ಓಂ

ಶ್ರೀ ಭಗವಜ್ಜಿನಸೇನಾಚಾರ್ಯ — ಗುಣಭದ್ರಾಚಾರ್ಯ ವಿರಚಿತ

# ಮಹಾಪುರಾಣ

ಸಂಪುಟ ೧

ಪೂರ್ವಪುರಾಣ — ೪೭ ಪರ್ವಗಳು

ಸಂಪಾದಕರು ಮತ್ತು ಅನುವಾದಕರು

ಶ್ರೀಮಾನ್ ಎತರ್ೂರು ಶಾಂತಿರಾಜಶಾಸ್ತ್ರಿಗಳವರು

ಪ್ರಕಾಶಕರು

ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್

ಬೆಂಗಳೂರು — ೫೬೦ ೦೮೭

(ದೂರವಾಣಿ: ೬೪೯೪೬೧)

೧೯೯೭

೧೪ ಪರಮ ಪೂಜ್ಯ ಶ್ರೀ ನೇಮಿಸಾಗರ ವರ್ಣೀಜಿ



೧೫



೧೬



೧೭



೧೮



೧೯



೨೦



೧೫ ಮಣೆಯಂಗೂಡು ಶ್ರೀ ಕೃಷ್ಣಯ್ಯಗೌಡರು. ೧೬ ಶ್ರೀ. ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದೂರ್. ೧೭ ಮಣೆಯಂಗೂಡು ಶ್ರೀ ಸುಬ್ಬೇಗೌಡರು. ೧೮ ಶ್ರೀ ಎಂ. ಸಿ. ಲಕ್ಷ್ಮೀಪತಯ್ಯನವರು. ೧೯ ಶ್ರೀ ಎಂ. ಎಲ್. ವರ್ಧಮಾನಯ್ಯನವರು.



ಸೌಜನ್ಯ : ಭ. ಆದಿನಾಥ ದಿಗಂಬರ ಜೈನಮಂದಿರ ಬಳೇಪೇಟೆ, ಬೆಂಗಳೂ

**ವಿಷಯಾಶಾವಶಾತೀತೋ ನಿರಾರಂಭೋಪರಿಗ್ರಹಃ । ಜ್ಞಾನಧ್ಯಾನತಪೋರಕ್ತಸ್ತಪಸ್ವೀ ಸಪ್ರಶಸ್ಯತೇ ॥**

— ಆವಮನುಷ್ಯನು ಇಂದ್ರಿಯವಿಷಯಗಳ ಆಸೆಗೆ ಅಧೀನನಲ್ಲದವನೂ(ಆ ಜೀವಿಕೆಗೋಸ್ಕರ) ಆರಂಭ – ಕೆಲಸವನ್ನು ಮಾಡದಿರುವವನೂ

**MAHAPURANA**

by **Bhagavajjinasenacharya & Gunabhadracharya** – Vol - 1 Original text with prose rendered and edited in Kannada by : **Panditaratna A. Shanthiraja Shastry, Mysore.**

Published by : **Panditaratna A. Shanthiraja Shastry Trust**, 369, 42nd Cross, 8th Block, Jayanagar, Bangalore – 560 082

Third Edition - October 1992

PP (xxxii + 692) 1500 copies, Price: Rs. 950/- (for one volume)

No. of Colour Photographs : 43 No. of pages : 14



ತೃತೀಯ ಮುದ್ರಣ : **ಅಕ್ಟೋಬರ್ ೧೯೯೨**
೧೫೦೦ ಪ್ರತಿಗಳು

ಬೆಲೆ : ರೂ. ೯೫೦/–
ಒಂಬೈನೂರ ಐವತ್ತು ರೂಪಾಯಿಗಳು ( ಒಂದು ಸಂಪುಟಕ್ಕೆ )

ರಕ್ಷಾಪುಟ ವಿನ್ಯಾಸ : ಶ್ರೀ ಆರ್. ಎಸ್. ಪದ್ಮರಾಜ್, ಬಿಂದು ಅಡ್ವರ್‌ಟೈಸರ್ಸ್, ಬೆಂಗಳೂರು

ಅಕ್ಷರ ಸಂಯೋಜನೆ : ಸುಧಾ ಮುದ್ರಣ, ಬಸವನಗುಡಿ, ಬೆಂಗಳೂರು – ೫೬೦ ೦೦೪

ಆಫ್‌ಸೆಟ್ ಮುದ್ರಣ : ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್, ಹೊಸತರಗುಪೇಟೆ, ಬೆಂಗಳೂರು – ೫೬೦ ೦೦೨

ಬೈಂಡ್ ಮಾಡಿದವರು: ಬಿ. ಬಿ. ಡಿ. ಪವರ್ ಪ್ರೆಸ್, ಅರಳೇಪೇಟೆ, ಬೆಂಗಳೂರು – ೫೬೦ ೦೫೩

# ಗ್ರಂಥ ಪ್ರವೇಶ

**ಮಹಾಪುರಾಣ**ವು ಮಹಾಸಾಗರದಂತೆ ಗಾತ್ರದಲ್ಲಿ ವಿಶಾಲವಾಗಿದೆ. ಮಹಾಸಾಗರದಲ್ಲಿ ಅಮೂಲ್ಯ ರತ್ನಗಳಿರುವಂತೆ **ಮಹಾಪುರಾಣ**ದಲ್ಲಿಯೂ ರತ್ನತ್ರಯಗಳ ವರ್ಣನೆ ಹಾಗೂ ನುಡಿಮುತ್ತುಗಳಿವೆ. ವಿ ಅಗಾಧವಾಗಿದೆ. **ಮಹಾಪುರಾಣ**ದಲ್ಲಿ ಸರ್ವಸ್ವವೂ ಇದೆ.

ಇದುವರೆಗೂ **ಮಹಾಪುರಾಣ**ವನ್ನು ವ್ಯಕ್ತಿ ಚರಿತ್ರೆಯಂತೆ ಘಟನೆಗಳನ್ನು ಓದಿ, ಕೇಳಿ ಸಂತೋಷಪಡುತ್ತಿ ಆದರೆ, **ಮಹಾಪುರಾಣ**ದಲ್ಲಿ ಸಂಶೋಧನೆಗೆ ವಿಪುಲವಾದ ಅವಕಾಶವಿದ್ದು, ನೂರಾರು ವಿಷಯಗಳನ್ನು ಪ್ರತ್ಯೇಕಿಸಿ, ಸಂಶೆ ಮಾಡಬಹುದಾಗಿದೆ. ಸ್ವರ್ಗ–ನರಕ, ಮಂತ್ರ–ತಂತ್ರ, ಪೂಜೆ, ವೈರಾಗ್ಯ, ಸನ್ಯಾಸ, ತಪಸ್ಸು, ಧ್ಯಾನ, ಯೋಗ, ಕರ್ಮಸಿ ಪುನರ್ಜನ್ಮ, ಮೋಕ್ಷ, ಹಿಂಸೆ–ಅಹಿಂಸೆ, ವ್ಯಾಕರಣ, ಛಂದಸ್ಸು, ಕಾವ್ಯ, ತರ್ಕ, ನ್ಯಾಯ, ನೀತಿ, ಜ್ಞಾನಮೀಮಾಂಸೆ, ರಾ ಯುದ್ಧನೀತಿ, ಅಸ್ತ್ರ–ಶಸ್ತ್ರ, ಸಮತಾವಾದ, ಗಜಶಾಸ್ತ್ರ, ವ್ಯಾಪಾರ, ವಿದೇಶನೀತಿ, ಭೂಗೋಳ, ನಗರರಚನೆ, ಗ್ರಹ, ವನಸ್ಪತಿ, ಜ್ಯೋತಿಷ್ಯ, ವಿಜ್ಞಾನ, ಗಣಿತ, ವೃಕ್ಷ-ಫಲ, ಪುಷ್ಪ, ಆಯುರ್ವೇದ, ಧಾತುವಿಜ್ಞಾನ, ನವರತ್ನ, ಕೃಷಿ, ದ್ವೀಪ, ಸ ನೃತ್ಯ, ವಾಸ್ತುಸಾರ, ಕಲೆ, ಸಂಗೀತ, ವಾದ್ಯ, ಸ್ತ್ರೀ, ವಸ್ತ್ರವಿನ್ಯಾಸ, ಕೇಶವಿನ್ಯಾಸ, ಶರೀರದ ಲಕ್ಷಣ, ಕುಟುಂಬನೀತಿ, ಸಮಾ ಕಾಮಶಾಸ್ತ್ರ, ಮಾತೃವಾತ್ಸಲ್ಯ, ಪಿತೃಭಕ್ತಿ, ಗುರುಭಕ್ತಿ, ಇತ್ಯಾದಿ ವಿಷಯಗಳನ್ನು ಪ್ರತ್ಯೇಕವಾಗಿ ಅಧ್ಯಯನ, ಸಂಶೆ ಮಾಡುವವರಿಗೆ ವೈಜ್ಞಾನಿಕವಾಗಿ ವಿಷಯಗಳ ವರ್ಣನೆ ಇದರಲ್ಲಿ ದೊರೆಯುತ್ತದೆ.

ಈ ಗ್ರಂಥದಲ್ಲಿ ಪ್ರತಿಯೊಂದು ಶ್ಲೋಕವನ್ನು ಪ್ರತ್ಯೇಕವಾಗಿ ಅರ್ಥಸಹಿತ ಪ್ರಕಟಿಸಿರುವುದು ಸಂಶೋ ಖಜಾನೆಯ ಬಾಗಿಲು ತೆರೆದಿರುವಂತೆ ಆಗಿದೆ. **ಮಹಾಪುರಾಣ**ವು ಒಂದು ಶಬ್ದಕೋಶದಂತಿದೆ. ಪ್ರತಿಯೊಂದು ಪದಗಳ ರೀತಿಯ ಅರ್ಥವನ್ನು ಗಮನಿಸಿದಾಗ ಇದೊಂದು ಸಂಸ್ಕೃತದ ವಿಶ್ವಕೋಶ ಎಂದರೆ ತಪ್ಪಾಗಲಾರದು. ಧರ್ಮ – ಅ ಕಾಮ –ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಿಗೆ ಆಕರವಾಗಿರುವ ಗ್ರಂಥವಾಗಿದೆ. ಹಿಂದೆ, ಇಂದು ಮತ್ತು ಮುಂದೆ ಮಾನವ ಸಮಾಜಕ್ಕೆ ಅಹಿಂಸೆಯ ಮೂಲಕ ಶಾಂತಿಯ ಸಂದೇಶವನ್ನು ನೀಡುವ ಮಹಾ ಗ್ರಂಥವಾಗಿದೆ.

ಇದು ವಿಜ್ಞಾನಯುಗ, ಇಂದಿನ ಹಾಗೂ ಮುಂದಿನ ಪೀಳಿಗೆಗೆ ಇದೊಂದು ಕಾಲ್ಪನಿಕ ಪುರಾಣ ಮತ್ತು ಕಥೆಗ ಕೂಡಿದ, ಮನರಂಜನೆಯ ಗ್ರಂಥವೆಂದು ಅಥವಾ ಧಾರ್ಮಿಕವಾಗಿ ಈ ಗ್ರಂಥವನ್ನು ಓದಿದರೆ ಪುಣ್ಯ ಲಭಿಸುತ್ತದೆ ಎಂದು ಹೇ ಬದಲು ಇದರಲ್ಲಿರುವ ವೈಜ್ಞಾನಿಕ ಸತ್ಯ ಸಂಗತಿಗಳನ್ನು ಇಂದಿನ ಜ್ವಲಂತ ಸಮಸ್ಯೆಗಳಾದ ವಿಶ್ವಶಾಂತಿ, ಪರಿಸರ ಸಂ ವಿಶ್ವಭ್ರಾತೃತ್ವ, ಅಹಿಂಸೆ, ನಿಶ್ಶಸ್ತ್ರೀಕರಣಗಳಿಗೆ **ಮಹಾಪುರಾಣ**ವು ಮಾರ್ಗದರ್ಶನವೀಯಬಲ್ಲದೇ ಎಂಬುದನ್ನು ಪ್ರಯೋಗ ವಾಗಿ ಸಂಶೋಧನೆಮಾಡಲು ಯತ್ನಿಸುವುದು ನಮ್ಮೆಲ್ಲರ ಕರ್ತವ್ಯವೆಂದು ನಾವು ಭಾವಿಸುತ್ತೇವೆ.

**ಮಹಾಪುರಾಣ**ದಲ್ಲಿ ಸಂಪೂರ್ಣ ಪಾಂಡಿತ್ಯ ಪಡೆದವರು ಅತೀ ವಿರಳ. ಅಂತಹ ವಿರಳ ವ್ಯಕ್ತಿತ್ವದ ನಿಧಿ ಸ್ವರ್ಗೀಯ ಶ್ರೀ ಎ. ಶಾಂತಿರಾಜ ಶಾಸ್ತ್ರಿಗಳವರಿಗೆ ಕನ್ನಡ ಜನತೆಯ ನಮನ. ಅವರಿಗೆ ಮೈಸೂರಿನ ಮಹಾರಾ **"ಪಂಡಿತರತ್ನ"** ಪ್ರಶಸ್ತಿ ನೀಡಿ ಗೌರವಿಸಿರುವುದು ರಾಷ್ಟ್ರ ಪ್ರಶಸ್ತಿಯಂತೆ, ಭಾರತೀಯ ಜ್ಞಾನಪೀಠ ಪ್ರಶಸ್ತಿ ಶ್ರೇಷ್ಠವಾದುದೆಂದರೆ ಅತಿಶಯೋಕ್ತಿಯೇನಲ್ಲ. ಕನ್ನಡಿಗರ ಪ್ರತಿನಿಧಿ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಸನ್ಮಾನಿಸಿರು ಅವರ ಅಗಾಧ ಪಾಂಡಿತ್ಯಕ್ಕೆ ಸಂದ ರಾಷ್ಟ್ರಗೌರವವಾಗಿದೆ.

ಈ ಗ್ರಂಥ ಅತ್ಯಂತ ಸುಂದರವಾಗಿ ಪ್ರಕಟವಾಗಿದೆ, ಈ ಹಿಂದೆ ಪ್ರಕಟಿಸಿದ ಆವೃತ್ತಿಗಳಿಗಿಂತ ಇದು ಬಹಳವಾಗಿ ವಿ ರೀತಿಯದ್ದಾಗಿದೆ. ಈ ಸ್ತುತ್ಯ ಪ್ರಯತ್ನ ಮಾಡಿದ್ದಕ್ಕಾಗಿ ಸ್ವರ್ಗೀಯ ಶ್ರೀ ಎ. ಶಾಂತಿರಾಜ ಶಾಸ್ತ್ರಿಗಳ ಸುಪುತ್ರರಾದ ಶ್ರೀ ಜಿತೇಂದ್ರ ಕುಮಾರ್ ಅವರಿಗೆ ಎಷ್ಟು ಕೃತಜ್ಞತೆ ಹೇಳಿದರೂ ಕಡಿಮೆ. ಈ ಗ್ರಂಥದ ಪ್ರಕಾಶನಕ್ಕಾಗಿ ಪ್ರಯತ್ನಿಸಿದ ಶಾಸ್ತ್ರಿಗಳ ಸುಪುತ್ರರಿಗೂ ಹಾಗೂ ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್, ಮೈಸೂರು –ಇದರ ಎಲ್ಲ ಧರ್ಮದರ್ಶಿಗಳಿ ಶುಭಾಶೀರ್ವಾದಗಳು.

**ಜಗದ್ಗುರು ಕರ್ಮಯೋಗಿ,**
**ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀ**
**ಶ್ರವಣಬೆಳಗೊಳ ಮಠ**

## ಮಂಗಲಕರ ಮಹಾಪುರಾಣ

ಪುರಾಣಮೃಷಿಭಿಃ ಪ್ರೋಕ್ತಂ ಪ್ರಮಾಣಂ ಸೂಕ್ತಮಾಂಜಸಂ ।
ತತಃ ಶ್ರದ್ಧೇಯಮಧ್ಯೇಯಂ ಧ್ಯೇಯಂ ಶ್ರೇಯೋರ್ಥಿನಾಮಿದಮ್ ॥
ಇದಂ ಪುಣ್ಯಮಿದಂ ಪೂತಮಿದಂ ಮಾಂಗಲ್ಯಮುತ್ತಮಂ ।
ಇದಮಾಯುಷ್ಯಮಗ್ರ್ಯಂ ಚ ಯಶಸ್ಯಂ ಸ್ವರ್ಗಮೇವ ಚ ॥

ಇದಮರ್ಚಯತಾಂ ಶಾಂತಿಸ್ತುಷ್ಟಿಃ ಪುಷ್ಟಿಶ್ಚ ಪೃಚ್ಛತಾಂ ।
ಪಠತಾಂ ಕ್ಷೇಮಮಾರೋಗ್ಯಂ ಶೃಣ್ವತಾಂ ಕರ್ಮನಿರ್ಜರಾ ॥
ಇತೋ ದುಃಸ್ವಪ್ನನಿರ್ನಾಶಃ ಸುಸ್ವಪ್ನಸ್ಯಾತಿರೇವ ಚ ।
ಇತೋಭೀಷ್ಟಫಲವ್ಯಕ್ತಿರ್ನಿಮಿತ್ತಮಭಿಪಶ್ಯತಾಮ್ ॥

– ಈ ಪುರಾಣವನ್ನು ಋಷಿಗಳು ಹೇಳಿರುವುದರಿಂದ ಇದು ಪ್ರಮಾಣವೂ ಸಂಪೂರ್ಣವಾಗಿ ಸತ್ಯವೂ ಆಗಿರುತ್ತದೆ. ಆದುದರಿಂದ ಆತ್ಮಕಲ್ಯಾಣವನ್ನಿಚ್ಛಿಸುವವರು ಇದನ್ನು ನಂಬಬೇಕು; ಅಧ್ಯಯನಮಾಡಬೇಕು; ಧ್ಯಾನಿಸಬೇಕು. ಈ ಪುರಾಣವು ಪುಣ್ಯದಾಯಕವೂ ಪವಿತ್ರವೂ ಉತ್ತಮವಾದ ಮಂಗಲಸ್ವರೂಪವೂ ಆಯುಷ್ಯವರ್ಧಕವೂ ಕೀರ್ತಿಯನ್ನುಂಟುಮಾಡುವುದೂ ಸ್ವರ್ಗದಾಯಕವೂ ಆಗಿರುತ್ತದೆ. ಈ ಪುರಾಣವನ್ನು ಪೂಜಿಸುವವರಿಗೆ ದುಃಖಶಾಂತಿಯೂ ಸಂದೇಹ ನಿವಾರಣೆಗೋಸುಗ ಪ್ರಶ್ನೆಮಾಡುವವರಿಗೆ ಆನಂದವೂ ಪುಷ್ಟಿ–ಜ್ಞಾನವೃದ್ಧಿಯೂ ಓದುವವರಿಗೆ ಕ್ಷೇಮವೂ ಆರೋಗ್ಯವೂ ಕೇಳುವವರಿಗೆ ಕರ್ಮನಿರ್ಜರೆಯೂ ಆಗುವುವು. ಈ ಪುರಾಣಪೂಜನ, ಪೃಚ್ಛನಾ, ಪಠನ, ಶ್ರವಣಾದಿಗಳಿಂದ ದುಃಸ್ವಪ್ನಗಳ ನಾಶವೂ ಸುಸ್ವಪ್ನಗಳವೃದ್ಧಿಯೂ ನಿಮಿತ್ತ–ಶಕುನವನ್ನು ನೋಡುವವರಿಗೆ ಇಷ್ಟಫಲ(ಶುಭಾಶುಭ ಶಕುನಫಲ) ಪ್ರಾಪ್ತಿಯೂ ಉಂಟಾಗುವುವು.'' ಇಂತಹ ಪವಿತ್ರಗ್ರಂಥವು ಮನೆಯಲ್ಲಿರುವುದು ಮಂಗಲಕರವೆಂದು ಭಾವಿಸಿ ಅನೇಕರು ಇದನ್ನು ತಮ್ಮ ಮನೆಗಳಲ್ಲಿಟ್ಟುಕೊಂಡು ಪೂಜಿಸುತ್ತಿರುವರು.

# ಮುನ್ನುಡಿ

**ಪಾಪಮಿದು ಪುಣ್ಯಮಿದು ಹಿತ**
**ರೂಪಮಿದು ಹಿತಪ್ರಕಾರಮಿದು ಸುಖಮಿದು ದುಃ**
**ಖೋಪಾತ್ತಮಿದೆಂದಱಿ ಪುಗಾ**
**ಮಾ ಪರಮಕವಿ ಪ್ರಧಾನರಾ ಕಾವ್ಯಂಗಳ್**

ಕವಿರಾಜಮಾರ್ಗಕಾರನ ಅಥವಾ ನೃಪತುಂಗನ ಈ ಕಂದಪದ್ಯ ಮಹಾಪುರಾಣವನ್ನು ಮತ್ತು ಜಿನಸೇನಾಚಾರ್ಯರನ್ನು ಕುರಿತು ರಚಿಸಿದ್ದೆಂದೇ ಹೇಳಬಹುದಾಗಿದೆ. ಈ ಮಹಾಪುರಾಣದ ಮಹತ್ವಕ್ಕೆ, ಔನ್ನತ್ಯಕ್ಕೆ ಹಾಗೂ ಶ್ರೇಷ್ಠತೆ ಅನ್ಯವ್ಯಾಖ್ಯಾನವಾಗಲಿ, ಅನ್ಯಪ್ರಮಾಣವಾಗಲಿ ಅನಗತ್ಯ. 'ಇಂದ್ರಪೂಜೆ, ಭುವನಸ್ತುತಮಪ್ಪನೆಗಟ್ತೆ, ಮುಕ್ತಿ ಸಂಭವಿಸು ಲಾಭಂ ... ಜಿನೇಂದ್ರ ಸ್ತುತಿಯಿಂದೆ ತಾಮೆ ಸಾರವೆ' ಎಂಬ ಪಂಪನ ಮಾತುಗಳೂ ಈ ಮಹಾಕೃತಿಗೆ ಅನ್ವಯವಾಗುವಂತಿವೆ.

ರಾಮಾಯಣ, ಮಹಾಭಾರತ, ಭಾಗವತ, ಬೃಹತ್‌ಕಥಾಕೋಶಗಳಂತೆ ಮಹಾಪುರಾಣವೂ ಕವಿಗಳ ಕಲ್ಪತರುವಾಗಿದ ಕೈವೊಕ್ಕ ನಿಧಿಯಾಗಿದೆ, ಭಾರತೀಯ ಭಾಷಾ ಸಾಹಿತ್ಯಗಳ ಅಕ್ಷಯ ಭಂಡಾರವಾಗಿದೆ. ಅದರಿಂದ ನಿರಂತರ ಸ್ಫೂರ್ತಿ, ಪ್ರೇರಣ ಸತ್ತ್ವಗಳನ್ನು ಪಡೆಯದ ದೇಶಭಾಷೆಯೇ ಇಲ್ಲ. ಭಾರತೀಯ ಸಂಸ್ಕೃತಿಯ ವಿಕಾಸದಲ್ಲಿ, ಅದರ ಶ್ರೀಮಂತಿಕೆಯ ಮತ್ತು ವೈಭವೋನ್ನತಿಯ ಸಾಧನೆಯಲ್ಲಿ ಈ ಅಮರ ಕೃತಿಯ ಪಾತ್ರ ಅಸಾಮಾನ್ಯವಾದದ್ದು. ಇದು ತೀರ್ಥಂಕರರ ಅವತಾರಲೀಲೆಯ ಮತ್ತು ನಿತ್ಯಾವಾಸದ ಕ್ಷೇತ್ರವಾಗಿದ್ದು, ಸಾಧುಸಂತರ, ಸಾಧಕರ ಹಾಗೂ ಭಾವುಕರ ಅಪೂರ್ವ ಅವಿನಾಶಿ ಯಾತ್ರಾಕೇಂದ್ರವಾಗಿದೆ ಭರತ ಬಾಹುಬಲಿಯರಂಥ ತ್ರಿಲೋಕವಂದ್ಯ ಮಹಾಪುರುಷರ ಆಡುಂಬೊಲವಾಗಿದೆ ಈ ಮಹಾಗ್ರಂಥ.

ಭಗವಜ್ಜಿನಸೇನಾಚಾರ್ಯರಿಂದ ರಚಿತವಾದ ಪೂರ್ವಪುರಾಣ ಮತ್ತು ಅವರ ಶಿಷ್ಯರಾದ ಶ್ರೀ ಗುಣಭದ್ರಾಚಾರ್ಯರಿಂದ ಮುಕ್ತಾಯಗೊಂಡ ಉತ್ತರಪುರಾಣಗಳೆರಡೂ ಸೇರಿ 'ಮಹಾಪುರಾಣ' ವೆಂದು ಖ್ಯಾತಿ ಪಡೆದು, ಸುಮಾರು ಹನ್ನೊಂದು ಶತಮಾನಗಳಿಗೂ ಮಿಕ್ಕಿದ ಕಾಲದಿಂದ ಭರತಖಂಡದಲ್ಲಿ ಧಾರ್ಮಿಕ ಸಂಪತ್ತನ್ನು ಪೋಷಿಸುತ್ತಿವೆ. ಜೈನಧರ್ಮದ ಪ್ರಕ್ರಿಯೆಗಳು ಮತ್ತು ತತ್ತ್ವಗಳು ಇದರಲ್ಲಿ ಉಲ್ಲೇಖಗೊಂಡಿರುವುದರಿಂದ ಇದೊಂದು ಮತೀಯ ಗ್ರಂಥವೆಂದು ತೋರಿ ಜೈನೇತರರ ನಿರ್ಲಕ್ಷ್ಯಕ್ಕೆ ಗುರಿಯಾಗುವ ಸಂಭವವುಂಟು. ಇದು ವೇದೋಪನಿಷತ್ತು ರಾಮಾಯಣ ಭಾರತ ಭಾಗವತಗಳ ನಾಡಾದ ಭರತಖಂಡದಲ್ಲಿಯೇ ಜನ್ಮವೆತ್ತಿ ವಿಕಾಸಗೊಂಡ ಕಾರಣದಿಂದಾಗಿ ಜೈನಧರ್ಮ ಭಾರತೀಯ ಧರ್ಮ, ಸರ್ವಭಾರತೀಯರ ಧರ್ಮ ಎಂದು ಹೇಳಿದರೆ ತಪ್ಪಾಗಲಾರದು. ಜಗತ್ತಿನ ಎಲ್ಲ ಧರ್ಮಗಳ ಉತ್ತಮಾಂಶಗಳನ್ನಿಲ್ಲಿ ಗುರುತಿಸುವ ಸಾಧ್ಯತೆಯಿದೆ. ಅಹಿಂಸಾ ಸಂದೇಶವನ್ನು ಜಗತ್ತಿಗೆ ನೀಡಿದ ಶ್ರೇಯಸ್ಸು ಮೊತ್ತಮೊದಲು ಜೈನಧರ್ಮಕ್ಕೆ ಸಲ್ಲಬೇಕಾಗಿದೆ. ತೀರ್ಥಂಕರರು ಇಡೀ ಜಗತ್ತಿಗೆ ಬೆಳಕು ನೀಡುವ ಸೂರ್ಯರಾಗಿದ್ದಾರೆ. ಜಗತ್ತಿನ ಸಾಹಿತ್ಯದಲ್ಲಿಯೇ ಭರತ ಬಾಹುಬಲಿಯರಂಥ ದೇವಮಾನವರು ಅಪರೂಪ; ಇಲ್ಲವೆಂದರೂ ಸಲ್ಲುತ್ತದೆ; ಅವರಿಲ್ಲದ ಜಗತ್ತು, ವಿಶೇಷವಾಗಿ ಭಾರತ ಕಡುರಿಕ್ತವಾಗುತ್ತದೆಂದೇ ಹೇಳಬೇಕಾಗುತ್ತವೆ. ಇಲ್ಲಿ ಬರುವ ಶಲಾಕಾಪುರುಷರು ಮುಮುಕ್ಷುಶಕ್ತಿಯ ಸಾಂಕೇತಿಕ ಪ್ರತಿಮೆಗಳಾಗಿ ಸರ್ವಾರಾಧ್ಯರಾಗಿದ್ದಾರೆ ; ಬಾಹ್ಯ ಪ್ರಕ್ರಿಯೆಗಳಿಂದ ಮುಕ್ತವಾದ ಧರ್ಮತತ್ತ್ವಗಳ ಒಳತಿರುಳು ಸರ್ವರ ಉಪಾಸನೆಗೆ ಯೋಗ್ಯವಾಗಿದೆ.

ಈಗ ಭರತಖಂಡದ ಐಕ್ಯಕ್ಕೆ, ಅದರ ಏಳ್ಗೆಗೆ ಬೇಕಾದ್ದು ಶ್ರೀ ರಾಮಕೃಷ್ಣ ಪರಮಹಂಸ ಪ್ರಣೀತ ಸರ್ವಧರ್ಮ ಸಮನ್ವಯ ಭಾವನೆ. ಸರ್ವಧರ್ಮಗಳ ಉತ್ತಮಾಂಶಗಳನ್ನು ಮಾನವ ತನ್ನ ಜೀವನದಲ್ಲಿ ಅಳವಡಿಸಿಕೊಂಡಾಗಲೇ ಜಗತ್ತಿನಲ್ಲಿ ಶಾಂತಿಸ್ಥಾಪನೆ ಸಾಧ್ಯವಾಗುತ್ತದೆ. ಭಾರತೀಯರಿಗಂತೂ ಇಂಥ ಸಾಧನೆ ಅನಿವಾರ್ಯ.

ಸಂಸ್ಕೃತ ಮತ್ತು ಸಂಸ್ಕೃತ ಸಾಹಿತ್ಯ ದೇಶಭಾಷೆಗಳ ಮೂಲಕ ಬದುಕಬೇಕಾಗಿದೆಯೆಂದು ಡಿವಿಜಿ ಎಂದೋ ಹೇಳಿದ್ದುಂಟು. ಮಹಾಪುರಾಣದಂತ ದಿವ್ಯಗ್ರಂಥ ರಾಷ್ಟ್ರದ ಮೂಲೆಮೂಲೆಯಲ್ಲಿ ಪಸರಿಸಿ, ಶ್ರೀ ಸಾಮಾನ್ಯನ ಮನವನ್ನು

ಪ್ರವೇಶಿಸಿದಾಗಲೇ ಅದಕ್ಕೆ ಸಾರ್ಥಕತೆ; ಭಾಷಾಂತರದ ಮೂಲಕವೇ ಅದು ಸಾಧ್ಯ. ಪಂಪರನ್ನಾದಿ ಮಹಾಕವಿಗಳು ಆ ಮಹಾರಣ್ಯದಿಂದ ತಮಗೆ ಬೇಕಾದ ಸಸಿಗಳನ್ನು ತಂದು ಕನ್ನಡದ ಉದ್ಯಾನವನ್ನು ಶೃಂಗಾರಗೊಳಿಸಿದ್ದಾರೆ, ಶ್ರೀಮಂತಗೊಳಿಸಿದ್ದಾರೆ, ನಿಜ. ಇಂಥ ಕೃತಿ ಎಲ್ಲ ದೇಶಭಾಷೆಗಳಲ್ಲಿ ಅವತರಿಸಿದಾಗ ಮಾತ್ರ, ಅದರ ಪ್ರಯೋಜನ ಶತಾಧಿಕವಾಗುತ್ತದೆ; ನೂತನ ಸಂತಾನದ ಜತೆಗೆ, ಸಂಶೋಧನೆ ಮತ್ತು ತೌಲನಿಕ ವ್ಯಾಸಂಗ ಸಾಧ್ಯವಾಗುತ್ತದೆ. ಸುಸಂಸ್ಕೃತರೂ, ಬಹುಶ್ರುತರೂ, ಬಹುಭಾಷಾವಿಶಾರದರೂ ಆದ ಶ್ರೀ ಎರ್ತೂರು ಶಾಂತಿರಾಜ ಶಾಸ್ತ್ರಿಗಳು ಈ ಮಹಾಕೃತಿಯನ್ನು ಕನ್ನಡಿಸಿ, ಭಗವಜ್ಜಿನಸೇನಾಚಾರ್ಯರ ಮತ್ತು ಗುಣ ಭದ್ರಾಚಾರ್ಯರ ಆಶೀರ್ವಾದವನ್ನು ಅವರ ದಿವ್ಯ ಸಂದೇಶವನ್ನು ಕನ್ನಡಿಗರಿಗೆ ದೊರಕಿಸಿ, ಪುಣ್ಯಭಾಜನರಾಗಿದ್ದಾರೆ; ಕನ್ನಡ ಸಾಹಿತ್ಯ ಈ ಮಹಾಕೃತಿಗೆ ಎಷ್ಟು ಋಣಿ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇಡೀ ಕನ್ನಡನಾಡು ಎಂದೆಂದಿಗೂ ಶ್ರೀ ಶಾಸ್ತ್ರಿಗಳಿಗೆ ಋಣಿಯಾಗಿರಬೇಕಾಗಿದೆ.

ಕೀರ್ತಿಶೇಷರಾದ ಶ್ರೀ ಶಾಂತಿರಾಜ ಶಾಸ್ತ್ರಿಗಳ ಜನ್ಮಶತಾಬ್ದ ಸಂದರ್ಭದಲ್ಲಿ ಅವರ ಮಕ್ಕಳು ಸರ್ವಶ್ರೀ ನಾಗ ಕುಮಾರರು, ಜಿತೇಂದ್ರ ಕುಮಾರರು, ಪ್ರಸನ್ನ ಕುಮಾರರು, ಗುಣವರ್ಮರು ಶ್ರೀ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟಿನ ಮೂಲಕ ಅವರ ಗ್ರಂಥಗಳನ್ನು ಸರ್ವಾಂಗ ಸುಂದರವಾಗಿ ಮುದ್ರಿಸಿ, ಪಿತೃಋಣ, ಭಾಷಾಋಣ, ಸಮಾಜಋಣ ಮತ್ತು ರಾಷ್ಟ್ರಋಣವನ್ನು ತೀರಿಸುವ ಮೂಲಕ ಪಿತೃವಾತ್ಸಲ್ಯವನ್ನು, ಕರ್ತವ್ಯನಿಷ್ಠೆಯನ್ನು ಮೆರೆದು, ಮುಂದಿನ ಪೀಳಿಗೆಗೆ ಆದರ್ಶರಾಗಿದ್ದಾರೆ, ಮಾರ್ಗ ದರ್ಶಕರಾಗಿದ್ದಾರೆ. ಅಸ್ತಂಗತನಾಗುತ್ತಿದ್ದ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ದಶರಥ ವಿಷ್ಣುವಿನ ಅವತಾರವೇ ಶ್ರೀರಾಮನೆಂದು ತಿಳಿದು "ನನ್ನ ಮಗನಾದುದಕೆ ನಿನಗಿದೋ ನಮಸ್ಕಾರಂ! ಧನ್ಯನಾದೆನ್" ಎಂದು ಉದ್ಗಾರ ತೆಗೆಯುತ್ತಾನೆ. ಅಂತೆಯೇ ಸೂಕ್ಷ್ಮ ಶರೀರಿಗಳಾಗಿ ಆಕಾಶದಲ್ಲಿ ಸಂಚರಿಸುತ್ತಿರುವ ಶ್ರೀ ಶಾಂತಿರಾಜ ಶಾಸ್ತ್ರಿಗಳು ಸಹ "ಮಕ್ಕಳಾದುದಕೆ ನಿಮಗಿದೋ ನಮಸ್ಕಾರಂ ! ಧನ್ಯನಾದೆನ್" ಎಂದು ಆಶೀರ್ವದಿಸುತ್ತಿದ್ದಾರೆ. ಈ ಮಕ್ಕಳು ಧನ್ಯರು; ಕನ್ನಡಿಗರು ಕೃತಕೃತ್ಯರು.

ಮೈಸೂರು
೧೪-೬-೧೯೯೨

**ದೇಜಗೌ**

ಪ್ರವೇಶಿಸಿದಾಗಲೇ ಅದಕ್ಕೆ ಸಾರ್ಥಕತೆ; ಭಾಷಾಂತರದ ಮೂಲಕವೇ ಅದು ಸಾಧ್ಯ. ಪಂಪರನ್ನಾದಿ ಮಹಾಕವಿಗಳು ಆ ಮಹಾರಣ್ಯದಿಂದ ತಮಗೆ ಬೇಕಾದ ಸಸಿಗಳನ್ನು ತಂದು ಕನ್ನಡದ ಉದ್ಯಾನವನ್ನು ಶೃಂಗಾರಗೊಳಿಸಿದ್ದಾರೆ, ಶ್ರೀಮಂತಗೊಳಿಸಿದ್ದಾರೆ, ನಿಜ. ಇಂಥ ಕೃತಿ ಎಲ್ಲ ದೇಶಭಾಷೆಗಳಲ್ಲಿ ಅವತರಿಸಿದಾಗ ಮಾತ್ರ, ಅದರ ಪ್ರಯೋಜನ ಶತಾಧಿಕವಾಗುತ್ತದೆ; ನೂತನ ಸಂತಾನದ ಜತೆಗೆ, ಸಂಶೋಧನೆ ಮತ್ತು ತೌಲನಿಕ ವ್ಯಾಸಂಗ ಸಾಧ್ಯವಾಗುತ್ತದೆ. ಸುಸಂಸ್ಕೃತರೂ, ಬಹುಶ್ರುತರೂ, ಬಹುಭಾಷಾವಿಶಾರದರೂ ಆದ ಶ್ರೀ ಎರ್ತೂರು ಶಾಂತಿರಾಜ ಶಾಸ್ತ್ರಿಗಳು ಈ ಮಹಾಕೃತಿಯನ್ನು ಕನ್ನಡಿಸಿ, ಭಗವಜ್ಜಿನಸೇನಾಚಾರ್ಯರ ಮತ್ತು ಗುಣ ಭದ್ರಾಚಾರ್ಯರ ಆಶೀರ್ವಾದವನ್ನು ಅವರ ದಿವ್ಯ ಸಂದೇಶವನ್ನು ಕನ್ನಡಿಗರಿಗೆ ದೊರಕಿಸಿ, ಪುಣ್ಯಭಾಜನರಾಗಿದ್ದಾರೆ; ಕನ್ನಡ ಸಾಹಿತ್ಯ ಈ ಮಹಾಕೃತಿಗೆ ಎಷ್ಟು ಋಣಿ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಇಡೀ ಕನ್ನಡನಾಡು ಎಂದೆಂದಿಗೂ ಶ್ರೀ ಶಾಸ್ತ್ರಿಗಳಿಗೆ ಋಣಿಯಾಗಿರಬೇಕಾಗಿದೆ.

ಕೀರ್ತಿಶೇಷರಾದ ಶ್ರೀ ಶಾಂತಿರಾಜ ಶಾಸ್ತ್ರಿಗಳ ಜನ್ಮಶತಾಬ್ದ ಸಂದರ್ಭದಲ್ಲಿ ಅವರ ಮಕ್ಕಳು ಸರ್ವಶ್ರೀ ನಾಗ ಕುಮಾರರು, ಜಿತೇಂದ್ರ ಕುಮಾರರು, ಪ್ರಸನ್ನ ಕುಮಾರರು, ಗುಣವರ್ಮರು ಶ್ರೀ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟಿನ ಮೂಲಕ ಅವರ ಗ್ರಂಥಗಳನ್ನು ಸರ್ವಾಂಗ ಸುಂದರವಾಗಿ ಮುದ್ರಿಸಿ, ಪಿತೃಋಣ, ಭಾಷಾಋಣ, ಸಮಾಜಋಣ ಮತ್ತು ರಾಷ್ಟ್ರಋಣವನ್ನು ತೀರಿಸುವ ಮೂಲಕ ಪಿತೃವಾತ್ಸಲ್ಯವನ್ನು, ಕರ್ತವ್ಯನಿಷ್ಠೆಯನ್ನು ಮೆರೆದು, ಮುಂದಿನ ಪೀಳಿಗೆಗೆ ಆದರ್ಶರಾಗಿದ್ದಾರೆ, ಮಾರ್ಗ ದರ್ಶಕರಾಗಿದ್ದಾರೆ. ಅಸ್ತಂಗತನಾಗುತ್ತಿದ್ದ ಶ್ರೀ ರಾಮಾಯಣದರ್ಶನಂ ಮಹಾಕಾವ್ಯದ ದಶರಥ ವಿಷ್ಣುವಿನ ಅವತಾರವೇ ಶ್ರೀರಾಮನೆಂದು ತಿಳಿದು ''ನನ್ನ ಮಗನಾದುದಕೆ ನಿನಗಿದೋ ನಮಸ್ಕಾರಂ! ಧನ್ಯನಾದೆನ್'' ಎಂದು ಉದ್ಗಾರ ತೆಗೆಯುತ್ತಾನೆ. ಅಂತೆಯೇ ಸೂಕ್ಷ್ಮ ಶರೀರಿಗಳಾಗಿ ಆಕಾಶದಲ್ಲಿ ಸಂಚರಿಸುತ್ತಿರುವ ಶ್ರೀ ಶಾಂತಿರಾಜ ಶಾಸ್ತ್ರಿಗಳು ಸಹ ''ಮಕ್ಕಳಾದುದಕೆ ನಿಮಗಿದೋ ನಮಸ್ಕಾರಂ! ಧನ್ಯನಾದೆನ್'' ಎಂದು ಆಶೀರ್ವದಿಸುತ್ತಿದ್ದಾರೆ. ಈ ಮಕ್ಕಳು ಧನ್ಯರು; ಕನ್ನಡಿಗರು ಕೃತಕೃತ್ಯರು.

ಮೈಸೂರು
೧೪-೬-೧೯೯೨

**ದೇಜಗೌ**

# ಪ್ರಕಾಶಕರ ವಿಜ್ಞಾಪನೆ

ಶ್ರೀ ಭಗವಜ್ಜಿನಸೇನ – ಗುಣಭದ್ರಾಚಾರ್ಯ ವಿರಚಿತ ಬೃಹತ್ ಕೃತಿ 'ಮಹಾಪುರಾಣ'ದ ಎರಡು ಭಾಗಗಳಲ್ಲಿ ಪೂರ್ವಪುರಾಣದ ೪೨ ಪರ್ವಗಳುಳ್ಳ ಪೂರ್ವಭಾಗವನ್ನು ಫೆಬ್ರವರಿ ೧೯೭೫ರಲ್ಲೂ ಇದರ ೫ ಪರ್ವಗಳ ಉತ್ತರ ಭಾಗವನ್ನು– ಅಂದರೆ ಸಂಪೂರ್ಣ ಪೂರ್ವಪುರಾಣ ಗ್ರಂಥವನ್ನು ಫೆಬ್ರವರಿ ೧೯೭೬ ರಲ್ಲೂ ೩೦ ಪರ್ವಗಳುಳ್ಳ ಉತ್ತರ ಪುರಾಣವನ್ನು ಜನವರಿ ೧೯೮೦ ರಲ್ಲೂ –ಶ್ರವಣ ಬೆಳ್ಗೊಳದ ಭಗವಾನ್ ಬಾಹುಬಲಿ ಮೂರ್ತಿಗೆ ಮಹಾಮಸ್ತಕಾಭಿಷೇಕ ನೆರವೇರಿದ ಸಂದರ್ಭದಲ್ಲಿ – ಸಂಪೂರ್ಣ 'ಮಹಾಪುರಾಣ'ವನ್ನು ಪಾಠಾಂತರದೊಂದಿಗೆ ಸಂಸ್ಕೃತದಲ್ಲಿ ಸಂಪಾದಿಸಿಕೊಟ್ಟಿರುವುದರ ಜೊತೆಗೆ ಸರಳ ಕನ್ನಡ ಗದ್ಯಾನುವಾದ ವನ್ನು ಪ್ರಪ್ರಥಮ ಬಾರಿಗೆ ಇಡೀ ಗ್ರಂಥಕ್ಕೆ ನೀಡಿ, ಸುಮಾರು ೨೦ – ೨೨ ವರ್ಷಗಳ ಕಾಲ ಹಗಲಿರುಳೆನ್ನದೆ, ಏಕಾಕಿಯಾಗಿ, ಅವಿರತವಾಗಿ, ಶಕ್ತಿಮೀರಿ ಶ್ರಮಿಸಿ ತಮ್ಮ ತಪಸ್ಸಿನ ಫಲವನ್ನು ಜೈನಸಮಾಜಕ್ಕೆ ಮತ್ತು ಕನ್ನಡದ ಜನತೆಗೆ ಧಾರೆಯೆರೆದು ಕೊಟ್ಟು ಮಹೋಪಕಾರ ಮಾಡಿದ್ದಾರೆ, ಪ್ರಾತಃಸ್ಮರಣೀಯರಾದ ಪಂಡಿತರತ್ನ ಎರ್ತೂರು ಶಾಂತಿರಾಜ ಶಾಸ್ತ್ರಿಗಳು. ಪರಮ ಧಾರ್ಮಿಕರಾದ ವೈನಾಡಿನ ಕೀರ್ತಿಶೇಷ ರಾದ ಶ್ರೀಮಾನ್ ಮಣಿಯಂಗೂಡು ಕೃಷ್ಣಯ್ಯಗೌಡರೂ ಅವರ ಸುಪುತ್ರ ಕೀರ್ತಿ ಶೇಷರಾದ ಶ್ರೀ ಎಂ. ಕೆ. ಸುಬ್ಬಯ್ಯಗೌಡರೂ ಉದಾರ ಧನಸಹಾಯಮಾಡಿ ಉಪಕರಿಸದಿದ್ದರೆ, ಅಂದು ಈ ಮಹೋನ್ನತ ಗ್ರಂಥಪ್ರಕಾಶನ ಕಾರ್ಯವು ಖಂಡಿತವಾಗಿಯೂ ಸಾಧ್ಯವಾಗುತ್ತಿರಲಿಲ್ಲ. ಅಂತೆಯೇ ಈ ಮಹತ್ಕಾರ್ಯಕ್ಕೆ ಸ್ವ || ಪೂಜ್ಯಶ್ರೀ ನೇಮಿಸಾಗರ ವರ್ಣಿಜಿಯವರು, ಶ್ರೀಯುತ ಎಂ. ಎಲ್. ವರ್ಧಮಾನಯ್ಯನವರು, ಎಂ. ಸಿ. ಲಕ್ಷ್ಮಿಪತಯ್ಯನವರು ಮತ್ತು ಡಿ. ಪುಟ್ಟಸ್ವಾಮಿ ಯವರು ಶಾಸ್ತ್ರಿಗಳಿಗೆ ಪ್ರೇರಕ ಶಕ್ತಿಯಾಗಿ ಪ್ರೋತ್ಸಾಹಿಸಿ ಉತ್ತೇಜನ ನೀಡಿದ್ದರು.

ಅನಂತರ ಫೆಬ್ರವರಿ ೧೯೮೧ರ ಶ್ರವಣಬೆಳಗೊಳದ ಬೃಹನ್ಮೂರ್ತಿ ಗೋಮಟೇಶ್ವರನಿಗೆ ಒಂದು ಸಾವಿರ ವರ್ಷದ ಮಹಾಮಸ್ತಕಾಭಿಷೇಕದ ಸಂದರ್ಭ ದಲ್ಲಿ ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡ ಸಾಹಿತ್ಯ ಪರಿಷತ್ತು ಪುನಃ ಈ ಮಹಾನ್ ಗ್ರಂಥವನ್ನು ನಾಲ್ಕು ಸಂಪುಟಗಳಲ್ಲಿ ಪ್ರಕಟಿಸಿ ಕನ್ನಡಾಭಿಮಾನಿ ಗಳಿಗೆ ಮಹದುಪಕಾರ ಮಾಡಿತು.

ಲೋಕಪ್ರಿಯವಾದ ಈ ಆದರಣೀಯ ಗ್ರಂಥದ ದ್ವಿತೀಯ ಮುದ್ರಣದ ಎಲ್ಲ ಪ್ರತಿಗಳೂ ಮುಗಿದುಹೋಗಿ, ತೃತೀಯ ಮುದ್ರಣಕ್ಕೆ ಅಪಾರ ಬೇಡಿಕೆ ದಿನೇ ದಿನೇ ಹೆಚ್ಚುತ್ತಿದ್ದುದರಿಂದ ಈ ಬಾರಿ ಈ ಗ್ರಂಥವನ್ನು ದ್ವಿವರ್ಣದಲ್ಲಿ, ಆಧುನಿಕ ತಂತ್ರಜ್ಞಾನವನ್ನು ಬಳಸಿ ಸರ್ವಾಂಗಸುಂದರವಾಗಿ ಆಬಾಲವೃದ್ಧರಿಗೂ ಮನಮೆಚ್ಚು ವಂತೆ ೨೪ ತೀರ್ಥಂಕರರುಗಳ, ಭರತ ಬಾಹುಬಲಿ ಯುದ್ಧ ಪ್ರಸಂಗದ, ಹಲವು ಪ್ರಮುಖ ಘಟನೆಗಳ, ಪ್ರಮುಖ ತೀರ್ಥಕ್ಷೇತ್ರಗಳ ಹಾಗೂ ಪವಿತ್ರ ನಿರ್ವಾಣಕ್ಷೇತ್ರ ಗಳ ಅನೇಕ ವರ್ಣಚಿತ್ರಗಳನ್ನು ಉಚಿತರೀತಿಯಲ್ಲಿ ಅಳವಡಿಸಿ ಸೂಕ್ತ ಅನುಬಂಧ ದೊಡನೆ ರಾಯಲ್ ಆಕಾರದ ಎರಡು ಸಂಪುಟಗಳಲ್ಲಿ ಹೊರತರಲು ಈಗ್ಗೆ ಎರಡೂವರೆ ವರ್ಷಗಳ ಹಿಂದೆಯೇ ಟ್ರಸ್ಟ್ ನಿರ್ಧರಿಸಿತು. ಈ ಎರಡೂವರೆ ವರ್ಷಗಳ ಸತತ ಪರಿಶ್ರಮದ ಫಲವೇ ಈಗ ತಮ್ಮ ಕೈಯಲ್ಲಿರುವ ಈ ಬೃಹತ್, ಪವಿತ್ರ ಗ್ರಂಥ.

ಈಗ ಪುನಃ ಅದೇ ಬೃಹನ್ಮೂರ್ತಿಯ ಮಹಾಮಸ್ತಕಾಭಿಷೇಕ ಮಹೋತ್ಸವ ಸಂದರ್ಭದಲ್ಲಿ – ೧೯೯೩ ರ ವೇಳೆಯಲ್ಲಿ ಈ ಮೇರುಕೃತಿಯನ್ನು ನಮ್ಮ ಶ್ರೀಮಠಗಳ, ಧರ್ಮಾಧಿಕಾರಿಗಳ, ಧರ್ಮಾಭಿಮಾನಿಗಳ ಮತ್ತು ಟ್ರಸ್ಟಿನ ಪೋಷಕರುಗಳ ಉದಾರ ಧನಸಹಾಯ, ಸಹಕಾರದಿಂದ ಹೊರತರಲಾಗುತ್ತಿ ರುವುದು ಒಂದು ಸುಯೋಗ. ಹೇಗೋ ಏನೋ ಅಂತೂ ಮಹಾಪುರಾಣದ ಪ್ರತಿ ಮರುಮುದ್ರಣಕ್ಕೂ ಶ್ರವಣಬೆಳಗೊಳದ ಬಾಹುಬಲಿಯ ಮಹಾಮಸ್ತಕಾಭಿ ಷೇಕಕ್ಕೂ ಏನೋ ಒಂದು ರೀತಿಯ ಬಿಡಿಸಲಾಗದ ನಂಟು.

ಈ ಮುದ್ರಣದ ಮೊದಲ ಸಂಪುಟದಲ್ಲಿ ಭಗವಜ್ಜಿನಸೇನಾಚಾರ್ಯ ವಿರಚಿತ ಪೂರ್ವಪುರಾಣದ ಪೂರ್ವಭಾಗದ ನಲವತ್ತೆರಡು ಪರ್ವಗಳಿರುತ್ತವೆ. ಎರಡನೆಯ ಸಂಪುಟದಲ್ಲಿ ಭಗವದ್ಗುಣಭದ್ರಾಚಾರ್ಯ ವಿರಚಿತ ಪೂರ್ವಪುರಾಣದ ಉತ್ತರ ಭಾಗದ ಐದು ಪರ್ವಗಳೂ, ಉತ್ತರಪುರಾಣದ ಮುವ್ವತ್ತು ಪರ್ವಗಳೂ ಇವೆ. ಮೊದಲ ಸಂಪುಟದಲ್ಲಿ ಶಾಂತಿರಾಜ ಶಾಸ್ತ್ರಿಗಳು ಪೂರ್ವಪುರಾಣ ಮತ್ತು ಉತ್ತರ ಪುರಾಣದ ಪ್ರಥಮ ಮುದ್ರಣಗಳಲ್ಲಿ ನೀಡಿದ್ದ ಎಲ್ಲ ಪ್ರಸ್ತಾವನೆ ಮತ್ತು ಮುನ್ನುಡಿ ಗಳನ್ನೂ ಕನ್ನಡ ಸಾಹಿತ್ಯ ಪರಷತ್ತಿನ ಅಂದಿನ ಅಧ್ಯಕ್ಷರೂ ಮಹಾಪುರಾಣದ ದ್ವಿತೀಯ ಮುದ್ರಣಕ್ಕೆ ಕಾರಣಕರ್ತರೂ ಆದ ಡಾ || ಹಂಪ. ನಾಗರಾಜಯ್ಯನವರು ನೀಡಿರುವ ಮುನ್ನುಡಿಯನ್ನೂ ಯಥಾವತ್ತಾಗಿ ಸಂಯೋಜಿಸಲಾಗಿದೆ. ಈ ಬಾರಿ ಪ್ರಥಮ ಮುದ್ರಣದಲ್ಲಿದ್ದ ಎಲ್ಲ ಮುದ್ರಣ ದೋಷಗಳನ್ನು ಹಾಗೂ ನಮ್ಮ ಗಮನಕ್ಕೆ ಬಂದ ಎಲ್ಲ ಅಶುದ್ಧಿಗಳನ್ನೂ ನಿವಾರಿಸಿ ಆದಷ್ಟು ಮಟ್ಟಿಗೆ ದೋಷಗಳೊಂದೂ ತಲೆದೋರ ದಂತೆ ಎಲ್ಲ ಹಂತದಲ್ಲಿಯೂ ಅತ್ಯಂತ ಎಚ್ಚರಿಕೆ ವಹಿಸಿ ಈ ಗ್ರಂಥವನ್ನು ಹೊರ ತರಲಾಗಿದೆ. ಪ್ರತಿ ಶ್ಲೋಕ ಮತ್ತು ಅದರ ಭಾವಾರ್ಥವನ್ನು ಪ್ರತ್ಯೇಕಿಸಿ ಶ್ಲೋಕದ ಕೆಳಗೇ ಭಾವಾರ್ಥ ಬರುವಂತೆ, ಪ್ರತಿ ಪುಟದಲ್ಲೂ ಎರಡು ಕಾಲಂಗಳಲ್ಲಿ ಮತ್ತು ಪ್ರತಿಪುಟದ ತಳಭಾಗದಲ್ಲಿ ಪಾಠಾಂತರ ಬರುವಂತೆ ಸಂಯೋಜಿಸಲಾಗಿದೆ. ಪ್ರತಿ ಪುಟಕ್ಕೂ ಕಾವಿ ವರ್ಣದ ೫ ಮಿ.ಮಿ. ಅಗಲದ ಬಳ್ಳಿ ವಿನ್ಯಾಸದ ಅಂಚನ್ನು (ಬಾರ್ಡರ್) ಅಳವಡಿಸಿ ಗ್ರಂಥದ ಅಂದವನ್ನೂ ಪಾವಿತ್ರ್ಯತೆಯನ್ನೂ ಹೆಚ್ಚಿಸಲಾಗಿದೆ. ಆಸಕ್ತಿಯುಳ್ಳ ವಾಚಕರಿಗೆ, ಸಂಶೋಧಕರಿಗೆ ಅನುಕೂಲವಾಗುವಂತೆ ಪ್ರತಿಪುಟದ ತಲೆಭಾಗದಲ್ಲಿ ಪರ್ವದ ಸಂಖ್ಯೆಯನ್ನೂ ಆ ಪುಟದಲ್ಲಿ ಬರುವ ಶ್ಲೋಕಗಳ ಸಂಖ್ಯೆಯನ್ನೂ ನಮೂದಿಸಲಾಗಿದೆ. ಎರಡನೆಯ ಸಂಪುಟದಲ್ಲಿಯೂ ಇದೇ ಕ್ರಮವನ್ನನುಸರಿಸಿರುವುದಲ್ಲದೆ, ವಿಸ್ತೃತ ಅನುಬಂಧ ಮತ್ತು ಈ ಮುದ್ರಣಕ್ಕೆ ಉದಾರಧನಸಹಾಯ ನೀಡಿರುವ ಎಲ್ಲ ದಾನಿಗಳ ಹೆಸರುಗಳನ್ನೂ ಉಲ್ಲೇಖಿಸ ಲಾಗಿದೆ. ಮೊದಲೆರಡು ಮುದ್ರಣದಲ್ಲಿದ್ದ ವಿಸ್ತೃತವಾದ ಮುನ್ನುಡಿ ಪುಟಗಳನ್ನು ಮೊದಲ ಸಂಪುಟದಲ್ಲಿ ಅಳವಡಿಸಿರುವುದರಿಂದ ಪುನಃ ಎರಡನೆಯ ಸಂಪುಟದಲ್ಲಿ ಚರ್ವಿತ ಚರ್ವಣವಾಗುವುದೆಂಬ ಭಯದಿಂದ ನೀಡಿರುವುದಿಲ್ಲ.

ಈ ಮುದ್ರಣದ ಮೂಲ ಪ್ರೇರಕಶಕ್ತಿಯಾಗಿ, ಮಾರ್ಗದರ್ಶಕರಾಗಿ, ಪ್ರಕಟಣೆಯ ಪ್ರತಿಹಂತದಲ್ಲೂ ಅನುಗ್ರಹಪೂರ್ವಕವಾದ ಸೂಕ್ತಸೂಚನೆ, ಸಲಹೆಗಳನ್ನು ದಯೆ ಪಾಲಿಸಿ ಉದಾರಧನಸಹಾಯವನ್ನೂ ನೀಡಿ ಮುನ್ನಡೆಸಿದವರು ಶ್ರವಣ ಬೆಳಗೊಳದ ಪರಮಪೂಜ್ಯ ಜಗದ್ಗುರು ಕರ್ಮಯೋಗಿ ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳವರು. ಅವರಿಗೆ ಟ್ರಸ್ಟ್ ತನ್ನ ಭಕ್ತಿಪೂರ್ವಕ ಕೃತಜ್ಞತೆಗಳನ್ನು ಸಮರ್ಪಿಸುತ್ತದೆ.

ಈ ಮಹತ್ಕಾರ್ಯಕ್ಕೆ ಉಳಿದೆಲ್ಲ ಮಠಾಧೀಶರುಗಳು ನೀಡಿರುವ ಅನುಗ್ರಹ ಪೂರ್ವಕ ಆಶೀರ್ವಾದ ಮತ್ತು ಸಹಾಯ, ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಪೂಜ್ಯ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರ ಹಾಗೂ ಅವರ ಮಾತೃಶ್ರೀ ರತ್ನಮ್ಮನವರ ಉದಾರ ಧನಸಹಾಯ, ಮತ್ತು ಮಹಾಪುರಾಣದ ಮೂಲ ಪ್ರಕಾಶಕರುಗಳ ಮೊಮ್ಮಕ್ಕಳುಗಳೂ ವೈನಾಡಿನ ಧರ್ಮಾತ್ಮರೂ ಆಗಿರುವ ಶ್ರೀ ಎಂ. ಪಿ. ಧರ್ಮಪಾಲನ್ ಮತ್ತು ಶ್ರೀ ಎಂ. ಪಿ. ಶಾಂತಿವರ್ಮ ಜೈನ್ ಇವರುಗಳು ಈ ಪ್ರಕಾಶನಕ್ಕೂ ಒದಗಿಸಿರುವ ಅಪಾರ ಧನಸಹಾಯ ಹಾಗೂ ಬೆಂಗಳೂರಿನ ಧರ್ಮಾತ್ಮರಾದ ಮಾನ್ಯಶ್ರೀ ರತನ್ ಲಾಲ್ ಹಿರಾನ್‌ರ ಧನಸಹಾಯ ವಿಶೇಷವಾಗಿ ಉಲ್ಲೇಖಾರ್ಹವಾಗಿವೆ. ಅಲ್ಲದೆ ಟ್ರಸ್ಟಿನ ಅನೇಕ ಪೋಷಕರೂ ಧರ್ಮಾಭಿಮಾನಿ ಗಳೂ ಉದಾರ ಧನಸಹಾಯ ನೀಡಿ ಈ ಗ್ರಂಥ ಪ್ರಕಾಶನಕ್ಕೆ ಸಹಕರಿಸಿ ಉಪಕರಿಸಿದ್ದಾರೆ. ಈ ಎಲ್ಲ ಪವಿತ್ರಾತ್ಮರ ಉದಾರ ಸಹಾಯ, ಸಹಕಾರಕ್ಕಾಗಿ ಟ್ರಸ್ಟ್ ಅತ್ಯಂತ ಕೃತಜ್ಞವಾಗಿದೆ. ಈ ಎಲ್ಲ ಮಹನೀಯರ ಮಹೋಪಕಾರವನ್ನು ಸಮಾಜವು ಚಿರಕಾಲ ಸ್ಮರಿಸುತ್ತ ಕೃತಜ್ಞವಾಗಿರಬೇಕು. ಈ ಎಲ್ಲ ಪವಿತ್ರಾತ್ಮರ ಧಾರ್ಮಿಕ ವಂಶವು ಸಂಪತ್ಸಮೃದ್ಧಿಯಿಂದ ಉದಿತೋದಿತವಾಗಿ ಬೆಳೆಯಲೆಂದು ಹಾರೈಸುತ್ತೇವೆ.

ಜೈನ ಸಾಹಿತ್ಯದ ತಲಸ್ಪರ್ಶಿಯಾದ ಅಧ್ಯಯನ ಮಾಡಿರುವವರೂ, ಜ್ಞಾನ ವೃದ್ಧರೂ, ಮೈಸೂರು ವಿಶ್ವವಿದ್ಯಾನಿಲಯದ ಪ್ರಖ್ಯಾತ ಕುಲಪತಿಗಳೂ ಆಗಿದ್ದ ಪ್ರೊ || ದೇ. ಜವರೇಗೌಡ ಅವರು ತಮ್ಮ ಬಿಡುವಿಲ್ಲದ ಅನೇಕ ಕಾರ್ಯಗಳ ಒತ್ತಡವಿದ್ದರೂ ಸಂತೋಷದಿಂದ ಸಕಾಲದಲ್ಲಿ ಈ ಮುದ್ರಣಕ್ಕೆ ತಮ್ಮ ಸ್ವಹಸ್ತದಲ್ಲಿ ಮುನ್ನುಡಿ ಬರೆದುಕೊಟ್ಟು ಉಪಕರಿಸಿ ಈ ಗ್ರಂಥವು ಹೆಚ್ಚು ಅರ್ಥಪೂರ್ಣ ವಾಗುವಂತೆಯೂ ಕಳೆಕಟ್ಟುವಂತೆಯೂ ಮಾಡಿದ್ದಾರೆ. ಅವರಿಗೆ ಟ್ರಸ್ಟ್ ಅನಂತ ಗೌರವಗಳನ್ನೂ ಕೃತಜ್ಞತೆಗಳನ್ನೂ ಸಮರ್ಪಿಸುತ್ತದೆ.

ಇಡೀ ಮಹಾಪುರಾಣ ಗ್ರಂಥಕ್ಕೆ ಶ್ಲೋಕಗಳಿಗೆ ಸಂಬಂಧಿಸಿದಂತೆ ಅನುಬಂಧ ಸಿದ್ಧಪಡಿಸಿ ಕೊಡುವ ಕಾರ್ಯವನ್ನು ಯಾರಿಗೆ ವಹಿಸಬೇಕೆಂಬ ಜಿಜ್ಞಾಸೆ ನಡೆದಿದ್ದಾಗ, ಟ್ರಸ್ಟಿನ ಎಲ್ಲ ಪ್ರಕಾಶನಕಾರ್ಯಗಳಿಗೂ ಅವ್ಯಾಹತ ಸಲಹೆ, ಸಹಕಾರ ನೀಡುತ್ತ ಬಂದಿರುವ ಖ್ಯಾತ ಸಾಹಿತಿ ಮಾನ್ಯ ಡಾ ॥ ಎಂ. ಎ. ಜಯಚಂದ್ರ ಅವರು ಸ್ವಸಂತೋಷದಿಂದ ಮುಂದೆ ಬಂದು ಈ ಕಾರ್ಯವನ್ನು ಶ್ರದ್ಧೆಯಿಂದ ತಮ್ಮೆಲ್ಲ ಸ್ವಂತ ಕೆಲಸ ಕಾರ್ಯಗಳನ್ನು ಬದಿಗೊತ್ತಿ ವಿಸ್ತೃತವಾದ ಅನುಬಂಧವನ್ನು ಬಹುಸಮರ್ಥ ರೀತಿಯಲ್ಲಿ ಸಿದ್ಧಪಡಿಸಿ ಕೊಟ್ಟಿರುವುದಲ್ಲದೆ, ಮುದ್ರಣ ಸಮಯದಲ್ಲಿ ಅನೇಕ ಸಲಹೆ ಸೂಚನೆಗಳನ್ನೂ ನೀಡಿ ವರ್ಣ ಚಿತ್ರಗಳನ್ನು ಚುನಾಯಿಸುವಲ್ಲಿ ಸಹಕರಿಸಿ, ಈ ಗ್ರಂಥವು ಉತ್ಕೃಷ್ಟ ರೀತಿಯಲ್ಲಿ ಹೊರಬರಲು ಸಹಕರಿಸಿದ್ದಾರೆ. ಇವರಿಗೆ ಟ್ರಸ್ಟ್ ಎಂದೆಂದಿಗೂ ಚಿರಋಣಿಯಾಗಿದೆ.

ಈ ಮುದ್ರಣದಲ್ಲಿ ಇಪ್ಪತ್ತೆರಡು ತೀರ್ಥಂಕರರ ಮತ್ತು ಸಮವಸರಣದ ಅಪೂರ್ವ ವರ್ಣಚಿತ್ರಗಳನ್ನು ಸಂಯೋಜಿಸಲು ಅನುಮತಿಸಿ ಇದೊಂದು ಅಪೂರ್ವ ದಾಖಲೆಯಾಗಿ ಉಳಿಯುವಂತೆ ಅವುಗಳ ಪ್ರತಿಗಳನ್ನು ಪಡೆಯಲು ಸಹಕರಿಸಿದ ಹಾಸನದ ಮಾನ್ಯಶ್ರೀ ಎ. ಜ್ವಾಲನಯ್ಯನವರಿಗೆ ಟ್ರಸ್ಟ್ ಚಿರಋಣಿಯಾಗಿದೆ. ಈ ವರ್ಣಚಿತ್ರಗಳನ್ನು ಮಾನ್ಯ ಶ್ರೀ ಜ್ವಾಲನಯ್ಯನವರ ಮುತ್ತಾತಂದಿರೂ ಧರ್ಮಾತ್ಮರೂ ಆದ ಸ್ವ ॥ ಶ್ರೀ ಜೆ. ಸಿದ್ದಪ್ಪನವರು ಅತಿಶ್ರಮವಹಿಸಿ ಸಂಗ್ರಹಿಸಿ ಕಾಪಾಡಿಕೊಂಡು ಬಂದಿದ್ದುದಾಗಿ ತಿಳಿದು ಬಂದಿದೆ.

ಡಿ. ಟಿ. ಪಿ. ಕಂಪೋಸಿಂಗ್ ಮತ್ತು ಮುದ್ರಣ ಕಾರ್ಯದ ಬಗ್ಗೆ, ವರ್ಣಚಿತ್ರಗಳ ಮತ್ತು ಬಾರ್ಡರ್ ವಿನ್ಯಾಸ ರಚನೆಯಲ್ಲಿ ಅನೇಕ ಸಲಹೆ, ಸಹಕಾರಗಳನ್ನು ನೀಡಿರುವ ಶ್ರೀ ಅನ್‌ಷುಮಾಲಿನ್ ಡಿ. ಷಹ ಅವರಿಗೂ; ೧೯೨೫ ಮತ್ತು ೧೯೩೩ ರಲ್ಲಿ ಪ್ರಕಾಶಿಸಲ್ಪಟ್ಟಿದ್ದ 'ಪೂರ್ವಪುರಾಣ' ಗ್ರಂಥದ ಪ್ರತಿಗಳನ್ನು ಒದಗಿಸಿಕೊಟ್ಟ ಬೆಂಗಳೂರಿನ ಧರ್ಮಾತ್ಮರಾದ ಶ್ರೀಮತಿ ದೊಡ್ಡರಾಜಮ್ಮ ಆದಿರಾಜಯ್ಯ ನವರಿಗೂ; ಅತ್ಯಂತ ಶ್ರಮವಹಿಸಿ ಈ ಗ್ರಂಥಕ್ಕೆ ನಾಲ್ಕು ವರ್ಣಗಳ ಸುಂದರ ಜಾಕೆಟ್‌ನ ವಿನ್ಯಾಸ, ಕಡೆಯ ಪುಟಗಳ ವಿನ್ಯಾಸ ಮತ್ತು ವರ್ಣಚಿತ್ರಗಳನ್ನು ಸಿದ್ಧಪಡಿಸಿಕೊಟ್ಟು ಸಹಕರಿಸಿರುವ ಬೆಂಗಳೂರಿನ ಬಿಂದು ಗ್ರಾಫಿಕ್ಸ್‌ನ ಶ್ರೀ ಆರ್. ಎಸ್. ಪದ್ಮರಾಜ್ ಅವರಿಗೂ; ಮುದ್ರಣದ ಹಲವಾರು ಸಂದರ್ಭಗಳಲ್ಲಿ ಸಮಯೋಚಿತ ಸಲಹೆಗಳನ್ನು ನೀಡಿ ಸಹಕರಿಸಿರುವ ಸನ್ಮಾನ್ಯ ಡಾ ॥ ಹಂಪ. ನಾಗರಾಜಯ್ಯನವರಿಗೂ ಶಮನೇ ವಾಡಿಯ ಡಾ ॥ ಎ. ಆರ್. ಚೌಗುಲೆ ಅವರಿಗೂ; ಮೈಸೂರಿನ ಶ್ರೀ ಪ. ನಾಗರಾಜಯ್ಯನವರಿಗೂ; ಗೊಮ್ಮಟವಾಣಿಯ ಸಂಪಾದಕರಾದ ಶ್ರೀ ಎಸ್. ಎನ್. ಅಶೋಕ್ ಕುಮಾರ್ ಅವರಿಗೂ; ಹಲವಾರು ಬಾರಿ ಮುದ್ರಣದ ಕರಡು(ಪ್ರೂಫ್) ತಿದ್ದುವಲ್ಲಿ ಸತತವಾಗಿ ಶ್ರಮಿಸಿ ಸಹಕರಿಸಿರುವ ಶ್ರೀ ಎಸ್. ಬಿ. ಬ್ರಹ್ಮಾನಂದ್‌ರಿಗೂ; ಈ ಪ್ರಕಾಶನಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ ನೀಡಿರುವ ಎಲ್ಲ ಮಹನೀಯರಿಗೂ ಟ್ರಸ್ಟ್ ಆಭಾರಿಯಾಗಿದೆ.

ಅಲ್ಲದೆ ಹಲವಾರು ಬಾರಿ ಕರಡುಗಳಲ್ಲಿ ಗುರ್ತುಮಾಡಿದ ಎಲ್ಲ ತಿದ್ದುಪಡಿ ಗಳನ್ನೂ, ಸೂಚನೆಗಳನ್ನೂ ಆಕಾರಗಳನ್ನೂ ಸ್ವಲ್ಪವೂ ಬೇಸರಿಸದೆ ಅಳವಡಿಸಿ ಈ ಬೃಹತ್ ಗ್ರಂಥದ ಸುಂದರ ಡಿ. ಟಿ. ಪಿ. ಕಂಪೋಸಿಂಗ್ ಮಾಡಿಕೊಟ್ಟ "ಸುಧಾ ಮುದ್ರಣ"ದ ಶ್ರೀ ಧನಂಜಯ ವರ್ಖೇಡ್‌ಕರ್ ಅವರನ್ನೂ; ಅತಿಸ್ವಲ್ಪ ಕಾಲದಲ್ಲೇ ಸುಂದರವಾಗಿ ಮುದ್ರಿಸಿಕೊಟ್ಟ ಓಂಕಾರ್ ಆಫ್‌ಸೆಟ್ ಪ್ರಿಂಟರ್ಸ್‌ನ ಮಾಲಿಕರಾದ ಶ್ರೀ ವೆಂಕಟೇಶ ಬಾಬು ಅವರನ್ನೂ; ಈ ಗ್ರಂಥಕ್ಕೆ ಸೂಕ್ತವಾದ, ಹೆಚ್ಚು ಬಾಳಿಕೆ ಬರುವಂತಹ ಉತ್ತಮವಾದ ಮತ್ತು ಸುಂದರವಾದ ರಟ್ಟಿನ ಪೆಟ್ಟಿಗೆಗಳನ್ನು ಸಕಾಲದಲ್ಲಿ ತಯಾರಿಸಿಕೊಟ್ಟು ಸಹಕರಿಸಿದ ಸಮಾಜರತ್ನ ಮಾನ್ಯ ಶ್ರೀ ಜಿ. ಹೆಚ್. ಆದಿರಾಜಯ್ಯನವರ ಸುಪುತ್ರರುಗಳಾದ ಶ್ರೀಹರ್ಷ ಮತ್ತು ಶ್ರೀ ಸುಮಂತ್ (ಮೆ ॥ ಹರ್ಷ ಪ್ಯಾಕೇಜಿಂಗ್ ಇಂಡಸ್ಟ್ರೀಸ್‌ನ ಮಾಲಿಕ)ರನ್ನೂ; ಈ ಮುದ್ರಣದ ವಿನ್ಯಾಸ, ರೂಪುರೇಷೆ ರಚನೆಯಲ್ಲಿ, ಮುದ್ರಣದ ಸಮಯದಲ್ಲಿ, ಸೂಕ್ತ ಕಾಗದ ಆರಿಸುವಲ್ಲಿ, ಸುಂದರ ಬೈಂಡಿಂಗ್ ಕೆಲಸದಲ್ಲಿ ಹೀಗೆ ಪ್ರತಿಯೊಂದು ಹಂತದಲ್ಲಿಯೂ ಅಭೂತಪೂರ್ವ, ಸೌಹಾರ್ದಯುತ ಸಹಕಾರ ನೀಡಿರುವ ಬೆಂಗಳೂರಿನ ಬಿ. ಬಿ. ಡಿ. ಪವರ್ ಪ್ರೆಸ್‌ನ ಸನ್ಮಾನ್ಯಶ್ರೀ ಮಲ್ಯ ಸಹೋದರರನ್ನೂ ಟ್ರಸ್ಟ್ ತುಂಬು ಕೃತಜ್ಞತೆಯಿಂದ ಸ್ಮರಿಸುತ್ತದೆ.

ಬೆಂಗಳೂರು
ದಿನಾಂಕ ೧೫-೮-೧೯೯೨

**ಪಂಡಿತರತ್ನ ಎರ್ತೂರು ಶಾಂತಿರಾಜ ಶಾಸ್ತ್ರಿ ಟ್ರಸ್ಟ್**

# ಪ್ರಸಿದ್ಧ ಪತ್ರಿಕೆ

## ಶ್ರೀಃ

ಶ್ರೀಮಚ್ಚಾಮುಂಡಿಕಾಂಬಾ ಚರಣಸರಸಿಜದ್ವಂದ್ವ ಸೇವಾಧುರೀಣ ಸಮಸ್ತ ಭೂಮಂಡಲ ಮಂಡನಾಯಮಾನ ನಿಖಿಲದೇಶಾವತಂಸ ಕರ್ಣಾಟಕ ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯಮಾನ ನಿಖಿಲ ಕಲಾನಿಧಿ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯ ರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲ ಪಯಃಪಾರಾವಾರ ಕಲಾನಿಧಿ ಶಂಖಚಕ್ರಾಂಕುಶ ಕುಠಾರ ಮಕರ ಮತ್ಸ್ಯ ಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತರಾದ ಕರ್ಣಾಟಕ ಸಿಂಹಾಸನಾಧೀಶ್ವರ

ಶ್ರೀಮಜ್ಜಯ ಚಾಮರಾಜೇಂದ್ರ ಒಡೆಯರ್ ಬಹದೂರ್,
ಜಿ. ಸಿ. ಬಿ., ಜಿ. ಸಿ. ಎಸ್. ಐ., ಮಹಾಸ್ವಾಮಿಯವರು

ಶಾಲೀವಾಹನಶಕ ೧೮೬೮ನೆಯ ವ್ಯಯನಾಮ ಸಂವತ್ಸರದ ಆಷಾಢ ಬಹುಳ ಸಪ್ತಮೀ ಭಾನುವಾರದಲ್ಲು ವರ್ಧಂತಿ ಮಹೋತ್ಸವ ಪ್ರಯುಕ್ತವಾದ ದರ್ಬಾರಿನಲ್ಲಿ ನಮ್ಮ ಅನುಗ್ರಹಕ್ಕೆ ಪಾತ್ರರಾದ—

**ಬ್ರಂ ॥ ಶ್ರೀ ॥ ನ್ಯಾಯತೀರ್ಥ ಮಹಾವಿದ್ವಾನ್ ಎತ್ತೂರು**
**ಶಾಂತಿರಾಜ ಶಾಸ್ತ್ರಿಗಳವರಿಗೆ**

“ ಪಂಡಿತರತ್ನ ”

ಎಂಬ ಬಿರುದನ್ನು ತಕ್ಕ ಮರ್ಯಾದೆಗಳೊಡನೆ ದಯಪಾಲಿಸಿರುತ್ತೇವೆ.

ಶ್ರೀರಸ್ತು

**ಜೈನಶಾಸ್ತ್ರ ವಿಶಾರದ, ನ್ಯಾಯತೀರ್ಥ, ಪಂಡಿತರತ್ನ,**
**ಮೈಸೂರು ಶ್ರೀಮನ್ಮಹಾರಾಜಾಸ್ಥಾನ ಮಹಾವಿದ್ವಾನ್,**

# ಶ್ರೀಮಾನ್ ಎ. ಶಾಂತಿರಾಜಶಾಸ್ತ್ರಿಗಳವರಿಗೆ

**ಬೆಂಗಳೂರಿನಲ್ಲಿರುವ ನಿಖಿಲ ಕರ್ಣಾಟಕ ವಿದ್ಯಾ ಸಂಸ್ಕೃತಿ ಸಂಸ್ಥೆಯಾದ**
**ಕನ್ನಡ ಸಾಹಿತ್ಯ ಪರಿಷತ್ತು ಅರ್ಪಿಸಿದ**

## ಸನ್ಮಾನಪತ್ರ

ಮಹಾಶಯರೇ,

ಕನ್ನಡ ಸಾಹಿತ್ಯವು ಆದಿಕಾಲದಿಂದಲೂ ಜೈನ ಕವಿಪಂಡಿತ ಪರಂಪರೆಯಿಂದ ಪೋಷಣೆಹೊಂದಿ ಪರಿಪುಷ್ಟವಾಗಿ ಬೆಳೆದು ಬಂದಿದೆ ಎಂಬುದು ಸರ್ವವಿದಿತವಾದ ಸಂಗತಿಯಾಗಿದೆ. ಪಂಪ ರನ್ನಾದಿ ಕವಿಪುಂಗವರೂ, ಕೇಶಿರಾಜ, ಭಟ್ಟಾಕಳಂಕ ಮೊದಲಾದ ಪಂಡಿತವರೇಣ್ಯರೂ, ಚಾವುಂಡರಾಯನಂಥ ಕಲಾಪೋಷಕರೂ ಕನ್ನಡದ ಕೀರ್ತಿಯನ್ನು ಎತ್ತಿ ಹಿಡಿದು, ಚಿರಸ್ಮರಣೀಯರಾಗಿ ಇಂದಿಗೂ ಕನ್ನಡಿಗರಿಗೆ ಮಾರ್ಗದರ್ಶಕ ರಾಗಿದ್ದಾರೆ. ಇಂಥ ಒಂದು ಪರಂಪರೆಯನ್ನು ಸಾರೋದ್ಧಾರವಾಗಿ ನಡಸಿಕೊಂಡು ಬರುವ ಕವಿಪಂಡಿತ ವರ್ಗವು ವಿರಳವಾಗುತ್ತಿರುವ ಈ ಕಾಲದಲ್ಲಿ ಅರ್ಧ ಶತಮಾನದಿಂದ ಜೈನಸಾಹಿತ್ಯ ಮತ್ತು ಧರ್ಮಗಳ ಸೇವೆಯನ್ನು ವಿವಿಧಕೃತಿಗಳಿಂದ ಮಾಡಿ ಆ ಪೂರ್ವಪಂಡಿತರನ್ನು ಸ್ಮರಣೆಗೆ ತರುತ್ತಿರುವ, ಉಭಯಭಾಷಾಸಾಹಿತ್ಯಗಳಲ್ಲಿ ಮಹಾ ವಿದ್ವಾಂಸರಾದ ತಮ್ಮಲ್ಲಿ ಕರ್ಣಾಟಕ ಮಹಾಜನರಿಗಿರುವ ಗೌರವಬುದ್ಧಿಯನ್ನೂ ಅಭಿಮಾನವನ್ನೂ ಈ ಸನ್ಮಾನಪತ್ರ ಮುಖೇನ ವ್ಯಕ್ತಪಡಿಸಲು ನಮಗೆ ದೊರೆತಿರುವ ಈ ಅವಕಾಶವನ್ನು ನಾವು ಒಂದು ಸುಯೋಗವೆಂದು ಭಾವಿಸಿದ್ದೇವೆ.

ಕನ್ನಡ ನಾಡಿನ ವಿದ್ವತ್ಪರಂಪರೆಗೆ ಸಹಜವಾಗಿರುವ ಉಭಯ ಭಾಷಾ ಪಾಂಡಿತ್ಯದ ಜೊತೆಗೆ ತಾವು ಆಧುನಿಕ ವಿಷಯಗಳಲ್ಲಿಯೂ ಪಾಂಡಿತ್ಯವನ್ನು ಸಂಪಾದಿಸಿ, ಸತತ ಪರಿಶ್ರಮದಿಂದಲೂ ಸೂಕ್ಷ್ಮವಿಮರ್ಶನಾಸಾಮರ್ಥ್ಯದಿಂದಲೂ ಪುರಾತನ ಸಂಸ್ಕೃತ ಕನ್ನಡ ಗ್ರಂಥಗಳನ್ನು ವ್ಯಾಖ್ಯಾನಗಳೊಡನೆ ಸಂಪಾದಿಸಿ ಪ್ರಕಟಿಸಿರುವಿರಲ್ಲದೆ ಸ್ವತಂತ್ರವಾಗಿಯೂ ಗ್ರಂಥರಚನೆಮಾಡಿ ಜೈನಧರ್ಮವನ್ನು ಪ್ರಕಾಶಪಡಿಸಿದ್ದೀರಿ. ಕನ್ನಡದ ಆದಿಕವಿ ಪಂಪನಿಗೆ ಕೀರ್ತಿತಂದ ಆದಿಪುರಾಣಕ್ಕೆ ಆಕರವಾದ ಜಿನಸೇನಾಚಾರ್ಯರ ''ಮಹಾಪುರಾಣ'', ಸಮಂತಭದ್ರ ಪೂಜ್ಯಪಾದಾದಿ ಜೈನಾಚಾರ್ಯರು ವ್ಯಾಖ್ಯಾನಮಾಡಿ ಕೊಂಡಾಡಿರುವ ಉಮಾಸ್ವಾತಿಪ್ರಣೀತವಾದ ''ತತ್ತ್ವಾರ್ಥಾಧಿಗಮ ಸೂತ್ರ'', ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಯ ''ದ್ರವ್ಯಸಂಗ್ರಹ'', ''ಅನ್ಯಯೋಗ ವ್ಯವಚ್ಛೇದಿಕಾ'' ಮೊದಲಾದ ಶಾಸ್ತ್ರಗ್ರಂಥಗಳನ್ನೂ, ''ದಶಭಕ್ತಿ'', ''ಜಿನಭಜನಸಾರ'' ಮೊದಲಾದ ಧರ್ಮಪ್ರಸಾರ ಸಾಧಕವಾದ ಸುಲಭ ಗ್ರಂಥಗಳನ್ನೂ, ''ನೇಮಿಜಿನೇಶಸಂಗತಿ'', ''ಶತಕತ್ರಯೀ'' ಮೊದಲಾದ ಕನ್ನಡ ಕಾವ್ಯ ಗ್ರಂಥಗಳನ್ನೂ ಇನ್ನೂ ಹಲವಾರು ಕನ್ನಡ ಸಂಸ್ಕೃತ ಗ್ರಂಥಗಳನ್ನೂ ಟೀಕೆ ಟಿಪ್ಪಣಿ ವ್ಯಾಖ್ಯಾನ ವಿವರಣಾದಿಗಳೊಡನೆ ಪರಿಶೋಧಿಸಿ ಪ್ರಕಟಿಸಿ ಅಭ್ಯಾಸಿಗಳಿಗೆ ಅತ್ಯಾವಶ್ಯಕವೂ ಅಮೂಲ್ಯವೂ ಆದ ಸಹಾಯವನ್ನು ಕಲ್ಪಿಸಿಕೊಟ್ಟಿದ್ದೀರಿ. ತಾವು ಜೈನ ಸಮಾಜಕ್ಕೆ ಮಾತ್ರವಲ್ಲದೆ ಒಟ್ಟು ನಾಡು ನುಡಿಗಳಿಗೇ ಈ ಮೂಲಕ ಅಮೋಘವಾದ ಸೇವೆ ಸಲ್ಲಿಸಿದ್ದೀರಿ.

ಮೈಸೂರು ಸರ್ಕಾರದ ಪ್ರಾಚ್ಯಸಂಶೋಧನಾಲಯದಲ್ಲಿಯೂ, ಪೌರಸ್ತ್ಯಗ್ರಂಥಭಂಡಾರದಲ್ಲಿಯೂ, ಹಲವು ವರ್ಷಗಳ ಕಾಲ ಪಂಡಿತರಾಗಿಯೂ, ಕೀರ್ತಿಶೇಷರಾದ ಶ್ರೀಮಾನ್ ವರ್ಧಮಾನಯ್ಯನವರ ಮೈಸೂರಿನ ವಿದ್ಯಾರ್ಥಿನಿಲಯದಲ್ಲಿ ಜೈನ ಧರ್ಮಾಚಾರ್ಯರಾಗಿಯೂ, ಚೈತ್ಯಾಲಯದಲ್ಲಿ ಜೈನಾಗಮ ಪುರಾಣಗಳನ್ನು ಶ್ರಾವಕರಿಗೆ ತಿಳಿನುಡಿಗಳಲ್ಲಿ ಹೇಳಿ ವಿವರಿಸುತ್ತಾ ಪೌರಾಣಿಕರಾಗಿಯೂ, ಅನೇಕ ಜೈನ ಸಂಸ್ಥೆಗಳಲ್ಲಿ ಮತ್ತು ಉತ್ಸವ ಸಮಾರಂಭಗಳಲ್ಲಿ ಪ್ರಮುಖಪಾತ್ರ ವಹಿಸಿ ಸಮಾಜ ಸೇವಕರಾಗಿಯೂ ದುಡಿದು ಮಹಾ ಜನರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದೀರಿ.

ತಮ್ಮ ಧರ್ಮಶ್ರದ್ಧೆ ಮತ್ತು ಶಾಸ್ತ್ರ ಪಾಂಡಿತ್ಯಗಳಿಗಾಗಿ ಶ್ರವಣಬೆಳುಗೊಳದ ಶ್ರೀ ಮಠದಿಂದ ''ಜೈನಶಾಸ್ತ್ರ ವಿಶಾರದ'' ಎಂಬ ಪ್ರಶಸ್ತಿಯನ್ನು ಪಡೆದಿದ್ದೀರಿ. ತಮ್ಮ ವಿದ್ಯಾ ವೈದುಷ್ಯಗಳಿಗೆ ಮೆಚ್ಚಿದ ಆಳಿದ ಮಹಾಸ್ವಾಮಿಯವರಿಂದ ''ಆಸ್ಥಾನ ಮಹಾವಿದ್ವಾನ್'' ಪದವಿಯನ್ನೂ, ಮತ್ತು ಈಗಿನ ಮಹಾಸ್ವಾಮಿಯವರಿಂದ ''ಪಂಡಿತರತ್ನ'' ಎಂಬ ಬಿರುದನ್ನೂ ಗಳಿಸಿದ್ದೀರಿ. ''ವಿವೇಕಾಭ್ಯುದಯ'', ''ವಿಶ್ವಬಂಧು'' ಪತ್ರಿಕಾ ಸಂಪಾದಕರಾಗಿ ಜನಮನವನ್ನು ಮೆಚ್ಚಿಸಿ ಆವರಿಂದಲೂ ಮನ್ನಣೆ ಪಡೆದಿದ್ದೀರಿ. ಹೀಗೆ ಗುರುಮನೆ ಅರಮನೆ ಸಮಾಜ-ಎಲ್ಲೆಡೆಗಳಿಂದಲೂ ಗೌರವ ವಿಶ್ವಾಸಗಳನ್ನು ಸಂಪಾದಿಸಿರುತ್ತೀರಿ. ಆಡಂಬರವಿಲ್ಲದ ಜೀವನ, ಸೌಜನ್ಯ, ಧರ್ಮಶ್ರದ್ಧೆ, ವಿದ್ಯಾ ವಿನಯ ಗುಣಗಳಿಂದ ಸರ್ವಮಾನ್ಯರೂ ಮಹಾಪಂಡಿತರೂ ಆದ ತಮಗೆ ಕನ್ನಡಿಗರೆಲ್ಲರ ಪ್ರತಿನಿಧಿ ಸಂಸ್ಥೆಯಾದ ಈ ಕನ್ನಡ ಸಾಹಿತ್ಯ ಪರಿಷತ್ತು ಮರ್ಯಾದೆ ಸಲ್ಲಿಸುವುದು ಉಚಿತವೇ ಆಗಿದೆ.

ನಮ್ಮ ಗೌರವ ವಿಶ್ವಾಸಗಳ ಕುರುಹಾಗಿ ಈ ಕಾಣಿಕೆಯನ್ನು ಅಂಗೀಕರಿಸುವುದಕ್ಕೆ ತಾವು ಒಪ್ಪಿದ್ದಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

ತಮ್ಮ ಶಾಸ್ತ್ರ ಸಾಹಿತ್ಯ ಸೇವಾಕಾರ್ಯಗಳು ಇತೋಪ್ಯತಿಶಯವಾಗಿಯೂ ನಿರ್ವಿಘ್ನವಾಗಿಯೂ, ನಡೆಯುವಂತೆ ತಮಗೆ ಆಯುರಾರೋಗ್ಯಭಾಗ್ಯಗಳನ್ನು ಅನುಗ್ರಹಿಸಲೆಂದು ಅನನ್ಯಭಾವದಿಂದ ಭಗವಂತನನ್ನು ಪ್ರಾರ್ಥಿಸುತ್ತೇವೆ.

ಶ್ರೀ ಕೃಷ್ಣರಾಜ ಪರಿಷನ್ಮಂದಿರ,
ಬೆಂಗಳೂರು
ತಾ ॥ ೧೩ ಮೇ ೧೯೫೧

ಇಂತು
ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು

# ಪ್ರಸ್ತಾವನೆ

**( ಪೂರ್ವಪುರಾಣದ ಪೂರ್ವಭಾಗಕ್ಕೆ ಬರೆದದ್ದು – ೧೯೨೫ )**

ಯಾವ ಸಮಾಜವೇ ಆಗಲಿ ಅದರ ಅಸ್ತಿತ್ವವು ಜಗತ್ತಿನಲ್ಲಿ ಚಿರಕಾಲವಿರಬೇಕಾದರೆ ಅದರ ಅಖಂಡವಾದ ಸಾಹಿತ್ಯವು ಅವಿಚ್ಛಿನ್ನವಾಗಿರಬೇಕು. ಧರ್ಮಾವಲಂಬಿಗಳು ನಾಶವಾದರೂ ಆ ಧರ್ಮಬೋಧಕವಾದ ಸಾಹಿತ್ಯವು ನಿರಪಾಯವಾಗಿದ್ದರೆ ಅದರ ಮಹಿಮೆಯಿಂದ ಮುಂದೆ ಮುಂದೆ ಹೊಸಹೊಸದಾಗಿ ಧರ್ಮಾವಲಂಬಿಗಳುಂಟಾಗುವರು. ಆದರೆ ಧರ್ಮಬೋಧಕವಾದ ಸಾಹಿತ್ಯವು ನಾಶವಾಗಿ ಆ ಧರ್ಮಾವಲಂಬಿಗಳಿದ್ದರೂ ಅವರ ಕಾಲದವರೆಗೆ ಮಾತ್ರ ಆ ಧರ್ಮವು ಇರುವುದಲ್ಲದೆ ಅವರು ಅಳಿದ ಮೇಲೆ ಧರ್ಮವೂ ಅವರ ಜೊತೆಯಲ್ಲೇ ಅಳಿದು ಹೋಗುವುದು. ಒಂದು ಕಾಲದಲ್ಲಿ ಬಿಟ್ಟ ಫಲಗಳು ನಾಶವಾಗಿ ಹೋದರೂ ವೃಕ್ಷವು ನಿರಪಾಯವಾಗಿದ್ದರೆ ಉತ್ತರೋತ್ತರ ಫಲಗಳುಂಟಾಗುತ್ತಿರಬಹುದು. ಫಲಗಳಿದ್ದು ವೃಕ್ಷವು ನಾಶವಾಗಿ ಹೋದರೆ ಆ ಫಲಗಳು ಮುಗಿದಮೇಲೆ ಮುಂದೆ ಫಲಗಳು ದೊರೆಯುವ ಆಸೆಯಿಲ್ಲವು. ರತ್ನಗಳು ನಾಶವಾಗಿ ಹೋದರೂ ಗಣಿಯು ನಾಶವಾಗದಿದ್ದರೆ ಮುಂದೆ ರತ್ನಗಳು ದೊರೆಯುತ್ತಿರಬಹುದು. ಗಣಿಯು ಹಾಳಾಗಿ ರತ್ನಗಳಿದ್ದರೂ ಅವು ನಾಶವಾಗಿ ಹೋದಮೇಲೆ ಪುನಃ ಸಿಕ್ಕುವ ಸಂಭವವಿಲ್ಲವು. ಆದುದರಿಂದ ತನ್ನ ಧರ್ಮವು ಭೂಮಂಡಲದಲ್ಲಿ ಅಜರಾಮರವಾಗಿರಬೇಕೆಂದು ಬಯಸುವ ಪ್ರತಿಯೋರ್ವ ಧರ್ಮಾಭಿಮಾನಿಯೂ ತನ್ನ ಧರ್ಮದ ಸ್ಥಿರತೆಗೆ ಮೂಲಕಾರಣವಾದ ಸಾಹಿತ್ಯವು ಲೋಪವಾಗದಂತೆ ನೋಡಿಕೊಳ್ಳುವುದೇ ತನ್ನ ಆದ್ಯ ಕರ್ತವ್ಯವೆಂದು ಭಾವಿಸಬೇಕು. ನಿಜವಾದ ಧರ್ಮರಕ್ಷಣೆಯೆಂಬುದಿದು.

ಸಾಹಿತ್ಯ ಶಬ್ದಕ್ಕೆ ''ಸಹಿತಸ್ಯ ಭಾವಃ ಸಾಹಿತ್ಯಂ'' ಎಂಬ ವ್ಯುತ್ಪತ್ತಿಯಿಂದ ಪರಸ್ಪರವಾಗಿ ಸೇರುವಿಕೆಯೆಂದೂ ''ಪರಸ್ಪರಸಾಪೇಕ್ಷಾಣಾಂ ತುಲ್ಯರೂಪಾಣಾಂ ಯುಗಪದೇಕಕ್ರಿಯಾನ್ವಯಿತ್ವಂ ಸಾಹಿತ್ಯಂ–ಪರಸ್ಪರಸಾಪೇಕ್ಷಗಳಾದ ಸಮಾನರೂಪ ವಸ್ತುಗಳಿಗೆ ಏಕಕಾಲದಲ್ಲಿ ಒಂದು ಕ್ರಿಯೆಯೊಡನೆ ಸಮನ್ವಯವಾಗುವಿಕೆಯು ಸಾಹಿತ್ಯವು'' ಎಂದೂ ಬೇರೆಬೇರೆ ಅರ್ಥಗಳಿದ್ದರೂ ಪ್ರಕೃತದಲ್ಲಿ ಸಾಹಿತ್ಯವೆಂದರೆ ಗ್ರಂಥವಿಶೇಷಗಳೆಂದರ್ಥವು. ಅಂತಹ ಗ್ರಂಥಗಳನ್ನು ಮಹಾಜ್ಞಾನಸಂಪನ್ನರಾದ ಮಹರ್ಷಿಗಳೂ ಕವಿಗಳೂ ಪರಂಪರಾಗತವಾದ ಪರಿಪಾಠಿಯಿಂದ ಆಯಾಕಾಲದಲ್ಲಿ ರಚಿಸಿದರೂ ಆ ಗ್ರಂಥಗಳಲ್ಲಿರುವ ವಿಷಯಗಳಿಗೆ ಮೂಲಕರ್ತರು ಸರ್ವಜ್ಞರಾಗಿರಬೇಕು. ಉತ್ತರೋತ್ತರ ಗ್ರಂಥಕರ್ತೃಗಳ ಗ್ರಾಂಥಿಕವಿಷಯಗಳು ಯಥೋಕ್ತವಾದ ಪೂರ್ವಪೂರ್ವಗ್ರಾಂಥಿಕವಿಷಯಗಳಿಗೆ ಅವಿರುದ್ಧಗಳಾಗಿದ್ದರೇನೇ ಅವುಗಳಿಗೆ ಪ್ರಾಮಾಣ್ಯವು ಬರುವುದು. ಹೀಗಿರುತ್ತ ಆ ಪೂರ್ವಗ್ರಂಥಗಳು ನಾಶವಾದರೆ ಮುಂದೆ ಆ ವಿಷಯಗಳ ಉತ್ಪತ್ತಿಯು ಹೇಗೆ? ಈ ಕಾಲದಲ್ಲಿ ಸರ್ವಜ್ಞರು ಹುಟ್ಟುವಂತಿಲ್ಲ. ನಮ್ಮಗಳ ಅಜಾಗರೂಕತೆಯಿಂದ ಎಷ್ಟೋ ಗ್ರಂಥಗಳು ನಾಶವಾಗಿ ತದ್ಗತವಾದ ಅನೇಕ ಅಲಭ್ಯ ವಿಷಯಗಳು ಲುಪ್ತವಾದುವು. ಈ ಯುಗದಲ್ಲಿ ಆ ವಿಷಯಗಳು ಪುನಃ ಲಭ್ಯವಾಗುವ ಸಂಭವವೇ ಇಲ್ಲವು. ಆದುದರಿಂದ ಅಳಿದುಳಿದ ಗ್ರಂಥಗಳನ್ನಾದರೂ ಜತನದಿಂದ ಕಾಪಾಡುವುದೂ ಲೋಕಕ್ಕೆ ಜ್ಞಾನದಾನವನ್ನು ಮಾಡುವುದಕ್ಕೋಸ್ಕರ ಶ್ರಮಪಟ್ಟು ಆ ಗ್ರಂಥಗಳನ್ನು ರಚಿಸಿದ ಗ್ರಂಥಕರ್ತರ ಉದ್ದೇಶಕ್ಕೆ, ಅವುಗಳನ್ನು ಬಚ್ಚಿಟ್ಟು ಭಂಗವನ್ನು ತರದೆ ಸಾಧ್ಯವಾದಷ್ಟು ಪ್ರಕಾಶಪಡಿಸುವುದೂ ನಮ್ಮಗಳ ಪರಮಕರ್ತವ್ಯಗಳಾಗಿವೆ. ಅಂತಹ ಗ್ರಂಥಗಳಲ್ಲಿ ಮಹಾಪುರಾಣವು ಒಂದಾಗಿದೆ. ಇಪ್ಪತ್ತನಾಲ್ಕುಮಂದಿ ತೀರ್ಥಂಕರರೂ ಹನ್ನೆರಡು ಮಂದಿ ಚಕ್ರವರ್ತಿಗಳೂ ಒಂಬತ್ತುಮಂದಿ ಬಲಭದ್ರರೂ ಒಂಬತ್ತುಮಂದಿ ನಾರಾಯಣರೂ ಒಂಬತ್ತುಮಂದಿ ಪ್ರತಿನಾರಾಯಣರೂ ಸೇರಿ ಅರುವತ್ತಮೂರು ಮಂದಿ ಪ್ರಸಿದ್ಧಪುರುಷರ(ತ್ರಿಷಷ್ಟಿಶಲಾಕಾಪುರುಷರ) ಚರಿತ್ರೆಯನ್ನು ಪ್ರತಿಪಾದಿಸುವ ಗ್ರಂಥಕ್ಕೆ ಮಹಾಪುರಾಣವೆಂದು ಹೆಸರು. ಈ ವಿಷಯವನ್ನು ಗ್ರಂಥಕರ್ತರೇ ಆರಂಭದಲ್ಲಿ ವಿಶದವಾಗಿ ಹೇಳಿದ್ದಾರೆ. ಮಹಾಪುರಾಣದಲ್ಲಿ ಪೂರ್ವಪುರಾಣವೆಂದೂ ಉತ್ತರಪುರಾಣವೆಂದೂ ಎರಡು ಭಾಗಗಳಿವೆ. ಪೂರ್ವಪುರಾಣದಲ್ಲಿ ಶ್ರೀವೃಷಭಸ್ವಾಮಿಯೆಂಬ ಪ್ರಥಮತೀರ್ಥಂಕರರ ಮತ್ತು ಭರತನೆಂಬ ಪ್ರಥಮ ಚಕ್ರವರ್ತಿಯ ಚರಿತ್ರೆಗಳು ಬಹಳ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಮಿಕ್ಕ ಅರುವತ್ತೊಂದು ಮಂದಿ ಮಹಾಪುರುಷರ ಚರಿತ್ರೆಗಳು ಉತ್ತರಪುರಾಣದಲ್ಲಿ ವರ್ಣಿಸಲ್ಪಟ್ಟಿವೆ. ಈ ಎರಡು ಪುರಾಣಗಳಲ್ಲಿಯೂ ಇನ್ನೂ ಅನೇಕ ಮಂದಿಗಳ ಚರಿತ್ರೆಗಳು ವರ್ಣಿಸಲ್ಪಟ್ಟಿದ್ದರೂ ಅವರೆಲ್ಲ ಮಹಾಪುರುಷರ ಗಣನೆಯಲ್ಲಿಲ್ಲದಿರುವುದರಿಂದ ಅವರ ಚರಿತ್ರೆಗಳೂ ಪ್ರಧಾನಗಳಲ್ಲವು. ಪೂರ್ವಪುರಾಣದಲ್ಲಿ ಹನ್ನೆರಡುಸಾವಿರ ಶ್ಲೋಕಗಳೂ, ಉತ್ತರಪುರಾಣದಲ್ಲಿ ಎಂಟುಸಾವಿರ ಶ್ಲೋಕಗಳೂ ಇವೆ. ಇವೆರಡರಲ್ಲಿ ಪ್ರಕೃತವಾದ ಪೂರ್ವಪುರಾಣವನ್ನು ಕುರಿತು ಕೆಲವು ಮಾತುಗಳನ್ನು ಹೇಳಬೇಕಾಗಿದೆ.

ಈಗ ಉಪಲಬ್ಧವಾಗಿರುವ ಜೈನಸಾಹಿತ್ಯ ಗ್ರಂಥಗಳಲ್ಲಿ ಪೂರ್ವಪುರಾಣವು ಒಂದಾಗಿದೆ. ಕವಿತಾಚಾತುರ್ಯ, ಅರ್ಥಗಾಂಭೀರ್ಯ, ಪದಲಾಲಿತ್ಯ, ರಸಾಲಂಕಾರ ಸೌಷ್ಠವ ಮೊದಲಾದ ಕಾವ್ಯಗುಣಗಳಿಂದ ಜೈನಪುರಾಣಗ್ರಂಥಗಳಲ್ಲೆಲ್ಲ ಇದು ಅದ್ವಿತೀಯವಾದುದೆಂದು ಹೇಳುವುದರಲ್ಲಿ ಸಂದೇಹವಿಲ್ಲ. ಇದರಲ್ಲಿ ಮಹಾಕಾವ್ಯದ ಲಕ್ಷಣಗಳೆಲ್ಲವೂ ತುಂಬಿ ತುಳುಕುತ್ತಿವೆ. ನೀತಿಬೋಧೆ ವೈರಾಗ್ಯ ತತ್ತ್ವವಿಚಾರ ಸಂಸಾರಸ್ವರೂಪ ಮುಕ್ತಿಸ್ವರೂಪ ಕರ್ಮಸ್ವರೂಪ ಲೋಕಸ್ವರೂಪ ಮೊದಲಾದ ವಿಷಯಗಳು ಬಹಳ ಚೆನ್ನಾಗಿ ನಿರೂಪಿಸಲ್ಪಟ್ಟಿವೆ. ಈ ವಿಷಯವು ಕೆಳಗೆ ಕೊಡುವ ಒಂದೆರಡು ಉದಾಹರಣೆಗಳಿಂದ ವ್ಯಕ್ತವಾಗುವುದು. ಒಬ್ಬ ಕವಿಯು ಈ ಗ್ರಂಥವನ್ನು ಹೀಗೆ ಪ್ರಶಂಸೆ ಮಾಡಿರುತ್ತಾನೆ:–''ಯದಿ ಸಕಲಕವೀಂದ್ರಪ್ರೋಕ್ತ ಸೂಕ್ತಪ್ರಚಾರ–ಶ್ರವಣಸರಸಚೇತಾಸ್ತತ್ತ್ವಮೇವಂ ಸಖೇ! ಸ್ಯಾಃ। ಕವಿವರಜಿನಸೇನಾಚಾರ್ಯವಕ್ತ್ರಾರವಿಂದ–ಪ್ರಣಿಗದಿತಪುರಾಣಾಕರ್ಣನಾಭ್ಯರ್ಣ ಕರ್ಣಃ ॥ –ಎಲೈ ಮಿತ್ರನೇ! ನೀನು ಎಲ್ಲಾ ಕವಿಶ್ರೇಷ್ಠರು ಹೇಳಿದ ಸುವಚನಗಳನ್ನು ಕೇಳಿ ಸರಸಹೃದಯವುಳ್ಳವನಾಗಬೇಕಾದರೆ ಕವಿಶ್ರೇಷ್ಠರಾದ ಜಿನಸೇನಾಚಾರ್ಯರ ಮುಖಕಮಲದಿಂದ ಹೇಳಲ್ಪಟ್ಟ ಪುರಾಣವನ್ನು ಕೇಳುವುದಕ್ಕೆ ಸಮೀಪವಾದ ಕಿವಿಗಳುಳ್ಳವನಾಗು'' ಇನ್ನೊಂದುಕಡೆಯಲ್ಲಿ ''ಯಥಾ ಮಹಾರ್ಘರತ್ನಾನಾಂ ಪ್ರಸೂತಿರ್ಮಕರಾಲಯಾತ್। ತಥೈವ ಸೂಕ್ತರತ್ನಾನಾಂ ಪ್ರಭವೋಸ್ಮಾತ್ಪುರಾಣತಃ ॥ ಸುದುರ್ಲಭಂ ಯದನ್ಯತ್ರ ಚಿರಾದಪಿ ಸುಭಾಷಿತಂ। ಸುಲಭಂ ಸ್ವೈರಸಂಗ್ರಾಹ್ಯಂ ತದಿಹಾಸ್ತಿ ಪದೇಪದೇ ॥ –ಹೇಗೆ ಸಮುದ್ರದಿಂದ ಬಹುಮೂಲ್ಯರತ್ನಗಳ ಉತ್ಪತ್ತಿಯೋ ಹಾಗೆಯೇ ಉತ್ತಮವಚನಗಳೆಂಬ ರತ್ನಗಳ ಉತ್ಪತ್ತಿಯು ಈ ಪುರಾಣದಿಂದಾಗುವುದು. ಬೇರೆ ಗ್ರಂಥಗಳಲ್ಲಿ ಬಹುಕಾಲ ಹುಡುಕಿದರೂ ಅತ್ಯಂತ ದುರ್ಲಭವಾದ ಸುಭಾಷಿತವು ಈ ಗ್ರಂಥದಲ್ಲಿ ಪ್ರತಿಪದದಲ್ಲಿಯೂ ಸುಲಭವಾಗಿಯೂ ಯಥೇಚ್ಛವಾಗಿ ಸಂಗ್ರಹಿಸುವುದಕ್ಕೆ ಯೋಗ್ಯವಾಗಿಯೂ ಇದೆ'' ಎಂದು ಹೇಳಲ್ಪಟ್ಟಿದೆ. ಅಷ್ಟೇಕೆ? ಈ ಗ್ರಂಥವನ್ನು ಸ್ವಯಂ ಪಠನಮಾಡಿ ಇದರ ರಸಾಸ್ವಾದನವನ್ನು ಮಾಡುವ ವಿದ್ವಾಂಸರಿಗೆ ಮೇಲೆ ಹೇಳಿದ ಮಾತು ಅಕ್ಷರಶಃ ಸತ್ಯವಾದುದೆಂದು ಒಡೆದು ಕಾಣದಿರದು.

## ಗ್ರಂಥಕರ್ತೃಪರಿಚಯ

ಈ ಪೂರ್ವಪುರಾಣವನ್ನು ಭಗವಜ್ಜಿನಸೇನಾಚಾರ್ಯರೆಂಬ ಮಹರ್ಷಿಗಳು ಲೋಕೋಪಕಾರಾರ್ಥವಾಗಿ ರಚಿಸಿದರು. ಅವರು ಸಂಪೂರ್ಣಮಹಾಪುರಾಣವನ್ನು ರಚಿಸಬೇಕೆಂದು ಉದ್ದೇಶಪಟ್ಟಿದ್ದರಾದರೂ ಕಾಲಗತಿಯಿಂದ ಮಧ್ಯಕಾಲದಲ್ಲೇ ಅವರಿಗೆ ಅವಸಾನಕಾಲವು ಪ್ರಾಪ್ತವಾದುದರಿಂದ ಅವರ ಉದ್ದೇಶವು ನೆರವೇರಲಿಲ್ಲ. ಅವರು ಸಂಪೂರ್ಣಮಹಾಪುರಾಣವನ್ನು ರಚಿಸಬೇಕೆಂದು ಉದ್ದೇಶಪಟ್ಟಿದ್ದರೆಂಬುದು ಪೂರ್ವಪುರಾಣದ ೧ನೆಯ ಪರ್ವದ ೧೯ನೆಯ ಪದ್ಯದ ''ಪುರಾಣಂ ಸಂಗ್ರಹಿಷ್ಯಾಮಿ ತ್ರಿಷಷ್ಟಿಪುರುಷಾಶ್ರಿತಂ'' ಎಂಬೀಭಾಗದಿಂದ ವ್ಯಕ್ತವಾಗುವುದು. ಪೂರ್ವಪುರಾಣದಲ್ಲಿ ೪೭ ಪರ್ವಗಳಿವೆ. ಅವುಗಳಲ್ಲಿ ೪೨ ಪರ್ವಗಳಾಗಿ ನಾಲ್ಕು ಪದ್ಯಗಳವರೆಗೆ ಭಗವಜ್ಜಿನಸೇನಾಚಾರ್ಯರು ರಚಿಸುವಷ್ಟರಲ್ಲಿ ಅವರಿಗೆ ಅವಸಾನಕಾಲವು ಪ್ರಾಪ್ತವಾಯಿತು. ತರುವಾಯ ಅವರ ಶಿಷ್ಯರಾದ ಭಗವದ್ಗುಣಭದ್ರಾಚಾರ್ಯರು ಪೂರ್ವಪುರಾಣದ ಅವಶಿಷ್ಟ ಭಾಗವನ್ನೂ ಉತ್ತರಪುರಾಣವನ್ನೂ ರಚಿಸಿದರು. ಮಹಾಪುರಾಣವು ಪೂರ್ವಪುರಾಣ ಮತ್ತು ಉತ್ತರಪುರಾಣವೆಂದು ಕವಲೊಡೆಯುವುದಕ್ಕೆ ಇದೇ ಕಾರಣವು.

ಹಸ್ತಿಮಲ್ಲಕವಿಯಿಂದ ವಿರಚಿತವಾದ ವಿಕ್ರಾಂತಕೌರವೀಯ ನಾಟಕದಲ್ಲಿರುವ "ತಚ್ಛಿಷ್ಯಪ್ರವರೋ ಜಾತೋ ಜಿನಸೇನಮುನೀಶ್ವರಃ । ಯದ್ವಾಙ್ಮಯಂ ಪುರೋರಾಸೀತ್ಪುರಾಣಂ ಪ್ರಥಮಂ ಭುವಿ ॥ –ಅವರ(ವೀರಸೇನರ) ಶಿಷ್ಯಶ್ರೇಷ್ಠರಾದ ಜಿನಸೇನಮುನೀಶ್ವರರ ವಾಙ್ಮಯರೂಪವಾದ ಆದೀಶ್ವರಸ್ವಾಮಿಯ ಪುರಾಣವು ಭೂಮಿಯಲ್ಲಿ ಮುಖ್ಯವಾಗಿದ್ದಿತು" ಎಂಬೀ ಪದ್ಯದಲ್ಲಿರುವ ಮುಖ್ಯಾರ್ಥ ದ್ಯೋತಕವಾದ "ಪ್ರಥಮ" ಪದಕ್ಕೆ "ಮೊದಲನೆಯ" ಎಂದು ಅರ್ಥಮಾಡಿಯೋ ಏನೋ ಈಗಿನ ಪರಿಶೋಧಕರು ಕೆಲವರು "ಜೈನರಲ್ಲಿ ಮೊಟ್ಟಮೊದಲು ಪುರಾಣವನ್ನು ರಚಿಸಿದವರು ಜಿನಸೇನಾಚಾರ್ಯರು" ಎಂದು ಹೇಳುತ್ತಾರೆ. ಅಂದರೆ ಅದಕ್ಕಿಂತ ಮೊದಲು ಜೈನರಲ್ಲಿ ಪುರಾಣವೇ ಇರಲಿಲ್ಲವೆಂದು ಅವರ ಅಭಿಪ್ರಾಯವು. ಈ ಅಭಿಪ್ರಾಯವು ನಿರಾಧಾರವಾದುದೆಂದು ಈ ಕೆಳಗೆ ವಿವರಿಸುವ ಕಾರಣಗಳಿಂದ ವ್ಯಕ್ತವಾಗುವುದು:– (೧) ಗ್ರಂಥಕರ್ತರೇ ತಮ್ಮ ಗ್ರಂಥದ ಪ್ರಥಮ ಪರ್ವದಲ್ಲಿ "ಸ ಪೂಜ್ಯಃ ಕವಿಭಿರ್ಲೋಕೇ ಕವೀನಾಂ ಪರಮೇಶ್ವರಃ । ವಾಗರ್ಥ ಸಂಗ್ರಹಂ ಕೃತ್ಸ್ನಂ ಪುರಾಣಂ ಯಃ ಸಮಗ್ರಹೀತ್ ॥ –ಯಾರು ಶಬ್ದಾರ್ಥಸಂಗ್ರಹವುಳ್ಳ ಚತುರ್ವಿಂಶತಿಪುರಾಣವನ್ನು ಸಂಕ್ಷೇಪವಾಗಿ ರಚಿಸಿದರೋ ಅಂತಹ ಕವಿಪರಮೇಷ್ಠಿಗಳು ಲೋಕದಲ್ಲಿ ಕವಿಗಳಿಂದ ಪೂಜಿಸಲ್ಪಡುವುದಕ್ಕೆ ಯೋಗ್ಯರು" ಎಂದು ಹೇಳಿರುವುದರಿಂದಲೂ ಗುಣಭದ್ರಾಚಾರ್ಯರು ಪೂರ್ವಪುರಾಣವನ್ನು ಪ್ರಶಂಸೆ ಮಾಡುವಾಗ, "ಕವಿಪರಮೇಶ್ವರನಿಗದಿತಗದ್ಯಕಥಾಮಾತ್ರಕಂ ಪುರೋಶ್ಚರಿತಮ್ । ಸಕಲಚ್ಛಂದೋಲಂಕೃತಿಲಕ್ಷ್ಯಂ ಸೂಕ್ಷ್ಮಾರ್ಥಗೂಢಪದರಚನಮ್ ॥ –ಕವಿಪರಮೇಶ್ವರರು ಗದ್ಯರೂಪದಿಂದ ಹೇಳಿದ ಕಥೆಯೇ ಉಳ್ಳುದೂ ಸಮಸ್ತಛಂದಸ್ಸುಗಳಿಗೂ ಅಲಂಕಾರಗಳಿಗೂ ಲಕ್ಷ್ಯರೂಪವಾಗಿರುವುದೂ ಸೂಕ್ಷ್ಮವಾದ ಅರ್ಥವೂ ಗೂಢವಾದ ಪದರಚನೆಯೂ ಉಳ್ಳುದೂ ಆದ ಆದೀಶ್ವರಸ್ವಾಮಿಯ ಚರಿತ್ರೆಯನ್ನು" ಎಂದು ಹೇಳಿರುವುದರಿಂದಲೂ ಜಿನಸೇನಾಚಾರ್ಯರಿಗಿಂತ ಮೊದಲು ಜೈನರಲ್ಲಿ ಪುರಾಣವೇ ಇರಲಿಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಜಿನಸೇನಾಚಾರ್ಯರು ಕವಿಪರಮೇಷ್ಠಿಗಳ ಗ್ರಂಥಾಧಾರವನ್ನಿಟ್ಟುಕೊಂಡೇ ಈ ಪುರಾಣವನ್ನು ಪ್ರಾರಂಭಿಸಿದುದಾಗಿದೆ. ಕವಿಪರಮೇಷ್ಠಿಗಳನ್ನು ಕನ್ನಡ ಕವಿಗಳೂ ಹೊಗಳಿದ್ದಾರೆ. ಈ ಕವಿಪರಮೇಷ್ಠಿಗಳು ಯಾವ ಹಿಂದಿನ ಗ್ರಂಥಾಧಾರದಿಂದ ಪುರಾಣವನ್ನು ರಚಿಸಿದರೆಂಬುದು ಮಾತ್ರ ನಮಗೆ ತಿಳಿಯದು. ಅಂತು ತೀರ್ಥಂಕರರ ಕಾಲದಿಂದಲೂ ಇದು ಪರಂಪರೆಯಾಗಿ ಬಂದಿದೆಯೆಂಬುದೇ ನಮ್ಮ ನಂಬಿಕೆಯಾಗಿದೆ.

ಭಗವಜ್ಜಿನಸೇನಾಚಾರ್ಯರು ಯಾವ ಊರಲ್ಲಿ ಮತ್ತು ವಂಶದಲ್ಲಿ ತಮ್ಮ ಪವಿತ್ರ ಜನ್ಮವನ್ನೆತ್ತಿದರೆಂಬುದಕ್ಕೆ ಯಾವ ಆಧಾರವೂ ನಮಗೆ ದೊರೆಯಲಿಲ್ಲ. ಇವರು ದಕ್ಷಿಣದೇಶದಲ್ಲಿ ಹುಟ್ಟಿದವರೆಂದು ಮಾತ್ರಪ್ರಸಿದ್ಧಿಯಿದೆ. ಸರ್ವಸಂಗಪರಿತ್ಯಾಗಿಗಳಾದ ತಪಸ್ವಿಗಳು ತಮ್ಮ ಪೂರ್ವಾವಸ್ಥೆಯನ್ನು ಬರೆದಿಡುವುದಕ್ಕೆ ಇಷ್ಟಪಡದಿರುವುದು ಚೋದ್ಯವಲ್ಲ. ಅವರ ಪೂರ್ವಾವಸ್ಥೆಗಿಂತಲೂ ಉತ್ತರಾವಸ್ಥೆ (ಮುನಿಯವಸ್ಥೆ)ಯೇ ಶ್ರೇಷ್ಠವೂ ಲೋಕಪೂಜ್ಯವೂ ಆಗಿರುವುದು. ಭಗವಜ್ಜಿನಸೇನಾಚಾರ್ಯರ ಉತ್ತರಾವಸ್ಥೆಯನ್ನು ವಿಚಾರಮಾಡುವಲ್ಲಿ ನಮಗೆ ತಿಳಿದುಬರುವುದೇನೆಂದರೆ:– ಜೈನರಲ್ಲಿ ಶ್ವೇತಾಂಬರ ಸಂಪ್ರದಾಯವು ಹುಟ್ಟಿದಂದಿನಿಂದ ದಿಗಂಬರ ಸಂಪ್ರದಾಯಕ್ಕೆ ಮೂಲಸಂಘವೆಂದು ಹೆಸರಾಯಿತು. ಈ ಮೂಲಸಂಘದಲ್ಲಿಯೂ ಈಗ್ಯೆ ಸುಮಾರು ೧೭೦೦ ವರ್ಷಗಳ ಹಿಂದೆ ಅರ್ಹದ್ಬಲ್ಯಾಚಾರ್ಯರ ಕಾಲದಲ್ಲಿ ಸಿಂಹಸಂಘ ನಂದಿಸಂಘ ಸೇನಸಂಘ ದೇವಸಂಘಗಳೆಂದು ನಾಲ್ಕು ಸಂಘ(ಮುನಿಗಳ ಪಂಗಡ)ಗಳುಂಟಾದುವು. ಅವುಗಳಲ್ಲಿ ಭಗವಜ್ಜಿನಸೇನಾಚಾರ್ಯರು ಸೇನಸಂಘಕ್ಕೆ ಸೇರಿದವರು. ಇವರ ವಿದ್ಯಾಗುರುಗಳು ವೀರಸೇನಮುನಿಗಳು. ದೀಕ್ಷಾಗುರುಗಳು ಜಯಸೇನರು. ವೀರಸೇನರ ಗುರುಗಳು ಏಲಾಚಾರ್ಯರು.

## ಕಾಲನಿರ್ಣಯ

ಭಗವಜ್ಜಿನಸೇನಾಚಾರ್ಯರ ಸರಿಯಾದ ಕಾಲನಿರ್ಣಯವನ್ನು ಸೂಚಿಸುವ ಆಧಾರಗಳಾವುವೂ ದೊರೆಯುವುದಿಲ್ಲವಾದರೂ ಇವರು ರಾಷ್ಟ್ರಕೂಟವಂಶದ ದೊರೆಯಾದ ಅಮೋಘವರ್ಷನಿಗೆ ಗುರುಗಳಾಗಿದ್ದುದರಿಂದಲೂ ಚರಿತ್ರಕಾರರು ಅಮೋಘವರ್ಷನ ರಾಜ್ಯಕಾಲವು ಶಕವರ್ಷ ೭೩೭ ರಿಂದ ೭೯೯ (ಕ್ರಿಸ್ತಶಕ ೮೧೫ ರಿಂದ ೮೭೭)ರ ವರೆಗೆ ಎಂದು ನಿಶ್ಚಯಿಸಿರುವುದರಿಂದಲೂ ಹರಿವಂಶಪುರಾಣದ ಕರ್ತರಾದ ಜಿನಸೇನಾಚಾರ್ಯರು ಈ ಭಗವಜ್ಜಿನಸೇನಾಚಾರ್ಯರನ್ನೂ ಇವರ ಗುರುಗಳಾದ ವೀರಸೇನಾಚಾರ್ಯರನ್ನೂ ಹರಿವಂಶಪುರಾಣದಲ್ಲಿ (ಜಿತಾತ್ಮಪರಲೋಕಸ್ಯಕವೀನಾಂ ಚಕ್ರವರ್ತಿನಃ । ವೀರಸೇನಗುರೋಃ ಕೀರ್ತಿರಕಲಂಕಾವಭಾಸತೇ ॥ ಯಾ ಮಿತಾಭ್ಯುದಯೇ ತಸ್ಯ ಜಿನೇಂದ್ರಗುಣಸಂಸ್ತುತಿಃ । ಸ್ವಾಮಿನೋ ಜಿನಸೇನಸ್ಯಕೀರ್ತಿಂ ಸಂಕೀರ್ತಯತ್ಯಸೌ ॥ ವರ್ಧಮಾನಪುರಾಣೋದ್ಯದಾದಿತ್ಯೋಕ್ತಿಗಭಸ್ತಯಃ । ಪ್ರಸ್ಫುರಂತಿ ಗಿರೀಶಾಂತಃಸ್ಫುಟಸ್ಫಟಿಕಭಿತ್ತಿಷು ॥) ಈ ಪದ್ಯಗಳಿಂದ ಪ್ರಶಂಸೆ ಮಾಡಿರುವುದರಿಂದಲೂ "ಶಾಕೇಷ್ವಬ್ದಶತೇಷು ಸಪ್ತಸು ದಿಶಂ ಪಂಚೋತ್ತರೇಷೂತ್ತರಾಂ । ಪಾತೀಂದ್ರಾಯುಧನಾಮ್ನಿ ಕೃಷ್ಣನೃಪಜೇ ಶ್ರೀವಲ್ಲಭೇ ದಕ್ಷಿಣಾಂ । ಪೂರ್ವಾಂ ಶ್ರೀಮದವಂತಿಭೂಭೃತಿ ನೃಪೇ ವತ್ಸಾಧಿರಾಜೇಽಪರಾಂ । ಸೌರಾಣಾಮಧಿಮಂಡಲಂ ಜಯಯುತೇ ವೀರೇ ವರಾಹೇಽವತಿ ॥ –ಶಕವರ್ಷ ೭೦೫ ರಲ್ಲಿ ಕೃಷ್ಣರಾಜನ ಮಗ ಇಂದ್ರಾಯುಧನು ಉತ್ತರದಿಕ್ಕನ್ನೂ ಶ್ರೀವಲ್ಲಭನು ದಕ್ಷಿಣದಿಕ್ಕನ್ನೂ ಅವಂತಿರಾಜನು ಪೂರ್ವದಿಕ್ಕನ್ನೂ ವತ್ಸರಾಜನು ಪಶ್ಚಿಮದಿಕ್ಕನ್ನೂ ವೀರನಾದ ಜಯವರಾಹನು ಸೌರಾಷ್ಟ್ರದೇಶವನ್ನೂ ಆಳುತ್ತಿರುವಾಗ (ಈ ಗ್ರಂಥದ ರಚನೆಯಾದುದು)" ಎಂದು ಹೇಳುವ ಪ್ರಕಾರ ಶಕವರ್ಷ ೭೦೫ (ಕ್ರಿ.ಶ. ೭೮೩) ರಲ್ಲಿ ಹರಿವಂಶಪುರಾಣವು ಪೂರ್ತಿಯಾಗಿರುವುದರಿಂದಲೂ ಭಗವಜ್ಜಿನಸೇನಾಚಾರ್ಯರ ಕಾಲವನ್ನು ಸ್ವಲ್ಪ ಹೆಚ್ಚುಕಡಮೆಯಾಗಿ ನಿರ್ಣಯಿಸುವುದಕ್ಕೆಡೆಯಿದೆ. ಭಗವಜ್ಜಿನಸೇನಾಚಾರ್ಯರು ಜಿನಗುಣಸ್ತೋತ್ರವೆಂಬ ಗ್ರಂಥವನ್ನೂ ವರ್ಧಮಾನ ಪುರಾಣವನ್ನೂ ಹರಿವಂಶಪುರಾಣಕ್ಕಿಂತ ಮೊದಲು ರಚಿಸಿದ್ದರೆಂಬುದು ಮೇಲಿನ ಪದ್ಯಗಳಿಂದ ವ್ಯಕ್ತವಾಗುತ್ತದೆ. ಹರಿವಂಶಪುರಾಣಿಕರು ಪ್ರಶಂಸೆಮಾಡಿದ ಕಾಲಕ್ಕೆ ಎರಡು ಗ್ರಂಥಗಳನ್ನು ರಚಿಸಿದ್ದ ಭಗವಜ್ಜಿನಸೇನಾಚಾರ್ಯರ ವಯಸ್ಸು ಸುಮಾರು ೩೦ ವರ್ಷಗಳಾಗಿರಬಹುದೆಂದು ಊಹಿಸಿ ಅವರ ಪೂರ್ಣವಯಸ್ಸು ಮುಂದೆ ಹೇಳುವ ಕೃತಿಗಳಿಂದ ಸುಮಾರು ೮೫ ವರ್ಷವೆಂದು ಭಾವಿಸಿಕೊಂಡರೂ ಕ್ರಿ. ಶ. ಸುಮಾರು ೭೫೩ ರಲ್ಲಿ ಅವರ ಜನ್ಮವೆಂದೂ ೮೩೮ ರಲ್ಲಿ ಮೃತ್ಯುವೆಂದೂ ತಿಳಿಯಬಹುದಾಗಿದೆ. ಹರಿವಂಶದ ಸಮಾಪ್ತಿಕಾಲಕ್ಕೂ ಅಮೋಘವರ್ಷನ ರಾಜ್ಯಾರಂಭ ಕಾಲಕ್ಕೂ ೩೨ ವರ್ಷಗಳ ಅಂತರವಿದೆ. ಈ ಲೆಕ್ಕದಿಂದ ೨೩ ವರ್ಷ ಭಗವಜ್ಜಿನಸೇನಾಚಾರ್ಯರು ಅಮೋಘವರ್ಷನ ರಾಜ್ಯಕಾಲದಲ್ಲಿದ್ದರೆಂದೂ ಹರಿವಂಶ ಪುರಾಣದ ನಂತರ ಇವರು ಮುಂದೆ ಹೇಳುವ ಇತರ ಗ್ರಂಥಗಳನ್ನೂ ಪೂರ್ವಪುರಾಣವನ್ನೂ ರಚಿಸಿದರೆಂಬುದೂ ಪೂರ್ವಪುರಾಣದ ರಚನೆಯಾಗಿ ಈಗ್ಯೆ ಸುಮಾರು ೧೦೮೦ ವರ್ಷಗಳ ಮೇಲೆಯಾಗಿದೆಯೆಂಬುದೂ ವ್ಯಕ್ತವಾಗುವುವು. ಭಗವಜ್ಜಿನಸೇನಾಚಾರ್ಯರು ಅಪರವಯಸ್ಸಿನಲ್ಲಿ ಪೂರ್ವಪುರಾಣದಂತಹ ಉದ್ಗ್ರಂಥವನ್ನು ರಚಿಸಿರುವುದರಿಂದ ವೃದ್ಧಾಪ್ಯದಲ್ಲಿಯೂ ಅವರ ಶರೀರದಾರ್ಢ್ಯವೂ ಬುದ್ಧಿ ಪಾಟವವೂ ಚೆನ್ನಾಗಿದ್ದುವೆಂದು ಗೊತ್ತಾಗುವುದು.

ಭಗವಜ್ಜಿನಸೇನಾಚಾರ್ಯರು ಅಮೋಘವರ್ಷನಿಗೆ ಗುರುವಾಗಿದ್ದರೆಂಬುದು ಗುಣಭದ್ರಾಚಾರ್ಯರ "ಯಸ್ಯ ಪ್ರಾಂಶುನಖಾಂಶುಜಾಲವಿಸರದ್ಧಾರಾಂತರಾವಿರ್ಭವ– । ತ್ಪಾದಾಂಭೋಜರಜಃಪಿಶಂಗಮುಕುಟಪ್ರತ್ಯಗ್ರರತ್ನದ್ಯುತಿಃ । ಸಂಸ್ಮರ್ತಾ ಸ್ವಮಮೋಘವರ್ಷನೃಪತಿಃ ಪೂತೋಽಹಮದ್ಯೇತ್ಯಲಂ, ಸ ಶ್ರೀಮಾನ್ ಜಿನಸೇನ ಪೂಜ್ಯಭಗವತ್ಪಾದೋ ಜಗನ್ಮಂಗಲಂ ॥ –ಅಮೋಘವರ್ಷರಾಜನು ಯಾವ ಪಾದ ಕಮಲಗಳಲ್ಲಿ ತನ್ನ ಕಿರೀಟವನ್ನಿಟ್ಟು ನಮಸ್ಕಾರ ಮಾಡುವಾಗ ಉಗುರುಗಳ ಕಿರಣ ಸಮೂಹವು ಕಿರೀಟದಲ್ಲಿ ನೂತನವಾದ ರತ್ನದ ಕಾಂತಿಯನ್ನುಂಟುಮಾಡಿದ್ದಿತೋ ಅವನು ಯಾವುದನ್ನು ಸ್ಮರಿಸಿ 'ಈ ದಿನ ನಾನು ಪವಿತ್ರನಾದೆನು, ಎಂದು ತಿಳಿಯುತ್ತಿದ್ದನೋ ಅಂತಹ ಸಂಪದ್ಯುಕ್ತವಾದ ಭಗವಜ್ಜಿನಸೇನಾಚಾರ್ಯರ ಪೂಜ್ಯವಾದ ಪಾದವು ಜಗತ್ತಿಗೆ ಮಂಗಲವನ್ನುಂಟುಮಾಡಲಿ" ಎಂಬೀ ಪದ್ಯದಿಂದಲೂ ಭಗವಜ್ಜಿನಸೇನಾಚಾರ್ಯರಿಂದ ವಿರಚಿತವಾದ ಪಾರ್ಶ್ವಾಭ್ಯುದಯ ಕಾವ್ಯದ "ಇತಿ ವಿರಚಿತಮೇತತ್ಕಾವ್ಯಮಾವೇಷ್ಟ್ಯಮೇಘಂ, ಬಹುಗುಣಮಪದೋಷಂ ಕಾಲಿದಾಸಸ್ಯ ಕಾವ್ಯಂ । ಮಲಿನಿತಪರಕಾವ್ಯಂ ತಿಷ್ಠತಾದಾಶಶಾಂಕಂ । ಭುವನಮವತು ದೇವಸ್ಸರ್ವದಾಮೋಘವರ್ಷಃ ॥ –ಈ ರೀತಿಯಾಗಿ ಕಾಲಿದಾಸನ ಮೇಘದೂತ ಕಾವ್ಯವನ್ನಾವರಿಸಿ ರಚಿಸಲ್ಪಟ್ಟುದೂ ಮಾಧುರ್ಯಾದಿ ಅನೇಕ ಗುಣಗಳುಳ್ಳುದೂ ದೋಷರಹಿತವೂ ಆದ ಈ ಕಾವ್ಯವು ಚಂದ್ರನಿರುವವರೆಗೂ ಬೇರೆ ಕಾವ್ಯವನ್ನು ಅಥವಾ ಬೇರೆಯವರ ಕಾವ್ಯವನ್ನು ಮಲಿನಮಾಡಿ ಅಂದರೆ ಸರ್ವೋತ್ಕೃಷ್ಟವಾಗಿ ಇರಲಿ. ಅಮೋಘವರ್ಷರಾಜನು ಯಾವಾಗಲೂ ಪೃಥ್ವಿಯನ್ನು ಕಾಪಾಡಲಿ"

ಎಂಬೀ ಪದ್ಯದಿಂದಲೂ ಗೊತ್ತಾಗುವುದು. ಅಮೋಘವರ್ಷನು ಮಾನ್ಯಖೇಡದಲ್ಲಿ ರಾಜನಾಗಿದ್ದನು. ಆ ಮಾನ್ಯಖೇಡವೆಂಬುದು ಈಗ ''ಮಲಖೇಡ'' ಎಂದು ಕರೆಯಲ್ಪಡುತ್ತದೆ. ಇದು ಹೈದ್ರಾಬಾದ್ ಸಂಸ್ಥಾನದಲ್ಲಿದೆ. ಅಮೋಘವರ್ಷನ ಮಗನ ಹೆಸರು ಅಕಾಲವರ್ಷ. ಈತನೂ ಬಹಳ ಪರಾಕ್ರಮಿಯಾದ ರಾಜನಾಗಿದ್ದನು. ಅಮೋಘವರ್ಷನು ಕೊನೆಗೆ ವಿರಕ್ತನಾಗಿ ರಾಜ್ಯಸಂಪತ್ತನ್ನು ಪರಿತ್ಯಜಿಸಿದ್ದನೆಂದು ಆತನು ರಚಿಸಿದ ಪ್ರಶ್ನೋತ್ತರ ರತ್ನಮಾಲೆಯೆಂಬ ಗ್ರಂಥದಲ್ಲಿರುವ, ವಿವೇಕಾತ್ತ್ಯಕ್ತ ರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ । ರಚಿತಾಮೋಘವರ್ಷೇಣ ಸುಧಿಯಾಂ ಸದಲಂಕೃತಿಃ ॥ –ವಿವೇಕದಿಂದ ರಾಜ್ಯವನ್ನು ತ್ಯಜಿಸಿದ ಅಮೋಘವರ್ಷನಿಂದ ವಿದ್ವಾಂಸರಿಗೆ ಒಳ್ಳೆಯ ಅಲಂಕಾರವಾದ ಈ ರತ್ನಮಾಲಿಕೆಯು ರಚಿಸಲ್ಪಟ್ಟಿತು'' ಎಂಬೀ ಪದ್ಯದಿಂದ ಗೊತ್ತಾಗುತ್ತದೆ.

## ಭಗವಜ್ಜಿನಸೇನಾಚಾರ್ಯರ ಗ್ರಂಥಗಳು.

ಇವರು ಜಿನಗುಣಸ್ತುತಿಯನ್ನೂ ವರ್ಧಮಾನಪುರಾಣವನ್ನೂ ರಚಿಸಿದ್ದರೆಂದು ಹರಿವಂಶಪುರಾಣದ ಆಧಾರದಿಂದ ಹೇಳುವುದಲ್ಲದೆ ಆ ಗ್ರಂಥಗಳು ಈಗ ದೊರೆಯುವುದಿಲ್ಲ. ಭಗವದ್ಗುಣಭದ್ರಾಚಾರ್ಯರು ಉತ್ತರಪುರಾಣದಲ್ಲಿ ''ಜಿನ ಸೇನಭಗವತೋಕ್ತಂ ಮಿಥ್ಯಾಕವಿದರ್ಪದಲನಮತಿಲಲಿತಂ । ಸಿದ್ಧಾಂತೋಪ ನಿಬಂಧನಕರ್ತ್ರಾ ಭರ್ತ್ರಾ ಚಿರಾದ್ವಿನೇಯಾನಾಂ ॥'' –ಎಂಬೀ ಪದ್ಯದಲ್ಲಿ ಭಗವಜ್ಜಿನ ಸೇನಾಚಾರ್ಯರಿಗೆ ಸಿದ್ಧಾಂತವ್ಯಾಖ್ಯಾಕರ್ತರೆಂಬ ವಿಶೇಷಣವನ್ನು ಕೊಟ್ಟಿರುವುದರಿಂದಲೂ ಶ್ರೀಧರನೆಂಬ ಕವಿಯು ರಚಿಸಿರುವ ಗದ್ಯರೂಪವಾದ ಶ್ರುತಾವತಾರ ಕಥೆಯಲ್ಲಿ ''ವಿಂಶತಿಸಹಸ್ರಕರ್ಮಪ್ರಾಭೃತಂ ವಿಚಾರ್ಯ ವೀರಸೇನಮುನಿಃ ಸ್ವರ್ಗಂ ಯಾಸ್ಯತಿ. ತಸ್ಯ ಶಿಷ್ಯೋ ಜಿನಸೇನೋ ಭವಿಷ್ಯತಿ, ಸೋಪಿಚತ್ವಾರಿಂಶತ್ಸಹಸ್ರೈಃ ಕರ್ಮಪ್ರಾಭೃತಂ ಸಮಾಪ್ತಿಂ ನೇಷ್ಯತಿ. ಅಮುನಾ ಪ್ರಕಾರೇಣ ಷಷ್ಟಿಸಹಸ್ರಪ್ರಮಿತಾ ಜಯಧವಲನಾಮಾಂಕಿತಾ ಟೀಕಾ ಭವಿಷ್ಯತಿ – ವೀರಸೇನ ಮುನಿಗಳು ಇಪ್ಪತ್ತು ಸಾವಿರ ಕರ್ಮಪ್ರಾಭೃತವನ್ನು ವಿಚಾರಮಾಡಿ(ರಚಿಸಿ) ಸ್ವರ್ಗವನ್ನು ಹೊಂದುವರು. ಅವರ ಶಿಷ್ಯರಾದ ಜಿನಸೇನರು ನಲ್ವತ್ತುಸಾವಿರ ಶ್ಲೋಕಗಳಿಂದ ಕರ್ಮಪ್ರಾಭೃತವನ್ನು ಪೂರೈಸುವರು. ಈ ಪ್ರಕಾರದಿಂದ ಅರುವತ್ತುಸಾವಿರ ಪರಿಮಿತವಾದ ಜಯಧವಲ ವೆಂಬ ನಾಮಾಂಕಿತವಾದ ಟೀಕೆಯಾಗುವುದು'' ಎಂದು ಹೇಳಿರುವುದರಿಂದಲೂ ಭಗವಜ್ಜಿನಸೇನಾಚಾರ್ಯರು ಜಯಧವಲವೆಂಬ ಸಿದ್ಧಾಂತ ವ್ಯಾಖ್ಯಾನಗ್ರಂಥವನ್ನು ರಚಿಸಿರುವರೆಂದು ಗೊತ್ತಾಗುತ್ತದೆ. ಈ ಗ್ರಂಥವು ಮೂಡಬಿದಿರೆಯ ಸಿದ್ಧಾಂತ ಬಸ್ತಿಯಲ್ಲಿದೆ.

ಭಗವಜ್ಜಿನಸೇನಾಚಾರ್ಯರು ರಚಿಸಿದ ನಾಲ್ಕನೆಯ ಗ್ರಂಥವು ಪಾರ್ಶ್ವಾಭ್ಯುದಯಕಾವ್ಯವು. ಇದರಲ್ಲಿ ನಾಲ್ಕು ಸರ್ಗಗಳಿವೆ. ಮಂದಾಕ್ರಾಂತವೃತ್ತದ ೩೮೦ ಶ್ಲೋಕಗಳಿವೆ. ಇದು ಕಾಲಿದಾಸನ ''ಮೇಘದೂತ'' ವೆಂಬ ಕಾವ್ಯದಮೇಲೆ ಸಮಸ್ಯಾಪೂರ್ತಿರೂಪವಾಗಿ ಹುಟ್ಟಿದ ಗ್ರಂಥವಾಗಿದೆ. ಭಗವಜ್ಜಿನಸೇನಾಚಾರ್ಯರು ತಮ್ಮ ಸಹಪಾಠಿಗಳಾದ ವಿನಯಸೇನಮುನಿಗಳ ಪ್ರೇರಣೆಯಿಂದ ಮೇಘದೂತ ಕಾವ್ಯದ ಒಂದೊಂದು ಪಾದಗಳನ್ನು ತೆಗೆದುಕೊಂಡು ಮಿಕ್ಕ ಮೂರು ಪಾದಗಳನ್ನು ತಾವು ಮಾಡಿ ಸೇರಿಸಿ ಸ್ವಲ್ಪವೂ ಐಬು ತೋರದಂತೆ ಮೂಲಗ್ರಂಥದ ಕಥೆಯನ್ನು ಸಂಪೂರ್ಣವಾಗಿ ಬದಲಾಯಿಸಿ ಶ್ರೀಪಾರ್ಶ್ವನಾಥಸ್ವಾಮಿಯ ಚರಿತ್ರೆಯನ್ನು ವರ್ಣಿಸಿರುವರು. ಕೆಲವು ಕಡೆಯಲ್ಲಿ ಎರಡೆರಡು ಪಾದಗಳನ್ನು ತೆಗೆದುಕೊಂಡು ಮಿಕ್ಕ ಎರಡು ಪಾದಗಳನ್ನು ಸೇರಿಸಿದ್ದಾರೆ. ಕೆಲವು ಪದ್ಯಗಳಲ್ಲಿ ಒಂದನೆಯ ಮೂರನೆಯ ಪಾದಗಳನ್ನೂ ಕೆಲವು ಪದ್ಯಗಳಲ್ಲಿ ಎರಡನೆಯ ನಾಲ್ಕನೆಯ ಪಾದ ಗಳನ್ನೂ ಕೆಲವು ಪದ್ಯಗಳಲ್ಲಿ ಒಂದನೆಯ ಎರಡನೆಯ ಪಾದಗಳನ್ನೂ ಸೇರಿಸಿ ವಿಚಿತ್ರ ರೀತಿಯಿಂದ ಕಾವ್ಯವನ್ನು ರಚಿಸಿದ್ದಾರೆ. ಕಾವ್ಯಗಳಲ್ಲಿ ಇದು ಅದ್ವಿತೀಯವಾದುದೆಂದರೆ ಅತಿಶಯೋಕ್ತಿಯಾಗಲಾರದು. ಇದಕ್ಕೆ ಯೋಗಿರಾಟ್‌ಪಂಡಿತಾಚಾರ್ಯರೆಂಬವರು ಸುಬೋಧಿಕೆಯೆಂಬ ಸಂಸ್ಕೃತ ವ್ಯಾಖ್ಯೆಯನ್ನು ಬರೆದಿದ್ದಾರೆ. ಇವರು ಗ್ರಂಥದ ಕೊನೆಯಲ್ಲಿ ಕಾವ್ಯಾವತಾರದ ಕಾರಣವನ್ನು ಹೇಳುವಾಗ ಕಾಲಿದಾಸನೂ ಭಗವಜ್ಜಿನಸೇನಾಚಾರ್ಯರೂ ಸಮಕಾಲಿಕರೆಂಬ ಅಭಿಪ್ರಾಯವನ್ನು ತೋರಿಸಿದ್ದಾರೆ. ಆದರೆ ಚರಿತ್ರ ಪರಿಶೋಧಕರು ಕಾಲಿದಾಸನ ಕಾಲವನ್ನು ಕಂಡುಹಿಡಿದಿರುವ ಪ್ರಕಾರ ಜಿನಸೇನಾಚಾರ್ಯರ ಕಾಲಕ್ಕೂ ಕಾಲಿದಾಸನ ಕಾಲಕ್ಕೂ ಬಹಳ ವ್ಯತ್ಯಾಸವು ತೋರುತ್ತದೆ. ಮೇಘದೂತಕಾವ್ಯ ರಘುವಂಶಕಾವ್ಯ ಮೊದಲಾದ ಗ್ರಂಥಗಳ ಕರ್ತನಾದ ಕಾಲಿದಾಸನು ವಿಕ್ರಮಾದಿತ್ಯನ ರಾಜ್ಯಕಾಲದ ಅಂತ್ಯಭಾಗದಲ್ಲಿಯೂ ಕುಮಾರಗುಪ್ತನ ರಾಜ್ಯಕಾಲದ ಆದಿಭಾಗದಲ್ಲಿಯೂ ಇದ್ದನೆಂದು ಚರಿತ್ರಕಾರರು ಹೇಳುತ್ತಾರೆ. ಈ ಲೆಕ್ಕದಿಂದ ಕಾಲಿದಾಸನು ಜಿನಸೇನಾಚಾರ್ಯರಿಗಿಂತ ಸುಮಾರು ೮೫೦ ವರ್ಷಗಳ ಮೊದಲಿದ್ದನೆಂದು ಗೊತ್ತಾಗುತ್ತದೆ. ಭೋಜನ ಕಾಲದಲ್ಲಿದ್ದ ಎರಡನೆಯ ಕಾಲಿದಾಸನೇ ಮೇಘದೂತಕಾವ್ಯ ಮೊದಲಾದ ಗ್ರಂಥಗಳ ಕರ್ತನೆಂದು ಕೆಲವರು ತಪ್ಪು ತಿಳಿದಿರುತ್ತಾರೆ. ಭೋಜನಕಾಲ(೧೦೧೮–೧೦೬೦)ದಲ್ಲಿ ಈ ಕಾಲಿದಾಸನೊಬ್ಬನಿದ್ದನೆಂದು ಕಲ್ಪಿಸಿಕೊಂಡರೂ ಜಿನಸೇನಾಚಾರ್ಯರಿಗಿಂತ ಸುಮಾರು ೨೦೦ ವರ್ಷಗಳ ನಂತರ ಆದವನು. ಆದುದರಿಂದ ಯೋಗಿರಾಟ್ ಪಂಡಿತಾಚಾರ್ಯರ ಹೇಳಿಕೆಯು ನಿರಾಧಾರವಾದುದೆಂದು ಹೇಳಬೇಕಾಗುತ್ತದೆ.

ಈಗ ಪ್ರಕೃತವಾದ ಪೂರ್ವಪುರಾಣವು ಭಗವಜ್ಜಿನಸೇನಾಚಾರ್ಯರ ಕೊನೆಯದಾದ ಐದನೆಯ ಕೃತಿಯು. ಬೇರೆ ಯಾವಯಾವ ಗ್ರಂಥಗಳನ್ನು ರಚಿಸಿದ್ದಾರೆಂಬುದು ತಿಳಿದುಬರುವುದಿಲ್ಲ. ಹೀಗೆ ಈ ಮಹಾತ್ಮರು ಲೋಕಕ್ಕೆ ಅಪಾರವಾದ ಉಪಕಾರವನ್ನು ಮಾಡಿ ಕೀರ್ತಿಶೇಷರಾದರು.

ಜೈನರ ಪುರಾಣಗಳಲ್ಲೆಲ್ಲ ಮಹಾಪುರಾಣವು ದೊಡ್ಡ ಗ್ರಂಥವಾಗಿಯೂ ಜೈನರಿಗೆ ಬಹಳ ಆದರಣೀಯವಾಗಿಯೂ ಇದೆ. ಆದರೆ ಈ ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವುದರಿಂದ ಸಂಸ್ಕೃತ ಪರಿಜ್ಞಾನವಿಲ್ಲದವರು ಈ ಗ್ರಂಥದ ಅತುಲಫಲವನ್ನು ಹೊಂದಲಾರದಿದ್ದರು. ಆದರೂ ಕೆಲವರು ಸಂಸ್ಕೃತಬಲ್ಲವರಿಂದ ಈ ಗ್ರಂಥವನ್ನು ಪಠನಮಾಡಿಸಿ ಪುರಾಣಶ್ರವಣವನ್ನು ಮಾಡುತ್ತಿದ್ದರು. ಈಗಲೂ ಕೆಲವರು ಹಾಗೆ ಮಾಡುವುದುಂಟು. ಇಂತಹ ಉತ್ತಮಗ್ರಂಥಕ್ಕೆ ಕನ್ನಡದಲ್ಲಿ ವ್ಯಾಖ್ಯಾನವು ಬರೆಯಲ್ಪಟ್ಟು ಕನ್ನಡನಾಡಿನ ಎಲ್ಲಾ ಜೈನಬಂಧುಗಳಿಗೂ ಇದು ಸುಲಭ ಲಭ್ಯವಾಗುವಂತೆ ಪ್ರಕಾಶಪಡಿಸುವುದು ಸಮಾಜದ ಕರ್ತವ್ಯವಾಗಿದ್ದರೂ ಈ ಕಡೆ ಲಕ್ಷ್ಯವು ಹೋಗದಿದ್ದುದರಿಂದಲೋ ಕಾಲವು ಒದಗದಿದ್ದುದರಿಂದಲೋ ಈ ಪ್ರಾಮುಖ್ಯ ಕಾರ್ಯವು ನಡೆಯಲಿಲ್ಲ. ಇದನ್ನು ಕಂಡು ಮಲಬಾರ್ ಜಿಲ್ಲಾ ವೈನಾಡುತಾಲೂಕು ಮಣಿಯಂಗೂಡು ಜಹಗೀರಿನಲ್ಲಿರುವ ಜಿನಧರ್ಮ ಪರಾಯಣರಾದ ಶ್ರೀಯುತ ಎಂ. ಕೃಷ್ಣಯ್ಯಗೌಡರವರು ಈ ಗ್ರಂಥಕ್ಕೆ ಕನ್ನಡದಲ್ಲಿ ವ್ಯಾಖ್ಯಾನವನ್ನು ಮಾಡಿಸಿ ಮುದ್ರಿಸಿಸಬೇಕೆಂಬ ಉದ್ದೇಶದಿಂದ ಈಗ್ಯೆ ೮–೧೦ ವರ್ಷಗಳ ಹಿಂದೆ ಎಂಟುಸಹಸ್ರ ರೂಪಾಯಿಗಳನ್ನು ಇದಕ್ಕಾಗಿ ತೆಗೆದಿಟ್ಟರು. ಅದಕ್ಕಿಂತ ಮೊದಲು ಸುಮಾರು ೧೦ ವರ್ಷಗಳ ಹಿಂದೆಯೂ ಈ ಮಹನೀಯರು ಪ್ರಯತ್ನಪಟ್ಟರಾದರೂ ಕಾರಣ ಸಾಮಗ್ರಿಯು ದೊರೆಯದಿದ್ದುರಿಂದ ಆಗ್ಯೆ ಉದ್ದಿಷ್ಟಕಾರ್ಯವು ನೆರವೇರಲಿಲ್ಲ. ಈಗ ಆರುವರ್ಷಗಳ ಹಿಂದೆ, ಕಾಕತಾಲೀಯನ್ಯಾಯದಂತೆ ಇವರ ಜ್ಯೇಷ್ಠಪುತ್ರರಾದ ಶ್ರೀಯುತ ಎಂ.ಕೆ. ಸುಬ್ಬಯ್ಯಗೌಡರವರು ಮೈಸೂರಿನಗೆ ಬಂದಿದ್ದು ಪೂಜ್ಯಶ್ರೀ ನೇಮಿಸಾಗರವರ್ಣೀಜೀಯವರಲ್ಲಿ ಈ ಪುರಾಣಪ್ರಕಾಶನದ ವಿಷಯವನ್ನು ಪರ್ಯಾಲೋಚಿಸಿ ಅವರಿಬ್ಬರೂ ಈ ಮಹತ್ಕಾರ್ಯವನ್ನು ನಮಗೆ ವಹಿಸಿದರು. ಇದು ನಮ್ಮ ಯೋಗ್ಯತೆಗೆ ಮೀರಿದ ಕಾರ್ಯವೆಂಬುದು ನಮಗೆ ಚೆನ್ನಾಗಿ ಗೊತ್ತಿದೆ. ಈ ಕಾರ್ಯವನ್ನು ನಮಗಿಂತ ಹೆಚ್ಚಿನ ವಿದ್ವಾಂಸರಿಗೆ ವಹಿಸಿದ್ದರೆ ಬಹಳ ಚೆನ್ನಾಗಿ ಆಗುತ್ತಿದ್ದಿತು. ಹಾಗೆ ಮಾಡದೆ ಪೂಜ್ಯವರ್ಣೀಜೀಯವರು ಈ ಕಾರ್ಯವನ್ನು ಮಾಡಬೇಕೆಂದು ನಮಗೆ ಆಜ್ಞಾಪಿಸಿದುದರಿಂದ ಅವರ ಆಜ್ಞೆಯನ್ನು ಮೀರಲಾರದೆ ನಮ್ಮ ಮಂದಬುದ್ಧ್ಯನುಸಾರವಾಗಿ ಈ ಗ್ರಂಥಕ್ಕೆ ''ಕನ್ನಡ ಭಾವದೀಪಿಕೆ'' ಯೆಂಬ ಒಂದು ಚಿಕ್ಕದಾದ ವ್ಯಾಖ್ಯೆಯನ್ನು ಬರೆದು ಮೇಲ್ಕಂಡ ಧರ್ಮಾತ್ಮರ ದ್ರವ್ಯಸಹಾಯದಿಂದ ಮುದ್ರಿಸಿಸಿ ಸಮಾಜದ ಮುಂದಿಟ್ಟಿರುವೆವು. ಈ ಗ್ರಂಥವು ಸಾಮಾಜಕ್ಕೆ ಉಪಕಾರಕವೂ ಬಹುಕಾಲದವರೆಗೆ ಇರತಕ್ಕುದೂ ಆಗಿರುವುದರಿಂದ ನಮ್ಮಿಂದಾಗುವಷ್ಟೂ ಶ್ರಮವನ್ನು ವಹಿಸಿ ವ್ಯಾಖ್ಯೆಯನ್ನು ಬರೆದು ಮುದ್ರಿಸಿಸಿರುತ್ತೇವೆ.

ಈ ವ್ಯಾಖ್ಯೆಯನ್ನು ಬರೆಯುವಾಗ ಮೈಸೂರು ಎಂ. ಎಲ್. ವಿದ್ಯಾರ್ಥಿನಿಲಯದ ಶ್ರುತಭಂಡಾರದಲ್ಲಿರುವ ಟಿಪ್ಪಣಸಹಿತವಾದ ಎರಡು ಓಲೆಗರಿಯ ಪ್ರತಿಗಳು ದೊರೆತುದರಿಂದ ಅವು ನಮಗೆ ಬಹಳ ಸಹಾಯಕಗಳಾದುವು. ಇವು ಬಹಳ ಶುದ್ಧ ಪ್ರತಿಗಳಾಗಿವೆ. ಆ ಟಿಪ್ಪಣಿಗಳನ್ನೂ ಈ ಪುಸ್ತಕದಲ್ಲಿ ಕೊಟ್ಟಿರುತ್ತೇವೆ. ಕೊಲ್ಲಾಪುರದ ಶ್ರೀಯುತ ಕಲ್ಲಪ್ಪ ಭರಮಪ್ಪ ನಿಟವೆಯವರು ಬರೆದು ಮುದ್ರಿಸಿದ ಮರಾಠೀ ವ್ಯಾಖ್ಯೆಯೂ ನಮಗೆ ಸಹಾಯಕವಾದುದು. ಪ್ರಕೃತ ಪುಸ್ತಕದಲ್ಲಿ ಮೇಲೆ ಪದ್ಯ ಗಳನ್ನು ಕೊಟ್ಟಿರುವುದರಿಂದ ಆ ಪದ್ಯಗಳ ಪದಗಳಿಗೆ ಅನುಸಾರವಾಗಿಯೇ ನಾವು

ವ್ಯಾಖ್ಯೆಯನ್ನು ಮಾಡಬೇಕಾಗಿ ಬಂದಿತು. ಕೆಲವೆಡೆಗಳಲ್ಲಿ ಮಾತ್ರ ಕನ್ನಡ ವಾಕ್ಯರಚನೆಗನುಸಾರವಾಗಿ ವಿಭಕ್ತ್ಯರ್ಥಗಳನ್ನು ಬದಲಾಯಿಸಿರುತ್ತೇವೆ. ಕೆಲವು ಪಾಠಾಂತರಗಳನ್ನು ಪದ್ಯಗಳಲ್ಲೇ ಆವರಣದೊಳಗೂ ಕೆಲವನ್ನು ಟಿಪ್ಪಣಗಳಲ್ಲಿಯೂ ಕೊಟ್ಟಿರುತ್ತೇವೆ. ಟಿಪ್ಪಣಗಳಲ್ಲಿರುವ ಪಾಠಾಂತರಗಳು ಹೆಚ್ಚಾಗಿ ಮರಾಠೀ ವ್ಯಾಖ್ಯಾ ಪುಸ್ತಕದಲ್ಲಿರುವ ಪಾಠಗಳಾಗಿವೆ. ಇವುಗಳಿಗಿಂತ ಮೂಲಪಾಠಗಳೇ ಪ್ರಶಸ್ತಗಳಾಗಿ ತೋರುತ್ತವೆ. ಮರಾಠೀ ವ್ಯಾಖ್ಯಾ ಪುಸ್ತಕದಲ್ಲಿ ಬಹಳ ಅಶುದ್ಧಿಗಳಿವೆ. ಆವರಣದಲ್ಲಿ ಕೊಟ್ಟಿರುವ ಪದ್ಯಗಳು ಓಲೆಗರಿಯ ಪ್ರತಿಗಳಲ್ಲಿಲ್ಲ.

ಕಾನ್ತಿ ಅಙ್ಕುರ ಸಙ್ಕೋಚ ಪಙ್ಕಜ ಮನ್ದತಾ ಸುನ್ದರ ಬನ್ಧುರ ನನ್ದನ ಇತ್ಯಾದಿ ಅನೇಕ ಶಬ್ದಗಳನ್ನು ನಾವು ಕಾಂತಿ, ಅಂಕುರ, ಸಂಕೋಚ, ಪಂಕಜ, ಮಂದತಾ ಸುಂದರ ಬಂಧುರ ನಂದನ ಇತ್ಯಾದಿ ರೂಪದಿಂದ ಪ್ರಯೋಗಿಸಿದ್ದೇವೆ. ವ್ಯಾಕರಣರೀತ್ಯಾ ಮೊದಲು ಬರೆದ ರೂಪಗಳೇ ಸಾಧುಗಳೆಂಬ ವಿಷಯವನ್ನು ನಾವು ಬಲ್ಲೆವು. ಆದರೂ ಅಕ್ಷರಜ್ಞರಿಗೆಲ್ಲ ಸುಲಭವಾಗಿ ಪಠಿಸುವುದಕ್ಕನುಕೂಲವಾಗಲೆಂಬ ಅಭಿಪ್ರಾಯದಿಂದ ಶಬ್ದಶಾಸ್ತ್ರ ಮರ್ಯಾದೆಯನ್ನು ಒತ್ತಟ್ಟಿಗಿಟ್ಟು ನಾವು ಎರಡನೆಯ ಮಾರ್ಗವನ್ನವಲಂಬಿಸಬೇಕಾಗಿಬಂದಿತು.

ಈ ಗ್ರಂಥವು ಮುದ್ರಿತವಾಗುವ ಕಾಲದಲ್ಲಿ ''ವಿಶ್ವಬಂಧು'' ವೆಂಬ ಪತ್ರಿಕೆಯ ಸಂಪಾದಕತ್ವವೂ ಮೈಸೂರು ವಿದ್ಯಾರ್ಥಿನಿಲಯದ ಪಾಠನಕಾರ್ಯವೂ ಶ್ರವಣ ಬೆಳ್ಗೊಳದ ಮುಸ್ತಕಾಭಿಷೇಕಮಹೊತ್ಸವಸಂಬಂಧವಾದ ಕೆಲವು ಲೇಖನ ಮತ್ತು ಮುದ್ರಾಪಣಕಾರ್ಯವೂ ನಮ್ಮ ಪಾಲಿಗೆ ಬಂದೊದಗಿದ್ದುದರಿಂದಲೂ ಗ್ರಂಥವನ್ನು ಆ ಮಹೋತ್ಸವದೊಳಗಾಗಿ ತಯಾರಿಸಬೇಕೆಂದು ಪ್ರಕಾಶಕರು ಅಪೇಕ್ಷಿಸಿದುದರಿಂದಲೂ ಮುದ್ರಣಪರಿಶೋಧನೆಗೆ ಸಾಕಾದಷ್ಟು ಸಮಯವು ನಮಗೆ ದೊರೆಯಲಿಲ್ಲ. ಆದರೂ ಸಾಧ್ಯವಾದಷ್ಟು ಶ್ರಮಪಟ್ಟು ಮುದ್ರಣ ದೊಷಗಳು ತಲೆದೋರದಂತೆ ಮಾಡಬೇಕೆಂದು ಪ್ರಯತ್ನಿಸಿದೆವು. ಶ್ಲೋಕಗಳಿಗೆ ಹೊಸಮೊಳೆಗಳನ್ನುಪಯೊಗಿಸಿದುದರಿಂದ ಕೆಲವು ಒತ್ತಕ್ಷರಗಳು ಮುದ್ರಣ ಕಾಲದಲ್ಲಿ ಒಡೆದು ಹೋಗಿ ಕೆಲವು ಅಶುದ್ಧಿಗಳು ಕಾಣಿಸಿಕೊಂಡುವು. ಕೆಲವು ಕಣ್ಮರೆಯಾಗಿ ಮೈದೋರಿದುವು. ಅಂತು ನಮ್ಮ ದೃಷ್ಟಿಗೆ ಬಿದ್ದ ೪೫ ಅಶುದ್ಧಿಗಳನ್ನು ಶುದ್ಧಾಶುದ್ಧ ಪತ್ರಿಕೆಯಲ್ಲಿ ಸರಿಪಡಿಸಿರುತ್ತೇವೆ. ನಾವು ಹೆಚ್ಚಾಗಿ ಶ್ಲೋಕಗಳ ಕಡೆಗೆ ಲಕ್ಷ್ಯವನ್ನಿಟ್ಟುದುದರಿಂದ ವ್ಯಾಖ್ಯೆಯಲ್ಲಿ ಅಪರೂಪವಾಗಿ ಎಲ್ಲೋ ನಾಲ್ಕಾರು ಅಶುದ್ಧಿಗಳು ಉಳಿದಿರಬಹುದು. ವಾಚಕರೆಲ್ಲ ಸರಿಪಡಿಸಿಕೊಳ್ಳುವುದಕ್ಕೆ ಸಾಧ್ಯವಾದ ಆ ಅಶುದ್ಧಿಗಳಿಗಾಗಿ ನಾವು ಕ್ಷಮಾಪಣೆಯನ್ನು ಕೇಳಿಕೊಳ್ಳುತ್ತೇವೆ. ಪ್ರತಿಯೊಂದು ಪರ್ವದ ವಿಷಯವನ್ನೂ ಸಂಕ್ಷೇಪವಾಗಿ ಪೀಠಿಕೆಯಲ್ಲಿ ಬರೆಯಬೇಕೆಂಬ ಉದ್ದೇಶವಿದ್ದಿತಾದರೂ ಮೇಲೆ ಹೇಳಿದ ಕಾರಣಗಳಿಂದ ಅನವಕಾಶವಾದುದಕ್ಕಾಗಿ ವಿಷಾದಿಸುತ್ತೇವೆ.

ಈ ಗ್ರಂಥವನ್ನು ಮ ॥ ರಾ ॥ ಕೃಷ್ಣಯ್ಯಗೌಡರವರೂ ಅವರ ಪುತ್ರರಾದ ಮ ॥ ರಾ ॥ ಸುಬ್ಬಯ್ಯಗೌಡರು ಮೊದಲಾದವರೂ ತಾವು ತೆಗೆದ ಧರ್ಮದ್ರವ್ಯದಿಂದ ಪ್ರಕಾಶಪಡಿಸಿರುತ್ತಾರೆಂಬ ವಿಷಯವನ್ನು ಮೇಲೆ ಸೂಚಿಸಿದೆವಷ್ಟೆ? ಇದರ ಉತ್ತರಭಾಗ(೨೭ ಪರ್ವ)ವನ್ನೂ ಶೀಘ್ರದಲ್ಲೇ ಪ್ರಕಾಶಪಡಿಸುವವರಾಗಿದ್ದಾರೆ. ಇಂತಹ ಗ್ರಂಥಪ್ರಕಾಶನಕಾರ್ಯವು ಮುಂದೆಯೂ ಸಾರೋದ್ಧಾರವಾಗಿ ನಡೆಯುವಂತೆ ಮಾಡಬೇಕೆಂದು ಈ ಧರ್ಮಾತ್ಮರುಗಳ ಉದ್ದೇಶವಿದೆ. ಈ ಮಹಾಶಯರುಗಳ ಧರ್ಮಾನುರಾಗವು ಪ್ರಶಂಸನೀಯವಾದುದು.

ಈ ಕಾರ್ಯದಲ್ಲಿ ನಮಗೆ ಉತ್ತೇಜನವನ್ನು ಕೊಟ್ಟ ಪೂಜ್ಯಶ್ರೀ ನೇಮಿಸಾಗರವರ್ಣಿಜೀಯವರಿಗೂ ಶ್ರೀಯುತ ಎಂ. ಎಲ್. ವರ್ಧಮಾನಯ್ಯ ನವರಿಗೂ ಎಂ.ಸಿ. ಲಕ್ಷ್ಮೀಪತಯ್ಯ ಬಿ.ಎ. ಯವರಿಗೂ ಧರ್ಮಸ್ಥಳದ ಪುಟ್ಟಸ್ವಾಮಯ್ಯನವರಿಗೂ ನಾವು ಕೃತಜ್ಞರಾಗಿದ್ದೇವೆ.

ಭಗವದನುಗ್ರಹದಿಂದಲೂ ಪೂರ್ವಾಚಾರ್ಯರ ಆಶೀರ್ವಾದಬಲದಿಂದಲೂ ನಾವು ಈ ಪೂರ್ವಭಾಗವನ್ನು ಪೂರೈಸಿ ಸಮಾಜದ ಮುಂದಿಟ್ಟಿರುವೆವು. ಇದರಲ್ಲಿ ದೋಷಗಳಿದ್ದರೆ ಅವೆಲ್ಲ ನಮ್ಮದೆಂದೂ ಗುಣಗಳೆಲ್ಲ ಗ್ರಂಥಕರ್ತರಾದ ಭಗವಜ್ಜಿನಸೇನಾಚಾರ್ಯರದೆಂದೂ ತಿಳಿದು ಸಮಾಜದವರು ಈ ಗ್ರಂಥವನ್ನು ಪುರಸ್ಕರಿಸಿದರೆ ನಮ್ಮ ಶ್ರಮವು ಸಫಲವಾದುದೆಂದು ಭಾವಿಸಿ ಈ ಪ್ರಸ್ತಾವನೆಯನ್ನು ಮುಗಿಸುತ್ತೇವೆ.

॥ ಜಯತು ಜಿನಶಾಸನಂ ॥

ವೀರಶಕ ೨೪೫೧
ತಾ ॥ ೨೬-೨-೧೯೨೫

ಪೂರ್ವಾಚಾರ್ಯಚರಣಾಬ್ಜ ಚಂಚರೀಕ,
**ಎ. ಶಾಂತಿರಾಜಶಾಸ್ತ್ರಿ**

## ಮುನ್ನುಡಿ

**( ಪೂರ್ವಪುರಾಣದ ಉತ್ತರಭಾಗಕ್ಕೆ ಬರೆದದ್ದು - ೧೯೩೩ )**

ಭಗವಜ್ಜಿನಸೇನಾಚಾರ್ಯ ವಿರಚಿತವೂ ತ್ರಿಷಷ್ಟಿಶಲಾಕಾಪುರುಷರ ಮಹಾಪುರಾಣಾಂತರ್ಗತವೂ ಆದ ಪೂರ್ವಪುರಾಣದ ಇಪ್ಪತ್ತು ಪರ್ವಗಳ ಪೂರ್ವಭಾಗವನ್ನು ಈಗ್ಗೆ ಎಂಟು ವರ್ಷಗಳ ಹಿಂದೆ ಕನ್ನಡದಲ್ಲಿ ಭಾವಾರ್ಥದೊಡನೆ ಮುದ್ರಣ ಮಾಡಿಸಿ ಪ್ರಕಟಿಸಿದ್ದೆವು. '' ಶ್ರೇಯಾಂಸಿ ಬಹುವಿಘ್ನಾನಿ '' ಎಂಬಂತೆ ಆವಾವುದೋ ಪ್ರತಿಬಂಧಕದಿಂದ ಈ ಪವಿತ್ರಗ್ರಂಥದ ಈ ಉತ್ತರಭಾಗವನ್ನು-ಪೂರ್ಣಗ್ರಂಥವನ್ನು ಮುದ್ರಣಮಾಡಿಸಿ ಪ್ರಕಟಿಸಲು ವಿಲಂಬವಾದುದಾದರೂ ಈ ಗ್ರಂಥವನ್ನು ಪೂರ್ತಿಮಾಡಿ ಸಮಾಜಬಾಂಧವರ ಮತ್ತು ಕನ್ನಡಿಗರ ಕರಕಮಲದಲ್ಲಿ ಕೈಗಾಣಿಕೆಯನ್ನಾಗಿ ಸಮರ್ಪಿಸುವ ಸೌಭಾಗ್ಯವು ಭಗವದನುಗ್ರಹದಿಂದಲೂ ಪೂರ್ವಾಚಾರ್ಯಾಶೀರ್ವಾದಬಲದಿಂದಲೂ ಈಗ ಪ್ರಾಪ್ತವಾದುದಕ್ಕಾಗಿ ಆನಂದತುಂದಿಲರಾಗಿರುತ್ತೇವೆ.

ನಾವು ಹೇಳಬೇಕಾದ ಇತರ ವಿಷಯಗಳನ್ನು ಇದರ ಪೂರ್ವಭಾಗದ ಮುನ್ನುಡಿಯಲ್ಲಿ ಹೇಳಿರುವುದರಿಂದ ಪುನಃ ಇಲ್ಲಿ ಚರ್ವಿತಚರ್ವಣದ ಆವಶ್ಯಕತೆಯಿಲ್ಲ.

ವೀರಶಕ ೨೪೫೮
ತಾ ॥ ೫-೨-೧೯೩೩

ಪೂರ್ವಾಚಾರ್ಯಚರಣಾಬ್ಜಚಂಚರೀಕ,
**ಎ. ಶಾಂತಿರಾಜಶಾಸ್ತ್ರಿ.**

# ಮುನ್ನುಡಿ

## ( ಪೂರ್ವಪುರಾಣದ ಸಂಯುಕ್ತಗ್ರಂಥಕ್ಕೆ ಬರೆದದ್ದು – ೧೯೩೩ )

ಆವುದೊಂದು ಸಮಾಜದ ಅಸ್ತಿತ್ವವು ಜಗತ್ತಿನಲ್ಲಿ ಚಿರಕಾಲವಿರಬೇಕಾದರೆ ಅದರ ಅಖಂಡವಾದ ಸಾಹಿತ್ಯವು ಅವಿಚ್ಛಿನ್ನವಾಗಿರಬೇಕು. ಧರ್ಮಾವಲಂಬಿಗಳು ನಾಶವಾದರೂ ಧರ್ಮಬೋಧಕವಾದ ಸಾಹಿತ್ಯವು ನಿರಪಾಯವಾಗಿದ್ದರೆ ಅದರ ಮಹಿಮೆಯಿಂದ ಮುಂದೆಮುಂದೆ ಹೊಸಹೊಸದಾಗಿ ಧರ್ಮಾವಲಂಬಿಗಳುಂಟಾಗಬಹುದು. ಸಾಹಿತ್ಯವು ನಾಶವಾಗಿ ಆ ಧರ್ಮಾವಲಂಬಿಗಳಿದ್ದರೂ ಕೆಲವು ಕಾಲದವರೆಗೆ ಮಾತ್ರ ಆ ಧರ್ಮವು ಇರುವುದಲ್ಲದೆ ಅವರು ಅಳಿದ ಮೇಲೆ ಅದೂ ಅವರ ಜೊತೆಯಲ್ಲೇ ಅಳಿದು ಹೋಗುವುದು. ಒಂದು ಕಾಲದಲ್ಲಿ ಬಿಟ್ಟ ಫಲಗಳು ನಾಶವಾಗಿ ಹೋದರೂ ವೃಕ್ಷವು ನಿರಪಾಯವಾಗಿದ್ದರೆ ಉತ್ತರೋತ್ತರ ಫಲಗಳುಂಟಾಗುತ್ತಿರಬಹುದು. ಫಲಗಳಿದ್ದು ವೃಕ್ಷವು ನಾಶವಾಗಿ ಹೋದರೆ ಆ ಫಲಗಳು ಮುಗಿದಮೇಲೆ ಮುಂದೆ ಫಲಗಳು ದೊರೆಯುವ ಆಸೆಯಿಲ್ಲವು. ರತ್ನಗಳು ನಾಶವಾಗಿ ಹೋದರೂ ಗಣಿಯು ನಾಶವಾಗದಿದ್ದರೆ ಮುಂದೆ ರತ್ನಗಳು ದೊರೆಯುತ್ತಿರಬಹುದು. ಗಣಿಯು ನಾಶವಾಗಿ ರತ್ನಗಳಿದ್ದರೂ ಅವು ನಾಶವಾಗಿ ಹೋದಮೇಲೆ ಪುನಃ ದೊರೆಯುವ ಸಂಭವವಿಲ್ಲವು. ಆದುದರಿಂದ ತನ್ನ ಧರ್ಮವು ಭೂಮಂಡಲದಲ್ಲಿ ಅಜರಾಮರವಾಗಿರಬೇಕೆಂದು ಬಯಸುವ ಪ್ರತಿಯೋರ್ವ ಧರ್ಮಾಭಿಮಾನಿಯೂ ತನ್ನ ಧರ್ಮದ ಸ್ಥಿರತೆಗೆ ಮೂಲಕಾರಣವಾದ ಸಾಹಿತ್ಯವು–ಗ್ರಂಥರಾಶಿಯು ಲೋಪವಾಗದಂತೆ ನೋಡಿಕೊಳ್ಳುವುದು ತನ್ನ ಆದ್ಯ ಕರ್ತವ್ಯವೆಂದು ಭಾವಿಸಬೇಕು. ಧರ್ಮರಕ್ಷಣೆಗೆ ಮುಖ್ಯವಾದ ಅಂಗವಿದು.

ಸಾಹಿತ್ಯ ಶಬ್ದಕ್ಕೆ ''ಸಹಿತಸ್ಯ ಭಾವಃ ಸಾಹಿತ್ಯಂ'' ಎಂಬ ವ್ಯುತ್ಪತ್ತಿಯಿಂದ ಪರಸ್ಪರವಾಗಿ ಸೇರುವಿಕೆಯೆಂದೂ ''ಪರಸ್ಪರಸಾಪೇಕ್ಷಾಣಾಂ ತುಲ್ಯರೂಪಾಣಾಂ ಯುಗಪದೇಕಕ್ರಿಯಾನ್ವಯಿತ್ವಂ ಸಾಹಿತ್ಯಂ–ಪರಸ್ಪರಾಪೇಕ್ಷಗಳಾದ ಸಮಾನವಸ್ತುರೂಪಗಳಿಗೆ ಏಕಕಾಲದಲ್ಲಿ ಒಂದು ಕ್ರಿಯೆಯೊಡನೆ ಸಮನ್ವಯವಾಗುವಿಕೆಯು ಸಾಹಿತ್ಯವು'' ಎಂದೂ ಬೇರೆಬೇರೆ ಅರ್ಥಗಳಿದ್ದರೂ ಪ್ರಕೃತದಲ್ಲಿ ಸಾಹಿತ್ಯವೆಂದರೆ ಗ್ರಂಥರಾಶಿಯೆಂದರ್ಥವು. ಅಂತಹ ಗ್ರಂಥಗಳನ್ನು ಮಹಾಜ್ಞಾನಸಂಪನ್ನರಾದ ಮಹರ್ಷಿಗಳೂ ಕವಿಗಳೂ ಪರಂಪರಾಗತವಾದ ಆಯಾ ಕಾಲದಲ್ಲಿ ರಚಿಸಿದರೂ ಆ ಗ್ರಂಥಗಳಲ್ಲಿರುವ ಸಿದ್ಧಾಂತವಿಷಯಗಳಿಗೆ ಮೂಲಕರ್ತರು ಸರ್ವಜ್ಞರಾಗಿರಬೇಕು. ಉತ್ತರೋತ್ತರ ಗ್ರಂಥಕರ್ತೃಗಳ ಗ್ರಾಂಥಿಕವಿಷಯಗಳು ಪೂರ್ವಪೂರ್ವ ಗ್ರಾಂಥಿಕ ವಿಷಯಗಳಿಗೆ ಅವಿರುದ್ಧಗಳಾಗಿದ್ದರೇನೇ ಅವುಗಳಿಗೆ ಪ್ರಾಮಾಣ್ಯವು ಬರುವುದು. ಆ ಪೂರ್ವಗ್ರಂಥಗಳು ನಾಶವಾದರೆ ಮುಂದೆ ಆ ವಿಷಯಗಳ ಉತ್ಪತ್ತಿಯಾಗುವ ಸಂಭವವಿಲ್ಲವು. ಈ ಕಾಲದಲ್ಲಿ ಸರ್ವಜ್ಞರು ಹುಟ್ಟುವಂತಿಲ್ಲ. ನಮ್ಮಗಳ ಅಜಾಗರೂಕತೆಯಿಂದ ಎಷ್ಟೋ ಗ್ರಂಥಗಳು ನಾಶವಾಗಿ ತದ್ಗತವಾದ ಅನೇಕ ಅಲಭ್ಯ ವಿಷಯಗಳು ಲುಪ್ತವಾದುವು. ಈ ಯುಗದಲ್ಲಿ ಆ ವಿಷಯಗಳು ಪುನಃ ಲಭ್ಯವಾಗುವ ಸಂಭವವೇ ಇಲ್ಲವು. ಆದುದರಿಂದ ಅಳಿದುಳಿದ ಗ್ರಂಥಗಳನ್ನಾದರೂ ಜತನದಿಂದ ಕಾಪಾಡುವುದೂ ಲೋಕಕ್ಕೆ ಜ್ಞಾನದಾನವನ್ನು ಮಾಡುವುದಕ್ಕೋಸ್ಕರ ಶ್ರಮಪಟ್ಟು ಆ ಗ್ರಂಥಗಳನ್ನು ರಚಿಸಿದ ಗ್ರಂಥಕರ್ತರ ಉದ್ದೇಶಕ್ಕೆ, ಅವುಗಳನ್ನು ಬಚ್ಚಿಟ್ಟು ಭಂಗವನ್ನು ತರದೆ ಸಾಧ್ಯವಾದಷ್ಟು ಪ್ರಕಾಶಪಡಿಸುವುದೂ ನಮ್ಮಗಳ ಪರಮಕರ್ತವ್ಯಗಳಾಗಿರುತ್ತವೆ. ಅಂತಹ ಗ್ರಂಥಗಳಲ್ಲಿ ಮಹಾಪುರಾಣವು ಒಂದಾಗಿದೆ. ಇಪ್ಪತ್ತುನಾಲ್ಕುಮಂದಿ ತೀರ್ಥಂಕರರೂ ಹನ್ನೆರಡುಮಂದಿ ಚಕ್ರವರ್ತಿಗಳೂ ಒಂಬತ್ತುಮಂದಿ ಬಲಭದ್ರರೂ ಒಂಬತ್ತುಮಂದಿ ನಾರಾಯಣರೂ ಒಂಬತ್ತುಮಂದಿ ಪ್ರತಿನಾರಾಯಣರೂ ಸೇರಿ ಅರುವತ್ತುಮೂರುಮಂದಿ ಪ್ರಸಿದ್ಧಪುರುಷರ (ತ್ರಿಷಷ್ಟಿಶಲಾಕಾಪುರುಷರ) ಚರಿತ್ರೆಯನ್ನು ಪ್ರತಿಪಾದಿಸುವುದರಿಂದ ಈ ಗ್ರಂಥಕ್ಕೆ ಮಹಾಪುರಾಣವೆಂದು ಹೆಸರು ಬಂದಿರುವುದು. ಈ ವಿಷಯವನ್ನು ಗ್ರಂಥಕರ್ತರೇ ಆರಂಭದಲ್ಲಿ ವಿಶದವಾಗಿ ಹೇಳಿದ್ದಾರೆ. ಮಹಾಪುರಾಣದಲ್ಲಿ ಪೂರ್ವಪುರಾಣವೆಂದೂ ಉತ್ತರಪುರಾಣವೆಂದೂ ಎರಡು ಭಾಗಗಳಿರುತ್ತವೆ. ಪೂರ್ವಪುರಾಣದಲ್ಲಿ ಶ್ರೀವೃಷಭಸ್ವಾಮಿಯೆಂಬ ಪ್ರಥಮತೀರ್ಥಂಕರರ ಮತ್ತು ಭರತನೆಂಬ ಪ್ರಥಮ ಚಕ್ರವರ್ತಿಯ ಚರಿತ್ರೆಗಳು ಬಹಳ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ. ಮಿಕ್ಕ ಅರುವತ್ತೊಂದುಮಂದಿ ಮಹಾಪುರುಷರ ಚರಿತ್ರೆಗಳು ಉತ್ತರಪುರಾಣದಲ್ಲಿ ವರ್ಣಿಸಲ್ಪಟ್ಟಿವೆ. ಈ ಎರಡು ಪುರಾಣಗಳಲ್ಲಿಯೂ ಇನ್ನೂ ಅನೇಕ ಮಂದಿಗಳ ಚರಿತ್ರೆಗಳು ವರ್ಣಿಸಲ್ಪಟ್ಟಿದ್ದರೂ ಅವರೆಲ್ಲ ಶಲಾಕಾಪುರುಷರ ಗಣನೆಯಲ್ಲಿಲ್ಲ, ಪೂರ್ವಪುರಾಣದಲ್ಲಿ ಹನ್ನೆರಡು ಸಾವಿರ ಶ್ಲೋಕಗಳೂ ಉತ್ತರಪುರಾಣದಲ್ಲಿ ಎಂಟುಸಾವಿರ ಶ್ಲೋಕಗಳೂ ಇರುತ್ತವೆ. ಇವೆರಡರಲ್ಲಿ ಪ್ರಕೃತವಾದ ಪೂರ್ವಪುರಾಣವನ್ನು ಕುರಿತು ಕೆಲವು ಮಾತುಗಳನ್ನು ಹೇಳುವೆವು.

ಈಗ ಉಪಲಬ್ಧವಾಗಿರುವ ಜೈನಸಾಹಿತ್ಯ ಗ್ರಂಥಗಳಲ್ಲಿ ಪೂರ್ವಪುರಾಣವು ಒಂದು ಮುಖ್ಯಗ್ರಂಥವಾಗಿದೆ. ಕವಿತಾಚಾತುರ್ಯ, ಅರ್ಥಗಾಂಭೀರ್ಯ, ಪದಲಾಲಿತ್ಯ, ರಸಾಲಂಕಾರಸೌಷ್ಠವ ಮೊದಲಾದ ಕಾವ್ಯಗುಣಗಳಿಂದ ಜೈನಪುರಾಣಗ್ರಂಥಗಳಲ್ಲೆಲ್ಲ ಇದು ಅದ್ವಿತೀಯವಾದುದು. ಇದರಲ್ಲಿ ಮಹಾಕಾವ್ಯದ ಲಕ್ಷಣಗಳೆಲ್ಲವೂ ತುಂಬಿ ತುಳುಕುತ್ತಿವೆ. ನೀತಿಬೋಧೆ, ವೈರಾಗ್ಯ, ತತ್ತ್ವವಿಚಾರ, ಸಂಸಾರಸ್ವರೂಪ, ಮುಕ್ತಿಸ್ವರೂಪ, ಕರ್ಮಸ್ವರೂಪ, ಲೋಕಸ್ವರೂಪ ಮೊದಲಾದ ವಿಷಯಗಳು ಬಹಳ ಚೆನ್ನಾಗಿ ನಿರೂಪಿಸಲ್ಪಟ್ಟಿರುತ್ತವೆ. ಒಬ್ಬ ಕವಿಯು ಈ ಗ್ರಂಥವನ್ನು ಕುರಿತು

**ಯದಿ ಸಕಲಕವೀಂದ್ರಪ್ರೋಕ್ತಸೂಕ್ತಪ್ರಚಾರ–ಶ್ರವಣಸರಸಚೇತಾಸ್ತತ್ತ್ವ**
**ಮೇವಂ ಸಖೇ ಸ್ಯಾಃ ।**
**ಕವಿವರಜಿನಸೇನಾಚಾರ್ಯವಕ್ತ್ರಾರವಿಂದ–ಪ್ರಣಿಗದಿತಪುರಾಣಾಕರ್ಣನಾ**
**ಭ್ಯರ್ಣಕರ್ಣಃ ॥**

–ಎಲೈ ಮಿತ್ರನೇ ! ನೀನು ಎಲ್ಲಾ ಕವಿಶ್ರೇಷ್ಠರು ಹೇಳಿದ ಸುವಚನಗಳನ್ನು ಕೇಳಿ ಸರಸಹೃದಯವುಳ್ಳವನಾಗಬೇಕಾದರೆ ಕವಿಶ್ರೇಷ್ಠರಾದ ಜಿನಸೇನಾಚಾರ್ಯರ ಮುಖಕಮಲದಿಂದ ಹೇಳಲ್ಪಟ್ಟ ಪುರಾಣವನ್ನು ಕೇಳುವುದಕ್ಕೆ ಸಮೀಪವಾದ ಕಿವಿಗಳುಳ್ಳವನಾಗು'' ಎಂದು ಹೊಗಳಿರುತ್ತಾನೆ

**''ಯಥಾ ಮಹಾರ್ಘರತ್ನಾನಾಂ ಪ್ರಸೂತಿರ್ಮಕರಾಲಯಾತ್ ।**
**ತಥೈವ ಸೂಕ್ತರತ್ನಾನಾಂ ಪ್ರಭವೋಸ್ಮಾತ್ಪುರಾಣತಃ ॥**
**ಸುದುರ್ಲಭಂ ಯದನ್ಯತ್ರ ಚಿರಾದಪಿ ಸುಭಾಷಿತಂ ।**
**ಸುಲಭಂ ಸ್ವೈರಸಂಗ್ರಾಹ್ಯಂ ತದಿಹಾಸ್ತಿ ಪದೇಪದೇ ॥**

–ಹೇಗೆ ಸಮುದ್ರದಿಂದ ಬಹುಮೂಲ್ಯರತ್ನಗಳ ಉತ್ಪತ್ತಿಯೋ ಹಾಗೆಯೇ ಉತ್ತಮವಚನಗಳೆಂಬ ರತ್ನಗಳ ಉತ್ಪತ್ತಿಯು ಈ ಪುರಾಣದಿಂದಾಗುವುದು. ಬೇರೆ ಗ್ರಂಥಗಳಲ್ಲಿ ಬಹುಕಾಲದವರೆಗೆ ಹುಡುಕಿದರೂ ಅತ್ಯಂತ ದುರ್ಲಭವಾದ ಸುಭಾಷಿತವು ಈ ಗ್ರಂಥದಲ್ಲಿ ಪದಪದದಲ್ಲಿ ಸುಲಭವಾಗಿಯೂ ಯಥೇಚ್ಛವಾಗಿಯೂ ಸಂಗ್ರಹಿಸುವುದಕ್ಕೆ ಯೋಗ್ಯವಾಗಿರುತ್ತದೆ'' ಎಂದು ಈ ಗ್ರಂಥದ ೨ನೆಯ ಪರ್ವದಲ್ಲಿ ಹೇಳಲ್ಪಟ್ಟಿರುವುದು. ಈ ಗ್ರಂಥವನ್ನು ಪಠನಮಾಡಿ ಇದರ ರಸಾಸ್ವಾದನವನ್ನು ಮಾಡುವ ವಿದ್ವಾಂಸರಿಗೆ ಮೇಲೆ ಹೇಳಿದ ಮಾತು ಅಕ್ಷರಶಃ ಸತ್ಯವಾದುದೆಂದು ಗೊತ್ತಾಗದಿರದು.

ಈ ಪುರಾಣದಲ್ಲಿ ಶೃಂಗಾರಾದಿ ವರ್ಣನಗಳು ವಿಸ್ತಾರವಾಗಿ ಮಾಡಲ್ಪಟ್ಟಿರುವುದರಿಂದ ಕೆಲವರು ''ಬಹಳ ವರ್ಣನೆಮಾಡಿರುತ್ತಾರೆ. ಅದು ಹೆಚ್ಚು'' ಎಂದು ಪೂಜ್ಯರಾದ ಗ್ರಂಥಕರ್ತರನ್ನು ಆಕ್ಷೇಪಿಸುವುದುಂಟು. ಕವಿತಾರಸಜ್ಞರಾದ ಮತ್ತೆ ಕೆಲವರು ಈ ವಿಸ್ತಾರವರ್ಣನಗಳನ್ನು ಬಹಳವಾಗಿ ಮೆಚ್ಚುತ್ತಾರೆ. ಲಕ್ಷಣಶಾಸ್ತ್ರಕಾರರು ಪುರಾಣದಲ್ಲಿ ಇಂತಿಂತಹ ವಿಷಯ ವರ್ಣನಗಳಿರಬೇಕೆಂದು ಹೇಳಿರುವುದರಿಂದ ಗ್ರಂಥಕರ್ತರು ಆ ಲಕ್ಷಣಗಳನ್ನೂ ಮನ್ನಿಸಬೇಕಾಗಿ ಬಂದಿತು. ಹಾಗೆ ಮನ್ನಿಸದಿದ್ದರೆ ಕವಿತ್ವಯೋಗ್ಯತೆಯಿಲ್ಲವೆಂದು ಲಕ್ಷಣಶಾಸ್ತ್ರಕಾರರು ಆಕ್ಷೇಪಿಸಬಹುದು. ಈ ಉಭಯಸಂಕಟದಲ್ಲಿ ಗ್ರಂಥಕರ್ತರು ಲಕ್ಷಣಶಾಸ್ತ್ರಕ್ಕೆ ಮನ್ನಣೆಯನ್ನು ಕೊಡುವುದೊಳ್ಳೆಯದೆಂದು ತಿಳಿದರು. ಅಂದರೆ ಬುದ್ಧಿಕ್ಲೇಶವನ್ನು ಸಹಿಸದ ವರ್ಣನೆಗಳನ್ನು ಬಯಸದ ಆ ಕೆಲವು ವಾಚಕರು, ದೊಡ್ಡ ಅಂಗಡಿಗೆ ಹೋಗಿ ತಮಗೆ

ಬೇಕಾದ ಪದಾರ್ಥಗಳನ್ನೇ ತೆಗೆದುಕೊಳ್ಳುವಂತೆ, ಈ ಪುರಾಣದಲ್ಲಿ ತಮಗೆ ಬೇಡವಾದ ವರ್ಣನೆಗಳನ್ನು ಬಿಟ್ಟು ಬೇಕಾದ ವಿಷಯಗಳನ್ನು ಗ್ರಹಣಮಾಡಲೆಂದು ಪೂಜ್ಯರಾದ ಆಚಾರ್ಯರು ಲಕ್ಷಣ ಶಾಸ್ತ್ರಾನುಸಾರವಾಗಿ ವಿದ್ವದ್ರಂಜಕವಾಗಿ ಗ್ರಂಥವನ್ನು ರಚಿಸಿದರು. ಸಲಕ್ಷಣವಾಗಿ ವರ್ಣನೆಗಳಿಲ್ಲದಿದ್ದರೆ ನ್ಯೂನತೆಯಾಗು ವುದಲ್ಲದೆ ವರ್ಣನಗಳಿರುವುದು ನ್ಯೂನತೆಯಾಗದು. ಸರ್ವಸಂಗ ಪರಿತ್ಯಾಗಿಗಳೂ ತಪಸ್ವಿಗಳೂ ನಿಸ್ಪೃಹರೂ ಪೂಜ್ಯರೂ ಆದ ಆಚಾರ್ಯರನ್ನು ಆಕ್ಷೇಪಿಸುವವರು ಅವರ ಬುದ್ಧಿವೈಭವವನ್ನೂ ದೂರದರ್ಶಿತೆಯನ್ನೂ ಯೋಗ್ಯತೆಯನ್ನೂ ತಮ್ಮ ಬುದ್ಧಿ ಯನ್ನೂ ಯೋಗ್ಯತೆಯನ್ನೂ ತುಲನಮಾಡದೆ ಅವರನ್ನು ಆಕ್ಷೇಪಿಸುವುದು ಅಶ್ರೇ ಯಸ್ಕರವೆಂದರೆ ತಪ್ಪಾಗದು.

ಇನ್ನು ಕೆಲವರು ''ಈ ಉದ್ಗ್ರಂಥವನ್ನು ಪ್ರಕಾಶಪಡಿಸಿದುದರಿಂದ ಇದರ ಮಹತ್ತ್ವವು ಹೋಯ್ತು'' ಎಂದು ಹೇಳುವುದುಂಟು. ಆದರೆ ಗ್ರಂಥಗಳನ್ನು ರಚಿಸಿರುವುದು ಲೋಕೋಪಕಾರಾರ್ಥವಾಗಿಯಲ್ಲದೆ ಅವುಗಳನ್ನು ಬಚ್ಚಿಟ್ಟು ಕೊಂಡು ತಾವು ಅವುಗಳ ಉಪಯೋಗವನ್ನು ಹೊಂದದೆ ಇತರರಿಗೂ ಅವಕಾಶ ವನ್ನು ಕೊಡದೆ ಕ್ರಿಮಿಕೀಟಗಳ ಪಾಲಾಗುವಂತೆ ಮಾಡಿ ಜ್ಞಾನಾವರಣೀಯ ಕರ್ಮ ಬಂಧವನ್ನು ಮಾಡಿಕೊಳ್ಳುವುದಕ್ಕಲ್ಲ. ಜ್ಞಾನವನ್ನು ದಾನಮಾಡುವ ವಿಷಯದಲ್ಲಿ ಮತ್ತು ಜ್ಞಾನಿಯ ವಿಷಯದಲ್ಲಿ ದುರ್ಭಾವನೆಯು, ತನಗೆ ತಿಳಿದಿದ್ದರೂ ಗೊತ್ತಿಲ್ಲ ವೆಂದು ಮರೆಮಾಡುವುದು, ಮಾತ್ಸರ್ಯಪಡುವುದು, ಜ್ಞಾನಾರ್ಜನೆಗೆ ವಿಘ್ನವನ್ನು ಮಾಡುವುದು, ಜ್ಞಾನವನ್ನು ದಾನ ಮಾಡದಿರುವುದು, ಪ್ರಶಸ್ತವಾದ ಜ್ಞಾನವನ್ನೂ ಜ್ಞಾನಿಯನ್ನೂ ಹೊಟ್ಟೆಗಿಚ್ಚಿನಿಂದ ದೂಷಿಸುವುದು ಇವುಗಳು ಜ್ಞಾನಾವರಣ, ದರ್ಶನಾವರಣಕರ್ಮಗಳ ಆಸ್ರವಕ್ಕೆ ಕಾರಣಗಳೆಂದು ತತ್ತ್ವಾರ್ಥಸೂತ್ರಗ್ರಂಥದ ''ತತ್ಪ್ರದೋಷನಿಹ್ನವಮಾತ್ಸರ್ಯಾಂತರಾಯಾಸಾದನೋಪಘಾತಾ ಜ್ಞಾನದರ್ಶನಾ ವರಣಯೋಃ'' ಎಂಬ ಸೂತ್ರದಲ್ಲಿ ಹೇಳಲ್ಪಟ್ಟಿರುತ್ತದೆ. ಗ್ರಂಥಗಳ ಮಹತ್ತ್ವವು ಹೋಗುವುದು ಅವುಗಳ ಕರ್ತರಾದ ಆಚಾರ್ಯರುಗಳ ಪವಿತ್ರೋದ್ದೇಶಕ್ಕೆ ಭಂಗ ವನ್ನುಂಟುಮಾಡಿ ಗ್ರಂಥಗಳನ್ನು ಹಾಳುಮಾಡುವುದರಿಂದಲ್ಲದೆ ಅವುಗಳನ್ನು ಪ್ರಕಾಶ ಪಡಿಸುವುದರಿಂದಲ್ಲ. ಗ್ರಂಥಗಳನ್ನು ಪ್ರಕಾಶಪಡಿಸುವುದರಿಂದ ಅವುಗಳ ಮಹತ್ತ್ವವು ಜನತೆಯಲ್ಲಿ ಪ್ರಕಾಶಿತವಾಗುವುದು. ದೀಪವು ಕತ್ತಲೆಯನ್ನು ಹೋಗಲಾಡಿಸಿ ಪದಾರ್ಥಗಳನ್ನು ಪ್ರಕಾಶಪಡಿಸದಿದ್ದರೆ ಅದಿದ್ದೇನು ಪ್ರಯೋಜನ? ಹಾಗೆಯೇ ಗ್ರಂಥಗಳು ಜನತೆಯ ಅಜ್ಞಾನವನ್ನು ಹೋಗಲಾಡಿಸಿ ಹೇಯೋಪಾ ದೇಯಗಳನ್ನು ತಿಳುಹುವುದಕ್ಕೆ ಸಹಕಾರಿಗಳಾಗದಿದ್ದರೆ ಅವುಗಳಿದ್ದೇನು ಫಲ? ಆದುದರಿಂದ ಗ್ರಂಥಗಳನ್ನು ಪ್ರಕಾಶಪಡಿಸುವುದರಿಂದ ಅವುಗಳ ಮಹತ್ತ್ವವು ಹೋಗುವು ದೆಂಬುದು ಮೂರ್ಖತನವೆಂದು ಬೇರೆ ಹೇಳಬೇಕಾಗಿಲ್ಲವು.

### ಮಹಾಪುರಾಣದ ಮಹತ್ತ್ವ

ಜೈನರಲ್ಲಿ ಈ ಪುರಾಣವು ಬಹು ಪವಿತ್ರಗ್ರಂಥವೆಂದೂ ಇದನ್ನು ಭಕ್ತಿಯಿಂದ ಪೂಜಿಸುವುದೂ ಪಠಿಸುವುದೂ ಶ್ರವಣಮಾಡುವುದೂ ಪುಣ್ಯಕರವೆಂದೂ ಭಾವಿಸ ಲ್ಪಡುತ್ತದೆ. ವೃಷಭತೀರ್ಥಂಕರರು, ಭರತ ಬಾಹುಬಲಿಗಳು ಮೊದಲಾದ ಅನೇಕ ಪವಿತ್ರಾತ್ಮರ ಪವಿತ್ರ ಜೀವನವಿಷಯಗಳು ಈ ಪುರಾಣದಲ್ಲಿ ಪ್ರತಿಪಾದಿಸ ಲ್ಪಟ್ಟಿರುವುದೇ ಇದರ ಪವಿತ್ರತೆಗೆ ಕಾರಣವಾಗಿರುತ್ತದೆ. ಶುಭಾಶುಭ ಫಲಗಳನ್ನು ತಿಳಿಯುವುದಕ್ಕಾಗಿ ಅನೇಕ ಜೈನಬಾಂಧವರು ಈ ಪವಿತ್ರಗ್ರಂಥವನ್ನು ಪೂಜಿಸಿ ಇದಕ್ಕೆ ಬಾಲೆಯಿಂದ ಬಂಗಾರದ ಕಡ್ಡಿಯನ್ನು ಹಾಕಿಸಿ ಮರುದಿವಸ ಪುನಃ ಪೂಜಿಸಿ ಅಲ್ಲಿ ಬರುವ ಶುಭಾಶುಭವಿಷಯಗಳಿಂದ ಶುಭಾಶುಭನಿಮಿತ್ತಗಳನ್ನು ತಿಳಿದುಕೊಳ್ಳುವ ಪದ್ಧತಿಯಿರುತ್ತದೆ. ಗುರುತುಮಾಡಲ್ಪಟ್ಟ ಓಲೆಯು ಶಿಥಿಲ ಅಥವಾ ಮುರಿದು ಹೋಗಿದ್ದರೂ ಪರ್ವಾಂತ್ಯವೂ ಶ್ಲೋಕಾಂತ್ಯವು ಬಂದರೂ ಯುದ್ಧ ಮೃತ್ಯು ಮೊದಲಾದ ದುಷ್ಟವಿಷಯಗಳು ಬಂದರೂ ಅಶುಭವೆಂದೂ

**ಪಾರಾವಾರಪುರರ್ತುಶೈಲಸಲಿಲಕ್ರೀಡಾಕುಮಾರೋದಯ ।**
**ಧ್ಯಾನಾಹ್ಲಾದವಿವಾಹಭೋಗವಿಜಯಶ್ರೀಚಂದ್ರಸೂರ್ಯೋದಯಾಃ ॥**
**ಮಂತ್ರಾಲೋಚನನಾಯಕಾಭ್ಯುದಯಯುಕ್ಪಟ್ಟಾಭಿಷೇಕೋತ್ಸವಾಃ**
**......... –**

–ಇತ್ಯಾದಿ ಪದ್ಯದಲ್ಲಿ ಹೇಳಿರುವಂತೆ ಪುರಾಣ ಶಕುನದಲ್ಲಿ ಸಮುದ್ರ ನಗರ ಋತು ಪರ್ವತ ಜಲಕ್ರೀಡಾ ಕುಮಾರೋತ್ಪತ್ತಿ ಧ್ಯಾನ ಆಹ್ಲಾದ ವಿವಾಹ ಭೋಗ ವಿಜಯ ಚಂದ್ರಸೂರ್ಯರ ಉದಯ ಮಂತ್ರಾಲೋಚನ, ನಾಯಕನ ಅಭ್ಯುದಯ ಪಟ್ಟಾಭಿಷೇಕ ಉತ್ಸವ ಈ ವಿಷಯಗಳು ಬಂದರೆ ಶುಭವೆಂದೂ ನಿಶ್ಚಯಿಸಲ್ಪಡು ವುದು.

ಶಕುನವನ್ನು ನೋಡುವುದಕ್ಕೆ ಗುರುತುಮಾಡಿರುವ ಸ್ಥಳದಲ್ಲಿ ಮೊದಲಿನ ಓಲೆಯ ಮೊದಲಿನ ಏಳು ಪಂಕ್ತಿಗಳನ್ನು ಬಿಟ್ಟು ಮುಂದಿನ ಭಾಗವನ್ನು ಓದಿನೋಡಿ ಅಲ್ಲಿ ಬರುವ ವಿಷಯಗಳ ಮೇಲೆ ಶುಭಾಶುಭನಿಮಿತ್ತಗಳನ್ನು ತಿಳಿಯ ಬೇಕೆನ್ನುವರು. ಈ ಪುರಾಣದ ಪವಿತ್ರತೆ, ನಿಮಿತ್ತವನ್ನು ನೋಡುವ ವಿಧಾನ ಮೊದ ಲಾದ ವಿಷಯಗಳು ಈ ಪುರಾಣದ ಪ್ರಥಮಪರ್ವದ ಈ ಕೆಳಗಿನ ಪದ್ಯಗಳಿಂದಲೂ ವಿಶದವಾಗುತ್ತವೆ.

**ಪುರಾಣಮೃಷಿಭಿಃ ಪ್ರೋಕ್ತಂ ಪ್ರಮಾಣಂ ಸೂಕ್ತಮಾಂಜಸಂ ।**
**ತತಃ ಶ್ರದ್ಧೇಯಮಧ್ಯೇಯಂ ಧ್ಯೇಯಂ ಶ್ರೇಯೋರ್ಥಿನಾಮಿದಮ್ ॥**
**ಇದಂ ಪುಣ್ಯಮಿದಂ ಪೂತಮಿದಂ ಮಾಂಗಲ್ಯಮುತ್ತಮಂ ।**
**ಇದಮಾಯುಷ್ಯಮಗ್ರ್ಯಂ ಚ ಯಶಸ್ಯಂ ಸ್ವರ್ಗಮೇವ ಚ ॥**

**ಇದಮರ್ಚಯತಾಂ ಶಾಂತಿಸ್ತುಷ್ಟಿಃ ಪುಷ್ಟಿಶ್ಚ ಪೃಚ್ಛತಾಂ ।**
**ಪಠತಾಂ ಕ್ಷೇಮಮಾರೋಗ್ಯಂ ಶೃಣ್ವತಾಂ ಕರ್ಮನಿರ್ಜರಾ ॥**
**ಇತೋ ದುಃಸ್ವಪ್ನನಿರ್ನಾಶಃ ಸುಸ್ವಪ್ನಸ್ಯಾತಿರೇವ ಚ ।**
**ಇತೋಽಭೀಷ್ಟಫಲವ್ಯಕ್ತಿರ್ನಿಮಿತ್ತಮಭಿಪಶ್ಯತಾಮ್ ॥**

–ಈ ಪುರಾಣವನ್ನು ಋಷಿಗಳು ಹೇಳಿರುವುದರಿಂದ ಇದು ಪ್ರಮಾಣವೂ ಸಂಪೂರ್ಣವಾಗಿ ಸತ್ಯವೂ ಆಗಿರುತ್ತದೆ. ಆದುದರಿಂದ ಆತ್ಮಕಲ್ಯಾಣವನ್ನಿಚ್ಛಿಸು ವವರು ಇದನ್ನು ನಂಬಬೇಕು; ಅಧ್ಯಯನಮಾಡಬೇಕು; ಧ್ಯಾನಿಸಬೇಕು. ಈ ಪುರಾಣವು ಪುಣ್ಯದಾಯಕವೂ ಪವಿತ್ರವೂ ಉತ್ತಮವಾದ ಮಂಗಲಸ್ವರೂಪವೂ ಆಯುಷ್ಯವರ್ಧಕವೂ ಕೀರ್ತಿಯನ್ನುಂಟುಮಾಡುವುದೂ ಸ್ವರ್ಗದಾಯಕವೂ ಆಗಿ ರುತ್ತದೆ. ಈ ಪುರಾಣವನ್ನು ಪೂಜಿಸುವವರಿಗೆ ದುಃಖಶಾಂತಿಯೂ ಸಂದೇಹ ನಿವಾರಣೆಗೋಸುಗ ಪ್ರಶ್ನೆಮಾಡುವವರಿಗೆ ಆನಂದವೂ ಪುಷ್ಟಿ–ಜ್ಞಾನವೃದ್ಧಿಯೂ ಓದುವವರಿಗೆ ಕ್ಷೇಮವೂ ಆರೋಗ್ಯವೂ ಕೇಳುವವರಿಗೆ ಕರ್ಮನಿರ್ಜರೆಯೂ ಆಗುವುವು. ಈ ಪುರಾಣಪೂಜನ, ಪೃಚ್ಛನಾ, ಪಠನ, ಶ್ರವಣಾದಿಗಳಿಂದ ದುಃಸ್ವಪ್ನಗಳ ನಾಶವೂ ಸುಸ್ವಪ್ನಗಳ ವೃದ್ಧಿಯೂ ನಿಮಿತ್ತ–ಶಕುನವನ್ನು ನೋಡುವವರಿಗೆ ಇಷ್ಟಫಲ(ಶುಭಾಶುಭ ಶಕುನಫಲ) ಪ್ರಾಪ್ತಿಯೂ ಉಂಟಾಗುವುವು.'' ಇಂತಹ ಪವಿತ್ರಗ್ರಂಥವು ಮನೆಯಲ್ಲಿರುವುದು ಮಂಗಲಕರವೆಂದು ಭಾವಿಸಿ ಅನೇಕರು ಇದನ್ನು ತಮ್ಮ ಮನೆಗಳಲ್ಲಿಟ್ಟುಕೊಂಡು ಪೂಜಿಸುತ್ತಿರುವರು.

### ಗ್ರಂಥಕರ್ತೃ ಪರಿಚಯ

ಈ ಗ್ರಂಥವನ್ನು ಭಗವಜ್ಜಿನಸೇನಾಚಾರ್ಯರೆಂಬ ಮಹರ್ಷಿಗಳು ಲೋಕೋಪ ಕಾರಾರ್ಥವಾಗಿ ರಚಿಸಿದರು. ಇವರು ಯಾವ ಊರಲ್ಲಿ ಮತ್ತು ವಂಶದಲ್ಲಿ ತಮ್ಮ ಪವಿತ್ರ ಜನ್ಮವನ್ನೆತ್ತಿದರೆಂಬುದಕ್ಕೆ ಯಾವ ಆಧಾರವೂ ದೊರೆತಿಲ್ಲ. ಇವರು ದಕ್ಷಿಣದೇಶದಲ್ಲಿ ಹುಟ್ಟಿದವರೆಂದು ಪ್ರಸಿದ್ಧಿಯಿದೆ. ಸರ್ವಸಂಗಪರಿತ್ಯಾಗಿಗಳಾದ ತಪಸ್ವಿಗಳು ತಮ್ಮ ಪೂರ್ವಾವಸ್ಥೆಯನ್ನು ಬರೆದಿಡುವುದಕ್ಕೆ ಇಷ್ಟಪಡದಿರುವುದು ಚೋದ್ಯವಲ್ಲ. ಅವರ ಪೂರ್ವಾವಸ್ಥೆಗಿಂತ ಉತ್ತರಾವಸ್ಥೆ(ಮುನಿಯವಸ್ಥೆ)ಯೇ ಶ್ರೇಷ್ಠವೂ ಲೋಕಪೂಜ್ಯವೂ ಆಗಿರುವುದು. ಭಗವಜ್ಜಿನಸೇನಾಚಾರ್ಯರ ಉತ್ತರಾವಸ್ಥೆ ಯನ್ನು ವಿಚಾರಮಾಡುವಲ್ಲಿ ನಮಗೆ ತಿಳಿದುಬರುವುದೇನೆಂದರೆ:– ಜೈನರಲ್ಲಿ ಶ್ವೇತಾಂಬರ ಸಂಪ್ರದಾಯವು ಹುಟ್ಟಿದಂದಿನಿಂದ ದಿಗಂಬರ ಸಂಪ್ರದಾಯಕ್ಕೆ ಮೂಲಸಂಘವೆಂದು ಹೆಸರಾಯಿತು. ಈ ಮೂಲಸಂಘದಲ್ಲಿಯೂ ಈಗ್ಗೆ ಸುಮಾರು ೧೭೦೦ ವರ್ಷಗಳ ಹಿಂದೆ ಅರ್ಹದ್ಬಲ್ಯಾಚಾರ್ಯರ ಕಾಲದಲ್ಲಿ ಸಿಂಹಸಂಘ ನಂದಿಸಂಘ ಸೇನಸಂಘ ದೇವಸಂಘಗಳೆಂದು ನಾಲ್ಕು ಮುನಿಗಳ ಸಂಘಗಳುಂಟಾದುವು. ಅವುಗಳಲ್ಲಿ ಭಗವಜ್ಜಿನಸೇನಾಚಾರ್ಯರು ಸೇನಸಂಘಕ್ಕೆ ಸೇರಿದವರು. ಇವರ ವಿದ್ಯಾಗುರುಗಳು ವೀರಸೇನ ಮುನಿಗಳು. ದೀಕ್ಷಾಗುರುಗಳು ಜಯಸೇನರು. ವೀರಸೇನರ ಗುರುಗಳು ಏಲಾಚಾರ್ಯರು.

ಭಗವಜ್ಜಿನಸೇನಾಚಾರ್ಯರು ಸಂಪೂರ್ಣ ಮಹಾಪುರಾಣವನ್ನು ರಚಿಸ ಬೇಕೆಂದು ಉದ್ದೇಶಪಟ್ಟಿದ್ದರಾದರೂ ಕಾಲಗತಿಯಿಂದ ಮಧ್ಯಕಾಲದಲ್ಲೇ ಅವರಿಗೆ ಅವಸಾನಕಾಲವು ಪ್ರಾಪ್ತವಾದುದರಿಂದ ಅವರ ಉದ್ದೇಶವು ನೆರವೇರಲಿಲ್ಲ. ಅವರು ಸಂಪೂರ್ಣ ಮಹಾಪುರಾಣವನ್ನು ರಚಿಸಬೇಕೆಂದು ಉದ್ದೇಶಪಟ್ಟಿದ್ದರೆಂಬುದು ಈ ಪುರಾಣದ ೧ ನೆಯ ಪರ್ವದ ೧೯ ನೆಯ ಪದ್ಯದ ''ಪುರಾಣಂ ಸಂಗ್ರಹಿಷ್ಯಾಮಿ ತ್ರಿಷಷ್ಟಿಪುರುಷಾಶ್ರಿತಂ'' ಎಂಬೀ ಪದ್ಯಭಾಗದಿಂದ ವ್ಯಕ್ತವಾಗುವುದು. ಈ ಪೂರ್ವಪುರಾಣದಲ್ಲಿ ೪೭ ಪರ್ವಗಳಿರುತ್ತವೆ. ಅವುಗಳಲ್ಲಿ ೪೨ ಪರ್ವಗಳನ್ನು ಭಗವಜ್ಜಿನಸೇನಾಚಾರ್ಯರು ರಚಿಸಿರುತ್ತಾರೆ. ಅಷ್ಟರಲ್ಲಿ ಅವರಿಗೆ ಅವಸಾನಕಾಲವು ಪ್ರಾಪ್ತವಾಯಿತು. ಬಳಿಕ ಅವರ ಶಿಷ್ಯರಾದ ಭಗವದ್ಗುಣಭದ್ರಾಚಾರ್ಯರು ಈ ಪೂರ್ವಪುರಾಣದ ಅವಶಿಷ್ಟಭಾಗವನ್ನೂ ಉತ್ತರಪುರಾಣವನ್ನೂ ರಚಿಸಿದರು. ಈ ಗುರುಶಿಷ್ಯರಾದ ಉಭಯ ಆಚಾರ್ಯರುಗಳ ಕವಿತಾಶಕ್ತಿಯು ಅದ್ಭುತವಾದುದು. ಇವರುಗಳ ಕವಿತೆಗಳನ್ನು ತುಲನಾತ್ಮಕ ದೃಷ್ಟಿಯಿಂದ ನೋಡುವುದಾದರೆ ಭಗವಜ್ಜಿನಸೇನಾಚಾರ್ಯರ ಕವಿತೆಯು ದ್ರಾಕ್ಷಾಪಾಕವೆಂದೂ ಭಗವದ್ಗುಣ ಭದ್ರಾಚಾರ್ಯರ ಕವಿತೆಯು ನಾರಿಕೇಲಪಾಕವೆಂದೂ ಹೇಳಬಹುದು.

ಹಸ್ತಿಮಲ್ಲಕವಿಯಿಂದ ವಿರಚಿತವಾದ ವಿಕ್ರಾಂತಕೌರವೀಯನಾಟಕದಲ್ಲಿರುವ

**ತಚ್ಛಿಷ್ಯಪ್ರವರೋ ಜಾತೋ ಜಿನಸೇನಮುನೀಶ್ವರಃ ।**
**ಯದ್ವಾಙ್ಮಯಂ ಪುರೋರಾಸೀತ್ಪುರಾಣಂ ಪ್ರಥಮಂ ಭುವಿ ॥**

–ಅವರ(ವೀರಸೇನರ) ಶಿಷ್ಯಶ್ರೇಷ್ಠರಾದ ಜಿನಸೇನಮುನೀಶ್ವರರ ವಾಙ್ಮಯ ರೂಪವಾದ ಆದೀಶ್ವರಸ್ವಾಮಿಯ ಪುರಾಣವು ಭೂಮಿಯಲ್ಲಿ ಮುಖ್ಯವಾಗಿದ್ದಿತು'' ಎಂಬೀ ಪದ್ಯದಲ್ಲಿರುವ ಮುಖ್ಯಾರ್ಥದ್ಯೋತಕವಾದ ''ಪ್ರಥಮ'' ಪದಕ್ಕೆ ''ಮೊದಲನೆಯ'' ಎಂದು ಅರ್ಥಮಾಡಿ ಈಗಿನ ಪರಿಶೋಧಕರು ಕೆಲವರು ''ಜೈನ ರಲ್ಲಿ ಮೊತ್ತಮೊದಲು ಪುರಾಣವನ್ನು ರಚಿಸಿದವರು ಜಿನಸೇನಾಚಾರ್ಯರು'' ಎಂದು ಹೇಳುತ್ತಾರೆ. ಇದರಿಂದ ಮೊದಲು ಜೈನರಲ್ಲಿ ಪುರಾಣವೇ ಇರಲಿಲ್ಲವೆಂದು ಅವರ ಅಭಿಪ್ರಾಯವಿರುವಂತೆ ತೋರುತ್ತದೆ. ಈ ಅಭಿಪ್ರಾಯವು ನಿರಾಧಾರವಾದು ದೆಂದು ಈ ಕೆಳಗೆ ವಿವರಿಸುವ ಕಾರಣಗಳಿಂದ ವ್ಯಕ್ತವಾಗುವುದು:– (೧) ಗ್ರಂಥಕರ್ತರೇ ತಮ್ಮ ಗ್ರಂಥದ ಪ್ರಥಮದಲ್ಲಿ

**ಸ ಪೂಜ್ಯಃ ಕವಿಭಿರ್ಲೋಕೇ ಕವೀನಾಂ ಪರಮೇಶ್ವರಃ ।**
**ವಾಗರ್ಥಸಂಗ್ರಹಂ ಕೃತ್ಸ್ನಂ ಪುರಾಣಂ ಯಃ ಸಮಗ್ರಹೀತ್ ॥**

– ಯಾರು ಶಬ್ದಾರ್ಥಸಂಗ್ರಹವುಳ್ಳ ಚತುರ್ವಿಂಶತಿಪುರಾಣವನ್ನು ಸಂಕ್ಷೇಪವಾಗಿ ರಚಿಸಿದರೋ ಅಂತಹ ಕವಿಪರಮೇಷ್ಠಿಗಳು ಲೋಕದಲ್ಲಿ ಕವಿಗಳಿಂದ ಪೂಜಿಸ ಲ್ಪಡುವುದಕ್ಕೆ ಯೋಗ್ಯರು'' ಎಂದು ಹೇಳಿರುವುದರಿಂದಲೂ ಗುಣಭದ್ರಾ ಚಾರ್ಯರು ಪೂರ್ವಪುರಾಣವನ್ನು ಪ್ರಶಂಸೆ ಮಾಡುವಾಗ

**ಕವಿಪರಮೇಶ್ವರನಿಗದಿತಗದ್ಯಕಥಾಮಾತೃಕಂ ಪುರೋಶ್ಚರಿತಮ್ ।**
**ಸಕಲಚ್ಛಂದೋಲಂಕೃತಿಲಕ್ಷ್ಯಂ ಸೂಕ್ಷ್ಮಾರ್ಥ ಗೂಢಪದರಚನಮ್ ॥**

–ಕವಿಪರಮೇಶ್ವರರು ಗದ್ಯರೂಪದಿಂದ ಹೇಳಿದ ಕಥೆಯೇ ಉಳ್ಳುದೂ ಸಮಸ್ತ ಛಂದಸ್ಸುಗಳಿಗೂ ಅಲಂಕಾರಗಳಿಗೂ ಲಕ್ಷ್ಯರೂಪವೂ ಸೂಕ್ಷ್ಮವಾದ ಅರ್ಥವೂ ಗೂಢವಾದ ಪದರಚನೆಯೂ ಉಳ್ಳುದೂ ಆದ ಆದೀಶ್ವರಸ್ವಾಮಿಯ ಚರಿತ್ರೆ ಯನ್ನು'' ಎಂದು ಹೇಳಿರುವುದರಿಂದಲೂ ಜಿನಸೇನಾಚಾರ್ಯರಿಗಿಂತ ಮೊದಲು ಜೈನರಲ್ಲಿ ಪುರಾಣವೇ ಇರಲಿಲ್ಲವೆಂದು ಹೇಳುವುದು ತಪ್ಪು. ಜಿನಸೇನಾಚಾರ್ಯರು ಕವಿಪರಮೇಷ್ಠಿಗಳ ಗ್ರಂಥಾಧಾರವನ್ನಿಟ್ಟುಕೊಂಡೇ ಈ ಪುರಾಣವನ್ನು ಪ್ರಾರಂಭಿಸಿ ದುದಾಗಿದೆ. ಕವಿಪರಮೇಷ್ಠಿಗಳನ್ನು ಕನ್ನಡಕವಿಗಳೂ ಹೊಗಳಿದ್ದಾರೆ. ಆ ಕವಿ ಪರಮೇಷ್ಠಿಗಳು ಯಾವ ಹಿಂದಿನ ಗ್ರಂಥಾಧಾರದಿಂದ ಪುರಾಣವನ್ನು ರಚಿಸಿದ ರೆಂಬುದು ನಮಗೆ ತಿಳಿದುಬಂದಿಲ್ಲವಾದರೂ ತೀರ್ಥಂಕರರ ಕಾಲದಿಂದಲೂ ಇದು ಪರಂಪರೆಯಾಗಿ ಬಂದಿದೆಯೆಂಬುದು ನಿಜ.

## ಗ್ರಂಥಕರ್ತರ ಕಾಲ

ಭಗವಜ್ಜಿನಸೇನಾಚಾರ್ಯರ ಸರಿಯಾದ ಕಾಲನಿರ್ಣಯವನ್ನು ಸೂಚಿಸುವ ಆಧಾರಗಳಾವುವೂ ದೊರೆಯುವುದಿಲ್ಲವಾದರೂ ಇವರು ರಾಷ್ಟ್ರಕೂಟವಂಶದ ದೊರೆಯಾದ ಅಮೋಘವರ್ಷನಿಗೆ ಗುರುಗಳಾಗಿದ್ದುದರಿಂದಲೂ ಚರಿತ್ರಕಾರರು ಅಮೋಘವರ್ಷನ ರಾಜ್ಯಕಾಲವು ಶಕವರ್ಷ ೭೩೭ ರಿಂದ ೭೯೯ (ಕ್ರಿಸ್ತಶಕ ೮೧೫ ರಿಂದ ೮೭೭) ಎಂದು ನಿಶ್ಚಯಿಸಿರುವುದರಿಂದಲೂ ಹರಿವಂಶಪುರಾಣದ ಕರ್ತರಾದ ಜಿನಸೇನಾಚಾರ್ಯರು ಈ ಭಗವಜ್ಜಿನಸೇನಾಚಾರ್ಯರನ್ನೂ ಇವರ ಗುರುಗಳಾದ ವೀರಸೇನಾಚಾರ್ಯರನ್ನೂ ಹರಿವಂಶಪುರಾಣದಲ್ಲಿ

**ಜಿತಾತ್ಮಪರಲೋಕಸ್ಯ ಕವೀನಾಂ ಚಕ್ರವರ್ತಿನಃ ।**
**ವೀರಸೇನಗುರೋಃ ಕೀರ್ತಿರಕಲಂಕಾವಭಾಸತೇ ॥**
**ಯಾ ಮಿತಾಭ್ಯುದಯೇ ತಸ್ಯ ಜಿನೇಂದ್ರಗುಣಸಂಸ್ತುತಿಃ ।**
**ಸ್ವಾಮಿನೋ ಜಿನಸೇನಸ್ಯ ಕೀರ್ತಿಂ ಸಂಕೀರ್ತಯತ್ಯಸೌ ॥**
**ವರ್ಧಮಾನಪುರಾಣೋದ್ಯದಾದಿತ್ಯೋಕ್ತಿಗಭಸ್ತಯಃ ।**
**ಪ್ರಸ್ಫುರಂತಿ ಗಿರೀಶಾಂತಃಸ್ಫುಟಸ್ಫಟಿಕಭಿತ್ತಿಷು ॥**

ಈ ಪದ್ಯಗಳಿಂದ ಪ್ರಶಂಸೆ ಮಾಡಿರುವುದರಿಂದಲೂ

**ಶಾಕೇಷ್ವಬ್ದಶತೇಷು ಸಪ್ತಸು ದಿಶಂ ಪಂಚೋತ್ತರೇಷೂತ್ತರಾಂ ।**
**ಪಾತೀಂದ್ರಾಯುಧನಾಮ್ನಿ ಕೃಷ್ಣನೃಪಜೇ ಶ್ರೀವಲ್ಲಭೇ ದಕ್ಷಿಣಾಂ ॥**
**ಪೂರ್ವಾಂ ಶ್ರೀಮದವಂತಿಭೂಭೃತಿ ನೃಪೇ ವತ್ಸಾಧಿರಾಜೇಽಪರಾಂ ।**
**ಸೌರಾಣಾಮಧಿಮಂಡಲಂ ಜಯಯುತೇ ವೀರೇ ವರಾಹೇವತಿ ॥**

–ಶಕವರ್ಷ ೭೦೫ ರಲ್ಲಿ ಕೃಷ್ಣರಾಜನ ಮಗನಾದ ಇಂದ್ರಾಯುಧನು ಉತ್ತರ ದಿಕ್ಕನ್ನೂ ಶ್ರೀವಲ್ಲಭನು ದಕ್ಷಿಣದಿಕ್ಕನ್ನೂ ಅವಂತಿರಾಜನು ಪೂರ್ವದಿಕ್ಕನ್ನೂ ವತ್ಸ ರಾಜನು ಪಶ್ಚಿಮದಿಕ್ಕನ್ನೂ ವೀರನಾದ ಜಯವರಾಹನು ಸೌರಾಷ್ಟ್ರದೇಶವನ್ನೂ ಆಳು ತ್ತಿರುವಾಗ (ಈ ಗ್ರಂಥದ ರಚನೆಯಾದುದು) ಎಂದು ಹೇಳುವಂತೆ ಶಕವರ್ಷ ೭೦೫ (ಕ್ರಿ.ಶ. ೭೮೩) ರಲ್ಲಿ ಹರಿವಂಶಪುರಾಣವು ಪೂರ್ತಿಯಾಗಿರುವುದರಿಂದಲೂ ಭಗವಜ್ಜಿನಸೇನಾಚಾರ್ಯರ ಕಾಲವನ್ನು ಸ್ವಲ್ಪ ಹೆಚ್ಚುಕಡಮೆಯಾಗಿ ನಿರ್ಣಯಿಸು ವುದಕ್ಕೆಡೆಯಿದೆ. ಭಗವಜ್ಜಿನಸೇನಾಚಾರ್ಯರು ಜಿನಗುಣಸ್ತೋತ್ರವೆಂಬ ಗ್ರಂಥ ವನ್ನೂ ವರ್ಧಮಾನಪುರಾಣವನ್ನೂ ಹರಿವಂಶಪುರಾಣಕ್ಕಿಂತ ಮೊದಲು ರಚಿಸಿದ್ದ ರೆಂಬುದು ಮೇಲಿನ ಪದ್ಯಗಳಿಂದ ವ್ಯಕ್ತವಾಗುವುದು. ಹರಿವಂಶಪುರಾಣಕರ್ತರು ಹೇಳಿರುವ ಕಾಲಕ್ಕೆ ಮೊದಲು ಎರಡು ಗ್ರಂಥಗಳನ್ನು ರಚಿಸಿದ್ದ ಭಗವಜ್ಜಿನ ಸೇನಾಚಾರ್ಯರ ವಯಸ್ಸು ಸುಮಾರು ೩೦ ವರ್ಷಗಳಾಗಿರಬಹುದೆಂದು ಊಹಿಸಿ ಅವರ ಪೂರ್ಣವಯಸ್ಸು ಮುಂದೆ ಹೇಳುವ ಕೃತಿಗಳಿಂದ ಸುಮಾರು ೮೫ ವರ್ಷಗಳೆಂದು ಭಾವಿಸಿಕೊಂಡರೆ ಕ್ರಿ. ಶ. ಸುಮಾರು ೭೫೩ ರಲ್ಲಿ ಅವರ ಜನ್ಮವೆಂದೂ ೮೩೮ ರಲ್ಲಿ ಮೃತ್ಯುವೆಂದೂ ಹೇಳಬಹುದಾಗಿದೆ. ಹರಿವಂಶಪುರಾಣದ ಸಮಾಪ್ತಿ ಕಾಲಕ್ಕೂ ಅಮೋಘವರ್ಷನ ರಾಜ್ಯಾರಂಭಕಾಲಕ್ಕೂ ೩೨ ವರ್ಷಗಳ ಅಂತರವಿದೆ. ಈ ಲೆಕ್ಕದಿಂದ ೨೩ ವರ್ಷಕಾಲ ಭಗವಜ್ಜಿನಸೇನಾಚಾರ್ಯರು ಅಮೋಘವರ್ಷನ ರಾಜ್ಯಕಾಲದಲ್ಲಿದ್ದರೆಂಬುದೂ ಹರಿವಂಶಪುರಾಣದನಂತರ ಮುಂದೆ ಹೇಳುವ ಇತರ ಗ್ರಂಥಗಳನ್ನೂ ಪೂರ್ವಪುರಾಣವನ್ನೂ ಇವರು ರಚಿಸಿದರೆಂಬುದೂ ಪೂರ್ವ ಪುರಾಣದ ರಚನೆಯಾಗಿ ಈಗ್ಗೆ ಸುಮಾರು ೧೧೯೦ ವರ್ಷಗಳ ಮೇಲೆಯಾಗಿದೆ ಯೆಂಬುದೂ ವ್ಯಕ್ತವಾಗುವುವು. ಭಗವಜ್ಜಿನಸೇನಾಚಾರ್ಯರು ಅಪರವಯಸ್ಸಿನಲ್ಲಿ ಪೂರ್ವಪುರಾಣದಂತಹ ಉದ್ಗ್ರಂಥವನ್ನು ರಚಿಸಿರುವುದರಿಂದ ವೃದ್ಧಾಪ್ಯದಲ್ಲಿಯೂ ಅವರ ಶರೀರದಾರ್ಢ್ಯವೂ ಬುದ್ಧಿಪಾಟವವೂ ಚೆನ್ನಾಗಿದ್ದುವೆಂದು ಗೊತ್ತಾಗುವುದು.

ಭಗವಜ್ಜಿನಸೇನಾಚಾರ್ಯರು ಅಮೋಘವರ್ಷನಿಗೆ ಗುರುವಾಗಿದ್ದರೆಂಬುದು ಗುಣಭದ್ರಾಚಾರ್ಯರ–

**ಯಸ್ಯ ಪ್ರಾಂಶುನಖಾಂಶುಜಾಲವಿಸರದ್ಧಾರಾಂತರಾವಿರ್ಭವ ।**
**ತ್ಪಾದಾಂಭೋಜರಜಃಪಿಶಂಗಮುಕುಟಪ್ರತ್ಯಗ್ರರತ್ನದ್ಯುತಿಃ ॥**
**ಸಂಸ್ಮರ್ತಾ ಸ್ವಮಮೋಘವರ್ಷನೃಪತಿಃ ಪೂತೋಽಹಮದ್ಯೇತ್ಯಲಂ ।**
**ಸ ಶ್ರೀಮಾನ್ ಜಿನಸೇನಪೂಜ್ಯಭಗವತ್ಪಾದೋ ಜಗನ್ಮಂಗಲಮ್ ॥**

–ಅಮೋಘವರ್ಷರಾಜನು ಯಾವ ಪಾದಕಮಲಗಳಲ್ಲಿ ತನ್ನ ಕಿರೀಟವನ್ನಿಟ್ಟು ನಮಸ್ಕಾರಮಾಡುವಾಗ ಉಗುರುಗಳ ಕಿರಣಗಳ ಸಮೂಹವು ಕಿರೀಟದಲ್ಲಿ ನೂತನವಾದ ರತ್ನದ ಕಾಂತಿಯನ್ನುಂಟುಮಾಡಿದ್ದಿತೋ ಅವನು ಯಾವುದನ್ನು ಸ್ಮರಿಸಿ ''ಈ ದಿನ ನಾನು ಪವಿತ್ರನಾದೆನು, ಎಂದು ತಿಳಿಯುತ್ತಿದ್ದನೋ ಅಂತಹ ಸಂಪದ್ಯುಕ್ತವಾದ ಭಗವಜ್ಜಿನಸೇನಾಚಾರ್ಯರ ಪೂಜ್ಯವಾದ ಪಾದವು ಜಗತ್ತಿಗೆ ಮಂಗಲವನ್ನುಂಟು ಮಾಡಲಿ'' ಎಂಬೀ ಪದ್ಯದಿಂದಲೂ ಭಗವಜ್ಜಿನಸೇನಾಚಾರ್ಯರಿಂದ ವಿರಚಿತವಾದ ಪಾರ್ಶ್ವಾಭ್ಯುದಯಕಾವ್ಯದ

**ಇತಿ ವಿರಚಿತಮೇತತ್ಕಾವ್ಯಮಾವೇಷ್ಟ್ಯ ಮೇಘಂ ।**
**ಬಹುಗುಣಮಪದೋಷಂ ಕಾಲಿದಾಸಸ್ಯ ಕಾವ್ಯಮ್ ॥**
**ಮಲಿನಿತಪರಕಾವ್ಯಂ ತಿಷ್ಠತಾದಾಶಶಾಂಕಂ ।**
**ಭುವನಮವತು ದೇವಸ್ಸರ್ವದಾಮೋಘವರ್ಷಃ ॥**

–ಈ ರೀತಿಯಾಗಿ ಕಾಲಿದಾಸನ ಮೇಘದೂತಕಾವ್ಯವನ್ನಾವರಿಸಿ ರಚಿಸಲ್ಪಟ್ಟಿದ್ದೂ ಮಾಧುರ್ಯಾದಿ ಅನೇಕ ಗುಣಗಳುಳ್ಳದ್ದೂ ದೋಷರಹಿತವೂ ಆದ ಈ ಕಾವ್ಯವು ಚಂದ್ರನಿರುವವರೆಗೂ ಬೇರೆ ಕಾವ್ಯವನ್ನು ಅಥವಾ ಬೇರೆಯವರ ಕಾವ್ಯವನ್ನು ಮಲಿನಮಾಡಿ ಅಂದರೆ ಸರ್ವೋತ್ಕೃಷ್ಟವಾಗಿ ಇರಲಿ. ಅಮೋಘವರ್ಷ ರಾಜನು ಯಾವಾಗಲೂ ಪೃಥ್ವಿಯನ್ನು ಕಾಪಾಡಲಿ'' ಎಂಬೀ ಪದ್ಯದಿಂದಲೂ ಗೊತ್ತಾಗುವುದು. ಅಮೋಘವರ್ಷನು ಮಾನ್ಯಖೇಟದಲ್ಲಿ ರಾಜನಾಗಿದ್ದನು. ಆ ಮಾನ್ಯಖೇಟವೆಂಬುದು ಈಗ ''ಮಲಖೇಡ'' ಎಂದು ಕರೆಯಲ್ಪಡುತ್ತದೆ. ಇದು ಹೈದರಾಬಾದ್ ಸಂಸ್ಥಾನದಲ್ಲಿದೆ. ಅಮೋಘವರ್ಷನ ಮಗನ ಹೆಸರು ಅಕಾಲವರ್ಷ. ಆತನು ಬಹಳ ಪರಾಕ್ರಮಿಯಾಗಿದ್ದನು. ಅಮೋಘವರ್ಷನು ಕೊನೆಯಲ್ಲಿ ವಿರಕ್ತನಾಗಿ ರಾಜ್ಯಸಂಪತ್ತನ್ನು ಪರಿತ್ಯಜಿಸಿದ್ದನೆಂದು ಆತನು ರಚಿಸಿರುವ ಪ್ರಶ್ನೋತ್ತರ ರತ್ನಮಾಲೆಯೆಂಬ ಗ್ರಂಥದಲ್ಲಿರುವ

**ವಿವೇಕಾತ್ತ್ಯಕ್ತರಾಜ್ಯೇನ ರಾಜ್ಞೇಯಂ ರತ್ನಮಾಲಿಕಾ ।**
**ರಚಿತಾಮೋಘವರ್ಷೇಣ ಸುಧಿಯಾಂ ಸದಲಂಕೃತಿಃ ॥**

–ವಿವೇಕದಿಂದ ರಾಜ್ಯವನ್ನು ತ್ಯಜಿಸಿದ ಅಮೋಘವರ್ಷನಿಂದ ವಿದ್ವಾಂಸರಿಗೆ ಒಳ್ಳೆಯ ಅಲಂಕಾರವಾದ ಈ ರತ್ನಮಾಲಿಕೆಯು ರಚಿಸಲ್ಪಟ್ಟಿತು'' ಎಂಬೀ ಪದ್ಯದಿಂದ ಗೊತ್ತಾಗುತ್ತದೆ.

### ಭಗವಜ್ಜಿನಸೇನಾಚಾರ್ಯರ ಗ್ರಂಥಗಳು.

ಇವರು ಜಿನಗುಣಸ್ತುತಿಯನ್ನೂ ವರ್ಧಮಾನಪುರಾಣವನ್ನೂ ರಚಿಸಿದ್ದರೆಂದು ಹರಿವಂಶಪುರಾಣದ ಆಧಾರದಿಂದ ಹೇಳುವುದಲ್ಲದೆ ಆ ಗ್ರಂಥಗಳು ದೊರೆತಿಲ್ಲ. ಭಗವದ್ಗುಣಭದ್ರಾಚಾರ್ಯರು ಉತ್ತರಪುರಾಣದಲ್ಲಿ

**ಜಿನಸೇನಭಗವತೋಕ್ತಂ ಮಿಥ್ಯಾಕವಿದರ್ಪದಲನಮತಿಲಲಿತಮ್ ।**
**ಸಿದ್ಧಾಂತೋಪನಿಬಂಧನಕರ್ತ್ರಾ ಭರ್ತ್ರಾ ಚಿರಾದ್ವಿನೇಯಾನಾಮ್ ॥**

–ಎಂಬೀ ಪದ್ಯದಲ್ಲಿ ಭಗವಜ್ಜಿನಸೇನಾಚಾರ್ಯರಿಗೆ ಸಿದ್ಧಾಂತವ್ಯಾಖ್ಯಾಕರ್ತರೆಂಬ ವಿಶೇಷಣವನ್ನು ಕೊಟ್ಟಿರುವುದರಿಂದಲೂ ಶ್ರೀಧರನೆಂಬ ಕವಿಯು ರಚಿಸಿರುವ ಗದ್ಯರೂಪವಾದ ಶ್ರುತಾವತಾರಕಥೆಯಲ್ಲಿ

**ವಿಂಶತಿಸಹಸ್ರಕರ್ಮಪ್ರಾಭೃತಂ ವಿಚಾರ್ಯ ವೀರಸೇನಮುನಿಃ ಸ್ವರ್ಗಂ ಯಾಸ್ಯತಿ. ತಸ್ಯ ಶಿಷ್ಯೋ ಜಿನಸೇನೋ ಭವಿಷ್ಯತಿ. ಸೋಪಿ ಚತ್ವಾರಿಂಶತ್ಸಹಸ್ರೈಃ ಕರ್ಮಪ್ರಾಭೃತಂ ಸಮಾಪ್ತಿಂ ನೇಷ್ಯತಿ. ಅಮುನಾ ಪ್ರಕಾರೇಣ ಷಷ್ಟಿಸಹಸ್ರಪ್ರಮಿತಾ ಜಯಧವಲನಾಮಾಂಕಿತಾ ಟೀಕಾ ಭವಿಷ್ಯತಿ ॥**

– ವೀರಸೇನಮುನಿಗಳು ಇಪ್ಪತ್ತುಸಾಸಿರ ಕರ್ಮಪ್ರಾಭೃತವನ್ನು ವಿಚಾರಮಾಡಿ (ರಚಿಸಿ) ಸ್ವರ್ಗವನ್ನು ಹೊಂದುವರು. ಅವರ ಶಿಷ್ಯರಾದ ಜಿನಸೇನರು ನಾಲ್ವತ್ತು ಸಾಸಿರ ಶ್ಲೋಕಗಳಿಂದ ಕರ್ಮಪ್ರಾಭೃತವನ್ನು ಪೂರೈಸುವರು. ಈ ಪ್ರಕಾರದಿಂದ ಅರುವತ್ತುಸಹಸ್ರ ಪರಿಮಿತವಾದ ಜಯಧವಲವೆಂಬ ನಾಮಾಂಕಿತವಾದ ಟೀಕೆಯಾಗುವುದು, ಎಂದು ಹೇಳಿರುವುದರಿಂದಲೂ ಭಗವಜ್ಜಿನಸೇನಾಚಾರ್ಯರು ಜಯಧವಲವೆಂಬ ಸಿದ್ಧಾಂತವ್ಯಾಖ್ಯಾನ ಗ್ರಂಥವನ್ನು ರಚಿಸಿರುವರೆಂದು ಗೊತ್ತಾಗುತ್ತದೆ. ಈ ಗ್ರಂಥವು ಮೂಡಬಿದರೆಯ ಸಿದ್ಧಾಂತಬಸದಿಯಲ್ಲಿದೆ.

ಭಗವಜ್ಜಿನಸೇನಾಚಾರ್ಯರು ರಚಿಸಿದ ನಾಲ್ಕನೆಯ ಗ್ರಂಥವು ಪಾರ್ಶ್ವಾಭ್ಯುದಯಕಾವ್ಯವು. ಇದರಲ್ಲಿ ನಾಲ್ಕು ಸರ್ಗಗಳಿರುತ್ತವೆ. ಮಂದಾಕ್ರಾಂತವೃತ್ತದ ೩೬೮ ಶ್ಲೋಕಗಳಿವೆ. ಇದು ಕಾಲಿದಾಸನ ''ಮೇಘದೂತ''ವೆಂಬ ಕಾವ್ಯದ ಮೇಲೆ ಸಮಸ್ಯಾಪೂರ್ತಿರೂಪವಾಗಿ ಹುಟ್ಟಿದ ಗ್ರಂಥವಾಗಿದೆ. ಭಗವಜ್ಜಿನಸೇನಾಚಾರ್ಯರು ತಮ್ಮ ಸಹಪಾಠಿಗಳಾದ ವಿನಯಸೇನಮುನಿಗಳ ಪ್ರೇರಣೆಯಿಂದ ಮೇಘದೂತ ಕಾವ್ಯದ ಒಂದೊಂದು ಪಾದಗಳನ್ನು ತೆಗೆದುಕೊಂಡು ಅದಕ್ಕೆ ಮೂರು ಪಾದಗಳನ್ನು ತಾವು ಮಾಡಿ ಸೇರಿಸಿ ಮೂಲಗ್ರಂಥದ ಕಥೆಯನ್ನು ಸಂಪೂರ್ಣವಾಗಿ ಬದಲಾಯಿಸಿ ಶ್ರೀಪಾರ್ಶ್ವನಾಥಸ್ವಾಮಿಯ ಚರಿತ್ರೆಯನ್ನು ವರ್ಣಿಸಿರುವರು. ಕೆಲವು ಪದ್ಯಗಳಲ್ಲಿ ಎರಡೆರಡು ಪಾದಗಳನ್ನು ತೆಗೆದುಕೊಂಡು ಮಿಕ್ಕ ಎರಡು ಪಾದಗಳನ್ನು ಸೇರಿಸಿದ್ದಾರೆ. ಕೆಲವು ಪದ್ಯಗಳಲ್ಲಿ ಒಂದನೆಯ ಎರಡನೆಯ ಪಾದಗಳನ್ನು ಸೇರಿಸಿ ವಿಚಿತ್ರವಾಗಿ ಕಾವ್ಯವನ್ನು ರಚಿಸಿದ್ದಾರೆ. ಕಾವ್ಯಗಳಲ್ಲಿ ಇದು ಅದ್ವಿತೀಯವಾದುದೆಂದರೆ ಅತಿಶಯೋಕ್ತಿಯಾಗದು. ಇದಕ್ಕೆ ಯೋಗಿರಾಟ್ ಪಂಡಿತಾಚಾರ್ಯರೆಂಬವರು ಸುಬೋಧಿನಿಯೆಂಬ ಸಂಸ್ಕೃತವ್ಯಾಖ್ಯೆಯನ್ನು ಬರೆದಿದ್ದಾರೆ. ಇವರು ಗ್ರಂಥದ ಕೊನೆಯಲ್ಲಿ ಕಾವ್ಯಾವತಾರದ ಕಾರಣವನ್ನು ಹೇಳುವಾಗ ಕಾಲಿದಾಸನೂ ಭಗವಜ್ಜಿನಸೇನಾಚಾರ್ಯರೂ ಸಮಕಾಲಿಕರೆಂಬ ಅಭಿಪ್ರಾಯವನ್ನು ತೋರಿಸಿದ್ದಾರೆ. ಆದರೆ ಚರಿತ್ರ ಪರಿಶೋಧಕರು ಕಾಲಿದಾಸನ ಕಾಲವನ್ನು ಕಂಡುಹಿಡಿದಿರುವ ಪ್ರಕಾರ ಜಿನಸೇನಾಚಾರ್ಯರ ಕಾಲಕ್ಕೂ ಕಾಲಿದಾಸನ ಕಾಲಕ್ಕೂ ಬಹಳ ವ್ಯತ್ಯಾಸವು ತೋರುತ್ತದೆ. ಮೇಘದೂತಕಾವ್ಯ ರಘುವಂಶಕಾವ್ಯ ಮೊದಲಾದ ಗ್ರಂಥಗಳ ಕರ್ತನಾದ ಕಾಲಿದಾಸನು ವಿಕ್ರಮಾದಿತ್ಯನ ರಾಜ್ಯಕಾಲದ ಅಂತ್ಯಭಾಗದಲ್ಲಿಯೂ ಕುಮಾರಗುಪ್ತನ ರಾಜ್ಯಕಾಲದ ಆದಿಭಾಗದಲ್ಲಿಯೂ ಇದ್ದನೆಂದು ಚರಿತ್ರಕಾರರು ಹೇಳುತ್ತಾರೆ. ಈ ಲೆಕ್ಕದಿಂದ ಕಾಲಿದಾಸನು ಜಿನಸೇನಾಚಾರ್ಯರಿಗಿಂತ ಸುಮಾರು ೮೫೦ ವರ್ಷಗಳ ಮೊದಲಿದ್ದನೆಂದು ಗೊತ್ತಾಗುತ್ತದೆ. ಭೋಜರಾಜನ ಕಾಲದಲ್ಲಿದ್ದ ಎರಡನೆಯ ಕಾಲಿದಾಸನೇ ಮೇಘದೂತಕಾವ್ಯ ಮೊದಲಾದ ಗ್ರಂಥಗಳ ಕರ್ತನೆಂದು ಕೆಲವರು ತಪ್ಪಾಗಿ ತಿಳಿದಿರುತ್ತಾರೆ. ಭೋಜರಾಜನ ಕಾಲ (೧೦೧೮–೧೦೬೦)ದಲ್ಲಿ ಈ ಕಾಲಿದಾಸನೊಬ್ಬನಿದ್ದನೆಂದು ಕಲ್ಪಿಸಿಕೊಂಡರೂ ಅವನು ಜಿನಸೇನಾಚಾರ್ಯರಿಗಿಂತ ಸುಮಾರು ೨೦೦ ವರ್ಷಗಳ ನಂತರ ಆದವನು. ಆದುದರಿಂದ ಯೋಗಿರಾಟ್ ಪಂಡಿತಾಚಾರ್ಯರ ಹೇಳಿಕೆಯು ನಿರಾಧಾರವಾದುದೆಂದು ಹೇಳಬೇಕಾಗುತ್ತದೆ.

ಈ ಪೂರ್ವಪುರಾಣವು ಭಗವಜ್ಜಿನಸೇನಾಚಾರ್ಯರ ಕೊನೆಯದಾದ–ಐದನೆಯ ಕೃತಿಯು. ಇವರು ಬೇರೆ ಯಾವಯಾವ ಗ್ರಂಥಗಳನ್ನು ರಚಿಸಿದ್ದಾರೆಂಬುದು ತಿಳಿದುಬಂದಿಲ್ಲ. ಹೀಗೆ ಈ ಮಹಾತ್ಮರು ಲೋಕಕ್ಕೆ ಅಪಾರವಾದ ಉಪಕಾರವನ್ನು ಮಾಡಿ ಕೀರ್ತಿಶೇಷರಾದರು. ಜೈನರ ಪುರಾಣಗಳಲ್ಲೆಲ್ಲ ಮಹಾಪುರಾಣವು ದೊಡ್ಡದಾದ ಗ್ರಂಥವಾಗಿಯೂ ಜೈನರಿಗೆ ಬಹಳ ಆದರಣೀಯವಾಗಿಯೂ ಇರುತ್ತದೆ. ಈ ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವುದರಿಂದ ಸಂಸ್ಕೃತ ಪರಿಜ್ಞಾನವಿಲ್ಲದವರು ಈ ಗ್ರಂಥದ ಆತುಲಫಲವನ್ನು ಸ್ವಯಂಪಠಿಸಿ ಹೊಂದಲಾರದೆ ಕೆಲವರು ಸಂಸ್ಕೃತವನ್ನು ಬಲ್ಲವರಿಂದ ಇದನ್ನು ಪಠನ ಮಾಡಿಸಿ ಪುರಾಣಶ್ರವಣವನ್ನು ಮಾಡುತ್ತಿದ್ದರು. ಈಗಲೂ ಕೆಲವರು ಹಾಗೆ ಮಾಡುತ್ತಿರುವರು. ಇಂತಹ ಉತ್ತಮಗ್ರಂಥಕ್ಕೆ ಕನ್ನಡದಲ್ಲಿ ಭಾವಾರ್ಥವನ್ನು ಬರೆಯಿಸಿ ಕನ್ನಡ ನಾಡಿನ ಎಲ್ಲಾ ಜೈನಬಂಧುಗಳಿಗೂ ಇದು ಸುಲಭ ಲಭ್ಯವಾಗುವಂತೆ ಮಾಡಬೇಕೆಂದು ಮಲಬಾರ್ ಜಿಲ್ಲಾ ವೈನಾಡುತಾಲೂಕು ಮಣಿಯಂಗೂಡು ಶ್ರೀಮಾನ್ ಕೃಷ್ಣಯ್ಯಗೌಡರವರು ಉದ್ದೇಶಿಸಿ ಈ ಕಾರ್ಯಕ್ಕಾಗಿ ಎಂಟು ಸಾಸಿರ ರೂಪಾಯಿಗಳನ್ನು ಮುಡುಪಾಗಿ ತೆಗೆದಿಟ್ಟು ಇವರೂ ಇವರ ಜ್ಯೇಷ್ಠಪುತ್ರರಾದ ಶ್ರೀಯುತ ಎಂ.ಕೆ.ಸುಬ್ಬಯ್ಯಗೌಡರವರೂ ಪೂಜ್ಯಶ್ರೀ ನೇಮಿಸಾಗರವರ್ಣೀಜೀಯವರೂ (ಶ್ರವಣಬೆಳ್ಗೊಳದ ಈಗಿನ ಶ್ರೀಗಳವರು) ಪರ್ಯಾಲೋಚಿಸಿ ಈ ಮಹತ್ಕಾರ್ಯವನ್ನು ನಮಗೆ ವಹಿಸಿದರು. ಇದು ನಮ್ಮ ಅಲ್ಪಬುದ್ಧಿಗೆ ಬಹು ಶ್ರಮಸಾಧ್ಯವಾದ ಕಾರ್ಯ. ಇದನ್ನು ನಮಗಿಂತ ಹೆಚ್ಚಿನ ವಿದ್ವಾಂಸರಿಗೆ ವಹಿಸಿದ್ದರೆ ಬಹಳ ಚೆನ್ನಾಗಿ ಆಗುತ್ತಿದ್ದಿತು. ನಮ್ಮ ಮಂದಬುದ್ಧ್ಯನುಸಾರವಾಗಿ ಈ ಗ್ರಂಥಕ್ಕೆ ''ಕರ್ಣಾಟಕ ಭಾವದೀಪಿಕೆ''ಯೆಂಬ ಚಿಕ್ಕದಾದ ವ್ಯಾಖ್ಯೆಯನ್ನು ಬರೆದು ಮೇಲ್ಕಂಡ ಧರ್ಮಾತ್ಮರ

ದ್ರವ್ಯಸಹಾಯದಿಂದ ಮುದ್ರಣಮಾಡಿ ಪೂರ್ಣಗ್ರಂಥವನ್ನು ಸಮಾಜದ ಮುಂದಿಟ್ಟಿರುವೆವು. ಈ ಗ್ರಂಥವು ಸಮಾಜಕ್ಕೆ ಉಪಕಾರಕವೂ ಬಹುಕಾಲದವರೆಗೆ ಇರತಕ್ಕುದೂ ಆಗಿರುವುದರಿಂದ ನಮ್ಮ ಜೀವನಯಾತ್ರೆಯಲ್ಲಿ ನಮ್ಮ ಶಕ್ತಿಗೆ ಇದೊಂದು ದೊಡ್ಡ ಕೆಲಸವೆಂದು ಭಾವಿಸಿ ಶ್ರಮವಹಿಸಿರುತ್ತೇವೆ.

ಈ ವ್ಯಾಖ್ಯೆಯನ್ನು ಬರೆಯುವಾಗ ಮೈಸೂರು ಎಂ.ಎಲ್. ಜೈನ ವಿದ್ಯಾರ್ಥಿ ನಿಲಯದ ಶ್ರುತಭಂಡಾರದ ಟಿಪ್ಪಣಸಹಿತವಾದ ಎರಡು ಓಲೆಗರಿಯ ಪ್ರತಿಗಳು ದೊರೆತು ಅವು ನಮಗೆ ಬಹಳ ಸಹಾಯಕಗಳಾದುವು. ಇವು ಬಹಳ ಶುದ್ಧಪ್ರತಿಗಳಾಗಿರುತ್ತವೆ. ಕೊಲ್ಲಾಪುರದ ಶ್ರೀಯುತ ಕಲ್ಲಪ್ಪ ಭರಮಪ್ಪ ನಿಟವೆಯವರು ಬರೆದು ಮುದ್ರಿಸಿದ ಮಹಾರಾಷ್ಟ್ರವ್ಯಾಖ್ಯೆಯ ಪುಸ್ತಕವೂ ನಮಗೆ ಸಹಾಯಕವಾದುದು. ಆ ಪುಸ್ತಕದಲ್ಲಿ ಅನೇಕ ಸ್ಥಳಗಳಲ್ಲಿ ಪಾಠಗಳ ಬದಲಾವಣೆಗಳೂ ಅಶುದ್ಧಿಗಳೂ ವಿರೋಧಾರ್ಥಗಳೂ ದೃಗ್ಗೋಚರವಾಗುತ್ತವೆ. ಈ ವಿಷಯವು ತುಲನಾತ್ಮಕದೃಷ್ಟಿಯಿಂದ ಪಠನಮಾಡುವವರಿಗೆ ವಿದಿತವಾಗುವುದು. ಪುಸ್ತಕದಲ್ಲಿ ನಾವು ಮೇಲೆ ಪದ್ಯಗಳನ್ನು ಕೊಟ್ಟಿರುವುದರಿಂದ ಆ ಪದ್ಯಗಳ ಪದಗಳಿಗೆ ಅನುಸಾರವಾಗಿಯೇ ವ್ಯಾಖ್ಯೆಯನ್ನು ಬರೆಯಬೇಕಾಗಿ ಬಂದಿತು. ಇದರಿಂದ ಮತ್ತು ಟಿಪ್ಪಣಗಳನ್ನು ಕೊಟ್ಟಿರುವುದರಿಂದ ಸಂಸ್ಕೃತಭಾಷಾ ಪರಿಚಯವುಳ್ಳವರಿಗೆ ಸುಲಭಾನ್ವಯಾರ್ಥ ಸೌಕರ್ಯವಾಗಬಹುದೆಂದು ಭಾವಿಸಿದ್ದೇವೆ. ಕೆಲವೆಡೆಗಳಲ್ಲಿ ಮಾತ್ರ ವಾಕ್ಯರಚನೆಗನುಸಾರವಾಗಿ ವಿಭಕ್ತ್ಯರ್ಥಗಳನ್ನು ಬದಲಾಯಿಸಿರುತ್ತೇವೆ. ಕೆಲವು ಪಾಠಾಂತರಗಳನ್ನು ಪದ್ಯಗಳಲ್ಲೇ ಆವರಣದೊಳಗೂ ಕೆಲವನ್ನು ಟಿಪ್ಪಣಗಳಲ್ಲಿಯೂ ಕೊಟ್ಟಿರುತ್ತೇವೆ. ಟಿಪ್ಪಣಗಳಲ್ಲಿರುವ ಪಾಠಾಂತರಗಳು ಹೆಚ್ಚಾಗಿ ಮಹಾರಾಷ್ಟ್ರವ್ಯಾಖ್ಯಾಪುಸ್ತಕದಲ್ಲಿರುವ ಪಾಠಗಳಾಗಿರುತ್ತವೆ. ಇವುಗಳಿಗಿಂತ ಮೂಲಪಾಠಗಳೇ ಪ್ರಶಸ್ತಗಳಾಗಿ ತೋರುತ್ತವೆ. ಆವರಣದಲ್ಲಿ ಕೊಟ್ಟಿರುವ ಪದ್ಯಗಳು ಓಲೆಗರಿಯ ಪ್ರತಿಗಳಲ್ಲಿಲ್ಲ.

ಕಾನ್ತಿ ಅಙ್ಕುರ ಸಙ್ಕೋಚ ಪಙ್ಕಜ ಮನ್ದತಾ ಸುನ್ದರ ಬನ್ಧುರ ನನ್ದನ ಇಂತಹ ಅನೇಕ ಶಬ್ದಗಳನ್ನು ನಾವು ಪಠನ ಸೌಕರ್ಯಕ್ಕಾಗಿ ಕಾಂತಿ, ಅಂಕುರ, ಸಂಕೋಚ, ಪಂಕಜ, ಮಂದತಾ, ಸುಂದರ, ಬಂಧುರ, ನಂದನ ಈ ಪ್ರಕಾರವಾದ ರೂಪದಿಂದ ಪ್ರಯೋಗಿಸಿದ್ದೇವೆ. ವ್ಯಾಕರಣರೀತ್ಯಾ ಮೊದಲು ಬರೆದ ರೂಪಗಳೇ ಸಾಧುವಾದುವು. ಇದರಲ್ಲಿ ಮುದ್ರಣ ದೋಷಗಳು ತಲೆದೋರದಂತೆ ಮಾಡಬೇಕೆಂದು ಪ್ರಯತ್ನಿಸಿದೆವಾದರೂ ಇದಕ್ಕೆ ಹೊಸಮೊಳೆಗಳನ್ನುಪಯೋಗಿಸಿದುದರಿಂದ ಕೆಲವು ಒತ್ತಕ್ಕರಗಳು ಮುದ್ರಣಕಾಲದಲ್ಲಿ ಒಡೆದು ಹೋಗಿ ಮತ್ತು ಕೆಲವು ಕಣ್ಮರೆಯಾಗಿ ಅಶುದ್ಧಿಗಳು ಮೈದೋರಿದುವು. ಅವುಗಳನ್ನು ಶುದ್ಧಾಶುದ್ಧಪತ್ರಿಕೆಯಲ್ಲಿ ಕೊಟ್ಟಿರುತ್ತೇವೆ. ನಾವು ಹೆಚ್ಚಾಗಿ ಶ್ಲೋಕಗಳ ಕಡೆಗೆ ಲಕ್ಷ್ಯವನ್ನಿಟ್ಟಿದ್ದುದರಿಂದ ವ್ಯಾಖ್ಯೆಯಲ್ಲಿ ಉಳಿದಿರಬಹುದಾದ ಅಶುದ್ಧಿಗಳನ್ನೂ ನಮ್ಮ ಪ್ರಮಾದದಿಂದ ಉಳಿದಿರಬಹುದಾದ ಅಶುದ್ಧಿಗಳನ್ನೂ ವಾಚಕರು ಸರಿಪಡಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇವೆ. ಪರ್ವಗಳ ವಿಷಯಸೂಚನೆಯನ್ನು ಕೊಟ್ಟಿದ್ದೇವೆ.

ಈ ಗ್ರಂಥದ ಪ್ರಕಾಶಕರೂ ಧರ್ಮಾತ್ಮರೂ ಆದ ಶ್ರೀಮಾನ್ ಕೃಷ್ಣಯ್ಯ ಗೌಡರವರು ತಮ್ಮ ಸ್ಥಳದಲ್ಲಿ ಬಹು ಸುಂದರವಾದ ನೂತನ ಜಿನದೇವಾಲಯವನ್ನು ಕಟ್ಟಿಸಿ ಪಂಚಕಲ್ಯಾಣ ಮಹೋತ್ಸವವನ್ನು ನಡೆಯಿಸುತ್ತಿರುವ ಈ ಸಮಯಕ್ಕೆ ಸರಿಯಾಗಿ ಭಗವದನುಗ್ರಹದಿಂದಲೂ ಪೂರ್ವಾಚಾರ್ಯರ ಆಶೀರ್ವಾದಬಲದಿಂದಲೂ ಗ್ರಂಥವನ್ನು ಪೂರ್ತಿಮಾಡುವ ಪುಣ್ಯವು ನಮಗೆ ಪ್ರಾಪ್ತವಾದುದೆಂದು ಭಾವಿಸಿ ಆನಂದತುಂದಿಲರಾಗಿ ಭಗವಂತನನ್ನೂ ಪೂರ್ವಾಚಾರ್ಯರನ್ನೂ ಭಕ್ತಿಭಾವದಿಂದ ಧ್ಯಾನಿಸುತ್ತ ಈ ಮುನ್ನುಡಿಯ ಲೇಖಕನಿಗೆ ವಿಶ್ರಾಂತಿಯನ್ನು ಕೊಡುತ್ತೇವೆ.

**॥ ಜಯತು ಜಿನಶಾಸನಂ ॥**

ವೀರಶಕ ೨೪೫೮
ತಾ ॥ ೫-೨-೧೯೩೩

ಪೂರ್ವಾಚಾರ್ಯಚರಣಾಬ್ಜಚಂಚರೀಕ,
**ಎ. ಶಾಂತಿರಾಜಶಾಸ್ತ್ರಿ**

# ಮರು ಮುದ್ರಣಕ್ಕೆ ಬರೆದ ಮುನ್ನುಡಿ

( ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ ದ್ವಿತೀಯ ಮುದ್ರಣಕ್ಕೆ ಬರೆದದ್ದು–೧೯೮೧ )

**ಮುಖಂ ಪ್ರಸನ್ನಂ ವಿಮಲಾ ಚ ದೃಷ್ಟೀ । ತಥಾನುರಾಗೋ ಮಧುರಾ ಚ ವಾಣಿ ॥**
**ಸ್ನೇಹೋಧಿಕಸ್ಸಂಭ್ರಮದರ್ಶನಂ ಚ । ಪದಾನುರಕ್ತಸ್ಯ ಜನಸ್ಯ ಲಕ್ಷಣಂ ॥**

(ವದನದಲ್ಲಿ ಪ್ರಸನ್ನತೆ, ಕಣ್ಣುಗಳ ನೋಟದಲ್ಲಿ ನಿರ್ಮಲತೆ, ಮನದಲ್ಲಿ ಒಲವು, ಮಾತಿನಲ್ಲಿ ಮಾಧುರ್ಯ, ಅತಿಥಿಗಳನ್ನು ಹೆಚ್ಚಿನ ಸ್ನೇಹದಿಂದಲೂ ಸಂಭ್ರಮ ದಿಂದಲೂ ಕಾಣುವುದು– ಇವು ಸಹೃದಯರೂ ಸರಸ ಸಜ್ಜನರೂ ಆದವರ ಲಕ್ಷಣ).

ಶಾಂತಿರಾಜ ಶಾಸ್ತ್ರಿಗಳ ದಿವ್ಯಸ್ಮರಣೆ ಅಂತರಂಗದಲ್ಲಿ ಅಂಕುರಿಸಿದಾಗಲೆಲ್ಲ ನನಗೆ ಈ ಆರ್ಯೋಕ್ತಿ ನೆನಪಾಗುತ್ತದೆ. ತಮ್ಮ ಬಳಿಗೆ ಯಾರೇ ಬರಲಿ, ಯಾವಾಗಲೇ ಬರಲಿ, ಅವರಿಗೆಲ್ಲ ಮೊಟ್ಟ ಮೊದಲಲ್ಲೇ ದೊರೆಯುತ್ತಿದ್ದುದು ಈ ಗೆಲುವಿನ ಮೊಗದಿಂದ ಕೂಡಿದ ಸ್ವಾಗತ, ಅನುಮಾನಕ್ಕೆ ಅವಕಾಶವಿಲ್ಲದ ಅಕಳಂಕವಾದ ದೃಷ್ಟಿ ಬೀರುತ್ತಿದ್ದರು. ಅಕ್ಕರೆಯಿಂದ ಕಾಣುತ್ತಿದ್ದರು. ಆಡುವ ನುಡಿಯಲ್ಲಿ ಸಿಹಿಯೂ ಸತ್ಯವೂ ಅಡಗಿರುತ್ತಿತ್ತು. ಅವ್ಯಾಜ ಸ್ನೇಹ, ಮನಸೆಳೆಯುವ ಸಡಗರ ತೋರುತ್ತಿದ್ದರು. ಮನೆಯಲ್ಲಿ ಅತಿಥಿಗಳು ಬಂದ ವೇಳೆಗೆ ಸಿದ್ಧವಾಗಿದ್ದ ಊಟ, ತಿಂಡಿ, ಹಾಲು, ಹಣ್ಣು ನೀಡಿ ಧನ್ಯರಾದಂತೆ ತಿಳಿಯುತ್ತಿದ್ದರು. ಸುಸಂಸ್ಕೃತನೆಂದು ಸಾರಲು ಮತ್ತೆ ಏನು ಲಕ್ಷಣಗಳು ಬೇಕು ? ಪರಿಶುದ್ಧ ಜೀವನ, ಮಡಿವಂತರು, ಹಿತವಾಗಿ ನುಡಿಯುತ್ತಿದ್ದರು. ಮಿತವಾಗಿ ಮಾತನಾಡುತ್ತಿದ್ದರು. ನಯವಿದ್ದರೂ ನಾಜೂಕು ಇರಲಿಲ್ಲ. ಸ್ನೇಹವಿದ್ದರೂ ಸಂಕೋಚ ಕೊಂಚವೂ ಇರಲಿಲ್ಲ. ಸಂಸ್ಕೃತದಲ್ಲಿ ಗಟ್ಟಿಗರು, ಉಭಯ ಭಾಷಾ ಪಂಡಿತರು. ಕನ್ನಡದಲ್ಲಿ ಅಕ್ಕರೆ, ಸಂಸ್ಕೃತದಲ್ಲಿ ಮಮತೆ, ಪ್ರಾಕೃತದಲ್ಲಿ ಪ್ರವೇಶ. ಸಂಸ್ಕೃತದ ಸಾಹಿತ್ಯೋಪಾಸಕರಾದರೆ ಕನ್ನಡದ ಸಾಹಿತ್ಯಾ ರಾಧಕರು, ಸಂಸ್ಕೃತಭಾಷಾ ಸಾಹಿತ್ಯಗಳ ಗಾಢವಾದ ಪರಿಚಯ, ಆಳವಾದ ಅಭ್ಯಾಸ ಕನ್ನಡವಿದ್ವಾಂಸರಿಗೆ ಅತ್ಯಗತ್ಯವೆಂಬುದು ಅವರ ಖಚಿತವಾದ ಅಭಿಪ್ರಾಯ. ಅಂತೆಯೇ ಸಂಸ್ಕೃತದಲ್ಲಿ ಸಾರವತ್ತಾದುದನ್ನು ಕನ್ನಡಕ್ಕೆ ತಂದರು. ಮಹಾಪುರಾಣ ವಂಥ ಮೇರುಕೃತಿ ಅವರಿಂದಾಗಿ ಕನ್ನಡದಲ್ಲಿ ಕಂಡಿತು. ಒಳ್ಳೆಯ ಭಾಷಣಕಾರ ರಾಗಿದ್ದರು. ಸಂಸ್ಕೃತಸಾಹಿತ್ಯ ಹಾಗೂ ಕನ್ನಡಸಾಹಿತ್ಯ ಕುರಿತು ಕವಿಗಳನ್ನು ಕುರಿತು ಪ್ರೋಜ್ವಲ ಉಪನ್ಯಾಸ ನೀಡುತ್ತಿದ್ದರು. ಅದರಲ್ಲಿಯೂ ಜೈನ ಸಾಹಿತ್ಯವು ಅವರ ತುದಿಬೆರಳಿನಲ್ಲಿ ಕುಣಿಯುತ್ತಿತ್ತು. ತುದಿ ನಾಲಿಗೆಯಲ್ಲಿ ನರ್ತಿಸುತ್ತಿತ್ತು. ಜೈನ ಕವಿ ಕಾವ್ಯ ಕುರಿತು, ಅದು ಸಂಸ್ಕೃತವಿರಲಿ, ಕನ್ನಡವಿರಲಿ, ಗಂಟೆಗಟ್ಟಲೆ ನಿರರ್ಗಳವಾಗಿ ಮಾತನಾಡುತ್ತಿದ್ದರು. ಕರ್ನಾಟಕವೆಲ್ಲ ಸುತ್ತಿ ಹಳ್ಳಿ, ನಗರ, ಪಟ್ಟಣಗಳಲ್ಲಿ ಅಡ್ಡಾಡಿ ಸಾಹಿತ್ಯಶ್ರೀಯನ್ನು ಮನೆಮನೆಗೆ ಮುಟ್ಟಿಸಿದರು; ಮೆರವಣಿಗೆ ಮಾಡಿದರು.

ಮಹಾ ಪೂಜ್ಯರೂ ತತ್ತ್ವಜ್ಞಾನಿಗಳೂ ಕರ್ಮಯೋಗಿಗಳೂ, ಸಾಧುಸಂತರಂತೆ ಮತ್ತು ಮಾತನಾಡುವ ಮಂಜುನಾಥನೆಂದು ದೇಶದಾದ್ಯಂತ ಎಲ್ಲರಿಂದಲೂ ಅಪಾರ ಮನ್ನಣೆ ಪಡೆದಿದ್ದವರೂ ಆದ ದಿವಂಗತ ಮಂಜಯ್ಯ ಹೆಗ್ಗಡೆಯವರು ಧರ್ಮಸ್ಥಳ ಕ್ಷೇತ್ರದಲ್ಲಿ ೧೯೩೩ ರಲ್ಲಿ ಸರ್ವಧರ್ಮ ಸಮ್ಮೇಲನ ಮತ್ತು ಸಾಹಿತ್ಯ ಸಮ್ಮೇಲನವನ್ನು ಪ್ರಾರಂಭಿಸಿದರು. ಅಂದಿನಿಂದ ಇಂದಿನತನಕ ಪ್ರತಿ ವರ್ಷವೂ ತಪ್ಪದೆ ಈ ಕಾರ್ಯಕ್ರಮ ನಡೆದುಕೊಂಡು ಬಂದಿದೆ. ೧೯೩೩ ರಲ್ಲಿ ಪ್ರಪ್ರಥಮವಾಗಿ ನಡೆದ ಸರ್ವಧರ್ಮ ಸಮ್ಮೇಲನದಲ್ಲಿ ಆ ಕಾಲದಲ್ಲಿ ವಿಶೇಷವಾಗಿ ಪ್ರಸಿದ್ಧಿ ಪಡೆದಿದ್ದ ಮೈಸೂರು ಅರಮನೆಯ ಮಹಾ ವಿದ್ವಾಂಸರಾಗಿದ್ದ, ಜೈನ ಧರ್ಮದಲ್ಲಿ ಪ್ರಕಾಂಡ ಪಂಡಿತರಾಗಿದ್ದ ಎ. ಶಾಂತಿರಾಜಶಾಸ್ತ್ರಿಗಳು ಅಮೋಘವಾದ ಉಪನ್ಯಾಸವನ್ನು ನೀಡಿದರು. ಅಂದಿನ ಅವರ ಬೋಧಪ್ರದ ಉಪನ್ಯಾಸವನ್ನು ಮೈಸೂರಿನ ಜೆ.ಸ್ವಾಮಿದಾಸರವರೂ, ಕೆ.ಎಸ್.ಧರಣೇಂದ್ರಯ್ಯನವರೂ ಯಾವಾಗಲೂ ಜ್ಞಾಪಿಸಿ ಕೊಳ್ಳುತ್ತಿದ್ದರು.

ಶಾಂತಿರಾಜ ಶಾಸ್ತ್ರಿಗಳು ಹುಟ್ಟಿನಿಂದ ದಕ್ಷಿಣ ಕನ್ನಡ ಜಿಲ್ಲೆಯವರು, ಅವರ ಆಧ್ಯಕ್ಷರವಾದ 'ಎ' ಎಂಬುದು ಅವರ ತವರೂರು 'ಎತ್ತೂರು' ಎಂಬುದರ ಸಂಕ್ಷಿಪ್ತ ರೂಪ. ಎತ್ತೂರು ಕಾರ್ಕಳ ತಾಲ್ಲೂಕಿನ ಹಳ್ಳಿ. ಶಾಂತಿರಾಜರ ಬಾಲ್ಯ, ವಿದ್ಯಾಭ್ಯಾಸ ಮೂಡಬಿದಿರೆ, ಶ್ರವಣಬೆಳಗೊಳದಲ್ಲಾಯಿತು. ಆಮೇಲೆ ಅವರು ಮೈಸೂರಿನಲ್ಲಿ ಕಲಿತರು. ಇನ್ನೂ ಹೆಚ್ಚಿಗೆ ಕಲಿಕೆಗಾಗಿ ಗ್ವಾಲಿಯರಿನ ಮೊರೆನಾಕ್ಕೆ ಹೋದರು. ಅಲ್ಲಿಂದ ಕಲ್ಕತ್ತೆಗೆ ಹೋಗಿ ಅಲ್ಲಿಯೂ ಓದನ್ನು ನಡೆಸಿದರು. ಅವರಿಗೆ ಧಾರ್ಮಿಕ ಶಿಕ್ಷಣ ವಿಶೇಷವಾಗಿ ದೊರೆಯಿತು. ವ್ಯಾಸಂಗ ಮುಗಿದಾಗ ನ್ಯಾಯ ತೀರ್ಥ ಪ್ರಶಸ್ತಿಯನ್ನು ಪಡೆದಿದ್ದರು. ಆ ವೇಳೆಗೆ ದೇಶ ಸುತ್ತಿದ್ದರು, ಕೋಶ ತಿರುವಿ ಹಾಕಿದ್ದರು. ಗುರುಮುಖೇನ, ಸಂಚಾರ ರೂಪದಲ್ಲಿ ಹಲವು ಅನುಭವ ಸಂಪಾ ದಿಸಿದ್ದರು. ಕನ್ನಡ, ತುಳು ಭಾಷೆಗಳ ಜೊತೆಗೆ ಸಂಸ್ಕೃತ, ಪ್ರಾಕೃತ, ಹಿಂದೀ ಭಾಷೆ ಗಳೂ ಕರತಲಾಮಲಕ ಆದುವು.

ಶಾಂತಿರಾಜ ಶಾಸ್ತ್ರಿಗಳಿಗೆ ತಾವು ಗಳಿಸಿದ ವಿಶೇಷ ಅನುಭವ, ಜ್ಞಾನಸಾರವನ್ನು ಕನ್ನಡಿಗರಿಗೆ ಹಂಚುವ ಹಂಬಲ ಉಂಟಾಯಿತು. ಅವರಿಗೆ ಪತ್ರಿಕೋದ್ಯಮದಲ್ಲಿ ಬಲು ಆಸಕ್ತಿ. ಅದಕ್ಕನುಗುಣವಾಗಿ ಆ ಕಾಲಕ್ಕೆ ಕನ್ನಡದಲ್ಲಿ ಇನ್ನೂ ಹೆಚ್ಚು ಪ್ರಚಾರ ದಲ್ಲಿರುವ ವಾರಪತ್ರಿಕೆಯನ್ನು ಆರಂಭಿಸಿದರು. ಅದರ ಹೆಸರು 'ವಿಶ್ವಬಂಧು' ಹೆಸರಿನ ಆಯ್ಕೆಯಲ್ಲಿ ಅವರ ಮಾನಸಿಕ ಔದಾರ್ಯ, ಮುಕ್ತವಿಶಾಲ ಸ್ವಭಾವವನ್ನು ಕಾಣಬಹುದು. ಪತ್ರಿಕಾವೃತ್ತಿ ಇನ್ನೂ ಶೈಶವಾವಸ್ಥೆಯಲ್ಲಿದ್ದಾಗ ವಾರಪತ್ರಿಕೆಯನ್ನು ನಡೆಸುವುದು ಕ್ಲಿಷ್ಟಕಾರ್ಯ. ಈ ಉದ್ಯಮದ ಬಾಲಾರಿಷ್ಟಗಳನ್ನು ನಿವಾರಿಸಿ ಕೊಳ್ಳುತ್ತ ಸುಮಾರು ಆರು ವರ್ಷ ಅವರು ವಿಶ್ವಬಂಧು ವಾರಪತ್ರಿಕೆಯನ್ನು ನಡೆಸಿದರು.

ಶಾಂತಿರಾಜ ಶಾಸ್ತ್ರಿಗಳಿಗೆ ಮಾಸಪತ್ರಿಕೆ ನಡೆಸುವ ಮನಸ್ಸಾಯಿತು. ಅದಕ್ಕೆ ಶ್ರವಣಬೆಳಗೊಳದ ಆಗಿನ ಸ್ವಾಮಿಗಳಾದ ಸ್ವಸ್ತಿಶ್ರೀ ನೇಮಿಸಾಗರ ವರ್ಣಿಗಳ ಪ್ರೋತ್ಸಾಹವೂ ದೊರೆಯಿತು. ಅದರಂತೆ 'ವಿವೇಕಾಭ್ಯುದಯ' ಎಂಬ ಮಾಸಪತ್ರಿಕೆ ಯನ್ನು ಪ್ರಾರಂಭಿಸಿದರು. ಅದಕ್ಕೆ ಎಂಟು ವರ್ಷ ಸಂಪಾದಕರಾಗಿದ್ದರು. ಅನಂತರ ವಿವೇಕಾಭ್ಯುದಯ ಮಾಸಪತ್ರಿಕೆಯನ್ನು ಧರ್ಮಸ್ಥಳದ ಮಂಜಯ್ಯ ಹೆಗ್ಗಡೆಯವರ ಮಾರ್ಗದರ್ಶನದಂತೆ ಬಿ.ಪುಟ್ಟಸ್ವಾಮಯ್ಯನವರಿಗೆ ವಹಿಸಿಕೊಟ್ಟರು. ಅವರ ಅಕಾಲ ನಿಧನದಿಂದಾಗಿ ವಿವೇಕಾಭ್ಯುದಯ ಪತ್ರಿಕೆಯನ್ನು ಮತ್ತೆ ದಕ್ಷಿಣ ಕನ್ನಡ ಜಿಲ್ಲೆಯ ಮೂಡಬಿದ್ರೆಯ ಈಗಿನ ಪಟ್ಟಾಚಾರ್ಯರು ವಹಿಸಿಕೊಂಡರು. ಕೆಲವು ಕಾಲ ಸರ್ವಶ್ರೀ ಬ್ರಹ್ಮಪ್ಪ, ಹಂಪನಾ ಹಾಗೂ ಶ್ರೀಮತಿ ಕಮಲಾ ಹಂಪನಾ ಅವರು ವಿವೇಕಾಭ್ಯುದಯ ಪತ್ರಿಕೆಯ ಸಂಪಾದನ ಕಾರ್ಯವನ್ನು ನಿರ್ವಹಿಸುತ್ತಾ ಶಾಂತಿರಾಜ ಶಾಸ್ತ್ರಿಗಳ ಸಾರಸ್ವತ ಸೇವೆಯ ಸ್ಮರಣೆಯನ್ನು ಹಸಿರಾಗಿ ಉಸಿರಾಡಿದರು. ಈ ಪತ್ರಿಕೆಗೆ ಈಗ ನಲವತ್ತೊಂದು ವರ್ಷ.

ಶಾಂತಿರಾಜ ಶಾಸ್ತ್ರಿಗಳು ತಮ್ಮ ಬದುಕಿನ ಬಹುಕಾಲವನ್ನು ಮೈಸೂರಿನಲ್ಲಿ ಕಳೆದರು. ಅವರ ಸಾಮಾಜಿಕ ಸಾಹಿತ್ಯಿಕ ಚಟುವಟಿಕೆಗಳಿಗೆ ಕರ್ನಾಟಕದ ಆಗಿನ ರಾಜಧಾನಿ ಮೈಸೂರು ಕೇಂದ್ರವಾಗಿತ್ತು. ಎಂಟು ಒಂಬತ್ತು ವರ್ಷ(೧೯೪೦– ೧೯೪೮) ಅವರು ಮೈಸೂರಿನ ಪ್ರಾಚ್ಯಸಂಶೋಧನಾಲಯದ ಗ್ರಂಥಭಂಡಾರದಲ್ಲಿ ಸಂಶೋಧಕರಾಗಿ ಕೂಡ ಸೇವೆ ಸಲ್ಲಿಸಿದರು. ಅವರ ಅಪಾರ ವಿದ್ವತ್ತಿನ ಕೀರ್ತಿ ಅರ ಮನೆ ಗುರುಮನೆಗಳಿಗೆ ಗಂಧಗಂಪಾಗಿ ತುಂಬಿತ್ತು. ಗುರುಮನೆಗಳಿಂದ ಸಂದ ಗೌರವ ಪರಂಪರೆ ಸಾಕಷ್ಟಿತ್ತು. ಅದಕ್ಕೆ ಕುಲಾವಿಯಾಗಿ ಅರಮನೆಯಿಂದ ಪ್ರಶಸ್ತಿಗಳೂ ಬಂದವು. ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹಾದ್ದೂರ್‌ಅವರು ವಿದ್ವದ್ವರೇಣ್ಯ ಶಾಂತಿರಾಜ ಶಾಸ್ತ್ರಿಗಳಿಗೆ ಆಸ್ಥಾನವಿದ್ವಾನರೆಂದು ದಿ || ೧೧–೬–೧೯೩೫ ರಂದೂ, ಮಹಾವಿದ್ವಾನರೆಂದು ದಿ || ೨೫–೧–೧೯೪೧ ರಂದೂ ಪುರಸ್ಕರಿಸಿದ್ದಲ್ಲದೆ ನಮ್ಮ ನಾಡಿಗೆ ಗುಲಾಮಗಿರಿಯಿಂದ ಬಿಡುಗಡೆ ಬಂದ ವರ್ಷವಾದ ಸನ್ ೧೯೪೭ ರಲ್ಲಿ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್‌ರವರು 'ಪಂಡಿತರತ್ನಂ' ಎಂದೂ ಪ್ರಶಸ್ತಿಕೊಟ್ಟು ಸನ್ಮಾನಿಸಿದರು. ಆಗ ಅವರಿಗೆ ಕೊಟ್ಟ ಪ್ರಶಸ್ತಿ ಪತ್ರ ಮತ್ತು ಕನ್ನಡ ಸಾಹಿತ್ಯ ಪರಿಷತ್ತು ಕೊಟ್ಟ ಮಾನಪತ್ರಗಳ ಮೂಲಪಾಠ ಇಂತಿದೆ.

## ಪ್ರಸಿದ್ಧ ಪತ್ರಿಕೆ

**ಶ್ರೀಃ**

ಶ್ರೀ ಮಚ್ಚಾಮುಂಡಿಕಾಂಬಾ ಚರಣ ಸರಸಿದ್ವಂದ್ವ ಸೇವಾಧುರೀಣ ಸಮಸ್ತ ಭೂಮಂಡಲ ಮಂಡವಾಯ ಮಾನ ನಿಖಿಲದೇಶಾವತಂಸ ಕರ್ಣಾಟಕ ಜನಪದ ಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರ ಮಹಾಸಂಸ್ಥಾನ ಮಧ್ಯ ದೇದೀಪ್ಯಮಾನ ನಿಖಿಲ ಕಲಾನಿಧಿ ಕುಲ ಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢ ಪ್ರತಾಪ ಅಪ್ರತಿಮವೀರ ನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾವಾರ ಕಲಾನಿಧಿ ಶಂಖ ಚಕ್ರಾಂಕುಶ ಕುಠಾರ ಮಕರ ಮತ್ಸ್ಯಶರಭ ಸಾಳ್ವ ಗಂಡಭೇರುಂಡ ಧರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತರಾದ ಕರ್ನಾಟಕ ಸಿಂಹಾಸನಾಧೀಶ್ವರ

**ಶ್ರೀ ಮಜ್ಜಯ ಚಾಮರಾಜೇಂದ್ರ ಒಡೆಯರ್ ಬಹಾದುರ್, ಜೆ.ಸಿ.ಬಿ.ಜೆ.ಸಿ.ಎಸ್.ಐ. ಮಹಾಸ್ವಾಮಿಯವರು**

ಶಾಲಿವಾಹನ ಶಕ ೧೮೬೯ ನೆಯ ವ್ಯವನಾಮ ಸಂವತ್ಸರದ ಆಷಾಢ ಬಹುಳ ಸಪ್ತಮೀ ಭಾನುವಾರದಲ್ಲೂ ವರ್ಧಂತಿ ಮಹೋತ್ಸವ ಪ್ರಯುಕ್ತವಾದ ದರ್ಬಾರಿನಲ್ಲಿ ನಮ್ಮ ಅನುಗ್ರಹಕ್ಕೆ ಪಾತ್ರರಾದ

ಬ್ರಂ ಶ್ರೀಃ ನ್ಯಾಯತೀರ್ಥ ಮಹಾವಿದ್ವಾನ್ ಎರ್ತೂರು ಶಾಂತಿರಾಜಶಾಸ್ತ್ರಿಗಳವರಿಗೆ

**''ಪಂಡಿತರತ್ನ''**

ಎಂಬ ಬಿರುದನ್ನು ತಕ್ಕ ಮರ್ಯಾದೆಗಳೊಡನೆ ದಯಪಾಲಿಸಿರುತ್ತೇವೆ.

---

**ಶ್ರೀ ರಸ್ತು**

ಜೈನಶಾಸ್ತ್ರ ವಿಶಾರದ, ನ್ಯಾಯತೀರ್ಥ, ಪಂಡಿತರತ್ನಂ, ಮೈಸೂರು ಶ್ರೀಮನ್ಮಹಾರಾಜಸ್ಥಾನ ಮಹಾವಿದ್ವಾನ್ ಶ್ರೀಮಾನ್ ಎ. ಶಾಂತಿರಾಜಶಾಸ್ತ್ರಿಗಳವರಿಗೆ.

ಬೆಂಗಳೂರಿನಲ್ಲಿರುವ ಅಖಿಲ ಕರ್ನಾಟಕ ವಿದ್ಯಾ ಸಂಸ್ಕೃತಿ ಸಂಸ್ಥೆಯಾದ ಕನ್ನಡ ಸಾಹಿತ್ಯ ಪರಿಷತ್ತು ಅರ್ಪಿಸಿದ ಸನ್ಮಾನ ಪತ್ರ.

ಮಹಾಶಯರೇ,

ಕನ್ನಡ ಸಾಹಿತ್ಯವು ಆದಿಕಾಲದಿಂದಲೂ ಜೈನ ಕವಿಪಂಡಿತ ಪರಂಪರೆಯಿಂದ ಪೋಷಣೆ ಹೊಂದಿ ಪರಿಪುಷ್ಟವಾಗಿ ಬೆಳೆದುಬಂದಿದೆ ಎಂಬುದು ಸರ್ವವಿದಿತವಾದ ಸಂಗತಿಯಾಗಿದೆ. ಪಂಪ ರನ್ನಾದಿ ಕವಿಪುಂಗವರೂ, ಕೇಶಿರಾಜ, ಭಟ್ಟಾಕಳಂಕ ಮೊದಲಾದ ಪಂಡಿತವರೇಣ್ಯರೂ, ಚಾಮುಂಡರಾಯನಂತ ಕಲಾಪೋಷಕರೂ ಕನ್ನಡದ ಕೀರ್ತಿಯನ್ನು ಎತ್ತಿ ಹಿಡಿದು ಚಿರಸ್ಮರಣೀಯರಾಗಿ ಇಂದಿಗೂ ಕನ್ನಡಿಗರಿಗೆ ಮಾರ್ಗದರ್ಶಕರಾಗಿದ್ದಾರೆ. ಇಂಥ ಒಂದು ಪರಂಪರೆಯನ್ನು ಸಾರೋದ್ಧಾರವಾಗಿ ನಡೆಸಿಕೊಂಡು ಬರುವ ಕವಿಪಂಡಿತ ವರ್ಗವು ವಿರಳವಾಗುತ್ತಿರುವ ಈ ಕಾಲದಲ್ಲಿ ಅರ್ಧ ಶತಮಾನದಿಂದಲೂ ಜೈನ ಸಾಹಿತ್ಯ ಮತ್ತು ಧರ್ಮಗಳ ಸೇವೆಯನ್ನು ವಿವಿಧ ಕೃತಿಗಳಿಂದ ಮಾಡಿ ಅಪೂರ್ವ ಪಂಡಿತರನ್ನು ಸ್ಮರಣೆಗೆ ತರುತ್ತಿರುವ ಉಭಯಭಾಷಾ ಸಾಹಿತ್ಯಗಳಲ್ಲಿ ಮಹಾವಿದ್ವಾಂಸರಾದ ತಮ್ಮಲ್ಲಿ ಕರ್ನಾಟಕ ಮಹಾಜನರಿಗಿರುವ ಗೌರವ ಬುದ್ಧಿಯನ್ನೂ, ಅಭಿಮಾನವನ್ನೂ, ಈ ಸನ್ಮಾನ ಪತ್ರಮುಖೇನ ವ್ಯಕ್ತಪಡಿಸಲು ನಮಗೆ ದೊರೆತಿರುವ ಈ ಅವಕಾಶವನ್ನು ನಾವು ಒಂದು ಸುಯೋಗವೆಂದು ಭಾವಿಸುತ್ತೇವೆ.

ಕನ್ನಡನಾಡಿನ ವಿದ್ವತ್ಪರಂಪರೆಗೆ ಸಹಜವಾಗಿರುವ ಉಭಯಭಾಷಾ ಪಾಂಡಿತ್ಯದ ಜೊತೆಗೆ ತಾವು ಆಧುನಿಕ ವಿಷಯಗಳಲ್ಲಿಯೂ ಪಾಂಡಿತ್ಯವನ್ನು ಸಂಪಾದಿಸಿ, ಸತತ ಪರಿಶ್ರಮದಿಂದಲೂ ಸೂಕ್ಷ್ಮವಿಮರ್ಶನಾ ಸಾಮರ್ಥ್ಯದಿಂದಲೂ ಪುರಾತನ ಸಂಸ್ಕೃತ ಕನ್ನಡ ಗ್ರಂಥಗಳನ್ನು ವ್ಯಾಖ್ಯಾನಗಳೊಡನೆ ಸಂಪಾದಿಸಿ ಪ್ರಕಟಪಡಿಸಿರುವಿರಲ್ಲದೆ ಸ್ವತಂತ್ರವಾಗಿಯೂ ಗ್ರಂಥರಚನೆ ಮಾಡಿ ಜೈನಧರ್ಮವನ್ನು ಪ್ರಕಟಪಡಿಸಿದ್ದೀರಿ. ಕನ್ನಡದ ಆದಿಕವಿ ಪಂಪನಿಗೆ ಕೀರ್ತಿತಂದ ಆದಿಪುರಾಣಕ್ಕೆ ಆಕರವಾದ ಜಿನಸೇನಾಚಾರ್ಯರ 'ಮಹಾಪುರಾಣ' ಸಮಂತಭದ್ರ, ಪೂಜ್ಯಪಾದಾದಿ ಜೈನಾಚಾರ್ಯರು ವ್ಯಾಖ್ಯಾನಮಾಡಿ ಕೊಂಡಾಡಿರುವ ಉಮಾಸ್ವಾತಿ ಪ್ರಣೀತವಾದ ''ತತ್ವಾರ್ಥಾದಿಗಮ ಸೂತ್ರ'' ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಯ ''ದ್ರವ್ಯಸಂಗ್ರಹ'' ''ಅನ್ಯಯೋಗವ್ಯವಚ್ಛೇದಿಕಾ'' ಮೊದಲಾದ ಶಾಸ್ತ್ರಗ್ರಂಥಗಳನ್ನೂ ದಶಭಕ್ತಿ, ಜಿನಭಜನಸಾರ, ಮೊದಲಾದ ಧರ್ಮಪ್ರಸಾರ ಸಾಧಕವಾದ ಸುಲಭ ಗ್ರಂಥಗಳನ್ನೂ ಇನ್ನೂ ಹಲವಾರು ಕನ್ನಡ, ಸಂಸ್ಕೃತ ಗ್ರಂಥಗಳನ್ನೂ ಟೀಕೆ, ಟಿಪ್ಪಣಿ, ವ್ಯಾಖ್ಯಾನ ವಿವರಣಾದಿಗಳೊಡನೆ ಪರಿಶೋಧಿಸಿ ಪ್ರಕಟಿಸಿ ಅಭ್ಯಾಸಿಗಳಿಗೆ ಅತ್ಯಾವಶ್ಯಕವೂ, ಅಮೂಲ್ಯವೂ ಆದ ಸಹಾಯವನ್ನು ಕಲ್ಪಿಸಿಕೊಟ್ಟಿದ್ದೀರಿ. ತಾವು ಜೈನ ಸಮಾಜಕ್ಕೆ ಮಾತ್ರವಲ್ಲದೆ ಒಟ್ಟು ನಾಡು ನುಡಿಗಳಿಗೇ ಈ ಮೂಲಕ ಅಮೋಘ ಸೇವೆ ಸಲ್ಲಿಸಿದ್ದೀರಿ.

ಮೈಸೂರು ಸರ್ಕಾರದ ಪ್ರಾಚ್ಯ ಸಂಶೋಧನಾಲಾಯದಲ್ಲೂ, ಪೌರಸ್ತ್ಯ ಗ್ರಂಥ ಭಂಡಾರದಲ್ಲಿಯೂ ಹಲವು ವರ್ಷಗಳಕಾಲ ಪಂಡಿತರಾಗಿಯೂ ಕೀರ್ತಿಶೇಷರಾದ ವರ್ಧಮಾನಯ್ಯನವರ ಮೈಸೂರಿನ ವಿದ್ಯಾರ್ಥಿನಿಲಯದಲ್ಲಿ ಜೈನ ಧರ್ಮಾಚಾರ್ಯರಾಗಿಯೂ ಚೈತ್ಯಾಲಯದಲ್ಲಿ ಜೈನಾಗಮ ಪುರಾಣಗಳನ್ನು ಶ್ರಾವಕರಿಗೆ ತಿಳಿನುಡಿಗಳಲ್ಲಿ ಹೇಳಿ ವಿವರಿಸುತ್ತಾ ಪೌರಾಣಿಕರಾಗಿಯೂ ದುಡಿದು ಮಹಾಜನರ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದೀರಿ.

ತಮ್ಮ ಧರ್ಮಶ್ರದ್ಧೆ ಮತ್ತು ಶಾಸ್ತ್ರ ಪಾಂಡಿತ್ಯಗಳಿಗಾಗಿ ಶ್ರವಣಬೆಳಗೊಳದ ಶ್ರೀ ಮಠದಿಂದ 'ಜೈನಶಾಸ್ತ್ರ ವಿಶಾರದ' ಎಂಬ ಪ್ರಶಸ್ತಿಯನ್ನು ಪಡೆದಿದ್ದೀರಿ. ತಮ್ಮ ವಿದ್ಯಾವಿಷದಗಳಿಗೆ ಮೆಚ್ಚಿದ ಆಳಿದ ಮಹಾಸ್ವಾಮಿಯವರಿಂದ 'ಆಸ್ಥಾನ ಮಹಾ ವಿದ್ವಾನ್' ಪದವಿಯನ್ನೂ ಮತ್ತು ಈಗಿನ ಮಹಾಸ್ವಾಮಿಯವರಿಂದ 'ಪಂಡಿತರತ್ನಂ' ಎಂಬ ಬಿರುದನ್ನೂ ಗಳಿಸಿದ್ದೀರಿ. 'ವಿವೇಕಾಭ್ಯುದಯ' ವಿಶ್ವಬಂಧು' ಪತ್ರಿಕಾ ಸಂಪಾದಕರಾಗಿ ಜನಮನವನ್ನು ಮೆಚ್ಚಿಸಿ ಅವರಿಂದಲೂ ಮನ್ನಣೆ ಪಡೆದಿದ್ದೀರಿ. ಹೀಗೆ ಗುರುಮನೆ, ಅರಮನೆ, ಸಮಾಜ–ಎಲ್ಲೆಡೆಗಳಿಂದಲೂ ಗೌರವ ವಿಶ್ವಾಸಗಳನ್ನು ಸಂಪಾದಿಸಿರುತ್ತೀರಿ. ಆಡಂಬರವಿಲ್ಲದ ಜೀವನ, ಸೌಜನ್ಯ, ಧರ್ಮಶ್ರದ್ಧೆ, ವಿದ್ಯಾ, ವಿನಯಗುಣಗಳಿಂದ ಸರ್ವಮಾನ್ಯರೂ ಮಹಾಪಂಡಿತರೂ ಆದ ತಮಗೆ ಕನ್ನಡಿಗರೆಲ್ಲರ ಪ್ರತಿನಿಧಿ ಸಂಸ್ಥೆಯಾದ ಈ ಕನ್ನಡ ಸಾಹಿತ್ಯ ಪರಿಷತ್ತು ಮರ್ಯಾದೆ ಸಲ್ಲಿಸುವುದು ಉಚಿತವೇ ಆಗಿದೆ.

ತಮ್ಮ ಗೌರವ ವಿಶ್ವಾಸಗಳ ಕುರುಹಾಗಿ ಈ ಕಾಣಿಕೆಯನ್ನು ಅಂಗೀಕರಿಸುವುದಕ್ಕೆ ತಾವು ಒಪ್ಪಿದ್ದಕ್ಕೆ ನಾವು ಕೃತಜ್ಞರಾಗಿದ್ದೇವೆ.

ತಮ್ಮ ಶಾಸ್ತ್ರ, ಸಾಹಿತ್ಯ, ಸೇವಾಕಾರ್ಯಗಳು ಇತೋಪ್ಯತಿಶಯವಾಗಿಯೂ ನಿರ್ವಿಘ್ನವಾಗಿಯೂ ನಡೆಯುವಂತೆ ತಮಗೆ ಆಯುರಾರೋಗ್ಯಭಾಗ್ಯಗಳನ್ನು ಅನುಗ್ರಹಿಸಲೆಂದು ಅನನ್ಯ ಭಾವದಿಂದ ಭಗವಂತನನ್ನು ಪ್ರಾರ್ಥಿಸುತ್ತೇವೆ.

ಶ್ರೀ ಕೃಷ್ಣರಾಜ ಪರಿಷನ್ಮಂದಿರ — ಇಂತು<br>
ಬೆಂಗಳೂರು, — **ಕನ್ನಡ ಸಾಹಿತ್ಯ ಪರಿಷತ್ತಿನ ಸದಸ್ಯರು**<br>
ತಾ. ೧೩ ಮೇ ೧೯೫೧

ಈ ರೀತಿ ಮೂರು ಸನ್ಮಾನಗಳನ್ನು ಒಬ್ಬರೇ ಪಡೆದ ಕೆಲವೇ ಆಯ್ದ ವಿದ್ವಾಂಸರಲ್ಲಿ ಶಾಂತಿರಾಜ ಶಾಸ್ತ್ರಿಗಳೂ ಒಬ್ಬರು. ಸಾಹಿತ್ಯ, ಸಂಸ್ಕೃತಿ, ಕಲೆಗಳಿಗೆ ನಿಪುಣರಿಗೆ ಅರಮನೆ ಆಶ್ರಯವಿತ್ತು ಪ್ರೋತ್ಸಾಹಿಸುತ್ತಿದ್ದ ಕಾಲವದು. ಸಹಜವಾಗಿಯೇ ಆ ತಲೆಮಾರಿನ ವಿದ್ವಾಂಸರಿಗೆ ರಾಜರಲ್ಲಿ ಅಪಾರ ಗೌರವ. ಶಾಸ್ತ್ರಿಗಳು ಇದಕ್ಕೆ ಹೊರತಾಗಿರಲಿಲ್ಲ. ತಮ್ಮ ಕೆಲವು ಕೃತಿಗಳನ್ನು 'ಆಳುವ ಮಹಾಸ್ವಾಮಿಗಳಿಗೆ' ಅರ್ಪಣೆ ಮಾಡಿದ್ದಾರೆ. ಉದಾ:– ನೇಮಿಜಿನೇಶಸಂಗತಿಯನ್ನು ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಅರ್ಪಿಸಿದೆ. ಶಾಸ್ತ್ರಿಗಳು ಒಳ್ಳೆಯ ಜ್ಯೋತಿಷ್ಯ ಶಾಸ್ತ್ರವಿಶಾರದರಾಗಿದ್ದರು; ಜೈನ ಜ್ಯೋತಿಷ್ಯದಲ್ಲಿ ನಿಷ್ಣಾತರು. ಪಂಡಿತರತ್ನ ಎ. ಶಾಂತಿರಾಜ ಶಾಸ್ತ್ರಿಗಳವರು ಕೀರ್ತಿಶೇಷರಾದ ಶ್ರವಣಬೆಳಗೊಳದ ಮಠಾಧೀಶರಾಗಿದ್ದ ''ಸ್ವಸ್ತಿಶ್ರೀ ನೇಮಿಸಾಗರ ಮಹಾಸ್ವಾಮಿಗಳ ಭಾಷಣ'' ಸಂಗ್ರಹವನ್ನು ಪ್ರಕಟಿಸಿದ್ದರು. ಈ ಸ್ವಾಮಿಗಳವರು ೧೯೧೨ರಿಂದ ೧೯೨೩ರ ವರೆಗೆ ಮೈಸೂರಿನ ಎಂ.ಎಲ್. ವರ್ಧಮಾನಯ್ಯನವರ ವಿದ್ಯಾರ್ಥಿನಿಲಯದಲ್ಲಿ ಇಳಿದುಕೊಂಡಿದ್ದು ಅಲ್ಲಿನ ವಿದ್ಯಾರ್ಥಿಗಳಿಗೆ ಉಪದೇಶಿಸುತ್ತಿದ್ದರು. ತಾವೂ ಜೈನ ನ್ಯಾಯಶಾಸ್ತ್ರವನ್ನು ಅಭ್ಯಾಸಮಾಡುತ್ತಿದ್ದರು. ಆ ಸಮಯದಲ್ಲಿ ಶಾಸ್ತ್ರಿಗಳವರೂ ಅಧ್ಯಾಪಕರಾಗಿಯೂ ವಿದ್ಯಾರ್ಥಿಯಾಗಿಯೂ ಇದ್ದರು. ಹಳೆಯ ಕಾವ್ಯಗಳನ್ನು ಬೇರೆಬೇರೆ ಓಲೆಗರಿ ಗ್ರಂಥಗಳಿಂದ

ಸಿದ್ಧಪಡಿಸಿ ಅದಕ್ಕೆ ವಿಸ್ತಾರವಾದ ಪೀಠಿಕೆ, ಕಥಾಸಾರ, ಕವಿಕಾವ್ಯವಿಮರ್ಶೆ ಕೊಡುತ್ತಿದ್ದರು. ಆ ಕಾಲಕ್ಕೆ ಅದು ಹೊಸದು. ಅವರ ನೇಮಿಜಿನೇಶಸಂಗತಿ, ನಾಗಕುಮಾರ ಚರಿತಂ, ಶತಕತ್ರಯ(ಮೂರುಶತಕಗಳ ಗದ್ಯಾನುವಾದವಿದೆ) ಈ ರೀತಿಯಲ್ಲಿ ಗಮನಾರ್ಹ ಕೃತಿಗಳು. ಗ್ರಂಥ ಸಂಪಾದನಾ ಶಾಸ್ತ್ರದ ಆದ್ಯರಲ್ಲಿ ಶಾಂತಿರಾಜ ಶಾಸ್ತ್ರಿಗಳು ಗಣ್ಯರು.

ಶ್ರೀ ಶಾಸ್ತ್ರಿಗಳ ಶಾಶ್ವತ ಸಾರಸ್ವತ ಸೇವೆಯನ್ನು ಮನಗಾಣಬೇಕಾದರೆ ಅವರ ಗ್ರಂಥಗಳನ್ನು ಅವಲೋಕಿಸಬೇಕು.

### ಶ್ರೀ ಶಾಂತಿರಾಜ ಶಾಸ್ತ್ರಿಗಳ ಪ್ರಕಟಿತ ಕೃತಿಗಳು:

| | | |
|---|---|---|
| ೧. | ಅನ್ಯಯೋಗ ವ್ಯವಚ್ಛೇದಿಕಾ | ೧೯೨೩ |
| ೨. | ಇಷ್ಟೋಪದೇಶ– (ಪೂಜ್ಯಪಾದಾಚಾರ್ಯರ ಕೃತಿಯ ಟೀಕೆ) | ೧೯೩೮ |
| ೩. | ಉತ್ತರಪೂರಾಣ– (ಗುಣಭದ್ರಾಚಾರ್ಯರ ಕೃತಿಯ ಅನುವಾದ) | ೧೯೪೪ |
| ೪. | ಚತುರ್ವಿಂಶತಿತೀರ್ಥಂಕರಆರಾಧನಾ | ೧೯೩೫ |
| ೫. | ಜಿನಭಜನಸಾರ | ೧೯೧೧ |
| ೬. | ಜೈನವೇದ ಮತ್ತು ಶ್ರುತಪಂಚಮಿ– | ೧೯೫೦ |
| ೭. | ತತ್ತ್ವರತ್ನ ಪ್ರದೀಪಿಕೆ– (ಇದು ಮರಣೋತ್ತರ ಪ್ರಕಟನೆ) | ೧೯೫೫ |
| ೮. | ತತ್ವಾರ್ಥಸೂತ್ರ | ೧೯೪೪ |
| ೯. | ದಶಲಕ್ಷಣಧರ್ಮ– | ೧೯೪೯ |
| ೧೦. | ದಶಭಕ್ತಿ– | ೧೯೩೪ |
| ೧೧. | ದ್ವಾದಶಾನುಪ್ರೇಕ್ಷೆ– | ೧೯೩೬, ೧೯೫೦ |
| ೧೨. | ಧರ್ಮಪರೀಕ್ಷಾನುವಾದ | ೧೯೩೮ |
| ೧೩. | ದ್ರವ್ಯಸಂಗ್ರಹ– | ೧೯೫೧ |
| ೧೪. | ನಂದೀಶ್ವರ ಅಷ್ಟಾಹ್ನಿಕ ಪೂಜೆ | ೧೯೩೨ |
| ೧೫. | ನಾಗಕುಮಾರಚರಿತಂ– | ೧೯೩೩ |
| ೧೬. | ನಿತ್ಯಸುಖದ ನೋಂಪಿಯ ಕಥೆ– | ೧೯೩೮ |
| ೧೭. | ನಿರ್ದುಃಖ ಸಪ್ತಮಿಯ ಮತ್ತು ಸಮಾಧಿವಿಧಾನದ ನೋಪಿಯ ಕಥೆ– | ೧೯೩೮ |
| ೧೮. | ನೇಮಿಜಿನೇಶ ಸಂಗತಿ (ಹರಿವಂಶ ಪುರಾಣ)– | ೧೯೩೧ |
| ೧೯. | ಪರಮಾತ್ಮಬೋಧೆ– | ೧೯೩೭ |
| ೨೦. | ಪಾರ್ಶ್ವನಾಥತೀರ್ಥಂಕರಚರಿತ– | ೧೯೩೪ |
| ೨೧. | ಪೂಜಾಸಾರಸಮುಚ್ಚಯ– | ೧೯೨೩ |
| ೨೨. | ಪೂರ್ವಪುರಾಣ– | ೧೯೩೩ |
| ೨೩. | ಭಕ್ತಾಮರ ಸ್ತೋತ್ರ (ಪಂಚಸ್ತೋತ್ರ) | ೧೯೧೩ |
| ೨೪. | ಮೃತ್ಯುಮಹೋತ್ಸವ– | ೧೯೩೭ |
| ೨೫. | ಮೂರು ನೋಂಪಿಯ ಕಥೆಗಳು– | ೧೯೨೬ |
| ೨೬. | ಯೋಗಾಮೃತ ಶತಕಂ– | ೧೯೫೦ |
| ೨೭. | ರತ್ನಕರಂಡಕ ಶ್ರಾವಕಾಚಾರ | — |
| ೨೮. | ರತ್ನಾಕರ ಅಪರಾಜಿತೇಶ್ವರ ಶತಕದ್ವಯ | ೧೯೩೩ |
| ೨೯. | ಸಪ್ತಪರಮಸ್ಥಾನಗಳು– | ೧೯೪೯ |
| ೩೦. | ಸಮ್ಯಕ್ತ್ವ ಕೌಮುದಿ | ೧೯೩೭ |
| ೩೧. | ಸ್ವಸ್ತಿಶ್ರೀನೇಮಿಸಾಗರ ಮಹಾಸ್ವಾಮಿಗಳ ಭಾಷಣ | ೧೯೩೨ |
| ೩೨. | ಶತಕತ್ರಯ | ೧೯೨೨ |
| ೩೩. | ಸುಕುಮಾರ ಚರಿತ್ರಾದಿ ಸಂಗ್ರಹ – (ಅಂಜನಾದೇವಿ ಚರಿತ್ರೆ ಮತ್ತು ಇತರ ಭಕ್ತಿಮಂತ್ರಗಳು) | ೧೯೪೨ |

ಈ ಕೃತಿಗಳಲ್ಲಿ ಕೆಲವದರ (ಈ ತಕ್ಷಣಕ್ಕೆ ನನಗೆ ದೊರೆತ ಕೃತಿಗಳು) ಕಿರುಪರಿಚಯ ಹೀಗಿದೆ :

### ಧರ್ಮ ಪರೀಕ್ಷಾ ಅನುವಾದ

ಇದರ ಮೂಲ ಸಂಸ್ಕೃತದಲ್ಲಿದೆ. ಜೈನ ಆಚಾರ್ಯರಲ್ಲಿ ಒಬ್ಬರಾದ ಅಮಿತಗತ್ಯಾಚಾರ್ಯರುಸಂಸ್ಕೃತದಲ್ಲಿ ರಚಿಸಿರುವ 'ಧರ್ಮಪರೀಕ್ಷಾ' ಎಂಬ ಗ್ರಂಥದ ಅನುವಾದವನ್ನು ಶಾಂತಿರಾಜ ಶಾಸ್ತ್ರಿಗಳು ತಿಳಿಗನ್ನಡದಲ್ಲಿ ಮಾಡಿಕೊಟ್ಟಿದ್ದಾರೆ. ೧೯೩೮ ರಲ್ಲಿ ಅಚ್ಚಾದ ಈ ಪುಸ್ತಕದ ಪ್ರಕಾಶಕರು ಬಿದಿರೆ ಪಾಯಿಸಾಗರ ಸ್ವಾಮಿಗಳವರು. ವಿಕ್ರಮ ಶಕ ೧೦೭೦ ರಲ್ಲಿ ಎರಡನೆ ಅಮಿತಗತ್ಯಾಚಾರ್ಯರು 'ಧರ್ಮಪರೀಕ್ಷಾ' ಗ್ರಂಥವನ್ನು ರಚಿಸಿದರು. ಅವರು ಅಮಿತಗತಿಶ್ರಾವಕಾಚಾರ, ಸಾಮಾಯಿಕ ಪಾಠ ಮೊದಲಾದ ಗ್ರಂಥಗಳನ್ನೂ ರಚಿಸಿದ್ದಾರೆ. ಸಂಸ್ಕೃತದಲ್ಲಿ ಅವರು ಉದ್ದಾಮ ಪ್ರೌಢ ವಿದ್ವಾಂಸರಾಗಿದ್ದರು.

ಮೂಲ ಗ್ರಂಥಕ್ಕೆ ಹಿಂದಿಯಲ್ಲಿ ಪದ್ಯರೂಪವಾಗಿ ಪಂಡಿತ ಮನೋಹರದಾಸ ಎಂಬುವರು ಗದ್ಯದಲ್ಲಿ ಜಯಪುರ ನಿವಾಸಿ ಚೌಧರಿ ಪನ್ನಾಲಾಲರು ೧೯೦೧ ರಲ್ಲಿ ಪಂಡಿತ ಪನ್ನಾಲಾಲ ಬಾಕಲೀವಾಲ ಅವರು ಮರಾಠಿಯಲ್ಲಿ ಕಾವ್ಯದಲ್ಲಿ ಪೂನಾ ನಗರದ ವೈದಿಕ ಬ್ರಾಹ್ಮಣಪಂಡಿತ ಕೃಷ್ಣಾಜೀ ನಾರಾಯಣ ಜೋಶಿ ಎಂಬುವರು, ಕಾವ್ಯದಲ್ಲಿ ಸಾಂಗಲಿಯ ಬಾಹುಬಲಿ ಶರ್ಮ ಎಂಬುವರೂ, ಕನ್ನಡದಲ್ಲಿ ಕಳೆದ ಶತಮಾನದಲ್ಲಿ ತೋವಿನಕೆರೆಯ ಚಂದ್ರಸಾಗರವರ್ಣಿ ಅವರು. ಈಚೆಗೆ ಹರಪನಹಳ್ಳಿಯ ಚೂಡಪ್ಪ ಇಜಾರಿ ಎಂಬುವರೂ ಈ ಧರ್ಮಪರೀಕ್ಷೆಯ ಅನುವಾದಗಳನ್ನು ಪ್ರಕಟಿಸಿದ್ದಾರೆ.

೨೦ ಪರಿಚ್ಛೇದಗಳುಳ್ಳ ಮೂಲ ಗ್ರಂಥದ ಪದ್ಯಗಳ ಸಂಖ್ಯೆ ೧೯೨೧. ಇದರ ಈ ಅನುವಾದದಲ್ಲಿ ಸುಮಾರು ೩೮೦೦ ಅನುಷ್ಟುಪ್‌ಶ್ಲೋಕಗಳಷ್ಟಾಗುತ್ತದೆ. ಮಂಡ್ಯದ ಸಾಹುಕಾರ್ ಎನ್. ಧರಣಪ್ಪನವರ ಹಣಸಹಾಯದಿಂದ ಈ ಕೃತಿ ಅಚ್ಚಾಗಿದೆ.

### ಸಮ್ಯಕ್ತ್ವ ಕೌಮುದಿ

ಅತಿಬಲ ಗ್ರಂಥಮಾಲೆಯ ೭೫ನೇ ಪುಷ್ಪವಾಗಿ ೧೯೩೭ ರಲ್ಲಿ ಅಚ್ಚಾದ ಈ ಗ್ರಂಥವು ೧೯೭೦ ರಲ್ಲಿ ಎರಡನೆಯ ಮುದ್ರಣವನ್ನು ಪಡೆದಿದೆ. ಜೈನಧರ್ಮ ಪ್ರತಿಪಾದಿಸುವ ರತ್ನತ್ರಯಗಳಲ್ಲಿ ಒಂದಾದ ಸಮ್ಯಗ್ದರ್ಶನಕ್ಕೆ ಸಮ್ಯಕ್ತ್ವ ಎಂದು ಹೆಸರಿದೆ. ಈ ಪ್ರಸಿದ್ಧ ಗ್ರಂಥದಲ್ಲಿ ಪ್ರತಿಪಾದನೆಯಾಗಿರುವ ವಿಷಯ ಸಮ್ಯಗ್ದರ್ಶನಕ್ಕೆ ಸಂಬಂಧಿಸಿದವು. ಈ ಗ್ರಂಥವು ಸಂಸ್ಕೃತ, ಹಿಂದಿ, ಮರಾಠಿ, ಭಾಷೆಗಳಲ್ಲಿ ರಚಿತವಾಗಿವೆ. ಕನ್ನಡದಲ್ಲಿ ಮೂರನೇ ಮಂಗರಸಕವಿ ಷಟ್ಪದಿಯಲ್ಲಿ ಈ ಕಾವ್ಯ ರಚಿಸಿದ್ದಾನೆ. ಅಲ್ಲದೆ ಜಿಕ್ಕಮಲ್ಲಣ್ಣ ಎಂಬ ಕವಿ ಮತ್ತು ಪಾಯಿಸಾಗರವರ್ಣಿ ಎಂಬ ಕವಿ ಸಾಂಗತ್ಯದಲ್ಲಿ ಈ ಕಾವ್ಯವನ್ನು ರಚಿಸಿದ್ದಾರೆ.

ಶಾಂತಿರಾಜ ಶಾಸ್ತ್ರಿಗಳು ಸಂಸ್ಕೃತದ ಮೂಲ ಗ್ರಂಥವನ್ನು ಆಧಾರವಾಗಿಟ್ಟುಕೊಂಡು ಹಲವು ಭಾವಾರ್ಥದೊಡನೆ ಕನ್ನಡ ಅನುವಾದವನ್ನು ಸಿದ್ಧಪಡಿಸಿದ್ದಾರೆ. ಸಂಸ್ಕೃತದಲ್ಲಿ ಈ ಗ್ರಂಥವನ್ನು ಯಾವ ಕವಿ ಯಾವ ಕಾಲದಲ್ಲಿ ರಚಿಸಿದ್ದನು ಎಂಬುದು ಸರಿಯಾಗಿ ತಿಳಿಯದು.

ಕೌಮುದಿ ಎಂಬ ಸಂಸ್ಕೃತ ಶಬ್ದ ಬೆಳದಿಂಗಳು ಎಂಬ ಅರ್ಥ ಕೊಡುತ್ತದೆ. ಬೆಳದಿಂಗಳು ಮನಸ್ಸಿಗೆ ಸಂತೋಷವನ್ನು ಕೊಡುವಂತೆ ಈ ಗ್ರಂಥದಲ್ಲಿರುವ ಕಥೆಗಳನ್ನು ಓದುವ ಓದುಗರಿಗೆ ಮನಸ್ಸಿಗೆ ಆಹ್ಲಾದ ದೊರೆಯುತ್ತದೆಯೆಂಬ ಉದ್ದೇಶದಿಂದ ಕವಿ ಈ ಕಾವ್ಯಕ್ಕೆ 'ಸಮ್ಯಕ್ತ್ವ ಕೌಮುದಿ' ಎಂದು ಹೆಸರು ಕೊಟ್ಟಿದ್ದಾನೆ. ಜೈನ ಕಥಾಲೋಕದಲ್ಲಿ ಪ್ರಸಿದ್ಧವಾಗಿರುವ ಕೆಲವು ಕಥೆಗಳು ಈ ಗ್ರಂಥದಲ್ಲಿ ಇದೆ.

### ಅನ್ಯಯೋಗ ವ್ಯವಚ್ಛೇದಿಕಾ

ಈ ಗ್ರಂಥದಲ್ಲಿ ಚಾರ್ವಾಕ, ನೈಯಾಯಿಕ ಮೊದಲಾದ ಮತಗಳ ವಿಮರ್ಶೆ ಕಂಡು ಬರುತ್ತದೆ. ಈಗಿನ ಗುಜರಾತ್ ರಾಜ್ಯದಲ್ಲಿ ೧೧ ನೇ ಶತಮಾನದಲ್ಲಿ ಚಾಳುಕ್ಯ ವಂಶದ ಸಿದ್ಧರಾಜನು ಆಳುತ್ತಿದ್ದನು. ಅವನ ರಾಜಧಾನಿ ಅನಹಿಲ್ಲಪುರದ ಸಮೀಪದ 'ಬಂಧೂಕ' ಗ್ರಾಮದ ವೈಶ್ಯರಾದ ಚಾಚ–ಪಾಹಿನಿ ದಂಪತಿಗಳಿಗೆ ೧೦೮೮ ರಲ್ಲಿ ಚಂಗದೇವ ಎಂಬ ಮಗ ಹುಟ್ಟಿದನು. ದೇವಚಂದ್ರ ಸೂರಿಗಳು ಎಂಬ ಜೈನಾಚಾರ್ಯರು ಚಂಗದೇವನಿಗೆ ಶಿಕ್ಷಣ ನೀಡಿದರು. ಚಂಗದೇವನು ಸೋಮಚಂದ್ರನೆಂಬ ಹೆಸರಿನಿಂದ ಸೂರಿ ಪದವಿಯನ್ನು ಪಡೆದನು. ಸಂಸ್ಕೃತ ಪ್ರಾಕೃತ, ನ್ಯಾಯ, ವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ಪಂಡಿತನಾಗಿ ಮುಂದೆ ಹೇಮಚಂದ್ರಾಚಾರ್ಯ ಎಂಬ ಹೆಸರಿನಿಂದ ಆಚಾರ್ಯನಾಗಿ ಕೀರ್ತಿಶಾಲಿಯಾದನು. ಸುಮಾರು ೩೦ ಗ್ರಂಥಗಳನ್ನು ಹೇಮಚಂದ್ರಾಚಾರ್ಯರು ರಚಿಸಿದ್ದಾರೆ.

ಸಂಸ್ಕೃತ ಗ್ರಂಥದಲ್ಲಿ ಸಂಕ್ಷಿಪ್ತವಾದ ವ್ಯಾಖ್ಯಾನದೊಡನೆ ಶಾಂತಿರಾಜ ಶಾಸ್ತ್ರಿಗಳು ಕೊಲ್ಲಾಪುರದ ಪಾಯಿಸಾಗರ ಸ್ವಾಮಿಜೀ ಉಗಾರಕರ್ ಅವರ ನೆರವಿನಿಂದ ೧೯೨೩ ರಲ್ಲಿ ಛಾಪಿಸಿದ್ದಾರೆ.

### ಜಿನಭಜನಸಾರ

ಹಲವು ಮುದ್ರಣಗಳನ್ನು (೪ನೇ ಮುದ್ರಣವನ್ನು ೧೯೪೭ರಲ್ಲಿ) ಕಂಡಿರುವ ಈ ಜನಪ್ರಿಯ ಧಾರ್ಮಿಕ ಭಕ್ತಿಗೀತೆಗಳ ಸಂಕಲನದಲ್ಲಿ ನಿತ್ಯಪೂಜೆಗೆ, ಭಜನೆಗೆ ಬೇಕಾದ ಹಾಡುಗಳು, ಮಂತ್ರಗಳು ಇವೆ. ಹಳಗನ್ನಡ ಕವಿಗಳ ಕೆಲವು ಪದ್ಯಗಳು ೨೪ ತೀರ್ಥಂಕರರುಗಳ ಸ್ತೋತ್ರಗಳು, ಶಾಂತಿರಾಜ ಶಾಸ್ತ್ರಿಗಳು ರಚಿಸಿದ ಭಕ್ತಿಗೀತೆಗಳೂ ಇದರಲ್ಲಿ ಇವೆ.

### ಶತಕದ್ವಯ

ಇದು ರತ್ನಾಕರ ಕವಿಯ ರತ್ನಾಕರ ಶತಕ ಮತ್ತು ಅಪರಾಜಿತೇಶ್ವರ ಶತಕಗಳು ಇರುವ ಕೃತಿ. ೧೯೩೩ ರಲ್ಲಿ ಮೈಸೂರಿನ ವರ್ಧಮಾನ ಪವರ್ ಪ್ರೆಸ್ಸಿನಲ್ಲಿ ಇದು ಅಚ್ಚಾಗಿದೆ. ಕಿಸೆಯಳತೆಗೆ ಅಳಪಡುವಂತೆ ಅಚ್ಚಾಗಿರುವ ಈ ಚಿಕ್ಕ ಪುಸ್ತಕಕ್ಕೆ ಪುಟ್ಟ ಮುನ್ನುಡಿಯೂ ಇದೆ.

### ಪೂಜಾಸಾರ ಸಮುಚ್ಚಯ

ಮೈಸೂರಿನ ವರ್ಧಮಾನ ಪವರ್ ಪ್ರೆಸ್ಸಿನಲ್ಲಿ ೧೯೩೬ ರಲ್ಲಿ ೩ನೇ ಮುದ್ರಣವಾಗಿರುವ ಈ ಗ್ರಂಥ ಜೈನ ಗೃಹಸ್ಥರಿಗೆ ಉಪಯೋಗಕರವಾದ ಸಂಧ್ಯಾವಂದನಾ, ಸಾಮಾಯಿಕ, ದೇವಪೂಜಾರಾಧನಾ ಮುಂತಾದ ನಿತ್ಯ ನೈಮಿತ್ತಿಕ ಧಾರ್ಮಿಕ ಕ್ರಿಯೆಗಳನ್ನು ಪ್ರತಿಪಾದಿಸುವ ಒಂದು ಕೈಪಿಡಿ. ಇದರಲ್ಲಿ ಕೆಲವು ಸ್ತೋತ್ರಗಳು, ಪೂಜಾರಾಧನೆಗಳು, ಲಘುಶಾಂತಿಹೋಮವಿಧಿ ಮುಂತಾದುವು ಸೇರಿಕೊಂಡಿದೆ. ಸಂಸ್ಕೃತ ಶ್ಲೋಕಗಳನ್ನು ಮೇಲೆ ಕೊಟ್ಟು ಅದರ ಕೆಳಗೆ ಹಳಗನ್ನಡ ಅನುವಾದವನ್ನು ಕೊಟ್ಟಿದ್ದಾರೆ.

### ಶ್ರವಣಬೆಳಗೊಳ ಶ್ರೀಗಳವರ ಭಾಷಣಗಳ ಸಂಗ್ರಹ

ಮೈಸೂರು ಜಿಲ್ಲೆಯ ಸಾಲಿಗ್ರಾಮದ ಸರಾಫ್ ಪದ್ಮರಾಜಯ್ಯನವರು ಮತ್ತು ಬೆಂಗಳೂರಿನ ಸ್ಯಾದ್ವಾದಭಿಷಙ್ಮಣಿ ವೈದ್ಯರಾಜಪಂಡಿತ ಎಲ್ಲಪ್ಪನವರು ಪ್ರಕಾಶಪಡಿಸಿರುವ ಈ ಪುಸ್ತಕ ೧೯೩೨ ರಲ್ಲಿ ಮೈಸೂರಿನ ವರ್ಧಮಾನ ಪವರ್ ಪ್ರೆಸ್ಸಿನಲ್ಲಿ ಅಚ್ಚಾಗಿದೆ. ಇದರಲ್ಲಿ ಪ್ರಸಿದ್ಧ ಜೈನತೀರ್ಥ ಸ್ಥಳವಾದ ಶ್ರವಣಬೆಳಗೊಳ ಜೈನಮಠದ ಆಗಿನ ಶ್ರೀಗಳವರ ಭಾಷಣಗಳ ಸಂಗ್ರಹವಾಗಿದೆ.

### ತತ್ತ್ವರತ್ನ ಪ್ರದೀಪಿಕೆ

ಜೈನದರ್ಶನದಲ್ಲಿ ಉಮಾಸ್ವಾಮಿ ವಿರಚಿತ ಸಂಸ್ಕೃತ ತತ್ವಾರ್ಥಸೂತ್ರಕ್ಕೆ ಮಹತ್ವದ ಸ್ಥಾನವಿದೆ. ಅದರ ಮೇಲೆ ಸಂಸ್ಕೃತ ಪ್ರಾಕೃತ ಕನ್ನಡಗಳಲ್ಲಿ ಸಾಕಷ್ಟು ಸಾಹಿತ್ಯ ಹೊರಬಂದಿದೆ. ದಿವಾಕರಣಂದಿಯ ಹಾಗೂ ಬಾಲಚಂದ್ರದೇವನ ವ್ಯಾಖ್ಯಾನಗಳು ಕನ್ನಡದಲ್ಲಿ ಪ್ರಾಚೀನವಾದವು. ಬಾಲಚಂದ್ರದೇವ ವಿರಚಿತ ತತ್ತ್ವರತ್ನ ಪ್ರದೀಪಿಕೆಯನ್ನು ನ್ಯಾಯತೀರ್ಥ ಶಾಂತಿರಾಜಶಾಸ್ತ್ರಿಗಳು ಸಂಪಾದಿಸಿದ್ದಾರೆ. ಇದನ್ನು ಅವರ ಮರಣೋತ್ತರ ಪ್ರಕಟನೆಯಾಗಿ ೧೯೫೫ ರಲ್ಲಿ ಮೈಸೂರು ಪ್ರಾಚ್ಯ ಕೋಶಾಗಾರದವರು ಪ್ರಕಟಿಸಿದ್ದಾರೆ. ಇದಕ್ಕೆ ಶಾಸ್ತ್ರಿಗಳು ಬರೆದಿರುವ ಮುನ್ನುಡಿಯಿಂದ ಅವರ ಪಾಂಡಿತ್ಯದ ಉದ್ದಗಲ ಆಳ ಗೊತ್ತಾಗುತ್ತದೆ.

### ನೇಮಿಜಿನೇಶ ಸಂಗತಿ (ಹರಿವಂಶ)

ಮೂರನೆಯ ಮಂಗರಸಕವಿ (ಸು. ೧೫೦೯) ವಿರಚಿತ ನೇಮೀಜಿನೇಶ ಸಂಗತಿ ಎಂಬ ಸಾಂಗತ್ಯ ಕಾವ್ಯವನ್ನು ೧೯೩೧ ರಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಕವಿ ಕಾವ್ಯ ಕಾಲ ಕೃತಿ ವಿಮರ್ಶೆ ಕಥಾಸಾರ– ಇವೆಲ್ಲವನ್ನೂ ಆ ಕಾಲಕ್ಕೆ ವಿಶೇಷವಾದ ರೀತಿಯಲ್ಲಿ ಅಣಿಗೊಳಿಸಿ ಕೊಟ್ಟಿದ್ದಾರೆ. ಇನ್ನೂ ಮುಖ್ಯವಾದುದು ಎಂದರೆ ಪಾಠಾಂತರಗಳನ್ನೂ ಗುರುತು ಮಾಡಿರುವುದು. ಮುಮ್ಮಡಿ ಮಂಗರಸ ಕವಿ ಕುರಿತು ಇವರು ಹೇಳಿದ ಮಾತುಗಳು ಇಂದಿಗೂ ಅಧಿಕೃತವಾಗಿವೆ.

### ನಾಗಕುಮಾರ ಚರಿತಂ

ಬಾಹುಬಲಿ(ಮತ್ತು ಅವನ ಮಗ ವರ್ಧಮಾನ)ಕವಿ ಬರೆದಿರುವ ನಾಗಕುಮಾರ ಚರಿತಂ ಎಂಬ ಸಾಂಗತ್ಯ ಕೃತಿಯನ್ನು ಉತ್ತಮವಾದ ರೀತಿಯಲ್ಲಿ ಸಂಪಾದಿಸಿದ್ದಾರೆ. ಮುದ್ರಣ ದೋಷಗಳಿಲ್ಲ ; ಒಳ್ಳೆಯ ಕಾಗದ ಬಳಸಿದ್ದಾರೆ ( ಈ ಮಾತು ಅವರೆಲ್ಲ ಹೊತ್ತಗೆಗಳಿಗೂ ಹೊಂದುತ್ತದೆ). ಇದು ೧೯೩೩ ರಲ್ಲಿ ಪ್ರಕಟವಾಗಿದೆ.

### ನಿರ್ದುಃಖಸಪ್ತಮಿಯ ಮತ್ತು ಸಮಾಧಿ ವಿಧಾನದ ನೋಂಪಿಯ ಕಥೆ

ಈ ಎರಡು ನೋಂಪಿಯ ಕಥೆಗಳನ್ನು ಪರಿಶೋಧಿಸಿ ೧೯೩೮ರಲ್ಲಿ ಪ್ರಕಟಿಸಿದ್ದಾರೆ. ಶಾಸ್ತ್ರದಾನಕ್ಕೆ ಇದನ್ನು ಪ್ರಕಾಶಿಸಿದವರು ಪುತ್ತೂರಿನ ಕುಸುಮಾಜಮ್ಮನವರು.

ಶಾಸ್ತ್ರಿಗಳು ಸಿದ್ಧಪಡಿಸಿದ ಕೃತಿಗಳಲ್ಲಿ ಮಹತ್ವದ್ದು ಈಗ ಪರಿಷತ್ತು ಮರು ಮುದ್ರಣ ಮಾಡುತ್ತಿರುವ ಮಹಾಪುರಾಣ ಎರಡು ಸಂಪುಟಗಳು (ಈಗ ನಾಲ್ಕು ಭಾಗಗಳಲ್ಲಿ ಹೊರತಂದಿದ್ದೇವೆ). ಜೈನ ವಾಙ್ಮಯದಲ್ಲಿ ಮೇರುಕೃತಿಯಾದ ಮಹಾಪುರಾಣವನ್ನು ಜಿನಸೇನ ಮತ್ತು ಗುಣಭದ್ರ ಆಚಾರ್ಯದ್ವಯರ ಮೂಲ ಆಶಯಕ್ಕೆ ಚ್ಯುತಿ ಬರದಂತೆ ಶಾಸ್ತ್ರಿಗಳು ಕನ್ನಡಿಸಿದ್ದಾರೆ. ಶಾಸ್ತ್ರಿಗಳ ಕನ್ನಡ ಅನುವಾದ ಶಾಸ್ತ್ರಕೃತಿಗಳಿಗೆ ಆಗಮ ಗ್ರಂಥಗಳಿಗೆ ಬೇಕಾದ ಹಿತಮಿತ ಲಕ್ಷಣೋಪೇತವಾಗಿದೆ. ಜೈನವ್ಯಾಖ್ಯಾನ ಪರಂಪರೆಯ ತಲಸ್ಪರ್ಶಿಯಾದ ಪಾಂಡಿತ್ಯ–ಪರಿಚಯ ಪಡೆದಿರುವ ಶಾಸ್ತ್ರಿಗಳ ವೈದುಷ್ಯವನ್ನು ಅವರು ಇಲ್ಲಿ ಮೊದಲನೆಯ ಪ್ರಾರ್ಥನಾ ಪದ್ಯಕ್ಕೆ ಬರೆದಿರುವ ಐದು ವಿಧವಾದ ವ್ಯಾಖ್ಯಾನದಿಂದ ಮನಗಾಣಬಹುದು. ಒಂದೇ ಪದ್ಯಕ್ಕೆ ಎಷ್ಟೆಷ್ಟು ಶ್ಲೇಷೆಗಳು ಸಾಧ್ಯವೋ ಅಷ್ಟನ್ನೂ ಹೊರದೆಗೆಯುವ ಪರಿಪಾಟಿ ಹೊಸದಲ್ಲ. ಕಾಳಿದಾಸನ ರಘುವಂಶದ ಪ್ರಾರ್ಥನಾ ಪದ್ಯಕ್ಕೆ ಶಿವಪರ–ವಿಷ್ಣುಪರ ವ್ಯಾಖ್ಯಾನಗಳಿವೆ.

ಈಗ ಕೇರಳಕ್ಕೆ ಸೇರಿರುವ ವೈನಾಡಿನ ಭಾಗದಲ್ಲಿರುವ ಜೈನ ಮನೆತನಗಳಲ್ಲಿ ನೆತ್ತಿಯ ಮಣಿಯಾಗಿದ್ದ ಮಣಿಯಂಗೂಡಿನ ಕೃಷ್ಣಯ್ಯಗೌಡರು ಬಹು ಶ್ರದ್ಧೆಯಿಂದ ಶಾಸ್ತ್ರಿಗಳು ಅನುವಾದಿಸಿದ ಮಹಾಪುರಾಣವನ್ನು ಅಷ್ಟೇ ನಿಷ್ಠೆ ಪ್ರೇಮಗಳಿಂದ ಮೂಲ ಮತ್ತು ಅನುವಾದ ಸಹಿತ ಪೂರ್ವಪುರಾಣ ಮತ್ತು ಉತ್ತರಪುರಾಣ ಎಂಬ ಎರಡು ಭಾಗಗಳಲ್ಲಿ ಪ್ರಕಟಿಸಿದರು. ಅದು ಆ ಕಾಲಕ್ಕೆ ಒಂದು ಮಹಾಸಾಹಸ. ಸೊಗಸಾದ ಕಾಗದ ಉಪಯೋಗಿಸಿ ಮುದ್ದಾದ ಮುದ್ರಣ ವಿನ್ಯಾಸದಿಂದ ಕಡಿಮೆ ಬೆಲೆಗೆ ಅವರು ಧರ್ಮವತ್ಸಲರಾಗಿ ಆ ಕಾರ್ಯ ಮಾಡಿದ್ದರು. ಅದರ ಪ್ರತಿಗಳು ಮುಗಿದು ಹತ್ತಾರು ವರ್ಷಗಳಾದವು. ವರ್ಷದಿಂದ ವರ್ಷಕ್ಕೆ ಜೈನರಲ್ಲಿ ಮಾತ್ರವಲ್ಲದೆ ಜೈನೇತರರಾದ ಸಾಹಿತ್ಯ ಪ್ರೇಮಿಗಳಿಂದ ಇದರ ಬೇಡಿಕೆ ಹೆಚ್ಚಾಗಿ ಉಂಟಾಯಿತು. ಕನ್ನಡವನ್ನು ಸ್ನಾತಕೋತ್ತರ ಹಂತದಲ್ಲಿ ಪ್ರಧಾನ ವಿಷಯವಾಗಿ ಕಲಿಯುವವರು ಹೆಚ್ಚುತ್ತಿದ್ದಾರೆ. ಆದರೆ ಇದನ್ನು ಇಷ್ಟು ಹಣ ಸುರಿದು ಪ್ರಕಟಿಸುವವರು ಯಾರು ? ಕಡೆಗೆ ಕರ್ನಾಟಕ ಸರಕಾರದ ಉದಾರ ನೆರವಿನಿಂದ ಸಾಹಿತ್ಯ ಪ್ರೇಮಿಗಳಿಗೆ ಎಟುಕುವ ಬೆಲೆಯಲ್ಲಿ ಪ್ರಕಟಿಸಲು ಸಾಹಿತ್ಯಪರಿಷತ್ತಿಗೆ ಸಾಧ್ಯವಾದದ್ದು ಯೋಗಾಯೋಗ. ಸುಮಾರು ಇನ್ನೂರು ರೂಪಾಯಿ ಬೆಲೆ ಇಡಬೇಕಾದ ಈ ಸಂಪುಟಗಳಿಗೆ ಒಟ್ಟು ಎಂಬತ್ತು ರೂಪಾಯಿ ಬೆಲೆ ಇಡಲು ಸಾಧ್ಯಮಾಡಿಕೊಟ್ಟ ಕರ್ನಾಟಕ ಸರಕಾರದ ನೆರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಅದೇ ರೀತಿ ಈ ಕೃತಿಶ್ರೇಣಿಯನ್ನು ಪರಿಷತ್ತು ಪ್ರಕಟಿಸಲು ಒಪ್ಪಿಗೆ ನೀಡಿದ ಶಾಸ್ತ್ರಿಗಳ ಮಕ್ಕಳೆಲ್ಲರನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಅದರಲ್ಲಿಯೂ ಎಸ್. ಜಿತೇಂದ್ರ ಕುಮಾರರು ಇದರ ಲೇಖಕ ಸಂಭಾವನೆಯಾಗಿ ಸಲ್ಲುವ ಮೊತ್ತವನ್ನು ಪೂರ್ತಿಯಾಗಿ ಅವರ ತಂದೆಯವರ ಹೆಸರಿನಲ್ಲಿ ಒಂದು ಶಾಶ್ವತ ದತ್ತಿನಿಧಿಯಾಗಿ ಪರಿಷತ್ತಿನಲ್ಲಿಡಲು ಅನುಮತಿಸಿದ್ದಾರೆ. ಅದರ ಜತೆಗೆ ಶಾಂತಿರಾಜಶಾಸ್ತ್ರಿಗಳ ಒಪ್ಪವಾದ ಭಾವಚಿತ್ರವೊಂದನ್ನು ಕಟ್ಟುಹಾಕಿಸಿ ಪರಿಷತ್ತಿನಲ್ಲಿಡಲು ಕೊಟ್ಟಿದ್ದಾರೆ. ಕುಲದೀಪಕರಾದ ಈ ಸುಪುತ್ರರ ಕೊಡುಗೆ ಪರಿಷತ್ತಿಗೆ ದೊಡ್ಡದು.

ಮಹಾಪುರಾಣ ಕನ್ನಡ ಜೈನ ಕವಿಗಳಿಗೆ ತಾಯಿಬೇರು, ತಲಕಾವೇರಿ, ಪಂಪ, ಪೊನ್ನ ರನ್ನ ಜನ್ನರಾದಿಯಾಗಿ ಉಳಿದ ಅನೇಕ ಕನ್ನಡ ಕವಿಗಳು ಇದರಲ್ಲಿ ಕ್ರೀಡಿಸಿದ್ದಾರೆ. ಈ ಕನ್ನಡ ಕವಿಗಳ ಋಣಭಾರದಿಂದ ಮಹಾಪುರಾಣ ಜಗ್ಗಿಲ್ಲ. ಅದು ಮೊಗೆಮೊಗೆದಷ್ಟೂ ಮುಗಿಯದ ಅಕ್ಷಯ ಕಾವ್ಯ, ಮಹಾಪುರಾಣ ಕಾವ್ಯಕ್ಕೆ ಕಾವ್ಯ, ಪುರಾಣಕ್ಕೆ ಪುರಾಣ, ಅದರ ಉದ್ದಕ್ಕೂ ಧರ್ಮಪ್ರಧಾನವಾಗಿದ್ದು ಕಾವ್ಯ ಅನುಷಂಗಿಕವಾಗಿ ಬರುತ್ತದೆಯಾದರೂ ಅಲ್ಲಲ್ಲಿ ಕಾವ್ಯ ಪ್ರಮುಖವಾಗಿ ಧರ್ಮ

ಗೌಣವಾದ ರಸಾರ್ದ್ರಭಾಗಗಳೂ ಇವೆ. ಒಂದರ್ಥದಲ್ಲಿ ರಾಮಾಯಣ ಮಹಾಭಾರತಗಳಿಗೆ ಹೊಯ್‌ಕಯ್ ಆಗಿ ಹತ್ತಿರ ಬರುವ ಈ ಮಹಾಪುರಾಣದ ಮೇಲೆ ಸಮಗ್ರ ವಿಮರ್ಶೆ ಇನ್ನೂ ನಡೆಯಬೇಕಾಗಿದೆ.

ಜಿನಸೇನನೆಂಬ ಹೆಸರಿನವರು ನಾಲ್ಕೈದು ಜನರಿದ್ದರೂ ಅವರಲ್ಲಿ ಇಬ್ಬರು ಜಿನಸೇನರು ಸುಪ್ರಸಿದ್ಧರು. ೬೬ ಸರ್ಗಗಳು ೧೨ ಸಾವಿರ ಶ್ಲೋಕಗಳು ಇರುವ ಹರಿವಂಶ ಪುರಾಣ ಎಂಬ ಸಂಸ್ಕೃತ ಮಹಾಕಾವ್ಯವನ್ನು ರಚಿಸಿದ ಜಿನಸೇನರು ಪುನ್ನಟ ಸಂಘಕ್ಕೆ ಸೇರಿದವರು. ಅವರು ಮಹಾತಪಸ್ವಿಗಳು. ಶ್ರೇಷ್ಠ ವಿದ್ವಾಂಸರೂ ಆಗಿದ್ದರು. ಆಚಾರ್ಯ ಕೀರ್ತಿಷೇಣರ ಪ್ರಧಾನ ಶಿಷ್ಯರು ಪುನ್ನಟ ಸಂಘದ ಜಿನಸೇನರು. ತಮ್ಮ ಹರಿವಂಶ ಪುರಾಣದಲ್ಲಿ ವರ್ಧಮಾನ ಪುರಾಣ ಮತ್ತು ಜಿನಗುರು ಸ್ತೋತ್ರ ಎಂಬ ಗ್ರಂಥಗಳನ್ನು ರಚಿಸಿದ ಇನ್ನೊಬ್ಬ ಜಿನಸೇನರು ಕೀರ್ತಿಗೆ ಪಾತ್ರರಾಗಿದ್ದಾರೆ.

ಇನ್ನೊಬ್ಬ ಜಿನಸೇನರು ಮಹಾಪುರಾಣದ ಆರಂಭದ ಅರ್ಧಭಾಗವನ್ನು ರಚಿಸಿದ ಜಿನಸೇನರು. ಪುನ್ನಟ ಸಂಘ ಎಂಬುದು ಈಗಿನ ಮೈಸೂರು ಜಿಲ್ಲೆಯ ಹಾಗೂ ಮದರಾಸು ಪ್ರಾಂತ್ಯಕ್ಕೆ ಸೇರಿದ ಕೊಯಮತ್ತೂರು ಜಿಲ್ಲೆಗೆ ಸೇರಿದ ಪ್ರದೇಶದಲ್ಲಿ ಪ್ರಚಾರದಲ್ಲಿತ್ತು, ಪುನ್ನಟ ಪ್ರದೇಶದ ರಾಜಧಾನಿ ಕೀರ್ತಿಪುರ. ಈ ಕೀರ್ತಿಪುರ ಕಿತ್ತೂರು ಎಂದಾಗಿದ್ದು ಇದು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿಗೆ ಸೇರಿದೆ. ಪುನ್ನಟ ಎಂಬುದು ಸಂಸ್ಕೃತ ರೂಪವಾಗಿ ಕನ್ನಡದ ಪುನ್ನಾಡು ಎಂಬುದಾಗಿ ಪರಿವರ್ತನೆಯಾಗಿದೆ. ಇದನ್ನು ಕ್ರಿ.ಶ. ೧೫೦ ರಲ್ಲಿ ಇದ್ದ ಟಾಲೆಮಿಯು ಎಂಬ ಗ್ರೀಕ್ ಭೌಗೋಲಿಕನು ಪೌನ್ನಟವೆಂದೂ ಆಚಾರ್ಯ ಹರಿಷೇಣನು ತನ್ನ ಬೃಹತ್‌ಕಥಾಕೋಶದಲ್ಲಿ ಪುನ್ನಾಟ ವಿಷಯವನ್ನೂ ಮಹಾಕವಿ ಪುಷ್ಪದಂತನು ಆದಿ ಪುರಾಣದಲ್ಲಿ ಪುಣ್ಣಡವಿ ಎಂದೂ ಉಲ್ಲೇಖಿಸಿದ್ದಾನೆ. ಪುನ್ನಾಟ ಸಂಘಕ್ಕೆ ಕಿತ್ತೂರು ಸಂಘವೆಂದೂ ಹೆಸರು ಇತ್ತೆಂದು ಶ್ರವಣಬೆಳಗೊಳ ಶಾಸನದಿಂದ ತಿಳಿಯಬಹುದು (೧೯೪.೮೧) ಇವುಗಳಿಂದ ಪುನ್ನಾಟ ಸಂಘದ ಜಿನಸೇನರು ಕರ್ನಾಟಕದವರೆಂದು ಸ್ಪಷ್ಟವಾಗುತ್ತದೆ. ಅವರು ರಚಿಸಿದ ಹರಿವಂಶಪುರಾಣ ಸಂಪೂರ್ಣಗೊಂಡದ್ದು ೭೮೩ ರಲ್ಲಿ. ಈ ಗ್ರಂಥವನ್ನು ಪೂರೈಸಿದ್ದು ವರ್ಧಮಾನಪುರದಲ್ಲಿ. ನನ್ನಿರಾಜನಿಂದ ನಿರ್ಮಿಸಲಾದ ಪಾರ್ಶ್ವನಾಥ ದೇವಾಲಯದಲ್ಲೂ ಅನಂತರ ದೌಸ್ತಟಿಕಾ ಪ್ರಜೆಗಳಿಂದ ನಿರ್ಮಿಸಲಾದ ಶಾಂತಿನಾಥ ದೇವಾಲಯದಲ್ಲೂ ಪೂರ್ಣವಾಯಿತು ಎಂದು ತಿಳಿದುಬರುತ್ತದೆ. ಹರಿಷೇಣಾಚಾರ್ಯರು ಬೃಹತ್‌ಕಥಾಕೋಶವನ್ನು ಇದೇ ವರ್ಧಮಾನಪುರಲ್ಲಿ ೯೩೩ ರಲ್ಲಿ ಪೂರೈಸಿದರು.

ಎಲ್ಲೋರ ಗುಹೆಯ ೧೨೩೪ರ ಶಾಸನದಲ್ಲಿ ವರ್ಧಮಾನಪುರದ ಉಲ್ಲೇಖವಿದೆ. ಮೇಲೆ ಹೇಳಿದ ಪುನ್ನಾಟ ಸಂಘದ ಜಿನಸೇನನಿಂದ ಪ್ರತ್ಯೇಕನಾದ ''ಭಗವಜ್ಜಿನಸೇನ'' ಎಂಬ ಹೆಸರಿನಿಂದ ಕಾವ್ಯನಾಮರಾದ ಜಿನಸೇನಾಚಾರ್ಯರು ಈ ಮಹಾಪುರಾಣದ ಮೊದಲ ಅರ್ಧಭಾಗವನ್ನು ರಚಿಸಿದ್ದಾರೆ. ಅವರ ಪೂರ್ವಾಶ್ರಮವಾದ ಜೀವನ ವಿವರ ಏನೇನೂ ತಿಳಿದುಬರುವುದಿಲ್ಲ. ಅವರು ಮುನಿಗಳಾದ ಮೇಲೆ ರಚಿಸಿದ ಕೃತಿಗಳ ಮತ್ತು ಅವರ ಗುರುಗಳ ವಿಚಾರ ತಿಳಿದುಬರುತ್ತದೆ. ಚಂದ್ರಸೇನ, ಆರ್ಯನಂದಿ, ವೀರಸೇನ, ಜಿನಸೇನ, ಗುಣಭದ್ರ ಇದು ಕ್ರಮವಾಗಿ ಬೆಳೆದುಬಂದ ಗುರುಶಿಷ್ಯರ ಪರಂಪರೆಯಾಗಿದೆ.

ಈ ಜಿನಸೇನಾಚಾರ್ಯರು ಆಚಾರ್ಯ ವೀರಸೇನರ ಶಿಷ್ಯರು. ಆಚಾರ್ಯ ದಶರಥಗುರು ಮತ್ತು ಆಚಾರ್ಯ ವಿನಯಸೇನರು ಇವರ ಸಹಪಾಠಿಗಳು. ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ರಾಜಗುರುಗಳು ಈ ಜಿನಸೇನಾಚಾರ್ಯರು. ಕನ್ನಡಿಗರಾದ ಇವರು ರಚಿಸಿದ ಜಿನಗುಣಸ್ತೋತ್ರ ಮತ್ತು ವರ್ಧಮಾನಪುರಾಣ ಎಂಬ ಎರಡು ಕೃತಿಗಳು ದೊರೆತಿಲ್ಲ. ಉಪಲಬ್ಧವಾಗಿರುವ ಕೃತಿಗಳ ವಿವರ ಹೀಗಿದೆ :

೧. **ಜಯಧವಲಾ ಟೀಕೆ:** ೮೩೭ ರಲ್ಲಿ ಪೂರ್ಣಗೊಂಡ ಈ ಟೀಕೆಯಲ್ಲಿ ೪೦ ಸಾವಿರ ಶ್ಲೋಕಗಳಿವೆ. ಕಷಾಯಪ್ರಾಭೃತ್ತದ ಮೇಲೆ ಅವರ ಗುರುಗಳಾದ ವೀರಸೇನರು ೨೦ ಸಾವಿರ ಶ್ಲೋಕಗಳನ್ನು 'ಜಯಧವಲಾ' ಎಂಬ ಹೆಸರಿನಿಂದಲೇ ರಚಿಸಿದ್ದರು. ಅಪೂರ್ಣವಾಗಿ ಉಳಿದ ಈ ಗ್ರಂಥವನ್ನು ಈ ಜಿನಸೇನರು ಮುಗಿಸಿದರು. ಇದಕ್ಕೆ 'ವೀರಸೇನಿಯಾ' ಎಂಬ ಇನ್ನೊಂದು ಹೆಸರೂ ಇದೆ.

೨. **ಪೂರ್ವಪುರಾಣ:** ಇದಕ್ಕೆ ಆದಿಪುರಾಣ ಎಂಬ ಹೆಸರು ಇದೆ. ಜಿನಸೇನರು ಸಮಗ್ರವಾಗಿ ಮಹಾಪುರಾಣ ಎಂಬ ಹೆಸರಿನಿಂದ 'ತ್ರಿಷಷ್ಟಿಶಲಾಕಾ ಪುರುಷಚರಿತೆ' ಎಂಬ ಹೆಸರಿನಿಂದ ಬರೆಯಲು ಆರಂಭಿಸಿದರು. ಆದರೆ ಆದಿಪುರಾಣದ ೧೨ ಸಾವಿರ ಶ್ಲೋಕಗಳ ಸಂಖ್ಯೆಯಲ್ಲಿ ೧೦೩೮೦ ಶ್ಲೋಕಗಳನ್ನು ರಚಿಸಿ ಅವರು ಕಾಲವಶವಾದರು. ಆದುದರಿಂದ ಉಳಿದ ಈ ೧೬೨೦ ಶ್ಲೋಕಗಳನ್ನು ಮತ್ತು ಉತ್ತರ ಪುರಾಣದ ೮೦೦೦ ಶ್ಲೋಕಗಳನ್ನು ಅವರ ಶಿಷ್ಯರಾದ ಗುಣಭದ್ರಾಚಾರ್ಯರು ರಚಿಸಿದ್ದಾರೆ. ಈ ಆದಿಪುರಾಣ ಅಥವಾ ಪೂರ್ವಪುರಾಣ ಜಿನಸೇನರ ಅಗಾಧವಾದ ಶಾಸ್ತ್ರಜ್ಞಾನ, ಲೋಕಜ್ಞಾನ ಮತ್ತು ಕಾವ್ಯಶಕ್ತಿಯನ್ನು ಪ್ರತಿಬಿಂಬಿಸುತ್ತದೆ. ಇದು ಭಾರತೀಯ ಜೀವನದ ಒಂದು ವಿಶ್ವಕೋಶವೆಂದು ಡಾ॥ ಸಿದ್ದೇಶ್ವರ ಭಟ್ಟಾಚಾರ್ಯರು ಅಭಿಪ್ರಾಯ ಪಟ್ಟಿದ್ದಾರೆ. ಆ ಕಾಲದ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿಷಯಗಳನ್ನು ಈ ಕಾವ್ಯದಿಂದ ಪರಿಚಯಿಸಿಕೊಳ್ಳಬಹುದು.

೩. **ಪಾರ್ಶ್ವಾಭ್ಯುದಯ:** ೪ ಸರ್ಗಗಳಿರುವ ಮಂದಾಕ್ರಾಂತವೃತ್ತದಲ್ಲಿ ರಚಿಸಲಾದ ಒಂದು ಖಂಡಕಾವ್ಯ. ಕಾಳಿದಾಸ ಕವಿಯ 'ಮೇಘದೂತ' ಕಾವ್ಯದ ಮೇಲೆ ಸಮಸ್ಯಾಪೂರ್ತಿ ರೂಪವಾಗಿ ಜಿನಸೇನರ ಪಾರ್ಶ್ವಾಭ್ಯುದಯ ಕಾವ್ಯ ರೂಪಗೊಂಡಿದೆ. ತಮ್ಮ ಸಹಪಾಠಿಗಳಾದ ವಿನಯಸೇನರ ಪ್ರೇರಣೆಯಿಂದ ಜಿನಸೇನರು ಮೇಘದೂತ ಕಾವ್ಯದ ಒಂದು ಅಥವಾ ಎರಡು ಪಾದಗಳನ್ನಿಟ್ಟುಕೊಂಡು ಉಳಿದ ಚರಣಗಳನ್ನು ರಚಿಸಿ ಆ ಮೂಲಕ ಪಾರ್ಶ್ವನಾಥ ತೀರ್ಥಂಕರರ ಚರಿತ್ರೆಯನ್ನು ಬರೆದಿದ್ದಾರೆ. ಆ ಮಾದರಿಯನ್ನು ಮುಂದುವರಿಸಿಕೊಂಡು ಅನಂತರದವರು ೩೬೪ ಮಂದಾಕ್ರಾಂತ ವೃತ್ತದಲ್ಲಿರುವ ಮೇಘದೂತ ಕಾವ್ಯದ ಸಾಲುಗಳನ್ನು ತೆಗೆದುಕೊಂಡು ನೇಮಿದೂತ, ಹಂಸದೂತ, ಶೀಲದೂತ ಮೊದಲಾದ ಕೃತಿಗಳನ್ನು ರಚಿಸಿದ್ದಾರೆ.

ಪ್ರೊ॥ ಕೆ.ಬಿ. ಪಾಠಕ್, ಪ್ರಾಚ್ಯವಿದ್ಯಾಮಹಾರ್ಣವ ನಗೇಂದ್ರನಾಥ ವಸು ಮೊದಲಾದವರು ಜಿನಸೇನರ ಈ ಕಾವ್ಯವನ್ನು ಮುಕ್ತ ಕಂಠದಿಂದ ಪ್ರಶಂಶಿಸಿದ್ದಾರೆ. ೧೬ ನೇ ಶತಮಾನದ ವಿದ್ವಾಂಸರಾದ ಮೇಗಿರಾಜ ಪಂಡಿತಾಚಾರ್ಯರ ಈ ಕಾವ್ಯಕ್ಕೆ ಸಂಸ್ಕೃತಪಾಠವನ್ನೂ ಕೂಡ ಬರೆದಿದ್ದಾರೆ.

ಜಿನಸೇನಾಚಾರ್ಯರ ಪರಮ ಶಿಷ್ಯರಾದ ಗುಣಭದ್ರಾಚಾರ್ಯರು ಗುರುವಿಗೆ ತಕ್ಕ ಶಿಷ್ಯರೆನಿಸಿಕೊಂಡು ಪೂರ್ವಪುರಾಣದ ನಾಲ್ಕೂವರೆ ಪರ್ವಗಳನ್ನು ಮತ್ತು ಉತ್ತರಪುರಾಣದ ೮ ಸಾವಿರ ಶ್ಲೋಕಗಳನ್ನು ರಚಿಸಿದ್ದಾರೆ. ಗುಣಭದ್ರಾಚಾರ್ಯರ ಈ ಕಾವ್ಯ ರಚನೆ ಪೂರೈಸಿದ್ದು ಈಗಿನ ಧಾರವಾಡ ಜಿಲ್ಲೆಯಲ್ಲಿರುವ ಬಂಕಾಪುರದಲ್ಲಿ. ೧೦೦೦ ವರ್ಷದ ಹಿಂದೆ ಇದು ಸ್ವಲ್ಪಕಾಲ ಬನವಾಸಿಯ ರಾಜಧಾನಿಯಾಗಿತ್ತು. ಅಲ್ಲಿ ರಾಷ್ಟ್ರಕೂಟರ ಚಕ್ರವರ್ತಿ ಅಕಾಲವರ್ಷನ ಸಾಮಂತ ಲೋಕಾದಿತ್ಯನು ರಾಜ್ಯಪಾಲನಾಗಿ ಶಾಸನ ಮಾಡುತ್ತಿದ್ದನು. ಆ ಕಾಲಕ್ಕೆ ಬಂಕಾಪುರ ಜೈನರ ಸಾಂಸ್ಕೃತಿಕ ಮತ್ತು ಧಾರ್ಮಿಕ ಪ್ರಸಾರದ ದೊಡ್ಡ ಕೇಂದ್ರವಾಗಿತ್ತು. ಅಲ್ಲಿ ಐದು ಜೈನ ಮಹಾವಿದ್ಯಾಲಯಗಳು ಇದ್ದವು. ಆಚಾರ್ಯ ಅಜಿತಸೇನರು ಮೊದಲಾದ ಪ್ರಕಾಂಡ ವಿದ್ವಾಂಸರು ಬಂಕಾಪುರದಲ್ಲಿ ಇರುತ್ತಿದ್ದರು. ಜೈನರಲ್ಲಿ ರೂಢಿಯಲ್ಲಿರುವ ಒಂದು ನಂಬಿಕೆಯಂತೆ ಮಹಾಕವಿ ರನ್ನನು ಪ್ರಾರಂಭದ ವಿದ್ಯಾಭ್ಯಾಸವನ್ನು ಇಲ್ಲಿಯೇ ನಡೆಸಿದ್ದು. ಮಾರಸಿಂಹ ದೊರೆ. ಗುರು ಅಜಿತಸೇನರ ಸಮ್ಮುಖದಲ್ಲಿ ಸಮಾಧಿ ಮರಣ ವ್ರತವನ್ನು ಕೈಗೊಂಡದ್ದು ಬಂಕಾಪುರದಲ್ಲಿಯೇ. ಇಂದಿಗೂ ಬಂಕಾಪುರದಲ್ಲಿ ೬೩ ಕಂಬಗಳ ಒಂದು ಬಸದಿ ಇದೆ. ಗುಣಭದ್ರಾಚಾರ್ಯರು ಉತ್ತರಪುರಾಣವನ್ನು ಬರೆದು ಮುಗಿಸಿದ್ದು ಈ ಬಸದಿಯಲ್ಲೆ ಎಂದು ಭಾವಿಸಲಾಗಿದೆ. ಗುಣಭದ್ರಾಚಾರ್ಯರು ಜೈನ ಸಿದ್ಧಾಂತ ಮತ್ತು ವಿವಿಧ ಶಾಸ್ತ್ರಗಳಲ್ಲಿ ನಿಷ್ಣಾತರಾಗಿದ್ದರು. ಆಗಮ ಮತ್ತು ಯಾಗ ಶಾಸ್ತ್ರದಲ್ಲಿ ನಿಪುಣರಾಗಿದ್ದರು. ಅವರು ತಮ್ಮ ವಿಚಾರದಲ್ಲಿ ತಾವೇ ಹೇಳಿಕೊಂಡಿರುವ ಮಾತುಗಳು ಹೀಗಿವೆ: ''ಆಚಾರ್ಯ ಜಿನಸೇನರ ಮತ್ತು ದಶರಥ ಗುರುಗಳ ಶಿಷ್ಯನಾದ ಸುಪ್ರಸಿದ್ಧ ಗುಣಭದ್ರಸೂರಿಯಾದ ನಾನು ಸಂಪೂರ್ಣ ವ್ಯಾಕರಣ ಶಾಸ್ತ್ರದಲ್ಲಿ ಪಾರಂಗತನಾಗಿದ್ದೇನೆ. ಅಗಾಧವಾದ ಸಿದ್ಧಾಂತಸಾಗರವನ್ನು ದಾಟಿರುವುದರಿಂದ ನನ್ನ ಬುದ್ಧಿ ಹಾಗೂ ಪ್ರತಿಭೆ ಸೂರ್ಯಪ್ರಕಾಶದಂತೆ ಹೊಳೆಯುತ್ತಿವೆ. ವಿದ್ಯೆ ಹಾಗೂ ಉಪವಿದ್ಯೆಗಳಲ್ಲಿ ನಿಷ್ಣಾತನಾದ ನಾನು ಪ್ರಮಾಣ ಹಾಗೂ ನಯಗಳ ಸ್ವರೂಪವನ್ನು ಚೆನ್ನಾಗಿ ಬಲ್ಲೆ.'' ಉತ್ತರಪುರಾಣವಲ್ಲದೆ ಗುಣಭದ್ರಾಚಾರ್ಯರು ಆತ್ಮಾನುಶಾಸನದ ಮತ್ತು ಜಿನದತ್ತಚರಿತ ಎಂಬ ಇನ್ನೂ ಎರಡು ಕೃತಿಗಳನ್ನೂ ರಚಿಸಿದ್ದಾರೆ.

ಆತ್ಮಾನುಶಾಸನದಲ್ಲಿ ಭರ್ತೃಹರಿಯ ವೈರಾಗ್ಯಶತಕದ ಶೈಲಿಯಲ್ಲಿ ಬರೆಯಲಾದ ೨೭೨ ಪದ್ಯಗಳು ಇವೆ. ಇದು ಸುಂದರವಾದ ಅತ್ಯುತ್ತಮ ಗ್ರಂಥ. ಆಚಾರ್ಯ ಪ್ರಭಾಚಂದ್ರರು ಈ ಕಾವ್ಯಕ್ಕೆ ಸಂಸ್ಕೃತದಲ್ಲಿ ಒಂದು ಟೀಕೆಯನ್ನು ರಚಿಸಿದ್ದಾರೆ. ಅಲ್ಲದೆ ಹಿಂದಿ ಮತ್ತು ಕನ್ನಡದಲ್ಲಿಯೂ ಇದಕ್ಕೆ ಟೀಕೆಗಳು ರಚಿತವಾಗಿದೆ.

ಜಿನದತ್ತಚರಿತೆಯಲ್ಲಿ ಅನುಷ್ಟುಪ್ ಛಂದಸ್ಸಿನಲ್ಲಿ ೯ ಸರ್ಗಗಳಲ್ಲಿ ಗಂಭೀರವಾದ ಶೈಲಿಯ ಪ್ರತಿಬಿಂಬನೆ ಇದೆ. ಇದರ ಹಿಂದಿ ಅನುವಾದ ಕೂಡ ಉಪಲಬ್ದವಿದೆ. ಗುಣಭದ್ರಾಚಾರ್ಯರು ಈ ಮೂರು ಕೃತಿಗಳನ್ನಲ್ಲದೆ ಭಾವಸಂಗ್ರಹವೆಂಬ ಇನ್ನೊಂದು ಕೃತಿಯನ್ನೂ ಕೂಡ ರಚಿಸಿದ್ದಾರೆ ಎಂದು ಹೇಳಿಕೆ ಇದೆ.

೧೦ ನೇ ಶತಮಾನದ ಅನಂತರ ರಚಿಸಿದ ಭಾರತೀಯ ಭಾಷೆಗಳಲ್ಲಿರುವ ಜೈನ ಪುರಾಣ ಕೃತಿಗಳೆಲ್ಲಾ ಈ ಮಹಾಪುರಾಣ ಮೂಲ ಮಾತೃಕೆಯಾಗಿದೆ. ಮಹಾಪುರಾಣಕ್ಕೆ ಮೂಲ ಕವಿಪರಮೇಷ್ಠಿ ರಚಿಸಿದ ವಾಗರ್ಥಸಂಗ್ರಹ ಎಂಬ ಅನುಲಬ್ದ ಕೃತಿ. ಇದು ಅಲ್ಲದೆ ಕುಚಿಭಟ್ಟಾರಕ ಮೊದಲಾದವರು ಆ ದಿಕ್ಕಿನಲ್ಲಿ ಪ್ರಯತ್ನಶೀಲರಾಗಿದ್ದರೆಂದು ತಿಳಿಯಲು ಆಧಾರಗಳು ಇವೆ. ಆದರೆ ಆ ಹಿಂದಿನ ಯಾವ ಕೃತಿಗಳೂ ದೊರೆತಿಲ್ಲ. ಬಹುವಾಗಿ ಸಂಸ್ಕೃತ ಮಹಾಪುರಾಣವನ್ನೇ ನೇರವಾಗಿ ಅಳವಡಿಸಿರುವ ಕನ್ನಡದ ಚಾವುಂಡರಾಯ ಪುರಾಣದಲ್ಲಿ ಕವಿ ಪರಮೇಷ್ಠಿಯ ಕೆಲವು ಪದ್ಯಗಳು ಉದಾಹೃತವಾಗಿದೆ.

ಮಹಾಪುರಾಣದ ಮರಿಗಳಾಗಿ ಹುಟ್ಟಿಕೊಂಡಿರುವ ಕನ್ನಡ ಕಾವ್ಯಗಳ ನಿಜಬಣ್ಣ ತಿಳಿಯಬೇಕಾದರೆ ತೌಲನಿಕ ಅಭ್ಯಾಸ ನಡೆಯಬೇಕು. ಅಂಥ ತುಲನಾತ್ಮಕ ವ್ಯಾಸಂಗದಿಂದ ಮಾತ್ರ ಕನ್ನಡ ಜೈನ ಕವಿಗಳ ಸ್ವಂತ ಕಾಂತಿಯ ಮೌಲಿಕತೆ ಗೊತ್ತಾಗುವುದು ಸಾಧ್ಯ. ಇದು ಹತ್ತಾರು ಪಿ.ಎಚ್.ಡಿ. ಪ್ರಬಂಧಗಳ ವಸ್ತುವಾಗುತ್ತದೆ. ಪಂಪನ ಆದಿಪುರಾಣ–ಪೂರ್ವಪುರಾಣ, ಜನ್ನ–ಉತ್ತರ ಪುರಾಣ, ಪೊನ್ನ–ಉತ್ತರಪುರಾಣ, ನಾಗಚಂದ್ರ–ಉತ್ತರಪುರಾಣ–ಹೀಗೆ ಸಮಷ್ಟಿಯಾಗಿ ವ್ಯಷ್ಟಿಯಾಗಿ ತೆಗೆದುಕೊಂಡು ಹೋಲಿಸಿ ತೂಗಿ ನೋಡಬಹುದು. ಹೀಗೆ ತೂಗಲು, ಅಳೆಯಲು ತಕ್ಕ ಸಿದ್ಧತೆಯುಳ್ಳ ಜನರಿಗೂ ಮಹಾಪುರಾಣದ ಮರುಮುದ್ರಣ ಬೇಕಿತ್ತು. ಅಲ್ಲದೆ ಈ ವರ್ಷ (೧೯೮೧) ಶ್ರವಣಬೆಳ್ಗೊಳದಲ್ಲಿ ವೀರಮಾರ್ತಂಡ ಚಾವುಂಡರಾಯನು ಅಖಂಡಶಿಲೆಯಲ್ಲಿ ಮಾಡಿಸಿದ ಬೃಹನ್ಮೂರ್ತಿ ಗೊಮ್ಮಟೇಶ್ವರನಿಗೆ ಒಂದು ಸಾವಿರ ವರ್ಷದ ಮಹಾಮಸ್ತಕಾಭಿಷೇಕ ಪೂಜೆ ತುಂಬ ವೈಭವದಿಂದ ೨೨–೨–೧೯೮೧ ರಂದು ಭಾನುವಾರ ಏರ್ಪಾಟಾಗಿದೆ. ಆ ಸಂದರ್ಭದ ನೆನಪಿಗೆ ಕೂಡ ಈ ಸಂಪುಟಗಳನ್ನು ಹೊರತಂದಂತಾಗಿರುವುದು ಒಂದು ಯೋಗಾಯೋಗ.

ಈ ಎಲ್ಲ ಹಿನ್ನೆಲೆಯಲ್ಲಿ ಸಾಹಿತ್ಯ ಪರಿಷತ್ತು ಮಹಾಪುರಾಣವನ್ನು ಪ್ರಕಟಿಸುತ್ತಿರುವುದರ ಔಚಿತ್ಯ ಸ್ವಯಂಸ್ಪಷ್ಟ.

ಇದನ್ನು ಸಕಾಲದಲ್ಲಿ ಮುದ್ರಿಸಿದವರಿಗೆ, ಕರಡು ನೋಡಿಕೊಟ್ಟವರಿಗೆ, ಅನುಬಂಧ ಸಿದ್ಧಪಡಿಸಿಕೊಟ್ಟವರಿಗೆ ಪರಿಷತ್ತು ಕೃತಜ್ಞವಾಗಿರುತ್ತದೆ.

**ಹಂಪ. ನಾಗರಾಜಯ್ಯ**
ಅಧ್ಯಕ್ಷ

# ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್(ರಿ),

'ಶಾಂತಿ' 369, 42 ನೇ ಅಡ್ಡರಸ್ತೆ, ಜಯನಗರ ಆನೇ ಬ್ಲಾಕ್, ಬೆಂಗಳೂರು – 560 082
(ಆದಾಯ ತೆರಿಗೆ ಇಲಾಖೆಯ ದಿನಾಂಕ 27.6.1988 ರ ಪತ್ರಸಂಖ್ಯೆ Accts/718/10A/Vol/BII/S–291 ರಂತೆ ನೋಂದಾಯಿಸಲ್ಪಟ್ಟಿದೆ)

## ಧರ್ಮದರ್ಶಿಗಳು (ಸರ್ವಶ್ರೀ)



---

**ಈ ಸಂಸ್ಥೆಯ ಪ್ರಮುಖ ಧ್ಯೇಯೋದ್ದೇಶಗಳು:**

೧. ಇದೊಂದು ಛಾರಿಟಬಲ್ ಟ್ರಸ್ಟ್.

೨. ಧಾರ್ಮಿಕ ಪುರಾಣ, ತತ್ತ್ವ, ಪೂಜಾಪಾಠ, ಸ್ತೋತ್ರ, ಸಿದ್ಧಾಂತ, ನೀತಿ, ಆಚಾರ ಮತ್ತು ಸಾಹಿತ್ಯ ಗ್ರಂಥಗಳ ಪ್ರಕಾಶನ ಮಾಡಿಸಿ ಸಮಾಜಬಾಂಧವರಿಗೆ ಒದಗಿಸುವುದರ ಮೂಲಕ ಧರ್ಮಜಾಗೃತಿ ಮತ್ತು ಧರ್ಮಪ್ರಭಾವನೆ ಮಾಡುವುದು.

೩. ಈ ದಿಶೆಯಲ್ಲಿ ಎರ್ತೂರು ಶಾಂತಿರಾಜಶಾಸ್ತ್ರಿಗಳ ಎಲ್ಲ ಕೃತಿಗಳನ್ನೂ ಲೇಖನಗಳನ್ನೂ ಭಾಷಣಗಳನ್ನೂ ಭಾಷಾಂತರಗಳನ್ನೂ ಸಂಗ್ರಹಿಸಿ ವ್ಯವಸ್ಥಿತ ರೀತಿಯಲ್ಲಿ ಸಂರಕ್ಷಿಸಿ ಪುನರ್ಮುದ್ರಣದ ಮತ್ತು ಪ್ರಕಾಶನದ ಕಾರ್ಯಗಳನ್ನು ಕೈಗೊಂಡು ಈ ಎಲ್ಲ ಕೃತಿಗಳನ್ನು ಜನಸಾಮಾನ್ಯರಿಗೆ ಸುಲಭಬೆಲೆಯಲ್ಲಿ ದೊರಕಿಸಿಕೊಡುವುದು, ಇದೇ ರೀತಿ ಇತರ ಖ್ಯಾತ ಲೇಖಕರ ಗ್ರಂಥ ಪ್ರಕಟಣಾ ಕಾರ್ಯ ಕೈಗೊಳ್ಳುವುದು.

೪. ದೇಶದ ಯಾವುದೇ ವಿಶ್ವವಿದ್ಯಾಲಯದಲ್ಲಿ ಜೈನಾಲಜಿ ಮತ್ತು ಪ್ರಾಕೃತ ವಿಷಯದಲ್ಲಿ ಸ್ನಾತಕೋತ್ತರ ಡಿಪ್ಲೊಮಾ ಮತ್ತು/ಅಥವಾ ಎಮ್.ಎ. ಪದವಿಗಾಗಿ ಅಭ್ಯಸಿಸುವ ಅಥವಾ ಶಾಸ್ತ್ರಿಗಳ ಜೀವನ ಕುರಿತು, ಅವರ ಕೃತಿಗಳ ಬಗ್ಗೆ ಸಂಶೋಧನೆ ನಡೆಸುವ ಎಲ್ಲ ವಿದ್ಯಾರ್ಥಿಗಳಿಗೂ ಜಾತಿಭೇದವಿಲ್ಲದೆ ಸೂಕ್ತ ಧನಸಹಾಯ, ಪ್ರೋತ್ಸಾಹ ನೀಡುವುದು.

೫. ಪ್ರಾತಃಸ್ಮರಣೀಯರಾದ ಶಾಂತಿರಾಜಶಾಸ್ತ್ರಿಗಳ ಸಂಸ್ಮರಣೆಯ ಅಂಗವಾಗಿ ಹಾಗೂ ಇತರ ಲೇಖಕರ ವಿಷಯವಾಗಿ ಚರ್ಚಾಸ್ಪರ್ಧೆ, ಉಪನ್ಯಾಸ, ವಾಚನ, ಗೋಷ್ಠಿ ಇತ್ಯಾದಿ ಕಾರ್ಯಕ್ರಮಗಳನ್ನು ಏರ್ಪಡಿಸುವುದು.

೬. ಅರ್ಹ, ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಬಹುಮಾನ, ವಿದ್ಯಾರ್ಥಿವೇತನ ನೀಡುವುದು.

೭. ಶಾಲಾ ಕಾಲೇಜುಗಳಲ್ಲಿ ಅಭ್ಯಸಿಸುತ್ತಿರುವ ವಿದ್ಯಾರ್ಥಿಗಳಿಗೆ ಜಾತಿಭೇದವಿಲ್ಲದಂತೆ ಅವರ ವಿದ್ಯಾರ್ಜನೆಗೆ, ಸಂಶೋಧನಾ ಕಾರ್ಯಗಳಿಗೆ ಅನುಕೂಲವಾಗುವಂತೆ, ಶಾಲಾ ಕಾಲೇಜು ಹಾಸ್ಟೆಲ್‌ಗಳ ಅಭಿವೃದ್ಧಿಗೆ ಸಹಾಯ, ಸಹಕಾರ ನೀಡಿ ಶ್ರಮಿಸುವುದು.

೮. ಗ್ರಂಥಾಲಯಗಳಿಗೆ ಸಹಾಯ, ಸಹಕಾರ ಒದಗಿಸುವುದು, ಸ್ಥಾಪಿಸುವುದು, ಇತ್ಯಾದಿ, ಇತ್ಯಾದಿ.

**ಈ ಧ್ಯೇಯೋದ್ದೇಶಗಳನ್ನು ಈಡೇರಿಸಲು ಸಾರ್ವಜನಿಕರು ನೀಡಬಹುದಾದ ಸಹಕಾರ, ಸಹಾಯ ಈ ರೀತಿ ಇದೆ:**

೧. ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿಗಳು ಅವರ ಜೀವನ ಪರ್ಯಂತ ಶ್ರಮಿಸಿ ಕರ್ನಾಟಕದ ಜನತೆಗೆ ನೀಡಿರುವ ಮೇರುಕೃತಿ **''ಮಹಾಪುರಾಣ''** ಆದಿಯಾಗಿ ೫೨ಕ್ಕೂ ಮೀರಿದ ಗ್ರಂಥಗಳು ಮತ್ತು ಲೇಖನಗಳು ಸುಮಾರು ೧೧,೦೦೦ ಪುಟಗಳನ್ನೂ ಮೀರಿದೆ! ಈ ಗ್ರಂಥಗಳ ಪುನರ್ಮುದ್ರಣಕ್ಕೆ ಅಪಾರಹಣದ ಆವಶ್ಯಕತೆ ಇದೆ. ಈ ಪವಿತ್ರಕಾರ್ಯಕ್ಕೆ ಸಾರ್ವಜನಿಕರು ಸ್ವತಃ ಮುಂದೆ ಬಂದು ಯಾವುದೇ ಗ್ರಂಥದ ಪುನರ್ಮುದ್ರಣಕ್ಕೆ ಸಹಯೋಗ ನೀಡಿ ಟ್ರಸ್ಟಿನ ಪೋಷಕರಾಗಬಹುದು.

೨. ಟ್ರಸ್ಟಿನ ಧ್ಯೇಯೋದ್ದೇಶಗಳನ್ನು ನೆರವೇರಿಸಲು ಟ್ರಸ್ಟಿಗೆ ಕನಿಷ್ಠ ರೂ.೧೦೦೧ (ಒಂದು ಸಾವಿರದ ಒಂದು ರೂಪಾಯಿಗಳ) ಧನಸಹಾಯ ನೀಡಿ ಪೋಷಕರಾಗಬಹುದು.

೩. ಇಂತಹ ಎಲ್ಲ ದಾನಿಗಳಿಗೂ ಟ್ರಸ್ಟ್ ಪ್ರಕಟಿಸುವ ಶಾಸ್ತ್ರಿಗಳ ಎಲ್ಲ ಗ್ರಂಥಗಳ ಒಂದೊಂದು ಗೌರವ ಪ್ರತಿಯನ್ನು ಒದಗಿಸಲಾಗುವುದು.

೪. ಟ್ರಸ್ಟಿನ ವಿದ್ಯಾರ್ಥಿವೇತನ ನಿಧಿಗೆ ೧೦೧ ರೂಪಾಯಿಗಳಿಗೂ ಕಡಿಮೆ ಇಲ್ಲದಂತೆ ಯಾವ ಮಹನೀಯರಾದರೂ ಧನಸಹಾಯ ನೀಡಿ ಸಹಕರಿಸಬಹುದು.

೫. ಈಗಾಗಲೇ ಹಲವಾರು ದಾನಿಗಳು **'ಮಹಾಪುರಾಣ'**ವೂ ಸೇರಿದಂತೆ ೩೪ ಪವಿತ್ರ ಹಾಗೂ ಆದರಣೀಯ ಗ್ರಂಥಗಳ ಪ್ರಕಾಶನಕ್ಕೆ ಸಹಯೋಗ ನೀಡಿರುತ್ತಾರೆ. ಸಾಹಿತ್ಯ, ಧರ್ಮಾಭಿಮಾನಿಗಳು ಈ ಸದವಕಾಶವನ್ನು ಉಪಯೋಗಿಸಿಕೊಂಡು ಇನ್ನುಳಿದ ಗ್ರಂಥಗಳ ಪ್ರಕಾಶನಕ್ಕೆ ಉದಾರ ಧನಸಹಾಯ ನೀಡಿ ಪ್ರೋತ್ಸಾಹಿಸಬಹುದು.

೬. ಎಲ್ಲ ರೀತಿಯ ಧನಸಹಾಯವನ್ನು **''ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್''**ನ ಹೆಸರಿನಲ್ಲಿ ಬೆಂಗಳೂರಿನಲ್ಲಿ ಪಾವತಿಯಾಗುವಂತೆ ಬ್ಯಾಂಕ್ ಡ್ರಾಫ್ಟ್ ಅಥವಾ ಚೆಕ್ ಮೂಲಕ ಸಲ್ಲಿಸಲು ವಿನಂತಿಸಿದೆ. ಹೆಚ್ಚಿನ ವಿವರಗಳಿಗೆ ಟ್ರಸ್ಟಿನ ಕಾರ್ಯಾಲಯವನ್ನು ಸಂಪರ್ಕಿಸಬಹುದು.

# ಪರ್ವವಿಷಯಾನುಕ್ರಮ

# ಚಿತ್ರ ಪರಿಚಯ

| ಚಿತ್ರ ಸಂ. | ವಿವರ |
|---|---|
| ೧ | ಬೆಂಗಳೂರಿನ ಬಳೇಪೇಟೆಯಲ್ಲಿರುವ ಆದಿನಾಥ ದಿಗಂಬರ ಜೈನಮಂದಿರದ ೧೦೦೮ ಭ. ವೃಷಭನಾಥರ ಅಮೃತಶಿಲೆಯ ದಿವ್ಯಮೂರ್ತಿ. |
| ೨ | ಮಧ್ಯಪ್ರದೇಶದ ಬಾವನಗಜದ ಭವ್ಯಮೂರ್ತಿ – **ಶಿಲ್ಪಕಲೆಯ ಜೀವಂತ ಪ್ರತೀಕ ೮೪ ಅಡಿ ಉನ್ನತವೂ ವಿಶಾಲವೂ ಆದ ಯುಗಪುರುಷ ಭ. ವೃಷಭತೀರ್ಥಂಕರರ ಕಾಯೋತ್ಸರ್ಗದ ಭವ್ಯ ಪ್ರತಿಮೆ.** |
| ೩ ರಿಂದ ೧೦ | ಮೊಹೆಂಜೋದಾರೋದಲ್ಲಿರುವ ೫೦೦೦ ವರ್ಷಗಳಿಗೂ ಮೀರಿದ ಪುರಾತನ ಶಿಲ್ಪಕಲೆಯ ಭಿತ್ತಿ ಚಿತ್ರಗಳು – **ಭ. ವೃಷಭನಾಥ, ಭರತಚಕ್ರವರ್ತಿ, ಎರಡು ವಿಧದ ಸ್ವಸ್ತಿಕಗಳು, ಓರ್ವ ಮಂತ್ರಿ, ಲತಾಮಂಟಪದಲ್ಲಿ ಬಾಹುಬಲಿ ಇತ್ಯಾದಿ.** |
| ೧೧ | ಸಂಸಾರ ದರ್ಶನ– ಸಂಸಾರ ಸ್ವರೂಪವನ್ನು ನಿರೂಪಿಸುವ ಚಿತ್ರ. |
| ೧೨ | ಆರು ಲೇಶ್ಯೆಗಳ ದರ್ಶನ. |
| ೧೩ | ಪ್ರಥಮ ಬಾರಿಗೆ ಕನ್ನಡದಲ್ಲಿ ಸಮಗ್ರ ಮಹಾಪುರಾಣವನ್ನು ನೀಡಿದ ಸರಸ್ವತೀ ವರಪುತ್ರ ಪಂಡಿತರತ್ನ ಎರ್ತೂರು ಶಾಂತಿರಾಜ ಶಾಸ್ತ್ರಿಗಳವರು, ಮೈಸೂರು. |
| ೧೪ | ಪರಮ ಪೂಜ್ಯ ಶ್ರೀ ನೇಮಿಸಾಗರ ವರ್ಣಿಜಿಯವರು, ಶ್ರವಣಬೆಳಗೊಳ. |
| ೧೫ | ಮಣಿಯಂಗೂಡು ಶ್ರೀ ಕೃಷ್ಣಯ್ಯಗೌಡರು, ವಯನಾಡು (ಕೇರಳ). |
| ೧೬ | ಮೈಸೂರು ಸಂಸ್ಥಾನದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದೂರ್. |
| ೧೭ | ಮಣಿಯಂಗೂಡು ಶ್ರೀ ಸುಬ್ಬೇಗೌಡರು, ವಯನಾಡು (ಕೇರಳ). |
| ೧೮ | ಶ್ರೀ ಎಂ. ಸಿ. ಲಕ್ಷ್ಮೀಪತಯ್ಯನವರು, ಮೈಸೂರು. |
| ೧೯ | ಮೈಸೂರಿನ ಸುಪ್ರಸಿದ್ಧ ಶ್ರೀ ಎಂ. ಎಲ್. ವರ್ಧಮಾನಯ್ಯನವರು. |
| ೨೦ | ಶ್ರೀ ಡಿ. ಪುಟ್ಟಸ್ವಾಮಿಯವರು, ಮಂಗಳೂರು. |
| | (೧೪ ರಿಂದ ೨೦) ಮೇರುಕೃತಿ ಮಹಾಪುರಾಣವನ್ನು ಪ್ರಪ್ರಥಮಬಾರಿಗೆ ಕನ್ನಡದಲ್ಲಿ ತರಲು ಪ್ರೋತ್ಸಾಹಿಸಿದ ಕಾರಣ ಪುರುಷರು. |
| ೨೧ | ಜಿನಮಾತೆ ಮರುದೇವಿಯ ಸ್ವಪ್ನಗಳು – ಗರ್ಭಾವತರಣ ಕಲ್ಯಾಣ. |
| ೨೨ | ಜಿನಶಿಶುವಿನ ಜನ್ಮಾಭಿಷೇಕ ಕಲ್ಯಾಣ – **ದೇವೇಂದ್ರನು ಶಚೀದೇವಿಯಿಂದ ಜಿನಶಿಶುವನ್ನು ತೆಗೆದುಕೊಂಡು ಐರಾವತಗಜವನ್ನೇರಿ ಜನ್ಮಾಭಿಷೇಕಕ್ಕೋಸ್ಕರ ಮಹಾಮೇರುಪರ್ವತದ ಪಾಂಡುಕಶಿಲೆಗೆ ಹೋಗುತ್ತಿರುವನು. ಪ್ರತೀಂದ್ರನಾದ ಈಶಾನೇಂದ್ರನು ಶ್ವೇತಛತ್ರವನ್ನು ಹಿಡಿದಿರುತ್ತಾನೆ. ಆನೆಯ ಆಕೃತಿಯನ್ನು ಧರಿಸಿರುವ ಐರಾವಣದೇವನು ತನ್ನ ವಿಗುರ್ವಣ ಶಕ್ತಿಯಿಂದ ದಂತಗಳಲ್ಲಿ ಸರೋವರಗಳನ್ನೂ ಅವುಗಳಲ್ಲಿ ಕಮಲಗಳನ್ನೂ ಆ ಕಮಲದಲಗಳಲ್ಲಿ ಅಪ್ಸರಸ್ತ್ರೀಯರ ನರ್ತನವನ್ನೂ ರಚಿಸಿರುತ್ತಾನೆ.** |
| ೨೩ | ವೃಷಭದೇವನ ಆಸ್ಥಾನದಲ್ಲಿ ಸುರಸುಂದರಿ ನೀಲಾಂಜನೆಯ ನೃತ್ಯ – ವೈರಾಗ್ಯಕಲ್ಯಾಣ. |
| ೨೪ | ಪರಿನಿಷ್ಕ್ರಮಣ ಕಲ್ಯಾಣ–**ವೃಷಭದೇವನು ತನ್ನ ವಸ್ತ್ರಾಲಂಕಾರಗಳನ್ನು ತ್ಯಜಿಸಿ ವಿಸರ್ಜಿಸಿದ ಕೇಶವನ್ನು ದೇವೇಂದ್ರನು ಪಡೆದು ಕ್ಷೀರಸಮುದ್ರದಲ್ಲಿ ವಿಸರ್ಜಿಸಲು ಸಿದ್ಧನಾಗುತ್ತಿರುವ ದೃಶ್ಯ.** |
| ೨೫ | ೧೦೦೮ ಭಗವಾನ್ ವೃಷಭತೀರ್ಥಂಕರರು. |
| ೨೬ | ಭಗವತ್ಸಮವಸರಣವನ್ನು ನಿರೂಪಿಸುವ ಚಿತ್ರ. |
| ೨೭ ರಿಂದ ೩೦ | ಭರತಬಾಹುಬಲಿ ಯುದ್ಧಪ್ರಸಂಗ – ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧ, ಚಕ್ರಪ್ರಯೋಗ. |
| ೩೧ ರಿಂದ ೩೬ | ಭಾರತದಲ್ಲಿ ಬಾಹುಬಲಿ ಮೂರ್ತಿಗಳು– **೨೦ ಅಡಿಯ ವೇಣೂರಿನಮೂರ್ತಿ(೧೬೦೪), ೧೮ ಅಡಿಯ ಗೊಮ್ಮಟಗಿರಿಯ ಮೂರ್ತಿ, ೪೧.೫ ಅಡಿ ಎತ್ತರದ ಕಾರ್ಕಳದ ದಿವ್ಯಮೂರ್ತಿ(೧೪೩೨), ಬಾಹುಬಲಿಕ್ಷೇತ್ರದ ಅಮೃತಶಿಲೆಯಮೂರ್ತಿ(೧೯೬೩), ಫಿರೋಜ಼ಾಬಾದ್ ನ ಮೂರ್ತಿ, ೩೯ ಅಡಿ ಎತ್ತರದ ಧರ್ಮಸ್ಥಳದ ರತ್ನಗಿರಿಯ ಮೂರ್ತಿ(೧೯೮೨).** |
| ೩೭ ರಿಂದ ೪೨ | ಶ್ರವಣಬೆಳಗೊಳದ ಭಗವಾನ್ ಬಾಹುಬಲಿಮೂರ್ತಿಯ ಮಹಾಮಸ್ತಕಾಭಿಷೇಕದ ಚಿತ್ರಗಳು– **ಅಭಿಷೇಕಕ್ಕೆ ಸಿದ್ಧವಿರುವ ಜಲಭರಿತ ೧೦೦೮ ಕಲಶಗಳು, ಜಲಾಭಿಷೇಕ, ಕ್ಷೀರಾಭಿಷೇಕ, ಚಂದನಾಭಿಷೇಕ, ಗಂಧಾಭಿಷೇಕ, ಪುಷ್ಪವೃಷ್ಟಿ.** |
| ೪೩ | ಜಗದ್ವಿಖ್ಯಾತ ೫೭ ಅಡಿ ಔನ್ನತ್ಯದ ಅತ್ಯಂತ ಸುಂದರವೂ ಮನೋಹರವೂ ಆದ ಭ.ಬಾಹುಬಲಿಸ್ವಾಮಿಯ ಭವ್ಯಮೂರ್ತಿ, ಶ್ರವಣಬೆಳಗೊಳ (೯೮೨-೮೩) |

॥ ಶ್ರೀ ವೃಷಭಜಿನಾಯ ನಮಃ ॥

## ಶ್ರೀ ಭಗವಜ್ಜಿನಸೇನಾಚಾರ್ಯ–ಗುಣಭದ್ರಾಚಾರ್ಯವಿರಚಿತ

# ಮಹಾಪುರಾಣ

**ಶ್ರೀಮತೇ ಸಕಲಜ್ಞಾನಸಾಮ್ರಾಜ್ಯಪದಮೀಯುಷೇ ।**
**ಧರ್ಮಚಕ್ರಭೃತೇ ಭರ್ತ್ರೇ ನಮಃ ಸಂಸಾರಭೀಮುಷೇ ॥ ೧ ॥**

**ಕರ್ಣಾಟಕಭಾವದೀಪಿಕಾವ್ಯಾಖ್ಯಾ**

ಕಂದ ॥ ಶ್ರೀವೃಷಭಜಿನಪನಂಘ್ರಿಯ ।
ಭಾವಿಸಿ ನಮಿಸೀಗ ಮುದದೆ ಪೊಸಗನ್ನಡದೊಳ್ ॥
ಪಾವನಪೂರ್ವಪುರಾಣದ ।
ಭಾವಮನರಿಪುವೆನು ವಿಪುಲಭಕ್ತಿಯ ಭರದಿಂ ॥

ಈ ಗ್ರಂಥಕರ್ತರಾದ ಭಗವಜ್ಜಿನಸೇನಾಚಾರ್ಯರು ನಿರ್ವಿಘ್ನವಾಗಿ ಗ್ರಂಥ ಪರಿಸಮಾಪ್ತಿ, ಶಿಷ್ಟಾಚಾರಪರಿಪಾಲನ, ನಾಸ್ತಿಕ್ಯ ಪರಿಹಾರಾದಿ ಪ್ರಯೋಜನಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಶಿಷ್ಯಶಿಕ್ಷಾರ್ಥವಾಗಿ ಇಷ್ಟದೇವತಾನಮಸ್ಕಾರರೂಪವಾದ ವಾಚನಿಕಮಂಗಲವನ್ನು ಮಾಡಿರುತ್ತಾರೆ. ಇಷ್ಟದೇವತೆಯ ವಿಶಿಷ್ಟನಾಮ ನಿರ್ದೇಶವನ್ನು ಈ ಶ್ಲೋಕದಲ್ಲಿ ಮಾಡದೆ ಅನೇಕಾರ್ಥದ್ಯೋತಕಗಳಾದ ಪದಗಳನ್ನು ಸಂಯೋಜಿಸಿ ಮಂಗಲವನ್ನು ಮಾಡಿರುವುದರಿಂದ ಈ ಪದಗಳಿಂದ ಸೂಚಿತರಾಗುವ ಎಲ್ಲಾ ಇಷ್ಟದೇವತೆಗಳಿಗೆ ನಮಸ್ಕಾರವನ್ನು ಮಾಡುವುದು ಗ್ರಂಥಕರ್ತರ ಉದ್ದೇಶವಾಗಿರುವುದೆಂದು ಭಾಸವಾಗುವುದು. ಅದು ಹೇಗೆಂದರೆ:-

ವೃಷಭಸ್ವಾಮಿಗೆ ನಮಸ್ಕಾರವು: —ಸಮವಸರಣ ಅನಂತಜ್ಞಾನಾದಿ ಬಾಹ್ಯಾಭ್ಯಂತರಸಂಪತ್ತಿಯುಳ್ಳವನೂ ಲೋಕಾಲೋಕವನ್ನು ತಿಳಿಯುವ ಕೇವಲಜ್ಞಾನವೆಂಬ ಸಾಮ್ರಾಜ್ಯಪದವನ್ನು (ಸಮವಸರಣದಲ್ಲಿರುವ ಇತರ ಕೇವಲಿಗಳಲ್ಲಿ ಮುಖ್ಯತ್ವವನ್ನು) ಹೊಂದಿದವನೂ ಧರ್ಮರೂಪವಾದ ಚಕ್ರವನ್ನು ಧರಿಸಿದವನೂ ತ್ರಿಲೋಕಾಧಿಪತಿಯೂ ಸಂಸಾರದಿಂದುಂಟಾದ ಭೀತಿಯನ್ನು (ಅಥವಾ ಕೃತ ಯುಗದ ಆದಿಯಲ್ಲಿ ಪ್ರಜೆಗಳಿಗೆ ಜೀವನೋಪಾಯವನ್ನು ತೋರಿಸಿ ಅವರ ಭೀತಿಯನ್ನು) ನಾಶಮಾಡಿದವನೂ ಆದ ವೃಷಭಸ್ವಾಮಿಗೆ ನಮಸ್ಕಾರವಿರಲಿ.

ತೀರ್ಥಂಕರ ಕೇವಲಿಗಳಿಗೆ ನಮಸ್ಕಾರವು: — ಈ ಶ್ಲೋಕದಲ್ಲಿರುವ ಪದಗಳು ಜಾತ್ಯೇಕವಚನಗಳಾಗಿ ಕೇವಲಜ್ಞಾನಾದಿ ಗುಣಸಾಮ್ಯವುಳ್ಳವರೂ ಭೂತ ವರ್ತಮಾನ ಭವಿಷ್ಯತ್ಕಾಲಸಂಬಂಧಿಗಳೂ ಆದ ಎಪ್ಪತ್ತೆರಡು ತೀರ್ಥಂಕರರ ಪರವಾದ ಅರ್ಥವನ್ನೂ ನೂರೆಪ್ಪತ್ತು ಕರ್ಮಭೂಮಿಸಂಬಂಧಿಗಳಾದ ನೂರೆಪ್ಪತ್ತು ತೀರ್ಥಂಕರರ ಪರವಾದ ಅರ್ಥವನ್ನೂ ಇತರ ಕೇವಲಿಗಳ ಪರವಾದ ಅರ್ಥವನ್ನೂ ತೋರಿಸುತ್ತವೆ.

ಪಂಚಪರಮೇಷ್ಠಿಗಳಿಗೆ ನಮಸ್ಕಾರವು: — ಶ್ರೀಮತೇ-ಬಾಹ್ಯಾಭ್ಯಂತರಲಕ್ಷ್ಮೀ ವಿರಾಜಮಾನನಾದ ಅರ್ಹತ್ಪರಮೇಷ್ಠಿಗೆ ನಮಸ್ಕಾರವಿರಲಿ. ಸಕಲಜ್ಞಾನ ಸಾಮ್ರಾಜ್ಯಪದಮೀಯುಷೇ — ಸಕಲಪ್ರತ್ಯಕ್ಷಜ್ಞಾನ-ಅನಂತಜ್ಞಾನರೂಪವಾದ ಸಾಮ್ರಾಜ್ಯಪದವನ್ನು ಹೊಂದಿರುವ ಸರ್ವಕರ್ಮಕಲಂಕರಹಿತನಾದ ಸಿದ್ಧಪರಮೇಷ್ಠಿಗೆ ನಮಸ್ಕಾರವಿರಲಿ. ಧರ್ಮಚಕ್ರಭೃತೇ —ಉತ್ತಮಕ್ಷಮಾದಿ ದಶಧರ್ಮ ಸಮೂಹವನ್ನು ಧರಿಸಿರುವ ಆಚಾರ್ಯಪರಮೇಷ್ಠಿಗೆ ನಮಸ್ಕಾರವಿರಲಿ. ಭರ್ತ್ರೇ — ಪ್ರಮಾಣನಯನಿಕ್ಷೇಪಾದಿಗಳಿಂದ ಏಕಾಂತಾದಿ ಮಿಥ್ಯಾತ್ವವನ್ನು ಹೋಗಲಾಡಿಸಿ ಶಿಷ್ಯಾನುಗ್ರಹಸಮರ್ಥನಾದ ಉಪಾಧ್ಯಾಯಪರಮೇಷ್ಠಿಗೆ ನಮಸ್ಕಾರವಿರಲಿ. ಸಂಸಾರಭೀಮುಷೇ —ನಿಶ್ಚಯರತ್ನತ್ರಯಾವಲಂಬನದಿಂದ ಸಂಸಾರ ಭೀತಿಯನ್ನು ದೂರಮಾಡಿರುವ ಸರ್ವಸಾಧುಪರಮೇಷ್ಠಿಗೆ ನಮಸ್ಕಾರವಿರಲಿ. ತ್ರಿಕಾಲವರ್ತಿಗಳಾದ ಪಂಚಪರಮೇಷ್ಠಿಗಳಿಗೆ ನಮಸ್ಕಾರವೆಂಬರ್ಥವೂ ಸೂಚಿತವಾಗುವುದು.

ಭರತೇಶ್ವರನಿಗೆ ನಮಸ್ಕಾರವು: — ಒಂಬತ್ತು ನಿಧಿಗಳಿಂದಲೂ ಹದಿನಾಲ್ಕು ರತ್ನಗಳಿಂದಲೂ ಪ್ರಕಟವಾದ ಸಂಪತ್ತಿಯುಳ್ಳವನೂ ಸಮಸ್ತ ವಿದ್ವಜ್ಜನರ ರಕ್ಷಣೆಯ ಸಾಮ್ರಾಜ್ಯಪದವನ್ನು ಹೊಂದಿದವನೂ (ಜಾನಂತೀತಿ ಜ್ಞಾಃ, ಸಕಲಾಶ್ಚ ತೇ ಜ್ಞಾಶ್ಚ ತೇಷಾಂ ಅನಂ—ರಕ್ಷಣಂ, ತಸ್ಯ ಸಾಮ್ರಾಜ್ಯಪದಂ) ಪೂರ್ವಜನ್ಮಕೃತವಾದ ಧರ್ಮದಿಂದುಂಟಾದ ಚಕ್ರರತ್ನವನ್ನು ಧರಿಸಿರುವವನೂ ಭರತಖಂಡಾಧಿಪತಿಯೂ ಅತುಲಭೋಗೈಶ್ವರ್ಯವುಳ್ಳವನಾದರೂ ಅಧ್ಯಾತ್ಮರಸಿಕನಾಗಿ ಸಂಸಾರಭೀತಿಯನ್ನು ನಾಶಮಾಡಿದವನೂ ಆದ ಭರತೇಶ್ವರನಿಗೆ ನಮಸ್ಕಾರವಿರಲಿ.

ಬಾಹುಬಲಿಸ್ವಾಮಿಗೆ ನಮಸ್ಕಾರವು: — ಇಭರ್ತ್ರೇ —ಆ ಕಾಲದ ಮನ್ಮಥನೂ ರಾಜ್ಯಾಧಿಪತಿಯೂ, ಶ್ರೀಮತೇ —ಗಂಧಕುಟಿಯೇ ಮೊದಲಾದ ಬಾಹ್ಯ ಸಂಪತ್ತಿಯೂ ಜ್ಞಾನಾದ್ಯಂತರಂಗಸಂಪತ್ತಿಯೂ ಉಳ್ಳವನೂ, ಧರ್ಮಚಕ್ರ ಭೃತಾ —ಪೂರ್ವಾರ್ಜಿತಧರ್ಮದಿಂದುಂಟಾದ ಚಕ್ರರತ್ನವನ್ನು ಧರಿಸಿದ ಭರತೇಶ್ವರನಿಂದ, ಸಕಲಜ್ಞಾನಸಾಮ್ರಾಜ್ಯಪದಂ —ಕೇವಲಜ್ಞಾನವೆಂಬ ಸಾಮ್ರಾಜ್ಯ ಪದವನ್ನು ಈಯುಷೇ —ಹೊಂದಿದವನೂ (ಬಾಹುಬಲಿಸ್ವಾಮಿಯು ಬಹುಕಾಲ ಕಠಿನತಪಸ್ಸನ್ನು ಮಾಡಿದರೂ ಕಷಾಯವಶದಿಂದ ಕೇವಲಜ್ಞಾನೋತ್ಪತ್ತಿಯಾಗದಿರಲು ಭರತೇಶ್ವರನ ಪೂಜಾಪ್ರಾರ್ಥನಾನಂತರದಲ್ಲಿ ಕೇವಲಜ್ಞಾನವನ್ನು ಹೊಂದಿದವನೂ) ಸಂಸಾರಭೀಮುಷೇ —ಕಠಿನ ತಪಸ್ಸನ್ನು ಮಾಡಿ ಕೇವಲಜ್ಞಾನವನ್ನು ಪಡೆದು ಸಂಸಾರಭೀತಿಯನ್ನು ದೂರಮಾಡಿದವನೂ ಆದ ಬಾಹುಬಲಿಸ್ವಾಮಿಗೆ ನಮಸ್ಕಾರವಿರಲಿ.

ವೃಷಭಸೇನಗಣಧರನಿಗೆ ನಮಸ್ಕಾರವು: — ಶ್ರೀಮತೇ —ತಪಸ್ಸಿನ ಋದ್ಧಿ —ಸಂಪತ್ತಿಯಿಂದ ಯುಕ್ತವಾದ ಬುದ್ಧಿಯುಳ್ಳವನೂ (ಶ್ರಿಯಾ ಉಪಲಕ್ಷಿತಾ ಮತಿರ್ಯಸ್ಯ ಸಃ ತಸ್ಯ ಸಂಬುದ್ಧಿಃ) ಅಸಕಲಜ್ಞಾನ —ಸಂಪೂರ್ಣವಲ್ಲದ ಜ್ಞಾನಗಳುಳ್ಳವನೂ (ಮತಿಶ್ರುತಗಳೆಂಬ ಪರೋಕ್ಷಜ್ಞಾನಗಳೂ ಅವಧಿಮನಃ ಪರ್ಯಯಗಳೆಂಬ ವಿಕಲಪ್ರತ್ಯಕ್ಷಜ್ಞಾನಗಳೂ ಉಳ್ಳವನೂ) ಆದ ಧರ್ಮಚಕ್ರ — ವೃಷಸೇನನೆ ! ಸಾಮ್ರಾಜ್ಯಪದಂ —ಮುನಿಸಮೂಹದಲ್ಲಿ ಶ್ರೇಷ್ಠಸ್ಥಾನವನ್ನು ಅಥವಾ ಶ್ರುತಜ್ಞಾನಚಕ್ರಾಧಿಪತ್ಯವನ್ನು, ಈಯುಷೇ —ಹೊಂದಿದವನೂ, ಭರ್ತ್ರೇ —ಮುನಿ ವೃಂದಕ್ಕೆ ಪ್ರಭುವೂ, ಸಂಸಾರಭೀಮುಷೇ-ಸಂಸಾರಭೀತಿಯನ್ನು ದೂರ ಮಾಡಿದವನೂ ಆದ ನಿನಗೆ, ನಮಃ —ನಮಸ್ಕಾರವು, ಅಸ್ತು —ಇರಲಿ.

ಈ ಮಂಗಲಶ್ಲೋಕದಲ್ಲಿರುವ ಧರ್ಮಚಕ್ರಭೃತೇ ಎಂಬ ಪದದಿಂದ ಸಮಸ್ತ ಚಕ್ರವರ್ತಿಗಳಿಗೂ ಸಂಸಾರಭೀಮುಷೇ ಎಂಬ ಪದದಿಂದ ಸಮಸ್ತ ಬಲದೇವರುಗಳಿಗೂ (ಅರೀಣಾಂ ಸಮೂಹಃ ಆರಂ, ಆರೇಣ ಸಹಿತಂ ಸಾರಂ, ಸಂಚ ತತ್ ಸಾರಂಚ, ತಸ್ಮಾದ್ಭೀಃ, ತಾಂ ಮುಷ್ಣಾತೀತಿ ತಸ್ಮೈ) ನಮಸ್ಕಾರರೂಪಾರ್ಥವೂ ಈ ಪದ್ಯದಿಂದ ತ್ರಿಷಷ್ಟಿಶಲಾಕಾಪುರುಷರ ಕಥಾಸೂಚನೆಯೂ ಆಗುವುದು. ಚಕ್ರವರ್ತಿಗಳಲ್ಲಿ ಕೆಲವರು ದುರ್ಗತಿಯನ್ನು ಪಡೆದಿರುವರಾದರೂ ಅವರು ಮುಂದೆ ಮುಕ್ತಿಗಾಮಿಗಳಾಗುವುದರಿಂದ ಭಾವಿನೈಗಮನಯಾಪೇಕ್ಷೆಯಿಂದ ಅವರಿಗೆ ನಮಸ್ಕಾರವು ಅನುಚಿತವಲ್ಲವೆಂದು ತಿಳಿಯಬೇಕು.

**ನಮಸ್ತಮಃಪಟಚ್ಛನ್ನಜಗದುದ್ಯೋತಹೇತವೇ ।**
**ಜಿನೇಂದ್ರಾಂಶುಮತೇ ತಸ್ಮೈ[೧]ತ್ಪ್ರಮಾಭಾಭಾರಭಾಸಿನೇ ॥ ೨ ॥**

ಅಜ್ಞಾನಾಂಧಕಾರವೆಂಬ ವಸ್ತ್ರದಿಂದ ಮರೆಮಾಡಲ್ಪಟ್ಟ ಲೋಕವನ್ನು ಪ್ರಕಾಶಪಡಿಸುವುದಕ್ಕೆ ಕಾರಣನೂ ವಿಸ್ತರಿಸುತ್ತಿರುವ ಉತ್ಕೃಷ್ಟಜ್ಞಾನಜ್ಯೋತಿಯ ಭಾರದಿಂದ ಪ್ರಕಾಶಿಸುತ್ತಿರುವವನೂ ಆದ ಜಿನೇಶ್ವರನೆಂಬ ಸೂರ್ಯನಿಗೆ ನಮಸ್ಕಾರವು.

**[೨]ಜಯತ್ಯಜಯ್ಯಮಾಹಾತ್ಮ್ಯಂ [೩]ವಿಶಾಸಿತಕುಶಾಸನಮ್ ।**
**ಶಾಸನಂ ಜೈನಮುದ್ಭಾಸಿ [೪]ಮುಕ್ತಿಲಕ್ಷ್ಮ್ಯೈಕ[೫]ಶಾಸನಮ್ ॥ ೩ ॥**

ಪರವಾದಿಗಳಿಂದ ಜಯಿಸಲಶಕ್ಯವಾದ ಮಹಿಮೆಯುಳ್ಳುದೂ ಮಿಥ್ಯಾಶಾಸ್ತ್ರವನ್ನು ಖಂಡಿಸುವುದೂ ಪ್ರಕಾಶಮಾನವೂ ಮೋಕ್ಷಲಕ್ಷ್ಮಿಯನ್ನು ಮುಖ್ಯವಾಗಿ ಪ್ರತಿಪಾದಿಸುವುದೂ ಆದ ಜೈನಶಾಸನವು ಸರ್ವೋತ್ಕೃಷ್ಟವಾಗಿದೆ. ನಮಸ್ಕಾರವು.

**ರತ್ನತ್ರಯಮಯಂ [೬]ಜೈನಂ ಜೈತ್ರಮಸ್ತ್ರಂ ಜಯತ್ಯದಃ ।**
**ಯೇನಾವ್ಯಾಜಂ ವ್ಯಜೇಷ್ಟಾರ್ಹನ್ ದುರಿತಾರಾತಿವಾಹಿನೀಮ್ ॥ ೪ ॥**

ಅರ್ಹತ್ಪರಮೇಶ್ವರರು ಯಾವ ಅಸ್ತ್ರದಿಂದ ಪಾಪವೆಂಬ ಶತ್ರುವಿನ ಸೈನ್ಯವನ್ನು ನಿರ್ಲಕ್ಷ್ಯವಾಗಿ ಜಯಿಸಿದರೋ ಅಂತಹ ಜಯಶೀಲವೂ ಜಿನೇಶ್ವರಸಂಬಂಧಿಯೂ ಸಮ್ಯಗ್ದರ್ಶನಜ್ಞಾನಚಾರಿತ್ರರೂಪವೂ ಆದ ಈ ಅಸ್ತ್ರವು ಸರ್ವೋತ್ಕೃಷ್ಟವಾಗಿದೆ. ರತ್ನತ್ರಯಕ್ಕೆ ನಮಸ್ಕಾರವು.

**ಯಃ ಸಾಮ್ರಾಜ್ಯಮಧಃಸ್ಥಾಯಿ ಗೀರ್ವಾಣಾಧಿಪವೈಭವಮ್ ।**
**[೭]ತೃಣಾಯ ಮನ್ಯಮಾನಃ ಸನ್ ಪ್ರಾವ್ರಾಜೀದಗ್ರಿಮಃ ಪುಮಾನ್ ॥ ೫ ॥**

ಯಾವ ಪುರುಷೋತ್ತಮನು ದೇವೇಂದ್ರನ ವೈಭವವನ್ನು ಕೀಳುಮಾಡುವ ರಾಜ್ಯಪದವಿಯನ್ನು ತೃಣವೆಂದು ತಿಳಿಯುವವನಾಗಿ ಮುನಿದೀಕ್ಷೆಯನ್ನು ಪರಿಗ್ರಹಿಸಿದನೋ

**[೮]ಯಮನುಪ್ರಾವ್ರಜನ್ಭೂರಿಸಹಸ್ರಾಣಿ ಮಹೀಕ್ಷಿತಾಮ್ ।**
**ಇಕ್ಷ್ವಾಕು[೯]ಭೋಜಮುಖ್ಯಾನಾಂ ಸ್ವಾಮಿಭಕ್ತ್ಯೈವ [೧೦]ಕೇವಲಮ್॥ ೬ ॥**

ಇಕ್ಷ್ವಾಕು ಭೋಜ ಮೊದಲಾದ ವಂಶದವರಾದ ಸಾವಿರಾರು ರಾಜರುಗಳು ಮುನಿಧರ್ಮದ ಸ್ವರೂಪವನ್ನು ತಿಳಿಯದೆ ಸ್ವಾಮಿಭಕ್ತಿಯಿಂದಲೇ ಯಾವ ಮಹಾತ್ಮನೊಡನೆ ಮುನಿದೀಕ್ಷೆಯನ್ನು ಪಡೆದರೋ

೧ ಪ್ರಕೃಷ್ಟಜ್ಞಾನಂ. ೨ ಸರ್ವೋತ್ಕರ್ಷೇಣ ವರ್ತತ ಇತ್ಯತ್ರ ಯಸ್ಮಾದುತ್ಕರ್ಷವಾಂಸ್ತೇನ ವಂದ್ಯೋ ಭವತೀತಿ ವ್ಯಂಗ್ಯರೂಪೇಣ ನಮಸ್ಕಾರಃ ಕ್ರಿಯತೇ. ೩ ವಿನಾಶಿತ. ೪ ಮುಕ್ತಿಲಕ್ಷ್ಮ್ಯಾ ಏಕಮೇವ ಶಾಸನಂ. ೫ ಪ್ರತಿಪಾದನಂ. ೬ ಜಿನಸ್ಯೇದಂ. ೭ ತೃಣಮಿತಿ ಮನ್ಯಮಾನಃ, ಅನಾದರೇ ಕರ್ಮಣ್ಯರ್ಥೇ ಚತುರ್ಥೀ. ೮ ಯೇನ ಸಹ. ೯ ವಂಶಃ. ೧೦ ನ ತು ತತ್ಸ್ವರೂಪ ಜ್ಞಾನಪೂರ್ವಕತ್ವೇನ.

**[೧]ಕಚ್ಛಾದ್ಯಾ ಯಸ್ಯ ಸದ್ವೃತ್ತಂ ನಿರ್ವೋಢುಮಸಹಿಷ್ಣವಃ ।**
**[೨]ವಸಾನಾಃ ಪರ್ಣವಲ್ಕಾದ್ಯಾನ್ವನ್ಯಾಂ [೩]ವೃತ್ತಿಂ ಪ್ರಪೇದಿರೇ ॥ ೭ ॥**

ಯಾವ ಮಹಾಪುರುಷನ ನಿರ್ದೋಷವಾದ ಚಾರಿತ್ರವನ್ನು ಧರಿಸುವುದಕ್ಕೆ ಸಾಮರ್ಥ್ಯವಿಲ್ಲದ ಕಚ್ಛ ಮೊದಲಾದ ರಾಜರು ಮರದ ಎಲೆ ತೊಗಟೆ ಮೊದಲಾದುವುಗಳನ್ನು ಧರಿಸುವವರಾಗಿ ವನಸಂಬಂಧವಾದ ಜೀವನ (ಕಂದಮೂಲಾದಿಭಕ್ಷಣ) ವನ್ನು ಹೊಂದಿದರೋ

**[೪]ಅನಾಶ್ವಾನ್ಯಸ್ತಪಸ್ತೇಪೇ ಚಿರಂ ಸೋಢ್ವಾ ಪರೀಷಹಾನ್ ।**
**ಸರ್ವಂ ಸಹತ್ವ[೫]ಮಾಧ್ಯಾಯ ನಿರ್ಜರಾಸಾಧನಂ ಪರಮ್ ॥ ೮ ॥**

ಯಾವ ಮಹಾತ್ಮನು ಬಹುಕಾಲದವರೆಗೆ ನಿರಾಹಾರಿಯಾಗಿ ಹಸಿವೆ ಬಾಯಾರಿಕೆ ಮೊದಲಾದ ಇಪ್ಪತ್ತೆರಡು ಪರೀಷಹ(ಬಾಧೆ)ಗಳನ್ನು ಸಹಿಸಿ ಭೂಮಿಯಂತೆ, ಸರ್ವಂಸಹತ್ವಗುಣವನ್ನು ವಿಮರ್ಶೆಮಾಡಿ ತಿಳಿದು ಕರ್ಮನಿರ್ಜರೆಗೆ ಸಾಧನವಾದ ಉತ್ಕೃಷ್ಟತಪಸ್ಸನ್ನು ಮಾಡಿದನೋ

**ಚಿರಂ ತಪಸ್ಯತೋ ಯಸ್ಯ ಜಟಾ ಮೂರ್ಧ್ನಿ ಬಭುಸ್ತರಾಮ್ ।**
**ಧ್ಯಾನಾಗ್ನಿದಗ್ಧಕರ್ಮೇ[೬]ಧನಿರ್ಯದ್ಧೂಮಶಿಖಾ ಇವ ॥ ೯ ॥**

ಬಹುಕಾಲದವರೆಗೆ ತಪಸ್ಸನ್ನು ಮಾಡಿದ ಯಾವ ಮಹಾಸ್ವಾಮಿಯ ಮಸ್ತಕದಲ್ಲಿ ಬೆಳೆದ ಜಟೆಗಳು, ಧ್ಯಾನವೆಂಬ ಬೆಂಕಿಯಿಂದ ಸುಡಲ್ಪಟ್ಟ ಕರ್ಮವೆಂಬ ಕಟ್ಟಿಗೆಯಿಂದ ಹೊರಡುವ ಹೊಗೆಯ ಶಿಖೆಗಳಂತೆ ಬಹಳವಾಗಿ ಪ್ರಕಾಶಿಸಿದುವೋ

**[೭]ಮಾರ್ಯಾದಾವಿಷ್ಕ್ರಿಯಾಹೇತೋರ್ವಿಹರಂತಂ ಯದೃಚ್ಛಯಾ ।**
**ಚಲಂತಮಿವ ಹೇಮಾದ್ರಿಂ ದದೃಶುರ್ಯಂ ಸುರಾಸುರಾಃ ॥ ೧೦ ॥**

ಸ್ವಾಮಿಯ ಶರೀರರಚನೆಯು ವಜ್ರವೃಷಭನಾರಾಚಸಂಹನನವಾಗಿದ್ದುದರಿಂದ ಕಬಲಾಹಾರವನ್ನು ತೆಗೆದುಕೊಳ್ಳುವ ಆವಶ್ಯಕತೆಯಿಲ್ಲದಿದ್ದರೂ ಮುನಿಮಾರ್ಗವನ್ನು ಪ್ರಕಟಮಾಡುವ ನಿಮಿತ್ತದಿಂದ ಸ್ವಚ್ಛಂದವಾಗಿ ವಿಹರಿಸುವ ಯಾವ ಮುನಿಪುಂಗವನನ್ನು ದೇವತೆಗಳು, ಸಂಚರಿಸುತ್ತಿರುವ ಬಂಗಾರದ ಬೆಟ್ಟವನ್ನು ನೋಡುವಂತೆ, ನೋಡಿದರೋ

**[೮]ಶ್ರೇಯಸಿ [೯]ಪ್ರಯತೇ ದಾನಂ ಯಸ್ಮೈ ದತ್ವಾ ಪ್ರಸೇದುಷಿ ।**
**ಪಂಚರತ್ನಮಯೀಂ ವೃಷ್ಟಿಂ ವವೃಷುಃ ಸುರವಾರಿದಾಃ ॥ ೧೧ ॥**

ಯಾವ ಮಹಾಪ್ರಭುವಿಗೆ ದಾನಶ್ರೇಯೋಮಹಾರಾಜನು ಆಹಾರವನ್ನು ಕೊಟ್ಟು ಪ್ರಸನ್ನನಾಗುತ್ತಿರಲು ದೇವತೆಗಳೆಂಬ ಮೇಘಗಳು ಪಂಚರತ್ನಮಯವಾದ ಮಳೆಯನ್ನು ಸುರಿದರೋ

**[೧೦]ಉದಪಾದಿ ವಿಭೋರ್ಯಸ್ಯ ಘಾತಿಕರ್ಮಾರಿನಿರ್ಜಯಾತ್ ।**
**ಕೇವಲಾಖ್ಯಂ ಪರಂಜ್ಯೋತಿರ್ಲೋಕಾಲೋಕಾವಭಾಸನಮ್ ॥ ೧೨ ॥**

ಯಾವ ಮಹಾತ್ಮನಿಗೆ ಜ್ಞಾನಾವರಣ ದರ್ಶನಾವರಣ ಮೋಹನೀಯ ಅಂತರಾಯರೂಪವಾದ ಘಾತಿಕರ್ಮವೆಂಬ ಶತ್ರುವಿನ ನಾಶದಿಂದ ಲೋಕಾಲೋಕವನ್ನು ಬೆಳಗುವ ಕೇವಲಜ್ಞಾನವೆಂಬ ಪರಂಜ್ಯೋತಿಯುಂಟಾಗಿದ್ದಿತೋ

**ಯೇನಾ[೧೧]ಭ್ಯಧಾಯಿ ಸದ್ಧರ್ಮಃ ಕರ್ಮಾರಾತಿ[೧೨]ನಿಬರ್ಹಣಃ ।**
**ಸದಃಸರೋಮುಖಾಂಭೋಜವನದೀಧಿತಿಮಾಲಿನಾ ॥ ೧೩ ॥**

೧ ಯಶಸ್ವತೀದೇವೀಭ್ರಾತಾ ನೃಪಃ. ೨ ಆಚ್ಛಾದಯಮಾನಾಃ. ೩ ಜೀವನಂ. ೪ ಅನಶನವಾನ್. ೫ ವಿಮೃಶ್ಯ ಜ್ಞಾತ್ವಾ. ೬ ಇಂಧನಂ. ೭ ಮಾರ್ಗಪ್ರಕಟನಹೇತೋಃ. ೮ ದಾನಶ್ರೇಯೋನೃಪೇ. ೯ ಪವಿತ್ರೇ. ೧೦ ಉತ್ಪನ್ನಂ. ೧೧ ಕಥಿತಃ. ೧೨ ನಿಬರ್ಹಯತಿ ಹಿನಸ್ತೀತಿನಿಬರ್ಹಣಃ.

ಸಮವಸರಣಸಭೆಯೆಂಬ ಸರೋವರದಲ್ಲಿ ಸೇರಿದ್ದ ಭವ್ಯರ ಮುಖಕಮಲಗಳಿಗೆ ಸೂರ್ಯನಂತಿದ್ದ ಯಾವ ಸ್ವಾಮಿಯಿಂದ ಕರ್ಮವೆಂಬ ಶತ್ರುವನ್ನು ನಾಶಮಾಡುವ ಸದ್ಧರ್ಮವು ಪ್ರಾದುರ್ಭವಿಸಿದ್ದಿತೋ

**ಯಸ್ಮಾತ್ಸ್ವಾನ್ವಯಮಾಹಾತ್ಮ್ಯಂ ಶುಶ್ರುವಾನ್ಭರತಾ[1]ತ್ಮಜಃ ।**
**ಸಲೀಲಮನಟಚ್ಚಾರುಚಂಚ[2]ಚ್ಚೀವರವಲ್ಕಲಃ ॥ ೧೪ ॥**

ಮನೋಹರವೂ ಪ್ರಕಾಶಮಾನವೂ ಆದ ನಾರುಬಟ್ಟೆಯನ್ನು ಧರಿಸಿ ಕೊಂಡಿದ್ದವನೂ ಭರತಚಕ್ರವರ್ತಿಯ ಪುತ್ರನೂ ಆದ ಮರೀಚಿಕುಮಾರನು ಯಾವ ಸ್ವಾಮಿಯ ಮುಖದಿಂದ ತನ್ನ ವಂಶದ ಮಹಿಮೆಯನ್ನು ಕೇಳಿ ಲೀಲೆಯಿಂದ ನರ್ತನವನ್ನು ಮಾಡಿದನೋ

**ತಮಾದಿದೇವಂ ನಾಭೇಯಂ ವೃಷಭಂ ವೃಷಭಧ್ವಜಮ್ ।**
**ಪ್ರಣೌಮಿ ಪ್ರಣಿಪತ್ಯಾಹಂ [3]ಪ್ರಣಿಧಾಯ ಮುಹುರ್ಮುಹುಃ ॥ ೧೫ ॥**

ನಾಭಿರಾಜಮನುವಿನ ಪುತ್ರರೂ ವೃಷಭಚಿಹ್ನೆಯ ಧ್ವಜವುಳ್ಳವರೂ ಆದಿ ಬ್ರಹ್ಮರೂ ಆದ ಅಂತಹ ವೃಷಭಸ್ವಾಮಿಯನ್ನು ನಾನು ನಮ್ರನಾಗಿ ನಮಸ್ಕರಿಸಿ ಪುನಃಪುನಃ ಸ್ತೋತ್ರಮಾಡುತ್ತೇನೆ.

**ಅಜಿತಾದೀನ್ ಮಹಾವೀರಪರ್ಯಂತಾನ್ ಪರಮೇಶ್ವರಾನ್ ।**
**ಜಿನೇಂದ್ರಾನ್ [4]ಪರ್ಯುಪಾಸೇಹಂ ಧರ್ಮಸಾಮ್ರಾಜ್ಯನಾಯಕಾನ್ ॥**

ಧರ್ಮವೆಂಬ ರಾಜ್ಯಕ್ಕಧಿಪತಿಗಳಾದ ಅಜಿತತೀರ್ಥಂಕರರು ಮೊದಲಾಗಿ ವರ್ಧಮಾನತೀರ್ಥಂಕರರ ಪರ್ಯಂತ ಇಪ್ಪತ್ತುಮೂರು ತೀರ್ಥಂಕರಪರಮ ದೇವರನ್ನು ಆರಾಧಿಸುತ್ತೇನೆ.

**ಸಕಲಜ್ಞಾನಸಾಮ್ರಾಜ್ಯಯೌವರಾಜ್ಯಪದೇ ಸ್ಥಿತಾನ್ ।**
**[5]ತೋಷ್ಟವೀಮಿ ಗಣಾಧೀಶಾನಾತ್ತಸಜ್ಜ್ಞಾನಕಂಠಿಕಾನ್ ॥ ೧೭ ॥**

ಕೇವಲಜ್ಞಾನವೆಂಬ ಸಾಮ್ರಾಜ್ಯದ ಯುವರಾಜಪದವಿಯಲ್ಲಿರುವವರೂ ಸಮ್ಯಜ್ಞಾನವೆಂಬ ಕಂಠಾಭರಣವನ್ನು ಧರಿಸಿದವರೂ ಆದ ಗಣಧರಪರಮೇಷ್ಠಿಗಳನ್ನು ಚೆನ್ನಾಗಿ ಸ್ತೋತ್ರಮಾಡುತ್ತೇನೆ.

**ಅನಾದಿನಿಧನಂ ತುಂಗಮನಲ್ಪಫಲದಾಯಿನಮ್ ।**
**[6]ಉಪಾಧ್ವಂ [7]ವಿಪುಲಚ್ಛಾಯಂ ಶ್ರುತಸ್ಕಂಧಮಹಾದ್ರುಮಮ್ ॥ ೧೮ ॥**

ಭವ್ಯರೆ ! ಅನಾದಿನಿಧನವೂ ಉನ್ನತವೂ ಬಹಳ ಫಲಗಳನ್ನು ಕೊಡತಕ್ಕುದೂ ವಿಸ್ತಾರವಾದ ನೆರಳುಳ್ಳುದೂ ದಯೆಯುಳ್ಳುದೂ ಆದ ಶ್ರುತಸ್ಕಂಧವೆಂಬ ಮಹಾವೃಕ್ಷವನ್ನು ಆರಾಧಿಸಿರಿ.

**ಇತ್ಯಾ[8]ಪ್ತಾಪ್ತವಚ[9]ಸ್ತೋತ್ರೈಃ ಕೃತಮಂಗಲಸತ್ಕ್ರಿಯಃ ।**
**ಪುರಾಣಂ [10]ಸಂಗ್ರಹಿಷ್ಯಾಮಿ ತ್ರಿಷಷ್ಟಿಪುರುಷಾಶ್ರಿತಮ್ ॥ ೧೯ ॥**

ಈ ಪ್ರಕಾರವಾಗಿ ದೇವಗುರುಶಾಸ್ತ್ರಗಳ ಸ್ತೋತ್ರಗಳಿಂದ ಮಂಗಲಕ್ರಿಯೆಯನ್ನು ಮಾಡಿದವನಾಗಿ ಅರುವತ್ತುಮೂರು ಮಹಾಪುರುಷಾಶ್ರಿತವೂ ಪರಾಪರಗುರುವಿನ ವಚನವೂ ಆದ ಪುರಾಣವನ್ನು ಸಂಗ್ರಹಮಾಡುವೆನು - ಸಂಕ್ಷೇಪದಿಂದ ಹೇಳುವೆನು.

**ತೀರ್ಥೇಶಾಮಪಿ ಚಕ್ರೇಶಾಂ ಹಲಿನಾಮರ್ಧಚಕ್ರಿಣಾಮ್ ।**
**ತ್ರಿಷಷ್ಟಿಲಕ್ಷಣಂ ವಕ್ಷ್ಯೇ ಪುರಾಣಂ ತದ್ದ್ವಿಷಾಮಪಿ ॥ ೨೦ ॥**

೧ ಮರೀಚಿಃ. ೨ ಭಿಕ್ಷುಯೋಗ್ಯವಸ್ತ್ರ, ಕಂಥಾರೂಪವಲ್ಕಲ ಇತ್ಯರ್ಥಃ. ೩ ಪ್ರಹ್ವೋಭೂತ್ವಾ. ೪ ಆರಾಧಯಾಮಿ. ೫ ಭೃಶಂ ಸ್ತೌಮಿ. ೬ ಆರಾಧಯಧ್ವಂ. ೭ ಪಕ್ಷೇ ವಿಪುಲದಯಂ. ೮ ಪರಾಪರಗುರೋರ್ವಚನಂ. ೯ ಸರ್ವಜ್ಞಗಣಧರಶ್ರುತಸ್ಕಂಧಸ್ತೋತ್ರೈಃ. ೧೦ ಸಂಕ್ಷೇಪೇಣ ಕಥಯಿಷ್ಯಾಮಿ.

ಇಪ್ಪತ್ತುನಾಲ್ಕು ತೀರ್ಥಂಕರರು, ಹನ್ನೆರಡು ಚಕ್ರವರ್ತಿಗಳು, ಒಂಬತ್ತು ಬಲಭದ್ರರು, ಒಂಬತ್ತು ನಾರಾಯಣರು, ಒಂಬತ್ತು ಪ್ರತಿನಾರಾಯಣರು ಇವರುಗಳ ತ್ರಿಷಷ್ಟಿಲಕ್ಷಣಗಳುಳ್ಳ ಪುರಾಣವನ್ನು ಹೇಳುವೆನು.

**ಪುರಾತನಂ ಪುರಾಣಂ ಸ್ಯಾತ್ [1]ತನ್ಮಹನ್ಮಹದಾಶ್ರಯಾತ್ ।**
**ಮಹದ್ಭಿರುಪದಿಷ್ಟತ್ವಾನ್ಮಹಾಶ್ರೇಯೋಽನುಶಾಸನಾತ್ ॥ ೨೧ ॥**

ಪುರಾತನವಾದುದು ಪುರಾಣವೆನಿಸುವುದು. ಆ ಪುರಾಣವು ತೀರ್ಥಂಕರರು ಮೊದಲಾದ ಮಹಾಪುರುಷರ ಸಂಬಂಧದಿಂದಲೂ ಮಹಾಪುರುಷರಿಂದ ಉಪದೇಶಿಸಲ್ಪಟ್ಟಿರುವುದರಿಂದಲೂ ಮಹಾಶ್ರೇಯಸ್ಸನ್ನು ಪ್ರತಿಪಾದಿಸುವುದರಿಂದಲೂ ಮಹಾಪುರಾಣವೆನಿಸುವುದು.

**[2]ಕವಿಂ ಪುರಾಣಮಾಶ್ರಿತ್ಯ ಪ್ರಸೃತತ್ವಾತ್ಪುರಾಣತಾ ।**
**[3]ಮಹತ್ತ್ವಂ ಸ್ವಮಹಿಮ್ನೈವ [4]ತಸ್ಯೇತ್ಯನ್ಯೈ [5]ರ್ನಿರುಚ್ಯತೇ ॥ ೨೨ ॥**

ಅಥವಾ ಪುರಾತನಕವಿಯನ್ನಾಶ್ರಯಿಸಿ ಉಂಟಾಗಿರುವುದರಿಂದ ಪುರಾಣತ್ವ ವುಂಟಾಗುವುದು. ಆ ಪುರಾಣಕ್ಕೆ ಮಹತ್ತ್ವವು ತನ್ನ ಮಹಿಮೆಯಿಂದಲೇ ಎಂಬುದಾಗಿ ಬೇರೆಯವರು ಹೇಳುತ್ತಾರೆ.

**ಮಹಾಪುರುಷಸಂಬಂಧಿ ಮಹಾಭ್ಯುದಯಶಾಸನಮ್ ।**
**ಮಹಾಪುರಾಣ[6]ಮಾಮ್ನಾತಮತ ಏತನ್ಮಹರ್ಷಿಭಿಃ ॥ ೨೩ ॥**

ಈ ಪುರಾಣವು ಮಹಾಪುರುಷ ಸಂಬಂಧಿಯೂ ಮಹಾಭ್ಯುದಯಕ್ಕೆ ಕಾರಣವೂ ಆಗಿರುವುದರಿಂದ ಮಹರ್ಷಿಗಳು ಇದಕ್ಕೆ ಮಹಾಪುರಾಣವೆಂದು ಹೇಳುತ್ತಾರೆ.

**ಋಷಿಪ್ರಣೀತ[7]ಮಾರ್ಷಂ ಸ್ಯಾತ್ಸೂಕ್ತಂ [8]ಸೂನೃತಶಾಸನಾತ್ ।**
**ಧರ್ಮಾನುಶಾಸನಾಚ್ಚೇದಂ ಧರ್ಮಶಾಸ್ತ್ರಮಿತಿ [9]ಸ್ಮೃತಮ್ ॥ ೨೪ ॥**

ಈ ಗ್ರಂಥವು ಋಷಿಪ್ರಣೀತವಾಗಿರುವುದರಿಂದ ಆರ್ಷವೆಂದೂ ಸತ್ಯಾರ್ಥವನ್ನು ಹೇಳುವುದರಿಂದ ಸೂಕ್ತವೆಂದೂ ಧರ್ಮವನ್ನು ಹೇಳುವುದರಿಂದ ಧರ್ಮಶಾಸ್ತ್ರವೆಂದೂ ಹೇಳಲ್ಪಟ್ಟಿದೆ.

**ಇತಿಹಾಸ ಇತೀಷ್ಟಂ [10]ತದಿತೀಹಾಸೀದಿತಿ ಶ್ರುತೇಃ ।**
**ಇತಿವೃತ್ತಮಥೈತಿಹ್ಯಮಾಮ್ನಾಯಂ ಚಾ[11]ಮನಂತಿ ತತ್ ॥ ೨೫ ॥**

"ಇತಿ ಇಹ ಆಸೀತ್ — ಇಲ್ಲಿ ಹೀಗಾಗಿದ್ದಿತು" ಎಂಬ ಚರಿತ್ರೆಗಳನ್ನು ವರ್ಣನೆಮಾಡುವುದರಿಂದ ಈ ಪುರಾಣವನ್ನು ಇತಿಹಾಸವೆಂದೂ ಇತಿವೃತ್ತವೆಂದೂ ಐತಿಹ್ಯವೆಂದೂ ಆಮ್ನಾಯವೆಂದೂ ಹೇಳುತ್ತಾರೆ.

**ಪುರಾಣಮಿತಿಹಾಸಾಖ್ಯಂ ಯತ್ಪ್ರೋವಾಚ ಗಣಾಧಿಪಃ ।**
**ತ[12]ತ್ಕಿಲಾಹಮಧೀರ್ವಕ್ಷ್ಯೇ ಕೇವಲಂ ಭಕ್ತಿ ಚೋದಿತಃ ॥ ೨೬ ॥**

ಇತಿಹಾಸವೆಂಬ ಯಾವ ಪುರಾಣವನ್ನು ಗಣಧರರು ಹೇಳಿದರೋ ಅದನ್ನು ಬುದ್ಧಿಯಿಲ್ಲದ (ಅಲ್ಪಜ್ಞಾನಿ) ನಾನು ಕೇವಲ ಭಕ್ತಿಯಿಂದ ಪ್ರೇರಿತನಾಗಿ ಹೇಳುವೆನು.

**ಪುರಾಣಂ ಗಣಭೃತ್ಪ್ರೋಕ್ತಂ [13]ವಿವಕ್ಷೋರ್ಮೇ ಮಹಾ[14]ನ್ಭರಃ ।**
**[15]ವಿವಕ್ಷೋರಿವ [16]ದಮ್ಯಸ್ಯ ಪುಂಗವೈರ್ಭಾರಮುದ್ಧೃತಮ್ ॥ ೨೭ ॥**

ದೊಡ್ಡ ಎತ್ತುಗಳು ಹೊರುವ ಹೊರೆಯನ್ನು ಹೊರಬೇಕೆಂದಿಚ್ಛಿಸುವ ಹೋರಿಗರುವಿಗೆ ಅದು ಹೇಗೆ ದೊಡ್ಡದಾದ ಭಾರವಾಗುವುದೋ ಹಾಗೆಯೇ

೧ ಮಹಾಪುರಾಣಮಿತಿ ನಾಮ ಸ್ಯಾತ್. ೨ ಪೂರ್ವಕವಿಂ. ೩ ಪುರಾಣಸ್ಯ ಮಹತ್ತ್ವಂ. ೪ ಪುರಾಣಸ್ಯ. ೫ ಕಥ್ಯತೇ. ೬ ಕಥಿತಂ. ೭ ಋಷಿಪರಂಪರಯಾ ಕಥಿತಮಾರ್ಷಂ ಸ್ಯಾತ್. ೮ ಸತ್ಯಭಾಷಣಾತ್. ೯ ಕಥಿತಂ. ೧೦ ಪುರಾಣಂ. ೧೧ ಕಥಯಂತಿ. ೧೨ ಅಸಂಭಾವ್ಯಾರ್ಥೇ ಕಿಲಶಬ್ದಃ. ೧೩ ವಕ್ತುಮಿಚ್ಛೋಃ. ೧೪ ಪ್ರಯತ್ನಾತಿಶಯಃ. ೧೫ ವೋಢುಮಿಚ್ಛೋಃ. ೧೬ ಬಾಲವತ್ಸಸ್ಯ.

ಗಣಧರರಿಂದ ಹೇಳಲ್ಪಟ್ಟ ಪುರಾಣವನ್ನು ಹೇಳಲಿಚ್ಛಿಸುವ ನನಗೆ ಬಹಳ ಪ್ರಯಾಸವಾಗಿದೆ.

**ಕ್ವ ಗಂಭೀರಃ ಪುರಾಣಾಬ್ಧಿಃ ಕ್ವ ಮಾದೃಗ್ಬೋಧ[೧]ದುರ್ವಿಧಃ ।**
**ಸೋಽಹಂ ಮಹೋದಧಿಂ ದೋರ್ಭ್ಯಾಂ ತಿತೀರ್ಷುರ್ಯಾಮಿ ಹಾಸ್ಯತಾಮ್ ॥ ೨೮ ॥**

ಅತ್ಯಂತ ಗಂಭೀರವಾದ ಪುರಾಣವೆಂಬ ಸಮುದ್ರವೆಲ್ಲಿ? ನನ್ನಂತಹ ಜ್ಞಾನಹೀನನೆಲ್ಲಿ ?ಆ ಮಹಾಸಮುದ್ರವನ್ನು ಕೈಗಳಿಂದ ಈಜಿ ದಾಟಲಿಚ್ಛಿಸುವ ನಾನು ಹಾಸ್ಯಕ್ಕೆ ಪಾತ್ರನಾಗುತ್ತೇನೆ.

**ಅಥವಾಸ್ತ್ಯೇತದಲ್ಪೋಽಪಿ ಯ[೨]ದ್ಘಟೇಽಹಂ ಸ್ವಶಕ್ತಿತಃ ।**
**ಲೂನವಾಲಧಿರಪ್ಯುಕ್ಷಾ ಕಿಂ ನೋತ್ಪುಚ್ಛಯತೇ ತರಾಮ್ ॥ ೨೯ ॥**

ಅಥವಾ ನಾನು ಅಲ್ಪನಾಗಿದ್ದರೂ ಶಕ್ತ್ಯನುಸಾರವಾಗಿ ಪುರಾಣವನ್ನು ಮಾಡುತ್ತೇನೆ. ಇದು ನ್ಯಾಯವಾಗಿದೆ. ಕತ್ತರಿಸಲ್ಪಟ್ಟ ಬಾಲವುಳ್ಳ ಎತ್ತು ಕೂಡ ತನ್ನ ಮೋಟುಬಾಲವನ್ನು ಮೇಲಕ್ಕೆತ್ತುವುದಿಲ್ಲವೇ ?

**ಗಣಾಧೀಶೈಃ ಪ್ರಣೀತೇಽಪಿ ಪುರಾಣೇಽಸ್ಮಿನ್ನಹಂ [೩]ಯತೇ ।**
**ಸಿಂಹೈ[೪]ರಾಸೇವಿತೇ ಮಾರ್ಗೇ ಮೃಗೋಽನ್ಯಃ ಕೇನ ವಾರ್ಯತೇ ॥ ೩೦ ॥**

ಈ ಪುರಾಣವು ಗಣಧರಪರಮೇಷ್ಠಿಗಳಿಂದ ಹೇಳಲ್ಪಟ್ಟಿದ್ದರೂ ನಾನು ಇದರಲ್ಲಿ ಯತ್ನವನ್ನು ಮಾಡುತ್ತೇನೆ. ಸಿಂಹಗಳಿಂದ ಸಂಚರಿಸಲ್ಪಟ್ಟ ಮಾರ್ಗದಲ್ಲಿ ಬೇರೆ ಮೃಗವು ಹೋದರೆ ಯಾರು ತಡೆಯುತ್ತಾರೆ ?

**ಪುರಾಣಕವಿಭಿಃ [೫]ಕ್ಷುಣ್ಣೇ ಕಥಾಮಾರ್ಗೇಽಸ್ತಿ ಮೇ [೬]ಗತಿಃ ।**
**[೭]ಪೌರಸ್ತ್ಯೈಃ ಶೋಧಿತಂ ಮಾರ್ಗಂ ಕೋ ವಾ ನಾನುವ್ರಜೇಜ್ಜನಃ ॥**

ಪ್ರಾಚೀನ ಕವಿಗಳಿಂದ ಸರಿಮಾಡಲ್ಪಟ್ಟ ಕಥಾರೂಪವಾದ ಮಾರ್ಗದಲ್ಲಿ ನನಗವಕಾಶವಿದೆ. ಪೂರ್ವಿಕರು ಸರಿಮಾಡಿಟ್ಟ ಮಾರ್ಗದಲ್ಲಿ ಯಾರು ತಾನೆ ಹೋಗುವುದಿಲ್ಲ ?

**ಮಹಾಕರೀಂದ್ರಸಮ್ಮರ್ದವಿರಲೀಕೃತಪಾದಪೇ ।**
**ವನೇ ವನ್ಯೇಭಕಲಭಾಃ ಸುಲಭಾಃ ಸ್ವೈರಚಾರಿಣಃ ॥ ೩೨ ॥**

ದೊಡ್ಡ ಆನೆಗಳ ಸಮ್ಮರ್ದದಿಂದ ವಿರಲವಾಗಿ ಮಾಡಲ್ಪಟ್ಟ ಮರಗಳುಳ್ಳ ವನದಲ್ಲಿ ಆನೆಯ ಮರಿಗಳು ಆಯಾಸವಿಲ್ಲದೆ ಸ್ವಚ್ಛಂದವಾಗಿ ಸಂಚಾರ ಮಾಡುತ್ತವೆ.

**ಮಹಾತಿಮಿಪೃಥು[೮]ಪ್ರೋಥಪಥೀಕೃತಜಲೇಽರ್ಣವೇ ।**
**ಯಥೇಷ್ಟಂ ಪರ್ಯಟಂತ್ಯೇವ ನನು ಪಾಠೀನಶಾಬಕಾಃ ॥ ೩೩ ॥**

ದೊಡ್ಡದಾದ ತಿಮಿಂಗಿಲ ಮೀನುಗಳ ವಿಸ್ತಾರವಾದ ಮೂಗುಗಳಿಂದ ಮಾರ್ಗವಾಗಿ ಮಾಡಲ್ಪಟ್ಟ ನೀರುಳ್ಳ ಸಮುದ್ರದಲ್ಲಿ ಸಣ್ಣದಾದ ಮೀನಿನ ಮರಿಗಳು ಯಥೇಷ್ಟವಾಗಿ ಸಂಚಾರ ಮಾಡಿಯೇ ಮಾಡುತ್ತವೆ.

**ಮಹಾಭಟಾಸ್ತ್ರಸಂಪಾತನಿರುದ್ಧ[೯]ಪ್ರತಿಯೋದ್ಧೃಕೇ।**
**[೧೦]ಭಟಬ್ರುವೋಽಪಿ ನಿಃಶಂಕಂ ವಲ್ಗತ್ಯೇವ ರಣಾಂಗಣೇ ॥ ೩೪ ॥**

ಯಾವ ರಣಾಂಗಣದಲ್ಲಿ ಮಹಾವೀರಭಟರು ತಮ್ಮ ಅಸ್ತ್ರಗಳನ್ನು ಬಿಟ್ಟು ಪ್ರತಿಭಟರನ್ನು ತಡೆದಿದ್ದಾರೋ ಅಂತಹ ರಣಾಂಗಣದಲ್ಲಿ ಭಟನೆಂದು ಹೇಳಿಸಿಕೊಳ್ಳುವವನು ಕೂಡ ಸಂದೇಹವಿಲ್ಲದೆ ಓಡಾಡುತ್ತಾನೆ.

೧ ದರಿದ್ರಃ. ೨ ವಿದಧಾಮಿ. ೩ ಯತ್ನಂ ಕರೋಮಿ. ೪ ಸಂಚರಿತೇ. ೫ ಸಮ್ಮರ್ದಿತೇ, ವಾಗ್ವಿಷಯತ್ವಂ ನೀತೇ. ೬ ಉಪಾಯಃ. ೭ ಪುರೋಗಮ್ಯೈಃ. ೮ ನಾಸಿಕಾ. ೯ ಪ್ರತಿಭಟೇ. ೧೦ ಶಸ್ತ್ರಮಾತ್ರಗ್ರಾಹೀ ಭಟಾಭಾಸಃ.

**[೧]ತತ್ಪುರಾಣಕವೀನೇವ ಮತ್ವಾ ಹಸ್ತಾವಲಂಬನಮ್ ।**
**ಮಹತೋಽಸ್ಯ ಪುರಾಣಾಬ್ಧೇಸ್ತರಣಾಯೋದ್ಯತೋಽಸ್ಮ್ಯಹಮ್ ॥ ೩೫ ॥**

ಆದುದರಿಂದ ಆ ಪ್ರಾಚೀನ ಕವಿಗಳನ್ನೇ ಹಸ್ತಾವಲಂಬನವನ್ನಾಗಿ ತಿಳಿದು, ಈ ಪುರಾಣವೆಂಬ ಮಹಾಸಮುದ್ರವನ್ನು ದಾಟುವುದಕ್ಕೆ ಉದ್ಯತನಾಗಿದ್ದೇನೆ.

**ಮಹತ್ಯಸ್ಮಿನ್ಪುರಾಣಾಬ್ಧೌ [೨]ಶಾಖಾಶತತರಂಗಕೇ ।**
**ಸ್ಖಲಿತಂ ಯತ್ಪ್ರಮಾದಾನ್ಮೇ ತದ್ಬುಧಾಃ ಕ್ಷಂತುಮರ್ಹಥ ॥ ೩೬ ॥**

ವಿದ್ವಾಂಸರೇ ! ನೂರಾರು ಅವಾಂತರಕಥೆಗಳೆಂಬ ತೆರೆಗಳುಳ್ಳ ಈ ಮಹಾಪುರಾಣವೆಂಬ ಸಮುದ್ರದಲ್ಲಿ ನನ್ನ ಪ್ರಮಾದದಿಂದ ಸ್ಖಾಲಿತ್ಯವುಂಟಾದರೆ ಅದನ್ನು ಕ್ಷಮಿಸಲರ್ಹರಾಗುತ್ತೀರಿ.

**ಕವಿಪ್ರಮಾದಜಾನ್ ದೋಷಾನಪಾಸ್ಯಾಸ್ಮಾತ್ಕಥಾಮೃತಾತ್ ।**
**ಸಂತೋ ಗುಣಾನ್ [೩]ಜಿಘೃಕ್ಷಂತು [೪]ಗುಣಗೃಹ್ಯಾ ಹಿ ಸಜ್ಜನಾಃ ॥ ೩೭ ॥**

ಸತ್ಪುರುಷರು ಕವಿಯ ಪ್ರಮಾದದಿಂದುಂಟಾದ ದೋಷಗಳನ್ನು ಬಿಟ್ಟು ಈ ಕಥೆಯೆಂಬ ಅಮೃತದಿಂದ ಗುಣಗಳನ್ನು ಗ್ರಹಣಮಾಡಲಿಚ್ಛಿಸಲಿ. ಸಜ್ಜನರು ಗುಣಗ್ರಾಹಿಗಳಲ್ಲವೆ ?

**ಸುಭಾಷಿತಮಹಾರತ್ನಸಂಭೃತೇಽಸ್ಮಿನ್ಕಥಾಂಬುಧೌ ।**
**ದೋಷಗ್ರಹಾನನಾ[೫]ದೃತ್ಯ ಯತಧ್ವಂ ಸಾರಸಂಗ್ರಹೇ ॥ ೩೮ ॥**

ಸುಭಾಷಿತಗಳೆಂಬ ಮಹಾರತ್ನಗಳಿಂದ ತುಂಬಿದ ಈ ಕಥೆಯೆಂಬ ಸಮುದ್ರದಲ್ಲಿ ದೋಷಗಳೆಂಬ ಕ್ರೂರ ಜಲಜಂತುಗಳನ್ನು ದೂರಮಾಡಿ ಸಾರವನ್ನು ಸಂಗ್ರಹ ಮಾಡುವುದರಲ್ಲಿ ಯತ್ನಿಸಿರಿ.

**ಕವಯಃ ಸಿದ್ಧಸೇನಾದ್ಯಾ ವಯಂ ಚ ಕವಯೋ ಮತಾಃ ।**
**ಮಣಯಃ ಪದ್ಮರಾಗಾದ್ಯಾ ನನು ಕಾಚೋಽಪಿ [೬]ಮೇಚಕಃ ॥ ೩೯ ॥**

ಸಿದ್ಧಸೇನರು ಮೊದಲಾದವರೂ ಕವಿಗಳು. ನಾವೂ ಕವಿಗಳೆಂದು ಸಮ್ಮತರಾಗಿದ್ದೇವೆ. ಪದ್ಮರಾಗ ಮೊದಲಾದ ರತ್ನಗಳೂ ಮಣಿಗಳು. ಐದು ವರ್ಣದ ಮೇಚಕವೆಂಬ ಗಾಜು ಕೂಡ ಮಣಿಯಾಗಿದೆ.

**ಯದ್ವಚೋದರ್ಪಣೇ ಕೃತ್ಸ್ನಂ [೭]ವಾಙ್ಮಯಂ ಪ್ರತಿಬಿಂಬಿತಮ್ ।**
**ತಾನ್ಕವೀನ್ಬಹು ಮನ್ಯೇಽಹಂ ಕಿಮನ್ಯೈಃ ಕವಿಮಾನಿಭಿಃ ॥ ೪೦ ॥**

ಯಾವ ಕವಿಗಳ ವಚನವೆಂಬ ಕನ್ನಡಿಯಲ್ಲಿ ಸಮಸ್ತವಾದ ಶಾಸ್ತ್ರವು ಪ್ರತಿಬಿಂಬಿಸಿದ್ದಿತೋ ಅಂತಹ ಕವಿಗಳನ್ನು ಗೌರವಿಸುತ್ತೇನೆ. ತಾವೂ ಕವಿಗಳೆಂದು ಅಹಂಕಾರಪಡುವ ಬೇರೆ ಕವಿಗಳಿಂದೇನು ?

**ನಮಃ ಪುರಾಣಕಾರೇಭ್ಯೋ ಯದ್ವಕ್ತ್ರಾಬ್ಜೇ ಸರಸ್ವತೀ ।**
**ಯೇಷಾ[೮]ಮದ್ಧಾ ಕವಿತ್ವಸ್ಯ ಸೂತ್ರಪಾತಾಯಿತಂ ವಚಃ ॥ ೪೧ ॥**

ಯಾರ ಮುಖವೆಂಬ ಕಮಲದಲ್ಲಿ ಸರಸ್ವತಿಯು ವಾಸಮಾಡುತ್ತಾಳೋ ಯಾರ ವಚನವು ನಿಜವಾಗಿ ಕವಿತ್ವಕ್ಕೆ ಸೂತ್ರಪಾತದಂತಿರುವುದೋ ಅಂತಹ ಪುರಾಣ ಕರ್ತೃಗಳಿಗೆ ನಮಸ್ಕಾರವು.

**[೯]ಪ್ರವಾದಿಕರಿಯೂಥಾನಾಂ ಕೇಸರೀ [೧೦]ನಯಕೇಸರಃ ।**
**ಸಿದ್ಧಸೇನಕವಿರ್ಜೀಯಾತ್ [೧೧]ವಿಕಲ್ಪನಖರಾಂಕುರಃ ॥ ೪೨ ॥**

೧ ತಸ್ಮಾತ್ಕಾರಣಾತ್. ೨ ಅವಾಂತರಕಥಾಃ. ೩ ಗೃಹೀತುಮಿಚ್ಛಂತು. ೪ ಗುಣಾ ಏವ ಗೃಹ್ಯಾ ಯೇಷಾಂ ತೇ. ೫ ಅಪಾಸ್ಯ. ೬ ಪಂಚವರ್ಣಂ ಭವೇದ್ರತ್ನಂ ಮೇಚಕಾಖ್ಯಂ. ೭ ಪರವಿದ್ಯಾಮಥಚ್ಛಂದೋವಿಚಿತಿಂ ವಾಗಲಂಕೃತಿಮ್ । ತ್ರಯೀಂ ಸಮುದಿತಾಮೇನಾಂ ವಾಙ್ಮಯಂ ವಾಗ್ವಿದೋ ವಿದುಃ. ೮ ತತ್ತ್ವೇ ತ್ವದ್ಧಾಂಜಸಾ ದ್ವಯ ಮಿತ್ಯಮರಃ. ೯ ಪರವಾದಿಃ. ೧೦ ನೈಗಮಾದಯಃ. ೧೧ ಸ್ಯಾದಸ್ತ್ಯಾದಿಸಪ್ತಭಂಗೀವಿಕಲ್ಪಃ.

ಪರವಾದಿಗಳೆಂಬ ಆನೆಗಳ ಗುಂಪಿಗೆ ಸಿಂಹಪ್ರಾಯರೂ ನೈಗಮಾದಿನಯಗಳೆಂಬ ಜಟೆಗಳುಳ್ಳವರೂ ಸ್ಯಾದಸ್ತಿ ಸ್ಯಾನ್ನಾಸ್ತೀತ್ಯಾದಿಸಪ್ತಭಂಗೀವಿಕಲ್ಪಗಳೆಂಬ ತೀಕ್ಷ್ಣವಾದ ಉಗುರುಗಳುಳ್ಳವರೂ ಆದ ಸಿದ್ಧಸೇನಕವಿವರ್ಯರು ಸರ್ವೋತ್ಕೃಷ್ಟರಾಗಿರಲಿ.

**ನಮಃ ಸಮಂತಭದ್ರಾಯ ಮಹತೇ ಕವಿವೇಧಸೇ ।**
**ಯದ್ವಚೋವಜ್ರಪಾತೇನ ನಿರ್ಭಿನ್ನಾಃ ಕುಮತಾದ್ರಯಃ ॥ ೪೩ ॥**

ಯಾರ ವಚನವೆಂಬ ವಜ್ರಾಯುಧದ ಪೆಟ್ಟಿನಿಂದ ಮಿಥ್ಯಾಮತಗಳೆಂಬ ಬೆಟ್ಟಗಳು ಚೂರಾಗಿ ಹೋದುವೋ ಅಂತಹ ದೊಡ್ಡ ಕವಿಬ್ರಹ್ಮರಾದ ಸಮಂತಭದ್ರ ಸ್ವಾಮಿಗಳಿಗೆ ನಮಸ್ಕಾರವು.

**[೧]ಕವೀನಾಂ ಗಮಕಾನಾಂ ಚ ವಾದಿನಾಂ ವಾಗ್ಮಿನಾಮಪಿ ।**
**ಯಶಃ ಸಾಮಂತಭದ್ರೀಯಂ ಮೂರ್ಧ್ನಿ [೨]ಚೂಡಾಮಣೀಯತೇ ॥**

ಸಮಂತಭದ್ರಸ್ವಾಮಿಗಳ ಯಶಸ್ಸು ನವೀನಕವಿತೆಯನ್ನು ಮಾಡುವ ಕವಿಗಳ ತಲೆಯಲ್ಲಿಯೂ ಕವಿತೆಯ ಮರ್ಮವನ್ನು ಕಂಡುಹಿಡಿಯುವ ಗಮಕಿಗಳ ತಲೆಯಲ್ಲಿಯೂ ವಿಜಯವಾಗ್ವ್ಯಾಪಾರವುಳ್ಳ ವಾದಿಗಳ ತಲೆಯಲ್ಲಿಯೂ ಜನರಂಜಕರಾದ ವಾಗ್ಮಿಗಳ ತಲೆಯಲ್ಲಿಯೂ ಚೂಡಾರತ್ನದಂತಾಚರಿಸುತ್ತದೆ.

**ಶ್ರೀದತ್ತಾಯ ನಮಸ್ತಸ್ಮೈ ತಪಃಶ್ರೀದೀಪ್ತಮೂರ್ತಯೇ ।**
**ಕಂಠೀರವಾಯಿತಂ ಯೇನ ಪ್ರವಾದೀಭಪ್ರಭೇದನೇ ॥ ೪೫ ॥**

ಪರವಾದಿಗಳನ್ನು ಜಯಿಸುವುದರಲ್ಲಿ ಯಾರು ಸಿಂಹದಂತಾಚರಿಸುತ್ತಿದ್ದರೋ ಅಂತಹ ತಪಃಪ್ರಭಾವದಿಂದ ಹೊಳೆಯುತ್ತಿರುವ ಶರೀರವುಳ್ಳ ಶ್ರೀದತ್ತರಿಗೆ ನಮಸ್ಕಾರವು.

**[೩]ವಿದುಷ್ಟಿಣೀಷು [೪]ಸಂಸತ್ಸು ಯಸ್ಯ ನಾಮಾಪಿ ಕೀರ್ತಿತಮ್ ।**
**[೫]ನಿಖರ್ವಯತಿ ತದ್ಗರ್ವಂ ಯಶೋಭದ್ರಃ ಸ ಪಾತು ನಃ ॥ ೪೬ ॥**

ವಿದ್ವಾಂಸರುಳ್ಳ ಸಭೆಗಳಲ್ಲಿ ಉಚ್ಚರಿಸಲ್ಪಟ್ಟ ಯಾರ ಹೆಸರು ಕೂಡ ಆ ವಿದ್ವಾಂಸರ ಗರ್ವವನ್ನು ಸಂಪೂರ್ಣವಾಗಿ ಕಡಮೆಮಾಡುತ್ತದೋ ಅಂತಹ ಯಶೋಭದ್ರರು ನಮ್ಮನ್ನು ಕಾಪಾಡಲಿ.

**ಚಂದ್ರಾಂಶುಶುಭ್ರಯಶಸಂ ಪ್ರಭಾಚಂದ್ರಕವಿಂ ಸ್ತುವೇ ।**
**ಕೃತ್ವಾ [೬]ಚಂದ್ರೋದಯಂ ಯೇನ ಶಶ್ವದಾಹ್ಲಾದಿತಂ ಜಗತ್ ॥ ೪೭ ॥**

ನ್ಯಾಯಕುಮುದಚಂದ್ರೋದಯವೆಂಬ ಗ್ರಂಥವನ್ನು ಮಾಡಿ ಯಾರು ಜಗತ್ತನ್ನು ಪುನಃ ಪುನಃ ಸಂತೋಷಪಡಿಸಿದರೋ ಅಂತಹ ಚಂದ್ರನಂತೆ ಶುಭ್ರವಾದ ಕೀರ್ತಿಯುಳ್ಳ ಪ್ರಭಾಚಂದ್ರಕವಿಗಳನ್ನು ಸ್ತೋತ್ರಮಾಡುತ್ತೇನೆ.

**ಚಂದ್ರೋದಯಕೃತಸ್ತಸ್ಯ ಯಶಸ್ಕೇನ ನ ಶಸ್ಯತೇ ।**
**ಯ[೭]ದಾಕಲ್ಪ[೮]ಮನಾಮ್ಲಾನಿ ಸತಾಂ ಶೇಖರತಾಂ ಗತಮ್ ॥ ೪೮ ॥**

ನ್ಯಾಯಕುಮುದಚಂದ್ರೋದಯಗ್ರಂಥವನ್ನು ಮಾಡಿದ ಪ್ರಭಾಚಂದ್ರಾಚಾರ್ಯರ ಯಾವ ಕೀರ್ತಿಯು ಕಲ್ಪಾಂತಕಾಲದವರೆಗೂ ಮಲಿನವಾಗದೆ ಸತ್ಪುರುಷರಿಗೆ ಶಿರೋಭೂಷಣವಾಗಿದ್ದಿತೋ ಅಂತಹ ಕೀರ್ತಿಯನ್ನು ಯಾರು ತಾನೆ ಶ್ಲಾಘಿಸುವುದಿಲ್ಲ ?

೧ ಕವಿರ್ನೂತನ ಸಂದರ್ಭೋ ಗಮಕಃ ಕೃತಿಭೇದಕಃ । ವಾದೀ ವಿಜಯವಾಗ್ವೃತ್ತಿರ್ವಾಗ್ಮೀ ತು ಜನರಂಜಕಃ. ೨ ಚೂಡಾಮಣಿರಿವಾಚರತಿ. ೩ ವಿದ್ವಾಂಸಃ ಸಂತ್ಯತ್ರೇತಿ ವಿದುಷ್ಟಿಣ್ಯಸ್ತಾಸು. ೪ ಸಭಾಸು. ೫ ನಿತರಾಂ ಹ್ರಸ್ವಂ ಕರೋತಿ. ೬ ನ್ಯಾಯಕುಮುದಚಂದ್ರೋದಯನಾಮ ಗ್ರಂಥವಿಶೇಷಂ. ೭ ಕಲ್ಪಕಾಲಪರ್ಯಂತಂ. ೮ ಈಷತ್ ಮ್ಲಾನಿರಾಮ್ಲಾನಿಃ ನ ವಿದ್ಯತೇ ಆಮ್ಲಾನಿರ್ಯಸ್ಯ ತತ್.

**[೧]ಶೀತೀಭೂತಂ ಜಗದ್ಯಸ್ಯ ವಾಚಾ[೨]ರಾಧ್ಯ[೩]ಚತುಷ್ಟಯಮ್ ।**
**ಮೋಕ್ಷಮಾರ್ಗಂ ಸ ಪಾಯಾನ್ನಃ ಶಿವಕೋಟಿಮುನೀಶ್ವರಃ ॥ ೪೯ ॥**

ಜಗತ್ತು ಯಾರ ವಚನದಿಂದ ಮೋಕ್ಷಕ್ಕೆ ಮಾರ್ಗವಾದ ಸಮ್ಯಗ್ದರ್ಶನ ಜ್ಞಾನ ಚಾರಿತ್ರ ತಪಸ್ಸು ಈ ಆರಾಧನಾಚತುಷ್ಟಯವನ್ನಾರಾಧಿಸಿ ಸುಖವನ್ನು ಹೊಂದಿತೋ ಅಂತಹ ಶಿವ ಕೋಟಿಮುನೀಶ್ವರರು ನಮ್ಮನ್ನು ರಕ್ಷಿಸಲಿ.

**ಕಾವ್ಯಾನುಚಿಂತನೇ ಯಸ್ಯ ಜಟಾಃ ಪ್ರಬಲವೃತ್ತಯಃ ।**
**ಅರ್ಥಾನ್ಸ್ಮಾ[೪]ನುವದಂತೀವ ಜಟಾಚಾರ್ಯಃ ಸ ನೋವತಾತ್ ॥ ೫೦ ॥**

ಕಾವ್ಯದ ಚಿಂತನೆಯಲ್ಲಿ ಯಾರ ಜಟೆಗಳು ಅರ್ಥಗಳನ್ನು ಅನುವಾದ ಮಾಡುತ್ತವೋ ಎಂಬಂತೆ ಚಲಿಸುತ್ತವೋ ಅಂತಹ ಜಟಾಚಾರ್ಯರು ನಮ್ಮನ್ನು ರಕ್ಷಿಸಲಿ.

**ಧರ್ಮಸೂತ್ರಾನುಗಾ ಹೃದ್ಯಾ ಯಸ್ಯ ವಾಙ್ಮಣಯೋಮಲಾಃ ।**
**ಕಥಾಲಂಕಾರತಾಂ ಭೇಜುಃ ಕಾಣಭಿಕ್ಷುರ್ಜಯತ್ಯಸೌ ॥ ೫೧ ॥**

ಧರ್ಮವೆಂಬ ಸೂತ್ರವನ್ನನುಸರಿಸುವುವೂ ನಿರ್ಮಲವೂ ಆದ ಯಾರ ವಚನಗಳೆಂಬ ರತ್ನಗಳು ಕಥೆಗೆ ಅಲಂಕಾರಭಾವವನ್ನು ಹೊಂದಿದುವೋ ಅಂತಹ ಈ ಕಾಣಭಿಕ್ಷುಮುನಿಗಳು ಸರ್ವೋತ್ಕೃಷ್ಟರಾಗಿದ್ದಾರೆ.

**ಕವೀನಾಂ [೫]ತೀರ್ಥಕೃದ್ದೇವಃ ಕಿಂ ತರಾಂ ತತ್ರ ವರ್ಣ್ಯತೇ ।**
**ವಿದುಷಾಂ ವಾಙ್ಮಲಧ್ವಂಸಿ [೬]ತೀರ್ಥಂ ಯಸ್ಯ [೭]ವಚೋಮಯಮ್ ॥**

ಯಾರ ವಚನರೂಪವಾದ ತೀರ್ಥವು ವಿದ್ವಾಂಸರವಚನಮಲವನ್ನು ನಾಶ ಮಾಡುವುದೋ ಕವಿಗಳಲ್ಲಿ ತೀರ್ಥಂಕರ (ಶ್ರೇಷ್ಠ)ರಾದ ಅಂತಹ ದೇವಾಚಾರ್ಯರನ್ನು ಹೆಚ್ಚೇನು ವರ್ಣಿಸಲಿ ?

**ಭಟ್ಟಾಕಲಂಕಶ್ರೀಪಾಲಪಾತ್ರಕೇಸರಿಣಾಂ ಗುಣಾಃ ।**
**ವಿದುಷಾಂ ಹೃದಯಾರೂಢಾ ಹಾರಾಯಂತೇತಿ ನಿರ್ಮಲಾಃ ॥ ೫೩ ॥**

ಭಟ್ಟಾಕಲಂಕ, ಶ್ರೀಪಾಲ, ಪಾತ್ರಕೇಸರಿಗಳ ಅತ್ಯಂತ ನಿರ್ಮಲವಾದ ಗುಣಗಳು ವಿದ್ವಾಂಸರ ಹೃದಯವನ್ನು ಹೊಂದಿ ಹಾರದಂತೆ ಆಚರಿಸುತ್ತವೆ.

**ಕವಿತ್ವಸ್ಯ ಪರಾ ಸೀಮಾ ವಾಗ್ಮಿತ್ವಸ್ಯ ಪರಂ ಪದಮ್ ।**
**ಗಮಕತ್ವಸ್ಯ ಪರ್ಯಂತೋ ವಾದಿಸಿಂಹೋರ್ಚ್ಯತೇ ನ ಕೈಃ ॥ ೫೪ ॥**

ಕವಿತ್ವಕ್ಕೆ ಕೊನೆಯದಾದ ಎಲ್ಲೆಯೂ ವಾಚಾಳುತ್ವಕ್ಕೆ ಉತ್ಕೃಷ್ಟವಾದ ಸ್ಥಾನವೂ ಪ್ರಮಾಣಶಾಸ್ತ್ರಕ್ಕೆ ಕೊನೆಯೂ ಆದ ವಾದೀಭಸಿಂಹರು ಯಾರಿಂದ ಪೂಜಿಸಲ್ಪಡುವುದಿಲ್ಲ ?

**ಶ್ರೀವೀರಸೇನ ಇತ್ಯಾತ್ತಭಟ್ಟಾರಕಪೃಥುಪ್ರಥಃ ।**
**ಸ ನಃ ಪುನಾತು ಪೂತಾತ್ಮಾ [೮]ಕವಿವೃಂದಾರಕೋ ಮುನಿಃ ॥ ೫೫ ॥**

ನಿರ್ಮಲ ಸ್ವಭಾವವುಳ್ಳವರೂ ಕವಿಗಳಲ್ಲಿ ಶ್ರೇಷ್ಠರೂ ಭಟ್ಟಾರಕರೆಂದು ಮಹಾಪ್ರಸಿದ್ಧಿಯನ್ನು ಹೊಂದಿರುವವರೂ ಆದ ಆ ವೀರಸೇನರು ನಮ್ಮನ್ನು ಪವಿತ್ರರನ್ನಾಗಿ ಮಾಡಲಿ.

**ಲೋಕವಿತ್ತ್ವಂ ಕವಿತ್ವಂ ಚ ಸ್ಥಿತಂ ಭಟ್ಟಾರಕೇ ದ್ವಯಮ್ ।**
**ವಾಗ್ಮಿತಾ[೯]ವಾಗ್ಮಿತಾ ಯಸ್ಯ ವಾಚಾ ವಾಚಸ್ಪತೇರಪಿ ॥ ೫೬ ॥**

೧ ಸುಖೀಭೂತಂ. ೨ ಆರಾಧನಾಂ ಕೃತ್ವಾ. ೩ ಸಮ್ಯಗ್ದರ್ಶನಜ್ಞಾನಚಾರಿತ್ರತಪೋ ರೂಪಂ. ೪ ಸಾರ್ಥಕಂ ಪುನರ್ವಚನಮನುವಾದಃ. ೫ ಕವೀನಾಂ ತೀರ್ಥಕೃದಿತ್ಯನೇನೈವ ವರ್ಣನೇನಾಲಂ. ೬ ಜಲಂ. ೭ ವಾಗ್ರೂಪಂ. ೮ ವೃಂದಾರಕೌ ರೂಪಿಮುಖ್ಯೌ ಇತ್ಯಮರಃ. ೯ ಅಲ್ಪೀಕೃತಾ, ಸ್ಯಾದವಾಚ್ಯಧೋಮುಖ ಇತ್ಯಮರಃ.

ಯಾರ ವಚನದಿಂದ ಬೃಹಸ್ಪತಿಯ ವಾಚಾಳತ್ವವು ಕೂಡ ಕಡಮೆಯಾಯಿತೋ ಅಂತಹ ವೀರಸೇನ ಭಟ್ಟಾರಕರಲ್ಲಿ ಕವಿತ್ವವೂ ಲೋಕಸ್ವರೂಪಪರಿಜ್ಞಾನವೂ ಇದ್ದುವು.

**[೧]ಸಿದ್ಧಾಂತೋಪನಿಬಂಧಾನಾಂ [೨]ವಿಧಾತುರ್ಮದ್ಗುರೋಶ್ಚಿರಮ್ ।**
**ಮನ್ಮನಃಸರಸಿ ಸ್ಥೇಯಾನ್ಮೃದುಪಾದಕುಶೇಶಯಮ್ ॥ ೫೭ ॥**

ಸಿದ್ಧಾಂತಶಾಸ್ತ್ರದ ವ್ಯಾಖ್ಯಾನಗಳನ್ನು ರಚಿಸಿದ ನನ್ನ ಗುರುಗಳ (ವೀರಸೇನರ) ಮೃದುವಾದ ಪಾದಕಮಲವು ನನ್ನ ಮನಸ್ಸೆಂಬ ಸರೋವರದಲ್ಲಿ ಬಹುಕಾಲದವರೆಗೆ ಸ್ಥಿರವಾಗಿರಲಿ.

**ಧವಲಾಂ ಭಾರತೀಂ ತಸ್ಯ ಕೀರ್ತಿಂ ಚ ವಿಧುನಿರ್ಮಲಾಮ್ ।**
**ಧವಲೀಕೃತನಿಃಶೇಷಭುವನಾಂ [೩]ನನ್ನಮೀಮ್ಯಹಮ್ ॥ ೫೮ ॥**

ಚಂದ್ರನಂತೆ ನಿರ್ಮಲವೂ ಸಮಸ್ತಲೋಕವನ್ನು ಶುಭ್ರವನ್ನಾಗಿ ಮಾಡಿದುದೂ ಆದ ಆ ವೀರಸೇನರ ಧವಲವಚನವನ್ನೂ (ಜಯಧವಲವನ್ನೂ) ಕೀರ್ತಿಯನ್ನೂ ಹೆಚ್ಚಾಗಿ ಅಥವಾ ಪುನಃ ಪುನಃ ನಮಸ್ಕರಿಸುತ್ತೇನೆ.

**ಜನ್ಮಭೂಮಿಸ್ತಪೋಲಕ್ಷ್ಮ್ಯಾಃ ಶ್ರುತಪ್ರಶಮಯೋರ್ನಿಧಿಃ ।**
**ಜಯಸೇನಗುರುಃ ಪಾತು ಬುಧವೃಂದಾಗ್ರಣೀಃ ಸ ನಃ ॥ ೫೯ ॥**

ತಪೋಲಕ್ಷ್ಮಿಗೆ ಜನ್ಮಭೂಮಿಯೂ ಶಾಸ್ತ್ರಕ್ಕೂ ಶಾಂತಿಗೂ ನಿಧಿಯೂ ವಿದ್ವಾಂಸರ ಸಮೂಹದಲ್ಲಿ ಮುಖ್ಯರೂ ಆದ ಆ ಜಯಸೇನಗುರುಗಳು ನಮ್ಮನ್ನು ಕಾಪಾಡಲಿ.

**ಸ ಪೂಜ್ಯಃ ಕವಿಭಿರ್ಲೋಕೇ ಕವೀನಾಂ [೪]ಪರಮೇಶ್ವರಃ ।**
**[೫]ವಾಗರ್ಥಸಂಗ್ರಹಂ [೬]ಕೃತ್ಸ್ನಂ ಪುರಾಣಂ ಯಃ [೭]ಸಮಗ್ರಹೀತ್ ॥ ೬೦ ॥**

ಯಾರು ಶಬ್ದಾರ್ಥ ಸಂಗ್ರಹವುಳ್ಳ ಚತುರ್ವಿಂಶತಿಪುರಾಣವನ್ನು ಸಂಕ್ಷೇಪವಾಗಿ ರಚಿಸಿದರೋ ಅಂತಹ ಕವಿಶ್ರೇಷ್ಠರಾದ ಕವಿಪರಮೇಷ್ಠಿಗಳು ಲೋಕದಲ್ಲಿ ಕವಿಗಳಿಂದ ಪೂಜಿಸುವುದಕ್ಕೆ ಯೋಗ್ಯರು.

**ಕವಯೋನ್ಯೇಪಿ ಸಂತ್ಯೇವ ಕಸ್ತಾನು[೮]ದ್ದೇಷ್ಟುಮುಷ್ಕಲಮ್ ।**
**ಸತ್ಕೃತಾ ಯೇ ಜಗತ್ಪೂಜ್ಯಾಸ್ತೇ ಮಯಾ ಮಂಗಲಾರ್ಥಿನಾ ॥ ೬೧ ॥**

ಜಗತ್ಪೂಜ್ಯರಾದ ಕವಿಗಳು ಬೇರೆಯೂ ಇದ್ದಾರೆ. ಅವರ ಹೆಸರುಗಳನ್ನೆಲ್ಲ ಹೇಳಲು ಯಾವನು ಸಮರ್ಥನು? ಮಂಗಲವನ್ನಿಚ್ಛಿಸುವ ನಾನು ಅವರನ್ನು ಸತ್ಕರಿಸುತ್ತೇನೆ.

**ತ ಏವ ಕವಯೋ ಲೋಕೇ ತ ಏವ ಚ ವಿಚಕ್ಷಣಾಃ ।**
**ಯೇಷಾಂ ಧರ್ಮಕಥಾಂಗತ್ವಂ ಭಾರತೀ ಪ್ರತಿಪದ್ಯತೇ ॥ ೬೨ ॥**

ಯಾರ ವಚನವು ಧರ್ಮಕಥೆಗೆ ಅಂಗವಾಗಿದೆಯೋ ಅವರೇ ಲೋಕದಲ್ಲಿ ಕವಿಗಳು. ಅವರೇ ವಿದ್ವಾಂಸರು.

**ಧರ್ಮಾನುಬಂಧಿನೀ ಯಾ ಸ್ಯಾತ್ಕವಿತಾ ಸೈವ ಶಸ್ಯತೇ ।**
**ಶೇಷಾ ಪಾಪಾಸ್ರವಾಯೈವ ಸುಪ್ರಯುಕ್ತಾಪಿ ಜಾಯತೇ ॥ ೬೩ ॥**

ಯಾವ ಕವಿತೆಯು ಧರ್ಮಸಂಬಂಧಿಯಾಗಿದೆಯೋ ಅದೇ ಪ್ರಶಂಸನೀಯವಾದುದು. ಬಾಕಿ ಕವಿತೆಯು ಚೆನ್ನಾಗಿ ರಚಿಸಲ್ಪಟ್ಟಿದ್ದರೂ ಪಾಪಾಸ್ರವಕ್ಕೇ ಕಾರಣವು.

೧ ಸಿದ್ಧಾಂತವ್ಯಾಖ್ಯಾನಾನಾಂ, ಕರ್ಮಣಿ ಷಷ್ಠೀ. ೨ ವೇಧಸಃ. ೩ ಭೃಶಂ ಪುನಃಪುನರ್ವಾ ನಮಾಮಿ, ಶ್ಲೋಕಚತುಷ್ಟಯೇನ ಶ್ರೀವೀರಸೇನಗುರುಸ್ತೋತ್ರಂ. ೪ ಕವಿಪರಮೇಷ್ಠೀ. ೫ ಶಬ್ದಾರ್ಥಸಂಗ್ರಹಂ. ೬ ಚತುರ್ವಿಂಶತಿಪುರಾಣಂ. ೭ ಸಂಕ್ಷಿಪ್ತಮಕರೋತ್. ೮ ನಾಮಮಾತ್ರೇಣ ಸಂಕೀರ್ತಯಿತುಂ ಸಮರ್ಥಃ.

**ಕೇಚಿನ್ಮಿಥ್ಯಾದೃಶಃ ಕಾವ್ಯಂ ಗ್ರಥ್ನಂತಿ ಶ್ರುತಿಪೇ[೧]ಶಲಮ್ ।**
**[೨]ತತ್ತ್ವಧರ್ಮಾನುಬಂಧಿತ್ವಾನ್ನಸತಾಂ ಪ್ರೀಣನಕ್ಷಮಮ್ ॥ ೬೪ ॥**

ಕೆಲವು ಮಿಥ್ಯಾದೃಷ್ಟಿಗಳು ಕಿವಿಗಳಿಗಿಂಪಾದ ಕಾವ್ಯವನ್ನು ರಚಿಸುತ್ತಾರೆ. ಅದು ವಿಶೇಷವಾಗಿ ಅಧರ್ಮವನ್ನುಂಟುಮಾಡುವುದರಿಂದ ಸತ್ಪುರುಷರನ್ನು ಸಂತೋಷಪಡಿಸುವುದಕ್ಕೆ ಸಮರ್ಥವಾದುದಲ್ಲ.

**[೩]ಅವ್ಯುತ್ಪನ್ನತರಾಃ ಕೇಚಿತ್ಕವಿತ್ವಾಯ ಕೃತೋದ್ಯಮಾಃ ।**
**ಪ್ರಯಾಂತಿ ಹಾಸ್ಯತಾಂ ಲೋಕೇ ಮೂಕಾ ಇವ ವಿವಕ್ಷವಃ ॥ ೬೫ ॥**

ಅವ್ಯುತ್ಪನ್ನರು (ಮೂರ್ಖರು) ಕೆಲವರು ಕವಿತೆಯನ್ನು ಮಾಡುವುದಕ್ಕೆ ಪ್ರಯತ್ನಪಟ್ಟು, ಮಾತನಾಡಲಿಚ್ಛಿಸುವ ಮೂಗರಂತೆ, ಲೋಕದಲ್ಲಿ ಹಾಸ್ಯಕ್ಕೆ ಪಾತ್ರರಾಗುತ್ತಾರೆ.

**ಕೇಚಿದನ್ಯವಚೋಲೇಶಾನಾದಾಯ ಕವಿಮಾನಿನಃ ।**
**ಛಾಯಾಮಾರೋಪಯಂತ್ಯನ್ಯಾಂ ವಸ್ತ್ರೇಷ್ವಿವ ವಣಿಗ್ಬ್ರುವಾಃ ॥ ೬೬ ॥**

ಬೇರೆ ಅಂಗಡಿಗಳಿಂದ ಬಟ್ಟೆಗಳನ್ನು ತಂದಿಟ್ಟುಕೊಂಡು ಮಾರುವವರು ತಾವೂ ವರ್ತಕರೆಂದು ಹೇಳಿಸಿಕೊಳ್ಳುವಂತೆ, ತಾವು ಕವಿಗಳೆಂದು ಅಹಂಕಾರಪಡುವ ಕೆಲವರು ಬೇರೆಯವರ ಕವಿತೆಯ ಸ್ವಲ್ಪಭಾಗವನ್ನು ತೆಗೆದುಕೊಂಡು ಬೇರೆ ತಾತ್ಪರ್ಯವನ್ನು ಕಲ್ಪಿಸುತ್ತಾರೆ.

**ಸಂಭೋಕ್ತುಮಕ್ಷಮಾಃ ಕೇಚಿತ್ಸ್ವರ[೪]ಸಾತ್ ಕೃತಿಕಾಮಿನೀಮ್ ।**
**ಸಹಾಯಾನ್ಕಾಮಯಂತೇನ್ಯಾನ[೫]ಕಲ್ಯಾ ಇವ ಕಾಮುಕಾಃ ॥ ೬೭ ॥**

ಕೆಲವರು ಸ್ವಸಾಮರ್ಥ್ಯದಿಂದ ಕವಿತೆಯೆಂಬ ಕಾಮಿನಿಯನ್ನು ಸಂಭೋಗಿಸಲಸಮರ್ಥರಾಗಿ, ರೋಗಿಗಳಾದ ಅಥವಾ ಪುಂಸ್ತ್ವರಹಿತರಾದ ಕಾಮುಕರಂತೆ (ಕಲ್ಯೋನೀರೋಗದಕ್ಷಯೋಃ ನಾ.ರ.ಮಾ) ಅನ್ಯರಸಹಾಯ ವನ್ನಿಚ್ಛಿಸುತ್ತಾರೆ.

**ಕೇಚಿದನ್ಯಕೃತೈರರ್ಥೈಃ ಶಬ್ದೈಶ್ಚ [೬]ಪರಿವರ್ತಿತೈಃ ।**
**[೭]ಪ್ರಸಾರಯಂತಿ ಕಾವ್ಯಾರ್ಥಾನ್ಪ್ರತಿ[೮]ಶಿಷ್ಟ್ಯೇವ ವಾಣಿಜಾಃ ॥ ೬೮ ॥**

ವ್ಯಾಪಾರಿಗಳು ಮಾರಾಟಕ್ಕೆ ಸಾಮಾನುಗಳನ್ನು ತಂದು ಅದಕ್ಕೆ ಸದೃಶವಾದ ಬೇರೆ ಪದಾರ್ಥಗಳನ್ನು ಸೇರಿಸಿ ರೂಪಾಂತರಮಾಡಿ ಮಾರುವಂತೆ ಕೆಲವು ಕವಿಗಳು ಬೇರೆಯವರ ಕವಿತೆಯ ಅರ್ಥಗಳನ್ನೂ ಶಬ್ದಗಳನ್ನೂ ಬದಲಾಯಿಸಿ ಕಾವ್ಯಾರ್ಥಗಳನ್ನು ಪ್ರಸಿದ್ಧಪಡಿಸುತ್ತಾರೆ.

**ಕೇಚಿದ್ವರ್ಣೋಜ್ಜ್ವಲಾಂ ವಾಣೀಂ ರಚಯಂತ್ಯರ್ಥದುರ್ಬಲಾಮ್ ।**
**[೯]ಜಾತುಷೀ ಕಂಠಿಕೇವಾಸೌ [೧೦]ಛಾಯಾಮ್ಯಚ್ಛತಿನೋ[೧೧]ಚ್ಛಿಖಾಮ್ ॥**

ಕೆಲವರು ಸುಂದರವಾದ ಅಕ್ಷರಗಳುಳ್ಳ ವಚನವನ್ನು ರಚಿಸುತ್ತಾರೆ. ಅದರಲ್ಲಿ ಅರ್ಥಗಾಂಭೀರ್ಯವಿರುವುದಿಲ್ಲ. ಇದು ಅರಗಿನ ಮಣಿಗಳಿಂದ ಮಾಡಿದ ಕಂಠಾಭರಣದಂತೆ, ಉತ್ಕೃಷ್ಟವಾದ ಶೋಭೆಯನ್ನು ಹೊಂದುವುದಿಲ್ಲ.

**ಕೇಚಿದ[೧೨]ರ್ಥಮಪಿ ಪ್ರಾಪ್ಯ ತದ್ಯೋಗ್ಯ[೧೩]ಪದಯೋಜನೈಃ ।**
**ನ ಸತಾಂ ಪ್ರೀಣನಾಯಾಲಂ ಲುಬ್ಧಾಲಬ್ಧಶ್ರಿಯೋ ಯಥಾ ॥ ೭೦ ॥**

೧ ಸುಭಗಂ. ೨ ವಿಶೇಷೇ ಅವಧಾರಣೇ ವಾ ತುಶಬ್ದಃ. ೩ ಶಬ್ದಧರ್ಮಾರ್ಥಕಾಮಾದಿ ಶಾಸ್ತ್ರೇಷ್ವಾಮ್ನಾಯಪೂರ್ವಿಕಾ । ಪ್ರತಿಪತ್ತಿರಸಾಮಾನ್ಯಾ ವ್ಯುತ್ಪತ್ತಿರಭಿಧೀಯತೇ. ೪ ಸ್ವಸಾಮರ್ಥ್ಯಾತ್. ೫ ಪುಂಸ್ತ್ವರಹಿತಾಃ. ೬ ಪ್ರಕಾರಾಂತರಂನೀತೈಃ. ೭ ಅತ್ಯಂತಂ ರಚಯಂತಿ. ೮ ಪ್ರತಿನಿಧಿವ್ಯವಹಾರೇಣ. ೯. ಜತುಮಣಿನಿರ್ವೃತ್ತಾ. ೧೦ ಕಾಂತಿಂ. ೧೧ ಪ್ರಕಟಲಹರಿಯುಕ್ತಾಂ. ೧೨ ಅಭಿಪ್ರಾಯಂ ಧನಂ ಚ. ೧೩ ವರ್ಣಸಮುದಾಯಸ್ಯ ಸ್ಥಾನಸ್ಯ ಚ ಯೋಜನೈಃ.

ಕೆಲವರು ಅರ್ಥವನ್ನು ಹೊಂದಿದರೂ ಅದಕ್ಕೆ ಯೋಗ್ಯವಾದ ಪದ ಸಂಯೋಜನೆಯಿಲ್ಲದಿರುವುದರಿಂದ, ದಾನಪೂಜಾದಿಗಳನ್ನು ಮಾಡದೆ ಹಣವನ್ನು ಗಳಿಸಿಟ್ಟ ಲೋಭಿಗಳಂತೆ, ಸತ್ಪುರುಷರನ್ನು ಸಂತೋಷಪಡಿಸಲಾರರು.

**ಯಥೇಷ್ಟಂ ಪ್ರಕೃ[೧]ತಾರಂಭಾಃ ಕೇಚಿನ್ನಿರ್ವಹಣಾಕುಲಾಃ ।**
**ಕವಯೋ ಬತ ಸೀದಂತಿ ಕರಾಕ್ರಾಂತ[೨]ಕುಡುಂಬಿವತ್ ॥ ೭೧ ॥**

ಕೆಲವು ಕವಿಗಳು ಕವಿತೆಯನ್ನು ಯಥೇಚ್ಛವಾಗಿ ಪ್ರಾರಂಭಿಸಿ ನಿರ್ವಹಿಸಲಸಮರ್ಥರಾಗಿ, ಕೃಷೀವಲ(ರೈತ)ನು ಕಂದಾಯವನ್ನು ಕೊಡಲಾರದೆ ದುಃಖಪಡುವಂತೆ, ದುಃಖಪಡುತ್ತಾರೆ.

**ಆಪ್ತ[೩]ಪಾಶಮತಾನ್ಯನ್ಯೇ ಕವಯಃ ಪೋಷಯಂತ್ಯಲಮ್ ।**
**ಕುಕವಿತ್ವಾದ್ವರಂ ತೇಷಾಮಕವಿತ್ವಮು[೪]ಪಾಸಿತಮ್ ॥ ೭೨ ॥**

ಇನ್ನು ಕೆಲವು ಕವಿಗಳು ಮಿಥ್ಯಾಮತಗಳನ್ನು ಹೆಚ್ಚಾಗಿ ಪುಷ್ಟೀಕರಿಸುತ್ತಾರೆ. ಅಂತಹ ವಿಷಯಗಳನ್ನು ವರ್ಣಿಸಿ ಅವರು ಕುಕವಿಗಳೆಂದು ಹೇಳಿಸಿಕೊಳ್ಳುವುದಕ್ಕಿಂತಲೂ ಕವಿತೆಯನ್ನು ಮಾಡದಿರುವುದು ಲೇಸು.

**ಅನಭ್ಯಸ್ತಮಹಾವಿದ್ಯಾಃ ಕಲಾಶಾಸ್ತ್ರಬಹಿಷ್ಕೃತಾಃ ।**
**ಕಾವ್ಯಾನಿ ಕರ್ತುಮೀಹಂತೇ ಕೇಚಿತ್ಪಶ್ಯತ [೫]ಸಾಹಸಮ್ ॥ ೭೩ ॥**

ಮಹಾವಿದ್ಯೆಗಳನ್ನಭ್ಯಾಸಮಾಡದಿರುವವರೂ ಕಲಾಶಾಸ್ತ್ರಗಳ ಪರಿಜ್ಞಾನವಿಲ್ಲದವರೂ ಆದ ಬೇರೆ ಕೆಲವರು ಕಾವ್ಯಗಳನ್ನು ಮಾಡಲಿಚ್ಛಿಸುತ್ತಾರೆ. ಅವರ ಸಾಹಸವನ್ನು ನೋಡಿ !

**ತಸ್ಮಾದಭ್ಯಸ್ಯ ಶಾಸ್ತ್ರಾರ್ಥಾನುಪಾಸ್ಯ ಚ ಮಹಾಕವೀನ್ ।**
**ಧರ್ಮ್ಯಂ [೬]ಶಸ್ಯಂ [೭]ಯಶಸ್ಯಂ ಚ ಕಾವ್ಯಂ ಕುರ್ವಂತು ಧೀಧನಾಃ ॥**

ಆದುದರಿಂದ ಬುದ್ಧಿಶಾಲಿಗಳು ಶಾಸ್ತ್ರಾರ್ಥಗಳನ್ನು ಅಭ್ಯಾಸಮಾಡಿ, ಮಹಾಕವಿಗಳ ಉಪಾಸನೆಯನ್ನೂ ಮಾಡಿ ಧರ್ಮಸಂಬಂಧಿಯೂ, ಪ್ರಶಂಸಾರ್ಹವೂ ಕೀರ್ತಿಯನ್ನುಂಟುಮಾಡುವುದೂ ಆದ ಕಾವ್ಯವನ್ನು ಮಾಡಲಿ.

**ಪರೇಷಾಂ ದೂಷಣಾಜ್ಜಾತು ನ ಬಿಭೇತಿ ಕವೀಶ್ವರಃ ।**
**ಕಿಮುಲೂಕಭಯಾದ್ಧುನ್ವನ್ ಧ್ವಾಂತಂ ನೋದೇತಿ ಭಾನುಮಾನ್ ॥**

ಕವಿಶ್ರೇಷ್ಠನು ಪರರದೂಷಣೆಗೆ ಎಂದೂ ಹೆದರುವುದಿಲ್ಲ. ಕತ್ತಲೆಯನ್ನು ದೂರಮಾಡುವ ಸೂರ್ಯನು ಗೂಬೆಯ ಭಯದಿಂದ ಉದಯಿಸುವುದಿಲ್ಲವೇ ?

**ಪರೇ ತುಷ್ಯಂತು ವಾ ಮಾ ವಾ ಕವಿಃ ಸ್ವಾರ್ಥಂ[೮]ಪ್ರತೀಹತಾಮ್ ।**
**ನ ಪರಾರಾಧನಾಚ್ಛ್ರೇಯಃ ಶ್ರೇಯಃ ಸನ್ಮಾರ್ಗದೇಶನಾತ್ ॥ ೭೬ ॥**

ಅನ್ಯರು ಸಂತೋಷಪಡಲಿ ಅಥವಾ ಪಡದಿರಲಿ, ಕವಿಯು ತನ್ನ ಪ್ರಯೋಜನವನ್ನಿಚ್ಛಿಸಬೇಕು. ಶ್ರೇಯಸ್ಸು ಬೇರೆಯವರನ್ನು ಸಂತೋಷಪಡಿಸುವುದರಿಂದಲ್ಲ. ಅದು ಸನ್ಮಾರ್ಗವನ್ನುಪದೇಶಮಾಡುವುದರಿಂದಿದೆ.

**ಪುರಾಣಕವಯಃ ಕೇಚಿತ್ಕೇಚನ್ನವಕವೀಶ್ವರಾಃ ।**
**ತೇಷಾಂ[೯]ಮತಾನಿ ಭಿನ್ನಾನಿ ಕಸ್ತದಾರಾಧನೇ ಕ್ಷಮಃ ॥ ೭೭ ॥**

ಪ್ರಾಚೀನಕವಿಗಳ ಅಭಿಪ್ರಾಯಗಳೂ ನವೀನಕವಿಗಳ ಅಭಿಪ್ರಾಯಗಳೂ ಬೇರೆ ಬೇರೆಯಾಗಿವೆ. ಅವನ್ನೆಲ್ಲಾ ಅನುಸರಿಸಿ ಕವಿತೆಯನ್ನು ಮಾಡಲು ಯಾರು ಸಮರ್ಥರು ?

೧ ಕವಿತ್ವೇ ಕೃತಪ್ರಾರಂಭಾಃ. ೨ ಕೃಷೀವಲವತ್, ಕುಟುಂಬಿವದಿತ್ಯಪಿ ಪಾಠಃ. ೩ ಕುತ್ಸಿತಾಪ್ತಮತಾನಿ. ೪ ಸ್ವೀಕೃತಂ. ೫ ಸಾಮರ್ಥ್ಯಂ. ೬ ಸ್ತುತ್ಯಂ. ೭ ಯಶಸ್ಕರಂ. ೮ ವಾಂಛತು. ೯ ಅಭಿಪ್ರಾಯಾಃ.

**ಕೇಚಿತ್ಸೌಶಬ್ದ್ಯಮಿಚ್ಛಂತಿ ಕೇಚಿದರ್ಥಸ್ಯ ಸಂಪದಮ್ ।**
**ಕೇಚಿತ್ಸಮಾಸಭೂಯಸ್ತ್ವಂ ಪರೇ ವ್ಯಸ್ತಾಂ ಪದಾವಲೀಮ್ ॥ ೭೮ ॥**

ಕೆಲವರು ಉತ್ತಮವಾದ ಶಬ್ದಗಳನ್ನಪೇಕ್ಷಿಸುತ್ತಾರೆ. ಕೆಲವರು ಅರ್ಥಚಮತ್ಕಾರವನ್ನಿಚ್ಛಿಸುತ್ತಾರೆ. ಕೆಲವರು ಸಮಾಸ ಹೆಚ್ಚಾಗಿರುವುದನ್ನಪೇಕ್ಷಿಸುತ್ತಾರೆ. ಇನ್ನುಕೆಲವರು ವಿರಳವಾದ ಪದಸಮೂಹವನ್ನಿಚ್ಛಿಸುತ್ತಾರೆ.

**ಮೃದುಬಂಧಾರ್ಥಿನಃ ಕೇಚಿ[೧]ತ್ಸ್ಫುಟಬಂಧೈಷಿಣಃ ಪರೇ ।**
**ಮಧ್ಯಮಾಃ ಕೇಚಿದನ್ಯೇಷಾಂ ರುಚಿರನ್ಯೈವ ಲಕ್ಷ್ಯತೇ ॥ ೭೯ ॥**

ಕೆಲವರು ಮೃದುವಾದ ಕವಿತೆಯನ್ನಿಚ್ಛಿಸುತ್ತಾರೆ. ಬೇರೆಯವರು ಶ್ಲೇಷಯುಕ್ತವಾದ ಕವಿತ್ವವನ್ನಪೇಕ್ಷಿಸುತ್ತಾರೆ. ಕೆಲವರು ಮಧ್ಯಮಸ್ಥಿತಿಯ ಕವಿತೆಯನ್ನಿಚ್ಛಿಸುತ್ತಾರೆ. ಇನ್ನು ಕೆಲವರ ಅಭಿರುಚಿಯು ವಿಲಕ್ಷಣವಾಗಿಯೇ ತೋರುತ್ತಿದೆ.

**ಇತಿ ಭಿನ್ನಾಭಿ[೨]ಸಂಧಿತ್ವಾದ್ದು[೩]ರಾರಾಧ್ಯಾ ಮನೀಷಿಣಃ ।**
**[೪]ಪೃಥಗ್ಜನೋಽಪಿ ಸೂಕ್ತಾನಾಮನಭಿಜ್ಞಃ[೫]ಸುದುರ್ಗ್ರಹಃ ॥ ೮೦ ॥**

ಹೀಗೆ ಭಿನ್ನಭಿನ್ನಾಭಿಪ್ರಾಯಗಳಿರುವುದರಿಂದ ಪ್ರಾಜ್ಞರನ್ನು ಆರಾಧಿಸು(ಸಂತೋಷಪಡಿಸು)ವುದು ಕಷ್ಟ. ಒಳ್ಳೆಯ ಮಾತುಗಳನ್ನು ತಿಳಿಯಲಸಮರ್ಥನಾದ ಮೂರ್ಖನನ್ನು ಸಂತೋಷಪಡಿಸುವುದಂತು ಬಹಳ ಕಷ್ಟ.

**ಸತೀಮಪಿ ಕಥಾಂ ರಮ್ಯಾಂ ದೂಷಯಂತ್ಯೇವ ದುರ್ಜನಾಃ ।**
**ಭುಜಂಗಾ ಇವ ಸಚ್ಛಾಯಾಂ ಚಂದನದ್ರುಮ[೬]ಮಂಜರೀಮ್ ॥ ೮೧ ॥**

ಸರ್ಪಗಳು ಸುಂದರವಾದ ಚಂದನವೃಕ್ಷದ ಹುವ್ವಿನ ಗೊಂಚಲನ್ನು ದೂಷಿತವನ್ನಾಗಿ ಮಾಡುವಂತೆ, ದುರ್ಜನರು ಮನೋಹರವಾದ ಉತ್ತಮ ಕಥೆಯನ್ನು ಕೂಡ ಅವಶ್ಯವಾಗಿ ದೂಷಿಸುತ್ತಾರೆ.

**ಸದೋಷಾಮಪಿ ನಿರ್ದೋಷಾಂ ಕರೋತಿ ಸುಜನಃ ಕೃತಿಮ್ ।**
**[೭]ಘನಾತ್ಯಯ ಇವಾಪಂಕಾಂ ಸರಸೀಂ ಪಂಕದೂಷಿತಾಮ್ ॥ ೮೨ ॥**

ಶರತ್ಕಾಲವು ಕೆಸರುಳ್ಳ ಸರೋವರವನ್ನು ಕೂಡ ಕೆಸರಿಲ್ಲದ್ದನ್ನಾಗಿ ಮಾಡುವಂತೆ, ಸತ್ಪುರುಷನು ಸದೋಷವಾದ ಕಾವ್ಯವನ್ನು ಕೂಡ ನಿರ್ದೋಷವನ್ನಾಗಿ ಮಾಡುತ್ತಾನೆ.

**ದುರ್ಜನಾ ದೋಷಮಿಚ್ಛಂತಿ ಗುಣಮಿಚ್ಛಂತಿ ಸಜ್ಜನಾಃ ।**
**ಸ ತೇಷಾಂ ಕ್ಷೇ[೮]ತ್ರಜೋ ಭಾವೋ ದು[೯]ಶ್ಚಿಕಿತ್ಸ್ಯಶ್ಚಿರಾದಪಿ ॥ ೮೩ ॥**

ದುರ್ಜನರು ದೋಷವನ್ನಿಚ್ಛಿಸುತ್ತಾರೆ. ಸಜ್ಜನರು ಗುಣವನ್ನಪೇಕ್ಷಿಸುತ್ತಾರೆ. ಅದು ಅವರ ಶರೀರಜನ್ಯವಾದ ಸ್ವಭಾವವಾಗಿದೆ. ಬಹುಕಾಲ ಪ್ರಯತ್ನಪಟ್ಟರೂ ಆ ಸ್ವಭಾವವನ್ನು ತಪ್ಪಿಸುವುದು ಕಷ್ಟ.

**ಯತೋ ಗುಣಧನಾಃ ಸಂತೋ ದುರ್ಜನಾ ದೋಷವಿತ್ತಕಾಃ ।**
**ಸ್ವಂ ಧನಂ ಗೃಹ್ಣತಾಂ ತೇಷಾಂ ಕಃ [೧೦]ಪ್ರತ್ಯರ್ಥೀ ಬುಧೋ ಜನಃ ॥**

ಸತ್ಪುರುಷರು ಗುಣವೆಂಬ ದ್ರವ್ಯವುಳ್ಳವರು. ದುರ್ಜನರು ದೋಷವೆಂಬ ಹಣವುಳ್ಳವರು. ತಂತಮ್ಮ ದ್ರವ್ಯಗಳನ್ನು ತೆಗೆದುಕೊಳ್ಳುತ್ತಿರುವ ಆ ಸುಜನ ದುರ್ಜನರನ್ನು ಯಾವ ವಿವೇಕಿಯು ತಾನೆ ತಡೆಯುತ್ತಾನೆ ? ಅವರವರ ಸ್ವಭಾವವನ್ನು ಯಾರೂ ತಪ್ಪಿಸಲಾರರೆಂದು ಭಾವವು.

೧ ಶ್ಲಿಷ್ಟ (ಗೌಣ) ಬಂಧೈಷಿಣಃ. ೨ ಅಭಿಪ್ರಾಯತ್ವಾತ್. ೩ ದುರಾರಾಧಾ ಇತ್ಯಪಿ ಪಾಠಃ. ೪ ಮೂರ್ಖನೀಚೌ ಪೃಥಗ್ಜನೌ. ೫ ಮಹತಾ ಕಷ್ಟೇನ ಗೃಹೀತುಂ ಶಕ್ಯಃ. ೬ ವಲ್ಲರೀಂ. ೭ ಶರತ್ಕಾಲಃ. ೮ ಶರೀರಜಃ, ಕ್ಷೇತ್ರಂ ಪತ್ನೀಶರೀರಯೋಃ. ೯ ಪರಿಹರ್ತುಮಶಕ್ಯಃ. ೧೦ ಪ್ರತಿಕೂಲವಾನ್.

**ದೋಷಾನ್ ಗೃಹ್ಣಂತು ವಾ ಕಾಮಂ ಗುಣಾಸ್ತಿಷ್ಠಂತು ನಃ ಸ್ಫುಟಮ್ ।**
**ಗೃಹೀತದೋಷಂ ಯತ್ಕಾವ್ಯಂ ಜಾಯತೇ ತದ್ಧಿ [೧]ಪುಷ್ಕಲಮ್ ॥ ೮೫ ॥**

ಅಥವಾ ದುರ್ಜನರು ದೋಷಗಳನ್ನು ಯಥೇಚ್ಛರಾಗಿ ಪರಿಗ್ರಹಿಸಿಲಿ. ಗುಣಗಳು ನಮಗಿರಲಿ. ಕಾವ್ಯದಲ್ಲಿರುವ ದೋಷಗಳನ್ನು ತೆಗೆದುಬಿಟ್ಟರೆ ಆ ಕಾವ್ಯವು ಮನೋಹರವಾಗುವುದು.

**ಅಸತಾಂ[೨]ದೂಯತೇ ಚಿತ್ತಂ ಶ್ರುತ್ವಾ ಧರ್ಮಕಥಾಂ ಸತೀಮ್ ।**
**ಮಂತ್ರವಿದ್ಯಾಮಿವಾಕರ್ಣ್ಯ ಮಹಾಗ್ರಹವಿಕಾರಿಣಾಮ್ ॥ ೮೬ ॥**

ದೊಡ್ಡಭೂತ ಹಿಡಿದವರ ಮನಸ್ಸು ಮಂತ್ರವಿದ್ಯೆಯನ್ನು ಕೇಳಿ ದುಃಖಿಸುವಂತೆ, ದುರ್ಜನರ ಮನಸ್ಸು ಉತ್ತಮವಾದ ಧರ್ಮಕಥೆಯನ್ನು ಕೇಳಿ ದುಃಖಿಸುತ್ತದೆ.

**ಮಿಥ್ಯಾತ್ವದೂಷಿತಧಿಯಾಮರುಚ್ಯಂ ಧರ್ಮಭೇಷಜಮ್ ।**
**ಸದಪ್ಯಸದಿವಾಭಾತಿ ತೇಷಾಂ ಪಿತ್ತಜುಷಾಮಿವ ॥ ೮೭ ॥**

ಪಿತ್ತಪ್ರಕೋಪವುಳ್ಳವರಿಗೆ ಒಳ್ಳೆಯ ಪದಾರ್ಥವಾದರೂ ಕೆಟ್ಟದಾಗಿ ತೋರುವಂತೆ ಮಿಥ್ಯಾತ್ವದಿಂದ ಮಲಿನವಾದ ಮನಸ್ಸುಳ್ಳವರಿಗೆ ಧರ್ಮವೆಂಬ ಔಷಧಿಯು ರುಚಿಸುವುದಿಲ್ಲ. ಯಥಾರ್ಥವಾದ ವಸ್ತುಸ್ವರೂಪವು ವಿಪರೀತವಾಗಿ ತೋರುವುದು.

**ಸುಭಾಷಿತಮಹಾಮಂತ್ರಾನ್ ಪ್ರಯುಕ್ತಾನ್ಕವಿಮಂತ್ರಿಭಿಃ ।**
**ಶ್ರುತ್ವಾ ಪ್ರಕೋಪಮಾಯಾಂತಿ ದುರ್ಗ್ರಹಾ ಇವ ದುರ್ಜನಾಃ ॥ ೮೮ ॥**

ದುಷ್ಟಗ್ರಹಪೀಡಿತರು ಮಂತ್ರವನ್ನು ಕೇಳಿ ಕೋಪಿಸಿಕೊಳ್ಳುವಂತೆ ಕವಿಗಳೆಂಬ ಮಂತ್ರಿಕರು ಪ್ರಯೋಗಿಸಿದ ಸುಭಾಷಿತಗಳೆಂಬ ಮಹಾಮಂತ್ರಗಳನ್ನು ಕೇಳಿ ದುರ್ಜನರು ಕೋಪಗೊಳ್ಳುತ್ತಾರೆ.

**ಚಿರ[೩]ಪ್ರರೂಢದುರ್ಗ್ರಂಥಿವೇಣುಮೂಲಸಮೋನ್ಯಜುಃ ।**
**ನರ್ಜೂಕರ್ತುಂ ಖಲಃ ಶಕ್ಯಃ ಶ್ವಪುಚ್ಛಸದೃಶೋಥ ವಾ ॥ ೮೯ ॥**

ಬಹುಕಾಲದಿಂದ ಬೆಳೆದು ಗಂಟುಕಟ್ಟಿರುವ ಬಿದಿರಿನಬುಡದಂತೆಯೂ ನಾಯಿಯ ಬಾಲದಂತೆಯೂ ದುಷ್ಟರನ್ನು ಸರಿಪಡಿಸುವುದು ಕಷ್ಟ.

**ಸುಜನಃಸುಜನೀಕರ್ತುಮಶಕ್ತೋ ಯಚ್ಚಿರಾದಪಿ ।**
**ಖಲಃ ಖಲೀಕರೋತ್ಯೇವ ಜಗದಾಶು ತದದ್ಭುತಮ್ ॥ ೯೦ ॥**

ಸತ್ಪುರುಷನು ಲೋಕವನ್ನು ತನ್ನಂತೆ ಸುಜನವನ್ನಾಗಿ ಮಾಡಲು ಬಹುಕಾಲ ಪ್ರಯತ್ನಪಟ್ಟರೂ ಅವನು ಸಮರ್ಥನಲ್ಲವು. ದುಷ್ಟನಾದರೋ ಶೀಘ್ರವಾಗಿ ಲೋಕವನ್ನು ದುಷ್ಟವನ್ನಾಗಿ ಮಾಡುತ್ತಾನೆ. ಅದು ಆಶ್ಚರ್ಯವಾಗಿದೆ.

**ಸೌಜನ್ಯಸ್ಯ ಪರಾಕೋಟಿರನ[೪]ಸೂಯಾ ದಯಾಲುತಾ ।**
**ಗುಣಪಕ್ಷಾನುರಾಗಶ್ಚ ದೌರ್ಜನ್ಯಸ್ಯ ವಿಪರ್ಯಯಃ ॥ ೯೧ ॥**

ಗುಣಗಳಲ್ಲಿ ದೋಷಾರೋಪಣೆಯನ್ನು ಮಾಡದಿರುವುದೂ ದಯಾಭಾವವೂ ಗುಣವಂತರಲ್ಲಿ ಪ್ರೀತಿಯೂ ಇವು ಸುಜನತ್ವದ ಕೊನೆಯ ಅವಧಿಗಳು. ಇದಕ್ಕೆ ವಿಪರೀತವಾಗಿರುವುದು ದುರ್ಜನತ್ವದ ಕೊನೆಯ ಅವಧಿಯು.

**ಸ್ವಭಾವಮಿತಿ ನಿಶ್ಚಿತ್ಯ ಸುಜನಸ್ಯೇತರಸ್ಯ ಚ ।**
**ಸುಜನೇಷ್ವನುರಾಗೋ[೫]ನೋ ದುರ್ಜನೇಷ್ವವಧೀರಣಾ ॥ ೯೨ ॥**

೧ ಮನೋಜ್ಞಂ. ೨ ಉಪತಪ್ತಂ ಜಾಯತೇ. ೩ ಉದ್ಭೂತ. ೪ ಗುಣೇಷು ದೋಷಾರೋಪ್ತೋ ಅಸೂಯಾ, ತಸ್ಯಾ ಅಭಾವಃ. ೫ ಅಸ್ಮಾಕಂ.

ಇದು ಸುಜನದುರ್ಜನರ ಸ್ವಭಾವವೆಂದು ನಿಶ್ಚಯಿಸಿ ನಮಗೆ ಸುಜನರಲ್ಲಿ ಪ್ರೀತಿಯು. ದುರ್ಜನರಲ್ಲಿ ತಿರಸ್ಕಾರವು.

**ಕವೀನಾಂ ಕೃತಿನಿರ್ವಾಹೇ [೧]ಸತೋ ಮತ್ವಾವಲಂಬನಮ್ ।**
**ಕವಿತಾಂಭೋಧಿ[೨]ಮುದ್ವೇಲಂ [೩]ಲಿಲಂಘಯಿಷುರಸ್ಮ್ಯಹಮ್ ॥ ೯೩ ॥**

ಕವಿಗಳ ಕೃತಿಯನ್ನು ನೆರವೇರಿಸುವುದರಲ್ಲಿ ಸತ್ಪುರುಷರನ್ನು ಹಸ್ತಾವಲಂಬನವನ್ನಾಗಿ ತಿಳಿದು ನಾನು ದಡವನ್ನು ಮೀರಿರುವ ಕವಿತೆಯೆಂಬ ಸಮುದ್ರವನ್ನು ದಾಟಲಿಚ್ಛೆಯುಳ್ಳವನಾಗಿದ್ದೇನೆ.

**ಕವೇ[೪]ರ್ಭಾವೋಥವಾ [೫]ಕರ್ಮ ಕಾವ್ಯಂ ತಜ್ಜ್ಞೈರ್ನಿರುಚ್ಯತೇ ।**
**ತತ್ಪ್ರತೀತಾರ್ಥಮ[೬]ಗ್ರಾಮ್ಯಂ ಸಾಲಂಕಾರಮ[೭]ನಾಕುಲಮ್ ॥ ೯೪ ॥**

ಕವಿಯ ಕವಿತೆಯನ್ನು ಮಾಡುವ ಶಕ್ತಿಯು ಅಥವಾ ಶಬ್ದಾರ್ಥರಚನಾರೂಪವಾದ ಕಾರ್ಯವು ಕಾವ್ಯವೆಂದು ಕವಿತೆಯನ್ನು ತಿಳಿದವರು ಹೇಳುತ್ತಾರೆ. ಅಂತಹ ಕಾವ್ಯವು ಪ್ರಸಿದ್ಧವಾದ ಅರ್ಥವುಳ್ಳದೂ ಗ್ರಾಮ್ಯ (ದುಷ್ಟವಾದ ಪ್ರಸಿದ್ಧಿ) ವಲ್ಲದುದೂ ಅಲಂಕಾರಯುಕ್ತವೂ ರಸಾಲಂಕಾರಗಳಿಂದ ಸಂಕುಚಿತವಲ್ಲದುದೂ ಆಗಿರಬೇಕು.

**ಕೇಚಿದರ್ಥಸ್ಯ ಸೌಂದರ್ಯಮಪರೇ ಪದಸೌ[೮]ಷ್ಠವಮ್ ।**
**[೯]ವಾಚಾಮಲಂಕ್ರಿಯಾಂ ಪ್ರಾಹುಸ್ತದ್ದ್ವಯಂ [೧೦]ನೋಮತಂ**
**[೧೧]ಮತಮ್ ॥ ೯೫ ॥**

ಕೆಲವರು ಕವಿಯ ವಾಕ್ಯಗಳಿಗೆ ಸುಂದರವಾದ ಅರ್ಥವು ಅಲಂಕಾರವೆಂದೂ ಬೇರೆಯವರು ವಿದ್ವಾಂಸರ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಪದಗಳು ಅಲಂಕಾರವೆಂದೂ ಹೇಳುತ್ತಾರೆ. ಆ ಎರಡು ಅಭಿಪ್ರಾಯಗಳೂ ನಮಗೆ ಸಮ್ಮತ (ಇಷ್ಟ)ವು.

**ಸಾಲಂಕಾರಮು[೧೨]ಪಾರೂಢರಸಮುದ್ಭೂತ[೧೩]ಸೌಷ್ಠವಮ್ ।**
**[೧೪]ಅನುಚ್ಛಿಷ್ಟಂ ಸತಾಂ ಕಾವ್ಯಂ ಸರಸ್ವತ್ಯಾಮುಖಾಯತೇ ॥ ೯೬ ॥**

ಅಲಂಕಾರಯುಕ್ತವೂ ಶೃಂಗಾರಾದಿ ರಸಭರಿತವೂ ಸಾಮ್ಯವುಳ್ಳದೂ ಬೇರೆಯವರ ಅಭಿಪ್ರಾಯರಹಿತವೂ ಆದ ಸತ್ಪುರುಷರ ಕಾವ್ಯವು ಸರಸ್ವತಿಗೆ ಮುಖದಂತಾಚರಿಸುತ್ತದೆ.

**ಅಸ್ಪೃಷ್ಟಬಂಧಲಾಲಿತ್ಯಮಪೇತಂ ರಸವತ್ತಯಾ ।**
**ನ ತತ್ಕಾವ್ಯಮ[೧೫]ತಿಗ್ರಾಮ್ಯಂ ಕೇವಲಂ ಕಟುಕರ್ಣಯೋಃ ॥ ೯೭ ॥**

ಯಾವ ಕಾವ್ಯದಲ್ಲಿ ಪದಲಾಲಿತ್ಯವೂ ಶೃಂಗಾರಾದಿರಸಗಳೂ ಇಲ್ಲವೋ ಅತ್ಯಂತಗ್ರಾಮ್ಯವಾದ ಅದು ಕಾವ್ಯವಲ್ಲ, ಕಿವಿಗಳಿಗೆ ಮಾತ್ರ ಕಠೋರವಾದುದು.

**ಸುಶ್ಲಿಷ್ಟಪದವಿನ್ಯಾಸಂ [೧೬]ಪ್ರಬಂಧಂ ರಚಯಂತಿ ಯೇ ।**
**[೧೭]ಶ್ರಾವ್ಯಬಂಧಂಪ್ರಸನ್ನಾರ್ಥಂ ತೇ ಮಹಾಕವಯೋ ಮತಾಃ ॥ ೯೮ ॥**

ಯಾರು ಉತ್ತಮವಾದ ಪದರಚನೆಯುಳ್ಳದೂ ಕೇಳುವುದಕ್ಕೆ ಮಧುರವೂ ಆನಂದವನ್ನುಂಟುಮಾಡುವ ಅರ್ಥಗಳುಳ್ಳದೂ ಆದ ಕಾವ್ಯವನ್ನು ರಚಿಸುತ್ತಾರೋ ಅವರು ಮಹಾಕವಿಗಳು.

೧ ಸತ್ಪುರುಷಾನ್. ೨ ವೇಲಾಮತಿಕ್ರಾಂತಂ. ೩ ವಿಲಂಘಯಿಷುರಿತ್ಯಪಿ ಪಾಠಃ. ೪ ಕಾವ್ಯನಿರ್ಮಾಣಶಕ್ತಿಃ. ೫ ಶಬ್ದಾರ್ಥರಚನಾರೂಪಂ ಕೃತ್ಯಂ. ೬ ದುಷ್ಪ್ರತೀತಿಕರಂ ಗ್ರಾಮ್ಯಂ. ೭ ರಸಾಲಂಕಾರೈರಸಂಕೀರ್ಣಂ. ೮ ಸಹೃದಹೃದಯಾಹ್ಲಾದಕತ್ವಂ. ೯ ವಾಕ್ಯಾನಾಂ. ೧೦ ಅಸ್ಮಾಕಂ. ೧೧ ಇಷ್ಟಂ. ೧೨ ಉದ್ಭೂತ. ೧೩ ಸಾಮ್ಯಂ. ೧೪ ಅನ್ಯಕವಿಭಾವರಹಿತಂ. ೧೫ ಇತೀತ್ಯಪಿ ಪಾಠಃ. ೧೬ ಕಾವ್ಯಂ. ೧೭ ಶ್ರವಣರಮಣೀಯಬಂಧಂ, ಶ್ರವ್ಯಬಂಧಮಿತ್ಯಪಿಪಾಠಃ.

**ಮಹಾಪುರಾಣಸಂಬಂಧಿ ಮಹಾನಾಯಕಗೋಚರಮ್ ।**
**ತ್ರಿವರ್ಗಫಲಸಂದರ್ಭಂ ಮಹಾಕಾವ್ಯಂ ತದಿಷ್ಯತೇ ॥ ೯೯ ॥**

ಬಹುಪ್ರಾಚೀನಕಾಲದ ಇತಿಹಾಸ ಮೊದಲಾದ ವಿಷಯಗಳುಳ್ಳುದೂ ತೀರ್ಥಂಕರರು ಮೊದಲಾದ ಮಹಾಪುರುಷರ ವರ್ಣನೆಯುಳ್ಳುದೂ ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗಗಳ ವರ್ಣನೆಯುಳ್ಳುದೂ ಆದ ಆ ಕಾವ್ಯವು ಮಹಾಕಾವ್ಯವೆನಿಸುವುದು.

**[೧]ನಿಸ್ತನ್ವನ್ನತಿಚಿಚ್ಛ್ಲೋಕಾನ್ಸರ್ವೋಽಪಿ ಕುರುತೇ ಕವಿಃ ।**
**ಪೂರ್ವಾಪರಾರ್ಥಘಟನೈಃ ಪ್ರಬಂಧೋ ದುಷ್ಕರೋ ಮತಃ ॥ ೧೦೦ ॥**

ಕೆಲವು ಪದ್ಯಗಳನ್ನು ಎಲ್ಲ ಕವಿಗಳೂ ಕಷ್ಟಪಟ್ಟು ಮಾಡುತ್ತಾರೆ. ಆದರೆ ಪೂರ್ವಾಪರ ಸಂಬಂಧಗಳಿಂದ ಕವಿತೆಯನ್ನು ಮಾಡುವುದು ಕಷ್ಟ.

**ಶಬ್ದರಾಶಿರಪರ್ಯಂತಃ ಸ್ವಾಧೀನೋಽರ್ಥಃ ಸ್ಫುಟಾ ರಸಾಃ ।**
**ಸುಲಭಾಶ್ಚ [೨]ಪ್ರತಿಚ್ಛಂದಾಃ ಕವಿತ್ವೇ ಕಾ ದರಿದ್ರತಾ ॥ ೧೦೧ ॥**

ಲೋಕದಲ್ಲಿ ಶಬ್ದರಾಶಿಯು ಅಪರಿಮಿತವಾಗಿದೆ. ಅರ್ಥವು ಸ್ವಾಧೀನವಾಗಿದೆ. ಶೃಂಗಾರಾದಿ ರಸಗಳು ಸ್ಪಷ್ಟವಾಗಿವೆ. ಪ್ರತಿರೂಪ (ಪ್ರತಿನಿಧಿ) ಗಳು ಸುಲಭವಾಗಿವೆ. ಹೀಗಿರುವಾಗ ಕವಿತೆಗೇನು ಬಡತನ ?

**[೩]ಪ್ರಯಾನ್ಮಹತಿ ವಾಙ್ಮಾರ್ಗೇ ಖಿನ್ನೋಽರ್ಥ[೪]ಗಹನಾಟನೈಃ ।**
**ಮಹಾಕವಿತರುಚ್ಛಾಯಾಂ ವಿಶ್ರಾಮಾಯಾಶ್ರಯೇತ್ಕವಿಃ ॥ ೧೦೨ ॥**

ವಚನವೆಂಬ ದೊಡ್ಡಮಾರ್ಗದಲ್ಲಿ ಹೋಗುವವನೂ ಅರ್ಥವೆಂಬ ಅರಣ್ಯದಲ್ಲಿ ಸಂಚಾರಮಾಡಿ ಖಿನ್ನನಾದವನೂ ಆದ ಕವಿಯು ವಿಶ್ರಮಿಸುವುದಕ್ಕೋಸ್ಕರ ಮಹಾಕವಿಗಳೆಂಬ ವೃಕ್ಷಗಳ ನೆರಳನ್ನಾಶ್ರಯಿಸಬೇಕು.

**[೫]ಪ್ರಜ್ಞಾಮೂಲೋಗುಣೋದಗ್ರಸ್ಕಂಧೋ ವಾಕ್ಪಲ್ಲವೋಜ್ಜ್ವಲಃ ।**
**ಮಹಾಕವಿತರುರ್ಧತ್ತೇ ಯಶಃಕುಸುಮಮಂಜರೀಮ್ ॥ ೧೦೩ ॥**

ಬುದ್ಧಿ (ಪ್ರತಿಭಾ) ಯೆಂಬ ಬೇರುಳ್ಳುದೂ, ಗುಣವೆಂಬ ಉನ್ನತವಾದ ಸ್ಕಂಧ (ದಿಂಡು) ವುಳ್ಳುದೂ, ವಚನವೆಂಬ ತಳಿರಿನಿಂದ ಪ್ರಕಾಶಿಸುವುದೂ ಆದ ಮಹಾಕವಿಯೆಂಬ ವೃಕ್ಷವು ಯಶಸ್ಸೆಂಬ ಹೂವಿನ ಗೊಂಚಲನ್ನು ಧರಿಸುತ್ತದೆ.

**ಪ್ರಜ್ಞಾವೇಲಃ ಪ್ರಸಾದೋರ್ಮಿರ್ಗುಣರತ್ನಪರಿಗ್ರಹಃ ।**
**ಮಹಾಧ್ವಾನಃ [೬]ಪೃಥುಸ್ರೋತಾಃ ಕವಿರಂಭೋ ನಿಧೀಯತೇ ॥ ೧೦೪ ॥**

ಬುದ್ಧಿಯೆಂಬ ದಡವುಳ್ಳವನೂ ಉಪಮಾದ್ಯಲಂಕಾರವೆಂಬ ತೆರೆಮಾಲೆಯುಳ್ಳವನೂ ಔದಾರ್ಯಾದಿಗುಣಗಳೆಂಬ ರತ್ನಗಳುಳ್ಳವನೂ ದೊಡ್ಡಶಬ್ದವುಳ್ಳವನೂ ಗುರುಪರಂಪರಾರೂಪವಾದ ಮಹಾಪ್ರವಾಹವುಳ್ಳವನೂ ಆದ ಕವಿಯು ಸಮುದ್ರದಂತಾಚರಿಸುತ್ತಾನೆ.

**ಯಥೋಕ್ತಮುಪಯುಂಜೀಧ್ವಂ ಬುಧಾಃ ಕಾವ್ಯರಸಾಯನಮ್ ।**
**ಯೇನ [೭]ಕಲ್ಪಾಂತರಸ್ಥಾಯಿ ವಪುರ್ವಃ ಸ್ಯಾದ್ಯಶೋಮಯಮ್॥ ೧೦೫ ॥**

ವಿದ್ವಾಂಸರುಗಳಿರಾ ! ನೀವು ಶಾಸ್ತ್ರೋಕ್ತರೀತಿಯಾಗಿ ಮಾಡಿದ ಕಾವ್ಯವೆಂಬ ರಸಾಯನವನ್ನು ಉಪಯೋಗಮಾಡಿ(ಸೇವಿಸಿ)ರಿ. ಇದರಿಂದ ನಿಮ್ಮ ಯಶೋರೂಪವಾದ ಶರೀರವು ಕಲ್ಪಕಾಲದವರೆಗೆ ಸ್ಥಿರವಾಗಿರುವುದು.

೧ ಗರ್ಜನ್, ಕ್ಲಿಶ್ಯನ್ನಿತ್ಯರ್ಥಃ. ೨ ಪ್ರತಿನಿಧಯಃ. ೩ ಗಚ್ಛನ್. ೪ ಕಾನನಂ. ೫ ತ್ರೈಕಾಲಿಕೀಬುದ್ಧಿಃ. ೬ ಅವಿಚ್ಛಿನ್ನಶಬ್ದಪ್ರವಾಹಃ. ೭ ಕಲ್ಪಾವಧಿ.

**ಯಶೋಧನಂ [೧]ಚಿಚೀಷೂರ್ಣಾಂ ಪುಣ್ಯಪಣ್ಯ[೨]ಪಣಾಯಿನಾಮ್ ।**
**ಪರಂ ಮೂಲ್ಯಮಿಹಾ[೩]ಮ್ನಾತಂ ಕಾವ್ಯಂ ಧರ್ಮಕಥಾಮಯಮ್ ॥**

ಯಶಸ್ಸೆಂಬ ದ್ರವ್ಯವನ್ನು ಸಂಗ್ರಹಿಸಬೇಕೆಂದು ಇಚ್ಛೆಯುಳ್ಳವರಿಗೂ ಪುಣ್ಯವೆಂಬ ವಸ್ತುವನ್ನು ಕ್ರಯಕ್ಕೆ ತೆಗೆದುಕೊಳ್ಳುವವರಿಗೂ ಧರ್ಮಕಥಾಮಯವಾದ ಕಾವ್ಯವು ಮುಖ್ಯವಾದ ಮೂಲಧನ(ಬಂಡವಾಳ)ವೆಂದು ಹೇಳಲ್ಪಟ್ಟಿದೆ.

**ಇದಮಧ್ಯ[೪]ವಸಾಯಾಹಂ ಕಥಾಂ ಧರ್ಮಾನುಬಂಧಿನೀಮ್ ।**
**[೫]ಪ್ರಸ್ತುವೇ ಪ್ರಸ್ತುತಾಂ ಸದ್ಭಿರ್ಮಹಾಪುರುಷಗೋಚರಾಮ್ ॥ ೧೦೭ ॥**

ಇದನ್ನು ನಿಶ್ಚಯಿಸಿ ಸತ್ಪುರುಷರಿಂದ ಹೇಳಲ್ಪಟ್ಟುದೂ ತೀರ್ಥಂಕರರು ಮೊದಲಾದ ಮಹಾಪುರುಷರ ವರ್ಣನೆಯುಳ್ಳುದೂ ಧರ್ಮಸಂಬಂಧಿಯೂ ಆದ ಕಥೆಯನ್ನು ನಾನು ಪ್ರಾರಂಭಿಸುತ್ತೇನೆ.

**ವಿಸ್ತೀರ್ಣಾನೇಕ[೬]ಶಾಖಾಢ್ಯಾಂ [೭]ಸಚ್ಛಾಯಾಂ ಫಲಶಾಲಿನೀಮ್ ।**
**[೮]ಆರ್ಯೈರ್ನಿಷೇವಿತಾಂ ರಮ್ಯಾಂ [೯]ಸತೀಂ ಕಲ್ಪಲತಾಮಿವ ॥ ೧೦೮ ॥**

ವಿಸ್ತಾರವಾದ ಅನೇಕ ಅವಾಂತರಕಥೆಗಳೆಂಬ ಕೊಂಬೆಗಳುಳ್ಳುದೂ ದಯೆಯೆಂಬ ನೆರಳುಳ್ಳುದೂ ಸುಖವೆಂಬ ಫಲವುಳ್ಳುದೂ ಆರ್ಯಪುರುಷರಿಂದ ಸೇವಿಸಲ್ಪಟ್ಟುದೂ ಮನೋಹರವೂ ಕಲ್ಪಲತೆಯಂತೆ ಪ್ರಶಸ್ತವೂ

**ಪ್ರಸನ್ನಾ ಮತಿಗಂಭೀರಾಂ ನಿರ್ಮಲಾಂ [೧೦]ಸುಖಶೀತಲಾಮ್ ।**
**[೧೧]ನಿರ್ವಾಪಿತಜಗತ್ತಾಪಾಂ ಮಹತೀಂ ಸರಸೀಮಿವ ॥ ೧೦೯ ॥**

ದೊಡ್ಡ ಸರೋವರದಂತೆ ಸಂತೋಷದಾಯಕವೂ ಅತ್ಯಂತಗಂಭೀರವೂ ನಿರ್ಮಲವೂ ಸುಖನಿಮಿತ್ತದಿಂದ ಶೀತಲವೂ ಜಗತ್ತಿನ ಸಂತಾಪವನ್ನು ಹೋಗಲಾಡಿಸಿದುದೂ

**ಗುರುಪ್ರವಾಹಸಂಭೂತಿಮಪಂಕಾಂ [೧೨]ತಾಪವಿಚ್ಛಿದಮ್ ।**
**[೧೩]ಕೃತಾವತಾರಾಂ ಕೃತಿಭಿಃ ಪುಣ್ಯಾಂ ವ್ಯೋಮಾಪಗಾಮಿವ ॥ ೧೧೦ ॥**

ಪುಣ್ಯದಾಯಕವಾದ ದೇವಗಂಗೆಯಂತೆ ಗುರುಪರಂಪರೆಯಿಂದುಂಟಾದುದೂ ದೋಷವೆಂಬ ಕೆಸರಿಲ್ಲದುದೂ ಸಂತಾಪ(ದುಃಖ)ವನ್ನು ನಾಶಮಾಡುವುದೂ ಗಣಧರಾದಿಮಹಾತ್ಮರಿಂದ ಪ್ರವೇಶಿಸಲ್ಪಟ್ಟುದೂ

**ಚೇತಃಪ್ರಸಾದಜನನೀಂ [೧೪]ಕೃತಮಂಗಲಸಂಗ್ರಹಾಮ್ ।**
**[೧೫]ಕ್ರೋಢೀಕೃತಜಗದ್ಬಿಂಬಾಂ ಹಸಂತೀಂ ದರ್ಪಣಶ್ರಿಯಮ್ ॥ ೧೧೧ ॥**

ಮನಸ್ಸಿಗೆ ಸಂತೋಷವನ್ನುಂಟುಮಾಡುವುದೂ, ಜಿನಸ್ತೋತ್ರರೂಪವಾದ ಮಂಗಲವುಳ್ಳುದೂ, ಅಷ್ಟಮಂಗಲದ್ರವ್ಯಗಳನ್ನು ಸ್ವೀಕರಿಸಿದುದೂ, ಸಮಸ್ತ ಲೋಕದ ಪ್ರತಿಬಿಂಬವನ್ನು ಸ್ವೀಕರಿಸಿದುದೂ, ಕನ್ನಡಿಯ ಶೋಭೆಯನ್ನು ಪರಿಹಾಸ್ಯ ಮಾಡುವುದೂ

**ಕಲ್ಪಾಂಘ್ರಿಪಾದಿವೋತ್ತುಂಗಾದಭೀಷ್ಟಫಲದಾಯಿನಃ ।**
**ಮಹಾಶಾಖಾಮಿವೋದಗ್ರಾಂ ಶ್ರುತಸ್ಕಂಧಾದು[೧೬]ಪಾಹೃತಾಮ್॥ ೧೧೨ ॥**

೧ ಚೇತುಮಿಚ್ಛೂನಾಂ. ೨ ಕ್ರೇತ್ರೂಣಾಂ. ೩ ಕಥಿತಂ. ೪ ನಿಶ್ಚಿತ್ಯ. ೫ ಪ್ರಾರಭೇ. ೬ ಅವಾಂತರಕಥಾ. ೭ ಪಕ್ಷೇ ಸದಯಾಂ. ೮ ಭೋಗಭೂಮಿಜೈಶ್ಚ. ೯ ಪ್ರಶಸ್ತಾಂ. ೧೦ ಸುಖಕಾರಿತ್ವೇನ ಶೀತಲಾಂ. ೧೧ ವಿನಾಶಿತ. ೧೨ ಪಕ್ಷೇ ತಾಪತ್ರಯವಿಚ್ಛಿದಂ. ೧೩ ಕೃತಾವಗಾಹಾಂ. ೧೪ ಕೃತೋಮಂಗಲಾನಾಂ ಜಿನಾದಿಸ್ತೋತ್ರಾಣಾಂ ಸಂಗ್ರಹೋ ಯಸ್ಯಾಂ, ಪಕ್ಷೇ.ಕೃತೋ ಮಂಗಲೇಷ್ವಷ್ಟವಿಧೇಷು ಸ್ವೀಕಾರೋ ಯಸ್ಯಾಂ. ೧೫ ಅಭ್ಯಂತರೀಕೃತ. ೧೬ ಆನೀತಾಂ.

ಇಷ್ಟಫಲವನ್ನು ಕೊಡುವ ಕಲ್ಪವೃಕ್ಷದಂತಿರುವ ಉನ್ನತವಾದ ಶ್ರುತಸ್ಕಂಧದಿಂದ ಸ್ವೀಕರಿಸಲ್ಪಟ್ಟುದೂ ದೊಡ್ಡ ಶಾಖೆಯಂತೆ ಶೋಭಿಸುತ್ತಿರುವುದೂ

**ಪ್ರಥಮಸ್ಯಾನುಯೋಗಸ್ಯ ಗಂಭೀರಸ್ಯೋದಧೇರಿವ ।**
**ವೇಲಾಮಿವ ಮಹ[೧]ದ್ಧ್ವಾನಾಂ [೨]ಪ್ರಸೃತಾರ್ಥಮಹಾಜಲಾಮ್॥ ೧೧೩ ॥**

ಗಂಭೀರವಾದ ಸಮುದ್ರದಂತಿರುವ ಪ್ರಥಮಾನುಯೋಗಶಾಸ್ತ್ರದ ವಿಸ್ತಾರವಾದ ಅರ್ಥವೆಂಬ ಜಲವುಳ್ಳುದೂ ಸಮುದ್ರದ ದಡದಂತೆ ಶಬ್ದಪರಿಪಾಟಿಯುಳ್ಳುದೂ

**[೩]ಆಕ್ಷಿಪ್ತಾಶೇಷತಂತ್ರಾರ್ಥಾಂ [೪]ವಿಕ್ಷಿಪ್ತಪರಶಾಸನಾಮ್ ।**
**ಸತಾಂ ಸಂವೇಗಜನನೀಂ ನಿರ್ವೇದ ರಸಬೃಂಹಿಣೀಮ್ ॥ ೧೧೪ ॥**

ಸಮಸ್ತಸಿದ್ಧಾಂತಾರ್ಥಗಳನ್ನೊಳಗೊಂಡುದೂ ಮಿಥ್ಯಾಶಾಸ್ತ್ರವನ್ನು ನಿರಾಕರಿಸಿದುದೂ ಸತ್ಪುರುಷರಿಗೆ ಧರ್ಮಪ್ರೀತಿಯನ್ನುಂಟುಮಾಡುವುದೂ ವೈರಾಗ್ಯವೆಂಬ ರಸವನ್ನು ವೃದ್ಧಿಪಡಿಸುವುದೂ

**ಅದ್ಭುತಾರ್ಥಾಮಿಮಾಂ ದಿವ್ಯಾಂ ಪರಮಾರ್ಥಬೃಹತ್ಕಥಾಮ್ ।**
**[೫]ಲಂಭ್ಯೈರನೇಕೈಃ ಸಂದೃಬ್ಧಾಂ ಗುಣಾಢ್ಯೈಃ ಪೂರ್ವಸೂರಿಭಿಃ ॥ ೧೧೫ ॥**

ಆಶ್ಚರ್ಯಕರವಾದ ಅರ್ಥವುಳ್ಳುದೂ ಶ್ರೇಷ್ಠವೂ ಯಥಾರ್ಥವಾದ ದೊಡ್ಡಕಥೆಯುಳ್ಳುದೂ ಗುಣವಂತರಾದ ಪೂರ್ವಾಚಾರ್ಯರುಗಳಿಂದ ಅನೇಕ ಅಧಿಕಾರ (ಅಧ್ಯಾಯ)ಗಳಿಂದ ರಚಿಸಲ್ಪಟ್ಟುದೂ

**ಯಶಃಶ್ರೇಯಸ್ಕರೀಂ ಪುಣ್ಯಾಂ ಭುಕ್ತಿಮುಕ್ತಿಫಲಪ್ರದಾಮ್ ।**
**ಪೂರ್ವಾನು[೬]ಪೂರ್ವ್ಯಮಾಶ್ರಿತ್ಯ ವಕ್ಷ್ಯೇ ಶೃಣುತ ಸಜ್ಜನಾಃ ॥ ೧೧೬ ॥**

ಯಶಸ್ಸನ್ನೂ ಶ್ರೇಯಸ್ಸನ್ನೂ ಉಂಟುಮಾಡುವುದೂ ಪುಣ್ಯಪ್ರದವೂ ಸ್ವರ್ಗಮೋಕ್ಷರೂಪವಾದ ಫಲವನ್ನು ಕೊಡತಕ್ಕುದೂ ಆದ ಧರ್ಮಕಥೆಯನ್ನು ಪೂರ್ವಾಚಾರ್ಯಪರಂಪರೆಯನ್ನಾಶ್ರಯಿಸಿ ಹೇಳುವೆನು. ಸಜ್ಜನರೆ ! ಕೇಳಿ ! (ನವಭಿಃ ಕುಲಕಂ).

**ಕಥಾಕಥಕಯೋರತ್ರ ಶ್ರೋತ್ರೂಣಾಮಪಿ ಲಕ್ಷಣಮ್ ।**
**ವ್ಯಾವರ್ಣನೀಯಂ ಪ್ರಾಗೇವ ಕಥಾರಂಭೇ ಮನೀಷಿಭಿಃ ॥ ೧೧೭ ॥**

ಬುದ್ಧಿಶಾಲಿಗಳು ಕಥೆಯನ್ನಾರಂಭಮಾಡುವುದಕ್ಕಿಂತ ಮೊದಲೇ ಕಥೆಯ ಲಕ್ಷಣವನ್ನೂ ಕಥೆಯನ್ನು ಹೇಳುವವ(ಕಥಕ)ನ ಲಕ್ಷಣವನ್ನೂ ಕಥೆಯನ್ನು ಕೇಳುವವರ ಲಕ್ಷಣವನ್ನೂ ವರ್ಣಿಸಬೇಕು.

**ಪುರುಷಾರ್ಥೋಪಯೋಗಿತ್ವಾತ್ತ್ರಿವರ್ಗಕಥನಂ ಕಥಾ ।**
**ತತ್ರಾಪಿ ಸತ್ಕಥಾಂ ಧರ್ಮ್ಯಾಮಾಮನಂತಿ ಮನೀಷಿಣಃ ॥ ೧೧೮ ॥**

ಮೋಕ್ಷಪುರುಷಾರ್ಥಕ್ಕುಪಯೋಗಿಗಳಾಗಿರುವುದರಿಂದ ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳ ಕಥನವು ಕಥೆಯೆನಿಸುವುದು. ಆ ಮೂರರಲ್ಲಿಯೂ ಧರ್ಮಸಂಬಂಧಿಯಾದ ಕಥೆಯನ್ನು ಬುದ್ಧಿವಂತರು ಸತ್ಕಥೆಯನ್ನಾಗಿ ಹೇಳುತ್ತಾರೆ.

**[೭]ತತ್ಫಲಾ[೮]ಭ್ಯುದಯಾಂಗತ್ವಾದರ್ಥಕಾಮ[೯]ಕಥಾಕಥಾ ।**
**[೧೦]ಅನ್ಯಥಾವಿಕಥೈವಾಸಾವಪುಣ್ಯಾಸ್ರವ[೧೧]ಕಾರಿಣೀ ॥ ೧೧೯ ॥**

೧ ಶಬ್ದಪರಿಪಾಟೀ. ೨ ಪ್ರಸೂತಾರ್ಥೇತ್ಯಪಿ ಪಾಠಃ. ೩ ಸ್ವೀಕೃತಸಕಲಸಿದ್ಧಾಂತಾರ್ಥಾಂ. ೪ ನಿರಾಕೃತ. ೫ ಅಧಿಕಾರೈಃ. ೬ ಆನುಪೂರ್ವೀಮಿತ್ಯಪಿ ಪಾಠಃ. ೭ ಧರ್ಮಸ್ಯ. ೮ ಅಭ್ಯುದಯೋಽವಯವೀ, ಅರ್ಥಕಾಮಾವವಯವಾವಿತ್ಯರ್ಥಃ. ೯ ಕಥನಂ. ೧೦ ತದಂಗತ್ವಾಭಾವೆ. ೧೧ ಕಾರಣಮಿತ್ಯಪಿಪಾಠಃ.

ಅರ್ಥಕಾಮಗಳು ಧರ್ಮದ ಫಲರೂಪವಾದ ಸ್ವರ್ಗಸುಖಕ್ಕೆ ಅಂಗರೂಪವಾಗಿರುವುದರಿಂದ ಆ ಅರ್ಥಕಾಮಗಳ ಕಥನವು ಧರ್ಮಕಥೆಯೆನಿಸುವುದು. ಹಾಗಲ್ಲದೆಹೋದರೆ ಪಾಪಾಸ್ರವಕ್ಕೆ ಕಾರಣವಾದ ಈ ಅರ್ಥಕಾಮಕಥೆಯು ವಿಕಥೆಯೆನಿಸುವುದು.

**ಯತೋಽಭ್ಯುದಯನಿಃಶ್ರೇಯಸಾರ್ಥಸಂಸಿದ್ಧಿರಂಜಸಾ ।**
**ಸ ಧರ್ಮಸ್ತ[೧]ನ್ನಿಬದ್ಧಾಯಾ ಸಾ ಸದ್ಧರ್ಮಕಥಾ ಸ್ಮೃತಾ ॥ ೧೨೦ ॥**

ಯಾವುದರಿಂದ ಸ್ವರ್ಗ ಮೋಕ್ಷಸುಖಪ್ರಾಪ್ತಿಯು ನಿಶ್ಚಯವಾಗಿ ಆಗುವುದೋ ಅದು ಧರ್ಮವೆನಿಸುವುದು. ಅಂತಹ ಧರ್ಮಸಂಬಂಧವಾದ ಕಥೆಯು ಸದ್ಧರ್ಮಕಥೆಯೆನಿಸುವುದು.

**ಪ್ರಾಹುರ್ಧರ್ಮಕಥಾಂಗಾನಿ ಸಪ್ತಸಪ್ತರ್ಧಿಭೂಷಣಾಃ ।**
**ಯೈರ್ಭೂಷಿತಾ ಕಥಾ[೨]ಹಾರ್ಯೈರ್ನಟೀವ ರಸಿಕಾ ಭವೇತ್ ॥ ೧೨೧ ॥**

ಸಪ್ತರ್ದ್ಧಿಧಾರಿಗಳಾದ ಮುನಿಗಳು ಧರ್ಮಕಥೆಗೆ ಏಳು ಅಂಗಗಳಿವೆಯೆಂದು ಹೇಳುತ್ತಾರೆ. ಯಾವ ಅಂಗಗಳಿಂದಲಂಕೃತವಾದ ಕಥೆಯು, ಆಭರಣಗಳಿಂದಲಂಕೃತಳಾದ ನಟಿಯಂತೆ, ಮನೋಹರವಾಗಿ ಆಗುವುದು.

**ದ್ರವ್ಯಂ ಕ್ಷೇತ್ರಂ ತಥಾ ತೀರ್ಥಂ ಕಾಲೋ ಭಾವಃ ಫಲಂ ಮಹತ್ ।**
**ಪ್ರಕೃತಂ ಚೇತ್ಯಮೂನ್ಯಾಹುಃ ಸಪ್ತಾಂಗಾನಿ ಕಥಾಮುಖೇ ॥ ೧೨೨ ॥**

ಕಥಾಪ್ರಾರಂಭದಲ್ಲಿ ದ್ರವ್ಯ, ಕ್ಷೇತ್ರ, ತೀರ್ಥ, ಕಾಲ, ಭಾವ, ಮಹಾಫಲ, ಪ್ರಕೃತ ಈ ಏಳು ಅಂಗಗಳನ್ನು ಹೇಳುತ್ತಾರೆ.

**ದ್ರವ್ಯಂ ಜೀವಾದಿ ಷೋಢಾ ಸ್ಯಾತ್ಕ್ಷೇತ್ರಂ ತ್ರಿಭುವನಸ್ಥಿತಿಃ ।**
**ಜಿನೇಂದ್ರಚರಿತಂ ತೀರ್ಥಂ ಕಾಲಸ್ತ್ರೇಧಾ ಪ್ರಕೀರ್ತಿತಃ ॥ ೧೨೩ ॥**

ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲವೆಂದು ದ್ರವ್ಯವು ಆರು ಪ್ರಕಾರವಾಗಿದೆ. ಕ್ಷೇತ್ರವು ಅಧೋ, ಮಧ್ಯ, ಊರ್ಧ್ವಭೇದದಿಂದ ಮೂರು ಪ್ರಕಾರವಾಗಿದೆ. ಜಿನೇಶ್ವರರ ಚರಿತ್ರವು ತೀರ್ಥವೆನಿಸುವುದು. ಭೂತಭವಿಷ್ಯದ್ವರ್ತಮಾನಭೇದದಿಂದ ಕಾಲವು ಮೂರು ಪ್ರಕಾರವಾಗಿದೆ.

**ಪ್ರಕೃತಂ ಸ್ಯಾತ್ಕಥಾವಸ್ತು ಫಲಂ ತತ್ತ್ವಾವಬೋಧನಮ್ ।**
**[೩]ಭಾವಃಕ್ಷಯೋಪಶಮಜಸ್ತಸ್ಯ ಸ್ಯಾತ್ಕ್ಷಾಯಿಕೋಽಥವಾ ॥ ೧೨೪ ॥**

ಕಥೆಯಲ್ಲಿ ವರ್ಣಿಸುವ ವಿಷಯವು ಪ್ರಕೃತವೆನಿಸುವುದು. ತತ್ತ್ವಜ್ಞಾನವು ಫಲವು. ಭಾವವು ಕ್ಷಾಯೋಪಶಮಿಕಕ್ಷಾಯಿಕವೆಂದು ಎರಡು ಪ್ರಕಾರವಾಗಿದೆ.

**ಇತ್ಯಮೂನಿ ಕಥಾಂಗಾನಿ ಯತ್ರ ಸಾ ಸತ್ಕಥಾ ಮತಾ ।**
**ಯಥಾವಸರಮೇವ್ಯೈಷಾಂ ಪ್ರಪಂಚೋ ದರ್ಶಯಿಷ್ಯತೇ ॥ ೧೨೫ ॥**

ಹಿಂದೆ ಹೇಳಿದ ಈ ಏಳು ಅಂಗಗಳುಳ್ಳುದು ಸತ್ಕಥೆಯೆನಿಸುವುದು. ಈ ಏಳು ಅಂಗಗಳ ವಿಸ್ತಾರವರ್ಣನೆಯನ್ನು ಸಂದರ್ಭಾನುಸಾರವಾಗಿ ಮಾಡುವೆವು.

**ತಸ್ಯಾಸ್ತು ಕಥಕಃ ಸೂರಿಃ ಸದ್ವೃತ್ತಃ ಸ್ಥಿರಧೀರ್ವ[೪]ಶೀ ।**
**[೫]ಕಲ್ಯೇಂದ್ರಿಯಃ ಪ್ರಶಸ್ತಾಂಗಃ ಸ್ಪಷ್ಟಮೃಷ್ಟೇಷ್ಟಗೀರ್ಗುಣಃ ॥ ೧೨೬ ॥**

೧ ಧರ್ಮೇಣ ಸಂಬದ್ಧಾ. ೨ ಭೂಷಣೈಃ. ೩ ಸ್ವರೂಪಂ. ೪ ಜಿತೇಂದ್ರಿಯಃ. ೫ ಪ್ರಶಸ್ತೇಂದ್ರಿಯಃ.

ಅಂತಹ ಧರ್ಮಕಥೆಯನ್ನು ಹೇಳುವವನು ವಿದ್ವಾಂಸನೂ ಸದಾಚಾರಿಯೂ ಸ್ಥಿರವಾದ ಬುದ್ಧಿಯುಳ್ಳವನೂ ಜಿತೇಂದ್ರಿಯನೂ ಪ್ರಶಸ್ತವಾದ ಇಂದ್ರಿಯಗಳುಳ್ಳವನೂ ಉತ್ತಮವಾದ ಶರೀರವುಳ್ಳವನೂ ಸ್ಪಷ್ಟವೂ ಮಧುರವೂ ಇಷ್ಟವೂ ಆದ ವಚನವುಳ್ಳವನೂ ಆಗಿರಬೇಕು.

**ಯಃ ಸರ್ವಜ್ಞಮತಾಂಭೋಧಿವಾರ್ಧೌತವಿಮಲಾಶಯಃ ।**
**ಅಶೇಷವಾಙ್ಮಲಾಪಾಯಾದುಜ್ಜ್ವಲಾ ಯಸ್ಯ ಭಾರತೀ ॥ ೧೨೭ ॥**

ಯಾವನು ಸರ್ವಜ್ಞರ ಮತವೆಂಬ ಸಮುದ್ರದ ನೀರಿನಿಂದ ತೊಳೆಯಲ್ಪಟ್ಟು ನಿರ್ಮಲವಾದ ಮನಸ್ಸುಳ್ಳವನಾಗಿದ್ದಾನೋ ಯಾವನ ವಚನವು ಸಂಪೂರ್ಣ ದೋಷದಿಂದ ಬಿಡಲ್ಪಟ್ಟುದಾಗಿ ಪ್ರಕಾಶಮಾನವಾಗಿದೆಯೋ

**ಶ್ರೀಮಾನ್ ಜಿತಸಭೋ ವಾಗ್ಮೀ ಪ್ರಗ[1]ಲ್ಭಃ ಪ್ರ[2]ತಿಭಾನವಾನ್ ।**
**ಯಃ ಸತಾಂ ಸಮ್ಮತವ್ಯಾಖ್ಯೋ ವಾ[3]ಗ್ಮಿಮರ್ದಭರಕ್ಷಮಃ ॥ ೧೨೮ ॥**

ಯಾವನು ಸಂಪದ್ಯುಕ್ತನೂ ಸಭೆಯನ್ನು ಜಯಿಸಿದವನೂ ವಾಚಾಳುವೂ ಪ್ರೌಢನೂ ಹೊಸ ಹೊಸ ವಿಷಯಗಳನ್ನು ತಿಳಿಯುವ ಬುದ್ಧಿಯುಳ್ಳವನೂ ಸತ್ಪುರುಷರಿಗೆ ಸಮ್ಮತವಾದ ವ್ಯಾಖ್ಯಾನವುಳ್ಳವನೂ ವಾದಿಗಳ ವಾಗ್ಧೋರಣೆ (ಪ್ರಶ್ನೆ) ಯನ್ನು ಸಹಿಸುವವನೂ

**ದಯಾಲುರ್ವತ್ಸಲೋ ಧೀಮಾನ್ ಪರೇಂ[4]ಗಿತವಿಶಾರದಃ ।**
**ಯೋಽಧೀತೀ ವಿಶ್ವವಿದ್ಯಾಸು ಸ ಧೀರಃ ಕಥಯೇತ್ಕಥಾಮ್ ॥ ೧೨೯ ॥**

ದಯಾಳುವೂ ಪ್ರೀತಿಯುಳ್ಳವನೂ ಬುದ್ಧಿಶಾಲಿಯೂ ಪರಾಭಿಪ್ರಾಯವನ್ನು ತಿಳಿಯುವುದರಲ್ಲಿ ಚತುರನೂ ಸಮಸ್ತವಿದ್ಯೆಗಳನ್ನಭ್ಯಾಸಮಾಡಿದವನೂ ಆಗಿರುತ್ತಾನೋ ಅಂತಹ ಧೀರನು ಕಥೆಯನ್ನು ಹೇಳಬೇಕು.

**ನಾ[5]ನೋಪಾಖ್ಯಾನಕುಶಲೋ ನಾನಾಭಾಷಾವಿಶಾರದಃ ।**
**ನಾನಾಶಾಸ್ತ್ರಕಲಾಭಿಜ್ಞಃ ಸ ಭವೇತ್ಕಥಕಾಗ್ರಣೀಃ ॥ ೧೩೦ ॥**

ಯಾವನು ಅನೇಕ ಕಥೆಗಳಲ್ಲಿ ಚತುರನೋ ಅನೇಕ ಭಾಷೆಗಳಲ್ಲಿ ಪಂಡಿತನೋ ಅನೇಕ ಶಾಸ್ತ್ರಗಳನ್ನೂ ಕಲೆಗಳನ್ನೂ ತಿಳಿದವನೋ ಅವನು ಕಥೆಯನ್ನು ಹೇಳುವವರಲ್ಲಿ ಶ್ರೇಷ್ಠನು.

**ನಾಂಗುಲೀಭಂಜನಂ ಕುರ್ಯಾನ್ನ ಭ್ರುವೌ ನರ್ತಯೇದ್ಬ್ರುವನ್ ।**
**ನಾ[6]ಧಿಕ್ಷಿಪೇನ್ನ ಚ ಹಸೇನ್ನಾತ್ಯುಚ್ಚೈರ್ನ ಶನೈರ್ವದೇತ್ ॥ ೧೩೧ ॥**

ಕಥಕನು ಉಪದೇಶಮಾಡುವ ಕಾಲದಲ್ಲಿ ಬೆರಳುಗಳನ್ನು ಮುರಿಯಬಾರದು. ಹುಬ್ಬುಗಳನ್ನು ಕುಣಿಸಬಾರದು. ಇತರರನ್ನು ತಿರಸ್ಕರಿಸಬಾರದು. ನಗಬಾರದು. ಬಹಳ ಗಟ್ಟಿಯಾಗಿಯೂ ನಿಧಾನವಾಗಿಯೂ ಹೇಳಬಾರದು.

**ಉಚ್ಚೈಃ ಪ್ರಭಾಷಿತವ್ಯಂ ಸ್ಯಾತ್ಸಭಾಮಧ್ಯೇ ಕದಾಚನ ।**
**ತತ್ರಾಪ್ಯನುದ್ಧತಂ ಬ್ರೂಯಾದ್ವಚಃ ಸಭ್ಯಮನಾಕುಲಮ್ ॥ ೧೩೨ ॥**

ಸಭಾಮಧ್ಯದಲ್ಲಿ ಗಟ್ಟಿಯಾಗಿ ಮಾತನಾಡಬೇಕಾದ ಸಂದರ್ಭದಲ್ಲಿಯೂ ಉದ್ಧತವಲ್ಲದುದೂ ಬೇರೆಯವರಿಗೆ ವ್ಯಸನವನ್ನುಂಟುಮಾಡದಿರುವುದೂ ಸಭಾಯೋಗ್ಯವೂ ಆದ ವಚನವನ್ನು ಮಾತನಾಡಬೇಕು.

೧ ಪ್ರೌಢಃ. ೨ ನವನವೋನ್ಮೇಷಶಾಲಿನೀಬುದ್ಧಿಃ ಪ್ರತಿಭಾ. ೩ ಪ್ರಶ್ನಸಹಃ. ೪ ಮನೋಂಗವಚಸಾಂ ಸೂಕ್ಷ್ಮಚೇಷ್ಟಾಸ್ಯಾದಿಂಗಿತಂ. ೫ ಬಹುಕಥಾನಿಪುಣಃ. ೬ ತಿರಸ್ಕಾರಂ ಕುರ್ಯಾತ್.

**ಹಿತಂ ಬ್ರೂಯಾನ್ಮಿತಂ ಬ್ರೂಯಾದ್ಬ್ರೂಯಾದ್ಧರ್ಮ್ಯಂ ಯಶಸ್ಕರಮ್ ।**
**ಪ್ರಸಂಗಾದಪಿ ನ ಬ್ರೂಯಾದಧರ್ಮ್ಯಮಯಶಸ್ಕರಮ್ ॥ ೧೩೩ ॥**

ಹಿತವೂ ಮಿತವೂ ಧರ್ಮಸಂಬಂಧಿಯೂ ಯಶಸ್ಸನ್ನುಂಟುಮಾಡತಕ್ಕುದೂ ಆದ ವಚನವನ್ನು ಹೇಳಬೇಕು. ಅಧರ್ಮವೂ ಅಪಯಶಸ್ಕರವೂ ಆದ ವಚನವನ್ನು ಯಾವ ಸಂದರ್ಭದಲ್ಲಿಯೂ ಹೇಳಬಾರದು.

**ಇತ್ಯಾಲೋಚ್ಯ ಕಥಾಯುಕ್ತಿಮಯುಕ್ತಿಪರಿಹಾರಿಣೀಮ್ ।**
**[1]ಪ್ರಸ್ತೂಯಾದ್ಯಃ ಕಥಾವಸ್ತು ಸ ಶಸ್ತೋ ವದತಾಂವರಃ ॥ ೧೩೪ ॥**

ಈ ಪ್ರಕಾರವಾಗಿ ಅಯುಕ್ತಿಗಳನ್ನು ದೂರಮಾಡತಕ್ಕ ಕಥಾಯುಕ್ತಿಯನ್ನು ಪರ್ಯಾಲೋಚಿಸಿ ಯಾವ ಕಥಕನು ಕಥಾವಿಷಯವನ್ನು ಪ್ರಾರಂಭಿಸುವನೋ ಅವನು ಪ್ರಶಸ್ತನು ಮತ್ತು ವಕ್ತೃಗಳಲ್ಲಿ ಶ್ರೇಷ್ಠನು.

**ಆಕ್ಷೇಪಿಣೀಂ ಕಥಾಂ ಕುರ್ಯಾತ್ಪ್ರಾಜ್ಞಃ ಸ್ವಮತಸಂಗ್ರಹೇ ।**
**ವಿಕ್ಷೇಪಿಣೀಂ ಕಥಾಂ ತಜ್ಞಃ ಕುರ್ಯಾದ್ದುರ್ಮತನಿಗ್ರಹೇ ॥ ೧೩೫ ॥**

ಪ್ರಾಜ್ಞನು ತನ್ನ ಮತವನ್ನು ಸಂಗ್ರಹಿಸುವ ಸಂದರ್ಭದಲ್ಲಿ ಆಕ್ಷೇಪಿಣೀ ಕಥೆಯನ್ನೂ ಮಿಥ್ಯಾಮತವನ್ನು ಖಂಡನೆಮಾಡುವ ಸಂದರ್ಭದಲ್ಲಿ ವಿಕ್ಷೇಪಿಣೀಕಥೆಯನ್ನೂ ಹೇಳಬೇಕು. ಆಕ್ಷೇಪಿಣೀ ಮೊದಲಾದ ನಾಲ್ಕು ಕಥೆಗಳ ಸ್ವರೂಪವನ್ನು ಗೋಮಟಸಾರಸಂಸ್ಕೃತವ್ಯಾಖ್ಯಾನದಲ್ಲಿ ಜ್ಞಾನಮಾರ್ಗಣೆಯ ಪ್ರಶ್ನವ್ಯಾಕರಣಾಂಗವಿವರಣದಲ್ಲಿ ವಿಸ್ತಾರವಾಗಿ ತಿಳಿದುಕೊಳ್ಳಬೇಕು.

**ಸಂವೇದಿನೀಂ ಕಥಾಂ ಪುಣ್ಯಫಲಸಂಪತ್ಪ್ರಪಂಚನೇ ।**
**ನಿರ್ವೇದಿನೀಂ ಕಥಾಂ ಕುರ್ಯಾದ್ವೈರಾಗ್ಯಜನನಂ ಪ್ರತಿ ॥ ೧೩೬ ॥**

ಪುಣ್ಯದ ಫಲರೂಪವಾದ ಸಂಪತ್ತನ್ನು ವಿವರಿಸುವ ಕಾಲದಲ್ಲಿ ಸಂವೇದಿನೀ ಕಥೆಯನ್ನೂ ವೈರಾಗ್ಯೋತ್ಪತ್ತಿಯನ್ನು ಕುರಿತು ನಿರ್ವೇದಿನೀ ಕಥೆಯನ್ನೂ ಹೇಳಬೇಕು.

**ಇತಿ ಧರ್ಮಕಥಾಂಗತ್ವಾದ[2]ರ್ಥಾಕ್ಷಿಪ್ತಾಂ ಚತುಷ್ಟಯೀಮ್ ।**
**ಕಥಾಂ ಯಥಾರ್ಹಂ ಶ್ರೋತೃಭ್ಯಃ ಕಥಕಃ ಪ್ರತಿಪಾದಯೇತ್ ॥ ೧೩೭ ॥**

ಹೀಗೆ ಧರ್ಮಕಥೆಗೆ ಅಂಗವಾಗಿರುವುದರಿಂದ ಅರ್ಥದಿಂದ ಸಿದ್ಧವಾದ ಆಕ್ಷೇಪಿಣೀ, ವಿಕ್ಷೇಪಿಣೀ, ಸಂವೇದಿನೀ, ನಿರ್ವೇದಿನೀ ಯೆಂಬೀ ಕಥಾಚತುಷ್ಟಯವನ್ನು ಯೋಗ್ಯತಾನುಸಾರವಾಗಿ ಕಥಕನು ಶ್ರೋತೃಗಳಿಗೆ ಹೇಳಬೇಕು.

**ಧರ್ಮಶ್ರುತೌ ನಿಯುಕ್ತಾಯೇ ಶ್ರೋತಾರಸ್ತೇಮತಾ ಬುಧೈಃ ।**
**ತೇಷಾಂ ಚ ಸದಸದ್ಭಾವವ್ಯಕ್ತ್ಯೈ ದೃಷ್ಟಾಂತಕಲ್ಪನಾ ॥ ೧೩೮ ॥**

ಧರ್ಮಶ್ರವಣದಲ್ಲಿ ಯಾರು ನಿಯುಕ್ತರಾಗಿದ್ದಾರೋ ಅವರೇ ಶ್ರೋತೃಗಳೆಂದು ಜ್ಞಾನಿಗಳು ಹೇಳುತ್ತಾರೆ. ಅವರಲ್ಲಿ ಕೆಲವರು ಉತ್ತಮರೂ, ಕೆಲವರು ಮಧ್ಯಮರೂ ಕೆಲವರು ನಿಕೃಷ್ಟರೂ ಇರುತ್ತಾರೆ. ಅದನ್ನು ತಿಳಿಸುವುದಕ್ಕೋಸ್ಕರ ಮುಂದೆ ಹೇಳುವ ದೃಷ್ಟಾಂತಕಲ್ಪನೆಯು

**ಮೃಚ್ಚಾಲಿನ್ಯಜಮಾರ್ಜಾರಶುಕಕಂಕಶಿಲಾಹಿಭಿಃ ।**
**ಗೋಹಂಸಮಹಿಷಚ್ಛಿದ್ರಘಟದಂಶಜಲೌಕಕೈಃ ॥ ೧೩೯ ॥**

೧ ಪ್ರಾರಭೇತ, ಪ್ರಸ್ತುಯಾದಿತ್ಯಪಿ ಪಾಠಃ. ೨ ಅರ್ಥಾಯಾತಾಂ.

ಮಣ್ಣು, ವಂದ್ರೀ, ಆಡು, ಬೆಕ್ಕು, ಗಿಣಿ, ಬಾಚಣಿಗೆ, ಕಲ್ಲು, ಸರ್ಪ, ಗೋವು, ಹಂಸಪಕ್ಷಿ, ಕೋಣ, ತೂತುಗಡಿಗೆ, ಕಚ್ಚುವ ನೊಣ, ಜಿಗಣೆ

**ಶ್ರೋತಾರಃ ಸಮಭಾವಾಃ ಸ್ಯುರುತ್ತಮಾಧಮಮಧ್ಯಮಾಃ ।**
**ಅನ್ಯಾದೃಶೋಽಪಿ ಸಂತ್ಯೇವ ತತ್ಕಿಂ ತೇಷಾಮಿಯತ್ತಯಾ ॥ ೧೪೦ ॥**

ಈ ಹದಿನಾಲ್ಕು ಪ್ರಕಾರದ ವಸ್ತುಗಳ ಸ್ವಭಾವದಂತಿರುವ ಶ್ರೋತೃಗಳಲ್ಲಿ ಉತ್ತಮ, ಮಧ್ಯಮ, ಜಘನ್ಯರೆಂದು ಮೂರು ಭೇದಗಳಿವೆ. ಇನ್ನೂ ವಿಲಕ್ಷಣರಾದ ಶ್ರೋತೃಗಳಿದ್ದಾರೆ. ಅವರು ಇಷ್ಟೇಯೆಂದು ಹೇಳುವುದರಿಂದೇನು ಪ್ರಯೋಜನ ?

**ಗೋಹಂಸಸದೃಶಾನ್ಪ್ರಾಹುರುತ್ತಮಾನ್ಮೃಚ್ಛುಕೋಪಮಾನ್ ।**
**ಮಧ್ಯಮಾನ್ವಿದುರನ್ಯೈಶ್ಚ ಸಮಕಕ್ಷ್ಯೋಽಧಮೋ ಮತಃ ॥ ೧೪೧ ॥**

ಗೋವು, ಹಂಸಪಕ್ಷಿ ಇವುಗಳಿಗೆ ಸಮಾನರಾದವರು ಉತ್ತಮ ಶ್ರೋತೃಗಳು. ಅಂದರೆ ಗೋವು ಸರೋವರದ ನೀರನ್ನು ಕದಡದೆ ಮೇಲಿನ ತಿಳಿನೀರನ್ನೇ ಪಾನಮಾಡುತ್ತದೆ. ಹಂಸಪಕ್ಷಿಯು ನೀರನ್ನು ಬಿಟ್ಟು ಹಾಲನ್ನೇ ಸ್ವೀಕರಿಸುತ್ತದೆ. ಹಾಗೆ ಉತ್ತಮರು ದೋಷಗಳನ್ನು ಬಿಟ್ಟು ಗುಣಗಳನ್ನೇ ಪರಿಗ್ರಹಿಸುತ್ತಾರೆ. ಮಣ್ಣು, ಗಿಣಿ, ಇವುಗಳಿಗೆ ಸಮಾನರಾದವರು ಮಧ್ಯಮಶ್ರೋತೃಗಳು — ಮಣ್ಣನ್ನು ನೆನೆಯಿಸಿದರೆ ಸ್ವಲ್ಪಹೊತ್ತು ಮೃದುವಾಗಿ ಪುನಃ ಶುಷ್ಕವಾಗುವುದು. ಗಿಣಿಯು ಹೇಳಿಕೊಟ್ಟಷ್ಟು ಮಾತನ್ನು ಹೇಳುತ್ತದೆ. ಇಂತಹ ಸ್ವಭಾವದವರು ಮಧ್ಯಮರು. ಮಿಕ್ಕಪದಾರ್ಥಗಳ ಸ್ವಭಾವದಂತೆ ಸ್ವಭಾವವುಳ್ಳವನು ಅಧಮಶ್ರೋತೃ ಎಂದು ಜ್ಞಾನಿಗಳು ಹೇಳುತ್ತಾರೆ.

**ಶೇಮುಷ್ಯಬ್ದತುಲಾದಂಡನಿಕಷೋಪಲಸನ್ನಿಭಾಃ ।**
**ಶ್ರೋತಾರಃ ಸತ್ಕಥಾರತ್ನಪರೀಕ್ಷಾಧ್ಯಕ್ಷಕಾ ಮತಾಃ ॥ ೧೪೨ ॥**

ದರ್ಪಣ, ತಕ್ಕಡಿ(ತ್ರಾಸು)ಯ ದಂಡ, ಒರೆಗಲ್ಲು ಇವುಗಳಿಗೆ ಸಮಾನರಾದ ಶ್ರೋತೃಗಳು ಸತ್ಕಥೆಗಳೆಂಬ ರತ್ನಗಳನ್ನು ಪರೀಕ್ಷೆಮಾಡುವುದಕ್ಕೆ ಅಧಿಕಾರಿಗಳು.

**ಶ್ರೋತಾ ನ ಚೈಹಿಕಂ ಕಿಂಚಿತ್ಫಲಂ ವಾಂಛೇತ್ಕಥಾಶ್ರುತೌ ।**
**ನೇಚ್ಛೇದ್ವಕ್ತಾ ಚ ಸತ್ಕಾರಧನಭೇಷಜ[1]ಸಂಶ್ರಯಾನ್ ॥ ೧೪೩ ॥**

ಕಥೆಯನ್ನು ಕೇಳುವವನು ಕಥಾಶ್ರವಣದಿಂದ ಈ ಲೋಕಸಂಬಂಧವಾದ ಯಾವ ಫಲವನ್ನೂ ಇಚ್ಛಿಸಬಾರದು. ಹೇಳುವವನೂ ಶ್ರೋತೃಗಳಿಂದ ಸತ್ಕಾರವನ್ನೂ ದ್ರವ್ಯವನ್ನೂ ಔಷಧವನ್ನೂ ಮನೆ ಮೊದಲಾದ ಆಶ್ರಯವನ್ನೂ ಇಚ್ಛಿಸಬಾರದು.

**ಶ್ರೇಯೋಽರ್ಥಂ ಕೇವಲಂ ಬ್ರೂಯಾತ್ ಸನ್ಮಾರ್ಗಂ ಶೃಣುಯಾಚ್ಚ ವೈ ।**
**ಶ್ರೇಯೋಽರ್ಥಾ ಹಿ ಸತಾಂ ಚೇಷ್ಟಾ ನ ಲೋಕ[2]ಪರಿಪಕ್ತಯೇ॥ ೧೪೪ ॥**

ಸ್ವರ್ಗಾದಿಶ್ರೇಯೋನಿಮಿತ್ತವಾಗಿ ಮಾತ್ರ ಸನ್ಮಾರ್ಗದ ಉಪದೇಶವನ್ನು ಕಥಕನು ಹೇಳಬೇಕು, ಶ್ರೋತೃವು ಕೇಳಬೇಕು. ಸತ್ಪುರುಷರ ಆಚರಣೆಯು ಶ್ರೇಯೋನಿಮಿತ್ತವಾಗಿಯಲ್ಲವೇ ? ಲೋಕವ್ಯವಹಾರಜ್ಞಾನಕ್ಕೋಸ್ಕರವಲ್ಲ.

**ಶ್ರೋತಾ ಶುಶ್ರೂಷತಾದ್ಯೈಃ ಸ್ವೈರ್ಗುಣೈರ್ಯುಕ್ತಃ ಪ್ರಶಸ್ಯತೇ ।**
**ವಕ್ತಾ ಚ ವತ್ಸಲತ್ವಾದಿಯಥೋಕ್ತಗುಣಭೂಷಣಃ ॥ ೧೪೫ ॥**

೧ ಸ್ಥಾನಾನಿ. ೨ ಪರಿಪಾಕಾಯ—ವ್ಯವಹಾರಾಯ, ಪರಿಪತ್ತಯೇ ಇತ್ಯಪಿ ಪಾಠಃ.

ಧರ್ಮಕಥೆಯನ್ನು ಕೇಳಬೇಕೆಂಬ ಇಚ್ಛೆ ಮೊದಲಾದ ತನ್ನ ಗುಣಗಳಿಂದ ಶ್ರೋತೃವು ಪ್ರಶಂಸಿಸಲ್ಪಡುತ್ತಾನೆ. ಹೇಳುವವನಾದರೋ ವಾತ್ಸಲ್ಯಾದಿಗುಣಗಳಿಂದ ಭೂಷಿತನಾಗಿರಬೇಕು.

**ಶುಶ್ರೂಷಾಂ ಶ್ರವಣಂ ಚೈವ ಗ್ರಹಣಂ ಧಾರಣಂ ತಥಾ ।**
**ಸ್ಮೃತ್ಯೂಹಾಪೋಹನಿರ್ಣೀತೀಃ ಶ್ರೋತುರಷ್ಟೌ ಗುಣಾನ್ವಿದುಃ ॥ ೧೪೬ ॥**

ಶುಶ್ರೂಷಾ — ಕೇಳಬೇಕೆಂಬ ಇಚ್ಛೆ, ಶ್ರವಣ, ಗ್ರಹಣ, ಧಾರಣ — ಬಹುಕಾಲದವರೆಗೆ ಮರೆಯದಿರುವುದು, ಸ್ಮೃತಿ, ಊಹ, ಅಪೋಹ, ನಿರ್ಣೀತಿ (ನಿಶ್ಚಯ), ಇವು ಶ್ರೋತೃವಿನ ಎಂಟು ಗುಣಗಳೆಂದು ಹೇಳುತ್ತಾರೆ.

**ಸತ್ಕಥಾಶ್ರವಣಾತ್ಪುಣ್ಯಂ ಶ್ರೋತುರ್ಯದುಪಚೀಯತೇ ।**
**ತೇನಾಭ್ಯುದಯಸಂಸಿದ್ಧಿಃ ಕ್ರಮಾನ್ನೈಃಶ್ರೇಯಸೀಸ್ಥಿತಿಃ ॥ ೧೪೭ ॥**

ಶ್ರೋತೃವಿಗೆ ಸತ್ಕಥೆಯನ್ನು ಕೇಳುವುದರಿಂದುಂಟಾದ ಪುಣ್ಯದಿಂದ ಉತ್ಕೃಷ್ಟವಾದ ಸಾಂಸಾರಿಕಸುಖವುಂಟಾಗಿ ಕ್ರಮದಿಂದ ಮೋಕ್ಷಸುಖವೂ ಉಂಟಾಗುವುದು.

**ಇತ್ಯಾಪ್ತೋಕ್ತ್ಯನುಸಾರೇಣ ಕಥಿತಂ [1]ವಃ ಕಥಾಮುಖಮ್ ।**
**ಕಥಾವತಾರಸಂಬಂಧಂ ವಕ್ಷ್ಯಾಮಃ ಶೃಣುತಾಧುನಾ ॥ ೧೪೮ ॥**

ಸಜ್ಜನರೇ ! ಹೀಗೆ ಸರ್ವಜ್ಞರ ವಚನಾನುಸಾರವಾಗಿ ನಿಮಗೆ ಕಥೆಯ ಪೀಠಿಕೆಯನ್ನು ಹೇಳಿ, ಈಗ ಕಥಾವತಾರದ ಸಂಬಂಧವನ್ನು ಹೇಳುವೆವು, ಕೇಳಿ.

**ಇತ್ಯನುಶ್ರೂಯತೇ ದೇವಃ [2]ಪುರಾಕಲ್ಪೇ ಸ ನಾಭಿಜಃ ।**
**[3]ಅಧ್ಯುವಾಸ ಭುವೋ ಮೌಲಿಂ ಕೈಲಾಸಾದ್ರಿಂ ಯದೃಚ್ಛಯಾ ॥ ೧೪೯ ॥**

ಚತುರ್ಥಕಾಲದ ಆದಿಯಲ್ಲಿ ನಾಭಿರಾಜಮನುವಿನ ಪುತ್ರರಾದ ವೃಷಭ ತೀರ್ಥಂಕರರು, ಇಚ್ಛಾನುಸಾರವಾಗಿ ವಿಹಾರಮಾಡುತ್ತ, ಭೂಮಿಗೆ ಶಿಖರ ದಂತಿರುವ ಕೈಲಾಸಪರ್ವತದಲ್ಲಿ ವಿರಾಜಮಾನರಾದರೆಂದು ಗುರುಪರಂಪರೆಯಿಂದ ಕೇಳುತ್ತೇವೆ.

**ತತ್ರಾಸೀನಂ ಚ ತಂ ದೇವಾಃ [4]ಪರಿಚೇರುಃ[5]ಸಪರ್ಯಯಾ ।**
**ತುಷ್ಟುವುಶ್ಚ ತಿರೀಟಾಗ್ರ[6]ಸಂದಷ್ಟಕರಕುಡ್ಮಲಾಃ ॥ ೧೫೦ ॥**

ಆ ಕೈಲಾಸಪರ್ವತದಲ್ಲಿ ವಿರಾಜಮಾನರಾಗಿದ್ದ ಆ ಆದಿಬ್ರಹ್ಮರನ್ನು ದೇವತೆಗಳು ಪೂಜೆಯಿಂದ ಉಪಾಸನೆಯನ್ನು ಮಾಡಿ ತಮ್ಮ ಕಿರೀಟಗಳ ಮೇಲೆ ಕೈಗಳನ್ನು ಜೋಡಿಸಿ ಸ್ವಾಮಿಯನ್ನು ಸ್ತೋತ್ರಮಾಡಿದರು.

**ಸಭಾವಿರಚನಾಂ ತತ್ರ ಸುತ್ರಾಮಾ ತ್ರಿಜಗದ್ಗುರೋಃ ।**
**ಪ್ರೀತಃ ಪ್ರವರ್ತಯಾಮಾಸ ಪ್ರಾಪ್ತಕೈವಲ್ಯಸಂಪದಃ ॥ ೧೫೧ ॥**

ಸಂತುಷ್ಟನಾದ ದೇವೇಂದ್ರನು ಆ ಕೈಲಾಸಪರ್ವತದಲ್ಲಿ ಕೈವಲ್ಯಸಂಪತ್ತನ್ನು ಹೊಂದಿದ ತ್ರಿಜಗತ್ಪತಿ-ಆದೀಶ್ವರಸ್ವಾಮಿಗೆ ಸಮವಸರಣಸಭಾರಚನೆಯನ್ನು ಮಾಡಿಸಿದನು.

೧ ಭೋ ಸಜ್ಜನಾಃ ! ಯುಷ್ಮಾಕಂ. ೨ ಪೂರ್ವಶಾಸ್ತ್ರೇ, ಪೂರ್ವಕಾಲೇ ವಾ—ಕಲ್ಪಃ ಸ್ಯಾತ್ಪ್ರಲಯೇ ನ್ಯಾಯೇ ಶಾಸ್ತ್ರೇ ಬ್ರಹ್ಮದಿನೇ ವಿಧೌ. ೩ ಶ್ರೀವಿಹಾರಾನಂತರಮಿತ್ಯರ್ಥಃ. ೪ ಉಪಾಸನಂ ಚಕ್ರುಃ. ೫ ಪೂಜಯಾ. ೬ ಸಂಯುಕ್ತ.

**ತತ್ರ [೧] ದೇವಸಭೇ ದೇವಂ ಸ್ಥಿತಮತ್ಯದ್ಭುತಸ್ಥಿತಿಮ್ ।**
**ಪ್ರಣನಾಮ ಮುದಾಭ್ಯೇತ್ಯ ಭರತೋ ಭಕ್ತಿನಿರ್ಭರಃ ॥ ೧೫೨ ॥**

ಭಕ್ತಿಭರಿತನಾದ ಭರತರಾಜನು ಸಂತೋಷದಿಂದ ಮುಂದೆಬಂದು ಆ ದೇವಸಭೆಯಲ್ಲಿದ್ದ ಅತ್ಯಾಶ್ಚರ್ಯಕರವಾದ ಸ್ಥಿತಿಯುಳ್ಳ ವೃಷಭಸ್ವಾಮಿಯನ್ನು ನಮಸ್ಕರಿಸಿದನು.

**ಸ ತಂ ಸ್ತುತಿಭಿರರ್ಥ್ಯಾಭಿರಭ್ಯರ್ಚ್ಯ ನೃಸುರಾರ್ಚಿತಮ್ ।**
**ಯಥೋಚಿತಂ ಸಭಾಸ್ಥಾನಮಧ್ಯಾಸ್ತ ವಿನಯಾನತಃ ॥ ೧೫೩ ॥**

ಆ ಭರತರಾಜನು ಮನುಷ್ಯರಿಂದಲೂ ದೇವತೆಗಳಿಂದಲೂ ಪೂಜಿಸಲ್ಪಟ್ಟ ಆ ವೃಷಭಸ್ವಾಮಿಯನ್ನು ಶ್ರೇಷ್ಠವಾದ—ಅರ್ಥಗರ್ಭಿತವಾದ ಸ್ತೋತ್ರಗಳಿಂದ ಪೂಜಿಸಿ ವಿನಯದಿಂದ ನಮ್ರನಾಗಿ ತನಗುಚಿತವಾದ ಸಭಾಸ್ಥಾನದಲ್ಲಿ ಕುಳಿತನು.

**ಸಭಾ [೨]ಸಭಾಸುರಸುರಾ ಪೀತ್ವಾ ಧರ್ಮಾಮೃತಂ ವಿಭೋಃ ।**
**ಪಿಪ್ರಿಯೇ ಪದ್ಮಿನೀವೋದ್ಯದಂಶುಜಾಲಮಲಂ ರವೇಃ ॥ ೧೫೪ ॥**

ಕಾಂತಿವಿಶಿಷ್ಟರಾದ ಅಸುರದೇವತೆಗಳಿಂದಲೂ ಕಲ್ಪವಾಸಿ ಮೊದಲಾದ ಇತರ ದೇವತೆಗಳಿಂದಲೂ ಸಹಿತವಾದ ಸಭೆಯು ಸ್ವಾಮಿಯ ದೆಶೆಯಿಂದ ಧರ್ಮವೆಂಬ ಅಮೃತವನ್ನು ಕುಡಿದು, ಸೂರ್ಯನ ಚೆನ್ನಾಗಿ ಉದಯಿಸುತ್ತಿರುವ ಕಿರಣಗಳ ಸಮೂಹವನ್ನು ಕುಡಿದ (ಸ್ವೀಕರಿಸಿದ) ತಾವರೆಯ ಬಳ್ಳಿಯಂತೆ, ಸಂತೋಷಿಸಿದ್ದಿತು.

**ಮಧ್ಯೇ ಸಭಮಥೋತ್ಥಾಯ ಭರತೋ ರಚಿತಾಂಜಲಿಃ ।**
**ವ್ಯಜಿಜ್ಞಪದಿದಂ ವಾಕ್ಯಂ [೩]ಪ್ರಶ್ರಯೋ ಮೂರ್ತಿಮಾನಿವ ॥ ೧೫೫ ॥**

ಆಮೇಲೆ ಕೈಗಳನ್ನು ಜೋಡಿಸಿದ ಭರತರಾಜನು ಸಭಾಮಧ್ಯದಲ್ಲಿ ಎದ್ದು, ಆಕಾರವುಳ್ಳ ವಿನಯವೋ ಎಂಬಂತೆ, ಈ ಮುಂದೆಹೇಳುವ ವಾಕ್ಯವನ್ನು ವಿಜ್ಞಾಪಿಸಿದನು.

**ಬ್ರುವತೋಽಸ್ಯ ಮುಖಾಂಭೋಜಾಲ್ಲಸದ್ದಂತಾಂಶುಕೇಸರಾತ್ ।**
**ನಿರ್ಯಯೌ ಮಧುರಾ ವಾಣೀ ಪ್ರಸನ್ನೇವ ಸರಸ್ವತೀ ॥ ೧೫೬ ॥**

ಮಾತನಾಡುತ್ತಿರುವ ಈ ಭರತಚಕ್ರವರ್ತಿಯ ಪ್ರಕಾಶಮಾನವಾದ ಹಲ್ಲುಗಳೆಂಬ ಕುಸುಮ (ಕೇಸರ) ಗಳುಳ್ಳ ಮುಖವೆಂಬ ಕಮಲದಿಂದ, ಪ್ರಸನ್ನಳಾದ ಸರಸ್ವತಿಯೋ ಎಂಬಂತೆ, ಮಧುರವಾದ ವಚನವು ಹೊರಟಿತು.

**ತ್ವತ್ತಃ ಪ್ರಬೋಧಮಾಯಾಂತೀ ಸಭೇಯಂ ಸಸುರಾಸುರಾ ।**
**ಪ್ರಫುಲ್ಲವದನಾಂಭೋಜಾ ವ್ಯಕ್ತಮಂಭೋಜಿನೀಯತೇ ॥ ೧೫೭ ॥**

''ಸ್ವಾಮಿಯೆ ! ಸುರಾಸುರರುಳ್ಳ ಈ ಸಭೆಯು ನಿನ್ನಿಂದ ಪ್ರಬೋಧ (ಎಚ್ಚರ) ವನ್ನು ಹೊಂದಿ, ಸೂರ್ಯನಿಂದ ವಿಕಸಿತವಾದ ಕಮಲಿನಿಯಂತೆ, ವಿಕಸಿತವಾದ ಮುಖಕಮಲವುಳ್ಳುದಾಗಿದೆ.

**ತಮಃ[೪]ಪ್ರಲಯಲೀನಸ್ಯ ಜಗತಃ [೫]ಸರ್ಜನಂ ಪ್ರತಿ ।**
**ತ್ವಯಾಮೃತಮಿವಾಸಿಕ್ತಮಿದಮಾಲಕ್ಷ್ಯತೇ ವಚಃ ॥ ೧೫೮ ॥**

ಪ್ರಭೋ ! ನಿನ್ನ ಉಪದೇಶಮಯವಾದ ವಚನವು ಅಜ್ಞಾನಾಂಧಕಾರವೆಂಬ ಪ್ರಲಯ(ಮೂರ್ಛೆ)ದಿಂದ ನಷ್ಟ(ವ್ಯಾಪ್ತ)ವಾದ ಜಗತ್ತನ್ನು ಪುನರುಜ್ಜೀವನ ಮಾಡುವುದಕ್ಕೋಸ್ಕರ ಅಮೃತವು ಸೇಚಿಸಲ್ಪಟ್ಟಂತಿದೆ.

**ನೋದಭಾಸ್ಯನ್ ಯದಿ ಧ್ವಾಂತವಿಚ್ಛಿದಸ್ತ್ವದ್ವಚೋಂಶವಃ ।**
**ತಮಸ್ಕಂಧೇ ಜಗತ್ಕೃತ್ಸ್ನಮಪತಿಷ್ಯದಿದಂ ಧ್ರುವಮ್ ॥ ೧೫೯ ॥**

ಅಜ್ಞಾನಾಂಧಕಾರವನ್ನು ನಾಶಮಾಡುವ ನಿನ್ನ ವಚನಗಳೆಂಬ ಕಿರಣಗಳು ಉದಯಿಸದಿರುತ್ತಿದ್ದರೆ, ಈ ಎಲ್ಲ ಜಗತ್ತೂ ಅಜ್ಞಾನವೆಂಬ ಗಾಢಾಂಧಕಾರದಲ್ಲಿ ಬೀಳುತ್ತಿದ್ದಿತು, ಇದು ನಿಶ್ಚಯ.

**ಯುಷ್ಮತ್ಸಂದರ್ಶನಾದೇವ ದೇವಾಭೂನ್ಮೇ ಕೃತಾರ್ಥತಾ ।**
**ಕಸ್ಯ ವಾ ನ ಕೃತಾರ್ಥತ್ವಂ ಸನ್ನಿಧೌ ಮಹತೋ ನಿಧೇಃ ॥ ೧೬೦ ॥**

ದೇವ ! ನಿಮ್ಮ ಸಂದರ್ಶನದಿಂದಲೇ ನಾನು ಕೃತಾರ್ಥನಾದೆನು. ಅಪೇಕ್ಷಿಸಿದ ವಸ್ತುವನ್ನು ಕೊಡುವ ಮಹಾನಿಧಿಯು ಸಮೀಪದಲ್ಲಿದ್ದರೆ ಯಾರುತಾನೆ ಕೃತಾರ್ಥರಾಗಲಾರರು ?

**ಶ್ರುತ್ವಾ ಪುನರ್ಭವದ್ವಾಚಂ ಕೃತಾರ್ಥತರಕೋಸ್ಮ್ಯಹಮ್ ।**
**ದೃಷ್ಟ್ವಾಮೃತಂ ಕೃತೀ ಲೋಕಃ ಕಿಂ ಪುನಸ್ತದ್ರಸೋಪಭು(ಯು)ಕ್ ॥**

ತಮ್ಮ ವಚನವನ್ನು ಕೇಳಿಯಾದರೋ ಹೆಚ್ಚು ಕೃತಾರ್ಥನಾದೆನು. ಜನವು ಅಮೃತವನ್ನು ನೋಡಿಯೇ ಸುಕೃತವುಳ್ಳುದಾಗುವುದು. ಹೀಗಿರುವಾಗ ಆ ರಸವನ್ನು ಅನುಭವಿಸಿದರೆ ಹೇಳತಕ್ಕುದೇನು ?

**[೧]ಇಷ್ಟ ಏವ ಕಿಲಾರಣ್ಯೇ ವೃಷ್ಟೋ [೨]ದೇವ ಇತಿ ಶ್ರುತಿಃ ।**
**ಸ್ಪಷ್ಟೀಭೂತಾದ್ಯ ಮೇ ದೇವ ವೃಷ್ಟಂ ಧರ್ಮಾಂಬು ಯತ್ತ್ವಯಾ ॥**

ಸ್ವಾಮಿಯೇ ! ತಾವು ಧರ್ಮವೆಂಬ ಜಲವನ್ನು ಸುರಿದುದರಿಂದ, ''ಮೇಘವು ಇಷ್ಟವಾದ ಕಾಡಿನಲ್ಲೇ ಮಳೆಯನ್ನು ಸುರಿಯಿತಲ್ಲ !'' ಎಂಬೀ ನುಡಿಯು ಈಗ ನನಗೆ ಸ್ಪಷ್ಟವಾಯಿತು.

**ತ್ವಯೋಪದಿಶತಾ ತತ್ತ್ವಂ ಕಿಂ ನಾಮ ಪರಿಶೇಷಿತಮ್ ।**
**ಧೂತಾಂಧತಮಸೋ ಭಾಸ್ವಾ [೩]ನ್ಪ್ರಾಸ್ಯಂ ಕಿಮವಶೇಷಯೇತ್ ॥ ೧೬೩ ॥**

ದೇವ ! ತತ್ತ್ವವನ್ನುಪದೇಶಮಾಡುವ ನೀನು ಯಾವುದನ್ನು ತಾನೆ ಉಪದೇಶಮಾಡದೆ ಬಿಟ್ಟಿರುತ್ತಿ ? ಗಾಢಾಂಧಕಾರವನ್ನು ನಾಶಮಾಡುವ ಸೂರ್ಯನು ಪ್ರಕಾಶಿಸುವುದಕ್ಕೆ ಯೋಗ್ಯವಾದ ಯಾವ ಪದಾರ್ಥವನ್ನು ಪ್ರಕಾಶಿಸದೆ ಬಿಡುವನು ? ಎಲ್ಲವನ್ನೂ ಪ್ರಕಾಶಿಸುತ್ತಾನೆಂದರ್ಥವು.

**ತ್ವಯೋಪದರ್ಶಿತೇ ತತ್ತ್ವೇ ಸತಾಂ ಮೋಮುಹ್ಯತೇ ನ ಧೀಃ ।**
**ಮಹತ್ಯಾದರ್ಶಿತೇ ವರ್ತ್ಮನ್ಯನಂಧಃ ಕಃ ಪರಿಸ್ಖಲೇತ್ ॥ ೧೬೪ ॥**

ನೀನು ತೋರಿಸಿದ ತತ್ತ್ವದಲ್ಲಿ ಸತ್ಪುರುಷರ ಬುದ್ಧಿಯು ಮೋಹವನ್ನು ಹೊಂದುವುದಿಲ್ಲ. ತೋರಿಸಿಕೊಟ್ಟ ದೊಡ್ಡಮಾರ್ಗದಲ್ಲಿ ಕಣ್ಣುಳ್ಳವನು ಯಾವನು ಎಡವಿಬಿದ್ದಾನು ? ಯಾರೂ ಬೀಳಲಾರರು.

**ತ್ವದ್ವಚೋವಿಸ್ತರೇ ಕೃತ್ಸ್ನಂ ವಸ್ತುಬಿಂಬಂ ಮಯೇಕ್ಷಿತಮ್ ।**
**ತ್ರೈಲೋಕ್ಯಶ್ರೀಮುಖಾಲೋಕಮಂಗಲಾಬ್ದತಲಾಯಿತೇ ॥ ೧೬೫ ॥**

ಮೂರು ಲೋಕದ ಲಕ್ಷ್ಮಿಯ ಮುಖವನ್ನು ನೋಡುವುದಕ್ಕೆ ಮಂಗಲಮಯವಾದ ಕನ್ನಡಿಯಂತಿರುವ ನಿನ್ನ ವಿಸ್ತಾರವಾದ ವಚನದಲ್ಲಿ ಪ್ರತಿಬಿಂಬಿಸಿದ ಎಲ್ಲಾ ವಸ್ತುವನ್ನೂ ನಾನು ನೋಡಿದೆನು.

**ತಥಾಪಿ ಕಿಮಪಿ ಪ್ರಷ್ಟುಮಿಚ್ಛಾ ಮೇ ಹೃದಿ ವರ್ತತೇ ।**
**ಭವದ್ವಚೋಮೃತಾಭೀಕ್ಷ್ಣಪಿಪಾಸಾ ತತ್ರ ಕಾರಣಮ್ ॥ ೧೬೬ ॥**

---

೧ ಸಭಾರಾಜಮರ್ತ್ಯಾದೀತಿ ನಪುಂಸಕತಾ. ೨ ಕಾಂತ್ಯುಪಲಕ್ಷಿತಾಸುರಸುರಸಹಿತಾ. ೩ ವಿನಯಃ ೪ ಪ್ರಲಯೋ ಮೂರ್ಛಾ. ೫ ಸೃಷ್ಟಿಂ.

೧ ಈಪ್. ೨ ಮೇಘಃ. ೩ ಪ್ರಕಾಶ್ಯಂ.

ಹಾಗಿದ್ದರೂ ಏನನ್ನೋ ಕೇಳಬೇಕೆಂಬ ಇಚ್ಛೆಯು ನನ್ನ ಹೃದಯದಲ್ಲಿದೆ. ಆದರಲ್ಲಿ ತಮ್ಮ ವಚನವೆಂಬ ಅಮೃತವನ್ನು ಬಾರಿಬಾರಿಗೂ ಪಾನಮಾಡಬೇಕೆಂಬ ಇಚ್ಛೆಯೇ ಕಾರಣವು.

**[೧]ಗಣೇಶಮಥವೋಲ್ಲಂಘ್ಯ ತ್ವಾಂ ಪ್ರಷ್ಟುಂ ಕ ಇವಾ[೨]ಹಕಮ್ ।**
**ಭಕ್ತೋ ನ ಗಣಯಾಮೀದಮತಿಭಕ್ತಿಶ್ಚ ನೇಷ್ಯತೇ ॥ ೧೬೭ ॥**

ಅಥವಾ ಗಣಧರರನ್ನು ಉಲ್ಲಂಘಿಸಿ ನಿನ್ನನ್ನೇ ಪ್ರಶ್ನೆಮಾಡಲು ನಾನು ಎಷ್ಟರವನು ? ಆದರೆ ಭಕ್ತನಾದ ನಾನು ಈ ವಿಷಯ (ತನ್ನ ಯೋಗ್ಯತೆ) ವನ್ನು ಗಣನೆಗೆ ತರುವುದಿಲ್ಲ. ಅತಿಭಕ್ತಿಯು ಗಣನೆಗೆತಾರದಂತೆ ಮಾಡುತ್ತದೆ.

**ಕಿಂ ವಿಶೇಷೈಷಿತ್ಯೈಷಾ ಮೇ ಕಿಮನೀ[೩]ಷಲ್ಲಭಾದರಃ ।**
**[೪]ಶ್ರದ್ಧೋತ್ಕರ್ಷೋಽಚ್ಚಿಕೀರ್ಷಾ ನು ಮುಖರೀಕುರುತೇಽದ್ಯ ಮಾಮ್ ॥**

ವಿಶೇಷವನ್ನು ತಿಳಿಯಬೇಕೆಂಬ ಇಚ್ಛೆಯೋ, ಅತಿಶಯವಾದ ಆದರ (ಪ್ರೀತಿ) ವೋ, ಹೆಚ್ಚು ಶ್ರದ್ಧೆಯನ್ನು ಮಾಡಬೇಕೆಂಬ ಇಚ್ಛೆಯೋ, ಇವುಗಳಲ್ಲಿ ಯಾವುದೋ ಈಗ ನನ್ನನ್ನು ಮಾತನಾಡುವಂತೆ ಮಾಡುತ್ತದೆ.

**ಭಗವನ್ ಶ್ರೋತುಕಾಮೋಽಸ್ಮಿ [೫]ವಿಶ್ವಭುಗ್ಧರ್ಮಸಂಗ್ರಹಮ್ ।**
**ಪುರಾಣಂ ಮಹತಾಂ ಪುಂಸಾಂ ಪ್ರಸೀದ ಕುರು ಮೇ ದಯಾಮ್ ॥**

ಜಗದ್ರಕ್ಷಕನಾದ ಭಗವಂತನೇ ! ಧರ್ಮದ ಸಂಗ್ರಹವುಳ್ಳ ಮಹಾಪುರುಷರ ಪುರಾಣವನ್ನು ಕೇಳಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ. ಪ್ರಸನ್ನನಾಗಿ ನನ್ನಲ್ಲಿ ದಯೆಯನ್ನು ಮಾಡು.

**ತ್ವತ್ಸಮಾಃ ಕತಿ ಸರ್ವಜ್ಞಾ ಮತ್ಸಮಾಃ ಕತಿ ಚಕ್ರಿಣಃ ।**
**ಕೇಶವಾಃ ಕತಿ ವಾ ದೇವ ಸರಾಮಾಃ ಕತಿ ತದ್ದ್ವಿಷಃ ॥ ೧೭೦ ॥**

ವಕ್ತೃಗಳಲ್ಲಿ ಶ್ರೇಷ್ಠನಾದ ಸ್ವಾಮಿಯೇ ! ನಿನಗೆ ಸಮಾನರಾದ ಸರ್ವಜ್ಞರು ಎಷ್ಟುಮಂದಿಗಳು ? ನನಗೆ ಸಮಾನರಾದ ಚಕ್ರವರ್ತಿಗಳೆಷ್ಟುಮಂದಿಗಳು ? ಬಲದೇವರು ಎಷ್ಟುಮಂದಿಗಳು ? ವಾಸುದೇವರು ಎಷ್ಟುಮಂದಿಗಳು ? ಅವರ ಶತ್ರುಗಳಾದ ಪ್ರತಿವಾಸುದೇವರು ಎಷ್ಟುಮಂದಿಗಳು ?

**ಕೀದೃಶಂ [೬]ವೃತ್ತಕಂ ತೇಷಾಂ [೭]ವೃತ್ತಂ [೮]ವರ್ತ್ಸ್ಯಚ್ಚ [೯]ಸಾಂಪ್ರತಮ್ ।**
**ತತ್ಸರ್ವಂ ಶ್ರೋತುಕಾಮೋಽಸ್ಮಿ ವದ ಮೇ ವದತಾಂವರ ॥ ೧೭೧ ॥**

ಅವರ ಪೂರ್ವಚರಿತ್ರವಾವುದು ? ಈಗಿನ ಮತ್ತು ಮುಂದಿನ ಚರಿತ್ರವಾವುದು ? ಅದನ್ನೆಲ್ಲ ಕೇಳಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ. ನನಗೆ ಹೇಳು. (ಯುಗ್ಮಂ)

**[೧೦]ಕಿಂನಾಮಾನಶ್ಚ ತೇ ಸರ್ವೇ ಕಿಂಗೋತ್ರಾಃ ಕಿಂಸನಾಭಯಃ ।**
**ಕಿಂಲಕ್ಷ್ಮಾಣಃ ಕಿಮಾಕಾರಾಃ ಕಿಮಾ[೧೧]ಹಾರ್ಯಾಃ ಕಿಮಾಯುಧಾಃ ॥**

ಅವರ ಹೆಸರುಗಳೇನು ? ಅವರ ಗೋತ್ರಗಳಾವುವು ? ಅವರ ಸಂಬಂಧಿ (ಬಂಧು) ಗಳು ಯಾರು ? ಅವರ ಲಕ್ಷಣಗಳೇನು ? ಅವರ ಆಕಾರಗಳು ಯಾವುವು ? ಆಭರಣಗಳಾವುವು ? ಏನು ಆಯುಧಗಳುಳ್ಳವರು ?

---

೧ ವೃಷಭಸೇನಗಣಧರಂ. ೨ ಆಲ್ಪೋಽಹಂ. ೩ ಸುದುರ್ಲಭಾದರಃ. ೪ ಶ್ರದ್ಧಾನಾತಿಶಯಸ್ಯ ಉಚ್ಚೇತುಮಿಚ್ಛಾ. ೫ ಜಗದ್ರಕ್ಷಕ ! ೬ ಚರಿತ್ರಂ. ೭ ಪುರಾಭೂತವೃತ್ತಂ. ೮ ಭವಿಷ್ಯದ್ವೃತ್ತಂ. ೯ ವರ್ತಮಾನವೃತ್ತಂ. ೧೦ ಅತ್ರಶ್ಲೋಕೇ ಸರ್ವತ್ರ ಕಿಂಶಬ್ದಃ ಸಮಾಸ ಏವ, ಕಾನಿ ನಾಮಾನಿ ಯೇಷಾಂ ತೇ ಇತ್ಯಾದಿ. ೧೧ ಕಿಮಾಭರಣಾಃ.

**ಕಿಂ ತೇಷಾಮಾಯುಷೋ ಮಾನಂ ಕಿಂ ವರ್ಷ್ಮ ಕಿಮಥಾಂತರಮ್ ।**
**ಕುತೂಹಲಮಿದಂ ಜ್ಞಾತುಂ ವಿಶ್ವಂ [೧]ವಿಶ್ವಜನೀನ ಮೇ ॥ ೧೭೩ ॥**

ಅವರ ಆಯುಷ್ಯಪರಿಮಾಣವೆಷ್ಟು ? ಶರೀರಪರಿಮಾಣವೆಷ್ಟು ? ಒಬ್ಬನು ಅವತರಿಸಿದಮೇಲೆ ಇನ್ನೊಬ್ಬನು ಅವತರಿಸುವವರೆಗೆ ಮಧ್ಯಕಾಲವೆಷ್ಟು ? ಸರ್ವರಿಗೂ ಹಿತಚಿಂತಕನಾದ ಸ್ವಾಮಿಯೇ ! ಇದನ್ನೆಲ್ಲ ತಿಳಿಯಬೇಕೆಂಬ ಕುತೂಹಲವು ನನಗುಂಟಾಗಿದೆ.

**ಕಸ್ಮಿನ್ಯುಗೇ ಕಿಯಂತೋ ವಾ [೨]ಯುಗಾಂಶಾಃ ಕಿಂ ಯುಗಾಂ[೩]ತರಮ್ ।**
**ಯುಗಾನಾಂ ಪರಿವರ್ತೋ ವಾ ಕತಿಕೃತ್ವಃ ಪ್ರವರ್ತತೇ ॥ ೧೭೪ ॥**

ಅವರು ಯಾವ ಯುಗದಲ್ಲಿ ಆಗುತ್ತಾರೆ ? ಯುಗದ ಭೇದಗಳೆಷ್ಟು ? ಒಂದು ಯುಗದಿಂದ ಇನ್ನೊಂದು ಯುಗಕ್ಕೆ ಮಧ್ಯಕಾಲವೆಷ್ಟು ? ಯುಗಪರಿವರ್ತನೆಯು ಎಷ್ಟುಬಾರಿ ಉಂಟಾಗುತ್ತದೆ ?

**ಯುಗಸ್ಯ [೪]ಕತಿಥೇ ಭಾಗೇ ಮನವೋ ಮನ್ವತೇ ಚ ಕಿಮ್ ।**
**ಕಿಂ ವಾ ಮನ್ವಂತರಂ ದೇವ ತತ್ತ್ವಂ ಮೇ ಬ್ರೂಹಿ ತತ್ತ್ವತಃ ॥ ೧೭೫ ॥**

ಯುಗದ ಎಷ್ಟನೆಯಭಾಗದಲ್ಲಿ ಮನುಗಳು ? ಏನನ್ನು ತಿಳಿಯುತ್ತಾರೆ ? ಮನ್ವಂತರವಾವುದು ? ಸ್ವಾಮಿಯೇ ! ನನಗೆ ತತ್ತ್ವವನ್ನು ಯಥಾರ್ಥವಾಗಿ ಹೇಳು.

**ಲೋಕಂ ಕಾಲಾವತಾರಂ ಚ ವಂಶೋತ್ಪತ್ತಿಲಯಸ್ಥಿತೀಃ ।**
**ವರ್ಣಸಂಭೂತಿಮನ್ಯಚ್ಚ [೫]ಬುಭುತ್ಸೇಽಹಂ ಭವನ್ಮುಖಾತ್ ॥ ೧೭೬ ॥**

ಲೋಕವನ್ನೂ, ಕಾಲದ ಅವತಾರವನ್ನೂ ವಂಶಗಳ ಉತ್ಪತ್ತಿಸ್ಥಿತಿವಿನಾಶಗಳನ್ನೂ ಕ್ಷತ್ರಿಯಾದಿವರ್ಣೋತ್ಪತ್ತಿಯನ್ನೂ ಇತರ ವಿಷಯವನ್ನೂ ತಮ್ಮ ಮುಖದಿಂದ ತಿಳಿಯಬೇಕೆಂಬ ಇಚ್ಛೆಯುಳ್ಳವನಾಗಿದ್ದೇನೆ.

**ಅನಾದಿವಾಸನೋದ್ಭೂತಮಿಥ್ಯಾಜ್ಞಾನಸಮುತ್ಥಿತಮ್ ।**
**ನುದ ಮೇ ಸಂಶಯಧ್ವಾಂತಂ ಜಿನಾರ್ಕ ವಚನಾಂಶುಭಿಃ ॥ ೧೭೭ ॥**

ಜಿನಸೂರ್ಯನೇ ! ಅನಾದಿವಾಸನೆಯಿಂದುಂಟಾದ ಮಿಥ್ಯಾಜ್ಞಾನದಿಂದುತ್ಪನ್ನವಾದ ನನ್ನ ಸಂಶಯವೆಂಬ ಅಂಧಕಾರವನ್ನು ನಿನ್ನ ವಚನಗಳೆಂಬ ಕಿರಣಗಳಿಂದ ದೂರಮಾಡು''

**ಇತಿ ಪ್ರಶ್ನಮುಪನ್ಯಸ್ಯ ಭರತಃ [೬]ಶಾತಮಾತುರಃ ।**
**ವಿರರಾಮ ಯಥಾಸ್ಥಾನ[೭]ಮಾಸೀನಶ್ಚ ಕಥೋತ್ಸುಕಃ ॥ ೧೭೮ ॥**

ಈ ಪ್ರಕಾರವಾಗಿ ಪ್ರಶ್ನೆಯನ್ನು ಮಾಡಿ, ನೂರುಮಕ್ಕಳ ತಾಯಿಯ ಮಗನಾದ ಭರತಚಕ್ರವರ್ತಿಯು ವಿರಾಮವನ್ನು ಹೊಂದಿ, ಉಚಿತವಾದ ಸ್ಥಾನದಲ್ಲಿ ಕುಳಿತು ಕಥೆಯನ್ನು ಕೇಳುವುದರಲ್ಲಿ ಕುತೂಹಲವುಳ್ಳವನಾದನು.

**ಲಬ್ಧಾವಸರಮಿ[೮]ದ್ಧಾರ್ಥಂ ಸುಸಂಬದ್ಧಮನುದ್ಧತಮ್ ।**
**ಅಭ್ಯನಂದತ್ಸಭಾ ಕೃತ್ಸ್ನಾ ಪ್ರಶ್ನಮಸ್ಯೇಶಿತು[೯]ರ್ವಿಶಾಮ್ ॥ ೧೭೯ ॥**

ಈ ಭರತಚಕ್ರವರ್ತಿಯ ಸಮಯೋಚಿತವೂ ಸಮೃದ್ಧವಾದ ಅರ್ಥವುಳ್ಳುದೂ ಅಸಂಬದ್ಧವಲ್ಲದುದೂ ಗರ್ವರಹಿತವೂ ಆದ ಪ್ರಶ್ನೆಯನ್ನು ಕೇಳಿ ಸಭಿಕರೆಲ್ಲ ಸಂತೋಷಪಟ್ಟರು.

---

೧ ವಿಶ್ವಜನೇಭ್ಯೋಹಿತ. ೨ ಯುಗಾವಯವಾಃ. ೩ ಯುಗಾವಧಿಃ. ೪ ಕತೀನಾಂ ಪೂರಣಃ ಕತಿಥಸ್ತಸ್ಮಿನ್. ೫ ಬೋದ್ಧುಮಿಚ್ಛಾಮಿ. ೬ ಶತಸ್ಯ ಮಾತಾ, ತಸ್ಯಾಃ ಅಪತ್ಯಂ ಪುಮಾನ್. ೭ ಉಪವಿಷ್ಟಃ. ೮ ಸಮೃದ್ಧಾರ್ಥಂ. ೯ ಮನುಜಾನಾಂ.

**ತತ್ಕ್ಷಣಂ ಸತ್ಕಥಾಪ್ರಶ್ನಾತ್ತದರ್ಪಿತದೃಶಃ ಸುರಾಃ ।**
**ಪುಷ್ಪವೃಷ್ಟಿಮಿವಾತೇನುಃ ಪ್ರತೀತಾ ಭರತಂ ಪ್ರತಿ ॥ ೧೮೦ ॥**

ಆ ಸಮಯದಲ್ಲಿ ಉತ್ತಮಕಥೆಯ ಪ್ರಶ್ನೆಯನ್ನು ಮಾಡಿದುದರಿಂದ ದೇವತೆಗಳು ಸಂತುಷ್ಟರಾಗಿ, ಭರತಚಕ್ರವರ್ತಿಯ ಮೇಲೆ ಪುಷ್ಪವೃಷ್ಟಿಮಾಡಿದಂತೆ, ತಮ್ಮ ನೇತ್ರಗಳನ್ನು ಅರ್ಪಿಸಿದರು. ಬಹಳಸಂತೋಷದಿಂದ ದೇವತೆಗಳು ಭರತ ಮಹಾರಾಜನನ್ನು ನೋಡಿದರೆಂದು ಭಾವವು.

**ಸಾಧು ಭೋ ಭರತಾಧೀಶ ಪ್ರತೀಕ್ಷ್ಯೋಽಸಿ ತ್ವಮದ್ಯ ನಃ ।**
**ಪ್ರಶಶಂಸುರಿತೀಂದ್ರಾಸ್ತಂ ಪ್ರಶ್ರಯಾತ್ಕೋನ ಶಸ್ಯತೇ ॥ ೧೮೧ ॥**

"ಭರತಮಹಾರಾಜನೆ! ಬಹಳ ಚೆನ್ನಾಯಿತು. ಈ ದಿನ ನೀನು ನಮಗೆ ಪೂಜ್ಯನಾಗಿ ಆದೆ" ಯೆಂದು ದೇವೇಂದ್ರರು ಭರತರಾಜನನ್ನು ಪ್ರಶಂಸೆ ಮಾಡಿದರು. ವಿನಯಗುಣದಿಂದ ಯಾರುತಾನೆ ಪ್ರಶಂಸಿಸಲ್ಪಡುವುದಿಲ್ಲ ?

**ಪ್ರಶ್ನಾದ್ವಿನೈವ ತದ್ಭಾವಂ ಜಾನನ್ನಪಿ ಸ ಸರ್ವವಿತ್ ।**
**ತತ್ಪ್ರಶ್ನಾಂತಮುದೈಕ್ಷಿಷ್ಟ ಪ್ರತಿಪತ್ತನುರೋಧತಃ ॥ ೧೮೨ ॥**

ಸರ್ವಜ್ಞರಾದ ಆ ವೃಷಭಸ್ವಾಮಿಯವರು ಭರತನು ಪ್ರಶ್ನೆ ಮಾಡದಿದ್ದರೂ ಅವನ ಅಭಿಪ್ರಾಯವನ್ನು ತಿಳಿಯುವವರಾಗಿದ್ದರೂ ಶ್ರೋತೃಗಳ ಅನುರೋಧದಿಂದ ಅವನ ಪ್ರಶ್ನೆಯು ಕೊನೆಯಾಗುವುದನ್ನು ನೋಡುತ್ತಿದ್ದರು.

**ಇತಿ ವಿಜ್ಞಾಪಿತಸ್ತೇನ ಭಗವಾನಾದಿತೀರ್ಥಕೃತ್ ।**
**ವ್ಯಾಜಹಾರ ಪುರಾಣಾರ್ಥಮತಿಗಂಭೀರಯಾ ಗಿರಾ ॥ ೧೮೩ ॥**

ಈ ರೀತಿಯಾಗಿ ಭರತಮಹಾರಾಜನು ವಿಜ್ಞಾಪಿಸಿಕೊಳ್ಳುತ್ತಿರಲಾಗಿ, ಆದಿಭಗವಂತನು ಅತ್ಯಂತಗಂಭೀರವಾದ ವಾಣಿಯಿಂದ ಪುರಾಣದ ಅರ್ಥವನ್ನು ಹೇಳಿದನು.

**ಅಪರಿಸ್ಪಂದತಾಲ್ವಾದೇರಸ್ಪಷ್ಟದಶನದ್ಯುತೇಃ ।**
**ಸ್ವಯಂಭುವೋ ಮುಖಾಂಭೋಜಾಜ್ಜಾತಾ ಚಿತ್ರಂ ಸರಸ್ವತೀ ॥ ೧೮೪ ॥**

ಅಕ್ಷರೋತ್ಪತ್ತಿಸ್ಥಾನವಾದ ತಾಲು (ದವಡೆ) ಮೊದಲಾದುವುಗಳ ಚಲನೆಯಿಲ್ಲದಿರುವುದೂ, ಹಲ್ಲುಗಳ ಕಾಂತಿಯೂ ಸ್ಪಷ್ಟವಾಗಿ ತೋರದಿರುವುದೂ ಆದ ಸ್ವಯಂಭು(ಆದಿಬ್ರಹ್ಮ)ವಿನ ಮುಖಕಮಲದಿಂದ ಸರಸ್ವತಿಯು ಹೊರಟಳು. ಇದು ಆಶ್ಚರ್ಯ !

**ಪ್ರಸವಾಗಾರಮೇತಸ್ಯಾಃ ಸತ್ಯಂ ತದ್ವಕ್ತ್ರಪಂಕಜಮ್ ।**
**ತತ್ರ ಲಬ್ಧಾತ್ಮಲಾಭಾ ಸಾ ಯಜ್ಜಗದ್ವಶಮಾನಯತ್ ॥ ೧೮೫ ॥**

ಆದಿಬ್ರಹ್ಮರ ಮುಖಕಮಲದಲ್ಲಿ ಉದ್ಭವಿಸಿದ ಆ ಸರಸ್ವತಿಯು ಜಗತ್ತನ್ನು ವಶಮಾಡಿದುದರಿಂದ ನಿಜವಾಗಿಯೂ ಈ ಸರಸ್ವತಿಗೆ ಆದಿಬ್ರಹ್ಮರ ಮುಖಕಮಲವು ಉತ್ಪತ್ತಿಸ್ಥಾನ (ತವರ್ಮನೆ) ವಾಗಿದೆ.

**ವಿವಕ್ಷಯಾ ವಿನೈವಾಸ್ಯ ದಿವ್ಯೋ ವಾಕ್ಪ್ರಸರೋಽಭವತ್ ।**
**ಮಹತಾಂ ಚೇಷ್ಟಿತಂ ಚಿತ್ರಂ ಜಗದಭ್ಯುಜ್ಜಿಹೀರ್ಷತಾಮ್ ॥ ೧೮೬ ॥**

ಸ್ವಾಮಿಗೆ ಉಪದೇಶವನ್ನು ಹೇಳಬೇಕೆಂಬ ಇಚ್ಛೆಯಿಲ್ಲದಿದ್ದರೂ ಸ್ವಾಭಾವಿಕವಾಗಿ ದಿವ್ಯಧ್ವನಿಯು ಉಂಟಾಯಿತು. ಲೋಕವನ್ನು ಉದ್ಧಾರಮಾಡುವ ಮಹಾತ್ಮರ ಚೇಷ್ಟೆ(ವ್ಯಾಪಾರ)ಯು ಆಶ್ಚರ್ಯಕರವಾಗಿರುತ್ತದೆ.

೧ ಭರತಾರ್ಪಿತದೃಷ್ಟಯಃ. ೨ ಹೃಷ್ಟಾಃ ಪ್ರಸಿದ್ಧಾಃ. ೩ ಪೂಜ್ಯಃ. ೪ ಭರತಂ. ೫ ವಿನಯಾತ್. ೬ ಭರತಾಭಿಪ್ರಾಯಂ. ೭ ಅಪಶ್ಯತ್. ೮ ಶ್ರೋತೃ. ೯ ವಾಣೀ, ನದೀ ಚ. ೧೦ ಯಸ್ಮಾತ್ಕಾರಣಾತ್. ೧೧ ಲೋಕಮುದ್ಧರ್ತುಮಿಚ್ಛತಾಂ.

**ಏಕರೂಪಾಽಪಿ ತದ್ಭಾಷಾ ಶ್ರೋತೄನ್ಪ್ರಾಪ್ಯ ಪೃಥಗ್ವಿಧಾನ್ ।**
**ಭೇಜೇ ನಾನಾತ್ಮತಾಂ ಕುಲ್ಯಾಜಲಸ್ರುತಿರಿವಾಂಘ್ರಿಪಾನ್ ॥ ೧೮೭ ॥**

ಆ ದಿವ್ಯಭಾಷೆಯು ಒಂದೇವಿಧವಾಗಿ ಹೊರಟರೂ, ಕಾಲುವೆಯ ಜಲಪ್ರವಾಹವು ಬೇರೆಬೇರೆ ಮಾರ್ಗಗಳನ್ನು ಹೊಂದಿ ಬೇರೆ ಬೇರೆಯಾಗಿ ಪರಿಣಮಿಸುವಂತೆ, ಬೇರೆಬೇರೆ ಶ್ರೋತೃಗಳನ್ನು ಹೊಂದಿ ನಾನಾಪ್ರಕಾರವಾಗಿ ಪರಿಣಮಿಸಿದ್ದಿತು.

**ಪರಾರ್ಥಂ ಸ ಕೃತಾರ್ಥೋಽಪಿ ಯದ್ಯೈಹಿಷ್ಟ ಜಗದ್ಗುರುಃ ।**
**ತನ್ನೂನಂ ಮಹತಾಂ ಚೇಷ್ಟಾ ಪರಾರ್ಥೈವ ನಿಸರ್ಗತಃ ॥ ೧೮೮ ॥**

ಜಗದ್ಗುರುವಾದ ಆ ಭಗವಂತನು ತಾನು ಕೃತಾರ್ಥನಾಗಿದ್ದರೂ ಪರೋಪಕಾರನಿಮಿತ್ತವಾಗಿ ಧರ್ಮೋಪದೇಶವನ್ನು ಮಾಡಿದನು. ನಿಜವಾಗಿಯೂ ಮಹಾತ್ಮರ ಚೇಷ್ಟೆ(ವ್ಯಾಪಾರ)ಯು ಪರೋಪಕಾರಮಾಡುವುದೇ ಸ್ವಭಾವವುಳ್ಳದಾಗಿರುತ್ತದೆ.

**ತನ್ಮುಖಾತ್ಪ್ರಸೃತಾ ವಾಣೀ ದಿವ್ಯಾ ತಾಂ ಮಹತೀಂ ಸಭಾಮ್ ।**
**ಪ್ರೀಣಯಾಮಾಸ ಸೌಧೀವ ಧಾರಾ ಸಂತಾಪಹಾರಿಣೀ ॥ ೧೮೯ ॥**

ಆ ಸ್ವಾಮಿಯ ಮುಖದಿಂದ ಹೊರಟ ದಿವ್ಯವಾಣಿಯು, ಸಂತಾಪವನ್ನು ನಾಶಮಾಡುವ ಅಮೃತದ ಧಾರೆಯಂತೆ, ಆ ದೊಡ್ಡಸಭೆಯನ್ನು ಸಂತೋಷಪಡಿಸಿದ್ದಿತು.

**ಯತ್ಪೃಷ್ಟವಮಾದಿತಸ್ತೇನ ತತ್ಸರ್ವಮನುಪೂರ್ವಶಃ ।**
**ವಾಚಸ್ಪತಿರನಾಯಾಸಾದ್ಭರತಂ ಪ್ರತ್ಯಬೂಬುಧತ್ ॥ ೧೯೦ ॥**

ಭರತಚಕ್ರವರ್ತಿಯು ಮೊದಲಿಂದ ಕೇಳಿದುದನ್ನೆಲ್ಲ ಅನುಕ್ರಮವಾಗಿ ಸ್ವಾಮಿಯು ಆಯಾಸವಿಲ್ಲದೆ ಭರತನಿಗೆ ಬೋಧಿಸಿದರು.

**ಪ್ರಾಗೇವೋತ್ಸರ್ಪಿಣೀಕಾಲಸಂಬಂಧಿಪುರುಷಾಶ್ರಿತಮ್ ।**
**ಪುರಾಣಮತಿಗಂಭೀರಂ ವ್ಯಾಜಹಾರ ಜಗದ್ಗುರುಃ ॥ ೧೯೧ ॥**

ಜಗದ್ಗುರುವಾದ ಆದಿಬ್ರಹ್ಮರು ಮೊದಲು ಉತ್ಸರ್ಪಿಣೀಕಾಲದಲ್ಲಿ ಆಗಿಹೋದ ಮಹಾಪುರುಷರ ಅತಿಗಂಭೀರವಾದ ಪುರಾಣವನ್ನು ಹೇಳಿದರು.

**ತತೋಽವಸರ್ಪಿಣೀಕಾಲಮಾಶ್ರಿತ್ಯ ಪ್ರಸ್ತುತಾಂ ಕಥಾಮ್ ।**
**ಪ್ರಸ್ತೋಷ್ಯನ್ಸ ಪುರಾಣಸ್ಯ ಪೀಠಿಕಾಂ ಪ್ರಾಕ್ಸಮಾದಧೇ ॥ ೧೯೨ ॥**

ಆಮೇಲೆ ಅವಸರ್ಪಿಣೀಕಾಲವನ್ನಾಶ್ರಯಿಸಿ ಪ್ರಕೃತಕಥೆಯನ್ನು ಆರಂಭಿಸುವವರಾಗಿ ಮೊದಲು ಪುರಾಣದ ಪೀಠಿಕೆಯನ್ನು ಚೆನ್ನಾಗಿ ಹೇಳಿದರು.

**ಇತಿವೃತ್ತಂ ಪುರಾಕಲ್ಪೇ ಯತ್ಪ್ರೋವಾಚ ಗಿರಾಂಪತಿಃ ।**
**ಗಣೀ ವೃಷಭಸೇನಾಖ್ಯಸ್ತತ್ತದಾಧಿಜಗೇರ್ಥತಃ ॥ ೧೯೩ ॥**

ಚತುರ್ಥಕಾಲದ ಪ್ರಾರಂಭದಲ್ಲಿ ಆದಿಬ್ರಹ್ಮರು ಯಾವ ಇತಿಹಾಸವನ್ನು ಹೇಳಿದರೋ ಅದನ್ನು ವೃಷಭಸೇನಗಣಧರರು ಆಗ ಅರ್ಥರೂಪದಿಂದ (ಅರ್ಥವನ್ನು ಬಿಡಿಸಿ) ಹೇಳಿದರು.

೧ ವ್ಯಾಪಾರಯಾಮಾಸ. ೨ ಅಮೃತಸಂಬಂಧಿನೀ. ೩ ಆದೀಶ್ವರಃ. ೪ ಪುರುಷಾಶ್ರಯಮಿತ್ಯಪಿ ಪಾಠಃ. ೫ ಪ್ರಕೃತಾಂ. ೬ ಬ್ರುವನ್. ೭ ಸಮ್ಯಗುಕ್ತವಾನ್. ೮ ಪುರಾಣಂ. ೯ ಅರ್ಥರೂಪೇಣ ಜ್ಞಾತವಾನಿತ್ಯರ್ಥಃ.

**ತತಃ ಸ್ವಾಯಂಭುವೀಂ ವಾಣೀಮುವಧಾರ್ಯಾರ್ಥತಃ ಕೃತೀ ।**
**ಜಗದ್ಧಿತಾಯ ಸೋ[೧]ಗ್ರಂಥೀತ್ತತ್ಪುರಾಣಂ ಗಣಾಗ್ರಣೀಃ ॥ ೧೯೪ ॥**

ಆಮೇಲೆ ಸ್ವಯಂಭುವಿನ (ಆದಿಬ್ರಹ್ಮರ) ವಾಣಿಯನ್ನು ಕುಶಲರಾದ ವೃಷಭಸೇನಗಣಧರರು ಅರ್ಥರೂಪದಿಂದ ನಿಶ್ಚಯಿಸಿ ಲೋಕದ ಹಿತಕ್ಕಾಗಿ ರಚಿಸಿದರು.

**ಶೇಷೈರಪಿ ತಥಾ ತೀರ್ಥಕೃದ್ಭಿರ್ಗಣಧರೈರಪಿ ।**
**ಮಹರ್ದ್ಧಿಭಿರ್ಯಥಾಮ್ನಾಯಂ ತತ್ಪುರಾಣಂ ಪ್ರಕಾಶಿತಮ್ ॥ ೧೯೫ ॥**

ಹಾಗೆ ಮಿಕ್ಕ ತೀರ್ಥಂಕರರೂ, ಮಹಾಋದ್ಧಿಧಾರಿಗಳಾದ ಗಣಧರರೂ ಆ ಪುರಾಣವನ್ನು ಪರಂಪರಾಗತವಾಗಿ ಬಂದಂತೆ, ಪ್ರಕಾಶಪಡಿಸಿದರು.

**ತತೋ ಯುಗಾಂತೇ ಭಗವಾನ್ವೀರಃ ಸಿದ್ಧಾರ್ಥನಂದನಃ ।**
**ವಿಪುಲಾದ್ರಿಮಲಂಕುರ್ವನ್ನೇ[೨]ಕದಾಸ್ತಾಖಿಲಾರ್ಥದೃಕ್ ॥ ೧೯೬ ॥**

ಆಮೇಲೆ ಚತುರ್ಥಕಾಲದ ಕೊನೆಯಲ್ಲಿ ಸಿದ್ಧಾರ್ಥರಾಜನ ಪುತ್ರರಾದ ಸರ್ವಜ್ಞಭಗವಾನ್ ಮಹಾವೀರತೀರ್ಥಂಕರರು ಶ್ರೀವಿಹಾರವನ್ನು ಮಾಡಿ ವಿಪುಲಾಚಲವನ್ನು ಅಲಂಕರಿಸಿದರು.

**ಅಥೋಪಸೃತ್ಯ ತತ್ರೈನಂ ಪಶ್ಚಿಮಂ ತೀರ್ಥನಾಯಕಮ್ ।**
**ಪಪ್ರಚ್ಛಾಮುಂ ಪುರಾಣಾರ್ಥಂ ಶ್ರೇಣಿಕೋ ವಿನಯಾನತಃ ॥ ೧೯೭ ॥**

ಅನಂತರ ಆ ವಿಪುಲಾಚಲದಲ್ಲಿರುವ ಅಂತಿಮ ತೀರ್ಥಂಕರರಾದ ವರ್ಧಮಾನಸ್ವಾಮಿಯ ಸಮೀಪಕ್ಕೆ ಹೋಗಿ ಶ್ರೇಣಿಕಮಹಾಮಂಡಲೇಶ್ವರನು ವಿನಯದಿಂದ ನಮ್ರನಾಗಿ ಈ ಪುರಾಣಾರ್ಥವನ್ನು ಕೇಳಿದನು.

**ತಂ ಪ್ರತ್ಯ[೩]ನುಗ್ರಹಂ ಭರ್ತುರವಬುಧ್ಯ ಗಣಾಧಿಪಃ ।**
**ಪುರಾಣಸಂಗ್ರಹಂ ಕೃತ್ಸ್ನಮನ್ವವೋಚತ್ಸ ಗೌತಮಃ ॥ ೧೯೮ ॥**

ಆ ಶ್ರೇಣಿಕರಾಜನ ಮೇಲೆ ಸ್ವಾಮಿಗೆ ದಯೆಯುಂಟಾಗಿದೆಯೆಂಬ ವಿಷಯವನ್ನು ಗೌತಮಗಣಧರರು ತಿಳಿದು ಸಮಸ್ತಪುರಾಣವಿಷಯವನ್ನು ಶ್ರೇಣಿಕನಿಗೆ ಹೇಳಿದರು.

**ತತ್ತದಾ[೪]ನುಸ್ಮೃತಂ ತತ್ರ ಗೌತಮೇನ ಮಹರ್ಷಿಣಾ ।**
**ತತೋಽಬೋಧಿ ಸುಧರ್ಮೋಽಸೌ ಜಂಬೂನಾಮ್ನೇ ಸಮರ್ಪಯತ್ ॥**

ಆಗ ಅರ್ಥರೂಪವಾಗಿ ತಿಳಿದ ಪುರಾಣವನ್ನು ಗೌತಮಮಹರ್ಷಿಗಳು ಸುಧರ್ಮರಿಗೆ ಬೋಧಿಸಿದರು. ಈ ಸುಧರ್ಮರು ಜಂಬೂಸ್ವಾಮಿಗಳಿಗೆ ಸಮರ್ಪಿಸಿ (ಬೋಧಿಸಿ) ದರು.

**ತತಃಪ್ರಭೃತ್ಯವಿಚ್ಛಿನ್ನಗುರುಪರ್ವಕ್ರಮಾಗತಮ್ ।**
**ಪುರಾಣಮಧುನಾಽಸ್ಮಾಭಿರ್ಯಥಾಶಕ್ತಿ ಪ್ರಕಾಶ್ಯತೇ ॥ ೨೦೦ ॥**

ಅದು ಮೊದಲುಗೊಂಡು ಎಡೆಬಿಡದೆ ಗುರುಪರಂಪರೆಯಾಗಿ ಬಂದ ಈ ಪುರಾಣವನ್ನು ಈಗ ನಾವು (ಜಿನಸೇನಾಚಾರ್ಯರು) ಶಕ್ತ್ಯನುಸಾರವಾಗಿ ಪ್ರಕಾಶಪಡಿಸುತ್ತೇವೆ (ಹೇಳುತ್ತೇವೆ).

**ತತೋಽತ್ರ ಮೂಲತಂತ್ರಸ್ಯ ಕರ್ತಾ ಪಶ್ಚಿಮತೀರ್ಥಕೃತ್ ।**
**ಗೌತಮಶ್ಚಾನುತಂತ್ರಸ್ಯ [೫]ಪ್ರತ್ಯಾಸತ್ತಿಕ್ರಮಾಶ್ರಯಾತ್ ॥ ೨೦೧ ॥**

೧ ಅರಚಯತ್. ೨ ಶ್ರೀವಿಹಾರಂ ಕೃತ್ವಾ. ೩ ಕಾರುಣ್ಯಂ. ೪ ಉಕ್ತಂ. ೫ ವಾಚ್ಯವಾಚಕಭಾವಸಂಬಂಧಲಕ್ಷಣಪದಸಂಘಾತಾದಿಕ್ರಮಾಶ್ರಯಾದಿತ್ಯರ್ಥಃ ಅಥವಾ ಸರ್ವೇಷಾಂ ತೀರ್ಥಕೃದ್ಗಣಧರಾಣಾಂ ಕರ್ತೃತ್ವೇಽಪಿ ಅನಯೋರೇವ ಕರ್ತೃತ್ವಂ ಪಂಚಮಕಾಲಸಾಮೀಪ್ಯ ಕ್ರಮಮಾಶ್ರಿತ್ಯ.

ಆದುದರಿಂದ ಈ ಪುರಾಣದಲ್ಲಿ ಅವಿಚ್ಛಿನ್ನಕ್ರಮದಿಂದ ಅಂತಿಮತೀರ್ಥಂಕರರಾದ ಮಹಾವೀರಸ್ವಾಮಿಯವರು ಮೂಲಸಿದ್ಧಾಂತದ ಕರ್ತರು. ಗೌತಮಗಣಧರರು ಉತ್ತರಸಿದ್ಧಾಂತದ ಕರ್ತರು. ಅಂದರೆ ಈ ಪುರಾಣದ ಮೂಲಕರ್ತರು ವರ್ಧಮಾನತೀರ್ಥಂಕರರು. ಉತ್ತರಕರ್ತರು ಗೌತಮಗಣಧರರೆಂದು ಭಾವವು.

**ಶ್ರೇಣಿಕಪ್ರಶ್ನಮುದ್ದಿಶ್ಯ ಗೌತಮಃ ಪ್ರತ್ಯಭಾಷತ ।**
**ಇತೀದಮ[೧]ನುಸಂಧಾಯ ಪ್ರಬಂಧೋಽಯಂ ನಿಬಧ್ಯತೇ ॥ ೨೦೨ ॥**

ಶ್ರೇಣಿಕಮಹಾಮಂಡಲೇಶ್ವರನ ಪ್ರಶ್ನೆಯನ್ನುದ್ದೇಶಿಸಿ ಗೌತಮಗಣಧರರು ಹೇಳಿದ ಈ ಪುರಾಣವನ್ನು ನಾನು (ಜಿನಸೇನಾಚಾರ್ಯರು) ಅನುಸಂಧಾನಮಾಡಿ (ಸೇರಿಸಿ) ರಚಿಸುತ್ತೇನೆ.

**ಇತೀ[೨]ದಂ ಪ್ರಮುಖಂ ನಾಮ ಕಥಾಸಂಬಂಧಸೂಚನಮ್ ।**
**ಕಥಾಪ್ರಾಮಾಣ್ಯಸಂಸಿದ್ಧಾವುಪಯೋಗೀತಿ ವರ್ಣಿತಮ್ ॥ ೨೦೩ ॥**

ಹಿಂದೆ ಹೇಳಿದ ರೀತಿಯಾಗಿ ಗುರುಪರಂಪರೆಯಿಂದ ಕಥೆಯ ಸಂಬಂಧವನ್ನು ಸೂಚಿಸುವ ಈ ಪ್ರಮುಖ ಅಥವಾ ಪ್ರತಿಮುಖವೆಂಬ ಪೀಠಿಕೆಯನ್ನು, ಕಥೆಗೆ ಪ್ರಾಮಾಣ್ಯವು ಸಿದ್ಧವಾಗುವುದಕ್ಕೆ ಉಪಯೋಗಕರವಾದುದೆಂದು ತಿಳಿದು, ವರ್ಣಿಸಿರುತ್ತೇವೆ.

**ಪುರಾಣಮೃಷಿಭಿಃ ಪ್ರೋಕ್ತಂ ಪ್ರಮಾಣಂ ಸೂಕ್ತ[೩]ಮಾಂಜಸಮ್ ।**
**ತತಃ ಶ್ರದ್ಧೇಯಮಧ್ಯೇಯಂ ಧ್ಯೇಯಂ ಶ್ರೇಯೋರ್ಥಿನಾಮಿದಮ್ ॥**

ಈ ಪುರಾಣವನ್ನು ಋಷಿಗಳು ಹೇಳಿರುವುದರಿಂದ ಇದು ಪ್ರಮಾಣವಾಗಿಯೂ ಸತ್ಯವಾಗಿಯೂ ಇದೆ. ಆದುದರಿಂದ ಆತ್ಮಕಲ್ಯಾಣವನ್ನು ಇಚ್ಛಿಸುವವರು ಇದನ್ನು ನಂಬಬೇಕು. ಅಧ್ಯಯನ ಮಾಡಬೇಕು. ಧ್ಯಾನಿಸಬೇಕು.

**ಇದಂ ಪುಣ್ಯಮಿದಂ ಪೂತಮಿದಂ ಮಾಂಗಲ್ಯಮುತ್ತಮಮ್ ।**
**ಇದಮಾ[೪]ಯುಷ್ಯಮಗ್ರ್ಯಂ ಚ ಯಶಸ್ಯಂ ಸ್ವರ್ಗ್ಯಮೇವ ಚ ॥ ೨೦೫ ॥**

ಈ ಪುರಾಣವು ಪುಣ್ಯದಾಯಕವೂ ಪವಿತ್ರವೂ ಉತ್ತಮವಾದ ಮಂಗಲವನ್ನುಂಟುಮಾಡುವುದೂ ಆಯುಷ್ಯವನ್ನು ಹೆಚ್ಚಿಸುವುದೂ ಶ್ರೇಷ್ಠವೂ ಕೀರ್ತಿಯನ್ನುಂಟುಮಾಡುವುದೂ ಸ್ವರ್ಗವನ್ನುಂಟುಮಾಡುವುದೂ ಆಗಿದೆ.

**ಇದಮರ್ಚಯತಾಂ ಶಾಂತಿಸ್ತುಷ್ಟಿಃ ಪುಷ್ಟಿಶ್ಚ ಪೃಚ್ಛತಾಮ್ ।**
**ಪಠತಾಂ ಕ್ಷೇಮಮಾರೋಗ್ಯಂ ಶೃಣ್ವತಾಂ ಕರ್ಮನಿರ್ಜರಾ ॥ ೨೦೬ ॥**

ಈ ಪುರಾಣವನ್ನು ಪೂಜಿಸುವವರಿಗೆ ದುಃಖಶಾಂತಿಯೂ ಸಂದೇಹನಿವಾರಣೆಗೋಸ್ಕರ ಪ್ರಶ್ನೆಮಾಡುವವರಿಗೆ ಆನಂದವೂ ಪುಷ್ಟಿಯೂ ಓದುವವರಿಗೆ ಕ್ಷೇಮವೂ ಆರೋಗ್ಯವೂ ಕೇಳುವವರಿಗೆ ಕರ್ಮನಿರ್ಜರೆಯೂ ಆಗುವುವು.

**ಇತೋ ದುಃಸ್ವಪ್ನನಿರ್ನಾಶಃ ಸುಸ್ವಪ್ನಸ್ಯಾ[೫]ತಿರೇವ ಚ ।**
**ಇತೋಽಭೀಷ್ಟಫಲವ್ಯಕ್ತಿರ್ನಿಮಿತ್ತಮಭಿಪಶ್ಯತಾಮ್ ॥ ೨೦೭ ॥**

ಈ ಪುರಾಣದಿಂದ ಕೆಟ್ಟಸ್ವಪ್ನಗಳ ನಾಶವೂ ಸುಸ್ವಪ್ನಗಳ ವೃದ್ಧಿಯೂ ಇಷ್ಟಫಲಪ್ರಾಪ್ತಿಯೂ ಪ್ರಶ್ನೆ-ಶಕುನವನ್ನು ನೋಡುವವರಿಗೆ ಶುಭಾಶುಭಶಕುನವೂ ಉಂಟಾಗುವುವು.

೧ ಅವಧಾರ್ಯ. ೨ ಪ್ರಸ್ತುತಂ. ೩ ಅಂಜಸೇತ್ಯಪಿ ಪಾಠಃ. ೪ ಆಯುಃ ಪ್ರಯೋಜನಮಸ್ಯ. ೫ ವೃದ್ಧಿಃ.

[1]ವೃಷಭಕವಿಭಿರ್ಯಾತಂ ಮಾರ್ಗಂ ವಯಂ ಚ ಕಿಲಾಧುನಾ
ವ್ರಜಿತುಮನಸೋ ಹಾಸ್ಯಂ ಲೋಕೇ ಕಿಮನ್ಯದತಃಪರಮ್ ।
[2]ಘಟಿತಮಥವಾ ನೈತಚ್ಚಿತ್ರಂ [3]ಪತತ್ಪತಿಲಂಘಿತಂ
ಗಗನಮಿತರೇ ನಾಕ್ರಾಮೇಯುಃ ಕಿಮಲ್ಪಶಕುಂತಯಃ ॥ ೨೦೮ ॥

ಕವೀಶ್ವರರು ಹೋದಮಾರ್ಗದಲ್ಲಿ ಈಗ ನಾವೂ (ಜಿನಸೇನಾಚಾರ್ಯರು) ಹೋಗಬೇಕೆಂಬ ಮನಸ್ಸುಳ್ಳವರಾಗಿದ್ದೇವೆ. ಲೋಕದಲ್ಲಿ ಇದಕ್ಕಿಂತಲೂ ಹಾಸ್ಯಾಸ್ಪದವಾದುದು ಬೇರೆ ಯಾವುದು ? ಮಹಾಕವಿಗಳು ವರ್ಣಿಸಿದ ಪುರಾಣವನ್ನು ತನ್ನಂತಹ ಅಲ್ಪನು ವರ್ಣಿಸುವುದು ಹಾಸ್ಯಕರವಾದುದೆಂದು ಭಾವವು. ಅಥವಾ ಈ ಚೇಷ್ಟೆಯು (ವ್ಯಾಪಾರವು) ಆಶ್ಚರ್ಯಕರವಾದುದಲ್ಲ. ಏತಕ್ಕೆಂದರೆ, ಗರುಡನು ಹೋದ ಆಕಾಶಮಾರ್ಗದಲ್ಲಿ ಸಣ್ಣಪಕ್ಷಿಗಳು ಸಂಚರಿಸುವುದಿಲ್ಲವೇನು ? ಸಂಚರಿಸಿಯೇ ಸಂಚರಿಸುತ್ತವೆ. ಹಾಗೆಯೇ ತಾನೂ ಯಥಾಶಕ್ತಿಯಾಗಿ ಪುರಾಣವನ್ನು ರಚಿಸುತ್ತೇನೆಂದಭಿಪ್ರಾಯವು.

ಇತಿ ವೃಷಭಕವೀಂದ್ರೈರ್ದ್ಯೋತಿತಂ ಮಾರ್ಗಮೇನಂ
ವಯಮಪಿ ಚ ಯಥಾವದ್ದ್ಯೋತಯಾಮಃ ಸ್ವಶಕ್ತ್ಯಾ ।
ಸವಿತೃಕಿರಣಜಾಲೈರ್ದ್ಯೋತಿತಂ ವ್ಯೋಮಮಾರ್ಗಂ
ವಿರಲಮುಡುಗಣೋಯಂ ಭಾಸಯೇತ್ಕಿಂ ನ ಲೋಕೇ ॥ ೨೦೯ ॥

ಈ ಪ್ರಕಾರವಾಗಿ ಕವಿಶ್ರೇಷ್ಠರು ಪ್ರಕಾಶಪಡಿಸಿದ ಈ ಪುರಾಣಮಾರ್ಗವನ್ನು ನಾವು ಕೂಡ ಯಥಾಶಕ್ತಿಯಾಗಿ ಪ್ರಕಾಶಪಡಿಸುತ್ತೇವೆ. ಸೂರ್ಯನಕಿರಣಗಳು ಪ್ರಕಾಶಪಡಿಸಿದ ಆಕಾಶಮಾರ್ಗವನ್ನು ಅಲ್ಲಲ್ಲಿ ಹೊಳೆಯುತ್ತಿರುವ ನಕ್ಷತ್ರಗಳ ಗುಂಪು ಪ್ರಕಾಶಪಡಿಸಲಾರದೋ ? ಯಥಾಶಕ್ತಿಯಾಗಿ ಪ್ರಕಾಶಪಡಿಸುತ್ತದೆ. ಹಾಗೆ ಮಹಾಕವಿಗಳು ವರ್ಣಿಸಿದ ಪುರಾಣವನ್ನು ಅಲ್ಪನಾದ ತಾನೂ ವರ್ಣಿಸುವುದು ತಪ್ಪಲ್ಲವೆಂದಭಿಪ್ರಾಯವು.

ಶ್ರೀಮದ್ಭವ್ಯಾಬ್ಜಿನೀನಾಂ ಹೃದಯಮುಕುಲಿತಂ
ಧುನ್ವದಾಧಾಯ ಬೋಧಂ
ಮಿಥ್ಯಾವಾದಾಂಧಕಾರಸ್ಥಿತಿಮಪಘಟಯದ್ವಾಙ್ಮಯೂಖಪ್ರತಾನೈಃ ।
ಸದ್ವೃತ್ತಂ ಶುದ್ಧಮಾರ್ಗಪ್ರಕಟನಮಹಿಮಾಲಂಬಿಯದ್ಭ್ರಧ್ನಬಿಂಬ-
ಪ್ರಸ್ಪರ್ಧೀದ್ವರ್ದ್ಧಿಜೈನಂ ಜಗತಿ ವಿಜಯತಾಂ
ಪುಣ್ಯಮೇತತ್ಪುರಾಣಮ್ ॥ ೨೧೦ ॥

ವರ್ತುಲಾಕಾರವಾದ ಮತ್ತು ಆಕಾಶಮಾರ್ಗವನ್ನು ಪ್ರಕಾಶಪಡಿಸುವ ಸೂರ್ಯನಬಿಂಬವು ತನ್ನ ಕಿರಣಗಳಿಂದ ಕತ್ತಲೆಯನ್ನು ಹೋಗಲಾಡಿಸಿ ಮುಕುಲಿತವಾದ ಕಮಲಗಳನ್ನು ಅರಳಿಸುವಂತೆ, ಜಿನೇಶ್ವರಸಂಬಂಧಿಯಾದ ಈ ಪುಣ್ಯಪುರಾಣವು ಉತ್ತಮವಚನಗಳಿಂದ ಮಿಥ್ಯಾತ್ವವನ್ನು ಹೋಗಲಾಡಿಸಿ, ಭವ್ಯರಿಗೆ ಜ್ಞಾನವನ್ನುಂಟುಮಾಡಿ ಮನಸ್ಸನ್ನು ಸಂತೋಷಪಡಿಸುವುದೂ ಉತ್ತಮವಾದ ಆಚರಣೆಯನ್ನುಂಟುಮಾಡುವುದೂ ಮಿಥ್ಯಾದೋಷರಹಿತವಾದ ಪರಿಶುದ್ಧ ಮೋಕ್ಷಮಾರ್ಗವನ್ನು ಪ್ರಕಾಶಪಡಿಸುವುದೂ ಆಗಿರುವುದರಿಂದ ಸೂರ್ಯಬಿಂಬವನ್ನು ಪ್ರತಿಸ್ಪರ್ಧೆ (ಹೊಟ್ಟೆಕಿಚ್ಚು) ಮಾಡತಕ್ಕುದಾಗಿದೆ. ಸೂರ್ಯಬಿಂಬದ ಸಾಮ್ಯವಿದೆ ಯೆಂದು ಭಾವವು. ಇಂತಹ ಪುರಾಣವು ಲೋಕದಲ್ಲಿ ಸರ್ವೋತ್ಕೃಷ್ಟ ವಾಗಿರಲಿ.

ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ
ಕಥಾಮುಖವ್ಯಾವರ್ಣನಂ ನಾಮ ಪ್ರಥಮಂ ಪರ್ವ ॥

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಕಥಾಮುಖವ್ಯಾವರ್ಣನೆಯೆಂಬ
ಮೊದಲನೆಯ ಪರ್ವವು ಸಮಾಪ್ತವಾದುದು.

---

೧ ಕವೀಶ್ವರೈಃ. ೨ ಚೇಷ್ಟಿತಂ. ೩ ಗರುತ್ಮಾನ್.

# ಅಥ ದ್ವಿತೀಯಂ ಪರ್ವ

**ತಮಾದಿದೇವಂ ದೇವಾನಾಮಧಿದೇವಂ ಸ್ವಯಂಭುವಮ್ ।**
**ಪ್ರಣಮ್ಯ ತತ್ಪುರಾಣಸ್ಯ ವಚ್ಮ್ಯುಪೋದ್ಘಾತವಿಸ್ತರಮ್ ॥ ೧ ॥**

ಆ ದೇವಾಧಿದೇವನೂ ಸ್ವಯಂಭುವೂ ಆದ ಆದೀಶ್ವರಸ್ವಾಮಿಯನ್ನು ನಮಸ್ಕರಿಸಿ, ಆದಿಪುರಾಣದ ವಿಸ್ತಾರವಾದ ಉಪೋದ್ಘಾತವನ್ನು ಹೇಳುತ್ತೇನೆ.

**ಅಥಾತೋ ಧರ್ಮಜಿಜ್ಞಾಸಾಸ[1]ಮಾಹಿತಮತಿಃ ಕೃತೀ ।**
**ಶ್ರೇಣಿಕಃ ಪರಿಪಪ್ರಚ್ಛ ಗೌತಮಂ ಗಣಭೃತ್ಪ್ರಭುಮ್ ॥ ೨ ॥**

ಅನಂತರದಲ್ಲಿ ಧರ್ಮವನ್ನು ತಿಳಿಯುವ ಇಚ್ಛೆಯಲ್ಲಿ ಏಕಾಗ್ರವಾದ ಬುದ್ಧಿಯುಳ್ಳವನೂ ಮಹಾವೀರಸ್ವಾಮಿಯ ದರ್ಶನದಿಂದ ಕೃತಾರ್ಥನೂ ಆದ ಶ್ರೇಣಿಕರಾಜನು ಗೌತಮಗಣಧರರನ್ನು ಪ್ರಶ್ನೆ ಮಾಡಿದನು.

**ಭಗವನ್ನರ್ಥತಃ ಕೃತ್ಸ್ನಂ ಶ್ರುತಂ ಸ್ವಾಯಂಭುವಾನ್ಮುಖಾತ್ ।**
**ಗ್ರಂಥತಃ ಶ್ರೋತುಮಿಚ್ಛಾಮಿ ಪುರಾಣಂ ತ್ವದನುಗ್ರಹಾತ್ ॥ ೩ ॥**

"ಸ್ವಾಮಿಯೇ ! ಸ್ವಯಂಭುವಾದ ಶ್ರೀವರ್ಧಮಾನಸ್ವಾಮಿಯ ಮುಖದಿಂದ ತ್ರಿಷಷ್ಟಿಶಲಾಕಾಪುರುಷರ ಪುರಾಣವನ್ನೆಲ್ಲ ಅರ್ಥರೂಪದಿಂದ ಕೇಳಿದೆನು. ತಮ್ಮ ಅನುಗ್ರಹದಿಂದ ಅದನ್ನು ಗ್ರಂಥರೂಪದಿಂದ ಕೇಳಲಿಚ್ಛಿಸುತ್ತೇನೆ.

**ತ್ವಮಕಾರಣಬಂಧುರ್ನಸ್ತ್ವಮಕಾರಣವತ್ಸಲಃ ।**
**ತ್ವಮಕಾರಣವೈದ್ಯೋಽಸಿ ದುಃಖಾ[2]ತಂಕಾರ್ದಿತಾತ್ಮನಾಮ್ ॥ ೪ ॥**

ದೇವ ! ದುಃಖವ್ಯಾಧಿಗಳಿಂದ ಪೀಡಿತರಾದ ನಮಗೆ ನೀನು ಅಕಾರಣಬಂಧುವೂ ಅಕಾರಣವಾಗಿ ನಮ್ಮಲ್ಲಿ ಪ್ರೇಮವುಳ್ಳವನೂ ಅಕಾರಣವೈದ್ಯನೂ ಆಗಿರುತ್ತಿ.

**ಪುಣ್ಯಾಭಿಷೇಕಮಭಿತಃ ಕುರ್ವಂತೀವ ಶಿರಸ್ಸು ನಃ ।**
**ವ್ಯೋಮಗಂಗಾಂಬುಸ[3]ಚ್ಛಾಯಾ ಯುಷ್ಮತ್ಪಾದನಖಾಂಶವಃ ॥ ೫ ॥**

ಆಕಾಶಗಂಗೆಯ ನೀರಿಗೆ ಸಮಾನವಾದ ತಮ್ಮ ಕಾಲುಗುರುಗಳ ಕಿರಣಗಳು ನಮ್ಮ ತಲೆಯಸುತ್ತಲೂ ಪುಣ್ಯಾಭಿಷೇಕವನ್ನು ಮಾಡುತ್ತವೆಯೋ ಎಂಬಂತಿವೆ.

**ತವ ದೀಪ್ತತಪೋಲ[4]ಬ್ಧೇರಂಗಲಕ್ಷ್ಮೀ[5]ಃಪ್ರತಾಯಿನೀ ।**
**ಅಕಾಲೇಪ್ಯನುಸಂಧತ್ತೇ ಸಾಂದ್ರಬಾಲಾತಪಶ್ರಿಯಮ್ ॥ ೬ ॥**

ನಿನ್ನ ದೀಪ್ತತಪಸ್ಸೆಂಬ ಋದ್ಧಿಯಿಂದ ವಿಸ್ತರಿಸುತ್ತಿರುವ ಶರೀರ ಕಾಂತಿಯು, ಅಕಾಲದಲ್ಲಿಯೂ ನಿಬಿಡವಾದ ಎಳೆಬಿಸಿಲಿನ ಶೋಭೆಯನ್ನು ಅನುಕರಣ ಮಾಡುತ್ತದೆ. ಅಕಾಲದಲ್ಲಿಯೂ ಎಳೆಬಿಸಿಲಿನಂತೆ ಶೋಭಿಸುತ್ತದೆಂದು ಭಾವವು.

**ತ್ವಯಾ ಜಗದಿದಂ ಕೃತ್ಸ್ನಮವಿದ್ಯಾಮೀಲಿತೇಕ್ಷಣಮ್ ।**
**ಸದ್ಯಃ ಪ್ರಬೋಧಮಾನೀತಂ ಭಾಸ್ವತೇವಾಬ್ಜಿನೀವನಮ್ ॥ ೭ ॥**

ರಾತ್ರಿಯಲ್ಲಿ ಮುಕುಳಿತವಾದ ತಾವರೆಗಳ ಗುಂಪನ್ನು ಸೂರ್ಯನು ಅರಳಿಸುವಂತೆ, ಅಜ್ಞಾನವೆಂಬ ನಿದ್ರೆಯಲ್ಲಿದ್ದ ಈ ಜಗತ್ತನ್ನೆಲ್ಲ ಶೀಘ್ರವಾಗಿ ನೀನು ಎಚ್ಚರಗೊಳಿಸಿದೆ.

**ಯನ್ನೇಂದುಕಿರಣೈಃ ಸ್ಪೃಷ್ಟಮನಾಲೀಢಂ ರವೇಃ ಕರೈಃ ।**
**ತತ್ತ್ವಯಾ ಹೇಲಯೋ[6]ದಸ್ತಮಂತರ್ಧ್ವಾಂತಂ ವಚೋಂಽಶುಭಿಃ ॥ ೮ ॥**

೧ ಏಕಾಗ್ರ. ೨ ವ್ಯಾಧಿಃ. ೩ ಸಮಾನಾ. ೪ ಋದ್ಧೇಃ. ೫ ವಿಸ್ತಾರಿಣೀ. ೬ ನಿರಾಕೃತಂ.

ಚಂದ್ರನ ಕಿರಣಗಳು ಸ್ಪರ್ಶಮಾಡದಿರುವ, ಸೂರ್ಯನಕಿರಣಗಳೂ ಮುಟ್ಟದಿರುವ ಒಳಗಿನ ಅಜ್ಞಾನವೆಂಬ ಕತ್ತಲೆಯನ್ನು ನಿನ್ನ ವಚನಗಳೆಂಬ ಕಿರಣಗಳು ಲೀಲಾಮಾತ್ರ (ಸುಲಭ) ದಿಂದ ನಾಶಮಾಡಿದುವು.

**ತವೋಚ್ಛಿಖಾಃ ಸ್ಫುರಂತ್ಯೇತಾ ಯೋಗಿನ್ನಪ್ತಮಹರ್ದ್ಧಯಃ ।**
**ಕರ್ಮೇಂಧನದಹೋದ್ದೀಪ್ತಾಃ ಸಪ್ತಾ[1]ರ್ಚಿಷ ಇವಾರ್ಚಿಷಃ ॥ ೯ ॥**

ಯೋಗಿಯೇ ! ಪ್ರಕಾಶಮಾನವಾದ ಈ ನಿನ್ನ ಬುದ್ಧಿ ತಪ ಮೊದಲಾದ ಏಳು ಮಹಾಋದ್ಧಿಗಳು, ಕರ್ಮವೆಂಬ ಕಟ್ಟಿಗೆಯನ್ನು ದಹಿಸುವುದರಿಂದ ಉದ್ದೀಪ್ತವಾದ ಬೆಂಕಿಯ ಏಳು ಜ್ವಾಲೆಗಳೋ ಎಂಬಂತೆ, ಪ್ರಕಾಶಿಸುತ್ತವೆ.

**ಇದಂ ಪುಣ್ಯಾ[2]ಶ್ರಮಸ್ಥಾನಂ ಪವಿತ್ರಂ ತ್ವತ್ಪ್ರತಿ[3]ಶ್ರಯಾತ್ ।**
**ರಕ್ಷಾರಣ್ಯಮಿವಾಭಾತಿ ತಪೋಲಕ್ಷ್ಮ್ಯಾ ನಿರಾಕುಲಮ್ ॥ ೧೦ ॥**

ನಿನ್ನ ವಾಸಸ್ಥಾನವಾಗಿರುವುದರಿಂದ ಪವಿತ್ರವಾದ ಈ ಪುಣ್ಯಾಶ್ರಮಸ್ಥಾನವು (ವಿಪುಲಾಚಲಪ್ರದೇಶವು), ತಪೋಲಕ್ಷ್ಮಿಯ ನಿರ್ಬಾಧವಾಗಿ ಕಾಪಾಡಿಟ್ಟ ಕಾಡೋ ಎಂಬಂತೆ ಶೋಭಿಸುತ್ತದೆ.

**ಅತ್ರೈತೇ ಪಶವೋ ವ[4]ನ್ಯಾಃ ಪುಷ್ಟಾ ಮೃಷ್ಟೈಸ್ತೃಣಾಂಕುರೈಃ ।**
**ನ ಕ್ರೂರಮೃಗಸಂಬಾಧಾಂ ಜಾನಂತ್ಯಪಿ ಕದಾಚನ ॥ ೧೧ ॥**

ಈ ಪುಣ್ಯಾಶ್ರಮಸ್ಥಾನದಲ್ಲಿ ಕೋಮಲವಾದ ತೃಣಾಂಕುರಗಳನ್ನು ತಿಂದು ಬೆಳೆದ ಈ ವನಸಂಬಂಧಿಗಳಾದ ಪಶುಗಳು ಕ್ರೂರಮೃಗಗಳ ಬಾಧೆಯನ್ನು ಎಂದೂ ತಿಳಿಯುವುದಿಲ್ಲ. ಸ್ವಾಮಿಯ ಮಹಿಮೆಯಿಂದ ಕ್ರೂರಮೃಗಗಳು ಕೂಡ ತಮ್ಮ ಕ್ರೂರಸ್ವಭಾವವನ್ನು ಬಿಟ್ಟು ಪರಸ್ಪರಪ್ರೇಮದಿಂದಿರುತ್ತವೆಂದು ಭಾವವು.

**ಪಾದಪ್ರಧಾವನೋತ್ಸೃಷ್ಟಕಮಂಡಲುಜಲೈರಿಮೇ ।**
**ಅಮೃತೈರಿವ ವರ್ಧಂತೇ ಮೃಗಶಾಬಾಃ ಪವಿತ್ರಿತಾಃ ॥ ೧೨ ॥**

ಕಾಲುತೊಳೆದು ಬಿಟ್ಟ ಕಮಂಡಲುಗಳ ನೀರಿನಿಂದ ಪವಿತ್ರಗಳಾಗಿರುವ ಈ ಜಿಂಕೆಯಮರಿಗಳು, ಅಮೃತಗಳಿಂದಲೋ ಎಂಬಂತೆ, ವೃದ್ಧಿಯನ್ನು ಹೊಂದುತ್ತವೆ.

**ಸಿಂಹಸ್ತನಂಧಯಾನತ್ರ ಕರಿಣ್ಯಃ ಪಾಯಯಂತ್ಯಮೂಃ ।**
**ಸಿಂಹಧೇ[5]ನುಸ್ತನಂ ಸ್ವೈರಂ ಸ್ಪೃಶಂತಿ ಕಲಭಾ ಇಮೇ ॥ ೧೩ ॥**

ಇಲ್ಲಿ ಸಿಂಹದಮರಿಗಳಿಗೆ ಈ ಹೆಣ್ಣಾನೆಗಳು ಸ್ತನ್ಯಪಾನವನ್ನು ಮಾಡಿಸುತ್ತವೆ. ಈ ಆನೆಮರಿಗಳು ಸ್ವಚ್ಛಂದವಾಗಿ (ಭಯವಿಲ್ಲದೆ) ಹೆಣ್ಣುಸಿಂಹದ ಸ್ತನವನ್ನು ಮುಟ್ಟುತ್ತವೆ (ಪಾನಮಾಡುತ್ತವೆ).

**[6]ಅಹೋಪರಮಮಾಶ್ಚರ್ಯಂ ಯದವಾಚೋಽಪ್ಯಮೀ ಮೃಗಾಃ ।**
**ಭಜಂತಿ ಭಗವತ್ಪಾದಚ್ಛಾಯಾಂ ಮುನಿಗಣಾ ಇವ ॥ ೧೪ ॥**

ದೇವನೇ !ಮಾತನ್ನಾಡುವುದಕ್ಕೂ ಬಾರದಿರುವ ಈ ಮೃಗಗಳು, ಮುನಿಗಳಂತೆ, ಭಗವಂತನ ಕಾಲುಗಳ ನೆರಳನ್ನು ಸೇವಿಸುತ್ತವೆ. ಆಶ್ಚರ್ಯವು ! ಮುನಿಗಳು ಭಗವಂತನ ಪಾದಗಳನ್ನು ಭಜಿಸುವಂತೆ ಈ ಮೃಗಗಳೂ ಭಜಿಸುತ್ತವೆಂದು ತಾತ್ಪರ್ಯವು.

೧ ಅಗ್ನೇಃ. ೨ವಿಪುಲಾಚಲಪ್ರದೇಶಃ. ೩ ಸಭಾಯಾಂ ಚ ಪ್ರತಿಶ್ರಯ ಇತ್ಯಮರಃ, ವಾಸಸ್ಥಾನಮಿತ್ಯರ್ಥಃ. ೪ ವನೇಭವಾಃ, ಧನ್ಯಾ ಇತ್ಯಪಿ ಪಾಠಃ. ೫ ಧೇನುಃ ಸ್ಯಾನ್ನವಸೂತಿಕಾ, ಇತ್ಯಮರಃ. ೬ ಭೋ.

**[1]ಅಚ್ಛತ್ತವಲ್ಕಲಾಶ್ಚಾಮೀ ಪ್ರಸೂನಫಲಶಾಲಿನಃ ।**
**ಧರ್ಮಾರಾಮತರೂಯಂತೇ ಪರಿತೋವನಪಾದಪಾಃ ॥ ೧೪ ॥**

ಯಾರೂ ಕೀಳದಿರುವ ತೊಕ್ಕು(ತೊಗಟೆ)ಗಳುಳ್ಳ ಈ ವನವೃಕ್ಷಗಳು ಫಲಪುಷ್ಪಗಳಿಂದ ಶೋಭಾಯಮಾನಗಳಾಗಿ ಸುತ್ತಲೂ ಧರ್ಮವೆಂಬ ತೋಟದ ವೃಕ್ಷಗಳಂತೆ, ಇವೆ.

**ಇಮಾ ವನಲತಾ ರಮ್ಯಾಃ ಪ್ರಫುಲ್ಲಾ ಭ್ರಮರೈರ್ವೃತಾಃ ।**
**ನ ವಿದುಃ ಕರಸಂಬಾಧಾಂ ರಾಜನ್ವತ್ಯ ಇವ ಪ್ರಜಾಃ ॥ ೧೫ ॥**

ಅರಳಿರುವುವೂ ದುಂಬಿಗಳಿಂದ ಮುತ್ತಲ್ಪಟ್ಟಿರುವುವೂ ಮನೋಹರವೂ ಆದ ಈ ವನಲತೆಗಳು, ಉತ್ತಮರಾಜನುಳ್ಳ ಪ್ರಜೆಗಳು ಕಂದಾಯದ ಬಾಧೆಯನ್ನು ತಿಳಿಯದಿರುವಂತೆ, ಕೈಗಳ ಬಾಧೆಯನ್ನು ತಿಳಿಯುವುದಿಲ್ಲ. ಯಾರೂ ಹೊಡೆಯುವುದಿಲ್ಲವೆಂದು ಭಾವವು.

**ತಪೋವನಮಿದಂ ರಮ್ಯಂ ಪರಿತೋ ವಿಪುಲಾಚಲವ್ ।**
**ದಯಾವನಮಿವೋದ್ಭೂತಂ ಪ್ರಸಾದಯತಿ ಮೇ ಮನಃ ॥ ೧೬ ॥**

ವಿಪುಲಾಚಲದ ಸುತ್ತಲೂ ಇರುವ ಈ ರಮಣೀಯವಾದ ತಪೋವನವು, ಉದ್ಭವಿಸಿದ ದಯಾಮಯವಾದ ವನವೋ ಎಂಬಂತೆ, ನನ್ನ ಮನಸ್ಸನ್ನು ಸಂತೋಷಪಡಿಸುತ್ತದೆ.

**ಇಮೇ ತಪೋಧನಾ ದೀಪ್ತತಪಸೋ [2]ವಾತವಲ್ಕಲಾಃ ।**
**ಭವತ್ಪಾದಪ್ರಸಾದೇನ ಮೋಕ್ಷಮಾರ್ಗಮುಪಾಸತೇ ॥ ೧೭ ॥**

ಗಾಳಿಯೇ ಬಟ್ಟೆಯಾಗಿರುವವರೂ-ದಿಗಂಬರರೂ ದೀಪ್ತತಪೋಧಾರಿಗಳೂ ಆದ ಈ ತಪಸ್ವಿಗಳು ತಮ್ಮ ಪಾದಪ್ರಸಾದದಿಂದ ಮೋಕ್ಷಮಾರ್ಗದ ಉಪಾಸನೆಯನ್ನು ಮಾಡುತ್ತಾರೆ.

**ಇತಿ ಪ್ರಸ್ಪಷ್ಟಮಾಹಾತ್ಮ್ಯಃ [3]ಕೃತೀ ಜಗದನುಗ್ರಹೇ ।**
**ಭಗವನ್ಭವ್ಯಸಾರ್ಥಸ್ಯ [4]ಸಾರ್ಥವಾಹಾಯತೇ ಭವಾನ್ ॥ ೧೮ ॥**

ಭಗವಂತನೇ ! ಹೀಗೆ ಪ್ರಸಿದ್ಧವಾದ ಮಾಹಾತ್ಮ್ಯವುಳ್ಳವನೂ ಜಗತ್ತನ್ನು ಅನುಗ್ರಹಿಸುವುದರಲ್ಲಿ ಕುಶಲನೂ ಆದ ನೀನು, ಭವ್ಯರ ಸಮೂಹವೆಂಬ ವರ್ತಕರಗುಂಪಿಗೆ ಶ್ರೇಷ್ಠನಾದ ವರ್ತಕನಂತೆ, ಇರುತ್ತಿ.

**ತತೋ ಬ್ರೂಹಿ ಮಹಾಯೋಗಿನ್ನತೇ ಕಶ್ಚಿದಗೋಚರಃ ।**
**ತವ ಜ್ಞಾನಾಂಶವೋ ದಿವ್ಯಾಃ ಪ್ರಸರಂತಿ ಜಗತ್ತ್ರಯೇ ॥ ೧೯ ॥**

ಮಹಾಯೋಗಿಯೇ ! ನೀನು ತಿಳಿಯದಿರುವ ವಿಷಯವು ಯಾವುದೂ ಇಲ್ಲ. ನಿನ್ನ ಜ್ಞಾನವೆಂಬ ದಿವ್ಯಕಿರಣಗಳು ಮೂರುಲೋಕದಲ್ಲಿಯೂ ಪ್ರಸರಿಸುತ್ತವೆ. ಮೂರುಲೋಕವನ್ನೂ ತಿಳಿಯುತ್ತವೆ. ಆದುದರಿಂದ ಪುರಾಣಾರ್ಥವನ್ನು ಹೇಳು.

**ವಿಜ್ಞಾಪ್ಯಮನ್ಯದಪ್ಯಸ್ತಿ ಸಮಾಧಾಯ ಮನಃ ಶೃಣು ।**
**ಯತೋ ಭಗವತಶ್ಚಿತ್ತಂ ದೃಢಂ ಸ್ಯಾನ್ಮದನುಗ್ರಹೇ ॥ ೨೦ ॥**

ಸ್ವಾಮಿಯೇ ! ಇನ್ನೊಂದು ವಿಜ್ಞಾಪಿಸಿಕೊಳ್ಳತಕ್ಕ ವಿಷಯವಿದೆ. ಮನಸ್ಸಿಟ್ಟು ಕೇಳಬೇಕು. ಅದನ್ನು ಕೇಳುವುದರಿಂದ ಪೂಜ್ಯರಾದ ತಮ್ಮ ಚಿತ್ತವು ನನ್ನನ್ನು ಅನುಗ್ರಹಿಸುವ ವಿಷಯದಲ್ಲಿ ದೃಢವಾಗುವುದು.

**ಪುರಾಚರಿತಮಜ್ಞಾನಾನ್ಮಯಾ ದುಶ್ಚರಿತಂ ಮಹತ್ ।**
**ತಸ್ಯೈ[5]ನಸಃ ಪ್ರಶಾಂತ್ಯರ್ಥಂ ಪ್ರಾಯಶ್ಚಿತ್ತಂ ಚರಾಮ್ಯಹವ್ ॥ ೨೧ ॥**

ಮೊದಲು ನಾನು ಅಜ್ಞಾನದಿಂದ ಮಹಾಕೆಟ್ಟಕೆಲಸವನ್ನು ಮಾಡಿದ್ದೆನು. ಆ ಪಾಪದ ಪರಿಹಾರಕ್ಕೋಸ್ಕರವಾಗಿ ಪ್ರಾಯಶ್ಚಿತ್ತವನ್ನು ಮಾಡುತ್ತೇನೆ.

೧ ಅಚ್ಛಿನ್ನಃ. ೨ ವಾಯುಸನಾಃ, ಅಥವಾ ಗತವಸ್ತ್ರಾಃ, ವಾ ಗತಿಗಂಧನಯೋರಿತಿಧಾತುಃ, ದಿಗಂಬರಾ ಇತ್ಯರ್ಥಃ. ೩ ಕುಶಲಃ. ೪ ವಣಿಕ್ ಶ್ರೇಷ್ಠಃ. ೫ ಪಾಪಸ್ಯ.

**ಹಿಂಸಾನೃತಾನ್ಯ[1]ರೈರಾಮಾರತ್ಯಾರಂಭಪರಿಗ್ರಹೈಃ ।**
**ಮಯಾ ಸಂಚಿತಮಜ್ಞೇನ ಪುರೈನೋತಿನಿಕಾಚಿತಮ್ ॥ ೨೨ ॥**

ಅಜ್ಞಾನಿಯಾದ ನಾನು ಹಿಂಸೆ, ಸುಳ್ಳು, ಪರದ್ರವ್ಯ, ಸ್ತ್ರೀಸೇವನ, ಆರಂಭಪರಿಗ್ರಹ ಇವುಗಳಿಂದ ಮೊದಲು ಬಹಳಪಾಪವನ್ನು ಉಪಾರ್ಜನೆಮಾಡಿದೆನು.

**ಕೃತೋ ಮುನಿವಧಾನಂದಸ್ತೀವ್ರೋ ಮಿಥ್ಯಾದೃಶಾ ಮಯಾ ।**
**ಯೇನಾಯುಃಕರ್ಮ ದುರ್ಮೋಚಂ ಬದ್ಧಂ ಶ್ವಾಭ್ರೀಂ ಗತಿಂ ಪ್ರತಿ ॥**

ಪ್ರಬಲವಾದ ಮಿಥ್ಯಾತ್ವಕರ್ಮದ ಉದಯದಿಂದ ನಾನು ಮುನಿವಧೆಯಲ್ಲಿ ಆನಂದಪಟ್ಟೆನು. ಆದರಿಂದ ನನಗೆ ಬಿಡಿಸಿಕೊಳ್ಳಲಶಕ್ಯವಾದ ನರಕಗತಿಯ ಆಯುಷ್ಯಕರ್ಮವು ಬಂಧವಾಯಿತು.

**ತತ್ಪ್ರಸೀದ ವಿಭೋ ವಕ್ತುಮಾಮೂಲಾತ್ಪಾವನೀಂ ಕಥಾಮ್ ।**
**ನಿಷ್ಕ್ರಿಯಾ ದುಷ್ಕೃತಸ್ಯಾಸ್ತು ಮಮ ಪುಣ್ಯಕಥಾಶ್ರುತಿಃ ॥ ೨೪ ॥**

ಆ ಕಾರಣದಿಂದ ಪ್ರಭುವೇ ! ಪವಿತ್ರವಾದ ಕಥೆಯನ್ನು ಮೊದಲಿನಿಂದ ಹೇಳುವುದಕ್ಕೆ ಅನುಗ್ರಹಿಸು, ಪುಣ್ಯಕಥೆಯನ್ನು ಕೇಳುವುದರಿಂದ ನನ್ನ ಪಾಪವು ಪರಿಹಾರವಾಗಲಿ''

**ಇತಿ ಪ್ರ[2]ಶ್ರಯಿಣೀಂ ವಾಚಮುದೀರ್ಯ ಮಗಧಾಧಿಪಃ ।**
**ವ್ಯರಮದ್ದಶನಜ್ಯೋತ್ಸ್ನಾ ಕೃತಪುಷ್ಪಾರ್ಚನಾಸ್ಥಿತಿಃ ॥ ೨೫ ॥**

ಹಲ್ಲುಗಳ ಕಾಂತಿಯಿಂದ ಪುಷ್ಪಾರ್ಚನೆಯನ್ನು ಮಾಡುತ್ತಾನೋ ಎಂಬಂತಿರುವ ಮಗಧದೇಶಾಧಿಪತಿಯಾದ ಶ್ರೇಣಿಕನು ಹಿಂದೆ ಹೇಳಿದಂತೆ ವಿನಯಪೂರ್ವಕವಾದ ವಚನವನ್ನು ಹೇಳಿ ವಿರಾಮವನ್ನು ಹೊಂದಿದನು.

**ತತಸ್ತಮೃಷಯೋ ದೀಪ್ತತಪೋಲಕ್ಷ್ಮೀವಿಭೂಷಣಾಃ ।**
**ಪ್ರಶಶಂಸುರಿತಿ ಪ್ರೀತಾ ಧಾರ್ಮಿಕಂ ಮಗಧೇಶ್ವರವ್ ॥ ೨೬ ॥**

ತರುವಾಯ ದೀಪ್ತತಪಸ್ಸೆಂಬ ಲಕ್ಷ್ಮಿಯಿಂದ ಶೋಭಿಸುತ್ತಿರುವ ಋಷಿಗಳು ಧಾರ್ಮಿಕನಾದ ಆ ಮಗಧಾಧಿಪತಿಯನ್ನು ಮುಂದೆಹೇಳುವ ರೀತಿಯಾಗಿ ಶ್ಲಾಘಿಸಿದರು.

**ಸಾಧು ಭೋ ಮಗಧಾಧೀಶ ಸಾಧು ಪ್ರಶ್ನವಿದಾಂವರ ।**
**ಪೃಚ್ಛತಾದ್ಯ ತ್ವಯಾ ತತ್ತ್ವಂ ಸಾಧು ನಃ ಪ್ರೀಣಿತಂ ಮನಃ ॥ ೨೭ ॥**

''ಪ್ರಶ್ನೆಯನ್ನು ತಿಳಿಯುವವರಲ್ಲಿ ಶ್ರೇಷ್ಠನಾದ ಮಗಧಾಧಿಪತಿಯೇ ! ಬಹಳ ಚೆನ್ನಾಗಿದೆ. ಈ ದಿನ ನೀನು ತತ್ತ್ವವನ್ನು (ತ್ರಿಷಷ್ಟಿಲಕ್ಷಣಪುರಾಣವನ್ನು) ಪ್ರಶ್ನೆಮಾಡಿ ನಮ್ಮ ಮನಸ್ಸನ್ನು ಸಂತೋಷಪಡಿಸಿದೆ. ಬಹಳ ಚೆನ್ನಾಗಿದೆ.

**ಪಿಪೃ[3]ಚ್ಛಿಷಿತಮಸ್ಮಾಭಿರ್ಯದೇವ ಪರಮಾರ್ಥಕಮ್ ।**
**ತದೇವಾದ್ಯ ತ್ವಯಾ ಪೃಷ್ಟಂ ಸಂ[4]ವಾದಃ ಪಶ್ಯ ಕೀದೃಶಃ ॥ ೨೮ ॥**

ಶ್ರೇಷ್ಠವಾದ ಅರ್ಥ(ಪ್ರಯೋಜನ)ವುಳ್ಳ ಯಾವ ವಿಷಯವನ್ನು ನಾವು ಕೇಳಬೇಕೆಂದು ಇಚ್ಛಿಸಿದ್ದೆವೋ ಅದೇ ವಿಷಯವನ್ನು ನೀನು ಈ ದಿವಸ ಪ್ರಶ್ನೆಮಾಡಿದೆ. ನೋಡು ಎಂತಹ ಸಮಕಟ್ಟು ಕೂಡಿತು ?

**[5]ಬುಭುತ್ಸಾವೇದನಂ ಪ್ರಶ್ನಃ ಸ ತೇ ಧರ್ಮೋಽಬುಭುತ್ಸಿತಃ ।**
**ತ್ವಯಾ ಬುಭುತ್ಸುನಾ ಧರ್ಮಂ ವಿಶ್ವಮೇವ ಬುಭುತ್ಸಿತಮ್ ॥ ೩೦ ॥**

೧ ಧನಂ. ೨ ವಿನಯವತೀಂ. ೩ ಪ್ರಷ್ಟುಮಿಚ್ಛಿತಂ. ೪ ಪ್ರಕೃತಾರ್ಥಾದವಿಚಲನಂ. ೫ ಬೋದ್ಧುಮಿಚ್ಛಾ.

ಇಷ್ಟಫಲವನ್ನು ಕೊಡುವ ಕಲ್ಪವೃಕ್ಷದಂತಿರುವ ಉನ್ನತವಾದ ಶ್ರುತಸ್ಕಂಧದಿಂದ ಸ್ವೀಕರಿಸಲ್ಪಟ್ಟುದೂ ದೊಡ್ಡ ಶಾಖೆಯಂತೆ ಶೋಭಿಸುತ್ತಿರುವುದೂ

**ಪ್ರಥಮಸ್ಯಾನುಯೋಗಸ್ಯ ಗಂಭೀರಸ್ಯೋದಧೇರಿವ ।**
**ವೇಲಾಮಿವ ಮಹ[೧]ದ್ಧ್ವಾನಾಂ [೨]ಪ್ರಸೃತಾರ್ಥಮಹಾಜಲಾಮ್॥ ೧೧೩ ॥**

ಗಂಭೀರವಾದ ಸಮುದ್ರದಂತಿರುವ ಪ್ರಥಮಾನುಯೋಗಶಾಸ್ತ್ರದ ವಿಸ್ತಾರವಾದ ಅರ್ಥವೆಂಬ ಜಲವುಳ್ಳುದೂ ಸಮುದ್ರದ ದಡದಂತೆ ಶಬ್ದಪರಿಪಾಟಿಯುಳ್ಳುದೂ

**[೩]ಆಕ್ಷಿಪ್ತಾಶೇಷತಂತ್ರಾರ್ಥಾಂ [೪]ವಿಕ್ಷಿಪ್ತಪರಶಾಸನಾಮ್ ।**
**ಸತಾಂ ಸಂವೇಗಜನನೀಂ ನಿರ್ವೇದ ರಸಬೃಂಹಿಣೀಮ್ ॥ ೧೧೪ ॥**

ಸಮಸ್ತಸಿದ್ಧಾಂತಾರ್ಥಗಳನ್ನೊಳಗೊಂಡುದೂ ಮಿಥ್ಯಾಶಾಸ್ತ್ರವನ್ನು ನಿರಾಕರಿಸಿದುದೂ ಸತ್ಪುರುಷರಿಗೆ ಧರ್ಮಪ್ರೀತಿಯನ್ನುಂಟುಮಾಡುವುದೂ ವೈರಾಗ್ಯವೆಂಬ ರಸವನ್ನು ವೃದ್ಧಿಪಡಿಸುವುದೂ

**ಅದ್ಭುತಾರ್ಥಾಮಿಮಾಂ ದಿವ್ಯಾಂ ಪರಮಾರ್ಥಬೃಹತ್ಕಥಾಮ್ ।**
**[೫]ಲಂಭೈರನೇಕೈಃ ಸಂದೃಬ್ಧಾಂ ಗುಣಾಢ್ಯೈಃ ಪೂರ್ವಸೂರಿಭಿಃ ॥ ೧೧೫ ॥**

ಆಶ್ಚರ್ಯಕರವಾದ ಅರ್ಥವುಳ್ಳುದೂ ಶ್ರೇಷ್ಠವೂ ಯಥಾರ್ಥವಾದ ದೊಡ್ಡಕಥೆಯುಳ್ಳುದೂ ಗುಣವಂತರಾದ ಪೂರ್ವಾಚಾರ್ಯರುಗಳಿಂದ ಅನೇಕ ಅಧಿಕಾರ (ಅಧ್ಯಾಯ)ಗಳಿಂದ ರಚಿಸಲ್ಪಟ್ಟುದೂ

**ಯಶಃಶ್ರೇಯಸ್ಕರೀಂ ಪುಣ್ಯಾಂ ಭುಕ್ತಿಮುಕ್ತಿಫಲಪ್ರದಾಮ್ ।**
**ಪೂರ್ವಾನು[೬]ಪೂರ್ವ್ಯಮಾಶ್ರಿತ್ಯ ವಕ್ಷ್ಯೇ ಶೃಣುತ ಸಜ್ಜನಾಃ ॥ ೧೧೬ ॥**

ಯಶಸ್ಸನ್ನೂ ಶ್ರೇಯಸ್ಸನ್ನೂ ಉಂಟುಮಾಡುವುದೂ ಪುಣ್ಯಪ್ರದವೂ ಸ್ವರ್ಗಮೋಕ್ಷರೂಪವಾದ ಫಲವನ್ನು ಕೊಡತಕ್ಕುದೂ ಆದ ಧರ್ಮಕಥೆಯನ್ನು ಪೂರ್ವಾಚಾರ್ಯಪರಂಪರೆಯನ್ನಾಶ್ರಯಿಸಿ ಹೇಳುವೆನು. ಸಜ್ಜನರೆ ! ಕೇಳಿ ! (ನವಭಿಃ ಕುಲಕಂ).

**ಕಥಾಕಥಕಯೋರತ್ರ ಶ್ರೋತೄಣಾಮಪಿ ಲಕ್ಷಣಮ್ ।**
**ವ್ಯಾವರ್ಣನೀಯಂ ಪ್ರಾಗೇವ ಕಥಾರಂಭೇ ಮನೀಷಿಭಿಃ ॥ ೧೧೭ ॥**

ಬುದ್ಧಿಶಾಲಿಗಳು ಕಥೆಯನ್ನಾರಂಭಮಾಡುವುದಕ್ಕಿಂತ ಮೊದಲೇ ಕಥೆಯ ಲಕ್ಷಣವನ್ನೂ ಕಥೆಯನ್ನು ಹೇಳುವವ(ಕಥಕ)ನ ಲಕ್ಷಣವನ್ನೂ ಕಥೆಯನ್ನು ಕೇಳುವವರ ಲಕ್ಷಣವನ್ನೂ ವರ್ಣಿಸಬೇಕು.

**ಪುರುಷಾರ್ಥೋಪಯೋಗಿತ್ವಾತ್ತ್ರಿವರ್ಗಕಥನಂ ಕಥಾ ।**
**ತತ್ರಾಪಿ ಸತ್ಕಥಾಂ ಧರ್ಮ್ಯಾಮಾಮನಂತಿ ಮನೀಷಿಣಃ ॥ ೧೧೮ ॥**

ಮೋಕ್ಷಪುರುಷಾರ್ಥಕ್ಕುಪಯೋಗಿಗಳಾಗಿರುವುದರಿಂದ ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗಗಳ ಕಥನವು ಕಥೆಯೆನಿಸುವುದು. ಆ ಮೂರರಲ್ಲಿಯೂ ಧರ್ಮಸಂಬಂಧಿಯಾದ ಕಥೆಯನ್ನು ಬುದ್ಧಿವಂತರು ಸತ್ಕಥೆಯನ್ನಾಗಿ ಹೇಳುತ್ತಾರೆ.

**[೭]ತತ್ಫಲಾ[೮]ಭ್ಯುದಯಾಂಗತ್ವಾದರ್ಥಕಾಮ[೯]ಕಥಾಕಥಾ ।**
**[೧೦]ಅನ್ಯಥಾವಿಕಥೈವಾಸಾವಪುಣ್ಯಾಸ್ರವ[೧೧]ಕಾರಿಣೀ ॥ ೧೧೯ ॥**

೧ ಶಬ್ದಪರಿಪಾಟೀ. ೨ ಪ್ರಸೂತಾರ್ಥೇತ್ಯಪಿ ಪಾಠಃ. ೩ ಸ್ವೀಕೃತಸಕಲಸಿದ್ಧಾಂತಾರ್ಥಾಂ. ೪ ನಿರಾಕೃತ. ೫ ಅಧಿಕಾರೈಃ. ೬ ಆನುಪೂರ್ವೀಮಿತ್ಯಪಿ ಪಾಠಃ. ೭ ಧರ್ಮಸ್ಯ. ೮ ಅಭ್ಯುದಯೋವಯವೀ, ಅರ್ಥಕಾಮಾವವಯವಾವಿತ್ಯರ್ಥಃ. ೯ ಕಥನಂ. ೧೦ ತದಂಗತ್ವಾಭಾವೇ. ೧೧ ಕಾರಣಮಿತ್ಯಪಿಪಾಠಃ.

ಅರ್ಥಕಾಮಗಳು ಧರ್ಮದ ಫಲರೂಪವಾದ ಸ್ವರ್ಗಸುಖಕ್ಕೆ ಅಂಗರೂಪವಾಗಿರುವುದರಿಂದ ಆ ಅರ್ಥಕಾಮಗಳ ಕಥನವು ಧರ್ಮಕಥೆಯೆನಿಸುವುದು. ಹಾಗಲ್ಲದೆಹೋದರೆ ಪಾಪಾಸ್ರವಕ್ಕೆ ಕಾರಣವಾದ ಈ ಅರ್ಥಕಾಮಕಥೆಯು ವಿಕಥೆಯೆನಿಸುವುದು.

**ಯತೋಭ್ಯುದಯನಿಃಶ್ರೇಯಸಾರ್ಥಸಂಸಿದ್ಧಿರಂಜಸಾ ।**
**ಸ ಧರ್ಮಸ್ತ[೧]ನ್ನಿಬದ್ಧಾಯಾ ಸಾ ಸದ್ಧರ್ಮಕಥಾ ಸ್ಮೃತಾ ॥ ೧೨೦ ॥**

ಯಾವುದರಿಂದ ಸ್ವರ್ಗ ಮೋಕ್ಷಸುಖಪ್ರಾಪ್ತಿಯು ನಿಶ್ಚಯವಾಗಿ ಆಗುವುದೋ ಅದು ಧರ್ಮವೆನಿಸುವುದು. ಅಂತಹ ಧರ್ಮಸಂಬಂಧವಾದ ಕಥೆಯು ಸದ್ಧರ್ಮಕಥೆಯೆನಿಸುವುದು.

**ಪ್ರಾಹುರ್ಧರ್ಮಕಥಾಂಗಾನಿ ಸಪ್ತಸಪ್ತರ್ಧಿಭೂಷಣಾಃ ।**
**ಯೈರ್ಭೂಷಿತಾ ಕಥಾ[೨]ಹಾರ್ಯೈರ್ನಟೀವ ರಸಿಕಾ ಭವೇತ್ ॥ ೧೨೧ ॥**

ಸಪ್ತರ್ದ್ಧಿಧಾರಿಗಳಾದ ಮುನಿಗಳು ಧರ್ಮಕಥೆಗೆ ಏಳು ಅಂಗಗಳಿವೆಯೆಂದು ಹೇಳುತ್ತಾರೆ. ಯಾವ ಅಂಗಗಳಿಂದಲಂಕೃತವಾದ ಕಥೆಯು, ಆಭರಣಗಳಿಂದಲಂಕೃತಳಾದ ನಟಿಯಂತೆ, ಮನೋಹರವಾಗಿ ಆಗುವುದು.

**ದ್ರವ್ಯಂ ಕ್ಷೇತ್ರಂ ತಥಾ ತೀರ್ಥಂ ಕಾಲೋ ಭಾವಃ ಫಲಂ ಮಹತ್ ।**
**ಪ್ರಕೃತಂ ಚೇತ್ಯಮೂನ್ಯಾಹುಃ ಸಪ್ತಾಂಗಾನಿ ಕಥಾಮುಖೇ ॥ ೧೨೨ ॥**

ಕಥಾಪ್ರಾರಂಭದಲ್ಲಿ ದ್ರವ್ಯ, ಕ್ಷೇತ್ರ, ತೀರ್ಥ, ಕಾಲ, ಭಾವ, ಮಹಾಫಲ, ಪ್ರಕೃತ ಈ ಏಳು ಅಂಗಗಳನ್ನು ಹೇಳುತ್ತಾರೆ.

**ದ್ರವ್ಯಂ ಜೀವಾದಿ ಷೋಢಾ ಸ್ಯಾತ್ಕ್ಷೇತ್ರಂ ತ್ರಿಭುವನಸ್ಥಿತಿಃ ।**
**ಜಿನೇಂದ್ರಚರಿತಂ ತೀರ್ಥಂ ಕಾಲಸ್ತ್ರೇಧಾ ಪ್ರಕೀರ್ತಿತಃ ॥ ೧೨೩ ॥**

ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲವೆಂದು ದ್ರವ್ಯವು ಆರು ಪ್ರಕಾರವಾಗಿದೆ. ಕ್ಷೇತ್ರವು ಅಧೋ, ಮಧ್ಯ, ಊರ್ಧ್ವಭೇದದಿಂದ ಮೂರು ಪ್ರಕಾರವಾಗಿದೆ. ಜಿನೇಶ್ವರರ ಚರಿತ್ರವು ತೀರ್ಥವೆನಿಸುವುದು. ಭೂತಭವಿಷ್ಯದ್ವರ್ತಮಾನಭೇದದಿಂದ ಕಾಲವು ಮೂರು ಪ್ರಕಾರವಾಗಿದೆ.

**ಪ್ರಕೃತಂ ಸ್ಯಾತ್ಕಥಾವಸ್ತು ಫಲಂ ತತ್ತ್ವಾವಬೋಧನಮ್ ।**
**[೩]ಭಾವಃ ಕ್ಷಯೋಪಶಮಜಸ್ತಸ್ಯ ಸ್ಯಾತ್ಕ್ಷಾಯಿಕೋಽಥವಾ ॥ ೧೨೪ ॥**

ಕಥೆಯಲ್ಲಿ ವರ್ಣಿಸುವ ವಿಷಯವು ಪ್ರಕೃತವೆನಿಸುವುದು. ತತ್ತ್ವಜ್ಞಾನವು ಫಲವು. ಭಾವವು ಕ್ಷಾಯೋಪಶಮಿಕಕ್ಷಾಯಿಕವೆಂದು ಎರಡು ಪ್ರಕಾರವಾಗಿದೆ.

**ಇತ್ಯಮೂನಿ ಕಥಾಂಗಾನಿ ಯತ್ರ ಸಾ ಸತ್ಕಥಾ ಮತಾ ।**
**ಯಥಾವಸರಮೇವೈಷಾಂ ಪ್ರಪಂಚೋ ದರ್ಶಯಿಷ್ಯತೇ ॥ ೧೨೫ ॥**

ಹಿಂದೆ ಹೇಳಿದ ಈ ಏಳು ಅಂಗಗಳುಳ್ಳುದು ಸತ್ಕಥೆಯೆನಿಸುವುದು. ಈ ಏಳು ಅಂಗಗಳ ವಿಸ್ತಾರವರ್ಣನೆಯನ್ನು ಸಂದರ್ಭಾನುಸಾರವಾಗಿ ಮಾಡುವೆವು.

**ತಸ್ಯಾಸ್ತು ಕಥಕಃ ಸೂರಿಃ ಸದ್ವೃತ್ತಃ ಸ್ಥಿರಧೀರ್ವ[೪]ಶೀ ।**
**[೫]ಕಲ್ಯೇಂದ್ರಿಯಃ ಪ್ರಶಸ್ತಾಂಗಃ ಸ್ಪಷ್ಟಮೃಷ್ಟೇಷ್ಟಗೀರ್ಗುಣಃ ॥ ೧೨೬ ॥**

೧ ಧರ್ಮೇಣ ಸಂಬದ್ಧಾ. ೨ ಭೂಷಣೈಃ. ೩ ಸ್ವರೂಪಂ. ೪ ಜಿತೇಂದ್ರಿಯಃ. ೫ ಪ್ರಶಸ್ತೇಂದ್ರಿಯಃ.

**ತಸ್ಮಾತ್ಪುಣ್ಯಕಥಾಮೇನಾಂ ಶೃಣುಯಾಮ ಸಮಂ ವಯಮ್ ।**
**ಪ್ರಜ್ಞಾಪಾರಮಿತೋ[೧]ದೇವೋ ವಕ್ತುಮುತ್ಸಹತಾಮಯಮ್ ॥ ೪೫ ॥**

ಆದುದರಿಂದ ಉತ್ಕೃಷ್ಟಜ್ಞಾನಿಗಳಾದ ಈ ಗೌತಮಗಣಧರರು ಈ ಪುಣ್ಯಕಥೆಯನ್ನು ಹೇಳುವುದಕ್ಕೆ ಉತ್ಸಾಹವುಳ್ಳವರಾಗಲಿ, ನಾವು ನಿನ್ನೊಡನೆ ಕೇಳುತ್ತೇವೆ''.

**ಇತಿ ಪ್ರೋತ್ಸಾಹ್ಯ ತಂ ಧರ್ಮೇ ತೇ [೨]ಸಮಾಧಾನಚಕ್ಷುಷಃ ।**
**ತತೋ ಗಣಧರಸ್ತೋತ್ರಂ ಪೇಠುರಿತ್ಯುಚ್ಚಕೈಸ್ತದಾ ॥ ೪೬ ॥**

ಈಪ್ರಕಾರವಾಗಿ ಏಕಾಗ್ರಬುದ್ಧಿಯುಳ್ಳ ಆ ಋಷಿಗಳು ಶ್ರೇಣಿಕನನ್ನು ಧರ್ಮದಲ್ಲಿ ಪ್ರೋತ್ಸಾಹಗೊಳಿಸಿ, ತರುವಾಯ ಮುಂದೆಹೇಳುವ ರೀತಿಯಾಗಿ ಗಣಧರರ ಸ್ತೋತ್ರವನ್ನು ಗಟ್ಟಿಯಾಗಿ ಪಠಿಸಿದರು.

**ತ್ವಾಂ ಪ್ರತ್ಯಕ್ಷವಿದಾಂ ಬೋಧ್ಯೈರಪ್ಯಬುದ್ಧಮಹೋದಯಮ್ ।**
**ಪ್ರತ್ಯಕ್ಷಸ್ತವನೈಃ ಸ್ತೋತುಂ ವಯಂ ಚಾದ್ಯ ಕಿಲೋದ್ಯತಾಃ ॥ ೪೭ ॥**

''ಸ್ವಾಮಿಯೇ !ಪ್ರತ್ಯಕ್ಷಜ್ಞಾನಿಗಳಾದ ಋಷಿಗಳ ಜ್ಞಾನಗಳಿಗೂ ಅಗೋಚರವಾದ ಅಭ್ಯುದಯವುಳ್ಳ ನಿನ್ನನ್ನು ಪ್ರತ್ಯಕ್ಷವಾದ ಸ್ತೋತ್ರಗಳಿಂದ ಸ್ತೋತ್ರಮಾಡುವುದಕ್ಕೆ ನಾವೀಗ ಉದ್ಯುಕ್ತರಾಗಿದ್ದೇವೆ.

**ಚತುರ್ದಶಮಹಾ[೩]ವಿದ್ಯಾಸ್ಥಾ[೪]ನಾಕೂಪಾರಪಾರಗಮ್ ।**
**ತ್ವಾಮೃಷೇ ಸ್ತೋತುಕಾಮಾಃ ಸ್ಮಃ ಕೇವಲಂ ಭಕ್ತಿಚೋದಿತಾಃ ॥ ೪೮ ॥**

ಋಷಿಯೇ ! ಉತ್ಪಾದಪೂರ್ವ ಮೊದಲಾದ ಮಹಾವಿದ್ಯೆಗಳೆಂಬ ಮತ್ತು ಪ್ರಥಮಾನುಯೋಗ ಮೊದಲಾದ ಚತುರ್ವೇದಗಳೆಂಬ ಸಮುದ್ರದ ಪಾರವನ್ನು ಹೊಂದಿರುವ ನಿನ್ನನ್ನು ಭಕ್ತಿಯಿಂದ ಮಾತ್ರ ಪ್ರೇರಿತರಾಗಿ ಸ್ತೋತ್ರಮಾಡಬೇಕೆಂಬ ಇಚ್ಛೆಯುಳ್ಳವರಾಗಿದ್ದೇವೆ.

**ಭಗವನ್ ಭವ್ಯಸಾರ್ಥಸ್ಯ ನೇತುಸ್ತವ [೫]ಶಿವಾಕರಮ್ ।**
**ಪತಾಕೇವೋ[೬]ಚ್ಛ್ರಿತಾ ಭಾತಿ ಕೀರ್ತಿರೇಷಾ ವಿಧೂಜ್ಜ್ವಲಾ ॥ ೪೯ ॥**

ಭಗವಂತನೇ !ಭವ್ಯರ ಸಮೂಹವೆಂಬ ವರ್ತಕರ ಗುಂಪನ್ನು ಮೋಕ್ಷವೆಂಬ ಖನಿ (ರತ್ನೋತ್ಪತ್ತಿಸ್ಥಾನ)ಗೆ ತೆಗೆದುಕೊಂಡುಹೋಗುವುದೂ ಚಂದ್ರನಂತೆ ಪ್ರಕಾಶಮಾನವೂ ಆದ ಈ ನಿನ್ನ ಕೀರ್ತಿಯು ಮೇಲಕ್ಕೆ ಎತ್ತಿಹಿಡಿದ ಧ್ವಜಪತಾಕೆಯಂತೆ, ಪ್ರಕಾಶಿಸುತ್ತಿದೆ.

**ಆಲವಾಲೀಕೃತಾಂಭೋಧಿವಲಯಾ ಕೀರ್ತಿವಲ್ಲರೀ ।**
**ಜಗನ್ನಾಡೀತರೋರಗ್ರಮಾಕ್ರಾಮತಿ ತವೋಚ್ಛಿಖಾ ॥ ೫೦ ॥**

ಮೇಲಕ್ಕೆದ್ದಿರುವ ನಿನ್ನ ಕೀರ್ತಿಯೆಂಬ ಲತೆಯು, ವಲಯಾಕಾರವಾದ ಸಮುದ್ರವನ್ನು ಪಾತಿ (ಕಟ್ಟೆ)ಯನ್ನಾಗಿ ಮಾಡಿಕೊಂಡು ಲೋಕನಾಡಿಯೆಂಬ ವೃಕ್ಷದಕೊನೆಯನ್ನು ಆಕ್ರಮಿಸುತ್ತಿದೆ.

**ತ್ವಾಮಾಮನಂತಿ ಮುನಯೋ ಯೋಗಿನಾಮಧಿಯೋಗಿನಮ್ ।**
**ತ್ವಾಂ ಗಣ್ಯಂ ಗಣನಾತೀತಗುಣಂ ಗಣಧರಂ ವಿದುಃ ॥ ೫೧ ॥**

ಮುನಿಗಳು ನಿನ್ನನ್ನು ಯೋಗಿಗಳಲ್ಲೆಲ್ಲ ಶ್ರೇಷ್ಠನನ್ನಾಗಿಯೂ ಗಣ್ಯನನ್ನಾಗಿಯೂ ಅಪರಿಮಿತವಾದ ಗುಣಗಳುಳ್ಳವನನ್ನಾಗಿಯೂ ಗಣಧರನನ್ನಾಗಿಯೂ ತಿಳಿಯುತ್ತಾರೆ.

೧ ಗಣಧರದೇವಃ. ೨ ಏಕಾಗ್ರಬುದ್ಧಯಃ. ೩ ಉತ್ಪಾದಪೂರ್ವಾದಿಚತುರ್ದಶಪೂರ್ವಾಣಿ. ೪ ಚತ್ವಾರೋ ವೇದಾಃ. ೫ ಮೋಕ್ಷಸ್ಥಾನಖನಿಂ. ೬ ಉದ್ಧೃತಾ.

**ಗೋತಮಾ [೧]ಗೌಃ ಪ್ರಕೃಷ್ಟಾ ಸ್ಯಾತ್ಸಾ ಚ ಸರ್ವಜ್ಞಭಾರತೀ ।**
**ತಾಂ ವೇತ್ಸಿ ತಾಮಧೀಷೇ ಚ ತ್ವಮತೋ [೨]ಗೌತಮೋ ಮತಃ ॥ ೫೨ ॥**

ಶ್ರೇಷ್ಠವಾದ ವಾಣಿಯು ಗೋತಮಾವೆನಿಸುತ್ತದೆ. ಅಂತಹ ವಾಣಿಯಾದರೋ ಸರ್ವಜ್ಞರ ದಿವ್ಯಧ್ವನಿಯಾಗಿದೆ. ಅದನ್ನು ನೀನು ತಿಳಿಯುತ್ತಿ ಮತ್ತು ಅಧ್ಯಯನಮಾಡುತ್ತಿ. ಈ ಕಾರಣದಿಂದ ನಿನಗೆ ಗೌತಮನೆಂದು ಹೆಸರಾಯಿತು.

**[೩]ಗೋತಮಾದಾಗತೋ [೪]ದೇವಃ ಸ್ವರ್ಗಾ [೫]ಗ್ರಾದ್ಗೌತಮೋ ಮತಃ ।**
**ತೇನ ಪ್ರೋಕ್ತಮಧೀಯಾನಸ್ತ್ವಂ ಚಾಸೀರ್ಗೌತಮಶ್ರುತಿಃ ॥ ೫೩ ॥**

ಶ್ರೇಷ್ಠವಾದ ಅಚ್ಯುತಸ್ವರ್ಗದ ಪುಷ್ಪೋತ್ತರವಿಮಾನದಿಂದ ಅವತರಿಸಿದ ವರ್ಧಮಾನಸ್ವಾಮಿಗೆ ಗೌತಮನೆಂದು ಹೆಸರು. ಅವರು ಹೇಳಿದ ತತ್ತ್ವವನ್ನು ಅಧ್ಯಯನಮಾಡುವುದರಿಂದ ನಿನಗೂ ಗೌತಮನೆಂದು ಹೆಸರಾಗಿದೆ.

**ಇಂದ್ರೇಣ ಪ್ರಾಪ್ತಪೂಜರ್ದ್ಧಿರಿಂದ್ರಭೂತಿಸ್ತ್ವಮಿಷ್ಯಸೇ ।**
**ಸಾಕ್ಷಾತ್ಸರ್ವಜ್ಞ ಪುತ್ರಸ್ತ್ವಮಾಪ್ತಸಜ್ಜ್ಞಾನಕಂಠಿಕಃ ॥ ೫೪ ॥**

ಸಾಕ್ಷಾತ್ ಇಂದ್ರನೇ ನಿನ್ನನ್ನು ಪೂಜಿಸಿದುದರಿಂದ ಇಂದ್ರಭೂತಿಯೆಂದೂ ಹೇಳುತ್ತಾರೆ. ಶ್ರೇಷ್ಠವಾದ ಅವಧಿಮನಃಪರ್ಯಯಜ್ಞಾನಗಳು ನಿನಗೆ ಪ್ರಾಪ್ತವಾಗಿರುವುದರಿಂದ ನೀನು ಸಾಕ್ಷಾತ್ ಸರ್ವಜ್ಞರ ಪುತ್ರನಂತಿರುತ್ತಿ.

**ಚತುರ್ಭಿರಮಲೈರ್ಬೋಧೈರ[೬]ಬುದ್ಧಾಸ್ತ್ವಂ ಜಗದ್ಧಿತಃ ।**
**ಪ್ರಜ್ಞಾಪಾರಮಿತಂ ಬುದ್ಧಂ ತ್ವಾಂ ನಿರಾಹುರತೋ ಬುಧಾಃ ॥ ೫೫ ॥**

ಮತಿ, ಶ್ರುತ, ಅವಧಿ, ಮನಃಪರ್ಯಯಗಳೆಂಬ ನಾಲ್ಕು ದಿವ್ಯಜ್ಞಾನಗಳಿಂದ ನೀನು ಲೋಕವನ್ನು ತಿಳಿದಿರುವುದರಿಂದಲೂ ಕ್ಷಾಯೋಪಶಮಿಕಜ್ಞಾನದ ಕೊನೆಯನ್ನು ಹೊಂದಿರುವುದರಿಂದಲೂ ನಿನ್ನನ್ನು ವಿದ್ವಾಂಸರು ಬುದ್ಧನೆಂದೂ ಹೇಳುತ್ತಾರೆ.

**ಪಾರೇತಮಃ ಪರಂಜ್ಯೋತಿಸ್ತ್ವಾಮುದ್ವೀಕ್ಷ್ಯ ದುರಾಸದಮ್ ।**
**ಜ್ಯೋತಿರ್ಮಯಃ ಪ್ರದೀಪೋಽಸಿ ತ್ವಂ ತಸ್ಯಾಪಿ ಪ್ರಕಾಶನಾತ್ ॥ ೫೬ ॥**

ಅಜ್ಞಾನಾಂಧಕಾರದ ಪಾರವನ್ನು ಹೊಂದಿದ ನಿನ್ನನ್ನು ನೋಡದೇ ಕೇವಲಜ್ಞಾನವೆಂಬ ಪರಮಜ್ಯೋತಿಯನ್ನು ಹೊಂದುವುದು ಕಷ್ಟ. ಅಂತಹ ಪರಂಜ್ಯೋತಿಯನ್ನು ಪ್ರಕಾಶಪಡಿಸುವುದರಿಂದ ನೀನೂ ಜ್ಯೋತಿರ್ಮಯವಾದ ದೀಪವಾಗಿರುತ್ತಿ.

**ಶ್ರುತದೇವ್ಯಾಹಿತಸ್ತ್ರೈ[೭]ಣಪ್ರಯತ್ನಾ ಬೋಧದೀಪಿಕಾ ।**
**ತವೈಷಾ ಪ್ರಜ್ವಲತ್ಯುಚ್ಚೈರ್ದ್ಯೋತಯಂತೀ ಜಗದ್ಗೃಹಮ್ ॥ ೫೭ ॥**

ಶ್ರುತದೇವಿಯ ಮೂಲಕ ಸ್ತ್ರೀರೂಪವನ್ನು ಹೊಂದಿರುವ ಈ ನಿನ್ನ ಜ್ಞಾನವೆಂಬ ದೀಪಿಕೆ (ದೀಪ)ಯು ಜಗತ್ತೆಂಬ ಮನೆಯನ್ನು ಪ್ರಕಾಶಪಡಿಸುತ್ತ ಅಧಿಕವಾಗಿ ಪ್ರಕಾಶಿಸುತ್ತಿದೆ.

**ತವ ವಾಕ್ಪ್ರಸರೋ ದಿವ್ಯೋ ವಿಧುನ್ವನ್ ಜಗತಾಂ [೮]ತಮಃ ।**
**ಪ್ರಕಾಶಯತಿ [೯]ಸನ್ಮಾರ್ಗಂ ರವೇರಿವ ಕರೋತ್ಕರಃ ॥ ೫೮ ॥**

ಶ್ರೇಷ್ಠವಾದ ನಿನ್ನ ವಚನದ ಪ್ರಸಾರಣೆಯು ಜಗತ್ತಿನ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಿ, ಸೂರ್ಯನ ಕಿರಣಸಮೂಹವು ಆಕಾಶವನ್ನು ಪ್ರಕಾಶಪಡಿಸುವಂತೆ ಉತ್ತಮವಾದ ಮೋಕ್ಷಮಾರ್ಗವನ್ನು ಪ್ರಕಾಶಪಡಿಸುತ್ತದೆ.

೧ ವಾಕ್. ೨ ಬೋದ್ಧ್ರ್ಯೇತ್ರ್ರೋರಿತ್ಯಣ್. ೩ ಅಚ್ಯುತಸ್ವರ್ಗಾತ್. ೪ ವರ್ಧಮಾನಸ್ವಾಮೀ. ೫ ಪುಷ್ಪೋತ್ತರವಿಮಾನಾತ್. ೬ ಜ್ಞಾತವಾನ್. ೭ ಸ್ತ್ರೀಸಂಬಂಧೀ. ೮ ಅಜ್ಞಾನಂ. ೯ ಸತಾಂ ನಕ್ಷತ್ರಾಣಾಮಿತಿ ಸೂರ್ಯಪಕ್ಷೇ.

**ತವ ಲೋಕಾತಿಗಾ ಪ್ರಜ್ಞಾ ವಿದ್ಯಾನಾಂ ಪಾರದೃಶ್ವರೀ ।**
**ಶ್ರುತಸ್ಕಂಧಮಹಾಸಿಂಧೋರಭಜದ್ಯಾ[೧]ನಪಾತ್ರತಾಮ್ ॥ ೫೯ ॥**

ವಿದ್ಯೆಗಳ ಪಾರವನ್ನು ಕಂಡಿರುವುದೂ ಅಸಾಧಾರಣವೂ ಆದ ನಿನ್ನ ಬುದ್ಧಿಯು ಶ್ರುತಸ್ಕಂಧ (ಶಾಸ್ತ್ರ) ವೆಂಬ ದೊಡ್ಡಸಮುದ್ರಕ್ಕೆ ಹಡಗಿನಂತಿದೆ.

**ತ್ವಯಾವತಾರಿತಾ ತುಂಗಾನ್ಮಹಾವೀರಹಿಮಾಚಲಾತ್ ।**
**ಶ್ರುತಾಮರಸರಿತ್ಪುಣ್ಯಾ ನಿರ್ಧುನಾನಾಖಿಲಂ ರಜಃ ॥ ೬೦ ॥**

ಸಮಸ್ತ ಪಾಪವೆಂಬ ಧೂಳನ್ನು ಹೋಗಲಾಡಿಸುವ ಪವಿತ್ರವಾದ ಶಾಸ್ತ್ರವೆಂಬ ದೇವಗಂಗೆಯನ್ನು, ಮಹಾವೀರಸ್ವಾಮಿಯೆಂಬ ಎತ್ತರವಾದ ಹಿಮವತ್ಪರ್ವತದಿಂದ, ನೀನು ಇಳಿಸಿದೆ. ಗಣಧರರ ನಿಮಿತ್ತದಿಂದ ಸ್ವಾಮಿಯ ದಿವ್ಯಧ್ವನಿಯು ಹೊರಟಿತೆಂದು ಭಾವವು.

**ಪ್ರತ್ಯಕ್ಷಶ್ಚ ಪರೋಕ್ಷಶ್ಚ ದ್ವಿಧಾ ತೇ ಜ್ಞಾನಪರ್ಯಯಃ ।**
**ಕೇವಲಂ ಕೇವಲಿನ್ಯೇಕಸ್ತತಸ್ತ್ವಂ ಶ್ರುತಕೇವಲೀ ॥ ೬೧ ॥**

ಕೇವಲಿಗಳಲ್ಲಿ ಒಂದೇ ಕೇವಲಜ್ಞಾನ (ಪ್ರತ್ಯಕ್ಷಜ್ಞಾನ) ವಿದೆ. ನಿನ್ನಲ್ಲಿ ಪ್ರತ್ಯಕ್ಷ (ಅವಧಿ ಮನಃಪರ್ಯಯ) ಪರೋಕ್ಷ (ಮತಿಶ್ರುತ) ವೆಂದು ಎರಡು ಜ್ಞಾನಗಳಿವೆ. ಆದುದರಿಂದ ನೀನು ಶ್ರುತಕೇವಲಿಯಾಗಿರುತ್ತಿ.

**ಪಾರೇತಮಃ ಪರಂ[೨]ಧಾಮ ಪ್ರವೇಷ್ಟುಮನಸೋ ವಯಮ್ ।**
**ತದ್ದ್ವಾರೋದ್ಘಾಟನಂ ಬೀಜಂ ತ್ವಾಮುಪಾಸ್ಯ ಲಭೇಮಹಿ ॥ ೬೨ ॥**

ನಾವು ಅಜ್ಞಾನಾಂಧಕಾರದ ನಾಶರೂಪವಾದ ಮೋಕ್ಷಸ್ಥಾನವನ್ನು ಪ್ರವೇಶಮಾಡಬೇಕೆಂಬ ಮನಸ್ಸುಳ್ಳವರಾಗಿದ್ದೇವೆ. ನಿನ್ನನ್ನು ಉಪಾಸನೆ (ಸೇವೆ) ಮಾಡಿ, ಆ ಮೋಕ್ಷದ ಬಾಗಿಲನ್ನು ತೆರೆಯುವ ಕಾರಣ (ಬೀಗದಕೈ)ವನ್ನು ಹೊಂದುವೆವು.

**ಬ್ರಹ್ಮೋದ್ಯಾ ನಿಖಿಲಾ ವಿದ್ಯಾಸ್ತ್ವಂ ಹಿ ಬ್ರಹ್ಮಸುತೋ ಮುನಿಃ ।**
**ಪರಂಬ್ರಹ್ಮ ತ್ವದಾ[೩]ಯತ್ತಮತೋ ಬ್ರಹ್ಮವಿದೋ ವಿದುಃ ॥ ೬೩ ॥**

ಸಮಸ್ತ ವಿದ್ಯೆಗಳೂ ಸರ್ವಜ್ಞರಿಂದ ಉಂಟಾದುವು. ನೀನಾದರೋ ಸರ್ವಜ್ಞರ ಪುತ್ರನಾದ ಮುನಿಯಾಗಿರುತ್ತಿ. ಈ ಕಾರಣದಿಂದ ಬ್ರಹ್ಮಜ್ಞಾನಿ (ಯೋಗಿ)ಗಳು ಪರಬ್ರಹ್ಮಸ್ವರೂಪವು ನಿನ್ನ ಅಧೀನವಾಗಿದೆಯೆಂದು ತಿಳಿಯುತ್ತಾರೆ.

**ಮುನಯೋ ವಾತರ[೪]ಶನಾಃ ಪದಮೂರ್ಧ್ವಂ ವಿಧಿತ್ಸವಃ ।**
**ತ್ವಾಂ ಮೂ[೫]ರ್ಧ್ನಾವಂದಿನೋ ಭೂತ್ವಾ ತದುಪಾಯಮುಪಾಸತೇ॥ ೬೪ ॥**

ಗಾಳಿಯೇ ಉಡುದಾರವಾಗಿರುವ – ದಿಗಂಬರ ಮುನಿಗಳು ಮೋಕ್ಷಸ್ಥಾನವನ್ನು ಪಡೆಯಲಿಚ್ಛಿಸುವವರಾಗಿ, ತಲೆಬಾಗಿಸಿ ನಿನ್ನನ್ನು ನಮಸ್ಕರಿಸಿ, ಮೋಕ್ಷಪ್ರಾಪ್ತಿಯ ಉಪಾಯವನ್ನು ಸೇವಿಸುತ್ತಾರೆ.

**ಮಹಾಯೋಗಿನ್ನಮಸ್ತುಭ್ಯಂ ಮಹಾಪ್ರಜ್ಞ ನಮೋಸ್ತು ತೇ ।**
**ನಮೋ ಮಹಾತ್ಮನೇ ತುಭ್ಯಂ ನಮಃ ಸ್ತಾತ್ತೇ ಮಹರ್ದ್ಧಯೇ ॥ ೬೫ ॥**

ಮಹಾಯೋಗಿಯೇ ! ನಿನಗೆ ನಮಸ್ಕಾರವು. ಮಹಾ ಬುದ್ಧಿಶಾಲಿಯೇ ! ನಿನಗೆ ವಂದನೆಯು. ಮಹಾತ್ಮನಾದ ನಿನಗೆ ನಮಸ್ಕಾರವು. ಮಹಾ ಋದ್ಧಿಯುಳ್ಳ ನಿನಗೆ ನಮಸ್ಕಾರವಿರಲಿ.

**ನಮೋವಧಿಜುಷೇ ತುಭ್ಯಂ ನಮೋ ದೇಶಾವಧಿತ್ವಿಷೇ ।**
**ಪರಮಾವಧಯೇ ತುಭ್ಯಂ ನಮಃ ಸರ್ವಾವಧಿಸ್ಪೃಶೇ ॥ ೬೬ ॥**

ಅವಧಿಜ್ಞಾನವನ್ನು ಹೊಂದಿರುವ ನಿನಗೆ ನಮಸ್ಕಾರವು. ದೇಶಾವಧಿಯೆಂಬ ಪ್ರಕಾಶವುಳ್ಳ ನಿನಗೆ ನಮಸ್ಕಾರವು. ಪರಮಾವಧಿಜ್ಞಾನವುಳ್ಳ ನಿನಗೆ ನಮಸ್ಕಾರವು. ಸರ್ವಾವಧಿಜ್ಞಾನವನ್ನು ಪಡೆದ ನಿನಗೆ ನಮಸ್ಕಾರವು.

**ಕೋಷ್ಠಬುದ್ಧೇ ನಮಸ್ತುಭ್ಯಂ ನಮಸ್ತೇ ಬೀಜಬುದ್ಧಯೇ ।**
**ಪದಾನುಸಾರಿನ್ಸಂಭಿನ್ನಶ್ರೋತಸ್ತುಭ್ಯಂ ನಮೋನಮಃ ॥ ೬೭ ॥**

ಕೋಷ್ಠಬುದ್ಧಿಯುಳ್ಳವನೇ ! ನಿನಗೆ ನಮಸ್ಕಾರವು. (ಭಂಡಾರದಲ್ಲಿ ಧಾನ್ಯವು ತುಂಬಿರುವಂತೆ ಸಮಸ್ತವಿಷಯವಾದ ತಿಳುವಳಿಕೆಯಿರುವುದಕ್ಕೆ ಕೋಷ್ಠಬುದ್ಧಿಯೆಂದು ಹೆಸರು). ಬೀಜಬುದ್ಧಿಯಳ್ಳ ನಿನಗೆ ನಮಸ್ಕಾರವು (ಒಳ್ಳೆಯ ಕ್ಷೇತ್ರದಲ್ಲಿ ಬಿತ್ತಿದ ಬೀಜವು ಅನೇಕ ಬೀಜಗಳನ್ನುಂಟುಮಾಡುವಂತೆ, ಬೀಜಾಕ್ಷರರೂಪ ಪದಗಳನ್ನು ಗ್ರಹಣಮಾಡಿ ಅನೇಕ ಅರ್ಥಗಳನ್ನು ತಿಳಿಯುವ ಬುದ್ಧಿಗೆ ಬೀಜಬುದ್ಧಿಯೆಂದು ಹೆಸರು). ಪದಾನುಸಾರಿ ಬುದ್ಧಿಧಾರಿಯೇ ! ಮತ್ತು ಸಂಭಿನ್ನಶ್ರೋತೃ ಬುದ್ಧಿಧಾರಿಯೇ ! ನಿನಗೆ ನಮಸ್ಕಾರವು. ಗ್ರಂಥದಲ್ಲಿ ಯಾವುದಾದರೊಂದು ಪದವನ್ನು ಗ್ರಹಣಮಾಡಿ ಸಂಪೂರ್ಣ ಗ್ರಂಥವನ್ನು ತಿಳಿದುಕೊಳ್ಳುವುದಕ್ಕೆ ಪದಾನುಸಾರಿ ಬುದ್ಧಿಯೆಂದೂ ಹನ್ನೆರಡುಯೋಜನ ಉದ್ದ, ಒಂಬತ್ತು ಯೋಜನ ಅಗಲವುಳ್ಳ ಪ್ರದೇಶದಲ್ಲಿರುವ ಮನುಷ್ಯ ತಿರ್ಯಂಚ ಸಂಬಂಧಿಯಾದ ಅಕ್ಷರಾತ್ಮಕ, ಅನಕ್ಷರಾತ್ಮಕ ಶಬ್ದಗಳನ್ನು ಒಂದೇ ಕಾಲದಲ್ಲಿ ಬೇರೆಬೇರೆಯಾಗಿ ತಿಳಿಯುವ ಬುದ್ಧಿಗೆ ಸಂಭಿನ್ನಶ್ರೋತೃಬುದ್ಧಿಯೆಂದೂ ಹೆಸರು).

**ನಮೋಸ್ತ್ವೃಜುಮತೇ ತುಭ್ಯಂ ನಮಸ್ತೇ ವಿಪುಲಾತ್ಮನೇ ।**
**ನಮಃ ಪ್ರತ್ಯೇಕಬುದ್ಧಾಯ ಸ್ವಯಂಬುದ್ಧಾಯ ವೈ ನಮಃ ॥ ೬೮ ॥**

ಋಜುಮತಿ, ವಿಪುಲಮತಿ ಮನಃಪರ್ಯಯಜ್ಞಾನಧಾರಿಯಾದ ನಿನಗೆ ನಮಸ್ಕಾರವು. ಪ್ರತ್ಯೇಕಬುದ್ಧನಾದ ನಿನಗೆ ನಮಸ್ಕಾರವು, ಸ್ವಯಂಬುದ್ಧನಾದ ನಿನಗೆ ನಮಸ್ಕಾರವು.

**ಅಭಿನ್ನದಶಪೂರ್ವಿತ್ವಾತ್ಪ್ರಾಪ್ತಪೂಜಾಯ ತೇ ನಮಃ ।**
**ನಮಸ್ತೇ ಪೂರ್ವವಿದ್ಯಾನಾಂ ವಿಶ್ವಾಸಾಂ ಪಾರದೃಶ್ವನೇ ॥ ೬೯ ॥**

ಅಭಿನ್ನದಶಪೂರ್ವಶಾಸ್ತ್ರಗಳನ್ನು ತಿಳಿದಿರುವುದರಿಂದ ಪೂಜ್ಯತ್ವವನ್ನು ಹೊಂದಿದ ನಿನಗೆ ನಮಸ್ಕಾರವು. ಸಮಸ್ತವಾದ ಪೂರ್ವಶಾಸ್ತ್ರಗಳ ಪಾರವನ್ನು ಕಡಂತಹ ನಿನಗೆ ನಮಸ್ಕಾರವು.

**ದೀಪ್ತೋಗ್ರತಪಸೇ ತುಭ್ಯಂ ನಮಸ್ತಪ್ತಮಹಾತಪಃ ।**
**ನಮೋ ಘೋರಗುಣಬ್ರಹ್ಮಚಾರಿಣೇ ಘೋರತೇಜಸೇ ॥ ೭೦ ॥**

ದೀಪ್ತತಪಸ್ಸು, ಉಗ್ರತಪಸ್ಸು, ತಪ್ತತಪಸ್ಸು, ಮಹಾತಪಸ್ಸು ಇವುಗಳುಳ್ಳ ನಿನಗೆ ನಮಸ್ಕಾರವು. ಸಂಪೂರ್ಣ ಗುಣಸಹಿತವಾಗಿ ನಿರ್ದೋಷವಾದ ಬ್ರಹ್ಮಚರ್ಯವನ್ನು ಪರಿಪಾಲನೆಮಾಡುವ ಮಹಾತೇಜಸ್ವಿಯಾದ ನಿನಗೆ ನಮಸ್ಕಾರವು.

**ನಮಸ್ತೇ ವಿಕ್ರಿಯರ್ದ್ಧೀನಾಮಷ್ಟಧಾ ಸಿದ್ಧಿಮೀಯುಷೇ ।**
**ಆಮರ್ಷಕ್ಷ್ವೇಲವಾಗ್ವಿಪ್ರುಡ್ಜಲ್ಲಸರ್ವೌಷಧೇ ನಮಃ ॥ ೭೧ ॥**

ಅಣಿಮಾ ಮಹಿಮಾ ಗರಿಮಾ ಲಘಿಮಾ ಪ್ರಾಪ್ತಿ ಪ್ರಾಕಾಮ್ಯ ಈಶಿತ್ವ ವಶಿತ್ವ ಈ ಎಂಟು ಋದ್ಧಿಗಳನ್ನು ಹೊಂದಿದ ನಿನಗೆ ನಮಸ್ಕಾರವು. ಸಮಸ್ತ ರೋಗಗಳನ್ನು ನಾಶಮಾಡುವ ಆಮರ್ಷ (ವಮನ) ಕ್ಷ್ವೇಲ (ಕಫ) ವಾಗ್ವಿಪ್ರುಟ್ (ಮಾತನಾಡುವಾಗ ಬಾಯಿಯಿಂದ ಹೊರಟ ಬಿಂದು) ಜಲ್ಲ (ಮಲ) ಸರ್ವೌಷಧಿ ಇವುಗಳೆಂಬ ಋದ್ಧಿಗಳನ್ನು ಹೊಂದಿದ ನಿನಗೆ ನಮಸ್ಕಾರವು.

---

೧ ನೌಃ. ೨ ಮೋಕ್ಷಸ್ಥಾನಂ. ೩ ಅಧೀನಂ. ೪ ವಾಯುಕಾಂಚೀದಾಮಾನಃ; ಸ್ತ್ರೀಕಟ್ಯಾಂ ಮೇಖಲಾ ಕಾಂಚೀ ಸಪ್ತಕೀ ರಶನಾ ತಥಾ, ಇತ್ಯಮರಃ. ೫ ಮೂರ್ಧ್ನಾ ವಂದಿತುಂ ಶೀಲಮೇಷಾಂ ತೇ.

**ನಮೋಽಮೃತಮಧುಕ್ಷೀರಸರ್ಪಿರಾಸ್ರಾವಿಣೇಽಸ್ತು ತೇ ।**
**ನಮೋ ಮನೋವಚಃ ಕಾಯಬಲಿನಾಂ ತೇ ಬಲೀಯಸೇ ॥ ೭೨ ॥**

ಭೋಜನಪದಾರ್ಥದಲ್ಲಿ ವಿಷಬಿದ್ದರೂ ಅಮೃತವನ್ನಾಗಿ ಮಾಡುವ ಅಮೃತಸ್ರಾವಿಣೀ ತಪಃಶಕ್ತಿಯೂ, ಮಧುರಪದಾರ್ಥವಿಲ್ಲದಿದ್ದರೂ ಮಧುರವನ್ನಾಗಿ ಮಾಡುವ ಮಧುಸ್ರಾವಿಣೀಶಕ್ತಿಯೂ, ಭೋಜನಶಾಲೆಯಲ್ಲಿ ಹಾಲಿಲ್ಲದಿದ್ದರೆ ಹಾಲನ್ನುಂಟುಮಾಡುವ ಕ್ಷೀರಸ್ರಾವಿಣೀಶಕ್ತಿಯೂ ತುಪ್ಪವಿಲ್ಲದಿದ್ದರೆ ತುಪ್ಪವನ್ನುಂಟುಮಾಡುವ ಸರ್ಪಿಸ್ರಾವಿಣೀಶಕ್ತಿಯೂ ಇವುಗಳುಳ್ಳ ನಿನಗೆ ನಮಸ್ಕಾರವು. ಮನೋಬಲ ವಚನಬಲ ಕಾಯಬಲ ಇವುಗಳಿಂದ ಬಲಿಷ್ಠನಾದ ನಿನಗೆ ನಮಸ್ಕಾರವು.

**ಜಲಜಂಘಾಫಲಶ್ರೇಣೀತಂತುಪುಷ್ಪಾಂಬರಾಶ್ರಯಾತ್ ।**
**ಚಾರಣರ್ದ್ಧಿಜುಷೇ ತುಭ್ಯಂ ನಮೋ ಕ್ಷೀಣಮಹರ್ದ್ಧಯೇ ॥ ೭೩ ॥**

ಜಲಕಾಯಿಕಜೀವಗಳಿಗೆ ಬಾಧೆಯಿಲ್ಲದಂತೆ ನೀರಿನಮೇಲೆ ಇಚ್ಛಿತಸ್ಥಾನಕ್ಕೆ ಹೋಗುವ ಜಲಚಾರಣಋದ್ಧಿಯೂ ಪದ್ಮಾಸನ ಮುಂತಾದ ಆಸನಗಳಿಂದ ಬೇಕಾದ ಸ್ಥಾನಕ್ಕೆ ಹೋಗುವ ಜಂಘಾಚಾರಣಋದ್ಧಿಯೂ ಫಲವನ್ನಾಶ್ರಯಿಸಿ ಹೋಗುವ ಫಲಚಾರಣ ಋದ್ಧಿಯೂ ನೆಟ್ಟಗೆ ಹೋಗುವ ಶ್ರೇಣೀಚಾರಣ ಋದ್ಧಿಯೂ ತಂತು (ದಾರ) ವನ್ನಾಶ್ರಯಿಸಿ ಹೋಗುವ ತಂತುಚಾರಣ ಋದ್ಧಿಯೂ ಪುಷ್ಪವನ್ನಾಶ್ರಯಿಸಿ ಹೋಗುವ ಪುಷ್ಪಚಾರಣ ಋದ್ಧಿಯೂ ಆಕಾಶದಲ್ಲಿ ಸಂಚರಿಸುವ ಜೀವಗಳಿಗೆ ಬಾಧೆಯಿಲ್ಲದಂತೆ ಆಕಾಶದಲ್ಲಿ ಸಂಚಾರಮಾಡುವ ಅಂಬರಚಾರಣ ಋದ್ಧಿಯೂ ಮುನಿಗೆ ಆಹಾರವಾದಮೇಲೆ ಆ ಅಡಿಗೆಯಮನೆಯಲ್ಲಿ ಭೋಜನಸಾಮಗ್ರಿಯು ಕಡಿಮೆಯಾಗದಿರುವ ಅಕ್ಷೀಣಮಹಾನಸ ಋದ್ಧಿಯೂ, ಅದೇ ಸ್ಥಾನದಲ್ಲಿ ಚಕ್ರವರ್ತಿಯ ಸೈನ್ಯ ಬಂದರೂ ಹಿಡಿಸುವ ಶಕ್ತಿಯನ್ನುಂಟುಮಾಡುವ ಅಕ್ಷೀಣಮಹಾಲಯ ಋದ್ಧಿಯೂ ಇರುವ ನಿನಗೆ ನಮಸ್ಕಾರವು.

**ತ್ವಮೇವ ಪರಮೋ ಬಂಧುಸ್ತ್ವಮೇವ ಪರಮೋ ಗುರುಃ ।**
**ತ್ವಾಮೇವ ಸೇವಮಾನಾನಾಂ ಭವಂತಿ ಜ್ಞಾನಸಂಪದಃ ॥ ೭೪ ॥**

ನೀನೇ ಪರಮಬಂಧುವು. ನೀನೇ ಪರಮಗುರುವು. ನಿನ್ನನ್ನು ಭಜಿಸುವವರಿಗೇ ಜ್ಞಾನಸಂಪತ್ತುಗಳುಂಟಾಗುತ್ತವೆ.

**ತ್ವಯೈವ ಭಗವನ್ ವಿಶ್ವಾ ವಿಹಿತಾ ಧರ್ಮಸಂಹಿತಾ ।**
**ಅತ ಏವ ನಮಸ್ತುಭ್ಯಮಮೀ ಕುರ್ವಂತಿ ಯೋಗಿನಃ ॥ ೭೫ ॥**

ಭಗವಂತನೇ ! ನೀನೇ ಸಮಸ್ತವಾದ ಧರ್ಮಶಾಸ್ತ್ರವನ್ನು ನಿರೂಪಿಸಿದೆ. ಈ ಕಾರಣದಿಂದಲೇ ಈ ಮುನಿಗಳು ನಿನಗೆ ನಮಸ್ಕಾರವನ್ನು ಮಾಡುತ್ತಾರೆ.

**ತ್ವತ್ತ ಏವ ಪರಂ ಶ್ರೇಯೋ ಮನ್ಯಮಾನಾಸ್ತತೋ ವಯಮ್ ।**
**ತವ ಪಾದಾಂಘ್ರಿಪಚ್ಛಾಯಾಂ ತ್ವಯ್ಯಾಸ್ತಿಕ್ಯಾದುಪಾಸ್ಮಹೇ ॥ ೭೬ ॥**

ಉತ್ತಮವಾದ ಶ್ರೇಯಸ್ಸಿನ ಪ್ರಾಪ್ತಿಯು ನಿನ್ನಿಂದಲೇ ಉಂಟಾದುವೆಂಬುದಾಗಿ ನಾವು ತಿಳಿದು ನಿನ್ನಲ್ಲಿ ಆಸ್ತಿಕ್ಯಬುದ್ಧಿಯಿಂದ ನಿನ್ನ ಪಾದವೆಂಬ ಮರದ ನೆರಳನ್ನು ಸೇವಿಸುತ್ತೇವೆ.

**ವಾಗ್ಗುಪ್ತೇಸ್ತ್ವತ್ಸ್ತುತೌ ಹಾನಿರ್ಮನೋಗುಪ್ತೇಸ್ತವಸ್ಮೃತೌ ।**
**ಕಾಯಗುಪ್ತೇಃ ಪ್ರಣಾಮೇ ತೇ ಕಾಮಮಸ್ತು ಸದಾಪಿ ನಃ ॥ ೭೭ ॥**

ನಿನ್ನನ್ನು ಸ್ತೋತ್ರಮಾಡುವುದರಿಂದ ವಾಗ್ಗುಪ್ತಿಯ ಹಾನಿಯೂ, ಸ್ಮರಿಸುವುದರಿಂದ ಮನೋಗುಪ್ತಿಯ ನಾಶವೂ, ನಮಸ್ಕರಿಸುವುದರಿಂದ ಕಾಯಗುಪ್ತಿಯ ಹಾನಿಯೂ ನಮಗೆ ಯಾವಾಗಲೂ ಯಥೇಚ್ಛವಾಗಿ ಆಗುತ್ತಿರಲಿ. ಹೀಗೆ ಹಾನಿಯಾದರೂ ಪವಿತ್ರಾತ್ಮರಾದ ಗಣಧರರನ್ನು ಭಜಿಸುವುದರಿಂದ ಪುಣ್ಯವೇ ಹೊರತು ಪಾಪವಿಲ್ಲವೆಂದು ಭಾವವು.

**ಸ್ತುತ್ವೇತಿ ಸ್ತುತಿಭಿಃ ಸ್ತುತ್ಯಂ ಭವಂತಂ ಭುವನಾಧಿಕಮ್ ।**
**ಪುರಾಣಶ್ರುತಿಮೇವೈನಾಂ ತತ್ಫಲಂ ಪ್ರಾಪ್ತಯಾಮಹೇ ॥ ೭೮ ॥**

ಲೋಕದಲ್ಲಿ ಶ್ರೇಷ್ಠನೂ ಸ್ತೋತ್ರಮಾಡುವುದಕ್ಕೆ ಯೋಗ್ಯನೂ ಆದ ನಿನ್ನನ್ನು ಹಿಂದೆ ಹೇಳಿದ ರೀತಿಯಾಗಿ ಸ್ತುತಿಗಳಿಂದ ಸ್ತೋತ್ರಮಾಡಿ, ತ್ರಿಷಷ್ಟಿಶಲಾಕಾಪುರುಷರ ಪುರಾಣಶ್ರವಣವನ್ನೇ ನಿನ್ನನ್ನು ಸ್ತೋತ್ರಮಾಡಿದುದಕ್ಕೆ ಪ್ರತಿಫಲವನ್ನಾಗಿ ಹೊಂದುವೆವು.

**ಪುರಾಣಶ್ರುತಿತೋ ಧರ್ಮೋ ಯೋಽಸ್ಮಾಕಮಭಿಸಂಸ್ಕೃತಃ ।**
**ಪುರಾಣಕವಿತಾಮೇವ ತಸ್ಮಾದಾಶಾಸ್ಮಹೇ ವಯಮ್ ॥ ೭೯ ॥**

ಪುರಾಣವನ್ನು ಕೇಳುವುದರಿಂದ ನಮಗೆ ಪ್ರಾಪ್ತವಾದ ಧರ್ಮ-ಪುಣ್ಯದಿಂದ ನಮಗೂ ಪುರಾಣವನ್ನು ಮಾಡುವ ಕವಿತಾಶಕ್ತಿಯು ಬರಲೆಂದು ಇಚ್ಛಿಸುತ್ತೇವೆ.

**ತ್ವತ್ಪಾದಾರಾಧನಾತ್ಪುಣ್ಯಂ ಯದಸ್ಮಾಭಿರುಪಾರ್ಜಿತಮ್ ।**
**[೧]ತವೇವ ತೇನ ಭೂಯಾನ್ನಃ ಪರಾರ್ಥಾ ಸಂಪದೂರ್ಜಿತಾ ॥ ೮೦ ॥**

ನಾವು ನಿನ್ನ ಪಾದಸೇವೆಯಿಂದ ಸಂಪಾದಿಸಿದ ಪುಣ್ಯದಿಂದ ನಮಗೂ ನಿನ್ನಂತೆ ಪರಪ್ರಯೋಜನಾರ್ಥವಾದ ಉತ್ಕೃಷ್ಟ ಜ್ಞಾನಸಂಪತ್ತು ಉಂಟಾಗಲಿ. ಆ ಪುಣ್ಯದಿಂದ ನಮಗೆ ಪುರಾಣಶ್ರವಣರೂಪವಾದ ಫಲವೇ ಉಂಟಾಗಲಿ. ಮಹಾಪುರುಷರ ಪುರಾಣಶ್ರವಣದಿಂದ ಉತ್ಕೃಷ್ಟಸಂಪತ್ತು ಉಂಟಾಗುತ್ತದೆಂದು ಎರಡನೆಯ ಅರ್ಥವು.

**ತ್ವತ್ಪ್ರಸಾದಾದಿಯಂ ದೇವ ಸಫಲಾ ಪ್ರಾರ್ಥನಾಸ್ತು ನಃ ।**
**ಸಾರ್ಧಂ ರಾಜರ್ಷಿಣಾನೇನ ಶ್ರೋತೄನನುಗೃಹಾಣ ನಃ ॥ ೮೧ ॥**

ದೇವನೇ ! ನಿನ್ನ ಅನುಗ್ರಹದಿಂದ ನಮ್ಮ ಈ ಹಿಂದೆ ಹೇಳಿದ ಪ್ರಾರ್ಥನೆಯು ಸಫಲವಾಗಲಿ. ಈ ರಾಜರ್ಷಿಯಾದ ಶ್ರೇಣಿಕನೊಡನೆ ಶ್ರೋತೃಗಳಾಗಿರುವ ನಮ್ಮನ್ನು ಅನುಗ್ರಹಿಸು.

**ಇತ್ಯುಚ್ಚೈಃ ಸ್ತೋತ್ರಸಂಪಾಠೈಸ್ತತ್ಕ್ಷಣಂ ಪ್ರವಿಜೃಂಭಿತಃ ।**
**ಪುಣ್ಯೋ ಮುನಿಸಮಾಜೇಽಸ್ಮಿನ್ಮಹಾನ್ಕಲಕಲೋಽಭವತ್ ॥ ೮೨ ॥**

ಈ ಪ್ರಕಾರವಾಗಿ ಗಟ್ಟಿಯಾದ ಸ್ತೋತ್ರಪಾಠಗಳಿಂದ ಈ ಮುನಿಗಳ ಗುಂಪಿನಲ್ಲಿ ಆ ಸಮಯದಲ್ಲಿ ಪುಣ್ಯರೂಪವಾದ ದೊಡ್ಡ ಕಲಕಲಧ್ವನಿಯು ಉಂಟಾಗಿದ್ದಿತು.

**ಇತ್ಥಂ ಸ್ತುವದ್ಭಿರೋ[೨]ಘೇನ ಮುನಿವೃಂದಾರಕೈಸ್ತದಾ ।**
**ಪ್ರಸಾದಿತೋ ಗಣೇಂದ್ರೋಽಭೂದ್ಭಕ್ತಿಗ್ರಾಹ್ಯಾ ಹಿ ಯೋಗಿನಃ ॥ ೮೩ ॥**

ಹೀಗೆ ಗುಂಪು ಕೂಡಿ ಸ್ತೋತ್ರಮಾಡುವ ಮುನಿಶ್ರೇಷ್ಠರಿಂದ ಗಣಧರರು ಪ್ರಸನ್ನಗೊಳಿಸಲ್ಪಟ್ಟರು. ಯೋಗಿಗಳು ಭಕ್ತಿಯಿಂದಲ್ಲವೆ ವಶಮಾಡಿಕೊಳ್ಳವುದಕ್ಕೆ ಯೋಗ್ಯರು ?

**ತದಾ ಪ್ರಶಾಂತಗಂಭೀರಂ ಸ್ತುತ್ವಾ ಮುನಿಭಿರ[೩]ರ್ಥಿತಃ ।**
**ಮನೋವ್ಯಾಪಾರಯಾಮಾಸ ಗೌತಮಸ್ತದನುಗ್ರಹೇ ॥ ೮೪ ॥**

೧ ತದೇವೇತ್ಯಪಿ ಪಾಠಃ. ೨ ಸಮುದಾಯೇನ ಪ್ರವಾಹರೂಪೇಣ ವಾ. ೩ ಪ್ರಾರ್ಥಿತಃ.

ಆಗ ಶಾಂತವಾಗಿಯೂ ಗಂಭೀರವಾಗಿಯೂ ಸ್ತೋತ್ರಮಾಡಿ ಮುನಿಗಳು ಪ್ರಾರ್ಥಿಸಿಕೊಳ್ಳಲಾಗಿ ಗೌತಮಗಣಧರರು ಅವರನ್ನು ಅನುಗ್ರಹಿಸುವುದಕ್ಕೆ ಮನಸ್ಸುಮಾಡಿದರು.

**ತತಃ ಪ್ರಶಾಂತಸಂಜಲ್ಪೇ ಪ್ರವ್ಯಕ್ತಕರಕುಡ್ಮಲೇ ।**
**ಶುಶ್ರೂಷಾ[೧]ವಹಿತೇ ಸಾಧುಸಮಾಜೇ ನಿ[೨]ಭೃತಂ ಸ್ಥಿತೇ ॥ ೮೫ ॥**

ಆಮೇಲೆ ತಾನು ಹೇಳಿಕೊಳ್ಳುವುದನ್ನು ನಿಲ್ಲಿಸಿ ಮುನಿಗಳ ಗುಂಪು ಕೈಗಳನ್ನು ಮುಗಿದು ನಿಶ್ಚಲವಾಗಿ ಕೇಳಬೇಕೆಂಬ ಇಚ್ಛೆಯಿಂದ ಸಾವಧಾನವಾಗಿರುತ್ತಿರಲು

**ವಾಙ್ಮಲಾನಾಮಶೇಷಾಣಾಮಪಾಯಾದತಿನಿರ್ಮಲಾಮ್ ।**
**ವಾಗ್ದೇವೀಂ ದಶನಜ್ಯೋತ್ಸ್ನಾ ವ್ಯಾಜೇನ ಸ್ಫುಟಯನ್ನಿವ ॥ ೮೬ ॥**

ಭಗವಾನ್ ಗೌತಮಸ್ವಾಮಿಯು ಶ್ರೋತೃಗಳನ್ನು ಸಂಬೋಧಿಸಿ, ಸಮಸ್ತ ವಾಗ್ದೋಷಗಳ ನಾಶದಿಂದ ಅತ್ಯಂತ ನಿರ್ಮಲವಾದ ವಾಗ್ದೇವಿ(ಸರಸ್ವತಿ)ಯನ್ನು, ತಮ್ಮ ಹಲ್ಲುಗಳ ಕಾಂತಿಯ ನೆಪದಿಂದ ಹೊರಪಡಿಸುತ್ತಾರೋ ಎಂಬಂತೆಯೂ

**ಸುಭಾಷಿತಮಹಾರತ್ನಪ್ರಸಾರಮಿವ ದರ್ಶಯನ್ ।**
**ಯಥಾಕಾಮಂ[೩]ಜಿಘೃಕ್ಷೂಣಾಂ ಭಕ್ತಿಮೂಲ್ಯೇನ ಯೋಗಿನಾಮ್॥ ೮೭ ॥**

ಭಕ್ತಿಯೆಂಬ ಮೂಲ್ಯದಿಂದ ಇಚ್ಛಾನುಸಾರವಾಗಿ ತೆಗೆದುಕೊಳ್ಳಲಿಚ್ಛಿಸುವ ಯೋಗಿಗಳಿಗೆ ವಿಸ್ತಾರವಾದ ಸುಭಾಷಿತಗಳೆಂಬ ರತ್ನಗಳನ್ನು ತೋರಿಸುತ್ತಾರೋ ಎಂಬಂತೆಯೂ

**ಲಸದ್ದಶನದೀಪ್ರಾಂಶುಪ್ರಸೂನೈರಾಕಿರನ್ಸದಃ ।**
**ಸರಸ್ವತೀಪ್ರವೇಶಾಯ [೪]ಪೂರ್ವರಂಗಮಿವಾಚರನ್ ॥ ೮೮ ॥**

ಶೋಭಿಸುತ್ತಿರುವ ಹಲ್ಲುಗಳ ಪ್ರಕಾಶಮಾನವಾದ ಕಿರಣಗಳೆಂಬ ಹೂವುಗಳನ್ನು ಸಭೆಗೆ ಎರಚಿ ಸರಸ್ವತಿ(ಯೆಂಬ ನಟಿ)ಯ ಪ್ರವೇಶಕ್ಕೋಸ್ಕರ ಪೂರ್ವರಂಗವನ್ನು ಮಾಡುತ್ತಿದ್ದಾರೋ ಎಂಬಂತೆಯೂ

**ಮನಃಪ್ರಸಾದಮಭಿತೋ ವಿಭಜದ್ಭಿರಿವಾಯತೈಃ ।**
**ಪ್ರಸನ್ನೈರ್ವೀಕ್ಷಿತೈಃ ಕೃತ್ಸ್ನಾಂ ಸಭಾಂ ಪ್ರಕ್ಷಾಲಯನ್ನಿವ ॥ ೮೯ ॥**

ಸುತ್ತಲೂ ಮನಃಪ್ರಸನ್ನತೆ(ಸಂತೋಷ)ಯನ್ನುಂಟುಮಾಡುತ್ತವೆಯೋ ಎಂಬಂತಿರುವ ನಿರ್ಮಲವೂ ದೀರ್ಘವೂ ಆದ ನೋಟಗಳಿಂದ ಸಭೆಯನ್ನೆಲ್ಲ ತೊಳೆಯುತ್ತಾರೋ ಎಂಬಂತೆಯೂ

**ತಪೋನುಭಾವಸಂಜಾತಮಧ್ಯಾಸೀನೋಽಪಿ ವಿಷ್ಟರಮ್ ।**
**ಜಗತಾಮುಪರೀವೋಚ್ಚೈರ್ಮಹಿಮ್ನಾ ಘಟಿತಸ್ಥಿತಿಃ ॥ ೯೦ ॥**

ತಪಸ್ಸಿನ ಮಹಿಮೆಯಿಂದ ಪ್ರಾಪ್ತವಾದ ಸಿಂಹಾಸನದಲ್ಲಿ ಕುಳಿತವರಾಗಿದ್ದರೂ ಅತಿಶಯವಾದ ತಮ್ಮ ಮಹಿಮೆಯಿಂದ ಲೋಕದ ಅಗ್ರಭಾಗದಲ್ಲಿ ಕುಳಿತಿದ್ದಾರೋ ಎಂಬಂತೆಯೂ

**ಸರಸ್ವತೀ ಪರಿಕ್ಲೇಶಮನಿಚ್ಛನ್ನಿವ ನಾಧಿಕಮ್ ।**
**ತೀವ್ರಯನ್ಕರಣಸ್ಪಂದಮಭಿನ್ನಮುಖಸೌಷ್ಠವಃ ॥ ೯೧ ॥**

ಉಪದೇಶಮಾಡುವ ಸಮಯದಲ್ಲಿ ಸರಸ್ವತಿಯನ್ನು ಕ್ಲೇಶಪಡಿಸುವುದಕ್ಕೆ ಇಚ್ಛೆಪಡದವರಂತೆಯೂ, ಇಂದ್ರಿಯಗಳನ್ನು ಹೆಚ್ಚಾಗಿ ಚಲನೆಮಾಡದಿರುವವರಾಗಿಯೂ, ಸುಂದರತೆಯು ಕುಂದದಿರುವ ಮುಖವುಳ್ಳವರಾಗಿಯೂ

೧ ಅವಧಾನಯುಕ್ತೇ. ೨ ನಿಶ್ಚಲಂ. ೩ ಗೃಹೀತುಮಿಚ್ಛೂನಾಂ ೪ ರಂಗಃ ಸ್ಥಾನ್ನರ್ತನಸ್ಥಾನಮಿತ್ಯಭಿಧಾನಾತ್ ಸರಸ್ವತೀನಟ್ಯಾ ನೃತ್ಯಾರಂಭೇ ಯೋ ರಂಗಃ ಸ ಪೂರ್ವರಂಗಃ.

**ನ ಸ್ವಿದ್ಯನ್ನ ಪರಿಶ್ರಾಮ್ಯನ್ನೋ ತ್ರಸ್ಯನ್ನ ಪರಿಸ್ಖಲನ್ ।**
**ಸರಸ್ವತೀಮತಿಪ್ರೌಢಾಮನಾಯಾಸೇನ ಯೋಜಯನ್ ॥ ೯೨ ॥**

ಬೆವರದಿರುವವರಾಗಿಯೂ, ಆಯಾಸಪಡದಿರುವವರಾಗಿಯೂ ನಿರ್ಭಯರಾಗಿಯೂ ಶಿಥಿಲತೆಯನ್ನು ಹೊಂದದವರಾಗಿಯೂ ಅತ್ಯಂತ ಪ್ರೌಢವಾದ ಸರಸ್ವತಿಯನ್ನು ಆಯಾಸವಿಲ್ಲದೆ ಪ್ರಕಾಶಪಡಿಸುವವರಾಗಿಯೂ

**ಸಮಮೃಜ್ವಾಯತಸ್ಥಾನಮಾಸ್ಥಾಯ ರಚಿತಾಸನಃ ।**
**ಪಲ್ಯಂಕೇನ ಪರಾಂ ಕೋಟಿಂ ವೈರಾಗ್ಯಸ್ಯೇವ ರೂಪಯನ್ ॥ ೯೩ ॥**

ಸಮಾನವೂ ವಕ್ರವಲ್ಲದುದೂ ವಿಶಾಲವೂ ಆದ ಸ್ಥಾನದಲ್ಲಿ ಪಲ್ಯಂಕಾಸನದಿಂದ ಕುಳಿತು ವೈರಾಗ್ಯದ ಅಂತಿಮಾವಸ್ಥೆಯನ್ನು ತೋರಿಸುತ್ತಾರೋ ಎಂಬಂತೆಯೂ

**ಕರಂ ವಾಮಂ ಸ್ವಪರ್ಯಂಕೇ ನಿಧಾಯೋತ್ತಾನಿತಂ ಶನೈಃ ।**
**ದೇಶನಾಹಸ್ತಮುತ್ಕ್ಷಿಪ್ಯ ಮಾರ್ದವಂ ನಾಟಯನ್ನಿವ ॥ ೯೪ ॥**

ಎಡದ ಕೈಯನ್ನು ತಮ್ಮ ಪರ್ಯಂಕ (ಮಡಿಚಿದ ಎಡಗಾಲು) ದಲ್ಲಿರಿಸಿ ಮೇಲುಮುಖವಾದ ಬಲಗೈಯನ್ನು ಮೆಲ್ಲನೆ ಎತ್ತಿ ಮಾರ್ದವಧರ್ಮವನ್ನು ಕುಣಿಸುತ್ತಿದ್ದಾರೋ ಎಂಬಂತೆಯೂ

**ವ್ಯಾಜಹಾರಾತಿಗಂಭೀರಮಧುರೋದಾರಯಾ ಗಿರಾ ।**
**ಭಗವಾನ್ ಗೌತಮಸ್ವಾಮೀ ಶ್ರೋತೄನ್ಸಂಬೋಧಯನ್ನಿತಿ ॥ ೯೫ ॥**

ಅತ್ಯಂತ ಗಂಭೀರವೂ ಮಧುರವೂ ಉದಾರ(ಧಾರಾಳ)ವೂ ಆದ ವಾಣಿಯಿಂದ ಶ್ರೋತೃಗಳಿಗೆ ಧರ್ಮೋಪದೇಶವನ್ನು ಹೇಳಿದರು. (೮೫ ನೇಯ ಶ್ಲೋಕದಿಂದ ೯೫ ನೇಯ ಶ್ಲೋಕದವರೆಗೆ ಒಂದೇ ಅನ್ವಯ) ಏಕಾದಶಭಿಃ ಕುಲಕಂ.

**ಶ್ರುತಂ ಮಯಾ ಶ್ರುತಸ್ಕಂಧಾದಾಯುಷ್ಮಂತೋ ಮಹಾಧಿಯಃ ।**
**ನಿಬೋಧತ ಪುರಾಣಾ[೧]ರ್ಥಂ ಯಥಾವತ್ಕಥಯಾಮಿ ವಃ ॥ ೯೬ ॥**

''ಮಹಾಬುದ್ಧಿಶಾಲಿಗಳಾದ ಆಯುಷ್ಮಂತರೇ ! ಶ್ರುತಸ್ಕಂಧ(ಶಾಸ್ತ್ರ)ದಿಂದ ನಾನು ಕೇಳಿದ ಪುರಾಣದ ಅರ್ಥವನ್ನು ಇದ್ದಹಾಗೆ ನಿಮಗೆ ಹೇಳುತ್ತೇನೆ. ಚೆನ್ನಾಗಿ ತಿಳಿದುಕೊಳ್ಳಿರಿ.

**ಯತ್ಪ್ರಜಾಪತಯೇ ಬ್ರಹ್ಮಾ ಭರತಾಯಾದಿತೀರ್ಥಕೃತ್ ॥**
**ಪ್ರೋವಾಚ ತದಹಂ ತೇಽದ್ಯ ವಕ್ಷ್ಯೇ ಶ್ರೇಣಿಕ ಭೋ ಶೃಣು ॥ ೯೭ ॥**

ಶ್ರೇಣಿಕನೆ ! ಪ್ರಥಮತೀರ್ಥಂಕರರಾದ ಆದಿಬ್ರಹ್ಮರು ಪ್ರಜಾಪಾಲಕನಾದ ಭರತಚಕ್ರವರ್ತಿಗೆ ಹೇಳಿದ್ದ ಪುರಾಣವನ್ನು ಈದಿನ ನಿನಗೆ ಹೇಳುವೆನು. ಕೇಳು.

**ಮಹಾಧಿಕಾರಾಶ್ಚತ್ವಾರಃ ಶ್ರುತಸ್ಕಂಧಸ್ಯ ವರ್ಣಿತಾಃ ।**
**ತೇಷಾಮಾದ್ಯೋನುಯೋಗೋಽಯಂ [೨]ಸತಾಂ ಸಚ್ಚರಿತಾಶ್ರಯಃ ॥**

ಶ್ರುತಸ್ಕಂಧ-ಶಾಸ್ತ್ರದಲ್ಲಿ ನಾಲ್ಕು ಮಹಾಧಿಕಾರಗಳು ವರ್ಣಿಸಲ್ಪಟ್ಟಿವೆ; ಆ ನಾಲ್ಕರಲ್ಲಿ ತೀರ್ಥಂಕರರು ಮೊದಲಾದ ಮಹಾಪುರುಷರ ಚರಿತ್ರೆಯು ಪ್ರಥಮಾನುಯೋಗವೆನಿಸುತ್ತದೆ.

**ದ್ವಿತೀಯಃ ಕರಣಾದಿಃ ಸ್ಯಾದನುಯೋಗಃ ಸ ಯತ್ರ ವೈ ।**
**ತ್ರೈಲೋಕ್ಯಕ್ಷೇತ್ರಸಂಖ್ಯಾನಂ [೩]ಕುಲಪತ್ರೇಽಧಿರೋಪಿತಮ್ ॥ ೯೯ ॥**

೧ ಪುರಾಣಂ ಮೇ ಇತ್ಯಪಿ ಪಾಠಾಂತರಂ. ಅಹಮಿತ್ಯರ್ಥೇ ಮೇ ಇತ್ಯವ್ಯಯಂ. ೨ ತೀರ್ಥಂಕರಾದೀನಾಂ. ೩ ಸಂತಾನಕ್ರಮಾದಾಗತಂ ತಾಮ್ರಮಯಾದಿಪತ್ರಂ ಕುಲಪತ್ರಂ ತದ್ವತ್ ಸ್ಥಿತಂ ತಸ್ಮಿನ್.

ಕುಲಕ್ರಮದಿಂದ ಬಂದ ತಾಮ್ರಪತ್ರ ಮೊದಲಾದ ಪತ್ರಗಳಲ್ಲಿ ವಂಶಾವಳಿಯನ್ನು ಬರೆಯುವಂತೆ, ಯಾವ ಅನುಯೋಗದಲ್ಲಿ ಮೂರುಲೋಕದ ಕ್ಷೇತ್ರಪರಿಮಾಣವು ವರ್ಣಿಸಲ್ಪಟ್ಟಿದೆಯೋ ಅದು ಎರಡನೇಯದಾದ ಕರಣಾನುಯೋಗವೆನಿಸುತ್ತದೆ.

**ಚರಣಾದಿಸ್ತೃತೀಯಃ ಸ್ಯಾದನುಯೋಗೋ ಜಿನೋದಿತಃ ।**
**ಯತ್ರ ಚರ್ಯಾವಿಧಾನಸ್ಯ ಪರಾ ಶುದ್ಧಿರುದಾಹೃತಾ ॥ ೧೦೦ ॥**

ಮುನಿಗಳ ಮತ್ತು ಶ್ರಾವಕರ ಚಾರಿತ್ರದ ಪರಮಶುದ್ಧಿಯು ಯಾವುದರಲ್ಲಿ ವರ್ಣಿಸಲ್ಪಟ್ಟಿದೆಯೋ ಅದು ಜಿನೇಶ್ವರನಿಂದ ಹೇಳಲ್ಪಟ್ಟ ಮೂರನೆಯ ಚರಣಾನುಯೋಗವೆನಿಸುವುದು.

**ತುರ್ಯೋ ದ್ರವ್ಯಾನುಯೋಗಸ್ತು ದ್ರವ್ಯಾಣಾಂ ಯತ್ರ ನಿರ್ಣಯಃ ।**
**ಪ್ರಮಾಣನಯನಿಕ್ಷೇಪೈಃ[1]ಸದಾದ್ಯೈಶ್ಚ[2]ಕಿಮಾದಿಭಿಃ ॥ ೧೦೧ ॥**

ಪ್ರಮಾಣನಯನಿಕ್ಷೇಪಗಳಿಂದಲೂ, ಸತ್, ಸಂಖ್ಯಾ, ಕ್ಷೇತ್ರ, ಸ್ಪರ್ಶನ, ಕಾಲ, ಅಂತರ, ಭಾವ, ಅಲ್ಪಬಹುತ್ವ ಇವುಗಳಿಂದಲೂ ನಿರ್ದೇಶ, ಸ್ವಾಮಿತ್ವ, ಸಾಧನ, ಅಧಿಕರಣ, ಸ್ಥಿತಿ, ವಿಧಾನ ಇವುಗಳಿಂದಲೂ ಜೀವಾದಿದ್ರವ್ಯಗಳ ನಿರ್ಣಯವು ಯಾವ ಅನುಯೋಗದಲ್ಲಿದೆಯೋ ಅದಕ್ಕೆ ದ್ರವ್ಯಾನುಯೋಗವೆಂದು ಹೆಸರು.

**ಆನುಪೂರ್ವ್ಯಾದಿಭೇದೇನ ಪಂಚಧೋಪಕ್ರಮೋ ಮತಃ ।**
**ಸ ಪುರಾಣಾವತಾರೇಽಸ್ಮಿನ್ಯೋಜನೀಯೋ ಯಥಾಗಮಮ್ ॥ ೧೦೨ ॥**

ಆನುಪೂರ್ವಿ ಮೊದಲಾದ ಭೇದದಿಂದ ಉಪಕ್ರಮವು ಐದು ಪ್ರಕಾರವಾಗಿ ಸಮ್ಮತವಾಗಿದೆ. ಅದನ್ನು ಈ ಪುರಾಣದ ಆರಂಭದಲ್ಲಿ ಆಗಮಾನುಸಾರವಾಗಿ ಸೇರಿಸಿಕೊಳ್ಳಬೇಕು.

**ಪ್ರಕೃತಸ್ಯಾರ್ಥತತ್ತ್ವಸ್ಯ ಶ್ರೋತೃಬುದ್ಧೌ ಸಮರ್ಪಣಮ್ ।**
**ಉಪಕ್ರಮೋಸೌ ವಿಜ್ಞೇಯಸ್ತಥೋಪೋದ್ಘಾತ ಇತ್ಯಪಿ ॥ ೧೦೩ ॥**

ತಾನು ಹೇಳಲಾರಂಭಿಸಿದ ಪದಾರ್ಥಸ್ವರೂಪವನ್ನು ಕೇಳುವವರ ಬುದ್ಧಿಯಲ್ಲಿ ಸಮರ್ಪಿಸು(ತಿಳಿ)ವುದು ಉಪಕ್ರಮವೆಂದು ತಿಳಿಯಬೇಕು. ಇದಕ್ಕೆ ಉಪೋದ್ಘಾತವೆಂತಲೂ ಹೆಸರು.

**ಆನುಪೂರ್ವೀ ತಥಾ ನಾಮ ಪ್ರಮಾಣಂ ಸಾಭಿಧೇಯಕಮ್ ।**
**ಅರ್ಥಾಧಿಕಾರಶ್ಚೇತ್ಯೇವಂ ಪಂಚೈತೇ ಸ್ಯುರುಪಕ್ರಮಾಃ ॥ ೧೦೪ ॥**

ಉಪಕ್ರಮವು ಆನುಪೂರ್ವೀ, ನಾಮ, ಪ್ರಮಾಣ, ಅಭಿಧೇಯ, ಅರ್ಥಾಧಿಕಾರ ಹೀಗೆ ಐದು ಭೇದವುಳ್ಳದಾಗಿದೆ.

**ಪೂರ್ವಾನುಪೂರ್ವ್ಯಾ ಪ್ರಥಮಶ್ಚರಮೋಽಯಂ ವಿಲೋಮತಃ ।**
**ಯಥಾ ತಥಾನುಪೂರ್ವ್ಯಾ ಚ ಯಾಂ ಕಾಂ ಚಿದ್ಗಣನಾಂ ಶ್ರಿತಃ॥ ೧೦೫ ॥**

ನಾಲ್ಕು ಅನುಯೋಗಗಳನ್ನು ಕ್ರಮವಾಗಿರಿಸಿದರೆ ಪ್ರಥಮಾನುಯೋಗ, ಕರಣಾನುಯೋಗ, ಚರಣಾನುಯೋಗ, ದ್ರವ್ಯಾನುಯೋಗಗಳೆಂದಾಗುತ್ತವೆ. ವ್ಯತಿಕ್ರಮ (ಹಿಂದು ಮುಂದು) ವಾಗಿಟ್ಟರೆ, ದ್ರವ್ಯಾನುಯೋಗ, ಚರಣಾನುಯೋಗ, ಕರಣಾನುಯೋಗ, ಪ್ರಥಮಾನುಯೋಗಗಳೆಂದಾಗುತ್ತವೆ. ಈ ಎರಡು ಸಂಖ್ಯಾಕ್ರಮಗಳಲ್ಲಿ ಯಾವುದಾದರೊಂದು ಕ್ರಮವನ್ನಾಶ್ರಯಿಸಿದ ಗಣನಾಕ್ರಮವು ಆನುಪೂರ್ವಿಯೆನಿಸುವುದು.

**ಶ್ರುತಸ್ಕಂಧಾನುಯೋಗಾನಾಂ ಚತುರ್ಣಾಂ ಪ್ರಥಮೋ ಽತಃ ।**
**ತತೋಽನುಯೋಗಂ ಪ್ರಥಮಂ ಪ್ರಾಹುರನ್ವರ್ಥಸಂಜ್ಞಯಾ ॥ ೧೦೬ ॥**

೧ ಸತ್ಸಂಖ್ಯಾಕ್ಷೇತ್ರಸ್ಪರ್ಶನಕಾಲಾದಿಭಿಃ. ೨ ನಿರ್ದೇಶಸ್ವಾಮಿತ್ವಸಾಧನಾದಿಭಿಃ.

ಶಾಸ್ತ್ರದ ನಾಲ್ಕು ಅನುಯೋಗಗಳಲ್ಲಿ ಇದು (ಈ ಪುರಾಣವು) ಮೊದಲನೆಯದಾಗಿರುವುದರಿಂದ ಪ್ರಥಮಾನುಯೋಗವೆಂದು ಹೇಳುವುದು ಸಾರ್ಥಕವಾಗಿದೆ. ಇದರಿಂದ ನಾಮವನ್ನು ಹೇಳಿದಂತಾಯಿತು.

**ಪ್ರಮಾಣಮಧುನಾ ತಸ್ಯ ವಕ್ಷ್ಯತೇ ಗ್ರಂಥತೋಽರ್ಥತಃ ।**
**ಗ್ರಂಥಗೌರವಭೀರೂಣಾಂ ಶ್ರೋತೄಣಾಮನುರೋಧತಃ ॥ ೧೦೭ ॥**

ಗ್ರಂಥವು ಬಹಳ ದೊಡ್ಡದೆಂದು ಭಯಪಡತಕ್ಕ ಶ್ರೋತೃಗಳ ಅನುರೋಧದಿಂದ ಗ್ರಂಥರೂಪವಾಗಿಯೂ ಅರ್ಥರೂಪವಾಗಿಯೂ ಈಗ ಈ ಪ್ರಥಮಾನುಯೋಗದ ಪ್ರಮಾಣವನ್ನು ಹೇಳುವೆವು.

**ಸೋಽರ್ಥತೋಽಪರಿಮೇಯೋಽಪಿ ಸಂಖ್ಯೇಯಃ ಶಬ್ದತೋ ಮತಃ ।**
**ಕೃತ್ಸ್ನಸ್ಯ ವಾಙ್ಮಯಸ್ಯಾಸ್ಯ ಸಂಖ್ಯೇಯತ್ವಾನತಿಕ್ರಮಾತ್ ॥ ೧೦೮ ॥**

ಆ ಪ್ರಥಮಾನುಯೋಗವು ಅರ್ಥದಿಂದ ಅಪರಿಮಿತವಾಗಿದ್ದರೂ ಶಬ್ದದ ಅಪೇಕ್ಷೆಯಿಂದ, ಸಮಸ್ತವಾದ ಶಾಸ್ತ್ರವು ಸಂಖ್ಯೇಯತ್ವವನ್ನು ಮೀರದಿರುವುದರಿಂದ (ಸಂಖ್ಯೆಗೊಳಪಟ್ಟಿರುವುದರಿಂದ) ಸಂಖ್ಯೇಯವಾಗಿದೆ.

**ದ್ವೇ ಲಕ್ಷೇ ಪಂಚಪಂಚಾಶತ್ಸಹಸ್ರಾಣಿ ಚತುಃಶತಮ್ ।**
**ಚತ್ವಾರಿಂಶತ್ತಥಾ ದ್ವೇ ಚ ಕೋಟ್ಯೋಽಸ್ಮಿನ್ ಗ್ರಂಥಸಂಖ್ಯಯಾ॥ ೧೦೯ ॥**

**ಏಕತ್ರಿಂಶಚ್ಚ ಲಕ್ಷಾಃ ಸ್ಯುಃ ಶತಾನಾಂ ಪಂಚಸಪ್ತತಿಃ ।**
**ಗ್ರಂಥಸಂಖ್ಯಾ ಚ ವಿಜ್ಞೇಯಾ ಶ್ಲೋಕೇನಾನುಷ್ಟುಭೇನ ಹಿ ॥ ೧೧೦ ॥**

ಈ ಪ್ರಥಮಾನುಯೋಗದಲ್ಲಿ ಅನುಷ್ಟುಪ್ ಶ್ಲೋಕದಿಂದ ಗ್ರಂಥಸಂಖ್ಯೆಯು, ಎರಡುಲಕ್ಷಕೋಟಿ ಐವತ್ತೈದುಸಾವಿರ ಕೋಟಿ ನಾಲ್ಕುನೂರ ನಲ್ವತ್ತೆರಡು ಕೋಟಿ, ಮೂವತ್ತೊಂದು ಲಕ್ಷ, ಏಳುಸಾವಿರದ ಐದುನೂರು (೨೫೫೪೪೨೩೧೦೭೫೦೦) ಇದೆ. (ಯುಗ್ಮಂ).

**ಗ್ರಂಥಪ್ರಮಾಣನಿಶ್ಚಿತ್ಯೈ ಪದಸಂಖ್ಯೋಪವರ್ಣ್ಯತೇ ।**
**ಪಂಚೈವೇಹಸಹಸ್ರಾಣಿ ಪದಾನಾಂ ಗಣಿಮಾನತಃ ॥ ೧೧೧ ॥**

ಗ್ರಂಥಪ್ರಮಾಣವನ್ನು ನಿಶ್ಚಯಿಸುವುದಕ್ಕೋಸ್ಕರ ಪದಸಂಖ್ಯೆಯನ್ನು ಹೇಳುತ್ತೇವೆ. ಈ ಪ್ರಥಮಾನುಯೋಗದಲ್ಲಿ ಐದುಸಾವಿರ ಪದಗಳಿವೆ ಎಂದು ಗಣಧರರ ಪರಿಗಣನೆ.

**ಶತಾನಿ ಷೋಡಶೈವ ಸ್ಯುಶ್ಚತುಸ್ತ್ರಿಂಶಚ್ಚ ಕೋಟಯಃ ।**
**ತ್ರ್ಯಶೀತಿ ಲಕ್ಷಾಃ ಸಪ್ತೈವ ಸಹಸ್ರಾಣಿ ಶತಾಷ್ಟಕಮ್ ॥ ೧೧೨ ॥**

**ಅಷ್ಟಾಶೀತಿಶ್ಚ ವರ್ಣಾಃ ಸ್ಯುಃ ಸಂಹತಾ ಮಧ್ಯಮಂಪದಮ್ ।**
**ಪದೇನೈತೇನ ಮೀಯಂತೇ ಪೂರ್ವಾಂಗಗ್ರಂಥವಿಸ್ತರಃ ॥ ೧೧೩ ॥**

ಒಂದೊಂದು ಮಧ್ಯಮಪದದಲ್ಲಿ ಸಾವಿರದ ಆರುನೂರ ಮೂವತ್ತನಾಲ್ಕು ಕೋಟಿ ಎಂಬತ್ತಮೂರು ಲಕ್ಷ, ಏಳುಸಾವಿರದ ಎಂಟುನೂರ ಎಂಬತ್ತೆಂಟು ಅಕ್ಷರಗಳಿವೆ (೧೬೩೪೮೩೦೭೮೦೦) ಈ ಮಧ್ಯಮಪದದಿಂದಲೇ ದ್ವಾದಶಾಂಗ ಚತುರ್ದಶಪೂರ್ವಗಳ ಗ್ರಂಥವಿಸ್ತರವು ಪರಿಗಣಿಸಲ್ಪಡುತ್ತದೆ.

**ದ್ರವ್ಯಪ್ರಮಾಣಮಿತ್ಯುಕ್ತಂ ಭಾವತಸ್ತು ಶ್ರುತಾಹ್ವಯಮ್ ।**
**ಪ್ರಮಾಣಮವಿಸಂವಾದಿ ಪರಮರ್ಷಿಪ್ರಣೇತೃಕಮ್ ॥ ೧೧೪ ॥**

ಹೀಗೆ ಅಕ್ಷರಪದರೂಪವಾದ ದ್ರವ್ಯಶ್ರುತದ ಪ್ರಮಾಣವು ಹೇಳಲ್ಪಟ್ಟಿತು. ಭಾವಶ್ರುತಜ್ಞಾನವಾದರೋ ಸಂಶಯಾದಿದೋಷರಹಿತವೂ ಪರಮರ್ಷಿಗಳಿಂದ ಪ್ರಣೀತವೂ ಆದ ಪ್ರಮಾಣಜ್ಞಾನವೇ ಆಗಿದೆ.

**ಪುರಾಣಸ್ಯಾಸ್ಯ ವಕ್ತವ್ಯಂ ಕೃತ್ಸ್ನಂ ವಾಙ್ಮಯಮಿಷ್ಯತೇ ।**
**ಯತೋ ನಾಸ್ಮಾದ್ಬಹಿರ್ಭೂತಮಸ್ತಿ ವಸ್ತು ವಚೋಽಪಿ ವಾ ॥ ೧೧೫ ॥**

ಈ ಪುರಾಣದ ಸಂಪೂರ್ಣವಾದ ವಕ್ತವ್ಯವು ವಾಙ್ಮಯ (ಶ್ರುತಜ್ಞಾನ)ವೆಂದು ಹೇಳಲ್ಪಡುತ್ತದೆ. ಇದರಿಂದ ಬಹಿರ್ಭೂತವಾದ ವಸ್ತುವಾಗಲಿ ವಚನವಾಗಲಿ ಇರುವುದಿಲ್ಲ. ಅಂದರೆ ಗಣಧರರು ಶ್ರುತಜ್ಞಾನಕ್ಕೆ ವಿಷಯವಾದ ಪ್ರಥಮಾನುಯೋಗ(ಪುರಾಣ)ದಲ್ಲಿ ನಾಲ್ಕು ಅನುಯೋಗಗಳ ಸಾಮಾನ್ಯ ವರ್ಣನೆಯೂ ಇರುವುದರಿಂದ, ಇದರಿಂದ ಬಹಿರ್ಭೂತವಾದ ವಸ್ತುವಾಗಲಿ ವಚನವಾಗಲಿ ಇಲ್ಲವೆಂದರ್ಥವು.

**ಯಥಾಮಹಾರ್ಘರತ್ನಾನಾಂ ಪ್ರಸೂತಿರ್ಮಕರಾಕರಾತ್ ।**
**ತಥೈವ ಸೂಕ್ತರತ್ನಾನಾಂ ಪ್ರಭವೋಽಸ್ಮಾತ್ಪುರಾಣತಃ ॥ ೧೧೬ ॥**

ಬಹು ಮೂಲ್ಯರತ್ನಗಳ ಉತ್ಪತ್ತಿಯು ಹೇಗೆ ಸಮುದ್ರದಿಂದಲೋ ಹಾಗೆ ಸುಭಾಷಿತಗಳೆಂಬ ರತ್ನಗಳ ಉತ್ಪತ್ತಿಯು ಈ ಪುರಾಣದಿಂದಾಗುವುದು.

**ತೀರ್ಥಕೃಚ್ಚಕ್ರವರ್ತೀಂದ್ರಬಲಕೇಶವಸಂಪದಃ ।**
**ಮುನೀನಾಮೃದ್ಧಯಶ್ಚಾಸ್ಯ ವಕ್ತವ್ಯಾಃ ಸಹ ಕಾರಣೈಃ ॥ ೧೧೭ ॥**

ಇಪ್ಪತ್ತನಾಲ್ಕು ತೀರ್ಥಂಕರರನ್ನೂ ಹನ್ನೆರಡು ಚಕ್ರವರ್ತಿಗಳನ್ನೂ ನೂರು ಇಂದ್ರರನ್ನೂ ಒಂಬತ್ತು ಬಲದೇವರನ್ನೂ ಒಂಬತ್ತು ನಾರಾಯಣರನ್ನೂ ಅವರ ಸಂಪತ್ತುಗಳನ್ನೂ ಮುನಿಗಳ ಋದ್ಧಿಗಳನ್ನೂ ಅವುಗಳ ಕಾರಣಗಳನ್ನೂ ಹೇಳಬೇಕು.

**ಬದ್ಧೋ ಮುಕ್ತಸ್ತಥಾ ಬಂಧೋ ಮೋಕ್ಷಸ್ತದ್ದ್ವಯಕಾರಣಮ್ ।**
**ಷಡ್ದ್ರವ್ಯಾಣಿ ಪದಾರ್ಥಾಶ್ಚ ನವೇತ್ಯಸ್ಯಾರ್ಥಸಂಗ್ರಹಃ ॥ ೧೧೮ ॥**

ಬದ್ಧಜೀವ (ಸಂಸಾರಿಜೀವ) ಮುಕ್ತಜೀವಗಳೂ ಬಂಧಮೋಕ್ಷಗಳೂ ಬಂಧ ಮೋಕ್ಷಗಳ ಕಾರಣಗಳೂ, ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಈ ಷಡ್ದ್ರವ್ಯಗಳೂ, ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ, ಮೋಕ್ಷ, ಪುಣ್ಯ, ಪಾಪ ಈ ನವಪದಾರ್ಥಗಳೂ ಈ ಪುರಾಣದ ಅರ್ಥಸಂಗ್ರಹವಾಗಿವೆ.

**ಜಗತ್ತ್ರಯನಿವೇಶಶ್ಚ ತ್ರೈಕಾಲ್ಯಸ್ಯ ಚ ಸಂಗ್ರಹಃ ।**
**ಜಗತಃ ಸೃಷ್ಟಿಸಂಹಾರೌ ಚೇತಿ ಕೃತ್ಸ್ನಮಿಹೋಚ್ಯತೇ ॥ ೧೧೯ ॥**

ಈ ಪುರಾಣದಲ್ಲಿ ಮೂರುಲೋಕಗಳ ರಚನಾಕ್ರಮವೂ, ಮೂರುಕಾಲಗಳ ಕಥನವೂ, ಜಗತ್ತಿನ ಉತ್ಪತ್ತಿಪ್ರಲಯಗಳೂ ಮೊದಲಾಗಿ ಎಲ್ಲವೂ ಹೇಳಲ್ಪಡುತ್ತದೆ.

**ಮಾರ್ಗೋಮಾರ್ಗಫಲಂ ಚೇತಿ ಪುರುಷಾರ್ಥಸಮುಚ್ಚಯಃ ।**
**ಯಾವಾನ್ಸವಿಸ್ತರಸ್ತಸ್ಯ ಧತ್ತೇ ಸೋಽಸ್ಯಾಭಿಧೇಯತಾಮ್ ॥ ೧೨೦ ॥**

ಸಮ್ಯಗ್ದರ್ಶನಜ್ಞಾನ ಚಾರಿತ್ರರೂಪವಾದ ಮೋಕ್ಷಮಾರ್ಗವೂ ಈ ಮಾರ್ಗದ ಫಲವಾದ ಮೋಕ್ಷವೂ ಧರ್ಮ, ಅರ್ಥ, ಕಾಮ, ಪುರಷಾರ್ಥಗಳೂ ಈ ಪುರಾಣದ ಅಭಿಧೇಯ-ವಾಚ್ಯಗಳಾಗಿವೆ.

**ಕಿಮತ್ರ ಬಹುನೋಕ್ತೇನ ಧರ್ಮಸ್ಯಸೃಷ್ಟಿರವಿ[1]ಪ್ಲುತಾ ।**
**ಯಾವತೀ ಸಾಸ್ಯ ವಕ್ತವ್ಯಪದವೀಮವಗಾಹತೇ ॥ ೧೨೧ ॥**

ಈ ಪುರಾಣದ ವಿಷಯದಲ್ಲಿ ಹೆಚ್ಚಾಗಿ ಹೇಳುವುದರಿಂದೇನು ಪ್ರಯೋಜನ? ಅಬಾಧಿತವಾದ ಧರ್ಮಸೃಷ್ಟಿಯು ಎಷ್ಟಿದೆಯೋ ಅದೆಲ್ಲವೂ ಈ ಗ್ರಂಥದಲ್ಲಿ ಹೇಳತಕ್ಕುದಾಗಿದೆ. ನಿರ್ಬಾಧವಾದ ಧರ್ಮಸ್ವರೂಪವೆಲ್ಲಾ ಈ ಗ್ರಂಥದಲ್ಲಿ ಹೇಳಲ್ಪಡುತ್ತದೆಂದು ಭಾವವು.

**ಸುದುರ್ಲಭಂ ಯದನ್ಯತ್ರ ಚಿರಾದಪಿ ಸುಭಾಷಿತಮ್ ।**
**ಸುಲಭಂ ಸ್ವೈರಸಂಗ್ರಾಹ್ಯಂ ತದಿಹಾಸ್ತಿ ಪದೇಪದೇ ॥ ೧೨೨ ॥**

ಬೇರೆ ಕಡೆಗಳಲ್ಲಿ ಬಹಳವಾಗಿ ಹುಡುಕಿದರೂ ದೊರೆಯದಿರುವ ಸುಭಾಷಿತವನ್ನು ಈ ಗ್ರಂಥದಲ್ಲಿ ಪ್ರತಿಪದದಲ್ಲಿಯೂ ಸುಲಭವಾಗಿಯೂ ಯಥೇಚ್ಛವಾಗಿಯೂ ಸಂಗ್ರಹಿಸಬಹುದಾಗಿದೆ.

**ಯದತ್ರ ಸುಸ್ಥಿತಂ ವಸ್ತು ತದೇವ[2]ನಿಕಷಕ್ಷಮಮ್ ।**
**ಯದತ್ರ ದುಃಸ್ಥಿತಂ ನಾಮ ತತ್ಸರ್ವತ್ರೈವ ದುಃಸ್ಥಿತಮ್ ॥ ೧೨೩ ॥**

ಈ ಗ್ರಂಥದಲ್ಲಿ ಯಾವ ಪದಾರ್ಥವು ಉತ್ತಮವೆಂದು ಹೇಳಲ್ಪಟ್ಟಿದೆಯೋ ಅದೇ ಪರೀಕ್ಷಾಕ್ಷಮ(ಶ್ರೇಷ್ಠ)ವಾದುದು. ಯಾವ ಪದಾರ್ಥವು ಕೆಟ್ಟುದೆಂದು ಹೇಳಲ್ಪಟ್ಟಿದೆಯೋ ಅದು ಎಲ್ಲಾಕಡೆಗಳಲ್ಲಿಯೂ ಕೆಟ್ಟುದೇ ಸರಿ.

**ಏವಂ ಮಹಾಭಿಧೇಯಸ್ಯ ಪುರಾಣಸ್ಯಾಸ್ಯ ಭೂಯಸಃ ।**
**ಕ್ರಿಯತೇಽರ್ಥಾಧಿಕಾರಾಣಾಮಿಯತ್ತಾನುಗಮೋಽಧುನಾ ॥ ೧೨೪ ॥**

ಹೀಗೆ ಮಹಾಪುರುಷರ ಚರಿತ್ರೆಯುಳ್ಳ ಈ ಮಹಾಪುರಾಣದಲ್ಲಿ ಅರ್ಥಾಧಿಕಾರಗಳು ಇಷ್ಟೇಯೆಂಬುದನ್ನು ಈಗ ಹೇಳುತ್ತೇವೆ.

**ತ್ರಯಃ ಷಷ್ಟಿರಿಹಾರ್ಥಾಧಿಕಾರಾಃ ಪ್ರೋಕ್ತಾ ಮಹರ್ಷಿಭಿಃ ।**
**ಕಥಾಪುರುಷಸಂಖ್ಯಾಯಾಸ್ತತ್ಪ್ರಮಾಣಾನತಿಕ್ರಮಾತ್ ॥ ೧೨೫ ॥**

ಈ ಗ್ರಂಥದಲ್ಲಿ ಕಥಾನಾಯಕರು ಅರುವತ್ತಮೂರು ಮಂದಿಗಳಾಗಿರುವುದರಿಂದ ಅರ್ಥಾಧಿಕಾರಗಳು ಕೂಡ ಅರುವತ್ತಮೂರೇ ಎಂದು ಮಹರ್ಷಿಗಳು ಹೇಳುತ್ತಾರೆ.

**ತ್ರಿಷಷ್ಟ್ಯವಯವಃ ಸೋಽಯಂ ಪುರಾಣಸ್ಕಂಧ ಇಷ್ಯತೇ ।**
**ಅವಾಂತರಾಧಿಕಾರಾಣಾಮಪರ್ಯಂತೋಽತ್ರ ವಿಸ್ತರಃ ॥ ೧೨೬ ॥**

ಈ ಪುರಾಣಸ್ಕಂಧವು ಅರುವತ್ತಮೂರು ಅವಯವ (ಅಧಿಕಾರ) ಗಳುಳ್ಳುದಾಗಿದೆ. ಇದರಲ್ಲಿ ಅವಾಂತರಾಧಿಕಾರಗಳ ವಿಸ್ತಾರವು ಅಪರಿಮಿತವಾಗಿದೆ.

**ತೀರ್ಥಕರ್ತೃಪುರಾಣೇಷು ಶೇಷಾಣಾಮಪಿ ಸಂಗ್ರಹಾತ್ ।**
**ಚತುರ್ವಿಂಶತಿರೇವಾತ್ರ ಪುರಾಣಾನೀತಿ ಕೇ ಚನ ॥ ೧೨೭ ॥**

ಇಪ್ಪತ್ತನಾಲ್ಕು ತೀರ್ಥಂಕರರ ಪುರಾಣಗಳಲ್ಲಿಯೇ ಚಕ್ರವರ್ತಿ ಮೊದಲಾದವರ ಪುರಾಣಗಳು ಸಂಗ್ರಹ(ಅಂತರ್ಭೂತ)ವಾಗುವುದರಿಂದ ಇಪ್ಪತ್ತನಾಲ್ಕೇ ಪುರಾಣ ಗಳೆಂದು ಕೆಲವರು ಹೇಳುತ್ತಾರೆ.

**ಪುರಾಣಂ ವೃಷಭಸ್ಯಾದ್ಯಂ ದ್ವಿತೀಯಮಜಿತೇಶಿನಃ ।**
**ತೃತೀಯಂ ಶಂಭವಸ್ಯೇಷ್ಟಂ ಚತುರ್ಥಮಭಿನಂದನೇ ॥ ೧೨೮ ॥**

ವೃಷಭತೀರ್ಥಂಕರರ ಪುರಾಣವು ಮೊದಲನೆಯದಾಗಿದೆ. ಅಜಿತತೀರ್ಥಂಕರರ ಪುರಾಣವು ಎರಡನೆಯದು. ಮೂರನೆಯದು ಶಂಭವತೀರ್ಥಂಕರರ ಪುರಾಣವು. ಅಭಿನಂದನತೀರ್ಥಂಕರರ ಪುರಾಣವು ನಾಲ್ಕನೆಯದು.

೧ ಆಬಾಧಿತಾ. ೨ ಪರೀಕ್ಷಾಕ್ಷಮಂ.

**ಪಂಚಮಂ ಸುಮತೇಃ ಪ್ರೋಕ್ತಂ ಷಷ್ಠಂ ಪದ್ಮಪ್ರಭಸ್ಯ ಚ ।**
**ಸಪ್ತಮಂ ಸ್ಯಾತ್ಸುಪಾರ್ಶ್ವಸ್ಯ ಚಂದ್ರಭಾಸೋಽಷ್ಟಮಂಸ್ಮೃತಮ್॥ ೧೨೯ ॥**

ಐದನೆಯ ಪುರಾಣವು ಸುಮತಿತೀರ್ಥಂಕರರದು. ಆರನೆಯ ಪುರಾಣವು ಪದ್ಮಪ್ರಭತೀರ್ಥಂಕರರದು. ಏಳನೆಯ ಪುರಾಣವು ಸುಪಾರ್ಶ್ವತೀರ್ಥಂಕರರದಾಗಿದೆ. ಚಂದ್ರಪ್ರಭತೀರ್ಥಂಕರರ ಪುರಾಣವು ಎಂಟನೆಯದಾಗಿದೆ.

**ನವಮಂ ಪುಷ್ಪದಂತಸ್ಯ ದಶಮಂ ಶೀತಲೇಶಿನಃ ।**
**ಶ್ರೇಯಾಂಸಂ ಚ ಪರಂ ತಸ್ಮಾದ್ವಾದಶಂ ವಾಸುಪೂಜ್ಯಗಮ್ ॥ ೧೩೦ ॥**

ಒಂಬತ್ತನೆಯ ಪುರಾಣವು ಪುಷ್ಪದಂತತೀರ್ಥಂಕರರದು. ಹತ್ತನೆಯದು ಶೀತಲತೀರ್ಥಂಕರರ ಪುರಾಣವು. ಶ್ರೇಯಾಂಸತೀರ್ಥಂಕರರ ಪುರಾಣವು ಹನ್ನೊಂದನೆಯದು. ಹನ್ನೆರಡನೆಯದು ವಾಸುಪೂಜ್ಯತೀರ್ಥಂಕರರ ಪುರಾಣವು.

**ತ್ರಯೋದಶಂ ಚ ವಿಮಲೇ ತತೋಽನಂತಜಿತಃ ಪರಮ್ ।**
**ಜಿನೇ ಪಂಚದಶಂ ಧರ್ಮೇ ಶಾಂತೇಃ ಷೋಡಶಮೀಶಿತುಃ ॥ ೧೩೧ ॥**

ಹದಿಮೂರನೆಯದು ವಿಮಲತೀರ್ಥಂಕರರ ಪುರಾಣವು. ಆಮೇಲೆ ಹದಿನಾಲ್ಕನೆಯದು ಅನಂತತೀರ್ಥಂಕರರ ಪುರಾಣವು. ಧರ್ಮತೀರ್ಥಂಕರರ ಪುರಾಣವು ಹದಿನೈದನೆಯದು. ಶಾಂತಿತೀರ್ಥಂಕರರ ಪುರಾಣವು ಹದಿನಾರನೆಯದಾಗಿದೆ.

**ಕುಂಥೋಃ ಸಪ್ತದಶಂ ಜ್ಞೇಯಮರಸ್ಯಾಷ್ಟಾದಶಂ ಮತಮ್ ।**
**ಮಲ್ಲೇರೇಕೋನವಿಂಶಂ ಸ್ಯಾದ್ವಿಂಶಂ ಚ ಮುನಿಸುವ್ರತೇ ॥ ೧೩೨ ॥**

ಕುಂಥುತೀರ್ಥಂಕರರ ಪುರಾಣವು ಹದಿನೇಳನೆಯದು. ಅರತೀರ್ಥಂಕರರ ಪುರಾಣವು ಹದಿನೆಂಟನೆಯದೆಂದು ಸಮ್ಮತವಾಗಿದೆ. ಮಲ್ಲಿತೀರ್ಥಂಕರರ ಪುರಾಣವು ಹತ್ತೊಂಬತ್ತನೆಯದಾಗಿದೆ. ಇಪ್ಪತ್ತನೆಯದು ಮುನಿಸುವ್ರತ ತೀರ್ಥಂಕರರ ಪುರಾಣವು.

**ಏಕವಿಂಶಂ ನಮೇರ್ಭರ್ತುರ್ನೇಮೇರ್ದ್ವಾವಿಂಶಮರ್ಹತಃ ।**
**ಪಾರ್ಶ್ವೇಶಸ್ಯ ತ್ರಯೋವಿಂಶಂ ಚತುರ್ವಿಂಶಂ ಚ ಸನ್ಮತೇಃ ॥ ೧೩೩ ॥**

ಇಪ್ಪತ್ತೊಂದನೆಯದು ನಮಿತೀರ್ಥಂಕರರ ಪುರಾಣವು. ನೇಮಿತೀರ್ಥಂಕರರ ಪುರಾಣವು ಇಪ್ಪತ್ತೆರಡನೆಯದಾಗಿದೆ. ಪಾರ್ಶ್ವತೀರ್ಥಂಕರರ ಪುರಾಣವು ಇಪ್ಪತ್ತಮೂರನೆಯದಾಗಿದೆ. ಇಪ್ಪತ್ತನಾಲ್ಕನೆಯದು ಸನ್ಮತಿ (ವರ್ಧಮಾನ) ತೀರ್ಥಂಕರರ ಪುರಾಣವಾಗಿದೆ.

**ಪುರಾಣಾನ್ಯೇವಮೇತಾನಿ ಚತುರ್ವಿಂಶತಿರರ್ಹತಾಮ್ ।**
**ಮಹಾಪುರಾಣಮೇತೇಷಾಂ ಸಮೂಹಃ ಪರಿಭಾಷ್ಯತೇ ॥ ೧೩೪ ॥**

ಹೀಗೆ ಇವುಗಳು ಇಪ್ಪತ್ತನಾಲ್ಕು ತೀರ್ಥಂಕರರ ಪುರಾಣಗಳು, ಇವುಗಳ ಸಮೂಹವು ಮಹಾಪುರಾಣವೆಂದು ಹೇಳುತ್ತಾರೆ.

**ಪುರಾಣಂ ಮಹದದ್ಯತ್ವೇ ಯದಸ್ಮಾಭಿರನು[೧]ಸ್ಮೃತಮ್ ।**
**[೨]ಪುರಾಯುಗಾಂತೇ ತನ್ನೂನಂ ಕಿಯದಪ್ಯವಶಿಷ್ಯತೇ ॥ ೧೩೫ ॥**

ಈ ದಿವಸ ನಾವು ಹೇಳಿದ ಮಹಾಪುರಾಣವು ಮುಂದೆ (ಅವಸರ್ಪಿಣೀಕಾಲದ ಅಂತದಲ್ಲಿ) ಬಹಳ ಸ್ವಲ್ಪವುಳಿಯುವುದು.

೧ ಕಥಿತಂ. ೨ ಅಗ್ರೇ.

**ದೋಷಾದ್ದುಃಷಮಕಾಲಸ್ಯ ಪ್ರಹಾ[೧]ಸ್ಯಂತೇ ಧಿಯೋ ನೃಣಾಮ್ ।**
**ತಾಸಾಂ ಹಾನೇಃ ಪುರಾಣಸ್ಯ ಹೀಯತೇ ಗ್ರಂಥವಿಸ್ತರಃ ॥ ೧೩೬ ॥**

ದುಃಷಮ (ಐದನೆಯ) ಕಾಲದ ದೋಷದಿಂದ ಮನುಷ್ಯರ ಬುದ್ಧಿಯು ಕಡಿಮೆಯಾಗುತ್ತ ಹೋಗುತ್ತದೆ. ಬುದ್ಧಿಯು ಕಡಿಮೆಯಾಗುವುದರಿಂದ ಗ್ರಂಥವಿಸ್ತಾರವೂ ಕಡಿಮೆಯಾಗುತ್ತದೆ.

**ತದಾಹೀದಂ ಪುರಾಣಂ ನಃ ಸಧರ್ಮಾ ಶ್ರುತಕೇವಲೀ ।**
**ಸುಧರ್ಮಃ ಪ್ರಚಯಂ ನೇಷ್ಯತ್ಯಖಿಲಂ ಮದನಂತರಮ್ ॥ ೧೩೭ ॥**

ನಮ್ಮ ಸಧರ್ಮಿಗಳಾದ ಸುಧರ್ಮಶ್ರುತಕೇವಲಿಗಳು ನನ್ನನಂತರ ಈ ಪುರಾಣವನ್ನೆಲ್ಲ ಇದ್ದಹಾಗೆಯೇ ಸಂಗ್ರಹಿಸುವರು.

**ಜಂಬೂನಾಮಾ ತತಃ ಕೃತ್ಸ್ನಂ ಪುರಾಣಮನುಶುಶ್ರುವಾನ್ ।**
**ಪ್ರಥಯಿಷ್ಯತಿ ಲೋಕೇಽಸ್ಮಿನ್ಸೋಽಂತ್ಯಃ ಕೇವಲಿನಾಮಿಹ ॥ ೧೩೮ ॥**

ಕೊನೆಯ ಶ್ರುತಕೇವಲಿಗಳಾದ ಜಂಬೂಸ್ವಾಮಿಗಳು ಆ ಸುಧರ್ಮರಿಂದ ಸಮಸ್ತಪುರಾಣವನ್ನು ಕೇಳಿ ಈ ಲೋಕದಲ್ಲಿ ಪ್ರಸಿದ್ಧಪಡಿಸುವರು.

**ಅಹಂ ಸುಧರ್ಮೋ ಜಂಬ್ವಾಖ್ಯೋ ನಿಖಿಲಶ್ರುತಧಾರಿಣಃ ।**
**ಕ್ರಮಾತ್ಕೈವಲ್ಯಮುತ್ಪಾದ್ಯ [೨]ನಿರ್ವಾಸ್ಯಾಮಸ್ತತೋ ವಯಮ್॥ ೧೩೯ ॥**

ಸಂಪೂರ್ಣಶ್ರುತಜ್ಞಾನಧಾರಿಗಳಾದ ನಾನೂ (ಗೌತಮ), ಸುಧರ್ಮರೂ, ಜಂಬೂಸ್ವಾಮಿಗಳೂ ಕ್ರಮವಾಗಿ ಕೇವಲಜ್ಞಾನವನ್ನು ಹೊಂದಿಮುಕ್ತರಾಗುವೆವು.

**ತ್ರಯಾಣಾಮಸ್ಮದಾದೀನಾಂ ಕಾಲಃ ಕೇವಲಿನಾಮಿಹ ।**
**ದ್ವಾಷಷ್ಟಿವರ್ಷಪಿಂಡಃ ಸ್ಯಾದ್ಯುಗವನ್ನೈರ್ವೃತೇಃ ಪರಮ್ ॥ ೧೪೦ ॥**

ಶ್ರೀವರ್ಧಮಾನಸ್ವಾಮಿಯು ಮುಕ್ತಿಯನ್ನು ಹೊಂದಿದನಂತರ ಶ್ರುತಕೇವಲಿಗಳಾದ ನಮ್ಮ ಮೂರುಮಂದಿಗಳ ಕಾಲವು ಅರವತ್ತೆರಡು ವರುಷಗಳು. ಅರವತ್ತೆರಡು ವರುಷಗಳ ನಂತರ ಮೂವರೂ ಕ್ರಮವಾಗಿ ಮುಕ್ತರಾಗುವರೆಂದು ಭಾವವು.

**ತತೋ ಯಥಾಕ್ರಮಂ ವಿಷ್ಣುರ್ನಂದಿಮಿತ್ರೋಽಪರಾಜಿತಃ ।**
**ಗೋವರ್ಧನೋ ಭದ್ರಬಾಹುರಿತ್ಯಾಚಾರ್ಯಾ ಮಹಾಧಿಯಃ ॥ ೧೪೧ ॥**

**ಚತುರ್ದಶಮಹಾವಿದ್ಯಾಸ್ಥಾನಾನಾಂ ಪಾರಗಾ ಇಮೇ ।**
**ಪುರಾಣಂ ದ್ಯೋತಯಿಷ್ಯಂತಿ[೩]ಕಾರ್ತ್ಸ್ನ್ಯೇನ[೪]ಶರದಃ[೫]ಶತಮ್ ॥ ೧೪೨ ॥**

ಆಮೇಲೆ ಹನ್ನೊಂದು ಅಂಗ ಹದಿನಾಲ್ಕು ಪೂರ್ವಶಾಸ್ತ್ರಗಳ ಪಾರಗಾಮಿಗಳಾದ ವಿಷ್ಣು, ನಂದಿಮಿತ್ರ, ಅಪರಾಜಿತ, ಗೋವರ್ಧನ, ಭದ್ರಬಾಹು ಈ ಐದುಮಂದಿ ಮಹಾಬುದ್ಧಿಶಾಲಿಗಳಾದ ಆಚಾರ್ಯರು (ಶ್ರುತಕೇವಲಿಗಳು) ಕ್ರಮವಾಗಿ ಉದ್ಭವಿಸಿ, ನೂರುವರುಷಗಳವರೆಗೆ ಪುರಾಣವನ್ನು ಸಂಪೂರ್ಣವಾಗಿ ಪ್ರಕಾಶಪಡಿಸುವರು.

**ವಿಶಾಖಪ್ರೋಷ್ಠಿಲಾಚಾರ್ಯೌ ಕ್ಷತ್ರಿಯೋ ಜಯಸಾಹ್ವಯಃ ।**
**ನಾಗಸೇನಶ್ಚ ಸಿದ್ಧಾರ್ಥೋ ಧೃತಿಷೇಣಸ್ತಥೈವ ಚ ॥ ೧೪೩ ॥**

**ವಿಜಯೋ ಬುದ್ಧಿಮಾನ್ ಗಂಗದೇವೋ ಧರ್ಮಾದಿಶಬ್ದತಃ ।**
**ಸೇನಶ್ಚ ದಶಪೂರ್ವಾಣಾಂ ಧಾರಕಾಃ ಸ್ಯುರ್ಯಥಾಕ್ರಮಮ್ ॥ ೧೪೪ ॥**

೧ ಪ್ರಹಾಣಿಂ ಗಮಿಷ್ಯಂತಿ. ೨ ನಿರ್ವೃತಿಂ ಯಾಸ್ಯಾಮಃ. ೩ ಸಾಕಲ್ಯೇನ. ೪ ಸಂವತ್ಸರಸ್ಯ. ೫ ಕಾಲಾಧ್ವನೋರ್ವ್ಯಾಪ್ತಾವಿತಿದ್ವಿತೀಯಾ.

**ತ್ರ್ಯಶೀತಿಶತಮಬ್ದಾನಾಮೇತೇಷಾಂ ಕಾಲಸಂಗ್ರಹಃ ।**
**ತದಾ ಚ ಕೃತ್ಸ್ನಮೇವೇದಂ ಪುರಾಣಂ ವಿಸ್ತರಿಷ್ಯತೇ ॥ ೧೪೫ ॥**

ತದನಂತರ ನೂರೆಂಬತ್ತಮೂರು ವರ್ಷಗಳವರೆಗೆ ಕ್ರಮವಾಗಿ ವಿಶಾಖಾಚಾರ್ಯ, ಪ್ರೋಷ್ಠಿಲಾಚಾರ್ಯ, ಕ್ಷತ್ರಿಯಾಚಾರ್ಯ, ಜಯಾಚಾರ್ಯ, ನಾಗಸೇನ, ಸಿದ್ಧಾರ್ಥ, ಧೃತಿಷೇಣ, ವಿಜಯ, ಬುದ್ಧಿಮಾನ್, ಗಂಗದೇವ, ಧರ್ಮಸೇನ, ಈ ಹನ್ನೊಂದುಮಂದಿ ಆಚಾರ್ಯರು ಹನ್ನೊಂದು ಅಂಗ, ಹತ್ತು ಪೂರ್ವಶಾಸ್ತ್ರಗಳನ್ನು ತಿಳಿದವರಾಗಿ ಈ ಪುರಾಣವನ್ನೆಲ್ಲ ಪ್ರಕಾಶಪಡಿಸುವರು.

**ತತೋ ನಕ್ಷತ್ರನಾಮಾ ಚ ಜಯಪಾಲೋ ಮಹಾತಪಾಃ ।**
**ಪಾಂಡುಶ್ಚ ಧ್ರುವಸೇನಶ್ಚ ಕಂಸಾಚಾರ್ಯ ಇತಿ ಕ್ರಮಾತ್ ॥ ೧೪೬ ॥**

**ಏಕಾದಶಾಂಗವಿದ್ಯಾನಾಂ ಪಾರಗಾಃ ಸ್ಯುರ್ಮುನೀಶ್ವರಾಃ ।**
**ವಿಂಶಂ ದ್ವಿಶತಮಬ್ದಾನಾಮೇತೇಷಾಂ ಕಾಲ ಇಷ್ಯತೇ ॥ ೧೪೭ ॥**

**ತದಾ ಪುರಾಣಮೇತತ್ತು ಪಾದೋನಂ ಪ್ರಥಯಿಷ್ಯತೇ ।**
**ಭಾಜನಾಭಾವತೋ ಭೂಯೋ ಜಾಯೇತಾಂಗಕನಿಷ್ಠತಾ ॥ ೧೪೮ ॥**

ಆಮೇಲೆ ಇನ್ನೂರಿಪ್ಪತ್ತು ವರುಷಗಳವರೆಗೆ ಕ್ರಮವಾಗಿ ನಕ್ಷತ್ರ, ಜಯಪಾಲ, ಪಾಂಡು, ಧ್ರುವಸೇನ, ಕಂಸಾಚಾರ್ಯ ಈ ಐದುಮಂದಿ ಮುನೀಶ್ವರರು, ಹನ್ನೊಂದಂಗಶಾಸ್ತ್ರಜ್ಞಾನಿಗಳಾಗಿ ಮುಕ್ಕಾಲುಭಾಗ ಪುರಾಣವನ್ನು ಪ್ರಸಿದ್ಧಪಡಿಸುವರು. ಕ್ರಮಕ್ರಮವಾಗಿ ಧಾರಣಾ(ಸ್ಮರಣ)ಶಕ್ತಿಯು ಕಡಿಮೆಯಾಗುವುದರಿಂದ ಶಾಸ್ತ್ರವು ಕಡಿಮೆ(ನಷ್ಟ)ಯಾಗುತ್ತ ಹೋಗುವುದು.

**ಸುಭದ್ರಶ್ಚ ಯಶೋಭದ್ರೋ ಭದ್ರಬಾಹುರ್ಮಹಾಯಶಾಃ ।**
**ಲೋಹಾರ್ಯಶ್ಚೇತ್ಯಮೀ ಜ್ಞೇಯಾಃ ಪ್ರಥಮಾಂಗಾಬ್ಧಿಪಾರಗಾಃ ॥**

**ಸಮಾನಾಂ ಶತಮೇಷಾಂ ಸ್ಯಾತ್ಕಾಲೋಽಷ್ಟಾದಶಭಿರ್ಯುತಃ ।**
**ತುರ್ಯೋ ಭಾಗಃ ಪುರಾಣಸ್ಯ ತದಾಸ್ಯ ಪ್ರತನಿಷ್ಯತೇ ॥ ೧೫೦ ॥**

ಕಂಸಾಚಾರ್ಯರನಂತರ ನೂರಹದಿನೆಂಟು ವರುಷಗಳವರೆಗೆ, ಸುಭದ್ರ, ಯಶೋಭದ್ರ, ಭದ್ರಬಾಹು, ಲೋಹಾಚಾರ್ಯ, ಈ ನಾಲ್ಕುಮಂದಿ ಆಚಾರ್ಯರು ಪ್ರಥಮಾಂಗಶಾಸ್ತ್ರದ ಪಾರಗಾಮಿಗಳಾಗುತ್ತಾರೆ. ಇವರು ಪುರಾಣದ ನಾಲ್ಕನೆಯ ಒಂದು ಭಾಗವನ್ನು ಪ್ರಕಾಶಪಡಿಸುವರು.

**ತತಃ ಕ್ರಮಾತ್ [1]ಪ್ರಹಾಯೇದಂ ಪುರಾಣಂ ಸ್ವಲ್ಪಮಾತ್ರಯಾ ।**
**ಧೀಪ್ರಮೋಷಾದಿದೋಷೇಣ ವಿರಲೈರ್ಧಾರಯಿಷ್ಯತೇ ॥ ೧೫೧ ॥**

ಆಮೇಲೆ (ವರ್ಧಮಾನಸ್ವಾಮಿಯು ಮುಕ್ತರಾಗಿ ಆರುನೂರೆಂಬತ್ತಮೂರು ವರುಷಗಳನಂತರ) ಈ ಪುರಾಣವು ಕ್ರಮವಾಗಿ ಹಾನಿಯನ್ನು ಹೊಂದುತ್ತ ವಿಸ್ಮರಣಾದಿದೋಷಗಳು ಹೆಚ್ಚುವುದರಿಂದ, ಇದರ ಸ್ವಲ್ಪಭಾಗವನ್ನು ಮಾತ್ರ ಬಹಳ ಸ್ವಲ್ಪಮಂದಿಗಳು ಧರಿಸುವರು (ತಿಳಿಯುವರು).

**ಜ್ಞಾನವಿಜ್ಞಾನಸಂಪನ್ನಗುರುಪರ್ವಾನ್ವಯಾದಿದಮ್ ।**
**ಪ್ರಮಾಣಂ ಯಚ್ಚ ಯಾವಚ್ಚ ಯದಾ ಯಚ್ಚ ಪ್ರಕಾಶತೇ ॥ ೧೫೨ ॥**

**ತದಾಪೀದಮನುಸ್ಮರ್ತುಂ [2]ಪ್ರಭವಿಶ್ಯಂತಿ ಧೀಧನಾಃ ।**
**ಜಿನಸೇನಾ[3]ಗ್ರಗಾಃ ಪೂಜ್ಯಾಃ ಕವೀನಾಂ ಪರಮೇಶ್ವರಾಃ ॥ ೧೫೩ ॥**

ಶಾಸ್ತ್ರಜ್ಞಾನವುಳ್ಳವರೂ ಅದರ ಅನುಭವವುಳ್ಳವರೂ ಆದ ಗುರುಗಳ (ಆಚಾರ್ಯರ) ಪರಂಪರೆಯಿಂದ ಪುರಾಣದ ಎಷ್ಟೆಷ್ಟುಭಾಗವು ಪ್ರಕಾಶಿಸಲ್ಪಡುತ್ತಿರುತ್ತದೋ ಅದನ್ನು ನೆನಪಿನಲ್ಲಿಡುವುದಕ್ಕೋಸ್ಕರ ಜ್ಞಾನಿಗಳೂ ಪೂಜ್ಯರೂ ಆದ ಜಿನಸೇನಾಚಾರ್ಯರು ಮೊದಲಾದ ಕವೀಶ್ವರರು ಸಮರ್ಥರಾಗುವರು.

**[1]ಪ್ರಮಾಣಮಿದಮೇವಾದ್ಯ ಯದಾಮ್ನಾತಂ [2]ಸ್ವಯಂಭುವಾ ।**
**ಪುರಾಣಾಭಾಸಮನ್ಯತ್ತು ಕೇವಲಂ ವಾಙ್ಮಲಂ ವಿದುಃ ॥ ೧೫೪ ॥**

ಸ್ವಯಂಭುವಾದ ವರ್ಧಮಾನಸ್ವಾಮಿಯು ಹೇಳಿದ ಪುರಾಣವೇ ಪ್ರಮಾಣವು. ಬೇರೆ ಎಲ್ಲ ಪುರಾಣಾಭಾಸವು ಮಿಥ್ಯಾಪುರಾಣವೆಂದು ಭಾವವು. ಅದನ್ನು ಜ್ಞಾನಿಗಳು ಕೇವಲ ವಾಗ್ದೋಷವೆಂದು ತಿಳಿಯುತ್ತಾರೆ.

**ನಾಮಗ್ರಹಣಮಾತ್ರಂ ಚ ಪುನಾತಿ ಪರಮೇಷ್ಠಿನಾಮ್ ।**
**ಕಿಂ ಪುನರ್ಮುಹುರಾಪೀತಂ ತತ್ಕಥಾಶ್ರವಣಾಮೃತಮ್ ॥ ೧೫೫ ॥**

ಪಂಚಪರಮೇಷ್ಠಿಗಳ ನಾಮವನ್ನು ಉಚ್ಚಾರಮಾಡಿದ ಮಾತ್ರದಿಂದ ಮನುಷ್ಯನು ಪವಿತ್ರನಾಗುತ್ತಾನೆ. ಅವರ ಕಥಾಶ್ರವಣವೆಂಬ ಅಮೃತವನ್ನು ಬಾರಿಬಾರಿಗೂ ಪಾನಮಾಡಿದರೆ ಹೇಳುವುದೇನು ? ಬಹಳ ಪವಿತ್ರನಾಗುತ್ತಾನೆಂದು ಭಾವವು.

**ತತೋ ಭವ್ಯಜನೈಃ ಶ್ರಾದ್ಧೈರವಗಾಹ್ಯಮಿದಂ ಮುಹುಃ ।**
**ಪುರಾಣಂ ಪುಣ್ಯಪುಂರತ್ನೈರ್ಭೃತಮಬ್ಧೀಯಿತಂ ಮಹತ್ ॥ ೧೫೬ ॥**

ಆದುದರಿಂದ ಶ್ರೇಷ್ಠರಾದ ಪುಣ್ಯಪುರುಷರಿಂದ ವ್ಯಾಪ್ತವಾದ ಈ ಪುರಾಣವೆಂಬ ಸಮುದ್ರವನ್ನು ಭವ್ಯ ಜನಗಳು ನಂಬಿಕೆಯಿಂದ ಬಾರಿಬಾರಿಗೂ ಪ್ರವೇಶಮಾಡಬೇಕು. ಯಾವಾಗಲೂ ಈ ಪುರಾಣದ ಪಠನಪಾಠನವನ್ನು ಮಾಡಬೇಕೆಂದು ಭಾವವು.

**ತಚ್ಚಪೂರ್ವಾನುಪೂರ್ವ್ಯೇದಂ ಪುರಾಣಮನುವರ್ಣ್ಯತೇ ।**
**ತತ್ರಾದ್ಯಸ್ಯ ಪುರಾಣಸ್ಯ ಸಂಗ್ರಹೇ ಕಾರಿಕಾಂ ವಿದುಃ ॥ ೧೫೭ ॥**

ಈ ಪುರಾಣವನ್ನು ಗುರುಪರಂಪರಾಕ್ರಮದಿಂದ ವರ್ಣಿಸುತ್ತೇವೆ. ಅದರಲ್ಲಿ ಮೊದಲನೆಯದಾದ ಆದಿಪುರಾಣದ ಕಾರಿಕೆ (ಶ್ಲೋಕರೂಪವ್ಯಾಖ್ಯೆ) ಯನ್ನು ಜ್ಞಾನಿಗಳು ಹೇಳುತ್ತಾರೆ.

**ಸ್ಥಿತಿಃ ಕುಲಧರೋತ್ಪತ್ತಿರ್ವಂಶಾನಾಮಥ ನಿರ್ಗಮಃ ।**
**ಪೂರೋಃ ಸಾಮ್ರಾಜ್ಯಮಾರ್ಹಂತ್ಯಂ ನಿರ್ವಾಣಂ ಯುಗ[3]ವಿಚ್ಛಿದಃ ॥**

ಈ ಆದಿಪುರಾಣದಲ್ಲಿ ಕಾಲದವರ್ಣನೆ, ಮನುಗಳ ಉತ್ಪತ್ತಿ, ವಂಶಗಳ ಉತ್ಪತ್ತಿ, ವೃಷಭತೀರ್ಥಂಕರರ ರಾಜ್ಯಭಾರ, ಅವರ ಆರ್ಹಂತ್ಯಾವಸ್ಥೆ, ನಿರ್ವಾಣ (ಮೋಕ್ಷ), ಯುಗಗಳ ಪರಿವರ್ತನೆ.

**ಏತೇ ಮಹಾಧಿಕಾರಾಃ ಸ್ಯುಃ ಪುರಾಣೇ ವೃಷಭೇಶಿನಃ ।**
**ಯಥಾವಸರಮನ್ಯೇಷು ಪುರಾಣೇಷ್ವಪಿ ಲಕ್ಷಯೇತ್ ॥ ೧೫೯ ॥**

ಇವುಗಳು ವೃಷಭಸ್ವಾಮಿಯ ಪುರಾಣದಲ್ಲಿ ಮಹಾಧಿಕಾರಗಳು (ವರ್ಣಿಸಲ್ಪಡುವ ದೊಡ್ಡ ಭಾಗಗಳು). ಸಂದರ್ಭಾನುಸಾರವಾಗಿ ಬೇರೆ ಪುರಾಣಗಳಲ್ಲಿಯೂ ಹೀಗೆಯೇ ತಿಳಿಯಬೇಕು.

**ಕಥೋಪೋದ್ಘಾತ ಏಷಃ ಸ್ಯಾತ್ ಕಥಾಯಾಃ ಪೀಠಿಕಾಮಿತಃ ।**
**ವಕ್ಷ್ಯೇ ಕಾಲಾವತಾರಂ ಚ ಸ್ಥಿತಿಂ ಕುಲಭೃತಾಮಪಿ ॥ ೧೬೦ ॥**

ಇದು (ಹಿಂದೆ ಹೇಳಿದುದು) ಕಥೆಯ ಉಪೋದ್ಘಾತವು. ಇಲ್ಲಿಂದ ಮುಂದೆ ಕಥೆಯ ಪೀಠಿಕೆಯನ್ನೂ ಕಾಲಪರಿವರ್ತನೆಯ ಕ್ರಮವನ್ನೂ ಮನುಗಳ ಸ್ಥಿತಿಯನ್ನೂ ಹೇಳುವೆನು.

---

೧ ಹೀಯಮಾನಂ ಭೂತ್ವಾ. ೨ ಸಮರ್ಥಾ ಭವಿಷ್ಯಂತಿ. ೩ ಪುರಸ್ಸರಾಃ.

೧ ಪುರಾಣಮಿತ್ಯಪಿ ಪಾಠಃ. ೨ ವರ್ಧಮಾನಸ್ವಾಮಿನಾ. ೩ ವಿಚ್ಛಿದಾ ಇತ್ಯಪಿಪಾಠಃ

**ಪ್ರಣಿಗದತಿ ಸತೀತ್ಥಂ ಗೌತಮೇ ಭಕ್ತಿನಮ್ರಾ ।**
**ಮುನಿಪರಿಷದಶೇಷಾ ಶ್ರೋತುಕಾಮಾ ಪುರಾಣಮ್ ॥**
**ಮಗಧನೃಪತಿನಾಮಾ[೧]ಸಾವಧಾನಾ ತದಾऽಭೂತ್ ।**
**ಹಿತಮ[೨]ವಗಣಯೇದ್ವಾ ಕಃ ಸುಧೀರಾಪ್ತವಾಕ್ಯಮ್ ॥ ೧೬೧ ॥**

ಹೀಗೆ ಗೌತಮಗಣಧರರು ಹೇಳುತ್ತಿರಲು ಆಗ ಭಕ್ತಿಯಿಂದ ನಮ್ರವಾದ ಸಮಸ್ತ ಮುನಿಸಂಘವು, ಶ್ರೇಣಿಕರಾಜನೊಡನೆ, ಪುರಾಣವನ್ನು ಕೇಳಬೇಕೆಂಬ ಇಚ್ಛೆಯಿಂದ ಸಾವಧಾನವಾಗಿದ್ದಿತು. ಹಿತವಾದ ಆಪ್ತವಾಕ್ಯವನ್ನು ಯಾವ ಬುದ್ಧಿವಂತನು ತಾನೆ ತಿರಸ್ಕರಿಸುವನು ? ಯಾರೂ ತಿರಸ್ಕರಿಸುವುದಿಲ್ಲವೆಂದು ಭಾವವು.

**ಇತ್ಯಾಚಾರ್ಯಪ[೩]ರಂಪರೀಣಮಮಲಂ ಪುಣ್ಯಂ ಪುರಾಣಂ ಪುರಾ ।**
**ಕಲ್ಪೇ ಯದ್ಭಗವಾನುವಾಚ ವೃಷಭಶ್ಚಕ್ರಾಧಿಭರ್ತ್ರೇಜಿನಃ ॥**
**ತದ್ವಃ ಪಾಪಕಲಂಕಪಂಕಮಖಿಲಂ ಪ್ರಕ್ಷಾಲ್ಯ ಶುದ್ಧಿಂ ಪರಾಮ್ ।**
**ದೇಯಾತ್ಪುಣ್ಯವಚೋಜಲಂ ಪರಮಿದಂ[೪]ತೀರ್ಥಂ ಜಗತ್ಪಾವನಮ್ ॥**

ಹೀಗೆ ಆಚಾರ್ಯಪರಂಪರೆಯಿಂದ ಬಂದಿರುವುದೂ ನಿರ್ದೋಷವೂ ಪುಣ್ಯದಾಯಕವೂ ಆದ ಯಾವ ಪುರಾಣವನ್ನು ಚತುರ್ಥಕಾಲದ ಆದಿಯಲ್ಲಿ ವೃಷಭತೀರ್ಥಂಕರರು ಭರತಚಕ್ರವರ್ತಿಗೆ ಹೇಳಿದ್ದರೋ ಅದೇ ಪುಣ್ಯವಚನವೆಂಬ ಜಲವು ಲೋಕವನ್ನು ಪರಿಶುದ್ಧವನ್ನಾಗಿ ಮಾಡುವ ತೀರ್ಥದಂತೆ ನಿಮ್ಮಗಳ ಸಮಸ್ತಪಾಪವೆಂಬ ಕಲಂಕವನ್ನು ತೊಳೆದು ಉತ್ಕೃಷ್ಟವಾದ ಪರಿಶುದ್ಧತೆಯನ್ನುಂಟುಮಾಡಲಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಕಥೋಪೋದ್ಘಾತವರ್ಣನಂ ನಾಮ ದ್ವಿತೀಯಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಕಥೆಯ ಉಪೋದ್ಘಾತವರ್ಣನೆಯೆಂಬ
ಎರಡನೆಯ ಪರ್ವವು ಸಮಾಪ್ತವಾದುದು.

---

೧ ಸಹ. ೨ ಅವಜ್ಞಾಂ ಕುರ್ಯಾತ್. ೩ ಪರಂಪರಾಯಾತಂ. ೪ ಪ್ರವಚನಂ, ಗಂಗಾದಿಕಂ ಚ ಧ್ವನ್ಯತೇ.

॥ ಶ್ರೀ ವೃಷಭಜಿನಾಯ ನಮಃ ॥

# ಅಥ ತೃತೀಯಂ ಪರ್ವ

**ಪುರಾಣಂ ಮುನಿಮಾನಮ್ಯ ಜಿನಂ ವೃಷಭಮಚ್ಯುತಮ್ ।**
**ಮಹತಸ್ತತ್ಪುರಾಣಸ್ಯ ಪೀಠಿಕಾ ವ್ಯಾಕರಿಷ್ಯತೇ ॥ ೧ ॥**

ಎಲ್ಲರಿಗಿಂತ ಮೊದಲನೆಯ ಮುನಿಗಳೂ ವಿನಾಶರಹಿತರೂ ಆದ ವೃಷಭಜಿನೇಶ್ವರರನ್ನು ನಮಸ್ಕರಿಸಿ, ಅವರ ಮಹಾಪುರಾಣದ ಪೀಠಿಕೆಯನ್ನು ಹೇಳುತ್ತೇನೆ.

**ಅನಾದಿನಿಧನಃ ಕಾಲೋ ವರ್ತ[೧]ನಾಲಕ್ಷಣೋ ಮತಃ ।**
**ಲೋಕಮಾತ್ರಃ ಸ ಸೂಕ್ಷ್ಮಾಣುಪರಿಚ್ಛಿನ್ನಪ್ರಮಾಣಕಃ ॥ ೨ ॥**

ವರ್ತನಾ(ಜೀವಾದಿದ್ರವ್ಯಗಳನ್ನು ಒಂದು ಅವಸ್ಥೆಯಿಂದ ಮತ್ತೊಂದು ಅವಸ್ಥೆಯನ್ನು ಹೊಂದಿಸುವುದು)ಲಕ್ಷಣವುಳ್ಳ ಕಾಲವು ಅನಾದಿನಿಧನವಾದುದು. ವರ್ತನೆಯು ನಿಶ್ಚಯಕಾಲದ ಲಕ್ಷಣವಾಗಿದೆ. ಆ ನಿಶ್ಚಯಕಾಲವು ಸೂಕ್ಷ್ಮವಾದ ಪರಮಾಣುವಿನಷ್ಟು ಪರಿಮಾಣವುಳ್ಳುದಾಗಿ ಲೋಕದಲ್ಲಿ ತುಂಬಿದೆ. ಲೋಕಾಕಾಶದ ಒಂದೊಂದು ಪ್ರದೇಶದಲ್ಲಿ ಒಂದೊಂದು ಕಾಲಾಣುವಿದೆಯೆಂದು ಭಾವವು.

**ಸೋಽಸಂಖ್ಯೆಯೋಽಪ್ಯನಂತಸ್ಯ ವಸ್ತುರಾಶೇರು[೨]ಪಗ್ರಹೇ ।**
**ವರ್ತತೇ ಸ್ವಗತಾನಂತಸಾಮರ್ಥ್ಯಪರಿಬೃಂ[೩]ಹಿತಃ ॥ ೩ ॥**

ಅಂತಹ ಕಾಲಾಣುಗಳು ಅಸಂಖ್ಯೇಯಗಳಾಗಿದ್ದರೂ ಅನಂತಶಕ್ತಿಯಿಂದ ಕೂಡಿದುವುಗಳಾಗಿ ಅನಂತಪದಾರ್ಥಗಳಿಗೆ ಉಪಕಾರಮಾಡುತ್ತವೆ. ಅನಂತ ಪದಾರ್ಥಗಳು ಅವಸ್ಥಾಂತರಗಳನ್ನು ಹೊಂದುವುದಕ್ಕೆ ಕಾಲವು ಸಹಕಾರಿಯಾಗಿದೆಯೆಂದರ್ಥವು.

**ಯಥಾ ಕುಲಾಲಚಕ್ರಸ್ಯ ಭ್ರಾಂತೇರ್ಹೇತುರಧಃ ಶಿಲಾ ।**
**ತಥಾ ಕಾಲಃ ಪದಾರ್ಥಾನಾಂ ವರ್ತನೋಪಗ್ರಹೇ ಮತಃ ॥ ೪ ॥**

ಕುಂಬಾರನ ಚಕ್ರವು ತಿರುಗುವುದಕ್ಕೆ ಕೆಳಗಿರುವ ಕಲ್ಲು ಹೇಗೆ ಕಾರಣವಾಗಿದೆಯೋ ಹಾಗೆ ಕಾಲವು ಸಮಸ್ತಪದಾರ್ಥಗಳ ಪರಿವರ್ತನೆಯಲ್ಲಿ ಉಪಕಾರಿಯಾಗಿದೆ. (ಸಹಕಾರಿಕಾರಣವಾಗಿದೆ).

**[೪]ಸ್ವತೋ ವಿವರ್ತಮಾನಾನಾಂ ಸೋಽರ್ಥಾನಾಂ ಪರಿವರ್ತಕಃ ।**
**[೫]ಯಥಾಸ್ವಂ ಗುಣಪರ್ಯಾಯೈರತೋ ನಾನ್ಯೋನ್ಯಸಂ[೬]ಪ್ಲವಃ ॥ ೫ ॥**

ತಮ್ಮ ಸಾಮರ್ಥ್ಯದಿಂದ ಯೋಗ್ಯತಾನುಸಾರವಾಗಿ ಗುಣಪರ್ಯಾಯಗಳಿಂದ ಪರಿವರ್ತನೆಯನ್ನು ಹೊಂದುವ ಪದಾರ್ಥಗಳಿಗೆ ಪರಿವರ್ತನೆಯನ್ನು ಮಾಡಿಸುವ ನಿಮಿತ್ತಕಾರಣವು ಕಾಲವಾಗಿದೆ. ಈ ಕಾರಣದಿಂದ ಪರಸ್ಪರಸಂಕರ (ಮಿಶ್ರ)ವಾಗುವುದಿಲ್ಲ. ಪದಾರ್ಥಗಳು ಬೇರೆಬೇರೆಯಾಗಿವೆಯೆಂದು ಭಾವವು.

**ಸೋಽಸ್ತಿಕಾಯೇಷ್ವಸಂಪಾಠಾನ್ನಾಸ್ತೀತ್ಯೇಕೇ ವಿಮನ್ವತೇ ।**
**ಷಡ್ದ್ರವ್ಯೇಷೂಪದಿಷ್ಟತ್ವಾದುಕ್ತಿಯೋಗಾಚ್ಚ ತದ್ಗತಿಃ ॥ ೬ ॥**

**ಮುಖ್ಯಕಲ್ಪೇನ ಕಾಲೋಽಸ್ತಿ ವ್ಯವಹಾರಪ್ರತೀತಿತಃ ।**
**ಮುಖ್ಯಾದೃತೇ ನಗೌಣೋಽಸ್ತಿ ಸಿಂಹೋ ಮಾಣವಕೋ ಯಥಾ ॥ ೭ ॥**

ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ ಈ ಐದು ಅಸ್ತಿಕಾಯಗಳೊಡನೆ ಕಾಲವನ್ನು ಸೇರಿಸದಿರುವುದರಿಂದ ಕಾಲವೆಂಬ ವಸ್ತುವೇ ಇಲ್ಲವೆಂದು ಕೆಲವರು ವಿವಾದಮಾಡುತ್ತಾರೆ. ಇದು ಸರಿಯಾದುದಲ್ಲ:— ಜೀವದ್ರವ್ಯ, ಪುದ್ಗಲದ್ರವ್ಯ, ಧರ್ಮದ್ರವ್ಯ, ಅಧರ್ಮದ್ರವ್ಯ, ಆಕಾಶದ್ರವ್ಯ, ಕಾಲದ್ರವ್ಯ ಈ ಆರು ದ್ರವ್ಯಗಳಲ್ಲಿ ಕಾಲವನ್ನು ಹೇಳಿರುವುದರಿಂದಲೂ, ಯುಕ್ತಿಯಿಂದಲೂ ಕಾಲವು ಇದೆಯೆಂದು ಗೊತ್ತಾಗುತ್ತದೆ. ಯುಕ್ತಿ ಯಾವುದೆಂದರೆ:— ಹುಡುಗನು ಸಿಂಹವಾಗಿದ್ದಾನೆ ಎಂಬುವಾಗ ನಿಜವಾದ ಸಿಂಹವಿಲ್ಲದಿದ್ದರೆ ಹುಡುಗನಲ್ಲಿ ಸಿಂಹದ ಆರೋಪವನ್ನು ಮಾಡುವುದಕ್ಕೆ ಆಗುವುದಿಲ್ಲ. ಮುಖ್ಯವಾದ ಸಿಂಹವಿರುವುದರಿಂದಲೇ ಅದರ ಕ್ರೂರತೆ ಶೌರ್ಯಾದಿಧರ್ಮದ ಸಾದೃಶ್ಯದಿಂದ ಹುಡುಗನಲ್ಲಿ ಹೇಗೆ ಸಿಂಹದ ಆರೋಪವನ್ನು ಮಾಡುತ್ತಾರೋ ಹಾಗೆಯೇ ಸಮಯ, ಆವಲಿ, ಘಂಟೆ, ದಿನ, ಪಕ್ಷ ಮೊದಲಾದ ವ್ಯವಹಾರಕಾಲದ ಜ್ಞಾನವಾಗುವುದರಿಂದ ಮುಖ್ಯಕಾಲವು ಇದೆಯೆಂದು ಗೊತ್ತಾಗುತ್ತದೆ. ಮುಖ್ಯವಿಲ್ಲದೆ ಗೌಣವಿರುವುದಿಲ್ಲ. ಗೌಣವಾದ ವ್ಯವಹಾರಕಾಲವು ಪ್ರಸಿದ್ಧವಾಗಿರುವುದರಿಂದ ಮುಖ್ಯ ಕಾಲವೂ ಸಿದ್ಧವಾಯಿತು.

**ಪ್ರದೇಶಪ್ರಚಯಾಪಾಯಾತ್ಕಾಲಸ್ಯಾನಸ್ತಿಕಾಯತಾ ।**
**ಗುಣಪ್ರಚಯಯೋಗೋಸ್ಯ ದ್ರವ್ಯತ್ವಾದಸ್ತಿ ಸೋಸ್ತ್ಯತಃ ॥ ೮ ॥**

ಅನೇಕ ಪ್ರದೇಶಗಳನ್ನು ಆಕ್ರಮಿಸಿಕೊಂಡಿರುವುದಕ್ಕೆ ಕಾಯವೆಂದೂ ಇರುವಿಕೆಗೆ ಅಸ್ತಿಯೆಂದೂ ಇವೆರಡು ಧರ್ಮಗಳೂ ಇರುವ ಪದಾರ್ಥಕ್ಕೆ ಅಸ್ತಿಕಾಯವೆಂದೂ ಹೆಸರು. ನಿಶ್ಚಯಕಾಲವು ಒಂದೊಂದು ಪ್ರದೇಶದಲ್ಲಿ ಬೇರೆಬೇರೆಯಾಗಿ ಒಂದೊಂದೇಯಿರುವುದರಿಂದ ಕಾಯವಲ್ಲ. ಕಾಲವು ದ್ರವ್ಯವಾಗಿರುವುದರಿಂದ ಅನೇಕ ಗುಣಗಳನ್ನೊಳಗೊಂಡಿದೆ. ಗುಣಗಳ ಸಮುದಾಯಕ್ಕೆ ದ್ರವ್ಯವೆಂದು ಹೆಸರು. ಇದರಿಂದ ಅಸ್ತಿತ್ವವು ಸಿದ್ಧವಾಯಿತು. ಹಿಂದೆ ಹೇಳಿದಂತೆ ಕಾಲವು ಅನೇಕ ಪ್ರದೇಶವರ್ತಿಯಲ್ಲದಿರುವುದರಿಂದ ಅಸ್ತಿಕಾಯವಲ್ಲ.

**ಅಸ್ತಿಕಾಯಶ್ರುತಿರ್ವಕ್ತಿ ಕಾಲಸ್ಯಾನಸ್ತಿಕಾಯತಾಮ್ ।**
**ಸರ್ವಸ್ಯ ಸವಿಪಕ್ಷತ್ವಾಜ್ಜೀವಕಾಯಶ್ರುತಿರ್ಯಥಾ ॥ ೯ ॥**

ಜೀವವೆಂದು ಹೇಳುವುದರಿಂದ ಇದಕ್ಕೆ ಪ್ರತಿಪಕ್ಷವಾದ ಅಜೀವವೂ ಕಾಯವೆಂದು ಹೇಳುವುದರಿಂದ ಇದಕ್ಕೆ ವಿರುದ್ಧವಾದ ಅಕಾಯವೂ ಇದೆಯೆಂದು ಹೇಗೆ ಸಿದ್ಧವಾಗುತ್ತದೋ ಹಾಗೆಯೇ ಎಲ್ಲಾ ಧರ್ಮಗಳೂ ಪ್ರತಿಪಕ್ಷ ಸಹಿತಗಳಾಗಿರುವುದರಿಂದ ಜೀವ ಮೊದಲಾದ ಐದು ದ್ರವ್ಯಗಳು ಅಸ್ತಿಕಾಯಗಳೆಂದು ಹೇಳಿದುದರಿಂದಲೇ ಕಾಲವು ಅಸ್ತಿಕಾಯವಲ್ಲವೆಂದು ಸಿದ್ಧವಾಗುತ್ತದೆ.

**ಕಾಲೋನ್ಯೋ ವ್ಯವಹಾರಾತ್ಮಾ ಮುಖ್ಯಕಾಲವ್ಯ[೧]ಪಾಶ್ರಯಃ ।**
**ಪರಾಪರತ್ವಸಂಸೂಚ್ಯೋ ವರ್ಣಿತಃ ಸರ್ವದರ್ಶಿಭಿಃ ॥ ೧೦ ॥**

ಮುಖ್ಯಕಾಲವನ್ನು ಆಶ್ರಯಿಸಿರುವ ವ್ಯವಹಾರಕಾಲವು ಮುಖ್ಯಕಾಲದಿಂದ ಬೇರೆಯಾದುದು. ಪದಾರ್ಥಗಳಲ್ಲಾಗುವ ಹಳೆಯದು ಹೊಸದೆಂಬ ಪರ್ಯಾಯಗಳನ್ನು ಈ ವ್ಯವಹಾರಕಾಲವು ಸೂಚಿಸುತ್ತದೆಂದು ಸರ್ವಜ್ಞರು ವರ್ಣಿಸಿರುತ್ತಾರೆ.

**ವರ್ತಿತೋ ದ್ರವ್ಯ[೨]ಕಾಲೇನ ವರ್ತನಾಲಕ್ಷಣೇನ ಯಃ ।**
**ಕಾಲಃ ಪೂರ್ವಾಪರೀಭೂತೋ ವ್ಯವಹಾರಾಯ [೩]ಕಲ್ಪತೇ ॥ ೧೧ ॥**

ವರ್ತನೆಯೇ ಲಕ್ಷಣವಾಗಿಯುಳ್ಳ ಮುಖ್ಯಕಾಲದಿಂದ ಪರಿವರ್ತನೆ ಮಾಡಲ್ಪಟ್ಟ ಭೂತಭವಿಷ್ಯದ್ವರ್ತಮಾನರೂಪವಾದ ಕಾಲವೇ ವ್ಯವಹಾರಕ್ಕೋಸ್ಕರ ಸಮರ್ಥವಾಗುತ್ತದೆ.

೧ ಣ್ಯಂತಾದನಪ್ರತ್ಯಯಃ. ೨ ಉಪಕಾರೇ. ೩ ವರ್ದ್ಧಿತಃ. ೪ ಸ್ವಸಾಮರ್ಥ್ಯಾತ್. ೫ ಯಥಾಯೋಗ್ಯಂ. ೬ ಸಂಕರಃ.

೧ ಸಂಶ್ರಯಃ. ೨ ಮುಖ್ಯಕಾಲೇನ. ೩ ಸಮರ್ಥೋ ಭವತಿ, ವ್ಯವಹಾರಾಖ್ಯೋ ಭವತೀತ್ಯರ್ಥಃ.

**ಸಮಯಾವಲಿಕೋಚ್ಛ್ವಾಸನಾಲಿಕಾದಿಪ್ರಭೇದತಃ ।**
**ಜ್ಯೋತಿಶ್ಚಕ್ರಭ್ರಮಾಯತ್ತಂ ಕಾಲಚಕ್ರಂ ವಿದುರ್ಬುಧಾಃ ॥ ೧೨ ॥**

ಸಮಯ, ಆವಲಿಕಾ, ಉಚ್ಛ್ವಾಸ, ಗಳಿಗೆ, ಮೊದಲಾದುವುಗಳು ವ್ಯವಹಾರ ಕಾಲದ ಭೇದಗಳು. ಸೂರ್ಯಾದಿಜ್ಯೋತಿಶ್ಚಕ್ರದ ಪರಿಭ್ರಮಣೆಯಿಂದ ಈ ಭೇದ ಗಳುಂಟಾಗುತ್ತವೆ. ಇದನ್ನು ಜ್ಞಾನಿಗಳು ಕಾಲಚಕ್ರವೆಂದು ತಿಳಿಯುತ್ತಾರೆ.

**ಭವಾಯುಃಕಾಯಕರ್ಮಾದಿಸ್ಥಿತಿ[೧]ಸಂಕಲನಾತ್ಮಕಃ ।**
**ಸೋಽನಂತಸಮಯಸ್ತಸ್ಯ ಪರಿವರ್ತೋಽಪ್ಯನಂತಧಾ ॥ ೧೩ ॥**

ಭವಸ್ಥಿತಿ, ಆಯುಃಸ್ಥಿತಿ, ಕಾಯಸ್ಥಿತಿ, ಕರ್ಮಸ್ಥಿತಿ ಮೊದಲಾದ ಎಲ್ಲಾ ಕಾಲವನ್ನು ಸೇರಿಸಿದರೆ ಆ ವ್ಯವಹಾರಕಾಲವು ಅನಂತಸಮಯಗಳುಳ್ಳುದಾಗುತ್ತದೆ. ಆ ಕಾಲದ ಪರಿವರ್ತನೆಯು ಕೂಡ ಅನಂತಪ್ರಕಾರವಾಗಿದೆ.

**ಉತ್ಸರ್ಪಿಣ್ಯವಸರ್ಪಿಣ್ಯೌ ದ್ವೌ ಭೇದೌ ತಸ್ಯ ಕೀರ್ತಿತೌ ।**
**ಉತ್ಸರ್ಪಾದವಸರ್ಪಾಚ್ಚ ಬಲಾಯುರ್ದೇಹವ[೨]ರ್ಷ್ಮಣಾಮ್ ॥ ೧೪ ॥**

ಆ ವ್ಯವಹಾರಕಾಲವು ಉತ್ಸರ್ಪಿಣೀ, ಅವಸರ್ಪಿಣೀಭೇದದಿಂದ ಎರಡುಪ್ರಕಾರವಾಗಿದೆ. ಉತ್ಸರ್ಪಿಣೀಕಾಲದಲ್ಲಿ ಮುಖ್ಯವಾಗಿ ಮನುಷ್ಯರ ಶಕ್ತಿ, ಆಯುಷ್ಯ, ಶರೀರಪ್ರಮಾಣ ಇವುಗಳು ವೃದ್ಧಿಯಾಗುತ್ತ ಹೋಗುತ್ತದೆ. ಅವಸರ್ಪಿಣೀಕಾಲದಲ್ಲಿ ಅವು ಕಡಿಮೆಯಾಗುತ್ತ ಹೋಗುತ್ತವೆ.

**ಕೋಟೀಕೋಟ್ಯೋ ದಶೈಕಸ್ಯ ಪ್ರಮಾ ಸಾಗರಸಂಖ್ಯಯಾ ।**
**ಶೇಷಸ್ಯಾಪ್ಯೇವಮೇವೇಷ್ಟಾ ತಾವುಭೌ ಕಲ್ಪ ಇಷ್ಯತೇ ॥ ೧೫ ॥**

ಅವೆರಡರಲ್ಲಿ ಉತ್ಸರ್ಪಿಣೀಕಾಲವು ಹತ್ತುಕೋಟೀ ಕೋಟಿಸಾಗರ ಪರಿಮಿತವಾದುದು. ಉಳಿದ ಅವಸರ್ಪಿಣೀಕಾಲವೂ ಹತ್ತುಕೋಟೀ ಕೋಟಿಸಾಗರಪರಿಮಿತವಾದುದು. ಅವೆರಡೂ ಸೇರಿ ಇಪ್ಪತ್ತುಕೋಟೀ ಕೋಟಿಸಾಗರಕಾಲಕ್ಕೆ ಕಲ್ಪವೆಂದು ಹೆಸರು.

**ಷೋಢಾ ಸ ಪುನರೇಕೈಕೋ ಭಿದ್ಯತೇ [೩]ಸ್ವಭಿದಾತ್ಮಭಿಃ ।**
**ತನ್ನಾಮಾನ್ಯನುಕೀರ್ತ್ಯಂತೇ ಶೃಣು ರಾಜನ್ಯಥಾಕ್ರಮಮ್ ॥ ೧೬ ॥**

ಸ್ವಕೀಯಭೇದಸ್ವಭಾವಗಳಿಂದ ಆ ಒಂದೊಂದು ಕಾಲವು ಆರಾರು ಭೇದವುಳ್ಳುದಾಗಿದೆ. ಎಲೈ ! ರಾಜನೆ ! ಆ ಹೆಸರುಗಳನ್ನು ಕ್ರಮವಾಗಿ ಹೇಳುತ್ತೇವೆ. ಕೇಳು.

**ದ್ವಿರುಕ್ತಸುಷಮಾದ್ಯಾಸೀತ್ ದ್ವಿತೀಯಾ ಸುಷಮಾ ಮತಾ ।**
**ಸುಷಮಾದುಃಷಮಾಂತಾನ್ಯಾ ಸುಷಮಾಂತಾ ಚ ದುಃಷಮಾ ॥ ೧೭ ॥**

ಮೊದಲನೆಯ ಭೇದವು ಸುಷಮಸುಷಮಾವಾಗಿದೆ. ಎರಡನೆಯದು ಸುಷಮಾ, ಮೂರನೆಯದು ಸುಷಮದುಃಷಮಾ, ನಾಲ್ಕನೆಯದು ದುಃಷಮಸುಷಮಾ.

**ಪಂಚಮೀ ದುಃಷಮಾ ಜ್ಞೇಯಾ ಸಮಾ ಷಷ್ಠ್ಯತಿದುಃಷಮಾ ।**
**ಭೇದಾ ಇಮೇವ ಸರ್ಪಿಣ್ಯಾ ಉತ್ಸರ್ಪಿಣ್ಯಾ [೪]ವಿಪರ್ಯಯಃ ॥ ೧೮ ॥**

ಐದನೆಯದು ದುಃಷಮಾ, ಆರನೆಯದು ಅತಿದುಃಷಮಾ, ಈ ಆರು ಅವಸರ್ಪಿಣೀಕಾಲದ ಭೇದಗಳಾಗಿವೆ. ಹೀಗೆ ಉತ್ಸರ್ಪಿಣಿಯ ಆರುಭೇದಗಳನ್ನು ವಿಪರೀತವಾಗಿ ತಿಳಿಯಬೇಕು. ಅಂದರೆ ಅತಿದುಃಷಮಾ, ದುಃಷಮಾ, ದುಃಷಮಸುಷಮಾ, ಸುಷಮದುಃಷಮಾ, ಸುಷಮಾ, ಸುಷಮಸುಷಮಾವೆಂದು ತಿಳಿಯಬೇಕು.

---

೧ ಸಂಯೋಜನಾತ್ಮಕಃ. ೨ ಪ್ರಮಾಣಾನಾಂ. ೩ ಸ್ವಕೀಯಭೇದಸ್ವಭಾವೈಃ. ೪ ಅತಿದುಃಷಮಾಮಾದಿಂ ಕೃತ್ವಾ ಸುಷಮಾಸುಷಮಾಮಂತ್ಯಾಂ ಕುರ್ಯಾದಿತ್ಯರ್ಥಃ.

**ಸಮಾ ಕಾಲವಿಭಾಗಃ ಸ್ಯಾತ್ಸುದುಸಾವರ್ಹಗರ್ಹಯೋಃ ।**
**ಸುಷಮಾ ದುಃಷಮೇತ್ಯೇವಮತೋಽನ್ವರ್ಥತ್ವಮೇತಯೋಃ ॥ ೧೯ ॥**

ಕಾಲವಿಭಾಗಕ್ಕೆ ಸಮಾವೆಂದು ಹೆಸರು. ಸು ಎಂಬ ಶಬ್ದ(ಉಪಸರ್ಗ)ವು ಶ್ರೇಷ್ಠಾರ್ಥವಾಚಿಯಾಗಿದೆ. ದುರ್(ದುಃ)ಎಂಬ ಶಬ್ದವು ಹೀನಾರ್ಥವಾಚಿಯಾಗಿದೆ. ಈ ಕಾರಣದಿಂದ ಸುಷಮಾ (ಉತ್ತಮಕಾಲವಿಭಾಗ) ದುಃಷಮಾ (ಕೆಟ್ಟಕಾಲ ವಿಭಾಗ)ವೆಂಬುದು ಸು, ದುಃ ಶಬ್ದಗಳ ಸಾರ್ಥಕನಾಮವಾಗಿದೆ.

**ಉತ್ಸರ್ಪಿಣ್ಯವಸರ್ಪಿಣ್ಯೌ ಕಾಲೌ ಸಾಂತರ್ಭಿದಾವಿಮೌ ।**
**ಸ್ಥಿತ್ಯುತ್ಸರ್ಪಾವಸರ್ಪಾಭ್ಯಾಂ ಲಬ್ಧಾನ್ವರ್ಥಾಭಿಧಾನಕೌ ॥ ೨೦ ॥**

ಉತ್ಸರ್ಪಿಣೀಕಾಲದಲ್ಲಿ ಆಯುಷ್ಯ ಸ್ಥಿತಿ ಮೊದಲಾದುವು ಹೆಚ್ಚುತ್ತ ಹೋಗುವುದರಿಂದಲೂ ಅವಸರ್ಪಿಣೀಕಾಲದಲ್ಲಿ ಕಡಿಮೆಯಾಗುತ್ತ ಹೋಗುವುದ ರಿಂದಲೂ ಆರಾರು ಭೇದಗಳನ್ನೊಳಗೊಂಡಿರುವ ಈ ಉತ್ಸರ್ಪಿಣೀ ಅವಸರ್ಪಿಣೀ ಕಾಲಗಳು ಸಾರ್ಥಕವಾದ ಹೆಸರುಗಳುಳ್ಳುವಾಗಿವೆ.

**ಕಾಲಚಕ್ರಪರಿಭ್ರಾಂತ್ಯಾ ಷಟ್ಸಮಾಪರಿವರ್ತನೈಃ ।**
**ತಾವುಭೌ ಪರಿವರ್ತೇತೇ ತಾಮಿಸ್ರೇತರಪಕ್ಷವತ್ ॥ ೨೧ ॥**

ಕೃಷ್ಣಪಕ್ಷ ಶುಕ್ಲಪಕ್ಷಗಳು ಒಂದರನಂತರ ಒಂದು ತಿರುಗುತ್ತಿರುವಂತೆ, ಹಿಂದೆಹೇಳಿದ ಆರು ಕಾಲಭೇದಗಳ ಪರಿವರ್ತನೆಗಳಿಂದ ಕೂಡಿದ ಆ ಉತ್ಸರ್ಪಿಣೀ ಅವಸರ್ಪಿಣೀ ಕಾಲಗಳು ತಿರುಗುತ್ತಿರುತ್ತವೆ.

**ಪುರಾಸ್ಯಾಮವಸರ್ಪಿಣ್ಯಾಂ ಕ್ಷೇತ್ರೇಽಸ್ಮಿನ್ಭರತಾಹ್ವಯೇ ।**
**ಮಧ್ಯಮಂ ಖಂಡಮಾಶ್ರಿತ್ಯ ವವೃತೇ ಪ್ರಥಮಾ ಸಮಾ ॥ ೨೨ ॥**

ಈಗ ನಡೆಯುತ್ತಿರುವ ಅವಸರ್ಪಿಣೀಕಾಲದಲ್ಲಿ ಮೊದಲು ಸುಷಮ ಸುಷಮಾವೆಂಬ ಕಾಲವು ಈ ಭರತಕ್ಷೇತ್ರದ ಆರ್ಯಖಂಡದಲ್ಲಿ ಪ್ರವರ್ತಿಸಿದ್ದಿತು.

**ಸಾಗರೋಪಮಕೋಟೀನಾಂ ಕೋಟೀ ಸ್ಯಾಚ್ಚತುರಾಹತಾ ।**
**ತಸ್ಯ ಕಾಲಸ್ಯ ಪರಿಮಾ ತದಾ ಸ್ಥಿತಿರಿಯಂ ಮತಾ ॥ ೨೩ ॥**

ನಾಲ್ಕು ಕೋಟೀ ಕೋಟಿಸಾಗರೋಪಮಕಾಲದವರೆಗೆ ಆ ಸುಷಮ ಸುಷಮಾ ಕಾಲದ ಪರಿಸ್ಥಿತಿಯಿದ್ದಿತು.

**ದೇವೋತ್ತರಕುರುಕ್ಷ್ಮಾಸು ಯಾ ಸ್ಥಿತಿಃ ಸಮವಸ್ಥಿತಾ ।**
**ಸಾ ಸ್ಥಿತಿರ್ಭಾರತೇ ವರ್ಷೇ ಯುಗಾರಂಭೇ ಸ್ಮ ಜಾಯತೇ ॥ ೨೪ ॥**

ದೇವಕುರು, ಉತ್ತರಕುರುಗಳೆಂಬ ಉತ್ತಮಭೋಗ ಭೂಮಿಗಳಲ್ಲಿ ಯಾವ ಸ್ಥಿತಿಯಿದ್ದಿತ್ತೋ ಅದೇ ಸ್ಥಿತಿಯು ಅವಸರ್ಪಿಣೀಕಾಲದ ಆರಂಭದಲ್ಲಿ ಈ ಭರತಕ್ಷೇತ್ರದಲ್ಲಿ ಉಂಟಾಯಿತು.

**ತದಾ ಸ್ಥಿತಿರ್ಮನುಷ್ಯಾಣಾಂ ತ್ರಿಪಲ್ಯೋಪಮಸಮ್ಮಿತಾ ।**
**ಷಟ್ಸಹಸ್ರಾಣಿ ಚಾಪಾನಾಮುತ್ಸೇಧೋ ವಪುಷಃ ಸ್ಮೃತಃ ॥ ೨೫ ॥**

ಆಗ ಮನುಷ್ಯರ ಆಯುಷ್ಯಸ್ಥಿತಿಯು ಮೂರು ಪಲ್ಯೋಪಮವಾಗಿದ್ದಿತು. ಶರೀರದ ಪರಿಮಾಣವು ಆರುಸಾವಿರ ಧನುಸ್ಸಾಗಿದ್ದಿತೆಂದು ಹೇಳಲ್ಪಟ್ಟಿದೆ.

**ವಜ್ರಾಸ್ಥಿಬಂಧನಾಃ ಸೌಮ್ಯಾಃ ಸುಂದರಾಕಾರಚಾರವಃ ।**
**ನಿಷ್ಟಪ್ತಕನಕಚ್ಛಾಯಾ ದೀಪ್ಯಂತೇ ತೇ ನರೋತ್ತಮಾಃ ॥ ೨೬ ॥**

ಆ ನರೋತ್ತಮರು ವಜ್ರಮಯವಾದ ಮೂಳೆಗಳುಳ್ಳವರಾಗಿಯೂ ಸೌಮ್ಯ (ಪ್ರಸನ್ನ)ರಾಗಿಯೂ ಸುಂದರವಾದ ಆಕಾರದಿಂದ ಮನೋಹರರಾಗಿಯೂ ಕಾಯಿಸಿದ ಚಿನ್ನದಂತೆ ಶರೀರಕಾಂತಿಯುಳ್ಳವರಾಗಿಯೂ ಪ್ರಕಾಶಿಸುತ್ತಿದ್ದರು.

**ಮಕುಟಂ ಕುಂಡಲಂ ಹಾರೋ ಮೇಖಲಾ ಕಟಕಾಂಗದೌ ।**
**ಕೇಯೂರಂ ಬ್ರಹ್ಮಸೂತ್ರಂ ಚ ತೇಷಾಂ ಶಶ್ವದ್ವಿಭೂಷಣಮ್ ॥ ೨೭ ॥**

ಅವರು ಯಾವಾಗಲೂ ಕಿರೀಟವನ್ನೂ ಕರ್ಣಕುಂಡಲವನ್ನೂ ಕೊರಳಿಗೆ ರತ್ನದ ಹಾರವನ್ನೂ ಸೊಂಟಕ್ಕೆ ಉಡುದಾರವನ್ನೂ ಕೈಗಳಿಗೆ ಕಡಗ ಭುಜಕೀರ್ತಿ (ಬಾಜೂಬಂದು) ಗಳನ್ನೂ ತೋಳುಬಳೆಯನ್ನೂ ಯಜ್ಞೋಪವೀತವನ್ನೂ ಧರಿಸುತ್ತಿದ್ದರು.

**ತೇ ಸ್ವಪುಣ್ಯೋದಯೋದ್ಭೂತರೂಪಲಾವಣ್ಯಸಂಪದಃ ।**
**ರಂರಮ್ಯಂತೇ ಚಿರಂ ಸ್ತ್ರೀಭಿಃ ಸುರಾ ಇವ ಸುರಾಲಯೇ ॥ ೨೮ ॥**

ಸ್ವರ್ಗದಲ್ಲಿ ದೇವತೆಗಳು ಅಪ್ಸರಸ್ತ್ರೀಯರೊಡನೆ ಕ್ರೀಡಿಸುತ್ತಿರುವಂತೆ, ಆ ನರೋತ್ತಮ(ಆರ್ಯ)ರು ತಮ್ಮ ಪುಣ್ಯದಿಂದುಂಟಾದ ರೂಪಲಾವಣ್ಯ ಸಂಪತ್ತುಗಳುಳ್ಳವರಾಗಿ ಬಹುಕಾಲದವರೆಗೂ ಸ್ತ್ರೀಯರೊಡನೆ ಕ್ರೀಡಿಸುತ್ತಿರುತ್ತಾರೆ.

**ಮಹಾಸತ್ತ್ವಾ ಮಹಾಧೈರ್ಯಾ ಮಹೋರಸ್ಕಾ ಮಹೌಜಸಃ ।**
**ಮಹಾನುಭಾವಾಸ್ತೇಸರ್ವೇ ಮಹೀಯಂತೇ ಮಹೋದಯಾಃ ॥ ೨೯ ॥**

ಆ ನರೋತ್ತಮರೆಲ್ಲ ಮಹಾಬಲಶಾಲಿಗಳೂ ಧೈರ್ಯಶಾಲಿಗಳೂ ವಿಶಾಲವಾದ ಎದೆಯುಳ್ಳವರೂ ಮಹಾತೇಜಸ್ವಿಗಳೂ ಮಹಾಪ್ರಭಾವವುಳ್ಳವರೂ ಮಹಾಭಾಗ್ಯ ಶಾಲಿಗಳೂ ಆಗಿ ಪೂಜ್ಯರೆನಿಸಿಕೊಳ್ಳುತ್ತಾರೆ.

**ತೇಷಾಮಾಹಾರಸಂಪ್ರೀತಿರ್ಜಾಯತೇ ದಿವಸೈಸ್ತ್ರಿ[1]ಭಿಃ ।**
**ಕುವಲೀ[2]ಫಲಮಾತ್ರಂ ಚ ದಿವ್ಯಾನ್ನಂ [3]ವಿಷ್ವಣಂತಿ ತೇ ॥ ೩೦ ॥**

ಅವರಿಗೆ ಆಹಾರವನ್ನು ತೆಗೆದುಕೊಳ್ಳಬೇಕೆಂಬ ಇಚ್ಛೆಯು ಮಧ್ಯದಲ್ಲಿ ಮೂರುದಿವಸ ಬಿಟ್ಟು ಉಂಟಾಗುತ್ತದೆ. ಆಗ ಅವರು ಬೋರೆಕಾಯಿಯಷ್ಟು ಕಲ್ಪವೃಕ್ಷದ ದಿವ್ಯವಾದ ಆಹಾರವನ್ನು ಭೋಜನಮಾಡುತ್ತಾರೆ.

**[4]ನಿರ್ವ್ಯಾಯಾಮಾ [5]ನಿರಾತಂಕಾ ನಿರ್ನೀಹಾರಾ [6]ನಿರಾಧಯಃ ।**
**ನಿಃಸ್ವೇದಾಸ್ತೇ [7]ನಿರಾಬಾಧಾ ಜೀವಂತಿ [8]ಪುರುಷಾಯುಷಮ್ ॥ ೩೧ ॥**

ಅವರು ಶ್ರಮವನ್ನುಂಟುಮಾಡುವ ಗಮನಾದಿವ್ಯಾಪಾರರಹಿತರೂ ರೋಗ ಬಾಧೆಯಿಲ್ಲದವರೂ ಮಲಮೂತ್ರಾದಿಬಾಧೆಯಿಲ್ಲದವರೂ ಮನೋವ್ಯಥೆಯಿಲ್ಲ ದಿರುವವರೂ ಬೆವರು ಇಲ್ಲದವರೂ ಬೇರೆಯವರ ಬಾಧೆಯಿಲ್ಲದವರೂ ಆಗಿ, ಅಕಾಲಮರಣವಿಲ್ಲದೆ ತಮ್ಮ ಆಯುಷ್ಯಪೂರ್ತಿಯಾಗುವವರೆಗೂ ಬದುಕುತ್ತಾರೆ.

**ಸ್ತ್ರಿಯೋಽಪಿ ತಾವದಾಯುಷ್ಕಾಸ್ತಾವದುತ್ಸೇಧವೃತ್ತಯಃ ।**
**ಕಲ್ಪದ್ರುಮೇಷು ಸಂಸಕ್ತಾಃ ಕಲ್ಪವಲ್ಲ್ಯ ಇವೋಜ್ಜ್ವಲಾಃ ॥ ೩೨ ॥**

ಆಗಿನ ಸ್ತ್ರೀಯರು ಕೂಡ ಪುರುಷರಷ್ಟೇ ಆಯುಷ್ಯವುಳ್ಳವರಾಗಿಯೂ ಅವರಷ್ಟೇ ಶರೀರಪರಿಮಾಣವುಳ್ಳವರಾಗಿಯೂ ಕಲ್ಪವೃಕ್ಷಗಳಲ್ಲಿ ಸಂಬಂಧಿಸಿಕೊಂಡಿರುವ ಕಲ್ಪಲತೆಗಳೋಪಾದಿಯಲ್ಲಿ, ಪುರುಷರಲ್ಲಿ ಅನುರಕ್ತರಾಗಿಯೂ ಪ್ರಕಾಶಿಸುತ್ತಿದ್ದರು.

೧ ತ್ರೀಣಿ ದಿನಾನ್ಯಂತರಿತಾನೀತ್ಯರ್ಥಃ. ೨ ಬದರೀಫಲಂ. ೩ ಅಶ್ನಂತಿ. ೪ ಶರೀರಾಯಾಸಜನನೀ ಕ್ರಿಯಾ ವ್ಯಾಯಾಮಃ, ಶ್ರಮಜನಕಗಮನಾದಿವ್ಯಾಪಾರರಹಿತಾ ಇತ್ಯರ್ಥಃ. ೫ ನಿರಾಮಯಾಃ. ೬ ಪುಂಸ್ಯಾಧಿರ್ಮಾನಸೀ ವ್ಯಥಾ. ೭ ಪರಕೃತಬಾಧಾರಹಿತಾಃ. ೮ ಆತ್ಮಾಯುಃಪರ್ಯಂತಂ.

**ಪುರುಷೇಷ್ವನುರಕ್ತಾಸ್ತಾಸ್ತೇ ಚ ತಾಸ್ವನುರಾಗಿಣಃ ।**
**ಯಾವಜ್ಜೀವಮಸಂಕ್ಲಿಷ್ಟಾ ಭುಂಜತೇ ಭೋಗಸಂಪದಃ ॥ ೩೩ ॥**

ಆ ಸ್ತ್ರೀಯರು ತಮ್ಮ ಪುರುಷರಲ್ಲಿ ಅನುರಾಗವುಳ್ಳವರಾಗಿಯೂ ಪುರುಷರು ತಮ್ಮ ಸ್ತ್ರೀಯರಲ್ಲಿ ಪ್ರೀತಿಯುಳ್ಳವರಾಗಿಯೂ ತಮ್ಮ ಆಯುಷ್ಯವಿರುವಪರ್ಯಂತ ಯಾವತರಹದ ಕ್ಲೇಶವೂ ಇಲ್ಲದೆ ಭೋಗಸಂಪತ್ತುಗಳನ್ನು ಅನುಭವಿಸುತ್ತಿರುತ್ತಾರೆ.

**ಸ್ವಭಾವಸುಂದರಂ ರೂಪಂ ಸ್ವಭಾವಮಧುರಂ ವಚಃ ।**
**ಸ್ವಭಾವಚತುರಾ ಚೇಷ್ಟಾ ತೇಷಾಂ ಸ್ವರ್ಗಜುಷಾಮಿವ ॥ ೩೪ ॥**

ಸ್ವರ್ಗದ ದೇವತೆಗಳಂತೆ ಅವರು ಸ್ವಭಾವದಿಂದಲೇ ಸುಂದರವಾದ ರೂಪವುಳ್ಳವರೂ ಸ್ವಭಾವದಿಂದಲೇ ಮಧುರವಾದ ಮಾತುಳ್ಳವರೂ ಸ್ವಭಾವದಿಂದಲೇ ಜಾಣ್ಮೆಯಾದ ಚೇಷ್ಟೆ (ವ್ಯಾಪಾರ)ಯುಳ್ಳವರೂ ಆಗಿರುತ್ತಾರೆ.

**ರುಚ್ಯಾಹಾರಗೃಹಾತೋದ್ಯಮಾಲ್ಯಭೂಷಾಂಬರಾದಿಕಮ್ ।**
**ಭೋಗಸಾಧನಮೇತೇಷಾಂ ಸರ್ವಂ ಕಲ್ಪತರೂದ್ಭವಮ್ ॥ ೩೫ ॥**

ಇವರಿಗೆ ಇಷ್ಟವಾದ ಭೋಜನ, ಮನೆ, ವಾದ್ಯ, ಮಾಲೆ, ಆಭರಣ, ವಸ್ತ್ರ ಮೊದಲಾದ ಭೋಗೋಪಭೋಗಸಾಮಗ್ರಿಗಳೆಲ್ಲ ಕಲ್ಪವೃಕ್ಷಗಳಿಂದುಂಟಾದುವು ಗಳೇ ಆಗಿದ್ದುವು.

**ಮಂದಗಂಧವಹಾಧೂತಚಲದಂಶುಕಪಲ್ಲವಾಃ ।**
**ನಿತ್ಯಾಲೋಕಾ ವಿರಾಜಂತೇ ಕಲ್ಪೋಪಪದಪಾದಪಾಃ ॥ ೩೬ ॥**

ಪರಿಮಳವಿಶಿಷ್ಟವಾದ ಮಂದಮಾರುತದಿಂದ ಚಲಿಸುತ್ತಿರುವ ತಳಿರುಗಳೆಂಬ ವಸ್ತ್ರಗುಳುಳ್ಳ ಕಲ್ಪವೃಕ್ಷಗಳು ಯಾವಾಗಲೂ ಪ್ರಕಾಶಮಾನಗಳಾಗಿ ಶೋಭಿಸು ತ್ತಿದ್ದುವು.

**ಕಾಲಾನುಭಾವಸಂಭೂತಕ್ಷೇತ್ರಸಾಮರ್ಥ್ಯಬೃಂಹಿತಾಃ ।**
**ಕಲ್ಪದ್ರುಮಾಸ್ತದಾ ತೇಷಾಂ ಕಲ್ಪಂತೇಽಭೀಷ್ಟಸಿದ್ಧಯೇ ॥ ೩೭ ॥**

ಸುಷಮಸುಷಮಾವೆಂಬ ಕಾಲದ ಪ್ರಭಾವದಿಂದ ಆರ್ಯಖಂಡದಲ್ಲಿ ವಿಲಕ್ಷಣವಾದ ಸಾಮರ್ಥ್ಯವುಂಟಾಗುತ್ತದೆ. ಆ ಸಾಮರ್ಥ್ಯದಿಂದ ವೃದ್ಧಿ ಹೊಂದುತ್ತಿರುವ ಕಲ್ಪವೃಕ್ಷಗಳು ಆಗ ಆರ್ಯರ ಇಷ್ಟಾರ್ಥವನ್ನು ಪೂರ್ತಿಮಾಡುವುದಕ್ಕೆ ಸಮರ್ಥವಾಗುತ್ತವೆ.

**ಮನೋಭಿ[1]ಲಷಿತಾನ್ಭೋಗಾನ್ ಯಸ್ಮಾತ್ಪುಣ್ಯಕೃತಾಂ ನೃಣಾಮ್ ।**
**ಕಲ್ಪಯಂತಿ ತತಸ್ತಜ್ಜ್ಞೈರ್ನಿರುಕ್ತಾಃ ಕಲ್ಪಪಾದಪಾಃ ॥ ೩೮ ॥**

ಸುಕೃತವನ್ನು ಮಾಡಿದ ಆ ಮನುಷ್ಯರ ಮನಸ್ಸಿಗೆ ಇಷ್ಟವಾದ ಭೋಗ ಸಾಮಗ್ರಿಗಳನ್ನು ಕಲ್ಪಿಸಿಕೊಡುವುದರಿಂದ ಆ ವೃಕ್ಷಗಳಿಗೆ ಆ ವಿಷಯವನ್ನು ತಿಳಿದವರು (ಗಣಧರಾದಿಗಳು) ಕಲ್ಪವೃಕ್ಷಗಳೆಂದು ಹೇಳುತ್ತಾರೆ.

**[2]ಮದ್ಯತೂರ್ಯವಿಭೂಷಾಸ್ರಗ್ಜ್ಯೋತಿರ್ದೀಪಗೃಹಾಂಗಕಾಃ ।**
**ಭೋಜನಾಮತ್ರವಸ್ತ್ರಾಂಗಾ ದಶಧಾ ಕಲ್ಪಶಾಖಿನಃ ॥ ೩೯ ॥**

ಅಂತಹ ಕಲ್ಪವೃಕ್ಷಗಳು ಮದ್ಯಾಂಗ, ತೂರ್ಯಾಂಗ, ವಿಭೂಷಾಂಗ, ಸ್ರಗಂಗ, ಜ್ಯೋತಿರಂಗ, ದೀಪಾಂಗ, ಗೃಹಾಂಗ, ಭೋಜನಾಂಗ, ಪಾತ್ರಾಂಗ, ವಸ್ತ್ರಾಂಗಗಳೆಂದು ಹತ್ತುಪ್ರಕಾರವಾಗಿವೆ. (ಇಲ್ಲಿ ಮದ್ಯಾಂಗಕಲ್ಪವೃಕ್ಷವು ಮದ್ಯವನ್ನು ಒದಗಿಸಿ ಕೊಡುತ್ತಿದ್ದುದರಿಂದ ಆರ್ಯರು ಮದ್ಯಪಾನಮಾಡುತ್ತಿದ್ದರೆಂದು ಸಿದ್ಧವಾಗು ತ್ತದೆಂದು ಕೆಲವರು ಸಂಶಯಪಡಬಹುದು, ಆದರೆ ಇಲ್ಲಿ ಮದ್ಯಶಬ್ದವು

೧ ರುಚಿತಾನಿತ್ಯಪಿ ಪಾಠಃ. ೨ ತೀವ್ರರಾಗಹೇತುತ್ವಾನ್ಮದ್ಯವನ್ಮದ್ಯಂ.

ಉಪಮಿತಸಮಾಸವಾಗಿರುವುದರಿಂದ ಮದ್ಯದಂತೆ ತೀವ್ರರಾಗೋತ್ಪಾದಕವಾದ ಉತ್ತಮವಸ್ತುವನ್ನು ಕೊಡತಕ್ಕ ಕಲ್ಪವೃಕ್ಷವೆಂದರ್ಥವು).

**ಇತಿ ಸ್ವನಾಮನಿರ್ದಿಷ್ಟಾಂ ಕುರ್ವಂತೋರ್ಥಕ್ರಿಯಾಮಮೀ ।**
**ಸಂಜ್ಞಾಭಿರೇವ ವಿಸ್ಪಷ್ಟಾಸ್ತತೋ ನಾತಿಪ್ರತನ್ಯತೇ ॥ ೪೦ ॥**

ಹೀಗೆ ಈ ಕಲ್ಪವೃಕ್ಷಗಳು ತಮ್ಮ ಹೆಸರಿಗೆ ಅನುಗುಣವಾದ ಕಾರ್ಯವನ್ನು ಮಾಡುವುವುಗಳೆಂಬುದು ಆ ಹೆಸರುಗಳಿಂದಲೇ ಸ್ಪಷ್ಟವಾಗಿರುವುದರಿಂದ ವಿಶೇಷವಾಗಿ ವರ್ಣನೆಮಾಡುವುದಿಲ್ಲ.

**ತಥಾ ಭುಕ್ತ್ವಾ ಚಿರಂ ಭೋಗಾನ್ಸ್ವಪುಣ್ಯಪರಿಪಾಕಜಾನ್ ।**
**ಸ್ವಾಯುರಂತೇ ವಿಲೀಯಂತೇ ತೇ ಘನಾ ಇವ ಶಾರದಾಃ ॥ ೪೧ ॥**

ಹಾಗೆ ಆರ್ಯರು ತಮ್ಮ ಪುಣ್ಯದ ಪರಿಪಾಕ(ಉದಯ)ದಿಂದುಂಟಾದ ಭೋಗಗಳನ್ನು ಬಹುಕಾಲದವರೆಗೂ ಅನುಭವಿಸಿ ಆಯುಷ್ಯವು ಪೂರ್ತಿಯಾದನಂತರ, ಶರತ್ಕಾಲದ ಮೇಘಗಳು ಬಯಲಾಗಿಹೋಗುವಂತೆ, ವಿಲಯವನ್ನು ಹೊಂದುತ್ತಾರೆ.

**ಜೃಂಭಿಕಾರಂಭಮಾತ್ರೇಣ ತತ್ಕಾಲೋತ್ಥಕ್ಷುತೇನ ವಾ ।**
**ಜೀವಿತಾಂತೇ ತನುಂ ತ್ಯಕ್ತ್ವಾ ತೇ ದಿವಂ ಯಾಂತ್ಯನೇನಸಃ ॥ ೪೨ ॥**

ಜೀವಿತದ ಅಂತಕಾಲದಲ್ಲಿ ಪಾಪರಹಿತರಾದ ಆ ಆರ್ಯರು ಆಕಳಿಕೆಯಿಂದಲೂ ಸೀನಿನಿಂದಲೂ ಶರೀರಪರಿತ್ಯಾಗಮಾಡಿ ಸ್ವರ್ಗಕ್ಕೆ ಹೋಗುತ್ತಾರೆ. ಪುರುಷರು ಆಕಳಿಕೆಯಿಂದಲೂ ಸ್ತ್ರೀಯರು ಸೀನಿನಿಂದಲೂ ಮರಣವನ್ನು ಹೊಂದಿ ಸ್ವರ್ಗವನ್ನು ಹೊಂದುತ್ತಾರೆಂದಭಿಪ್ರಾಯವು.

**ಸ್ವಭಾವಮಾರ್ದವಾಯೋಗವಕ್ರತಾದಿಗುಣೈರ್ಯುತಾಃ ।**
**ಭದ್ರಕಾಸ್ತ್ರಿದಿವಂ ಯಾಂತಿ ತೇಷಾಂ ನಾನ್ಯಾ ಗತಿಸ್ತತಃ ॥ ೪೩ ॥**

ಸ್ವಭಾವದಿಂದ ಸರಳವಾದ ಪರಿಣಾಮವುಳ್ಳವರೂ ಮನಸ್ಸಿನಲ್ಲಿಯೂ ವಚನದಲ್ಲಿಯೂ ಕಾಯದಲ್ಲಿಯೂ ವಕ್ರಭಾವವಿಲ್ಲದವರೂ ಆದ ಆ ಭದ್ರಜೀವಗಳು ಮರಣವನ್ನು ಹೊಂದಿ ಸ್ವರ್ಗಕ್ಕೆ ಹೋಗುತ್ತಾರೆ. ಭೋಗಭೂಮಿಯಿಂದ ಅವರಿಗೆ ಬೇರೆಗತಿಯೇ ಇಲ್ಲ.

**ಇತ್ಯಾದ್ಯಃ ಕಾಲಭೇದೋವಸರ್ಪಿಣ್ಯಾ ವರ್ಣಿತೋ ಮನಾಕ್ ।**
**ಉದಕ್ಕುರುಸಮಃ ಶೇಷೋ ವಿಧಿರತ್ರಾವಧಾರ್ಯತಾಮ್ ॥ ೪೪ ॥**

ಈ ಪ್ರಕಾರವಾಗಿ ಅವಸರ್ಪಿಣಿಯ ಮೊದಲನೆಯ ಸುಷಮಸುಷಮಾವೆಂಬ ಕಾಲಭೇದವನ್ನು ಸ್ವಲ್ಪಮಟ್ಟಿಗೆ ವರ್ಣಿಸಿದೆವು. ಇಲ್ಲಿಯ ಬೇರೆವಿಧಿಯನ್ನೆಲ್ಲ ಉತ್ತರಕುರುವಿನಂತೆ ತಿಳಿಯಬೇಕು.

**ತತೋ ಯಥಾಕ್ರಮಂ ತಸ್ಮಿನ್ಕಾಲೇ ಗಲತಿ ಮಂದತಾಮ್ ।**
**ಯಾತಾಸು ವೃಕ್ಷವೀರ್ಯಾಯುಃಶರೀರೋತ್ಸೇಧವೃತ್ತಿಷು ॥ ೪೫ ॥**

**ಸುಷಮಾಲಕ್ಷಣಃ ಕಾಲೋ ದ್ವಿತೀಯಃ ಸಮವರ್ತತ ।**
**ಸಾಗರೋಪಮಕೋಟೀನಾಂ ತಿಸ್ರಃ ಕೋಟ್ಯೋಽಸ್ಯ ಸಮ್ಮಿತಿಃ ॥ ೪೬ ॥**

ಆ ಮೇಲೆ ಕ್ರಮವಾಗಿ ಆ ಸುಷಮಸುಷಮಾಕಾಲವು ಕಳೆಯುತ್ತಿರಲು ಕಲ್ಪವೃಕ್ಷಗಳೂ ಮನುಷ್ಯರಶಕ್ತಿಯೂ ಆಯುಷ್ಯಸ್ಥಿತಿಯೂ ಶರೀರೋತ್ಸೇಧವೂ ಕಡಿಮೆಯಾಗುತ್ತಿರಲು; ಮೂರುಕೋಟೀಕೋಟಿಸಾಗರೋಪಮಪರಿಮಿತವಾದ ಸುಷಮಾವೆಂಬ ಎರಡನೆಯ ಕಾಲವು ಪ್ರವರ್ತಿಸಿತು - ಪ್ರಾರಂಭವಾಯಿತು.

**ತದಾಸ್ಮಿನ್ಭಾರತೇ ವರ್ಷೇ ಮಧ್ಯಭೋಗಭುವಾಂ ಸ್ಥಿತಿಃ ।**
**ಜಾಯತೇ ಸ್ಮ ಪರಾಂ ಭೂತಿಂ ತನ್ವಾನಾ ಕಲ್ಪಪಾದಪೈಃ ॥ ೪೭ ॥**

ಆಗ ಈ ಭರತಕ್ಷೇತ್ರದಲ್ಲಿ ಮಧ್ಯಮಭೋಗಭೂಮಿಯ ಸ್ಥಿತಿಯೂ ಕಲ್ಪವೃಕ್ಷಗಳಿಂದ ಅಧಿಕವಾದ ಸಂಪತ್ತನ್ನು ವಿಸ್ತರಿಸುವುದಾಗಿ ಉಂಟಾಯಿತು.

**ತದಾ ಮರ್ತ್ಯಾಹ್ಯಮರ್ತ್ಯಾಭಾ ದ್ವಿಪಲ್ಯೋಪಮ[1]ಜೀವಿನಃ ।**
**ಚತುಃಸಹಸ್ರಚಾಪೋಚ್ಚವಿಗ್ರಹಾಃ ಶುಭಚೇಷ್ಟಿತಾಃ ॥ ೪೮ ॥**

ಆಗ ಮನುಷ್ಯರು ದೇವತೆಗಳಿಗೆ ಸಮಾನರೂ ಎರಡುಪಲ್ಯೋಪಮ ಆಯುಷ್ಯವುಳ್ಳವರೂ ನಾಲ್ಕುಸಾವಿರ ಧನುಸ್ಸಿನಷ್ಟು ಎತ್ತರವಾದ ಶರೀರವುಳ್ಳವರೂ ಶುಭವಾದ ಚೇಷ್ಟೆ (ವ್ಯಾಪಾರ) ಯುಳ್ಳವರೂ ಆಗಿದ್ದರು.

**[2]ಕಲಾಧರಕಲಾಸ್ಪರ್ಧಿದೇಹಜ್ಯೋತ್ಸ್ನಾಃ ಸ್ಮಿತೋಜ್ಜ್ವಲಾಃ ।**
**ದಿನದ್ವಯೇನ ತೇಽಶ್ನಂತಿ [3]ವಾರ್ಕ್ಷಮಂ[4]ಧೋ[5]ಕ್ಷಮಾತ್ರಕಮ್ ॥ ೪೯ ॥**

ಚಂದ್ರನ ಕಲೆಗಳಿಗೆ ಸಮಾನವಾದ ದೇಹಕಾಂತಿಯುಳ್ಳವರೂ ನಗುವಿನಿಂದ ಶೋಭಿಸುತ್ತಿರುವವರೂ ಆದ ಆ ಭೋಗಭೂಮಿಜರು ಮಧ್ಯದಲ್ಲಿ ಎರಡು ದಿವಸಗಳನ್ನು ಬಿಟ್ಟು ತಾರೆಕಾಯಿಯಷ್ಟು ಕಲ್ಪವೃಕ್ಷದಿಂದುಂಟಾದ ಅನ್ನವನ್ನು ಭೋಜನಮಾಡುತ್ತಿದ್ದರು.

**ಶೇಷೋ ವಿಧಿಸ್ತು ನಿಃಶೇಷೋ ಹರಿವರ್ಷಸಮೋ ಮತಃ ।**
**ತತಃ ಕ್ರಮೇಣ ಕಾಲೇಽಸ್ಮಿನ್ನವಸರ್ಪತ್ಯನುಕ್ರಮಾತ್ ॥ ೫೦ ॥**

**ಪ್ರಹೀಣಾ ವೃಕ್ಷವೀರ್ಯಾದಿವಿಶೇಷಾಃ ಪ್ರಾಕ್ತನಾ ಯದಾ ।**
**ಜಘನ್ಯಭೋಗಭೂಮೀನಾಂ ಮರ್ಯಾದಾವಿರಭೂತ್ತದಾ ॥ ೫೧ ॥**

ಬೇರೆಯೆಲ್ಲಾ ವಿಧಿಯು ಹರಿವರ್ಷ-ಮಧ್ಯಮಭೋಗಭೂಮಿಗೆ ಸಮಾನವೆಂದು ತಿಳಿಯಬೇಕು. ಆಮೇಲೆ ಕ್ರಮವಾಗಿ ಈ ಸುಷಮಾಕಾಲವು ಕಳೆಯುತ್ತಿರಲು, ಕಲ್ಪವೃಕ್ಷಗಳೂ ಮನುಷ್ಯರ ಶಕ್ತಿ ಮೊದಲಾದ ವಿಶೇಷಗಳೂ ಕಡಿಮೆಯಾದಾಗ ಜಘನ್ಯ ಭೋಗಭೂಮಿಯ ಸ್ಥಿತಿಯು ಪ್ರಕಟವಾಯಿತು.

**ಯಥಾವಸರಸಂಪ್ರಾಪ್ತಸ್ತೃತೀಯಃ ಕಾಲಪರ್ಯಯಃ ।**
**ಪ್ರಾವರ್ತತ ಸುರಾಜೇವ ಸ್ವಾಂ ಮರ್ಯಾದಾಮಲಂಘಯನ್ ॥ ೫೨ ॥**

ಒಳ್ಳೆಯ ರಾಜನು ತನ್ನ ರಾಜನೀತಿಯನ್ನು ಉಲ್ಲಂಘನೆಮಾಡದೆ ರಾಜ್ಯಭಾರವನ್ನು ಮಾಡುವಂತೆ, ಮೂರನೆಯ ಸುಷಮದುಃಷಮಾವೆಂಬ ಕಾಲವು ತನ್ನ ಹದ್ದನ್ನು ಮೀರದೆ ಉಚಿತಕಾಲದಲ್ಲಿ ಪ್ರವರ್ತಿಸಿದ್ದಿತು.

**ಸಾಗರೋಪಮಕೋಟೀನಾಂ ಕೋಟ್ಯೌ ದ್ವೇ ಲಬ್ಧಸಂಸ್ಥಿತೌ ।**
**ಕಾಲೇಽಸ್ಮಿನ್ಭಾರತೇ ವರ್ಷೇ ಮರ್ತ್ಯಾಃ ಪಲ್ಯೋಪಮಾಯುಷಃ ॥ ೫೩ ॥**

ಎರಡು ಕೋಟೀ ಕೋಟಿಸಾಗರೋಪಮಪರಿಮಿತವಾದ ಸುಷಮಾದುಃಷಮಾಕಾಲದಲ್ಲಿ ಈ ಭರತಕ್ಷೇತ್ರದ ಮನುಷ್ಯರು ಒಂದು ಪಲ್ಯೋಪಮಕಾಲ ಆಯುಷ್ಯವುಳ್ಳವರಾಗಿದ್ದರು.

**[6]ಗವ್ಯೂತಿಪ್ರಮಿತೋಚ್ಛ್ರಾಯಾಃ ಪ್ರಿಯಂಗುಶ್ಯಾಮವಿಗ್ರಹಾಃ ।**
**ದಿನಾಂತರೇಣ ಸಂಪ್ರಾಪ್ತಧಾತ್ರೀ[7]ಫಲಮಿತಾಶನಾಃ ॥ ೫೪ ॥**

ಒಂದು ಹರದಾರಿಪ್ರಮಾಣ ಶರೀರೋತ್ಸೇಧವುಳ್ಳವರೂ, ಪ್ರಿಯಂಗುಗಿಡ (ಪ್ರೇಂಕಣಗಿಡ) ಅಥವಾ ನವಣೆಯಂತೆ ಕಪ್ಪಾದ ಶರೀರವುಳ್ಳವರೂ ಮಧ್ಯದಲ್ಲಿ ಒಂದುದಿನ ಬಿಟ್ಟು ನೆಲ್ಲಿಕಾಯಿಯಷ್ಟು ಭೋಜನಮಾಡುವವರೂ ಆಗಿದ್ದರು.

---

೧ ಜೀವಿತಾ ಇತ್ಯಪಿ ಪಾಠಃ. ೨ ಚಂದ್ರಃ. ೩ ವೃಕ್ಷೇಭವಂ. ೪ ಭಿಸ್ಸಾಸ್ತ್ರೀ ಭಕ್ತಮಂಧೋನ್ನಮಿತ್ಯಮರಃ, ಸಾಂತೋಯಂ ಶಬ್ದಃ. ೫ ನಾಕ್ಷಸ್ತುಷಃಕರ್ಷಫಲ ಇತ್ಯಮರಃ. ೬ ಕ್ರೋಶಃ. ೭ ಆಮಲಕಃ.

ತತಸ್ತೃತೀಯಕಾಲೇಽಸ್ಮಿನ್ವ್ಯತಿಕ್ರಾಮತ್ಯನುಕ್ರಮಾತ್ ।
ಪಲ್ಯೋಪಮಾಷ್ಟಭಾಗಸ್ತು ಯದಾಸ್ಮಿನ್ಪರಿಶಿಷ್ಯತೇ ॥ ೫೫ ॥

ಆಮೇಲೆ ಈ ಸುಷಮದುಃಷಮಾವೆಂಬ ಮೂರನೆಯಕಾಲವು ಕಳೆಯುತ್ತ ಪಲ್ಯೋಪಮಕಾಲದ ಎಂಟನೆಯ ಒಂದು ಭಾಗವುಳಿಯುವಾಗ

ಕಲ್ಪಾನೋಕಹವೀರ್ಯಾಣಾಂ ಕ್ರಮಾದೇವ ಪರಿಚ್ಯುತೌ ।
ಜ್ಯೋತಿರಂಗಾಸ್ತದಾ ವೃಕ್ಷಾ ಗತಾ ಮಂದಪ್ರಕಾಶತಾಮ್ ॥ ೫೬ ॥

ಕಲ್ಪವೃಕ್ಷಗಳ ಶಕ್ತಿಯು ಕ್ರಮವಾಗಿ ನಷ್ಟವಾಗುತ್ತಿರಲು ಜ್ಯೋತಿರಂಗ ಕಲ್ಪವೃಕ್ಷಗಳೂ ಮಂದವಾದ ಪ್ರಕಾಶವುಳ್ಳವುಗಳಾದುವು.

[೧]ಪುಷ್ಪವಂತಾವಥಾಷಾಢ್ಯಾಂ ಪೌರ್ಣಮಾಸ್ಯಾಂ ಸ್ಫುರತ್ಪ್ರಭೌ ।
ಸಾಯಾಹ್ನೇ ಪ್ರಾದುರಾಸ್ತಾಂ ತೌ ಗಗನೋಭಯಭಾಗಯೋಃ ॥ ೫೭ ॥

ಅನಂತರದಲ್ಲಿ ಆಷಾಢಶುದ್ಧ ಪೌರ್ಣಮೀದಿವಸ ಸಾಯಂಕಾಲದಲ್ಲಿ ದೇದೀಪ್ಯಮಾನರಾದ ಸೂರ್ಯಚಂದ್ರರು ಆಕಾಶದ ಎರಡು ಕಡೆಗಳಲ್ಲಿಯೂ ಪ್ರಾದುರ್ಭವಿಸಿದರು. ಪಶ್ಚಿಮದಿಕ್ಕಿನಲ್ಲಿ ಅಸ್ತಮಾನವನ್ನು ಹೊಂದುತ್ತಿರುವ ಸೂರ್ಯನೂ, ಪೂರ್ವದಿಕ್ಕಿನಲ್ಲಿ ಉದಯಿಸುತ್ತಿರುವ ಚಂದ್ರನೂ ಕಾಣಿಸಿಕೊಂಡರೆಂದು ಭಾವವು.

ಚಾಮೀಕರಮಯೌ [೨]ಪೋತಾವಿವ ತೌ ಗಗನಾರ್ಣವೇ ।
ವಿಯದ್ಗಜಸ್ಯ [೩]ನಿರ್ಯಾಣಚಂ[೪]ದ್ರಕಾವಿವ ಲಕ್ಷಿತೌ ॥ ೫೮ ॥

ಆ ಸೂರ್ಯಚಂದ್ರರು, ಆಕಾಶವೆಂಬ ಸಮುದ್ರದಲ್ಲಿ ಸುವರ್ಣಮಯವಾದ ಹಡಗುಗಳಂತೆಯೂ ಆಕಾಶವೆಂಬ ಆನೆಯ ಗಂಡಸ್ಥಳದಲ್ಲಿ ಸಿಂದೂರದಿಂದ ಮಾಡಿದ ಇಬ್ಬರು ಚಂದ್ರರಂತೆಯೂ ಕಾಣಿಸಿಕೊಂಡರು.

ಪೌರ್ಣಮಾಸೀವಿಲಾಸಿನ್ಯಾ ಕ್ರೀಡ್ಯಮಾನೌ ಸಮುಜ್ಜ್ವಲೌ ।
ಪರಸ್ಪರಕರಾಶ್ಲಿಷ್ಟೌ ಜಾತುಷಾವಿವ [೫]ಗೋಲಕೌ ॥ ೫೯ ॥

ಪೌರ್ಣಮೀಯೆಂಬ ಸ್ತ್ರೀಯ ಪ್ರಕಾಶಮಾನವೂ ಅನ್ಯೋನ್ಯವಾಗಿ ಕಿರಣಗಳಿಂದ ಸಂಬಂಧಿಸಿಕೊಂಡಿರುವುವೂ ಅರಗಿನಿಂದ ಮಾಡಲ್ಪಟ್ಟುವೂ ಆದ ಆಟದ ಚೆಂಡುಗಳೋ ಎಂಬಂತೆಯೂ

ಜಗದ್ಗೃಹಮಹಾದ್ವಾರಿ ವಿನ್ಯಸ್ತೌ ಕಾಲಭೂಭೃತಃ ।
[೬]ಪ್ರತ್ಯಗ್ರಸ್ಯ ಪ್ರವೇಶಾಯ ಕುಂಭಾವಿವ ಹಿರಣ್ಮಯೌ ॥ ೬೦ ॥

ದುಃಷಮಸುಷಮಾಕಾಲವೆಂಬ ಹೊಸ ರಾಜನ ಪ್ರವೇಶಕ್ಕೋಸ್ಕರ, ಜಗತ್ತೆಂಬ ಮನೆಯ ದೊಡ್ಡಬಾಗಿಲಲ್ಲಿರಿಸಿದ ಸುವರ್ಣಕಲಶಗಳೋ ಎಂಬಂತೆಯೂ

ತಾರಾಫೇನಗ್ರಹಗ್ರಾಹವಿಯತ್ಸಾಗರಮಧ್ಯಗೌ ।
ಚಾಮೀಕರಮಯೌ ದಿವ್ಯಾವಂಭಃಕ್ರೀಡಾಗೃಹಾವಿವ ॥ ೬೧ ॥

ನಕ್ಷತ್ರಗಳೆಂಬ ನೊರೆಯಿಂದಲೂ ಗ್ರಹಗಳೆಂಬ ಮೊಸಳೆಗಳಿಂದಲೂ ಕೂಡಿಕೊಂಡಿರುವ ಆಕಾಶವೆಂಬ ಸಮುದ್ರದ ಮಧ್ಯದಲ್ಲಿ ಮನೋಹರವಾದ ಬಂಗಾರದ ಜಲಕ್ರೀಡೆಮಾಡುವ ಮನೆಗಳೋ ಎಂಬಂತೆಯೂ

ಸದ್ವೃತ್ತತ್ವಾದಸಂಗತ್ವಾತ್ಸಾಧುವರ್ಗಾನುಕಾರಿಣೌ ।
ಶೀತತೀವ್ರಕರತ್ವಾಚ್ಚ ಸದಸದ್ಭೂಮಿಪಾವಿವ ॥ ೬೨ ॥

ಗುಂಡಾಗಿಯೂ ಬೇರೆಬೇರೆಯಾಗಿಯೂ ಇದ್ದುದರಿಂದ, ಸದಾಚಾರಿಗಳೂ ಪರಿಗ್ರಹರಹಿತರೂ ಆದ ಯತಿಗಳನ್ನು ಹೋಲುವವರಾಗಿಯೂ ಚಂದ್ರನು ಶೀತವಾದ ಕಿರಣವುಳ್ಳವನಾಗಿದ್ದುದರಿಂದ ಸ್ವಲ್ಪಕಂದಾಯವನ್ನು ತೆಗೆದುಕೊಳ್ಳುವ ಒಳ್ಳೆಯ ರಾಜನಂತೆಯೂ ಸೂರ್ಯನು ತೀಕ್ಷ್ಣವಾದ ಕಿರಣವುಳ್ಳವನಾಗಿದ್ದುದರಿಂದ ಹೆಚ್ಚುಕಂದಾಯವನ್ನು ತೆಗೆದುಕೊಳ್ಳುವ ದುಷ್ಟರಾಜನಂತೆಯೂ ಆ ಸೂರ್ಯ ಚಂದ್ರರು ಕಾಣಿಸುತ್ತಿದ್ದರು.

ಪ್ರತಿಶ್ರುತಿರಿತಿ ಖ್ಯಾತಸ್ತದಾ ಕುಲಧರೋಽಗ್ರಿಮಃ ।
ಬಿಭ್ರಲ್ಲೋಕಾತಿಗಂ ತೇಜಃ ಪ್ರಜಾನಾಂ ನೇತ್ರಮುದ್ಬಭೌ ॥ ೬೩ ॥

ಆಗ ಪ್ರತಿಶ್ರುತಿಯೆಂದು ಪ್ರಸಿದ್ಧನಾದ ಮೊದಲನೆಯ ಕುಲಧರ(ಮನು)ನು, ಎಲ್ಲರಿಗಿಂತಲೂ ಹೆಚ್ಚಾದ ತೇಜಸ್ಸನ್ನು ಹೊಂದಿದವನಾಗಿ ಪ್ರಜೆಗಳ ಕಣ್ಣುಗಳಂತೆ ಪ್ರಕಾಶಿಸುತ್ತಿದ್ದನು. ಪ್ರಜೆಗಳಿಗೆ ವಿವೇಕವನ್ನು ಹೇಳುವವನಾಗಿ ಶ್ರೇಷ್ಠನಾಗಿದ್ದನೆಂದು ಭಾವವು.

ಪಲ್ಯಸ್ಯ ದಶಮೋ ಭಾಗಸ್ತಸ್ಯಾಯುರ್ಜಿನದೇಶಿತಮ್ ।
ಧನುಃಸಹಸ್ರಮುತ್ಸೇಧಃ ಶತೈರಧಿಕಮಷ್ಟಭಿಃ ॥ ೬೪ ॥

ಆ ಮನುವಿನ ಆಯುಷ್ಯವು ಪಲ್ಯೋಪಮಕಾಲದ ಹತ್ತನೆಯ ಒಂದು ಭಾಗವೆಂದು ಜಿನೇಶ್ವರನಿಂದ ಹೇಳಲ್ಪಟ್ಟಿದೆ. ಸಾವಿರದ ಎಂಟುನೂರು ಧನುಸ್ಸಿನಷ್ಟು ಅವನ ಶರೀರೋತ್ಸೇಧವಾಗಿದ್ದಿತು.

ಜಾಜ್ವಲ್ಯಮಾನಮುಕುಟೋ [೧]ಲಸತ್ಕನಕಕುಂಡಲಃ ।
ಕನಕಾದ್ರಿರಿವೋತ್ತುಂಗೋ ಬಿಭ್ರಾಣೋ ಹಾರನಿರ್ಝರಮ್ ॥ ೬೫ ॥

ಅವನ ಮಸ್ತಕದಲ್ಲಿ ಪ್ರಕಾಶಮಾನವಾದ ಕಿರೀಟವೂ, ಕಿವಿಯಲ್ಲಿ ಪ್ರಕಾಶಮಾನವಾದ ಚಿನ್ನದ ಕರ್ಣಕುಂಡಲವೂ ಇದ್ದುವು. ಅವನು ಬಂಗಾರದ ಬೆಟ್ಟ(ಮಹಾಮೇರು)ದಂತೆ ಎತ್ತರವಾಗಿದ್ದನು. ಕೊರಳಲ್ಲಿ ಧರಿಸಿದ್ದ ಹಾರವು ಬೆಟ್ಟದಮೇಲೆ ಹರಿಯುವ ಗಿರಿನದಿಯಂತೆ ತೋರುತ್ತಿದ್ದಿತು.

ನಾನಾಭರಣಭಾಭಾರಭಾಸುರೋದಾರವಿಗ್ರಹಃ ।
ಪ್ರೋತ್ಸರ್ಪತ್ತೇಜಸಾ ಸ್ವೇನ [೨]ನಿರ್ಭರ್ತ್ಸಿತರವಿಗ್ರಹಃ ॥ ೬೬ ॥

ಆ ಪ್ರತಿಶ್ರುತಿ ಮನುವು ನಾನಾಪ್ರಕಾರವಾದ ಆಭರಣಗಳ ಕಾಂತಿಯಿಂದ ಪ್ರಕಾಶಮಾನವಾದ ಶರೀರವುಳ್ಳವನೂ ನಾಲ್ಕುಕಡೆಗಳಲ್ಲಿಯೂ ಹರಡುತ್ತಿರುವ ತನ್ನ ತೇಜಸ್ಸಿನಿಂದ ಸೂರ್ಯನನ್ನು ತಿರಸ್ಕರಿಸುವವನೂ

ಮಹಾನ್ಜಗದ್ಗೃಹೋ[೩]ನ್ಮಾನಮಾನದಂಡ ಇವೋಚ್ಛ್ರಿತಃ ।
ದಧಜ್ಜನ್ಮಾಂತರಾಭ್ಯಾಸಜನಿತಂ [೪]ಬೋಧಮಿದ್ಧಧೀಃ ॥ ೬೭ ॥

ಜಗತ್ತೆಂಬ ಮನೆಯನ್ನು ಅಳತೆಮಾಡುವ ದೊಡ್ಡ ದಂಡದಂತೆ ಉನ್ನತನೂ ಪೂರ್ವಜನ್ಮದ ಅಭ್ಯಾಸದಿಂದುಂಟಾದ ಉತ್ತಮಜ್ಞಾನ(ಅವಧಿಜ್ಞಾನ)ವುಳ್ಳವನೂ

ಸ್ಫುರದ್ದಂತಾಂಶುಸಲಿಲೈರ್ಮುಹುಃ ಪ್ರಕ್ಷಾಲಯನ್ ದಿಶಃ ।
ಪ್ರಜಾನಾಂ [೫]ಪ್ರೀಣನಂ ವಾಕ್ಯಂ [೬]ಸೌಧಂ ರಸಮಿವೋದ್ಗಿರನ್ ॥ ೬೮ ॥

ಪ್ರಕಾಶಿಸುತ್ತಿರುವ ಹಲ್ಲುಗಳ ಕಾಂತಿಗಳೆಂಬ ನೀರಿನಿಂದ ದಿಕ್ಕುಗಳನ್ನು ಬಾರಿಬಾರಿಗೂ ತೊಳೆಯುವವನೂ ಅಮೃತರಸವನ್ನೋಪಾದಿಯಲ್ಲಿ ಪ್ರಜೆಗಳಿಗೆ ಪ್ರೀತಿಯನ್ನುಂಟುಮಾಡುವ ವಾಕ್ಯವನ್ನು ಹೇಳುವವನೂ ಆಗಿ

೧ ವಿಕಯೋಽಸ್ಯಾ ಪುಷ್ಪವಂತೌ ದಿವಾಕರನಿಶಾಕರಾವಿತ್ಯಮರಃ. ೨ ಯಾನಪಾತ್ರೇ. ೩ ಅಪಾಂಗದೇಶೋ ನಿರ್ಯಾಣಮಿತ್ಯಮರಃ. ೪ ನಿರ್ಯಾಣಲಿಖಿತೌ ತಿಲಕಾವಿವೇತ್ಯಪಿ ಪಾಠಾಂತರಂ. ೫ ಕಂದುಕೌ. ೬ ಅಭಿನವಸ್ಯ.

೧ ಲಸನ್ಮಕರಕುಂಡಲ ಇತ್ಯಪಿ ಪಾಠಾಂತರಂ. ೨ ಅಭಿಭೂತಃ. ೩ ಊರ್ಧ್ವಮಾನಃ. ೪ ಜಾತಿ ಸ್ಮರಣಜ್ಞಾನಂ. ೫ ಪ್ರೀತಿಕರಂ. ೬ ಸುಧಾಸಂಬಂಧಿನಂ.

**ಅದೃಷ್ಟಪೂರ್ವೌ ತೌ ದೃಷ್ಟ್ವಾ ಸ ಭೀತಾನ್ಭೋಗಭೂಮಿಜಾನ್ ।**
**ಭೀತೇರ್ನಿರ್ವರ್ತಯಾಮಾಸ ತತ್ಸ್ವರೂಪಮಿತಿ ಬ್ರುವನ್ ॥ ೧೯ ॥**

ಮೊದಲು ಕಾಣದಿದ್ದ ಸೂರ್ಯಚಂದ್ರರನ್ನು ನೋಡಿ ಹೆದರಿದ ಆ ಭೋಗಭೂಮಿಯ ಆರ್ಯರಿಗೆ ಮುಂದೆಹೇಳುವ ರೀತಿಯಾಗಿ ಆ ಸೂರ್ಯಚಂದ್ರರ ಸ್ವರೂಪವನ್ನು ತಿಳಿಸಿ ಅವರ ಭಯವನ್ನು ಹೋಗಲಾಡಿಸಿದನು.

**ಏತೌ ತೌ ಪ್ರತಿದೃಶ್ಯೇತೇ ಸೂರ್ಯಾಚಂದ್ರಮಸೌ ಗ್ರಹೌ ।**
**ಜ್ಯೋತಿರಂಗಪ್ರಭಾಪಾಯಾತ್ಕಾಲಹ್ರಾಸವಶೋದ್ಭವಾತ್ ॥ ೨೦ ॥**

"ಎಲೈ ಭದ್ರಪುರುಷರೇ! ಈ ಎರಡು ಪದಾರ್ಥಗಳು ಸೂರ್ಯಚಂದ್ರ ಗ್ರಹಗಳು. ಸುಷಮದುಃಷಮಾಕಾಲವು ಕಳೆಯುತ್ತ ಬಂದುದರಿಂದ ಜ್ಯೋತಿರಂಗ ಕಲ್ಪವೃಕ್ಷಗಳ ಪ್ರಭೆಯು ಕಡಿಮೆಯಾಯಿತು. ಇದರಿಂದ ಈ ಗ್ರಹಗಳು ಕಾಣಿಸಿಕೊಳ್ಳುತ್ತವೆ.

**ಸದಾಪ್ಯಧಿ[1]ನಭೋಭಾಗಂ ಭ್ರಾಮ್ಯತೋಮೂ ಮಹಾದ್ಯುತೀ ।**
**ನ ವಸ್ತಾಭ್ಯಾಂ ಭಯಂ ಕಿಂಚಿದತೋ ಮಾ ಭೈಷ್ಟ ಭದ್ರಕಾಃ ॥ ೨೧ ॥**

ಅಧಿಕವಾದ ಕಾಂತಿಯುಳ್ಳ ಈ ಸೂರ್ಯಚಂದ್ರರು ಯಾವಾಗಲೂ ಆಕಾಶದಲ್ಲಿ ತಿರುಗುತ್ತಾರೆ. ಅವರಿಂದ ನಿಮಗೇನೂ ಭಯವಿಲ್ಲ. ಹೆದರಬೇಡಿರಿ"

**ಇತಿ ತದ್ವಚನಾತ್ತೇಷಾಂ ಪ್ರತ್ಯಾಶ್ವಾಸೋ ಮಹಾನಭೂತ್ ।**
**ಕ್ಷೇತ್ರೇ ಸೋಽತಃಪರಂ ಚಾಸ್ಮಿನ್ನಿಯೋಗಾನ್ಪ್ರಾವಿನೋಽನ್ವಶಾತ್ ॥ ೨೨ ॥**

ಪ್ರತಿಶ್ರುತಿಮನುವಿನ ಈ ವಚನವನ್ನು ಕೇಳಿ ಆ ಭೋಗಭೂಮಿಜರಿಗೆ ಬಹಳ ನಂಬಿಕೆಯುಂಟಾಯಿತು. ಆ ಮನುವು ಈ ಭರತಕ್ಷೇತ್ರದಲ್ಲಿ ಮುಂದೆ ಉಂಟಾಗುವ ವಿಷಯ (ಕರ್ಮಭೂಮಿಯ ಸ್ಥಿತಿ) ಗಳನ್ನೂ ತಿಳಿಸಿದನು.

**ಪ್ರತಿಶ್ರುತಿರಯಂ ಧೀರೋ [2]ಯನ್ನಃ ಪ್ರತ್ಯಶೃಣೋದ್ವಚಃ ।**
**ಇತೀಡಾಂ[3] ಚಕ್ರಿರೇ ನಾಮ್ನಾ ತೇ ತಂ ಸಂಪ್ರೀತಮಾನಸಾಃ ॥ ೨೩ ॥**

"ಈ ಧೀರನಾದ ಪ್ರತಿಶ್ರುತಿಮನುವು ನಮ್ಮ ಮಾತನ್ನು ಮನಸ್ಸುಕೊಟ್ಟು ಕೇಳಿದುದರಿಂದ 'ಇವನು ಪ್ರತಿಶ್ರುತಿಯು" ಎಂಬುದಾಗಿ ಆ ಆರ್ಯರು ಸಂತುಷ್ಟವಾದ ಮನಸ್ಸುಳ್ಳವರಾಗಿ ಅವನನ್ನು ಸ್ತೋತ್ರಮಾಡಿದರು.

**ಅಹೋ ಧೀಮನ್ಮಹಾಭಾಗ ಚಿರಂ ಜೀವ ಪ್ರಸೀದ ನಃ ।**
**ಯಾನಪಾತ್ರಾಯಿತಂ [4]ಯೇನ ತ್ವಯಾಽಸ್ಮದ್ವ್ಯಸನಾರ್ಣವೇ ॥ ೨೪ ॥**

"ನೀನು ನಮ್ಮ ವ್ಯಸನವೆಂಬ ಸಮುದ್ರದಲ್ಲಿ ಹಡಗಿನಂತೆಯಾದುದರಿಂದ ಅಂದರೆ ವ್ಯಸನವನ್ನು ಹೋಗಲಾಡಿಸಿದುದರಿಂದ ಎಲೈ ಬುದ್ಧಿಶಾಲಿಯೇ! ಮಹಾಭಾಗ್ಯಶಾಲಿಯೆ! ಬಹುಕಾಲ ಜೀವಿಸುತ್ತಿರು. ನಮ್ಮ ಮೇಲೆ ಪ್ರಸನ್ನನಾಗು"

**ಇತಿ ಸ್ತುತ್ವಾರ್ಯಕಾಸ್ತೇ ತಂ ಸತ್ಕೃತ್ಯ ಚ ಪುನಃ ಪುನಃ ।**
**ಲಬ್ಧಾನುಜ್ಞಾಸ್ತತಃ ಸ್ವಂ ಸ್ವಮೋ[5]ಕೋ ಜಗ್ಮುಃ ಸ[6]ಜಾನಯಃ ॥ ೨೫ ॥**

ಈ ರೀತಿಯಾಗಿ ಆರ್ಯರು ಪ್ರತಿಶ್ರುತಿಮನುವನ್ನು ಸ್ತೋತ್ರಮಾಡಿ ಪುನಃ ಪುನಃ ಸತ್ಕಾರವನ್ನುಮಾಡಿ ಅವನ ಅಪ್ಪಣೆಯನ್ನು ಪಡೆದು ತಮ್ಮ ಪತ್ನಿಯರೊಡನೆ ತಂತಮ್ಮ ಮನೆಗಳಿಗೆ ಹೋದರು.

**ಮನೌ ಯಾತಿ ದಿವಂ ತಸ್ಮಿನ್ಕಾಲೇ ಗಲತಿ ಚ ಕ್ರಮಾತ್ ।**
**ಮನ್ವಂತರಮಸಂಖ್ಯೇಯಾ ವರ್ಷಕೋಟೀರ್ವ್ಯತೀತ್ಯ ಚ ॥ ೨೬ ॥**

ಆ ಪ್ರತಿಶ್ರುತಿ ಮನುವು ತನ್ನ ಆಯುಷ್ಯವು ಪೂರ್ತಿಯಾದನಂತರ ಸತ್ತು ಸ್ವರ್ಗವನ್ನು ಪಡೆದನು. ಆ ಸುಷಮದುಃಷಮಾಕಾಲವೂ ಕ್ರಮವಾಗಿ ಕಳೆಯುತ್ತ ಬಂದಿತು. ಅಸಂಖ್ಯಾತಕೋಟಿ ವರುಷಗಳವರೆಗೆ ಮನ್ವಂತರ(ಎರಡನೆಯ ಮನುವು ಹುಟ್ಟುವವರ್ಯಂತ ಮಧ್ಯಕಾಲ)ಕಾಲವು ಕಳೆಯಿತು.

**ಸನ್ಮತಿಃ ಸನ್ಮತಿರ್ನಾಮ್ನಾ ದ್ವಿತೀಯೋಭೂನ್ಮನುಸ್ತದಾ ।**
**ಪ್ರೋತ್ಸರ್ಪದಂಶು[1]ಕಃ ಪ್ರಾಂ[2]ಶುಶ್ಚಲತ್ಕಲ್ಪತರೂಪಮಃ ॥ ೨೭ ॥**

ಆಗ ಮಹಾಬುದ್ಧಿಶಾಲಿಯಾದ ಸನ್ಮತಿಯೆಂದು ಹೆಸರುಳ್ಳ ಎರಡನೆಯ ಮನುವು ಹುಟ್ಟಿದನು. ಅವನು ಸುತ್ತಲೂ ಹರಡುತ್ತಿರುವ ರಶ್ಮಿಯುಳ್ಳವನೂ ಉನ್ನತನೂ ಆಗಿದ್ದುದರಿಂದ ಸಂಚರಿಸುತ್ತಿರುವ ಕಲ್ಪವೃಕ್ಷವೋ ಎಂಬಂತೆ ಕಾಣಿಸುತ್ತಿದ್ದನು.

**ಸ ಕುಂತಲೀ ಕಿರೀಟೀ ಚ ಕುಂಡಲೀ ಹಾರಭೂಷಿತಃ ।**
**ಸ್ರಗ್ವೀ ಮಲಯಜಾಲಿಪ್ತವಪುರತ್ಯಂತಮಾಬಭೌ ॥ ೨೮ ॥**

ಅವನು ಸುಂದರವಾದ ತಲೆಕೂದಲುಗಳುಳ್ಳವನೂ ಮಸ್ತಕದಲ್ಲಿ ಕಿರೀಟವನ್ನು ಧರಿಸಿದವನೂ ಕರ್ಣಕುಂಡಲಗಳಿಂದಲೂ ಹಾರಗಳಿಂದಲೂ ಅಲಂಕೃತನೂ ಕೊರಳಲ್ಲಿ ಪುಷ್ಪಮಾಲೆಯನ್ನು ಧರಿಸಿದವನೂ ಮೈಗೆ ಚಂದನವನ್ನು ಲೇಪಿಸಿಕೊಂಡವನೂ ಆಗಿ ಹೆಚ್ಚು ಶೋಭಿಸುತ್ತಿದ್ದನು.

**ತಸ್ಯಾಯುರ[3]ಮಮಪ್ರಖ್ಯಮಾಸೀತ್ಸಂಖ್ಯೇಯಹಾಯನಮ್ ।**
**ಸಹಸ್ರಂ ತ್ರಿಶತೀಯುಕ್ತಮುತ್ಸೇಧೋ ಧನುಷಾಂ ಮತಃ ॥ ೨೯ ॥**

ಅವನ ಆಯುಷ್ಯವು ಅಮಮಪರಿಮಿತವಾದಸಂಖ್ಯಾತ ವರುಷವಾಗಿದ್ದಿತು. ಶರೀರವು ಒಂದು ಸಾವಿರದ ಐದುನೂರು ಧನುಸ್ಸಿನಷ್ಟು ಪರಿಮಾಣವುಳ್ಳುದಾಗಿದ್ದಿತು.

**ಜ್ಯೋತಿರ್ವಿಟಪಿನಾಂ ಭೂಯೋಽಪ್ಯಾಸೀತ್ಕಾಲೇನ ಮಂದಿಮಾ ।**
**ಪ್ರಹೀಣಾಭಿಮುಖಂ ತೇಜೋ ನಿರ್ವಾಸ್ಯತಿ ಹಿ ದೀಪವತ್ ॥ ೩೦ ॥**

ಜ್ಯೋತಿರಂಗ ಕಲ್ಪವೃಕ್ಷಗಳ ಪ್ರಭೆಯು ಇನ್ನೂ ಕಡಿಮೆಯಾಗುತ್ತ ಬಂದಿತು. ಎಣ್ಣೆ ಬತ್ತಿ ಕಡಿಮೆಯಾದ ದೀಪವು ನೊಂದಿ(ಆರಿ)ಹೋಗುವಂತೆ, ಕಡಿಮೆಯಾಗುತ್ತಿರುವ ಪ್ರಭೆಯು ನಾಶವಾಗುವುದಲ್ಲವೆ?

**ನಭೋಂಗಣಮಥಾಪೂರ್ಯ ತಾರಕಾಃ ಪ್ರಚಕಾಶಿರೇ ।**
**[4]ನಾತ್ಯಂಧಕಾರಕಲುಷಾಂ ವೇಲಾಂ ಪ್ರಾಪ್ಯ ತಮೀಮುಖೇ ॥ ೩೧ ॥**

ಹಾಗೆ ಸಂಪೂರ್ಣವಾಗಿ ಆ ಪ್ರಭೆಯು ನಾಶವಾಗುತ್ತಿರಲು ಒಂದು ದಿನ ರಾತ್ರಿಯ ಪ್ರಾರಂಭದಲ್ಲಿ ಸ್ವಲ್ಪ ಕತ್ತಲೆಯಾಗುವಾಗ ಆಕಾಶದಲ್ಲೆಲ್ಲ ನಕ್ಷತ್ರಗಳು ಪ್ರಕಾಶಿಸಿದುವು.

**ಅಕಸ್ಮಾತ್ತಾರಕಾ ದೃಷ್ಟ್ವಾ ಸಂಭ್ರಾಂತಾನ್ಭೋಗಭೂಭುವಃ ।**
**ಭೀತಿರ್ವಿ[5]ಚಲಯಾಮಾಸ ಪ್ರಾಣಿಹತ್ಯೇವ ಯೋಗಿನಃ ॥ ೩೨ ॥**

ಅಕಸ್ಮಾತ್ ಈ ನಕ್ಷತ್ರಗಳನ್ನು ನೋಡಿ ಗಾಬರಿಪಟ್ಟ ಭೋಗಭೂಮಿಜರು, ಪ್ರಾಣಿವಧೆಯಿಂದ ಯೋಗಿಗಳು ಭಯಪಡುವಂತೆ, ಭಯಪಟ್ಟರು. (ಆಗ ಅವರೆಲ್ಲರು ಮನುವಿನ ಸಮೀಪಕ್ಕೆ ಬಂದು ಹೇಳಿಕೊಂಡರು).

**ಸ ಸನ್ಮತಿರ[6]ನುಧ್ಯಾಯ ಕ್ಷಣಂ ಪ್ರಾವೋಚತಾರ್ಯಕಾನ್ ।**
**ನೋತ್ಪಾತಃ ಕೋಽಪ್ಯಯಂ ಭದ್ರಾಸ್ತನ್ಮಾ[7]ಗಾತ ಭಿಯೋ ವಶಮ್ ॥**

೧ ನಭೋಭಾಗೇ. ೨ ಯಸ್ಮಾತ್ಕಾರಣಾತ್. ೩ ಸ್ತುವಂತಿ ಸ್ಮ. ೪ ಕಾರಣೇನ. ೫ ಗೃಹಂ. ೬ ಸಭಾರ್ಯಾಃ ಜಾಯಾಯಾಜಾನಿರಿತ್ಯನೇನ ಜಾಯಾಶಬ್ದಸ್ಯ ಜಾನಿರಾದೇಶಃ.

೧ ಕಾಂತಿಃ. ೨ ಉನ್ನತಃ. ೩ ಅಮಮಾದೀನಾಂ ಲಕ್ಷಣಮಸ್ಮಿನ್ನೇವ ಪರ್ವಣ್ಯುತ್ತರತ್ರ ವಕ್ಷ್ಯತೇ. ೪ ಅತ್ಯಂಧಕಾರಕಲುಷಾ ನ ಭವತೀತಿ ನಾತ್ಯಂಧಕಾರಕಲುಷಾ, ತಾಂ ಸಮಾಸೇಪ್ಯತ್ರ ನಞೋ ನ ಲೋಪಃ. ೫ ವ್ಯಾಪ್ತೇತ್ಯರ್ಥಃ. ೬ ವಿಚಿಂತ್ಯ. ೭ ಇಣ್ ಗತೌ ಲುಙ್ ಮಧ್ಯಮಬಹುವಚನಂ.

ಆ ಸನ್ಮತಿಮನುವು ಒಂದು ಕ್ಷಣಕಾಲ ಯೊಚಿಸಿ, ''ಎಲೈ ಭದ್ರಪುರುಷರೇ !ಇದು ಯಾವುದೂ ಕೆಡುಕಲ್ಲ. ಇದಕ್ಕಾಗಿ ನೀವುಗಳು ಹೆದರಬೇಕಾದುದಿಲ್ಲ'' ಎಂದು ಆ ಆರ್ಯರಿಗೆ ಹೇಳಿದನು.

**ಏತಾಸ್ತಾಸ್ತಾರಕಾನಾಮ್ನೈತಚ್ಚ ನಕ್ಷತ್ರಮಂಡಲಮ್ ।**
**ಗ್ರಹಾ ಇಮೇ ಸದೋದ್ಯೋತಾ ಇದಂ ತಾರಕಿತಂ ನಭಃ ॥ ೮೪ ॥**

''ಇವು ತಾರೆಗಳು. ಇದು ಅಶ್ವಿನೀ, ಭರಣೀ, ಕೃತ್ತಿಕಾ ಮೊದಲಾದ ನಕ್ಷತ್ರಗಳ ಮಂಡಲವು. ಇವು ಯಾವಾಗಲೂ ಪ್ರಕಾಶಿಸುತ್ತಿರುವ ಆದಿತ್ಯ, ಸೋಮ ಮೊದಲಾದ ಗ್ರಹಗಳು. ಇದು ತಾರೆಗಳುಳ್ಳ ಆಕಾಶ.

**ಜ್ಯೋತಿಶ್ಚಕ್ರಮಿದಂ ಶಶ್ವದ್ವ್ಯೋಮಮಾರ್ಗೇ ಕೃತಸ್ಥಿತಿ ।**
**ಸ್ಪಷ್ಟತಾಮಧುನಾ ಯಾತಂ ಜ್ಯೋತಿರಂಗಪ್ರಭಾಕ್ಷಯಾತ್ ॥ ೮೫ ॥**

ಇದು ಜ್ಯೋತಿಶ್ಚಕ್ರ(ಗ್ರಹನಕ್ಷತ್ರಾದಿಜ್ಯೋತಿರ್ದೇವತೆಗಳ ಸಮೂಹ). ಯಾವಾಗಲೂ ಆಕಾಶಮಾರ್ಗದಲ್ಲಿ ಇರುವುದು. ಈಗ ಜ್ಯೋತಿರಂಗಕಲ್ಪವೃಕ್ಷಗಳ ಪ್ರಭೆಯು ಕಡಿಮೆಯಾದುದರಿಂದ ಈ ಜ್ಯೋತಿಶ್ಚಕ್ರವು ಕಾಣಿಸಿಕೊಂಡಿತು.

**ಇತಃಪ್ರಭೃತ್ಯಹೋರಾತ್ರವಿಭಾಗಶ್ಚ ಪ್ರವರ್ತತೇ ।**
**ಉದಯಾಸ್ತಮಯೈಃ ಸೂರ್ಯಚಂದ್ರಯೋಃ ಸಹತಾರಯೋಃ ॥ ೮೬ ॥**

ಇಲ್ಲಿಂದ ಮುಂದೆ ಸೂರ್ಯಚಂದ್ರರ ಮತ್ತು ತಾರೆನಕ್ಷತ್ರಗಳ ಉದಯಾಸ್ತ ಮಾನಗಳಿಂದ ಹಗಲು ರಾತ್ರಿಯೆಂಬ ವಿಭಾಗವುಂಟಾಗುವುದು.

**ಗ್ರಹಣಗ್ರಹವಿಕ್ಷೇಪದಿನಾನ್ಯಯನ[1]ಸಂಕ್ರಮಾನ್ ।**
**ಜ್ಯೋತಿರ್ಜ್ಞಾನಸ್ಯ[2]ಬೀಜಾನಿ ಸೋಽನ್ವವೋಚದ್ವಿದಾಂವರಃ ॥ ೮೭ ॥**

ಸೂರ್ಯಚಂದ್ರರ ಗ್ರಹಣವೂ ಗ್ರಹಗಳ ಸಂಚಾರವೂ (ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಹೋಗುವುದು) ದಿನ, ಅಯನ, ಸಂಕ್ರಾಂತಿ ಇವುಗಳೂ ಜ್ಯೋತಿಶ್ಶಾಸ್ತ್ರದ ಜ್ಞಾನಕ್ಕೆ ಕಾರಣಗಳು'' ಎಂದು ಆ ಬುದ್ಧಿಶಾಲಿಯಾದ ಮನುವು ಆರ್ಯರಿಗೆ ತಿಳಿಸಿದನು.

**ಅಥ ತದ್ವಚನಾದಾರ್ಯಾ ಜಾತಾಃ ಸಪದಿ ನಿರ್ಭಯಾಃ ।**
**ಸ ಹಿ ಲೋಕೋತ್ತರಂ ಜ್ಯೋತಿಃ ಪ್ರಜಾನಾಮುಪಕಾರಕಮ್ ॥ ೮೮ ॥**

ಆಮೇಲೆ ಅವನ ವಚನವನ್ನು ಕೇಳಿ ಆರ್ಯರು ಶೀಘ್ರವಾಗಿ ನಿರ್ಭಯರಾದರು. ಆ ಸನ್ಮತಿಯಾದರೋ ಪ್ರಜೆಗಳಿಗೆ ಉಪಕಾರಕವಾದ ಲೋಕೋತ್ತರ ಜ್ಯೋತಿ ಯಾಗಿದ್ದನು.

**ಅಯಂ ಸನ್ಮತಿರೇವಾಸ್ತು ಪ್ರಭುರ್ನಃ ಸನ್ಮತಿಪ್ರದಃ ।**
**ಇತಿ ಪ್ರಶಸ್ಯ ಸಂಪೂಜ್ಯ ಯಯುಸ್ತೇ ತಂ ಸ್ವಮಾಸ್ಪದಮ್ ॥ ೮೯ ॥**

ಆ ಪ್ರಜೆಗಳೆಲ್ಲ, ಒಳ್ಳೆಯ ಬುದ್ಧಿಯನ್ನು ಕೊಡುವ ಈ ಸನ್ಮತಿಯೇ ತಮ್ಮಗಳ ಒಡೆಯನೆಂದು ಹೊಗಳಿ ಅವನನ್ನು ಪೂಜಿಸಿ ತಂತಮ್ಮ ಮನೆಗಳಿಗೆ ಹೋದರು.

**ತತೋಽನ್ತರಮಸಂಖ್ಯೇಯಾಃ ಕೋಟೀರುಲ್ಲಂಘ್ಯ ವತ್ಸರಾನ್ ।**
**ತೃತೀಯೋ ಮನುರತ್ರಾಸೀತ್ಕ್ಷೇಮಂಕರಸಮಾಹ್ವಯಃ ॥ ೯೦ ॥**

ಆಮೇಲೆ ಅಸಂಖ್ಯಾತಕೋಟಿ ವರುಷಗಳು ಕಳೆದನಂತರ ಈ ಭರತಕ್ಷೇತ್ರದಲ್ಲಿ ಕ್ಷೇಮಂಕರನೆಂಬ ಮೂರನೆಯ ಮನುವು ಹುಟ್ಟಿದನು.

೧ ಸಂಕ್ರಾಂತೀಃ. ೨ ಕಾರಣಾನಿ.

**[1]ಯುಗಬಾಹುರ್ಮಹಾಕಾಯಃ ಪೃಥುವಕ್ಷಾಃ ಸ್ಫುರತ್ಪ್ರಭಃ ।**
**ಸೋಽತ್ಯಶೇತ ಗಿರಿಂ ಮೇರುಂ ಸ್ಫುರನ್ಮುಕುಟಚೂಲಿಕಃ ॥ ೯೧ ॥**

ಆ ಕ್ಷೇಮಂಕರಮನುವು ನೊಗದಂತೆ ದೀರ್ಘವಾದ ತೋಳುಗಳುಳ್ಳವನೂ ದೊಡ್ಡ ಶರೀರವುಳ್ಳವನೂ ವಿಸ್ತಾರವಾದ ಎದೆಯುಳ್ಳವನೂ ದೇದೀಪ್ಯಮಾನವಾದ ಶರೀರಕಾಂತಿಯುಳ್ಳವನೂ ಪ್ರಕಾಶಮಾನವಾದ ಕಿರೀಟದ ಚೂಲಿಕೆಯುಳ್ಳವನೂ ಆಗಿ ಮಹಾಮೇರುಪರ್ವತವನ್ನು ಮೀರುತ್ತಿದ್ದನು. ಮೇರುಪರ್ವತಕ್ಕಿಂತಲೂ ಹೆಚ್ಚಾಗಿ ಶೋಭಿಸುತ್ತಿದ್ದನೆಂದು ಭಾವವು.

**ಅಟಟಪ್ರಮಿತಂ ತಸ್ಯ ಬಭೂವಾಯುರ್ಮಹೌಜಸಃ ।**
**ದೇಹೋತ್ಸೇಧಶ್ಚ ಚಾಪಾನಾಮಮುಷ್ಯಾಸೀಚ್ಛತಾಷ್ಟಕಮ್ ॥ ೯೨ ॥**

ಮಹಾತೇಜಸ್ವಿಯಾದ ಆ ಮನುವಿನ ಆಯುಷ್ಯವು ಅಟಟಸಂಖ್ಯಾ ಪರಿಮಿತವಾಗಿದ್ದಿತು. ಶರೀರೋತ್ಸೇಧವು ಎಂಟುನೂರು ಧನುಸ್ಸುಗಳ ಪರಿಮಾಣವಾಗಿದ್ದಿತು.

**ಪುರಾ ಕಿಲ ಮೃಗಾ ಭದ್ರಾಃ ಪ್ರಜಾನಾಂ ಹಸ್ತಲಾಲಿತಾಃ ।**
**ತದಾ ತು ವಿಕೃತಿಂ ಭೇಜು[2]ರ್ವ್ಯಾತ್ತಾಸ್ಯಾ ಭೀಷಣಸ್ವನಾಃ ॥ ೯೩ ॥**

ಮೊದಲು ಪ್ರಜೆಗಳು ತಮ್ಮ ಕೈಗಳಿಂದ ಲಾಲಿಸುತ್ತಿದ್ದ ಶಾಂತಸ್ವಭಾವದ ಸಿಂಹ ಮೊದಲಾದ ಮೃಗಗಳು ಆಗ ವಿಕಾರವನ್ನು ಹೊಂದಿದುವು. ಬಾಯಿಯನ್ನು ತೆರೆದು ಭಯಂಕರವಾದ ಶಬ್ದವನ್ನು ಮಾಡತೊಡಗಿದುವು.

**ತೇಷಾಂ [3]ವಿಕ್ರಿಯಯಾ ಸಾಂತರ್ಗರ್ಜಯಾ ತತ್ರಸುಃ ಪ್ರಜಾಃ ।**
**ಪಪ್ರಚ್ಛುಶ್ಚ ತಮಭ್ಯೇತ್ಯ ಮನುಂ ಸ್ಥಿತಮವಿಸ್ಮಿತಮ್ ॥ ೯೪ ॥**

ಆ ಮೃಗಗಳ ವಿಕಾರಭಾವದಿಂದಲೂ, ಒಳಗೆ ಗುರುಗುಟ್ಟುವುದರಿಂದಲೂ ಪ್ರಜೆಗಳೆಲ್ಲ ಭಯಪಟ್ಟು ಕ್ಷೇಮಂಕರಮನುವಿನ ಬಳಿಗೆ ಹೋಗಿ, ಸ್ವಲ್ಪವೂ ಆಶ್ಚರ್ಯಪಡದಿದ್ದ ಆ ಮನುವನ್ನು, ಮುಂದೆ ಹೇಳುವ ರೀತಿಯಾಗಿ, ಪ್ರಶ್ನೆಮಾಡಿದರು.

**ಇಮೇ [4]ಭದ್ರ ಮೃಗಾಃ ಪೂರ್ವಂ [5]ಸ್ವಾದೀಯೋಭಿಸ್ತೃಣಾಂಕುರೈಃ ।**
**[6]ರಸಾಯನರಸ್ಯೈಃ ಪುಷ್ಟಾಃ ಸರಸಾಂ ಸಲಿಲೈರಪಿ ॥ ೯೫ ॥**

''ಎಲೈ ದೇವನೇ ! ಮೊದಲು ಈ ಮೃಗಗಳು ಅತ್ಯಂತರುಚಿಕರವಾದ ಹುಲ್ಲಿನಿಂದಲೂ ರಸಾಯನದಂತೆ ಸ್ವಾದಿಷ್ಟವಾದ ಸರೋವರದ ನೀರಿನಿಂದಲೂ ಬೆಳೆದುವೂ

**ಅಂಕಾಧಿರೋಹಣೈರ್ಹಸ್ತಲಾಲನೈರಪಿ[7] ಸಾಂತ್ವಿತಾಃ ।**
**ಅಸ್ಮಾಭಿರಿತಿ[8]ವಿಶ್ರಬ್ಧಾಃ ಸಂವಸಂತೋಽನುಪದ್ರವಾಃ ॥ ೯೬ ॥**

ತೊಡೆಯಮೇಲಿರಿಸಿಕೊಂಡು ಕೈಗಳ ಲಾಲನೆ(ಆದರಣೆ)ಗಳಿಂದ ಶಾಂತ ವಾಗಿದ್ದು ಯಾವ ತೊಂದರೆಯನ್ನು ಮಾಡದಿದ್ದುವೂ ನಮ್ಮೊಡನೆ ಅತ್ಯಂತ ಪ್ರೀತಿಯುಳ್ಳುವೂ ಆಗಿ ವಾಸಮಾಡುತ್ತಿದ್ದುವು.

**ಇದಾನೀಂ ತು ವಿನಾ ಹೇತೋಃ ಶೃಂಗೈರಭಿಭವಂತಿ ನಃ ।**
**ದಂಷ್ಟ್ರಾಭಿರ್ನಖರಾಗ್ರೈಶ್ಚ[9]ಬಿಭತ್ಸಂತಿ ಚ ದಾರುಣಾಃ ॥ ೯೭ ॥**

ಈಗಲಾದರೋ ಕಾರಣವಿಲ್ಲದೆ ಕೊಂಬುಗಳಿಂದ ನಮ್ಮನ್ನು ತಿರಸ್ಕರಿಸುತ್ತವೆ (ಹಾಯುತ್ತವೆ). ಕೋರೆದಾಡೆಗಳಿಂದಲೂ ಉಗುರುತುದಿಗಳಿಂದಲೂ ಭಯಂಕರ ವಾಗಿ ಹೆದರಿಸುತ್ತವೆ.

೧ ಯುಗವದಾಯತೌ. ೨ ವಿವೃತಂ. ೩ ವಿಕಾರೇಣ. ೪ ಹೇಮನೋ ! ೫ ಅತಿಶಯೇನ ಸ್ವಾದುಭಿಃ. ೬ ರಸಾಯನವದ್ರಸೋ ಯೇಷಾಂ ತಾನಿ. ೭ ಶಾಂತಿಂ ನೀತಾಃ. ೮ ವಿಶ್ವಸ್ತಾಃ. ೯ ಭೇತ್ತುಮಿಚ್ಛಂತಿ.

**ಕೋಽಭ್ಯುಪಾಯೋ ಮಹಾಭಾಗ ಬ್ರೂಹಿ ನಃ ಕ್ಷೇಮಸಾಧನಮ್ ।**
**ಕ್ಷೇಮಂಕರೋ ಹಿ ಸ ಭವಾನ್ ಜಗತಃ ಕ್ಷೇಮಚಿಂತನೈಃ ॥ ೯೮ ॥**

ಎಲೈ! ಮಹಾ ಅದೃಷ್ಟಶಾಲಿಯೇ! ಈ ತೊಂದರೆಯು ತಪ್ಪಿ ನಮಗೆ ಕ್ಷೇಮವುಂಟಾಗಬೇಕಾದರೆ ಏನು ಉಪಾಯಮಾಡಬೇಕೆಂಬುದನ್ನು ಹೇಳು. ನೀನು ಲೋಕಕ್ಕೆ ಕ್ಷೇಮಚಿಂತಕನಾಗಿರುವುದರಿಂದ ಕ್ಷೇಮಂಕರನೆಂಬ ಹೆಸರುಳ್ಳವನಾಗಿದ್ದಿ''

**ಇತಿ ತದ್ವಚನಾಜ್ಞಾತಸೌಹಾರ್ದೋ ಮನುರಬ್ರವೀತ್ ।**
**ಸತ್ಯಮೇತತ್ತಥಾಪೂರ್ವಮಿದಾನೀಂ ತು ಭಯಾವಹಾಃ ॥ ೯೯ ॥**

**ತದಿಮೇ ಪರಿಹರ್ತವ್ಯಾಃ ಕಾಲಾದ್ವಿಕೃತಿಮಾಗತಾಃ ।**
**ಕರ್ತವ್ಯೋ ನೈಷು ವಿಶ್ವಾಸೋ ಬಾಧಾಂ ಕುರ್ವಂತ್ಯುಪೇಕ್ಷಿತಾಃ ॥ ೧೦೦ ॥**

ಈ ಪ್ರಕಾರವಾದ ಆರ್ಯರ ಮಾತಿನಿಂದ ಅವರಮೇಲೆ ಪ್ರೇಮವುಳ್ಳವನಾಗಿ ಕ್ಷೇಮಂಕರಮನುವು, ''ಮೊದಲು ಆ ಮೃಗಗಳು ಶಾಂತಸ್ವಭಾವವುಳ್ಳುವಾಗಿದ್ದುದು ನಿಜ, ಆದರೆ ಈಗ ಭಯಂಕರಗಳಾಗಿವೆ. ಕಾಲದೋಷದಿಂದ ವಿಕಾರವನ್ನು ಹೊಂದಿದ ಈ ಮೃಗಗಳನ್ನು ದೂರಮಾಡಬೇಕು. ಇವುಗಳಲ್ಲಿ ವಿಶ್ವಾಸವನ್ನು ಮಾಡಕೂಡದು. ಉಪೇಕ್ಷೆಮಾಡಿದರೆ ಬಾಧೆಪಡಿಸುವುವು'' ಎಂಬುದಾಗಿ ಹೇಳಿದನು.

**ಇತ್ಯಾಕರ್ಣ್ಯ ವಚಸ್ತಸ್ಯ [೧]ಪರಿಜಹ್ರುಸ್ತದಾ ಮೃಗಾನ್ ।**
**ಶೃಂಗಿಣೋ ದಂಷ್ಟ್ರಿಣಃ ಕ್ರೂರಾನ್ ಶೇಷೈಃ [೨]ಸಂವಾಸಮಾಯಯುಃ ॥**

ಆ ಕ್ಷೇಮಂಕರಮನುವಿನ ಈ ವಚನವನ್ನು ಕೇಳಿ ಕೊಂಬುಗಳುಳ್ಳುವೂ ಕೋರೆಹಲ್ಲುಗಳುಳ್ಳುವೂ ಆದ ಆ ಕ್ರೂರಮೃಗಗಳನ್ನು ಪರಿತ್ಯಜಿಸಿ ಸಾಧುವಾದ ಮೃಗಗಳೊಡನೆ ವಾಸಮಾಡಿದರು.

**[೩]ವ್ಯತೀಯುಷಿ ತತಃ ಕಾಲೇ ಮನೋರಸ್ಯ ವ್ಯತಿಕ್ರಮೇ ।**
**ಮನ್ವಂತರಮಸಂಖ್ಯೇಯಾಃ [೪]ಸಮಾಕೋಟೀರ್ವಿಲಂಘ್ಯ ಚ ॥ ೧೦೨ ॥**

ಈ ಕ್ಷೇಮಂಕರಮನುವಿನ ಕಾಲವು ಸಮಾಪ್ತವಾಗುತ್ತಿರಲು ಅಸಂಖ್ಯಾತ ಕೋಟಿವರ್ಷ ಮನ್ವಂತರವು ಕಳೆಯಿತು.

**ಅತ್ರಾಂತರೇ ಮಹೋದಗ್ರವಿಗ್ರಹೋ ದೋಷನಿಗ್ರಹಃ ।**
**ಅಗ್ರೇಸರಃ ಸತಾಮಾಸೀನ್ಮನುಃ ಕ್ಷೇಮಂಧರಾಹ್ವಯಃ ॥ ೧೦೩ ॥**

ಇಪ್ಪರಲ್ಲಿ ಬಹಳ ಎತ್ತರವಾದ ಶರೀರವುಳ್ಳವನೂ ನಿರ್ದೋಷಿಯೂ ಸಜ್ಜನರಲ್ಲಿ ಶ್ರೇಷ್ಠನೂ ಆದ ಕ್ಷೇಮಂಧರನೆಂಬ ನಾಲ್ಕನೆಯ ಮನುವು ಹುಟ್ಟಿದನು.

**ತುಟಿಕಾಬ್ದಮಿತಂ ತಸ್ಯ ಬಭೂವಾಯುರ್ಮಹಾತ್ಮನಃ ।**
**ಶತಾನಿ ಸಪ್ತಚಾಪಾನಾಂ ಸಪ್ತತಿಃ ಪಂಚಚೋಚ್ಛ್ರಿತಿಃ ॥ ೧೦೪ ॥**

ಅವನ ಆಯುಷ್ಯವು ತುಟಿಕಸಂಖ್ಯಾಪರಿಮಿತವಾಗಿದ್ದಿತು. ಶರೀರೋತ್ಸೇಧವು ಏಳುನೂರೆಪ್ಪತ್ತೈದು ಧನುಸ್ಸು ಪರಿಮಾಣವಾಗಿದ್ದಿತು.

**ಯದಾ ಪ್ರಬಲತಾಂ ಯಾತಾಃ[೫]ಪಾಕಸತ್ತ್ವಾಃ ಮಹಾಕ್ರುಧಃ ।**
**ತದಾ ಲಕುಟಯಷ್ಟ್ಯಾದ್ಯೈಃ ಸ ರಕ್ಷಾವಿಧಿಮನ್ವಶಾತ್ ॥ ೧೦೫ ॥**

ಆ ಕ್ರೂರಮೃಗಗಳು ಬಹಳ ಕೋಪವುಳ್ಳುವಾಗಿ ಪ್ರಬಲವಾದಾಗ ದೊಣ್ಣೆ ಕೋಲು ಮೊದಲಾದುವುಗಳಿಂದ ಅವುಗಳನ್ನು ಬೆದರಿಸಿ ಆತ್ಮರಕ್ಷಣೆಯನ್ನು ಮಾಡಿಕೊಳ್ಳಬೇಕೆಂದು ಆ ಕ್ಷೇಮಂಧರಮನುವು ಪ್ರಜೆಗಳಿಗೆ ಬೋಧಿಸಿದನು.

**ಕ್ಷೇಮಂಧರ ಇತಿ ಖ್ಯಾತಿಂ ಪ್ರಜಾನಾಂ ಕ್ಷೇಮಧಾರಣಾತ್ ।**
**ಸ ದಧೇ ಪಾಕಸತ್ತ್ವೇಭ್ಯೋ ರಕ್ಷೋಪಾಯಾನುಶಾಸನಾತ್ ॥ ೧೦೬ ॥**

೧ ಪರಿಹರಂತಿ ಸ್ಮ. ೨ ಸಹವಾಸಂ. ೩ ವ್ಯತಿಕ್ರಾಂತೇ. ೪ ವತ್ಸರಾಃ. ೫ ಕ್ರೂರಮೃಗಾಃ.

ಕ್ರೂರಮೃಗಗಳ ದೆಸೆಯಿಂದ ಆತ್ಮರಕ್ಷಣೆಯನ್ನು ಮಾಡಿಕೊಳ್ಳುವ ಉಪಾಯವನ್ನುಪದೇಶಮಾಡಿ ಪ್ರಜೆಗಳಿಗೆ ಕ್ಷೇಮವನ್ನುಂಟುಮಾಡಿದುದರಿಂದ ಆ ಮನುವು ಕ್ಷೇಮಂಧರನೆಂದು ಪ್ರಸಿದ್ಧಿಯನ್ನು ಹೊಂದಿದನು.

**ಪುನರ್ಮನ್ವಂತರಂ ತತ್ರ ಸಂಜಾತಂ ಪೂರ್ವವತ್ಕ್ರಮಾತ್ ।**
**ಮನುಃ ಸೀಮಂಕರೋ ಜಜ್ಞೇ ಪ್ರಜಾನಾಂ ಪುಣ್ಯಪಾಕತಃ ॥ ೧೦೭ ॥**

ಅವನ ಕಾಲವೂ ಪೂರ್ತಿಯಾದ ನಂತರ ಮೊದಲಿನಂತೆ ಅಸಂಖ್ಯಾತ ಕೋಟಿವರುಷ ಮನ್ವಂತರವು ಕಳೆಯಿತು. ಆಗ ಪ್ರಜೆಗಳ ಪುಣ್ಯೋದಯದಿಂದ ಸೀಮಂಕರನೆಂಬ ಮನುವು ಜನಿಸಿದನು.

**ಸ ಚಿತ್ರವಸ್ತ್ರಮಾಲ್ಯಾದಿಭೂಷಿತಂ ವಪುರುದ್ವಹನ್ ।**
**ಸುರೇಂದ್ರಃ ಸ್ವರ್ಗಲಕ್ಷ್ಮ್ಯೇವ ಭೋಗಲಕ್ಷ್ಮ್ಯೋಪಲಾಲಿತಃ ॥ ೧೦೮ ॥**

ಅವನು ನಾನಾವಿಧವಾದ ವಸ್ತ್ರಗಳಿಂದಲೂ ಪುಷ್ಪಮಾಲೆ ಮೊದಲಾದುವುಗಳಿಂದಲೂ ಅಲಂಕೃತವಾದ ಶರೀರವುಳ್ಳವನಾಗಿ, ದೇವೇಂದ್ರನು ಸ್ವರ್ಗಲಕ್ಷ್ಮಿಯಿಂದ ಪ್ರೀತಿಸಲ್ಪಡುವಂತೆ, ಭೋಗಲಕ್ಷ್ಮಿಯಿಂದ ಪ್ರೀತಿಸಲ್ಪಡುತ್ತಿದ್ದನು. ಅಂದರೆ ಇಂದ್ರನು ಸ್ವರ್ಗಸಂಪತ್ತನ್ನನುಭವಿಸುವಂತೆ ಈ ಮನುವು ಭೋಗ ಸಂಪತ್ತನ್ನನುಭವಿಸುತ್ತಿದ್ದನೆಂದು ಭಾವವು.

**ಕಮಲಪ್ರಮಿತಂ ತಸ್ಯ ಪ್ರಾಹುರಾಯುರ್ಮಹಾಧಿಯಃ ।**
**ಶತಾನಿ ಸಪ್ತಪಂಚಾಶದುಚ್ಛ್ರಾಯೋ ಧನುಷಾಂ ಮತಃ ॥ ೧೦೯ ॥**

ಮಹಾಬುದ್ಧಿಶಾಲಿಯಾದ ಆ ಮನುವಿನ ಆಯುಷ್ಯವು ಕಮಲವೆಂಬ ಸಂಖ್ಯಾಪರಿಮಿತವಾಗಿದ್ದಿತು. ಶರೀರೋತ್ಸೇಧವು ಏಳುನೂರೈವತ್ತು ಧನುಸ್ಸು ಪರಿಮಾಣವಾಗಿದ್ದಿತು.

**ಕಲ್ಪಾಂಘ್ರಿಪಾ ಯದಾ ಜಾತಾ [೧]ವಿರಲಾ [೨]ಮಂದಕಾಃ ಫಲೈಃ ।**
**ತದಾ ತೇಷು [೩]ವಿಸಂವಾದೋ ಬಭೂವೈಷಾಂ ಪರಸ್ಪರಮ್ ॥ ೧೧೦ ॥**

ಕಲ್ಪವೃಕ್ಷಗಳು ಕಡಿಮೆಯಾಗಿ ಸ್ವಲ್ಪಫಲಗಳನ್ನು ಕೊಡುವುದಕ್ಕೆ ಪ್ರಾರಂಭಿಸಿದಾಗ ಕಲ್ಪವೃಕ್ಷಗಳ ವಿಷಯವಾಗಿ, ನನ್ನದು ತನ್ನದೆಂದು ಆರ್ಯರಿಗೆ ಪರಸ್ಪರವಾಗಿ ವಿವಾದವು ಹುಟ್ಟಿತು.

**ತತೋ ಮನುರಸೌ ಮತ್ವಾ ವಾಚಾ ಸೀಮವಿಧಿಂ ವ್ಯಧಾತ್ ।**
**ಅತಃ ಸೀಮಂಕರಾಖ್ಯಾಂ ತೈರ್ಲ[೪]ಂಭಿತೋನ್ವರ್ಥತಾಂ ಗತಾಮ್ ॥**

ಆಮೇಲೆ ಈ ಸೀಮಂಕರಮನುವು ಚೆನ್ನಾಗಿ ಪರ್ಯಾಲೋಚಿಸಿ ಮಾತಿನಿಂದ ಎಲ್ಲೆಯನ್ನು ಮಾಡಿ ಕಲ್ಪವೃಕ್ಷಗಳನ್ನು ಆರ್ಯರಿಗೆ ಹಂಚಿಕೊಟ್ಟನು. ಈ ಕಾರಣದಿಂದ ಆರ್ಯರು ಆ ಮನುವಿಗೆ ಸೀಮಂಕರನೆಂದು ಸಾರ್ಥಕವಾದ ಹೆಸರನ್ನು ಕೊಟ್ಟರು.

**ಪುನರ್ಮನ್ವಂತರಂ ಪ್ರಾಗ್ವದತಿಲಂಘ್ಯ ಮಹೋದಯಃ ।**
**ಮನುಃ ಸೀಮಂಧರೋ ನಾಮ್ನಾ ಸಮಜಾಯತ ಪುಣ್ಯಧೀಃ ॥ ೧೧೨ ॥**

ಪುನಃ ಮೊದಲಿನಂತೆ ಅಸಂಖ್ಯಾತಕೋಟಿವರ್ಷ ಮನ್ವಂತರವು ಕಳೆಯಿತು. ಆಗ ಮಹಾಭಾಗ್ಯಶಾಲಿಯೂ ಬುದ್ಧಿಶಾಲಿಯೂ ಆದ ಸೀಮಂಧರನೆಂದು ಹೆಸರುಳ್ಳ ಮನುವು ಹುಟ್ಟಿದನು.

**ನಲಿನಪ್ರಮಿತಾಯುಷ್ಕೋ [೫]ನಲಿನಾಸ್ಯೇಕ್ಷಣದ್ಯುತಿಃ ।**
**ಧನುಷಾಂ ಪಂಚವರ್ಗಾಗ್ರಮುಚ್ಛ್ರಿತಃ ಶತಸಪ್ತಕಮ್ ॥ ೧೧೩ ॥**

೧ ದುರ್ಲಭಾಃ. ೨ ಅಲ್ಪಾಃ. ೩ ವಿವಾದಃ. ೪ ಪ್ರಾಪಿತಃ. ೫ ನಲಿನವದಾಸ್ಯೇಕ್ಷಣಯೋರ್ದ್ಯುತಿರ್ಯಸ್ಯ ಸಃ.

ಕಮಲದಂತೆ ಮುಖಕಾಂತಿಯೂ ಕಣ್ಣುಗಳ ಕಾಂತಿಯೂ ಉಳ್ಳ ಈ ಮನುವು ನಲಿನಸಂಖ್ಯಾಪರಿಮಿತವಾದ ಆಯುಷ್ಯವುಳ್ಳವನಾಗಿದ್ದನು. ಏಳುನೂರಿಪ್ಪತ್ತೈದು ಧನುಸ್ಸು ಶರೀರಪರಿಮಾಣವಾಗಿದ್ದಿತು.

**ಅತ್ಯಂತವಿರಲಾ ಜಾತಾಃ ಕ್ಷ್ಮಾಜಾ ಮಂದಫಲಾ ಯದಾ ।**
**ನೃಣಾಂ ಮಹಾನ್ಸಿಸಂವಾದಃ ಕೇಶಾಕೇಶಿ ತದಾವೃಧತ್ ॥ ೧೧೪ ॥**

ಕಲ್ಪವೃಕ್ಷಗಳು ಬಹಳ ಕಡಿಮೆಯಾಗಿ ಸ್ವಲ್ಪಫಲಗಳನ್ನು ಕೊಡಲಾರಂಭಿಸಿದಾಗ ಆರ್ಯರು "ನನ್ನದು ತನ್ನದು" ಎಂದು ಜುಟ್ಟುಜುಟ್ಟು ಹಿಡಿದು ಹೆಚ್ಚಾಗಿ ಜಗಳವಾಡಲಾರಂಭಿಸಿದರು.

**ಕ್ಷೇಮವೃತ್ತಿಂ ತತಸ್ತೇಷಾಂ ಮನ್ವಾನಃ ಸ ಮನುಸ್ತದಾ ।**
**ಸೀಮಾನಿ ತರುಗುಲ್ಮಾದಿಚಿನ್ಹಿತಾನ್ಯಕರೋತ್ಕೃತೀ ॥ ೧೧೫ ॥**

ಆಗ ಆ ಚತುರನಾದ ಸೀಮಂಧರಮನುವು ಆ ಆರ್ಯರಿಗೆ ಕ್ಷೇಮವಾಗುವ ಯೋಚನೆಯನ್ನುಮಾಡಿ ಗಿಡ ಪೊದರು ಮೊದಲಾದ ಗುರುತುಗಳುಳ್ಳ ಸೀಮಾ (ಎಲ್ಲೆ) ವಿಭಾಗಗಳನ್ನು ಮಾಡಿಕೊಟ್ಟನು.

**ತತೋಽಂತರಮಭೂದ್ಭೂಯೋಽಪ್ಯಸಂಖ್ಯಾ ವರ್ಷಕೋಟಯಃ ।**
**ಹೀಯಮಾನೇಷು ಸರ್ವೇಷು ನಿಯೋಗೇಷ್ವನುಪೂರ್ವಶಃ ॥ ೧೧೬ ॥**

**ತದಂತರವ್ಯತಿಕ್ರಾಂತಾವಭೂದ್ವಿಮಲವಾಹನಃ ।**
**ಮನೂನಾಂ ಸಪ್ತಮೋ ಭೋಗಲಕ್ಷ್ಮ್ಯಾಲಿಂಗಿತವಿಗ್ರಹಃ ॥ ೧೧೭ ॥**

ಇವನ ನಂತರ ಅಸಂಖ್ಯಾತಕೋಟಿವರ್ಷ ಮನ್ವಂತರವು ಕಳೆಯಿತು. ಕಲ್ಪವೃಕ್ಷಗಳ ಶಕ್ತಿ ಮನುಷ್ಯರ ಆಯುಷ್ಯ ಬುದ್ಧಿ ಮೊದಲಾದುವೆಲ್ಲವೂ ಕ್ರಮವಾಗಿ ನಾಶಹೊಂದುತ್ತ ಆ ಮನ್ವಂತರವು ಕಳೆಯುವಾಗ ಮನುಗಳಲ್ಲಿ ಏಳನೆಯವನಾದ ವಿಮಲವಾಹನನೆಂಬ ಮನುವು ಹುಟ್ಟಿದನು. ಅವನ ಶರೀರವು ಭೋಗಲಕ್ಷ್ಮಿಯಿಂದ ಆಲಿಂಗಿತವಾಗಿದ್ದಿತು. ಬಹಳ ಶೋಭಾಯಮಾನವಾಗಿದ್ದಿತೆಂದು ಭಾವವು.

**ಪದ್ಮಪ್ರಮಿತಮಸ್ಯಾಯುಃ ಪದ್ಮಾಶ್ಲಿಷ್ಟತನೋರಭೂತ್ ।**
**ಧನುಃಶತಾನಿ ಸಪ್ತೈವ ತನೂತ್ಸೇಧೋಽಸ್ಯ ವರ್ಣಿತಃ ॥ ೧೧೮ ॥**

ಶೋಭಾಯುಕ್ತವಾದ ಶರೀರವುಳ್ಳ ಆ ವಿಮಲವಾಹನಮನುವಿನ ಆಯುಷ್ಯವು ಪದ್ಮಸಂಖ್ಯಾಪರಿಮಿತವಾಗಿದ್ದಿತು. ಏಳುನೂರು ಧನುಸ್ಸು ಶರೀರೋತ್ಸೇಧ ವಾಗಿದ್ದಿತು.

**ತದುಪಜ್ಞಂ ಗಜಾದೀನಾಂ ಬಭೂವಾರೋಹಣಕ್ರಮಃ ।**
**ಕುಠಾರಾಂಕುಶಪರ್ಯಾಣಮುಖಭಾಂಡಾದ್ಯುಪಕ್ರಮೈಃ ॥ ೧೧೯ ॥**

ಅವನು ಆನೆ ಕುದುರೆ ಮೊದಲಾದ ವಾಹನಗಳನ್ನು ಹತ್ತುವ ಕ್ರಮವನ್ನೂ ಕೊಡಲಿ ಅಂಕುಶ ಹೌದ ಕಡಿವಾಣ ಮೊದಲಾದುವುಗಳನ್ನು ಉಪಯೋಗಿಸುವ ವಿಧಿಯನ್ನೂ ಮೊದಲು ಉಪದೇಶಮಾಡಿದನು.

**ಪುನರಂತರಮತ್ರಾಭೂದಸಂಖ್ಯೇಯಾಬ್ದಕೋಟಯಃ ।**
**ತತೋಽಷ್ಟಮೋ ಮನುರ್ಜಾತಶ್ಚಕ್ಷುಷ್ಮಾನಿತಿ ಶಬ್ದಿತಃ ॥ ೧೨೦ ॥**

ಇವನಕಾಲವು ಕಳೆದನಂತರ ಪುನಃ ಅಸಂಖ್ಯಾತಕೋಟಿವರ್ಷ ಮನ್ವಂತರವು ಕಳೆಯಿತು. ಆಮೇಲೆ ಚಕ್ಷುಷ್ಮಾನೆಂದು ಹೆಸರುಳ್ಳ ಎಂಟನೆಯ ಮನುವು ಹುಟ್ಟಿದನು.

**ಪದ್ಮಾಂಗಪ್ರಮಿತಾಯುಷ್ಕಶ್ಚಾಪಾನಾಂ ಪಂಚಸಪ್ತತಿಃ ।**
**ಷಟ್ಛತಾನ್ಯಪ್ಯುದಗ್ರಶ್ರೀರುಚ್ಛ್ರಿತಾಂಗೋ ಬಭೂವ ಸಃ ॥ ೧೨೧ ॥**

ಆ ಮನುವು ಪದ್ಮಾಂಗಸಂಖ್ಯಾಪರಿಮಿತವಾದ ಆಯುಷ್ಯವುಳ್ಳವನೂ ಆರು ನೂರೆಪ್ಪತ್ತೈದು ಧನುಸ್ಸು ಶರೀರಪರಿಮಾಣವುಳ್ಳವನೂ ಅತ್ಯಂತ ಶೋಭಾಯ ಮಾನನೂ ಆಗಿದ್ದನು.

**ತಸ್ಯ ಕಾಲೇಭವತ್ತೇಷಾಂ ಕ್ಷಣಂ ಪುತ್ರಮುಖೇಕ್ಷಣಮ್ ।**
**ಅದೃಷ್ಟಪೂರ್ವಮಾರ್ಯಾಣಾಂ ಮಹದುತ್ತ್ರಾಸಕಾರಣಮ್ ॥ ೧೨೨ ॥**

ಅವನ ಕಾಲದಲ್ಲಿ ಆರ್ಯರು ಒಂದು ಕ್ಷಣಕಾಲ ಮಕ್ಕಳ ಮುಖವನ್ನು ನೋಡಲಾರಂಭಿಸಿದರು. ಮೊಟ್ಟಮೊದಲು ಹೀಗಾದುದನ್ನು ನೋಡಿ ಆರ್ಯರು ಭಯಪಟ್ಟರು. ಅಂದರೆ ಆ ಕಾಲದವರೆಗೆ ಪುತ್ರೋತ್ಪತ್ತಿಯಾದೊಡನೆ ಪುತ್ರಮುಖವನ್ನು ನೋಡದೆಯೇ ಮರಣವನ್ನು ಹೊಂದುತ್ತಿದ್ದರು. ಆಗ ಪುತ್ರಮುಖವನ್ನು ನೋಡಲಾರಂಭಿಸಿ ಭಯಪಟ್ಟರೆಂದಭಿಪ್ರಾಯವು.

**ತತಃ ಸಪದಿ ಸಂಜಾತಸಾಧ್ವಸಾನಾರ್ಯಕಾಂಸ್ತದಾ ।**
**ತದ್ಯಾಥಾತ್ಮ್ಯೋಪದೇಶೇನ ಸ ಸಂತ್ರಾಸಮಥೌಜ್ಝಯತ್ ॥ ೧೨೩ ॥**

ಆಮೇಲೆ ಶೀಘ್ರವಾಗಿ ಭಯವನ್ನುಹೊಂದಿದ ಆರ್ಯರಿಗೆ ನಿಜಸ್ಥಿತಿಯನ್ನು ಉಪದೇಶಮಾಡಿ ಅವರ ಭಯವನ್ನು ಹೋಗಲಾಡಿಸಿದನು. "ಇವರು ನಿಮ್ಮ ಮಕ್ಕಳು" ಎಂದು ತಿಳಿಸಿ ಅವರ ಭಯವನ್ನು ನಿವಾರಣೆಮಾಡಿದನೆಂದರ್ಥವು.

**ಚಕ್ಷುಷ್ಮಾನಿತಿ ತೇನಾಭೂತ್ತತ್ಕಾಲೇ ತೇ ಯತೋಽರ್ಭಕಾಃ ।**
**ಜನಯಿತ್ರೋಃ ಕ್ಷಣಂ ಯಾತಾಶ್ಚಕ್ಷುರ್ದರ್ಶನಗೋಚರಮ್ ॥ ೧೨೪ ॥**

ಆ ಕಾಲದಲ್ಲಿ ತಂದೆತಾಯಿಗಳ ಕಣ್ಣುಗಳಿಗೆ ಒಂದು ಕ್ಷಣಕಾಲ ಮಕ್ಕಳ ದರ್ಶನವಾದುದರಿಂದ ಆ ಮನುವಿನ ಹೆಸರು ಚಕ್ಷುಷ್ಮಾನೆಂದಾಯಿತು.

**ಪುನರಪ್ಯಂತರಂ ತಾವದ್ವರ್ಷಕೋಟೀರ್ವಿಲಂಘ್ಯ ಸಃ ।**
**ಯಶಸ್ವಾನಿತ್ಯಭೂನ್ನಾಮ್ನಾ ಯಶಸ್ವೀ ನವಮೋ ಮನುಃ ॥ ೧೨೫ ॥**

ಅವನನಂತರ ಅಸಂಖ್ಯಾತಕೋಟಿವರ್ಷ ಮನ್ವಂತರವು ಕಳೆಯಿತು. ಆಗ ಯಶಸ್ವಾನೆಂದು ಹೆಸರುಳ್ಳ ಒಂಬತ್ತನೆಯ ಮನುವು ಹುಟ್ಟಿದನು.

**ಕುಮುದಪ್ರಮಿತಂ ತಸ್ಯ ಪರಮಾಯುರ್ಮಹೀಯಸಃ ।**
**ಷಟ್ಛತಾನಿ ಚ ಪಂಚಾಶದ್ಧನೂಂಷಿ ಚ ತನೂಚ್ಛ್ರಿತಿಃ ॥ ೧೨೬ ॥**

ಆ ಮಹಾಪುರುಷನ ಆಯುಷ್ಯವು ಕುಮುದಸಂಖ್ಯಾಪರಿಮಿತವಾಗಿದ್ದಿತು. ಆರುನೂರೈವತ್ತುಧನುಸ್ಸು ಶರೀರ ಪರಿಮಾಣವಾಗಿದ್ದಿತು.

**ತಸ್ಯ ಕಾಲೇ ಪ್ರಜಾ [೧]ಜನ್ಯಮುಖಾಲೋಕಪುರಸ್ಸರಮ್ ।**
**ಕೃತಾಶಿಷಃ ಕ್ಷಣಂ ಸ್ಥಿತ್ವಾ ಲೋಕಾಂತರಮುಪಾಗಮನ್ ॥ ೧೨೭ ॥**

ಅವನ ಕಾಲದಲ್ಲಿ ಪ್ರಜೆಗಳು ತಮ್ಮಮಕ್ಕಳ ಮುಖವನ್ನು ನೋಡಿ ಆಶೀರ್ವಾದವನ್ನು ಮಾಡಿ ಸ್ವಲ್ಪಹೊತ್ತು ಇದ್ದು ಪರಲೋಕವನ್ನು ಹೊಂದುತ್ತಿದ್ದರು.

**ಯಶಸ್ವಾನಿತ್ಯಭೂತ್ತೇನ ಶಶಂಸುಸ್ತದ್ಯಶೋ ಯತಃ ।**
**ಪ್ರಜಾಃ[೨]ಸುಪ್ರಜಸಃ ಪ್ರೀತಾಃ ಪುತ್ರಾಶಾಸನದೇಶನಾತ್ ॥ ೧೨೮ ॥**

ಆ ಮನುವು ಮಕ್ಕಳಿಗೆ ಆಶೀರ್ವಾದಮಾಡುವುದನ್ನು ಪ್ರಜೆಗಳಿಗೆ ಉಪದೇಶಮಾಡಿದುದರಿಂದ ಒಳ್ಳೆಯ ಪುತ್ರಸಂತಾನವನ್ನು ಪಡೆದ ಆ ಪ್ರಜೆಗಳೆಲ್ಲ ಯಶಸ್ವಾನೆಂಬ ಹೆಸರಿನಿಂದ ಆ ಮನುವಿನ ಯಶಸ್ಸನ್ನು ಹೊಗಳಿದರು.

೧ ಪುತ್ರ. ೨ ಶೋಭನಾಃ ಪ್ರಜಾಃ (ಪುತ್ರಾಃ) ಯಾಸಾಂ ತಾಃ, ಅಸ್ವಜಾಯಾ ಇತ್ಯಸ್.

**ತತೋಽಂತರಮತಿಕ್ರಮ್ಯ ತತ್ಪಾಯೋಗ್ಯಾಬ್ದಸಂಮಿತಮ್ ।**
**ಅಭಿಚಂದ್ರೋಭವನ್ನಾಮ್ನಾ ಚಂದ್ರಸೌಮ್ಯಾನನೋ ಮನುಃ ॥ ೧೨೯ ॥**

ಆಮೇಲೆ ಅಸಂಖ್ಯಾತಕೋಟಿವರ್ಷ ಮನ್ವಂತರವು ಕಳೆಯಿತು. ಆಗ ಚಂದ್ರನಂತೆ ಸೌಮ್ಯವಾದ ಮುಖವುಳ್ಳ ಅಭಿಚಂದ್ರನೆಂಬ ಮನುವು ಹುಟ್ಟಿದನು.

**ಕುಮುದಾಂಗಪ್ರಮಾಯುಷ್ಕೋ ಜ್ವಲನ್ಮುಕುಟಕುಂಡಲಃ ।**
**[೧]ಪಂಚವರ್ಗಾಗ್ರಷಟ್ಚಾಪಶತೋತ್ಸೇಧಃ ಸ್ಫುರತ್ತನುಃ ॥ ೧೩೦ ॥**

ಅವನು ಕುಮುದಾಂಗಸಂಖ್ಯಾಪರಿಮಿತವಾದ ಆಯುಷ್ಯವುಳ್ಳವನೂ, ಪ್ರಕಾಶಮಾನವಾದ ಮಕುಟ ಕರ್ಣಕುಂಡಲಗಳುಳ್ಳವನೂ ಆರುನೂರಿಪ್ಪತ್ತೈದು ಧನುಸ್ಸು ಉತ್ಸೇಧವುಳ್ಳ ಪ್ರಕಾಶಮಾನವಾದ ಶರೀರವುಳ್ಳವನೂ ಆಗಿದ್ದನು.

**ಕಲ್ಪದ್ರುಮ ಇವೋತ್ತುಂಗಃ [೨]ಫಲಶಾಲೀ ಮಹಾದ್ಯುತಿಃ ।**
**ಸ ಬಭಾರ ಯಥಾಸ್ಥಾನಂ ನಾನಾಭರಣ[೩]ಮಂಜರೀಃ ! ॥ ೧೩೧ ॥**

ಅವನು ಕಲ್ಪವೃಕ್ಷದಂತೆ ಉನ್ನತನಾಗಿದ್ದನು. ಭೋಗಫಲಗಳಿಂದ ಮನೋಹರನಾಗಿದ್ದನು. ಮಹಾಕಾಂತಿಯುಕ್ತನಾಗಿ ಅನೇಕಪ್ರಕಾರವಾದ ಆಭರಣಗಳ ಸಮೂಹವೆಂಬ ಪುಷ್ಪಗಳ ಗೊಂಚಲುಗಳನ್ನು ಆಯಾ ಸ್ಥಾನಗಳಲ್ಲಿ ಧರಿಸಿದ್ದನು.

**ತಸ್ಯ ಕಾಲೇ ಪ್ರಜಾ[೪]ಸ್ತೋಕಮುಖಂ ವೀಕ್ಷ್ಯ ಸಕೌತುಕಮ್ ।**
**ಆಶಾಸ್ಯ ಕ್ರೀಡನಂ ಚಕ್ರುರ್ನಿಶಿ ಚಂದ್ರಾಭಿದರ್ಶನೈಃ ॥ ೧೩೨ ॥**

ಅವನ ಕಾಲದಲ್ಲಿ ಪ್ರಜೆಗಳು ಕುತೂಹಲದಿಂದ ತಮ್ಮ ಮಕ್ಕಳ ಮುಖವನ್ನು ನೋಡಿ ಆಶೀರ್ವಾದಮಾಡಿ ರಾತ್ರಿಕಾಲದಲ್ಲಿ ಚಂದ್ರನನ್ನು ತೋರಿಸಿ ಆಟವಾಡುತ್ತಿದ್ದರು. ಮನುವಿನ ಉಪದೇಶದಿಂದ ಚಂದ್ರನನ್ನು ತೋರಿಸಿ ಮಕ್ಕಳನ್ನು ಆಡಿಸುತ್ತಿದ್ದರೆಂದು ಭಾವವು.

**ತತೋಭಿಚಂದ್ರ ಇತ್ಯಾಸೀದ್ಯತಶ್ಚಂದ್ರಮಭಿಸ್ಥಿತಾಃ ।**
**ಪುತ್ರಾನಾಕ್ರೀಡಯಾಮಾಸುಸ್ತತ್ಕಾಲೇ ತನ್ಮತಾಜ್ಜನಾಃ ॥ ೧೩೩ ॥**

ಆ ಕಾಲದಲ್ಲಿ ಆ ಮನುವಿನ ಉಪದೇಶದಿಂದ ಜನಗಳು ಚಂದ್ರನಿಗೆ ಅಭಿಮುಖರಾಗಿದ್ದು ಮಕ್ಕಳನ್ನು ಆಡಿಸುತ್ತಿದ್ದುದರಿಂದ ಅವನಿಗೆ ಅಭಿಚಂದ್ರನಂತೆ ಹೆಸರಾಯಿತು.

**ಪುನರಂತರಮುಲ್ಲಂಘ್ಯ ತತ್ಪಾಯೋಗ್ಯಸಮಾಶತೈಃ ।**
**ಚಂದ್ರಾಭ ಇತ್ಯಭೂತ್ಖ್ಯಾತಶ್ಚಂದ್ರಾಸ್ಯಃ ಕಾಲವಿನ್ಮನುಃ ॥ ೧೩೪ ॥**

ಆಮೇಲೆ ಯಥಾಕ್ರಮವಾಗಿ ಅನೇಕವರ್ಷ ಮನ್ವಂತರವು ಕಳೆಯಿತು. ಆಗ ಚಂದ್ರನಂತೆ ಮುಖವುಳ್ಳವನೂ ಕಾಲಜ್ಞಾನಿಯೂ ಆದ ಚಂದ್ರಾಭನೆಂಬ ಮನುವು ಹುಟ್ಟಿದನು.

**ನವು(ಯು)ತಪ್ರಮಿತಾಯುಷ್ಕೋ ವಿಲಸಲ್ಲಕ್ಷಣೋಜ್ಜ್ವಲಃ ।**
**ಧನುಷಾಂ ಷಟ್ಶತಾನ್ಯುಚ್ಚೈಃ ಪ್ರೋದ್ಯದರ್ಕಸಮದ್ಯುತಿಃ ॥ ೧೩೫ ॥**

ಅವನ ಆಯುಷ್ಯವು ನವು(ಯು)ತಸಂಖ್ಯಾಪರಿಮಿತವಾಗಿದ್ದಿತು. ಪ್ರಕಾಶಿಸುತ್ತಿರುವ ಶುಭಲಕ್ಷಣಗಳಿಂದ ಶೋಭಿಸುತ್ತಿದ್ದನು. ಅವನ ಶರೀರವು ಆರುನೂರು ಧನುಸ್ಸು ಉನ್ನತವಾಗಿದ್ದಿತು. ಉದಯಿಸುತ್ತಿರುವ ಸೂರ್ಯನಿಗೆ ಸಮಾನವಾದ ದೇಹಕಾಂತಿಯುಳ್ಳವನಾಗಿದ್ದನು.

---

೧ ಪಂಚವರ್ಗ ಇತ್ಯಸ್ಯ ಪಂಚವಿಂಶತಿರಿತ್ಯರ್ಥಃ, ಯಥಾ ೫ x ೫ = ೨೫. ೨ ಮನುಪಕ್ಷೇ ಭೋಗಃ. ೩ ವೃಕ್ಷಪಕ್ಷೇ ಕುಸುಮಮಂಜರೀರ್ಮನುಪಕ್ಷೇ ಸಮೂಹಃ. ೪ ಪುತ್ರಮುಖಂ.

**ಸ [೧]ಪುಷ್ಕಲಾಃ ಕಲಾ ಬಿಭ್ರದುದಿತೋ ಜಗತಾಂ ಪ್ರಿಯಃ ।**
**ಸ್ಮಿತಜ್ಯೋತ್ಸ್ನಾಭಿರಾಹ್ಲಾದಂ ಶಶೀವ ಸಮಜೀಜನತ್ ॥ ೧೩೬ ॥**

ಹದಿನಾರು ಕಲೆಗಳನ್ನು ಧರಿಸಿದ ಚಂದ್ರನು ಉದಯಿಸಿ ತನ್ನ ಕಿರಣಗಳಿಂದ ಜನಗಳನ್ನು ಸಂತೋಷಪಡಿಸುವಂತೆ, ಮನುವು ಜನಿಸಿ ಸಮಸ್ತವಾದ ಕಲಾಕೌಶಲ್ಯಗಳನ್ನು ತಿಳಿದವನಾಗಿ ತನ್ನ ಮುಗುಳುನಗೆಯಿಂದ ಜನಗಳನ್ನು ಆನಂದಪಡಿಸುತ್ತಿದ್ದನು.

**ತಸ್ಯ ಕಾಲೇಽತಿಸಂಪ್ರೀತಾಃ ಪುತ್ರಾ[೨]ಶಾಸನದರ್ಶನೈಃ ।**
**[೩]ತುಗ್ಭಿಃ ಸಹ ಸ್ಮ ಜೀವಂತಿ ದಿನಾನಿ ಕತಿಚಿತ್ಪ್ರಜಾಃ ॥ ೧೩೭ ॥**

ಅವನ ಕಾಲದಲ್ಲಿ ಪ್ರಜೆಗಳು ಬಹಳ ಪ್ರೀತಿಯಿಂದ ಮಕ್ಕಳಿಗೆ ಆಶೀರ್ವಾದವನ್ನು ಮಾಡಿ ಕೆಲವು ದಿವಸಗಳವರೆಗೆ ಆ ಮಕ್ಕಳೊಡನೆ ಜೀವಿಸುತ್ತಿದ್ದರು.

**ತತೋ ಲೋಕಾಂತರಪ್ರಾಪ್ತಿಮಭಜಂತ ಯಥಾಸುಖಮ್ ।**
**ಸ ತದಾಹ್ಲಾದನಾದಾಸೀಚ್ಚಂದ್ರಾಭ ಇತಿ [೪]ವಿಶ್ರುತಃ ॥ ೧೩೮ ॥**

ಆಮೇಲೆ ಸುಖವಾಗಿ ಲೋಕಾಂತರವನ್ನು ಹೊಂದುತ್ತಿದ್ದರು. ಆ ಮನುವು ಚಂದ್ರನಂತೆ ಪ್ರಜೆಗಳಿಗೆ ಸಂತೋಷಪಡಿಸಿದುದರಿಂದ ಅವನಿಗೆ ಚಂದ್ರಾಭನೆಂದು ಹೆಸರಾಯಿತು.

**ಮರುದ್ದೇವೋಭವತ್ಕಾ[೫]ಂತಃ ಕುಲಧೃ(ಕೃ)ತ್ತದನಂತರಮ್ ।**
**ಸ್ವೋಚಿತಾಂತರಮುಲ್ಲಂಘ್ಯ ಪ್ರಜಾನಾಮುತ್ಸವೋ ದೃಶಾಮ್ ॥ ೧೩೯ ॥**

ಅವನನಂತರ ಅನೇಕವರ್ಷ ಮನ್ವಂತರವು ಕಳೆಯಿತು. ಆಗ ಮರುದ್ದೇವನೆಂಬ ಸುಂದರನಾದ ಕುಲಧರನು ಹುಟ್ಟಿದನು. ಅವನನ್ನು ನೋಡಿ ಪ್ರಜೆಗಳಿಗೆ ಬಹಳ ಸಂತೋಷವಾಯಿತು.

**ಶತಾನಿ ಪಂಚ[೬]ಪಂಚಾಗ್ರಾಂ ಸಪ್ತತಿಂ ಚ ಸಮುಚ್ಛ್ರಿತಿಃ ।**
**ಧನೂಂಷಿ ನವು (ಯು) ತಾಂಗಾಯು[೭]ರ್ವಿವಸ್ವಾನಿವ ಭಾಸ್ವರಃ॥ ೧೪೦ ॥**

ಆ ಮನುವಿನ ಶರೀರವು ಐದುನೂರೆಪ್ಪತ್ತೈದು ಧನುಸ್ಸು ಉನ್ನತವಾಗಿದ್ದಿತು. ಅವನು ನವು(ಯು)ತಾಂಗಸಂಖ್ಯಾಪರಿಮಿತವಾದ ಆಯುಷ್ಯವುಳ್ಳವನೂ ಸೂರ್ಯನಂತೆ ಪ್ರಕಾಶಮಾನನೂ ಆಗಿದ್ದನು.

**ಸ [೮]ತೇಜಸ್ವೀ [೯]ಸುಖಾಲೋಕಃ [೧೦]ಸೋದಯೋಽನಸ್ತಸಂಗತಿಃ ।**
**ಭೂಮಿಸ್ಥೋಪ್ಯಂ[೧೧]ಬರೋದ್ಭಾಸೀ ಭಾಸ್ವಾನತಿವಿಲಕ್ಷಣಃ ॥ ೧೪೧ ॥**

ಆ ಮನುವು ಪ್ರತಾಪಿಯೂ ಸುಖದಿಂದ ನೋಡುವುದಕ್ಕೆ ಯೋಗ್ಯನೂ ಭಾಗ್ಯೋದಯವುಳ್ಳವನೂ ಸೂರ್ಯನು ಅಸ್ತಮಿತನಾದರೂ ಈ ಮನುವಿನ ಸಹವಾಸವು ಬಿಟ್ಟುಹೋಗದಿದ್ದುರಿಂದ ದೃಢವಾದ ಸಹವಾಸವುಳ್ಳವನೂ ಭೂಮಿಯಲ್ಲಿರುವವನಾದರೂ ಅಂಬರ (ವಸ್ತ್ರ) ದಿಂದ ಪ್ರಕಾಶಮಾನನೂ ಆಗಿ ಅತಿ ವಿಲಕ್ಷಣವಾದ ಸೂರ್ಯನಾಗಿದ್ದನು.

**ತಸ್ಯ ಕಾಲೇ ಪ್ರಜಾ ದೀರ್ಘಂ [೧೨]ಪ್ರಜಾಭಿಃ ಸ್ವಾಭಿರನ್ವಿತಾಃ ।**
**[೧೩]ಪ್ರಾಣಿಷುಸ್ತನ್ಮುಖಾಲೋಕತದಂಗಸ್ಪರ್ಶನೋತ್ಸವೈಃ ॥ ೧೪೨ ॥**

---

೧ ಪೂರ್ಣಶ್ರೇಷ್ಠಾ ತು ಪುಷ್ಕಲೌ. ೨ ಆಶೀರ್ವಚಃ. ೩ ಪುತ್ರೈಃ. ೪ ವಿಖ್ಯಾತಃ. ೫ ಕಾಂತಂ ಮನೋರಮಂ ರುಚ್ಯಮಿತ್ಯಮರಃ. ೬ ಪಂಚಾಗ್ರಸಪ್ತತಿಶ್ಚೇತ್ಯಪಿ ಪಾಠಾಂತರಂ. ೭ ಸೂರ್ಯಃ. ೮ ತೇಜಃ ಪ್ರಭಾವೇ ದೀಪ್ತೌ ಚೇತ್ಯಮರಃ. ೯ ಇಷ್ಟದರ್ಶನಃ. ೧೦ ಅಭ್ಯುದಯಃ ಪಕ್ಷೇ ಪ್ರಾದುರ್ಭಾವಃ. ೧೧ ವಸ್ತ್ರಂ ಪಕ್ಷೇ ಆಕಾಶಂ. ೧೨ ಪುತ್ರೈಃ. ೧೩ ಅಣಪ್ರಾಣನೇ ಲುಙ್.

ಅವನ ಕಾಲದಲ್ಲಿ ಪ್ರಜೆಗಳು ಮಕ್ಕಳಮುಖವನ್ನು ನೋಡುವ ಆನಂದದಿಂದಲೂ ಆ ಮಕ್ಕಳ ಆಲಿಂಗನದ ಸಂತೋಷದಿಂದಲೂ ಬಹುಕಾಲ ತಮ್ಮ ಮಕ್ಕಳೊಡನೆ ಜೀವಿಸುತ್ತಿದ್ದರು.

**ಸ [1]ತದುಚ್ಛ್ವಸಿತಂ ಯಸ್ಮಾತ್ತದಾಯತ್ತಸ್ವಜೀವಿಕಾಃ ।**
**ಪ್ರಜಾ ಜೀವಂತಿ ತೇನಾಭಿರ್ಮರುದ್ದೇವ ಇತೀರಿತಃ ॥ ೧೪೩ ॥**

ಆ ಮನುವು ಪ್ರಜೆಗಳ ಪ್ರಾಣಸಮಾನನಾಗಿದ್ದನು. ಪ್ರಜೆಗಳ ಜೀವನವು ಆ ಮನುವಿನ ಅಧೀನವಾಗಿದ್ದುದರಿಂದ ಪ್ರಜೆಗಳೆಲ್ಲ ಅವನಿಗೆ ಮರುದ್ದೇವನೆಂದು ಹೆಸರನ್ನಿಟ್ಟರು.

**ನೌದ್ರೋಣೀಸಂಕ್ರಮಾದೀನಿ ಜಲದುರ್ಗೇಷ್ವಕಾರಯತ್ ।**
**ಗಿರಿದುರ್ಗೇಷು ಸೋಪಾನಪದ್ಧತೀಃ ಸೋಧಿರೋಹಣೇ ॥ ೧೪೪ ॥**

ಈ ಮನುವು ಜಲದುರ್ಗಗಳಲ್ಲಿ ಸಂಚಾರಮಾಡುವುದಕ್ಕೋಸ್ಕರ ಹಡಗು ದೋಣಿ ಕಟ್ಟೆ ಇವುಗಳನ್ನೂ ಗಿರಿದುರ್ಗಗಳನ್ನು ಹತ್ತುವುದಕ್ಕೆ ಏಣಿಯ ಪದ್ಧತಿಯನ್ನೂ ಮಾಡಿಸಿದನು.

**ತಸ್ಯೈವ ಕಾಲೇ ಕುತ್ಶೈಲಾಃ ಕುಸಮುದ್ರಾಃ ಕುನಿಮ್ನಗಾಃ ।**
**ಜಾತಾಃ [2]ಸಾಸಾರಮೇಘಾಶ್ಚ ಕಿಂರಾಜಾನ ಇವಾಸ್ಥಿರಾಃ ॥ ೧೪೫ ॥**

ಅವನ ಕಾಲದಲ್ಲಿಯೇ ಸಣ್ಣಪರ್ವತಗಳೂ ಉಪಸಮುದ್ರಗಳೂ ಸಣ್ಣನದಿಗಳೂ ಹುಟ್ಟಿದುವು. ಜಲ ಬಿಂದುಗಳೊಡನೆ ಕೂಡಿಕೊಂಡಿರುವ ಮೇಘಗಳೂ ದುಷ್ಟರಾಜರಂತೆ, ಅಸ್ಥಿರಗಳಾಗಿದ್ದುವು. ಯಾವಾಗಲಾದರೂ ಒಂದೊಂದುಸಾರೆ ಮಳೆಯನ್ನು ಸುರಿಯುತ್ತಿದ್ದುವೆಂದು ಭಾವವು.

**ತತಃ ಪ್ರಸೇನಜಿಜ್ಜಜ್ಞೇ ಪ್ರಭವಿಷ್ಣುರ್ಮನುರ್ಮಹಾನ್ ।**
**ಕರ್ಮಭೂಮಿಸ್ಥಿತಾವೇವಮ[3]ಭ್ಯರ್ಣಾಯಾಂ ಶನೈಃ ಶನೈಃ ॥ ೧೪೬ ॥**

ಆಮೇಲೆ ಕರ್ಮಭೂಮಿಯ ಸ್ಥಿತಿಯು ಮೆಲ್ಲಮೆಲ್ಲಗೆ ಸಮೀಪವಾಗುತ್ತಿರಲು ಮಹಾಭಾಗ್ಯಶಾಲಿಯಾದ ಪ್ರಸೇನಜಿತ್ ಎಂಬ ಮನುವು ಹುಟ್ಟಿದನು.

**ಪರ್ವಪ್ರಮಿತಮಾಮ್ನಾತಂ ಮನೋರಸ್ಯಾಯುರಂಜಸಾ ।**
**ಶತಾನಿ ಪಂಚಚಾಪಾನಾಂ ಶತಾರ್ಧಂ ಚ ತದುಚ್ಛ್ರಿತಿಃ ॥ ೧೪೭ ॥**

ಈ ಮನುವಿನ ಆಯುಷ್ಯವು ಪರ್ವಸಂಖ್ಯಾಪರಿಮಿತವಾಗಿದ್ದಿತು. ಶರೀರವು ಐನೂರೈವತ್ತು ಧನುಸ್ಸು ಉನ್ನತವಾಗಿದ್ದಿತು.

**ಪ್ರಜಾನಾಮ[4]ಧಿಕಂ ಚಕ್ಷುಸ್ತ[5]ಮೋದೋಷೈ[6]ರವಿಪ್ಲುತಃ ।**
**ಸೋಭಾದ್ರವಿರಿವಾಭ್ಯುದ್ಯನ್ಪ[7]ದ್ಮಾಕರಪರಿಗ್ರಹಾತ್ ॥ ೧೪೮ ॥**

ಉದಯಿಸುತ್ತಿರುವ ಸೂರ್ಯನು ಅಂಧಕಾರವೆಂಬ ದೋಷದಿಂದ ಪೀಡಿತನಾಗದೆ ಕಮಲಸರೋವರಗಳನ್ನು ಪರಿಗ್ರಹಿಸುವುದರಿಂದ (ಕಮಲಗಳನ್ನು ಅರಳಿಸುವುದರಿಂದ) ಹೇಗೆ ಪ್ರಜೆಗಳಿಗೆ ಸುಖವನ್ನುಂಟುಮಾಡುತ್ತಾನೋ ಹಾಗೆ ಈ ಮನುವು ಅಭಿವೃದ್ಧಿಯನ್ನು ಹೊಂದುತ್ತ ಅಜ್ಞಾನಪರಿಣಾಮಗಳಿಂದ ಪೀಡಿತನಾಗದೆ ಲಕ್ಷ್ಮಿಯ ಕೈಯನ್ನು ಹಿಡಿದಿರುವುದರಿಂದ ಪ್ರಜೆಗಳಿಗೆ ಮೂರನೆಯ ನೇತ್ರವಾಗಿ ಶೋಭಿಸುತ್ತಿದ್ದನು.

**ತದಾಭೂದರ್ಭಕೋತ್ಪತ್ತಿರ್ಜರಾಯುಪಟಲಾವೃತಾ ।**
**ತತಸ್ತತ್ಕರ್ಷಣೋಪಾಯಂ ಸ ಪ್ರಜಾನಾಮುಪಾದಿಶತ್ ॥ ೧೪೯ ॥**

೧ ಭಾವೇ ಕ್ತಃ, ತಾಸಾಂ ಪ್ರಜಾನಾಮುಚ್ಛ್ವಾಸಃ ಪ್ರಾಣಃ. ೨ ಧಾರಾ ಸಂಪಾತ ಆಸಾರ ಇತ್ಯಮರಃ. ೩ ಆಸನ್ನಾಯಾಂ. ೪ ತೃತೀಯಂ ಲೋಚನಂ. ೫ ಅಜ್ಞಾನಪರಿಣಾಮೈರಂಧಕಾರವಿಕಾರೈಶ್ಚ. ೬ ಅನುಪದ್ರುತಃ. ೭ ಲಕ್ಷ್ಮೀಹಸ್ತಸ್ವೀಕಾರಾತ್, ಪದ್ಮಸರಃಪರಿಗ್ರಹಾಚ್ಚ.

ಅವನ ಕಾಲದಲ್ಲಿ ಮಕ್ಕಳು ಜರಾಯುಪಟಲದಿಂದ ಆಚ್ಛಾದಿತಗಳಾಗಿ ಹುಟ್ಟುತ್ತಿದ್ದುವು. ಆಮೇಲೆ ಪ್ರಜೆಗಳಿಗೆ ಆ ಚೀಲದ ಸಂಬಂಧವನ್ನು ಬಿಡಿಸುವ ಉಪಾಯವನ್ನು ಆ ಮನುವು ಉಪದೇಶಮಾಡಿದನು.

**ತನುಸಂವರಣಂ ಯತ್ತಜ್ಜರಾಯುಪಟಲಂ ನೃಣಾಮ್ ।**
**ಸ ಪ್ರಸೇನೋ ಜಯಾತ್ತಸ್ಯ ಪ್ರಸೇನಜಿದಸೌ ಸ್ಮೃತಃ ॥ ೧೫೦ ॥**

ಮಕ್ಕಳು ಹುಟ್ಟುವಕಾಲದಲ್ಲಿ ರಕ್ತಮಾಂಸಗಳಿಂದ ನಿರ್ಮಿತವಾದ ಒಂದು ತರಹದ ಚೀಲವು ಮಗುವನ್ನು ಆಚ್ಛಾದಿಸಿಕೊಂಡಿರುತ್ತದೆ. ಅದಕ್ಕೆ ಜರಾಯುಪಟಲವೆಂದು ಹೆಸರು. ಪ್ರಸೇನವೆಂದೂ ಹೆಸರಿದೆ. ಅದರ ಜಯದಿಂದ ಅಂದರೆ ಆ ಪಟಲವನ್ನು ಕತ್ತರಿಸಿ ಮಗುವನ್ನು ತೆಗೆಯುವ ಉಪಾಯವನ್ನು ಹೇಳಿದುದರಿಂದ ಆ ಮನುವಿಗೆ ಪ್ರಸೇನಜಿತ್ ಎಂದು ಹೆಸರಾಯಿತು.

**ಪ್ರಸಾ ಪ್ರಸೂತಿಃ ಸಂರೋಧಾದಿನಸ್ತಸ್ಯಾಃ ಪ್ರಸೇನಕಃ ।**
**ತದ್ಧಾನೋಪಾಯಕಥನಾತ್ತಜ್ಜಯಾದ್ವಾ ಪ್ರಸೇನಜಿತ್ ॥ ೧೫೧ ॥**

ಪ್ರಸೇನ ಎಂಬುದರಲ್ಲಿ ಪ್ರಸಾ, ಇನ ಎಂದು ಎರಡು ಶಬ್ದಗಳಿವೆ. ಪ್ರಸೆಯೆಂದು ಪ್ರಸೂತಿ(ಉತ್ಪತ್ತಿ)ಗೆ ಹೆಸರು. ಆ ಪ್ರಸೂತಿ(ಮಗು)ಯನ್ನು ಮುಚ್ಚುವುದಕ್ಕೆ ಇನ(ಸ್ವಾಮಿ)ವೆಂದು ಹೆಸರು. ಎರಡುಶಬ್ದಗಳೂ ಸೇರಿ ಪ್ರಸೇನವೆಂದಾಯಿತು. ಆ ಪ್ರಸೇನ(ಜರಾಯುಪಟಲ)ವನ್ನು ನಾಶಮಾಡುವ ಉಪಾಯವನ್ನು ಹೇಳಿದುದರಿಂದ ಅಥವಾ ಅದರ ಜಯದಿಂದ ಆ ಮನುವಿಗೆ ಪ್ರಸೇನಜಿತ್ ಎಂದು ಹೆಸರಾಯಿತು.

**ತದನಂತರಮೇವಾಭೂನ್ನಾಭಿಃ ಕುಲಧರಃ ಸುಧೀಃ ।**
**ಯುಗಾದಿಪುರುಷೈಃ ಪೂರ್ವೈರುದೂಢಾಂ ಧುರಮುದ್ವಹನ್ ॥ ೧೫೨ ॥**

ಆ ಮನುವಿನ ನಂತರದಲ್ಲೇ ಬುದ್ಧಿಶಾಲಿಯಾದ ನಾಭಿರಾಜನೆಂಬ ಹದಿನಾಲ್ಕನೆಯ ಕುಲಧರನು ಹುಟ್ಟಿದನು. ಅವನು ಯುಗದ ಆದಿಪುರುಷರು (ಕುಲಧರರು) ಧರಿಸಿದ ಭಾರ(ಪ್ರಜಾಸಂರಕ್ಷಣ)ವನ್ನು ಧರಿಸಿದನು.

**ಪೂರ್ವಕೋಟೀಮಿತಂ ತಸ್ಯ ಪರಮಾಯುಸ್ತದುಚ್ಛ್ರಯಃ ।**
**ಶತಾನಿ ಪಂಚಚಾಪಾನಾಂ ಪಂಚವರ್ಗಾಧಿಕಾನಿ ವೈ ॥ ೧೫೩ ॥**

ಅವನ ಪರಮಾಯುಷ್ಯವು ಪೂರ್ವಕೋಟಿಸಂಖ್ಯಾಪರಿಮಿತವಾಗಿದ್ದಿತು. ಶರೀರವು ಐದುನೂರಿಪ್ಪತ್ತೈದು ಧನುಸ್ಸು ಉನ್ನತವಾಗಿದ್ದಿತು.

**ಮುಕುಟೋದ್ಭಾಸಿಮೂರ್ಧಾಸೌ ಕುಂಡಲಾಭ್ಯಾಮಲಂಕೃತಃ ।**
**ಸುಮೇರುರಿವ ಚಂದ್ರಾರ್ಕಸಂಶ್ಲಿಷ್ಟಾಧಿತ್ಯಕೋ ಬಭೌ ॥ ೧೫೪ ॥**

ಅವನ ಮಸ್ತಕವು ಕಿರೀಟದಿಂದ ಶೋಭಿಸುತ್ತಿದ್ದಿತು. ಸೂರ್ಯಚಂದ್ರರಿಂದ ಕೂಡಿಕೊಂಡಿರುವ ತಪ್ಪಲುಪ್ರದೇಶವುಳ್ಳ ಮಹಾಮೇರುವಿನಂತೆ ಎರಡು ಕರ್ಣಕುಂಡಲಗಳಿಂದ ಅಲಂಕೃತನಾಗಿ ಪ್ರಕಾಶಿಸುತ್ತಿದ್ದನು.

**ಹಾರ್ವಣಂ ಶಶಿನಂ ಗರ್ವಾತ್ಫುಲಯತ್ತಸ್ಯ ಮುಖಾಂಬುಜಮ್ ।**
**ಸ್ಮಿತೋಲ್ಲಸಿತದಂತಾಂಶುಕೇಸರಂ ಭೃಶಮಾಬಭೌ ॥ ೧೫೫ ॥**

ಮುಗುಳುನಗೆಯಿಂದ ಪ್ರಕಾಶಿಸುತ್ತಿರುವ ಹಲ್ಲುಗಳ ಕಿರಣಗಳೆಂಬ ಕೇಸರಗಳುಳ್ಳ ಅವನ ಮುಖವೆಂಬ ಕಮಲವು, ಗರ್ವದಿಂದ ಪೂರ್ಣಿಮಾಚಂದ್ರನನ್ನು ಜಯಿಸಿ, ಅಧಿಕವಾಗಿ ಪ್ರಕಾಶಿಸುತ್ತಿದ್ದಿತು. ಚಂದ್ರೋದಯಕಾಲದಲ್ಲಿ ಕಮಲವು ಮುಕುಳಿತವಾಗುತ್ತದೆ. ಈತನ ಮುಖವು ಮುಕುಳಿತವಾಗದೆ ಸದಾ ಪ್ರಸನ್ನವಾಗುತ್ತಿದ್ದಿತೆಂದು ಭಾವವು.

**ಸ ಹಾರಭೂಷಿತಂ ವಕ್ಷೋ ಬಭಾರಾಭರಣೋಜ್ಜ್ವಲಃ ।**
**ಹಿಮವಾನಿವ ಗಂಗಾಂಬುಪ್ರವಾಹಘಟಿತಂ ತಟಮ್ ॥ ೧೫೬ ॥**

ಹಿಮವತ್ಪರ್ವತವು ಗಂಗಾನದಿಯ ಜಲಪ್ರವಾಹದಿಂದ ಕೂಡಿದ ದಡವನ್ನು ಧರಿಸಿರುವಂತೆ ಆಭರಣಗಳಿಂದ ಶೋಭಿಸುತ್ತಿರುವ ಆ ನಾಭಿರಾಜಮನುವು ಹಾರಗಳಿಂದ ಭೂಷಿತವಾದ ವಕ್ಷಸ್ಥಲ(ಎದೆ)ವನ್ನು ಧರಿಸಿದ್ದನು.

**ಸದಂಗುಲಿತಲೌ ಬಾಹೂ ಸೋಧಾನ್ನಾಗಾವಿವೋತ್ಫಣೌ ।**
**ಕೇಯೂರರುಚಿರೌ ಚಾಂಸೌ ಸಾಹೀ ನಿಧಿಘಟಾವಿವ ॥ ೧೫೭ ॥**

ಶ್ರೇಷ್ಠವಾದ ಬೆರಳುಗಳೂ ಅಂಗೈಯೂ ಉಳ್ಳ ಆವನ ಬಾಹುಗಳು ಹೆಡೆಯನ್ನು ಮೇಲಕ್ಕೆತ್ತಿರುವ ಎರಡು ಸರ್ಪಗಳೋ ಎಂಬಂತಿದ್ದುವು. ಬಾಜುಬಂದುಗಳಿಂದ ಮನೋಹರವಾದ ಭುಜಗಳು, ಸರ್ಪಗಳೊಡನೆ ಕೂಡಿಕೊಂಡಿರುವ ನಿಧಿಯ ಘಟಗಳೋ ಎಂಬಂತೆ ಶೋಭಿಸುತ್ತಿದ್ದುವು.

**ಸುಸಂಹತಂ ದಧೌ ಮಧ್ಯಂ ಸ್ಥೇಯೋ ವಜ್ರಾಸ್ಥಿಬಂಧನಮ್ ।**
**ಲೋಕಸ್ಕಂಧ ಇವೋರ್ಧ್ವಾಧೋವಿಸ್ತೃತಶ್ಚಾರುನಾಭಿಕಮ್ ॥ ೧೫೮ ॥**

ಆ ಮನುವಿನ ಮಧ್ಯಭಾಗವು ವಜ್ರಮಯವಾದ ಮೂಳೆಗಳ ಕಟ್ಟುಳ್ಳದೂ ಕೆಳಗೂ ಮೇಲೂ ವಿಸ್ತಾರವಾದ ಲೋಕದ ರಚನೆಯಂತಿರುವುದೂ ಮನೋಹರವಾದ ನಾಭಿಯುಳ್ಳದೂ ಆಗಿದ್ದಿತು.

**ಕಟೀತಟಂ ಕಟೀಸೂತ್ರಘಟಿತಂ ಸ್ಮ ಬಿಭರ್ತಿ ಸಃ ।**
**ರತ್ನದ್ವೀಪಮಿವಾಂಭೋಧಿಃ ಪರ್ಯಂತಸ್ಥಿತರತ್ನಕಮ್ ॥ ೧೫೯ ॥**

ಸಮುದ್ರವು ಸುತ್ತಲೂ ರತ್ನಗಳುಳ್ಳ ರತ್ನದ್ವೀಪವನ್ನು ಧರಿಸುವಂತೆ ಆ ಮನುವು ಕಟೀಸೂತ್ರ(ಉಡುದಾರ)ದಿಂದ ಕೂಡಿದ ಕಟಿಪ್ರದೇಶ(ಸೊಂಟ)ವನ್ನು ಧರಿಸಿದ್ದನು.

**ವಜ್ರಸಾರೌ ದಧಾವೂರೂ ಪರಿವೃತ್ತೌ ಸುಸಂಹತೀ ।**
**ಜಗದ್ಗೃಹಾಂತರ್ವಿನ್ಯಸ್ತಸುಸ್ಥಿತಸ್ತಂಭಸನ್ನಿಭೌ ॥ ೧೬೦ ॥**

ವಜ್ರಮಯವೂ ದುಂಡಾಗಿಯೂ ಸುದೃಢವೂ ಆಗಿರುವ ತೊಡೆಗಳು ಜಗತ್ತೆಂಬ ಮನೆಯ ಮಧ್ಯದಲ್ಲಿರಿಸಿದ ದೃಢವಾದ ಕಂಭಗಳಂತಿದ್ದುವು.

**ಮತ್ವೋರಃಶಿಲಮಸ್ಯೋರ್ಧ್ವಕಾಯಂ ವೇಧಾ ಮಹಾಭರಮ್ ।**
**[1]ಉಪಾಜೀಕರ್ತು[2]ಮಧ್ಯೂರು ಸ್ಥಿರೇ ಜಂಘೇ ನ್ಯಧಾದ್ಧ್ರುವಮ್ ॥ .**

ಬ್ರಹ್ಮನು, ಈ ಮನುವಿನ ವಕ್ಷಸ್ಥಲವೆಂಬ ಕಲ್ಲುಳ್ಳ ಶರೀರದ ಮೇಲುಭಾಗವು ಬಹಳ ಭಾರವಾಗಿದೆಯೆಂದು ತಿಳಿದು ಅದನ್ನು ಬಲಪಡಿಸುವುದಕ್ಕೋಸ್ಕರ ತೊಡೆಗಳಲ್ಲಿ ದೃಢವಾದ ಕಣಕಾಲುಗಳನ್ನಿರಿಸಿದನು. ಇದು ನಿಜ.

**ಚಂದ್ರಾರ್ಕಸರಿದಂಭೋಧಿಮತ್ಸ್ಯಕೂರ್ಮಾದಿಲಕ್ಷಣಮ್ ।**
**ದಧೇ[3]ಧಿಚರಣಂ[4]ಭಕ್ತುಂ ಚರಾಚರಮಿವಾಶ್ರಿತಮ್ ॥ ೧೬೨ ॥**

ಆ ಮನುವಿನ ಸೇವೆಮಾಡುವುದಕ್ಕೋಸ್ಕರ ಚರಾಚರಪ್ರಾಣಿಗಳು ಬಂದು ಪಾದವನ್ನು ಆಶ್ರಯಿಸಿವೆಯೋ ಎಂಬಂತೆ, ಅವನು ತನ್ನ ಕಾಲುಗಳಲ್ಲಿ ಸೂರ್ಯ ಚಂದ್ರ ನದಿ ಸಮುದ್ರ ಮೀನು ಆಮೆ ಮೊದಲಾದ ಲಕ್ಷಣಗಳನ್ನು ಧರಿಸಿದ್ದನು.

**ಇತಿ ಸ್ವಭಾವ[5]ಮಾಧುರ್ಯ[6]ಸೌಂದರ್ಯಘಟಿತಂ ವಪುಃ ।**
**ಮನ್ಯೇ ತಾದೃಕ್ಸುರೇಂದ್ರಾಣಾಮಪಿ ಜಾಯೇತ ದುಷ್ಕರಮ್ ॥ ೧೬೩ ॥**

ಮೇಲೆ ಹೇಳಿದಂತೆ ನಾಭಿರಾಜಮನುವಿನ ಶರೀರವು ಸ್ವಭಾವದಿಂದಲೇ ಮನೋಹರವಾಗಿಯೂ, ಸುಂದರವಾಗಿಯೂ ನಿರ್ಮಿತವಾಗಿದ್ದಿತು. ಅಂತಹ ಶರೀರವು ದೇವೇಂದ್ರರುಗಳಿಗೂ ದುರ್ಲಭವಾಗಿರಬಹುದೆಂದು ತಿಳಿಯುತ್ತೇನೆ.

**ತಸ್ಯ ಕಾಲೇ ಸುತೋತ್ಪತ್ತೌ ನಾಭಿನಾಲಮದೃಶ್ಯತ ।**
**ಸ ತನ್ನಿಕರ್ತನೋಪಾಯಮಾದಿಶನ್ನಾಭಿರಿತ್ಯಭೂತ್ ॥ ೧೬೪ ॥**

ಅವನ ಕಾಲದಲ್ಲಿ ಮಕ್ಕಳು ಹುಟ್ಟುವಾಗ ಹೊಕ್ಕಳಲ್ಲಿ ನಾಲ(ದಾರ)ವು ಕಾಣಿಸಿಕೊಂಡಿತು. ಅದನ್ನು ಕತ್ತರಿಸಿ ತೆಗೆಯುವ ಉಪಾಯವನ್ನು ಹೇಳಿದುದರಿಂದ ಈ ಮನುವಿಗೆ ನಾಭಿರಾಜನೆಂದು ಹೆಸರಾಯಿತು.

**ತಸ್ಯೈವ ಕಾಲೇ ಜಲದಾಃ ಕಾಲಿಕಾಃ ಕರ್ಬುರತ್ವಿಷಃ ।**
**ಪ್ರಾದುರಾಸನ್ನಭೋಭಾಗೇ ಸಾಂದ್ರಾಃ ಸೇಂದ್ರಶರಾಸನಾಃ ॥ ೧೬೫ ॥**

ಅವನ ಕಾಲದಲ್ಲಿಯೇ ಆಕಾಶಪ್ರದೇಶದಲ್ಲಿ ಇಂದ್ರಧನುಸ್ಸಿನೊಡಗೂಡಿದ ನಾನಾಬಣ್ಣಗಳುಳ್ಳ ದಟ್ಟವಾದ ಮೇಘಗಳು ಸಕಾಲದಲ್ಲಿ ಪ್ರಾದುರ್ಭವಿಸಿದುವು.

**ನಭೋನೀರಂಧ್ರಮಾರುಂಧನ್ನಜೃಂಭೇಂಭೋಮುಚಾಂ ಚಯಃ ।**
**ಕಾಲಾದುದ್ಭೂತಸಾಮರ್ಥ್ಯೈರಾರಬ್ಧಃ ಸೂಕ್ಷ್ಮಪುದ್ಗಲೈಃ ॥ ೧೬೬ ॥**

ಕಾಲಕ್ಕನುಸಾರವಾಗಿ ಮೇಘರೂಪವಾಗಿ ಪರಿಣಮಿಸುವ ಸಾಮರ್ಥ್ಯವುಳ್ಳ ಸೂಕ್ಷ್ಮಪುದ್ಗಲಗಳಿಂದ ಮಾಡಲ್ಪಟ್ಟ ಮೇಘಗಳ ಸಮೂಹವು ಎಡೆಬಿಡದೆ ಆಕಾಶವನ್ನು ತಡೆದು (ವ್ಯಾಪಿಸಿ) ವೃದ್ಧಿಹೊಂದಿತು.

**ವಿದ್ಯುದ್ವಂತೋ ಮಹಾಧ್ವಾನಾ ವರ್ಷಂತೋ ರೇಜಿರೇ ಘನಾಃ ।**
**[1]ಸಹೇಮಕಕ್ಷ್ಯಾ ಮದಿನೋ ನಾಗಾ ಇವ ಸಬೃಂಹಿತಾಃ ॥ ೧೬೭ ॥**

ಮಿಂಚಿನೊಡನೆ ಕೂಡಿ ಮಹಾಧ್ವನಿಯನ್ನು ಮಾಡುತ್ತಿರುವುವೂ ನೀರನ್ನು ಸುರಿಯುವುವೂ ಆದ ಮೇಘಗಳು, ಬಂಗಾರದ ಸೊಂಟಪಟ್ಟಿಯುಳ್ಳವೂ ಗರ್ಜಿಸುತ್ತಿರುವುವೂ ಮದಜಲವನ್ನು ಸುರಿಯುವುವೂ ಆದ ಆನೆಗಳಂತೆ, ಪ್ರಕಾಶಿಸುತ್ತಿದ್ದುವು.

**ಘನಾಘನಘನಧ್ವಾನೈಃ ಪ್ರಹತಾ ಗಿರಿಭಿತ್ತಯಃ ।**
**ಪ್ರತ್ಯಾಕ್ರೋಶಮಿವಾತೇನುಃ ಪ್ರರುಷ್ಟಾಃ ಪ್ರತಿಶಬ್ದಕೈಃ ॥ ೧೬೮ ॥**

ಮೇಘಗಳ ಪ್ರಬಲವಾದ ಧ್ವನಿಯು ಪರ್ವತಗಳ ತಪ್ಪಲುಗಳಿಗೆ ತಾಗಿ ಪ್ರತಿಶಬ್ದವಾಗುತ್ತಿದ್ದಿತು. ಇದನ್ನು ನೋಡಿದರೆ ಪರ್ವತಗಳ ತಪ್ಪಲುಗಳು ಕೋಪಿಸಿಕೊಂಡು ಪ್ರತಿಶಬ್ದಗಳಿಂದ ಬಯ್ಯುವಂತೆ ಕಾಣುತ್ತಿದ್ದುವು.

**[2]ವವಾವವಾ[3]ತತಾನ್ಕುರ್ವನ್ಕಲಾಪೌಘಾನ್ಕಲಾಪಿನಾಮ್ ।**
**ಘನಾಘನಾಲಿಮುಕ್ತಾಂಭಃಕಣವಾಹೀ ಸಮೀರಣಃ ॥ ೧೬೯ ॥**

ಮೇಘಪಂಕ್ತಿಯು ಸುರಿದ ಜಲಬಿಂದುಸಹಿತವಾದ ಗಾಳಿಯು ನವಿಲುಗಳ ರೆಕ್ಕೆಗಳನ್ನು ವಿಸ್ತಾರಪಡಿಸುತ್ತ ಬೀಸುತ್ತಿದ್ದಿತು.

**ಚಾತಕಾ ಮಧುರಂ [4]ರೇಣುರಭಿನಂದ್ಯ ಘನಾಗಮಮ್ ।**
**ಅಕಸ್ಮಾತ್ತಾಂಡವಾರಂಭಮಾತೇನೇ ಶಿಖಿನಾಂ ಕುಲಮ್ ॥ ೧೭೦ ॥**

ಮೇಘದ ಆಗಮನವನ್ನು ನೋಡಿ ಸಂತೋಷಪಟ್ಟು ಚಾತಕಪಕ್ಷಿಗಳು ಇಂಪಾಗಿ ಶಬ್ದಮಾಡಿದುವು. ನವಿಲುಗಳ ಗುಂಪು ಅಕಸ್ಮಾತ್ತಾಗಿ ತಾಂಡವನರ್ತನವನ್ನು ಮಾಡಲಾರಂಭಿಸಿದ್ದಿತು.

---

೧ ಅವ್ಯಯಂ, ಬಲಾಧಾನೇನಾಹಿತಬಲಂ ಕರ್ತುಮಿತ್ಯರ್ಥಃ. ೨ ಊರುದ್ವಯೇ. ೩ ಚರಣಯೋಃ. ೪ ಸೇವಾಯ್ಯೆ. ೫ ಹೃದಯಾಭಿರಾಮತಾ. ೬ ನಯನಾಭಿರಾಮತಾ.

೧ ಸುವರ್ಣಮಯಮಧ್ಯಬಂಧನವರತ್ರಾಃ. ೨ ವಾತಿ ಸ್ಮ. ೩ ಆವಸಮಂತಾದಾತತಾನ್ಕುರ್ವನ್. ೪ ರಣಶಬ್ದೇ.

**ಅಭಿಷೇಕ್ತುಮಿವಾರಬ್ಧಾಃ ಗಿರೀನಂಭೋಮುಚಾಂ ಚಯಾಃ ।**
**ಮುಕ್ತಧಾರಂ ಪ್ರವರ್ಷಂತಃ ಪ್ರಕ್ಷರ[1]ದ್ಧಾತುನಿರ್ಝರಾನ್ ॥ ೧೭೧ ॥**

ಮೇಘಗಳ ಗುಂಪುಗಳು, ಧಾರೆಯಾಗಿ ಜಲವನ್ನು ವರ್ಷಿಸಿ, ಪರ್ವತಗಳಮೇಲೆ ಗೈರಿಕಧಾತುಗಳಿಂದ ಕದಡಿದ ಗಿರಿನದಿಯ ಪ್ರವಾಹಗಳನ್ನುಂಟುಮಾಡಿದುವು. ಇದನ್ನು ನೋಡಿದರೆ ಪರ್ವತಗಳಿಗೆ ಧಾರಪೂರ್ವಕವಾಗಿ ಅಭಿಷೇಕವನ್ನು ಮಾಡುವುದಕ್ಕೆ ತೊಡಗಿದಂತೆ ಕಾಣುತ್ತಿದ್ದುವು.

**ಕ್ವಚಿದ್ಗಿರಿ[2]ಸರಿತ್ಪೂರಾಃ ಪ್ರಾವರ್ತಂತ ಮಹಾ[3]ರಯಾಃ ।**
**ಧಾತುರಾಗಾರುಣಾ ಮುಕ್ತಾ ರಕ್ತಮೋಕ್ಷಾ ಇವಾದ್ರಿಷು ॥ ೧೭೨ ॥**

ಕೆಲವು ಕಡೆಗಳಲ್ಲಿ ಕಾವಿಕಲ್ಲುಗಳಿಂದ ಕೆಂಪಾದ ಗಿರಿನದಿಗಳ ಪ್ರವಾಹಗಳು ಬಹಳ ವೇಗದಿಂದ ಹರಿಯುವುದಕ್ಕಾರಂಭಿಸಿದುವು. ಇದನ್ನು ನೋಡಿದರೆ ಮೇಘಗಳಿಂದ ಪರ್ವತಗಳಮೇಲೆ ಬಿಡಲ್ಪಟ್ಟ ರಕ್ತದ ಪ್ರವಾಹಗಳಂತೆ ಕಾಣುತ್ತಿದ್ದಿತು.

**ಧ್ವನಂತೋ ವವೃಷುರ್ಮುಕ್ತಸ್ಥೂಲಧಾರಾಃ ಪಯೋಧರಾಃ ।**
**ರುದಂತ ಇವ ಶೋಕಾರ್ತಾ ಕಲ್ಪವೃಕ್ಷಪರಿಕ್ಷಯೇ ॥ ೧೭೩ ॥**

ಗರ್ಜನೆಮಾಡುತ್ತಿರುವ ಮೋಡಗಳು, ಕಲ್ಪವೃಕ್ಷಗಳು ನಾಶವಾದುದಕ್ಕೋಸ್ಕರ ಶೋಕಪೀಡಿತಗಳಾಗಿ ಅಳುತ್ತಿವೆಯೋ ಎಂಬಂತೆ, ಸ್ಥೂಲವಾದ ಜಲಧಾರೆಗಳನ್ನು ಸುರಿದುವು.

**ಮಾರ್ದಂಗಿಕಕರಾಸ್ಫಾಲಾದಿವ ವಾತವಿಘಟ್ಟನಾತ್ ।**
**[4]ಪುಷ್ಕರೇಷ್ವಿವ ಗಂಭೀರಂ ಧ್ವನತ್ಸು ಜಲವಾಹಿಷು ॥ ೧೭೪ ॥**

ಮದ್ದಳೆಗಾರನ ಕೈಗಳ ಹೊಡೆತದಿಂದ ವಾದ್ಯಗಳು ಶಬ್ದಮಾಡುವಂತೆ, ಗಾಳಿಯ ಹೊಡೆತದಿಂದ ಮೋಡಗಳು ಗಂಭೀರವಾಗಿ ಶಬ್ದಮಾಡುತ್ತಿದ್ದುವು.

**ವಿದ್ಯುನ್ನಟೀ ನಭೋರಂಗೇ ವಿಚಿತ್ರಾಕಾರಧಾರಿಣೀ ।**
**ಪ್ರತಿಕ್ಷಣ[5]ವಿವೃತ್ತಾಂಗೀ ನೃತ್ತಾರಂಭಮಿವಾತನೋತ್ ॥ ೧೭೫ ॥**

ಆಗ ಮಿಂಚೆಂಬ ನಟಿಯು ಆಕಾಶವೆಂಬ ರಂಗಸ್ಥಳದಲ್ಲಿ ನಾನಾಪ್ರಕಾರವಾದ ಆಕಾರಗಳನ್ನು ಧರಿಸಿ ಪ್ರತಿಕ್ಷಣದಲ್ಲಿಯೂ ತಿರುಗುತ್ತಿರುವ ಅಂಗಗಳುಳ್ಳವಳಾಗಿ ಕುಣಿಯುವುದಕ್ಕೆ ಪ್ರಾರಂಭಿಸಿದಂತೆ ಕಾಣುತ್ತಿದ್ದಳು.

**ಪಯಃಪಯೋಧರಾಸಕ್ತ್ಯೈಃ ಪಿಬದ್ಭಿರವಿತೃಪ್ತಿಭಿಃ ।**
**ಕೃಚ್ಛ್ರಲಬ್ಧಮತಿಪ್ರೀತ್ಯೈಶ್ಚಾತಕೈರರ್ಭಕಾಯಿತಮ್ ॥ ೧೭೬ ॥**

ಹಾಲುತುಂಬಿಕೊಂಡಿರುವ ಸ್ತನಗಳಲ್ಲಿ ಆಸಕ್ತಗಳೂ ಕಷ್ಟದಿಂದ ದೊರಕಿದ ಸ್ತನ್ಯವನ್ನು ಅತಿ ಪ್ರೀತಿಯುಳ್ಳವಾಗಿ ಪಾನಮಾಡಿ ತೃಪ್ತಿಯನ್ನು ಹೊಂದದಿರುವುವೂ ಆದ ಮಕ್ಕಳಂತೆ, ಜಲಭರಿತವಾದ ಮೇಘಗಳಲ್ಲಿ ಆಸಕ್ತಗಳಾದ ಚಾತಕಪಕ್ಷಿಗಳು ಕಷ್ಟದಿಂದ ಪ್ರಾಪ್ತವಾದ ಜಲವನ್ನು ಬಹಳ ಪ್ರೀತಿಯಿಂದ ಪಾನಮಾಡಿ ತೃಪ್ತಿಯನ್ನು ಹೊಂದುತ್ತಿರಲಿಲ್ಲ.

**ತಡಿತ್ಕಲತ್ರಸಂಸಕ್ತ್ಯೈಃ ಕಾಲಾಪೇಕ್ಷ್ಯೈ[6]ರ್ಮಹಾಜಲೈಃ ।**
**ಕೃಷಿಪ್ರವೃತ್ತಕೈರ್ಮೇಘೈರ್ವ್ಯಕ್ತಂ ಪಾಮರಕಾಯಿತಮ್ ॥ ೧೭೭ ॥**

ಮಿಂಚೆಂಬ ಸ್ತ್ರೀಯಲ್ಲಿ ಆಸಕ್ತಗಳೂ ವರ್ಷಾಕಾಲವನ್ನಪೇಕ್ಷಿಸುವುವೂ ಬಹಳ ನೀರುಳ್ಳುವೂ ಕೃಷಿಯಲ್ಲಿ ಪ್ರವರ್ತನೆಮಾಡಿಸುವುವೂ ಆದ ಮೇಘಗಳು, ಸ್ತ್ರೀಯರಲ್ಲಿ ಆಸಕ್ತರೂ ಕಾಲವನ್ನಪೇಕ್ಷಿಸುವವರೂ ಮಹಾಜಡರೂ ಕೃಷಿಯಲ್ಲಿ ಪ್ರವರ್ತಿಸುವವರೂ ಆದ ಪಾಮರ(ನೀಚ)ರಂತೆ, ಇದ್ದುವು.

೧ ಗೈರಿಕಃ. ೨ ನದೀ. ೩ ವೇಗಾಃ. ೪ ವಾದ್ಯೇಷು, ಪುಷ್ಕರಂ ಕರಿಹಸ್ತಾಗ್ರೇ ವಾದ್ಯಭಾಂಡಮುಖೇ ಜಲೇ ಇತ್ಯಮರಃ. ೫ ವಕ್ರಂ. ೬ ಡಲಯೋರಭೇದಾತ್ಪಕ್ಷೇ ಮಹಾಜಡ್ಯೈಃ.

**ಅಬುದ್ಧಿಪೂರ್ವಮುತ್ಸೃಜ್ಯ ವೃಷ್ಟಿಂ ಸದ್ಯಃ ಪಯೋಮುಚಃ ।**
**[1]ನೈಕಧಾ ವಿಕ್ರಿಯಾಂ ಭೇಜುರ್ವೈಚಿತ್ರ್ಯಾತ್ಪುದ್ಗಲಾತ್ಮನಃ ॥ ೧೭೮ ॥**

ಪುದ್ಗಲದ ಶಕ್ತಿಯು ವಿಚಿತ್ರವಾಗಿರುವುದರಿಂದ ಮೇಘಗಳು ಮಳೆಯನ್ನು ಸುರಿಸಬೇಕೆಂಬ ಬುದ್ಧಿಯಿಲ್ಲದಿದ್ದರೂ ಮಳೆಯನ್ನು ಸುರಿದು ಅನೇಕ ವಿಕಾರಗಳನ್ನು ಹೊಂದುತ್ತಿದ್ದುವು.

**ತದಾ ಜಲಧರೋನ್ಮುಕ್ತಾ ಮುಕ್ತಾಫಲರುಚೋ[2]ಪ್ಸುಟಾಃ ।**
**ಮಹೀಂ ನಿರ್ವಾಪಯಾಮಾಸುರ್ದಿವಾಕರಕರೋಷ್ಮತಃ ॥ ೧೭೯ ॥**

ಆಗ ಮೇಘಗಳು ಸುರಿದ ನೀರಿನ ಹನಿಗಳು ಮುಕ್ತಾಫಲದ ಕಾಂತಿಯುಳ್ಳುವಾಗಿ ಭೂಮಿಯನ್ನು ಸೂರ್ಯಕಿರಣಗಳ ತಾಪದಿಂದ ಶಾಂತಪಡಿಸಿದುವು.

**ತತೋಬ್ದಮುಕ್ತವಾರಿಕ್ಷ್ಮಾಖಾನಿಲಾತಪಗೋಚರಾನ್ ।**
**ಕ್ಲೇದಾಧಾರಾವಗಾಹಾಂತರ್ನಿರ್ಹಾರೋಷ್ಮತ್ವಲಕ್ಷಣಾನ್ ॥ ೧೮೦ ॥**

**ಗುಣಾನಾಶ್ರಿತ್ಯ ಸಾಮಗ್ರೀಂ ಪ್ರಾಪ್ಯ ದ್ರವ್ಯಾದಿಲಕ್ಷಣಾಮ್ ।**
**ಸಂರೂಢಾನ್ಯಂಕುರಾವಸ್ಥಾಪ್ರಭೃತ್ಯಾಕಣಿಶಾಪ್ತಿತಃ ॥ ೧೮೧ ॥**

**ಶನೈಃ ಶನೈರ್ವಿವೃದ್ಧಾನಿ ಕ್ಷೇತ್ರೇಷ್ವವಿರಲಂ ತದಾ ।**
**ಸಸ್ಯಾನ್ಯಕೃಷ್ಟಪಚ್ಯಾನಿ ನಾನಾಭೇದಾನಿ ಸರ್ವತಃ ॥ ೧೮೨ ॥**

**ಪ್ರಜಾನಾಂ ಪೂರ್ವಸುಕೃತಾತ್ಕಾಲಾದಪಿ ಚ ತಾದೃಶಾತ್ ।**
**ಸುಪಕ್ವಾನಿ ಯಥಾಕಾಲಂ ಫಲದಾಯೀನಿ ಜಜ್ಞಿರೇ ॥ ೧೮೩ ॥**

ಆಮೇಲೆ ಮೇಘವು ಸುರಿದ ನೀರಿನ ನೆನೆಯುವಿಕೆಯೆಂಬ ಗುಣವನ್ನೂ ಭೂಮಿಯ ಆಧಾರತ್ವಗುಣವನ್ನೂ ಆಕಾಶದ ಅವಗಾಹನ(ಅವಕಾಶ ಕೊಡುವಿಕೆ)ಗುಣವನ್ನೂ ಗಾಳಿಯ ಅಂತರ್ನಿಹಾರ (ಅಂಕುರಾಭಿವೃದ್ಧಿಗೆ ಬೇಕಾದ ಪರಮಾಣುಗಳನ್ನು ಒಂದುಕಡೆ ಸೇರುವಂತೆ ಮಾಡುವಿಕೆ) ಗುಣವನ್ನೂ ಬಿಸಿಲಿನ ಉಷ್ಣತ್ವಗುಣವನ್ನೂ ದ್ರವ್ಯಕ್ಷೇತ್ರಕಾಲ ಭಾವಗಳೆಂಬ ಸಾಮಗ್ರಿಯನ್ನೂ ಹೊಂದಿ ಹುಟ್ಟಿದುವು. ಅಂಕುರಾವಸ್ಥೆ ಮೊದಲುಗೊಂಡು ತೆನೆಬರುವವರೆಗೂ ಕ್ರಮಕ್ರಮವಾಗಿ ಕ್ಷೇತ್ರಗಳಲ್ಲಿ ದಟ್ಟವಾಗಿ ಬೆಳೆದುವು. ಅನೇಕ ತರಹದುವೂ ಅಕೃಷ್ಟಪಚ್ಯ(ಉತ್ತು ಬಿತ್ತದೆ ಬೆಳೆದ)ಗಳೂ ಆದ ಪೈರು(ಬೆಳೆ)ಗಳು, ಎಲ್ಲಕಡೆಯಲ್ಲಿಯೂ ಪ್ರಜೆಗಳ ಪೂರ್ವಪುಣ್ಯದಿಂದಲೂ, ಕಾಲವಿಶೇಷದಿಂದಲೂ, ಯೋಗ್ಯಕಾಲದಲ್ಲಿ ಪರಿಪಕ್ವವಾದ ಫಲಗಳನ್ನು ಕೊಡುವುವುಗಳಾದುವು.

**ತದಾ ಪಿತೃವ್ಯತಿಕ್ರಾಂತಾವಪತ್ಯಾನೀವ ತತ್ಪದಮ್ ।**
**ಕಲ್ಪವೃಕ್ಷೋಚಿತಸ್ಥಾನಂ ತಾನ್ಯಧ್ಯಾಸಿಷತ ಸ್ಫುಟಮ್ ॥ ೧೮೪ ॥**

ತಂದೆಯು ಮರಣಹೊಂದಿದಮೇಲೆ ಅವನ ಸ್ಥಾನವನ್ನು ಮಕ್ಕಳು ಹೊಂದುವಂತೆ, ಆಗ ಆ ಅಕೃಷ್ಟಪಚ್ಯಗಳಾದ ಬೆಳೆಗಳು ಕಲ್ಪವೃಕ್ಷಗಳಿಗೆ ಉಚಿತವಾದ ಸ್ಥಾನವನ್ನು ಹೊಂದಿದುವು. ಕಲ್ಪವೃಕ್ಷಗಳ ಸ್ಥಾನಾಪನ್ನಗಳಾದುವೆಂದರ್ಥವು.

**ನಾತಿವೃಷ್ಟಿರವೃಷ್ಟಿರ್ವಾ ತದಾಸೀತ್ಕಿಂತು ಮಧ್ಯಮಾ ।**
**ವೃಷ್ಟಿಸ್ತತ್ಸರ್ವಧಾನ್ಯಾನಾಂ ಫಲಾವಾಪ್ತಿರವಿಪ್ಲುತಾ ॥ ೧೮೫ ॥**

ಆಗ ಮಳೆಯು ಹೆಚ್ಚಾಗಿಯೂ ಇರಲಿಲ್ಲ. ಕಡಿಮೆಯಾಗಿಯೂ ಇರಲಿಲ್ಲ. ಮಧ್ಯಮರೀತಿಯಲ್ಲಿ ಮಳೆಯಾಗುತ್ತಿದ್ದಿತು. ಆದುದರಿಂದ ಎಲ್ಲಾ ಧಾನ್ಯಗಳೂ ನಿರ್ವಿಘ್ನವಾಗಿ ಫಲಿಸಿ ಸಿದ್ಧವಾದುವು.

**[3]ಷಷ್ಟಿಕಾಃ ಕಲಮವ್ರೀಹಿಯವಗೋಧೂಮಕಂಗವಃ ।**
**ಶ್ಯಾಮಾಕಕೋದ್ರವೋದಾರನೀವಾರವರಕಾಸ್ತಥಾ ॥ ೧೮೬ ॥**

೧ ಅನೇಕಧಾ. ೨ ಅಪ್ಸುಟಾ ಇತಿ ವಾ ಪಾಠಾಂತರಂ. ೩ ಶಾಲಯಃ ಕಲಮಾದ್ಯಾಶ್ಚ ಷಷ್ಟಿಕಾದ್ಯಾಶ್ಚ ಪುಂಸ್ಯಮೀತ್ಯಮರಃ.

**ತಿಲಾತಸ್ಯೌ ಮಸೂರಾಶ್ಚ ಸರ್ಷಪೋ ಧಾನ್ಯಜೀರಕೌ ।**
**ಮುದ್ಗಮಾಷಾಢಕೀರಾಜಮಾಷನಿಷ್ಪಾವಕಾಶ್ಚಣಾಃ ॥ ೧೮೭ ॥**

**ಕುಲತ್ಥತ್ರಿಪುಟೌ ಚೇತಿ ಧಾನ್ಯಭೇದಾಸ್ತ್ವಿಮೇ ಮತಾಃ ।**
**ಸಕುಸುಂಭಾಃ ಸಕಾರ್ಪಾಸಾಃ ಪ್ರಜಾಜೀವನಹೇತವಃ ॥ ೧೮೮ ॥**

**ಉಪಭೋಗ್ಯೇಷು ಧಾನ್ಯೇಷು ಸತ್ಸ್ವಪ್ಯೇಷು ತದಾ ಪ್ರಜಾಃ ।**
**ತದುಪಾಯಮಜಾನಾನಾಃ ಸ್ವತೋಮೂರ್ಮುಮುಹುರ್ಮುಹುಃ ॥**

ಅರುವತ್ತು ದಿನಗಳಲ್ಲಿ ಬೆಳೆಯುವ ಧಾನ್ಯಗಳು, ಸಣ್ಣಭತ್ತ, ಸಾಮಾನ್ಯಭತ್ತ, ಯವಧಾನ್ಯ, ಗೋಧಿ, ನವಣೆ, ಸಾವೆ, ಹಾರಕ, ತೃಣಧಾನ್ಯ, ಬರಗುಧಾನ್ಯ, ಎಳ್ಳು, ಎಳ್ಳಗಸೆ, ಚನ್ನಂಗಿ, ಸಾಸಿವೆ, ಕೊತ್ತುಮರಿ, ಜೀರಿಗೆ, ಹೆಸರು, ಉದ್ದು, ತೊಗರಿ, ಕಾಡುದ್ದು, ಅವರೆ, ಕಡಲೆ, ಹುರುಳಿ, ಎರಂಡ, ಯಾಲಕ್ಕಿ ಇವುಗಳೆಲ್ಲಾ ಧಾನ್ಯವಿಶೇಷಗಳು. ಇವುಗಳೂ ಬಂಗಾರವೂ ಹತ್ತಿಯೂ ಪ್ರಜೆಗಳ ಜೀವನಕ್ಕೆ ಕಾರಣಗಳು— ಜೀವನೋಪಾಯಗಳು. ಈ ಧಾನ್ಯಗಳೆಲ್ಲ ಉಪಭೋಗಿಸುವುದಕ್ಕೆ ಯೋಗ್ಯಗಳಾಗಿದ್ದರೂ ಆಗ ಪ್ರಜೆಗಳು ತಾವಾಗಿಯೇ ಅವುಗಳನ್ನು ಉಪಯೋಗಿಸುವ ವಿಧಾನವನ್ನು ತಿಳಿಯದೆ ಬಾರಿಬಾರಿಗೂ ಭ್ರಮೆಗೊಂಡರು.

**ಕಲ್ಪದ್ರುಮೇಷು ಕಾರ್ತ್ಸ್ನ್ಯೇನ ಪ್ರಲೀನೇಷು ನಿರಾಶ್ರಯಾಃ ।**
**ಯುಗಸ್ಯ[೧]ಪರಿವರ್ತೇಽಸ್ಮಿನ್ನಭೂವನ್ನಾ[೨]ಕುಲಾಕುಲಾಃ ॥ ೧೯೦ ॥**

ಈ ಯುಗದ ಪರಿವರ್ತನೆಯಲ್ಲಿ ಕಲ್ಪವೃಕ್ಷಗಳು ಸಂಪೂರ್ಣವಾಗಿ ನಾಶಹೊಂದುತ್ತಿರಲು ನಿರಾಶ್ರಿತರಾದ ಆ ಪ್ರಜೆಗಳು ಅತ್ಯಂತ ಆಕುಲ ವುಳ್ಳವರಾದರು.

**ತೀವ್ರಾಯಾಮಶನಾಯಾಯಾಮುದೀರ್ಣಾಹಾರಸಂಜ್ಞಯಾ ।**
**ಜೀವನೋಪಾಯಸಂಶೀತಿವ್ಯಾಕುಲೀಕೃತಚೇತಸಃ ॥ ೧೯೧ ॥**

**ಯುಗಮುಖ್ಯಮು[೩]ಪಾಸೀನಾ ನಾಭಿಂ ಮನುಮ[೪]ಪಶ್ಚಿಮಮ್ ।**
**ತೇ ತಂ ವಿಜ್ಞಾಪಯಾಮಾಸುರಿತಿ ದೀನಗಿರೋ ನರಾಃ ॥ ೧೯೨ ॥**

ಆಹಾರಸಂಜ್ಞೆಯ ಉದಯದಿಂದ ಅಧಿಕವಾದ ಹೊಟ್ಟೆಹಸಿವೆಯಾಗುತ್ತಿರಲು ಜೀವನೋಪಾಯದ ಸಂಶಯದಿಂದ ವ್ಯಾಕುಲಚಿತ್ತರಾದ ಆ ಪ್ರಜೆಗಳು ಆ ಯುಗಕ್ಕೆ ಮುಖ್ಯನಾಯಕನೂ ಸರ್ವಶ್ರೇಷ್ಠನೂ ಆದ ನಾಭಿರಾಜಮನುವನ್ನು ಕಂಡು ಬಹಳ ದೀನವಾದ ವಚನದಿಂದ ಮುಂದೆ ಹೇಳುವ ರೀತಿಯಾಗಿ ವಿಜ್ಞಾಪಿಸಿಕೊಂಡರು.

**ಜೀವಾಮಃ ಕಥಮೇವಾದ್ಯ ನಾಥಾನಾಥಾ ವಿನಾ ದ್ರುಮೈಃ ।**
**[೫]ಕಲ್ಪದಾಯಿಭಿರಾ[೬]ಕಲ್ಪಮವಿಸ್ಮಾರ್ಯೈರಪುಣ್ಯಕಾಃ ॥ ೧೯೩ ॥**

“ಎಲೈ ಪ್ರಭುವೇ ! ಸ್ಮರಣೆಮಾಡುವುದಕ್ಕೆ ಯೋಗ್ಯವೂ ಮರಣಪರ್ಯಂತ ಇಷ್ಟಾರ್ಥವನ್ನು ಕೊಡುವುವೂ ಆದ ಮರಗಳಿಲ್ಲದೆ, ಅದೃಷ್ಟಹೀನರೂ ಅನಾಥರೂ ಆದ ನಾವು ಈಗ ಹೇಗೆ ಬದುಕಬೇಕು ?

**ಇಮೇ ಕೇ ಚಿದಿತೋ ದೇವ ತರುಭೇದಾಃ ಸಮುತ್ಥಿತಾಃ ।**
**ಶಾಖಾಭಿಃ ಫಲನಮ್ರಾಭಿರಾಹ್ವಯಂತೀವ ನೋಽಧುನಾ ॥ ೧೯೪ ॥**

ಎಲೈ ದೇವನೇ ! ಈಕಡೆ ಬೆಳೆದಿರುವ ಈ ಕೆಲವು ವೃಕ್ಷವಿಶೇಷಗಳು ಫಲಗಳಿಂದ ಬಗ್ಗಿರುವ ಕೊಂಬೆಗಳಿಂದ ನಮ್ಮನ್ನೀಗ ಕರೆಯುವಂತಿವೆ.

**ಕಿಮಿಮೇ ಪರಿಹರ್ತವ್ಯಾಃ ಕಿಂ ವಾ ಭೋಗ್ಯಫಲಾ ಇಮೇ ।**
**ಫಲೇಗ್ರಹೀನಿಮೇಸ್ಮಾನ್ವಾ ನಿಗೃಹ್ಣಂತ್ಯನುಪಾಂತಿ ವಾ ॥ ೧೯೫ ॥**

೧ ಪರ್ಯಾಯೇ. ೨ ಅತ್ಯಂತಾಕುಲಾಃ. ೩ ಸಮೀಪೇ ಸ್ಥಿತಾಃ. ೪ ಶ್ರೇಷ್ಠಂ. ೫ ಅಭೀಷ್ಟಪ್ರದೈಃ. ೬ ಆಜೀವಿತಾಂತಂ.

ಇವುಗಳನ್ನು ಪರಿತ್ಯಾಗಮಾಡಬೇಕೋ ? ಅಥವಾ ಇವುಗಳ ಫಲಗಳನ್ನು ಸೇವನೆಮಾಡಬಹುದೋ ? ನಾವು ಫಲಗಳನ್ನು ತೆಗೆದುಕೊಂಡರೆ ಇವು ನಮ್ಮನ್ನು ಕೊಲ್ಲುವುವೋ ? ಅಥವಾ ರಕ್ಷಿಸುವುವೋ ?

**ಅಮೀಷಾಮು[೧]ಪಶಲ್ಯೇಷು ಕೇಷ್ಯಮೀ ತೃಣಗುಲ್ಮಕಾಃ ।**
**ಫಲನಮ್ರಶಿಖಾ ಭಾಂತಿ [೨]ವಿಶ್ವದಿಕ್ಕಮಿತೋಮುತಃ ॥ ೧೯೬ ॥**

ಈ ವೃಕ್ಷಗಳ ಸಮೀಪಭೂಮಿಯಲ್ಲಿ ಕೆಲವು ಹುಲ್ಲುಪೊದೆಗಳು ಎಲ್ಲಾ ದಿಕ್ಕುಗಳಲ್ಲಿಯೂ ಫಲಗಳಿಂದ ಬಗ್ಗಿದ ಅಗ್ರಭಾಗಗಳುಳ್ಳವಾಗಿ ಪ್ರಕಾಶಿಸುತ್ತಿವೆ.

**ಕ ಏಷಾಮು[೩]ಪಯೋಗಃ ಸ್ಯಾದ್ವಿನಿಯೋಜ್ಯಾಃ ಕಥಂ ನು ವಾ ।**
**ಕಿಮಿಮೇ ಸ್ವೈರಸಂಗ್ರಾಹ್ಯಾ ನವೇತೀದಂ ವದಾದ್ಯ ನಃ ॥ ೧೯೭ ॥**

ಇವುಗಳ ಉಪಕಾರವು ಯಾವುದು ? ಇವುಗಳನ್ನು ಹೇಗೆ ಉಪಯೋಗಿಸಿ ಕೊಳ್ಳಬೇಕು ? ಇವುಗಳನ್ನು ಇಚ್ಛಾನುಸಾರವಾಗಿ ಸಂಗ್ರಹಿಸಿಕೊಳ್ಳಬಹುದೋ ? ಕೂಡದೋ ? ಎಂಬ ವಿಷಯವನ್ನು ಈಗ ನಮಗೆ ಹೇಳು.

**ತ್ವಂ ದೇವ ಸರ್ವಮಪ್ಯೇತದ್ವೇತ್ಸಿ ನಾಭೇಽನಭಿಜ್ಞಕಾಃ ।**
**ಪೃಚ್ಛಾಮೋ ವಯಮದ್ಯಾರ್ತಾಸ್ತತೋ ಬ್ರೂಹಿ ಪ್ರಸೀದ ನಃ ॥ ೧೯೮ ॥**

ಎಲೈ ಪ್ರಭುವಾದ ನಾಭಿರಾಜನೇ ! ನೀನು ಈ ವಿಚಾರವನ್ನೆಲ್ಲ ತಿಳಿದಿರುತ್ತಿ. ಅರಿಯದ ನಾವು ದುಃಖಿತರಾಗಿ ನಿನ್ನನ್ನು ಕೇಳುತ್ತೇವೆ. ಆದುದರಿಂದ ನಮ್ಮಮೇಲೆ ಪ್ರಸನ್ನನಾಗಿ ಹೇಳು”.

**ಇತಿಕರ್ತವ್ಯತಾಮೂಢಾನತಿಭೀತಾಂಸ್ತದಾರ್ಯಕಾನ್ ।**
**ನಾಭಿರ್ನ[೪]ಭೇಯಮಿತ್ಯುಕ್ತ್ವಾ ವ್ಯಾಜಹಾರ ಪುನಃ ಸ ತಾನ್ ॥ ೧೯೯ ॥**

ಹೀಗೆಯೇ ಮಾಡಬೇಕೆಂಬ ವಿಷಯದಲ್ಲಿ ಮೂಢರಾಗಿ ಬಹಳ ಹೆದರಿದ ಆ ಆರ್ಯರಿಗೆ ನಾಭಿರಾಜಮನುವು ಹೆದರಬೇಕಾದುದಿಲ್ಲವೆಂದು ಹೇಳಿ, ಮುಂದೆಹೇಳುವ ರೀತಿಯಾಗಿ ಪುನಃ ಅವರಿಗೆ ಹೇಳಿದನು:—

**ಇಮೇ ಕಲ್ಪತರೂಚ್ಛೇದೇ ದ್ರುಮಾಃ ಪಕ್ವಫಲಾನತಾಃ ।**
**ಯುಷ್ಮಾನದ್ಯಾನುಗೃಹ್ಣಂತಿ ಪುರಾಕಲ್ಪದ್ರುಮಾ ಯಥಾ ॥ ೨೦೦ ॥**

“ಕಲ್ಪವೃಕ್ಷಗಳು ನಾಶವಾದಮೇಲೆ ಹಣ್ಣಾದ ಫಲಗಳಿಂದ ಬಗ್ಗಿದ ಈ ವೃಕ್ಷಗಳು, ಮೊದಲು ಕಲ್ಪವೃಕ್ಷಗಳು ನಿಮ್ಮನ್ನು ಕಾಪಾಡುತ್ತಿದ್ದಂತೆ ಈಗ ಕಾಪಾಡುವುವು.

**ಭದ್ರಕಾ[೫]ಸ್ತದಿಮೇ ಭೋಗ್ಯಾಃ ಕಾರ್ಯಾ ನ ಭ್ರಾಂತಿರತ್ರ ವಃ ।**
**ಅಮೀ ಚ ಪರಿಹರ್ತವ್ಯಾ ದೂರತೋ ವಿಷವೃಕ್ಷಕಾಃ ॥ ೨೦೧ ॥**

ಆದುದರಿಂದ ಎಲೈ ಭದ್ರಪುರುಷರೇ ! ಈ ವೃಕ್ಷಗಳು, ಭೋಗಿಸುವುದಕ್ಕೆ ಅರ್ಹವಾಗಿವೆ. ಇವುಗಳಲ್ಲಿ ನೀವು ಭ್ರಮೆಪಡಬಾರದು. ಈ ವಿಷವೃಕ್ಷಗಳನ್ನಾದರೋ ದೂರದಿಂದಲೇ ಪರಿತ್ಯಾಗ ಮಾಡಬೇಕು.

**ಇಮಾಶ್ಚ [೬]ಕಾಶ್ಚನೌಷಧ್ಯಃ [೭]ಸ್ತಂಬಕರ್ಯಾದಯೋ ಮತಾಃ ।**
**ಏತಾಸಾಂ ಭೋಜ್ಯಮನ್ನಾದ್ಯಂ [೮]ವ್ಯಂಜನಾದ್ಯೈಃ ಸುಸಂಸ್ಕೃತಮ್ ॥**

ಇವು ಕೆಲವು ಔಷಧಿಮೂಲಿಕೆಗಳು. ಇವು ಭತ್ತ ಮೊದಲಾದ ಧಾನ್ಯಗಳು. ಇವುಗಳ ಅನ್ನ ಮುಂತಾದ ವಸ್ತುವಿಗೆ, ಮಸಾಲೆ ಚಟ್ಣಿ ಉಪ್ಪಿನಕಾಯಿ ಮೊದಲಾದುವುಗಳನ್ನು ಸೇರಿಸಿ ಅದನ್ನು ತಿನ್ನಬಹುದು.

೧ ಸಮೀಪಭೂಮಿಷು. ೨ ಸರ್ವದಿಕ್ಷು. ೩ ಉಪಕಾರಃ. ೪ ನ ಭೇತವ್ಯಂ. ೫ ತಸ್ಮಾತ್ಕಾರಣಾತ್. ೬ ನಾಮೌಷಧಯ ಇತ್ಯಪಿ ಪಾಠಃ. ೭ ವ್ರೀಹ್ಯಾದಯಃ. ೮ ಉಪದಂಶಾದ್ಯೈಃ.

**ಸ್ವಭಾವಮಧುರಾಶ್ಚೈತೇ ದೀರ್ಘಾಃ ಪುಂಡ್ರೇಕ್ಷುದಂಡಕಾಃ ।**
**ರಸೀಕೃತ್ಯ ಪ್ರಪಾತವ್ಯಾ ದಂತೈರ್ಯಂತ್ರೈಶ್ಚ ಪೀಡಿತಾಃ ॥ ೨೦೩ ॥**

ಸ್ವಭಾವದಿಂದಲೇ ರುಚಿಯಾದುವೂ ಉದ್ದವೂ ಆದ ಈ ರಸದಾಳಿ ಕಬ್ಬುಗಳನ್ನು ಹಲ್ಲುಗಳಿಂದಾಗಲಿ, ಯಂತ್ರಗಳಿಂದಾಗಲಿ ಪೀಡಿಸಿ ರಸತೆಗೆದು ಕುಡಿಯಬಹುದು''.

**ಗಜಕುಂಭಸ್ಥಲೇ ತೇನ ಮೃದಾ ನಿರ್ವರ್ತಿತಾನಿ ಚ ।**
**ಪಾತ್ರಾಣಿ ವಿವಿಧಾನ್ಯೇ[೧]ಷಾಂ ಸ್ಥಾಲ್ಯಾದೀನಿ ದಯಾಲುನಾ ॥ ೨೦೪ ॥**

ದಯಾಳುವಾದ ಆ ನಾಭಿರಾಜಮನುವು ಆನೆಯ ಕುಂಭಸ್ಥಳದಲ್ಲಿ ಮಣ್ಣನ್ನು ಮೆತ್ತಿಸಿ ತಟ್ಟೆ ಮೊದಲಾದ ನಾನಾವಿಧಪಾತ್ರಗಳನ್ನು ಈ ಆರ್ಯರಿಗೆ ಮಾಡಿಸಿಕೊಟ್ಟನು.

**ಇತ್ಯಾದ್ಯುಪಾಯಕಥನೈಃ ಪ್ರೀತಾಃ ಸತ್ಕೃತ್ಯ ತಂ ಮನುಮ್ ।**
**ಭೇಜುಸ್ತದ್ದರ್ಶಿತಾಂ ವೃತ್ತಿಂ ಪ್ರಜಾಃ ಕಾಲೋಚಿತಾಂ ತದಾ ॥ ೨೦೫ ॥**

ಇವು ಮೊದಲಾದ ಉಪಾಯಗಳನ್ನು ಹೇಳಿದುದರಿಂದ ಪ್ರಜೆಗಳು ಸಂತುಷ್ಟರಾಗಿ ಆ ಮನುವನ್ನು ಸತ್ಕರಿಸಿ, ಆಗ ಅವನು ಕಾಲೋಚಿತವಾಗಿ ತೋರಿಸಿದ ವೃತ್ತಿಯನ್ನು ಮಾಡತೊಡಗಿದರು.

**ಪ್ರಜಾನಾಂ ಹಿತಕೃದ್ಭೂತ್ವಾ ಭೋಗಭೂಮಿಸ್ಥಿತಿಚ್ಯುತೌ ।**
**ನಾಭಿರಾಜಸ್ತದೋದ್ಭೂತೋ ಭೇಜೇ ಕಲ್ಪತರುಸ್ಥಿತಿಮ್ ॥ ೨೦೬ ॥**

ಭೋಗಭೂಮಿಯ ಸ್ಥಿತಿಯು ನಾಶವಾಗುತ್ತಿರಲು ಆಗ ಉದ್ಭವಿಸಿದ ನಾಭಿರಾಜಮನುವು ಪ್ರಜೆಗಳಿಗೆ, ಕಲ್ಪವೃಕ್ಷಗಳಂತೆ, ಹಿತಕಾರಿಯಾದನು.

**ಪೂರ್ವಂ ವ್ಯಾವರ್ಣಿತಾ ಯೇ ಯೇ ಪ್ರತಿಶ್ರುತ್ಯಾದಯಃ ಕ್ರಮಾತ್ ।**
**ಪುರಾಭವೇ ಬಭೂವುಸ್ತೇ ವಿದೇಹೇಷು ಮಹಾನ್ವಯಾಃ ॥ ೨೦೭ ॥**

ಮೊದಲು ಕ್ರಮವಾಗಿ ವರ್ಣಿಸಿದ ಪ್ರತಿಶ್ರುತಿ ಮೊದಲಾದ ಮನುಗಳು ಪೂರ್ವಭವದಲ್ಲಿ ವಿದೇಹಕ್ಷೇತ್ರಗಳಲ್ಲಿ ದೊಡ್ಡ ವಂಶಸ್ಥರಾಗಿದ್ದರು.

**ಕುಶಲೈಃ ಪಾತ್ರದಾನಾದ್ಯೈರನುಷ್ಠಾನೈರ್ಯಥೋಚಿತೈಃ ।**
**ಸಮ್ಯಕ್ತ್ವಗ್ರಹಣಾತ್ಪೂರ್ವಂ ಬಧ್ವಾಯುರ್ಭೋಗಭೂಭುವಾಮ್ ॥**

**ಪಶ್ಚಾತ್ಕ್ಷಾಯಿಕಸಮ್ಯಕ್ತ್ವಮುಪಾದಾಯ ಜಿನಾಂತಿಕೇ ।**
**ಅತ್ರೋದಪತ್ಸತ ಸ್ವಾಯುರಂತೇ ತೇ ಶ್ರುತಪೂರ್ವಿಣಃ ॥ ೨೦೯ ॥**

ಶ್ರೇಷ್ಠವಾದ ಪಾತ್ರದಾನ ಮೊದಲಾದುವುಗಳಿಂದಲೂ ಯಥೋಚಿತವಾದ ಆಚರಣೆಗಳಿಂದಲೂ ಸಮ್ಯಕ್ತ್ವಗ್ರಹಣವಾಗುವುದಕ್ಕಿಂತ ಮೊದಲು, ಭೋಗ ಭೂಮಿಜರ ಆಯುಷ್ಯವನ್ನು ಬಂಧಿಸಿಕೊಂಡು ಆಮೇಲೆ ಜಿನೇಶ್ವರರ ಸಮೀಪದಲ್ಲಿ ಕ್ಷಾಯಿಕಸಮ್ಯಕ್ತ್ವವನ್ನೂ ಸಂಪೂರ್ಣಶ್ರುತಜ್ಞಾನವನ್ನೂ ಪಡೆದು ತಮ್ಮ ಆಯುಷ್ಯವು ಪೂರ್ತಿಯಾದನಂತರ ಈ ಆರ್ಯಖಂಡದಲ್ಲಿ ಹುಟ್ಟಿದರು.

**ಇಮಾನ್ನಿಯೋಗಾನಾಧ್ಯಾಯ ಪ್ರಜಾನಾಮಿತ್ಯುಪಾದಿಶನ್ ।**
**ಕೇಚಿಜ್ಜಾತಿಸ್ಮರಾಸ್ತೇಷು ಕೇಚಿಚ್ಚಾವಧಿಲೋಚನಾಃ ॥ ೨೧೦ ॥**

ಹಿಂದೆಹೇಳಿದ ರೀತಿಯಾಗಿ ಈ ನಿಯಮಗಳನ್ನು ಸ್ಮರಿಸಿ ಪ್ರಜೆಗಳಿಗೆ ಉಪದೇಶಮಾಡಿದರು. ಆ ಮನುಗಳಲ್ಲಿ ಕೆಲವರು ಜಾತಿಸ್ಮರಣೆಯುಳ್ಳವರೂ ಕೆಲವರು ಅವಧಿಜ್ಞಾನವುಳ್ಳವರೂ ಆಗಿದ್ದರು.

೧ ಆರ್ಯಾಣಾಂ.

**ಪ್ರಜಾನಾಂ ಜೀವನೋಪಾಯ[೧]ಮನನಾನ್ಮನವೋ ಮತಾಃ ।**
**ಆರ್ಯಾಣಾಂ [೨]ಕುಲಸಂಸ್ತ್ಯಾಯಕೃತೇಃ ಕುಲಕರಾ ಇಮೇ ॥ ೨೧೧ ॥**

ಪ್ರಜೆಗಳ ಜೀವನೋಪಾಯವನ್ನು ಚಿಂತಿಸಿದುದರಿಂದ ಇವರಿಗೆ ಮನುಗಳೆಂದು ಹೆಸರಾಯಿತು. ಆರ್ಯರಿಗೆ ಮನೆಗಳ ರಚನೆಯನ್ನು ಮಾಡಿದುದರಿಂದ ಕುಲಕರರೆಂದು ಹೆಸರಾಯಿತು.

**ಕುಲಾನಾಂ ಧಾರಣಾದೇತೇ ಮತಾಃ ಕುಲಧರಾ ಇತಿ ।**
**ಯುಗಾದಿಪುರುಷಾಃ ಪ್ರೋಕ್ತಾ ಯುಗಾದೌ ಪ್ರಭವಿಷ್ಣವಃ ॥ ೨೧೨ ॥**

ಕುಲಗಳನ್ನು ಧರಿಸಿದುದರಿಂದ (ನಾಯಕರಾಗಿದ್ದುದರಿಂದ) ಇವರಿಗೆ ಕುಲಧರರೆಂದು ಹೆಸರಾಯಿತು. ಯುಗದ ಆದಿಯಲ್ಲಿ ಸಮರ್ಥರಾದ ಪ್ರಭುಗಳಾಗಿದ್ದುದರಿಂದ ಯುಗಾದಿಪುರುಷರೆಂದು ಹೆಸರಾಯಿತು.

**ವೃಷಭಸ್ತೀರ್ಥಕೃಚ್ಚೈವ ಕುಲಕೃ(ದ್ಧೃ)ಚ್ಚೈವ ಸಮ್ಮತಃ ।**
**ಭರತಶ್ಚಕ್ರಭೃಚ್ಚೈವ ಕುಲಧೃ(ಕೃ)ಚ್ಚೈವ ವರ್ಣಿತಃ ॥ ೨೧೩ ॥**

ವೃಷಭಸ್ವಾಮಿಯು ತೀರ್ಥಂಕರರೂ ಕುಲಕರ(ಧರ)ರೂ ಆಗಿದ್ದರು. ಭರತ ರಾಜನು ಚಕ್ರವರ್ತಿಯೂ ಕುಲಧರನೂ ಆಗಿದ್ದನೆಂದು ವರ್ಣಿಸಲ್ಪಟ್ಟನು.

**ತತ್ರಾದ್ಯೈಃ ಪಂಚಭಿರ್ನೃಣಾಂ ಕುಲಭೃ(ಕೃ)ದ್ಭಿಃ ಕೃತಾಗಸಾಮ್ ।**
**[೩]ಹಾಕಾರಲಕ್ಷಣೋ ದಂಡಃ ಸಮವಸ್ಥಾಪಿತಸ್ತದಾ ॥ ೨೧೪ ॥**

ಈ ಹದಿನಾಲ್ಕು ಜನ ಮನುಗಳಲ್ಲಿ ಮೊದಲನೆಯ ಐದುಜನ ಮನುಗಳು ತಪ್ಪುಮಾಡಿದ ಮನುಷ್ಯರಿಗೆ ''ಹಾ'' ಎಂಬ ಶಿಕ್ಷೆಯನ್ನು ವಿಧಿಸುತ್ತಿದ್ದರು. 'ಹಾ' ಎಂದು ಶೋಕಪ್ರಕಟಮಾಡುವುದೇ ಶಿಕ್ಷೆಯಾಗಿದ್ದಿತೆಂದರ್ಥವು.

**ಹಾಮಾಕಾರೌ ಚ ದಂಡೋನ್ಯೈಃ ಪಂಚಭಿಃ ಸಂಪ್ರವರ್ತಿತಃ ।**
**ಪಂಚಭಿಸ್ತು ತತಃ ಶೇಷೈರ್ಹಾಮಾಧಿ[೪]ಕ್ಕಾರಲಕ್ಷಣಃ ॥ ೨೧೫ ॥**

ಬೇರೆ ಐದುಜನ ಮನುಗಳು ''ಹಾ ಮಾ'' ಎಂಬ ಶಿಕ್ಷೆಯನ್ನು ವಿಧಿಸುತ್ತಿದ್ದರು. 'ಹಾ' ಎಂದು ಶೋಕಪ್ರಕಟಮಾಡುವುದೂ 'ಮಾ' ಎಂದು ತಡೆಮಾಡುವುದೂ ಶಿಕ್ಷೆಯಾಗಿದ್ದಿತೆಂದು ಭಾವವು. ಆಮೇಲೆ ಮಿಕ್ಕ ನಾಲ್ಕುಜನ ಮನುಗಳೂ ಆದಿತೀರ್ಥಂಕರರೂ ಈ ಐದುಮಂದಿಗಳು ''ಹಾ ಮಾ ಧಿಕ್'' ಎಂಬ ಶಿಕ್ಷೆಯನ್ನು ವಿಧಿಸುತ್ತಿದ್ದರು. 'ಹಾ' ಎಂದು ಶೋಕಪ್ರಕಟಮಾಡುವುದೂ 'ಮಾ' ಎಂದು ತಡೆಯುವುದೂ 'ಧಿಕ್' ಎಂದು ಬೆದರಿಸುವುದೂ ಅಥವಾ ನಿಂದಿಸುವುದೂ ಶಿಕ್ಷೆಯಾಗಿದ್ದಿತೆಂದಭಿಪ್ರಾಯವು.

**ಶರೀರದಂಡನಂ ಚೈವ ವಧಬಂಧಾದಿಲಕ್ಷಣಮ್ ।**
**ನೃಣಾಂ ಪ್ರಬಲದೋಷಾಣಾಂ ಭರತೇನ ನಿಯೋಜಿತಮ್ ॥ ೨೧೬ ॥**

ಭರತಚಕ್ರವರ್ತಿಯು ಅಧಿಕವಾಗಿ ತಪ್ಪುಮಾಡಿದವರಿಗೆ ವಧೆ ಬಂದಿಖಾನೆ ಮುಂತಾದ ಶರೀರಶಿಕ್ಷೆಯನ್ನು ವಿಧಿಸಿದನು. ಕ್ರಮಕ್ರಮವಾಗಿ ಪ್ರಜೆಗಳು ಹೆಚ್ಚುಹೆಚ್ಚು ತಪ್ಪುಮಾಡಲಾರಂಭಿಸಿದ ಹಾಗೆಲ್ಲ ಶಿಕ್ಷೆಯೂ ಹೆಚ್ಚುಹೆಚ್ಚಾದುದೆಂದು ಭಾವವು.

**ಯದಾಯುರುಕ್ತಮೇತೇಷಾಮಮಮಾದಿಪ್ರಸಂಖ್ಯಯಾ ।**
**ಕ್ರಿಯತೇ ತದ್ವಿನಿಶ್ಚಿತ್ಯೈ ಪರಿಭಾಷೋಪವರ್ಣನಮ್ ॥ ೨೧೭ ॥**

ಈ ಮನುಗಳಿಗೆ ಅಮಮಾ ಮೊದಲಾದ ಸಂಖ್ಯೆಗಳಿಂದ ಹೇಳಿದ ಆಯುಷ್ಯವನ್ನು ನಿಶ್ಚಯಿಸುವುದಕ್ಕೋಸ್ಕರ ಆ ಪರಿಭಾಷೆಗಳ ವರ್ಣನೆಯನ್ನು ಮಾಡುತ್ತೇವೆ:—

೧ ಚಿಂತನಾತ್. ೨ ಕುಲಮನ್ವಯಸಂಘಾತಗೃಹೋತ್ಪತ್ತ್ಯಾಶ್ರಮೇಷು ಚ, ಗ್ರಹವಿನ್ಯಾಸಕರಣಾತ್. ೩ ಹಾವಿಷಾದಶುಗರ್ತಿಷು. ೪ ಧಿಙ್ನಿರ್ಭರ್ತ್ಸನನಿಂದಯೋರಿತ್ಯಮರಃ.

**ಪೂರ್ವಾಂಗಂ ವರ್ಷಲಕ್ಷಾಣಾಮಶೀತಿಶ್ಚತುರುತ್ತರಾ ।**
**ತದ್ವರ್ಗಿತಂ ಭವೇತ್ಪೂರ್ವಂ ತತ್ಕೋಟೀ ಪೂರ್ವಕೋಟ್ಯಸೌ ॥ ೨೧೮ ॥**

ಎಂಬತ್ತನಾಲ್ಕುಲಕ್ಷ ವರ್ಷಗಳಿಗೆ ಒಂದು ಪೂರ್ವಾಂಗವೆಂದು ಹೆಸರು. ಎಂಬತ್ತನಾಲ್ಕುಲಕ್ಷ ವರ್ಷಗಳನ್ನು ವರ್ಗಮಾಡಿದರೆ ಒಂದು ಪೂರ್ವವಾಗುತ್ತದೆ:—(೮೪೦೦೦೦೦ x ೮೪೦೦೦೦೦ = ೭೦೫೬೦೦೦೦೦೦೦೦೦೦). ಈ ಪೂರ್ವವನ್ನು ಒಂದು ಕೋಟಿಯಿಂದ ಗುಣಿಸಿದರೆ ಪೂರ್ವಕೋಟಿಯೆನಿಸುವುದು.

**ಪೂರ್ವಂ ಚತುರಶೀತಿಘ್ನಂ ಪರ್ವಾಂಗಂ ಪರಿಭಾಷ್ಯತೇ ।**
**ಪೂರ್ವಾಂಗತಾಡಿತಂ ತತ್ತು ಪರ್ವಾಂಗಂ ಪರ್ವಮಿಷ್ಯತೇ ॥ ೨೧೯ ॥**

ಪೂರ್ವಸಂಖ್ಯೆಯನ್ನು ಎಂಬತ್ತನಾಲ್ಕರಿಂದ ಗುಣಿಸಿದರೆ ಪರ್ವಾಂಗವೆನಿಸುವುದು (೭೦೫೬೦೦೦೦೦೦೦೦೦೦ X ೮೪ = ೫೯೨೭೦೪೦೦೦೦೦೦೦೦೦೦). ಪರ್ವಾಂಗವನ್ನು ಪೂರ್ವಾಂಗದಿಂದ ಗುಣಿಸಿದರೆ ಒಂದು ಪರ್ವವೆನಿಸುತ್ತದೆ. (೫೯೨೭೦೪೦೦೦೦೦೦೦೦೦೦ X೮೪೦೦೦೦೦ = ೪೯೭೮೭೧೩೬೦೦೦ ೦೦೦೦೦೦೦೦೦೦೦೦).

**ಗುಣಕಾರವಿಧಿಃ ಸೋಽಯಂ ಯೋಜನೀಯೋ ಯಥಾಕ್ರಮಮ್ ।**
**ಉತ್ತರೇಷ್ವಪಿ ಸಂಖ್ಯಾನವಿಕಲ್ಪೇಷು ನಿರಾಕುಲಮ್ ॥ ೨೨೦ ॥**

ಮುಂದಿನ ಸಂಖ್ಯಾವಿಕಲ್ಪಗಳಲ್ಲಿಯೂ ಯಥಾಕ್ರಮವಾಗಿ ಇದೇ ಗುಣಕಾರ ವಿಧಿಯನ್ನು ಮಾಡಿಕೊಳ್ಳಬೇಕು. ಅಂದರೆ ಪರ್ವವನ್ನು ಎಂಬತ್ತನಾಲ್ಕರಿಂದ ಗುಣಿಸಿದರೆ ನವು(ಯು)ತಾಂಗವೂ ನವು(ಯು)ತಾಂಗವನ್ನು ಎಂಬತ್ತನಾಲ್ಕು ಲಕ್ಷದಿಂದ ಗುಣಿಸಿದರೆ ನವು(ಯು)ತವೂ ನವು(ಯು)ತವನ್ನು ಎಂಬತ್ತನಾಲ್ಕರಿಂದ ಗುಣಿಸಿದರೆ ಕುಮುದಾಂಗವೂ ಕುಮುದಾಂಗವನ್ನು ಎಂಬತ್ತನಾಲ್ಕು ಲಕ್ಷದಿಂದ ಗುಣಿಸಿದರೆ ಕುಮುದವೂ ಕುಮುದವನ್ನು ಎಂಬತ್ತನಾಲ್ಕರಿಂದ ಗುಣಿಸಿದರೆ ಪದ್ಮಾಂಗವೂ ಪದ್ಮಾಂಗವನ್ನು ಎಂಬತ್ತನಾಲ್ಕು ಲಕ್ಷದಿಂದ ಗುಣಿಸಿದರೆ ಪದ್ಮವೂ ಪದ್ಮವನ್ನು ಎಂಬತ್ತನಾಲ್ಕರಿಂದ ಗುಣಿಸಿದರೆ ನಲಿನಾಂಗವೂ ನಲಿನಾಂಗವನ್ನು ಎಂಬತ್ತನಾಲ್ಕು ಲಕ್ಷದಿಂದ ಗುಣಿಸಿದರೆ ನಲಿನವೂ ಇವು ಮೊದಲಾದ ಸಂಖ್ಯೆಗಳು ಹೀಗೆಯೇ ಗುಣಕಾರ ಮಾಡುವುದರಿಂದ ಬರುತ್ತವೆ.

**ತೇಷಾಂ ಸಂಖ್ಯಾನಭೇದಾನಾಂ ನಾಮಾನೀಮಾನ್ಯನುಕ್ರಮಾತ್ ।**
**ಕೀರ್ತ್ಯಂತೇಽನಾದಿಸಿದ್ಧಾಂತೇ ಪದರೂಢಾನಿ ಯಾನಿ ವೈ ॥ ೨೨೧ ॥**

ಅನಾದಿಕಾಲದಿಂದ ಬಂದ ಆಗಮದಲ್ಲಿ ಪ್ರಸಿದ್ಧಪದಗಳಾದ, ಆ ಸಂಖ್ಯಾಭೇದಗಳ ಹೆಸರುಗಳನ್ನು ಕ್ರಮವಾಗಿ ಹೇಳುತ್ತೇವೆ.

**ಪೂರ್ವಾಂಗಂ ಚ ತಥಾ ಪೂರ್ವಂ ಪರ್ವಾಂಗಂ ಪರ್ವಸಾಹ್ವಯಮ್ ।**
**ನವು(ಯು)ತಾಂಗಂ ಪರಂ ತಸ್ಮಾನ್ನವು(ಯು)ತಂ ಚ ತತಃ ಪರಮ್ ॥**

**ಕುಮುದಾಂಗಮತೋ ವಿದ್ಧಿ ಕುಮುದಾಹ್ವಮತಃ ಪರಮ್ ।**
**ಪದ್ಮಾಂಗಂ ಚ ತತಃ ಪದ್ಮಂ ನಲಿನಾಂಗಮತೋಽಪಿ ಚ ॥ ೨೨೩ ॥**

**ನಲಿನಂ ಕಮಲಾಂಗಂ ಚ ತಥಾನ್ಯತ್ಕಮಲಂ ವಿದುಃ ।**
**ತುಟ್ಯಂಗಂ ತುಟಿಕಂ ಚಾನ್ಯದಟಟಾಂಗಮಥಾಟಟಮ್ ॥ ೨೨೪ ॥**

**ಅಮಮಾಂಗಮತೋಜ್ಞೇಯಮಮಮಾಖ್ಯಮತಃ ಪರಮ್ ।**
**ಹಾಹಾಂಗಂ ಚ ತಥಾ ಹಾಹಾ ಹೂಹೂಶ್ಚೈವಂ ಪ್ರತೀಯತಾಮ್ ॥**

**ಲತಾಂಗಂ ಚ ಲತಾಹ್ವಂ ಚ ಮಹತ್ಪೂರ್ವಂ ಚ ತದ್ದ್ವಯಮ್ ।**
**ಶಿರಃಪ್ರಕಂಪಿತಂ ಚಾನ್ಯತ್ತತೋ ಹಸ್ತಪ್ರಹೇಲಿತಮ್ ॥ ೨೨೬ ॥**

**ಅಚಲಾತ್ಮಕಮಿತ್ಯೇವಂ ಪ್ರಕಾರಃ ಕಾಲಪರ್ಯಯಃ ।**
**ಸಂಖ್ಯೇಯೋ ಗಣನಾತೀತಂ ವಿದುಃ ಕಾಲಮತಃ ಪರಮ್ ॥ ೨೨೭ ॥**

ಪೂರ್ವಾಂಗ, ಪೂರ್ವ, ಪರ್ವಾಂಗ, ಪರ್ವ, ನವು(ಯು)ತಾಂಗ, ನವು(ಯು)ತ, ಕುಮುದಾಂಗ, ಕುಮುದ, ಪದ್ಮಾಂಗ, ಪದ್ಮ, ನಲಿನಾಂಗ, ನಲಿನ, ಕಮಲಾಂಗ, ಕಮಲ, ತುಟ್ಯಂಗ, ತುಟಿಕ, ಅಟಟಾಂಗ, ಅಟಟ, ಅಮಮಾಂಗ, ಅಮಮ, ಹಾಹಾಂಗ, ಹಾಹಾ, ಹೂಹ್ವಂಗ, ಹೂಹೂ, ಲತಾಂಗ, ಲತಾ, ಮಹಾಲತಾಂಗ, ಮಹಾಲತಾ, ಶಿರಃಪ್ರಕಂಪಿತ, ಹಸ್ತಪ್ರಹೇಲಿತ, ಅಚಲ, ಇವುಗಳೆಲ್ಲ ಕಾಲಪರ್ಯಯದ ಸಂಖ್ಯಾತಭೇದಗಳೆಂದು ತಿಳಿಯಬೇಕು. ಇದರಮುಂದಿನ ಕಾಲಭೇದವು ಅಸಂಖ್ಯಾತವೆನಿಸುತ್ತದೆ.

**ಯಥಾಸಂಭವಮೇತೇಷು ಮನೂನಾಮಾಯುರೂಹ್ಯತಾಮ್ ।**
**ಸಂಖ್ಯಾಜ್ಞಾನಮಿದಂ ವಿದ್ವಾನ್ಸುಧೀಃ ಪೌರಾಣಿಕೋ ಭವೇತ್ ॥ ೨೨೮ ॥**

ಈ ಹಿಂದೆ ಹೇಳಿದ ಸಂಖ್ಯೆಗಳಲ್ಲಿ ಮನುಗಳ ಆಯುಷ್ಯಪರಿಮಾಣವನ್ನು ಯಥಾಸಂಭವವಾಗಿ ಊಹಿಸಿಕೊಳ್ಳಬೇಕು. ಈ ಸಂಖ್ಯೆಗಳನ್ನು ತಿಳಿಯುವ ಪ್ರಾಜ್ಞನು ಪೌರಾಣಿಕ(ಪುರಾಣವನ್ನು ಹೇಳುವವ)ನಾಗುವನು.

**ಆದ್ಯಃ ಪ್ರತಿಶ್ರುತಿಃ ಪ್ರೋಕ್ತೋ ದ್ವಿತೀಯಃ ಸನ್ಮತಿರ್ಮನುಃ ।**
**ತೃತೀಯಃ ಕ್ಷೇಮಕೃನ್ನಾಮ್ನಾ ಚತುರ್ಥಃ ಕ್ಷೇಮಧೃನ್ಮನುಃ ॥ ೨೨೯ ॥**

ಮೊದಲನೆಯ ಮನುವು ಪ್ರತಿಶ್ರುತಿಯು. ಎರಡನೆಯವನು ಸನ್ಮತಿ. ಮೂರನೆಯ ಮನುವು ಕ್ಷೇಮಂಕರನು. ನಾಲ್ಕನೆಯವನು ಕ್ಷೇಮಂಧರನು.

**ಸೀಮಕೃತ್ಪಂಚಮೋ ಜ್ಞೇಯಃ ಷಷ್ಠಃ ಸೀಮಧೃದಿಷ್ಯತೇ ।**
**ತತೋ ವಿಮಲವಾಹಾಂಕಶ್ಚಕ್ಷುಷ್ಮಾನಷ್ಟಮೋ ಮತಃ ॥ ೨೩೦ ॥**

ಸೀಮಂಕರನು ಐದನೆಯವನು. ಆರನೆಯವನು ಸೀಮಂಧರನು. ಆಮೇಲೆ ವಿಮಲವಾಹನನು ಏಳನೆಯವನು. ಚಕ್ಷುಷ್ಮಾನ್ ಎಂಟನೆಯ ಮನುವು.

**ಯಶಸ್ವಾನ್ನವಮಸ್ತಸ್ಮಾದಭಿಚಂದ್ರೋಪ್ಯನಂತರಃ ।**
**ಚಂದ್ರಾಭೋಸ್ಮಾತ್ಪರಂ ಜ್ಞೇಯೋ ಮರುದ್ದೇವಸ್ತತಃ ಪರಮ್ ॥ ೨೩೧ ॥**

ಯಶಸ್ವಾನ್ ಒಂಬತ್ತನೆಯವನು. ಹತ್ತನೆಯವನು ಅಭಿಚಂದ್ರನು. ಇವನ ನಂತರ ಚಂದ್ರಾಭಮನುವು. ಆಮೇಲೆ ಮರುದ್ದೇವನು.

**ಪ್ರಸೇನಜಿತ್ಪರಸ್ತಸ್ಮಾನ್ನಾಭಿರಾಜಶ್ಚತುರ್ದಶಃ ।**
**ವೃಷಭೋ ಭರತೇಶಶ್ಚ ತೀರ್ಥಚಕ್ರಭೃತೌ ಮನೂ ॥ ೨೩೨ ॥**

ಅವನನಂತರ ಪ್ರಸೇನಜಿತ್ ಎಂಬ ಹದಿಮೂರನೆಯ ಮನುವು. ನಾಭಿರಾಜನು ಹದಿನಾಲ್ಕನೆಯ ಮನುವು. ವೃಷಭಸ್ವಾಮಿಯು ತೀರ್ಥಂಕರರೂ ಮನುವೂ ಆಗಿದ್ದರು. ಭರತರಾಜನು ಚಕ್ರವರ್ತಿಯೂ ಮನುವೂ ಆಗಿದ್ದನು.

**ಪ್ರತಿಶ್ರುತಿಃ ಪ್ರತ್ಯಶೃಣೋತ್ಪ್ರಜಾನಾಂ**
**ಚಂದ್ರಾರ್ಕಸಂದರ್ಶನಭೀತಿಭಾಜಾಮ್ ।**
**ಸ ಸನ್ಮತಿಸ್ತಾರಕಿತಾಭ್ರಮಾರ್ಗ-**
**ಸಂದರ್ಶನೇ ಭೀತಿಮಪಾಚಕಾರ ॥ ೨೩೩ ॥**

ಪ್ರತಿಶ್ರುತಿಯೆಂಬ ಮೊದಲನೆಯ ಮನುವು ಸೂರ್ಯಚಂದ್ರರನ್ನು ನೋಡಿ ಭಯಭೀತರಾದ ಪ್ರಜೆಗಳ ಮಾತನ್ನು ಕೇಳಿದನು (ಭಯವನ್ನು ಹೋಗಲಾಡಿಸಿದನು). ಸನ್ಮತಿಮನುವು ಆಕಾಶಮಾರ್ಗದಲ್ಲಿ ನಕ್ಷತ್ರಗಳು ಉದಯಿಸಿದುದನ್ನು ನೋಡಿದುದರಿಂದುಂಟಾದ ಭಯವನ್ನು ಹೋಗಲಾಡಿಸಿದನು.

**ಕ್ಷೇಮಂಕರಃ ಕ್ಷೇಮಕೃದಾರ್ಯವರ್ಗೇ**
**ಕ್ಷೇಮಂಧರಃ ಕ್ಷೇಮಧೃತೇಃ ಪ್ರಜಾನಾಮ್ ।**
**ಸೀಮಂಕರಃ ಸೀಮಕೃದಾರ್ಯನೄಣಾಂ**
**ಸೀಮಂಧರಃ ಸೀಮಧೃತೇಸ್ತರೂಣಾಮ್** ॥ ೨೩೪ ॥

ಆರ್ಯರಿಗೆ ಕ್ಷೇಮವನ್ನುಂಟುಮಾಡಿದವನು ಕ್ಷೇಮಂಕರಮನುವು. ಪ್ರಜೆಗಳ ಕ್ಷೇಮವನ್ನು ವಹಿಸಿದುದರಿಂದ ಕ್ಷೇಮಂಧರಮನುವೆನಿಸಿದನು. ಆರ್ಯರಿಗೆ ಕ್ಷೇತ್ರ ಮೊದಲಾದುವುಗಳನ್ನು ವಚನದಿಂದಲೇ ವಿಭಾಗಮಾಡಿಕೊಟ್ಟುದರಿಂದ ಸೀಮಂಕರನೆನಿಸಿಕೊಂಡನು. ವೃಕ್ಷಗಳನ್ನು ಎಲ್ಲೆಮಾಡಿ ವಿಭಾಗಮಾಡಿ ಕೊಟ್ಟುದರಿಂದ ಸೀಮಂಧರನೆನಿಸಿಕೊಂಡನು.

**ವಾಹೋಪದೇಶಾದ್ವಿಮಲಾದಿವಾಹಃ**
**ಪುತ್ರಾನನಾಲೋಕನಸಂಪ್ರದಾಯಾತ್ ।**
**ಚಕ್ಷುಷ್ಮದಾಖ್ಯೋ ಮನುರಗ್ರಗೋಭೂ-**
**ದ್ಯಶಸ್ವದಾಖ್ಯಸ್ತದಭೀಷ್ಟವೇನ** ॥ ೨೩೫ ॥

ಆನೆ ಕುದುರೆ ಮೊದಲಾದ ವಾಹನಗಳನ್ನೇರುವ ಉಪದೇಶ ಮಾಡಿದವನು ವಿಮಲವಾಹನಮನುವು. ಮಕ್ಕಳಮುಖವನ್ನು ನೋಡುವ ಪದ್ಧತಿಯುಂಟಾದುದರಿಂದ ಆ ಕಾಲದ ಮನುವು ಚಕ್ಷುಷ್ಮಾನೆಂಬ ಮುಖ್ಯ ಮನುವಾಗಿದ್ದನು. ಪ್ರಜೆಗಳು ಯಾವನನ್ನು ಸ್ತೋತ್ರಮಾಡಿದರೋ ಅವನು ಯಶಸ್ವಾನೆಂಬ ಮನುವಾಗಿದ್ದನು.

**ಸೋಕ್ರೀಡಯಚ್ಚಂದ್ರಮಸಾಭಿಚಂದ್ರ-**
**ಶ್ಚಂದ್ರಾಭಕಸ್ತೈಃ ಕಿಯದಪ್ಯಜೀವೀತ್ ।**
**ಮರುತ್ಸುರೋಭೂಚ್ಚಿರಜೀವನಾತ್ತೈಃ**
**ಪ್ರಸೇನಜಿದ್ಗರ್ಭಮಲಾಪಹಾರಾತ್** ॥ ೨೩೬ ॥

ಮಕ್ಕಳಿಗೆ ಚಂದ್ರನನ್ನು ತೋರಿಸಿ ಆಡಿಸುವ ಉಪದೇಶವನ್ನು ಮಾಡಿದವನು ಅಭಿಚಂದ್ರಮನುವು. ಮಕ್ಕಳೊಡನೆ ಪ್ರಜೆಗಳು ಕೆಲವುಕಾಲ ಜೀವಿಸಿದುದರಿಂದ ಆ ಕಾಲದ ಮನುವಿಗೆ ಚಂದ್ರಾಭನೆಂದು ಹೆಸರಾಯಿತು. ಪ್ರಜೆಗಳು ಮಕ್ಕಳೊಡನೆ ಬಹುಕಾಲ ಬದುಕಿದುದರಿಂದ ಆ ಕಾಲದ ಮನುವಿಗೆ ಮರುದ್ದೇವನೆಂದು ಹೆಸರಾಯಿತು. ಗರ್ಭಮಲವನ್ನು ಹೋಗಲಾಡಿಸುವ ಉಪದೇಶವನ್ನು ಮಾಡಿದವನು ಪ್ರಸೇನಜಿತ್ ಎಂಬ ಮನುವಾಗಿದ್ದನು.

**ನಾಭಿಶ್ಚ ತನ್ನಾಭಿನಿಕರ್ತನೇನ**
**ಪ್ರಜಾಸಮಾಶ್ವಾಸನಹೇತುರಾಸೀತ್ ।**
**ಸೋಜೀಜನತ್ತಂ ವೃಷಭಂ ಮಹಾತ್ಮಾ**
**ಸೋಪ್ಯಗ್ರಸೂನುಂ ಮನುಮಾದಿರಾಜಮ್** ॥ ೨೩೭ ॥

ನಾಭಿನಾಳವನ್ನು ಕತ್ತರಿಸುವ ಉಪದೇಶವನ್ನುಮಾಡಿ ಪ್ರಜೆಗಳಿಗೆ ಸಮಾಧಾನ ಪಡಿಸಿದುದರಿಂದ ನಾಭಿರಾಜನೆಂದು ಹೆಸರಾಯಿತು. ಆ ನಾಭಿರಾಜಮನುವಿನಿಂದ ವೃಷಭತೀರ್ಥಂಕರರು ಜನಿಸಿದರು. ಅವರಿಂದ ಹದಿನಾರನೆಯ ಮನುವಾದ ಭರತರಾಜನು ಜನಿಸಿದನು.

**ಇತ್ಥಂ ಯುಗಾದಿಪುರುಷೋದ್ಭವಮಾದರೇಣ**
**ತಸ್ಮಿನ್ನಿರೂಪಯತಿ ಗೌತಮಸದ್ಗಣೇಂದ್ರೇ ।**
**ಸಾಸಾಧುಸಂಸದಖಿಲಾಸಹಮಾಗಧೇನ**
**ರಾಜ್ಞಾ ಪ್ರಮೋದಮಚಿರಾತ್ಪರಮಾಜಗಾಮ** ॥ ೨೩೮ ॥

ಈ ಪ್ರಕಾರವಾಗಿ ಗೌತಮಗಣಧರರು ಬಹಳ ಪ್ರೀತಿಯಿಂದ ಯುಗದ ಆದಿಪುರುಷರ ಉತ್ಪತ್ತಿಯನ್ನು ಹೇಳುತ್ತಿರಲು ಮಗಧದೇಶದ ರಾಜನಾದ ಶ್ರೇಣಿಕನೊಡನೆ ಆ ಮುನಿಸಂಘವು ಶೀಘ್ರವಾಗಿ ಪರಮಾನಂದವನ್ನು ಹೊಂದಿತು.

**ಸಕಲಮನುನಿಯೋಗಾನ್ಕಾಲಭೇದಂ ಚ ಷೋಢಾ**
**ಪರಿಷದಿ ಜಿನಸೇನಾಚಾರ್ಯಮುಖ್ಯೋ ನಿರೂಪ್ಯ ।**
**ಪುನರಥ ಪುರುನಾಮ್ನಃ ಪುಣ್ಯಮಾದ್ಯಂ ಪುರಾಣಂ**
**ಕಥಯಿತುಮುದಿಯಾಯ ಶ್ರೇಣಿಕಾಕರ್ಣಯೇತಿ** ॥ ೨೩೯ ॥

ಆಚಾರ್ಯಮುಖ್ಯರಾದ ಗೌತಮಗಣಧರರು ಎಲ್ಲಾ ಮನುಗಳ ಕಾಲದಲ್ಲಿ ಉಂಟಾದ ವಿಷಯಗಳನ್ನೂ ಆರುಪ್ರಕಾರವಾದ ಕಾಲಭೇದವನ್ನೂ ಆ ಸಮವಸರಣಸಭೆಯಲ್ಲಿ ಹೇಳಿ, ಆಮೇಲೆ ''ಶ್ರೇಣಿಕನೇ! ವೃಷಭತೀರ್ಥಂಕರರ ಮೊದಲನೆಯ ಪುಣ್ಯಪುರಾಣವನ್ನು ಕೇಳು'' ಎಂಬುದಾಗಿ ಹೇಳಲಾರಂಭಿಸಿದರು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಪೀಠಿಕಾವರ್ಣನಂ ನಾಮ ತೃತೀಯಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ
ಮಹಾಪುರಾಣದಲ್ಲಿ ''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಪೀಠಿಕಾವರ್ಣನೆಯೆಂಬ
ಮೂರನೆಯ ಪರ್ವವು ಸಮಾಪ್ತವಾದುದು.

# ಅಥ ಚತುರ್ಥಂ ಪರ್ವ

**ಯಸ್ತ್ರಿಪರ್ವೀಮಿಮಾಂ ಪುಣ್ಯಾಮಧೀತೇ ಮತಿಮಾನ್ಸುಮಾನ್ ।**
**ಸೋಧಿಗಮ್ಯ ಪುರಾಣಾರ್ಥಮಿಹಾಮುತ್ರ ಚ ನಂದತಿ ॥ ೧ ॥**

ಈ ಪುಣ್ಯದಾಯಕವಾದ ಮೂರು ಪರ್ವಗಳನ್ನು ಅಧ್ಯಯನಮಾಡುವ ಪ್ರಾಜ್ಞನು ಪುರಾಣದ ಅರ್ಥವನ್ನು ತಿಳಿದು ಇಹಪರಲೋಕಗಳಲ್ಲಿ ಸಮೃದ್ಧ (ಸುಖಿ) ನಾಗುತ್ತಾನೆ.

**ಅಥಾದ್ಯಸ್ಯ ಪುರಾಣಸ್ಯ ಮಹತಃ ಪೀಠಿಕಾಮಿಮಾಮ್ ।**
**ಪ್ರತಿಷ್ಠಾಪ್ಯ ತತೋ ವಕ್ಷ್ಯೇ ಚರಿತಂ ವೃಷಭೇಶಿನಃ ॥ ೨ ॥**

ಮೊದಲನೆಯ ಮಹಾಪುರಾಣದ ಈ ಪೀಠಿಕೆಯನ್ನು ಸ್ಥಾಪಿಸಿ - ಹೇಳಿ, ಆಮೇಲೆ ವೃಷಭಸ್ವಾಮಿಯ ಚರಿತ್ರವನ್ನು ಹೇಳುವೆನು.

**ಲೋಕೋ ದೇಶಃ ಪುರಂ ರಾಜ್ಯಂ ತೀರ್ಥಂ ದಾನತಪೋದ್ವಯಮ್ ।**
**ಪುರಾಣೇಷ್ವಷ್ಟಧಾಖ್ಯೇಯಂ ಗತಯಃ ಫಲಮಿತ್ಯಪಿ ॥ ೩ ॥**

ಪುರಾಣಗಳಲ್ಲಿ ಲೋಕ, ದೇಶ, ಪಟ್ಟಣ, ರಾಜ್ಯ, ತೀರ್ಥ, ದಾನತಪಸ್ಸು, ಗತಿಗಳು, ಫಲ ಈ ಎಂಟು ವಿಷಯಗಳನ್ನು ಹೇಳಬೇಕು.

**ಲೋಕೋದ್ದೇಶನಿರುಕ್ತ್ಯಾದಿವರ್ಣನಂ ಯತ್ಸವಿಸ್ತರಮ್ ।**
**ಲೋಕಾಖ್ಯಾನಂ ತದಾಮ್ನಾತಂ ವಿಶೋಧಿತದಿಗಂತರಮ್ ॥ ೪ ॥**

ವಿಸ್ತಾರವಾಗಿ ಲೋಕದ ಹೆಸರನ್ನೂ ಅವಯವಾರ್ಥವನ್ನೂ ದಿಕ್ಕುಗಳ ವಿಶೇಷವರ್ಣನೆಯನ್ನೂ ವರ್ಣಿಸುವುದಕ್ಕೆ ಲೋಕಾಖ್ಯಾನವೆಂದು ಹೆಸರು.

**ತದೇಕದೇಶದೇಶಾದ್ರಿದ್ವೀಪಾಬ್ಧ್ಯಾದಿಪ್ರಪಂಚನಮ್ ।**
**ದೇಶಾಖ್ಯಾನಂ ತು ತಜ್ಜ್ಞೇಯಂ ತಜ್ಜ್ಞೈಃ ಸಜ್ಜ್ಞಾನಲೋಚನೈಃ ॥ ೫ ॥**

ಲೋಕದ ಏಕದೇಶಗಳಾದ ದೇಶ, ಪರ್ವತ, ದ್ವೀಪ, ಸಮುದ್ರ ಮೊದಲಾದುವುಗಳ ವಿಸ್ತಾರವಾದ ವರ್ಣನೆಯು ದೇಶಾಖ್ಯಾನವೆಂದು ಸಮ್ಯಗ್ಜ್ಞಾನವೆಂಬ ನೇತ್ರವುಳ್ಳ ಪ್ರಾಜ್ಞರು ತಿಳಿಯಬೇಕು.

**ಭರತಾದಿಷು ವರ್ಷೇಷು ರಾಜಧಾನೀಪ್ರರೂಪಣಮ್ ।**
**ಪುರಾಖ್ಯಾನಮಿತೀಷ್ಟಂ ತತ್ಪುರಾತನವಿದಾಂ ಮತೇ ॥ ೬ ॥**

ಭರತ ಮೊದಲಾದ ಕ್ಷೇತ್ರಗಳಲ್ಲಿರುವ ರಾಜಧಾನಿಗಳನ್ನು ವರ್ಣನೆಮಾಡುವುದು ಪುರಾಖ್ಯಾನ-ಪಟ್ಟಣದ ಕಥನವೆಂದು ಪುರಾತನಜ್ಞಾನಿಗಳ ಅಭಿಪ್ರಾಯವಾಗಿದೆ.

**ಅಮುಷ್ಮಿನ್ನಧಿದೇಶೋಽಯಂ ನಗರಂ ಚೇತಿ ತತ್ಪತೇಃ ।**
**ಆಖ್ಯಾನಂ ಯತ್ತದಾಖ್ಯಾತಂ ರಾಜ್ಯಾಖ್ಯಾನಂ ಜಿನಾಗಮೇ ॥ ೭ ॥**

ಈ ಕ್ಷೇತ್ರದಲ್ಲಿ ಇದು ದೇಶ, ಇದು ನಗರ, ಇವನು ಆ ನಗರದ ರಾಜನು ಎಂಬುದಾಗಿ ವರ್ಣಿಸುವುದಕ್ಕೆ ಜಿನಾಗಮದಲ್ಲಿ ರಾಜ್ಯಾಖ್ಯಾನವೆಂದು ಹೆಸರು.

**ಸಂಸಾರಾಬ್ಧೇರಪಾರಸ್ಯ ತರಣೇ ತೀರ್ಥಮಿಷ್ಯತೇ ।**
**ಚೇಷ್ಟಿತಂ ಜಿನನಾಥಾನಾಂ ತಸ್ಯೋಕ್ತಿಸ್ತೀರ್ಥಸಂಕಥಾ ॥ ೮ ॥**

ಅಪಾರವಾದ ಸಂಸಾರವೆಂಬ ಸಮುದ್ರವನ್ನು ದಾಟಿಸುವುದರಲ್ಲಿ ಸಮರ್ಥವಾದ ಜಿನೇಶ್ವರರ ವ್ಯಾಪಾರ - ಉಪದೇಶಕ್ಕೆ ತೀರ್ಥವೆಂದು ಹೆಸರು. ಅದನ್ನು ಹೇಳುವುದಕ್ಕೆ ತೀರ್ಥಸಂಕಥಾ - ತೀರ್ಥಾಖ್ಯಾನವೆಂದು ಹೆಸರು.

**ಯಾದೃಶಂ ಸ್ಯಾತ್ತಪೋದಾನಮನೀದೃಶಗುಣೋದಯಮ್ ।**
**ಕಥನಂ ತಾದೃಶಸ್ಯಾಸ್ಯ ತಪೋದಾನಕಥೋಚ್ಯತೇ ॥ ೯ ॥**

ಉಪಮಾತೀತವಾದ ಗುಣಗಳುಳ್ಳ ತಪಸ್ಸನ್ನೂ ದಾನವನ್ನೂ ವರ್ಣಿಸುವುದಕ್ಕೆ ತಪೋದಾನಕಥೆಯೆಂದು ಹೆಸರು.

**ನರಕಾದಿಪ್ರಭೇದೇನ ಚತಸ್ರೋ ಗತಯೋ ಮತಾಃ ।**
**ತಾಸಾಂ ಸಂಕೀರ್ತನಂ ಯದ್ಧಿ ಗತ್ಯಾಖ್ಯಾನಂ ತದಿಷ್ಯತೇ ॥ ೧೦ ॥**

ನರಕಾದಿಭೇದದಿಂದ ಗತಿಗಳು ನಾಲ್ಕು. ಆ ಗತಿಗಳ ವರ್ಣನೆಗೆ ಗತ್ಯಾಖ್ಯಾನವೆಂದು ಹೆಸರು.

**ಪುಣ್ಯಪಾಪಫಲಾವಾಪ್ತಿರ್ಜಂತೂನಾಂ ಯಾದೃಶೀ ಭವೇತ್ ।**
**ತದಾಖ್ಯಾನಂ ಫಲಾಖ್ಯಾನಂ ತಚ್ಚ ನಿಃಶ್ರೇಯಸಾವಧಿ ॥ ೧೧ ॥**

ಪ್ರಾಣಿಗಳಿಗುಂಟಾಗುವ ಪುಣ್ಯಪಾಪಗಳನ್ನು ವರ್ಣಿಸುವುದಕ್ಕೆ ಫಲಾಖ್ಯಾನವೆಂದು ಹೆಸರು. ಈ ಫಲಾಖ್ಯಾನವು ಮೋಕ್ಷಪ್ರಾಪ್ತಿಯಾಗುವವರೆಗೂ ಇರುತ್ತದೆ.

**ಲೋಕಾಖ್ಯಾನಂ ಯಥೋದ್ದೇಶಮಿಹ ತಾವತ್ಪ್ರತನ್ಯತೇ ।**
**ಯಥಾವಸರಮನ್ಯೇಷಾಂ ಪ್ರಪಂಚೋ ವರ್ಣಯಿಷ್ಯತೇ ॥ ೧೨ ॥**

ಹಿಂದೆ ಹೇಳಿದ ಎಂಟು ವಿಷಯಗಳಲ್ಲಿ ಉದ್ದೇಶಾನುಸಾರವಾಗಿ ಮೊಟ್ಟ ಮೊದಲು ಲೋಕಾಖ್ಯಾನವನ್ನು ವರ್ಣನೆಮಾಡುತ್ತೇವೆ. ಉಳಿದ ಭೇದಗಳನ್ನು ಸಮಯಾನುಸಾರವಾಗಿ ವರ್ಣಿಸುತ್ತೇವೆ.

**ಲೋಕ್ಯಂತೇಽಸ್ಮಿನ್ನಿಮೀಕ್ಷ್ಯಂತೇ ಜೀವಾದ್ಯರ್ಥಾಃ ಸಪರ್ಯಯಾಃ ।**
**ಇತಿ ಲೋಕಸ್ಯ ಲೋಕತ್ವಂ ನಿರಾಹುಸ್ತತ್ತ್ವದರ್ಶಿನಃ ॥ ೧೩ ॥**

ಜೀವ, ಅಜೀವ ಮೊದಲಾದ ಪದಾರ್ಥಗಳು ಪರ್ಯಾಯಸಹಿತಗಳಾಗಿ ಯಾವುದರಲ್ಲಿ ಕಾಣಲ್ಪಡುತ್ತವೆಯೋ ಅದು ಲೋಕವೆಂದು ತತ್ತ್ವಜ್ಞಾನಿಗಳು ಹೇಳುತ್ತಾರೆ.

**[1]ಕ್ಷೀಯಂತಿ ನಿವಸಂತ್ಯಸ್ಮಿನ್ಜೀವಾದಿದ್ರವ್ಯವಿಸ್ತರಾಃ ।**
**ಇತಿ ಕ್ಷೇತ್ರಂ ನಿರಾಹುಸ್ತಂ ಲೋಕಮನ್ವರ್ಥಸಂಜ್ಞಯಾ ॥ ೧೪ ॥**

ಕ್ಷೀಧಾತುವಿನಿಂದ ಕ್ಷೇತ್ರವೆಂಬ ಶಬ್ದವುಂಟಾಗಿದೆ. ಜೀವ ಮೊದಲಾದ ದ್ರವ್ಯಗಳು ಈ ಲೋಕದಲ್ಲಿರುವುದರಿಂದ ಲೋಕವನ್ನು ಸಾರ್ಥಕವಾದ ಹೆಸರಿನಿಂದ ಕ್ಷೇತ್ರವನ್ನಾಗಿಯೂ ಹೇಳುತ್ತಾರೆ.

**ಲೋಕೋ ಹ್ಯಕೃತ್ರಿಮೋ ಜ್ಞೇಯೋ ಜೀವಾದ್ಯರ್ಥಾವಗಾಹಕಃ ।**
**ನಿತ್ಯಃ ಸ್ವಭಾವನಿರ್ವೃತ್ತಃ ಸೋಽನಂತಾಕಾಶಮಧ್ಯಗಃ ॥ ೧೫ ॥**

ಜೀವಾದಿಪದಾರ್ಥಗಳಿಗೆ ಆಶ್ರಯವೂ ಅಕೃತ್ರಿಮವೂ ನಿತ್ಯವೂ ಸ್ವಭಾವದಿಂದಿರುವುದೂ ಆದ ಲೋಕವು ಅನಂತಾಕಾಶದ ಮಧ್ಯದಲ್ಲಿದೆ.

**ಸ್ರಷ್ಟಾಸ್ಯ ಜಗತಃ ಕಶ್ಚಿದಸ್ತೀತ್ಯೇಕೇ ಜಗುರ್ಜಡಾಃ ।**
**ತದ್ದುರ್ನಯನಿರಾಸಾರ್ಥಂ ಸೃಷ್ಟಿವಾದಃ ಪರೀಕ್ಷ್ಯತೇ ॥ ೧೬ ॥**

೧ ಕ್ಷೀ ನಿವಾಸಗತ್ಯೋಃ.

ಈ ಲೋಕವನ್ನು ಸೃಷ್ಟಿಸುವವನೊಬ್ಬನಿದ್ದಾನೆಂದು ಕೆಲವು ಮಂದಮತಿಗಳು ಹೇಳುತ್ತಾರೆ. ಆ ತಪ್ಪುತಿಳುವಳಿಕೆಯನ್ನು ದೂರಮಾಡುವುದಕ್ಕೋಸ್ಕರ ಸೃಷ್ಟಿವಾದವನ್ನು ಪರೀಕ್ಷಿಸುತ್ತೇವೆ.

**ಸ್ರಷ್ಟಾ ಸರ್ಗಬಹಿರ್ಭೂತಃ ಕ್ವಸ್ಥಃ ಸೃಜತಿ ತಜ್ಜಗತ್ ।**
**ನಿರಾಧಾರಶ್ಚ ಕೂಟಸ್ಥಃ ಸೃಷ್ಟ್ವೈನತ್ ಕ್ವ ನಿವೇಶಯೇತ್ ॥ ೧೭ ॥**

ಆ ಸೃಷ್ಟಿಯಿಂದ ಬಹಿರ್ಭೂತನಾದ ಜಗತ್ಕರ್ತನು ಎಲ್ಲಿದ್ದುಕೊಂಡು ಆ ಲೋಕವನ್ನು ಸೃಷ್ಟಿಸುತ್ತಾನೆ ? ನಿರಾಧಾರನೂ ಯಾವ ವಿಕಾರವನ್ನೂ ಹೊಂದದೆ ನಿತ್ಯನೂ ಆದ ಸೃಷ್ಟಿಕರ್ತನು ಈ ಜಗತ್ತನ್ನು ರಚಿಸಿ ಎಲ್ಲಿಡುವನು ?

**ನೈಕೋ ವಿಶ್ವಾತ್ಮಕಸ್ಯಾಸ್ಯ ಜಗತೋ ಘಟನೇ ಪಟುಃ ।**
**ವಿತನೋಶ್ಚ ನ ತನ್ವಾದಿಮೂರ್ತಮುತ್ಪತ್ತುಮರ್ಹತಿ ॥ ೧೮ ॥**

ಸಮಸ್ತಚರಾಚರಪದಾರ್ಥಗಳನ್ನೊಳಗೊಂಡಿರುವ ಈ ಪ್ರಪಂಚವನ್ನು ರಚಿಸುವುದರಲ್ಲಿ ಸಮರ್ಥನಾದವನೊಬ್ಬನಿಲ್ಲ. ಶರೀರರಹಿತನಾದ ಈಶ್ವರನಿಂದ ಮೂರ್ತಪದಾರ್ಥಗಳ ಉತ್ಪತ್ತಿಯಾಗುವುದು ಅಸಂಭವವು. ಲೋಕದಲ್ಲಿ ಶರೀರಸಹಿತನಾದವನೇ ಮೂರ್ತಪದಾರ್ಥಗಳನ್ನು ಮಾಡುವುದಕ್ಕೆ ಸಮರ್ಥನೆಂದರ್ಥವು.

**ಕಥಂ ಚ ಸ ಸೃಜೇಲ್ಲೋಕಂ ವಿನಾನ್ಯೈಃ ಕರಣಾದಿಭಿಃ ।**
**ತಾನಿ ಸೃಷ್ಟ್ವಾ ಸೃಜೇಲ್ಲೋಕಮಿತಿ ಚೇದನವಸ್ಥಿತಿಃ ॥ ೧೯ ॥**

ಆ ಸೃಷ್ಟಿಕರ್ತನು ಅತ್ಯಂತಸಾಧಕಗಳಾದ ಬೇರೆ ಸಲಕರಣಗಳಿಲ್ಲದೆ ಪ್ರಪಂಚವನ್ನು ಹೇಗೆ ಸೃಷ್ಟಿಸುವನು ? ಮೊದಲು ಆ ಸಲಕರಣಗಳನ್ನು ಸೃಷ್ಟಿಸಿ ಆಮೇಲೆ ಲೋಕವನ್ನು ಸೃಷ್ಟಿಸುತ್ತಾನೆಂದು ಹೇಳುವುದಾದರೆ, ಆ ಸಲಕರಣಗಳನ್ನು ಯಾವ ಸಲಕರಣಗಳಿಂದ ಸೃಷ್ಟಿಸಿದನು ? ಬೇರೆ ಸಲಕರಣಗಳಿಂದ ಸೃಷ್ಟಿಸುತ್ತಾನೆಂದು ಹೇಳುವಪಕ್ಷದಲ್ಲಿ ಆ ಬೇರೆ ಸಲಕರಣಗಳನ್ನೂ ಹೇಗೆ ಸೃಷ್ಟಿಸಿದನು ? ಹೀಗೆಯೇ ಪ್ರಶ್ನೆಮಾಡುತ್ತ ಹೋದರೆ ಒಂದುಸಲ ಹೇಳಿದ ಉತ್ತರವನ್ನೇ ಪುನಃ ಪುನಃ ಹೇಳಬೇಕಾದುದರಿಂದ ಯಾವ ವ್ಯವಸ್ಥೆಯೂ ಆಗದೆ ಅನವಸ್ಥಾದೋಷವು ಬರುವುದು.

**ತೇಷಾಂ ಸ್ವಭಾವಸಿದ್ಧತ್ವೇ ಲೋಕೇಪ್ಯೇತತ್ಪಸಜ್ಯತೇ ।**
**ಕಿಂ ಚ ನಿರ್ಮಾತೃವದ್ವಿಶ್ವಂ ಸ್ವತಃ ಸಿದ್ಧಿಮವಾಪ್ನುಯಾತ್ ॥ ೨೦ ॥**

ಆ ಸಲಕರಣಗಳು ಸ್ವಭಾವದಿಂದಲೇ ಸಿದ್ಧವಾಗಿದ್ದುವೆಂದು ಹೇಳುವಪಕ್ಷದಲ್ಲಿ ಹಾಗೆ ಲೋಕವೂ ಸ್ವಭಾವದಿಂದ ಸಿದ್ಧವಾಗಿದ್ದಿತೆಂದು ಸಿದ್ಧವಾಗುತ್ತದೆ. ಮತ್ತು ಸೃಷ್ಟಿಕರ್ತನು ಹೇಗೆ ಅನಾದಿಕಾಲದಿಂದಲೂ ಸ್ವಭಾವದಿಂದ ಸಿದ್ಧನಾಗಿದ್ದಾನೆಂದು ಹೇಳುತ್ತೀರೋ ಹಾಗೆಯೇ ಪ್ರಪಂಚವೂ ಅನಾದಿಕಾಲದಿಂದಲೂ ಸ್ವಭಾವದಿಂದ ಸಿದ್ಧವಾಗಿರುವುದು. ಇದಕ್ಕೊಬ್ಬ ಸೃಷ್ಟಿಕರ್ತನನ್ನೇಕೆ ಕಲ್ಪನೆಮಾಡಬೇಕು ?

**ಸೃಜೇದ್ವಿನಾಪಿ ಸಾಮಗ್ರ್ಯಾ ಸ್ವತಂತ್ರಃ ಪ್ರಭುರಿಚ್ಛಯಾ ।**
**ಇತೀಚ್ಛಾಮಾತ್ರಮೇವೈತತ್ಕಃ ಶ್ರದ್ದಧ್ಯಾದಯುಕ್ತಿಕಮ್ ॥ ೨೧ ॥**

ಸಾಮಗ್ರಿಗಳಿಲ್ಲದಿದ್ದರೂ ಸ್ವತಂತ್ರನಾದ ಈಶ್ವರನು ತನ್ನ ಇಚ್ಛಾಮಾತ್ರದಿಂದ ಪ್ರಪಂಚವನ್ನು ಸೃಷ್ಟಿಸುತ್ತಾನೆಂದು ಹೇಳುವಪಕ್ಷದಲ್ಲಿ ಈ ಯುಕ್ತಿಶೂನ್ಯವಾದ ಇಚ್ಛಾಮಾತ್ರ ಕಥನವನ್ನು ಯಾರು ನಂಬುವರು ? ಈಶ್ವರೇಚ್ಛೆಯು ನಿತ್ಯವೋ ಅನಿತ್ಯವೋ ? ನಿತ್ಯವಾಗುವ ಪಕ್ಷದಲ್ಲಿ ಯಾವಾಗಲೂ ಸೃಷ್ಟಿಯಾಗುತ್ತಿರಬೇಕು. ಪ್ರಲಯವೂ ಆಗಬಾರದು. ಮಧ್ಯದಲ್ಲಿ ಪ್ರಲಯವಾದರೆ ನಿತ್ಯವಾದ ಇಚ್ಛೆಗೆ ಭಂಗಬಂದಂತಾಯಿತು. ಭಂಗವಾಗದಿರುವ ಪಕ್ಷದಲ್ಲಿ ಸೃಷ್ಟಿಪ್ರಲಯಗಳೆರಡೂ ಒಂದೇಕಾಲದಲ್ಲಿ ಆಗಬೇಕಾದೀತು. ಇತ್ಥಂಚ ಸ್ವಭಾವಸಂಕರದೋಷಪ್ರಸಂಗವು ಬರುವುದು. ಈಶ್ವರೇಚ್ಛೆಯು ಅನಿತ್ಯವಾಗುವ ಪಕ್ಷದಲ್ಲಿ ಅದು ಉಂಟಾಗುವುದಕ್ಕೆ ಕಾರಣವಾವುದೆಂದು ಹೇಳಬೇಕು. ಈಶ್ವರೇಚ್ಛೆಯು ಈಶ್ವರನಿಂದ ಭಿನ್ನವಾಗಿದೆಯೋ ? ಅಭಿನ್ನವಾಗಿದೆಯೋ ? ಭಿನ್ನವಾಗಿರುವ ಪಕ್ಷದಲ್ಲಿ ಈಶ್ವರನದೇ ಇಚ್ಛೆಯೆಂದು ಹೇಳಲಾಗುವುದಿಲ್ಲ. ಆಕಾಶದ್ದೇತಕ್ಕಾಗಬಾರದು ? ಭಿನ್ನತ್ವವು ಎರಡರಲ್ಲಿಯೂ ಸಮಾನವಾಗಿದೆ. ಈಶ್ವರನಿಂದ ಇಚ್ಛೆಯು ಅಭಿನ್ನವಾಗಿರುವ ಪಕ್ಷದಲ್ಲಿ ಈಶ್ವರನಿಗೂ ಅನಿತ್ಯತ್ವಪ್ರಸಂಗವು ಬರುವುದು. ಅಶರೀರನು ಇಚ್ಛಾಮಾತ್ರದಿಂದ ಕಾರ್ಯವನ್ನು ಮಾಡುತ್ತಾನೆಂಬುದಕ್ಕೆ ಯಾವ ದೃಷ್ಟಾಂತವೂ ಇಲ್ಲ. ಆದುದರಿಂದ ಇಚ್ಛಾಮಾತ್ರದಿಂದ ಪ್ರಪಂಚವನ್ನು ಸೃಷ್ಟಿಸುವುದು ಅಸಂಭವವು.

**ಕೃತಾರ್ಥಸ್ಯ ವಿನಿರ್ಮಿತ್ಸಾ ಕಥಮೇವಾಸ್ಯ ಯುಜ್ಯತೇ ।**
**ಅಕೃತಾರ್ಥೋऽಪಿ ನ ಸ್ರಷ್ಟುಂ ವಿಶ್ವಮೀಷ್ಟೇ ಕುಲಾಲವತ್ ॥ ೨೨ ॥**

ಕೃತಕೃತ್ಯನಾದ ಈಶ್ವರನಿಗೆ ಜಗತ್ತನ್ನು ನಿರ್ಮಿಸಬೇಕೆಂಬ ಇಚ್ಛೆಯು ಹೇಗೆ ಸಂಭವಿಸುತ್ತದೆ ? ಕೃತಕೃತ್ಯನಿಗೆ ಯಾವ ಇಚ್ಛೆಯೂ ಉಂಟಾಗುವುದಿಲ್ಲ. ಕೃತಾರ್ಥನಲ್ಲದಿರುವ ಪಕ್ಷದಲ್ಲಿ, ಕುಂಬಾರನಂತೆ, ಜಗತ್ತನ್ನು ನಿರ್ಮಿಸುವುದಕ್ಕೆ ಸಮರ್ಥನಾಗುವುದಿಲ್ಲ. ಆದುದರಿಂದಲೇ ಸರ್ವಶಕ್ತಿಮಂತನೂ ಅಲ್ಲ.

**ಅಮೂರ್ತೋ ನಿಷ್ಕ್ರಿಯೋ ವ್ಯಾಪೀ ಕಥಮೇಷ ಜಗತ್ಸೃಜೇತ್ ।**
**ನ ಸಿಸೃಕ್ಷಾಪಿ ತಸ್ಯಾಸ್ತಿ ವಿಕ್ರಿಯಾರಹಿತಾತ್ಮನಃ ॥ ೨೩ ॥**

ಅಮೂರ್ತನೂ ಕ್ರಿಯಾರಹಿತನೂ ವ್ಯಾಪಕನೂ ಆದ ಈಶ್ವರನು ಜಗತ್ತನ್ನು ಹೇಗೆ ಸೃಷ್ಟಿಸುವನು ? ವಿಕಾರರಹಿತನಾದ ಈಶ್ವರನಿಗೆ ಪ್ರಪಂಚವನ್ನು ಸೃಷ್ಟಿಸಬೇಕೆಂಬ ಇಚ್ಛೆಯುಂಟಾಗುವುದೂ ಅಸಂಗತ. ಇಚ್ಛೆಯುಂಟಾದರೆ ಈಶ್ವರನಲ್ಲಿ ವಿಕಾರವು ಸಿದ್ಧವಾಗುವುದು.

**ತಥಾಪ್ಯಸ್ಯ ಜಗತ್ಸರ್ಗೇ ಫಲಂ ಕಿಮಿತಿ ಮೃಗ್ಯತಾಮ್ ।**
**ನಿಷ್ಠಿತಾರ್ಥಸ್ಯ ಧರ್ಮಾದಿಪುರುಷಾರ್ಥೇಷ್ವನರ್ಥಿನಃ ॥ ೨೪ ॥**

"ತುಷ್ಯತುದುರ್ಜನಃ" ಎಂಬೀ ನ್ಯಾಯದಿಂದ ಈಶ್ವರನು ಜಗತ್ತನ್ನು ಸೃಷ್ಟಿಸುತ್ತಾನೆಂದು ಒಪ್ಪಿಕೊಂಡರೂ ಹಾಗೆ ಪ್ರಪಂಚವನ್ನು ಸೃಷ್ಟಿಸುವುದರಿಂದ ಅವನಿಗಾಗುವ ಪ್ರಯೋಜನವೇನೆಂದು ವಿಚಾರಮಾಡಬೇಕು. ಲೋಕದಲ್ಲಿ ಮೂರ್ಖನು ಕೂಡ ಪ್ರಯೋಜನವಿಲ್ಲದೆ ಯಾವ ಕಾರ್ಯದಲ್ಲಿಯೂ ಪ್ರವರ್ತಿಸುವುದಿಲ್ಲ. ಈಶ್ವರನಿಗೆ ಪ್ರಪಂಚವನ್ನು ಸೃಷ್ಟಿಸುವುದರಿಂದ ಪ್ರಯೋಜನವಿದೆಯೆಂದು ಹೇಳುವುದಕ್ಕೂ ಆಗುವುದಿಲ್ಲ. ಅವನು ಕೃತಕೃತ್ಯನಾಗಿರುವುದರಿಂದ ಧರ್ಮಾರ್ಥಕಾಮಮೋಕ್ಷಪುರುಷಾರ್ಥಗಳಲ್ಲಿ ಅವನಿಗಿಚ್ಛೆಯಿಲ್ಲ. ಹಾಗೆ ಇಚ್ಛೆಯೂ ಪ್ರಯೋಜನವೂ ಇಲ್ಲದೆ ಸೃಷ್ಟಿಕಾರ್ಯದಲ್ಲಿ ಏತಕ್ಕೆ ಪ್ರವರ್ತಿಸುತ್ತಾನೆ ?

**ಸ್ವಭಾವತೋ ವಿನೈವಾರ್ಥಾನ್ಸೃಜತೋऽನರ್ಥಸಂಗತಿಃ ।**
**ಕ್ರೀಡೇಯಂ ಕಾಪಿ ಚೇದಸ್ಯ ದುರಂತಾ ಮೋಹಸಂತತಿಃ ॥ ೨೫ ॥**

ಪ್ರಯೋಜನವಿಲ್ಲದೆಯೇ ಸೃಷ್ಟಿಸುವುದು ಈಶ್ವರನ ಸ್ವಭಾವವೆಂದು ಹೇಳುವ ಪಕ್ಷದಲ್ಲಿ, ಈಶ್ವರನು ಪ್ರಪಂಚವನ್ನು ನಿಷ್ಪ್ರಯೋಜನವಾಗಿ ಸೃಷ್ಟಿಸುತ್ತಾನೆಂದು ಹೇಳಿದಂತಾಯಿತು. ಇದು ಅಸಂಗತವಾದ ಮಾತಾಗಿದೆ. ಜಗತ್ತನ್ನು ಸೃಷ್ಟಿಸುವುದು ಈಶ್ವರನ ಒಂದು ಲೀಲೆಯೆಂದು ಹೇಳುವಪಕ್ಷದಲ್ಲಿ ಈಶ್ವರನು ಬಾಲಕರಂತೆ ಅಜ್ಞಾನಿಯೆಂದು ಹೇಳಬೇಕಾಗುವುದು. ಅಜ್ಞಾನಿಬಾಲಕರು ಆಡುವುದಕ್ಕೆ ಇಚ್ಛೆಪಡುತ್ತಾರೆ. ಈಶ್ವರನೂ ಅವರಂತೆಯೇ ಆದನು.

**ಕರ್ಮಾಪೇಕ್ಷಃ ಶರೀರಾದಿ ದೇಹಿನಾಂ ಘಟಯೇದ್ಯದಿ ।**
**ನನ್ವೇವಮೀಶ್ವರೋ ನ ಸ್ಯಾತ್ಪಾರತಂತ್ರ್ಯಾತ್ಕುವಿಂದವತ್ ॥ ೨೬ ॥**

ಈಶ್ವರನು ಪ್ರಾಣಿಗಳ ಕರ್ಮವನ್ನನುಸರಿಸಿ ಶರೀರ ಮೊದಲಾದ ಕಾರ್ಯಗಳನ್ನು ಮಾಡುತ್ತಾನೆಂದು ಹೇಳುವ ಪಕ್ಷದಲ್ಲಿ ಅವನು, ಬಟ್ಟೆಯನ್ನು ಮಾಡುವ ಮಗ್ಗದವನಂತೆ, ಪರತಂತ್ರನಾದುದರಿಂದ ಈಶ್ವರನಾಗಲಾರನು. ಮಗ್ಗದವನು ತಂತು ಮೊದಲಾದ ಸಾಮಗ್ರಿಗಳು ಸಿಕ್ಕಿದರೆ ಪಟಕಾರ್ಯವನ್ನು ಮಾಡುತ್ತಾನೆ, ಸಿಕ್ಕದಿದ್ದರೆ ಕಾರ್ಯವನ್ನು ಮಾಡಲಾರನು. ಅದರಂತೆ ಈಶ್ವರನೂ ಪರತಂತ್ರನಾದನು. ಸರ್ವಶಕ್ತನಾಗಲಿಲ್ಲ.

**ನಿಮಿತ್ತಮಾತ್ರಮಿಷ್ಟಶ್ಚೇತ್ಕಾರ್ಯೇ ಕರ್ಮಾದಿಹೇತುಕೇ ।**
**ಸಿದ್ಧೋಪಸ್ಥಾಯ್ಯಸೌ ಹಂತ ಪೋಷ್ಯತೇ ಕಿಮಕಾರಣಮ್ ॥ ೨೭ ॥**

ಶರೀರ ಮೊದಲಾದ ಕಾರ್ಯಗಳಲ್ಲಿ ಪ್ರಾಣಿಗಳ ಕರ್ಮವೇ ಕಾರಣವು, ಈಶ್ವರನು ನಿಮಿತ್ತಮಾತ್ರಕರ್ತನೆಂದು ಹೇಳುವುದಾದರೆ ಕರ್ಮದಿಂದಲೇ ಸಿದ್ಧವಾಗಿರುವ ಕಾರ್ಯವನ್ನು ಈಶ್ವರನು ಮಾಡುತ್ತಾನೆಂದು ಹೇಳಿದಂತಾಯಿತು. ಹಾಗೆ ಸ್ವಯಂ ಸಿದ್ಧವಾಗಿರುವ ಕಾರ್ಯಕ್ಕೆ ನಿಷ್ಕಾರಣವಾಗಿ ಈಶ್ವರನನ್ನೇತಕ್ಕೆ ತಂದೊಡ್ಡಬೇಕು ?

**ವತ್ಸಲಃ ಪ್ರಾಣಿನಾಮೇಕಃ ಸೃಜನ್ನನುಜಿಘೃಕ್ಷಯಾ ।**
**ನನು ಸೌಖ್ಯಮಯೀಂ ಸೃಷ್ಟಿಂ ವಿದಧ್ಯಾದನುಪಪ್ಲುತಾಮ್ ॥ ೨೮ ॥**

ಪ್ರಾಣಿಗಳ ಮೇಲೆ ವಾತ್ಸಲ್ಯವುಳ್ಳವನಾಗಿ ಈಶ್ವರನು ಅವುಗಳನ್ನು ಅನುಗ್ರಹಿಸಬೇಕೆಂಬ ಇಚ್ಛೆಯಿಂದ ಜಗತ್ತನ್ನು ಸೃಷ್ಟಿಸುತ್ತಾನೆಂದು ಹೇಳುವ ಪಕ್ಷದಲ್ಲಿ, ದಯಾಳುವಾದ ಈಶ್ವರನು ನಿರ್ಬಾಧವೂ ಸುಖಮಯವೂ ಆದ ಸೃಷ್ಟಿಯನ್ನು ಮಾಡಬೇಕಾಗಿದ್ದಿತು. ಸಂಸಾರದಲ್ಲಿ ಒಬ್ಬನನ್ನು ಸುಖಿಯನ್ನಾಗಿಯೂ ಒಬ್ಬನನ್ನು ದುಃಖಿಯನ್ನಾಗಿಯೂ ಮಾಡಬಾರದಾಗಿದ್ದಿತು. ಜೀವನು ತಾನು ಮಾಡಿದ ಪಾಪಕ್ಕನುಸಾರವಾಗಿ ದುಃಖವನ್ನನುಭವಿಸುತ್ತಾನೆಂದು ಹೇಳುವುದಾದರೆ ಸರ್ವಶಕ್ತನಾದ ಈಶ್ವರನು ಪಾಪವನ್ನು ಅಥವಾ ದುಃಖವನ್ನು ಹೋಗಲಾಡಿಸಿ ಸುಖವನ್ನೇ ಉಂಟುಮಾಡಬೇಕಾಗಿದ್ದಿತು. ಅಂತಹ ಪಾಪವನ್ನು ಮಾಡುವ ಬುದ್ಧಿಯನ್ನೂ ಉಂಟುಮಾಡಬಾರದಾಗಿದ್ದಿತು.

**ಸೃಷ್ಟಿಪ್ರಯಾಸವೈಯರ್ಥ್ಯಂ ಸರ್ಜನೇ ಜಗತಃ ಸತಃ ।**
**ನಾತ್ಯಂತಮಸತಃ ಸರ್ಗೋ ಯುಕ್ತೋ ವ್ಯೋಮಾರವಿಂದವತ್ ॥ ೨೯ ॥**

ಈಶ್ವರನು ಸೃಷ್ಟಿಮಾಡುವುದಕ್ಕಿಂತ ಮೊದಲು ಲೋಕವು ಇದ್ದಿತೋ ? ಇಲ್ಲವೋ ? ಇದ್ದಿರುವ ಪಕ್ಷದಲ್ಲಿ ಈಶ್ವರನ ಸೃಷ್ಟಿ ಪ್ರಯಾಸವು ವ್ಯರ್ಥವಾಯಿತು. ಇದ್ದುದನ್ನೇ ಮಾಡುವುದರಿಂದ ಪ್ರಯೋಜನವೇನು ? ಸೃಷ್ಟಿಮಾಡುವ ಮೊದಲು ಲೋಕವು ಇಲ್ಲದಿದ್ದಪಕ್ಷದಲ್ಲಿ, ಆಕಾಶಪುಷ್ಪದಂತೆ, ಇಲ್ಲದಿದ್ದುದನ್ನು ಮಾಡುವುದೂ ಅಸಂಭವವು. ಇಲ್ಲದಿರುವ ಆಕಾಶಪುಷ್ಪವನ್ನೂ ಕತ್ತೆಯ ಕೋಡನ್ನೂ ಯಾರೂ ಮಾಡಲಾಗುವುದಿಲ್ಲ. ಅದರಂತೆ ಇಲ್ಲದಿರುವ ಲೋಕವನ್ನೂ ಈಶ್ವರನು ಮಾಡಲಾರನು.

**ನೋದಾಸೀನಃ ಸೃಜೇನ್ಮುಕ್ತಃ ಸಂಸಾರೀ ನಾಪ್ಯನೀಶ್ವರಃ ।**
**ಸೃಷ್ಟಿವಾದಾವತಾರೋಽಯಂ ತತಶ್ಚ ನ ಕುತಶ್ಚ ನ ॥ ೩೦ ॥**

ಸಕಲಕರ್ಮಕಲಂಕವಿಮುಕ್ತನಾದ ಮುಕ್ತಾತ್ಮನು ಲೋಕವನ್ನು ಸೃಷ್ಟಿಸುತ್ತಾನೆಂದು ಹೇಳುವುದೂ ಯುಕ್ತವಾದುದಲ್ಲ. ಕೃತಕೃತ್ಯನಾಗಿ ಉದಾಸೀನನಾದ ಆ ಮುಕ್ತಾತ್ಮನಿಗೆ ಲೋಕವನ್ನು ಸೃಷ್ಟಿಸಬೇಕೆಂಬ ಇಚ್ಛೆ ಹುಟ್ಟುವುದೇ ಅಸಂಭವವು. ಸಂಸಾರಿಜೀವನೂ ವಿಚಿತ್ರವಾದ ಲೋಕವನ್ನು ಸೃಷ್ಟಿಸುವುದು ಅಸಂಗತವು. ಸಂಸಾರಿಜೀವನಿಗೆ ಅಂತಹ ಶಕ್ತಿಯೇ ಇಲ್ಲ. ಆದುದರಿಂದ ಈ ಸೃಷ್ಟಿವಾದಾವತಾರವು ಯಾವ ವಿಧದಿಂದ ವಿಚಾರಮಾಡಿದರೂ ಸಿದ್ಧವಾಗುವುದಿಲ್ಲ. ಲೋಕವನ್ನು ಮುಕ್ತನಿಂದಲೂ ಸೃಷ್ಟಿಸುವುದಕ್ಕಾಗುವುದಿಲ್ಲ, ಸಂಸಾರಿಯಿಂದಲೂ ಆಗುವುದಿಲ್ಲ, ಆದುದರಿಂದ ಲೋಕವು ಸ್ವಭಾವದಿಂದಲೇ ಇರತಕ್ಕುದಾಗಿದೆ.

**ಮಹಾನಧರ್ಮಯೋಗೋಽಸ್ಯ ಸೃಷ್ಟ್ವಾ ಸಂಹರತಃ ಪ್ರಜಾಃ ।**
**ದುಷ್ಟನಿಗ್ರಹಬುದ್ಧ್ಯಾ ಚೇದ್ವರಂ ದೈತ್ಯಾದ್ಯಸರ್ಜನಮ್ ॥ ೩೧ ॥**

ಈಶ್ವರನು ಪ್ರಜೆಗಳನ್ನೆಲ್ಲ ಸೃಷ್ಟಿಸಿ ಪುನಃ ಪ್ರಲಯಕಾಲದಲ್ಲಿ ನಾಶಮಾಡುವುದು ದೊಡ್ಡ ತಪ್ಪು. ಲೋಕದಲ್ಲಿ ಮಕ್ಕಳನ್ನು ಹುಟ್ಟಿಸಿ ಕೊಲ್ಲುವವನು ಬಹಳ ಪಾಪಿಯೆನಿಸಿಕೊಳ್ಳುತ್ತಾನೆ. ಮಕ್ಕಳಂತಿರುವ ಪ್ರಜೆಗಳನ್ನು ಸಂಹಾರಮಾಡುವುದು ಈಶ್ವರನಿಗೆ ಮಹಾಪಾಪಕ್ಕೆ ಕಾರಣವು. ದುಷ್ಟರನ್ನು ನಿಗ್ರಹಿಸುವುದಕ್ಕೋಸ್ಕರ ಸಂಹಾರಮಾಡುತ್ತಾನೆಂದು ಹೇಳುವಪಕ್ಷದಲ್ಲಿ ದೈತ್ಯರೇ ಮೊದಲಾದ ಅಂತಹ ದುಷ್ಟರನ್ನು ಸೃಷ್ಟಿಸಲೇಬಾರದಾಗಿದ್ದಿತು. ದುಷ್ಟರನ್ನು ಸೃಷ್ಟಿಸಿ ಪುನಃ ಸಂಹಾರ ಮಾಡುವಾಗ ಅವರೊಡನೆ ಶಿಷ್ಟರನ್ನು ಸಂಹರಿಸಿ ಪಾಪ ಭಾಗಿಯಾಗುವುದಕ್ಕಿಂತಲೂ ಆ ದುಷ್ಟರನ್ನು ಸೃಷ್ಟಿಸದಿರುತ್ತಿದ್ದರೆ ಚೆನ್ನಾಗಿರುತ್ತಿರಲಿಲ್ಲವೇ ? ಸರ್ವಜ್ಞನಾದ ಈಶ್ವರನಿಗೆ ಮುಂದಕ್ಕೆ ಯಾರು ದುಷ್ಟರಾಗುತ್ತಾರೆಂದು ತಿಳಿದಿರಲಿಲ್ಲವೇ ?

**ಬುದ್ಧಿಮದ್ಧೇತುಸಾನ್ನಿಧ್ಯೇ ತನ್ವಾದ್ಯುತ್ಪತ್ತುಮರ್ಹತಿ ।**
**ವಿಶಿಷ್ಟಸನ್ನಿವೇಶಾದಿಪ್ರತೀತೇರ್ನಗರಾದಿವತ್ ॥ ೩೨ ॥**

"ಪಟ್ಟಣ, ಮನೆ ಮೊದಲಾದ ಪದಾರ್ಥಗಳಲ್ಲಿ ವಿಶೇಷವಾದ ರಚನೆಯು ಕಾಣುವುದರಿಂದ ಆ ಪದಾರ್ಥಗಳನ್ನು ಮಾಡುವ ಬುದ್ಧಿಮಾನ್ ಪುರುಷನು ಇದ್ದಾನೆಂದು ಗೊತ್ತಾಗುತ್ತದೆ. ಅದರಂತೆ ಶರೀರ, ಮರ, ಪ್ರಪಂಚ ಮೊದಲಾದ ಪದಾರ್ಥಗಳಲ್ಲಿಯೂ ವಿಶೇಷರಚನೆಯು ಕಾಣುವುದರಿಂದ ಈ ಪದಾರ್ಥಗಳನ್ನು ಮಾಡುವವನೊಬ್ಬ ಬುದ್ಧಿವಂತನಿದ್ದಾನೆ. (ತರುತನ್ವಾದಿಕಂ ಬುದ್ಧಿಮದ್ಧೇತುಕಂ ಸನ್ನಿವೇಶವಿಶಿಷ್ಟತ್ವಾತ್ ನಗರಾದಿವತ್)"

**ಇತ್ಯಸಾಧನಮೇವೈತದೀಶ್ವರಾಸ್ತಿತ್ವಸಾಧನೇ ।**
**ವಿಶಿಷ್ಟಸನ್ನಿವೇಶಾದೇರನ್ಯಥಾಪ್ಯುಪಪತ್ತಿತಃ ॥ ೩೩ ॥**

ಹೀಗೆ ಹೇಳುವುದು ಕೂಡ ಈಶ್ವರನಿದ್ದಾನೆಂದು ಸಾಧಿಸುವುದಕ್ಕೆ ಹೇತುವಾಗುವುದಿಲ್ಲ. ಏತಕ್ಕಂದರೆ:— ಬುದ್ಧಿವಂತನಾದ ಈಶ್ವರನಿಲ್ಲದಿದ್ದರೂ ಆ ವಿಶೇಷರಚನೆಯು ಉಂಟಾಗಬಹುದು. ಈಶ್ವರನಿಲ್ಲದಿದ್ದರೂ ಪ್ರಾಣಿಗಳ ಪುಣ್ಯಪಾಪಗಳಿಗನುಸಾರವಾಗಿ ಶರೀರಾದಿಗಳ ರಚನಾವಿಶೇಷವು ಆಗಬಹುದೆಂದಭಿಪ್ರಾಯವು.

**ಚೇತನಾಧಿಷ್ಠಿತಂ ಹೀದಂ ಕರ್ಮನಿರ್ಮಾತೃಚೇಷ್ಟಿತಮ್ ।**
**ತನ್ವಕ್ಷಸುಖದುಃಖಾದಿವೈಶ್ವರೂಪಾಯ ಕಲ್ಪತೇ ॥ ೩೪ ॥**

ಚೈತನ್ಯಸ್ವರೂಪನಾದ ಆತ್ಮನೊಡನೆ ಕೂಡಿಕೊಂಡಿರುವ ಈ ಶರೀರ ಇಂದ್ರಿಯ ಸುಖದುಃಖ ಮೊದಲಾದುದೆಲ್ಲ ಕರ್ಮ(ಅದೃಷ್ಟ)ದಿಂದುಂಟಾದ ಕಾರ್ಯವಾಗಿದೆ. ಈ ನಾನಾವಿಧವಾದ ಕಾರ್ಯಕ್ಕೇ ಪ್ರಪಂಚವೆಂದು ಹೆಸರು. ಲೋಕದಲ್ಲಿ ಜೀವಗಳಿಲ್ಲದಿರುವ ಪ್ರದೇಶಗಳೇ ಇಲ್ಲದಿರುವುದರಿಂದ ಭಿನ್ನಭಿನ್ನ ಪ್ರದೇಶಗಳಲ್ಲಿ ಉಂಟಾಗುವ ಕಾರ್ಯಗಳೆಲ್ಲ ಅಲ್ಲಲ್ಲಿರುವ ಜೀವಗಳ ಪುಣ್ಯಪಾಪಗಳಿಗನುಸಾರವಾಗಿ ಆಗುತ್ತವೆ. ಇದಕ್ಕಾಗಿ ಈಶ್ವರನ ಕಲ್ಪನೆಯು ಅನಾವಶ್ಯಕವಾಗಿದೆ.

**ನಿರ್ಮಾಣಕರ್ಮನಿರ್ಮಾತೃಕೌಶಲಾಪಾದಿತೋದಯಮ್ ।**
**ಅಂಗೋಪಾಂಗಾದಿವೈಚಿತ್ರ್ಯಮಂಗಿನಾಂ ಸಂಗಿರಾಮಹೇ ॥ ೩೫ ॥**

ಪ್ರಾಣಿಗಳ ಅಂಗೋಪಾಂಗ ಮೊದಲಾದ ವಿಚಿತ್ರಕಾರ್ಯವು ನಿರ್ಮಾಣವೆಂಬ ನಾಮಕರ್ಮದಿಂದುಂಟಾಗುತ್ತದೆಂದು ಹೇಳುತ್ತೇವೆ. ಈ ಕಾರ್ಯಗಳಿಗಾಗಿ ಈಶ್ವರನ ಕಲ್ಪನೆಯು ಅಸಂಗತವಾಗಿದೆ.

**ತದೇತತ್ಕರ್ಮವೈಚಿತ್ರ್ಯಾದ್ಭವನ್ನಾನಾತ್ಮಕಂ ಜಗತ್ ।**
**ವಿಶ್ವಕರ್ಮಾಣಮಾತ್ಮಾನಂ ಸಾಧಯೇತ್ಕರ್ಮಸಾರಥಿಮ್ ॥ ೩೬ ॥**

ಕರ್ಮವು ನಾನಾಪ್ರಕಾರವಾಗಿರುವುದರಿಂದ ಆ ಕರ್ಮವೇ ಸಹಾಯಕವಾಗಿರುವ ಈ ಜಗತ್ತು ಕೂಡ ನಾನಾಪ್ರಕಾರವಾಗಿ ಪರಿಣಮಿಸುತ್ತದೆ. ಅಂದರೆ ಪ್ರಾಣಿಗಳ ನಾನಾಪ್ರಕಾರವಾದ ಕರ್ಮಕ್ಕನುಸಾರವಾಗಿ ಸುಖದುಃಖರೂಪವಾದ ಜಗತ್ತನ್ನು ಸೃಷ್ಟಿಸಿಕೊಳ್ಳುವುದಕ್ಕೆ ಪ್ರಾಣಿಗಳೇ ಕಾರಣಗಳು.

**ವಿಧಿಃ ಸ್ರಷ್ಟಾ ವಿಧಾತಾ ಚ ದೈವಂ ಕರ್ಮ ಪುರಾಕೃತಮ್ ।**
**ಈಶ್ವರಶ್ಚೇತಿ ಪರ್ಯಾಯಾ ವಿಜ್ಞೇಯಾಃ ಕರ್ಮವೇಧಸಃ ॥ ೩೭ ॥**

ವಿಧಿ, ಸ್ರಷ್ಟಾ, ವಿಧಾತಾ, ದೈವ, ಪೂರ್ವಕೃತಕರ್ಮ, ಈಶ್ವರ, ಈ ಶಬ್ದಗಳೆಲ್ಲ ಕರ್ಮವೆಂಬ ಬ್ರಹ್ಮನ ಪರ್ಯಾಯಶಬ್ದಗಳಾಗಿವೆ. ಶಬ್ದಭೇದವೇ ಹೊರತು ಅರ್ಥಭೇದವಿಲ್ಲ. ಕರ್ಮವೇ ಜಗತ್ತಿಗೆ ಕಾರಣ ಹೊರತು ಈಶ್ವರನಲ್ಲವೆಂದು ಭಾವವು.

**ಸ್ರಷ್ಟಾರಮಂತರೇಣಾಪಿ ವ್ಯೋಮಾದೀನಾಂ ಚ ಸಂಗರಾತ್ ।**
**ಸೃಷ್ಟಿವಾದೀ ಸ ನಿಗ್ರಾಹ್ಯಃ ಶಿಷ್ಟೈರ್ದುರ್ಮತದುರ್ಮದೀ ॥ ೩೮ ॥**

ಆಕಾಶ, ಪರಮಾಣು, ಕಾಲ ಮೊದಲಾದ ಕೆಲವು ಪದಾರ್ಥಗಳನ್ನು ಈಶ್ವರನು ಸೃಷ್ಟಿಸುವುದಿಲ್ಲ. ಆ ಪದಾರ್ಥಗಳು ಸ್ವಭಾವದಿಂದಲೇ ಇರುತ್ತವೆಂದು ಸೃಷ್ಟಿಕರ್ತೃವಾದಿಗಳು ಅಂಗೀಕಾರಮಾಡುತ್ತಾರೆ. ಅದರಂತೆ ಇತರ ಪದಾರ್ಥಗಳೂ ಸ್ವಭಾವದಿಂದಲೇ ಏತಕ್ಕಿರಬಾರದು ? ಶಿಷ್ಟರಾದವರು ಅಂತಹ ದುರಭಿಪ್ರಾಯ ದಿಂದ ಅಹಂಕಾರಪಡುವ ಸೃಷ್ಟಿಕರ್ತೃವಾದಿಯನ್ನು ನಿಗ್ರಹಿಸಬೇಕು. ವಾದಮಾಡಿ ಜಯಿಸಬೇಕೆಂದರ್ಥವು.

**ತತೋಽಸಾವಕೃತೋಽನಾದಿನಿಧನಃ ಕಾಲತತ್ತ್ವವತ್ ।**
**ಲೋಕೋ ಜೀವಾದಿತತ್ತ್ವಾನಾಮಾಧಾರಾತ್ಮಾ ಪ್ರಕಾಶತೇ ॥ ೩೯ ॥**

ಆದುದರಿಂದ ಜೀವಾದಿತತ್ತ್ವಗಳಿಗೆ ಆಧಾರರೂಪವಾದ ಈ ಲೋಕವು ಯಾರಿಂದಲೂ ಮಾಡಲ್ಪಡದೆ ಕಾಲತತ್ತ್ವದಂತೆ ಅನಾದಿನಿಧನವಾಗಿ ಪ್ರಕಾಶಿಸುತ್ತದೆ.

**ಅಸೃಜ್ಯೋಽಯಮಸಂಹಾರ್ಯಃ ಸ್ವಭಾವನಿಯತಸ್ಥಿತಿಃ ।**
**ಅಧಸ್ತಿರ್ಯಗಥೋರ್ಧ್ವಂ ಚ ತ್ರಿಭಿರ್ಭೇದೈಃ ಸಮನ್ವಿತಃ ॥ ೪೦ ॥**

ಅಧೋ ಮಧ್ಯ ಊರ್ಧ್ವ ಈ ಮೂರು ಭೇದಗಳಿಂದ ಕೂಡಿಕೊಂಡಿರುವ ಈ ಲೋಕವನ್ನು ಈಶ್ವರನು ಸೃಷ್ಟಿಸುವುದೂ ಇಲ್ಲ. ಸಂಹಾರಮಾಡುವುದೂ ಇಲ್ಲ. ಇದು ಸ್ವಭಾವದಿಂದಲೇ ನಿಶ್ಚಿತವಾದ ಸ್ಥಿತಿಯುಳ್ಳುದಾಗಿದೆ.

**ವೇತ್ರವಿಷ್ಟರಝಲ್ಲರ್ಯೋ ಮೃದಂಗಸ್ಯ ಚ ಯಥಾವಿಧಾಃ ।**
**ಸಂಸ್ಥಾನೈಸ್ತಾದೃಶಾನ್ಪ್ರಾಹುಸ್ತ್ರೀನ್ಲೋಕಾನನುಪೂರ್ವಶಃ ॥ ೪೧ ॥**

ಬೆತ್ತದಕುರ್ಚಿಯ ಕೆಳಭಾಗದಂತೆ ಅಧೋಲೋಕದ ಆಕಾರವೂ, ಚಕ್ರತಾಳದಂತೆ ವರ್ತುಲಾಕಾರವಾಗಿ ಮಧ್ಯಲೋಕದ ಆಕಾರವೂ, ಮದ್ದಳೆಯಂತೆ ಊರ್ಧ್ವ ಲೋಕದ ಆಕಾರವೂ ಇವೆ.

**ವೈಶಾಖಸ್ಥಃ ಕಟಿನ್ಯಸ್ತಹಸ್ತಃ ಸ್ಯಾದ್ಯಾದೃಶಃ ಪುಮಾನ್ ।**
**ತಾದೃಶಂ ಲೋಕಸಂಸ್ಥಾನಮಾಮನಂತಿ ಮನೀಷಿಣಃ ॥ ೪೨ ॥**

ಕಾಲುಗಳನ್ನು ವಿಸ್ತರಿಸಿ ಕೈಗಳನ್ನು ಸೊಂಟದಲ್ಲಿರಿಸಿ ನಿಂತಿರುವ ಪುರುಷನ ಆಕಾರದಂತೆ ಈ ಲೋಕದ ಆಕಾರವಾಗಿದೆಯೆಂದೂ ಪ್ರಾಜ್ಞರು ಹೇಳುತ್ತಾರೆ.

**ಅನಂತಾನಂತಭೇದಸ್ಯ ವಿಯತೋ ಮಧ್ಯಮಾಶ್ರಿತಃ ।**
**ಲೋಕಸ್ತ್ರಿಭಿರ್ವೃತೋ ವಾತೈರ್ಭಾತಿ ಶಿಕ್ಯೈರಿವಾತತೈಃ ॥ ೪೩ ॥**

ಅನಂತಾನಂತಪ್ರದೇಶಗಳುಳ್ಳ ಆಕಾಶದ ಮಧ್ಯದಲ್ಲಿ ಘನೋದಧಿ ಘನವಾತ ತನುವಾತಗಳೆಂಬ ವಿಸ್ತಾರವಾದ ಮೂರು ಗಾಳಿಗಳಿಂದ ಲೋಕವು, ನೆಲುವುಗಳಿಂದ ಆವರಿಸಿಕೊಂಡಂತೆ, ಶೋಭಿಸುತ್ತದೆ.

**ವಾತರಜ್ಜುಭಿರಾನದ್ಧೋ ಲೋಕಸ್ತ್ರಿಸ್ರಭಿರಾಶಿಖಮ್ ।**
**ಪಟತ್ರಿತಯಸಂವೀತಸುಪ್ರತಿಷ್ಠಕಸನ್ನಿಭಃ ॥ ೪೪ ॥**

ಕೆಳಗಿನಿಂದ ಮೇಲಿನವರೆಗೂ ಮೂರು ಗಾಳಿಗಳೆಂಬ ಹಗ್ಗಗಳಿಂದ ಕಟ್ಟಲ್ಪಟ್ಟ ಈ ಲೋಕವು, ಮೂರು ವಸ್ತ್ರಗಳಿಂದ ಸುತ್ತಲ್ಪಟ್ಟ ಸುಪ್ರತಿಷ್ಠವೆಂಬ ಮಂಗಲದ್ರವ್ಯದಂತೆ, ತೋರುತ್ತದೆ.

**ತಿರ್ಯಗ್ಲೋಕಸ್ಯ ವಿಸ್ತಾರಂ ರಜ್ಜುಮೇಕಾಂ ಪ್ರಚಕ್ಷತೇ ।**
**ಚತುರ್ದಶಗುಣಾಂ ಪ್ರಾಹೂ ರಜ್ಜುಂ ಲೋಕೋಚ್ಛ್ರಿತಿಂ ಬುಧಾಃ ॥**

ತಿರ್ಯಗ್ಲೋಕ(ಮಧ್ಯಲೋಕ)ದ ವಿಸ್ತಾರವು ಒಂದು ರಜ್ಜುವೆಂದೂ ಸಂಪೂರ್ಣಲೋಕವು ಹದಿನಾಲ್ಕು ರಜ್ಜು ಎತ್ತರವಾಗಿದೆಯೆಂದೂ ಪ್ರಾಜ್ಞರು ಹೇಳುತ್ತಾರೆ.

**ಅಧೋ ಮಧ್ಯೋರ್ಧ್ವಮಧ್ಯಾಗ್ರೇ ಲೋಕವಿಷ್ಕಂಭರಜ್ಜವಃ ।**
**ಸಪ್ತೈಕಾ ಪಂಚ ಚೈಕಾ ಚ ಯಥಾಕ್ರಮಮುದಾಹೃತಾಃ ॥ ೪೬ ॥**

ಈ ಲೋಕವು ಕೆಳಭಾಗದಲ್ಲಿ ಏಳು ರಜ್ಜು ವಿಸ್ತಾರವಾಗಿದೆ. ಮಧ್ಯದಲ್ಲಿ ಒಂದು ರಜ್ಜು ವಿಸ್ತಾರವಿದೆ. ಊರ್ಧ್ವಲೋಕದ ಮಧ್ಯಭಾಗ-ಬ್ರಹ್ಮಕಲ್ಪದಲ್ಲಿ ಐದು ರಜ್ಜು ವಿಸ್ತಾರವಾಗಿದೆ. ಮೇಲುಭಾಗದಲ್ಲಿ ಒಂದು ರಜ್ಜು ವಿಸ್ತಾರವಾಗಿದೆ.

**ದ್ವೀಪಾಬ್ಧಿಭಿರಸಂಖ್ಯಾತೈರ್ದ್ವಿರ್ದ್ವಿರ್ವಿಷ್ಕಂಭಮಾಶ್ರಿತೈಃ ।**
**ವಿಭಾತಿ ವಲಯಾಕಾರೈರ್ಮಧ್ಯಲೋಕೋ ವಿಭೂಷಿತಃ ॥ ೪೭ ॥**

ಮಧ್ಯಲೋಕವು ದ್ವಿಗುಣ ದ್ವಿಗುಣವಾಗಿ ವಿಸ್ತಾರಗಳೂ ವರ್ತುಲಾಕಾರಗಳೂ ಆದ ಅಸಂಖ್ಯಾತ ದ್ವೀಪಸಮುದ್ರಗಳಿಂದ ಅಲಂಕೃತವಾಗಿ ಶೋಭಿಸುತ್ತಿದೆ.

**ಮಧ್ಯಮಸ್ಯಾಸ್ಯ ಲೋಕಸ್ಯ ಜಂಬೂದ್ವೀಪೋಽಸ್ತಿ ಮಧ್ಯಗಃ ।**
**ಮೇರುನಾಭಿಃ ಸುವೃತ್ತಾತ್ಮಾ ಲವಣಾಂಭೋಧಿವೇಷ್ಟಿತಃ ॥ ೪೮ ॥**

ಈ ಮಧ್ಯಮಲೋಕದ ಮಧ್ಯದಲ್ಲಿ ಮಹಾಮೇರುಪರ್ವತವೇ ನಾಭಿ ಯಾಗಿರುವುದೂ ವರ್ತುಲಾಕಾರವೂ ಆದ ಜಂಬೂದ್ವೀಪವು ಲವಣಸಮುದ್ರದಿಂದ ಆವರಿಸಿಕೊಂಡಿದೆ.

**ಸಪ್ತಭಿಃ ಕ್ಷೇತ್ರವಿನ್ಯಾಸೈಃ ಷಡ್ಭಿಶ್ಚ ಕುಲಪರ್ವತೈಃ ।**
**ಪ್ರವಿಭಕ್ತಃ ಸರಿದ್ಭಿಶ್ಚ ಲಕ್ಷಯೋಜನವಿಸ್ತೃತಃ ॥ ೪೯ ॥**

ಭರತ ಹೈಮವತ ಹರಿ ವಿದೇಹ ರಮ್ಯಕ ಹೈರಣ್ಯವತ ಐರಾವತಗಳೆಂಬ ಏಳು ಕ್ಷೇತ್ರರಚನೆಗಳಿಂದಲೂ ಹಿಮವಾನ್ ಮಹಾಹಿಮವಾನ್ ನಿಷಧ ನೀಲ ರುಕ್ಮಿ ಶಿಖರಿಗಳೆಂಬ ಆರು ಕುಲಪರ್ವತಗಳಿಂದಲೂ ಗಂಗಾ ಸಿಂಧು ಮೊದಲಾದ ಹದಿನಾಲ್ಕು ನದಿಗಳಿಂದಲೂ ವಿಭಾಗವಾದ ಈ ಜಂಬೂದ್ವೀಪವು ಒಂದು ಲಕ್ಷಯೋಜನವಿಸ್ತಾರವಾಗಿದೆ.

**ಸ ಮೇರುಮೌಲಿರಾಭಾತಿ ಲವಣೋದಧಿಮೇಖಲಃ ।**
**ಸರ್ವದ್ವೀಪಸಮುದ್ರಾಣಾಂ ಜಂಬೂದ್ವೀಪೋಽಧಿರಾಜವತ್ ॥ ೫೦ ॥**

ಆ ಜಂಬೂದ್ವೀಪಕ್ಕೆ ಮೇರುಪರ್ವತವು ಕಿರೀಟದಂತೆಯೂ ಲವಣಸಮುದ್ರವು ಕಟೀಸೂತ್ರ - ಉಡುದಾರದಂತೆಯೂ ಇರುವುದರಿಂದ ದ್ವೀಪಸಮುದ್ರಗಳಲ್ಲೆಲ್ಲ ಜಂಬೂದ್ವೀಪವು, ರಾಜನಂತೆ, ಶೋಭಿಸುತ್ತದೆ.

**ಇಹ ಜಂಬೂಮತಿ ದ್ವೀಪೇ ಮೇರೋಃ [1]ಪ್ರತ್ಯಗ್ದಿಗಾಶ್ರಿತಃ ।**
**ವಿಷಯೋ ಗಂಧಿಲಾಭಿಖ್ಯೋ ಭಾತಿ ಸ್ವರ್ಗೈಕಖಂಡವತ್ ॥ ೫೧ ॥**

ಈ ಜಂಬೂದ್ವೀಪದಲ್ಲಿ ಮಹಾಮೇರುಪರ್ವತದ ಪಶ್ಚಿಮಭಾಗದಲ್ಲಿ ಗಂಧಿಲವೆಂದು ಹೆಸರುಳ್ಳ ದೇಶವು, ಸ್ವರ್ಗದ ಒಂದು ಭಾಗದಂತೆ, ಪ್ರಕಾಶಿಸುತ್ತದೆ.

**ಪೂರ್ವಾಪರಾವಧೀ ತಸ್ಯ [2]ದೇವಾದ್ರಿಶ್ಚೋರ್ಮಿಮಾಲಿನೀ[3] ।**
**ದಕ್ಷಿಣೋತ್ತರಪರ್ಯಂತೌ ಸೀತೋದಾ ನೀಲ ಏವ ಚ ॥ ೫೨ ॥**

೧ ಪಶ್ಚಿಮದಿಕ್. ೨ ದೇವಮಾಲ ಇತಿ ವಕ್ಷಾರಗಿರಿಃ. ೩ ವಿಭಂಗನದೀ.

ಆ ಗಂಧಿಲದೇಶಕ್ಕೆ ಪೂರ್ವದಿಕ್ಕಿನಲ್ಲಿ ದೇವಮಾಲವೆಂಬ ವಕ್ಷಾರಪರ್ವತವೂ ಪಶ್ಚಿಮದಿಕ್ಕಿನಲ್ಲಿ ಊರ್ಮಿಮಾಲಿನೀ ಯೆಂಬ ವಿಭಂಗನದಿಯೂ ದಕ್ಷಿಣದಿಕ್ಕಿನಲ್ಲಿ ಸೀತೋದಾನದಿಯೂ ಉತ್ತರ ದಿಕ್ಕಿನಲ್ಲಿ ನೀಲಪರ್ವತವೂ ಎಲ್ಲೆಯಾಗಿವೆ. ಇವುಗಳ ಮಧ್ಯದಲ್ಲಿ ಗಂಧಿಲದೇಶವಿದೆಯೆಂದು ಭಾವವು.

**ಯತ್ರ ಕರ್ಮಮಲಾಪಾಯಾದ್ವಿದೇಹಾ ಮುನಯಃ ಸದಾ ।**
**ನಿರ್ವಾಂತೀ[1]ತಿ ಗತಾ ರೂಢಿಂ ವಿದೇಹಾಖ್ಯಾರ್ಥಭಾಗಿಯಮ್ ॥ ೫೩ ॥**

ವಿದೇಹಕ್ಷೇತ್ರದಲ್ಲಿ ಮುನಿಗಳು ಯಾವಾಗಲೂ ಪಾಪಮಲವನ್ನು ಹೋಗಲಾಡಿಸಿ ದೇಹಪರಿತ್ಯಾಗವನ್ನು ಮಾಡಿ ಮೋಕ್ಷವನ್ನು ಹೊಂದುತ್ತಿರುವುದರಿಂದ ಆ ಕ್ಷೇತ್ರಕ್ಕೆ ವಿದೇಹವೆಂಬ ಈ ಹೆಸರು ಸಾರ್ಥಕವಾಗಿ ರೂಢಿಯಲ್ಲಿ ಬಂದಿದೆ.

**ನಿತ್ಯಪ್ರಮುದಿತಾ ಯತ್ರ ಪ್ರಜಾ ನಿತ್ಯಕೃತೋತ್ಸವಾಃ ।**
**ನಿತ್ಯಸನ್ನಿಹಿತೈರ್ಭೋಗೈಃ ಸತ್ಯಂ ಸ್ವರ್ಗೇಽಪ್ಯನಾದರಾಃ ॥ ೫೪ ॥**

ಆ ಗಂಧಿಲದೇಶದಲ್ಲಿ ಯಾವಾಗಲೂ ಸಂತೋಷಪಡುವವರೂ ಸದಾ ಉತ್ಸವಗಳನ್ನು ಮಾಡುವವರೂ ಆದ ಪ್ರಜೆಗಳು ಸದಾ ಪ್ರಾಪ್ತವಾಗುತ್ತಿರುವ ಭೋಗವಸ್ತುಗಳಿಂದ ಸ್ವರ್ಗದಲ್ಲಿಯೂ ಪ್ರೀತಿಯುಳ್ಳವರಾಗಿಲ್ಲ.

**ನಿಸರ್ಗಸುಭಗಾ ನಾರ್ಯೋ ನಿಸರ್ಗಚತುರಾನರಾಃ ।**
**ನಿಸರ್ಗಲಲಿತಾಲಾಪಾ ಬಾಲಾ ಯತ್ರ ಗೃಹೇ ಗೃಹೇ ॥ ೫೫ ॥**

ಆ ಗಂಧಿಲದೇಶದ ಪ್ರತಿಯೊಂದು ಮನೆಯಲ್ಲಿಯೂ ಸ್ತ್ರೀಯರು ಸ್ವಭಾವದಿಂದಲೇ ಸುಂದರಿಯರು. ಪುರುಷರು ಸ್ವಭಾವದಿಂದಲೇ ಚತುರರಾಗಿದ್ದಾರೆ. ಬಾಲಕರು ಸ್ವಭಾವದಿಂದಲೇ ಮನೋಹರವಾದ ಮಾತುಗಳುಳ್ಳವರು.

**ವೈದಗ್ಧ್ಯಂ ಚತುರೈರ್ವೇಷೈರ್ಭೂಷಣೈಶ್ಚ ಧನರ್ದ್ಧಯಃ ।**
**ವಿಲಾಸೈರ್ಯೌವನಾರಂಭಾಃ ಸೂಚ್ಯಂತೇ ಯತ್ರ ದೇಹಿನಾಮ್ ॥ ೫೬ ॥**

ಆ ಗಂಧಿಲದೇಶದಲ್ಲಿ ಮನುಷ್ಯರ ಪಾಂಡಿತ್ಯವು ಅವರ ಚತುರವಾದ ವೇಷಗಳಿಂದಲೂ ಧನಸಂಪತ್ತುಗಳು ಆಭರಣಗಳಿಂದಲೂ ಯೌವನದ ಪ್ರಾದುರ್ಭಾವವು ಭೋಗವಿಲಾಸಗಳಿಂದಲೂ ತಿಳಿಯಲ್ಪಡು(ಗೊತ್ತಾಗು)ತ್ತಿವೆ.

**ಯತ್ರ ಸತ್ಪಾತ್ರದಾನೇಷು ಪ್ರೀತಿಃ ಪೂಜಾಸು ಚಾರ್ಹತಾಮ್ ।**
**ಸಕ್ತಿರಾತ್ಯಂತಿಕೀ ಶೀಲೇ ಪ್ರೋಷಧೇ ಚ ರತಿರ್ನೃಣಾಮ್ ॥ ೫೭ ॥**

ಆ ದೇಶದಲ್ಲಿ ಜನಗಳಿಗೆ ಸತ್ಪಾತ್ರದಾನಗಳಲ್ಲಿಯೂ ಅರಹಂತರ ಪೂಜೆಗಳಲ್ಲಿಯೂ ಶೀಲವನ್ನು ಪರಿಪಾಲನೆಮಾಡುವುದರಲ್ಲಿಯೂ ಪ್ರೋಷಧೋಪವಾಸವ್ರತವನ್ನು ಆಚರಿಸುವುದರಲ್ಲಿಯೂ ಬಹಳ ಪ್ರೀತಿಯು.

**ನ ಯತ್ರ ಪರಲಿಂಗಾನಾಮಸ್ತಿ ಜಾತು ಚಿದುದ್ಭವಃ ।**
**ಸದೋದಯಾಜ್ಜಿನಾರ್ಕಸ್ಯ ಖದ್ಯೋತಾನಾಮಿವಾಹನಿ ॥ ೫೮ ॥**

ಹಗಲಿನಲ್ಲಿ ಸೂರ್ಯನ ಎದುರಿಗೆ ಹೇಗೆ ಮಿಣುಕುಹುಳಗಳ ಆವಿರ್ಭಾವವಿಲ್ಲವೋ ಹಾಗೆ ಆ ದೇಶದಲ್ಲಿ ಜಿನೇಶ್ವರನ ಉದಯ(ಅಸ್ತಿತ್ವ)ವು ಯಾವಾಗಲೂ ಇರುವುದರಿಂದ ಎಂದೂ ಮಿಥ್ಯಾದೃಷ್ಟಿಗಳ ಆವಿರ್ಭಾವವಿಲ್ಲವು.

**ಯತ್ರಾರಾಮಾಃ ಸದಾರಮ್ಯಾಸ್ತರುಭಿಃ ಫಲಶಾಲಿಭಿಃ ।**
**ಪಥಿಕಾನಾಹ್ವಯಂತೀವ ಪರಪುಷ್ಟಕಲಸ್ವನೈಃ ॥ ೫೯ ॥**

ಆ ದೇಶದಲ್ಲಿ ಫಲಗಳಿಂದ ಶೋಭಿಸುತ್ತಿರುವ ವೃಕ್ಷಗಳಿಂದ ಮನೋಹರಗಳಾದ ಉದ್ಯಾನಗಳು ಕೋಗಿಲೆಗಳ ಮಧುರವಾದ ಶಬ್ದಗಳಿಂದ, ಮಾರ್ಗದಲ್ಲಿ ಹೋಗುವವರನ್ನು ಕರೆಯುತ್ತವೋ ಎಂಬಂತಿವೆ.

**ಯಸ್ಯ ಸೀಮವಿಭಾಗೇಷು ಶಾಲ್ಯಾದಿಕ್ಷೇತ್ರಸಂಪದಃ ।**
**ಸದೈವ ಫಲಶಾಲಿನ್ಯೋ ಭಾಂತಿ ಧರ್ಮ್ಯಾ ಇವ ಕ್ರಿಯಾಃ ॥ ೬೦ ॥**

ಧರ್ಮಸಂಬಂಧವಾದ ಕಾರ್ಯಗಳು ಸ್ವರ್ಗಾದಿಫಲಗಳಿಂದ ಶೋಭಿಸುವಂತೆ, ಆ ದೇಶದ ಎಲ್ಲೆಗಳಲ್ಲಿ ಭತ್ತ ಮೊದಲಾದ ಸಸ್ಯಸಂಪತ್ತುಗಳು ಯಾವಾಗಲೂ ಫಲಭರಿತಗಳಾಗಿ ಶೋಭಿಸುತ್ತಿವೆ.

**ಯತ್ರ ಶಾಲಿವನೋಪಾಂತೇ ಖಾತ್ಪತಂತೀಂ ಶುಕಾವಲೀಮ್ ।**
**ಶಾಲಿಗೋಪ್ಯೋನುಮನ್ಯಂತೇ ದಧತೀಂ ತೋರಣಶ್ರಿಯಮ್ ॥ ೬೧ ॥**

ಭತ್ತವನ್ನು ಕಾಯುವ ಸ್ತ್ರೀಯರು ಆ ಭತ್ತದ ಕ್ಷೇತ್ರಗಳಿಗೆ ಬಂದು ಬೀಳುತ್ತಿರುವ ಗಿಣಿಗಳ ಗುಂಪನ್ನು, ತೋರಣಮಾಲಿಕೆಯನ್ನಾಗಿ (ತೋರಣವೆಂದು) ತಿಳಿಯುತ್ತಾರೆ.

**ಮಂದಗಂಧವಹಾ ಧೂತಾಃ ಶಾಲಿವಪ್ರಾಃ ಫಲಾನತಾಃ ।**
**ಕೃತಸಂರಾವಿಣೋ ಯತ್ರ ಚೋತ್ಕುರ್ವಂತೀವ ಪಕ್ಷಿಣಃ ॥ ೬೨ ॥**

ಫಲಗಳಿಂದ ಬಗ್ಗಿರುವ ಭತ್ತದ ಕ್ಷೇತ್ರಗಳು ಮಂದವಾಗಿ ಬೀಸುತ್ತಿರುವ ಗಾಳಿಯಿಂದ ಚಲಿಸುತ್ತ ಶಬ್ದ ಮಾಡುವುದನ್ನು ನೋಡಿದರೆ ಹೊಲಕ್ಕೆ ಬಂದು ಬೀಳುತ್ತಿರುವ ಪಕ್ಷಿಗಳನ್ನು ಓಡಿಸುವಂತೆ ತೋರುತ್ತಿವೆ.

**ಯತ್ರ ಪುಂಡ್ರೇಕ್ಷುವಾಟೇಷು ಯಂತ್ರಚೀತ್ಕಾರಹಾರಿಷು ।**
**ಪಿಬಂತಿ ಪಥಿಕಾಃ ಸ್ವೈರಂ ರಸಂ ಸುರಸಮೈಕ್ಷವಮ್ ॥ ೬೩ ॥**

ಕಬ್ಬಿನ ರಸವನ್ನು ತೆಗೆಯುವ ಯಂತ್ರಗಳ ಚೀತ್ಕಾರಶಬ್ದದಿಂದ ಮನೋಹರವಾದ ರಸದಾಳಿ ಕಬ್ಬುಗಳ ಕ್ಷೇತ್ರಗಳಲ್ಲಿ ಮಾರ್ಗಸ್ಥರು ಯಥೇಚ್ಛವಾಗಿ ಕಬ್ಬಿನ ರಸವನ್ನು ಕುಡಿಯುತ್ತಾರೆ.

**ಯತ್ರ ಕುಕ್ಕುಟಸಂಪಾತ್ಯಾ ಗ್ರಾಮಾಃ ಸಂಸಕ್ತಸೀಮಕಾಃ ।**
**ಸೀಮಾನಃ ಸಸ್ಯಸಂಪನ್ನಾ [1]ನಿಷ್ಫಾಲಾಂಚಫಲೋದಯಾಃ ॥ ೬೪ ॥**

ಆ ದೇಶದಲ್ಲಿ ಗ್ರಾಮಗಳು ಕೋಳಿ ಹಾರಿ ಕುಳಿತುಕೊಳ್ಳುವಷ್ಟು ಸಮೀಪವಾಗಿವೆ. ಆ ಗ್ರಾಮಗಳ ಎಲ್ಲೆಗಳು ಪರಸ್ಪರವಾಗಿ ಕೂಡಿಕೊಂಡಿವೆ. ಪೈರುಗಳಿಂದ ಸಮೃದ್ಧಗಳಾದ ಆ ಎಲ್ಲೆಗಳು ಉಳದೆ ಅನಾಯಾಸವಾಗಿ ಉಂಟಾಗುವ ಫಲಗಳುಳ್ಳವಾಗಿವೆ.

**ಕಲಾಸಮಾಪ್ತಿಷು ಪ್ರಾಯಃ ಕಲಾಂತರಪರಿಗ್ರಹಃ ।**
**ಗುಣಾಧಿರೋಪಣೌದ್ಧತ್ಯಂ ಯತ್ರ ಚಾಪೇಷು ಧನ್ವಿನಾಮ್ ॥ ೬೫ ॥**

ಆ ದೇಶದಲ್ಲಿ ಜನಗಳು ಒಂದು ವಿದ್ಯೆಯನ್ನು ಪೂರ್ಣಮಾಡಿಯೇ ಇನ್ನೊಂದು ವಿದ್ಯೆಯನ್ನು ಪ್ರಾರಂಭಮಾಡುತ್ತಾರೆ. ತಮ್ಮಲ್ಲಿಲ್ಲದಿರುವ ಗುಣಗಳನ್ನು ಆರೋಪಣೆ ಮಾಡಿ ಅಹಂಕಾರಪಡುವುದಿಲ್ಲ. ಗುಣಾಧಿರೋಪಣವೆಂಬುದು ಧನುರ್ಧಾರಿಗಳ ಧನಸ್ಸುಗಳಲ್ಲಿ ಮಾತ್ರವಿದೆ. ಅಂದರೆ ಧನುಸ್ಸುಗಳಲ್ಲಿ ಗುಣ(ಹಗ್ಗ)ದ ಆರೋಪಣೆಯ(ಎಳೆದು ಕಟ್ಟುವುದ)ನ್ನು ಮಾಡಿ ಅಹಂಕಾರಪಡುವುದಿದೆ. ಪರಾಕ್ರಮಿಗಳಾಗಿದ್ದರೆಂದು ಭಾವವು.

**ಮುನೀನಾಂ ಯತ್ರ ಶೈಥಿಲ್ಯಂ ಗಾತ್ರೇಷು ನ ಸಮಾಧಿಷು ।**
**ನಿಗ್ರಹಃ ಕರಣಗ್ರಾಮೇ ಭೂತಗ್ರಾಮೇ ನ ಜಾತು ಚಿತ್ ॥ ೬೬ ॥**

---

೧ ಹೇತೋಃ.

೧ ನಿರೀಶಂ ಕುಟಕಂ ಫಾಲಃ ಕೃಷಕೋ ಲಾಂಗಲಂ ಹಲಮಿತ್ಯಮರಃ.

ಆ ದೇಶದಲ್ಲಿ ಶಿಥಿಲವಾಗಿರುವಿಕೆಯು ಮುನಿಗಳ ಶರೀರದಲ್ಲಿದೆ. ಅದು ಧ್ಯಾನ-ಯೋಗಗಳಲ್ಲಿಲ್ಲ. ದಂಡಿಸುವುದೆಂಬುದು ಇಂದ್ರಿಯಗಳಲ್ಲಿದೆ, ಪ್ರಾಣಿಗಳಲ್ಲಿ ಎಂದೂ ಇಲ್ಲ. ಜನಗಳು ದುರ್ಮಾರ್ಗದಲ್ಲಿ ಹೋಗುತ್ತಿಲ್ಲವೆಂದು ಭಾವವು.

**ಕುಲಾಯೇಷು ಶಕುಂತಾನಾಂ ಯತ್ರೋದ್ವಾಸಧ್ವನಿಃ ಸ್ಥಿತಃ ।**
**[1]ವರ್ಣಸಂಸ್ಕಾರವೃತ್ತಾಂತಶ್ಚಿತ್ರಾದನ್ಯತ್ರ ನ ಕ್ವಚಿತ್ ॥ ೬೭ ॥**

ಆ ದೇಶದಲ್ಲಿ ಕೋಲಾಹಲಶಬ್ದವು ಪಕ್ಷಿಗಳ ಗೂಡುಗಳಲ್ಲಿದ್ದಿತು. ಮನುಷ್ಯರಲ್ಲಿರಲಿಲ್ಲ. ವರ್ಣಸಂಕರವು ಚಿತ್ರಕಾರ್ಯದಲ್ಲಿದ್ದಿತು. ಬೇರೆಬೇರೆ ವರ್ಣಗಳನ್ನು ಬೆರಸಿ ಚಿತ್ರವನ್ನು ಬರೆಯಬೇಕಾದುದರಿಂದ ವರ್ಣಸಂಕರವೆಂಬುದು ಚಿತ್ರಕಾರ್ಯದಲ್ಲಿದ್ದಿತೆಂದು ಭಾವವು. ಬ್ರಾಹ್ಮಣ ಮೊದಲಾದ ವರ್ಣಗಳು ಸಂಕರವಾಗು (ಬೆರೆಯು)ತ್ತಿರಲಿಲ್ಲ.

**ಯತ್ರ ಭಂಗಸ್ತರಂಗೇಷು ಗಜೇಷು ಮದವಿಕ್ರಿಯಾ ।**
**ದಂಡಪಾರುಷ್ಯಮಬ್ಜೇಷು ಸರಸ್ಸು ಜಲಸಂಗ್ರಹಃ ॥ ೬೮ ॥**

ಆ ದೇಶದಲ್ಲಿ ಮುರಿದುಹೋಗುವಿಕೆಯೆಂಬುದು ತೆರೆಮಾಲೆಗಳಲ್ಲಿದ್ದಿತು. ಜನಗಳಲ್ಲಿ ಸುಖದ ಭಂಗವಾಗಲಿ, ಮಿತ್ರತೆಯ ಭಂಗವಾಗಲಿ ಇರಲಿಲ್ಲ. ಮದವಿಕಾರವು ಆನೆಗಳಲ್ಲಿದ್ದಿತು. ಜನರಲ್ಲಿ ಮದವಿಕಾರವಿರಲಿಲ್ಲ. ದಂಡ (ದಂಟು)ದಲ್ಲಿ ಕಾಠಿಣ್ಯವು ತಾವರೆಗಳಲ್ಲಿದ್ದಿತು. ಜನರಲ್ಲಿ ದಂಡ(ಶಿಕ್ಷೆ)ದ ಕಾಠಿಣ್ಯವಿರಲಿಲ್ಲ. ಜಲದ ಸಂಗ್ರಹವು ಸರೋವರಗಳಲ್ಲಿದ್ದಿತು. ಜನರಲ್ಲಿ ಜಡತನದ ಸಂಗ್ರಹವಿರಲಿಲ್ಲ. (ಡಲಯೋರಭೇದಃ).

**ಸ್ವರ್ಗಾವಾಸಸಮಾಃ ಪುರ್ಯೋ[2]ನಿಗಮಾಃ[3]ಕುರುಸನ್ನಿಭಾಃ ।**
**ವಿಮಾನಸ್ಪರ್ಧಿನೋ ಗೇಹಾಃ ಪ್ರಜಾ ಯತ್ರ ಸುರೋಪಮಾಃ ॥ ೬೯ ॥**

ಆ ದೇಶದಲ್ಲಿ ಪಟ್ಟಣಗಳು ಸ್ವರ್ಗದ ವಾಸಸ್ಥಾನಗಳಿಗೆ ಸಮಾನಗಳಾಗಿದ್ದುವು. ಅಂಗಡಿಬೀದಿಗಳು ದೇವಕುರು ಉತ್ತರಕುರುಗಳಿಗೆ ಸಮಾನಗಳಾಗಿದ್ದುವು. ಮನೆಗಳು ವಿಮಾನಗಳನ್ನು ಪ್ರತಿಸ್ಪರ್ಧೆಮಾಡುವುವುಗಳಾಗಿದ್ದುವು. ಮನುಷ್ಯರು ದೇವತೆಗಳಿಗೆ ಸಮಾನರಾಗಿದ್ದರು.

**ದಿಗ್ನಾಗಸ್ಪರ್ಧಿನೋ ನಾಗಾ ನಾರ್ಯೋ ದಿಕ್ಕನ್ಯಕೋಪಮಾಃ ।**
**ದಿಕ್ಪಾಲಾ ಇವ ಭೂಪಾಲಾ ಯತ್ರಾವಿಷ್ಕೃತದಿಗ್ಜಯಾಃ ॥ ೭೦ ॥**

ಆ ಗಂಧಿಲದೇಶದಲ್ಲಿ ದಿಗ್ಗಜಗಳಿಗೆ ಸಮಾನಗಳಾದ ಆನೆಗಳಿದ್ದುವು. ದಿಕ್ಕನ್ಯೆಯರಿಗೆ ಸಮಾನರಾದ ಸ್ತ್ರೀಯರಿದ್ದರು. ದಿಕ್ಪಾಲಕರಂತೆ ದಿಗ್ವಿಜಯವನ್ನು ಮಾಡುವ ರಾಜರಿದ್ದರು.

**ಜನತಾಪಚ್ಛಿದೋ ಯತ್ರ ವಾಪ್ಯಃ ಸ್ವಚ್ಛಾಂಬುಸಂಭೃತಾಃ ।**
**ಭಾಂತಿ ತೀರತರುಚ್ಛಾಯಾನಿರುದ್ಧೋಷ್ಣಾ ಬಹುಪ್ರಪಾಃ ॥ ೭೧ ॥**

ಆ ದೇಶದಲ್ಲಿ ಸ್ವಚ್ಛವಾದ ನೀರಿನಿಂದ ತುಂಬಿರುವುವೂ ಜನರ ತಾಪವನ್ನು ಹೋಗಲಾಡಿಸುವುವೂ ಆದ ಬಾವಿಗಳೂ ದಡದಲ್ಲಿರುವ ಮರಗಳ ನೆರಳಿನಿಂದ ಉಷ್ಣವನ್ನು ಕಡಿಮೆಮಾಡುವ ಅನೇಕ ಅರವಟಿಕೆಗಳೂ ಶೋಭಿಸುತ್ತಿವೆ.

**ಯತ್ರ ಕೂಪತಟಾಕಾದ್ಯಾಃ ಕಾಮಂ ಸಂತು ಜಲಾಶಯಾಃ ।**
**ತಥಾಪಿ ಜನತಾತಾಪಂ ಹರಂತಿ ರಸವತ್ತಯಾ ॥ ೭೨ ॥**

೧ ವರ್ಣಸಂಸ್ಕಾರಶ್ಚ ವೃತ್ತಂ ಚ ತಯೋರಂತೋ ನಾಶಃ, ವರ್ಣಸ್ಯ ಸಂಸ್ಕಾರಸ್ತಸ್ಯ ವೃತ್ತಾಂತಃ. ೨ ವಣಿಕ್ಪಥಃ ಪುರಂ ವೇದೋ ನಿಗಮ ಇತ್ಯಮರಃ. ೩ ದೇವಕುರೂತ್ತರಕುರು.

ಆ ದೇಶದಲ್ಲಿ ಬಾವಿ ಕೆರೆ ಮೊದಲಾದ ಜಲಾಶಯಗಳು ಜಡಾಶಯ (ಅಚೇತನ)ಗಳಾಗಿದ್ದರೂ ತಮ್ಮ ಮಧುರವಾದ ಜಲದಿಂದ ಜನರ ಸಂತಾಪವನ್ನು ನಾಶಮಾಡುತ್ತವೆ.

**ವಿಪಂಕಾ ಗ್ರಾಹವತ್ಯಶ್ಚ ಸ್ವಚ್ಛಾಃ ಕುಟಿಲವೃತ್ತಯಃ ।**
**ಅಲಂಘ್ಯಾಃ ಸರ್ವಭೋಗ್ಯಾಶ್ಚ ವಿಚಿತ್ರಾ ಯತ್ರ ನಿಮ್ನಗಾಃ ॥ ೭೩ ॥**

ಆ ದೇಶದಲ್ಲಿ ವಿಶೇಷವಾಗಿ ದೋಷವುಳ್ಳವರೂ ವಿಟಪುರುಷರಿಂದ ಧನವನ್ನು ತೆಗೆದುಕೊಳ್ಳುವವರೂ ನೋಡುವುದಕ್ಕೆ ನಿರ್ಮಲರೂ ಕುಟಿಲವ್ಯಾಪಾರವುಳ್ಳವರೂ ವಿಟಪುರುಷರನ್ನು ವಶಪಡಿಸಿಕೊಳ್ಳುವವರೂ ಎಲ್ಲರಿಂದಲೂ ಭೋಗಿಸುವುದಕ್ಕೆ ಯೋಗ್ಯರೂ ನಾನಾವಿಧದವರೂ ನೀಚಪುರುಷರನ್ನು ಹೊಂದುವವರೂ ಆದ ವೇಶ್ಯೆಯರಂತೆ, ಹೊಳೆಗಳು ಕೆಸರಿಲ್ಲದುವೂ ಮೊಸಳೆ ಮೊದಲಾದ ಜಲಜಂತುಗಳುಳ್ಳವೂ ನಿರ್ಮಲಗಳೂ ವಕ್ರವಾಗಿ ಹರಿಯುವುವುಗಳೂ ದಾಟುವುದಕ್ಕೆ ಅಶಕ್ಯಗಳೂ ಎಲ್ಲರು ಉಪಯೋಗಿಸುವುದಕ್ಕೆ ಯೋಗ್ಯಗಳೂ ನಾನಾವಿಧಗಳೂ ಕೆಳಗೆ ಹರಿಯುವುವೂ ಆಗಿದ್ದುವು. (ಇಲ್ಲಿ ವೇಶ್ಯಾರ್ಥವು ಧ್ವನಿತವಾಗುತ್ತದೆ).

**ಸರಸಾಂ ತೀರದೇಶೇಷು ರುತಂ ಹಂಸಾ ವಿಕುರ್ವತೇ ।**
**ಯತ್ರ ಕಂಠಬಿಲಾಲಗ್ನಮೃಣಾಲಶಕಲಾಕುಲಾಃ ॥ ೭೪ ॥**

ಆ ದೇಶದಲ್ಲಿ ಸರೋವರಗಳ ದಡಗಳಲ್ಲಿ ಹಂಸಪಕ್ಷಿಗಳು, ಕಂಠದಲ್ಲಿ ತಾವರೆದಂಟಿನ ಚೂರು ಸಿಕ್ಕಿಕೊಂಡುದರಿಂದ ತೊಂದರೆಪಡುವುವುಗಳಾಗಿ ವಿಕಾರವಾದ ಶಬ್ದವನ್ನು ಮಾಡುತ್ತಿವೆ.

**ವನೇಷು ವನಮಾತಂಗಾ ಮದಾಮೀಲಿತಲೋಚನಾಃ ।**
**ಭ್ರಮಂತ್ಯವಿರತಂ ಯಸ್ಮಿನ್ನಾಹ್ವಾತುಮಿವ ದಿಗ್ಗಜಾನ್ ॥ ೭೫ ॥**

ಆ ದೇಶದಲ್ಲಿ ಕಾಡಾನೆಗಳು ಮದದಿಂದ ಕಣ್ಣುಗಳನ್ನು ಮುಚ್ಚಿಕೊಂಡು, ದಿಗ್ಗಜಗಳನ್ನು ಕರೆಯುವುದಕ್ಕೋಸ್ಕರವೋ ಎಂಬಂತೆ, ಯಾವಾಗಲೂ ವನಗಳಲ್ಲಿ ತಿರುಗುತ್ತವೆ.

**ಯತ್ರ ಶೃಂಗಾಗ್ರಸಂಲಗ್ನಕರ್ದಮಾ ದುರ್ದಮಾ ಭೃಶಮ್ ।**
**ಉತ್ಖನಂತಿ ವೃಷಾ ದೃಪ್ತಾ ಸ್ಥಲೇಷು ಸ್ಥಲಪದ್ಮಿನೀಮ್ ॥ ೭೬ ॥**

ಆ ದೇಶದಲ್ಲಿ ಶಾಂತಪಡಿಸುವುದಕ್ಕೆ ಅಶಕ್ಯಗಳೂ ಮದಿಸಿದುವೂ ಆದ ಎತ್ತುಗಳು ತಮ್ಮ ಕೊಂಬುಗಳಲ್ಲಿ ಕೆಸರನ್ನು ಮೆತ್ತಿಕೊಂಡು ಸ್ಥಳಗಳಲ್ಲಿ ನೆಲದಾವರೆಲತೆಗಳನ್ನು ಕೀಳುತ್ತವೆ.

**ಜಿನಾಲಯೇಷು ಸಂಗೀತಪಟಹಾಂಭೋದನಿಸ್ವನೈಃ ।**
**ಯತ್ರ ನೃತ್ಯಂತ್ಯಕಾಲೇಽಪಿ ಶಿಖಿನಃ ಪ್ರೋನ್ಮದಿಷ್ಣವಃ ॥ ೭೭ ॥**

ಆ ದೇಶದ ಜಿನಮಂದಿರಗಳಲ್ಲಿ ಸಂಗೀತಶಬ್ದಗಳಿಂದಲೂ ಮೇಘದ ಶಬ್ದದಂತಿರುವ ಭೇರಿಯ ಶಬ್ದಗಳಿಂದಲೂ ಮದಿಸಿದ ನವಿಲುಗಳು ಅಕಾಲದಲ್ಲಿಯೂ ನರ್ತನವನ್ನು ಮಾಡುತ್ತವೆ.

**ಗವಾಂ ಗಣಾ ಯಥಾಕಾಲಮಾತ್ತಗರ್ಭಾಃ ಕೃತಸ್ವನಾಃ ।**
**ಪೋಷಯಂತಿ ಪಯೋಭಿಃ ಸ್ವೈರ್ಜನಂ ಯತ್ರ ಘನೈಃ ಸಮಮ್ ॥**

ಆ ದೇಶದಲ್ಲಿ ಮೇಘಗಳು ಯೋಗ್ಯಕಾಲದಲ್ಲಿ ಜಲವನ್ನು ಧರಿಸಿಕೊಂಡು ಗರ್ಜನೆಯನ್ನು ಮಾಡಿ ತಮ್ಮ ಜಲಗಳಿಂದ ಜನಗಳನ್ನು ಪೋಷಣೆ ಮಾಡುವಂತೆ, ದನಗಳ ಗುಂಪುಗಳು ಯೋಗ್ಯಕಾಲದಲ್ಲಿ ಗರ್ಭವನ್ನು ಧರಿಸಿ ಶಬ್ದಮಾಡುವುವುಗಳಾಗಿ ತಮ್ಮ ಹಾಲುಗಳಿಂದ ಜನಗಳನ್ನು ಪೋಷಿಸುತ್ತವೆ.

**ಬಲಾಕಾಲಿಪತಾಕಾಢ್ಯಾಃ ಸ್ತನಿತಾ ಮಂದ್ರಬೃಂಹಿತಾಃ ।**
**ಜೀಮೂತಾ ಯತ್ರ ವರ್ಷಂತೋ ಭಾಂತಿ ಮತ್ತಾ ಇವ ದ್ವಿಪಾಃ॥ ೭೯ ॥**

ಆ ದೇಶದಲ್ಲಿ ಬಲಾಕಾಪಕ್ಷಿ(ಬೆಳ್ಳಕ್ಕಿ)ಗಳೊಡಗೂಡಿದುವೂ ಗರ್ಜಿಸುತ್ತಿರುವುವೂ ಆದ ಮೋಡಗಳು, ಬಿಳಿಯದಾದ ಧ್ವಜಪತಾಕೆಗಳೊಡಗೂಡಿ ಗರ್ಜಿಸುತ್ತಿರುವ ಮದ್ದಾನೆಗಳು ಮದಜಲವನ್ನು ಸುರಿಯುವಂತೆ, ಮಳೆಯನ್ನು ಸುರಿಯುತ್ತ ಶೋಭಿಸುತ್ತವೆ.

**ನ ಸ್ಪೃಶಂತಿ ಕರಾಬಾಧಾ ಯತ್ರ ರಾಜನ್ವತೀಃ ಪ್ರಜಾಃ ।**
**ಸದಾ ಸುಕಾಲಸಾನ್ನಿಧ್ಯಾನ್ನೇತಯೋ ನಾಪ್ಯನೀತಯಃ ॥ ೮೦ ।**

ಆ ದೇಶದ ರಾಜನು ನೀತಿಪರಾಯಣನಾಗಿದ್ದುದರಿಂದ ಅಲ್ಲಿಯ ಪ್ರಜೆಗಳಿಗೆ ಕಂದಾಯದ ಬಾಧೆಯಿರಲಿಲ್ಲ. ಯಾವಾಗಲೂ ಕಾಲ-ಋತುಪರಿವರ್ತನೆಯು ಸರಿಯಾಗಿ ಆಗುತ್ತಿದ್ದುದರಿಂದ ಅತಿವೃಷ್ಟಿ ಮುಂತಾದ ಈತಿಬಾಧೆಗಳಾಗಲಿ, ಅನೀತಿ-ಅನ್ಯಾಯಗಳಾಗಲಿ ನಡೆಯುತ್ತಿರಲಿಲ್ಲ.

**ವಿಷಯಸ್ಯಾಸ್ಯ ಮಧ್ಯೇಽಸ್ತಿ ವಿಜಯಾರ್ಧೋ ಮಹಾಚಲಃ ।**
**ರೌಪ್ಯಃ ಸ್ವೈರಂಶುಭಿಃ ಶುಭ್ರೈರ್ಹಸನ್ನಿವ ಕುಲಾಚಲಾನ್ ॥ ೮೧ ॥**

ಈ ಗಂಧಿಲದೇಶದ ಮಧ್ಯಭಾಗದಲ್ಲಿ ವಿಜಯಾರ್ಧವೆಂಬ ಬೆಳ್ಳಿಯ ದೊಡ್ಡ ಪರ್ವತವಿದೆ. ಅದು ತನ್ನ ಶುಭ್ರವಾದ ಕಿರಣಗಳಿಂದ ಕುಲಪರ್ವತಗಳನ್ನು ನೋಡಿ ನಗುವಂತಿದೆ.

**ಯೋ ಯೋಜನಾನಾಂ ಪಂಚಾಗ್ರಾಂ ವಿಂಶತಿಂ ಧರಣೀತಲಾತ್ ।**
**ಉಚ್ಛ್ರಿತಃ ಶಿಖರೈಸ್ತುಂಗೈರ್ದಿವಂ ಸ್ಪ್ರಷ್ಟುಮಿವೋದ್ಯತಃ ॥ ೮೨ ॥**

ಆ ವಿಜಯಾರ್ಧಪರ್ವತವು ಭೂಮಿತಲದಿಂದ ಇಪ್ಪತ್ತೈದುಯೋಜನ ಎತ್ತರವಾಗಿದೆ. ಎತ್ತರವಾದ ಶಿಖರಗಳಿಂದ ಸ್ವರ್ಗವನ್ನು ಮುಟ್ಟುವುದಕ್ಕೋಸ್ಕರ ಪ್ರಯತ್ನಪಡುತ್ತಿದೆಯೋ ಎಂಬಂತಿದೆ.

**ದ್ವಿಸ್ತೌಂಗ್ಯಾದ್ವಿಸ್ತೃತೋ ಮೂಲಾತ್ಪ್ರಭೃತ್ಯಾ ದಶಯೋಜನಮ್ ।**
**ಮಧ್ಯೇ ತ್ರಿಂಶತ್ಪೃಥುರ್ಯೋಽಗ್ರೇ ದಶಯೋಜನವಿಸ್ತೃತಿಃ ॥ ೮೩ ॥**

ಆ ಬೆಟ್ಟವು ಬುಡದಿಂದ ಹತ್ತುಯೋಜನಗಳವರೆಗೆ ಎತ್ತರದ ಎರಡರಷ್ಟು (೫೦ ಯೋಜನ) ಅಗಲವಾಗಿದೆ. ಮಧ್ಯದಲ್ಲಿ ಮೂವತ್ತುಯೋಜನ ಅಗಲವಾಗಿದೆ. ತುದಿಯಲ್ಲಿ ಹತ್ತುಯೋಜನ ಅಗಲವಾಗಿದೆ.

**ಉಚ್ಛ್ರಾಯಸ್ಯ ತುರೀಯಾಂಶಮವಗಾಢಶ್ಚ ಯಃ ಕ್ಷಿತೌ ।**
**ಗಂಧಿಲಾದೇಶವಿಷ್ಕಂಭಮಾನದಂಡ ಇವಾಯತಃ ॥ ೮೪ ॥**

ಆ ಪರ್ವತವು ಭೂಮಿಯೊಳಗೆ ಎತ್ತರದ ನಾಲ್ಕನೆಯ ಒಂದು ಭಾಗ (೨೫ ಹರದಾರಿ) ಆಳವಾಗಿದೆ. ಆ ಗಂಧಿಲದೇಶವನ್ನು ಅಳತೆಮಾಡುವ ಅಳತೆಯ ಕೋಲಿನಂತೆ ಉದ್ದವಾಗಿದೆ.

**ದಶಯೋಜನವಿಸ್ತೀರ್ಣಶ್ರೇಣೀದ್ವಯಸಮಾಶ್ರಯಾನ್ ।**
**ಯೋ ಧತ್ತೇ ಖೇಚರಾವಾಸಾನ್ಸುರವೇಶ್ಮೋಪಹಾಸಿನಃ ॥ ೮೫ ॥**

ಆ ಪರ್ವತದ ಮಧ್ಯಭಾಗದಲ್ಲಿ ಹತ್ತುಹತ್ತು ಯೋಜನ ಅಗಲವಾದ ಉತ್ತರಶ್ರೇಣಿ ದಕ್ಷಿಣಶ್ರೇಣಿಗಳೆಂಬ ಖೇಚರರ ವಾಸಸ್ಥಾನಗಳಿವೆ. ಆ ಸ್ಥಾನಗಳು ದೇವತೆಗಳ ವಾಸಸ್ಥಾನಗಳನ್ನು ಪರಿಹಾಸ್ಯಮಾಡುವಂತಿವೆ.

**ಖಚರೀಜನಸಂಚಾರಸಂಕ್ರಾಂತಪದಯಾವಕೈಃ ।**
**ರಕ್ತಾಂಬುಜೋಪಹಾರಶ್ರೀರ್ಯತ್ರ ನಿತ್ಯಂ ವಿತನ್ಯತೇ ॥ ೮೬ ॥**

ಆ ಪರ್ವತದಲ್ಲಿ ಯಾವಾಗಲೂ ಖೇಚರಸ್ತ್ರೀಯರು ಸಂಚಾರಮಾಡುವಾಗ ಅಲತಿಗೆಯ ರಸವನ್ನು ಹಚ್ಚಿಕೊಂಡಿರುವ ಕಾಲುಗಳ ಗುರುತುಗಳು ಅಲ್ಲಲ್ಲಿ ಬಿದ್ದಿದ್ದುವು. ಅವು ಕೆಂದಾವರೆಗಳನ್ನು ಕೈಗಾಣಿಕೆಯಾಗಿ ಅರ್ಪಿಸಿದಂತೆ ಕಾಣುತ್ತಿವೆ.

**ಅಭೇದ್ಯಶಕ್ತಿರಕ್ಷಯ್ಯಃ ಸಿದ್ಧವಿದ್ಯೈರುಪಾಸಿತಃ ।**
**ದಧದಾತ್ಯಂತಿಕೀಂ ಶುದ್ಧಿಂ ಸಿದ್ಧಾತ್ಮೇವ ವಿಭಾತಿ ಯಃ ॥ ೮೭ ॥**

ತಿಳಿಯಲಶಕ್ಯವಾದ ಶಕ್ತಿಯುಳ್ಳವರೂ ನಿತ್ಯಸಿದ್ಧವಾದ ಸಮ್ಯಗ್ದರ್ಶನ ಮೊದಲಾದುವುಗಳಿಂದ ಸೇವಿಸಲ್ಪಡುವವರೂ ಅತ್ಯಂತಪರಿಶುದ್ಧರೂ ಆದ ಸಿದ್ಧಾತ್ಮರಂತೆ, ಆ ಪರ್ವತವು ಅಭೇದ್ಯವಾದ ಶಕ್ತಿಯುಳ್ಳುದೂ ನಿತ್ಯವೂ ವಿದ್ಯಾಧರರಿಂದ ಸೇವಿಸಲ್ಪಡುವುದೂ ಅತ್ಯಂತಪರಿಶುದ್ಧವೂ ಆಗಿ ಶೋಭಿಸುತ್ತದೆ.

**ಯೋಽನಾದಿಕಾಲಸಂಬಂಧಿಶುದ್ಧಿಶಕ್ತಿಸಮನ್ವಯಾತ್ ।**
**ಭವ್ಯಾತ್ಮನಿರ್ವಿಶೇಷೋಽಪಿ ದೀಕ್ಷಾಯೋಗಪರಾಙ್ಮುಖಃ ॥ ೮೮ ॥**

ಅನಾದಿಕಾಲದಿಂದಲೂ ಪರಿಶುದ್ಧವಾದ ಶಕ್ತಿಯುಳ್ಳ ಆ ವಿಜಯಾರ್ಧ ಪರ್ವತವು, ಅನಾದಿಕಾಲದಿಂದಲೂ ಸಮ್ಯಗ್ದರ್ಶನವನ್ನು ಧಾರಣೆಮಾಡುವ ಯೋಗ್ಯತೆಯೆಂಬ ಶಕ್ತಿಯನ್ನು ಧರಿಸಿಕೊಂಡಿರುವ ಭವ್ಯಪುರುಷರಿಗೆ ಸಮಾನವಾಗಿದ್ದರೂ ಜಡವಾಗಿರುವುದರಿಂದ ದೀಕ್ಷೆಯನ್ನು ತೆಗೆದುಕೊಳ್ಳುವುದರಲ್ಲಿ ಮಾತ್ರ ವಿಮುಖವಾಗಿದೆ.

**ವಿದ್ಯಾಧರೈಃ ಸದಾರಾಧ್ಯೋ ನಿರ್ಮಲಾತ್ಮಾ ಸನಾತನಃ ।**
**ಸುನಿಶ್ಚಿತಪ್ರಮಾಣೋ ಯೋ ಧತ್ತೇ ಜೈನಾಗಮಸ್ಥಿತಿಮ್ ॥ ೮೯ ॥**

ವಿದ್ವಾಂಸರಿಂದ ಯಾವಾಗಲೂ ಸೇವಿಸುವುದಕ್ಕೆ ಯೋಗ್ಯವು ನಿರ್ದೋಷವೂ ಸಂತಾನಕ್ರಮದಿಂದ ಅನಾದಿನಿಧನವೂ ಚೆನ್ನಾಗಿ ನಿಶ್ಚಿತವಾದ ಪ್ರತ್ಯಕ್ಷಾದಿ ಪ್ರಮಾಣವುಳ್ಳುದೂ ಆದ ಜೈನಾಗಮದಂತೆ, ಆ ವಿಜಯಾರ್ಧಪರ್ವತವು ವಿದ್ಯಾಧರರಿಂದ ಸೇವಿಸಲ್ಪಡುವುದಕ್ಕೆ ಯೋಗ್ಯವೂ ಪರಿಶುದ್ಧವೂ ಅನಾದಿನಿಧನವೂ ಚೆನ್ನಾಗಿ ನಿಶ್ಚಯಿಸಲ್ಪಟ್ಟ ಉದ್ದ ಅಗಲ ಮುಂತಾದ ಪರಿಮಾಣವುಳ್ಳುದೂ ಆಗಿದೆ.

**ಭಜಂತ್ಯೇಕಾಕಿನೋ ನಿತ್ಯಂ ವೀತಸಂಸಾರಭೀತಯಃ ।**
**ಪ್ರವೃದ್ಧನಖರಾ ಧೀರಾ ಯಂ ಸಿಂಹಾ ಇವ ಚಾರಣಾಃ ॥ ೯೦ ॥**

ಇತರಪ್ರಾಣಿಗಳ ಭಯವಿಲ್ಲದಿರುವ ಸಿಂಹಗಳು ಉಗುರುಗಳನ್ನು ಬೆಳೆಯಿಸಿಕೊಂಡು ಧೈರ್ಯದಿಂದ ಯಾವಾಗಲೂ ಒಂಟಿಯಾಗಿರುವಂತೆ, ಚಾರಣಮುನಿಗಳು ಸಂಸಾರದ ಭಯವಿಲ್ಲದಿರುವವರೂ ಬಹುದಿನಗಳ ತಪಶ್ಚರಣದಿಂದ ಉಗುರುಗಳು ಬೆಳೆದಿರುವವರೂ ಧೀರರೂ ಏಕಾಕಿಗಳೂ ಆಗಿ ಆ ಪರ್ವತವನ್ನು ಯಾವಾಗಲೂ ಸೇವಿಸುತ್ತಿದ್ದರು. ವಾಸಮಾಡುತ್ತಿದ್ದರೆಂದರ್ಥವು.

**ಯೋ ವಿತತ್ಯ ಪೃಥುಶ್ರೇಣೀದ್ವಯಂ ಪಕ್ಷದ್ವಯೋಪಮಮ್ ।**
**ಸಮುತ್ಪಿತ್ಸುರಿವಾಭಾತಿ ನಾಕಲಕ್ಷ್ಮೀದಿದೃಕ್ಷಯಾ ॥ ೯೧ ॥**

ಆ ವಿಜಯಾರ್ಧಪರ್ವತವು ಸ್ವರ್ಗಸಂಪತ್ತನ್ನು ನೋಡಬೇಕೆಂಬ ಇಚ್ಛೆಯಿಂದ ಎರಡು ರೆಕ್ಕೆಗಳಿಗೆ ಸಮಾನವಾದ ಉತ್ತರಶ್ರೇಣಿ ದಕ್ಷಿಣಶ್ರೇಣಿಗಳನ್ನು ಹರಡಿಕೊಂಡು, ಮೇಲೆ ಹಾರುವುದಕ್ಕೆ ಇಚ್ಛಿಸುತ್ತದೆಯೋ ಎಂಬಂತೆ ಶೋಭಿಸುತ್ತದೆ.

**ಯಸ್ಯ ಸಾನುಷು ರಮ್ಯೇಷು ಕಿನ್ನರಾಃ ಸುರಪನ್ನಗಾಃ ।**
**ರಂರಮ್ಯಮಾಣಾಃ ಸುಚಿರಂ ವಿಸ್ಮರಂತಿ ನಿಜಾಲಯಾನ್ ॥ ೯೨ ।**

ಆ ಪರ್ವತದ ಮನೋಹರವಾದ ತಪ್ಪಲುಪ್ರದೇಶಗಳಲ್ಲಿ ಕಿನ್ನರರೆಂಬ ವ್ಯಂತರದೇವತೆಗಳೂ ಪನ್ನಗರೆಂಬ ಭವನವಾಸಿದೇವತೆಗಳೂ ಬಹುಕಾಲದವರೆಗೂ ಕ್ರೀಡಿಸುವವರಾಗಿ ತಮ್ಮ ವಾಸಸ್ಥಾನಗಳನ್ನು ಮರೆತುಬಿಡುತ್ತಾರೆ.

**ಯದೀಯಾ ರಾಜತೀರ್ಭಿತ್ತೀಃ ಶರನ್ಮೇಘಾವಲೀ ಶ್ರಿತಾ ।**
**ವ್ಯಜ್ಯತೇ ಶೀಕರಾಸಾರೈಃ ಸ್ತನಿತೈಶ್ಚಲಿತೈರಪಿ ॥ ೯೩ ॥**

ಆ ಪರ್ವತದ ಬೆಳ್ಳಿಯ ಗೋಡೆ(ಭಾಗ)ಗಳನ್ನು ಹೊಂದಿದ ಶರತ್ಕಾಲದ ಬೆಳ್ಳಗಿರುವ ಮೇಘಗಳ ಪಂಕ್ತಿಯು ನೀರಿನ ಹನಿಗಳಿಂದಲೂ ಗರ್ಜನೆಗಳಿಂದಲೂ ಚಲನೆಗಳಿಂದಲೂ ಗೊತ್ತಾಗುತ್ತದೆ. ಪರ್ವತದ ಭಾಗವೂ ಶರತ್ಕಾಲದ ಮೇಘವೂ ಬೆಳ್ಳಗಿರುವುದರಿಂದ ಭೇದವೇ ಗೊತ್ತಾಗುವುದಿಲ್ಲವೆಂದೂ ಜಲಬಿಂದು ಮೊದಲಾದುವುಗಳಿಂದ ಮಾತ್ರ ಭೇದವು ಗೊತ್ತಾಗುವುದೆಂದೂ ಭಾವವು.

**ಯಸ್ತುಂಗೈಃ ಶಿಖರೈರ್ಧತ್ತೇ ದೇವಾವಾಸಾನ್ ಸ್ಫುರನ್ಮಣೀನ್ ।**
**ಚೂಡಾಮಣೀನಿವೋದಗ್ರಾನ್ಸಿದ್ಧಾಯತನಪೂರ್ವಕಾನ್ ॥ ೯೪ ॥**

ಆ ವಿಜಯಾರ್ಧಪರ್ವತದ ಉನ್ನತವಾದ ಶಿಖರಗಳಲ್ಲಿ ಪ್ರಕಾಶಮಾನವಾದ ರತ್ನಗಳುಳ್ಳ ದೇವತೆಗಳ ವಾಸಸ್ಥಾನಗಳಿವೆ. ಅವುಗಳಲ್ಲಿ ಚೂಡಾರತ್ನಗಳಂತೆ ಉನ್ನತವಾದ ಸಿದ್ಧಾಯತನ-ಅಕೃತ್ರಿಮಚೈತ್ಯಾಲಯಗಳಿವೆ.

**ದಧಾತ್ಯುಚ್ಚೈಃ ಸ್ವಕೂಟಾನಿ ಮುಕುಟಾನೀವ ಭೂಮಿಭೃತ್ ।**
**ಪರಾರ್ಧ್ಯರತ್ನಚಿತ್ರಾಣಿ ಯಃ ಶ್ಲಾಘ್ಯಾನಿ ಸುರಾಸುರೈಃ ॥ ೯೫ ॥**

ರಾಜನು ನಾನಾರತ್ನಗಳುಳ್ಳ ಕಿರೀಟವನ್ನು ಧರಿಸುವಂತೆ, ಆ ಪರ್ವತವು ಕಲ್ಪವಾಸಿದೇವತೆಗಳಿಂದಲೂ ಭವನವಾಸಿದೇವತೆಗಳಿಂದಲೂ ಶ್ಲಾಘಿಸುವುದಕ್ಕೆ ಯೋಗ್ಯಗಳೂ ಬಹಳ ಬೆಲೆಬಾಳುವ ನಾನಾರತ್ನಗಳುಳ್ಳವೂ ಉನ್ನತವೂ ಆದ ಕೂಟ(ಶಿಖರ)ಗಳನ್ನು ಧರಿಸಿರುತ್ತದೆ.

**ಗುಹಾದ್ವಯಂ ಚ ಯೋ ಧತ್ತೇ ಹಟದ್ವಜ್ರಕವಾಟಕಮ್ ।**
**ಸ್ವಸಾರಧನನಿಕ್ಷೇಪಮಹಾದುರ್ಗಮಿವಾಯತಮ್ ॥ ೯೬ ॥**

ಆ ಪರ್ವತದಲ್ಲಿ ದೇದೀಪ್ಯಮಾನವಾದ ವಜ್ರದ ಬಾಗಿಲುಗಳುಳ್ಳ ಎರಡು ದೊಡ್ಡ ಗುಹೆಗಳಿವೆ. ಅವು, ತನ್ನ ಸಾರವಾದ ದ್ರವ್ಯಗಳನ್ನು ಬಚ್ಚಿಡುವುದಕ್ಕೋಸ್ಕರ ದೊಡ್ಡ ದುರ್ಗಗಳೋ ಎಂಬಂತೆ, ಉದ್ದವಾಗಿವೆ.

**ಉತ್ಸಂಗಾದೇತ್ಯ ನೀಲಾದ್ರೇರ್ಗಂಗಾಸಿಂಧೂ ಮಹಾಪಗೇ ।**
**ವಿಶುದ್ಧತ್ವಾದಲಂಘ್ಯಸ್ಯ ಯಸ್ಯ ಪಾದಾಂತಮಾಶ್ರಿತೇ ॥ ೯೭ ॥**

ಗಂಗಾ ಸಿಂಧುಗಳೆಂಬ ಎರಡು ದೊಡ್ಡ ನದಿಗಳು ನೀಲಪರ್ವತದ ಮೇಲಿಂದ ಬಂದು ಪರಿಶುದ್ಧವಾಗಿರುವುದರಿಂದ ಮೀರಲಾಗದ ಆ ವಿಜಯಾರ್ಧಪರ್ವತದ ಪಾದ-ಪ್ರತ್ಯಂತಪರ್ವತದ ಬುಡವನ್ನು ಆಶ್ರಯಿಸಿವೆ.

**ಯಸ್ತಟೋಪಾಂತಸಂರೂಢವನರಾಜೀಪರಿಷ್ಕೃತಃ ।**
**ನೀಲಾಂಬರಧರಸ್ಯೋಚ್ಚೈರ್ಧತ್ತೇ ಲಾಂಗಲಿನಃ ಶ್ರಿಯಮ್ ॥ ೯೮ ॥**

ಪರ್ವತದ ತಪ್ಪಲುಗಳಲ್ಲಿ ಬೆಳೆದಿರುವ ವನಗಳ ಪಂಕ್ತಿಯಿಂದ ಸುತ್ತಲ್ಪಟ್ಟಿರುವ ಆ ಬೆಳ್ಳಿಯ ಬೆಟ್ಟವು, ನೀಲವಸ್ತ್ರವನ್ನು ಧರಿಸಿಕೊಂಡಿರುವ ಬಲರಾಮನಂತೆ, ಕಾಣುತ್ತದೆ.

**ವನವೇದೀಂ ಸಮುತ್ತುಂಗಾಂ ಯೋ ಬಿಭರ್ತ್ಯಭಿತೋ ವನಮ್ ।**
**ರಾಮಣೀಯಕಸೀಮಾನಮಿವ ಕೇನಾಪಿ ನಿರ್ಮಿತಾಮ್ ॥ ೯೯ ॥**

ಆ ಪರ್ವತದಲ್ಲಿ ವನದ ಸುತ್ತಲೂ ಉನ್ನತವಾದ ವನವೇದಿಕೆ(ಕಟ್ಟೆ) ಯಿದೆ. ಅದು ಯಾರಿಂದಲೋ ನಿರ್ಮಿಸಲ್ಪಟ್ಟ ರಮಣೀಯವಾದ ಎಲ್ಲೆಕಟ್ಟನ್ನು ಧರಿಸಿರುವಂತಿದೆ.

**ಸಂಚರತ್ಖಚರೀಪಾದನೂಪುರಾರಾವಕರ್ಷಕಃ ।**
**ಯತ್ರ ಗಂಧವಹೋ ವಾತಿ ಮಂದಂ ಮಂದಾರವೀಥಿಷು ॥ ೧೦೦ ॥**

ಮಂದಮಾರುತವು ಆ ಪರ್ವತದಲ್ಲಿ ಸಂಚರಿಸುತ್ತಿರುವ ವಿದ್ಯಾಧರಸ್ತ್ರೀಯರ ಪಾದಕಡಗಗಳ ಶಬ್ದಗಳೊಡನೆ ಕೂಡಿಕೊಂಡು ಮಂದಾರಗಿಡಗಳ ಸಾಲುಗಳಲ್ಲಿ ಮಂದವಾಗಿ ಬೀಸುತ್ತದೆ.

**ಯಃ ಪೂರ್ವಾಪರ[೧]ಕೋಟಿಭ್ಯಾಂ ಧಿಕ್ತಟಾನಿ ವಿಘಟ್ಟಯನ್ ।**
**ಸ್ವಗತಂ ವಕ್ತಿ ಮಾಹಾತ್ಮ್ಯಮ್[೨]ಜಗದ್ಗುರುಭರಕ್ಷಮಮ್ ॥ ೧೦೧ ॥**

ಆ ವಿಜಯಾರ್ಧ ಪರ್ವತವು ಪೂರ್ವಾಪರ ತುದಿಗಳಿಂದ ದಿಗ್ಭಾಗಗಳನ್ನು ಮರ್ಧಿಸಿ ಜಗತ್ತಿನ ಭಾರವನ್ನು ವಹಿಸುವುದರಲ್ಲಿ ಸಮರ್ಥವಾದ ತನ್ನ ಮಾಹಾತ್ಮ್ಯವನ್ನು ತಿಳಿಸುತ್ತದೆ. ಇಲ್ಲಿ ಜಗದ್ಗುರುಶಬ್ದಕ್ಕೆ ಮುಂದೆ ಜಿನೇಶ್ವರನಾಗುವ ಮಹಾಬಲನೆಂದೂ ಅರ್ಥವಾಗುತ್ತದೆ.

**[೩]ಅನಾಯತೋ ಯದಿ ವ್ಯೋಮ್ನಿ ವ್ಯವರ್ಧಿಷ್ಯತ ಹೇಲಯಾ ।**
**ತದಾ ಜಗತ್ಕುಟೀಮಧ್ಯೇ [೪]ಸಮಮಾಸ್ಯತ್ಸ್ಯ ಸೋಽಚಲಃ ॥ ೧೦೨ ॥**

ಆ ಪರ್ವತವು ಲೀಲೆಯಿಂದ ಆಕಾಶದಲ್ಲಿ ಉದ್ದವಾಗಿ ಬೆಳೆಯುತ್ತಿದ್ದರೆ ಆಗ ಆ ಬೆಟ್ಟವು ಜಗತ್ತೆಂಬ ಗುಡಿಸಲಿನಲ್ಲಿ ಎಲ್ಲಿ ಅಡಕವಾಗುತ್ತಿದ್ದಿತು? ಅಡಕವಾಗುತ್ತಿರಲಿಲ್ಲವೆಂದರ್ಥವು.

**ಸೋಽಚಲಸ್ತುಂಗವೃತ್ತಿತ್ವಾದ್ವಿಶುದ್ಧಿತ್ವಾನ್ಮಹೋಚ್ಛ್ರಯೈಃ ।**
**ಕುಲಾಚಲೈರಿವ ಸ್ಪರ್ಧಾಂ ಶಿಖರೈಃ ಕರ್ತುಮುದ್ಯತಃ ॥ ೧೦೩ ॥**

ಆ ಪರ್ವತವು ಎತ್ತರವಾಗಿರುವುದರಿಂದಲೂ ಪರಿಶುದ್ಧವಾಗಿರುವುದರಿಂದಲೂ ತನ್ನ ಉನ್ನತವಾದ ಶಿಖರಗಳಿಂದ ಕುಲಪರ್ವತಗಳೊಡನೆ ಹೋರಾಡುವುದಕ್ಕೋಸ್ಕರ ಪ್ರಯತ್ನಪಡುತ್ತಿದೆಯೋ ಎಂಬಂತಿದೆ.

**ತಸ್ಯಾಸ್ತ್ಯುತ್ತರತಃ ಶ್ರೇಣ್ಯಾಮಲಕೇತಿ ಪರಾ ಪುರೀ ।**
**ಸಾಲಕೈಃ ಖೇಚರೀವಕ್ತ್ರೈಃ ಸಾಂಕಂ ಹಸತಿ ಯಾ ವಿಧುಮ್ ॥ ೧೦೪ ॥**

ಆ ಪರ್ವತದ ಉತ್ತರಶ್ರೇಣಿಯಲ್ಲಿ ಅಲಕಾವೆಂದು ಹೆಸರುಳ್ಳ ಶ್ರೇಷ್ಠವಾದ ಪಟ್ಟಣವಿದೆ. ಅದು ಕಲಂಕವುಳ್ಳ ಚಂದ್ರನನ್ನು ಕುರುಳುಕೂದಲುಗಳೊಡನೆ ಕೂಡಿಕೊಂಡಿರುವ ವಿದ್ಯಾಧರಸ್ತ್ರೀಯರ ಮುಖಗಳಿಂದ ಪರಿಹಾಸ್ಯಮಾಡುತ್ತದೆ.

**ಸಾ ತಸ್ಯಾಂ ನಗರೀ ಭಾತಿ ಶ್ರೇಣ್ಯಾಂ ಪ್ರಾಪ್ತಮಹೋದಯಾ ।**
**ಶಿಲಾಯಾಂ ಪಾಂಡುಕಾಖ್ಯಾಯಾಂ ಜೈನೀವಾಭಿಷವಕ್ರಿಯಾ ॥ ೧೦೫ ॥**

ಆ ಉತ್ತರಶ್ರೇಣಿಯಲ್ಲಿ ಬಹಳ ಅತಿಶಯವನ್ನು ಪಡೆದ ಆ ಅಲಕಾಪಟ್ಟಣವು, ಪಾಂಡುಕಶಿಲೆಯಲ್ಲಿ ಜಿನೇಶ್ವರನ ಸಂಬಂಧವಾದ ಜನ್ಮಾಭಿಷೇಕ ಕ್ರಿಯೆಯಂತೆ ಶೋಭಿಸುತ್ತದೆ.

**ಮಹತ್ಯಾಂ [೫]ಶಬ್ದವಿದ್ಯಾಯಾಂ [೬]ಪ್ರಕ್ರಿಯೇವಾತಿವಿಸ್ತೃತಾ ।**
**ಭಗವದ್ದಿವ್ಯಭಾಷಾಯಾಂ ನಾನಾಭಾಷಾತ್ಮತೇವ ಯಾ ॥ ೧೦೬ ॥**

ಆ ಅಲಕಾಪಟ್ಟಣವು, ದೊಡ್ಡ ವ್ಯಾಕರಣಶಾಸ್ತ್ರದಲ್ಲಿ ಪದ ಮೊದಲಾದ ಸಿದ್ಧಿಯಂತೆ, ವಿಸ್ತಾರವೂ ಭಗವಂತನ ದಿವ್ಯಧ್ವನಿಯಲ್ಲಿ ಅನೇಕ ಭಾಷೆಗಳು ಗರ್ಭಿತವಾಗಿರುವಂತೆ, ನಾನಾಭಾಷೆಗಳುಳ್ಳುದೂ ಆಗಿದೆ. ನಾನಾಭಾಷೆಗಳನ್ನಾಡುವ ಜನಗಳುಳ್ಳುದಾಗಿದೆಯೆಂದು ಭಾವವು.

**ಯಾ ಧತ್ತೇ ಸಾಲಮುತ್ತುಂಗಗೋಪುರದ್ವಾರಮುಚ್ಛ್ರಿತಮ್ ।**
**ವೇದಿಕಾವಲಯಂ ಪ್ರಾಂತೇ ಜಂಬೂದ್ವೀಪಸ್ಥಲೀ ಯಥಾ ॥ ೧೦೭ ॥**

೧ ಭಾಗಾಭ್ಯಾಂ. ೨ ಜಗತೋ ಮಹಾಭಾರಕ್ಷಮಂ ಜಗದ್ಗುರೋರ್ಭಾವಿಜಿನಸ್ಯ ಮಹಾಬಲಸ್ಯ ವಾ. ೩ ಅದೀರ್ಘಾ. ೪ ಮಾಮಾನೇ ಸಮ್ ಪೂರ್ವಃ ಲ್ಯಬ್. ೫ ವ್ಯಾಕರಣಶಾಸ್ತ್ರೇ. ೬ ಪದಾದಿಸಿದ್ಧಿಃ

ಆ ಪಟ್ಟಣಕ್ಕೆ ಎತ್ತರವಾದ ಗೋಪುರದ ಬಾಗಿಲುಗಳುಳ್ಳ ಉನ್ನತವಾದ ಕೋಟೆಯಿದೆ. ಜಂಬೂದ್ವೀಪಕ್ಕೆ ಸುತ್ತಲೂ ಇರುವ ವೇದಿಕೆ (ಕಟ್ಟೆ) ಯಂತೆ, ವೇದಿಕೆಯಿದೆ.

**ಯತ್ಖಾತಿಕಾ ಭ್ರಮದ್ಭೃಂಗರುಚಿರಾಂಜನರಂಜಿತೈಃ ।**
**ಪಯೋಜನೇತ್ರೈರಾಭಾತಿ ವೀಕ್ಷಮಾಣೇವ ಖೇಚರಾನ್ ॥ ೧೦೮ ॥**

ಆ ಪಟ್ಟಣದ ಕಂದಕವು ಸುತ್ತುತ್ತಿರುವ ಭ್ರಮರಗಳೆಂಬ ಕಾಡಿಗೆಯಿಂದ ಮನೋಹರಗಳಾದ ತಾವರೆಗಳೆಂಬ ಕಣ್ಣುಗಳಿಂದ ವಿದ್ಯಾಧರರನ್ನು ನೋಡುತ್ತಿದೆಯೋ ಎಂಬಂತೆ, ಶೋಭಿಸುತ್ತಿದೆ.

**ಶೋಭಾಯೈ ಕೇವಲಂ ಯಸ್ಯಾಃ ಸಾಲಃ ಸಪರಿಖಾವೃತಿಃ ।**
**ತತ್ಪಾಲಖಗಭೂಪಾಲಭುಜರಕ್ಷಾಧೃತಾಃ ಪ್ರಜಾಃ ॥ ೧೦೯ ॥**

ಕಂದಕದಿಂದ ಸುತ್ತಲ್ಪಟ್ಟಿರುವ ಕೋಟೆಯು ಆ ಪಟ್ಟಣದ ಶೋಭೆಗೋಸ್ಕರ ಮಾತ್ರವಾಗಿದೆ. ಪ್ರಜೆಗಳ ರಕ್ಷಣೆಯನ್ನಾದರೋ ಆ ನಗರಿಯ ವಿದ್ಯಾಧರರಾಜನ ಭುಜಗಳೇ ಮಾಡುತ್ತವೆ. ಪ್ರಜೆಗಳ ರಕ್ಷಣೆಯನ್ನು ರಾಜನೇ ಮಾಡುತ್ತಿರುವುದರಿಂದ ಕೋಟೆಯು ಶೋಭೆಗೋಸ್ಕರ ಮಾತ್ರವಾಗಿದೆಯೆಂದಭಿಪ್ರಾಯವು.

**ಯಸ್ಯಾಃ ಸೌಧಾವಲೀಶೃಂಗಸಂಗಿನೀ ಕೇತುಮಾಲಿಕಾ ।**
**ಕೈಲಾಸಕೂಟನಿಪತದ್ಧಂಸಮಾಲಾಮ್[೧]ವಿಲಂಘತೇ ॥ ೧೧೦ ॥**

ಆ ಪಟ್ಟಣದ ಉಪ್ಪರಿಗೆಮನೆಗಳ ಶಿಖರಗಳಲ್ಲಿರುವ ಧ್ವಜಪತಾಕೆಗಳ ಪಂಕ್ತಿಯು, ಕೈಲಾಸಪರ್ವತದ ಶಿಖರಗಳಲ್ಲಿ ಹಾರಾಡುತ್ತಿರುವ ಹಂಸಪಕ್ಷಿಗಳ ಪಂಕ್ತಿಯನ್ನು, ಹೋಲುತ್ತದೆ.

**ಗೃಹೇಷು ದೀರ್ಘಿಕಾ ಯಸ್ಯಾಂ ಕಲಹಂಸವಿಕೂಜಿತೈಃ ।**
**ಮಾನಸಂ ವ್ಯಾಹಸಂತೀವ ಪ್ರಫುಲ್ಲಾಂಭೋರುಹಶ್ರಿಯಃ ॥ ೧೧೧ ॥**

ಆ ಪಟ್ಟಣದ ಮನೆಗಳಲ್ಲಿ ಅರಳಿದ ತಾವರೆಗಳ ಶೋಭೆಯುಳ್ಳ ಚದರಬಾವಿಗಳು ಕಲಹಂಸಪಕ್ಷಿಗಳ ಶಬ್ದಗಳಿಂದ ಮಾನಸಸರೋವರವನ್ನು ಪರಿಹಾಸ್ಯಮಾಡುವಂತಿವೆ.

**ಸ್ವಚ್ಛಾಂಬುವಸನಾ ವಾಪ್ಯೋ ನೀಲೋತ್ಪಲ[೨]ವತಂಸಕಾಃ ।**
**ಭಾಂತಿ ಪದ್ಮಾನನಾ ಯತ್ರ ಲಸತ್ಕುವಲಯೇಕ್ಷಣಾಃ ॥ ೧೧೨ ॥**

ಆ ಪಟ್ಟಣದಲ್ಲಿ ನಿರ್ಮಲವಾದ ನೀರೆಂಬ ವಸ್ತ್ರವುಳ್ಳವೂ ಕನ್ನೈದಿಲೆಪುಷ್ಪಗಳೆಂಬ ಕರ್ಣಾಭರಣಗಳುಳ್ಳವೂ ಆದ ಬಾವಿಗಳು ಕಮಲಗಳೆಂಬ ಮುಖಗಳುಳ್ಳವೂ ವಿಕಸಿತವಾದ ನೈದಿಲೆಗಳೆಂಬ ಕಣ್ಣುಗಳುಳ್ಳವೂ ಆಗಿ ಶೋಭಿಸುತ್ತವೆ. (ಬಾವಿಗಳು ಸ್ತ್ರೀಯರಂತೆ ಶೋಭಿಸುತ್ತವೆಂಬ ಅರ್ಥವು ಧ್ವನಿತವಾಗುತ್ತದೆ).

**ಯತ್ರ ಮರ್ತ್ಯಾ ನ ಸಂತ್ಯಜ್ಞಾ ನಾಂಗನಾಃ ಶೀಲವರ್ಜಿತಾಃ ।**
**ನಾನಾರಾಮಾ ನಿವೇಶಾಶ್ಚ ನಾರಾಮಾಃ ಫಲವರ್ಜಿತಾಃ ॥ ೧೧೩ ॥**

ಆ ನಗರದಲ್ಲಿ ಮೂಢರಾದ ಮನುಷ್ಯರಿಲ್ಲ. ದುರಾಚಾರಿಣಿಯರಾದ ಸ್ತ್ರೀಯರೂ ಇಲ್ಲ. ಉದ್ಯಾನಗಳಿಲ್ಲದಿರುವ ವಾಸಸ್ಥಾನಗಳಿಲ್ಲ. ಫಲಗಳಿಲ್ಲದಿರುವ ಉದ್ಯಾನಗಳೂ ಇಲ್ಲ.

**ವಿನಾರ್ಹತ್ಪೂಜಯಾ ಜಾತು ಜಾಯಂತೇ ನ ಜನೋತ್ಸವಾಃ ।**
**ವಿನಾ ಸನ್ಯಾಸವಿಧಿನಾ ಮರಣಂ ಯತ್ರ ನಾಂಗಿನಾಮ್ ॥ ೧೧೪ ॥**

ಆ ಅಲಕಾಪಟ್ಟಣದಲ್ಲಿ ಅರ್ಹತ್ಪರಮೇಶ್ವರರ ಪೂಜೆಯಿಲ್ಲದೆ ಎಂದೂ ಜನಗಳ ಉತ್ಸವಗಳಾಗುವುದಿಲ್ಲ. ಪ್ರಾಣಿಗಳಿಗೆ ಸನ್ಯಾಸ-ಸಮಾಧಿವಿಧಿಯಿಲ್ಲದೆ ಮರಣವಾಗುವುದಿಲ್ಲ.

೧ ಅನುಕರೋತಿ. ೨ ಕರ್ಣಪೂರಾಃ.

**ಸಸ್ಯಾನ್ಯಕೃಷ್ಟಪಚ್ಯಾನಿ ಯತ್ರ ನಿತ್ಯಂ [೧]ಚಕಾಸತಿ ।**
**ಪ್ರಜಾನಾಂ ಸುಕೃತಾನೀವ [೨]ವಿತರಂತಿ ಮಹತ್ಫಲಮ್ ॥ ೧೧೫ ॥**

ಆ ನಗರದಲ್ಲಿ ಪ್ರಜೆಗಳ ಸುಕೃತಗಳಂತೆ ಬಹಳ ಫಲಗಳನ್ನು ಕೊಡುವುವೂ ಉಳದೆ ಬೆಳೆದುವೂ ಆದ ಬೆಳೆಗಳು ಪ್ರಕಾಶಿಸುತ್ತವೆ.

**ಯತ್ರೋದ್ಯಾನೇಷು ಪಾಯ್ಯಂತೇ ಪಯೋದೈರ್ಬಾಲಪಾದಪಾಃ ।**
**ಸ್ತನಂಧಯಾ ಇವಾ[೩]ಪ್ರಾಪ್ತಸ್ಥೇಮಾನೋ ಯತ್ನರಕ್ಷಿತಾಃ ॥ ೧೧೬ ॥**

ಆ ನಗರದ ಉದ್ಯಾನಗಳಲ್ಲಿರುವ ಎಳೆಯದಾದ ವೃಕ್ಷಗಳಿಗೆ ಮೋಡಗಳು ನೀರನ್ನು ಕುಡಿಸುತ್ತವೆ. ಇದು, ಸ್ಥಿರತ್ವವನ್ನು ಹೊಂದದಿರುವ ಎಳೆಯದಾದ ಮಕ್ಕಳನ್ನು ಪ್ರಯತ್ನದಿಂದ ಸಂರಕ್ಷಿಸುವಂತಿದೆ.

**ಮಹಾಬ್ಧಾವಿವ ಸದ್ಧ್ವಾನೇ ಸ್ಫುರದ್ರತ್ನೇ ವಣಿಕ್ಪಥೇ ।**
**ವಿಚರಂತಿ ಜನಾ ಯಸ್ಯಾಂ ಯಾದಾಂಸೀವ ಸಮಂತತಃ ॥ ೧೧೭ ॥**

ಆ ಪಟ್ಟಣದಲ್ಲಿ ಶ್ರೇಷ್ಠವಾದ ಶಬ್ದವುಳ್ಳುದೂ ಪ್ರಕಾಶಮಾನವಾದ ರತ್ನಗಳುಳ್ಳುದೂ ಆದ ದೊಡ್ಡ ಸಮುದ್ರದಲ್ಲಿ ಜಲಜಂತುಗಳು ಎಲ್ಲಾ ಕಡೆಗಳಲ್ಲಿಯೂ ಸಂಚರಿಸುವಂತೆ, ಜನಗಳ ಧ್ವನಿಯೊಡನೆ ಕೂಡಿರುವುದೂ ಪ್ರಕಾಶಮಾನವಾದ ರತ್ನಗಳುಳ್ಳುದೂ ಆದ ಅಂಗಡಿಬೀದಿಗಳಲ್ಲಿ ಜನಗಳು ಸುತ್ತಲೂ ಸಂಚರಿಸುತ್ತಾರೆ.

**ಪದ್ಮೇಷ್ವೇವ [೪]ವಿಕೋಶತ್ವಂ ಪ್ರಮದಾಸ್ವೇವ [೫]ಭೀರುತಾ ।**
**ದಂತಚ್ಛದೇಷ್ವ[೬]ಧರತಾ ಯತ್ರ ನಿಸ್ತ್ರಿಂಶತಾಸಿಷು ॥ ೧೧೮ ॥**

ಆ ನಗರದಲ್ಲಿ ಬಹಳ ಮೊಗ್ಗುಗಳಿರುವಿಕೆಯು ತಾವರೆಗಳಲ್ಲಿ ಮಾತ್ರವಿದೆ. ಭಂಡಾರವಿಲ್ಲದಿರುವಿಕೆಯು ಪಟ್ಟಣದಲ್ಲಿರುವುದಿಲ್ಲ. ಹೆದರುವಿಕೆಯು ಸ್ತ್ರೀಯರಲ್ಲಿ ಮಾತ್ರವಿದೆ. ಜನರಲ್ಲಿಲ್ಲ. ಅಧರತ್ವವು ತುಟಿಗಳಲ್ಲಿ ಮಾತ್ರವಿದೆ. ಪಟ್ಟಣದಲ್ಲಿ ಅಧರತ್ವ(ನೀಚತ್ವ)ವು ಇರುವುದಿಲ್ಲ. ತೀಕ್ಷ್ಣತ್ವವು ಖಡ್ಗಗಳಲ್ಲಿದೆ. ಜನಗಳಲ್ಲಿಲ್ಲ.

**ಯಾಂಚಾ ಕರಗ್ರಹೌ ಯಸ್ಯಾಂ ವಿವಾಹೇಷ್ವೇವ ಕೇವಲಮ್ ।**
**ಮಾಲಾಸ್ವೇವ ಪರಿಮ್ಲಾನಿರ್ದ್ವಿರದೇಷ್ವೇವ ಬಂಧನಮ್ ॥ ೧೧೯ ॥**

ಆ ಪಟ್ಟಣದಲ್ಲಿ ಬೇಡುವಿಕೆಯೂ ಕೈಗಳನ್ನು ಹಿಡಿಯುವಿಕೆಯೂ ಮದುವೆಗಳಲ್ಲಿ ಮಾತ್ರವಿದೆ. ಬೇರೆಕಡೆಯಲ್ಲಿಲ್ಲ. ಬಾಡುವಿಕೆಯು ಹೂವಿನಮಾಲೆಗಳಲ್ಲಿ ಮಾತ್ರವಿದೆ. ಜನಗಳ ಮುಖಗಳಲ್ಲಿಲ್ಲ. ಬಂಧನವು ಆನೆಗಳಲ್ಲಿ ಮಾತ್ರವಿದೆ. ಜನಗಳಿಗೆ ಕಾರಾಗೃಹಬಂಧನವಿಲ್ಲ.

**ಜನೈರತ್ಯುತ್ಸುಕೈರ್ವೀಕ್ಷ್ಯಂ ವಯಸ್ಯಾಂತಂ ಸಪುಷ್ಪಕಮ್ ।**
**ಬಾಣಾಂಕಿತಂ ಯದುದ್ಯಾನಂ ವಧೂವರಮಿವ ಪ್ರಿಯಮ್ ॥ ೧೨೦ ॥**

ಮದುಮಗಳೂ ಮದುಮಗನೂ ಕುತೂಹಲವುಳ್ಳ ಜನರಿಂದ ನೋಡುವುದಕ್ಕೆ ಯೋಗ್ಯರಾಗಿಯೂ ವಯಸ್ಸಿನಿಂದ ಮನೋಹರರಾಗಿಯೂ ಹೂಗಳನ್ನು ಧರಿಸಿಕೊಂಡಿರುವವರಾಗಿಯೂ ಅನ್ಯೋನ್ಯವಾಗಿ ದೃಷ್ಟಿಬಾಣದಿಂದ ಅಂಕಿತರಾಗಿಯೂ ಎಲ್ಲರಿಗೂ ಪ್ರಿಯರಾಗಿಯೂ ಇರುವಂತೆ, ಅಲಕಾನಗರದ ಉದ್ಯಾನವು ಕುತೂಹಲವುಳ್ಳ ಜನರಿಂದ ನೋಡುವುದಕ್ಕೆ ಯೋಗ್ಯವಾಗಿಯೂ ಪಕ್ಷಿಗಳಿಂದ ಮನೋಹರವಾಗಿಯೂ ಹೂಗಳುಳ್ಳುದಾಗಿಯೂ ಬಾಣವೃಕ್ಷಗಳಿಂದ ಕೂಡಿದುದಾಗಿಯೂ ಎಲ್ಲರಿಗೂ ಪ್ರಿಯವಾಗಿಯೂ ಇದೆ. ಉದ್ಯಾನಕ್ಕೆ ವಧೂವರರ ಸಾದೃಶ್ಯವಿದೆಯೆಂದು ಭಾವವು.

೧ ಚಕಾಸ್ಯ ದೀಪ್ತೌ ಬಹೂಕ್ತಿಃ. ೨ ಶತ್ರಂತನಪುಂಸಕಬಹೂಕ್ತಿಃ. ೩ ಅಲಬ್ಧಸ್ಥೈರ್ಯಾಃ. ೪ ಭಂಡಾರರಹಿತತ್ವಂ ವಿಶೇಷಕುಡ್ಮಲಸಹಿತತ್ವಂ ಚ. ೫ ಭೀರುಶಬ್ದವಾಚ್ಯತ್ವಂ ಭೀತಿಶ್ಚ. ೬ ಅಧರಪದವಾಚ್ಯತ್ವಂ ನೀಚತ್ವಂ ಚ.

**ಇತಿ ಪ್ರತೀತಮಾಹಾತ್ಮ್ಯಾ ವಿಜಯಾರ್ಧಮಹೀಭೃತಃ ।**
**[೧]ಸದ್ವೃತ್ತವರ್ಣಸಂಕೀರ್ಣಾ ಸಾ ಪುರೀ ತಿಲಕಾಯತೇ ॥ ೧೨೧ ॥**

ಈ ಪ್ರಕಾರವಾಗಿ ಪ್ರಸಿದ್ಧವಾದ ಮಹಿಮೆಯುಳ್ಳುದೂ ಸದಾಚಾರವುಳ್ಳ ಬ್ರಾಹ್ಮಣ ಮೊದಲಾದ ವರ್ಣದವರೊಡನೆ ಕೂಡಿಕೊಂಡಿರುವುದೂ ಆದ ಆ ಅಲಕಾಪುರಿಯು, ವಿಜಯಾರ್ಧಪರ್ವತವೆಂಬ ರಾಜನಿಗೆ ವರ್ತುಲಾಕಾರವೂ ಬಣ್ಣವುಳ್ಳುದೂ ಆದ ತಿಲಕದಂತೆ ಶೋಭಿಸುತ್ತದೆ.

**ತಸ್ಯಾಃ ಪ್ರಭುರಭೂತ್ಖೇಂ[೨]ದ್ರಮಕುಟಾ[illegible]ಶಾಸನಃ ।**
**ಖಗೇಂದ್ರೋಽತಿಬಲೋ ನಾಮ್ನಾ ಪ್ರತಿಪಕ್ಷಬಲಕ್ಷಯಃ ॥ ೧೨೨ ॥**

ಆ ನಗರಕ್ಕೆ ಶತ್ರುಗಳ ಬಲವನ್ನು ನಾಶಮಾಡುವ ಅತಿಬಲನೆಂಬ ವಿದ್ಯಾಧರೇಶ್ವರನು ರಾಜನಾಗಿದ್ದನು. ಅವನ ಆಜ್ಞೆಯು ವಿದ್ಯಾಧರರಿಗೆಲ್ಲ ಶಿರೋಧಾರ್ಯವಾಗಿದ್ದಿತು.

**ಸ ಧರ್ಮವಿಜಯೀ ಶೂರೋ ಜಿಗೀಷುರರಿಮಂಡಲೇ ।**
**[೩]ಷಾಡ್ಗುಣ್ಯೇನಾಜಯತ್ಕೃತ್ಸ್ನಂ ವಿಪಕ್ಷಮ[೪]ನುಪೇಕ್ಷಿತಮ್ ॥ ೧೨೩ ॥**

ಆ ರಾಜನು ಧರ್ಮಯುದ್ಧವನ್ನು ಮಾಡಿ ವಿಜಯವನ್ನು ಹೊಂದುತ್ತಿದ್ದನು. ಶೂರನಾಗಿಯೂ ವೈರಿ ಸಮೂಹದಲ್ಲಿ ಜಯಿಸಲಿಚ್ಛೆಯುಳ್ಳವನಾಗಿಯೂ ಇದ್ದನು. ಸಂಧಿ ವಿಗ್ರಹ ಮೊದಲಾದ ಆರು ಗುಣಗಳಿಂದ ಆಲಸ್ಯವಿಲ್ಲದೆ ಶತ್ರುಗಳನ್ನೆಲ್ಲ ಜಯಿಸಿದನು.

**ಸ ಕುರ್ವನ್ವೃದ್ಧಸಂಯೋಗಂ ವಿಜಿತೇಂದ್ರಿಯ[೫]ಸಾಧನಃ ।**
**[೬]ಸಾಧನೈಃ ಪ್ರತಿಸಾಮಂತಾನ್ಲೀಲಯೈವೋದಮೂಲಯತ್ ॥ ೧೨೪ ॥**

ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಂಡಿದ್ದ ಆ ವಿದ್ಯಾಧರೇಶ್ವರನು ಜ್ಞಾನವೃದ್ಧವಯೋವೃದ್ಧರ ಸ್ನೇಹವನ್ನು ಮಾಡಿ ತನ್ನ ಸೈನ್ಯಗಳಿಂದ ಶತ್ರು ಸಾಮಂತರಾಜರನ್ನು ಲೀಲಾಮಾತ್ರದಿಂದ ನಿರ್ಮೂಲಮಾಡುತ್ತಿದ್ದನು.

**[೭]ಮಹೋದಯೋ ಮಹೋತ್ತುಂಗ[೮]ವಂಶೋ ಭಾಸ್ವನ್ಮಹಾಕರಃ ।**
**ಮಹಾದಾನೇನ ಸೋಽಪುಷ್ಣಾದಾಶ್ರಿತಾನಿವ ದಿಗ್ದ್ವಿಪಃ ॥ ೧೨೫ ॥**

ಬಹಳ ಉನ್ನತವೂ ಎತ್ತರವಾದ ಬೆನ್ನುಮೂಳೆಯುಳ್ಳುದೂ ಪ್ರಕಾಶಮಾನವಾದ ದೊಡ್ಡ ಸೊಂಡಿಲುಳ್ಳುದೂ ಆದ ದಿಗ್ಗಜವು ಮದಜಲದಿಂದ ತನ್ನ ಆಶ್ರಿತ-ಭ್ರಮರಗಳನ್ನು ಪೋಷಿಸುವಂತೆ, ಬಹಳ ಅಭ್ಯುದಯವುಳ್ಳವನೂ ಶ್ರೇಷ್ಠವಾದ ವಂಶದವನೂ ಪ್ರಕಾಶಮಾನವಾದ ಕೈಗಳುಳ್ಳವನೂ ಆದ ಆ ಅತಿಬಲರಾಜನು ಬಹಳ ದಾನದಿಂದ ತನ್ನ ಆಶ್ರಿತರನ್ನು ಪೋಷಿಸುತ್ತಿದ್ದನು.

**ಲಸದ್ದಂತಾಂಶು ತಸ್ಯಾಸ್ಯಂ ಸಜ್ಯೋತ್ಸ್ನಂ ಬಿಂಬಮೈಂದವಮ್ ।**
**ಜಿತ್ವೇವ ಭ್ರೂಪತಾಕಾಭ್ಯಾಮು[೯]ತ್ಕ್ಷಿಪ್ತಾಭ್ಯಾಂ ವ್ಯರಾಜತ ॥ ೧೨೬ ॥**

ಹೊಳೆಯುತ್ತಿರುವ ಹಲ್ಲುಗಳ ಕಾಂತಿಯುಳ್ಳ ಆ ರಾಜನ ಮುಖವು, ಬೆಳದಿಂಗಳೊಡನೆ ಕೂಡಿಕೊಂಡಿರುವ ಚಂದ್ರಬಿಂಬವನ್ನು ಜಯಿಸಿಯೋ ಎಂಬಂತೆ, ಉನ್ನತವಾದ ಹುಬ್ಬುಗಳೆಂಬ ಪತಾಕೆಗಳಿಂದ ಪ್ರಕಾಶಿಸುತ್ತಿದ್ದಿತು.

೧ ಸುಚರಿತ್ರೈಃ ಕ್ಷತ್ರಿಯಾದಿವರ್ಣೈಃ ಪೂರ್ಣಾ, ಅತ್ಯಂತವರ್ತುಲಾ ಕೃಷ್ಣಾದಿವರ್ಣೈಃ ಪೂರ್ಣಾ. ೨ ಖಚರೇಂದ್ರೈರ್ಮಸ್ತಕಧೃತಾಜ್ಞ ಇತ್ಯರ್ಥಃ. ೩ ಸಂಧಿರ್ನಾವಿಗ್ರಹೋ ಯಾನಮಾಸನಂ ದ್ವೈಧಮಾಶ್ರಯ ಇತ್ಯಮರಃ. ೪ ಅನಾಲಸ್ಯಂ ಯಥಾ ಭವತಿ ತಥಾ. ೫ ಸಮೂಹಃ. ೬ ವಾಹಿನೀಸಾಧನಂ ಚಮೂಃ. ೭ ಉನ್ನತಿರಭ್ಯುದಯಶ್ಚ. ೮ ಅನ್ವಯಃ ಪೃಷ್ಠಾಸ್ಥಿ ಚ. ೯ ಉದ್ಧೃತಾಭ್ಯಾಂ.

**[೧]ಸಪುಷ್ಪಕೇಶಮಸ್ಯಾಭಾದುತ್ತಮಾಂಗಂ [೨]ಸದಾನವಮ್ ।**
**ತ್ರಿಕೂಟಾಗ್ರಮಿವೋಪಾಂತಪತಚ್ಚಾಮರನಿರ್ಝರಮ್ ॥ ೧೨೭ ॥**

ಯಾವಾಗಲೂ ಹೊಸದಾಗಿರುವುದೂ ಪುಷ್ಪಸಹಿತವೂ ಆದ ಕೂದಲುಗಳುಳ್ಳ ಈ ಅತಿಬಲರಾಜನ ಮಸ್ತಕವು, ರಾಕ್ಷಸರೊಡನೆ ಕೂಡಿಕೊಂಡಿರುವವನೂ ಪುಷ್ಪಕವಿಮಾನಾಧಿಪತಿಯೂ ಆದ ರಾವಣನುಳ್ಳ ತ್ರಿಕೂಟಪರ್ವತದ ಅಗ್ರಭಾಗವು ಗಿರಿನದಿಗಳುಳ್ಳುದಾಗಿ ಶೋಭಿಸುವಂತೆ, ಸಮೀಪದಲ್ಲಿ ಬೀಸಲ್ಪಡುತ್ತಿರುವ ಚಾಮರಗಳುಳ್ಳುದಾಗಿ ಶೋಭಿಸುತ್ತಿದ್ದಿತು.

**ಪೃಥು ವಕ್ಷಃಸ್ಥಲಂ ಹಾರಿ ಹಾರವಲ್ಲೀಪರಿಷ್ಕೃತಮ್ ।**
**ಕ್ರೀಡಾದ್ವೀಪಾಯಿತಂ ಲಕ್ಷ್ಮ್ಯಾಃ ಸ ಬಭಾರ ಗುಣಾಂಬುಧಿಃ ॥ ೧೨೮ ॥**

ಬಹಳ ಗುಣವಂತನಾದ ಆ ರಾಜನು ಪುಷ್ಪಮಾಲೆಗಳೆಂಬ ಲತೆಗಳಿಂದ ಕೂಡಿರುವುದೂ ಮನೋಹರವೂ ವಿಸ್ತಾರವೂ ಲಕ್ಷ್ಮೀದೇವಿಯು ಕ್ರೀಡಿಸುವ ದ್ವೀಪದಂತಿರುವುದೂ ಆದ ಎದೆಯನ್ನು ಧರಿಸಿದ್ದನು.

**ಕರೌ ಕರಿಕರಾಕಾರಾವೂರೂ ಕಾಮೇಷುಧೀಯಿತೌ ।**
**[೩]ಕುರುವಿಂದಾಕೃತೀ ಜಂಘೇ ಕ್ರಮಾವಂಬುಜಸಚ್ಛವೀ ॥ ೧೨೯ ॥**

ಅವನ ಕೈಗಳು ಆನೆಯ ಸೊಂಡಿಲಿನಂತಿದ್ದುವು. ತೊಡೆಗಳು ಮನ್ಮಥನ ಬಾಣಗಳ ಬತ್ತಲಿಕೆಯಂತಿದ್ದುವು. ಕಣಕಾಲುಗಳು ಪದ್ಮರಾಗರತ್ನದಂತಿದ್ದುವು. ಪಾದಗಳು ತಾವರೆಗೆ ಸಮಾನಗಳಾಗಿದ್ದುವು.

**[೪]ಪ್ರತಿಪ್ರತೀಕಮಿತ್ಯಸ್ಯ [೫]ಕೃತಂ ವರ್ಣನಯಾನಯಾ ।**
**ಯದ್ಯಚ್ಚಾರೂಪಮಾವಸ್ತು ತತ್ತತ್ತಸ್ಯಾಂಗೈರ್ಜಿಗೀಷತಃ ॥ ೧೩೦ ॥**

ಸುಂದರವಾದ ಉಪಮಾಪದಾರ್ಥಗಳನ್ನೆಲ್ಲ ತನ್ನ ಅವಯವಗಳಿಂದ ಜಯಿಸುವ ಈ ರಾಜನ ಪ್ರತಿಯೊಂದು ಅವಯವವನ್ನು ವರ್ಣನೆಮಾಡುವುದು ಸಾಕು. ವರ್ಣಿಸಿತೀರದೆಂದು ಭಾವವು.

**ಮನೋಹರಾಂಗೀ ತಸ್ಯಾಭೂತ್ಪ್ರಿಯಾ ನಾಮ್ನಾ ಮನೋಹರಾ ।**
**ಮನೋಭವಸ್ಯ ಜೈತ್ರೇಷುರಿವ ಯಾ ರೂಪಶೋಭಯಾ ॥ ೧೩೧ ॥**

ಆ ಅತಿಬಲರಾಜನಿಗೆ ಮನೋಹರವಾದ ಶರೀರವುಳ್ಳ ''ಮನೋಹರಾ'' ಎಂದು ಹೆಸರುಳ್ಳ ಪತ್ನಿಯಿದ್ದಳು. ಆಕೆಯು ರೂಪಿನ ಶೋಭೆಯಿಂದ ಮನ್ಮಥನ ಜಯಶೀಲವಾದ ಬಾಣದಂತಿದ್ದಳು.

**ಸ್ಮಿತಪುಷ್ಪೋಜ್ವಲಾ ಭರ್ತುಃ ಪ್ರಿಯಾಸೀಲ್ಲತಿಕೇವ ಸಾ ।**
**ಹಿತಾನುಬಂಧಿನೀ ಜೈನೀ[೬]ವಿದ್ಯೇವ ಚ ಯಶಸ್ಕರೀ ॥ ೧೩೨ ॥**

ಆ ಮನೋಹರಾದೇವಿಯು ಲತೆಯಂತೆ ಮುಗುಳುನಗೆಯೆಂಬ ಪುಷ್ಪಗಳಿಂದ ಪ್ರಕಾಶಮಾನಳೂ ಹಿತವನ್ನುಂಟುಮಾಡುವ ಜೈನಾಗಮದಂತೆ ಯಶಸ್ಸನ್ನುಂಟು ಮಾಡುವವಳೂ ಪತಿಗೆ ಪ್ರಿಯಳೂ ಆಗಿದ್ದಳು.

**ತಯೋರ್ಮಹಾಬಲ[೭]ಖ್ಯಾತಿರಭೂತ್ಸೂನುರ್ಮಹೋದಯಃ ।**
**ಯಸ್ಯ [೮]ಜಾತಾವಭೂತ್ಪ್ರೀತಿಃ ಪಿಂಡೀಭೂತೇವ ಬಂಧುಷು ॥ ೧೩೩ ॥**

೧ ಪುಷ್ಪಕಚಸಹಿತಂ ಪುಷ್ಪಕವಿಮಾನೇಶಸಹಿತಂ ಚ. ೨ ನಿತ್ಯಂ ನವಂ ಸರಾಕ್ಷಸಂ ಚ. ೩ ಪದ್ಮರಾಗರತ್ನಾಂಕುರಾಕೃತೀ. ೪ ಪ್ರತ್ಯಂಗಂ. ೫ ಅಲಂ. ೬ ಜೈನಾಗಮ ಇವ. ೭ ನಾಮ. ೮ ಜನನೇ.

ಆ ದಂಪತಿಗಳಿಗೆ ಮಹಾಭಾಗ್ಯಶಾಲಿಯಾದ ಮಹಾಬಲನೆಂಬ ಮಗನು ಹುಟ್ಟಿದನು. ಅವನು ಜನಿಸುತ್ತಿರಲಾಗಿ ಬಂಧುಗಳಿಗೆ ಬಹಳ ಪ್ರೀತಿಯುಂಟಾಗಿದ್ದಿತು.

**ಕಲಾಸು ಕೌಶಲಂ ಶೌರ್ಯಂ ತ್ಯಾಗಃ ಪ್ರಜ್ಞಾ ಕ್ಷಮಾ ದಯಾ ।**
**ಧೃತಿಃ ಸತ್ಯಂ ಚ [೧]ಶೌಚಂ ಚ ಗುಣಾಸ್ತಸ್ಯ ನಿಸರ್ಗಜಾಃ ॥ ೧೩೪ ॥**

ವಿದ್ಯೆಗಳಲ್ಲಿ ನಿಪುಣತೆ ಪರಾಕ್ರಮ ದಾನ ಬುದ್ಧಿ ಕ್ಷಮೆ ದಯೆ ಧೈರ್ಯ ಸತ್ಯ ಲೋಭವಿಲ್ಲದಿರುವಿಕೆ ಇವು ಮೊದಲಾದುವು ಆ ಮಹಾಬಲನ ಸ್ವಾಭಾವಿಕವಾದ ಗುಣಗಳಾಗಿದ್ದುವು.

**ಸ್ಪರ್ಧಯೇವ ವಪುರ್ವೃದ್ಧ್ಯಾ ವಿವೃದ್ಧಾಃ ಪ್ರತ್ಯಹಂ ಗುಣಾಃ ।**
**ಸ್ಪರ್ಧಾ ಹ್ಯೇಕತ್ರ [೨]ಭೂಷ್ಣೂನಾಂ ಕ್ರಿಯಾಸಾಮ್ಯಾದ್ವಿವರ್ಧತೇ ॥ ೧೩೫ ॥**

ಪ್ರತಿದಿವಸವೂ ಅವನ ಶರೀರವು ವೃದ್ಧಿಯಾದಹಾಗೆಲ್ಲ, ಈರ್ಷೆಯಿಂದಲೋ ಎಂಬಂತೆ, ಗುಣಗಳೂ ವೃದ್ಧಿಹೊಂದುತ್ತಿದ್ದುವು. ಒಂದೇಕಡೆಯಲ್ಲಿರುವವರಿಗೆ ಸಮಾನವಾದ ಕೆಲಸದಿಂದ ಈರ್ಷೆಯು ಹೆಚ್ಚುತ್ತದೆ. ಶರೀರವು ವೃದ್ಧಿ ಹೊಂದಿದಹಾಗೆಲ್ಲ ಗುಣಗಳೂ ವೃದ್ಧಿಹೊಂದಿದುವೆಂದು ಭಾವವು.

**ರಾಜವಿದ್ಯಾಶ್ಚತಸ್ರೋಽಪಿ ಸೋಧ್ಯೈಷ್ಟ ಗುರುಸನ್ನಿಧೌ ।**
**ಸ ತಾಭಿರ್ವಿಬಭೌ ಭಾಭಿಃ ಸ್ವಾಭಿರುದ್ಯನ್ನಿವಾಂಶುಮಾನ್ ॥ ೧೩೬ ॥**

ಆ ಮಹಾಬಲನು ಗುರುಸಮೀಪದಲ್ಲಿ ನಾಲ್ಕು ಪ್ರಕಾರವಾದ ರಾಜವಿದ್ಯೆಗಳನ್ನು ಕಲಿತನು. ಉದಯಿಸುತ್ತಿರುವ ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಿಸುವಂತೆ, ಮಹಾಬಲನು ಆ ರಾಜವಿದ್ಯೆಗಳಿಂದ ಶೋಭಿಸಿದನು.

**ಸೋಧೀಯನ್ನಖಿಲಾ ವಿದ್ಯಾ [೩]ಗುರುಸಂಸ್ಕಾರಯೋಗತಃ ।**
**ದಿದೀಪೇಧಿಕಮ[೪]ರ್ಚಿಷ್ಮಾನಿವಾನಿಲಸಮಾಗಮಾತ್ ॥ ೧೩೭ ॥**

ಪ್ರಬಲವಾದ ಜನ್ಮಾಂತರಸಂಸ್ಕಾರದಿಂದ ಆ ಮಹಾಬಲನು ಸಮಸ್ತವಿದ್ಯೆಗಳನ್ನೂ ಕಲಿತು, ಬೆಂಕಿಯು ಗಾಳಿಯ ಸಂಬಂಧದಿಂದ ಹೆಚ್ಚಾಗಿ ಪ್ರಜ್ವಲಿಸುವಂತೆ, ಅಧಿಕವಾಗಿ ಶೋಭಿಸುತ್ತಿದ್ದನು.

**ಪ್ರಶ್ರಯಾದ್ಯಾನ್ಗುಣಾನಸ್ಯ ಮತ್ವಾ ಯೋಗ್ಯತ್ವಪೋಷಕಾನ್ ।**
**ಯೌವರಾಜ್ಯಪದಂ ತಸ್ಮೈ ಸೋ[೫]ನುಮೇನೇ ಖಗಾಧಿಪಃ ॥ ೧೩೮ ॥**

ಅತಿಬಲರಾಜನು, ಈ ಮಹಾಬಲನ ವಿನಯ ಮೊದಲಾದ ಗುಣಗಳು ಅವನ ಯೋಗ್ಯತೆಯನ್ನು ಹೆಚ್ಚಿಸುವುವುಗಳೆಂದು ತಿಳಿದು, ಅವನಿಗೆ ಯುವರಾಜ ಪದವಿಯನ್ನು ಕೊಟ್ಟನು.

**ಸಂವಿಭಕ್ತಾ ತಯೋರ್ಲಕ್ಷ್ಮೀಶ್ಚಿರಂ ರೇಜೇ ಧೃತಾಯತಿಃ ।**
**ಹಿಮವತ್ಯಂಬುರಾಶೌ ಚ ವ್ಯೋಮಗಂಗೇವ ಸಂಗತಾ ॥ ೧೩೯ ॥**

ರಾಜ್ಯಲಕ್ಷ್ಮಿಯು ಅತಿಬಲನಲ್ಲಿಯೂ ಮಹಾಬಲನಲ್ಲಿಯೂ ವಿಭಾಗವಾಗಿ, ಹಿಮವತ್ಪರ್ವತದಲ್ಲಿಯೂ ಸಮುದ್ರದಲ್ಲಿಯೂ ಸಂಬಂಧಿಸಿಕೊಂಡಿರುವ ಗಂಗಾನದಿಯಂತೆ, ಬಹು ಕಾಲದವರೆಗೂ ವಿಸ್ತಾರವಾಗಿ ಶೋಭಿಸುತ್ತಿದ್ದಳು.

**ಸ ರಾಜಾ ತೇನ ಪುತ್ರೇಣ [೬]ಪುತ್ರೀ ಬಹುಸುತೋಪ್ಯಭೂತ್ ।**
**ನಭೋಭಾಗೋ ಯಥಾರ್ಕೇಣ ಜ್ಯೋತಿಷ್ಮಾನ್ನಾಪರೈರ್ಗ್ರಹೈಃ ॥ ೧೪೦ ॥**

ಆಕಾಶಪ್ರದೇಶವು, ಬೇರೆ ಗ್ರಹಗಳಿದ್ದರೂ ಸೂರ್ಯನಿಂದ ಜ್ಯೋತಿಷ್ಮಾನ್—ಪ್ರಕಾಶವುಳ್ಳದು ಆಗಿರುವಂತೆ, ಆ ಅತಿಬಲನು ಬಹಳ ಮಕ್ಕಳುಳ್ಳವನಾಗಿದ್ದರೂ ಆ ಮಹಾಬಲನಿಂದ ಪುತ್ರವಂತನಾಗಿದ್ದನು. ಎಲ್ಲಾ ಮಕ್ಕಳಿಗಿಂತಲೂ ಮಹಾಬಲನು ಶ್ರೇಷ್ಠನಾಗಿದ್ದನೆಂದಭಿಪ್ರಾಯವು.

೧ ನಿರ್ಲೋಭತ್ವಂ. ೨ ಭವನಶೀಲಾನಾಂ. ೩ ಜನ್ಮಾಂತರಾಗತಮಹಾಸಂಸ್ಕಾರಸಂಬಂಧಾತ್. ೪ ಅಗ್ನಿಃ. ೫ ದದಾತಿ ಸ್ಮ. ೬ ಪುತ್ರವಾನ್.

**ಅಥಾನ್ಯೇದ್ಯುರಸೌ ರಾಜಾ ನಿರ್ವೇದಂ ವಿಷಯೇಷ್ವಗಾತ್ ।**
**ವಿತೃಷ್ಣಃ ಕಾಮಭೋಗೇಷು ಪ್ರವ್ರಜ್ಯಾಯೈ ಕೃತೋದ್ಯಮಃ ॥ ೧೪೧ ॥**

ಅನಂತರದಲ್ಲಿ ಈ ಅತಿಬಲರಾಜನು ಒಂದು ದಿನ ಇಂದ್ರಿಯವಿಷಯಗಳಲ್ಲಿ ವೈರಾಗ್ಯವನ್ನು ಹೊಂದಿ ಕಾಮಭೋಗಗಳಲ್ಲಿ ಅಭಿಲಾಷೆಯಿಲ್ಲದವನಾಗಿ ದೀಕ್ಷೆಗೋಸ್ಕರ ಪ್ರಯತ್ನಪಟ್ಟನು.

**ವಿಷಪುಷ್ಪಮಿವಾತ್ಯಂತವಿಷಮಂ ಪ್ರಾಣಹಾರಕಮ್ ।**
**ಮಹಾ[೧]ದೃಷ್ಟಿ ವಿಷ[೨]ಸ್ಥಾನಮಿವ ವಾತ್ಯಂತಭೀಷಣಮ್ ॥ ೧೪೨ ॥**

**ನಿರ್ಭುಕ್ತಮಾಲ್ಯವದ್ಭೂಯೋ ನ ಭೋಗ್ಯಂ ಮಾನಶಾಲಿನಾಮ್ ।**
**ದುಷ್ಕಲತ್ರಮಿವಾಪಾಯಿ ಹೇಯಂ ರಾಜ್ಯಮಮಂಸ್ತ ಸಃ ॥ ೧೪೩ ॥**

ಆ ಅತಿಬಲರಾಜನು ರಾಜ್ಯವನ್ನು, ವಿಷಪುಷ್ಪದಂತೆ, ಅತ್ಯಂತ ವಿಷಮವನ್ನಾಗಿಯೂ, ಪ್ರಾಣಾಪಹಾರಿಯನ್ನಾಗಿಯೂ, ಸರ್ಪವು ವಾಸಮಾಡುವ ಹುತ್ತದಂತೆ, ಬಹಳ ಭಯಂಕರವನ್ನಾಗಿಯೂ, ಚೆನ್ನಾಗಿ ಭೋಗಿಸಿ ಬಿಸುಟ ಪುಷ್ಪಮಾಲಿಕೆಯಂತೆ ಮಾನವಂತರಿಗೆ ಪುನಃ ಭೋಗಿಸುವುದಕ್ಕೆ ಯೋಗ್ಯವಲ್ಲದುದನ್ನಾಗಿಯೂ ದುಷ್ಟಳಾದ ಪತ್ನಿಯಂತೆ, ಅಪಾಯಕರವನ್ನಾಗಿಯೂ ತಿಳಿದನು.

**ಭೂಯೋಪ್ಯಚಿಂತಯದ್ಧೀಮಾನಿಮಾಂ ಸಂಸಾರವಲ್ಲರೀಮ್ ।**
**[೩]ಉಚ್ಛೇತ್ಸ್ಯಾಮಿ ಮಹಾಧ್ಯಾನಕುಠಾರೇಣ [೪]ಕ್ಷಮೀಭವನ್ ॥ ೧೪೪ ॥**

ಪುನಃ ಆ ಬುದ್ಧಿವಂತನಾದ ಅತಿಬಲನು ''ಈ ಸಂಸಾರವೆಂಬ ಲತೆಯನ್ನು ಮಹಾಧ್ಯಾನವೆಂಬ ಕೊಡಲಿಯಿಂದ ಕತ್ತರಿಸುವೆನು'' ಎಂದು ಶಾಂತನಾಗಿ ಆಲೋಚಿಸಿದನು.

**ಮೂಲಂ ಮಿಥ್ಯಾತ್ವಮೇತಸ್ಯಾಃ ಪುಷ್ಪಂ [೫]ಜಾತ್ಯಾದಿಕಂ ಫಲಮ್ ।**
**[೬]ವ್ಯಸನಾನ್ಯಸುಭೃದ್ಭೃಂಗೈಃ ಸೇವ್ಯೇಯಂ ವಿಷಯಾ[೭]ಸವೇ ॥ ೧೪೫ ॥**

''ಈ ಸಂಸಾರವೆಂಬ ಲತೆಗೆ ಮಿಥ್ಯಾತ್ವವು ಬೇರು-ಬುಡವಾಗಿದೆ. ಜನ್ಮಜರಾಮರಣಗಳು ಪುಷ್ಪಗಳಾಗಿವೆ. ದುಃಖಗಳು ಫಲಗಳಾಗಿವೆ. ಪ್ರಾಣಿಗಳೆಂಬ ದುಂಬಿಗಳು ಇಂದ್ರಿಯವಿಷಯವೆಂಬ ಪುಷ್ಪರಸನಿಮಿತ್ತವಾಗಿ ಈ ಲತೆಯನ್ನು ಸೇವಿಸುತ್ತವೆ.

**ಯೌವನಂ ಕ್ಷಣಭಂಗೀದಂ ಭೋಗಾ ಭುಕ್ತಾ ನ ತೃಪ್ತಯೇ ।**
**[೮]ಪ್ರತ್ಯುತಾತ್ಯಂತಮೇವೈತೈಸ್ತೃಷ್ಣಾ[೯]ರ್ಚಿರಭಿವರ್ಧತೇ ॥ ೧೪೬ ॥**

ಯೌವನವು ಕ್ಷಣಭಂಗುರವಾದುದು. ಭೋಗಗಳನ್ನು ಎಷ್ಟು ಭೋಗಿಸಿದರೂ ತೃಪ್ತಿಯಾಗುವುದಿಲ್ಲ. ಇದಕ್ಕೆ ಪ್ರತಿಯಾಗಿ ಈ ಭೋಗಗಳಿಂದ ಅಭಿಲಾಷೆಯೆಂಬ ಬೆಂಕಿಯು ಬಹಳವಾಗಿ ವೃದ್ಧಿಹೊಂದುತ್ತದೆ.

**ಶರೀರಮಿದಮತ್ಯಂತ[೧೦]ಪೂತಿ ಬೀಭತ್ಸ್ವಶಾಶ್ವತಮ್ ।**
**[೧೧]ವಿಲಾಸ್ಯತೇದ್ಯ ವಾ ಶ್ವೋ ವಾ ಮೃತ್ಯುವಜ್ರವಿಚೂರ್ಣಿತಮ್ ॥**

೧ ಸರ್ಪವಿಶೇಷಃ. ೨ ವಲ್ಮೀಕಂ. ೩ ಖಂಡಯಿಷ್ಯಾಮಿ. ೪ ಶಾಂತಸ್ಸನ್ ಸಮರ್ಥಸ್ಸನ್ವಾ. ೫ ಜನ್ಮಜರಾಮರಣಂ. ೬ ದುಃಖಾನಿ. ೭ ಮಕರಂದನಿಮಿತ್ತಂ, ಚರ್ಮಣಿ ದ್ವೀಪಿನಂ ಹಂತಿ ದಂತಯೋರ್ಹಂತಿ ಕುಂಜರಮಿತ್ಯಾದಿವತ್. ೮ ಪುನಃ ಕಿಮಿತಿ ಚೇತ್. ೯ ಅಗ್ನಿಃ. ೧೦ ದುರ್ಗಂಧಂ. ೧೧ ವಿಲಯಮೇಷ್ಯತಿ.

ಈ ಶರೀರವು ಬಹಳ ದುರ್ಗಂಧವಾದುದು, ವಿಕಾರವಾದುದು, ಅಶಾಶ್ವತವಾದುದು. ಮೃತ್ಯುವೆಂಬ ಸಿಡಿಲಿನಿಂದ ಚೂರ್ಣಮಾಡಲ್ಪಟ್ಟುದಾಗಿ ಇಂದೋ ನಾಳೆಯೋ ನಾಶವಾಗುವುದು.

**ಶರೀರವೇಣುರಸ್ವಂತಫಲೋ ದುರ್ಗ್ರಂಥಿ[1]ಸಂತತಃ ।**
**[2]ಪ್ಲುಷ್ಟಃ ಕಾಲಾಗ್ನಿನಾ ಸದ್ಯೋ[3]ಭಸ್ಮಸಾತ್ಸ್ಯಾತ್ಸ್ಫುರದ್ಧ್ವನಿಃ ॥ ೧೪೮ ॥**

ಈ ಶರೀರವೆಂಬ ಬಿದುರು ಕೊನೆಯಲ್ಲಿ ದುಃಖವೆಂಬ ಫಲವುಳ್ಳದಾಗಿದೆ. ಎಡೆಬಿಡದೆ ಪರಿಗ್ರಹಗಳೆಂಬ ಕೆಟ್ಟಗಂಟುಗಳುಳ್ಳದಾಗಿದೆ. ಮೃತ್ಯುವೆಂಬ ಕಾಡ್ಗಿಚ್ಚಿನಿಂದ ಸುಟ್ಟು ಶಬ್ದವನ್ನು ಮಾಡುತ್ತ ಕೂಡಲೆ ಬೂದಿಯಾಗಿ ಹೋಗುವುದು.

**ಬಂಧವೋ ಬಂಧನಾನ್ಯೇತೇ ಧನಂ ದುಃಖಾನುಬಂಧನಮ್ ।**
**ವಿಷಯಾ ವಿಷಸಂಪೃಕ್ತವಿಷಮಾಶನಸನ್ನಿಭಾಃ ॥ ೧೪೯ ॥**

ಈ ಬಂಧುಗಳು ಬಂಧನಗಳಾಗಿದ್ದಾರೆ. ದ್ರವ್ಯವು ದುಃಖವನ್ನುಂಟು ಮಾಡತಕ್ಕುದಾಗಿದೆ. ವಿಷಯಸುಖಗಳು ವಿಷಮಿಶ್ರವಾದ ವಿಷಮಭೋಜನಕ್ಕೆ ಸಮಾನಗಳಾಗಿವೆ.

**ತದಲಂ ರಾಜ್ಯಭೋಗೇನ ಲಕ್ಷ್ಮೀ[4]ರತಿಚಲಾಚಲಾ ।**
**ಸಂಪದೋ ಜಲಕಲ್ಲೋಲವಿಲೋಲಾಃ ಸರ್ವಮಧ್ರುವಮ್ ॥ ೧೫೦ ॥**

ಲಕ್ಷ್ಮಿಯು ಅತ್ಯಂತ ಚಪಲಳು. ಸಂಪತ್ತುಗಳು ನೀರಿನ ತೆರೆಮಾಲೆಗಳಂತೆ ಚಂಚಲಗಳಾಗಿವೆ. ಎಲ್ಲವೂ ಅಸ್ಥಿರವಾಗಿದೆ. ಆದುದರಿಂದ ರಾಜ್ಯಭೋಗವು ಸಾಕು''

**ಇತಿ ನಿಶ್ಚಿತ್ಯ ಧೀರೋಽಸಾವಭಿಷೇಕಪುರಸ್ಸರಮ್ ।**
**ಸೂನವೇ ರಾಜ್ಯಸರ್ವಸ್ವಮ[5]ದಿತಾತಿಬಲಸ್ತದಾ ॥ ೧೫೧ ॥**

ಹಿಂದೆಹೇಳಿದ ಪ್ರಕಾರವಾಗಿ ನಿಶ್ಚಯಿಸಿ ಈ ಧೀರನಾದ ಅತಿಬಲರಾಜನು ಆಗ ರಾಜ್ಯವನ್ನೆಲ್ಲ ಮಗನಾದ ಮಹಾಬಲನಿಗೆ ಕೊಟ್ಟು ಪಟ್ಟಾಭಿಷೇಕವನ್ನು ಮಾಡಿದನು.

**ತತೋ ಗಜ ಇವಾಪೇತಬಂಧನೋ ನಿಃಸೃತೋ ಗೃಹಾತ್ ।**
**ಬಹುಭಿಃ ಖೇಚರೈಃ ಸಾರ್ಧಂ ದೀಕ್ಷಾಂ ಸ ಸಮುಪಾದದೇ ॥ ೧೫೨ ॥**

ಆಮೇಲೆ ಬಂಧನದಿಂದ ಬಿಡಲ್ಪಟ್ಟ ಆನೆಯಂತೆ ಆ ಅತಿಬಲನು ಮನೆಯಿಂದ ಹೊರಟುಹೋಗಿ ಅನೇಕವಿದ್ಯಾಧರರೊಡನೆ ದೀಕ್ಷೆಯನ್ನು ತೆಗೆದುಕೊಂಡನು.

**ಜಿಗೀಷುಬಲವದ್ಗು[6]ಪ್ತ್ಯಾ[7]ಸಮಿತ್ಯಾ ಚ ಸುಸಂವೃತಮ್ ।**
**ಮಹಾನಾಗಫಣಾರತ್ನಮಿವ ಚಾ[8]ನ್ಯೈ[9]ರ್ದುರಾಸದಮ್ ॥ ೧೫೩ ॥**

ಆ ಅತಿಬಲನ ತಪಸ್ಸು, ರಕ್ಷಣೆಯಿಂದಲೂ ಯುದ್ಧದಿಂದಲೂ ಜಯಿಸಲಿಚ್ಛಿಸುವ ಸೈನ್ಯದಂತೆ, ಮನೋವಾಕ್ಕಾಯಗಳ ಗುಪ್ತಿಗಳಿಂದಲೂ ಪಂಚಸಮಿತಿಗಳಿಂದಲೂ ವ್ಯಾಪ್ತವಾಗಿದ್ದಿತು. ದೊಡ್ಡ ಸರ್ಪದಹೆಡೆಯಲ್ಲಿರುವ ರತ್ನವು ಬೇರೆಯವರಿಂದ ಹೊಂದಲಶಕ್ಯವಾಗಿರುವಂತೆ, ಇವನ ತಪಸ್ಸು ಬೇರೆಯವರಿಂದ ಧರಿಸಲಶಕ್ಯವಾಗಿದ್ದಿತು.

**ನಾಭಿಕಾಲೋದ್ಭವತ್ಕಲ್ಪತರುಜಾಲಮಿವಾಂಬರೈಃ ।**
**ಭೂಷಣೈಶ್ಚ ಪರಿತ್ಯಕ್ತಮಪೇತಂ ದೋಷವತ್ತಯಾ ॥ ೧೫೪ ॥**

೧ ನಿರಂತರಃ. ೨ ದಗ್ಧಃ. ೩ ಭಸ್ಮಾಧೀನಂ. ೪ ಅತ್ಯಂತಚಂಚಲಾ. ೫ ಡುದಾಞ್ ದಾನೇ ಲುಙ್. ೬ ರಕ್ಷಣೇನ ತ್ರಿಗುಪ್ತ್ಯಾ ಚ. ೭ ಯುದ್ಧೇನ ಪಂಚಸಮಿತ್ಯಾ ಚ. ೮ ಸಂದರ್ಶನಿಭಿರಪರೈಶ್ಚ. ೯ ದುಷ್ಪ್ರಾಪ್ಯಂ ದುರ್ಗಮಂ ಚ.

ನಾಭಿರಾಜಮನುವಿನ ಕಾಲದಲ್ಲಿ ವಸ್ತ್ರಗಳಿಂದಲೂ ಆಭರಣಗಳಿಂದಲೂ ಬಿಡಲ್ಪಟ್ಟ ಕಲ್ಪವೃಕ್ಷಗಳ ಸಮೂಹದಂತೆ, ಅತಿಬಲನ ತಪಸ್ಸು ವಸ್ತ್ರಗಳಿಂದಲೂ ಆಭರಣಗಳಿಂದಲೂ ಬಿಡಲ್ಪಟ್ಟು ನಿರ್ದೋಷವಾಗಿದ್ದಿತು.

**[1]ಉದರ್ಕಸುಖಹೇತುತ್ವಾದ್ಗುರೂಣಾಮಿವ ಸದ್ವಚಃ ।**
**ನಿಯತಾವಾಸಶೂನ್ಯತ್ವಾತ್ಪ[2]ತತಾಮಿವ ಮಂಡಲಮ್ ॥ ೧೫೫ ॥**

ಆ ತಪಸ್ಸು ಮುಂದೆ ಉಂಟಾಗುವ ಸುಖಕ್ಕೆ ಕಾರಣವಾಗಿದ್ದುದರಿಂದ ಗುರುಗಳ ವಚನದಂತೆಯೂ ಗೊತ್ತಾದ ವಾಸಸ್ಥಾನವಿಲ್ಲದಿದ್ದುದರಿಂದ ಪಕ್ಷಿಗಳ ಗುಂಪಿನಂತೆಯೂ ಇದ್ದಿತು.

**ವಿಷಾದಭಯದೈನ್ಯಾದಿಹಾನೇಃ ಸಿದ್ಧಾಸ್ಪದೋಪಮಮ್ ।**
**[3]ಕ್ಷಮಾಧಾರತಯಾ [4]ವಾತವಲಯಸ್ಥಿತಿಮುದ್ವಹನ್ ॥ ೧೫೬ ॥**

ಆ ತಪಶ್ಚರಣದಲ್ಲಿ ಖೇದವಾಗಲಿ, ಭಯವಾಗಲಿ, ದೀನತ್ವವಾಗಲಿ ಇಲ್ಲದಿದ್ದುದರಿಂದ ಅದು ಸಿದ್ಧರ ಸ್ಥಾನಕ್ಕೆ ಸಮಾನವಾಗಿದ್ದಿತು. ಕ್ಷಮೆಗೆ ಆಧಾರವಾಗಿದ್ದುದರಿಂದ ಭೂಮಿಗೆ ಆಧಾರವಾದ ಘನೋದಧಿ ಮೊದಲಾದ ಗಾಳಿಗಳ ಸಮೂಹದಂತಿದ್ದಿತು.

**ನಿಃಸಂಗತ್ವಾದಿವಾಭ್ಯಸ್ತಪರಮಾಣುವಿಚೇಷ್ಟಿತಮ್ ।**
**ನಿರ್ವಾಣಸಾಧನತ್ವಾಚ್ಚ ರತ್ನತ್ರಯಮಿವಾಮಲಮ್ ॥ ೧೫೭ ॥**

ಆ ತಪಶ್ಚರಣವು ಬಾಹ್ಯಾಭ್ಯಂತರಪರಿಗ್ರಹರಹಿತವಾಗಿದ್ದುರಿಂದ ಬೇರೆ ಬೇರೆಯಾಗಿರುವ ಪರಮಾಣುಗಳಂತಿದ್ದಿತು. ಮೋಕ್ಷಕ್ಕೆ ಕಾರಣವಾಗಿದ್ದುದರಿಂದ ನಿರ್ಮಲವಾದ ರತ್ನತ್ರಯಕ್ಕೆ ಸಮಾನವಾಗಿದ್ದಿತು.

**ಸೋತ್ಯುದಾರಗುಣಂ ಭೂರಿತೇಜೋಭಾಸುರಮೂರ್ಜಿತಮ್ ।**
**ಪುಣ್ಯಂ ಜೈನೇಶ್ವರಂ ರೂಪಂ ದಧ[5]ತ್ತೇಪೇ ಚಿರಂ ತಪಃ ॥ ೧೫೮ ॥**

ಆ ಅತಿಬಲಮುನಿಯು, ಉದಾರವಾದ ಗುಣಗಳುಳ್ಳದೂ ಬಹಳ ತೇಜೋಮಯವೂ ಪ್ರಕಾಶಮಾನವೂ ವೃದ್ಧಿಯನ್ನು ಹೊಂದುತ್ತಿರುವುದೂ ಪುಣ್ಯರೂಪವೂ ಜಿನೇಶ್ವರನ ಸಂಬಂಧಿಯೂ ಆದ ರೂಪ(ದಿಗಂಬರತ್ವ)ವನ್ನು ಧರಿಸಿ ಬಹುಕಾಲದವರೆಗೆ ತಪಸ್ಸನ್ನಾಚರಿಸಿದನು.

**ತತಃ ಕೃತಾಭಿಷೇಕೋಽಸೌ [6]ಬಲಶಾಲೀ ಮಹಾಬಲಃ ।**
**ರಾಜ್ಯಭಾರಂ ದಧೇ ನಮ್ರಖೇಚರಾಭ್ಯರ್ಚಿತಕ್ರಮಃ ॥ ೧೫೯ ॥**

ಆಮೇಲೆ ರಾಜ್ಯಪಟ್ಟಾಭಿಷಿಕ್ತನಾದ ಈ ಮಹಾಬಲನು ಶಕ್ತಿಯಿಂದಲೂ ಸೈನ್ಯದಿಂದಲೂ ಕೂಡಿಕೊಂಡು ನಮ್ರರಾದ ವಿದ್ಯಾಧರರಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನಾಗಿ ರಾಜ್ಯಭಾರವನ್ನು ವಹಿಸಿದನು.

**ಸ ದೈವಬಲಸಂಪನ್ನಃ [7]ಕೃತಧೀರ್ವೀರಚೇಷ್ಟಿತಃ ।**
**ದೋರ್ಬಲಂ ಪ್ರಥಯಾಮಾಸ ಸಂಹರನ್ ದ್ವಿಷತಾಂ ಬಲಮ್ ॥**

ಆ ಮಹಾಬಲನು ಭಾಗ್ಯಶಾಲಿಯೂ, ಬುದ್ಧಿವಂತನೂ ವೀರಪುರುಷರ ಕಾರ್ಯಗಳನ್ನು ಮಾಡುವವನೂ ಶತ್ರುಗಳ ಸೈನ್ಯವನ್ನು ನಾಶಮಾಡುವವನೂ ಆಗಿ ತನ್ನ ಭುಜಬಲವನ್ನು ಪ್ರಸಿದ್ಧಪಡಿಸಿದನು.

**ಮಂತ್ರಶಕ್ತ್ಯಾ ಪ್ರತಿಧ್ವಸ್ತಸಾಮರ್ಥ್ಯಾಸ್ತಸ್ಯ ವಿದ್ವಿಷಃ ।**
**[8]ಮಹಾಹಯ ಇವಾಭೂವನ್ನಿಕ್ರಿಯಾವಿಮುಖಾಸ್ತದಾ ॥ ೧೬೧ ॥**

೧ ಉದರ್ಕಃ ಫಲಮುತ್ತರಂ. ೨ ಪಕ್ಷಿಣಾಂ. ೩ ಕ್ಷಾಂತ್ಯಾಧಾರತ್ವಂ ಭೂಮ್ಯಾಧಾರತ್ವಂ ಚ. ೪ ಘನೋದಧ್ಯಾದಿ. ೫ ಆಚಚಾರ. ೬ ಸ್ಥೌಲ್ಯಸಾಮರ್ಥ್ಯಂ ಸೈನ್ಯಂ ಚ. ೭ ನಿಷ್ಪನ್ನಾ. ೮ ಮಹಾಸರ್ಪಾ.

ಆಗ ಮಂತ್ರಶಕ್ತಿಯಿಂದ ಶಕ್ತಿಹೀನಗಳಾದ ದೊಡ್ಡ ಸರ್ಪಗಳಂತೆ, ಆ ಮಹಾಬಲನ ಮಂತ್ರಶಕ್ತಿಯಿಂದ ಸಾಮರ್ಥ್ಯಹೀನರಾದ ಅವನ ವೈರಿಗಳು ಕ್ರಿಯಾಶೂನ್ಯರೂ ವಿಮುಖರೂ ಆದರು.

**ತಸ್ಮಿನ್ನಾರೂಢ[1]ಮಾಧುರ್ಯೇ ದಧುಃ ಪ್ರೀತಿಂ ಪ್ರಜಾದೃಶಃ ।**
**ಚೂತದ್ರುಮ ಇವ ಸ್ವಾದುಸುಪಕ್ವಫಲಶಾಲಿನಿ ॥ ೧೬೨ ॥**

ರುಚಿಕರವೂ ಚೆನ್ನಾಗಿ ಹಣ್ಣಾಗಿರುವುದೂ ಆದ ಫಲಗಳಿಂದ ಶೋಭಿಸುತ್ತಿರುವ ಮಾವಿನ ಮರದಲ್ಲಿ ಜನಗಳ ದೃಷ್ಟಿಯು ಬೀಳುವಂತೆ, ಎಲ್ಲರಲ್ಲಿಯೂ ಪ್ರೀತಿಯನ್ನು ಮಾಡುತ್ತಿರುವ ಆ ಮಹಾಬಲನಲ್ಲಿ ಪ್ರಜೆಗಳ ನೇತ್ರಗಳು ಪ್ರೀತಿಯನ್ನು ಧರಿಸಿದುವು. ಪ್ರಜೆಗಳೆಲ್ಲ ಮಹಾಬಲನನ್ನು ಪ್ರೀತಿಯಿಂದ ನೋಡುತ್ತಿದ್ದರೆಂದು ಭಾವವು.

**ನಾತ್ಯರ್ಥಮಭವತ್ತೀಕ್ಷ್ಣೋ ನ ಚಾತಿಮೃದುತಾಂ ದಧೇ ।**
**ಮಧ್ಯಮಾಂ ವೃತ್ತಿಮಾಶ್ರಿತ್ಯ ಸ ಜಗದ್ವಶಮಾನಯತ್ ॥ ೧೬೩ ॥**

ಆ ಮಹಾಬಲನು ಬಹಳ ಕ್ರೂರನಾಗಿಯೂ ಇರಲಿಲ್ಲ ಅತಿಮೃದುವಾಗಿಯೂ ಇರಲಿಲ್ಲ. ಮಧ್ಯಮ ರೀತಿಯನ್ನು ಹೊಂದಿ ಲೋಕವನ್ನು ವಶಮಾಡಿಕೊಂಡನು.

**[2]ಉಭಯೇಽಪಿ ದ್ವಿಷಸ್ತೇನ ಶಮಿತಾ ಭೂತಿಮಿಚ್ಛತಾ ।**
**[3]ಕಾಲಾದೌದ್ಧತ್ಯಮಾಯಾತಾ ಜಲದೇನೇವ ಪಾಂಸವಃ ॥ ೧೬೪ ॥**

ಬೇಸಿಗೆಯ ಕಾಲದಲ್ಲಿ ಮೇಲಕ್ಕೇಳುತ್ತಿರುವ ಧೂಳುಗಳನ್ನು ಮೋಡವು ಶಾಂತಪಡಿಸುವಂತೆ, ಸಂಪತ್ತನ್ನಿಚ್ಛಿಸುವ ಆ ಮಹಾಬಲನು ಕಾಮಕ್ರೋಧ ಮೊದಲಾದ ಅಂತರಂಗವೈರಿಗಳನ್ನೂ ಪ್ರತಿಕೂಲವಾಗಿರುವ ಬಹಿರಂಗ ವೈರಿಗಳನ್ನೂ ಶಾಂತಪಡಿಸಿದನು.

**ಸಿದ್ಧಿರ್ಧರ್ಮಾರ್ಥಕಾಮಾನಾಂ ನಾಬಾಧಿಷ್ಟ ಪರಸ್ಪರಮ್ ।**
**ತಸ್ಯ ಪ್ರಯೋಗನೈಪುಣ್ಯಾದ್ಬಂ[4]ಧುಭೂಯಮಿವಾಗತಾ ॥ ೧೬೫ ॥**

ಆ ಮಹಾಬಲರಾಜನು ಧರ್ಮ ಅರ್ಥ ಕಾಮಗಳೆಂಬ ಮೂರು ಪುರುಷಾರ್ಥಗಳನ್ನು ಒಂದಕ್ಕೊಂದು ಬಾಧೆಯಿಲ್ಲದಂತೆ ಸೇವನೆಮಾಡುತ್ತಿದ್ದನು. ಅವನ ಪ್ರಯೋಗನೈಪುಣ್ಯದಿಂದ ಆ ಧರ್ಮ ಅರ್ಥ ಕಾಮಗಳ ಸಿದ್ಧಿಯು ಪರಸ್ಪರವಾಗಿ ಬಂಧುತ್ವವನ್ನು ಹೊಂದಿದಂತಿದ್ದಿತು.

**ಪ್ರಾಯೇಣ ರಾಜ್ಯಮಾಸಾದ್ಯ ಭವಂತಿ ಮದಕರ್ಕಶಾಃ ।**
**ನೃಪೇಭಾಃ ಸ ತು ನಾಮಾದ್ಯತ್ಪ್ರ[5]ತ್ಯುತಾಸೀತ್ಪ್ರಸನ್ನಧೀಃ ॥ ೧೬೬ ॥**

ರಾಜರೆಂಬ ಆನೆಗಳು ರಾಜ್ಯವನ್ನು ಪಡೆದು ಪ್ರಾಯಶಃ ಮದೋನ್ಮತ್ತರಾಗುತ್ತಾರೆ. ಆ ಮಹಾಬಲನಾದರೋ ಮದೋನ್ಮತ್ತನಾಗದೆ ಪ್ರಸನ್ನವಾದ ಬುದ್ಧಿಯುಳ್ಳವನಾಗಿದ್ದನು.

**ವಯಸಾ ರೂಪಸಂಪತ್ತ್ಯಾ ಕುಲಜಾತ್ಯಾದಿಭಿಃ ಪರೇ ।**
**ಭಜಂತಿ ಮದಮಸ್ಯೈತೇ ಗುಣಾಃ ಪ್ರಶಮಮಾ[6]ದಧುಃ ॥ ೧೬೭ ॥**

ಬೇರೆಯವರು ವಯಸ್ಸು ರೂಪ ಐಶ್ವರ್ಯ ತಂದೆಯ ವಂಶ ತಾಯಿಯ ವಂಶ ಇವು ಮೊದಲಾದ ಗುಣಗಳಿಂದ ಅಹಂಕಾರಪಡುತ್ತಾರೆ. ಈ ಗುಣಗಳು ಮಹಾಬಲರಾಜನಿಗೆ ಶಾಂತಿಯನ್ನುಂಟುಮಾಡಿದುವು. ಈ ಗುಣಗಳಿಂದ ಅಹಂಕಾರಪಡುತ್ತಿರಲಿಲ್ಲವೆಂದರ್ಥವು.

**ರಾಜ್ಯಲಕ್ಷ್ಮ್ಯಾ ಪರಂ ಗರ್ವಮುದ್ವಹಂತಿ ನೃಪಾತ್ಮಜಾಃ ।**
**ಕಾಮವಿದ್ಯೇವ [7]ನಿರ್ಮೋಕ್ಷ್ಣೋಃ ಸಾ ಭೂ[8]ತ್ತಸ್ಯೋಪಶಾಂತಯೇ ॥**

೧ ಸ್ವಾದುಪ್ರಿಯೌ ಚ ಮಧುರೌ, ಧೃತಸ್ನೇಹ ಇತ್ಯರ್ಥಃ. ೨ ಆಯುಕ್ತಿತಃ ಪ್ರಣೇತಾಃ ಕಾಮಾದಯ ಆಂತರಂಗಾಃ, ಪ್ರಾತಿಕೂಲ್ಯಮಾಚರಂತೋ ನೃಪಾ ಬಹಿರಂಗಾಃ. ೩ ಛತ್ರಭಂಗಕಾಲಂ, ಗ್ರೀಷ್ಮಕಾಲಂ ಚಾಶ್ರಿತ್ಯ. ೪ ಬಂಧುತ್ವಂ. ೫ ಕಿಂತು. ೬ ಕುರ್ವಂತಿ ಸ್ಮ. ೭ ಮುನೇಃ. ೮ ಮಹಾಬಲಸ್ಯ.

ಮುಖ್ಯವಾಗಿ ರಾಜಕುಮಾರರು ರಾಜ್ಯಲಕ್ಷ್ಮಿಯಿಂದ ಬಹಳ ಅಹಂಕಾರವನ್ನು ಹೊಂದುತ್ತಾರೆ. ಮಹಾಬಲನಿಗೆ ಆ ರಾಜ್ಯಲಕ್ಷ್ಮಿಯು, ಮುನಿಗೆ ಕಾಮವಿದ್ಯೆಯಂತೆ, ಶಾಂತಿಯನ್ನೇ ಉಂಟುಮಾಡುತ್ತಿದ್ದಿತು.

**ಅನ್ಯಾಯಧ್ವನಿರು[1]ತ್ಸನ್ನಃ ಪಾತಿ ತಸ್ಮಿನ್ನುರಾಜನಿ ।**
**ಪ್ರಜಾನಾಂ ಭಯಸಂಕ್ಷೋಭಾಃ ಸ್ವಪ್ನೇಪ್ಯಾಸನ್ನಜಾತು ಚಿತ್ ॥ ೧೬೯ ॥**

ಆ ಶ್ರೇಷ್ಠನಾದ ಮಹಾಬಲನು ರಾಜ್ಯಪರಿಪಾಲನೆಯನ್ನು ಮಾಡುತ್ತಿರಲು ಅನ್ಯಾಯವೆಂಬ ಶಬ್ದವೇ ನಷ್ಟವಾಯಿತು. ಪ್ರಜೆಗಳಿಗೆ ಭಯವೂ ಕ್ಷೋಭೆ (ಗಾಬರಿ)ಯೂ ಸ್ವಪ್ನದಲ್ಲಿಯೂ ಎಂದೂ ಉಂಟಾಗುತ್ತಿರಲಿಲ್ಲ.

**ಚಕ್ಷುಶ್ಚಾ[2]ರೋ ವಿಚಾರಶ್ಚ ತಸ್ಯಾಸೀತ್ಕಾರ್ಯದರ್ಶನೇ ।**
**ಚಕ್ಷುಷೀ ಪುನರಸ್ಯಾಸ್ಯ ಮಂಡನೇ ದೃಶ್ಯದರ್ಶನೇ ॥ ೧೭೦ ॥**

ಆ ಮಹಾಬಲನ ರಾಜ್ಯಕಾರ್ಯವನ್ನು ನೋಡುವುದರಲ್ಲಿ ಗುಪ್ತಚರನೂ ವಿಚಾರವೂ ಕಣ್ಣಾಗಿದ್ದುವು. ಕಣ್ಣುಗಳಂತಿದ್ದುವೆಂದರ್ಥವು. ಕಣ್ಣುಗಳಾದರೋ ಇವನ ಮುಖಕ್ಕೆ ಅಲಂಕಾರಗಳೂ ನೋಡುವುದಕ್ಕೆ ಯೋಗ್ಯವಾದ ವಿಷಯಗಳನ್ನು ನೋಡುವುವುಗಳೂ ಆಗಿದ್ದುವು.

**ಅಥಾಸ್ಯ ಯೌವನಾರಂಭೇ ರೂಪಮಾಸೀಜ್ಜಗತ್ಪ್ರಿಯಮ್ ।**
**ಪೂರ್ಣಸ್ಯೇವ ಶಶಾಂಕಸ್ಯ ದಧತಃ ಸಕಲಾಃ ಕಲಾಃ ॥ ೧೭೧ ॥**

ಆಮೇಲೆ, ಸಮಸ್ತಕಲೆಗಳನ್ನು ಧರಿಸಿರುವ ಪೂರ್ಣಚಂದ್ರನ ರೂಪದಂತೆ ಯೌವನದ ಆರಂಭದಲ್ಲಿ ಈ ಮಹಾಬಲನ ರೂಪವು ಜಗತ್ತಿಗೆ ಪ್ರಿಯವಾಗಿದ್ದಿತು.

**ಅದೃಶ್ಯೋ ಮದನೋಽನಂಗೋ ದೃಶ್ಯೋಽಸೌ ಚಾರುವಿಗ್ರಹಃ ।**
**ತದಸ್ಯ ಮದನೋ ದೂರಮೌಪಮ್ಯಪದಮತ್ಯಗಾತ್ ॥ ೧೭೨ ॥**

ಮನ್ಮಥನು ಅದೃಶ್ಯನು. ಈ ಮಹಾಬಲನು ದೃಶ್ಯನಾಗಿದ್ದನು. ಮನ್ಮಥನಿಗೆ ಶರೀರವಿಲ್ಲ. ಮಹಾಬಲನಿಗೆ ಸುಂದರವಾದ ಶರೀರವಿದ್ದಿತು. ಆದುದರಿಂದ ಮನ್ಮಥನು ಈ ಮಹಾಬಲನ ಉಪಮೆಯನ್ನು ಬಹು ದೂರದಲ್ಲೇ ಮೀರಿದ್ದನು. ಮನ್ಮಥನನ್ನು ಮೀರಿದ್ದನೆಂದ ಭಾವವು.

**ತಸ್ಯಾಭಾದಲಿಸಂಕಾಶಮೃದುಕುಂಚಿತಮೂರ್ಧಜಮ್ ।**
**ಶಿರೋವಿನ್ಯಸ್ತಮುಕುಟಂ ಮೇರೋಃ ಕೂಟಮಿವಾಭ್ರಿತಮ್ ॥ ೧೭೩ ॥**

ಕಿರೀಟವನ್ನಿಟ್ಟಿರುವ ಆ ಮಹಾಬಲನ ಮಸ್ತಕವು ಭ್ರಮರಗಳಿಗೆ ಸಮಾನವೂ ಮೃದುವೂ ಆದ ಕುರುಳುಕೂದಲುಗಳುಳ್ಳದಾಗಿ, ಮೋಡಗಳೊಡನೆ ಕೂಡಿ ಕೊಂಡಿರುವ ಮಹಾಮೇರುವಿನ ಶಿಖರದಂತೆ ಶೋಭಿಸುತ್ತಿದ್ದಿತು.

**ಲಲಾಟಮಸ್ಯ ವಿಸ್ತೀರ್ಣಮುನ್ನತಂ ರುಚಿಮಾದಧೇ ।**
**ಲಕ್ಷ್ಮ್ಯಾ ವಿಶ್ರಾಂತಯೇ ಕ್ಲೃಪ್ತಮಿವ ಹೈಮಂ ಶಿಲಾತಲಮ್ ॥ ೧೭೪ ॥**

ವಿಸ್ತಾರವೂ ಉನ್ನತವೂ ಆದ ಈ ಮಹಾಬಲನ ಹಣೆಯು, ಲಕ್ಷ್ಮೀದೇವಿಯ ವಿಶ್ರಾಂತಿಗೋಸ್ಕರ ಮಾಡಿದ ಬಂಗಾರಮಯವಾದ ಹಲಿಗೆಕಲ್ಲಿನಂತೆ, ಶೋಭಿಸುತ್ತಿದ್ದಿತು.

**ಭ್ರೂರೇಖೇ ತಸ್ಯ ರೇಜಾತೇ ಕುಟಿಲೇ ಭೃಶಮಾಯತೇ ।**
**ಮದನಸ್ಯಾಸ್ತ್ರಶಾಲಾಯಾಂ ಧನುಷೋರಿವ ಯಷ್ಟಿಕೇ ॥ ೧೭೫ ॥**

ವಕ್ರವೂ ದೀರ್ಘವೂ ಆದ ಆ ಮಹಾಬಲನ ಹುಬ್ಬುಗಳ ರೇಖೆಗಳು, ಮನ್ಮಥನ ಆಯುಧಶಾಲೆಯಲ್ಲಿ ಎರಡು ಧನುಸ್ಸುಗಳ ಕಟ್ಟಿಗೆಗಳಂತೆ ಅಧಿಕವಾಗಿ ಪ್ರಕಾಶಿಸಿದುವು.

೧ ನಷ್ಟಃ. ೨ ಗೂಢಪುರುಷಃ.

**ಚಕ್ಷುಷೀ ರೇಜತುಸ್ತಸ್ಯ ಭ್ರೂಚಾಪೋಪಾಂತವರ್ತಿನೀ ।**
**ವಿಷಮೇಷೋರಿವಾಶೇಷಂ ಜಿಗೀಷೋರಿಷುಯಂತ್ರಕೇ ॥ ೧೭೬ ॥**

ಆ ಮಹಾಬಲನ ಹುಬ್ಬುಗಳೆಂಬ ಧನುಸ್ಸುಗಳ ಮಧ್ಯದಲ್ಲಿರುವ ಕಣ್ಣುಗಳು, ಸಮಸ್ತವನ್ನೂ ಜಯಿಸಲಿಚ್ಛಿಸುವ ಮನ್ಮಥನ ಬಾಣಗಳನ್ನು ನಡಿಸುವ ಎರಡು ಯಂತ್ರಗಳೋ ಎಂಬಂತೆ ಶೋಭಿಸುತ್ತಿದ್ದುವು.

**ಸ ಕರ್ಣಪಾಲಿಕೇ ಚಾರೂ ರತ್ನಕುಂಡಲಮಂಡಿತೇ ।**
**ಶ್ರುತಾಂಗನಾಸ[೧]ಮಾಕ್ರೀಡಲೀಲಾದೋಲಾಯಿತೇ ದಧೌ ॥ ೧೭೭ ॥**

ರತ್ನಜಟಿತವಾದ ಕರ್ಣಕುಂಡಲಗಳಿಂದ ಅಲಂಕೃತವಾದ ಆ ಮಹಾಬಲನ ಕಿವಿಗಳೆರಡು, ಶ್ರುತದೇವಿಯ ಉದ್ಯಾನದಲ್ಲಿ ಕ್ರೀಡಿಸುವುದಕ್ಕೋಸ್ಕರ ಉಯ್ಯಾಲೆಗಳೋ ಎಂಬಂತೆ, ಮನೋಹರಗಳಾಗಿದ್ದುವು.

**ದಧೇಸೌ [೨]ನಾಸಿಕಾವಂಶಂ ತುಂಗಂ [೩]ಮಧ್ಯೇ ವಿಲೋಚನಮ್ ।**
**ತದ್ವೃದ್ಧಿಸ್ಪರ್ಧರೋಧಾರ್ಥಂ ಬದ್ಧಂ ಸೇತುಮಿವಾಯತಮ್ ॥ ೧೭೮ ॥**

ಸ್ಪರ್ಧೆಯಿಂದ ವೃದ್ಧಿಹೊಂದುತ್ತಿರುವ ನೇತ್ರಗಳನ್ನು ತಡೆಯುವುದಕ್ಕೋಸ್ಕರ ಉದ್ದವಾದ ಸೇತುವೆಯು ಕಟ್ಟಲ್ಪಟ್ಟಿದೆಯೋ ಎಂಬಂತೆ ಈ ಮಹಾಬಲನು ಕಣ್ಣುಗಳ ಮಧ್ಯದಲ್ಲಿ ಉನ್ನತವಾದ ನಾಸಿಕದಂಡವನ್ನು ಧರಿಸಿದ್ದನು.

**ಮುಖಮಸ್ಯ ಲಸದ್ದಂತದೀಪ್ತಿಕೇಸರಮಾಬಭೌ ।**
**[೪]ಮಹೋತ್ಪಲಮಿವಾಮೋದಶಾಲಿದಂತಚ್ಛದ[೫]ಚ್ಛದಮ್ ॥ ೧೭೯ ॥**

ಪರಿಮಳವುಳ್ಳ ತುಟಿಗಳೆಂಬ ಎಲೆಗಳೂ ಹೊಳೆಯುತ್ತಿರುವ ಹಲ್ಲುಗಳ ಕಾಂತಿಯೆಂಬ ಕುಸುಮಗಳೂ ಉಳ್ಳ ಈ ಮಹಾಬಲನ ಮುಖವು ತಾವರೆಯಂತೆ ಶೋಭಿಸುತ್ತಿದ್ದಿತು.

**ಪೃಥುವಕ್ಷೋ ಬಭಾರಾಸೌ ಹಾರರೋಚಿ[೬]ರ್ಜಲಪ್ಲವಮ್ ।**
**ಧಾರಾಗೃಹಮಿವೋದಾರಂ ಲಕ್ಷ್ಮ್ಯಾ [೭]ನಿರ್ವಾಪಣಂ ಪರಮ್ ॥ ೧೮೦ ॥**

ಈ ಮಹಾಬಲನು, ಲಕ್ಷ್ಮೀದೇವಿಗೆ ಬಹಳ ಸುಖವನ್ನುಂಟುಮಾಡುವ ವಿಸ್ತಾರವಾದ ಮನೆಯೋ ಎಂಬಂತಿರುವುದೂ ಹಾರಗಳ ಕಾಂತಿಯೆಂಬ ಜಲಪ್ರವಾಹವುಳ್ಳುದೂ ವಿಶಾಲವೂ ಆದ ಎದೆಯನ್ನು ಧರಿಸಿದ್ದನು. ಮಹಾಬಲನ ಎದೆಯು ವಿಶಾಲವಾಗಿದ್ದಿತೆಂದು ಭಾವವು.

**ಕೇಯೂರರುಚಿರಾವಂ[೮]ಸೌ ತಸ್ಯ ಶೋಭಾಮುಪೇಯತುಃ ।**
**ಕ್ರೀಡಾದ್ರೀ ರುಚಿರೌ ಲಕ್ಷ್ಮ್ಯಾ ವಿಹಾರಾಯೇವ ನಿರ್ಮಿತೌ ॥ ೧೮೧ ॥**

ತೋಳುಬಳೆಗಳಿಂದ ಮನೋಹರವಾದ ಆ ಮಹಾಬಲನ ಎರಡು ಭುಜಗಳು, ಲಕ್ಷ್ಮೀದೇವಿಯ ವಿಹಾರಕ್ಕೋಸ್ಕರ ನಿರ್ಮಿಸಿರುವ ಮನೋಹರವಾದ ಎರಡು ಕ್ರೀಡಾ ಬೆಟ್ಟಗಳಂತೆ, ಶೋಭಿಸುತ್ತಿದ್ದುವು.

**ಯುಗಾಯತೌ ಬಿಭರ್ತಿ ಸ್ಮ ಬಾಹೂ ಚಾರುತಲಾಂಕಿತೌ ।**
**ಸ [೯]ಸುರಾಗ ಇವೋದಗ್ರವಿಟಪೌ ಪಲ್ಲವೋಜ್ವಲೌ ॥ ೧೮೨ ॥**

ಕಲ್ಪವೃಕ್ಷವು ತಳಿರುಗಳಿಂದ ಪ್ರಕಾಶಿಸುತ್ತಿರುವ ಉನ್ನತವಾದ ಎರಡು ಕೊಂಬೆಗಳನ್ನು ಧರಿಸಿರುವಂತೆ, ಆ ಮಹಾಬಲನು ನೊಗದಂತೆ ದೀರ್ಘವೂ ಸುಂದರವಾದ ಅಂಗೈಗಳುಳ್ಳುದೂ ಆದ ಎರಡು ತೋಳುಗಳನ್ನು ಧರಿಸಿದ್ದನು.

**ಗಂಭೀರನಾಭಿಕಂ ಮಧ್ಯಂ ಸ ವಲೀಲಲಿತಂ ದಧೌ ।**
**ಮಹಾಬ್ಧಿರಿವ ಸಾವರ್ತಂ ಸತರಂಗಂ ಚ ಸೈಕತಮ್ ॥ ೧೮೩ ॥**

ದೊಡ್ಡ ಸಮುದ್ರವು ಸುಳಿಗಳೊಡನೆ ಕೂಡಿಕೊಂಡಿರುವ ತೆರೆಮಾಲೆಗಳುಳ್ಳುದೂ ಮರಳುಳ್ಳುದೂ ಆದ ಮಧ್ಯಭಾಗವನ್ನು ಧರಿಸಿರುವಂತೆ, ಆ ಮಹಾಬಲನು ಆಳವಾದ ನಾಭಿಯುಳ್ಳುದೂ ತ್ರಿವಲಿಗಳಿಂದ ಸುಂದರವೂ ಆದ ಮಧ್ಯಭಾಗವನ್ನು ಧರಿಸಿದ್ದನು.

**ಘನಂ ಚ [೧]ಜಘನಂ ತಸ್ಯ ಮೇಖಲಾದಾಮವೇಷ್ಟಿತಮ್ ।**
**ಬಭೌ ವೇದಿಕಯಾ ಜಂಬೂದ್ವೀಪಸ್ಥಲಮಿವಾವೃತಮ್ ॥ ೧೮೪ ॥**

ಅವನ ಉಡುದಾರದಿಂದ ಸುತ್ತಲ್ಪಟ್ಟ ದಟ್ಟವಾದ ಜಘನಭಾಗ(ಸೊಂಟದ ಮುಂಭಾಗ)ವು, ವೇದಿಕೆಯಿಂದ ಸುತ್ತಲ್ಪಟಿರುವ ಜಂಬೂದ್ವೀಪದ ಸ್ಥಳದಂತೆ, ಪ್ರಕಾಶಿಸುತ್ತಿದ್ದಿತು.

**ರಂಭಾಸ್ತಂಭನಿಭಾವೂರೂ ಸ ಧತ್ತೇ ಸ್ಮ [೨]ಕನದ್ದ್ಯುತೀ ।**
**ಕಾಮಿನೀದೃಷ್ಟಿಬಾಣಾನಾಂ ಲಕ್ಷ್ಯೇ ಏವ ನಿವೇಶಿತೌ ॥ ೧೮೫ ॥**

ಆ ಮಹಾಬಲನು ಕಾಮಿನಿಯರ ದೃಷ್ಟಿಬಾಣಗಳಿಗೆ ಗುರಿಯಾಗಿರಿಸಲ್ಪಟ್ಟವೆಯೋ ಎಂಬಂತಿರುವುವೂ ಬಾಳೆಕಂಭಗಳಿಗೆ ಸಮಾನವೂ ಹೊಳೆಯುತ್ತಿರುವ ಕಾಂತಿಗಳುಳ್ಳುವೂ ಆದ ಎರಡು ತೊಡೆಗಳನ್ನು ಧರಿಸಿದ್ದನು.

**ವಜ್ರಶಾಣಸ್ಥಿರೇ ಜಂಘೇ ಸೋಧತ್ತರುಚಿರಾಕೃತೀ ।**
**ಮನೋಜಜೈತ್ರಬಾಣಾನಾಂ ನಿಶಾನಾಯೇವ ಕಲ್ಪಿತೇ ॥ ೧೮೬ ॥**

ಆ ಮಹಾಬಲನು, ಮನ್ಮಥನ ಜಯಶೀಲವಾದ ಬಾಣಗಳನ್ನು ಮಸೆಯುವುದಕ್ಕೋಸ್ಕರ ಮಾಡಲ್ಪಟ್ಟಂತಿರುವುವೂ ವಜ್ರದ ಶಾಣೆಯಂತೆ ಗಟ್ಟಿಯಾಗಿರುವುವೂ ಸುಂದರವಾದ ಆಕಾರವುಳ್ಳುವೂ ಆದ ಎರಡು ಕಣಕಾಲುಗಳನ್ನು ಧರಿಸಿದ್ದನು.

**ಪದತಾಮರಸದ್ವಂದ್ವಂ ಸ ಸದಂಗುಲಿಪತ್ರಕಮ್ ।**
**ನಖಾಂಶುಕೇಸರಂ ದಧ್ರೇ ಲಕ್ಷ್ಮ್ಯಾಃ ಕುಲಗೃಹಾಯಿತಮ್ ॥ ೧೮೭ ॥**

ಆ ಮಹಾಬಲನು, ಲಕ್ಷ್ಮೀದೇವಿಗೆ ತವರುಮನೆಯಂತಿರುವುವೂ ಸುಂದರವಾದ ಬೆರಳುಗಳೆಂಬ ಎಲೆಗಳುಳ್ಳುವೂ ಉಗುರುಗಳ ಕಾಂತಿಗಳೆಂಬ ಕುಸುಮಗಳುಳ್ಳುವೂ ಆದ ಎರಡು ಪಾದಗಳೆಂಬ ತಾವರೆಗಳನ್ನು ಧರಿಸಿದ್ದನು.

**ಇತ್ಯಸ್ಯ ರೂಪಮುದ್ಭೂತನವಯೌವನವಿಭ್ರಮಮ್ ।**
**ಕಾಮನೀಯಕ[೩]ಮೈಕಧ್ಯಮುಪನೀತಮಿವಾಬಭೌ ॥ ೧೮೮ ॥**

ಈ ಪ್ರಕಾರವಾಗಿ ಪ್ರಾದುರ್ಭವಿಸಿದ ನವಯೌವನದ ಸೊಬಗುಳ್ಳ ಈ ಮಹಾಬಲನ ರೂಪವು, ಸುಂದರತೆಯು ಐಕ್ಯವಾಗಿ ಈ ಮಹಾಬಲನನ್ನು ಹೊಂದಿದೆಯೋ ಎಂಬಂತೆ ಶೋಭಿಸುತ್ತಿದ್ದಿತು.

**ನ ಕೇವಲಮಸೌ ರೂಪಶೋಭಯೈವಾಜಯಜ್ಜಗತ್ ।**
**ವ್ಯಜೇಷ್ಟ ಮಂತ್ರಶಕ್ತ್ಯಾಪಿ ವೃದ್ಧಸಂಯೋಗಲಬ್ಧಯಾ ॥ ೧೮೯ ॥**

ಈ ಮಹಾಬಲನು ತನ್ನ ರೂಪದ ಶೋಭೆಯಿಂದಲೇ ಜಗತ್ತನ್ನು ಜಯಿಸಲಿಲ್ಲ. ಹಿರಿಯರ ಸಹವಾಸದಿಂದ ಸಂಪಾದಿಸಿದ ಮಂತ್ರಶಕ್ತಿಯಿಂದಲೂ ಜಯಿಸಿದನು.

**ತಸ್ಯಾಭೂವನ್ಮಹಾಪ್ರಜ್ಞಾಶ್ಚತ್ವಾರೋ ಮಂತ್ರಿಪುಂಗವಾಃ ।**
**ಬಹಿಶ್ಚರಾ ಇವ ಪ್ರಾಣಾಃ ಸುಸ್ನಿಗ್ಧಾ [೪]ದೀರ್ಘದರ್ಶಿನಃ ॥ ೧೯೦ ॥**

ಆ ಮಹಾಬಲನಿಗೆ ಹೊರಗಿನ ಪ್ರಾಣಗಳಂತಿರುವವರೂ ಬಹಳ ಬುದ್ಧಿಶಾಲಿಗಳೂ ಪ್ರೀತಿಪಾತ್ರರೂ ವಿದ್ವಾಂಸರೂ ಆದ ನಾಲ್ಕು ಜನ ಮಂತ್ರಿಶ್ರೇಷ್ಠರಿದ್ದರು.

೧ ಉದ್ಯಾನಂ. ೨ ನಾಸಿಕಾದಂಡಮಿತ್ಯರ್ಥಃ. ೩ ವಿಲೋಚನಯೋರ್ಮಧ್ಯೇ. ೪ ಕಮಲಂ. ೫ ಪತ್ರಂ. ೬ ಜಲಪ್ರವಾಹಂ. ೭ ಸುಖಹೇತುಂ. ೮ ಸ್ಕಂಧೌ. ೯ ಸುರಾಣಾಮಗೋ ವೃಕ್ಷಃ ಕಲ್ಪತರುರಿತ್ಯರ್ಥಃ.

೧ ಕ್ಲೀಬೇ ತು ಜಘನಂ ಪುರ ಇತ್ಯಮರಃ. ೨ ದೀಪ್ಯಮಾನದ್ಯುತೀ. ೩ ಏಕತ್ವಂ. ೪ ವಿದ್ವಾಂಸಃ.

**ಮಹಾಮತಿಶ್ಚ ಸಂಭಿನ್ನಮತಿಃ ಶತಮತಿಸ್ತಥಾ ।**
**ಸ್ವಯಂಬುದ್ಧಶ್ಚ ರಾಜ್ಯಸ್ಯ ಮೂಲಸ್ತಂಭಾ ಇವ ಸ್ಥಿರಾಃ ॥ ೧೯೧ ॥**

ಮಹಾಮತಿ, ಸಂಭಿನ್ನಮತಿ, ಶತಮತಿ, ಸ್ವಯಂಬುದ್ಧ ಈ ನಾಲ್ಕು ಜನ ಮಂತ್ರಿಗಳು ರಾಜ್ಯಕ್ಕೆ, ಮೂಲಸ್ತಂಭಗಳಂತೆ, ದೃಢರಾಗಿದ್ದರು.

**ಸ್ವಯಂಬುದ್ಧೋಽಭವತ್ತೇಷು ಸಮ್ಯಗ್ದರ್ಶನಶುದ್ಧಧೀಃ ।**
**ಶೇಷಾ ಮಿಥ್ಯಾದೃಶಸ್ತೇಽಮೀ ಸರ್ವೇ ಸ್ವಾಮಿಹಿತೋದ್ಯತಾಃ ॥ ೧೯೨ ॥**

ಆ ನಾಲ್ಕುಜನ ಮಂತ್ರಿಗಳಲ್ಲಿ ಸ್ವಯಂಬುದ್ಧನು ಸಮ್ಯಗ್ದರ್ಶನದಿಂದ ಶುದ್ಧವಾದ ಬುದ್ಧಿಯುಳ್ಳವನಾಗಿದ್ದನು. ಮಿಕ್ಕ ಮೂರು ಮಂದಿಗಳು ಮಿಥ್ಯಾದೃಷ್ಟಿಗಳಾಗಿದ್ದರು. ಅವರೆಲ್ಲರು ರಾಜನಿಗೆ ಹಿತವನ್ನು ಮಾಡುವುದರಲ್ಲಿ ಪ್ರಯತ್ನಶೀಲರಾಗಿದ್ದರು.

**ಚತುರ್ಭಿಃ ಸ್ವೈರಮಾತ್ಯೈಸ್ತೈಃ ಪಾದೈರಿವ ಸುಯೋಜಿತೈಃ ।**
**ಮಹಾಬಲಸ್ಯ ತದ್ರಾಜ್ಯಂ ಪಪ್ರಥೇ [1]ಸಮವೃತ್ತವತ್ ॥ ೧೯೩ ॥**

ಮಹಾಬಲನ ರಾಜ್ಯವು, ಸರಿಯಾಗಿ ಸೇರಿಸಿದ ನಾಲ್ಕು ಪಾದಗಳಿಂದ ಸಮಾನವಾದ ವೃತ್ತವುಳ್ಳ ಶ್ಲೋಕವು ಪ್ರಸಿದ್ಧವಾಗಿರುವಂತೆ ಸರಿಯಾಗಿ ಸೇರಿಸಿದ ನಾಲ್ಕು ಕಾಲುಗಳಂತಿರುವ ಆ ನಾಲ್ಕು ಜನ ಮಂತ್ರಿಗಳಿಂದ ಪ್ರಸಿದ್ಧವಾಗಿದ್ದಿತು.

**ಸ ಮಂತ್ರಿಭಿಶ್ಚತುರ್ಭಿಸ್ತೈಃ ಕದಾಚಿಚ್ಚ ಸಮಂ ತ್ರಿಭಿಃ ।**
**ದ್ವಾಭ್ಯಾಮೇಕೇನ ವಾ ಮಂತ್ರಮವಿಸಂವಾದಿನಾಽಭಜತ್ ॥ ೧೯೪ ॥**

ಆ ಮಹಾಬಲನು ಕೆಲವು ವೇಳೆಯಲ್ಲಿ ನಾಲ್ಕುಜನ ಮಂತ್ರಿಗಳೊಡನೆಯೂ ಕೆಲವು ವೇಳೆಯಲ್ಲಿ ಮೂರು ಜನರೊಡನೆಯೂ, ಕೆಲವು ವೇಳೆಯಲ್ಲಿ ಇಬ್ಬರೊಡನೆಯೂ ಕೆಲವು ವೇಳೆಯಲ್ಲಿ ಯಥಾರ್ಥವನ್ನು ಹೇಳುವ ಒಬ್ಬನೊಡನೆಯೂ ರಾಜ್ಯಕಾರ್ಯವನ್ನು ಆಲೋಚಿಸುತ್ತಿದ್ದನು.

**ಸ್ವಯಂ ನಿಶ್ಚಿತಕಾರ್ಯಸ್ಯ ಮಂತ್ರಿಣೋಽಸ್ಯಾ[2]ನುಶಾಸನಮ್ ।**
**ಚಕ್ರುಃ [3]ಸ್ವಯಂ ಪ್ರಬುದ್ಧಸ್ಯ ಜಿನಸ್ಯೇವಾ[4]ಮರೋತ್ತಮಾಃ ॥ ೧೯೫ ॥**

ತಾನಾಗಿಯೇ ವೈರಾಗ್ಯವನ್ನು ಹೊಂದಿದ ಜಿನೇಶ್ವರನಿಗೆ ಅನಂತರ ಲೌಕಾಂತಿಕ ದೇವತೆಗಳು ತಮ್ಮ ಅಭಿಪ್ರಾಯವನ್ನು ಪ್ರಕಟಪಡಿಸುವಂತೆ, ತಾನಾಗಿಯೇ ಮಹಾಬಲನು ರಾಜ್ಯಕಾರ್ಯವನ್ನು ನಿಶ್ಚಯಿಸಿದ ಮೇಲೆ ಮಂತ್ರಿಗಳು ಅದಕ್ಕನುಸಾರವಾಗಿ ತಮ್ಮ ಅಭಿಪ್ರಾಯಗಳನ್ನು ಪ್ರಕಟಪಡಿಸುತ್ತಿದ್ದರು. ಮಹಾಬಲನು ದೃಢವಾದ ಉತ್ತಮವಿಚಾರವುಳ್ಳವನಾಗಿದ್ದನೆಂದು ಭಾವವು.

**ನ್ಯಸ್ತರಾಜ್ಯಭರಸ್ತೇಷು ಸಃ ಸ್ತ್ರೀಭಿಃ ಖಚರೋಚಿತಾನ್ ।**
**ಬುಭುಜೇ ಸುಚಿರಂ ಭೋಗಾ[1]ನ್ನಭೋಗಾನಾಮಧೀಶಿತಾ ॥ ೧೯೬ ॥**

ಆ ವಿದ್ಯಾಧರಾಧಿಪತಿಯಾದ ಮಹಾಬಲನು ಮಂತ್ರಿಗಳಲ್ಲಿ ರಾಜ್ಯಭಾರವನ್ನಿರಿಸಿ ವಿದ್ಯಾಧರರಿಗೆ ಯೋಗ್ಯವಾದ ಭೋಗಗಳನ್ನು ಸ್ತ್ರೀಯರೊಡನೆ ಬಹುಕಾಲದವರೆಗೆ ಅನುಭವಿಸಿದನು.

**ಮೃದುಸುರಭಿಸಮೀರೈಃ ಸಾಂದ್ರಮಂದಾರವೀಥೀ**
**ಪರಿಚಯಸುಖಶೀತೈರ್ಧೂತಸಂಭೋಗಖೇದಃ ।**
**ಮುಹುರುಪವನದೇಶಾನ್ನಂದನೋದ್ದೇಶ[2]ದೇಶ್ಯಾನ್**
**ಜಿತಮದನ[3]ನಿವೇಶಾನ್ ಸ್ತ್ರೀಸಹಾಯಃ ಸ ಭೇಜೇ ॥ ೧೯೭ ॥**

ಆ ಮಹಾಬಲನು ದಟ್ಟವಾದ ಮಂದಾರವೃಕ್ಷಗಳ ಸಾಲುಗಳಲ್ಲಿ ಬೀಸುತ್ತ ಬಂದು ಸುಖವಾಗಿಯೂ ತಣ್ಣಗಾಗಿಯೂ ಪರಿಮಳವುಳ್ಳುದಾಗಿಯೂ ಇರುವ ಮಂದ ಮಾರುತಗಳಿಂದ ಸಂಭೋಗಜನಿತವಾದ ಖೇದವನ್ನು ಹೋಗಲಾಡಿಸಿಕೊಂಡು ಮನ್ಮಥನ ಸೈನ್ಯಸ್ಥಾನಗಳನ್ನು ಜಯಿಸುತ್ತಿರುವುವೂ ನಂದನವನಪ್ರದೇಶಗಳಿಗೆ ಸಮಾನಗಳೂ ಆದ ಸಮೀಪತೋಟಗಳನ್ನು ಸ್ತ್ರೀಯರೊಡನೆ ಕೂಡಿಕೊಂಡು ಬಾರಿಬಾರಿಗೂ ಸೇವಿಸುತ್ತಿದ್ದನು. ಸಂತೋಷಾರ್ಥವಾಗಿ ಸ್ತ್ರೀಯರೊಡನೆ ಉದ್ಯಾನಗಳಲ್ಲಿ ವಿಹರಿಸುತ್ತಿದ್ದನೆಂದು ಭಾವವು.

**ಇತಿ ಸುಕೃತವಿಪಾಕಾದಾನಮತ್ಖೇಚರೋದ್ಯ-**
**ನ್ಮಕುಟಮಕರಿಕಾಭಿಃ ಸ್ಪೃಷ್ಟಪಾದಾರವಿಂದಃ ।**
**ಚಿರಮರಮತ ತಸ್ಮಿನ್ಖೇಚರಾದ್ರೌ ಸುರಾದ್ರೌ**
**ಸುರಪತಿರಿವ ಸೋಽಯಂ ಭಾವಿಭಾಸ್ವಜ್ಜಿನಶ್ರೀಃ ॥ ೧೯೮ ॥**

ಹೀಗೆ ಪುಣ್ಯಕರ್ಮದ ಪರಿಪಾಕ(ಉದಯ)ದಿಂದ ಎಲ್ಲಾ ಕಡೆಗಳಿಂದಲೂ ಬಂದು ನಮಸ್ಕರಿಸುತ್ತಿರುವ ವಿದ್ಯಾಧರರ ಪ್ರಕಾಶಮಾನವಾದ ಕಿರೀಟಗಳಲ್ಲಿರುವ ಮೊಸಳೆಯ ಚಿತ್ರಗಳಿಂದ ತನ್ನ ಪಾದಕಮಲಗಳನ್ನು ಮುಟ್ಟಿಸಿಕೊಳ್ಳುತ್ತಿರುವವನೂ ಮುಂದೆ ತೀರ್ಥಂಕರಸಂಪತ್ತನ್ನು ಹೊಂದುವವನೂ ಆದ ಈ ಮಹಾಬಲನು ಮಹಾಮೇರುಪರ್ವತದಲ್ಲಿ ದೇವೇಂದ್ರನು ಕ್ರೀಡಿಸುವಂತೆ ವಿದ್ಯಾಧರಪರ್ವತವಾ ವಿಜಯಾರ್ಧದಲ್ಲಿ ಬಹುಕಾಲದವರೆಗೆ ಕ್ರೀಡಿಸಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಮಹಾಬಲಾಭ್ಯುದಯವರ್ಣನಂ ನಾಮ ಚತುರ್ಥಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣದಲ್ಲಿ ''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಮಹಾಬಲನ ಅಭ್ಯುದಯವರ್ಣನೆಯೆಂಬ ನಾಲ್ಕನೆಯ ಪರ್ವವು ಸಮಾಪ್ತವಾದುದು.

---

೧ ಸಮವೃತ್ತಪದ್ಯವತ್. ೨ ಪಶ್ಚಾತ್ಕಥಶನಂ. ೩ ಸ್ವಯಮೇವ ವಿರಕ್ತಸ್ಯ. ೪ ಲೌಕಾಂತಿಕದೇವಾಃ.

೧ ವಿದ್ಯಾಧರಾಣಾಂ. ೨ ಸದೃಶಾನ್. ೩ ಕಟಕಾನ್.

# ಅಥ ಪಂಚಮಂ ಪರ್ವ

**ಕದಾಚಿದಥ ತಸ್ಯಾಸೀದ್ವರ್ಷವೃದ್ಧಿದಿನೋತ್ಸವಃ ।**
**ಮಂಗಲೈರ್ಗೀತವಾದಿತ್ರನೃತ್ತಾರಂಭೈಶ್ಚ ಸಂಭೃತಃ ॥ ೧ ॥**

ಆಮೇಲೆ ಒಂದಾನೊಂದು ದಿನ ಆ ಮಹಾಬಲನ ಜನ್ಮದಿವಸದ ಉತ್ಸವ(ವರ್ಷವರ್ಧಂತಿಯ ಉತ್ಸವ)ವು ಮಂಗಲಮಯವಾದ ಗೀತವಾದ್ಯನೃತ್ಯಗಳಿಂದ ಪ್ರಾರಂಭವಾಯಿತು.

**ಸಿಂಹಾಸನೇ ತಮಾಸೀನಂ ತದಾನೀಂ ಖಚರಾಧಿಪಮ್ ।**
**ದುಧುವುಶ್ಚಾಮರೈರ್ವಾರನಾರ್ಯಃ ಕ್ಷೀರೋದಪಾಂಡುರೈಃ ॥ ೨ ॥**

ಆಗ ಸಿಂಹಾಸನದಲ್ಲಿ ಕುಳಿತಿರುವ ಆ ವಿದ್ಯಾಧರಾಧಿಪತಿಯಾದ ಮಹಾಬಲನಿಗೆ ವಾರಾಂಗನೆಯರು, ಕ್ಷೀರಸಮುದ್ರದಂತೆ ಶುಭ್ರವಾದ ಚಾಮರಗಳನ್ನು ಬೀಸಿದರು.

**ಮದನದ್ರುಮಮಂಜರ್ಯೋ ಲಾವಣ್ಯಾಂಭೋಧಿವೀಚಯಃ ।**
**ಸೌಂದರ್ಯಕಲಿಕಾ ರೇಜುಸ್ತರುಣ್ಯಸ್ತತ್ಸಮೀಪಗಾಃ ॥ ೩ ॥**

ಆ ಮಹಾಬಲನ ಸಮೀಪದಲ್ಲಿದ್ದ ಯುಪತಿಯರು ಮನ್ಮಥನೆಂಬ ವೃಕ್ಷದ ಹೂವಿನ ಗೊಂಚಲುಗಳಂತೆಯೂ ಚೆಲ್ವಿಕೆಯೆಂಬ ಸಮುದ್ರದ ತೆರೆಮಾಲೆಗಳಂತೆಯೂ ಸೌಂದರ್ಯದ ಮೊಗ್ಗುಗಳಂತೆಯೂ ಶೋಭಿಸುತ್ತಿದ್ದರು.

**ಪೃಥುವಕ್ಷಃಸ್ಥಲಚ್ಛನ್ನ[೧]ಪರ್ಯಂತೈರ್ಮಕುಟೋಜ್ಜ್ವಲೈಃ ।**
**ಖಗೇಂದ್ರೈಃ ಪರಿವವ್ರೇಽಸೌ ಗಿರಿರಾಜ ಇವಾದ್ರಿಭಿಃ ॥ ೪ ॥**

ಮಹಾಮೇರುಪರ್ವತವನ್ನು ಬೇರೆ ಪರ್ವತಗಳು ಆವರಿಸಿಕೊಳ್ಳುವಂತೆ, ಈ ಮಹಾಬಲನನ್ನು ವಿಶಾಲವಾದ ಎದೆಗಳಿಂದ ಮುಚ್ಚಿ ಹೋದ ಸಮೀಪ ಪ್ರದೇಶವುಳ್ಳವರೂ ಕಿರೀಟಗಳಿಂದ ಪ್ರಕಾಶಿಸುವವರೂ ಆದ ಬೇರೆ ವಿದ್ಯಾಧರ ರಾಜರುಗಳು ಮುತ್ತಿಕೊಂಡಿದ್ದರು.

**ತಸ್ಯ ವಕ್ಷಃಸ್ಥಲೇ ಹಾರೋ ನೀಹಾರಾಂಶುಸಮದ್ಯುತಿಃ ।**
**ಬಭಾಸೇ ಹಿಮವತ್ಸಾನೌ ಪ್ರಪತನ್ನಿವ ನಿರ್ಝರಃ ॥ ೫ ॥**

ಆ ಮಹಾಬಲನ ಎದೆಯಲ್ಲಿ ಹಿಮದಂತೆ ಕಾಂತಿಯುಳ್ಳ ಹಾರವು ಹಿಮವತ್ಪರ್ವತದ ತಪ್ಪಲಿನಲ್ಲಿ ಬೀಳುತ್ತಿರುವ ಜಲಪಾತದಂತೆ, ಶೋಭಿಸುತ್ತಿದ್ದಿತು.

**ತದ್ವಕ್ಷಸಿ ಪೃಥಾವಿಂದ್ರನೀಲಮಧ್ಯಮಣಿರ್ಬಭೌ ।**
**ಕಂಠಿಕಾ ಹಂಸಮಾಲೇವ ವ್ಯೋಮ್ನಿ [೩]ದಾತ್ಯೂಹಮಧ್ಯಗಾ ॥ ೬ ॥**

ಆ ಮಹಾಬಲನ ವಿಶಾಲವಾದ ಎದೆಯಲ್ಲಿ ಇಂದ್ರನೀಲಮಣಿಯು ಮಧ್ಯವಾಗಿರುವ ಮುಕ್ತಾಹಾರವು ಆಕಾಶದಲ್ಲಿ ಕಪ್ಪಾದ ಗಂಡುಕೋಗಿಲೆಯು ಮಧ್ಯವಾಗಿರುವ ಹಂಸಪಕ್ಷಿಗಳ ಪಂಕ್ತಿಯಂತೆ ಪ್ರಕಾಶಿಸುತ್ತಿದ್ದಿತು.

**[೪]ಮಂತ್ರಿಣಶ್ಚ ತದಾ[೫]ಮಾತ್ಯಸೇನಾಪತಿಪುರೋಹಿತಾಃ ।**
**ಶ್ರೇಷ್ಠಿನೋಽ[೬]ಧಿಕೃತಾಶ್ಚಾನ್ಯೇ ತಂ ಪರೀತ್ಯಾವತಸ್ಥಿರೇ ॥ ೭ ॥**

ಆಗ ಬುದ್ಧಿಯಿಂದ ಸಹಾಯವನ್ನು ಮಾಡುವ ಮಂತ್ರಿಗಳೂ ಕಾರ್ಯದಲ್ಲಿ ಸಹಾಯವನ್ನು ಮಾಡುವ ಪ್ರಧಾನರೂ ಸೇನಾನಾಯಕರೂ ಪುರೋಹಿತರೂ

೧ ಯೇನ ದಿನೇನೋತ್ತರವರ್ಷಸ್ಯಾದಿಭೂತೇನ ವರ್ಷೋ ವರ್ಧ್ಯತೇ ತದ್ವರ್ಷವೃದ್ಧಿದಿನಂ ಜನನದಿನಂ ತಸ್ಮಿನ್ ಕ್ರಿಯಮಾಣೋತ್ಸವಃ. ೨ ಸಮೀಪೈಃ. ೩ ಕೃಷ್ಣಪಕ್ಷಿವಿಶೇಷಃ ಪುಂಸ್ಕೋಕಿಲಃ. ೪ ಧೀಸಚಿವಾಃ. ೫ ಕಾರ್ಯಸಹಾಯಾಃ. ೬ ಅಧಿಕಾರಿಣಃ.

ವರ್ತಕಶ್ರೇಷ್ಠರೂ ಅಧಿಕಾರಿಗಳೂ ಇತರರೂ ಆ ಮಹಾಬಲನ ಸುತ್ತಲೂ ಇರುತ್ತಿದ್ದರು.

**ಸ್ಮಿತೈಃ ಸಂಭಾಷಿತೈಃ ಸ್ಥಾನೈರ್ದಾನೈಃ ಸಮ್ಮಾನನೈರಪಿ ।**
**ತಾನಸೌ ತರ್ಪಯಾಮಾಸ[೧]ವೀಕ್ಷಿತೈರಪಿ ಸಾದರೈಃ ॥ ೮ ॥**

ಅವರನ್ನು ಈ ಮಹಾಬಲನು ಮುಗುಳುನಗೆಗಳಿಂದಲೂ ಸಂಭಾಷಣೆಗಳಿಂದಲೂ ವಾಸಸ್ಥಾನಗಳಿಂದಲೂ ದಾನಗಳಿಂದಲೂ ಸಮ್ಮಾನಗಳಿಂದಲೂ ಪ್ರೀತಿಪೂರ್ವಕವಾದ ನೋಟಗಳಿಂದಲೂ ಸಂತೋಷಪಡಿಸಿದನು.

**ಸ ಗೋಷ್ಠೀರ್ಭಾವಯನ್ಭೂಯೋ ಗಂಧರ್ವಾದಿಕಲಾವಿದಾಮ್ ।**
**ಸ್ಪರ್ಧಮಾನಾಂಶ್ಚ ತಾನ್ಪಶ್ಯನ್[೨]ಪಶ್ರೋತೃಸಮಕ್ಷತಃ ॥ ೯ ॥**

ಆ ಮಹಾಬಲನು ಗಾನ ಮೊದಲಾದ ವಿದ್ಯೆಗಳನ್ನು ತಿಳಿದವರ ಸಭೆಗಳನ್ನು ಸೇರಿಸಿ ಗಾಯನ ಮೊದಲಾದುವನ್ನು ಕೇಳುವವನೂ ಸಭ್ಯರ ಸಮಕ್ಷದಲ್ಲಿ ಪರಸ್ಪರವಾಗಿ ಈರ್ಷೆಪಡುವ ಆ ಕಲಾಭಿಜ್ಞರನ್ನು ನೋಡುವವನೂ

**ಸಾಮಂತಪ್ರಹಿತಾನ್ದೂತಾನ್ ದ್ವಾಸ್ಥೈರಾನೀಯಮಾನಕಾನ್ ।**
**ಸಂಭಾವಯನ್ಯಥೋಕ್ತೇನ ಸಮ್ಮಾನೇನ ಪುನಃಪುನಃ ॥ ೧೦ ॥**

ಸಾಮಂತರಾಜರಿಂದ ಕಳುಹಿಸಲ್ಪಟ್ಟವರೂ ದ್ವಾರಪಾಲಕರಿಂದ ಆಸ್ಥಾನಕ್ಕೆ ಕರೆತರಲ್ಪಟ್ಟವರೂ ಆದ ದೂತರನ್ನು ಯೋಗ್ಯತಾನುಸಾರವಾದ ಸನ್ಮಾನದಿಂದ ಬಾರಿಬಾರಿಗೆ ಗೌರವಿಸುವವನೂ

**ಪರಚಕ್ರನರೇಂದ್ರಾಣಾಮಾನೀತಾನಿ [೩]ಮಹತ್ತಮೈಃ ।**
**ಉಪಾಯನಾನಿ ಸಂಪಶ್ಯನ್ಯಥಾಸ್ವಂ ತಾಂಶ್ಚ ಪೂಜಯನ್ ॥ ೧೧ ॥**

ಕುಲವೃದ್ಧರು ತಂದ ಪರರಾಜರ ಕೈಗಾಣಿಕೆಗಳನ್ನು ನೋಡುವವನೂ ಯೋಗ್ಯತಾನುಸಾರವಾಗಿ ಆ ವೃದ್ಧರನ್ನು ಪೂಜಿಸುವವನೂ

**ಇತ್ಯಸೌ ಪರಮಾನಂದಮಾತನ್ವನ್ನದ್ಭುತೋದಯಃ ।**
**ಯಥೇಷ್ಟಂ ಮಂತ್ರಿವರ್ಗೇಣ ಸಹಾಸ್ತಾನಂದಮಂಡಪೇ ॥ ೧೨ ॥**

ಹೀಗೆ ಅತ್ಯಂತಭಾಗ್ಯಶಾಲಿಯೂ ಆದ ಈ ಮಹಾಬಲರಾಜನು ಪರಮಾನಂದವನ್ನು ಹೊಂದಿ ಆನಂದಮಂಟಪದಲ್ಲಿ ಮಂತ್ರಿಗಳೊಡನೆ ಯಥೇಚ್ಛವಾಗಿದ್ದನು.

**ತಂ ತದಾ ಪ್ರೀತಮಾಲೋಕ್ಯ ಸ್ವಯಂಬುದ್ಧಃ ಸಮಿದ್ಧಧೀಃ ।**
**ಸ್ವಾಮಿನೇ ಹಿತಮಿತ್ಯುಚ್ಚೈರಭಾಷಿಷ್ಟೇಷ್ಟ[೪]ಮೃಷ್ಟವಾಕ್ ॥ ೧೩ ॥**

ಆಗ ಅತ್ಯಂತಬುದ್ಧಿಶಾಲಿಯಾದ ಸ್ವಯಂಬುದ್ಧಮಂತ್ರಿಯು ಪ್ರಸನ್ನನಾಗಿರುವ ಆ ಮಹಾಬಲರಾಜನನ್ನು ನೋಡಿ ಪ್ರಭುವಿಗೆ ಬಹಳ ಹಿತಕರವಾದ ಮಾತನ್ನು ಇಷ್ಟವೂ ಪರಿಶುದ್ಧವೂ ಆದ ವಚನವುಳ್ಳವನಾಗಿ ಮಾತನಾಡಿದನು.

೧ ಈಕ್ಷಣೈಃ. ೨ ಸಭ್ಯಾದಿ. ೩ ಕುಲವೃದ್ಧೈಃ. ೪ ಶುದ್ಧಾ.

**ಇತಃ ಶೃಣು ಖಗಾಧೀಶ ವಕ್ಷ್ಯೇ ಶ್ರೇಯೋನುಬಂಧಿ[೧] ತೇ ।**
**ವೈದ್ಯಾಧರೀಮಿಮಾಂ ಲಕ್ಷ್ಮೀಂ ವಿದ್ಧಿ ಪುಣ್ಯಫಲಂ ವಿಭೋ ॥ ೧೪ ॥**

"ವಿದ್ಯಾಧರಾಧಿಪತಿಯೇ ! ನಿನಗೆ ಶ್ರೇಯಸ್ಸಿಗೆ ಕಾರಣವಾದ ವಚನವನ್ನು ಹೇಳುವೆನು, ಕೇಳು. ಪ್ರಭುವೇ ! ಈ ವಿದ್ಯಾಧರಸಂಪತ್ತು ಪೂರ್ವದಲ್ಲಿ ಮಾಡಿದ ಪುಣ್ಯದ ಫಲವೆಂದು ತಿಳಿ.

**ಧರ್ಮಾದಿಷ್ಟಾರ್ಥ ಸಂಪತ್ತಿಸ್ತತಃ ಕಾಮಸುಖೋದಯಃ ।**
**ಸ ಚ ಸಂಪ್ರೀತಯೇ ಪುಂಸಾಂ ಧರ್ಮಾತ್ಸೈಷಾ ಪರಂಪರಾ ॥ ೧೫ ॥**

ಧರ್ಮದಿಂದ ಇಷ್ಟಪದಾರ್ಥದ ಪ್ರಾಪ್ತಿಯಾಗುತ್ತದೆ. ಆ ಇಷ್ಟಾರ್ಥಪ್ರಾಪ್ತಿಯಿಂದ ಇಷ್ಟವಾದ ಸುಖಪ್ರಾಪ್ತಿಯಾಗುತ್ತದೆ. ಆ ಸುಖಪ್ರಾಪ್ತಿಯು ಮನುಷ್ಯರಿಗೆ ಮನಃಪ್ರೀತಿಗೆ ಕಾರಣವಾಗುತ್ತದೆ. ಆದುದರಿಂದ ಈ ಪರಂಪರೆಯು ಧರ್ಮದಿಂದುಂಟಾಗುತ್ತದೆ. ಎಲ್ಲದಕ್ಕೂ ಧರ್ಮವು ಮೂಲಕಾರಣವೆಂದು ಭಾವವು.

**ರಾಜ್ಯಂ ಚ ಸಂಪದೋ ಭೋಗಾಃ ಕುಲೇ ಜನ್ಮ ಸುರೂಪತಾ ।**
**ಪಾಂಡಿತ್ಯಮಾಯುರಾರೋಗ್ಯಂ ಧರ್ಮಸ್ಯೈತತ್ಫಲಂ ವಿದುಃ ॥ ೧೬ ॥**

ರಾಜ್ಯವೂ ಸಂಪತ್ತುಗಳೂ ಭೋಗಗಳೂ ಉತ್ತಮಕುಲದಲ್ಲಿ ಹುಟ್ಟುವಿಕೆಯೂ ಸುಂದರವಾದ ರೂಪವೂ ಪಾಂಡಿತ್ಯವೂ ಪೂರ್ಣವಾದ ಆಯುಷ್ಯವೂ ಆರೋಗ್ಯವೂ ಇವೆಲ್ಲ ಧರ್ಮದ ಫಲವೆಂದು ಜ್ಞಾನಿಗಳು ತಿಳಿಯುತ್ತಾರೆ.

**ನ ಕಾರಣಾದ್ವಿನಾ ಕಾರ್ಯನಿಷ್ಪತ್ತಿರಿಹ ಜಾತು ಚಿತ್ ।**
**ಪ್ರದೀಪೇನ ವಿನಾ ದೀಪ್ತಿರ್ದೃಷ್ಟಪೂರ್ವಾ ಕಿಮು ಕ್ವಚಿತ್ ॥ ೧೭ ॥**

ಕಾರಣವಿಲ್ಲದೆ ಕಾರ್ಯೋತ್ಪತ್ತಿಯೆಂದೂ ಆಗುವುದಿಲ್ಲ. ಮೊದಲು ದೀಪವಿಲ್ಲದೆ ಎಲ್ಲಿಯಾದರೂ ಪ್ರಕಾಶವು ಕಾಣಲ್ಪಟ್ಟಿದೆಯೋ ?

**ನಾಂಕುರಃ ಸ್ಯಾದ್ವಿನಾ ಬೀಜಾದ್ವಿನಾ ವೃಷ್ಟಿರ್ನ ವಾರಿದಾತ್ ।**
**ಛತ್ರಾದ್ವಿನಾಪಿ ನ ಚ್ಛಾಯಾ ವಿನಾ ಧರ್ಮಾನ್ನ ಸಂಪದಃ ॥ ೧೮ ॥**

ಬೀಜವಿಲ್ಲದೆ ಮೊಳಕೆಯಾಗುವುದಿಲ್ಲ. ಮೋಡವಿಲ್ಲದೆ ಮಳೆಯಾಗುವುದಿಲ್ಲ. ಛತ್ರಿಯಿಲ್ಲದೆ ನೆರಳಾಗುವುದಿಲ್ಲ. ಧರ್ಮವಿಲ್ಲದೆ ಸಂಪತ್ತುಗಳುಂಟಾಗುವುದಿಲ್ಲ.

**ನಾಧರ್ಮಾತ್ಸುಖಸಂಪ್ರಾಪ್ತಿರ್ನ ವಿಷಾದಸ್ತಿ ಜೀವಿತಮ್ ।**
**ನೋಷರಾತ್ಸಸ್ಯನಿಷ್ಪತ್ತಿರ್ನಾಗ್ನೇರಾಹ್ಲಾದನಂ ಭವೇತ್ ॥ ೧೯ ॥**

ಅಧರ್ಮದಿಂದ ಸುಖದ ಪ್ರಾಪ್ತಿಯಾಗುವುದಿಲ್ಲ. ವಿಷದಿಂದ ಬದುಕುವಿಕೆಯಿಲ್ಲ. ಸವುಳುಭೂಮಿಯಲ್ಲಿ ಫಲಪೈರುಗಳ ಉತ್ಪತ್ತಿಯಿಲ್ಲ. ಬೆಂಕಿಯಿಂದ ಮನಸ್ಸಿಗೆ ಆನಂದವಾಗಲಾರದು.

**ಯತೋಭ್ಯುದಯನಿಃಶ್ರೇಯಸಾರ್ಥಸಿದ್ಧಿಃ ಸುನಿಶ್ಚಿತಾ ।**
**ಸ ಧರ್ಮಸ್ತಸ್ಯ ಧರ್ಮಸ್ಯ ವಿಸ್ತರಂ ಶೃಣು ಸಾಂಪ್ರತಮ್ ॥ ೨೦ ॥**

ಯಾವುದರಿಂದ ಸ್ವರ್ಗಮೋಕ್ಷಗಳ ಸಿದ್ಧಿಯು ನಿಶ್ಚಯವಾಗಿ ಆಗುವುದೋ ಅದೇ ಧರ್ಮವು. ಈಗ ಆ ಧರ್ಮದ ವಿಸ್ತಾರವರ್ಣನೆಯನ್ನು ಕೇಳು.

**ದಯಾಮೂಲೋ ಭವೇದ್ಧರ್ಮೋ ದಯಾ ಪ್ರಾಣಾನುಕಂಪನಮ್ ।**
**ದಯಾಯಾಃ ಪರಿರಕ್ಷಾರ್ಥಂ ಗುಣಾಃ ಶೇಷಾಃ ಪ್ರಕೀರ್ತಿತಾಃ ॥ ೨೧ ॥**

ಧರ್ಮವು ದಯಾಮೂಲವಾದುದು. ಪ್ರಾಣಗಳಲ್ಲಿ ಕೃಪೆಯನ್ನಿಡುವುದು ದಯೆಯು. ದಯೆಯನ್ನು ಕಾಪಾಡಿಕೊಳ್ಳುವುದಕ್ಕೋಸ್ಕರವೇ ಬೇರೆ ಗುಣಗಳು ಹೇಳಲ್ಪಟ್ಟಿವೆ.

**ಧರ್ಮಸ್ಯ ತಸ್ಯ ಲಿಂಗಾನಿ ದಮಃ ಕ್ಷಾಂತಿರಹಿಂಸತಾ ।**
**ತಪೋ ದಾನಂ ಚ ಶೀಲಂ ಚ ಯೋಗೋ ವೈರಾಗ್ಯಮೇವ ಚ ॥ ೨೨ ॥**

ಆ ದಯಾಮೂಲಧರ್ಮಕ್ಕೆ ಇಂದ್ರಿಯನಿಗ್ರಹವೂ ಕ್ಷಮೆಯೂ ಹಿಂಸೆಯನ್ನು ಮಾಡದಿರುವಿಕೆಯೂ ತಪಸ್ಸೂ ದಾನವೂ ಶೀಲವೂ ಧ್ಯಾನವೂ ವೈರಾಗ್ಯವೂ ಚಿಹ್ನೆಗಳು.

**ಅಹಿಂಸಾ ಸತ್ಯವಾದಿತ್ವಮಚೌರ್ಯಂ ತ್ಯಕ್ತಕಾಮತಾ ।**
**ನಿಷ್ಪರಿಗ್ರಹತಾ ಚೇತಿ ಪ್ರೋಕ್ತೋ ಧರ್ಮಃ ಸನಾತನಃ ॥ ೨೩ ॥**

ಹಿಂಸೆಯನ್ನು ಮಾಡದಿರುವಿಕೆಯೂ ಸತ್ಯವನ್ನು ಮಾತನಾಡುವಿಕೆಯೂ ಕಳ್ಳತನವನ್ನು ಮಾಡದಿರುವಿಕೆಯೂ ಸ್ತ್ರೀವಿಷಯಾಸಕ್ತಿಯನ್ನು ಬಿಡುವಿಕೆಯೂ ಪರಿಗ್ರಹಗಳಿಲ್ಲದಿರುವಿಕೆಯೂ ಧರ್ಮಗಳೆಂದು ಅನಾದಿಕಾಲದಿಂದಲೂ ಹೇಳಲ್ಪಟ್ಟಿವೆ.

**ತಸ್ಮಾದ್ಧರ್ಮಫಲಂ ಜ್ಞಾತ್ವಾ ಸರ್ವಂ ರಾಜ್ಯಾದಿಲಕ್ಷಣಮ್ ।**
**ತದರ್ಥಿನಾ ಮಹಾಭಾಗ ಧರ್ಮೇ ಕಾರ್ಯಾ ಮತಿಃ ಸ್ಥಿರಾ ॥ ೨೪ ॥**

ಆದುದರಿಂದ ಈ ರಾಜ್ಯ ಮೊದಲಾದುದೆಲ್ಲವೂ ಧರ್ಮದ ಫಲವೆಂದು ತಿಳಿದು, ಭಾಗ್ಯಶಾಲಿಯೇ ! ಆ ಫಲವನ್ನಿಚ್ಛಿಸುವ ನೀನು ಧರ್ಮದಲ್ಲಿ ಸ್ಥಿರವಾದ ಬುದ್ಧಿಯನ್ನಿಡು.

**ಧೀಮನ್ನಿಮಾಂ ಚಲಾಂ ಲಕ್ಷ್ಮೀಂ ಶಾಶ್ವತೀಂ ಕರ್ತುಮಿಚ್ಛತಾ ।**
**ತ್ವಯಾ ಧರ್ಮೋಽನುಮಂತವ್ಯಃ ಸೋಽನುಷ್ಠೇಯಶ್ಚ ಶಕ್ತಿತಃ ॥ ೨೫**

ಬುದ್ಧಿವಂತನೇ ! ಈ ಚಂಚಲವಾದ ಲಕ್ಷ್ಮಿಯನ್ನು ಸ್ಥಿರಪಡಿಸಬೇಕೆಂದು ನೀ: ಇಚ್ಛಿಸುವುದಾದರೆ ಧರ್ಮವನ್ನು ತಿಳಿದು ಶಕ್ತ್ಯನುಸಾರವಾಗಿ ಅದನ್ನು ನಡಿಸಬೇಕು"

**ಇತ್ಯುಕ್ತ್ವಾಥ ಸ್ವಯಂಬುದ್ಧೇ ಸ್ವಾಮಿಶ್ರೇಯೋಽನುಬಂಧಿನಿ ।**
**ಧರ್ಮ್ಯಮರ್ಥ್ಯಂ ಯಶಸ್ಯಂ ಚ ವಚೋ ವಿರತಿಮೀಯುಷಿ ॥ ೨೬**

ಸ್ವಾಮಿಗೆ ಹಿತವನ್ನು ಬಯಸುವ ಸ್ವಯಂಬುದ್ಧನು ಧರ್ಮವನ್ನೂ ಅರ್ಥವನ ಯಶಸ್ಸನ್ನೂ ಉಂಟುಮಾಡುವ ಮಾತನ್ನು ಹೇಳಿ ವಿರಾಮವನ್ನು ಹೊಂದಿದನು:

**ತತಸ್ತದ್ವಚನಂ ಸೋಢುಮಶಕ್ತೋ ದುರ್ಮತೋದ್ಧತಃ ।**
**ದ್ವಿತೀಯಃ ಸಚಿವೋ ವಾಚಮಿತ್ಯುವಾಚ ಮಹಾಮತಿಃ ॥ .**

ಆಮೇಲೆ ಸ್ವಯಂಬುದ್ಧನ ಮಾತನ್ನು ಸಹಿಸುವುದಕ್ಕೆ ಅಸಮರ್ಥ: ಮಿಥ್ಯಾಮತದಿಂದ ಗರ್ವಪಡುವವನೂ ಆದ ಮಹಾಮತಿಯೆಂಬ ಎರಡನೇ ಮಂತ್ರಿಯು ಮುಂದೆಹೇಳುವ ಮಾತನ್ನು ಹೇಳಿದನು.

**ಭೂತವಾದಮಥಾಲಂಬ್ಯ ಸ ಲೌಕಾಯತಿಕೀಂ ಶ್ರುತಿಮ್ ।**
**ಪ್ರಸ್ತುವನ್ ಜೀವತತ್ತ್ವಸ್ಯ ದೂಷಣೇ ಮತಿಮಾತನೋತ್ ॥ ೨೮ ॥**

ಆಮೇಲೆ ಮಹಾಮತಿಯು ಭೂತವಾದವನ್ನವಲಂಬಿಸಿ ಲೌಕಾಯತಿಕ (ಚಾರ್ವಾಕ) ಶಾಸ್ತ್ರವನ್ನುಪಕ್ರಮಿಸಿ ಜೀವತತ್ತ್ವದ ದೂಷಣೆಯಲ್ಲಿ ಪ್ರವರ್ತಿಸಿದನು. ಜೀವತತ್ತ್ವವಿಲ್ಲವೆಂದು ಸಾಧಿಸಲಾರಂಭಿಸಿದನೆಂದು ಭಾವವು.

**ಸತಿ ಧರ್ಮಿಣಿ ಧರ್ಮಸ್ಯ ಘಟತೇ ದೇವ ಚಿಂತನಮ್ ।**
**ಸ ಏವ ತಾವನ್ನಾಸ್ತ್ಯಾತ್ಮಾ ಕುತೋ ಧರ್ಮಫಲಂ ಭವೇತ್ ॥ ೨೯ ॥**

೧ ವಚನಮಿತ್ಯರ್ಥಃ.

“ಸ್ವಾಮಿಯೇ ! ಧರ್ಮಿಯು ಸಿದ್ಧವಾಗಿದ್ದರೆ ಅದರಲ್ಲಿ ಧರ್ಮವನ್ನು ಪರಿಕಲ್ಪನೆಮಾಡುವುದು ಸರಿಯಾಗುತ್ತದೆ. ಆ ಧರ್ಮಿರೂಪನಾದ ಆತ್ಮನೇ ಇಲ್ಲದಿರುವಾಗ ಧರ್ಮಫಲವು ಎಲ್ಲಿ ಬಂದಿತು ?

**ಪೃಥಿವ್ಯಪ್ಪವನಾಗ್ನೀನಾಂ ಸಂಘಾತಾದಿಹ ಚೇತನಾ ।**
**ಪ್ರಾದುರ್ಭವತಿ ಮದ್ಯಾಂಗಸಂಗಮಾನ್ಮದಶಕ್ತಿವತ್ ॥ ೩೦ ॥**

ಹೆಂಡವಾಗುವ ಪದಾರ್ಥ(ಹಿಟ್ಟು ನೀರು ಬೆಲ್ಲ ಧಾತಕೀಪುಷ್ಪ)ಗಳನ್ನು ಬೆರಸುವುದರಿಂದ ಒಂದು ಮದಶಕ್ತಿಯುಂಟಾಗುವಂತೆ ಭೂಮಿ ಜಲ ಗಾಳಿ ಬೆಂಕಿ ಈ ನಾಲ್ಕುಪದಾರ್ಥಗಳು ಸೇರುವುದರಿಂದ ಈ ಶರೀರದಲ್ಲಿ ಒಂದು ಚೈತನ್ಯಶಕ್ತಿಯು ಪ್ರಾದುರ್ಭವಿಸುತ್ತದೆ. ಈ ನಾಲ್ಕುಪದಾರ್ಥಗಳ ಸಂಯೋಗದಿಂದ ಆತ್ಮನೆಂಬ ವಸ್ತುವುಂಟಾಗುತ್ತದೆಂದು ಭಾವವು.

**ತತೋ ನ ಚೇತನಾ ಕಾಯತತ್ತ್ವಾತ್ಪೃಥಗಿಹಾಸ್ತಿ ನಃ ।**
**ತಸ್ಮಾಸ್ತದ್ವ್ಯತಿರೇಕೇಣಾನುಪಲಬ್ಧೇಃ ಖಪುಷ್ಪವತ್ ॥ ೩೧ ॥**

ಆದುದರಿಂದ ಈ ನಮ್ಮ ಶರೀರದಲ್ಲಿ ಶರೀರಕ್ಕಿಂತ ಬೇರೆ ಚೇತನಾ ( ಆತ್ಮ ) ವೆಂಬುದಿಲ್ಲ. ಶರೀರ ಹೊರತು ಆ ಚೇತನವು ಆಕಾಶಪುಷ್ಪದಂತೆ, ಕಾಣುವುದಿಲ್ಲ.

**ತತೋ ನ ಧರ್ಮಃ ಪಾಪಂ ವಾ ಪರಲೋಕಶ್ಚ ಕಸ್ಯಚಿತ್ ।**
**ಜಲಬುದ್ಬುದವಜ್ಜೀವಾ ವಿಲೀಯಂತೇ ತನುಕ್ಷಯಾತ್ ॥ ೩೨ ॥**

ಆದುದರಿಂದ ಜೀವನಿಗೆ ಪುಣ್ಯವೂ ಪಾಪವೂ ಪರಲೋಕವೂ ಇಲ್ಲ. ಶರೀರವು ನಷ್ಟವಾದೊಡನೆ ನೀರಿನಗುಳ್ಳೆಯಂತೆ, ಜೀವಗಳೂ ನಷ್ಟವಾಗುತ್ತವೆ. ಅಂದರೆ ಪೃಥಿವೀ ಜಲ ತೇಜ ವಾಯು ಈ ನಾಲ್ಕರ ಸಂಯೋಗದಿಂದ ಶರೀರವಾಗುತ್ತದೆ; ಆದರಲ್ಲಿ ಚೈತನ್ಯಶಕ್ತಿಯೆಂಬುದುಂಟಾಗುತ್ತದೆ; ಆ ಶರೀರವು ನಷ್ಟವಾಗಿ ಪೃಥಿವೀ ಜಲ ಮೊದಲಾದುವು ಬೇರೆಯಾದೊಡನೆ ಆ ಚೈತನ್ಯಶಕ್ತಿಯೂ ನಷ್ಟವಾಗುತ್ತದೆ; ಶರೀರಕ್ಕಿಂತ ಬೇರೆ ಆತ್ಮತತ್ತ್ವವೂ ಇಲ್ಲ ; ಪುಣ್ಯಪಾಪಗಳೂ ಇಲ್ಲ.

**ತಸ್ಮಾದ್ದೃಷ್ಟಸುಖಂ ತ್ಯಕ್ತ್ವಾ ಪರಲೋಕಸುಖಾರ್ಥಿನಃ ।**
**ವ್ಯರ್ಥಕ್ಲೇಶಾ ಭವಂತ್ಯೇತೇ ಲೋಕದ್ವಯಸುಖಾಚ್ಚ್ಯುತಾಃ ॥ ೩೩ ॥**

ಆದುದರಿಂದ ಪ್ರಾಪ್ತವಾದ ಸುಖವನ್ನು ಬಿಟ್ಟು ಪರಲೋಕದ ಸುಖವನ್ನಿಚ್ಛಿಸುವ ಈ ಜನಗಳು ವ್ಯರ್ಥವಾಗಿ ತಪಸ್ಸು ಮೊದಲಾದುವುಗಳಿಂದ ಕ್ಲೇಶಪಟ್ಟು ಈ ಲೋಕದ ಸುಖವನ್ನೂ ಪರಲೋಕದ ಸುಖವನ್ನೂ ಕಳೆದುಕೊಳ್ಳುತ್ತಾರೆ.

**ತದೇಷಾಂ ಪರಲೋಕಾರ್ಥಾ [೧]ಸಮೀಹಾ ಕ್ರೋಷ್ಟುರಾಮಿಷಮ್ ।**
**ತ್ಯಕ್ತ್ವಾ ಮುಖಾಗತಂ ಮೋಹಾ[೨]ನ್ಮೀನಾಶೋತ್ಪತನಾಯತೇ ॥ ೩೪ ॥**

ಆದುದರಿಂದ ಇವರ ಪರಲೋಕದ ಇಚ್ಛೆಯು ನರಿಯು ಬಾಯಿಯಲ್ಲಿರುವ ಮಾಂಸವನ್ನು ಬಿಟ್ಟು ಮೀನಿನ ಆಶೆಯಿಂದ ಮೇಲಕ್ಕೆ ಹಾರಿದಂತೆ ಆಗುತ್ತದೆ.

**ಪಿಂಡತ್ಯಾಗಾಲ್ಲಿಹಂತೀಮೇ ಹಸ್ತಂ [೩]ಪ್ರೇತ್ಯ ಸುಖೇಪ್ಸಯಾ ।**
**[೪]ವಿಪ್ರಲಬ್ಧಾಃ ಸಮುತ್ಸೃಷ್ಟದೃಷ್ಟಭೋಗಾ [೫]ವಿಚೇತಸಃ ॥ ೩೫ ॥**

ಈ ಬುದ್ಧಿಹೀನರಾದ ಜನಗಳು ಬಡಿಸಿದ ಭೋಜನಪದಾರ್ಥಗಳನ್ನು ಬಿಟ್ಟು ಕೈಯನ್ನು ನೆಕ್ಕುವಂತೆ ಪರಲೋಕಸುಖದ ಇಚ್ಛೆಯಿಂದ ವಂಚಿತರಾಗಿ ಪ್ರಾಪ್ತವಾಗಿರುವ ಭೋಗೋಪಭೋಗಗಳನ್ನು ಬಿಟ್ಟುಬಿಡುತ್ತಾರೆ. ಬುದ್ಧಿಹೀನರಿಗೆ ಇಹಪರ ಸುಖಗಳೆರಡೂ ಇಲ್ಲವೆಂದಭಿಪ್ರಾಯವು”

೧ ಇಚ್ಛಾ. ೨ ಮತ್ಸ್ಯವಾಂಛಯೋತ್ಪತನಾಯತೇ. ೩ ಭವಾಂತರಸುಖೇಚ್ಛಯಾ. ೪ ವಂಚಿತಾಃ. ೫ ಬುದ್ಧಿಹೀನಾಃ.

**ಸ್ವಮತೇ ಯುಕ್ತಿಮಿತ್ಯುಕ್ತ್ವಾ ವಿರತೇ ಭೂತವಾದಿನಿ ।**
**ವಿಜ್ಞಾನಮಾತ್ರಮಾಶ್ರಿತ್ಯ ಪ್ರಸ್ತುವನ್ ಜೀವನಾಸ್ತಿತಾಮ್ ॥ ೩೬ ॥**

**ಸಂಭಿನ್ನೋ ವಾದಕಂಡೂಯಾವಿಜೃಂಭಿತಮಥೋದ್ವಹನ್ ।**
**ಸ್ಮಿತಂ ಸ್ವಮತಸಂಸಿದ್ಧಿಮಿತ್ಯುಪನ್ಯಸ್ಯತಿ ಸ್ಮ ಸಃ ॥ ೩೭ ॥**

ಹಿಂದೆಹೇಳಿದಂತೆ ಭೂತವಾದಿಯಾದ ಮಹಾಮತಿಯು ತನ್ನ ಮತದಲ್ಲಿ ಯುಕ್ತಿಯನ್ನು ಹೇಳಿ ವಿರಾಮವನ್ನು ಹೊಂದುತ್ತಿರಲು, ವಾದದ ನವೆಯುಳ್ಳ ಸಂಭಿನ್ನಮತಿಯು, ವಿಜ್ಞಾನಾದ್ವೈತವಾದವನ್ನವಲಂಬಿಸಿ ಜೀವವೆಂಬ ವಸ್ತುವಿಲ್ಲ ವೆಂದು ಹೇಳಲಾರಂಭಿಸಿ ನಗುತ್ತ, ತನ್ನಮತದ ಪ್ರಸಿದ್ಧಿಯನ್ನು ಮುಂದೆ ಹೇಳುವ ರೀತಿಯಾಗಿ ಉಪನ್ಯಾಸಮಾಡಿದನು.

**ಜೀವವಾದಿನ್ನ ತೇ ಕಶ್ಚಿಜ್ಜೀವೋಽಸ್ತ್ಯನುಪಲಬ್ಧಿತಃ ।**
**ವಿಜ್ಞಪ್ತಿಮಾತ್ರಮೇವೇದಂ ಕ್ಷಣಭಂಗಿ ಯತೋ ಜಗತ್ ॥ ೩೮ ॥**

“ಜೀವತತ್ತ್ವವನ್ನು ಸಿದ್ಧಮಾಡುವ ಸ್ವಯಂಬುದ್ಧನೇ !ಜೀವವೆಂಬ ಪದಾರ್ಥವು ಕಾಣದಿರುವುದರಿಂದ ಅದು ಇಲ್ಲ. ಜೀವಪದಾರ್ಥವು ಇರುತ್ತಿದ್ದ ಪಕ್ಷದಲ್ಲಿ ನಮಗೆ ಕಾಣುತ್ತಿದ್ದಿತು. (ಜೀವೋ ನಾಸ್ತ್ಯನುಪಲಬ್ಧೇಃ) ಜಗತ್ತು ಕ್ಷಣನಶ್ವರವಾಗಿರುವು ದರಿಂದ ಈ ಕಾಣುವ ಪದಾರ್ಥಗಳೆಲ್ಲವೂ ಜ್ಞಾನಮಯವೇ ಆಗಿದೆ. ಜ್ಞಾನಕ್ಕಿಂತ ಬೇರೆ ಪದಾರ್ಥವಾವುದೂ ಇಲ್ಲ.

**[೧]ನಿರಂಶಂ ತಚ್ಚ ವಿಜ್ಞಾನಂ [೨]ನಿರನ್ವಯವಿನಶ್ವರಮ್ ।**
**ವೇದ್ಯವೇದಕಸಂವಿತ್ತಿ[೩]ಭಾಗೈ[೪]ರ್ಭಿನ್ನಂ ಪ್ರಕಾಶತೇ ॥ ೩೯ ॥**

ಆ ವಿಜ್ಞಾನವಾದರೋ ಅಂಶಗಳಿಲ್ಲದಿರುವ ಅಖಂಡವಾದ ಒಂದೇ ವಸ್ತುವೂ ಒಂದುಕ್ಷಣಕಾಲವಿದ್ದು ಸಂಪೂರ್ಣವಾಗಿ ನಾಶವಾಗತಕ್ಕುದೂ ವೇದ್ಯ ವೇದಕ ಸಂವಿತ್ತಿ ಈ ಆಕಾರಗಳಿಂದ ಬೇರೆಯೂ ಆಗಿ ಪ್ರಕಾಶಿಸುತ್ತದೆ. ಆ ವಿಜ್ಞಾನವು ಬೇರೆ ಪದಾರ್ಥಗಳಿಂದ ತಿಳಿಯಲ್ಪಡತಕ್ಕುದೂ ಅಲ್ಲ , ಅದು ಬೇರೆ ಪದಾರ್ಥಗಳನ್ನು ತಿಳಿಯುವುದೂ ಇಲ್ಲ , ಜ್ಞಾನರೂಪದಿಂದಲೂ ಬೇರೆಯಾಗಿದೆಯೆಂದು ಭಾವವು.

**ಸಂತಾನಾವಸ್ಥಿತೇಸ್ತಸ್ಯ ಸ್ಮೃತ್ಯಾದ್ಯಪಿ ಘಟಾಮಟೇತ್ ।**
**[೫]ಸಂವೃತ್ಯಾ ಸ ಚ ಸಂತಾನಃ [೬]ಸಂತಾನಿಭ್ಯೋ ನ ಭಿದ್ಯತೇ ॥ ೪೦ ॥**

ಆ ವಿಜ್ಞಾನವು ಸಂಪೂರ್ಣವಾಗಿ ನಾಶವಾದರೂ ಅದರ ಸಂತಾನಪರಂಪರೆಯು ಇರುವುದರಿಂದ ಸ್ಮೃತಿ ಪ್ರತ್ಯಭಿಜ್ಞಾನ ಮೊದಲಾದ ಜ್ಞಾನಗಳುಂಟಾಗಬಹುದು. ಆದರೆ ಆ ಸಂತಾನವೂ ಭ್ರಾಂತಿರೂಪವಾಗಿರುವುದರಿಂದ ಸಂತಾನಿಗಳಾದ ಕ್ಷಣಿಕಜ್ಞಾನಗಳಿಂದ ಬೇರೆಯಾಗಿರುವುದಿಲ್ಲ. ಪೂರ್ವಜ್ಞಾನಕ್ಕೆ ಸದೃಶವಾದ ಉತ್ತರಜ್ಞಾನದ ಉತ್ಪತ್ತಿಗೆ ಸಂತಾನವೆಂದೂ ಅಂತಹ ಸಂತಾನವು ಉತ್ತರೋತ್ತರವಾಗಿ ಉಂಟಾಗುತ್ತಲೇ ಇರುವುದರಿಂದ ಸ್ಮರಣಾದಿಜ್ಞಾನ ಗಳುಂಟಾಗಬಹುದೆಂದೂ ಭಾವವು.

**ಪ್ರತ್ಯಭಿಜ್ಞಾದಿಕಂ ಭ್ರಾಂತಂ ವಸ್ತುನಿ ಕ್ಷಣನಶ್ವರೇ ।**
**ಯಥಾಲೂನಪುನರ್ಜಾತನಖಕೇಶಾದಿಷು ಕ್ವಚಿತ್ ॥ ೪೧ ॥**

ಉಗುರು ಕೂದಲು ಮೊದಲಾದುವುಗಳನ್ನು ಕತ್ತರಿಸಿದನಂತರ ಪುನಃ ಬೆಳೆದ ಉಗುರು ಕೂದಲು ಮೊದಲಾದುವುಗಳಲ್ಲಿ “ಇವು ಮೊದಲಿನ ಉಗುರು ಕೂದಲು ಮೊದಲಾದುವುಗಳೇ” ಎಂಬುದಾಗಿ ಉಂಟಾಗುವ ಪ್ರತ್ಯಭಿಜ್ಞಾನವು ಹೇಗೆ ಮಿಥ್ಯಾಜ್ಞಾನವೋ ಹಾಗೆ ಕ್ಷಣಕಾಲದಲ್ಲಿ ನಾಶವಾಗುವ ವಸ್ತುವಿನಲ್ಲಿ “ಇದು ಮೊದಲು ನೋಡಿದ್ದ ವಸ್ತುವೇ” ಯೆಂಬುದಾಗಿ ಉಂಟಾಗುವ ಪ್ರತ್ಯಭಿಜ್ಞಾನವೂ ಭ್ರಮಾತ್ಮಕವಾದುದು.

೧ ವೇದ್ಯವೇದಕಸವಿಂತ್ಯಾಕಾರತ್ರಯರಹಿತಂ. ೨ ಅನ್ವಯೋ ದ್ರವ್ಯಂ ತತೋ ನಿಷ್ಕ್ರಾಂತಂ. ೩ ಆಕಾರೈಃ. ೪ ಪೃಥಗ್ಭೂತಂ. ೫ ಭ್ರಾಂತ್ಯಾ. ೬ ಕ್ಷಣಿಕಜ್ಞಾನೇಭ್ಯಃ.

**ತತೋ ವಿಜ್ಞಾನಸಂತಾನವ್ಯತಿರಿಕ್ತೋ ನ ಕಶ್ಚನ ।**
**ಜೀವಸಂಜ್ಞಃ ಪದಾರ್ಥೋಽಸ್ತಿ ಪ್ರೇತ್ಯಭಾವಫಲೋಪಭುಕ್ ॥ ೪೨ ॥**

ಆದುದರಿಂದ ವಿಜ್ಞಾನಪರಂಪರೆಗಿಂತ ಬೇರೆ ಪರಲೋಕದಲ್ಲಿ ಸುಖದುಃಖಗಳನ್ನನುಭವಿಸುವ ಜೀವವೆಂಬುದೊಂದು ಪದಾರ್ಥವಿಲ್ಲ. ವಿಜ್ಞಾನವೇ ವಾಸ್ತವಿಕವಾದ ತತ್ವವೆಂದರ್ಥವು.

**ತದಮುತ್ರಾತ್ಮನೋ ದುಃಖಜಿಹಾಸಾರ್ಥಂ [೧]ಪ್ರಯಸ್ಯತಃ ।**
**ಟಿಟ್ಟಿಭಸ್ಯೇವ ಭೀತಿಸ್ತೇ ಗಗನಾದಪತಿಷ್ಯತಃ ॥ ೪೩ ॥**

ಆದುದರಿಂದ ಎಲೈ ಸ್ವಯಂಬುದ್ಧನೇ ! ಪರಲೋಕದಲ್ಲಿ ಆತ್ಮನಿಗುಂಟಾಗುವ ದುಃಖವನ್ನು ಹೋಗಲಾಡಿಸುವುದಕ್ಕೋಸ್ಕರ ಪ್ರಯತ್ನಪಡುತ್ತಿರುವ ನಿನ್ನ ಭಯವು, ಬೀಳದಿರುವ ಆಕಾಶದ ದೆಸೆಯಿಂದ ಲಕುಮುಕೀಪಕ್ಷಿಯು ಭಯಪಡುವಂತಿದೆ"

**ಇತ್ಯುದೀರ್ಯ ಸ್ಥಿತೇ ತಸ್ಮಿನ್ಮಂತ್ರೀ ಶತಮತಿಸ್ತತಃ ।**
**[೨]ನೈರಾತ್ಮ್ಯವಾದಮಾಲಂಬ್ಯ ಪ್ರೋವಾಚೇತ್ಥಂ [೩]ವಿಕತ್ಥನಃ ॥ ೪೪ ॥**

ಹೀಗೆ ಹೇಳಿ ಸಂಭಿನ್ನಮತಿಯು ಸುಮ್ಮನಾದಮೇಲೆ ಶತಮತಿಯೆಂಬ ಮಂತ್ರಿಯು ಆತ್ಮಶ್ಲಾಘನೆಯನ್ನು ಮಾಡುತ್ತ ಶೂನ್ಯವಾದವನ್ನಾಶ್ರಯಿಸಿ ಮುಂದೆ ಹೇಳುವ ರೀತಿಯಾಗಿ ಹೇಳಿದನು.

**ಶೂನ್ಯಮೇವ ಜಗದ್ವಿಶ್ವಮಿದಂ ಮಿಥ್ಯಾವಭಾಸತೇ ।**
**ಭ್ರಾಂತೇಃ ಸ್ವಪ್ನೇಂದ್ರಜಾಲಾದೌ ಹಸ್ತ್ಯಾದಿಪ್ರತಿಭಾಸವತ್ ॥ ೪೫ ॥**

"ಈ ಜಗತ್ತೆಲ್ಲವು ಶೂನ್ಯವೇ ಆಗಿದೆ. ಸ್ವಪ್ನದಲ್ಲಿಯೂ ಇಂದ್ರಜಾಲ ಮೊದಲಾದುದರಲ್ಲಿಯೂ ಆನೆ ಕುದುರೆ ಮೊದಲಾದ ಪದಾರ್ಥಗಳು ಕಾಣುವಂತೆ, ಭ್ರಾಂತಿಯಿಂದ ಈ ಘಟಪಟಮುಕುಟಶಕಟಾದಿ ಪದಾರ್ಥಗಳು ಕಾಣಿಸುತ್ತವೆ. ಇದೆಲ್ಲ ಮಿಥ್ಯಾರೂಪವಾಗಿದೆ.

**ತತಃ ಕುತೋಽಸ್ತಿ ವಾ ಜೀವಃ ಪರಲೋಕಃ ಕುತೋಽಸ್ತಿ ವಾ ।**
**ಅಸತ್ಸರ್ವಮಿದಂ ಯಸ್ಮಾ[೪]ದ್ಗಂಧರ್ವನಗರಾದಿವತ್ ॥ ೪೬ ॥**

ಆದುದರಿಂದ ಜೀವವೆಲ್ಲಿದೆ ? ಪರಲೋಕವೆಲ್ಲಿದೆ ? ಇಂದ್ರಜಾಲಿಕರು ಮಾಡುವ ನಗರ ಮೊದಲಾದುವುಗಳಂತೆ ಇದೆಲ್ಲ ಮಿಥ್ಯಾರೂಪವಾಗಿದೆ. ಜಗತ್ತೆಲ್ಲವೂ ಶೂನ್ಯವೆಂದರ್ಥವು.

**ಅತೋಽಮೀ ಪರಲೋಕಾರ್ಥಂ ತಪೋಽನುಷ್ಠಾನತತ್ಪರಾಃ ।**
**ವೃಥೈವ ಕ್ಲೇಶಮಾಯಾಂತಿ ಪರಮಾರ್ಥಾನಭಿಜ್ಞಕಾಃ ॥ ೪೭ ॥**

ಈ ಕಾರಣದಿಂದ ಯಥಾರ್ಥವನ್ನು ತಿಳಿಯದಿರುವ ಇವರು (ಸ್ವಯಂಬುದ್ಧನ ಮತವನ್ನನುಸರಿಸುವವರು) ಪರಲೋಕಕ್ಕೋಸ್ಕರ ತಪಶ್ಚರ್ಯಾದಿಗಳಲ್ಲಿ ತತ್ಪರರಾಗಿ ಸುಮ್ಮನೆ ಶರೀರವನ್ನು ಒಣಗಿಸಿಕೊಂಡು ದುಃಖಪಡುತ್ತಾರೆ"

**ಘರ್ಮಾರಂಭೇ ಮೃಗಾ ಯದ್ವದ್ದೃಷ್ಟ್ವಾ ಮರುಮರೀಚಿಕಾಃ ।**
**ಜಲಾಶಯಾನುಧಾವಂತಿ ತದ್ವದ್ಭೋಗಾರ್ಥಿನೋಽಪ್ಯಮೀ ॥ ೪೮ ॥**

ಬೇಸಿಗೆಯ ಆರಂಭದಲ್ಲಿ ಮೃಗಗಳು ಥಳಥಳಿಸುವ ಬಿಸಲುಕುದುರೆಯನ್ನು ನೋಡಿ ನೀರಿನ ಆಸೆಯಿಂದ ಓಡುವಂತೆ, ಭೋಗವನ್ನಪೇಕ್ಷಿಸುವ ಈ ಜೀವಗಳೂ ವ್ಯರ್ಥವಾಗಿ ಕ್ಲೇಶವನ್ನನುಭವಿಸುತ್ತವೆ"

೧ ಪ್ರಯತ್ನಂ ಪ್ರಯಾಸಂ ವಾ ಕುರ್ವತಃ. ೨ ಶೂನ್ಯವಾದಂ. ೩ ವಿಕತ್ಥಯತ್ಯಾತ್ಮಾನಂ ಶ್ಲಾಘಯತೀತಿ ವಿಕತ್ಥನಃ. ೪ ಐಂದ್ರಜಾಲಿಕಾದಿಕೃತನಗರಾದಿವತ್.

**ಇತ್ಯು[೧]ದ್ಗೃಹ್ಯ ಕುದೃಷ್ಟಾಂತಕುಹೇತುಭಿರಪಾರ್ಥಕಮ್ ।**
**ವ್ಯರಮತ್ಸೋಽಪ್ಯತೋ ವಕ್ತುಂ ಸ್ವಯಂಬುದ್ಧಃ ಪ್ರಚಕ್ರಮೇ ॥ ೪೯ ॥**

ಈಪ್ರಕಾರವಾಗಿ ಕುದೃಷ್ಟಾಂತಗಳಿಂದಲೂ ಕುಹೇತುಗಳಿಂದಲೂ ಮಿಥ್ಯಾರ್ಥವನ್ನು ಹೇಳಿ ಆ ಶತಮತಿಯೂ ವಿರಾಮವನ್ನು ಹೊಂದಿದನು. ಇದರಮೇಲೆ ಸ್ವಯಂಬುದ್ಧನು ಹೇಳುವುದಕ್ಕಾರಂಭಿಸಿದನು.

**ಭೂತವಾದಿನ್ಮೃಷಾ ವಕ್ತಿ [೨]ಸ ಭವಾನಾತ್ಮಶೂನ್ಯತಾಮ್ ।**
**ಭೂತೇಭ್ಯೋ ವ್ಯತಿರಿಕ್ತಸ್ಯ ಚೈತನ್ಯಸ್ಯ ಪ್ರತೀತಿತಃ ॥ ೫೦ ॥**

"ಎಲೈ ಭೂತವಾದಿಯೇ ! ಪ್ರಸಿದ್ಧನಾದ ನೀನು ಆತ್ಮವಿಲ್ಲವೆಂದು ಸುಳ್ಳು ಹೇಳುತ್ತಿ. ಪೃಥಿವ್ಯಾದಿ ಭೂತಗಳಿಗಿಂತ ಬೇರೆಯಾದ ಚೈತನ್ಯವು ಅನುಭವಸಿದ್ಧವಾಗಿದೆ.

**ಕಾಯಾತ್ಮಕಂ ನ ಚೈತನ್ಯಂ ನ ಕಾಯಶ್ಚೇತನಾತ್ಮಕಃ ।**
**ಮಿಥೋ ವಿರುದ್ಧಧರ್ಮತ್ವಾತ್ತಯೋಶ್ಚಿದಚಿದಾತ್ಮನೋಃ ॥ ೫೧ ॥**

ಚೈತನ್ಯವು ಶರೀರಸ್ವರೂಪವಲ್ಲ. ಶರೀರವು ಚೈತನ್ಯಸ್ವರೂಪವಲ್ಲ. ಚೈತನ್ಯ ಜಡರೂಪಗಳಾದ ಆ ಜೀವ ಮತ್ತು ಶರೀರಗಳು ಪರಸ್ಪರವಾಗಿ ವಿರುದ್ಧ ಧರ್ಮವುಳ್ಳುವಾಗಿವೆ. ಜೀವವು ಜ್ಞಾನಾದಿಗುಣವುಳ್ಳುದಾಗಿದೆ. ಶರೀರವು ರೂಪರಸ ಗಂಧಸ್ಪರ್ಶಗುಣಗಳುಳ್ಳುದಾಗಿದೆ.

**ಕಾಯಚೈತನ್ಯಯೋರ್ನೈಕ್ಯಂ ವಿರೋಧಿಗುಣಯೋಗತಃ ।**
**ತಯೋರಂತರ್ಬಹೀರೂಪನಿರ್ಭಾಸಾಚ್ಚಾಸಿಕೋಶವತ್ ॥ ೫೨ ॥**

ಪರಸ್ಪರವಿರೋಧವಾದ ಗುಣಗಳ ಸಂಬಂಧದಿಂದ ಶರೀರ ಮತ್ತು ಚೈತನ್ಯಗಳಿಗೆ ಐಕ್ಯವಾಗುವುದಿಲ್ಲ. ಖಡ್ಗವೂ ಒರೆಯೂ ಬೇರೆಬೇರೆಯಾಗಿರುವುದರಿಂದ ಖಡ್ಗದ ರೂಪವು ಒಳಗೆ ಪ್ರಕಾಶಿಸುತ್ತದೆ. ಒರೆಯ ರೂಪವು ಹೊರಗೆ ಪ್ರಕಾಶಿಸುತ್ತದೆ. ಅದರಂತೆ ಚೈತನ್ಯವೂ ಶರೀರವೂ ಬೇರೆಬೇರೆಯಾಗಿವೆ. ಚೈತನ್ಯದ ರೂಪವು ಮಾನಸಪ್ರತ್ಯಕ್ಷದಿಂದ ತೋರುತ್ತದೆ. ಶರೀರದ ರೂಪವು ಬಾಹ್ಯಕ್ಕೆ ತೋರುತ್ತದೆ.

**ನ ಭೂತಕಾರ್ಯಂ ಚೈತನ್ಯಂ ಘಟತೇ ತದ್ಗುಣೋಽಪಿ ವಾ ।**
**ತತೋ ಜಾತ್ಯಂತರೀಭಾವಾತ್ತದ್ವಿಭಾಗೇನ ತದ್ಗ್ರಹಾತ್ ॥ ೫೩ ॥**

ಚೈತನ್ಯವು ಪೃಥ್ವೀ ಮೊದಲಾದ ಭೂತಗಳ ಕಾರ್ಯವೂ ಅಲ್ಲ. ಅವುಗಳ ಗುಣವೂ ಅಲ್ಲ. ಭೂತಗಳು ಜಡವಾಗಿವೆ. ಚೈತನ್ಯವು ಜ್ಞಾನಾತ್ಮಕವಾಗಿದೆ. ಆದುದರಿಂದ ಚೈತನ್ಯವು ಭೂತಗಳಿಂದ ಬೇರೆಯೇ ವಸ್ತುವಾಗಿದೆ. ನಮಗೆ ಆ ಭೂತಚೈತನ್ಯಗಳ ಜ್ಞಾನವು ಬೇರೆಬೇರೆಯಾಗಿ ಆಗುತ್ತದೆ. ಭೂತಗಳು ಇಂದ್ರಿಯಪ್ರತ್ಯಕ್ಷವಾಗಿವೆ. ಚೈತನ್ಯವು ಮಾನಸಪ್ರತ್ಯಕ್ಷವಾಗಿದೆ.

**ನ ವಿಕಾರೋಽಪಿ ದೇಹಸ್ಯ ಸಂವಿದ್ಭವಿತುಮರ್ಹತಿ ।**
**ಭಸ್ಮಾದಿತದ್ವಿಕಾರೇಭ್ಯೋ ವೈಧರ್ಮ್ಯಾನ್ಮೂ[೩]ರ್ತ್ಯನನ್ವಯಾತ್ ॥ ೫೪ ॥**

ಸ್ವಯಂಬುದ್ಧ:- "ಚೈತನ್ಯವು ಶರೀರದ ವಿಕಾರವೂ ಆಗುವುದಿಲ್ಲ. ಶರೀರದ ವಿಕಾರಗಳಾದ ಬೂದಿ ಮೊದಲಾದುವುಗಳಿಗಿಂತ ಈ ಚೈತನ್ಯವು ಬೇರೆಯಾಗಿದೆ. ಮೂರ್ತವಾದ ಶರೀರದ ವರ್ಣರಸಗಂಧಾದಿಗುಣಗಳು ಚೈತನ್ಯದಲ್ಲಿಲ್ಲವು.

**ಗೃಹಪ್ರದೀಪಯೋರ್ಯದ್ವತ್ಸಂಬಂಧೋ ಯುತಸಿದ್ಧಯೋಃ ।**
**ಆಧಾರಧೇಯರೂಪತ್ವಾತ್ತದ್ವದ್ದೇಹೋಪಯೋಗಯೋಃ ॥ ೫೫ ॥**

ಬೇರೆಬೇರೆ ಸಿದ್ಧವಾಗಿರುವ ಮನೆಗೂ ದೀಪಕ್ಕೂ ಸಂಬಂಧವಿರುವಂತೆ, ಶರೀರವು ಆಧಾರವಾಗಿಯೂ ಚೈತನ್ಯವು ಆಧೇಯವಾಗಿಯೂ ಇರುವುದರಿಂದ ಶರೀರಾತ್ಮಗಳಿಗೆ ಆಧಾರಾಧೇಯಸಂಬಂಧವಿದೆ. ಮನೆಯೂ ದೀಪವೂ ಬೇರೆಬೇರೆ

೧ ಉಕ್ತ್ವಾ. ೨ ಪ್ರಸಿದ್ಧಃ. ೩ ವರ್ಣಗಂಧಾದಿಮೂರ್ತಗುಣಾಸಂಬಂಧಾತ್.

ಪದಾರ್ಥಗಳೆಂದು ಸಿದ್ಧವಾಗುವಂತೆ, ಶರೀರವೂ ಆತ್ಮನೂ ಬೇರೆ ಬೇರೆ ಪದಾರ್ಥಗಳೆಂದು ಸಿದ್ಧವಾಗುತ್ತದೆಂದು ಭಾವವು.

**ಸರ್ವಾಂಗೀಣೈಕಚೈತನ್ಯಪ್ರತಿಭಾಸಾದಬಾಧಿತಾತ್ ।**
**ಪ್ರತ್ಯಂಗಪ್ರವಿಭಕ್ತೇಭ್ಯೋ ಭೂತೇಭ್ಯಃ ಸಂವಿದೋ ಭಿದಾ ॥ ೫೬ ॥**

ಶರೀರದ ಅವಯವಗಳು ಬೇರೆಬೇರೆಯಾಗಿದ್ದರೂ ಅವುಗಳಲ್ಲೆಲ್ಲ ಚೈತನ್ಯವು ಒಂದೇ ಆಗಿದೆಯೆಂದು ಗೊತ್ತಾಗುವುದರಿಂದಲೂ ಪ್ರತಿಯೊಂದು ಅವಯವಗಳಲ್ಲಿಯೂ ವಿಭಾಗವಾಗಿರುವ ಭೂತಗಳು ಬೇರೆ ಬೇರೆಯಾಗಿದ್ದರೂ ಚೈತನ್ಯವು ಒಂದೇ ಎಂದು ಗೊತ್ತಾಗುವುದರಿಂದಲೂ ಇವುಗಳಿಗಿಂತ ಬೇರೆಯಾದ ಒಂದು ಚೈತನ್ಯವು ಇದೆ.

**ಕಥಂ ಮೂರ್ತಿಮತೋ ದೇಹಾಚ್ಚೈತನ್ಯ[1]ಮತದಾತ್ಮಕಮ್ ।**
**[2]ಸ್ಯಾದ್ಧೇತುಫಲಭಾವೋ ಹಿ ನ ಮೂರ್ತಾಮೂರ್ತಯೋಃ ಕ್ವಚಿತ್ ॥**

ಭೂತವಾದಿಯೇ ! ಮೂರ್ತವಾದ ಶರೀರದಿಂದ ಅಮೂರ್ತವಾದ ಚೈತನ್ಯವು ಹೇಗುಂಟಾಗುತ್ತದೆ ? ಮೂರ್ತಾಮೂರ್ತಗಳಿಗೆ ಎಲ್ಲಿಯೂ ಕಾರ್ಯಕಾರಣ ಭಾವವಿಲ್ಲ. ಅಂದರೆ ಮೂರ್ತವಾದ ಕಾರಣದಿಂದ ಅಮೂರ್ತವಾದ ಕಾರ್ಯವುಂಟಾಗುವುದಿಲ್ಲ.

**ಅಮೂರ್ತಮಕ್ಷವಿಜ್ಞಾನಂ ಮೂರ್ತಾದಕ್ಷಕದಂಬಕಾತ್ ।**
**ದೃಷ್ಟಮುತ್ಪದ್ಯಮಾನಂ ಚೇನ್ನಾಸ್ಯ ಮೂರ್ತತ್ವ[3]ಸಂಗರಾತ್ ॥ ೫೮ ॥**

ಭೂತವಾದಿಯು ಮೂರ್ತವಾದ ಇಂದ್ರಿಯಸಮುದಾಯದಿಂದ ಅಮೂರ್ತವಾದ ಜ್ಞಾನವುಂಟಾಗುವಂತೆ ಮೂರ್ತವಾದ ಶರೀರದಿಂದ ಅಮೂರ್ತವಾದ ಚೈತನ್ಯವುಂಟಾಗಬಹುದೆಂದು ಹೇಳಬಹುದು. ಆದರೆ ಮೂರ್ತವಾದ ಇಂದ್ರಿಯದಿಂದುಂಟಾಗುವ ಜ್ಞಾನವೂ ಮೂರ್ತವೇ ಎಂದು ಸ್ವೀಕರಿಸಿರುವುದರಿಂದ ದೃಷ್ಟಾಂತವು ವಿಷಮವಾಗಿದೆ.

**ಬಂಧಂ ಪ್ರತ್ಯೇಕತಾಂ ಬಿಭ್ರದಾತ್ಮಾ ಮೂರ್ತೇನ ಕರ್ಮಣಾ ।**
**ಮೂರ್ತಃ ಕಥಂಚಿ[4]ದಾಕ್ಷೋಽಪಿ ಬೋಧಃ ಸ್ಯಾನ್ಮೂರ್ತಿಮಾನ[5]ತಃ ॥**

ಹೇಗಂದರೆ: — ಆತ್ಮನು ಮೂರ್ತವಾದ ಕರ್ಮದೊಡನೆ ಬಂಧವನ್ನು ಹೊಂದಿ ಹಾಲು ನೀರು ಬೆರತಂತೆ ಐಕ್ಯವಾಗಿರುವುದರಿಂದ ಕಥಂಚಿತ್ (ಒಂದು ಅಪೇಕ್ಷೆಯಿಂದ) ಮೂರ್ತನಾಗಿದ್ದಾನೆ. ಈ ಕಾರಣದಿಂದ ಇಂದ್ರಿಯಜನ್ಯವಾದ ಜ್ಞಾನವೂ ಕಥಂಚಿತ್ ಮೂರ್ತವಾಗಿದೆ. ಅಮೂರ್ತನಾದ ಆತ್ಮನು ಮೂರ್ತವಾದ ಕರ್ಮದೊಡನೆ ಸೇರಿ ಕಥಂಚಿತ್ ಮೂರ್ತನೆನಿಸಿಕೊಳ್ಳುವಂತೆ, ಅಮೂರ್ತವಾದ ಇಂದ್ರಿಯಜ್ಞಾನವೂ ಮೂರ್ತವಾದ ಇಂದ್ರಿಯದಿಂದುಂಟಾಗುವುದರಿಂದ ಕಥಂಚಿತ್ ಮೂರ್ತವಾಗಿದೆಯೆಂದು ಭಾವವು.

**ಕಾಯಾಕಾರೇಣ ಭೂತಾನಾಂ ಪರಿಣಾಮೋಽನ್ಯಹೇತುಕಃ ।**
**ಕರ್ಮಸಾರಥಿಮಾತ್ಮಾನಂ [6]ವ್ಯತಿರಿಚ್ಯ ಸ ಕೋಽಪರಃ ॥ ೬೦ ॥**

ಪೃಥ್ವೀಜಲ ಮೊದಲಾದ ಭೂತಗಳು ಶರೀರಾಕಾರವಾಗಿ ಪರಿಣಮಿಸುವುದಕ್ಕೆ ಕರ್ಮಸಹಿತನಾದ ಸಂಸಾರಿ ಆತ್ಮನನ್ನು ಬಿಟ್ಟು ಬೇರೆ ಯಾವುದು ಕಾರಣ ? ಶರೀರರಚನೆಯು ಸಂಸಾರಿಜೀವದ ಪಾಪಪುಣ್ಯಕ್ಕನುಸಾರವಾಗಿ ಆಗುತ್ತದೆಂದರ್ಥವು.

**ಅಭೂತ್ವಾ ಭವನಾ[7]ದ್ದೇಹೇ ಭೂತ್ವಾ ಚಾಭವನಾತ್ಪುನಃ ।**
**ಜಲಬುದ್ಬುದವಜ್ಜೀವಂ ಮಾ ಮಂಸ್ಥಾಸ್ತದ್ವಿಲಕ್ಷಣಮ್ ॥ ೬೧ ॥**

ಜೀವವು ಶರೀರವುಂಟಾಗುವುದಕ್ಕಿಂತ ಮೊದಲು ಇಲ್ಲದೆ ಶರೀರದೊಡನೆ ಉಂಟಾಗುವುದರಿಂದಲೂ ಶರೀರವು ನಷ್ಟವಾದ ಮೇಲೆ ಜೀವವು ಇಲ್ಲದಿರುವುದರಿಂದಲೂ ನೀರಿನ ಗುಳ್ಳೆಯಂತೆ ಜೀವವು ಅನಿತ್ಯವಾದುದೆಂದು ತಿಳಿಯಬೇಡ. ಜೀವವು ಶರೀರಕ್ಕಿಂತ ವಿಲಕ್ಷಣವಾಗಿದೆ. ಶರೀರದ ಗುಣವೇ ಬೇರೆ ಜೀವದ ಗುಣವೇ ಬೇರೆ.

**ಶರೀರಂ ಕಿಮುಪಾದಾನಂ ಸಂವಿದಃ ಸಹಕಾರಿ ವಾ ।**
**ನೋಪಾದಾನಮುಪಾದೇಯಾದ್ವಿಜಾತೀಯತ್ವದರ್ಶನಾತ್ ॥ ೬೨ ॥**

ಚೈತನ್ಯವು ಶರೀರದಿಂದಲೇ ಉಂಟಾಗುತ್ತದೆಂದು ಅಂಗೀಕಾರಮಾಡಿದರೂ ಶರೀರವು ಚೈತನ್ಯಕ್ಕೆ ಉಪಾದಾನಕಾರಣವೋ ? ಸಹಕಾರಿಕಾರಣವೋ ? ಎಂದು ಪ್ರಶ್ನೆಯುಂಟಾಗುವುದು. ಶರೀರವು ಜಡವಾಗಿರುವುದರಿಂದ ಉಪಾದಾನಕಾರಣವೆಂದು ಹೇಳಲಾಗುವುದಿಲ್ಲ. ಜೀವವು ಜ್ಞಾನರೂಪವಾಗಿದೆ. ವಿಜಾತೀಯವಾದ ಶರೀರದಿಂದ ವಿಜಾತೀಯವಾದ ಆತ್ಮನು ಹುಟ್ಟುವುದಿಲ್ಲ. ಆದುದರಿಂದ ಶರೀರವು ಉಪಾದಾನಕಾರಣವಲ್ಲ.

**ಸಹಕಾರೀತಿ ಚೇದಿಷ್ಟಮುಪಾದಾನಂ ತು ಮೃಗ್ಯತಾಮ್ ।**
**ಸೂಕ್ಷ್ಮ[1]ಭೂತಸಮಾಹಾರಸ್ತದುಪಾದಾನಮಿತ್ಯಸತ್ ॥ ೬೩ ॥**

**ತತೋ ಭೂತಮಯಾದ್ದೇಹಾದ್ವ್ಯತಿಭಿನ್ನಂ ಸ್ವಲಕ್ಷಣಮ್ ।**
**ಜೀವದ್ರವ್ಯಮುಪಾದಾನಂ ಚೈತನ್ಯಸ್ಯೇತಿ ಗೃಹ್ಯತಾಮ್ ॥ ೬೪ ॥**

ಶರೀರವು ಸಹಕಾರಿಕಾರಣವೆಂದು ಹೇಳುವ ಪಕ್ಷದಲ್ಲಿ ಇಷ್ಟವೆ. ಆದರೆ ಜೀವಕ್ಕೆ ಉಪಾದಾನ-ಮುಖ್ಯಕಾರಣವನ್ನು ಬೇರೆ ಹುಡುಕಬೇಕು. ಮಡಿಕೆಗೆ ಮಣ್ಣು ಹೇಗೋ ಹಾಗೆ ಯಾವ ಕಾರಣವು ಕಾರ್ಯರೂಪವಾಗಿ ಪರಿಣಮಿಸುತ್ತದೆಯೋ ಅದಕ್ಕೆ ಉಪಾದಾನಕಾರಣವೆಂದು ಹೆಸರು. ಬೇರೆ ಕಾರಣಗಳಿಗೆ ಸಹಕಾರಿಕಾರಣಗಳೆಂದು ಹೆಸರು. ಸೂಕ್ಷ್ಮವಾದ ಪೃಥಿವ್ಯಾದಿ ಭೂತಸಮೂಹವೇ ಉಪಾದಾನಕಾರಣವೆಂಬುದೂ ಸರಿಯಾದುದಲ್ಲ. ಭೂತಗಳಿಂದುಂಟಾದ ಆ ದೇಹಕ್ಕಿಂತ ಚೈತನ್ಯವು ಸಂಪೂರ್ಣ ಬೇರೆಯಾಗಿದೆ. ಆದುದರಿಂದ ಚೈತನ್ಯಕ್ಕೆ ಜೀವವೇ ಉಪಾದಾನಕಾರಣವೆಂದು ಸ್ವೀಕರಿಸಬೇಕು.

**ಏತೇನೈವ [2]ಪ್ರತಿಕ್ಷಿಪ್ತಂ ಮದಿರಾಂಗನಿದರ್ಶನಮ್ ।**
**ಮದ್ಯಾಂಗೇಷ್ವವಿರೋಧಿನ್ಯಾ ಮದಶಕ್ತೇ[3]ರ್ವಿಭಾವನಾತ್ ॥ ೬೫ ॥**

ಹಿಟ್ಟು ಬೆಲ್ಲ ನೀರು ಧಾತಕೀಪುಷ್ಪ ಇವುಗಳ ಸಂಯೋಗದಿಂದ ನವೀನವಾದ ಶಕ್ತಿಯುಂಟಾಗುತ್ತದೆಂದು ಹೇಳಿದ ದೃಷ್ಟಾಂತವು ಈ ಹಿಂದೆ ಹೇಳಿದ ಯುಕ್ತಿಯಿಂದಲೇ ಖಂಡಿತವಾಯಿತು. ಏತಕ್ಕೆಂದರೆ: — ಆ ಮದ್ಯವಾಗುವ ಪದಾರ್ಥಗಳಲ್ಲಿಯೂ ಮದಶಕ್ತಿಯು ಅವ್ಯಕ್ತವಾಗಿ ಮೊದಲೇ ಇರುತ್ತದೆಂದು ನಿಶ್ಚಯವಾಗಿದೆ. ಮೊದಲು ಇಲ್ಲದಿರುವ ಶಕ್ತಿಯು ಆಕಾಶಪುಷ್ಪದಂತೆ ಎಂದೂ ಉಂಟಾಗಲಾರದು.

**ಸತ್ಯಂ [4]ಭೂತೋಪಸೃಷ್ಟೋಽಯಂ ಭೂತವಾದೀ ಕುತೋಽನ್ಯಥಾ ।**
**ಭೂತಮಾತ್ರಮಿದಂ ವಿಶ್ವಮಭೂತಂ ಪ್ರತಿಪಾದಯೇತ್ ॥ ೬೬ ॥**

ಯಥಾರ್ಥವಾಗಿ ನೋಡಿದರೆ ಈ ಭೂತವಾದಿಯೂ ಭೂತಹಿಡಿದವನೇ ಆಗಿದ್ದಾನೆ. ಹಾಗಿಲ್ಲದಿರುವ ಪಕ್ಷದಲ್ಲಿ ಕೇವಲಭೂತಮಯವಲ್ಲದ ಈ ಜಗತ್ತನ್ನು ಪೃಥ್ವೀ ಜಲ ತೇಜ ವಾಯು ಮಾತ್ರವೇ ಎಂಬುದಾಗಿ ಏತಕ್ಕೆ ಹೇಳುವನು ? ಮಹಾಮತಿಯು ಭೂತಹಿಡಿದವನಂತೆ ಹುಚ್ಚನಾಗಿರುವುದರಿಂದ ಈ ಜಗತ್ತು ಪೃಥ್ವೀ ಜಲ ತೇಜ ವಾಯು ರೂಪ ಮಾತ್ರವೇ ಆಗಿದೆಯೆಂದು ಹೇಳುತ್ತಾನೆಂದು ಭಾವವು.

---

೧. ಅಮೂರ್ತರೂಪಂ. ೨ ಕಾರಣಕಾರ್ಯಭಾವಃ. ೩ ಪ್ರತಿಜ್ಞಾನಾತ್. ೪ ಇಂದ್ರಿಯಜನಿತಃ. ೫ ಕಾರಣಾತ್. ೬ ತ್ಯಕ್ತ್ವಾ. ೭ ಶರೀರಸ್ಯ ಜಲಬುದ್ಬುದಸ್ಯಾಪಿ ಸಾದಿಸಾಂತತ್ವಾದಭೂತ್ವಾಭವನಾದಿಕಮಸ್ತಿ ಜೀವಸ್ಯಾನಾದ್ಯನಂತತ್ವಾನ್ನಾಸ್ತೀತ್ಯರ್ಥಃ.

೧ ಪೃಥಿವ್ಯಾದಿಚತುಷ್ಟಯಸಮಾಹಾರಃ. ೨ ನಿರಾಕೃತಂ. ೩ ನಿಶ್ಚಯಾತ್. ೪ ಗ್ರಹಾವಿಷ್ಟಃ.

**ಪೃಥಿವ್ಯಾದಿಷ್ವನುದ್ಭೂತಂ ಚೈತನ್ಯಂ ಪೂರ್ವಮಸ್ತಿಚೇತ್ ।**
**ನಾಚೇತನೇಷು ಚೈತನ್ಯಶಕ್ತೇರ್ವ್ಯಕ್ತಿ[೧]ಮನನ್ವಯಾತ್ ॥ ೬೭ ॥**

ಚೈತನ್ಯವು ಪೃಥಿವೀ ಮೊದಲಾದುವುಗಳಲ್ಲಿ ಅವ್ಯಕ್ತವಾಗಿ ಮೊದಲೇ ಇರುತ್ತದೆಂದು ಹೇಳುವುದೂ ಸರಿಯಲ್ಲ. ಅಚೇತನವಾದ ಪುದ್ಗಲಗಳಲ್ಲಿ ಚೈತನ್ಯಶಕ್ತಿಯ ಸಂಬಂಧವು ಕಾಣುವುದಿಲ್ಲ. ಅವು ಜಡವಾಗಿರುತ್ತವೆಂಬುದು ಪ್ರಸಿದ್ಧವಾಗಿದೆ.

**ಆದ್ಯಂತೌ ದೇಹಿನಾಂ ದೇಹೌ ನ ವಿನಾ ಭವತಸ್ತನೂ ।**
**ಪೂರ್ವೋತ್ತರೇ ಸಂವಿದಧಿಷ್ಠಾನತ್ವಾನ್ಮಧ್ಯದೇಹವತ್ ॥ ೬೮ ॥**

ಮಧ್ಯಾವಸ್ಥೆಯಲ್ಲಿರುವ ಶರೀರದಲ್ಲಿ ಜೀವನಿಗೆ ಆಹಾರ ಮೊದಲಾದುವುಗಳಲ್ಲಿ ಇಚ್ಛೆಗಳು ಕಂಡುಬರುತ್ತವೆ. ಇದು ಪೂರ್ವಶರೀರಾವಸ್ಥೆಯ ಸಂಸ್ಕಾರವೆಂದು ಪ್ರಸಿದ್ಧವಾಗಿದೆ. ಅದರಂತೆ ಪ್ರಥಮತಃ ಉತ್ಪತ್ತಿಯಾಗುವ ಶರೀರಕ್ಕೂ ಮೊದಲು ಶರೀರಸಹಿತವಾಗಿದ್ದ ಜೀವವೇ ಕಾರಣವು. ಮಗುವು ಹುಟ್ಟಿದರಕೂಡಲೆ ಸ್ತನ್ಯಪಾನವನ್ನು ಮಾಡಬೇಕೆಂದು ಅಪೇಕ್ಷಿಸುತ್ತದೆ. ಇದು ಪೂರ್ವದಲ್ಲಿ ಅನುಭವಿಸಿದ ಸ್ಮರಣೆಯಿಲ್ಲದಿದ್ದರೆ ಉಂಟಾಗಲಾರದು. ಹಾಗೆಯೇ ಪ್ರಕೃತದೇಹವು ಅಂತವಾದಮೇಲೆ ಜೀವವು ಇನ್ನೊಂದುದೇಹವನ್ನು ಹೊಂದುತ್ತದೆ. ಇದರಿಂದ ಶರೀರ ಹೊರತು ಬೇರೆ ಜೀವತತ್ತ್ವವಿದೆಯೆಂದು ಸಿದ್ಧವಾಗುತ್ತದೆ. ಅಂತಹ ಜೀವವು ಅನಾದಿಕಾಲದಿಂದಲೂ ಸಂತಾನಕ್ರಮದಿಂದ ಅವಿಚ್ಛಿನ್ನವಾದ ಶರೀರ ವುಳ್ಳುದಾಗಿಯೇ ಇರುತ್ತದೆ. ಹಾಗೆ ಅವಿಚ್ಛಿನ್ನವಾಗಿರುವ ಶರೀರಗಳಿಗೆ ತೈಜಸ ಕಾರ್ಮಣಗಳೆಂದು ಹೆಸರು. ಕಾರ್ಮಣಶರೀರವೇ ಔದಾರಿಕ ಮೊದಲಾದ ಶರೀರ ಗಳಿಗೆ ಬೀಜಪ್ರಾಯವಾಗಿದೆ.

**ದೇಹೌ ತೌ ಯತ್ರ ತಂ ವಿದ್ಧಿ ಪರಲೋಕಮಸಂಶಯಮ್ ।**
**ತದ್ವಾಂಶ್ಚ ಪರಲೋಕೀ ಸ್ಯಾತ್ಪ್ರೇತ್ಯಭಾವಫಲೋಪಭುಕ್ ॥ ೬೯ ॥**

ಜೀವಕ್ಕೆ ಆ ಭೂತಕಾಲದ ಶರೀರವೂ ಭವಿಷ್ಯತ್ಕಾಲದ ಶರೀರವೂ ಎಲ್ಲಿ ಉಂಟಾಗುತ್ತವೋ ಅದೇ ಪರಲೋಕವೆಂದು ನಿಶ್ಚಯವಾಗಿ ತಿಳಿ. ಆ ಪರಲೋಕವುಳ್ಳವನೇ ಪರಲೋಕಿ(ಆತ್ಮ)ಯು. ಅವನೇ ಪರಲೋಕದಲ್ಲಿ ಪುಣ್ಯ ಪಾಪಗಳ ಸುಖದುಃಖರೂಪವಾದ ಫಲಗಳನ್ನನುಭವಿಸುವವನು. ಆದುದರಿಂದ ಪಂಚಭೂತಾತ್ಮಕವಾದ ಶರೀರವೇ ಆತ್ಮನೆಂದು ಹೇಳುವುದು ಅಸಂಗತವಾಗಿದೆ. ಗಾಢಾಂಧಕಾರದಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡು "ನಾನು" ಎಂಬ ಶಬ್ದವನ್ನುಚ್ಚರಿಸಿದರೆ ಅದಕ್ಕೆ ವಾಚ್ಯನು ಆತ್ಮನು ಹೊರತು ಶರೀರವಲ್ಲವೆಂದು ಸ್ಪಷ್ಟವಾಗುತ್ತದೆ.

**ಜಾತ್ಯನುಸ್ಮರಣಾಜ್ಜೀವಗತಾಗತವಿನಿಶ್ಚಯಾತ್ ।**
**ಆಪ್ತೋಕ್ತಿಸಂಭವಾಚ್ಚೈವ ಜೀವಾಸ್ತಿತ್ವವಿನಿಶ್ಚಯಃ ॥ ೭೦ ॥**

ಕೆಲವು ಜೀವಗಳಿಗೆ ಪೂರ್ವಜನ್ಮದ ವಿಷಯಗಳು ಸ್ಮರಣೆ(ಜಾತಿಸ್ಮರಣೆ)ಗೆ ಬರುವುದರಿಂದಲೂ ಜೀವನು ನವೀನಶರೀರವನ್ನು ಹೊಂದುವುದೂ ಶರೀರವನ್ನು ಬಿಟ್ಟುಹೋಗುವುದೂ ನಿಶ್ಚಯವಾಗಿರುವುದರಿಂದಲೂ ಜೀವವೆಂಬ ಪದಾರ್ಥ ವಿದೆಯೆಂದು ಆಪ್ತವಚನವಿರುವುದರಿಂದಲೂ ಜೀವದ ಅಸ್ತಿತ್ವವು ಸಿದ್ಧವಾಗುತ್ತದೆ.

**ಅನ್ಯಪ್ರೇರಿತಮೇತಸ್ಯ ಶರೀರಸ್ಯ ವಿಚೇಷ್ಟಿತಮ್ ।**
**ಹಿತಾಹಿತಾಭಿಸಂಧಾನಾದ್ಯಂತ್ರಸ್ಯೇವ ವಿಚೇಷ್ಟಿತಮ್ ॥ ೭೧ ॥**

ಅಚೇತನವಾದ ಯಂತ್ರದಲ್ಲಿ ಉಂಟಾಗುವ ಹಲನಚಲನಾದಿಕ್ರಿಯೆಗಳಿಂದ ಯಂತ್ರವನ್ನು ನಡಿಸುವ ಚೈತನ್ಯಪುರುಷನ ಅಸ್ತಿತ್ವವು ಸಿದ್ಧವಾಗುವಂತೆ, ಈ ಅಚೇತನವಾದ ಶರೀರದಲ್ಲಿಯೂ ಹಿತಾಹಿತವನ್ನು ತಿಳಿದು ಪ್ರವರ್ತಿಸುವ ಕ್ರಿಯೆಗಳಿಂದ ಈ ಶರೀರಕ್ಕೂ ಪ್ರೇರಕವಾದ ಬೇರೊಂದು ವಸ್ತುವಿದೆಯೆಂದು ಗೊತ್ತಾಗುತ್ತದೆ. ಕೇವಲ ಶರೀರದಲ್ಲಿ ಹಿತಾಹಿತಪ್ರಾಪ್ತಿನಿವೃತ್ತಿರೂಪವಾದ ಕ್ರಿಯೆಗಳುಂಟಾಗುವುದು ಅಸಂಭವವಾಗಿದೆ. ಅಂತಹ ಪ್ರೇರಕನು ಜೀವ ಹೊರತು ಶರೀರವಲ್ಲ.

**ಚೈತನ್ಯಂ ಭೂತಸಂಯೋಗಾದ್ಯದಿ ಚೇತ್ಸಂಪ್ರಜಾಯತೇ ।**
**[೧]ಪಿಠರೇ[೨]ರಂಧನಾಯಾಧಿಶ್ರಿತೇ ಸ್ಯಾತ್ತತ್ಸಮುದ್ಭವಃ ॥ ೭೨ ॥**

ಆತ್ಮನೆಂಬ ಬೇರೆ ಪದಾರ್ಥವಿಲ್ಲದೆ ಪೃಥಿವೀ ಮೊದಲಾದ ಭೂತ ಸಂಯೋಗದಿಂದಲೇ ಚೈತನ್ಯವುಂಟಾಗುವ ಪಕ್ಷದಲ್ಲಿ ಅಡಿಗೆಗೋಸ್ಕರ ಒಲೆಯಲ್ಲಿಟ್ಟ ಪಾತ್ರೆಯಲ್ಲಿಯೂ ಚೈತನ್ಯವುಂಟಾದೀತು. ಆ ಪಾತ್ರೆಯಲ್ಲಿಯೂ ಪೃಥಿವೀ, ಜಲ ಮೊದಲಾದ ಭೂತಗಳ ಸಂಯೋಗವಾಗಿರುವುದರಿಂದ ಚೈತನ್ಯವುಂಟಾಗ ಬೇಕಾಗುವುದೆಂದು ಭಾವವು.

**ಇತ್ಯಾದಿಭೂತವಾದೀಷ್ಟಮತದೂಷಣಸಂಭವಾತ್ ।**
**ಮೂರ್ಖಪ್ರಲಪಿತಂ ತಸ್ಯ ಮತಮಿತ್ಯ[೩]ವಧೀರ್ಯತಾಮ್ ॥ ೭೩ ॥**

ಭೂತವಾದಿ-ಮಹಾಮತಿಗೆ ಇಷ್ಟವಾದ ಮತದಲ್ಲಿ ಹಿಂದೆ ಹೇಳಿದಂತೆ ಇನ್ನೂ ಅನೇಕ ದೋಷಗಳು ಸಂಭವಿಸುವುದರಿಂದ ಅವನ ಮತವು ಮೂರ್ಖ ಪ್ರಲಾಪವೆಂಬುದಾಗಿ ತಿಳಿದು ನಿರಾಕರಿಸಬೇಕು. ಅದು ಮಿಥ್ಯಾವಾದುದರಿಂದ ಅದನ್ನು ಖಂಡಿಸಬೇಕೆಂದಭಿಪ್ರಾಯವು".

**ವಿಜ್ಞಪ್ತಿಮಾತ್ರಸಂಸಿದ್ಧಿರ್ನ ವಿಜ್ಞಾನಾದಿಹಾಸ್ತಿ ತೇ ।**
**ಸಾಧ್ಯಸಾಧನಯೋರೈಕ್ಯಾತ್ಕುತಸ್ತತ್ತ್ವವಿನಿಶ್ಚಿತಿಃ ॥ ೭೪ ॥**

ಸ್ವಯಂಬುದ್ಧಮಂತ್ರಿಯು ಭೂತವಾದವನ್ನು ನಿರಾಕರಿಸಿ ಎರಡನೆಯ ವಿಜ್ಞಾನಾದ್ವೈತವಾದವನ್ನು ನಿರಾಕರಣಮಾಡುತ್ತಾನೆ:- "ಎಲೈ ವಿಜ್ಞಾನಾದ್ವೈತ ವಾದಿಯೇ! ವಿಜ್ಞಾನವೇ ತತ್ತ್ವವು, ಬೇರೆ ಯಾವುದೂ ತತ್ತ್ವವಿಲ್ಲವೆಂದು ಯಾವುದರಿಂದ ಸಿದ್ಧವಾಗುತ್ತದೆ? ವಿಜ್ಞಾನದ ಸಿದ್ಧಿಯು ವಿಜ್ಞಾನದಿಂದಲೇ ಆಗುವುದಿಲ್ಲ. ಇಲ್ಲಿ ವಿಜ್ಞಾನವು ಸಾಧ್ಯವಾಗಿದೆ. ಅದನ್ನು ಸಿದ್ಧಮಾಡುವುದಕ್ಕೆ ಬೇರೆಯಾವುದಾದರು ಹೇತು (ಸಾಧನ) ಬೇಕು. ಹಾಗೆ ಬೇರೆ ಹೇತುವಿನಿಂದ ಸಿದ್ಧವಾಗುವ ಪಕ್ಷದಲ್ಲಿ ದ್ವೈತವು ಸಿದ್ಧವಾಗುತ್ತದೆ. ವಿಜ್ಞಾನವೇ ಹೇತುವಾಗುವ ಪಕ್ಷದಲ್ಲಿ ಸಾಧ್ಯಸಾಧನಗಳೆರಡೂ ಒಂದೇ ಆದುವು. ಇದು ಸಾಧ್ಯಸಮಹೇತ್ವಾ ಭಾಸವಾಯಿತು. ಸಾಧ್ಯವು ಅಸಿದ್ಧವಾಗಿರುವಂತೆ ಸಾಧನವೂ ಅಸಿದ್ಧವಾಯಿತು. ಆದುದರಿಂದ ತತ್ತ್ವನಿಶ್ಚಯವು ಹೇಗಾಗುತ್ತೆ?

**ವಿಜ್ಞಾನವ್ಯತಿರಿಕ್ತಸ್ಯ ವಾಕ್ಯಸ್ಯೇಹ ಪ್ರಯೋಗತಃ ।**
**ಬಹಿರರ್ಥಸ್ಯ ಸಂಸಿದ್ಧಿರ್ವಿಜ್ಞಾನಂ ತದ್ವಚೋಪಿ ಚೇತ್ ॥ ೭೫ ॥**

**ಕಿಂ ಕೇನ ಸಾಧಿತಂ ತತ್ಸ್ಯಾನ್ಮೂರ್ಖವಿಜ್ಞಪ್ತಿಮಾತ್ರಕವ್ ।**
**ಕುತೋ ಗ್ರಾಹ್ಯಾದಿಭೇದೋಽಪಿ ವಿಜ್ಞಾನೈಕ್ಯೇ ನಿರಂಶಕೇ ॥ ೭೬ ॥**

ವಿಜ್ಞಾನದಿಂದ ವ್ಯತಿರಿಕ್ತವಾದ ವಾಕ್ಯಪ್ರಯೋಗವು ಕಾಣುವುದರಿಂದ ಆ ವಾಕ್ಯಕ್ಕೆ ವಾಚ್ಯವಾದ ಬಾಹ್ಯಪದಾರ್ಥವೂ ಸಿದ್ಧವಾಗುತ್ತದೆ. ಹಾಗೆ ಬಾಹ್ಯಪದಾರ್ಥವೂ ಸಿದ್ಧವಾಗುವುದರಿಂದ ವಿಜ್ಞಾನಮಾತ್ರವೇ ತತ್ತ್ವವೆಂಬ ಮಾತು ಸುಳ್ಳಾಯಿತು. ವಾಕ್ಯವು ಬಾಹ್ಯಪದಾರ್ಥವನ್ನು ಹೇಳದೆ ವಿಜ್ಞಾನವನ್ನೇ ಹೇಳುವುದರಿಂದ ವಿಜ್ಞಾನ ಮತ್ತು ವಿಜ್ಞಾನವನ್ನು ಹೇಳುವ ವಾಕ್ಯ ಇವೆರಡು ಹೊರತು ಬೇರೆ ಪದಾರ್ಥವಿಲ್ಲವೆಂದು ಹೇಳುವ ಪಕ್ಷದಲ್ಲಿ, ವಿಜ್ಞಾನ ಮತ್ತು ವಾಕ್ಯ ಈ ಎರಡು ಪದಾರ್ಥಗಳು ಸಿದ್ಧವಾಗುವುದರಿಂದ ದ್ವೈತವು ಸಿದ್ಧವಾಯಿತು. ವಿಜ್ಞಾನವನ್ನು ಹೇಳುವ ವಾಕ್ಯವೂ ವಿಜ್ಞಾನವೇ ಆಗಿದೆಯೆಂದು ಹೇಳುವಪಕ್ಷದಲ್ಲಿ ಯಾವುದನ್ನು ಯಾವುದರಿಂದ ಸಾಧಿಸಿದಂತಾಯಿತು? ವಾಚ್ಯವಾಚಕಗಳೆರಡೂ ಒಂದೇ

೧ ಅಸಂಬಂಧಾತ್.

೧ ಸ್ಥಾಲ್ಯಾಂ. ೨ ಪಚನಾಯ. ೩ ಅವಜ್ಞಾಯತಾಂ.

ಆದುದರಿಂದ ತತ್ತ್ವವ್ಯವಸ್ಥೆಯಾಗುವುದಿಲ್ಲವೆಂದರ್ಥವು. ವಿಜ್ಞಾನವೇ ತತ್ತ್ವವಾಗುವಪಕ್ಷದಲ್ಲಿ ಅದನ್ನು ತಿಳಿಸುವುದಾವುದು ?ವಾಕ್ಯವೇ ತತ್ತ್ವವಾಗುವ ಪಕ್ಷದಲ್ಲಿ ಅದಕ್ಕೆ ವಾಚ್ಯವಾವುದು ? ನಿರಂಶವಾದ ವಿಜ್ಞಾನವೊಂದೇ ತತ್ತ್ವವಾಗುವಪಕ್ಷದಲ್ಲಿ ಆ ಜ್ಞಾನಕ್ಕೆ ಗ್ರಾಹ್ಯಪದಾರ್ಥವೇ ಇಲ್ಲವೆಂತಾಯಿತು. ಗ್ರಾಹ್ಯವಿಲ್ಲದಿದ್ದರೆ ಗ್ರಾಹಕ (ಜ್ಞಾನ)ವೂ ಇರುವುದಿಲ್ಲ , ಇದರಿಂದ ಸರ್ವಶೂನ್ಯಪ್ರಸಂಗವು ಬರುತ್ತದೆ.

**ವಿಜ್ಞಪ್ತಿರ್ವಿಷಯಾಕಾರಶೂನ್ಯಾ ನ ಪ್ರತಿಭಾಸತೇ ।**
**ಪ್ರಕಾಶ್ಯೇನ ವಿನಾ ಸಿದ್ಧ್ಯೇತ್ಕ್ವಚಿತ್ಕಿಂ ನು ಪ್ರಕಾಶಕಮ್ ॥ ೭೭ ॥**

ಯಾವುದಾದರೂ ವಿಷಯವನ್ನವಲಂಬಿಸದಿರುವ ಜ್ಞಾನವು ಅನುಭವಸಿದ್ಧವಾಗಿಲ್ಲ. ಜ್ಞಾನವು ವಿಷಯವನ್ನವಲಂಬಿಸಿಯೇ ಇರುತ್ತದೆ. ಯಾವ ಪದಾರ್ಥವನ್ನೂ ಪ್ರಕಾಶಪಡಿಸದಿರುವ ಪ್ರಕಾಶ(ದೀಪ)ವು ಎಲ್ಲಿಯಾದರು ಸಿದ್ಧವಾಗುವುದುಂಟೆ ?

**ವಿಜ್ಞಪ್ತ್ಯಾ ಪರಸಂವಿತ್ತೇರ್ಗ್ರಹಃ ಸ್ಯಾದ್ವಾ ನ ವಾ ತವ ।**
**ತದ್ಗ್ರಹೇ ಸರ್ವವಿಜ್ಞಾನನಿರಾಲಂಬನತಾಕ್ಷತಿಃ ॥ ೭೮ ॥**

ವಿಜ್ಞಾನವು ಬೇರೆ ಜ್ಞಾನವನ್ನು ತಿಳಿಯುತ್ತದೆಯೋ? ಇಲ್ಲವೋ? ತಿಳಿಯುವಪಕ್ಷದಲ್ಲಿ ಸಮಸ್ತಜ್ಞಾನಗಳೂ ನಿರಾಲಂಬನಗಳಾಗಿವೆಯೆಂದು ಹೇಳುವ ಮಾತು ಸುಳ್ಳಾಯಿತು. ಬೇರೆ ಜ್ಞಾನವನ್ನು ತಿಳಿಯುವುದರಿಂದ ಆ ಬೇರೆ ಜ್ಞಾನವೇ ಅವಲಂಬನವಾಯಿತು.

**ತದಗ್ರಹೇಽನ್ಯಸಂತಾನಸಾಧನೇ ಕಾ ಗತಿಸ್ತವ ।**
**ಅನುಮಾನೇನ ತತ್ಸಿದ್ಧೌ ನನು ಬಾಹ್ಯಾರ್ಥಸಂಸ್ಥಿತಿಃ ॥ ೭೯ ॥**

ವಿಜ್ಞಪ್ತಿಯು ಬೇರೆ ಜ್ಞಾನವನ್ನು ತಿಳಿಯದಿರುವಪಕ್ಷದಲ್ಲಿ ಬೇರೆ ಜ್ಞಾನ ಸಂತಾನವಿದೆ ಯೆಂಬುದನ್ನು ಯಾವುದರಿಂದ ಸಿದ್ಧಮಾಡುತ್ತಿ? ಅನುಮಾನ ಪ್ರಮಾಣದಿಂದ ಜ್ಞಾನಸಂತಾವಿದೆ ಯೆಂಬುದನ್ನು ಸಿದ್ಧಮಾಡುವಪಕ್ಷದಲ್ಲಿ ಅದರಂತೆ ಘಟಪಟ ಮೊದಲಾದ ಬಾಹ್ಯಪದಾರ್ಥಗಳೂ ಅನುಮಾನದಿಂದ ಸಿದ್ಧವಾಗುವುವು.

**ವಿಶ್ವಂ ವಿಜ್ಞಪ್ತಿಮಾತ್ರಂ ಚೇದ್ವಾಗ್ವಿಜ್ಞಾನಂ ಮೃಷಾಖಿಲಮ್ ।**
**ಭವೇದ್ಬಾಹ್ಯಾರ್ಥಶೂನ್ಯತ್ವಾತ್ಕುತಃ ಸತ್ಯೇತರಸ್ಥಿತಿಃ ॥ ೮೦ ॥**

ಪ್ರಪಂಚವೆಲ್ಲ ವಿಜ್ಞಾನಮಯವಾಗುವ ಪಕ್ಷದಲ್ಲಿ ವಚನದಿಂದುಂಟಾಗುವ ಬಾಹ್ಯಪದಾರ್ಥಜ್ಞಾನವೆಲ್ಲ ಸುಳ್ಳಾಗಬೇಕಾಯಿತು. ಬಾಹ್ಯಾರ್ಥವು ಸುಳ್ಳಾದುದರಿಂದ ಅದನ್ನು ಹೇಳುವ ವಾಕ್ಯವೂ ಸುಳ್ಳಾಯಿತು. ಮತ್ತು ಬಾಹ್ಯಪದಾರ್ಥಗಳು ಯಥಾರ್ಥವಾಗಿಲ್ಲದಿರುವಪಕ್ಷದಲ್ಲಿ, ''ಇಂತಹ ಮಾತು ಸತ್ಯವಾದುದು, ಇಂತಹುದು ಸುಳ್ಳು'' ಎಂಬ ಲೋಕವ್ಯವಹಾರವು ಹೇಗುಂಟಾಗುವುದು ?ಸತ್ಯ ಮಿಥ್ಯಾವೆಂಬ ವ್ಯವಹಾರವು ಬಾಹ್ಯಪದಾರ್ಥಗಳನ್ನವಲಂಬಿಸಿಯೇ ಉಂಟಾಗುತ್ತದೆ. ಬಾಹ್ಯಪದಾರ್ಥಗಳೇ ಇಲ್ಲದಿರುವಪಕ್ಷದಲ್ಲಿ ಸತ್ಯ ಮಿಥ್ಯಾವ್ಯವಹಾರವು ಉಂಟಾಗಲಾರದೆಂದಭಿಪ್ರಾಯವು.

**ತತೋಽಸ್ತಿ ಬಹಿರರ್ಥೋಽಪಿ ಸಾಧನಾದಿಪ್ರಯೋಗತಃ ।**
**ತಸ್ಮಾದ್ವಿಜ್ಞಪ್ತಿವಾದೋಽಯಂ ಬಾಲಾಲಪಿತ[1]ಪೇಲವಃ ॥ ೮೧ ॥**

ಆದುದರಿಂದ ಸಾಧನ ಮೊದಲಾದ ಪ್ರಯೋಗಗಳನ್ನು ಸ್ವೀಕಾರಮಾಡುವುದರಿಂದ ಬಾಹ್ಯಪದಾರ್ಥಗಳನ್ನೂ ಸ್ವೀಕಾರಮಾಡಬೇಕು. ಆದುದರಿಂದ ವಿಜ್ಞಾನವೇ ತತ್ತ್ವವೆಂಬ ಈ ವಾದವು ಬಾಲಕರ ಮಾತಿನಂತೆ ನಿಸ್ಸಾರವಾಗಿದೆ''

೧ ನಿಸ್ಸಾರಃ.

**ಶೂನ್ಯವಾದೇಽಪಿ ಶೂನ್ಯತ್ವಪ್ರತಿಪಾದಿ ವಚಸ್ತವ ।**
**ವಿಜ್ಞಾನಂ ಚಾಸ್ತಿ ವಾ ನೇತಿ ವಿಕಲ್ಪದ್ವಯಕಲ್ಪನಾ ॥ ೮೨ ॥**

ಹೀಗೆ ವಿಜ್ಞಾನಾದ್ವೈತವಾದವನ್ನು ನಿರಾಕರಿಸಿ ಸ್ವಯಂಬುದ್ಧನು ಶೂನ್ಯವಾದವನ್ನು ವಿಚಾರಮಾಡುತ್ತಾನೆ: — ''ಎಲೈ ಶೂನ್ಯವಾದಿಯಾದ ಶತಮತಿಯೇ ! ನಿನ್ನ ಶೂನ್ಯವಾದದಲ್ಲಿಯೂ ಆ ಶೂನ್ಯತ್ವವನ್ನು ಹೇಳುವ ವಚನವೂ ಅದರಿಂದುಂಟಾಗುವ ಜ್ಞಾನವೂ ಇವೆಯೋ ಇಲ್ಲವೋ ಹೀಗೆಂದು ಎರಡು ಪಕ್ಷಗಳುಂಟಾಗುತ್ತವೆ.

**ವಾಗ್ವಿಜ್ಞಾನಂ ಸಮಸ್ತೀದಮಿತಿ ಹಂತ ಹತೋ ಭವಾನ್ ।**
**ತದ್ವತ್ಕೃತ್ಸ್ನಸ್ಯ ಸಂಸಿದ್ಧೇರನ್ಯಥಾ ಶೂನ್ಯತಾ ಕುತಃ ॥ ೮೩ ॥**

ವಚನವೂ ವಿಜ್ಞಾನವೂ ಇವೆಯೆಂದು ಹೇಳುವ ಪಕ್ಷದಲ್ಲಿ , ಹಾ !ನೀನು ಕೆಟ್ಟೆ !! ಜಗತ್ತೆಲ್ಲವೂ ಶೂನ್ಯವಾಗಿದೆಯೆಂದು ಹೇಳಿ ಪುನಃ ವಚನವನ್ನೂ ವಿಜ್ಞಾನವನ್ನೂ ಸ್ವೀಕರಿಸಿದಂತಾಯಿತು. ಸ್ವವಚನಬಾಧಿತವಾಯಿತೆಂದು ಭಾವವು. ಆ ವಚನವೂ ವಿಜ್ಞಾನವೂ ಇರುವಂತೆ ಎಲ್ಲಾ ವಸ್ತುಗಳೂ ಇರಬಹುದು. ವಚನವೂ ಜ್ಞಾನವೂ ಇಲ್ಲದಿರುವ ಪಕ್ಷದಲ್ಲಿ ಶೂನ್ಯವಾದವನ್ನು ಸಿದ್ಧಮಾಡುವುದು ಹೇಗೆ ?

**ತದಸ್ಮಾಲಪಿತಂ ಶೂನ್ಯಮುನ್ಮತ್ತ[1]ವಿರುತೋಪಮಮ್ ।**
**ತತೋಽಸ್ತಿ ಜೀವೋ ಧರ್ಮಶ್ಚ ದಯಾಸಂಯಮಲಕ್ಷಣಃ ॥ ೮೪ ॥**

ಆದುದುರಿಂದ ಈ ಶೂನ್ಯವಾದಿಯ ಮಾತು ಹುಚ್ಚನ ಮಾತಿನಂತೆ ಶೂನ್ಯವಾಗಿದೆ. ಅಸಂಗತವಾಗಿದೆಯೆಂದರ್ಥವು. ಆದುದರಿಂದ ಜೀವವೆಂಬ ವಸ್ತುವೂ ದಯಾಸಂಯಮ ಸ್ವರೂಪವಾದ ಧರ್ಮವೂ ಇವೆ. ಜಗತ್ತು ಶೂನ್ಯವಾದುದಲ್ಲವೆಂದರ್ಥವು.

**ಸರ್ವಜ್ಞೋಪಜ್ಞಮೇವೈತತ್ತತ್ತ್ವಂ ತತ್ತ್ವವಿದಾಂ ಮತಮ್ ।**
**[2]ಆಪ್ತಂಮನ್ಯಮತಾನ್ಯನ್ಯಾನ್ಯ[3]ಪಹೇಯಾನ್ಯತೋ ಬುಧೈಃ ॥ ೮೫ ॥**

ತತ್ತ್ವಜ್ಞಾನಿಗಳು ಸರ್ವಜ್ಞರು ಹೇಳಿದ ಮಾತನ್ನೇ ಯಥಾರ್ಥವನ್ನಾಗಿ ಅಥವಾ ತತ್ತ್ವವನ್ನಾಗಿ ತಿಳಿಯುತ್ತಾರೆ. ಇದಕ್ಕೆ ವ್ಯತಿರಿಕ್ತವಾದ ಬೇರೆ ಮತಗಳು ತಾವು ಆಪ್ತರಲ್ಲದಿದ್ದರೂ ಆಪ್ತರೆಂದು ತಿಳಿಯುವವರ ಮತಗಳಾದುದರಿಂದ ಜ್ಞಾನಿಗಳಿಗೆ ತ್ಯಾಜ್ಯಗಳಾಗಿವೆ. ಜ್ಞಾನಿಗಳು ಅಂತಹ ಮಿಥ್ಯಾಮತಗಳನ್ನು ಅವಲಂಬಿಸಬಾರದೆಂದು ಭಾವವು ''.

**ಇತಿ ತದ್ವಚನಾಜ್ಞಾತಾ ಪರಿಷತ್ಸಕಲೈವ ಸಾ ।**
**[4]ನಿರಾರೇಕಾ[5]ತ್ಮಸದ್ಭಾವೇ ಸಂಪ್ರೀತಶ್ಚ ಸಭಾಪತಿಃ ॥ ೮೬ ॥**

ಈಪ್ರಕಾರವಾದ ಸ್ವಯಂಬುದ್ಧನ ಮಾತಿನಿಂದ ಸಭಿಕರಿಗೆಲ್ಲಾ ಜೀವವಸ್ತುವಿದೆಯೆಂಬ ವಿಷಯದಲ್ಲಿ ಸಂಶಯವು ಹೋಯಿತು. ಆ ಸಭಾಪತಿಯಾದ ಮಹಾಬಲನೂ ಬಹಳ ಸಂತುಷ್ಟನಾದನು.

**ಪರವಾದಿ[6]ನಗಾಸ್ತೇಽಪಿ ಸ್ವಯಂಬುದ್ಧವಚೋಽಶನೇಃ ।**
**ನಿಷ್ಠುರಾಪಾತಮಾಸಾದ್ಯ ಸದ್ಯಃ ಪ್ರಮ್ಲಾನಿಮಾಗತಾಃ ॥ ೮೭ ॥**

ಪರವಾದಿಗಳೆಂಬ ಆ ಮಹಾಮತಿ ಮೊದಲಾದ ವೃಕ್ಷಗಳೂ ಸ್ವಯಂಬುದ್ಧನ ವಚನವೆಂಬ ಸಿಡಿಲಿನಿಂದ ಕೆಳಕ್ಕೆ ಬಿದ್ದು ಬಾಡಿ ಹೋದುವು. ಸೋತು ಹೋದರೆಂದರ್ಥವು.

**ಪುನಃ ಪ್ರಶಾಂತಗಂಭೀರೇ ಸ್ಥಿತೇ ತಸ್ಮಿನ್ಸದಸ್ಯಸೌ ।**
**ದೃಷ್ಟಶ್ರುತಾನುಭೂತಾರ್ಥಸಂಬಂಧೀದಮಭಾಷತ ॥ ೮೮ ॥**

೧ ವಚನಂ. ೨ ಆಪ್ತಾಭಾಸಮತಾನಿ. ೩ ತ್ಯಾಜ್ಯಾನಿ. ೪ ನಿಸ್ಸಂದೇಹಾ. ೫ ಜೀವಸದ್ಭಾವೇ. ೬ ವೃಕ್ಷಾಃ.

ಪುನಃ ಆ ಸಭೆಯು ಶಾಂತವಾಗಿಯೂ ಗಂಭೀರವಾಗಿಯೂ ಇರುತ್ತಿರಲು ಈ ಸ್ವಯಂಬುದ್ಧನು ನೋಡಿಯೂ ಕೇಳಿಯೂ ಅನುಭೂತವಾಗಿಯೂ ಇರುವ ಒಂದುವಿಷಯವನ್ನು ಕುರಿತು ಮುಂದೆಹೇಳುವ ರೀತಿಯಾಗಿ ಮಾತನಾಡಿದನು.

**ಶೃಣು ಭೋಸ್ತ್ವಂ ಮಹಾರಾಜ [1]ವೃತ್ತ[2]ಮಾಖ್ಯಾನಕಂ ಪುರಾ ।**
**[3]ಖೇಂದ್ರೋಭೂದರವಿಂದಾಖ್ಯೋ ಭವದ್ವಂಶಶಿಖಾಮಣಿಃ ॥ ೮೯ ॥**

"ಮಹಾರಾಜನೇ ! ಮೊದಲು ನಡೆದ ಕಥೆಯನ್ನು ಕೇಳು. ಹಿಂದೆ ನಿನ್ನವಂಶಕ್ಕೆ ಶಿಖಾಮಣಿಯಾದ ಕುರುವಿಂದನೆಂಬ ವಿದ್ಯಾಧರರಾಜನಿದ್ದನು.

**ಸ ಇಮಾಂ ಪುಣ್ಯಪಾಕೇನ ಶಾಸ್ತಿ ಸ್ಮ ಪರಮಾಂ ಪುರೀಮ್ ।**
**ಉದ್ವೃಪ್ತಪ್ರತಿಸಾಮಂತದೋರ್ದರ್ಪಾನವಸರ್ಪಯನ್ ॥ ೯೦ ॥**

ಅವನು ಮದೋನ್ಮತ್ತರಾದ ಶತ್ರುಸಾಮಂತರಾಜರ ಅಹಂಕಾರವನ್ನು ಮುರಿದು ತನ್ನ ಪುಣ್ಯಕರ್ಮದ ಉದಯದಿಂದ ಈ ಶ್ರೇಷ್ಠವಾದ ಪಟ್ಟಣವನ್ನು ಆಳುತ್ತಿದ್ದನು.

**ವಿಷಯಾನನ್ವಭೂದ್ದಿವ್ಯಾನಸೌ ಖೇಚರಗೋಚರಾನ್ ।**
**ಅಭೂತಾಂ ಹರಿಚಂದ್ರಶ್ಚ ಕುರುವಿಂದಶ್ಚ ತತ್ಸುತೌ ॥ ೯೧ ॥**

ಈ ಅರವಿಂದರಾಜನು ವಿದ್ಯಾಧರರಿಗೆ ಯೋಗ್ಯವಾದ ಭೋಗೋಪಭೋಗ ವಿಷಯಗಳನ್ನು ಅನುಭವಿಸಿದನು. ಅವನಿಗೆ ಹರಿಚಂದ್ರನೆಂದೂ ಕುರುವಿಂದನೆಂದೂ ಇಬ್ಬರು ಮಕ್ಕಳಾದರು.

**ಸ ಬಹ್ವಾರಂಭಸಂರಂಭರೌದ್ರಧ್ಯಾನಾ[4]ಭಿಸಂಧಿನಾ ।**
**ಬಬಂಧ ನರಕಾಯುಷ್ಯಂ ತೀವ್ರಾಸಾತಫಲೋದಯಮ್ ॥ ೯೨ ॥**

ಆ ಅರವಿಂದ ರಾಜನು ಬಹ್ವಾರಂಭಪರಿಣಾಮದಿಂದಲೂ ಹಿಂಸಾಪರಿಣಾಮ ದಿಂದಲೂ ರೌದ್ರಧ್ಯಾನಪರಿಣಾಮದಿಂದಲೂ ತೀವ್ರವಾದ ಅಸಾತಾವೇದನೀಯದ ಉದಯವುಳ್ಳ ನರಕಾಯುಷ್ಯವನ್ನು ಬಂಧಮಾಡಿಕೊಂಡನು.

**ಪ್ರತ್ಯಾಸನ್ನಮೃತೇಸ್ತಸ್ಯ ದಾಹಜ್ವರವಿಜೃಂಭಿತಃ ।**
**ವವೃಧೇ ತನುಸಂತಾಪಃ ಕದಾಚಿದತಿದುಃಸಹಃ ॥ ೯೩ ॥**

ಆ ಅರವಿಂದರಾಜನಿಗೆ ಮರಣವು ಸಮೀಪವಾದಾಗ ದಾಹಜ್ವರವು ಸಂಭವಿಸಿ ಅತ್ಯಂತದುಃಸಹವಾದ ಶರೀರಸಂತಾಪವು ವೃದ್ಧಿಯಾಯಿತು.

**ಕಲ್ಹಾರವಾರಿಭಿರ್ಧೂತಶೀತ[5]ಶೀತಲಿಕಾನಿಲೈಃ ।**
**ನ [6]ನಿರ್ವೃತಿಮಸೌ ಲೇಭೇ ಹಾರೈಶ್ಚ ಹರಿಚಂದನೈಃ ॥ ೯೪ ॥**

ಸ್ವಲ್ಪ ಕೆಂಪಾದುದೂ ಪರಿಮಳವುಳ್ಳುದೂ ಆದ ಕಲ್ಹಾರಪುಷ್ಪಗಳ ನೀರನ್ನು ಚಿಮುಕಿಸಿ ಬೀಸಿದ ಬೀಸಣಿಗೆಗಳ ಗಾಳಿಗಳಿಂದಲೂ ಹಾರಗಳಿಂದಲೂ ತಂಪಾದ ಶ್ರೀಗಂಧದಿಂದಲೂ ಈ ಅರವಿಂದರಾಜನು ಸುಖವನ್ನು ಹೊಂದಲಿಲ್ಲ. ತಾಪಶಾಂತಿಯಾಗಲಿಲ್ಲವೆಂದರ್ಥವು.

**ವಿದ್ಯಾಸು ವಿಮುಖೀಭಾವಂ ಸ್ವಾಸು ಯಾತಾಸು ದುರ್ಮದೀ ।**
**ಪುಣ್ಯಕ್ಷಯಾತ್ಪರಿಕ್ಷೀಣಮದಶಕ್ತಿರಿವೇಭರಾಟ್ ॥ ೯೫ ॥**

ಪುಣ್ಯವು ಕ್ಷಯವಾದುದರಿಂದ ಈ ಅರವಿಂದರಾಜನ ವಿದ್ಯೆಗಳೆಲ್ಲ ಬಿಟ್ಟುಹೋದ ಮೇಲೆ ದುರಹಂಕಾರಿಯಾದ ಈ ಅರವಿಂದರಾಜನು, ಮದಿಸಿದ ದೊಡ್ಡ ಆನೆಯ ಮದವು ಗಲಿತವಾದಮೇಲೆ ಅದು ಮದಶಕ್ತಿರಹಿತವಾಗಿರುವಂತೆ, ಮದಶಕ್ತಿ ಹೀನನಾದನು.

೧ ಜಾತಂ. ೨ ಕಥಾಂ. ೩ ವಿದ್ಯಾಧರೇಂದ್ರಃ. ೪ ಮನಸಾ. ೫ ತಾಲವೃಂತಕಂ. ೬ ಸುಖಂ.

**ದಾಹಜ್ವರಪರೀತಾಂಗಃ ಸಂತಾಪಂ ಸೋಢುಮಕ್ಷಮಃ ।**
**ಹರಿಚಂದ್ರಮಥಾಹೂಯ ಸುತಮಿತ್ಯಾದಿಶದ್ವಚಃ ॥ ೯೬ ॥**

ದಾಹಜ್ವರದಿಂದ ವ್ಯಾಪ್ತವಾದ ಶರೀರವುಳ್ಳ ಆ ಅರವಿಂದರಾಜನು ಸಂತಾಪವನ್ನು ಸಹಿಸುವುದಕ್ಕೆ ಅಸಮರ್ಥನಾಗಿ ಹರಿಚಂದ್ರನೆಂಬ ಮಗನನ್ನು ಕರೆದು ಮುಂದೆ ಹೇಳುವ ಮಾತನ್ನು ಹೇಳಿದನು.

**ಅಂಗ ಪುತ್ರ ಮಮಾಂಗೇಷು ಸಂತಾಪೋ ವರ್ಧತೇ ತರಾಮ್ ।**
**ಪಶ್ಯ ಕಲ್ಹಾರಹಾರಾಣಾಂ ಪರಿಮ್ಲಾನಿಂ ತದರ್ಪಣಾತ್ ॥ ೯೭ ॥**

"ಎಲೈ ಮಗನೇ ! ನನ್ನ ಶರೀರದಲ್ಲಿ ಸಂತಾಪವು ಬಹಳವಾಗಿ ವೃದ್ಧಿಯಾಗುತ್ತಿದೆ. ಶರೀರದಲ್ಲಿ ಧರಿಸಿದ ಕಲ್ಹಾರಪುಷ್ಪಗಳ ಮಾಲೆಗಳು ಬಾಡಿಹೋದುದನ್ನು ನೋಡು.

**ತನ್ಮಾಮುದಕ್ಕುರೂನ್ಪುತ್ರ ಪ್ರಾಪಯಾಶು ಸ್ವವಿದ್ಯಯಾ ।**
**ತಾಂಶ್ಚ ಶೀತಾನ್ವನೋದ್ದೇಶಾನ್ಸೀತಾನದ್ಯಾಸ್ತಟಾಶ್ರಿತಾನ್ ॥ ೯೮ ॥**

ಆದುದರಿಂದ ಮಗನೇ ನನ್ನನ್ನು ನಿನ್ನ ವಿದ್ಯೆಯಿಂದ ಶೀಘ್ರವಾಗಿ ಉತ್ತರಕುರುಗಳಿಗೆ ಕರೆದುಕೊಂಡುಹೋಗಿ ಸೀತಾನದಿಯ ದಡದಲ್ಲಿರುವ ತಂಪಾದ ಪ್ರದೇಶಗಳಲ್ಲಿ ಬಿಡು.

**ತತ್ರ ಕಲ್ಪತರೂನ್ ಧುನ್ವನ್ಸೀತಾವೀಚೀಚಯೋತ್ಥಿತಃ ।**
**ದಾಹಾನ್ಮಾಂ ಮಾತರಿಶ್ವಾಸ್ಮಾದುಪಶಾಂತಿಂ ಸ ನೇಷ್ಯತಿ ॥ ೯೯ ॥**

ಅಲ್ಲಿ ಸೀತಾನದಿಯ ತೆರೆಮಾಲೆಗಳ ಸಮೂಹದಿಂದುಂಟಾದ ಆ ಗಾಳಿಯು ಕಲ್ಪವೃಕ್ಷಗಳನ್ನು ಕೊಡಹುತ್ತ ಈ ಸಂತಾಪದಿಂದ ನನಗೆ ಉಪಶಾಂತಿಯನ್ನು ಹೊಂದಿಸುವುದು. ಸಂತಾಪವನ್ನು ಹೋಗಲಾಡಿಸಿ ಸುಖವನ್ನುಂಟುಮಾಡುವು ದೆಂದರ್ಥವು"

**ಇತಿ ತದ್ವಚನಾದ್ವಿದ್ಯಾಂ ಪ್ರೈಷಿಷದ್ವ್ಯೋಮಗಾಮಿನೀಮ್ ।**
**ಸ ಸೂನುಃ ಸಾಪ್ಯಪುಣ್ಯಸ್ಯ ನಾಭೂತ್ತಸ್ಯೋಪಕಾರಿಣೀ ॥ ೧೦೦ ॥**

ಈ ಪ್ರಕಾರವಾದ ತಂದೆಯಮಾತಿನಿಂದ ಆ ಹರಿಚಂದ್ರನು ಆಕಾಶಗಾಮಿನಿ ವಿದ್ಯೆಯನ್ನು ತಂದೆಯಸಮೀಪಕ್ಕೆ ಕಳುಹಿಸಿದನು. ಆದರೆ ಪುಣ್ಯಹೀನನಾದ ಆ ಅರವಿಂದರಾಜನಿಗೆ ಆ ವಿದ್ಯೆಯು ಉಪಕಾರವನ್ನು ಮಾಡಲಾರದೆಹೋಯಿತು.

**ವಿದ್ಯಾವೈಮುಖ್ಯತೋ ಜ್ಞಾತ್ವಾ ಪಿತುರ್ವ್ಯಾಧೇರಸಾಧ್ಯತಾಮ್ ।**
**ಸುತಃ ಕರ್ತವ್ಯತಾಮೂಢಃ ಸೋಭೂದುದ್ವಿಗ್ನಮಾನಸಃ ॥ ೧೦೧ ॥**

ಆ ಹರಿಚಂದ್ರನು, ವಿದ್ಯೆಯು ವಿಮುಖವಾದುದರಿಂದ, ತಂದೆಯ ವ್ಯಾಧಿಯು ಅಸಾಧ್ಯವಾದುದೆಂದು ತಿಳಿದು ಯಾವ ಪ್ರತೀಕಾರಮಾಡಬೇಕೆಂಬುದನ್ನು ತಿಳಿಯ ದವನೂ ದುಃಖಿತವಾದ ಮನಸ್ಸುಳ್ಳವನೂ ಆದನು.

**ಅಥಾನ್ಯೇದ್ಯುರಮುಷ್ಯಾಂಗೇ ಪೇತುಃ ಶೋಣಿತಬಿಂದವಃ ।**
**ಮಿಥಃ ಕಲಹ[1]ವಿಶ್ಲಿಷ್ಟಗೃಹಗೋಧಿಕವಾಲಧೇಃ ॥ ೧೦೨ ॥**

ಆಮೇಲೆ ಇನ್ನೊಂದುದಿನ ಹಲ್ಲಿಗಳು ಪರಸ್ಪರವಾಗಿ ಜಗಳವಾಡಿದುದರಿಂದ ಬಾಲಗಳು ತುಂಡಾಗಿ ರಕ್ತದತೊಟ್ಟುಗಳು ಈ ಅರವಿಂದರಾಜನ ಶರೀರದಮೇಲೆ ಬಿದ್ದುವು.

**ತೈಶ್ಚ ತಸ್ಯ ಕಿಲಾಂಗಾನಿ [2]ನಿರ್ವವುಃ ಪಾಪದೋಷತಃ ।**
**ಸೋಽತುಷ್ಯಚ್ಚೇತಿ ದಿಷ್ಟ್ಯಾದ್ಯ ಪರಂ ಲಬ್ಧಂ ಮಯೌಷಧಮ್ ॥ ೧೦೩ ॥**

೧ ವಿಚ್ಛಿನ್ನಃ. ೨ ಶೀತಲಾ ಬಭೂವುಃ.

ಆ ರಕ್ತದ ಬಿಂದುಗಳಿಂದ ಅರವಿಂದರಾಜನ ಶರೀರಾವಯವಗಳು ಪಾಪ ದೋಷದಿಂದ ತಣ್ಣಗಾದುವು. ಆ ಅರವಿಂದರಾಜನು ''ಈದಿನ ಅದೃಷ್ಟದಿಂದ ನನಗೆ ಉತ್ತಮವಾದ ಔಷಧವು ಸಿಕ್ಕಿತು'' ಎಂದು ಸಂತೋಷಪಟ್ಟನು.

**ತತೋನ್ಯಂ ಕುರುವಿಂದಾಖ್ಯಂ ಸೂನುಮಾಹೂಯ ಸೋಽವದತ್ ।**
**ಪುತ್ರ ಮೇ ರುಧಿರಾಪೂರ್ಣಾ ವಾಪ್ಯೇಕಾ ಕಾರ್ಯತಾಮಿತಿ ॥ ೧೦೪ ॥**

ಆಮೇಲೆ ಅರವಿಂದರಾಜನು ಕುರುವಿಂದನೆಂಬ ಇನ್ನೊಬ್ಬ ಮಗನನ್ನು ಕರೆದು ''ಮಗನೇ! ನನಗೆ ರಕ್ತದಿಂದ ತುಂಬಿದ ಒಂದು ಬಾವಿಯನ್ನು ಮಾಡಿಸು'' ಎಂಬುದಾಗಿ ಹೇಳಿದನು.

**ಪುನರಪ್ಯವದಲ್ಲಬ್ಧವಿಭಂಗೋಽಸ್ಮಿನ್ವನಾಂತರೇ ।**
**ಮೃಗಾ ಬಹುವಿಧಾಃ ಸಂತಿ ತೈಸ್ತ್ವಂ ಪ್ರಕೃತಮಾಚರ ॥ ೧೦೫ ॥**

ವಿಭಂಗ-ಕುಅವಧಿಜ್ಞಾನವನ್ನು ಪಡೆದಿದ್ದ ಆ ಅರವಿಂದರಾಜನು ಪುನಃ ಮಗನನ್ನು ಕುರಿತು ''ಈ ವನದಲ್ಲಿ ಅನೇಕಪ್ರಕಾರವಾದ ಮೃಗಗಳಿವೆ. ಆ ಮೃಗಗಳಿಂದ ನೀನು ಪ್ರಕೃತಕಾರ್ಯವನ್ನು ಮಾಡು'' ಎಂಬುದಾಗಿ ಹೇಳಿದನು. ಆ ಮೃಗಗಳನ್ನು ಕೊಂದು ಅವುಗಳ ರಕ್ತದಿಂದ ಬಾವಿಯನ್ನು ತುಂಬಬೇಕೆಂದರ್ಥವು.

**ಸ ತದ್ವಚನಮಾಕರ್ಣ್ಯ ಪಾಪಭೀರುರ್ವಿಚಿಂತ್ಯ ಚ ।**
**ತತ್ಕರ್ಮಾಪಾರಯನ್ಕರ್ತುಂ ಮೂಕೀಭೂತಃ ಕ್ಷಣಂ ಸ್ಥಿತಃ ॥ ೧೦೬ ॥**

ಪಾಪಭೀತನಾದ ಆ ಕುರುವಿಂದನು ತಂದೆಯ ಮಾತನ್ನು ಕೇಳಿ ಆ ಪಾಪಕಾರ್ಯವನ್ನು ಮಾಡಲಾರದೆ ಒಂದು ಕ್ಷಣಕಾಲದವರೆಗೆ ಮಾತನಾಡದೆ ನಿಂತುಬಿಟ್ಟನು.

**ಪ್ರತ್ಯಾಸನ್ನಮೃತಿಂ ಬುಧ್ವಾ ತಂ ಬದ್ಧನರಕಾಯುಷಮ್ ।**
**ದಿವ್ಯಜ್ಞಾನದೃಶಃ ಸಾಧೋಸ್ತತ್ಕಾರ್ಯೇಽಭೂತ್ಸ [1]ಶೀತಕಃ ॥ ೧೦೭ ॥**

ಆಮೇಲೆ ಕುರುವಿಂದನು ತಂದೆಗೆ ಮರಣವು ಸಮೀಪವಾಗಿದೆಯೆಂಬುದನ್ನೂ ನರಕಾಯುಷ್ಯವು ಕಟ್ಟಿದೆಯೆಂಬುದನ್ನೂ ದಿವ್ಯಜ್ಞಾನಿಗಳಾದ ಮುನಿಗಳಿಂದ ತಿಳಿದು ಆ ಪಾಪಕಾರ್ಯದಲ್ಲಿ ಉದಾಸೀನನಾದನು.

**ಅನುಲ್ಲಂಘ್ಯಂ ಪಿತುರ್ವಾಕ್ಯಂ ಮನ್ಯಮಾನಸ್ತಥಾಪ್ಯಸೌ ।**
**ಕೃತ್ರಿಮೈಃ ಕ್ಷತಜೈಃ ಪೂರ್ಣಾಂ ವಾಪೀಮೇಕಾಮಕಾರಯತ್ ॥ ೧೦೮ ॥**

ಆದರೂ ತಂದೆಯ ವಾಕ್ಯವನ್ನು ಮೀರಬಾರದೆಂದು ತಿಳಿದು ಈ ಕುರುವಿಂದನು ಕೃತ್ರಿಮವಾದ ರಕ್ತ(ಅರಗಿನ ಜಲ)ದಿಂದ ತುಂಬಿದ ಒಂದು ಬಾವಿಯನ್ನು ಮಾಡಿಸಿದನು.

**ಸ ತದಾಕರ್ಣನಾತ್ಪ್ರೀತಿಮಗಮತ್ಪಾಪಪಂಡಿತಃ ।**
**ಅಲಬ್ಧಪೂರ್ವಮಾಸಾದ್ಯ [2]ನಿಧಾನಮಿವ [3]ದುರ್ಗತಃ ॥ ೧೦೯ ॥**

ಪಾಪಕಾರ್ಯದಲ್ಲಿ ನಿಪುಣನಾದ ಆ ಅರವಿಂದರಾಜನು ಬಾವಿಯು ತಯಾರಾಗಿರುವ ಸಮಾಚಾರವನ್ನು ಕೇಳಿ, ಮೊದಲು ಪಡೆಯದಿರುವ ನಿಧಿಯನ್ನು ಹೊಂದಿದ ದರಿದ್ರನಂತೆ, ಸಂತೋಷಪಟ್ಟನು.

**[4]ಕಾರಿಮಾರುಣರಾಗೇಣ ವಾರಿಣಾ ವಿಪ್ರತಾರಿತಃ ।**
**ಬಹುಮೇನೇ ಸ ತಾಂ ವಾಪೀಂ ಪಾಪೀ [5]ವೈತರಣೀಮಿವ ॥ ೧೧೦ ॥**

ಪಾಪಿಜೀವನು ನರಕದಲ್ಲಿರುವ ವೈತರಣೀನದಿಯನ್ನು ನೋಡಿ ಸಂತೋಷ ಪಡುವಂತೆ, ಕೆಂಪುಬಣ್ಣವುಳ್ಳ ನೀರಿನಿಂದ ವಂಚಿತನಾದ ಆ ಅರವಿಂದರಾಜನು ಕೃತ್ರಿಮವಾದ ಆ ಬಾವಿಯನ್ನು ನೋಡಿ ಸಂತೋಷಪಟ್ಟನು.

೧ ಉದಾಸೀನಃ. ೨ ನಿಧಿಂ. ೩ ದರಿದ್ರಃ. ೪ ಕೃತ್ರಿಮಾಂ. ೫ ನರಕನದೀಂ.

**ತತ್ರಾನೀತಶ್ಚ ತನ್ಮಧ್ಯೇ ಯಥೇಷ್ಟಂ ಸ ಇತೋಽಮುತಃ ।**
**ಚಿಕ್ರೀಡ ಕೃತಗಂಡೂಷಃ ಕೃತಕಂ ತದಬುದ್ಧ ಚ ॥ ೧೧೧ ॥**

ಆ ಬಾವಿಯ ಸಮೀಪಕ್ಕೆ ತರಲ್ಪಟ್ಟ ಆ ಅರವಿಂದರಾಜನು ಯಥೇಚ್ಛವಾಗಿ ಆ ಬಾವಿಯ ಮಧ್ಯದಲ್ಲಿ ಈಕಡೆ ಆಕಡೆ ಕ್ರೀಡಿಸಿದನು. ಬಾಯಿಯನ್ನು ಮುಕ್ಕುಳಿಸಿ ಆ ರಕ್ತವು ಕೃತಕವಾದುದೆಂದೂ ತಿಳಿದನು. ಅಂದರೆ ನಿಜವಾದ ರಕ್ತವಲ್ಲವೆಂದು ತಿಳಿದನು.

**ನರಕಾಯುರಪರ್ಯಾಪ್ತಂ [1]ಪರ್ಯಾಪಿಪಯಿಷನ್ನಿವ ।**
**ದಧೇ ಸ [2]ತುಗ್ವಧೇ ಚಿತ್ತಮಧೀಃ ಪಾಪೋದಧೇರ್ವಿಧುಃ ॥ ೧೧೨ ॥**

ಆಮೇಲೆ ಪಾಪವೆಂಬ ಸಮುದ್ರಕ್ಕೆ ಚಂದ್ರನಂತಿರುವವನೂ ಬುದ್ಧಿಹೀನನೂ ಆದ ಆ ಅರವಿಂದರಾಜನು, ಸಾಲದಿರುವ ನರಕಾಯುಷ್ಯವನ್ನು ಪೂರ್ತಿ ಮಾಡುವುದ ಕ್ಕೋಸ್ಕರವೋ ಎಂಬಂತೆ, ಮಗನ ವಧೆಯಲ್ಲಿ ಮನಸ್ಸು ಮಾಡಿದನು.

**ಸ ರುಷ್ಟಃ ಪುತ್ರಮಾಹಂತುಮಾಧಾವನ್ನತಿತೋಽಂತರೇ ।**
**[3]ಸ್ವಾಸಿಧೇನುಕಯಾ ದೀರ್ಣಹೃದಯೋ ಮೃತಿಮಾಸದತ್ ॥ ೧೧೩ ॥**

ಕೋಪಗೊಂಡ ಆ ಅರವಿಂದರಾಜನು ಮಗನನ್ನು ಕೊಲ್ಲುವುದಕ್ಕೋಸ್ಕರ ಓಡಿಹೋಗಿ ಮಧ್ಯದಲ್ಲಿ ಬಿದ್ದು ತನ್ನ ಕೈಯಲ್ಲಿದ್ದ ಸಣ್ಣ ಖಡ್ಗವು ಎದೆಗೆ ತಗುಲಿ ಎದೆಯು ಸೀಳಿಹೋಯಿತು. ಆದರಿಂದ ಮರಣವನ್ನು ಹೊಂದಿದನು.

**ಸ ತಥಾ ದುರ್ಮೃತಿಂ ಪ್ರಾಪ ಗತಿಂ ಶ್ವಾಭ್ರೀಮಧರ್ಮತಃ ।**
**ಕಥೇಯಮಧುನಾಪ್ಯಸ್ಯಾಂ ನಗರ್ಯಾಂ ಸ್ಮರ್ಯತೇ ಜನೈಃ ॥ ೧೧೪ ॥**

ಆವನು ಪಾಪದಿಂದ ಹಾಗೆ ದುರ್ಮರಣವನ್ನು ಹೊಂದಿ ನರಕಗತಿಯನ್ನು ಪಡೆದನು. ಈ ಕಥೆಯನ್ನು ಈಗಲೂ ಈ ಪಟ್ಟಣದಲ್ಲಿ ಜನರು ಸ್ಮರಿಸುತ್ತಾರೆ.

**ತತೋ ಭಗ್ನೈಕರದನೋ ದಂತೀವಾನಮಿತಾನನಃ ।**
**ಉತ್ಪಾತಫಣಮಾಣಿಕ್ಯೋ ಮಹಾಹಿರಿವ ನಿಷ್ಪ್ರಭಃ ॥ ೧೧೫ ॥**

ಅನಂತರದಲ್ಲಿ ಅರವಿಂದನ ಪುತ್ರನಾದ ಕುರುವಿಂದನು, ಒಂದು ಕೋರೆಹಲ್ಲು ಮುರಿದು ಹೋದ ಆನೆಯಂತೆ, ಮುಖವನ್ನು ಕೆಳಕ್ಕೆ ಬಗ್ಗಿಸಿದವನಾಗಿಯೂ ಹೆಡೆಯಲ್ಲಿರುವ ರತ್ನವನ್ನು ಕಳೆದುಕೊಂಡ ದೊಡ್ಡಸರ್ಪದಂತೆ ಕಾಂತಿಹೀನ ನಾಗಿಯೂ

**ಪಿತುರ್ಭಾನೋರಿವಾಪಾಯಾತ್ಕುರುವಿಂದೋರವಿಂದವತ್ ।**
**ಪರಿಮ್ಲಾನತನುಚ್ಛಾಯಃ ಸ ಶೋಚ್ಯಾಮಗಮದ್ದಶಾಮ್ ॥ ೧೧೬ ॥**

ಸೂರ್ಯನ ಅಸ್ತಮಾನದಿಂದ ಕಮಲವು ಕಾಂತಿಹೀನವಾಗುವಂತೆ, ತಂದೆಯ ಮರಣದಿಂದ ಕಾಂತಿಯಿಲ್ಲದ ಶರೀರವುಳ್ಳವನಾಗಿಯೂ ಶೋಚನೀಯವಾದ ಅವಸ್ಥೆಯನ್ನು ಹೊಂದಿದನು.

**ತಥಾತ್ರೈವ ಭವದ್ವಂಶೇ ವಿಸ್ತೀರ್ಣೇ ಜಲಧಾವಿವ ।**
**ದಂಡೋ ನಾಮ್ನಾಭವತ್ಖೇಂದ್ರೋ ದಂಡಿತಾರಾತಿಮಂಡಲಃ ॥ ೧೧೭ ॥**

ಹಾಗೆಯೇ ಸಮುದ್ರದಂತೆ ವಿಸ್ತಾರವಾದ ಈ ನಿನ್ನ ವಂಶದಲ್ಲಿ ಶತ್ರು ಸಮೂಹವನ್ನು ದಂಡಿಸುತ್ತಿದ್ದ ದಂಡನೆಂಬ ವಿದ್ಯಾಧರರಾಜನಿದ್ದನು.

**ಮಣಿಮಾಲೀತ್ಯಭೂತ್ತಸ್ಯಾತ್ಮೂನುರ್ಮಣಿರಿವಾಂಬುಧೇಃ ।**
**ನಿಯೋಜ್ಯ ಯೌವರಾಜ್ಯೇ ತಂ ಸ್ವೇಷ್ಟಾನ್ಭೋಗಾನಭುಂಕ್ತ ಸಃ ॥ ೧೧೮ ॥**

೧ ಸಮಾಪ್ತಿಂ ಕರ್ತುಮಿಚ್ಛನ್ನಿವ. ೨ ಪುತ್ರವಧೇ. ೩ ಸ್ವಸ್ಯ ಛುರಿಕಯೇತ್ಯರ್ಥಃ.

ಸಮುದ್ರದಿಂದ ಮಣಿಯು ಉತ್ಪನ್ನವಾಗುವಂತೆ, ಆ ದಂಡನಿಂದ ಮಣಿಮಾಲಿಯೆಂಬ ಮಗನು ಹುಟ್ಟಿದನು. ಆ ದಂಡರಾಜನು ಮಗನನ್ನು ಯುವರಾಜ ಪದವಿಯಲ್ಲಿರಿಸಿ ತನಗಿಷ್ಟವಾದ ಭೋಗಗಳನ್ನನುಭವಿಸಿದನು.

**ಭುಕ್ತ್ವಾಪಿ ಸುಚಿರಂ ಭೋಗಾನ್ನಾತೃಪ್ಯದ್ವಿಷಯೋತ್ಸುಕಃ ।**
**ಪ್ರತ್ಯುತಾಸಕ್ತಿಮಭಜತ್ ಸ್ತ್ರೀವಸ್ತ್ರಾಭರಣಾದಿಷು ॥ ೧೧೯ ॥**

ವಿಷಯಾಸಕ್ತನಾಗಿ ಬಹುಕಾಲದವರೆಗೆ ಭೋಗಗಳನ್ನು ಭೋಗಿಸಿದರೂ ತೃಪ್ತಿಯನ್ನು ಹೊಂದಲಿಲ್ಲ. ಅದಕ್ಕೆ ಬದಲಾಗಿ ಸ್ತ್ರೀ ವಸ್ತ್ರ ಆಭರಣ ಮೊದಲಾದ ಭೋಗೋಪಭೋಗವಿಷಯಗಳಲ್ಲಿ ಆಸಕ್ತನಾದನು.

**ಸೋತ್ಯಂತವಿಷಯಾಸಕ್ತಿಕೃತಕೌಟಿಲ್ಯಚೇಷ್ಟಿತಃ ।**
**ಬಬಂಧ ತೀವ್ರಸಂಕ್ಲೇಶಾತ್ತಿರಶ್ಚಾಮಾಯುರಾರ್ತಧೀಃ ॥ ೧೨೦ ॥**

ಆ ದಂಡರಾಜನು ಅತ್ಯಂತವಿಷಯಾಸಕ್ತನೂ ಮಾಯಾಚಾರಿಯೂ ಆರ್ತಧ್ಯಾನವುಳ್ಳವನೂ ಆಗಿ ತೀವ್ರವಾದ ಸಂಕ್ಲೇಶಪರಿಣಾಮದಿಂದ ತಿರ್ಯಗ್ಗತಿಯ ಆಯುಷ್ಯವನ್ನು ಕಟ್ಟಿಕೊಂಡನು.

**ಜೀವಿತಾಂತೇ ಸ ದುರ್ಧ್ಯಾನಮಾರ್ತಮಾಪೂರ್ಯ ದುರ್ಮೃತಃ ।**
**ಭಾಂಡಾಗಾರೇ ನಿಜೇ ಮೋಹಾನ್ಮಹಾನಜಗರೋಽಜನಿ ॥ ೧೨೧ ॥**

ಆ ದಂಡರಾಜನು ಸಾಯುವಕಾಲದಲ್ಲಿ ಆರ್ತಧ್ಯಾನದಿಂದ ದುರ್ಮರಣವನ್ನು ಹೊಂದಿ ಮೋಹದಿಂದ ತನ್ನ ಭಂಡಾರದಲ್ಲಿ ದೊಡ್ಡ ಸರ್ಪವಾಗಿ ಹುಟ್ಟಿದನು.

**ಸ ಜಾತಿಸ್ಮರತಾಂ ಗತ್ವಾ [೧]ಭಾಂಡಾಗಾರಮುವಸ್ಸೃಶಮ್ ।**
**ತತ್ಪ್ರವೇಶೇ ನಿಜಂ ಸೂನುಮನ್ವಮಂಸ್ತ ನ ಚಾಪರಮ್ ॥ ೧೨೨ ॥**

ಆ ಸರ್ಪವು ಜಾತಿಸ್ಮರಣೆಯಿಂದ ಪೂರ್ವಜನ್ಮದ ವಿಷಯವನ್ನೆಲ್ಲ ತಿಳಿದು ತನ್ನ ಭಂಡಾರವನ್ನು ಚೆನ್ನಾಗಿ ಕಾಪಾಡುತ್ತ ತನ್ನ ಮಗನನ್ನು ಹೊರತು ಬೇರೆ ಯಾರನ್ನೂ ಆ ಖಜಾನೆಗೆ ಪ್ರವೇಶಮಾಡುವುದಕ್ಕೆ ಬಿಡುತ್ತಿರಲಿಲ್ಲ.

**ಅನ್ಯೇದ್ಯುರವಧಿಜ್ಞಾನಲೋಚನಾನ್ಮುನಿಪುಂಗವಾತ್ ।**
**ಮಣಿಮಾಲೀ ಪಿತುರ್ಜ್ಞಾತ್ವಾ ತದ್ವೃತ್ತಾಂತಮಶೇಷತಃ ॥ ೧೨೩ ॥**

ಇನ್ನೊಂದುದಿನ ಆ ಮಣಿಮಾಲಿಯು ಅವಧಿಜ್ಞಾನಸಂಪನ್ನರಾದ ಮುನಿಗಳಿಂದ ತನ್ನ ತಂದೆಯ ಸಮಾಚಾರವನ್ನೆಲ್ಲ ತಿಳಿದು

**ಪಿತೃಭಕ್ತ್ಯಾ ಸ [೨]ತನ್ಮೂರ್ಛಾಮಪಹರ್ತುಮನಾಃ ಸುಧೀಃ ।**
**[೩]ಶಯೋರಗ್ರೇ ಶನೈಃ ಸ್ಥಿತ್ವಾ ಸ್ನೇಹಾರ್ದ್ರಾಂ ಗಿರಮಭ್ಯಧಾತ್ ॥ ೧೨೪ ॥**

ಆ ವಿವೇಕಿಯಾದ ಮಣಿಮಾಲಿಯು ಪಿತೃಭಕ್ತಿಯಿಂದ ಆ ಸರ್ಪಕ್ಕಿರುವ ಪರಿಗ್ರಹಾಸಕ್ತಿಯನ್ನು ಹೋಗಲಾಡಿಸಬೇಕೆಂಬ ಮನಸ್ಸುಳ್ಳವನಾಗಿ ಮೆಲ್ಲನೆ ಆ ಸರ್ಪದ ಮುಂಭಾಗದಲ್ಲಿ ನಿಂತು ಮುಂದೆ ಹೇಳುವ ರೀತಿಯಾಗಿ ಸ್ನೇಹಯುಕ್ತವಾದ ಮಾತನ್ನು ಹೇಳಿದನು.

**ಪಿತಃ ಪತಿತವಾನಸ್ಯಾಂ ಕುಯೋನಾವಧುನಾ [೪]ತ್ವಕಮ್ ।**
**ವಿಷಯಾಸಂಗದೋಷೇಣ ಧೃತ[೫]ಮೂರ್ಛೋ ಧನರ್ದ್ಧಿಷು ॥ ೧೨೫ ॥**

"ತಂದೆಯೇ! ನೀನು ಪಂಚೇಂದ್ರಿಯವಿಷಯಗಳ ಸಂಪರ್ಕದಿಂದುಂಟಾದ ದೋಷದಿಂದ ಧನಸಂಪತ್ತುಗಳಲ್ಲಿ ಮೋಹಪಟ್ಟವನಾಗಿ ಈಗ ಈ ದುಷ್ಟ ಯೋನಿ(ತಿರ್ಯಗ್ಗತಿ)ಯಲ್ಲಿ ಬಿದ್ದಿರುತ್ತಿ.

೧ ಭಾಂಡಾಗಾರಿಕವದ್ಭೃಶಮಿತಿ ಪಾಠಾಂತರಂ. ೨ ಪರಿಗ್ರಹಾಸಕ್ತಿಂ. ೩ ಅಜಗರಸ್ಯ. ೪ ತ್ವಮಿತ್ಯರ್ಥಃ. ೫ ಮೋಹಃ.

**ತತೋ ಧಿಗಿದಮತ್ಯಂತಕಟುಕಂ ವಿಷಯಾ[೧]ಮಿಷಮ್ ।**
**ವಮೈತದ್ದುರ್ಜರಂ ತಾತ [೨]ಕಿಂಪಾಕಫಲಸನ್ನಿಭಮ್ ॥ ೧೨೬ ॥**

ಆದುದರಿಂದ ಅತ್ಯಂತಕಟುಕವಾದ ಈ ವಿಷಯಭೋಗವನ್ನು ಸುಡು. ತಂದೆಯೇ! ವಿಷವೃಕ್ಷದ ಫಲಕ್ಕೆ ಸಮಾನವೂ ನಾಶಸ್ವಭಾವವೂ ಆದ ಈ ವಿಷಯಸುಖವನ್ನು ವಮನಮಾಡು.

**[೩]ರಥಾಂಗಮಿವ ಸಂಸಾರಮನುಬಧ್ನಾತಿ ಸಂತತಮ್ ।**
**ದುಸ್ತ್ಯಜಂ [೪]ತ್ಯಾಜ್ಯಮಪ್ಯೇತತ್ಕಂಠಸ್ಥಮಿವ ಜೀವಿತಮ್ ॥ ೧೨೭ ॥**

ಈ ವಿಷಯಸುಖವು, ಚಕ್ರದಂತೆ, ಯಾವಾಗಲೂ ಸಂಸಾರದಲ್ಲಿ ತಿರಿಗಿಸುತ್ತದೆ. ಈ ಸುಖವು ಬಿಡುವುದಕ್ಕೆ ಯೋಗ್ಯವಾಗಿದ್ದರೂ ಕಂಠಗತವಾದ ಪ್ರಾಣದಂತೆ ಬಹಳ ಕಷ್ಟದಿಂದ ಬಿಡತಕ್ಕುದಾಗಿದೆ.

**ಪ್ರಕಟೀಕೃತವಿಶ್ವಾಸಂ ಪ್ರಾಣಹಾರಿ ಭಯಾವಹಮ್ ।**
**[೫]ಮೃಗಯೋರಿವ ದುರ್ಗೀತಂ ನೃಗಣೈಣಪ್ರಲಂಭಕಮ್ ॥ ೧೨೮ ॥**

ಬೇಡನು ಜಿಂಕೆಗಳನ್ನು ವಂಚಿಸಿ ಬೇಟೆಯಾಡುವುದಕ್ಕೋಸ್ಕರ ಮೊದಲು ಗಾನಮಾಡುತ್ತ ವಿಶ್ವಾಸವನ್ನುಂಟುಮಾಡಿ ಆಮೇಲೆ ಪ್ರಾಣವನ್ನು ನಾಶಮಾಡುತ್ತಾನೆ. ಅಂತಹ ಬೇಡನ ಗೀತದಂತೆ ಈ ವಿಷಯಸುಖವು ಮನುಷ್ಯರನ್ನು ವಂಚಿಸುವುದೂ ವಿಶ್ವಾಸವನ್ನು ತೋರಿಸಿ ಭಯಂಕರವಾಗಿ ಪ್ರಾಣಗಳನ್ನು ನಾಶಮಾಡುವುದೂ ಆಗಿದೆ.

**ತಾಂಬೂಲಮಿವ ಸಂಯೋಗಾದಿದಂ ರಾಗವಿವರ್ದ್ಧನಮ್ ।**
**ಅಂಧಕಾರಮಿವೋತ್ಸರ್ಪತ್ಸನ್ಮಾರ್ಗಸ್ಯ ನಿರೋಧನಮ್ ॥ ೧೨೯ ॥**

ಎಲೆ, ಅಡಿಕೆ ಮೊದಲಾದ ತಾಂಬೂಲಸಾಮಗ್ರಿಗಳು ಪರಸ್ಪರಸಂಯೋಗದಿಂದ ಕೆಂಪುಬಣ್ಣವನ್ನು ವೃದ್ಧಿಮಾಡುವಂತೆ, ಈ ವಿಷಯಸುಖವು ಭೋಗೋಪಭೋಗ ಸಾಮಗ್ರಿಗಳ ಸಂಬಂಧದಿಂದ ಅನುರಾಗವನ್ನು ಹೆಚ್ಚಿಸುತ್ತದೆ. ಕತ್ತಲೆಯು ಆಕಾಶಕ್ಕೆ ಪ್ರತಿಬಂಧಕವಾಗಿರುವಂತೆ, ಈ ವಿಷಯಸುಖವು ಸನ್ಮಾರ್ಗಕ್ಕೆ ಪ್ರತಿಬಂಧಕವಾಗಿದೆ.

**ಜೈನಂ ಮತಮಿವ ಪ್ರಾಯಃ ಪರಿಭೂತಮತಾಂತರಮ್ ।**
**ತಡಿಲ್ಲಸಿತವಲ್ಲೋಲಂ ವೈಚಿತ್ರ್ಯಾತ್ಸುರಚಾಪವತ್ ॥ ೧೩೦ ॥**

ಬೇರೆ ಮತಗಳನ್ನು ಖಂಡನೆಮಾಡುವ ಜೈನಮತದಂತೆ ಈ ವಿಷಯಸುಖವು ಬೇರೆ ಅಭಿಪ್ರಾಯ( ವಿವೇಕಬುದ್ಧಿ )ಗಳನ್ನು ತಿರಸ್ಕರಿಸುವುದಾಗಿದೆ. ಈ ವಿಷಯ ಸುಖವು ಮಿಂಚಿನ ಹೊಳಪಿನಂತೆ ಚಂಚಲವಾಗಿದೆ. ಇಂದ್ರಧನುಸ್ಸಿನಂತೆ ನಾನಾವಿಧವಾಗಿದೆ.

**ಕಿಂ ವಾತ್ರ ಬಹುನೋಕ್ತೇನ ಪಶ್ಯೇದಂ ವಿಷಯೋದ್ಭವಮ್ ।**
**ಸುಖಂ ಸಂಸಾರಕಾಂತಾರೇ ಪರಿಭ್ರಮಯ[೬]ತೀಪ್ಸಿತಮ್ ॥ ೧೩೧ ॥**

ಈ ವಿಚಾರದಲ್ಲಿ ಹೆಚ್ಚು ಹೇಳುವುದರಿಂದೇನು ಪ್ರಯೋಜನ? ವಿಷಯಗಳಿಂದುಂಟಾಗುವ ಈ ಸುಖವು ಸಂಸಾರವೆಂಬ ಅಡವಿಯಲ್ಲಿ ಯಥೇಷ್ಟವಾಗಿ ತಿರಿಗಿಸುತ್ತದೆ. ನೋಡು.

**ನಮೋಸ್ತು [೭]ತದ್ರಸಾಸಂಗವಿಮುಖಾಯ ಸ್ಥಿರಾತ್ಮನೇ ।**
**ತಪೋಧನಗಣಾಯೇತಿ ನಿನಿಂದ ವಿಷಯಾನಸೌ ॥ ೧೩೨ ॥**

೧ ಆಮಿಷಂ ಪಲಲೇ ಭೋಗೇ ಸಂಭೋಗೋತ್ಕೋಚಯೋರಪಿ. ೨ ವಿಷವೃಕ್ಷಃ. ೩ ಚಕ್ರವತ್. ೪ ತ್ಯಜದಪೀತಿ ಪಾಠಾಂತರಂ. ೫ ಲುಬ್ಧಕಸ್ಯ. ೬ ಯಥೇಷ್ಟಂ. ೭ ಸುಖಾನುರಾಗಾಸಕ್ತಿಃ.

ಆದುದರಿಂದ ವಿಷಯಸುಖದ ರಸಾಸ್ವಾದನದಿಂದ ವಿಮುಖರೂ ಸ್ಥಿರಾತ್ಮರೂ ಆದ ತಪಸ್ವಿಗಳಿಗೆ ನಮಸ್ಕಾರವಿರಲಿ.'' ಈ ರೀತಿಯಾಗಿ ಮಣಿಮಾಲಿರಾಜನು ಇಂದ್ರಿಯವಿಷಯಗಳನ್ನು ನಿಂದಿಸಿದನು.

**ಅಥಾಸೌ ಪುತ್ರನಿರ್ದಿಷ್ಟಧರ್ಮವಾಕ್ಯಾಂಶುಮಾಲಿನಾ ।**
**ಗಲಿತಾಶೇಷಮೋಹಾಂಧತಮಸಃ ಸಮಜಾಯತ ॥ ೧೩೩ ॥**

ಆಮೇಲೆ ಈ ಸರ್ಪವು ಮಗನು ಹೇಳಿದ ಧರ್ಮವಾಕ್ಯವೆಂಬ ಸೂರ್ಯನಿಂದ ಮೋಹವೆಂಬ ಕತ್ತಲೆಯನ್ನೆಲ್ಲ ಕಳೆದುಕೊಂಡಿತು.

**ತತೋ ಧರ್ಮೌಷಧಂ ಪ್ರಾಪ್ಯ ಸ ಕೃತಾ[೧]ನುಶಯಃ ಶಯುಃ ।**
**ವವಾಮ ವಿಷಯೌತ್ಸುಕ್ಯಂ ಮಹಾವಿಷಮಿವೋ[೨]ಲ್ಬಣಮ್ ॥ ೧೩೪ ॥**

ಆಮೇಲೆ ಆ ಸರ್ಪವು, ಉತ್ತಮವಾದ ಔಷಧವನ್ನು ಹೊಂದಿ ತೀವ್ರವಾದ ಮಹಾವಿಷವನ್ನು ಕಾರಿಬಿಡುವಂತೆ, ಮಣಿಮಾಲಿಯು ಹೇಳಿದ ಧರ್ಮವನ್ನು ಹೊಂದಿ (ಕೇಳಿ) ಪಶ್ಚಾತ್ತಾಪಪಟ್ಟು ವಿಷಯಾಸಕ್ತಿಯನ್ನು ತೊರೆದುಬಿಟ್ಟಿತು.

**ಸ ಪರಿತ್ಯಜ್ಯ ಸಂವೇಗಾದಾಹಾರಂ ಸಶರೀರಕಮ್ ।**
**ಜೀವಿತಾಂತೇ ತನುಂ ಹಿತ್ವಾ ದಿವಿಜೋಭೂನ್ಮಹರ್ದ್ಧಿಕಃ ॥ ೧೩೫ ॥**

ಆ ಸರ್ಪವು ಧರ್ಮಪ್ರೀತಿಯಿಂದ ಆಹಾರವನ್ನೂ ಶರೀರಮಮಕಾರವನ್ನೂ ಪರಿತ್ಯಜಿಸಿ ಮರಣಕಾಲದಲ್ಲಿ ಶರೀರವನ್ನು ಬಿಟ್ಟು ಸ್ವರ್ಗದಲ್ಲಿ ಮಹರ್ದ್ಧಿಕದೇವನಾಗಿ ಹುಟ್ಟಿತು.

**ಜ್ಞಾತ್ವಾ ಚ ಭವಮಾಗತ್ಯ ಸಂಪೂಜ್ಯ ಮಣಿಮಾಲಿನೇ ।**
**ಮಣಿಹಾರಮದತ್ತಾಸಾವುನ್ಮಿಷನ್ಮಣಿದೀಧಿತಿಮ್ ॥ ೧೩೬ ॥**

ಈ ದೇವನು ಅವಧಿಜ್ಞಾನದಿಂದ ತನ್ನ ಪೂರ್ವಭವವನ್ನು ತಿಳಿದು ಮಣಿಮಾಲಿಯ ಸಮೀಪಕ್ಕೆ ಬಂದು ಅವನನ್ನು ಪೂಜಿಸಿ ದೇದೀಪ್ಯಮಾನವಾದ ಕಾಂತಿಯುಳ್ಳ ಒಂದು ರತ್ನದ ಹಾರವನ್ನು ಅವನಿಗೆ ಕೊಟ್ಟನು.

**ಸ ಏಷ ಭವತಃ ಕಂಠೇ ಹಾರೋ ರತ್ನಾಂಶುಭಾಸುರಃ ।**
**ಲಕ್ಷ್ಯತೇದ್ಯಾಪಿ ಯೋ ಲಕ್ಷ್ಮ್ಯಾಃ ಪ್ರಹಾಸ ಇವ ನಿರ್ಮಲಃ ॥ ೧೩೭ ॥**

ರತ್ನಗಳ ಕಾಂತಿಯಿಂದ ಪ್ರಕಾಶಮಾನವಾದ ಆ ಹಾರವು ಈಗಲೂ ನಿನ್ನ ಕಂಠದಲ್ಲಿ, ಲಕ್ಷ್ಮೀದೇವಿಯ ನಿರ್ಮಲವಾದ ಪ್ರಹಾಸ(ನಗು)ವೋ ಎಂಬಂತೆ, ತೋರುತ್ತದೆ.

**ತಥೇ[೩]ದಮಪರಂ ರಾಜನ್ಯ[೪]ಥಾವೃತ್ತಂ ನಿಗದ್ಯತೇ ।**
**ಸಂತಿ ಯದ್ದರ್ಶಿನೋದ್ಯಾಪಿ ವೃದ್ಧಾಃ ಕೇ ಚನ ಖೇಚರಾಃ ॥ ೧೩೮ ॥**

ಎಲೈ ರಾಜನೇ! ಹಾಗೆಯೇ ಇನ್ನೊಂದು ಕಥೆಯನ್ನು ನಡೆದಂತೆಯೇ ಹೇಳುತ್ತೇನೆ. ಆ ವಿಷಯವನ್ನು ನೋಡಿದ ವೃದ್ಧರಾದ ಕೆಲವು ವಿದ್ಯಾಧರರು ಈಗಲೂ ಇದ್ದಾರೆ.

**ಆಸೀಚ್ಛತಬಲೋ ನಾಮ್ನಾ ಭವದೀಯಃ ಪಿತಾಮಹಃ ।**
**ಪ್ರಜಾ ರಾಜನ್ವತೀಃ ಕುರ್ವನ್ನ್ವಗುಣ್ಯೈ[೫]ರಾಭಿಗಾಮಿಕೈಃ ॥ ೧೩೯ ॥**

ಹಿಂದೆ ಶತಬಲನೆಂಬ ನಿನ್ನ ತಾತನಿದ್ದನು. ಬಹಳ ಆದರಣೀಯವಾದ ಅವನ ಗುಣಗಳಿಂದ ಪ್ರಜೆಗಳೆಲ್ಲ ಪ್ರಶಸ್ತರಾಜನುಳ್ಳವರಾಗಿದ್ದರು. ಶತಬಲನು ಬಹಳ ಗುಣವಂತನಾಗಿ ನ್ಯಾಯದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನೆಂದರ್ಥವು.

**ಸ ರಾಜ್ಯಂ ಸುಚಿರಂ ಭುಕ್ತ್ವಾ ಕದಾಚಿದ್ಭೋಗನಿಸ್ಪೃಹಃ ।**
**ಭವತ್ಪಿತರಿ ನಿಕ್ಷಿಪ್ತರಾಜ್ಯಭಾರೋ ಮಹೋದಯಃ ॥ ೧೪೦ ॥**

೧ ಪಶ್ಚಾತ್ತಾಪಃ. ೨ ಉತ್ಕಟಂ. ೩ ಆಖ್ಯಾನಕಂ. ೪ ಯೇನ ಪ್ರಕಾರೇಣ ವೃತ್ತಂ. ೫ ಅತ್ಯಾದರಣೀಯೈಃ.

ಮಹಾಭಾಗ್ಯಶಾಲಿಯಾದ ಆ ಶತಬಲರಾಜನು ಬಹುಕಾಲದವರೆಗೆ ರಾಜ್ಯಭೋಗಗಳನ್ನು ಭೋಗಿಸಿ ಒಂದು ಕಾಲದಲ್ಲಿ ಭೋಗಗಳಲ್ಲಿ ಇಚ್ಛೆಯಿಲ್ಲದವನಾಗಿ ನಿನ್ನ ತಂದೆಗೆ ರಾಜ್ಯಭಾರವನ್ನು ಕೊಟ್ಟನು.

**ಸಮ್ಯಗ್ದರ್ಶನಪೂತಾತ್ಮಾ ಗೃಹೀತೋಪಾಸಕವ್ರತಃ ।**
**ನಿಬದ್ಧಸುರಲೋಕಾಯುರ್ವಿಶುದ್ಧಪರಿಣಾಮತಃ ॥ ೧೪೧ ॥**

ಅವನು ಸಮ್ಯಗ್ದರ್ಶನದಿಂದ ಪವಿತ್ರವಾದ ಆತ್ಮನುಳ್ಳವನೂ ಶ್ರಾವಕವ್ರತವನ್ನು ಗ್ರಹಣಮಾಡಿದವನೂ ಆಗಿ ವಿಶುದ್ಧಪರಿಣಾಮದಿಂದ ದೇವಾಯುಷ್ಯವನ್ನು ಕಟ್ಟಿಕೊಂಡನು.

**ಕೃತ್ವಾನಶನಸಚ್ಚರ್ಯಾಮವಮೋದರ್ಯಮಪ್ಯದಃ ।**
**ಯಥೋಚಿತ[೧]ನಿಯೋಗೇನ [೨]ಯೋಗೇನಾಂತೇತ್ಯಜತ್ತನುಮ್ ॥ ೧೪೨ ॥**

ಉಪವಾಸವನ್ನೂ ಅವಮೋದರ್ಯ(ಅರ್ಧಹೊಟ್ಟೆ ಭೋಜನ)ವನ್ನೂ ಮಾಡಿ ಉಚಿತವಾದ ಕೃತ್ಯದಿಂದ ಮರಣಕಾಲದಲ್ಲಿ ಧ್ಯಾನಪೂರ್ವಕವಾಗಿ ಶರೀರವನ್ನು ಬಿಟ್ಟನು.

**ಮಾಹೇಂದ್ರಕಲ್ಪೇನಲ್ಪರ್ದ್ಧಿರಭೂದೇಷಃ ಸುರಾಗ್ರಣೀಃ ।**
**ಅಣಿಮಾದಿಗುಣೋಪೇತಃ ಸಪ್ತಾಂಬುಧಿಮಿತಸ್ಥಿತಿಃ ॥ ೧೪೩ ॥**

ಈ ಶತಬಲನು ಮಾಹೇಂದ್ರಕಲ್ಪದಲ್ಲಿ ದೇವತೆಗಳಿಗೆಲ್ಲ ಶ್ರೇಷ್ಠನೂ ಅಣಿಮಾದಿ ಗುಣಗಳುಳ್ಳವನೂ ಏಳು ಸಾಗರಪರಿಮಿತವಾದ ಆಯುಷ್ಯಸ್ಥಿತಿಯುಳ್ಳವನೂ ಆದ ಮಹರ್ದ್ಧಿಕದೇವನಾಗಿ ಹುಟ್ಟಿದನು.

**ಸ ಚಾನ್ಯದಾ ಮಹಾಮೇರೌ ನಂದನೇ ತ್ವಾಮುಪಾಗತಮ್ ।**
**ಕ್ರೀಡಾಹೇತೋರ್ಮಯಾ ಸಾರ್ದ್ಧಂ ದೃಷ್ಟ್ವಾತಿಸ್ನೇಹನಿರ್ಭರಃ ॥ ೧೪೪ ॥**

**ಕುಮಾರ ಪರಮೋ ಧರ್ಮೋ ಜೈನೋಭ್ಯುದಯಸಾಧನಃ ।**
**ನ ವಿಸ್ಮಾರ್ಯಸ್ತ್ವಯೇತ್ಯೇವಂ ತ್ವಾಂ ತದಾ[೩]ನ್ವಶಿಷತ್ತರಾಮ್ ॥ ೧೪೫ ॥**

ಇನ್ನೊಂದುಕಾಲದಲ್ಲಿ ಆ ಶತಬಲನು ಮಹಾಮೇರುಪರ್ವತದ ನಂದನವನದಲ್ಲಿ ಕ್ರೀಡಿಸುವುದಕ್ಕೋಸ್ಕರ ನನ್ನೊಡನೆ ಬಂದಿದ್ದ ನಿನ್ನನ್ನು ನೋಡಿ ಅತ್ಯಂತ ಪ್ರೀತಿಯುಳ್ಳವನಾಗಿ 'ಮಗನೇ! ಶ್ರೇಷ್ಠವಾದ ಜೈನಧರ್ಮವು ಅಭ್ಯುದಯವನ್ನುಂಟು ಮಾಡುವುದಾಗಿದೆ. ಈ ಧರ್ಮವನ್ನು ನೀನು ಮರೆತುಬಿಡಬಾರದು' ಎಂದು ನಿನಗೆ ಬಹಳವಾಗಿ ಹೇಳಿದನು''.

**ನಮತ್ಖೇಚರರಾಜೇಂದ್ರಮಸ್ತಕಾರೂಢಶಾಸನಃ ।**
**ಸಹಸ್ರಬಲ ಇತ್ಯಾಸೀದ್ಭವತ್ಪಿತೃಪಿತಾಮಹಃ ॥ ೧೪೬ ॥**

ಈ ಕಥೆಯನ್ನು ಹೇಳಿ ಸ್ವಯಂಬುದ್ಧನು ಪುನಃ ಹೇಳುತ್ತಾನೆ:— ''ಹಿಂದೆ ಸಹಸ್ರಬಲನೆಂಬ ನಿನ್ನ ಮುತ್ತಾತನಿದ್ದನು. ಅವನಿಗೆ ವಿದ್ಯಾಧರರಾಜರೆಲ್ಲ ಬಂದು ನಮಸ್ಕರಿಸಿ ಅವನ ಆಜ್ಞೆಯನ್ನು ಶಿರೋಧಾರಣೆಮಾಡುತ್ತಿದ್ದರು.

**ಸ ದೇವದೇವೇ ನಿಕ್ಷಿಪ್ಯ ಲಕ್ಷ್ಮೀಂ ಶತಬಲೇ ಸುತೇ ।**
**ಜಗ್ರಾಹ ಪರಮಾಂ ದೀಕ್ಷಾಂ ಜೈನೀಂ ನಿರ್ವಾಣಸಾಧನೀಮ್ ॥ ೧೪೭ ॥**

ಆ ಸಹಸ್ರಬಲರಾಜನು ನಿಮ್ಮ ತಾತನಾದ ಶತಬಲನೆಂಬ ಮಗನಿಗೆ ರಾಜ್ಯಸಂಪತ್ತನ್ನು ಕೊಟ್ಟು ಮೋಕ್ಷಕ್ಕೆ ಕಾರಣವೂ ಶ್ರೇಷ್ಠವೂ ಆದ ಜಿನದೀಕ್ಷೆಯನ್ನು ತೆಗೆದುಕೊಂಡನು.

೧ ಕೃತ್ಯೇನ. ೨ ಧ್ಯಾನೇನ. ೩ ಅನುಶಾಸ್ತಿ ಸ್ಮ.

ವಿಜಹಾರ ಮಹೀಂ ಕೃತ್ಸ್ನಾಂ ದ್ಯೋತಯನ್ಸ ತಪೋಂಶುಭಿಃ ।
ಮಿಥ್ಯಾಂಧಕಾರಘಟನಾಂ ವಿಘಟಯ್ಯಾಂಶುಮಾನಿವ ॥ ೧೪೮ ॥

ಸೂರ್ಯನು ಕತ್ತಲೆಯನ್ನು ಹೋಗಲಾಡಿಸುವಂತೆ, ಆ ಸಹಸ್ರಬಲಮುನಿಯು ತನ್ನ ತಪಸ್ಸುಗಳೆಂಬ ಕಿರಣಗಳಿಂದ ಮಿಥ್ಯಾತ್ವವೆಂಬ ಕತ್ತಲೆಯನ್ನು ನಾಶಮಾಡಿ ಭೂಮಂಡಲವನ್ನೆಲ್ಲ ಪ್ರಕಾಶಪಡಿಸುತ್ತ ವಿಹರಿಸಿದನು.

ಕ್ರಮಾತ್ಕೈವಲ್ಯಮುತ್ಪಾದ್ಯ ಪೂಜಿತೋ ನೃಸುರಾಸುರೈಃ ।
ತತೋನಂತಮಪಾರಂ ಚ ಸಂಪ್ರಾಪಚ್ಛಾಶ್ವತಂ ಪದಮ್ ॥ ೧೪೯ ॥

ಕ್ರಮದಿಂದ ನಾಲ್ಕು ಘಾತಿಕರ್ಮಗಳನ್ನು ನಾಶಮಾಡಿ ಕೇವಲಜ್ಞಾನವನ್ನು ಪಡೆದು ಮನುಷ್ಯರಿಂದಲೂ ದೇವತೆಗಳಿಂದಲೂ ಭವನವಾಸಿಗಳಿಂದಲೂ ಪೂಜಿಸಲ್ಪಟ್ಟವನಾಗಿ ಅನಂತರ ಅನಂತವೂ ಅಪಾರವೂ ಆದ ಮೋಕ್ಷಪದವಿಯನ್ನು ಪಡೆದನು.

ತಥಾ ಯುಷ್ಮತ್ಪಿತಾಯುಷ್ಮನ್ ರಾಜ್ಯಭೂರಿಭರಂ ವಶೀ ।
ತ್ವಯಿ ನಿಕ್ಷಿಪ್ಯ ವೈರಾಗ್ಯಾನ್ಮಹಾಪ್ರಾವ್ರಾಜ್ಯ[1]ಮಾಸ್ಥಿತಃ ॥ ೧೫೦ ॥

ಆಯುಷ್ಮಂತನೇ ! ಹಾಗೆಯೇ ಜಿತೇಂದ್ರಿಯನಾದ ನಿನ್ನ ತಂದೆಯು ಅಪಾರವಾದ ರಾಜ್ಯಭಾರವನ್ನು ನಿನಗೆ ವಹಿಸಿ ವೈರಾಗ್ಯದಿಂದ ಮಹಾವ್ರತವನ್ನು ಆಶ್ರಯಿಸಿದನು. ಜಿನದೀಕ್ಷೆಯನ್ನು ತೆಗೆದುಕೊಂಡನೆಂದರ್ಥವು.

ಪುತ್ರ[2]ನಪ್ತೃಭಿರನ್ಯೈಶ್ಚ ನಭಶ್ಚರನರಾಧಿಪೈಃ ।
ಸಾರ್ಧಂ ತಪಶ್ಚರನ್ನೇಷ ಮುಕ್ತಿಲಕ್ಷ್ಮೀಂ ಜಿಘೃಕ್ಷತಿ ॥ ೧೫೧ ॥

ಈ ಅತಿಬಲಮುನಿಯು ಮಕ್ಕಳು ಮೊಮ್ಮಕ್ಕಳೊಡನೆಯೂ ಬೇರೆ ವಿದ್ಯಾಧರರಾಜ ಮನುಷ್ಯರಾಜರೊಡನೆಯೂ ತಪಸ್ಸನ್ನು ಮಾಡುತ್ತ ಮೋಕ್ಷಲಕ್ಷ್ಮಿಯನ್ನು ಪಡೆಯಲಿಚ್ಛಿಸುತ್ತಾನೆ.

ಧರ್ಮಾಧರ್ಮಫಲಸ್ಯೈತೇ ದೃಷ್ಟಾಂತತ್ವೇನ ದರ್ಶಿತಾಃ ।
ಯುಷ್ಮದ್ವಂಶ್ಯಾಃ ಖಗಾಧೀಶಾಃ ಸುಪ್ರತೀತಕಥಾ[3]ನಕಾಃ ॥ ೧೫೨ ॥

ದೃಷ್ಟಾಂತರೂಪದಿಂದ ತೋರಿಸಿದ ನಿನ್ನ ವಂಶೀಯರಾದ ಈ ವಿದ್ಯಾಧರರಾಜರು ಧರ್ಮಾಧರ್ಮದ ಫಲವನ್ನು ತಮ್ಮ ಕಥೆಯೆಂಬ ಭೇರಿಯಿಂದ ಪ್ರಸಿದ್ಧಪಡಿಸಿರುತ್ತಾರೆ.

ವಿದ್ಧಿ ಧ್ಯಾನಚತುಷ್ಕಸ್ಯ ಫಲಮೇತನ್ನಿದರ್ಶಿತಮ್ ।
ಪೂರ್ವಂ ಧ್ಯಾನದ್ವಯಂ ಪಾಪಂ ಶುಭೋದರ್ಕಂ ಪರಂ ದ್ವಯಮ್ ॥

ಎಲೈ ರಾಜನೇ ! ಹಿಂದೆ ಹೇಳಿದ ದೃಷ್ಟಾಂತಗಳು ಆರ್ತ ರೌದ್ರ ಧರ್ಮ ಶುಕ್ಲಗಳೆಂಬ ನಾಲ್ಕು ಧ್ಯಾನಗಳ ಫಲರೂಪವಾಗಿವೆಯೆಂದು ತಿಳಿ. (ಅರವಿಂದರಾಜನು ರೌದ್ರಧ್ಯಾನದಿಂದ ನರಕವನ್ನು ಹೊಂದಿದನೆಂದೂ ದಂಡರಾಜನು ಆರ್ತಧ್ಯಾನದಿಂದ ಸರ್ಪವಾದನೆಂದೂ ಶತಬಲ ರಾಜನು ಧರ್ಮಧ್ಯಾನದಿಂದ ದೇವನಾದನೆಂದೂ ಸಹಸ್ರಬಲರಾಜನು ಶುಕ್ಲಧ್ಯಾನದಿಂದ ಮೋಕ್ಷವನ್ನು ಪಡೆದನೆಂದೂ ಅತಿಬಲನು ಶುಕ್ಲಧ್ಯಾನದಿಂದ ಮೋಕ್ಷವನ್ನು ಪಡೆಯುವನೆಂದೂ ಭಾವವು) ಮೊದಲನೆಯ ಎರಡು ಧ್ಯಾನಗಳು ಪಾಪರೂಪವಾಗಿವೆ. ಮಿಕ್ಕ ಎರಡು ಧ್ಯಾನಗಳು ಉತ್ತರದಲ್ಲಿ ಶುಭವನ್ನುಂಟುಮಾಡತಕ್ಕುವಾಗಿವೆ.

ತಸ್ಮಾದ್ಧರ್ಮಜುಷಾಂ ಪುಂಸಾಂ ಭುಕ್ತಿಮುಕ್ತೀ ನ ದುರ್ಲಭೇ ।
ಪ್ರತ್ಯಕ್ಷಾಪ್ತೋಪದೇಶಾಭ್ಯಾಮಿದಂ ನಿಶ್ಚಿನು ಧೀಧನ ॥ ೧೫೪ ॥

ಆದುದರಿಂದ ಧರ್ಮವನ್ನು ಹೊಂದಿದ ಮನುಷ್ಯರಿಗೆ ಸಂಸಾರಸುಖವೂ ಮೋಕ್ಷಸುಖವೂ ದುರ್ಲಭವಾದುವಲ್ಲವು. ಎಲೈ ಬುದ್ಧಿಶಾಲಿಯೇ ! ಈ ವಿಷಯವನ್ನು ಪ್ರತ್ಯಕ್ಷಪ್ರಮಾಣದಿಂದಲೂ ಆಪ್ತರು ಹೇಳಿದ ಆಗಮಪ್ರಮಾಣದಿಂದಲೂ ನಿಶ್ಚಯಿಸು.

ಇತಿ ಪ್ರತೀತಮಾಹಾತ್ಮ್ಯೋ ಧರ್ಮೋಯಂ ಜಿನದೇಶಿತಃ ।
ತ್ವಯಾಪಿ ಶಕ್ತಿತಃ ಸೇವ್ಯಃ ಫಲಂ ವಿಮಲಮಿಚ್ಛತಾ ॥ ೧೫೫ ॥

ಜಿನೇಶ್ವರರು ಹೇಳಿದ ಈ ಧರ್ಮದ ಮಾಹಾತ್ಮ್ಯವು ಹಿಂದೆ ಹೇಳಿದ ರೀತಿಯಾಗಿ ಪ್ರಸಿದ್ಧವಾಗಿದೆ. ಉತ್ತಮವಾದ ಫಲವನ್ನು ಇಚ್ಛಿಸುವ ನೀನು ಕೂಡ ಶಕ್ತ್ಯನುಸಾರವಾಗಿ ಈ ಧರ್ಮವನ್ನು ಸೇವಿಸು".

ಶ್ರುತ್ವೋದಾರಂ ಚ ಗಂಭೀರಂ ಸ್ವಯಂಬುದ್ಧೋದಿತಂ ತದಾ ।
ಸಭಾ[1]ಸಭಾಜಯಾಮಾಸ ಪರಮಾಸ್ತಿಕ್ಯ[2]ಮಾಸ್ಥಿತಾ ॥ ೧೫೬ ॥

ಆಗ ಉದಾರವೂ ಗಂಭೀರವೂ ಆದ ಸ್ವಯಂಬುದ್ಧನ ಮಾತನ್ನು ಕೇಳಿ ಸಭಿಕರೆಲ್ಲ ಆಸ್ತಿಕ್ಯಬುದ್ಧಿಯುಳ್ಳವರಾಗಿ ಸಂತೋಷಪಟ್ಟರು.

ಇದಮೇವಾರ್ಹತಂ [3]ತತ್ತ್ವಮಿತೋನ್ಯನ್ನಮತಾಂತರಮ್ ।
ಪ್ರತೀತಿರಿತಿ ತದ್ವಾಕ್ಯಾದಾವಿರಾಸೀತ್ಸದಃಸತಾಮ್ ॥ ೧೫೭ ॥

ಆ ಸ್ವಯಂಬುದ್ಧನ ಮಾತಿನಿಂದ ಸಭಿಕರಿಗೆಲ್ಲ "ಇದೇ ಅರ್ಹತ್ಪರಮೇಶ್ವರನ ಮತವು, ಇದಕ್ಕಿಂತ ಬೇರೆ ಉತ್ತಮ ಮತವಿಲ್ಲ" ಎಂದು ವಿಶ್ವಾಸವುಂಟಾಯಿತು. ಅರ್ಹತ್ಪರಮೇಶ್ವರನ ಮತವೇ ಯಥಾರ್ಥವಾದುದೆಂದೂ ಬೇರೆ ಮತಗಳು ಯಥಾರ್ಥವಾದುವಲ್ಲವೆಂದೂ ವಿಶ್ವಾಸವುಂಟಾಯಿತೆಂದರ್ಥವು.

ಸದ್ದೃಷ್ಟಿರ್ವ್ರತಸಂಪನ್ನೋ ಗುಣಶೀಲವಿಭೂಷಿತಃ ।
ಋಜು[4]ರ್ಗುಪ್ತೋ ಗುರೌ ಭಕ್ತಃ ಶ್ರುತಾಭಿಜ್ಞಃ [5]ಪ್ರಗಲ್ಭಧೀಃ ॥ ೧೫೮ ॥

ಶ್ಲಾಘ್ಯ ಏಷ ಗುಣೈರೇಭಿಃ ಪರಮಶ್ರಾವಕೋಚಿತೈಃ ।
ಸ್ವಯಂಬುದ್ಧೋ ಮಹಾತ್ಮೇತಿ ತುಷ್ಟುವುಸ್ತಂ ಸಭಾಸದಃ ॥ ೧೫೯ ॥

ಈ ಸ್ವಯಂಬುದ್ಧನು ಸಮ್ಯಗ್ದೃಷ್ಟಿಯೂ ವ್ರತಸಂಪನ್ನನೂ ಗುಣಶೀಲಗಳಿಂದ ಅಲಂಕೃತನೂ ಸರಳಸ್ವಭಾವದವನೂ ಮನವಚನಕಾಯಗಳ ಗುಪ್ತಿಯುಳ್ಳವನೂ ಗುರುವಿನಲ್ಲಿ ಭಕ್ತಿಯುಳ್ಳವನೂ ಶಾಸ್ತ್ರವನ್ನು ತಿಳಿದವನೂ ಪ್ರೌಢವಾದ ಬುದ್ಧಿಯುಳ್ಳವನೂ ಪ್ರಶಂಸೆಗೆ ಯೋಗ್ಯನೂ ಉತ್ತಮ ಶ್ರಾವಕರಿಗೆ ಯೋಗ್ಯವಾದ ಈ ಮೇಲೆ ಹೇಳಿದ ಗುಣಗಳಿಂದ ಕೂಡಿಕೊಂಡಿರುವವನೂ ಮಹಾತ್ಮನೂ ಆಗಿದ್ದಾನೆಂದು ಸಭಿಕರೆಲ್ಲ ಆ ಸ್ವಯಂಬುದ್ಧನನ್ನು ಸ್ತೋತ್ರಮಾಡಿದರು.

ಪ್ರಶಸ್ಯ ಖಚರಾಧೀಶಃ ಪ್ರತಿಪದ್ಯ ಚ ತದ್ವಚಃ ।
ಪ್ರೀತಃ ಸಂಪೂಜಯಾಮಾಸ ಸ್ವಯಂಬುದ್ಧಂ ಮಹಾಧಿಯಮ್॥ ೧೬೦ ॥

ವಿದ್ಯಾಧರಾಧಿಪತಿಯಾದ ಮಹಾಬಲನು ಸಂತುಷ್ಟನಾಗಿ ಬಹಳ ಬುದ್ಧಿಶಾಲಿಯಾದ ಸ್ವಯಂಬುದ್ಧನನ್ನು ಹೊಗಳಿ ಅವನ ಮಾತನ್ನು ಒಪ್ಪಿಕೊಂಡು ಅವನನ್ನು ಪೂಜಿಸಿದನು. ಸತ್ಕರಿಸಿದನೆಂದು ಭಾವವು.

ಅಥಾನ್ಯದಾ ಸ್ವಯಂಬುದ್ಧೋ ಮಹಾಮೇರುಗಿರಿಂ ಯಯೌ ।
[6]ವಿವಂದಿಷುರ್ಜಿನೇಂದ್ರಾಣಾಂ ಚೈತ್ಯವೇಶ್ಮಾನಿ ಭಕ್ತಿತಃ ॥ ೧೬೧ ॥

ಆಮೇಲೆ ಮತ್ತೊಂದು ಕಾಲದಲ್ಲಿ ಸ್ವಯಂಬುದ್ಧನು ಭಕ್ತಿಯಿಂದ ಜಿನೇಶ್ವರರ ಚೈತ್ಯಾಲಯಗಳನ್ನು ವಂದಿಸಬೇಕೆಂಬ ಇಚ್ಛೆಯುಳ್ಳವನಾಗಿ ಮಹಾಮೇರುಪರ್ವತಕ್ಕೆ ಹೋದನು.

೧. ಆಶ್ರಿತಃ. ೨ ಪೌತ್ರೈಃ. ೩ ಆನಕಃ ಪಟಹ ಇತ್ಯಮರಃ.

೧ ಸಭಾಜಪ್ರೀತಿದರ್ಶನಯೋಃ, ತುತೋಷೇತ್ಯರ್ಥಃ. ೨ ಆಶ್ರಿತಾ. ೩ ಮತಂ. ೪ ಗುಪ್ತಿರಸ್ಯಾಸ್ತೀತಿ ಗುಪ್ತಃ ಅಭ್ರಾದಿತ್ವಾದಪ್ರತ್ಯಯಃ. ೫ ಪ್ರೌಢಬುದ್ಧಿಃ. ೬ ವಂದಿತುಮಿಚ್ಛುಃ.

**ವನೈಶ್ಚತುರ್ಭಿರಾಭಾಂತಂ ಜಿನಸ್ಯೇವ [೧]ಸಭೋದಯಮ್ ।**
**ಶ್ರುತಸ್ಕಂದಮಿವಾನಾದಿನಿಧನಂ ಸಪ್ರಮಾಣಕಮ್ ॥ ೧೬೨ ॥**

ಆ ಮಹಾಮೇರುಪರ್ವತವು, ಅಶೋಕವನ ಸಪ್ತಚ್ಛದವನ ಆಮ್ರವನ ಚಂಪಕವನ ಈ ನಾಲ್ಕು ವನಗಳಿಂದ ಶೋಭಿಸುತ್ತಿರುವ ಜಿನೇಶ್ವರರ ಸಮವಸರಣದೋಪಾದಿಯಲ್ಲಿ, ಭದ್ರಶಾಲವನ ನಂದನವನ ಸೌಮನಸವನ ಪಾಂಡುಕವನ ಈ ನಾಲ್ಕುವನಗಳಿಂದ ಶೋಭಿಸುತ್ತಿದೆ. ಅನಾದಿನಿಧನವೂ ಪ್ರಮಾಣವೂ ಆಗಿರುವ ಶ್ರುತಸ್ಕಂಧದಂತೆ, ಅನಾದಿನಿಧನವೂ ಒಂದು ಲಕ್ಷಯೋಜನಪ್ರಮಾಣವೂ ಆಗಿದೆ.

**ಮಹೀಭೃತಾಮಧೀಶತ್ವಾತ್ಸದ್ವೃತ್ತತ್ವಾ[೨]ತ್ಸದಾಸ್ಥಿತೇಃ ।**
**ಪ್ರವೃದ್ಧ[೩]ಕಟಕತ್ವಾಚ್ಚ ಸುರಾಜಾನಮಿವೋನ್ನತಮ್ ॥ ೧೬೩ ॥**

ರಾಜರಿಗೆಲ್ಲ ಅಧಿಪತಿಯೂ ಸದಾಚಾರಿಯೂ ವಿದ್ವಜ್ಜನರಿಂದ ಸುತ್ತಲ್ಪಟ್ಟವನೂ ವೃದ್ಧಿಹೊಂದಿದ ಸೈನ್ಯವುಳ್ಳವನೂ ಆದ ಒಳ್ಳೆಯ ರಾಜನಂತೆ, ಆ ಪರ್ವತವು ಪರ್ವತಗಳಿಗೆಲ್ಲ ಅಧಿಪತಿಯೂ ವರ್ತುಲಾಕಾರವೂ ಸದಾ ಇರುವುದೂ ವೃದ್ಧಿಹೊಂದಿದ ತಪ್ಪಲುಪ್ರದೇಶಗಳುಳ್ಳದೂ ಆಗಿದೆ.

**[೪]ಸರ್ವಲೋಕೋತ್ತರತ್ವಾಚ್ಚ ಜ್ಯೇಷ್ಠ ತ್ವಾತ್ಸರ್ವಭೂಭೃತಾಮ್ ।**
**ಮಹತ್ವಾತ್ಸ್ವರ್ಣವರ್ಣತ್ವಾತ್ತಮಾದ್ಯಮಿವ ಪೂರುಷಮ್ ॥ ೧೬೪ ॥**

ಸಮಸ್ತಜನರಿಗಿಂತಲೂ ಶ್ರೇಷ್ಠರೂ ರಾಜರಲ್ಲೆಲ್ಲ ಮೊದಲನೆಯವರೂ ದೊಡ್ಡವರೂ ಬಂಗಾರದಂತೆ ಶರೀರವರ್ಣವುಳ್ಳವರೂ ಆದ ವೃಷಭತೀರ್ಥಂಕರ (ಆದಿಬ್ರಹ್ಮ)ರಂತೆ, ಆ ಮೇರುಪರ್ವತವು ಭರತೈರಾವತಪೂರ್ವಾಪರವಿದೇಹ ಕ್ಷೇತ್ರಗಳಿಗೆಲ್ಲ ಉತ್ತರದಿಕ್ಕಿನಲ್ಲಿರುವುದೂ ಪರ್ವತಗಳಲ್ಲೆಲ್ಲ ಶ್ರೇಷ್ಠವೂ ದೊಡ್ಡದೂ ಬಂಗಾರವರ್ಣವುಳ್ಳದೂ ಆಗಿದೆ.

**ಸಮಾಸಾದಿತವಜ್ರತ್ವಾ[೫]ದಪ್ಸರಃಸಂಶ್ರಯಾದಪಿ ।**
**ಜ್ಯೋತಿಃಪರೀತಮೂರ್ತಿತ್ವಾತ್ಸುರರಾಜಮಿವಾಪರಮ್ ॥ ೧೬೫ ॥**

ವಜ್ರಾಯುಧವುಳ್ಳವನೂ ಅಪ್ಸರಸ್ತ್ರೀಯರ ಸಂಬಂಧವುಳ್ಳವನೂ ತೇಜೋಮಯವಾದ ಶರೀರವುಳ್ಳವನೂ ಆದ ಬೇರೊಬ್ಬ ದೇವೇಂದ್ರನೋ ಎಂಬಂತೆ, ಆ ಮೇರುಪರ್ವತವು ವಜ್ರರತ್ನಗಳುಳ್ಳದೂ ಅಥವಾ ವಜ್ರೆಯೆಂಬ ಭೂಮಿತಲವನ್ನು ಮುಟ್ಟಿದುದೂ ಜಲಭರಿತವಾದ ಸರೋವರಗಳುಳ್ಳದೂ ಸೂರ್ಯಚಂದ್ರಾದಿ ಜ್ಯೋತಿರ್ದೇವರ್ಕಳಿಂದ ಸುತ್ತಲ್ಪಡುವ ಆಕಾರವುಳ್ಳದೂ ಆಗಿದೆ.

**ಚೂಲಿಕಾಗ್ರಸಮಾಸನ್ನಸೌಧರ್ಮೇಂದ್ರವಿಮಾನಕಮ್ ।**
**ಸ್ವರ್ಲೋಕಧಾರಣೇ ನ್ಯಸ್ತಮಿವೈಕಂ ಸ್ತಂಭಮುಚ್ಛ್ರಿತಮ್ ॥ ೧೬೬ ॥**

ಆ ಮೇರುಪರ್ವತದ ಚೂಲಿಕೆಯ ತುದಿಯು ಸೌಧರ್ಮೇಂದ್ರನ ವಿಮಾನಕ್ಕೆ ಬಹಳ ಸಮೀಪಸ್ಥವಾಗಿದೆ. ಆ ಮೇರುಪರ್ವತವು, ಸ್ವರ್ಗಲೋಕವನ್ನು ಧರಿಸುವುದಕ್ಕೋಸ್ಕರ ಸ್ಥಾಪಿಸಿದ ಎತ್ತರವಾದೊಂದು ಕಂಭವೋ, ಎಂಬಂತಿದೆ.

**ಮೇಖಲಾಭಿರ್ವನಶ್ರೇಣೀರ್ದಧಾನಂ ಕುಸುಮೋಜ್ಜ್ವಲಾಃ ।**
**ಸ್ಪರ್ಧಯೇವ ಕುರುಕ್ಷ್ಮಾಜೈಃ ಸರ್ವರ್ತುಫಲದಾಯಿನೀಃ ॥ ೧೬೭ ॥**

ಆ ಮೇರುಪರ್ವತವು, ಕಲ್ಪವೃಕ್ಷಗಳೊಡನೆ ಸ್ಪರ್ಧೆಯಿಂದಲೋ ಎಂಬಂತೆ, ಎಲ್ಲಾ ಋತುಗಳಲ್ಲಿಯೂ ಫಲಗಳನ್ನು ಕೊಡುವುವೂ ಪುಷ್ಪಗಳಿಂದ ಶೋಭಿಸುವುವೂ ಕಟ್ಟೆ(ವೇದಿಕೆ)ಗಳಿಂದ ಸುತ್ತಲ್ಪಟ್ಟುವೂ ಆದ ವನಪಂಕ್ತಿಗಳನ್ನು ಧರಿಸಿಕೊಂಡಿದೆ.

**ಹಿರಣ್ಮಯಮಹೋದಗ್ರವಪುಷಂ ರತ್ನಭಾಜುಷಮ್ ।**
**ಜಿನಜನ್ಮಾಭಿಷೇಕಾಯ ಬದ್ಧಂ ಪೀಠಮಿವಾಮರೈಃ ॥ ೧೬೮ ॥**

ಬಂಗಾರಮಯವೂ ಬಹಳ ಉನ್ನತವೂ ರತ್ನಗಳ ಕಾಂತಿಯನ್ನು ಧರಿಸಿರುವುದೂ ಆದ ಆ ಮೇರುಪರ್ವತವು, ಜಿನೇಶ್ವರನ ಜನ್ಮಾಭಿಷೇಕಕ್ಕೋಸ್ಕರ ದೇವತೆಗಳು ಮಾಡಿದ ಪೀಠವೋ, ಎಂಬಂತಿದೆ.

**ಜಿನಾಭಿಷೇಕಸಂಬಂಧಾಜ್ಜಿನಾಯತನಧಾರಣಾತ್ ।**
**ಸ್ವೀಕೃತೇನೇವ ಪುಣ್ಯೇನ ಪ್ರಾಪ್ತಂ ಸ್ವರ್ಗಮನರ್ಗಲಮ್ ॥ ೧೬೯ ॥**

ಆ ಮೇರುಪರ್ವತವು ಜಿನೇಶ್ವರನ ಜನ್ಮಾಭಿಷೇಕಸಂಬಂಧದಿಂದಲೂ ಜಿನಚೈತ್ಯಾಲಯಗಳನ್ನು ಧರಿಸಿರುವುದರಿಂದಲೂ ಸಂಪಾದಿಸಿದ ಪುಣ್ಯದಿಂದಲೋ ಎಂಬಂತೆ ತಡೆಯಿಲ್ಲದೆ ಸ್ವರ್ಗವನ್ನು ಹೊಂದಿದೆ. ಸ್ವರ್ಗದವರೆಗೆ ಉನ್ನತವಾಗಿದೆಯೆಂದರ್ಥವು.

**ಲವಣಾಂಭೋಧಿವೇಲಾಂಭೋವಲಯಶ್ಲಕ್ಷ್ಣವಾಸಸಃ ।**
**ಜಂಬೂದ್ವೀಪಮಹೀಭರ್ತುಃಸ್ತಿರೀಟಮಿವ ಸುಸ್ಥಿತಮ್ ॥ ೧೭೦ ॥**

ಆ ಮೇರು ಪರ್ವತವು, ಲವಣಸಮುದ್ರದ ದಡಗಳಲ್ಲಿ ಜಲವೆಂಬ ಹೊಳಪಾದ ವಸ್ತ್ರವನ್ನು ಧರಿಸಿರುವ ಜಂಬೂದ್ವೀಪವೆಂಬ ರಾಜನ ಕಿರೀಟವೋ ಎಂಬಂತೆ, ಸ್ಥಿರವಾಗಿದೆ.

**ಕುಲಾಚಲಪೃಥೂತ್ತುಂಗವೀಚೀಭಂಗೋಪಶೋಭಿನಃ ।**
**ಸಂಗೀತಪ್ರಹತಾತೋದ್ಯವಿಹಂಗರುತಶಾಲಿನಃ ॥ ೧೭೧ ॥**

**ಮಹಾನದೀಜಲಾಲೋಲಮೃಣಾಲವಿಲಸದ್ಯುತೇಃ ।**
**ನಂದನಾದಿಮಹೋದ್ಯಾನವಿಸರ್ಪತ್ಪತ್ರಸಂಪದಃ ॥ ೧೭೨ ॥**

**ಸುರಾಸುರಸಭಾವಾಸಭಾಸಿತಾಮರಸಶ್ರಿಯಃ ।**
**ಸುಖಾಸವರಸಾಸಕ್ತಜೀವಭೃಂಗಾವಲೀಭೃತಃ ॥ ೧೭೩ ॥**

**ಜಗತ್ಪದ್ಮಾಕರಸ್ಯಾಸ್ಯ ಮಧ್ಯೇ ಕಾಲಾನಿಲೋದ್ಧತಮ್ ।**
**ವಿವೃದ್ಧಮಿವ ಕಿಂಜಲ್ಕಪುಂಜಮಾಪಿಂಜರಚ್ಛವಿಮ್ ॥ ೧೭೪ ॥**

ಕುಲಪರ್ವತಗಳೆಂಬ ಉನ್ನತವಾದ ತೆರೆಮಾಲೆಗಳಿಂದ ಶೋಭಿಸುತ್ತಿರುವುದೂ ಸಂಗೀತದೊಡನೆ ನುಡಿಸಿದ ವಾದ್ಯಗಳೆಂಬ ಪಕ್ಷಿಗಳ ಶಬ್ದಗಳಿಂದ ಶೋಭಿಸುವುದೂ ಗಂಗಾ ಸಿಂಧು ಮೊದಲಾದ ದೊಡ್ಡನದಿಗಳ ನೀರುಗಳೆಂಬ ಚಂಚಲವಾದ ತಾವರೆದಂಟುಗಳಿಂದ ಪ್ರಕಾಶಿಸುತ್ತಿರುವುದೂ ನಂದನ ಮೊದಲಾದ ವನಗಳೆಂಬ ವಿಶಾಲವಾದ ಪತ್ರಗಳುಳ್ಳದೂ ಕಲ್ಪವಾಸಿಭವನವಾಸಿದೇವತೆಗಳ ಸಭಾಸ್ಥಾನಗಳೆಂಬ ವಿಕಸಿತವಾದ ಕಮಲಗಳ ಶೋಭೆಯುಳ್ಳದೂ ಇಂದ್ರಿಯಸುಖಗಳೆಂಬ ಪುಷ್ಪರಸದಲ್ಲಿ ಆಸಕ್ತಗಳಾದ ಜೀವಗಳೆಂಬ ಭ್ರಮರಗಳುಳ್ಳದೂ ಆದ ಜಗತ್ತೆಂಬ ಕಮಲಸರೋವರದ ಮಧ್ಯದಲ್ಲಿ, ಈ ಮಹಾಮೇರುಪರ್ವತವು, ಪ್ರಳಯಕಾಲದ ಗಾಳಿಯಿಂದ ಮೇಲಕ್ಕೆದ್ದು ವೃದ್ಧಿಹೊಂದಿದುದೂ ಸಂಪೂರ್ಣವಾಗಿ ಹಳದಿಬಣ್ಣವುಳ್ಳದೂ ಆದ ಕಿಂಜಲ್ಕ-ಕೇಸರಗಳ ರಾಶಿಯೋ, ಎಂಬಂತಿದೆ.

೧ ಸಮವಸರಣಂ. ೨ ವಿದ್ವಜ್ಜನಾನಾಮಾಸಮಂತಾತ್ಸ್ಥಿತಿರ್ಯಸ್ಮಿನ್, ಮೇರುಪಕ್ಷೇ ನಿತ್ಯಸ್ಥಿತೇಃ. ೩ ಸೈನ್ಯಂ, ಪಕ್ಷೇ ಸಾನುಃ. ೪ ಸರ್ವಜನೋತ್ತಮತ್ವಾತ್, ಪಕ್ಷೇ ಭರತೈರಾವತಪೂರ್ವಾಪರವಿದೇಹ ಕ್ಷೇತ್ರಾಣಾಮುತ್ತರದಿಕ್ ಸ್ಥಿತತ್ವಾತ್. ೫ ದೇವಸ್ತ್ರಿಯಃ, ಪಕ್ಷೇ ಜಲಯುಕ್ತಸರಾಂಸಿ.

**ಸರತ್ನಕಟಕಂ ಭಾಸ್ವಚ್ಚೂಲಿಕಾಮುಕುಟೋಜ್ಜ್ವಲಮ್ ।**
**ಸೋದರ್ಶದ್ಗಿರಿರಾಜಂ ತಂ ರಾಜಂತಂ ಜಿನಮಂದಿರೈಃ ॥ ೧೭೫ ॥**

ರತ್ನಖಚಿತವಾದ ಕಡಗವನ್ನೂ ಪ್ರಕಾಶಮಾನವಾದ ಕಿರೀಟವನ್ನೂ ಧರಿಸಿರುವ ರಾಜನಂತೆ, ಆ ಮೇರುಪರ್ವತವು ರತ್ನಖಚಿತವಾದ ತಪ್ಪಲುಪ್ರದೇಶಗಳನ್ನೂ ಪ್ರಕಾಶಮಾನವಾದ ಚೂಲಿಕೆಯೆಂಬ ಮುಕುಟವನ್ನೂ ಧರಿಸಿದೆ. ಜಿನಮಂದಿರಗಳಿಂದ ಪ್ರಕಾಶಮಾನವಾದ ಅಂತಹ ಮೇರುಪರ್ವತವನ್ನು ಸ್ವಯಂಬುದ್ಧನು ನೋಡಿದನು.

**ತಮುದ್ಭೂತಶ್ರಿಯಂ ಪಶ್ಯನ್ನಗಮತ್ಸ ಪರಾಂ ಮುದಮ್ ।**
**ನ್ಯರೂಪಯಚ್ಚ ಪರ್ಯಂತದೇಶಾನಸ್ಯೇತಿ ವಿಸ್ಮಯಾತ್ ॥ ೧೭೬ ॥**

ಸ್ವಯಂಬುದ್ಧನು ಸಂಪದ್ಯುಕ್ತವಾದ ಆ ಮಹಾಮೇರುಪರ್ವತವನ್ನು ನೋಡಿ ಬಹಳ ಸಂತೋಷವನ್ನು ಹೊಂದಿದನು. ವಿಸ್ಮಯದಿಂದ ಈ ಪರ್ವತದ ಸಮೀಪ ಪ್ರದೇಶಗಳ ವರ್ಣನೆಯನ್ನೂ ಮುಂದೆ ಹೇಳುವಂತೆ ಮಾಡಿದನು.

**ಗಿರೀಂದ್ರೋಽಯಂ ಸ್ವಶೃಂಗಾಗ್ರೈಃ ಸಮಾಕ್ರಾಂತನಭೋಂಗಣಃ ।**
**ಲೋಕನಾಡೀಗತಾಯಾಮಂ [೧]ಮಿಮಾನ ಇವ ರಾಜತೇ ॥ ೧೭೭ ॥**

ಈ ದೊಡ್ಡಪರ್ವತವು, ತನ್ನ ಶಿಖರಗಳ ಅಗ್ರಭಾಗಗಳಿಂದ ಆಕಾಶವೆಂಬ ಅಂಗಣವನ್ನು ಆಕ್ರಮಿಸಿಕೊಂಡು ಲೋಕನಾಡಿಯ ಉದ್ದಳತೆಯನ್ನು ಅಳೆಯುವ ದಂಡವೋ ಎಂಬಂತೆ, ಶೋಭಿಸುತ್ತಿದೆ.

**ಅಸ್ಯ ಸಾನೂನಿಮೇ ರಮ್ಯಚ್ಛಾಯಾ[೨]ನೋಕಹಶೋಭಿನಃ ।**
**ಸಾರ್ಧಂ ವಧೂಜನೈಃ ಶಶ್ವದಾವಸಂತಿ ದಿವೌಕಸಃ ॥ ೧೭೮ ॥**

ನೆರಳನ್ನು ಕೊಡುವ ಮನೋಹರವಾದ ವೃಕ್ಷಗಳಿಂದ ಶೋಭಿಸುತ್ತಿರುವ ಈ ಪರ್ವತದ ತಪ್ಪಲುಗಳಲ್ಲಿ ಈ ದೇವತೆಗಳು ತಮ್ಮ ಸ್ತ್ರೀಯರೊಡನೆ ಯಾವಾಗಲೂ ವಾಸಮಾಡುತ್ತಾರೆ.

**ಅಸ್ಯ ಪಾದಾದ್ರಯೋಽಪ್ಯಸ್ಮಾದಾನೀಲನಿಷಧಂ ಗತಾಃ ।**
**ಮಹತಾಂ ಪಾದಸಂಸೇವೀ ಕೋ ವಾ ನಾಯತಿಮಾಪ್ನುಯಾತ್ ॥**

ಈ ಮೇರುವಿನ ಪಾದಾದ್ರಿ(ಪ್ರತ್ಯಂತಪರ್ವತ)ಗಳು ನೀಲಪರ್ವತದಿಂದ ನಿಷಧ ಪರ್ವತದವರೆಗೂ ದೀರ್ಘವಾಗಿವೆ. ದೊಡ್ಡವರ ಪಾದವನ್ನು ಸೇವಿಸುವವನು ಯಾರುತಾನೆ ದೈರ್ಘ್ಯ( ಅಭಿವೃದ್ಧಿ )ವನ್ನು ಹೊಂದುವುದಿಲ್ಲ ?

**ಗಜದಂತಾದ್ರಯೋಽಸ್ಯೈತೇ ಲಕ್ಷ್ಯಂತೇ ಪಾದಸಂಶ್ರಿತಾಃ ।**
**[೩]ಭಕ್ತ್ಯೈ ನಿಷಧನೀಲಾಭ್ಯಾಮಿವ ಹಸ್ತಾಃ ಪ್ರಸಾರಿತಾಃ ॥ ೧೮೦ ॥**

ಈ ಮೇರುಪರ್ವತದ ಪಾದವನ್ನಾಶ್ರಯಿಸಿಕೊಂಡಿರುವ ಈ ಗಜದಂತ ಪರ್ವತಗಳು, ಮೇರುವನ್ನು ಭಜಿಸುವುದಕ್ಕೋಸ್ಕರ ನಿಷಧನೀಲಪರ್ವತಗಳಿಂದ ನೀಡಲ್ಪಟ್ಟ ಕೈಗಳೋ ಎಂಬಂತೆ, ಕಾಣುತ್ತಿವೆ.

**ಇಮೇ ಚೈನಂ ಮಹಾನದ್ಯೌ ಸೀತಾಸೀತೋದಕಾಹ್ವಯೇ ।**
**ಕ್ರೋಶದ್ವಯಾದನಾಸ್ಪೃಶ್ಯ ಯಾತೋಽಂಭೋಧಿಂ ಭಯಾದಿವ ॥ ೧೮೧ ॥**

ಸೀತಾಸೀತೋದಾಗಳೆಂಬ ಈ ಎರಡು ದೊಡ್ಡಹೊಳೆಗಳು, ಈ ಮೇರು ಪರ್ವತವನ್ನು ಮುಟ್ಟದೆ ಎರಡುಹರದಾರಿ ದೂರದಿಂದ ಭಯದಿಂದಲೋ ಎಂಬಂತೆ, ಸಮುದ್ರವನ್ನು ಸೇರುತ್ತವೆ.

**ಅಸ್ಯ ಪರ್ಯಂತಭೂಭಾಗಂ ಸದಾಲಂಕುರುತೇ ದ್ರುಮೈಃ ।**
**ಭದ್ರಸಾಲ[೪]ಪರಿಕ್ಷೇಪಃ ಕುರುಲಕ್ಷ್ಮೀ[೫]ಮಧಿಕ್ಷಿಪನ್ ॥ ೧೮೨ ॥**

೧ ಪ್ರಮಾತಾ. ೨ ವೃಕ್ಷಾಃ. ೩ ಭಜನಾಯ. ೪ ಪರಿಧಿಃ. ೫ ತಿರಸ್ಕುರ್ವನ್.

ಈ ಪರ್ವತದಲ್ಲಿರುವ ಭದ್ರಸಾಲವನದ ಪರಿಧಿಯು ದೇವಕುರು ಉತ್ತರ ಕುರುಗಳ ಶೋಭೆಯನ್ನು ತಿರಸ್ಕರಿಸಿ ವೃಕ್ಷಗಳಿಂದ ಯಾವಾಗಲೂ ಈ ಪರ್ವತದ ಸಮೀಪಭೂಪ್ರದೇಶಗಳನ್ನು ಅಲಂಕರಿಸುತ್ತದೆ.

**ಇತೋ ನಂದನಮುದ್ಯಾನಮಿತಃ ಸೌಮನಸಂ ವನಮ್ ।**
**ಇತಃ ಪಾಂಡುಕಮಾಭಾತಿ ಶಶ್ವತ್ಕುಸುಮಿತದ್ರುಮಮ್ ॥ ೧೮೩ ॥**

ಈ ಕಡೆಯಲ್ಲಿ ನಂದನವನವೂ ಈಕಡೆಯಲ್ಲಿ ಸೌಮನಸವನವೂ ಇತ್ತಕಡೆಯಲ್ಲಿ ಪಾಂಡುಕವನವೂ ಸದಾ ಪುಷ್ಪಿತಗಳಾದ ವೃಕ್ಷಗಳಿಂದ ಶೋಭಿಸುತ್ತಿವೆ.

**ಇತೋಽರ್ದ್ಧಚಂದ್ರವೃ[೧]ತ್ತಾಂಗಾಃ ಕುರವೋಽಮೀ ಚಕಾಸತಿ ।**
**ಇತೋ ಜಂಬೂದ್ರುಮಃ ಶ್ರೀಮಾನಿತಃ ಶಾಲ್ಮಲಿಪಾದಪಃ ॥ ೧೮೪ ॥**

ಈ ಕಡೆಯಲ್ಲಿ ಅರ್ದ್ಧಚಂದ್ರಾಕಾರವುಳ್ಳ ದೇವಕುರು ಉತ್ತರಕುರುಗಳು ಪ್ರಕಾಶಿಸುತ್ತಿವೆ. ಈಕಡೆಯಲ್ಲಿ ಶೋಭಾಯಮಾನವಾದ ಜಂಬೂವೃಕ್ಷವಿದೆ. ಇನ್ನೊಂದು ಕಡೆಯಲ್ಲಿ ಶಾಲ್ಮಲಿವೃಕ್ಷವಿದೆ.

**ಅಮೀ ಚೈತ್ಯಗೃಹಾ ಭಾಂತಿ ವನೇಷ್ವಸ್ಯ ಜಿನೇಶಿನಾಮ್ ।**
**ರತ್ನಭಾಭಾಸಿಭಿಃ ಕೂಟೈರ್ದ್ಯೋತಯಂತೋ ನಭೋಂಗಣಮ್ ॥**

ಈ ಮಹಾಮೇರುಪರ್ವತದ ವನಗಳಲ್ಲಿ ಜಿನೇಶ್ವರರ ಈ ಚೈತ್ಯಾಲಯಗಳು ರತ್ನಕಾಂತಿಗಳಿಂದ ಪ್ರಕಾಶಿಸುತ್ತಿರುವ ಶಿಖರಗಳಿಂದ ಆಕಾಶವೆಂಬ ಅಂಗಣವನ್ನು ಪ್ರಕಾಶಿಸುವವುಗಳಾಗಿ ಶೋಭಿಸುತ್ತಿವೆ.

**ಶಶ್ವ[೨]ತ್ಪುಣ್ಯಜನಾಕೀರ್ಣಃ ಸೋದ್ಯಾನಃ ಸಜಿನಾಲಯಃ ।**
**ಪರ್ಯಂತಸ್ಥಸರಿತ್ಕ್ಷೇತ್ರೋ ನಗೋಽಯಂ ನಗರಾಯತೇ ॥ ೧೮೬ ॥**

ಸದಾ ಸಜ್ಜನರಿಂದ ವ್ಯಾಪ್ತವೂ ಉದ್ಯಾನಗಳೊಡನೆ ಕೂಡಿದುದೂ ಜಿನ ಮಂದಿರಗಳುಳ್ಳುದೂ ಸಮೀಪದಲ್ಲಿ ನದಿಗಳೂ ಕ್ಷೇತ್ರಗಳೂ ಉಳ್ಳುದೂ ಆದ ನಗರದಂತೆ, ಈ ಪರ್ವತವು ಯಾವಾಗಲೂ ರಾಕ್ಷಸರಿಂದ ವ್ಯಾಪ್ತವೂ ಉದ್ಯಾನಗಳುಳ್ಳುದೂ ಜಿನಮಂದಿರಗಳುಳ್ಳುದೂ ಸಮೀಪದಲ್ಲಿ ನದಿಗಳೂ ಕ್ಷೇತ್ರಗಳೂ ಉಳ್ಳುದೂ ಆಗಿದೆ.

**ಸಂಗತಸ್ಪ್ರಾಂಗಭೃದ್ಭೃಂಗೈಃ ಕ್ಷೇತ್ರಪತ್ರೋಪಶೋಭಿನಃ ।**
**ಜಂಬೂದ್ವೀಪಾಂಬುಜಸ್ಯಾಸ್ಯ ನಗೋಽಯಂ ಕರ್ಣಿಕಾಯತೇ ॥ ೧೮೭ ॥**

ಪ್ರಾಣಿಗಳೆಂಬ ಭ್ರಮರಗಳಿಂದ ಕೂಡಿರುವುದೂ ಭರತಹೈಮವತಾದಿ ಕ್ಷೇತ್ರಗಳೆಂಬ ಪತ್ರಗಳಿಂದ ಶೋಭಿಸುವುದೂ ಆದ ಈ ಜಂಬೂದ್ವೀಪವೆಂಬ ಕಮಲಕ್ಕೆ ಈ ಮೇರುಪರ್ವತವು ಕರ್ಣಿಕೆಯಂತಿದೆ.

**ಇತಿ ಪ್ರಕಟಿತೋದಾರಮಹಿಮಾ ಭೂಭೃತಾಂ ಪತಿಃ ।**
**ಮನ್ಯೇ ಜಗತ್ತ್ರಯಾಯಾಮ[೩]ಮವ್ಯಾಪ್ಯೇಷ ವಿಲಂಘತೇ ॥ ೧೮೮ ॥**

ಹೀಗೆ ಪ್ರಸಿದ್ಧವೂ ವಿಶಾಲವೂ ಆದ ಮಹಿಮೆಯುಳ್ಳುದೂ ಅವ್ಯಾಪಕವೂ ಆದ ಮೇರುಪರ್ವತ(ಪರ್ವತಗಳರಾಜ)ವು ಮೂರುಲೋಕದ ಉದ್ದಳತೆಯನ್ನು ಮೀರುತ್ತದೆಂದು ತಿಳಿಯುತ್ತೇನೆ.

**ತಮಿತ್ಯಾವರ್ಣಯನ್ ದೂರಾತ್ಸ್ವಯಂಬುದ್ಧಃ ಸಮಾಸದತ್ ।**
**ಧ್ವಜಹಸ್ತೈರಿವಾಹೂತಃ ಸಾದರಂ ಜಿನಮಂದಿರೈಃ ॥ ೧೮೯ ॥**

ಹೀಗೆ ಸ್ವಯಂಬುದ್ಧಮಂತ್ರಿಯು ದೂರದಿಂದ ಆ ಮೇರುಪರ್ವತವನ್ನು ವರ್ಣನೆಮಾಡುವವನಾಗಿ, ಧ್ವಜಪತಾಕೆಗಳೇ ಕೈಗಳಾಗಿರುವ ಜಿನಮಂದಿರಗಳಿಂದ

೧ ಆಕಾರಾಃ. ೨ ತಥಾ ಪುಣ್ಯಜನಾನ್ ಪ್ರಾಹುಃ ಸಜ್ಜನಾನ್ ರಾಕ್ಷಸಾನಪೀತಿ ಧನಂಜಯಃ. ೩ ಅವ್ಯಾಪಕಃ.

ಆದರಪೂರ್ವಕವಾಗಿ ಕರೆಯಲ್ಪಟ್ಟವನಾಗಿಯೋ ಎಂಬಂತೆ, ಆ ಪರ್ವತವನ್ನು ಸೇರಿದನು.

**ಅಕೃತ್ರಿಮಾನನಾದ್ಯಂತಾ[1]ನ್ನಿತ್ಯಾಲೋಕಾನ್ಸುರಾರ್ಚಿತಾನ್ ।**
**ಜಿನಾಲಯಾನ್ ಸಮಾಸಾದ್ಯ ಸ ಪರಾಂ ಮುದಮಾಯಯೌ ॥ ೧೯೦ ॥**

ಅಕೃತ್ರಿಮಗಳೂ ಅನಾದಿನಿಧನಗಳೂ ಯಾವಾಗಲೂ ಪ್ರಕಾಶಮಾನಗಳೂ ದೇವತೆಗಳಿಂದ ಪೂಜಿಸಲ್ಪಡುವುವೂ ಆದ ಜಿನಮಂದಿರಗಳನ್ನು ಹೊಂದಿ ಆ ಸ್ವಯಂಬುದ್ಧನು ಬಹಳ ಸಂತೋಷಪಟ್ಟನು.

**[2]ಸಪರ್ಯಯಾ ಸ [3]ಪರ್ಯೇತ್ಯ ಭೂಯೋ ಭಕ್ತ್ಯಾ ಪ್ರಣಮ್ಯ ಚ ।**
**ಭದ್ರಸಾಲಾ[4]ದಿಚೈತ್ಯಾನಿ ವಂದತೇ ಸ್ಮ ಯಥಾಕ್ರಮಮ್ ॥ ೧೯೧ ॥**

ಆ ಸ್ವಯಂಬುದ್ಧನು ಪ್ರದಕ್ಷಿಣೆಯನ್ನು ಮಾಡಿ ಪೂಜಿಸಿ ಪುನಃಪುನಃ ಭಕ್ತಿಯಿಂದ ನಮಸ್ಕರಿಸಿ ಭದ್ರಸಾಲ ಮೊದಲಾದ ವನಗಳಲ್ಲಿರುವ ಚೈತ್ಯಾಲಯಗಳನ್ನು ಕ್ರಮವಾಗಿ ವಂದಿಸಿದನು.

**ಸ ಸೌಮನಸಪೌರಸ್ತ್ಯದಿಗ್ಭಾಗಜಿನವೇಶ್ಮನಿ ।**
**ಕೃತಾರ್ಚನವಿಧಿರ್ಭಕ್ತ್ಯಾ ಪ್ರಣಮ್ಯ ಕ್ಷಣ[5]ಮಾಸಿತಃ ॥ ೧೯೨ ॥**

ಆ ಸ್ವಯಂಬುದ್ಧನು ಸೌಮನಸವನದ ಪೂರ್ವದಿಕ್ಕಿನಲ್ಲಿರುವ ಜಿನಮಂದಿರದಲ್ಲಿ ಪೂಜಾವಿಧಿಯನ್ನು ಮಾಡಿ ಭಕ್ತಿಯಿಂದ ನಮಸ್ಕರಿಸಿ ಒಂದು ಕ್ಷಣಕಾಲಪರ್ಯಂತ ಕುಳಿತುಕೊಂಡನು.

**ಪ್ರಾಗ್ವಿದೇಹಮಹಾಕಚ್ಛವಿಷಯಾರಿಷ್ಟಸತ್ಪುರಾತ್ ।**
**ಆಗತೌ ಸಹಸೈಕ್ಷಿಷ್ಟ ಮುನೀ ಗಗನಚಾರಣೌ ॥ ೧೯೩ ॥**

ಆಗ ಪೂರ್ವವಿದೇಹದಲ್ಲಿರುವ ಕಚ್ಛದೇಶದ ಅರಿಷ್ಟವೆಂಬ ಪಟ್ಟಣದಿಂದ ಆಕಸ್ಮಾತಾಗಿ ಬಂದ ಇಬ್ಬರು ಆಕಾಶಚಾರಣ ಮುನಿಗಳನ್ನು ಕಂಡನು.

**ಆದಿತ್ಯಗತಿಮಗ್ರಣ್ಯಂ ತಥಾರಿಂಜಯಶಬ್ದನಮ್ ।**
**ಯುಗಂಧರಮಹಾತೀರ್ಥಸರಸೀಹಂಸನಾಯಕೌ ॥ ೧೯೪ ॥**

ಅವರಲ್ಲಿ ಮೊದಲನೆಯವರು ಆದಿತ್ಯಗತಿಯೆಂಬುವವರು. ಎರಡನೆಯವರು ಅರಿಂಜಯರೆಂಬುವವರು. ಇವರು ಯುಗಂಧರತೀರ್ಥಂಕರರ ಸಮವಸರಣವೆಂಬ ಸರೋವರದಲ್ಲಿ ಎರಡು ಗಂಡುಹಂಸಪಕ್ಷಿಗಳಂತಿರುವವರು.

**ತಾವಭ್ಯೇತ್ಯ ಸಮಭ್ಯರ್ಚ್ಯ ಪ್ರಣಮ್ಯ ಚ ಪುನಃಪುನಃ ।**
**ಪಪ್ರಚ್ಛೇತಿ ಸುಖಾಸೀನೌ ಮನೀಷೀ ಸ್ವಮನೀಷಿತಮ್ ॥ ೧೯೫ ॥**

ಬುದ್ಧಿಶಾಲಿಯಾದ ಸ್ವಯಂಬುದ್ಧನು ಸುಖವಾಗಿ ಕುಳಿತಿರುವ ಆ ಚಾರಣ ಮುನಿಗಳ ಸಮೀಪಕ್ಕೆ ಹೋಗಿ ಅವರನ್ನು ಪೂಜಿಸಿ ಪುನಃಪುನಃ ನಮಸ್ಕರಿಸಿ ಮುಂದೆಹೇಳುವ ರೀತಿಯಾಗಿ ತನ್ನ ಮನೋಭಿಪ್ರಾಯವನ್ನು ಪ್ರಶ್ನೆಮಾಡಿದನು.

**ಭಗವಂತೌ ಯುವಾಂ ಬ್ರೂತಂ ಕಿಂಚಿತ್ಪೃಚ್ಛಾಮಿ ಹೃದ್ಗತಮ್ ।**
**ಭವಂತೌ ಹಿ ಜಗದ್ಬೋಧವಿಧೌ ಧತ್ತೋವಧಿತ್ವಿಷಮ್ ॥ ೧೯೬ ॥**

"ಪೂಜ್ಯರೇ! ತಾವುಗಳು ಜಗತ್ತನ್ನೆಲ್ಲ ತಿಳಿಯುವುದರಲ್ಲಿ ಸಮರ್ಥವಾದ ಅವಧಿಜ್ಞಾನವೆಂಬ ಜ್ಯೋತಿಯನ್ನು ಧರಿಸಿರುತ್ತೀರಿ. ಆದುದರಿಂದ ನನ್ನ ಮನೋಗತವಾದ ಒಂದು ವಿಷಯವನ್ನು ಕೇಳುತ್ತೇನೆ. ಹೇಳಿ.

೧ ನಿತ್ಯಂ ಪ್ರಕಾಶಮಾನಾನ್. ೨ ಪೂಜಯಾ ಸಹ. ೩ ಪ್ರದಕ್ಷಿಣೀಕೃತ್ಯ. ೪ ಆದಿಶಬ್ದೇನ ನಂದನಾದಿಸ್ಥಚೈತ್ಯಾನಾಂ ಗ್ರಹಣಂ. ೫ ಉಪವಿಷ್ಟಃ.

**ಅಸ್ಮತ್ಸ್ವಾಮೀ ಖಗಾಧೀಶಃ ಖ್ಯಾತೋಸ್ತೀಹ ಮಹಾಬಲಃ ।**
**ಸ [1]ಭವ್ಯಸಿದ್ಧಿರಾಹೋಸ್ವಿದಭವ್ಯಃ ಸಂಶಯೋತ್ರ ಮೇ ॥ ೧೯೭ ॥**

ಪೂಜ್ಯರೇ! ಲೋಕದಲ್ಲಿ ಮಹಾಬಲನೆಂದು ಪ್ರಸಿದ್ಧನೂ ನಮ್ಮ ಸ್ವಾಮಿಯೂ ಆದ ವಿದ್ಯಾಧರರಾಜನಿದ್ದಾನೆ. ಅವನು ಭವ್ಯನೋ? ಅಭವ್ಯನೋ? ಎಂಬ ವಿಷಯದಲ್ಲಿ ನನಗೆ ಸಂಶಯವಿದೆ.

**ಜಿನೋಪದಿಷ್ಟಸನ್ಮಾರ್ಗಮಸ್ಮದ್ವಾಕ್ಯಾತ್ಪ್ರಮಾಣಯನ್ ।**
**ಸ ಕಿಂ ಶ್ರದ್ಧಾಸ್ಯತೇ ನೇತಿ [2]ಜಿಜ್ಞಾಸೇ [3]ವಾಮನುಗ್ರಹಾತ್ ॥ ೧೯೮ ॥**

ಆ ಮಹಾಬಲನು ನನ್ನ ಮಾತಿನಿಂದ ಜಿನೇಶ್ವರರು ಹೇಳಿದ ಸನ್ಮಾರ್ಗವನ್ನು ನಿಜವೆಂದು ತಿಳಿದು ನಂಬುವನೋ? ಇಲ್ಲವೋ? ಎಂಬ ವಿಷಯವನ್ನು ತಮ್ಮಗಳ ಅನುಗ್ರಹದಿಂದ ತಿಳಿಯಲಿಚ್ಛಿಸುತ್ತೇನೆ".

**ಇತಿ ಪ್ರಶ್ನ[4]ಮುಪನ್ಯಸ್ಯ ತಸ್ಮಿನ್ವಿಶ್ರಾಂತಿಮೀಯುಷಿ ।**
**ತಯೋರಾದಿತ್ಯಗತ್ಯಾಖ್ಯಃ ಸಮಾಖ್ಯದವಧೀಕ್ಷಣಃ ॥ ೧೯೯ ॥**

ಈಪ್ರಕಾರವಾಗಿ ಆ ಸ್ವಯಂಬುದ್ಧನು ಪ್ರಶ್ನೆಯನ್ನು ಉಪನ್ಯಾಸಮಾಡಿ ವಿಶ್ರಾಂತನಾಗುತ್ತಿರಲು, ಆ ಮುನಿಗಳಲ್ಲಿ ಅವಧಿಜ್ಞಾನಸಂಪನ್ನರಾದ ಮೊದಲನೆಯ ಆದಿತ್ಯಗತಿ ಮುನಿಗಳು ಉತ್ತರವನ್ನು ಹೇಳಲಾರಂಭಿಸಿದರು.

**ಭೋ ಭವ್ಯ ಭವ್ಯ ಏವಾಸೌ [5]ಪ್ರತ್ಯೇಷ್ಯತಿ ಚ ತೇ ವಚಃ ।**
**ದಶಮೇ ಜನ್ಮನೀತಶ್ಚ ತೀರ್ಥಕೃತ್ತ್ವಮವಾಪ್ಸ್ಯತಿ ॥ ೨೦೦ ॥**

"ಎಲೈ ಭವ್ಯನಾದ ಸ್ವಯಂಬುದ್ಧನೇ! ಈ ಮಹಾಬಲನು ಭವ್ಯನೇ ಆಗಿದ್ದಾನೆ. ನಿನ್ನ ಮಾತನ್ನು ನಂಬುವನು. ಇನ್ನು ಹತ್ತನೆಯ ಜನ್ಮದಲ್ಲಿ ತೀರ್ಥಕರತ್ವವನ್ನು ಹೊಂದುವನು. ಹತ್ತನೆಯ ಜನ್ಮದಲ್ಲಿ ತೀರ್ಥಕರನಾಗಿ ಹುಟ್ಟುವನೆಂದರ್ಥವು.

**ದ್ವೀಪೇ ಜಂಬೂಮತೀಹೈವ ವಿಷಯೇ ಭರತಾಹ್ವಯೇ ।**
**ಜನಿತ್ಯೈ[6]ಷ್ಯತ್ಯುಗಾರಂಭೇ ಭಗವಾನಾದಿತೀರ್ಥಕೃತ್ ॥ ೨೦೧ ॥**

ಮಹಾಬಲನು ಇದೇ ಜಂಬೂದ್ವೀಪದಲ್ಲಿರುವ ಭರತಕ್ಷೇತ್ರದಲ್ಲಿ ಮುಂದೆ ಬರುವ ಯುಗದ ಆರಂಭದಲ್ಲಿ ಆದಿತೀರ್ಥಂಕರರಾಗಿ ಹುಟ್ಟುವನು.

**ಇತೋತೀತಭವಂ ಚಾಸ್ಯ ವಕ್ಷ್ಯೇ ಶೃಣು ಸಮಾಸತಃ ।**
**ಧರ್ಮಬೀಜಮನೇನೋಪ್ತಂ ಯತ್ರ ಭೋಗೇಚ್ಛಯಾನ್ವಿತಮ್॥ ೨೦೨ ॥**

ಎಲೈ ಸ್ವಯಂಬುದ್ಧನೇ! ಈ ಮಹಾಬಲನು ಯಾವ ಭವದಲ್ಲಿ ಭೋಗಗಳ ಇಚ್ಛೆಯೊಡಗೂಡಿದ ಧರ್ಮವೆಂಬ ಬೀಜವನ್ನು ಬಿತ್ತಿದ್ದನೋ ಅಂತಹ ಪೂರ್ವ ಭವವನ್ನು ಸಂಕ್ಷೇಪವಾಗಿ ಹೇಳುವೆನು, ಕೇಳು.

**ಇಹೈವಾಪರತೋ ಮೇರೋರ್ವಿದೇಹೇ ಗಂಧಿಲಾಭಿಧೇ ।**
**ಪುರೇ ಸಿಂಹಪುರಾಭಿಖ್ಯೇ ಪುರಂದರಪುರೋಪಮೇ ॥ ೨೦೩ ॥**

**ಶ್ರೀಷೇಣ ಇತ್ಯಭೂದ್ರಾಜಾ [7]ರಾಜೇವ ಪ್ರಿಯದರ್ಶನಃ ।**
**ದೇವೀ ಚ ಸುಂದರೀ ತಸ್ಯ ಬಭೂವಾತ್ಯಂತಸುಂದರೀ ॥ ೨೦೪ ॥**

ಇದೇ ಜಂಬೂದ್ವೀಪದಲ್ಲಿ ಮೇರುವಿನ ಪಶ್ಚಿಮದಲ್ಲಿರುವ ಅಪರವಿದೇಹದ ಗಂಧಿಲವೆಂಬ ದೇಶದಲ್ಲಿ ದೇವೇಂದ್ರನ ಪಟ್ಟಣಕ್ಕೆ ಸಮಾನವಾದ ಸಿಂಹಪುರವೆಂಬ ನಗರದಲ್ಲಿ ಚಂದ್ರನಂತೆ ನೋಡುವುದಕ್ಕೆ ಪ್ರಿಯನಾದ ಶ್ರೀಷೇಣನೆಂಬ ರಾಜನಿದ್ದನು. ಆ ಶ್ರೀಷೇಣರಾಜನಿಗೆ ಅತ್ಯಂತ ಸುಂದರಳಾದ ಸುಂದರಿಯೆಂಬ ಪಟ್ಟ ಮಹಿಷಿಯಿದ್ದಳು.

೧ ಭವಿತುಂ ಯೋಗ್ಯಾ ಸಿದ್ಧಿರ್ಯಸ್ಯಾಸೌ. ೨ ಜ್ಞಾತುಮಿಚ್ಛಾಮಿ. ೩ ಭವತೋಃ. ೪ ಉಪನ್ಯಾಸಂ ಕೃತ್ವಾ. ೫ ಶ್ರದ್ಧಾನಂ ಕರಿಷ್ಯತಿ. ೬ ಭವಿಷ್ಯದ್ಯುಗಾರಂಭೇ. ೭ ಚಂದ್ರ ಇವ.

**ಜಯವರ್ಮಾಹ್ವಯಃ [1]ಸೋಽಯಂ ತಯೋಃ ಸೂನುರಜಾಯತ ।**
**ಶ್ರೀವರ್ಮೇತಿ ಚ ತಸ್ಯಾಭೂದನುಜೋ ಜನತಾಪ್ರಿಯಃ ॥ ೨೦೫ ॥**

ಆ ದಂಪತಿಗಳಿಗೆ ಈ ಮಹಾಬಲನು ಜಯವರ್ಮನೆಂಬ ಮಗನಾಗಿ ಹುಟ್ಟಿದನು. ಆ ಜಯವರ್ಮನ ತಮ್ಮನಾದ ಶ್ರೀವರ್ಮನೆಂಬುವವನು ಜನರಿಗೆ ಪ್ರಿಯನಾಗಿದ್ದನು.

**ಪಿತ್ರೋರಪಿ ನಿಸರ್ಗೇಣ ಕನೀಯಾನಭವತ್ಪ್ರಿಯಃ ।**
**ಪ್ರಾಯಃ [2]ಪ್ರಜಾತ್ವಸಾಮ್ಯೇಽಪಿ ಕ್ವಚಿತ್ಪ್ರೀತಿಃ ಪ್ರಜಾಯತೇ ॥ ೨೦೬ ॥**

ತಂದೆತಾಯಿಗಳಿಗೂ ಕಿರಿಯ ಮಗನು ಸ್ವಭಾವದಿಂದಲೇ ಹೆಚ್ಚು ಪ್ರೀತಿ ಪಾತ್ರನಾಗಿದ್ದನು. ತಂದೆತಾಯಿಗಳಿಗೆ ಎಲ್ಲಾ ಮಕ್ಕಳಲ್ಲಿಯೂ ಪುತ್ರತ್ವವು ಸಮಾನವಾಗಿದ್ದರೂ ಬಹಳಮಟ್ಟಿಗೆ ಒಬ್ಬ ಮಗನಲ್ಲಿ ಹೆಚ್ಚು ಪ್ರೀತಿಯುಂಟಾಗುತ್ತದೆ.

**ಜನಾನುರಾಗಮುತ್ಸಾಹಂ ಪಿತಾ ದೃಷ್ಟ್ವಾ ಕನೀಯಸಿ ।**
**ರಾಜ್ಯಪಟ್ಟಂ ಬಬಂಧಾಸ್ಯ ಜ್ಯಾಯಾಂಸಮವಧೀರಯನ್ ॥ ೨೦೭ ॥**

ತಂದೆಯಾದ ಶ್ರೀಷೇಣರಾಜನು ಕಿರಿಯ ಮಗನಲ್ಲಿ ಪ್ರಜೆಗಳಿಗಿರುವ ಅನುರಾಗವನ್ನೂ ಉತ್ಸಾಹವನ್ನೂ ನೋಡಿ ಹಿರಿಯ ಮಗನನ್ನು ತಿರಸ್ಕರಿಸಿ ಈ ಚಿಕ್ಕಮಗನಾದ ಶ್ರೀವರ್ಮನಿಗೆ ರಾಜ್ಯಪಟ್ಟವನ್ನು ಕಟ್ಟಿದನು.

**ಜಯವರ್ಮಾಥ ನಿರ್ವೇದಂ ಪರಂ ಪ್ರಾಪ್ಯ ತಪೋಗ್ರಹೀತ್ ।**
**ಸ್ವಯಂಪ್ರಭಗುರೋಃ ಪಾರ್ಶ್ವೇ ಸ್ವಮಪುಣ್ಯಂ [3]ನಿಗರ್ಹಯನ್॥ ೨೦೮ ॥**

ಆಮೇಲೆ ಅಣ್ಣನಾದ ಜಯವರ್ಮನು ತನ್ನ ಪಾಪವನ್ನು ಬಹಳವಾಗಿ ನಿಂದಿಸುತ್ತ ಪರಮವೈರಾಗ್ಯವನ್ನು ಹೊಂದಿ ಸ್ವಯಂಪ್ರಭರೆಂಬ ಗುರುಗಳ ಸಮೀಪದಲ್ಲಿ ದೀಕ್ಷೆಯನ್ನು ತೆಗೆದುಕೊಂಡನು.

**ನವಸಂಯತ ಏವಾಸೌ ಯಾಂತಮ್ಯುದ್ಧ್ವಾ [4]ಮಹೀಧರಮ್ ।**
**ಖೇ ಖೇಚರೇಶ[5]ಮುಚ್ಚಕ್ಷುರ್ವೀಕ್ಷ್ಯಾಸೀತ್ಸ ನಿದಾನಕಃ ॥ ೨೦೯ ॥**

ನವೀನವಾಗಿ ಮಹಾವ್ರತವನ್ನು ತೆಗೆದುಕೊಂಡ ಈ ಜಯವರ್ಮಮುನಿಯು ಆಕಾಶದಲ್ಲಿ ವೈಭವದಿಂದ ಹೋಗುತ್ತಿದ್ದ ಮಹೀಧರನೆಂಬ ವಿದ್ಯಾಧರರಾಜನನ್ನು ಕಣ್ಣೆತ್ತಿನೋಡಿ ನಿದಾನವುಳ್ಳವನಾದನು. ಅಂತಹ ಐಶ್ವರ್ಯವು ತನಗೂ ಉಂಟಾಗಬೇಕೆಂದು ಇಚ್ಛಿಸಿದನೆಂರ್ಥವು.

**ಮಹಾಖೇಚರಭೋಗಾಸ್ತೇ ಭೂಯಾಸುರ್ಮೇಽನ್ಯಜನ್ಮನಿ ।**
**ಇತಿ ಧ್ಯಾಯನ್ನಸೌ ದಷ್ಟೋ ವಲ್ಮೀಕಾದ್ಭೀಮಭೋಗಿನಾ ॥ ೨೧೦ ॥**

ಇನ್ನೊಂದು ಜನ್ಮದಲ್ಲಿ ಮಹಾವಿದ್ಯಾಧರನ ಆ ಭೋಗಗಳೆಲ್ಲ ತನಗುಂಟಾಗಲೆಂದು ಧ್ಯಾನಿಸಿದ ಈ ಜಯವರ್ಮ ಮುನಿಗೆ ಹುತ್ತದಿಂದ ಹೊರಟ ಒಂದು ಭಯಂಕರವಾದ ಸರ್ಪವು ಕಚ್ಚಿತು. ಭೋಗಗಳು ತನಗುಂಟಾಗಲೆಂದು ಧ್ಯಾನಿಸುತ್ತಿದ್ದ ಕಾಲದಲ್ಲಿ ಸರ್ಪವು ಕಚ್ಚಿತೆಂದು ಭಾವವು.

**ಭೋಗಕಾಮ್ಯನ್ನಿಸೃಷ್ಟಾಸುರಿಹ ಭೂತ್ವಾ ಮಹಾಬಲಃ ।**
**ಸೋಽನಾಶಿತಂ ಭವಾನ್ಭೋಗಾನ್ಭುಂಕ್ತೇಽದ್ಯ ಖಚರೋಚಿತಾನ್ ॥ ೨೧೧ ॥**

ಅವನು ಭೋಗಗಳನ್ನಿಚ್ಛಿಸಿ ಪ್ರಾಣಗಳನ್ನು ಬಿಟ್ಟು ಇಲ್ಲಿ ಮಹಾಬಲವಾಗಿ ಹುಟ್ಟಿ ವಿದ್ಯಾಧರರಿಗೆ ಉಚಿತವೂ ಭೋಗಿಸಿದಷ್ಟೂ ತೃಪ್ತಿಯನ್ನುಂಟುಮಾಡದಿರುವುವೂ ಆದ ಭೋಗಗಳನ್ನು ಈಗ ಭೋಗಿಸುತ್ತಿದ್ದಾನೆ.

**ತತೋ ಭೋಗೇಷ್ವಸಾವೇವಂ ಚಿರಕಾಲಮರಜ್ಯತ ।**
**ಭವದ್ವಚೋಽಧುನಾ ಶ್ರುತ್ವಾ ಕ್ಷಿಪ್ರಮೇಭ್ಯೋ ವಿರಂಸ್ಯತಿ ॥ ೨೧೨ ॥**

ಆದುದರಿಂದ ಈ ಮಹಾಬಲನು ಹೀಗೆ ಭೋಗಗಳಲ್ಲಿ ಬಹುಕಾಲದವರೆಗೆ ಆನಂದಪಟ್ಟನು. ಈಗ ನಿನ್ನ ಮಾತನ್ನು ಕೇಳಿ ಶೀಘ್ರವಾಗಿ ಈ ಭೋಗಗಳಿಂದ ವಿರಕ್ತನಾಗುವನು.

**ಸೋಽದ್ಯ ರಾತ್ರೌ ಸಮೈಕ್ಷಿಷ್ಟ ಸ್ವಪ್ನೇ ದುರ್ಮಂತ್ರಿಭಿಸ್ತ್ರಿಭಿಃ ।**
**ನಿಮಜ್ಜ್ಯಮಾನಮಾತ್ಮಾನಂ ಬಲಾತ್ಪಂಕೇ ದುರುತ್ತರೇ ॥ ೨೧೩ ॥**

ಆ ಮಹಾಬಲನು ಈ ದಿನ ರಾತ್ರಿ ಸ್ವಪ್ನದಲ್ಲಿ ಮೂರು ಜನ ಮಂತ್ರಿಗಳು ತನ್ನನ್ನು ಅಪರಿಮಿತವಾದ ಕೆಸರಿನಲ್ಲಿ ಬಲಾತ್ಕಾರದಿಂದ ಮುಳುಗಿಸುವುದನ್ನು ಕಂಡನು.

**ತತೋ ನಿರ್ಭರ್ತ್ಸ್ಯ ತಾನ್ದುಷ್ಟಾನ್ದುಷ್ಪಂಕಾದುದ್ಧೃತಂ ತ್ವಯಾ ।**
**ಅಭಿಷಿಕ್ತಂ ಸ್ವಮೈಕ್ಷಿಷ್ಟ ನಿವಿಷ್ಟಂ ಹರಿವಿಷ್ಟರೇ ॥ ೨೧೪ ॥**

ತರುವಾಯ ನೀನು ಆ ದುಷ್ಟರನ್ನು ಬೆದರಿಸಿ ಅಪಾರವಾದ ಕೆಸರಿನಿಂದ ಮೇಲಕ್ಕೆ ತೆಗೆದು ಸಿಂಹಪೀಠದಲ್ಲಿ ಕುಳ್ಳಿರಿಸಿ ಅಭಿಷೇಕಮಾಡಿದುದನ್ನು ನೋಡಿದನು.

**ದೀಪ್ತಾಮೇಕಾಂ ಚ ಸಜ್ಜ್ವಾಲಾಂ ಕ್ಷೀಯಮಾಣಾಮನುಕ್ಷಣಮ್ ।**
**ಕ್ಷಣಪ್ರಭಾಮಿವಾಲೋಲಾಮಪಶ್ಯತ್ಕ್ಷಣದಾಕ್ಷಯೇ ॥ ೨೧೫ ॥**

ಪ್ರತಿಸಮಯದಲ್ಲಿಯೂ ಕ್ಷಯಿಸುತ್ತಿರುವುದೂ ಮಿಂಚಿನಂತೆ ಚಂಚಲವೂ ಪ್ರಕಾಶಮಾನವೂ ಆದ ಒಂದು ಅಗ್ನಿಜ್ವಾಲೆಯನ್ನು ಬೆಳಗಿನ ಝಾವದಲ್ಲಿ ನೋಡಿದನು. ಈ ಎರಡು ಸ್ವಪ್ನಗಳನ್ನೂ ಬೆಳಗಿನ ಝಾವದಲ್ಲಿ ನೋಡಿದನೆಂದು ಭಾವವು.

**ದೃಷ್ಟ್ವಾ ಸ್ವಪ್ನಾವಿತಿ ಸ್ಪಷ್ಟಂ ತ್ವಾಮೇವ ಪ್ರತಿಪಾಲಯನ್ ।**
**ಆಸ್ತೇ ತಸ್ಮಾತ್ತ್ವಮಾಶ್ವೇವ ಗತ್ವೈನಂ ಪ್ರತಿಬೋಧಯ ॥ ೨೧೬ ॥**

ಹೀಗೆ ಎರಡು ಸ್ವಪ್ನಗಳನ್ನು ಸ್ಪಷ್ಟವಾಗಿ ನೋಡಿ ನಿನ್ನನ್ನೇ ಎದುರು ನೋಡುತ್ತಿದ್ದಾನೆ. ಆದುದರಿಂದ ಶೀಘ್ರವಾಗಿ ನೀನು ಹೋಗಿ ಈ ಮಹಾಬಲನಿಗೆ ಬೋಧಿಸು.

**ಸ್ವಪ್ನದ್ವಯಮದಃಪೂರ್ವಂ ತ್ವತ್ತಃ ಶ್ರುತ್ವಾತಿವಿಸ್ಮಿತಃ ।**
**ಪ್ರೀತೋ ಭವದ್ವಚಃ ಕೃತ್ಸ್ನಂ ಸ ಕರಿಷ್ಯತ್ಯಸಂಶಯಮ್ ॥ ೨೧೭ ॥**

ಈ ಎರಡು ಸ್ವಪ್ನಗಳನ್ನು ಮೊದಲು ನಿನ್ನಿಂದ ಕೇಳಿ ಬಹಳ ಆಶ್ಚರ್ಯವುಳ್ಳವನೂ ಪ್ರೀತಿಯುಳ್ಳವನೂ ಆಗಿ ಮಹಾಬಲನು ನಿನ್ನ ವಚನವನ್ನೆಲ್ಲ ನಿಃಸಂಶಯವನ್ನಾಗಿ ಮಾಡುವನು. ಈ ಸ್ವಪ್ನಗಳನ್ನು ಮಹಾಬಲನು ತಿಳಿಸುವುದಕ್ಕಿಂತ ಮೊದಲು ಸ್ವಯಂಬುದ್ಧನು ತಿಳಿಸಬೇಕೆಂದೂ ಇದರಿಂದ ಮಹಾಬಲನು ಸಂತುಷ್ಟನಾಗಿ ಆತನ ಮಾತನ್ನೆಲ್ಲ ನಂಬುವನೆಂದೂ ತಾತ್ಪರ್ಯವು.

**ತೃಷಿತಃ ಪಯಸೀವಾಬ್ದಾತ್ಪತಿತೇ ಚಾತಕೋಽಧಿಕಮ್ ।**
**ಜನುಷಾಂಧ ಇವಾನಂಧಂಕರಣೇ ಪರಮೌಷಧೇ ॥ ೨೧೮ ॥**

**ರುಚಿಮೇಷ್ಯತಿ ಸದ್ಧರ್ಮೇ ತ್ವತ್ತಃ ಸೋಽದ್ಯ ಪ್ರಬುದ್ಧಧೀಃ ।**
**ದೂತ್ಯೇವ ಮುಕ್ತಿಕಾಮಿನ್ಯಾಃ ಕಾಲಲಬ್ಧ್ಯಾ ಪ್ರಚೋದಿತಃ ॥ ೨೧೯ ॥**

ಬಾಯಾರಿದ ಚಾತಕಪಕ್ಷಿಯು ಮೇಘದಿಂದ ಬಿದ್ದ ನೀರಿನಲ್ಲಿ ಬಹಳವಾಗಿ ಪ್ರೀತಿಯನ್ನು ಹೊಂದುವಂತೆಯೂ ಜನ್ಮದಿಂದಲೇ ಕುರುಡನಾದ ಮನುಷ್ಯನು ಅಂಧತ್ವವನ್ನು ಹೋಗಲಾಡಿಸುವ ಉತ್ತಮವಾದ ಔಷಧದಲ್ಲಿ ಪ್ರೀತಿಯನ್ನು ಹೊಂದುವಂತೆಯೂ ಆ ಮಹಾಬಲನು ಈ ದಿನ ನಿನ್ನಿಂದ ಎಚ್ಚತ್ತವನೂ (ತತ್ತ್ವವನ್ನರಿತವನೂ) ಮೋಕ್ಷಲಕ್ಷ್ಮಿಯ ದೂತಿಯಿಂದಲೋ ಎಂಬಂತೆ,

೧ ಮಹಾಬಲಃ. ೨ ಪುತ್ರತ್ವಂ. ೩ ನಿಂದನ್. ೪ ನಾಮಕಂ. ೫ ಊರ್ಧ್ವದೃಷ್ಟಿಃ.

ಕಾಲಲಬ್ಧಿಯಿಂದ ಪ್ರೇರಿತನೂ ಆಗಿ ಧರ್ಮದಲ್ಲಿ ಪ್ರೀತಿಯನ್ನು ಹೊಂದುವನು. ಧರ್ಮವನ್ನು ಪ್ರೀತಿಸುವನೆಂದರ್ಥವು.

**ವಿದ್ಧಿ ತದ್ಭಾವಿಪುಣ್ಯರ್ದ್ಧಿಪಿಶುನಂ ಸ್ವಪ್ನಮಾದಿಮಮ್ ।**
**ದ್ವಿತೀಯಂ ಚ ತದೀಯಾಯುರತಿಹ್ರಾಸನಿವೇದಕಮ್ ॥ ೨೨೦ ॥**

ಎಲೈ ಸ್ವಯಂಬುದ್ಧನೇ ! ಮಹಾಬಲನು ಕಂಡ ಮೊದಲನೆಯ ಸ್ವಪ್ನವು ಮುಂದೆ ಅವನಿಗುಂಟಾಗುವ ಪುಣ್ಯವನ್ನೂ ಸಂಪತ್ತನ್ನೂ ಸೂಚಿಸುವುದೆಂದೂ ಎರಡನೆಯ ಸ್ವಪ್ನವು ಅವನ ಆಯುಷ್ಯವು ಬಹಳ ಸ್ವಲ್ಪವುಳಿದಿದೆಯೆಂಬುದನ್ನು ಸೂಚಿಸುವುದೆಂದೂ ತಿಳಿ.

**ಮಾಸಮಾತ್ರಾವಶಿಷ್ಟಂ ಚ ಜೀವಿತಂ ತಸ್ಯ ನಿಶ್ಚಿನು ।**
**ತದಸ್ಯ ಶ್ರೇಯಸೇ ಭದ್ರ [೧]ಘಟೇಥಾಸ್ತ್ವ[೨]ಮಶೀತಕಃ ॥ ೨೨೧ ॥**

ಎಲೈ ಮಂಗಳಾಂಗನೇ ! ಆ ಮಹಾಬಲನ ಆಯುಷ್ಯವು ಇನ್ನು ಒಂದು ತಿಂಗಳು ಉಳಿದಿದೆಯೆಂದು ದೃಢವಾಗಿ ನಂಬು. ಆದುದರಿಂದ ಈ ಮಹಾಬಲನ ಶ್ರೇಯಸ್ಸಿಗೋಸ್ಕರ ಆಲಸ್ಯರಹಿತನಾಗಿ ಪ್ರಯತ್ನಿಸು''.

**ಇತ್ಯುದೀರ್ಯ ತತೋಽಂ[೩]ತರ್ಧಿಮಗಾತ್ಸೋಽಂಬರಚಾರಣಃ ।**
**ಸಮಂ ಸಧರ್ಮಣಾದಿತ್ಯಗತಿರಾಶಾಸ್ಯ ಮಂತ್ರಿಣಮ್ ॥ ೨೨೨ ॥**

ಈ ಪ್ರಕಾರವಾಗಿ ಹೇಳಿದನಂತರ ಆಕಾಶಚಾರಣರಾದ ಆದಿತ್ಯಗತಿಮುನಿಗಳು ಸ್ವಯಂಬುದ್ಧನನ್ನು ಆಶೀರ್ವದಿಸಿ ತಮ್ಮ ಸಮಾನಧರ್ಮಿಗಳಾದ ಅರಿಂಜಯ ಮುನಿಗಳೊಡನೆ ಅಂತರ್ಧಾನವನ್ನು ಹೊಂದಿದರು.

**ಸ್ವಯಂಬುದ್ಧೋಽಪಿ ತದ್ವಾಕ್ಯಶ್ರವಣಾತ್ಕಿಂಚಿದಾಕುಲಃ ।**
**ದ್ರುತಂ ಪ್ರತ್ಯಾವೃತತ್ತಸ್ಯ ಪ್ರತಿಬೋಧವಿಧಾಯಕಃ ॥ ೨೨೩ ॥**

ಸ್ವಯಂಬುದ್ಧನೂ ಮಹಾಬಲನ ಮರಣಸೂಚಕವಾದ ಆ ಮಾತಿನಿಂದ ಸ್ವಲ್ಪ ಖೇದವುಳ್ಳವನಾಗಿ ಮಹಾಬಲನಿಗೆ ಬೋಧಿಸುವುದಕ್ಕೋಸ್ಕರ ಹಿಂದಿರುಗಿದನು.

**ಸತ್ವರಂ ಚ ಸಮಾಸಾದ್ಯ ಸ ತಂ ದೃಷ್ಟ್ವಾ ಮಹಾಬಲಮ್ ।**
**ಚಾರಣರ್ಷಿವಚೋಽಶೇಷಮಾಖ್ಯತ್ಸ್ವಪ್ನಫಲಾವಧಿ ॥ ೨೨೪ ॥**

ಆ ಸ್ವಯಂಬುದ್ಧನು ಶೀಘ್ರವಾಗಿ ಮಹಾಬಲನ ಬಳಿಗೆ ಹೋಗಿ ಅವನನ್ನು ನೋಡಿ ಸ್ವಪ್ನಫಲಗಳವರೆಗೆ ಚಾರಣಮುನಿಗಳು ಹೇಳಿದ ಮಾತನ್ನೆಲ್ಲ ಹೇಳಿದನು.

**[೪]ಹಂತ ದುಃಖಾನುಬಂಧಾನಾಂ [೫]ಹಂತಾ ಧರ್ಮೋ ಜಿನೋದಿತಃ ।**
**ತಸ್ಮಾತ್ತಸ್ಮಿನ್ಮತಿಂ ಧತ್ಸ್ವ ಮತಿಮನ್ನಿತಿ ಚಾನ್ವಶಾತ್ ॥ ೨೨೫ ॥**

"ಎಲೈ ಬುದ್ಧಿಶಾಲಿಯಾದ ಮಹಾಬಲನೇ ! ಜಿನೇಶ್ವರರಿಂದ ಹೇಳಲ್ಪಟ್ಟ ಧರ್ಮವು ದುಃಖಸಂಬಂಧಗಳನ್ನು ನಾಶಮಾಡುವುದಾಗಿದೆಯೆಂಬುದು ಹರ್ಷ ವಿಷಯವಾಗಿದೆ. ಆದುದರಿಂದ ಅಂತಹ ಧರ್ಮದಲ್ಲಿ ಬುದ್ಧಿಯನ್ನಿಡು'' ಎಂಬುದಾಗಿ ಸ್ವಯಂಬುದ್ಧನು ಬೋಧಿಸಿದನು.

**ತತಃ ಸ್ವಾಯುಃಕ್ಷಯಂ ಬುಧ್ವಾ ಸ್ವಯಂಬುದ್ಧಾನ್ಮಹಾಬಲಃ ।**
**ತನುತ್ಯಾಗೇ ಮತಿಂ ಧೀಮಾನಧತ್ತ ವಿಧಿವತ್ತದಾ ॥ ೨೨೬ ॥**

ಅನಂತರದಲ್ಲಿ ಬುದ್ಧಿಶಾಲಿಯಾದ ಮಹಾಬಲನು ಸ್ವಯಂಬುದ್ಧನಿಂದ ತನ್ನ ಆಯುಷ್ಯಕ್ಷಯವನ್ನು ತಿಳಿದು, ಆಗ ಶಾಸ್ತ್ರೋಕ್ತವಾದ ಸಲ್ಲೇಖನಾ ವಿಧಿಗನುಸಾರವಾಗಿ ಶರೀರವನ್ನು ಪರಿತ್ಯಾಗಮಾಡಬೇಕೆಂದು ಯೋಚಿಸಿದನು.

೧ ಪ್ರಯತ್ನಂ ಕುರು. ೨ ಅನಾಲಸ್ಯಃ. ೩ ತಿರೋಧಾನಂ. ೪ ಹಂತ ಹರ್ಷೇಽನುಕಂಪಾಯಾಮಿತ್ಯಮರಃ, ಅತ್ರ ಹರ್ಷಾರ್ಥಃ. ೫ ಘಾತಕಃ.

**ಕೃತ್ವಾಷ್ಟಾಹ್ನಿಕಮಿದ್ಧರ್ಧ್ದಿರ್ಮಹಾಮಹಮ[೧]ಹಾಪಯತ್ ।**
**ದಿವಸಾನ್ಸ್ವಗೃಹೋದ್ಯಾನಜಿನವೇಶ್ಮನಿ ಭಕ್ತಿತಃ ॥ ೨೨೭ ॥**

ಸಮೃದ್ಧಿಶಾಲಿಯಾದ ಮಹಾಬಲನು ಅಷ್ಟಾಹ್ನಿಕ ಮಹಾಪೂಜೆಯನ್ನು ತನ್ನ ಮನೆಯ ಉದ್ಯಾನದಲ್ಲಿರುವ ಜಿನಮಂದಿರದಲ್ಲಿ ಭಕ್ತಿಯಿಂದ ಮಾಡಿ ದಿವಸಗಳನ್ನು ಕಳೆಯುತ್ತಿದ್ದನು.

**ಸುತಾಯಾತಿಬಲಾಖ್ಯಾಯ ದತ್ವಾ ರಾಜ್ಯಂ ಸಮೃದ್ಧಿಮತ್ ।**
**ಸರ್ವಾನಾಪೃಚ್ಛ್ಯ ಮಂತ್ರ್ಯಾದೀನ್ಪರಂ ಸ್ವಾತಂತ್ರ್ಯಮಾಶ್ರಿತಃ ॥ ೨೨೮ ॥**

ಅತಿಬಲನೆಂಬ ಮಗನಿಗೆ ಐಶ್ವರ್ಯಸಂಪನ್ನವಾದ ತನ್ನ ರಾಜ್ಯವನ್ನು ಕೊಟ್ಟು ಮಂತ್ರಿ ಮೊದಲಾದವರನ್ನೆಲ್ಲ ಕೇಳಿಕೊಂಡು ಮಹಾಬಲನು ಪರಮಸ್ವಾತಂತ್ರ್ಯವನ್ನು ಹೊಂದಿದನು.

**ಸಿದ್ಧಕೂಟಮುಪೇತ್ಯಾಶು ಪರಾರ್ಧ್ಯಂ ಜಿನಮಂದಿರಮ್ ।**
**ಸಿದ್ಧಾರ್ಚಾಸ್ತತ್ರ ಸಂಪೂಜ್ಯ ಸ [೨]ಸನ್ಯಾಸ್ಥದ[೩]ಸಾಧ್ವಸಃ ॥ ೨೨೯ ॥**

ಆಮೇಲೆ ಮಹಾಬಲನು ಶೀಘ್ರವಾಗಿ ಸಿದ್ಧಕೂಟಜಿನಚೈತ್ಯಾಲಯಕ್ಕೆ ಹೋಗಿ ಅಲ್ಲಿ ಸಿದ್ಧಪ್ರತಿಮೆಗಳನ್ನು ಪೂಜಿಸಿ ನಿರ್ಭಯನಾಗಿ ಸನ್ಯಾಸವನ್ನು ಮಾಡಿದನು.

**ಯಾವಜ್ಜೀವಂ ಕೃತಾಹಾರಶರೀರತ್ಯಾಗ[೪]ಸಂಗರಃ ।**
**ಗುರುಸಾಕ್ಷಿ[೫]ಸಮಾರುಕ್ಷದ್ವೀ[೬]ರಶಯ್ಯಾಮಮೂಢಧೀಃ ॥ ೨೩೦ ॥**

ಬುದ್ಧಿಶಾಲಿಯಾದ ಆ ಮಹಾಬಲನು ಗುರುಸಾಕ್ಷಿಪೂರ್ವಕವಾಗಿ ಜನ್ಮ ಪರಿಯಂತ ಆಹಾರಶರೀರಗಳಲ್ಲಿ ಮಮತೆಯನ್ನು ಪರಿತ್ಯಾಗಮಾಡುವ ಪ್ರತಿಜ್ಞೆಯನ್ನು ಮಾಡಿ ವೀರಶಯ್ಯೆ(ಒಂದು ಪಾರ್ಶ್ವದಲ್ಲಿ ಮಲಗುವಿಕೆ)ಯನ್ನು ಹೊಂದಿದನು.

**ಆರುಹ್ಯಾರಾಧನಾನಾವಂ ತಿತೀರ್ಷುರ್ಭವಸಾಗರಮ್ ।**
**[೭]ನಿರ್ಯಾಪಕಂ ಸ್ವಯಂಬುದ್ಧಂ ಬಹುಮೇನೇ ಮಹಾಬಲಃ ॥ ೨೩೧ ॥**

ಮಹಾಬಲನು ಜ್ಞಾನಾರಾಧನೆ ಮೊದಲಾದ ಆರಾಧನೆಗಳೆಂಬ ಹಡಗನ್ನು ಹತ್ತಿ ಸಂಸಾರವೆಂಬ ಸಮುದ್ರವನ್ನು ದಾಟಬೇಕೆಂಬ ಇಚ್ಛೆಯುಳ್ಳವನಾಗಿ ಸ್ವಯಂಬುದ್ಧನನ್ನು ನಾವಿಕನನ್ನಾಗಿ ತಿಳಿದು ಗೌರವಿಸಿದನು.

**ಸರ್ವತ್ರ ಸಮತಾಂ ಮೈತ್ರೀ[೮]ಮನೌತ್ಸುಕ್ಯಂ ಚ ಭಾವಯನ್ ।**
**ಸೋಽಭೂನ್ಮುನಿರಿವಾಸಂಗಸ್ತ್ಯಕ್ತಬಾಹ್ಯೇತರೋ[೯]ಪಧಿಃ ॥ ೨೩೨ ॥**

ಆ ಮಹಾಬಲನು ಸುಖದುಃಖಗಳಲ್ಲಿಯೂ ಶತ್ರುಮಿತ್ರರಲ್ಲಿಯೂ ಸಮಾನ ಭಾವವನ್ನೂ ಸಕಲಪ್ರಾಣಿಗಳಲ್ಲಿ ಮಿತ್ರಭಾವವನ್ನೂ ಭೋಗೋಪಭೋಗಗಳಲ್ಲಿ ಉದಾಸೀನಭಾವವನ್ನೂ ಭಾವಿಸುವವನಾಗಿ, ಬಾಹ್ಯಾಭ್ಯಂತರಪರಿಗ್ರಹಗಳನ್ನು ತೊರೆದ ಮುನಿಯಂತೆ, ಪರಿಗ್ರಹರಹಿತನಾದನು.

**ದೇಹಾಹಾರಪರಿತ್ಯಾಗವ್ರತ[೧೦]ಮಾಸ್ಥಾಯ ಧೀರಧೀಃ ।**
**ಪರಮಾರಾಧನಾಶುದ್ಧಿಂ ಸ ಭೇಜೇ ಸುಸಮಾಹಿತಃ ॥ ೨೩೩ ॥**

ಧೈರ್ಯಶಾಲಿಯಾದ ಆ ಮಹಾಬಲನು ಶರೀರಾಹಾರಪರಿತ್ಯಾಗವ್ರತವನ್ನು ಸ್ವೀಕರಿಸಿ ಉತ್ತಮವಾದ ಜ್ಞಾನ, ದರ್ಶನ, ಚಾರಿತ್ರ, ತಪ ಈ ನಾಲ್ಕು ಆರಾಧನೆಗಳನ್ನು ನಿಶ್ಚಲವಾದ ಮನಸ್ಸಿನಿಂದ ಆರಾಧಿಸಿದನು.

೧ ಅನಯತ್. ೨ ಸನ್ಯಾಸಮಕರೋತ್. ೩ ಭಯರಹಿತಃ. ೪ ಪ್ರತಿಜ್ಞಃ. ೫ ಸಮಾರೂಢವಾನ್. ೬ ಏಕಪಾರ್ಶ್ವಶಯನಂ. ೭ ಕರ್ಣಧಾರಂ, ನಿರ್ಯಾಪಕಾಚಾರ್ಯಂ ಸಮಾಧಿಸಾಧನೇ ಮುಖ್ಯಮಿತ್ಯರ್ಥಃ. ೮. ವಿಷಯೇಷ್ವಲಾಂಪಟ್ಯಂ. ೯ ಪರಿಗ್ರಹಃ. ೧೦ ಅಂಗೀಕೃತ್ಯ.

**ಪ್ರಾಯೋಪಗಮನಂ ಕೃತ್ವಾ ಧೀರಃ ಸ್ವಪರಗೋಚರಾನ್ ।**
**ಉಪಕಾರಾನಸೌ ನೈಚ್ಛಚ್ಛರೀರೇ[೧]ನಿಶ್ಚ್ಯುತಾಂ ಗತಃ ॥ ೨೩೪ ॥**

ಧೀರನಾದ ಈ ಮಹಾಬಲನು ಜನ್ಮಪರ್ಯಂತ ಅನ್ನಪಾನಾದಿಗಳನ್ನು ತೊರೆದು ಶರೀರದಲ್ಲಿ ನಿಸ್ಪೃಹನಾಗಿ ಆದರ ಪೋಷಣೆಗೋಸ್ಕರ ತನ್ನ ಉಪಕಾರಗಳನ್ನೂ ಬೇರೆಯವರ ಉಪಕಾರಗಳನ್ನೂ ಅಪೇಕ್ಷಿಸಲಿಲ್ಲವು.

**ತೀವ್ರಂ ತಪಸ್ಯತಸ್ತಸ್ಯ [೨]ತನಿಮಾನಮಗಾತ್ತನುಃ ।**
**ಪರಿಣಾಮಸ್ತ್ವವರ್ಧಿಷ್ಟ ಸ್ಮರತಃ [೩]ಪರಮೇಷ್ಠಿನಾಮ್ ॥ ೨೩೫ ॥**

ಕಠಿನವಾಗಿ ತಪಸ್ಸನ್ನು ಮಾಡುತ್ತಿದ್ದ ಆ ಮಹಾಬಲನ ಶರೀರವು ಕೃಶವಾಗುತ್ತ ಬಂದಿತು. ಪಂಚಪರಮೇಷ್ಠಿಗಳನ್ನು ಸ್ಮರಿಸುತ್ತಿರುವ ಆ ಮಹಾಬಲನ ಪರಿಣಾಮವಾದರೋ ವೃದ್ಧಿಹೊಂದುತ್ತಿದ್ದಿತು.

**[೪]ಅನಾಶುಷೋಽಸ್ಯ ಗಾತ್ರಾಣಾಂ ಪರಂ ಶಿಥಿಲತಾಭವತ್ ।**
**[೫]ನಾರೂಢಾಯಾಃ ಪ್ರತಿಜ್ಞಾಯಾ ವ್ರತಂ ಹಿ ಮಹತಾಮಿದಮ್ ॥**

ಈ ಮಹಾಬಲನು ಆಹಾರವನ್ನು ಪರಿತ್ಯಾಗಮಾಡಿದುದರಿಂದ ಶರೀರವೆಲ್ಲ ಶಿಥಿಲವಾಯಿತು. ಅವನು ಮಾಡಿದ ಪ್ರತಿಜ್ಞೆಯು ಮಾತ್ರ ಶಿಥಿಲವಾಗಲಿಲ್ಲ. ಇದಲ್ಲವೆ ಮಹಾತ್ಮರ ವ್ರತವೆಂಬುದು ?

**ಶರದ್ಘನ ಇವಾರೂಢಕಾರ್ಶ್ಯೋಽಭೂತ್ಸ [೬]ರಸಕ್ಷಯಾತ್ ।**
**ಮಾಂಸಾ[೭]ಸೃಜವಿಯುಕ್ತಂ ಹಿ ದೇಹಂ ಸುರ ಇವಾ[೮]ಬಿಭಃ ॥ ೨೩೭ ॥**

ರಕ್ತವು ಒಣಗಿಹೋದ ಆ ಮಹಾಬಲನು, ಶರತ್ಕಾಲದ ಮೇಘದಂತೆ ಕೃಶನಾದನು. ಆದುದರಿಂದ, ದೇವನು ಸಪ್ತಧಾತುರಹಿತವಾದ ಶರೀರವನ್ನು ಧರಿಸುವಂತೆ, ಆ ಮಹಾಬಲನು ರಕ್ತಮಾಂಸರಹಿತವಾದ ಶರೀರವನ್ನು ಧರಿಸಿದನು. ಶರೀರವು ಬಹಳ ಕೃಶವಾಯಿತೆಂದು ಭಾವವು.

**ಗೃಹೀತಮರಣಾರಂಭವ್ರತಂ ತಂ ವೀಕ್ಷ್ಯ ಚಕ್ಷುಷೀ ।**
**ಶುಚೇವ ಕ್ವಾಪಿ [೯]ಸಂಲೀನೇ ಪ್ರಾಗ್ವಿಲಾಸಾದ್ವಿರೇಮತುಃ ॥ ೨೩೮ ॥**

ಮಹಾಬಲನು ಸಲ್ಲೇಖನಾವ್ರತವನ್ನು ಧಾರಣೆಮಾಡಿ ಮರಣೋನ್ಮುಖನಾದುದನ್ನು ನೋಡಿ ಅವನ ಕಣ್ಣುಗಳೆರಡು, ದುಃಖದಿಂದಲೋ ಎಂಬಂತೆ, ಎಲ್ಲಿಯೋ ಮರೆಯಾಗಿ ಮೊದಲಿನ ಹಾವಭಾವವಿಲಾಸಗಳನ್ನು ಪರಿತ್ಯಜಿಸಿದುವು.

**ಕಪೋಲಾವಸ್ಯ ಸಂಶುಷ್ಕದಸೃಙ್ಮಾಂಸತ್ವಚಾವಪಿ ।**
**ಗೂಢೌ [೧೦]ಕಾಂತ್ಯಾನಪಾಯಿನ್ಯಾ [೧೧]ನೌಜ್ಝಿಷ್ಟಾಂ ಪ್ರಾಕ್ತನೀಂ ಶ್ರಿಯಮ್ ॥**

ರಕ್ತಮಾಂಸಚರ್ಮಗಳು ಒಣಗಿಹೋದುದರಿಂದ ಈ ಮಹಾಬಲನ ಕೆನ್ನೆಗಳು ಹಳ್ಳವಾಗಿದ್ದರೂ ಕಾಂತಿಯು ನಾಶವಾಗದಿದ್ದುದರಿಂದ ಮೊದಲಿನ ಶೋಭೆಯು ಕಡಿಮೆಯಾಗಲಿಲ್ಲ.

**ನಿತಾಂತಪೀವರಾವಂಸೌ ಕೇಯೂರಕಿಣಕರ್ಕಶೌ ।**
**ತದಾಸ್ಯೋಜ್ಝಿತಕಾಠಿನ್ಯೌ ಮೃದಿಮಾನಮುಪೇಯತುಃ ॥ ೨೪೦ ॥**

ಬಹಳ ಪುಷ್ಟಿಯೂ ಬಾಜೂಬಂದಿನಿಂದ ಜಡ್ಡುಕಟ್ಟಿ ಕಠಿನವೂ ಆದ ಈ ಮಹಾಬಲನ ಭುಜಗಳು ಆಗ ಕಾಠಿನ್ಯವನ್ನು ಬಿಟ್ಟು ಮಾರ್ದವವನ್ನು ಹೊಂದಿದುವು.

೧ ನಿಸ್ಪೃಹತ್ವಂ. ೨ ಕೃಶತ್ವಂ. ೩ ಸ್ಮೃತ್ಯರ್ಥೇತ್ಯಾದಿನಾ ಕರ್ಮಣಿ ಷಷ್ಠೀ. ೪ ಅನಶನವ್ರತಸ್ಯ ಸಾಂತೋಙಸ್. ೫ ಆರೂಢಾಯಾಃ ಪ್ರತಿಜ್ಞಾಯಾಃ ಶಿಥಿಲತಾ ನಾಭವದಿತಿ ಸಂಬಂಧಃ. ೬ ಧಾತುಕ್ಷಯಾತ್. ೭ ಅಸೃಜ್ ಶಬ್ದೋ ಜಾಂತೋಽಪಿ ಸಮಾಸವಶಾದದಂತಃ. ೮ ಬಿಭರ್ತಿ ಸ್ಮ. ೯ ಅಂತರ್ಹಿತೋ ಭೂತ್ವೇರ್ಥಃ. ೧೦ ಅನೇನ ಮನಃಕ್ಲೇಶಾಭಾವೋ ವ್ಯಜ್ಯತೇ. ೧೧ ನ ತ್ಯಜತಃ ಸ್ಮ.

**[೧]ಆಭುಗ್ನಮುದರಂ ಚಾಸ್ಯ [೨]ವಿವಲೀ[೩]ಭಂಗಸಂಗಮಮ್ ।**
**ನಿವಾತನಿಸ್ತರಂಗಾಂಬುಸರಃ ಶುಷ್ಯದಿವಾಭವತ್ ॥ ೨೪೧ ॥**

ತ್ರಿವಲಿಗಳೆಂಬ ತೆರೆಮಾಲೆಗಳ ಸಂಬಂಧವಿಲ್ಲದಿರುವ ಈ ಮಹಾಬಲನ ಸ್ವಲ್ಪವಕ್ರವಾಗಿರುವ ಹೊಟ್ಟೆಯು, ಗಾಳಿಯಿಲ್ಲದಿರುವುದರಿಂದ ತೆರೆಮಾಲೆಗಳಿಲ್ಲದ ನೀರುಳ್ಳುದೂ ಒಣಗುತ್ತಿರುವುದೂ ಆದ ಸರೋವರದಂತೆ, ಇದ್ದಿತು.

**ತಪ[೪]ಸ್ತನೂನಪಾತ್ತಾಪಾದ್ದಿದೀಪೇಧಿಕಮೇವ ಸಃ ।**
**ಕನಕಾಶ್ಮ ಇವಾ[೫]ಧ್ಮಾತಃ ಪರಾಂ ಶುದ್ಧಿಂ ಸಮುದ್ವಹನ್ ॥ ೨೪೨ ॥**

ಆ ಮಹಾಬಲನು ತಪಸ್ಸೆಂಬ ಬೆಂಕಿಯ ತಾಪದಿಂದ, ಅಗ್ನಿಯಿಂದ ಕಾಯಿಸಿದ ಬಂಗಾರವುಳ್ಳ ಕಲ್ಲಿನಂತೆ, ಪರಮಶುದ್ಧಿಯನ್ನು ಹೊಂದಿ ಅಧಿಕವಾಗಿ ಪ್ರಕಾಶಿಸಿದನು.

**ಅಸಹ್ಯಂ ತನುಸಂತಾಪಂ ಸಹಮಾನಸ್ಯ ಹೇಲಯಾ ।**
**ಯಯುಃ ಪರೀಷಹಾ ಭಂಗಮಭಂಗಸ್ಯಾಸ್ಯ [೬]ಸಂಗರೇ ॥ ೨೪೩ ॥**

ಸಹಿಸುವುದಕ್ಕೆ ಅಶಕ್ಯವಾದ ಶರೀರಸಂತಾಪವನ್ನು ಲೀಲಾಮಾತ್ರದಿಂದ ಸಹಿಸುತ್ತಿರುವವನೂ ಪ್ರತಿಜ್ಞೆಯಲ್ಲಿಯೂ ಯುದ್ಧದಲ್ಲಿಯೂ ಸೋಲದಿರುವವನೂ ಆದ ಈ ಮಹಾಬಲನಿಗೆ ಪರೀಷಹ(ಬಾಧೆ)ಗಳು ಸೋತುಹೋದುವು. ಮಹಾಬಲನು ಇಪ್ಪತ್ತೆರಡು ಪರೀಷಹಗಳನ್ನು ಜಯಿಸಿದನೆಂದು ಭಾವವು.

**ತ್ವಗಸ್ಥಿಭೂತದೇಹೋಽಪಿ ಯದ್ವ್ಯಜೇಷ್ಟ ಪರೀಷಹಾನ್ ।**
**ಸ್ವಸಮಾಧಿಬಲಾದ್ವ್ಯಕ್ತಂ ಸ ತದಾಸೀನ್ಮಹಾಬಲಃ ॥ ೨೪೪ ॥**

ಆ ಮಹಾಬಲನ ದೇಹದಲ್ಲಿ ಚರ್ಮ ಮೂಳೆಮಾತ್ರವುಳಿದಿದ್ದರೂ ತನ್ನ ಧ್ಯಾನಸಾಮರ್ಥ್ಯದಿಂದ ಪರೀಷಹಗಳನ್ನು ಜಯಿಸಿದನು. ಆದುದರಿಂದ ಅವನಿಗೆ ಮಹಾಬಲನೆಂಬ ಹೆಸರು ಸಾರ್ಥಕವಾಗಿದ್ದಿತು.

**ಮೂರ್ಧ್ನಿ ಲೋಕೋತ್ತಮಾನ್ಸಿದ್ಧಾನ್ಸ್ಥಾಪಯನ್ಹೃದಯೇಽರ್ಹತಃ ।**
**ಶಿರಃಕವಚಮಸ್ತ್ರಂ ಚ ಸ ಚಕ್ರೇ ಸಾಧುಭಿಸ್ತ್ರಿಭಿಃ ॥ ೨೪೫ ॥**

ಆ ಮಹಾಬಲನು ಲೋಕೋತ್ಕೃಷ್ಟರಾದ ಸಿದ್ಧಪರಮೇಷ್ಠಿಗಳನ್ನು ಮಸ್ತಕದಲ್ಲಿಯೂ ಅರ್ಹತ್ಪರಮೇಷ್ಠಿಗಳನ್ನು ಹೃದಯದಲ್ಲಿಯೂ ಸ್ಥಾಪಿಸಿ, ಆಚಾರ್ಯ ಪರಮೇಷ್ಠಿಗಳನ್ನು ಶಿರೋರಕ್ಷಕರನ್ನಾಗಿಯೂ ಉಪಾಧ್ಯಾಯ ಪರಮೇಷ್ಠಿಗಳನ್ನು ಕವಚವನ್ನಾಗಿಯೂ ಸರ್ವಸಾಧುಪರಮೇಷ್ಠಿಗಳನ್ನು ಅಸ್ತ್ರವನ್ನಾಗಿಯೂ ಮಾಡಿದನು.

**ಚಕ್ಷುಷೀ ಪರಮಾತ್ಮಾನಮದ್ರಾಷ್ಟಾಮಸ್ಯ [೭]ಯೋಗತಃ ।**
**ಅಶ್ರೌಷ್ಟಾಂ ಪರಮಂ ಮಂತ್ರಂ ಶ್ರೋತ್ರೇ ಜಿಹ್ವಾ ತಮಾಪಠತ್ ॥**

ಈ ಮಹಾಬಲನ ಕಣ್ಣುಗಳು ಧ್ಯಾನದಿಂದ ಪರಮಾತ್ಮನನ್ನು ನೋಡುತ್ತಿದ್ದುವು. ಕಿವಿಗಳು ಶ್ರೇಷ್ಠವಾದ ಪಂಚನಮಸ್ಕಾರಮಂತ್ರವನ್ನು ಕೇಳುತ್ತಿದ್ದುವು. ನಾಲಗೆಯು ಪಂಚನಮಸ್ಕಾರಮಂತ್ರವನ್ನು ಪಠನೆಮಾಡುತ್ತಿದ್ದಿತು.

**ಮನೋಗರ್ಭಗೃಹೇಽರ್ಹಂತಂ ವಿಧಾಯಾಸೌ ನಿರಂಜನಮ್ ।**
**ಪ್ರದೀಪ ಇವ ನಿರ್ಧೂತ[೮]ಧ್ವಾಂತೋಽಭೂದ್ಧ್ಯಾನತೇಜಸಾ ॥ ೨೪೭ ॥**

ಈ ಮಹಾಬಲನು ಕರ್ಮಕಲಂಕರಹಿತರಾದ ಅರಹಂತರನ್ನು ತನ್ನ ಮನಸ್ಸೆಂಬ ಗರ್ಭಗೃಹದಲ್ಲಿ ಸ್ಥಾಪಿಸಿ, ಕತ್ತಲೆಯನ್ನು ಹೋಗಲಾಡಿಸುವ ದೀಪದಂತೆ, ಧ್ಯಾನವೆಂಬ ತೇಜಸ್ಸಿನಿಂದ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸಿಕೊಂಡನು.

೧ ಈಷದ್ವಕ್ರಂ. ೨ ವಿಗತಃ. ೩ ತರಂಗಾಃ. ೪ ಅಗ್ನಿಃ. ೫ ಅಗ್ನಿಸಂಯೋಗಃ. ೬ ಪ್ರತಿಜ್ಞಾಯಾಂ ಯುದ್ಧೇ ಚೇತಿ ಧ್ವನಿಃ. ೭ ಧ್ಯಾನತಃ. ೮ ಅಂಧಕಾರೋ ಜ್ಞಾನಂ ಚ.

**ದ್ವಾವಿಂಶತಿ [೧]ದಿನಾನ್ಯೇಷ ಕೃತಸಲ್ಲೇಖನಾವಿಧಿಃ ।**
**ಜೀವಿತಾಂತೇ [೨]ಸಮಾಧಾಯ ಮನಃ ಸ್ವಂ ಪರಮೇಷ್ಠಿಷು ॥ ೨೪೮ ॥**

**ನಮಸ್ಕಾರಪದಾನ್ಯಂತರ್ಜಲ್ಪೇನ [೩]ನಿಭೃತಂ ಜಪನ್ ।**
**ಲಲಾಟತಟವಿನ್ಯಸ್ತಹಸ್ತಪಂಕಜಕುಡ್ಮಲಃ ॥ ೨೪೯ ॥**

**ಕೋಶಾದಸೇರಿವಾನ್ಯತ್ವಂ ದೇಹಾಜ್ಜೀವಸ್ಯ ಭಾವಯನ್ ।**
**ಭಾವಿತಾತ್ಮಾ ಸುಖಂ ಪ್ರಾಣಾನೌಜ್ಝತ್ಸ[೪]ನ್ಮಂತ್ರಿಸಾಕ್ಷಿಕಮ್ ॥ ೨೫೦ ॥**

ಇವನು ಇಪ್ಪತ್ತೆರಡು ದಿನಗಳವರೆಗೆ ಸಲ್ಲೇಖನಾವಿಧಿಯನ್ನು ಮಾಡಿ ಮರಣಕಾಲದಲ್ಲಿ ತನ್ನ ಮನಸ್ಸನ್ನು ಪಂಚಪರಮೇಷ್ಠಿಗಳಲ್ಲಿರಿಸಿ, ಪಂಚನಮಸ್ಕಾರ ಮಂತ್ರಗಳನ್ನು ಅಂತರ್ಜಲ್ಪ(ಗಂಟಲೊಳಗಿನ ಉಚ್ಚಾರ)ದಿಂದ ಸ್ಥಿರವಾಗಿ ಜಪಿಸುತ್ತ ಕೈಗಳನ್ನು ಜೋಡಿಸಿ ಹಣೆಯಲ್ಲಿಟ್ಟು, ಒರೆಯಿಂದ ಖಡ್ಗವು ಬೇರೆಯಾಗಿರುವಂತೆ, ಶರೀರದಿಂದ ಜೀವವು ಬೇರೆಯಾಗಿದೆಯೆಂದು ಭಾವಿಸಿ ಸ್ವಯಂಬುದ್ಧಮಂತ್ರಿಯ ಸಮಕ್ಷದಲ್ಲಿ ಸುಖವಾಗಿ ಪ್ರಾಣಗಳನ್ನು ಬಿಟ್ಟನು.

**ಮಂತ್ರಶಕ್ತ್ಯಾ ಯಥಾ ಪೂರ್ವಂ ಸ್ವಯಂಬುದ್ಧೋ ನ್ಯಧಾ[೫]ದ್ಬಲಮ್ ।**
**[೬]ತದಾಪಿ [೭]ಮಂತ್ರಶಕ್ತ್ಯೈವ ಬಲಂ ನ್ಯಾಸ್ಥನ್ಮಹಾಬಲೇ ॥ ೨೫೧ ॥**

ಸ್ವಯಂಬುದ್ಧನು ಮೊದಲು ಮಹಾಬಲನ ರಾಜ್ಯಭಾರಕಾಲದಲ್ಲಿ ಮಂತ್ರ ಶಕ್ತಿಯಿಂದ ಮಹಾಬಲನಲ್ಲಿ ಹೇಗೆ ಪರಾಕ್ರಮವನ್ನು ಉಂಟುಮಾಡಿದ್ದನೋ ಹಾಗೆ ಮರಣಕಾಲದಲ್ಲಿಯೂ ಪಂಚನಮಸ್ಕಾರ ಮಂತ್ರಶಕ್ತಿಯಿಂದಲೇ ಬಲವನ್ನು ಅಂದರೆ ರತ್ನತ್ರಯ ಧರ್ಮದಲ್ಲಿ ದಾರ್ಢ್ಯವನ್ನು ಉಂಟುಮಾಡಿದನು.

**[೮]ಸಾಚಿವ್ಯಂ ಸಚಿವೇನೇತಿ ಕೃತಮಸ್ಯ [೯]ನಿರತ್ಯಯಮ್ ।**
**[೧೦]ತದಾ ಧರ್ಮಸಹಾಯತ್ವಂ ನಿರ್ವ್ಯಪೇಕ್ಷಂ ಪ್ರಕುರ್ವತಾ ॥ ೨೫೨ ॥**

ಹೀಗೆ ಮಹಾಬಲನ ಸಮಾಧಿಮರಣಕಾಲದಲ್ಲಿ ಪ್ರತಿಫಲಾಪೇಕ್ಷೆಯಿಲ್ಲದೆ ಧರ್ಮಸಹಾಯವನ್ನು ಮಾಡುವವನಾದ ಸ್ವಯಂಬುದ್ಧಮಂತ್ರಿಯು ಈ ಮಹಾಬಲನಿಗೆ ನಿರ್ವಿಘ್ನವಾಗಿ ಸಹಾಯ —ಧರ್ಮೋಪದೇಶವನ್ನು ಮಾಡಿದನು.

**ದೇಹಭಾರಮಥೋತ್ಸೃಜ್ಯ ಲಘೂಭೂತ ಇವ ಕ್ಷಣಾತ್ ।**
**ಪ್ರಾಪತ್ಸ ಕಲ್ಪಮೈಶಾನಮನಲ್ಪಸುಖಸನ್ನಿಧಿಮ್ ॥ ೨೫೩ ॥**

ಅನಂತರದಲ್ಲಿ ಆ ಮಹಾಬಲನು ಶರೀರಭಾರವನ್ನು ಬಿಟ್ಟು ಹಗುರವಾದವನಂತೆ, ಅಪರಿಮಿತವಾದ ಸುಖಗಳುಳ್ಳ ಈಶಾನಕಲ್ಪವನ್ನು ಒಂದು ಕ್ಷಣಕಾಲದಲ್ಲಿ ಹೊಂದಿದನು. ಎರಡನೆಯ ಸ್ವರ್ಗದಲ್ಲಿ ಹುಟ್ಟಿದನೆಂದರ್ಥವು.

**ತತ್ರೋಪಪಾದಶಯ್ಯಾಯಾಮುದಪಾದಿ ಮಹೋದಯಃ ।**
**ವಿಮಾನೇ ಶ್ರೀಪ್ರಭೇ ರಮ್ಯೇ ಲಲಿತಾಂಗಃ ಸುರೋತ್ತಮಃ ॥ ೨೫೪ ॥**

ಆ ಕಲ್ಪದಲ್ಲಿ ಮನೋಹರವಾದ ಶ್ರೀಪ್ರಭವೆಂಬ ವಿಮಾನದಲ್ಲಿರುವ ಉಪಪಾದ(ದೇವತೆಗಳು ಹುಟ್ಟುವ ಶಯ್ಯೆ)ದಲ್ಲಿ ಮಹಾಸಂಪನ್ನನಾದ ಲಲಿತಾಂಗನೆಂಬ ದೇವನಾಗಿ ಹುಟ್ಟಿದನು.

**ಯಥಾ ವಿಯತಿ ವೀತಾಭ್ರೇ [೧೧]ಸಾಭ್ರಾ ವಿದ್ಯುದ್ವಿರೋಚತೇ ।**
**ತಥಾ ವೈಕ್ರಿಯಕೀ ದಿವ್ಯಾ ತನುರಸ್ಯಾಚಿರಾದಭಾತ್ ॥ ೨೫೫ ॥**

೧ ಕಾಲಾಧ್ವನೋರತ್ಯಂತಸಂಯೋಗೇ ದ್ವಿತೀಯಾ. ೨ ಏಕಾಗ್ರಂ ಕೃತ್ವಾ. ೩ ಸ್ಥಿರಂ. ೪ ಸ್ವಯಂಬುದ್ಧಃ. ೫ ಪರಾಕ್ರಮಂ. ೬ ಸನ್ನ್ಯಸನಕಾಲೇ. ೭ ಪಂಚಮಂತ್ರಸ್ಯ. ೮ ಸಹಾಯತ್ವಂ. ೯ ನಿರ್ವಿಘ್ನಂ ಯಥಾ ಭವತಿ. ೧೦ ಸಮಾಧಿಸಮಯೇ. ೧೧ ಮೇಘಸಹಿತಾ.

ಅಲ್ಲಿ ಆ ಲಲಿತಾಂಗದೇವನ ವೈಕ್ರಿಯಕದಿವ್ಯಶರೀರವು, ಮೋಡವಿಲ್ಲದಿರುವ ಆಕಾಶದಲ್ಲಿ ಮೇಘದೊಡನೆ ಕೂಡಿರುವ ಮಿಂಚು ಶೀಘ್ರವಾಗಿ ಹೊಳೆಯುವಂತೆ, ತತ್ಕ್ಷಣದಲ್ಲಿ ಪ್ರಕಾಶಿಸಿತು.

**ನವಯೌವನಪೂರ್ಣೋ ನಾ ಸರ್ವಲಕ್ಷಣಸಂಭೃತಃ ।**
**ಸುಪ್ತೋತ್ಥಿತೋ ಯಥಾ ಭಾತಿ ತಥಾ ಸೋಂತರ್ಮುಹೂರ್ತತಃ ॥**

ನವಯೌವನಪರಿಪೂರ್ಣನೂ ಸರ್ವಲಕ್ಷಣಸಂಪನ್ನನೂ ಆದ ಮನುಷ್ಯನು ಮಲಗಿದ್ದು ಎದ್ದರೆ ಹೇಗೆ ಶೋಭಿಸುತ್ತಾನೋ ಹಾಗೆ ಆ ಲಲಿತಾಂಗದೇವನು ಒಂದು ಅಂತರ್ಮುಹೂರ್ತದಲ್ಲಿ ನವಯೌವನಪರಿಪೂರ್ಣನೂ ಸರ್ವಲಕ್ಷಣಸಂಪನ್ನನೂ ಆಗಿ ಶೋಭಿಸಿದನು.

**ಜ್ವಲತ್ಕುಂಡಲಕೇಯೂರಮುಕುಟಾಂಗದಭೂಷಣಃ ।**
**ಸ್ರಗ್ವೀ ಸದಂಶುಕಧರಃ ಪ್ರಾದುರಾಸೀನ್ಮಹಾದ್ಯುತಿಃ ॥ ೨೫೭ ॥**

ಆ ಶಯ್ಯೆಯಲ್ಲಿ ಲಲಿತಾಂಗದೇವನು ದೇದೀಪ್ಯಮಾನವಾದ ಕರ್ಣಕುಂಡಲ ಬಾಜೂಬಂದು ಕಿರೀಟ ಭುಜಕೀರ್ತಿ ಮೊದಲಾದ ಆಭರಣಗಳುಳ್ಳವನೂ ಪುಷ್ಪಮಾಲಿಕೆಗಳುಳ್ಳವನೂ ಒಳ್ಳೆಯ ವಸ್ತ್ರವನ್ನು ಧರಿಸಿದವನೂ ಮಹಾಕಾಂತಿ ಯುಕ್ತನೂ ಆಗಿ ಪ್ರಾದುರ್ಭವಿಸಿದನು.

**ತಸ್ಯ ರೂಪಂ ತದಾ ರೇಜೇ ನಿಮೇಷಾಲಸಲೋಚನಮ್ ।**
**ಝಷದ್ವಯೇನ ನಿಷ್ಕಂಪಸ್ಥಿತೇನೇವ ಸರೋಜಲಮ್ ॥ ೨೫೮ ॥**

ಆಗ, ನಿಶ್ಚಲವಾಗಿರುವ ಎರಡು ಮೀನುಗಳಿಂದ ಕೂಡಿರುವ ಸರೋವರದ ನೀರು ಶೋಭಿಸುವಂತೆ, ರೆಪ್ಪೆಯನ್ನು ಹೊಡೆಯದೆ ನಿಶ್ಚಲವಾಗಿರುವ ಎರಡು ಕಣ್ಣುಗಳುಳ್ಳ ಆ ಲಲಿತಾಂಗದೇವನ ರೂಪವು ಶೋಭಿಸಿದ್ದಿತು.

**ಬಾಹುಶಾಖೋಜ್ಜ್ವಲಂ ಶ್ರೀಮತ್ತಲಪಲ್ಲವಕೋಮಲಮ್ ।**
**ನೇತ್ರಭೃಂಗಂ ವಪುಸ್ತಸ್ಯ ಭೇಜೇ ಕಲ್ಪಾಂಘ್ರಿಪಶ್ರಿಯಮ್ ॥ ೨೫೯ ॥**

ಬಾಹುಗಳೆಂಬ ಕೊಂಬೆಗಳಿಂದ ಶೋಭಿಸುತ್ತಿರುವುದೂ ಅಂಗೈಗಳೆಂಬ ತಳಿರುಗಳಿಂದ ಕೋಮಲವೂ ಕಣ್ಣುಗಳೆಂಬ ಭ್ರಮರಗಳುಳ್ಳುದೂ ಆದ ಆ ಲಲಿತಾಂಗದೇವನ ಶರೀರವು ಕಲ್ಪವೃಕ್ಷದಂತೆ ಶೋಭಿಸುತ್ತಿದ್ದಿತು.

**ಲಲಿತಂ ಲಲಿತಾಂಗಸ್ಯ ದಿವ್ಯಂ ರೂಪಮಯೋನಿಜಮ್ ।**
**ಇತ್ಯೇವ ವರ್ಣನಾಸ್ಯಾಸ್ತು ಕಿಂ ವಾ ವರ್ಣನಯಾನ್ಯಯಾ ॥ ೨೬೦ ॥**

ಸ್ತ್ರೀಪುರುಷಸಂಬಂಧವಿಲ್ಲದೆ ಉಪಪಾದಶಯ್ಯೆಯಲ್ಲಿ ಉತ್ಪನ್ನವಾದ ಲಲಿತಾಂಗದೇವನ ದಿವ್ಯರೂಪವು ಮನೋಹರವಾಗಿದೆ ಯೆಂಬುದೇ ಈ ಶರೀರದ ವರ್ಣನೆಯಾಗಿರಲಿ. ಬೇರೆ ವರ್ಣನೆಯಿಂದೇನು ? ಲಲಿತಾಂಗದೇವನ ರೂಪವನ್ನು ಎಷ್ಟು ವರ್ಣಿಸಿದರೂ ತೀರದೆಂದರ್ಥವು.

**ಪುಷ್ಪವೃಷ್ಟಿಸ್ತದಾಪಪ್ತನ್ಮುಕ್ತಾ ಕಲ್ಪದ್ರುಮೈಃ ಸ್ವಯಮ್ ।**
**ದುಂದುಭಿಸ್ತನಿತಂ ಮಂದ್ರಂ ಜಜೃಂಭೇ ರುದ್ಧದಿಕ್ತಟಮ್ ॥ ೨೬೧ ॥**

ಲಲಿತಾಂಗದೇವನು ಹುಟ್ಟಿದಾಗ ಕಲ್ಪವೃಕ್ಷಗಳಿಂದ ತಾನಾಗಿಯೇ ಪುಷ್ಪವೃಷ್ಟಿಯಾಯಿತು. ಗಂಭೀರವಾದ ಭೇರಿಯ ಶಬ್ದವು ದಿಕ್ಕುಗಳನ್ನು ತಡೆದು ವೃದ್ಧಿ ಹೊಂದಿತು.

**ಮೃದುರಾಧೂತಮಂದಾರನಂದನಾದಾಹರನ್ರಜಃ ।**
**ಸುಗಂಧಿರಾವವೌ ಮಂದಮನಿಲೋಂಬುಕಣಾನ್ಕಿರನ್ ॥ ೨೬೨ ॥**

ಪರಿಮಳವಿಶಿಷ್ಟವಾದ ಮಂದಮಾರುತವು ನೀರಿನ ತುಂತುರುಗಳನ್ನು ಎರಚುತ್ತಲೂ ನಂದನವನದಲ್ಲಿರುವ ಕಲ್ಪವೃಕ್ಷಗಳನ್ನು ಅಳ್ಳಾಡಿಸಿ ಪುಷ್ಪಧೂಳುಗಳನ್ನು ತರುತ್ತಲೂ ಸುಖವಾಗಿ ಬೀಸುತ್ತಿದ್ದಿತು.

**ತತೋಽಸೌ ವಲಿತಾಂ ಕಿಂಚಿದ್ದೃಶಂ ವ್ಯಾಪಾರಯನ್ದಿಶಾಮ್ ।**
**ಸಮಂತಾದಾನಮದ್ದೇವಕೋಟಿದೇಹಪ್ರಭಾಜುಷಾಮ್ ॥ ೨೬೩ ॥**

ಅನಂತರದಲ್ಲಿ ಈ ಲಲಿತಾಂಗದೇವನು ಎಲ್ಲಾ ಕಡೆಗಳಿಂದಲೂ ಬಂದು ನಮಸ್ಕರಿಸುತ್ತಿರುವ ಅನೇಕ ದೇವತೆಗಳ ದೇಹಕಾಂತಿಯಿಂದ ಕೂಡಿರುವ ದಿಕ್ಕುಗಳನ್ನು ಓರೆಗಣ್ಣಿನಿಂದ ಸ್ವಲ್ಪ ನೋಡಿದನು.

**ಅಹೋ ಪರಮಮೈಶ್ವರ್ಯಂ ಕಿಮೇತತ್ ಕೋಽಸ್ಮಿ ಕೇ ತ್ವಿಮೇ ।**
**ಆನಮಂತ್ಯೇತ್ಯ ಮಾಂ ದೂರಾದಿತ್ಯಾಸೀದ್ವಿಸ್ಮಿತಃ ಕ್ಷಣಮ್ ॥ ೨೬೪ ॥**

"ಈ ಉತ್ಕೃಷ್ಟವಾದ ಐಶ್ವರ್ಯವಾವುದು ? ನಾನಾರು ? ನಮಸ್ಕರಿಸುತ್ತಿರುವ ಇವರಾರು ? ಬಂದು ದೂರದಿಂದ ನನ್ನನ್ನು ನಮಸ್ಕರಿಸುತ್ತಾರೆ" ಈ ಪ್ರಕಾರವಾಗಿ ಲಲಿತಾಂಗದೇವನು ಒಂದು ಕ್ಷಣಕಾಲದವರೆಗೆ ಆಶ್ಚರ್ಯಪರವಶನಾದನು.

**ಕ್ವಾಯಾತೋಽಸ್ಮಿ ಕುತೋ ವಾದ್ಯ ಪ್ರಸೀದತಿ ಮೇ ಮನಃ ।**
**ಶಯ್ಯಾತಲಮಿದಂ ಕಸ್ಯ ರಮ್ಯಃ ಕೋಽಯಂ ಮಹಾಶ್ರಮಃ ॥ ೨೬೫ ॥**

"ಎಲ್ಲಿಗೆ ಬಂದೆನು ? ಯಾವಕಾರಣದಿಂದ ಈಗ ನನ್ನ ಮನಸ್ಸು ಪ್ರಸನ್ನವಾಗುತ್ತಿದೆ ? ಈ ಶಯ್ಯೆಯು ಯಾರದಾಗಿದೆ ? ರಮಣೀಯವಾದ ಈ ಆಶ್ರಮವಾವುದು ?".

**ಇತಿ ಚಿಂತಯತಸ್ತಸ್ಯ ಕ್ಷಣಾದವಧಿರುದ್ಯಯೌ ।**
**ತೇನಾಬುದ್ಧ ಸುರಃ ಸರ್ವಂ ಸ್ವಯಂಬುದ್ಧಾದಿವೃತ್ತಕಮ್ ॥ ೨೬೬ ॥**

ಹೀಗೆ ಚಿಂತಿಸುತ್ತಿದ್ದ ಆ ಲಲಿತಾಂಗದೇವನಿಗೆ ತತ್ಕ್ಷಣದಲ್ಲಿಯೇ ಅವಧಿ ಜ್ಞಾನವುಂಟಾಯಿತು. ಆ ಜ್ಞಾನದಿಂದ ದೇವನು ಸ್ವಯಂಬುದ್ಧನು ಮೊದಲುಗೊಂಡು ಸಮಸ್ತವೃತ್ತಾಂತವನ್ನೂ ತಿಳಿದುಕೊಂಡನು.

**ಇದಂ ತಪಃಫಲಂ ದಿವ್ಯಮಯಂ ಸ್ವರ್ಗೋ ಮಹಾದ್ಯುತಿಃ ।**
**ಇಮೇ ದೇವಾಸ್ಸಮುತ್ಸರ್ಪದ್ದೇಹೋದ್ಯೋತಾಃ ಪ್ರಣಾಮಿನಃ ॥ ೨೬೭ ॥**

**ವಿಮಾನಮೇತದುದ್ಭಾಸಿ ಕಲ್ಪಪಾದಪವೇಷ್ಟಿತಮ್ ।**
**ಇಮಾ ಮಂಜುಗಿರೋ ದೇವ್ಯಃ ಶಿಂಜಾನಮಣಿನೂಪುರಾಃ ॥ ೨೬೮ ॥**

**ಅಪ್ಸರಃಪರಿವಾರೋಽಯಮಿತೋ ನೃತ್ಯತಿ ಸಸ್ಮಿತಮ್ ।**
**ಗೀಯತೇ ಕಲಮಾಮಂದ್ರಮಿತಶ್ಚ ಮುರಜಧ್ವನಿಃ ॥ ೨೬೯ ॥**

"ಇದು ಶ್ರೇಷ್ಠವಾದ ತಪಸ್ಸಿನ ಫಲವು. ಇದು ಮಹಾತೇಜೋಮಯವಾದ ಸ್ವರ್ಗವು. ಸುತ್ತಲೂ ಹರಡುತ್ತಿರುವ ದೇಹಕಾಂತಿಯುಳ್ಳವರಾಗಿ ನಮಸ್ಕರಿಸುತ್ತಿರುವ ಇವರು ದೇವತೆಗಳು. ಕಲ್ಪವೃಕ್ಷಗಳಿಂದ ಸುತ್ತಲ್ಪಟ್ಟು ಪ್ರಕಾಶಿಸುತ್ತಿರುವ ಇದು ವಿಮಾನವಾಗಿದೆ. ಶಬ್ದಮಾಡುತ್ತಿರುವ ರತ್ನಖಚಿತವಾದ ಪಾದಕಡಗಗಳುಳ್ಳವರೂ ಮನೋಹರವಾದ ಮಾತುಗಳುಳ್ಳವರೂ ಆದ ಇವರು ದೇವಸ್ತ್ರೀಯರಾಗಿದ್ದಾರೆ. ಈ ಅಪ್ಸರಸ್ತ್ರೀಯರ ಪರಿವಾರವು ನಗುತ್ತ ಈ ಕಡೆಯಲ್ಲಿ ನರ್ತನ ಮಾಡುತ್ತಿದೆ. ಈಕಡೆಯಲ್ಲಿ ಮನೋಹರವೂ ಗಂಭೀರವೂ ಆದ ಮದ್ದಳೆಯ ಶಬ್ದವು ಕೇಳಿಸುತ್ತಿದೆ".

**ಇತಿ ನಿಶ್ಚಿತ್ಯ ತತ್ಸರ್ವಂ ಭವಪ್ರತ್ಯಯತೋಽವಧೇಃ ।**
**ಶಯ್ಯೋತ್ಸಂಗೇ ಸುಖಾಸೀನೋ ನಾನಾರತ್ನಾಂಶುಭಾಸುರೇ ॥ ೨೭೦ ॥**

ಈಪ್ರಕಾರವಾಗಿ ಲಲಿತಾಂಗದೇವನು ಅನೇಕಪ್ರಕಾರವಾದ ರತ್ನಗಳ ಕಾಂತಿಗಳಿಂದ ಪ್ರಕಾಶಮಾನವಾದ ಉಪಪಾದಶಯ್ಯೆಯಲ್ಲಿ ಸುಖವಾಗಿ ಕುಳಿತುಕೊಂಡು ಭವಪ್ರತ್ಯಯಾವಧಿಜ್ಞಾನದಿಂದ ಆ ವಿಷಯಗಳನ್ನೆಲ್ಲ ನಿಶ್ಚಯಿಸಿ ತಿಳಿದುಕೊಂಡನು. ನಾರಕಿಗಳಿಗೂ ದೇವತೆಗಳಿಗೂ ಆಯಾ ಭವಗಳು ಕಾರಣವಾಗಿ ಉಂಟಾಗುವ ಆ ಜ್ಞಾನಕ್ಕೆ ಭವಪ್ರತ್ಯಯಾವಧಿಜ್ಞಾನವೆಂದು ಹೆಸರು. ಈ ದಿವ್ಯಜ್ಞಾನದಿಂದ ಲಲಿತಾಂಗದೇವನು ಎಲ್ಲಾ ವಿಷಯಗಳನ್ನು ತಿಳಿದುಕೊಂಡನೆಂದು ತಾತ್ಪರ್ಯವು.

**ಜಯೇಶ ವಿಜಯಿನ್ನಂದ ನೇತ್ರಾನಂದಿಮಹಾದ್ಯುತೇ ।**
**ವರ್ಧಸ್ವೇತ್ಯು[೧]ದ್ಗಿರೋನಮ್ರಾಸ್ತ[೨]ಮಾಸೀದನ್ದಿವೌಕಸಃ ॥ ೨೭೧ ॥**

ಆಗ ದೇವತೆಗಳು ಬಂದು ಲಲಿತಾಂಗದೇವನಿಗೆ ನಮಸ್ಕರಿಸಿ "ಜಯಶೀಲನಾದ ಸ್ವಾಮಿಯೇ ! ಜಯವಂತನಾಗಿರು. ಸಂತೋಷವುಳ್ಳವನಾಗಿರು. ಕಣ್ಣುಗಳಿಗೆ ಆನಂದವನ್ನುಂಟುಮಾಡುವ ಮಹಾಕಾಂತಿಯುಳ್ಳ ಪ್ರಭುವೇ ! ವೃದ್ಧಿಯನ್ನು ಹೊಂದು" ಈಪ್ರಕಾರವಾಗಿ ಹೇಳಿದರು.

**ಸಪ್ರಶ್ರಯಮಥೋಪೇತ್ಯ ಸ್ವನಿಯೋಗಪ್ರಚೋದಿತಾಃ ।**
**ತೇ ತಂ ವಿಜ್ಞಾಪಯಾಮಾಸುರಿತಿ ಪ್ರಣತಮೌಲಯಃ ॥ ೨೭೨ ॥**

ಆಮೇಲೆ ತಮ್ಮ ನಿಯಮಿತಕಾರ್ಯದಲ್ಲಿ ಪ್ರೇರಿತರಾದ ಆ ದೇವತೆಗಳು ವಿನಯದಿಂದ ಆ ಲಲಿತಾಂಗದೇವನ ಸಮೀಪಕ್ಕೆ ಬಂದು ತಲೆಬಾಗಿಸಿ ಮುಂದೆಹೇಳುವ ರೀತಿಯಾಗಿ ವಿಜ್ಞಾಪಿಸಿಕೊಂಡರು.

**[೩]ಪ್ರತೀಚ್ಛ ಪ್ರಥಮಂ ನಾಥ [೪]ಸಜ್ಜಂ ಮಜ್ಜನಮಂಗಲಮ್ ।**
**ತತಃ ಪೂಜಾಂ ಜಿನೇಂದ್ರಾಣಾಂ ಕುರು [೫]ಪುಣ್ಯಾನುಬಂಧಿನೀಮ್ ॥**

"ಸ್ವಾಮಿಯೇ ! ಸಿದ್ಧಪಡಿಸಿರುವ ಮಂಗಲಸ್ನಾನವನ್ನು ಮೊಟ್ಟಮೊದಲು ಮಾಡು. ಆಮೇಲೆ ಪುಣ್ಯಸಂಪಾದಕವಾದ ಜಿನೇಶ್ವರರ ಪೂಜೆಯನ್ನು ಮಾಡು.

**ತತೋ ಬಲಮಿದಂ [೬]ದೈವಂ ಭವ[೭]ದ್ದೈವಬಲಾರ್ಜಿತಮ್ ।**
**ಸಮಾಲೋಕಯ ಸಂಘಟ್ಟೈಃ ಸಮಾಪತದಿತಸ್ತತಃ ॥ ೨೭೪ ॥**

ಅನಂತರ ನಿನ್ನ ಅದೃಷ್ಟದಿಂದ ಪ್ರಾಪ್ತವಾದುದೂ ಹೋರಾಟಗಳಿಂದ ಈಕಡೆ ಆಕಡೆಯಿಂದ ಬಂದು ಬೀಳುತ್ತಿರುವುದೂ ಆದ ಈ ದೇವತೆಗಳ ಸೈನ್ಯವನ್ನು ನೋಡು.

**ಇತಃ ಪ್ರೇಕ್ಷಸ್ವ [೮]ಸಂಪ್ರೇಕ್ಷ್ಯಾಃ [೯]ಪ್ರೇಕ್ಷಾಗೃಹಮುಪಾಗತಾಃ ।**
**ಸಲೀಲಭ್ರೂಲತೋತ್ಕ್ಷೇಪಂ ನಟಂತೀಃ ಸುರನರ್ತಕೀಃ ॥ ೨೭೫ ॥**

ನೋಡುವುದಕ್ಕೆ ಯೋಗ್ಯರೂ ನಾಟ್ಯಶಾಲೆಯನ್ನು ಹೊಂದಿರುವವರೂ ತಮ್ಮ ಹಾವಭಾವ ವಿಲಾಸದಿಂದ ಹುಬ್ಬುಗಳನ್ನು ಮೇಲಕ್ಕೆ ಹಾರಿಸುತ್ತ ನರ್ತನವನ್ನು ಮಾಡುವವರೂ ಆದ ದೇವನರ್ತಕಿಯರನ್ನು ಈಕಡೆ ನೋಡು.

**ಮನೋಜ್ಞ [೧೦]ವೇಷಭೂಷಾಶ್ಚ ದೇವೀರ್ದೇವಾದ್ಯ ಮಾನಯ ।**
**[೧೧]ದೇವಭೂಯಸ್ಯ ಸಂಪ್ರಾಪ್ತೌ ಫಲಮೇತಾವದೇವ ಹಿ ॥ ೨೭೬ ॥**

ಎಲೈ ದೇವನೇ ! ಮನೋಹರವಾದ ವೇಷವೂ ಆಭರಣಗಳೂ ಉಳ್ಳ ಈ ದೇವಿಯರನ್ನು ಈಗ ಸತ್ಕರಿಸು. ದೇವಪರ್ಯಾಯವನ್ನು ಪಡೆದುದಕ್ಕೆ ಇಷ್ಟೇ ಫಲವಲ್ಲವೇ".

**ಇತಿ ತದ್ವಚನಾದೇತತ್ಸ ಸರ್ವಮಕರೋತ್ಕೃತೀ ।**
**ಸ್ವನಿಯೋಗಾನತಿಕ್ರಾಂತಿರ್ಮಹತಾಂ ಭೂಷಣಂ ಪರಮ್ ॥ ೨೭೭ ॥**

ಈಪ್ರಕಾರವಾಗಿ ಪುಣ್ಯಶಾಲಿಯಾದ ಲಲಿತಾಂಗದೇವನು ಆ ದೇವತೆಗಳು ಹೇಳಿದಂತೆ ಮಂಗಲಸ್ನಾನಾದಿಗಳನ್ನೆಲ್ಲ ಮಾಡಿದನು. ತಮ್ಮ ನಿಯಮಿತ ಕರ್ತವ್ಯಗಳನ್ನು ಮೀರದಿರುವುದು ಮಹಾತ್ಮರಿಗೆ ಶ್ರೇಷ್ಠವಾದ ಭೂಷಣವು.

---

೧ ಉದೀರ್ಣವಚನಾಃ. ೨ ಪ್ರಾಪ್ತಾಃ. ೩ ಸ್ವೀಕುರು. ೪ ಸಜ್ಜೀಕೃತಂ. ೫ ಅಲಬ್ಧಲಾಭೋ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ಚ ಪುಣ್ಯಾನುಬಂಧಃ. ೬ ದೇವಸಂಬಂಧಿ. ೭ ಸುಕೃತಂ. ೮ ದರ್ಶನೀಯಾಃ. ೯ ನೃತ್ಯಶಾಲಾಂ. ೧೦ ವೇಷಃ ಶರೀರೋತ್ಕರ್ಷಕ ಉದ್ಧತಾದಿಃ ಭೂಷಾ ಅಲಂಕಾರಃ ಕಟಕಾದಿಃ. ೧೧ ದೇವತ್ವಸ್ಯ.

**ನಿಷ್ಟಪ್ತಕನಕಚ್ಛಾಯಃ ಸಪ್ತಹಸ್ತೋಚ್ಛವಿಗ್ರಹಃ ।**
**ವಸ್ತ್ರಾಭರಣಮಾಲ್ಯಾದ್ಯೈಃ ಸಹಜೈರೇವ ಭೂಷಿತಃ ॥ ೨೭೮ ॥**

ಆ ಲಲಿತಾಂಗದೇವನು ಪುಟಕ್ಕಿಟ್ಟ ಬಂಗಾರದಂತೆ ವರ್ಣವುಳ್ಳವನೂ ಏಳುಮೊಳ ಉದ್ದವಾದ ಶರೀರವುಳ್ಳವನೂ ಹುಟ್ಟುವಾಗಲೇ ಉಂಟಾದ ವಸ್ತ್ರ ಆಭರಣ ಪುಷ್ಪಮಾಲಿಕೆ ಮೊದಲಾದ ಅಲಂಕಾರಗಳಿಂದ ಅಲಂಕೃತನೂ ಆಗಿದ್ದನು.

**[1]ಸುಗಂಧಿಬಂಧು[2]ರಾಮೋದನಿಃಶ್ವಾಸೋ ಲಕ್ಷಣೋಜ್ಜ್ವಲಃ ।**
**ಸ ದಿವ್ಯಾನನ್ವಭೂದ್ಭೋಗಾನಣಿಮಾದಿಗುಣೈರ್ಯುತಃ ॥ ೨೭೯ ॥**

ಆ ಲಲಿತಾಂಗದೇವನು ಇಷ್ಟವಾದ ಪರಿಮಳವುಳ್ಳುದೂ ಮನೋಹರವೂ ಬಹುದೂರದವರೆಗೆ ವ್ಯಾಪಿಸುವ ಸುವಾಸನೆಯುಳ್ಳುದೂ ಆದ ನಿಃಶ್ವಾಸವುಳ್ಳವನೂ ದಿವ್ಯಲಕ್ಷಣಗಳಿಂದ ಪ್ರಕಾಶಮಾನನೂ ಅಣಿಮಾ ಮಹಿಮಾ ಗರಿಮಾ ಮೊದಲಾದ ಗುಣಗಳಿಂದ ಕೂಡಿದವನೂ ಆಗಿ ದಿವ್ಯಭೋಗಗಳನ್ನು ಅನುಭವಿಸಿದನು.

**ಭೇಜೇ ವರ್ಷಸಹಸ್ರೇಣ ಮಾನಸೀಂ ಸ [3]ತನುಸ್ಥಿತಿಮ್ ।**
**ಪಕ್ಷೇಣೈಕೇನ ಚೋಚ್ಛ್ವಾಸಂ ಪ್ರವೀಚಾರೋಽಸ್ಯ ಕಾಯಿಕಃ ॥ ೨೮೦ ॥**

ಆ ದೇವನು ಸಾವಿರ ವರ್ಷಕ್ಕೊಮ್ಮೆ ಮಾನಸಿಕ ಆಹಾರವನ್ನು ತೆಗೆದುಕೊಳ್ಳುತ್ತಿದ್ದನು. (ದೇವತೆಗಳಿಗೆ ಆಹಾರವನ್ನು ಗ್ರಹಣಮಾಡಬೇಕೆಂಬ ಇಚ್ಛೆಯುಂಟಾದಾಗ ಗಂಟಲಲ್ಲಿರುವ ಅಮೃತದ ಗೆಡ್ಡೆಯು ಕರಗುವುದು, ಅದರಿಂದಲೇ ದೇವತೆಗಳಿಗೆ ತೃಪ್ತಿಯುಂಟಾಗುವುದು. ಇದಕ್ಕೆ ಮಾನಸಿಕಾಹಾರವೆಂದು ಹೆಸರು) ಆ ದೇವನು ಹದಿನೈದು ದಿವಸಕ್ಕೊಮ್ಮೆ ಉಚ್ಛ್ವಾಸವನ್ನು ಬಿಡುತ್ತಿದ್ದನು. ಸ್ತ್ರೀವಿಷಯಸುಖವನ್ನು ಶರೀರಸಂಪರ್ಕದಿಂದ ಅನುಭವಿಸುತ್ತಿದ್ದನು. ಮನುಷ್ಯರಂತೆ ಕಾಮಸುಖವನ್ನನುಭವಿಸುತ್ತಿದ್ದನೆಂದರ್ಥವು.

**ತನುಚ್ಛಾಯಾಮಿವಾಮ್ಲಾನಿಂ ದಧಾನಃ ಸ್ರಜಮುಜ್ಜ್ವಲಾಮ್ ।**
**ಶರತ್ಕಾಲ ಇವಾಧತ್ತ ಸ ದಿವ್ಯಮರಜೋಂ[4]ಬರಮ್ ॥ ೨೮೧ ॥**

ಆ ಲಲಿತಾಂಗದೇವನು ತನ್ನ ಶರೀರದ ಕಾಂತಿಯಂತೆ ಬಾಡದಿರುವ ಪುಷ್ಪ ಮಾಲಿಕೆಯನ್ನು ಧರಿಸಿದ್ದನು. (ದೇವತೆಗಳು ಧರಿಸುವ ಕಲ್ಪವೃಕ್ಷದ ಪುಷ್ಪಮಾಲಿಕೆಗಳು ಕೊನೆಯ ಆರು ತಿಂಗಳನ್ನು ಬಿಟ್ಟು ಮರಣಕಾಲದವರೆಗೂ ಬಾಡುವುದಿಲ್ಲವೆಂದು ನಿಯಮವಿದೆ.) ಶರತ್ಕಾಲದ ಆಕಾಶದಂತೆ ನಿರ್ಮಲವಾದ ದಿವ್ಯವಸ್ತ್ರವನ್ನು ಧರಿಸಿದ್ದನು.

**ಸಹಸ್ರಾಣ್ಯಭವನ್ ದೇವ್ಯಶ್ಚತ್ವಾರ್ಯಸ್ಯ [5]ಪರಿಗ್ರಹಃ ।**
**ಚತಸ್ರಶ್ಚ ಮಹಾದೇವ್ಯಶ್ಚಾರುಲಾವಣ್ಯ[6]ವಿಭ್ರಮಾಃ ॥ ೨೮೨ ॥**

ಈ ಲಲಿತಾಂಗದೇವನಿಗೆ ನಾಲ್ಕುಸಾವಿರ ಪರಿವಾರದೇವಿಯರಿದ್ದರು. ಮನೋಹರವಾದ ಲಾವಣ್ಯವುಳ್ಳವರೂ ಹಾವಭಾವವಿಲಾಸಗಳುಳ್ಳವರೂ ಆದ ಪಟ್ಟಮಹಿಷಿಯರು ನಾಲ್ವರಿದ್ದರು.

**ಸ್ವಯಂಪ್ರಭಾಗ್ರಿಮಾ ದೇವೀ ದ್ವಿತೀಯಾ ಕನಕಪ್ರಭಾ ।**
**ಕನಕಾದಿಲತಾನ್ಯಾಸೀದ್ದೇವೀ ವಿದ್ಯುಲ್ಲತಾಪರಾ ॥ ೨೮೩ ॥**

ಅವರಲ್ಲಿ ಮೊದಲನೆಯವಳು ಸ್ವಯಂಪ್ರಭಾದೇವಿಯು. ಎರಡನೆಯವಳು ಕನಕಪ್ರಭಾದೇವಿಯು. ಮೂರನೆಯವಳು ಕನಕಲತಾದೇವಿಯು. ನಾಲ್ಕನೆಯವಳು ವಿದ್ಯುಲ್ಲತಾದೇವಿಯು.

೧ ಇಷ್ಟಗಂಧಿಃ. ೨ ಆಮೋದಃ ಸೋತಿನಿರ್ಹಾರೀ. ೩ ಆಹಾರಂ. ೪ ವಸ್ತ್ರಮಾಕಾಶಂ ಚ. ೫ ಪತ್ನೀಪರಿಜನಾದಾನಮೂಲಶಾಪಾಃ ಪರಿಗ್ರಹಾ ಇತ್ಯಮರಃ. ೬ ಭ್ರೂಯುಗಾಂತರವಿಕಾರಃ.

**ರಾಮಾಭಿರಭಿರಾಮಾಭಿರಾಭಿರ್ಭೋಗಾನನಾರತಮ್ ।**
**ಭುಂಜಾನಸ್ಯಾಸ್ಯ ಕಾಲೋಗಾದನಲ್ಪಃ ಪುಣ್ಯಪಾಕಜಾನ್ ॥ ೨೮೪ ॥**

ಈ ಸುಂದರಸ್ತ್ರೀಯರೊಡನೆ ಪುಣ್ಯದ ಉದಯದಿಂದುಂಟಾದ ಭೋಗಗಳನ್ನು ಸದಾ ಅನುಭವಿಸುತ್ತಿದ್ದ ಈ ಲಲಿತಾಂಗದೇವನಿಗೆ ಬಹಳಕಾಲವು ವ್ಯಯವಾಯಿತು. ಭೋಗಗಳನ್ನನುಭವಿಸುತ್ತ ಬಹಳಕಾಲವು ಕಳೆಯಿತೆಂದರ್ಥವು.

**ತದಾಯುರ್ಜಲಧೇರ್ಮಧ್ಯೇ ವೀಚೀಮಾಲಾ ಇವಾಕುಲಾಃ ।**
**ವಿಲೀಯಂತೇ ಸ್ಮ ಭೂಯಸ್ಯೋ ದೇವ್ಯಃ ಸ್ವಾಯುಃಸ್ಥಿತಿಚ್ಯುತೇಃ ॥**

ಸಮುದ್ರದಲ್ಲಿ ತೆರೆಮಾಲೆಗಳು ಉತ್ಪನ್ನವಾಗಿ ನಾಶವಾಗುವಂತೆ ಆ ಲಲಿತಾಂಗದೇವನ ಜೀವನಕಾಲದಲ್ಲಿ ಅನೇಕ ದೇವಿಯರು ತಮ್ಮ ಆಯುಷ್ಯವು ಪೂರ್ತಿಯಾದುದರಿಂದ ಮರಣವನ್ನು ಹೊಂದಿದರು. ಸ್ವರ್ಗದಲ್ಲಿ ಸ್ತ್ರೀಯರಿಗಿಂತಲೂ ಪುರುಷರಿಗೆ ಆಯುಷ್ಯವು ಬಹಳ ಅಧಿಕವಾಗಿರುವುದರಿಂದ ಲಲಿತಾಂಗದೇವನ ಆಯುಷ್ಯಕಾಲದಲ್ಲಿ ಎಷ್ಟೋ ದೇವಿಯರು ಮರಣವನ್ನು ಹೊಂದಿದರೆಂದು ಭಾವವು.

**ಪಲ್ಯೋಪಮಪೃ[1]ಥಕ್ತ್ವಾವಶಿಷ್ಟಮಾಯುರ್ಯದಾಸ್ಯ ಚ ।**
**ತದೋದಪಾದಿ ಪುಣ್ಯೈಃ ಸ್ವೈಃ ಪ್ರೇಯಸ್ಯಸ್ಯ ಸ್ವಯಂಪ್ರಭಾ ॥ ೨೮೬ ॥**

ಈ ಲಲಿತಾಂಗದೇವನಿಗೆ ಪೃಥಕ್ತ್ವಪಲ್ಯೋಪಮಕಾಲ ಆಯುಷ್ಯವುಳಿದಾಗ ಇವನ ಪುಣ್ಯೋದಯದಿಂದ ಸ್ವಯಂಪ್ರಭಾದೇವಿಯು ಹುಟ್ಟಿ ಪ್ರಾಣವಲ್ಲಭೆಯಾದಳು. (ಮೂರರಿಂದ ಮೇಲೆ ಒಂಬತ್ತರೊಳಗಿನ ಸಂಖ್ಯೆಗೆ ಪೃಥಕ್ತ್ವವೆಂದು ಆಗಮ ಸಂಜ್ಞೆಯು).

**ಅಥ ಸಾ ಕೃತನೇ[2]ಪಥ್ಯಾ ಪ್ರಭಾತರಲವಿಗ್ರಹಾ ।**
**ಪತ್ಯುರಂಕಗತಾ ರೇಜೇ ಕಲ್ಪ[3]ಶ್ರೀರಿವ ರೂಪಿಣೀ ॥ ೨೮೭ ॥**

ಆಮೇಲೆ ಕಾಂತಿಯಿಂದ ಚಲಿಸುತ್ತಿರುವ ಶರೀರವುಳ್ಳ ಆ ಸ್ವಯಂಪ್ರಭಾದೇವಿಯು ಅಲಂಕಾರಮಾಡಿಕೊಂಡು ಪತಿಯ ತೊಡೆಯ ಮೇಲೆ ಕುಳಿತು, ಸ್ತ್ರೀರೂಪವನ್ನು ಧರಿಸಿದ ಈಶಾನಕಲ್ಪದ ಲಕ್ಷ್ಮೀದೇವಿಯೋ ಎಂಬಂತೆ, ಶೋಭಿಸಿದಳು.

**ಸೈಷಾ ಸ್ವಯಂಪ್ರಭಾಸ್ಯಾಸೀತ್ಪರಾ ಸೌಹಾರ್ದಭೂಮಿಕಾ ।**
**ಚಿರಂ ಮಧುಕರಸ್ಯೇವ ಪ್ರತ್ಯಗ್ರಾ ಚೂತಮಂಜರೀ ॥ ೨೮೮ ॥**

ನೂತನವಾದ ಮಾವಿನಹೂವಿನ ಗೊಂಚಲು ಭ್ರಮರಕ್ಕೆ ಪ್ರಿಯವಾಗಿರುವಂತೆ, ಈ ಸ್ವಯಂಪ್ರಭಾದೇವಿಯು ಲಲಿತಾಂಗದೇವನಿಗೆ ಬಹುಕಾಲದವರೆಗೆ ಬಹಳ ಪ್ರೀತಿಪಾತ್ರಳಾಗಿದ್ದಳು.

**ಸ್ವಯಂಪ್ರಭಾನನಾಲೋಕತದ್ಗಾತ್ರಸ್ಪರ್ಶನೋತ್ಸವೈಃ ।**
**ಸ ರೇಮೇ ಕರಿಣೀಸಕ್ತಃ ಕರೀವ ಸುಚಿರಂ ಸುರಃ ॥ ೨೮೯ ॥**

ಆ ಲಲಿತಾಂಗದೇವನು ಸ್ವಯಂಪ್ರಭಾದೇವಿಯ ಮುಖವನ್ನು ನೋಡುವುದರಿಂದಲೂ ಅವಳ ಶರೀರಸ್ಪರ್ಶದಿಂದಲೂ ಆನಂದಪಡುತ್ತ, ಹೆಣ್ಣಾನೆಯಲ್ಲಿ ಆಸಕ್ತವಾದ ಗಂಡಾನೆಯಂತೆ, ಬಹುಕಾಲದವರೆಗೆ ಸ್ತ್ರೀವಿಷಯಸುಖವನ್ನನುಭವಿಸಿದನು.

**ಸ ತಯಾ ಮಂದರೇ ಕಾಂತಚಂದ್ರಕಾಂತಶಿಲಾತಲೇ ।**
**ಭೃಂಗಕೋಕಿಲವಾಚಾಲನಂದನಾದಿವನಾಂಚಿತೇ ॥ ೨೯೦ ॥**

೧ ತೃತೀಯಾದುಪರಿ ನವಕಾದಧಃ. ೨ ಆಕಲ್ಪವೇಷೌ ನೇಪಥ್ಯಮಿತ್ಯಮರಃ, ನೇತ್ರಯೋಃ ಪಥ್ಯಂ ನೇಪಥ್ಯಮಿತಿ ಸುಬೋಧಿನೀ, ಕೃತಪ್ರಸಾಧನೇತ್ಯರ್ಥಃ. ೩ ಈಶಾನಕಲ್ಪಲಕ್ಷ್ಮೀಃ.

**ನೀಲಾದಿಷ್ವಚಲೇಂದ್ರೇಷು ಖಚರಾಚಲಸಾನುಷು ।**
**ಕುಂಡಲೇ ರುಚಕೇ ಚಾದ್ರೌ ಮಾನುಷೋತ್ತರಪರ್ವತೇ ॥ ೨೯೧ ॥**

**ನಂದೀಶ್ವರಮಹಾದ್ವೀಪೇ ದ್ವೀಪೇಷ್ವನ್ಯೇಷು ಚಾಬ್ಧಿಷು ।**
**ಭೋಗಭೂಮ್ಯಾದಿದೇಶೇಷು ದೀವ್ಯನ್ ದೇವೋವಸತ್ಸುಖಮ್ ॥**

ಆ ಲಲಿತಾಂಗದೇವನು ಸ್ವಯಂಪ್ರಭಾದೇವಿಯೊಡನೆ, ಭ್ರಮರಗಳೂ ಕೋಗಿಲೆಗಳೂ ಧ್ವನಿಮಾಡುತ್ತಿರುವ ನಂದನ ಮೊದಲಾದ ವನಗಳಿಂದ ಕೂಡಿರುವುದೂ ಮನೋಹರವಾದ ಚಂದ್ರಕಾಂತಶಿಲೆಗಳುಳ್ಳುದೂ ಆದ ಮಹಾಮೇರುಪರ್ವತದಲ್ಲಿಯೂ ನೀಲ ಮೊದಲಾದ ದೊಡ್ಡಪರ್ವತ ಗಳಲ್ಲಿಯೂ ವಿಜಯಾರ್ದ್ಧಪರ್ವತದ ತಪ್ಪಲುಪ್ರದೇಶಗಳಲ್ಲಿಯೂ ಕುಂಡಲಪರ್ವತದಲ್ಲಿಯೂ ರುಚಕಪರ್ವತದಲ್ಲಿಯೂ ಮಾನುಷೋತ್ತರಪರ್ವತ ದಲ್ಲಿಯೂ ನಂದೀಶ್ವರಮಹಾದ್ವೀಪದಲ್ಲಿಯೂ ಬೇರೆ ದ್ವೀಪಗಳಲ್ಲಿಯೂ ಸಮುದ್ರ ಗಳಲ್ಲಿಯೂ ಭೋಗ ಭೂಮಿ ಮೊದಲಾದ ಪ್ರದೇಶಗಳಲ್ಲಿಯೂ ಕ್ರೀಡಿಸುವವನಾಗಿ ಸುಖವಾಗಿದ್ದನು.

**ಇತಿ ಪರಮಮುದಾರಂ ದಿವ್ಯಭೋಗಂ [1]ಮಹರ್ದ್ಧಿಃ**
**ಸಮಮಮರವಧೂಭಿಃ ಸೋನ್ವಭೂದದ್ಭುತಶ್ರೀಃ ।**
**[2]ಸ್ಮಿತಹಸಿತವಿಲಾಸಸ್ಪಷ್ಟಚೇಷ್ಟಾಭಿರಿಷ್ಟಂ**
**ಸ್ವಕೃತಸುಕೃತಪಾಕಾತ್ಸಾಧಿಕಂ ವಾರ್ದ್ಧಿಮೇಕಮ್ ॥ ೨೯೩ ॥**

ಹೀಗೆ ಅದ್ಭುತವಾದ ಶೋಭೆಯುಳ್ಳವನೂ ಮಹಾಬುದ್ಧಿಸಂಪನ್ನನೂ ಆದ ಆ ಲಲಿತಾಂಗದೇವನು ಮುಗುಳುನಗೆಯೂ ನಗೆಯೂ ಹಾವಭಾವ ವಿಲಾಸಚೇಷ್ಟೆಗಳೂ ಉಳ್ಳ ದೇವಸ್ತ್ರೀಯರೊಡನೆ ಸ್ವಲ್ಪ ಹೆಚ್ಚು ಒಂದುಸಾಗರಕಾಲದವರೆಗೆ ತಾನು ಮಾಡಿದ ಪುಣ್ಯದ ಉದಯದಿಂದುಂಟಾದ ದಿವ್ಯಭೋಗಗಳನ್ನು ವಿಶೇಷವಾಗಿ ಅನುಭವಿಸಿದನು.

**ಸ್ವತನುಮತನುತೀವ್ರಾಸಹ್ಯತಾಪೈಸ್ತಪೋಭಿ-**
**[3]ರ್ಯದಯಮಕೃತಧೀಮಾನ್ನಿಷ್ಕಲಂಕಾ[4]ಮಮುತ್ರ ।**
**ತದಿಹ ರುಚಿರಭಾಭಿಃ ಸ್ವರ್ವಧೂಭಿಃ ಸಹಾಯಂ**
**ಸುಖಮಭಜತ ತಸ್ಮಾದ್ಧರ್ಮ ಏವಾರ್ಜನೀಯಃ ॥ ೨೯೪ ॥**

ಬುದ್ಧಿಶಾಲಿಯಾದ ಈ ಲಲಿತಾಂಗದೇವನು ಪೂರ್ವಜನ್ಮದಲ್ಲಿ ಬಹಳ ಕಠಿಣವೂ ಸಹಿಸುವುದಕ್ಕೆ ಅಶಕ್ಯವೂ ಆದ ಸಂತಾಪವನ್ನುಂಟುಮಾಡುವ ತಪಸ್ಸುಗಳಿಂದ ತನ್ನ ಶರೀರವನ್ನು ನಿಷ್ಕಲಂಕವನ್ನಾಗಿ ಮಾಡಿದುದರಿಂದ ಈ ಸ್ವರ್ಗದಲ್ಲಿ ಮನೋಹರವಾದ ಕಾಂತಿಯುಳ್ಳ ದೇವಸ್ತ್ರೀಯರೊಡನೆ ಸುಖವನ್ನನುಭವಿಸಿದನು. ಆದುದರಿಂದ ಧರ್ಮವನ್ನು ಸಂಪಾದಿಸಬೇಕು. ಧರ್ಮವು ಪ್ರಾಣಿಗಳಿಗೆ ಸುಖವನ್ನುಂಟುಮಾಡುವುದರಿಂದ ಧರ್ಮವನ್ನು ಸಂಪಾದಿಸಬೇಕೆಂದು ಭಾವವು.

**ಕುರುತ ತಪಸಿ ತೃಷ್ಣಾಂ ಭೋಗತೃಷ್ಣಾಮಪಾಸ್ಯ**
**ಶ್ರಿಯಮಧಿಕತರಾಂ ಚೇದ್ವಾಂಛಥ [1]ಪ್ರಾಂಚತೇಶಮ್ ।**
**ಜಿನಮವೃಜಿನಮಾರ್ಯಾಸ್ತದ್ವಚಃ ಶ್ರದ್ದಧೀಧ್ವಂ**
**ಕುಕವಿವಿರುತಮನ್ಯಚ್ಛಾಸನಂ ಮಾಗ್ರಹೀಧ್ವಮ್ ॥ ೨೯೫ ॥**

ಸಜ್ಜನರೇ ! ನೀವು ಭೋಗಾಭಿಲಾಷೆಯನ್ನು ತೊರೆದು ತಪಸ್ಸಿನಲ್ಲಿ ಇಚ್ಛೆಯನ್ನು ಮಾಡಿ. ಅಧಿಕವಾದ ಸಂಪತ್ತನ್ನು ಇಚ್ಛಿಸುವುದಾದರೆ ಪಾಪರಹಿತನಾದ ಜಿನೇಶ್ವರನನ್ನು ಪೂಜಿಸಿರಿ. ಆ ಜಿನೇಶ್ವರನ ವಚನವನ್ನು ನಂಬಿರಿ. ಮಿಥ್ಯಾಕವಿಗಳು ಹೇಳಿದ ಬೇರೆ ಉಪದೇಶವನ್ನು ಗ್ರಹಣಮಾಡಬೇಡಿರಿ.

**ಇತ್ಥಂ [2]ವಿಕಥ್ಯ ಪುರುಷಾರ್ಥ[3]ಸಮರ್ಥನೋ ಯೋ**
**ಧರ್ಮಃ ಕುಕರ್ಮಕುಟಿಲಾಟವಿಸತ್ಕುಠಾರಃ ।**
**ತಂ ಸೇವಿತುಂ ಬುಧಜನಾಃ ಪ್ರಯತಧ್ವ[4]ಮಾಧ್ವಂ**
**ಜೈನೇ ಮತೇ ಕುಮತಿಭೇದಿನಿ ಸೌಖ್ಯಕಾಮಾಃ ॥ ೨೯೬ ॥**

ವಿದ್ವಾಂಸರೇ ! ನೀವು ಸುಖವನ್ನಿಚ್ಛಿಸುವುದಾದರೆ ಹೀಗೆ ಅತ್ಯಂತ ಶ್ಲಾಘ್ಯವಾದ ಧರ್ಮ ಅರ್ಥ ಕಾಮ ಮೋಕ್ಷ ಪುರುಷಾರ್ಥಗಳನ್ನುಂಟುಮಾಡುವುದೂ ದುಷ್ಕರ್ಮವೆಂಬ ಅಡವಿಗೆ ಒಳ್ಳೆಯ ಕೊಡಲಿಯೂ ಆದ ಧರ್ಮವನ್ನು ಸೇವಿಸುವುದಕ್ಕೆ ಪ್ರಯತ್ನಮಾಡಿರಿ. ದುರ್ಬುದ್ಧಿಯನ್ನು ನಾಶಮಾಡುವ ಜೈನಮತದಲ್ಲಿ ದೃಢಚಿತ್ತರಾಗಿರಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಲಲಿತಾಂಗಸ್ವರ್ಗಭೋಗವರ್ಣನಂ ನಾಮ ಪಂಚಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಲಲಿತಾಂಗದೇವನ ಸ್ವರ್ಗಭೋಗವರ್ಣನೆಯೆಂಬ
ಐದನೆಯ ಪರ್ವವು ಸಮಾಪ್ತವಾದುದು.

---

೧. ವಿಪುಲಾಣಿಮಾದಿಗುಣಸಂಪತ್ತಿಃ. ೨ ಅಲ್ಪಹಾಸಃ. ೩ ಯಸ್ಮಾತ್ಕಾರಣಾತ್. ೪ ಪೂರ್ವಜನ್ಮನಿ.

೧ ಪೂಜಯತ. ೨ ವಿಕಥ್ಯೋ ವಿಶೇಷೇಣ ಶ್ಲಾಘ್ಯಃ ಸ ಚಾಸೌ ಪುರುಷಾರ್ಥಶ್ಚ. ೩ ಸಂಪಾದಕಃ. ೪ ಆಸ ಉಪವೇಶನೇ ಲೋಟ್.

# ಅಥ ಷಷ್ಠಂ ಪರ್ವ

**[೧]ಕದಾಚಿದಥ ತಸ್ಯಾಸನ್ಭೂಷಾಸಂಬಂಧಿನೋಮಲಾಃ ।**
**ಮಣಯಸ್ತೇಜಸಾ ಮಂದಾ ನಿಶಾಪಾಯ ಪ್ರದೀಪವತ್ ॥ ೧ ॥**

ಅನಂತರದಲ್ಲಿ ಆ ಲಲಿತಾಂಗದೇವನ ಆಯುಷ್ಯವು ಆರು ತಿಂಗಳು ಉಳಿದಾಗ ಅವನ ಆಭರಣಗಳ ನಿರ್ಮಲವಾದ ರತ್ನಗಳ ಕಾಂತಿಯು, ರಾತ್ರಿಯು ಕಳೆದಮೇಲೆ ದೀಪದ ಕಾಂತಿಯಂತೆ, ಕುಂದಿತು.

**ಮಾಲಾ ಚ ಸಹಜಾ ತಸ್ಯ ಮಹೋರಸ್ಥಲಸಂಗಿನೀ ।**
**ಮ್ಲಾನಿಮಾಗಾದಮುಷ್ಯೇವ [೨]ಲಕ್ಷ್ಮೀರ್ವಿಶ್ಲೇಷ[೩]ಭೀಲುಕಾ ॥ ೨ ॥**

ಆ ಲಲಿತಾಂಗದೇವನ ವಿಶಾಲವಾದ ಎದೆಯಲ್ಲಿ ಲಕ್ಷ್ಮೀದೇವಿಯು ಅವನ ವಿಯೋಗದಿಂದ ಭಯಪಟ್ಟು ಖಿನ್ನಳಾದಳೋ ಎಂಬಂತೆ, ಹುಟ್ಟಿದಂದಿನಿಂದ ಸಂಬಂಧಿಸಿದ್ದ ಪುಷ್ಪಮಾಲಿಕೆಯೂ ಬಾಡಿತು.

**ಪ್ರಚಕಂಪೇ ತದಾವಾಸಸಂಬಂಧೀ ಕಲ್ಪಪಾದಪಃ ।**
**ತದ್ವಿಯೋಗಮಹಾವಾತಧೂತಃ [೪]ಸಾಧ್ವಸಮಾದಧತ್ ॥ ೩ ॥**

ಆ ಲಲಿತಾಂಗದೇವನ ವಾಸಸ್ಥಾನದಲ್ಲಿದ್ದ ಕಲ್ಪವೃಕ್ಷವು ಅವನ ವಿಯೋಗವೆಂಬ ದೊಡ್ಡಗಾಳಿಯಿಂದ ಕೊಡಹಲ್ಪಟ್ಟು ಭಯಭೀತವಾದಂತೆ ಕಂಪಿಸಿತು. ಕಲ್ಪವೃಕ್ಷದ ಕಂಪನೆಯೂ ಅವನ ಮರಣಸೂಚಕವಾಗಿದ್ದಿತೆಂದರ್ಥವು.

**ತನುಚ್ಛಾಯಾ ಚ ತಸ್ಯಾಸೀತ್ಸದ್ಯೋ [೫]ಮಂದಾಯಿತಾ ತದಾ ।**
**ಪುಣ್ಯಾತಪತ್ರವಿಶ್ಲೇಷೇ ತಚ್ಛಾಯಾ ಕ್ವಾವತಿಷ್ಠತಾಮ್ ॥ ೪ ॥**

ಆಗ ಆ ಲಲಿತಾಂಗದೇವನ ಶರೀರಚ್ಛಾಯೆಯೂ ಕಡಿಮೆಯಾಯಿತು. ಪುಣ್ಯವೆಂಬ ಛತ್ರಿಯು ನಷ್ಟವಾದಮೇಲೆ ಅದರ ನೆರಳು ಎಲ್ಲಿರಬೇಕು ? ಛತ್ರಿಯು ನಾಶವಾದರೆ ಅದರ ನೆರಳೂ ನಾಶವಾಗುವಂತೆ ಪುಣ್ಯವು ನಾಶವಾದಮೇಲೆ ಅದರ ಕಾರ್ಯವಾದ ಸುಖವೂ ನಾಶವಾಯಿತೆಂದು ಭಾವವು.

**ತಮಾಲೋಕ್ಯ ತದಾ ಧ್ವಸ್ತಕಾಂತಿಂ [೬]ವಿಚ್ಛಾಯತಾಂ ಗತಮ್ ।**
**ನ ಶೇಕುರ್ದ್ರಷ್ಟುಮೈಶಾನಕಲ್ಪಜಾ ದಿವಿಜಾಃ ಶುಚಾ ॥ ೫ ॥**

ಆಗ ಕಾಂತಿರಹಿತನಾಗಿ ಕುಂದಿಹೋದ ಆ ಲಲಿತಾಂಗದೇವನನ್ನು ನೋಡಿ ಈಶಾನಕಲ್ಪದ ದೇವತೆಗಳು ದುಃಖದಿಂದ ಅವನನ್ನು ನೋಡಲಾರದೆ ಹೋದರು. ಆ ಲಲಿತಾಂಗದೇವನನ್ನು ನೋಡಿ ಈಶಾನಕಲ್ಪದ ದೇವತೆಗಳೂ ಬಹಳ ದುಃಖಪಟ್ಟರೆಂದಭಿಪ್ರಾಯವು.

**ತಸ್ಯ ದೈನ್ಯಾತ್ಪರಿಪ್ರಾಪ್ತಾ ದೈನ್ಯಂ ತತ್ಪರಿಚಾರಕಾಃ ।**
**ತರೌ ಚಲತಿ [೭]ಶಾಖಾದ್ಯಾ ವಿಶೇಷಾನ್ನ ಚಲಂತಿ ಕಿಮ್ ॥ ೬ ॥**

ಆ ಲಲಿತಾಂಗದೇವನು ಖಿನ್ನನಾದುದನ್ನು ನೋಡಿ ಅವನ ಪರಿಚಾರಕ ದೇವತೆಗಳೂ ಖಿನ್ನರಾದರು. ವೃಕ್ಷವು ಚಲಿಸಿದರೆ ಅದರ ಶಾಖೋಪಶಾಖೆಗಳು ಹೆಚ್ಚಾಗಿ ಚಲಿಸುವುದಿಲ್ಲವೇ ?

**ಆಜನ್ಮನೋ ಯದೇತೇನ [೮]ನಿರ್ವಿಷ್ಟಂ ಸುಖಮಾಮರಮ್ ।**
**ತತ್ತದಾ ಪಿಂಡಿತಂ ಸರ್ವಂ [೯]ದುಃಖಭೂಯಮಿವಾಗತಮ್ ॥ ೭ ॥**

೧ ಯದಾ ನಿಜಾಯುಃ ಷಣ್ಮಾಸಾವಸಿಷ್ಟಂ ತದೇತ್ಯರ್ಥಃ. ೨ ಮಹೋರಸ್ಥಲಸಂಗಿನೀತ್ಯೇತದತ್ರಾಪಿ ಸಂಬದ್ಧ್ಯತೇ. ೩ ಭಯಶೀಲಾ. ೪ ಭಯಂ. ೫ ಅಲ್ಪೀಭೂತಾ. ೬ ವಿವರ್ಣತ್ವಂ. ೭ ಸತಿ. ೮ ಅನುಭುಕ್ತಂ. ೯ ದುಃಖತ್ವಂ.

ಆ ಲಲಿತಾಂಗದೇವನು ಜನ್ಮಪರ್ಯಂತ ಅನುಭವಿಸಿದ ದೇವಸುಖವೆಲ್ಲವೂ ರಾಶಿಯಾಗಿ ದುಃಖರೂಪವನ್ನು ಹೊಂದಿದಂತಿದ್ದಿತು.

**ತತ್ಕಂಠಮಾಲಿಕಾಮ್ಲಾನಿವಚಃ [೧]ಕಲ್ಪಾಂತಮಾನಶೇ ।**
**ಶೀಘ್ರರೂಪಸ್ಯ ಲೋಕಾಂತಮಣೋರಿವ ವಿಚೇಷ್ಟಿತಮ್ ॥ ೮ ॥**

ಶೀಘ್ರಗಮನವುಳ್ಳ ಪರಮಾಣುವು ಲೋಕಾಂತವನ್ನು ಹೊಂದುವಂತೆ, ಲಲಿತಾಂಗದೇವನ ಕಂಠಮಾಲಿಕೆಯು ಬಾಡಿತೆಂಬ ವಚನವು ಶೀಘ್ರವಾಗಿ ಈಶಾನಕಲ್ಪವನ್ನೆಲ್ಲ ವ್ಯಾಪಿಸಿತು. (ಶೀಘ್ರಗಮನವುಳ್ಳ ಪರಮಾಣುವು ಹದಿನಾಲ್ಕು ರಜ್ಜು ಪರಿಮಿತವಾದ ಲೋಕದ ಕೊನೆಯವರೆಗೂ ಒಂದೇಸಮಯದಲ್ಲಿ ಹೋಗುವುದೆಂದು ಸಿದ್ಧಾಂತವಿದೆ).

**ಅಥ [೨]ಸಾಮಾನಿಕಾ ದೇವಾಸ್ತಮುಪೇತ್ಯ ಯಥೋಚಿತಮ್ ।**
**ತದ್ವಿಷಾದಾಪನೋದೀದಂ [೩]ಪುಷ್ಕಲಂ ವಚನಂ ಜಗುಃ ॥ ೯ ॥**

ಅನಂತರ ತಾಯಿತಂದೆಗಳಿಗೆ ಸಮಾನರಾದ ಸಾಮಾನಿಕರೆಂಬ ದೇವತೆಗಳು ಆ ಲಲಿತಾಂಗದೇವನ ಸಮೀಪಕ್ಕೆ ಬಂದು ಅವನ ದುಃಖವನ್ನು ಹೋಗಲಾಡಿಸುವ ಮನೋಹರವಾದ ಉಚಿತ ವಚನವನ್ನು ಮುಂದೆಹೇಳುವ ರೀತಿಯಾಗಿ ಹೇಳಿದರು: —

**ಭೋ ಧೀರ ಧೀರತಾಮೇವ ಭಾವಯಾದ್ಯ ಶುಚಂ ತ್ಯಜ ।**
**ಜನ್ಮಮೃತ್ಯುಜರಾತಂಕಭಯಾನಾಂ ಕೋ ನ ಗೋಚರಃ ॥ ೧೦ ॥**

''ಎಲೈ ಧೀರನೇ ! ಈಗ ದುಃಖವನ್ನುಬಿಟ್ಟು ಧೀರತ್ವವನ್ನೇ ಭಾವಿಸು. ಜನ್ಮ ಮರಣ ಮುಪ್ಪು ರೋಗ ಭಯ ಮೊದಲಾದ ದುಃಖಗಳಿಗೆ ಯಾರು ವಿಷಯರಲ್ಲ ? ಜನ್ಮಮರಣಾದಿದುಃಖಗಳು ಸಂಸಾರಿಪ್ರಾಣಿಗಳಿಗೆ ತಪ್ಪಿದುವಲ್ಲವೆಂದರ್ಥವು.

**ಸಾಧಾರಣೀಮಿಮಾಂ ವಿದ್ಧಿ ಸರ್ವೇಷಾಂ ಪ್ರಚ್ಯುತಿಂ [೪]ದಿವಃ ।**
**[೫]ದ್ಯೌರಾಯುಷಿ ಪರಿಕ್ಷೀಣೇ ನ ವೋಢುಂ ಕ್ಷಮತೇ ಕ್ಷಣಮ್ ॥ ೧೧ ॥**

ಸ್ವರ್ಗದಿಂದ ಚ್ಯುತಿಯಾಗುವುದು ಎಲ್ಲಾ ದೇವತೆಗಳಿಗೂ ಸಮಾನ ವಾಗಿದೆಯೆಂದು ತಿಳಿ. ಆಯುಷ್ಯವು ತೀರಿಹೋದಮೇಲೆ ಸ್ವರ್ಗವು ಒಂದು ಕ್ಷಣಕಾಲದವರೆಗೂ ಪ್ರಾಣಿಯನ್ನು ಧರಿಸಿಕೊಳ್ಳುವುದಕ್ಕೆ ಸಮರ್ಥವಾಗುವುದಿಲ್ಲ.

**ನಿತ್ಯಾಲೋಕೋಪ್ಯನಾಲೋಕೋ [೬]ದ್ಯುಲೋಕಃ ಪ್ರತಿಭಾಸತೇ ।**
**ವಿಗಮಾತ್ಪುಣ್ಯದೀಪಸ್ಯ ಸಮಂತಾದಂಧಕಾರಿತಃ ॥ ೧೨ ॥**

ಸ್ವರ್ಗವು ಯಾವಾಗಲೂ ಪ್ರಕಾಶಮಾನವಾಗಿದ್ದರೂ ಪುಣ್ಯವೆಂಬ ದೀಪವು ತೊಲಗಿಹೋದಮೇಲೆ ಬೆಳಕಿಲ್ಲದೆ ಎಲ್ಲಾ ಕಡೆಯಲ್ಲಿಯೂ ಕತ್ತಲೆಯಾಗಿ ತೋರುತ್ತದೆ.

**ಯಥಾ ರತಿರಭೂತ್ಸ್ವರ್ಗೇ ಪುಣ್ಯಪಾಕಾದನಾರತಮ್ ।**
**ತಥೈವಾತ್ರಾರತಿರ್ಭೂಯಃ ಕ್ಷೀಣಪುಣ್ಯಸ್ಯ ಜಾಯತೇ ॥ ೧೩ ॥**

ಪುಣ್ಯದ ಉದಯದಿಂದ ಸ್ವರ್ಗದಲ್ಲಿ ಯಾವಾಗಲೂ ಪ್ರೀತಿಯುಂಟಾಗುವಂತೆ, ಪುಣ್ಯಹೀನನಿಗೆ ಈ ಸ್ವರ್ಗದಲ್ಲಿ ಅಪ್ರೀತಿಯುಂಟಾಗುತ್ತದೆ.

೧ ಈಶಾನಕಲ್ಪಾವಸಾನಂ. ೨ ಮಾತೃಪಿತೃಗುರೂಪಾಧ್ಯಾಯಸಮಾನತ್ವಾತ್ಸಾಮಾನಿಕಾಃ. ೩ ಮನೋಹರಂ. ೪ ಸ್ವರ್ಗಾತ್. ೫ ಸ್ವರ್ಗಃ. ೬ ಸ್ವರ್ಗಲೋಕಃ.

**ನ ಕೇವಲಂ ಪರಿಮ್ಲಾನಿರ್ಮಾಲಾಯಾಃ ಸಹಜನ್ಮನಃ ।**
**ಪಾಪಾತಪೇ [೧]ತಪತ್ಯಂತೇ ಜಂತೋರ್ವಮ್ಲಾನಿಸ್ತನೋರಪಿ ॥ ೧೪ ॥**

ಪಾಪವೆಂಬ ಬಿಸಲು ತಪಿಸುತ್ತಿರಲು ಜನ್ಮಕಾಲದಲ್ಲಿ ಉಂಟಾಗಿದ್ದ ಪುಷ್ಪ ಮಾಲಿಕೆಯು ಬಾಡುವುದು ಮಾತ್ರವಲ್ಲದೆ ಮರಣಕಾಲದಲ್ಲಿ ಪ್ರಾಣಿಯ ಶರೀರವೂ ಬಾಡಿಹೋಗುತ್ತದೆ.

**ಕಂಪತೇ ಹೃದಯಂ ಪೂರ್ವಂ [೨]ಚರಮಂ ಕಲ್ಪಪಾದಪಃ ।**
**ಗಲತಿ ಶ್ರೀಃ [೩]ಪ್ರಗೇ ಪಶ್ಚಾತ್ತನುಚ್ಛಾಯಾ ಸಮಂ ಹ್ರಿಯಾ ॥ ೧೫ ॥**

ದೇವಪರ್ಯಾಯದ ಅಂತಸಮಯದಲ್ಲಿ ಮೊದಲು ಹೃದಯವು ನಡುಗುತ್ತದೆ. ಆಮೇಲೆ ಕಲ್ಪವೃಕ್ಷವು ನಡುಗುತ್ತದೆ. ಅನಂತರದಲ್ಲಿ ಐಶ್ವರ್ಯವು ನಾಶವಾಗುತ್ತದೆ. ತರುವಾಯ ಲಜ್ಜೆಯೂ ಶರೀರಕಾಂತಿಯೂ ನಾಶವಾಗುತ್ತವೆ.

**[೪]ಜನಾಪರಾಗ ಏವಾದೌ ಜೃಂಭತೇ ಜೃಂಭಿಕಾ [೫]ಪರಮ್ ।**
**[೬]ವಾಸಸೋರಪರಾಗಶ್ಚ ಪಶ್ಚಾ[೭]ತ್ಪಾಪೋಪರಾಗತಃ ॥ ೧೬ ॥**

ಪಾಪದ ವಶದಿಂದ ಮೊದಲು ಜನರಲ್ಲಿ ಪ್ರೀತಿಯು ನಾಶವಾಗುತ್ತದೆ. ಆಮೇಲೆ ಆಕಳಿಕೆಯುಂಟಾಗುತ್ತದೆ. ಅನಂತರದಲ್ಲಿ ಅಂತರೀಯ ಉತ್ತರೀಯವಸ್ತ್ರಗಳು ಮಲಿನವಾಗುತ್ತವೆ.

**ಕಾಮರಾಗಾವಭಂಗಶ್ಚ ಮಾನಭಂಗಾದನಂತರಮ್ ।**
**ಮನಃ ಪೂರ್ವಂ ತಮೋ [೮]ರುಂಧೇ ದೃಶೌ ಪಶ್ಚಾದನೀದೃಶಮ್ ॥**

ತಾನು ದೊಡ್ಡವನು ಎಂಬ ಅಭಿಮಾನವು ಮೊದಲು ನಷ್ಟವಾಗುತ್ತದೆ. ತರುವಾಯ ಭೋಗೋಪಭೋಗಗಳಲ್ಲಿ ಇಚ್ಛೆಯು ನಷ್ಟವಾಗುತ್ತದೆ. ಆಮೇಲೆ ಅಜ್ಞಾನವು ಮನಸ್ಸನ್ನಾವರಿಸುತ್ತದೆ. ಅನಂತರ ನೇತ್ರಗಳನ್ನು ಆವರಿಸುತ್ತದೆ. ಅಜ್ಞಾನವು ಆವರಿಸಿ ವಿವೇಕರಹಿತನಾಗುತ್ತಾನೆಂದು ಭಾವವು.

**ಪ್ರತ್ಯಾಸನ್ನಚ್ಯುತೇರೇವಂ ಯದ್ದೌಸ್ಥಿತ್ಯಂ ದಿವೌಕಸಃ ।**
**ನ ತತ್ಸ್ಯಾನ್ನಾರಕಸ್ಯಾಪಿ ಪ್ರತ್ಯಕ್ಷಂ ತಚ್ಚ ತೇಧುನಾ ॥ ೧೮ ॥**

ಮರಣಕ್ಕೆ ಸಮೀಪಸ್ಥನಾಗಿರುವ ದೇವನಿಗುಂಟಾಗುವ ದುರವಸ್ಥೆ(ದುಃಖ)ಯು ನಾರಕಿಗೂ ಉಂಟಾಗದು. ಅಂತಹ ಅವಸ್ಥೆಯು ಈಗ ನಿನಗೆ ಪ್ರಾಪ್ತವಾಗಿದೆ.

**ಯಥೋದಿತಸ್ಯ ಸೂರ್ಯಸ್ಯ ನಿಶ್ಚಿತೋಸ್ತಮಯಃ ಪುರಃ ।**
**ತಥಾ ಪಾತೋನ್ಮುಖಃ ಸ್ವರ್ಗೇ ಜಂತೋರಭ್ಯುದಯೋಪ್ಯಯಮ್ ॥**

ಉದಯಿಸಿದ ಸೂರ್ಯನು ಮುಂದೆ ಅಸ್ತಂಗತನಾಗುವುದು ನಿಶ್ಚಿತ ವಾಗಿರುವಂತೆ ಸ್ವರ್ಗದಲ್ಲಿ ಹುಟ್ಟುವ ಪ್ರಾಣಿಯ ಈ ಅಭ್ಯುದಯವೂ ನಾಶವಾಗತಕ್ಕುದಾಗಿದೆ.

**ತಸ್ಮಾನ್ಮಾ ಸ್ಮ ಗಮಃ ಶೋಕಂ ಕುಯೋನ್ಯಾವರ್ತಪಾತಿನಮ್ ।**
**ಧರ್ಮೇ ಮತಿಂ ನಿಧತ್ಸ್ವಾರ್ಯ ಧರ್ಮೋ ಹಿ ಶರಣಂ ಪರಮ್ ॥**

ಆದುದರಿಂದ ಎಲೈ ಪೂಜ್ಯನೇ! ಶೋಕವನ್ನು ಮಾಡಬೇಡ. ಶೋಕವು ಆತ್ಮನನ್ನು ಕುಯೋನಿ—ದುರ್ಗತಿಯೆಂಬ ಸುಳಿಯಲ್ಲಿ ಕೆಡಹುವುದಾಗಿದೆ. ಧರ್ಮದಲ್ಲಿ ಮನಸ್ಸನ್ನಿಡು. ಸಂಸಾರಿಪ್ರಾಣಿಗಳಿಗೆ ಧರ್ಮವೇ ಶರಣವಾಗಿದೆ.

**ಕಾರಣಾನ್ನ ವಿನಾ ಕಾರ್ಯಮಾರ್ಯ ಜಾತು ಚಿದೀಕ್ಷ್ಯತೇ ।**
**ಪುಣ್ಯಂ ಚ ಕಾರಣಂ ಪ್ರಾಹುರ್ಬುಧಾಃ ಸ್ವರ್ಗಾಪವರ್ಗಯೋಃ ॥ ೨೧ ॥**

ಪೂಜ್ಯನೇ! ಕಾರಣವಿಲ್ಲದೆ ಎಂದೂ ಕಾರ್ಯವುಂಟಾಗುವುದಿಲ್ಲ. ಸ್ವರ್ಗ ಮೋಕ್ಷಗಳಿಗೆ ಪುಣ್ಯವು ಕಾರಣವೆಂದು ವಿದ್ವಾಂಸರು ಹೇಳುತ್ತಾರೆ. ಮೋಕ್ಷಪ್ರಾಪ್ತಿ ರೂಪವಾದ ಕಾರ್ಯಕ್ಕೆ ಪುಣ್ಯವು ಪರಂಪರಾಕಾರಣವೆಂದೂ ಪಾಪಪುಣ್ಯಕ್ಷಯವು ಸಾಕ್ಷಾತ್ಕಾರಣವೆಂದೂ ಭಾವವು.

**[೧]ತತ್ಪುಣ್ಯಸಾಧನೇ ಜೈನೇ ಶಾಸನೇ ಮತಿಮಾದಧತ್ ।**
**ವಿಷಾದಮುತ್ಸೃಜಾನೂನಂ [೨]ಯೇನಾ[೩]ನೇನಾ ಭವಿಷ್ಯಸಿ ॥ ೨೨ ॥**

ಆದುದರಿಂದ ಪುಣ್ಯವನ್ನುಂಟುಮಾಡುವ ಜೈನಮತದಲ್ಲಿ ಬುದ್ಧಿಯನ್ನಿಟ್ಟು ಈ ಅಪಾರವಾದ ಖೇದವನ್ನು ಬಿಟ್ಟುಬಿಡು. ಹಾಗೆ ಖೇದವನ್ನು ಬಿಟ್ಟು ಜಿನೇಶ್ವರನ ವಚನದಲ್ಲಿ ಶ್ರದ್ಧೆಯನ್ನಿಡುವುದರಿಂದ ಪಾಪರಹಿತನಾಗುವೆ''.

**ಇತಿ ತದ್ವಚನಾದ್ಧೈರ್ಯಮವಲಂಬ್ಯ ಸ ಧರ್ಮಧೀಃ ।**
**ಮಾಸಾರ್ಧಂ ಭುವನೇ ಕೃತ್ಸ್ನೇ ಜಿನವೇಶ್ಮಾನ್ಯಪೂಜಯತ್ ॥ ೨೩ ॥**

ಈ ಪ್ರಕಾರವಾದ ಆ ಸಾಮಾನಿಕದೇವತೆಗಳ ವಚನದಿಂದ ಲಲಿತಾಂಗದೇವನು ಧೈರ್ಯವನ್ನು ಹೊಂದಿ ಧರ್ಮದಲ್ಲಿ ಬುದ್ಧಿಯುಳ್ಳವನಾಗಿ ಹದಿನೈದು ದಿನ ಗಳವರೆಗೆ ಎಲ್ಲಾ ಲೋಕದಲ್ಲಿರುವ ಜಿನಮಂದಿರಗಳನ್ನು ಪೂಜಿಸಿದನು.

**ತತೋಚ್ಯುತಸ್ಯ ಕಲ್ಪಸ್ಯ ಜಿನಬಿಂಬಾನಿ ಪೂಜಯನ್ ।**
**ತಚ್ಚೈತ್ಯದ್ರುಮಮೂಲಸ್ಥಃ ಸ್ವಾಯುರಂತೇ [೪]ಸಮಾಹಿತಃ ॥ ೨೪ ॥**

**ನಮಸ್ಕಾರಪದಾನ್ಯುಚ್ಚೈರನುಧ್ಯಾಯನ್ನಸಾಧ್ವಸಃ ।**
**ಸಾಧ್ವಸೌ ಮುಕುಲೀಕೃತ್ಯ ಕರೌ [೫]ಪ್ರಾಯಾದದೃಶ್ಯತಾಮ್ ॥ ೨೫ ॥**

ಅನಂತರ ಹದಿನಾರನೆಯ ಅಚ್ಯುತಸ್ವರ್ಗದಲ್ಲಿರುವ ಜಿನಬಿಂಬಗಳನ್ನು ಪೂಜಿಸಿ ಆ ಚೈತ್ಯವೃಕ್ಷದ ಬುಡದಲ್ಲಿದ್ದು ತನ್ನ ಮರಣಕಾಲದಲ್ಲಿ ಏಕಾಗ್ರಮನಸ್ಸಿನಿಂದ ಪಂಚನಮಸ್ಕಾರಪದಗಳನ್ನು ಗಟ್ಟಿಯಾಗಿ ಉಚ್ಚರಿಸುತ್ತ, ಈ ಲಲಿತಾಂಗದೇವನು ಭಯರಹಿತನಾಗಿ ಎರಡು ಕೈಗಳನ್ನು ಚೆನ್ನಾಗಿ ಜೋಡಿಸಿ - ಪಂಚಪರಮೇಷ್ಠಿಗಳಿಗೆ ನಮಸ್ಕರಿಸಿ ಅದೃಶ್ಯನಾದನು. ಮರಣವನ್ನು ಹೊಂದಿದನೆಂದರ್ಥವು. (ಈ ಲಲಿತಾಂಗದೇವನ ಮಿತ್ರನಾದ ಹದಿನಾರನೆಯ ಸ್ವರ್ಗದ ಅಚ್ಯುತೇಂದ್ರನು ಲಲಿತಾಂಗದೇವನ ಮರಣಕಾಲದಲ್ಲಿ ಅವನನ್ನು ಅಚ್ಯುತಕಲ್ಪಕ್ಕೆ ಒಯ್ದಿದ್ದನು).

**ಜಂಬೂದ್ವೀಪೇ ಮಹಾಮೇರೋರ್ವಿದೇಹೇ ಪೂರ್ವದಿಗ್ಗತೇ ।**
**ಯಾ ಪುಷ್ಕಲಾವತೀತ್ಯಾಸೀ[೬]ಜ್ಜಾನಭೂಮಿರ್ಮನೋರಮಾ ॥ ೨೬ ॥**

ಈ ಜಂಬೂದ್ವೀಪದಲ್ಲಿ ಮಹಾಮೇರುವಿನ ಪೂರ್ವದಿಕ್ಕಿನಲ್ಲಿರುವ ವಿದೇಹ ಕ್ಷೇತ್ರದಲ್ಲಿ ಅತ್ಯಂತ ಸುಂದರವಾದ ಪುಷ್ಕಲಾವತಿಯೆಂಬ ದೇಶವಿದೆ.

**ಸ್ವರ್ಗಭೂ[೭]ನಿರ್ವಿಶೇಷಾಂ ತಾಂ ಪುರಮುತ್ಪಲಖೇಟಕಮ್ ।**
**ಭೂಷಯತ್ಯುತ್ಪಲಚ್ಛನ್ನಶಾಲಿ[೮]ವಪ್ರಾದಿಸಂಪದಾ ॥ ೨೭ ॥**

ಸ್ವರ್ಗಭೂಮಿಗೆ ಸಮಾನವಾದ ಆ ಪುಷ್ಕಲಾವತೀದೇಶವನ್ನು ಕನ್ನೈದಿಲೆಗಳಿಂದ ವ್ಯಾಪ್ತವಾದ ಭತ್ತದಪೈರಿನ ಕ್ಷೇತ್ರ ಮೊದಲಾದ ಸಂಪತ್ತಿನಿಂದ ಉತ್ಪಲಖೇಟವೆಂಬ ಪಟ್ಟಣವು ಅಲಂಕರಿಸುತ್ತದೆ.

**ವಜ್ರಬಾಹುಃ ಪತಿಸ್ತಸ್ಯ ವಜ್ರೀವಾಜ್ಞಾಪರೋಭವತ್ ।**
**ಕಾಂತಾ ವಸುಂಧರಾಸ್ಯಾಸೀದ್ದ್ವಿತೀಯೇವ ವಸುಂಧರಾ ॥ ೨೮ ॥**

೧ ಸತಿ. ೨ ಪಶ್ಚಾದಿತ್ಯರ್ಥಃ. ೩ ಪ್ರಾಕ್. ೪ ಜನೇಷು ವಿರಾಗಃ. ೫ ಪಶ್ಚಾತ್. ೬ ಅಂತರೀಯೋತ್ತರೀಯವಸ್ತ್ರಯೋಃ. ೭ ಪಾಪಗ್ರಹಣಾತ್. ೮ ಆವೃಣೋತಿ.

೧ ತಸ್ಮಾತ್ಕಾರಣಾತ್. ೨ ವಿಷಾದತ್ಯಜನೇನ. ೩ ಪಾಪರಹಿತಃ. ೪ ಏಕಾಗ್ರಚಿತ್ತಃ. ೫ ಗತಃ. ೬ ಜನಪದಃ. ೭ ಸದೃಶಾಂ. ೮ ಕ್ಷೇತ್ರಂ.

ಇಂದ್ರನಂತೆ ಆಜ್ಞೆಯನ್ನು ಮಾಡುವ ವಜ್ರಬಾಹುವೆಂಬುವವನು ಆ ಪಟ್ಟಣಕ್ಕೆ ರಾಜನಾಗಿದ್ದನು. ಅವನಿಗೆ ವಸುಂಧರೆಯೆಂಬುವವಳು, ಎರಡನೆಯ ವಸುಂಧರೆ-ಪೃಥ್ವಿಯೋ ಎಂಬಂತೆ, ಪತ್ನಿಯಾಗಿದ್ದಳು.

**ತಯೋಃ ಸೂನುರಭೂದ್ದೇವೋ ಲಲಿತಾಂಗಸ್ತತಶ್ಚ್ಯುತಃ ।**
**ವಜ್ರಜಂಘ ಇತಿ ಖ್ಯಾತಿಂ ದಧದನ್ವರ್ಥತಾಂ ಗತಾಮ್ ॥ ೨೯ ॥**

ಆ ದಂಪತಿಗಳಿಗೆ ಸ್ವರ್ಗದಿಂದ ಚ್ಯುತನಾದ ಆ ಲಲಿತಾಂಗದೇವನು ವಜ್ರಜಂಘನೆಂಬ ಮಗನಾಗಿ ಹುಟ್ಟಿದನು. ಇವನ ಕಣಕಾಲುಗಳು ವಜ್ರದಂತೆ ದೃಢವಾಗಿದ್ದುದರಿಂದ ವಜ್ರಜಂಘನೆಂಬ ಹೆಸರು ಸಾರ್ಥಕವಾಗಿದ್ದಿತು.

**ಸ ಬಂಧುಕುಮುದಾನಂದೀ ಪ್ರತ್ಯಹಂ ವರ್ಧಯನ್ಕಲಾಃ ।**
**ಸಂಕೋಚಯನ್ದ್ವಿಷ[೧]ತ್ಪದ್ಮಾನ್ಸ್ವವೃಧೇ ಬಾಲಚಂದ್ರಮಾಃ ॥ ೩೦ ॥**

ಆ ವಜ್ರಜಂಘನೆಂಬ ಬಾಲಚಂದ್ರನು ತನ್ನ ಬಂಧುಗಳೆಂಬ ಕುಮುದಪುಷ್ಪಗಳನ್ನು ಸಂತೋಷಪಡಿಸುತ್ತಲೂ ಕಲೆ-ವಿದ್ಯೆಗಳನ್ನು ವೃದ್ಧಿಪಡಿಸುತ್ತಲೂ ಶತ್ರುಗಳೆಂಬ ಕಮಲಗಳನ್ನು ಸಂಕೋಚಪಡಿಸುತ್ತಲೂ ವೃದ್ಧಿಯನ್ನು ಹೊಂದಿದನು.

**ಆರೂಢಯೌವನಸ್ಯಾಸ್ಯ ರೂಪಸಂಪದನೀದೃಶೀ ।**
**ಜಾತಾ ಕಾಂತಿರಿವಾಪೂರ್ಣಮಂಡಲಸ್ಯ[೨]ನಿಶಾಕೃತಃ ॥ ೩೧ ॥**

ಯೌವನಾವಸ್ಥೆಯನ್ನು ಹೊಂದಿದ ಈ ವಜ್ರಜಂಘನ ರೂಪವು, ಪೂರ್ಣಚಂದ್ರನ ಕಾಂತಿಯಂತೆ, ಉಪಮಾರಹಿತವಾಗಿ ಆಯಿತು.

**ಶಿರಸ್ಯಸ್ಯ ಬಭುರ್ನೀಲಾ ಮೂರ್ಧಜಾಃ ಕುಂಚಿತಾಯತಾಃ ।**
**ಕಾಮಕೃಷ್ಣಭುಜಂಗಸ್ಯ ಶಿಶವೋ [೩]ನು ವಿಜೃಂಭಿತಾಃ ॥ ೩೨ ॥**

ಈ ವಜ್ರಜಂಘನ ಮಸ್ತಕದಲ್ಲಿ ಕಪ್ಪಾದ ಕುರುಳುಕೂದಲುಗಳು, ಕಾಮನೆಂಬ ಕೃಷ್ಣಸರ್ಪದ ವೃದ್ಧಿಹೊಂದುತ್ತಿರುವ ಮರಿಗಳೋ ಎಂಬಂತೆ, ಶೋಭಿಸುತ್ತಿದ್ದುವು.

**ನೇತ್ರಭೃಂಗೇ ಮುಖಾಬ್ಜೇಸ್ಯ ಸ್ಮಿತಾಂಶೂತ್ಕರಕೇಸರೇ ।**
**ಧತ್ತೇ ಸ್ಮ ಮಧುರಾ ವಾಣೀ ಮಕರಂದರಸೋಪಮಾಮ್ ॥ ೩೩ ॥**

ಮುಗುಳುನಗೆಯಿಂದುಂಟಾದ ಕಾಂತಿಗಳ ಸಮೂಹವೆಂಬ ಕುಸುಮಗಳುಳ್ಳದೂ ಕಣ್ಣುಗಳೆಂಬ ಭ್ರಮರಗಳುಳ್ಳದೂ ಆದ ಈ ವಜ್ರಜಂಘನ ಮುಖವೆಂಬ ಕಮಲದಲ್ಲಿ ಮಧುರವಾದ ವಚನವು ಪುಷ್ಪರಸದ ಸಾದೃಶ್ಯವನ್ನು ಧರಿಸಿದ್ದಿತು.

**ನೇತ್ರಯೋರ್ದ್ವಿತಯಂ ರೇಜೇ ಸಂಸಕ್ತಂ ತಸ್ಯ ಕರ್ಣಯೋಃ ।**
**[೪]ಸಶ್ರುತೀ ತಾವಿವಾಶ್ರಿತ್ಯ ಶಿಕ್ಷಿತುಂ ಸೂಕ್ಷ್ಮದರ್ಶಿತಾಮ್ ॥ ೩೪ ॥**

ಕಿವಿಗಳವರೆಗೆ ದೀರ್ಘವಾದ ಆ ವಜ್ರಜಂಘನ ಕಣ್ಣುಗಳು, ಶಾಸ್ತ್ರಶ್ರವಣವನ್ನು ಮಾಡಿದ ಆ ಕಿವಿಗಳನ್ನು ಸೂಕ್ಷ್ಮದರ್ಶಿತ್ವವನ್ನು ಕಲಿಯುವುದಕ್ಕೋಸ್ಕರ ಆಶ್ರಯಿಸಿವೆಯೋ ಎಂಬಂತೆ, ಶೋಭಿಸುತ್ತಿದ್ದುವು.

**[೫]ಉಪಕಂಠಮಸೌ ದಧ್ರೇ ಹಾರಂ [೬]ನೀಹಾರಸಚ್ಛವಿಮ್ ।**
**ತಾರಾನಿಕರಮಾಸ್ಯೇಂದೋರಿವ ಸೇವಾರ್ಥಮಾಗತಮ್ ॥ ೩೫ ॥**

ಈ ವಜ್ರಜಂಘನು ಕಂಠದಲ್ಲಿ ಹಿಮದ ಬಿಂದುವಿಗೆ ಸಮಾನವಾದ ಕಾಂತಿಯುಳ್ಳ ಮುಕ್ತಾಹಾರವನ್ನು ಧರಿಸಿದ್ದನು. ಇದು ಇವನ ಮುಖವೆಂಬ ಚಂದ್ರನ ಸೇವೆಗೋಸ್ಕರ ಬಂದಿರುವ ನಕ್ಷತ್ರಗಳ ಸಮೂಹವೋ ಎಂಬಂತೆ, ಕಾಣುತ್ತಿದ್ದಿತು.

೧ ವಾ ಪುಂಸಿ ಪದ್ಮಂ ನಲಿನಮಿತ್ಯಮರಃ. ೨ ಚಂದ್ರಸ್ಯ. ೩ ಇವ. ೪ ಶಾಸ್ತ್ರಶ್ರವಣಸಹಿತೌ. ೫ ಕಂಠೇ. ೬ ಅವಶ್ಯಾಯಸ್ತು ನೀಹಾರಸ್ತುಷಾರಸ್ತುಹಿನಂ ಹಿಮಮಿತ್ಯಮರಃ.

**ವಕ್ಷಸ್ಥಲೇನ ಪೃಥುನಾ ಸೋಢಾಚ್ಚಂದನಚರ್ಚಿಕಾಮ್ ।**
**ಮೇರುರ್ನಿಜತಟೇ ಲಗ್ನಾಂ ಶಾರದೀಮಿವ ಚಂದ್ರಿಕಾಮ್ ॥ ೩೬ ॥**

ಆ ವಜ್ರಜಂಘನು ಮಹಾಮೇರುಪರ್ವತದ ತಪ್ಪಲಲ್ಲಿ ಬಿದ್ದಿರುವ ಶರತ್ಕಾಲದ ಬೆಳದಿಂಗಳಿನಂತಿರುವ ಗಂಧಲೇಪನವನ್ನು ತನ್ನ ವಿಶಾಲವಾದ ಎದೆಯಲ್ಲಿ ಧರಿಸಿದ್ದನು.

**ಮುಕುಟೋದ್ಭಾಸಿನೋ [೧]ಮೇರುಂ ಮನ್ಯಸ್ಯ ಶಿರಸೋಂತಿಕೇ ।**
**ಬಾಹೂ ತಸ್ಯಾಯತೌ ನೀಲನಿಷಧಾವಿವ ರೇಜತುಃ ॥ ೩೭ ॥**

ಕಿರೀಟದಿಂದ ಪ್ರಕಾಶಿಸುತ್ತಿರುವುದೂ ತನ್ನನ್ನು ಮಹಾಮೇರು ಪರ್ವತವನ್ನಾಗಿ ತಿಳಿಯುವುದೂ ಆದ ಮಸ್ತಕದ ಸಮೀಪದಲ್ಲಿ ಆ ವಜ್ರಜಂಘನ ತೋಳುಗಳು ಉದ್ದವಾದ ನಿಷಧನೀಲಪರ್ವತಗಳೋಪಾದಿಯಲ್ಲಿ, ಶೋಭಿಸುತ್ತಿದ್ದುವು.

**ಸರಿದಾವರ್ತಗಂಭೀರಾ ನಾಭಿರ್ಮಧ್ಯೇಸ್ಯ ನಿರ್ಬಭೌ ।**
**ನಾರೀದೃಕ್ಕರಿಣೀ[೨]ರೋಧೇ [೩]ವಾರೀ ಖಾತೇವ [೪]ಹೃದ್ಭುವಾ ॥ ೩೮ ॥**

ಈ ವಜ್ರಜಂಘನ ಶರೀರಮಧ್ಯದಲ್ಲಿ ನದಿಯ ಸುಳಿಯಂತೆ ಗಂಭೀರವಾದ ನಾಭಿಯು, ಸ್ತ್ರೀಯರ ಕಣ್ಣುಗಳೆಂಬ ಹೆಣ್ಣಾನೆಗಳನ್ನು ಬಂಧಿಸುವುದಕ್ಕೋಸ್ಕರ ಮನ್ಮಥನು ತೋಡಿರುವ ಹಳ್ಳದೋಪಾದಿಯಲ್ಲಿ, ಶೋಭಿಸುತ್ತಿದ್ದಿತು.

**ರಶನಾವೇಷ್ಟಿತಂ ತಸ್ಯ ಕಟೀಮಂಡಲಮಾಬಭೌ ।**
**ಹೇಮವೇದೀ[೫]ಪರಿಕ್ಷಿಪ್ತಮಿವ ಜಂಬೂದ್ರುಮಸ್ಥಲಮ್ ॥ ೩೯ ॥**

ಚಿನ್ನದ ಉಡುದಾರದಿಂದ ಸುತ್ತಲ್ಪಟ್ಟಿರುವ ಆ ವಜ್ರಜಂಘನ ಸೊಂಟವು, ಬಂಗಾರದ ವೇದಿಕೆಯಿಂದ ಸುತ್ತಲ್ಪಟ್ಟಿರುವ ಜಂಬೂವೃಕ್ಷದ ಸ್ಥಲದೋಪಾದಿಯಲ್ಲಿ ಶೋಭಿಸುತ್ತಿದ್ದಿತು.

**ಊರುದ್ವಯಮಭಾತ್ತಸ್ಯ ಸ್ಥಿರಂ ವೃತ್ತಂ [೬]ಸುಸಂಹತಮ್ ।**
**ರಾಮಾಮನೋಗಜಾಲಾನಸ್ತಂಭಲೀಲಾಂ ಸಮುದ್ವಹತ್ ॥ ೪೦ ॥**

ಸುದೃಢವೂ ವರ್ತುಲಾಕಾರವೂ ಸ್ಥಿರವೂ ಆದ ಆ ವಜ್ರಜಂಘನ ತೊಡೆಗಳೆರಡು, ಸ್ತ್ರೀಯರ ಮನಸ್ಸುಗಳೆಂಬ ಆನೆಗಳನ್ನು ಕಟ್ಟುವ ಸ್ತಂಭಗಳೋಪಾದಿಯಲ್ಲಿ, ಶೋಭಿಸುತ್ತಿದ್ದುವು.

**ಜಂಘೇ ವಜ್ರಸ್ಥಿರೇ ನಾಸ್ಯ ವ್ಯಾವರ್ಣ್ಯೇತೇ ಮಯಾಧುನಾ ।**
**ತನ್ನಾಮ್ನೈವ [೭]ಗತಾರ್ಥತ್ವಾತ್ಪೌನರುಕ್ತ್ಯವಿಶಂಕಯಾ ॥ ೪೧ ॥**

ಈ ವಜ್ರಜಂಘನ ವಜ್ರದಂತೆ ಸ್ಥಿರವಾದ ಕಣಕಾಲುಗಳು 'ವಜ್ರಜಂಘ' ಎಂಬ ಹೆಸರಿನಿಂದಲೇ ವರ್ಣಿಸಲ್ಪಟ್ಟುದರಿಂದ ಪುನರುಕ್ತಿದೋಷ ಬರುವುದೆಂಬ ಸಂದೇಹದಿಂದ, ಪುನಃ ಅವುಗಳನ್ನು ವರ್ಣಿಸುವುದಿಲ್ಲ.

**ಚರಣದ್ವಿತಯಂ ಸೋಢಾದಾರಕ್ತಂ ಮೃದಿಮಾನ್ವಿತಮ್ ।**
**ಶ್ರಿತಂ ಶ್ರಿಯಾನಪಾಯಿನ್ಯಾ [೮]ಸಂಚಾರೀವ ಸ್ಥಲಾಂಬುಜಮ್ ॥ ೪೨ ॥**

ಮೃದುವಾಗಿಯೂ ಕೆಂಪಾಗಿಯೂ ಇರುವ ಆ ವಜ್ರಜಂಘನ ಕಾಲುಗಳೆರಡು ನಾಶರಹಿತವಾದ ಶೋಭೆಯುಳ್ಳವುಗಳಾಗಿ ಸಂಚರಿಸುವ ನೆಲದಾವರೆಗಳೋ ಎಂಬಂತಿದ್ದುವು.

**ರೂಪಸಂಪದಮುಷ್ಯೈಷಾ ಭೂಷಿತಾ ಶ್ರುತಸಂಪದಾ ।**
**ಶರಚ್ಚಂದ್ರಿಕಯೇವೇಂದೋರ್ಮೂರ್ತಿರಾನಂದಿನೀ ದೃಶಾಮ್ ॥ ೪೩ ॥**

೧ ಮೇರುಮಾತ್ಮಾನಂ ಮನ್ಯತ ಇತಿ ಮೇರುಂ ಮನ್ಯಂ ತಸ್ಯ. ೨ ರೋಧನಿಮಿತ್ತಮಿತ್ಯರ್ಥಃ. ೩ ವಾರೀ ತು ಗಜಬಂಧನೀತ್ಯಮರಃ. ೪ ಕಾಮೇನ. ೫ ಪರಿವೇಷ್ಟಿತಂ. ೬ ನಿಬಿಡಂ. ೭ ಜ್ಞಾತಃ. ೮ ಸಂಚರಣಶೀಲಂ.

ಶ್ರುತಜ್ಞಾನವೆಂಬ ಸಂಪತ್ತಿನಿಂದ ಭೂಷಿತವಾದ ಈ ವಜ್ರಜಂಘನ ರೂಪಸಂಪತ್ತು ಶರತ್ಕಾಲದ ಬೆಳದಿಂಗಳೊಡನೆ ಕೂಡಿರುವ ಚಂದ್ರನ ಮೂರ್ತಿಯಂತೆ, ನೇತ್ರಗಳಿಗೆ ಆನಂದವನ್ನುಂಟುಮಾಡುತ್ತಿದ್ದಿತು.

**ಪದವಾಕ್ಯಪ್ರಮಾಣೇಷು ಪರಂ ಪ್ರಾವೀಣ್ಯಮಾಗತಾ[೧] ।**
**ತಸ್ಯ ಧೀಃ ಸರ್ವಶಾಸ್ತ್ರೇಷು [೨]ದೀಪಿಕೇವ ವ್ಯದೀಪ್ಯತ ॥ ೪೪ ॥**

ಆ ವಜ್ರಜಂಘನ ಬುದ್ಧಿಯು ವ್ಯಾಕರಣ ನ್ಯಾಯ ಮೊದಲಾದ ಶಾಸ್ತ್ರಗಳಲ್ಲಿ ಬಹಳ ಪ್ರವೀಣವಾದುದಾಗಿ ಸರ್ವಶಾಸ್ತ್ರಗಳಲ್ಲಿಯೂ ದೀಪದಂತೆ ಅಥವಾ ಟಿಪ್ಪಣಿಯಂತೆ ದೇದೀಪ್ಯಮಾನವಾಗಿದ್ದಿತು.

**ಸ ಕಲಾಃ ಸಕಲಾ [೩]ವಿದ್ವಾನ್ವಿನೀತಾತ್ಮಾ ಜಿತೇಂದ್ರಿಯಃ ।**
**ರಾಜ್ಯಲಕ್ಷ್ಮೀಕಟಾಕ್ಷಾಣಾಂ ಲಕ್ಷ್ಯತಾಮುಗಮತ್ಕೃತೀ ॥ ೪೫ ॥**

ವಿನಯಸ್ವಭಾವವುಳ್ಳವನೂ ಜಿತೇಂದ್ರಿಯನೂ ಪುಣ್ಯಶಾಲಿಯೂ ಆದ ಆ ವಜ್ರಜಂಘನು ಸಮಸ್ತವಿದ್ಯೆಗಳನ್ನೂ ತಿಳಿದವನಾಗಿ ರಾಜ್ಯಲಕ್ಷ್ಮಿಯ ಕಟಾಕ್ಷಗಳಿಗೆ ಲಕ್ಷ್ಯನಾದನು. ರಾಜ್ಯಭಾರವನ್ನು ಹೊಂದುವುದಕ್ಕೆ ಯೋಗ್ಯನಾದನೆಂದರ್ಥವು.

**ನಿಸರ್ಗಜಾ ಗುಣಾಸ್ತಸ್ಯ ವಿಶ್ವಂ ಜನಮರಂಜಯನ್ ।**
**ಜನಾನುರಾಗಃ ಸೋಪುಷ್ಣಾನ್ನಹತೀಮಸ್ಯ ಯೋಗ್ಯತಾಮ್ ॥ ೪೬ ॥**

ಆ ವಜ್ರಜಂಘನ ಸ್ವಾಭಾವಿಕವಾದ ಗುಣಗಳು ಸಮಸ್ತಜನರನ್ನೂ ಸಂತೋಷಪಡಿಸಿದುವು. ಜನಗಳಿಗಿರುವ ಆ ಅನುರಾಗವು ಇವನ ಯೋಗ್ಯತೆಯನ್ನು ವೃದ್ಧಿಪಡಿಸಿತು.

**ಅನುರಾಗಂ ಸರಸ್ವತ್ಯಾಂ ಕೀರ್ತ್ಯಾಂ [೪]ಪ್ರಣಯನಿಘ್ನತಾಮ್ ।**
**ಲಕ್ಷ್ಮ್ಯಾಂ [೫]ವಾಲ್ಲಭ್ಯಮಾತನ್ವನ್ವಿದುಷಾಂ ಮೂರ್ಧ್ನಿ ಸೋಭವತ್ ॥**

ಆ ವಜ್ರಜಂಘನ ಸರಸ್ವತಿಯಲ್ಲಿ ಅನುರಾಗವನ್ನೂ ಕೀರ್ತಿಯಲ್ಲಿ ಸ್ನೇಹವನ್ನೂ ರಾಜ್ಯಲಕ್ಷ್ಮಿಯಲ್ಲಿ ಪ್ರಭುತ್ವವನ್ನೂ ಇರಿಸಿದ್ದನು. ಆದುದರಿಂದ ವಿದ್ವಾಂಸರಲ್ಲೆಲ್ಲ ಶ್ರೇಷ್ಠನಾಗಿದ್ದನು.

**ಸ ತಥಾಪಿ [೬]ಕೃತಪ್ರಜ್ಞೋ ಯೌವನಂ ಪರಮಾಪಿವಾನ್ ।**
**[೭]ಸ್ವಯಂಪ್ರಭಾನುರಾಗೇಣ ಪ್ರಾಯೋಭೂತ್ ಸ್ತ್ರೀಷು ನಿಸ್ಪೃಹಃ ॥ ೪೮ ॥**

ಬಹಳ ಬುದ್ಧಿಶಾಲಿಯಾದ ಆ ವಜ್ರಜಂಘನು ಚೆನ್ನಾಗಿ ಯೌವನವನ್ನು ಹೊಂದಿದ್ದರೂ ಸ್ವರ್ಗದಲ್ಲಿ ಲಲಿತಾಂಗದೇವನಾಗಿದ್ದಾಗ ಪ್ರಿಯಳಾಗಿದ್ದ ಸ್ವಯಂಪ್ರಭಾದೇವಿಯಲ್ಲಿ ಅನುರಾಗದಿಂದಲೋ ಎಂಬಂತೆ, ಬೇರೆ ಸ್ತ್ರೀಯರಲ್ಲಿ ನಿಸ್ಪೃಹನಾಗಿದ್ದನು.

**ತಸ್ಯೇತಿ ಪರಮಾನಂದಾತ್ಕಾಲೇ [೮]ಗಚ್ಛತಿ ಧೀಮತಃ ।**
**ಸ್ವಯಂಪ್ರಭಾ ದಿವಶ್ಚ್ಯುತ್ವಾ ಕ್ವೋತ್ಪನ್ನೇತ್ಯಧುನೋಚ್ಯತೇ ॥ ೪೯ ॥**

ಹೀಗೆ ಆ ಮಹಾಪ್ರಾಜ್ಞನಾದ ವಜ್ರಜಂಘನ ಕಾಲವು ಕಳೆಯುತ್ತಿರಲು ಆ ಸ್ವಯಂಪ್ರಭಾದೇವಿಯು ಸ್ವರ್ಗದಿಂದ ಚ್ಯುತಳಾಗಿ ಎಲ್ಲಿ ಹುಟ್ಟಿದಳೆಂಬ ವಿಷಯವನ್ನು ಈಗ ಹೇಳುತ್ತೇವೆ.

**ಅಥ ಸ್ವಯಂಪ್ರಭಾ ದೇವೀ ತಸ್ಮಿನ್ಪ್ರಚ್ಯುತಿಮೀಯುಷಿ ।**
**ತದ್ವಿಯೋಗಾಚ್ಚಿರಂ ಖಿನ್ನಾ ಚಕ್ರಾಹ್ವೇವ ವಿಭರ್ತೃಕಾ ॥ ೫೦ ॥**

೧ ಸತೀ. ೨ ಟಿಪ್ಪಣವತ್. ೩ ವಿದನ್. ೪ ಸ್ನೇಹಾಧೀನತಾಂ. ೫ ವಲ್ಲಭತ್ವಂ. ೬ ಸಂಪೂರ್ಣಧೀಃ. ೭ ಸ್ವಯಂಪ್ರಭಾನುರಾಗೇಣೇವೇತ್ಯರ್ಥಃ, ಉತ್ಪ್ರೇಕ್ಷಾವ್ಯಂಜಕೋಯಂ ಶಬ್ದಃ. ೮ ಸತಿ.

ಆಮೇಲೆ ಆ ಸ್ವಯಂಪ್ರಭಾದೇವಿಯು, ಲಲಿತಾಂಗದೇವನು ಸ್ವರ್ಗದಿಂದ ಚ್ಯುತನಾಗುತ್ತಿರಲು ಅವನ ವಿಯೋಗದಿಂದ, ಪತಿಯಿಲ್ಲದ ಹೆಣ್ಣುಚಕ್ರವಾಕ ಪಕ್ಷಿಯಂತೆ, ಬಹುಕಾಲದವರೆಗೆ ದುಃಖಿತಳಾಗಿದ್ದಳು.

**[೧]ಶುಚಾವಿವ ಚ ಸಂತಾಪಧಾರಿಣೀಭೂರಭೂ[೨]ದಭಾ ।**
**ಸಮುಜ್ಝಿತಕಲಾಲಾಪಾ ಕೋಕಿಲೇವ ಘನಾಗಮೇ ॥ ೫೧ ॥**

ಗ್ರೀಷ್ಮ ಋತುವಿನಲ್ಲಿ ಭೂಮಿಯು ಕಾದು ತೇಜೋರಹಿತವಾಗಿರುವಂತೆ ಈ ಸ್ವಯಂಪ್ರಭಾದೇವಿಯು ಶೋಕದಿಂದ ಸಂತಾಪವುಳ್ಳವಳಾಗಿ ಕಾಂತಿರಹಿತಳಾದಳು. ವರ್ಷಾಕಾಲದಲ್ಲಿ ಹೆಣ್ಣು ಕೋಗಿಲೆಯು ಮಧುರವಾದ ಆಲಾಪವನ್ನು ಬಿಟ್ಟುಬಿಡುವಂತೆ, ಸ್ವಯಂಪ್ರಭಾದೇವಿಯು ಮಧುರಭಾಷಣವನ್ನು ಬಿಟ್ಟಳು.

**ದಿವ್ಯಸ್ಯೇವೌಷಧಸ್ಯಾ[೩]ಸ್ಯ ವಿರಹಾತ್ತಾಂ ತಥಾ ಸತೀಮ್ ।**
**ಆಧಯೋ ಪೀಡಯನ್ಗಾಢಂ ವ್ಯಾಧಿ[೪]ಕಲ್ಪಾಃ ಸುದುಃಸಹಾಃ ॥ ೫೨ ॥**

ಆಗ, ಉತ್ತಮವಾದ ಔಷಧವಿಲ್ಲದಿದ್ದರೆ ಸಹಿಸಲಶಕ್ಯವಾದ ರೋಗಗಳು ಪೀಡಿಸುವಂತೆ, ಈ ಲಲಿತಲಾಂಗದೇವನ ವಿರಹದಿಂದುಂಟಾದುವೂ ಸಹಿಸಲಶಕ್ಯವೂ ಆದ ಮನೋವ್ಯಥೆಗಳು ಆ ಸ್ವಯಂಪ್ರಭಾದೇವಿಯನ್ನು ಬಹಳವಾಗಿ ಪೀಡಿಸಿದುವು.

**ತತೋಸ್ಯಾ ದೃಢಧರ್ಮಾಖ್ಯೋ ದೇವೋಂತಃ[೫]ಪರಿಷದ್ಭವಃ ।**
**ಶುಚಂ ವ್ಯಪೋಹ್ಯ ಸನ್ಮಾರ್ಗೇ ಮತಿ[೬]ಮಾಸಂಜಯತ್ತರಾಮ್ ॥ ೫೩ ॥**

ತರುವಾಯ ಈ ಸ್ವಯಂಪ್ರಭಾದೇವಿಯ ಅಂತರಂಗ ಸಭೆಯಲ್ಲಿರುವ ದೃಢಧರ್ಮನೆಂಬ ದೇವನೊಬ್ಬನು ಇವಳ ಶೋಕವನ್ನು ಹೋಗಲಾಡಿಸಿ ಧರ್ಮಮಾರ್ಗದಲ್ಲಿ ಬುದ್ಧಿಯನ್ನು ದೃಢಪಡಿಸಿದನು.

**ಸಾ ಚಿತ್ರಪ್ರತಿಮೇವಾಸೀತ್ತದಾ ಭೋಗೇಷು ನಿಸ್ಪೃಹಾ ।**
**ವಿಮುಕ್ತಮೃತಿಭೀಶೂರಪುರುಷಸ್ಯೇವ ಶೇಮುಷೀ ॥ ೫೪ ॥**

ಆಗ ಆ ಸ್ವಯಂಪ್ರಭಾದೇವಿಯು ಭೋಗಗಳಲ್ಲಿ ಇಚ್ಛೆಯಿಲ್ಲದವಳಾಗಿ ಚಿತ್ರದಲ್ಲಿ ಬರೆದ ಗೊಂಬೆಯಂತೆಯೂ ಮರಣಭಯವನ್ನು ಬಿಟ್ಟ ಶೂರಪುರುಷನ ಬುದ್ಧಿಯಂತೆಯೂ ನಿಶ್ಚಂಚಲಳಾದಳು.

**ಶ್ರೀಮತೀ ಸಾ ಭವಿಷ್ಯಂತೀ ಭವ್ಯ[೭]ಮಾಲೇವ ಧರ್ಮಭಾಕ್ ।**
**ಷಣ್ಮಾಸಾನ್ ಜಿನಪೂಜಾಯಾಮುದ್ಯತಾಭೂನ್ಮನಸ್ವಿನೀ ॥ ೫೫ ॥**

ಮುಂದೆ ಶ್ರೀಮತಿಯಾಗಿ ಹುಟ್ಟುವ ಆ ಸ್ವಯಂಪ್ರಭಾದೇವಿಯು, ಧರ್ಮಸೇವನೆಯನ್ನು ಮಾಡುವ ಭವ್ಯರ ಸಮೂಹದಂತೆ, ಆರು ತಿಂಗಳುಗಳವರೆಗೂ ಯಥೇಚ್ಛವಾಗಿ ಜಿನಪೂಜೆಯಲ್ಲಿ ಉದ್ಯತಳಾಗಿದ್ದಳು.

**ತತಃ ಸೌಮನಸೋದ್ಯಾನಪೂರ್ವದಿಗ್ಜಿನಮಂದಿರೇ ।**
**ಮೂಲೇ ಚೈತ್ಯತರೋಃ ಸಮ್ಯಕ್ ಸ್ಮರಂತೀ ಗುರುಪಂಚಕಮ್ ॥ ೫೬ ॥**

**ಸಮಾಧಿನಾ ಕೃತಪ್ರಾಣತ್ಯಾಗಾ [೮]ಪ್ರಾಚ್ಯೋಷ್ಟ ಸಾ ದಿವಃ ।**
**ತಾರಕೇವ ನಿಶಾಪಾಯೇ ಸಹಸಾದೃಶ್ಯತಾಂ ಗತಾ ॥ ೫೭ ॥**

ಆಮೇಲೆ ಸೌಮನಸೋದ್ಯಾನದ ಪೂರ್ವದಿಕ್ಕಿನ ಜಿನಮಂದಿರದಲ್ಲಿ ಚೈತ್ಯವೃಕ್ಷದ ಬುಡದಲ್ಲಿ ಪಂಚನಮಸ್ಕಾರಮಂತ್ರಗಳನ್ನು ಚೆನ್ನಾಗಿ ಸ್ಮರಿಸುತ್ತ ಆ ಸ್ವಯಂಪ್ರಭಾದೇವಿಯು ಸಮಾಧಿಯಿಂದ ಪ್ರಾಣಗಳನ್ನು ಬಿಟ್ಟು ಸ್ವರ್ಗದಿಂದ ಚ್ಯುತಳಾಗಿ, ರಾತ್ರಿಯು ಕಳೆದುಹೋದಮೇಲೆ ನಕ್ಷತ್ರವು ಅದೃಶ್ಯವಾಗುವಂತೆ, ಅದೃಶ್ಯಳಾದಳು.

೧. ಗ್ರೀಷ್ಮೇ. ೨ ನಿಷ್ಪ್ರಭಾ. ೩. ಲಲಿತಾಂಗಸ್ಯ. ೪ ಸದೃಶಾಃ. ೫ ಪರಿಷತ್ತ್ರಯದೇವೇಷು ಅಭ್ಯಂತರಪರಿಷದಿ ಭವಃ. ೬ ಆಪಾದಯತ್. ೭ ಸಮೂಹಃ. ೮ ಚ್ಯುಙ್ ಗತೌ ಲುಙ್, ಪ್ರಚ್ಯುತೇತ್ಯರ್ಥಃ.

**ಪ್ರಾಗ್ವ್ಯಾಪಿತೇ ವಿದೇಹೇಸ್ತಿ ನಗರೀ ಪುಂಡರೀಕಿಣೀ ।**
**ತಸ್ಯಾಃ ಪತಿರಭೂನ್ನಾಮ್ನಾ ವಜ್ರದಂತೋ ಮಹೀಪತಿಃ ॥ ೫೮ ॥**

ಹಿಂದೆ ಹೇಳಿದ ಪೂರ್ವವಿದೇಹದಲ್ಲಿ ಪುಂಡರೀಕಿಣೀಯೆಂಬ ಪಟ್ಟಣವಿದೆ. ಆ ಪಟ್ಟಣಕ್ಕೆ ವಜ್ರದಂತನೆಂಬುವವನು ರಾಜನಾಗಿದ್ದನು.

**ಲಕ್ಷ್ಮೀರಿವಾಸ್ಯ ಕಾಂತಾಂಗೀ ಲಕ್ಷ್ಮೀಮತಿರಭೂತ್ಪ್ರಿಯಾ ।**
**ಸ ತಯಾ ಕಲ್ಪವಲ್ಲ್ಯೇವ [೧]ಸುರಾಗೋಲಂಕೃತೋ ನೃಪಃ ॥ ೫೯ ॥**

ಈ ವಜ್ರದಂತರಾಜನಿಗೆ ಲಕ್ಷ್ಮೀದೇವಿಯಂತೆ ಸುಂದರಿಯಾದ ಲಕ್ಷ್ಮೀಮತಿ ಯೆಂಬುವವಳು ಪತ್ನಿಯಾಗಿದ್ದಳು. ಕಲ್ಪವೃಕ್ಷವು ಕಲ್ಪಲತೆಯಿಂದ ಅಲಂಕೃತ ವಾಗಿರುವಂತೆ ಆ ವಜ್ರದಂತರಾಜನು ಆ ಲಕ್ಷ್ಮೀಮತಿಯಿಂದ ಅಲಂಕೃತನಾಗಿದ್ದನು.

**ತಯೋಃ ಪುತ್ರೀ ಬಭೂವಾಸೌ ವಿಶ್ರುತಾ ಶ್ರೀಮತೀತಿ ಯಾ ।**
**ಪತಾಕೇವ ಮನೋಜಸ್ಯ ರೂಪಸೌಂದರ್ಯಲೀಲಯಾ ॥ ೬೦ ॥**

ಈ ಸ್ವಯಂಪ್ರಭಾದೇವಿಯು ಸ್ವರ್ಗದಿಂದ ಚ್ಯುತಳಾಗಿ ಆ ವಜ್ರದಂತನಿಗೂ ಲಕ್ಷ್ಮೀಮತಿಗೂ, ರೂಪಸೌಂದರ್ಯವಿಲಾಸದಿಂದ ಮನ್ಮಥನ ಧ್ವಜಪತಾಕೆ ಯೋಪಾದಿಯಲ್ಲಿ, ಶ್ರೀಮತಿಯೆಂದು ಪ್ರಸಿದ್ಧಳಾದ ಮಗಳಾಗಿ ಹುಟ್ಟಿದಳು.

**ನವಯೌವನಮಾಸಾದ್ಯ ಮಧುಮಾಸಮಿವಾಧಿಕಮ್ ।**
**ಲೋಕಸ್ಯ ಪ್ರಮದಂ ತೇನೇ ಬಾಲಾ ಶಶಿಕಲೇವ ಸಾ ॥ ೬೧ ॥**

ಬಾಲೆಯಾದ ಆ ಶ್ರೀಮತಿಯು, ಫಲಪುಷ್ಪಗಳಿಂದ ಸಮೃದ್ಧವಾದ ಚೈತ್ರಮಾಸದಂತೆ, ನವಯೌವನವನ್ನು ಹೊಂದಿ, ಚಂದ್ರನ ಕಲೆಯಂತೆ, ಲೋಕಕ್ಕೆ ಅಧಿಕವಾದ ಸಂತೋಷವನ್ನುಂಟುಮಾಡಿದಳು.

**ನಖೈರಾಪಾಟಲೈಸ್ತಸ್ಯಾ [೨]ಜಿಗ್ಯೇ ಕುರವಕಚ್ಛವಿಃ ।**
**ಅಶೋಕಪಲ್ಲವಚ್ಛಾಯಾ ಪಾದಭಾಸಾಧರೀಕೃತಾ ॥ ೬೨ ॥**

ಆ ಶ್ರೀಮತಿಯ ಕೆಂಪಾದ ಉಗುರುಗಳು ಕೆಂಪುಗೋರಟೆಹೂವಿನ ಕಾಂತಿಯನ್ನು ಜಯಿಸಿದುವು. ಪಾದಕಾಂತಿಯಿಂದ ಅಶೋಕವೃಕ್ಷದ ತಳಿರುಗಳ ಕಾಂತಿಯು ಕೀಳಾಗಿ ಮಾಡಲ್ಪಟ್ಟಿದ್ದಿತು.

**ರಣನ್ನೂಪುರಮತ್ತಾಲಿಝುಂಕಾರಮುಖರೀಕೃತೇ ।**
**ಪಾದಾರವಿಂದೇ ಸಾಧತ್ತ ಲಕ್ಷ್ಮ್ಯಾಃ ಶಶ್ವತ್ಕೃತಾಸ್ಪದೇ ॥ ೬೩ ॥**

ಆ ಶ್ರೀಮತಿಯು ಝುಣಝುಣವೆಂದು ಶಬ್ದ ಮಾಡುತ್ತಿರುವ ಪಾದಕಡಗ ಗಳೆಂಬ ಮದಿಸಿದ ಭ್ರಮರಗಳ ಝೇಂಕಾರದಿಂದ ಶಬ್ದಾಯಮಾನವೂ ಲಕ್ಷ್ಮೀದೇವಿಗೆ ಯಾವಾಗಲೂ ವಾಸಸ್ಥಾನವೂ ಆದ ಎರಡು ಪಾದಗಳೆಂಬ ಕಮಲಗಳನ್ನು ಧರಿಸಿದ್ದಳು.

**ಚಿರಂ ಯದು[೩]ದವಾಸೇನ ದಧ[೪]ತ್ಕಂಟಕಿತಾಂ ತನುಮ್ ।**
**ವ್ರತಂ ಚಚಾರ ತೇನಾಬ್ಜಂ [೫]ಮನ್ಯೇಗಾತ್ತತ್ಪದೋಪಮಾಮ್ ॥ ೬೪ ॥**

ತಾವರೆಯು ರೋಮಾಂಚವುಳ್ಳ-ಮುಳ್ಳುಗಳುಳ್ಳ ಶರೀರವನ್ನು ಧರಿಸಿಕೊಂಡು ಬಹುದಿವಸಗಳವರೆಗೆ ನೀರಿನಲ್ಲಿ ವಾಸಮಾಡಿ ವ್ರತ-ತಪಸ್ಸನ್ನು ಆಚರಿಸಿದುದರಿಂದ ಶ್ರೀಮತಿಯ ಪಾದಗಳ ಸಾದೃಶ್ಯವನ್ನು ಹೊಂದಿತೆಂಬುದಾಗಿ ತಿಳಿಯುತ್ತೇನೆ.

೧ ಕಲ್ಪತರುಃ. ೨ ಕರ್ಮಣಿ ಲಿಟ್. ೩ ಜಲವಾಸೇನ. ೪ ರೋಮಾಂಚಯುಕ್ತಾಂ ಕಂಟಕಯುಕ್ತಾಂ ಚ. ೫ ಉತ್ಪ್ರೇಕ್ಷಾದ್ಯೋತಕೋಯಂ ಶಬ್ದಃ, ಮನ್ಯೇ ಶಂಕೇ ಧ್ರುವಮಿತ್ಯಾದಿ.

**ಜಂಘೇ ರರಾಜತುಸ್ತಸ್ಯಾಃ ಕುಸುಮೇಷೋರಿವೇಷುಧೀ ।**
**ಊರುದಂಡೌ ಚ ಬಿಭ್ರಾತೇ ಕಾಮೇಭಾಲಾನಯಷ್ಟಿತಾಮ್ ॥ ೬೫ ॥**

ಆ ಶ್ರೀಮತಿಯ ಕಣಕಾಲುಗಳೆರಡು, ಮನ್ಮಥನ ಬಾಣಗಳನ್ನು ಹಾಕುವ ಬತ್ತಲಿಕೆಗಳೋಪಾದಿಯಲ್ಲಿ, ಪ್ರಕಾಶಿಸುತ್ತಿದ್ದುವು. ತೊಡೆಗಳೆರಡು ಕಾಮನೆಂಬ ಆನೆಯನ್ನು ಕಟ್ಟುವ ಕಂಭಗಳೋಪಾದಿಯಲ್ಲಿದ್ದುವು.

**ನಿತಂಬಬಿಂಬಮೇತಸ್ಯಾಃ ಸರಸ್ಯಾ ಇವ ಸೈಕತಮ್ ।**
**ಲಸದ್ದುಕೂಲನೀರೇಣ [೧]ಸ್ಥಗಿತಂ ರುಚಿಮಾನಶೇ ॥ ೬೬ ॥**

ಶುಭ್ರವಾದ ನವಿರಾದ ಸೀರೆಯೆಂಬ ನೀರಿನಿಂದ ಮುಚ್ಚಿಕೊಂಡಿರುವ ಈ ಶ್ರೀಮತಿಯ ನಿತಂಬಪ್ರದೇಶವು, ಸರೋವರದ ಮರಳುಗುಡ್ಡೆಯೋಪಾದಿಯಲ್ಲಿ, ಶೋಭಿಸುತ್ತಿದ್ದಿತು.

**[೨]ವಲಿಭಂ ದಕ್ಷಿಣಾವರ್ತನಾಭಿಮಧ್ಯಂ ಬಭಾರ ಸಾ ।**
**ನದೀವ ಜಲಮಾವರ್ತಸಂಶೋಭಿಸತರಂಗಕಮ್ ॥ ೬೭ ॥**

ನದಿಯು ಸುಳಿಗಳಿಂದ ಶೋಭಿಸುತ್ತಿರುವ ತೆರೆಮಾಲೆಗಳುಳ್ಳ ನೀರನ್ನು ಧರಿಸಿರುವಂತೆ, ಆ ಶ್ರೀಮತಿಯು ತ್ರಿವಲಿಗಳುಳ್ಳುದೂ ದಕ್ಷಿಣಕ್ಕೆ ಸುತ್ತಿದ ನಾಭಿಯುಳ್ಳುದೂ ಆದ ಮಧ್ಯಭಾಗವನ್ನು ಧರಿಸಿದ್ದಳು.

**ಮಧ್ಯಂ ಸ್ತನಭರಾಕ್ರಾಂತಿ ಚಿಂತಯೇವಾತ್ತತಾನವಮ್ ।**
**ರೋಮಾವಲಿಚ್ಛಲೇನಾಸ್ಯಾ ದಧೇವಷ್ಟಂಭಯಷ್ಟಿಕಾಮ್ ॥ ೬೮ ॥**

ಈ ಶ್ರೀಮತಿಯ ಕೃಶವಾದ ಮಧ್ಯಭಾಗವು, ಸ್ತನಗಳಭಾರದ ಚಿಂತೆಯಿಂದಲೋ ಎಂಬಂತೆ, ಹೊಟ್ಟೆಯಲ್ಲಿರುವ ರೋಮಗಳ ಪಂಕ್ತಿಯ ನೆಪದಿಂದ ಒಂದು ಆಧಾರಸ್ತಂಭವನ್ನು ಧರಿಸಿದ್ದಿತು.

**ನಾಭಿರಂಧ್ರಾದಧಸ್ತನ್ವೀಂ ರೋಮರಾಜೀಮಸೌ ದಧೇ ।**
**[೩]ಉಪಘ್ನಾಂತರಮನ್ವಿಚ್ಛೋಃ ಕಾಮಾಹೇಃ [೪]ಪದವೀಮಿವ ॥ ೬೯ ॥**

ಈ ಶ್ರೀಮತಿಯ ನಾಭಿರಂಧ್ರದ ಕೆಳಗೆ ಸೂಕ್ಷ್ಮವಾಗಿರುವ ರೋಮಪಂಕ್ತಿಯು ಬೇರೊಂದು ಆಶ್ರಯವನ್ನಿಚ್ಛಿಸುವ ಕಾಮನೆಂಬ ಸರ್ಪವು ಹೋಗುವ ಮಾರ್ಗವೋ ಎಂಬಂತಿದ್ದಿತು.

**ಲತೇವಾಸೌ ಮೃದೂ ಬಾಹೂ ದಧೌ ವಿಟಪಸಚ್ಛವೀ ।**
**ನಖಾಂಶುಮಂಜರೀ ಚಾಸ್ಯಾ ಧತ್ತೇ ಸ್ಮ ಕುಸುಮಶ್ರಿಯಮ್ ॥ ೭೦ ॥**

ಕೊಂಬೆಗಳಿಗೆ ಸದೃಶವೂ ಕೋಮಲವೂ ಆದ ತೋಳುಗಳುಳ್ಳ ಈ ಶ್ರೀಮತಿಯು ಲತೆಯಂತೆ ಕಾಣುತ್ತಿದ್ದಳು. ಇವಳ ಉಗುರುಕಾಂತಿಗಳ ಸಮೂಹವು ಪುಷ್ಪಗಳ ಶೋಭೆಯನ್ನು ಧರಿಸಿದ್ದಿತು. ಉಗುರುಗಳ ಕಾಂತಿಯು ಪುಷ್ಪದಂತಿದ್ದಿತೆಂದರ್ಥವು.

**ಆನೀಲಚೂಚುಕೌ ತಸ್ಯಾಃ ಕುಚಕುಂಭೌ ವಿರೇಜತುಃ ।**
**ಪೂರ್ಣೌ ಕಾಮರಸಸ್ಯೇವ ನೀಲರತ್ನಾಭಿಮುದ್ರಿತೌ ॥ ೭೧ ॥**

ಆ ಶ್ರೀಮತಿಯ ಕಪ್ಪಾದ ತುದಿಗಳುಳ್ಳ ಸ್ತನಗಳು, ನೀಲರತ್ನದಿಂದ ಮುದ್ರೆ ಮಾಡಿರುವ ಕಾಮರಸದ ಪೂರ್ಣಕುಂಭಗಳೋ ಎಂಬಂತೆ, ಶೋಭಿಸುತ್ತಿದ್ದುವು.

**ಸ್ತನಾಂಶುಕಂ ಶುಕಚ್ಛಾಯಂ ತಸ್ಯಾಃ ಸ್ತನತಟಾಶ್ರಿತಮ್ ।**
**ಬಭಾಸೇ ರುದ್ಧಪಂಕೇಜಕುಡ್ಮಲಂ ಶೈವಲಂ ಯಥಾ ॥ ೭೨ ॥**

೧ ಆಚ್ಛಾದಿತಂ. ೨ ವಲಿತ್ರಯಮಸ್ಯಾಸ್ತೀತಿ ವಲಿಭಂ, ವಲಿತುಂದೀತ್ಯಾದಿಸೂತ್ರೇಣ ಭಪ್ರತ್ಯಯಃ. ೩ ಸ್ಯಾದುಪಘ್ನೋಂತಿಕಾಶ್ರಯ ಇತ್ಯಮರಃ. ೪ ಮಾರ್ಗಂ.

ಆ ಶ್ರೀಮತಿಯ ಸ್ತನಗಳಮೇಲಿರುವುದೂ ಗಿಣಿಯ ಬಣ್ಣವುಳ್ಳುದೂ ಆದ ಕುಪ್ಪಸ(ರವಕೆ)ವು, ತಾವರೆಮೊಗ್ಗುಗಳನ್ನು ಆವರಿಸಿಕೊಂಡಿರುವ ಆವಚಿಯಂತೆ ಪ್ರಕಾಶಿಸುತ್ತಿದ್ದಿತು.

**ಹಾರಸ್ತಸ್ಯಾಃ ಸ್ತನೋಪಾಂತೇ ನೀಹಾರ[೧]ರುಚಿನಿರ್ಮಲಃ ।**
**ಶ್ರಿಯಮಾಧತ್ತ ಫೇನಸ್ಯ ಕಂಜಕುಡ್ಮಲಸಂಸ್ಪೃಶಃ ॥ ೭೩ ॥**

ಆ ಶ್ರೀಮತಿಯ ಸ್ತನಗಳಸಮೀಪದಲ್ಲಿ ಚಂದ್ರನಂತೆ ನಿರ್ಮಲವಾದ ಮುಕ್ತಾಹಾರವು ತಾವರೆಮೊಗ್ಗುಗಳನ್ನು ಸ್ಪರ್ಶಿಸುತ್ತಿರುವ ನೊರೆಯ ಶೋಭೆಯನ್ನು ಧರಿಸಿದ್ದಿತು.

**ಗ್ರೀವಾಸ್ಯಾ [೨]ರಾಜಿಭಿರ್ಭೇಜೇ ಕಂಬುಕಂದರವಿಭ್ರಮಮ್ ।**
**[೩]ಸ್ರಸ್ತಾವಂಸೌ ಚ ಹಂಸೀವ [೪]ಪಕ್ಷತೀ ಸಾ ದಧೇ [೫]ಶುಚೀ ॥ ೭೪ ॥**

ಈ ಶ್ರೀಮತಿಯ ಶಂಖದಂತೆ ಸುಂದರವಾದ ಕಂಠವು ಮೂರು ರೇಖೆಗಳಿಂದ ಶೋಭಿಸುತ್ತಿದ್ದಿತು. ಸ್ತ್ರೀಹಂಸಪಕ್ಷಿಯು ಶುಭ್ರವಾದ ಎರಡುರೆಕ್ಕೆಗಳ ಬುಡಗಳನ್ನು ಧರಿಸಿರುವಂತೆ, ಆ ಶ್ರೀಮತಿಯು ಸಾಮುದ್ರಿಕಾಲಕ್ಷಣಯುಕ್ತವೂ ಸ್ವಲ್ಪ ಬಗ್ಗಿರುವುವೂ ಆದ ಎರಡು ಭುಜಗಳನ್ನು ಧರಿಸಿದ್ದಳು.

**ಮುಖಮಸ್ಯಾ ದಧೇ ಚಂದ್ರಪದ್ಮಯೋಃ ಶ್ರಿಯ[೬]ಮಕ್ರಮಾತ್ ।**
**ನೇತ್ರಾನಂದಿಸ್ಮಿತಜ್ಯೋತ್ಸ್ನಂ ಸ್ಫುರದ್ದಂತಾಂಶುಕೇಸರಮ್ ॥ ೭೫ ॥**

ಕಣ್ಣುಗಳಿಗೆ ಆನಂದವನ್ನುಂಟುಮಾಡುವ ಮುಗುಳುನಗೆಯೆಂಬ ಬೆಳದಿಂಗಳುಳ್ಳುದೂ ಪ್ರಕಾಶಮಾನವಾದ ಹಲ್ಲುಗಳ ಕಾಂತಿಗಳೆಂಬ ಕುಸುಮಗಳುಳ್ಳುದೂ ಆದ ಈ ಶ್ರೀಮತಿಯ ಮುಖವು ಒಂದೇ ಕಾಲದಲ್ಲಿ ಚಂದ್ರನ ಶೋಭೆಯನ್ನೂ ತಾವರೆಯ ಶೋಭೆಯನ್ನೂ ಧರಿಸಿದ್ದಿತು.

**ಸ್ವಕಲಾವೃದ್ಧಿಹಾನಿಭ್ಯಾಂ ಚಿರಂ ಚಾಂದ್ರಾಯಣಂ ತಪಃ ।**
**ಕೃತ್ವಾ ನೂನಂ ಶಶೀ ಪ್ರಾಪತ್ತದ್ವಕ್ತ್ರಸ್ಯೋಪಮಾನತಾಮ್ ॥ ೭೬ ॥**

ಚಂದ್ರನು ನಿಶ್ಚಯವಾಗಿ ತನ್ನ ಕಲೆಗಳ ಹಾನಿವೃದ್ಧಿಗಳಿಂದ ಬಹುಕಾಲದವರೆಗೆ ಚಾಂದ್ರಾಯಣತಪಸ್ಸನ್ನು ಮಾಡಿ ಆ ಶ್ರೀಮತಿಯ ಮುಖದ ಸಾದೃಶ್ಯವನ್ನು ಹೊಂದಿದನು.

**ಕರ್ಣೌ ಸಹೋತ್ಪಲೌ ತಸ್ಯಾ ನೇತ್ರಾಭ್ಯಾಂ ಲಂಘಿತೌ [೭]ಭೃಶಮ್ ।**
**[೮]ಸ್ವಾಯತ್ತ್ಯಾ ರೋಧಿನಂ ಕೋ ವಾ ಸಹೇತೋ[೯]ಪಾಂತವರ್ತಿನಮ್ ॥**

ಆ ಶ್ರೀಮತಿಯ ಕಣ್ಣುಗಳು ಕನ್ನೈದಿಲೆಪುಷ್ಪಗಳೊಡನೆ ಕೂಡಿಕೊಂಡಿರುವ ಕಿವಿಗಳನ್ನು ನಿಜವಾಗಿಯೂ ಮೀರಿದ್ದುವು. ತನ್ನ ಸಂಪತ್ತಿನಿಂದ ದೀರ್ಘತ್ವದಿಂದ ತಡೆಯುತ್ತಿರುವ ಸಮೀಪಸ್ಥನನ್ನು ಯಾವನು ತಾನೆ ಸಹಿಸುವನು ?

**ಕರ್ಣಪೂರೋತ್ಪಲಂ ತಸ್ಯಾ ನೇತ್ರೋಪಾಂತೇ ಸ್ಮ ಲಕ್ಷ್ಯತೇ ।**
**ದಿದೃಕ್ಷಮಾಣಮಸ್ಯೇವ ಶೋಭಾಂ ಸ್ವಶ್ರೀ[೧೦]ವಿಹಾಸಿನೀಮ್ ॥ ೭೮ ॥**

ಆ ಶ್ರೀಮತಿಯ ಕಣ್ಣುಗಳ ಸಮೀಪದಲ್ಲಿ ಕಿವಿಗಳಿಗೆ ಆಭರಣವಾಗಿರುವ ಕನ್ನೈದಿಲೆ ಪುಷ್ಪವು ತನ್ನ ಶೋಭೆಯನ್ನು ಪರಿಹಾಸ್ಯಮಾಡುವ ಈ ಕಣ್ಣಿನ ಶೋಭೆಯನ್ನು ನೋಡುತ್ತಿದೆಯೋ ಎಂಬಂತೆ, ಕಾಣುತ್ತಿದ್ದಿತು.

**ಮುಖಪಂಕಜಸಂಸಕ್ತಾನಲ[೧೧]ಕಾಲೀನ್ ಬಭಾರ ಸಾ ।**
**ಮಲಿನಾನಪಿ ನೋ ಧತ್ತೇ ಕಃ ಶ್ರಿತಾನ[೧೨]ನಪಾಯಿನಃ ॥ ೭೯ ॥**

ಆ ಶ್ರೀಮತಿಯು ಮುಖವೆಂಬ ಕಮಲದಲ್ಲಿ ಸಂಬಂಧಿಸಿಕೊಂಡಿದ್ದ ಕುರುಳು ಕೂದಲುಗಳೆಂಬ ಭ್ರಮರಗಳನ್ನು ಧರಿಸಿದ್ದಳು. ಆಶ್ರಯಮಾಡಿದವರು ಮಲಿನರಾಗಿದ್ದರೂ ಅವರನ್ನು ಅಪಾಯರಹಿತರನ್ನಾಗಿ ಮಾಡಿ ಯಾರುತಾನೆ ಕಾಪಾಡುವುದಿಲ್ಲ ?

**ಧಮ್ಮಿಲ್ಲಭಾರಮಾ[೧]ಸ್ರಸ್ತಂ ಸಾ ದಧೇ ಮೃದು[೨]ಕುಂಚಿತಮ್ ।**
**ಚಂದನದ್ರುಮವಲ್ಲೀವ ಕೃಷ್ಣಾಹೇ[೩]ರ್ಭೋಗಮಾಯತಮ್ ॥ ೮೦ ॥**

ಚಂದನವೃಕ್ಷದ ಶಾಖೆಯು ಕೃಷ್ಣಸರ್ಪದ ದೀರ್ಘವಾದ ಶರೀರ ಅಥವಾ ಹೆಡೆಯನ್ನು ಧರಿಸುವಂತೆ, ಆ ಶ್ರೀಮತಿಯು ಮೃದುವೂ ವಕ್ರವೂ ಬಿಚ್ಚಿಹೋದುದೂ ಆದ ತುರುಬನ್ನು ಧರಿಸಿದ್ದಳು.

**ಇತ್ಯಸೌ ಮದನೋನ್ಮಾದಜನಿಕಾಂ ರೂಪಸಂಪದಮ್ ।**
**ಬಭಾರ ಸ್ವರ್ವಧೂರೂಪಸಾರಾಂಶೈರಿವ ನಿರ್ಮಿತಾಮ್ ॥ ೮೧ ॥**

ಹೀಗೆ ಈ ಶ್ರೀಮತಿಯು ಮನ್ಮಥನಿಗೆ ಮತ್ತನ್ನುಂಟುಮಾಡುವುದೂ ದೇವಸ್ತ್ರೀಯರ ರೂಪಗಳ ಸಾರಭಾಗಗಳಿಂದ ನಿರ್ಮಿಸಲ್ಪಟ್ಟಂತಿರುವುದೂ ಆದ ರೂಪಸಂಪತ್ತನ್ನು ಹೊಂದಿದ್ದಳು.

**ಲಕ್ಷ್ಮೀಂ ಚಲಾಂ ವಿನಿರ್ಮಾಯ ಯದಾಗೋ ವೇಧಸಾರ್ಜಿತಮ್ ।**
**[೪]ತನ್ನಿರ್ಮಾಣೇನ ತನ್ನೂನಂ ತೇನ ಪ್ರಕ್ಷಾಲಿತಂ ತದಾ ॥ ೮೨ ॥**

ಬ್ರಹ್ಮನು ಚಂಚಲಳಾದ ಲಕ್ಷ್ಮಿಯನ್ನು ನಿರ್ಮಿಸಿ ಮಾಡಿದ್ದ ತಪ್ಪನ್ನು ಶ್ರೀಮತಿಯ ನಿರ್ಮಾಣದಿಂದ ನಿಶ್ಚಯವಾಗಿ ಕಳೆದುಕೊಂಡನು.

**ಪಿತರೌ ತಾಂ ಪ್ರಪಶ್ಯಂತೌ ನಿತರಾಂ ಪ್ರೀತಿಮಾಪತುಃ ।**
**ಕಲಾಮಿವ ಸುಧಾಸೂತೇರ್ಜನತಾನಂದಕಾರಿಣೀಮ್ ॥ ೮೩ ॥**

ತಂದೆತಾಯಿಗಳು, ಚಂದ್ರನಕಲೆಯಂತೆ, ಜನಗಳಿಗೆ ಆನಂದವನ್ನುಂಟುಮಾಡುವ ಆ ಶ್ರೀಮತಿಯನ್ನು ನೋಡಿ ಬಹಳ ಸಂತೋಷಪಟ್ಟರು.

**ಅಥಾನ್ಯೇದ್ಯುರಸೌ ಸುಪ್ತಾ ಹರ್ಮ್ಯೇ ಹಂ[೫]ಸಾಂಸನಿರ್ಮಲೇ ।**
**[೬]ಪರಾರ್ಧ್ಯರತ್ನಸಂಶೋಭೇ ಸ್ವರ್ವಿಮಾನಾಪಹಾಸಿನಿ ॥ ೮೪ ॥**

**ತದ್ವೈತದಭವತ್ತಸ್ಯಾಃ [೭]ಸಂವಿಧಾನಕಮೀದೃಶಮ್ ।**
**ಯಶೋಧರಗುರೋಸ್ತಸ್ಮಿನ್ಪುರೇ ಕೈವಲ್ಯ[೮]ಸಂಭವೇ ॥ ೮೫ ॥**

ತರುವಾಯ ಒಂದುದಿನ ಈ ಶ್ರೀಮತಿಯು ಹಂಸಪಕ್ಷಿಯ ರೆಕ್ಕೆಗಳಂತೆ ನಿರ್ಮಲವೂ ಉತ್ಕೃಷ್ಟವಾದ ರತ್ನಗಳಿಂದ ಶೋಭಿಸುತ್ತಿರುವುದೂ ಸ್ವರ್ಗದ ವಿಮಾನಗಳನ್ನು ಪರಿಹಾಸ್ಯಮಾಡುವುದೂ ಆದ ಪ್ರಾಸಾದ(ಉಪ್ಪರಿಗೆ)ದಲ್ಲಿ ಮಲಗಿರುವಾಗ ಆದೇ ಪಟ್ಟಣದಲ್ಲಿ ಯಶೋಧರಸ್ವಾಮಿಗೆ ಕೇವಲಜ್ಞಾನವು ಪ್ರಾದುರ್ಭವಿಸುತ್ತಿರಲು ಆ ಶ್ರೀಮತಿಗೆ ಈ ಮುಂದೆಹೇಳುವ ಸಾಮಗ್ರಿ ಸಂಘಟನೆಯುಂಟಾಗಿದ್ದಿತು.

**ಮನೋಹರಾಖ್ಯಮುದ್ಯಾನಮಧ್ಯಾಸೀನಂ ತಮರ್ಚಿತುಮ್ ।**
**ದೇವಾಃ ಸಂಪ್ರಾಪುರಾರೂಢವಿಮಾನಾಃ ಸಹ ಸಂಪದಾ ॥ ೮೬ ॥**

ಮನೋಹರವೆಂಬ ಉದ್ಯಾನದಲ್ಲಿದ್ದ ಆ ಯಶೋಧರಕೇವಲಿಗಳನ್ನು ಪೂಜಿಸುವುದಕ್ಕೋಸ್ಕರ ದೇವತೆಗಳು ವಿಮಾನಾರೂಢರಾಗಿ ಆ ಉದ್ಯಾನಕ್ಕೆ ವೈಭವದಿಂದ ಬಂದರು.

---

೧ ಚಂದ್ರಃ. ೨ ತ್ರಿರೇಖಾಭಿಃ. ೩ ಈಷನ್ನತೌ. ೪ ಪಕ್ಷಮೂಲೇ. ೫ ಶುಭ್ರೇ, ಸಾಮುದ್ರಿಕಲಕ್ಷಣಯುಕ್ತೌ ಚ. ೬ ಯುಗಪತ್. ೭ ನೂನಂ. ೮ ಸ್ವಸಂಪತ್ತ್ಯಾ ಪಕ್ಷೇ ದೀರ್ಘತ್ವೇನ. ೯ ಸಮೀಪವರ್ತಿನಂ. ೧೦ ವಿಹಸನಶೀಲಾಂ. ೧೧ ಭ್ರಮರಾನ್. ೧೨ ಅಪಾಯರಹಿತಾನ್ ಕೃತ್ವಾ.

೧ ಗಲಿತಂ. ೨ ವಕ್ರಿತಂ. ೩ ಶರೀರಂ ಫಣಾಂ ವಾ. ೪ ಶ್ರೀಮತೀನಿರ್ಮಾಣೇನ. ೫ ಹಂಸಪಕ್ಷವತ್. ೬ ಉತ್ಕೃಷ್ಟಾನಿ. ೭ ಸಾಮಗ್ರೀ ಪ್ರಶಸ್ತವಿಧಿರಿತ್ಯರ್ಥಃ. ೮ ಉತ್ಪನ್ನೇ ಸತಿ.

**ಪುಷ್ಪವೃಷ್ಟಿರ್ದಿಶೋಽರುದ್ಧಾ ತದಾಪಪ್ತತ್ಸಹಾಲಿಭಿಃ ।**
**ಸ್ವರ್ಗಲಕ್ಷ್ಮ್ಯೇವ ತಂ ದ್ರಷ್ಟುಂ ಪ್ರಹಿತಾ ನಯನಾವಲೀ ॥ ೮೭ ॥**

ಆಗ ಸ್ವರ್ಗಲಕ್ಷ್ಮಿಯು ಆ ಕೇವಲಿಗಳನ್ನು ನೋಡುವುದಕ್ಕೋಸ್ಕರ ಕಳುಹಿಸಿದ ನೇತ್ರಗಳ ಪಂಕ್ತಿಯೋ ಎಂಬಂತೆ ಎಲ್ಲಾ ದಿಕ್ಕುಗಳಲ್ಲಿಯೂ ಭ್ರಮರಗಳಿಂದ ಕೂಡಿದ ಪುಷ್ಪಗಳ ಮಳೆಯು ಬಹಳವಾಗಿ ಬಿದ್ದಿತು.

**ಮಂದಮಾಧೂತಮಂದಾರಸಾಂದ್ರಕಿಂಜಲ್ಕಪಿಂಜರಃ ।**
**ಪುಂಜಿತಾಲಿರುತಾಮಂಜುರಾಗುಂಜನ್ಮರುದಾವವೌ ॥ ೮೮ ॥**

ಮಂದವಾಗಿ ಕಂಪಿಸಲ್ಪಟ್ಟ ಕಲ್ಪವೃಕ್ಷಗಳ ದಟ್ಟವಾದ ಕುಸುಮಗಳಿಂದ ಹಳದಿಬಣ್ಣವುಳ್ಳದೂ ಗುಂಪಾಗಿ ಸೇರಿದ ಭ್ರಮರಗಳ ಶಬ್ದದಿಂದ ಮನೋಹರವೂ ಶಬ್ದ ಮಾಡುವುದೂ ಆದ ಮಂದಮಾರುತವು ಬೀಸಿತು.

**ದಂಧ್ವನದ್ದುಂದುಭಿಧ್ವಾನೈರರುಧ್ಯಂತ ದಿಶೋ ದಶ ।**
**ಸುರಾಣಾಂ ಪ್ರಮದೋದ್ಭೂತೋ ಮಹಾನ್ಕಲಕಲೋಽಪ್ಯಭೂತ್॥ ೮೯ ॥**

ಗಟ್ಟಿಯಾಗಿ ಶಬ್ದಮಾಡುತ್ತಿರುವ ಭೇರಿಗಳ ಶಬ್ದಗಳಿಂದ ಹತ್ತುದಿಕ್ಕುಗಳೂ ವ್ಯಾಪ್ತವಾದುವು. ದೇವತೆಗಳ ಸಂತೋಷದಿಂದುಂಟಾದ 'ಜಯಜಯ'ವೆಂಬ ದೊಡ್ಡಶಬ್ದವೂ ಉಂಟಾಗಿದ್ದಿತು.

**ಸಾ ತದಾ ತದ್ಧ್ವನಿಂ ಶ್ರುತ್ವಾ ನಿಶಾಂತೇ ಸಹಸೋತ್ಥಿತಾ ।**
**ಭೇಜೇ ಹಂಸೀವ ಸಂತ್ರಾಸಂ ಶ್ರುತಪರ್ಜನ್ಯನಿಸ್ವನಾ ॥ ೯೦ ॥**

ಆಗ ಶ್ರೀಮತಿಯು ಆ ಶಬ್ದವನ್ನು ಕೇಳಿ ಪ್ರಾತಃಕಾಲದಲ್ಲಿ ಶೀಘ್ರವಾಗಿ ಎದ್ದು, ಮೇಘಧ್ವನಿಯನ್ನು ಕೇಳಿದ ಸ್ತ್ರೀಹಂಸಪಕ್ಷಿಯಂತೆ, ಭಯಪಟ್ಟಳು.

**ದೇವಾಗಮೇಕ್ಷಣಾತ್ತಸ್ಯಾಃ ಪ್ರಾಗ್ಜನ್ಮಸ್ಮೃತಿರಾಶ್ವಭೂತ್ ।**
**ಸಾ ಸ್ಮೃತ್ವಾ ಲಲಿತಾಂಗಂ ತಂ ಮುಮೂರ್ಚ್ಛೋತ್ಕಂಠಿತಾ ಮುಹುಃ ॥**

ದೇವತೆಗಳ ಬರುವಿಕೆಯನ್ನು ನೋಡಿದಕೂಡಲೆ ಆ ಶ್ರೀಮತಿಗೆ ಪೂರ್ವಜನ್ಮದ ಸ್ಮರಣೆಯುಂಟಾಯಿತು. ಶ್ರೀಮತಿಯು ಬಹಳ ಕುತೂಹಲವುಳ್ಳವಳಾಗಿ ಪೂರ್ವ ಜನ್ಮದಲ್ಲಿ ಪತಿಯಾಗಿದ್ದ ಆ ಲಲಿತಾಂಗದೇವನನ್ನು ಸ್ಮರಿಸಿ ಬಾರಿಬಾರಿಗೂ ಮೂರ್ಛೆಯನ್ನು ಹೊಂದಿದಳು.

**ಸಖೀಭಿರಥ ಸೋಪಾಯಮಾಶ್ವಾಸ್ಯ ವ್ಯಜನಾನಿಲೈಃ ।**
**[೧]ಪ್ರತ್ಯಾಪತ್ತಿಂ ಸಮಾನೀತಾ ಸಾಭೂದ್ಭೂಯೋ[೨]ಽಪ್ಯವಾಙ್ಮುಖೀ ॥ ೯೨ ॥**

ಆಮೇಲೆ ಸಖಿಯರು ಬೀಸಣಿಗೆಯ ಗಾಳಿಯಿಂದ ಉಪಚರಿಸಿ ಪೂರ್ವಸ್ಥಿತಿಗೆ ತಂದರು. ಆ ಶ್ರೀಮತಿಯು ಪುನಃ ಮುಖವನ್ನು ಬಾಗಿಸಿದವಳಾಗಿದ್ದಳು.

**ಮನೋಹರಂ ಪ್ರಭೋದ್ಭಾಸಿ ಸುಂದರಂ [೩]ಚಾರುಲಕ್ಷಣಮ್ ।**
**[೪]ತದ್ವಪುರ್ಮನಸೀವಾಸ್ಯಾಲಿಖಿತಂ ನಿರ್ಬಭೌ ತದಾ ॥ ೯೩ ॥**

ಆಗ ಮನೋಹರವೂ ಪ್ರಭೆಯಿಂದ ಪ್ರಕಾಶಿಸುವುದೂ ಸುಂದರವೂ ಹಲಕುಲಿಶಾದಿಶುಭಲಕ್ಷಣಗಳುಳ್ಳದೂ ಆದ ಆ ಲಲಿತಾಂಗದೇವನ ಶರೀರವು ಈ ಶ್ರೀಮತಿಯ ಮನಸ್ಸಿನಲ್ಲಿ ಬರೆಯಲ್ಪಟ್ಟಂತೆ ಪ್ರಕಾಶಿಸುತ್ತಿದ್ದಿತು.

೧ ಪೂರ್ವಸ್ಥಿತಿಂ. ೨ ಅಧೋಮುಖೀ. ೩ ಹಲಕುಲಿಶಾದಿ. ೪ ಲಲಿತಾಂಗಸ್ಯ.

**ಪರಿಪೃಷ್ಟಾಪಿ ಸಾಶಂಕಂ ಸಖೀಭಿ[೧]ರ್ಜೋಷಮಾಸ್ತ ಸಾ ।**
**ಮೂಕೀಭೂತಾ [೨]ಕಿಲಾಪ್ರಾಪ್ತೇಸ್ತಸ್ಯ ಮೌನಂ ಮಮೇತ್ಯಲಮ್ ॥ ೯೪ ॥**

ಸಖಿಯರು ಸಂದೇಹಪಟ್ಟು ಆ ಶ್ರೀಮತಿಯನ್ನು ಪ್ರಶ್ನೆಮಾಡಿದರೂ ಉತ್ತರ ವನ್ನು ಕೊಡದೆ ಸುಮ್ಮನಿದ್ದಳು. "ಆ ಲಲಿತಾಂಗನ ಪ್ರಾಪ್ತಿಯಾಗುವವರೆಗೆ ನನಗೆ ಮೌನವೇ" ಯೆಂದು ಆ ಶ್ರೀಮತಿಯು ಮೂಗಳಾಗಿದ್ದಿರಬಹುದು.

**ತತಃ ಪರ್ಯಾಕುಲಾಃ ಸತ್ಯಸ್ತ[೩]ಮುದಂತಮಶೇಷತಃ ।**
**ಗತ್ವಾ ಪಿತೃಭ್ಯಾಮಾಚಖ್ಯುಃ ಸಖ್ಯೋ [೪]ವರ್ಷಧರೈಃ ಸಮಮ್ ॥ ೯೫ ॥**

ಆಮೇಲೆ ಆ ಸಖಿಯರು ವ್ಯಾಕುಲರಾಗಿ ವೃದ್ಧರಾದ ಅಂತಃಪುರದ ಸೇವಕ ರೊಡನೆ ಹೋಗಿ ಶ್ರೀಮತಿಯ ತಾಯಿತಂದೆಗಳಿಗೆ ಆ ಎಲ್ಲಾ ಸಮಾಚಾರವನ್ನು ತಿಳಿಸಿದರು.

**ತದ್ವಾರ್ತಾಕರ್ಣನಾ[೫]ತ್ತೂರ್ಣಂ ತ[೬]ದಭ್ಯರ್ಣಮುಪಾಗತೌ ।**
**ಪಿತರೌ ತದವಸ್ಥಾಂ ಚ ದೃಷ್ಟ್ವೈನಾಂ ಶುಚಮೀಯತುಃ ॥ ೯೬ ॥**

ತಾಯಿತಂದೆಗಳು ಆ ಸಮಾಚಾರವನ್ನು ಕೇಳಿ ಶೀಘ್ರವಾಗಿ ಶ್ರೀಮತಿಯ ಸಮೀಪಕ್ಕೆ ಹೋಗಿ ಅವಳ ಅವಸ್ಥೆಯನ್ನೂ ನೋಡಿ ಈ ಶೋಕವನ್ನು ಹೊಂದಿದರು: —

**[೭]ಅಂಗ ಪುತ್ರಿ [೮]ಪರಿಷ್ವಂಗಂ ವಿಧೇಹ್ಯುತ್ಸಂಗಮೇಹಿ[೯]ನೌ ।**
**ಇತಿ ನಿರ್ಬಧ್ಯಮಾನಾಪಿ [೧೦]ಮೋಮುಹ್ಯೈವ ಯದಾಸ್ತಸಾ ॥ ೯೭ ॥**

"ಎಲೈ ಮಗಳೇ! ನಮ್ಮನ್ನು ಆಲಿಂಗಿಸು. ನಮ್ಮ ತೊಡೆಗೆ ಬಾ" ಎಂದು ನಿರ್ಬಂಧಪಡಿಸಿದರೂ ಆ ಶ್ರೀಮತಿಯು ಅಧಿಕವಾಗಿ ಪರವಶವಾದ ಮನಸ್ಸುಳ್ಳವಳಾಗಿದ್ದಳು.

**ಲಕ್ಷ್ಮೀಮತಿಮಥೋವಾಚ ಪ್ರಭುರಿಂಗಿತಕೋವಿದಃ ।**
**ಜಾತಾ ತೇ ಪುತ್ರಿಕಾ ತನ್ವಿ ಸೇಯಮಾಪೂರ್ಣಯೌವನಾ ॥ ೯೮ ॥**

ಅನಂತರ ಮನೋಭಿಪ್ರಾಯವನ್ನು ತಿಳಿಯುವುದರಲ್ಲಿ ಚತುರನಾದ ಆ ವಜ್ರದಂತರಾಜನು ಪತ್ನಿಯಾದ ಲಕ್ಷ್ಮೀಮತಿಯನ್ನು ಕುರಿತು "ಎಲೈ ಕೃಶಾಂಗಿಯೇ! ಈ ನಿನ್ನ ಮಗಳು ಸಂಪೂರ್ಣ ಯೌವನವತಿಯಾದಳು.

**ಅಸ್ಯಾಃ ಸುದತಿ ಪಶ್ಯೇದಂ ವಪುರತ್ಯಂತಕಾಂತಿಮತ್ ।**
**[೧೧]ಅನೀದೃಶಮಭೂತ್ಸ್ವರ್ಗನಾರೀಭಿರಪಿ ದುರ್ಲಭಮ್ ॥ ೯೯ ॥**

ಎಲೈ ಸುದತಿಯೇ! ಈ ಶ್ರೀಮತಿಯ ಅತ್ಯಂತಕಾಂತಿಯುಳ್ಳ ಈ ಶರೀರವನ್ನು ನೋಡು. ಇಂತಹ ಉಪಮಾತೀತವಾದ ಶರೀರವು ಸ್ವರ್ಗದ ಸ್ತ್ರೀಯರಿಗೂ ದುರ್ಲಭವಾಗಿದೆ.

**[೧೨]ತತೋ ವಿಕೃತಿರೇಷಾಸ್ಯಾ ನ ದುಷ್ಯತ್ಯದ್ಯ ಸುಂದರಿ ।**
**[೧೩]ತೇನ ಮಾ ಸ್ಮ ಭಯಂ ದೇವಿ ಶಂಕಮಾನಾನ್ಯಥಾ ಗಮಃ ॥ ೧೦೦ ॥**

ಆದುದರಿಂದ ಎಲೈ ಸುಂದರಿಯೇ! ಇವಳ ಈ ವಿಕಾರವು ದೋಷ ವನ್ನುಂಟುಮಾಡುವುದಲ್ಲ. ಆದುದರಿಂದ ದೇವಿಯೇ! ಬೇರೆ ವಿಧವಾಗಿ ಸಂದೇಹಪಟ್ಟು ಭಯಪಡಬೇಡ.

೧ ತೂಷ್ಣೀಂ. ೨ ಸಂಭಾವ್ಯೇ. ೩ ವೃತ್ತಾಂತಂ. ೪ ವೃದ್ಧಕಂಚುಕಿಭಿಃ. ೫ ಶೀಘ್ರಂ. ೬ ಸಮೀಪಂ. ೭ ಅಂಗೋ ದೇಶವಿಶೇಷೇ ಸ್ಯಾದಂಗಸಂಬೋಧನೇವ್ಯಯಮಿತಿ ವಿಶ್ವಪ್ರಕಾಶಃ. ೮ ಆಲಿಂಗನಂ. ೯ ಆವಯೋಃ. ೧೦ ಮೋಮುಹೀತೀತಿ ಮೋಮುಹಾ, ಭೃಶಂ ವಿವಶಚಿತ್ತೇತ್ಯರ್ಥಃ. ೧೧ ಅನುಪಮಂ. ೧೨ ತಸ್ಮಾತ್ಕಾರಣಾತ್. ೧೩ ಕಾರಣೇನ.

**ಪ್ರಾಗ್ಜನ್ಮಾನುಭವಃ ಕೋಽಪಿ ನೂನಮಸ್ಯಾ ಹೃದಿ ಸ್ಥಿತಃ ।**
**ಸಂಸ್ಕಾರಾನ್ಪ್ರಾಕ್ತನಾನ್ಪ್ರಾಯಃ ಸ್ಮೃತ್ವಾ ಮೂರ್ಛಂತಿ ಜಂತವಃ ॥ ೧೦೧ ॥**

ನಿಶ್ಚಯವಾಗಿಯೂ ಪೂರ್ವಜನ್ಮದಲ್ಲಿ ಪರಿಚಿತನಾದ ಯಾವನೋ ಒಬ್ಬನನ್ನು ಇವಳು ಸ್ಮರಿಸುತ್ತಾಳೆ. ಪ್ರಾಣಿಗಳು ಹೆಚ್ಚಾಗಿ ಪೂರ್ವಜನ್ಮದ ಸಂಸ್ಕಾರಗಳನ್ನು ಸ್ಮರಿಸಿ ಮೂರ್ಛೆಯನ್ನು ಹೊಂದುತ್ತಾರೆ''.

**ಇತಿ ಬ್ರುವಾಣ ಏವಾಸಾವುತ್ತಸ್ಥೇ ಸಹ ಕಾಂತಯಾ ।**
**ನಿಯೋಜ್ಯ[1] ಪಂಡಿತಾಂ ಧಾತ್ರೀಂ ಕನ್ಯಾಶ್ವಾಸನಸಂವಿಧೌ ॥ ೧೦೨ ॥**

ಹೀಗೆ ಹೇಳಿ ಈ ವಜ್ರದಂತರಾಜನು ಆ ಕನ್ಯೆಯಾದ ಶ್ರೀಮತಿಯನ್ನು ಪಚರಿಸುವುದಕ್ಕೆ ಪಂಡಿತೆಯೆಂಬ ದಾದಿಯನ್ನು ನಿಯಮಿಸಿ ಪತ್ನಿಯೊಡನೆ ಹೊರಟುಹೋದನು.

**ತದಾ ಕಾರ್ಯದ್ವಯಂ ತಸ್ಯ ಯುಗಪತ್ಸ[2]ಮುಪಸ್ಥಿತಮ್ ।**
**ಕೈವಲ್ಯಂ ಸ್ವಗುರೋಶ್ಚಕ್ರಸಂಭೂತಿಶ್ಚಾಯುಧಾಲಯೇ ॥ ೧೦೩ ॥**

ಆಗ ಆ ವಜ್ರದಂತರಾಜನಿಗೆ ಒಂದೇ ಕಾಲದಲ್ಲಿ ಎರಡು ಕಾರ್ಯಗಳೊದಗಿದುವು. ಒಂದನೆಯದು ಯಶೋಧರತೀರ್ಥಂಕರರಿಗೆ ಕೇವಲಜ್ಞಾನೋತ್ಪತ್ತಿಯು. ಎರಡನೆಯದು ತನ್ನ ಆಯುಧಶಾಲೆಯಲ್ಲಿ ಚಕ್ರಾಯುಧದ ಉತ್ಪತ್ತಿಯು. ಸಾಮಾನ್ಯವಾಗಿ ರಾಜರು ಕೇವಲಜ್ಞಾನೋತ್ಪತ್ತಿಯ ವಾರ್ತೆಯನ್ನು ಕೇಳಿದೊಡನೆ ಕೇವಲಜ್ಞಾನಪೂಜೆಗೆ ಹೊರಡುವುದೂ ತಮ್ಮ ಆಯುಧಶಾಲೆಯಲ್ಲಿ ಚಕ್ರಾಯುಧವುತ್ಪನ್ನವಾಯಿತೆಂಬ ಸಮಾಚಾರವನ್ನು ಕೇಳಿದೊಡನೆ ಚಕ್ರಾಯುಧದ ಪೂಜೆಗೆ ಹೊರಡುವುದೂ ತಮ್ಮ ಕರ್ತವ್ಯವಾಗಿರುತ್ತಿರಲು ವಜ್ರದಂತರಾಜನಿಗೆ ಈ ಎರಡು ಕಾರ್ಯಗಳೂ ಒಂದೇ ಕಾಲದಲ್ಲಿ ಪ್ರಾಪ್ತವಾದುವೆಂದರ್ಥವು.

**ತತ್ಕಾರ್ಯದ್ವೈತಮಾಸಾದ್ಯ ಬಭೂವ ಕ್ಷಣಮಾಕುಲಃ ।**
**ಪ್ರಾಗ್ವಿಧೇಯಂ ಕಿಮತ್ರೇತಿ ಸ ನಿಶ್ಚೇತುಮಶಕ್ನುವನ್ ॥ ೧೦೪ ॥**

ವಜ್ರದಂತನು ಆ ಎರಡು ಕಾರ್ಯಗಳನ್ನು ಹೊಂದಿ ಅವುಗಳಲ್ಲಿ ಮೊದಲು ಯಾವುದನ್ನು ಮಾಡಬೇಕೆಂದು ನಿಶ್ಚಯಿಸುವುದಕ್ಕೆ ಅಸಮರ್ಥನಾಗಿ ಒಂದು ಕ್ಷಣಕಾಲದವರೆಗೆ ವ್ಯಾಕುಲಪಟ್ಟನು.

**ತತಃ ಕಿಮತ್ರ ಕರ್ತವ್ಯಮಿತ್ಯಸೌ [3]ಸಂಪ್ರಧಾರಯನ್ ।**
**ಗುರೋಃ ಕೈವಲ್ಯಸಂಪೂಜಾಮಾದೌ ನಿಶ್ಚಿತವಾನ್ಸುಧೀಃ ॥ ೧೦೫ ॥**

**[4]ಯತೋ ದೂರಾತ್ಸಮಾಸನ್ನಂ ಕಾರ್ಯಂ ಕಾರ್ಯಂ ಮನೀಷಿಭಿಃ ।**
**ವ್ಯತಿಪಾತಿ ತತಸ್ತಸ್ಮಾತ್ಪ್ರಧಾನಂ ಕಾರ್ಯಮಾಚರೇತ್ ॥ ೧೦೬ ॥**

**ತತಃ ಶಕ್ಯಂ ಶುಭಂ ತಸ್ಮಾತ್ತಸ್ಮಾಚ್ಚ ವಿಪುಲೋದಯಮ್ ।**
**ಧರ್ಮಾತ್ಮಕಂ ಚ ಯತ್ಕಾರ್ಯಮರ್ಹತ್ಪೂಜಾದಿಲಕ್ಷಣಮ್ ॥ ೧೦೭ ॥**

ಆಮೇಲೆ ಬುದ್ಧಿಶಾಲಿಯಾದ ಈ ವಜ್ರದಂತರಾಜನು ಈ ಎರಡುಕಾರ್ಯಗಳಲ್ಲಿ ಮೊದಲು ಯಾವುದನ್ನು ಮಾಡಬೇಕೆಂದು ಪರ್ಯಾಲೋಚಿಸಿ ಬುದ್ಧಿಶಾಲಿಗಳು ದೂರ ಮತ್ತು ಸಮೀಪದಲ್ಲಿರುವ ಕಾರ್ಯಗಳಲ್ಲಿ ದೂರದಲ್ಲಿರುವ ಕಾರ್ಯಕ್ಕಿಂತ ಮೊದಲು ಸಮೀಪದಲ್ಲಿರುವ ಕಾರ್ಯವನ್ನು ಮಾಡಬೇಕೆಂದೂ ಸಮೀಪದಲ್ಲಿರುವ ಕಾರ್ಯಕ್ಕಿಂತ ಮೊದಲು ನಾಶವಾಗುವ ಕಾರ್ಯವನ್ನು ಮಾಡಬೇಕೆಂದೂ ನಾಶವಾಗುವ ಕಾರ್ಯಕ್ಕಿಂತ ಮೊದಲು ಮುಖ್ಯವಾದ ಕಾರ್ಯವನ್ನು ಮಾಡಬೇಕೆಂದೂ ಮುಖ್ಯವಾದ ಕಾರ್ಯಕ್ಕಿಂತ ಮೊದಲು ಶಕ್ಯವಾದ ಕಾರ್ಯವನ್ನು ಮಾಡಬೇಕೆಂದೂ ಶಕ್ಯವಾದ ಕಾರ್ಯಕ್ಕಿಂತ ಮೊದಲು ಶುಭವಾದ ಕಾರ್ಯವನ್ನು ಮಾಡಬೇಕೆಂದೂ ಶುಭಕಾರ್ಯಕ್ಕಿಂತ ಮೊದಲು ಮಹಾಭ್ಯುದಯವುಳ್ಳ ಅರ್ಹತ್ಪೂಜೆ ಮೊದಲಾದ ಧರ್ಮಕಾರ್ಯವನ್ನು ಮಾಡಬೇಕೆಂದೂ ನೀತಿಯಿರುವುದರಿಂದ, ಮೊದಲು ಸ್ವಾಮಿಯ ಕೇವಲಜ್ಞಾನಪೂಜೆಯನ್ನು ಮಾಡಬೇಕೆಂದು ನಿಶ್ಚಯಿಸಿದನು.

**ಮನಸೀತ್ಯಾಕಲಯ್ಯಾಸೌ ಯಶೋಧರಗುರೋಃ ಪರಾಮ್ ।**
**ಪೂಜಾಂ ಕರ್ತುಂ ಸಮುತ್ತಸ್ಥೌ ನೃಪಃ ಪುಣ್ಯಾನುಬಂಧಿನೀಮ್ ॥ ೧೦೮ ॥**

ಈ ವಜ್ರದಂತರಾಜನು ಹೀಗೆ ಮನಸ್ಸಿನಲ್ಲಿ ಸಂಕಲ್ಪಿಸಿ ಯಶೋಧರಕೇವಲಿಗಳ ಉತ್ತಮವೂ ಪುಣ್ಯಸಂಪಾದಕವೂ ಆದ ಕೇವಲಜ್ಞಾನಪೂಜೆಯನ್ನು ಮಾಡುವುದಕ್ಕೆ ಹೊರಟನು.

**ತತಃ ಪ್ರತನಯಾ ಸಾರ್ದ್ಧಮುಪಸೃತ್ಯ ಜಗದ್ಗುರುಮ್ ।**
**ಪೂಜಯಾಮಾಸ ಸಂಪ್ರೀತಿಪ್ರೋತ್ಫುಲ್ಲಮುಖಪಂಕಜಃ ॥ ೧೦೯ ॥**

ಅನಂತರ ತನ್ನ ಸೈನ್ಯದೊಡನೆ ಯಶೋಧರಕೇವಲಿಗಳ ಸಮೀಪಕ್ಕೆ ಹೋಗಿ ಪ್ರೀತಿಯಿಂದ ವಿಕಸಿತವಾದ ಮುಖಕಮಲವುಳ್ಳವನಾಗಿ ಪೂಜಿಸಿದನು.

**ತತ್ಪಾದೌ ಪ್ರಣಮನ್ನೇವ ಸೋಽಲಬ್ಧಾವಧಿಮಿದ್ಧಧೀಃ ।**
**ವಿಶುದ್ಧಪರಿಣಾಮೇನ ಭಕ್ತಿಃ ಕಿಂ ನ ಫಲಿಷ್ಯತಿ ॥ ೧೧೦ ॥**

ತೀಕ್ಷ್ಣಬುದ್ಧಿಯುಳ್ಳ ಆ ವಜ್ರದಂತರಾಜನು ಯಶೋಧರಕೇವಲಿಗಳ ಪಾದಗಳನ್ನು ನಮಸ್ಕರಿಸಿದೊಡನೆ ಅವನಿಗೆ ಅವಧಿಜ್ಞಾನವುಂಟಾಗಿದ್ದಿತು. ವಿಶುದ್ಧವಾದ ಪರಿಣಾಮದಿಂದ ಮಾಡಿದ ಭಕ್ತಿಯು ಯಾವುದನ್ನು ತಾನೆ ಫಲಿಸುವುದಿಲ್ಲ ? ಭಕ್ತಿಯಿಂದ ಎಲ್ಲವೂ ಫಲಿಸುವುದೆಂದರ್ಥವು.

**ತೇನಾಬುದ್ಧಾಚ್ಯುತೇಂದ್ರತ್ವಮಾತ್ಮನಃ ಪ್ರಾಕ್ತನೇ ಭವೇ ।**
**ಲಲಿತಾಂಗಪ್ರಿಯಾಯಾಶ್ಚ ದುಹಿತೃತ್ವಮಿಹಾಂಜಸಾ ॥ ೧೧೧ ॥**

ವಜ್ರದಂತರಾಜನು ಆ ಅವಧಿಜ್ಞಾನದಿಂದ ಪೂರ್ವಜನ್ಮದಲ್ಲಿ ತಾನು ಅಚ್ಯುತೇಂದ್ರನಾಗಿದ್ದುದನ್ನೂ ಲಲಿತಾಂಗದೇವನ ಪತ್ನಿಯಾದ ಸ್ವಯಂಪ್ರಭಾದೇವಿಯು ತನ್ನ ಮಗಳಾದುದನ್ನೂ ಶೀಘ್ರವಾಗಿ ತಿಳಿದನು.

**ಕೃತಾಭಿವಂದನ[1]ಸ್ತಸ್ಮಾನ್ನಿವೃತ್ಯ ಕೃತಧೀಃ ಸುತಾಮ್ ।**
**ಪಂಡಿತಾಯೈ ಸಮರ್ಪ್ಯಾಶು ಪ್ರತಸ್ಥೇ ದಿಗ್ಜಯಾಯ ಸಃ ॥ ೧೧೨ ॥**

ಬುದ್ಧಿಶಾಲಿಯಾದ ಆ ವಜ್ರದಂತರಾಜನು ಸ್ವಾಮಿಯನ್ನು ವಂದಿಸಿ ಸಮವಸರಣದಿಂದ ಹೊರಟುಬಂದು ಮಗಳನ್ನು ಪಂಡಿತೆಗೆ ಸಮರ್ಪಿಸಿ ತಾನು ದಿಗ್ವಿಜಯಕ್ಕೆ ಹೊರಡಲು ಸನ್ನದ್ಧನಾದನು.

**ಚಕ್ರಪೂಜಾಂ ತತಃ ಕೃತ್ವಾ ಚಕ್ರೀ ಶಕ್ರಸಮದ್ಯುತಿಃ ।**
**ಪ್ರಾಸ್ಥಿತಾಸೌ ದಿಶೋ ಜೇತುಂ ಧ್ವಜಿನ್ಯಾ ಷಡಂಗಯಾ ॥ ೧೧೩ ॥**

ಆಮೇಲೆ ದೇವೇಂದ್ರನಿಗೆ ಸಮಾನವಾದ ಕಾಂತಿಯುಳ್ಳ ಈ ವಜ್ರದಂತ ಚಕ್ರವರ್ತಿಯು ಚಕ್ರರತ್ನವನ್ನು ಪೂಜಿಸಿ ಆನೆ ಕುದುರೆ ರಥ ಪದಾತಿ ದೇವ ವಿದ್ಯಾಧರರೆಂಬ ಷಡಂಗ ಸೈನ್ಯದೊಡನೆ ದಿಗ್ವಿಜಯಕ್ಕೆ ಹೊರಟನು.

**ಅಥ ಪಂಡಿತಿಕಾನ್ಯೇದ್ಯುರ್ನಿಪುಣಾ ನಿಪುಣಂ ವಚಃ ।**
**ಶ್ರೀಮತ್ಯಾಃ ಪ್ರತಿಬೋಧಾಯ ರಹಸ್ಯೇವಮಭಾಷತ ॥ ೧೧೪ ॥**

೧ ನಾಮ. ೨ ಆಗತಂ. ೩ ವಿಚಾರಯನ್. ೪ ಯಸ್ಮಾತ್ಕಾರಣಾದ್ದೂರಸ್ಥಸಮೀಪಸ್ಥಯೋಃ ಕಾರ್ಯಯೋಃ ಸಮೀಪಸ್ಥಮೇವಾದೌ ಕರ್ತವ್ಯಂ, ಸಮೀಪಸ್ಥವಿನಶ್ವರಯೋರ್ವಿನಶ್ವರಮೇವ, ವಿನಶ್ವರಮುಖ್ಯಯೋರ್ಮುಖ್ಯಮೇವ, ಮುಖ್ಯಶಕ್ಯಯೋಃ ಶಕ್ಯಮೇವ, ಶಕ್ಯಶುಭಯೋಃ ಶುಭಮೇವ, ಶುಭಧರ್ಮಾತ್ಮಕಯೋರ್ಧರ್ಮಾತ್ಮಕಮೇವ ವಿಚಕ್ಷಣೈಃ ಪ್ರಾಕ್ಕರ್ತವ್ಯಮಿತಿ ನೀತಿಸ್ತಸ್ಮಾತ್ಕೈವಲ್ಯಪೂಜಾಮಾದೌ ನಿಶ್ಚಿತವಾನಿತ್ಯರ್ಥಃ.

೧ ಸಮವಸರಣಾತ್.

**ಅಶೋಕ[1]ವನಿಕಾಮಧ್ಯೇ ಚಂದ್ರಕಾಂತಶಿಲಾತಲೇ ।**
**ಸ್ಥಿತ್ವಾ ಸಸ್ನೇಹಮಂಗಾನಿ ಸ್ಪೃಶಂತೀ ಮೃದುಪಾಣಿನಾ ॥ ೧೧೫ ॥**

**ಮುಖಪಂಕಜಸಂಸರ್ಪದ್ದಶನಾಂಶುಜಲಪ್ಲವೈಃ ।**
**ತಸ್ಯಾ ಹೃದಯಸಂತಾಪಮಿವ ನಿರ್ವಾಪಯಂತ್ಯಸೌ ॥ ೧೧೬ ॥**

ಆಮೇಲೆ ಚತುರಳಾದ ಆ ಪಂಡಿತೆಯು ಶ್ರೀಮತಿಯನ್ನು ಬೋಧಿಸುವುದಕ್ಕೋಸ್ಕರ, ಅಶೋಕವನದ ಮಧ್ಯದಲ್ಲಿರುವ ಚಂದ್ರಕಾಂತ ಶಿಲೆಯಲ್ಲಿ ಕುಳಿತುಕೊಂಡು ಸ್ನೇಹಪೂರ್ವಕವಾಗಿ ಮೃದುವಾದ ಕೈಯಿಂದ ಶ್ರೀಮತಿಯ ಅವಯವಗಳನ್ನು ಸ್ಪರ್ಶಿಸಿ, ಮುಖವೆಂಬ ಕಮಲದಿಂದ ಹೊರಡುತ್ತಿರುವ ಹಲ್ಲುಗಳಕಾಂತಿಯೆಂಬ ಜಲಪ್ರವಾಹಗಳಿಂದ ಆ ಶ್ರೀಮತಿಯ ಹೃದಯದಲ್ಲಿರುವ ಸಂತಾಪವನ್ನು ಹೋಗಲಾಡಿಸುತ್ತಾಳೋ ಎಂಬಂತೆ, ಏಕಾಂತದಲ್ಲಿ ಯುಕ್ತಿಯಾದ ಮಾತನ್ನು ಮುಂದೆಹೇಳುವ ರೀತಿಯಾಗಿ ಹೇಳಿದಳು.

**ಅಹಂ ಪಂಡಿತಿಕಾ ಸತ್ಯಂ ಪಂಡಿತಾ ಕಾರ್ಯಯುಕ್ತಿಷು ।**
**ಜನನೀ[2]ನಿರ್ವಿಶೇಷಾಸ್ಮಿ ತವ ಪ್ರಾಣಸಮಾ ಸಖೀ ॥ ೧೧೭ ॥**

"ಎಲೈ ಶ್ರೀಮತಿಯೇ ! ನಾನು ಯುಕ್ತಿಯಿಂದ ಕಾರ್ಯಗಳನ್ನು ಮಾಡುವುದರಲ್ಲಿ ಚತುರಳಾಗಿರುವುದರಿಂದ ಪಂಡಿತೆಯೆಂಬ ನನ್ನ ಹೆಸರು ಸಾರ್ಥಕವಾಗಿದೆ. ನಿನಗೆ ನಾನು ತಾಯಿಗೆ ಸಮಾನಳೂ ಪ್ರಾಣಗಳಿಗೆ ಸಮಾನಳೂ ಆದ ಸಖಿಯಾಗಿಯೂ ಇರುತ್ತೇನೆ.

**ತತೋ ಬ್ರೂಹಿ [3]ಮಿಥಃ ಕನ್ಯೇ ಧನ್ಯೇ ತ್ವಂ ಮೌನಕಾರಣಮ್ ।**
**[4]ನಾಮಯೋ ಗೋಪನೀಯೋ ಹಿ ಜನನ್ಯಾ ಇತಿ ವಿಶ್ರುತಮ್ ॥**

ಆದುದರಿಂದ ಎಲೈ ಧನ್ಯಳಾದ ಕನ್ಯೆಯೇ ! ನೀನು ಮೌನವಾಗಿರುವುದಕ್ಕೆ ಕಾರಣವೇನೆಂಬುದನ್ನು ಗುಟ್ಟಿನಲ್ಲಿ ನನ್ನೊಡನೆ ಹೇಳು. ತನಗಿರುವ ವ್ಯಾಧಿಯನ್ನು ತಾಯಿಯಲ್ಲಿ ಮರೆಮಾಚಬಾರದೆಂದು ಲೋಕದಲ್ಲಿ ಪ್ರಸಿದ್ಧಿಯಿದೆ.

**ಮಯಾ ಸುನಿಪುಣಂ ಚಿತ್ತೇ ಪರ್ಯಾಲೋಚಿತಮೀಹಿತಮ್ ।**
**ತವಾಸೀನ್ನ ತು ವಿಜ್ಞಾತಂ ತನ್ಮೇ ವದ ಪತಿಂವರೇ ॥ ೧೧೯ ॥**

ಪತಿಯನ್ನು ವರಿಸುವವಳೇ ! ನಾನು ಬಹಳ ಜಾಣತನದಿಂದ ನಿನ್ನ ಇಷ್ಟಾರ್ಥವನ್ನು ತಿಳಿಯಬೇಕೆಂದು ಮನಸ್ಸಿನಲ್ಲಿ ಪರ್ಯಾಲೋಚಿಸಿದೆನು. ಆದರೆ ನನಗೆ ಗೊತ್ತಾಗಲಿಲ್ಲ. ಆದುದರಿಂದ ಆ ಕಾರಣವನ್ನು ನನಗೆ ಹೇಳು.

**ಕಿಮೇಷ ಮದನೋನ್ಮಾದಃ ಕಿ[5]ಮಾಲಿ ಗ್ರಹವಿಪ್ಲವಃ ।**
**ಪ್ರಾಯೋ ಹಿ ಯೌವನಾರಂಭೇ ಜೃಂಭತೇ ಮದನಗ್ರಹಃ ॥ ೧೨೦ ॥**

ಸಖಿಯೇ ! ಇದೇನು ಕಾಮಬಾಧೆಯಿಂದುಂಟಾದ ಮೂರ್ಛೆಯೋ ? ಗ್ರಹಪೀಡೇಯೋ ? ಪ್ರಾಯಶಃ ಯೌವನಾರಂಭದಲ್ಲಿ ಕಾಮನೆಂಬ ಗ್ರಹವೇ ಪ್ರಾದುರ್ಭವಿಸುತ್ತದೆ".

**ಇತಿ ಪೃಷ್ಟಾ ತಯಾ ಕಿಂಚಿದಾನಮ್ಯ ಮುಖಪಂಕಜಮ್ ।**
**ಪದ್ಮಿನೀವ ದಿನಾಪಾಯೇ ಪರಿಮ್ಲಾನಂ ಮಹೋತ್ಪಲಮ್ ॥ ೧೨೧ ॥**

**ಜಗಾದ ಶ್ರೀಮತೀ ಸತ್ಯಂ ನ ಶಕ್ತಾಸ್ಮೀದೃಶಂ ವಚಃ ।**
**ಕಸ್ಯಾಪಿ ಪುರತೋ ವಕ್ತುಂ ಲಜ್ಜಾವಿವಶಮಾನಸಾ ॥ ೧೨೨ ॥**

ಹೀಗೆ ಆ ಪಂಡಿತೆಯಿಂದ ಪ್ರಶ್ನೆಮಾಡಲ್ಪಟ್ಟ ಶ್ರೀಮತಿಯು, ಸೂರ್ಯಸ್ತಮಾನಕಾಲದಲ್ಲಿ ಕಮಲಲತೆಯು ಬಾಡಿದ ಕಮಲವನ್ನು ಬಗ್ಗಿಸುವಂತೆ, ಮುಖಕಮಲವನ್ನು ಬಗ್ಗಿಸಿ, "ಎಲೈ ಪಂಡಿತೆಯೇ ! ಸತ್ಯವಾಗಿಯೂ ನಾನು ಲಜ್ಜೆಗೆ ಪರವಶವಾದ ಮನಸ್ಸುಳ್ಳವಳಾಗಿ ಇಂತಹ ಮಾತನ್ನು ಯಾರ ಮುಂದೆಯೂ ಹೇಳುವುದಕ್ಕೆ ಅಸಮರ್ಥಳಾಗಿದ್ದೇನೆ.

**ಕಿಂತು ತೇದ್ಯ ಪುರೋ ನಾಹಂ ಜಿಹ್ರೇಮ್ಯಾರ್ತಾ ಲಪಂತ್ಯಲಮ್ ।**
**ಜನನೀನಿರ್ವಿಶೇಷಾ ತ್ವಂ ಚಿರಂ ಪರಿಚಿತಾ ಚ ಮೇ ॥ ೧೨೩ ॥**

ಆದರೆ ಈಗ ದುಃಖಿತಳಾಗಿ ನಿನ್ನ ಮುಂದೆ ಸಂಪೂರ್ಣವಾಗಿ ಹೇಳುವುದಕ್ಕೆ ನಾನು ನಾಚುವುದಿಲ್ಲ. ನೀನು ನನಗೆ ತಾಯಿಗೆ ಸಮಾನಳೂ ಬಹಳಕಾಲದಿಂದ ಪರಿಚಿತಳೂ ಆಗಿರುತ್ತಿ.

**ತದ್ವಕ್ಷ್ಯೇ ಶೃಣು ಸೌಮ್ಯಾಂಗಿ ಮಹತೀಯಂ ಕಥಾ ಮಮ ।**
**ಮಯಾ ಪ್ರಾಗ್ಜನ್ಮಚರಿತಂ ಸ್ಮೃತಂ ದೇವಾಗಮೇಕ್ಷಣಾತ್ ॥ ೧೨೪ ॥**

ಆದುದರಿಂದ ಎಲೈ ಮನೋಹರಾಂಗಿಯೇ ! ನನ್ನ ಈ ದೊಡ್ಡಕಥೆಯನ್ನು ಹೇಳುತ್ತೇನೆ, ಕೇಳು. ದೇವತೆಗಳ ಬರುವಿಕೆಯನ್ನು ನೋಡಿದುದರಿಂದ ನಾನು ಪೂರ್ವಜನ್ಮದ ಚರಿತ್ರೆಯನ್ನು ಸ್ಮರಿಸಿಕೊಂಡೆನು.

**ತತ್ಕೀದೃಶಂ ಕದಾ ವೇತಿ ಸರ್ವಂ ವಕ್ಷ್ಯೇ ಸವಿಸ್ತರಮ್ ।**
**ಸ್ವಪ್ನಾನುಭೂತಮಿವ ಮೇ ಸ್ಮೃತೌ ತತ್ಪ್ರತಿಭಾಸತೇ ॥ ೧೨೫ ॥**

ಆ ಚರಿತ್ರೆಯು ಯಾವ ಪ್ರಕಾರವಾದುದು ? ಯಾವಾಗ ನಡೆದುದು ? ಎಂಬ ವಿಷಯವನ್ನೆಲ್ಲ ಸವಿಸ್ತಾರವಾಗಿ ಹೇಳುವೆನು. ಆ ಚರಿತ್ರೆಯು, ಸ್ವಪ್ನದಲ್ಲಿ ಕಂಡಂತೆ, ನನ್ನ ಸ್ಮರಣೆಯಲ್ಲಿ ಹೊಳೆಯುತ್ತದೆ.

**ಅಹಂ ಪೂರ್ವಭವೇಭೂವಂ ಧಾತಕೀಖಂಡನಾಮನಿ ।**
**ಮಹಾದ್ವೀಪೇ ಸರೋಜಾಕ್ಷಿ ಸ್ವರ್ಗಭೂಮ್ಯತಿಶಾಯಿನಿ ॥ ೧೨೬ ॥**

ಎಲೈ ಕಮಲಲೋಚನೆಯೇ ! ನಾನು ಪೂರ್ವಭವದಲ್ಲಿ ಸ್ವರ್ಗಭೂಮಿಯನ್ನು ಮೀರುವ ಧಾತಕೀಖಂಡವೆಂಬ ಮಹಾದ್ವೀಪದಲ್ಲಿದ್ದೆನು.

**ತತ್ರಾಸ್ತಿ ಮಂದರಾತ್ಪೂರ್ವಾದ್ವಿದೇಹೇ [1]ಪ್ರತ್ಯಗಾಶ್ರಿತೇ ।**
**ವಿಷಯೋ ಗಂಧಿಲಾಭಿಖ್ಯೋ ಯಃ [2]ಕುರೂನಪಿ ನಿರ್ಜಯೇತ್ ॥**

ಆ ದ್ವೀಪದ ಪೂರ್ವದಿಕ್ಕಿನಲ್ಲಿರುವ ಮೇರುಪರ್ವತದಿಂದ ಪಶ್ಚಿಮದಲ್ಲಿರುವ ವಿದೇಹಕ್ಷೇತ್ರದಲ್ಲಿ ಗಂಧಿಲವೆಂಬ ದೇಶವಿದೆ. ಆ ದೇಶವು ದೇವಕುರು ಉತ್ತರ ಕುರುಗಳನ್ನು ಕೂಡ ಜಯಿಸುವುದು.

**ತತ್ರಾಸೀತ್ಪಾಟಲೀಗ್ರಾಮೇ ನಾಗದತ್ತೋ ವಣಿಕ್ಸುತಃ ।**
**[3]ಸುರತಿಸ್ತಸ್ಯ ಕಾಂತಾಭೂತ್ತಯೋರ್ಜಾತಾಃ ಸುತಾ ಇಮೇ ॥ ೧೨೮ ॥**

ಆ ದೇಶದಲ್ಲಿ ಪಾಟಲಿಯೆಂಬ ಗ್ರಾಮವಿದೆ. ಆ ಗ್ರಾಮದಲ್ಲಿ ನಾಗದತ್ತನೆಂಬ ವರ್ತಕನಿದ್ದನು. ಆತನಿಗೆ ಸುರತಿಯೆಂಬುವವಳು ಪತ್ನಿಯಾಗಿದ್ದಳು. ಆ ದಂಪತಿಗಳಿಗೆ ಈ ಮುಂದೆ ಹೇಳಲ್ಪಡುವವರು ಮಕ್ಕಳಾಗಿ ಹುಟ್ಟಿದರು.

**ನಂದಶ್ಚ ನಂದಿಮಿತ್ರಶ್ಚ ನಂದಿಷೇಣಾಹ್ವಯಃ ಪರಃ ।**
**ವರಸೇನೋ ಜಯಾದಿಶ್ಚ ಸೇನಸ್ತತ್ಸೂನವಃ ಕ್ರಮಾತ್ ॥ ೧೨೯ ॥**

ನಂದ, ನಂದಿಮಿತ್ರ, ನಂದಿಷೇಣ, ವರಸೇನ, ಜಯಸೇನ ಈ ಐದು ಜನರು ಕ್ರಮವಾಗಿ ಆವರಿಗೆ ಪುತ್ರರಾದರು.

**ಪುತ್ರಿಕೇ ಚ ತಯೋರ್ಜಾತೇ [4]ಮದನಶ್ರೀಪದಾದಿಕೇ ।**
**ಕಾಂತೇ [5]ತಯೋರಹಂ ಜಾತಾ [6] ನಿರ್ನಾಮೇತಿ ಕನೀಯಸೀ ॥ ೧೩೦ ॥**

---

೧ ವನಂ. ೨ ಸಮಾನಾ. ೩ ರಹಸಿ. ೪ ವ್ಯಾಧಿರ್ನ ಗೋಪನೀಯ ಇತಿ ಸಂಬಂಧಃ. ೫ ಹೇ ಸಖಿ !

೧ ಅಪರಃ. ೨ ದೇಶವಾಚಿತ್ವಾದ್ಬಹೂಕ್ತಿಃ. ೩ ಸುಮತಿರಿತಿ ಪಾಠಾಂತರಂ. ೪ ಮದನಕಾಂತಾ ಶ್ರೀಕಾಂತಾ ಚೇತ್ಯರ್ಥಃ. ೫ ಪಿತ್ರೋಃ. ೬ ನಿರ್ನಾಮೇತಿ ತೃತೀಯಪುತ್ರೀತ್ಯರ್ಥಃ.

ಆ ದಂಪತಿಗಳಿಗೆ ಮದನಕಾಂತಾ, ಶ್ರೀಕಾಂತಾ ಎಂದು ಹೆಸರುಳ್ಳ ಇಬ್ಬರು ಹೆಣ್ಣುಮಕ್ಕಳು ಹುಟ್ಟಿದರು. ಅದೇ ದಂಪತಿಗಳಿಗೆ ನಾನು ನಿರ್ನಾಮೆಯೆಂಬ ಮೂರನೆಯ ಕಿರಿಮಗಳಾಗಿ ಹುಟ್ಟಿದೆನು.

**ಕದಾಚಿತ್ಕಾನನೇ ರಮ್ಯೇ ಚರಿತೇ ಚಾರಣಾದಿಕೇ ।**
**ಗಿರಾವಂಬರಪೂರ್ವೇಹಂ ತಿಲಕೇ ಪಿಹಿತಾಸ್ರವಮ್ ॥ ೧೩೧ ॥**

**ನಾನರ್ದ್ಧಿಭೂಷಣಂ ದೃಷ್ಟ್ವಾ ಮುನಿಂ ಸಾವಧಿಬೋಧನಮ್ ।**
**ಇದಮಪ್ರಾಕ್ಷಮಾನಮ್ಯ ಸಂಬೋಧ್ಯ ಭಗವನ್ನಿತಿ ॥ ೧೩೨ ॥**

ಒಂದು ಕಾಲದಲ್ಲಿ ಚಾರಣಚರಿತವೆಂಬ ರಮಣೀಯವಾದ ಅರಣ್ಯದಲ್ಲಿ ಅಂಬರತಿಲಕವೆಂಬ ಪರ್ವತದಲ್ಲಿ ಅನೇಕಪ್ರಕಾರವಾದ ಋದ್ಧಿಗಳಿಂದ ಭೂಷಿತರೂ ಅವಧಿಜ್ಞಾನಸಂಪನ್ನರೂ ಆದ ಪಿಹಿತಾಸ್ರವರೆಂಬ ಮುನಿಗಳನ್ನು ನಾನು ನೋಡಿ ನಮಸ್ಕರಿಸಿ 'ಎಲೈ ಭಗವಂತನೇ !' ಎಂದು ಸಂಬೋಧಿಸಿ ಈ ಮುಂದೆ ಹೇಳುವ ವಿಷಯವನ್ನು ಕೇಳಿದೆನು:–

**ಕೇನಾಸ್ಮಿ ಕರ್ಮಣಾ ಜಾತಾ ಕುಲೇ [೧]ದೌರ್ಗತ್ಯಶಾಲಿನಿ ।**
**ಬ್ರೂಹೀದಮತಿ[೨]ನಿರ್ವಿಣ್ಣಾಂ ದೀನಾಮನುಗೃಹಾಣ ಮಾಮ್ ॥ ೧೩೩ ॥**

'ಯಾವ ಕರ್ಮದಿಂದ ನಾನು ಈ ದಾರಿದ್ರ್ಯವುಳ್ಳ ಕುಲದಲ್ಲಿ ಹುಟ್ಟಿದೆನೆಂಬುದನ್ನು ಹೇಳಿ ಅತ್ಯಂತ ದುಃಖಿತಳಾದ ನನ್ನನ್ನು ಅನುಗ್ರಹಿಸಿ'.

**ಇತಿ ಪೃಷ್ಟೋ ಮುನೀಂದ್ರೋಸೌ ಜಗೌ ಮಧುರಯಾ ಗಿರಾ ।**
**ಇಹೈವ ವಿಷಯೇ[೩]ಮುತ್ರ ಪುತ್ರಿ ಜಾತಾಸಿ ಕರ್ಮಣಾ ॥ ೧೩೪ ॥**

**ಪಲಾಲಪರ್ವತಗ್ರಾಮೇ ದೇವಿಲ[೪]ಗ್ರಾಮಕೂಟಕಾತ್ ।**
**ಸುಮತೇರುದರೇ ಪುತ್ರೀ ಧನಶ್ರೀರಿತಿ ವಿಶ್ರುತಾ ॥ ೧೩೫ ॥**

ಹೀಗೆ ನಾನು ಪ್ರಶ್ನೆಮಾಡಿದನಂತರ ಆ ಪಿಹಿತಾಸ್ರವಮುನಿಗಳು ಮಧುರ ವಚನದಿಂದ ಮುಂದೆ ಹೇಳುವ ಪ್ರಕಾರವಾಗಿ ಹೇಳಿದರು. 'ಎಲೈ ಮಗಳೇ ! ನೀನು ಕರ್ಮದ ವಶದಿಂದ ಪೂರ್ವಭವದಲ್ಲಿ ಇದೇ ದೇಶದಲ್ಲಿರುವ ಪಲಾಲಪರ್ವತವೆಂಬ ಗ್ರಾಮದಲ್ಲಿ ದೇವಿಲನೆಂಬ ಗೌಡನಿಗೂ ಆತನ ಪತ್ನಿ ಸುಮತಿಯೆಂಬುವವಳಿಗೂ ಧನಶ್ರೀಯೆಂಬ ಮಗಳಾಗಿ ಹುಟ್ಟಿದ್ದೆ.

**ಅನ್ಯೇದ್ಯುಶ್ಚ ತ್ವಮಜ್ಞಾನಾಚ್ಛುನಃ ಪೂತಿಕಲೇವರಮ್ ।**
**ಮುನೇಃ ಸಮಾಧಿಗುಪ್ತಸ್ಯ ಪಠತೋಂತೇ ನ್ಯಧಾ ಮುದಾ ॥ ೧೩೬ ॥**

ನೀನು ಅಜ್ಞಾನದಿಂದ ಒಂದು ದಿನ ಸತ್ತ ನಾಯಿಯ ದುರ್ಗಂಧವಾದ ಶರೀರವನ್ನು ಶಾಸ್ತ್ರಸ್ವಾಧ್ಯಾಯಮಾಡುತ್ತಿದ್ದ ಸಮಾಧಿಗುಪ್ತಮುನಿಗಳ ಸಮೀಪದಲ್ಲಿ ಸಂತೋಷದಿಂದ ಹಾಕಿದೆ.

**ಮುನಿಸ್ತದವಲೋಕ್ಯಾಸೌ ತ್ವಾಮಿ[೫]ತ್ಯನ್ವಶಿಷತ್ತದಾ ।**
**ತ್ವಯೇದಂ ಬಾಲಿಕೇ ಕರ್ಮ[೬]ವಿರೂಪಕಮನುಷ್ಠಿತಮ್ ॥ ೧೩೭ ॥**

**ಫಲಿಷ್ಯತಿ ವಿಪಾಕೇ ತೇ ದುರಂತಂ ಕಟುಕಂ ಫಲಮ್ ।**
**ದಹತ್ಯಧಿಕ[೭]ಮನ್ಯಸ್ಮಿ[೮]ನ್ಮಾನನೀಯವಿಮಾನನಾ ॥ ೧೩೮ ॥**

ಆಗ ಈ ಸಮಾಧಿಗುಪ್ತಮುನಿಗಳು ಅದನ್ನು ನೋಡಿ ನಿನ್ನನ್ನು ಕುರಿತು ಮುಂದೆ ಹೇಳುವ ಪ್ರಕಾರವಾಗಿ ಹೇಳಿದರು 'ಎಲೈ ಬಾಲಿಕೆಯೇ ! ನೀನು ಈ ನಿಂದ್ಯವಾದ ಕಾರ್ಯವನ್ನು ಮಾಡಿದೆ. ಈ ಕಾರ್ಯದಿಂದ ಮುಂದೆ ನಿನಗೆ ಬಹಳ ದುಃಖವುಂಟಾಗುವುದು. ಪೂಜ್ಯರಿಗೆ ಅಪಮಾನವನ್ನು ಮಾಡುವುದರಿಂದ ಇನ್ನೊಂದು ಭವದಲ್ಲಿ ಅಧಿಕವಾದ ಸಂತಾಪವುಂಟಾಗುತ್ತದೆ'.

**ಇತಿ ಬ್ರುವಂತಮಭ್ಯೇತ್ಯ ಕ್ಷಮಾ[೧]ಮಗ್ರಾಹಯಸ್ತದಾ ।**
**ಭಗವನ್ನಿದಮಜ್ಞಾನಾತ್ಕ್ಷಮಸ್ವ ಕೃತಮಿತ್ಯರಮ್ ॥ ೧೩೯ ॥**

ಹೀಗೆ ಹೇಳುತ್ತಿರುವ ಸಮಾಧಿಗುಪ್ತಮುನಿಗಳ ಸಮೀಪಕ್ಕೆ ಹೋಗಿ ಆಗ ನೀನು ಎಲೈ ಭಗವಂತನೇ ! ಈ ಕಾರ್ಯವನ್ನು ನಾನು ಅಜ್ಞಾನದಿಂದ ಮಾಡಿದೆನು. ಶೀಘ್ರವಾಗಿ ಕ್ಷಮಿಸಿ, ಹೀಗೆಂದು ಕ್ಷಮಾಪಣೆಯನ್ನು ಕೇಳಿಕೊಂಡೆ.

**ತೇನೋಪಶಮಭಾವೇನ ಜಾತಾಲ್ಪಂ ಪುಣ್ಯಮಾಶ್ರಿತಾ ।**
**ಮನುಷ್ಯಜನ್ಮನೀಹಾದ್ಯ ಕುಲೇ ಪರಮದುರ್ಗತೇ ॥ ೧೪೦ ॥**

ಹಾಗೆ ನೀನು ಕ್ಷಮಾ ಪ್ರಾರ್ಥನೆಯನ್ನು ಮಾಡಿಕೊಂಡುದರಿಂದುಂಟಾದ ಸ್ವಲ್ಪ ಪುಣ್ಯದಿಂದ ಈಗ ಮನುಷ್ಯಜನ್ಮದಲ್ಲಿ ಅತ್ಯಂತದಾರಿದ್ರ್ಯವುಳ್ಳ ಈ ಕುಲದಲ್ಲಿ ಹುಟ್ಟಿರುತ್ತಿ.

**ತತಃ ಕಲ್ಯಾಣಿ [೨]ಕಲ್ಯಾಣಂ ಗೃಹಾಣೋಪೋಷಿತವ್ರತಮ್ ।**
**ಜಿನೇಂದ್ರಗುಣ[೩]ಸಂಪತ್ತಿಂ [೪]ಶ್ರುತಜ್ಞಾನಮಪಿ ಕ್ರಮಾತ್ ॥ ೧೪೧ ॥**

ಆದುದರಿಂದ ಎಲೈ ಮಂಗಳಾಂಗಿಯೇ ! ಜಿನೇಂದ್ರಗುಣಸಂಪತ್ತಿ ಮತ್ತು ಶ್ರುತಜ್ಞಾನ ಈ ಎರಡು ಉಪವಾಸವ್ರತಗಳನ್ನು ಸ್ವೀಕರಿಸು.

**ಕೃತಾನಾಂ ಕರ್ಮಣಾಮಾರ್ಯೇ ಸಹಸಾ [೫]ಪರಿಪಾಚನಮ್ ।**
**ತಪೋನಶನಮಾಮ್ನಾತಂ ವಿಧಿಯುಕ್ತ[೬]ಮುಪೋಷಿತಮ್ ॥ ೧೪೨ ॥**

ಎಲೈ ಆರ್ಯಳೇ ! ಶೀಘ್ರವಾಗಿ ಮಾಡಿದ ಕರ್ಮಗಳ ನಿರ್ಜರೆಗೆ ಕಾರಣವು ಅನಶನವೆಂಬ ತಪಸ್ಸಾಗಿದೆ. ಅನಶನವೆಂದರೆ ವಿಧಿಪೂರ್ವಕವಾಗಿ ಮಾಡುವ ಉಪವಾಸವು.

**ತೀರ್ಥಕೃತ್ತ್ವಸ್ಯ ಪುಣ್ಯಸ್ಯ ಕಾರಣಾನೀಹ ಷೋಡಶ ।**
**ಕಲ್ಯಾಣಾನ್ಯತ್ರ ಪಂಚೈವ ಪ್ರಾತಿಹಾರ್ಯಾಷ್ಟಕಂ ತಥಾ ॥ ೧೪೩ ॥**

**[೭]ಅತಿಶೇಷಾಶ್ಚತುಸ್ತ್ರಿಂಶದಿಮಾನುದ್ದಿಶ್ಯ ಸದ್ಗುಣಾನ್ ।**
**ಯಾ ಸಾನುಷ್ಠೀಯತೇ ಭವ್ಯೈಃ ಸಂಪಜ್ಜಿನಗುಣಾದಿಕಾ ॥ ೧೪೪ ॥**

ಈ ಜಿನೇಂದ್ರಗುಣಸಂಪತ್ತಿಯೆಂಬ ಉಪವಾಸವ್ರತದಲ್ಲಿ ತೀರ್ಥಕರನಾಗಿ ಹುಟ್ಟುವ ಪುಣ್ಯಕ್ಕೆ ಕಾರಣಗಳು ದರ್ಶನವಿಶುದ್ಧಿ, ವಿನಯಸಂಪನ್ನತಾ ಮೊದಲಾದ ಹದಿನಾರು ಭಾವನೆಗಳು. ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ, ನಿರ್ವಾಣ ಈ ಐದು ಕಲ್ಯಾಣಗಳು. ಹಾಗೆಯೇ ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದುಂದುಭಿ, ಆತಪತ್ರ (ಛತ್ರಿ) ಇವು ಎಂಟು ಪ್ರಾತಿಹಾರ್ಯಗಳು. ತೀರ್ಥಂಕರರ ಉತ್ಪತ್ತಿಕಾಲದಲ್ಲಿ ಹತ್ತು ಅತಿಶಯಗಳು, ಘಾತಿಕರ್ಮಗಳ ಕ್ಷಯಕಾಲದಲ್ಲುಂಟಾಗುವ ಹತ್ತು ಅತಿಶಯಗಳು, ದೇವತೆಗಳುಮಾಡುವ ಹದಿನಾಲ್ಕು ಅತಿಶಯಗಳು, ಹೀಗೆ ಮೂವತ್ತನಾಲ್ಕು ಅತಿಶಯಗಳು. ಈ ಅರವತ್ತಮೂರು ಗುಣಗಳನ್ನು ಉದ್ದೇಶಿಸಿ ಭವ್ಯಪುರುಷರು ಮಾಡುವ ಉಪವಾಸವ್ರತಕ್ಕೆ ಜಿನಗುಣಸಂಪತ್ತಿಯೆಂದು ಹೆಸರು.

**ಉಪವಾಸದಿನಾನ್ಯತ್ರ ತ್ರಿಷಷ್ಟಿರ್ಮುನಿಭಿರ್ಮತಾ ।**
**ಶ್ರುತಜ್ಞಾನೋಪವಾಸಸ್ಯ ಸ್ವರೂಪಮಧುನೋಚ್ಯತೇ ॥ ೧೪೫ ॥**

ಈ ಅರವತ್ತಮೂರು ಗುಣಗಳನ್ನು ಕುರಿತು ಅರವತ್ತಮೂರು ದಿವಸ ಉಪವಾಸಮಾಡಬೇಕೆಂದು ಗಣಧರಾದಿಮುನಿಗಳು ಹೇಳುತ್ತಾರೆ. (೧೬

೧ ದಾರಿದ್ರ್ಯಂ ಪ್ರಾಪ್ತೇ, ಶಲಗತಾವಿತ್ಯಸ್ಮಾದ್ಧಾತೋರ್ನಿಃ. ೨ ಉದ್ವೇಗವತೀಂ. ೩ ಪೂರ್ವಭವೇ. ೪ ಮಹತ್ತರೋ ಗ್ರಾಮಕೂಟ ಇತಿ ಹಾರಾವಲೀ. ೫ ಅನುಶಾಸ್ತಿ ಸ್ಮ. ೬ ನಿಕೃಷ್ಟಂ. ೭ ಪರಭವೇ. ೮ ಪೂಜ್ಯಾವಜ್ಞಾ.

೧ ತ್ವಮಗ್ರಾಹಯ ಇತಿ ಸಂಬಂಧ. ೨ ಶುಭಂ. ೩ ನಾಮ. ೪ ನಾಮ. ೫ ಪರಿಪಾಚಯತೀತಿ ಪರಿಪಾಚನಂ, ನಿರ್ಜರಾಕಾರಣಮಿತ್ಯರ್ಥಃ. ೬ ಉಪವಾಸಂ. ೭ ಅತಿಶಯಾಃ.

ಭಾವನೆಗಳಿಗೆ ೧೬ ಪಾಡ್ಯಗಳೂ ೫ ಕಲ್ಯಾಣಗಳಿಗೆ ೫ ಪಂಚಮಿಗಳೂ ೮ ಪ್ರಾತಿಹಾರ್ಯಗಳಿಗೆ ೮ ಅಷ್ಟಮೀ ದಿನಗಳೂ ೩೪ ಅತಿಶಯಗಳಿಗೆ ೨೦ ದಶಮಿಗಳು ಮತ್ತು ೧೪ ಚತುರ್ದಶಿಗಳೂ ಉಪವಾಸದಿನಗಳೆಂದು ತಿಳಿಯಬೇಕು) ಈಗ ಶ್ರುತಜ್ಞಾನೋಪವಾಸದ ಸ್ವರೂಪವನ್ನು ಹೇಳುತ್ತೇವೆ.

**ಅಷ್ಟಾವಿಂಶತಿಮಪ್ಯೇಕಾದಶ ದ್ವೌ ಚ ಯಥಾಕ್ರಮಮ್ ।**
**ಅಷ್ಟಾಶೀತಿಮಥೈಕಂ ಚ ಚತುರ್ದಶ ಚ ಪಂಚ ಚ ॥ ೧೪೬ ॥**

**ವಿದ್ಧಿ ಷಡ್ವಿಂಶೈಕಸಂಖ್ಯಾಂ ಚ ಮತ್ಯಾದಿಜ್ಞಾನಪರ್ಯಯಾತ್ ।**
**ನಾಮೋದ್ದೇಶಕ್ರಮಶ್ಚೈಷಾಂ ಜ್ಞಾನಾನಾಮಿತ್ಯನುಸ್ಮೃತಃ ॥ ೧೪೭ ॥**

**ಮತಿಜ್ಞಾನಮಥೈಕಾದಶಾಂಗಾನಿ ಪರಿಕರ್ಮ ಚ ।**
**ಸೂತ್ರಮಾದ್ಯಾನುಯೋಗಂ ಚ ಪೂರ್ವಾಣ್ಯಪಿ ಚ ಚೂಲಿಕಾಮ್ ॥**

**ಅವಧಿಂ ಚ ಮನಃಪರ್ಯಯಾಖ್ಯಂ ಕೇವಲಮೇವ ಚ ।**
**ಜ್ಞಾನಭೇದಾನ್ಪ್ರತೀತ್ಯೇಮಾನ್ ಶ್ರುತಜ್ಞಾನಮುಪೋಷ್ಯತೇ ॥ ೧೪೯ ॥**

ಮನಃಸಹಿತವಾದ ಆರು ಇಂದ್ರಿಯಗಳಲ್ಲಿ ಅವಗ್ರಹ, ಈಹಾ, ಅವಾಯ, ಧಾರಣಾ ಈ ನಾಲ್ಕು ಪ್ರಕಾರವಾದ ಜ್ಞಾನಗಳು ಪ್ರತಿಯೊಂದು ಇಂದ್ರಿಯದಲ್ಲಿಯೂ ಉಂಟಾಗುವುದರಿಂದ ಇಪ್ಪತ್ತನಾಲ್ಕು ಭೇದಗಳಾದುವು. ಮನ ಇಂದ್ರಿಯವೂ ಚಕ್ಷುರಿಂದ್ರಿಯವೂ ಪದಾರ್ಥಗಳನ್ನು ಸ್ಪರ್ಶಮಾಡದೆ ಅಪ್ರಾಪ್ಯಕಾರಿಗಳಾಗಿ ಪದಾರ್ಥಗಳನ್ನು ತಿಳಿಯುವುದರಿಂದ ಈ ಎರಡು ಇಂದ್ರಿಯಗಳಿಗೆ ವ್ಯಂಜನ (ಅಸ್ಪಷ್ಟ) ಅವಗ್ರಹವುಂಟಾಗುವುದಿಲ್ಲ. ಉಳಿದ ನಾಲ್ಕು ಇಂದ್ರಿಯಗಳಿಗೆ ವ್ಯಂಜನಾವಗ್ರಹವುಂಟಾಗುತ್ತದೆ. ಈ ನಾಲ್ಕು ಸೇರಿ ಮತಿಜ್ಞಾನದ ಭೇದಗಳು ಇಪ್ಪತ್ತೆಂಟು. ಶ್ರುತಜ್ಞಾನದಲ್ಲಿ ಆಚಾರಾಂಗ ಮೊದಲಾಗಿ ಹನ್ನೊಂದು ಅಂಗಗಳು, ಎರಡು ಪರಿಕರ್ಮಗಳು, ಸೂತ್ರದಲ್ಲಿ ಎಂಬತ್ತೆಂಟು ಭೇದಗಳು, ಪ್ರಥಮಾನುಯೋಗ ಒಂದು, ಹದಿನಾಲ್ಕು ಪೂರ್ವೆಗಳು, ಐದು ಚೂಲಿಕೆಗಳು, ಹೀಯಮಾನ ವರ್ಧಮಾನ ಮೊದಲಾದ ಭೇದಗಳಿಂದ ಆರು ಪ್ರಕಾರವಾದ ಅವಧಿಜ್ಞಾನಗಳು, ಋಜುಮತಿ ವಿಪುಲಮತಿ ಭೇದದಿಂದ ಮನಃಪರ್ಯಯಜ್ಞಾನಗಳೆರಡು, ಕೇವಲಜ್ಞಾನವು ಒಂದು, ಹೀಗೆ ಮತಿಜ್ಞಾನ ಮೊದಲಾದ ಜ್ಞಾನಪರ್ಯಾಯದ ಅಪೇಕ್ಷೆಯಿಂದ ಈ ಜ್ಞಾನಗಳ ಹೆಸರುಗಳು ಹೇಳಲ್ಪಟ್ಟಿವೆ. (ಈ ಜ್ಞಾನಗಳ ವಿಸ್ತಾರವರ್ಣನೆಯನ್ನು ತತ್ತ್ವಾರ್ಥಸೂತ್ರದ ವ್ಯಾಖ್ಯಾನಗಳಿಂದ ತಿಳಿಯಬೇಕು) ಹಿಂದೆ ಹೇಳಿದ ನೂರೈವತ್ತೆಂಟು ಜ್ಞಾನಭೇದಗಳನ್ನುದ್ದೇಶಿಸಿ ಮಾಡುವ ಉಪವಾಸ ವ್ರತಕ್ಕೆ ಶ್ರುತಜ್ಞಾನೋಪವಾಸವ್ರತವೆಂದು ಹೆಸರು.

**ದಿನಾನಾಂ ಶತಮತ್ರೇಷ್ಟಮಷ್ಟಾಪಂಚಾಶತಾಧಿಕಮ್ ।**
**ವಿಧೀ ತ್ವಮೇತಾವಾಲಂಬ್ಯ ತಪೋಽನಶನಮಾಚರ ॥ ೧೫೦ ॥**

ಈ ಉಪವಾಸವ್ರತವನ್ನು ನೂರೈವತ್ತೆಂಟು ದಿನಗಳಲ್ಲಿ ಮಾಡಬೇಕು. ನೀನು ಜಿನಗುಣಸಂಪತ್ತಿ ಶ್ರುತಜ್ಞಾನಗಳೆಂಬ ಈ ಎರಡು ವಿಧಿಗಳನ್ನು ಕೈಗೊಂಡು ಅನಶನ(ಉಪವಾಸ)ವ್ರತವನ್ನು ಆಚರಿಸು.

**[1]ಉಶಂತಿ ಜ್ಞಾನಸಾಮ್ರಾಜ್ಯಂ ವಿಧ್ಯೋಃ ಫಲಮಥೈನಯೋಃ ।**
**ಸ್ವರ್ಗಾದ್ಯಪಿ ಫಲಂ ಪ್ರಾಹುರನಯೋ[2]ರನುಷಂಗಜಮ್ ॥ ೧೫೧ ॥**

ವಿಧಿಪೂರ್ವಕವಾಗಿ ಆಚರಿಸಿದ ಈ ಎರಡು ವ್ರತಗಳ ಫಲವು ಕೇವಲಜ್ಞಾನದ ಪ್ರಾಪ್ತಿಯೆಂದು ಹೇಳುತ್ತಾರೆ. ಇವುಗಳಿಗೆ ಸ್ವರ್ಗಾದಿಫಲವು ಗೌಣವಾಗಿದೆ. ಸ್ವರ್ಗಾದಿಫಲವು ನಿಯಮವಾಗಿ ಆಗುತ್ತದೆಂದರ್ಥವು.

೧ ವದಂತಿ. ೨ ಗೌಣಂ.

**ಮುನಯಃ ಪಶ್ಯ ಕಲ್ಯಾಣಿ ಶಾಪಾನುಗ್ರಹಯೋಃ ಕ್ಷಮಾಃ ।**
**ಅತಿಕ್ರಾಂತಿರತಸ್ತೇಷಾಂ ಲೋಕದ್ವಯವಿರೋಧಿನೀ ॥ ೧೫೨ ॥**

ಎಲೈ ಮಂಗಳಾಂಗಿಯೇ ! ನೋಡು, ಮುನಿಗಳು ಶಾಪಕೊಡುವುದರಲ್ಲಿಯೂ ಅನುಗ್ರಹಿಸುವುದರಲ್ಲಿಯೂ ಸಮರ್ಥರು. ಅಂತಹ ಮುನಿಗಳಿಗೆ ವಿರೋಧವನ್ನು ಮಾಡುವುದರಿಂದ ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ದುಃಖವುಂಟಾಗುವುದು.

**ವಾಚಾತಿಲಂಘನಂ ವಾಚಂ ನಿರುಣದ್ಧಿ ಭವೇಽಪರೇ ।**
**ಮನಸೋಲ್ಲಂಘನಂ ಚಾಪಿ ಸ್ಮೃತಿಮಾಹಂತಿ ಮಾನಸೀಮ್ ॥ ೧೫೩ ॥**

**ಕಾಯೇನಾತಿಕ್ರಮಸ್ತೇಷಾಂ [1]ಕಾರ್ತಿಃ ಸಾ ಯಾ ನ ಢೌಕತೇ ।**
**ತಸ್ಮಾತ್ತಪೋಧನೇಂದ್ರಾಣಾಂ ಕಾರ್ಯೋ ನಾತಿಕ್ರಮೋ ಬುಧೈಃ ॥ ೧೫೪ ॥**

ಆ ಮುನಿಗಳಿಗೆ ವಚನದಿಂದ ವಿರೋಧಮಾಡುವವರು ಇನ್ನೊಂದು ಭವದಲ್ಲಿ ಮೂಗರಾಗಿ ಹುಟ್ಟುತ್ತಾರೆ. ಮನಸ್ಸಿನಿಂದ ವಿರೋಧಮಾಡುವವರಿಗೆ ಸ್ಮರಣೆ ಮುಂತಾದ ಮಾನಸಿಕ ಶಕ್ತಿಯು ನಾಶವಾಗುತ್ತದೆ. ಆ ಮುನಿಗಳಿಗೆ ಶರೀರದಿಂದ ವಿರೋಧಮಾಡುವುದರಿಂದ ಉಂಟಾಗದಿರುವ ಪೀಡೆಯಾವುದು ? ಎಲ್ಲಾ ಪೀಡೆಗಳೂ ಉಂಟಾಗುತ್ತವೆಂದರ್ಥವು. ಆದುದರಿಂದ ವಿವೇಕಿಗಳು ಮುನೀಶ್ವರರಿಗೆ ವಿರೋಧವನ್ನು ಮಾಡಬಾರದು.

**ಕ್ಷಮಾಧನಾನಾಂ ಕ್ರೋಧಾಗ್ನಿಂ ಜನಾಃ ಸಂಧುಕ್ಷಯಂತಿ ಯೇ ।**
**ಕ್ಷಮಾಭಸ್ಮಪ್ರತಿಚ್ಛನ್ನಂ ದುರ್ವಚೋವಿಸ್ಫುಲಿಂಗಕಮ್ ॥ ೧೫೫ ॥**

**ಸಮ್ಮೋಹಕಾಷ್ಠಜನಿತಂ [2]ಪ್ರಾತೀಪ್ಯಪವನೇರಿತಮ್ ।**
**ಕಿಂ ತೈರ್ನ ನಾಶಿತಂ ಮುಗ್ಧೇ ಹಿತಂ ಲೋಕದ್ವಯಾಶ್ರಿತಮ್ ॥ ೧೫೬ ॥**

ಎಲೈ ಮೂಢಳೇ ! ಕ್ಷಮೆಯೇ ಧನವಾಗಿರುವ ಮುನಿಗಳ ಕ್ಷಮೆಯೆಂಬ ಬೂದಿಯಿಂದ ಮುಚ್ಚಿರುವುದೂ ದುರ್ವಚನಗಳೆಂಬ ಕಿಡಿಗಳುಳ್ಳದೂ ಮೋಹವೆಂಬ ಕಟ್ಟಿಗೆಯಿಂದುತ್ಪನ್ನವಾದುದೂ ಪ್ರತಿಕೂಲತ್ವವೆಂಬ ಗಾಳಿಯಿಂದ ಉದ್ದೀಪ್ತವೂ ಆದ ಕೋಪವೆಂಬ ಬೆಂಕಿಯನ್ನು ವೃದ್ಧಿಪಡಿಸುವವರು ಇಹಪರ ಲೋಕಗಳಲ್ಲಿ ಉಂಟಾಗುವ ಯಾವ ಹಿತವನ್ನು ತಾನೆ ನಾಶಮಾಡಿಕೊಳ್ಳಲಿಲ್ಲ ? ಎಲ್ಲಾ ಹಿತವನ್ನು ನಾಶಮಾಡಿಕೊಂಡರೆಂದರ್ಥವು.

**ಇತ್ಥಂ ಮುನಿವಚಃಪಥ್ಯ[3]ಮನುಮತ್ಯ ಯಥಾವಿಧಿ ।**
**ಉಪೋಷ್ಯ ತದ್ವಯಂ ಸ್ವಾಯುರಂತೇ ಸ್ವರ್ಗಮಯಾಸಿಷಮ್ ॥ ೧೫೭ ॥**

ಈ ಪ್ರಕಾರವಾದ ಮುನಿಗಳ ಹಿತವಚನವನ್ನು ಅಂಗೀಕರಿಸಿ ವಿಧಿಪೂರ್ವಕವಾಗಿ ಆ ಎರಡು ಉಪವಾಸವ್ರತಗಳನ್ನು ಆಚರಿಸಿ ತನ್ನ ಆಯುಷ್ಯ ಪರಿಸಮಾಪ್ತಿಯಾದನಂತರ ಸ್ವರ್ಗವನ್ನು ಹೊಂದಿದೆನು.

**ಲಲಿತಾಂಗಸ್ಯ ತತ್ರಾ[4]ಸಂ ಕಾಂತಾ ದೇವೀ ಸ್ವಯಂಪ್ರಭಾ ।**
**ಸಾರ್ದ್ಧಂ ಸಪರ್ಯಯಾಗತ್ಯ [5]ತತೋ [6]ಗುರುಮಪೂಜಯಮ್ ॥**

ಆ ಸ್ವರ್ಗದಲ್ಲಿ ಲಲಿತಾಂಗದೇವನಿಗೆ ಸ್ವಯಂಪ್ರಭೆಯೆಂಬ ದೇವಿಯಾಗಿದ್ದೆನು. ಆ ಈಶಾನಸ್ವರ್ಗದಿಂದ ಪೂಜಾಸಾಮಗ್ರಿಯೊಡನೆ ಬಂದು ಪಿಹಿತಾಸ್ರವಗುರುಗಳನ್ನು ಪೂಜಿಸಿದೆನು.

**ಕಲ್ಪೇನಲ್ಪರ್ದ್ಧಿರೈಶಾನೇ ಶ್ರೀಪ್ರಭಾಧಿಪಸಂಯುತಾ ।**
**ಭೋಗಾನ್ಭುಕ್ತ್ವಾತ್ರ ಜಾತೇತಿ ಕಥಾಪರ್ಯವಸಾನಕಮ್ ॥ ೧೫೯ ॥**

೧ ಯಾ ನ ಢೌಕತೇ ಸಾ ಆರ್ತಿಃ ಕಾ ಇತಿ ಸಂಬಂಧಃ, ಕಾಯಾರ್ತಿಃ ಸಾಧಯೇತ್ತರಾಂ, ಕಾಯಾರ್ತಿಂ ಸಾಧಯೇತ್ತರಾಮಿತಿ ಚ ಪಾಠಾಂತರದ್ವಯಂ. ೨ ಪ್ರತಿಕೂಲತ್ವಂ. ೩ ಅಂಗೀಕೃತ್ಯ. ೪ ಅಭವಂ. ೫ ಈಶಾನಕಲ್ಪಾತ್. ೬ ಪಿಹಿತಾಸ್ರವಂ.

**ಲಲಿತಾಂಗಚ್ಯುತೌ ತಸ್ಮಾತ್ಷಣ್ಮಾಸಾನ್ಜಿನಪೂಜನಮ್ ।**
**ಕೃತ್ವಾ ಪ್ರಚ್ಯುತ್ಯ [1]ಸಂಭೂತಿಮಿಹಾ[2]ಲಪ್ಸಿ ತನೂದರಿ ॥ ೧೬೦ ॥**

ಎಲೈ ಕೃಶಾಂಗಿಯೇ! ಈಶಾನಕಲ್ಪದಲ್ಲಿ ನಾನು ಅನೇಕ ಋದ್ಧಿಧಾರಕಳಾಗಿ ಶ್ರೀಪ್ರಭಾವಿಮಾನಾಧಿಪತಿಯಾದ ಲಲಿತಾಂಗದೇವನೊಡನೆ ಕೂಡಿಕೊಂಡು ಭೋಗೋಪಭೋಗಗಳನ್ನು ಭೋಗಿಸಿ ಲಲಿತಾಂಗದೇವನು ಅಲ್ಲಿಂದ ಚ್ಯುತನಾದ ಮೇಲೆ ನಾನು ಆರು ತಿಂಗಳವರೆಗೆ ಜಿನಪೂಜೆಯನ್ನು ಮಾಡಿ, ಸ್ವರ್ಗದಿಂದ ಚ್ಯುತಳಾಗಿ, ಇಲ್ಲಿ ಬಂದು ವಜ್ರದಂತಚಕ್ರವರ್ತಿಯ ಮಗಳಾಗಿ ಹುಟ್ಟಿದೆನು. ಹೀಗೆ ನನ್ನ ಕಥೆಯ ಪರ್ಯವಸಾನವಾಗಿದೆ.

**ತಮಿದಾನೀಮನುಸ್ಮೃತ್ಯ ತದನ್ವೇಷಣಸಂವಿಧೌ ।**
**ಯತೇಹಂ [3]ಪ್ರಯತಾ ತೇನ [4]ವಾಚಂ ಯಮವಿಧಿಂ ದಧೇ ॥ ೧೬೧ ॥**

ಈಗ ನಾನು ಆ ಲಲಿತಾಂಗದೇವನನ್ನು ಸ್ಮರಿಸಿ ಅವನನ್ನು ಹುಡುಕುವ ವಿಧಾನದಲ್ಲಿ ಪವಿತ್ರಳಾಗಿ ಪ್ರಯತ್ನಮಾಡುತ್ತಿದ್ದೇನೆ. ಆದುದರಿಂದ ಮೌನವ್ರತವನ್ನು ಧರಿಸಿರುತ್ತೇನೆ.

**ಉತ್ಕೀರ್ಣ ಇವ ದೇವೋಸೌ ಪಶ್ಚಾದ್ಯಾಪಿ ಮನೋ ಮಮ ।**
**ಅಧಿತಿಷ್ಠತಿ ದೈವೇನ ರೂಪೇಣಾ[5]ನಂಗತಾಂ ಗತಃ ॥ ೧೬೨ ॥**

ದೇವರೂಪದಿಂದ ಚ್ಯುತನಾದ ಈ ಲಲಿತಾಂಗದೇವನು, ಕಲ್ಲಿನಲ್ಲಿ ಪ್ರತಿಮೆಯನ್ನು ಬಿಡಿಸಿದಂತೆ, ಈಗಲೂ ನನ್ನ ಮನಸ್ಸಿನಲ್ಲಿರುತ್ತಾನೆ. ನೋಡು.

**ಲಲಿತಾಂಗವಪುಃ ಸೌಮ್ಯಂ ಲಲಿತಂ ನಲಿನಾನನೇ ।**
**ಸಹಜಾತಾಂಬರಂ ಸ್ರಗ್ವಿ ಸ್ಫುರದಾಭರಣೋಜ್ಜ್ವಲಮ್ ॥ ೧೬೩ ॥**

**ಪಶ್ಯಾಮೀವ ಸುಖಸ್ಪರ್ಶಂ ತತ್ಕರಸ್ಪರ್ಶಲಾಲಿತಾ ।**
**[6]ತದಲಾಭೇ ಚ ಮದ್ಗಾತ್ರಂ ಕ್ಷಾಮತಾಂ ನೈತದುಜ್ಝತಿ ॥ ೧೬೪ ॥**

ಎಲೈ ಕಮಲಮುಖಿಯೇ! ಹುಟ್ಟಿದಂದಿನಿಂದ ಸಂಬಂಧಿಸಿಕೊಂಡಿದ್ದ ವಸ್ತ್ರಗಳುಳ್ಳುದೂ ಪುಷ್ಪಮಾಲಿಕೆಯುಳ್ಳುದೂ ಪ್ರಕಾಶಮಾನವಾದ ಆಭರಣಗಳಿಂದ ದೇದೀಪ್ಯಮಾನವೂ ಮನೋಹರವೂ ನೇತ್ರಾನಂದಕರವೂ ಸುಖವಾದ ಸ್ಪರ್ಶವುಳ್ಳುದೂ ಆದ ಆ ಲಲಿತಾಂಗದೇವನ ರೂಪವನ್ನು ಅವನ ಹಸ್ತಸ್ಪರ್ಶದಿಂದ ಲಾಲಿಸಲ್ಪಟ್ಟವಳಾಗಿ ಈಗಲೂ ಆ ರೂಪವನ್ನು ನೋಡುವವಳಂತಿದ್ದೇನೆ. ಆ ಲಲಿತಾಂಗದೇವನು ದೊರೆಯದಿದ್ದರೆ ಈ ನನ್ನ ಶರೀರದಲ್ಲಿರುವ ಕೃಶತ್ವವು ಕಡಿಮೆಯಾಗುವುದಿಲ್ಲ.

**ಇಮೇಶ್ರುಬಿಂದವೋಜಸ್ರಂ ನಿರ್ಯಾಂತಿ ಮಮ ಲೋಚನಾತ್ ।**
**ಮದ್ದುಃಖಮಕ್ಷಮಾ ದ್ರಷ್ಟುಂ ತಮನ್ವೇಷ್ಟುಮಿವೋದ್ಯತಾಃ ॥ ೧೬೫ ॥**

ಈ ಕಣ್ಣೀರಿನ ಬಿಂದುಗಳು ನನ್ನ ದುಃಖವನ್ನು ನೋಡಲಾರದೆ ಆ ಲಲಿತಾಂಗದೇವನನ್ನು ಹುಡುಕುವುದಕ್ಕೋಸ್ಕರ ಉದ್ಯುಕ್ತಗಳಾಗಿವೆಯೋ ಎಂಬಂತೆ, ಯಾವಾಗಲೂ ನನ್ನ ಕಣ್ಣಿನಿಂದ ಹೊರಡುತ್ತಿವೆ''.

**ಇತ್ಯುಕ್ತ್ವಾ ಪುನರಪ್ಯೇವಮುವಾದೀಚ್ಛ್ರೀಮತೀ ಸಖೀಮ್ ।**
**ಶಕ್ತಾ ತ್ವಮೇವ ನಾನ್ಯಾಸ್ತಿ ಮತ್ಪ್ರಿಯಾನ್ವೇಷಣಂ ಪ್ರತಿ ॥ ೧೬೬ ॥**

ಹೀಗೆ ಶ್ರೀಮತಿಯು ಸಖಿಯಾದ ಪಂಡಿತೆಯನ್ನು ಕುರಿತು ಹೇಳಿ ಪುನಃ ಮುಂದೆ ಹೇಳುವರೀತಿಯಾಗಿ ಹೇಳಿದಳು. ''ಎಲೈ ಸಖಿಯೇ! ನನ್ನ ಪ್ರಿಯನನ್ನು ಹುಡುಕುವುದಕ್ಕೆ ನೀನೇ ಸಮರ್ಥಳು. ಬೇರೆ ಯಾರೂ ಸಮರ್ಥರಲ್ಲ.

೧ ಉತ್ಪತ್ತಿಂ. ೨ ಪ್ರಾಪ್ತಾ. ೩ ಪವಿತ್ರಾ, ಪ್ರಯತಃ ಪೂತ ಇತ್ಯಮರಃ. ೪ ಮೌನವಿಧಿಂ. ೫ ಅಶರೀರತ್ವಂ. ೬ ಲಲಿತಾಂಗಸ್ಯಾಲಾಭೇ.

**ತ್ವಯಿ ಸತ್ಯಾಂ ಸರೋಜಾಕ್ಷಿ ಕುತೋದ್ಯ ಸ್ಯಾನ್ಮಮಾಸುಖಮ್ ।**
**ನಲಿನ್ಯಾಃ ಕಿಮು ದೌಸ್ಥಿತ್ಯಂ ತಪಂತ್ಯಾಂ ತಪನದ್ಯುತೌ ॥ ೧೬೭ ॥**

ಎಲೈ ಕಮಲಲೋಚನೆಯೇ! ನೀನಿರುವಾಗ ನನಗೆ ಯಾವುದರಿಂದ ದುಃಖವುಂಟಾಗುವುದು? ಸೂರ್ಯನ ಕಾಂತಿಯು ಪ್ರಕಾಶಿಸುತ್ತಿರುವಾಗ ಕಮಲಲತೆಗೆ ದುರವಸ್ಥೆಯುಂಟಾಗುವುದೇ?

**ಸತ್ಯಂ ತ್ವಂ ಪಂಡಿತಾ ಕಾರ್ಯಘಟನಾಸ್ವತಿಪಂಡಿತಾ ।**
**ತನ್ಮಮೈತಸ್ಯ ಕಾರ್ಯಸ್ಯ ಸಂಸಿದ್ಧಿಸ್ತ್ವಯಿ ತಿಷ್ಠತೇ ॥ ೧೬೮ ॥**

ಎಲೈ ಸಖಿಯೇ! ನಿಜವಾಗಿಯೂ ನೀನು ಪಂಡಿತಳು. ಕಾರ್ಯವನ್ನು ಮಾಡುವುದರಲ್ಲಿ ಬಹಳ ಚತುರಳು. ಆದುದರಿಂದ ಈ ನನ್ನ ಕಾರ್ಯದ ಸಿದ್ಧಿಯು ನಿನ್ನಲ್ಲಿದೆ.

**ತತೋ ರಕ್ಷ ಮಮ ಪ್ರಾಣಾನ್ಪ್ರಾಣೇಶಸ್ಯ ಗವೇಷಣಾತ್ ।**
**ಸ್ತ್ರೀಣಾಂ ವಿಪತ್ಪ್ರತೀಕಾರೇ ಸ್ತ್ರಿಯ ಏವಾವಲಂಬನಮ್ ॥ ೧೬೯ ॥**

ಆದುದರಿಂದ ನನ್ನ ಪ್ರಾಣವಲ್ಲಭನನ್ನು ಹುಡುಕಿಕೊಟ್ಟು ನನ್ನ ಪ್ರಾಣಗಳನ್ನು ಕಾಪಾಡು. ಸ್ತ್ರೀಯರ ಕಷ್ಟವನ್ನು ಪರಿಹರಿಸುವುದರಲ್ಲಿ ಸ್ತ್ರೀಯರೇ ಸಹಾಯಕರಾಗಿರುತ್ತಾರೆ.

**ತದುಪಾಯಂ ಚ ತೇದ್ಯಾಹಂ ಬ್ರುವೇ ಪ್ರಸ್ತುತಸಿದ್ಧಯೇ ।**
**ಮಯಾ ವಿಲಿಖಿತಂ ಪೂರ್ವಭವಸಂಬಂಧಿ ಪಟ್ಟಕಮ್ ॥ ೧೭೦ ॥**

ಈ ಕಾರ್ಯಸಿದ್ಧಿಗೋಸ್ಕರ ಆ ಉಪಾಯವನ್ನು ಈಗ ನಿನಗೆ ಹೇಳುತ್ತೇನೆ. ನಾನು ಪೂರ್ವಭವಸಂಬಂಧವಾದ ಒಂದು ಚಿತ್ರಪಟವನ್ನು ಬರೆದಿರುತ್ತೇನೆ.

**ಕ್ವಚಿತ್ಕಿಂಚಿನ್ನಿಗೂಢಾಂತಃಪ್ರಕೃತಂ ಚಿತ್ತರಂಜನಮ್ ।**
**ತದ್ಗೃಹಾಣಾದಾಯ ಧೂರ್ತಾನಾಂ ಮನಃಸಮ್ಮೋಹಕಾರಣವ್ ॥ ೧೭೧ ॥**

ಕೆಲವು ಕಡೆಯಲ್ಲಿ ಮನಸ್ಸನ್ನು ಸಂತೋಷಪಡಿಸುವ ಸ್ವಲ್ಪ ಗುಪ್ತವಿಷಯವು ಬರೆಯಲ್ಪಟ್ಟಿದೆ. ಧೂರ್ತಪುರುಷರ ಮನಸ್ಸನ್ನು ಮೋಹಗೊಳಿಸುವುದಕ್ಕೆ ಕಾರಣವಾದ ಆ ಚಿತ್ರಪಟವನ್ನು ತೆಗೆದುಕೊಂಡು ಹೋಗು. (ಆ ಕಾಲದಲ್ಲಿ ಮದುವೆಯಾಗದ ಕುಮಾರಿಯರು ಪತಿಯನ್ನು ಹುಡುಕುವುದಕ್ಕೋಸ್ಕರ ತಮಗಿಷ್ಟವಾದವನ ಪಟವನ್ನು ಬರೆದುಕಳುಹಿಸಿ ಆ ಮೂಲಕ ಪರೀಕ್ಷಿಸುವ ಪದ್ಧತಿಯಿದ್ದಿತು. ಅಂತಹ ಪಟಗಳನ್ನು ನೋಡಿದೊಡನೆ ಇದು ಅವಿವಾಹಿತಕುಮಾರಿಯು ಕಳುಹಿಸಿದ ಪಟವೆಂದು ಪುರುಷರು ತಿಳಿಯುತ್ತಿದ್ದರು. ಕೆಲವು ಧೂರ್ತರು ಮದುವೆಮಾಡಿಕೊಳ್ಳಬೇಕೆಂಬಿಚ್ಛೆಯಿಂದ ಮೋಸಮಾಡುತ್ತಿದ್ದರು. ಅಂತಹ ಧೂರ್ತರಿಗೆ ಗುಪ್ತವಿಷಯವನ್ನೊಳಗೊಂಡಿರುವ ಈ ಪಟವು ಭ್ರಾಂತಿಯನ್ನುಂಟು ಮಾಡುವುದಾಗಿದೆಯೆಂದು ಭಾವವು).

**ಪತಿಬ್ರುವಾಶ್ಚ ಯೇ ಮಿಥ್ಯಾ[1]ವೈಯಾತ್ಯೋದ್ಧತಬುದ್ಧಯಃ ।**
**ತಾನ್ಸ್ಮಿತಾಂಶುಪಟಚ್ಛನ್ನಾನ್ಕುರು ಗೂಢಾರ್ಥಸಂಕಟೇ ॥ ೧೭೨ ॥**

ತಾವು ಪತಿಗಳೆಂದು ಸುಳ್ಳುಹೇಳುವ ಧೂರ್ತರನ್ನು, ಈ ಪಟದಲ್ಲಿರುವ ಗೂಢಾರ್ಥವನ್ನು ಕೇಳಿ ಮುಗುಳುನಗೆಯ ಕಾಂತಿಯೆಂಬ ವಸ್ತ್ರದಿಂದ, ಮುಚ್ಚಿಬಿಡು. ತಪ್ಪಾಗಿ ಉತ್ತರವನ್ನು ಹೇಳಿದಾಗ ನಗಬೇಕೆಂದರ್ಥವು''.

**ಇತ್ಯುಕ್ತಾ ಪಂಡಿತಾವೋಚತ್ತಚ್ಚಿತ್ತಾಶ್ವಾಸನಂ ವಚಃ ।**
**ಸ್ಮಿತಾಂಶುಮಂಜರೀಪುಂಜೈಃ ಕಿರತೀವೋ[2]ದ್ಗಮಾಂಜಲಿಮ್ ॥ ೧೭೩ ॥**

ಹೀಗೆ ಶ್ರೀಮತಿಯಿಂದ ಹೇಳಲ್ಪಟ್ಟ ಆ ಪಂಡಿತೆಯು, ಮುಗುಳುನಗೆಯ ಕಿರಣಗಳೆಂಬ ಪುಷ್ಪದ ಗೊಂಚಲುಗಳಿಂದ ಪುಷ್ಪಾಂಜಲಿಯನ್ನೆರಚುತ್ತಾಳೋ

೧ ಧಾರ್ಷ್ಟ್ಯಂ. ೨ ಪುಷ್ಪಾಂಜಲಿಂ.

ಎಂಬಂತೆ, ಆ ಶ್ರೀಮತಿಯ ಮನಸ್ಸನ್ನು ಸಮಾಧಾನಪಡಿಸುವ ಮಾತನ್ನು ಹೇಳಿದಳು: —

**ಮಯಿ ಸತ್ಯಾಂ ಮನಸ್ತಾಪೋ ಮಾಭೂತ್ತೇ ಕಲಭಾಷಿಣಿ ।**
**ಲಸತ್ಯಾಂ ಚೂತಮಂಜರ್ಯಾಂ ಕೋಕಿಲಾಯಾಃ ಕುತೋ ಸುಖಮ್ ॥**

"ಎಲೈ ಮಧುರಭಾಷಿಣಿಯೇ ! ನಾನಿರುತ್ತಿರಲು ನೀನು ಮನಃಸಂತಾಪವನ್ನು ಪಡಬಾರದು. ಮಾವಿನ ಪುಷ್ಪಗಳ ಗೊಂಚಲು ಶೋಭಿಸುತ್ತಿರುವಾಗ ಹೆಣ್ಣು ಕೋಗಿಲೆಗೆ ದುಃಖವೆಲ್ಲಿ ಬಂದಿತು ?

**ಕವೇರ್ಧೀರಿವ ಸುಶ್ಲಿಷ್ಟಮರ್ಥಂ ತೇ ಮೃಗಯೇ ಪತಿಮ್ ।**
**ಸಖಿ ಲಕ್ಷ್ಮೀರಿವೋದ್ಯೋಗಶಾಲಿನಂ ಪುರುಷಂ ಪರಮ್ ॥ ೧೭೫ ॥**

ಎಲೈ ಸಖಿಯೇ ! ಕವಿಯ ಬುದ್ಧಿಯು ಸುಸಂಗತವಾದ ಅರ್ಥವನ್ನು ಹುಡುಕುವಂತೆಯೂ ಲಕ್ಷ್ಮಿಯು ಉದ್ಯೋಗಶೀಲನಾದ ಉತ್ತಮಪುರುಷನನ್ನು ಹುಡುಕುವಂತೆಯೂ ನಾನು ನಿನ್ನ ಪತಿಯನ್ನು ಹುಡುಕುವೆನು.

**ಘಟಯಿಷ್ಯಾಮಿ ತೇ ಕಾರ್ಯಂ ಪಟುಧೀರಹಮುದ್ಯತಾ ।**
**ದುರ್ಘಟಂ ನಾಸ್ತಿ ಮೇ ಕಿಂಚಿತ್ತ್ರಿತಯೇಹ ಜಗತ್ತ್ರಯೇ ॥ ೧೭೬ ॥**

ಚತುರಳಾದ ನಾನು ಪ್ರಯತ್ನಪಟ್ಟು ನಿನ್ನ ಕಾರ್ಯವನ್ನು ನೆರವೇರಿಸಿ ಕೊಡುವೆನು. ಈ ಮೂರು ಲೋಕದಲ್ಲಿಯೂ ನನಗೆ ಕಠಿನವಾದ ಕಾರ್ಯವು ಯಾವುದೂ ಇಲ್ಲವೆಂಬುದಾಗಿ ತಿಳಿ.

**ನಾನಾಭರಣವಿನ್ಯಾಸಮತೋ ಧಾರಯ ಸುಂದರಿ ।**
**ವಸಂತಲತಿಕೇವೋದ್ಯತ್ಪ್ರವಾಲಾಂಕುರಸಂಕುಲಮ್ ॥ ೧೭೭ ॥**

ಈ ಕಾರಣದಿಂದ ಎಲೈ ಸುಂದರಿಯೇ ! ನೀನು ಮಾಧವೀಲತೆಯು ತಳಿರುಗಳ ಮತ್ತು ಅಂಕುರಗಳ ಸಮೂಹವನ್ನು ಧರಿಸುವಂತೆ ನಾನಾ ವಿಧವಾದ ಆಭರಣಗಳನ್ನು ಧರಿಸು.

**ತದತ್ರ ಸಂಶಯೋ ನೈವ ಕಾರ್ಯಃ ಕಾರ್ಯಸ್ಯ ಸಾಧನೇ ।**
**ಶ್ರೀಮತೀಪ್ರಾರ್ಥಿತಾರ್ಥಾನಾಂ ನನು ಸಿದ್ಧಿರಸಂಶಯಮ್ ॥ ೧೭೮ ॥**

ಆದುದರಿಂದ ಈ ಕಾರ್ಯಸಿದ್ಧಿಯ ವಿಷಯದಲ್ಲಿ ನೀನು ಸಂಶಯವನ್ನು ಮಾಡಬೇಡ. ಶ್ರೀಮತಿಯು ಪ್ರಾರ್ಥಿಸಿದ ಅರ್ಥಗಳ ಸಿದ್ಧಿಯು ನಿಃಸಂಶಯವಾಗಿ ಆಗುವುದು".

**ಇತ್ಯುಕ್ತ್ವಾ ಪಂಡಿತಾಶ್ವಾಸ್ಯ ತಾಂ ತದರ್ಪಿತಪಟ್ಟಕಮ್ ।**
**ಗೃಹೀತ್ವಾಗಮದಾಶ್ವೇವ ಮಹಾಪೂತಜಿನಾಲಯಮ್ ॥ ೧೭೯ ॥**

ಪಂಡಿತೆಯು ಈ ಪ್ರಕಾರವಾಗಿ ಹೇಳಿ ಆ ಶ್ರೀಮತಿಯನ್ನು ಸಮಾಧಾನಗೊಳಿಸಿ, ಆಕೆಯು ಕೊಟ್ಟ ಚಿತ್ರಪಟವನ್ನು ತೆಗೆದುಕೊಂಡು ಅತಿಪವಿತ್ರವಾದ ಜಿನಮಂದಿರಕ್ಕೆ ಶೀಘ್ರವಾಗಿ ಹೋದಳು.

**ಯಃ ಸುದೂರೋಚ್ಛ್ರಿತೈಃ ಕೂಟೈರ್ಲಕ್ಷ್ಯತೇ ರತ್ನಭಾಸುರೈಃ ।**
**ಪಾತಾಲಾದುತ್ಫಣಸ್ತೋಷಾತ್ ಕಿಮಪ್ಯುದ್ಯನ್ನಿವಾಹಿರಾಟ್ ॥ ೧೮೦ ॥**

ಆ ಜಿನಮಂದಿರವು ಎತ್ತರವೂ ರತ್ನಗಳಿಂದ ಪ್ರಕಾಶಮಾನವೂ ಆದ ಶಿಖರಗಳಿಂದ, ನಾಗೇಂದ್ರನು ಸಂತೋಷದಿಂದ ಹೆಡೆಯನ್ನೆತ್ತಿಕೊಂಡು ಏತಕ್ಕೋ ಪಾತಾಳದಿಂದ ಮೇಲಕ್ಕೆದ್ದುಬಂದನೋ ಎಂಬಂತೆ, ತೋರುತ್ತದೆ.

**[1]ವರ್ಣಸಾಂಕರ್ಯಸಂಭೂತ[2]ಚಿತ್ರಕರ್ಮಾನ್ವಿತಾ ಅಪಿ ।**
**ಯದ್ಭಿತ್ತಯೋ ಜಗಚ್ಚಿತ್ತಹಾರಿಣ್ಯೋ ಗಣಿಕಾ ಇವ ॥ ೧೮೧ ॥**

ನಾನಾಬಣ್ಣಗಳ ಮಿಶ್ರಣದಿಂದುಂಟಾದ ಚಿತ್ರಕಾರ್ಯಗಳುಳ್ಳ ಆ ಜಿನ ಮಂದಿರದ ಗೋಡೆಗಳು, ಕ್ಷತ್ರಿಯ ಮೊದಲಾದ ವರ್ಣಗಳ ಸಂಕರದಿಂದುತ್ಪನ್ನರೂ ನಾನಾಪ್ರಕಾರವಾದ ಪಾಪಕೃತ್ಯವುಳ್ಳವರೂ ಆದ ವೇಶ್ಯಾಸ್ತ್ರೀಯರಂತೆ, ಜನಗಳ ಮನಸ್ಸುಗಳನ್ನು ಅಪಹರಿಸುತ್ತಿದ್ದುವು.

**[3]ದಿವಾಮನ್ಯಾಂ ನಿಶಾಂ ಕರ್ತುಂ ಕ್ಷಮೈರ್ಮಣಿವಿಚಿತ್ರಿತೈಃ ।**
**ತುಂಗೈಃ ಶೃಂಗೈಃ ಸ್ಮ ಯೋ ಭಾತಿ [4]ದಿವ[5]ಮುನ್ಮೀಲಯನ್ನಿವ ॥ ೧೮೨ ॥**

ರಾತ್ರಿಯನ್ನು ಹಗಲಿನಂತೆ ಮಾಡುವುದಕ್ಕೆ ಸಮರ್ಥಗಳೂ ರತ್ನಗಳಿಂದ ನಾನಾವರ್ಣಗಳೂ ಉನ್ನತಗಳೂ ಆದ ಶಿಖರಗಳಿಂದ ಆ ಜಿನಮಂದಿರವು, ಆಕಾಶವನ್ನು ಪ್ರಕಾಶಪಡಿಸುತ್ತದೆಯೋ ಎಂಬಂತೆ, ಪ್ರಕಾಶಿಸುತ್ತಿದ್ದಿತು.

**ಪಠದ್ಭಿರನಿಶಂ ಸಾಧುವೃಂದೈರಾಮಂದ್ರನಿಸ್ವನಮ್ ।**
**ಪ್ರಜಲ್ಪನ್ನಿವ ಯೋ [6]ಭವ್ಯೈರ್ವ್ಯಭಾವ್ಯತ ಸಮಾಗತೈಃ ॥ ೧೮೩ ॥**

ಯಾವಾಗಲೂ ಗಂಭೀರವಾದ ಶಬ್ದದಿಂದ ಶಾಸ್ತ್ರವನ್ನೋದುತ್ತಿರುವ ಮುನಿಗಳ ಸಮೂಹಗಳಿಂದ ಕೂಡಿರುವ ಆ ಜಿನಮಂದಿರವು, ತನ್ನ ದರ್ಶನಕ್ಕಾಗಿ ಬಂದ ಭವ್ಯರೊಡನೆ ಮಾತನಾಡುತ್ತದೆಯೋ ಎಂಬಂತೆ, ಶೋಭಿಸುತ್ತಿದ್ದಿತು.

**ಯಸ್ಯ ಕೂಟಾಗ್ರಸಂಸಕ್ತಾಃ ಕೇತವೋನಿಲಘಟ್ಟಿತಾಃ ।**
**ವಿಬಭುರ್ವಂದನಾಭಕ್ತ್ಯೈ ವ್ಯಾಹ್ವಯಂತ ಇವಾಮರಾನ್ ॥ ೧೮೪ ॥**

ಆ ಜಿನಮಂದಿರದ ಶಿಖರಗಳಲ್ಲಿ ಸಂಬಂಧಿಸಿಕೊಂಡಿರುವುವೂ ಗಾಳಿಯಿಂದ ಚಲಿಸುತ್ತಿರುವುವೂ ಆದ ಧ್ವಜಪತಾಕೆಗಳು, ವಂದನೆಯನ್ನೂ ಭಕ್ತಿಯನ್ನೂ ಮಾಡುವುದಕ್ಕೋಸ್ಕರ ದೇವತೆಗಳನ್ನು ಕರೆಯುತ್ತವೆಯೋ ಎಂಬಂತೆ, ಶೋಭಿಸುತ್ತಿದ್ದುವು.

**ತದ್ವಾತಾಯನನಿರ್ಯಾತಾ ಧೂಪಧೂಮಾಶ್ಚಕಾಶಿರೇ ।**
**[7]ಸ್ವರ್ಗಸ್ಯೋಪಾಯನೀಕರ್ತುಂ [8]ನಿರ್ಮಿಮಾಣಾ ಘನಾ ಇವ॥ ೧೮೫ ॥**

ಆ ಜಿನಾಲಯದ ಕಿಡಿಕಿಗಳಿಂದ ಹೊರಡುತ್ತಿರುವ ಧೂಪದ ಹೊಗೆಗಳು, ಸ್ವರ್ಗಕ್ಕೆ ಕೈಗಾಣಿಕೆಯಾಗಿ ಮಾಡುವುದಕ್ಕೋಸ್ಕರ ನಿರ್ಮಿಸಲ್ಪಟ್ಟ ಮೇಘಗಳೋ ಎಂಬಂತೆ, ಶೋಭಿಸುತ್ತಿದ್ದುವು. (ದೇವತೆಗಳು ಮೇಘವಾಹನರೆಂದು ಪ್ರಸಿದ್ಧಿಯಿದೆ).

**ಯಸ್ಯ ಕೂಟತಟಾಲಗ್ನಾಸ್ತಾರಾಸ್ತರಲರೋಚಿಷಃ ।**
**ಪುಷ್ಪೋಪಹಾರ[9]ಸಮ್ಮೋಹಂ ನಾತನ್ವನ್ನ[10]ನಭೋಜುಷಾಮ್॥ ೧೮೬ ॥**

ಆ ಜಿನಾಲಯದ ಶಿಖರಗಳನ್ನು ಮುಟ್ಟಿಕೊಂಡಿರುವುವೂ ಚಂಚಲವಾದ ಕಾಂತಿಯುಳ್ಳುವೂ ಆದ ತಾರೆಗಳು ದೇವತೆಗಳಿಗೆ ಪುಷ್ಪಮಾಲಿಕೆಯೆಂಬ ಭ್ರಾಂತಿಯನ್ನುಂಟುಮಾಡದೆಯಿರಲಿಲ್ಲ.

**[11]ಸದ್ವೃತ್ತಸಂಗತ[12]ಶ್ಚಿತ್ರಸಂದರ್ಭರುಚಿರಾಕೃತಿಃ ।**
**ಯಃ ಸುಶಬ್ದೋ ಮಹಾನ್ಮಹ್ಯಾಂ ಕಾವ್ಯಬಂಧ ಇವಾಬಭೌ ॥ ೧೮೭ ॥**

೧ ಶ್ವೇತಾದಿ, ಕ್ಷತ್ರಿಯಾದಿ. ೨ ಚಿತ್ರಕರ್ಮ, ನಾನಾಪ್ರಕಾರಪಾಪಂ. ೩ ದಿವಸಮಾತ್ಮಾನಂ ಮನ್ಯತ ಇತಿ ದಿವಾಮನ್ಯಾಂ, ದಿವಸಸದೃಶೀಮಿತ್ಯರ್ಥಃ. ೪ ಆಕಾಶಂ. ೫ ಪ್ರಕಾಶಯನ್. ೬ ಸಹ. ೭ ಸ್ವರ್ಗಿಣೋ ಮೇಘವಾಹನಾ ಇತಿಪ್ರಸಿದ್ಧೇಃ. ೮ ಸೃಜಂತಃ. ೯ ಭ್ರಾಂತಿಂ. ೧೦ ದ್ವೌ ನಞೌ ಪ್ರಕೃತಮರ್ಥಂಗಮಯತಃ. ೧೧ ಪ್ರಶಸ್ತಪದ್ಯೈಃ, ಸಚ್ಚರಿತ್ರಸಂಪನ್ನಭವ್ಯೈಃ. ೧೨ ಕಮಲಬಂಧಾದಿರಚನಾ, ಪುತ್ರಿಕಾದಿಚಿತ್ರವಿನ್ಯಾಸಃ.

ಉಪಜಾತಿ ಮೊದಲಾದ ಛಂದಸ್ಸುಗಳಿಂದ ಕೂಡಿರುವುದೂ ಹಾರಬಂಧ ಮೊದಲಾದ ಚಿತ್ರಗಳಿಂದ ಮನೋಹರವೂ ಉತ್ತಮವಾದ ಶಬ್ದಗಳುಳ್ಳುದೂ ಆದ ಮಹಾಕಾವ್ಯದಂತೆ ಆ ಜಿನಮಂದಿರವು ಉತ್ತಮಚಾರಿತ್ರ ಧಾರಕರಾದ ಭವ್ಯರುಳ್ಳುದೂ ನಾನಾವಿಧವಾದ ಚಿತ್ರಗಳಿಂದ ಮನೋಹರಾಕಾರವುಳ್ಳುದೂ ಸ್ತೋತ್ರಭಜನೆ ಮೊದಲಾದ ಒಳ್ಳೆಯ ಶಬ್ದಗಳುಳ್ಳುದೂ ಆಗಿ ಶೋಭಿಸುತ್ತಿದ್ದಿತು.

**ಸಪತಾಕೋ ರಣದ್ಘಂಟೋ ಯೋ ದೃಢಸ್ತಂಭಸಂಭೃತಃ ।**
**ವ್ಯಭಾದ್ಗಭೀರ[೧]ನಿರ್ಘೋಷೈಃ ಸಬೃಂಹಿತ ಇವೇಭರಾಟ್ ॥ ೧೮೮ ॥**

ಪತಾಕೆಗಳನ್ನು ಧರಿಸಿರುವುದೂ, ಶಬ್ದಮಾಡುತ್ತಿರುವ ಘಂಟೆಗಳುಳ್ಳುದೂ ದೃಢವಾದ ಸ್ತಂಭದಲ್ಲಿ ಕಟ್ಟಲ್ಪಟ್ಟಿರುವುದೂ ಗರ್ಜನೆಯನ್ನು ಮಾಡುತ್ತಿರುವುದೂ ಆದ ದೊಡ್ಡ ಆನೆಯಂತೆ ಆ ಜಿನಾಲಯವು ಪತಾಕೆಗಳುಳ್ಳುದೂ ಘಂಟೆಗಳ ಶಬ್ದಗಳುಳ್ಳುದೂ ದೃಢವಾದ ಸ್ತಂಭಗಳಿಂದ ಕಟ್ಟಲ್ಪಟ್ಟುದೂ ಆಗಿ ಗಂಭೀರವಾದ ಧ್ವನಿಗಳಿಂದ ಪ್ರಕಾಶಿಸುತ್ತಿದ್ದಿತು.

**ಪಠತಾಂ ಪುಣ್ಯನಿರ್ಘೋಷೈರ್ವಂದಾರೂಣಾಂ ಚ ನಿಸ್ವನೈಃ ।**
**ಯಃ ಸಂದಧಾವಕಾಲೇಽಪಿ ಮದಾರಂಭಂ ಶಿಖಂಡಿಷು ॥ ೧೮೯ ॥**

ಆ ಜಿನಾಲಯವು ಶಾಸ್ತ್ರಪಠನವನ್ನು ಮಾಡುವವರ ಪುಣ್ಯಶಬ್ದಗಳಿಂದಲೂ ನಮಸ್ಕರಿಸುವವರ ಶಬ್ದಗಳಿಂದಲೂ ನವಿಲುಗಳಿಗೆ ಅಕಾಲದಲ್ಲಿಯೂ ಮದ ವನ್ನುಂಟುಮಾಡುತ್ತಿದ್ದಿತು.

**ಯಸ್ತುಂಗಶಿಖರಃ ಶಶ್ವಚ್ಚಾರಣೈಃ [೨]ಕೃತಸಂಸ್ತವಃ ।**
**ವಿದ್ಯಾಧರೈಃ ಸಮಾಸೇವ್ಯೋ ಮಂದರಾದ್ರಿರಿವಾದ್ಯುತತ್ ॥ ೧೯೦ ॥**

ಉನ್ನತವಾದ ಶಿಖರವುಳ್ಳುದೂ ಚಾರಣಮುನಿಗಳಿಂದ ಸ್ತೋತ್ರಮಾಡ ಲ್ಪಟ್ಟುದೂ ವಿದ್ಯಾಧರರಿಂದ ಸೇವಿಸಲ್ಪಟ್ಟುದೂ ಆದ ಆ ಜಿನಮಂದಿರವು, ಮಹಾಮೇರುಪರ್ವತದಂತೆ, ಶೋಭಿಸುತ್ತಿದ್ದಿತು.

**ತತ್ರ ಪಟ್ಟಕಶಾಲಾಯಾಂ ಪಂಡಿತಾ ಕೃತವಂದನಾ ।**
**ಪ್ರಸಾರ್ಯ ಪಟ್ಟಕಂ ತಸ್ಥೌ [೩]ಪರೀಕ್ಷಿಕ್ಷುರಾಗತಾನ್ ॥ ೧೯೧ ॥**

ಅಲ್ಲಿ ಪಂಡಿತೆಯು ದೇವತಾನಮಸ್ಕಾರವನ್ನು ಮಾಡಿ ತಾನು ತೆಗೆದುಕೊಂಡು ಹೋಗಿದ್ದ ಪಟವನ್ನು ಚಿತ್ರಶಾಲೆಯಲ್ಲಿ ಹರಡಿ ಆ ಚಿತ್ರಶಾಲೆಗೆ ಬಂದವರನ್ನು ಪರೀಕ್ಷಿಸಬೇಕೆಂಬ ಇಚ್ಛೆಯುಳ್ಳವಳಾಗಿ ಕುಳಿತಳು.

**ವ್ಯೈಕ್ಷಂತ ಕೇಚಿದಾಗತ್ಯ ಸಾವಧಾನಂ ಮಹಾಧಿಯಃ ।**
**ಕೇಚಿತ್ಕಿಮೇತದಿತ್ಯುಚ್ಚೈರ್ಜಜಲ್ಪುರ್ವೀಕ್ಷ್ಯ ಪಟ್ಟಕಮ್ ॥ ೧೯೨ ॥**

ಮಹಾಬುದ್ಧಿಶಾಲಿಗಳಾದ ಕೆಲವರು ಬಂದು ಆ ಪಟವನ್ನು ಬಹಳ ಸಾವಧಾನದಿಂದ ನೋಡಿದರು. ಕೆಲವರು ಪಟವನ್ನು ನೋಡಿ ಇದೇನೆಂದು ಗಟ್ಟಿಯಾಗಿ ಮಾತನಾಡಿದರು.

**ತೇಷಾಂ ಸಮುಚಿತೈರ್ವಾಕ್ಯೈರ್ದದತೀ ಪಂಡಿತೋತ್ತರಮ್ ।**
**ತತ್ರಾಸ್ತೇ ಸ್ಮ ಸ್ಮಿತೋದ್ಯೋತೈಃ [೪]ಕಿರಂತೀ ಪಂಡಿತಾಯಿತಾನ್ ॥ ೧೯೩ ॥**

ಅವರಿಗೆ ಪಂಡಿತೆಯು ಉಚಿತವಾದ ವಾಕ್ಯಗಳಿಂದ ಉತ್ತರವನ್ನು ಕೊಟ್ಟು, ತಾವು ಪಂಡಿತರೆಂದು ಅಹಂಕಾರ ಪಡುವವರನ್ನು ಮುಗುಳುನಗೆಗಳಿಂದ ತಿರಸ್ಕರಿಸು ವವಳಾಗಿ ಅಲ್ಲಿ ಕುಳಿತಿದ್ದಳು.

೧ ಭೇರ್ಯಾದಿಧ್ವನಿಭಿಃ. ೨ ಸಮ್ಯಕ್ ಸ್ತೋತ್ರಂ, ಅದ್ರಿಪಕ್ಷೇ ಸಂಸ್ತವಃ ಸ್ವಾತ್ಪರಿಚಯಃ. ೩ ಪರೀಕ್ಷಿತುಮಿಚ್ಛುಃ. ೪ ನಿರಾಕುರ್ವಂತೀ.

**ಅಥ ದಿಗ್ವಿಜಯಾಚ್ಚಕ್ರೀ ನ್ಯವೃತತ್ಕೃತದಿಗ್ಜಯಃ ।**
**ಪ್ರಣತೀಕೃತನಿಃಶೇಷನರವಿದ್ಯಾಧರಾಮರಃ ॥ ೧೯೪ ॥**

ಅನಂತರದಲ್ಲಿ ವಜ್ರದಂತಚಕ್ರವರ್ತಿಯು ದಿಗ್ವಿಜಯವನ್ನು ಮಾಡಿ ಸಮಸ್ತ ಮನುಷ್ಯರಿಂದಲೂ ವಿದ್ಯಾಧರರಿಂದಲೂ ದೇವತೆಗಳಿಂದಲೂ ನಮಸ್ಕಾರವನ್ನು ಮಾಡಿಸಿಕೊಂಡವನಾಗಿ ದಿಗ್ವಿಜಯದಿಂದ ಹಿಂದಿರುಗಿದನು.

**ತತೋಽಭಿಷೇಕಂ ದ್ವಾತ್ರಿಂಶತ್ಸಹಸ್ರಧರಣೀಶ್ವರೈಃ ।**
**ಚಕ್ರವರ್ತೀ ಪರಂ ಪ್ರಾಪತ್ಪುಣ್ಯೈಃ ಕಿಂ ನು ನ ಲಭ್ಯತೇ ॥ ೧೯೫ ॥**

ಆಮೇಲೆ ಮೂವತ್ತೆರಡುಸಾವಿರ ರಾಜರು ಸೇರಿ ಬಹಳ ವೈಭವದಿಂದ ವಜ್ರದಂತಚಕ್ರವರ್ತಿಗೆ ಅಭಿಷೇಕವನ್ನು ಮಾಡಿದರು. ಪುಣ್ಯದಿಂದ ಏನುತಾನೇ ಪ್ರಾಪ್ತವಾಗುವುದಿಲ್ಲ ?

**ಸ ಚ ತೇ ಚ ಸಮಾಕಾರಾಃ ಕರಾಂಘ್ರಿವದನಾದಿಭಿಃ ।**
**ತಥಾಪಿ ತೈಃ ಸಮಭ್ಯರ್ಚ್ಯಃ ಸೋಽಭೂತ್ಪುಣ್ಯಾನುಭಾವತಃ ॥ ೧೯೬ ॥**

ಆ ವಜ್ರದಂತಚಕ್ರವರ್ತಿಯೂ ಬೇರೆ ರಾಜರೂ ಕೈಕಾಲುಮುಖ ಮೊದಲಾದ ಅವಯವಗಳಿಂದ ಸಮಾನವಾದ ಆಕಾರವುಳ್ಳವರಾಗಿದ್ದರೂ ಆ ವಜ್ರದಂತ ಚಕ್ರವರ್ತಿಯು ಪುಣ್ಯದ ಅತಿಶಯದಿಂದ ಆ ರಾಜರುಗಳಿಗೆ ಪೂಜ್ಯನಾದನು.

**ಅನೀದೃಶವಪುಶ್ಚಂದ್ರಸೌಮ್ಯಾಸ್ಯಃ ಕಮಲೇಕ್ಷಣಃ ।**
**ಪುಣ್ಯೇನ ಸ ಬಭೌ ಸರ್ವಾನತಿಶಯ್ಯ ನರಾಮರಾನ್ ॥ ೧೯೭ ॥**

ಉಪಮಾರಹಿತವಾದ ಶರೀರವುಳ್ಳವನೂ ಚಂದ್ರನಂತೆ ಸೌಮ್ಯವಾದ ಮುಖ ವುಳ್ಳವನೂ ಕಮಲದಂತೆ ನೇತ್ರಗಳುಳ್ಳವನೂ ಆದ ಆ ವಜ್ರದಂತಚಕ್ರವರ್ತಿಯು ಪುಣ್ಯದಿಂದ ಎಲ್ಲಾ ಮನುಷ್ಯರಿಂದಲೂ ದೇವತೆಗಳಿಂದಲೂ ಮಿಗಿಲಾಗಿ ಶೋಭಿಸುತ್ತಿದ್ದನು.

**ಶಂಖಚಕ್ರಾಂಕುಶಾದೀನಿ ಲಕ್ಷಣಾನ್ಯಸ್ಯ ಪಾದಯೋಃ ।**
**ಬಭುರಾಲಿಖಿತಾನೀವ ಲಕ್ಷ್ಮ್ಯಾ ಲಕ್ಷ್ಮಾಣಿ ಚಕ್ರಿಣಃ ॥ ೧೯೮ ॥**

ಈ ವಜ್ರದಂತಚಕ್ರವರ್ತಿಯ ಪಾದಗಳಲ್ಲಿ ಶಂಖ ಚಕ್ರ ಅಂಕುಶ ಮೊದಲಾದ ಶುಭಲಕ್ಷಣಗಳು, ಲಕ್ಷ್ಮೀದೇವಿಯಿಂದ ಬರೆಯಲ್ಪಟ್ಟ ಲಕ್ಷಣಗಳೋ ಎಂಬಂತೆ, ಶೋಭಿಸುತ್ತಿದ್ದುವು.

**ಅಮೋಘಶಾಸನೇ ತಸ್ಮಿನ್ನೇವಂ ಶಾಸತಿ ಭೂಭುಜಿ ।**
**ನ [೧]ದಂಡಪಕ್ಷಃ ಕೋಽಪ್ಯಾಸೀತ್ಪ್ರಜಾನಾಮಕೃತಾಗಸಾಮ್ ॥ ೧೯೯ ॥**

ಆ ವಜ್ರದಂತಚಕ್ರವರ್ತಿಯು ಸಾರ್ಥಕವಾದ ತನ್ನ ಆಜ್ಞೆಯಿಂದ ರಾಜ್ಯವನ್ನು ಪರಿಪಾಲಿಸುತ್ತಿರಲು ಪ್ರಜೆಗಳು ತಪ್ಪನ್ನು ಮಾಡುತ್ತಿರಲಿಲ್ಲ. ಆದುದರಿಂದ ಯಾರೂ ದಂಡಿಸುವುದಕ್ಕೆ ಯೋಗ್ಯರಾಗಿರಲಿಲ್ಲವು.

**ಸ ಬಿಭ್ರದ್ವಕ್ಷಸಾ ಲಕ್ಷ್ಮೀಂ ವಕ್ತ್ರಾಬ್ಜೇನ ಚ ವಾಗ್ವಧೂಮ್ ।**
**[೨]ಪ್ರಣಾಯ್ಯಾಮಿವ ಲೋಕಾಂತಂ ಪ್ರಾಹಿಣೋತ್ಕೀರ್ತಿಮೇಕಿಕಾಮ್**

ಆ ವಜ್ರದಂತಚಕ್ರವರ್ತಿಯು ಲಕ್ಷ್ಮಿಯನ್ನು ಹೃದಯದಲ್ಲಿಯೂ ಸರಸ್ವತಿಯ ಮುಖಕಮಲದಲ್ಲಿಯೂ ಧರಿಸಿ ಏಕಾಕಿನಿಯಾದ ಕೀರ್ತಿಯನ್ನು, ಅಪ್ರಿಯ ನ್ನೋಪಾದಿಯಲ್ಲಿ, ಲೋಕದಕೊನೆಗೆ ಕಳುಹಿಸಿದನು. ವಜ್ರದಂತಚಕ್ರವರ್ತಿಯ ಐಶ್ವರ್ಯವಂತನೂ ವಿದ್ಯಾವಂತನೂ ಕೀರ್ತಿವಂತನೂ ಆಗಿದ್ದನೆಂದು ಭಾವವು.

೧ ದಂಡಯಿತುಂ ಯೋಗ್ಯಃ. ೨ ಅಸಮ್ಮತಾಂ.

**ಸುಧಾಸೂತಿರಿವೋದಂಶುರಂಶುಮಾನಿವ ಚೋತ್ಕರಃ ।**
**ಸ ಕಾಂತಿಂ ದೀಪ್ತಿಮುಪ್ಯುಚ್ಚೈರಧಾದತ್ಯದ್ಭುತೋದಯಃ ॥ ೨೦೧ ॥**

ಆಶ್ಚರ್ಯಕರವಾದ ಭಾಗ್ಯೋದಯವುಳ್ಳ ಆ ಚಕ್ರವರ್ತಿಯು, ಆವಿರ್ಭವಿಸುತ್ತಿರುವ ಕಿರಣಗಳುಳ್ಳ ಚಂದ್ರನಂತೆಯೂ ಮೇಲಕ್ಕೇಳುತ್ತಿರುವ ತೇಜಸ್ಸುಳ್ಳ ಸೂರ್ಯನಂತೆಯೂ ಅಧಿಕವಾದ ಕಾಂತಿಯುಳ್ಳವನಾಗಿಯೂ ತೇಜಸ್ಸುಳ್ಳವನಾಗಿಯೂ ಇದ್ದನು.

**ಪುಣ್ಯಕಲ್ಪತರೋರುಚ್ಚೈಃ ಫಲಾನೀವ ಮಹಾಂತ್ಯಲಮ್ ।**
**ಬಭೂವುಸ್ತಸ್ಯ ರತ್ನಾನಿ ಚತುರ್ದಶ ವಿಶಾಂ ವಿಭೋಃ ॥ ೨೦೨ ॥**

ಆ ಚಕ್ರವರ್ತಿಗೆ, ಪುಣ್ಯವೆಂಬ ಕಲ್ಪವೃಕ್ಷದ ದೊಡ್ಡಫಲಗಳೋ ಎಂಬಂತೆ, ಹದಿನಾಲ್ಕು ಮಹಾರತ್ನಗಳಿದ್ದುವು.

**ನಿಧಯೋ ನವ ತಸ್ಯಾಸನ್ಪುಣ್ಯಾನಾಮಿವ ರಾಶಯಃ ।**
**ಯೈರಕ್ಷಯ್ಯೈರಮುಷ್ಯಾಸೀದ್ಗೃಹವಾರ್ತಾ ಮಹೋದಯಾ ॥ ೨೦೩ ॥**

ಪುಣ್ಯದರಾಶಿಗಳೋ ಎಂಬಂತೆ, ಆ ಚಕ್ರವರ್ತಿಗೆ ಒಂಬತ್ತು ನಿಧಿಗಳಿದ್ದುವು. ಖರ್ಚುಮಾಡಿದಷ್ಟೂ ಕಡಿಮೆಯಾಗದಿರುವ ಆ ನಿಧಿಗಳಿಂದ ಈ ಚಕ್ರವರ್ತಿಯ ಗೃಹವಾರ್ತೆಯು ಸರಿಯಾಗಿದ್ದಿತು.

**ಷಟ್ಖಂಡಮಂಡಿತಾಂ ಪೃಥ್ವೀಮಿತಿ ಸಂಪಾಲಯನ್ನಸೌ ।**
**ದಶಾಂಗಭೋಗಸಂಭೂತಿಮಭುಕ್ತಸುಕೃತೀ ಚಿರಮ್ ॥ ೨೦೪ ॥**

ಪುಣ್ಯಶಾಲಿಯಾದ ಈ ಚಕ್ರವರ್ತಿಯು ಈ ಪ್ರಕಾರವಾಗಿ ಷಟ್ಖಂಡಪೃಥ್ವಿಯನ್ನು ಪರಿಪಾಲಿಸುತ್ತ ಬಹುಕಾಲದವರೆಗೆ ದಿವ್ಯವಾದ ಪುರ ರತ್ನ ನಿಧಿ ಸೈನ್ಯ ಭಾಜನ ಭೋಜನ ಶಯನ ಆಸನ ವಾಹನ ಮೊದಲಾದ ಹತ್ತುವಿಧ ಭೋಗೋಪಭೋಗಗಳನ್ನು ಅನುಭವಿಸಿದನು.

**ಇತಿ ಕತಿಪಯೈರೇವಾಹೋಭಿಃ ಕೃತೀ ಕೃತದಿಗ್ಜಯೋ**
**ಜಯುಪೃತನಯಾ ಸಾರ್ಧಂ ಚಕ್ರೀ ನಿವೃತ್ಯ ಪುರೀಂ ವಿಶನ್ ।**
**ಸುರಪೃತನಯಾ ಸಾಕಂ ಶಕ್ರೋ ನಿಶನ್ನಮರಾವತೀ-**
**ಮಿವ ಸ ರುರುಚೇ ಭಾಸ್ವನ್ಮೌಲಿರ್ಜ್ವಲನ್ಮಣಿಕುಂಡಲಃ ॥ ೨೦೫ ॥**

ಪ್ರಕಾಶಮಾನವಾದ ಕಿರೀಟವುಳ್ಳವನೂ, ದೇದೀಪ್ಯಮಾನವಾದ ಕರ್ಣಕುಂಡಲಗಳುಳ್ಳವನೂ ಪುಣ್ಯಶಾಲಿಯೂ ಆದ ಆ ಚಕ್ರವರ್ತಿಯು ಈ ಪ್ರಕಾರವಾಗಿ ಕೆಲವು ದಿವಸಗಳಲ್ಲಿಯೇ ದಿಗ್ವಿಜಯವನ್ನು ಮಾಡಿ ಜಯಶೀಲವಾದ ಸೈನ್ಯದೊಡನೆ ಪಟ್ಟಣಕ್ಕೆ ಪ್ರವೇಶ ಮಾಡುವವನಾಗಿ, ಪ್ರಕಾಶಮಾನವಾದ ಕಿರೀಟವುಳ್ಳವನೂ ದೇದೀಪ್ಯಮಾನವಾದ ಕರ್ಣಕುಂಡಲಗಳುಳ್ಳವನೂ ಆದ ದೇವೇಂದ್ರನು ದೇವತೆಗಳ ಸೈನ್ಯದೊಡನೆ ಅಮರಾವತಿಯನ್ನು ಪ್ರವೇಶಮಾಡುವಂತೆ, ಶೋಭಿಸಿದನು.

**ವಿಹಿತನಿಖಿಲಕೃತ್ಯೋಪ್ಯಾತ್ಮಪುತ್ರೀವಿವಾಹ-**
**[1]ವ್ಯತಿಕರಕರಣೀಯೇ ಕಿಂಚಿದಂತಃ ಸಚಿಂತಃ ।**
**ಪುರಮವಿಶದುದಾರಶ್ರೀಪರಾರ್ಧ್ಯಂ ಪುರುಶ್ರೀ-**
**ರ್ಮೃದುಪವನವಿಧೂತಪ್ರೋಲ್ಲಸತ್ಕೇತುಮಾಲಮ್ ॥ ೨೦೬ ॥**

ತಾನು ಮಾಡಬೇಕಾದ ಸಕಲಕಾರ್ಯಗಳನ್ನು ಮಾಡಿದವನಾಗಿದ್ದರೂ ತನ್ನ ಮಗಳ ವಿವಾಹಮಹೋತ್ಸವವನ್ನು ಮಾಡುವ ವಿಷಯದಲ್ಲಿ ಸ್ವಲ್ಪ ಚಿಂತಾಕುಲನಾದ ಆ ವಜ್ರದಂತಚಕ್ರವರ್ತಿಯು ಅಧಿಕವಾದ ಶೋಭೆಯುಳ್ಳವನಾಗಿ, ಮಂದಮಾರುತದಿಂದ ಕೊಡಹಲ್ಪಟ್ಟ ಪ್ರಕಾಶಮಾನವಾದ ಧ್ವಜಗಳುಳ್ಳದೂ ಅಧಿಕವಾದ ಸಂಪತ್ತಿನಿಂದ ಶ್ರೇಷ್ಠವೂ ಆದ ತನ್ನ ಪಟ್ಟಣಕ್ಕೆ ಪ್ರವೇಶಮಾಡಿದನು.

**[2]ಕ್ಷುಂದಂತೋ [3]ಲವಲೀಲತಾಸ್ತಟವನೇ ಸಿಂಧೋರ್ಲವಂಗಾ[4]ತತೇ**
**ತತ್ರಾಸೀನಸುರಾಂಗನಾಲಸಲಸನ್ನೇತ್ರೈಃ ಶನೈರ್ವೀಕ್ಷಿತಾಃ ।**
**ಆಭೇಜುರ್ವಿಜಯಾರ್ಧ್ವಕಂದರದರೀ[5]ರಾಮೃದ್ಯ ಸೇನಾಚರಾ ।**
**ಯಸ್ಯಾಸೌ ವಿಜಯೀ ಸ್ವಪುಣ್ಯಫಲಿತಾಂ ದೀರ್ಘಂ ಭುನಕ್ತಿ ಸ್ಮ ಗಾಮ್ ॥**

ಯಾವ ಚಕ್ರವರ್ತಿಯ ಸೈನಿಕರು ಲವಂಗಗಿಡಗಳಿಂದ ವ್ಯಾಪ್ತವಾಗಿರುವ ಸಮುದ್ರದಡದಲ್ಲಿರುವ ವನದಲ್ಲಿ ದೊಡ್ಡಯಾಲಕ್ಕಿಲತೆಗಳನ್ನು ತುಳಿದು ನಾಶಮಾಡಿ ಅಲ್ಲಿ ಕುಳಿತಿರುವ ದೇವಸ್ತ್ರೀಯರ ಆಲಸ್ಯಯುಕ್ತವಾದ ಕಣ್ಣುಗಳಿಂದ ಮೆಲ್ಲನೆ ನೋಡಲ್ಪಟ್ಟವರಾಗಿ ವಿಜಯಾರ್ಧ್ವಪರ್ವತದ ಗುಹೆಗಳನ್ನು ತುಳಿದು ಮರ್ದನಮಾಡಿ ಪ್ರವೇಶಮಾಡಿದ್ದರೋ ಅಂತಹ ಜಯಶೀಲನಾದ ಈ ವಜ್ರದಂತಚಕ್ರವರ್ತಿಯು ತನ್ನ ಪುಣ್ಯದಿಂದ ಪ್ರಾಪ್ತವಾದ ಪೃಥ್ವಿಯನ್ನು ಬಹುಕಾಲದವರೆಗೆ ಅನುಭವಿಸಿದನು.

**ಆಕ್ರಾಮನ್ವನವೇದಿಕಾಂತರಗತಸ್ಥಾಂ ವೈಜಯಾರ್ಧೀಂ ತಟೀ-**
**ಮುಲ್ಲಂಘ್ಯಾಬ್ಧಿವಧೂಂ ತರಂಗತರಲಾಂ ಗಂಗಾಂ ಚ**
**ಸಿಂಧುಂ ಧುನೀಮ್ ।**
**ಜಿತ್ವಾಶಾಃ ಕುಲಭೂಭೃದುನ್ನತಿಮಪಿ ನ್ಯಕ್ಕೃತ್ಯ ಚಕ್ರಾಂಕಿತಾಂ**
**ಲೇಭೇಸೌ ಜಿನಶಾಸನಾರ್ಪಿತಮತಿಃ ಶ್ರೀವಜ್ರದಂತಃ ಶ್ರಿಯಮ್॥ ೨೦೮ ॥**

ಜಿನಶಾಸನದಲ್ಲಿ ಬುದ್ಧಿಯನ್ನಿಟ್ಟಿದ್ದ ಈ ವಜ್ರದಂತಚಕ್ರವರ್ತಿಯು ವನವೇದಿಕೆಯೊಳಹೊಕ್ಕು ವಿಜಯಾರ್ಧ್ವಪರ್ವತದ ತಪ್ಪಲುಪ್ರದೇಶಗಳನ್ನು ಆಕ್ರಮಿಸಿ ಸಮುದ್ರದ ಪತ್ನಿಯರೂ ಅಲೆಗಳಿಂದ ಚಂಚಲರೂ ಆದ ಗಂಗಾಸಿಂಧುನದಿಗಳನ್ನು ದಾಟಿ, ದಿಕ್ಕುಗಳನ್ನು ಜಯಿಸಿ, ಕುಲಪರ್ವತದ ಉನ್ನತಿ(ಗರ್ವ)ಯನ್ನು ತಿರಸ್ಕರಿಸಿ ಚಕ್ರವರ್ತಿಸಂಪತ್ತನ್ನು ಹೊಂದಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಲಲಿತಾಂಗಸ್ವರ್ಗಚ್ಯವನವರ್ಣನಂ ನಾಮ ಷಷ್ಠಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಲಲಿತಾಂಗಸ್ವರ್ಗಚ್ಯವನವರ್ಣನವೆಂಬ
ಆರನೆಯ ಪರ್ವವು ಸಮಾಪ್ತವಾದುದು.

---

೧ ಉತ್ಸವಃ. ೨ ಸಂಚೂರ್ಣಯಂತಃ. ೩ ಸೂಕ್ಷ್ಮೈಲಾ ತು ತ್ರುಟಿಃ ಪ್ರೋಕ್ತಾ ಸ್ಥೂಲೈಲಾ ಲವಲೀ ಮತಾ. ೪ ವ್ಯಾಪ್ತೇ. ೫ ಸಂಚೂರ್ಣ್ಯ.

# ಅಥ ಸಪ್ತಮಂ ಪರ್ವ

**ಅಥಾಹೂಯ ಸುತಾಂ ಚಕ್ರೀ ತಾಮಿತ್ಯನ್ವಶಿಷತ್ಕೃತೀ ।**
**ಸ್ಮಿತಾಂಶುಸಲಿಲೈಃ ಸಿಂಚನ್ನಿವೈನಾಮಾಧಿಬಾಧಿತಾಮ್ ॥ ೧ ॥**

ತರುವಾಯ ಚತುರನಾದ ಆ ವಜ್ರದಂತಚಕ್ರವರ್ತಿಯು ಮನೋವ್ಯಥೆಯಿಂದ ಬಾಧಿತಳಾದ ಆ ಮಗಳನ್ನು (ಶ್ರೀಮತಿಯನ್ನು) ಕರೆದು, ಮುಗುಳುನಗೆಯ ರಶ್ಮಿಗಳೆಂಬ ನೀರುಗಳಿಂದ ಸೇಚನೆಮಾಡುವವನಂತೆ, ಮುಂದೆ ಹೇಳುವರೀತಿಯಾಗಿ ಉಪದೇಶಮಾಡಿದನು.

**ಪುತ್ರಿ ಮಾ ಸ್ಮ ಗಮಃ ಶೋಕಮುಪಸಂಹರ ಮೌನಿತಾಮ್ ।**
**ಜಾನಾಮಿ ತ್ವತ್ಪತೇಃ ಸರ್ವಂ ವೃತ್ತಾಂತಮವಧಿತ್ವಿಷಾ ॥ ೨ ॥**

''ಎಲೈ ಮಗಳೇ ! ನಾನು ಅವಧಿಜ್ಞಾನದಿಂದ ನಿನ್ನ ಪತಿಯ ವೃತ್ತಾಂತವನ್ನೆಲ್ಲಾ ತಿಳಿಯುತ್ತೇನೆ. ಆದುದರಿಂದ ಶೋಕಪಡಬೇಡ. ಮೌನವನ್ನು ಬಿಡು.

**ತ್ವಕಂ ಪುತ್ರಿ ಸುಖಂ [೧]ಸ್ನಾಹಿ ಪ್ರಸಾಧನವಿಧಿಂ ಕುರು ।**
**ಚಂದ್ರಬಿಂಬಾಯಿತೇ ಪಶ್ಯ ದರ್ಪಣೇ ಮುಖಮಂಡನಮ್ ॥ ೩ ॥**

ಮಗಳೇ ! ನೀನು ಸುಖವಾಗಿ ಸ್ನಾನವನ್ನು ಮಾಡಿ ಅಲಂಕಾರಮಾಡಿಕೊ. ಚಂದ್ರಬಿಂಬದಂತಿರುವ ಕನ್ನಡಿಯಲ್ಲಿ ನಿನ್ನ ಮುಖದ ಅಲಂಕಾರವನ್ನು ನೋಡು.

**[೨]ಅಶಾನ ಮಧುರಾಲಾಪೈಸ್ತರ್ಪಯೇಷ್ಟಂ ಸಖೀಜನಮ್ ।**
**ತ್ವದಿಷ್ಟಸಂಗಮೋವಶ್ಯಮದ್ಯ ಶ್ವೋ ವಾ ಭವಿಷ್ಯತಿ ॥ ೪ ॥**

ನೀನು ಭೋಜನವನ್ನು ಮಾಡು. ನಿನಗಿಷ್ಟರಾದ ಸಖೀಜನರನ್ನು ಮಧುರ ಸಲ್ಲಾಪಗಳಿಂದ ಸಂತೋಷಪಡಿಸು. ನಿನಗೆ ಇಷ್ಟನಾದ ಪತಿಯ ಸಮಾಗಮವು ಇಂದೋ ನಾಳೆಯೋ ಅವಶ್ಯವಾಗಿ ಆಗುವುದು.

**ಯಶೋಧರಮಹಾಯೋಗಿಕೈವಲ್ಯೇ ಸ ಮಯಾವಧಿಃ ।**
**ಸಮಾಸಾದಿ ತತೋ[೩]ಜ್ಞಾನಾ[೪]ಮಭಿನ್ನ[೫]ಸಮಯಾವಧಿಃ ॥ ೫ ॥**

ನಾನು ಯಶೋಧರತೀರ್ಥಂಕರರ ಕೇವಲಜ್ಞಾನಪೂಜೆಯನ್ನು ಮಾಡುವುದಕ್ಕೋಸ್ಕರ ಹೋಗಿದ್ದಾಗ ದ್ರವ್ಯಕ್ಷೇತ್ರಕಾಲಭಾವಗಳನ್ನು ಅವಧಿಮಾಡಿಕೊಂಡು ಉಂಟಾಗುವ ಆ ಅವಧಿಜ್ಞಾನವು ನನಗೆ ಪ್ರಾಪ್ತವಾಯಿತು. ಆ ಜ್ಞಾನದಿಂದ ನಿನ್ನ ಪತಿಯ ವಿಷಯವನ್ನು ತಿಳಿದೆನು. (ದ್ರವ್ಯಕ್ಷೇತ್ರಕಾಲಭಾವಗಳನ್ನು ಅವಧಿ ಮಾಡಿಕೊಂಡು ಇಂದ್ರಿಯಗಳಿಗೆ ಅಗೋಚರವಾದ ವಿಷಯಗಳನ್ನು ತಿಳಿಯುವ ದಿವ್ಯಜ್ಞಾನಕ್ಕೆ ಅವಧಿಜ್ಞಾನವೆಂದು ಹೆಸರು)

**ಶೃಣು ಪುತ್ರಿ ತವಾಸ್ಮಾಕಂ ತ್ವತ್ಕಾಂತಸ್ಯಾಪಿ ವೃತ್ತಕಮ್ ।**
**ಜನ್ಮಾಂತರನಿಬದ್ಧಂ ತೇ ವಕ್ಷ್ಯಾಮೀದಂತಯಾ ಪೃಥಕ್ ॥ ೬ ॥**

ಮಗಳೇ ! ನಿನ್ನ ಪೂರ್ವಭವಸಂಬಂಧವಾದ ಚರಿತ್ರೆಯನ್ನೂ ನನ್ನ ಪೂರ್ವಭವದ ಚರಿತ್ರೆಯನ್ನೂ ನಿನ್ನ ಪತಿಯ ಚರಿತ್ರೆಯನ್ನೂ ಕೇಳು. ಅದನ್ನು ನಿನಗೆ ಮುಂದೆ ಹೇಳುವ ಪ್ರಕಾರವಾಗಿ ಬೇರೆ ಹೇಳುವೆನು:—

**ಇತೋಹಂ ಪಂಚಮೇಭೂವಂ ಜನ್ಮನ್ಯಸ್ಯಾಂ ಮಹಾದ್ಯುತೌ ।**
**ನಗರ್ಯಾಂ ಪುಂಡರೀಕಿಣ್ಯಾಂ ಸ್ವರ್ಗನಗರ್ಯಾಮಿವರ್ದ್ಧಿಭಿಃ ॥ ೭ ॥**

**ಸುತೋರ್ದ್ಧಚಕ್ರಿಣಶ್ಚಂದ್ರಕೀರ್ತಿರಿತ್ಯಾತ್ತಕೀರ್ತನಃ ।**
**ಜಯಕೀರ್ತಿರ್ವಯಸ್ಯೋ ಮೇ ತದಾಸೀತ್ಸಹ ವರ್ದ್ಧಿತಃ ॥ ೮ ॥**

ನಾನು ಈ ಭವಕ್ಕಿಂತ ಮೊದಲು ಐದನೆಯ ಜನ್ಮದಲ್ಲಿ ಸಂಪತ್ತುಗಳಿಂದ ಸ್ವರ್ಗಕ್ಕೆ ಸಮಾನವೂ ಮಹಾಕಾಂತಿಯುಳ್ಳುದೂ ಆದ ಈ ಪುಂಡರೀಕಿಣೀನಗರದಲ್ಲಿ ರಾಜನಾದ ಅರ್ದ್ಧಚಕ್ರಿಗೆ ಚಂದ್ರಕೀರ್ತಿಯೆಂಬ ಮಗನಾಗಿ ಹುಟ್ಟಿದ್ದೆನು. ಆಗ ನನ್ನೊಡನೆ ಸಲಹಲ್ಪಟ್ಟ ಜಯಕೀರ್ತಿಯೆಂಬವನು ನನ್ನ ಮಿತ್ರನಾಗಿದ್ದನು.

**ಪಿತುಃ ಕ್ರಮಾಗತಾಂ ಲಕ್ಷ್ಮೀಮಾಸಾದ್ಯ ಪರಮೋದಯಾಮ್ ।**
**ಸಮಂ ವಯಂ ವಯಸ್ಯೇನ ಚಿರಮತ್ರಾರಮಾಮಹಿ ॥ ೯ ॥**

ಕ್ರಮವಾಗಿ ತಂದೆಯಿಂದ ಬಂದುದೂ ಹೆಚ್ಚು ವೃದ್ಧಿಯನ್ನು ಹೊಂದುತ್ತಿದ್ದುದೂ ಆದ ರಾಜ್ಯಲಕ್ಷ್ಮಿಯನ್ನು ಪಡೆದು ಬಹುಕಾಲಪರ್ಯಂತ ನನ್ನ ಮಿತ್ರನೊಡನೆ ಆಟವಾಡುತ್ತಿದ್ದೆನು.

**ಗೃಹಮೇಧೀ ಗೃಹೀತಾಣುವ್ರತಃ ಸೋಹಂ ಕ್ರಮಾತ್ತತಃ ।**
**ಕಾಲಾಂತೇ ಚಂದ್ರಸೇನಾಖ್ಯಂ ಗುರುಂ ಶ್ರಿತ್ವಾ ಸಮಾಧಯೇ ॥ ೧೦ ॥**

**ತ್ಯಕ್ತಾಹಾರಶರೀರಃ ಸನ್ನುದ್ಯಾನೇ ಪ್ರೀತಿವರ್ದ್ಧನೇ ।**
**ಸನ್ಯಾಸವಿಧಿನಾಜಾಯೇ ಕಲ್ಪೇ ಮಾಹೇಂದ್ರಸಂಜ್ಞಿತೇ ॥ ೧೧ ॥**

**ಸಪ್ತಸಾಗರಕಾಲಾಯುಃಸ್ಥಿತಿಃ ಸಾಮಾನಿಕಃ ಸುರಃ ।**
**ಜಯಕೀರ್ತಿಶ್ಚ ತತ್ರೈವ ಜಾತೋ ಮತ್ಸದೃಶರ್ದ್ಧಿಕಃ ॥ ೧೨ ॥**

ಅನಂತರ ನಾನು ಗೃಹಸ್ಥನಾಗಿ ಕ್ರಮವಾಗಿ ಅಣುವ್ರತವನ್ನು ಧಾರಣೆಮಾಡಿ ಅಂತಕಾಲದಲ್ಲಿ ಸಮಾಧಿಮರಣವನ್ನು ಮಾಡುವುದಕ್ಕೋಸ್ಕರ ಚಂದ್ರಸೇನರೆಂಬ ಗುರುಗಳನ್ನು ಕಂಡು, ಪ್ರೀತಿವರ್ದ್ಧನವೆಂಬ ಉದ್ಯಾನದಲ್ಲಿ ಸನ್ಯಾಸ (ಸಮಾಧಿ) ವಿಧಿಯಿಂದ ಆಹಾರಶರೀರಗಳನ್ನು ಪರಿತ್ಯಜಿಸಿ ಮಾಹೇಂದ್ರವೆಂಬ ನಾಲ್ಕನೆಯ ಸ್ವರ್ಗದಲ್ಲಿ ಏಳು ಸಾಗರಕಾಲ ಆಯುಷ್ಯಸ್ಥಿತಿಯುಳ್ಳ ಸಾಮಾನಿಕದೇವನಾಗಿ ಹುಟ್ಟಿದೆನು. ನನ್ನ ಮಿತ್ರನಾಗಿದ್ದ ಜಯಕೀರ್ತಿಯೂ ಅದೇ ಸ್ವರ್ಗದಲ್ಲಿ ನನಗೆ ಸಮಾನವಾದ ಸಂಪತ್ತುಳ್ಳವನಾಗಿ ಹುಟ್ಟಿದನು.

**ತತಃ ಪ್ರಚ್ಯುತ್ಯ ಕಾಲಾಂತೇ ದ್ವೀಪೇ ಪುಷ್ಕರಸಂಜ್ಞಕೇ ।**
**ಪೂರ್ವಮಂದರಪೌರಸ್ತ್ಯವಿದೇಹೇ ಪ್ರಾಜನಿಷ್ವಹಿ ॥ ೧೩ ॥**

**ವಿಷಯೇ ಮಂಗಲಾವತ್ಯಾಂ ನಗರೇ ರತ್ನಸಂಚಯೇ ।**
**ಶ್ರೀಧರಸ್ಯ ಮಹೀಭರ್ತುಸ್ತನಯೌ ಬಲಕೇಶವೌ ॥ ೧೪ ॥**

**ಮನೋಹರಾತದ್ರಮಯೋಃ ಶ್ರೀವರ್ಮಾ ಚ ವಿಭೀಷಣಃ ।**
**ತತೋ ರಾಜ್ಯಪದಂ ಪ್ರಾಪ್ಯ ದೀರ್ಘಂ ತತ್ರಾರಮಾವಹಿ ॥ ೧೫ ॥**

ಆಯುಷ್ಯವು ತೀರಿದಮೇಲೆ ಅಲ್ಲಿಂದ ಚ್ಯುತರಾಗಿ ಪುಷ್ಕರವೆಂಬ ದ್ವೀಪದಲ್ಲಿ ಪೂರ್ವಮೇರುಪರ್ವತದ ಪೂರ್ವದಲ್ಲಿರುವ ವಿದೇಹಕ್ಷೇತ್ರದಲ್ಲಿ ಮಂಗಲಾವತೀ ದೇಶದಲ್ಲಿರುವ ರತ್ನಸಂಚಯನಗರದಲ್ಲಿ ಶ್ರೀಧರನೆಂಬ ರಾಜನಿಗೂ ಆತನ ಪತ್ನಿಯಾದ ಮನೋಹರಾದೇವಿಗೂ ನಾನು ಶ್ರೀವರ್ಮನೆಂಬ ಮಗನಾಗಿ ಹುಟ್ಟಿದೆನು. ನನ್ನ ಮಿತ್ರನೂ ಅದೇ ಶ್ರೀಧರರಾಜನ ಎರಡನೆಯ ಪತ್ನಿಯಾದ ಮನೋರಮಾದೇವಿಗೆ ವಿಭೀಷಣನೆಂಬ ಮಗನಾಗಿ ಹುಟ್ಟಿದನು. ನಾನು ಬಲರಾಮನಾಗಿಯೂ ಅನಂತರ ವಿಭೀಷಣನು ನಾರಾಯಣನಾಗಿಯೂ ಇದ್ದೆವು. ರಾಜ್ಯಪದವಿಯನ್ನು ಪಡೆದು ಬಹುಕಾಲದವರೆಗೆ ಅಲ್ಲಿ ಕ್ರೀಡಿಸುತ್ತಿದ್ದೆವು.

---

೧ ಸ್ನಾನಂ ಕುರು. ೨ ಭೋಜನಂ ಕುರು. ೩. ಅಜ್ಞಾನಿಷಂ, ಲಙ್ ಮಿಪ್. ೪ ಯುಕ್ತಃ. ೫ ಉಪಲಕ್ಷಣೇನ ದ್ರವ್ಯಕ್ಷೇತ್ರಕಾಲಭಾವಯುಕ್ತಃ, ದ್ರವ್ಯಕ್ಷೇತ್ರಕಾಲಭಾವಸೀಮಕ ಇತ್ಯರ್ಥಃ.

**ಪಿತಾ ತು ಮಯಿ ನಿಕ್ಷಿಪ್ತರಾಜ್ಯಭಾರಃ ಸುಧರ್ಮತಃ ।**
**ದೀಕ್ಷಿತ್ವೋಪೋಷ್ಯ ಸಿದ್ಧೋಽಭೂದುಪವಾಸವಿಧೀನ್ಬಹೂನ್ ॥ ೧೬ ॥**

ತಂದೆಯಾದರೋ ರಾಜ್ಯಭಾರವನ್ನು ನನ್ನಲ್ಲಿರಿಸಿ ಸುಧರ್ಮಮುನಿಗಳಿಂದ ದೀಕ್ಷೆಯನ್ನು ಸ್ವೀಕರಿಸಿ ಅನೇಕ ಉಪವಾಸವಿಧಿಗಳನ್ನಾಚರಿಸಿ ಸಿದ್ಧ(ಮುಕ್ತ)ನಾದನು.

**ಮನೋಹರಾ ಮಯಿ ಸ್ನೇಹಾತ್ಸ್ಥಿತಾಗಾರೇ ಶುಚಿವ್ರತಾ ।**
**ಸುಧರ್ಮಗುರುನಿರ್ದಿಷ್ಟಮಾಚರಂತೀ ಚಿರಂ ತಪಃ ॥ ೧೭ ॥**

ನನ್ನ ತಾಯಿಯಾದ ಮನೋಹರಾದೇವಿಗೆ ನನ್ನಲ್ಲಿ ಬಹಳ ಪ್ರೇಮವಿದ್ದುದರಿಂದ ಪವಿತ್ರವಾದ ವ್ರತಗಳನ್ನು ಧರಿಸಿ ಸುಧರ್ಮಮುನಿಗಳು ಉಪದೇಶ ಮಾಡಿದ ತಪಸ್ಸನ್ನು ಆಚರಿಸುತ್ತ ಮನೆಯಲ್ಲೇ ಇದ್ದಳು.

**ಉಪೋಷ್ಯ ವಿಧಿವತ್ಕರ್ಮಕ್ಷಪಣಂ ವಿಧಿಮುತ್ತಮಮ್ ।**
**ಜೀವಿತಾಂತೇ ಸಮಾರಾಧ್ಯ ಲಲಿತಾಂಗಃ ಸುರೋಽಭವತ್ ॥ ೧೮ ॥**

ಆಕೆಯು ವಿಧಿಗನುಸಾರವಾಗಿ ಕರ್ಮದಹನವೆಂಬ ಶ್ರೇಷ್ಠವಾದ ವಿಧಿಯನ್ನು ಉಪವಾಸಪೂರ್ವಕವಾಗಿ ಆಚರಿಸಿ ಜೀವಿತಾಂತ್ಯದಲ್ಲಿ ಮೃತಳಾಗಿ ಈಶಾನಕಲ್ಪದಲ್ಲಿ ಲಲಿತಾಂಗದೇವನಾಗಿ ಹುಟ್ಟಿದಳು (ಈ ಲಲಿತಾಂಗದೇವನು ಸ್ವಯಂಪ್ರಭಾದೇವಿಯ ಪತಿಯಾದ ಲಲಿತಾಂಗನಲ್ಲ).

**ಲಲಿತಾಂಗಸ್ತತೋಽಸೌ ಮಾಂ ವಿಭೀಷಣವಿಯೋಗತಃ ।**
**ಶುಚಮಾಪನ್ನಮಾಸಾದ್ಯ ಸೋಽಪಾಯಂ ಪ್ರತ್ಯಬೋಧಯತ್ ॥ ೧೯ ॥**

ಆಮೇಲೆ ಈ ಲಲಿತಾಂಗದೇವನು ನನ್ನ ಅನುಜನಾದ ವಿಭೀಷಣನ ಮರಣದಿಂದ ದುಃಖಪಡುತ್ತಿದ್ದ ನನ್ನ ಸಮೀಪಕ್ಕೆ ಬಂದು ಉಪಾಯದಿಂದ ಮುಂದೆ ಹೇಳುವರೀತಿಯಾಗಿ ಬೋಧಿಸಿದನು:—

**ಅಂಗ ಪುತ್ರ ತ್ವಕಂ ಮಾಗಾಃ ಶುಚಮಜ್ಞೋ ಯಥಾ ಜನಃ ।**
**ಜನನಾದಿಭಿಯೋಽವಶ್ಯಂ ಭಾವುಕಾ ವಿದ್ಧಿ ಸಂಸೃತೌ ॥ ೨೦ ॥**

'ಎಲೈ ಮಗನೇ ! ಮೂರ್ಖಜನರಂತೆ ನೀನು ದುಃಖಪಡಬೇಡ. ಸಂಸಾರದಲ್ಲಿ ಜನನಮರಣಾದಿಭಯಗಳು ಅವಶ್ಯವಾಗಿ ಉಂಟಾಗುವುವುಗಳೆಂದು ತಿಳಿ'.

**ಇತಿ ಮಾತೃಚರಸ್ಯಾಸ್ಯ ಲಲಿತಾಂಗಸ್ಯ ಬೋಧನಾತ್ ।**
**ಶುಚಮುತ್ಸೃಜ್ಯ ಧರ್ಮೈಕರಸೋಽಭೂವಂ ಪ್ರಸನ್ನಧೀಃ ॥ ೨೧ ॥**

ಪೂರ್ವಭವದಲ್ಲಿ ತಾಯಿಯಾಗಿದ್ದ ಲಲಿತಾಂಗದೇವನ ಈ ಬೋಧನೆಯಿಂದ ದುಃಖವನ್ನು ಬಿಟ್ಟು ಪ್ರಸನ್ನವಾದ ಮನಸ್ಸುಳ್ಳವನಾಗಿ ಧರ್ಮದಲ್ಲಿ ದೃಢವಾದ ವಿಶ್ವಾಸವುಳ್ಳವನಾದೆನು.

**ತತೋ ಯುಗಂಧರಸ್ಯಾಂತೇ ದೀಕ್ಷಾಂ ಜೈನೇಶ್ವರೀಮಹಮ್ ।**
**ನೃಪೈರ್ದಶಸಹಸ್ರಾರ್ಧಮಿತೈಃ ಸಾರ್ಧಮುಪಾದಿಷಿ ॥ ೨೨ ॥**

ತರುವಾಯ ನಾನು ಯುಗಂಧರಮುನಿಗಳ ಸಮೀಪದಲ್ಲಿ ಐದುಸಾವಿರ ರಾಜರೊಡನೆ ಜಿನದೀಕ್ಷೆಯನ್ನು ತೆಗೆದುಕೊಂಡೆನು.

**ಯಥಾವಿಧಿ ತತಸ್ತಪ್ತ್ವಾ ಸಿಂಹನಿಷ್ಕ್ರೀಡಿತಂ ತಪಃ ।**
**ಸುದುಶ್ಚರಂ ಮಹೋದರ್ಕಂ ಸರ್ವತೋಭದ್ರಮಪ್ಯದಃ ॥ ೨೩ ॥**

**ತ್ರಿಜ್ಞಾನವಿಮಲಾಲೋಕಃ ಕಾಲಾಂತೇ ಪ್ರಾಪಮಿಂದ್ರತಾಮ್ ।**
**ಕಲ್ಪೇಽಚ್ಯುತೇಽಹ್ಯನಲ್ಪರ್ದ್ಧಿ ದ್ವಾವಿಂಶತ್ಯಬ್ಧಿಜೀವಿತಃ ॥ ೨೪ ॥**

ಆಮೇಲೆ ಅತ್ಯಂತ ಕಠಿಣವೂ ಉತ್ತರದಲ್ಲಿ ಮಹಾಫಲವನ್ನು ಕೊಡುವುದೂ ಆದ ಸಿಂಹನಿಷ್ಕ್ರೀಡಿತತಪಸ್ಸನ್ನೂ ಸರ್ವತೋಭದ್ರತಪಸ್ಸನ್ನೂ ವಿಧಿಪೂರ್ವಕವಾಗಿ ಆಚರಿಸಿ ಮತಿಜ್ಞಾನ ಶ್ರುತಜ್ಞಾನ ಅವಧಿಜ್ಞಾನಗಳೆಂಬ ನಿರ್ಮಲವಾದ ಬೆಳಕನ್ನು ಪಡೆದು ಜೀವಿತಾಂತ್ಯದಲ್ಲಿ ಮರಣವನ್ನು ಹೊಂದಿ ಬಹಳ ಋದ್ಧಿಗಳುಳ್ಳ ಅಚ್ಯುತಕಲ್ಪದಲ್ಲಿ ಇಪ್ಪತ್ತೆರಡು ಸಾಗರಕಾಲ ಆಯುಷ್ಯವುಳ್ಳ ಅಚ್ಯುತೇಂದ್ರನಾಗಿ ಹುಟ್ಟಿದೆನು. (೧ ಉಪವಾಸ ೧ ಪಾರಣೆ, ೨ ಉಪವಾಸ ೧ ಪಾರಣೆ, ೧ ಉ ೧ ಪಾ, ೩ ಉ ೧ ಪಾ, ೨ ಉ ೧ ಪಾ, ೪ ಉ ೧ ಪಾ, ೩ ಉ ೧ ಪಾ, ೫ ಉ ೧ ಪಾ, ೪ ಉ ೧ ಪಾ, ೬ ಉ ೧ ಪಾ, ೫ ಉ ೧ ಪಾ, ೭ ಉ ೧ ಪಾ, ೬ ಉ ೧ ಪಾ, ೮ ಉ ೧ ಪಾ, ೭ ಉ ೧ ಪಾ, ೯ ಉ ೧ ಪಾ, ೮ ಉ ೧ ಪಾ, ೭ ಉ ೧ ಪಾ, ೮ ಉ ೧ ಪಾ, ೬ ಉ ೧ ಪಾ, ೭ ಉ ೧ ಪಾ, ೫ ಉ ೧ ಪಾ, ೬ ಉ ೧ ಪಾ, ೪ ಉ ೧ ಪಾ, ೫ ಉ ೧ ಪಾ, ೩ ಉ ೧ ಪಾ, ೪ ಉ ೧ ಪಾ, ೨ ಉ ೧ ಪಾ, ೩ ಉ ೧ ಪಾ, ೧ ಉ ೧ ಪಾ, ೨ ಉ ೧ ಪಾ, ೧ ಉ ೧ ಪಾ, ಈ ಕ್ರಮದಿಂದ ೧೪೫ ಉಪವಾಸಗಳೂ ೩೨ ಪಾರಣೆಗಳೂ ಆಗುತ್ತವೆ. ಇದಕ್ಕೆ ಸಿಂಹನಿಷ್ಕ್ರೀಡಿತತಪಸ್ಸೆಂದು ಹೆಸರು. ೧ ಉಪವಾಸ ೧ ಪಾರಣೆ, ೨ ಉಪವಾಸ ೧ ಪಾರಣೆ, ೩ ಉ ೧ ಪಾ, ೪ ಉ ೧ ಪಾ, ೫ ಉ ೧ ಪಾ, ೩ ಉ ೧ ಪಾ, ೨ ಉ ೧ ಪಾ, ೧ ಉ ೧ ಪಾ, ೫ ಉ ೧ ಪಾ, ೪ ಉ ೧ ಪಾ, ೨ ಉ ೧ ಪಾ, ೩ ಉ ೧ ಪಾ, ೪ ಉ ೧ ಪಾ, ೫ ಉ ೧ ಪಾ, ೧ ಉ ೧ ಪಾ, ೪ ಉ ೧ ಪಾ, ೩ ಉ ೧ ಪಾ, ೨ ಉ ೧ ಪಾ, ೧ ಉ ೧ ಪಾ, ೫ ಉ ೧ ಪಾ, ೩ ಉ ೧ ಪಾ, ೪ ಉ ೧ ಪಾ, ೫ ಉ ೧ ಪಾ, ೧ ಉ ೧ ಪಾ, ೨ ಉ ೧ ಪಾ, ಈ ಕ್ರಮದಿಂದ ೭೫ ಉಪವಾಸಗಳೂ ೨೫ ಪಾರಣೆಗಳೂ ಆಗುತ್ತವೆ. ಇದಕ್ಕೆ ಸರ್ವತೋಭದ್ರತಪಸ್ಸೆಂದು ಹೆಸರು).

**ದಿವ್ಯಾನನುಭವನ್ಭೋಗಾಂಸ್ತತ್ರ ಕಲ್ಪೇ ಮಹಾದ್ಯುತೌ ।**
**ಗತ್ವಾ ಚ ಜನನೀಸ್ನೇಹಾಲ್ಲಲಿತಾಂಗಮಪೂಜಯಮ್ ॥ ೨೫ ॥**

ಅತ್ಯಂತ ದೇದೀಪ್ಯಮಾನವಾದ ಅಚ್ಯುತಕಲ್ಪದಲ್ಲಿ ದಿವ್ಯಭೋಗಗಳನ್ನು ಭೋಗಿಸುವವನಾಗಿ ಪೂರ್ವಭವದ ಮಾತೃಪ್ರೇಮದಿಂದ ಈಶಾನಕಲ್ಪಕ್ಕೆ ಹೋಗಿ ಆ ಲಲಿತಾಂಗದೇವನನ್ನು ಪೂಜಿಸಿದೆನು.

**ಪ್ರೀತಿವರ್ಧನಮಾರೋಪ್ಯ ವಿಮಾನಮತಿಭಾಸ್ವರಮ್ ।**
**ನೀತ್ವಾಸ್ಮತ್ಕಲ್ಪಮೇವಾಸ್ಯ ಕೃತವಾನಸ್ಮಿ ಸತ್ಕ್ರಿಯಾಮ್ ॥ ೨೬ ॥**

ಆ ಲಲಿತಾಂಗದೇವನನ್ನು ಅತ್ಯಂತ ದೇದೀಪ್ಯಮಾನವಾದ ಪ್ರೀತಿವರ್ಧನವೆಂಬ ವಿಮಾನದಲ್ಲಿ ಕುಳ್ಳಿರಿಸಿ ನಮ್ಮ ಅಚ್ಯುತಸ್ವರ್ಗಕ್ಕೊಯ್ದು ಇವನಿಗೆ ಸತ್ಕಾರವನ್ನು ಮಾಡಿರುತ್ತೇನೆ.

**ಸ ನೋ ಮಾತೃಚರಸ್ತಸ್ಮಿನ್ಕಲ್ಪೇಽನಲ್ಪಸುಖೋದಯೇ ।**
**ಭೋಗಾನನುಭವನ್ದಿವ್ಯಾನಸಕೃಚ್ಚ ಮಯಾರ್ಚಿತಃ ॥ ೨೭ ॥**

ನಮ್ಮ ಪೂರ್ವಭವದ ತಾಯಿಯಾಗಿದ್ದ ಆ ಲಲಿತಾಂಗದೇವನು ಅತ್ಯಂತ ಸುಖವನ್ನುಂಟುಮಾಡುವ ಆ ಈಶಾನಕಲ್ಪದಲ್ಲಿ ದಿವ್ಯಭೋಗಗಳನ್ನು ಭೋಗಿಸುವವನಾಗಿ ಅನೇಕಾವರ್ತಿ ನನ್ನಿಂದ ಪೂಜಿಸಲ್ಪಟ್ಟನು.

**ಲಲಿತಾಂಗಸ್ತತಶ್ಚ್ಯುತ್ವಾ ಜಂಬೂದ್ವೀಪಸ್ಯ ಪೂರ್ವಗೇ ।**
**ವಿದೇಹೇ ಮಂಗಲಾವತ್ಯಾಂ ರೌಪ್ಯಸ್ಯಾದ್ರೇರುದಕ್ತಟೇ ॥ ೨೮ ॥**

**ಗಂಧರ್ವಪುರನಾಥಸ್ಯ ವಾಸವಸ್ಯ ಖಗೇಶಿನಃ ।**
**ಸೂನುರಾಸೀತ್ಪ್ರಭಾವತ್ಯಾಂ ದೇವ್ಯಾಂ ನಾಮ್ನಾ ಮಹೀಧರಃ ॥ ೨೯ ॥**

ಆ ಲಲಿತಾಂಗದೇವನು ಜೀವಿತಾಂತ್ಯದಲ್ಲಿ ಈಶಾನಸ್ವರ್ಗದಿಂದ ಚ್ಯುತನಾಗಿ ಈ ಜಂಬೂದ್ವೀಪದ ಪೂರ್ವವಿದೇಹದ ಮಂಗಲಾವತೀದೇಶದಲ್ಲಿರುವ ವಿಜಯಾರ್ಧ ಪರ್ವತದ ಉತ್ತರದ ಶ್ರೇಣಿಯಲ್ಲಿರುವ ಗಂಧರ್ವಪುರವೆಂಬ ಪಟ್ಟಣದ ಅಧಿಪತಿಯಾಗಿದ್ದ ವಾಸವನೆಂಬ ವಿದ್ಯಾಧರರಾಜನಿಗೂ ಆತನ ಪಟ್ಟಮಹಿಷಿಯಾಗಿದ್ದ ಪ್ರಭಾವತೀದೇವಿಗೂ ಮಹೀಧರನೆಂಬ ಮಗನಾಗಿ ಹುಟ್ಟಿದನು.

**ಮಹೀಧರೇ ನಿಜಂ ರಾಜ್ಯಭಾರಂ ನಿಕ್ಷಿಪ್ಯ ವಾಸವಃ ।**
**ನಿಕಟೇಽರಿಂಜಯಾಖ್ಯಸ್ಯ ತಪ್ತ್ವಾ ಮುಕ್ತಾವಲೀಂ ತಪಃ ॥ ೩೦ ॥**

**ನಿರ್ವಾಣಮಗಮತ್ಪದ್ಮಾವತ್ಯಾರ್ಯಾಂ ಚ ಪ್ರಭಾವತೀ ।**
**ಸಮಾಶ್ರಿತ್ಯ ತಪಸ್ತಪ್ತ್ವಾ ಪರಂ ರತ್ನಾವಲೀಮಸೌ ॥ ೩೧ ॥**

**ಅಚ್ಯುತಂ ಕಲ್ಪಮಾಸಾದ್ಯ ಪ್ರತೀಂದ್ರಪದಭಾಗಭೂತ್ ।**
**ಮಹೀಧರೋಽಪಿ ಸಂಸಿದ್ಧವಿದ್ಯೋಽಭೂದದ್ಭುತೋದಯಃ ॥ ೩೨ ॥**

ವಾಸವರಾಜನು ತನ್ನ ರಾಜ್ಯಭಾರವನ್ನು ಮಹೀಧರಪುತ್ರನಲ್ಲಿರಿಸಿ ತಾನು ಅರಿಂಜಯಮುನಿಗಳ ಸಮೀಪದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಮುಕ್ತಾವಲಿಯೆಂಬ ತಪಸ್ಸನ್ನು ಮಾಡಿ ಮೋಕ್ಷವನ್ನು ಹೊಂದಿದನು. ಈ ಪ್ರಭಾವತೀದೇವಿಯೂ ಪದ್ಮಾವತಿಯೆಂಬ ಆರ್ಜಿಕೆಯರನ್ನು ಹೊಂದಿ ರತ್ನಾವಲಿಯೆಂಬ ಉತ್ತಮತಪಸ್ಸನ್ನು ಮಾಡಿ ಜೀವಿತಾಂತ್ಯದಲ್ಲಿ ಮೃತಳಾಗಿ ಅಚ್ಯುತಕಲ್ಪದಲ್ಲಿ ಪ್ರತೀಂದ್ರನಾಗಿ ಹುಟ್ಟಿದಳು. ಮಹೀಧರನೂ ಅನೇಕ ವಿದ್ಯೆಗಳನ್ನು ಸಾಧಿಸಿ ಬಹಳ ವೈಭವದಿಂದ ರಾಜ್ಯವಾಳುತ್ತಿದ್ದನು. (೧ ಉಪವಾಸ ೧ ಪಾರಣೆ, ೨ ಉ ೧ ಪಾ, ೩ ಉ ೧ ಪಾ, ೪ ಉ ೧ ಪಾ, ೫ ಉ ೧ ಪಾ, ೪ ಉ ೧ ಪಾ, ೩ ಉ ೧ ಪಾ, ೨ ಉ ೧ ಪಾ, ೧ ಉ ೧ ಪಾ, ಈ ಕ್ರಮದಿಂದ ೨೫ ಉಪವಾಸಗಳೂ ೯ ಪಾರಣೆಗಳೂ ಆಗುತ್ತವೆ. ಇದಕ್ಕೆ ಮುಕ್ತಾವಲೀತಪಸ್ಸೆಂದು ಹೆಸರು. ೧ ಉಪವಾಸ ೧ ಪಾರಣೆ, ೨ ಉ ೧ ಪಾ, ೩ ಉ ೧ ಪಾ, ೪ ಉ ೧ ಪಾ, ೫ ಉ ೧ ಪಾ, ೫ ಉ ೧ ಪಾ, ೪ ಉ ೧ ಪಾ, ೩ ಉ ೧ ಪಾ, ೨ ಉ ೧ ಪಾ, ೧ ಉ ೧ ಪಾ, ಈ ಕ್ರಮದಿಂದ ೩೦ ಉಪವಾಸಗಳೂ ೧೦ ಪಾರಣೆಗಳೂ ಆಗುತ್ತವೆ. ಇದಕ್ಕೆ ರತ್ನಾವಲೀತಪಸ್ಸೆಂದು ಹೆಸರು).

**ಕದಾಚಿದಥ ಗತ್ವಾಹಂ ಪುಷ್ಕರಾರ್ಧಸ್ಯ ಪಶ್ಚಿಮೇ ।**
**ಭಾಗೇ ಪೂರ್ವವಿದೇಹೇ ತಂ ವಿಷಯಂ ವತ್ಸಕಾವತೀಮ್ ॥ ೩೩ ॥**

**ತತ್ರ ಪ್ರಭಾಕರೀಪುರ್ಯಾಂ ವಿನಯಂಧರಯೋಗಿನಃ ।**
**ನಿರ್ವಾಣಪೂಜಾಂ ನಿಷ್ಠಾಪ್ಯ ಮಹಾಮೇರುಮಥಾಗಮಮ್ ॥ ೩೪ ॥**

ಅನಂತರ ಒಂದಾನೊಂದು ಕಾಲದಲ್ಲಿ ಅಚ್ಯುತೇಂದ್ರನಾಗಿದ್ದ ನಾನು ಪುಷ್ಕರಾರ್ಧ ದ್ವೀಪದ ಪಶ್ಚಿಮಭಾಗದ ಪೂರ್ವವಿದೇಹದಲ್ಲಿರುವ ವತ್ಸಕಾವತೀದೇಶಕ್ಕೆ ಹೋಗಿ ಅಲ್ಲಿರುವ ಪ್ರಭಾಕರಿಯೆಂಬ ಪುರದಲ್ಲಿ ವಿನಯಂಧರರೆಂಬ ಯೋಗಿಗಳ ನಿರ್ವಾಣಕಲ್ಯಾಣಪೂಜೆಯನ್ನು ಮಾಡಿ ಆಮೇಲೆ ಮಹಾಮೇರುಪರ್ವತಕ್ಕೆ ಹೋದೆನು.

**ತತ್ರ ನಂದನಪೂರ್ವಾಶಾಚೈತ್ಯಾಲಯಮುಪಾಶ್ರಿತಮ್ ।**
**ಮಹೀಧರಂ ಸಮಾಲೋಕ್ಯ ವಿದ್ಯಾಪೂಜೋದ್ಯತಂ ತದಾ ॥ ೩೫ ॥**

**ಪ್ರತ್ಯಬೂಬುಧಮಿತ್ಯುಚ್ಚೈರಹೋ ಖೇಂದ್ರಮಹೀಧರ ।**
**ವಿದ್ಧಿ ಮಾಮಚ್ಯುತಾಧೀಶಂ ಲಲಿತಾಂಗಸ್ತ್ವಮಪ್ಯಸೌ ॥ ೩೬ ॥**

ಅಲ್ಲಿ ನಂದನವನದ ಪೂರ್ವದಿಕ್ಕಿನಲ್ಲಿರುವ ಚೈತ್ಯಾಲಯದಲ್ಲಿ ವಿದ್ಯಾಸಾಧಕವಾದ ಪೂಜೆಯನ್ನು ಮಾಡುತ್ತಿದ್ದ ಮಹೀಧರರಾಜನನ್ನು ನೋಡಿ ಮುಂದೆ ಹೇಳುವ ರೀತಿಯಾಗಿ ಬೋಧಿಸಿದೆನು. 'ಎಲೈ ವಿದ್ಯಾಧರಾಧಿಪತಿಯಾದ ಮಹೀಧರನೇ! ನಾನು ಅಚ್ಯುತಕಲ್ಪದ ಇಂದ್ರನೆಂಬುದಾಗಿಯೂ ನೀನು ಪೂರ್ವದಲ್ಲಿ ಲಲಿತಾಂಗದೇವನಾಗಿದ್ದೆಯೆಂಬುದಾಗಿಯೂ ತಿಳಿ.

**ತ್ವಯ್ಯಸಾಧಾರಣೀ ಪ್ರೀತಿರ್ಮಮಾಸ್ತಿ ಜನನೀಚರೇ ।**
**ತದ್ಭದ್ರ ವಿಷಯಾಸಂಗಾದ್ದುರಂತಾದ್ವಿರಮಾಧುನಾ ॥ ೩೭ ॥**

ಪೂರ್ವದಲ್ಲಿ ನೀನು ನನಗೆ ತಾಯಿಯಾಗಿದ್ದುದರಿಂದ ನಿನ್ನಲ್ಲಿ ನನಗೆ ಬಹಳ ಪ್ರೀತಿಯಿದೆ. ಆದುದರಿಂದ ಎಲೈ ಭದ್ರಪುರುಷನೇ! ಕೊನೆಯಲ್ಲಿ ದುಃಖವನ್ನುಂಟುಮಾಡುವ ಇಂದ್ರಿಯವಿಷಯಗಳ ಸಂಬಂಧವನ್ನು ಈಗ ಪರಿತ್ಯಜಿಸು'.

**ಇತ್ಯುಕ್ತಮಾತ್ರ ಏವಾಸೌ ನಿರ್ವಿಣ್ಣಃ ಕಾಮಭೋಗತಃ ।**
**ಮಹೀಕಂಪೇ ಸುತೇ ಜ್ಯೇಷ್ಠೇ ರಾಜ್ಯಭಾರಂ ಸ್ವಮರ್ಪಯನ್ ॥ ೩೮ ॥**

**ಬಹುಭಿಃ ಖೇಚರೈಃ ಸಾರ್ಧಂ ಜಗನ್ನಂದನಶಿಷ್ಯತಾಮ್ ।**
**ಪ್ರಪದ್ಯ ಕನಕಾವಲ್ಯಾ ಪ್ರಾಣತೇಂದ್ರೋಽಭವದ್ವಿಭುಃ ॥ ೩೯ ॥**

ಹೀಗೆ ಹೇಳಿದಕೂಡಲೆ ಈ ಮಹೀಧರರಾಜನು ಕಾಮಭೋಗಗಳಿಂದ ವಿರಕ್ತನಾಗಿ ತನ್ನ ರಾಜ್ಯಭಾರವನ್ನು ಮಹೀಕಂಪನೆಂಬ ಜ್ಯೇಷ್ಠಪುತ್ರನಲ್ಲಿರಿಸಿ ಅನೇಕ ಖೇಚರರೊಡನೆ ಜಗನ್ನಂದನರೆಂಬ ಮುನಿಗಳ ಸಮೀಪದಲ್ಲಿ ಜಿನದೀಕ್ಷೆಯನ್ನು ಕೈಗೊಂಡು ಕನಕಾವಲಿಯೆಂಬ ತಪಸ್ಸನ್ನು ಮಾಡಿ ಜೀವಿತಾಂತ್ಯದಲ್ಲಿ ಮರಣವನ್ನು ಹೊಂದಿ ಪ್ರಾಣತವೆಂಬ ಹದಿನಾಲ್ಕನೆಯ ಸ್ವರ್ಗದಲ್ಲಿ ಇಂದ್ರನಾಗಿ ಹುಟ್ಟಿದನು. (ಒಂದು ವರ್ಷದವರೆಗೆ ಪ್ರತಿಯೊಂದು ತಿಂಗಳಿನ ಶುಕ್ಲಪಕ್ಷದಲ್ಲಿ ಪಾಡ್ಯ, ಪಂಚಮೀ, ದಶಮೀ, ಈ ತಿಥಿಗಳಲ್ಲಿಯೂ ಕೃಷ್ಣಪಕ್ಷದಲ್ಲಿ ದ್ವಿತೀಯಾ, ಷಷ್ಠೀ, ದ್ವಾದಶೀ ಈ ತಿಥಿಗಳಲ್ಲಿಯೂ ಉಪವಾಸವನ್ನು ಮಾಡುವುದು. ಒಂದು ವರ್ಷಕ್ಕೆ ೭೨ ಉಪವಾಸಗಳಾಗುತ್ತವೆ. ಇದಕ್ಕೆ ಕನಕಾವಲೀತಪಸ್ಸೆಂದು ಹೆಸರು).

**ವಿಂಶತ್ಯಬ್ಧಿಸ್ಥಿತಿಸ್ತತ್ರ ಭೋಗಾನ್ನಿರ್ವಿಶ್ಯ ನಿಶ್ಚ್ಯುತಃ ।**
**ಧಾತಕೀಷ(ಖ)ಂಡಪೂರ್ವಾಶಾಪಶ್ಚಿಮೇರುವಿದೇಹಗೇ ॥ ೪೦ ॥**

**ಗಂಧಿಲೇ ವಿಷಯೇಽಯೋಧ್ಯಾನಗರೇ ಜಯವರ್ಮಣಃ ।**
**ಸುಪ್ರಭಾಯಾಶ್ಚ ಪುತ್ರೋಽಭೂದಜಿತಂಜಯ ಇತ್ಯಸೌ ॥ ೪೧ ॥**

ಆ ಸ್ವರ್ಗದಲ್ಲಿ ಇಪ್ಪತ್ತುಸಾಗರೋಪಮ ಕಾಲದವರೆಗೆ ಭೋಗಗಳನ್ನನುಭವಿಸಿ ತನ್ನ ಆಯುಷ್ಯವು ಪೂರ್ತಿಯಾದಮೇಲೆ ಅಲ್ಲಿಂದ ಚ್ಯುತನಾಗಿ ಧಾತಕೀಖಂಡ ದ್ವೀಪದ ಪೂರ್ವಭಾಗದಲ್ಲಿರುವ ಅಪರವಿದೇಹದ ಗಂಧಿಲದೇಶದ ಅಯೋಧ್ಯಾ ನಗರದಲ್ಲಿ ಜಯವರ್ಮರಾಜನಿಗೂ ಆತನ ಪತ್ನಿಯಾದ ಸುಪ್ರಭಾದೇವಿಗೂ ಅಜಿತಂಜಯನೆಂಬ ಮಗನಾಗಿ ಹುಟ್ಟಿದನು.

**ಜಯವರ್ಮಾಥ ನಿಕ್ಷಿಪ್ಯ ಸ್ವಂ ರಾಜ್ಯಮಜಿತಂಜಯೇ ।**
**ಪಾರ್ಶ್ವೇಽಭಿನಂದನಸ್ಯಾಧಾತ್ತಪಃ ಸಾಚಾಮ್ಲವರ್ಧನಮ್ ॥ ೪೨ ॥**

ಆಮೇಲೆ ಜಯವರ್ಮನು ತನ್ನ ರಾಜ್ಯಭಾರವನ್ನು ಅಜಿತಂಜಯನಲ್ಲಿರಿಸಿ ಅಭಿನಂದನರೆಂಬ ಮುನಿಗಳ ಸಮೀಪದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಆಚಾಮ್ಲವರ್ಧನವೆಂಬ ತಪಸ್ಸನ್ನು ಮಾಡಿದನು. (೧ ಆಚಾಮ್ಲ ೧ ಪಾರಣೆ, ೨ ಆ ೧ ಪಾ, ೩ ಆ ೧ ಪಾ, ೪ ಆ ೧ ಪಾ, ೫ ಆ ೧ ಪಾ, ೬ ಆ ೧ ಪಾ, ೭ ಆ ೧ ಪಾ, ೮ ಆ ೧ ಪಾ, ೯ ಆ ೧ ಪಾ, ೧೦ ಆ ೧ ಪಾ, ೯ ಆ ೧ ಪಾ, ೮ ಆ ೧ ಪಾ, ೭ ಆ ೧ ಪಾ, ೬ ಆ ೧ ಪಾ, ೫ ಆ ೧ ಪಾ, ೪ ಆ ೧ ಪಾ, ೩ ಆ ೧ ಪಾ, ೨ ಆ ೧ ಪಾ, ೧ ಆ ೧ ಪಾ, ಈ ಕ್ರಮದಿಂದ ೧೦೦ ಆಚಾಮ್ಲಗಳೂ ೧೯ ಪಾರಣೆಗಳೂ ಆಗುತ್ತವೆ. ಇದಕ್ಕೆ ಆಚಾಮ್ಲವರ್ಧನತಪಸ್ಸೆಂದು ಹೆಸರು. ದಿನಕ್ಕೊಂದಾವರ್ತಿ ಬರೇ ಗಂಜಿಯನ್ನು ಪಾನಮಾಡಿಕೊಂಡಿರುವುದಕ್ಕೆ ಆಚಾಮ್ಲವೆಂದು ಹೆಸರು).

**ಕರ್ಮಬಂಧನನಿರ್ಮುಕ್ತೋ ಲೇಭೇಽಸೌ ಪರಮಂ ಪದಮ್ ।**
**ಯತ್ರಾತ್ಯಂತಿಕಮಕ್ಷಯ್ಯಮವ್ಯಾಬಾಧಂ ಪರಂ ಸುಖಮ್ ॥ ೪೩ ॥**

ಈ ಜಯವರ್ಮನು ಸಕಲಕರ್ಮಗಳನ್ನು ನಾಶಮಾಡಿ ನಿತ್ಯವೂ ನಾಶರಹಿತವೂ ಬಾಧಾರಹಿತವೂ ಆದ ಉತ್ತಮಸುಖವುಳ್ಳ ಮೋಕ್ಷಪದವನ್ನು ಹೊಂದಿದನು.

**ಸುಪ್ರಭಾ ಚ ಸಮಾಸಾದ್ಯ ಗಣಿನೀಂ ತಾಂ ಸುದರ್ಶನಾಮ್ ।**
**ರತ್ನಾವಲೀಮುಪೋಷ್ಯಾಭೂದಚ್ಯುತಾನುದಿಶಾಧಿಪಃ ॥ ೪೪ ॥**

ಸುಪ್ರಭಾದೇವಿಯು ಸುದರ್ಶನರೆಂಬ ಆರ್ಜಿಕೆಯರಿಂದ ದೀಕ್ಷೆಯನ್ನು ತೆಗೆದುಕೊಂಡು ರತ್ನಾವಲೀವ್ರತದ ಉಪವಾಸವನ್ನು ಮಾಡಿ ಅಚ್ಯುತಕಲ್ಪದ ಅನುದಿಶವಿಮಾನದಲ್ಲಿ ದೇವನಾಗಿ ಹುಟ್ಟಿದಳು.

**ತತೋಽಜಿತಂಜಯಶ್ಚಕ್ರೀಭೂತ್ವಾ ಭಕ್ತ್ಯಾಭಿನಂದನಮ್ ।**
**ವಿವಂದಿಷುರ್ಜಿನಂ ಜಾತಃ ಪಿಹಿತಾಸ್ರವನಾಮಭಾಕ್ ॥ ೪೫ ॥**

**ತದಾ ಪಾಪಾಸ್ರವದ್ವಾರಪಿಧಾನಾನ್ನಾಮ ತಾದೃಶಮ್ ।**
**ಲಬ್ಧ್ವಾಸೌ ಸುಚಿರಂ ಕಾಲಂ ಸಾಮ್ರಾಜ್ಯಸುಖಮನ್ವಭೂತ್ ॥ ೪೬ ॥**

ಅನಂತರ ಅಜಿತಂಜಯನು ಚಕ್ರವರ್ತಿಯಾಗಿ ಭಕ್ತಿಯಿಂದ ಅಭಿನಂದನ ಜಿನೇಶ್ವರರನ್ನು ವಂದಿಸಬೇಕೆಂಬ ಇಚ್ಛೆಯುಳ್ಳವನಾದನು. ಆಗ ಪಾಪದ ಬರುವಿಕೆಯನ್ನು ತಡೆದುದರಿಂದ ಅಂತಹ ಪಿಹಿತಾಸ್ರವನೆಂಬ ಸಾರ್ಥಕವಾದ ಹೆಸರನ್ನು ಪಡೆದು ಈ ಅಜಿತಂಜಯನು ಬಹುಕಾಲದವರೆಗೆ ಚಕ್ರವರ್ತಿಯ ಸುಖವನ್ನನುಭವಿಸಿದನು.

**ಪ್ರಬೋಧಿತಶ್ಚ ಸೋಽನ್ಯೇದ್ಯುರ್ಮಯೈವ ಸ್ನೇಹನಿರ್ಭರಮ್ ।**
**ಭೋ ಭವ್ಯ ಮಾ ಭವಾ[1]ನ್ನಾಂಕ್ಷೀದ್ವಿಷಯೇ[2]ಷ್ವಪಹಾರಿಷು ॥ ೪೭ ॥**

**ಪಶ್ಯ [3]ನಿರ್ವಿಷಯಾಂ ತೃಪ್ತಿಮುಶಂತ್ಯಾತ್ಯಂತಿಕೀಂ ಬುಧಾಃ ।**
**ನ ಸಾಸ್ತಿ ವಿಷಯೈರ್ಭುಕ್ತೈರ್ದಿವ್ಯಮಾನುಷಗೋಚರೈಃ ॥ ೪೮ ॥**

ಆತನಲ್ಲಿ ನನಗೆ ಬಹಳ ಪ್ರೇಮವಿದ್ದುದರಿಂದ ನಾನೇ ಒಂದು ದಿನ ಆತನಿಗೆ ಮುಂದೆ ಹೇಳುವಂತೆ ಬೋಧಿಸಿದೆನು 'ಎಲೈ ಭವ್ಯನೇ ! ನಾಶಸ್ವಭಾವವುಳ್ಳ ಇಂದ್ರಿಯವಿಷಯಗಳಲ್ಲಿ ನೀನು ಆಸಕ್ತನಾಗಬೇಡ. ನೋಡು, ವಿದ್ವಾಂಸರು ವಿಷಯಭೋಗಗಳಿಂದ ರಹಿತವಾಗುವಿಕೆಯೇ ಪರಮಸುಖವೆಂದು ಹೇಳುತ್ತಾರೆ. ಅಂತಹ ಸುಖವು ದೇವತೆಗಳೂ ಮನುಷ್ಯರೂ ಭೋಗಿಸಿದ ಭೋಗೋಪಭೋಗವಿಷಯಗಳಿಂದುಂಟಾಗುವುದಿಲ್ಲ.

**ಭೂಯೋ ಭುಕ್ತೇಷು ಭೋಗೇಷು ಭವೇನ್ನೈವ ರಸಾಂತರಮ್ ।**
**ಸ ಏವ ಚೇದ್ರಸಃ ಪೂರ್ವಃ ಕಿಂ ತೈಶ್ಚರ್ವಿತಚರ್ವಣೈಃ ॥ ೪೯ ॥**

ಅನೇಕಾವರ್ತಿ ಭೋಗಿಸಿದ ಭೋಗಗಳಲ್ಲಿ ಬೇರೆ (ನವೀನವಾದ) ಸುಖವುಂಟಾಗುವುದಿಲ್ಲ. ಮೊದಲುಂಟಾದ ಸುಖವೇ ಪುನಃ ಪುನಃ ಉಂಟಾಗುವುದಾದರೆ ಆ ಚರ್ವಿತಚರ್ವಣದಿಂದೇನು ಫಲವು ?

**ಭೋಗೈ[4]ರೈಂದ್ರೈರ್ನ ಯಸ್ತೃಪ್ತಃ ಸ ಕಿಂ ತಪ್ಸ್ಯಸಿ ಮರ್ತ್ಯಜೈಃ ।**
**[5]ಅನಾಶಿತಂಭವೈರೇಭಿಸ್ತದಲಂ ಭಂಗುರೈಃ ಸುಖೈಃ ॥ ೫೦ ॥**

ಸ್ವರ್ಗದಲ್ಲಿ ಇಂದ್ರನಾಗಿದ್ದು ಇಂದ್ರನ ಭೋಗಗಳಿಂದ ತೃಪ್ತಿಯನ್ನು ಹೊಂದದಿರುವ ನೀನು ಈಗ ಮನುಷ್ಯಭೋಗಗಳಿಂದ ತೃಪ್ತಿಯನ್ನು ಹೊಂದುವಿಯೋ ? ಆದುದರಿಂದ ಎಷ್ಟು ಭೋಗಿಸಿದರೂ ತೃಪ್ತಿಯಾಗದಿರುವ ಮತ್ತು ನಾಶವಾಗುವ ಈ ಸುಖಗಳು ಸಾಕು'.

**ಇತ್ಯಸ್ಮದ್ವಚನಾಜ್ಜಾತವೈರಾಗ್ಯಃ ಪಿಹಿತಾಸ್ರವಃ ।**
**ಸಹಸ್ರಗುಣವಿಂಶತ್ಯಾ ಸಮಂ ಪಾರ್ಥಿವಕುಂಜರೈಃ ॥ ೫೧ ॥**

**ಮಂದರಸ್ಥವಿರಸ್ಯಾಂತೇ ದೀಕ್ಷಾಮಾದಾಯ ಸೋಽವಧಿಮ್ ।**
**ಚಾರಣರ್ದ್ಧಿಂ ಚ ಸಂಪ್ರಾಪ್ಯ ತಿಲಕಾಂತೇಽಂಬರೇ ಗಿರೌ ॥ ೫೨ ॥**

**ತಪೋ ಜಿನಗುಣರ್ದ್ಧಿಂ ಚ ಶ್ರುತಜ್ಞಾನವಿಧಿಂ ಚ [6]ತೇ ।**
**[7]ತದಾ[8]ದಾ[9]ದಾದದಾನಾಯ್ಯೈ ಸ್ವರ್ಗಾಗ್ರಸುಖಸಾಧನಮ್ ॥ ೫೩ ॥**

ಈ ಪ್ರಕಾರವಾದ ನನ್ನ ಮಾತಿನಿಂದ ಪಿಹಿತಾಸ್ರವರಾಜನಿಗೆ ವೈರಾಗ್ಯವುಂಟಾಗಿ ಇಪ್ಪತ್ತುಸಾವಿರ ರಾಜರೊಡನೆ ಮಂದರಸ್ಥವಿರರೆಂಬ ಮುನಿಗಳ ಸಮೀಪದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ಅವಧಿಜ್ಞಾನವನ್ನೂ ಚಾರಣಋದ್ಧಿಯನ್ನೂ ಪಡೆದು ಅಂಬರತಿಲಕವೆಂಬ ಬೆಟ್ಟದಲ್ಲಿ ಆ ಪಿಹಿತಾಸ್ರವಮುನಿಗಳು ನೀನು ನಿರ್ನಾಮಿಕೆಯಾಗಿದ್ದಾಗ ಸ್ವರ್ಗಮೋಕ್ಷಗಳ ಸಾಧನವನ್ನು ಪರಿಗ್ರಹಿಸುತ್ತಿದ್ದ ನಿನಗೆ ಜಿನಗುಣಸಂಪತ್ತಿವ್ರತವನ್ನೂ ಶ್ರುತಜ್ಞಾನವ್ರತವನ್ನೂ ಕೊಟ್ಟರು-ಉಪದೇಶಿಸಿದರು.

೧ ಸಕ್ತೋ ಭವ, ಷಂಜಷಂಗೇ ಲುಙ್. ೨ ನಾಶಶೀಲೇಷು. ೩ ವಿಷಯರಹಿತಾಂ. ೪ ಇಂದ್ರಸಂಬಂಧಿಭಿಃ. ೫ ಅತೃಪ್ತಿಕರೈಃ. ೬ ತುಭ್ಯಂ, ಶ್ರೀಮತ್ಯೈ. ೭ ನಿರ್ನಾಮಿಕಾಭವೇ. ೮ ಡುದಾಞ್ ದಾನೇ ಲುಙ್. ೯ ಆದತ್ತ ಇತ್ಯಾದದಾನಾ ತಸ್ಯೈ.

**ತತೋಽಸ್ಮದ್ಗುರುರೇವಾಸೀತ್ತತ್ರಾ[1]ಪ್ಯಭ್ಯರ್ಹಿತೋ ಗುರುಃ ।**
**ದ್ವಾವಿಂಶತಿಂ ಗುರುಸ್ನೇಹಾಲ್ಲಲಿತಾಂಗನಥಾರ್ಚಯಮ್ ॥ ೫೪ ॥**

ಆದುದರಿಂದ ಪೂರ್ವದಲ್ಲಿ ನನ್ನ ತಾಯಿಯಾಗಿದ್ದ ಮನೋರಮೆಯು ಸ್ವರ್ಗದಲ್ಲಿ ಲಲಿತಾಂಗದೇವನಾಗಿ ಹುಟ್ಟಿ ಅವನು ಪುತ್ರಪ್ರೇಮದಿಂದ ನನಗೆ ಉಪದೇಶಮಾಡಿದನು. ಆ ಜೀವವೇ ಪಿಹಿತಾಸ್ರವನಾಗಿ ನಿನಗೂ ಪೂಜ್ಯಗುರುವಾದನು. ಆಮೇಲೆ ನಾನು ಗುರುಸ್ನೇಹದಿಂದ ಇಪ್ಪತ್ತೆರಡುಮಂದಿ ಲಲಿತಾಂಗರನ್ನು ಪೂಜಿಸಿದೆನು. (ಈಶಾನಕಲ್ಪದಲ್ಲಿ ಲಲಿತಾಂಗದೇವನಿಗೆ ಒಂದು ಸಾಗರೋಪಮ ಆಯುಷ್ಯಸ್ಥಿತಿಯು. ಅಚ್ಯುತಕಲ್ಪದಲ್ಲಿ ಅಚ್ಯುತೇಂದ್ರನಿಗೆ ಇಪ್ಪತ್ತೆರಡು ಸಾಗರೋಪಮ ಆಯುಷ್ಯಸ್ಥಿತಿಯು. ಒಬ್ಬ ಅಚ್ಯುತೇಂದ್ರನ ಜೀವಿತಕಾಲದಲ್ಲಿ ಇಪ್ಪತ್ತೆರಡು ಲಲಿತಾಂಗದೇವರು ಕ್ರಮವಾಗಿ ಆಗುತ್ತಾರೆ. ಆ ಇಪ್ಪತ್ತೆರಡು ಲಲಿತಾಂಗರನ್ನು ಗುರುಸ್ನೇಹದಿಂದ ಪೂಜಿಸಿದನೆಂದರ್ಥವು.)

**[2]ತೇ[3]ಷ್ವಂತ್ಯೋ ಭವತೀಭರ್ತಾ ಪ್ರಾಗ್ಭವೇಽಭೂನ್ಮಹಾಬಲಃ ।**
**ಸ್ವಯಂಬುದ್ಧೋಪದೇಶೇನ ಸೋಽನ್ವಭೂದಾಮರೀಂ ಶ್ರಿಯಮ್॥ ೫೫ ॥**

ಆ ಇಪ್ಪತ್ತೆರಡು ಮಂದಿ ಲಲಿತಾಂಗರಲ್ಲಿ ನಿನ್ನ ಪತಿಯಾಗಿದ್ದ ಕಡೆಯ ಲಲಿತಾಂಗನು ಪೂರ್ವಭವದಲ್ಲಿ ಮಹಾಬಲರಾಜನಾಗಿದ್ದನು. ಆ ಮಹಾಬಲನು ಸ್ವಯಂಬುದ್ಧಮಂತ್ರಿಯ ಉಪದೇಶದಿಂದ ಲಲಿತಾಂಗದೇವನಾಗಿ ಹುಟ್ಟಿ ದೇವಸಂಪತ್ತನ್ನು ಅನುಭವಿಸಿದನು.

**ಲಲಿತಾಂಗಶ್ಚ್ಯುತಃ ಸ್ವರ್ಗಾನ್ಮರ್ತ್ಯಭಾವೇ ಸ್ಥಿತೋಽದ್ಯ ನಃ ।**
**ಪ್ರತ್ಯಾಸನ್ನತಮೋ ಬಂಧುಃ ಸ ತೇ ಭರ್ತಾ ಭವಿಷ್ಯತಿ ॥ ೫೬ ॥**

ಆ ಲಲಿತಾಂಗದೇವನು ಸ್ವರ್ಗದಿಂದ ಚ್ಯುತನಾಗಿ ಮನುಷ್ಯರೂಪದಲ್ಲಿ ಈಗ ನಮಗೆ ಅತ್ಯಂತಸಮೀಪಬಂಧುವಾಗಿ ಹುಟ್ಟಿದ್ದಾನೆ. ಅವನೇ ನಿನಗೆ ಪತಿಯಾಗುವನು.

**ತವಾ[4]ಭಿಜ್ಞಾನಮನ್ಯಚ್ಚ ವಕ್ಷ್ಯೇ ಪದ್ಮಾನನೇ ಶೃಣು ।**
**ಬ್ರಹ್ಮೇಂದ್ರಲಾಂತವೇಂದ್ರಾಭ್ಯಾಂ ಭಕ್ತ್ಯಾ ಪೃಷ್ಟಸ್ತದೇತ್ಯಹಮ್ ॥ ೫೭ ॥**

ಎಲೈ ಕಮಲಮುಖಿಯೇ ! ನಿನಗೆ ಇನ್ನು ಒಂದು ಗುರುತನ್ನು ಹೇಳುವೆನು, ಕೇಳು. ನಾನು ಅಚ್ಯುತೇಂದ್ರನಾಗಿದ್ದಾಗ ಬ್ರಹ್ಮೇಂದ್ರಲಾಂತವೇಂದ್ರರು ಬಂದು ಭಕ್ತಿಯಿಂದ ಮುಂದೆ ಹೇಳುವರೀತಿಯಾಗಿ ನನ್ನನ್ನು ಪ್ರಶ್ನೆಮಾಡಿದರು:—

**ಯುಗಂಧರಜಿನೇಶಸ್ಯ ತೀರ್ಥೇ [5]ಲಬ್ಧ್ವಹಿ [6]ದರ್ಶನಮ್ ।**
**[7]ತತಸ್ತಚ್ಚರಿತಂ ಕೃತ್ಸ್ನಂ ಸಂಬುಭುತ್ಸಾವಹೇಽಧುನಾ ॥ ೫೮ ॥**

'ಎಲೈ ಅಚ್ಯುತೇಂದ್ರನೇ ! ನಾವು ಯುಗಂಧರತೀರ್ಥಂಕರರ ಸಮೀಪದಲ್ಲಿ ಸಮ್ಯಕ್ತ್ವವನ್ನು ಹೊಂದಿದೆವು. ಆದುದರಿಂದ ಆ ಯುಗಂಧರತೀರ್ಥಂಕರರ ಪೂರ್ವಚರಿತ್ರೆಯನ್ನೆಲ್ಲ ಈಗ ತಿಳಿಯಲಿಚ್ಛಿಸುತ್ತೇವೆ'.

**ತತೋಽವೋಚಮಹಂ ತಾಭ್ಯಾಮಿತಿ ತಚ್ಚರಿತಂ ತದಾ ।**
**ದಂಪತೀಭ್ಯಾಂ [8]ಸಮೇತಾಭ್ಯಾಂ [9]ಯುವಾಭ್ಯಾಂ ಚ ಯದೃಚ್ಛಯಾ ॥**

ತರುವಾಯ ನಾನು ಆ ಬ್ರಹ್ಮೇಂದ್ರಲಾಂತವೇಂದ್ರರಿಗೂ ಆಗ ಅಕಸ್ಮಾತ್ತಾಗಿ ದಂಪತಿಗಳು (ಸ್ವಯಂಪ್ರಭಾಲಲಿತಾಂಗರು) ಕೂಡಿಕೊಂಡುಬಂದಿದ್ದ ನಿಮ್ಮಿಬ್ಬ

೧ ಪೂಜಿತಃ. ೨ ಲಲಿತಾಂಗದೇವೇಷು. ೩ ದ್ವಾವಿಂಶತಿಪೂರಣೋ ಲಲಿತಾಂಗಃ. ೪ ಚಿಹ್ನಂ. ೫ ಲಬ್ಧವಂತೌ ಲುಙ್. ೬ ಸಮ್ಯಕ್ತ್ವಂ. ೭ ಕಾರಣಾತ್. ೮ ಮಿಲಿತಾಭ್ಯಾಂ. ೯ ಲಲಿತಾಂಗಸ್ವಯಂಪ್ರಭಾಭ್ಯಾಂ.

ರಿಗೂ ಆ ಯುಗಂಧರತೀರ್ಥಂಕರರ ಚರಿತ್ರೆಯನ್ನು ಮುಂದೆ ಹೇಳುವರೀತಿಯಾಗಿ ಹೇಳಿದೆನು.

**ಜಂಬೂದ್ವೀಪಸ್ಯ ಪೂರ್ವಸ್ಮಿನ್ವಿದೇಹೇ ವತ್ಸಕಾಹ್ವಯೇ ।**
**ವಿಷಯೇ ಭೋಗಭೂ[೧]ದೇಶ್ಯೇ ಸೀತಾದಕ್ಷಿಣದಿಗ್ಗತೇ ॥ ೬೦ ॥**

**ಸುಸೀಮಾನಗರೇ ನಿತ್ಯವಾಸ್ತವ್ಯೌ ಜ್ಞಾನವಿತ್ತಕೌ ।**
**ಜಾತೌ ಪ್ರಹಸಿತಾಖ್ಯಶ್ಚ ತಥಾ ವಿಕಸಿತಾಹ್ವಯಃ ॥ ೬೧ ॥**

'ಜಂಬೂದ್ವೀಪದ ಪೂರ್ವವಿದೇಹದಲ್ಲಿ ಭೋಗಭೂಮಿಗೆ ಸಮಾನವಾದ ವತ್ಸಕವೆಂಬ ದೇಶವಿದೆ. ಈ ದೇಶದಲ್ಲಿ ಸೀತೋದಾನದಿಯ ದಕ್ಷಿಣದಿಕ್ಕಿನಲ್ಲಿರುವ ಸುಸೀಮಾನಗರದಲ್ಲಿ ನೆಲೆಯಾಗಿರುವ ಪ್ರಹಸಿತನೆಂದೂ ವಿಕಸಿತನೆಂದೂ ಹೆಸರುಳ್ಳ ಇಬ್ಬರು ವಿದ್ವಾಂಸರಿದ್ದರು.

**ತತ್ಪುರಾಧಿಪತೇಃ ಶ್ರೀಮದಜಿತಂಜಯಭೂಭೃತಃ ।**
**ನಾಮ್ನಾಮೃತಮತಿರ್ಮಂತ್ರೀ ಸತ್ಯಭಾಮಾ ಪ್ರಿಯಾಸ್ಯ ಚ ॥ ೬೨ ॥**

ಆ ಸುಸೀಮಾಪಟ್ಟಣಕ್ಕೆ ಅಧಿಪತಿಯಾದ ಅಜಿತಂಜಯರಾಜನಿಗೆ ಅಮೃತಮತಿಯೆಂಬುವನು ಮಂತ್ರಿಯಾಗಿದ್ದನು. ಈ ಮಂತ್ರಿಗೆ ಸತ್ಯಭಾಮೆಯೆಂಬ ಪತ್ನಿಯಿದ್ದಳು.

**ತಯೋಃ ಪ್ರಹಸಿತಾಖ್ಯೋಽಯಮಭೂತ್ಸೂನುರ್ವಿಚಕ್ಷಣಃ ।**
**ಸಖಾ ವಿಕಸಿತೋಽಸ್ಯಾಸೌ ಸದೇವಾ ಸಹಚಾರಿಣೌ ॥ ೬೩ ॥**

ಆ ದಂಪತಿಗಳಿಗೆ ಆ ವಿದ್ವಾಂಸನಾದ ಪ್ರಹಸಿತನು ಮಗನಾಗಿದ್ದನು. ಈ ಪ್ರಹಸಿತನಿಗೆ ವಿಕಸಿತನು ಮಿತ್ರನಾಗಿದ್ದನು. ಇವರಿಬ್ಬರೂ ಯಾವಾಗಲೂ ಜೊತೆಯಾಗಿರುತ್ತಿದ್ದರು.

**[೨]ಜಾತ್ಯಾ ಹೇತುತದಾಭಾಸಚ್ಛಲಜಾತ್ಯಾ[೩]ದಿಕೋವಿದೌ ।**
**ತೀರ್ಣವ್ಯಾಕರಣಾಂಭೋಧೀ ಸಭಾರಂಜನತತ್ಪರೌ ॥ ೬೪ ॥**

ಹುಟ್ಟಿದಂದಿನಿಂದಲೇ ಹೇತು, ಹೇತ್ವಾಭಾಸ, ಛಲ, ಜಾತಿ, ನಿಗ್ರಹಸ್ಥಾನ ಇವುಗಳನ್ನು ಚೆನ್ನಾಗಿ ಬಲ್ಲವರಾಗಿಯೂ, ವ್ಯಾಕರಣದಲ್ಲಿ ಪಾರಗಾಮಿಗಳಾಗಿಯೂ, ಸಭೆಯನ್ನು ಸಂತೋಷಪಡಿಸುವುದರಲ್ಲಿ ತತ್ಪರರಾಗಿಯೂ ಇದ್ದರು. ''ಹೊಗೆಯಿರುವುದರಿಂದ ಪರ್ವತವು ಬೆಂಕಿಯುಳ್ಳುದಾಗಿದೆ'' ಎಂಬೀ ಮೊದಲಾದ ಅನುಮಾನವಾಕ್ಯಗಳಿಂದುಂಟಾಗುವ ಬೆಂಕಿ ಮೊದಲಾದುವುಗಳ ಜ್ಞಾನಕ್ಕೆ ಅನುಮಾನಪ್ರಮಾಣವೆಂದು ಹೆಸರು. ಇಲ್ಲಿ ಬೆಂಕಿಯು ಸಾಧ್ಯವಾಗಿದೆ. ಹೊಗೆಯು ಹೇತುವಾಗಿದೆ. ಹೇತುವು ಸಾಧ್ಯವನ್ನು ಬಿಡದೆಯಿದ್ದರೆ ಸದ್ಧೇತುವೆನಿಸುತ್ತದೆ. ''ಸಾಧ್ಯಾವಿನಾಭಾವಿತ್ವೇನ ನಿಶ್ಚಿತೋ ಹೇತುಃ'' ಇದಕ್ಕೆ ವಿಪರೀತವಾಗಿದ್ದರೆ ಹೇತ್ವಾಭಾಸವೆನಿಸುತ್ತದೆ. ವಾದಿಯು ಯಾವುದಾದರೊಂದು ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಒಂದು ವಾಕ್ಯವನ್ನು ಪ್ರಯೋಗಮಾಡಿದರೆ ಪ್ರತಿವಾದಿಯು ಅದಕ್ಕೆ ವಿಪರೀತಾರ್ಥವನ್ನು ಆರೋಪಿಸಿ ಪ್ರಕೃತಾರ್ಥವನ್ನು ನಿಷೇಧಿಸುವುದಕ್ಕೆ ಛಲವೆಂದು ಹೆಸರು:— ''ವಚನವಿಘಾತೋರ್ಥ-ವಿಕಲ್ಪೋಪಪತ್ತ್ಯಾ ಛಲಂ'' ಇದು ವಾಕ್ಛಲ, ಸಾಮಾನ್ಯಚ್ಛಲ, ಉಪಚಾರಚ್ಛಲವೆಂದು ಮೂರುವಿಧವಾಗಿದೆ. ಯಾವುದಾದರೊಂದು ಅರ್ಥವನ್ನು ಸಿದ್ಧ ಮಾಡುವುದಕ್ಕೆ ಪ್ರಯೋಗಿಸಿದ ಹೇತುವಿಗೆ ಸಾದೃಶ್ಯದಿಂದಾಗಲಿ ವೈಸಾದೃಶ್ಯದಿಂದಾಗಲಿ ದೂಷಣೆಯನ್ನು ಹೇಳುವ ಉತ್ತರಕ್ಕೆ ಜಾತಿಯೆಂದು ಹೆಸರು. ''ಸಾಧರ್ಮ್ಯವೈಧರ್ಮ್ಯಾಭ್ಯಾಂ ಪ್ರತ್ಯವಸ್ಥಾನಂ ಜಾತಿಃ'' ಈ ಜಾತಿಯು ಇಪ್ಪತ್ತನಾಲ್ಕು ಪ್ರಕಾರವಾಗಿದೆ. ''ವಿಪ್ರತಿಪತ್ತಿರಪ್ರತಿಪತ್ತಿಶ್ಚ ನಿಗ್ರಹಸ್ಥಾನಂ'' ವಾದಿಯು ಹೇಳಿದ ವಿಷಯವನ್ನು ವಿಪರೀತವಾಗಿ ತಿಳಿಯುವುದು ಅಥವಾ ತಿಳಿಯದಿರುವುದಕ್ಕೆ ನಿಗ್ರಹಸ್ಥಾನವೆಂದು ಹೆಸರು. ಈ ಛಲಜಾತಿನಿಗ್ರಹಸ್ಥಾನಗಳ ವಿಶೇಷವರ್ಣನೆಯನ್ನು ಪ್ರಮೇಯಕಮಲಮಾರ್ತಂಡದ ಐದನೆಯ ಪರಿಚ್ಛೇದದಲ್ಲಿ ನೋಡಿಕೊಳ್ಳುವುದು.

[೧] ಸದೃಶೇ. [೨] ಜನ್ಮನಾ. [೩] ನಿಗ್ರಹಸ್ಥಾನಂ.

**ತೌ ರಾಜಸಮ್ಮತೌ ವಾದಕಂಡೂಯಾಕಾಂಡಪಂಡಿತೌ ।**
**ವಿದ್ಯಾ[೧]ಸಂವಾದಗೋಷ್ಠೀಷು ನಿಕಷೋಪಲತಾಂ ಗತೌ ॥ ೬೫ ॥**

ರಾಜನಿಗೆ ಪ್ರೀತಿಪಾತ್ರರಾದ ಆ ವಿದ್ವಾಂಸರಿಬ್ಬರೂ ವಾದಮಾಡುವುದರಲ್ಲಿ ಅತ್ಯಂತ ಚತುರರಾಗಿದ್ದರು. ವಿದ್ಯಾವಿಚಾರವಾದ ಸಭೆಗಳಲ್ಲಿ ಇವರು ವರೆಕಲ್ಲಿನಂತಿದ್ದರು. ವಿದ್ವಾಂಸರನ್ನೆಲ್ಲ ಪರೀಕ್ಷಿಸುವವರಾಗಿದ್ದರೆಂದರ್ಥವು.

**ಕದಾಚಿಚ್ಚ ನರೇಂದ್ರೇಣ ಸಮಂ ಗತ್ವಾ ಮುನೀಶ್ವರಮ್ ।**
**ಮತಿಸಾಗರಮದ್ರಾಷ್ಟಾಮಮೃತಸ್ರವಣರ್ದ್ಧಿಕಮ್ ॥ ೬೬ ॥**

ಒಂದಾನೊಂದುಕಾಲದಲ್ಲಿ ಅವರಿಬ್ಬರೂ ರಾಜನೊಡನೆ ಹೋಗಿ ಅಮೃತಸ್ರವಣಋದ್ಧಿಯನ್ನು ಹೊಂದಿದ ಮತಿಸಾಗರರೆಂಬ ಮುನಿಗಳನ್ನು ನೋಡಿದರು.

**ನೃಪಪ್ರಶ್ನವಶಾತ್ತಸ್ಮಿನ್ಜೀವತತ್ತ್ವನಿರೂಪಣಮ್ ।**
**ಕುರ್ವಾಣೇ [೨]ಚೋದ್ಯಚುಂಚುತ್ವಾದಿತ್ಯಬ್ರೂತಾಂ [೩]ಪ್ರಸಹ್ಯ ತೌ ॥ ೬೭ ॥**

ಅಲ್ಲಿ ರಾಜನು ಜೀವತತ್ತ್ವವಿಷಯವಾಗಿ ಮುನಿಗಳನ್ನು ಪ್ರಶ್ನೆಮಾಡಿದನು. ಆ ಪ್ರಶ್ನೆಗನುಸಾರವಾಗಿ ಮತಿಸಾಗರಮುನಿಗಳು ಜೀವತತ್ತ್ವವನ್ನು ನಿರೂಪಿಸುತ್ತಿರುವಾಗ ಆ ವಿದ್ವಾಂಸರು ಆಕ್ಷೇಪಕರವಾದ ಪ್ರಶ್ನೆಗೆ ಅವಕಾಶವಿದೆಯೆಂದು ತೋರಿದುದರಿಂದ ಬಲಾತ್ಕರಿಸಿ ಈ ಮುಂದೆಹೇಳುವ ರೀತಿಯಾಗಿ ಹೇಳಿದರು.

**ವಿನೋ[೪]ಪಲಬ್ಧ್ಯಾ [೫]ಸದ್ಭಾವಂ ಪ್ರತೀಮಃ ಕಥಮಾತ್ಮನಃ ।**
**ಸ ನಾಸ್ತ್ಯತಃ ಕುತಸ್ತಸ್ಯ ಪ್ರೇತ್ಯಭಾವ[೬]ಫಲಾದಿಕಮ್ ॥ ೬೮ ॥**

''ಆತ್ಮನನ್ನು ನೋಡದೆ ಆತ್ಮನಿದ್ದಾನೆಂದು ಹೇಗೆ ನಂಬುವುದು ? ಆತ್ಮನು ಕಾಣದಿರುವುದರಿಂದ ಆತ್ಮನೇ ಇಲ್ಲ. ಆತ್ಮನಿಲ್ಲದಿದ್ದಮೇಲೆ ಪರಭವದಲ್ಲಿ ಪುಣ್ಯಪಾಪಗಳ ಸುಖದುಃಖರೂಪವಾದ ಫಲವೆಲ್ಲಿ ಬಂದಿತು ?''

**[೭]ತದುಪಾಲಂಭಮಿತ್ಯುಚ್ಚೈರಾಕರ್ಣ್ಯ ಮುನಿಪುಂಗವಃ ।**
**ವಚನಂ ತತ್ಪ್ರಬೋಧೀದಂ ಧೀರಧೀಃ ಪ್ರತ್ಯಭಾಷತ ॥ ೬೯ ॥**

ಹೀಗೆ ಜೀವತತ್ತ್ವಸಂಬಂಧವಾದ ದೂಷಣೆಯ ವಚನವನ್ನು ಕೇಳಿ ಧೀರರಾದ ಆ ಮತಿಸಾಗರಮುನಿವರ್ಯರು ಮುಂದೆ ಹೇಳುವಂತೆ ಜೀವದ ಅಸ್ತಿತ್ವವನ್ನು ಬೋಧಿಸುವ ವಚನವನ್ನು ಹೇಳಿದರು:—

**ಯದುಕ್ತಂ ಜೀವನಾಸ್ತಿತ್ವೇಽನುಪಲಬ್ಧಿಃ ಪ್ರಸಾಧನಮ್ ।**
**ತದಸದ್ಧೇತುದೋಷಾಣಾಂ ಭೂಯಸಾಂ ತತ್ರ ಸಂಭವಾತ್ ॥ ೭೦ ॥**

''ಎಲೈ ವಿದ್ವಾಂಸರೇ ! ಜೀವವಿಲ್ಲವೆಂದು ಸಿದ್ಧಮಾಡುವುದಕ್ಕೋಸ್ಕರ ನೀವು ಹೇಳಿದ ಅನುಪಲಬ್ಧಿ(ಕಾಣದಿರುವುದು)ಯೆಂಬ ಹೇತುವಿನಲ್ಲಿ ಅನೇಕ ಹೇತುದೋಷಗಳು ಸಂಭವಿಸುವುದರಿಂದ ಆ ಹೇತುವು ದೂಷಿತವಾಗಿದೆ. ಅಂತಹ ದುಷ್ಟಹೇತುವಿನಿಂದ ಜೀವದ ನಾಸ್ತಿತ್ವವು ಸಿದ್ಧವಾಗುವುದಿಲ್ಲ.

**ಛದ್ಮಸ್ಥಾನುಪಲಬ್ಧಿಭ್ಯಃ [೮]ಸೂಕ್ಷ್ಮಾದಿಷು ಕುತೋ ಗತಿಃ ।**
**ಅಭಾವೇಽಸ್ಯ ತತೋ ಹೇತುಃ ಸಾಧ್ಯಂ ವ್ಯಭಿಚರತ್ಯಯಮ್ ॥ ೭೧ ॥**

ಕರ್ಮಬದ್ಧರಾದ ಸಂಸಾರಿಜೀವಗಳಿಗೆ ಕಾಣದಿರುವುದರಿಂದ ಪರಮಾಣುಪಿಶಾಚ ಮೊದಲಾದುವುಗಳಲ್ಲಿ ಅಭಾವಜ್ಞಾನವು ಹೇಗೆ ? ಪರಮಾಣುಪಿಶಾಚ ಮೊದಲಾದುವುಗಳಲ್ಲಿ ಅನುಪಲಬ್ಧಿರೂಪವಾದ ಹೇತುವಿದ್ದರೂ ಅಭಾವರೂಪವಾದ

[೧] ವಿಚಾರಃ. [೨] ಸಾಕ್ಷೇಪಪ್ರಶ್ನಪ್ರತೀತತ್ವಾತ್. [೩] ಬಲಾತ್ಕಾರೇಣ. [೪] ಅದರ್ಶನೇನ. [೫] ಅಸ್ತಿತ್ವಂ. [೬] ಪುಣ್ಯಪಾಪಂ. [೭] ಜೀವದೂಷಣಂ. [೮] ಪರಮಾಣುಪಿಶಾಚಾದಿಷು.

ಸಾಧ್ಯವಿಲ್ಲ. ಸಾಧ್ಯವನ್ನು ಬಿಡದಿರುವುದು ಹೇತುವಿನ ಲಕ್ಷಣ. ಆದುದರಿಂದ ನೀವು ಹೇಳಿದ ಈ ಅನುಪಲಬ್ಧಿಹೇತುವು ಸಾಧ್ಯವನ್ನು ವ್ಯಭಿಚರಿಸುತ್ತದೆ. ಸಾಧ್ಯವಿಲ್ಲದಿರುವ ಸ್ಥಳದಲ್ಲಿಯೂ ಈ ಹೇತುವಿರುವುದರಿಂದ ದುಷ್ಟಹೇತುವಾಗಿದೆಯೆಂದು ಭಾವವು.

**ಭವತಾ ಕಿಂನು ದೃಷ್ಟೋಽಸೌ ತ್ವತ್ಪಿತುರ್ಯಃ ಪಿತಾಮಹಃ ।**
**ತಥಾಪಿ ಸೋಽಸ್ತಿ ಚೇದಸ್ತು ಜೀವಸ್ಯಾಪ್ಯೇವಮಸ್ತಿತಾ ॥ ೭೨ ॥**

ಅದೂ ಅಲ್ಲದೆ ನಿಮ್ಮ ತಂದೆಯ ತಾತನನ್ನು ನೀವು ನೋಡಿದ್ದೀರೋ? ನೋಡದಿರುವ ಪಕ್ಷದಲ್ಲಿ ನಿಮ್ಮ ಅನುಪಲಬ್ಧಿಹೇತುವು ಅಲ್ಲಿಯೂ ಇರುವುದರಿಂದ ನಿಮ್ಮ ಮುತ್ತಾತನೇ ಇರಲಿಲ್ಲವೆಂದು ಹೇಳಿ. ನಿಮ್ಮ ಮುತ್ತಾತನನ್ನು ನೀವು ನೋಡದಿದ್ದರೂ ಮುತ್ತಾತನಿದ್ದನೆಂದು ಹೇಳುವಪಕ್ಷದಲ್ಲಿ ಹಾಗೆಯೇ ನಿಮ್ಮ ಬಾಹ್ಯೇಂದ್ರಿಯಕ್ಕೆ ಕಾಣದಿದ್ದರೂ ''ಜೀವವು ಇದೆ'' ಯೆಂದು ನಂಬಿ.

**ಅಭಾವೇಽಪಿ [೧]ವಿಬಂಧ್ರೂಣಾಂ ಜೀವಸ್ಯಾನುಪಲಬ್ಧಿತಃ ।**
**ಸ ನಾಸ್ತೀ[೨]ತಿ ಮೃಷಾ[೩]ಸ್ತಿತ್ವಾ[೪]ತ್ಸೂಕ್ಷ್ಮಸ್ಯೇಹ [೫]ವಿಬಂಧೃಣಃ ॥ ೭೩ ॥**

ಜೀವವನ್ನು ಆವರಿಸಿಕೊಂಡಿರುವ ಸ್ಥೂಲಶರೀರಗಳಿಲ್ಲದಿದ್ದರೆ ಜೀವವು ಕಾಣದಿರುವುದರಿಂದ ಅಂದರೆ ಶರೀರವನ್ನು ಬಿಟ್ಟು ಬೇರೆ ಕಡೆಗಳಲ್ಲಿ ಜೀವವು ಕಾಣದಿರುವುದರಿಂದ ಜೀವವೇ ಇಲ್ಲವೆಂದು ಹೇಳುವಪಕ್ಷದಲ್ಲಿ ಈ ಜೀವಕ್ಕೆ ಆವರಿಸಿಕೊಂಡಿರುವ ಸೂಕ್ಷ್ಮವಾದ ಕಾರ್ಮಣಶರೀರವು ಇರುವುದರಿಂದ ಜೀವವೇ ಇಲ್ಲವೆಂದು ಹೇಳುವುದೇತಕ್ಕೆ ಮಿಥ್ಯೆಯಲ್ಲ?

**ಜೀವಶಬ್ದಾ[೬]ಭಿಧೇಯಸ್ಯ ವಚಸಃ [೭]ಪ್ರತ್ಯಯಸ್ಯ ಚ ।**
**ಯಥಾಸ್ತಿತ್ವಂ ತಥಾ ಬಾಹ್ಯೋಪ್ಯರ್ಥ[೮]ಸ್ತಸ್ಯಾಸ್ತು ಕಾಕ್ಷಮಾ ॥ ೭೪ ॥**

ಜೀವವೆಂಬ ಶಬ್ದಕ್ಕೆ ಅರ್ಥವಿರುವಂತೆಯೂ, ಜೀವವೆಂಬ ವಚನವಿರುವಂತೆಯೂ ಜೀವವೆಂಬ ಶಬ್ದದಿಂದ ಜ್ಞಾನವುಂಟಾಗುವಂತೆಯೂ ಆ ವಚನಜ್ಞಾನಗಳಿಗೆ ವಾಚ್ಯವಾದ ಬಾಹ್ಯಾರ್ಥ(ಜೀವ)ವೂ ಇರಲಿ. ಅದರಲ್ಲೇನು ಅಸಹನ?

**ಜೀವಶಬ್ದೋಽಯಮಭ್ರಾಂತಂ ಬಾಹ್ಯಮರ್ಥಮಪೇಕ್ಷತೇ ।**
**[೯]ಸಂಜ್ಞಾತ್ವಾ[೧೦]ಲ್ಲೌಕಿಕಾ[೧೧]ಭ್ರಾಂತಮತ[೧೨]ಹೇತ್ವಾದಿಶಬ್ದವತ್ ॥ ೭೫ ॥**

ಲೋಕದಲ್ಲಿ ಘಟವೆಂಬ ಸಂಜ್ಞಾವಾಚಕಶಬ್ದದಿಂದ ಘಟದಲ್ಲಿ ಜ್ಞಾನವೂ ಪ್ರವೃತ್ತಿಯೂ ಉಂಟಾಗುವಂತೆಯೂ, ಇಷ್ಟಾಭಿಪ್ರಾಯವನ್ನು ಸೂಚಿಸುವ 'ಧೂಮವತ್ವಾತ್' ಇತ್ಯಾದಿ ಹೇತುವಾಚಕಸಂಜ್ಞಾಶಬ್ದಗಳಿಂದ ಬಾಹ್ಯಾರ್ಥದಲ್ಲಿ ಜ್ಞಾನವೂ ಪ್ರವೃತ್ತಿಯೂ ಉಂಟಾಗುವಂತೆಯೂ ಈ ಜೀವವೆಂಬ ಶಬ್ದವೂ ಸಂಜ್ಞಾವಾಚಕವಾಗಿರುವುದರಿಂದ ನಿಜವಾದ ಬಾಹ್ಯಪದಾರ್ಥವನ್ನು ಅಪೇಕ್ಷಿಸುತ್ತದೆ''.

**ಇತ್ಯಾದಿಯುಕ್ತಿಭಿರ್ಜೀವತತ್ತ್ವಂ ಸ ನಿರಣೀನಯತ್ ।**
**ತಾವಪಿ ಜ್ಞಾನಜಂ ಗರ್ವಮುಜ್ಝಿತ್ವಾ ನೇಮತುರ್ಮುನಿಮ್ ॥ ೭೬ ॥**

ಇವು ಮೊದಲಾದ ಯುಕ್ತಿಗಳಿಂದ ಆ ಮತಿಸಾಗರಮುನಿಗಳು ಜೀವತತ್ತ್ವವನ್ನು ನಿರ್ಣಯಿಸಿದರು. ಸಿದ್ಧಮಾಡಿದರೆಂದರ್ಥವು. ಆ ವಿದ್ವಾಂಸರೂ ತಾವು ಜ್ಞಾನಿಗಳೆಂಬ ಗರ್ವವನ್ನು ಬಿಟ್ಟು ಮುನಿಗಳನ್ನು ವಂದಿಸಿದರು.

**ಗುರೋಸ್ತಸ್ಯೈವ ಪಾರ್ಶ್ವೇತೌ ಗೃಹೀತ್ವಾ ಪರಮಂ ತಪಃ ।**
**[೧೩]ಸುದರ್ಶನಮಥಾಚಾಮ್ಲವರ್ದ್ಧನಂ ಚಾಪ್ಯುಪೋಷತುಃ ॥ ೭೭ ॥**

೧ ಶರೀರಾದೀನಾಂ. ೨ ಚೇತ್. ೩ ಕುತಃ. ೪ ಕಾರ್ಮಣಶರೀರಸ್ಯ. ೫ ಬಂಧಕಸ್ಯ. ೬ ಅರ್ಥಸ್ಯ. ೭ ಜ್ಞಾನಸ್ಯ. ೮ ವಚನಪ್ರತ್ಯಯಸ್ಯ. ೯ ವಾಚಕತ್ವಾತ್. ೧೦ ಘಟಮಾನಯೇತ್ಯಾದಿ. ೧೧ ಇಷ್ಟಾಭಿಪ್ರಾಯಃ ೧೨ ಧೂಮವತ್ವಾದಿತ್ಯಾದಿ. ೧೩ ಸುದರ್ಶನಮಿತಿ ವ್ರತವಿಶೇಷಃ.

ಆ ವಿದ್ವಾಂಸರಿಬ್ಬರೂ ಮತಿಸಾಗರಮುನಿಗಳ ಸಮೀಪದಲ್ಲಿ ಶ್ರೇಷ್ಠವಾದ ತಪಸ್ಸನ್ನು ಕೈಗೊಂಡು ಸುದರ್ಶನವ್ರತದ ಉಪವಾಸವನ್ನೂ ಆಚಾಮ್ಲವರ್ದ್ಧನ ವ್ರತದ ಉಪವಾಸವನ್ನೂ ಮಾಡಿದರು. (ಔಪಶಮಿಕ, ಕ್ಷಾಯಿಕ, ಕ್ಷಾಯೋಪಶಮಿಕವೆಂದು ಸಮ್ಯಗ್ದರ್ಶನವು ಮೂರು ವಿಧವಾಗಿದೆ. ಪ್ರತಿಯೊಂದು ಸಮ್ಯಗ್ದರ್ಶನಕ್ಕೂ ನಿಃಶಂಕಾದಿ ಎಂಟೆಂಟು ಅಂಗಗಳಿವೆ. ಎಲ್ಲಾ ಸೇರಿ ಇಪ್ಪತ್ತನಾಲ್ಕು ಅಂಗಗಳಾದುವು. ಈ ಇಪ್ಪತ್ತನಾಲ್ಕು ಅಂಗಗಳನ್ನು ಕುರಿತು ಒಂದು ಉಪವಾಸ ಒಂದು ಪಾರಣೆ ಈ ಕ್ರಮದಿಂದ ಇಪ್ಪತ್ತನಾಲ್ಕು ಉಪವಾಸಗಳನ್ನು ಮಾಡುವುದಕ್ಕೆ ಸುದರ್ಶನ ತಪಸ್ಸೆಂದು ಹೆಸರು).

**ನಿದಾನಂ ವಾಸುದೇವತ್ವೇ ವ್ಯಧಾದ್ವಿಕಸಿತೋ[೧]ಪ್ಯಭೂತ್ ।**
**ಕಾಲಾಂತೇ ತಾವಜಾಯೇತಾಂ ಮಹಾಶುಕ್ರಸುರೋತ್ತಮೌ ॥ ೭೮ ॥**

**ಇಂದ್ರಪ್ರತೀಂದ್ರಪದಯೋಃ ಷೋಡಶಾಬ್ಧ್ಯುಪಮಸ್ಥಿತೀ ।**
**ತೌ ತತ್ರ[೨]ಸುಖಸಾದ್ಭೂತಾವನ್ವಭೂತಾಂ ಸುರಶ್ರಿಯಮ್ ॥ ೭೯ ॥**

ಅಜ್ಞಾನಿಯಾದ ವಿಕಸಿತನೂ ತನಗೆ ವಾಸುದೇವಪದವಿಯು ಪ್ರಾಪ್ತವಾಗಬೇಕೆಂದು ಇಚ್ಛೆಪಟ್ಟನು. ಜೀವಿತಾಂತ್ಯದಲ್ಲಿ ಅವರಿಬ್ಬರೂ ಮೃತಪಟ್ಟು ಮಹಾಶುಕ್ರವೆಂಬ ಹತ್ತನೆಯ ಸ್ವರ್ಗದಲ್ಲಿ ಹದಿನಾರು ಸಾಗರೋಪಮ ಆಯುಷ್ಯಸ್ಥಿತಿಯುಳ್ಳ ಇಂದ್ರಪ್ರತೀಂದ್ರರಾಗಿ ಹುಟ್ಟಿ ದೇವಸುಖವನ್ನನುಭವಿಸಿದರು.

**ಸ್ವಾಯುರಂತೇ ತತಶ್ಚ್ಯುತ್ವಾ ಧಾತಕೀಷಂ(ಖಂ)ಡಗೋಚರೇ ।**
**ವಿದೇಹೇ ಪುಷ್ಕಲಾವತ್ಯಾಂ ಪಶ್ಚಿಮಾರ್ದ್ಧ[೩]ಪುರೋಗತೇ ॥ ೮೦ ॥**

**ವಿಷಯೇ ಪುಂಡರೀಕಿಣ್ಯಾಂ ಪುರ್ಯಾಂ ರಾಜ್ಞೋ ಧನಂಜಯಾತ್ ।**
**ಜಯಸೇನಾಯಶಸ್ವತ್ಯೋರ್ದೇವ್ಯೋ[೪]ರ್ವ್ಯಕ್ತ್ಯಾಸಿತಕ್ರಮೌ ॥ ೮೧ ॥**

**ಜಜ್ಞಾತೇ ತನಯೌ ರಾಮಕೇಶವಸ್ಥಾನಭಾಗಿನೌ ।**
**ಜ್ಯಾಯಾನ್ಮಹಾಬಲೋಽನ್ಯಶ್ಚ ಖ್ಯಾತೋಽತಿಬಲಸಂಜ್ಞಯಾ ॥ ೮೨ ॥**

ತಮ್ಮ ಆಯುಷ್ಯವು ಪೂರ್ತಿಯಾದಮೇಲೆ ಆ ಸ್ವರ್ಗದಿಂದ ಚ್ಯುತರಾಗಿ ಧಾತಕೀಖಂಡದ್ವೀಪದ ಪಶ್ಚಿಮಭಾಗದಲ್ಲಿರುವ ಪೂರ್ವವಿದೇಹದಲ್ಲಿ ಪುಷ್ಕಲಾವತಿಯೆಂಬ ದೇಶದಲ್ಲಿ ಪುಂಡರೀಕಿಣಿಯೆಂಬ ಪಟ್ಟಣದಲ್ಲಿ ಆ ಪಟ್ಟಣಕ್ಕೆ ದೊರೆಯಾಗಿದ್ದ ಧನಂಜಯನೆಂಬ ರಾಜನಿಗೆ ಯಶಸ್ವತೀದೇವಿಯಲ್ಲಿ ಪ್ರಹಸಿತನು (ಇಂದ್ರನು) ಮಹಾಬಲನೆಂಬ ಬಲರಾಮನಾಗಿಯೂ, ಧನಂಜಯರಾಜನ ಎರಡನೆಯ ಪತ್ನಿಯಾದ ಜಯಸೇನಾದೇವಿಯಲ್ಲಿ ವಿಕಸಿತ(ಪ್ರತೀಂದ್ರ)ನು ಅತಿಬಲನೆಂಬ ಕೇಶವ (ನಾರಾಯಣ)ನಾಗಿಯೂ ಹುಟ್ಟಿದರು.

**ರಾಜ್ಯಾಂತೇ ಕೇಶವೇಽತೀತೇ ತಪಸ್ತಪ್ತ್ವಾ ಮಹಾಬಲಃ ।**
**ಪಾರ್ಶ್ವೇ ಸಮಾಧಿಗುಪ್ತಸ್ಯ ಪ್ರಾಣತೇಂದ್ರಸ್ತತೋಽಭವತ್ ॥ ೮೩ ॥**

ತಂದೆಯ ರಾಜ್ಯವು ಅತಿಬಲನಿಗೆ ಪ್ರಾಪ್ತವಾಯಿತು. ಅತಿಬಲನು ಬಹುಕಾಲ ರಾಜ್ಯವನ್ನಾಳಿ ಮರಣವನ್ನೈದಿದನಂತರ ಮಹಾಬಲನು ಸಮಾಧಿಗುಪ್ತ ಮುನಿಗಳ ಸಮೀಪದಲ್ಲಿ ದೀಕ್ಷೆಯನ್ನು ತೆಗೆದುಕೊಂಡು ತಪಶ್ಚರಣವನ್ನು ಮಾಡಿ ಜೀವಿತಾಂತ್ಯದಲ್ಲಿ ಮೃತನಾಗಿ ಹದಿನಾಲ್ಕನೆಯ ಪ್ರಾಣತಸ್ವರ್ಗದಲ್ಲಿ ಇಂದ್ರನಾಗಿ ಹುಟ್ಟಿದನು.

**ಭುಕ್ತ್ವಾಮರೀಂ ಶ್ರಿಯಂ ತತ್ರ ವಿಂಶತ್ಯಬ್ಧ್ಯುಪಮಾತ್ಯಯೇ ।**
**ಧಾತಕೀಷಂ(ಖಂ)ಡಪಶ್ಚಾರ್ದ್ಧ[೫]ಪುರೋವರ್ತಿವಿದೇಹಗೇ ॥ ೮೪ ॥**

**ವಿಷಯೇ ವತ್ಸಕಾವತ್ಯಾಂ ಪ್ರಭಾಕರ್ಯಾಃ [೬]ಪುರಃ ಪ್ರಭೋಃ ।**
**ಮಹಾಸೇನಸ್ಯ ಭೂಭರ್ತುಃ ಪ್ರತಾಪಾನತವಿದ್ವಿಷಃ ॥ ೮೫ ॥**

೧ ಅಜ್ಞಾನೀ. ೨ ಸುಖಾಧೀನೌ. ೩ ಪೂರ್ವದಿಗ್ಗತೇ. ೪ ಜಯಸೇನಾಯಾಃ ಕೇಶವಃ ಯಶಸ್ವತ್ಯಾ ರಾಮ ಇತ್ಯರ್ಥಃ. ೫ ಪೂರ್ವದಿಗ್ವರ್ತೀತ್ಯರ್ಥಃ. ೬ ಪುರಸ್ಯ.

**ದೇವ್ಯಾಂ ವಸುಂಧರಾಖ್ಯಾಯಾಂ ಜಯಸೇನಾಹ್ವಯೋಜನಿ ।**
**ಪ್ರಜಾನಾಂ ಜನಿತಾನಂದಶ್ಚಂದ್ರಮಾ ಇವ ನಂದನಃ ॥ ೮೬ ॥**

ಆ ಸ್ವರ್ಗದಲ್ಲಿ ಇಪ್ಪತ್ತುಸಾಗರೋಪಮಕಾಲದವರೆಗೆ ದೇವಸಂಪತ್ತನ್ನನುಭವಿಸಿದನಂತರ ಅಲ್ಲಿಂದ ಚ್ಯುತನಾಗಿ, ಧಾತಕೀಖಂಡದ್ವೀಪದ ಪಶ್ಚಿಮಭಾಗದ ಪೂರ್ವವಿದೇಹದಲ್ಲಿರುವ ವತ್ಸಕಾವತಿಯೆಂಬ ದೇಶದಲ್ಲಿ ಪ್ರಭಾಕರಿಯೆಂಬುದೊಂದು ಪಟ್ಟಣವಿದೆ. ತನ್ನ ಪ್ರತಾಪದಿಂದಲೇ ಶತ್ರುಗಳನ್ನು ಸ್ವಾಧೀನಮಾಡಿಕೊಂಡಿದ್ದ ಮಹಾಸೇನನೆಂಬುವವನು ಆ ಪಟ್ಟಣದ ರಾಜನಾಗಿದ್ದನು. ಆ ರಾಜನ ಪತ್ನಿಯಾದ ವಸುಂಧರೆಯೆಂಬ ದೇವಿಯಲ್ಲಿ ಜಯಸೇನನೆಂಬ ಮಗನಾಗಿ ಹುಟ್ಟಿದನು. ಆ ಜಯಸೇನನು ಚಂದ್ರನಂತೆ ಪ್ರಜೆಗಳಿಗೆ ಆನಂದವನ್ನುಂಟುಮಾಡುತ್ತಿದ್ದನು.

**ಕ್ರಮಾಚ್ಚಕ್ರಧರೋ ಭೂತ್ವಾ ಪ್ರಜಾಃ ಸ ಚಿರಮನ್ವಶಾತ್ ।**
**ವಿರಕ್ತಧೀಶ್ಚ ಭೋಗೇಷು ಪ್ರವ್ರಜ್ಯಾಮಾರ್ಹತೀಂ ಶ್ರಿತಃ ॥ ೮೭ ॥**

ಆ ಜಯಸೇನನು ಕೆಲವು ದಿವಸಗಳಮೇಲೆ ಚಕ್ರವರ್ತಿಯಾಗಿ ಬಹುಕಾಲದವರೆಗೆ ಪ್ರಜೆಗಳನ್ನು ಪರಿಪಾಲಿಸಿ, ಕೊನೆಗೆ ಭೋಗೋಪಭೋಗಗಳಲ್ಲಿ ವಿರಕ್ತನಾಗಿ ಜಿನದೀಕ್ಷೆಯನ್ನು ತೆಗೆದುಕೊಂಡನು.

**ಸೀಮಂಧರಾರ್ಹತ್ಪಾದಾಬ್ಜಮೂಲೇ [೧]ಷೋಡಶಕಾರಣೀಮ್ ।**
**ಭಾವಯನ್ನುಚಿರಂ ತೇಪೇ ತಪೋ ನಿರತಿಚಾರಕಮ್ ॥ ೮೮ ॥**

ಆ ಜಯಸೇನಮುನಿಯು ಸೀಮಂಧರತೀರ್ಥಂಕರರ ಪಾದಮೂಲದಲ್ಲಿ ದರ್ಶನವಿಶುದ್ಧಿ, ವಿನಯಸಂಪನ್ನತಾಮೊದಲಾದ ಹದಿನಾರು ಕಾರಣ(ಭಾವನೆ)ಗಳನ್ನು ಭಾವಿಸಿ ಬಹುಕಾಲದವರೆಗೆ ನಿರತಿಚಾರವಾದ ತಪಸ್ಸನ್ನು ಮಾಡಿದನು.

**ಸ್ವಾಯುರಂತೇಹಮಿಂದ್ರೋಭೂದ್ಗ್ರೈವೇಯೇಷೂರ್ಧ್ವಮಧ್ಯಮೇ ।**
**ತ್ರಿಂಶದಬ್ಧ್ಯುಪಮಂ ಕಾಲಂ ದಿವ್ಯಂ ತತ್ರಾನ್ವಭೂತ್ಸುಖಮ್ ॥ ೮೯ ॥**

ಆಯುಷ್ಯವು ತೀರಿದಮೇಲೆ ಮೃತಪಟ್ಟು ಊರ್ಧ್ವಗ್ರೈವೇಯೇಕವೆಂಬ ಸ್ವರ್ಗದಲ್ಲಿ ಮಧ್ಯದ ವಿಮಾನದಲ್ಲಿ ಅಹಮಿಂದ್ರದೇವನಾಗಿಹುಟ್ಟಿ ಮೂವತ್ತು ಸಾಗರಕಾಲದವರೆಗೆ ದಿವ್ಯಸುಖವನ್ನನುಭವಿಸಿದನು.

**ತತೋವತೀರ್ಣಃ ಸ್ವರ್ಗಾಗ್ರಾತ್ಪುಷ್ಕರಾರ್ದ್ಧ[೨]ಪುರೋಗತೇ ।**
**ವಿದೇಹೇ ಮಂಗಲಾವತ್ಯಾಂ ಪ್ರಾಕ್ಪುರೇ ರತ್ನಸಂಚಯೇ ॥ ೯೦ ॥**

**ಅಜಿತಂಜಯಭೂಪಾಲಾದ್ವಸುಮತ್ಯಾಃ ಸುತೋಭವತ್ ।**
**ಯುಗಂಧರ ಇತಿ ಖ್ಯಾತಿಮುದ್ವಹನ್ನೃಸುರಾರ್ಚಿತಃ ॥ ೯೧ ॥**

ಆಯುಷ್ಯವು ಪೂರ್ತಿಯಾದಮೇಲೆ ಆ ಸ್ವರ್ಗದಿಂದ ಚ್ಯುತನಾಗಿ ಪುಷ್ಕರಾರ್ದ್ಧದ್ವೀಪದ ಪೂರ್ವಭಾಗದಲ್ಲಿರುವ ವಿದೇಹಕ್ಷೇತ್ರದ ಮಂಗಲಾವತೀ ದೇಶದ ರತ್ನಸಂಚಯಪುರದಲ್ಲಿ ಅಜಿತಂಜಯ ರಾಜನಿಗೂ ವಸುಮತಿಗೂ ಮನುಷ್ಯರಿಂದಲೂ ದೇವತೆಗಳಿಂದಲೂ ಪೂಜಿಸಲ್ಪಟ್ಟ ಯುಗಂಧರನೆಂದು ಪ್ರಸಿದ್ಧನಾದ ಮಗನಾಗಿ ಹುಟ್ಟಿದನು.

**ಕಲ್ಯಾಣತ್ರಿತಯೇ [೩]ವರ್ಯಾಂ ಸ[೪]ಸಪರ್ಯಾಮವಾಪಿವಾನ್ ।**
**ಕ್ರಮಾತ್ಕೈವಲ್ಯಮುತ್ಪಾದ್ಯ ಮಹಾನೇಷ ಮಹೀಯತೇ ॥ ೯೨ ॥**

ಆ ಯುಗಂಧರನು ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ ಈ ಮೂರು ಕಲ್ಯಾಣಗಳಲ್ಲಿಯೂ ದೇವೇಂದ್ರ ಮೊದಲಾದವರಿಂದ ಪೂಜಿಸಿಕೊಂಡವನಾಗಿ ಕ್ರಮದಿಂದ ಈ ಮಹಾತ್ಮನು ಕೇವಲಜ್ಞಾನವನ್ನು ಪಡೆದು ಪೂಜಿಸಲ್ಪಡುತ್ತಿದ್ದಾನೆ.

೧ ಸಮಾಹಾರೇ ಜಾ. ೨ ಪೂರ್ವದಿಗ್ಗತೇ. ೩ ಶ್ರೇಷ್ಠಾಂ. ೪ ಪೂಜಾಂ.

**ಶುಭಾನುಬಂಧಿನಾ ಸೋಯಂ ಕರ್ಮಣಾಭ್ಯುದಯಂ ಸುಖವತ್ ।**
**[೧]ಷಟ್ಷಷ್ಟ್ಯಬ್ಧ್ಯುಪಮಂ ಕಾಲಂ ಭುಕ್ತ್ವಾರ್ಹಂತ್ಯಮಥಾಸದತ್ ॥ ೯೩ ॥**

ಹಿಂದೆ ಪ್ರಹಸಿತನಾಗಿದ್ದ ಈ ಯುಗಂಧರನು ಶುಭಕರ್ಮದಿಂದ ಅರವತ್ತಾರು ಸಾಗರೋಪಮಕಾಲದವರೆಗೆ ಸ್ವರ್ಗಸುಖವನ್ನನುಭವಿಸಿದಮೇಲೆ ಅರ್ಹತ್ಪದವಿಯನ್ನು ಹೊಂದಿದನು.

**ಯುಗ್ಯೋ ಧರ್ಮರಥಸ್ಯಾಯಂ ಯುಗಜ್ಯೇಷ್ಠೋ ಯುಗಂಧರಃ ।**
**ತೀರ್ಥಕೃತ್ತ್ರಾಯತೇ ಸೋಸ್ಮಾನ್ಭವ್ಯಾಬ್ಜವನಭಾನುಮಾನ್ ॥ ೯೪ ॥**

ಭವ್ಯರೆಂಬ ತಾವರೆಗಳ ಗುಂಪಿಗೆ ಸೂರ್ಯರೂ ಧರ್ಮವೆಂಬ ರಥವನ್ನು ನಡೆಯಿಸುವವರೂ ಈ ಯುಗಕ್ಕೆ ಮೊದಲನೆಯವರೂ ಆದ ಈ ಯುಗಂಧರತೀರ್ಥಂಕರರು ನಮ್ಮನ್ನು ಕಾಪಾಡುತ್ತಾರೆ.

**ತದೇತಿ ಮದ್ವಚಃ ಶ್ರುತ್ವಾ ಬಹವೋ ದರ್ಶನಂ ಶ್ರಿತಾಃ ।**
**ಯುವಾಂ ಚ ಧರ್ಮಸಂವೇಗಂ ಪರಮಂ ಸಮುಪಾಗತೌ ॥ ೯೫ ॥**

ಈಗ ಈ ಪ್ರಕಾರವಾದ ನನ್ನ ಮಾತನ್ನು ಕೇಳಿ ಅನೇಕರು ಸಮ್ಯಗ್ದರ್ಶನವನ್ನು ಆಶ್ರಯಿಸಿದರು. ಲಲಿತಾಂಗಸ್ವಯಂಪ್ರಭೆಯರಾಗಿದ್ದ ನೀವಿಬ್ಬರು ಕೂಡ ಧರ್ಮದಲ್ಲಿ ಬಹಳವಾದ ಪ್ರೀತಿಯನ್ನು ಹೊಂದಿದಿರಿ.

**ಪಿಹಿತಾಸ್ರವಭಟ್ಟಾರಕೈವಲ್ಯೋಪಜನಕ್ಷಣೇ ।**
**ಸಮಂ ಗತ್ವಾರ್ಚಯಿಷ್ಯಾಮಸ್ತದಾ ಪುತ್ರಿ ಸ್ಮರಸ್ಯದಃ ॥ ೯೬ ॥**

ಎಲೈ ಮಗಳೇ! ಪಿಹಿತಾಸ್ರವಮುನಿಗಳಿಗೆ ಕೇವಲಜ್ಞಾನೋತ್ಪತ್ತಿಯಾದ ಕಾಲದಲ್ಲಿ ನಾವು ಜೊತೆಯಲ್ಲಿಹೋಗಿ ಪೂಜಿಸಿದ್ದೆವು. ಈ ವಿಷಯವು ನಿನಗೆ ನೆನಪಿದೆಯೋ ?

**ಅಭಿಜಾನಾಸಿ ತತ್ಪುತ್ರಿ ಸ್ವಯಂಭೂರಮಣೋದಧಿಮ್ ।**
**ಕ್ರೀಡಾಹೇತೋ[೨]ರ್ವ್ರಜಿಷ್ಯಾವೋ ಗಿರಿಂ ಚಾಂಜನಸಂಜ್ಞಕಮ್ ॥ ೯೭ ॥**

ಮಗಳೇ! ಕ್ರೀಡೆಗೋಸ್ಕರ ನಾವು ಸ್ವಯಂಭೂರಮಣಸಮುದ್ರಕ್ಕೂ ಅಂಜನಗಿರಿಗೂ ಹೋಗಿದ್ದುದು ಗೊತ್ತಿದೆಯೋ ?''

**ಶ್ರೀಮತೀ[೩]ಗುರುಣೇತ್ಯುಕ್ತಾ ತಾತ ಯುಷ್ಮತ್ಪ್ರಸಾದತಃ ।**
**ಅಭಿಜಾನಾಮಿ ತತ್ಸರ್ವಮಿತ್ಯಸೌ ಪ್ರತ್ಯಭಾಷತ ॥ ೯೮ ॥**

ಶ್ರೀಮತಿಯ ತಂದೆಯಾದ ವಜ್ರದಂತಚಕ್ರವರ್ತಿಯಿಂದ ಈರೀತಿಯಾಗಿ ಹೇಳಲ್ಪಟ್ಟ ಶ್ರೀಮತಿಯು ''ತಂದೆಯೇ! ತಮ್ಮ ಪ್ರಸಾದದಿಂದ ತಾವು ಹೇಳಿದ ವಿಷಯವನ್ನೆಲ್ಲಾ ತಿಳಿಯುತ್ತೇನೆ'' ಎಂದು ಉತ್ತರವನ್ನಿತ್ತಳು.

**[೪]ಗುರೋಃ ಸ್ಮರಾಮಿ ಕೈವಲ್ಯಪೂಜಾಂ [೫]ದ್ಯುತಿಲಕೇ ಗಿರೌ ।**
**[೬]ವಿಹೃತಂ ಚಾಂಜನೇ ಶೈಲೇ ಸ್ವಯಂಭೂರಮಣೇ ಚ ಯತ್ ॥ ೯೯ ॥**

''ತಂದೆಯೇ! ಅಂಬರತಿಲಕವೆಂಬ ಪರ್ವತದಲ್ಲಿ ಪಿಹಿತಾಸ್ರವಗುರುಗಳ ಕೇವಲಜ್ಞಾನಪೂಜೆಯನ್ನೂ ಅಂಜನಗಿರಿಯಲ್ಲಿಯೂ ಸ್ವಯಂಭೂರಮಣಸಮುದ್ರದಲ್ಲಿಯೂ ವಿಹರಿಸಿದ್ದುದನ್ನೂ ಸ್ಮರಿಸುತ್ತೇನೆ.

**ಪ್ರತ್ಯಕ್ಷಮಿವ ತತ್ಸರ್ವಂ ಪರಿಸ್ಫುರತಿ ಮೇ ಹೃದಿ ।**
**ಕಿಂತು ಕಾಂತಃ ಕ್ವ ಮೇ ಜಾತ ಇತಿ ಡೋಲಾಯತೇ ಮತಿಃ ॥ ೧೦೦ ॥**

೧ ಮಹಾಶುಕ್ರೇ ೧೬ ಸಾ, ಪ್ರಾಣತಕಲ್ಪೇ ೨೦ ಸಾ, ಉರ್ಧ್ವಗ್ರೈವೇಯಕಮಧ್ಯಮೇ ೩೦ ಸಾ, ಮಿಲಿತ್ವಾ ೬೬ ಸಾಗರಾಃ. ೨ ಸ್ಮೃತ್ಯರ್ಥೇ ಯದಿ ಲೃಡಿತಿಭೂತಾನದ್ಯತನೇ ಲೃಟ್. ೩ ಪಿತ್ರಾ. ೪ ಪಿಹಿತಾಸ್ರವಸ್ಯ. ೫ ಅಂಬರತಿಲಕೇ. ೬ ವಿಹರಣಂ.

ಈ ವಿಷಯಗಳೆಲ್ಲಾ ಪ್ರತ್ಯಕ್ಷವಾಗಿರುವಂತೆ ನನ್ನ ಹೃದಯದಲ್ಲಿ ಹೊಳೆಯುತ್ತಿವೆ. ಆದರೆ ನನ್ನ ಪತಿಯು ಎಲ್ಲಿ ಉದ್ಭವಿಸಿದ್ದಾನೆಂಬ ವಿಷಯದಲ್ಲಿ ನನ್ನ ಮನಸ್ಸು ಚಂಚಲವಾಗಿದೆ''.

**ಇತಿ ಬ್ರುವಾಣಾಂ ತಾಂ ಭೂಯಃ ಪ್ರತ್ಯುವಾಚ ನರಾಧಿಪಃ ।**
**ಪುತ್ರಿ ಸ್ವರ್ಗಸ್ಥಯೋ[೧]ರೇವ ಯುವಯೋಃ ಪ್ರಾಕ್ಚ್ಯುತೋಽಚ್ಯುತಾತ್ ॥**

**ನಗರ್ಯಾಮಿಹ [೨]ಧುರ್ಯೋಽಹಂ ಯಶೋಧರಮಹೀಪತೇಃ ।**
**ದೇವ್ಯಾ ವಸುಂಧರಾಯಾಶ್ಚ ವಜ್ರದಂತಃ ಸುತೋಽಭವಮ್ ॥ ೧೦೨ ॥**

ಈ ಪ್ರಕಾರವಾಗಿ ಹೇಳುತ್ತಿರುವ ಶ್ರೀಮತಿಯನ್ನು ಕುರಿತು ವಜ್ರದಂತರಾಜನು ಪುನಃ ಹೇಳಿದನು ''ಎಲೈ ಮಗಳೇ !ಲಲಿತಾಂಗನೂ ನೀನೂ ಸ್ವರ್ಗದಲ್ಲಿರುವಾಗ ಈ ನಗರದಲ್ಲಿ ರಾಜ್ಯವಾಳುತ್ತಿರುವ ನಾನು ನಿಮಗಿಂತ ಮೊದಲು ಅಚ್ಯುತಸ್ವರ್ಗದಿಂದ ಚ್ಯುತನಾಗಿ ಯಶೋಧರರಾಜನಿಗೂ ವಸುಂಧರಾದೇವಿಗೂ ವಜ್ರದಂತನೆಂಬ ಮಗನಾಗಿ ಹುಟ್ಟಿದೆನು.

**[೩]ನಿಯುತಾರ್ದ್ಧಪ್ರಸಂಖ್ಯಾನಿ ಪೂರ್ವಾಣ್ಯಾಯುಃಸ್ಥಿತೌ ಯದಾ ।**
**ಭವತೋಃ ಪರಿಶಿಷ್ಟಾನಿ ತದಾಹಂ ಪ್ರಚ್ಯುತೋ ದಿವಃ ॥ ೧೦೩ ॥**

ನಿಮ್ಮ ಆಯುಷ್ಯಸ್ಥಿತಿಯಲ್ಲಿ ಐವತ್ತುಸಾವಿರಪೂರ್ವವರ್ಷಗಳು ಉಳಿದಾಗ ನಾನು ಸ್ವರ್ಗದಿಂದ ಚ್ಯುತನಾದೆನು.

**ಯುವಾಂ ಚ ಪರಿಶಿಷ್ಟಾಯುರ್ಭುಕ್ತ್ವಾಂತೇ ತ್ರಿದಿವಾಚ್ಚ್ಯುತೌ ।**
**ಜಾತೌ ಯಥಾಸ್ವಮತ್ರೈವ ವಿಷಯೇ ರಾಜ[೪]ದಾರಕೌ ॥ ೧೦೪ ॥**

ನೀವು ಕೂಡ ಉಳಿದ ಆಯುಷ್ಯವನ್ನು ಸುಖದಿಂದ ಕಳೆದು ಕೊನೆಗೆ ಸ್ವರ್ಗದಿಂದ ಚ್ಯುತರಾಗಿ ಇದೇ ದೇಶದಲ್ಲಿ ಲಲಿತಾಂಗನು ರಾಜಪುತ್ರನಾಗಿಯೂ, ನೀನು ರಾಜಪುತ್ರಿಯಾಗಿಯೂ ಹುಟ್ಟಿದಿರಿ.

**[೫]ಜನಿತೇತಸ್ತೃತೀಯೇಽಹ್ನಿ ಲಲಿತಾಂಗಚರೇಣ ತೇ ।**
**ಸಂಗಮೋಽದ್ಯೈವ ತದ್ವಾರ್ತಾಂ ಪಂಡಿತಾನೇಷ್ಯತಿ ಸ್ಫುಟಮ್ ॥ ೧೦೫ ॥**

ಇಂದಿನಿಂದ ಮೂರನೆಯದಿವಸದಲ್ಲಿ ಲಲಿತಾಂಗನಾಗಿದ್ದ ಆ ರಾಜಕುಮಾರನೊಡನೆ ನಿನಗೆ ಸಂಬಂಧವಾಗುವುದು. ಪಂಡಿತೆಯು ಈ ದಿನವೇ ಅವನ ಸಮಾಚಾರವನ್ನು ತರುವಳು.

**[೬]ಪೈತೃಷ್ವಸ್ರೀಯ ಏವಾಯಂ ತವ ಭರ್ತಾ ಭವಿಷ್ಯತಿ ।**
**ತದಿಯಂ ಮೃಗ್ಯಮಾಣೈವ ವಲ್ಲೀ ಪಾದೇ[೭]ವಸಜ್ಯತೇ ॥ ೧೦೬ ॥**

ನಿನಗೆ ಪತಿಯಾಗುವವನು ನನ್ನ ಸಹೋದರಿಯಮಗನೇ ಆಗಿದ್ದಾನೆ. ಈ ಸಂಘಟನೆಯು ಹುಡುಕಲ್ಪಡುತ್ತಿರುವ ಲತೆಯು ಕಾಲಿಗೆ ಸಿಕ್ಕಿದಂತೆ, ಆಗಿದೆ.

**ಮಾತುಲಾನ್ಯಾಸ್ತವಾಯಾಂತ್ಯಾ ವಯಮಪ್ಯದ್ಯ ಪುತ್ರಿಕೇ ।**
**ಪ್ರತ್ಯುದ್ಗಚ್ಛಾಮ ಇತ್ಯುಕ್ತ್ವಾ ರಾಜೋತ್ಥಾಯ ತತೋಽಗಮತ್ ॥ ೧೦೭ ॥**

ಮಗಳೇ ! ಈಗ ನಿನ್ನ ಅತ್ತೆಯು ಬರುತ್ತಿದ್ದಾಳೆ. ನಾವು ಅವಳನ್ನು ಎದುರುಗೊಳ್ಳುವುದಕ್ಕೋಸ್ಕರ ಹೋಗುತ್ತೇವೆ''. ಹೀಗೆಹೇಳಿ ರಾಜನು ಎದ್ದು ಅಲ್ಲಿಂದ ಹೊರಟುಹೋದನು.

**ಪಂಡಿತಾ ತತ್ಕ್ಷಣಂ ಪ್ರಾಪ್ತಾ ಪ್ರಫುಲ್ಲವದನಾಂಬುಜಾ ।**
**ಮುಖರಾಗೇಣ ಸಂಲಕ್ಷ್ಯ ಕಾರ್ಯಸಿದ್ಧಿರುವಾಚ ತಾಮ್ ॥ ೧೦೮ ॥**

೧ ಸತೋಃ. ೨ ಧುರಂಧರಃ. ೩ ಲಕ್ಷಾರ್ದ್ಧಮಿತಾನಿ. ೪ ಪುತ್ರೌ. ೫. ಭವಿಷ್ಯತಿ. ೬ ಪಿತುರ್ಭಗಿನ್ಯಾಃ ಪುತ್ರಃ. ೭ ಸಂಸಕ್ತಾ ಭವತಿ.

ಆ ಕ್ಷಣದಲ್ಲಿಯೇ ಪಂಡಿತೆಯು ಪ್ರಫುಲ್ಲಿತವಾದ ಮುಖಕಮಲವುಳ್ಳವಳಾಗಿ ಬಂದು ಕಾರ್ಯಸಿದ್ಧಿಯಾಯಿತೆಂದು ತನ್ನ ಮುಖಕಾಂತಿಯಿಂದಲೇ ತಿಳಿಸುವವಳಾಗಿ ಶ್ರೀಮತಿಯನ್ನು ಕುರಿತು ಇಂತೆಂದಳು:—

**ತ್ವಂ ದಿಷ್ಟ್ಯಾ ವರ್ದ್ಧಸೇ ಕನ್ಯೇ ಪೂರ್ಣಸ್ತೇಽದ್ಯ ಮನೋರಥಃ ।**
**ಸಪ್ರಪಂಚಂ ಚ ತದ್ವಚ್ಮಿ ಸಾವಧಾನಮಿತಃ ಶೃಣು ॥ ೧೦೯ ॥**

''ಎಲೈ ಕನ್ಯೆಯೇ !ನೀನು ಅದೃಷ್ಟದಿಂದ ವೃದ್ಧಿಯನ್ನು ಹೊಂದುತ್ತಿ. ಈದಿನ ನಿನ್ನ ಮನೋರಥವು ಪೂರ್ಣವಾಯಿತು. ಆ ವಿಷಯವನ್ನೆಲ್ಲಾ ವಿಸ್ತಾರವಾಗಿ ಹೇಳುತ್ತೇನೆ. ಸಾವಧಾನವಾಗಿ ಕೇಳು.

**ಯದಾ ಪಟ್ಟಕಮಾದಾಯ ಗತಾಹಂ ತ್ವನ್ನಿದೇಶತಃ ।**
**ತದಾ[೧]ಸ್ಥಾಂ ವಿಪುಲಾಶ್ಚರ್ಯೇ ಮಹಾಪೂತಜಿನಾಲಯೇ ॥ ೧೧೦ ॥**

ನಿನ್ನ ಆಜ್ಞೆಯಂತೆ ನಾನು ಚಿತ್ರಪಟವನ್ನು ತೆಗೆದುಕೊಂಡುಹೋಗಿ ಅತ್ಯಂತ ಆಶ್ಚರ್ಯಕರವಾದ ಮಹಾಪೂತಜಿನಾಲಯದಲ್ಲಿ ಕುಳಿತೆನು.

**ಮಯಾ ತತ್ರ ವಿಚಿತ್ರಸ್ಯ ಪಟ್ಟಕಸ್ಯ ಪ್ರಸಾರಣೇ ।**
**ಬಹವಸ್ತದವಿಜ್ಞಾಯ ಗತಾಃ ಪಂಡಿತಮಾನಿನಃ ॥ ೧೧೧ ॥**

ಅಲ್ಲಿ ನಾನು ಈ ವಿಚಿತ್ರವಾದ ಚಿತ್ರಪಟವನ್ನು ಬಿಚ್ಚುತ್ತಿರಲು ತಾವು ಪಂಡಿತರೆಂದು ಅಹಂಕಾರಪಡುವ ಅನೇಕರು ಚಿತ್ರಪಟದ ವಿಷಯವನ್ನು ತಿಳಿಯದೆ ಹೊರಟುಹೋದರು.

**ತೌ ತು [೨]ವಾಸವದುರ್ದಾಂತೌ ಯಾವಲೀಕವಿಚಕ್ಷಣೌ ।**
**ದೃಷ್ಟ್ವಾಸ್ಮತ್ಪಟ್ಟಕಂ ದುಷ್ಟೌ ಸ್ವಾನುಮಾನಾದವೋಚತಾಮ್ ॥ ೧೧೨ ॥**

ನಿಜವಾದ ವಿದ್ವಾಂಸರಲ್ಲದ ವಾಸವದುರ್ದಾಂತರೆಂಬ ದುಷ್ಟರಿಬ್ಬರು ನಮ್ಮ ಚಿತ್ರಪಟವನ್ನು ನೋಡಿ ತಮ್ಮ ಅನುಮಾನದಿಂದ ಹೀಗೆ ಹೇಳಿದರು:—

**ಪಟ್ಟಕಾರ್ಥಂ ಸ್ಫುಟಂ [೩] ವಿದ್ವೋಽಜಾತಿಸ್ಮೃತಿಮುಪೇಯುಷೀ ।**
**ವ್ಯಲಿಖದ್ರಾಜಪುತ್ರೀದಂ ಸ್ವಪೂರ್ವಭವಚೇಷ್ಟಿತಮ್ ॥ ೧೧೩ ॥**

'ನಾವು ಈ ಚಿತ್ರಪಟದ ಅರ್ಥವನ್ನು ನಿಃಸಂದೇಹವಾಗಿ ತಿಳಿಯುತ್ತೇವೆ. ಜಾತಿಸ್ಮರಣೆಯನ್ನು ಹೊಂದಿದ ರಾಜಪುತ್ರಿಯು ತನ್ನ ಪೂರ್ವಭವಸಂಬಂಧವಾದ ಈ ಚರಿತ್ರೆಯನ್ನು ಬರೆದಿದ್ದಾಳೆ.'

**ಇತಿ [೪]ನಾಗರಿಕತ್ವೇನ ಪ್ರವೃತ್ತೌ [೫]ನಾಯಕಬ್ರುವೌ ।**
**ತಾವವೋಚಂ ವಿಹಸ್ಯಾಹಂ ಚಿರಾತ್ಸ್ಯಾದಿದಮೀದೃಶಮ್ ॥ ೧೧೪ ॥**

ಈರೀತಿಯಾಗಿ ಚಾತುರ್ಯದಿಂದ ಪ್ರವರ್ತಿಸಿ ಮೊದಲು ನಿನ್ನ ಪತಿಗಳಾಗಿದ್ದರೆಂದು ಹೇಳಿಕೊಳ್ಳುತ್ತಿದ್ದ ಆ ವಾಸವದುರ್ದಾಂತರನ್ನು ಕುರಿತು ನಾನು ನಕ್ಕು 'ಬಹುಕಾಲದಹಿಂದೆ ಇದು ಹೀಗೆ ನಡೆದಿರಬಹುದು' ಎಂದು ಹೇಳಿದೆನು.

**ಹಠಾತ್ಪ್ರಕೃತಗೂಢಾರ್ಥಸಂಪ್ರಶ್ನೇ ಚ ಮಯಾ ಕೃತೇ ।**
**[೬]ಜೋಷಮಾಸ್ತಾಂ ವಿಲಕ್ಷ್ಯೌ ತೌ ಮೂಕೀಭೂಯ ತತೋ ಗತೌ ॥**

ನಾನು ಅಕಸ್ಮಾತ್ತಾಗಿ ಚಿತ್ರಪಟದಲ್ಲಿರುವ ಗುಪ್ತವಿಷಯವನ್ನು ಪ್ರಶ್ನೆಮಾಡುತ್ತಿರಲು ಯೋಗ್ಯವಾದ ಉತ್ತರವನ್ನು ಕೊಡಲಾರದೆ ಮೂಕೀಭೂತರಾಗಿ ಸುಮ್ಮನಿದ್ದು ಆಮೇಲೆ ಹೊರಟುಹೋದರು.

**[೭]ಶ್ವಶುರ್ಯಸ್ತೇ ಯುವಾ ವಜ್ರಜಂಘಸ್ತತ್ರಾಗಮತ್ತತಃ ।**
**ದಿವ್ಯೇನ ವಪುಷಾ ಕಾಂತ್ಯಾ [೮]ದೀಪ್ತ್ಯಾ ಚಾನುಪಮೋ ಭುವಿ ॥ ೧೧೬ ॥**

೧ ವಸಾಮಿ ಸ್ಮ. ೨ ನಾಮಾನೌ. ೩ ಜಾನೀವಃ. ೪ ಪ್ರೌಢತ್ವೇನ. ೫ ಆತ್ಮಾನೌ ನಾಯಕೌ ಬ್ರುವಾತ ಇತಿ. ೬ ತೂಷ್ಣೀಂ. ೭ ಶ್ವಶುರಪುತ್ರಃ. ೮ ತೇಜಸಾ.

ತರುವಾಯ ದಿವ್ಯವಾದ ರೂಪದಿಂದಲೂ ಕಾಂತಿಯಿಂದಲೂ ತೇಜಸ್ಸಿನಿಂದಲೂ ಭೂಮಿಯಲ್ಲಿ ಉಪಮೆಯಿಲ್ಲದವನೂ ನಿನ್ನ ಮಾವನ ಮಗನೂ ಯುವಕನೂ ಆದ ವಜ್ರಜಂಘನು ಅಲ್ಲಿಗೆ ಬಂದನು.

**ಅಥ ಪ್ರದಕ್ಷಿಣೀಕೃತ್ಯ ಭವ್ಯಸ್ತಜ್ಜಿನಮಂದಿರಮ್ ।**
**ಸ್ತುತ್ವಾ ಪ್ರಣಮ್ಯ ಚಾಭ್ಯರ್ಚ್ಯ ಪಟ್ಟಶಾಲಾಮುಪಾಸದತ್ ॥ ೧೧೭ ॥**

ಅನಂತರ ಭವ್ಯನಾದ ಆ ವಜ್ರಜಂಘನು ಜಿನಮಂದಿರದ ಪ್ರದಕ್ಷಿಣೆಯನ್ನೂ ಸ್ತೋತ್ರವನ್ನೂ ವಂದನೆಯನ್ನೂ ಪೂಜೆಯನ್ನೂ ಮಾಡಿ ಚಿತ್ರಶಾಲೆಯನ್ನು ಪ್ರವೇಶಿಸಿದನು.

**[1]ನಿರ್ವರ್ಣ್ಯ ಪಟ್ಟಕಂ ತತ್ರ ಶ್ರೀಮಾನಿದಮವೋಚತ ।**
**ಜ್ಞಾತಪೂರ್ವಮಿವೇದಂ ಮೇ ಚರಿತಂ ಪಟ್ಟಕಸ್ಥಿತಮ್ ॥ ೧೧೮ ॥**

ಅಲ್ಲಿ ಚಿತ್ರಪಟವನ್ನು ನೋಡಿ ಭಾಗ್ಯಶಾಲಿಯಾದ ವಜ್ರಜಂಘನು ಈ ಮಾತನ್ನು ಹೇಳಿದನು:— 'ಚಿತ್ರಪಟದಲ್ಲಿರುವ ಈ ಚರಿತ್ರೆಯನ್ನು ಮೊದಲು ನಾನು ತಿಳಿದಹಾಗಿದೆ.

**ವರ್ಣನಾತೀತಮತ್ರೇದಂ ಚಿತ್ರಕರ್ಮ ವಿರಾಜತೇ ।**
**ಮಾನೋನ್ಮಾನಪ್ರಮಾಣಾಢ್ಯಂ ನಿಮ್ನೋನ್ನತವಿಭಾಗ[2]ವತ್ ॥ ೧೧೯ ॥**

ಉದ್ದ ಅಗಲ ಎತ್ತರ ತಗ್ಗು ಈ ಅಳತೆಗಳಿಂದ ಯುಕ್ತವಾದ ಈ ಚಿತ್ರಪಟವು ಇಲ್ಲಿ ಶೋಭಿಸುತ್ತಿದೆ. ಇದನ್ನು ವರ್ಣಿಸುವುದಶಕ್ಯವಾಗಿದೆ.

**ಅಹೋ ಸುನಿಪುಣಂ ಚಿತ್ರಕರ್ಮೇದಂ ವಿಲಸಚ್ಛವಿ ।**
**ರಸಭಾವಾನ್ವಿತಂ ಹಾರಿ ರೇಖಾಮಾಧುರ್ಯಸಂಗತಮ್ ॥ ೧೨೦ ॥**

ಅಹೋ ! ರಸಗಳೂ ಭಾವಗಳೂ ಗರ್ಭಿತವೂ ಮನೋಹರವೂ ರೇಖೆಗಳ ಮಾಧುರ್ಯವುಳ್ಳುದೂ ಪ್ರಕಾಶಮಾನವೂ ಆದ ಈ ಚಿತ್ರಪಟದ ಕಾರ್ಯವು ಬಹಳ ಸುಂದರವಾಗಿದೆ.

**ಅತ್ರಾಸ್ಮದ್ಭವಸಂಬಂಧಃ ಪೂರ್ವೋಲೇಖಿ ಸವಿಸ್ತರಮ್ ।**
**[3]ಶ್ರೀಪ್ರಭಾಧಿಪತಾಂ ಸಾಕ್ಷಾತ್ಪಶ್ಯಾಮೀವೇಹ ಮಾಮಿಕಾಮ್ ॥ ೧೨೧ ॥**

ಇಲ್ಲಿ ನಮ್ಮ ಪೂರ್ವಭವಸಂಬಂಧವು ವಿಸ್ತಾರವಾಗಿ ಬರೆಯಲ್ಪಟ್ಟಿದೆ. ನಾನು ಶ್ರೀಪ್ರಭವಿಮಾನಾಧಿಪತಿಯಾಗಿದ್ದುದನ್ನು ಸಾಕ್ಷಾತ್ ಇಲ್ಲಿ ನೋಡುವಂತಿದ್ದೇನೆ.

**ಅಹೋ ಸ್ತ್ರೀರೂಪಮತ್ರೇದಂ ನಿತರಾಂ [4]ಮೇಭಿರೋಚತೇ ।**
**ಸ್ವಯಂಪ್ರಭಾಂಗ[5]ಸಂವಾದಿ ವಿಚಿತ್ರಾಭರಣೋಜ್ಜ್ವಲಮ್ ॥ ೧೨೨ ॥**

ಚಿತ್ರಪಟದಲ್ಲಿ ಸ್ವಯಂಪ್ರಭೆಯ ಅವಯವಗಳಿಗೆ ಸಮಾನವೂ ಅನೇಕಪ್ರಕಾರವಾದ ಆಭರಣಗಳಿಂದ ಪ್ರಕಾಶಮಾನವೂ ಆದ ಈ ಸ್ತ್ರೀರೂಪವು ನನಗೆ ಬಹಳ ಇಷ್ಟವಾಗಿದೆ. ಆಶ್ಚರ್ಯ !

**ಕಿಂತ್ವತ್ರ ಕತಿಚಿತ್ಕಸ್ಮಾದ್ಗೂಢಾನಿ ಪ್ರಕೃತಾನಿ ಭೋಃ ।**
**ಮನ್ಯೇ ಸಮ್ಮೋಹನಾಯೇದಂ ಜನಾನಾಮಿತಿ ಚಿತ್ರಿತಮ್ ॥ ೧೨೩ ॥**

ಎಲೈ ದಾದಿಯೇ ! ಆದರೆ ಈ ಚಿತ್ರಪಟದಲ್ಲಿ ಎಷ್ಟೋ ಗುಪ್ತವಿಷಯಗಳೇಕೆ ಬರೆಯಲಾಗಿದೆ ? ಈ ಚರಿತ್ರೆಯಲ್ಲಿ ಸಂಬಂಧವಿಲ್ಲದ ಜನರಿಗೆ ಭ್ರಮೆಯನ್ನುಂಟು ಮಾಡುವುದಕ್ಕೋಸ್ಕರ ಈ ರೀತಿಯಾಗಿ ಗೂಢಾರ್ಥಗಳನ್ನು ಗರ್ಭೀಕರಿಸಿ ಈ ಚಿತ್ರವನ್ನು ಬರೆಯಲಾಗಿದೆ ಎಂದು ತಿಳಿಯುತ್ತೇನೆ.

**ಐಶಾನೋ ಲಿಖಿತಃ ಕಲ್ಪಃ ಶ್ರೀಪ್ರಭಂ ಚ ಪ್ರಭಾಸ್ವರಮ್ ।**
**ಶ್ರೀಪ್ರಭಾಧಿಪತೇಃ ಪಾರ್ಶ್ವೇ ದರ್ಶಿತೇಯಂ ಸ್ವಯಂಪ್ರಭಾ ॥ ೧೨೪ ॥**

ಈ ಚಿತ್ರದಲ್ಲಿ ಈಶಾನ ಕಲ್ಪವು ಬರೆಯಲಾಗಿದೆ. ದೇದೀಪ್ಯಮಾನವಾದ ಶ್ರೀಪ್ರಭವಿಮಾನವೂ ಬರೆಯಲಾಗಿದೆ. ಶ್ರೀಪ್ರಭವಿಮಾನಾಧಿಪತಿಯಾದ ಲಲಿತಾಂಗನ ಪಕ್ಕದಲ್ಲಿ ಈ ಸ್ವಯಂಪ್ರಭಾದೇವಿಯನ್ನು ಬರೆದಿದೆ.

**ಕಲ್ಪಾನೋಕಹವೀಥೀಯಮಿದಮುತ್ಪಂಕಜಂ ಸರಃ ।**
**ದೋಲಾಗೃಹಮಿದಂ ರಮ್ಯಂ ರಮ್ಯೋಯಂ ಕೃತಕಾಚಲಃ ॥ ೧೨೫ ॥**

ಇದು ಕಲ್ಪವೃಕ್ಷಗಳ ಸಾಲಾಗಿದೆ. ಇದು ಪ್ರಫುಲ್ಲಿತವಾದ ಕಮಲಗಳುಳ್ಳ ಸರೋವರವಾಗಿದೆ. ಇದು ಮನೋಹರವಾದ ಉಯ್ಯಾಲೆಯ ಮನೆಯಾಗಿದೆ. ಇದು ರಮಣೀಯವಾದ ಕೃತ್ರಿಮ ಪರ್ವತವಾಗಿದೆ.

**ಕೃತಪ್ರಣಯಕೋಪೇಯಂ ದರ್ಶಿತಾತ್ರ ಪರಾಙ್ಮುಖೀ ।**
**ಮಂದಾರವನವೀಥ್ಯಂತೇ ಲತೇವ ಪವನಾಹತಾ ॥ ೧೨೬ ॥**

ಪ್ರಣಯಕೋಪವನ್ನು ಮಾಡಿ ಮುಖವನ್ನು ತಿರುಗಿಸಿದ ಈ ಸ್ವಯಂಪ್ರಭೆಯು, ಮಂದಾರವನದ ಸಾಲಿನಲ್ಲಿ ಗಾಳಿಯಿಂದ ಹೊಡೆಯಲ್ಪಟ್ಟ ಲತೆಯಂತೆ, ಬರೆಯಲ್ಪಟ್ಟಿದ್ದಾಳೆ.

**ಕನಕಾದ್ರಿತಟೇ ಕ್ರೀಡಾ ಲಲಿತಾ ದರ್ಶಿತಾವಯೋಃ ।**
**ಇತೋ ಮಣಿತಟೋತ್ಸರ್ಪತ್ಪ್ರಭಾಕಾಂಡಪಟಾವೃತೇ ॥ ೧೨೭ ॥**

ಈ ಕಡೆಯಲ್ಲಿ ರತ್ನಖಚಿತವಾದ ತಪ್ಪಲುಗಳಿಂದ ಮೇಲಕ್ಕೆ ಹರಡುತ್ತಿರುವ ಪ್ರಭೆಯೆಂಬ ಪರದೆಯಿಂದ ಮುಚ್ಚಿಹೋಗಿರುವ ಮಹಾಮೇರುಪರ್ವತದ ತಪ್ಪಲಿನಲ್ಲಿ ನಮ್ಮ ಮನೋಹರವಾದ ಕ್ರೀಡೆಯು ತೋರಿಸಲ್ಪಟ್ಟಿದೆ.

**ನಿಗೂಢಪ್ರೇಮಸದ್ಭಾವಕೈತವಾಪಾದಿತೇರ್ಷ್ಯಯಾ ।**
**ಶಯ್ಯೋತ್ಸಂಗೇ ಮದುತ್ಸಂಗಾದ್ಬಲಾತ್ಪಾದೋರ್ಪಿತೋನಯಾ ॥ ೧೨೮ ॥**

ಅಂತರಂಗದಲ್ಲಿ ಪ್ರೇಮವಿದೆ. ಬಾಹ್ಯದಲ್ಲಿ ಕಪಟದಿಂದ ಈರ್ಷ್ಯೆಯನ್ನು ಮಾಡಿ ನನ್ನ ತೊಡೆಯಮೇಲಿನಿಂದ ಇವಳು ಬಲಾತ್ಕಾರವಾಗಿ ಕಾಲನ್ನು ತೆಗೆದು ಹಾಸಿಗೆಯಲ್ಲಿಟ್ಟಳು.

**ಮಣಿನೂಪುರಝುಂಕಾರಚಾರುಣಾ ಚರಣೇನ ಮಾಮ್ ।**
**ತಾಡಯಂತೀಹ ಸಂರುದ್ಧಾ ಕಾಂಚ್ಯಾ ಸಖ್ಯೇವ ಗೌರವಾತ್ ॥ ೧೨೯ ॥**

ಇಲ್ಲಿ ರತ್ನಮಯವಾದ ಕಾಲುಕಡಗದ ಝೇಂಕಾರಶಬ್ದದಿಂದ ಮನೋಹರವಾದ ಕಾಲಿನಿಂದ ಈಕೆಯು ನನ್ನನ್ನು ಒದೆಯುವಾಗ, ಗೌರವದಿಂದ ಸಖಿಯು ಬಂದು ತಡೆಯುವಂತೆ, ಡಾಬು ತಡೆದಿದೆ.

**ಕೃತವ್ಯಲೀಕಕೋಪಂ ಮಾಂ ಪ್ರಸಾದಯಿತುಮಾನತಾ ।**
**ಸ್ವೋತ್ತಮಾಂಗೇನ ಪಾದೌ ಮೇ ಘಟಯಂತೀಹ ದರ್ಶಿತಾ ॥ ೧೩೦ ॥**

ಕೋಪಗೊಂಡವನಂತೆ ನಟಿಸಿದ ನನ್ನನ್ನು ಸಮಾಧಾನಪಡಿಸುವುದಕ್ಕೋಸ್ಕರ ಸ್ವಯಂಪ್ರಭೆಯು ನಮ್ರಳಾಗಿ ತನ್ನ ಮಸ್ತಕವನ್ನು ನನ್ನ ಪಾದಗಳ ಮೇಲಿರಿಸುತ್ತಿರುವುದನ್ನು ಇಲ್ಲಿ ತೋರಿಸಿದೆ.

**ಅಚ್ಯುತೇಂದ್ರಸಮಾಯೋಗ[1]ಗುರುಪೂಜಾದಿವಿಸ್ತರಃ ।**
**ದರ್ಶಿತೋತ್ರ ನಿಗೂಢಸ್ತು ಭಾವಃ ಪ್ರಣಯಜೋ [2]ಮಿಥಃ ॥ ೧೩೧ ॥**

ಅಚ್ಯುತಕಲ್ಪದ ಇಂದ್ರನೊಡನೆ ಸಂಬಂಧವಾದುದೂ ಪಿಹಿತಾಸ್ರವಮುನಿಗಳ ಪೂಜೆಮೊದಲಾದ ಕಾರ್ಯವಿಸ್ತಾರವೂ ಇಲ್ಲಿ ತೋರಿಸಲ್ಪಟ್ಟಿವೆ. ಏಕಾಂತದಲ್ಲಿ ಪ್ರೀತಿಯಿಂದುಂಟಾದ ಭಾವವು ಗುಪ್ತವಾಗಿದೆ.

೧ ಅವಲೋಕ್ಯ. ೨ ಅಸ್ಮರ್ಥೇ ಮತುಃ. ೩ ವಿಮಾನಂ. ೪ ಮಹ್ಯಂ. ೫ ಸಮಾನಂ.

೧ ಪಿಹಿತಾಸ್ರವಸ್ಯ. ೨ ರಹಸಿ.

**ಇಹ ಪ್ರಣಯಕೋಪೇಸ್ಯಾಃ ಪಾದಯೋರ್ನಿಪತನ್ನಹಮ್ ।**
**ಕರ್ಣೋತ್ಪಲೇನ ಮೃದುನಾ ತಾಡ್ಯಮಾನೋ ನ ದರ್ಶಿತಃ ॥ ೧೩೨ ॥**

ಸ್ವಯಂಪ್ರಭೆಗೆ ಪ್ರಣಯಕೋಪವುಂಟಾದಕಾಲದಲ್ಲಿ ನಾನು ಇವಳ ಕಾಲುಗಳಿಗೆ ಬಿದ್ದಾಗ ಕಿವಿಯಲ್ಲಿದ್ದ ಮೃದುವಾದ ನೈದಿಲೆಪುಷ್ಪದಿಂದ ನನ್ನನ್ನು ಹೊಡೆದಿದ್ದಳು. ಆ ವಿಷಯವನ್ನು ಇಲ್ಲಿ ತೋರಿಸಲಿಲ್ಲ.

**ಸಾಲಕ್ತಕಪದಾಂಗುಷ್ಠ ಮುದ್ರಯಾಸ್ಮದುರಸ್ಸ್ಥಲೇ ।**
**[1]ವಾಲ್ಲಭ್ಯಲಾಂಛನಂ ದತ್ತಂ ಪ್ರಿಯಯಾ ನಾತ್ರ ದರ್ಶಿತಮ್ ॥ ೧೩೩ ॥**

ಅಲತಿಗೆರಸವನ್ನು ಹಚ್ಚಿಕೊಂಡಿದ್ದ ಕಾಲಿನ ಅಂಗುಷ್ಠಮುದ್ರೆಯಿಂದ ನನ್ನ ಎದೆಯಲ್ಲಿ ಪ್ರಿಯಳು ಪ್ರಿಯಪತ್ನೀತ್ವಚಿಹ್ನೆಯನ್ನುಂಟುಮಾಡಿದ್ದಳು. ಅದನ್ನು ಇಲ್ಲಿ ತೋರಿಸಲಿಲ್ಲ.

**ಕಪೋಲಫಲಕೇ ಚಾಸ್ಯಾಃ [2]ಫಲಿನೀಫಲಸತ್ತ್ವಿಷಿ ।**
**ಲಿಖ[3]ನ್ನಾಲೇಖ್ಯಪತ್ರಾಣಿ ನಾಹಮತ್ರ ನಿದರ್ಶಿತಃ ॥ ೧೩೪ ॥**

ಪ್ರಿಯಂಗುಫಲಕ್ಕೆ ಸಮಾನವಾದ ಕಾಂತಿಯುಳ್ಳ ಇವಳ ಕೆನ್ನೆಯಲ್ಲಿ ನಾನು ಮಕರಿಕಾಪತ್ರಗಳನ್ನು ಬರೆಯುತ್ತಿದ್ದುದನ್ನು ಇಲ್ಲಿ ತೋರಿಸಲಿಲ್ಲ.

**ನೂನಂ ಸ್ವಯಂಪ್ರಭಾಚರ್ಯಾ ಹಸ್ತನೈಪುಣ್ಯಮೀದೃಶಮ್ ।**
**ನಾನ್ಯಸ್ಯ ಸ್ತ್ರೀಜನಸ್ಯೇದೃಕ್ಪ್ರಾವೀಣ್ಯಂ ಸ್ಯಾತ್ಕಲಾವಿಧೌ ॥ ೧೩೫ ॥**

ಇದು ನಿಶ್ಚಯವಾಗಿಯೂ ಸ್ವಯಂಪ್ರಭೆಯಾಗಿದ್ದ ಸ್ತ್ರೀಯ ಹಸ್ತಚಾತುರ್ಯವೇ ಆಗಿರಬೇಕು. ಚಿತ್ರವನ್ನು ಬರೆಯುವುದರಲ್ಲಿ ಇಂತಹ ಕುಶಲತೆಯು ಬೇರೆ ಸ್ತ್ರೀಯರಿಗೆ ಇರಲಾರದು'.

**ಇತಿ ಪ್ರತರ್ಕ್ಯಯನ್ನೇವ ಪರ್ಯಾಕುಲ ಇವ ಕ್ಷಣಮ್ ।**
**[4]ಶೂನ್ಯಾಂತಃಕರಣೋ[5]ಧ್ಯಾಸೀತ್ಕಿಮಪ್ಯಾಮೀಲಿತೇಕ್ಷಣಃ ॥ ೧೩೬ ॥**

ಹೀಗೆ ಆ ವಜ್ರಜಂಘನು ವಿಚಾರಮಾಡುವವನಾಗಿಯೇ ಒಂದು ಕ್ಷಣಕಾಲ ಪರ್ಯಂತ ವ್ಯಾಕುಲಚಿತ್ತನಾದಂತೆ ಬೇರೆವಿಷಯಗಳಲ್ಲಿ ಶೂನ್ಯಹೃದಯನಾಗಿ ಕಣ್ಣುಗಳನ್ನು ಮುಚ್ಚಿಕೊಂಡು ಏನನ್ನೋ ಚಿಂತಿಸುತ್ತಿದ್ದನು.

**ಉದಶ್ರುಲೋಚನಶ್ಚಾಯಂ ದಶಾ[6]ಮಂತ್ಯಾಮಿವೋಪಯನ್ ।**
**ದಿಷ್ಟ್ಯಾ ಸಂಧಾರಿತೋಭ್ಯೇತ್ಯ ತದಾ ಸಖ್ಯೇವ ಮೂರ್ಛಯಾ ॥ ೧೩೭ ॥**

ಈ ವಜ್ರಜಂಘನು ಕಣ್ಣೀರನ್ನು ಸುರಿಸುತ್ತ ಮರಣಾವಸ್ಥೆಯನ್ನು ಹೊಂದುವವನಂತಿರುವಾಗ, ಅದೃಷ್ಟದಿಂದ ಸಖಿಯು ಬಂದು ಹಿಡಿದುಕೊಳ್ಳುವಂತೆ, ಅವನಿಗೆ ಮೂರ್ಛೆಯು ಪ್ರಾಪ್ತವಾಯಿತು.

**ತದವಸ್ಥಂ ತಮಾಲೋಕ್ಯ ನಾಹಮೇವೋ[7]ನ್ಮನಾಯಿತಾ ।**
**ಚಿತ್ರಸ್ಥಾನ್ಯಪಿ ರೂಪಾಣಿ [8]ಪ್ರಾಯಾನ್ಪ್ರಾಯೋಂತರಾರ್ದ್ರತಾಮ್ ॥**

ಆ ಅವಸ್ಥೆಯನ್ನು ಹೊಂದಿದ ವಜ್ರಜಂಘನನ್ನು ನೋಡಿ ನಾನು ಮಾತ್ರ ದುಃಖಿತವಾದ ಮನಸ್ಸುಳ್ಳವಳಾಗಲಿಲ್ಲ; ಚಿತ್ರದಲ್ಲಿರುವ ರೂಪಗಳು ಕೂಡ ದುಃಖಪಟ್ಟುವು.

**[9]ಪ್ರತ್ಯಾಶ್ವಾಸಮಥಾನೀತಃ ಸೋಪಾಯಂ ಪರಿಚಾರಿಭಿಃ ।**
**ತ್ವದರ್ಪಿತಮನೋವೃತ್ತಿಃ ಸೋದರ್ಶ[10]ತ್ತ್ವನ್ಮಯೀರ್ದಿಶಃ ॥ ೧೩೯ ॥**

ತರುವಾಯ ಅವನ ಪರಿಚಾರಕರು ಉಪಾಯವಾಗಿ ಶೈತ್ಯೋಪಚಾರವನ್ನು ಮಾಡಿ ಅವನನ್ನು ಪೂರ್ವಾವಸ್ಥೆಗೆ ತಂದರು. ಆದರೆ ನಿನ್ನನ್ನೇ ಮನಸ್ಸಿನಲ್ಲಿ ಚಿಂತಿಸುತ್ತಿದ್ದ ಆ ವಜ್ರಜಂಘನಿಗೆ ಎಲ್ಲಾ ದಿಕ್ಕುಗಳಲ್ಲಿಯೂ ನೀನೇ ಇರುವಂತೆ ಕಾಣುತ್ತಿದ್ದಿತು.

೧ ವಲ್ಲಭತ್ವಚಿಹ್ನಂ. ೨ ಪ್ರಿಯಂಗುಃ ಫಲಿನೀ ಫಲೀತ್ಯಮರಃ. ೩ ಮಕರಿಕಾಪತ್ರಾಣಿ. ೪ ವಿಷಯಾಂತರವಿಚಾರಶೂನ್ಯಃ. ೫ ವಿಚಾರಯತಿ ಸ್ಮ. ೬ ಮರಣಸಂಜ್ಞಿತಾಂ. ೭ ದುರ್ಮನಾಯಿತಾ. ೮ ಅಗಚ್ಛನ್. ೯ ಪುನರುಜ್ಜೀವನಂ. ೧೦ ತ್ವಯಾ ನಿರ್ವೃತ್ತಾಃ.

**ಅಚಿರಾ[1]ಲ್ಲಬ್ಧಸಂಜ್ಞಶ್ಚ ಪೃಷ್ಟವಾನಿತಿ ಮಾಮಸೌ ।**
**ಭದ್ರೇ ಕೇನೇದ[2]ಮಾಲೇಖ್ಯೇ ಲಿಖಿತಂ ನಃ [3]ಪುರೇಹಿತಮ್ ॥ ೧೪೦ ॥**

ಬಹಳ ಹೊತ್ತಿನಮೇಲೆ ಚೇತರಿಸಿಕೊಂಡು ಈ ವಜ್ರಜಂಘನು ಮುಂದೆ ಹೇಳುವರೀತಿಯಾಗಿ ನನ್ನನ್ನು ಕೇಳಿದನು— 'ಎಲೈ ಭದ್ರೇ ! ಈ ಚಿತ್ರಪಟದಲ್ಲಿ ನಮ್ಮ ಈ ಪೂರ್ವಭವದ ಚರಿತ್ರೆಯನ್ನು ಯಾರು ಬರೆದರು ?'

**ಪ್ರತ್ಯುಕ್ತಶ್ಚ ಮಯೇತ್ಯಸ್ತಿ [4]ಸ್ತ್ರೀಸರ್ಗಸ್ಯೈಕನಾಯಿಕಾ ।**
**ದುಹಿತಾ ಮಾತುಲಾನ್ಯಾಸ್ತೇ ಶ್ರೀಮತೀತಿ [5]ಪತಿಂವರಾ ॥ ೧೪೧ ॥**

ನಾನು ಮುಂದೆ ಹೇಳುವಂತೆ ಉತ್ತರವನ್ನಿತ್ತೆನು 'ಸ್ತ್ರೀಸೃಷ್ಟಿಗೆ ಮುಖ್ಯನಾಯಕಿಯೂ ನಿನ್ನ ಸೋದರತ್ತೆಯ ಮಗಳೂ ಆದ ಶ್ರೀಮತಿಯೆಂಬ ಕನ್ಯೆಯಿದ್ದಾಳೆ.

**ತಾಂ ವಿದ್ಧಿ ಮದನಸ್ಯೇವ ಪತಾಕಾ[6]ಮುಜ್ಜ್ವಲಾಂಶುಕಾಮ್ ।**
**ಸ್ತ್ರೀಸೃಷ್ಟೇರಿವ [7]ನಿರ್ಮಾಣರೇಖಾಂ ಮಾಧುರ್ಯಶಾಲಿನೀಮ್ ॥**

ಆ ಶ್ರೀಮತಿಯು ಹೊಳೆಯುತ್ತಿರುವ ವಸ್ತ್ರವುಳ್ಳ ಮನ್ಮಥನ ಪತಾಕೆಯಂತೆ ದೇದೀಪ್ಯಮಾನವಾದ ಶರೀರಕಾಂತಿಯುಳ್ಳವಳೂ ಸ್ತ್ರೀಸೃಷ್ಟಿಯ ಮನೋಹರವಾದ ಜೀವರೇಖೆಯಂತೆ ಮನೋಹರಳೂ ಆಗಿದ್ದಾಳೆಂದು ತಿಳಿ. ಬಹಳ ಸುಂದರಳಾಗಿದ್ದಾಳೆಂದು ಭಾವವು.

**ಸಮಗ್ರಯೌವನಾರಂಭಸೂತ್ರಪಾತ್ರೈರಿವಾಯತೈಃ ।**
**ದೃಷ್ಟಿಪಾತೈಃ [8]ಸ್ವಭೂಸ್ತಸ್ಯಾಃ ಶ್ಲಾಘತೇ ಶರಕೌಶಲಮ್ ॥ ೧೪೩ ॥**

ಆ ಶ್ರೀಮತಿಯ ಸಂಪೂರ್ಣವಾದ ಯೌವನಾರಂಭಕ್ಕೆ ಸೂತ್ರವಿನ್ಯಾಸಗಳೋ ಎಂಬಂತಿರುವ ದೀರ್ಘವಾದ ನೋಟಗಳಿಂದ ಮನ್ಮಥನು ತನ್ನ ಬಾಣಗಳ ಕೌಶಲ್ಯವನ್ನು ಶ್ಲಾಘಿಸುತ್ತಾನೆ.

**ಲಕ್ಷ್ಮೀಕರಾಗ್ರಸಂಸಕ್ತಲೀಲಾಂಬುಜಜಿಗೀಷಯಾ ।**
**ತದ್ವಕ್ತ್ರೇಂದುಃ ಸದಾ ಭಾತಿ ನೂನಂ ದಂತಾಂಶುಪೇಶಲಃ ॥ ೧೪೪ ॥**

ಹಲ್ಲುಗಳ ಕಾಂತಿಗಳಿಂದ ಮನೋಹರನಾದ ಆ ಶ್ರೀಮತಿಯ ಮುಖವೆಂಬ ಚಂದ್ರನು ಲಕ್ಷ್ಮೀದೇವಿಯ ಕೈಯಲ್ಲಿರುವ ಕ್ರೀಡಾರ್ಥವಾದ ಕಮಲವನ್ನು ಜಯಿಸಬೇಕೆಂಬ ಇಚ್ಛೆಯಿಂದಲೇ ಯಾವಾಗಲೂ ಪ್ರಕಾಶಿಸುತ್ತಿದ್ದಾನೆ.

**ತಸ್ಯಾಶ್ಚರಣವಿನ್ಯಾಸೇ ಲಾಕ್ಷಾರಕ್ತಾಂ ಪದಾವಲೀಮ್ ।**
**ಭ್ರಮರಾ ಲಂಘಯಂತ್ಯಾಶು ರಕ್ತಾಂಬುಜವಿಶಂಕಯಾ ॥ ೧೪೫ ॥**

ಅಲತಿಗೆಯರಸವನ್ನು ಹಚ್ಚಿಕೊಂಡಿರುವ ಆ ಶ್ರೀಮತಿಯ ಪಾದಗಳ ಹೆಜ್ಜೆಗಳನ್ನು ನೋಡಿ ಕೆಂದಾವರೆಗಳೆಂಬ ಭ್ರಮೆಯಿಂದ ಭ್ರಮರಗಳು ಸುತ್ತುತ್ತಿವೆ.

**ಕಾಮವಿದ್ಯಾಮಿ[9]ವಾದೇಷ್ಟುಂ ಭ್ರಮರ್ಯಃ ಕಲನಿಸ್ವನಾಃ ।**
**ತಸ್ಯಾಃ ಕರ್ಣೋತ್ಪಲೇ ಲಗ್ನಾ [10]ನಾಪಯಾಂತ್ಯಪಿ ತಾಡಿತಾಃ ॥ ೧೪೬ ॥**

ಕಾಮವಿದ್ಯೆಯನ್ನುಪದೇಶಮಾಡುವುದಕ್ಕೋಸ್ಕರವೋ ಎಂಬಂತೆ ಆ ಶ್ರೀಮತಿಯ ಕಿವಿಯ ಮೇಲಿರುವ ನೈದಿಲೆಪುಷ್ಪದಲ್ಲಿ ಸಂಬಂಧಿಸಿರುವುವೂ ಮನೋಹರವಾದ ಶಬ್ದವನ್ನು ಮಾಡುತ್ತಿರುವುವೂ ಆದ ಸ್ತ್ರೀಭ್ರಮರಗಳನ್ನು ಹೊಡೆದರೂ ತೊಲಗುವುದಿಲ್ಲ.

೧ ಲಬ್ಧಚೈತನ್ಯಃ. ೨ ಪಟ್ಟಕೇ. ೩ ಪೂರ್ವಭವಚೇಷ್ಟಿತಂ. ೪ ಸ್ತ್ರೀಸೃಷ್ಟೇಃ. ೫ ಕನ್ಯೇತ್ಯರ್ಥಃ. ೬ ಪಕ್ಷೇ ಉಜ್ಜ್ವಲಕಾಂತಿಂ. ೭ ಜೀವರೇಖಾಂ. ೮ ಮದನಃ. ೯ ಉಪದೇಷ್ಟುಂ. ೧೦ ನಾಪಸರಂತಿ.

**ದೇವಸ್ಯ ವಜ್ರದಂತಸ್ಯ ಪ್ರಿಯಪುತ್ರ್ಯಾ ತಯಾದರಾತ್ ।**
**ಕಲಾಕೌಶಲಮಾತ್ಮೀಯಮಿಹಾಲೇಖ್ಯೇ ಪ್ರದರ್ಶಿತಮ್ ॥ ೧೪೭ ॥**

ವಜ್ರದಂತರಾಜನ ಪ್ರಿಯಪುತ್ರಿಯಾದ ಆ ಶ್ರೀಮತಿಯು ಪ್ರೀತಿಯಿಂದ ತನ್ನ ಕಲಾಚಾತುರ್ಯವನ್ನು ಈ ಚಿತ್ರಪಟದಲ್ಲಿ ತೋರಿಸಿದ್ದಾಳೆ.

**ಲಕ್ಷ್ಮೀರಿವಾರ್ಥಿನಾಂ ಪ್ರಾರ್ಥ್ಯಾ ಸೈಷಾ ಕನ್ಯಾ ಘನಸ್ತನೀ ।**
**ಮೃಗ್ಯಾ ಮೃಗಯತೇ [೧]ತ್ವಾದೃ ನಾನ್ಯಸ್ತ್ವಮಿವ ಪುಣ್ಯವಾನ್ ॥ ೧೪೮ ॥**

ದ್ರವ್ಯವನ್ನಿಚ್ಛಿಸುವವರಿಂದ ಪ್ರಾರ್ಥಿಸಲ್ಪಡುವ ಲಕ್ಷ್ಮಿಯಂತೆ ಪ್ರಯತ್ನದಿಂದ ಪಡೆಯುವುದಕ್ಕೆ ಯೋಗ್ಯಳೂ ದಟ್ಟವಾದ ಸ್ತನಗಳುಳ್ಳ ಕನ್ಯೆಯೂ ಆದ ಈ ಶ್ರೀಮತಿಯು ಈಗ ನಿನ್ನನ್ನು ಹುಡುಕುತ್ತಿದ್ದಾಳೆ. ಆದುದರಿಂದ ನಿನ್ನಂತಹ ಪುಣ್ಯವಂತನು ಬೇರೆ ಯಾವನೂ ಇಲ್ಲ.

**ಲಲಿತಾಂಗಂ ಬ್ರವೀತಿ ತ್ವಾಂ ಪ್ರಿಯಾ [೨]ದಿವ್ಯೇವ ತನ್ಮೃಷಾ ।**
**ಯೇನೇಹಾಪಿ ಭವಾನ್ಸೌಮ್ಯೋ ಲಕ್ಷ್ಯತೇ [೩]ಲಲಿತಾಂಗಕಃ ॥ ೧೪೯ ॥**

ಸೌಮ್ಯನಾದ ನೀನು ಈ ಲೋಕದಲ್ಲಿಯೂ ಲಲಿತಾಂಗ(ಸುಂದರವಾದ ಅವಯವಗಳುಳ್ಳವ)ನಾಗಿ ತೋರುವುದರಿಂದ ನಿನ್ನ ಪ್ರಿಯಳು ಸ್ವರ್ಗದಲ್ಲಿಯೇ ನಿನ್ನನ್ನು ಲಲಿತಾಂಗನೆಂದು ಹೇಳುವುದು ಸುಳ್ಳು'

**ಇತ್ಯುಕ್ತಸ್ತು ಮಯಾ ಸಾಧು ಪಂಡಿತೇ ಸಾಧು ಜಲ್ಪಿತಮ್ ।**
**ವಿಧೇ[೪]ರ್ವಿಲಸಿತಂ ಚಿತ್ರಮಭೀಷ್ಟಾರ್ಥಪ್ರಸಿದ್ಧಿಷು ॥ ೧೫೦ ॥**

ಹೀಗೆ ನಾನು ಹೇಳಿದ ಮೇಲೆ ಆ ವಜ್ರಜಂಘನು 'ಪಂಡಿತೆಯೇ ! ಬಹಳ ಚೆನ್ನಾಗಿ ಹೇಳಿದೆ. ಇಷ್ಟವಾದ ಅರ್ಥದ ಸಿದ್ಧಿಯಲ್ಲಿ ಅದೃಷ್ಟದ ವ್ಯಾಪಾರವು ವಿಚಿತ್ರವಾಗಿದೆ.

**ಪಶ್ಯ ಜನ್ಮಾಂತರಾಜ್ಜಂತೂನಾನೀಯೈವಮನಂತರೇ ।**
**ಭವೇ [೫]ಸಂಘಟಯತ್ಯಾಶು ವಿಧಿರ್ಯಾತೋ[೬]ನುಲೋಮತಾಮ್ ॥**

ನೋಡು ! ಅದೃಷ್ಟವು ಅನುಕೂಲವಾಗಿದ್ದರೆ ಜನ್ಮಾಂತರದಿಂದ ಪ್ರಾಣಿಗಳನ್ನು ತಂದು ಉತ್ತರಭವದಲ್ಲಿ ಹೀಗೆ ಸಂಘಟನೆಮಾಡಿಸುತ್ತದೆ.

**ದ್ವೀಪಾಂತರಾದ್ದಿಶಾಮಂತಾ[೭]ದಂತರೀಪಾದಪಾಂ ನಿಧೇಃ ।**
**ವಿಧಿರ್ಘಟಯತೀಷ್ಟಾರ್ಥಮಾನೀಯಾ[೮]ನ್ವೀಪತಾಂ ಗತಃ ॥ ೧೫೨ ॥**

ಅನುಕೂಲತೆಯನ್ನು ಹೊಂದಿದ ಅದೃಷ್ಟವು ಇಷ್ಟವಸ್ತುವನ್ನು ದ್ವೀಪಾಂತರದಿಂದಲಾಗಲಿ, ದಿಕ್ಕುಗಳ ಕೊನೆಗಳಿಂದಲಾಗಲಿ, ಜಲಮಧ್ಯದ ದ್ವೀಪದಿಂದಲಾಗಲಿ, ಸಮುದ್ರದಿಂದಲಾಗಲಿ ತಂದು ಸಂಘಟನೆಯನ್ನು ಮಾಡಿಸುತ್ತದೆ'.

**ಇತೀ[೯]ರಯನ್ನಚೋ ಭೂಯಃ ಪ್ರಸ್ವಿದ್ಯತ್ಕರಪಲ್ಲವಃ ।**
**ತದಸ್ಮತ್ಪಟ್ಟಕಂ ಪಾಣೌ ಕೃತವಾನ್ಸ ಕುತೂಹಲೀ ॥ ೧೫೩ ॥**

ಈ ಪ್ರಕಾರವಾಗಿ ಹೇಳಿ ಬೆವರಿದ ಕೈಗಳುಳ್ಳ ಆ ವಜ್ರಜಂಘನು ಪುನಃ ಕುತೂಹಲದಿಂದ ಆ ನಮ್ಮ ಚಿತ್ರಪಟವನ್ನು ಕೈಯಲ್ಲಿ ತೆಗೆದುಕೊಂಡನು.

**ಸ್ವಪಟ್ಟಕಮಿದಂ ಚಾನ್ಯನ್ಮಮ ಹಸ್ತೇ ಸಮಾರ್ಪಿಪತ್ ।**
**ಯತ್ರ ತ್ವಚ್ಚಿತ್ರ[೧೦]ಸಂವಾದಿ ಸರ್ವಮಾಲಕ್ಷ್ಯತೇ ಸ್ಫುಟಮ್ ॥ ೧೫೪ ॥**

ಸಂಪೂರ್ಣವಾಗಿ ನಿನ್ನ ಚಿತ್ರಪಟಕ್ಕೆ ಸಮಾನವಾಗಿರುವ ಈ ತನ್ನ ಚಿತ್ರಪಟವನ್ನು ನನ್ನ ಕೈಯಲ್ಲಿ ಕೊಟ್ಟನು.

೧ ಭವಂತಂ. ೨ ಸ್ವರ್ಗೇ ಏವ. ೩ ಮನೋಜ್ಞಾವಯವಃ. ೪ ಚೇಷ್ಟಿತಂ. ೫ ಸಂಬಂಧಂ ಕರೋತಿ. ೬ ಅನುಕೂಲತಾಂ. ೭ ವಾರಿಮಧ್ಯದ್ವೀಪಾತ್. ೮ ಆನುಕೂಲ್ಯಂ. ೯ ಬ್ರುವನ್. ೧೦ ಸದೃಶಂ.

**[೧]ಸೂತ್ರಕ್ರಮಃ ಸ್ಫುಟೋತ್ರಾಸ್ತಿ ವ್ಯಕ್ತೋ [೨]ವರ್ಣಕ್ರಮೋಪ್ಯಯಮ್ ।**
**ಕ್ರಮೋ ಭಾವಾನುಬಂಧಸ್ಯ [೩]ಪ್ರತ್ಯಾಹಾರ ಇವಾಸ್ತ್ಯಹೋ ॥ ೧೫೫ ॥**

ಪ್ರತ್ಯಾಹಾರ(ವ್ಯಾಕರಣ)ಶಾಸ್ತ್ರದಲ್ಲಿ ಸೂತ್ರಕ್ರಮವೂ ಅಕಾರಾದಿವರ್ಣಕ್ರಮವೂ ಸ್ಫುಟವಾಗಿರುವಂತೆ, ಈ ಚಿತ್ರದಲ್ಲಿ ಸೂತ್ರವಿನ್ಯಾಸಕ್ರಮವೂ ಕಪ್ಪು ಬಿಳಿಪು ಮೊದಲಾದ ವರ್ಣಗಳ ಕ್ರಮವೂ ಅಭಿಪ್ರಾಯಗಳ ಸಂಬಂಧಕ್ರಮವೂ ಸ್ಫುಟವಾಗಿವೆ.

**ಇದಮರ್ಪಯತಾ ನೂನಮನುರಾಗೋ ಮನೋಗತಃ ।**
**ತ್ವನ್ಮನೋರಥಸಂಸಿದ್ಧೌ ಸತ್ಯಂಕಾರೋಽರ್ಪಿತೋಮುನಾ ॥ ೧೫೬ ॥**

ವಜ್ರಜಂಘನು ಈ ಚಿತ್ರಪಟವನ್ನು ಕೊಟ್ಟು ನಿಜವಾಗಿಯೂ ನಿನ್ನ ಮನೋರಥಸಿದ್ಧಿಯಲ್ಲಿ ತನ್ನ ಮನೋಗತವಾದ ಅನುರಾಗವನ್ನು ಅರ್ಪಿಸಿದನು. ಶ್ರೀಮತಿಯ ಮನೋರಥಕ್ಕನುಗುಣವಾಗಿ ತನ್ನ ಪ್ರೀತಿಯನ್ನು ತೋರಿಸಿದನೆಂದರ್ಥವು.

**ತತಃ ಕರಂ ಪ್ರಸಾರ್ಯಾರ್ಯೇ ಪುನರ್ದರ್ಶನಮಸ್ತು ತೇ ।**
**ವ್ರಜ ವ್ರಜಾಮ ಇತ್ಯುದ್ಗೀರ್ನಿರಗಾತ್ಸ ಜಿನಾಲಯಾತ್ ॥ ೧೫೭ ॥**

ಆಮೇಲೆ ತನ್ನ ಕೈಗಳನ್ನು ನೀಡಿ 'ಎಲೈ ಆರ್ಯಳೇ ! ಪುನಃ ನಿನ್ನ ದರ್ಶನವಾಗಲಿ. ಈಗ ನೀನು ತೆರಳು, ನಾವು ಹೋಗುತ್ತೇವೆ' ಎಂದು ಹೇಳಿ ಆ ವಜ್ರಜಂಘನು ಜಿನಮಂದಿರದಿಂದ ಹೊರಟುಹೋದನು.

**ಗೃಹೀತ್ವಾಹಂ ಚ ತದ್ವಾರ್ತಾಮಿಹಾಗಾಮಿತಿ ಪಂಡಿತಾ ।**
**ಪ್ರಸಾರಿತವತೀ ತಸ್ಯಾಃ ಪುರಸ್ತಚ್ಚಿತ್ರಪಟ್ಟಕಮ್ ॥ ೧೫೮ ॥**

ನಾನೂ ಆ ಸಮಾಚಾರವನ್ನು ತೆಗೆದುಕೊಂಡು ಇಲ್ಲಿಗೆ ಬಂದೆನು'' ಹೀಗೆಂದು ಹೇಳಿ ಪಂಡಿತೆಯು ಆ ಶ್ರೀಮತಿಯ ಮುಂದೆ ವಜ್ರಜಂಘನು ಕೊಟ್ಟಿದ್ದ ಚಿತ್ರಪಟವನ್ನು ಬಿಚ್ಚಿದಳು.

**ತನ್ನಿರ್ವರ್ಣ್ಯ ಚಿರಂ ಜಾತಪ್ರತ್ಯಯಾ ಸಾ ಸಮಾಶ್ವಸೀತ್ ।**
**ಚಿರೋಢಪ್ರೌಢಸಂತಾಪಾ ಚಾತಕೀವ ಘನಾಗಮಮ್ ॥ ೧೫೯ ॥**

ಹೆಣ್ಣುಚಾತಕಪಕ್ಷಿಯು ಮೇಘದ ಆಗಮನವನ್ನು ನೋಡಿ ಬಹುಕಾಲದಿಂದ ವೃದ್ಧಿಯನ್ನು ಹೊಂದಿದ ಸಂತಾಪದಿಂದ ಶಾಂತವಾಗುವಂತೆ, ಆ ಶ್ರೀಮತಿಯು ಆ ಚಿತ್ರಪಟವನ್ನು ನೋಡಿ ಬಹಳ ಹೊತ್ತಿನ ಮೇಲೆ ನಂಬಿಕೆಯುಂಟಾಗಿ ಸುಖವನ್ನು ಹೊಂದಿದಳು.

**ಯಥಾ ಶರನ್ನದೀತೀರಪುಲಿನಂ ಹಂಸಕಾಮಿನೀ ।**
**ಭವ್ಯಾವಲೀ ಯಥಾಧ್ಯಾತ್ಮಶಾಸ್ತ್ರಂ ಪ್ರಾಪ್ಯ ಪ್ರಮೋದತೇ ॥ ೧೬೦ ॥**

**ಯಥಾ ಕುಸುಮಿತಂ ಚೂತಕಾನನಂ ಕಲಕಂಠಿಕಾ ।**
**ದ್ವೀಪಂ ನಂದೀಶ್ವರಂ ಪ್ರಾಪ್ಯ ಯಥಾ ವಾ ಪೃತನಾಮರೀ ॥ ೧೬೧ ॥**

**ತಥೇದಂ ಪಟ್ಟಕಂ ಪ್ರಾಪ್ಯ ಶ್ರೀಮತ್ಯಾಸೀದನಾಕುಲಾ ।**
**ಮನೋಜ್ಞೇಷ್ಟಾರ್ಥಸಂಪತ್ತಿಃ ಕಸ್ಯ ವಾ ನೋತ್ಕತಾಂ ಹರೇತ್ ॥ ೧೬೨ ॥**

ಶರತ್ಕಾಲದ ನದಿಯ ದಡದಲ್ಲಿ ಮರಳನ್ನು ಸೇರಿ ಸ್ತ್ರೀಹಂಸಪಕ್ಷಿಯು ಸಂತೋಷಪಡುವಂತೆಯೂ ಭವ್ಯರು ಅಧ್ಯಾತ್ಮಶಾಸ್ತ್ರವನ್ನು ಹೊಂದಿ ಸಂತೋಷಪಡುವಂತೆಯೂ ಸ್ತ್ರೀಕೋಗಿಲೆಯು ಹೂಬಿಟ್ಟಿರುವ ಮಾವಿನವನವನ್ನು ಹೊಂದಿ ಸಂತೋಷಪಡುವಂತೆಯೂ ದೇವತೆಗಳ ಸೈನ್ಯವು ನಂದೀಶ್ವರದ್ವೀಪವನ್ನು ಸೇರಿ ಸಂತೋಷಪಡುವಂತೆಯೂ ಶ್ರೀಮತಿಯು ಈ ಚಿತ್ರಪಟವನ್ನು ಹೊಂದಿ ವ್ಯಾಕುಲರಹಿತಳಾದಳು. ಸಂತೋಷಪಟ್ಟಳೆಂದರ್ಥವು. ಮನೋಹರವಾದ ಇಷ್ಟಾರ್ಥಸಂಪತ್ತಿಯು ಯಾರ ಮನಃಖೇದವನ್ನು ತಾನೆ ನಾಶಮಾಡದು ?

೧ ಪಕ್ಷೇ ಅಲ್ಪಾಕ್ಷರಮಿತ್ಯಾದಿ. ೨ ಪಕ್ಷೇ ಸ್ವರಾದಿ. ೩ ಪ್ರತ್ಯಾಹಾರಶಾಸ್ತ್ರೇ.

**ತತಃ ಕೃತಾರ್ಥತಾಂ ತಸ್ಯಾಃ ಸಮರ್ಥಯಿತುಕಾಮಯಾ ।**
**ಪ್ರೋಚೇ ಪಂಡಿತಯಾ ವಾಚಂ ಶ್ರೀಮತ್ಯವಸರೋಚಿತಮ್ ॥ ೧೬೩ ॥**

ಅನಂತರ ಶ್ರೀಮತಿಯ ಇಷ್ಟಾರ್ಥವು ಕೈಗೂಡಿದುದರಿಂದ ತಾನು ಕೃತಾರ್ಥಳಾದೆನೆಂದು ತಿಳಿಸಬೇಕೆಂಬ ಅಪೇಕ್ಷೆಯುಳ್ಳ ಪಂಡಿತೆಯು ಶ್ರೀಮತಿಯನ್ನು ಕುರಿತು ಸಮಯೋಚಿತವಾದ ಮಾತನ್ನು ಹೇಳಿದಳು.

**ದಿಷ್ಟ್ಯಾ ಕಲ್ಯಾಣಿ ಕಲ್ಯಾಣಾನ್ಯಚಿರಾತ್ತ್ವಮವಾಪ್ನುಹಿ ।**
**ಪ್ರತೀಹಿ ಪ್ರಾಣನಾಥೇನ ಪ್ರತ್ಯಾಸನ್ನಂ ಸಮಾಗಮಮ್ ॥ ೧೬೪ ॥**

''ಎಲೈ ಮಂಗಳಾಂಗಿಯೇ! ನೀನು ಮಂಗಲಕರವಾದ ಸುಖಗಳನ್ನು ಶೀಘ್ರವಾಗಿಯೇ ಹೊಂದು. ನಿನ್ನ ಪ್ರಾಣಕಾಂತನೊಡನೆ ನಿನಗೆ ಸಮಾಗಮವು ಬಹಳ ಸಮೀಪಸ್ಥವಾಗಿದೆಯೆಂದು ನಂಬು.

**ಮಾಗಮಸ್ತ್ವಮನಾಶ್ವಾಸಂ ಸ ಜೋಷಂ ಗತವಾನಿತಿ ।**
**ಮಯಾ ಸುನಿಪುಣಂ ತಸ್ಯ ಭಾವಸ್ತ್ವಯ್ಯುಪಲಕ್ಷಿತಃ ॥ ೧೬೫ ॥**

ಆ ವಜ್ರಜಂಘನು ಸುಮ್ಮನಿದ್ದಾನೆಂದು ನಿನ್ನ ಕಾರ್ಯಸಿದ್ಧಿಯ ವಿಷಯದಲ್ಲಿ ಅಪನಂಬಿಕೆಯನ್ನು ಮಾಡಬೇಡ. ಅವನ ಭಾವವು ನಿನ್ನಮೇಲಿದೆಯೆಂಬ ವಿಷಯವನ್ನು ನಾನು ಚೆನ್ನಾಗಿ ನೋಡಿದೆನು.

**ಚಿರಂ ವಿಲಂಬಿತೋ ದ್ವಾರಿ ವೀಕ್ಷತೇ ಮಾಂ ಮುಹುರ್ಮುಹುಃ ।**
**ವ್ರಜನ್ನಪಿ ಸುಗೇ ಮಾರ್ಗೇ ಸ್ಖಲತ್ಯೇವ ಪದೇ ಪದೇ ॥ ೧೬೬ ॥**

ಆ ವಜ್ರಜಂಘನು ಜಿನಮಂದಿರದಿಂದ ಹೊರಟುಹೋಗುವಾಗ ಬಾಗಿಲಲ್ಲಿ ನನ್ನನ್ನು ಬಾರಿಬಾರಿಗೂ ನೋಡುತ್ತಿದ್ದನು. ಸರಿಯಾದ ಮಾರ್ಗದಲ್ಲಿ ಹೋಗುತ್ತಿದ್ದರೂ ಪ್ರತಿಹೆಜ್ಜೆಯಲ್ಲಿಯೂ ಎಡರುತ್ತಿದ್ದನು.

**ಸ್ಮಯತೇ ಜೃಂಭತೇ ಕಿಂಚಿತ್ಸ್ಮರತ್ಯಾರಾದ್ವಿಲೋಕತೇ ।**
**ಶ್ವಸಿತ್ಯುಷ್ಣಂ ಚ ದೀರ್ಘಂ ಚ ಪಟುರಸ್ಮಿನ್ಸ್ಮರಜ್ವರಃ ॥ ೧೬೭ ॥**

ಸ್ವಲ್ಪ ನಗುತ್ತಲೂ ಆಕಳಿಕೆಯನ್ನು ಬಿಡುತ್ತಲೂ ಸ್ಮರಿಸುತ್ತಲೂ ಈಕಡೆ ಆಕಡೆ ನೋಡುತ್ತಲೂ ಉಷ್ಣವಾಗಿಯೂ ದೀರ್ಘವಾಗಿಯೂ ಶ್ವಾಸವನ್ನು ಬಿಡುತ್ತಲೂ ಇದ್ದನು. ಇವನಲ್ಲಿ ಮದನಜ್ವರವು ತೀವ್ರವಾಗಿದ್ದಿತು.

**ತಮೇವ ಬಹುಮನ್ಯೇತೇ ಪಿತರೌ ತೇ ವರೋತ್ತಮಮ್ ।**
**ನೃಪೇಂದ್ರೋ ಭಾಗಿನೇಯತ್ವಾದ್ಭ್ರಾತ್ರೀಯತ್ವಾಚ್ಚ ದೇವ್ಯಸೌ ॥ ೧೬೮ ॥**

ನಿನ್ನ ತಂದೆಯ ಸಹೋದರಿಯ ಮಗನಾಗಿರುವುದರಿಂದ ವಜ್ರದಂತರಾಜನೂ ನಿನ್ನ ತಾಯಿಯ ಸಹೋದರನ ಮಗನಾಗಿರುವುದರಿಂದ ಮಹಾರಾಣಿಯೂ ನಿನಗೆ ಆ ವಜ್ರಜಂಘನು ಉತ್ತಮವರನೆಂದು ತಿಳಿದು ಅವನನ್ನು ಗೌರವಿಸುತ್ತಾರೆ.

**ಲಕ್ಷ್ಮೀವಾನ್ಕುಲಜೋ ದಕ್ಷಃ ಸುರೂಪೋಽಭಿಮತಃ ಸತಾಮ್ ।**
**ಇತ್ಯನೇಕಗುಣಗ್ರಾಮಸ್ತಸ್ಮಿನ್ನಸ್ತಿ ವರೋಚಿತಃ ॥ ೧೬೯ ॥**

ವರನು ಐಶ್ವರ್ಯವಂತನೂ ಉತ್ತಮಕುಲದಲ್ಲಿ ಹುಟ್ಟಿದವನೂ ಚತುರನೂ ಒಳ್ಳೆಯ ಸುಂದರನೂ ಆಗಿರಬೇಕೆಂದು ಸತ್ಪುರುಷರಿಗೆ ಸಮ್ಮತವಾಗಿರುವಂತೆ, ವಜ್ರಜಂಘನಲ್ಲಿ ವರನಿಗೆ ಉಚಿತವಾದ ಇನ್ನೂ ಅನೇಕ ಗುಣಗಳಿವೆ.

**ಸಪತ್ನೀ ಶ್ರೀಸರಸ್ವತ್ಯೋರ್ಭೂತ್ವಾ ತ್ವಂ ತದುರೋಗೃಹೇ ।**
**ಚಿರಂ ನಿವಸ ಕಲ್ಯಾಣಿ ಕಲ್ಯಾಣಶತಭಾಗಿನೀ ॥ ೧೭೦ ॥**

ಎಲೈ ಮಂಗಳಾಂಗಿಯೇ! ನೀನು ಲಕ್ಷ್ಮಿಗೂ ಸರಸ್ವತಿಗೂ ಸವತಿಯಾಗಿದ್ದುಕೊಂಡು ಆ ವಜ್ರಜಂಘನ ವಕ್ಷಃಸ್ಥಳವೆಂಬ ಮನೆಯಲ್ಲಿ ಅನೇಕ ಸುಖಗಳನ್ನನುಭವಿಸುತ್ತ ಬಹುಕಾಲದವರೆಗೆ ವಾಸಮಾಡು.

**[೧]ಸಾಮಾನ್ಯೇನೋಪಮಾನಂ ತೇ ಲಕ್ಷ್ಮೀರ್ನೈವ ಸರಸ್ವತೀ ।**
**[೨]ಯತೋಽಪೂರ್ವೈವ ಲಕ್ಷ್ಮೀಸ್ತ್ವಮನ್ಯೈವ ಚ ಸರಸ್ವತೀ ॥ ೧೭೧ ॥**

ನೀನು ಅಪೂರ್ವಳಾದ ಲಕ್ಷ್ಮಿಯೂ ಬೇರೆಯೇ ಸರಸ್ವತಿಯೂ ಆಗಿರುವುದರಿಂದ ಸಮಾನಧರ್ಮದಿಂದ ನಿನ್ನನ್ನು ಲಕ್ಷ್ಮಿಗೂ ಸರಸ್ವತಿಗೂ ಹೋಲಿಸುವುದಕ್ಕಾಗುವುದಿಲ್ಲ.

**[೩]ಭಿದೇಲಿಮದಲೇ ಶಶ್ವತ್ಸಂಕೋಚಿನಿ ರಜೋಜುಷಿ ।**
**ಸಾ ಶ್ರೀ[೪]ರಶ್ರೀರಿವೋದ್ಭೂತಾ ಕುಶೇಶಯಕುಟೀರಕೇ ॥ ೧೭೨ ॥**

**ಸರಸ್ವತೀ ಚ ಸೋಚ್ಛಿಷ್ಟೇ ಚಲಜ್ಜಿಹ್ವಾಗ್ರಪಲ್ಲವೇ ।**
**ಲಬ್ಧಜನ್ಮಾ ತಯೋಃ ಕ್ವತ್ಯಸ್ತ್ವಸ್ಯೈವಾ[೫]ಭಿಜನಃ ಶುಚಿಃ ॥ ೧೭೩ ॥**

ಆ ಲಕ್ಷ್ಮಿಯು ಮುರಿದು ಹೋಗುವ ಎಲೆಗಳುಳ್ಳದೂ ಆಗಾಗ್ಯೆ ಮುಚ್ಚಿಕೊಳ್ಳುವುದೂ ಧೂಳುಗಳುಳ್ಳದೂ ಆದ ಕಮಲವೆಂಬ ಗುಡಿಸಲಿನಲ್ಲಿ ದರಿದ್ರಳಂತೆ ಹುಟ್ಟಿದಳು. ಸರಸ್ವತಿಯೂ ಉಚ್ಛಿಷ್ಟವೂ ಚಂಚಲವೂ ಆದ ನಾಲಗೆಯ ತುದಿಯೆಂಬ ತಳಿರಿನಲ್ಲಿ ಹುಟ್ಟಿದಳು. ನಿನ್ನ ಕುಲವೇ ಪರಿಶುದ್ಧವಾದುದು. ಆ ಲಕ್ಷ್ಮೀ ಸರಸ್ವತಿಯರಿಗೆ ಇಂತಹ ಪರಿಶುದ್ಧವಾದ ಕುಲವು ಎಲ್ಲಿ ಬಂದಿತು ?ಹಿಂದೆ ಹೇಳಿದಂತೆ ಲಕ್ಷ್ಮೀಸರಸ್ವತಿಯರ ಉತ್ಪತ್ತಿಸ್ಥಾನಗಳು ಅಪರಿಶುದ್ಧವಾಗಿರುವುದರಿಂದ ಶ್ರೀಮತಿಗೆ ಆ ಲಕ್ಷ್ಮೀಸರಸ್ವತಿಯರ ಉಪಮೆಯನ್ನು ಕೊಡಲಾಗುವುದಿಲ್ಲವೆಂದು ತಾತ್ಪರ್ಯವು.

**ಲತಾಂಗಿ ಲಲಿತಾಂಗಸ್ಯ [೬]ವಿವಿಕ್ತೇ ತಸ್ಯ ಮಾನಸೇ ।**
**ರಮಸ್ವ ರಾಜಹಂಸೀವ [೭]ಲತಾಂಗಮಿತವತ್ಸರಾನ್ ॥ ೧೭೪ ॥**

ಲತೆಯಂತೆ ಸುಂದರವಾದ ಶರೀರವುಳ್ಳ ಶ್ರೀಮತಿಯೇ! ನೀನು ಸುಂದರವಾದ ಶರೀರವುಳ್ಳ ಆ ವಜ್ರಜಂಘನ ಪರಿಶುದ್ಧವಾದ ಮನಸ್ಸಿನಲ್ಲಿ, ನಿರ್ಜನವಾದ ಮಾನಸ ಸರೋವರದಲ್ಲಿ ಹೆಣ್ಣು ರಾಜಹಂಸಪಕ್ಷಿಯು ಕ್ರೀಡಿಸುವಂತೆ, ಲತಾಂಗ ಸಂಖ್ಯಾಪರಿಮಿತವಾದ ವರ್ಷಗಳವರೆಗೆ ಕ್ರೀಡಿಸು.

**ಯುವಯೋರುಚಿತಂ ಯೋಗಂ ಕೃತ್ವಾ ಯಾತು ಕೃತಾರ್ಥತಾಮ್ ।**
**ವಿಧಾತಾ ಜನನಿರ್ವಾದಾನ್ಮುಚ್ಯೇತ ಕಥಮನ್ಯಥಾ ॥ ೧೭೫ ॥**

ಬ್ರಹ್ಮ(ಶುಭಕರ್ಮ)ನು ನಿಮ್ಮಿಬ್ಬರಿಗೆ ಉಚಿತವಾದ ಸಂಯೋಗವನ್ನು ಮಾಡಿ ಕೃತಾರ್ಥನಾಗಲಿ. ಹಾಗೆ ಮಾಡದಿದ್ದರೆ ಬ್ರಹ್ಮನು ಜನಾಪವಾದದಿಂದ ಹೇಗೆ ಬಿಡಲ್ಪಡುವನು ? ಅನುಚಿತಸಂಬಂಧವನ್ನು ಮಾಡಿದರೆ ಜನರು ದೂಷಣೆ ಮಾಡುವರೆಂದರ್ಥವು.

**ಸಮಾಶ್ವಸಿಹಿ ತದ್ಭದ್ರೇ ಕ್ಷಿಪ್ರಮೇಷ್ಯತಿ ತೇ ವರಃ ।**
**ತದ್ವರಾಗಮನೇ ಪಶ್ಯ ಪುರಮುದ್ವೇಲ[೮]ಕೌತುಕಮ್ ॥ ೧೭೬ ॥**

ಆದುದರಿಂದ ಎಲೈ ಮಂಗಳಾಂಗಿಯೇ! ಸಮಾಧಾನಚಿತ್ತಳಾಗಿರು. ಶೀಘ್ರದಲ್ಲಿಯೇ ನಿನ್ನ ವರನು ಬರುವನು. ನೋಡು; ನಿನ್ನ ವರನು ಬರುವುದರಿಂದ ಪಟ್ಟಣವೆಲ್ಲ ಬಹಳ ಉತ್ಸಾಹವುಳ್ಳದಾಗಿದೆ''.

**ಇತ್ಯಾದಿ[೯]ತದ್ಗತಾಲಾಪೈಃ ಶ್ರವ್ಯೈಸ್ತಾಂ ಸುಖಮಾನಯತ್ ।**
**ಪಂಡಿತಾ [೧೦]ಸಾ ತು ತತ್ಪ್ರಾಪ್ತ್ಯೈ ನಾದ್ಯಾಪ್ಯಾಸೀನ್ನಿರಾಕುಲಾ ॥ ೧೭೭ ॥**

ವಜ್ರಜಂಘನ ವಿಷಯಕವೂ ಇಂಪೂ ಮೇಲೆ ಹೇಳಲ್ಪಟ್ಟುವೂ ಆದ ಭಾಷಣಗಳಿಂದ ಪಂಡಿತೆಯು ಶ್ರೀಮತಿಯನ್ನು ಸುಖಪಡಿಸಿದಳು. ಆ ಶ್ರೀಮತಿಯಾದರೋ ವಜ್ರಜಂಘನ ಪ್ರಾಪ್ತಿಯ ವಿಷಯದಲ್ಲಿ ಈಗಲೂ ನಿರಾಕುಲಚಿತ್ತಳಾಗಲಿಲ್ಲ.

---

೧ ಸಮಾನಧರ್ಮೇಣ. ೨ ಯಸ್ಮಾತ್. ೩ ಭಿನ್ನಪರ್ಣೇ. ೪ ದರಿದ್ರಾ. ೫ ಅನ್ವಯಃ. ೬ ಪವಿತ್ರೇ. ೭ ಸಂಖ್ಯಾವಿಶೇಷಃ. ೮ ಉತ್ಸಾಹಂ. ೯ ವಜ್ರಜಂಘಃ ೧೦ ಶ್ರೀಮತೀ.

**ತಾವಚ್ಚ ಚಕ್ರಿಣಾ ಬಂಧುಪ್ರೀತಿಮಾತನ್ವತಾ ಪರಾಮ್ ।**
**ಗತ್ವಾರ್ಘಪಥಮಾನೀತೋ ವಜ್ರಬಾಹುಮಹೀಪತಿಃ ॥ ೧೭೮ ॥**

ಇಷ್ಟರಲ್ಲಿ ವಜ್ರದಂತಚಕ್ರವರ್ತಿಯು ಬಹಳವಾಗಿ ಬಂಧುಪ್ರೀತಿಯನ್ನು ತೋರ್ಪಡಿಸಿ ಅರ್ಘದಾರಿಗೆ ಹೋಗಿ ವಜ್ರಬಾಹುರಾಜನನ್ನು ಕರೆತಂದನು.

**[1]ಸ್ವಸುಃಪತಿಂ ಸ್ವಸಾರಂ ಚ [2]ಸ್ವಸ್ರೀಯಂ ಚ ವಿಲೋಕಯನ್ ।**
**ಪ್ರಾಪ ಚಕ್ರೀ ಪರಾಂ ಪ್ರೀತಿಂ ಪ್ರೇಮ್ಣೋ ದೃಷ್ಟಾ ಹಿ ಬಂಧುತಾ॥ ೧೭೯ ॥**

ವಜ್ರದಂತಚಕ್ರವರ್ತಿಯು, ತನ್ನ ಸಹೋದರಿಯ ಪತಿಯಾದ ವಜ್ರಬಾಹು ರಾಜನನ್ನೂ, ಸಹೋದರಿಯಾದ ವಸುಂಧರೆಯನ್ನೂ, ಸಹೋದರಿಯ ಮಗನಾದ ವಜ್ರಜಂಘನನ್ನೂ ನೋಡಿ ಬಹಳ ಪ್ರೀತಿಪಟ್ಟನು. ನ್ಯಾಯವೇ; ಬಂಧುತ್ವವೆಂಬುದು ಪ್ರೇಮಕ್ಕೋಸ್ಕರವಾಗಿದೆಯಲ್ಲವೇ ? ಬಂಧುಗಳನ್ನು ಪ್ರೀತಿಸುವುದು ಸ್ವಭಾವ ವಾಗಿದೆಯೆಂದರ್ಥವು.

**ಸುಖಸಂಕಥಯಾ ಕಾಂಚಿತ್ಸ್ಥಿತ್ವಾ ಕಾಲಕಲಾಂ ಪುನಃ ।**
**[3]ಪ್ರಾಘೂರ್ಣಿಕೋಚಿತಾಂ ತೇಽಮೀ ಸತ್ಕ್ರಿಯಾಂ ತೇನ [4]ಲಂಭಿತಾಃ ॥**

ಸ್ವಲ್ಪಕಾಲದವರೆಗೆ ಸುಖಸಂಭಾಷಣೆಯನ್ನು ಮಾಡಿ ತರುವಾಯ ವಜ್ರದಂತಚಕ್ರವರ್ತಿಯು ಅಭ್ಯಾಗತರಿಗೆ ಉಚಿತವಾದ ಸತ್ಕಾರಗಳನ್ನು ಮಾಡಿದನು.

**ಚಕ್ರವರ್ತಿಕೃತಾಂ ಪ್ರಾಪ್ಯ ವಜ್ರಬಾಹುಃ ಸಮಾನನಾಮ್ ।**
**ಪಿಪ್ರಿಯೇ ನನು ಸಂಪ್ರೀತ್ಯೈ ಸತ್ಕಾರಃ ಪ್ರಭುಣಾ ಕೃತಃ ॥ ೧೮೧ ॥**

ಆ ವಜ್ರಬಾಹುರಾಜನು ಚಕ್ರವರ್ತಿಯಿಂದ ಮಾಡಲ್ಪಟ್ಟ ಸತ್ಕಾರದಿಂದ ಬಹಳ ಸಂತೋಷಪಟ್ಟನು. ಚಕ್ರವರ್ತಿಯು ಮಾಡಿದ ಸತ್ಕಾರವು ಪ್ರೀತಿಯನ್ನುಂಟು ಮಾಡುವುದಿಲ್ಲವೇ ?

**ಯಥಾಸುಖಂ ಚ ಸಂತೋಷಾತ್ಸ್ಥಿತೇಷ್ವೇವಂ ಸನಾಭಿಷು ।**
**ತತಶ್ಚಕ್ರಧರೋ ವಾಚಮಿತ್ಯವೋಚತ್ಸ್ವಸುಃ ಪತಿಮ್ ॥ ೧೮೨ ॥**

ಹೀಗೆ ಬಂಧುಗಳೆಲ್ಲ ಸಂತೋಷದಿಂದ ಸುಖವಾಗಿ ಕುಳಿತಮೇಲೆ ವಜ್ರದಂತ ಚಕ್ರವರ್ತಿಯು ತನ್ನ ಸಹೋದರಿಯ ಪತಿಯಾದ ವಜ್ರಬಾಹುರಾಜನನ್ನು ಕುರಿತು ಇಂತೆಂದನು:—

**ಯತ್ಕಿಂಚಿದ್ರುಚಿತಂ ತುಭ್ಯಂ ವಸ್ತುಜಾಲಂ ಮಮಾಲಯೇ ।**
**ತದ್ಗೃಹಾಣ ಯದಿ ಪ್ರೀತಿರ್ಮಯಿ ತೇಽಸ್ತ್ಯ[5]ನಿಯಂತ್ರಣಾ ॥ ೧೮೩ ॥**

''ನನ್ನಲ್ಲಿ ನಿನಗೆ ತಡೆಯಿಲ್ಲದಿರುವ (ಅತಿಶಯವಾದ) ಪ್ರೀತಿಯಿದ್ದರೆ ನನ್ನ ಮನೆಯಲ್ಲಿ ನಿನಗೆ ಇಷ್ಟವಾದ ಪದಾರ್ಥವು ಯಾವುದಿದೆಯೋ ಅದನ್ನು ಪರಿಗ್ರಹಿಸು.

**ಪ್ರೀತೇರದ್ಯ ಪರಾಂ ಕೋಟಿಮಧಿರೋಹತಿ ಮೇ ಮನಃ ।**
**ತ್ವಂ [6]ಸತುಕ್ಕಃ ಸದಾರಶ್ಚ ಯನ್ಮಮಾಭ್ಯಾಗತೋ ಗೃಹಮ್ ॥ ೧೮೪ ॥**

ನೀನು ಪುತ್ರಪತ್ನೀಸಹಿತನಾಗಿ ನನ್ನ ಮನೆಗೆ ಬಂದಿರುವುದರಿಂದ ಈ ದಿನ ನನ್ನ ಮನಸ್ಸಿಗೆ ಬಹಳ ಸಂತೋಷವಾಗಿದೆ.

**ತ್ವಮಿಷ್ಟಬಂಧುರಾಯಾತೋ ಗೃಹಂ ಮೇಽದ್ಯ ಸದಾರಕಃ ।**
**[7]ಸಂವಿಭಾಗೋಚಿತಃ ಕೋಽನ್ಯಃ ಪ್ರಸ್ತಾವಃ ಸ್ಯಾನ್ಮಮೇದೃಶಃ ॥ ೧೮೫ ॥**

ಇಷ್ಟಬಂಧುವಾದ ನೀನು ಈ ದಿವಸ ಪತ್ನೀಸಹಿತನಾಗಿ ನನ್ನ ಮನೆಗೆ ಬಂದಿರುತ್ತಿ. ಸತ್ಕಾರಮಾಡುವುದಕ್ಕೆ ಯೋಗ್ಯವಾದ ಇಂತಹ ಅವಸರವು ನನಗೆ ಬೇರೆ ಯಾವುದು ? ಇದೇ ಒಳ್ಳೆಯ ಸಮಯವೆಂದರ್ಥವು.

೧ ಭಗಿನ್ಯಾ ವಸುಂಧರಯಾ. ೨ ಭಗಿನೀಪುತ್ರಂ. ೩ ಅಭ್ಯಾಗತೋಚಿತಾಂ. ೪ ಪ್ರಾಪಿತಾಃ. ೫ ಅಪ್ರತಿಬಂಧಾ. ೬ ಸಪುತ್ರಃ. ೭ ಸತ್ಕಾರೋಚಿತಃ.

**ತದತ್ರಾವಸರೇ ವಸ್ತು ತನ್ನ ಮೇ ಯನ್ನ ದೀಯತೇ ।**
**[1]ಪ್ರಣಯಿನ್ಪ್ರಣಯಸ್ಯಾಸ್ಯ ಮಾಕೃಥಾ ಭಂಗ[2]ಮರ್ಥಿನಃ ॥ ೧೮೬ ॥**

ಈ ಸಮಯದಲ್ಲಿ ಕೊಡಲ್ಪಡದಿರುವ ವಸ್ತುವು ನನ್ನದಲ್ಲವು. ಕೊಡು ವುದಕ್ಕಾಗದ ಪದಾರ್ಥವು ತನ್ನದಲ್ಲವೆಂದು ಭಾವವು. ಮಿತ್ರನೇ ! ನನ್ನ ಈ ಪ್ರೀತಿಯನ್ನು ಭಂಗಪಡಿಸಬೇಡ''.

**ಇತ್ಯುಕ್ತಃ ಪ್ರೇಮ[3]ನಿಘ್ನೇನ ಚಕ್ರಿಣಾ ಪ್ರತ್ಯುವಾಚ ಸಃ ।**
**ತ್ವತ್ಪ್ರಸಾದಾನ್ಮಮಾಸ್ತ್ಯೇವ ಸರ್ವಂ ಕಿಂ ಪ್ರಾರ್ಥ್ಯಮದ್ಯ ಮೇ ॥ ೧೮೭ ॥**

ವಜ್ರದಂತಚಕ್ರವರ್ತಿಯು ಪ್ರೇಮಪರವಶನಾಗಿ ಹೀಗೆ ಹೇಳಿದ ಮೇಲೆ ಆ ವಜ್ರಬಾಹುರಾಜನು ಇಂತೆಂದನು ''ನಿನ್ನ ಅನುಗ್ರಹದಿಂದ ನನಗೆ ಎಲ್ಲವೂ ಇದೆ. ಈಗ ನಾನು ಏನನ್ನು ಪ್ರಾರ್ಥಿಸಲಿ ?

**[4]ಸಾಮ್ನಾನೇನಾ[5]ರ್ಪಿತಸ್ವೇನ ಪ್ರಯುಕ್ತೇನೇತಿ ಸಾದರಮ್ ।**
**ಪ್ರಣಯಸ್ಯ ಪರಾಂ ಭೂಮಿಮಹಮಾರೋಪಿತಸ್ತ್ವಯಾ ॥ ೧೮೮ ॥**

ಹೀಗೆ ಆದರಪೂರ್ವಕವಾಗಿ ಧನವನ್ನು ಅರ್ಪಿಸುತ್ತೇನೆಂದು ಹೇಳಿದ ಈ ಪ್ರೇಮವಚನದಿಂದ ನೀನು ನನ್ನನ್ನು ಪ್ರೀತಿಯ ಅಂತ್ಯಸ್ಥಾನ(ಶಿಖರ)ವನ್ನು ಹತ್ತಿಸಿದೆ.

**ಕಿಯನ್ಮಾತ್ರಮಿದಂ ದೇವ ಸ್ವಾಪತೇಯಂ ಪರಿಕ್ಷಯಿ ।**
**ತ್ವಯಾಢ್ಯಂಕರಣೀ ದೃಷ್ಟಿರಲಮೇಷಾರ್ಪಿತಾ ಮಯಿ ॥ ೧೮೯ ॥**

ಪ್ರಭುವೇ ! ನಾಶವಾಗುವ ಈ ದ್ರವ್ಯವು ಎಷ್ಟರಮಟ್ಟಿನದು ? ನೀನು ನನ್ನಲ್ಲಿಟ್ಟಿರುವ ಮತ್ತು ಧನಿಕನನ್ನಾಗಿ ಮಾಡುವ ಈ ಕೃಪಾದೃಷ್ಟಿಯು ಸಾಕಾಗಿದೆ. ಕೃಪಾದೃಷ್ಟಿಯನ್ನಿಟ್ಟಿರುವುದು ಹೆಚ್ಚಿನ ಧನವೆಂದು ಭಾವವು.

**ಅಹಮದ್ಯ ಕೃತೀ ಧನ್ಯೋ ಜೀವಿತಂ ಶ್ಲಾಘ್ಯಮದ್ಯ ಮೇ ।**
**ಯದ್ವೀಕ್ಷಿತೋಽಸ್ಮಿ ದೇವೇನ ಸ್ನೇಹನಿರ್ಭರಯಾ ದೃಶಾ ॥ ೧೯೦ ॥**

ಪ್ರಭುವಾದ ನೀನು ನನ್ನನ್ನು ಪ್ರೇಮದೃಷ್ಟಿಯಿಂದ ನೋಡಿದುದರಿಂದ ನಾನು ಈ ದಿನ ಪುಣ್ಯಶಾಲಿಯಾದೆನು. ಧನ್ಯನಾದೆನು. ನನ್ನ ಜೀವನವು ಪ್ರಶಂಸೆಗೆ ಯೋಗ್ಯವಾದುದು.

**ಪರೋಪಕೃತಯೇ ಬಿಭ್ರತ್ಯರ್ಥವತ್ತಾಂ ಭವದ್ವಿಧಾಃ ।**
**ಲೋಕೇ[6]ಪ್ರಸಿದ್ಧಸಾಧುತ್ವಾಃ ಶಬ್ದಾ ಇವ [7]ಕೃತೌ ಗತಾಃ ॥ ೧೯೧ ॥**

ಲೋಕದಲ್ಲಿ ಸೂತ್ರಕ್ರಮದಿಂದ ನಿಷ್ಪನ್ನಗಳಾದ ಕಾವ್ಯದಲ್ಲಿರುವ ಶಬ್ದಗಳು ಪರೋಪಕಾರಕ್ಕೋಸ್ಕರ ಅರ್ಥವನ್ನು ಧರಿಸಿರುವಂತೆ, ತಮ್ಮಂತಹ ಪುರುಷರು ಪರೋಪಕಾರಕ್ಕೋಸ್ಕರ ಅರ್ಥ(ಐಶ್ವರ್ಯ)ವನ್ನು ಧರಿಸಿರುತ್ತಾರೆ.

**ತದೇವ ವಸ್ತು [8]ವಸ್ತುಷ್ಮೈ ಸೋಪಯೋಗಂ ಯದರ್ಥಿನಾಮ್ ।**
**ಅವಿಭಕ್ತಧನಾಯಾಸ್ತು ಬಂಧುತಾಯಾ ವಿಶೇಷತಃ ॥ ೧೯೨ ॥**

ಯಾಚಕರಿಗೆ ಉಪಯೋಗಕರವಾದ ವಸ್ತುವೇ ನಿಮಗೆ ಸಂತೋಷ ವನ್ನುಂಟುಮಾಡುವುದು. ಧನವನ್ನು ವಿಭಾಗಮಾಡಿಕೊಳ್ಳದಿರುವ ಬಂಧುಜನಗಳಿಗೆ ನಿಮ್ಮ ವಸ್ತು ಉಪಯೋಗಕ್ಕೆ ಬಂದರೆ ವಿಶೇಷವಾಗಿ ನಿಮಗೆ ಪ್ರೀತಿಯಾಗುವುದು.

**[9]ತದೇತತ್ಸ್ವೈರಸಂಭೋಗ್ಯಮಾಸ್ತಾಂ[10]ಸಾನ್ಯಾಸಿಕಂ ಧನಮ್ ।**
**ನ ಮೇ ಮಾನಗ್ರಹಃ ಕೋಽಪಿ ತ್ವಯಿ ನಾನಾದರೋಽಪಿ ವಾ ॥ ೧೯೩ ॥**

೧ ಭೋ ಮಿತ್ರ. ೨ ಮಮ. ೩ ಅಧೀನೇನ. ೪ ಪ್ರೇಮವಚನೇನ. ೫ ಸಮರ್ಪಿತಧನೇನ. ೬ ಸೂತ್ರಾನುಸಾರೇಣ ನಿಷ್ಪನ್ನಾಃ. ೭ ಕಾವ್ಯಂ ಪ್ರಾಪ್ತಾಃ. ೮ ಯುಷ್ಮಾಕಂ. ೯ ಕಾರಣಾತ್. ೧೦ ನಿಕ್ಷಿಪ್ತಂ.

ಆದುದರಿಂದ ನಮಗೆ ಸ್ವಚ್ಛಂದವಾಗಿ ಭೋಗಿಸುವುದಕ್ಕೆ ಯೋಗ್ಯವಾದ ಈ ನಿಮ್ಮ ದ್ರವ್ಯವು ನಿಕ್ಷಿಪ್ತ(ಸುರಕ್ಷಿತ)ವಾಗಿರಲಿ. ನನಗೆ ಅಭಿಮಾನವಾಗಲಿ ನಿನ್ನಲ್ಲಿ ಅನಾದರವಾಗಲಿ ಇಲ್ಲ.

**ಪ್ರಾರ್ಥಯೇಹಂ ತಥಾಪ್ಯೇತದ್ಯುಷ್ಮದಾಜ್ಞಾಂ ಪ್ರಪೂಜಯನ್ ।**
**ಶ್ರೀಮತೀ ವಜ್ರಜಂಘಾಯ ದೇಯಾ ಕನ್ಯೋತ್ತಮಾ ತ್ವಯಾ ॥ ೧೯೪ ॥**

ಆದರೂ ನಾನು ನಿಮ್ಮ ಆಜ್ಞೆಯನ್ನು ಗೌರವಿಸಿ ಉತ್ತಮಕನ್ಯೆಯಾದ ಶ್ರೀಮತಿಯನ್ನು ನೀನು ವಜ್ರಜಂಘನಿಗೆ ಕೊಡಬೇಕೆಂದು ಪ್ರಾರ್ಥಿಸುತ್ತೇನೆ.

**ಭಾಗಿನೇಯತ್ವಮಸ್ತ್ಯೇಕಮಾಭಿಜಾತ್ಯಂ ಚ ತತ್ಕೃತಮ್ ।**
**ಯೋಗ್ಯತಾಂ ಚಾಸ್ಯ ಪುಷ್ಣಾತಿ ಸತ್ಕಾರೋದ್ಯ ತ್ವಯಾ ಕೃತಃ ॥ ೧೯೫ ॥**

ವಜ್ರಜಂಘನು ನಿನ್ನ ಸೋದರಳಿಯನಾಗಿಯೂ ಆದರಿಂದ ಸತ್ಕುಲದಲ್ಲಿ ಹುಟ್ಟಿದವನಾಗಿಯೂ ಇದ್ದಾನೆ. ಈ ದಿನ ನೀನು ಮಾಡಿದ ಸತ್ಕಾರವೂ ಇವನ ಯೋಗ್ಯತೆಯನ್ನು ಹೆಚ್ಚಿಸುತ್ತದೆ.

**ಅಥ ವೈ ತತ್ವ[೧]ಲಂಕ್ತ್ವಾಯಂ ಸರ್ವಥಾರ್ಹತಿ ಕನ್ಯಕಾಮ್ ।**
**ಹಸಂತ್ಯಾಶ್ಚಾರುದಂತ್ಯಾಶ್ಚ ಪ್ರಾಘೂರ್ಣಕ ಇತಿ ಶ್ರುತೇಃ ॥ ೧೯೬ ॥**

ಅಥವಾ ಈ ಕಥನವೆಲ್ಲ ಇರಲಿ. 'ಹಸನ್ಮುಖಿಯೂ ಸುಂದರವಾದ ಹಲ್ಲುಗಳುಳ್ಳವಳೂ ಆದ ಕನ್ಯೆಯನ್ನು ಕೊಟ್ಟು ಸೋದರಳಿಯನನ್ನು ಸತ್ಕರಿಸು' ಎಂದು ವಾಡಿಕೆಯಿರುವುದರಿಂದ ಈ ವಜ್ರಜಂಘನು ಸರ್ವಪ್ರಕಾರದಿಂದಲೂ ಕನ್ಯೆಗೆ ತಕ್ಕವನಾಗಿದ್ದಾನೆ.

**ತತ್ಪ್ರಸೀದ ವಿಭೋ ದಾತುಂ ಭಾಗಿನೇಯಾಯ ಕನ್ಯಕಾಮ್ ।**
**ಸಫಲಾ ಪ್ರಾರ್ಥನಾ ಮೇಸ್ತು [೨]ಕೌಮಾರಃ ಸೋಸ್ತು ತತ್ಪತಿಃ ॥ ೧೯೭ ॥**

ಆದುದರಿಂದ ಪ್ರಭುವೇ ! ನಿನ್ನ ಸೋದರಳಿಯನಿಗೆ ಕನ್ಯೆಯನ್ನು ಕೊಡುವುದಕ್ಕೆ ಪ್ರಸನ್ನನಾಗು. ನನ್ನ ಪ್ರಾರ್ಥನೆಯು ಸಫಲವಾಗಲಿ. ಕುಮಾರಿಯ ಹೃದಯಕ್ಕೆ ಮೆಚ್ಚಿಗೆಯಾದ ಆ ವಜ್ರಜಂಘನು ಶ್ರೀಮತಿಗೆ ಪತಿಯಾಗಲಿ.

**ವಸ್ತುವಾಹನಸರ್ವಸ್ವಂ ಲಬ್ಧಮೇವಾಸಕೃನ್ಮಯಾ ।**
**ಕಿಂ ತೇನಾಲಬ್ಧಪೂರ್ವಂ ನಃ ಕನ್ಯಾರತ್ನಂ ಪ್ರದೀಯತಾಮ್ ॥ ೧೯೮ ॥**

ವಸ್ತುವಾಹನ ಮೊದಲಾದ ಸಕಲಪದಾರ್ಥಗಳನ್ನು ನಾನು ಅನೇಕಾವರ್ತಿ ತೆಗೆದುಕೊಂಡಿರುತ್ತೇನೆ. ಅದರಿಂದೇನು ಫಲ ? ಮೊದಲು ಪಡೆಯದಿದ್ದ ಕನ್ಯಾರತ್ನವನ್ನು ನಮಗೆ ಕೊಡು''.

**ಇತಿ ವಿಜ್ಞಾಪಿತಸ್ತೇನ ಚಕ್ರಭೃತ್ಪ್ರ[೩]ತ್ಯಪದ್ಯತ ।**
**ತಥಾಸ್ತು ಸಂಗಮೋ ಯೂನೋರನುರೂಪೋನಯೋರಿತಿ ॥ ೧೯೯ ॥**

ಹೀಗೆ ವಜ್ರಬಾಹುರಾಜನಿಂದ ವಿಜ್ಞಾಪಿಸಲ್ಪಟ್ಟ ವಜ್ರದಂತಚಕ್ರವರ್ತಿಯು ''ಯೌವನಸ್ಥರಾದ ಈ ಶ್ರೀಮತೀವಜ್ರಜಂಘರಿಗೆ ನಿಮ್ಮ ಇಷ್ಟದಂತೆ ಅನುರೂಪವಾದ ಸಂಬಂಧವು ಆಗಲಿ'' ಎಂಬುದಾಗಿ ಅನುಮತಿಸಿದನು.

**ಪ್ರಕೃತ್ಯಾ ಸುಂದರಾಕಾರೋ ವಜ್ರಜಂಘೋಸ್ತ್ವಯಂ ವರಃ ।**
**ಪತಿಂವರಾ ಗುಣೈರ್ಯುಕ್ತಾ ಶ್ರೀಮತೀ ಚಾಸ್ತು ಸಾ ವಧೂಃ ॥ ೨೦೦ ॥**

''ಸ್ವಭಾವದಿಂದ ಸುಂದರಾಕಾರನಾದ ಈ ವಜ್ರಜಂಘನು ವರನಾಗಲಿ. ಪತಿಯನ್ನು ವರಿಸುವವಳೂ ಗುಣಗಳಿಂದ ಯುಕ್ತಳೂ ಆದ ಆ ಶ್ರೀಮತಿಯು ವಧುವಾಗಲಿ.

**ಜನ್ಮಾಂತರಾನುಬದ್ಧಂ ಚ ಪ್ರೇಮಾಸ್ತ್ಯೇವಾನಯೋರತಃ ।**
**[೧]ಸಮಾಗಮೋಸ್ತು ಚಂದ್ರಸ್ಯ ಜ್ಯೋತ್ಸ್ನಾಯಾಸ್ತು [೨]ಯಥೋಚಿತಃ ॥**

ಇವರಿಬ್ಬರಿಗೆ ಜನ್ಮಾಂತರದಿಂದ ಸಂಬಂಧಿಸಿಕೊಂಡು ಬಂದ ಅನ್ಯೋನ್ಯ ಪ್ರೇಮವೂ ಇದೆ. ಈ ಕಾರಣದಿಂದ, ಚಂದ್ರನಿಗೂ ಬೆಳದಿಂಗಳಿಗೂ ಸಂಬಂಧವಿರುವಂತೆ, ಇವರಿಗೂ ಉಚಿತವಾದ ಸಂಬಂಧವಾಗಲಿ.

**ಪ್ರಾಗೇವ ಚಿಂತಿತಂ ಕಾರ್ಯಂ ಮಯೇದ[೩]ಮತಿಮಾನುಷಃ ।**
**ವಿಧಿಸ್ತು ಪ್ರಾಕ್ತರಾಮೇವ ಸಾವಧಾನೋತ್ರ ಕೇ ವಯಮ್ ॥ ೨೦೨ ॥**

ಈ ಕಾರ್ಯವನ್ನು ನಾನು ಮೊದಲೇ ಯೋಚಿಸಿದ್ದೆನು. ಆದರೆ ಮನುಷ್ಯಪ್ರಯತ್ನವನ್ನು ಮೀರಿರುವ ಅದೃಷ್ಟವು ಮೊದಲೇ ಬಹಳ ಜಾಗರೂಕವಾಗಿರುವಾಗ ಈ ವಿಷಯದಲ್ಲಿ ನಾವು ಯಾರು ?''

**ಇತಿ ಚಕ್ರಧರೇಣೋಕ್ತಾಂ ವಾಚಂ ಸಂಪೂಜ್ಯ ಪುಣ್ಯಧೀಃ ।**
**ವಜ್ರಬಾಹುಃ ಪರಾಂ ಕೋಟಿಂ ಪ್ರೀತೇರಧ್ಯಾರುರೋಹ ಸಃ ॥ ೨೦೩ ॥**

ಹೀಗೆ ಚಕ್ರವರ್ತಿಯು ಹೇಳಿದ ಮಾತನ್ನು ಆದರಪೂರ್ವಕವಾಗಿ ಕೇಳಿ ಆ ಪುಣ್ಯಶಾಲಿಯಾದ ವಜ್ರಬಾಹುರಾಜನು ಪ್ರೀತಿಯ ಚರಮಸೀಮೆಯನ್ನು ಹೊಂದಿದನು. ಅತ್ಯಂತಸಂತುಷ್ಟನಾದನೆಂದರ್ಥವು.

**ವಸುಂಧರಾ ಮಹಾದೇವೀ ಪುತ್ರಕಲ್ಯಾಣಸಂಪದಾ ।**
**ತಯಾ ಪ್ರಮುದಪೂರ್ಣಾಂಗೀ ನ ಸ್ವಾಂಗೇ ನನ್ವ[೪]ಮಾತ್ತದಾ ॥ ೨೦೪ ॥**

ಆ ಸಮಯದಲ್ಲಿ ಮಗನ ವಿವಾಹವೈಭವದಿಂದ ಆನಂದಭರಿತಳಾದ ವಸುಂಧರಾಮಹಾದೇವಿಯು ತನ್ನ ಶರೀರದಲ್ಲಿ ಆ ಆನಂದವನ್ನು ಅಳತೆ ಮಾಡಲಾರದೆ ಹೋದಳು. ಬಹಳ ಆನಂದಪಟ್ಟಳೆಂದರ್ಥವು.

**ಸಾ ತದಾ ಸುತಕಲ್ಯಾಣಮಹೋತ್ಸವಸಮುದ್ಗತಮ್ ।**
**ರೋಮಾಂಚ[೫]ಮಂಚಿತಂ ಭೇಜೇ ಪ್ರಮದಾಂಕುರಸನ್ನಿಭಮ್ ॥ ೨೦೫ ॥**

ಆಗ ಆ ವಸುಂಧರೆಗೆ ಪುತ್ರನ ವಿವಾಹ ಮಹೋತ್ಸವದಿಂದುಂಟಾದುದೂ ಆನಂದದ ಅಂಕುರಗಳಿಗೆ ಸಮಾನವೂ ಆದ ರೋಮಾಂಚನವುಂಟಾಯಿತು. ಸಂತೋಷದಿಂದ ರೋಮಾಂಚನವಾಯಿತೆಂದು ಭಾವವು.

**ಮಂತ್ರಿಮುಖ್ಯಾ[೬]ಮಹಾಮಾತ್ಯಸೇನಾಪತಿಪುರೋಹಿತಾಃ ।**
**[೭]ಸಾಮಂತಾಶ್ಚ ಸಪೌರಾಸ್ತತ್ಕಲ್ಯಾಣಂ ಬಹುಮೇನಿರೇ ॥ ೨೦೬ ॥**

ಮಂತ್ರಿಮುಖ್ಯರೂ ಸರ್ವಾಧಿಕಾರಿಗಳೂ ಸೇನಾಪತಿಗಳೂ ಪುರೋಹಿತರೂ ಸಾಮಂತರಾಜರೂ ಪಟ್ಟಣವಾಸಿಗಳೂ ಆ ಶ್ರೀಮತೀವಜ್ರಜಂಘರ ವಿವಾಹವನ್ನು ಬಹುಮಾನಿಸಿದರು.

**ಕುಮಾರೋ ವಜ್ರಜಂಘೋಯಮನಂಗಸದೃಶಾಕೃತಿಃ ।**
**ಶ್ರೀಮತೀಯಂ ರತಿಂ ರೂಪಸಂಪದಾ ನಿರ್ಜಿಗೀಷತಿ ॥ ೨೦೭ ॥**

''ಈ ವಜ್ರಜಂಘಕುಮಾರನು ಮನ್ಮಥನಿಗೆ ಸಮಾನವಾದ ಆಕಾರವುಳ್ಳವನಾಗಿದ್ದಾನೆ. ಈ ಶ್ರೀಮತಿಯು ತನ್ನ ರೂಪಸಂಪತ್ತಿನಿಂದ ರತಿಯನ್ನು ಜಯಿಸಲಿಚ್ಛಿಸುತ್ತಾಳೆ.

**[೮]ಅಭಿರೂಪಃ ಕುಮಾರೋಯಂ ಸುರೂಪಾ ಕನ್ಯಕಾನಯೋಃ ।**
**ಅನುರೂಪೋಸ್ತು ಸಂಬಂಧಃ ಸುರದಂಪತಿಲೀಲಯೋಃ ॥ ೨೦೮ ॥**

ಈ ವಜ್ರಜಂಘಕುಮಾರನೂ ಮನೋಹರ ರೂಪವುಳ್ಳವನಾಗಿದ್ದಾನೆ. ಕನ್ಯೆಯಾದ ಶ್ರೀಮತಿಯೂ ಸರ್ವಾಂಗಸುಂದರಿಯಾಗಿದ್ದಾಳೆ. ದೇವದಂಪತಿಗಳ

೧ ವಚನೇನಾಲಂ ನಿಷೇಧೇಲಂ ಖಲೌ ಕ್ತ್ವಾ ಇತಿ ಕ್ತ್ವಾಪ್ರತ್ಯಯಃ. ೨ ಕುಮಾರೀಹೃದಯಂ ಪ್ರಾಪ್ತಃ. ೩ ಅನ್ವಮನ್ಯತ.

೧ ಸಂಬಂಧಃ. ೨ ಇವ. ೩ ಮಾನುಷಮತಿಕ್ರಾಂತಃ. ೪ ಪ್ರಮಾಣಯತಿ ಸ್ಮ. ೫ ವ್ಯಾಪ್ತಂ. ೬ ಸರ್ವಾಧಿಕಾರೀ. ೭ ಸಾಮಂತಾ ರಾಜ್ಯಸಂಧಿಸ್ಥಾ ಇತಿ ವಿದಗ್ಧಃ. ೮ ಮನೋಜ್ಞಃ.

ಲೀಲೆ(ಶೋಭೆ)ಯುಳ್ಳ ಈ ಶ್ರೀಮತೀವಜ್ರಜಂಘರಿಗೆ ಅನುರೂಪವಾದ ಸಂಬಂಧವು ಆಗಲಿ''.

**ಇತಿ ಪ್ರಮದವಿಸ್ತಾರಮುದ್ವಹತ್ತತ್ಪುರಂ ತದಾ ।**
**ರಾಜವೇಶ್ಮ ಚ [1]ಸಂವೃತ್ತಂ ಶ್ರಿಯಮನ್ಯಾಮಿವಾಶ್ರಿತಮ್ ॥ ೨೦೯ ॥**

ಈ ಪ್ರಕಾರವಾಗಿ ಆ ಸಮಯದಲ್ಲಿ ಅತ್ಯಂತ ಆನಂದವನ್ನು ಹೊಂದಿದ ಆ ನಗರವೂ ರಾಜಮಂದಿರವೂ ಬೇರೆ(ಅನಿರ್ವಚನೀಯ)ಯೇ ಶೋಭೆಯನ್ನು ಹೊಂದಿದಂತೆ ಆದುವು.

**ವಿವಾಹಮಂಡಪಾ[2]ರಂಭಂ ಚಕ್ರವರ್ತಿನಿದೇಶತಃ ।**
**[3]ಮಹಾಸ್ಥಪತಿರಾತೇನೇ ಪರಾರ್ಧ್ಯಮಣಿಕಾಂಚನೈಃ ॥ ೨೧೦ ॥**

ತರುವಾಯ ಚಕ್ರವರ್ತಿಯ ಆಜ್ಞೆಯನ್ನು ಹೊಂದಿ ವಿಶ್ವಕರ್ಮನು ಶ್ರೇಷ್ಠವಾದ ರತ್ನಬಂಗಾರಗಳಿಂದ ವಿವಾಹಮಂಟಪವನ್ನು ಮಾಡಲಾರಂಭಿಸಿದನು.

**ಚಾಮೀಕರಮಯಾಃ ಸ್ತಂಭಾ[4]ಸ್ತಲಕುಂಭೈ[5]ರ್ಮಹೋದಯೈಃ ।**
**ರತ್ನೋಜ್ಜ್ವಲೈಃ ಶ್ರಿಯಂ ತೇನುರ್ನೃಪಾ ಇವ ನೃಪಾಸನೈಃ ॥ ೨೧೧ ॥**

ರಾಜರು ಕುಳಿತುಕೊಳ್ಳುವ ಆಸನಗಳಮೇಲೆ ರಾಜರು ಶೋಭಿಸುವಂತೆ, ರತ್ನಗಳಿಂದ ದೇದೀಪ್ಯಮಾನಗಳಾಗಿಯೂ, ಉನ್ನತಗಳಾಗಿಯೂ ಇರುವ ಕಲ್ಲಿನ ಪೀಠಗಳಮೇಲೆ ಬಂಗಾರದ ಕಂಬಗಳು ಶೋಭಿಸುತ್ತಿದ್ದುವು.

**ಸ್ಫಾಟಿಕ್ಯೋ ಭಿತ್ತಯಸ್ತಸ್ಮಿನ್ ಜನಾನಾಂ ಪ್ರತಿಬಿಂಬಕೈಃ ।**
**ಚಿತ್ರಿತಾ ಇವ ಸಂರೇಜುಃ ಪ್ರೇಕ್ಷಿಣಾಂ ಚಿತ್ತರಂಜಿಕಾಃ ॥ ೨೧೨ ॥**

ಆ ಮಂಟಪದ ಸ್ಫಟಿಕನಿರ್ಮಿತವಾದ ಗೋಡೆಗಳು, ಜನರ ಪ್ರತಿಬಿಂಬಗಳಿಂದ ಚಿತ್ರಬರೆದಂತೆ, ನೋಡುವವರಿಗೆ ಮನೋರಂಜಕಗಳಾಗಿ ಶೋಭಿಸುತ್ತಿದ್ದುವು.

**ಮಣಿಕುಟ್ಟಿಮಭೂರಸ್ಮಿನ್ನೀಲರತ್ನೈರ್ವಿನಿರ್ಮಿತಾ ।**
**ಪುಷ್ಪೋಪಹಾರೈರ್ವ್ಯರುಚದ್ದ್ಯೌರಿವಾತತತಾರಕಾ ॥ ೨೧೩ ॥**

ಆ ವಿವಾಹಮಂಟಪದಲ್ಲಿ ನೀಲರತ್ನಗಳಿಂದ ನಿರ್ಮಿತವೂ ರತ್ನಖಚಿತವೂ ಆದ ನೆಲವು, ಚೆಲ್ಲಿರುವ ಪುಷ್ಪಗಳಿಂದ, ಚದರಿರುವ ನಕ್ಷತ್ರಗಳುಳ್ಳ ಆಕಾಶದಂತೆ, ಶೋಭಿಸುತ್ತಿದ್ದಿತು.

**ಮುಕ್ತಾದಾಮಾನಿಲಂಬಾನಿ [6]ತದ್ಗರ್ಭೇ ವ್ಯದ್ಯುತಂಸ್ತರಾಮ್ ।**
**ಸಫೇನಾನಿ [7]ಮೃಣಾಲಾನಿ ಲಂಬಿತಾನೀವ ಕೌತುಕಾತ್ ॥ ೨೧೪ ॥**

ನೊರೆಯೊಡಗೂಡಿದ ತಾವರೆದಂಟುಗಳು, ಕುತೂಹಲದಿಂದ ತೂಗುಹಾಕಲ್ಪಟ್ಟಿವೆಯೋ ಎಂಬಂತೆ, ಆ ಮಂಟಪದ ಮಧ್ಯದಲ್ಲಿ ತೂಗುಹಾಕಿದ್ದ ಮುತ್ತಿನ ಹಾರಗಳು ಅಧಿಕವಾಗಿ ಪ್ರಕಾಶಿಸುತ್ತಿದ್ದುವು.

**ಪದ್ಮರಾಗಮಯಸ್ತಸ್ಮಿನ್ವೇದೀಬಂಧೋಭವತ್ಪೃಥುಃ।**
**ಜನಾನಾಮಿವ ಚಿತ್ತಸ್ಥೋ ರಾಗಸ್ತನ್ಮಯತಾಂ ಗತಃ ॥ ೨೧೫ ॥**

ಜನರ ಹೃದಯದಲ್ಲಿರುವ ಅನುರಾಗವೇ ವಿವಾಹಮಂಟಪದಲ್ಲಿ ವೇದಿಕೆಯಾಗಿ ಪರಿಣಮಿಸಿದೆಯೋ ಎಂಬಂತೆ ಪದ್ಮರಾಗರತ್ನಮಯವಾದ ದೊಡ್ಡ ವೇದಿಕೆಯು ಆ ಮಂಟಪದಲ್ಲಿದ್ದಿತು.

**ಸುಧೋಜ್ಜ್ವಲಾನಿ ಕೂಟಾನಿ ಪರ್ಯಂತೇಷ್ವಸ್ಯ ರೇಜಿರೇ ।**
**ತೋಷಾತ್ಸುರವಿಮಾನಾನಿ ಹಸಂತೀವಾತ್ಮಶೋಭಯಾ ॥ ೨೧೬ ॥**

ಈ ಮಂಟಪದ ಸಮೀಪಪ್ರದೇಶಗಳಲ್ಲಿ ಸುಣ್ಣದಿಂದ ಪ್ರಕಾಶಮಾನಗಳಾದ ಶಿಖರಗಳು ಸಂತೋಷದಿಂದ ತಮ್ಮ ಶೋಭೆಯಿಂದ ದೇವವಿಮಾನಗಳನ್ನು ಹಾಸ್ಯಮಾಡುತ್ತಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ವೇದಿಕಾಕಟಿಸೂತ್ರೇಣ ಪರ್ಯಂತೇ ಸ ಪರಿಷ್ಕೃತಃ ।**
**ರಾಮಣೀಯಕಸೀಮ್ನೇವ ರುದ್ಧದಿಕ್ಕೇನ ವಿಶ್ವತಃ ॥ ೨೧೭ ॥**

ವೇದಿಕೆಯೆಂಬ ಕಟೀಸೂತ್ರದಿಂದ ನಾಲ್ಕು ಕಡೆಗಳಲ್ಲಿಯೂ ಸುತ್ತಲ್ಪಟ್ಟಿರುವ ಆ ಮಂಟಪವು ಸಮಸ್ತ ದಿಕ್ಕುಗಳನ್ನೂ ತಡೆದಿರುವ ಸುಂದರವಾದ ಸೀಮೆ(ಅವಧಿ)ಯಿಂದ ಸುತ್ತಲ್ಪಟ್ಟಿರುವಂತೆ, ಶೋಭಿಸುತ್ತಿದ್ದಿತು.

**ರತ್ನೈರ್ವಿರಚಿತಂ ತಸ್ಯ ಬಭೌ ಗೋಪುರಮುಚ್ಚಕೈಃ ।**
**ಪ್ರೋತ್ಸರ್ಪದ್ರತ್ನಭಾಜಾಲರಚಿತೇಂದ್ರಶರಾಸನಮ್ ॥ ೨೧೮ ॥**

ಉತ್ತಮವಾದ ರತ್ನಗಳಿಂದ ಮಾಡಿದ ಆ ಮಂಟಪದ ಗೋಪುರ (ಹೊರಬಾಗಿಲು)ವು ಪಸರಿಸುತ್ತಿರುವ ರತ್ನಗಳ ಕಾಂತಿಗಳಿಂದ ಮಾಡಿದ ಇಂದ್ರಧನುಸ್ಸೋ ಎಂಬಂತೆ, ಶೋಭಿಸುತ್ತಿದ್ದಿತು.

**ಸರ್ವರತ್ನಮಯಸ್ತಸ್ಯ ದ್ವಾರಬಂಧೋ [1]ನಿವೇಶಿತಃ ।**
**ಲಕ್ಷ್ಮ್ಯಾಃ ಪ್ರವೇಶನಾಯೇವ ಪರ್ಯಂತಾರ್ಪಿತಮಂಗಲಃ ॥ ೨೧೯ ॥**

ಸಮಸ್ತಪ್ರಕಾರವಾದ ರತ್ನಗಳಿಂದ ನಿರ್ಮಿತವೂ ಸಮೀಪದಲ್ಲಿ ಮಂಗಲ ದ್ರವ್ಯಗಳುಳ್ಳುದೂ ಆದ ಆ ಮಂಟಪದ ಬಾಗಿಲು ಲಕ್ಷ್ಮೀದೇವಿಯ ಪ್ರವೇಶಕ್ಕೋಸ್ಕರ ಸ್ಥಾಪಿಸಲ್ಪಟ್ಟಿದೆಯೋ ಎಂಬಂತೆ, ಶೋಭಿಸುತ್ತಿದ್ದಿತು.

**ಸ ತದಾಷ್ಟಾಹ್ನಿಕೀಂ ಪೂಜಾಂ ಚಕ್ರೇ ಚಕ್ರಧರಃ ಪರಾಮ್ ।**
**[2]ಕಲ್ಪವೃಕ್ಷಮಹಾರೂಢಿಂ ಮಹಾಪೂತಜಿನಾಲಯೇ ॥ ೨೨೦ ॥**

ಆ ಸಮಯದಲ್ಲಿ ವಜ್ರದಂತಚಕ್ರವರ್ತಿಯು ಅತ್ಯಂತ ಪವಿತ್ರವಾದ ಜಿನಾಲಯದಲ್ಲಿ ಶ್ರೇಷ್ಠವಾದ ಅಷ್ಟಾಹ್ನಿಕಪೂಜೆಯನ್ನೂ ಯಾಚಕರು ಇಚ್ಛಿಸಿದ ಪದಾರ್ಥಗಳನ್ನು ದಾನಮಾಡಿ ಚಕ್ರವರ್ತಿಯು ಮಾಡುವ ಕಲ್ಪವೃಕ್ಷವೆಂದು ಹೆಸರುಳ್ಳ ಪೂಜೆಯನ್ನೂ ಮಾಡಿದನು.

**ತತಃ ಶುಭದಿನೇ ಸೌಮ್ಯೇ ಲಗ್ನೇ ಶುಭಮುಹೂರ್ತಕೇ ।**
**ಚಂದ್ರತಾರಾಬಲೋಪೇತೇ [3]ತಜ್ಜ್ಞೈಃ ಸಮ್ಯಗ್ನಿರೂಪಿತೇ ॥ ೨೨೧ ॥**

**ಕೃತೋಪಶೋಭೇ ನಗರೇ ಸಮಂತಾದ್ಬದ್ಧತೋರಣೇ ।**
**ಸುರಲೋಕ ಇವಾ[4]ಭಾತಿ ಪರಾಂ ದಧತಿ ಸಂಪದಮ್ ॥ ೨೨೨ ॥**

**ರಾಜವೇಶ್ಮಾಂಗಣೇ ಸಾಂದ್ರಚಂದನಚ್ಛಟಯೋ[5]ಕ್ಷಿತೇ ।**
**ಪುಷ್ಪೋಪಹಾರೈರಾಗುಂಜದಲಿಭಿಃ ಕೃತರೋಚಿಷಿ ॥ ೨೨೩ ॥**

**ಸೌವರ್ಣಕಲಶೈಃ ಪೂರ್ಣೈಃ ಪುಣ್ಯತೋಯೈಃ ಸರತ್ನಕೈಃ ।**
**ಅಭ್ಯಷೇಚಿ ವಿಧಾನಜ್ಞೈರ್ವಿಧಿವತ್ತದ್ವಧೂವರಮ್ ॥ ೨೨೪ ॥**

ತರುವಾಯ ಜ್ಯೋತಿಃಶಾಸ್ತ್ರವನ್ನು ತಿಳಿದವರು ಚೆನ್ನಾಗಿ ನೋಡಿ ಹೇಳಿದ ಶುಭದಿವಸದಲ್ಲಿ ಸೌಮ್ಯವಾದ ಲಗ್ನದಲ್ಲಿ, ಚಂದ್ರತಾರಾಬಲಯುಕ್ತವಾದ ಶುಭಮುಹೂರ್ತದಲ್ಲಿ, ಎಲ್ಲಾ ಕಡೆಗಳಲ್ಲಿಯೂ ತೋರಣಗಳನ್ನು ಕಟ್ಟಿ ಸುಶೋಭಿತವೂ ಸ್ವರ್ಗದಂತೆ ದೇದೀಪ್ಯಮಾನವೂ ಅಧಿಕ ಸಂಪತ್ತುಳ್ಳುದೂ ಆದ ಪಟ್ಟಣದಲ್ಲಿ ಭ್ರಮರಗಳು ಮುತ್ತಿಕೊಂಡು ಶಬ್ದ ಮಾಡುತ್ತಿರುವ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟುದೂ, ದಟ್ಟವಾಗಿ ಚಂದನಜಲದಿಂದ ಸೇಚಿಸಲ್ಪಟ್ಟುದೂ ಆದ ರಾಜಮಂದಿರದ ಅಂಗಣದಲ್ಲಿ, ಪುಣ್ಯಜಲಗಳಿಂದಲೂ

---

೧ ಪ್ರವೃತ್ತಂ. ೨ ಸೃಷ್ಟಿಂ. ೩ ವಿಶ್ವಕರ್ಮಾ. ೪ ಆಸನೀಭೂತಪಾಷಾಣೈಃ. ೫ ಉನ್ನತೈಃ. ೬ ಮಂಡಪಮಧ್ಯೇ. ೭ ಬಿಸಾನಿ.

೧ ಸ್ಥಾಪಿತಃ. ೨ ಕಿಮಿಚ್ಛಕೇನ ದಾನೇನ ಜಗದಾಶಾಃ ಪ್ರಪೂರ್ಯ ಯಃ । ಚಕ್ರಿಭಿಃ ಕ್ರಿಯತೇ ಸೋಽರ್ಹದ್ಯಜ್ಞಃ ಕಲ್ಪದ್ರುಮೋ ಮತಃ. ೩ ಜ್ಯೋತಿಃಶಾಸ್ತ್ರಜ್ಞೈಃ. ೪ ಸತಿ. ೫ ಸಿಕ್ತೇ.

ರತ್ನಗಳಿಂದಲೂ ಪರಿಪೂರ್ಣವಾದ ಬಂಗಾರದ ಕಲಶಗಳಿಂದ ವಿವಾಹವಿಧಿಯನ್ನು ತಿಳಿದವರು, ವಿಧಿಗನುಸಾರವಾಗಿ, ವಧೂವರರಿಗೆ ಅಭಿಷೇಕವನ್ನು ಮಾಡಿದರು.

**ತದಾ ಮಹಾ[೧]ನಕಧ್ವಾನಃ ಶಂಖಕೋಲಾಹಲಾ[೨]ಕುಲಃ ।**
**[೩]ಘನಾಡಂಬರಮಾಕ್ರಮ್ಯ ಜಜೃಂಭೇ ನೃಪಮಂದಿರೇ ॥ ೨೨೫ ॥**

ಆಗ ರಾಜಭವನದಲ್ಲಿ ಶಂಖಗಳ ಕೋಲಾಹಲಶಬ್ದಗಳೊಡನೆ ಕೂಡಿಕೊಂಡಿರುವ ದೊಡ್ಡಭೇರೀಶಬ್ದವು ಮೇಘಧ್ವನಿಯನ್ನು ಅತಿಕ್ರಮಿಸಿ ವೃದ್ಧಿಹೊಂದಿತು. ಆಕಾಶವನ್ನೆಲ್ಲಾ ವ್ಯಾಪಿಸಿದ್ದಿತೆಂದರ್ಥವು.

**ಕಲ್ಯಾಣಾಭಿಷವೇ ತಸ್ಮಿನ್ ಶ್ರೀಮತೀವಜ್ರಜಂಘಯೋಃ ।**
**ಸ [೪]ನಾಂತರ್ವಂಶಿಕಸ್ತೋಷನಿರ್ಭರಂ ನ ನನರ್ತ ಯಃ ॥ ೨೨೬ ॥**

ಶ್ರೀಮತೀವಜ್ರಜಂಘರ ವಿವಾಹಸಂಬಂಧವಾದ ಅಭಿಷೇಕಕಾಲದಲ್ಲಿ ಸಂತೋಷದಿಂದ ನರ್ತನಮಾಡದಿದ್ದ ಅಂತಃಪುರದ ಜನವೇ ಇರಲಿಲ್ಲ. ಅಂತಃಪುರದವರೆಲ್ಲರೂ ಆನಂದದಿಂದ ನರ್ತನಮಾಡಿದರೆಂದರ್ಥವು.

**ವಾರಾಂಗನಾಃ [೫]ಪುರಂಧ್ರ್ಯಶ್ಚ ಪೌರವರ್ಗಶ್ಚ ತತ್ಕ್ಷಣಮ್ ।**
**ಪುಣ್ಯೈಃ ಪುಷ್ಪಾಕ್ಷತೈಃ [೬]ಶೇಷಾಂ ಸಾಶಿಷಂ ತಾ[೭]ವಲಂಭಯನ್॥ ೨೨೭ ॥**

ವಧೂವರರಿಗೆ ಮಂಗಲಸ್ನಾನವಾದ ಕೂಡಲೆ ವಾರಾಂಗನೆಯರೂ, ಪತಿವ್ರತಾಸ್ತ್ರೀಯರೂ, ಪಟ್ಟಣವಾಸಿಗಳೂ ಪುಣ್ಯಕರವಾದ ಪುಷ್ಪಾಕ್ಷತೆಗಳಿಂದ ವಧೂವರರನ್ನು ಆಶೀರ್ವದಿಸಿ ಶೇಷೆಯನ್ನಿಕ್ಕಿದರು.

**ಶ್ಲಕ್ಷ್ಣಪಟ್ಟದುಕೂಲಾನಿ [೮]ನಿಷ್ಪ್ರವಾಣೀನಿ ತೌ ತದಾ ।**
**ಕ್ಷೀರೋದೋರ್ಮಿಮಯಾನೀವ [೯]ಪರ್ಯಧತ್ತಾಮನಂತರಮ್ ॥**

ತರುವಾಯ ವಧೂವರರು ಕ್ಷೀರಸಮುದ್ರದ ತೆರೆಮಾಲೆಗಳೋ ಎಂಬಂತಿರುವ ಮತ್ತು ಹೊಳೆಯುತ್ತಿರುವ ನವೀನಪಟ್ಟೆವಸ್ತ್ರಗಳನ್ನು ಧರಿಸಿದರು.

**[೧೦]ಪ್ರಸಾಧನಗೃಹೇ ರಮ್ಯೇ ಪ್ರಾಙ್ಮುಖಂ ಸುನಿವೇಶಿತೌ ।**
**ತಾವಲಂಕಾರಸರ್ವಸ್ವಂ ಭೇಜತುರ್ಮಂಗಲೋಚಿತಮ್ ॥ ೨೨೯ ॥**

ರಮಣೀಯವಾದ ಅಲಂಕಾರಮಾಡುವ ಮನೆಯಲ್ಲಿ ಪೂರ್ವಮುಖವಾಗಿ ಕುಳ್ಳಿರಿಸಲ್ಪಟ್ಟ ಆ ವಧೂವರರು ಮಂಗಲೋಚಿತವಾದ ಆಭರಣಗಳಿಂದ ಅಲಂಕೃತರಾದರು.

**ಚಂದನೇನಾನುಲಿಪ್ತೌ ತೌ ಲಲಾಟೇನ [೧೧]ಲಲಾಟಿಕಾಮ್ ।**
**ಚಂದನದ್ರವವಿನ್ಯಸ್ತಾಂ ದಧತುಃ [೧೨]ಕೌತುಕೋಚಿತಾಮ್ ॥ ೨೩೦ ॥**

ಆ ವಧೂವರರು ಚಂದನದಿಂದ ಲೇಪಿಸಲ್ಪಟ್ಟವರಾಗಿ ಉತ್ಸವಕ್ಕೆ ಉಚಿತವೂ ಚಂದನದಿಂದ ಮಾಡಲ್ಪಟ್ಟುದೂ ಆದ ತಿಲಕವನ್ನು ಹಣೆಯಲ್ಲಿ ಧರಿಸಿಕೊಂಡರು.

**ವಕ್ಷಸಾ ಹಾರಯಷ್ಟಿಂ ತೌ ಹರಿಚಂದನಶೋಭಿನಾ ।**
**ಅಧತ್ತಾಂ ಮೌಕ್ತಿಕೈಃ ಸ್ಥೂಲೈರ್ಧೃತತಾರಾವಲಿಶ್ರಿಯಮ್ ॥ ೨೩೧ ॥**

ಆ ವಧೂವರರು ಹರಿಚಂದನದಿಂದ ಶೋಭಿಸುತ್ತಿರುವ ಎದೆಯಲ್ಲಿ ನಕ್ಷತ್ರಗಳ ಪಂಕ್ತಿಯಂತೆ ಶೋಭಿಸುತ್ತಿರುವ ದಪ್ಪವಾದ ಮುತ್ತುಗಳ ಹಾರಗಳನ್ನು ಧರಿಸಿದರು.

**ಪುಷ್ಪಮಾಲಾ ಬಭೌ ಮೂರ್ಧ್ನಿ ತಯೋಃ ಕುಂಚಿತಮೂರ್ಧಜೇ ।**
**ಸೀತಾಪಗೇವ ನೀಲಾದ್ರಿಶಿಖರೋಪಾಂತವರ್ತಿನೀ ॥ ೨೩೨ ॥**

ಆ ವಧೂವರರ ಕುರುಳುಕೂದಲುಗಳುಳ್ಳ ಮಸ್ತಕದಲ್ಲಿ ಪುಷ್ಪಮಾಲಿಕೆಯು, ನೀಲಪರ್ವತದ ಶಿಖರಗಳ ಸಮೀಪದಲ್ಲಿರುವ ಸೀತಾನದಿಯಂತೆ, ಶೋಭಿಸುತ್ತಿದ್ದಿತು.

**ಕರ್ಣಿಕಾಭರಣನ್ಯಾಸಂ ಕರ್ಣಯೋ[೧]ರ್ನಿರವೀಕ್ಷತಾಮ್ ।**
**ಯದ್ರತ್ನಾ[೨]ಭೀಷುಭಿರ್ಭೇಜೇ ತದ್ವಕ್ತ್ರಾಬ್ಜಂ ಪರಾಂ ಶ್ರಿಯಮ್॥ ೨೩೩ ॥**

ಆ ವಧೂವರರು ಕಿವಿಗಳಲ್ಲಿ ಕರ್ಣಾಭರಣಗಳನ್ನು ಧರಿಸಿದರು. ಆ ಆಭರಣಗಳಲ್ಲಿರುವ ರತ್ನಗಳ ಕಾಂತಿಗಳಿಂದ ವಧೂವರರ ಮುಖಕಮಲಗಳು ಅಧಿಕವಾಗಿ ಶೋಭಿಸಿದುವು.

**ಆಜಾನುಲಂಬಮಾನೇನ ತೌ [೩]ಪ್ರಾಲಂಬೇನ ರೇಜತುಃ ।**
**ಶರಜ್ಜ್ಯೋತ್ಸ್ನಾಮಯೇನೇವ ಮೃಣಾಲಚ್ಛವಿಚಾರುಣಾ ॥ ೨೩೪ ॥**

ಆ ವಧೂವರರು ಶರತ್ಕಾಲದ ಬೆಳದಿಂಗಳಂತೆ ಶುಭ್ರವೂ ಕಮಲನಾಲಗಳ ತಂತುಗಳ ಕಾಂತಿಯಂತೆ ಸುಂದರವೂ ಮೊಣಕಾಲುಗಳವರೆಗೆ ಜೋಲುವುದೂ ಆದ ಪುಷ್ಪಮಾಲಿಕೆಯಿಂದ ಶೋಭಿಸುತ್ತಿದ್ದರು.

**[೪]ಕಟಕಾಂಗದ[೫]ಕೇಯೂರಮುದ್ರಿಕಾದಿವಿಭೂಷಣೈಃ ।**
**ಬಾಹೂ ವ್ಯರುಚತಾಂ ಕಲ್ಪತರುಶಾಖಾಚ್ಛವೀ ತಯೋಃ ॥ ೨೩೫ ॥**

ಕಲ್ಪವೃಕ್ಷದ ಕೊಂಬೆಗಳಂತಿರುವ ಆ ವಧೂವರರ ತೋಳುಗಳು ಬಾಜುಬಂದು ಭುಜಕೀರ್ತಿ ಉಂಗುರ ಮೊದಲಾದ ಆಭರಣಗಳಿಂದ ಪ್ರಕಾಶಿಸುತ್ತಿದ್ದುವು.

**ಜಘನೇ [೬]ರಶನಾವೇಷ್ಟಂ ಕಿಂಕಿಣೀಕೃತನಿಃಸ್ವನಮ್ ।**
**ತಾವನಂಗದ್ವಿಪಸ್ಯೇವ ಜಯಡಿಂಡಿಮ[೭]ಮೂಹತುಃ ॥ ೨೩೬ ॥**

ಆ ವಧೂವರರು, ಮನ್ಮಥನೆಂಬ ಆನೆಯ ಜಯಜಯಕಾರಶಬ್ದವನ್ನು ಮಾಡುವ ವಾದ್ಯದಂತೆ, ಗೆಜ್ಜೆಗಳಿಂದ ಶಬ್ದವನ್ನು ಮಾಡುತ್ತಿರುವ ಹದಿನಾರು ಎಳೆಗಳುಳ್ಳ ಡಾಬನ್ನು ಸೊಂಟದಲ್ಲಿ ಧರಿಸಿಕೊಂಡರು.

**ಮಣಿನೂಪುರಝಂಕಾರೈಃ ಕ್ರಮೌ ಶಿಶ್ರಿಯತುಃ ಶ್ರಿಯಮ್ ।**
**ಶ್ರೀಮತ್ಯಾಃ ಪದ್ಮಯೋರ್ಭೃಂಗಕಲನಿಕ್ವಾಣಶೋಭಿನೋಃ ॥ ೨೩೭ ॥**

ರತ್ನಮಯವಾದ ಪಾದಕಡಗಗಳ ಝಂಕಾರಶಬ್ದಗಳಿಂದ ಆ ಶ್ರೀಮತಿಯ ಪಾದಗಳು, ಭ್ರಮರಗಳ ಮಧುರಶಬ್ದಗಳಿಂದ ಶೋಭಿಸುತ್ತಿರುವ ಕಮಲಗಳಂತೆ, ಶೋಭಿಸುತ್ತಿದ್ದುವು.

**ಮಹಾಲಂಕೃತಿ[೮]ಮಾಚಾರ ಇತ್ಯೇವ ಬಿಭೃತಃ ಸ್ಮ ತೌ ।**
**[೯]ಅನ್ಯಥಾ ಸುಂದರಾಕಾರಶೋಭೈವಾಲಂಕೃತಿಸ್ತಯೋಃ ॥ ೨೩೮ ॥**

ಆ ವಧೂವರರು ಮಂಗಲಾಚಾರವನ್ನು ಪರಿಪಾಲನೆಮಾಡಬೇಕೆಂಬುದಾಗಿಯೇ ಅತಿಶಯವಾದ ಅಲಂಕಾರವನ್ನು ಧರಿಸಿಕೊಂಡರು. ಹಾಗಿಲ್ಲದಿದ್ದರೆ ಸ್ವಭಾವದಿಂದ ಸುಂದರವಾದ ಶರೀರಾಕಾರದ ಶೋಭೆಯೇ ಅವರಿಗೆ ಅಲಂಕಾರವಾಗಿದ್ದಿತು.

**ಲಕ್ಷ್ಮೀಮತಿಃ ಸ್ವಯಂ ಲಕ್ಷ್ಮೀರಿವ ಪುತ್ರೀಮಭೂಷಯತ್ ।**
**ಪುತ್ರಂ ಚ ಭೂಷಯಾಮಾಸ ವಸುಧೇವ ವಸುಂಧರಾ ॥ ೨೩೯ ॥**

ಸಾಕ್ಷಾತ್‌ಲಕ್ಷ್ಮಿಯಂತಿರುವ ಲಕ್ಷ್ಮೀಮತಿಯು ತನ್ನ ಮಗಳಾದ ಶ್ರೀಮತಿಯನ್ನು ಅಲಂಕರಿಸದಳು. ಪೃಥ್ವಿಯಂತಿರುವ ವಸುಂಧರೆಯು ತನ್ನ ಮಗನಾದ ವಜ್ರಜಂಘನನ್ನು ಅಲಂಕರಿಸಿದಳು.

---

೧ ಪಟಹಃ. ೨ ಆಕೀರ್ಣಃ. ೩ ಮೇಘಃ. ೪ ಅಂತಃಪುರಾಧಿಕಾರೀ. ೫ ಪತಿವ್ರತಾಸ್ತ್ರಿಯಃ. ೬ ಶೇಷಾಕ್ಷತವಿಧಾನೇ ಸ್ನಾನ್ನಿರ್ಮಾಲ್ಯೇ ಮರುತಾಮಪಿ. ೭ ಪ್ರಾಪಯಂತಿ ಸ್ಮ. ೮ ನವವಸ್ತ್ರಾಣಿ. ೯ ಪರಿಧಾನಮಕಾರ್ಷ್ಟಾಂ. ೧೦ ಅಲಂಕಾರಗೃಹೇ. ೧೧ ತಿಲಕಂ. ೧೨ ಉತ್ಸವಃ.

೧ ನಿರ್ವೇಶೋ ಭೃತಿಭೋಗಯೋಃ. ೨ ಅಭೀಷುಃ ಪ್ರಗ್ರಹೇ ರಶ್ಮೌ. ೩ ಪ್ರಾಲಂಬಮೃಜುಲಂಬಿ ಸ್ಯಾದಿತ್ಯಮರಃ. ೪ ಭುಜಾಭರಣಂ. ೫ ಭುಜಶಿಖಾಭರಣಂ. ೬ ಕಾಂಚೀದಾಮವಲಯಂ. ೭ ಅಧಕ್ತಾಂ. ೮ ಲೋಕಾಚರಣಂ. ೯ ಆಚಾರೋ ನ ಚೇತ್.

**ಪ್ರಸಾಧನವಿಧೇರಂತೇ ಯಥಾಸ್ವಂ ತೌ ನಿವೇಶಿತೌ ।**
**ರತ್ನವೇದೀತಟೇ ಪೂರ್ವಂ ಕೃತಮಂಗಲಸತ್ಕ್ರಿಯೇ ॥ ೨೪೦ ॥**

ಹೀಗೆ ಅಲಂಕಾರಮಾಡಿದನಂತರ ಮೊದಲೇ ಮಂಗಲಕ್ರಿಯೆಗಳನ್ನು ಮಾಡಿದ್ದ ರತ್ನವೇದಿಕೆಯ ಮೇಲೆ ವಧೂವರರನ್ನು ಅವರವರ ಸ್ಥಾನದಲ್ಲಿ ಕುಳ್ಳಿರಿಸಿದರು.

**ಮಣಿಪ್ರದೀಪರುಚಿರಾ ಮಂಗಲ್ಯೈರು[೧]ಪಶೋಭಿತಾ ।**
**ಬಭೌ ವೇದೀ [೨]ತದಾಕ್ರಾಂತಾ ಸಾಮರೇವಾದ್ರಿರಾಟ್ತಟೀ ॥ ೨೪೧ ॥**

ರತ್ನದೀಪಗಳಿಂದ ಮನೋಹರವೂ ಮಂಗಲದ್ರವ್ಯಗಳಿಂದ ಅಲಂಕೃತವೂ ವಧೂವರರಿಂದ ಆಕ್ರಾಂತವೂ ಆಗಿದ್ದ ಆ ವಿವಾಹಮಂಟಪದ ವೇದಿಕೆಯು, ದೇವದಂಪತಿಗಳು ಕುಳಿತಿರುವ ಮಹಾಮೇರುಪರ್ವತದ ತಟಪ್ರದೇಶದಂತೆ, ಶೋಭಿಸಿದ್ದಿತು.

**ತತೋ ಮಧುರಗಂಭೀರಮಾನಕಾಃ [೩]ಕೋಣತಾಡಿತಾಃ ।**
**ದಧ್ವನುರ್ಧ್ವಾನದಂಭೋಧಿಗಂಭೀರಧ್ವನಯಸ್ತದಾ ॥ ೨೪೨ ॥**

ತರುವಾಯ ಶಬ್ದಮಾಡುತ್ತಿರುವ ಸಮುದ್ರದಂತೆ ಗಂಭೀರವಾಗಿ ಧ್ವನಿ ಮಾಡುತ್ತಿರುವುವೂ ಕೋಲುಗಳಿಂದ ಹೊಡೆಯಲ್ಪಟ್ಟುವೂ ಆದ ಭೇರಿಗಳು ಇಂಪಾಗಿಯೂ ಮಧುರವಾಗಿಯೂ ಶಬ್ದಮಾಡಿದುವು.

**ಮಂಗಲೋದ್ಗಾನಮಾತೇನುರ್ವಾರವಧ್ವಃ ಕಲಂ ತದಾ ।**
**[೪]ಉತ್ಸಾಹಾನ್ಪೇಠುರಭಿತೋ [೫]ವಂದಿನಃ ಸಹಮಾಗಧಾಃ ॥ ೨೪೩ ॥**

ಆಗ ವಾರಾಂಗನೆಯರು ಮನೋಹರವಾಗಿ ಮಂಗಲಗಾನವನ್ನು ಮಾಡಿದರು. ಸ್ತುತಿಪಾಠಕರೂ ಮಾಗಧರೂ (ವಂಶಾವಳಿಯನ್ನೋದುವವರು) ನಾಲ್ಕು ಕಡೆಗಳಿಂದಲೂ ಮಂಗಲಾಷ್ಟಕಗಳನ್ನು ಪಠಿಸಿದರು.

**ವರ್ದ್ಧಮಾನ[೬]ಲಯೈರ್ನೃತ್ತಮಾರೇಭೇ ಲಲಿತಂ ತದಾ ।**
**ವಾರಾಂಗನಾಭಿರುದ್ಭ್ರೂಭೀರಣನ್ನೂಪುರಮೇಖಲಮ್ ॥ ೨೪೪ ॥**

ಆಗ ವಾರಾಂಗನೆಯರು ಹುಬ್ಬುಗಳನ್ನು ಹಾರಿಸುತ್ತಾ ವೃದ್ಧಿಹೊಂದುತ್ತಿರುವ ಗೀತವಾದ್ಯ ಮೊದಲಾದುವುಗಳ ಲಯಗಳಿಂದ ಮನೋಹರವೂ ಪಾದಕಡಗ ಮತ್ತು ಡಾಬುಗಳ ಶಬ್ದಗಳೊಡನೆ ಕೂಡಿಕೊಂಡಿರುವುದೂ ಆದ ನರ್ತನವನ್ನು ಮಾಡಲಾರಂಭಿಸಿದರು.

**ತತೋ ವಧೂವರಂ [೭]ಸಿದ್ಧಸ್ನಾನಾಂಭಃಪೂತಮಸ್ತಕಮ್ ।**
**ನಿವೇಶಿತಂ ಮಹಾಭಾಸಿ ಸಚ್ಚಾಮೀಕರಪಟ್ಟಕೇ ॥ ೨೪೫ ॥**

ತರುವಾಯ ವಧೂವರರ ಮಸ್ತಕವನ್ನು ಸಿದ್ಧಪರಮೇಷ್ಠಿಪ್ರತಿಮೆಗಳ ಅಭಿಷೇಕಜಲದಿಂದ ಪವಿತ್ರವನ್ನಾಗಿ ಮಾಡಿ ಅತ್ಯಂತಪ್ರಕಾಶಮಾನವಾದ ಬಂಗಾರದ ಆಸನ(ಮಣೆ)ದಲ್ಲಿ ವಧೂವರರನ್ನು ಕುಳ್ಳಿರಿಸಿ

**ಸ್ವಯಂ ಸ್ಮ[೮]ಕರಕಂ ಧತ್ತೇ ಚಕ್ರವರ್ತೀ ಮಹಾಕರಃ ।**
**ಹಿರಣ್ಮಯಂ ಮಹಾರತ್ನಖಚಿತಂ ಮೌಕ್ತಿಕೋಜ್ಜ್ವಲಮ್ ॥ ೨೪೬ ॥**

ದೊಡ್ಡ ಕೈಗಳುಳ್ಳ ವಜ್ರದಂತಚಕ್ರವರ್ತಿಯು ಮಹಾರತ್ನಖಚಿತವೂ ಮುತ್ತುಗಳಿಂದ ಪ್ರಕಾಶಮಾನವೂ ಆದ ಬಂಗಾರದ ಗಿಂಡಿಯನ್ನು ತಾನು ತೆಗೆದುಕೊಂಡನು.

**ಅಶೋಕಪಲ್ಲವೈರ್ವಕ್ತ್ರನಿಹಿತೈಃ ಕರಕೋ ಬಭೌ ।**
**ಕರಪಲ್ಲವಸಚ್ಛಾಯಾಮನುಕುರ್ವನ್ನಿವಾ[೯]ನಯೋಃ ॥ ೨೪೭ ॥**

೧ ಅಲಂಕೃತಾ. ೨ ವಧೂವರಾಕ್ರಾಂತಾ. ೩ ವಾದನೋಪಾಯೇನ. ೪ ಮಂಗಲಾಷ್ಟಕಾನ್. ೫ ಸ್ತುತಿಪಾಠಕಾಃ. ೬ ಸರ್ವಾಭಿನಯಸಾಮ್ಯಂ ಲಯಮಿತ್ಯುಚ್ಯತೇ. ೭ ಸಿದ್ಧಪರಮೇಷ್ಠಿ ಪ್ರತಿಮಾಭಿಷೇಕಜಲಂ. ೮ ಭೃಂಗಾರಂ. ೯ ವಧೂವರಯೋಃ.

ಮುಖದಲ್ಲಿ ಅಶೋಕದ ತಳಿರುಗಳುಳ್ಳ ಆ ಬಂಗಾರದ ಗಿಂಡಿಯು, ಈ ವಧೂವರರ ಹಸ್ತಪಲ್ಲವದ ಶೋಭೆಯನ್ನು ಅನುಕರಣಮಾಡುವಂತೆ, ಶೋಭಿಸಿದ್ದಿತು.

**ತತೋ [೧]ನ್ಯಪಾತಿ ಕರಕಾದ್ಧಾರಾ ತತ್ಕರಪಲ್ಲವೇ ।**
**ದೂರಮಾವರ್ಜಿತಾ ದೀರ್ಘಂ ಭವಂತೌ ಜೀವತಾಮಿತಿ ॥ ೨೪೮ ॥**

ತರುವಾಯ ''ನೀವುಗಳು ಬಹುಕಾಲದವರೆಗೆ ಜೀವಿಸಿರಿ'' ಯೆಂದು ಹೇಳಿ ಗಿಂಡಿಯಿಂದ ದೀರ್ಘವಾಗಿ ಬಿಟ್ಟ ಜಲಧಾರೆಯು ಆ ವಧೂವರರ ಪಲ್ಲವ(ಚಿಗುರೆಲೆ)ದಂತಿರುವ ಕೈಗಳಮೇಲೆ ಬಿದ್ದಿತು.

**ತತಃ ಪಾಣೌ ಮಹಾಬಾಹುರ್ವಜ್ರಜಂಘೋಗ್ರಹೀನ್ಮುದಾ ।**
**ಶ್ರೀಮತೀಂ ತನ್ಮೃದುಸ್ಪರ್ಶಸುಖಾಮೀಲಿತಲೋಚನಃ ॥ ೨೪೯ ॥**

ಆಮೇಲೆ ದೊಡ್ಡತೋಳುಗಳುಳ್ಳ ವಜ್ರಜಂಘನು ಶ್ರೀಮತಿಯ ಕೋಮಲವಾದ ಸ್ಪರ್ಶದ ಸುಖದಿಂದ ಕಣ್ಣುಗಳನ್ನು ಮುಚ್ಚಿಕೊಂಡವನಾಗಿ ಸಂತೋಷದಿಂದ ಶ್ರೀಮತಿಯ ಪಾಣಿಗ್ರಹಣವನ್ನು ಮಾಡಿದನು.

**ಶ್ರೀಮತೀ ತತ್ಕರಸ್ಪರ್ಶಾದ್ಘರ್ಮಬಿಂದೂನಧಾರಯತ್ ।**
**ಚಂದ್ರಕಾಂತಶಿಲಾಪುತ್ರೀ ಚಂದ್ರಾಂಶುಸ್ಪರ್ಶನಾದಿವ ॥ ೨೫೦ ॥**

ಚಂದ್ರಕಾಂತಶಿಲೆಯಿಂದ ಮಾಡಿದ ಪ್ರತಿಮೆಯು ಚಂದ್ರಕಿರಣಗಳ ಸ್ಪರ್ಶದಿಂದ ನೀರನ್ನು ಸ್ರವಿಸುವಂತೆ, ವಜ್ರಜಂಘನ ಹಸ್ತಸ್ಪರ್ಶದಿಂದ ಶ್ರೀಮತಿಯ ಶರೀರವು ಬೆವರಿತು.

**ವಜ್ರಜಂಘಕರಸ್ಪರ್ಶಾ[೨]ತ್ತನುತೋಸ್ಯಾಶ್ಚಿರಂ ಧೃತಃ ।**
**ಸಂತಾಪಃ ಕ್ವಾಪಿ ಯಾತಿ ಸ್ಮ ಭೂಮೇರಿವ ಘನಾಗಮೇ ॥ ೨೫೧ ॥**

ಮೇಘವೊಡ್ಡಿ ಜಲವನ್ನು ವರ್ಷಿಸುವುದರಿಂದ ಭೂಮಿಯ ತಾಪವು ಹೋಗುವಂತೆ, ವಜ್ರಜಂಘನ ಹಸ್ತಸ್ಪರ್ಶದಿಂದ ಈ ಶ್ರೀಮತಿಯ ಶರೀರದಿಂದ ಬಹುಕಾಲದ ಸಂತಾಪವು ಎಲ್ಲಿಯೋ ಹೋಯಿತು.

**ವಜ್ರಜಂಘಸಮಾಸಂಗಾಚ್ಛ್ರೀಮತೀ ವ್ಯದ್ಯುತತ್ತರಾಮ್ ।**
**ಕಲ್ಪವಲ್ಲೀವ ಸಂಶ್ಲಿಷ್ಟತುಂಗಕಲ್ಪಮಹೀರುಹಾ ॥ ೨೫೨ ॥**

ಉನ್ನತವಾದ ಕಲ್ಪವೃಕ್ಷವನ್ನು ಹಬ್ಬಿಕೊಂಡಿರುವ ಕಲ್ಪಲತೆಯಂತೆ, ವಜ್ರಜಂಘನ ಸಂಬಂಧದಿಂದ ಶ್ರೀಮತಿಯು ಅಧಿಕವಾಗಿ ಶೋಭಿಸಿದಳು.

**ಸೋಪಿ ಪರ್ಯಂತವರ್ತಿನ್ಯಾ ತಯಾ ಲಕ್ಷ್ಮೀಂ ಪರಾಮಧಾತ್ ।**
**ಸ್ತ್ರೀಸೃಷ್ಟೇಃ ಪರಯಾ ಕೋಟ್ಯಾ ರತ್ಯೇವ ಕುಸುಮಾಯುಧಃ ॥ ೨೫೩ ॥**

ಸ್ತ್ರೀಸೃಷ್ಟಿಯಲ್ಲಿ ಶ್ರೇಷ್ಠಳಾದ ರತಿಯಿಂದ ಮನ್ಮಥನು ಶೋಭಿಸುವಂತೆ, ಸಮೀಪದಲ್ಲಿ ಕುಳಿತಿರುವ ಶ್ರೀಮತಿಯಿಂದ ಆ ವಜ್ರಜಂಘನೂ ಅಧಿಕವಾಗಿ ಶೋಭಿಸಿದನು.

**[೩]ಗುರುಸಾಕ್ಷಿ ತಯೋರಿತ್ಥಂ ವಿವಾಹಃ ಪರಮೋದಯಃ ।**
**ನಿರವರ್ತತ ಲೋಕಸ್ಯ ಪರಮಾನಂದಮಾದಧತ್ ॥ ೨೫೪ ॥**

ಹೀಗೆ ಸಕಲಜನರಿಗೂ ಆನಂದವನ್ನುಂಟುಮಾಡುವುದೂ ಅಧಿಕವಾದ ಸುಖಾವಿರ್ಭಾವವುಳ್ಳುದೂ ಆದ ಶ್ರೀಮತೀವಜ್ರಜಂಘರ ವಿವಾಹವು ತಾಯಿತಂದೆ ಮೊದಲಾದ ಗುರುಜನರ ಸಾಕ್ಷಿಯಾಗಿ ಜರುಗಿತು.

**ತತಃ ಪಾಣಿಗೃಹೀತಿಂ ತಾಂ ತೇ ಜನಾ [೪]ಬಹುಮೇನಿರೇ ।**
**ಶ್ರೀಮತೀ ಸತ್ಯಮೇವೇಯಂ ಶ್ರೀಮತೀತ್ಯುದ್ಗಿರಸ್ತದಾ ॥ ೨೫೫ ॥**

೧ ಕರ್ಮಕರ್ತರಿಪ್ರಯೋಗಃ, ಸ್ವಯಮೇವ ಪತತಿ ಸ್ಮ. ೨ ಶರೀರಾತ್. ೩ ಪಿತೃಸಾಕ್ಷಿ. ೪ ಪ್ರಶಶಂಸುಃ.

ಆಗ ಆ ಜನರೆಲ್ಲರೂ ''ಈ ಶ್ರೀಮತಿಯು ನಿಜವಾಗಿಯೂ ಶ್ರೀಮತಿ(ಐಶ್ವರ್ಯ ಸಂಪನ್ನೆ)ಯಾದಳು'' ಎಂದು ಹೇಳುವವರಾಗಿ ವಿವಾಹಿತಳಾದ ಆ ಶ್ರೀಮತಿಯನ್ನು ಪ್ರಶಂಸೆಮಾಡಿದರು.

**ತೌ ದಂಪತೀ ಸದಾಕಾರೌ ಸುರದಂಪತಿವಿಭ್ರಮೌ ।**
**ಜನಾನಾಂ ಪಶ್ಯತಾಂ ಚಿತ್ತಂ [೧]ನಿರ್ವಾವಾರಾಮೃತಾಯಿತೌ ॥ ೨೫೬ ॥**

ದೇವದಂಪತಿಗಳಂತೆ ಲೀಲೆಯನ್ನು ಮಾಡುವವರೂ, ಅಮೃತದಂತೆ, ಆನಂದವನ್ನುಂಟುಮಾಡುವವರೂ, ಸುಂದರವಾದ ಆಕಾರವುಳ್ಳವರೂ ಆದ ಆ ದಂಪತಿಗಳನ್ನು ನೋಡುವ ಜನರ ಮನಸ್ಸು ಅತ್ಯಂತ ಸಂತುಷ್ಟವಾಯಿತು.

**ತತ್ಕಲ್ಯಾಣಂ ಸಮಾಲೋಕ್ಯ ಸುರಲೋಕೇಪಿ ದುರ್ಲಭಮ್ ।**
**ಪ್ರಶಶಂಸುರ್ಮುದಂ ಪ್ರಾಪ್ತಾಃ ಪರಮಾಂ ಪ್ರೇಕ್ಷಕಾ ಜನಾಃ ॥ ೨೫೭ ॥**

ಸ್ವರ್ಗಲೋಕದಲ್ಲಿಯೂ ದುರ್ಲಭವಾದ ಆ ವಿವಾಹವನ್ನು ನೋಡಿ ಅತ್ಯಂತ ಆನಂದಗೊಂಡ ಪ್ರೇಕ್ಷಕಜನರು ಬಹಳ ಪ್ರಶಂಸೆಮಾಡಿದರು; ಹೇಗೆಂದರೆ:—

**ಚಕ್ರವರ್ತೀ [೨]ಮಹಾಭಾಗಃ ಸ್ತ್ರೀರತ್ನಮಿದಮೂರ್ಜಿತಮ್ ।**
**ಯೋಗ್ಯೇ ನಿಯೋಜಯಾಮಾಸ ಜನಶ್ಲಾಘಾಸ್ಪದೇ [೩]ಪದೇ ॥ ೨೫೮ ॥**

''ಪುಣ್ಯವಂತನಾದ ವಜ್ರದಂತಚಕ್ರವರ್ತಿಯು ಶ್ರೇಷ್ಠವಾದ ಈ ಸ್ತ್ರೀರತ್ನವನ್ನು ಜನರ ಪ್ರಶಂಸೆಗೆ ಪಾತ್ರವಾದ ಯೋಗ್ಯಸ್ಥಾನ(ವರ)ದಲ್ಲಿ ಸೇರಿಸಿದನು.

**ಜನನೀ ಪುಣ್ಯವತ್ಯಸ್ಯಾ [೪]ಮೂರ್ಧ್ನಿ [೫]ಸುಪ್ರಜಸಾಮಸೌ ।**
**[೬]ಸತ್ಪ್ರಸೂತಿರಿಯಂ ಸೂತಾ [೭]ಯಯಾ ಲಕ್ಷ್ಮೀಸಮದ್ಯುತಿಃ ॥ ೨೫೯ ॥**

ಲಕ್ಷ್ಮೀದೇವಿಗೆ ಸಮಾನವಾದ ಕಾಂತಿಯುಳ್ಳ ಈ ಶ್ರೀಮತಿಯನ್ನು ಹಡೆದವಳೂ ಮಕ್ಕಳುಳ್ಳ ಸ್ತ್ರೀಯರಲ್ಲೆಲ್ಲ ಶ್ರೇಷ್ಠಳೂ ಆದ ಈ ಶ್ರೀಮತಿಯ ತಾಯಿ (ಲಕ್ಷ್ಮೀಮತಿ)ಯು ಪುಣ್ಯವಂತಳು.

**ಕುಮಾರೇಣ ತಪಸ್ತಪ್ತಂ ಕಿಮೇತೇನಾನ್ಯಜನ್ಮನಿ ।**
**ಯೇನಾಸಾದಿ ಜಗತ್ಸಾರಂ ಸ್ತ್ರೀರತ್ನಮಮಿತದ್ಯುತಿ ॥ ೨೬೦ ॥**

ಜಗತ್ತಿನಲ್ಲೆಲ್ಲ ಸಾರವೂ ಅಪಾರವಾದ ಕಾಂತಿಯುಳ್ಳುದೂ ಆಗಿರುವ ಸ್ತ್ರೀರತ್ನವನ್ನು ಪಡೆದ ಈ ವಜ್ರಜಂಘಕುಮಾರನು ಪೂರ್ವಜನ್ಮದಲ್ಲಿ ತಪಸ್ಸನ್ನು ಮಾಡಿದ್ದನೋ ?

**ಧನ್ಯೇಯಂ ಕನ್ಯಕಾ ಮಾನ್ಯಾ ನಾನ್ಯಾ ಪುಣ್ಯವತೀದೃಶೀ ।**
**ಕಲ್ಯಾಣಭಾಗಿನೀ ಯ್ಯೈಷಾ ವಜ್ರಜಂಘಂ ಪತಿಂ [೮]ವೃತಾ ॥ ೨೬೧ ॥**

ಲೋಕಮಾನ್ಯಳಾದ ಈ ಕನ್ಯೆಯು ವಜ್ರಜಂಘನನ್ನು ವರಿಸಿ ಧನ್ಯಳಾದಳು. ಸುಖಭಾಗಿನಿಯಾದಳು. ಇವಳಂತಹ ಪುಣ್ಯಶಾಲೀ ಕನ್ಯೆಯು ಬೇರೆಯಿಲ್ಲ.

**ಉಪೋಷಿತಂ ಕಿಮೇತಾಭ್ಯಾಂ ಕಿಂ ವಾ ತಪ್ತಂ ತಪೋ ಮಹತ್ ।**
**ಕಿಂನು ದತ್ತಂ [೯]ಕಿಮಿಷ್ಟಂ ವಾ ಕೀದೃಗ್ವಾಚರಿತಂ ವ್ರತಮ್ ॥ ೨೬೨ ॥**

ಈ ವಧೂವರರು ಪೂರ್ವದಲ್ಲಿ ಉಪವಾಸವ್ರತವನ್ನು ಮಾಡಿದ್ದರೋ ? ಮಹಾತಪಸ್ಸನ್ನು ಮಾಡಿದ್ದರೋ ?ಸತ್ಪಾತ್ರಕ್ಕೆ ದಾನವನ್ನು ಮಾಡಿದ್ದರೋ ?ಅಥವಾ ದೇವಪೂಜೆಯನ್ನು ಮಾಡಿದ್ದರೋ ? ಎಂತಹ ವ್ರತವನ್ನು ಆಚರಿಸಿದ್ದರು ?

**ಅಹೋ ಧರ್ಮಸ್ಯ ಮಾಹಾತ್ಮ್ಯಮಹೋ ಸತ್ಸಾಧನಂ ತಪಃ ।**
**ಅಹೋ ದತ್ತಿರ್ಮಹೋದರ್ಕಾ ದಯಾವಲ್ಲೀ ಫಲತ್ಯಹೋ ॥ ೨೬೩ ॥**

೧ ಅತುಷತ್. ೨ ಪುಣ್ಯವಾನ್. ೩ ಸ್ಥಾನೇ. ೪ ಅಗ್ರೇ. ೫ ಶೋಭನಪುತ್ರವತೀನಾಂ. ೬ ಸತೀಪ್ರಸೂತಿರ್ಯಸ್ಯಾಃ ಸಾ. ೭ ಜನನ್ಯಾ. ೮ ವೃಣೀತೇ ಸ್ಮ. ೯ ಯಜ, ದೇವಪೂಜಾಸಂಗತಿಕರಣದಾನೇಷು.

ಅಹೋ ! ಧರ್ಮದ ಮಹಿಮೆಯೇ ! ಅಹೋ ! ಅಭ್ಯುದಯವನ್ನುಂಟು ಮಾಡುವ ತಪಸ್ಸೇ ! ಅಹೋ ! ಉತ್ತರದಲ್ಲಿ ಮಹಾಫಲವನ್ನು ಕೊಡುವ ದಾನವೇ ! ಅಹೋ ! ದಯೆಯೆಂಬ ಲತೆಯು ಫಲಿಸುತ್ತದೆ. (ಪೂರ್ವದಲ್ಲಿ ಮಾಡಿದ ಧರ್ಮದ ಮಹಿಮೆಯಿಂದಲೂ ತಪಸ್ಸಿನಿಂದಲೂ ದಾನದಿಂದಲೂ ದಯೆಯಿಂದಲೂ ಈಗ ಇಂತಹ ಲೋಕೋತ್ಕೃಷ್ಟವಾದ ದಾಂಪತ್ಯವು ಕೂಡಿತೆಂದು ಜನರು ಮಾತ ನಾಡಿಕೊಳ್ಳುತ್ತಿದ್ದರೆಂದು ಭಾವವು).

**ನೂನಮಾಭ್ಯಾಂ ಕೃತಾ ಪೂಜಾ ಮಹತಾಮರ್ಹತಾಂ ಪರಾ ।**
**ಪೂಜ್ಯಪೂಜಾನುಸಂಧತ್ತೇ ನನು ಸಂಪತ್ಪರಂಪರಾಮ್ ॥ ೨೬೪ ॥**

ನಿಶ್ಚಯವಾಗಿಯೂ ಈ ವಧೂವರರು ಪೂರ್ವಭವದಲ್ಲಿ ಪೂಜ್ಯರಾದ ಅರ್ಹತ್ಪರಮೇಷ್ಠಿಗಳ ಪೂಜೆಯನ್ನು ಮಾಡಿದ್ದರು. ಪೂಜ್ಯರಪೂಜೆಯನ್ನು ಮಾಡುವುದರಿಂದ ಅವಶ್ಯವಾಗಿಯೂ ಅನೇಕ ಸಂಪತ್ತುಗಳು ಒಂದರ ಮೇಲೊಂದುಂಟಾಗುತ್ತವೆ.

**ಅತಃ ಕಲ್ಯಾಣಭಾಗಿತ್ವಂ ಧನರ್ದ್ಧಿಂ ವಿಪುಲಂ ಸುಖಮ್ ।**
**ವಾಂಛದ್ಭಿರರ್ಹತಾಂ ಮಾರ್ಗೇ ಮತಿಃ ಕಾರ್ಯಾ ಮಹಾಫಲೇ ॥**

ಈ ಕಾರಣದಿಂದ ತಮಗೆ ಕಲ್ಯಾಣವನ್ನೂ ಅತಿಶಯವಾದ ದ್ರವ್ಯವನ್ನೂ ಅಧಿಕಸುಖವನ್ನೂ ಇಚ್ಛಿಸುವವರು ಮಹಾಫಲದಾಯಕವಾದ ಜಿನಮಾರ್ಗದಲ್ಲಿ ಬುದ್ಧಿಯನ್ನಿಡಬೇಕು''.

**ಇತ್ಯಾದಿಜನಸಂಜಲ್ಪೈಃ ಸಂಶ್ಲಾಘ್ಯೌ ದಂಪತೀ ತದಾ ।**
**ಸುಖಾಸೀನೌ ಪ್ರಶಸ್ಯಾಯಾಂ ಬಂಧುಭಿಃ ಪರಿವಾರಿತೌ ॥ ೨೬೬ ॥**

ಇವೇ ಮೊದಲಾದ ಜನರ ಸಲ್ಲಾಪಗಳಿಂದ ಪ್ರಶಂಸೆಗೆ ಯೋಗ್ಯರಾದ ಆ ದಂಪತಿಗಳು ಬಂಧುಗಳಿಂದ ಸುತ್ತಲ್ಪಟ್ಟವರಾಗಿ ಹಸೆಯಲ್ಲಿ ಕುಳಿತುಕೊಂಡರು.

**[೧]ದೀನೈ[೨]ರ್ದೈನ್ಯಂ ಸಮುತ್ಸೃಷ್ಟಂ ಕಾರ್ಪಣ್ಯಂ [೩]ಕೃಪಣೈ[೪]ರ್ಜಹೇ ।**
**ಅನಾಥೈಶ್ಚ ಸನಾಥತ್ವಂ ಭೇಜೇ ತಸ್ಮಿನ್ಮಹೋತ್ಸವೇ ॥ ೨೬೭ ॥**

ಆ ವಿವಾಹಮಹೋತ್ಸವದಲ್ಲಿ ದರಿದ್ರರ ಬಡತನವು ಹೋಯಿತು. ಕೃಪಣ(ಜಿಪುಣ)ರು ತಮ್ಮ ಕೃಪಣತ್ವವನ್ನು ಬಿಟ್ಟರು. ಅನಾಥರಾಗಿದ್ದವರು ಸನಾಥರಾದರು.

**ಬಂಧವೋ ಮಾನಿತಾಃ ಸರ್ವೇ ದಾನ[೫]ಮಾನಾಭಿಜಲ್ಪನೈಃ ।**
**ಭೃತ್ಯಾಶ್ಚ ತರ್ಪಿತಾ ಭರ್ತ್ರಾ ಚಕ್ರಿಣಾಸ್ಮಿನ್ಮಹೋತ್ಸವೇ ॥ ೨೬೮ ॥**

ಈ ವಿವಾಹಮಹೋತ್ಸವದಲ್ಲಿ ಚಕ್ರವರ್ತಿಯು ಬಂಧುಗಳನ್ನೆಲ್ಲ ದಾನದಿಂದಲೂ ಸನ್ಮಾನದಿಂದಲೂ ಉಚಿತಸಂಭಾಷಣೆಗಳಿಂದಲೂ ಗೌರವಿಸಿದನು. ಸೇವಕರಿಗೆ ಇಷ್ಟಾರ್ಥವನ್ನು ಕೊಟ್ಟು ತೃಪ್ತಿಪಡಿಸಿದನು.

**ಗೃಹೇ ಗೃಹೇ ಮಹಾಂಸ್ತೋಷಃ ಕೇತುಬಂಧೋ ಗೃಹೇ ಗೃಹೇ ।**
**ಗೃಹೇ ಗೃಹೇ [೬]ವರಾಲಾಪೋ [೭]ವಧೂಃ ಶಂಸ್ಯಾ ಗೃಹೇ ಗೃಹೇ॥ ೨೬೯ ॥**

ಪ್ರತಿಮನೆಯಲ್ಲಿಯೂ ಮಹಾಸಂತೋಷವುಂಟಾಗಿದ್ದಿತು. ಎಲ್ಲೆಲ್ಲಿಯೂ ಧ್ವಜ ಪತಾಕೆಗಳನ್ನು ಕಟ್ಟಿದ್ದರು. ಪ್ರತಿಯೊಂದು ಮನೆಯಲ್ಲಿಯೂ ವರನ ವಿಷಯದ ಸಲ್ಲಾಪವೂ ವಧೂವಿನ ಪ್ರಶಂಸೆಯೂ ಉಂಟಾಯಿತು.

**ದಿನೇ ದಿನೇ ಮಹಾಂಸ್ತೋಷೋ ಧರ್ಮಭಕ್ತಿರ್ದಿನೇ ದಿನೇ ।**
**ದಿನೇ ದಿನೇ ಮಹೇದ್ಧರ್ದ್ಧ್ಯಾ ಪೂಜ್ಯತೇ ಸ್ಮ ವಧೂವರಮ್ ॥ ೨೭೦ ॥**

೧ ದರಿದ್ರೈಃ. ೨ ದಾರಿದ್ರ್ಯಂ. ೩ ಲುಬ್ಧೈಃ. ೪ ತ್ಯಕ್ತಮಿತ್ಯರ್ಥಃ. ೫ ಸನ್ಮಾನಃ. ೬ ವಜ್ರಜಂಘಸ್ಯ. ೭ ಶ್ರೀಮತೀ.

ದಿನಕ್ರಮದಿಂದ ಜನರ ಸಂತೋಷವೂ ಧರ್ಮದಲ್ಲಿ ಭಕ್ತಿಯೂ ವೃದ್ಧಿಹೊಂದಿದುವು. ವಧೂವರರಿಗೆ ಪ್ರತಿದಿನದಲ್ಲಿಯೂ ಬಹಳ ವೈಭವದಿಂದ ಆದರಸತ್ಕಾರವೂ ಉಂಟಾಯಿತು.

**ಅಥಾಪರೇದ್ಯುರು[೧]ದ್ಯಾವ[೨]ಮುದ್ಯೋತಯಿತುಮುದ್ಯಮೀ ।**
**ಪ್ರದೋಷೇ ದೀಪಿಕೋದ್ಯೋತ್ಯೈರ್ಮ[೩]ಹಾಪೂತಂ ಯಯೌ ವರಃ ॥**

ವಿವಾಹವಾದನಂತರ ಮರುದಿವಸ ವ್ರತವನ್ನು ಉದ್ಯಾಪನೆಮಾಡುವುದಕ್ಕೋಸ್ಕರ ಪ್ರಯತ್ನಪಟ್ಟ ವರ(ವಜ್ರಜಂಘ)ನು ರಾತ್ರಿಯ ಆರಂಭ(ಸಾಯಂಕಾಲ)ದಲ್ಲಿ ದೀಪಗಳ ಪ್ರಕಾಶಗಳಿಂದ ಮಹಾಪೂತವೆಂದು ಹೆಸರುಳ್ಳ ಜಿನಮಂದಿರಕ್ಕೆ ಹೋದನು.

**ಪ್ರಯಾಂತಮನುಯಾತಿ ಸ್ಮ ಶ್ರೀಮತೀ ತಂ ಮಹಾದ್ಯುತಿಮ್ ।**
**ಭಾಸ್ವಂತಮಿವ ರುದ್ಧಾಂಧತಮಸಂ ಭಾಸುರಾ ಪ್ರಭಾ ॥ ೨೭೨ ॥**

ಪ್ರಕಾಶಮಾನವಾದ ಕಾಂತಿಯು ಅಂಧಕಾರವನ್ನು ಹೋಗಲಾಡಿಸುವ ಸೂರ್ಯನನ್ನು ಹಿಂಬಾಲಿಸುವಂತೆ, ಜಿನಾಲಯಕ್ಕೆ ಹೋಗುತ್ತಿರುವ ಮಹಾಕಾಂತಿಯುಳ್ಳ ಆ ವಜ್ರಜಂಘನನ್ನು ಶ್ರೀಮತಿಯು ಹಿಂಬಾಲಿಸಿ ಹೋದಳು.

**ಪೂಜಾವಿ[೪]ಭೂತಿಂ ಮಹತೀಂ ಪುರಸ್ಕೃತ್ಯ ಜಿನಾಲಯಮ್ ।**
**ಪ್ರಾಪದುತ್ತುಂಗಕೂಟಾಗ್ರಂ ಸ ಸುಮೇರುಮಿವೋಚ್ಛ್ರಿತಮ್ ॥ ೨೭೩ ॥**

ಆ ವಜ್ರಜಂಘನು ಬಹಳ ಪೂಜಾಸಾಮಗ್ರಿಗಳನ್ನು ತೆಗೆದುಕೊಂಡು ಉನ್ನತವಾದ ಶಿಖರವುಳ್ಳುದೂ ಮಹಾಮೇರುಪರ್ವತದಂತೆ ಉನ್ನತವೂ ಆದ ಜಿನಾಲಯವನ್ನು ಪ್ರವೇಶಿಸಿದನು.

**ಸ ತಂ ಪ್ರದಕ್ಷಿಣೀಕುರ್ವನ್ಸಜಾನಿರ್ವಿಬಭೌ ನೃಪಃ ।**
**ಮೇರುಮರ್ಕ ಇವ ಶ್ರೀಮಾನ್ಮಹಾದೀಪ್ತ್ಯಾ ಪರಿಷ್ಕೃತಃ ॥ ೨೭೪ ॥**

ಪತ್ನೀಸಹಿತನಾಗಿ ಆ ಜಿನಾಲಯವನ್ನು ಪ್ರದಕ್ಷಿಣೆಮಾಡುತ್ತಿರುವ ವಜ್ರಜಂಘನು, ಮಹಾಕಾಂತಿಯೊಡಗೂಡಿದ ಸೂರ್ಯನು ಮಹಾಮೇರುಪರ್ವತವನ್ನು ಪ್ರದಕ್ಷಿಣೆ ಮಾಡುವಂತೆ, ಶೋಭಿಸುತ್ತಿದ್ದನು.

**ಕೃತೇರ್ಯಾ ಶುದ್ಧಿರಿದ್ಧರ್ದ್ಧಿಃ ಪ್ರವಿಶ್ಯ ಜಿನಮಂದಿರಮ್ ।**
**ತತ್ರಾಪಶ್ಯದೃಷೀನ್ದೀಪ್ತತಪಸಃ ಕೃತವಂದನಃ ॥ ೨೭೫ ॥**

ಈರ್ಯಾಪಥಶುದ್ಧಿಮಂತ್ರವನ್ನು ಪಠಿಸಿ ವಜ್ರಜಂಘನು ಮಹಾವೈಭವದಿಂದ ಜಿನಮಂದಿರವನ್ನು ಪ್ರವೇಶಿಸಿ ಅಲ್ಲಿ ದೀಪ್ತತಪೋಧಾರಿಗಳಾದ ಋಷಿಗಳನ್ನು ಕಂಡು ಅವರಿಗೆ ವಂದಿಸಿದನು.

**ತತೋ ಗಂಧಕುಟೀಮಧ್ಯೇ ಜಿನೇಂದ್ರಾ[೫]ರ್ಚ್ಯಾಂ ಹಿರಣ್ಮಯೀಮ್ ।**
**ಪೂಜಯಾಮಾಸ ಗಂಧಾದ್ಯೈರಭಿಷೇಕಪುರಸ್ಸರಮ್ ॥ ೨೭೬ ॥**

ತರುವಾಯ ವಜ್ರಜಂಘನು ಗಂಧಕುಟಿಯ ಮಧ್ಯದಲ್ಲಿ ಸುವರ್ಣಮಯವಾದ ಜಿನೇಶ್ವರಪ್ರತಿಮೆಗೆ ಅಭಿಷೇಕವನ್ನು ಮಾಡಿ ಜಲಗಂಧಾಕ್ಷತೆ ಮೊದಲಾದ ಅಷ್ಟದ್ರವ್ಯಗಳಿಂದ ಪೂಜಿಸಿದನು.

**ಕೃತಾರ್ಚನಸ್ತತಃ ಸ್ತೋತುಂ ಪ್ರಾರೇಭೇಸೌ ಮಹಾಮತಿಃ ।**
**ಅರ್ಥ್ಯಾಭಿಃ ಸ್ತುತಿಭಿಃ ಸಾಕ್ಷಾತ್ಕೃತ್ಯ ಸ್ತುತ್ಯಂ ಜಿನೇಶ್ವರಮ್ ॥ ೨೭೭ ॥**

ಪೂಜೆಯನ್ನು ಮಾಡಿದನಂತರ ಈ ಮಹಾಬುದ್ಧಿಶಾಲಿಯಾದ ವಜ್ರಜಂಘನು ಸ್ತುತಿಗೆ ಪಾತ್ರರಾದ ಜಿನೇಶ್ವರರನ್ನು ಸಾಕ್ಷಾತ್ಕರಿಸಿ ಉತ್ತಮೋತ್ತಮವಾದ ಅರ್ಥವುಳ್ಳ ಸ್ತುತಿಗಳಿಂದ ಸ್ತೋತ್ರವನ್ನು ಮಾಡಲಾರಂಭಿಸಿದನು.

೧ ವ್ರತಂ. ೨ ಉದ್ಯಾಪಯಿತುಂ. ೩ ನಾಮಜಿನಾಲಯಂ. ೪ ಪೂಜಾಸಾಮಗ್ರೀಂ. ೫ ಪ್ರತಿಮಾಂ.

**ನಮೋ ಜಿನೇಶಿನೇ ತುಭ್ಯಮ[೧]ನಭ್ಯಸ್ತದುರಾಧಯೇ ।**
**ತ್ವಾಮದ್ಯಾರಾಧಯಾಮೀಶ ಕರ್ಮಶತ್ರುಬಿ[೨]ಭಿತ್ಸಯಾ ॥ ೨೭೮ ॥**

ಹೇಗೆಂದರೆ:— ''ದುಷ್ಟವಾದ ಮನೋವ್ಯಥೆಯನ್ನು ಹೋಗಲಾಡಿಸಿದ ಜಿನೇಶ್ವರನೇ ! ನಿನಗೆ ನಮಸ್ಕಾರ. ಪ್ರಭುವೇ ! ಈಗ ನಾನು ಕರ್ಮವೆಂಬ ಶತ್ರುವನ್ನು ಭೇದಿಸಬೇಕೆಂಬ ಇಚ್ಛೆಯಿಂದ ನಿನ್ನನ್ನು ಪೂಜಿಸುತ್ತೇನೆ.

**ಅನಂತಾಸ್ತ್ವದ್ಗುಣಾಃ ಸ್ತೋತುಮಶಕ್ಯಾ ಗ[೩]ಣಪ್ಯೈರಪಿ ।**
**ಭಕ್ತ್ಯಾ ತು ಪ್ರಸ್ತು[೪]ವೇ ಸ್ತೋತ್ರಂ ಭಕ್ತಿಃ ಶ್ರೇಯೋನುಬಂಧಿನೀ ॥**

ಅನಂತವಾದ ನಿನ್ನ ಗುಣಗಳನ್ನು ಸ್ತೋತ್ರಮಾಡುವುದಕ್ಕೆ ಗಣಧರರೂ ಸಮರ್ಥರಲ್ಲ. ನಾನಾದರೋ ಭಕ್ತಿಯಿಂದ ಸ್ತೋತ್ರವನ್ನು ಮಾಡಲಾರಂಭಿಸುತ್ತೇನೆ. ಭಕ್ತಿಯು ಸ್ವರ್ಗಾದಿಸುಖವನ್ನುಂಟುಮಾಡುವುದಾಗಿದೆ.

**ತ್ವದ್ಭಕ್ತಃ ಸುಖಮಭ್ಯೇತಿ ಲಕ್ಷ್ಮೀಸ್ತ್ವದ್ಭಕ್ತಮಶ್ನುತೇ ।**
**ತ್ವದ್ಭಕ್ತಿರ್ಭು[೫]ಕ್ತಯೇ ಪುಂಸಾಂ ಮುಕ್ತಯೇ ಚ ಸ್ಥ[೬]ವೀಯಸೀ ॥ ೨೮೦ ॥**

ನಿನ್ನ ಭಕ್ತನು ಸುಖವನ್ನು ಹೊಂದುತ್ತಾನೆ. ನಿನ್ನ ಭಕ್ತನಿಗೆ ಐಶ್ವರ್ಯವುಂಟಾಗುವುದು. ನಿನ್ನಲ್ಲಿ ಅತ್ಯಂತಸ್ಥಿರವಾದ ಭಕ್ತಿಯನ್ನು ಮಾಡುವವರಿಗೆ ಇಹದಲ್ಲಿ ಭೋಗವೂ ಕ್ರಮೇಣ ಮೋಕ್ಷವೂ ಪ್ರಾಪ್ತವಾಗುವುವು.

**ಅತೋ ಭಜಂತಿ ಭವ್ಯಾಸ್ತ್ವಾಂ ಮನೋವಾಕ್ಕಾಯಶುದ್ಧಿಭಿಃ ।**
**ಫಲಾರ್ಥಿಭಿರ್ಭವಾನ್ಸೇವ್ಯೋ ವ್ಯಕ್ತಂ ಕಲ್ಪತರೂಯತೇ ॥ ೨೮೧ ॥**

ಈ ಕಾರಣದಿಂದಲೇ ಭವ್ಯರು ಮನೋವಚನಕಾಯಶುದ್ಧಿಯಿಂದ ನಿನ್ನನ್ನು ಸೇವಿಸುತ್ತಾರೆ. ಫಲವನ್ನಿಚ್ಛಿಸುವವರಿಂದ ಸೇವಿಸುವುದಕ್ಕೆ ಯೋಗ್ಯನಾದ ನೀನು ಆ ಫಲಾಪೇಕ್ಷಿಗಳಿಗೆ ಸಾಕ್ಷಾತ್ ಕಲ್ಪವೃಕ್ಷಕ್ಕೆ ಸಮಾನನಾಗಿರುತ್ತಿ.

**ತ್ವಯಾ ಪ್ರವರ್ಷತಾ ಧರ್ಮವೃಷ್ಟಿಂ ದುಷ್ಕರ್ಮಘರ್ಮತಃ ।**
**[೭]ಪ್ರೋದನ್ಯದ್ಭವಭೃದ್ವಾರಿಸ್ಪೃಹಾಂ ನವಘನಾಯಿತಮ್ ॥ ೨೮೨ ॥**

ದುಷ್ಕರ್ಮವೆಂಬ ಸಂತಾಪದಿಂದ ಬಾಯಾರಿದ ಸಂಸಾರಿಜೀವಗಳೆಂಬ ಚಾತಕಗಳಿಗೆ ಧರ್ಮವೆಂಬ ಮಳೆಯನ್ನು ಸುರಿದ ನೀನು ನೂತನವಾದ ಮೇಘದಂತೆ ಆನಂದವನ್ನುಂಟುಮಾಡಿದೆ.

**ತ್ವಯಾ ಪ್ರದರ್ಶಿತಂ ಮಾರ್ಗಮಾಸೇವಂತೇ ಹಿತೈಷಿಣಃ ।**
**ಭಾಸ್ವತಾ ದ್ಯೋತಿತಂ ಮಾರ್ಗಮಿವ ಕಾರ್ಯಾರ್ಥಿನೋ ಜನಾಃ ॥**

ಕಾರ್ಯವನ್ನು ಮಾಡಲಿಚ್ಛಿಸುವ ಜನರು ಸೂರ್ಯನಿಂದ ಪ್ರಕಾಶಿತವಾದ ಮಾರ್ಗದಲ್ಲಿ ಹೋಗುವಂತೆ, ಆತ್ಮಹಿತವನ್ನಿಚ್ಛಿಸುವ ಜನರು ನೀನು ತೋರಿಸಿದ ಧರ್ಮಮಾರ್ಗದಲ್ಲಿ ಹೋಗುತ್ತಾರೆ.

**ಸಂಸಾರೋಚ್ಛೇದನೇ ಬೀಜಂ ತ್ವಯಾ ತತ್ತ್ವಂ ನಿದರ್ಶಿತಮ್ ।**
**[೮]ಆತ್ರಿಕಾಮುತ್ರಿಕಾರ್ಥಾನಾಂ ಯತಃ ಸಿದ್ಧಿರಿಹಾಂಗಿನಾಮ್ ॥ ೨೮೪ ॥**

ನೀನು ತೋರಿಸಿದ ತತ್ತ್ವವು ಸಂಸಾರವನ್ನು ನಾಶಮಾಡುವುದಕ್ಕೆ ಮುಖ್ಯ ಕಾರಣವಾಗಿದೆ. ಆ ತತ್ತ್ವದಿಂದ ಸಂಸಾರಿಜೀವಗಳಿಗೆ ಇಹಪರಲೋಕಸಂಬಂಧವಾದ ಸಮಸ್ತ ಇಷ್ಟಾರ್ಥಸಿದ್ಧಿಯು ಆಗುವುದು.

**[೯]ಲಕ್ಷ್ಮೀಸರ್ವಸ್ವಮುಜ್ಝಿತ್ವಾ ಸಾಮ್ರಾಜ್ಯಂ ಪ್ರಾಜ್ಯವೈಭವಮ್ ।**
**ತ್ವಯಾ ಚಿತ್ರ[೧೦]ಮುದೂಢಾಸೌ ಮುಕ್ತಿಶ್ರೀಃ ಸ್ಪೃಹಯಾಲುನಾ ॥ ೨೮೫ ॥**

೧ ನಿರಸ್ತಮನಃಪೀಡಾದಿವ್ಯಾಧಯೇ. ೨ ಭೇತ್ತುಮಿಚ್ಛಯಾ. ೩ ಗಣಧರೈಃ. ೪ ಪ್ರಾರಭೇ. ೫ ಭೋಗಾಯ. ೬ ಸ್ಥಿರತರಾ. ೭ ಅತ್ಯಂತಪಿಪಾಸವತ್ಸಂಸಾರಿಚಾತಕಾನಾಂ. ೮ ಐಹಿಕಾಮುಷ್ಮಿಕಾರ್ಥಾನಾಂ. ೯ ಭಂಡಾರಂ. ೧೦ ವಿವಾಹಿತಾ.

ಅತ್ಯಧಿಕವಾದ ವೈಭವವುಳ್ಳ ಸಾಮ್ರಾಜ್ಯವನ್ನೂ ಭಂಡಾರ ಮೊದಲಾದುದೆಲ್ಲವನ್ನೂ ಪರಿತ್ಯಜಿಸಿ ಮೋಕ್ಷಲಕ್ಷ್ಮಿಯನ್ನು ಇಚ್ಛೆಪಟ್ಟು ನೀನು ವಿವಾಹ ಮಾಡಿಕೊಂಡುದು ಆಶ್ಚರ್ಯ !

**ದಯಾವಲ್ಲೀಪರಿಷ್ವಕ್ತೋ ಮಹೋದರ್ಕೋ ಮಹೋನ್ನತಿಃ ।**
**ಪ್ರಾರ್ಥಿತಾರ್ಥಾನ್ಪ್ರಪುಷ್ಣಾತಿ ಭವಾನ್ಕಲ್ಪದ್ರುಮೋ ಯಥಾ ॥ ೨೮೬ ॥**

ದಯೆಯೆಂಬ ಲತೆಯಿಂದ ಸುತ್ತಲ್ಪಟ್ಟವನೂ ಉತ್ತರಜನ್ಮದಲ್ಲಿ ಮಹಾಫಲವನ್ನುಂಟುಮಾಡುವವನೂ ಬಹಳ ಉನ್ನತನೂ ಆದ ನೀನು ಕಲ್ಪವೃಕ್ಷದಂತೆ ಇಷ್ಟಾರ್ಥಗಳನ್ನು ಕೊಡುವವನಾಗಿರುತ್ತಿ.

**ತ್ವಯಾ ಕರ್ಮಮಹಾಶತ್ರೂನುಚ್ಚಾನುಚ್ಛೇತ್ತುಮಿಚ್ಛತಾ ।**
**ಧರ್ಮಚಕ್ರಂ ತಪೋಧಾರಂ ಪಾಣೌಕೃತಮಸಂಭ್ರಮಮ್ ॥ ೨೮೭ ॥**

ಮಹಾಬಲಿಷ್ಠರಾದ ಕರ್ಮಗಳೆಂಬ ಶತ್ರುಗಳನ್ನು ಜಯಿಸಬೇಕೆಂಬ ಇಚ್ಛೆಯುಳ್ಳ ನೀನು ತಪಸ್ಸೆಂಬ ಧಾರೆಯುಳ್ಳ ಧರ್ಮವೆಂಬ ಚಕ್ರವನ್ನು ಕೈಯಲ್ಲಿ ಧರಿಸಿದೆ.

**ನ ಬದ್ಧೋ ಭ್ರುಕುಟಿನ್ಯಾಸೋ ನ ದಷ್ಟೋಷ್ಠಂ ಮುಖಾಂಬುಜಮ್ ।**
**ನ ಭಿನ್ನಸೌಷ್ಠವಂ ಸ್ಥಾನಂ ವ್ಯರಚ್ಯರಿಜಯೇ ತ್ವಯಾ ॥ ೨೮೮ ॥**

ನೀನು ಶತ್ರುವನ್ನು ಜಯಿಸುವ ಸಮಯದಲ್ಲಿ ಹುಬ್ಬುಗಳನ್ನು ಗಂಟುಹಾಕಲಿಲ್ಲ. ತುಟಿಯನ್ನು ಹಲ್ಲುಗಳಿಂದ ಕಚ್ಚಿದ ಮುಖಭಾವವೂ ಇರಲಿಲ್ಲ. ಮನೋಹರತೆಯು ಕುಂದಿದಸ್ಥಾನ(ಅವಯವ)ವನ್ನು ರಚಿಸಲಿಲ್ಲ.

**ದಯಾಲುನಾಪಿ ದುಃಸಾಧ್ಯಮೋಹಶತ್ರುಜಿಗೀಷಯಾ ।**
**ತಪಃಕುಠಾರೇ ಕಠಿನೇ ತ್ವಯಾ ವ್ಯಾಪಾರಿತಃ ಕರಃ ॥ ೨೮೯ ॥**

ನೀನು ದಯಾಳುವಾಗಿದ್ದರೂ ಬಲಿಷ್ಠವಾದ ಮೋಹವೆಂಬ ಶತ್ರುವನ್ನು ಜಯಿಸಬೇಕೆಂಬ ಇಚ್ಛೆಯಿಂದ ತೀಕ್ಷ್ಣವಾದ ತಪಸ್ಸೆಂಬ ಕೊಡಲಿಯನ್ನು ಕೈಯಲ್ಲಿ ಧರಿಸಿದೆ.

**ತ್ವಯಾ ಸಂಸಾರದುರ್ವಲ್ಲೀ ರೂಢಾಜ್ಞಾನಜಲೋಕ್ಷಣೈಃ ।**
**ನಾನಾದುಃಖಫಲಾ ಚಿತ್ರಂ ವ[1]ರ್ದ್ಧಿತಾಪಿ ನ ವರ್ದ್ಧತೇ ॥ ೨೯೦ ॥**

ಅಜ್ಞಾನವೆಂಬ ಜಲದ ಸೇಚನೆಯಿಂದುಂಟಾದುದೂ ನಾನಾದುಃಖಗಳೆಂಬ ಫಲಗಳುಳ್ಳುದೂ ಆದ ಸಂಸಾರವೆಂಬ ಕೆಟ್ಟ ಲತೆಯನ್ನು ನೀನು ಬೆಳೆಯಿಸಿದರೂ ಬೆಳೆಯುವುದಿಲ್ಲ; ಆಶ್ಚರ್ಯ ! ಕತ್ತರಿಸಿದರೂ ಬೆಳೆಯುವುದಿಲ್ಲವೆಂದು ಪರಿಹಾರಾರ್ಥವು.

**ಪ್ರಸೀದತಿ[2]ಭವತ್ಪಾದಪದ್ಮೇ ಪದ್ಮಾ ಪ್ರಸೀದತಿ ।**
**ವಿಮುಖೇ ಯಾತಿ ವೈಮುಖ್ಯಂ ಭವನ್ಮಾಧ್ಯಸ್ಥ್ಯಮೀದೃಶಮ್ ॥ ೨೯೧ ॥**

ನಿನ್ನ ಪಾದಕಮಲವು ಪ್ರಸನ್ನವಾದರೆ ಲಕ್ಷ್ಮಿಯು ಪ್ರಸನ್ನಳಾಗುತ್ತಾಳೆ; ವಿಮುಖವಾದರೆ ವಿಮುಖಳಾಗುತ್ತಾಳೆ. ನಿನ್ನ ಮಾಧ್ಯಸ್ಥವೃತ್ತಿಯು ಈ ಪ್ರಕಾರವಾದುದು. ಅಂದರೆ ಭಗವದ್ಭಕ್ತರಿಗೆ ಐಶ್ವರ್ಯವು ಪ್ರಾಪ್ತವಾಗುತ್ತದೆ. ಭಕ್ತರಲ್ಲದವರಿಗೆ ಆಗುವುದಿಲ್ಲವೆಂದು ಭಾವವು.

**ಪ್ರಾತಿಹಾರ್ಯಮಯೀಂ ಭೂತಿಂ ತ್ವಂ ದಧಾನೋಽಪ್ಯನನ್ಯಗಾಮ್ ।**
**ವೀತರಾಗೋ ಮಹಾಂಶ್ಚಾಸಿ ಜಗತ್ಯೇತಜ್ಜಿನಾದ್ಭುತಮ್ ॥ ೨೯೨ ॥**

ಜಿನೇಶ್ವರನೇ! ಬೇರೆಯವರಿಗೆ ಪ್ರಾಪ್ತವಾಗದಿರುವ ಅಶೋಕವೃಕ್ಷದೇವದುಂದುಭಿ ದಿವ್ಯಧ್ವನಿ ಮೊದಲಾದ ಪ್ರಾತಿಹಾರ್ಯಗಳೆಂಬ ಸಂಪತ್ತನ್ನು ನೀನು ಧರಿಸಿಕೊಂಡಿದ್ದರೂ ಲೋಕದಲ್ಲಿ ಮಹಾವೀತರಾಗನಾಗಿರುತ್ತಿ. ಇದು ಆಶ್ಚರ್ಯ ! ಐಶ್ವರ್ಯವಂತನಾಗಿರುವುದೂ ವೀತರಾಗನಾಗಿರುವುದೂ ಪರಸ್ಪರವಿರುದ್ಧವಾಗಿದೆಯೆಂದರ್ಥವು. (ಜಿನೇಶ್ವರನು ವೀತರಾಗನಾಗಿದ್ದರೂ ಪುಣ್ಯಾತಿಶಯದಿಂದ ಅನಪೇಕ್ಷಿತವಾಗಿ ಪ್ರಾತಿಹಾರ್ಯಗಳುಂಟಾಗುವುದರಿಂದ ದೋಷವಿಲ್ಲ).

**ತವಾಯಂ ಶಿಶಿರಚ್ಛಾಯೋ ಭಾತ್ಯಶೋಕತರುರ್ಮಹಾನ್ ।**
**ಶೋಕಮಾಶ್ರಿತಭವ್ಯಾನಾಂ ವಿದೂರ[1]ಮಪಹಸ್ತಯನ್ ॥ ೨೯೩ ॥**

ನಿನ್ನ ತಂಪಾದ ನೆರಳುಳ್ಳ ಈ ದೊಡ್ಡ ಅಶೋಕವೃಕ್ಷವು ನಿನ್ನನ್ನು ಆಶ್ರಯಿಸಿದ ಭವ್ಯರ ಶೋಕವನ್ನು ದೂರಮಾಡಿ ಅಧಿಕವಾಗಿ ಶೋಭಿಸುತ್ತಿದೆ.

**ಪುಷ್ಪವೃಷ್ಟಿಂ ದಿವೋ ದೇವಾಃ ಕಿರಂತಿ ತ್ವಾಂ ಜಿನಾಭಿತಃ ।**
**ಪರಿತೋ ಮೇರುಮುತ್ಫುಲ್ಲಾ ಯಥಾಕಲ್ಪಮಹೀರುಹಾಃ ॥ ೨೯೪ ॥**

ಜಿನೇಶ್ವರನೇ! ವಿಕಸಿತವಾದ ಪುಷ್ಪಗಳುಳ್ಳ ಕಲ್ಪವೃಕ್ಷಗಳು ಮಹಾಮೇರು ಪರ್ವತದ ಸುತ್ತಲೂ ಪುಷ್ಪವೃಷ್ಟಿಯನ್ನು ಮಾಡುವಂತೆ, ಆಕಾಶದಿಂದ ದೇವತೆಗಳು ನಿನ್ನ ಸುತ್ತಲೂ ಪುಷ್ಪವೃಷ್ಟಿಯನ್ನು ಮಾಡುತ್ತಾರೆ.

**ದಿವ್ಯಭಾಷಾ ತವಾಶೇಷಭಾಷಾಭೇದಾನುಕಾರಿಣೀ ।**
**[2]ವಿಕರೋತಿ ಮನೋಧ್ವಾಂತ[3]ಮವಾಚಾಮಪಿ ದೇಹಿನಾಮ್ ॥ ೨೯೫ ॥**

ಸರ್ವಭಾಷಾಮಯವಾದ ನಿನ್ನ ದಿವ್ಯವಾಣಿಯು ಮಾತನಾಡದಿರುವ ತಿರ್ಯಕ್ಪ್ರಾಣಿಗಳ ಮನಸ್ಸಿನಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುತ್ತದೆ.

**[4]ಪ್ರಕೀರ್ಣಕಯುಗಂ ಭಾತಿ ತ್ವಾಂ ಜಿನೋಭಯತೋ ಧುತಮ್ ।**
**ಪತನ್ನಿರ್ಝರ[5]ಸಂವಾದಿ ಶಶಾಂಕಕರನಿರ್ಮಲಮ್ ॥ ೨೯೬ ॥**

ಜಿನೇಶ್ವರನೇ ! ನಿನ್ನ ಉಭಯಪಾರ್ಶ್ವಗಳಲ್ಲಿಯೂ ಬೀಸಲ್ಪಡುವ ಚಾಮರಗಳ ಜೊತೆಯು, ಚಂದ್ರಕಿರಣಗಳಿಂದ ನಿರ್ಮಲವಾಗಿ ಬೀಳುತ್ತಿರುವ ಗಿರಿನದಿಗೆ ಸಮಾನವಾಗಿ, ಶೋಭಿಸುತ್ತಿದೆ.

**ಚಾಮೀಕರವಿನಿರ್ಮಾಣಂ ಹರಿಭಿರ್ಧೃತಮಾಸನಮ್ ।**
**ಗಿರೀಂದ್ರಶಿಖರಸ್ಪರ್ದ್ಧಿ ರಾಜತೇ ಜಿನರಾಜ ತೇ ॥ ೨೯೭ ॥**

ಜಿನರಾಜನೇ ! ಸಿಂಹಗಳು ಧರಿಸಿರುವ ಸುವರ್ಣಮಯವಾದ ನಿನ್ನ ಆಸನವು, ಮಹಾಮೇರುಪರ್ವತದ ಶಿಖರದೊಡನೆ ಸ್ಪರ್ಧೆಯನ್ನು ಮಾಡುವಂತೆ, ಪ್ರಕಾಶಿಸುತ್ತದೆ.

**[6]ಜ್ಯೋತಿರ್ಮಂಡಲಮುತ್ಸರ್ಪತ್ತವಾಲಂಕುರುತೇ ತನುಮ್ ।**
**ಮಾರ್ತಂಡಮಂಡಲದ್ವೇಷಿ ವಿಧುನ್ವಜ್ಜಗತಾಂ ತಮಃ ॥ ೨೯೮ ॥**

ಸೂರ್ಯಮಂಡಲವನ್ನು ತನ್ನ ಕಾಂತಿಯಿಂದ ದ್ವೇಷಿಸುವುದೂ, ಪ್ರಾಣಿಗಳ ಪಾಪಾಂಧಕಾರವನ್ನು ಹೋಗಲಾಡಿಸುವುದೂ ಮೇಲಕ್ಕೆ ಪಸರಿಸುವುದೂ ಆದ ಭಾಮಂಡಲವು ನಿನ್ನ ಶರೀರವನ್ನು ಅಲಂಕರಿಸುತ್ತದೆ.

**ತವೋದ್ಘೋಷಯತೀವೋಚ್ಚೈರ್ಜಗತಾಮೇಕಭರ್ತೃತಾಮ್।**
**ದುಂದುಭಿಸ್ತನಿತಂ ಮಂದ್ರಮುಚ್ಚರತ್ಪಥಿ ವಾರ್ಮುಚಾಮ್ ॥ ೨೯೯ ॥**

ಆಕಾಶಮಾರ್ಗದಲ್ಲಿ ವ್ಯಾಪಿಸಿಕೊಂಡಿರುವ ಗಂಭೀರವಾದ ಭೇರಿಯ ಶಬ್ದವು ಲೋಕಕ್ಕೆ ನೀನೊಬ್ಬನೇ ಪ್ರಭುವಾಗಿರುವುದನ್ನು ಗಟ್ಟಿಯಾಗಿ ಸಾರಿ ಹೇಳುವಂತಿದೆ.

**ತವಾವಿಷ್ಕುರುತೇ ದೇವ ಪ್ರಾಭವಂ ಭುವನಾತಿಗಮ್ ।**
**ವಿಧುಬಿಂಬಪ್ರತಿಸ್ಪರ್ದ್ಧಿಚ್ಛತ್ರತ್ರಿತಯಮುಚ್ಛ್ರಿತಮ್ ॥ ೩೦೦ ॥**

೧ ಛೇದಿತಾ. ೨ ಸತಿ.

೧ ಅಪಸಾರಯನ್. ೨ ವಿನಾಶಯತಿ. ೩ ತಿರಶ್ಚಾಂ. ೪ ಚಾಮರಯುಗಂ. ೫ ಸದೃಶಂ. ೬ ಭಾಮಂಡಲಂ.

ದೇವನೇ ! ಚಂದ್ರಬಿಂಬವನ್ನು ಸ್ಪರ್ಧೆಮಾಡುವುದೂ ಉನ್ನತವೂ ಆದ ಛತ್ರತ್ರಯವು ನಿನ್ನ ಲೋಕೋತ್ತರವಾದ ಪ್ರಭುತ್ವವನ್ನು ಪ್ರಕಟಪಡಿಸುತ್ತದೆ.

**ವಿಭ್ರಾಜತೇ ಜಿನೈತತ್ತೇ ಪ್ರಾತಿಹಾರ್ಯಕದಂಬಕಮ್ ।**
**ತ್ರಿಜಗತ್ಸಾರಸರ್ವಸ್ವಮಿವೈಕತ್ರ ಸಮುಚ್ಚಿತಮ್ ॥ ೩೦೧ ॥**

ಜಿನೇಶ್ವರನೇ ! ನಿನ್ನ ಈ ಪ್ರಾತಿಹಾರ್ಯಗಳ ಸಮೂಹವು, ಮೂರು ಲೋಕಗಳಲ್ಲಿರುವ ಸಾರವನ್ನೆಲ್ಲಾ ಒಂದು ಕಡೆಯಲ್ಲಿ ಸೇರಿಸಿಟ್ಟಿರುವಂತೆ, ಶೋಭಿಸುತ್ತಿದೆ.

**ನೋಪರೋದ್ಧುಮಲಂ ದೇವ ತವ ವೈರಾಗ್ಯಸಂಪದಮ್ ।**
**ಸುರೈರ್ವಿರಚಿತೋ ಭಕ್ತ್ಯಾ ಪ್ರಾತಿಹಾರ್ಯ[೧]ಪರಿಚ್ಛದಃ ॥ ೩೦೨ ॥**

ದೇವನೇ !ದೇವತೆಗಳು ಭಕ್ತಿಯಿಂದ ರಚಿಸಿದ ಈ ಅಷ್ಟಮಹಾಪ್ರಾತಿಹಾರ್ಯಗಳ ಸಮೂಹವು ನಿನ್ನ ವೈರಾಗ್ಯಸಂಪತ್ತನ್ನು ತಡೆಯುವುದಕ್ಕೆ ಸಮರ್ಥವಲ್ಲ. ದಿವ್ಯಧ್ವನಿಯನ್ನು ಬಿಟ್ಟು ಇತರ ವಿಭೂತಿಗಳನ್ನು ದೇವತೆಗಳು ಭಕ್ತಿಯಿಂದ ರಚಿಸಿರುವುದರಿಂದ ಸ್ವಾಮಿಯ ವೈರಾಗ್ಯಕ್ಕೆ ಕುಂದಕವಿಲ್ಲವೆಂದು ಭಾವವು.

**ಕರಿಕೇಸರಿದಾವಾಹಿ[೨]ನಿಷಾದವಿಷಮಾಬ್ಧಯಃ ।**
**ರೋಗಾ [೩]ಬಂಧಾಶ್ಚ ಶಾಮ್ಯಂತಿ ತ್ವತ್ಪದಾನುಸ್ಮೃತೇರ್ಜಿನ ॥ ೩೦೩ ॥**

ಜಿನೇಶ್ವರನೇ ! ನಿನ್ನಪಾದಗಳ ಸ್ಮರಣೆಯಿಂದ ಆನೆ, ಸಿಂಹ, ಕಾಡ್ಕಿಚ್ಚು, ಸರ್ಪ, ಬೇಡ (ವ್ಯಾಧ), ಅಲ್ಲೋಲಕಲ್ಲೋಲವಾಗುವ ಸಮುದ್ರವು, ವ್ಯಾಧಿಗಳು, ಬಂಧನಗಳು ಉಪಶಮವನ್ನು ಹೊಂದುತ್ತವೆ.

**[೪]ಕರಟಕ್ಷರದುದ್ದಾಮಮದಾಂಬುಕೃತದುರ್ದಿನಮ್ ।**
**ಗಜ[೫]ಮಾಘಾತಕಂ ಮರ್ತ್ಯಾ ಜಯಂತಿ ತ್ವದನುಸ್ಮೃತೇಃ ॥ ೩೦೪ ॥**

ಗಂಡಸ್ಥಲದಿಂದ ಸುರಿಯುತ್ತಿರುವ ಅಧಿಕವಾದ ಮದಜಲದಿಂದ ದಿವಸವನ್ನು ಮಬ್ಬಾಗಿ ಮಾಡುವುದೂ ಕೊಲ್ಲುವುದಕ್ಕೆ ಬರುತ್ತಿರುವುದೂ ಆದ ಆನೆಯನ್ನು ಮನುಷ್ಯರು ನಿನ್ನ ಸ್ಮರಣೆಯಿಂದ ಜಯಿಸುತ್ತಾರೆ.

**ಕರೀಂದ್ರಕುಂಭನಿರ್ಭೇದಕಠೋರನಖರೋ ಹರಿಃ ।**
**ಕ್ರಮೇಪಿ ಪತಿತಂ ಜಂತುಂ ನ ಹಂತಿ ತ್ವತ್ಪದಸ್ಮೃತೇಃ ॥ ೩೦೫ ॥**

ಆನೆಯ ಕುಂಭಸ್ಥಲವನ್ನು ಭೇದಿಸುವ ತೀಕ್ಷ್ಣವಾದ ಉಗುರುಗಳುಳ್ಳ ಸಿಂಹವು ತನ್ನ ಕಾಲಿಗೆ ಸಿಕ್ಕಿದ ಪ್ರಾಣಿಯನ್ನೂ ನಿನ್ನ ಪಾದಸ್ಮರಣೆಯನ್ನು ಮಾಡಿದರೆ ಅದನ್ನು ಕೊಲ್ಲುವುದಿಲ್ಲ.

**ನೋಪದ್ರವತಿ ದೀಪ್ತಾರ್ಚಿರಪ್ಯರ್ಚಿಷ್ಮಾನ್ಸಮುತ್ಥಿತಃ ।**
**ತ್ವತ್ಪದಸ್ಮೃತಿಶೀತಾಂಬುಧಾರಾಪ್ರಶಮಿತೋದಯಃ ॥ ೩೦೬ ॥**

ತೀವ್ರವಾದ ಜ್ವಾಲೆಯಿಂದ ಪ್ರಜ್ವಲಿಸುತ್ತಿರುವ ಬೆಂಕಿಯು ನಿನ್ನ ಪಾದಸ್ಮರಣೆಯೆಂಬ ಶೀತವಾದ ಜಲಧಾರೆಯಿಂದ ಅದರ ವೇಗವು ಕಡಿಮೆಯಾಗಿ ಬಾಧೆಯನ್ನುಂಟುಮಾಡುವುದಿಲ್ಲ.

**[೬]ಫಣೀಕೃತಫಣೋ ರೋಷಾದುದ್ಗಿರನ್ಗರಮುಲ್ಬಣಮ್ ।**
**ತ್ವತ್ಪದಾ[೭]ಗದಸಂಸ್ಮೃತ್ಯಾ ಸದ್ಯೋ ಭವತಿ ನಿರ್ವಿಷಃ ॥ ೩೦೭ ॥**

ಕೋಪದಿಂದ ಹೆಡೆಯನ್ನೆತ್ತಿರುವುದೂ ಅಧಿಕವಾದ ವಿಷವನ್ನು ಕಾರುತ್ತಿರುವುದೂ ಆದ ಸರ್ಪವು ನಿನ್ನ ಪಾದಗಳೆಂಬ ಔಷಧಿಯ ಸ್ಮರಣೆಯನ್ನು ಮಾಡಿದ ಕೂಡಲೆ ನಿರ್ವಿಷವಾಗುತ್ತದೆ.

೧ ಸಮೂಹಃ. ೨ ವ್ಯಾಧಾಃ. ೩ ಬಂಧನಾನಿ. ೪ ಕಪೋಲಃ. ೫ ಆಹಿಂಸ್ರಕಂ. ೬ ಉತ್ಥಿತಫಣ ಇತ್ಯರ್ಥಃ. ೭ ಭೇಷಜಃ.

**ವನೇ ಪ್ರಚಂಡ[೧]ಲುಂಟಾಕಕೋದಂಡರವಭೀಷಣೇ ।**
**[೨]ಸಾರ್ಥಾಃ [೩]ಸಾರ್ಥಾಧಿಪಾಃ ಸ್ವೈರಂ ಪ್ರಯಾಂತಿ ತ್ವತ್ಪದೋಪಗಾಃ ॥**

ನಿನ್ನ ಪಾದಗಳನ್ನು ಹೊಂದಿದವರೂ ದ್ರವ್ಯಸಹಿತರಾದವರೂ ಆದ ದೊಡ್ಡ ವರ್ತಕರು, ಕ್ರೂರನಾದ ಬೇಡನು ಬಿಡುತ್ತಿರುವ ಬಾಣಗಳ ಶಬ್ದದಿಂದ ಭಯಂಕರವಾದ ಅರಣ್ಯದಲ್ಲಿ ಯಥೇಚ್ಛವಾಗಿ ಹೋಗುತ್ತಾರೆ.

**ಅಪಿ ಚಂಡಾನಿಲಾ[೪]ಕಾಂಡಜೃಂಭಣಾಘೂರ್ಣಿತಾ[೫]ರ್ಣಸಮ್ ।**
**ತರಂತ್ಯರ್ಣವಮುದ್ವೇಲಂ ಹೇಲಯಾ ತ್ವತ್ಕ್ರಮಾಶ್ರಿತಾಃ ॥ ೩೦೯ ॥**

ನಿನ್ನ ಪಾದಗಳನ್ನು ಆಶ್ರಯಿಸಿದವರು ದಡವನ್ನು ಮೀರಿದ ಮತ್ತು ಭಯಂಕರವಾದ ಗಾಳಿಯಿಂದ ಅಕಾಲದಲ್ಲಿ ವೃದ್ಧಿಯನ್ನು ಹೊಂದಿ ಅಲ್ಲೋಲ ಕಲ್ಲೋಲವಾಗುತ್ತಿರುವ ಜಲವುಳ್ಳ ಸಮುದ್ರವನ್ನು ಕೂಡ ಸುಲಭದಿಂದ ದಾಟುತ್ತಾರೆ.

**ಅಪ್ಯಸ್ಥಾನಕೃತೋತ್ಥಾನತೀವ್ರವ್ರಣರುಜೋ ಜನಾಃ ।**
**ಸದ್ಯೋ ಭವಂತ್ಯನಾತಂಕಾಃ ಸ್ಮೃತತ್ವತ್ಪದಭೇಷಜಾಃ ॥ ೩೧೦ ॥**

ಗುಪ್ತಸ್ಥಾನ, ಸಂಧಿ ಮೊದಲಾದ ಇಕ್ಕಟ್ಟಾದ ಪ್ರದೇಶಗಳಲ್ಲಿ ಕಠಿಣವಾದ ವ್ರಣಗಳಿಂದ ಪೀಡಿತರಾದ ಜನರೂ ನಿನ್ನ ಪಾದಗಳೆಂಬ ಔಷಧಿಯ ಸ್ಮರಣೆಯನ್ನು ಮಾಡಿದ ಕೂಡಲೆ ನೀರೋಗಿಗಳಾಗುತ್ತಾರೆ.

**ಕರ್ಮಬಂಧವಿನಿರ್ಮುಕ್ತಂ ತ್ವಾಮನುಸ್ಮೃತ್ಯ ಮಾನವಃ ।**
**ದೃಢಬಂಧೇನ ಬದ್ಧೋಪಿ ಭವತ್ಯಾಶು ವಿಶೃಂಖಲಃ ॥ ೩೧೧ ॥**

ಮನುಷ್ಯನು ದೃಢವಾದ ಬಂಧನದಿಂದ ಕಟ್ಟಲ್ಪಟ್ಟಿದ್ದರೂ ಕರ್ಮಬಂಧನದಿಂದ ಬಿಡುಗಡೆಯನ್ನು ಹೊಂದಿದ ನಿನ್ನನ್ನು ಸ್ಮರಿಸಿ ಶೀಘ್ರವಾಗಿ ಬಿಡುಗಡೆಯನ್ನು ಹೊಂದುತ್ತಾನೆ.

**ಇತಿ ವಿಘ್ನತವಿಘ್ನೌಘಂ ಭಕ್ತಿನಿಘ್ನೇನ ಚೇತಸಾ ।**
**ಪರ್ಯುಪಾಸೇ ಜಿನೇಂದ್ರ ತ್ವಾಂ ವಿಘ್ನವರ್ಗೋಪಶಾಂತಯೇ॥ ೩೧೨ ॥**

ಜಿನೇಶ್ವರನೇ ! ವಿಘ್ನಗಳ ಸಮುದಾಯವು ಶಾಂತವಾಗುವುದಕ್ಕೋಸ್ಕರ ವಿಘ್ನಗಳಿಗೆ ವಿಘ್ನವನ್ನುಂಟುಮಾಡಿದ (ಅಂತರಾಯಕರ್ಮವನ್ನು ನಾಶಮಾಡಿದ) ನಿನ್ನನ್ನು ಭಕ್ತಿಗೆ ಅಧೀನವಾದ ಮನಸ್ಸಿನಿಂದ ಹೀಗೆ ಭಜಿಸುತ್ತೇನೆ.

**ತ್ವಮೇಕಂ ಜಗತಾಂ ಜ್ಯೋತಿಸ್ತ್ವಮೇಕೋ ಜಗತಾಂ ಪತಿಃ ।**
**ತ್ವಮೇಕೋ ಜಗತಾಂ ಬಂಧುಸ್ತ್ವಮೇಕೋ ಜಗತಾಂ ಗುರುಃ॥ ೩೧೩ ॥**

ನೀನು ಮೂರುಲೋಕವನ್ನೂ ಬೆಳಗುವ ಒಂದು ಜ್ಯೋತಿಸ್ಸ್ವರೂಪನಾಗಿರುತ್ತಿ. ಲೋಕಕ್ಕೆ ಮುಖ್ಯಪ್ರಭುವೂ ಬಂಧುವೂ ಗುರುವೂ ನೀನೇ ಆಗಿರುತ್ತಿ.

**ತ್ವಮಾದಿಃ ಸರ್ವವಿದ್ಯಾನಾಂ ತ್ವಮಾದಿಃ ಸರ್ವಯೋಗಿನಾಮ್ ।**
**ತ್ವಮಾದಿರ್ಧರ್ಮತೀರ್ಥಸ್ಯ ತ್ವಮಾದಿರ್ಗುರುರಂಗಿನಾಮ್ ॥ ೩೧೪ ॥**

ಎಲ್ಲಾ ವಿದ್ಯೆಗಳಿಗೂ ನೀನು ಮೊದಲನೆಯವನು. ಸರ್ವಯೋಗಿಗಳಲ್ಲಿಯೂ ನೀನು ಮೊದಲನೆಯ ಯೋಗಿಯು. ಧರ್ಮತೀರ್ಥದ ಪ್ರಥಮಕರ್ತನೂ ನೀನಾಗಿರುತ್ತಿ. ಪ್ರಾಣಿಗಳಿಗೆ ಹಿತೋಪದೇಶವನ್ನು ಮಾಡುವ ಮೊದಲನೆಯ ಗುರುವೂ ನೀನೇ ಆಗಿರುತ್ತಿ.

**ತ್ವಂ ಸಾರ್ವಃ ಸರ್ವವಿದ್ಯೇಶಃ ಸರ್ವಲೋಕಾನಲೋಕಥಾಃ ।**
**ಸ್ತುತಿವಾದಸ್ತವೈತಾವಾನಲಮಾಸ್ತಾಂ ಪ್ರವಿಸ್ತರಃ ॥ ೩೧೫ ॥**

೧ ವ್ಯಾಧಃ. ೨ ಅರ್ಥೇನ ಸಹಿತಾಃ. ೩ ವಣಿಗ್ವರಾಃ. ೪ ಅಕಾಲಃ. ೫ ಜಲಂ.

ನೀನು ಸಮಸ್ತಪ್ರಾಣಿಗಳಿಗೂ ಹಿತಕರನೂ ಸಕಲವಿದ್ಯೆಗಳಿಗೂ ಅಧಿಪತಿಯೂ ಸಮಸ್ತಲೋಕಗಳನ್ನು ನೋಡಿದವನೂ ಆಗಿರುತ್ತಿ. ಈ ವರೆಗೆ ಮಾಡಿದ ನಿನ್ನ ಸ್ತೋತ್ರವು ಸಾಕಾಗಿರುವುದರಿಂದ ವಿಸ್ತಾರಮಾಡುವುದಿಲ್ಲ.

**ತ್ವಾಂ ದೇವಮಿತ್ಥಮಭಿವಂದ್ಯ ಕೃತಪ್ರಣಾಮೋ**
**ನಾನ್ಯತ್ಫಲಂ ಪರಿಮಿತಂ ಪರಿಮಾರ್ಗಯಾಮಿ ।**
**ತ್ವಯ್ಯೇವ ಭಕ್ತಿಮಚಲಾಂ ಜಿನ ಮೇ ದಿಶ ತ್ವಂ**
**ಸಾ ಸರ್ವಮಭ್ಯುದಯಮುಕ್ತಿಫಲಂ ಪ್ರಸೂತೇ** ॥ ೩೧೬ ॥

ಜಿನೇಶ್ವರನೇ ! ಹೀಗೆ ನಿನ್ನ ಸ್ತುತಿಪೂರ್ವಕವಾಗಿ ನಮಸ್ಕಾರವನ್ನು ಮಾಡಿ ನಾನು ಪರಿಮಿತವಾದ ಬೇರೆ ಫಲವನ್ನು ಹುಡುಕುವುದಿಲ್ಲ. ನನಗೆ ನಿನ್ನಲ್ಲಿಯೇ ದೃಢವಾದ ಭಕ್ತಿಯನ್ನು ಕೊಡು. ಆ ಭಕ್ತಿಯು ಸಮಸ್ತಸ್ವರ್ಗಮೋಕ್ಷಸುಖವನ್ನುಂಟು ಮಾಡುತ್ತದೆ''.

**ಇತ್ಯುಚ್ಚೈಃ ಪ್ರಣಿಪತ್ಯ ತಂ ಜಿನಪತಿಂ ಸ್ತುತ್ವಾ ಕೃತಾಭ್ಯರ್ಚನಃ**
**ಸ ಶ್ರೀಮಾನ್ಮುನಿವೃಂದಮಪ್ಯನುಗಮಾತ್ಸಂಪೂಜ್ಯ ನಿಷ್ಕಲ್ಮಷಮ್ ।**
**ಶ್ರೀಮತ್ಯಾ ಸಹ ವಜ್ರಜಂಘನೃಪತಿಸ್ತಾಮುತ್ತಮರ್ದ್ಧಿಂ ಪುರೀಂ**
**ಪ್ರಾವಿಕ್ಷತ್ಪ್ರಮದೋದಯಾಜ್ಜಿನಗುಣಾನ್ಭೂಯಃ ಸ್ಮರನ್ಭೂತಯೇ** ॥

ಈ ಪ್ರಕಾರವಾಗಿ ಆ ಜಿನೇಶ್ವರನಿಗೆ ಚೆನ್ನಾಗಿ ನಮಸ್ಕಾರವನ್ನೂ ಸ್ತೋತ್ರವನ್ನೂ ಅರ್ಚನೆಯನ್ನೂ ಮಾಡಿ ಪಾಪರಹಿತವಾದ ಮುನಿಸಂಘವನ್ನು ಕ್ರಮದಿಂದ ಪೂಜಿಸಿ ಆ ಭಾಗ್ಯಶಾಲಿಯಾದ ವಜ್ರಜಂಘರಾಜನು ಅತಿಶಯವಾದ ಸಂಪತ್ತು ಪ್ರಾಪ್ತವಾಗುವುದಕ್ಕೋಸ್ಕರ ಬಾರಿಬಾರಿಗೂ ಜಿನೇಶ್ವರನ ಗುಣಗಳನ್ನು ಸ್ಮರಿಸುತ್ತ ಸುಶೋಭಿತವಾದ ಆ ಪುಂಡರೀಕಿಣೀನಗರವನ್ನು ಶ್ರೀಮತಿಯೊಡನೆ ಬಹಳ ಆನಂದದಿಂದ ಪ್ರವೇಶಮಾಡಿದನು.

**ಲಕ್ಷ್ಮೀವಾನಭಿಷೇಕಪೂರ್ವಕಮಸೌ ಶ್ರೀವಜ್ರಜಂಘೋ ವಿಭು-**
**ರ್ದ್ವಾತ್ರಿಂಶನ್ಮಕುಟಪ್ರಬದ್ಧಮಹಿತಕ್ಷ್ಮಾಭೃತ್ಸಹಸ್ರೈರ್ಮುಹುಃ ।**
**ತಾಂ ಕಲ್ಯಾಣಪರಂಪರಾಮನುಭವನ್ಭೋಗಾನ್ಪರಾನ್ನಿರ್ವಿಶನ್**
**ಶ್ರೀಮತ್ಯಾ ಸಹ ದೀರ್ಘಕಾಲಮವಸತ್ತಸ್ಮಿನ್ಪುರೇಽರ್ಚನ್ ಜಿನಾನ್** ॥

ಲಕ್ಷ್ಮೀವಂತನಾದ ಈ ವಜ್ರಜಂಘರಾಜನು ಪ್ರಸಿದ್ಧರಾದ ಮೂವತ್ತೆರಡುಸಾವಿರ ಮಕುಟಬದ್ಧರಾದ ರಾಜರಿಂದ ಅಭಿಷೇಕಮಾಡಲ್ಪಟ್ಟವನಾಗಿ ಒಂದರಮೇಲೊಂದು ಉಂಟಾಗುವ ಮಂಗಲಗಳನ್ನೂ ಉತ್ತಮವಾದ ಭೋಗಗಳನ್ನೂ ಅನುಭವಿಸುತ್ತಲೂ ಶ್ರೀಮತಿಯೊಡನೆ ಬಹುಕಾಲದ ವರೆಗೆ ಆ ಪುಂಡರೀಕಿಣೀ ಪಟ್ಟಣದಲ್ಲಿ ಜಿನಪೂಜೆಯನ್ನು ಮಾಡುತ್ತಲೂ ವಾಸಮಾಡಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಶ್ರೀಮತೀವಜ್ರಜಂಘಸಮಾಗಮವರ್ಣನಂ ನಾಮ ಸಪ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಶ್ರೀಮತೀವಜ್ರಜಂಘರ ಸಮಾಗಮವರ್ಣನವೆಂಬ
ಏಳನೆಯ ಪರ್ವವು ಸಮಾಪ್ತವಾದುದು.

---

# ಅಥಾಷ್ಟಮಂ ಪರ್ವ

**ಅಥ ತತ್ರಾವಸದ್ದೀರ್ಘಂ ಸ ಕಾಲಂ ಚಕ್ರಿಮಂದಿರೇ ।**
**ನಿತ್ಯೋತ್ಸವೇ ಮಹಾಭೋಗಸಂಪದಾ ಸೋಽಪಭೋಗಯಾ || ೧ ||**

ವಿವಾಹವಾದನಂತರ ನಿತ್ಯೋತ್ಸವವುಳ್ಳ ಚಕ್ರವರ್ತಿಯ ಮನೆಯಲ್ಲಿ ಆ ವಜ್ರಜಂಘನು ಉತ್ತಮೋತ್ತಮಭೋಗೋಪಭೋಗಗಳನ್ನು ಅನುಭವಿಸುತ್ತ ಬಹುಕಾಲ ವಾಸಮಾಡಿದನು.

**ಶ್ರೀಮತೀಸ್ತನಸಂಸ್ಪರ್ಶಾತ್ತನ್ಮುಖಾಬ್ಜವಿಲೋಕನಾತ್ ।**
**ತಸ್ಯಾಸೀನ್ಮಹತೀ ಪ್ರೀತಿಃ ಪ್ರೇಮ್ಣೋ ವಸ್ತ್ವಿಷ್ಟಮಾಶ್ರಿತಮ್ || ೨ ||**

ಶ್ರೀಮತಿಯ ಕುಚಗಳ ಸ್ಪರ್ಶದಿಂದಲೂ ಆಕೆಯ ಮುಖಕಮಲವನ್ನು ನೋಡುವುದರಿಂದಲೂ ಆ ವಜ್ರಜಂಘನಿಗೆ ಬಹಳ ಸಂತೋಷವಾಯಿತು. ಇಷ್ಟವಸ್ತುವಿನ ಪ್ರಾಪ್ತಿಯಾದರೆ ಪ್ರೀತಿಯಾಗುವುದು ಸ್ವಭಾವವಾಗಿದೆ.

**ತನ್ಮುಖಾಬ್ಜಾದ್ರಸಾಮೋದಾವಾಹರನ್ನಾತೃಪನ್ನೃಪಃ ।**
**ಮಧುವ್ರತ ಇವಾಂಭೋಜಾತ್ಕಾ[१]ಮಸೇವಾ ನ ತೃಪ್ತಯೇ || ೩ ||**

ಕಮಲದಿಂದ ರಸವನ್ನೂ ಪರಿಮಳವನ್ನೂ ಸೇವನೆಮಾಡಿ ತೃಪ್ತಿಯನ್ನು ಹೊಂದದಿರುವ ಭ್ರಮರದಂತೆ ವಜ್ರಜಂಘರಾಜನು ಆ ಶ್ರೀಮತಿಯ ಮುಖಕಮಲದಿಂದ ರಸವನ್ನೂ ಪರಿಮಳವನ್ನೂ ಸೇವನೆಮಾಡಿ ತೃಪ್ತನಾಗಲಿಲ್ಲ. ವಿಷಯಸುಖಗಳನ್ನು ಸೇವಿಸಿದಷ್ಟೂ ತೃಪ್ತಿಯಾಗುವುದಿಲ್ಲ.

**ಮುಖೇಂದುಮಸ್ಯಾಃ ಸೋಽಪಶ್ಯನ್ನಿರ್ನಿಮೇಷೋ[२]ತ್ಕಯಾ ದೃಶಾ ।**
**ಕಾಂತಿಮದ್ದಶನಜ್ಯೋತಿರ್ಜ್ಯೋತ್ಸ್ನಯಾ ಸತತೋಜ್ಜ್ವಲಮ್ || ೪ ||**

ಆ ವಜ್ರಜಂಘನು ಪ್ರಕಾಶಮಾನಗಳಾದ ಹಲ್ಲುಗಳ ಕಾಂತಿಯೆಂಬ ಬೆಳದಿಂಗಳಿಂದ ಸದಾ ಪ್ರಕಾಶಿಸುತ್ತಿರುವ ಈ ಶ್ರೀಮತಿಯ ಮುಖವೆಂಬ ಚಂದ್ರನನ್ನು ರೆಪ್ಪೆಮುಚ್ಚದೆ ಕುತೂಹಲವುಳ್ಳ ದೃಷ್ಟಿಯಿಂದ ನೋಡಿದನು.

**ಅಪಾಂಗವೀಕ್ಷಿತೈರ್ಲೀಲಾಸ್ಮಿತೈಶ್ಚ ಕಲಭಾಷಿತೈಃ ।**
**ಮನೋ [३]ಬಬಂಧ ಸಾ ತಸ್ಯ [४]ಸ್ವಸ್ಮಿನ್ನತ್ಯಂತ[५]ಬಂಧುರೈಃ || ೫ ||**

ಆ ಶ್ರೀಮತಿಯು ಅತ್ಯಂತಮನೋಹರಗಳಾದ ಕಡೆಕಣ್ಣುನೋಟಗಳಿಂದಲೂ, ಆಟಗಳಿಂದಲೂ, ಮುಗುಳುನಗೆಗಳಿಂದಲೂ, ಮಧುರಭಾಷಣಗಳಿಂದಲೂ ವಜ್ರಜಂಘನ ಮನಸ್ಸನ್ನು ತನ್ನಲ್ಲಿ ಆಸಕ್ತವನ್ನಾಗಿ ಮಾಡಿಕೊಂಡಳು.

**ತ್ರಿವಲೀವೀಚಿರಮ್ಯೇಸೌ ನಾಭಿಕಾವರ್ತಶೋಭಿನಿ ।**
**ಉದರೇ ಕೃಶಮಧ್ಯಾಯಾ ರೇಮೇ ನದ್ಯಾ ಇವ ಹ್ರದೇ || ೬ ||**

ಮಧ್ಯಭಾಗವು ಕೃಶವಾಗಿರುವ ಶ್ರೀಮತಿಯ ಹೊಟ್ಟೆಯ ಮೇಲಿರುವ ಮೂರುರೇಖೆಗಳೆಂಬ ತೆರೆಮಾಲೆಗಳಿಂದ ಮನೋಹರವೂ ನಾಭಿಯೆಂಬ ಸುಳಿಯಿಂದ ಶೋಭಾಯಮಾನವೂ ಆಗಿರುವ ಉದರ(ಮಧ್ಯಭಾಗ)ದಲ್ಲಿ ಈ ವಜ್ರಜಂಘನು, ನದಿಯ ಮಡುವಿನಲ್ಲಿ ಕ್ರೀಡಿಸುವಂತೆ, ಕ್ರೀಡಿಸಿದನು.

**ನಿತಂಬಪುಲಿನೇ ತಸ್ಯಾಃ ಸ ಚಿರಂ [६]ಧೃತಿಮಾತನೋತ್ ।**
**ಕಾಂಚೀವಿಹಂಗವಿರುತೇ ರಮ್ಯೇ ಹಂಸಯುವಾಯಿತಃ || ೭ ||**

೧ ಇಷ್ಟವಿಷಯೋಪಭೋಗಃ. ೨ ಉತ್ಕಂಠಯಾ. ೩ ಆಸಕ್ತಂ ಚಕಾರ. ೪ ಆತ್ಮನಿ. ೫ ಭಾಸುರೈರಿತ್ಯಪಿ ಪಾಠಾಂತರಂ. ೬ ಸಂತೋಷಮಿತ್ಯರ್ಥಃ.

ಆ ವಜ್ರಜಂಘನು ಶ್ರೀಮತಿಯ ಸೊಂಟದಲ್ಲಿರುವ ಡಾಬೆಂಬ ಪಕ್ಷಿಯ ಶಬ್ದದಿಂದ ಮನೋಹರವಾದ ನಿತಂಬ(ಪಿರ್ರೆ)ವೆಂಬ ಮರಳುಗುಡ್ಡೆಯಲ್ಲಿ, ತರುಣಹಂಸಪಕ್ಷಿಯಂತೆ, ಬಹುಕಾಲದ ವರೆಗೆ ಕ್ರೀಡಿಸಿದನು.

**ತತ್ಸ್ತನಾಂಶುಕಮಾಹೃತ್ಯ ತತ್ರ ವ್ಯಾಪಾರಯನ್ಕರಮ್ ।**
**ಮದೇಭ ಇವ ಸೋಽಭಾಸೀತ್ಪದ್ಮಿನ್ಯಾಃ ಕುಡ್ಮಲಂ ಸ್ಪೃಶನ್ || ೮ ||**

ಆ ವಜ್ರಜಂಘನು ಶ್ರೀಮತಿಯ ಕುಚಗಳ ಮೇಲಿರುವ ವಸ್ತ್ರವನ್ನು ತೆಗೆದು ಆ ಕುಚಗಳಲ್ಲಿ ಕೈಯನ್ನು ಆಡಿಸುವವನಾಗಿ, ತಾವರೆದಂಟಿನಲ್ಲಿರುವ ಕಮಲದ ಮೊಗ್ಗುಗಳನ್ನು ಸ್ಪರ್ಶಮಾಡುತ್ತಿರುವ ಮದ್ದಾನೆಯಂತೆ, ಶೋಭಿಸಿದನು.

**ಸ್ತನಚಕ್ರಾಹ್ವಯೇ ತಸ್ಯಾಃ ಶ್ರೀಖಂಡದ್ರವಕರ್ದಮೇ ।**
**ಉರಃಸರಸಿ ರೇಮೇಸೌ ಸತ್ಕುಚಾಂಶುಕಶೈವಲೇ || ೯ ||**

ಈ ವಜ್ರಜಂಘನು, ಕುಚಗಳೆಂಬ ಚಕ್ರವಾಕಪಕ್ಷಿಗಳುಳ್ಳದೂ, ಚಂದನಲೇಪನ ವೆಂಬ ಕೆಸರುಳ್ಳದೂ, ಕುಚಗಳ ಮೇಲಿರುವ ಒಳ್ಳೆಯ ವಸ್ತ್ರವೆಂಬ ಆವಚಿಯು ಳ್ಳದೂ ಆದ ಆ ಶ್ರೀಮತಿಯ ಎದೆಯೆಂಬ ಸರೋವರದಲ್ಲಿ ಕ್ರೀಡಿಸಿದನು.

**ಮೃದು[१]ಬಾಹುಲತೇ ಕಂಠೇ ಗಾಢಮಾಸಜ್ಯ ಸುಂದರೀ ।**
**ಕಾಮಪಾಶಾಯಿತೇ ತಸ್ಯ ಮನೋಽಬಧ್ನಾನ್ಮನಸ್ವಿನೀ || ೧೦ ||**

ಆ ಚತುರಳಾದ ಸುಂದರಿಯು ಮನ್ಮಥನ ಹಗ್ಗಗಳಂತಿರುವ ಮೃದುವಾದ ತನ್ನ ತೋಳುಗಳನ್ನು ವಜ್ರಜಂಘನ ಕಂಠದಲ್ಲಿ ಗಟ್ಟಿಯಾಗಿ ಸೇರಿಸಿ ಆತನ ಮನಸ್ಸನ್ನು ಕಟ್ಟಿಹಾಕಿದಳು.

**ಮೃದುಪಾಣಿತಲೇ ಸ್ಪರ್ಶಂ ರಸಗಂಧೌ ಮುಖಾಂಬುಜೇ ।**
**ಶಬ್ದಮಾಲಪಿತೇ ತಸ್ಯಾಸ್ತನೌ ರೂಪಂ ನಿರೂಪಯನ್ || ೧೧ ||**

**ಸುಚಿರಂ ತರ್ಪಯಾಮಾಸ ಸೋಽಕ್ಷಗ್ರಾಮಮಶೇಷತಃ ।**
**ಸುಖಮೈಂದ್ರಿಯಿಕಂ ಪ್ರೇಪ್ಸೋರ್ಗತಿರ್ನಾತಃ ಪರಾಂಗಿನಃ || ೧೨ ||**

ಆ ವಜ್ರಜಂಘನು ಶ್ರೀಮತಿಯ ಮೃದುವಾದ ಹಸ್ತದಲ್ಲಿ ಸ್ಪರ್ಶವನ್ನೂ ಮುಖಕಮಲದಲ್ಲಿ ರಸವನ್ನೂ ಗಂಧವನ್ನೂ ಭಾಷಣೆಯಲ್ಲಿ ಮಧುರಶಬ್ದವನ್ನೂ ಶರೀರದಲ್ಲಿ ಸೌಂದರ್ಯವನ್ನೂ ಅನುಭವಿಸಿ ಬಹುಕಾಲದವರೆಗೆ ತನ್ನ ಇಂದ್ರಿಯಗಳನ್ನು ಸಂಪೂರ್ಣವಾಗಿ ತೃಪ್ತಿಪಡಿಸಿದನು. ಇಂದ್ರಿಯಸುಖವನ್ನು ಹೊಂದಬೇಕೆಂಬ ಇಚ್ಛೆಯುಳ್ಳವನಿಗೆ ಸ್ತ್ರೀಹೊರತು ಬೇರೆ ಗತಿಯಿಲ್ಲ.

**ಕಾಂಚೀದಾಮಮಹಾನಾಗಸಂರುದ್ಧೇನ್ಯೈರ್ದುರಾಸದೇ ।**
**ರೇಮೇ ತಸ್ಯಾಃ ಕಟಿಸ್ಥಾನೇ ಮಹತೀವ ನಿಧಾನಕೇ || ೧೩ ||**

ಸೊಂಟಕ್ಕಿಟ್ಟಿದ್ದ ಡಾಬೆಂಬ ದೊಡ್ಡ ಸರ್ಪದಿಂದ ಸುತ್ತಲ್ಪಟ್ಟಿರುವುದೂ, ಇತರರಿಂದ ಪಡಿಯುವುದಕ್ಕೆ ಅಸಾಧ್ಯವಾದುದೂ ಮಹಾನಿಧಿಯಂತಿರುವುದೂ ಆದ ಆ ಶ್ರೀಮತಿಯ ಕಟಿಪ್ರದೇಶದಲ್ಲಿ ವಜ್ರಜಂಘನು ರಮಿಸಿದನು.

**ಕಚಗ್ರಹೈರ್ಮದೀಯೋಽಭಿಃ ಕರ್ಣೋತ್ಪಲವಿತಾಡಿತೈಃ ।**
**ಅಭೂತ್ಪ್ರಣಯಕೋಪೋಽಸ್ಯಾ ಯೂನಃ ಪ್ರೀತ್ಯೈ ಸುಖಾಯ ಚ || ೧೪ ||**

೧ ಕರ್ಮತಾಪನ್ನೇ.

ಮೃದುವಾದ ಕೂದಲುಗಳನ್ನು ಹಿಡಿಯುವುದರಿಂದಲೂ ಕಿವಿಗಳಿಗಿಟ್ಟಿರುವ ನೈದಿಲೆಪುಷ್ಪಗಳ ತಾಡನೆಗಳಿಂದಲೂ ಯುಕ್ತವಾದ ಈ ಶ್ರೀಮತಿಯ ಪ್ರಣಯಕೋಪವು ಯುವಕನಾದ ವಜ್ರಜಂಘನಿಗೆ ಪ್ರೀತಿಯನ್ನೂ ಸುಖವನ್ನೂ ಉಂಟುಮಾಡಿದ್ದಿತು.

**ಗಲಿತಾಭರಣನ್ಯಾಸೇ ರತಿಘರ್ಮಾಂಬುಕರ್ದಮೇ ।**
**ತಸ್ಯಾಸೀದ್ಧೃತಿರಂಗೇಸ್ಯಾಃ ಸುಖೋತ್ಕರ್ಷಃ ಸ ಕಾಮಿನಾಮ್ ॥ ೧೫ ॥**

ಧರಿಸಿರುವ ಆಭರಣಗಳು ಜಾರಿಹೋಗಿರುವುದೂ ರತಿಕ್ರೀಡೆಯಿಂದುಂಟಾದ ಬೆವರಿನಿಂದ ಮಲಿನವೂ ಆದ ಶ್ರೀಮತಿಯ ಶರೀರವು ಆ ವಜ್ರಜಂಘನಿಗೆ ಬಹಳ ಸಂತೋಷವನ್ನುಂಟುಮಾಡಿದ್ದಿತು. ಕಾಮುಕರಿಗೆ ಅದೇ ಹೆಚ್ಚಿನ ಸುಖವು.

**ಸೌಧವಾತಾಯನೋಪಾಂತಕೃತಶಯ್ಯೌ ರತಿಶ್ರಮಮ್ ।**
**ಅಪನಿನ್ಯತುರಾಸ್ಪೃಷ್ಟೌ ತೌ ಶನೈರ್ಮೃದುಮಾರುತೈಃ ॥ ೧೬ ॥**

ಮಹಡಿ(ಉಪ್ಪರಿಗೆ)ಯ ಕಿಡಿಕಿಯ ಸಮೀಪದಲ್ಲಿ ಪರಸ್ಪರವಾಗಿ ಸ್ವಲ್ಪ ಮುಟ್ಟಿಕೊಂಡು ಮಲಗಿರುವ ಆ ದಂಪತಿಗಳು ಮೃದುವಾಗಿ ಬೀಸುತ್ತಿರುವ ಗಾಳಿಯಿಂದ ತಮ್ಮ ರತಿಕ್ರೀಡೆಯ ಆಯಾಸವನ್ನು ಮೆಲ್ಲನೆ ಪರಿಹರಿಸಿಕೊಂಡರು.

**ತಸ್ಯಾ ಮುಖೇಂದುರಾಹ್ಲಾದಂ ಲೋಚನೇ ನಯನೋತ್ಸವಮ್ ।**
**ಸ್ತನೌ ಸ್ಪರ್ಶಸುಖಾಸಂಗಮಸ್ಯ ತೇನುರ್ದುರಾಸದಮ್ ॥ ೧೭ ॥**

ಈ ವಜ್ರಜಂಘನಿಗೆ ಶ್ರೀಮತಿಯ ಚಂದ್ರನಂತಿರುವ ಮುಖವು ದುರ್ಲಭವಾದ ಆನಂದವನ್ನೂ ನೇತ್ರಗಳೆರಡು ವಜ್ರಜಂಘನ ನೇತ್ರಗಳಿಗೆ ಉತ್ಸವವನ್ನೂ ಕುಚಗಳು ಸ್ಪರ್ಶಸುಖವನ್ನೂ ಉಂಟುಮಾಡಿದುವು.

**ತತ್ಕನ್ಯಾಮೃತಮಾಸಾದ್ಯ ದಿವ್ಯೌಷಧಮಿವಾತುರಃ ।**
**ಸ ಕಾಲೇ ಸೇವಮಾನೋಭೂತ್ಸುಖೀ ನಿರ್ಮದನಜ್ವರಃ ॥ ೧೮ ॥**

ರೋಗಿಯು ದಿವ್ಯವಾದ ಔಷಧವನ್ನು ಹೊಂದಿ ಯೋಗ್ಯಕಾಲದಲ್ಲಿ ಸೇವಿಸಿ ಸುಖಿಯಾಗುವಂತೆ ವಜ್ರಜಂಘನು ಆ ಕನ್ಯೆಯೆಂಬ ಅಮೃತವನ್ನು ಸೇವಿಸಿ ಮದನಜ್ವರ ರಹಿತನಾಗಿ ಸುಖಿಯಾದನು.

**ಕದಾಚಿನ್ನಂದನಸ್ಪರ್ಧಿಪರಾರ್ಧ್ಯತರುಶೋಭಿಷು ।**
**ಗೃಹೋದ್ಯಾನೇಷು ರೇಮೇಸೌ ಕಾಂತಯಾ[1]ಮಾ ಮಹರ್ದ್ಧಿಷು॥ ೧೯ ॥**

ಕೆಲವು ವೇಳೆಗಳಲ್ಲಿ ಈ ವಜ್ರಜಂಘನು ನಂದನವನವನ್ನು ತಿರಸ್ಕರಿಸುವ ಶ್ರೇಷ್ಠವಾದ ವೃಕ್ಷಗಳಿಂದ ಶೋಭಿಸುತ್ತಿರುವ ಗೃಹೋದ್ಯಾನಗಳಲ್ಲಿ ತನ್ನ ಪತ್ನಿಯೊಡನೆ ಕ್ರೀಡಿಸಿದನು.

**ಕದಾಚಿದ್ಬಹಿರುದ್ಯಾನೇ ಲತಾಗೃಹವಿರಾಜಿನಿ ।**
**ಕ್ರೀಡಾದ್ರಿಸಹಿತೇ ದೀವ್ಯತ್ಪ್ರಿಯಯಾ ಸಮಮುತ್ಸುಕಃ ॥ ೨೦ ॥**

ಕೆಲವು ವೇಳೆಗಳಲ್ಲಿ ಲತಾಮಂಟಪಗಳಿಂದ ಶೋಭಿಸುತ್ತಿರುವುದೂ ಕ್ರೀಡಾಪರ್ವತಸಹಿತವೂ ಆದ ಬಾಹ್ಯೋದ್ಯಾನದಲ್ಲಿ ತನ್ನ ಪ್ರಿಯೆಯೊಡನೆ ಕುತೂಹಲವಿಶಿಷ್ಟನಾಗಿ ಕ್ರೀಡಿಸಿದನು.

**ನದೀಪುಲಿನದೇಶೇಷು ಕದಾಚಿದ್ವಿಜಹಾರ ಸಃ ।**
**ಸ್ವಯಂಗಲಿತಸಂಫುಲ್ಲಲತಾಕುಸುಮಶೋಭಿಷು ॥ ೨೧ ॥**

ಕೆಲವು ವೇಳೆಗಳಲ್ಲಿ ಆ ವಜ್ರಜಂಘನು ಶಿಥಿಲವಾಗಿ ತಾನಾಗಿಯೇ ಬಿದ್ದಿರುವ ಪುಷ್ಪಗಳಿಂದಲೂ ಅರಳಿರುವ ಪುಷ್ಪಗಳುಳ್ಳ ಲತೆಗಳಿಂದಲೂ ಶೋಭಿಸುತ್ತಿರುವ ನದಿಯ ಮರಳು ಪ್ರದೇಶಗಳಲ್ಲಿ ವಿಹರಿಸಿದನು.

೧ ಸಹ.

**ಕದಾಚಿದ್ದೀರ್ಘಿಕಾಂಭಸ್ಸು ಜಲಕ್ರೀಡಾಂ ಸಮಾತನೋತ್ ।**
**ಮಕರಂದರಜಃಪುಂಜಪಿಂಜರೇಷು ಸ ಸಪ್ರಿಯಃ ॥ ೨೨ ॥**

ಕೆಲವು ವೇಳೆಗಳಲ್ಲಿ ತನ್ನ ಪ್ರಿಯೆಯೊಡನೆ ಪುಷ್ಪರಸದಿಂದಲೂ ಪುಷ್ಪಧೂಳಿಯಿಂದಲೂ ಹೊಂಬಣ್ಣವಾಗಿರುವ ಕೊಳಗಳ ನೀರುಗಳಲ್ಲಿ ಕ್ರೀಡಿಸಿದನು.

**ಚಾಮೀಕರಮಯೈರ್ಯಂತ್ರೈರ್ಜಲಕೇಲಿವಿಧಾವಸೌ ।**
**ಪ್ರಿಯಾಮುಖಾಬ್ಜಮಂಭೋಭಿರಸಿಂಚತ್ಕೂ[1]ಣಿತೇಕ್ಷಣಮ್ ॥ ೨೩ ॥**

ಜಲಕ್ರೀಡೆಯನ್ನು ಮಾಡುವಾಗ ಈ ವಜ್ರಜಂಘನು ಕಣ್ಣುಗಳನ್ನು ಮುಚ್ಚಿಕೊಂಡಿರುವ ಪ್ರಿಯೆಯ ಮುಖಕಮಲದ ಮೇಲೆ ಬಂಗಾರದ ಯಂತ್ರ(ಪಿಚಕಾರಿ)ಗಳಿಂದ ನೀರನ್ನೆರಚಿದನು.

**ಸಾಪ್ಯಸ್ಯ ಮುಖಮಾಸೇಕ್ತುಂ ಕೃತವಾಂಛಾಪಿ ನಾಶಕತ್ ।**
**ಸ್ತನಾಂಶುಕೇ ಗಲತ್ಯಾವಿರ್ಭವದ್ವ್ರೀಡಾಪರಾಙ್ಮುಖೀ ॥ ೨೪ ॥**

ಆ ಶ್ರೀಮತಿಯೂ ತನ್ನ ಪ್ರಿಯ ಪತಿಯ ಮುಖದ ಮೇಲೆ ನೀರನ್ನು ಎರಚುವುದಕ್ಕೋಸ್ಕರ ಇಚ್ಛೆಯುಳ್ಳವಳಾದರೂ ಕುಚಗಳ ಮೇಲಿನ ವಸ್ತ್ರವು ಜಾರಿಹೋಗುವುದರಿಂದ ನಾಚಿಕೆಪಟ್ಟು ಪರಾಙ್ಮುಖಳಾಗಿ ನೀರನ್ನೆರಚುವುದಕ್ಕೆ ಸಮರ್ಥಳಾಗಲಿಲ್ಲ.

**ಜಲಕೇಲಿವಿಧೌ ತಸ್ಯಾ ಲಗ್ನಂ ಸ್ತನತಟೇಂಶುಕಮ್ ।**
**ಜಲಚ್ಛಾಯಾಂ ದಧೇ ಶ್ಲಕ್ಷ್ಣಂ ಸ್ತನಶೋಭಾ[2]ಮಕರ್ಷಯತ್ ॥ ೨೫ ॥**

ಜಲಕ್ರೀಡೆಯನ್ನು ಮಾಡುವ ಸಮಯದಲ್ಲಿ ಆ ಶ್ರೀಮತಿಯ ಕುಚಗಳಲ್ಲಿ ಸಂಬಂಧಿಸಿಕೊಂಡಿರುವ ಹೊಳಪಾದ ವಸ್ತ್ರವು ಕುಚಗಳ ಶೋಭೆಯನ್ನು ನಾಶಮಾಡದೆ ನೀರಿನ ಛಾಯೆಯನ್ನು ಧರಿಸಿದ್ದಿತು.

**ಸ್ತನಕುಡ್ಮಲಸಂಶೋಭಾ ಮೃದುಬಾಹುಮೃಣಾಲಿಕಾ ।**
**ಸಾ ದಧೇ ನಲಿನೀಶೋಭಾಂ ಮುಖಾಂಬುಜವಿರಾಜಿನೀ ॥ ೨೬ ॥**

ಕುಚಗಳೆಂಬ ಮೊಗ್ಗುಗಳಿಂದ ಶೋಭಿಸುವವಳೂ ಮೃದುವಾದ ತೋಳುಗಳೆಂಬ ದಂಟುಗಳುಳ್ಳವಳೂ ಮುಖವೆಂಬ ಕಮಲದಿಂದ ಶೋಭಿಸುವವಳೂ ಆದ ಆ ಶ್ರೀಮತಿಯು ತಾವರೆಬಳ್ಳಿಯ ಶೋಭೆಯನ್ನು ಧರಿಸಿದಳು. ತಾವರೆಬಳ್ಳಿಯ ಸಾದೃಶ್ಯವನ್ನು ಧರಿಸಿದಳೆಂದು ಭಾವವು.

**ಕರ್ಣೋತ್ಪಲಂ [3]ಸ್ವಮಿತ್ಯಸ್ಯಾ ವಿಲೋಲೈರಾದಧೇ ಜಲೈಃ ।**
**ತನ್ಮುಖಾಂಬುರುಹಚ್ಛಾಯಾಂ ಸ್ವಾಬ್ಜೈರ್ಜೇತುಮಿವಾಕ್ಷಮೈಃ ॥ ೨೭ ॥**

ಆ ಶ್ರೀಮತಿಯ ಮುಖಕಮಲದ ಶೋಭೆಯನ್ನು ತಮ್ಮ ಕಮಲಗಳಿಂದ ಜಯಿಸುವುದಕ್ಕೆ ಅಸಮರ್ಥಗಳಾಗಿಯೋ ಎಂಬಂತೆ ಚಂಚಲಗಳಾದ ಜಲಗಳು ಈ ಶ್ರೀಮತಿಯ ಕಿವಿಯಲ್ಲಿರುವ ನೈದಿಲೆಪುಷ್ಪವನ್ನು ''ಇದು ನಮ್ಮದು'' ಎಂದು ತೆಗೆದುಕೊಂಡುವು. ಜಲಕ್ರೀಡಾಸಮಯದಲ್ಲಿ ಕಿವಿಯಲ್ಲಿದ್ದ ನೈದಿಲೆಪುಷ್ಪವು ಜಾರಿ ನೀರಿನಲ್ಲಿ ಬಿದ್ದಿತೆಂದರ್ಥ.

**ಧಾರಾಗೃಹೇ ಸ ನಿಪತದ್ಧಾರಾಬದ್ಧಘನಾಗಮೇ ।**
**ಪ್ರಿಯಯಾ ವಿದ್ಯುತೇವೋಚ್ಚೈಶ್ಚಿಕ್ರೀಡ ಸುಖ[4]ನಿರ್ವೃತಃ ॥ ೨೮ ॥**

ಧಾರೆಯಾಗಿ ಜಲವನ್ನು ಸುರಿಯುವ ಮೇಘದಂತಿರುವ ಜಲಧಾರಾಗೃಹದಲ್ಲಿ ಮಿಂಚಿನಂತೆ ಪ್ರಕಾಶಮಾನಳಾದ ಪ್ರಿಯೆಯೊಡನೆ ಆ ವಜ್ರಜಂಘನು ಸುಖಸಂತೃಪ್ತನಾಗಿ ಬಹಳವಾಗಿ ಕ್ರೀಡಿಸಿದನು.

೧ ಸಂಕೋಚಿತಂ. ೨ ಅವಿನಾಶಯತ್. ೩ ಸ್ವಸಂಬಂಧೀತ್ಯರ್ಥಃ. ೪ ಸಂತೃಪ್ತಃ.

**ಕದಾಚಿತ್ಸೌಧಪೃಷ್ಠೇಷು ತಾರಕಾ[೧]ಪ್ರತಿಬಿಂಬಿತೈಃ ।**
**ಕೃತಾರ್ಚನೇಷ್ವಸೌ ರೇಮೇ ಜ್ಯೋತ್ಸ್ನಾಂ ರಾತ್ರಿಷು ನಿರ್ವಿಶನ್ ॥ ೨೯ ॥**

ಕೆಲವು ವೇಳೆಗಳಲ್ಲಿ ಈ ವಜ್ರಜಂಘನು ನಕ್ಷತ್ರಗಳ ಪ್ರತಿಬಿಂಬಗಳಿಂದ ಪೂಜಿಸಲ್ಪಟ್ಟ ಮಹಡಿ(ಉಪ್ಪರಿಗೆ)ಯ ಹಿಂಭಾಗಗಳಲ್ಲಿ ರಾತ್ರಿಗಳಲ್ಲಿ ಬೆಳದಿಂಗಳನ್ನು ಹೊಂದಿ ಕ್ರೀಡಿಸಿದನು.

**ಇತಿ ತತ್ರ ಚಿರಂ ಭೋಗ್ಯೈರುಪಭೋಗ್ಯೈಶ್ಚ ಹಾರಿಭಿಃ ।**
**ವಧೂವರಮರಂಸ್ತೈತತ್ಸ್ವರ್ಗಭೋಗಾತಿಶಾಯಿಭಿಃ ॥ ೩೦ ॥**

ಹೀಗೆ ಆ ವಜ್ರದಂತಚಕ್ರವರ್ತಿಯ ಮನೆಯಲ್ಲಿ ಸ್ವರ್ಗದ ಭೋಗಗಳನ್ನು ಮೀರುತ್ತಿರುವ ಮನೋಹರವಾದ ಭೋಗೋಪಭೋಗಗಳಿಂದ ಈ ವಧೂವರರು ಕ್ರೀಡಿಸಿದರು.

**ತಯೋಸ್ತಥಾವಿಧೈರ್ಭೋಗೈರ್ಜಿನೇಂದ್ರಮಹಿಮೋತ್ಸವೈಃ ।**
**ಪಾತ್ರದಾನವಿನೋದೈಶ್ಚ ತತ್ರ ಕಾಲೋಗಮದ್ಬಹುಃ ॥ ೩೧ ॥**

ಹಿಂದೆ ಹೇಳಿದ ಪ್ರಕಾರವಾದ ಭೋಗಗಳಿಂದಲೂ ಜಿನೇಶ್ವರನ ಪೂಜೋತ್ಸವಗಳಿಂದಲೂ ಸತ್ಪಾತ್ರದಾನವಿನೋದಗಳಿಂದಲೂ ಆ ವಧೂವರರ ಬಹಳ ಕಾಲವು ಚಕ್ರವರ್ತಿಯ ಮನೆಯಲ್ಲಿ ಕಳೆಯಿತು.

**ನಿತ್ಯ[೨]ಪ್ರಸಾದಲಾಭೇನ ತಯೋರ್ನಿತ್ಯಮಹೋತ್ಸವೈಃ ।**
**ಪುತ್ರೋತ್ಪತ್ತ್ಯಾದಿ[೩]ಸರ್ಗೈಶ್ಚ ಸ ಕಾಲೋವಿದಿತೋಗಮತ್ ॥ ೩೨ ॥**

ನಿತ್ಯೋತ್ಸವಗಳಿಂದಲೂ ಪುತ್ರೋತ್ಪತ್ತಿ ಮೊದಲಾದ ಲಾಭಗಳಿಂದಲೂ ನಿತ್ಯದಲ್ಲಿಯೂ ಪ್ರಸನ್ನತೆಯನ್ನು ಹೊಂದುತ್ತಿದ್ದುದರಿಂದ ಆ ವಧೂವರರಿಗೆ ಕಾಲವು ಕಳೆದುದೇ ತಿಳಿಯಲಿಲ್ಲ.

**ವಜ್ರಜಂಘಾನುಜಾಂ ಕನ್ಯಾಮನುರೂಪಾಮನುಂದರೀಮ್ ।**
**ವಜ್ರಬಾಹುರ್ವಿಭೂತ್ಯಾಸಾವದಿತಾಮಿತತೇಜಸೇ ॥ ೩೩ ॥**

ಈ ವಜ್ರಬಾಹುರಾಜನು ವಜ್ರಜಂಘನ ತಂಗಿಯಾದ ಅನುಂದರಿಯೆಂಬ ಅನುರೂಪಳಾದ ಕನ್ಯೆಯನ್ನು ಬಹಳ ವೈಭವದಿಂದ ಅಮಿತತೇಜನಿಗೆ ಕೊಟ್ಟು ವಿವಾಹಮಾಡಿದನು.

**ಚಕ್ರಿಸೂನುಂ ತಮಾಸಾದ್ಯ ಸುತರಾಂ ಪಿಪ್ರಿಯೇ ಸತೀ ।**
**ಅನುಂದರೀ ನವೋಢಾಸೌ ವಸಂತಮಿವ ಕೋಕಿಲಾ ॥ ೩೪ ॥**

ವಸಂತಋತುವಿನ ಸಮಾಗಮದಿಂದ ಹೆಣ್ಣು ಕೋಗಿಲೆಯು ಸಂತೋಷಪಡುವಂತೆ, ಹೊಸದಾಗಿ ವಿವಾಹಿತಳೂ ಪತಿವ್ರತೆಯೂ ಆದ ಈ ಅನುಂದರಿಯು ಚಕ್ರವರ್ತಿಯ ಮಗನಾದ ಆ ಅಮಿತತೇಜನನ್ನು ಹೊಂದಿ ಬಹಳ ಸಂತೋಷಪಟ್ಟಳು.

**ಅಥ ಚಕ್ರಧರಃ ಪೂಜಾಸತ್ಕಾರೈರಭಿಪೂಜಿತಮ್ ।**
**ಸ್ವಪುರಂ ಪ್ರತಿ[೪]ಯಾನಾಯ [೫]ವ್ಯಸೃಜತ್ತದ್ವಧೂವರಮ್ ॥ ೩೫ ॥**

ತರುವಾಯ ವಜ್ರದಂತಚಕ್ರವರ್ತಿಯು ಪೂಜಾಸತ್ಕಾರಗಳಿಂದ ಆ ವಧೂವರರನ್ನು ಪೂಜಿಸಿ ತಮ್ಮ ಪಟ್ಟಣಕ್ಕೆ ಹೋಗುವುದಕ್ಕೆ ಕಳುಹಿಸಿಕೊಟ್ಟನು.

**ಹಸ್ತ್ಯಶ್ವರಥಪಾದಾತಂ ರತ್ನಂ ದೇಶಂ ಸಕೋಶಕಮ್ ।**
**ತದಾನ್ವಯಿನಿಕಂ ಪುತ್ರ್ಯೈ ದದೌ ಚಕ್ರಧರೋ ಮಹತ್ ॥ ೩೬ ॥**

ವಧೂವರರು ಹೋಗುವ ಸಮಯದಲ್ಲಿ ಚಕ್ರವರ್ತಿಯು ತನ್ನ ಮಗಳಿಗೆ ಆನೆ, ಕುದುರೆ, ಕಾಲಾಳು, ರತ್ನ, ದೇಶ, ಖಜಾನೆ ಮೊದಲಾದ ಬಹಳ ಬಳುವಳಿಯನ್ನು ಕೊಟ್ಟನು.

೧ ಪ್ರತಿಬಿಂಬೈಃ. ೨ ಪ್ರಸನ್ನತಾ. ೩ ಲಾಭೈಃ. ೪ ಗಮನಾಯ. ೫ ಪ್ರಾಹಿಣೋತ್.

**ಅಥ ಪ್ರಯಾಣಸಂಕ್ಷೋಭಾದ್ದಂಪತ್ಯೋಸ್ತತ್ಪುರಂ ತದಾ ।**
**ಪರಮಾಕುಲತಾಂ ಭೇಜೇ ತದ್ಗುಣೈ[೧]ರುನ್ಮನಾಯಿತಮ್ ॥ ೩೭ ॥**

ತರುವಾಯ ಆ ಶ್ರೀಮತೀವಜ್ರಜಂಘರ ಪ್ರಯಾಣಕಾಲದಲ್ಲಿ ಉಂಟಾದ ಕ್ಷೋಭೆಯಿಂದ ಆ ಪಟ್ಟಣವಾಸಿಗಳೆಲ್ಲ ಆ ವಧೂವರರ ಸದ್ಗುಣಗಳಿಂದ ಉತ್ಕಂಠಿತರಾಗಿ ಬಹಳ ವ್ಯಾಕುಲರಾದರು.

**ತತಃ ಪ್ರಸ್ಥಾನಗಂಭೀರಭೇರೀಧ್ವಾನೈಃ ಶುಭೇ ದಿನೇ ।**
**ಪ್ರಯಾಣಮಕರೋಚ್ಛ್ರೀಮಾನ್ವಜ್ರಜಂಘಃ ಸಹಾಂಗನಃ ॥ ೩೮ ॥**

ತರುವಾಯ ಆ ಪುಣ್ಯಶಾಲಿಯಾದ ವಜ್ರಜಂಘನು ಪ್ರಯಾಣಕಾಲದ ಗಂಭೀರವಾದ ಭೇರೀಶಬ್ದಗಳಿಂದ ಕೂಡಿದ ಶುಭದಿವಸದಲ್ಲಿ ಪತ್ನೀಸಹಿತನಾಗಿ ಪ್ರಯಾಣಮಾಡಿದನು.

**ವಜ್ರಬಾಹುಮಹಾರಾಜೋ ದೇವೀ ಚಾಸ್ಯ ವಸುಂಧರಾ ।**
**ವಜ್ರಜಂಘಂ ಸಪತ್ನೀಕಂ ವ್ರಜಂತಮನುಜಗ್ಮತುಃ ॥ ೩೯ ॥**

ವಜ್ರಬಾಹು ಮಹಾರಾಜನೂ ಈತನ ಪತ್ನಿಯಾದ ವಸುಂಧರಾದೇವಿಯೂ ಪತ್ನೀಸಹಿತನಾಗಿ ಹೋಗುತ್ತಿರುವ ವಜ್ರಜಂಘನನ್ನು ಹಿಂಬಾಲಿಸಿ ಹೋದರು.

**ಪೌರವರ್ಗಂ ತಥಾ ಮಂತ್ರಿಸೇನಾಪತಿಪುರೋಹಿತಾನ್ ।**
**ಸೋನುವ್ರಜಿತುಮಾಯಾತಾ[೨]ನ್ನಾತಿದೂರಾದ್ವ್ಯಸರ್ಜಯತ್ ॥ ೪೦ ॥**

ಆ ವಜ್ರಜಂಘನು ತನ್ನನ್ನು ಕಳುಹಿಸಿ ಕೊಡುವುದಕ್ಕಾಗಿ ಹಿಂಬಾಲಿಸಿ ಬರುತ್ತಿರುವ ಪಟ್ಟಣವಾಸಿಗಳನ್ನೂ ಮಂತ್ರಿ ಸೇನಾಪತಿ ಪುರೋಹಿತ ಮೊದಲಾದವರನ್ನೂ ಸ್ವಲ್ಪ ದೂರದಿಂದಲೇ ಹಿಂದಕ್ಕೆ ಕಳುಹಿಸಿದನು.

**ಹಸ್ತ್ಯಶ್ವರಥಭೂಯಿಷ್ಠಂ [೩]ಸಾಧನಂ ಸಹಪತ್ತಿಕಮ್ ।**
**[೪]ಸಂವಾಹಯನ್ ಸ ಸಂಪ್ರಾಪತ್ಪುರಮುತ್ಪಲಖೇಟಕಮ್ ॥ ೪೧ ॥**

ಆನೆ ಕುದುರೆ ರಥ ಕಾಲಾಳು ಇವುಗಳಿಂದ ಕೂಡಿರುವ ಸೈನ್ಯಸಮೇತನಾಗಿ ವಜ್ರಜಂಘನು ಉತ್ಪಲಖೇಟನಗರವನ್ನು ಸೇರಿದನು.

**ಪರಾರ್ಧ್ಯರಚನೋಪೇತಂ ಸೋತ್ಸವಂ ಪ್ರವಿಶನ್ಪುರಮ್ ।**
**ಪುರಂದರ ಇವಾಭಾಸೀದ್ವಜ್ರಜಂಘೋಮಿತದ್ಯುತಿಃ ॥ ೪೨ ॥**

ಉತ್ತಮವಾದ ರಚನೆಯಿಂದಲೂ ಉತ್ಸವದಿಂದಲೂ ಕೂಡಿರುವ ಆ ಪಟ್ಟಣವನ್ನು ಪ್ರವೇಶಮಾಡುತ್ತಿರುವವನೂ ಅಪಾರವಾದ ಕಾಂತಿಯುಳ್ಳವನೂ ಆದ ವಜ್ರಜಂಘನು ದೇವೇಂದ್ರನಂತೆ ಶೋಭಿಸಿದನು.

**ಪೌರಾಂಗನಾ ಮಹಾವೀಥೀರ್ವಿಶಂತಂ ತಂ ಪ್ರಿಯಾನ್ವಿತಮ್ ।**
**ಸುಮನೋಂಜಲಿಭಿಃ ಪ್ರೀತ್ಯಾ [೫]ಚಕರುಃ ಸೌಧಸಂಶ್ರಿತಾಃ ॥ ೪೩ ॥**

ಪ್ರಾಣಕಾಂತೆಯೊಡಗೂಡಿ ರಾಜಬೀದಿಗಳನ್ನು ಪ್ರವೇಶಮಾಡುತ್ತಿರುವ ಆ ವಜ್ರಜಂಘನ ಮೇಲೆ ಮಹಡಿಯ ಮೇಲಿದ್ದ ಪುರಸ್ತ್ರೀಯರು ಪ್ರೀತಿಯಿಂದ ಪುಷ್ಪಾಂಜಲಿಗಳನ್ನು ಎರಚಿದರು.

**ಪುಷ್ಪಾಕ್ಷತಯುತಾಂ ಪುಣ್ಯಾಂ ಶೇಷಾಂ ಪುಣ್ಯಾಶಿಷಾ ಸಮಮ್ ।**
**ಪ್ರಜಾಃ ಸಮಂತತೋಭ್ಯೇತ್ಯ ದಂಪತೀ ತಾ[೬]ವಲಂಭಯನ್ ॥ ೪೪ ॥**

ಎಲ್ಲಾ ಕಡೆಗಳಿಂದಲೂ ಪ್ರಜೆಗಳು ಬಂದು ಆ ನೂತನದಂಪತಿಗಳಿಗೆ ಪುಷ್ಪಾಕ್ಷತೆಗಳಿಂದ ಕೂಡಿದ ಮತ್ತು ಪುಣ್ಯಮಯವಾದ ಶೇಷೆಯನ್ನಿಕ್ಕಿ ಆಶೀರ್ವದಿಸಿದರು.

೧ ಉತ್ಕ ಉನ್ಮನಾ ಇತ್ಯಮರಃ. ೨ ಸಮೀಪಾತ್. ೩ ಚಮೂಂ. ೪ ಪ್ರಾಪಯನ್. ೫ ಕ್ಷೂ ವಿಕ್ಷೇಪೇ ಲಿಟ್. ೬ ಪ್ರಾಪಯಂತಿ ಸ್ಮ.

**ತತಃ ಪ್ರಹತಗಂಭೀರಪಟಹಧ್ವಾನಸಂಕುಲಮ್ ।**
**ಪುರಮುತ್ತೋರಣಂ ಪಶ್ಯನ್ಸ ವಿವೇಶ ನೃಪಾಲಯಮ್ ॥ ೪೫ ॥**

ತರುವಾಯ ತಮ್ಮಟೆ ಮೊದಲಾದ ವಾದ್ಯಗಳ ಗಂಭೀರವಾದ ಶಬ್ದಗಳಿಂದ ಪ್ರಾಪ್ತವಾಗಿರುವುದೂ ಮೇಲೆ ಕಟ್ಟಿರುವ ತೋರಣಗಳುಳ್ಳುದೂ ಆದ ಆ ಪಟ್ಟಣವನ್ನು ನೋಡುತ್ತ ಆ ವಜ್ರಜಂಘನು ರಾಜಮಂದಿರವನ್ನು ಪ್ರವೇಶಮಾಡಿದನು.

**ತತ್ರ [೧]ಶ್ರೀಭವನೇ ರಮ್ಯೇ ಸರ್ವರ್ತುಸುಖದಾಯಿನಿ ।**
**ಶ್ರೀಮತ್ಯಾ ಸಹ ಸಂಪ್ರೀತ್ಯಾ ವಜ್ರಜಂಘೋಽವಸತ್ಸುಖಮ್ ॥ ೪೬ ॥**

ಲಕ್ಷ್ಮಿಗೆ ನಿವಾಸವೂ ಮನೋಹರವೂ ಸಮಸ್ತ ಋತುಗಳಲ್ಲಿಯೂ ಸುಖದಾಯಕವೂ ಆದ ಆ ರಾಜಭವನದಲ್ಲಿ ವಜ್ರಜಂಘನು ಶ್ರೀಮತಿಯೊಡನೆ ಆನಂದದಿಂದ ಸುಖವಾಗಿ ವಾಸಮಾಡಿದನು.

**ಸ ರಾಜಸದನಂ ರಮ್ಯಂ ಪ್ರೀತ್ಯಾಮುಷ್ಯೈ ಪ್ರದರ್ಶಯನ್ ।**
**ತತ್ರ ತಾಂ [೨]ರಮಯಾಮಾಸ ಖಿನ್ನಾಂ [೩]ಗುರುವಿಯೋಗತಃ ॥ ೪೭ ॥**

ಆ ವಜ್ರಜಂಘನು ರಮಣೀಯವಾದ ರಾಜಭವನವನ್ನು ಪ್ರೀತಿಯಿಂದ ಈ ಶ್ರೀಮತಿಗೆ ತೋರಿಸಿ ತಂದೆತಾಯಿಗಳ ವಿಯೋಗದಿಂದ ಖಿನ್ನಳಾದ ಆಕೆಯನ್ನು ಸಂತೋಷಪಡಿಸಿದನು.

**ಪಂಡಿತಾ ಸಮಮಾಯಾತಾ ಸಖೀನಾಮಗ್ರಣೀಃ ಸತೀ ।**
**[೪]ತಾಮಸೌ ರಂಜಯಾಮಾಸ ವಿನೋದೈರ್ನರ್ತನಾದಿಭಿಃ ॥ ೪೮ ॥**

ಸಖಿಯರಲ್ಲಿ ಶ್ರೇಷ್ಠಳಾದ ಪಂಡಿತೆಯು ಶ್ರೀಮತಿಯ ಜೊತೆಯಲ್ಲಿ ಬಂದಿದ್ದಳು. ಈಕೆಯು ನರ್ತನಮೊದಲಾದ ವಿನೋದಕಾರ್ಯಗಳಿಂದ ಶ್ರೀಮತಿಯನ್ನು ಸಂತೋಷಪಡಿಸಿದಳು.

**ಭೋಗೈರನಾರತೈರೇವಂ ಕಾಲೇ ಗಚ್ಛತ್ಯನುಕ್ರಮಾತ್ ।**
**ಶ್ರೀಮತೀ ಸುಷುವೇ ಪುತ್ರಾ[೫]ನ್ನೇಕಪಂಚಾಶತಂ [೬]ಯಮಾನ್ ॥ ೪೯ ॥**

ಹೀಗೆ ಸದಾ ಭೋಗಗಳನ್ನನುಭವಿಸುತ್ತ ಕಾಲವು ಕಳೆಯುತ್ತಿರಲಾಗಿ ಶ್ರೀಮತಿಯು ಕ್ರಮವಾಗಿ ನಲ್ವತ್ತೊಂಬತ್ತು ಅವುಳಿಮಕ್ಕಳ(೯೮ ಗಂಡುಮಕ್ಕಳ)ನ್ನು ಹೆತ್ತಳು.

**ಅಥಾನ್ಯೇದ್ಯುರ್ಮಹಾರಾಜೋ ವಜ್ರಬಾಹುರ್ಮಹಾದ್ಯುತಿಃ ।**
**ಶರ[೭]ದಂಬುಧರೋತ್ಥಾನಂ ಸೌಧಾಗ್ರಸ್ಥೋ ನಿರೂಪಯನ್ ॥ ೫೦ ॥**

ತರುವಾಯ ಒಂದು ದಿನ ಮಹಾತೇಜಸ್ವಿಯಾದ ವಜ್ರಬಾಹುಮಹಾರಾಜನು ಮಹಡಿಯ ಮೇಲಿರುವಾಗ ಶರತ್ಕಾಲದ ಮೇಘೋತ್ಪತ್ತಿಯನ್ನು ನೋಡಿದನು.

**ದೃಷ್ಟ್ವಾ ತದ್ವಿಲಯಂ ಸದ್ಯೋ ನಿರ್ವೇದಂ ಪರಮಾಗತಃ ।**
**ವಿರಕ್ತಸ್ಯಾಸ್ಯ ಚಿತ್ತೇಽಭೂದಿತಿ ಚಿಂತಾ ಗರೀಯಸೀ ॥ ೫೧ ॥**

ತತ್ಕ್ಷಣದಲ್ಲಿಯೇ ಆ ಮೇಘವು ನಷ್ಟವಾದುದನ್ನು ನೋಡಿ ಆ ವಜ್ರಬಾಹುಮಹಾರಾಜನು ಪರಮ ವೈರಾಗ್ಯವನ್ನು ಹೊಂದಿದನು. ವಿರಕ್ತನಾದ ಇವನ ಮನಸ್ಸಿನಲ್ಲಿ ಮುಂದೆ ಹೇಳುವ ರೀತಿಯಾಗಿ ವಿಚಾರವುಂಟಾಗಿದ್ದಿತು.

**ಪಶ್ಯ ನಃ [೮]ಪಶ್ಯತಾಮೇವ ಕಥಮೇಷ ಶರದ್ಘನಃ ।**
**ಪ್ರಾಸಾದಾಕೃತಿರುದ್ಭೂತೋ ವಿಲೀನಶ್ಚ ಕ್ಷಣಾಂತರೇ ॥ ೫೨ ॥**

೧ ಲಕ್ಷ್ಮೀನಿವಾಸೇ. ೨ ತೋಷಯತಿ ಸ್ಮ. ೩ ಪಿತ್ರೋರ್ವಿಯೋಗತಃ. ೪ ಶ್ರೀಮತೀಂ. ೫ ಏಕೋನಂ. ೬ ಯುಗ್ಮಾನ್. ೭ ಮೇಘೋತ್ಪತ್ತಿಂ. ೮ ಅನಾದೃತ್ಯ.

"ನೋಡು! ಈ ಶರತ್ಕಾಲದ ಮೇಘವು ಮಹಡಿಮನೆಯ ಆಕಾರದಿಂದ ಉತ್ಪನ್ನವಾಗಿ ನೋಡುತ್ತಿರುವ ನಮ್ಮನ್ನು ಅನಾದರಿಸಿ ಕ್ಷಣಕಾಲದಲ್ಲಿ ಹೇಗೆ ನಷ್ಟವಾಯಿತು ?

**ಸಂಪ[೧]ದಭ್ರವಿಲಾಯಂ ನಃ ಕ್ಷಣಾದೇಷಾ [೨]ವಿಲಾಸ್ಯತೇ ।**
**ಲಕ್ಷ್ಮೀಸ್ತಟಿದ್ವಿಲೋಲೇಯ[೩]ಮಿತ್ವರ್ಯೋ ಯೌವನಶ್ರಿಯಃ ॥ ೫೩ ॥**

ನಮ್ಮ ಈ ಸಂಪತ್ತು ಮೇಘದಂತೆ ಕ್ಷಣಕಾಲದಲ್ಲಿ ನಾಶವಾಗತಕ್ಕುದಾಗಿದೆ. ಈ ಲಕ್ಷ್ಮಿಯು ಮಿಂಚಿನಂತೆ ಚಂಚಲವಾದುದು. ಯೌವನವೂ ನಾಶವಾಗತಕ್ಕುದಾಗಿದೆ.

**[೪]ಆಪಾತಮಾತ್ರರಮ್ಯಾಶ್ಚ ಭೋಗಾಃ ಪರ್ಯಂತತಾಪಿನಃ ।**
**ಪ್ರತಿಕ್ಷಣಂ ಗಲತ್ಯಾಯುರ್ಗಲನ್ನಾಲೀಜಲಂ ಯಥಾ ॥ ೫೪ ॥**

ಅನುಭವಿಸುವ ಕಾಲದಲ್ಲಿ ಮಾತ್ರ ರಮಣೀಯವಾಗಿರುವ ಭೋಗಗಳೂ ಕೊನೆಯಲ್ಲಿ ತಾಪವನ್ನುಂಟುಮಾಡುವುವುಗಳಾಗಿವೆ. ಕೊಳವೆಯಿಂದ ನೀರು ಸುರಿದು ಹೋಗುವಂತೆ ಆಯುಷ್ಯವು ಪ್ರತಿಕ್ಷಣದಲ್ಲಿಯೂ ಕಳೆದು ಹೋಗುತ್ತಿದೆ.

**ರೂಪಮಾರೋಗ್ಯಮೈಶ್ವರ್ಯಮಿಷ್ಟಬಂಧುಸಮಾಗಮಃ ।**
**ಪ್ರಿಯಾಂಗನಾರತಿಶ್ಚೇತಿ ಸರ್ವಮಪ್ಯ[೫]ನವಸ್ಥಿತಮ್ ॥ ೫೫ ॥**

ರೂಪ ಆರೋಗ್ಯ ಐಶ್ವರ್ಯ ಇಷ್ಟಬಂಧುಗಳ ಸಮಾಗಮ ಪ್ರಿಯಸ್ತ್ರೀಯರ ರತಿಸುಖಮೊದಲಾದುವೆಲ್ಲವೂ ಅಸ್ಥಿರವಾದುವು".

**ವಿಚಿಂತ್ಯೇತಿ ಚಲಾಂ ಲಕ್ಷ್ಮೀಂ [೬]ಪ್ರಜಿಹಾಸುಃ ಸುಧೀರಸೌ ।**
**ಅಭಿಷಿಚ್ಯ ಸುತಂ ರಾಜ್ಯೇ ವಜ್ರಜಂಘ[೭]ಮತಿಷ್ಠಿಪತ್ ॥ ೫೬ ॥**

ಈ ಪ್ರಕಾರವಾಗಿ ಆಲೋಚಿಸಿ ಚಂಚಲವಾದ ಲಕ್ಷ್ಮಿಯನ್ನು ಬಿಡಬೇಕೆಂದಿಚ್ಛಿಸಿ ಈ ಬುದ್ಧಿಶಾಲಿಯಾದ ರಾಜನು ಮಗನಾದ ವಜ್ರಜಂಘನಿಗೆ ರಾಜ್ಯಾಭಿಷೇಕವನ್ನು ಮಾಡಿ ರಾಜ್ಯದಲ್ಲಿ ಸ್ಥಾಪಿಸಿದನು.

**ಸ ರಾಜ್ಯಭೋಗನಿರ್ವಿಣ್ಣಸ್ತೂರ್ಣಂ ಯಮಧರಾಂತಿಕೇ ।**
**ನೃಪೈಃ ಸಾರ್ಧಂ [೮]ಸಹಸ್ರಾರ್ಧಮಿತೈರ್ದೀಕ್ಷಾಮುಪಾದದೇ ॥ ೫೭ ॥**

ಆ ವಜ್ರಬಾಹುರಾಜನು ರಾಜ್ಯಭೋಗಗಳಲ್ಲಿ ವಿರಕ್ತನಾಗಿ ಶೀಘ್ರವಾಗಿ ಯಮಧರಮುನಿಗಳ ಸಮೀಪದಲ್ಲಿ ಐನೂರುಮಂದಿ ರಾಜರೊಡನೆ ದೀಕ್ಷೆಯನ್ನು ತೆಗೆದುಕೊಂಡನು.

**ಶ್ರೀಮತೀತನಯಾಶ್ಚಾಮೀ ವೀರಬಾಹು[೯]ಪುರೋಗಮಾಃ ।**
**ಸಮಂ ರಾಜರ್ಷಿಣಾನೇನ ತದಾ ಸಂಯಮಿನೋಽಭವನ್ ॥ ೫೮ ॥**

ಆಗ ಶ್ರೀಮತಿಯ ಮಕ್ಕಳಾದ ವೀರಬಾಹು ಮೊದಲಾದವರೂ ರಾಜರ್ಷಿಯಾದ ಈ ವಜ್ರಬಾಹುವಿನೊಡನೆ ದೀಕ್ಷೆಯನ್ನು ತೆಗೆದುಕೊಂಡರು.

**[೧೦]ಯಮ್ಯೈಃ ಸಮ[೧೧]ಮುಪಾರೂಢಶುದ್ಧಿಭಿರ್ವಿಹರನ್ನಸೌ ।**
**ಕ್ರಮಾದುತ್ಪಾದ್ಯ ಕೈವಲ್ಯಂ ಪರಂ ಧಾಮ ಸಮಾಸದತ್ ॥ ೫೯ ॥**

ಈ ವಜ್ರಬಾಹುಮುನಿಯು ಪರಿಶುದ್ಧತೆಯನ್ನು ಹೊಂದಿದ ವ್ರತಗಳೊಡನೆ ವಿಹರಿಸುತ್ತಿದ್ದು ಕಾಲಕ್ರಮದಿಂದ ಕೇವಲಜ್ಞಾನವನ್ನು ಪಡೆದು ಮೋಕ್ಷವನ್ನು ಹೊಂದಿದನು.

**ವಜ್ರಜಂಘಸ್ತತೋ ರಾಜ್ಯಸಂಪದಂ ಪ್ರಾಪ್ಯ [೧೨]ಪೈತೃಕೀಮ್ ।**
**[೧೩]ನಿರವೀಕ್ಷಚ್ಚಿರಂ ಭೋಗಾ[೧೪]ನ್ಸುಕೃತೀರನುರಂಜಯನ್ ॥ ೬೦ ॥**

೧ ಅಭ್ರಮಿವೇತ್ಯರ್ಥಃ. ೨ ವಿಲಯಮೇಷ್ಯತಿ, ಲೃಟ್. ೩ ವ್ಯಭಿಚಾರಿಣ್ಯಃ. ೪ ಅನುಭವನಕಾಲಮಾತ್ರೇ. ೫ ಅಸ್ಥಿರಂ. ೬ ಪ್ರಹಾತುಮಿಚ್ಛುಃ. ೭ ಸ್ಥಾಪಿತವಾನಿತ್ಯರ್ಥಃ. ೮ ಪಂಚಶತಪ್ರಮಿತೈಃ. ೯ ಪ್ರಮುಖಾಃ. ೧೦ ವ್ರತೈಃ. ೧೧ ಧೃತಾಃ. ೧೨ ಪಿತುಃ ಸಕಾಶಾದಾಗತಾಂ. ೧೩ ಅನ್ವಭೂತ್. ೧೪ ಪ್ರಜಾಃ.

ವಜ್ರಜಂಘನು ತಂದೆಯಿಂದ ಪ್ರಾಪ್ತವಾದ ರಾಜ್ಯಸಂಪತ್ತನ್ನು ಹೊಂದಿ ಪ್ರಜೆಗಳನ್ನು ಸಂತೋಷಪಡಿಸುತ್ತ ಬಹುಕಾಲದವರೆಗೆ ಭೋಗಗಳನ್ನನುಭವಿಸಿದನು.

**ಅಥಾನ್ಯದಾ ಮಹಾರಾಜೋ ವಜ್ರದಂತೋ ಮಹರ್ದ್ಧಿಕಃ ।**
**ಸಿಂಹಾಸನೇ ಸುಖಾಸೀನೋ ನರೇಂದ್ರೈಃ ಪರಿವೇಷ್ಟಿತಃ ॥ ೬೧ ॥**

ತರುವಾಯ ಒಂದುದಿನ ಮಹಾಬುದ್ಧಿಸಂಪನ್ನನಾದ ವಜ್ರದಂತಮಹಾರಾಜನು ರಾಜರಿಂದ ಸುತ್ತಲ್ಪಟ್ಟವನಾಗಿ ಸಿಂಹಾಸನದಲ್ಲಿ ಸುಖವಾಗಿ ಕುಳಿತಿದ್ದನು.

**ತದಾಸೀನಸ್ಯ ಚೋದ್ಯಾನಪಾಲೀ ವಿಕಸಿತಂ ನವಮ್ ।**
**ಸುಗಂಧಿಪದ್ಮಮಾನೀಯ ತಸ್ಯ ಹಸ್ತೇ ದದೌ ಮುದಾ ॥ ೬೨ ॥**

ಆಗ ಒಬ್ಬ ವನಪಾಲಕನು ಅರಳಿದ ಸುಗಂಧವಾದ ಹೊಸಕಮಲವನ್ನು ತಂದು ಸಿಂಹಾಸನದಲ್ಲಿ ಕುಳಿತಿದ್ದ ಆ ವಜ್ರದಂತಚಕ್ರವರ್ತಿಯ ಕೈಯಲ್ಲಿ ಸಂತೋಷದಿಂದ ಕೊಟ್ಟನು.

**[೧]ಪಾಣೌಕೃತ್ಯ ತದಾ ಜಿಘ್ರನ್ಸ್ವಾನನಾಮೋದಸುಂದರಮ್ ।**
**ಸಂಪ್ರೀತಃ ಕರಪದ್ಮೇನ ಸ ವಿಭ್ರಮಮಬಿಭ್ರಮತ್ ॥ ೬೩ ॥**

ಆ ಚಕ್ರವರ್ತಿಯು ತನ್ನ ಮುಖದಂತೆ ಸುಗಂಧವುಳ್ಳುದೂ ಸುಂದರವೂ ಆದ ಆ ಕಮಲವನ್ನು ಕೈಯಲ್ಲಿ ತೆಗೆದುಕೊಂಡು ಮೂಸಿ ನೋಡಿ ಬಹಳ ಸಂತುಷ್ಟನಾಗಿ ತನ್ನ ಕಮಲದಂತಿರುವ ಕೈಯಿಂದ ಆ ಕಮಲವನ್ನು ತಿರುಗಿಸಿದನು.

**ತದ್ಗಂಧಲೋಲುಪಂ ತತ್ರ ರುದ್ಧಂ ಲೋಕಾಂತರಾಶ್ರಿತಮ್ ।**
**ದೃಷ್ಟ್ವಾಲಿಂ ವಿಷಯಾ[೨]ಸಂಗಾ[೩]ದ್ವಿರರಾಮ ಸುಧೀರಸೌ ॥ ೬೪ ॥**

ಆ ಕಮಲದ ಪರಿಮಳಕ್ಕೆ ಆಸೆಪಟ್ಟು ಅದರಲ್ಲಿ ಸಿಕ್ಕಿಕೊಂಡು ಮೃತವಾಗಿದ್ದ ಒಂದು ಭ್ರಮರವನ್ನು ನೋಡಿ ಈ ಬುದ್ಧಿಶಾಲಿಯಾದ ವಜ್ರದಂತಚಕ್ರವರ್ತಿಯು ವಿಷಯಾಸಕ್ತಿಯಿಂದ ವಿರಕ್ತನಾದನು.

**ಅಹೋ ಮದಾಲಿರೇಷೋತ್ರ ಗಂಧಾ[೪]ಕೃಷ್ಟೋ ರಸಂ ಪಿಬನ್ ।**
**ದಿನಾಪಾಯೇ ನಿರುದ್ಧೋಭೂ[೫]ದ್ವ್ಯಸುರ್ಧಿಗ್ವಿಷಯೈಷಿತಾಮ್ ॥ ೬೫ ॥**

"ಅಹೋ! ಮದಿಸಿದ ಈ ಭ್ರಮರವು ಪರಿಮಳಕ್ಕೆ ಆಸಕ್ತವಾಗಿ ರಸವನ್ನು ಕುಡಿಯುತ್ತಿದ್ದಾಗ ಸೂರ್ಯಾಸ್ತಮಾನವಾಗಲು ಈ ಕಮಲದಲ್ಲಿ ಸಿಕ್ಕಿಕೊಂಡು ಪ್ರಾಣಗಳನ್ನು ಕಳೆದುಕೊಂಡಿತು. ಈ ವಿಷಯಾಭಿಲಾಷೆಗೆ ಧಿಕ್ಕಾರವಿರಲಿ.

**ವಿಷಯಾ ವಿಷಮಾಃ ಪಾಕೇ [೬]ಕಿಂಪಾಕಸದೃಶಾ ಇಮೇ ।**
**ಆಪಾತರಮ್ಯಾ ಧಿಗಿಮಾನನಿಷ್ಟಫಲದಾಯಿನಃ ॥ ೬೬ ॥**

ಈ ವಿಷಮವಾದ ಭೋಗೋಪಭೋಗವಿಷಯಗಳು ಸೇವಿಸುವ ಕಾಲದಲ್ಲಿ ರಮಣೀಯಗಳೂ ಪರ್ಯವಸಾನದಲ್ಲಿ ಪ್ರಾಣಾಪಹಾರಿಗಳೂ ಆದ ವಿಷವೃಕ್ಷದ ಫಲಗಳಿಗೆ ಸಮಾನಗಳಾಗಿವೆ. ಅನಿಷ್ಟಫಲಗಳನ್ನು ಕೊಡುವ ಈ ವಿಷಯಗಳಿಗೆ ಧಿಕ್ಕಾರವಿರಲಿ.

**ಅಹೋ ಧಿಗಸ್ತು ಭೋಗಾಂಗಮಿದಮಂಗಂ ಶರೀರಿಣಾಮ್ ।**
**ವಿಲೀಯತೇ [೭]ಶರನ್ಮೇಘವಿಲಾಯಮತಿ[೮]ಪೇಲವಮ್ ॥ ೬೭ ॥**

ಅಹೋ! ಪ್ರಾಣಿಗಳ ವಿಷಯಸುಖಾನುಭವಕ್ಕೆ ಕಾರಣವಾದ ಈ ಶರೀರಕ್ಕೆ ಧಿಕ್ಕಾರವಿರಲಿ, ಏತಕ್ಕಂದರೆ:— ಈ ಶರೀರವು ಅತ್ಯಂತ ಚಂಚಲ ಅಥವಾ ಸುಂದರವಾದ ಶರತ್ಕಾಲದ ಮೇಘದಂತೆ ನಾಶವಾಗಿ ಹೋಗುತ್ತದೆ.

೧ ಸ್ವೀಕೃತ್ಯೇತ್ಯರ್ಥಃ. ೨ ಆಸಕ್ತೇಃ. ೩ ವಿರಕ್ತೋ ಬಭೂವೇತ್ಯರ್ಥಃ. ೪ ಆಸಕ್ತಃ. ೫ ಗತಪ್ರಾಣಃ. ೬ ವಿಷವೃಕ್ಷಸದೃಶಾಃ. ೭ ಶರನ್ಮೇಘಸದೃಶಂ. ೮ ಚಂಚಲಂ ಸುಂದರಂ ವಾ.

**ತಟಿದುನ್ಮಿಷಿತಾಲೋಲಾ ಲಕ್ಷ್ಮೀ[೧]ರಾಕಾಲಿಕಂ ಸುಖಮ್ ।**
**ಇಮಾಃ ಸ್ವಪ್ನರ್ದ್ಧಿ[೨]ದೇಶೀಯಾ ವಿನಶ್ವರ್ಯೋ ಧನರ್ದ್ಧಯಃ ॥ ೬೮ ॥**

ಈ ಲಕ್ಷ್ಮಿಯು ಮಿಂಚಿನ ಹೊಳಪಿನಂತೆ ಚಂಚಲವಾದುದು. ಸಂಸಾರಸುಖವು ಕ್ಷಣನಶ್ವರವಾದುದು. ಈ ಧನಕನಕ ಮೊದಲಾದ ಸಂಪತ್ತುಗಳು ಕನಸಿನಲ್ಲಿ ಕಂಡ ವೈಭವಗಳಂತೆ ನಾಶವನ್ನು ಹೊಂದುವುವುಗಳಾಗಿವೆ.

**ಭೋಗಾನ್ಯೋ [೩]ಗಾಢುಮೀಹಂತೇ ಕಥಮೇತಾನ್ಮನಸ್ವಿನಃ ।**
**ಯೇ[೪]ವಿಲೋಭಯಿತುಂ ಜಂತೂನಾಯಾಂತಿ ಚ [೫]ವಿಯಂತಿ ಚ ॥**

ಎಲೈ ಬುದ್ಧಿಶಾಲಿಗಳೇ! ಯಾವ ಭೋಗಗಳು ಪ್ರಾಣಿಗಳನ್ನು ವಂಚಿಸುವುದಕ್ಕೋಸ್ಕರ ಬಂದು ನಾಶವಾಗುತ್ತವೆಯೋ ಅಂತಹ ಭೋಗಗಳನ್ನು ಹೊಂದುವುದಕ್ಕೋಸ್ಕರ ವಿವೇಕಿಗಳು ಹೇಗೆ ಇಚ್ಛೆಪಡುತ್ತಾರೆ ?

**ವಪುರಾರೋಗ್ಯಮೈಶ್ವರ್ಯಂ ಯೌವನಂ ಸುಖಸಂಪದಃ ।**
**ವಸ್ತುವಾಹನಮನ್ಯಚ್ಚ ಸುರಚಾಪವದಸ್ಥಿರಮ್ ॥ ೭೦ ॥**

ಶರೀರ ಆರೋಗ್ಯ ಐಶ್ವರ್ಯ ಯೌವನ ಸುಖಸಂಪತ್ತು ವಸ್ತು ವಾಹನ ಮೊದಲಾದುದೆಲ್ಲವೂ ಇಂದ್ರಧನುಸ್ಸಿನಂತೆ ಅಸ್ಥಿರವಾದುದು.

**ತೃಣಾಗ್ರಲಗ್ನವಾರ್ಬಿಂದುರ್ವಿನಿಪಾತೋನ್ಮುಖೋ ಯಥಾ ।**
**ತಥಾ ಪ್ರಾಣಭೃತಾಮಾಯುರ್ವಿಲಾಸೋ ವಿನಿಪಾತುಕಃ ॥ ೭೧ ॥**

ಹುಲ್ಲಿನ ತುದಿಯಲ್ಲಿರುವ ನೀರಿನ ಬಿಂದುವು ಬಿದ್ದು ಹೋಗುವುದಕ್ಕೆ ಸಿದ್ಧವಾಗಿರುವಂತೆ ಪ್ರಾಣಿಗಳ ಆಯುಷ್ಯದ ಲೀಲೆಯೂ ಪತನವಾಗುವುದಾಗಿದೆ.

**ಅಗ್ರೇಸರೀ ಜರಾತಂಕಾಃ [೬]ಪಾರ್ಷ್ಣಿಗ್ರಾಹಾ[೭]ಸ್ತರಸ್ವಿನಃ ।**
**ಕಷಾಯಾಟವಿಕೈಃ ಸಾರ್ದ್ಧಂ ಯಮರಾ[೮]ಡ್ಡಮರೋದ್ಯಮೀ ॥ ೭೨ ॥**

ವೃದ್ಧಾವಸ್ಥೆಯು ಮುಂದೆ ಹೋಗುತ್ತಿದೆ. ವೇಗವುಳ್ಳ ವ್ಯಾಧಿಗಳು ಬೆನ್ನುಹತ್ತಿಬರುತ್ತವೆ. ಯಮರಾಜನು ಕ್ರೋಧಾದಿ ಕಷಾಯಗಳೆಂಬ ವ್ಯಾಧರೊಡನೆ ಯುದ್ಧಸನ್ನದ್ಧನಾಗಿದ್ದಾನೆ.

**ಅಕ್ಷಗ್ರಾಮಂ ದಹಂತ್ಯೇತೇ [೯]ಸಂತರ್ಷವಿಷಮಾ[೧೦]ರ್ಚಿಷಃ ।**
**ವಿಷಯಾ ವಿಷಮೋತ್ಥಾನವೇದನಾ [೧೧]ಲೂಷಯಂತ್ಯಸೂನ್ ॥ ೭೩ ॥**

ಈ ಆಸೆಗಳೆಂಬ ವಿಷಮವಾದ ಅಗ್ನಿಗಳು ಇಂದ್ರಿಯಸಮೂಹವನ್ನು ಸುಡುತ್ತವೆ. ಅಧಿಕವಾಗಿ ವೇದನೆಯನ್ನುಂಟುಮಾಡುವ ಭೋಗೋಪಭೋಗವಿಷಯಗಳು ಪ್ರಾಣಗಳನ್ನು ಅಪಹರಿಸುತ್ತವೆ.

**ಪ್ರಾಣಿನಾಂ ಸುಖಮಲ್ಪೀಯೋ ಭೂಯಿಷ್ಠಂ ದುಃಖಮೇವ ತು ।**
**ಸಂಸೃತೌ [೧೨]ತದಿಹಾ[೧೩]ಶ್ವಾಸಃ ಕಸ್ಯಃ ಕೌತಸ್ಕುತೋಥವಾ ॥ ೭೪ ॥**

ಸಂಸಾರದಲ್ಲಿ ಪ್ರಾಣಿಗಳಿಗೆ ಸುಖವು ಅಲ್ಪವಾಗಿದೆ. ದುಃಖವು ಅಧಿಕವಾಗಿದೆ. ಆದುದರಿಂದ ಈ ಸಂಸಾರದಲ್ಲಿ ಪ್ರೀತಿಕರವಾದುದು ಆವಾವುದು ? ಅಥವಾ ಪ್ರೀತಿಯು ಆವಾವುದರಿಂದುಂಟಾಗುವುದು ?

**ತನುಮಾನ್ವಿಷಯಾನೀಪ್ಸನ್ ಕ್ಲೇಶೈಃ ಪ್ರಾಗೇವ ತಾಮ್ಯತಿ ।**
**ಭುಂಜಾನಸ್ತೃಪ್ತ್ಯಯೋಗೇನ ವಿಯೋಗೇ[೧೪]ನುಶಯಾನಕಃ ॥ ೭೫ ॥**

ಭೋಗವಿಷಯಗಳನ್ನಿಚ್ಛಿಸುವ ಪ್ರಾಣಿಯು ಮೊದಲೇ ಕ್ಲೇಶಗಳಿಂದ ದುಃಖಪಡುತ್ತದೆ. ಆ ವಿಷಯಗಳನ್ನು ಅನುಭವಿಸಿದಷ್ಟೂ ತೃಪ್ತಿಪಡುವುದಿಲ್ಲ. ಆ ವಿಷಯಗಳು ತೊಲಗಿ ಹೋದರೆ ಈ ಪ್ರಾಣಿಯು ಪಶ್ಚಾತ್ತಾಪಪಡುತ್ತದೆ.

೧ ಕ್ಷಣಧ್ವಂಸೀತ್ಯರ್ಥಃ. ೨ ಸಮಾನಾಃ. ೩ ಪ್ರವೇಷ್ಟುಂ ಪ್ರಾಪ್ತುಮಿತ್ಯರ್ಥಃ. ೪ ವಂಚಯಿತುಂ. ೫ ನಶ್ಯಂತಿ. ೬ ಪೃಷ್ಠವರ್ತಿನಃ. ೭ ವೇಗಿನಃ. ೮ ಯುದ್ಧಸನ್ನದ್ಧಃ. ೯ ತೃಷ್ಣಾ. ೧೦ ಅಗ್ನಯಃ. ೧೧ ಅಪಹರಂತಿ ಲೂಷಸ್ತೇಯೇ ಚುರಾದಿಃ. ೧೨ ತಸ್ಮಾತ್ಕಾರಣಾತ್. ೧೩ ಆಪ್ಯಾಯನಂ. ೧೪ ಪಶ್ಚಾತ್ತಾಪವಾನ್.

ಯದದ್ಯಾಢ್ಯತರಂ ತೃಪ್ತಂ ಶ್ವಸ್ತದಾಢ್ಯಚರಂ ಭವೇತ್ ।
ಯಚ್ಚಾದ್ಯವ್ಯಸನೈರ್ಭುಕ್ತಂ ತತ್ಕುಲಂ [1]ಶ್ವೋವಸೀಯಸಮ್ ॥ ೭೬ ॥

ಇಂದು ಯಾವ ಕುಲವು ಐಶ್ವರ್ಯಸಂಪನ್ನವಾಗಿ ತೃಪ್ತಿಯನ್ನು ಹೊಂದಿದೆಯೋ ಅದೇ ಕುಲವು ನಾಳೆ ದರಿದ್ರವಾಗಿ ಆಗುವುದು. ಈ ದಿನ ಯಾವ ಕುಲವು ವ್ಯಸನಗಳಿಂದ ಕೂಡಿದೆಯೋ ಅದೇ ಕುಲವು ನಾಳೆ ಮಾಂಗಲ್ಯಯುಕ್ತವಾಗಿ ಆಗುವುದು. ಸುಖದುಃಖಗಳು ಶಾಶ್ವತವಾದುವಲ್ಲವೆಂದು ಭಾವವು.

ಸುಖಂ ದುಃಖಾನುಬಂಧೀದಂ ಸದಾ ಸನಿಧನಂ ಧನಮ್ ।
ಸಂಯೋಗಾ ವಿಪ್ರಯೋಗಾಂತಾ ವಿಪದಂತಾಶ್ಚ ಸಂಪದಃ ॥ ೭೭ ॥

ಈ ಸಂಸಾರಸುಖವು ದುಃಖವನ್ನುಂಟುಮಾಡುವುದಾಗಿದೆ. ಈ ಧನವು ಸದಾ ನಾಶವನ್ನು ಹೊಂದುವುದಾಗಿದೆ. ಇಷ್ಟಪದಾರ್ಥಗಳ ಸಂಯೋಗಗಳು ವಿಯೋಗ ಸಹಿತವಾದುವು. ಸಂಪತ್ತುಗಳು ಬಂದಮೇಲೆ ವಿಪತ್ತುಗಳು ಅವಶ್ಯವಾಗಿ ಬರುತ್ತವೆ''.

ಇತ್ಯಶಾಶ್ವತಿಕಂ ವಿಶ್ವಂ ಜೀವಲೋಕಂ ವಿಲೋಕಯನ್ ।
ವಿಷಯಾನ್ವಿಷವನ್ಮೇನೇ ಪರ್ಯಂತವಿರಸಾನಸೌ ॥ ೭೮ ॥

ಈ ಪ್ರಕಾರವಾಗಿ ವಿಚಾರಮಾಡಿ ಈ ಜಗತ್ತೆಲ್ಲಾ ಅನಿತ್ಯವಾದುದೆಂದು ತಿಳಿದು ಪರ್ಯವಸಾನದಲ್ಲಿ ನೀರಸಗಳಾದ ಭೋಗೋಪಭೋಗವಿಷಯಗಳನ್ನು ಈ ಚಕ್ರವರ್ತಿಯು ವಿಷಕ್ಕೆ ಸಮಾನಗಳನ್ನಾಗಿ ತಿಳಿದನು.

ಇತಿ ನಿರ್ವಿದ್ಯ ಭೋಗೇಷು ಸಾಮ್ರಾಜ್ಯಭರಮಾತ್ಮನಃ ।
ಸೂನವೇಮಿತತೇಜೋಭಿಧಾನಾಯ ಸ್ಮ [2]ಪ್ರದಿತ್ಸತಿ ॥ ೭೯ ॥

ಹೀಗೆ ಆ ವಜ್ರದಂತಚಕ್ರವರ್ತಿಯು ಭೋಗಗಳಲ್ಲಿ ವೈರಾಗ್ಯವನ್ನು ಹೊಂದಿ ತನ್ನ ರಾಜ್ಯಭಾರವನ್ನು ಮಗನಾದ ಅಮಿತತೇಜನಿಗೆ ಕೊಡಬೇಕೆಂದಿಚ್ಛಿಸಿದನು.

ಪ್ರದಿತ್ಸತಾಮುನಾ ರಾಜ್ಯಂ ಭೂಯೋ ಭೂಯೋನುಬಧ್ನತಾ ।
ಸಮಾದಿತ್ಸೋಪ್ಯಸೌ ನೈಚ್ಛತ್ಸಾನುಜೋ ರಾಜ್ಯಸಂಪದಮ್ ॥ ೮೦ ॥

ತನ್ನ ಮಗನಿಗೆ ರಾಜ್ಯವನ್ನು ಕೊಡಬೇಕೆಂದಿಚ್ಛಿಸಿದ ಈ ಚಕ್ರವರ್ತಿಯು ರಾಜ್ಯವನ್ನು ತೆಗೆದುಕೊಳ್ಳಬೇಕೆಂದು ಅಮಿತತೇಜನನ್ನೂ ಆತನ ತಮ್ಮಂದಿರನ್ನೂ ಬಾರಿಬಾರಿಗೂ ನಿರ್ಬಂಧಪಡಿಸಿ ಅಪ್ಪಣೆಮಾಡಿದರೂ ಅವರು ಆ ರಾಜ್ಯಸಂಪತ್ತನ್ನು ಇಚ್ಛಿಸಲಿಲ್ಲ.

ಸ ದೇವ ಯದಿದಂ ರಾಜ್ಯಂ ಯುಷ್ಮಾಭಿಃ ಪ್ರಜಿಹಾಸಿತಮ್ ।
ನೇಚ್ಛಾಮ್ಯಲ[3]ಮನೇನಾರ್ಯ ಮಾಭೂದಾಜ್ಞಾ[4]ಪ್ರತೀಪತಾ ॥ ೮೧ ॥

ಅಮಿತತೇಜನು ''ಎಲೈ ಸ್ವಾಮಿಯೇ ! ನೀವು ಈ ರಾಜ್ಯವನ್ನು ಬಿಡಬೇಕೆಂದು ಯಾವ ಕಾರಣದಿಂದ ಇಚ್ಛಿಸಿದಿರೋ ನಾನೂ ಅದೇ ಕಾರಣದಿಂದ ರಾಜ್ಯವನ್ನು ಇಚ್ಛಿಸುವುದಿಲ್ಲ. ಈ ರಾಜ್ಯವು ಸಾಕು. ಪೂಜ್ಯರೇ ! ಹೀಗೆ ನಾನು ಇಚ್ಛಿಸದಿದ್ದುದರಿಂದ ತಮ್ಮ ಆಜ್ಞಾಭಂಗವಾಯಿತೆಂದು ತಿಳಿಯಬಾರದು.

ಯುಷ್ಮಾಭಿಃ ಸಮಮೇವಾಹಂ ಪ್ರಯಾಸ್ಯಾಮಿ ತಪೋವನಮ್ ।
ಯೌಷ್ಮಾಕೀಯಾ ಗತಿಃ ಸೈವ ಮಮಾಪೀತ್ಯಭಣೀದ್ಗಿರಮ್ ॥ ೮೨ ॥

ತಮ್ಮೊಡನೆಯೇ ನಾನು ತಪೋವನವನ್ನು ಹೊಂದುವೆನು. ನಿಮ್ಮ ಗತಿಯೇ ನನಗೂ ಆಗಲಿ'' ಯೆಂದು ಹೇಳಿದನು.

೧ ನಿಪಾತೋಯಂ ಮಾಂಗಲ್ಯಯುಕ್ತಮಿತ್ಯರ್ಥಃ. ೨ ಪ್ರದಾತುಮಿಚ್ಛತಿ. ೩ ಅನಿಚ್ಛಕತ್ವೇನ. ೪ ಪ್ರತಿಕೂಲತಾ.

ತತ[1]ಸ್ತನ್ನಿಶ್ಚಯಂ ಜ್ಞಾತ್ವಾ ರಾಜ್ಯಂ ತತ್ಸೂನವೇ ದದೌ ।
ಪುಂಡರೀಕಾಯ ಬಾಲಾಯ ಸಂತಾನಸ್ಥಿತಿಪಾಲಿನೇ ॥ ೮೩ ॥

ತರುವಾಯ ಚಕ್ರವರ್ತಿಯು ಅಮಿತತೇಜನ ದೃಢನಿಶ್ಚಯವನ್ನು ತಿಳಿದು ತನ್ನ ವಂಶಸ್ಥಿತಿಯನ್ನು ಪರಿಪಾಲಿಸುವ ಅಮಿತತೇಜನ ಪುತ್ರನಾದ ಪುಂಡರೀಕನೆಂಬ ಬಾಲಕನಿಗೆ ರಾಜ್ಯವನ್ನು ಕೊಟ್ಟನು.

ಸ ಯಶೋಧರಯೋಗೀಂದ್ರಶಿಷ್ಯಂ ಗುಣಧರಂ ಶ್ರಿತಃ ।
ಸಪುತ್ರದಾರೋ ರಾಜರ್ಷಿರದೀಕ್ಷಿಷ್ಟ ನೃಪೈಃ ಸಮಮ್ ॥ ೮೪ ॥

ತರುವಾಯ ಆ ರಾಜರ್ಷಿಯಾದ ವಜ್ರದಂತಚಕ್ರವರ್ತಿಯು ಯಶೋಧರ ಮುನಿಗಳ ಶಿಷ್ಯರಾದ ಗುಣಧರಮುನಿಗಳ ಬಳಿಗೆ ಹೋಗಿ ಪತ್ನೀಪುತ್ರಸಮೇತನಾಗಿ ರಾಜರೊಡನೆ ದೀಕ್ಷೆಯನ್ನು ತೆಗೆದುಕೊಂಡನು.

ದೇವ್ಯಃ ಷಷ್ಟಿಸಹಸ್ರಾಣಿ [2]ತತ್ಸ್ಯಂಶಪ್ರಮಿತಾ ನೃಪಾಃ ।
ಪ್ರಭುಂ ತಮನ್ವದೀಕ್ಷಂತ ಸಹಸ್ರಂ ಚ ಸುತೋತ್ತಮಾಃ ॥ ೮೫ ॥

ಆ ಚಕ್ರವರ್ತಿಯ ಜೊತೆಯಲ್ಲಿ ಅರುವತ್ತುಸಾವಿರ ಸ್ತ್ರೀ(ಪತ್ನಿ)ಯರೂ ಇಪ್ಪತ್ತುಸಾವಿರ ರಾಜರೂ ಒಂದುಸಾವಿರ ಆತನ ಮಕ್ಕಳೂ ದೀಕ್ಷೆಯನ್ನು ತೆಗೆದುಕೊಂಡರು.

ಪಂಡಿತಾಪಿ ತದಾತ್ಮಾನುರೂಪಾಂ ದೀಕ್ಷಾಂ ಸಮಾದದೇ ।
ತದೇವ ನನು ಪಾಂಡಿತ್ಯಂ ಯತ್ಸಂಸಾರಾತ್ಸಮುದ್ಧರೇತ್ ॥ ೮೬ ॥

ಆಗ ಪಂಡಿತೆಯೂ ಅವಳಿಗೆ ಯೋಗ್ಯವಾದ ದೀಕ್ಷೆಯನ್ನು ತೆಗೆದುಕೊಂಡಳು. ಸಂಸಾರದಿಂದ ಯಾವುದು ತನ್ನನ್ನು ಉದ್ಧರಿಸುವುದೋ ಅದಲ್ಲವೆ ಪಾಂಡಿತ್ಯವು ?

ತತಶ್ಚಕ್ರಧರಾಪಾಯಾಲ್ಲಕ್ಷ್ಮೀಮತಿರಗಾಚ್ಛುಚಮ್ ।
ಅನುಂದರ್ಯಾ ಸಹೋಷ್ಣಾಂಶುವಿಯೋಗಾನ್ನಲಿನೀ ಯಥಾ ॥ ೮೭ ॥

ತರುವಾಯ, ಸೂರ್ಯನ ವಿಯೋಗದಿಂದ ಕಮಲಲತೆಯು ಬಾಡುವಂತೆ, ಚಕ್ರವರ್ತಿಯ ವಿಯೋಗದಿಂದ ಲಕ್ಷ್ಮೀಮತಿಯೂ ಅಮಿತತೇಜನ ವಿಯೋಗದಿಂದ ಅನುಂದರಿಯೂ ಶೋಕಪಟ್ಟರು.

ಪುಂಡರೀಕಮಥಾದಾಯ ಬಾಲಂ ಮಂತ್ರಿ[3]ಪುರಸ್ಕೃತಮ್ ।
[4]ತೇ [5]ಪ್ರವಿಷ್ಟೇ ಪುರೀಂ ಶೋಕಾದ್ವಿಚ್ಛಾಯತ್ವಮುಪಾಗತಾಮ್ ॥ ೮೮ ॥

ಅನಂತರ ಮಂತ್ರಿಯು ಮುಂದೆಮಾಡಿ ಕರೆದುಕೊಂಡು ಬರುತ್ತಿರುವ ಪುಂಡರೀಕನೆಂಬ ಬಾಲಕನನ್ನು ತೆಗೆದುಕೊಂಡು ಅನುಂದರೀಲಕ್ಷ್ಮೀಮತಿಯರು ಶೋಕದಿಂದ ಶೋಭಾರಹಿತವಾದ ಆ ಪಟ್ಟಣಕ್ಕೆ ಪ್ರವೇಶಮಾಡಿದರು.

ತತೋಭೂನ್ಮಹತೀ ಚಿಂತಾ ಲಕ್ಷ್ಮೀಮತ್ಯಾ ಮಹಾಭರೇ ।
ರಾಜ್ಯೇ ಬಾಲೋಯ[6]ಮವ್ಯಕ್ತಃ ಸ್ಥಾಪಿತೋ [7]ನಪ್ತೃಭಾಂಡಕಮ್ ॥

ಆಮೇಲೆ ಲಕ್ಷ್ಮೀಮತಿಗೆ ಬಹಳ ಚಿಂತೆಯುಂಟಾಗಿ ''ಈ ದೊಡ್ಡರಾಜ್ಯಭಾರದಲ್ಲಿ ಮೊಮ್ಮಗನೇ ಮೂಲಧನವಾಗಿರುವ ಈ ಅಶಕ್ತನಾದ ಬಾಲಕನು ಸ್ಥಾಪಿಸಲ್ಪಟ್ಟಿರುತ್ತಾನೆ. ಆ ಬಾಲಕನಿಂದಲೇ ಮುಂದೆ ವಂಶವೃದ್ಧಿಯಾಗಬೇಕಾಗಿದ್ದುದರಿಂದ ಅವನು ವ್ಯಾಪಾರದಲ್ಲಿ ಮೂಲಧನದಂತೆ ಇದ್ದನೆಂದು ಭಾವವು.

ಕಥಂ ನು ಪಾಲಯಾಮ್ಯೇನಂ ವಿನಾ [8]ಪಕ್ಷಬಲಾದಹಮ್ ।
ವಜ್ರಜಂಘಸ್ಯ ತ[9]ನ್ಮೂಲಂ ಪ್ರಹಿಣೋಮ್ಯದ್ಯ ಧೀಮತಃ ॥ ೯೦ ॥

೧ ಅಮಿತತೇಜಸಃ. ೨ ವಿಂಶತಿಸಹಸ್ರಂ. ೩ ಅಗ್ರೇಕೃತಂ. ೪ ಲಕ್ಷ್ಮೀಮತ್ಯನುಂದರ್ಯೌ. ೫ ಪ್ರವಿಶತುಃ. ೬ ಅಶಕ್ತ ಇತ್ಯರ್ಥಃ. ೭ ಪೌತ್ರ ಏವ ಮೂಲಧನಂ. ೮ ಸಹಾಯಬಲಾತ್. ೯ ಕಾರಣಂ.

ಬೇರೆಯವರ ಸಹಾಯವಿಲ್ಲದೆ ಈ ಬಾಲಕನನ್ನು ನಾನು ಹೇಗೆ ಕಾಪಾಡಲಿ? ಆದುದರಿಂದ ಬುದ್ಧಿಶಾಲಿಯಾದ ವಜ್ರಜಂಘನಿಗೆ ಈಗ ಪತ್ರವನ್ನು ಕಳುಹಿಸುತ್ತೇನೆ.

**ತೇನಾಧಿಷ್ಠಿತಮ[೧]ಸ್ಯೇದಂ ರಾಜ್ಯಂ ನಿಷ್ಕಂಟಕೀಭವೇತ್ ।**
**ಅನ್ಯಥಾ [೨]ಗತಮೇವೈತದಾಕ್ರಾಂತಂ ಬಲಿಭಿರ್ನೃಪೈಃ ॥ ೯೧ ॥**

ಆ ವಜ್ರಜಂಘನು ಇದರ ವ್ಯವಸ್ಥೆಯನ್ನು ಮಾಡಿದರೆ ಈ ಬಾಲಕನ ರಾಜ್ಯವು ನಿಷ್ಕಂಟಕವಾಗಿಯಾಗುವುದು. ಇಲ್ಲವಾದರೆ ಬಲಿಷ್ಠರಾದ ರಾಜರಿಂದ ಈ ರಾಜ್ಯವು ಆಕ್ರಾಂತವಾಗಿ ನಷ್ಟವೇ ಆಗುವುದು''.

**ನಿಶ್ಚಿತ್ಯೇತಿ ಸಮಾಹೂಯ ಸುತೌ ಮಂದರಮಾಲಿನಃ ।**
**ಸುಂದರ್ಯಾಶ್ಚ [೩]ಖಗಾಧೀಶೋ ಗಂಧರ್ವಪುರಪಾಲಿನಃ ॥ ೯೨ ॥**

**ಚಿಂತಾಮನೋಗತೀ ಸ್ನಿಗ್ಧೌ ಶುಚೀ ದಕ್ಷೌ ಮಹಾನ್ವಯೌ ।**
**[೪]ಅನುರಕ್ತೌ ಶ್ರುತಾಶೇಷಶಾಸ್ತ್ರಾರ್ಥೌ ಕಾರ್ಯಕೋವಿದೌ ॥ ೯೩ ॥**

**ಕರಂಡಸ್ಥಿತತತ್ಕಾರ್ಯಪತ್ರೌ ಸೋಪಾಯನೌ ತದಾ ।**
**ಪ್ರಾಹಿಣೋದ್ವಜ್ರಜಂಘಸ್ಯ ಪಾರ್ಶ್ವಂ ಸಂದೇಶಪೂರ್ವಕಮ್ ॥ ೯೪ ॥**

ಈ ಪ್ರಕಾರವಾಗಿ ನಿಶ್ಚಯಿಸಿ ಲಕ್ಷ್ಮೀಮತಿಯು ಗಂಧರ್ವಪುರವನ್ನು ಪರಿಪಾಲಿಸುತ್ತಿದ್ದ ಮಂದರಮಾಲಿಯೆಂಬ ವಿದ್ಯಾಧರರಾಜನ ಮತ್ತು ಆತನ ಪತ್ನಿಯಾದ ಸುಂದರಿಯ ಪುತ್ರರೂ ಪರಸ್ಪರಪ್ರೇಮವುಳ್ಳವರೂ ಪರಿಶುದ್ಧರೂ ಸಮರ್ಥರೂ ದೊಡ್ಡವಂಶಿಕರೂ ಸ್ವಾಮಿಭಕ್ತರೂ ಸಮಸ್ತಶಾಸ್ತ್ರಾರ್ಥಗಳನ್ನು ತಿಳಿದವರೂ ಕಾರ್ಯದಲ್ಲಿ ಚತುರರೂ ಆದ ಚಿಂತಾಗತಿಮನೋಗತಿಯೆಂಬಿಬ್ಬರನ್ನು ಕರೆದು ಕರಡಿಗೆಯಲ್ಲಿ ಒಂದು ಪತ್ರವನ್ನು ಹಾಕಿ ಕೈಗಾಣಿಗೆಗಳನ್ನೂ ಕೊಟ್ಟು ವಜ್ರಜಂಘನ ಬಳಿಗೆ ಹೇಳಿ ಕಳುಹಿಸಿದಳು.

**ಚಕ್ರವರ್ತೀ ವನಂ ಯಾತಃ ಸಪುತ್ರಪರಿವಾರಕಃ ।**
**ಪುಂಡರೀಕಸ್ತು ರಾಜ್ಯೇಽಸ್ಮಿನ್ಪುಂಡರೀಕಾನನಃ ಸ್ಥಿತಃ ॥ ೯೫ ॥**

''ಚಕ್ರವರ್ತಿಯು ಪುತ್ರಪರಿವಾರಸಹಿತನಾಗಿ ವನಕ್ಕೆ ಹೋದನು. ಕಮಲದಂತೆ ಮುಖವುಳ್ಳ ಪುಂಡರೀಕನು ರಾಜ್ಯದಲ್ಲಿರುತ್ತಾನೆ.

**ಕ್ವ ಚಕ್ರವರ್ತಿನೋ ರಾಜ್ಯಂ ಕ್ವಾಯಂ ಬಾಲೋಽತಿದುರ್ಬಲಃ ।**
**[೫]ತದಯಂ ಪುಂಗವೈರ್ಧಾರ್ಯೇ ಭಾರೇ [೬]ದಮ್ಯೋ ನಿಯೋಜಿತಃ ॥**

ಚಕ್ರವರ್ತಿಯ ರಾಜ್ಯವೆಲ್ಲಿ? ಅತ್ಯಂತದುರ್ಬಲನಾದ ಈ ಬಾಲಕನೆಲ್ಲಿ? ಆದುದರಿಂದ ದೊಡ್ಡ ಹೋರಿಗಳಿಂದ ಧರಿಸುವುದಕ್ಕೆ ಯೋಗ್ಯವಾದ ಭಾರವನ್ನು ಸಣ್ಣ ಹೋರಿ ಕರುವಿನ ಮೇಲೆ ಇರಿಸಿದಂತೆ ಈ ಬಾಲಕನು ರಾಜ್ಯಭಾರದಲ್ಲಿ ನಿಯಮಿಸಲ್ಪಟ್ಟಿರುತ್ತಾನೆ.

**ಬಾಲೋಽಯ[೭]ಮಬಲೇ ಚಾವಾಂ ರಾಜ್ಯಂ ಚೇದಮನಾಯಕಮ್ ।**
**[೮]ವಿಶೀರ್ಣಪ್ರಾಯಮೇತಸ್ಯ ಪಾಲನಂ ತ್ವಯಿ [೯]ತಿಷ್ಠತೇ ॥ ೯೭ ॥**

ಈ ಪುಂಡರೀಕನು ಚಿಕ್ಕಬಾಲಕನಾಗಿದ್ದಾನೆ. ನಾವಿಬ್ಬರೂ ಹೆಂಗಸರು. ಈ ರಾಜ್ಯವಾದರೋ ಅನಾಯಕವಾಗಿ ಜೀರ್ಣಪ್ರಾಯವಾಗಿದೆ. ಈ ರಾಜ್ಯವನ್ನು ಪರಿಪಾಲನೆಮಾಡುವ ಭಾರವು ನಿನ್ನಲ್ಲಿದೆ.

**[೧೦]ಅಕಾಲಹರಣಂ ತಸ್ಮಾದಾಗಂತವ್ಯಂ ಮಹಾಧಿಯಾ ।**
**ತ್ವಯಾ ತ್ವತ್ಸನ್ನಿಧಾನೇನ ಭೂಯಾದ್ರಾಜ್ಯ[೧೧]ಮವಿಪ್ಲವಮ್ ॥ ೯೮ ॥**

ಆದುದರಿಂದ ಕಾಲಹರಣವನ್ನು ಮಾಡದೆ ಶೀಘ್ರವಾಗಿ ನೀನು ಬರಬೇಕು. ಮಹಾಬುದ್ಧಿಶಾಲಿಯಾದ ನಿನ್ನ ಸಾನ್ನಿಧ್ಯದಿಂದ ರಾಜ್ಯವು ನಿಷ್ಕಂಟಕವಾಗಿಯಾಗಲಿ''.

೧ ಬಾಲಸ್ಯ. ೨ ನಷ್ಟಮೇವೇತ್ಯರ್ಥಃ. ೩ ವಿದ್ಯಾಧರಪತೇಃ. ೪ ಸ್ವಾಮಿಭಕ್ತಾವಿತ್ಯರ್ಥಃ. ೫ ತಸ್ಮಾತ್ಕಾರಣಾತ್. ೬ ವತ್ಸಃ. ೭ ಯೋಷಿತೌ. ೮ ಜೀರ್ಣಸದೃಶಂ. ೯ ಪ್ರಕಾಶನಸ್ಥೇಯೇತ್ಯಾದಿನಾ ತಙ್. ೧೦ ಕಾಲಯಾಪನಮಕೃತ್ವಾ. ೧೧ ನಿಷ್ಕಂಟಕಂ.

**ಇತಿ [೧]ವಾಚಿಕಮಾದಾಯ ತೌ ತದೋತ್ಪೇತತುರ್ನಭಃ ।**
**ಪಯೋದಾಂಸ್ತ್ವರಯಾ ದೂರಮಾಕರ್ಷಂತೌ ಸಮೀಪಗಾನ್ ॥ ೯೯ ॥**

ಈ ಪ್ರಕಾರವಾಗಿ ಬರೆದಿದ್ದ ಪತ್ರವನ್ನು ತೆಗೆದುಕೊಂಡು ಆ ವಿದ್ಯಾಧರಕುಮಾರರಿಬ್ಬರೂ ಆಕಾಶಕ್ಕೆ ನೆಗೆದು ದಾರಿಯಲ್ಲಿ ಸಿಕ್ಕಿದ ಮೇಘಗಳನ್ನು ದೂರವಾಗಿ ತಳ್ಳಿ ಶೀಘ್ರವಾಗಿ ಹೊರಟು ಹೋದರು.

**ಕ್ವಚಿಜ್ಜಲಧರಾಂಸ್ತುಂಗಾನ್ಸ್ವಮಾರ್ಗಪರಿರೋಧಿನಃ ।**
**ವಿಭಿಂದಂತೌ ಪಯೋಬಿಂದೂನ್ಕ್ಷರತೋಽಶ್ರುಲವಾನಿವ ॥ ೧೦೦ ॥**

**ತೌ ಪಶ್ಯಂತೌ ನದೀರ್ದೂರಾತ್ತನ್ವೀರತ್ಯಂತಪಾಂಡುರಾಃ ।**
**ಘನಾಗಮಸ್ಯ ಕಾಂತಸ್ಯ ವಿರಹೇಣೇವ [೨]ಕರ್ಶಿತಾಃ ॥ ೧೦೧ ॥**

**ಮನ್ವಾನೌ ದೂರಭಾವೇನ [೩]ಪಾರಿಮಂಡಲ್ಯಮಾಗತಾನ್ ।**
**ಭೂಮಾವಿವ ನಿಮಗ್ನಾಂಗಾನರ್ಕತಾಪಭಯಾದ್ಗಿರೀನ್ ॥ ೧೦೨ ॥**

**ದೀರ್ಘಿಕಾಂಭೋ [೪]ಭುವಾ ನ್ಯಸ್ತಮಿವೈಕಮತಿವರ್ತುಲಮ್ ।**
**ತಿಲಕಂ ದೂರತಾಹೇತೋಃ ಪ್ರೇಕ್ಷಮಾಣಾವನುಕ್ಷಣಮ್ ॥ ೧೦೩ ॥**

**ಕ್ರಮಾದವಾಪತಾಮೇತೌ ಪುರಮುತ್ಪಲಖೇಟಕಮ್ ।**
**ಮಂದ್ರಸಂಗೀತನಿರ್ಘೋಷಬಧಿರೀಕೃತದಿಙ್ಮುಖಮ್ ॥ ೧೦೪ ॥**

ಅವರಿಬ್ಬರೂ ಕೆಲವು ಕಡೆಗಳಲ್ಲಿ ಕಣ್ಣೀರಿನ ಹನಿಗಳನ್ನು ಸುರಿಯುವಂತೆ ನೀರಿನ ಹನಿಗಳನ್ನು ಸುರಿಯುತ್ತಿರುವುವೂ ತಮ್ಮ ಮಾರ್ಗವನ್ನು ತಡೆದು ಬರುತ್ತಿರುವುವೂ ಉನ್ನತವೂ ಆದ ಮೇಘಗಳನ್ನು ಭೇದಿಸುವವರಾಗಿಯೂ, ಮೇಘವೆಂಬ ಪತಿಯ ವಿಯೋಗದಿಂದ ಕೃಶವಾದಂತಿರುವುವೂ ಶುಭ್ರವೂ ಆದ ನದಿಗಳನ್ನು ದೂರದಿಂದಲೇ ನೋಡುವವರಾಗಿಯೂ, ಬಹಳ ದೂರವಾಗಿದ್ದುದರಿಂದ ಸೂಕ್ಷ್ಮತ್ವವನ್ನು ಹೊಂದಿದ ಪರ್ವತಗಳನ್ನು ಸೂರ್ಯನ ತಾಪದ ಭಯದಿಂದ ಭೂಮಿಯಲ್ಲಿ ಮುಳುಗಿರುವಂತೆ ತಿಳಿಯುವವರಾಗಿಯೂ, ಬಹಳ ದೂರವಾಗಿದ್ದುದರಿಂದ ಕೊಳಗಳಲ್ಲಿ ವರ್ತುಲಾಕಾರವಾಗಿರುವ ನೀರನ್ನು ಭೂದೇವಿಯ ವರ್ತುಲಾಕಾರವಾದೊಂದು ತಿಲಕವನ್ನೋಪಾದಿಯಲ್ಲಿ ಪ್ರತಿಸಮಯದಲ್ಲಿಯೂ ನೋಡುವವರಾಗಿಯೂ, ಗಂಭೀರವಾದ ಸಂಗೀತಶಬ್ದದಿಂದ ದಿಕ್ಕುಗಳೆಲ್ಲಾ ವ್ಯಾಪ್ತವಾಗಿರುವ ಉತ್ಪಲಖೇಟನಗರಕ್ಕೆ ಕ್ರಮವಾಗಿ ಬಂದು ಸೇರಿದರು.

**ದ್ವಾಃಸ್ಥೈಃ ಪ್ರಣೀಯಮಾನೌ ಚ ಪ್ರವಿಶ್ಯ ನೃಪಮಂದಿರಮ್ ।**
**ಮಹಾನೃಪಂ ಸಭಾಸೀನಂ ವಜ್ರಜಂಘಮದರ್ಶತಾಮ್ ॥ ೧೦೫ ॥**

ದ್ವಾರಪಾಲಕರಿಂದ ಒಯ್ಯಲ್ಪಟ್ಟವರಾಗಿ ರಾಜಮಂದಿರವನ್ನು ಪ್ರವೇಶಮಾಡಿ ಸಭೆಯಲ್ಲಿ ಕುಳಿತಿದ್ದ ವಜ್ರಜಂಘಮಹಾರಾಜನನ್ನು ನೋಡಿದರು.

**ಕೃತಪ್ರಣಾಮೌ ತೌ ತಸ್ಯ ಪುರೋ ರತ್ನಕರಂಡಕಮ್ ।**
**ನಿಚಿಕ್ಷಿಪತುರಂತಸ್ಥಪತ್ರಕಂ ಸದುಪಾಯನಮ್ ॥ ೧೦೬ ॥**

ಆ ಚಿಂತಾಗತಿಮನೋಗತಿಗಳಿಬ್ಬರೂ ವಜ್ರಜಂಘನಿಗೆ ನಮಸ್ಕಾರವನ್ನು ಮಾಡಿ ಪತ್ರವನ್ನೊಳಗೊಂಡಿರುವ ರತ್ನದ ಕರಡಿಗೆಯನ್ನೂ ಕೈಗಾಣಿಗೆಯನ್ನೂ ವಜ್ರಜಂಘನ ಮುಂದಿರಿಸಿದರು.

**ತದುನ್ಮುದ್ರ್ಯ ತದಂತಸ್ಥಂ ಗೃಹೀತ್ವಾ ಕಾರ್ಯಪತ್ರಕಮ್ ।**
**ನಿರೂಪ್ಯ ವಿಸ್ಮಿತಶ್ಚಕ್ರವರ್ತಿಪ್ರಾವ್ರಾಜ್ಯನಿರ್ಣಯಾತ್ ॥ ೧೦೭ ॥**

೧ ಸಂದೇಶವಾಗ್ವಾಚಿಕಂ ಸ್ಯಾದಿತ್ಯಮರಃ. ೨ ಕೃಶೀಕೃತಾಃ. ೩ ಪರಮಸೂಕ್ಷ್ಮತ್ವಂ. ೪ ಭುವ ಇತ್ಯಪಿ ಪಾಠಃ.

ವಜ್ರಜಂಘನು ಆ ಕರಡಿಗೆಯನ್ನು ತೆರೆದು ಅದರೊಳಗಿದ್ದ ಕಾರ್ಯಪತ್ರವನ್ನು ನೋಡಿ ಚಕ್ರವರ್ತಿಯು ದೀಕ್ಷೆಯನ್ನು ತೆಗೆದುಕೊಂಡನೆಂಬ ಸಮಾಚಾರದಿಂದ ಆಶ್ಚರ್ಯಪಟ್ಟನು.

**ಅಹೋ ಚಕ್ರಧರಃ ಪುಣ್ಯಭಾಗೀ ಸಾಮ್ರಾಜ್ಯವೈಭವಮ್ ।**
**ತ್ಯಕ್ತ್ವಾ ದೀಕ್ಷಾಮು[೧]ಪಾಯಂಸ್ತ [೨]ವಿವಿಕ್ತಾಂಗೀಂ ವಧೂಮಿವ ॥ ೧೦೮ ॥**

“ಅಹೋ ! ಪುಣ್ಯಶಾಲಿಯಾದ ಚಕ್ರವರ್ತಿಯು ಸಾಮ್ರಾಜ್ಯವೈಭವವನ್ನು ಪರಿತ್ಯಜಿಸಿ ಪರಿಶುದ್ಧಾವಯವವುಳ್ಳ ಕುಲವಧೂವಿನಂತಿರುವ ಜಿನದೀಕ್ಷೆಯನ್ನು ಸ್ವೀಕರಿಸಿದನು.

**ಅಹೋ ಪುಣ್ಯಧನಾಃ ಪುತ್ರಾಶ್ಚಕ್ರಿಣೋಽಚಿಂತ್ಯಸಾಹಸಾಃ ।**
**[೩]ಅವಮತ್ಯಾಧಿರಾಜ್ಯಂ ಯೇ ಸಮಂ ಪಿತ್ರಾ ದಿದೀಕ್ಷಿರೇ ॥ ೧೦೯ ॥**

ಅಹೋ ! ರಾಜ್ಯಸಂಪತ್ತನ್ನು ತಿರಸ್ಕರಿಸಿ ತಂದೆಯೊಡನೆ ದೀಕ್ಷೆಯನ್ನು ತೆಗೆದುಕೊಂಡ ಚಕ್ರವರ್ತಿಯ ಮಕ್ಕಳು ಪುಣ್ಯಶಾಲಿಗಳು. ಅವರ ಸಾಹಸವು ಅಚಿಂತ್ಯವಾದುದು.

**ಪುಂಡರೀಕಸ್ತು ಸಂಫುಲ್ಲಪುಂಡರೀಕಾನನದ್ಯುತಿಃ ।**
**ರಾಜ್ಯೇ ನಿವೇಶಿತೋ [೪]ಧುರ್ಯೈರೂಢಭಾರೇ ಸ್ತನಂಧಯಃ ॥ ೧೧೦ ॥**

ವಿಕಸಿತವಾದ ಕಮಲದಂತೆ ಮುಖಕಾಂತಿಯುಳ್ಳವನೂ ಮಗುವೂ ಆದ ಪುಂಡರೀಕನನ್ನು ಸಮರ್ಥರಾದವರಿಂದ ವಹಿಸುವುದಕ್ಕೆ ಯೋಗ್ಯವಾದ ರಾಜ್ಯಭಾರದಲ್ಲಿರಿಸಿದ್ದಾರೆ.

**[೫]ಮಾಮೀ ಚ [೬]ಸನ್ನಿಧಾನಂ ಮೇ [೭]ಪ್ರತಿಪಾಲಯತಿ ದ್ರುತಮ್ ।**
**ತದ್ರಾಜ್ಯಪ್ರಶಮಾಯೇ[೮]ತಿ ದುರ್ಬೋಧಃ ಕಾರ್ಯಸಂಭವಃ ॥ ೧೧೧ ॥**

ಅತ್ತೆಯಾದ ಲಕ್ಷ್ಮೀಮತಿಯು ರಾಜ್ಯಕಾರ್ಯವನ್ನು ತಿಳಿಯುವುದು ಕಠಿಣವೆಂಬುದರಿಂದ ಶೀಘ್ರವಾಗಿ ಆ ರಾಜ್ಯದಲ್ಲಿ ಶಾಂತಿ ಸ್ಥಾಪನೆಯನ್ನು ಮಾಡುವುದಕ್ಕೋಸ್ಕರ ನನ್ನ ಸಾನ್ನಿಧ್ಯವನ್ನು ಎದುರುನೋಡುತ್ತಿದ್ದಾಳೆ”.

**ಇತಿ ನಿಶ್ಚಿತಲೇಖಾರ್ಥಃ ಕೃತಧೀಃ ಕೃತ್ಯಕೋವಿದಃ ।**
**ಸ್ವಯಂ ನಿರ್ಣೀತಮರ್ಥಂ ತಂ ಶ್ರೀಮತೀಮಪ್ಯಬೋಧಯತ್ ॥**

ಈ ಪ್ರಕಾರವಾಗಿ ಆ ಪತ್ರದ ಅಭಿಪ್ರಾಯವನ್ನು ನಿಶ್ಚಯಿಸಿ ಕಾರ್ಯದಲ್ಲಿ ಚತುರನಾದ ಆ ವಜ್ರಜಂಘನು ತಾನು ನಿರ್ಣಯಿಸಿದ ಆ ಅರ್ಥವನ್ನು ಶ್ರೀಮತಿಗೂ ತಿಳಿಸಿದನು.

**ವಾಚಿಕೇನ ಚ [೯]ಸಂವಾದಂ [೧೦]ಲೇಖಾರ್ಥಸ್ಯ ವಿಭಾವಯನ್ ।**
**ಪ್ರಸ್ಥಾನೇ ಪುಂಡರೀಕಿಣ್ಯಾಮತಿ[೧೧]ಮಾಧಾತ್ಸ ಧೀಧನಃ ॥ ೧೧೩ ॥**

ಆ ಬುದ್ಧಿಶಾಲಿಯಾದ ವಜ್ರಜಂಘನು ಪತ್ರಿಕಾಭಿಪ್ರಾಯದ ಸಮಾಚಾರವನ್ನು ಆ ದೂತರ ಬಾಯಿಮಾತಿನಿಂದಲೂ ತಿಳಿದು ಚೆನ್ನಾಗಿ ಪರ್ಯಾಲೋಚಿಸಿ ಪುಂಡರೀಕಿಣೀನಗರಕ್ಕೆ ಹೊರಡುವ ವಿಚಾರವನ್ನು ಮಾಡಿದನು.

**ಶ್ರೀಮತೀಂ ಚ ಸಮಾಶ್ವಾಸ್ಯ ತದ್ವಾರ್ತಾಕರ್ಣನಾಕುಲಾಮ್ ।**
**ತಯಾ ಸಮಂ ಸಮಾಲೋಚ್ಯ ಪ್ರಯಾಣಂ ನಿಶ್ಚಿಚಾಯ ಸಃ ॥ ೧೧೪ ॥**

ತನ್ನ ತವರುಮನೆಯ ಸಮಾಚಾರವನ್ನು ಕೇಳಿ ದುಃಖಿತಳಾದ ಶ್ರೀಮತಿಯನ್ನು ಸಮಾಧಾನಪಡಿಸಿ ಆಕೆಯೊಡನೆ ಪರ್ಯಾಲೋಚಿಸಿ ವಜ್ರಜಂಘನು ಪ್ರಯಾಣವನ್ನು ನಿಶ್ಚಯಿಸಿದನು.

೧ ಯಮ ಉಪರಮೇ, ಯಮೋ ವಿವಾಹೇ ಇತಿ ತಙ್. ೨ ಪವಿತ್ರಾವಯವಾಂ. ೩ ಅವಜ್ಞಾಂ ಕೃತ್ವಾ. ೪ ಧುರಂಧರೈಃ. ೫ ಮಾತುಲಾ. ೬ ಸಾಮೀಪ್ಯಂ. ೭ ಪಶ್ಯತಿ. ೮ ಹೇತೋಃ. ೯ ಸಮಾಚಾರಮಿತಿ ಯಾವತ್. ೧೦ ಪತ್ರಿಕಾಭಿಪ್ರಾಯಸ್ಯ. ೧೧ ಅಕರೋತ್.

**ವಿಸೃಜ್ಯ ಚ ಪುರೋ ದೂತಮುಖ್ಯೌ ತೌ ಕೃತಸತ್ಕ್ರಿಯೌ ।**
**ಸ್ವಯಂ ತದನುಮಾರ್ಗೇಣ ಪ್ರಯಾಣಾಯೋದ್ಯತೋ ನೃಪಃ ॥ ೧೧೫ ॥**

ಆ ಮುಖ್ಯರಾದ ದೂತರನ್ನು ಸತ್ಕರಿಸಿ ಅವರನ್ನು ಮೊದಲು ಕಳುಹಿಸಿಕೊಟ್ಟು ವಜ್ರಜಂಘರಾಜನು ಅವರ ಹಿಂದೆಯೇ ತಾನೂ ಪ್ರಯಾಣಸನ್ನದ್ಧನಾದನು.

**ತತೋ ಮತಿವರಾನಂದೌ ಧನಮಿತ್ರೋಽಪ್ಯಕಂಪನಃ ।**
**ಮಹಾಮಂತ್ರಿಪುರೋಧೋಗ್ರ್ಯಶ್ರೇಷ್ಠಿ ಸೇನಾಧಿನಾಯಕಾಃ ॥ ೧೧೬ ॥**

**ಪ್ರಧಾನಪುರುಷಾಶ್ಚಾನ್ಯೇ ಪ್ರಯಾಣೋದ್ಯತಬುದ್ಧಯಃ ।**
**ಪರಿವವ್ರುರ್ನರೇಂದ್ರಂ ತಂ ಶತಕ್ರತುಮಿವಾಮರಾಃ ॥ ೧೧೭ ॥**

ತರುವಾಯ ಮತಿವರ ಆನಂದ ಧನಮಿತ್ರ ಅಕಂಪನ ಈ ನಾಲ್ಕು ಮಂದಿ ಮಹಾಮಂತ್ರಿಗಳು ಪುರೋಹಿತ ರಾಜಶ್ರೇಷ್ಠಿ ಸೇನಾಧಿಪತಿಗಳು ಬೇರೆ ಪ್ರಧಾನಪುರುಷರು ಇವರುಗಳು ಪ್ರಯಾಣಸನ್ನದ್ಧರಾಗಿ, ಸ್ವರ್ಗದಲ್ಲಿ ದೇವತೆಗಳು ದೇವೇಂದ್ರನನ್ನು ಸುತ್ತಿಕೊಳ್ಳುವಂತೆ, ಆ ವಜ್ರಜಂಘರಾಜನನ್ನು ಸುತ್ತಿಕೊಂಡರು.

**ತಸ್ಮಿನ್ನೇವಾಹ್ನಿ ಸೋ[೧]ಽಹ್ನಾಯ ಪ್ರಸ್ಥಾನಮಕರೋತ್ಕೃತೀ ।**
**ಮಹಾನ್ಪ್ರಯಾಣ[೨]ಸಂಕ್ಷೋಭಸ್ತದಾಭೂತ್ತನ್ನಿಯೋಗಿನಾಮ್ ॥ ೧೧೮ ॥**

ವಜ್ರಜಂಘನು ಅದೇ ದಿನ ಶೀಘ್ರವಾಗಿ ಪ್ರಸ್ಥಾನವನ್ನು ಮಾಡಿದನು. ಆಗ ರಾಜನ ಪರಿಚಾರಕಜನರಲ್ಲಿ ಮುಂದೆ ಹೇಳುವಂತೆ ದೊಡ್ಡಪ್ರಯಾಣಸಂಭ್ರಮ ವುಂಟಾಗಿದ್ದಿತು.

**ಯೂಯಮಾಬದ್ಧಸೌವರ್ಣ[೩]ಗ್ರೈವೇಯಾದಿಪರಿಚ್ಛದಾಃ ।**
**ಕರೇಣೂರ್ಮದ[೪]ವೈಮುಖ್ಯಾತ್ಸತೀಃ ಕುಲವಧೂರಿವ ॥ ೧೧೯ ॥**

**ರಾಜ್ಞೀನಾಮಧಿರೋಹಾಯ ಸಜ್ಜಾಃ ಪ್ರಾಪಯತ ದ್ರುತಮ್ ।**
**ಯೂಯ[೫]ಮಶ್ವತರೀರಾಶು [೬]ಪರ್ಯಾಣಯತ ಶೀಘ್ರಗಾಃ ॥ ೧೨೦ ॥**

ಆಯಾ ಕಾರ್ಯಗಳ ಅಧಿಕಾರಿಗಳು ತಮ್ಮ ಕಡೆಯವರಿಗೆ ಹೀಗೆ ಹೇಳಲಾರಂಭಿಸಿದರು:– “ನೀವು ಮಹಾರಾಣಿಯವರು ಕುಳಿತುಕೊಳ್ಳುವುದ ಕ್ಕೋಸ್ಕರ ಕುಲವಧೂಗಳಂತೆ ಮದವಿಲ್ಲದೆ ಸಾಧ್ವಿಗಳಾದ ಹೆಣ್ಣಾನೆಗಳಿಗೆ ಬಂಗಾರದ ಕಂಠಾಭರಣಮೊದಲಾದ ಆಭರಣಗಳನ್ನು ತೊಡಿಸಿ ಸಿದ್ಧಪಡಿಸಿ ಶೀಘ್ರವಾಗಿ ತನ್ನಿರಿ. ನೀವು ಶೀಘ್ರವಾಗಿ ಹೋಗುವ ಹೆಣ್ಣುಕತ್ತೆ (ಹೇಸರಕತ್ತೆ) ಗಳಿಗೆ ಬೇಗನೆ ಜೀನುಗಳನ್ನು ಹಾಕಿರಿ.

**ನೃಪವಲ್ಲಭಿಕಾನಾಂ ಚ ಯೂಯಮರ್ಪಯತಾಶ್ವಿಮಾಃ ।**
**ಕಾಚವಾಹಜನಾನ್ಯೂಯಂ ಗವೇಷಯತ [೭]ದುರ್ದಮಾನ್ ॥ ೧೨೧ ॥**

ನೀವು ಈ ಹೇಸರಕತ್ತೆಗಳನ್ನು ರಾಜನ ಸೇವಕಿಯರಿಗೆ ಶೀಘ್ರವಾಗಿ ತಂದು ಕೊಡಿರಿ. ನೀವು ಪ್ರಚಂಡರಾದ ಪಲ್ಲಕ್ಕಿ ಮೊದಲಾದ ವಾಹನಗಳನ್ನು ಹೊರುವವರನ್ನು ಹುಡುಕಿರಿ.

**ತುರಂಗಮಕುಲಂ ಚೇದ[೮]ಮಾಪಾಯ್ಯೋದಕಮಾಶುಗಮ್ ।**
**ಬದ್ಧಪರ್ಯಾಣಕಂ ಯೂಯಂ ಕುರುಧ್ವಂ ಸುವಯೋನ್ವಿತಮ್ ॥**

ನೀವು ಶೀಘ್ರವಾಗಿ ಹೋಗುವ ಒಳ್ಳೆಯ ಪ್ರಾಯದ ಕುದುರೆಗಳಿಗೆ ನೀರನ್ನು ಕುಡಿಸಿ ಜೀನುಗಳನ್ನು ಹಾಕಿ ಸಿದ್ಧಪಡಿಸಿರಿ.

**[೯]ಭುಜಿಷ್ಯಾಃ [೧೦]ಸರ್ವಕರ್ಮೀಣಾ ಯೂಯಮಾಹ್ವಯತ ದ್ರುತಮ್ ।**
**ಪಾಕಧಾನ್ಯ[೧೧]ಪರಿಕ್ಷೋದಶೋಧನಾದಿನಿಯೋಗಿನೀಃ ॥ ೧೨೩ ॥**

೧ ದ್ರಾಗ್ಝಟಿತ್ಯಂಜಸಾಹ್ನಾಯೇತ್ಯಮರಃ. ೨ ಸಂಭ್ರಮಃ. ೩ ಕಂಠಾಭರಣಂ. ೪ ವಿಮುಖತ್ವಾತ್. ೫ ಗರ್ದಭೀಃ. ೬ ಬದ್ಧಪರ್ಯಾಣಾಃ ಕುರುತ. ೭ ಚಂಡಾನಿತ್ಯರ್ಥಃ. ೮ ಪಾನಂ ಕಾರಯಿತ್ವಾ. ೯ ಚೇಟೀಃ. ೧೦ ಸರ್ವಸ್ಮಿನ್ಕರ್ಮಣಿ ಸಮರ್ಥಾಃ. ೧೧ ಕುಟ್ಟನಂ.

ನೀವು ಪಾಕಕ್ಕೆ ಬೇಕಾದ ಧಾನ್ಯಗಳನ್ನು ಕುಟ್ಟಿ ಪರಿಶೋಧಿಸುವ ಮತ್ತು ಸಮಸ್ತಕಾರ್ಯಗಳಲ್ಲಿಯೂ ಚತುರರಾದ ಪರಿಚಾರಕಿಯರನ್ನು ಶೀಘ್ರವಾಗಿ ಕರೆಯಿರಿ.

**ಯೂಯಂ ಸೇನಾಗ್ರಗಾ ಭೂತ್ವಾ ನಿವೇಶಂ ಪ್ರತಿ [೧]ಸೂಚ್ಛ್ರಿತಾಃ ।**
**[೨]ಅನುತಿಷ್ಠತ [೩]ಸತ್ಕಾಯಮಾನಗರ್ಭಾ ಮಹಾವೃತೀಃ ॥ ೧೨೪ ॥**

ನೀವು ಸೈನ್ಯದ ಮುಂದಿದ್ದುಕೊಂಡು ಅಲ್ಲಲ್ಲಿ ಇಳಿದುಕೊಳ್ಳುವುದಕ್ಕೆ ಮಧ್ಯದಲ್ಲಿ ಡೇರೆಗಳುಳ್ಳ ಉನ್ನತವಾದ ಆವರಣ(ಬೇಲಿ)ಗಳನ್ನು ಮಾಡಿರಿ.

**ಯೂಯಂ ಮಹಾನಸೇ ರಾಜ್ಞೋ ನಿಯುಕ್ತಾಃ ಸರ್ವಸಂಪದಾ ।**
**[೪]ಸಮಗ್ರಯತ ತದ್ಯೋಗ್ಯಾಂ ಸಾಮಗ್ರೀಂ [೫]ನಿರವಗ್ರಹಾಃ ॥ ೧೨೫ ॥**

ನೀವು ಬಾಧಾರಹಿತರಾಗಿ ರಾಜನ ಭೋಜನಶಾಲೆಯ ಅಧಿಕಾರಿಗಳಾಗಿ ನಿಯೋಜಿಸಲ್ಪಟ್ಟು, ಸರ್ವಸಂಪತ್ತಿನಿಂದ ಪ್ರಯಾಣಕ್ಕೆ ಯೋಗ್ಯವಾದ ಸಾಮಗ್ರಿಯನ್ನು ಸಿದ್ಧಪಡಿಸಿರಿ.

**ಯೂಯಂ [೬]ಗೋಮಂಡಲಂ ಚಾರು [೭]ವಾತ್ಸಕಂ ಬಹು [೮]ಧೈನುಕಮ್ ।**
**ಸೋದಕೇಷು ಪ್ರದೇಶೇಷು ಸಚ್ಛಾಯೇಷ್ವಭಿರಕ್ಷತ ॥ ೧೨೬ ॥**

ನೀವು ಹೊಸದಾಗಿ ಈದ ಮತ್ತು ಸುಂದರವಾದ ಕರುಗಳುಳ್ಳ ಗೋವುಗಳನ್ನು ನೀರೂ ನೆರಳೂ ಉಳ್ಳ ಪ್ರದೇಶಗಳಲ್ಲಿ ರಕ್ಷಣೆಮಾಡಿರಿ.

**ಯೂಯಮಾರಕ್ಷತ [೯]ಸ್ತ್ರೈಣಂ ರಾಜಕೀಯಂ ಪ್ರಯತ್ನತಃ ।**
**ಸಪಾಠೀನಾ ಇವಾಂಭೋಧೇಸ್ತರಂಗಾ ಭಾಸುರಾ[೧೦]ಸಯಃ ॥ ೧೨೭ ॥**

ನೀವು ಕೈಗಳಲ್ಲಿ ಪ್ರಕಾಶಮಾನವಾದ ಕತ್ತಿಗಳನ್ನು ಧರಿಸಿಕೊಂಡು ಸಮುದ್ರದ ತುರೀಮುಳ್ಳುಗಳುಳ್ಳ ಮೀನುಗಳೊಡಗೂಡಿದ ತೆರೆಮಾಲೆಗಳಂತೆ ಪ್ರಯತ್ನದಿಂದ ರಾಜಸ್ತ್ರೀಸಮೂಹವನ್ನು ರಕ್ಷಣೆಮಾಡಿರಿ.

**ಯೂಯಂ ಕಂಚುಕಿನೋ ವೃದ್ಧಾ ಮಧ್ಯೇಂತಃಪುರಯೋಷಿತಾಮ್ ।**
**ಅಂಗರಕ್ಷಾನಿಯೋಗಂ ಸ್ವಮಶೂನ್ಯಂ ಕುರುತಾ[೧೧]ದೃತಾಃ ॥ ೧೨೮ ॥**

ವೃದ್ಧರಾದ ಅಂತಃಪುರದ ಸೇವಕರೇ ! ನೀವು ಅಂತಃಪುರದ ಸ್ತ್ರೀಯರ ಮಧ್ಯದಲ್ಲಿ ಅಂಗರಕ್ಷಣೆಯ ನಿಮ್ಮ ಕಾರ್ಯವನ್ನು ಲೋಪವಿಲ್ಲದಂತೆ ಶ್ರದ್ಧೆಯಿಂದ ಮಾಡಿರಿ.

**ಯೂಯ[೧೨]ಮತ್ರೈವ ಪಾಶ್ಚಾತ್ಯಕರ್ಮಾಣ್ಯೇವಾನುತಿಷ್ಠತ ।**
**ಯೂಯಂ ಸಮಂ ಸಮಾಗತ್ಯ ಸ್ವಾನ್ನಿಯೋಗಾನ್ಸಪಶ್ಯತ ॥ ೧೨೯ ॥**

ನೀವು ಇಲ್ಲಿಯೇ ಇದ್ದು ಹಿಂದೆ ಮಾಡುತ್ತಿದ್ದ ಕಾರ್ಯಗಳನ್ನೇ ಮಾಡಿರಿ. ನೀವು ಸವಾರಿ ಜೊತೆಯಲ್ಲಿ ಬಂದು ನಿಮ್ಮ ನಿಮ್ಮ ಕಾರ್ಯಗಳನ್ನು ಸರಿಯಾಗಿ ನೋಡಿಕೊಂಡಿರಿ.

**ದೇಶಾಧಿಕಾರಿಣೋ ಗತ್ವಾ ಯೂಯಂ ಚೋದಯತ ದ್ರುತಮ್ ।**
**[೧೩]ಪ್ರತಿಗ್ರಹೀತುಂ ಭೂನಾಥಂ ಸಾಮಗ್ರ್ಯಾ [೧೪]ಸ್ವಾನುರೂಪಯಾ ॥**

ನೀವು ಶೀಘ್ರವಾಗಿ ಹೋಗಿ ತಮಗೆ ಅನುಕೂಲವಾದ ಸಾಮಗ್ರಿಯೊಡನೆ ಬಂದು ರಾಜನನ್ನು ಸತ್ಕರಿಸುವುದಕ್ಕೋಸ್ಕರ ದೇಶಾಧಿಕಾರಿಗಳನ್ನು ಪ್ರೇರೇಪಿಸಿರಿ (ಆಜ್ಞೆಮಾಡಿರಿ).

**ಯೂಯಂ [೧೫]ಬಿಭೃತ ಹಸ್ತ್ಯಶ್ವಂ ಯೂಯಂ ಪಾಲಯ[೧೬]ತೌಷ್ಟ್ರಕಮ್ ।**
**ಯೂಯಂ ಸವಾತ್ಸಕಂ ಭೂರಿಕ್ಷೀರಂ ರಕ್ಷತ ಧೈನುಕಮ್ ॥ ೧೩೧ ॥**

೧ ಸೂನ್ನತಾಃ. ೨ ಕುರುತ. ೩ ಶೋಭನಾನಿ ಕಾಯಮಾನಾನಿ (ಪಟಕುಟ್ಯಃ) ಗರ್ಭೇ ಯಾಸಾಂ ತಾಃ, ಕಾಯಮಾನಂ ತೃಣೌಕಸಿ. ೪ ಸಮಗ್ರಂ ಕುರುತ. ೫ ನಿರ್ಬಾಧಾಃ. ೬ ಗೋಸಮೂಹಂ. ೭ ವತ್ಸಸಮೂಹಂ. ೮ ನವಸೂತಿಕಾಸಮೂಹಂ. ೯ ಸ್ತ್ರೀಸಮೂಹಂ. ೧೦ ಖಡ್ಗಾಃ. ೧೧ ಸಾದರಾಃ. ೧೨ ಪುರೇ. ೧೩ ಸಮ್ಮುಖಮಾಗಂತುಂ. ೧೪ ಸ್ವಾನುಕೂಲಯಾ. ೧೫ ಪೋಷಯತ. ೧೬ ಉಷ್ಟ್ರಸಮೂಹಂ.

ನೀವು ಆನೆಕುದುರೆಗಳನ್ನು ಪೋಷಣೆಮಾಡಿರಿ. ನೀವು ಒಂಟೆಗಳ ಗುಂಪನ್ನು ಕಾಪಾಡಿರಿ. ನೀವು ಕರುಗಳುಳ್ಳವೂ ಹೆಚ್ಚು ಹಾಲನ್ನು ಕೊಡುವುವೂ ಆದ ಹಸು(ದನ)ಗಳನ್ನು ರಕ್ಷಣೆಮಾಡಿರಿ.

**ಯೂಯಂ ಜೈನೇಶ್ವರೀಮರ್ಚ್ಯಾಂ ರತ್ನತ್ರಯಪುರಸ್ಸರಾಮ್ ।**
**ಯಜೇತ ಶಾಂತಿಕಂ ಕರ್ಮ [೧]ಸಮಾಧಾಯ ಮಹೀಕ್ಷಿತಃ ॥ ೧೩೨ ॥**

ನೀವು ರತ್ನತ್ರಯಪುರಸ್ಸರವಾದ ಜಿನಪೂಜೆಯನ್ನು ಮಾಡಿ ಸಮಾಧಾನದಿಂದ ರಾಜನಿಗೆ ಶಾಂತಿಕ್ರಿಯೆಯನ್ನು ಮಾಡಿರಿ.

**ಕೃತಾಭಿಷೇಚನಾಃ ಸಿದ್ಧಶೇಷಾ ಗಂಧಾಂಬುಮಿಶ್ರಿತಾಃ ।**
**ಯೂಯಂ ಕ್ಷಿಪೇತ ಪುಣ್ಯಾಶೀಃ ಶಾಂತಿಘೋಷೈಃ ಸಮಂ ಪ್ರಭೋಃ ॥**

ನೀವು ಜಿನೇಶ್ವರನಿಗೆ ಅಭಿಷೇಕವನ್ನು ಮಾಡಿ ಗಂಧೋದಕಮಿಶ್ರವಾದ ಪುಷ್ಪಾಕ್ಷತೆಗಳನ್ನು ಶಾಂತಿಪಾಠದೊಂದಿಗೆ ಆಶೀರ್ವದಿಸಿ ರಾಜನ ಮೇಲೆ ಚೆಲ್ಲಿರಿ.

**ಯೂಯಂ ನೈಮಿತ್ತಿಕಾಃ ಸಮ್ಯಗ್ನಿರೂಪಿತಶುಭೋದಯಾಃ ।**
**ಪ್ರಸ್ಥಾನಸಮಯಂ ಬ್ರೂತ ರಾಜ್ಞೋ ಯಾತ್ರಾಪ್ರಸಿದ್ಧಯೇ ॥ ೧೩೪ ॥**

ಚೆನ್ನಾಗಿ ನಿಮಿತ್ತವನ್ನು ನೋಡಿ ಶುಭವನ್ನು ತಿಳಿದಿರುವ ಜ್ಯೋತಿಷಿಕರೇ ! ನೀವು ರಾಜನ ಯಾತ್ರೆಯು ನಿರ್ವಿಘ್ನವಾಗಿ ಸಿದ್ಧಿಯಾಗುವುದಕ್ಕೋಸ್ಕರ ಹೊರಡುವುದಕ್ಕೆ ಸುಮುಹೂರ್ತವನ್ನು ಹೇಳಿರಿ''.

**ಇತಿ [೨]ತಂತ್ರನಿಯುಕ್ತಾನಾಂ ತದಾ ಕೋಲಾಹಲೋ ಮಹಾನ್ ।**
**[೩]ಉದತಿಷ್ಠತ್ಪ್ರಯಾಣಾಯ ಸಾಮಗ್ರೀ[೪]ಮನುತಿಷ್ಠ ತಾಮ್ ॥ ೧೩೫ ॥**

ಈ ಪ್ರಕಾರವಾಗಿ ಹೊರಡುವ ಸಮಯದಲ್ಲಿ ಪ್ರಯಾಣಸಾಮಗ್ರಿಯನ್ನು ಮಾಡುವ ಪರಿವಾರಜನರ ದೊಡ್ಡ ಕಲಕಲಶಬ್ದವುಂಟಾಗಿದ್ದಿತು.

**ತತಃ ಕರೀಂದ್ರೈಸ್ತುರಗೈಃ ಪತ್ತಿಭಿಶ್ಚೋದ್ಧೃತಾಯುಧೈಃ ।**
**ನೃಪಾಜಿರಮಭೂದ್ರುದ್ಧಂ ಸ್ಯಂದನೈಶ್ಚ ಸಮಂತತಃ ॥ ೧೩೬ ॥**

ತರುವಾಯ ದೊಡ್ಡ ಆನೆಗಳಿಂದಲೂ ಕುದುರೆಗಳಿಂದಲೂ ಆಯುಧಗಳನ್ನೆತ್ತಿಹಿಡಿದಿರುವ ಕಾಲಾಳುಗಳಿಂದಲೂ ರಥಗಳಿಂದಲೂ ರಾಜಾಂಗಣವೆಲ್ಲ ತುಂಬಿದ್ದಿತು.

**ಸಿತಾತಪತ್ರೈರ್ಮಾಯೂರಪಿಂಛಚ್ಛತ್ರೈಶ್ಚ ಸೂಚ್ಛ್ರಿತೈಃ ।**
**ನಿರುದ್ಧಮಭವದ್ವ್ಯೋಮ ಘನೈರಿವ ಸಿತಾಸಿತೈಃ ॥ ೧೩೭ ॥**

ಆಕಾಶವು ಬಿಳುಪುಕಪ್ಪುಮೋಡಗಳಿಂದ ವ್ಯಾಪ್ತವಾಗಿರುವಂತೆ, ಶ್ವೇತಛತ್ರಿಗಳಿಂದಲೂ ಉನ್ನತವಾದ ನವಿಲುಗರಿಗಳ ಛತ್ರಿಗಳಿಂದಲೂ ಆಕಾಶವು ವ್ಯಾಪ್ತವಾಯಿತು.

**ಛತ್ರಾಣಾಂ ನಿಕುರುಂಬೇಣ ರುದ್ಧಂ ತೇಜೋಪಿ ಭಾಸ್ವತಃ ।**
**ಸದ್ವೃತ್ತಸನ್ನಿಧೌ ನೂನಂ ನಾ[೫]ಭಾ ತೇಜಸ್ವಿನಾಮಪಿ ॥ ೧೩೮ ॥**

ಛತ್ರಿಗಳ ಸಮೂಹವು ಸೂರ್ಯನ ತೇಜಸ್ಸನ್ನು ತಡೆದಿದ್ದಿತು. ವರ್ತುಲಾಕಾರವಾದ ಪದಾರ್ಥಗಳ ಸಾನ್ನಿಧ್ಯದಲ್ಲಿಯೂ ಸದಾಚಾರಿಗಳ ಸಾನ್ನಿಧ್ಯದಲ್ಲಿಯೂ ತೇಜಸ್ವಿಗಳ ತೇಜಸ್ಸು ವ್ಯಾಪಿಸುವುದಿಲ್ಲ, ನಿಜ.

**ರಥಾನಾಂ ವಾರಣಾನಾಂ ಚ ಕೇತವೋನ್ಯೋನ್ಯ[೬]ಮಾಶ್ಲಿಷನ್ ।**
**ಪವನಾಂದೋಲಿತಾ ದೀರ್ಘಕಾಲಾದ್ದೃಷ್ಟ್ವೇವ ತೋಷಿಣಃ ॥ ೧೩೯ ॥**

೧ ಸಮಾಧಾನಂ ಕೃತ್ವಾ. ೨ ತಂತ್ರಂ ಪ್ರಧಾನೇ ಸಿದ್ಧಾಂತೇ ಸೂತ್ರವಾಯೇ ಪರಿಚ್ಛದೇ ಇತ್ಯಮರಃ. ೩ ಉದೇತಿ ಸ್ಮ. ೪ ಕುರ್ವತಾಂ. ೫ ತೇಜಃ. ೬ ಆಲಿಂಗನಂ ಚಕ್ರಿರೇ.

ಬಹುಕಾಲದನಂತರ ಪರಸ್ಪರವಾಗಿ ನೋಡಲ್ಪಟ್ಟ ಮನುಷ್ಯರು ಸಂತೋಷದಿಂದ ಆಲಿಂಗನೆಯನ್ನು ಮಾಡಿಕೊಳ್ಳುವಂತೆ, ರಥಗಳ ಮತ್ತು ಆನೆಗಳ ಮೇಲಿದ್ದ ಧ್ವಜಪತಾಕೆಗಳು ಗಾಳಿಯಿಂದ ಚಲಿಸಲ್ಪಟ್ಟು, ಪರಸ್ಪರವಾಗಿ ಆಲಿಂಗನೆ ಮಾಡಿಕೊಂಡುವು. ಪರಸ್ಪರವಾಗಿ ಸಂಬಂಧಿಸಿದುವೆಂದರ್ಥವು.

**ತುರಂಗಮಖುರೋದ್ಧೂತಾಃ [೧]ಪ್ರಾಸರ್ಪನ್ರೇಣವಃ ಪುರಃ ।**
**ಮಾರ್ಗ[೨]ಮಸ್ಯೇವ [೩]ನಿರ್ದೇಷ್ಟುಂ ನಭೋಭಾಗವಿಲಂಘಿನಃ ॥ ೧೪೦ ॥**

ಕುದುರೆಯ ಗೊರಸುಗಳಿಂದ ಮೇಲಕ್ಕೆ ಹಾರಿಸಲ್ಪಟ್ಟು ಆಕಾಶದಲ್ಲಿ ವ್ಯಾಪಿಸಿಕೊಂಡಿರುವ ಧೂಳುಗಳು ಈ ಕುದುರೆಯ ಅಥವಾ ಸೈನ್ಯದ ಮಾರ್ಗವನ್ನು ಉಪದೇಶಮಾಡುವುದಕ್ಕೋಸ್ಕರವೋ ಎಂಬಂತೆ ಮುಂದುಗಡೆಯಲ್ಲಿ ವ್ಯಾಪಿಸಿದುವು.

**ಕರಿಣಾಂ ಮದಧಾರಾಭಿಃ ಶೀಕರೈಶ್ಚ ಕರೋಜ್ಝಿತೈಃ ।**
**ಹಯಲಾಲಾಜಲೈಶ್ಚಾಪಿ ಪ್ರಣನಾಶ ಮಹೀರಜಃ ॥ ೧೪೧ ॥**

ಆನೆಗಳ ಮದಜಲದ ಧಾರೆಗಳಿಂದಲೂ ಸೊಂಡಲುಗಳಿಂದ ಸುರಿಯುವ ನೀರಿನ ತುಂತುರುಗಳಿಂದಲೂ ಕುದುರೆಗಳ ಬಾಯಿಯಿಂದ ಸುರಿಯುವ ಜೊಲ್ಲು ನೀರುಗಳಿಂದಲೂ ಭೂಮಿಯ ಧೂಳು ನಾಶವಾಯಿತು.

**ತತಃ ಪುರಾದ್ವಿನಿರ್ಯಾಂತೀ ಸಾ ಚಮೂರ್ವ್ಯರುಚದ್ಭೃಶಮ್ ।**
**ಮಹಾನದೀವ ಸಚ್ಛತ್ರಫೇನಾ ವಾಜಿತರಂಗಿಕಾ ॥ ೧೪೨ ॥**

ತರುವಾಯ ಪಟ್ಟಣದಿಂದ ಹೊರಡುತ್ತಿರುವ ಆ ಸೈನ್ಯವು ಒಳ್ಳೆಯ ಶ್ವೇತಚ್ಛತ್ರಿಗಳೆಂಬ ನೊರೆಯುಳ್ಳದೂ ಕುದುರೆಗಳೆಂಬ ತೆರೆಮಾಲೆಗಳುಳ್ಳದೂ ಆಗಿ ದೊಡ್ಡ ನದಿಯಂತೆ ಅಧಿಕವಾಗಿ ಶೋಭಿಸಿದ್ದಿತು.

**ಕರೀಂದ್ರಪೃಥು[೪]ಯಾದೋಭಿಸ್ತುರಂಗಮತರಂಗಕೈಃ ।**
**ವಿಲೋಲಾಸಿಲತಾಮತ್ಸ್ಯೈಃ ಶುಶುಭೇ ಸಾ ಚಮೂ[೫]ಧುನೀ ॥ ೧೪೩ ॥**

ದೊಡ್ಡ ಆನೆಗಳೆಂಬ ಜಲಚರಪ್ರಾಣಿಗಳಿಂದಲೂ, ಕುದುರೆಗಳೆಂಬ ತೆರೆಮಾಲೆಗಳಿಂದಲೂ ಚಲಿಸುತ್ತಿರುವ ಖಡ್ಗಗಳೆಂಬ ಮೀನುಗಳಿಂದಲೂ ಆ ಸೈನ್ಯವೆಂಬ ನದಿಯು ಶೋಭಿಸಿದ್ದಿತು.

**ತತಃ ಸಮೀಕೃತಾಶೇಷಸ್ಥಲನಿಮ್ನಮಹೀತಲಾ ।**
**ಅಪರ್ಯಾಪ್ತಮಹಾಮಾರ್ಗಾ ಯಥಾಸ್ವಂ ಪ್ರಸೃತಾ ಚಮೂಃ ॥ ೧೪೪ ॥**

ತರುವಾಯ ಹಳ್ಳದಿಣ್ಣೆಪ್ರದೇಶಗಳನ್ನು ಸರಿಮಾಡಿದ ಭೂಮಿಯಲ್ಲಿ ಕ್ರಮವಾಗಿ ಆ ಸೈನ್ಯವು ಹೊರಟಿತು. ಆ ಸೈನ್ಯವು ಹೋಗುವುದಕ್ಕೆ ದೊಡ್ಡಮಾರ್ಗದಲ್ಲಿ ಸ್ಥಳವೇ ಸಾಕಾಗುತ್ತಿರಲಿಲ್ಲ.

**ವನೇಭಕಟಮುಜ್ಝಿತ್ವಾ ದಾನಸಕ್ತಾ ಮದಾಲಿನಃ ।**
**[೬]ನ್ಯಲೀಯಂತ ನೃಪೇಭೇಂದ್ರಕರಟೇ ಪ್ರಕ್ಷರನ್ಮದೇ ॥ ೧೪೫ ॥**

ಮದಜಲದಲ್ಲಿ ಆಸಕ್ತಗಳಾದ ಮದಿಸಿದ ಭ್ರಮರಗಳು ಕಾಡಾನೆಗಳ ಕೆನ್ನೆಗಳನ್ನು ಬಿಟ್ಟು ಮದವನ್ನು ಸುರಿಯುತ್ತಿರುವ ರಾಜನ ಆನೆಗಳ ಕೆನ್ನೆಯಲ್ಲಿ ಆಸಕ್ತಗಳಾದುವು.

**ರಮ್ಯಾನ್ವನತರೂನ್ ಹಿತ್ವಾ ರಾಜಸ್ತಂಭೇರಮಾನಮೀ ।**
**[೭]ಆಶ್ರಯನ್ಮಧುಪಾಃ ಪ್ರಾಯಃ [೮]ಪ್ರತ್ಯಗ್ರಂ ಲೋಕರಂಜನಮ್ ॥ ೧೪೬ ॥**

ಈ ಭ್ರಮರಗಳು ರಮಣೀಯವಾದ ವನವೃಕ್ಷಗಳನ್ನು ಬಿಟ್ಟು ರಾಜನ ಆನೆಗಳನ್ನು ಆಶ್ರಯಿಸಿದುವು. ನೂತನವಾದ ವಸ್ತುವು ಪ್ರಾಯಶಃ ಲೋಕವನ್ನು ಸಂತೋಷಪಡಿಸುತ್ತದೆ.

೧ ಪ್ರಸರಂತಿ ಸ್ಮ. ೨ ತುರಗಸ್ಯ. ೩ ಉಪದೇಷ್ಟುಂ. ೪ ಯಾದಾಂಸಿ ಜಲಜಂತವ ಇತ್ಯಮರಃ. ೫ ನದೀ. ೬ ಲೀನಾ ಬಭೂವುಃ. ೭ ಶ್ರಯಂತಿ ಸ್ಮ. ೮ ನೂತನಂ.

**ನೃಪಂ ವನಾನಿ ರಮ್ಯಾಣಿ [೧]ಪ್ರತ್ಯಗೃಹ್ಣನ್ನಿವಾಧ್ವನಿ ।**
**ಫಲಪುಷ್ಪಭರಾನಮ್ರೈಃ ಸಾಂದ್ರಚ್ಛಾಯೈರ್ಮಹಾದ್ರುಮೈಃ ॥ ೧೪೭ ॥**

ಮಾರ್ಗದಲ್ಲಿ ರಮಣೀಯವಾದ ವನಗಳು ಫಲಪುಷ್ಪಗಳ ಭಾರದಿಂದ ನಮ್ರಗಳೂ ದಟ್ಟವಾದ ನೆರಳುಗಳುಳ್ಳವೂ ಆದ ದೊಡ್ಡವೃಕ್ಷಗಳಿಂದ ರಾಜನನ್ನು ಸತ್ಕರಿಸುವಂತಿದ್ದುವು.

**ತದಾ ವನಲತಾಪುಷ್ಪಪಲ್ಲವಾನ್ಕರಪಲ್ಲವೈಃ ।**
**ಆಜಹಾರಾವತಂಸಾದಿವಿನ್ಯಾಸಾಯ ವಧೂಜನಃ ॥ ೧೪೮ ॥**

ಆಗ ಅಂತಃಪುರದ ಸ್ತ್ರೀಯರು ಅಲಂಕಾರಾರ್ಥವಾಗಿ ಮುಡಿದುಕೊಳ್ಳುವುದಕ್ಕೆ ತಮ್ಮ ಪಲ್ಲವದಂತಿರುವ ಕೈಗಳಿಂದ ವನಲತೆಗಳ ಪುಷ್ಪಗಳನ್ನೂ ತಳಿರುಗಳನ್ನೂ ಕಿತ್ತುಕೊಂಡರು.

**ಧ್ರುವಮಕ್ಷೀಣಪುಷ್ಪರ್ದ್ಧಿಂ ಪ್ರಾಪ್ತಾಸ್ತೇ ವನಶಾಖಿನಃ ।**
**ಯತ್ಸೈನಿಕೋಪಭೋಗೇಪಿ ನ ಜಹುಃ ಪುಷ್ಪಸಂಪದಮ್ ॥ ೧೪೯ ॥**

ನಿಶ್ಚಯವಾಗಿಯೂ ಕಡಿಮೆಯಾಗದಿರುವ ಪುಷ್ಪಗಳ ಸಮೃದ್ಧಿಯನ್ನು ಹೊಂದಿರುವ ಆ ವನವೃಕ್ಷಗಳು ತಮ್ಮ ಪುಷ್ಪಸಂಪತ್ತನ್ನು ಸೈನಿಕರು ಭೋಗಿಸಿದಷ್ಟೂ ಬಿಡಲಿಲ್ಲ. ಪುಷ್ಪವು ಕಡಿಮೆಯಾಗಲಿಲ್ಲವೆಂದರ್ಥವು.

**ಹಯಹೇಷಿತಮಾತಂಗಬೃಹದ್ಬೃಂಹಿತನಿಃಸ್ವನೈಃ ।**
**ಮುಖರಂ ತದ್ಬಲಂ ಶಷ್ಪಸರೋವರಮಥಾಸದತ್ ॥ ೧೫೦ ॥**

ತರುವಾಯ ಕುದುರೆಗಳ ಹೇಷಿತಶಬ್ದಗಳಿಂದಲೂ ಆನೆಗಳ ಬೃಂಹಿತಶಬ್ದಗಳಿಂದಲೂ ವ್ಯಾಪ್ತವಾದ ಆ ಸೈನ್ಯವು ಶಷ್ಪಸರೋವರವನ್ನು ತಲುಪಿತು.

**ಯದಂಬುಜರಜಃಪುಂಜಪಿಂಜರೀಕೃತವೀಚಿಕಮ್ ।**
**ಕನಕದ್ರವಸಚ್ಛಾಯಂ ಬಿಭರ್ತಿಸ್ಮಾಂಬುಶೀತಲಮ್ ॥ ೧೫೧ ॥**

ಆ ಶಷ್ಪಸರೋವರದ ಶೀತಲವಾದ ನೀರು ಕಮಲಗಳ ಧೂಳುಗಳಿಂದ ಹಳದಿಬಣ್ಣವಾದ ತೆರೆಮಾಲೆಗಳುಳ್ಳದಾಗಿಯೂ ಬಂಗಾರದ ರಸದಂತೆ ಕಾಂತಿಯುಳ್ಳದಾಗಿಯೂ ಇದ್ದಿತು.

**ವನಷಂಡವೃತಪ್ರಾಂತಂ ಯದರ್ಕಸ್ಯಾಂಶವೋ ಭೃಶಮ್ ।**
**ನ [೨]ತೇಪುಃ ಸಂವೃತಂ ಕೋ ವಾ ತಪೇದಾರ್ದ್ರಾಂತರಾತ್ಮಕಮ್ ॥**

ವನಸಮೂಹಗಳಿಂದ ವ್ಯಾಪ್ತವಾದ ಆ ಸರೋವರಪ್ರದೇಶದಲ್ಲಿ ಸೂರ್ಯನ ಕಿರಣಗಳು ಸಂತಾಪವನ್ನುಂಟುಮಾಡಲಿಲ್ಲ. ಯಾರ ಅಂತರಂಗವು ಶೀತಲ(ಶಾಂತ)ವಾಗಿದೆಯೋ ಅವರಿಗೆ ಯಾವನು ತಾನೆ ಸಂತಾಪವನ್ನುಂಟುಮಾಡುವನು ?

**ವಿಹಂಗಮರುತೈರ್ನೂನಂ ತತ್ಸರೋ ನೃಪ[೩]ಸಾಧನಮ್ ।**
**[೪]ಆಜುಹಾವ ನಿವೇಷ್ಟವ್ಯಮಿಹೇತ್ಯುದ್ವೀಚಿಬಾಹುಕಮ್ ॥ ೧೫೩ ॥**

ಆ ಸರೋವರವು ತನ್ನ ತೆರೆಮಾಲೆಗಳೆಂಬ ತೋಳುಗಳನ್ನು ಮೇಲಕ್ಕೆತ್ತಿ ಪಕ್ಷಿಗಳ ಶಬ್ದಗಳಿಂದ ರಾಜನ ಸೈನ್ಯವನ್ನು ''ಇಲ್ಲಿ ವಾಸಮಾಡಬೇಕು'' ಎಂಬುದಾಗಿ ನಿಶ್ಚಯವಾಗಿ ಕರೆಯಿತು (ಉತ್ಪ್ರೇಕ್ಷಾ).

**ತತಸ್ತಸ್ಮಿನ್ಸರಸ್ಯಸ್ಯ [೫]ನ್ಯವಿಕ್ಷತ ಬಲಂ ವಿಭೋಃ ।**
**ತರುಗುಲ್ಮಲತಾಚ್ಛನ್ನಪರ್ಯಂತೇ ಮೃದುಮಾರುತೇ ॥ ೧೫೪ ॥**

೧. ಸತ್ಕುರ್ವಂತಿ ಸ್ಮ. ೨ ತಪಿ ದಾಹೇ. ೩ ಬಲಂ. ೪ ಆಹ್ವಯತಿ ಸ್ಮ. ೫ ನಿವಿಶತಿ ಸ್ಮ.

ತರುವಾಯ ವೃಕ್ಷಗಳಿಂದಲೂ ಪೊದರುಗಳಿಂದಲೂ ಲತೆಗಳಿಂದಲೂ ವ್ಯಾಪ್ತವೂ ಮೃದುವಾದ ಗಾಳಿಯಿಂದ ಕೂಡಿರುವುದೂ ಆದ ಆ ಸರೋವರದಲ್ಲಿ ಈ ವಜ್ರಜಂಘರಾಜನ ಸೈನ್ಯವು ಪ್ರವೇಶಮಾಡಿತು.

**ದುರ್ಬಲಾಃ ಸ್ವಂ ಜಹುಃ ಸ್ಥಾನಂ ಬಲವದ್ಭಿ[1]ರಭಿದ್ರುತಾಃ ।**
**ಆದೇಶೈರಿವ ಸಂಪ್ರಾಪ್ತೈಃ ಸ್ಥಾನಿನೋ [2]ಹನಿಪೂರ್ವಕಾಃ ॥ ೧೫೫ ॥**

ವ್ಯಾಕರಣಶಾಸ್ತ್ರಕ್ಕನುಸಾರವಾಗಿ ''ಹನಿ'' ಮೊದಲಾದ ಶಬ್ದರೂಪಗಳ ಸ್ಥಾನಗಳಿಗೆ ಪ್ರಾಪ್ತವಾಗುವ ಆದೇಶಗಳಿಂದ ತಿರಸ್ಕರಿಸಲ್ಪಟ್ಟ ಆ ಮೂಲರೂಪ (ಸ್ಥಾನಿ)ಗಳು ತಮ್ಮ ಸ್ಥಾನಗಳನ್ನು ಬಿಡುವಂತೆ, ಬಲಿಷ್ಠರಾದ ಸೈನಿಕರಿಂದ ತಿರಸ್ಕರಿಸಲ್ಪಟ್ಟ ದುರ್ಬಲಪ್ರಾಣಿಗಳು ಆ ಸರೋವರಸ್ಥಾನವನ್ನು ತ್ಯಜಿಸಿದುವು.

**ವಿಜಹುರ್ನಿಜನೀಡಾನಿ ವಿಹಗಾಸ್ತತ್ರಸುರ್ಮೃಗಾಃ ।**
**ಮೃಗೇಂದ್ರಾ ಬಲಸಂಕ್ಷೋಭಾಚ್ಛನೈಃ ಸ[3]ಮುದಮೀಲಯನ್ ॥ ೧೫೬ ॥**

ಸೈನ್ಯದ ಕೋಲಾಹಲಶಬ್ದದಿಂದ ಅಲ್ಲಿದ್ದ ಪಕ್ಷಿಗಳು ತಮ್ಮ ಗೂಡುಗಳನ್ನು ಬಿಟ್ಟು ಹೋದುವು. ಹರಿಣಗಳು ಹೆದರಿದುವು. ಸಿಂಹಗಳು ಮೆಲ್ಲನೆ ಕಣ್ಣುಗಳನ್ನು ತೆರೆದುವು.

**ಶಾಖಾ[4]ವಿಷಕ್ತಭೂಷಾದಿರುಚಿರಾ ವನಪಾದಪಾಃ ।**
**ಕಲ್ಪದ್ರುಮಶ್ರಿಯಂ ಭೇಜುರಾಶ್ರಿತೈರ್ಮಿಥುನೈರ್ಮಿಥಃ ॥ ೧೫೭ ॥**

ಸ್ತ್ರೀಪುರುಷರು ಆ ಸರೋವರದ ತೀರದಲ್ಲಿರುವ ವೃಕ್ಷಗಳ ಕೊಂಬೆಗಳಲ್ಲಿ ತಮ್ಮ ಆಭರಣ ಮೊದಲಾದ ವಸ್ತುಗಳನ್ನಿರಿಸಿದುದರಿಂದ ಅತ್ಯಂತಮನೋಹರಗಳಾದ ಆ ವೃಕ್ಷಗಳು ಕಲ್ಪವೃಕ್ಷಗಳಂತೆ ಶೋಭಿಸುತ್ತಿದ್ದುವು.

**ಕುಸುಮಾಪಚಯೇ ತೇಷಾಂ ಪಾದಪಾ ವಿಟಪೈರ್ನತಾಃ ।**
**ಆನುಕೂಲ್ಯಮಿವಾತೇನುಃ ಸಂಮತಾ[5]ತಿಥ್ಯಸತ್ಕ್ರಿಯಾಃ ॥ ೧೫೮ ॥**

ಕೊಂಬೆಗಳಿಂದ ನಮ್ರವಾಗಿರುವ ಆ ವೃಕ್ಷಗಳು ಅತಿಥಿಗಳಿಗೆ ಸಮ್ಮತವಾದ ಯೋಗ್ಯ ಸತ್ಕಾರಗಳನ್ನು ಮಾಡುವುವುಗಳಾಗಿ ಆ ಸೈನಿಕರಿಗೆ ಹೂವುಗಳನ್ನು ಬಿಡಿಸಿಕೊಳ್ಳುವುದಕ್ಕೆ ಅನುಕೂಲತೆಯನ್ನು ಕಲ್ಪಿಸಿಕೊಡುವಂತಿದ್ದುವು. ವೃಕ್ಷಗಳು ಬಗ್ಗಿದ್ದುದರಿಂದ ಸೈನಿಕರ ಪುಷ್ಪಾಪಚಯಕ್ಕೆ ಅನುಕೂಲವಾಗಿದ್ದುವೆಂದು ಭಾವವು.

**ಕೃತಾವಗಾಹನಾಃ ಸ್ನಾತುಂ ಸ್ತನ[6]ದಘ್ನಂ ಸರೋಜಲಮ್ ।**
**ರೂಪಸೌಂದರ್ಯಲಾಭೇನ [7]ತದ[8]ಗಾರೀದಿವಾಂಗನಾಃ ॥ ೧೫೯ ॥**

ಆ ಸೈನ್ಯದಲ್ಲಿದ್ದ ಸ್ತ್ರೀಯರು ಸ್ನಾನಮಾಡುವುದಕ್ಕಾಗಿ ತಮ್ಮ ಸ್ತನಗಳವರೆಗೆ ಆಳವಾದ ಆ ಸರೋವರದ ಜಲವನ್ನು ಪ್ರವೇಶಮಾಡಿದರು. ಇದನ್ನು ನೋಡಿದರೆ ಆ ಸ್ತ್ರೀಯರ ರೂಪಸೌಂದರ್ಯದ ಲಾಭವಾಯಿತೆಂದು ತಿಳಿದು ಆ ಸರೋವರದ ಜಲವು ಆ ಸ್ತ್ರೀಯರನ್ನು ನುಂಗಿದಂತಿದ್ದಿತು.

**ಕಿಣೀಭೂತದೃಢಸ್ಕಂಧಾನ್ವಿಶತಃ ಕಾಚವಾಹಕಾನ್ ।**
**ಸ್ವಾಂಭೋತಿವ್ಯಯಭೀತ್ಯೇವ ಚಕಂಪೇ ವೀಕ್ಷ್ಯ ತತ್ಸರಃ ॥ ೧೬೦ ॥**

ನೀರನ್ನು ಹೊತ್ತು ಹೊತ್ತು ಜಡ್ಡು ಕಟ್ಟಿ ಗಟ್ಟಿಯಾಗಿರುವ ಹೆಗಲುಗಳುಳ್ಳ ಕಾವಡಿ (ಅಡ್ಡೆ) ಹೊರುವವರು ನೀರಿಗೆ ಪ್ರವೇಶಮಾಡುವುದನ್ನು ನೋಡಿ ಆ ಸರೋವರವು, ತನ್ನ ನೀರು ಹೆಚ್ಚು ವ್ಯಯವಾಗುತ್ತವೆಂಬ ಭೀತಿಯಿಂದಲೋ ಎಂಬಂತೆ, ಕಂಪಿಸಿತು.

---

೧ ನಿರಾಕೃತಾಃ. ೨ ಹನ ಹಿಂಸಾಗತ್ಯೋರಿತ್ಯಾದಯಃ. ೩ ನಯನೋನ್ಮೀಲನಂ ಚಕ್ರಿರೇ. ೪ ಲಗ್ನಾಃ. ೫ ಅತಿಥಿಯೋಗ್ಯಸತ್ಕಾರಾಃ. ೬ ಪ್ರಮಾಣಂ. ೭ ಸರೋಜಲಂ. ೮ ಗಿಲತಿ ಸ್ಮೇವ.

**ವಿಷ್ವಗ್ವದೃಶಿರೇ [1]ದೂಷ್ಯಕುಟೀಭೇದಾ [2] ನಿವೇಶಿತಾಃ ।**
**ಕ್ಲೃಪ್ತಾ [3]ವತ್ಸ್ಯಜ್ಜಿನಸ್ಯಾಸ್ಯ ವನಶ್ರೀಭಿರಿವಾಲಯಾಃ ॥ ೧೬೧ ॥**

ಆ ಸರೋವರದ ಎಲ್ಲಾ ಕಡೆಗಳಲ್ಲಿಯೂ ಮುಂದೆ ಜನಿಸುವ ಜಿನೇಶ್ವರನಿಗೆ ವನಲಕ್ಷ್ಮಿಗಳು ನಿರ್ಮಾಪಿಸಿದ ಮನೆಗಳೋ ಎಂಬಂತೆ ಮಾಡಿದ ನಾನಾವಿಧವಾದ ವಸ್ತ್ರಗೃಹಗಳು ಕಾಣಿಸಿಕೊಂಡುವು.

**ನಿಪತ್ಯ ಭುವಿ ಭೂಯೋಽಪಿ ಪ್ರೋತ್ಥಾಯ ಕೃತ[4]ವಲ್ಗನಾಃ ।**
**ರೇಜಿರೇ ವಾಜಿನಃ [5]ಸ್ನೇಹ್ಯೈಃ ಪುಷ್ಟಾ ಮಲ್ಲಾ ಇವೋದ್ಧತಾಃ ॥ ೧೬೨ ॥**

ಪ್ರೇಮದಿಂದ ಭೂಮಿಯಲ್ಲಿ ಬಿದ್ದು ಹೊರಳಾಡಿ ಪುನಃ ಎದ್ದು ನೆಗೆದಾಡುವ ಕುದುರೆಗಳು, ಎಣ್ಣೆಯಿಂದ ಪುಷ್ಟಿಯಾದವರೂ ಉದ್ಧತರೂ ಆದ ಜಟ್ಟಿಗಳಂತೆ ಶೋಭಿಸುತ್ತಿದ್ದುವು.

**[6]ಮಧುಪಾನಾದಿವ ಕ್ರುದ್ಧೈರ್ಬದ್ಧಾಃ ಶಾಖಿಷು ದಂತಿನಃ ।**
**ಸುವಂಶಾ ಜಗತಾಂ ಪೂಜ್ಯಾ ಬಲಾ[7]ದಾಧೋರಣೈಸ್ತದಾ ॥ ೧೬೩ ॥**

ಆಗ ಮದ್ಯಪಾನದಿಂದ ಕೋಪಗೊಂಡವರಂತೆ ಕೋಪಿಷ್ಠರಾದ ಆನೆಮಾವಟಿಗರು ಉತ್ತಮವಾದ ಆನೆಗಳ ವಂಶದಲ್ಲಿ ಹುಟ್ಟಿದುವೂ ಜಗತ್ತಿಗೆ ಪೂಜ್ಯವೂ ಆದ ಆನೆಗಳನ್ನು ಬಲಾತ್ಕಾರದಿಂದ ಮರಗಳಲ್ಲಿ ಕಟ್ಟಿಹಾಕಿದರು.

**ಯಥಾಸ್ವಂ ಸನ್ನಿವಿಷ್ಟೇಷು ಸೈನ್ಯೇಷು ಸತತೋ ನೃಪಃ ।**
**ಶಿಬಿರಂ ಪ್ರಾಪ[8]ದಧ್ವನ್ಯೈರ್ಹಯ್ಯೈರವಿದಿತಾಂತರಮ್ ॥ ೧೬೪ ॥**

ಹೀಗೆ ಸೈನ್ಯಗಳನ್ನು ಆಯಾ ಸ್ಥಾನಗಳಲ್ಲಿರಿಸಿ ವ್ಯವಸ್ಥೆಮಾಡಿದ ತರುವಾಯ ವಜ್ರಜಂಘರಾಜನು ಶೀಘ್ರವಾಗಿ ಹೋಗುವ ಕುದುರೆಗಳಿಂದ ತಾನು ಎಷ್ಟುದೂರ ಬಂದೆನೆಂದು ತಿಳಿಯದಂತೆ ತನ್ನ ದಂಡು ನಿಂತಿರುವ ಸ್ಥಳಕ್ಕೆ ಬಂದು ಸೇರಿದನು.

**ತುರಂಗಮಖುರೋದ್ಧೂತರೇಣು[9]ದೂಷಿತಮೂರ್ತಯಃ ।**
**[10]ಸ್ವಿದ್ಯಂತಃ [11]ಸಾದಿನಃ ಪ್ರಾಪುಸ್ತೇ ಲಲಾಟಂತಪೇ ರವೌ ॥ ೧೬೫ ॥**

ಕುದುರೆಗಳ ಗೊರಸುಗಳಿಂದ ಮೇಲಕ್ಕೆದ್ದ ಧೂಳುಗಳಿಂದ ವ್ಯಾಪ್ತವಾದ ಶರೀರವುಳ್ಳವರೂ ಮೈಬೆವರಿದವರೂ ಆದ ಆ ಕುದುರೆಸವಾರರು ಸೂರ್ಯನು ಹಣೆಯನ್ನು ತಪಿಸುವಾಗ ಅಂದರೆ ಮಧ್ಯಾಹ್ನಸಮಯದಲ್ಲಿ ಬಂದು ದಂಡುನಿಲ್ಲುವ ಸ್ಥಾನವನ್ನು ಸೇರಿದರು.

**[12]ಕಾಯಮಾನೇ ಮಹಾಮಾನೇ ರಾಜಾ ತತ್ರಾವಸತ್ಸುಖಮ್ ।**
**ಸರೋಜಲತರಂಗೋತ್ಥಮೃದುಮಾರುತಶೀತಲೇ ॥ ೧೬೬ ॥**

ಆ ಸರೋವರದ ನೀರಿನ ಅಲೆಗಳ ಮೇಲೆ ಬೀಸಿದ ಮೃದುವಾದ ಗಾಳಿಯಿಂದ ಶೀತಲವಾದ ದೊಡ್ಡ ಡೇರೆಯಲ್ಲಿ ವಜ್ರಜಂಘರಾಜನು ಸುಖವಾಗಿ ವಾಸಮಾಡಿದನು.

**ತತೋ ದಮಧರಾಭಿಖ್ಯಃ ಶ್ರೀಮಾನಂಬರಚಾರಣಃ ।**
**ಸಮಂ ಸಾಗರಸೇನೇನ ತನ್ನಿವೇಶಮುಪಾಯಯೌ ॥ ೧೬೭ ॥**

ತರುವಾಯ ತಪಸ್ಸಂಪನ್ನರಾದ ಯಮಧರರೆಂಬ ಆಕಾಶಚಾರಣಮುನಿಗಳು ಸಾಗರಸೇನಮುನಿಗಳೊಡನೆ ವಜ್ರಜಂಘರಾಜನ ಡೇರೆಗೆ ಬಂದರು.

**ಕಾಂತಾರಚರ್ಯಾಂ [13]ಸಂಗೀರ್ಯ ಪರ್ಯಟಂತೌ ಯದೃಚ್ಛಯಾ ।**
**ವಜ್ರಜಂಘಮಹೀಭರ್ತುರಾವಾಸಂ ತಾವುಪೇಯತುಃ ॥ ೧೬೮ ॥**

---

೧ ವಸ್ತ್ರವೇಶ್ಮ. ೨ ಸ್ಥಾಪಿತಾಃ. ೩ ಭವಿಷ್ಯತ್. ೪ ಲಂಘನಾಃ. ೫ ಪ್ರೇಮಭಿ, ತೈಲೈಶ್ಚ. ೬ ಮದ್ಯಪಾನಾತ್. ೭ ಹಸ್ತಿಪಕೈಃ. ೮ ಆಧ್ವಾನಮಲಂಗಾಮಿಭಿಃ. ೯ ಆಚ್ಛಾದಿತಾ. ೧೦ ಸ್ವೇದಂ ಧಾರಯಂತಃ. ೧೧ ಅಶ್ವಾರೋಹಾಸ್ತು ಸಾದಿನ ಇತ್ಯಮರಃ. ೧೨ ಪಟಕುಟ್ಯಾಂ. ೧೩ ಪ್ರತಿಜ್ಞಾಂ ಕೃತ್ವಾ.

ಆ ಮುನಿಗಳಿಬ್ಬರೂ ವನದಲ್ಲಿ ವಿಧಿಪೂರ್ವಕವಾದ ಆಹಾರವು ಸಿಕ್ಕಿದರೆ ಸ್ವೀಕರಿಸುತ್ತೇವೆಂದು ಪ್ರತಿಜ್ಞೆಯನ್ನು ಮಾಡಿ ತಮ್ಮ ಇಚ್ಛಾನುಸಾರವಾಗಿ ಸಂಚರಿಸುತ್ತ ವಜ್ರಜಂಘರಾಜನ ವಾಸಸ್ಥಾನಕ್ಕೆ ಬಂದರು.

**ದೂರಾದೇವ ಮುನೀಂದ್ರೌ ತೌ ರಾಜಾಪಶ್ಯನ್ಮಹಾದ್ಯುತೀ ।**
**ಸ್ವರ್ಗಾಪವರ್ಗಯೋರ್ಮಾರ್ಗಾವಿವ ಪ್ರಕ್ಷೀಣಕಲ್ಮಷೌ ॥ ೧೬೯ ॥**

ಸ್ವರ್ಗಮೋಕ್ಷಗಳ ಮಾರ್ಗಗಳೋ ಎಂಬಂತಿರುವವರೂ ಪಾಪರಹಿತರೂ ಮಹಾತೇಜಸ್ವಿಗಳೂ ಆದ ಆ ಮುನೀಶ್ವರರನ್ನು ದೂರದಿಂದಲೇ ವಜ್ರಜಂಘರಾಜನು ಕಂಡನು.

**ಸ್ವಾಂಗದೀಪ್ತಿವಿನಿರ್ಧೂತತಮಸೌ ತೌ ತತೋ ಮುನೀ ।**
**ಸಸಂಭ್ರಮಂ ಸಮುತ್ಥಾಯ [೧]ಪ್ರತಿಜಗ್ರಾಹ ಭೂಮಿಪಃ ॥ ೧೭೦ ॥**

ತರುವಾಯ ರಾಜನು ಸಂಭ್ರಮದಿಂದ ಎದ್ದು ತಮ್ಮ ಶರೀರಕಾಂತಿಯಿಂದ ಕತ್ತಲೆಯನ್ನು ಹೋಗಲಾಡಿಸುತ್ತಿರುವ ಆ ಮುನಿಗಳನ್ನು ಇದಿರ್ಗೊಂಡು ಕರೆತಂದನು. ರಾಜನು ಶೀಘ್ರವಾಗಿ ಯೆದ್ದು ಮುನಿಗಳ ಎದುರಿಗೆ ಹೋಗಿ ಕರೆದುಕೊಂಡು ಬಂದನೆಂದರ್ಥವು.

**ಕೃತಾಂಜಲಿಪುಟೋ ಭಕ್ತ್ಯಾ ದತ್ತಾರ್ಘ್ಯಃ ಪ್ರಣಿಪತ್ಯ ತೌ ।**
**ಗೃಹಂ ಪ್ರವೇಶಯಾಮಾಸ ಶ್ರೀಮತ್ಯಾ ಸಹ ಪುಣ್ಯಭಾಕ್ ॥ ೧೭೧ ॥**

ಪುಣ್ಯಶಾಲಿಯಾದ ವಜ್ರಜಂಘನು ಶ್ರೀಮತೀಸಹಿತನಾಗಿ ಆ ಮುನಿಗಳಿಗೆ ಕೈಗಳನ್ನು ಮುಗಿದು ಭಕ್ತಿಯಿಂದ ಅರ್ಘ್ಯವನ್ನು ಕೊಟ್ಟು ನಮಸ್ಕರಿಸಿ ತನ್ನ ಡೇರೆಗೆ ಕರೆದುಕೊಂಡು ಹೋದನು.

**ಪ್ರಕ್ಷಾಲಿತಾಂಘ್ರೀ ಸಂಪೂಜ್ಯ ಮಾನ್ಯೇ ಸ್ಥಾನೇ ನಿವೇಶ್ಯ ತೌ ।**
**ಪ್ರಣಿಪತ್ಯ ಮನಃಕಾಯವಚೋಭಿಃ ಶುದ್ಧಿಮುದ್ವಹನ್ ॥ ೧೭೨ ॥**

**ಶ್ರದ್ಧಾದಿಗುಣಸಂಪತ್ತ್ಯಾ [೨]ಗುಣವದ್ಭ್ಯಾಂ ವಿಶುದ್ಧಿಭಾಕ್ ।**
**ದತ್ವಾ ವಿಧಿವದಾಹಾರಂ ಪಂಚಾಶ್ಚರ್ಯಾಣ್ಯವಾಪ ಸಃ ॥ ೧೭೩ ॥**

ವಜ್ರಜಂಘನು ಮನೋವಚನಕಾಯಶುದ್ಧಿಯಿಂದ ಆ ಮುನಿಗಳನ್ನು ಯೋಗ್ಯಸ್ಥಾನದಲ್ಲಿ ಕುಳ್ಳಿರಿಸಿ, ಪಾದಪ್ರಕ್ಷಾಲನೆಯನ್ನು ಮಾಡಿ, ಪೂಜಿಸಿ, ನಮಸ್ಕರಿಸಿ ಶ್ರದ್ಧೆ ಮೊದಲಾದ ಗುಣಗಳಿಂದ ಪರಿಶುದ್ಧನಾಗಿ ಗುಣವಂತರಾದ ಆ ಮುನಿಗಳಿಗೆ ವಿಧಿಪೂರ್ವಕವಾಗಿ ಆಹಾರವನ್ನು ಕೊಟ್ಟು ರತ್ನವೃಷ್ಟಿ ಮೊದಲಾದ ಪಂಚಾಶ್ಚರ್ಯಗಳನ್ನು ಪಡೆದನು.

**ವಸುಧಾರಾ [೩]ದಿವೋ ದೇವಾಃ ಪುಷ್ಪವೃಷ್ಟ್ಯಾ ಸಹಾಕಿರನ್ ।**
**ಮಂದಂ ವ್ಯೋಮಾಪಗಾ[೪]ವಾರಿಕಣಕೀರ್ಮರುದಾವವೌ ॥ ೧೭೪ ॥**

**ಮಂದ್ರದುಂದುಭಿನಿರ್ಘೋಷೈರ್ಘೋಷಣಾಂ ಚ ಪ್ರಚಕ್ರಿರೇ ।**
**ಅಹೋ ದಾನಮಹೋದಾನಮಿತ್ಯುಚ್ಚೈರುದ್ಧದಿಙ್ಮುಖಮ್ ॥ ೧೭೫ ॥**

ಸ್ವರ್ಗದಿಂದ ದೇವತೆಗಳು ಸುವರ್ಣರತ್ನಮೊದಲಾದ ದ್ರವ್ಯಗಳ ವೃಷ್ಟಿಯನ್ನೂ, ಪುಷ್ಪವೃಷ್ಟಿಯನ್ನೂ ಮಾಡಿದರು. ಆಕಾಶಗಂಗೆಯ ನೀರಿನ ಹನಿಗಳನ್ನು ಎರಚುತ್ತಾ ಮಂದಮಾರುತವು ಬೀಸಿತು. ಗಂಭೀರವಾದ ಭೇರಿಯ ಶಬ್ದಗಳೊಡನೆ ದೇವತೆಗಳು ''ಅಹೋದಾನ ! ಅಹೋದಾನ ! ಎಂದು ಗಟ್ಟಿಯಾಗಿ ದಿಕ್ಕುಗಳೆಲ್ಲಾ ವ್ಯಾಪಿಸುವಂತೆ ಘೋಷಣೆಯನ್ನು ಮಾಡಿದರು.

**ತತೋಭಿವಂದ್ಯ ಸಂಪೂಜ್ಯ ವಿಸರ್ಜ್ಯ ಮುನಿಪುಂಗವೌ ।**
**[೫]ಕಾಂಚುಕೀಯಾದಬುದ್ಧೈನೌ ಚರಮಾವಾತ್ಮನಃ ಸುತೌ ॥ ೧೭೬ ॥**

೧ ಅಭಿಮುಖಂ ಗತ್ವಾನೀತವಾನಿತ್ಯರ್ಥಃ. ೨ ಮುನಿಭ್ಯಾಂ. ೩ ಸ್ವರ್ಗಾತ್. ೪ ವಾರಿಕಣಾನ್ಕಿರತೀತಿ ವಾರಿಕಣಕೀಃ. ೫ ಕಂಚುಕಿನಃ ಸಕಾಶಾತ್.

ಆಹಾರವಾದ ತರುವಾಯ ಆ ಮುನಿಶ್ರೇಷ್ಠರನ್ನು ವಂದಿಸಿ ಮತ್ತು ಪೂಜಿಸಿ ಬಿಟ್ಟು ಈ ಮುನಿಗಳಿಬ್ಬರೂ ತನ್ನ (ವಜ್ರಜಂಘನ) ಕೊನೆಯ ಮಕ್ಕಳೆಂಬುದನ್ನು ಕಂಚುಕಿಯಿಂದ ತಿಳಿದನು.

**ಶ್ರೀಮತ್ಯಾ ಸಹ ಸಂಶ್ರಿತ್ಯ ಸಂಪ್ರೀತ್ಯಾ ನಿಕಟಂ ತಯೋಃ ।**
**ಸ ಧರ್ಮಮಶೃಣೋತ್ಪುಣ್ಯಕಾಮಃ ಸನ್ ಗೃಹಮೇಧಿನಾಮ್ ॥ ೧೭೭ ॥**

ವಜ್ರಜಂಘನು ಪ್ರೀತಿಯಿಂದ ಶ್ರೀಮತಿಯೊಡನೆ ಆ ಮುನಿಗಳ ಸಮೀಪಕ್ಕೆ ಹೋಗಿ ಪುಣ್ಯವನ್ನು ಪಡೆಯಬೇಕೆಂಬ ಇಚ್ಛೆಯುಳ್ಳವನಾಗಿ ಗೃಹಸ್ಥರ ಧರ್ಮವನ್ನು ಕೇಳಿದನು.

**ದಾನಂ ಪೂಜಾಂ ಚ ಶೀಲಂ ಚ ಪ್ರೋಷಧಂ ಚ ಪ್ರಪಂಚತಃ ।**
**ಶ್ರುತ್ವಾ ಧರ್ಮಂ ತತೋಪೃಚ್ಛ[೧]ತ್ಸಕಾಂತಃ ಸ್ವಾಂ ಭವಾವಲೀಮ್ ॥**

ದಾನಪೂಜಾಶೀಲಪ್ರೋಷಧೋಪವಾಸ ಮೊದಲಾದ ಧರ್ಮವನ್ನು ವಿಸ್ತಾರವಾಗಿ ಕೇಳಿ ತರುವಾಯ ಪತ್ನೀಸಹಿತನಾಗಿ ತನ್ನ ಭವಾವಳಿಯನ್ನು ಕೇಳಿದನು.

**ಮುನಿರ್ದಮಧರಃ ಪ್ರಾಖ್ಯತ್ತಸ್ಯ ಜನ್ಮಾವಲೀಮಿತಿ ।**
**ದಶನಾಂಶುಭಿರುದ್ಯೋತಮಾತನ್ವನ್ದಿಙ್ಮುಖೇಷು ಸಃ ॥ ೧೭೯ ॥**

ಆ ದಮಧರಮುನಿಗಳು ತಮ್ಮ ಹಲ್ಲುಗಳ ಕಾಂತಿಯಿಂದ ದಿಕ್ಕುಗಳನ್ನೆಲ್ಲಾ ಬೆಳಗುವವರಾಗಿ ಮುಂದೆ ಹೇಳುವಂತೆ ಆ ವಜ್ರಜಂಘನ ಭವಾವಳಿಯನ್ನು ಹೇಳಿದರು.

**ಚತುರ್ಥೇ ಜನ್ಮನೀತಸ್ತ್ವಂ ಜಂಬೂದ್ವೀಪ[೨]ವಿದೇಹಗೇ ।**
**ಗಂಧಿಲೇ ವಿಷಯೇ ಸಿಂಹಪುರೇ ಶ್ರೀಷೇಣಪಾರ್ಥಿವಾತ್ ॥ ೧೮೦ ॥**

''ನೀನು ಇಲ್ಲಿಂದ ಮೊದಲು ನಾಲ್ಕನೆಯ ಜನ್ಮದಲ್ಲಿ ಜಂಬೂದ್ವೀಪದ ಅಪರವಿದೇಹದಲ್ಲಿ ಗಂಧಿಲವೆಂಬ ದೇಶದಲ್ಲಿರುವ ಸಿಂಹಪುರದಲ್ಲಿ ಶ್ರೀಷೇಣನೆಂಬ ರಾಜನಿಗೂ ಅತ್ಯಂತಸುಂದರಿಯಾದ ಸುಂದರೀದೇವಿಗೂ ಜ್ಯೇಷ್ಠಪುತ್ರನಾಗಿ ಹುಟ್ಟಿದೆ.

**ಸುಂದರ್ಯಾಮತಿಸುಂದರ್ಯಾಂ [೩]ಜ್ಯಾಯಾನ್ಸೂನುರಜಾಯಥಾಃ ।**
**ನಿರ್ವೇದಾದಾರ್ಹತೀಂ ದೀಕ್ಷಾಮಾದಾಯಾ[೪]ವ್ಯಕ್ತಸಂಯತಃ ॥ ೧೮೧ ॥**

**ವಿದ್ಯಾಧರೇಂದ್ರಭೋಗೇಷು ನ್ಯಸ್ತಧೀರ್ಮೃತಿಮಾಪಿವಾನ್ ।**
**ಪ್ರಾಗುಕ್ತೇ ಗಂಧಿಲೇ ರೂಪ್ಯಗಿರೇರುತ್ತರಸತ್ತಟೇ ॥ ೧೮೨ ॥**

**ನಗರ್ಯಾಮಲಕಾಖ್ಯಾಯಾಂ ವ್ಯೋಮಗಾನಾಮಧೀಶಿತಾ ।**
**ಮಹಾಬಲೋಭೂರ್ಭೋಗಾಂಶ್ಚ [೫]ಯಥಾಕಾಮಂ ತ್ವಮನ್ವಭೂಃ ॥**

ವೈರಾಗ್ಯದಿಂದ ಜಿನದೀಕ್ಷೆಯನ್ನು ತೆಗೆದುಕೊಂಡು ನೂತನಸಂಯಮಿ(ಮುನಿ)ಯಾಗಿ ವಿದ್ಯಾಧರರ ಭೋಗಗಳಲ್ಲಿ ಇಚ್ಛೆಯನ್ನಿಟ್ಟು ಮರಣವನ್ನು ಹೊಂದಿದುದರಿಂದ ಹಿಂದೆಹೇಳಿದ ಗಂಧಿಲದೇಶದಲ್ಲಿ ವಿಜಯಾರ್ಧ ಪರ್ವತದ ಉತ್ತರದಿಕ್ಕಿನಲ್ಲಿರುವ ಅಲಕಾಪಟ್ಟಣದಲ್ಲಿ ವಿದ್ಯಾಧರಾಧಿಪತಿಯಾದ ಮಹಾಬಲರಾಜನಾಗಿ ಹುಟ್ಟಿದೆ. ಯಥೇಚ್ಛವಾಗಿ ಭೋಗಗಳನ್ನೂ ಅನುಭವಿಸಿದೆ.

**ಸ್ವಯಂಬುದ್ಧಾತ್ಪ್ರಬುದ್ಧಾತ್ಮಾ ಜಿನಪೂಜಾಪುರಸ್ಸರಮ್ ।**
**ತ್ಯಕ್ತ್ವಾ ಸನ್ನ್ಯಸತೋ ದೇಹಂ ಲಲಿತಾಂಗಸುರೋಭವಃ ॥ ೧೮೪ ॥**

ಅಲ್ಲಿ ಸ್ವಯಂಬುದ್ಧಮಂತ್ರಿಯಿಂದ ಉಪದೇಶಿಸಲ್ಪಟ್ಟವನಾಗಿ ಆತ್ಮಸ್ವರೂಪವನ್ನು ತಿಳಿದು ಜಿನಪೂಜಾಪುರಸ್ಸರವಾಗಿ ಸನ್ನ್ಯಸವಿಧಿಯಿಂದ ಶರೀರವನ್ನು ಬಿಟ್ಟು ಸ್ವರ್ಗದಲ್ಲಿ ಲಲಿತಾಂಗದೇವನಾಗಿ ಹುಟ್ಟಿದೆ.

೧ ಕಾಂತಯಾ ಸಹಿತಃ. ೨ ಅಪರವಿದೇಹೇ. ೩ ಜಯವರ್ಮಾ. ೪ ಪ್ರಾರಬ್ಧಯೋಗಸ್ಸನ್. ೫ ಯಥೇಚ್ಛಂ.

**ತತಶ್ಚ್ಯುತ್ವಾಧುನಾಭೂಸ್ತ್ವಂ ವಜ್ರಜಂಘಮಹೀಪತಿಃ ।**
**ಶ್ರೀಮತೀ ಚ ಪುರ್ಯೈಕಸ್ಮಿನ್ನವೇ ದ್ವೀಪೇ [೧]ದ್ವಿತೀಯಕೇ ॥ ೧೮೫ ॥**

**[೨]ಪ್ರಾಕ್ ಮೇರೋರ್ಗಂಧಿಲೇ ದೇಶೇ [೩]ಪ್ರತ್ಯಕ್ಪತ್ರೀ ಕುಟುಂಬಿನಃ ।**
**ಪಲಾಲಪರ್ವತಗ್ರಾಮೇ ಜಾತಾಲ್ಪಸುಕೃತೋದಯಾತ್ ॥ ೧೮೬ ॥**

**[೪]ತತ್ರೈವ ವಿಷಯೇ ಭೂಯಃ ಪಾಟಲೀಗ್ರಾಮಕೇಭವತ್ ।**
**ನಿರ್ನಾಮಿಕಾ ವಣಿಕ್ಪುತ್ರೀ ಸಂಶ್ರಿತ್ಯ ಪಿಹಿತಾಸ್ರವಮ್ ॥ ೧೮೭ ॥**

**ವಿಧಿನೋಪೋಷ್ಯ ತತ್ರಾಸೀತ್ತ್ವ ದೇವೀ ಸ್ವಯಂಪ್ರಭಾ ।**
**ಶ್ರೀಪ್ರಭೇಭೂದಿದಾನೀಂ ಚ ಶ್ರೀಮತೀ ವಜ್ರದಂತತಃ ॥ ೧೮೮ ॥**

ಅಲ್ಲಿಂದ ಚ್ಯುತನಾಗಿ ಈಗ ನೀನು ವಜ್ರಜಂಘರಾಜನಾಗಿ ಹುಟ್ಟಿರುತ್ತಿ. ಶ್ರೀಮತಿಯೂ ಮೊದಲು ಒಂದು ಜನ್ಮದಲ್ಲಿ ಧಾತಕೀಷ(ಖ)ಂಡದ್ವೀಪದಲ್ಲಿ ಪೂರ್ವಮೇರುಪರ್ವತದ ಪಶ್ಚಿಮವಿದೇಹದ ಗಂಧಿಲದೇಶದಲ್ಲಿರುವ ಪಲಾಲ ಪರ್ವತಗ್ರಾಮದಲ್ಲಿ ದೇವಿಲನೆಂಬವನಿಗೆ ಮಗಳಾಗಿ ಹುಟ್ಟಿ ಮುನಿಗಳಿಗೆ ಅವಮಾನವನ್ನು ಮಾಡಿ ತತ್‌ಕ್ಷಣದಲ್ಲಿಯೇ ಆ ಮುನಿಗಳ ಉಪದೇಶದಿಂದ ಪಶ್ಚಾತ್ತಾಪವನ್ನು ಹೊಂದಿದಳು. ಆ ಸ್ವಲ್ಪಪುಣ್ಯದಿಂದ ಪುನಃ ಅದೇ ಗಂಧಿಲದೇಶದಲ್ಲಿ ಪಾಟಲಿಗ್ರಾಮದಲ್ಲಿ ನಿರ್ನಾಮಿಕೆಯೆಂಬ ವರ್ತಕಪುತ್ರಿಯಾಗಿ ಹುಟ್ಟಿದಳು. ಆಕೆಯು ಪಿಹಿತಾಸ್ರವಮುನಿಗಳ ಸಮೀಪದಲ್ಲಿ ಜಿನೇಂದ್ರಗುಣಸಂಪತ್ತಿ ಶ್ರುತಜ್ಞಾನಗಳೆಂಬ ಎರಡು ವ್ರತಗಳನ್ನು ಕೈಕೊಂಡು ಶಾಸ್ತ್ರೋಕ್ತವಿಧಿಯಿಂದ ಉಪವಾಸವನ್ನು ಮಾಡಿ ಆಯುಷ್ಯತೀರಿದ ಮೇಲೆ ಮೃತಪಟ್ಟು ಆ ಸ್ವರ್ಗದ ಶ್ರೀಪ್ರಭವಿಮಾನದಲ್ಲಿ ನಿನಗೆ ಸ್ವಯಂಪ್ರಭೆಯೆಂಬ ದೇವಿಯಾಗಿ ಹುಟ್ಟಿದಳು. ಈಗಲಾದರೋ ವಜ್ರದಂತಚಕ್ರವರ್ತಿಗೆ ಶ್ರೀಮತಿಯೆಂಬ ಮಗಳಾಗಿ ಹುಟ್ಟಿದ್ದಾಳೆ."

**ಶ್ರುತ್ವೇತಿ ಸ್ವಾನ್ಸವಾನ್ಸೂಯೋ ಭೂನಾಥಃ ಪ್ರಿಯಯಾ ಸಮಮ್ ।**
**ಪೃಷ್ಟವಾನಿಷ್ಟವರ್ಗಸ್ಯ ಭವಾನತಿಕುತೂಹಲಾತ್ ॥ ೧೮೯ ॥**

ಈ ಪ್ರಕಾರವಾಗಿ ವಜ್ರಜಂಘರಾಜನು ಶ್ರೀಮತೀಸಹಿತನಾಗಿ ತನ್ನ ಭವಗಳನ್ನು ಕೇಳಿ ಪುನಃ ಕುತೂಹಲದಿಂದ ತನ್ನ ಇಷ್ಟಬಂಧುಗಳ ಭವಗಳನ್ನು ಮುಂದೆಹೇಳುವರೀತಿಯಾಗಿ ಕೇಳಲಾರಂಭಿಸಿದನು.

**ಸ್ವಬಂಧು[೫]ನಿರ್ವಿಶೇಷಾ ಮೇ ಸ್ನಿಗ್ಧಾ ಮತಿವರಾದಯಃ ।**
**ತತ್ಪ್ರಸೀದ ಭವಾನೇಷಾಂ ಬ್ರೂಹೀತ್ಯಾಖ್ಯಚ್ಚ ತಾನ್ಮುನಿಃ ॥ ೧೯೦ ॥**

"ಸ್ವಾಮಿಯೇ! ಮತಿವರಮಂತ್ರಿಮೊದಲಾದವರು ನನ್ನ ಪ್ರಿಯಬಂಧುಗಳಿಗೆ ಸಮಾನರಾಗಿದ್ದಾರೆ. ಆದುದರಿಂದ ತಾವು ಪ್ರಸನ್ನರಾಗಿ ಇವರ ಭವಗಳನ್ನು ಹೇಳಿ" ಯೆಂದು ರಾಜನು ಹೇಳಿದ ಮೇಲೆ ಮುನಿಗಳು ಅವರ ಭವಗಳನ್ನು ಹೇಳಲಾರಂಭಿಸಿದರು.

**ಅಯಂ ಮತಿವರೋತ್ರೈವ ಜಂಬೂದ್ವೀಪೇ ಪುರೋಗತೇ ।**
**ವಿದೇಹೇ ವತ್ಸಕಾವತ್ಯಾಂ ವಿಷಯೇ ತ್ರಿದಿವೋಪಮೇ ॥ ೧೯೧ ॥**

**ತತ್ರ ಪುರ್ಯಾಂ ಪ್ರಭಾಕರ್ಯಾಮತಿ[೬]ಗೃದ್ಧೋ ನೃಪೋಭವತ್ ।**
**ವಿಷಯೇಷು ವಿಷಕ್ತಾತ್ಮಾ ಬಹ್ವಾರಂಭಪರಿಗ್ರಹೈಃ ॥ ೧೯೨ ॥**

**ಬಧ್ವಾಯುರ್ನಾರಕಂ ಜಾತಃ ಶ್ವಭ್ರೇ ಪಂಕಪ್ರಭಾಹ್ವಯೇ ।**
**ದಶಾಬ್ಧ್ಯುಪಮಿತಂ ಕಾಲಂ ನಾರಕೀಂ ವೇದನಾಮಗಾತ್ ॥ ೧೯೩ ॥**

"ಈ ಮತಿವರಮಂತ್ರಿಯು ಪೂರ್ವದಲ್ಲಿ ಇದೇ ಜಂಬೂದ್ವೀಪದ ಪೂರ್ವವಿದೇಹದಲ್ಲಿ ಸ್ವರ್ಗಕ್ಕೆ ಸಮಾನವಾದ ವತ್ಸಕಾವತೀದೇಶದಲ್ಲಿರುವ ಪ್ರಭಾಕರಿಯೆಂಬ ಪಟ್ಟಣದಲ್ಲಿ ಅತಿಗೃದ್ಧನೆಂಬ ರಾಜನಾಗಿದ್ದನು. ಆತನು ಭೋಗವಿಷಯಗಳಲ್ಲಿ ಆಸಕ್ತನಾಗಿ ಬಹ್ವಾರಂಭಪರಿಗ್ರಹಗಳಿಂದ ನರಕಾಯುಷ್ಯವನ್ನು ಕಟ್ಟಿಕೊಂಡು ಪಂಕಪ್ರಭೆಯೆಂಬ ನರಕದಲ್ಲಿ ಹುಟ್ಟಿ ಹತ್ತು ಸಾಗರೋಪಮಕಾಲದ ವರೆಗೆ ನರಕವೇದನೆಯನ್ನನುಭವಿಸಿದನು.

**ತತೋ [೧]ನಿಷ್ಪತ್ಯ ಪೂರ್ವೋಕ್ತನಗರಸ್ಯ ಸಮೀಪಗೇ ।**
**ವ್ಯಾಘ್ರೋಭೂತ್ಪ್ರಾಕ್ತನಾತ್ಮೀಯಧನನಿಕ್ಷೇಪಪರ್ವತೇ ॥ ೧೯೪ ॥**

ಆಯುಷ್ಯವು ತೀರಿದನಂತರ ಆ ನರಕದಿಂದ ಹೊರಟು ಹಿಂದೆ ಹೇಳಿದ ಪ್ರಭಾಕರೀಪಟ್ಟಣದ ಸಮೀಪದಲ್ಲಿ ತಾನು ಮೊದಲು ದ್ರವ್ಯವನ್ನು ಹೂಳಿಟ್ಟಿದ್ದ ಪರ್ವತದಲ್ಲಿ ಹುಲಿಯಾಗಿ ಹುಟ್ಟಿದನು.

**ಅಥಾನ್ಯದಾ [೨]ಪುರಾಧೀಶ[೩]ಸ್ತತ್ರಾಗತ್ಯ ಸಮಾವಸತ್ ।**
**ನಿವರ್ತ್ಯ [೪]ಸ್ವಾನುಜನ್ಮಾನಂ [೫]ವ್ಯುತ್ಥಿತಂ ವಿಜಿಗೀಷಯಾ ॥ ೧೯೫ ॥**

**[೬]ಸಾನುಜನ್ಮಾನಮತ್ರಸ್ಥಂ ನೃಪಮಾಖ್ಯತ್ಪುರೋಹಿತಃ ।**
**ಅತ್ರೈವ ತೇ ಮಹಾನ್ ಲಾಭೋ [೭]ಭವಿತಾ ಮುನಿದಾನತಃ ॥ ೧೯೬ ॥**

ತರುವಾಯ ಒಂದು ದಿನ ಆ ಪಟ್ಟಣಕ್ಕೆ ರಾಜನಾಗಿದ್ದ ಪ್ರೀತಿವರ್ಧನನೆಂಬವನು ತನ್ನೊಡನೆ ವಿರೋಧವನ್ನು ಮಾಡಿ ಹೋದ ತನ್ನ ತಮ್ಮನನ್ನು ಹಿಂದಿರುಗಿಸಿ ಜಯಿಸಬೇಕೆಂಬ ಇಚ್ಛೆಯಿಂದ ಬಂದು ಆ ಪರ್ವತದಲ್ಲಿ ವಾಸಮಾಡಿದನು. ಆ ಸಹೋದರನನ್ನು ತನಗೆ ಅನುಕೂಲನನ್ನಾಗಿ ಮಾಡಿಕೊಂಡು ಪ್ರೀತಿವರ್ಧನರಾಜನು ಅನುಜಸಹಿತನಾಗಿ ಈ ಪರ್ವತದಲ್ಲಿರುವಾಗ ಅವನ ಪುರೋಹಿತನು ಬಂದು ರಾಜನನ್ನು ಕುರಿತು ಇಂತೆಂದನು:— "ಮುನಿಗಳಿಗೆ ಆಹಾರದಾನವನ್ನು ಕೊಡುವುದರಿಂದ ಇದೇ ಪರ್ವತದಲ್ಲಿ ನಿನಗೆ ದೊಡ್ಡ ಲಾಭವಾಗುವುದಿದೆ.

**ಸ ಮುನಿಃ ಕಥಮೇವಾತ್ರ ಲಭ್ಯಶ್ಚೇಚ್ಛೃಣು ಪಾರ್ಥಿವ ।**
**ವಕ್ಷ್ಯೇ ತದಾಗಮೋಪಾಯಂ [೮]ದಿವ್ಯಜ್ಞಾನಾವಲೋಕಿತಮ್ ॥ ೧೯೭ ॥**

**ಮಹಾನದ್ಯ ನರೇಂದ್ರಸ್ಯ ಪ್ರಮದ[೯]ಸ್ತೇನ [೧೦]ನಾಗರಾಃ ।**
**ಸರ್ವೇ ಯೂಯಂ ಸ್ವಗೇಹೇಷು ಬಧ್ವಾ ಕೇತೂನ್ಸತೋರಣಾನ್ ॥**

**ಗೃಹಾಂಗಣಾನಿ ರಥ್ಯಾಶ್ಚ ಕುರುತಾಶು ಪ್ರಸೂನಕೈಃ ।**
**ಸೋಪಹಾರಾಣಿ [೧೧]ನೀರಂಧ್ರಮಿತಿ ದದ್ಯಃ ಪ್ರಘೋಷಣಾಮ್ ॥**

ಎಲೈ ರಾಜನೇ ! ಆ ಮುನಿಗಳು ಈ ಪರ್ವತದಲ್ಲಿ ಪ್ರಾಪ್ತವಾಗುವುದು ಹೇಗೆಂದರೆ ನಾನು ಮಹಾನಿಮಿತ್ತಜ್ಞಾನದಿಂದ ನೋಡಿದ ಅವರ ಆಗಮನೋಪಾಯವನ್ನು ಹೇಳುವೆನು. ಕೇಳು 'ಈದಿನ ರಾಜನಿಗೆ ಬಹಳ ಸಂತೋಷವುಂಟಾಗಿದೆ. ಆದುದುರಿಂದ ಎಲೈ ಪಟ್ಟಣವಾಸಿಗಳೇ! ನೀವೆಲ್ಲರೂ ತಂತಮ್ಮ ಮನೆಗಳಲ್ಲಿ ಧ್ವಜಗಳನ್ನೂ ತೋರಣಗಳನ್ನೂ ಕಟ್ಟಿ ಶೀಘ್ರವಾಗಿ ಮನೆಗಳ ಅಂಗಣಗಳಲ್ಲಿಯೂ ಬೀದಿಗಳಲ್ಲಿಯೂ ಎಡೆಬಿಡದಂತೆ ರಾಜನ ಬಹುಮಾನಾರ್ಥವಾಗಿ ಪುಷ್ಪಗಳನ್ನು ಚೆಲ್ಲಿರಿ' ಹೀಗೆ ಡಂಗೂರವನ್ನು ಹೊಯಿಸೋಣ.

**ತತೋ ಮುನಿರಸೌ ತ್ಯಕ್ತ್ವಾ ಪುರಮತ್ರಾಗಮಿಷ್ಯತಿ ।**
**ವಿಚಿಂತ್ಯಾಪ್ರಾಸುಕತ್ವೇನ ವಿಹಾರಾಯೋಗ್ಯಮಾತ್ಮನಃ ॥ ೨೦೦ ॥**

ತರುವಾಯ ಈ ಮುನಿಗಳು ಪಟ್ಟಣವು ಪ್ರಾಸುಕವಲ್ಲದಿರುವುದರಿಂದ ತಮ್ಮ ವಿಹಾರಕ್ಕೆ ಯೋಗ್ಯವಲ್ಲವೆಂದು ಯೋಚಿಸಿ ನಗರವನ್ನು ಬಿಟ್ಟು ಈ ಪರ್ವತಕ್ಕೆ ಬರುವರು."

೧ ಧಾತಕೀಷಂಡನಾಮ್ನಿ. ೨ ಪೂರ್ವಮಂದರಾತ್. ೩ ಅಪರವಿದೇಹೇ. ೪ ಗಂಧಿಲವಿಷಯೇ. ೫ ಸಮಾನಾಃ. ೬ ನಾಮ.

೧ ನಿರ್ಗತ್ಯ. ೨ ಪ್ರೀತಿವರ್ಧನನಾಮಾ. ೩ ಪರ್ವತಸಮೀಪೇ. ೪ ಸ್ವಸ್ಯಾನುಜಂ. ೫ ಸ್ಪರ್ಧಯಾ ಪುರಾನ್ನಿರ್ಗತಮಿತ್ಯರ್ಥಃ. ೬ ಅನುಜಸಹಿತಂ. ೭ ಭವಿಷ್ಯತಿ. ೮ ಮಹಾನಿಮಿತ್ತಜ್ಞಾನಂ. ೯ ಕಾರಣೇನ. ೧೦ ಪೌರಾಃ. ೧೧ ನಿಬಿಡಂ.

**ಪುರೋಧೋ ವಚನಾತ್ತುಷ್ಟೋ ನೃಪೋಸೌ ಪ್ರೀತಿವರ್ದ್ಧನಃ ।**
**ತತ್ತಥೈವಾಕರೋತ್ಪ್ರೀತೋ ಮುನಿರಪ್ಯಾಗಮತ್ತಥಾ ॥ ೨೦೧ ॥**

ಪುರೋಹಿತನ ವಚನದಿಂದ ಸಂತುಷ್ಟನಾದ ಈ ಪ್ರೀತಿವರ್ಧನರಾಜನು ಪ್ರೀತಿಯುಳ್ಳವನಾಗಿ ಪುರೋಹಿತನು ಹೇಳಿದಂತೆಯೇ ಆ ಕಾರ್ಯವನ್ನು ಮಾಡಿದನು. ಹಾಗೆ ಮುನಿಗಳೂ ಪಟ್ಟಣದಿಂದ ಹಿಂದಿರುಗಿ ಪರ್ವತಕ್ಕೆ ಬಂದರು.

**ಪಿಹಿತಾಸ್ರವನಾಮಾಸೌ ಮಾಸ[೧]ಕ್ಷಪಣಸಂಯುತಃ ।**
**ಪ್ರವಿಷ್ಟೋ ನೃಪತೇಃ ಸದ್ಮ ಚರಂ[೨]ಶ್ಚರ್ಯಾಮನುಕ್ರಮಾತ್ ॥ ೨೦೨ ॥**

ಮಾಸೋಪವಾಸವನ್ನು ಮಾಡಿದ ಪಿಹಿತಾಸ್ರವರೆಂಬ ಈ ಮುನಿಗಳೂ ಪಾರಣೆಗೋಸ್ಕರ ಕ್ರಮವಾಗಿ ವೀರಚರ್ಯೆ(ಬಲದಹಸ್ತವನ್ನು ತಮ್ಮ ಭುಜದ ಮೇಲಿಟ್ಟು ಗಮನ)ಯಿಂದ ರಾಜನ ವಾಸಸ್ಥಾನಕ್ಕೆ ಪ್ರವೇಶಮಾಡಿದರು.

**ತತೋ ನೃಪತಿನಾ ತಸ್ಮೈ ದತ್ತಂ ದಾನಂ ಯಥಾವಿಧಿ ।**
**ಪಾತಿತಾ ಚ ದಿವೋ ದೇವೈರ್ವಸುಧಾರಾ ಕೃತಾರವಮ್ ॥ ೨೦೩ ॥**

ತರುವಾಯ ರಾಜನು ವಿಧಿಗನುಸಾರವಾಗಿ ಆ ಮುನಿಗಳಿಗೆ ಆಹಾರದಾನವನ್ನು ಕೊಟ್ಟನು. ಸ್ವರ್ಗದಿಂದ ದೇವತೆಗಳು ಭೇರಿಯ ಶಬ್ದವನ್ನೂ ರತ್ನವೃಷ್ಟಿಯನ್ನೂ ಮಾಡಿದರು. ಮುನಿದಾನದ ಅತಿಶಯದಿಂದ ಪಂಚಾಶ್ಚರ್ಯವಾದುದೆಂದು ಭಾವವು.

**ತತಸ್ತದವಲೋಕ್ಯಾಸೌ ಶಾರ್ದೂಲೋ ಜಾತಿಮಸ್ಮರತ್ ।**
**ಉಪಶಾಂತಶ್ಚ [೩]ನಿರ್ಮೋಚ್ಛಃ ಶರೀರಾಹಾರಮತ್ಯಜತ್ ॥ ೨೦೪ ॥**

ಆಮೇಲೆ ಆಹಾರದಾನಮೊದಲಾದ ಕಾರ್ಯವನ್ನು ನೋಡಿ ಆ ಹುಲಿಗೆ ಜಾತಿಸ್ಮರಣೆ(ಪೂರ್ವಭವಸ್ಮರಣೆ)ಯಾಯಿತು. ಅನಂತರ ತನ್ನ ಕ್ರೂರಸ್ವಭಾವವನ್ನು ಬಿಟ್ಟು ಶಾಂತವೂ ಮೋಹರಹಿತವೂ ಆಗಿ ತನ್ನ ಶರೀರದಲ್ಲಿಯೂ ಆಹಾರದಲ್ಲಿಯೂ ಮಮತ್ವವನ್ನು ಬಿಟ್ಟಿತು.

**ಶಿಲಾತಲೇ ನಿವಿಷ್ಟಂ ಚ [೪]ಸನ್ನ್ಯಸ್ತನಿಖಿಲೋಪಧಿಮ್ ।**
**ದಿವ್ಯಜ್ಞಾನಮಯೇನಾ[೫]ಕ್ಷ್ಣಾ ಸಹಸಾಬುದ್ಧ ತಂ ಮುನಿಃ ॥ ೨೦೫ ॥**

ಹಾಗೆಯೇ ಸಮಸ್ತಪರಿಗ್ರಹಗಳನ್ನೂ ಸಂಪೂರ್ಣವಾಗಿ ಪರಿತ್ಯಜಿಸಿ ಆ ಹುಲಿಯು ಒಂದು ಶಿಲೆ(ಅರೆಕಲ್ಲು)ಯ ಮೇಲೆ ಕುಳಿತುಕೊಂಡಿತು. ಈ ವಿಷಯವನ್ನು ಪಿಹಿತಾಸ್ರವಮುನಿಗಳು ತಮ್ಮ ದಿವ್ಯಜ್ಞಾನವೆಂಬ ನೇತ್ರದಿಂದ ತಿಳಿದರು.

**ತತೋ ನೃಪಮುವಾಚೇತ್ಥಮಸ್ಮಿನ್ನದ್ರಾವುಪಾಸಕಃ ।**
**ಸನ್ನ್ಯಾಸಂ ಕುರುತೇ ಕೋಪಿ ಸ ತ್ವಯಾ [೬]ಪರಿಚರ್ಯತಾಮ್॥ ೨೦೬ ॥**

ತರುವಾಯ ಆ ಮುನಿಗಳು ರಾಜನನ್ನು ಕುರಿತು ಇಂತೆಂದರು ''ಎಲೈ ರಾಜನೇ ! ಈ ಪರ್ವತದಲ್ಲಿ ಧರ್ಮವನ್ನವಲಂಬಿಸಿದ ಆವುದೋ ಒಂದು ಪ್ರಾಣಿಯು ಸನ್ನ್ಯಾಸವಿಧಿಯನ್ನು ಮಾಡುತ್ತಿದೆ. ನೀನು ಹೋಗಿ ಅದರ ಸೇವೆಯನ್ನು ಮಾಡು.

**ಸ [೭]ಚಕ್ರವರ್ತಿತಾಮೇತ್ಯ ಚರಮಾಂಗಃ ಪುರಾ ಪುರೋಃ ।**
**ಸೂನುರ್ಭೂತ್ವಾ ಪರಂ ಧಾಮ ವ್ರಜತ್ಯತ್ರ ನ ಸಂಶಯಃ ॥ ೨೦೭ ॥**

ಮುಂದೆ ಆ ಪ್ರಾಣಿಯು ವೃಷಭತೀರ್ಥಂಕರರಿಗೆ ಅಂತಿಮಶರೀರವನ್ನು ಧರಿಸಿದ ಪುತ್ರನಾಗಿ ಹುಟ್ಟಿ ಚಕ್ರವರ್ತಿಯ ಪದವಿಯನ್ನು ಪಡೆದು ಮೋಕ್ಷವನ್ನು ಹೊಂದುವುದು. ಈ ವಿಷಯದಲ್ಲಿ ಸಂಶಯವಿಲ್ಲ'' (ಆತ್ಮನು ಯಾವ ಶರೀರದಿಂದ ಮೋಕ್ಷವನ್ನು ಪಡೆಯುತ್ತಾನೋ ಆ ಅಂತಿಮಶರೀರಕ್ಕೆ ''ಚರಮಶರೀರ''ವೆಂದು ಹೆಸರು).

**ಇತಿ ತದ್ವಚನಾಜ್ಜಾತವಿಸ್ಮಯೋ ಮುನಿನಾ ಸಮಮ್ ।**
**ಗತ್ವಾ ನೃಪಸ್ತಮದ್ರಾಕ್ಷೀಚ್ಛಾರ್ದೂಲಂ ಕೃತಸಾಹಸಮ್ ॥ ೨೦೮ ॥**

ಈ ಪ್ರಕಾರವಾದ ಮುನಿಗಳ ವಚನದಿಂವ ರಾಜನಿಗೆ ಆಶ್ಚರ್ಯವುಂಟಾಗಿ ಮುನಿಗಳನ್ನು ಕರೆದುಕೊಂಡು ಹೋಗಿ ರಾಜನು ಸಾಹಸವನ್ನು ಮಾಡಿ (ಸನ್ನ್ಯಾಸವಿಧಿಯನ್ನಾಚರಿಸಿ)ದ ಆ ಹುಲಿಯನ್ನು ನೋಡಿದನು.

**ತತಸ್ತಸ್ಯ [೧]ಸಪರ್ಯಾಯಾಂ [೨]ಸಾಚಿವ್ಯಮಕರೋನ್ನೃಪಃ ।**
**ಮುನಿಶ್ಚಾಸ್ಮೈ ದದೌ [೩]ಕರ್ಣಜಾಪಂ ಸ್ವರ್ಗೀ ಭವೇತ್ಯಸೌ ॥ ೨೦೯ ॥**

ತರುವಾಯ ರಾಜನು ಆ ಹುಲಿಯ ಧರ್ಮಸೇವನೆಗೆ ಸಹಾಯವನ್ನು ಮಾಡಿದನು. ಈ ಮುನಿಗಳೂ ''ನೀನು ಸ್ವರ್ಗದಲ್ಲಿ ದೇವನಾಗು'' ಎಂದು ಹೇಳಿ ಈ ಹುಲಿಯ ಕಿವಿಯಲ್ಲಿ ಪಂಚನಮಸ್ಕಾರಮಂತ್ರವನ್ನು ಹೇಳಿದರು.

**ವ್ಯಾಘ್ರೋಪ್ಯಷ್ಟಾದಶಭಿ[೪]ರ್ಭಕ್ತಮಹೋಭಿರುಪಸಂಹರನ್ ।**
**ದಿವಾಕರಪ್ರಭೋ ನಾಮ್ನಾ ದೇವೋಭೂ[೫]ತ್ತದ್ವಿಮಾನಕೇ ॥ ೨೧೦ ॥**

ಹುಲಿಯು ಹದಿನೆಂಟು ದಿವಸಗಳ ವರೆಗೆ ಉಪವಾಸವನ್ನು ಮಾಡಿ ಮೃತಪಟ್ಟು ಸ್ವರ್ಗದಲ್ಲಿ ದಿವಾಕರಪ್ರಭವಿಮಾನದಲ್ಲಿ ದಿವಾಕರನೆಂಬ ದೇವನಾಗಿ ಹುಟ್ಟಿತು.

**ತದಾಶ್ಚರ್ಯಂ ಮಹದ್ದೃಷ್ಟ್ವಾ ನೃಪಸ್ಯಾಸ್ಯ ಚಮೂಪತಿಃ ।**
**ಮಂತ್ರೀ ಪುರೋಹಿತಶ್ಚ ದ್ರಾಗುಪಶಾಂತಿಂ ಪರಾಂ ಗತಾಃ ॥ ೨೧೧ ॥**

ಆ ಹುಲಿಯ ಆಶ್ಚರ್ಯಕರವಾದ ಘಟನೆಯನ್ನು ನೋಡಿ ಈ ಪ್ರೀತಿವರ್ಧನರಾಜನ ಸೇನಾಪತಿ ಮಂತ್ರಿ ಪುರೋಹಿತ ಈ ಮೂರು ಜನರು ತತ್ಕ್ಷಣದಲ್ಲಿಯೇ ಅತ್ಯಂತ ಉಪಶಮಭಾವವನ್ನು ಹೊಂದಿದರು.

**ನೃಪದಾನಾನುಮೋದೇನ ಕುರುಷ್ವಾರ್ಯಾಸ್ತತೋಭವನ್ ।**
**ಕಾಲಾಂತೇ ತೇ ತತೋ ಗತ್ವಾ ಶ್ರೀಮದೈಶಾನಕಲ್ಪಜಾಃ ॥ ೨೧೨ ॥**

**ಸುರಾ ಜಾತಾ ವಿಮಾನೇಶಾ ಮಂತ್ರೀ ಕಾಂಚನಸಂಜ್ಞಕೇ ।**
**ವಿಮಾನೇ ಕನಕಾಭೋಭೂದ್ರುಷಿತಾಖ್ಯೇ ಪುರೋಹಿತಃ ॥ ೨೧೩ ॥**

**ಪ್ರಭಂಜನೋಭೂತ್ಸೇನಾನೀಃ ಪ್ರಭಾನಾಮ್ನಿ ಪ್ರಭಾಕರಃ ।**
**ಲಲಿತಾಂಗಭವೇ ಯುಷ್ಮತ್ಪರಿವಾರಾಮರಾ ಇಮೇ ॥ ೨೧೪ ॥**

ರಾಜನು ಮುನಿಗಳಿಗೆ ಆಹಾರದಾನಕೊಟ್ಟುದನ್ನು ನೋಡಿ ಈ ಮೂರು ಮಂದಿಗಳೂ ಅನುಮೋದಪಟ್ಟುದರಿಂದ ತಮ್ಮ ಆಯುಷ್ಯವು ತೀರಿದ ಮೇಲೆ ಮರಣವನ್ನು ಹೊಂದಿ ಉತ್ತಮಭೋಗಭೂಮಿಯಲ್ಲಿ ಆರ್ಯರಾಗಿ ಹುಟ್ಟಿದರು. ಅಲ್ಲಿಂದ ಆಯುಷ್ಯವು ತೀರಿದನಂತರ ಮರಣವನ್ನು ಹೊಂದಿ ಸ್ವರ್ಗದಲ್ಲಿ ಈಶಾನಕಲ್ಪದಲ್ಲಿ ದೇವತೆಗಳಾಗಿ ಹುಟ್ಟಿದರು. ಆ ಮೂವರಲ್ಲಿ ಮಂತ್ರಿಯಾಗಿದ್ದವನು ಕಾಂಚನವಿಮಾನದಲ್ಲಿ ಕನಕಪ್ರಭನೆಂಬ ದೇವನಾಗಿ ಹುಟ್ಟಿದನು. ಪುರೋಹಿತನಾಗಿದ್ದವನು ರುಷಿತವಿಮಾನದಲ್ಲಿ ಪ್ರಭಂಜನನೆಂಬ ದೇವನಾಗಿ ಹುಟ್ಟಿದನು. ಸೇನಾಪತಿಯಾಗಿದ್ದವನು ಪ್ರಭಾಕರವಿಮಾನದಲ್ಲಿ ಪ್ರಭಾಕರನೆಂಬ ದೇವನಾಗಿ ಹುಟ್ಟಿದನು. ನಿನ್ನ ಲಲಿತಾಂಗಭವದಲ್ಲಿ ಇವರು ನಿನ್ನ ಪರಿವಾರ ದೇವತೆಗಳಾಗಿದ್ದರು.

**ತತಃ ಪ್ರಚ್ಯುತ್ಯ ಶಾರ್ದೂಲಚರೋ ದೇವೋಭವತ್ಸ ತೇ ।**
**ಮಂತ್ರೀ ಮತಿವರಃ ಸೂನುಃ ಶ್ರೀಮತ್ಯಾಂ ಮತಿಸಾಗರಾತ್ ॥ ೨೧೫ ॥**

ಹಿಂದೆ ಹುಲಿಯಾಗಿದ್ದ ದೇವನು ಸ್ವರ್ಗದಿಂದ ಚ್ಯುತನಾಗಿ ಮತಿಸಾಗರನಿಗೂ ಆತನ ಪತ್ನಿಯಾದ ಶ್ರೀಮತಿಯೆಂಬವಳಿಗೂ ಮಗನಾಗಿ ಹುಟ್ಟಿ ನಿನಗೆ ಮತಿವರನೆಂಬ ಮಂತ್ರಿಯಾದನು.

---

೧ ಉಪವಾಸಸಂಯುತಃ. ೨ ವೀರಚರ್ಯಾಮಾಚರನ್. ೩ ನಿರ್ಮೋಹಃ. ೪ ಸಂತ್ಯಕ್ತಸಕಲಪರಿಗ್ರಹಂ. ೫ ಲೋಚನೇನ. ೬ ಉಪಾಸ್ಯತಾಂ. ೭ ಭರತಚಕ್ರವರ್ತಿತ್ವಂ.

೧ ಆರಾಧನಾಯಾಂ. ೨ ಸಹಾಯತ್ವಂ. ೩ ಪಂಚನಮಸ್ಕಾರಂ. ೪ ಅನ್ನಂ. ೫ ದಿವಾಕರಪ್ರಭವಿಮಾನೇ.

**ಅಪರಾಜಿತಸೇನಾನ್ಯಶ್ಚ್ಯುತಃ ಸ್ವರ್ಗಾತ್ಪ್ರಭಾಕರಃ ।**
**ಆರ್ಜವಾಯಾಶ್ಚ ಪುತ್ರೋಽಭೂದಕಂಪನಸಮಾಹ್ವಯಃ ॥ ೨೧೬ ॥**

ಪ್ರಭಾಕರದೇವನು ಸ್ವರ್ಗದಿಂದ ಚ್ಯುತನಾಗಿ ಅಪರಾಜಿತನೆಂಬ ಸೇನಾಪತಿಗೂ ಆತನ ಪತ್ನಿಯಾದ ಆರ್ಜವೆಗೂ ಪುತ್ರನಾಗಿ ಹುಟ್ಟಿ ಅಕಂಪನನೆಂಬ ಸೇನಾಪತಿಯಾದನು.

**ಶ್ರುತಕೀರ್ತೇರಥಾನಂತಮತ್ಯಾಶ್ಚ ಕನಕಪ್ರಭಃ ।**
**ಸುತೋಽಭೂದಯಮಾನಂದಃ ಪುರೋಧಾಸ್ತವ ಸಂಮತಃ ॥ ೨೧೭ ॥**

ಕನಕಪ್ರಭದೇವನು ಸ್ವರ್ಗದಿಂದ ಚ್ಯುತನಾಗಿ ಶ್ರುತಕೀರ್ತಿಯೆಂಬವನಿಗೂ ಆತನ ಪತ್ನಿಯಾದ ಅನಂತಮತಿಗೂ ಪುತ್ರನಾಗಿ ಜನಿಸಿ ನಿನಗೆ ಪ್ರೀತಿಪಾತ್ರನಾದ ಆನಂದನೆಂಬ ಪುರೋಹಿತನಾದನು.

**ಪ್ರಭಂಜನಶ್ಚ್ಯುತಸ್ತಸ್ಮಾಚ್ಛ್ರೇಷ್ಠ್ಯಭೂದ್ಧನಮಿತ್ರಕಃ ।**
**ಧನದತ್ತೋದರೇ ಜಾತೋ ಧನದತ್ತಾದ್ಧನರ್ದ್ಧಿಮಾನ್ ॥ ೨೧೮ ॥**

ಪ್ರಭಂಜನದೇವನು ಸ್ವರ್ಗದಿಂದ ಚ್ಯುತನಾಗಿ ಧನದತ್ತ ಶ್ರೇಷ್ಠಿಯ ಪತ್ನಿಯಾದ ಧನದತ್ತೆಯ ಗರ್ಭದಲ್ಲಿ ಜನಿಸಿ ಐಶ್ವರ್ಯಸಂಪನ್ನನಾದ ಧನಮಿತ್ರನೆಂಬ ಶ್ರೇಷ್ಠಿಯಾದನು.''

**ಇತಿ ತಸ್ಯ ಮುನೀಂದ್ರಸ್ಯ ವಚಃ ಶ್ರುತ್ವಾ ನರಾಧಿಪಃ ।**
**ಶ್ರೀಮತೀ ಚ ತದಾ ಧರ್ಮೇ ಪರಂ ಸಂವೇಗಮಾಪತುಃ ॥ ೨೧೯ ॥**

ಈ ಪ್ರಕಾರವಾದ ಆ ಮುನೀಶ್ವರರ ವಚನವನ್ನು ಕೇಳಿ ವಜ್ರಜಂಘರಾಜನೂ ಶ್ರೀಮತಿಯೂ ಧರ್ಮದಲ್ಲಿ ಬಹಳ ಪ್ರೀತಿಯುಳ್ಳವರಾದರು.

**ರಾಜಾ ಸವಿಸ್ಮಯಂ ಭೂಯೋಽಪ್ಯಪೃಚ್ಛತ್ತಂ ಮುನೀಶ್ವರಮ್ ।**
**ಅಮೀ ನಕುಲಶಾರ್ದೂಲಗೋಲಾಂಗೂಲಾಃ ಸಸೂಕರಾಃ ॥ ೨೨೦ ॥**

**ಕಸ್ಮಾದಸ್ಮಿನ್ ಜನಾಕೀರ್ಣೇ ದೇಶೇ ತಿಷ್ಠಂತ್ಯನಾಕುಲಾಃ ।**
**ಭವನ್ಮುಖಾರವಿಂದಾವಲೋಕನೇ ದತ್ತದೃಷ್ಟಯಃ ॥ ೨೨೧ ॥**

ರಾಜನು ಆಶ್ಚರ್ಯಪಟ್ಟು ಪುನಃ ಆ ಮುನೀಶ್ವರರನ್ನು ಕುರಿತು '' ಸ್ವಾಮಿಯೇ ! ಬಹಳ ಜನರು ಸೇರಿರುವ ಈ ಪ್ರದೇಶದಲ್ಲಿ ಮುಂಗಸಿ ಹುಲಿ ಕೋತಿ (ಮಂಗ) ಹಂದಿ ಈ ನಾಲ್ಕು ಪ್ರಾಣಿಗಳು ತಮ್ಮ ಮುಖಕಮಲವನ್ನು ನೋಡುವುದರಲ್ಲಿ ಆಸಕ್ತಗಳಾಗಿ ನಿರ್ಭಯದಿಂದ ಕುಳಿತಿವೆ. ಇದಕ್ಕೆ ಕಾರಣವೇನು ? '' ಎಂದು ಕೇಳಿದನು.

**ಇತಿ ರಾಜ್ಞಾ[1]ನುಯುಕ್ತೋಽಸೌ ಚಾರಣರ್ಷಿರವೋಚತ ।**
**ಶಾರ್ದೂಲೋಽಯಂ [2]ಭವೇಽನ್ಯಸ್ಮಿ[3]ನ್ದೇಶೇಽಸ್ಮಿನ್ನೇವ ವಿಶ್ರುತೇ ॥ ೨೨೨ ॥**

**ಹಸ್ತಿನಾಖ್ಯಪುರೇ ಖ್ಯಾತೇ ವೈಶ್ಯಾತ್ಸಾಗರದತ್ತತಃ ।**
**ಧನವತ್ಯಾಮಭೂತ್ಸೂನುರುಗ್ರಸೇನಸಮಾಹ್ವಯಃ ॥ ೨೨೩ ॥**

ಹೀಗೆ ರಾಜನು ಪ್ರಶ್ನೆಮಾಡಿದನಂತರ ಈ ಚಾರಣಮುನಿಗಳು ಇಂತೆಂದರು ''ಈ ಹುಲಿಯು ಪೂರ್ವಭದಲ್ಲಿ ಇದೇ ಪುಷ್ಕಲಾವತೀದೇಶದಲ್ಲಿರುವ ಪ್ರಸಿದ್ಧವಾದ ಹಸ್ತಿನಪುರದಲ್ಲಿ ಸಾಗರದತ್ತನೆಂಬ ವೈಶ್ಯನಿಗೆ ಧನವತಿಯೆಂಬ ಪತ್ನಿಯಲ್ಲಿ ಉಗ್ರಸೇನನೆಂಬ ಮಗನಾಗಿದ್ದಿತು.

**ಸೋಽಪ್ರತ್ಯಾಖ್ಯಾನತಃ ಕ್ರೋಧಾತ್ಪೃಥಿವೀಭೇದಸನ್ನಿಭಾತ್ ।**
**ತಿರ್ಯಗಾಯುರ್ಬಬಂಧಾಜ್ಞೋ ನಿಸರ್ಗಾದತಿರೋಷಣಃ ॥ ೨೨೪ ॥**

೧ ಪೃಷ್ಟಃ. ೨ ಪೂರ್ವಭವೇ. ೩ ಪುಷ್ಕಲಾವತೀವಿಷಯೇ.

ಆ ಉಗ್ರಸೇನನು ಭೂಮಿಯ ಬಿರಿತ(ಸೀಳುವಿಕೆ)ಕ್ಕೆ ಸಮಾನವಾದ ಅಪ್ರತ್ಯಾಖ್ಯಾನಕ್ರೋಧದ ಉದಯದಿಂದ ಸ್ವಭಾವವಾಗಿ ಕೋಪಿಷ್ಠನಾಗಿದ್ದನು. ಆದುದರಿಂದ ಆ ಮೂರ್ಖನಿಗೆ ತಿರ್ಯಗ್ಗತಿಯ ಆಯುಷ್ಯವು ಬಂಧವಾಯಿತು. (ಅನಂತಾನುಬಂಧಿಕ್ರೋಧ, ಅಪ್ರತ್ಯಾಖ್ಯಾನಕ್ರೋಧ, ಪ್ರತ್ಯಾಖ್ಯಾನಕ್ರೋಧ, ಸಂಜ್ವಲನಕ್ರೋಧವೆಂದು ಕ್ರೋಧವು ನಾಲ್ಕುಪ್ರಕಾರವಾಗಿದೆ. ಇವುಗಳಲ್ಲಿ ಅನಂತಾನುಬಂಧಿಕ್ರೋಧವು ಶಿಲೆಯ ಬಿರಿತಕ್ಕೂ ಅಪ್ರತ್ಯಾಖ್ಯಾನಕ್ರೋಧವು ಭೂಮಿಯ ಬಿರಿತಕ್ಕೂ ಪ್ರತ್ಯಾಖ್ಯಾನಕ್ರೋಧವು ಧೂಳಿಯ ರೇಖೆಗೂ ಸಂಜ್ವಲನಕ್ರೋಧವು ಜಲರೇಖೆಗೂ ಸಮಾನವಾದುವು).

**ಕೋಷ್ಠಾಗಾರನಿಯುಕ್ತಾಂಶ್ಚ [1]ನಿರ್ಭರ್ತ್ಸ್ಯ ಘೃತತಂಡುಲಮ್ ।**
**ಬಲಾದಾದಾಯ [2]ವೇಶ್ಯಾಭಿಃ ಸಂ[3]ಪ್ರಾಯಚ್ಛತ ದುರ್ಮದೀ ॥ ೨೨೫ ॥**

ಮದಿಸಿದ ಆ ಉಗ್ರಸೇನನು ರಾಜನ ಕೋಶಾಧಿಕಾರಿಗಳನ್ನು ಬೆದರಿಸಿ ಬಲಾತ್ಕಾರದಿಂದ ತುಪ್ಪ ಅಕ್ಕಿ ಮೊದಲಾದ ಪದಾರ್ಥಗಳನ್ನು ತೆಗೆದುಕೊಂಡು ಸೂಳೆಯರಿಗೆ ಕೊಟ್ಟನು.

**ತದ್ವಾರ್ತಾಕರ್ಣನಾದ್ರಾಜ್ಞಾ ಬಂಧಿತಸ್ತೀವ್ರವೇದನಮ್ ।**
**[4]ಚಪೇಟಚರಣಾಘಾತೈರ್ಮೃತ್ವಾ ವ್ಯಾಘ್ರ [5]ಇಹಾಭವತ್ ॥ ೨೨೬ ॥**

ಆ ಸಮಾಚಾರವನ್ನು ಕೇಳಿ ರಾಜನು ಉಗ್ರಸೇನನನ್ನು ಬಂಧಿಸಿ ಹಸ್ತತಲಗಳಿಂದಲೂ ಕಾಲುಗಳಿಂದಲೂ ಹೊಡೆಯಿಸಿದನು. ಆದರ ತೀವ್ರವೇದನೆಯಿಂದ ಉಗ್ರಸೇನನು ಸತ್ತು ಈ ಶಷ್ಪಸರೋವರಪ್ರದೇಶದಲ್ಲಿ ಹುಲಿಯಾಗಿ ಹುಟ್ಟಿದನು.

**ವರಾಹೋಽಯಂ ಭವೇಽತೀತೇ ಪುರೇ ವಿಜಯನಾಮನಿ ।**
**ಸೂನುರ್ವಸಂತಸೇನಾಯಾಂ ಮಹಾನಂದನೃಪಾದಭೂತ್ ॥ ೨೨೭ ॥**

**ಹರಿವಾಹನನಾಮಾಸಾವಪ್ರತ್ಯಾಖ್ಯಾನಮಾನತಃ ।**
**ಮಾನಮಸ್ಥಿಸಮಂ ಬಿಭ್ರತ್ಪಿತ್ರೋರಪ್ಯವಿನೀತಕಃ ॥ ೨೨೮ ॥**

ಈ ಹಂದಿಯು ಪೂರ್ವಭವದಲ್ಲಿ ವಿಜಯಪುರದಲ್ಲಿ ಮಹಾನಂದನೆಂಬ ರಾಜನಿಗೂ ವಸಂತಸೇನೆಗೂ ಹರಿವಾಹನನೆಂಬ ಮಗನಾಗಿದ್ದಿತು. ಈ ಹರಿ ವಾಹನನು ಅಪ್ರತ್ಯಾಖ್ಯಾನಮಾನಕಷಾಯದ ಉದಯದಿಂದ ಮೂಳೆ(ಎಲುಬು)ಗೆ ಸಮಾನವಾದ ಮಾನ(ಅಹಂಕಾರ)ವುಳ್ಳವನಾಗಿ ತನ್ನ ತಾಯಿತಂದೆಗಳಲ್ಲಿಯೂ ವಿನಯವುಳ್ಳವನಾಗಿರಲ್ಲಿಲ್ಲ.

**ತಿರ್ಯಗಾಯುರತೋ ಬಧ್ವಾ ನೈಚ್ಛತ್ಪಿತ್ರನುಶಾಸನಮ್ ।**
**ಧಾವಮಾನಃ ಶಿಲಾಸ್ತಂಭಜರ್ಜರೀಕೃತಮಸ್ತಕಃ ॥ ೨೨೯ ॥**

**ಆರ್ತೋ ಮೃತ್ವಾ ವರಾಹೋಽಭೂದ್ವಾನರೋಽಯಂ ಪುರಾಭವೇ ।**
**ಪುರೇ ಧಾನ್ಯಾಹ್ವಯೇ ಜಾತಃ ಕುಬೇರಾಖ್ಯವಣಿಕ್ಸುತಃ ॥ ೨೩೦ ॥**

**ಸುದತ್ತಾಗರ್ಭಸಂಭೂತೋ ನಾಗದತ್ತಸಮಾಹ್ವಯಃ ।**
**ಅಪ್ರತ್ಯಾಖ್ಯಾನಮಾಯಾಂ ತಾಂ ಮೇಷಶೃಂಗಸಮಾಂ ಶ್ರಿತಃ ॥ ೨೩೧ ॥**

ಈ ಮಾನಪರಿಣಾಮದಿಂದ ಹರಿವಾಹನನಿಗೆ ತಿರ್ಯಂಚಾಯುಷ್ಯವು ಬಂಧವಾಯಿತು. ಒಂದು ದಿನ ತಂದೆಯ ಆಜ್ಞೆಯನ್ನು ಮೀರಿ ಓಡಿಹೋಗುತ್ತಿರುವಾಗ ಕಲ್ಲಿನ ಕಂಭವು ತಗುಲಿ ತಲೆಯು ಸೀಳಿತು. ಇದರ ವೇದನೆಯನ್ನನುಭವಿಸುತ್ತ ಆರ್ತಧ್ಯಾನದಿಂದ ಸತ್ತು ಹಂದಿಯಾಗಿ ಹುಟ್ಟಿದನು. ಈ ಕಪಿಯು ಪೂರ್ವಭವದಲ್ಲಿ ಧಾನ್ಯವೆಂಬ ಪಟ್ಟಣದಲ್ಲಿ ಕುಬೇರನೆಂಬ ವೈಶ್ಯನಿಗೂ ಆತನ ಪತ್ನಿಯಾದ ಸುದತ್ತೆಗೂ ನಾಗದತ್ತನೆಂಬ ಮಗನಾಗಿ ಹುಟ್ಟಿತು. ಆ

೧ ಸಂತರ್ಜ್ಯ. ೨ ವೇಶ್ಯಾಭ್ಯ ಇತ್ಯರ್ಥಃ. ೩ ದಾಣೋಯಚ್ಛಾದೇಶಃ. ೪ ಹಸ್ತತಲಪಾದಾಘಾತೈಃ. ೫ ಶಷ್ಪಸರೋವರಪ್ರದೇಶೇ.

ನಾಗದತ್ತನು ಅಪ್ರತ್ಯಾಖ್ಯಾನಮಾಯಾಕಷಾಯದ ಉದಯದಿಂದ ಕುರಿಯ ಕೋಡಿನಂತೆ (ಕೊಂಬಿನಂತೆ) ವಕ್ರವಾದ ಕುಟಿಲಪರಿಣಾಮವುಳ್ಳವನಾಗಿದ್ದನು.

**ಸ್ವಾನುಜಾಯಾ ವಿವಾಹಾರ್ಥಂ [1]ಸ್ವಾಪಣೇ [2]ಸ್ವಾಪತೇಯಕಮ್ ।**
**ಸ್ವಾಂಬಾಯಾ[3]ಮಾದಧಾನಾಯಾಂ ಸುಪರೀಕ್ಷ್ಯ ಯಥೇಪ್ಸಿತಮ್ ॥**

ಒಂದುದಿನ ಆ ನಾಗದತ್ತನ ತಾಯಿಯು ಆತನ ತಂಗಿಯ ವಿವಾಹಕ್ಕೋಸ್ಕರ ತನ್ನ ಅಂಗಡಿಯಲ್ಲಿ ದ್ರವ್ಯವನ್ನು ಇಚ್ಛಾನುಸಾರವಾಗಿ ಪರೀಕ್ಷಿಸಿ ಇರಿಸುತ್ತಿರಲು

**ತತಸ್ತದ್ವಂಚನೋಪಾಯಮಜಾನನ್ನಾರ್ತಧೀರ್ಮ್ಟತಃ ।**
**ತಿರ್ಯಗಾಯುರ್ವಶೇನಾಸೌ ಗೋಲಾಂಗೂಲತ್ವಮಿತ್ಯಗಾತ್ ॥ ೨೩೩ ॥**

ತರುವಾಯ ಈ ನಾಗದತ್ತನು ಆಕೆಯನ್ನು ವಂಚಿಸುವ ಉಪಾಯವನ್ನು ತಿಳಿಯದೆ ಆರ್ತಧ್ಯಾನವುಳ್ಳವನಾಗಿ ಸತ್ತು ತಿರ್ಯಂಚಾಯುಷ್ಯವಶದಿಂದ ಕಪಿಯಾಗಿ ಹುಟ್ಟಿದನು.

**ನಕುಲೋಯಂ ಭವೇನ್ಯಸ್ಮಿನ್ಸುಪ್ರತಿಷ್ಠಿತಪತ್ತನೇ ।**
**ಅಭೂತ್ಕಾಂದವಿಕೋ ನಾಮ್ನಾ ಲೋಲುಪೋ ಧನಲೋಲುಪಃ ॥**

ಈ ಮುಂಗಸಿಯು ಪೂರ್ವಭವದಲ್ಲಿ ಸುಪ್ರತಿಷ್ಠಿತವೆಂಬ ಪಟ್ಟಣದಲ್ಲಿ ಧನಲೋಭಿಯಾದ ಲೋಲುಪನೆಂಬೋರ್ವ ಭಕ್ಷ್ಯಮಾಡುವವ(ಮಿಠಾಯಿ ವ್ಯಾಪಾರಿ)ನಾಗಿದ್ದಿತು.

**ಸೋನ್ಯದಾ ನೃಪತೌ ಚೈತ್ಯಗೃಹನಿರ್ಮಾಪಣೋದ್ಯಮೇ ।**
**ಇಷ್ಟಕಾ ವಿಷ್ಟಿಪುರುಷೈರಾನಾಯಯತಿ ಲುಬ್ಧಧೀಃ ॥ ೨೩೫ ॥**

**ದತ್ವಾಪೂಪಂ ನಿಗೂಢಂ ಸ್ವಂ ಮೂಢಃ ಪ್ರಾವೇಶಯೇದ್ಗೃಹಮ್ ।**
**ಇಷ್ಟಕಾಸ್ತತ್ರ ಕಾಸಾಂಚಿದ್ಭೇದೇಪಶ್ಯಚ್ಚ ಕಾಂಚನಮ್ ॥ ೨೩೬ ॥**

**ತಲ್ಲೋಭಾದಿಷ್ಟಕಾ ಭೂಯೋಪ್ಯಾನಾಯಯಿತುಮುದ್ಯತಃ ।**
**ಪುರುಷೈರ್ವಿಷ್ಟಿಕೈಸ್ತೇಭ್ಯೋ ದತ್ವಾಪೂಪಾದಿಭೋಜನಮ್ ॥ ೨೩೭ ॥**

ಒಂದು ಕಾಲದಲ್ಲಿ ರಾಜನು ದೇವಸ್ಥಾನವನ್ನು ಕಟ್ಟಿಸುವುದಕ್ಕೆ ಪ್ರಯತ್ನಪಟ್ಟನು. ಆಗ ಲೋಭಿಯಾದ ಆ ಲೋಲುಪನು ಕೂಲಿಯಾಳುಗಳಿಗೆ ಗುಪ್ತವಾಗಿ ಸ್ವಲ್ಪ ಮಿಠಾಯಿಯನ್ನು ಕೊಟ್ಟು ಇಟ್ಟಿಗೆಗಳನ್ನು ತರಿಸಿ ತನ್ನ ಮನೆಗೆ ಸೇರಿಸುತ್ತಿದ್ದನು. ಕೆಲವು ಇಟ್ಟಿಗೆಗಳನ್ನು ಒಡೆದು ನೋಡಿ ಅವುಗಳಲ್ಲಿ ಬಂಗಾರವಿರುವುದನ್ನೂ ಕಂಡನು. ಅದರ ಲೋಭದಿಂದ ಆ ಕೂಲಿಯಾಳುಗಳಿಗೆ ಮಿಠಾಯಿಮೊದಲಾದ ಭೋಜನವನ್ನು ಕೊಟ್ಟು ಪುನಃ ಅವರಿಂದ ಇಟ್ಟಿಗೆಗಳನ್ನು ತರಿಸುತ್ತಿದ್ದನು.

**ಸ್ವಸುತಾಗ್ರಾಮಮನ್ಯೇದ್ಯುಃ ಸ ಗಚ್ಛನ್ಪುತ್ರಮಾತ್ಮನಃ ।**
**ನ್ಯಯುಙ್ಕ್ತ ಪುತ್ರಕಾಹಾರಂ ದತ್ವಾನಾಯ್ಯಾಸ್ತ್ವಯೇಷ್ಟಕಾಃ ॥ ೨೩೮ ॥**

ಒಂದು ದಿನ ಆ ಲೋಲುಪನು ತನ್ನ ಮಗಳ ಗ್ರಾಮಕ್ಕೆ ಹೋಗುವವನಾಗಿ ತನ್ನ ಮಗನನ್ನು ಕುರಿತು ''ಮಗನೇ ! ನೀನು ಕೂಲಿಯಾಳುಗಳಿಗೆ ಆಹಾರವನ್ನು ಕೊಟ್ಟು ಇಟ್ಟಿಗೆಗಳನ್ನು ತರಿಸಬೇಕು'' ಎಂದು ಹೇಳಿದನು.

**ಇತ್ಯುಕ್ತ್ವಾಸ್ಮಿನ್ಗತೇ ಪುತ್ರಸ್ತತ್ತಥಾ ನಾಕರೋದತಃ ।**
**ಸ ನಿವೃತ್ಯ ಸುತಂ ಪೃಷ್ಟ್ವಾ ರುಷ್ಟೋಸ್ಮೈ ದುಷ್ಟಮಾನಸಃ ॥ ೨೩೯ ॥**

**ಶಿರಃ ಪುತ್ರಸ್ಯ ನಿರ್ಭಿದ್ಯ ಲಕುಟೋಪಲತಾಡನೈಃ ।**
**ಚರಣೌ ಸ್ವೌ ಚ ನಿರ್ವೇದಾದ್ವಭಂಜ ಕಿಲ ಮೂಢಧೀಃ ॥ ೨೪೦ ॥**

ಹೀಗೆ ಹೇಳಿ ಲೋಲುಪನು ಹೊರಟು ಹೋದನು. ಆದರೆ ಮಗನು ತಂದೆಹೇಳಿದಂತೆ ಇಟ್ಟಿಗೆಗಳನ್ನು ತರಿಸಲಿಲ್ಲ. ಇದರಿಂದ ಆ ದುಷ್ಟನಾದ ಲೋಲುಪನು ಹಿಂದಿರುಗಿ ಬಂದು ಮಗನನ್ನು ವಿಚಾರಿಸಿ ತಾನು ಹೇಳಿದಂತೆ ಮಾಡದಿದ್ದುದಕ್ಕಾಗಿ ಬಹಳ ಕೋಪಗೊಂಡು ದೊಣ್ಣೆಯಿಂದಲೂ ಕಲ್ಲುಗಳಿಂದಲೂ ಆ ಮಗನ ತಲೆಯನ್ನು ಒಡೆದನು. ಪುನಃ ಮಗನ ಮೃತ್ಯುವಿಗಾಗಿ ಪಶ್ಚಾತ್ತಾಪಪಟ್ಟು ಆ ಮೂರ್ಖನು ತನ್ನ ಕಾಲುಗಳನ್ನೂ ಸೀಳಿಕೊಂಡನು.

**ರಾಜ್ಞಾ ಚ ಘಾತಿತೋ ಮೃತ್ವಾ ನಕುಲತ್ವಮುಪಾಗಮತ್ ।**
**ಅಪ್ರತ್ಯಾಖ್ಯಾನಲೋಭೇನ ನೀತಃ ಸೋಯಂ ದಶಾಮಿಮಾಮ್ ॥**

ಈ ಸಮಾಚಾರವನ್ನು ರಾಜನು ತಿಳಿದು ಲೋಲುಪನನ್ನು ಕೊಲ್ಲಿಸಿದನು. ಲೋಲುಪನು ಅಪ್ರತ್ಯಾಖ್ಯಾನಲೋಭಪರಿಣಾಮದಿಂದ ಮೃತಪಟ್ಟು ಮುಂಗಸಿಯ ಪರ್ಯಾಯವನ್ನು ಪಡೆದು ಈ ಅವಸ್ಥೆಯನ್ನು ಹೊಂದಿದನು.

**ಯುಷ್ಮದ್ದಾನಂ ಸಮೀಕ್ಷ್ಯೈತೇ ಪ್ರಮೋದಂ ಪರಮಾಗತಾಃ ।**
**ಪ್ರಾಪ್ತಾ ಜಾತಿಸ್ಮರತ್ವಂ ಚ ನಿರ್ವೇದಮಧಿಕಂ ಶ್ರಿತಾಃ ॥ ೨೪೨ ॥**

ಈ ನಾಲ್ಕು ಪ್ರಾಣಿಗಳೂ ನೀವು ಮಾಡಿದ ಆಹಾರದಾನವನ್ನು ನೋಡಿ ಬಹಳ ಸಂತೋಷಪಟ್ಟುವು. ಇವುಗಳಿಗೆ ಪೂರ್ವಭವಸ್ಮರಣೆಯುಂಟಾಗಿ ಅತ್ಯಂತವೈರಾಗ್ಯವನ್ನೂ ಹೊಂದಿದುವು.

**ಭವದ್ದಾನಾನುಮೋದೇನ ಬದ್ಧಾಯುಷ್ಕಾಃ ಕುರುಷ್ವಮೀ ।**
**ತತೋ ವಿಭೀತಿಮುತ್ಸೃಜ್ಯ ಸ್ಥಿತಾ ಧರ್ಮಶ್ರವಾರ್ಥಿನಃ ॥ ೨೪೩ ॥**

ನೀವು ಮಾಡಿದ ದಾನದ ಅನುಮೋದದಿಂದ ಈ ಪ್ರಾಣಿಗಳಿಗೆ ಉತ್ತಮಭೋಗಭೂಮಿಯ ಮನುಷ್ಯಾಯುಷ್ಯವು ಬಂಧವಾಗಿದೆ. ಆದುದರಿಂದ ಈ ಪ್ರಾಣಿಗಳು ಭಯವನ್ನು ಬಿಟ್ಟು ಪ್ರೀತಿಯಿಂದ ಧರ್ಮಶ್ರವಣವನ್ನು ಮಾಡುತ್ತಿವೆ.

**ಇತೋಷ್ಟಮೇ ಭವೇ ಭಾವಿನ್ಯಪುನರ್ಭವತಾಂ ಭವಾನ್ ।**
**ಭವಿತಾಮೀ ಚ ತತ್ರೈವ ಭವೇ ಸೇತ್ಸ್ಯಂತ್ಯಸಂಶಯಮ್ ॥ ೨೪೪ ॥**

ಮುಂದೆ ಎಂಟನೆಯ ಭವದಲ್ಲಿ ನೀನು ಮೋಕ್ಷವನ್ನು ಹೊಂದುವೆ. ಈ ಪ್ರಾಣಿಗಳೂ ಅದೇ ಭವದಲ್ಲಿ ನಿಃಸಂಶಯವಾಗಿ ಮೋಕ್ಷವನ್ನು ಪಡೆಯುವುವು.

**ತಾವಚ್ಚಾಭ್ಯುದಯಂ ಸೌಖ್ಯಂ ದಿವ್ಯಮಾನುಷಗೋಚರಮ್ ।**
**ತ್ವಯೈವ ಸಮಮೇತೇನುಭೋಕ್ತಾರಃ ಪುಣ್ಯಭಾಗಿನಃ ॥ ೨೪೫ ॥**

ಅವರೆಗೆ ಈ ಪುಣ್ಯಭಾಗಿಗಳಾದ ಪ್ರಾಣಿಗಳು ನಿನ್ನೊಡನೆಯೇ ದೇವಮನುಷ್ಯಸಂಬಂಧಿಯಾದ ಅಭ್ಯುದಯಸುಖವನ್ನನುಭವಿಸುವುವು.

**ಶ್ರೀಮತೀ ಚ ಭವತ್ತೀರ್ಥೇ ದಾನತೀರ್ಥಪ್ರವರ್ತಕಃ ।**
**ಶ್ರೇಯಾನ್ಭೂತ್ವಾ ಪರಂ ಶ್ರೇಯಃ ಶ್ರಯಿಷ್ಯತಿ ನ ಸಂಶಯಃ ॥ ೨೪೬ ॥**

ನೀನು ತೀರ್ಥಂಕರನಾಗುವ ಕಾಲದಲ್ಲಿ ಶ್ರೀಮತಿಯು ದಾನತೀರ್ಥಪ್ರವರ್ತಕನಾದ ಶ್ರೇಯಾಂಸರಾಜನಾಗಿ ಉತ್ಕೃಷ್ಟಶ್ರೇಯಸ್ಸನ್ನು ಪಡೆಯುವಳು. ಈ ವಿಷಯದಲ್ಲಿ ಸಂಶಯವಿಲ್ಲ.''

**ಇತಿ ಚಾರಣಯೋಗೀಂದ್ರವಚಃ ಶ್ರುತ್ವಾ ನರಾಧಿಪಃ ।**
**ದಧೇ ರೋಮಾಂಚಿತಂ ಗಾತ್ರಂ ತತಂ ಪ್ರೇಮಾಂಕುರೈರಿವ ॥ ೨೪೭ ॥**

ಈ ಪ್ರಕಾರವಾದ ಚಾರಣಮುನಿಗಳ ವಚನವನ್ನು ಕೇಳಿ ವಜ್ರಜಂಘರಾಜನ ಶರೀರದಲ್ಲಿ, ಪ್ರೇಮದ ಮೊಳಕೆಯೋ ಎಂಬಂತೆ, ರೋಮಾಂಚವಾಯಿತು.

**ತತೋಭಿವಂದ್ಯ ಯೋಗೀಂದ್ರೌ ನರೇಂದ್ರಃ ಪ್ರಿಯಯಾನ್ವಿತಃ ।**
**ಸ್ವಾವಾಸಂ ಪ್ರತ್ಯಗಾತ್ಪ್ರೀತೈಃ ಸಮಂ ಮತಿವರಾದಿಭಿಃ ॥ ೨೪೮ ॥**

೧ ನಿಜವಿಪಣ್ಯಾಂ. ೨ ವಿತ್ತಂ. ೩ ನಿಕ್ಷಿಪ್ತವತ್ಯಾಂ.

ತರುವಾಯ ವಜ್ರಜಂಘರಾಜನು ಶ್ರೀಮತೀಸಹಿತನಾಗಿ ಮುನಿಗಳನ್ನು ವಂದಿಸಿ ಸಂತುಷ್ಟರಾದ ಮತಿವರಮೊದಲಾದವರೊಡನೆ ತನ್ನ ವಾಸಸ್ಥಾನಕ್ಕೆ ಹೋದನು.

**ಮುನೀ ಚ ವಾತರಶನೌ ವಾಯು[1]ಮನ್ವೀಯತುಸ್ತದಾ ।**
**ಮುನಿವೃತ್ತೇರಸಂಗತ್ವಂ [2]ಖ್ಯಾಪಯಂತೌ ನಭೋಗತೀ ॥ ೨೪೯ ॥**

ಆಗ ದಿಗಂಬರರಾದ ಆ ಮುನಿಗಳಿಬ್ಬರೂ ಮುನಿವೃತ್ತಿಯ ನಿಃಸಂಗ (ನಿರ್ಲಿಪ್ತ) ವ್ಯಾಪಾರವನ್ನು ಪ್ರಕಟಪಡಿಸುವವರಾಗಿ ಆಕಾಶಗಮನದಿಂದ ಗಾಳಿಯನ್ನನುಸರಿಸಿದರು. ಆಕಾಶಮಾರ್ಗವಾಗಿ ಹೊರಟು ಹೋದರೆಂದರ್ಥವು.

**ನೃಪೋಽಪಿ ತದ್ಗುಣಾಧ್ಯಾನಸಮುತ್ಕಂಠಿತಮಾನಸಃ ।**
**ತತ್ರೈವ ತ[3]ದಹಃಶೇಷ[4]ಮತಿವಾಹ್ಯ ಸಸಾಧನಃ ॥ ೨೫೦ ॥**

**ತತಃ ಪ್ರಯಾಣಕೈಃ ಕೈಶ್ಚಿತ್ಸಂಪ್ರಾಪತ್ಪುಂಡರೀಕಿಣೀಮ್ ।**
**ತತ್ರಾಪಶ್ಯಚ್ಚ ಶೋಕಾರ್ತಾಂ ದೇವೀಂ ಲಕ್ಷ್ಮೀಮತೀಂ ಸತೀಮ್ ॥**

**ಅನುಂದರೀಂ ಚ ಸೋತ್ಕಂಠಾಂ ಸಮಾಶ್ವಾಸ್ಯ ಶನೈರಸೌ ।**
**ಪುಂಡರೀಕಸ್ಯ ತದ್ರಾಜ್ಯಮಕರೋನ್ನಿರುಪಪ್ಲವಮ್ ॥ ೨೫೧ ॥**

ರಾಜನು ಅತ್ಯಂತ ಕುತೂಹಲವಾದ ಮನಸ್ಸಿನಿಂದ ಆ ಮುನಿಗಳ ಗುಣಗಳನ್ನು ಸ್ಮರಿಸುತ್ತ ಸೈನ್ಯಸಹಿತನಾಗಿ ಆ ದಿವಸವನ್ನೆಲ್ಲಾ ಅಲ್ಲಿ(ಶಷ್ಪಸರೋವರಪ್ರದೇಶದಲ್ಲಿ)ಯೇ ಕಳೆದು, ಅನಂತರ ಕೆಲವು ದಿವಸಗಳ ಪ್ರಯಾಣಗಳಿಂದ ಪುಂಡರೀಕಿಣಿಯನ್ನು ತಲುಪಿದನು. ಅಲ್ಲಿ ಶೋಕಪೀಡಿತರಾಗಿ ಕುತೂಹಲದಿಂದ ಈ ವಜ್ರಜಂಘನ ಆಗಮನವನ್ನು ಎದುರು ನೋಡುತ್ತಿದ್ದ ಶೀಲವತಿಯರಾದ ಲಕ್ಷ್ಮೀಮತಿಯನ್ನೂ ಅನುಂದರಿಯನ್ನೂ ಸಮಾಧಾನಪಡಿಸಿ, ಪುಂಡರೀಕನ ಆ ರಾಜ್ಯವನ್ನು ನಿಷ್ಕಂಟಕವನ್ನಾಗಿ ಮಾಡಿದನು.

**ಪ್ರಕೃತೀರಪಿ ಸಾಮಾದ್ಯೈರುಪಾಯೈಃ ಸೋಽನ್ವರಂಜಯತ್ ।**
**ಸಾಮಂತಾನಪಿ ಸಂಮಾನ್ಯ ಯಥಾಪೂರ್ವಮತಿಷ್ಠಿಪತ್ ॥ ೨೫೩ ॥**

ವಜ್ರಜಂಘನು ಪ್ರಜೆಗಳನ್ನು ಸಾಮದಾನಮೊದಲಾದ ಉಪಾಯಗಳಿಂದ ಸಂತೋಷಪಡಿಸಿದನು. ಸಾಮಂತ ರಾಜರನ್ನೂ ಸನ್ಮಾನಿಸಿ ಪೂರ್ವದಂತೆ ಸ್ಥಾಪಿಸಿದನು.

**ಸಮಂತ್ರಿಕಂ ತತೋ ರಾಜ್ಯೇ ಬಾಲಂ ಬಾಲಾರ್ಕಸಪ್ರಭಮ್ ।**
**ನಿವೇಶ್ಯ ಪುನರಾವೃತ್ತಃ ಪ್ರಾಪದುತ್ಪಲಖೇಟಕಮ್ ॥ ೨೫೪ ॥**

ಆಮೇಲೆ ಮಂತ್ರಿಸಹಿತನೂ ಬಾಲಸೂರ್ಯನಂತೆ ಪ್ರಭೆಯುಳ್ಳವನೂ ಆದ ಬಾಲಕನನ್ನು ರಾಜ್ಯದಲ್ಲಿರಿಸಿ, ವಜ್ರಜಂಘನು ಹಿಂದಿರುಗಿ ಹೋಗಿ ಉತ್ಪಲಖೇಟವನ್ನು ಹೊಂದಿದನು.

**ಅಥ ಪರಮವಿಭೂತ್ಯಾ ವಜ್ರಜಂಘಃ ಕ್ಷಿತೀಶಃ ।**
**ಪುರಮಮರಪುರಾಭಂ ಸ್ವಂ ವಿಶನ್ಕಾಂತಯಾಮಾ ॥**
**ಶತಮಖ ಇವ ಶಚ್ಯಾ ಸಂಭೃತಶ್ರೀಃ ಸ ರೇಜೇ ।**
**ಪುರವರವನಿತಾನಾಂ ಲೋಚನೈಃ ಪೀಯಮಾನಃ ॥ ೨೫೫ ॥**

ಅನಂತರದಲ್ಲಿ ಆ ವಜ್ರಜಂಘನೃಪತಿಯು ತನ್ನ ಉತ್ಕೃಷ್ಟವಾದ ವೈಭವದಿಂದ ಪ್ರಾಣಕಾಂತೆಯಾದ ಶ್ರೀಮತಿಯೊಡನೆ ಇಂದ್ರನಗರಿಗೆ ಸಮಾನವಾದ ತನ್ನ ಪಟ್ಟಣಕ್ಕೆ ಪ್ರವೇಶಮಾಡುತ್ತಿರುವಾಗ ಪಟ್ಟಣವಾಸಿಗಳಾದ ಸುಂದರಸ್ತ್ರೀಯರ ನೇತ್ರಗಳಿಂದ ಪಾನಮಾಡಲ್ಪಟ್ಟವನಾಗಿ ಶಚೀದೇವಿಯೊಡಗೂಡಿದ ದೇವೇಂದ್ರನಂತೆ ಶೋಭಿಸಿದನು.

**ಕಿಮಯಮಮರನಾಥಃ ಕಿಂಸ್ವಿದೀಶೋ ಧನಾನಾಮ್ ।**
**ಕಿಮುತ ಫಣಿಗಣೇಶಃ ಕಿಂ ವಪುಷ್ಮಾನನಂಗಃ ॥**
**ಇತಿ ಪುರನರನಾರೀಜಲ್ಪನೈಃ [1]ಕಥ್ಯಮಾನೋ ।**
**ಗೃಹಮವಿಶದುದಾರಶ್ರೀಪರಾರ್ಧ್ಯಂ ಮಹರ್ದ್ಧಿಃ ॥ ೨೫೬ ॥**

ಮಹಾಪುಣ್ಯಶಾಲಿಯಾದ ವಜ್ರಜಂಘನು ಅನೇಕ ಸಂಪತ್ತಿನೊಡಗೂಡಿದ ತನ್ನ ಮನೆಗೆ ಪ್ರವೇಶಮಾಡುವಾಗ ನಗರನಿವಾಸಿಗಳಾದ ಸ್ತ್ರೀಯರು ''ಇವನೇನು ದೇವೇಂದ್ರನೋ ! ಕುಬೇರನೋ ! ನಾಗೇಂದ್ರನೋ ! ಅಥವಾ ಶರೀರವನ್ನು ಧರಿಸಿದ ಮನ್ಮಥನೋ !'' ಎಂದು ವಜ್ರಜಂಘನನ್ನು ಶ್ಲಾಘಿಸಿದರು.

**ತತ್ರಾಸೌ ಸುಖಮಾವಸ[2]ತ್ಸ್ವರುಚಿತಾನ್ಭೋಗಾನ್ಸ್ವಪುಣ್ಯಾರ್ಜಿತಾನ್ ।**
**ಭುಂಜಾನಃ ಷಡೃತುಪ್ರಮೋದಜನನೇ ಹರ್ಮ್ಯೇ ಮನೋಹಾರಿಣಿ ॥**
**ಸಂಭೋಗೈರುಚಿತೈಃ ಶಚೀಮಿವ ಹರಿಃ ಸಂಭಾವಯನ್ಪ್ರೇಯಸೀಮ್ ।**
**ಜೈನಂ ಧರ್ಮಮನುಸ್ಮರನ್ಸ್ಮರನಿಭಃ ಕೀರ್ತಿಂ ಚ ತನ್ವನ್ದಿಶಿ ॥ ೨೫೭ ॥**

ಮನ್ಮಥನಿಗೆ ಸಮಾನನಾದ ಈ ವಜ್ರಜಂಘನು ವಸಂತಮೊದಲಾದ ಆರು ಋತುಗಳಲ್ಲಿಯೂ ಆನಂದವನ್ನುಂಟುಮಾಡುವ ಮನೋಹರವಾದ ಮಂದಿರದಲ್ಲಿ ತನ್ನ ಪೂರ್ವಪುಣ್ಯದಿಂದ ಪ್ರಾಪ್ತವಾದ ಇಷ್ಟಭೋಗಗಳನ್ನು ಭೋಗಿಸುತ್ತಲೂ, ಉಚಿತವಾದ ಭೋಗಗಳಿಂದ ದೇವೇಂದ್ರನು ಶಚೀದೇವಿಯನ್ನು ಸಂತೋಷಪಡಿಸುವಂತೆ, ತನ್ನ ಪ್ರಾಣಕಾಂತೆಯನ್ನು ಸಂತೋಷಪಡಿಸುತ್ತಲೂ, ಜೈನಧರ್ಮವನ್ನು ಸ್ಮರಣೆ ಮಾಡುತ್ತಲೂ, ಸಮಸ್ತದಿಕ್ಕುಗಳಲ್ಲಿಯೂ ತನ್ನ ಕೀರ್ತಿಯನ್ನು ವಿಸ್ತರಿಸುತ್ತಲೂ, ಸುಖವಾಗಿದ್ದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಶ್ರೀಮತೀವಜ್ರಜಂಘಪಾತ್ರದಾನಾನುವರ್ಣನಂ ನಾಮಾಷ್ಟಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ ''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಶ್ರೀಮತೀವಜ್ರಜಂಘರ ಪಾತ್ರದಾನವರ್ಣನವೆಂಬ ಎಂಟನೆಯ ಪರ್ವವು ಸಮಾಪ್ತವಾದುದು.

---

೧ ಅನುಚಕ್ರತುಃ. ೨ ಕಥಯಂತೌ. ೩ ದಿವಸಾವಶೇಷಂ. ೪ ನೀತ್ವಾ.

೧ ಶ್ಲಾಘ್ಯಮಾನಃ. ೨ ಆತ್ಮಾಭೀಷ್ಟಾನ್.

# ಅಥ ನವಮಂ ಪರ್ವ

**ಅಥ ತ್ರಿವರ್ಗಸಂಸರ್ಗರಮ್ಯಂ ರಾಜ್ಯಂ ಪ್ರಕುರ್ವತಃ ।**
**ತಸ್ಯ ಕಾಲೋಗಮ[೧]ದ್ಭೂಯಾನ್ಭೋಗೈಃ ಷಡೃತುಸುಂದರೈಃ ॥ ೧ ॥**

ಅನಂತರದಲ್ಲಿ ಧರ್ಮ ಅರ್ಥ ಕಾಮ ಈ ಮೂರು ಪುರುಷಾರ್ಥಗಳ ಸಂಬಂಧ ದಿಂದ ರಮಣೀಯವಾದ ರಾಜ್ಯವನ್ನು ಪರಿಪಾಲಿಸುತ್ತಿರುವ ಆ ವಜ್ರಜಂಘನಿಗೆ ವಸಂತ ಮೊದಲಾದ ಆರು ಋತುಗಳಲ್ಲಿ ಸುಂದರವಾದ ಭೋಗಗಳಿಂದ ಬಹಳ ಕಾಲವು ಕಳೆಯಿತು.

**ಸ ರೇಮೇ ಶರದಾರಂಭೇ ಪ್ರಫುಲ್ಲಾಬ್ಜಸರೋಜಲೇ ।**
**ವನೇಷ್ವ [೨]ಯುಕ್ಛದಾಮೋದಸುಭಗೇಷು ಪ್ರಿಯಾನ್ವಿತಃ ॥ ೨ ॥**

ವಜ್ರಜಂಘನು ಶರತ್ಕಾಲದಲ್ಲಿ ವಿಕಸಿತವಾದ ಕಮಲಗಳುಳ್ಳ ಸರೋವರದ ಜಲದಲ್ಲಿಯೂ ಏಳಿಲೆಬಾಳೆಗಿಡಗಳ ಪರಿಮಳದಿಂದ ಮನೋಹರವಾದ ವನಗಳಲ್ಲಿ ಯೂ ತನ್ನ ಪ್ರಿಯೆಯೊಡನೆ ಕೂಡಿ ಕ್ರೀಡಿಸಿದನು.

**ಸರಿತ್ಪುಲಿನದೇಶೇಷು ಪ್ರಿಯಾಜಘನ[೩]ಹಾರಿಷು ।**
**ರಾಜಹಂಸೋ [೪]ಧೃತಿಂ ಲೇಭೇ [೫]ಸಧ್ರೀಚೀ[೬]ಮನುಯನ್ನಯಮ್ ॥ ೩ ॥**

ಪ್ರಾಣಕಾಂತೆಯ ಜಘನ(ಕಟಿಪುರೋಭಾಗ)ದಂತೆ ಮನೋಹರವಾದ ನದಿಯ ಮರಳುಪ್ರದೇಶಗಳಲ್ಲಿ ಆ ರಾಜಶ್ರೇಷ್ಠನು ತನ್ನ ಪ್ರಾಣಕಾಂತೆಯೊಡನೆ ಸಂತೋಷ ಪಟ್ಟನು.

**ಕುರ್ವನ್ನೀಲೋತ್ಪಲಂ ಕರ್ಣೇ ಸ ಕಾಂತಾಯಾ [೭]ವತಂಸಕಮ್ ।**
**ಶೋಭಾಮಿವ ದೃಶೋರಸ್ಯಾಸ್ತೇನಾಭೂ[೮]ತ್ಸನ್ನಿಕರ್ಷಯನ್ ॥ ೪ ॥**

ವಜ್ರಜಂಘನು ತನ್ನ ಪ್ರಾಣಕಾಂತೆಯ ಕಿವಿಯ ಮೇಲೆ ಕನ್ನೈದಿಲೆಪುಷ್ಪವನ್ನು ಅಲಂಕಾರಾರ್ಥವಾಗಿರಿಸಿ ಆ ಪುಷ್ಪದಿಂದ ಈಕೆಯ ನೇತ್ರಗಳಿಗೆ ಶೋಭೆಯನ್ನು ಸೇರಿಸುತ್ತಿದ್ದಾನೋ ಎಂಬಂತೆ ತೋರುತ್ತಿದ್ದನು.

**[೯]ಸರಸಾಬ್ಜರಜಃಪುಂಜಪಿಂಜರಂ ಸ್ತನಮಂಡಲಮ್ ।**
**ಸ ಪಶ್ಯನ್ಬಹುಮೇನೇಸ್ಯಾಃ ಕಾಮಸ್ಯೇವ ಕರಂಡಕಮ್ ॥ ೫ ॥**

ಮನ್ಮಥನ ಕರಡಿಗೆಯೋ ಎಂಬಂತಿರುವುದೂ ಪುಷ್ಪರಸಸಹಿತವಾದ ತಾವರೆಗಳ ಪರಾಗ(ಧೂಳು)ದಿಂದ ಹಳದಿಬಣ್ಣವುಳ್ಳುದೂ ಆದ ಪ್ರಿಯೆಯ ಕುಚಮಂಡಲ ವನ್ನು ನೋಡಿ ವಜ್ರಜಂಘನು ಬಹಳ ಸಂತೋಷಪಟ್ಟನು.

**[೧೦]ವಾಸಗೇಹೇ ಸಮುತ್ಸರ್ಪದ್ಧೂಪಾಮೋದಸುಗಂಧಿನಿ ।**
**ಪ್ರಿಯಾ[೧೧]ಸ್ತನೋಷ್ಮಣಾ ಭೇಜೇ ಹಿಮರ್ತೌ ಸ ಪರಾಂ ಧೃತಿಮ್ ॥ ೬ ॥**

ಹಿಮಂತಋತುವಿನಲ್ಲಿ ಆ ವಜ್ರಜಂಘನು ಎಲ್ಲಾ ಕಡೆಗಳಲ್ಲಿಯೂ ಪಸರಿ ಸುತ್ತಿರುವ ಧೂಪದ ಸುಗಂಧವುಳ್ಳ ಶಯನಗೃಹದಲ್ಲಿ ಪ್ರಾಣಕಾಂತೆಯ ಕುಚಗಳ ಉಷ್ಣ(ಗರ್ಮಿ)ದಿಂದ ಬಹಳ ಆನಂದಪಟ್ಟನು.

**ಕುಂಕುಮಾಲಿಪ್ತಸರ್ವಾಂಗೀಮನಾಮ್ಲಾನಮುಖಾಂಬುಜಾಮ್ ।**
**ಪ್ರಿಯಾಮುರಮಯದ್ಗಾಢಮಾಶ್ಲಿಷ್ಯನ್ [೧೨]ಶಿಶಿರಾಗಮೇ ॥ ೭ ॥**

ಚಳಿಗಾಲವು ಬಂದಾಗ ವಜ್ರಜಂಘನು ಸರ್ವಾಂಗಗಳಿಗೂ ಕುಂಕುಮವನ್ನು ಲೇಪಿಸಿಕೊಂಡವಳೂ ಬಾಡದಿರುವ ಮುಖಕಮಲವುಳ್ಳವಳೂ ಆದ ಪ್ರಿಯಳನ್ನು ಬಿಗಿದಪ್ಪಿ ಸಂತೋಷಪಡಿಸಿದನು.

೧ ಬಹುಲಃ. ೨ ಸಪ್ತಚ್ಛದಃ. ೩ ವತ್. ೪ ಸಂತೋಷಂ. ೫ ಪ್ರಿಯತಮಾಂ. ೬ ಅನುಗಚ್ಛನ್. ೭ ಕರ್ಣಪೂರಂ. ೮ ಸಂಯೋಜಯನ್. ೯ ಮಕರಂದಸಹಿತಃ. ೧೦ ಶಯ್ಯಾಗೃಹೇ. ೧೧ ಕೂಪೋದಕಂ ವಟಚ್ಛಾಯಾ ತಾಂಬೂಲಂ ತರುಣೀಸ್ತನೌ । ಶೀತಕಾಲೇ ಭವೇದುಷ್ಣಮುಷ್ಣಕಾಲೇತಿಶೀತಲಮ್. ೧೨ ಹಿಮಾಗಮೇ.

**[೧]ಮಧೌ ಮಧುಮದಾಯತ್ತಕಾಮಿನೀಜನಸುಂದರೇ ।**
**ವನೇಷು ಸಹಕಾರಾಣಾಂ ಸ ರೇಮೇ ರಾಮಯಾ ಸಮಮ್ ॥ ೮ ॥**

ಪುಷ್ಪರಸವನ್ನು ಪಾನಮಾಡಿ ಮದಿಸಿದ ಸ್ತ್ರೀಯರಿಂದ ಸುಂದರವಾದ ವಸಂತಋತುವಿನಲ್ಲಿ ಮಾವಿನ ವೃಕ್ಷಗಳ ವನಗಳಲ್ಲಿ ಆ ವಜ್ರಜಂಘನು ತನ್ನ ಪ್ರಾಣಕಾಂತೆಯೊಡನೆ ಕ್ರೀಡಿಸಿದನು.

**ಅಶೋಕಕಲಿಕಾಃ ಕರ್ಣೇ [೨]ನ್ಯಸ್ಯನ್ನಸ್ಯಾ ಮನೋಭುವಃ ।**
**ಜನಚೇತೋಭಿದೋ [೩]ದಧ್ಯೌ [೪]ಶೋಣಿತಾಕ್ತಾಃ [೫]ಸ [೬]ತೀರಕಾಃ ॥ ೯ ॥**

ವಜ್ರಜಂಘನು ಶ್ರೀಮತಿಯ ಕಿವಿಯಲ್ಲಿ ಅಶೋಕವೃಕ್ಷದ ಮೊಗ್ಗುಗಳನ್ನಿರಿಸಿ ಅವುಗಳನ್ನು, ಜನರ ಮನಸ್ಸನ್ನು ಭೇದಿಸುವ ಮತ್ತು ರಕ್ತದಿಂದ ಲೇಪಿಸಲ್ಪಟ್ಟ ಮನ್ಮಥನ ಬಾಣಗಳನ್ನಾಗಿ, ತಿಳಿದನು. ಕಾಮೋದ್ದೀಪಕಗಳಾಗಿದ್ದುವೆಂದು ಭಾವವು.

**ಘರ್ಮೇ [೭]ಘರ್ಮಾಂಬುವಿಚ್ಛೇದಿಸರೋನಿಲಹೃತಕ್ಲಮಃ ।**
**ಜಲಕೇಲೀವಿಧೌ ಕಾಂತಾಂ ರಮಯನ್ವಿಜಹಾರ ಸಃ ॥ ೧೦ ॥**

ಗ್ರೀಷ್ಮಋತು(ಬೇಸಗೆ)ವಿನಲ್ಲಿ ಆ ವಜ್ರಜಂಘನು ಬೆವರುನೀರನ್ನು ಹೋಗ ಲಾಡಿಸುವ ಸರೋವರದ ಗಾಳಿಯಿಂದ ತನ್ನ ಶ್ರಮವನ್ನು ಪರಿಹರಿಸಿಕೊಂಡು ಜಲ ಕ್ರೀಡೆಯಿಂದ ಪ್ರಿಯಳನ್ನು ಸಂತೋಷಪಡಿಸುತ್ತ ವಿಹರಿಸಿದನು.

**ಚಂದನದ್ರವಸಿಕ್ತಾಂಗೀಂ ಪ್ರಿಯಾಂ ಹಾರವಿಭೂಷಣಾಮ್ ।**
**ಕಂಠೇ [೮]ಗೃಹ್ಣನ್ಸ [೯]ಘರ್ಮೋತ್ಥಂ [೧೦]ನಾಜ್ಞಾಸೀತ್ಕಮಪಿ ಶ್ರಮಮ್ ॥**

ಶರೀರಕ್ಕೆ ಚಂದನದ್ರವವನ್ನು ಸೇಚಿಸಿಕೊಂಡು ಹಾರವನ್ನೂ ಆಭರಣಗಳನ್ನೂ ಧರಿಸಿರುವ ಪ್ರಿಯಳನ್ನು ಕಂಠದಲ್ಲಿ ಆಲಿಂಗಿಸಿ ವಜ್ರಜಂಘನು ಬೇಸಿಗೆಯಿಂದುಂಟಾದ ಶ್ರಮವನ್ನು ಸ್ವಲ್ಪವೂ ತಿಳಿಯಲಿಲ್ಲ.

**ಶಿರೀಷಕುಸುಮೈಃ ಕಾಂತಾಮಲಂಕುರ್ವ[೧೧]ನ್ವತಂಸಿತೈಃ ।**
**ರೂಪಿಣೀಮಿವ ನೈದಾಘೀಂ ಶ್ರಿಯಂ ತಾಂ ಬಹ್ವಮಂಸ್ತ ಸಃ ॥ ೧೨ ॥**

ವಜ್ರಜಂಘನು ತಲೆಗೆ ಅಲಂಕಾರವಾದ ಬಾಗೆಹೂವುಗಳಿಂದ ಪ್ರಾಣಕಾಂತೆಯನ್ನು ಅಲಂಕರಿಸಿ ಆಕೆಯನ್ನು ಆಕಾರವನ್ನು ಧರಿಸಿದ ಉಷ್ಣಕಾಲದ ಲಕ್ಷ್ಮಿಯನ್ನೋಪಾದಿ ಯಲ್ಲಿ ಗೌರವಿಸಿದನು.

**[೧೨]ಘನಾಗಮೇ [೧೩]ಘನೋಪಾಂತಸ್ಫುರತ್ತಟಿತಿ [೧೪]ಸಾಧ್ವಸಾತ್ ।**
**ಕಾಂತಯಾಶ್ಲೇಷಿ ವಿಶ್ಲೇಷಭೀತಯಾ [೧೫]ಘನಮೇವ ಸಃ ॥ ೧೩ ॥**

ಮೇಘದ ಸಮೀಪದಲ್ಲಿ ಹೊಳೆಯುತ್ತಿರುವ ಮಿಂಚುಳ್ಳ ಮೇಘವು ಬಂದಾಗ ಭಯದಿಂದ ಪತಿಯನ್ನು ಬಿಡುವುದಕ್ಕೆ ಹೆದರಿದ ಶ್ರೀಮತಿಯು ವಜ್ರಜಂಘನನ್ನು ಗಾಢವಾಗಿ ಆಲಿಂಗಿಸಿದಳು.

**ಇಂದ್ರಗೋಪಚಿತಾ ಭೂಮಿರಾಮಂದ್ರಸ್ತನಿತಾ ಘನಾಃ ।**
**ಐಂದ್ರಚಾಪಂ ಚ ಪಾಂಥಾನಾಂ ಚಕ್ರುರುತ್ಕಂಠಿತಂ ಮನಃ ॥ ೧೪ ॥**

ಕೆಂಪುಬಣ್ಣದ ಹುಳಗಳಿಂದ ವ್ಯಾಪ್ತವಾದ ಭೂಮಿಯೂ, ಗಂಭೀರವಾದ ಗರ್ಜನೆಯುಳ್ಳ ಮೇಘಗಳೂ, ಇಂದ್ರಧನುಸ್ಸೂ ಪ್ರಯಾಣಿಕರ ಮನಸ್ಸನ್ನು ಕುತೂಹಲಪಡಿಸುತ್ತಿದ್ದುವು. ಸಂತೋಷಪಡಿಸುತ್ತಿದ್ದುವೆಂದು ಭಾವವು.

೧ ವಸಂತಕಾಲೇ. ೨ ಸ್ಥಾಪಯನ್. ೩ ಮೇನೇ. ೪ ರಕ್ತಲಿಪ್ತಾಃ. ೫ ರಾಜಾ. ೬ ಬಾಣಾನ್. ೭ ಸ್ವೇದಜಲಂ. ೮ ಆಲಿಂಗನ್. ೯ ಗ್ರೀಷ್ಮೋತ್ಥಂ. ೧೦ ನ ಜಾನಾತಿ ಸ್ಮ. ೧೧ ಶೇಖರೀಕೃತೈಃ. ೧೨ ಮೇಘಃ. ೧೩ ಮೇಘಸಮೀಪೇ. ೧೪ ಭಯಾತ್. ೧೫ ದೃಢಂ.

**ನಭಃಸ್ಥಗಿತ[೧]ಮಸ್ಮಾಭಿಃ ಸುರಗೋಪೈ[೨]ಸ್ತತಾ ಮಹೀ ।**
**ಕ್ವ ಯಾಥೇತಿ [೩]ನ್ಯಷೇಧನ್ನು ಪಥಿಕಾನ್ಗರ್ಜಿತೈರ್ಘನಾಃ ॥ ೧೫ ॥**

"ಆಕಾಶವೆಲ್ಲಾ ನಮ್ಮಿಂದ ವ್ಯಾಪ್ತವಾಯಿತು. ಭೂಮಿಯು ಕೆಂಪುಬಣ್ಣದ ಹುಳಗಳಿಂದ ವ್ಯಾಪ್ತವಾಯಿತು. ನೀವು ಎಲ್ಲಿ ಹೋಗುತ್ತೀರಿ ?" ಎಂದು ಮೇಘಗಳು ತಮ್ಮ ಗರ್ಜನೆಗಳಿಂದ ಮಾರ್ಗದಲ್ಲಿ ಹೋಗುವವರನ್ನು ತಡೆಯುವಂತಿದ್ದುವು.

**ವಿಕಾಸಿಕುಟಜಚ್ಛನ್ನಾ ಭೂಧರಾಣಾ[೪]ಮುಪತ್ಯಕಾಃ ।**
**ಮನೋಽಸ್ಯ ನಿನ್ಯುರೌತ್ಸುಕ್ಯಂ ಸ್ವನೈರುನ್ಮದಕೇಕಿನಾಮ್ ॥ ೧೬ ॥**

ಅರಳಿದ ಗಿರಿಮಲ್ಲಿಗೆಗಳಿಂದ ವ್ಯಾಪ್ತವಾದ ಪರ್ವತಸಮೀಪಭೂಮಿಗಳು ಮದಿಸಿದ ನವಿಲುಗಳ ಶಬ್ದಗಳಿಂದ ಈ ವಜ್ರಜಂಘನ ಮನಸ್ಸಿಗೆ ಕುತೂಹಲವನ್ನುಂಟುಮಾಡಿದುವು.

**ಕದಂಬಾನಿಲ[೫]ಸಂವಾಸಸುರಭೀಕೃತಸಾನವಃ ।**
**ಗಿರಯೋಽಸ್ಯ ಮನೋ ಜಹ್ರುಃ [೬]ಕಾಲೇ [೭]ನೃತ್ಯಚ್ಛಿಖಾವಲೇ ॥ ೧೭ ॥**

ನರ್ತನಮಾಡುತ್ತಿರುವ ನವಿಲುಗಳುಳ್ಳ ವರ್ಷಾಕಾಲದಲ್ಲಿ ಕದಂಬವೃಕ್ಷಗಳ ಮೇಲೆ ಬೀಸಿದ ಗಾಳಿಯ ಸಂಬಂಧದಿಂದ ಪರಿಮಳವಾದ ತಪ್ಪಲುಪ್ರದೇಶಗಳುಳ್ಳ ಪರ್ವತಗಳು ಈ ವಜ್ರಜಂಘನ ಮನಸ್ಸನ್ನು ಅಪಹರಿಸಿದುವು. ಮನೋಹರಗಳಾಗಿದ್ದುವೆಂದರ್ಥವು.

**[೮]ಅನೇಹಸಿ ಲಸದ್ವಿದ್ಯುದುದ್ಯೋತಿತವಿಹಾಯಸಿ ।**
**ಸ ರೇಮೇ ರಮ್ಯಹರ್ಮ್ಯಾಗ್ರೇ[೯]ಮಧಿಶಯ್ಯ ಪ್ರಿಯಾಸಖಃ ॥ ೧೮ ॥**

ಹೊಳೆಯುತ್ತಿರುವ ಮಿಂಚಿನಿಂದ ಪ್ರಕಾಶಮಾನವಾದ ಆಕಾಶವುಳ್ಳ ವರ್ಷಾಕಾಲದಲ್ಲಿ ವಜ್ರಜಂಘನು ತನ್ನ ಮನೆಯಮೇಲೆ—ಉಪ್ಪರಿಗೆಯಲ್ಲಿ ಪ್ರಾಣಕಾಂತೆಯೊಡನೆ ಕ್ರೀಡಿಸಿದನು.

**ಸರಿತಾ[೧೦]ಮುದ್ಧತಾಂಭೋಭಿಃ ಪ್ರಿಯಾಮಾನ[೧೧]ಪ್ರಧಾವಿಭಿಃ ।**
**ಪ್ರವಾಹೈರ್ಧೃತಿರಸ್ಯಾಸೀದ್ವರ್ಷರ್ತೋಃ ಸಮುಪಾಗಮೇ ॥ ೧೯ ॥**

ವರ್ಷಋತುವು ಬರಲಾಗಿ ಅಲ್ಲೋಲಕಲ್ಲೋಲವಾಗುತ್ತಿರುವ ನೀರುಳ್ಳವೂ ಸ್ತ್ರೀಯರ ಗರ್ವವನ್ನು ತೊಳೆಯುವುವೂ ಆದ ನದಿಗಳ ಪ್ರವಾಹಗಳಿಂದ ಈ ವಜ್ರಜಂಘನಿಗೆ ಸಂತೋಷವಾಯಿತು. ಪ್ರವಾಹವು ಕಾಮೋದ್ದೀಪಕವಾದುದರಿಂದ ಸ್ತ್ರೀಯರು ಗರ್ವವನ್ನು ಬಿಟ್ಟು ತಮ್ಮ ಪತಿಗಳಿಗೆ ಅನುಕೂಲರಾದರೆಂದು ಭಾವವು.

**ಭೋಗಾನ್ನಡೃತುಜಾನಿತ್ಥಂ ಭುಂಜಾನೋಽಸೌ ಸಹಾಂಗನಃ ।**
**ಸಾಕ್ಷಾತ್ಕೃತ್ಯೇವ ಮೂಢಾನಾಂ ತಪಃಫಲಮದರ್ಶಯತ್ ॥ ೨೦ ॥**

ಈ ಪ್ರಕಾರವಾಗಿ ಆರು ಋತುಗಳಲ್ಲುಂಟಾಗುವ ಸುಖಭೋಗಗಳನ್ನು ತನ್ನ ಪ್ರಾಣಕಾಂತೆಯೊಡನೆ ಅನುಭವಿಸುತ್ತಿರುವ ಈ ವಜ್ರಜಂಘನು ಅಜ್ಞಾನಿಗಳಿಗೆ ತಪಸ್ಸಿನ ಫಲವನ್ನು ಸಾಕ್ಷಾತ್ಕರಿಸಿ ತೋರಿಸುವಂತಿದ್ದನು.

**ಅಥ ಕಾಲಾಗರೂ[೧೨]ದ್ದಾಮಧೂಪಧೂಮಾಧಿವಾಸಿತೇ ।**
**ಮಣಿಪ್ರದೀಪಕೋದ್ಯೋತದೂರೀಕೃತ[೧೩]ತಮಸ್ತರೇ ॥ ೨೧ ॥**

**[೧೪]ಪ್ರತಿಪಾದುಕವಿನ್ಯಸ್ತರತ್ನಮಂಚೋಪಶೋಭಿನಿ ।**
**ದಧತ್ಯಾಲಂಬಿಭಿರ್ಮುಕ್ತಾಜಾಲಕೈರ್ಹಸಿತಶ್ರಿಯಮ್ ॥ ೨೨ ॥**

**ಕುಂದೇಂದೀವರಮಂದಾರಸಾಂದ್ರಾಮೋದಾಶ್ರಿತಾಲಿನಿ ।**
**ಚಿತ್ರಭಿತ್ತಿಗತಾನೇಕ[೧೫]ರೂಪಕರ್ಮಮನೋಹರೇ ॥ ೨೩ ॥**

**ವಾಸಗೇಹೇನ್ಯದಾ ಶಿಶ್ಯೇ ತಲ್ಪೇ ಮೃದುನಿ ಹಾರಿಣಿ ।**
**ಗಂಗಾಸೈಕತನಿರ್ಭಾಸಿ ದುಕೂಲಪ್ರಚ್ಛದೋಜ್ಜ್ವಲೇ ॥ ೨೪ ॥**

೧ ಮೇಘೈಃ. ೨ ವ್ಯಾಪ್ತಾ. ೩ ನಿಷೇಧಮಕುರ್ವನ್. ೪ ಉಪತ್ಯಕಾದ್ರೇರಾಸನ್ನಭೂಮಿರಿತ್ಯಮರಃ. ೫ ಸಹವಾಸಃ. ೬ ವರ್ಷಾಕಾಲೇ. ೭ ನೃತ್ಯತ್ಕೇಕಿನಿ. ೮ ವರ್ಷಾಕಾಲೇ. ೯ ಆಧಾರೇ ಕರ್ಮ. ೧೦ ಉತ್ಕಟಾನಿ. ೧೧ ಪ್ರಕ್ಷಾಲಯದ್ಭಿಃ. ೧೨ ಉದ್ದಾಮ ಇತ್ಯಪಿ ಪಾಠಾಂತರಂ. ೧೩ ತಮೋತಿಶಯೇ. ೧೪ ಪಾದಂಪಾದಂಪ್ರತಿ. ೧೫ ಚಿತ್ರಕರ್ಮ.

**ಪ್ರಿಯಾಸ್ತನತಟಸ್ಪರ್ಶಸುಖಾಮೀಲಿತಲೋಚನಃ ।**
**ಮೇರುಕಂದರಮಾಶ್ಲಿಷ್ಯನ್ಸವಿದ್ಯುದಿವ ವಾರಿದಃ ॥ ೨೫ ॥**

ಅನಂತರದಲ್ಲಿ ಒಂದು ದಿನ ಕಾಲಾಗರುಧೂಪದ ಹೊಗೆಯಿಂದ ಪರಿಮಳವುಳ್ಳುದೂ ರತ್ನದೀಪಗಳ ಬೆಳಕಿನಿಂದ ಕತ್ತಲೆಯಿಲ್ಲದಿರುವುದೂ ಪ್ರತಿಯೊಂದು ಕಾಲಿಗೂ ರತ್ನಗಳನ್ನು ಕೆತ್ತಿರುವ ಮಂಚದಿಂದ ಶೋಭಿಸುವುದೂ ತೂಗುಹಾಕಿದ್ದ ಮುತ್ತಿನ ಜಲ್ಲಿಗಳಿಂದ ಹಾಸ್ಯರಸದ ಶೋಭೆಯನ್ನು ಧರಿಸಿರುವುದೂ, ಕೋಲುಮಲ್ಲಿಗೆ ಕನ್ನೈದಿಲೆ ಮಂದಾರ ಈ ಪುಷ್ಪಗಳ ಪರಿಮಳಕ್ಕೆ ಆಶ್ರಯಿಸಿರುವ ಭ್ರಮರಗಳುಳ್ಳುದೂ ನಾನಾಪ್ರಕಾರವಾದ ಗೋಡೆಗಳಲ್ಲಿ ಅನೇಕಪ್ರಕಾರವಾದ ಚಿತ್ರಕಾರ್ಯಗಳಿಂದ ಮನೋಹರವೂ ಆದ ಶಯನಗೃಹದಲ್ಲಿ ಮೃದುವೂ ಮನೋಹರವೂ ಗಂಗಾನದಿಯ ಮರಳಿನಂತೆ ಶುಭ್ರವಾದ ಹಾಸುವವಸ್ತ್ರದಿಂದ ಪ್ರಕಾಶಮಾನವೂ ಆದ ಹಾಸಿಗೆಯಲ್ಲಿ ಪ್ರಾಣಕಾಂತೆಯ ಕುಚಗಳ ಸ್ಪರ್ಶಸುಖದಿಂದ ಕಣ್ಣುಗಳನ್ನು ಮುಚ್ಚಿ ನಿದ್ರೆಮಾಡುತ್ತಿದ್ದ ಆ ವಜ್ರಜಂಘನು ಮಿಂಚುಸಹಿತವಾದ ಮೇಘವು ಮೇರುಪರ್ವತದ ಗುಹೆಯನ್ನು ಸಂಬಂಧಿಸಿಕೊಂಡಿರುವಂತೆ ಶೋಭಿಸಿದನು.

**[೧]ತತ್ರ ವಾತಾಯನದ್ವಾರಪಿಧಾನಾರುದ್ಧಧೂಮಕೇ ।**
**ಕೇಶಸಂಸ್ಕಾರಧೂಪೋದ್ಯದ್ಧೂಮೇನ ಕ್ಷಣಮೂರ್ಚ್ಛಿತೌ ॥ ೨೬ ॥**

**ನಿರುದ್ಧೋಚ್ಛ್ವಾಸದೌಸ್ಥಿತ್ಯಾದಂತಃ ಕಿಂಚಿದಿವಾಕುಲೌ ।**
**ದಂಪತೀ ತೌ ನಿಶಾಮಧ್ಯೇ [೨]ದೀರ್ಘನಿದ್ರಾಮುಪೇಯತುಃ ॥ ೨೭ ॥**

ಕಿಡಿಕಿಗಳನ್ನು ಮುಚ್ಚಿದ್ದುದರಿಂದ ಹೊಗೆಯು ತುಂಬಿಕೊಂಡಿದ್ದ ಆ ಶಯನಗೃಹದಲ್ಲಿ ಕೂದಲುಗಳು ಸುವಾಸನೆಯಾಗುವುದಕ್ಕೋಸ್ಕರ ಮಾಡಿದ್ದ ಹೊಗೆಯಿಂದ ಸ್ವಲ್ಪ ತೊಂದರೆಪಡುತ್ತಿದ್ದ ಆ ಶ್ರೀಮತೀವಜ್ರಜಂಘರಿಗೆ ಶ್ವಾಸವು ಕಟ್ಟಿಕೊಂಡು ಸ್ವಲ್ಪಹೊತ್ತು ಮೂರ್ಚ್ಛಿತರಾಗಿ ಮಧ್ಯರಾತ್ರಿಯಲ್ಲಿ ದೀರ್ಘನಿದ್ರೆ (ಮರಣ)ಯನ್ನು ಹೊಂದಿದರು.

**ಜೀವಾಪಾಯೇ ತಯೋರ್ದೇಹೌ ಕ್ಷಣಾದ್ವಿಚ್ಛಾಯತಾಂ ಗತೌ ।**
**ಪ್ರದೀಪಾಪಾಯಸಂರುದ್ಧತಮಸ್ಕಂಧೌ ಯಥಾ ಗೃಹೌ ॥ ೨೮ ॥**

ದೀಪವು ನೊಂದಿ ಹೋದೊಡನೆ ಕತ್ತಲೆಯು ಕವಿದುಕೊಂಡ ಮನೆಗಳು ಮಬ್ಬಾಗುವಂತೆ ಜೀವವು ತೊಲಗಿಹೋದಕೂಡಲೆ ಆ ಶ್ರೀಮತೀವಜ್ರಜಂಘರ ಶರೀರಗಳು ಕಳೆಗುಂದಿದುವು.

**[೩]ವಿಯುತಾಸುರಸೌ ಛಾಯಾಂ ನ ಲೇಭೇ ಸಹ ಕಾಂತಯಾ ।**
**[೪]ಪರ್ಯಸ್ತ ಇವ [೫]ಕಾಲೇನ ಸಲತಃ ಕಲ್ಪಪಾದಪಃ ॥ ೨೯ ॥**

ಕಾಲವಿಶೇಷದಿಂದ ಸಾಮರ್ಥ್ಯಗುಂದಿದ ಕಲ್ಪವೃಕ್ಷವು ಲತಾಸಹಿತವಾಗಿ ಒಣಗಿ ಹೋಗುವಂತೆ, ಯಮ(ಆಯುಷ್ಯಕರ್ಮ)ನಿಂದ ತನ್ನ ಪ್ರಾಣಪ್ರಿಯೆಯೊಡನೆ ಮರಣವನ್ನು ಹೊಂದಿದ ಈ ವಜ್ರಜಂಘನು ಪುನಃ ಕಾಂತಿಯನ್ನು ಹೊಂದಲಿಲ್ಲ. ಶರೀರದಲ್ಲಿ ಪುನಃ ಕಾಂತಿಯುಂಟಾಗಲಿಲ್ಲವೆಂದರ್ಥವು.

**ಭೋಗಾಂ[೬]ಗೇನಾಪಿ ಧೂಪೇನ ತಯೋರಾಸೀ[೭]ತ್ಪರಾಸುತಾ ।**
**ಧಿಗಿಮಾನ್ಭೋಗಿಭೋಗಾಭಾನ್ಭೋಗಾನ್ಪ್ರಾಣಾಪಹಾರಿಣಃ ॥ ೩೦ ॥**

ಧೂಪವು ಭೋಗಕ್ಕೆ ಕಾರಣವಾಗಿದ್ದರೂ ಅದರಿಂದ ಆ ಶ್ರೀಮತೀವಜ್ರಜಂಘರಿಗೆ ಮರಣವು ಸಂಭವಿಸಿತು, ಆದುದರಿಂದ ಸರ್ಪದ ಹೆಡೆಯಂತೆ ಪ್ರಾಣಾಪಹಾರಿಗಳಾದ ಈ ಭೋಗಗಳನ್ನು ಸುಡು !

**ತೌ ತಥಾ [೮]ಸುಖಸಾದ್ಭೂತೌ ಸಂಭೋಗೈರುಪಲಾಲಿತೈಃ ।**
**ಪ್ರಾಪ್ತಾ[೯]ವೇಕಪದೇ ಶೋಚ್ಯಾಂ ದಶಾಂ ಧಿಕ್ಸಂಸೃತಿಸ್ಥಿತಿಮ್ ॥ ೩೧ ॥**

೧ ವಾಸಗೃಹೇ. ೨ ಮರಣಮಿತ್ಯರ್ಥಃ. ೩ ಗತಪ್ರಾಣಃ. ೪ ವಿಧ್ವಸ್ತಸಾಮರ್ಥ್ಯಃ. ೫ ಯಮೇನ ಕಾಲವಿಶೇಷೇಣ ಚ. ೬ ಕಾರಣೇನ. ೭ ಮೃತಿಃ. ೮ ಸುಖಾಧೀನೌ. ೯ ಏಕಕ್ಷಣೇ.

ತಮಗೆ ಇಷ್ಟವಾದ ಭೋಗಗಳಿಂದ ಸುಖಪರವಶರಾಗಿದ್ದ ಆ ದಂಪತಿಗಳು ಹಿಂದೆ ಹೇಳಿದಂತೆ ಒಂದು ಕ್ಷಣಕಾಲದಲ್ಲಿ ಶೋಚನೀಯವಾದ ಅವಸ್ಥೆಯನ್ನು ಹೊಂದಿದರು. ಆದುದರಿಂದ ಈ ಸಂಸಾರಸ್ಥಿತಿಯನ್ನು ಸುಡು !

**ಭೋಗಾಂಗೈರಪಿ ಜಂತೂನಾಂ ಯದಿ ಚೇದೀದೃಶೀ ದಶಾ ।**
**ಜನಾಃ ಕಿಮೇಭಿ[೧]ರಸ್ವಂತ್ಯೈಃ ಕುರುತಾಪ್ತಮತೇ ರತಿಮ್ ॥ ೩೨ ॥**

ಜನಗಳೇ ! ಭೋಗಕಾರಣಗಳಿಂದಲೂ ಪ್ರಾಣಿಗಳಿಗೆ ಇಂತಹ ಅವಸ್ಥೆಯಾದರೆ, ಕೊನೆಯಲ್ಲಿ ದುಃಖವನ್ನುಂಟುಮಾಡುವ ಈ ಭೋಗಸಾಮಗ್ರಿಗಳಿಂದೇನು ಪ್ರಯೋಜನ ? ನೀವು ಆಪ್ತರು ಹೇಳಿದ ವಚನದಲ್ಲಿ ಪ್ರೀತಿಯನ್ನು ಮಾಡಿರಿ.

**ಪಾತ್ರದಾನಾತ್ತಪುಣ್ಯೇನ ಬದ್ಧೋ[೨]ದಕ್ಕುರುಜಾಯುಷೌ ।**
**ಕ್ಷಣಾತ್ಕುರೂನ್ಸಮಾಸಾದ್ಯ ತತ್ರ ತೌ ಜನ್ಮ ಭೇಜತುಃ ॥ ೩೩ ॥**

ಹಿಂದೆ ಆ ಶ್ರೀಮತೀವಜ್ರಜಂಘರು ಚಾರಣಮುನಿಗಳಿಗೆ ಭಕ್ತಿಪೂರ್ವಕವಾಗಿ ಆಹಾರದಾನವನ್ನು ಕೊಟ್ಟುದರಿಂದುಂಟಾದ ಪುಣ್ಯದಿಂದ ಅವರಿಗೆ ಉತ್ತರಕುರು (ಉತ್ತಮಭೋಗಭೂಮಿ)ವಿನ ಆಯುಷ್ಯವು ಬಂಧವಾಗಿ ಮರಣವಾದ ಕೂಡಲೆ ಅವರಿಬ್ಬರೂ ಅಲ್ಲಿ ಜನ್ಮವನ್ನೆತ್ತಿದರು.

**ಜಂಬೂದ್ವೀಪಮಹಾಮೇರೋರುತ್ತರಾಂ ದಿಶಮಾಶ್ರಿತಾಃ ।**
**ಸಂತ್ಯುದಕ್ಕುರವೋ ನಾಮ ಸ್ವರ್ಗಶ್ರೀಪರಿಹಾಸಿನಃ ॥ ೩೪ ॥**

ಸ್ವರ್ಗಸಂಪತ್ತಿಯನ್ನೂ ಪರಿಹಾಸ್ಯಮಾಡುವ ಆ ಉತ್ತರಕುರುಗಳು ಈ ಜಂಬೂದ್ವೀಪದಲ್ಲಿರುವ ಮಹಾಮೇರುಪರ್ವತದ ಉತ್ತರದಿಕ್ಕಿನಲ್ಲಿವೆ.

**ಮದ್ಯಾತೋದ್ಯವಿಭೂಷಾಸ್ರಗ್ದೀಪಜ್ಯೋತಿರ್ಗೃಹಾಂಗಕಾಃ ।**
**ಭೋಜನಾ[೩]ಮತ್ರವಸ್ತ್ರಾಂಗಾ ಇತ್ಯನ್ವರ್ಥಸಮಾಹ್ವಯಾಃ ॥ ೩೫ ॥**

ಆ ಉತ್ತರಕುರುಗಳಲ್ಲಿ ಮದ್ಯ ವಾದ್ಯ ಆಭರಣ ಮಾಲಿಕೆ ದೀಪ ಪ್ರಕಾಶ ಮನೆ ಭೋಜನ ಪಾತ್ರ ವಸ್ತ್ರ ಈ ಹತ್ತು ಪದಾರ್ಥಗಳನ್ನು ಕೊಡುವ ಸಾರ್ಥಕವಾದ ನಾಮಧೇಯವುಳ್ಳ ಹತ್ತು ಪ್ರಕಾರದ ಕಲ್ಪವೃಕ್ಷಗಳಿವೆ.

**ಯತ್ರ ಕಲ್ಪದ್ರುಮಾ ರಮ್ಯಾ ದಶಧಾ ಪರಿಕೀರ್ತಿತಾಃ ।**
**ನಾನಾರತ್ನಮಯಾಃ ಸ್ಫೀತಪ್ರಭೋದ್ಯೋತಿತದಿಙ್ಮುಖಾಃ ॥ ೩೬ ॥**

ನಾನಾಪ್ರಕಾರವಾದ ರತ್ನಮಯವೂ ರಮಣೀಯವೂ ಆದ ಆ ಕಲ್ಪವೃಕ್ಷಗಳು ತಮ್ಮ ಕಾಂತಿಯಿಂದ ಸಮಸ್ತದಿಕ್ಕುಗಳನ್ನು ಪ್ರಕಾಶಪಡಿಸುತ್ತವೆ.

**ಮದ್ಯಾಂಗಾ ಮಧುಮೈರೇಯಶೀಧ್ವರಿಷ್ಟಾಸವಾದಿಕಾನ್ ।**
**ರಸಭೇದಾಂಸ್ತತಾಮೋದಾನ್ವಿತರಂತ್ಯಮೃತೋಪಮಾನ್ ॥ ೩೭ ॥**

ಮದ್ಯಾಂಗಕಲ್ಪವೃಕ್ಷಗಳು ಅಮೃತಸಮಾನವೂ ಪರಿಮಳವೂ ಆದ ಮಧು, ಮೈರೇಯ (ಅರೆಹೂವು ಬೆಲ್ಲ ನೀರು ಇವುಗಳಿಂದ ಮಾಡಿದ ಹೆಂಡ) ಶೀಧು (ಅರೆಹೂವು ಬೆಲ್ಲ ಕಲಗಚ್ಚು ಇವುಗಳಿಂದ ಮಾಡಿದ ಹೆಂಡ) ಅರಿಷ್ಟವೆಂಬ ಮದ್ಯ ಇವುಮೊದಲಾದ ರಸಗಳನ್ನು ಕೊಡುತ್ತವೆ.

**ಕಾಮೋದ್ದೀಪನಸಾಧರ್ಮ್ಯಾನ್ಮದ್ಯಮಿತ್ಯುಪಚರ್ಯತೇ ।**
**[೪]ತಾರವೋ ರಸಭೇದೋಽಯಂ ಯಃ ಸೇವ್ಯೋ ಭೋಗಭೂಮಿಜೈಃ ॥**

ಈ ಹಿಂದೆಹೇಳಿದ ರಸಗಳು ವೃಕ್ಷಗಳಿಂದಲೇ ಉಂಟಾಗುತ್ತವೆ. ಈ ರಸಗಳು ಕಾಮೋದ್ದೀಪಕಗಳಾಗಿರುವುದರಿಂದ ಮದ್ಯವೆಂದು ಉಪಚಾರದಿಂದ ಹೇಳಲ್ಪಟ್ಟಿವೆ. ಇವು ಕೃತ್ರಿಮವಾದ ಮದ್ಯದಂತೆ ನಿಕೃಷ್ಟವಾದುವಲ್ಲವೆಂದು ಭಾವವು. ಈ ರಸಗಳನ್ನು ಭೋಗಭೂಮಿಜ(ಆರ್ಯ)ರು ಸೇವಿಸುತ್ತಿದ್ದರು.

೧ ದುಃಖಾಂತ್ಯೈಃ. ೨ ಉತ್ತರಕುರುಜಾಯುಷೌ. ೩ ಭಾಜನಂ. ೪ ತರುಸಂಬಂಧೀ.

**ಮದಸ್ಯ ಕರಣಂ ಮದ್ಯಂ ಪಾನ[೧]ಶೌಂಡೈರ್ಯದಾದೃತಮ್ ।**
**ತದ್ವರ್ಜನೀಯಮಾರ್ಯಾಣಾಮಂತಃಕರಣಮೋಹದಮ್ ॥ ೩೯ ॥**

ಮದ್ಯಪಾನವನ್ನು ಮಾಡಿ ಮತ್ತರಾದವರು ಮದವನ್ನುಂಟುಮಾಡುವ ಯಾವ ಕೃತ್ರಿಮಮದ್ಯವನ್ನು ಪ್ರೀತಿಸುತ್ತಾರೋ ಅಂತಹ ಮದ್ಯವು ಅಂತಃಕರಣಕ್ಕೆ ಮೋಹವನ್ನುಂಟುಮಾಡುವುದಾಗಿರುವುದರಿಂದ ಉತ್ತಮರು ಅದನ್ನು ಸೇವಿಸಬಾರದು.

**ಪಟಹಾನ್ಮರ್ದಲಾಂಸ್ತಾಲಂ [೨]ಝಲ್ಲರೀಶಂಖಕಾಹಲಮ್ ।**
**ಫಲಂತಿ ಪಣವಾದ್ಯಾಂಶ್ಚ ವಾದ್ಯಭೇದಾಂಸ್ತದಂಘ್ರಿಪಾಃ ॥ ೪೦ ॥**

ಭೇರೀ ಮೃದಂಗ ತಾಳ ಜಯಘಂಟೆ ಶಂಖ ಕಾಹಲ ಗೋಮುಖವಾದ್ಯ ಮೊದಲಾದ ವಾದ್ಯಗಳನ್ನು ಕೊಡುವ ಕಲ್ಪವೃಕ್ಷಗಳಿಗೆ ಆತೋದ್ಯಾಂಗಗಳೆಂದು ಹೆಸರು.

**[೩]ತುಲಾಕೋಟಿಕಕೇಯೂರ[೪]ರುಚಕಾಂಗದವೇಷ್ಟಕಾನ್ ।**
**ಹಾರಾನ್ಮಕುಟಭೇದಾಂಶ್ಚ ಸುವತೇ ಭೂಷಣಾಂಗಕಾಃ ॥ ೪೧ ॥**

ಕಾಲುಕಡಗ ಭುಜಕೀರ್ತಿ ಕುಂಡಲ ನಾಗಮುರಿ ಒಡ್ಯಾಣ ಹಾರ ಮಕುಟ ಮೊದಲಾದ ಆಭರಣಗಳನ್ನು ಭೂಷಣಾಂಗಕಲ್ಪವೃಕ್ಷಗಳು ಕೊಡುತ್ತವೆ.

**ಸ್ರಜೋ ನಾನಾವಿಧಾಃ ಕರ್ಣಪೂರಭೇದಾಂಶ್ಚ [೫]ನ್ನೈಕಧಾ ।**
**ಸರ್ವರ್ತುಕುಸುಮಾಕೀರ್ಣಾಃ ಸುಮನೋಂಗಾ ದಧತ್ಯಲಮ್ ॥ ೪೨ ॥**

ಅನೇಕಪ್ರಕಾರವಾದ ಪುಷ್ಪಮಾಲಿಕೆಗಳನ್ನೂ ಕಿವಿಗಳಿಗೆ ಇಡುವ ಅನೇಕ ಪ್ರಕಾರವಾದ ಪುಷ್ಪಾಲಂಕಾರಗಳನ್ನೂ ಸಮಸ್ತ ಋತುಗಳಲ್ಲಿಯೂ ಪುಷ್ಪಗಳಿಂದ ವ್ಯಾಪ್ತವಾದ ಪುಷ್ಪಾಂಗಕಲ್ಪವೃಕ್ಷಗಳು ಧರಿಸುತ್ತವೆ.

**ಮಣಿಪ್ರದೀಪೈರಾಭಾಂತಿ ದೀಪಾಂಗಾಖ್ಯಾ ಮಹಾದ್ರುಮಾಃ ।**
**ಜ್ಯೋತಿರಂಗಾಃ ಸದೋದ್ಯೋತಮಾತನ್ವಂತಿ ಸ್ಫುರದ್ರುಚಃ ॥ ೪೩ ॥**

ದೀಪಾಂಗಕಲ್ಪವೃಕ್ಷಗಳು ರತ್ನದೀಪಗಳಿಂದ ಪ್ರಕಾಶಿಸುತ್ತವೆ. ಜ್ಯೋತಿರಂಗ ಕಲ್ಪವೃಕ್ಷಗಳು ಸದಾ ಪ್ರಕಾಶವನ್ನುಂಟುಮಾಡುತ್ತವೆ.

**ಗೃಹಾಂಗಾಃ ಸೌಧಮುತ್ತುಂಗಂ ಮಂಡಪಂ ಚ ಸಭಾಗೃಹಮ್ ।**
**ಚಿತ್ರನರ್ತನಶಾಲಾಶ್ಚ [೬]ಸನ್ನಿಧಾಪಯಿತುಂ ಕ್ಷಮಾಃ ॥ ೪೪ ॥**

ಗೃಹಾಂಗಕಲ್ಪವೃಕ್ಷಗಳು ದೊಡ್ಡಮಹಡಿಮನೆಯನ್ನೂ ಮಂಡಪವನ್ನೂ ಸಭಾಗೃಹವನ್ನೂ ಚಿತ್ರಶಾಲೆಗಳನ್ನೂ ನರ್ತನಶಾಲೆಗಳನ್ನೂ ಒದಗಿಸಿಕೊಡುವುದಕ್ಕೆ ಸಮರ್ಥಗಳಾಗಿವೆ.

**ಭೋಜನಾಂಗಾ ವರಾಹಾರಾನಮೃತಸ್ವಾದುದಾಯಿನಃ ।**
**[೭]ವಪುಷ್ಕರಾನ್ಫಲಂತ್ಯಾತ್ತಷಡ್ರಸಾನಶನಾದಿಕಾನ್ ॥ ೪೫ ॥**

ಭೋಜನಾಂಗಕಲ್ಪವೃಕ್ಷಗಳು ಅಮೃತದಂತೆ ರುಚಿಕರವೂ ಶರೀರಕ್ಕೆ ಪುಷ್ಟಿಕರವೂ ಷಡ್ರಸೋಪೇತವೂ ಶ್ರೇಷ್ಠವೂ ಆದ ಭೋಜನಮೊದಲಾದ ಆಹಾರಗಳನ್ನು ಕೊಡುತ್ತವೆ.

**ಅಶನಂ ಪಾನಕಂ ಖಾದ್ಯಂ ಸ್ವಾದ್ಯಂ ಚಾನ್ನಂ ಚತುರ್ವಿಧಮ್ ।**
**[೮]ಕಟ್ವಾಮ್ಲತಿಕ್ತಮಧುರಕಷಾಯಲವಣಾ ರಸಾಃ ॥ ೪೬ ॥**

ಅನ್ನ ಪಾನ ಖಾದ್ಯ ಸ್ವಾದ್ಯ(ನೆಕ್ಕಿತಿನ್ನುವ ಲೇಹಾದಿವಸ್ತು)ಗಳೆಂದು ಆಹಾರವು ನಾಲ್ಕುವಿಧವಾಗಿದೆ. ಖಾರ ಹುಳಿ ಕಹಿ ಮಧುರ ಕಷಾಯ (ಒಗರು) ಲವಣಗಳೆಂದು ರಸಗಳು ಆರುವಿಧವಾಗಿವೆ.

೧ ಮತ್ತೇ ಶೌಂಡೋತ್ಕಟಕ್ಷೀಬಾ ಇತ್ಯಮರಃ. ೨ ಜಯಘಂಟಾ. ೩ ನೂಪುರಃ. ೪ ಕುಂಡಲಂ. ೫ ಅನೇಕಧಾ. ೬ ಸನ್ನಿಹಿತಾನ್ಕರ್ತುಂ. ೭ ಪುಷ್ಟಿಕರಾನ್. ೮ ಕಟ್ವಮ್ಲ ಇತ್ಯಪಿ ಪಾಠಾಂತರಂ.

**[೧]ಸ್ಥಾಲಾನಿ [೨]ಚಷಕಾನ್ [೩]ಶೂಕ್ತಿಭೃಂಗಾರಕರಕಾದಿಕಾನ್ ।**
**ಭಾಜನಾಂಗಾ ದಿಶಂತ್ಯಾವಿರ್ಭವಚ್ಛಾಖಾ[೪]ವಿಷಂಗಿಣಃ ॥ ೪೭ ॥**

ಭಾಜನಾಂಗಕಲ್ಪವೃಕ್ಷಗಳು ಅನ್ನದ ಪಾತ್ರಗಳನ್ನೂ ಪಾನಪಾತ್ರಗಳನ್ನೂ ಶೂಕ್ತಿಯೆಂಬ ಪಾತ್ರವಿಶೇಷವನ್ನೂ ಗಿಂಡಿ ಕಮಂಡಲ ಮೊದಲಾದ ಪಾತ್ರಗಳನ್ನೂ ಕೊಡುತ್ತವೆ. ಈ ಪಾತ್ರಗಳೆಲ್ಲಾ ಭಾಜನಾಂಗಕಲ್ಪವೃಕ್ಷಗಳ ಕೊಂಬೆಗಳಲ್ಲಿ ಸಂಬಂಧಿಸಿ ಕೊಂಡಿರುತ್ತವೆ.

**ಚೀನಪಟ್ಟದುಕೂಲಾನಿ [೫]ಪ್ರಾವಾರ[೬]ಪರಿಧಾನಕಮ್ ।**
**ಮೃದುಶ್ಲಕ್ಷ್ಣಮಹಾರ್ಘಾಣಿ ವಸ್ತ್ರಾಂಗಾ ದಧತಿ ದ್ರುಮಾಃ ॥ ೪೮ ॥**

ವಸ್ತ್ರಾಂಗಕಲ್ಪವೃಕ್ಷಗಳು ಮೃದುವೂ ಹೊಳಪೂ ಅಮೂಲ್ಯವೂ ಆದ ಚೀನವಸ್ತ್ರ ಪಟ್ಟೆವಸ್ತ್ರ ನಾರುವಸ್ತ್ರ ಹೊದ್ದುಕೊಳ್ಳುವ ವಸ್ತ್ರ ಉಟ್ಟುಕೊಳ್ಳುವ ವಸ್ತ್ರ ಮೊದಲಾದ ವಸ್ತ್ರಗಳನ್ನು ಕೊಡುತ್ತವೆ.

**ನ [೭]ವನಸ್ಪತಯೋಽಪ್ಯೇತೇ ನೈವ [೮]ದಿವ್ಯೈ[೯]ರಧಿಷ್ಠಿತಾಃ**
**ಕೇವಲಂ ಪೃಥಿವೀಸಾರಾಸ್ತನ್ಮಯತ್ವಮುಪಾಗತಾಃ ॥ ೪೯ ॥**

ಈ ಹತ್ತು ವಿಧವಾದ ಕಲ್ಪವೃಕ್ಷಗಳು ವನಸ್ಪತಿಗಳೂ ಅಲ್ಲ. ಸ್ವರ್ಗಿಕರಿಂದ ಸ್ಥಾಪಿಸಲ್ಪಟ್ಟ ವೃಕ್ಷಗಳೂ ಅಲ್ಲ. ಭೂಮಿಯ ಸಾರಗಳೇ ಆ ಸ್ವರೂಪವನ್ನು ಹೊಂದಿವೆ.

**ಅನಾದಿನಿಧನಾಶ್ಚೈತೇ ನಿಸರ್ಗಾತ್ಫಲದಾಯಿನಃ ।**
**ನ ಹಿ [೧೦]ಭಾವಸ್ವಭಾವಾನಾ[೧೧]ಮುಪಾಲಂಭಃ[೧೨]ಸುಸಂಗತಃ ॥ ೫೦ ॥**

ಈ ಕಲ್ಪವೃಕ್ಷಗಳು ಭೋಗಭೂಮಿಗಳಲ್ಲಿ ಅನಾದಿನಿಧನಗಳೂ ಸ್ವಭಾವದಿಂದ ಫಲಗಳನ್ನು ಕೊಡುವುವುಗಳೂ ಆಗಿವೆ. ಪದಾರ್ಥಗಳ ಸ್ವಭಾವಗಳನ್ನು ದೂಷಿಸುವುದು ಯುಕ್ತವಲ್ಲ. ಪದಾರ್ಥಗಳಲ್ಲಿ ಅಚಿಂತ್ಯಶಕ್ತಿಯಿರುವುದರಿಂದ ಹಿಂದೆ ಹೇಳಿದ ಕಲ್ಪವೃಕ್ಷಗಳು ಕ್ಷೇತ್ರದ ಗುಣದಿಂದ ಹಾಗೆ ಪರಿಣತವಾದುದು ಆಶ್ಚರ್ಯವಲ್ಲವೆಂದು ಭಾವವು.

**ನೃಣಾಂ ದಾನಫಲಾದೇತೇ ಫಲಂತಿ ವಿಪುಲಂ ಫಲಮ್ ।**
**ಯಥಾನ್ಯಪಾದಪಾಃ ಕಾಲೇ ಪ್ರಾಣಿನಾಮುಪಕಾರಿಣಃ ॥ ೫೧ ॥**

ಇತರವೃಕ್ಷಗಳು ಯೋಗ್ಯಕಾಲದಲ್ಲಿ ಪ್ರಾಣಿಗಳಿಗೆ ಉಪಕಾರಿಗಳಾಗಿರುವಂತೆ ಈ ಕಲ್ಪವೃಕ್ಷಗಳು ಸತ್ಪಾತ್ರದಾನದ ಫಲದಿಂದ ಮನುಷ್ಯರಿಗೆ ಅಧಿಕವಾದ ಫಲಗಳನ್ನು ಕೊಡುತ್ತವೆ.

**ಸರ್ವರತ್ನಮಯಂ ಯತ್ರ ಧರಣೀತಲಮುಜ್ಜ್ವಲೈಃ ।**
**ಪ್ರಸೂನೈಃ ಸೋಪಹಾರತ್ವಾನ್ಮುಚ್ಯತೇ ಜಾತು ನ ಶ್ರಿಯಾ ॥ ೫೨ ॥**

ಆ ಉತ್ತರಕುರುಗಳಲ್ಲಿ ಸಮಸ್ತರತ್ನಮಯವಾದ ಭೂತಲವು ಪ್ರಕಾಶ ಮಾನವಾದ ಪುಷ್ಪಗಳಿಂದಲಂಕೃತವಾಗಿರುವುದರಿಂದ ಯಾವಾಗಲೂ ಶೋಭಾಯ ಮಾನವಾಗಿದೆ.

**ಯತ್ರ [೧೩]ತೃಣ್ಯಾ ಮಹೀಪೃಷ್ಠಂ ಚತುರಂಗುಲಸಮ್ಮಿತಾ ।**
**ಶುಕಚ್ಛಾಯಾಂಶುಕೇನೇವ ಪ್ರಚ್ಛಾದಯತಿ ಹಾರಿಣೀ ॥ ೫೩ ॥**

ಆ ಭೋಗಭೂಮಿಗಳಲ್ಲಿ ನಾಲ್ಕು ಅಂಗುಲಪ್ರಮಾಣ ಬೆಳೆದಿರುವ ಹುಲ್ಲುಗಳ ಸಮೂಹವು ಗಿಣಿಯ ಬಣ್ಣದಂತೆ ಹಸುರಾದ ಬಣ್ಣವುಳ್ಳ ವಸ್ತ್ರದಿಂದ ಭೂಮಿಯನ್ನು ಹೊದಿಸುತ್ತಿದೆಯೋ ಎಂಬಂತೆ ಮನೋಹರವಾಗಿದೆ.

೧ ಅನ್ನಭಾಜನಾನಿ. ೨ ಪಾನಪಾತ್ರಾಣಿ. ೩ ಪಾತ್ರವಿಶೇಷಂ. ೪ ಸಂಸಕ್ತಾನ್. ೫ ಉತ್ತರೀಯವಸ್ತ್ರಂ. ೬ ಅಧೋಂಶುಕಂ. ೭ ತೇ ಸವ್ವೇ ಕಪ್ಪದುಮಾ ಣ ವಣಪ್ಫದಿಣೋ ಣ ವೆಂತರಾ ದೇವಾ । ಣವರಿ ಪುಢವಿಸರೂವಾ ಪುಣ ಫಲಂ ದೆಂತಿ ಜೀವಾಣಮಿತ್ಯಾಗಮಾತ್. ೮ ಸ್ವರ್ಗಿಭಿಃ. ೯ ಸ್ಥಾಪಿತಾಃ. ೧೦ ಪದಾರ್ಥಃ. ೧೧ ದೂಷಣಂ. ೧೨ ಮನೋಜ್ಞಃ. ೧೩ ತೃಣಸಂಹತಿಃ.

**ಮೃಗಾ[೧]ಶ್ಚರಂತಿ ಯತ್ರತ್ಯಾಃ ಕೋಮಲಾಸ್ತೃಣಸಂಪದಃ ।**
**ಸ್ವಾದ್ವೀರ್ಮೃದ್ವೀರ್ಯಸೀರ್ಹೃದ್ಯಾ [೨]ರಸಾಯನರಸಾಸ್ಥಯಾ ॥ ೫೪ ॥**

ಅಲ್ಲಿರುವ ಮೃಗಗಳು ರುಚಿಕರವೂ ಮೃದುವೂ ಮನೋಹರವೂ ಆದ ಆ ಹುಲ್ಲುಗಳನ್ನು ಅಮೃತರಸವೆಂಬ ಬುದ್ಧಿಯಿಂದ ತಿನ್ನುತ್ತವೆ.

**ಸೋತ್ಪಲಾ ದೀರ್ಘಿಕಾ ಯತ್ರ ವಿದಲತ್ಕನಕಾಂಬುಜಾಃ ।**
**ಹಂಸಾನಾಂ [೩]ಕಲಮಂದ್ರೇಣ ವಿರುತೇನ ಮನೋಹರಾಃ ॥ ೫೫ ॥**

ಆ ಭೋಗಭೂಮಿಗಳಲ್ಲಿ ನೈದಿಲೆಪುಷ್ಪಗಳೂ ಸುವರ್ಣಕಮಲಗಳೂ ಉಳ್ಳ ಚದರವಾದ ಬಾವಿಗಳು ಹಂಸಪಕ್ಷಿಗಳ ಮಧುರವೂ ಗಂಭೀರವೂ ಆದ ಶಬ್ದಗಳಿಂದ ಮನೋಹರಗಳಾಗಿವೆ.

**ಸರಾಂಸ್ಯುತ್ಫುಲ್ಲಪದ್ಮಾನಿ ವನಮುನ್ಮತ್ತಕೋಕಿಲಮ್ ।**
**ಕ್ರೀಡಾದ್ರಯಶ್ಚ ರುಚಿರಾಃ ಸಂತಿ ಯತ್ರ ಪದೇ ಪದೇ ॥ ೫೬ ॥**

ಆ ಭೋಗಭೂಮಿಗಳಲ್ಲಿ ಪ್ರತಿಯೊಂದು ಸ್ಥಾನದಲ್ಲಿಯೂ ವಿಕಸಿತವಾದ ಕಮಲಗಳುಳ್ಳ ಸರೋವರಗಳೂ ಮದಿಸಿದ ಕೋಗಿಲೆಗಳುಳ್ಳ ವನಗಳೂ ಮನೋಹರವಾದ ಕ್ರೀಡಾಪರ್ವತಗಳೂ ಇವೆ.

**ಯತ್ರಾಧೂಯ ತರೂನ್ಮಂದಮಾವಾತಿ ಮೃದುಮಾರುತಃ ।**
**[೪]ಪಟವಾಸಮಿವಾತನ್ವನ್ಮಕರಂದರಜೋಽಭಿತಃ ॥ ೫೭ ॥**

ಆ ಭೋಗಭೂಮಿಗಳಲ್ಲಿ ಮೃದುವಾದ ಗಾಳಿಯು ವೃಕ್ಷಗಳನ್ನು ಕೊಡಹಿ ಸುಗಂಧದ್ರವ್ಯದ ಚೂರ್ಣವನ್ನೆರಚುವಂತೆ ಪುಷ್ಪಧೂಳುಗಳನ್ನು ಸುತ್ತಲೂ ಎರಚಿ ಮಂದವಾಗಿ ಬೀಸುತ್ತದೆ.

**ಯತ್ರ ಗಂಧವಹಾಧೂತೈರಾಕೀರ್ಣಾ ಪುಷ್ಪರೇಣುಭಿಃ ।**
**ವಸುಧಾ ರಾಜತೇ [೫]ಪೀತಕ್ಷೌಮೇಣೇವಾ[೬]ವಕುಂಠಿತಾ ॥ ೫೮ ॥**

ಆ ಭೋಗಭೂಮಿಗಳಲ್ಲಿ ಗಾಳಿಯಿಂದ ಕೊಡಹಲ್ಪಟ್ಟ ಪುಷ್ಪ ಧೂಳುಗಳಿಂದ ವ್ಯಾಪ್ತವಾಗಿರುವ ಭೂಮಿಯು ಸುವರ್ಣವರ್ಣವುಳ್ಳ ಪಟ್ಟೆವಸ್ತ್ರದಿಂದ ಹೊದಿಸ ಲ್ಪಟ್ಟಿದೆಯೋ ಎಂಬಂತೆ ಶೋಭಿಸುತ್ತದೆ.

**ಯತ್ರಾಮೋದಿತದಿಗ್ಭಾಗೈರ್ಮರುದ್ಭಿಃ ಪುಷ್ಪಜಂ ರಜಃ ।**
**ನಭಸಿ ಶ್ರಿಯಮಾಧತ್ತೇ ವಿತಾನಸ್ಯಾಭಿತೋ ಹೃತಮ್ ॥ ೫೯ ॥**

ಆ ಭೋಗಭೂಮಿಗಳಲ್ಲಿ ಸಮಸ್ತದಿಗ್ಭಾಗಗಳನ್ನು ಸುಗಂಧಗಳುಳ್ಳವುಗಳನ್ನಾಗಿ ಮಾಡುವ ಗಾಳಿಯಿಂದ ಮೇಲಕ್ಕೆ ಹಾರಿಸಲ್ಪಟ್ಟ ಪುಷ್ಪಧೂಳಿಯು ಆಕಾಶದಲ್ಲಿ ಮೇಲ್ಕಟ್ಟಿನ ಶೋಭೆಯನ್ನು ಧರಿಸುತ್ತದೆ. ಪುಷ್ಪಧೂಳಿಯು ಆಕಾಶದಲ್ಲಿ ಮೇಲ್ಕಟ್ಟಿನಂತೆ ಶೋಭಿಸುತ್ತಿದೆಯೆಂದು ಭಾವವು.

**ಯತ್ರ ನಾತಪಸಂಬಾಧಾ ನ ವೃಷ್ಟಿರ್ನ ಹಿಮಾದಯಃ ।**
**[೭]ನೇತಯೋ [೮]ದಂದಶೂಕಾ ವಾ ಪ್ರಾಣಿನಾಂ ಭಯಹೇತವಃ ॥ ೬೦ ॥**

ಅಲ್ಲಿ ಬಿಸಲಿನ ಬಾಧೆಯಾಗಲಿ ಮಳೆಯ ಬಾಧೆಯಾಗಲಿ ಶೀತಬಾಧೆಯಾಗಲಿ ಇಲ್ಲ. ಅತಿವೃಷ್ಟಿಮೊದಲಾದ ಈತಿಬಾಧೆಗಳೂ ಸರ್ಪಗಳೂ ಪ್ರಾಣಿಗಳಿಗೆ ಭಯಹೇತುಗಳಾಗಿಲ್ಲ.

**ನ ಜ್ಯೋತ್ಸ್ನಾ ನಾಪ್ಯಹೋರಾತ್ರವಿಭಾಗೋ ನರ್ತುಸಂಕ್ರಮಃ ।**
**ನಿತ್ಯೈಕವೃತ್ತಯೋ ಭಾವಾ ಯ[೯]ತ್ರೈಷಾಂ ಸುಖಹೇತವಃ ॥ ೬೧ ॥**

೧ ಭಕ್ಷಯಂತಿ. ೨ ಅಮೃತರಸಬುದ್ಧ್ಯಾ. ೩ ಮಧುರಗಂಭೀರೇಣ. ೪ ಪಟವಾಸಚೂರ್ಣಂ. ೫ ಸುವರ್ಣವರ್ಣಪಟ್ಟವಸ್ತ್ರೇಣ. ೬ ಆಚ್ಛಾದಿತಾ. ೭ ಅತಿವೃಷ್ಟಿರನಾವೃಷ್ಟಿಃ ಶಲಭಾ ಮೂಷಕಾಃ ಶುಕಾಃ । ಅತ್ಯಾಸನ್ನಾಶ್ಚ ರಾಜಾನಃ ಷಡೇತಾ ಈತಯಃ ಸ್ಮೃತಾಃ. ೮ ಸರ್ಪಾಃ. ೯ ಆರ್ಯಾಣಾಂ.

ಆ ಭೋಗಭೂಮಿಗಳಲ್ಲಿ ಬೆಳದಿಂಗಳೂ ಹಗಲುರಾತ್ರಿಯೆಂಬ ಭೇದವೂ ಋತುಪರಿವರ್ತನೆಯೂ ಇಲ್ಲ. ಅಲ್ಲಿರುವ ಪದಾರ್ಥಗಳು ಯಾವಾಗಲೂ ಒಂದೇಪ್ರಕಾರವಾಗಿದ್ದು ಆರ್ಯರಿಗೆ ಸುಖಹೇತುಗಳಾಗಿವೆ.

**ವನಾನಿ ನಿತ್ಯಪುಷ್ಪಾಣಿ ನಲಿನ್ಯೋ ನಿತ್ಯಪಂಕಜಾಃ ।**
**ಯತ್ರ ನಿತ್ಯಸುಖಾ ದೇಶಾ ರತ್ನಪಾಂಸುಭಿರಾಚಿತಾಃ ॥ ೬೨ ॥**

ಅಲ್ಲಿ ವನಗಳು ಯಾವಾಗಲೂ ಪುಷ್ಪಭರಿತಗಳಾಗಿರುತ್ತವೆ. ಕಮಲಲತೆಗಳು ಯಾವಾಗಲೂ ಕಮಲಗಳನ್ನು ಧರಿಸಿರುತ್ತವೆ. ರತ್ನಧೂಳಿಗಳಿಂದ ವ್ಯಾಪ್ತವಾಗಿರುವ ಪ್ರದೇಶಗಳು ಯಾವಾಗಲೂ ಸುಖದಾಯಕಗಳಾಗಿವೆ.

**ಯತ್ರೋ[1]ತ್ಪನ್ನವತಾಂ ದಿವ್ಯಮಂಗುಲ್ಯಾಹಾರ[2]ಮುದ್ರಸಮ್ ।**
**ವದಂತ್ಯುತ್ತಾನಶಯ್ಯಾಯಾಮಾಸಪ್ತಾಹವ್ಯತಿಕ್ರಮಾತ್ ॥ ೬೩ ॥**

ಆ ಭೋಗಭೂಮಿಗಳಲ್ಲಿ ಹುಟ್ಟಿದ ಮಕ್ಕಳಿಗೆ ಜನಿಸಿದ ಏಳುದಿವಸಗಳವರೆಗೆ ಶ್ರೇಷ್ಠವೂ ರಸಭರಿತವೂ ಆದ ಬೆರಳಿನ ಆಹಾರವೆಂದು ಆಚಾರ್ಯರು ಹೇಳುತ್ತಾರೆ. ಅಂದರೆ–ಭೋಗಭೂಮಿಗಳಲ್ಲಿ ಹುಟ್ಟಿದ ಮಕ್ಕಳು ಏಳುದಿವಸಗಳ ವರೆಗೆ ತಮ್ಮ ಹೆಬ್ಬೆಟ್ಟುಗಳನ್ನು ಚೀಪುತ್ತ ಜೀವಿಸುತ್ತವೆ. ಆ ಬೆರಳುಗಳಲ್ಲಿ ಅಮೃತಸಮಾನವಾದ ರಸವು ತುಂಬಿರುತ್ತದೆ.

**ತತೋ [3]ದಶಾಂತರಂ ತೇಷಾಮಾಮನಂತಿ ಮನೀಷಿಣಃ ।**
**ದಂಪತೀನಾಂ ಮಹೀರಂಗ[4]ರಿಂಗಿಣಾಂ ದಿನಸಪ್ತಕಮ್ ॥ ೬೪ ॥**

ಪುನಃ ಏಳುದಿವಸಗಳ ವರೆಗೆ ಆ ಬಾಲದಂಪತಿಗಳಿಗೆ ಬೇರೆ ಅವಸ್ಥೆಯುಂಟಾಗಿ ಭೂಮಿಯೆಂಬ ರಂಗಸ್ಥಳದಲ್ಲಿ ಸಂಚರಿಸುತ್ತಾರೆಂದು ವಿದ್ವಾಂಸರು ಹೇಳುತ್ತಾರೆ. (ಭೋಗ ಭೂಮಿಗಳಲ್ಲಿ ಹೆಣ್ಣುಗಂಡುಅವಳಿಮಕ್ಕಳು ಹುಟ್ಟಿ ಪುನಃ ಅವರೇ ದಂಪತಿಗಳಾಗುತ್ತಾರೆ).

**ಸಪ್ತಾಹೇನ ಪರೇಣಾಥ ಪ್ರೋತ್ಥಾಯ ಕಲಭಾಷಿಣಃ ।**
**ಸ್ಖಲದ್ಗತಿ ಸಹೇಲಂ ಚ ಸಂಚರಂತಿ ಮಹೀತಲೇ ॥ ೬೫ ॥**

ಆ ಏಳುದಿವಸಗಳನಂತರ ಪುನಃ ಏಳುದಿವಸಗಳ ವರೆಗೆ ತೊದಲುಮಾತುಗಳನ್ನಾಡುವ ಆ ಮಕ್ಕಳು ಎದ್ದು ಭೂಮಿಯ ಮೇಲೆ ಎಡವಿ ಬೀಳುತ್ತ ಲೀಲೆಯಾಗಿ ಸಂಚರಿಸುತ್ತಾರೆ.

**ತತಃ ಸ್ಥಿರಪದನ್ಯಾಸೈರ್ವ್ರಜಂತಿ ದಿನಸಪ್ತಕಮ್ ।**
**ಕಲಾಜ್ಞಾನೇನ ಸಪ್ತಾಹಂ [5]ನಿರ್ವಿಶಂತಿ ಗುಣೈಶ್ಚ ತೇ ॥ ೬೬ ॥**

ತರುವಾಯ ಏಳುದಿವಸಗಳ ವರೆಗೆ ಸ್ಥಿರವಾಗಿ ಹೆಜ್ಜೆಗಳನ್ನಿಟ್ಟು ನಡೆಯುತ್ತಾರೆ. ಪುನಃ ಏಳುದಿವಸಗಳಲ್ಲಿ ಕಲಾಜ್ಞಾನವನ್ನೂ ಬೇರೆ ಗುಣಗಳನ್ನೂ ಹೊಂದುತ್ತಾರೆ.

**ಪರೇಣ ಸಪ್ತರಾತ್ರೇಣ ಸಂಪೂರ್ಣನವಯೌವನಾಃ ।**
**ಲಸದಂಶುಕಸದ್ಭೂಷಾ ಜಾಯಂತೇ ಭೋಗಭಾಗಿನಃ ॥ ೬೭ ॥**

ಆಮೇಲೆ ಏಳುದಿವಸಗಳಲ್ಲಿ ಸಂಪೂರ್ಣನವಯೌವನಭರಿತರೂ ಪ್ರಕಾಶಮಾನವಾದ ವಸ್ತ್ರಾಭರಣಗಳನ್ನು ಧರಿಸಿದವರೂ ಭೋಗಗಳನ್ನನುಭವಿಸುವವರೂ ಆಗುತ್ತಾರೆ.

**ನವಮಾಸಂ ಸ್ಥಿತಾ ಗರ್ಭೇ ರತ್ನಗರ್ಭಗೃಹೋಪಮೇ ।**
**ಯತ್ರ ದಂಪತಿತಾಮೇತ್ಯ ಜಾಯಂತೇ ದಾನಿನೋ ನರಾಃ ॥ ೬೮ ॥**

ಸತ್ಪಾತ್ರದಾನವನ್ನು ಮಾಡಿದ ಮನುಷ್ಯರು ಆ ಭೋಗಭೂಮಿಗಳಲ್ಲಿ ರತ್ನಗಳು ತುಂಬಿರುವ ಮನೆಯಂತಿರುವ ಗರ್ಭದಲ್ಲಿ ಒಂಬತ್ತು ತಿಂಗಳ ವರೆಗೆ ಇದ್ದು ತರುವಾಯ ದಂಪತಿಗಳಾಗಿ ಹುಟ್ಟುತ್ತಾರೆ.

**ಯದಾ ದಂಪತಿಸಂಭೂತಿರ್ಜನಯಿತ್ರೋಃ ಪರಾಸುತಾ ।**
**ತದೈವ ತನ್ನ ಪುತ್ರಾದಿಸಂಕಲ್ಪೋ ಯತ್ರ ದೇಹಿನಾಮ್ ॥ ೬೯ ॥**

ಈ ದಂಪತಿಗಳಾದ ಅವಳಿಮಕ್ಕಳು ಹುಟ್ಟಿದೊಡನೆ ತಾಯಿತಂದೆಗಳಿಗೆ ಮರಣವಾಗುವುದು. ಆದುದರಿಂದ ಅಲ್ಲಿ ಪ್ರಾಣಿಗಳಿಗೆ ಮಕ್ಕಳು ತಂದೆ ತಾಯಿ ಮೊದಲಾದ ಕಲ್ಪನೆ(ವ್ಯವಹಾರ)ಯು ಉಂಟಾಗುವುದಿಲ್ಲ.

**ಕ್ಷುತಜೃಂಭಿತಮಾತ್ರೇಣ ಯತ್ರಾಹುರ್ಮೃತಿಮಂಗಿನಾಮ್ ।**
**ಸ್ವಭಾವಮಾರ್ದವಾದ್ಯಾಂತಿ ದಿವಮೇವ ಯದುದ್ಭವಾಃ ॥ ೭೦ ॥**

ಆ ಭೋಗಭೂಮಿಗಳಲ್ಲಿ ಸ್ತ್ರೀಯರು ಸೀನಿನಿಂದಲೂ ಪುರುಷರು ಆಕಳಿಕೆಯಿಂದಲೂ ಮರಣವನ್ನು ಹೊಂದುತ್ತಾರೆ. ಆ ಭೋಗಭೂಮಿಗಳಲ್ಲಿ ಹುಟ್ಟಿದವರ ಸ್ವಭಾವವು ಮೃದುವಾಗಿರುವುದರಿಂದ ಅವರೆಲ್ಲರೂ ಆಯುಷ್ಯವು ತೀರಿದ ಮೇಲೆ ಮೃತರಾಗಿ ಸ್ವರ್ಗವನ್ನೇ ಹೊಂದುತ್ತಾರೆ.

**ದೇಹೋಚ್ಛ್ರಾಯಂ ನೃಣಾಂ ಯತ್ರ ನಾನಾಲಕ್ಷಣಸುಂದರಮ್ ।**
**ಧನುಷಾಂ ಷಟ್ ಸಹಸ್ರಾಣಿ [1]ವಿವೃಣ್ವಂತ್ಯಾ[2]ಪ್ತಸೂಕ್ತಯಃ ॥ ೭೧ ॥**

ಆ ಉತ್ತರಕುರುಗಳಲ್ಲಿ ಮನುಷ್ಯರ ನಾನಾಲಕ್ಷಣಗಳಿಂದ ಸುಂದರವಾದ ಶರೀರದ ಉತ್ಸೇಧವು ಆರುಸಾವಿರ ಧನುಸ್ಸಿನ ಪ್ರಮಾಣವಾಗಿದೆಯೆಂದು ಆಪ್ತವಚನಗಳು ವಿವರಿಸುತ್ತವೆ.

**ಪಲ್ಯತ್ರಯಮಿತಂ ಯತ್ರ ದೇಹಿನಾಮಾಯುರಿಷ್ಯತೇ ।**
**ದಿನತ್ರಯೇಣ ಚಾಹಾರಃ [3]ಕುವಲೀಫಲಮಾತ್ರಕಃ ॥ ೭೨ ॥**

ಅಲ್ಲಿ ಪ್ರಾಣಿಗಳ ಆಯುಷ್ಯವು ಮೂರುಪಲ್ಯಪ್ರಮಾಣವಾಗಿದೆ. ಆಹಾರವು ಮೂರುದಿವಸಕ್ಕೊಮ್ಮೆ ಬೋರೆಕಾಯಿಪ್ರಮಾಣವಾಗಿದೆ. (ಇಲ್ಲಿ ಪಲ್ಯವೆಂಬುದು ಉಪಮಾಪ್ರಮಾಣವಾಗಿದೆ ಮತ್ತು ಭೋಗಭೂಮಿಜರು ಪುಣ್ಯಜೀವಿಗಳಾಗಿರುವುದರಿಂದಲೂ ಆಹಾರವು ಅಮೃತಸಮಾನವಾಗಿ ಸಾರವಾಗಿರುವುದರಿಂದಲೂ ಅಲ್ಪಾಹಾರವು ಸಾಕಾಗುತ್ತದೆ).

**ಯ[4]ದ್ಭವಾಂ ನ ಜರಾತಂಕಾ ನ ವಿಯೋಗೋ ನ ಶೋಚನಮ್ ।**
**ನಾನಿಷ್ಟಸಂಪ್ರಯೋಗಶ್ಚ ನ ಚಿಂತಾ ದೈನ್ಯಮೇವ ಚ ॥ ೭೩ ॥**

ಅಲ್ಲಿ ಹುಟ್ಟಿದ ಜೀವಗಳಿಗೆ ಮುಪ್ಪೂ ವಿಯೋಗವೂ ಶೋಕವೂ ಅನಿಷ್ಟವಸ್ತುಗಳ ಸಂಬಂಧವೂ ಚಿಂತೆಯೂ ದೀನತ್ವವೂ ಇರುವುದಿಲ್ಲ. ಯಾವ ಪ್ರಕಾರವಾದ ಕೊರತೆಯೂ ಇಲ್ಲದೆ ನಿತ್ಯಸುಖಿಗಳಾಗಿರುತ್ತಾರೆಂದು ಭಾವವು.

**ನ ನಿದ್ರಾ ನಾತಿತಂದ್ರಾಣಂ ನಾತ್ಯುನ್ಮೇಷನಿಮೇಷಣಮ್ ।**
**ನ ಶಾರೀರಮಲಂ ಯತ್ರ ನ ಲಾಲಾಸ್ವೇದಸಂಭವಃ ॥ ೭೪ ॥**

ಅಲ್ಲಿ ಪ್ರಾಣಿಗಳಿಗೆ ನಿದ್ರೆಯಿಲ್ಲ, ಬಹಳ ಆಲಸ್ಯವೂ ಇಲ್ಲ, ಅತಿಯಾಗಿ ಕಣ್ಣುಗಳನ್ನು ಮುಚ್ಚಿ ತೆರೆಯುವಿಕೆಯಿಲ್ಲ, ಶರೀರದಿಂದ ಯಾವಪ್ರಕಾರವಾದ ಮಲವೂ ಹೊರಡುವುದಿಲ್ಲ, ಬಾಯಿಯಿಂದ ಜೊಲ್ಲು ಸುರಿಯುವುದಿಲ್ಲ, ಬೆವರುವುದಿಲ್ಲ.

**ನ ಯತ್ರ ವಿರಹೋನ್ಮಾದೋ ನ ಯತ್ರ ಮದನಜ್ವರಃ ।**
**ನ ಯತ್ರ ಖಂಡನಾ ಭೋಗೇ ಸುಖಂ ಯತ್ರ ನಿರಂತರಮ್ ॥ ೭೫ ॥**

೧ ಬಾಲಕಾನಾಂ. ೨ ಉದ್ಗತರಸಂ. ೩ ಅವಸ್ಥಾಂತರಂ. ೪ ರಿಗಿತಾವಿತಿ ಧಾತುಃ. ೫ ಅನುಭವಂತಿ.

೧ ವಿವರಣಂ ಕುರ್ವಂತಿ. ೨ ಆಪ್ತವಚನಾನಿ. ೩ ಬದರೀಫಲಪರಿಮಿತಃ. ೪ ಉತ್ಪನ್ನಾನಾಂ.

ಅಲ್ಲಿ ತಮಗೆ ಇಷ್ಟವಾದ ಪದಾರ್ಥಗಳ ವಿಯೋಗವಾಗುವುದಿಲ್ಲ. ಚಿತ್ತಭ್ರಮೆಯುಂಟಾಗುವುದಿಲ್ಲ. ಕಾಮಜ್ವರವಿಲ್ಲ. ಭೋಗೋಪಭೋಗವಿಷಯ ಗಳಲ್ಲಿ ವಿಚ್ಛೇದವುಂಟಾಗುವುದಿಲ್ಲ. ಅಲ್ಲಿ ಯಾವಾಗಲೂ ಸುಖವಿರುತ್ತದೆ.

**ನ ವಿಷಾದೋ ಭಯಂ [೧]ಗ್ಲಾನಿರ್ನಾರುಚಿಃ ಕುಪಿತಂ ಚ ನ ।**
**ನ ಕಾರ್ಪಣ್ಯಮನಾಚಾರೋ ನ ಬಲೀ ಯತ್ರ ನಾಬಲಃ ॥ ೭೬ ॥**

ಆ ಭೋಗಭೂಮಿಗಳಲ್ಲಿ ವಿಷಾದವೂ ಭಯವೂ ಗ್ಲಾನಿ(ಸಂತೋಷಕ್ಕೆ ಭಂಗ)ಯೂ ಪ್ರೀತಿಯಿಲ್ಲದಿರುವಿಕೆಯೂ ಕೋಪವೂ ಕೃಪಣತ್ವವೂ ಅನಾಚಾರವೂ ಬಲಿಷ್ಠನೂ ಬಲಹೀನನೂ ಇಲ್ಲ. ಸಮಾನರೆಂದು ಭಾವವು.

**ಬಾಲಾರ್ಕಸಮ[೨]ನಿರ್ಭಾಸಾ ನಿಃಸ್ವೇದಾ ನೀರಜೋಂಬರಾಃ ।**
**ಯತ್ರ ಪುಣ್ಯೋದಯಾನ್ನಿತ್ಯಂ ರಂರಮ್ಯಂತೇ ನರಾಃ ಸುಖಮ್ ॥ ೭೭ ॥**

ಅಲ್ಲಿ ಮನುಷ್ಯರು ಪೂರ್ವಪುಣ್ಯದ ಉದಯದಿಂದ ಬಾಲಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವರೂ ಬೆವರದಿರುವ ಶರೀರವುಳ್ಳವರೂ ಕೊಳೆಯಿಲ್ಲದೆ ಪರಿಶುದ್ಧವಾಗಿರುವ ವಸ್ತ್ರವುಳ್ಳವರೂ ಆಗಿ ಯಾವಾಗಲೂ ಸುಖವಾಗಿ ಕ್ರೀಡಿಸುತ್ತಾರೆ.

**ದಶಾಂಗತರುಸಂಭೂತಭೋಗಾನುಭವನೋದ್ಭವಮ್ ।**
**ಸುಖಂ ಯತ್ರಾ[೩]ತಿಶೇತೇ ತಾಂ ಚಕ್ರಿಣೋ ಭೋಗಸಂಪದಮ್ ॥ ೭೮ ॥**

ಆ ಭೋಗಭೂಮಿಗಳಲ್ಲಿ ಹತ್ತುಪ್ರಕಾರವಾದ ಕಲ್ಪವೃಕ್ಷಗಳಿಂದುಂಟಾಗುವ ಭೋಗಗಳನ್ನನುಭವಿಸುವುದರಿಂದುಂಟಾಗುವ ಸುಖವು ಚಕ್ರವರ್ತಿಯ ಭೋಗ ಸಂಪತ್ತನ್ನೂ ಮೀರುತ್ತದೆ. ಚಕ್ರವರ್ತಿಯ ಸುಖಕ್ಕಿಂತಲೂ ಅತಿಶಯವಾದ ಸುಖವು ಭೋಗಭೂಮಿಜರಿಗಿದೆಯೆಂದು ಭಾವವು.

**ಯತ್ರ ದೀರ್ಘಾಯುಷಾಂ ನೄಣಾಂ [೪]ನಾಕಾಂಡೇ ಮೃತ್ಯುಸಂಭವಃ ।**
**ನಿರುಪದ್ರವಮಾಯುಃ ಸ್ವಂ ಜೀವಂತ್ಯುಕ್ತಪ್ರಮಾಣಕಮ್ ॥ ೭೯ ॥**

ದೀರ್ಘಾಯುಷ್ಯವುಳ್ಳ ಆ ಭೋಗಭೂಮಿಯ ಮನುಷ್ಯರಿಗೆ ಅಕಾಲದಲ್ಲಿ ಮರಣವಾಗುವುದಿಲ್ಲ. ಹಿಂದೆ ಹೇಳಿದ ಮೂರುಪಲ್ಯಕಾಲಪ್ರಮಾಣವಾದ ತಮ್ಮ ಆಯುಷ್ಯವು ಪೂರ್ತಿಯಾಗುವವರೆಗೆ ಯಾವ ತೊಂದರೆಯೂ ಇಲ್ಲದೆ ಜೀವಿಸುತ್ತಾರೆ.

**ಸರ್ವೇಽಪಿ ಸಮಸಂಭೋಗಾಃ ಸರ್ವೇ ಸಮಸುಖೋದಯಾಃ ।**
**ಸರ್ವೇ ಸರ್ವರ್ತುಜಾನ್ಭೋಗಾನ್ಯತ್ರ [೫]ವಿಂದಂತ್ಯನಾಮಯಾಃ ॥ ೮೦ ॥**

ಅಲ್ಲಿ ಎಲ್ಲರೂ ಸಮಾನವಾದ ಭೋಗವುಳ್ಳವರಾಗಿಯೂ ಸಮಾನವಾದ ಸುಖ ವುಳ್ಳವರಾಗಿಯೂ ಇರುತ್ತಾರೆ. ಎಲ್ಲರೂ ಆರೋಗ್ಯಶಾಲಿಗಳಾಗಿ ಸಮಸ್ತಋತು ಗಳಲ್ಲಿಯೂ ಉಂಟಾಗುವ ಭೋಗೋಪಭೋಗವಸ್ತುಗಳನ್ನು ಹೊಂದುತ್ತಾರೆ.

**ಸರ್ವೇಽಪಿ ಸುಂದರಾಕಾರಾಃ ಸರ್ವೇ ವಜ್ರಾಸ್ಥಿಬಂಧನಾಃ ।**
**ಸರ್ವೇ ಚಿರಾಯುಷಃ ಕಾಂತ್ಯಾ ಗೀರ್ವಾಣಾ ಇವ ಯದ್ಭುವಃ ॥ ೮೧ ॥**

ಭೋಗಭೂಮಿಗಳಲ್ಲಿ ಹುಟ್ಟಿದವರೆಲ್ಲರೂ ಸುಂದರವಾದ ಆಕಾರವುಳ್ಳವರಾಗಿ ರುತ್ತಾರೆ. ವಜ್ರದಂತೆ ದೃಢವಾದ ಎಲುಬು(ಮೂಳೆ)ಗಳ ಬಂಧನವುಳ್ಳವರಾಗಿ ರುತ್ತಾರೆ. ಎಲ್ಲರೂ ದೀರ್ಘಾಯುಷ್ಯವುಳ್ಳವರಾಗಿರುತ್ತಾರೆ. ದೇವತೆಗಳಂತೆ ದೇಹ ಕಾಂತಿಯುಳ್ಳವರಾಗಿರುತ್ತಾರೆ.

**ಯತ್ರ ಕಲ್ಪತರುಚ್ಛಾಯಾಮುಪೇತ್ಯ ಲಲಿತಸ್ಮಿತೌ ।**
**ದಂಪತೀ ಗೀತವಾದಿತ್ರೈ ರಮೇತೇ ಸತತೋತ್ಸವೈಃ ॥ ೮೨ ॥**

೧ ಹರ್ಷಕ್ಷಯಃ. ೨ ರುಚಯಃ. ೩ ಅತಿಶಯಂ ಕರೋತಿ. ೪ ಅಕಾಲೇ. ೫ ಲಭಂತೇ.

ಅಲ್ಲಿ ಮುಗುಳುನಗೆಯುಳ್ಳ ದಂಪತಿಗಳು ಕಲ್ಪವೃಕ್ಷಗಳ ನೆರಳಿನಲ್ಲಿ ಗೀತವಾದ್ಯಗಳ ಶಬ್ದಗಳಿಂದ ಯಾವಾಗಲೂ ಉಂಟಾಗುವ ಉತ್ಸವಗಳಿಂದ ವಿನೋದವನ್ನು ಮಾಡುತ್ತಾರೆ.

**ಕಲಾಕುಶಲತಾ[೧]ಕಲ್ಯದೇಹತ್ವಂ [೨]ಕಲಕಂಠತಾ ।**
**ಮಾತ್ಸರ್ಯೇರ್ಷ್ಯಾದಿವೈಕಲ್ಯಮಪಿ ಯತ್ರ ನಿಸರ್ಗಜಮ್ ॥ ೮೩ ॥**

ಆ ಭೋಗಭೂಮಿಗಳಲ್ಲಿ ಆರ್ಯರಿಗೆ ಸಮಸ್ತಕಲಾಚಾತುರ್ಯವೂ ಆರೋಗ್ಯವಾದ ದೇಹವೂ ಮನೋಹರವಾದ ಕಂಠವೂ ಮತ್ಸರವಿಲ್ಲದಿರು ವಿಕೆಯೂ ಈರ್ಷೆಯಿಲ್ಲದಿರುವಿಕೆಯೂ ಸ್ವಭಾವದಿಂದಲೇ ಉಂಟಾಗುತ್ತವೆ.

**ಸ್ವಭಾವಸುಂದರಾಕಾರಾಃ ಸ್ವಭಾವಲಲಿತೇ[೩]ಹಿತಾಃ ।**
**ಸ್ವಭಾವಮಧುರಾಲಾಪಾ ಮೋದಂತೇ ಯತ್ರ ದೇಹಿನಃ ॥ ೮೪ ॥**

ಆ ಭೋಗಭೂಮಿಜರು ಸ್ವಭಾವದಿಂದ ಸುಂದರವಾದ ಆಕಾರವುಳ್ಳವರೂ ಸ್ವಭಾವದಿಂದ ಮನೋಹರವಾದ ಚೇಷ್ಟೆಯುಳ್ಳವರೂ ಸ್ವಭಾವದಿಂದ ಮಧುರ ವಾದ ಸಂಭಾಷಣೆಯುಳ್ಳವರೂ ಆಗಿ ಆನಂದಪಡುತ್ತಾರೆ.

**ದಾನಾದ್ದಾನಾನುಮೋದಾದ್ವಾ ಯತ್ರ ಪಾತ್ರಸಮಾಶ್ರಿತಾತ್ ।**
**ಪ್ರಾಣಿನಃ ಸುಖಮೇಧಂತೇ ಯಾವಜ್ಜೀವಮನಾಮಯಾಃ ॥ ೮೫ ॥**

ಪ್ರಾಣಿಗಳು ಸತ್ಪಾತ್ರದಾನವನ್ನು ಮಾಡುವುದರಿಂದ ಅಥವಾ ಬೇರೆಯವರು ಮಾಡಿದ ದಾನಕ್ಕೆ ಅನುಮೋದಪಡುವುದರಿಂದ ಆ ಭೋಗಭೂಮಿಗಳಲ್ಲಿ ಜನಿಸಿ ಆರೋಗ್ಯಭಾಗಿಗಳಾಗಿ ಆಯುಷ್ಯವಿರುವವರೆಗೂ ಸುಖವನ್ನನುಭವಿಸುತ್ತಾರೆ.

**ಕುದೃಷ್ಟಯೋ ವ್ರತೈರ್ಹೀನಾಃ ಕೇವಲಂ ಭೋಗಕಾಂಕ್ಷಿಣಃ ।**
**ದತ್ವಾ ದಾನಾನ್ಯಪಾತ್ರೇಷು ತಿರ್ಯಕ್ತ್ವಂ ಯತ್ರ ಯಾಂತ್ಯಮೀ ॥ ೮೬ ॥**

ವ್ರತಹೀನರಾದ ಮಿಥ್ಯಾದೃಷ್ಟಿಗಳು ಕೇವಲ ಭೋಗಾಪೇಕ್ಷಿಗಳಾಗಿ ಕುಪಾತ್ರಗಳಿಗೆ ದಾನವನ್ನು ಮಾಡಿ ಮರಣಾನಂತರ ಆ ಭೋಗಭೂಮಿಗಳಲ್ಲಿ ತಿರ್ಯಂಚಜೀವ (ಪಶು)ಗಳಾಗಿ ಹುಟ್ಟುತ್ತಾರೆ.

**ಕುಶೀಲಾಃ ಕುತ್ಸಿತಾಚಾರಾಃ [೪]ಕುವೇಷಾ [೫]ದುರುಪೋಷಿತಾಃ ।**
**ಮಾಯಾಚಾರಾಶ್ಚ ಜಾಯಂತೇ ಮೃಗಾ ಯತ್ರ ವ್ರತಚ್ಯುತಾಃ ॥ ೮೭ ॥**

ದುಷ್ಟಸ್ವಭಾವದವರೂ ದುರಾಚಾರಿಗಳೂ ಕಾಪಾಲಿಕಾದಿದುಷ್ಟವೇಷಗಳನ್ನು ಧರಿಸುವವರೂ ಅಮಾವಾಸ್ಯಮೊದಲಾದ ದುಷ್ಟತಿಥಿಗಳಲ್ಲಿ ಉಪವಾಸಗಳನ್ನು ಮಾಡುವವರೂ ಮಾಯಾಚಾರಿಗಳೂ ವ್ರತಭ್ರಷ್ಟರೂ ಆ ಭೋಗಭೂಮಿಗಳಲ್ಲಿ ಪಶುಗಳಾಗಿ ಹುಟ್ಟುತ್ತಾರೆ.

**ಮಿಥುನಂ ಮಿಥುನಂ ತೇಷಾಂ ಮೃಗಾಣಾಮಪಿ ಜಾಯತೇ ।**
**ನ ಮಿಥೋಽಸ್ತಿ [೬]ವಿರೋಧೋ ವಾ [೭]ವೈರಂ [೮]ವೈರಸ್ಯಮೇವ ವಾ ॥**

ಪಶುಗಳು ಕೂಡ ಅವಳಿಗಳಾಗಿಯೇ ಹುಟ್ಟುತ್ತವೆ. ಅವುಗಳಿಗೆ ಪರಸ್ಪರವಾಗಿ ಹಿಂಸಿಸಬೇಕೆಂಬ ಭಾವ(ವಧ್ಯವಧಕಭಾವ)ವೂ ಮನಸ್ಸಿನಲ್ಲಿ ದ್ವೇಷವೂ ಪ್ರೀತಿಯಿಲ್ಲ ದಿರುವಿಕೆಯೂ ಇರುವುದಿಲ್ಲ. ಮನುಷ್ಯರಂತೆ ಅನ್ಯೋನ್ಯಪ್ರೇಮವುಳ್ಳುವಾಗಿ ರುತ್ತವೆಂದರ್ಥವು.

**ಇತ್ಯತ್ಯಂತಸುಖೇ ತಸ್ಮಿನ್ಕ್ಷೇತ್ರೇ ಪಾತ್ರಪ್ರದಾನತಃ ।**
**ಶ್ರೀಮತೀ ವಜ್ರಜಂಘಶ್ಚ ದಂಪತೀತ್ವಮುಪೇಯತುಃ ॥ ೮೯ ॥**

ಹೀಗೆ ಅತ್ಯಂತ ಸುಖಹೇತುವಾದ ಆ ಕ್ಷೇತ್ರದಲ್ಲಿ ಶ್ರೀಮತೀವಜ್ರಜಂಘರು ಸತ್ಪಾತ್ರದಾನದ ಮಹಿಮೆಯಿಂದ ದಂಪತಿಗಳಾಗಿ ಹುಟ್ಟಿದರು.

೧ ನಿರಾಮಯದೇಹತ್ವಂ. ೨ ಮನೋಜ್ಞಕಂಠತ್ವಂ. ೩ ಚೇಷ್ಟಾಃ. ೪ ಕಾಪಾಲಿಕಾದಯಃ. ೫ ಅಮಾವಾಸ್ಯಾದಿದುಷ್ಟೋಪವಾಸಾಃ. ೬ ವಧ್ಯವಧಕಭಾವಃ. ೭ ಮಾನಸಿಕೋ ದ್ವೇಷಃ. ೮ ರಾಗಕ್ಷಯಃ.

**ಪ್ರಾಗುಕ್ತಾಶ್ಚ ಮೃಗಾ ಜನ್ಮ ಭೇಜುಸ್ತತ್ರೈವ ಭದ್ರಕಾಃ ।**
**ಪಾತ್ರದಾನಾನುಮೋದೇನ ದಿವ್ಯಂ ಮಾನುಷ್ಯಮಾಶ್ರಿತಾಃ ॥ ೯೦ ॥**

ಹಿಂದೆ ಶ್ರೀಮತೀವಜ್ರಜಂಘರು ಚಾರಣಮುನಿಗಳಿಗೆ ಆಹಾರದಾನವನ್ನು ಕೊಟ್ಟಾಗ ಅನುಮೋದಪಟ್ಟಿದ್ದ ಹಂದಿ ಹುಲಿ ಮುಂಗಸಿ ಕಪಿ ಈ ನಾಲ್ಕು ಪಶುಗಳೂ ಸತ್ಪಾತ್ರದಾನದ ಅನುಮೋದದಿಂದ ಅದೇ ಭೋಗಭೂಮಿಯಲ್ಲಿ ಮನುಷ್ಯರಾಗಿ ಜನಿಸಿದುವು.

**ತಥಾ ಮತಿವರಾದ್ಯಾಶ್ಚ ತದ್ವಿಯೋಗಾದ್ಗತಾಃ ಶುಚಮ್ ।**
**ದೃಢಧರ್ಮಾಂತಿಕೇ ದೀಕ್ಷಾಂ ಜೈನೀಮಾಶಿಶ್ರಿಯನ್ಪರಾಮ್ ॥ ೯೧ ॥**

ಹಾಗೆಯೇ ಮತಿವರಮಂತ್ರಿ ಮೊದಲಾದವರೂ ವಜ್ರಜಂಘನ ವಿಯೋಗದಿಂದ ದುಃಖಿತರಾಗಿ ದೃಢಧರ್ಮರೆಂಬ ಮುನಿಗಳ ಸಮೀಪದಲ್ಲಿ ಶ್ರೇಷ್ಠವಾದ ಜಿನ ದೀಕ್ಷೆಯನ್ನು ತೆಗೆದುಕೊಂಡರು.

**ತೇ ಸಮ್ಯಗ್ದರ್ಶನಜ್ಞಾನಚಾರಿತ್ರಾಚಾರಸಂಪದಮ್ ।**
**ಸಮಾರಾಧ್ಯ ಯಥಾಕಾಲಂ ಸ್ವರ್ಗಲೋಕಮಯಾಶಿಷುಃ ॥ ೯೨ ॥**

ಆ ಮತಿವರ ಮೊದಲಾದ ನಾಲ್ಕು ಮಂದಿಗಳೂ ಸಮ್ಯಗ್ದರ್ಶನ ಸಮ್ಯಜ್ಞಾನ ಸಮ್ಯಕ್ಚಾರಿತ್ರ ಮೊದಲಾದ ನಾಲ್ಕು ಆರಾಧನೆಗಳನ್ನು ಆರಾಧಿಸಿ ತಮ್ಮ ಆಯುಷ್ಯವು ಪೂರ್ತಿಯಾದನಂತರ ಮೃತರಾಗಿ ಸ್ವರ್ಗಲೋಕವನ್ನು ಹೊಂದಿದರು.

**ಅಧೋಗ್ರೈವೇಯಕಸ್ಯಾಧೋ ವಿಮಾನೇ ತೇಹಮಿಂದ್ರತಾಮ್ ।**
**ಪ್ರಾಪ್ತಾಸ್ತಪೋನುಭಾವೇನ ತಪೋ ಹಿ ಫಲತೀಪ್ಸಿತಮ್ ॥ ೯೩ ॥**

ತಪಸ್ಸಿನ ಮಹಿಮೆಯಿಂದ ಆ ನಾಲ್ಕು ಮಂದಿಗಳೂ ಅಧೋಗ್ರೈವೇಯಕದ ಮೊದಲನೆಯ ವಿಮಾನದಲ್ಲಿ ಅಹಮಿಂದ್ರರಾಗಿ ಹುಟ್ಟಿದರು. ತಪಸ್ಸು ಇಷ್ಟಾರ್ಥವನ್ನು ಫಲಿಸುವುದಲ್ಲವೇ ?

**ಅಥಾತೋ ವಜ್ರಜಂಘಾರ್ಯಃ ಕಾಂತಯಾ ಸಮಮೇಕದಾ ।**
**ಕಲ್ಪಪಾದಪಜಾಂ ಲಕ್ಷ್ಮೀಮೀಕ್ಷಮಾಣಃ ಕ್ಷಣಂ ಸ್ಥಿತಃ ॥ ೯೪ ॥**

ತರುವಾಯ ಇತ್ತಕಡೆ ವಜ್ರಜಂಘನಾಗಿದ್ದ ಆರ್ಯನು ಒಂದುದಿನ ತನ್ನ ಪತ್ನೀಸಮೇತನಾಗಿ ಕಲ್ಪವೃಕ್ಷದ ಶೋಭೆಯನ್ನು ಸ್ವಲ್ಪಹೊತ್ತು ನೋಡುತ್ತಿದ್ದನು.

**ಸೂರ್ಯಪ್ರಭಸ್ಯ ದೇವಸ್ಯ ನಭೋಯಾಯಿ ವಿಮಾನಕಮ್ ।**
**ದೃಷ್ಟ್ವಾ ಜಾತಿಸ್ಮರೋ ಭೂತ್ವಾ ಪ್ರಬುದ್ಧಃ ಪ್ರಿಯಯಾ ಸಮಮ್ ॥**

ಆಗ ಸೂರ್ಯಪ್ರಭನೆಂಬ ದೇವನ ವಿಮಾನವು ಆಕಾಶದಲ್ಲಿ ಸಂಚರಿಸುತ್ತಿದ್ದುದನ್ನು ನೋಡಿ ತನ್ನ ಪ್ರಾಣಕಾಂತೆಯೊಡನೆ ಜಾತಿಸ್ಮರಣೆಯುಳ್ಳವನಾಗಿ ಪೂರ್ವಭವದ ವಿಷಯವನ್ನು ತಿಳಿದನು. ದಂಪತಿಗಳಿಗಿಬ್ಬರಿಗೂ ಪೂರ್ವಭವದ ಸ್ಮರಣೆಯುಂಟಾಗಿ ಪೂರ್ವಭವದ ವಿಷಯವನ್ನು ತಿಳಿದರೆಂದರ್ಥವು.

**ತಾವಚ್ಚಾರಣಯೋರ್ಯುಗ್ಮಂ ದೂರಾದಾಗಚ್ಛದೈಕ್ಷತ ।**
**ತಂ ಚ ತಾವನುಗೃಹ್ಣಂತೌ ವ್ಯೋಮ್ನಃ ಸಮವತೇರತುಃ ॥ ೯೬ ॥**

ಅಷ್ಟರಲ್ಲಿ ಇಬ್ಬರು ಚಾರಣಮುನಿಗಳು ದೂರದಲ್ಲಿ ಬರುತ್ತಿರುವುದನ್ನು ವಜ್ರಜಂಘಾರ್ಯನು ಕಂಡನು. ಅವನ ಮೇಲೆ ಅನುಗ್ರಹವನ್ನಿಟ್ಟು ಆ ಮುನಿಗಳೂ ಆಕಾಶದಿಂದ ಇಳಿದು ಬಂದರು.

**ದೃಷ್ಟ್ವಾ ತೌ ಸಹಸಾಸ್ಯಾಸೀದಭ್ಯುತ್ಥಾನಾದಿಸಂಭ್ರಮಃ ।**
**ಸಂಸ್ಕಾರಾಃ ಪ್ರಾಕ್ತನಾ ನೂನಂ ಪ್ರೇರಯಂತ್ಯಂಗಿನೋ ಹಿತೇ ॥ ೯೭ ॥**

ಆ ಮುನಿಗಳನ್ನು ನೋಡಿ ಈ ವಜ್ರಜಂಘಾರ್ಯನಿಗೆ ಶೀಘ್ರವಾಗಿ ಯೆದ್ದು ನಿಲ್ಲುವುದು ಮೊದಲಾದ ವಿಧಿಗಳ ಸಂಭ್ರಮವುಂಟಾಯಿತು. ನಿಶ್ಚಯವಾಗಿಯೂ ಪೂರ್ವಜನ್ಮದ ಸಂಸ್ಕಾರಗಳು ಪ್ರಾಣಿಗಳನ್ನು ಪ್ರೇರೇಪಿಸುತ್ತವೆ. ಭೋಗಭೂಮಿಜರಿಗೆ ಅಭ್ಯುತ್ಥಾನಾದಿಸತ್ಕಾರಗಳನ್ನು ಮಾಡುವ ವಿಧಿಯು ಗೊತ್ತಿರುವುದಿಲ್ಲ. ಆದರೆ ಈ ಶ್ರೀಮತೀವಜ್ರಜಂಘಾರ್ಯರು ಪೂರ್ವಭವದಲ್ಲಿ ಮುನಿಗಳಿಗೆ ಅಭ್ಯುತ್ಥಾನಮೊದಲಾದ ವಿಧಿಗಳನ್ನು ಮಾಡಿದ್ದುದರಿಂದ ಆಗಲೂ ಹಿಂದಿನ ಸಂಸ್ಕಾರದಿಂದ ಆ ವಿಧಿಗಳನ್ನಾಚರಿಸಿದರೆಂದು ಭಾವವು.

**ಅಭ್ಯುತ್ತಿಷ್ಠನ್ನಸೌ ರೇಜೇ ಮುನೀಂದ್ರೌ ಸಹ ಕಾಂತಯಾ ।**
**ನಲಿನ್ಯಾ ದಿವಸಃ ಸೂರ್ಯಪ್ರತಿಸೂರ್ಯಾವಿವೋದ್ಗತೌ ॥ ೯೮ ॥**

ಆ ಮುನಿಗಳನ್ನು ಕಂಡು ತನ್ನ ಪ್ರಾಣಕಾಂತೆಯೊಡನೆ ಯೆದ್ದು ನಿಂತ ಈ ವಜ್ರಜಂಘಾರ್ಯನು, ಸೂರ್ಯಪ್ರತಿಸೂರ್ಯರನ್ನು ನೋಡಿ ದಿವಸವು ಕಮಲಲತೆಯೊಡನೆ ಯೆದ್ದು ನಿಲ್ಲುವಂತೆ, ಶೋಭಿಸುತ್ತಿದ್ದನು.

**ತಯೋ[೧]ರಧಿಪದದ್ವಂದ್ವಂ ದತ್ತಾರ್ಘಃ ಪ್ರಣನಾಮ ಸಃ ।**
**ಆನಂದಾಶ್ರುಲವೈಃ ಸಾಂದ್ರೈಃ ಕ್ಷಾಲಯನ್ನಿವ ತತ್ಕ್ರಮೌ ॥ ೯೯ ॥**

ಪೂರ್ವದಲ್ಲಿ ವಜ್ರಜಂಘನಾಗಿದ್ದ ಆರ್ಯನು ಆ ಮುನಿಗಳ ಪಾದಯುಗಲಕ್ಕೆ ಅರ್ಘ್ಯವನ್ನೆತ್ತಿ, ನಿಬಿಡವಾಗಿ ಸುರಿಯುತ್ತಿರುವ ಆನಂದದ ಕಣ್ಣೀರುಗಳಿಂದ ಆ ಮುನಿಗಳ ಕಾಲುಗಳನ್ನು ತೊಳೆಯುವವನಂತೆ, ನಮಸ್ಕಾರವನ್ನು ಮಾಡಿದನು.

**ತಮಾಶೀರ್ಭಿರಥಾಶಾಸ್ಯ ಪ್ರಣತಂ [೨]ಪ್ರಮದಾನ್ವಿತಮ್ ।**
**ಯತೀ ಸಮುಚಿತಂ [೩]ದೇಶಮಧ್ಯಾಸೀನೌ ಯಥಾಕ್ರಮಮ್ ॥ ೧೦೦ ॥**

ತರುವಾಯ ತನ್ನ ಪತ್ನಿಯೊಡನೆ ನಮಸ್ಕರಿಸಿದ ಆ ಆರ್ಯನಿಗೆ ಆಶೀರ್ವಾದವನ್ನು ಮಾಡಿ ಆ ಮುನಿಗಳು ತಮಗೆ ಉಚಿತವಾದ ಸ್ಥಾನದಲ್ಲಿ ಕ್ರಮವಾಗಿ ಕುಳಿತರು.

**ತತಃ ಸುಖೋಪವಿಷ್ಟೌ ತೌ ಸೋಪೃಚ್ಛದಿತಿ ಚಾರಣೌ ।**
**ಲಸದ್ದಂತಾಂಶುಸಂತಾನೈಃ ಪುಷ್ಪಾಂಜಲಿಮಿವಾಕಿರನ್ ॥ ೧೦೧ ॥**

ತರುವಾಯ ಆ ವಜ್ರಜಂಘಾರ್ಯನು ಸುಖದಿಂದ ಕುಳಿತ ಆ ಚಾರಣಮುನಿಗಳ ಮೇಲೆ ತನ್ನ ಶುಭ್ರವಾದ ಹಲ್ಲುಗಳ ಕಾಂತಿಗಳಿಂದ ಪುಷ್ಪಾಂಜಲಿಯನ್ನು ಎರಚುವವನೋಪಾದಿಯಲ್ಲಿ ಮುಂದೆಹೇಳುವ ರೀತಿಯಾಗಿ ಆ ಮುನಿಗಳನ್ನು ಪ್ರಶ್ನೆಮಾಡಿದನು.

**ಭಗವಂತೌ ಯುವಾಂ [೪]ಕ್ವತ್ಯೌ [೫]ಕುತಸ್ತ್ಯೌ ಕಿನ್ನು ಕಾರಣಮ್ ।**
**ಯುಷ್ಮದಾಗಮನೇ ಬ್ರೂತ[೬]ಮಿದ[೭]ಮೇತತ್ತ್ರಯಾದ್ಯ ಮೇ ॥ ೧೦೨ ॥**

"ಪೂಜ್ಯರೇ ! ನೀವುಗಳು ಎಲ್ಲಿ ಹುಟ್ಟಿದವರು ? ಎಲ್ಲಿಂದ ಬಂದಿರಿ ? ನೀವು ಬರುವುದಕ್ಕೆ ಕಾರಣವೇನು ? ಈ ಮೂರು ವಿಷಯವನ್ನು ನನಗೆ ಪ್ರತ್ಯಕ್ಷವಾಗಿ ಹೇಳಿರಿ.

**ಯುಷ್ಮತ್ಸಂದರ್ಶನಾಜ್ಜಾತಸೌಹಾರ್ದಂ ಮಮ ಮಾನಸಮ್ ।**
**ಪ್ರಸೀದತಿ ಕಿಮು ಜ್ಞಾತಪೂರ್ವೌ [೮]ಜ್ಞಾತೀ ಯುವಾಂ ಮಮ ॥ ೧೦೩ ॥**

ನಿಮ್ಮ ಸಂದರ್ಶನದಿಂದ ಪ್ರೇಮಭರಿತವಾದ ನನ್ನ ಮನಸ್ಸು ಅತ್ಯಂತ ಪ್ರಸನ್ನವಾಗಿದೆ. ನೀವಿಬ್ಬರೂ ಪೂರ್ವಪರಿಚಿತರಾದ ನನ್ನ ಬಂಧುಗಳೋ ?"

---

೧ ಪದಯುಗಲೇ. ೨ ಸ್ತ್ರೀಸಹಿತಂ. ೩ ಆಧಾರೇ ಕರ್ಮ. ೪ ಕ್ವ ಭವೌ. ೫ ಕುತ ಆಗತೌ. ೬ ಏತತ್ತ್ರಯಾತ್ಮಕಂ. ೭ ಪ್ರತ್ಯಕ್ಷತಯಾ. ೮ ಬಂಧೂ.

**ಇತಿ ಪೃಶ್ನಾವಸಾನೇಸ್ಯ ಮುನಿರ್ಜ್ಯಾಯಾನಭಾಷತ ।**
**ದಶನಾಂಶುಜಲೋ[1]ತ್ಪೀಡೈಃ ಕ್ಷಾಲಯನ್ನಿವ ತತ್ತನುಮ್ ॥ ೧೦೪ ॥**

ಹೀಗೆ ಪ್ರಶ್ನೆಮಾಡಿದನಂತರ ಆ ಇಬ್ಬರುಮುನಿಗಳಲ್ಲಿ ದೊಡ್ಡವರು ತಮ್ಮ ಹಲ್ಲುಗಳ ಕಿರಣಗಳೆಂಬ ಜಲಪ್ರವಾಹಗಳಿಂದ ಆ ವಜ್ರಜಂಘಾರ್ಯನ ಶರೀರವನ್ನು ತೊಳೆಯುವವರಂತೆ, ಮಾತನಾಡಿದರು.

**ತ್ವಂ ವಿದ್ಧಿ ಮಾಂ ಸ್ವಯಂಬುದ್ಧಂ ಯತೋಬುದ್ಧಾಃ ಪ್ರಬುದ್ಧಧೀಃ ।**
**ಮಹಾಬಲಭವೇ ಜೈನಂ ಧರ್ಮಂ ಕರ್ಮ[2]ನಿಬರ್ಹಣಮ್ ॥ ೧೦೫ ॥**

"ಎಲೈ ಆರ್ಯನೇ! ಮಹಾಬಲನ ಭವದಲ್ಲಿ ನೀನು ಯಾರಿಂದ ಉಪದೇಶವನ್ನು ಹೊಂದಿ ಕರ್ಮವನ್ನು ನಾಶಮಾಡುವ ಜೈನಧರ್ಮವನ್ನು ತಿಳಿದೆಯೋ ಅಂತಹ ಸ್ವಯಂಬುದ್ಧನನ್ನಾಗಿ ನನ್ನನ್ನು ತಿಳಿ.

**ತ್ವದ್ವಿಯೋಗಾದಹಂ ಜಾತನಿರ್ವೇದೋ ಬೋಧಿಮಾಶ್ರಿತಃ ।**
**ದೀಕ್ಷಿತ್ವಾಭೂವಮುತ್ಸೃಷ್ಟದೇಹಃ ಸೌಧರ್ಮಕಲ್ಪಜಃ ॥ ೧೦೬ ॥**

ನಿನ್ನ ವಿಯೋಗದಿಂದ ನನಗೆ ವೈರಾಗ್ಯವುಂಟಾಗಿ ನಾನು ವಿವೇಕಜ್ಞಾನವನ್ನು ಹೊಂದಿ ಜಿನದೀಕ್ಷೆಯನ್ನು ತೆಗೆದುಕೊಂಡೆನು. ಆಯುಷ್ಯವು ಪೂರ್ತಿಯಾದನಂತರ ಮೃತನಾಗಿ ಸೌಧರ್ಮವೆಂಬ ಕಲ್ಪದಲ್ಲಿ ದೇವನಾಗಿ ಹುಟ್ಟಿದೆನು.

**ಸ್ವಯಂಪ್ರಭವಿಮಾನೇಗ್ರ್ಯೇ ಮಣಿಚೂಲಾಹ್ವಯಃ ಸುರಃ ।**
**ಸಾಧಿಕಾಬ್ಧ್ಯುಪಮಾಯುಷ್ಕಸ್ತತಶ್ಚ್ಯುತ್ವಾ ಭುವಂ ಶ್ರಿತಃ ॥ ೧೦೭ ॥**

**ಜಂಬೂದ್ವೀಪಸ್ಯ ಪೂರ್ವಸ್ಮಿನ್ವಿದೇಹೇ [3]ಪೌಷ್ಕಲಾವತೇ ।**
**ನಗರ್ಯಾಂ ಪುಂಡರೀಕಿಣ್ಯಾಂ ಪ್ರಿಯಸೇನಮಹೀಭೃತಃ ॥ ೧೦೮ ॥**

**ಸುಂದರ್ಯಾಶ್ಚ ಸುತೋಭೂವಂ ಜ್ಯಾಯಾನ್ಪ್ರೀತಿಂಕರಾಹ್ವಯಃ ।**
**ಪ್ರೀತಿದೇವಃ ಕನೀಯಾನ್ಮೇ ಮುನಿರೇಷ ಮಹಾತಪಾಃ ॥ ೧೦೯ ॥**

ಅಲ್ಲಿ ಶ್ರೇಷ್ಠವಾದ ಸ್ವಯಂಪ್ರಭವೆಂಬ ವಿಮಾನದಲ್ಲಿ ಸ್ವಲ್ಪ ಅಧಿಕವಾದ ಒಂದುಸಾಗರೋಪಮಕಾಲ ಆಯುಷ್ಯವುಳ್ಳ ಮಣಿಚೂಲನೆಂಬ ದೇವನಾಗಿ ಹುಟ್ಟಿದೆನು. ಅಲ್ಲಿಂದ ಚ್ಯುತನಾಗಿ ಭೂಲೋಕವನ್ನು ಹೊಂದಿ ಜಂಬೂದ್ವೀಪದ ಪೂರ್ವವಿದೇಹದಲ್ಲಿ ಪುಷ್ಕಲಾವತೀದೇಶದಲ್ಲಿ ಪುಂಡರೀಕಿಣೀನಗರದ ರಾಜನಾದ ಪ್ರಿಯಸೇನನಿಗೂ ಆತನ ಪತ್ನಿಯಾದ ಸುಂದರಿಯೆಂಬವಳಿಗೂ ಪ್ರೀತಿಂಕರನೆಂಬ ಜ್ಯೇಷ್ಠಪುತ್ರನಾಗಿ ಹುಟ್ಟಿದೆನು. ಮಹಾತಪಸ್ವಿಯಾದ ಈ ಮುನಿಯು ಪ್ರೀತಿದೇವನೆಂಬ ನನ್ನ ತಮ್ಮನಾಗಿ ಹುಟ್ಟಿದನು.

**ಸ್ವಯಂಪ್ರಭಜಿನೋಪಾಂತೇ ದೀಕ್ಷಿತ್ವಾವಾಮಲಪ್ಸ್ವಹಿ ।**
**ಸಾವಧಿಜ್ಞಾನಮಾಕಾಶಚಾರಣತ್ವಂ ತಪೋಬಲಾತ್ ॥ ೧೧೦ ॥**

ನಾವು ಸ್ವಯಂಪ್ರಭಜಿನರ ಸಮೀಪದಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿ ತಪಸ್ಸಿನ ಬಲದಿಂದ ಅವಧಿಜ್ಞಾನವನ್ನೂ ಆಕಾಶದಲ್ಲಿ ಸಂಚರಿಸುವ ಸಾಮರ್ಥ್ಯವನ್ನೂ ಪಡೆದೆವು.

**ಬುಧ್ವಾವಧಿಮಯಂ ಚಕ್ಷುರ್ವ್ಯಾಪಾರ್ಯಾ[4]ಜರ್ಯಸಂಗತಮ್ ।**
**ತ್ವಾಮಾರ್ಯಮಿಹ ಸಂಭೂತಂ ಪ್ರಬೋಧಯಿತುಮಾಗತೌ ॥ ೧೧೧ ॥**

ನಾಶವಾಗದಿರುವ ಸಂಬಂಧವುಳ್ಳ ಅವಧಿಜ್ಞಾನವೆಂಬ ನೇತ್ರವನ್ನುಪಯೋಗಿಸಿ ನೀನು ಇಲ್ಲಿ ಆರ್ಯನಾಗಿ ಹುಟ್ಟಿರುವುದನ್ನು ತಿಳಿದು ನಿನಗೆ ಬೋಧಿಸುವುದಕ್ಕೋಸ್ಕರ ಬಂದೆವು.

೧ ಪ್ರವಾಹೈಃ. ೨ ನಾಶಕಂ. ೩ ಪುಷ್ಕಲಾವತ್ಯಾ ಅಯಂ ಪೌಷ್ಕಲಾವತಸ್ತಸ್ಮಿನ್. ೪ ಅವಿನಾಶಿಸಂಗಮಂ.

**[1]ವಿದಾಂಕರು [2]ಕುರುಷ್ವಾರ್ಯ ಪಾತ್ರದಾನವಿಶೇಷತಃ ।**
**ಸಮುತ್ಪನ್ನಮಿಹಾತ್ಮಾನಂ ವಿಶುದ್ಧಾದ್ದರ್ಶನಾದ್ವಿನಾ ॥ ೧೧೨ ॥**

ಎಲೈ ಆರ್ಯನೇ! ಪರಿಶುದ್ಧವಾದ ಸಮ್ಯಗ್ದರ್ಶನವಿಲ್ಲದಿದ್ದುದರಿಂದ ನೀನು ಸತ್ಪಾತ್ರದಾನದ ಫಲದಿಂದ ಈ ಭೋಗಭೂಮಿಯಲ್ಲಿ ಹುಟ್ಟಿರುತ್ತಿಯೆಂದು ತಿಳಿ.

**ಮಹಾಬಲಭವೇಸ್ಮತ್ತೋ ಬುಧ್ವಾ [3]ತ್ಯಕ್ತತನುಸ್ಥಿತಿಃ ।**
**ನಾಲಬ್ಧಾ ದರ್ಶನೇ ಶುದ್ಧಿಂ ಭೋಗಕಾಂಕ್ಷಾನುಬಂಧತಃ ॥ ೧೧೩ ॥**

ನೀನು ಮಹಾಬಲನಾಗಿದ್ದಾಗ ನಮ್ಮಿಂದ ಯಥಾರ್ಥಜ್ಞಾನವನ್ನು ಹೊಂದಿ ಇಪ್ಪತ್ತೆರಡುದಿವಸಗಳವರೆಗೆ ಆಹಾರವನ್ನು ಪರಿತ್ಯಜಿಸಿದೆ. ಆದರೆ ಭೋಗಕಾಂಕ್ಷೆಯಿಂದ ನೀನು ಸಮ್ಯಗ್ದರ್ಶನದಲ್ಲಿ ಶುದ್ಧಿಯನ್ನು ಹೊಂದಲಿಲ್ಲ.

**ತಸ್ಮಾ[4]ತ್ತೇ ದರ್ಶನಂ [5]ಸಮ್ಯಗ್ವಿಶೇಷಣಮನುತ್ತರಮ್ ।**
**ಆಯಾತೌ ದಾತುಕಾಮೌ [6]ಸ್ವಃ ಸ್ವರ್ಮೋಕ್ಷಸುಖಸಾಧನಮ್ ॥ ೧೧೪ ॥**

ಆದುದರಿಂದ ನಿನಗೆ ಸ್ವರ್ಗಮೋಕ್ಷಸುಖಕ್ಕೆ ಕಾರಣವಾದ "ಸಮ್ಯಕ್" ಎಂಬ ವಿಶೇಷಣವುಳ್ಳ ಶ್ರೇಷ್ಠವಾದ ದರ್ಶನ(ಸಮ್ಯಗ್ದರ್ಶನ)ವನ್ನು ಕೊಡಬೇಕೆಂಬ ಇಚ್ಛೆಯಿಂದ ನಾವು ಬಂದಿರುತ್ತೇವೆ.

**ತದ್ಗೃಹಾಣಾದ್ಯ ಸಮ್ಯಕ್ತ್ವಂ ತಲ್ಲಾಭೇ ಕಾಲ ಏಷ ತೇ ।**
**ಕಾಲಲಬ್ಧ್ಯಾ ವಿನಾ ನಾರ್ಯ ತದುತ್ಪತ್ತಿರಿಹಾಂಗಿನಾಮ್ ॥ ೧೧೫ ॥**

ಆದುದರಿಂದ ಎಲೈ ಆರ್ಯನೇ! ಈಗ ಸಮ್ಯಕ್ತ್ವವನ್ನು ಗ್ರಹಣಮಾಡು. ಆ ಸಮ್ಯಕ್ತ್ವವನ್ನು ಪಡೆಯುವುದಕ್ಕೆ ನಿನಗೆ ಇದೇ ಯೋಗ್ಯವಾದ ಕಾಲವಾಗಿದೆ. ಈ ಸಂಸಾರದಲ್ಲಿ ಪ್ರಾಣಿಗಳಿಗೆ ಕಾಲಲಬ್ಧ್ಯಾದಿಗಳಿಲ್ಲದೆ ಆ ಸಮ್ಯಗ್ದರ್ಶನವುಂಟಾಗುವುದಿಲ್ಲ.

**ದೇಶನಾಕಾಲಲಬ್ಧ್ಯಾದಿಬಾಹ್ಯಕಾರಣಸಂಪದಿ ।**
**ಅಂತಃಕರಣಸಾಮಗ್ರ್ಯಾಂ [7]ಭವ್ಯಾತ್ಮಾ ಸ್ಯಾದ್ವಿಶುದ್ಧದೃಕ್ ॥ ೧೧೬ ॥**

ಉಪದೇಶ ಕಾಲಲಬ್ಧಿ ಮೊದಲಾದ ಬಾಹ್ಯಕಾರಣಸಂಪತ್ತೂ ಅಭ್ಯಂತರ ಕಾರಣವೂ ಇದ್ದರೆ ಭವ್ಯಾತ್ಮನು ಶುದ್ಧಸಮ್ಯಗ್ದೃಷ್ಟಿಯಾಗುವನು.

**ಶಮಾದ್ದರ್ಶನಮೋಹಸ್ಯ [8]ಸಮ್ಯಕ್ತ್ವಾದಾನ[9]ಮಾದಿತಃ ।**
**ಜಂತೋರನಾದಿಮಿಥ್ಯಾತ್ವಕಲಂಕ[10]ಕಲಿಲಾತ್ಮನಃ ॥ ೧೧೭ ॥**

ಅನಾದಿಕಾಲದಿಂದಲೂ ಮಿಥ್ಯಾತ್ವವೆಂಬ ಕಲಂಕದಿಂದ ದೂಷಿತವಾದ ಪ್ರಾಣಿಗೆ ಮೊದಲು ದರ್ಶನಮೋಹನೀಯವೆಂಬ ಕರ್ಮದ ಉಪಶಮದಿಂದ ಪ್ರಥಮೋಪಶಮಸಮ್ಯಕ್ತ್ವವುಂಟಾಗುತ್ತದೆ.

**ಯಥಾ ಪಿತ್ತೋದಯೋದ್ಭ್ರಾಂತಸ್ವಾಂತವೃ[11]ತ್ತೇಸ್ತದತ್ಯಯಾತ್ ।**
**ಯಥಾರ್ಥದರ್ಶನಂ ತದ್ವದಂತರ್ಮೋಹೋಪಶಾಂತಿತಃ ॥ ೧೧೮ ॥**

ಪಿತ್ತೋದ್ರೇಕದಿಂದ ಮನಸ್ಸು ಭ್ರಮಿಸಿದ ಪುರುಷನಿಗೆ ಆ ಪಿತ್ತವು ಉಪಶಮವಾದ ಮೇಲೆ ಪದಾರ್ಥಗಳು ನಿಜಸ್ವರೂಪದಿಂದ ತೋರುವಂತೆ, ಅಂತರಂಗದಲ್ಲಿ ಮೋಹನೀಯಕರ್ಮವು ಉಪಶಮವಾದರೆ ಜೀವಾದಿಪದಾರ್ಥಗಳಲ್ಲಿ ಯಥಾರ್ಥವಾದ ನಂಬಿಕೆಯುಂಟಾಗುತ್ತದೆ.

**ಅನಿರ್ದ್ಧೂಯ ತಮೋ[12]ನೈಶಂ ಯಥಾ ನೋದಯತೇಂಶುಮಾನ್ ।**
**ತಥಾನುದ್ಭಿದ್ಯ ಮಿಥ್ಯಾತ್ವತಮೋ ನೋದೇತಿ ದರ್ಶನಮ್ ॥ ೧೧೯ ॥**

೧ ವಿದ್ಧಿ. ೨ ಉತ್ತಮಭೋಗಭೂಮಿಷು. ೩ ದ್ವಾವಿಂಶತಿದಿನಪರ್ಯಂತಂ ತ್ಯಕ್ತಾಹಾರಃ. ೪ ತುಭ್ಯಂ. ೫ ಸಮ್ಯಗಿತಿ ವಿಶೇಷಣಂ ಯಸ್ಯ ತತ್. ೬ ಭವಾವಃ. ೭ ಸತ್ಯಾಂ. ೮ ಪ್ರಥಮೋಪಶಮಸಮ್ಯಕ್ತ್ವಾದಾನಂ. ೯ ಆದೌ. ೧೦ ದೂಷಿತಾತ್ಮನಃ. ೧೧ ಪುರುಷಸ್ಯ. ೧೨ ನಿಶಾಯಾ ಇದಂ.

ರಾತ್ರಿಯ ಕತ್ತಲೆಯನ್ನು ಹೋಗಲಾಡಿಸದೆ ಹೇಗೆ ಸೂರ್ಯನು ಉದಯಿಸುವುದಿಲ್ಲವೋ ಹಾಗೆಯೇ ಮಿಥ್ಯಾತ್ವವೆಂಬ ಕತ್ತಲೆಯನ್ನು ಭೇದಿಸದೆ ಸಮ್ಯಗ್ದರ್ಶನವು ಪ್ರಾದುರ್ಭವಿಸುವುದಿಲ್ಲ.

**[1]ತ್ರಿಧಾ ವಿಪಾಟ್ಯ ಮಿಥ್ಯಾತ್ವಪ್ರಕೃತಿಂ [2]ಕರಣೈಸ್ತ್ರಿಭಿಃ ।**
**ಭವ್ಯಾತ್ಮಾ ಹ್ರಾಸಯನ್ಕರ್ಮ[3]ಸ್ಥಿತೀಃ ಸಮ್ಯಕ್ತ್ವಭಾಗ್ಭವೇತ್ ॥ ೧೨೦ ॥**

ಅನಾದಿಕಾಲದಿಂದಲೂ ಮಿಥ್ಯಾದೃಷ್ಟಿಯಾಗಿದ್ದ ಭವ್ಯಾತ್ಮನು ಅಧಃಪ್ರವೃತ್ತಕರಣ ಅಪೂರ್ವಕರಣ ಅನಿವೃತ್ತಿಕರಣಗಳೆಂಬ ಮೂರು ಪರಿಣಾಮವಿಶೇಷಗಳಿಂದ ಆ ಮಿಥ್ಯಾತ್ವಪ್ರಕೃತಿಯನ್ನು ಮಿಥ್ಯಾತ್ವ ಸಮ್ಯಗ್ಮಿಥ್ಯಾತ್ವ ಸಮಕ್ತ್ವಪ್ರಕೃತಿಗಳೆಂಬ ಭೇದದಿಂದ ಮೂರುವಿಧವಾಗಿ ಭೇದಿಸಿ ಕರ್ಮಗಳ ಸ್ಥಿತಿಗಳನ್ನು ಕಡಿಮೆಮಾಡಿ ಪ್ರಥಮೋಪಶಮಸಮ್ಯಕ್ತ್ವವನ್ನು ಹೊಂದುತ್ತಾನೆ.

**ಆಪ್ತಾಗಮಪದಾರ್ಥಾನಾಂ ಶ್ರದ್ಧಾನಂ ಪರಯಾ ಮುದಾ ।**
**ಸಮ್ಯಗ್ದರ್ಶನಮಾಮ್ನಾತಂ ತನ್ಮೂಲೇ [4]ಜ್ಞಾನಚೇಷ್ಟಿತೇ ॥ ೧೨೧ ॥**

ಆಪ್ತ(ಸರ್ವಜ್ಞವೀತರಾಗ)ನಿಂದ ಹೇಳಲ್ಪಟ್ಟ ಆಗಮ ಜೀವಾದಿಪದಾರ್ಥ ಇವುಗಳನ್ನು ಅತ್ಯಂತ ಸಂತೋಷದಿಂದ ನಂಬುವುದು ಸಮ್ಯಗ್ದರ್ಶನ. ಈ ಸಮ್ಯಗ್ದರ್ಶನವು ಜ್ಞಾನಚಾರಿತ್ರಗಳಿಗೆ ಮೂಲವಾಗಿದೆ.

**[5]ಆತ್ಮಾದಿಮುಕ್ತಿಪರ್ಯಂತತತ್ತ್ವಶ್ರದ್ಧಾನಮಂಜಸಾ ।**
**ತ್ರಿಭಿರ್ಮೂಢೈರನಾಲೀಢಮಷ್ಟಾಂಗಂ ವಿದ್ಧಿ ದರ್ಶನಮ್ ॥ ೧೨೨ ॥**

ಜೀವ ಅಜೀವ ಆಸ್ರವ ಬಂಧ ಸಂವರ ನಿರ್ಜರಾ ಮೋಕ್ಷ ಈ ಏಳು ತತ್ತ್ವಗಳ ನಿಜವಾದ ನಂಬಿಕೆಯು ಸಮ್ಯಗ್ದರ್ಶನವೆನಿಸುವುದು. ಈ ಸಮ್ಯಗ್ದರ್ಶನವು ಮೂರು ಮೂಢಗಳಿಂದ ರಹಿತವೂ ಎಂಟು ಅಂಗಗಳಿಂದ ಯುಕ್ತವೂ ಆಗಿರಬೇಕೆಂದು ತಿಳಿ.

**ತಸ್ಯ ಪ್ರಶಮಸಂವೇಗಾವಾಸ್ತಿಕ್ಯಂ ಚಾನುಕಂಪನಮ್ ।**
**ಗುಣಾಃ ಶ್ರದ್ಧಾರುಚಿಸ್ಪರ್ಶಪ್ರತ್ಯಯಾಶ್ಚೇತಿ ಪರ್ಯಯಾಃ ॥ ೧೨೩ ॥**

ಆ ಸಮ್ಯಗ್ದರ್ಶನಕ್ಕೆ ಪ್ರಶಮ ಸಂವೇಗ (ಧರ್ಮದಲ್ಲಿಯೂ ಧರ್ಮಫಲದಲ್ಲಿಯೂ ಪ್ರೀತಿ) ಆಸ್ತಿಕ್ಯ ಪ್ರಾಣಿದಯೆ ಇವುಗಳು ಗುಣಗಳಾಗಿವೆ. ಶ್ರದ್ಧಾ ರುಚಿ ಸ್ಪರ್ಶ ಪ್ರತ್ಯಯ ಇವುಗಳೆಲ್ಲ ಆ ಸಮ್ಯಗ್ದರ್ಶನಕ್ಕೆ ಪರ್ಯಾಯಶಬ್ದಗಳಾಗಿವೆ.

**ತಸ್ಯ ನಿಃಶಂಕಿತತ್ವಾದೀನ್ಯಷ್ಟಾವಂಗಾನಿ ನಿಶ್ಚಿನು ।**
**ಯೈರಂಶುಭಿರಿವಾಭಾತಿ ರತ್ನಂ ಸದ್ದರ್ಶನಾಹ್ವಯಮ್ ॥ ೧೨೪ ॥**

ಆ ಸಮ್ಯಗ್ದರ್ಶನಕ್ಕೆ ನಿಃಶಂಕಿತತ್ವ ಮೊದಲಾದ ಎಂಟು ಅಂಗಗಳಿವೆ. ಆ ಎಂಟು ಅಂಗಗಳೆಂಬ ಕಿರಣಗಳಿಂದ ಸಮ್ಯಗ್ದರ್ಶನವೆಂಬ ರತ್ನವು ಪ್ರಕಾಶಿಸುತ್ತದೆ.

**ಶಂಕಾಂ ಜಹೀಹಿ ಸನ್ಮಾರ್ಗೇ ಭೋಗಕಾಂಕ್ಷಾಮುಪಾಕುರು ।**
**ವಿಚಿಕಿತ್ಸಾ[6]ದ್ವಯಂ ಹಿತ್ವಾ ಭಜಸ್ವಾಮೂಢದೃಷ್ಟಿತಾಮ್ ॥ ೧೨೫ ॥**

ನೀನು ಸನ್ಮಾರ್ಗದಲ್ಲಿ ಸಂಶಯವನ್ನು ಬಿಡು. ಭೋಗಗಳ ಇಚ್ಛೆಯನ್ನು ತೊರೆದು ಬಿಡು. ತನ್ನ ಅಥವಾ ಬೇರೆಯವರ ಶರೀರಮಲದಲ್ಲಿ ಜುಗುಪ್ಸೆಯನ್ನು ಬಿಟ್ಟು ಅಮೂಢದೃಷ್ಟಿತ್ವವನ್ನು ಸೇವಿಸು.

**ಕುರೂಪಬೃಂಹಣಂ ಧರ್ಮೇ ಮಲಸ್ಥಾನನಿಗೂಹನೈಃ ।**
**ಮಾರ್ಗಾಚ್ಚಲತಿ ಧರ್ಮಸ್ಥೇ ಸ್ಥಿತೀಕರಣಮಾಚರ ॥ ೧೨೬ ॥**

ಅಶಕ್ತಿಯಿಂದಲೂ ಅಜ್ಞಾನದಿಂದಲೂ ಧಾರ್ಮಿಕರಲ್ಲಿ ಉಂಟಾಗುವ ದೋಷಗಳನ್ನು ಪ್ರಕಾಶಪಡಿಸದೆ ಮರೆಮಾಚು. ಧಾರ್ಮಿಕನಾದ ಮನುಷ್ಯನು ಧರ್ಮದಿಂದ ಭ್ರಷ್ಟನಾದರೆ ಉಪದೇಶವನ್ನು ಮಾಡಿ ಪುನಃ ಸನ್ಮಾರ್ಗದಲ್ಲಿರಿಸು.

**ರತ್ನತ್ರಿತಯವತ್ಯಾರ್ಯಸಂಘೇ ವಾತ್ಸಲ್ಯಮಾತನು ।**
**ವಿಧೇಹಿ ಶಾಸನೇ ಜೈನೇ ಯಥಾಶಕ್ತಿ ಪ್ರಭಾವನಾಮ್ ॥ ೧೨೭ ॥**

ಎಲೈ ಆರ್ಯನೇ! ಸಮ್ಯಗ್ದರ್ಶನ ಜ್ಞಾನಚಾರಿತ್ರಗಳನ್ನು ಧರಿಸಿದ ಋಷಿ ಮೊದಲಾದ ಚತುಸಂಘದಲ್ಲಿ ಯೋಗ್ಯತಾನುಸಾರವಾಗಿ ವಾತ್ಸಲ್ಯವನ್ನು ಮಾಡು. ನಿನ್ನ ಶಕ್ತ್ಯನುಸಾರವಾಗಿ ಜೈನಧರ್ಮದ ಪ್ರಭಾವನೆಯನ್ನು ಮಾಡು.

**ದೇವತಾಲೋಕಪಾಷಂಡವ್ಯಾಮೋಹಾಂಶ್ಚ ಸಮುತ್ಸೃಜ ।**
**ಮೋಹಾಂಧೋ ಹಿ ಜನಸ್ತತ್ತ್ವಂ ಪಶ್ಯನ್ನಪಿ ನ ಪಶ್ಯತಿ ॥ ೧೨೮ ॥**

ರಾಗದ್ವೇಷಮೊದಲಾದ ದುಷ್ಟಪರಿಣಾಮಗಳಿಂದ ಕೂಡಿದ ದೇವತೆಗಳನ್ನು ಪೂಜಿಸುವುದೆಂಬ ದೇವತಾಮೂಢವನ್ನು ಪರಿತ್ಯಜಿಸು. ಸಮುದ್ರಸ್ನಾನ ಸೂರ್ಯಾರ್ಘ್ಯ ಮೊದಲಾದ ಲೋಕಮೂಢವನ್ನು ಬಿಡು. ಪರಿಗ್ರಹಧಾರಿಗಳಾದ ಮಿಥ್ಯಾತಪಸ್ವಿಗಳನ್ನು ಸೇವಿಸುವುದೆಂಬ ಪಾಷಂಡಿಮೂಢವನ್ನು ಬಿಡು. ಮೋಹನೀಯಕರ್ಮದಿಂದ ಕುರುಡಾಗಿರುವ ಜನರು ಯಥಾರ್ಥವಾದ ತತ್ತ್ವವನ್ನು ನೋಡಿದರೂ ನೋಡದಂತೆಯೇ ಆಚರಿಸುತ್ತಾರೆ.

**[1]ಪ್ರತೀಹಿ ಧರ್ಮಸರ್ವಸ್ವಂ ದರ್ಶನಂ ಚಾರುದರ್ಶನ ।**
**[2]ತಸ್ಮಿನ್ನಾ[3]ಪ್ತೇ [4]ದುರಾಪಾಣಿ ನ ಸುಖಾನೀಹ ದೇಹಿನಾಮ್ ॥ ೧೨೯ ॥**

ಎಲೈ ಸಮ್ಯಗ್ದೃಷ್ಟಿಯಾದ ಆರ್ಯನೇ! ಸಮ್ಯಗ್ದರ್ಶನವು ಧರ್ಮದ ಸಾರವೆಂದು ತಿಳಿ. ಪ್ರಾಣಿಗಳಿಗೆ ಸಮ್ಯಗ್ದರ್ಶನವು ಪ್ರಾಪ್ತವಾದರೆ ಈ ಸಂಸಾರದಲ್ಲಿ ಸುಖಗಳನ್ನು ಹೊಂದುವುದು ದುರ್ಲಭವಲ್ಲ.

**ಲಬ್ಧಂ ತೇನೈವ ಸಜ್ಜನ್ಮ ಸ ಕೃತಾರ್ಥಃ ಸ ಪಂಡಿತಃ ।**
**ಪರಿಸ್ಫುರತಿ [5]ನಿರ್ವ್ಯಾಜಂ ಯಸ್ಯ ಸದ್ದರ್ಶನಂ ಹೃದಿ ॥ ೧೩೦ ॥**

ಯಾವನ ಹೃದಯದಲ್ಲಿ ನಿರ್ಮಲವಾದ ಸಮ್ಯಗ್ದರ್ಶನವು ಪ್ರಕಾಶಿಸುತ್ತದೆಯೋ ಅವನ ಜನ್ಮವೇ ಸಫಲವಾದುದು. ಅವನೇ ಕೃತಾರ್ಥನು. ಅವನೇ ಪಂಡಿತನು.

**ಸಿದ್ಧಿಪ್ರಾಸಾದಸೋಪಾನಂ ವಿದ್ಧಿ ದರ್ಶನಮಗ್ರಿಮಮ್ ।**
**ದುರ್ಗತಿದ್ವಾರಸಂರೋಧಿ ಕವಾಟಪುಟಮೂರ್ಜಿತಮ್ ॥ ೧೩೧ ॥**

ಮೋಕ್ಷವೆಂಬ ಪ್ರಾಸಾದವನ್ನು ಹತ್ತುವುದಕ್ಕೆ ಸಮ್ಯಗ್ದರ್ಶನವು ಮೊದಲನೆಯ ಸೋಪಾನವೆಂದು ತಿಳಿ. ಇದು ದುರ್ಗತಿಯ ದ್ವಾರವನ್ನು ಮುಚ್ಚುವ ಸ್ಥಿರವಾದ ಬಾಗಿಲಾಗಿದೆ.

**ಸ್ಥಿರಂ ಧರ್ಮತರೋರ್ಮೂಲಂ ದ್ವಾರಂ [6]ಸ್ವರ್ಮೋಕ್ಷವೇಶ್ಮನಃ ।**
**ಶೀಲಾಭರಣಹಾರಸ್ಯ [7]ತರಲಂ [8]ತರಲೋಪಮಮ್ ॥ ೧೩೨ ॥**

ಧರ್ಮವೆಂಬ ವೃಕ್ಷಕ್ಕೆ ದೃಢವಾದ ಬೇರಾಗಿದೆ. ಸ್ವರ್ಗಮೋಕ್ಷವೆಂಬ ಮನೆಗೆ ದ್ವಾರವಾಗಿದೆ. ಶೀಲಗಳೆಂಬ ಆಭರಣಗಳ ಹಾರಕ್ಕೆ ಪ್ರಕಾಶಮಾನವಾದ ಹಾರದಲ್ಲಿರುವ ಮಧ್ಯದ ಮಣಿಗೆ ಸಮಾನವಾಗಿದೆ.

**[9]ಅಲಂಕರಿಷ್ಣು ರೋಚಿಷ್ಣು ರತ್ನಸಾರಮನುತ್ತರಮ್ ।**
**ಸಮ್ಯಕ್ತ್ವಂ ಹೃದಯೇ ಧತ್ಸ್ವ ಮುಕ್ತಿಶ್ರೀಹಾರ[10]ವಿಭ್ರಮಮ್ ॥ ೧೩೩ ॥**

೧ ಮಿಥ್ಯಾತ್ವಸಮ್ಯಗ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿಭೇದೇನ. ೨ ಅಧಃಪ್ರವೃತ್ತಕರಣಾಪೂರ್ವಕರಣಾನಿವೃತ್ತಿಕರಣೈಃ, ಪರಿಣಾಮವಿಶೇಷೈರಿತ್ಯರ್ಥಃ. ೩ ಸ್ಥಿತಿಮಿತ್ಯಪಿ ಪಾಠಾಂತರಂ. ೪ ಜ್ಞಾನಚಾರಿತ್ರೇ. ೫ ಜೀವಾಜೀವಾಸ್ರವಬಂಧಸಂವರನಿರ್ಜರಾಮೋಕ್ಷಾಸ್ತತ್ತ್ವಂ. ೬ ದ್ರವ್ಯಭಾವಭೇದೇನ, ಸ್ವಪರಾಶ್ರಯಭೇದೇನ ವಾ.

೧ ಜಾನೀಹಿ. ೨ ದರ್ಶನೇ. ೩ ಲಬ್ಧೇ ಸತಿ. ೪ ದುರ್ಲಭಾನಿ. ೫ ನಿರ್ಮಲಂ. ೬ ಸ್ವರ್ಲೋಕವೇಶ್ಮನ ಇತ್ಯಪಿ ಪಾಠಾಂತರಂ. ೭ ದೀಪ್ರಂ. ೮ ತರಲೋ ಹಾರಮಧ್ಯಗ ಇತ್ಯಮರಃ, ನಾಯಕಮಣಿಮಿತ್ಯರ್ಥಃ. ೯ ಅಲಂಕರ್ತೃ. ೧೦ ಶೋಭನಂ.

ಆತ್ಮನನ್ನು ಅಲಂಕರಿಸುವುದೂ ಪ್ರಕಾಶಿಸುವುದೂ ರತ್ನಗಳಲ್ಲಿ ಸಾರವೂ ಅದ್ವಿತೀಯವೂ ಮೋಕ್ಷಲಕ್ಷ್ಮಿಯೆಂಬ ಹಾರಕ್ಕೆ ಶೋಭೆಯನ್ನುಂಟುಮಾಡುವುದೂ ಆದ ಸಮ್ಯಕ್ತ್ವವನ್ನು ಹೃದಯದಲ್ಲಿ ಧರಿಸು.

**ಸಮ್ಯಗ್ದರ್ಶನಸದ್ರತ್ನಂ ಯೇನಾ[1]ಸಾದಿ ದುರಾಸದಮ್ ।**
**ಸೋಽಚಿರಾನ್ಮುಕ್ತಿಪರ್ಯಂತಾಂ [2]ಸುಖತಾತಿಮವಾಪ್ನುಯಾತ್॥ ೧೩೪ ॥**

ಪಡೆಯಲಶಕ್ಯವಾದ ಸಮ್ಯಗ್ದರ್ಶನವೆಂಬ ಶ್ರೇಷ್ಠವಾದ ರತ್ನವನ್ನು ಯಾವನು ಹೊಂದಿದನೋ ಅವನು ಶೀಘ್ರವಾಗಿ ಮೋಕ್ಷಪರ್ಯಂತವಾದ ಸುಖಪರಂಪರೆಯನ್ನು ಹೊಂದುವನು.

**ಲಬ್ಧಸದ್ದರ್ಶನೋ ಜೀವೋ ಮುಹೂರ್ತಮಪಿ ಪಶ್ಯ ಯಃ ।**
**ಸಂಸಾರಲತಿಕಾಂ ಛಿತ್ವಾ ಕುರುತೇ ಹ್ರಾಸಿನೀಮಸೌ ॥ ೧೩೫ ॥**

ಎಲೈ ಆರ್ಯನೇ ! ಒಂದು ಮುಹೂರ್ತಕಾಲದ ವರೆಗಾದರೂ ಸಮ್ಯಗ್ದರ್ಶನವನ್ನು ಹೊಂದಿದ ಜೀವವು ಸಂಸಾರವೆಂಬ ಲತೆಯನ್ನು ಛೇದಿಸಿ ಕಡಿಮೆಮಾಡುತ್ತದೆ. ನೋಡು.

**ಸುದೇವತ್ವಸುಮಾನುಷ್ಯೇ ಜನ್ಮನೀ ತಸ್ಯ ನೇತರತ್ ।**
**ದುರ್ಜನ್ಮ ಜಾಯತೇ ಜಾತು ಹೃದಿ ಯಸ್ಯಾಸ್ತಿ ದರ್ಶನಮ್ ॥ ೧೩೬ ॥**

ಯಾವನ ಹೃದಯದಲ್ಲಿ ಸಮ್ಯಗ್ದರ್ಶನವು ನೆಲೆಗೊಂಡಿರುವುದೋ ಅವನು ಉತ್ತಮದೇವನಾಗಿಯಾಗಲಿ ಉತ್ತಮಮನುಷ್ಯನಾಗಿಯಾಗಲಿ ಹುಟ್ಟುವನು. ಅವನಿಗೆ ಬೇರೆ ದುರ್ಗತಿಯು ಆಗುವುದಿಲ್ಲ.

**ಕಿಂವಾ ಬಹುಭಿರಾಲಾಪೈಃ ಶ್ಲಾಘ್ಯೈಷೈವಾಸ್ತು ದರ್ಶನೇ ।**
**ಲಬ್ಧೇನ ಯೇನ ಸಂಸಾರೋ ಯಾತ್ಯನಂತೋಽಪಿ ಸಾಂತತಾಮ್ ॥**

ಅಥವಾ ಈ ಸಮ್ಯಗ್ದರ್ಶನದ ವಿಷಯದಲ್ಲಿ ಹೆಚ್ಚು ಆಲಾಪಗಳಿಂದೇನು ಪ್ರಯೋಜನ ? ಈ ಸಮ್ಯಗ್ದರ್ಶನವನ್ನು ಹೊಂದಿದ ಆತ್ಮನಿಗೆ ಸಂಸಾರವು ಅನಂತವಾಗಿದ್ದರೂ ಅಂತವನ್ನು ಹೊಂದುತ್ತದೆ. ಬೀಜವೃಕ್ಷದಂತೆ ಸಂಸಾರವು ಅನಾದಿಪರಂಪರೆಯಿಂದ ಬಂದಿದ್ದರೂ ಅಂತವನ್ನು ಹೊಂದುವುದೆಂದರ್ಥವು. ಸಮ್ಯಗ್ದರ್ಶನದ ವಿಷಯದಲ್ಲಿ ಇದೇ ಪ್ರಶಂಸೆಯಾಗಿರಲಿ.

**ತತ್ತ್ವಂ ಜೈನೇಶ್ವರೀಮಾಜ್ಞಾಮಸ್ಮದ್ವಾಕ್ಯಾತ್ಪ್ರಮಾಣಯನ್ ।**
**ಅನನ್ಯಶರಣೋ ಭೂತ್ವಾ ಪ್ರತಿಪದ್ಯಸ್ವ ದರ್ಶನಮ್ ॥ ೧೩೮ ॥**

ಆದುದರಿಂದ ಎಲೈ ಆರ್ಯನೇ ! ನೀನು ನಮ್ಮ ಮಾತಿನಿಂದ ಜಿನೇಶ್ವರನ ಆಜ್ಞೆಯು ಪ್ರಮಾಣವೆಂದು ತಿಳಿದು ಬೇರೆಯವರ ಶರಣವನ್ನು ಹೊಂದದೆ ಸಮ್ಯಗ್ದರ್ಶನವನ್ನು ಸ್ವೀಕರಿಸು.

**ಉತ್ತಮಾಂಗಮಿವಾಂಗೇಷು ನೇತ್ರದ್ವಯಮಿವಾನನೇ ।**
**[3]ಮುಕ್ತ್ಯಂಗೇಷು ಪ್ರಧಾನಾಂಗಮಾಪ್ತಾಃ ಸದ್ದರ್ಶನಂ ವಿದುಃ ॥ ೧೩೯ ॥**

ಅವಯವಗಳಲ್ಲೆಲ್ಲ ಮಸ್ತಕವು ಪ್ರಧಾನವಾಗಿರುವಂತೆಯೂ ಮುಖದಲ್ಲಿ ನೇತ್ರವು ಪ್ರಧಾನ(ಮುಖ್ಯ)ವಾಗಿರುವಂತೆಯೂ ಮುಕ್ತಿಯ ಕಾರಣಗಳಲ್ಲಿ ಸಮ್ಯಗ್ದರ್ಶನವು ಪ್ರಧಾನವಾದುದೆಂದು ಆಪ್ತರು ಹೇಳುತ್ತಾರೆ.

**ಅಪಾಸ್ಯ ಲೋಕಪಾಷಂಡಿದೇವತಾಸು ವಿಮೂಢತಾಮ್ ।**
**[4]ಪರತೀರ್ಥ್ಯೈರನಾಲೀಢಮುಜ್ಜ್ವಲೀಕುರು ದರ್ಶನಮ್ ॥ ೧೪೦ ॥**

ನೀನು ಲೋಕಮೂಢ ಪಾಷಂಡಿಮೂಢ ದೇವಮೂಢಗಳನ್ನು ಪರಿತ್ಯಜಿಸಿ ಬೇರೆ ಧರ್ಮಗಳ ಸಂಬಂಧವಾಗದಂತೆ ಸಮ್ಯಗ್ದರ್ಶನವನ್ನು ಪ್ರಕಾಶಗೊಳಿಸು.

೧ ಲಬ್ಧಂ. ೨ ಸುಖಪರಂಪರಾಂ. ೩ ಮುಕ್ತಿಕಾರಣೇಷು. ೪ ಪರದರ್ಶನಿಭಿಃ.

**ಸಂಸಾರಲತಿಕಾಯಾಮಂ ಛಿಂದಿ ಸದ್ದರ್ಶನಾಸಿನಾ ।**
**[1]ನಾಸಿ ನಾಸನ್ನಭವ್ಯಸ್ತ್ವಂ ಭವಿಷ್ಯತ್ತೀರ್ಥನಾಯಕಃ ॥ ೧೪೧ ॥**

ನೀನು ಸಮ್ಯಗ್ದರ್ಶನವೆಂಬ ಖಡ್ಗದಿಂದ ವಿಸ್ತಾರವಾದ ಸಂಸಾರವೆಂಬ ಲತೆಯನ್ನು ಕತ್ತರಿಸು. ಆಸನ್ನಭವ್ಯನಾದ ನೀನು ಮುಂದೆ ತೀರ್ಥಂಕರನಾಗುವವನಾಗಿರುತ್ತಿ.

**ಸಮ್ಯಕ್ತ್ವ [2]ಮಧಿಕೃತ್ಯೈವಮಾಪ್ತಸೂಕ್ತ್ಯನುಸಾರತಃ ।**
**ಕೃತಾರ್ಯ ದೇಶನಾಸ್ಮಾಭಿರ್ಗ್ರಾಹ್ಯೈಷಾ ಶ್ರೇಯಸೇ ತ್ವಯಾ ॥ ೧೪೨ ॥**

ಎಲೈ ಆರ್ಯನೇ ! ನಾವು ವೀತರಾಗಸರ್ವಜ್ಞರ ವಚನವನ್ನನುಸರಿಸಿ ಸಮ್ಯಕ್ತ್ವವನ್ನು ಉದ್ದೇಶಿಸಿ ಹಿಂದೆ ಹೇಳಿದರೀತಿಯಾಗಿ ನಿನಗೆ ಉಪದೇಶವನ್ನು ಮಾಡಿದೆವು. ನಿನ್ನ ಸ್ವರ್ಗಾದಿಶ್ರೇಯಸ್ಸಿಗೋಸ್ಕರ ನೀನು ಈ ಉಪದೇಶವನ್ನು ಗ್ರಹಣಮಾಡು.

**ತ್ವಮಪ್ಯಂಬಾವಲಂಬೇಥಾಃ ಸಮ್ಯಕ್ತ್ವ[3]ಮವಿಲಂಬಿತಮ್ ।**
**ಭವಾಂಬುಧೇಸ್ತರಂಡಂ ತತ್ಸ್ತ್ರೈಣಾತ್ಕಿಂ ಬತ ಖಿದ್ಯಸೇ ॥ ೧೪೩ ॥**

ಎಲೈ ತಾಯಿಯೇ ! ನೀನೂ ಶೀಘ್ರವಾಗಿ ಸಮ್ಯಕ್ತ್ವವನ್ನು ಅವಲಂಬಿಸು. ಆ ಸಮ್ಯಕ್ತ್ವವು ಸಂಸಾರವೆಂಬ ಸಮುದ್ರವನ್ನು ದಾಟುವುದಕ್ಕೆ ತೆಪ್ಪವಾಗಿದೆ. ಈ ಸ್ತ್ರೀಪರ್ಯಾಯದಿಂದ ಏತಕ್ಕೆ ದುಃಖಪಡುತ್ತೀಯೇ ! ಕಷ್ಟವು !

**ಸದ್ದೃಷ್ಟೇಃ ಸ್ತ್ರೀಷ್ವನುತ್ಪತ್ತಿಃ ಪೃಥಿವೀಷ್ವಪಿ [4]ಷಟ್ಸ್ವಧಃ ।**
**ತ್ರಿಷು ದೇವನಿಕಾಯೇಷು ನೀಚೇಷ್ವನ್ಯೇಷು ವಾಂಬಿಕೇ ॥ ೧೪೪ ॥**

ಎಲೈ ತಾಯಿಯೇ ! ಸಮ್ಯಗ್ದೃಷ್ಟಿಯಾದ ಜೀವನು ಸ್ತ್ರೀಯಾಗಿ ಹುಟ್ಟುವುದಿಲ್ಲ. ಕೆಳಗೆ ಎರಡನೆಯ ನರಕಮೊದಲಾದ ಆರು ನರಕಭೂಮಿಗಳಲ್ಲಿಯೂ ಹುಟ್ಟುವುದಿಲ್ಲ. ಭವನವಾಸಿ ವ್ಯಂತರಿಕ ಜ್ಯೋತಿಷ್ಕ ಈ ಮೂರುವಿಧವಾದ ದೇವನಾಗಿಯೂ ಹುಟ್ಟುವುದಿಲ್ಲ. ಬೇರೆ ನೀಚಯೋನಿಗಳಲ್ಲಿಯೂ ಹುಟ್ಟುವುದಿಲ್ಲ.

**ಧಿಗಿದಂ ಸ್ತ್ರೈಣಮಶ್ಲಾಘ್ಯಂ ನೈರ್ಗ್ರಂಥ್ಯಪ್ರತಿಬಂಧಿ ಯತ್ ।**
**[5]ಕಾರೀಷಾಗ್ನಿನಿಭಂ ತಾಪಂ ನಿರಾಹುಸ್ತತ್ರ ತದ್ವಿದಃ ॥ ೧೪೫ ॥**

ಮುನಿದೀಕ್ಷೆಗೆ ತಡೆಯಾಗಿಯೂ ನಿಂದ್ಯವಾಗಿಯೂ ಇರುವ ಈ ಸ್ತ್ರೀಪರ್ಯಾಯಕ್ಕೆ ಧಿಕ್ಕಾರವಿರಲಿ. ಆ ಸ್ತ್ರೀಪರ್ಯಾಯದಲ್ಲಿ ಬೆರಣಿಯ ಬೆಂಕಿಗೆ ಸಮಾನವಾದ ಕಾಮಸಂತಾಪವುಂಟಾಗುವುದೆಂದು ತತ್ತ್ವಜ್ಞಾನಿಗಳು ಹೇಳುತ್ತಾರೆ.

**[6]ತದೇತತ್ಸ್ತ್ರೈಣಮುತ್ಸೃಜ್ಯ ಸಮ್ಯಗಾರಾಧ್ಯ ದರ್ಶನಮ್ ।**
**[7]ಪ್ರಾಪ್ತಾಸಿ ಪರಮಸ್ಥಾನ[8]ಸಪ್ತಕಂ ತ್ವಮನುಕ್ರಮಾತ್ ॥ ೧೪೬ ॥**

ಆದುದರಿಂದ ನೀನು ಸಮ್ಯಗ್ದರ್ಶನವನ್ನು ಚೆನ್ನಾಗಿ ಆರಾಧಿಸಿದರೆ ಈ ಸ್ತ್ರೀಪರ್ಯಾಯವನ್ನು ಬಿಟ್ಟು ಕ್ರಮದಿಂದ ಉತ್ತಮಜಾತಿ ಸದ್ಗೃಹಸ್ಥತ್ವ ಮುನಿಪದವಿ ದೇವೇಂದ್ರಪದವಿ ಚಕ್ರವರ್ತಿಪದವಿ ಅರ್ಹತ್ಪದವಿ ನಿರ್ವಾಣಗಳೆಂಬ ಸಪ್ತಪರಮಸ್ಥಾನಗಳನ್ನು ಹೊಂದುವೆ.

**ಯುವಾಂ ಕತಿಪಯೈರೇವ ಭವೈಃ [9]ಶ್ರೇಯೋಽನುಬಂಧಿಭಿಃ ।**
**ಧ್ಯಾನಾಗ್ನಿದಗ್ಧಕರ್ಮಾಣೌ [10]ಪ್ರಾಪ್ತಾಸ್ಥಃ ಪರಮಂ ಪದಮ್ ॥ ೧೪೭ ॥**

ನೀವಿಬ್ಬರೂ ಪುಣ್ಯದಾಯಕವಾದ ಕೆಲವು ಭವಗಳಿಂದಲೇ ಧ್ಯಾನವೆಂಬ ಬೆಂಕಿಯಿಂದ ಕರ್ಮಗಳನ್ನು ಸುಟ್ಟು ಮೋಕ್ಷವನ್ನು ಪಡೆಯುವಿರಿ.''

೧ ದ್ವೌ ನಞೌ ಪ್ರಕೃತಮರ್ಥಂ ಗಮಯತಃ. ೨ ಉದ್ದಿಶ್ಯೇತ್ಯರ್ಥಃ. ೩ ಶೀಘ್ರಂ. ೪ ದ್ವಿತೀಯಾದಿ ನರಕೇಷು. ೫ ಶುಷ್ಕಗೋಮಯಾಗ್ನಿಸದೃಶಂ. ೬ ತಸ್ಮಾತ್ಕಾರಣಾತ್. ೭ ಲುಟ್. ೮ ಸಜ್ಜಾತಿಃ ಸದ್ಗೃಹಸ್ಥತ್ವಂ ಪಾರಿವ್ರಾಜ್ಯಂ ಸುರೇಂದ್ರತಾ । ಸಾಮ್ರಾಜ್ಯಂ ಪರಮಾರ್ಹಂತ್ಯಂ ನಿರ್ವಾಣಂ ಚೇತಿ ಸಪ್ತಧಾ. ೯ ಪುಣ್ಯಂ. ೧೦ ಗಮಿಷ್ಯಥಃ.

**ಇತಿ ಪ್ರೀತಿಂಕರಾಚಾರ್ಯವಚನಂ ಸ ಪ್ರಮಾಣಯನ್ ।**
**ಸಜಾನಿರಾದಧೇ ಸಮ್ಯಗ್ದರ್ಶನಂ ಪ್ರೀತಮಾನಸಃ ॥ ೧೪೮ ॥**

ಈ ಪ್ರಕಾರವಾದ ಪ್ರೀತಿಂಕರಾಚಾರ್ಯರ ವಚನವನ್ನು ಪ್ರಮಾಣವನ್ನಾಗಿ ನಂಬಿ ಆ ದಂಪತಿಗಳು ಸಂತುಷ್ಟವಾದ ಮನಸ್ಸಿನಿಂದ ಸಮ್ಯಗ್ದರ್ಶನವನ್ನು ಸ್ವೀಕರಿಸಿದರು.

**ಸ ಸದ್ದರ್ಶನಮಾಸಾದ್ಯ ಸಪ್ರಿಯಃ ಪಿಪ್ರಿಯೇ ತರಾಮ್ ।**
**ಪುಷ್ಣಾತ್ಯಲಬ್ಧಲಾಭೋ ಹಿ ದೇಹಿನಾಂ ಮಹತೀಂ ಧೃತಿಮ್ ॥ ೧೪೯ ॥**

ಆ ವಜ್ರಜಂಘಾರ್ಯನು ತನ್ನ ಪ್ರಾಣಕಾಂತೆಯೊಡನೆ ಸಮ್ಯಗ್ದರ್ಶನವನ್ನು ಪಡೆದು ಬಹಳವಾಗಿ ಸಂತೋಷಪಟ್ಟನು. ಪ್ರಾಣಿಗಳಿಗೆ ಮೊದಲು ಎಂದೂ ಪ್ರಾಪ್ತವಾಗದಿರುವ ಲಾಭವಾದರೆ ಬಹಳ ಸಂತೋಷವಾಗುವುದು ಸ್ವಭಾವವಾಗಿದೆ.

**ಪ್ರಾಪ್ಯ [1]ಸೂತ್ರಾನುಗಾಂ ಹೃದ್ಯಾಂ ಸಮ್ಯಗ್ದರ್ಶನಕಂಠಿಕಾಮ್ ।**
**ಯೌವರಾಜ್ಯಪದೇ ಸೋಸ್ಥಾನ್ಮುಕ್ತಿಸಾಮ್ರಾಜ್ಯಸಂಪದಃ ॥ ೧೫೦ ॥**

ಆ ವಜ್ರಜಂಘಾರ್ಯನು ಜಿನಾಗಮವನ್ನನುಸರಿಸಿರುವುದೂ ಮನೋಹರವೂ ಆದ ಸಮ್ಯಗ್ದರ್ಶನವೆಂಬ ಕಂಠಿಕೆ(ಕಂಠಾಭರಣ)ಯನ್ನು ಧರಿಸಿ ಮೋಕ್ಷವೆಂಬ ಸಾಮ್ರಾಜ್ಯಸಂಪತ್ತಿನ ಯುವರಾಜಪದವಿಯಲ್ಲಿ ಕುಳಿತನು.

**ಸಾಪಿ ಸಮ್ಯಕ್ತ್ವಲಾಭೇನ ನಿತರಾಮತುಷತ್ಸತೀ ।**
**ವಿಶುದ್ಧಪುಂಸ್ತ್ವಯೋಗೇನ ನಿರ್ವಾಣಮಭಿಲಾಷುಕಾ ॥ ೧೫೧ ॥**

ವಿಶುದ್ಧವಾದ ಪುರುಷಪರ್ಯಾಯವನ್ನು ಹೊಂದಿ ನಿರ್ವಾಣಪದವಿಯನ್ನಿಚ್ಛಿಸುವ ಆ ಸಾಧ್ವಿಯೂ ಸಮ್ಯಕ್ತ್ವದ ಲಾಭದಿಂದ ಬಹಳವಾಗಿ ಸಂತೋಷಪಟ್ಟಳು.

**ಅಲಬ್ಧಪೂರ್ವಮಾಸ್ವಾದ್ಯ ಸದ್ದರ್ಶನರಸಾಯನಮ್ ।**
**ಪ್ರಾಪತುಸ್ತೌ ಪರಾಂ ಪುಷ್ಟಿಂ ಧರ್ಮೇ ಕರ್ಮನಿಬರ್ಹಣೇ ॥ ೧೫೨ ॥**

ಮೊದಲು ಪಡೆಯದಿರುವ ಸಮ್ಯಗ್ದರ್ಶನವೆಂಬ ರಸಾಯನವನ್ನು ಆಸ್ವಾದಿಸಿ ಆ ದಂಪತಿಗಳು ಕರ್ಮವನ್ನು ನಾಶಮಾಡುವ ಧರ್ಮದಲ್ಲಿ ಅತ್ಯಂತಪುಷ್ಟಿಯನ್ನು ಹೊಂದಿದರು. ಧರ್ಮದಲ್ಲಿ ದೃಢವಾದ ನಂಬಿಕೆಯುಳ್ಳವರಾದರೆಂದು ಭಾವವು.

**ಶಾರ್ದೂಲಾರ್ಯಾದಯೋಪ್ಯಾಭ್ಯಾಂ ಸಮಂ ಸದ್ದರ್ಶನಾಮೃತಮ್ ।**
**[2]ತದಾ ಭೇಜುರ್ಗುರೋರಸ್ಯ ಪಾದಮೂಲಮುಪಾಶ್ರಿತಾಃ ॥ ೧೫೩ ॥**

ಪೂರ್ವಭವದಲ್ಲಿ ಹುಲಿಮೊದಲಾದ ತಿರ್ಯಕ್ಪ್ರಾಣಿಗಳಾಗಿದ್ದ ಆರ್ಯರೂ ಈ ಪ್ರೀತಿಂಕರಗುರುಗಳ ಪಾದಮೂಲವನ್ನು ಹೊಂದಿ ಆಗ ಈ ದಂಪತಿಗಳೊಡನೆ ಸಮ್ಯಗ್ದರ್ಶನವೆಂಬ ಅಮೃತವನ್ನು ಪಡೆದರು. ಸಮ್ಯಗ್ದೃಷ್ಟಿಗಳಾದರೆಂದು ಭಾವವು.

**ತೌ ದಂಪತೀ ಕೃತಾನಂದಸಂದರ್ಶಿತಮನೋರಥೌ ।**
**ಮುನೀಂದ್ರೌ ಧರ್ಮಸಂವೇಗಾಚ್ಛಿರಸ್ಯಸ್ಪೃಕ್ಷತಾಂ ಮುಹುಃ ॥ ೧೫೪ ॥**

ಆ ಮುನಿಗಳಿಬ್ಬರೂ ಆನಂದದಿಂದ ತಮ್ಮ ಮನೋರಥವನ್ನು ಪ್ರಕಟಪಡಿಸಿದ ಆ ದಂಪತಿಗಳ ಶಿರಸ್ಸಿನಲ್ಲಿ ಧರ್ಮಪ್ರೀತಿಯಿಂದ ಬಾರಿಬಾರಿಗೂ ಸ್ಪರ್ಶಮಾಡಿದರು. ಮುನಿಗಳು ಧರ್ಮಪ್ರೀತಿಯಿಂದ ಆ ಆರ್ಯರ ತಲೆಯನ್ನು ಸವರಿದರೆಂದರ್ಥವು.

**ಜನ್ಮಾಂತರನಿಬದ್ಧೇನ ಪ್ರೇಮ್ಣಾ ವಿಸ್ಫಾರಿತೇಕ್ಷಣಃ ।**
**ಕ್ಷಣಂ ಮುನಿಪದಾಂಭೋಜಸಂಸ್ಪರ್ಶಾತ್ಸೋನ್ವಭೂದ್ಧೃತಿಮ್॥ ೧೫೫ ॥**

ಆ ವಜ್ರಜಂಘಾರ್ಯನು ಜನ್ಮಾಂತರಸಂಬದ್ಧವಾದ ಪ್ರೀತಿಯಿಂದ ಕಣ್ಣುಗಳನ್ನು ತೆರೆದು ಒಂದುಕ್ಷಣಕಾಲದ ವರೆಗೆ ಮುನಿಗಳ ಪಾದ ಕಮಲಗಳ ಸ್ಪರ್ಶದಿಂದ ಸೌಖ್ಯವನ್ನನುಭವಿಸಿದನು.

೧ ಆಗಮಃ. ೨ ತಥೇತ್ಯಪಿ ಪಾಠಾಂತರಂ.

**ಕೃತಪ್ರಣಾಮಮಾಶೀರ್ಭಿರಾಶಾಸ್ಯ ತ[1]ಮನುತ್ಥಿತಮ್ ।**
**ತತೋ ಯಥೋಚಿತಂ ದೇಶಂ ತಾವೃಷೀ ಗಂತುಮುದ್ಯತೌ ॥ ೧೫೬ ॥**

ಆ ಚಾರಣಮುನಿಗಳ ಪಾದಗಳಿಗೆ ನಮಸ್ಕಾರವನ್ನು ಮಾಡಿ ಅವರೊಡನೆ ಮೇಲಕ್ಕೆದ್ದ ಆ ವಜ್ರಜಂಘಾರ್ಯನನ್ನು ಆಶೀರ್ವದಿಸಿ ತರುವಾಯ ಆ ಮುನಿಗಳು ಉಚಿತವಾದ ದೇಶಕ್ಕೆ ಹೋಗಲುದ್ಯುಕ್ತರಾದರು.

**ಪುನರ್ದರ್ಶನಮಸ್ತ್ವಾರ್ಯ ಸದ್ಧರ್ಮಂ ಮಾಸ್ಮ ವಿಸ್ಮರಃ ।**
**ಇತ್ಯುಕ್ತ್ವಾಂತರ್ಹಿತೌ ಸದ್ಯಶ್ಚಾರಣೌ ವ್ಯೋಮಚಾರಿಣೌ ॥ ೧೫೭ ॥**

''ಎಲೈ ಆರ್ಯನೇ ! ಪುನರ್ದರ್ಶನವಾಗಲಿ. ಸದ್ಧರ್ಮವನ್ನು ಮರೆಯದಿರು'' ಎಂದು ಹೇಳಿ ಆಕಾಶಗಾಮಿಗಳಾದ ಆ ಚಾರಣಮುನಿಗಳು ತತ್ಕ್ಷಣದಲ್ಲಿಯೇ ಮರೆಯಾದರು. ಆಕಾಶಮಾರ್ಗವಾಗಿ ಹೊರಟು ಹೋದರೆಂದರ್ಥವು.

**ಗತೇಥ ಚಾರಣದ್ವಂದ್ವೇ ಸೋಭೂ[2]ದುತ್ಕಂಠಿತಃ ಕ್ಷಣಮ್ ।**
**[3]ಪ್ರೇಯಸಾಂ ವಿಪ್ರಯೋಗೋ ಹಿ ಮನಸ್ತಾಪಾಯ ಕಲ್ಪತೇ ॥ ೧೫೮ ॥**

ಆ ಚಾರಣಮುನಿಗಳು ಹೊರಟು ಹೋದನಂತರ ವಜ್ರಜಂಘಾರ್ಯನು ಒಂದುಕ್ಷಣಕಾಲದ ವರೆಗೆ ವ್ಯಾಕುಲಚಿತ್ತನಾದನು. ನ್ಯಾಯವೇ. ಲೋಕದಲ್ಲಿ ಮಿತ್ರರ ವಿಯೋಗವು ಮನಸ್ಸಂತಾಪವನ್ನುಂಟುಮಾಡುವುದಲ್ಲವೇ ?

**ಮುಹುರ್ಮುನಿಗುಣಾ[4]ಧ್ಯಾನ್ಯೈರಾರ್ದ್ರಯನ್ನಾತ್ಮನೋ ಮನಃ ।**
**ಇತಿ ಚಿಂತಾಮಸೌ ಭೇಜೇ ಚಿರಂ ಧರ್ಮಾನುಬಂಧಿನೀಮ್ ॥ ೧೫೯ ॥**

ಈ ವಜ್ರಜಂಘಾರ್ಯನು ಬಾರಿಬಾರಿಗೂ ಮುನಿಗಳ ಸ್ಮರಣೆಯಿಂದ ತನ್ನ ಮನಸ್ಸನ್ನು ಕರಗಿಸಿ ಮುಂದೆ ಹೇಳುವ ರೀತಿಯಾಗಿ ಬಹುಕಾಲದ ವರೆಗೂ ಧರ್ಮಸಂಬಂಧವಾದ ಚಿಂತೆ(ಭಾವನೆ)ಯನ್ನು ಮಾಡಿದನು.

**ಧುನೋತಿ [5]ದವಥುಂ ಸ್ವಾಂತಾತ್ತನೋತ್ಯಾ[6]ನಂದಥುಂ ಪರಮ್ ।**
**ಧಿನೋತಿ ಚ ಮನೋವೃತ್ತಿಮಹೋ ಸಾಧುಸಮಾಗಮಃ ॥ ೧೬೦ ॥**

''ಅಹೋ ! ಸಾಧುಗಳ ಸಮಾಗಮವು ಮನಸ್ಸಿನ ಸಂತಾಪವನ್ನು ಹೋಗಲಾಡಿಸುತ್ತದೆ. ಪರಮಾನಂದವನ್ನುಂಟುಮಾಡುತ್ತದೆ. ಮನೋವೃತ್ತಿಯನ್ನು ಸ್ಥಿರಗೊಳಿಸುತ್ತದೆ.

**ಮುಷ್ಣಾತಿ ದುರಿತಂ [7]ದೂರಾತ್ಪರಂ ಪುಷ್ಣಾತಿ ಯೋಗ್ಯತಾಮ್ ।**
**[8]ಭೂಯಃ ಶ್ರೇಯೋನುಬಧ್ನಾತಿ ಪ್ರಾಯಃ ಸಾಧುಸಮಾಗಮಃ ॥**

ಸಾಧುಗಳ ಸಮಾಗಮವು ಪಾಪವನ್ನು ಸಂಪೂರ್ಣವಾಗಿ ನಾಶಮಾಡುವುದು. ಯೋಗ್ಯತೆಯನ್ನು ಹೆಚ್ಚಿಸುವುದು. ಪುನಃ ಸ್ವರ್ಗಾದಿಶ್ರೇಯಸ್ಸನ್ನುಂಟುಮಾಡುವುದು.

**ಸಾಧವೋ [9]ಮುಕ್ತಿಮಾರ್ಗಸ್ಯ ಸಾಧನೇರ್ಪಿತಧೀಧನಾಃ ।**
**[10]ಲೋಕಾನುವೃತ್ತಿಸಾಧ್ಯಾಂಶೋ ನೈಷಾಂ ಕಶ್ಚನ [11]ಪುಷ್ಕಲಃ ॥ ೧೬೨ ॥**

ಸಾಧುಗಳು ಮೋಕ್ಷಮಾರ್ಗವನ್ನು ಸಾಧಿಸುವುದರಲ್ಲಿ ತಮ್ಮ ಬುದ್ಧಿಯೆಂಬ ದ್ರವ್ಯವನ್ನು ಅರ್ಪಿಸಿದ್ದಾರೆ. ಇವರಿಗೆ ಜನರ ಮೆಚ್ಚಿಗೆಯಂತೆ ನಡೆದು ಸಾಧಿಸಿಕೊಳ್ಳಬೇಕಾದ ಯಾವುದೊಂದು ಶ್ರೇಷ್ಠವಾದ ಪ್ರಯೋಜನವೂ ಇಲ್ಲ.

**ಪರಾನುಗ್ರಹಬುದ್ಧ್ಯಾ ತು [12]ಕೇವಲಂ ಮಾರ್ಗದೇಶನಾಮ್ ।**
**ಕುರ್ವತೇಮೀ [13]ಪ್ರಗತ್ಯಾಪಿ ನಿಸರ್ಗೋಯಂ ಮಹಾತ್ಮನಾಮ್ ॥**

೧ ಸಹೋತ್ಥಿತಂ. ೨ ವ್ಯಾಕುಲಿತಃ, ಕಠುಚ್ ಶೋಕೇ. ೩ ಮಿತ್ರಾಣಾಂ. ೪ ಸ್ಮರಣೈಃ. ೫ ಸಂತಾಪಂ. ೬ ಆನಂದಂ. ೭ ಅತಿಶಯೇನೇತ್ಯರ್ಥಃ. ೮ ಪುನಃ. ೯ ಮೋಕ್ಷಮಾರ್ಗಸ್ಯ. ೧೦ ಜನಾನುವರ್ತನಂ. ೧೧ ಶ್ರೇಷ್ಠಃ. ೧೨ ಸ್ವಪ್ರಯೋಜನಮಂತರೇಣ. ೧೩ ಪುನರುತ್ಪದ್ಯಾಪಿ.

ಇವರು ಪುನರ್ಜನ್ಮವನ್ನೆತ್ತಿಯೂ ಪರರನ್ನು ಅನುಗ್ರಹಿಸಬೇಕೆಂಬ ಬುದ್ಧಿಯಿಂದ ಮಾತ್ರ ಧರ್ಮೋಪದೇಶವನ್ನು ಮಾಡುತ್ತಾರೆ. ಸ್ವಪ್ರಯೋಜನವೇನೂ ಇಲ್ಲ ವೆಂದರ್ಥವು. ಇದು ಮಹಾತ್ಮರ ಸ್ವಭಾವವಾಗಿದೆ.

**ಸ್ವದುಃಖೇ [1]ನಿರ್ಘೃಣಾರಂಭಾಃ ಪರದುಃಖೇಷು ದುಃಖಿತಾಃ ।**
**ನಿರ್ವ್ಯಪೇಕ್ಷಂ ಪರಾರ್ಥೇಷು [2]ಬದ್ಧಕಕ್ಷ್ಯಾ ಮುಮುಕ್ಷವಃ ॥ ೧೬೪ ॥**

ಮೋಕ್ಷಾಭಿಲಾಷಿಗಳು ತಮ್ಮ ದುಃಖದಲ್ಲಿ ದಯೆಯಿಲ್ಲದವ(ದುಃಖಪಡದವ) ರೂ ಬೇರೆಯವರ ದುಃಖದಲ್ಲಿ ದುಃಖಪಡುವವರೂ ನಿಸ್ಪೃಹರಾಗಿ ಬೇರೆಯವರ ಪ್ರಯೋಜನಗಳಲ್ಲಿ ಪ್ರೀತಿಯನ್ನು ಮಾಡುವವರೂ ಆಗಿರುತ್ತಾರೆ.

**ಕ್ವ ವಯಂ ನಿಃಸ್ಪೃಹಾಃ ಕ್ವೇಮೇ ಕ್ವೇಯಂ ಭೂಮಿಃ ಸುಖೋಚಿತಾ ।**
**ತಥಾಪ್ಯನುಗ್ರಹೇಸ್ಮಾಕಂ ಸಾವಧಾನಾಸ್ತಪೋಧನಾಃ ॥ ೧೬೫ ॥**

ನಾವೆಲ್ಲಿ ? ನಿಸ್ಪೃಹರಾದ ಈ ಮುಮುಕ್ಷುಗಳೆಲ್ಲಿ ? ಸುಖಪಡುವುದಕ್ಕೆ ಯೋಗ್ಯವಾದ ಈ ಭೂಮಿಯೆಲ್ಲಿ ?ಆದರೂ ತಪಸ್ವಿಗಳು ನಮ್ಮನ್ನು ಅನುಗ್ರಹಿಸುವ ವಿಷಯದಲ್ಲಿ ಜಾಗರೂಕರಾಗಿದ್ದಾರೆ.

**ಭವಂತು ಸುಖಿನಃ ಸರ್ವೇ ಸತ್ತ್ವಾ ಇತ್ಯೇವ ಕೇವಲಮ್ ।**
**ಯತೋ ಯತಂತೇ ತೇನ್ಯೈಷಾಂ ಯತಿತ್ವಂ ಸನ್ನಿರುಚ್ಯತೇ ॥ ೧೬೬ ॥**

ಲೋಕದಲ್ಲಿ ಸಮಸ್ತಪ್ರಾಣಿಗಳೂ ಸುಖಿಗಳಾಗಿರಬೇಕೆಂಬುದಾಗಿಯೇ ಇವರು ಪ್ರಯತ್ನಿಸುತ್ತಿರುವುದರಿಂದ ಇವರಿಗೆ 'ಯತಿ' ಯೆಂಬ ಹೆಸರು ಬಂದಿದೆ.

**ಏವಂ ನಾಮ ಮಹೀಯಾಂಸಃ ಪರಾರ್ಥೇ ಕುರ್ವತೇ ರತಿಮ್ ।**
**ದೂರಾದಪಿ ಸಮಾಗತ್ಯ ಯದ್ಯೈತೌ ಚಾರಣಾವುಭೌ ॥ ೧೬೭ ॥**

ಈ ಚಾರಣಮುನಿಗಳಿಬ್ಬರೂ ದೂರಪ್ರದೇಶದಿಂದ ಬಂದು ನಮ್ಮ ಮೇಲೆ ಪ್ರೀತಿಯನ್ನು ತೋರಿಸುವಂತೆ ಮಹಾತ್ಮರು ಪರರ ಪ್ರಯೋಜನದಲ್ಲಿ ಪ್ರೀತಿಯನ್ನು ಮಾಡುತ್ತಾರೆ.

**ಅದ್ಯಾಪಿ ಚಾರಣೌ ಸಾಕ್ಷಾತ್ಪಶ್ಯಾಮೀವ ಪುರಃ ಸ್ಥಿತೌ ।**
**ತಪ[3]ಸ್ತನೂನಪಾತ್ತಾಪ[4]ತನೂಕೃತತನೂ ಮುನೀ ॥ ೧೬೮ ॥**

ತಪಸ್ಸೆಂಬ ಬೆಂಕಿಯ ತಾಪದಿಂದ ತಮ್ಮ ಶರೀರವನ್ನು ಕೃಶಮಾಡಿದ ಆ ಚಾರಣಮುನಿಗಳನ್ನು ಈಗಲೂ ನನ್ನ ಮುಂಭಾಗದಲ್ಲಿ ಪ್ರತ್ಯಕ್ಷವಾಗಿ ನೋಡು ತ್ತಿದ್ದೇನೋ ಎಂಬಂತಿದೆ.

**ಚಾರಣೌ ಚರಣದ್ವಂದ್ವೇ ಪ್ರಣತಂ ಮೃದುಪಾಣಿನಾ ।**
**ಸ್ಪೃಶಂತೌ ಸ್ನೇಹನಿಘ್ನಂ ಮಾಂ [5]ವ್ಯಧಾತಾ[6]ಮಧಿಮಸ್ತಕಮ್ ॥ ೧೬೯ ॥**

ಆ ಚಾರಣಮುನಿಗಳ ಕಾಲುಗಳಿಗೆ ನಮಸ್ಕರಿಸಿದ ನನ್ನನ್ನು ಮೃದುವಾದ ಕೈಯಿಂದ ನನ್ನ ಮಸ್ತಕವನ್ನು ಸ್ಪರ್ಶಮಾಡಿ ನನ್ನನ್ನು ಸ್ನೇಹಪರವಶನನ್ನಾಗಿ ಮಾಡಿದರು. ಅವರ ಮೃದುವಾದ ಹಸ್ತಸ್ಪರ್ಶದಿಂದ ತಾನು ಪ್ರೇಮಪರವಶ ನಾದನೆಂದರ್ಥವು.

**[7]ಅಪೀಪ್ಯತಾಂ ಚ ಮಾಂ [8]ಧರ್ಮತೃಷಿತಂ ದರ್ಶನಾಮೃತಮ್ ।**
**ಅಪಾಸ್ಯ ಭೋಗಸಂತಾಪಂ [9]ನಿರ್ವೃತಂ ಯೇನ ಮೇ ಮನಃ ॥ ೧೭೦ ॥**

ಧರ್ಮದಲ್ಲಿ ಬಾಯಾರಿದ (ಧರ್ಮವನ್ನು ತಿಳಿಯಲಿಚ್ಛಿಸಿದ) ನನಗೆ ಸಮ್ಯಗ್ದರ್ಶನವೆಂಬ ಅಮೃತವನ್ನು ಪಾನಮಾಡಿಸಿದರು. ಆದರಿಂದ ನನ್ನ ಮನಸ್ಸಿಗೆ ಭೋಗದಿಂದುಂಟಾದ ಸಂತಾಪವು ಶಾಂತವಾಗಿ ಸುಖವಾಯಿತು.

೧ ಕಾರುಣ್ಯರಹಿತಃ. ೨ ಕೃತಪ್ರೀತಯಃ. ೩ ಅಗ್ನಿಃ. ೪ ಕೃಶೀಕೃತಾ. ೫ ಕೃತವಂತೌ. ೬ ಮಸ್ತಕೇ. ೭ ಪಾನಮಕಾರಯತಾಂ. ೮ ಧರ್ಮಪ್ರೀತಂ. ೯ ಸುಖೀಭೂತಂ.

**ಸತ್ಯಂ ಪ್ರೀತಿಂಕರೋ ಜ್ಯಾಯಾನ್ಮುನಿರ್ಯೋಸ್ಮಾಸ್ವದರ್ಶಯತ್ ।**
**ಪ್ರೀತಿಂ ಸರ್ವತ್ರಗಪ್ರೀತಿಃ ಸನ್ಮಾರ್ಗಪ್ರತಿಬೋಧನಾತ್ ॥ ೧೭೧ ॥**

ನಮ್ಮಲ್ಲಿ ಪ್ರೀತಿಯನ್ನು ತೋರಿಸಿದ ಜ್ಯೇಷ್ಠರಾದ ಆ ಪ್ರೀತಿಂಕರಮುನಿಗಳು ಸತ್ಯವಾಗಿಯೂ ಪ್ರೀತಿಯನ್ನುಂಟುಮಾಡುವವರೇ ಆಗಿದ್ದಾರೆ. ಆ ಮುನಿಗಳು ಸನ್ಮಾರ್ಗದ ಉಪದೇಶವನ್ನು ಮಾಡುವುದರಿಂದ ಎಲ್ಲಾ ಕಡೆಗಳಲ್ಲಿಯೂ ಪ್ರೀತಿಯನ್ನು ಸಂಪಾದಿಸಿದವರಾಗಿದ್ದಾರೆ.

**ಮಹಾಬಲಭವೇಪ್ಯಾಸೀತ್ಸ್ವಯಂಬುದ್ಧೋ ಗುರುಃ ಸ ನಃ ।**
**ವಿತೀರ್ಯ ದರ್ಶನಂ ಸಮ್ಯಗಧುನಾ ತು ವಿಶೇಷತಃ ॥ ೧೭೨ ॥**

ನಾನು ಮಹಾಬಲನಾಗಿದ್ದಾಗಲೂ ಆ ಸ್ವಯಂಬುದ್ಧನು ನನಗೆ ಗುರು ವಾಗಿದ್ದನು. ಆಗ ನನಗೆ ಸಮ್ಯಗ್ದರ್ಶನವನ್ನು ಕೊಟ್ಟು ಈಗ ವಿಶೇಷವಾಗಿ ಆ ಸಮ್ಯಗ್ದರ್ಶನವನ್ನು ಕೊಟ್ಟನು. ದೃಢಪಡಿಸಿದನೆಂದು ಭಾವವು.

**ಗುರೂಣಾಂ ಯದಿ ಸಂಸರ್ಗೋ ನ ಸ್ಯಾನ್ನ ಸ್ಯಾದ್ಗುಣಾರ್ಜನಮ್ ।**
**ವಿನಾ ಗುಣಾರ್ಜನಾತ್ಕ್ವಾಸ್ಯ ಜಂತೋಃ ಸಫಲಜನ್ಮತಾ ॥ ೧೭೩ ॥**

ಪ್ರಾಣಿಗಳಿಗೆ ಗುರುಗಳ ಸಂಸರ್ಗವು ಇಲ್ಲದೆ ಹೋದರೆ ಸದ್ಗುಣಗಳು ಪ್ರಾಪ್ತವಾಗುವುದಿಲ್ಲ. ಸದ್ಗುಣಗಳು ಪ್ರಾಪ್ತವಾಗದಿದ್ದರೆ ಈ ಪ್ರಾಣಿಯ ಜನ್ಮವು ಹೇಗೆ ಸಫಲವಾಗುವುದು ?

**ರಸೋಪವಿದ್ಧಃ ಸನ್ ಧಾತುರ್ಯಥಾ ಯಾತಿ ಸುವರ್ಣತಾಮ್ ।**
**ತಥಾ ಗುರು[1]ಗುಣಾಶ್ಲಿಷ್ಟೋ ಭವ್ಯಾತ್ಮಾ ಶುದ್ಧಿಮೃಚ್ಛತಿ ॥ ೧೭೪ ॥**

ಸಿದ್ಧರಸದ ಸಂಬಂಧದಿಂದ ಕಬ್ಬಿಣವು ಬಂಗಾರವಾಗುವಂತೆ ಗುರುಗಳ ಗುಣಗಳ ಸಂಬಂಧದಿಂದ ಭವ್ಯಾತ್ಮನು ಶುದ್ಧಿಯನ್ನು ಹೊಂದುತ್ತಾನೆ. ಕರ್ಮವು ಬಿಡುಗಡೆಯಾಗಿ ಶುದ್ಧನಾಗುವನೆಂದರ್ಥವು.

**ನ ವಿನಾ ಯಾನಪಾತ್ರೇಣ ತರೀತುಂ ಶಕ್ಯತೇರ್ಣವಃ ।**
**ನರ್ತೇ ಗುರೂಪದೇಶಾಚ್ಚ ಸುತರೋಯಂ ಭವಾರ್ಣವಃ ॥ ೧೭೫ ॥**

ಹಡಗು ಇಲ್ಲದಿದ್ದರೆ ಸಮುದ್ರವನ್ನು ದಾಟುವುದಕ್ಕಾಗುವುದಿಲ್ಲ. ಗುರುಗಳ ಉಪದೇಶವಿಲ್ಲದಿದ್ದರೆ ಈ ಸಂಸಾರವೆಂಬ ಸಮುದ್ರವನ್ನು ಸುಖದಿಂದ ದಾಟು ವುದಕ್ಕಾಗುವುದಿಲ್ಲ.

**ಯಥಾಂಧತಮಸಚ್ಛನ್ನಾ ನಾರ್ಥಾನ್ದೀಪಾದ್ವಿನೇಕ್ಷತೇ ।**
**ತಥಾ ಜೀವಾದಿಭಾವಾಂಶ್ಚ ನೋಪದೇಷ್ಟುರ್ವಿನೇಕ್ಷತೇ ॥ ೧೭೬ ॥**

ಕತ್ತಲೆಯಲ್ಲಿರುವವರು ದೀಪವಿಲ್ಲದಿದ್ದರೆ ಪದಾರ್ಥಗಳನ್ನು ಹೇಗೆ ನೋಡು ವುದಿಲ್ಲವೋ ಹಾಗೆಯೇ ಉಪದೇಶಕನಿಲ್ಲದಿದ್ದರೆ ಜೀವಾದಿಪದಾರ್ಥ ಗಳನ್ನು ನೋಡುವುದಿಲ್ಲ.

**ಬಂಧವೋ ಗುರವಶ್ಚೇತಿ ದ್ವಯೇ ಸಂಪ್ರೀತಯೇ ನೃಣಾಮ್ ।**
**ಬಂಧವೋತ್ರೈವ ಸಂಪ್ರೀತ್ಯೈ ಗುರವೋಮುತ್ರ ಚಾತ್ರ ಚ ॥ ೧೭೭ ॥**

ಮನುಷ್ಯರಿಗೆ ಬಂಧುಗಳೂ ಗುರುಗಳೂ ಪ್ರೀತಿಯನ್ನುಂಟುಮಾಡುವವ ರಾಗಿದ್ದಾರೆ. ಆದರೆ ಬಂಧುಗಳು ಈ ಭವದಲ್ಲಿ ಮಾತ್ರ ಪ್ರೀತಿಯನ್ನುಂಟುಮಾಡು ತ್ತಾರೆ. ಗುರುಗಳು ಈ ಭವದಲ್ಲಿಯೂ ಪರಭವದಲ್ಲಿಯೂ ಪ್ರೀತಿಯನ್ನುಂಟು ಮಾಡುತ್ತಾರೆ.

**ಯತೋ ಗುರುನಿದೇಶೇನ ಜಾತಾ ನಃ ಶುದ್ಧಿರೀದೃಶೀ ।**
**ತತೋ ಗುರುಪದೇ ಭಕ್ತಿರ್ಭೂಯಾಜ್ಜನ್ಮಾಂತರೇಪಿ ನಃ ॥ ೧೭೮ ॥**

೧ ಗುಣಶ್ಲಿಷ್ಟ ಇತ್ಯಪಿ ಪಾಠಾಂತರಂ.

ಗುರುಗಳ ಉಪದೇಶದಿಂದ ನಮ್ಮ ಸಮ್ಯಗ್ದರ್ಶನವು ಇಷ್ಟು ಪರಿಶುದ್ಧತೆಯನ್ನು ಹೊಂದಿದುದರಿಂದ ಜನ್ಮಾಂತರದಲ್ಲಿಯೂ ನಮಗೆ ಗುರುಪಾದದಲ್ಲಿ ಭಕ್ತಿಯುಂಟಾಗಲಿ.''

**ಇತಿ ಚಿಂತಯತೋಸ್ಯಾಸೀದ್ದೃಢಾ ಸಮ್ಯಕ್ತ್ವಭಾವನಾ ।**
**ಸಾ ತು ಕಲ್ಪಲತೇವಾಸ್ಮೈ ಸರ್ವಮಿಷ್ಟಂ ಫಲಿಷ್ಯತಿ ॥ ೧೭೯ ॥**

ಈ ಪ್ರಕಾರವಾಗಿ ಚಿಂತಿಸುತ್ತಿದ್ದ ಆ ವಜ್ರಜಂಘಾರ್ಯನ ಸಮ್ಯಕ್ತ್ವಭಾವನೆಯು ದೃಢವಾಯಿತು. ಆ ಭಾವನೆಯು ಇವನಿಗೆ ಸಮಸ್ತ ಇಷ್ಟಾರ್ಥವನ್ನೂ ಪೂರ್ತಿ ಮಾಡುವುದು.

**ಸಮಾನಭಾವನಾನೇನ ಸಾಪ್ಯಭೂಚ್ಛ್ರೀಮತೀಚರೀ ।**
**ಸಮಾನಶೀಲಯೋಶ್ಚಾಸೀದಚ್ಛಿನ್ನಾ ಪ್ರೀತಿರೇನಯೋಃ ॥ ೧೮೦ ॥**

ಆಗ ಶ್ರೀಮತಿಯಾಗಿದ್ದ ಆರ್ಯೆಯೂ ಇವನೊಡನೆ ಸಮಾನವಾದ ಭಾವನೆಯುಳ್ಳವಳಾದಳು. ವಜ್ರಜಂಘಾರ್ಯನಂತೆ ಸಮ್ಯಕ್ತ್ವವನ್ನು ಭಾವಿಸಿದಳೆಂದರ್ಥವು. ಈ ದಂಪತಿಗಳ ಆಚರಣೆಯು ಸಮಾನವಾಗಿದ್ದುದರಿಂದ ಇವರಿಬ್ಬರಿಗೂ ಪರಸ್ಪರವಾಗಿ ಅತ್ಯಂತಪ್ರೀತಿಯುಂಟಾಯಿತು.

**ದಂಪತ್ಯೋರಿತಿ ಸಂಪ್ರೀತ್ಯಾ ಭೋಗಾ[೧]ನ್ನಿರ್ವಿಶತೋಶ್ಚಿರಮ್ ।**
**ಭೋಗಕಾಲಸ್ತಯೋ[೨]ರ್ನಿಷ್ಠಾಂ ಪ್ರಾಪತ್ಪಲ್ಯತ್ರಯೋ[೩]ನ್ಮಿತಃ ॥ ೧೮೧ ॥**

ಹೀಗೆ ಬಹುಕಾಲದ ವರೆಗೂ ಅತ್ಯಂತಪ್ರೀತಿಯಿಂದ ಭೋಗೋಪಭೋಗಗಳನ್ನನುಭವಿಸುತ್ತಿದ್ದ ಆ ದಂಪತಿಗಳ ಮೂರುಪಲ್ಯಪರಿಮಿತವಾದ ಭೋಗಕಾಲವು ಕಳೆಯಿತು.

**ಜೀವಿತಾಂತೇ ಸುಖಂ ಪ್ರಾಣಾನ್ ಹಿತ್ವಾ ತೌ [೪]ಪುಣ್ಯಶೇಷತಃ ।**
**ಪ್ರಾಪತುಃ ಕಲ್ಪಮೈಶಾನಂ ಗೃಹಾದಿವ ಗೃಹಾಂತರಮ್ ॥ ೧೮೨ ॥**

ಆಯುಷ್ಯವು ಪೂರ್ತಿಯಾದನಂತರ ಆ ದಂಪತಿಗಳಿಬ್ಬರೂ ಸುಖವಾಗಿ ಪ್ರಾಣಗಳನ್ನು ಬಿಟ್ಟು, ಒಂದು ಮನೆಯಿಂದ ಇನ್ನೊಂದು ಮನೆಯನ್ನು ಪಡೆಯುವಂತೆ ಅನುಭವಿಸಿ ಉಳಿದ ಪುಣ್ಯದಿಂದ ಎರಡನೆಯ ಈಶಾನಸ್ವರ್ಗದಲ್ಲಿ ಹುಟ್ಟಿದರು.

**ವಿಲೀಯಂತೇ ಯಥಾ ಮೇಘಾ ಯಥಾಕಾಲಂ ಕೃತೋದಯಾಃ ।**
**ಭೋಗಭೂಮಿಭುವಾಂ ದೇಹಾ[೫]ಸ್ತಥಾಂತೇ [೬]ವಿಶರಾರವಃ ॥ ೧೮೩ ॥**

ಯೋಗ್ಯಕಾಲದಲ್ಲಿ ಆವಿರ್ಭವಿಸಿದ ಮೇಘಗಳು ಅದೃಶ್ಯವಾಗಿ ಹೋಗುವಂತೆ ಭೋಗಭೂಮಿಜರ ಅಂತಕಾಲದಲ್ಲಿ ಅವರ ಶರೀರಗಳು ನಾಶವಾಗುತ್ತವೆ. ಕರ್ಪೂರವು ಸುಟ್ಟು ಹೋಗುವಂತೆ ಭೋಗಭೂಮಿಜರ ಶರೀರಗಳು ನಾಶವಾಗುತ್ತವೆಂದು ಭಾವವು.

**ಯಥಾ ವೈಕ್ರಿಯಿಕೇ ದೇಹೇ ನ [೭]ದೋಷಮಲಸಂಭವಃ ।**
**ತಥಾ [೮]ದಿವ್ಯಮನುಷ್ಯಾಣಾಂ ದೇಹೇ ಶುದ್ಧಿರುದಾಹೃತಾ ॥ ೧೮೪ ॥**

ದೇವತೆಗಳ ವೈಕ್ರಿಯಕಶರೀರದಲ್ಲಿ ಹೇಗೆ ವಾತಪಿತ್ತಶ್ಲೇಷ್ಮಮೊದಲಾದ ದೋಷಗಳು ಸಂಭವಿಸುವುದಿಲ್ಲವೋ ಹಾಗೆಯೇ ಭೋಗಭೂಮಿಜರ ಶರೀರಗಳಲ್ಲಿ ದೋಷಗಳಿಲ್ಲದೆ ಅವು ಪರಿಶುದ್ಧವಾಗಿರುತ್ತವೆ.

**ವಿಮಾನೇ ಶ್ರೀಪ್ರಭೇ [೯]ತತ್ರ [೧೦]ನಿತ್ಯಾಲೋಕೇ ಸ್ಫುರತ್ಪ್ರಭಃ ।**
**ಸ ಶ್ರೀಮಾನ್ವಜ್ರಜಂಘಾರ್ಯಃ ಶ್ರೀಧರಾಖ್ಯಃ ಸುರೋಭವತ್ ॥ ೧೮೫ ॥**

೧ ಅನುಭವತೋಃ. ೨ ಅಂತಂ. ೩ ಪ್ರಮಿತಃ. ೪ ಅವಶಿಷ್ಟಪುಣ್ಯಾತ್. ೫ ತದಂತ ಇತ್ಯಪಿ ಪಾಠಾಂತರಂ. ೬ ವಿನಾಶಶೀಲಾಃ. ೭ ವಾತಪಿತ್ತಶ್ಲೇಷ್ಮಾದಿಃ. ೮ ಭೋಗಭೂಮಿಮನುಷ್ಯಾಣಾಂ. ೯ ಈಶಾನಕಲ್ಪೇ. ೧೦ ನಿತ್ಯಪ್ರಕಾಶೇ.

ಈ ಈಶಾನಸ್ವರ್ಗದಲ್ಲಿ ಯಾವಾಗಲೂ ಪ್ರಕಾಶಮಾನವಾಗಿರುವ ಶ್ರೀಪ್ರಭವೆಂಬ ವಿಮಾನದಲ್ಲಿ ಆ ಭಾಗ್ಯಶಾಲಿಯಾದ ವಜ್ರಜಂಘಾರ್ಯನು ದೇದೀಪ್ಯಮಾನನಾದ ಶ್ರೀಧರನೆಂಬ ದೇವನಾಗಿ ಹುಟ್ಟಿದನು.

**ಸಾಪಿ ಸಮ್ಯಕ್ತ್ವಮಾಹಾತ್ಮ್ಯಾತ್ಸ್ತ್ರೈಣಾದ್ವಿಶ್ಲೇಷಮೀಯುಷೀ ।**
**ಸ್ವಯಂಪ್ರಭವಿಮಾನೇಭೂತ್[೧]ತ್ಸನಾಮಾ ಸುರೋತ್ತಮಃ ॥ ೧೮೬ ॥**

ಆ ಶ್ರೀಮತಿಯಾಗಿದ್ದ ಆರ್ಯೆಯೂ ಸಮ್ಯಕ್ತ್ವದ ಮಹಿಮೆಯಿಂದ ಸ್ತ್ರೀಪರ್ಯಾಯವನ್ನು ನಾಶಗೊಳಿಸಿ ಅದೇ ಸ್ವರ್ಗದಲ್ಲಿ ಸ್ವಯಂಪ್ರಭವಿಮಾನದಲ್ಲಿ ಸ್ವಯಂಪ್ರಭನೆಂಬ ದೇವನಾಗಿ ಹುಟ್ಟಿದಳು.

**ಶಾರ್ದೂಲಾರ್ಯಾದಯೋಪ್ಯಸ್ಮಿನ್ಕಲ್ಪೇನಲ್ಪಸುಖೋದಯೇ ।**
**ಮಹರ್ದ್ಧಿಕಾಃ ಸುರಾ ಜಾತಾಃ ಪುಣ್ಯೈಃ ಕಿನ್ನು [೨]ದುರಾಸದಮ್॥ ೧೮೭ ॥**

ಮೊದಲು ಹುಲಿಮೊದಲಾದ ತಿರ್ಯಕ್ಪ್ರಾಣಿಗಳಾಗಿದ್ದ ಆರ್ಯರೂ ಅಧಿಕವಾದ ಸುಖವುಳ್ಳ ಇದೇ ಈಶಾನಕಲ್ಪದಲ್ಲಿ ಮಹರ್ದ್ಧಿಕರೆಂಬ ದೇವತೆಗಳಾಗಿ ಹುಟ್ಟಿದರು. ಪುಣ್ಯದಿಂದ ಯಾವುದುತಾನೆ ಪಡೆಯಲಶಕ್ಯವಾಗಿದೆ ?

**ಋತೇ ಧರ್ಮಾತ್ಕುತಃ ಸ್ವರ್ಗಃ ಕುತಃ ಸ್ವರ್ಗಾದೃತೇ ಸುಖಮ್ ।**
**ತಸ್ಮಾತ್ಸುಖಾರ್ಥಿನಾಂ ಸೇವ್ಯೋ ಧರ್ಮಕಲ್ಪತರುಶ್ಚಿರಮ್ ॥ ೧೮೮ ॥**

ಧರ್ಮವಿಲ್ಲದಿದ್ದರೆ ಸ್ವರ್ಗವು ಹೇಗುಂಟಾಗುತ್ತದೆ ?ಸ್ವರ್ಗವನ್ನು ಪಡೆಯದಿದ್ದರೆ ಸುಖವೆಲ್ಲಿ ಬಂತು ? ಆದುದರಿಂದ ಸುಖವನ್ನು ಬಯಸುವವರು ಬಹುಕಾಲದ ವರೆಗೂ ಧರ್ಮವೆಂಬ ಕಲ್ಪವೃಕ್ಷವನ್ನು ಸೇವಿಸಬೇಕು.

**ಶಾರ್ದೂಲಭೂತಪೂರ್ವೋ ಯಃ ಸ ವಿಮಾನೇ ಮನೋಹರೇ ।**
**ಚಿತ್ರಾಂಗದೇ ಜ್ವಲನ್ಮೌಲಿರಭೂಚ್ಚಿತ್ರಾಂಗದೋಮರಃ ॥ ೧೮೯ ॥**

ಮೊದಲು ಹುಲಿಯಾಗಿದ್ದ ಆರ್ಯನು ಮನೋಹರವಾದ ಚಿತ್ರಾಂಗದವೆಂಬ ವಿಮಾನದಲ್ಲಿ ದೇದೀಪ್ಯಮಾನವಾದ ಕಿರೀಟವುಳ್ಳ ಚಿತ್ರಾಂಗದನೆಂಬ ದೇವನಾಗಿ ಹುಟ್ಟಿದನು.

**ವರಾಹಾರ್ಯಶ್ಚ ನಂದಾಖ್ಯೇ ವಿಮಾನೇ ಮಣಿಕುಂಡಲೀ ।**
**ಜ್ವಲನ್ಮಕುಟಕೇಯೂರಮಣಿಕುಂಡಲಭೂಷಿತಃ ॥ ೧೯೦ ॥**

ಮೊದಲು ಹಂದಿಯಾಗಿದ್ದ ಆರ್ಯನು ನಂದವೆಂಬ ವಿಮಾನದಲ್ಲಿ ದೇದೀಪ್ಯಮಾನವಾದ ಕಿರೀಟ ಭುಜಕೀರ್ತಿ ರತ್ನಗಳ ಕರ್ಣಕುಂಡಲಮೊದಲಾದ ಆಭರಣಗಳಿಂದ ಅಲಂಕೃತನಾದ ಮಣಿಕುಂಡಲಿಯೆಂಬ ದೇವನಾಗಿ ಹುಟ್ಟಿದನು.

**ನಂದ್ಯಾವರ್ತವಿಮಾನೇಭೂದ್ವಾನರಾರ್ಯೋ [೩]ಮನೋಹರಃ ।**
**ಸುರಾಂಗನಾಮನೋಹಾರಿಚತುರಾಕಾರಸುಂದರಃ ॥ ೧೯೧ ॥**

ಮೊದಲು ಕಪಿಯಾಗಿದ್ದ ಆರ್ಯನು ನಂದ್ಯಾವರ್ತವೆಂಬ ವಿಮಾನದಲ್ಲಿ ದೇವಸ್ತ್ರೀಯರ ಮನಸ್ಸನ್ನು ಅಪಹರಿಸುವ ಸುಂದರವಾದ ಶರೀರಾಕಾರವುಳ್ಳ ಮನೋಹರನೆಂಬ ದೇವನಾಗಿ ಹುಟ್ಟಿದನು.

**ಪ್ರಭಾಕರವಿಮಾನೇಭೂನ್ನಕುಲಾರ್ಯೋ [೪]ಮನೋರಥಃ ।**
**ಮನೋರಥಶತಾವಾಪ್ತದಿವ್ಯಭೋಗೋಮೃತಾಶನಃ ॥ ೧೯೨ ॥**

ಮೊದಲು ಮುಂಗಸಿಯಾಗಿದ್ದ ಆರ್ಯನು ಪ್ರಭಾಕರವೆಂಬ ವಿಮಾನದಲ್ಲಿ ತನಗೆ ಇಚ್ಛೆಬಂದಂತೆ ಬೇಕಾದಷ್ಟು ದಿವ್ಯಭೋಗೋಪಭೋಗಗಳನ್ನೂ ಅಮೃತಭೋಜನವನ್ನೂ ಪಡೆಯುವವನಾದ ಮನೋರಥನೆಂಬ ದೇವನಾಗಿ ಹುಟ್ಟಿದನು.

೧ ತೇನ ಸಮಾನನಾಮಾ ಸ್ವಯಂಪ್ರಭ ಇತ್ಯರ್ಥಃ. ೨ ಲಬ್ಧುಮಶಕ್ಯಂ. ೩ ಮನೋಹರನಾಮಾ. ೪ ಮನೋರಥನಾಮಾ.

**ಇತಿ ಪುಣ್ಯೋದಯಾತ್ತೇಷಾಂ ಸ್ವರ್ಲೋಕೇ[೧]ಸುಖಭೋಗಿನಾಮ್ ।**
**ರೂಪಸೌಂದರ್ಯಭೋಗಾದಿವರ್ಣನಾ ಲಲಿತಾಂಗವತ್ ॥ ೧೯೩ ॥**

ಹೀಗೆ ಪುಣ್ಯದ ಉದಯದಿಂದ ಸ್ವರ್ಗಲೋಕದ ಸುಖವನ್ನನುಭವಿಸುತ್ತಿದ್ದ ಆ ದೇವತೆಗಳ ರೂಪ ಸೌಂದರ್ಯ ಭೋಗ ಮೊದಲಾದ ವರ್ಣನೆಯು ಹಿಂದೆ ವರ್ಣಿಸಿದ ಲಲಿತಾಂಗದೇವನಂತೆಯೆಂದು ತಿಳಿಯಬೇಕು.

**ಇತ್ಯುಚ್ಚೈಃ ಪ್ರಮದೋದಯಾತ್ಸುರವರಃ ಶ್ರೀಮಾನಸೌ ಶ್ರೀಧರಃ ।**
**ಸ್ವರ್ಗಶ್ರೀನಯನೋತ್ಸವಂ ಶುಚಿತರಂ ಬಿಭ್ರದ್ವಪುರ್ಭಾಸ್ವರಮ್ ॥**
**ಕಾಂತಾಭಿಃ ಕಲಭಾಷಿಣೀಭಿರುಚಿತಾನ್ಭೋಗಾನ್ಮನೋರಂಜನಾನ್ ।**
**ಭುಂಜಾನಃ ಸತತೋತ್ಸವೈರರಮತ ಸ್ವಸ್ಮಿನ್ವಿಮಾನೋತ್ತಮೇ ॥ ೧೯೪ ॥**

ಈ ಪ್ರಕಾರವಾಗಿ ಸ್ವರ್ಗಸ್ತ್ರೀಯರ ನೇತ್ರಗಳಿಗೆ ಆನಂದವನ್ನುಂಟುಮಾಡುವುದೂ ಅತ್ಯಂತ ನಿರ್ಮಲವೂ ಪ್ರಕಾಶಮಾನವೂ ಆದ ಶರೀರವನ್ನು ಧರಿಸಿರುವವನೂ ದೇವತೆಗಳಲ್ಲಿ ಶ್ರೇಷ್ಠನೂ ಭಾಗ್ಯಶಾಲಿಯೂ ಆದ ಈ ಶ್ರೀಧರದೇವನು ತನ್ನ ಉತ್ತಮವಾದ ವಿಮಾನದಲ್ಲಿ ಮಧುರಭಾಷಿಣಿಯರಾದ ಸ್ತ್ರೀಯರೊಡನೆ ಯೋಗ್ಯವೂ ಮನೋರಂಜಕವೂ ಆದ ಭೋಗಗಳನ್ನನುಭವಿಸುತ್ತ ಅತ್ಯಂತ ಆನಂದದಿಂದಲೂ ನಿತ್ಯೋತ್ಸವಗಳಿಂದಲೂ ಕ್ರೀಡಿಸುತ್ತಿದ್ದನು.

**ಕಾಂತಾನಾಂ ಕರಪಲ್ಲವೈರ್ಮೃದುತಲೈಃ ಸಂವಾಹ್ಯಮಾನಕ್ರಮು-**
**ಸ್ತದ್ವಕ್ತ್ರೇಂದುಶುಚಿಸ್ಮಿತಾಂಶುಸಲಿಲೈಃ ಸಂಸಿಚ್ಯಮಾನೋ ಮುಹುಃ ।**
**[೧]ಸಭ್ರೂವಿಭ್ರಮತತ್ಕಟಾಕ್ಷ[೨]ವಿಶಿಖೈರ್ಲಕ್ಷ್ಯೀಕೃತೋನುಕ್ಷಣಂ**
**[೩]ಭೋಗಾಂಗೈರಿತಿಸೋತ್ಯಪತ್ಯಮುದಿತೋ [೪]ವತ್ಸ್ಯರ್ಜ್ಜಿನಃ ಶ್ರೀಧರಃ ॥**

ಸ್ತ್ರೀಯರ ಮೃದುವಾದ ಅಂಗೈಗಳುಳ್ಳ ಕೈಗಳಿಂದ ತನ್ನ ಕಾಲುಗಳನ್ನು ಒತ್ತಿಸಿಕೊಳ್ಳುವವನೂ ಆ ಸ್ತ್ರೀಯರ ಚಂದ್ರನಂತಿರುವ ಮುಖಗಳ ನಿರ್ಮಲವಾದ ಮುಗುಳುನಗೆಯ ಕಿರಣಗಳೆಂಬ ಜಲಗಳಿಂದ ಬಾರಿಬಾರಿಗೂ ಸೇಚಿಸಲ್ಪಡುವವನೂ ಆ ಸ್ತ್ರೀಯರ ಹುಬ್ಬುಗಳ ವಿಭ್ರಮದೊಡಗೂಡಿದ ಕಡೆಕಣ್ಣಿನೋಟಗಳೆಂಬ ಬಾಣಗಳಿಂದ ಬಾರಿಬಾರಿಗೂ ಗುರಿಯಿಡಲ್ಪಡುವವನೂ ಮುಂದೆ ತೀರ್ಥಂಕರ ನಾಗುವವನೂ ಆದ ಆ ಶ್ರೀಧರದೇವನು ಸಂತುಷ್ಟನಾಗಿ ಭೋಗಸಾಮಗ್ರಿಗಳಿಂದ ಈ ರೀತಿಯಾಗಿ ತೃಪ್ತಿಪಟ್ಟನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಶ್ರೀಮತೀವಜ್ರಜಂಘಾರ್ಯಸಮ್ಯಗ್ದರ್ಶನೋತ್ಪತ್ತಿವರ್ಣನಂ ನಾಮ ನವಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ ''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಶ್ರೀಮತೀವಜ್ರಜಂಘಾರ್ಯರ ಸಮ್ಯಕ್ತ್ವೋತ್ಪತ್ತಿವರ್ಣನವೆಂಬ ಒಂಬತ್ತನೆಯ ಪರ್ವವು ಸಮಾಪ್ತವಾದುದು.

---

೧ ಸುಖಭಾಗಿನಾಮಿತ್ಯಪಿ ಪಾಠಾಂತರಂ.

೧ ಭ್ರೂವಿಭ್ರಮಸಹಿತಾನಿ. ೨ ಬಾಣೈಃ. ೩ ಭೋಗಾಂಗೈರಪೀತ್ಯಪಿ ಪಾಠಾಂತರಂ. ೪ ಭವಿಷ್ಯಜ್ಜಿನಃ.

# ಅಥ ದಶಮಂ ಪರ್ವ

**ಅಥಾನ್ಯೇದ್ಯುರಬುದ್ಧಾಸೌ ಪ್ರಯುಕ್ತಾವಧಿ[೧]ರಂಜಸಾ ।**
**[೨]ಸ್ವಗುರುಂ ಪ್ರಾಪ್ತಕೈವಲ್ಯಂ [೩]ಶ್ರೀಪ್ರಭಾದ್ರಿಮಧಿಷ್ಠಿತಮ್ ॥ ೧ ॥**

ಅನಂತರದಲ್ಲಿ ಒಂದುದಿನ ಈ ಶ್ರೀಧರದೇವನು ಶೀಘ್ರವಾಗಿ ಅವಧಿಜ್ಞಾನವನ್ನು ಪ್ರಯೋಗಿಸಿ ಶ್ರೀಪ್ರಭಪರ್ವತದಲ್ಲಿರುವ ತನ್ನ ಗುರುಗಳಿಗೆ ಕೇವಲಜ್ಞಾನವು ಪ್ರಾಪ್ತವಾದುದೆಂದು ತಿಳಿದನು.

**ಜಗತ್ಪ್ರೀತಿಕರೋ ಯೋ[೪]ಽಸ್ಯ ಗುರುಃ ಪ್ರೀತಿಂಕರಾಹ್ವಯಃ ।**
**ತಮರ್ಚಿತುಮಭೀಯಾಯ [೫]ವರ್ಯಯಾ ಸ [೬]ಸಪರ್ಯಯಾ ॥ ೨ ॥**

ಜಗತ್ತಿಗೆ ಪ್ರೀತಿಯನ್ನುಂಟುಮಾಡುವ ಪ್ರೀತಿಂಕರನೆಂದು ಹೆಸರುಳ್ಳ ಈ ಶ್ರೀಧರದೇವನು ಗುರುವನ್ನು ಪೂಜಿಸುವುದಕ್ಕೋಸ್ಕರ ಉತ್ಕೃಷ್ಟವಾದ ಪೂಜಾ ಸಾಮಗ್ರಿಗಳೊಡನೆ ಆ ಶ್ರೀಧರದೇವನು ಹೊರಟನು.

**ಶ್ರೀಪ್ರಭಾದ್ರೌ ತಮಭ್ಯರ್ಚ್ಯ ಸರ್ವಜ್ಞಮಭಿವಂದ್ಯ ಚ ।**
**ಶ್ರುತ್ವಾ ಧರ್ಮಂ ತತೋಽಪೃಚ್ಛದಿತ್ಯಸೌ ಸ್ವಮನೀಷಿತಮ್ ॥ ೩ ॥**

ಶ್ರೀಪ್ರಭಪರ್ವತದಲ್ಲಿ ಸರ್ವಜ್ಞರಾದ ಆ ಪ್ರೀತಿಂಕರರನ್ನು ಪೂಜಿಸಿ ವಂದಿಸಿ ಮತ್ತು ಧರ್ಮಶ್ರವಣವನ್ನು ಮಾಡಿ ತರುವಾಯ ಈ ಶ್ರೀಧರದೇವನು ಮುಂದೆಹೇಳುವ ರೀತಿಯಾಗಿ ತನ್ನ ಇಷ್ಟಾರ್ಥವನ್ನು ಪ್ರಶ್ನೆಮಾಡಿದನು.

**ಮಹಾಬಲಭವೇ ಯೇಽಸ್ಮನ್ಮಂತ್ರಿಣೋ ದುರ್ದೃಶಸ್ತ್ರಯಃ ।**
**ಕ್ವಾದ್ಯ ತೇ ಲಬ್ಧಜನ್ಮಾನಃ ಕೀದೃಶೀಂ ವಾ ಗತಿಂ ಶ್ರಿತಾಃ ॥ ೪ ॥**

"ನಮ್ಮ ಮಹಾಬಲಭವದಲ್ಲಿ ಮಿಥ್ಯಾದೃಷ್ಟಿಗಳಾಗಿದ್ದ ಮೂರುಜನ ಮಂತ್ರಿಗಳು ಈಗ ಎಲ್ಲಿ ಹುಟ್ಟಿದ್ದಾರೆ ? ಎಂತಹ ಗತಿಯನ್ನು ಹೊಂದಿದರು ?"

**ಇತಿ ಪೃಷ್ಟವತೇ ತಸ್ಮೈ ಸೋಽವೋಚತ್ಸರ್ವಭಾವವಿತ್ ।**
**ತನ್ಮನೋಧ್ವಾಂತಸಂತಾನಮಪಾಕುರ್ವನ್ವಚೋಂಶುಭಿಃ ॥ ೫ ॥**

ಹೀಗೆ ಪ್ರಶ್ನೆಮಾಡಿದ ಆ ಶ್ರೀಧರದೇವನಿಗೆ ಸಮಸ್ತಪದಾರ್ಥಗಳನ್ನೂ ತಿಳಿಯುವ ಆ ಪ್ರೀತಿಂಕರಕೇವಲಿಗಳು ತಮ್ಮ ವಚನಗಳೆಂಬ ಕಿರಣಗಳಿಂದ ಆ ಶ್ರೀಧರದೇವನ ಮನಸ್ಸಿನಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವವರಾಗಿ ಮುಂದೆ ಹೇಳುವ ರೀತಿಯಾಗಿ ಹೇಳಿದರು.

**ತ್ವಯಿ ಸ್ವರ್ಗಂ ಗತೇಽಸ್ಮಾಸು[೭]ಲಬ್ಧಬೋಧಿಷು ತೇ ತದಾ ।**
**ಪ್ರಪದ್ಯ ದುರ್ಮೃತಿಂ [೮]ಯಾತಾ [೯]ವಿಯಾತಾ [೧೦]ಬತ ದುರ್ಗತಿಮ್ ॥**

"ಮಹಾಬಲನಾಗಿದ್ದ ನೀನು ಮೃತನಾಗಿ ಸ್ವರ್ಗವನ್ನು ಹೊಂದುತ್ತಿರಲಾಗಿ ನಾವು ರತ್ನತ್ರಯವನ್ನು ಪಡೆದೆವು. ವೈರಾಗ್ಯದಿಂದ ದೀಕ್ಷೆಯನ್ನು ತೆಗೆದುಕೊಂಡ ರೆಂದರ್ಥವು. ಆಗ ಆ ದುಷ್ಟರು ದುರ್ಮರಣವನ್ನು ಹೊಂದಿ ದುರ್ಗತಿಯನ್ನು ಪಡೆದರು. ಕಷ್ಟ !

**[೧೧]ದ್ವೌ ನಿಗೋದಾಸ್ಪದಂ ಯಾತೌ [೧೨]ತಮೋಽಂಧಂ ಯತ್ರ ಕೇವಲಮ್ ।**
**ತಪ್ತಾಧಿಶ್ರಯಣೋದ್ವರ್ತಭೂಯಿಷ್ಠೈರ್ಜನ್ಮಮೃತ್ಯುಭಿಃ ॥ ೭ ॥**

ಅವರಲ್ಲಿ ಮಹಾಮತಿಸಂಭಿನ್ನಮತಿಗಳಿಬ್ಬರು ಒಲೆಯಲ್ಲಿ ಕುದಿಯುತ್ತಿರುವ ಪದಾರ್ಥದಂತೆ ಜನನಮರಣಗಳಿಂದ ಕೂಡಿರುವುದೂ ಅಜ್ಞಾನಮಯವೂ ಆದ ನಿಗೋದವನ್ನು ಹೊಂದಿದರು.

**ಗತಃ ಶತಮತಿಃ ಶ್ವಭ್ರಂ ಮಿಥ್ಯಾತ್ವಪರಿಪಾಕತಃ ।**
**ವಿಪಾಕಕ್ಷೇತ್ರಮಾಮ್ನಾತಂ ತದ್ಧಿ ದುಷ್ಕೃತಕರ್ಮಣಾಮ್ ॥ ೮ ॥**

ಶತಮತಿಯು ಮಿಥ್ಯಾತ್ವಕರ್ಮದ ಉದಯದಿಂದ ನರಕವನ್ನು ಹೊಂದಿದನು, ಆ ನರಕವು ಪ್ರಾಣಿಗಳಿಗೆ ದುಷ್ಟಕರ್ಮಗಳ ಫಲವನ್ನು ಅನುಭವಮಾಡಿಸುವ ಕ್ಷೇತ್ರವೆಂದು ಹೇಳಲ್ಪಟ್ಟಿದೆ.

**ಮಿಥ್ಯಾತ್ವವಿಷಸಂಸುಪ್ತಾ ಯೇ ಮಾರ್ಗಪರಿಪಂಥಿನಃ ।**
**ತೇ ಯಾಂತಿ ದೀರ್ಘಮಧ್ವಾನಂ ಕುಯೋನ್ಯಾವರ್ತಸಂಕುಲಮ್ ॥ ೯ ॥**

ಮಿಥ್ಯಾತ್ವವೆಂಬ ವಿಷದಿಂದ ಮೂರ್ಛಿತರಾಗಿ ಸನ್ಮಾರ್ಗವನ್ನು ದ್ವೇಷಿಸುವ ಜೀವಗಳು ಬಹುಕಾಲದ ವರೆಗೂ ನೀಚಯೋನಿಯೆಂಬ ಸುಳಿಯಲ್ಲಿ ಕಷ್ಟ ಪಡುತ್ತಾರೆ.

**ತಮಸ್ಯಂಧೇ ನಿಮಜ್ಜಂತಿ ಸಜ್ಜ್ಞಾನದ್ವೇಷಿಣೋ ನರಾಃ ।**
**ಆಪ್ತೋಪಜ್ಞಮತೋ ಜ್ಞಾನಂ ಬುಧೋಭ್ಯಸ್ಯೇದನಾರತಮ್ ॥ ೧೦ ॥**

ಸಮ್ಯಜ್ಞಾನವನ್ನು ದ್ವೇಷಿಸುವ ಜನಗಳು ಗಾಢವಾದ ಅಜ್ಞಾನಾಂಧಕಾರದಲ್ಲಿ ಮುಳುಗುತ್ತಾರೆ. ಈ ಕಾರಣದಿಂದ ವಿವೇಕಿಯಾದವನು ಯಾವಾಗಲೂ ಆಪ್ತರ ಮೊದಲನೆಯ ಜ್ಞಾನವಾದ ಸಮ್ಯಜ್ಞಾನವನ್ನು ಅಭ್ಯಾಸಮಾಡಬೇಕು.

**ಧರ್ಮೇಣಾತ್ಮಾ ವ್ರಜತ್ಯೂರ್ಧ್ವಮಧರ್ಮೇಣ ಪತತ್ಯಧಃ ।**
**ಮಿಶ್ರಸ್ತು ಯಾತಿ ಮಾನುಷ್ಯಮಿತ್ಯಾಪ್ತೋಕ್ತಂ ವಿನಿಶ್ಚಿನು ॥ ೧೧ ॥**

ಎಲೈ ಶ್ರೀಧರದೇವನೇ ! ಆತ್ಮನು ಧರ್ಮದಿಂದ ಊರ್ಧ್ವಗತಿ(ಸ್ವರ್ಗ)ಯನ್ನು ಪಡೆಯುತ್ತಾನೆ. ಅಧರ್ಮ(ಪಾಪ)ದಿಂದ ಕೆಳಕ್ಕೆ(ನರಕಕ್ಕೆ) ಬೀಳುತ್ತಾನೆ. ಧರ್ಮಾ ಧರ್ಮಗಳನ್ನಾಚರಿಸುವ ಮಿಶ್ರನು ಮನುಷ್ಯತ್ವವನ್ನು ಹೊಂದುತ್ತಾನೆ. ಹೀಗೆಂಬುದು ಆಪ್ತವಚನವೆಂದು ನಿಶ್ಚಯವಾಗಿ ತಿಳಿ.

**ಸ ಏಷ ಶತಬುದ್ಧಿಸ್ತೇ ಮಿಥ್ಯಾಜ್ಞಾನಸ್ಯ ದಾರ್ಢ್ಯತಃ ।**
**ದ್ವಿತೀಯನರಕೇ ದುಃಖಮನುಭುಂಕ್ತೇತಿದಾರುಣಮ್ ॥ ೧೨ ॥**

ನಿನ್ನ ಆ ಶತಮತಿಯು ಮಿಥ್ಯಾಜ್ಞಾನದ ದೃಢತೆಯಿಂದ ಎರಡನೆಯ ನರಕದಲ್ಲಿ ಭಯಂಕರವಾದ ದುಃಖವನ್ನನುಭವಿಸುತ್ತಿದ್ದಾನೆ.

**ಸೋಽಯಂ ಸ್ವಯಂ ಕೃತೋಽನರ್ಥೋ ಜಂತೋರಘಜಿತಾತ್ಮನಃ ।**
**ಯದಯಂ ವಿದ್ವಿಷನ್ಧರ್ಮಮಧರ್ಮೇ ಕುರುತೇ ರತಿಮ್ ॥ ೧೩ ॥**

ಧರ್ಮವನ್ನು ದ್ವೇಷಿಸಿ ಅಧರ್ಮವನ್ನು ಪ್ರೀತಿಸುವುದೂ ಪಾಪದಿಂದ ತಿರಸ್ಕೃತವೂ ಆದ ಜಂತುವು ತಾನಾಗಿಯೇ ಮಾಡಿಕೊಂಡ ಅನರ್ಥವಿದು.

**ಧರ್ಮಾತ್ಸುಖಮಧರ್ಮಾಚ್ಚ ದುಃಖಮಿ[೧]ತ್ಯವಿಗಾನತಃ ।**
**ಧರ್ಮೈಕಪರತಾಂ ಧತ್ತೇ ಬುಧೋಽನರ್ಥಜಿಹಾಸಯಾ ॥ ೧೪ ॥**

---

೧ ಝಟಿತಿ. ೨ ಪ್ರೀತಿಂಕರಂ. ೩ ಆಧಾರೇ ಕರ್ಮ. ೪ ಶ್ರೀಧರಸ್ಯ. ೫ ವಿಶಿಷ್ಟಯಾ. ೬ ಪೂಜಾದ್ರವ್ಯೇಣ. ೭ ಪ್ರಾಪ್ತರತ್ನತ್ರಯವತ್ಸು ಸತ್ಸು. ೮ ಗತಾಃ. ೯ ಧೃಷ್ಟಾಃ. ೧೦ ಕಷ್ಟಂ. ೧೧ ಮಹಾಮತಿಸಂಭಿನ್ನಮತೀ. ೧೨ ಅಜ್ಞಾನಂ.

೧ ಅವಿಪ್ರತಿಪತ್ತಿತಃ, ನಿಃಸಂದೇಹಾದಿತ್ಯರ್ಥಃ.

ಧರ್ಮದಿಂದ ಸುಖವೂ ಅಧರ್ಮದಿಂದ ದುಃಖವೂ ಉಂಟಾಗುವುದೆಂದು ನಿಃಸಂಶಯವಾಗಿ ತಿಳಿದು ವಿವೇಕಿಯು ಅನರ್ಥವನ್ನು ಪರಿತ್ಯಜಿಸಬೇಕೆಂಬ ಇಚ್ಛೆಯಿಂದ ಧರ್ಮದಲ್ಲಿಯೇ ತತ್ಪರನಾಗುತ್ತಾನೆ.

**ಧರ್ಮಃ ಪ್ರಾಣಿದಯಾ ಸತ್ಯಂ ಕ್ಷಾಂತಿಃ ಶೌಚಂ ವಿತೃಷ್ಣತಾ ।**
**ಜ್ಞಾನವೈರಾಗ್ಯಸಂಪತ್ತಿರಧರ್ಮಸ್ತದ್ವಿಪರ್ಯಯಃ ॥ ೧೫ ॥**

ಪ್ರಾಣಿಮಾತ್ರದಲ್ಲಿ ದಯೆಯನ್ನಿಡುವುದೂ ಸತ್ಯವನ್ನು ಮಾತನಾಡುವುದೂ ಕ್ಷಮೆಯೂ ಶುಚಿಯೂ ಭೋಗೋಪಭೋಗವಿಷಯಗಳಲ್ಲಿ ಆಸೆಯಿಲ್ಲದಿರುವಿಕೆಯೂ ಜ್ಞಾನಾಭ್ಯಾಸವೂ ಸಂಸಾರದಲ್ಲಿ ವೈರಾಗ್ಯಭಾವನೆಯೂ ಧರ್ಮವೆನಿಸುವುವು. ಇದಕ್ಕೆ ವಿಪರೀತವಾದ ನಿರ್ದಯೆ ಮೊದಲಾದ ಗುಣಗಳು ಅಧರ್ಮಗಳೆನಿಸುವುವು.

**ತನೋತಿ ವಿಷಯಾಸಂಗಃ ಸುಖ[೧]ಸಂತರ್ಷಮಂಗಿನಃ ।**
**ಸ ತೀವ್ರಮನುಸಂಧತ್ತೇ ತಾಪಂ ದೀಪ್ತ ಇವಾನಲಃ ॥ ೧೬ ॥**

ಭೋಗೋಪಭೋಗವಿಷಯಗಳ ಸಂಬಂಧವು ಪ್ರಾಣಿಗಳಿಗೆ ಸುಖದ ಅಭಿಲಾಷೆಯನ್ನುಂಟುಮಾಡಿ ಜ್ವಲಿಸುತ್ತಿರುವ ಅಗ್ನಿಯಂತೆ ತೀವ್ರವಾದ ಸಂತಾಪವನ್ನುಂಟುಮಾಡುತ್ತದೆ.

**ಸಂತಪ್ತಸ್ತತ್ಪ್ರತೀಕಾರಮೀಪ್ಸನ್ಪಾಪೇನುರಜ್ಯತೇ ।**
**ದ್ವೇಷ್ಟಿಪಾಪರತೋ ಧರ್ಮಮಧರ್ಮಾಚ್ಚ ಪತತ್ಯಧಃ ॥ ೧೭ ॥**

ಹೀಗೆ ವಿಷಯಾಭಿಲಾಷೆಯಿಂದ ಸಂತಪಿಸಿ ಅದರ ಪ್ರತೀಕಾರವನ್ನಿಚ್ಛಿಸುವ ಪ್ರಾಣಿಯು ಪಾಪಕಾರ್ಯದಲ್ಲಿ ಆಸಕ್ತವಾಗುತ್ತದೆ. ಪಾಪದಲ್ಲಿ ಆಸಕ್ತವಾಗಿ ಧರ್ಮವನ್ನು ದ್ವೇಷಿಸುತ್ತದೆ. ಅಧರ್ಮ(ಪಾಪ)ದಿಂದ ಕೆಳಕ್ಕೆ(ನರಕಕ್ಕೆ) ಬೀಳುತ್ತದೆ.

**ವಿಪಚ್ಯತೇ ಯಥಾಕಾಲಂ ನರಕೇ ದುರನುಷ್ಠಿತಮ್ ।**
**[೨]ಅನೇಹಸಿ ಸಮುಭ್ಯರ್ಣೇ ಯಥಾ[೩]ಲರ್ಕಶುನೋ ವಿಷಮ್ ॥ ೧೮ ॥**

ಹುಚ್ಚುನಾಯಿಯ ವಿಷವು ಕಾಲಾಂತರದಲ್ಲಿ ಉದಯಕ್ಕೆ ಬಂದು ದುಃಖವನ್ನುಂಟುಮಾಡುವಂತೆ, ಪೂರ್ವದಲ್ಲಿ ಮಾಡಿದ ದುಷ್ಕೃತ್ಯವು ಯೋಗ್ಯಕಾಲದಲ್ಲಿ, ಉದಯಕ್ಕೆ ಬಂದು ಆ ನರಕದಲ್ಲಿ ದುಃಖವನ್ನುಂಟುಮಾಡುತ್ತದೆ.

**ಯಥಾ[೪]ಪಚರಿತೈರ್ಜಂತುಂ ತೀವ್ರಂ ಜ್ವರಯತಿ ಜ್ವರಃ ।**
**ತಥಾ [೫]ದುರೀಹಿತೈಃ [೬]ಪಾಪ್ಮಾ ಗಾಢೀಭವತಿ [೭]ದುರ್ದೃಶಃ ॥ ೧೯ ॥**

ಅಪಥ್ಯಭೋಜನಗಳಿಂದ ಜ್ವರವು ಪ್ರಾಣಿಯನ್ನು ಅಧಿಕವಾಗಿ ಪೀಡಿಸುವಂತೆ, ದುರಾಚಾರಗಳಿಂದ ಮಿಥ್ಯಾದೃಷ್ಟಿಯ ಪಾಪವು ದೃಢವಾಗುತ್ತದೆ.

**ದುರಂತಃ ಕರ್ಮಣಾಂ ಪಾಕೋ ದದಾತಿ ಕಟುಕಂ ಫಲಮ್ ।**
**ಯೇನಾತ್ಮಾ ಪತಿತಃ ಶ್ವಭ್ರೇ ಕ್ಷಣಂ ದುಃಖಾನ್ನ ಮುಚ್ಯತೇ ॥ ೨೦ ॥**

ದುಃಖವೇ ಕೊನೆಯಾಗುಳ್ಳ ಕರ್ಮಗಳ ಪರಿಪಾಕವು ಕಟುಕವಾದ ಫಲವನ್ನು ಕೊಡುತ್ತದೆ. ಆ ಕರ್ಮದಿಂದ ಆತ್ಮನು ನರಕದಲ್ಲಿ ಬಿದ್ದು ಕ್ಷಣಕಾಲವಾದರೂ ದುಃಖದಿಂದ ಬಿಡುಗಡೆಯನ್ನು ಹೊಂದುವುದಿಲ್ಲ.

**ಕೀದೃಶಂ ನರಕೇ ದುಃಖಂ ತತ್ರೋತ್ಪತ್ತಿಃ ಕುತೋಂಗಿನಾಮ್ ।**
**ಇತಿ ಚೇಚ್ಛೃಣು ತತ್ಸಮ್ಯಕ್ಪ್ರಣಿಧಾಯ ಮನಃ ಕ್ಷಣಮ್ ॥ ೨೧ ॥**

'ನರಕದಲ್ಲಿ ದುಃಖವು ಎಂತಹುದು ? ಅಲ್ಲಿ ಪ್ರಾಣಿಗಳಿಗೆ ಉತ್ಪತ್ತಿ ಯಾವ ಕಾರಣದಿಂದ ?' ಎಂದು ಕೇಳಿದರೆ ಒಂದು ಕ್ಷಣಕಾಲದ ವರೆಗೆ ಚೆನ್ನಾಗಿ ಮನಸ್ಸನ್ನಿಟ್ಟು ಕೇಳು.

೧ ಅಭಿಲಾಷಂ. ೨ ಕಾಲೇ. ೩ ಉನ್ಮತ್ತಶುನಕಸ್ಯ. ೪ ಅಪಥ್ಯಭೋಜನೈಃ. ೫ ದುರಾಚಾರೈಃ. ೬ ಪಾಪಂ. ೭ ಮಿಥ್ಯಾದೃಷ್ಟೇಃ.

**ಹಿಂಸಾಯಾಂ ನಿರತಾ ಯೇ ಸ್ಯುರ್ಯೇ ಮೃಷಾವಾದತತ್ಪರಾಃ ।**
**ಚೌರಾಶೀಲಾಃ ಪರಸ್ತ್ರೀಷು ಯೇ ರತಾ ಮದ್ಯಪಾಶ್ಚ ಯೇ ॥ ೨೨ ॥**

ಹಿಂಸೆಯಲ್ಲಿ ನಿರತರಾದವರೂ ಸುಳ್ಳುಹೇಳುವುದರಲ್ಲಿ ತತ್ಪರರಾದವರೂ ಕದಿಯುವ ಸ್ವಭಾವವುಳ್ಳವರೂ ಪರಸ್ತ್ರೀಯರಲ್ಲಿ ಆಸಕ್ತರಾದವರೂ ಮದ್ಯಪಾನವನ್ನು ಮಾಡುವವರೂ

**ಯೇ ಚ ಮಿಥ್ಯಾದೃಶಃ ಕ್ರೂರಾಃ ರೌದ್ರಧ್ಯಾನಪರಾಯಣಾಃ ।**
**ಸತ್ತ್ವೇಷು [೧]ನಿರನುಕ್ರೋಶಾ ಬಹ್ವಾರಂಭಪರಿಗ್ರಹಾಃ ॥ ೨೩ ॥**

ಮಿಥ್ಯಾದೃಷ್ಟಿಗಳೂ ಕ್ರೂರಸ್ವಭಾವದವರೂ ರೌದ್ರಧ್ಯಾನಪರಾಯಣರೂ ಪ್ರಾಣಿಗಳಲ್ಲಿ ದಯೆಯಿಲ್ಲದವರೂ ಬಹಳ ಆರಂಭಪರಿಗ್ರಹವುಳ್ಳವರೂ

**[೨]ಧರ್ಮದ್ರುಹಶ್ಚಯೇ ನಿತ್ಯಮಧರ್ಮಪರಿಪೋಷಕಾಃ ।**
**ದೂಷಕಾಃ ಸಾಧುವರ್ಗಸ್ಯ ಮಾತ್ಸರ್ಯೋಪಹತಾಶ್ಚ ಯೇ ॥ ೨೪ ॥**

ಧರ್ಮಘಾತಕರೂ ಅಧರ್ಮವನ್ನು ಪರಿಪೋಷಣೆಮಾಡುವವರೂ ಸಾಧುಗಳ ಸಂಘವನ್ನು ದೂಷಿಸುವವರೂ ಮಾತ್ಸರ್ಯವುಳ್ಳವರೂ

**[೩]ರುಷ್ಯಂತ್ಯಕಾರಣಂ ಯೇ ಚ ನಿರ್ಗ್ರಂಥೇಭ್ಯೋತಿಪಾತಕಾಃ ।**
**ಮುನಿಭ್ಯೋ ಧರ್ಮಶೀಲೇಭ್ಯೋ ಮಧುಮಾಂಸಾಶನೇ ರತಾಃ ॥ ೨೫ ॥**

ಧರ್ಮಶೀಲರಾದ ನಿರ್ಗ್ರಂಥಮುನಿಗಳ ಮೇಲೆ ನಿಷ್ಕಾರಣವಾಗಿ ಕೋಪಿಸಿಕೊಳ್ಳುವ ಮಹಾಪಾಪಿಗಳೂ ಜೇನುತುಪ್ಪವನ್ನೂ ಮಾಂಸವನ್ನೂ ತಿನ್ನುವುದರಲ್ಲಿ ಆಸಕ್ತರಾದವರೂ

**[೪]ವಧಕಾನ್ಪೋಷಯಿತ್ವಾನ್ಯಜೀವಾನಾಂ ಯೇತಿನಿರ್ಘೃಣಾಃ ।**
**ಖಾದಕಾ ಮಧುಮಾಂಸಸ್ಯ ತೇಷಾಂ ಯೇ ಚಾನುಮೋದಕಾಃ ॥ ೨೬ ॥**

ನಾಯಿಮೊದಲಾದ ಹಿಂಸಕಪ್ರಾಣಿಗಳನ್ನು ಸಲಹಿ ಬೇರೆ ಜೀವಗಳ ಮೇಲೆ ಅತ್ಯಂತ ನಿರ್ದಯೆಯುಳ್ಳವರೂ ಮಧುಮಾಂಸಗಳನ್ನು ತಿನ್ನುವವರೂ ಆ ಭಕ್ಷಕರನ್ನು ನೋಡಿ ಅನುಮೋದಪಡುವವರೂ ಇವರೆಲ್ಲ

**ತೇ ನರಾಃ ಪಾಪಭಾರೇಣ ಪ್ರವಿಶಂತಿ ರಸಾತಲಮ್ ।**
**ವಿಪಾಕಕ್ಷೇತ್ರಮೇತದ್ಧಿ ವಿದ್ಧಿ ದುಷ್ಕೃತಕರ್ಮಣಾಮ್ ॥ ೨೭ ॥**

ಪಾಪದ ಭಾರದಿಂದ ನರಕವನ್ನು ಪ್ರವೇಶಿಸುತ್ತಾರೆ. ಈ ನರಕವು ದುಷ್ಕರ್ಮಗಳ ಪರಿಪಾಕವಾಗುವ ಕ್ಷೇತ್ರವೆಂದು ತಿಳಿ.

**ಜಲಸ್ಥಲಚರಾಃ ಕ್ರೂರಾಃ ಸೋರಗಾಶ್ಚ ಸರೀಸೃಪಾಃ ।**
**ಪಾಪಶೀಲಾಶ್ಚ ಮಾನಿನ್ಯಃ ಪಕ್ಷಿಣಶ್ಚ ಪ್ರಯಾಂತ್ಯಧಃ ॥ ೨೮ ॥**

ಕ್ರೂರವಾದ ಜಲಚರಪ್ರಾಣಿಗಳೂ ಸ್ಥಲಚರಪ್ರಾಣಿಗಳೂ ಸರ್ಪಗಳೂ ಹೆಡೆಯಿಲ್ಲದ ಹಾವುಗಳೂ ಪಾಪಾಚಾರಿಣಿಯರಾದ ಸ್ತ್ರೀಯರೂ ಪಕ್ಷಿಗಳೂ ನರಕಕ್ಕೆ ಹೋಗುತ್ತವೆ.

**ಪ್ರಯಾಂತ್ಯಸಂಜ್ಞಿನೋ ಘರ್ಮಾಂ ತಾಂ ವಂಶಾಂ ಚ ಸರೀಸೃಪಾಃ ।**
**ಪಕ್ಷಿಣ[೫]ಸ್ತೇ ತೃತೀಯಾಂ ಚ ತಾಶ್ಚತುರ್ಥೀಂ ಚ ಪನ್ನಗಾಃ ॥ ೨೯ ॥**

ಅಸಂಜ್ಞಿಜೀವಗಳು ಘರ್ಮಾವೆಂಬ ಮೊದಲನೆಯ ನರಕವನ್ನು ಹೊಂದುತ್ತವೆ. ಹೆಡೆಯಿಲ್ಲದ ಸರ್ಪಜಾತಿಗಳು ಮೊದಲನೆಯ ನರಕವನ್ನು ಅಥವಾ ವಂಶಾವೆಂಬ ಎರಡನೆಯ ನರಕವನ್ನು ಹೊಂದುತ್ತವೆ. ಪಕ್ಷಿಗಳು ಒಂದನೆಯ ಎರಡನೆಯ ಅಥವಾ ಮೂರನೆಯ ನರಕವನ್ನು ಹೊಂದುತ್ತವೆ. ಸರ್ಪಗಳು ಮೊದಲನೆಯ ಮೂರು ನರಕಗಳನ್ನು ಅಥವಾ ನಾಲ್ಕನೆಯ ನರಕವನ್ನು ಹೊಂದುತ್ತವೆ.

೧ ನಿಷ್ಕೃಪಾಃ. ೨ ಧರ್ಮಘಾತಕಾಃ. ೩ ಕುಪ್ಯಂತಿ. ೪ ಶುನಕಾದೀನ್. ೫ ಘರ್ಮಾವಂಶೇ.

**ಸಿಂಹಾಸ್ತಾಃ ಪಂಚಮೀಂ ಚೈವ ತಾಶ್ಚ ಷಷ್ಠೀಂ ಚ ಯೋಷಿತಃ ।**
**ಪ್ರಯಾಂತಿ ಸಪ್ತಮೀಂ ತಾಶ್ಚ ಮರ್ತ್ಯಾ ಮತ್ಸ್ಯಾಶ್ಚ ಪಾಪಿನಃ ॥ ೩೦ ॥**

ಸಿಂಹಗಳು ಮೊದಲಿನ ನಾಲ್ಕು ನರಕಗಳನ್ನು ಅಥವಾ ಐದನೆಯ ನರಕವನ್ನು ಹೊಂದುತ್ತವೆ. ಸ್ತ್ರೀಯರು ಮೊದಲಿನ ಐದು ನರಕಗಳನ್ನು ಅಥವಾ ಆರನೆಯ ನರಕವನ್ನು ಹೊಂದುತ್ತಾರೆ. ಪಾಪಿಗಳಾದ ಮನುಷ್ಯರೂ ಮೀನುಗಳೂ ಮೊದಲಿನ ಆರು ನರಕಗಳನ್ನು ಅಥವಾ ಏಳನೆಯ ನರಕವನ್ನು ಹೊಂದುತ್ತವೆ.

**ರತ್ನಶರ್ಕರವಾಲೂಕಾಪಂಕಧೂಮತಮಃಪ್ರಭಾಃ ।**
**ತಮಸ್ತಮಃಪ್ರಭಾ ಚೇತಿ ಸಪ್ತಾಧಃ ಶ್ವಭ್ರಭೂಮಯಃ ॥ ೩೧ ॥**

ರತ್ನಪ್ರಭಾ ಶರ್ಕರಾಪ್ರಭಾ ವಾಲುಕಾಪ್ರಭಾ ಪಂಕಪ್ರಭಾ ಧೂಮಪ್ರಭಾ ತಮಃಪ್ರಭಾ ತಮಸ್ತಮಃ(ಮಹಾತಮಃ)ಪ್ರಭಾಗಳೆಂದು ಕೆಳಗೆ ಏಳು ನರಕ ಭೂಮಿಗಳಿವೆ.

**ತಾಸಾಂ ಪರ್ಯಾಯನಾಮಾನಿ ಘರ್ಮಾ ವಂಶಾ ಶಿಲಾಂಜನಾ ।**
**ಅರಿಷ್ಟಾ ಮಘವೀ ಚೈವ ಮಾಘವೀ ಚೇತ್ಯನುಕ್ರಮಾತ್ ॥ ೩೨ ॥**

ಆ ನರಕಗಳಿಗೆ ಘರ್ಮಾ ವಂಶಾ ಶಿಲಾ ಅಂಜನಾ ಅರಿಷ್ಟಾ ಮಘವೀ ಮಾಘವೀಗಳೆಂಬ ಏಳು ಕ್ರಮವಾಗಿ ಮೇಲಿನ ಅರ್ಥವನ್ನೇ ತಿಳಿಸುವ ಹೆಸರುಗಳಾಗಿವೆ.

**ತತ್ರ ಬೀಭತ್ಸುನಿ ಸ್ಥಾನೇ ಜಾಲೇ ಮಧುಕೃತಾಮಿವ ।**
**ತೇಽಧೋಮುಖಾಃ ಪ್ರಜಾಯಂತೇ ಪಾಪಿನಾಮುನ್ನತಿಃ ಕುತಃ ॥ ೩೩ ॥**

ಆ ನರಕಗಳಲ್ಲಿ ಜೇನುನೊಣಗಳ ಬಲೆ(ಹೊಟ್ಟು)ಯಂತಿರುವ ಅತ್ಯಂತ ದುರ್ಗಂಧವಾದ ಸ್ಥಾನದಲ್ಲಿ ಆ ನಾರಕಿಗಳು ಅಧೋಮುಖರಾಗಿ ಹುಟ್ಟುತ್ತಾರೆ. ಪಾಪಿಗಳಿಗೆ ಉನ್ನತಿಯು ಎಲ್ಲಿ ಬಂತು ?

**ತೇಂತರ್ಮುಹೂರ್ತತೋ ಗಾತ್ರಂ ಪೂತಿಗಂಧಿ ಜುಗುಪ್ಸಿತಮ್ ।**
**ಪರ್ಯಾಪಯಂತಿ ದುಷ್ಪ್ರೇಕ್ಷಂ ವಿಕೃತಾಕೃತಿದುಷ್ಕೃತಾತ್ ॥ ೩೪ ॥**

ಆ ನಾರಕಿಗಳು ಒಂದು ಅಂತರ್ಮುಹೂರ್ತ ಕಾಲದಲ್ಲಿ ಪಾಪದ ವಶದಿಂದ ದುರ್ಗಂಧವೂ ಹೇಸಿಗೆಯುಳ್ಳುದೂ ವಿಕಾರವಾದ ಆಕಾರವುಳ್ಳುದೂ ನೋಡುವುದಕ್ಕೆ ಅಸಹ್ಯವೂ ಆದ ಶರೀರವನ್ನು ಪಡೆಯುತ್ತಾರೆ.

**ಪರ್ಯಾಪ್ತಾಶ್ಚ ಮಹೀಪೃಷ್ಠೇ [೧]ಜ್ವಲನಿನ್ಯತಿದುಃಸಹೇ ।**
**ವಿಚ್ಛಿನ್ನಬಂಧನಾನೀವ ಪತ್ರಾಣಿ ವಿಲುಠಂತ್ಯಧಃ ॥ ೩೫ ॥**

ಅತ್ಯಂತ ದುಃಸಹವೂ ಅಗ್ನಿಯುಳ್ಳುದೂ ಆದ ಆ ನರಕಭೂಮಿಯಲ್ಲಿ ಶರೀರ ಧಾರಿಗಳಾಗಿ ಹುಟ್ಟಿದ ಆ ನಾರಕಿಜೀವಗಳು ತೊಟ್ಟುಕಳಚಿದ ಎಲೆಗಳಂತೆ ಕೆಳಕ್ಕೆ ಬೀಳುತ್ತವೆ.

**ನಿಪತ್ಯ ಚ ಮಹೀಪೃಷ್ಠೇ ನಿಶಿತಾಯುಧಮೂರ್ಧಸು ।**
**ಫೂತ್ಕುರ್ವಂತಿ ದುರಾತ್ಮಾನಶ್ಛಿನ್ನಸರ್ವಾಂಗಸಂಧಯಃ ॥ ೩೬ ॥**

ಆ ನರಕಭೂಮಿಯಲ್ಲಿ ತೀಕ್ಷ್ಣವಾದ ಆಯುಧಗಳ ಮೇಲೆ ಆ ಪಾಪಿಗಳು ಬಿದ್ದು ಛಿನ್ನಭಿನ್ನವಾದ ಸರ್ವಾಂಗವುಳ್ಳವರಾಗಿ ರೋದನವನ್ನು ಮಾಡುತ್ತಾರೆ.

**ಭೂಮ್ಯುಷ್ಮಣಾ ಚ ಸಂತಪ್ತಾ ದುಸ್ಸಹೇನಾಕುಲೀಕೃತಾಃ ।**
**ತಪ್ತಭ್ರಾಷ್ಟ್ರೇ ತಿಲಾ ಯದ್ವನ್ನಿಪತಂತ್ಯುತ್ಪತಂತಿ ಚ ॥ ೩೭ ॥**

೧ ಜ್ವಲನವತಿ.

ಸಹಿಸುವುದಕ್ಕೆ ಕಷ್ಟವಾದ ಭೂಮಿಯ ಉಷ್ಣದಿಂದ ಸಂತಪ್ತರಾಗಿ ದುಃಖ ಪಡುತ್ತಿರುವ ಆ ನಾರಕಿಜೀವಗಳು, ಚೆನ್ನಾಗಿ ಕಾದ ಹೆಂಚಿನಲ್ಲಿ ಎಳ್ಳುಗಳಂತೆ, ಕೆಳಕ್ಕೆ ಬಿದ್ದು ಮೇಲಕ್ಕೆ ಪುಟಹಾರುತ್ತಾರೆ.

**ತತಸ್ತೇಷಾಂ ನಿಕೃಂತಂತಿ ಗಾತ್ರಾಣಿ ನಿಶಿತಾಯುಧೈಃ ।**
**ನಾರಕಾಃ ಪರುಷಕ್ರೋಧಾಸ್ತರ್ಜಯಂತೋತಿಭೀಷಣಮ್ ॥ ೩೮ ॥**

ತರುವಾಯ ಅತ್ಯಂತ ಕೋಪಿಷ್ಠರಾದ ಹಳೆ ನಾರಕಿಜೀವಗಳು ಅತ್ಯಂತ ಭಯಂಕರವಾಗಿ ಬೆದರಿಸಿ ತೀಕ್ಷ್ಣವಾದ ಆಯುಧಗಳಿಂದ ಅವರ ಶರೀರಗಳನ್ನು ಕತ್ತರಿಸುತ್ತಾರೆ.

**ತೇಷಾಂ ಭಿನ್ನಾನಿ ಗಾತ್ರಾಣಿ [೧]ಸಂಧಾನಂ ಯಾಂತಿ ತತ್ಕ್ಷಣಾತ್ ।**
**ದಂಡಾಹತಾನಿ ವಾರೀಣಿ ಯದ್ವ[೨]ದ್ವಿಕ್ಷಿಪ್ಯ [೩]ಶಲ್ಕಶಃ ॥ ೩೯ ॥**

ತುಂಡುತುಂಡಾಗಿ ಎಸೆದ ಆ ನಾರಕಿಜೀವಗಳ ಛಿನ್ನಭಿನ್ನವಾದ ಅವಯವಗಳು ಕೋಲಿನಿಂದ ಹೊಡೆಯಲ್ಪಟ್ಟ ನೀರಿನಂತೆ, ತತ್ಕ್ಷಣದಲ್ಲಿಯೇ ಸೇರಿಕೊಳ್ಳುತ್ತವೆ.

**ವೈರಮನ್ಯೋನ್ಯಸಂಬಂಧಿ ನಿವೇದ್ಯಾನ್ಯಭವಾನುಗಮ್ ।**
**ದಂಡಾಂ[೪]ಸ್ತದನುರೂಪಾಂಸ್ತೇ ಯೋಜಯಂತಿ ಪರಸ್ಪರಮ್ ॥ ೪೦ ॥**

ಒಬ್ಬರಿಗೊಬ್ಬರ ಪೂರ್ವಭವದ ವೈರವನ್ನು ತಿಳಿಸಿ ಆ ವೈರಕ್ಕೆ ಅನುರೂಪವಾದ ಶಿಕ್ಷೆಯನ್ನು ಪರಸ್ಪರವಾಗಿ ಕೊಡುತ್ತಾರೆ.

**ಚೋದಯಂತ್ಯಸುರಾಶ್ಚೈತಾನ್ಯೂಯಂ ಯುಧ್ಯಧ್ವಮಿತ್ಯರಮ್ ।**
**ಸಂಸ್ಮಾರ್ಯ ಪೂರ್ವವೈರಾಣಿ ಪ್ರಾಕ್ಚತುರ್ಥ್ಯಾಃ ಸುದಾರುಣಾಃ ॥ ೪೧ ॥**

ಅತ್ಯಂತ ಭಯಂಕರರಾದ ಅಸುರದೇವತೆಗಳು ಮೂರನೆಯ ನರಕದ ವರೆಗೆ ಹೋಗಿ ಈ ನಾರಕಿಜೀವಗಳಿಗೆ ಪೂರ್ವದ ವೈರಗಳನ್ನು ನೆನಪುಹುಟ್ಟಿಸಿ 'ನೀವು ಶೀಘ್ರವಾಗಿ ಯುದ್ಧಮಾಡಿರಿ' ಯೆಂದು ಪ್ರೇರೇಪಿಸುತ್ತಾರೆ.

**ವಜ್ರಚಂಚುಪುಟೈರ್ಗೃಧ್ರಾಃ ಕೃಂತಂತ್ಯೇತಾನ್ಭಯಂಕರಾಃ ।**
**ಶ್ವಾನಶ್ಚಾ[೫]ನರ್ಜುನಾಃ [೬]ಶೂನಾ ದ್ಯಣಂತಿ ನಖರೈಃ ಖರೈಃ ॥ ೪೨ ॥**

ಭಯಂಕರವಾದ ಹದ್ದುಗಳು ವಜ್ರದ ಕೊಕ್ಕುಗಳಿಂದ ಈ ನಾರಕಿಗಳನ್ನು ಕತ್ತರಿಸುತ್ತವೆ. ದೊಡ್ಡದಾದ ಕಪ್ಪು ನಾಯಿಗಳು ತೀಕ್ಷ್ಣವಾದ ಉಗುರುಗಳಿಂದ ಸೀಳುತ್ತವೆ.

**ಮೂಷಾಕ್ವಥಿತತಾಮ್ರಾದಿರಸಾನ್ಕೇಚಿತ್ಪ್ರಪಾಯಿತಾಃ ।**
**ಪ್ರಯಾಂತಿ ವಿಲಯಂ ಸದ್ಯೋ [೭]ರಸಂತೋ [೮]ವಿರಸಸ್ವನಮ್ ॥ ೪೩ ॥**

ಕೆಲವು ನಾರಕಿಗಳಿಗೆ ಮೂಸೆಯಲ್ಲಿ ಕುದಿಸಿದ ತಾಮ್ರ ಮೊದಲಾದ ಲೋಹಗಳ ರಸಗಳನ್ನು ಕುಡಿಸುತ್ತಾರೆ. ಅಂತಹವರು ತತ್ಕ್ಷಣದಲ್ಲಿಯೇ ಕಠೋರವಾದ ಶಬ್ದವನ್ನು ಮಾಡಿ ನಾಶವನ್ನು ಹೊಂದುತ್ತಾರೆ.

**ಇಕ್ಷುಯಂತ್ರೇಷು ನಿಕ್ಷಿಪ್ಯ ಪೀಡ್ಯಂತೇ ಖಂಡಶಃ ಕೃತಾಃ ।**
**[೯]ಉಷ್ಟ್ರಿಕಾಸು ಚ ನಿಷ್ಕ್ವಾಥ್ಯ ನೀಯಂತೇ ರಸತಾಂ ಪರೇ ॥ ೪೪ ॥**

ಕೆಲವರನ್ನು ತುಂಡುತುಂಡಾಗಿ ಕತ್ತರಿಸಿ ಕಬ್ಬಿನ ಯಂತ್ರ(ಆಲೆ)ಗಳಲ್ಲಿರಿಸಿ ಪೀಡಿಸುತ್ತಾರೆ. ಇನ್ನು ಕೆಲವರನ್ನು ಮಣ್ಣಿನ ದೊಡ್ಡ ಪಾತ್ರಗಳಲ್ಲಿ ಕುದಿಸಿ ರಸಮಾಡುತ್ತಾರೆ.

**ಕೇಚಿತ್ಸ್ವಾನ್ಯೇವ ಮಾಂಸಾನಿ ಖಾದ್ಯಂತೇ [೧೦]ಬಲಿಭಿಃ ಪರೈಃ ।**
**[೧೧]ವಿಶಸ್ಯ ನಿಶಿತೈಃ ಶಸ್ತ್ರೈಃ ಪರಮಾಂಸಾಶಿನಃ ಪುರಾ ॥ ೪೫ ॥**

೧ ಸಂಬಂಧಂ. ೨ ವೀರ್ಯಾ. ೩ ಖಂಡಶಃ. ೪ ವೈರಾನುರೂಪಾನ್. ೫ ಕೃಷ್ಣಾಃ. ೬ ಸ್ಥೂಲಾಃ. ೭ ಧ್ವನಂತಃ. ೮ ನಿಷ್ಠುರಾರವಂ. ೯ ಅಥ ಮೃದ್ಭಾಂಡಮುಷ್ಟಿಕಾ. ೧೦ ನಾರಕೈಃ. ೧೧ ಛಿತ್ವಾ.

ಬಲಿಷ್ಠರಾದ ಹಳೆನಾರಕಿಗಳು ಪೂರ್ವದಲ್ಲಿ ತೀಕ್ಷ್ಣವಾದ ಶಸ್ತ್ರಗಳಿಂದ ಕತ್ತರಿಸಿ ಬೇರೆ ಜೀವಗಳ ಮಾಂಸವನ್ನು ಭಕ್ಷಿಸಿದ್ದ ಕೆಲವು ನಾರಕಿಗಳಿಗೆ ಅವರ ಮಾಂಸವನ್ನೇ ಕತ್ತರಿಸಿ ತಿನ್ನಿಸುತ್ತಾರೆ.

**[೧]ಸಂದಂಶಕೈರ್ವಿದಾರ್ಯಾಸ್ಯಂ ಗಲೇ ಪಾಟಿಕಯಾ ಬಲಾತ್ ।**
**ಗ್ರಾಸ್ಯಂತೇ ತಾಪಿತಾನ್ಲೋಹಪಿಂಡಾನ್ಮಾಂಸಪ್ರಿಯಾಃ ಪುರಾ ॥ ೪೬ ॥**

ಪೂರ್ವದಲ್ಲಿ ಮಾಂಸಪ್ರಿಯರಾಗಿದ್ದ ನಾರಕಿಜೀವಗಳಿಗೆ ಇಕ್ಕಳಗಳಿಂದ ಅವರ ಬಾಯಿಯನ್ನು ಬಿಡಿಸಿ ಕಂಠದಲ್ಲಿ ಕತ್ತರಿಯನ್ನು ಹಾಕಿ ಬಲಾತ್ಕಾರದಿಂದ ಕಾಯಿಸಿದ ಲೋಹದ ಗುಂಡುಗಳನ್ನು ತಿನ್ನಿಸುತ್ತಾರೆ.

**ಸೈಷಾ ತವ ಪ್ರಿಯೇತ್ಯುಚ್ಚೈಸ್ತಪ್ತಾಯಃಪುತ್ರಿಕಾಂ ಪರೇ ।**
**ಆಲಿಂಗ್ಯಂತೇ ಬಲಾದನ್ಯೈರನಲಾರ್ಚಿಃಕಣಾಚಿತಾಮ್ ॥ ೪೭ ॥**

ಇನ್ನು ಕೆಲವರಿಗೆ ಬೇರೆ ನಾರಕಿಗಳು 'ಇವಳು ನಿನ್ನ ಆ ಪ್ರಾಣಕಾಂತೆಯು' ಎಂದು ಬೆಂಕಿಯ ಕಿಡಿಗಳಿಂದ ವ್ಯಾಪ್ತವಾಗಿರುವ ಕಾಯಿಸಿದ ಕಬ್ಬಿಣದ ಬೊಂಬೆಯನ್ನು ಬಲಾತ್ಕಾರದಿಂದ ತಬ್ಬಿಸುತ್ತಾರೆ.

**ಸಂಕೇತಕೇತಕೋದ್ಯಾನೇ ಕರ್ಕಶಕ್ರಕಚಚ್ಛದೇ ।**
**ತ್ವಾಮಿಹೋ[೨]ಪಹ್ವರೇ ಕಾಂತಾಹ್ವಯತ್ಯ[೩]ಭಿಶಿಶೀರ್ಷಯಾ ॥ ೪೮ ॥**

**ಪುರಾ ಪರಾಂಗನಾಸಂಗರತಿ[೪]ದುರ್ಲಲಿತಾನಿತಿ ।**
**ಸಂಯೋಜಯಂತಿ ತಪ್ತಾಯಃಪುತ್ರಿಕಾಭಿರ್ಬಲಾತ್ಪರೇ ॥ ೪೯ ॥**

ಮೊದಲು ಪರಸ್ತ್ರೀಸೇವನೆಯಿಂದ ಮತ್ತರಾಗಿದ್ದ ಕೆಲವರನ್ನು ತೀಕ್ಷ್ಣವಾದ ಗರಗಸದಂತೆ ಎಲೆಗಳುಳ್ಳುದೂ ಗೊತ್ತುಮಾಡಲ್ಪಟ್ಟುದೂ ಆದ ಕೇದಗಿಯ ಉದ್ಯಾನದಲ್ಲಿ 'ಇಲ್ಲಿ ಗುಪ್ತವಾಗಿ ನಿನ್ನನ್ನು ಹೊಂದಬೇಕೆಂಬ ಇಚ್ಛೆಯಿಂದ ನಿನ್ನ ಪ್ರಾಣಕಾಂತೆಯು ನಿನ್ನನ್ನು ಕರೆಯುತ್ತಾಳೆ' ಯೆಂದು ಹೇಳಿ ಬೇರೆ ನಾರಕಿಗಳು ಕಾಯಿಸಿದ ಕಬ್ಬಿಣದ ಬೊಂಬೆಗಳಿಗೆ ಬಲಾತ್ಕಾರದಿಂದ ತಬ್ಬಿಸುತ್ತಾರೆ.

**ತಾಂಸ್ತದಾಲಿಂಗನಾಸಂಗಾತ್ಕ್ಷಣಮೂರ್ಛಾಮುಪಾಗತಾನ್ ।**
**ತುದಂತ್ಯಯೋಮಯೈಸ್ತೋ[೫]ತ್ರೈರನ್ಯೇ ಮರ್ಮಸು ನಾರಕಾಃ ॥ ೫೦ ॥**

ಆ ಪ್ರತಿಮೆಯ ಆಲಿಂಗನದಿಂದ ಒಂದುಕ್ಷಣಕಾಲದ ವರೆಗೆ ಮೂರ್ಛಿತರಾದ ಆ ನಾರಕಿಗಳನ್ನು ಮರ್ಮಸ್ಥಾನಗಳಲ್ಲಿ ಬೇರೆ ನಾರಕಿಗಳು ಕಬ್ಬಿಣದ ತಿವಿಗೋಲುಗಳಿಂದ ತಿವಿಯುತ್ತಾರೆ.

**ತದಂಗಾಲಿಂಗನಾಸಂಗಕ್ಷಣಾಮೀಲಿತಲೋಚನಾಃ ।**
**ನಿಪತಂತಿ ಮಹೀರಂಗೇ ತೇಂಗಾರೀಕೃತವಿಗ್ರಹಾಃ ॥ ೫೧ ॥**

ಆ ಕಾಯಿಸಿದ ಪ್ರತಿಮೆಗಳ ಶರೀರವನ್ನು ಆಲಿಂಗನಮಾಡಿದ ಕ್ಷಣದಲ್ಲಿಯೇ ಕಣ್ಣುಗಳನ್ನು ಮುಚ್ಚಿ ಆ ನಾರಕಿಗಳು ಕೆಂಡವಾಗಿ ಮಾಡಲ್ಪಟ್ಟ (ಕೆಂಡದಂತೆ) ಶರೀರವುಳ್ಳವರಾಗಿ ಭೂಮಿಯ ಮೇಲೆ ಬೀಳುತ್ತಾರೆ.

**[೬]ಭಸ್ತ್ರಾಗ್ನಿದೀಪಿತಾನ್ಕೇಚಿದಾಯಸಾನ್ ಶಾಲ್ಮಲಿದ್ರುಮಾನ್ ।**
**ಆರೋಪ್ಯಂತೇ ಹಠಾತ್ಕೈಶ್ಚಿತ್ತೀಕ್ಷ್ಣೋರ್ಧ್ವಾಧೋಗ್ರಕಂಟಕಾನ್ ॥ ೫೨ ॥**

ಕೆಲವು ನಾರಕಿಗಳು ಕೆಳಗೂ ಮೇಲೂ ತೀಕ್ಷ್ಣವಾದ ಮುಳ್ಳುಗಳುಳ್ಳ ಮತ್ತು ಕಬ್ಬಿಣದಿಂದ ಮಾಡಿದ ಬೂರುಗದ ಮರಗಳನ್ನು ತಿದಿಯ ಬೆಂಕಿಯಿಂದ ಕಾಯಿಸಿ ಬಲಾತ್ಕಾರದಿಂದ ಬೇರೆ ನಾರಕಿಗಳನ್ನು ಹತ್ತಿಸುತ್ತಾರೆ.

**ತೇ ತದಾರೋಪಣೋರ್ಧ್ವಾಧಃಕರ್ಷಣೈರತಿಕರ್ಷಿತಾಃ ।**
**ಮುಚ್ಯಂತೇ ನಾರಕೈಃ ಕೃಚ್ಛ್ರಾತ್ ಕ್ಷರತ್ಕ್ಷತಜಮೂರ್ತಯಃ ॥ ೫೩ ॥**

ಆ ಮರಗಳ ಮೇಲೆ ಹತ್ತಿ ಇಳಿಯುವಾಗ ಆ ಮುಳ್ಳುಗಳಿಂದ ಪರಚಲ್ಪಟ್ಟು ಸರ್ವಾಂಗದಲ್ಲಿಯೂ ರಕ್ತವನ್ನು ಸುರಿಸುತ್ತಿರುವ ಆ ನಾರಕಿಗಳನ್ನು ಅವರು ಬಿಡುವುದು ಕಷ್ಟ.

**[೧]ಅರುಷ್ಕರದ್ರವಾಪೂರ್ಣನದೀರನ್ಯೇ ವಿಗಾಹಿತಾಃ ।**
**ಕ್ಷಣಾದ್ವಿಶೀರ್ಣಸರ್ವಾಂಗಾ [೨]ವಿಲುಪ್ಯಂತೇಂ[೩]ಬುಚಾರಿಭಿಃ ॥ ೫೪ ॥**

ಇನ್ನು ಕೆಲವರನ್ನು ಗೇರುಮರದ ರಸದಿಂದ ಪರಿಪೂರ್ಣವಾದ ನದಿಗಳನ್ನು ಪ್ರವೇಶಮಾಡಿಸುತ್ತಾರೆ. ಅಲ್ಲಿ ಜಲಚರಪ್ರಾಣಿಗಳು ಒಂದುಕ್ಷಣಕಾಲದಿಂದ ಸರ್ವಾಂಗವನ್ನು ಸೀಳಿ ಬಿಡುತ್ತವೆ.

**ವಿಸ್ಫುಲಿಂಗಮಯೀಂ ಶಯ್ಯಾಂ ಜ್ವಲಂತೀಮಧಿಶಾಯಿತಾಃ ।**
**ಶೇರತೇ [೪]ಪ್ಲುಷ್ಯಮಾಣಾಂಗಾ ದೀರ್ಘನಿದ್ರಾಸುಖೇಪ್ಸಯಾ ॥ ೫೫ ॥**

ಕೆಲವು ನಾರಕಿಗಳನ್ನು ಜ್ವಲಿಸುತ್ತಿರುವುದೂ ಅಗ್ನಿಕಿಡಿಗಳಿಂದ ವ್ಯಾಪ್ತವೂ ಆದ ಹಾಸಿಗೆಯಲ್ಲಿ ಮಲಗಿಸುತ್ತಾರೆ. ಅದರಲ್ಲಿ ದಹಿಸಲ್ಪಟ್ಟ ಶರೀರವುಳ್ಳವರಾಗಿ ಆ ನಾರಕಿಗಳು ದೀರ್ಘನಿದ್ರೆಯ(ಮರಣದ)ಸುಖವನ್ನು ಪಡೆಯಬೇಕೆಂಬ ಇಚ್ಛೆ ಯಿಂದ ಮಲಗುತ್ತಾರೆ.

**ಅಸಿಪತ್ರವನಾನ್ಯನ್ಯೇ ಶ್ರಯಂತ್ಯುಷ್ಣಾ[೫]ರ್ದಿತಾ ಯದಾ ।**
**ತದಾ ವಾತಿ ಮರುತ್ತೀವ್ರೋ ವಿಸ್ಫುಲಿಂಗಕಣಾನ್ಕಿರನ್ ॥ ೫೬ ॥**

**ತೇನ ಪತ್ರಾಣಿ ಪಾತ್ಯಂತೇ ಸರ್ವಾಯುಧಮಯಾನ್ಯರಮ್ ।**
**ತೈಶ್ಛಿನ್ನಭಿನ್ನಸರ್ವಾಂಗಾಃ ಪೂತ್ಕುರ್ವಂತಿ ವರಾಕಕಾಃ ॥ ೫೭ ॥**

ತಾಪದಿಂದ ಪೀಡಿತರಾದ ಆ ನಾರಕಿಗಳು ಖಡ್ಗದಂತೆ ಯಲೆಗಳುಳ್ಳ ವನಗಳನ್ನು ಆಶ್ರಯಿಸುತ್ತಾರೆ. ಆಗ ಬೆಂಕಿಯ ಕಿಡಿಗಳನ್ನು ಎರಚುತ್ತಿರುವುದೂ ವೇಗವೂ ಆದ ಗಾಳಿಯು ಬೀಸುತ್ತದೆ. ಆ ಗಾಳಿಯಿಂದ ಸಮಸ್ತ ಆಯುಧಮಯವಾದ ಆ ಎಲೆಗಳು ಶೀಘ್ರವಾಗಿ ಕೆಳಕ್ಕೆ ಬೀಳುತ್ತವೆ. ಅದರಿಂದ ಛಿನ್ನಭಿನ್ನವಾದ ಸರ್ವಾಂಗವುಳ್ಳವರಾಗಿ ಆ ನಾರಕಿಗಳು ಅಳುತ್ತಾರೆ, ಅರಚಿಕೊಳ್ಳುತ್ತಾರೆ.

**[೬]ವಲ್ಲೂರೀಕೃತ್ಯ ಶೋಷ್ಯಂತೇ [೭]ಶೂಲ್ಯಮಾಂಸೀಕೃತಾಃ ಪರೇ ।**
**ಪಾತ್ಯಂತೇ ಚ ಗಿರೇರಗ್ರಾದಧಃಕೃತಮುಖಾಃ ಪರೇ ॥ ೫೮ ॥**

ಕೆಲವು ನಾರಕಿಗಳ ಮಾಂಸವನ್ನು ಶೂಲದಲ್ಲಿ ಸುಟ್ಟು ಅದನ್ನು ಒಣಗಿಸಿ ಆ ನಾರಕಿಗಳನ್ನು ಬತ್ತಿಸು(ಒಣಗಿಸು)ತ್ತಾರೆ. ಇನ್ನು ಕೆಲವು ನಾರಕಿಗಳನ್ನು ಪರ್ವತದ ತುದಿಯಿಂದ ಕೆಳಮುಖವಾಗಿ ತಳ್ಳುತ್ತಾರೆ.

**[೮]ದಾರ್ಯಂತೇ ಕ್ರಕಚೈಸ್ತೀಕ್ಷ್ಣೈಃ ಕೇಚಿನ್ಮರ್ಮಾಸ್ಥಿಸಂಧಿಷು ।**
**ತಪ್ತಾಯಃಸೂಚಿಭಿರ್ಭಿನ್ನನಖಾಗ್ರೋ[೯]ಲ್ಬಣವೇದನಾಃ ॥ ೫೯ ॥**

ಕೆಲವು ನಾರಕಿಗಳ ಮರ್ಮಸ್ಥಾನಗಳನ್ನು ತೀಕ್ಷ್ಣವಾದ ಗರಗಸಗಳಿಂದ ಸೀಳುತ್ತಾರೆ. ಕಾಯಿಸಿದ ಕಬ್ಬಿಣದ ಸೂಜಿಗಳಿಂದ ಉಗುರುಗಳ ತುದಿಗಳನ್ನು ಚುಚ್ಚಿ ವೇದನೆಯನ್ನುಂಟುಮಾಡುತ್ತಾರೆ.

**ಕಾಂಶ್ಚಿ[೧೦]ನ್ನಿಶಾತ[೧೧]ಶೂಲಾಗ್ರಪ್ರೋತಾನ್ಲಂಬಾಂತ್ರಸಂತತೀನ್ ।**
**ಭ್ರಮಯಂತ್ಯುಚ್ಚಲಚ್ಛೋಣಶೋಣಿತಾರುಣವಿಗ್ರಹಾನ್ ॥ ೬೦ ॥**

ಕರುಳುಗಳು ಜೋಲುತ್ತಿರುವ ಮತ್ತು ಮೇಲಕ್ಕೆ ಹಾರುತ್ತಿರುವ ರಕ್ತದಿಂದ ಕೆಂಪಾದ ಶರೀರವುಳ್ಳ ಕೆಲವು ನಾರಕಿಗಳನ್ನು ತೀಕ್ಷ್ಣವಾದ ಶೂಲದ ತುದಿಯಲ್ಲಿರಿಸಿ ತಿರುಗಿಸುತ್ತಾರೆ.

---

೧ ಕಂಕಮುಖೈಃ. ೨ ರಹಸಿ. ೩ ಅಭಿಸರ್ತುಮಿಚ್ಛಯಾ. ೪ ದೃಪ್ತಾನ್. ೫ ತೋದನ್ಯೈಃ, ಪ್ರಾದನಂ ತೋದನಂ ತೋತ್ರಮಿತ್ಯಮರಃ. ೬ ಚರ್ಮಪ್ರಸೇವಿಕಾಗ್ನಿಃ.

೧ ಭಲ್ಲಾತಕೀತೈಲಂ. ೨ ಛಿದ್ಯಂತೇ. ೩ ಜಲಚರೈಃ. ೪ ದಹ್ಯಮಾನಾಂಗಾಃ. ೫ ಪೀಡಿತಾಃ. ೬ ಶುಷ್ಕಮಾಂಸೀಕೃತ್ಯ. ೭ ಶೂಲೇ ದಗ್ಧಂ ಶೂಲ್ಯಂ. ೮ ವಿದಾರ್ಯಂತೇ. ೯ ಉತ್ಕಟಾ. ೧೦ ತೀಕ್ಷ್ಣೀಕೃತಃ. ೧೧ ಶೂಲಾಗ್ರೇ ನಿಕ್ಷಿಪ್ತಾನ್.

ಆ ಮರುದೇವಿಯ ವಿವಾಹದಲ್ಲಿ ದೇವೇಂದ್ರನಿಂದ ಪ್ರೇರಿತರಾದ ದೇವತೆಗಳು ಮಹಾವೈಭವದಿಂದ ವಿವಾಹೋತ್ಸಾಹವನ್ನು ಮಾಡಿದರು.

**ಪುಣ್ಯಸಂಪತ್ತಿರೇವಾಸ್ಯಾ ಜನನೀತ್ವಮುಪಾಗತಾ ।**
**[೧]ಸಖೀಭೂಯಂ ಗತಾ ಲಜ್ಜಾ ಗುಣಾಃ ಪರಿಜನಾಯಿತಾಃ ॥ ೬೦ ॥**

ಪುಣ್ಯಸಂಪತ್ತಿಯೇ ಈ ಮರುದೇವಿಗೆ ಉತ್ಪತ್ತಿಸ್ಥಾನವಾಗಿದ್ದಿತು. ಲಜ್ಜೆಯು ಸಖಿಯಾಗಿದ್ದಿತು. ಗುಣಗಳು ಪರಿವಾರಜನಗಳಾಗಿದ್ದುವು.

**ರೂಪಪ್ರಭಾವವಿಜ್ಞಾನೈರಿತಿ ರೂಢಿಂ ಪರಾಂ ಗತಾ ।**
**ಭರ್ತುರ್ಮನೋಗಜಾ [೨]ಲಾನೇ ಭೇಜೇ ಸಾಲಾನಯಷ್ಟಿತಾಮ್॥ ೬೧ ॥**

ರೂಪ ಪ್ರಭಾವ ವಿಜ್ಞಾನ ಇವುಗಳಿಂದ ರೂಢಿಯನ್ನು ಹೊಂದಿದ (ಯುಕ್ತಳಾದ) ಮರುದೇವಿಯು ಪತಿಯ ಮನಸ್ಸೆಂಬ ಆನೆಯನ್ನು ಕಟ್ಟುವುದಕ್ಕೆ ಕಂಭವಾಗಿದ್ದಳು. ಪತಿಯ ಮನಸ್ಸನ್ನು ಸಂತೋಷಪಡಿಸುತ್ತಿದ್ದಳೆಂದು ಭಾವವು.

**ತದ್ವಕ್ತ್ರೇಂದೋಃ ಸ್ಮಿತಜ್ಯೋತ್ಸ್ನಾ ತನ್ವತೀ ನಯನೋತ್ಸವಮ್ ।**
**ಭರ್ತುಶ್ಚೇತೋಂಬುಧೇಃ ಕ್ಷೋಭಮನುವೇಲಂ ಸಮಾತನೋತ್ ॥**

ನೇತ್ರಗಳಿಗೆ ಆನಂದವನ್ನುಂಟುಮಾಡುವ ಆ ಮರುದೇವಿಯ ಮುಖವೆಂಬ ಚಂದ್ರನ ಮುಗುಳುನಗೆಯೆಂಬ ಬೆಳದಿಂಗಳು ಪತಿಯ ಮನಸ್ಸೆಂಬ ಸಮುದ್ರಕ್ಕೆ ಅಧಿಕವಾದ ಕ್ಷೋಭೆಯನ್ನುಂಟುಮಾಡಿತು. ಮುಗುಳುನಗೆಯೊಡಗೂಡಿದ ಮರುದೇವಿಯ ಮುಖವನ್ನು ನೋಡಿ ಪತಿಗೆ ಅಪಾರವಾದ ಆನಂದವಾಗುತ್ತಿದ್ದಿತೆಂದು ಭಾವವು.

**ರೂಪಲಾವಣ್ಯಸಂಪತ್ತ್ಯಾ [೩]ಪತ್ಯುಃ ಶ್ರೀರಿವ ಸಾ ಮತಾ ।**
**[೪]ಮತಾವಿವ ಮುನಿಸ್ತಸ್ಯಾಮತಾನೀತ್ಸಪರಾಂ [೫]ಧೃತಿಮ್ ॥ ೬೩ ॥**

ರೂಪಸೌಂದರ್ಯಸಂಪತ್ತಿನಿಂದ ಆ ಮರುದೇವಿಯು ಪತಿಗೆ ಲಕ್ಷ್ಮಿಯಂತಿದ್ದಳು. ಮುನಿಯು ಬುದ್ಧಿಯಲ್ಲಿ ಸಂತುಷ್ಟನಾಗಿರುವಂತೆ ಆ ನಾಭಿರಾಜಮನುವು ಮರುದೇವಿಯಲ್ಲಿ ಬಹಳ ಸಂತೋಷವುಳ್ಳವನಾಗಿದ್ದನು.

**ಪರಿಹಾಸೇಷ್ವಮರ್ಮಸ್ಪೃಕ್ಸಂಭೋಗೇಷ್ವನುವರ್ತಿನೀ।**
**[೬]ಸಾಚಿವ್ಯಮಕರೋತ್ತಸ್ಯ [೭]ನರ್ಮಣಃ ಪ್ರಣಯಸ್ಯ ಚ ॥ ೬೪ ॥**

ಪರಿಹಾಸವಚನಗಳಲ್ಲಿ ಮರ್ಮಭೇದಿಯಾದ ಮಾತನ್ನಾಡದಿರುವವಳೂ ಸಂಭೋಗಕ್ರಿಯೆಗಳಲ್ಲಿ ಪತಿಗೆ ಅನುಕೂಲಳೂ ಆದ ಮರುದೇವಿಯು ಆ ನಾಭಿರಾಜನಿಗೆ ಕ್ರೀಡೆಯಲ್ಲಿಯೂ ಪ್ರೀತಿಯಲ್ಲಿಯೂ ಸಹಾಯಕಳಾಗಿದ್ದಳು.

**ಸಾಭವತ್ಪ್ರೇಯಸೀ ತಸ್ಯ ಪ್ರಾಣೇಭ್ಯೋಽಪಿ ಗರೀಯಸೀ ।**
**ಶಚೀವ ದೇವರಾಜಸ್ಯ ಪರಾ [೮]ಪ್ರಣಯಭೂಮಿಕಾ ॥ ೬೫ ॥**

ಆ ನಾಭಿರಾಜನಿಗೆ ಪ್ರಾಣಕ್ಕಿಂತಲೂ ಹೆಚ್ಚುಪ್ರಿಯಳಾದ ಮರುದೇವಿಯು ದೇವೇಂದ್ರನಿಗೆ ಶಚೀದೇವಿಯಂತೆ, ಬಹಳ ಪ್ರೀತಿಪಾತ್ರಳಾಗಿದ್ದಳು.

**ಸ ತಯಾ ಕಲ್ಪವಲ್ಲ್ಯೇವ ಲಸದಂಶುಕಭೂಷಯಾ ।**
**ಸಮಾಶ್ಲಿಷ್ಟತನುಃ ಶ್ರೀಮಾನ್ಕಲ್ಪದ್ರುಮ ಇವಾದ್ಯುತತ್ ॥ ೬೬ ॥**

ಭಾಗ್ಯವಂತನಾದ ಆ ನಾಭಿರಾಜನು ಪ್ರಕಾಶಮಾನವಾದ ವಸ್ತ್ರದಿಂದಲೂ ಆಭರಣಗಳಿಂದಲೂ ಅಲಂಕೃತಳಾದ ಮರುದೇವಿಯಿಂದ ಆಲಿಂಗಿಸಲ್ಪಟ್ಟ ಶರೀರವುಳ್ಳವನಾಗಿ ಕಲ್ಪಲತೆಯು ಹಬ್ಬಿಕೊಂಡಿರುವ ಕಲ್ಪವೃಕ್ಷದಂತೆ, ಶೋಭಿಸಿದನು.

೧ ಸಖೀತ್ವಂ. ೨ ಬಂಧನೇ, ಲಾ ಆಧಾನೇ ಇತಿ ಧಾತುಃ. ೩ ಭರ್ತ್ರುಃ. ೪ ಬುದ್ಧಾವಿವ. ೫ ಸಂತೋಷಂ. ೬ ಸಹಾಯತ್ವಂ. ೭ ಕ್ರೀಡಾಯಾಃ. ೮ ಸ್ನೇಹಸ್ಥಾನಂ.

**ಸ ಏವ ಪುಣ್ಯವಾನ್ಲೋಕೇ ಸೈವ ಪುಣ್ಯವತೀ ಸತೀ ।**
**ಯಯೋ[೧]ರಯೋನಿಜನ್ಮಾಸೌ ವೃಷಭೋ [೨]ಭವಿತಾತ್ಮಜಃ ॥ ೬೭ ॥**

ಲೋಕದಲ್ಲಿ ಆ ನಾಭಿರಾಜನೇ ಪುಣ್ಯವಂತನು. ಪತಿವ್ರತೆಯಾದ ಆ ಮರುದೇವಿಯೇ ಸ್ತ್ರೀಯರಲ್ಲೆಲ್ಲ ಪುಣ್ಯವಂತಳು. ಏತಕ್ಕೆಂದರೆ-ಆ ದಂಪತಿಗಳಿಗೆ ಸ್ವಯಂಭುವಾದ ಈ ವೃಷಭತೀರ್ಥಂಕರರು ಪುತ್ರರಾಗಿ ಹುಟ್ಟುವರು.

**ತೌ ದಂಪತೀ [೩]ತದಾ [೪]ತತ್ರ [೫]ಭೋಗೈಕರಸತಾಂ ಗತೌ ।**
**ಭೋಗಭೂಮಿಶ್ರಿಯಂ ಸಾಕ್ಷಾಚ್ಚಕ್ರತು[೬]ರ್ವಿಯುತಾಮಪಿ ॥ ೬೮ ॥**

ಆ ಸಂಧಿಕಾಲದಲ್ಲಿ ಆರ್ಯಖಂಡದಲ್ಲಿ ಅತ್ಯಂತ ಭೋಗಾಸಕ್ತರಾದ ಆ ದಂಪತಿಗಳು ಭೋಗಭೂಮಿಯ ಚದರಿರುವ ಸಂಪತ್ತನ್ನು ಸಾಕ್ಷಾತ್ಕರಿಸಿದರು. ಅನುಭವಿಸಿದರೆಂದು ಭಾವವು.

**ತಾಭ್ಯಾಮಲಂಕೃತೇ ಪುಣ್ಯೇ ದೇಶೇ ಕಲ್ಪಾಂಘ್ರಿಪಾತ್ಯಯೇ ।**
**ತತ್ಪುಣ್ಯೈರ್ಮುಹುರಾಹೂತಃ ಪುರುಹೂತಃ ಪುರೀಂ ವ್ಯಧಾತ್ ॥ ೬೯ ॥**

ಆ ದಂಪತಿಗಳ ಪುಣ್ಯಗಳಿಂದ ಬಾರಿಬಾರಿಗೂ ಕರೆಯಲ್ಪಟ್ಟ ದೇವೇಂದ್ರನು, ಕಲ್ಪವೃಕ್ಷಗಳು ನಷ್ಟವಾಗಿದ್ದರೂ ಆ ನಾಭಿರಾಜಮರುದೇವಿಯರಿಂದ ಅಲಂಕೃತವಾದ ಪುಣ್ಯಪ್ರದೇಶದಲ್ಲಿ ಒಂದು ಪಟ್ಟಣವನ್ನು ರಚಿಸಿದನು.

**ಸುರಾಃ ಸಸಂಭ್ರಮಾಃ ಸದ್ಯಃ ಪಾಕಶಾಸನಶಾಸನಾತ್ ।**
**ತಾಂ ಪುರೀಂ ಪರಮಾನಂದಾದ್ವ್ಯಧುಃ ಸುರಪುರೀನಿಭಾಮ್ ॥ ೭೦ ॥**

ದೇವೇಂದ್ರನ ಆಜ್ಞೆಯಿಂದ ಉತ್ಸಾಹಯುಕ್ತರಾದ ದೇವತೆಗಳು ತತ್ಕ್ಷಣದಲ್ಲಿಯೇ ದೇವತೆಗಳ ನಗರಕ್ಕೆ ಸಮಾನವಾದ ಆ ಪಟ್ಟಣವನ್ನು ಆನಂದದಿಂದ ರಚಿಸಿದರು.

**ಸ್ವರ್ಗಸ್ಯೇವ [೭]ಪ್ರತಿಚ್ಛಂದಂ ಭೂಲೋಕೇಽಸ್ಮಿನ್ವಿಧಿತ್ಸುಭಿಃ ।**
**ವಿಶೇಷರಮಣೀಯೈವ [೮]ನಿರ್ಮಮೇ ಸಾಮರೈಃ ಪುರೀ ॥ ೭೧ ॥**

ಸ್ವರ್ಗದ ಪ್ರತಿಕೃತಿಯನ್ನು ಈ ಭೂಲೋಕದಲ್ಲಿ ಮಾಡಲಿಚ್ಛೆಯುಳ್ಳವರಂತೆ ದೇವತೆಗಳು ಆ ನಗರವನ್ನು ಅತ್ಯಂತ ರಮಣೀಯವಾಗಿ ನಿರ್ಮಿಸಿದರು.

**[೯]ಸ್ವಸ್ವರ್ಗ[೧೦]ಸ್ತ್ರಿದಶಾವಾಸಃ ಸ್ವಲ್ಪ ಇತ್ಯ[೧೧]ವಮತ್ಯ ತಮ್ ।**
**[೧೨]ಪರಃಶತಜನಾವಾಸಭೂಮಿಕಾಂ ತಾಂ [೧೩]ನು ತೇ ವ್ಯಧುಃ ॥ ೭೨ ॥**

ದೇವತೆಗಳ ವಾಸಸ್ಥಾನವಾದ, ಮೂವತ್ತಮೂರುಜನರಿಗೆ ವಾಸಸ್ಥಾನವಾದ ತಮ್ಮ ಸ್ವರ್ಗವು ಚಿಕ್ಕದಾಗಿದೆಯೆಂದು ತಿಳಿದು ಆ ಸ್ವರ್ಗವನ್ನು ತಿರಸ್ಕರಿಸಿ ಅನೇಕಜನರ ವಾಸಸ್ಥಾನವಾದ ಆ ಪಟ್ಟಣವನ್ನು ರಚಿಸಿದರೋ ಎಂಬಂತೆ ದೇವತೆಗಳು ಆ ಪಟ್ಟಣವನ್ನು ರಚಿಸಿದರು.

**ಇತಸ್ತತಶ್ಚ [೧೪]ವಿಕ್ಷಿಪ್ತಾನಾನೀಯಾನೀಯ ಮಾನವಾನ್ ।**
**ಪುರೀಂ ನಿವೇಶಯಾಮಾಸುರ್ವಿನ್ಯಾಸೈರ್ವಿವಿಧೈಃ ಸುರಾಃ ॥ ೭೩ ॥**

ದೇವತೆಗಳು ಇತ್ತತ್ತ ಚದರಿದ್ದ ಜನರನ್ನು ತಂದು ತಂದು ನಾನಾವಿಧವಾದ ರಚನೆಗಳಿಂದ ನಗರವನ್ನು ನಿರ್ಮಿಸಿದರು.

**ನರೇಂದ್ರಭವನಂ ಚಾಸ್ಯಾಃ ಸುರೈರ್ಮಧ್ಯೇ ನಿವೇಶಿತಮ್ ।**
**ಸುರೇಂದ್ರಭವನಸ್ಪರ್ಧಿ ಪರಾರ್ಧ್ಯವಿಭವಾನ್ವಿತಮ್ ॥ ೭೪ ॥**

ದೇವತೆಗಳು ಈ ನಗರದ ಮಧ್ಯದಲ್ಲಿ ಇಂದ್ರಭವನಕ್ಕೆ ಸಮಾನವೂ ಶ್ರೇಷ್ಠವಾದ ಸಂಪತ್ತಿನೊಡಗೂಡಿದುದೂ ಆದ ರಾಜಭವನವನ್ನು ರಚಿಸಿದರು.

೧ ಸ್ವಯಂಭೂಃ. ೨ ಭವಿಷ್ಯತಿ. ೩ ತಸ್ಮಿನ್ಕಾಲಸಂಧೌ. ೪ ಆರ್ಯಖಂಡೇ. ೫ ಭೋಗ ಮುಖ್ಯಾನುರಾಗತಾಂ. ೬ ವಿಯುಕ್ತಾಂ. ೭ ಪ್ರತಿನಿಧಿಂ. ೮ ನಿರ್ಮಿತಾ. ೯ ಸ್ವಕೀಯಸ್ವರ್ಗಃ. ೧೦ ತ್ರಿಂಶಜ್ಜನಾವಾಸ ಇತಿ ಧ್ವನಿಃ. ೧೧ ಅವಜ್ಞಾಂ ಕೃತ್ವಾ. ೧೨ ಬಹುಜನಾನಾಂ. ೧೩ ಇವ. ೧೪ ವಿಕೀರ್ಣಾನ್.

**ಸುತ್ರಾಮಾ [೧]ಸೂತ್ರಧಾರೋಸ್ಯಾಃ ಶಿಲ್ಪಿನಃ ಕಲ್ಪಜಾಃ ಸುರಾಃ ।**
**[೨]ವಾಸ್ತುಜಾತಂ ಮಹೀ ಕೃತ್ಸ್ನಾ ಸೋ[೩]ದ್ಧಾ ನಾಸ್ತು ಕಥಂ ಪುರೀ॥ ೭೫ ॥**

ದೇವೇಂದ್ರನು ಈ ನಗರಿಗೆ ಸೂತ್ರಧಾರ(ಶಿಲ್ಪಕಾಚಾರ್ಯ)ನಾಗಿದ್ದನು. ಕಲ್ಪವಾಸಿಗಳಾದ ದೇವತೆಗಳು ಶಿಲ್ಪಿಗಳಾಗಿದ್ದರು. ಆ ಪಟ್ಟಣದ ಭೂಮಿಯಲ್ಲೆಲ್ಲ ಮನೆಗಳ ಗುಂಪುಗಳಿದ್ದುವು. ಹೀಗಿರುವಾಗ ಆ ಪಟ್ಟಣವು ಪ್ರಶಸ್ತ(ಶ್ರೇಷ್ಠ) ವಾಗಿರಲಾರದೇಕೆ ?

**[೪]ಸಂಚಸ್ಕರುಶ್ಚ ತಾಂ ವಪ್ರಪ್ರಾಕಾರಪರಿಖಾದಿಭಿಃ ।**
**[೫]ಅಯೋಧ್ಯಾಂ ನ ಹರಂ ನಾಮ್ನಾ ಗುಣೇನಾಪ್ಯರಿಭಿಃ ಸುರಾಃ ॥ ೭೬ ॥**

ದೇವತೆಗಳು ಆ ನಗರವನ್ನು ಕಂದಕಕೋಟೆಮೊದಲಾದುವುಗಳಿಂದ ಅಲಂಕರಿಸಿದರು. ಆ ಪಟ್ಟಣವು ಹೆಸರಿನಿಂದ ಮಾತ್ರ ಅಯೋಧ್ಯೆಯಾಗಿರಲಿಲ್ಲ. ಗುಣದಿಂದಲೂ ಶತ್ರುಗಳಿಂದ ಅಯೋಧ್ಯೆ(ಯುದ್ಧಮಾಡಲಶಕ್ಯ)ಯೇ ಆಗಿದ್ದಿತು.

**[೬]ಸಾಕೇತರೂಢಿರಪ್ಯಸ್ಯಾಃ ಶ್ಲಾಘ್ಯೈವ ಸ್ವೈರ್ನಿಕೇತನೈಃ ।**
**ಸ್ವರ್ನಿಕೇತಮಿವಾ[೭]ಹ್ವಾತುಂ [೮]ಸಾಕೂತೈಃ ಕೇತುಬಾಹುಭಿಃ ॥ ೭೭ ॥**

ಸ್ವರ್ಗದಲ್ಲಿರುವ ಗೃಹಗಳೊಡನೆ ಹೋರಾಡುವುದಕ್ಕೋಸ್ಕರ ಅಭಿಪ್ರಾಯಗರ್ಭಿತವಾದ ಧ್ವಜಗಳೆಂಬ ಕೈಗಳಿಂದ ಕರೆಯುತ್ತಿವೆಯೋ ಎಂಬಂತಿರುವ ಮನೆಗಳಿಂದ ಈ ನಗರಕ್ಕೆ ಸಾಕೇತ (ಮನೆಗಳೊಡನೆ ಕೂಡಿರುವುದು)ವೆಂಬ ರೂಢಿಯೂ ಶ್ಲಾಘ್ಯವಾಗಿಯೇ ಇದೆ.

**ಸುಕೋಸಲೇತಿ ಚ ಖ್ಯಾತಿಂ ಸಾ ದೇಶಾ[೯]ಭಿಖ್ಯಯಾ ಗತಾ ।**
**ವಿನೀತಜನತಾಕೀರ್ಣಾ ವಿನೀತೇತಿ ಚ ಸಾ ಮತಾ ॥ ೭೮ ॥**

ಆ ನಗರವು ತನ್ನ ದೇಶದ ಶೋಭೆಯಿಂದ ''ಸುಕೋಸಲ'' ವೆಂಬ ಪ್ರಖ್ಯಾತಿಯನ್ನೂ ಹೊಂದಿತು. ವಿನಯವುಳ್ಳ ಜನರಿಂದ ವ್ಯಾಪ್ತವಾದ ಆ ಪಟ್ಟಣಕ್ಕೆ ''ವಿನೀತಾ'' ಎಂದೂ ಹೆಸರು.

**ಬಭೌ ಸುಕೋಸಲಾ [೧೦]ಭಾವಿವಿಷಯಸ್ಯಾ[೧೧]ಲಘೀಯಸಃ ।**
**ನಾಭಿಲಕ್ಷ್ಮೀಂ ದಧಾನಾಸೌ ರಾಜಧಾನೀ ಸುವಿಶ್ರುತಾ ॥ ೭೯ ॥**

ಮುಂದೆ ಉಂಟಾಗುವ ಅತ್ಯಧಿಕವಾದ ವಿಷಯ(ತೀರ್ಥಂಕರ)ಕ್ಕೆ ಉತ್ಪತ್ತಿಸ್ಥಾನವಾದ ಸುಕೋಸಲವೆಂಬೀ ರಾಜಧಾನಿಯು ಪ್ರಸಿದ್ಧಿಯನ್ನು ಹೊಂದಿ ಶೋಭಿಸುತ್ತಿದ್ದಿತು.

**ಸನೃಪಾಲಯಮುದ್ವಪ್ರಂ ದೀಪ್ರಶಾಲಂ ಸಖಾತಿಕಮ್ ।**
**ತದ್ವರ್ತ್ಸ್ಯನ್ನಗರಾರಂಭೇ[೧೨]ಪ್ರತಿಚ್ಛಂದಾಯಿತಂ ಪುರಮ್ ॥ ೮೦ ॥**

ರಾಜಭವನದೊಡಗೂಡಿದುದೂ ಉನ್ನತವಾದ ಪ್ರಾಕಾರವುಳ್ಳುದೂ ಪ್ರಕಾಶಮಾನವಾದ ಶಾಲೆಗಳುಳ್ಳುದೂ ಕಂದಕಗಳುಳ್ಳುದೂ ಆದ ಆ ನಗರವು ಮುಂದೆ ರಚಿಸುವ ಬೇರೆ ನಗರಗಳ ಪ್ರತಿಕೃತಿಯಂತೆ ಇದ್ದಿತು.

**ಪುಣ್ಯೇಹನಿ ಮುಹೂರ್ತೇ ಚ ಶುಭಯೋಗೇ [೧೩]ಶುಭೋದಯೇ ।**
**ಪುಣ್ಯಾಹಘೋಷಣಾಂ ತತ್ರ ಸುರಾಶ್ಚಕ್ರುಃ ಪ್ರಮೋದಿನಃ ॥ ೮೧ ॥**

ಪುಣ್ಯದಿವಸದಲ್ಲಿ ಪುಣ್ಯಮುಹೂರ್ತ ಮತ್ತು ಶುಭಯೋಗದೊಡಗೂಡಿದ ಶುಭಲಗ್ನದಲ್ಲಿ ದೇವತೆಗಳು ಸಂತುಷ್ಟರಾಗಿ ಆ ನಗರದಲ್ಲಿ ಪುಣ್ಯಾಹವಾಚನೆ(ಇಂದಿನ ದಿನವು ಪುಣ್ಯಕರವಾಗಲೆಂಬ ಶಬ್ದೋಚ್ಚಾರ)ಯನ್ನು ಮಾಡಿದರು.

೧ ಶಿಲ್ಪಾಚಾರ್ಯಃ. ೨ ಗೃಹಸಮೂಹಃ. ೩ ಪ್ರಶಸ್ತಾ. ೪ ಅಲಂಚಕ್ರುಃ. ೫ ಯೋದ್ಧುಮಶಕ್ಯಾಂ. ೬ ಆಕೇತೈರ್ಗೃಹೈಃ ಸಹ ವರ್ತತ ಇತಿ ಸಾಕೇತಂ. ೭ ಸ್ಪರ್ಧಾಂ ಕರ್ತುಂ. ೮ ಸಾಭಿಪ್ರಾಯೈಃ. ೯ ಅಭಿಖ್ಯಾ ನಾಮಶೋಭಯೋಃ. ೧೦ ಭವಿಷ್ಯತ್ತೀರ್ಥಂಕರಸ್ಯ. ೧೧ ಭೂಯಸಃ. ೧೨ ಪ್ರತಿನಿಧಿರಿವಾಚರಿತಂ. ೧೩ ಶುಭಲಗ್ನೇ.

**ಅಧ್ಯವಾಸ್ತಾಂ ತದಾನೀಂ ತೌ ತಾಮಯೋಧ್ಯಾಂ ಮಹರ್ದ್ಧಿಕಾಮ್ ।**
**ದಂಪತೀ [೧]ಪರಮಾನಂದಾವಾಪ್ತಸಂಪತ್ಪರಂಪರೌ ॥ ೮೨ ॥**

ಆಗ ಸಕಲಸಂಪತ್ತನ್ನು ಹೊಂದಿ ಆನಂದಪಡುತ್ತಿರುವ ಆ ದಂಪತಿಗಳು ಸಮೃದ್ಧವಾದ ಆ ಅಯೋಧ್ಯೆಯಲ್ಲಿ ವಾಸಮಾಡಿದರು.

**[೨]ವಿಶ್ವದೃಶ್ವೈತಯೋಃ ಪುತ್ರೋ ಜನಿತೇತಿ ಶತಕ್ರತುಃ ।**
**ತಯೋಃ ಪೂಜಾಂ ವ್ಯಧತ್ತೋಚ್ಚೈರಭಿಷೇಕ[೩]ಪುರಃಸರಾಮ್ ॥ ೮೩ ॥**

ಸರ್ವಜ್ಞನು ಈ ದಂಪತಿಗಳಿಗೆ ಪುತ್ರನಾಗಿ ಹುಟ್ಟುವನೆಂದು ತಿಳಿದು ದೇವೇಂದ್ರನು ಆ ದಂಪತಿಗಳಿಗೆ ಅಭಿಷೇಕವನ್ನು ಮಾಡಿ ಬಹಳವಾಗಿ ಪೂಜಿಸಿದನು.

**ಷಡ್ಭಿರ್ಮಾಸೈರಥೈತಸ್ಮಿನ್ಸ್ವರ್ಗಾ[೪]ದವತರಿಷ್ಯತಿ ।**
**ರತ್ನವೃಷ್ಟಿಂ ದಿವೋ ದೇವಾಃ ಪಾತಯಾಮಾಸುರಾದರಾತ್ ॥ ೮೪ ॥**

ತರುವಾಯ ಈ ಸರ್ವಜ್ಞನು ಸ್ವರ್ಗದಿಂದ ಅವತರಿಸುವ ಆರುತಿಂಗಳ ಮೊದಲು ದೇವತೆಗಳು ಆನಂದದಿಂದ ರತ್ನಗಳ ಮಳೆಯನ್ನು ಸುರಿದರು.

**ಸಂಕ್ರಂದನನಿಯುಕ್ತೇನ ಧನದೇನ ನಿಪಾತಿತಾ ।**
**ಸಾಭಾ[೫]ತ್ಸ್ವಸಂಪದೌತ್ಸುಕ್ಯಾತ್ಪ್ರಸ್ಥಿತೇವಾಗ್ರತೋ[೬]ವಿಭೋಃ ॥ ೮೫ ॥**

ದೇವೇಂದ್ರನ ಅಪ್ಪಣೆಯಿಂದ ಕುಬೇರನು ಸುರಿದ ಆ ರತ್ನವೃಷ್ಟಿಯು ಅಹಮಿಂದ್ರನ ಸಂಪತ್ತು, ಕುತೂಹಲದಿಂದ ಅಹಮಿಂದ್ರನ ಮುಂದೆ ಹೊರಟಿತೋ ಎಂಬಂತೆ, ಶೋಭಿಸಿತು.

**[೭]ಹರಿನ್ಮಣಿಮಹಾನೀಲಪದ್ಮರಾಗಾಂಶು[೮]ಕೇಸರೈಃ ।**
**[೯]ಸಾದ್ಯುತತ್ಸುರಚಾಪಶ್ರೀಃ[೧೦]ಪ್ರಗುಣತ್ವಮಿವಾಶ್ರಿತಾ ॥ ೮೬ ॥**

ಪಚ್ಚೆ ನೀಲ ಕೆಂಪು ಈ ರತ್ನಗಳ ಕಾಂತಿಗಳಿಂದ ಆ ರತ್ನವೃಷ್ಟಿಯು ಋಜುತ್ವವನ್ನು ಹೊಂದಿದ ಇಂದ್ರ ಧನುಸ್ಸಿನಂತೆ ಶೋಭಿಸಿತು.

**[೧೧]ರೈಧಾರೈರಾವತಸ್ಥೂಲ[೧೨]ಸಮಾಯಾತಕರಾಕೃತಿಃ ।**
**ಬಭೌ ಪುಣ್ಯದ್ರುಮಸ್ಯೇವ ಪೃಥುಃ [೧೩]ಪ್ರಾರೋಹಸಂತತಿಃ ॥ ೮೭ ॥**

ದಪ್ಪಕ್ಕೆ ಸರಿಯಾಗಿ ಉದ್ದವಾಗಿರುವ ಐರಾವತಗಜದ ಸೊಂಡಲಿನಂತೆ ಆಕಾರವುಳ್ಳ ಆ ರತ್ನವೃಷ್ಟಿಯ ಧಾರೆಯು ಪುಣ್ಯವೆಂಬ ವೃಕ್ಷದ ದಪ್ಪವಾದ ಬಿಳಲುಗಳ ಸಮೂಹದಂತೆ ಶೋಭಿಸುತ್ತಿದ್ದಿತು.

**[೧೪]ನೀರಂಧ್ರಂ [೧೫]ರೋಧಸೀ ರುದ್ಧ್ವಾ [೧೬]ರಾಯಾಂ ಧಾರಾ ಪತಂತ್ಯಭಾತ್ ।**
**ಸುರದ್ರುಮೈರಿವೋನ್ಮುಕ್ತಾ ಸಾ ಪ್ರಾರೋಹಪರಂಪರಾ ॥ ೮೮ ॥**

ಆಕಾಶಭೂಮಿಗಳನ್ನು ನಿಬಿಡವಾಗಿ ತಡೆದು (ಮಧ್ಯದಲ್ಲಿ ವ್ಯುಚ್ಛಿತ್ತಿಯಿಲ್ಲದೆ) ಸುರಿಯುತ್ತಿರುವ ರತ್ನಸುವರ್ಣಗಳ ಮಳೆಯು ಕಲ್ಪವೃಕ್ಷಗಳಿಂದ ಬಿಡಲ್ಪಟ್ಟ ಬಿಳಲುಗಳ ಪಂಕ್ತಿಯಂತೆ, ಶೋಭಿಸಿತು.

**ರೇಜೇ ಹಿರಣ್ಮಯೀ ವೃಷ್ಟಿಃ ಖಾಂಗಣಾನ್ನಿಪತಂತ್ಯಸೌ ।**
**ಜ್ಯೋತಿರ್ಗಣಪ್ರಭೇವೋಚ್ಚೈರಾಯಾಂತೀ ಸುರಸದ್ಮನಃ ॥ ೮೯ ॥**

ಆಕಾಶದಿಂದ ಬೀಳುತ್ತಿರುವ ಈ ಬಂಗಾರಮಯವಾದ ಮಳೆಯು ಸ್ವರ್ಗದಿಂದ ಕೆಳಕ್ಕೆ ಬರುತ್ತಿರುವ ಜ್ಯೋತಿರ್ದೇವತೆಗಳ ಪ್ರಭೆಯಂತೆ, ಶೋಭಿಸಿತು.

೧ ಪರಮಾನಂದಾದಿತ್ಯಪಿ ಪಾಠಃ. ೨ ವಿಶ್ವಂ ದೃಷ್ಟವಾನ್. ೩ ಪುರಃಸರಮಿತ್ಯಪಿ ಪಾಠಃ. ೪ ಆಗಮಿಷ್ಯತಿ ಸತಿ. ೫ ಸ್ವಃ (ಸ್ವರ್ಗಃ) ಇತ್ಯಪಿ ಪಾಠಃ. ೬ ಅಹಮಿಂದ್ರಸ್ಯ. ೭ ಮರಕತಮಣಿಃ. ೮ ಸಂಕರ್ಯೈರಿತ್ಯಪಿ ಪಾಠಃ. ೯ ರತ್ನವೃಷ್ಟಿಃ. ೧೦ ಋಜುಗುಣತ್ವಂ. ೧೧ ಸುವರ್ಣಧಾರಾ. ೧೨ ಸಮಾನಾಯಾಮಃ. ೧೩ ಶಿಫಾ ಸಮೂಹಃ. ೧೪ ನಿಬಿಡಂ. ೧೫ ಭೂಮ್ಯಾಕಾಶೇ. ೧೬ ರತ್ನಸುವರ್ಣಾನಾಂ.

ಒಂದನೆಯ ನರಕದಲ್ಲಿ ಮೂವತ್ತು ಲಕ್ಷ ಬಿಲಗಳಿವೆ. ಎರಡನೆಯ ನರಕದಲ್ಲಿ ಇಪ್ಪತ್ತೈದು ಲಕ್ಷ ಬಿಲಗಳಿವೆ. ಮೂರನೆಯ ನರಕದಲ್ಲಿ ಹದಿನೈದು ಲಕ್ಷ ಬಿಲಗಳಿವೆ. ನಾಲ್ಕನೆಯ ನರಕದಲ್ಲಿ ಹತ್ತು ಲಕ್ಷ ಬಿಲಗಳಿವೆ. ಐದನೆಯ ನರಕದಲ್ಲಿ ಮೂರು ಲಕ್ಷ ಬಿಲಗಳಿವೆ. ಆರನೆಯ ನರಕದಲ್ಲಿ ಐದು ಕಡಿಮೆ ಒಂದು ಲಕ್ಷ ಬಿಲಗಳಿವೆ. ಏಳನೆಯ ನರಕದಲ್ಲಿ ಐದು ಬಿಲಗಳಿವೆ. ಈ ಬಿಲಗಳೆಲ್ಲವೂ ದೊಡ್ಡವಾಗಿಯೂ ಸದಾ ತಪಿಸುವುವಾಗಿಯೂ ಇವೆ. ದುರಾತ್ಮರಾದ ನಾರಕಿಗಳು ಆ ಬಿಲಗಳಲ್ಲಿ, ಮಡಿಕೆಗಳಲ್ಲಿ ಪಾಕವಾಗುವಂತೆ, ದಹಿಸಲ್ಪಡುತ್ತಾರೆ.

**ಏಕಂ ತ್ರೀಣಿ ತಥಾ ಸಪ್ತ ದಶ ಸಪ್ತದಶಾಪಿ ಚ ।**
**ದ್ವಾವಿಂಶತಿಸ್ತ್ರಯಸ್ತ್ರಿಂಶದಾಯುಸ್ತತ್ರಾಬ್ಧಿಸಂಖ್ಯಯಾ ॥ ೯೩ ॥**

ಒಂದನೆಯ ನರಕದಲ್ಲಿ ನಾರಕಿಗಳಿಗೆ ಉತ್ಕೃಷ್ಟಾಯುಷ್ಯವು ಒಂದು ಸಾಗರೋಪಮವಾಗಿದೆ. ಎರಡನೆಯ ನರಕದಲ್ಲಿ ಮೂರು ಸಾಗರೋಪಮ. ಮೂರನೆಯ ನರಕದಲ್ಲಿ ಏಳು ಸಾಗರೋಪಮ. ನಾಲ್ಕನೆಯ ನರಕದಲ್ಲಿ ಹತ್ತು ಸಾಗರೋಪಮ. ಐದನೆಯ ನರಕದಲ್ಲಿ ಹದಿನೇಳು ಸಾಗರೋಪಮ. ಆರನೆಯ ನರಕದಲ್ಲಿ ಇಪ್ಪತ್ತೆರಡು ಸಾಗರೋಪಮ. ಏಳನೆಯ ನರಕದಲ್ಲಿ ಮೂವತ್ತಮೂರು ಸಾಗರೋಪಮ, ಉತ್ಕೃಷ್ಟಾಯುಷ್ಯವು.

**ಧನೂಂಷಿ ಸಪ್ತ ತಿಸ್ರಃ ಸ್ಯು[1]ರರತ್ನೋಂಗುಲಯಶ್ಚ ಷಟ್ ।**
**ಘರ್ಮಾಯಾಂ ನಾರಕೋತ್ಸೇಧೋ [2]ದ್ವಿರ್ದ್ವಿಃ ಶೇಷಾಸು ಲಕ್ಷ್ಯತಾಮ್**

ಒಂದನೆಯ ನರಕದಲ್ಲಿ ನಾರಕಿಗಳ ಶರೀರವು ಏಳು ಧನುಸ್ಸೂ ಮೂರು ಗುಡ್ಡುಮೊಳವೂ ಆರು ಬೆರಳು ಪ್ರಮಾಣವಾಗಿದೆ. ಕೆಳಕೆಳಗಿನ ನರಕಗಳಲ್ಲಿ ಮೇಲೆಮೇಲಿನ ನರಕಗಳ ಅಪೇಕ್ಷೆಯಿಂದ ದ್ವಿಗುಣದ್ವಿಗುಣ ಪ್ರಮಾಣವೆಂದು ತಿಳಿಯಬೇಕು. ಅಂದರೆ:–ಎರಡನೆಯ ನರಕದಲ್ಲಿ ೧೫ ಧನುಸ್ಸು ೨ ಗುಡ್ಡುಮೊಳ ೧೨ ಬೆರಳು. ಮೂರನೆಯ ನರಕದಲ್ಲಿ ೩೧ ಧನುಸ್ಸು ೧ ಗುಡ್ಡುಮೊಳ. ನಾಲ್ಕನೆಯ ನರಕದಲ್ಲಿ ೬೨ ಧನುಸ್ಸು ೨ ಗುಡ್ಡುಮೊಳ. ಐದನೆಯ ನರಕದಲ್ಲಿ ೧೨೫ ಧನುಸ್ಸು. ಆರನೆಯ ನರಕದಲ್ಲಿ ೨೫೦ ಧನುಸ್ಸುಗಳು. ಏಳನೆಯ ನರಕದಲ್ಲಿ ೫೦೦ ಧನುಸ್ಸುಗಳು.

**[3]ಪೋಗಂಡಾ ಹುಂಡಸಂಸ್ಥಾನಾಃ ಷಂಡಕಾಃ ಪೂತಿಗಂಧಯಃ ।**
**ದುರ್ವರ್ಣಾಶ್ಚೈವ ದುಃಸ್ಪರ್ಶಾ ದುಃಸ್ವರಾ [4]ದುರ್ಭಗಾಶ್ಚ ತೇ ॥ ೯೫ ॥**

ಆ ನಾರಕಿಗಳು ಅಂಗಹೀನರೂ ಹುಂಡಸಂಸ್ಥಾನದವರೂ ನಪುಂಸಕರೂ ದುರ್ಗಂಧವುಳ್ಳವರೂ ದುಷ್ಟವಾದ ಶರೀರವರ್ಣವುಳ್ಳವರೂ ದುಷ್ಟವಾದ ಸ್ಪರ್ಶವುಳ್ಳವರೂ ದುಷ್ಟ(ಕಠೋರ)ಸ್ವರವುಳ್ಳವರೂ ವಿಕಾರವಾದ ಆಕಾರವುಳ್ಳವರೂ ಆಗಿರುತ್ತಾರೆ.

**ತಮೋಮಯೈರಿವಾರಬ್ಧಾಃ [5]ವಿರೂಕ್ಷೈಃ ಪರಮಾಣುಭಿಃ ।**
**ಜಾಯಂತೇ [6]ಕಾಲಕಾಲಾಭಾ ನಾರಕಾ [7]ದ್ರವ್ಯಲೇಶ್ಯಯಾ ॥ ೯೬ ॥**

ಅಂಧಕಾರಮಯವಾದ ಪರಮಾಣುಗಳಿಂದಲೇ ರಚಿಸಲ್ಪಟ್ಟವರೋ ಎಂಬಂತೆ ಅತ್ಯಂತಕಠಿಣವಾದ ಪರಮಾಣುಗಳಿಂದ ಮಾಡಲ್ಪಟ್ಟ ಆ ನಾರಕಿಗಳು ದ್ರವ್ಯಲೇಶ್ಯ(ಶರೀರವರ್ಣ)ದಿಂದ ಅತ್ಯಂತ ಕೃಷ್ಣವರ್ಣದವರಾಗಿ ಹುಟ್ಟುತ್ತಾರೆ.

**ಭಾವಲೇಶ್ಯಾ ತು ಕಾಪೋತೀ ಜಘನ್ಯಾ ಮಧ್ಯಮೋತ್ತಮಾ ।**
**ನೀಲಾ ಚ ಮಧ್ಯಮಾ ನೀಲಾ ನೀಲೋತ್ಕೃಷ್ಟಾ ಚ ಕೃಷ್ಣಯಾ ॥ ೯೭ ॥**

**ಕೃಷ್ಣಾ ಚ ಮಧ್ಯಮೋತ್ಕೃಷ್ಟಾ ಕೃಷ್ಣಾ ಚೇತಿ ಯಥಾಕ್ರಮಮ್ ।**
**ಘರ್ಮಾದಿಸಪ್ತಮೀ ಯಾವತ್ತಾವತ್ಪೃಥ್ವೀಷು ವರ್ಣಿತಾಃ ॥ ೯೮ ॥**

ಭಾವಲೇಶ್ಯೆಯು (ಪರಿಣಾಮವು) ಒಂದನೆಯ ನರಕದಲ್ಲಿ ಜಘನ್ಯ ಕಪೋತಲೇಶ್ಯೆಯು. ಎರಡನೆಯ ನರಕದಲ್ಲಿ ಮಧ್ಯಮಕಪೋತಲೇಶ್ಯೆಯು. ಮೂರನೆಯ ನರಕದಲ್ಲಿ ಉತ್ಕೃಷ್ಟಕಪೋತಲೇಶ್ಯೆಯೂ ಜಘನ್ಯನೀಲಲೇಶ್ಯೆಯೂ, ನಾಲ್ಕನೆಯ ನರಕದಲ್ಲಿ ಮಧ್ಯಮನೀಲಲೇಶ್ಯೆಯು, ಐದನೆಯ ನರಕದಲ್ಲಿ ಉತ್ಕೃಷ್ಟನೀಲಲೇಶ್ಯೆಯೂ ಜಘನ್ಯಕೃಷ್ಣಲೇಶ್ಯೆಯೂ, ಆರನೆಯ ನರಕದಲ್ಲಿ ಮಧ್ಯಮಕೃಷ್ಣಲೇಶ್ಯೆಯು, ಏಳನೆಯ ನರಕದಲ್ಲಿ ಉತ್ಕೃಷ್ಟಕೃಷ್ಣಲೇಶ್ಯೆಯು ವರ್ಣಿಸಲ್ಪಟ್ಟಿವೆ.

**ಯಾದೃಶಃ ಕಟುಕಾಲಾಬು[1]ಕಾಂಜೀರಾದಿ[2]ಸಮಾಗಮೇ ।**
**ರಸಃ ಕಟುರನಿಷ್ಟಶ್ಚ ತದ್ಗಾತ್ರೇಷ್ವಪಿ ತಾದೃಶಃ ॥ ೯೯ ॥**

ಕಹಿ ಸೋರೆಕಾಯಿಯಲ್ಲಿ ಗಂಜಿ ಮೊದಲಾದ ಪದಾರ್ಥಗಳ ಸಂಬಂಧ ವಾಗುತ್ತಿರಲು ಯಾವ ಪ್ರಕಾರವಾದ ರಸವು ಕಹಿಯಾಗಿಯೂ ಇಷ್ಟವಲ್ಲದುದಾಗಿಯೂ ಇರುವುದೋ ಆ ನಾರಕಿಗಳ ಶರೀರಗಳಲ್ಲಿಯೂ ಅದೇ ಪ್ರಕಾರವಾದ ರಸ ವುಂಟಾಗುವುದು.

**ಶ್ವಮಾರ್ಜಾರಖರೋಷ್ಟ್ರಾದಿಕುಣಪಾನಾಂ [3]ಸಮಾಹೃತೌ ।**
**ಯದ್ವೈಗಂಧ್ಯಂ ತದಪ್ಯೇಷಾಂ ದೇಹಗಂಧಸ್ಯ ನೋಪಮಾ ॥ ೧೦೦ ॥**

ನಾಯಿ ಬೆಕ್ಕು ಕತ್ತೆ ಒಂಟೆ ಮೊದಲಾದ ಪ್ರಾಣಿಗಳ ಹೆಣಗಳನ್ನು ರಾಶಿಮಾಡುವುದರಿಂದುಂಟಾಗುವ ದುರ್ಗಂಧವೂ ಈ ನಾರಕಿಗಳ ಶರೀರದ ದುರ್ಗಂಧಕ್ಕೆ ಉಪಮೆಯಾಗುವುದಿಲ್ಲ.

**ಯಾದೃಶಃ [4]ಕರಪತ್ರೇಷು [5]ಗೋಕ್ಷುರೇಷು ಚ ಯಾದೃಶಃ ।**
**ತಾದೃಶಃ ಕರ್ಕಶಃ ಸ್ಪರ್ಶಸ್ತದಂಗೇಷ್ವಪಿ ಜಾಯತೇ ॥ ೧೦೧ ॥**

ಗರಗಸಗಳಲ್ಲಿಯೂ ನೆಗ್ಗಿಲುಮುಳ್ಳುಗಳಲ್ಲಿಯೂ ಯಾವಪ್ರಕಾರವಾದ ಕಠಿನ ಸ್ಪರ್ಶವಿರುತ್ತದೆಯೋ ಆಪ್ರಕಾರವಾದ ಸ್ಪರ್ಶವು ಆ ನಾರಕಿಗಳ ಶರೀರಗಳಲ್ಲಿಯೂ ಉಂಟಾಗುತ್ತದೆ.

**ಅಪೃಥಗ್ವಿಕ್ರಿಯಾಸ್ತ್ಯೇಷಾಮಶುಭಾದ್ದುರಿತೋದಯಾತ್ ।**
**[6]ತತೋ ವಿಕೃತಬೀಭತ್ಸ[7]ವಿರೂಪಾತ್ಮೈವ ಸಾ ಮತಾ ॥ ೧೦೨ ॥**

ಈ ನಾರಕಿಗಳಿಗೆ ಅಶುಭಕರ್ಮದ ಉದಯದಿಂದ ಅಪೃಥಕ್ ವಿಕ್ರಿಯೆ(ತಮ್ಮ ಶರೀರವನ್ನು ಮಾತ್ರ ವಿಕಾರಮಾಡಿಕೊಳ್ಳುವ ವಿಕ್ರಿಯೆ)ಯುಂಟಾಗುತ್ತದೆ. ಆದುದರಿಂದ ಆ ವಿಕ್ರಿಯೆಯು ವಿಕಾರವುಳ್ಳುದೂ ಹೇಸಿಗೆಯೂ ದುಷ್ಟವಾದ ವರ್ಣವುಳ್ಳುದೂ ಆಗಿರುತ್ತದೆ.

**[8]ವಿಬೋಧೋಽಸ್ತಿ ವಿಭಂಗಾಖ್ಯಸ್ತೇಷಾಂ ಪರ್ಯಾಪ್ತ್ಯನಂತರಮ್ ।**
**ತೇನಾನ್ಯಜನ್ಮವೈರಾಣಾಂ ಸ್ಮರಂತ್ಯು[9]ದ್ಘಟ್ಟಯಂತಿ ಚ ॥ ೧೦೩ ॥**

ಆ ನಾರಕಿಗಳಿಗೆ ಶರೀರಶಕ್ತಿಯು ಪರಿಪೂರ್ಣವಾದನಂತರ ವಿಭಂಗವೆಂಬ ಜ್ಞಾನವುಂಟಾಗುವುದು. ಆ ಜ್ಞಾನದಿಂದ ಪೂರ್ವಜನ್ಮದ ವೈರಗಳನ್ನು ಸ್ಮರಿಸಿ ಪ್ರಕಟಮಾಡುತ್ತಾರೆ.

**ಯದಮೀ ಪ್ರಾಕ್ತನೇ ಜನ್ಮನ್ಯಾಸನ್ಪಾಪೇಷು ಪಂಡಿತಾಃ ।**
**[10]ತದ್ವದಾಶ್ಚ ದುರಾಚಾರಾಸ್ತದ್ವಿಪಾಕೋಽಯ[11]ಮುಲ್ಬಣಃ ॥ ೧೦೪ ॥**

ಪೂರ್ವಜನ್ಮದಲ್ಲಿ ಈ ನಾರಕಿಗಳು ಪಾಪಕಾರ್ಯಗಳಲ್ಲಿ ನಿಪುಣರೂ ದುಷ್ಟವಚನವುಳ್ಳವರೂ ದುರಾಚಾರವುಳ್ಳವರೂ ಆಗಿದ್ದುದರಿಂದ ಈ ಉತ್ಕಟವಾದ ದುರವಸ್ಥೆಗಳೆಲ್ಲ ಆ ದುಷ್ಕೃತ್ಯಗಳ ಪರಿಪಾಕವಾಗಿವೆ.

೧ ಹಸ್ತೋ ಮುಷ್ಟ್ಯಾ ತು ಬದ್ಧಯಾ, ಸರತ್ನಿಃ ಸ್ಯಾದರತ್ನಿಸ್ತು ನಿಷ್ಕನಿಷ್ಠೇನ ಮುಷ್ಟಿನಾ. ೨ ದ್ವಿಗುಣದ್ವಿಗುಣಃ. ೩ ವಿಕಲಾಂಗಸ್ತು ಪೋಗಂಡಃ. ೪ ಕುರೂಪಿಣಃ. ೫ ಕರ್ಕಶೈಃ. ೬ ಅತಿಕೃಷ್ಣಾಭಾಃ. ೭ ಶರೀರವರ್ಣೇನ.

೧ ಉಷ್ಟ್ರಿಕಾ. ೨ ಸಂಬಂಧೇ. ೩ ಸಂಗ್ರಹೇ. ೪ ಕ್ರಕಚೇಷು. ೫ ಗೋಕಂಟಕೇಷು. ೬ ಕಾರಣಾತ್. ೭ ದುರ್ವರ್ಣಾ. ೮ ಜ್ಞಾನಂ. ೯ ಉದ್ಘಾಟಯಂತಿ. ೧೦ ಕುತ್ಸಿತವಚನಾಃ. ೧೧ ಉತ್ಕಟಃ.

**ಈದೃಗ್ವಿಧಂ ಮಹಾದುಃಖಂ ದ್ವಿತೀಯನರಕಾಶ್ರಿತಮ್ ।**
**ಪಾಪೇನ ಕರ್ಮಣಾ ಪ್ರಾಪಚ್ಛತಬುದ್ಧಿರಸೌ [೧]ಸುರ ॥ ೧೦೫ ॥**

ಎಲೈ ಶ್ರೀಧರದೇವನೇ ! ದ್ವಿತೀಯನರಕದಲ್ಲಿರುವ ಈ ಪ್ರಕಾರವಾದ ಮಹಾ ದುಃಖವನ್ನು ಪಾಪಕರ್ಮದಿಂದ ಈ ಶತಮತಿಯು ಹೊಂದಿದನು.

**ತಸ್ಮಾದ್ದುಃಖಮನಿಚ್ಛೂನಾಂ [೨]ನಾರಕಂ ತೀವ್ರಮೀದೃಶಮ್ ।**
**ಉಪಾಸ್ಯೋಯಂ ಜಿನೇಂದ್ರಾಣಾಂ ಧರ್ಮೋ ಮತಿಮತಾಂ ನೃಣಾಮ್॥**

ಆದುದರಿಂದ ಇಂತಹ ತೀವ್ರವಾದ ನರಕದುಃಖವನ್ನಿಚ್ಛಿಸದಿರುವ ಬುದ್ಧಿಶಾಲಿಗಳು ಈ ಜಿನಧರ್ಮದ ಉಪಾಸನೆಯನ್ನು ಮಾಡಬೇಕು.

**ಧರ್ಮಃ [೩]ಪ್ರಪಾತಿದುಃಖೇಭ್ಯೋ ಧರ್ಮಃ [೪]ಶರ್ಮ ತನೋತ್ಯಯಮ್ ।**
**ಧರ್ಮೋ ನೈಃಶ್ರೇಯಸಂ ಸೌಖ್ಯಂ ಧತ್ತೇ ಕರ್ಮಕ್ಷಯೋದ್ಭವಮ್ ॥**

ಧರ್ಮವು ಪ್ರಾಣಿಯನ್ನು ದುಃಖಗಳಿಂದ ತಪ್ಪಿಸಿ ಕಾಪಾಡುತ್ತದೆ. ಧರ್ಮವು ಸಂಸಾರ ಸುಖವನ್ನುಂಟುಮಾಡುತ್ತದೆ. ಧರ್ಮವು ಕರ್ಮಕ್ಷಯದಿಂದುಂಟಾಗುವ ಮೋಕ್ಷಸುಖವನ್ನೂ ಉಂಟುಮಾಡುತ್ತದೆ.

**ಧರ್ಮಾದೇವ ಸುರೇಂದ್ರತ್ವಂ ನರೇಂದ್ರತ್ವಂ ಗಣೇಂದ್ರತಾ ।**
**ಧರ್ಮಾತ್ತೀರ್ಥಕರತ್ವಂ ಚ [೫]ಪರಮಾನಂತ್ಯಮೇವ ಚ ॥ ೧೦೮ ॥**

ಧರ್ಮದಿಂದಲೇ ದೇವೇಂದ್ರಪದವಿಯೂ ಚಕ್ರವರ್ತಿಪದವಿಯೂ ಗಣಧರ ಪದವಿಯೂ ಉಂಟಾಗುವುವು. ಧರ್ಮದಿಂದ ತೀರ್ಥಕರಪದವಿಯೂ ಮೋಕ್ಷವೂ ಉಂಟಾಗುವುವು.

**ಧರ್ಮೋ ಬಂಧುಶ್ಚ ಮಿತ್ರಂ ಚ ಧರ್ಮೋಽಯಂ ಗುರುರಂಗಿನಾಮ್ ।**
**ತಸ್ಮಾದ್ಧರ್ಮೇ ಮತಿಂ ಧತ್ಸ್ವ ಸ್ವರ್ಮೋಕ್ಷಸುಖದಾಯಿನಿ ॥ ೧೦೯ ॥**

ಈ ಧರ್ಮವು ಪ್ರಾಣಿಗಳಿಗೆ ಬಂಧುವೂ ಮಿತ್ರನೂ ಗುರುವೂ ಆಗಿದೆ. ಆದುದರಿಂದ ಸ್ವರ್ಗಮೋಕ್ಷಸುಖವನ್ನು ಕೊಡುವ ಧರ್ಮದಲ್ಲಿ ಬುದ್ಧಿಯನ್ನಿಡು''

**ತದಾ ಪ್ರೀತಿಂಕರಸ್ಯೇತಿ ವಚಃ ಶ್ರುತ್ವಾ ಜಿನೇಶಿನಃ ।**
**ಶ್ರೀಧರೋ ಧರ್ಮಸಂವೇಗಂ ಪರಂ ಪ್ರಾಪತ್ಸ ಪುಣ್ಯಧೀಃ ॥ ೧೧೦ ॥**

ಆಗ ಪ್ರೀತಿಂಕರಜಿನೇಶ್ವರರ ಈ ಪ್ರಕಾರವಾದ ವಚನವನ್ನು ಕೇಳಿ ಆ ಪುಣ್ಯಶಾಲಿಯಾದ ಶ್ರೀಧರದೇವನು ಧರ್ಮದಲ್ಲಿ ಅತ್ಯಂತ ಪ್ರೀತಿಯುಳ್ಳವನಾದನು.

**[೬]ಗತ್ವಾ ಗುರುನಿದೇಶೇನ ಶತಬುದ್ಧಿಮಬೋಧಯತ್ ।**
**ಕಿಂ [೭]ಭದ್ರಮುಖ ಮಾಂ ವೇತ್ಸಿ ಶತಬುದ್ಧೇ ಮಹಾಬಲಮ್॥ ೧೧೧ ॥**

**ತದಾಸೀತ್ತವ ಮಿಥ್ಯಾತ್ವ[೮]ಮುದ್ರಿಕ್ತಂ ದುರ್ನಯಾಶ್ರಯಾತ್ ।**
**ಪಶ್ಯ ತತ್ಪರಿಪಾಕೋಯ[೯]ಮಸ್ವಂತಸ್ತೇ ಪುರಃ ಸ್ಥಿತಃ ॥ ೧೧೨ ॥**

ಗುರುಗಳ ಅಪ್ಪಣೆಯಿಂದ ಆ ಎರಡನೆಯ ನರಕಕ್ಕೆ ಹೋಗಿ ಶತಮತಿಯನ್ನು ಮುಂದೆ ಹೇಳುವ ರೀತಿಯಾಗಿ ಬೋಧಿಸಿದನು. ''ಎಲೈ ಭದ್ರಶ್ರೇಷ್ಠನಾದ ಶತಮತಿಯೇ ! ಮಹಾಬಲನಾಗಿದ್ದ ನನ್ನನ್ನು ತಿಳಿಯುತ್ತೀಯೋ ? ಆಗ ದುರ್ನಯದ ಆಶ್ರಯದಿಂದ ನಿನಗೆ ಅತ್ಯಧಿಕವಾದ ಮಿಥ್ಯಾತ್ವವಿದ್ದಿತು. ದುಃಖವೇ ಕೊನೆಯಾಗಿ ನಿನ್ನ ಮುಂದಿರುವ ಈ ಮಿಥ್ಯಾತ್ವಕರ್ಮದ ಪರಿಪಾಕವನ್ನು ನೋಡು. ಆ ಮಿಥ್ಯಾತ್ವಕರ್ಮದ ಉದಯದಿಂದ ಅವನು ಅನುಭವಿಸುತ್ತಿದ್ದ ಆ ದುಃಖವು ಪ್ರಾಪ್ತವಾಗಿದ್ದಿತೆಂದು ಭಾವವು.''

೧ ಹೇ ಶ್ರೀಧರದೇವ ! ೨ ನರಕೇ ಭವಂ. ೩ ಪಾ ರಕ್ಷಣೇ. ೪ ಸಾಂಸಾರಿಕಂ ಸುಖಂ. ೫ ಮೋಕ್ಷಃ. ೬ ದ್ವಿತೀಯನರಕಮೇತ್ಯ. ೭ ಭದ್ರಶ್ರೇಷ್ಠ. ೮ ಉತ್ಕಟಂ. ೯ ದುಃಖಾವಸಾನಃ.

**ಇತ್ಯ[೧]ಸೌ ಬೋಧಿತಸ್ತೇನ ಶುದ್ಧಂ ದರ್ಶನಮಗ್ರಹೀತ್ ।**
**ಮಿಥ್ಯಾತ್ವಕಲುಷಾಪಾಯಾತ್ಪರಾಂ ಶುದ್ಧಿಮುಪಾಶ್ರಿತಃ ॥ ೧೧೩ ॥**

ಈಪ್ರಕಾರವಾಗಿ ಶ್ರೀಧರದೇವನಿಂದ ಬೋಧಿಸಲ್ಪಟ್ಟ ಶತಮತಿಯಾಗಿದ್ದ ಈ ನಾರಕಿಯು ಮಿಥ್ಯಾತ್ವವೆಂಬ ಮಲದ ನಾಶದಿಂದ ಅತ್ಯಂತ ಪರಿಶುದ್ಧನಾಗಿ ಶುದ್ಧವಾದ ಸಮ್ಯಗ್ದರ್ಶನವನ್ನು ಗ್ರಹಣಮಾಡಿದನು.

**ಕಾಲಾಂತೇ ನರಕಾದ್ವೀಮಾನ್ನಿರ್ಗತ್ಯ ಶತಧೀಚರಃ ।**
**ಪುಷ್ಕರದ್ವೀಪಪೂರ್ವಾರ್ಧಪ್ರಾಗ್ವಿದೇಹಮುಪಾಗತಃ ॥ ೧೧೪ ॥**

**ವಿಷಯೇ ಮಂಗಲಾವತ್ಯಾಂ ನಗರ್ಯಾಂ ರತ್ನಸಂಚಯೇ ।**
**ಮಹೀಧರಸ್ಯ [೨]ಸಮ್ರಾಜಸ್ಸುಂದರ್ಯಾಶ್ಚ ಸುತೋಭವತ್ ॥ ೧೧೫ ॥**

**ಜಯಸೇನಶ್ರುತಿರ್ಬುಧ್ವಾ ವಿವಾಹಸಮಯೇ ಸುರಾತ್ ।**
**ಶ್ರೀಧರಾಖ್ಯಾತ್ಪ್ರವವ್ರಾಜ ಗುರುಂ ಯಮಧರಂ ಶ್ರಿತಃ ॥ ೧೧೬ ॥**

ಶತಮತಿಯಾಗಿದ್ದ ಆ ನಾರಕಿಯು ಆಯುಷ್ಯವು ಪೂರ್ತಿಯಾದನಂತರ ಭಯಂಕರವಾದ ಆ ನರಕದಿಂದ ಹೊರಟು ಪುಷ್ಕರದ್ವೀಪದ ಪೂರ್ವಭಾಗದ ಪೂರ್ವವಿದೇಹದಲ್ಲಿ ಮಂಗಲಾವತೀದೇಶದ ರತ್ನಸಂಚಯವೆಂಬ ನಗರಿಯಲ್ಲಿ ಮಹೀಧರನೆಂಬ ಚಕ್ರವರ್ತಿಗೂ ಆತನ ಪತ್ನಿಯಾದ ಸುಂದರಿಗೂ ಜಯಸೇನನೆಂಬ ಮಗನಾಗಿ ಹುಟ್ಟಿದನು. ಅವನು ಪ್ರಾಯಭರಿತನಾದ ನಂತರ ಅವನ ವಿವಾಹ ಸಮಯದಲ್ಲಿ ಪುನಃ ಆ ಶ್ರೀಧರದೇವನಿಂದ ಬೋಧಿಸಲ್ಪಟ್ಟವನಾಗಿ ಈ ಜಯಸೇನನು ಯಮಧರರೆಂಬ ಮುನಿಗಳಿಂದ ಜಿನದೀಕ್ಷೆಯನ್ನು ಪಡೆದನು.

**ನಾರಕೀಂ ವೇದನಾಂ ಘೋರಾಂ ತೇನಾಸೌ ಕಿಲ ಬೋಧಿತಃ ।**
**[೩]ನಿರ್ವಿದ್ಯ ವಿಷಯಾಸಂಗಾತ್ತಪೋ ದುಶ್ಚರಮಾಚರತ್ ॥ ೧೧೭ ॥**

ಆ ಜಯಸೇನನಿಗೆ ಶ್ರೀಧರದೇವನು ಘೋರವಾದ ಆ ನರಕವೇದನೆಯನ್ನು ಬೋಧಿಸಿದನು. ಜಯಸೇನನು ಭೋಗೋಪಭೋಗಗಳಲ್ಲಿ ವಿರಕ್ತನಾಗಿ ಘೋರವಾದ ತಪಸ್ಸನ್ನು ಮಾಡಿದನು.

**ತತೋ ಬ್ರಹ್ಮೇಂದ್ರತಾಂ ಸೋಗಾಜ್ಜೀವಿತಾಂತೇ [೪]ಸಮಾಹಿತಃ ।**
**ಕ್ವ ನಾರಕಃ ಕ್ವ ದೇವೋಽಯಂ ವಿಚಿತ್ರಾ ಕರ್ಮಣಾಂ ಗತಿಃ ॥ ೧೧೮ ॥**

ತರುವಾಯ ಆ ಜಯಸೇನಮುನಿಯು ಆಯುಷ್ಯವು ಪೂರ್ತಿಯಾದನಂತರ ಸಮಾಧಾನದಿಂದ ಮೃತನಾಗಿ ಬ್ರಹ್ಮಸ್ವರ್ಗದಲ್ಲಿ ಬ್ರಹ್ಮೇಂದ್ರನಾಗಿ ಹುಟ್ಟಿದನು. ನಾರಕಿಯಾಗಿದ್ದುದೆಲ್ಲಿ ? ಈ ದೇವನೆಲ್ಲಿ ? ಕರ್ಮದ ಗತಿಯು ವಿಚಿತ್ರವಾಗಿದೆ.

**ನೀಚೈರ್ವೃತ್ತಿರಧರ್ಮೇಣ ಧರ್ಮೇಣೋಚ್ಚೈಃ ಸ್ಥಿತಿಂ ಭಜೇತ್ ।**
**ತಸ್ಮಾದುಚ್ಚೈಃ ಪದಂ ವಾಂಛನ್ನರೋ ಧರ್ಮಪರೋ ಭವೇತ್ ॥ ೧೧೯ ॥**

ಜೀವವು ಅಧರ್ಮದಿಂದ ಅಧೋಗತಿಯನ್ನೂ ಧರ್ಮದಿಂದ ಊರ್ಧ್ವಗತಿಯನ್ನೂ ಹೊಂದುವುದು. ಆದುದರಿಂದ ಶ್ರೇಷ್ಠವಾದ ಪದವಿಯನ್ನು ಅಪೇಕ್ಷಿಸುವ ಮನುಷ್ಯನು ಧರ್ಮದಲ್ಲಿ ಆಸಕ್ತನಾಗಬೇಕು.

**ಬ್ರಹ್ಮಲೋಕಾದಥಾಗತ್ಯ ಬ್ರಹ್ಮೇಂದ್ರಃ ಸೋಽವಧೀಕ್ಷಣಃ ।**
**ಶ್ರೀಧರಂ ಪೂಜಯಾಮಾಸ ಗತಂ ಕಲ್ಯಾಣಮಿತ್ರತಾಮ್ ॥ ೧೨೦ ॥**

ತರುವಾಯ ಅವಧಿಜ್ಞಾನಸಂಪನ್ನನಾದ ಆ ಬ್ರಹ್ಮೇಂದ್ರನು ಬ್ರಹ್ಮಲೋಕದಿಂದ ಬಂದು ತನಗೆ ಹಿತವನ್ನುಂಟುಮಾಡಿದ ಮಿತ್ರನಾದ ಆ ಶ್ರೀಧರದೇವನನ್ನು ಪೂಜಿಸಿದನು.

೧ ಶತಮತಿಃ. ೨ ಚಕ್ರಿಣಃ. ೩ ವಿರಕ್ತೋ ಭೂತ್ವಾ. ೪ ಸಮಾಧಾನಯುಕ್ತಃ.

**ಶ್ರೀಧರೋಥ ದಿವಶ್ಚ್ಯುತ್ವಾ ಜಂಬೂದ್ವೀಪಮುಪಾಶ್ರಿತೇ ।**
**ಪ್ರಾಗ್ವಿದೇಹೇ ಮಹಾವತ್ಸವಿಷಯೇ ಸ್ವರ್ಗಸನ್ನಿಭೇ ॥ ೧೨೧ ॥**

**[೧]ಸುಸೀಮಾನಗರೇ ಜಜ್ಞೇ ಸುದೃಷ್ಟಿನೃಪತೇಃ ಸುತಃ ।**
**ಮಾತುಃ ಸುಂದರನಂದಾಯಾಃ ಸುವಿಧಿರ್ನಾಮಪುಣ್ಯಧೀಃ ॥ ೧೨೨ ॥**

ತರುವಾಯ ಆ ಶ್ರೀಧರದೇವನು ಸ್ವರ್ಗದಿಂದ ಚ್ಯುತನಾಗಿ ಜಂಬೂದ್ವೀಪದ ಪೂರ್ವವಿದೇಹದಲ್ಲಿ ಸ್ವರ್ಗಕ್ಕೆ ಸಮಾನವಾದ ಮಹಾವತ್ಸದೇಶದಲ್ಲಿ ಸೀತಾನದಿಯ ಉತ್ತರದಡದಲ್ಲಿರುವ ಸುಸೀಮಾನಗರದಲ್ಲಿ ಸುದೃಷ್ಟಿರಾಜನಿಗೂ ಆತನ ಪತ್ನಿಯಾದ ಸುಂದರನಂದೆಗೂ ಮಹಾಪುಣ್ಯಶಾಲಿಯಾದ ಸುವಿಧಿಯೆಂಬ ಮಗನಾಗಿ ಹುಟ್ಟಿದನು.

**ಬಾಲ್ಯಾತ್ಪ್ರಭೃತಿ ಸರ್ವಾಸಾಂ ಕಲಾನಾಂ ಸೋಭವನ್ನಿಧಿಃ ।**
**ಶಶೀವ ಜಗತಸ್ತನ್ವನ್ನನ್ವಹಂ ನಯನೋತ್ಸವಮ್ ॥ ೧೨೩ ॥**

ಆ ಸುವಿಧಿಯು ಬಾಲ್ಯಮೊದಲುಗೊಂಡು ಸಮಸ್ತಕಲೆಗಳಿಗೂ ನಿಧಿಪ್ರಾಯನಾಗಿ ಚಂದ್ರನಂತೆ ಲೋಕಕ್ಕೆ ಸದಾ ನೇತ್ರಾನಂದವನ್ನುಂಟುಮಾಡುತ್ತಿದ್ದನು.

**ಸ [೨]ಬಾಲ್ಯ ಏವ ಸದ್ಧರ್ಮಮಬುದ್ಧ ಪ್ರತಿಬುದ್ಧಧೀಃ ।**
**ಪ್ರಾಯೇಣಾ[೩]ತ್ಮವತಾಂ ಚಿತ್ತಮಾತ್ಮಶ್ರೇಯಸಿ ರಜ್ಯತೇ ॥ ೧೨೪ ॥**

ಬುದ್ಧಿಶಾಲಿಯಾದ ಆ ಸುವಿಧಿಯು ಯೌವನದಲ್ಲಿಯೇ ಸದ್ಧರ್ಮವನ್ನು ತಿಳಿದನು. ಪ್ರಾಯಶಃ ಬುದ್ಧಿವಂತರ ಮನಸ್ಸು ತಮ್ಮ ಶ್ರೇಯಸ್ಸಿನಲ್ಲಿ ಅನುರಾಗಪಡುತ್ತದೆ.

**ಶೈಶವೇಪಿ ಸ ಸಂಪ್ರಾಪಜ್ಜನತಾನಂದದಾಯಿನೀಮ್ ।**
**ರೂಪಸಂಪದಮಾಪೂರ್ಣಯೌವನಸ್ತು ವಿಶೇಷತಃ ॥ ೧೨೫ ॥**

ಆ ಸುವಿಧಿಕುಮಾರನು ಬಾಲ್ಯದಲ್ಲಿಯೇ ಸಮಸ್ತಜನರಿಗೂ ಆನಂದವನ್ನುಂಟುಮಾಡುವ ರೂಪಸಂಪತ್ತನ್ನು ಹೊಂದಿದ್ದನು. ಆತನ ಪರಿಪೂರ್ಣವಾದ ಯೌವನವಾದರೋ ವಿಶೇಷವಾಗಿ ಜನರಿಗೆ ಆನಂದವನ್ನುಂಟುಮಾಡಿತು.

**ಮಕುಟಾಲಂಕೃತಪ್ರಾಂಶುಮೂರ್ಧ್ನಾ ಪ್ರೋನ್ನತಿಮಾದಧೇ ।**
**ಮೇರುಃ ಕುಲಮಹೀಧ್ರಾಣಾಮಿವ ಮಧ್ಯೇ ಸ ಭೂಭೃತಾಮ್ ॥ ೧೨೬ ॥**

ಕುಲಪರ್ವತಗಳ ಮಧ್ಯದಲ್ಲಿ ಮಹಾಮೇರುಪರ್ವತವು ಉನ್ನತವಾಗಿರುವಂತೆ, ಕಿರೀಟದಿಂದಲಂಕೃತವೂ ಉನ್ನತವೂ ಆದ ಮಸ್ತಕದಿಂದ ಆ ಸುವಿಧಿರಾಜನು ರಾಜರಲ್ಲೆಲ್ಲ ಉನ್ನತ(ಶ್ರೇಷ್ಠ)ನಾಗಿದ್ದನು.

**ಕುಂಡಲೋದ್ಭಾಸಿ ತಸ್ಯಾಭೂನ್ಮುಖಮುದ್ಭ್ರೂ ವಿಲೋಚನಮ್ ।**
**ಸಚಂದ್ರಾರ್ಕಂ ಸತಾರಂ ಚ ಸೇಂದ್ರಚಾಪಮಿವಾಂಬರಮ್ ॥ ೧೨೭ ॥**

ಕರ್ಣಕುಂಡಲಗಳಿಂದ ಪ್ರಕಾಶಮಾನವೂ ಮೇಲಕ್ಕೆದ್ದಿರುವ ಹುಬ್ಬುಗಳುಳ್ಳದೂ ಉನ್ನತವಾದ ನೇತ್ರಗಳುಳ್ಳದೂ ಆದ ಆ ಸುವಿಧಿರಾಜನ ಮುಖವು, ಸೂರ್ಯಚಂದ್ರರುಳ್ಳದೂ ನಕ್ಷತ್ರಗಳುಳ್ಳದೂ ಇಂದ್ರಧನುಸ್ಸಿನೊಡಗೂಡಿರುವುದೂ ಆದ ಆಕಾಶದಂತೆ ಇದ್ದಿತು.

**ಮುಖಂ ಸುರಭಿನಿಃಶ್ವಾಸಂ ಕಾಂತಾಧರಮಭಾದ್ವಿಭೋಃ ।**
**[೪]ಮಹೋತ್ಪಲಮಿವೋದ್ಭಿನ್ನದಲಂ ಸುರಭಿಗಂಧಿ ಚ ॥ ೧೨೮ ॥**

ಸುಗಂಧವಾದ ನಿಃಶ್ವಾಸವೂ ಮನೋಹರವಾದ ತುಟಿಗಳೂ ಉಳ್ಳ ಆ ಸುವಿಧಿಯ ಮುಖವು, ಪರಿಮಳವುಳ್ಳ ಅರಳಿದ ಕಮಲದಂತೆ, ಶೋಭಿಸುತ್ತಿದ್ದಿತು.

೧ ಸೀತಾನದ್ಯುತ್ತರತಟವರ್ತಿನಿ. ೨ ಯೌವನೇ. ೩ ಬುದ್ಧಿಮತಾಂ. ೪ ಪುಂಡರೀಕಂ ಮಹೋತ್ಪಲಮಿತಿ ಧನಂಜಯಃ.

**ನಾಸಿಕಾಘ್ರಾತು[೧]ಮಸ್ಯೇವ ಗಂಧಮಾಯತಿಮಾದಧೇ ।**
**ಅವಾಙ್ಮುಖೀ [೨]ವಿರೇಖಾಭ್ಯಾಮಾಪಿಬಂತೀವ ತದ್ರಸಮ್ ॥ ೧೨೯ ॥**

ಆತನ ಮೂಗು ಈ ಮುಖಕಮಲದ ಪರಿಮಳವನ್ನು ಮೂಸಿ ನೋಡುವುದಕ್ಕೋಸ್ಕರವೋ ಎಂಬಂತೆ ಉದ್ದವಾಗಿಯೂ ಕೆಳಮುಖವಾದ ರಂಧ್ರಗಳಿಂದ ಆ ಮುಖಕಮಲದ ರಸವನ್ನು ಪಾನಮಾಡುವಂತೆಯೂ ಇದ್ದಿತು.

**ಕಂಧರಸ್ತನ್ಮುಖಾಬ್ಜಸ್ಯ ನಾಲಲೀಲಾಂ ದಧೇ ಪರಾಮ್ ।**
**ಮೃಣಾಲವಲಯೇನೇವ ಹಾರೇಣ ಪರಿರಾಜಿತಃ ॥ ೧೩೦ ॥**

ತಾವರೆಯ ಕೊಳವೆಯಿಂದ ಮಾಡಿದ ಕಂಕಣದಂತಿರುವ ಹಾರದಿಂದ ಸುತ್ತಲೂ ಶೋಭಿಸುತ್ತಿರುವ ಕಂಠ(ಕುತ್ತಿಗೆ)ವು ಅವನ ಮುಖವೆಂಬ ಕಮಲಕ್ಕೆ ತಾವರೆದಂಟಿನ ಶೋಭೆಯನ್ನುಂಟುಮಾಡುತ್ತಿದ್ದಿತು.

**ಮಹೋರಃಸ್ಥಲಮಸ್ಯಾಭಾನ್ಮಹಾರತ್ನಾಂಶುಪೇಶಲಮ್ ।**
**ಜ್ವಲದ್ದೀಪಮಿವಾಂ[೩]ಭೋಜವಾಸಿನ್ಯಾ ವಾಸಗೇಹಕಮ್ ॥ ೧೩೧ ॥**

ಮಹಾರತ್ನಗಳ ಕಿರಣಗಳಿಂದ ಸುಂದರವಾದ ಈ ಸುವಿಧಿಯ ವಿಶಾಲವಾದ ಎದೆಯು, ಜ್ವಲಿಸುತ್ತಿರುವ ದೀಪವುಳ್ಳ ಲಕ್ಷ್ಮೀದೇವಿಯ ವಾಸಗೃಹದಂತೆ ಪ್ರಕಾಶಿಸುತ್ತಿದ್ದಿತು.

**ಅಂಸಾವಭ್ಯುನ್ನತೌ ತಸ್ಯ ದಿಗ್ಗಜಸ್ಯೇವ ಸದ್ಗತೇಃ ।**
**[೪]ಕುಂಭಾವಿವ ರರಾಜಾತೇ ಸುವಂಶಸ್ಯ ಮಹೋನ್ನತೇಃ ॥ ೧೩೨ ॥**

ದಿಗ್ಗಜದಂತೆ ಉತ್ತಮವಾದ ಗಮನವುಳ್ಳವನೂ ಶ್ರೇಷ್ಠವಾದ ವಂಶಿಕನೂ ಅತ್ಯಂತ ಉನ್ನತನೂ ಆದ ಆ ಸುವಿಧಿಯ ಉನ್ನತವಾದ ಭುಜಶಿರಸ್ಸುಗಳೆರಡು ಆನೆಯ ಕುಂಭಸ್ಥಳಗಳಂತೆ ಶೋಭಿಸುತ್ತಿದ್ದುವು.

**[೫]ವ್ಯಾಯಾಮಶಾಲಿನಾವಸ್ಯ ರೇಜತುರ್ಭೂಭುಜೋ ಭುಜೌ ।**
**ಭೂಲೋಕಾಪಾಯರಕ್ಷಾರ್ಥಂ ಕ್ಲೃಪ್ತೌ ವಾಜ್ರಾವಿವಾರ್ಗಲೌ ॥ ೧೩೩ ॥**

ಈ ಸುವಿಧಿರಾಜನ ದೀರ್ಘವಾದ ಭುಜಗಳೆರಡು ಭೂಲೋಕದ ಅಪಾಯವನ್ನು ಹೋಗಲಾಡಿಸಿ ಕಾಪಾಡುವುದಕ್ಕೋಸ್ಕರ ಮಾಡಿದ ವಜ್ರದ ಅಗಣಿಗಳಂತೆ ಶೋಭಿಸುತ್ತಿದ್ದುವು.

**ನಖತಾರಾಭಿರುದ್ಭೂತಚಂದ್ರಾರ್ಕಸ್ಫುಟಲಕ್ಷಣಮ್ ।**
**ಚಾರುಹಸ್ತತಲಂ ತಸ್ಯ ನಭಃಸ್ಥಲಮಿವಾಬಭೌ ॥ ೧೩೪ ॥**

ಚಂದ್ರಸೂರ್ಯರ ಚಿಹ್ನೆಯುಳ್ಳ ಆತನ ಸುಂದರವಾದ ಹಸ್ತತಲವು ಉಗುರುಗಳೆಂಬ ನಕ್ಷತ್ರಗಳಿಂದ ಆಕಾಶಪ್ರದೇಶದಂತೆ ಶೋಭಿಸುತ್ತಿದ್ದಿತು.

**ಮಧ್ಯಮಸ್ಯ ಜಗನ್ಮಧ್ಯವಿಭ್ರಮಂ ಬಿಭ್ರದದ್ಯುತತ್ ।**
**ಧೃತತಾನವಮೂರ್ಧ್ವಾಧೋವಿಸ್ತೀರ್ಣ[೬]ಪರಿಮಂಡಲಮ್ ॥ ೧೩೫ ॥**

ಕೆಳಗೂ ಮೇಲೆಯೂ ವಿಸ್ತಾರವೂ ಕೃಶವೂ ಆದ ಈ ಸುವಿಧಿಯ ಸೊಂಟವು ಜಗತ್ತಿನ ಮಧ್ಯದ ಶೋಭೆಯನ್ನು ಧರಿಸುತ್ತ ಶೋಭಿಸುತ್ತಿದ್ದಿತು. (ಲೋಕವು ಕೆಳಗೂ ಮೇಲೆಯೂ ವಿಸ್ತಾರವಾಗಿಯೂ ಮಧ್ಯದಲ್ಲಿ ಕೃಶವಾಗಿಯೂ ಇರುತ್ತದೆ)

**ಜಘನಾ[೭]ಭೋಗ[೮]ಮಾಮುಕ್ತಕಟೀಸೂತ್ರಮಸೌ ದಧೇ ।**
**ಮೇರುರ್ನಿತಂಬಮಾಲಂಬಿಸೇಂದ್ರಚಾಪಾಂಬುದಂ ಯಥಾ ॥ ೧೩೬ ॥**

ಪರ್ವತದ ತಪ್ಪಲನ್ನು ಹೊಂದಿರುವುದೂ ಇಂದ್ರಧನುಸ್ಸಿನೊಡಗೂಡಿರುವುದೂ ಆದ ಮೇಘವನ್ನು ಮಹಾಮೇರುಪರ್ವತವು ಧರಿಸಿರುವಂತೆ, ಈ ಸುವಿಧಿರಾಜನು ಉಡಿದಾರವನ್ನು ಕಟ್ಟಿರುವ ವಿಸ್ತಾರವಾದ ಕಟಿಪ್ರದೇಶವನ್ನು ಧರಿಸಿದ್ದನು.

೧ ಮುಖಕಮಲಸ್ಯ. ೨ ರಂಧ್ರಾಭ್ಯಾಂ. ೩ ಲಕ್ಷ್ಮ್ಯಾಃ. ೪ ಕುಂಭೌ ತು ಪಿಂಡೌ ಶಿರಸ ಇತ್ಯಮರಃ. ೫ ದೈರ್ಘ್ಯಂ. ೬ ಪರಿಧಿಃ. ೭ ವಿಸ್ತಾರಂ. ೮ ಪಿನದ್ಧಕಟೀಸೂತ್ರಂ.

**ಸೋಧಾತ್ಕನಕರಾಜೀವಕಿಂಜಲ್ಕ[೧]ಪರಿಪಿಂಜರೌ ।**
**ಊರೂ ಜಗದ್ಗೃಹೋದಗ್ರತೋರಣಸ್ತಂಭಸನ್ನಿಭೌ ॥ ೧೩೭ ॥**

ಆ ಸುವಿಧಿಯು ಜಗತ್ತೆಂಬ ಮನೆಯ ಉನ್ನತವಾದ ತೋರಣಸ್ತಂಭಗಳಿಗೆ ಸದೃಶವೂ ಸ್ವರ್ಣಕಮಲದ ಕುಸುಮದಂತೆ ಹಳದಿ ಬಣ್ಣವುಳ್ಳುದೂ ಆದ ಎರಡು ತೊಡೆಗಳನ್ನು ಧರಿಸಿದ್ದನು.

**[೨]ಜಂಘಾದ್ವಯಂ ಚ [೩]ಸುಶ್ಲಿಷ್ಟಂ ನೃಣಾಂ ಚಿತ್ತಸ್ಯ ರಂಜಕಮ್ ।**
**ಸಾಲಂಕಾರಂ ವ್ಯಜೇಷ್ಟಾಸ್ಯ ಸುಕವೇಃ ಕಾವ್ಯಬಂಧನಮ್ ॥ ೧೩೮ ॥**

ಶ್ರೇಷ್ಠನಾದ ಕವಿಯ ಉಪಮಾ ಮೊದಲಾದ ಅಲಂಕಾರಗಳುಳ್ಳುದೂ ಶ್ಲೇಷಾರ್ಥಗಳುಳ್ಳುದೂ ಮನುಷ್ಯರ ಮನೋರಂಜಕವೂ ಆದ ಕಾವ್ಯರಚನೆಯನ್ನು ಈ ಸುವಿಧಿರಾಜನ ಅಲಂಕಾರಗಳುಳ್ಳುದೂ ಸುದೃಢವೂ ಮನುಷ್ಯರ ಮನೋರಂಜಕವೂ ಆದ ಕಣಕಾಲುಗಳೆರಡು ಜಯಿಸಿದುವು.

**ತತ್ಕ್ರಮಾಬ್ಜಂ ಮೃದುಸ್ಪರ್ಶಂ ಲಕ್ಷ್ಮೀ[೪]ಸಂವಾಹನೋಚಿತಮ್ ।**
**[೫]ಶೋಣಿಮಾನಂ ದಧೇ ಲಗ್ನಮಿವ ತತ್ಕರಪಲ್ಲವಾತ್ ॥ ೧೩೯ ॥**

ಲಕ್ಷ್ಮಿಯು ತಿಕ್ಕುವುದಕ್ಕೆ ಯೋಗ್ಯವೂ ಮೃದುವಾದ ಸ್ಪರ್ಶವುಳ್ಳುದೂ ಆದ ಆ ಸುವಿಧಿಯ ಪಾದಕಮಲವು, ಆ ಲಕ್ಷ್ಮೀದೇವಿಯ ತಳಿರಿನಂತಿರುವ ಕೈಗಳ ಸ್ಪರ್ಶದಿಂದಲೋ ಎಂಬಂತೆ ಕೆಂಪಾಗಿದ್ದಿತು.

**ಇತ್ಯಾವಿಷ್ಕೃತರೂಪೇಣ ಹಾರಿಣಾ ಚಾರುಲಕ್ಷ್ಮಣಾ ।**
**ಮನಾಂಸಿ ಜಗತಾಂ [೬]ಜಹ್ರೇ ಸ[೭]ಬಲಾದ್ಬಾಲಕೋಽಪಿ ಸನ್ ॥ ೧೪೦ ॥**

ಹೀಗೆ ಆ ಸುವಿಧಿಯು ಬಾಲಕನಾಗಿದ್ದರೂ ಸ್ಪಷ್ಟವೂ ಮನೋಹರವೂ ಆದ ಉತ್ತಮಲಕ್ಷಣದಿಂದ ಬಲಾತ್ಕಾರವಾಗಿ ಜನಗಳ ಮನಸ್ಸುಗಳನ್ನು ಅಪಹರಿಸಿದನು.

**ಸ ತಥಾ ಯೌವನಾರಂಭೇ ಮದನೋ[೮]ತ್ತೋಚಕಾರಿಣಿ ।**
**ವಶೀ [೯]ಯುವಜರನ್ನಾಸೀದರಿಷಡ್ವರ್ಗನಿಗ್ರಹಾತ್ ॥ ೧೪೧ ॥**

ಹಾಗೆಯೇ ಆ ಜಿತೇಂದ್ರಿಯನಾದ ಸುವಿಧಿರಾಜನು ಮನ್ಮಥೋದ್ರೇಕವನ್ನುಂಟು ಮಾಡುವ ಯೌವನದ ಆರಂಭದಲ್ಲಿ ಕಾಮ ಕ್ರೋಧ ಲೋಭ ಮಾನ ಮದ ಹರ್ಷಗಳೆಂಬ ಅರಿಷಡ್ವರ್ಗಗಳನ್ನು ನಿಗ್ರಹಿಸಿ ವಯಸ್ಸಿನಿಂದ ಯುವಕನೂ ಗುಣದಿಂದ ವೃದ್ಧನೂ ಆಗಿದ್ದನು.

**ಸೋಽನುಮೇನೇ ಯಥಾಕಾಲಂ ಸತ್ಕಲತ್ರಪರಿಗ್ರಹಮ್ ।**
**ಉಪರೋಧಾ[೧೦]ದ್ಗುರೋಃ ಪ್ರಾಪ್ತರಾಜ್ಯಲಕ್ಷ್ಮೀ[೧೧]ಪರಿಚ್ಛದಃ ॥ ೧೪೨ ॥**

ಆ ಸುವಿಧಿಯು ಯೋಗ್ಯಕಾಲದಲ್ಲಿ ತಂದೆಯ ನಿರ್ಬಂಧದಿಂದ ರಾಜ್ಯಲಕ್ಷ್ಮಿಯ ಪರಿವಾರವನ್ನು ಹೊಂದಿ ಉತ್ತಮವಾದ ಸ್ತ್ರೀಯನ್ನು ಪರಿಗ್ರಹಿಸುವುದಕ್ಕೆ ಸಮ್ಮತಿಸಿದನು.

**ಚಕ್ರಿಣೋಽಭಯಘೋಷಸ್ಯ [೧೨]ಸ್ವಸ್ರೀಯೋಽಯಂ [೧೩]ಯತೋ ಯುವಾ ।**
**ತತಶ್ಚಕ್ರಿಸುತಾನೇನ ಪರಿಣಿನ್ಯೇ ಮನೋರಮಾ ॥ ೧೪೩ ॥**

ಈ ಸುವಿಧಿಯು ಅಭಯಘೋಷಚಕ್ರವರ್ತಿಯ ಸಹೋದರಿಯ ಮಗನಾಗಿದ್ದುದರಿಂದ ಆ ಚಕ್ರವರ್ತಿಯ ಮಗಳಾಗಿದ್ದ ಮನೋರಮೆಯನ್ನು ವಿವಾಹ ಮಾಡಿಕೊಂಡನು.

**ತಯಾನುಕೂಲಯಾ[೧೪]ಸತ್ಯಾ ಸ ರೇಮೇ ಸುಚಿರಂ ನೃಪಃ ।**
**ಸುಶೀಲಮನುಕೂಲಂ ಚ ಕಲತ್ರಂ ರಮಯೇನ್ನರಮ್ ॥ ೧೪೪ ॥**

ಪತಿಗೆ ಅನುಕೂಲಳೂ ಪತಿವ್ರತೆಯೂ ಆದ ಆ ಮನೋರಮೆಯೊಡನೆ ಸುವಿಧಿರಾಜನು ಬಹುಕಾಲದವರೆಗೆ ಕ್ರೀಡಿಸುತ್ತಿದ್ದನು. ಸುಶೀಲೆಯೂ ಪತಿಗೆ ಅನುಕೂಲಳೂ ಆದ ಪತ್ನಿಯು ಮನುಷ್ಯನನ್ನು ಸಂತೋಷಪಡಿಸುವಳು.

**ತಯೋರತ್ಯಂತಸಂಪ್ರೀತ್ಯಾ ಕಾಲೇ ಗಚ್ಛತ್ಯನಂತರಮ್ ।**
**ಸ್ವಯಂಪ್ರಭೋ ದಿವಶ್ಚ್ಯುತ್ವಾ ಕೇಶವಾಖ್ಯಃ ಸುತೋಽಜನಿ ॥ ೧೪೫ ॥**

ಅತ್ಯಂತಪ್ರೀತಿಯಿಂದ ಆ ದಂಪತಿಗಳ ಕಾಲವು ಕಳೆಯುತ್ತಿರಲು ಸ್ವಯಂಪ್ರಭದೇವನು ಸ್ವರ್ಗದಿಂದ ಚ್ಯುತನಾಗಿ ಈ ದಂಪತಿಗಳಿಗೆ ಕೇಶವನೆಂಬ ಮಗನಾಗಿ ಹುಟ್ಟಿದನು.

**ವಜ್ರಜಂಘಭವೇ ಯಾಸೌ ಶ್ರೀಮತೀತ್ಯಸ್ಯ ವಲ್ಲಭಾ ।**
**ಸೈವಾಸ್ಯ ಪುತ್ರತಾಂ ಯಾತಾ ಸಂಸೃತಿಸ್ಥಿತಿರೀದೃಶೀ ॥ ೧೪೬ ॥**

ವಜ್ರಜಂಘಭವದಲ್ಲಿ ಯಾವ ಶ್ರೀಮತಿಯು ವಜ್ರಜಂಘನಿಗೆ ಪ್ರಾಣಕಾಂತೆಯಾಗಿದ್ದಳೋ ಅವಳೇ ಈ ಸುವಿಧಿಗೆ ಪುತ್ರನಾಗಿ ಹುಟ್ಟಿದಳು. ಸಂಸಾರಸ್ಥಿತಿಯು ಈ ಪ್ರಕಾರವಾಗಿದೆ.

**ತಸ್ಮಿನ್ಸುತೇ ನೃಪಸ್ಯಾಸ್ಯ ಪ್ರೀತಿರಾಸೀದ್ಗರೀಯಸೀ ।**
**ಪುತ್ರಮಾತ್ರಂ ಚ ಸಂಪ್ರೀತ್ಯೈ ಕಿಮುತೇ[೧]ಷ್ಟಾಂಗನಾಚರಃ ॥ ೧೪೭ ॥**

ಆ ಮಗನಲ್ಲಿ ಸುವಿಧಿರಾಜನಿಗೆ ಅತ್ಯಧಿಕವಾದ ಪ್ರೇಮವಿದ್ದಿತು. ಸಾಮಾನ್ಯವಾದ ಪುತ್ರನೇ ತಂದೆಗೆ ಪ್ರೀತಿಪಾತ್ರನಾಗಿರುತ್ತಾನೆ. ಪೂರ್ವಭವದಲ್ಲಿ ಪ್ರೀತಿಪಾತ್ರಳಾಗಿದ್ದ ಪತ್ನಿಯು ಮಗನಾಗಿ ಹುಟ್ಟಿದರೆ ಹೇಳುವುದೇನು ?

**ಶಾರ್ದೂಲಾರ್ಯಚರಾದ್ಯಾಶ್ಚ ದೇಶೇತ್ರೈವ ನೃಪಾತ್ಮಜಾಃ ।**
**ಜಾತಾಃ ಸಮಾನಪುಣ್ಯತ್ವಾದನ್ಯೋನ್ಯಸದೃಶರ್ದ್ಧಯಃ ॥ ೧೪೮ ॥**

ಮೊದಲು ಹುಲಿಯೂ ಆರ್ಯನೂ ಮೊದಲಾದುವುಗಳಾಗಿದ್ದ ತಿರ್ಯಕ್ಪ್ರಾಣಿಗಳು ಇದೇ ಮಹಾವತ್ಸದೇಶದಲ್ಲಿ ರಾಜಪುತ್ರರಾಗಿ ಹುಟ್ಟಿದುವು. ಸಮಾನಪುಣ್ಯವುಳ್ಳವರಾದುದರಿಂದ ಎಲ್ಲರೂ ಸಮಾನಸಂಪತ್ತುಳ್ಳವರಾದರು.

**ವಿಭೀಷಣನೃಪಾತ್ಸುತಃ ಪ್ರಿಯದತ್ತೋದರೇಜನಿ ।**
**ದೇವ[೨]ಶ್ಚಿತ್ರಾಂಗದಶ್ಚ್ಯುತ್ವಾ ವರದತ್ತಾಹ್ವಯೋ [೩]ದಿವಃ ॥ ೧೪೯ ॥**

ಮೊದಲು ಹುಲಿಯಾಗಿದ್ದ ಚಿತ್ರಾಂಗದದೇವನು ಈಶಾನಕಲ್ಪದ ಚಿತ್ರಾಂಗದ ವಿಮಾನದಿಂದ ಚ್ಯುತನಾಗಿ ವಿಭೀಷಣರಾಜನಿಗೂ ಪ್ರಿಯದತ್ತೆಗೂ ವರದತ್ತನೆಂಬ ಮಗನಾಗಿ ಹುಟ್ಟಿದನು.

**ನಂದಿಷೇಣನೃಪಾನಂತಮತ್ಯೋಃ ಸೂನುರಜಾಯತ ।**
**[೪]ಮಣಿಕುಂಡಲನಾಮಾಸೌ ವರಸೇನಸಮಾಹ್ವಯಃ ॥ ೧೫೦ ॥**

ಮೊದಲು ಹಂದಿಯಾಗಿದ್ದ ಮಣಿಕುಂಡಲದೇವನು ಸ್ವರ್ಗದಿಂದ ಚ್ಯುತನಾಗಿ ನಂದಿಷೇಣರಾಜನಿಗೂ ಅನಂತಮತಿಗೂ ವರಸೇನನೆಂಬ ಮಗನಾಗಿ ಜನಿಸಿದನು.

**ರತಿಷೇಣಮಹೀಭರ್ತುಶ್ಚಂದ್ರಮತ್ಯಾಂ ಸುತೋಽಜನಿ ।**
**[೫]ಮನೋಹರೋ [೬]ದಿವಶ್ಚ್ಯುತ್ವಾ ಚಿತ್ರಾಂಗದಸಮಾಖ್ಯಯಾ ॥ ೧೫೧ ॥**

ಮೊದಲು ಕಪಿಯಾಗಿದ್ದ ಮನೋಹರದೇವನು ಸ್ವರ್ಗದಿಂದ ಚ್ಯುತನಾಗಿ ರತಿಷೇಣರಾಜನಿಗೆ ಚಂದ್ರಮತಿಯಲ್ಲಿ ಚಿತ್ರಾಂಗದನೆಂಬ ಪುತ್ರನಾಗಿ ಹುಟ್ಟಿದನು.

**ಪ್ರಭಂಜನನೃಪಾಚ್ಚಿತ್ರಮಾಲಿನ್ಯಾಂ ಸ [೭]ಮನೋರಥಃ ।**
**ಪ್ರಶಾಂತಮದನಃ ಸೂನುರಜನಿಷ್ಟ [೮]ದಿವಶ್ಚ್ಯುತಃ ॥ ೧೫೨ ॥**

೧ ಇವ. ೨ ಜಂಘಾ ತು ಪ್ರಸೃತಾ ಜಾನ್ವಿತ್ಯಮರಃ. ೩ ಸುಸಂಬದ್ಧಂ, ಶ್ಲೇಷಗುಣಯುಕ್ತಂ ಚ. ೪ ಮರ್ದನಂ. ೫ ಶೋಣತ್ವಂ. ೬ ಅಪಹರತಿ ಸ್ಮ. ೭ ಶಕ್ತಿಮಾಶ್ರಿತ್ಯ. ೮ ಉದ್ರೇಕಃ. ೯ ವಯಸಾ ಯುವಾ, ಗುಣೇನ ವೃದ್ಧ ಇತ್ಯರ್ಥಃ. ೧೦ ಪಿತುಃ. ೧೧ ಪರಿಕರಃ. ೧೨ ಭಾಗಿನೇಯಃ. ೧೩. ಕಾರಣಾತ್. ೧೪ ಪತಿವ್ರತಯಾ.

೧ ಪೂರ್ವಮಿಷ್ಟಾಂಗನಾ. ೨ ವ್ಯಾಘ್ರಚರಃ. ೩ ಈಶಾನಕಲ್ಪಸ್ಥಚಿತ್ರಾಂಗದವಿಮಾನಾತ್. ೪ ವರಾಹಚರಃ. ೫ ಮರ್ಕಟಚರಃ. ೬ ನಂದವಿಮಾನಾತ್. ೭ ನಕುಲಚರಃ. ೮ ನಂದ್ಯಾವರ್ತವಿಮಾನಾತ್.

ಮೊದಲು ಮುಂಗಸಿಯಾಗಿದ್ದ ಮನೋರಥದೇವನು ಸ್ವರ್ಗದಿಂದ ಚ್ಯುತನಾಗಿ ಪ್ರಭಂಜನರಾಜನಿಗೂ ಚಿತ್ರಮಾಲಿನಿಗೂ ಪ್ರಶಾಂತಮದನನೆಂಬ ಮಗನಾಗಿ ಜನಿಸಿದನು.

**ತೇ ಸರ್ವೇ ಸದೃಶಾಕಾರರೂಪಲಾವಣ್ಯಸಂಪದಃ ।**
**ಸ್ವೋಚಿತಾಂ ಶ್ರಿಯಮಾಸಾದ್ಯ ಚಿರಂ ಭೋಗಾನಭುಂಜತ ॥ ೧೫೩ ॥**

ಮೇಲೆ ಹೇಳಿದ ನಾಲ್ಕು ಜನ ರಾಜಪುತ್ರರೂ ಸಮಾನವಾದ ಆಕಾರರೂಪ ಲಾವಣ್ಯಸಂಪತ್ತುಗಳುಳ್ಳವರಾಗಿ ತಮಗೆ ಉಚಿತವಾದ ಲಕ್ಷ್ಮಿಯನ್ನು ಹೊಂದಿ ಬಹುಕಾಲದವರೆಗೆ ಭೋಗಗಳನ್ನನುಭವಿಸಿದರು.

**ತತೋ[೧]ಮೀ ಚಕ್ರಿಣಾನ್ಯೇದ್ಯುರಭಿವಂದ್ಯ ಸಮಂ ಜಿನಮ್ ।**
**ಭಕ್ತ್ಯಾ ವಿಮಲವಾಹಾಖ್ಯಂ ಮಹಾಪ್ರಾವ್ರಾಜ್ಯಮಾಸ್ಥಿತಾಃ ॥ ೧೫೪ ॥**

ತರುವಾಯ ಈ ನಾಲ್ಕು ಜನ ರಾಜಪುತ್ರರೂ ಒಂದುದಿನ ಅಭಯಘೋಷ ಚಕ್ರವರ್ತಿಯೊಡನೆ ಹೋಗಿ ಭಕ್ತಿಯಿಂದ ವಿಮಲವಾಹನಜಿನರನ್ನು ವಂದಿಸಿ ಜಿನದೀಕ್ಷೆಯನ್ನು ಪಡೆದರು.

**ನೃಪೈರಷ್ಟಾದಶಾ[೨]ಭ್ಯಸ್ತಸಹಸ್ರಪ್ರಮಿತೈ[೩]ರಮಾ ।**
**ಸಹಸ್ರೈಃ ಪಂಚಭಿಃ ಪುತ್ರೈಃ ಪ್ರಾವ್ರಾಜೀಚ್ಚಕ್ರವರ್ತ್ಯಸೌ ॥ ೧೫೫ ॥**

ಈ ಅಭಯಘೋಷಚಕ್ರವರ್ತಿಯು ಹದಿನೆಂಟು ಸಾವಿರ ರಾಜರೊಡನೆಯೂ ಐದು ಸಾವಿರ ಪುತ್ರರೊಡನೆಯೂ ಜಿನದೀಕ್ಷೆಯನ್ನು ತೆಗೆದುಕೊಂಡನು.

**ಪರಂ ಸಂವೇಗನಿರ್ವೇದಪರಿಣಾಮಮುಪಾಗತಾಃ ।**
**ತೇ ತೇಪಿರೇ ತಪಸ್ತೀವ್ರಂ ಮಾರ್ಗಂ ಸ್ವರ್ಗಾಪವರ್ಗಯೋಃ ॥ ೧೫೬ ॥**

ಆ ತಪಸ್ವಿಗಳು ಪರಮಸಂವೇಗಪರಿಣಾಮವನ್ನೂ ನಿರ್ವೇದಪರಿಣಾಮವನ್ನೂ ಹೊಂದಿ ಸ್ವರ್ಗಮೋಕ್ಷಕ್ಕೆ ಮಾರ್ಗವಾದ ಕಠಿನ ತಪಸ್ಸನ್ನು ಮಾಡಿದರು.

**ಸಂವೇಗಃ ಪರಮಾ ಪ್ರೀತಿರ್ಧರ್ಮೇ ಧರ್ಮಫಲೇಷು ಚ ।**
**ನಿರ್ವೇದೋ ದೇಹಭೋಗೇಷು ಸಂಸಾರೇ ಚ ವಿರಕ್ತತಾ ॥ ೧೫೭ ॥**

ಧರ್ಮದಲ್ಲಿಯೂ ಧರ್ಮಫಲಗಳಲ್ಲಿಯೂ ಉತ್ಕೃಷ್ಟವಾದ ಪ್ರೀತಿಯು ಸಂವೇಗವೆನಿಸುವುದು. ಶರೀರಭೋಗಗಳಲ್ಲಿಯೂ ಸಂಸಾರದಲ್ಲಿಯೂ ವಿರಕ್ತನಾಗುವಿಕೆಯು ನಿರ್ವೇದವೆನಿಸುವುದು.

**ನೃಪಸ್ತು ಸುವಿಧಿಃ ಪುತ್ರಸ್ನೇಹಾದ್ಗಾರ್ಹಸ್ಥ್ಯಮತ್ಯಜನ್ ।**
**ಉತ್ಕೃಷ್ಟೋಪಾಸಕಸ್ಥಾನೇ ತಪಸ್ತೇಪೇ ಸುದುಶ್ಚರಮ್ ॥ ೧೫೮ ॥**

ಸುವಿಧಿರಾಜನಾದರೋ ಪುತ್ರಪ್ರೇಮದಿಂದ ಗೃಹಸ್ಥಧರ್ಮವನ್ನು ಬಿಡದೆ ಉತ್ಕೃಷ್ಟವಾದ ಶ್ರಾವಕನೆಲೆಯಲ್ಲಿದ್ದು ಕಠಿನವಾದ ತಪಸ್ಸನ್ನು ಮಾಡಿದನು.

**ಸದ್ದರ್ಶನಂ ವ್ರತೋದ್ಯೋತಂ [೪]ಸಮತಾಂ ಪ್ರೋಷಧವ್ರತಮ್ ।**
**ಸಚಿತ್ತಸೇವಾವಿರತಿ[೫]ಮಹಃ ಸ್ತ್ರೀಸಂಗವರ್ಜನಮ್ ॥ ೧೫೯ ॥**

**ಬ್ರಹ್ಮಚರ್ಯಮಥಾರಂಭಪರಿಗ್ರಹಪರಿಚ್ಯುತೀ ।**
**ತತ್ರಾನುಮನನತ್ಯಾಗಂ ಸ್ವೋದ್ದಿಷ್ಟಪರಿವರ್ಜನಮ್ ॥ ೧೬೦ ॥**

**ಸ್ಥಾನಾನಿ ಗೃಹಿಣಾಂ ಪ್ರಾಹುರೇಕಾದಶ ಗಣಾಧಿಪಾಃ ।**
**ಸ ತೇಷು ಪಶ್ಚಿಮಂ ಸ್ಥಾನಮಾಸಸಾದ ಕ್ರಮಾನ್ನೃಪಃ ॥ ೧೬೧ ॥**

ಸಮ್ಯಗ್ದರ್ಶನವನ್ನೂ ನಿರತಿಚಾರವಾದ ವ್ರತವನ್ನೂ ಸಾಮಯಿಕವನ್ನೂ ಪ್ರೋಷಧೋಪವಾಸವನ್ನೂ ಸಚಿತ್ತವಸ್ತುಸೇವನೆಯ ತ್ಯಾಗವನ್ನೂ ಹಗಲು ಸ್ತ್ರೀಸಂಗತ್ಯಾಗವನ್ನೂ ಬ್ರಹ್ಮಚರ್ಯವನ್ನೂ ಆರಂಭತ್ಯಾಗವನ್ನೂ ಪರಿಗ್ರಹ ತ್ಯಾಗವನ್ನೂ ಅನುಮತಿತ್ಯಾಗವನ್ನೂ ಉದ್ದಿಷ್ಟತ್ಯಾಗವನ್ನೂ ಗೃಹಸ್ಥರ ಹನ್ನೊಂದು ಸ್ಥಾನ(ನೆಲೆ)ಗಳನ್ನಾಗಿ ಗಣಧರರು ಹೇಳಿರುತ್ತಾರೆ. ಆ ಸುವಿಧಿರಾಜನು ಕ್ರಮದಿಂದ ಆ ನೆಲೆಗಳನ್ನು ಹೊಂದುತ್ತ ಕೊನೆಯದಾದ ಉದ್ದಿಷ್ಟತ್ಯಾಗ ನೆಲೆಯನ್ನು ಹೊಂದಿದನು.

**ಪಂಚಧೈವಾಣುವ್ರತಾನ್ಯೇಷಾಂ ತ್ರಿವಿಧಂ ಚ ಗುಣವ್ರತಮ್ ।**
**ಶಿಕ್ಷಾವ್ರತಾನಿ ಚತ್ವಾರಿ ವ್ರತಾನ್ಯಾಹುರ್ಗೃಹಾಶ್ರಮೇ ॥ ೧೬೨ ॥**

ಗೃಹಸ್ಥಾಶ್ರಮದಲ್ಲಿರುವ ಈ ಶ್ರಾವಕರಿಗೆ ಐದು ಅಣುವ್ರತಗಳನ್ನೂ ಮೂರು ಗುಣವ್ರತಗಳನ್ನೂ ನಾಲ್ಕು ಶಿಕ್ಷಾವ್ರತಗಳನ್ನೂ ಶಾಸ್ತ್ರದಲ್ಲಿ ಹೇಳಿದ್ದಾರೆ.

**ಸ್ಥೂಲಾತ್ಪ್ರಾಣಾತಿಪಾತಾಚ್ಚ ಮೃಷಾವಾದಾಚ್ಚ ಚೌರ್ಯತಃ ।**
**ಪರಸ್ತ್ರೀಸೇವನಾತ್ತೃಷ್ಣಾಪ್ರಕರ್ಷಾಚ್ಚ ನಿವೃತ್ತಯಃ ॥ ೧೬೩ ॥**

**ವ್ರತಾನ್ಯೇತಾನಿ ಪಂಚ ಸ್ಯುರ್ಭಾವನಾಸಂಸ್ಕೃತಾನಿ ವೈ ।**
**ಸಮ್ಯಕ್ತ್ವಶುದ್ಧಿಯುಕ್ತಾನಿ ಮಹೋದರ್ಕಾಣ್ಯಗಾರಿಣಾಮ್ ॥ ೧೬೪ ॥**

ದ್ವೀಂದ್ರಿಯಮೊದಲಾದ ಪ್ರಾಣಿಗಳನ್ನು ಹಿಂಸೆಮಾಡದಿರುವದೂ ಅಸತ್ಯವನ್ನು ಮಾತನಾಡದಿರುವುದೂ ಕದಿಯದಿರುವುದೂ ಪರಸ್ತ್ರೀಸೇವನೆಯನ್ನು ಮಾಡದಿರುವುದೂ ಬಹಳ ಲೋಭವನ್ನು ಮಾಡದಿರುವುದೂ ಐದು ಅಣುವ್ರತಗಳಾಗಿವೆ. ಐದೈದುಭಾವನೆಗಳಿಂದ ಸ್ಥಿರತ್ವವನ್ನೂ ಸಮ್ಯಗ್ದರ್ಶನದಿಂದ ಶುದ್ಧಿಯನ್ನೂ ಹೊಂದಿದ ಈ ವ್ರತಗಳು ಉತ್ತರಜನ್ಮದಲ್ಲಿ ಉತ್ತಮಫಲಗಳನ್ನುಂಟುಮಾಡುತ್ತವೆ.

**ದಿಗ್ದೇಶಾನರ್ಥದಂಡೇಭ್ಯೋ ವಿರತಿಃ ಸ್ಯಾದ್ಗುಣವ್ರತಮ್ ।**
**ಭೋಗೋಪಭೋಗಸಂಖ್ಯಾನಮಪ್ಯಾಹುಸ್ತದ್ಗುಣವ್ರತಮ್ ॥ ೧೬೫ ॥**

ದಿಗ್ವ್ರತ ದೇಶವ್ರತ ಅನರ್ಥದಂಡವ್ರತಗಳೆಂದು ಗುಣವ್ರತವು ಮೂರು ವಿಧವಾಗಿದೆ. ಭೋಗೋಪಭೋಗವಸ್ತುಗಳನ್ನು ಪರಿಮಾಣಮಾಡಿಕೊಳ್ಳುವುದಕ್ಕೂ ಗುಣವ್ರತವೆಂದು ಹೇಳುತ್ತಾರೆ.

**ಸಮತಾಂ ಪ್ರೋಷಧವಿಧಿಂ ತಥೈವಾತಿಥಿಸಂಗ್ರಹಮ್ ।**
**ಮರಣಾಂತೇ ಚ ಸನ್ನ್ಯಾಸಂ ಪ್ರಾಹುಃ ಶಿಕ್ಷಾವ್ರತಾನ್ಯಪಿ ॥ ೧೬೬ ॥**

ಸಾಮಯಿಕ ಪ್ರೋಷಧವಿಧಿ(ಪ್ರೋಷಧೋಪವಾಸ)ಅತಿಥಿಸಂಗ್ರಹ (ಅತಿಥಿ ಸಂವಿಭಾಗ-ಅತಿಥಿಗಳಿಗೆ ಆಹಾರಪದಾರ್ಥಗಳನ್ನು ಬೇರೆ ತೆಗೆದಿರಿಸುವಿಕೆ) ಮರಣ ಕಾಲದಲ್ಲಿ ಸನ್ನ್ಯಸವನ್ನು ಮಾಡುವುದು. ಇವು ನಾಲ್ಕು ಶಿಕ್ಷಾವ್ರತಗಳಾಗಿವೆ.

**ದ್ವಾದಶಾತ್ಮಕಮೇತದ್ಧಿ ವ್ರತಂ ಸ್ಯಾದ್ಗೃಹಮೇಧಿನಾಮ್ ।**
**ಸ್ವರ್ಗಸೌಧಸ್ಯ ಸೋಪಾನಂ ಪಿಧಾನಮಪಿ ದುರ್ಗತೇಃ ॥ ೧೬೭ ॥**

ಹೀಗೆ ಗೃಹಸ್ಥರ ಹನ್ನೆರಡು ಪ್ರಕಾರವಾದ ಈ ವ್ರತವು ಸ್ವರ್ಗವೆಂಬ ಉಪ್ಪರಿಗೆಗೆ ಮೆಟ್ಟಲಾಗಿಯೂ ದುರ್ಗತಿಯನ್ನು ತಡೆಯುವುದಾಗಿಯೂ ಇದೆ.

**ತತೋ ದರ್ಶನಸಂಪೂತಾಂ ವ್ರತಶುದ್ಧಿಮುಪೇಯಿವಾನ್ ।**
**ಉಪಾಸಿಷ್ಟ ಸ ಮೋಕ್ಷಸ್ಯ ಮಾರ್ಗಂ ರಾಜರ್ಷಿರೂರ್ಜಿತಮ್ ॥ ೧೬೮ ॥**

ತರುವಾಯ ರಾಜರ್ಷಿಯಾದ ಆ ಸುವಿಧಿರಾಜನು ಸಮ್ಯಗ್ದರ್ಶನದಿಂದ ಪವಿತ್ರವಾದ ಶುದ್ಧವ್ರತವನ್ನು ಹೊಂದಿ ಸ್ಥಿರವಾದ ಮೋಕ್ಷಮಾರ್ಗವನ್ನು ಉಪಾಸನೆಮಾಡಿದನು.

**ಅಥಾವಸಾನೇ ನೈರ್ಗ್ರಂಥೀಂ ಪ್ರವ್ರಜ್ಯಾಮುಪಸೇದಿವಾನ್ ।**
**ಸುವಿಧಿರ್ವಿಧಿನಾರಾಧ್ಯ ಮುಕ್ತಿಮಾರ್ಗಮನುತ್ತರಮ್ ॥ ೧೬೯ ॥**

೧ ವ್ಯಾಘ್ರಚರಾದಯಶ್ಚತ್ವಾರಃ. ೨ ಗುಣಿತಂ. ೩ ಸಮಂ. ೪ ಸಾಮಯಿಕಮಿತ್ಯರ್ಥಃ. ೫ ದಿವಾಮೈಥುನ ವರ್ಜನಂ.

**ಸಮಾಧಿನಾ ತನುತ್ಯಾಗಾದಚ್ಯುತೇಂದ್ರೋಭವದ್ವಿಭುಃ ।**
**ದ್ವಾವಿಂಶತ್ಯಬ್ಧಿಸಂಖ್ಯಾತಪರಮಾಯುರ್ಮಹರ್ದ್ಧಿಕಃ ॥ ೧೭೦ ॥**

ಆಮೇಲೆ ಸುವಿಧಿರಾಜನು ತನ್ನ ಅಂತ್ಯಕಾಲದಲ್ಲಿ ನಿರ್ಗ್ರಂಥದೀಕ್ಷೆಯನ್ನು ಪಡೆದು ಶ್ರೇಷ್ಠವಾದ ಮೋಕ್ಷಮಾರ್ಗ(ಸಮ್ಯಗ್ದರ್ಶನಜ್ಞಾನಚಾರಿತ್ರ)ವನ್ನು ವಿಧಿಪೂರ್ವಕವಾಗಿ ಆರಾಧಿಸಿ ಸಮಾಧಿವಿಧಿಯಿಂದ ಶರೀರತ್ಯಾಗವನ್ನು ಮಾಡಿ ಅಚ್ಯುತಸ್ವರ್ಗದಲ್ಲಿ ಇಪ್ಪತ್ತೆರಡುಸಾಗರೋಪಮಾಯುಷ್ಯವುಳ್ಳವನೂ ಮಹಾಋದ್ಧಿಧಾರಕನೂ ಆದ ಅಚ್ಯುತೇಂದ್ರನಾಗಿ ಹುಟ್ಟಿದನು.

**ಕೇಶವಶ್ಚ ಪರಿತ್ಯಕ್ತಕೃತ್ಸ್ನಬಾಹ್ಯೇತರೋಪಧಿಃ ।**
**ನೈಸ್ಸಂಗೀಮಾಶ್ರಿತೋ ದೀಕ್ಷಾಂ ಪ್ರತೀಂದ್ರೋಭವದಚ್ಯುತೇ ॥ ೧೭೧ ॥**

ಕೇಶವನೂ ಬಾಹ್ಯಾಭ್ಯಂತರಪರಿಗ್ರಹಗಳನ್ನೆಲ್ಲ ಪರಿತ್ಯಜಿಸಿ ನಿರ್ಗ್ರಂಥದೀಕ್ಷೆಯನ್ನು ತೆಗೆದುಕೊಂಡು ಆಯುಷ್ಯವು ತೀರಿದನಂತರ ಮೃತಪಟ್ಟು ಅಚ್ಯುತಕಲ್ಪದಲ್ಲಿ ಪ್ರತೀಂದ್ರನಾಗಿ ಹುಟ್ಟಿದನು.

**ಪೂರ್ವೋಕ್ತಾ ನೃಪಪುತ್ರಾಶ್ಚ ವರದತ್ತಾದಯಃ ಕ್ರಮಾತ್ ।**
**ಸಮಜಾಯಂತ ಪುಣ್ಯೈಃ ಸ್ವೈಸ್ತತ್ರ ಸಾಮಾನಿಕಾಃ ಸುರಾಃ ॥ ೧೭೨ ॥**

ಮೊದಲು ಹೇಳಿದ ವರದತ್ತಮೊದಲಾದ ರಾಜಪುತ್ರರೂ ಕ್ರಮದಿಂದ ಆ ಸ್ವರ್ಗದಲ್ಲಿ ತಮ್ಮ ಪುಣ್ಯದಿಂದ ಸಾಮಾನಿಕದೇವರ್ಕಳಾಗಿ ಹುಟ್ಟಿದರು.

**ತತ್ರಾಷ್ಟಗುಣಮೈಶ್ವರ್ಯಂ ದಿವ್ಯಂ ಭೋಗಂ ಚ ನಿರ್ವಿಶನ್ ।**
**ಸ ರೇಮೇ ಸುಚಿರಂ ಕಾಲಮಚ್ಯುತೇಂದ್ರೋಚ್ಯುತಸ್ಥಿತಿಃ ॥ ೧೭೩ ॥**

ಆ ಸ್ವರ್ಗದಲ್ಲಿ ನಾಶರಹಿತವಾದ ಸ್ಥಿತಿಯುಳ್ಳ ಆ ಅಚ್ಯುತೇಂದ್ರನು ಅಣಿಮಾದ್ಯಷ್ಟೈಶ್ವರ್ಯವನ್ನೂ ದಿವ್ಯಭೋಗಗಳನ್ನೂ ಅನುಭವಿಸುವವನಾಗಿ ಬಹುಕಾಲದ ವರೆಗೆ ಸುಖಿಪಡುತ್ತಿದ್ದನು.

**ದಿವ್ಯಾನುಭಾವಮಸ್ಯಾಸೀದ್ವಪುರವ್ಯಾಜಸುಂದರಮ್ ।**
**ವಿಷಶಸ್ತ್ರಾದಿಬಾಧಾಭಿರಸ್ಪೃಷ್ಟಮತಿನಿರ್ಮಲಮ್ ॥ ೧೭೪ ॥**

ಸ್ವಭಾವದಿಂದಲೇ ಸುಂದರವಾದ ಈ ಅಚ್ಯುತೇಂದ್ರನ ದೇಹವು ದಿವ್ಯವಾದ ಪ್ರಭಾವವುಳ್ಳುದೂ ವಿಷಶಸ್ತ್ರಮೊದಲಾದ ಬಾಧೆಗಳಿಂದ ರಹಿತವೂ ಅತ್ಯಂತ ನಿರ್ಮಲವೂ ಆಗಿದ್ದಿತು.

**ಸಂತಾನಕುಸುಮೋತ್ತಂಸಮಸೌ ಧತ್ತೇ ಸ್ಮ ಮೌಲಿನಾ ।**
**ತಪಃಫಲಮತಿಸ್ಫೀತಂ ಮೂರ್ಧ್ನೋದ್ಧೃತ್ಯ ದರ್ಶಯನ್ ॥ ೧೭೫ ॥**

ಈ ಅಚ್ಯುತೇಂದ್ರನು ಅತ್ಯಧಿಕವಾದ ತಪಸ್ಸಿನ ಫಲವನ್ನು ತನ್ನ ಮಸ್ತಕದಿಂದ ಧರಿಸಿ ತೋರಿಸುವವನಂತೆ ತನ್ನ ಕಿರೀಟದಲ್ಲಿ ಕಲ್ಪವೃಕ್ಷದ ಪುಷ್ಪಾಲಂಕಾರವನ್ನು ಧರಿಸಿದನು.

**ಸಹಜೈರ್ಭೂಷಣೈರಸ್ಯ ರುರುಚೇ ರುಚಿರಂ ವಪುಃ ।**
**ದಯಾವಲ್ಲೀಫಲೈ[೧]ರುದ್ಧೈಃ ಪ್ರತ್ಯಂಗಮಿವ [೨]ಸಂಗತೈಃ ॥ ೧೭೬ ॥**

ಈ ಅಚ್ಯುತೇಂದ್ರನ ಸುಂದರವಾದ ಶರೀರವು ಜನ್ಮಕಾಲದಲ್ಲಿಯೇ ಉಂಟಾದ ಆಭರಣಗಳಿಂದ ಪ್ರತಿಯೊಂದು ಅವಯವದಲ್ಲಿಯೂ ಸಂಬಂಧಿಸಿಕೊಂಡಿರುವ ದಯೆಯೆಂಬ ಲತೆಯ ಶ್ರೇಷ್ಠವಾದ ಫಲಗಳಿಂದಲೋಪಾದಿಯಲ್ಲಿ, ಶೋಭಿಸಿದ್ದಿತು.

**[೩]ಸಮಸುಪ್ರವಿಭಕ್ತಾಂಗಃ ಸ ರೇಜೇ ದಿವ್ಯಲಕ್ಷಣೈಃ ।**
**ಸುರದ್ರುಮ ಇವಾಕೀರ್ಣಃ ಪುಷ್ಪೈ [೪]ರುಚ್ಚಾವಚಾತ್ಮಭಿಃ ॥ ೧೭೭ ॥**

ಸಮಚತುರಸ್ರಸಂಸ್ಥಾನಶರೀರವುಳ್ಳ ಆ ಅಚ್ಯುತೇಂದ್ರನು ದಿವ್ಯಲಕ್ಷಣಗಳಿಂದ, ಅನೇಕಪ್ರಕಾರವಾದ ಪುಷ್ಪಗಳಿಂದ ವ್ಯಾಪ್ತವಾದ ಕಲ್ಪವೃಕ್ಷದಂತೆ, ಶೋಭಿಸಿದನು.

**ಶಿರಃ ಸಕುಂತಲಂ ತಸ್ಯ ರೇಜೇ ಸೋಷ್ಣೀಷಪಟ್ಟಕಮ್ ।**
**ಸತಮಾಲಮಿವಾದ್ರೀಂದ್ರಕೂಟಂ ವ್ಯೋಮಾಪಗಾಶ್ರಿತಮ್ ॥ ೧೭೮ ॥**

ಉದ್ದವಾದ ಕುರುಳುಕೂದಲುಗಳಿಂದಲೂ ರುಮಾಲಿನಿಂದಲೂ ಯುಕ್ತವಾದ ಅಚ್ಯುತೇಂದ್ರನ ಮಸ್ತಕವು ಗಂಗಾನದಿಯಿಂದಲೂ ಹೊಂಗೆವೃಕ್ಷಗಳಿಂದಲೂ ಯುಕ್ತವಾದ ಹಿಮವತ್ಪರ್ವತದ ಶಿಖರದಂತೆ, ಪ್ರಕಾಶಿಸಿತು.

**ಮುಖಮಸ್ಯ ಲಸನ್ನೇತ್ರಭೃಂಗಸಂಗತಮಾಬಭೌ ।**
**ಸ್ಮಿತಾಂಶುಭಿರ್ಜಲಾಕ್ರಾಂತಂ ಪ್ರಬುದ್ಧಮಿವ ಪಂಕಜಮ್ ॥ ೧೭೯ ॥**

ಮುಗುಳುನಗೆಯ ಕಿರಣಗಳಿಂದಲೂ ಪ್ರಕಾಶಮಾನವಾದ ನೇತ್ರಗಳೆಂಬ ಭ್ರಮರಗಳಿಂದಲೂ ಯುಕ್ತವಾದ ಅಚ್ಯುತೇಂದ್ರನ ಮುಖವು, ಜಲದಿಂದ ವ್ಯಾಪ್ತವೂ ವಿಕಸಿತವೂ ಆದ ಕಮಲದಂತೆ, ಪ್ರಕಾಶಿಸಿತು.

**ವಕ್ಷಃಸ್ಥಲೇ ಪೃಥೌ ರಮ್ಯೇ ಹಾರಂ ಸೋಧತ್ತ ನಿರ್ಮಲಮ್ ।**
**ಶರದಂಭೋದಸಂಘಾತಮಿವ ಮೇರುಸ್ತಟಾಶ್ರಿತಮ್ ॥ ೧೮೦ ॥**

ಆ ಅಚ್ಯುತೇಂದ್ರನು ಮನೋಹರವೂ ವಿಶಾಲವೂ ಆದ ಎದೆಯಲ್ಲಿ ನಿರ್ಮಲವಾದ ಹಾರವನ್ನು, ಮಹಾಮೇರುಪರ್ವತವು ತನ್ನ ತಪ್ಪಲುಪ್ರದೇಶವನ್ನು ಹೊಂದಿರುವ ಶರತ್ಕಾಲದ ಮೇಘಸಮೂಹವನ್ನೋಪಾದಿಯಲ್ಲಿ, ಧರಿಸಿದನು.

**ಲಸದಂಶುಕ[೧]ಸಂವೀತಂ ಜಘನಂ ತಸ್ಯ ನಿರ್ಬಭೌ ।**
**ತರಂಗಾಕ್ರಾಂತಮಂಭೋಧೇರಿವ ಸೈಕತಮಂಡಲಮ್ ॥ ೧೮೧ ॥**

ಪ್ರಕಾಶಮಾನವಾದ ವಸ್ತ್ರದಿಂದ ಸುತ್ತಲ್ಪಟ್ಟಿರುವ ಆ ಅಚ್ಯುತೇಂದ್ರನ ಕಟಿ(ಸೊಂಟ)ಪ್ರದೇಶವು, ತೆರೆಮಾಲೆಗಳಿಂದ ವ್ಯಾಪ್ತವಾದ ಸಮುದ್ರದ ಮರಳುಗುಡ್ಡೆಯಂತೆ, ಪ್ರಕಾಶಿಸಿತು.

**ಸುವರ್ಣಕದಲೀಸ್ತಂಭವಿಭ್ರಮಂ ರುಚಿಮಾನಶೇ ।**
**ತಸ್ಯೋರುದ್ವಿತಯಂ ಚಾರು ಸುರನಾರೀಮನೋಹರಮ್ ॥ ೧೮೨ ॥**

ದೇವಸ್ತ್ರೀಯರ ಮನಸ್ಸನ್ನು ಅಪಹರಿಸುವ ಆ ಅಚ್ಯುತೇಂದ್ರನ ತೊಡೆಗಳೆರಡು ಬಂಗಾರದ ಬಾಳೆಯ ಸ್ತಂಭಗಳ ಶೋಭೆಯನ್ನು ಧರಿಸಿದುವು.

**ತಸ್ಯ ಪಾದದ್ವಯೇ ಲಕ್ಷ್ಮೀಃ [೨]ಕಾಪ್ಯಭೂದಬ್ಜಶೋಭಿನಿ ।**
**ನಖಾಂಶುಸ್ವಚ್ಛಸಲಿಲೇ ಸರಸೀವ [೩]ಝುಷಾಂಕಿತೇ ॥ ೧೮೩ ॥**

ಕಮಲಗಳೂ ನೀರೂ ಮೀನುಗಳೂ ಉಳ್ಳ ಸರೋವರದಲ್ಲಿ ಅನಿರ್ವಚನೀಯವಾದ ಶೋಭೆಯಿರುವಂತೆ ಕಮಲದಂತೆ ಶೋಭಾಯಮಾನವೂ ಉಗುರುಗಳ ಕಾಂತಿಯುಳ್ಳುದೂ ಮತ್ಸ್ಯಮೊದಲಾದ ಶುಭಲಕ್ಷಣಗಳಿಂದ ಕೂಡಿದುದೂ ಆದ ಆ ಅಚ್ಯುತೇಂದ್ರನ ಪಾದಯುಗ್ಮದಲ್ಲಿ ಅನಿರ್ವಚನೀಯವಾದ ಶೋಭೆಯುಂಟಾಗಿದ್ದಿತು.

**ಇತ್ಯುದಾರತರಂ ಬಿಭ್ರದ್ದಿವ್ಯಂ ವೈಕ್ರಿಯಿಕಂ ವಪುಃ ।**
**ಸ ತತ್ರ ಬುಭುಜೇ ಭೋಗಾನಚ್ಯುತೇಂದ್ರಃ ಸ್ವಕಲ್ಪಜಾನ್ ॥ ೧೮೪ ॥**

ಹೀಗೆ ಅತ್ಯಂತ ಸುಂದರವಾದ ವೈಕ್ರಿಯಿಕದಿವ್ಯಶರೀರವನ್ನು ಧರಿಸಿರುವ ಆ ಅಚ್ಯುತೇಂದ್ರನು ಅಚ್ಯುತಸ್ವರ್ಗದಲ್ಲಿ ಉಂಟಾದ ಭೋಗಗಳನ್ನನುಭವಿಸಿದನು.

**[೪]ಇತೋ ರಜ್ಜೂಃ ಷಡು[೫]ತ್ಪತ್ಯ ಕಲ್ಪೋಸ್ತ್ಯಚ್ಯುತಸಂಜ್ಞಕಃ ।**
**ಸೋಸ್ಯ [೬]ಭುಕ್ತಿರಭೂತ್ಪುಣ್ಯಾತ್ಪುಣ್ಯೈಃ ಕಿಂ ನು ನ ಲಭ್ಯತೇ ॥ ೧೮೫ ॥**

೧ ಪ್ರಶಸ್ತೈಃ. ೨ ಸಂಬದ್ಧೈಃ. ೩ ಸಮಚತುರಸ್ರಸಂಸ್ಥಾನಾಂಗಃ. ೪ ಅನೇಕಾತ್ಮಭಿಃ.

೧ ವೇಷ್ಟಿತಂ. ೨ ಅನಿರ್ವಾಚ್ಯಾ. ೩ ಮತ್ಸ್ಯಯುಕ್ತೇ, ಮತ್ಸ್ಯಾದಿಶುಭಲಕ್ಷಣಯುಕ್ತೇ. ೪ ಭೂಮೇಃ. ೫ ಉತ್ಕ್ರಮ್ಯ. ೬ ಭುಕ್ತಿಕ್ಷೇತ್ರಮಿತ್ಯರ್ಥಃ.

ಈ ಮಧ್ಯಮಲೋಕದಿಂದ ಆರು ರಜ್ಜುಗಳ ಮೇಲೆ ಅಚ್ಯುತಕಲ್ಪವಿದೆ. ಆ ಕಲ್ಪವು ಈ ಅಚ್ಯುತೇಂದ್ರನ ಪುಣ್ಯದಿಂದ ಭೋಗಗಳನ್ನನುಭವಿಸುವ ಕ್ಷೇತ್ರವಾಯಿತು. ಪುಣ್ಯದಿಂದ ಏನುತಾನೆ ಲಭಿಸುವುದಿಲ್ಲ ?

**ತಸ್ಯ ಭುಕ್ತ್ಯೈ ವಿಮಾನಾನಾಂ ಪರಿಸಂಖ್ಯಾ ಮತಾ ಜಿನೈಃ ।**
**ಶತಮೇಕಮಥೈಕೋನಷಷ್ಟಿಶ್ಚ ಪರಮಾಗಮೇ ॥ ೧೮೬ ॥**

ಆ ಅಚ್ಯುತೇಂದ್ರನ ಭೋಗಕ್ಷೇತ್ರವಾದ ಅಚ್ಯುತಕಲ್ಪದಲ್ಲಿ ಅವನ ಉಪಭೋಗಾರ್ಥವಾಗಿ ನೂರೈವತ್ತೊಂಬತ್ತು ವಿಮಾನಗಳಿವೆಯೆಂದು ಜಿನೇಶ್ವರರಿಂದ ಪರಮಾಗಮದಲ್ಲಿ ಹೇಳಲ್ಪಟ್ಟಿದೆ.

**ತ್ರಯೋವಿಂಶಂ ಶತಂ ತೇಷು ವಿಮಾನೇಷು ಪ್ರಕೀರ್ಣಕಾಃ ।**
**ಶ್ರೇಣಿಬದ್ಧಾಸ್ತತೋಽನ್ಯೇಸ್ಯುರತಿರುಂದ್ರಾಃ ಸಹೇಂದ್ರಕಾಃ ॥ ೧೮೭ ॥**

ಆ ವಿಮಾನಗಳಲ್ಲಿ ನೂರಿಪ್ಪತ್ತಮೂರು ಪ್ರಕೀರ್ಣಕವಿಮಾನಗಳು. ಉಳಿದುವು ಬಹಳ ದೊಡ್ಡದಾದ ಶ್ರೇಣಿಬದ್ಧ ವಿಮಾನಗಳಾಗಿವೆ. ಈ ವಿಮಾನಗಳ ಮಧ್ಯದಲ್ಲಿ ಇಂದ್ರಕವಿಮಾನವಿದೆ.

**ತ್ರಯಸ್ತ್ರಿಂಶದಥಾಸ್ಯ ಸ್ಯುಸ್ತ್ರಾಯಸ್ತ್ರಿಂಶಾಃ ಸುರೋತ್ತಮಾಃ ।**
**ತೇ ಚ ಪುತ್ರೀಯಿತಾಸ್ತೇನ ಸ್ನೇಹನಿರ್ಭರಯಾ ಧಿಯಾ ॥ ೧೮೮ ॥**

ಈ ಅಚ್ಯುತೇಂದ್ರನಿಗೆ ಮೂವತ್ತಮೂರು ತ್ರಯಸ್ತ್ರಿಂಶದೇವತೆಗಳಿದ್ದಾರೆ. ಆ ದೇವತೆಗಳನ್ನು ಅಚ್ಯುತೇಂದ್ರನು ತನ್ನ ಮಕ್ಕಳಂತೆ ಪ್ರೀತಿಸುತ್ತಾನೆ.

**ಅಯುತಪ್ರಮಿತಾಶ್ಚಾಸ್ಯ ಸಾಮಾನಿಕಸುರಾ ಮತಾಃ ।**
**ತೇಽಪ್ಯಸ್ಯ ಸದೃಶಾಃ ಸರ್ವೈರ್ಭೋಗೈರಾಜ್ಞಾ ತು ಭಿದ್ಯತೇ ॥ ೧೮೯ ॥**

ಈ ಅಚ್ಯುತೇಂದ್ರನಿಗೆ ಅಯುತಪ್ರಮಾಣ(೧೦೦೦೦) ಸಾಮಾನಿಕದೇವತೆಗಳಿದ್ದಾರೆ. ಆ ದೇವತೆಗಳು ಆಜ್ಞೆಯೊಂದನ್ನು ಬಿಟ್ಟು ಬೇರೆ ಎಲ್ಲಾ ಭೋಗಗಳಿಂದಲೂ ಈ ಅಚ್ಯುತೇಂದ್ರನಿಗೆ ಸಮಾನರಾಗಿರುತ್ತಾರೆ.

**ಆತ್ಮರಕ್ಷಾಶ್ಚ ತಸ್ಯೋಕ್ತಾಶ್ಚತ್ವಾರ್ಯೇವಾಯುತಾನಿ ವೈ ।**
**ತೇಽಪ್ಯಂಗರಕ್ಷಕೈಸ್ತುಲ್ಯಾ ವಿಭವಾಯೈವ ವರ್ಣಿತಾಃ ॥ ೧೯೦ ॥**

ಆ ಅಚ್ಯುತೇಂದ್ರನಿಗೆ ನಾಲ್ಕು ಅಯುತಪ್ರಮಾಣ(೪೦೦೦೦) ಆತ್ಮರಕ್ಷಕದೇವತೆಗಳಿದ್ದಾರೆ. ಅವರು ಅಂಗರಕ್ಷಕರಿಗೆ ಸಮಾನರಾಗಿರುತ್ತಾರೆ. ಅಚ್ಯುತೇಂದ್ರನ ವೈಭವವನ್ನು ತೋರಿಸುವುದಕ್ಕೆ ಮಾತ್ರವೇ ಆತ್ಮರಕ್ಷಕದೇವತೆಗಳನ್ನು ವರ್ಣನೆ ಮಾಡಿದುದಾಗಿದೆ. ಶತ್ರುಗಳ ಬಾಧೆಯನ್ನು ನಿವಾರಣೆಮಾಡುವುದಕ್ಕೋಸ್ಕರ ವಲ್ಲವೆಂದು ಭಾವವು.

**ಅಂತಃಪರಿಷದಸ್ಯಾದ್ಯಾ ಸಪಾದಂ ಶತಮಿಷ್ಯತೇ ।**
**ಮಧ್ಯಮಾರ್ಧತೃತೀಯಂ ಸ್ಯಾದ್ಬಾಹ್ಯಾ ತದ್ವಿಗುಣಾ ಮತಾ ॥ ೧೯೧ ॥**

ಈ ಅಚ್ಯುತೇಂದ್ರನಿಗೆ ಮೂರು ಸಭೆಗಳಿವೆ. ಒಳಗಿನ ಸಭೆಯಲ್ಲಿ ನೂರಿಪ್ಪತ್ತೈದು ದೇವತೆಗಳಿದ್ದಾರೆ. ಮಧ್ಯದ ಸಭೆಯಲ್ಲಿ ಇನ್ನೂರೈವತ್ತು ದೇವತೆಗಳಿದ್ದಾರೆ. ಹೊರಗಿನ ಸಭೆಯಲ್ಲಿ ಐನೂರು ದೇವತೆಗಳಿದ್ದಾರೆ.

**ಚತ್ವಾರೋ ಲೋಕಪಾಲಾಶ್ಚ ತಲ್ಲೋಕಾಂತಪ್ರಪಾಲಕಾಃ ।**
**ಪ್ರತ್ಯೇಕಂ ಚ ತಥೈತೇಷಾಂ ದೇವ್ಯೋ ದ್ವಾತ್ರಿಂಶದೇವ ಹಿ ॥ ೧೯೨ ॥**

ಅಚ್ಯುತಕಲ್ಪವನ್ನು ಕಾಪಾಡುವ ನಾಲ್ಕುಮಂದಿ ಲೋಕಪಾಲದೇವತೆಗಳಿದ್ದಾರೆ. ಪ್ರತಿಯೊಬ್ಬ ಲೋಕಪಾಲದೇವನಿಗೆ ಮೂವತ್ತೆರಡು ದೇವಿಯರಿರುತ್ತಾರೆ.

**ಅಷ್ಟಾವಸ್ಯ ಮಹಾದೇವ್ಯೋ ರೂಪಸೌಂದರ್ಯಸಂಪದಾ ।**
**ತನ್ಮನೋಲೋಹಮಾಕ್ರಷ್ಟುಂ ಕ್ಲೃಪ್ತಾಯಸ್ಕಾಂತಪುತ್ರಿಕಾಃ ॥ ೧೯೩ ॥**

ಈ ಅಚ್ಯುತೇಂದ್ರನಿಗೆ ಎಂಟುಮಂದಿ ಮಹಾದೇವಿಯರಿರುತ್ತಾರೆ. ಆ ದೇವಿಯರು ತಮ್ಮ ರೂಪ ಸೌಂದರ್ಯದಿಂದ ಅಚ್ಯುತೇಂದ್ರನ ಮನಸ್ಸೆಂಬ ಲೋಹವನ್ನು ಆಕರ್ಷಣಮಾಡುವುದಕ್ಕೋಸ್ಕರ ಮಾಡಿದ ಸೂಜಿಕಲ್ಲಿನ ಬೊಂಬೆಗಳೋಪಾದಿಯಲ್ಲಿರುತ್ತಾರೆ.

**ಅನ್ಯಾ ವಲ್ಲಭಿಕಾಸ್ತಸ್ಯ ತ್ರಿಷಷ್ಟಿಃ ಪರಿಕೀರ್ತಿತಾಃ ।**
**ಏಕಶೋಽಗ್ರಮಹಿಷ್ಯರ್ಧತ್ರಿತೀಯತ್ರಿಶತೈರ್ವೃತಾ ॥ ೧೯೪ ॥**

**ದ್ವೇ ಸಹಸ್ರೇ ತಥೈಕಾಗ್ರಾ ಸಪ್ತತಿಶ್ಚ ಸಮುಚ್ಚಿತಾಃ ।**
**ಸರ್ವಾ ದೇವ್ಯೋಽಸ್ಯ ಯಾಃ ಸ್ಮೃತ್ವಾ ಯಾತಿ ಚೇತೋಽಸ್ಯ ನಿರ್ವೃತಿಮ್ ॥**

ಆ ಅಚ್ಯುತೇಂದ್ರನಿಗೆ ಬೇರೆ ವಲ್ಲಭೆಯರು ಅರುವತ್ತಮೂರುಮಂದಿ ಗಳಿರುತ್ತಾರೆ. ಪ್ರತಿಯೊಬ್ಬ ಮಹಾದೇವಿಗೂ ಇನ್ನೂರೈವತ್ತು ಪರಿವಾರದೇವಿಯರಿರುತ್ತಾರೆ. ಒಬ್ಬ ಅಚ್ಯುತೇಂದ್ರನಿಗೆ ಒಟ್ಟು ಎರಡುಸಾವಿರದ ಎಪ್ಪತ್ತೊಂದು ದೇವಿಯರಿರುತ್ತಾರೆ. ಆ ದೇವಿಯರ ಸ್ಮರಣ ಮಾತ್ರದಿಂದಲೇ ಈ ಅಚ್ಯುತೇಂದ್ರನ ಮನಸ್ಸು ಶಾಂತವಾಗುತ್ತದೆ.

**ತಾಸಾಂ ಮೃದುಕರಸ್ಪರ್ಶೈಸ್ತದ್ವಕ್ತ್ರಾಬ್ಜನಿರೀಕ್ಷಣೈಃ ।**
**ಸ ಲೇಭೇಽಭ್ಯಧಿಕಾಂ ತೃಪ್ತಿಂ ಸಂಭೋಗೈರಪಿ ಮಾನಸೈಃ ॥ ೧೯೬ ॥**

ಅಚ್ಯುತೇಂದ್ರನು ಆ ದೇವಸ್ತ್ರೀಯರ ಮೃದುವಾದ ಹಸ್ತಸ್ಪರ್ಶಗಳಿಂದಲೂ ಅವರ ಮುಖಕಮಲಗಳ ನೋಟಗಳಿಂದಲೂ ಮಾನಸಿಕ ಸಂಭೋಗಗಳಿಂದಲೂ ಅತ್ಯಧಿಕವಾದ ತೃಪ್ತಿಯನ್ನು ಹೊಂದಿದನು.

**ಷಟ್ಚತುಷ್ಕಂ ಸಹಸ್ರಾಣಿ ನಿಯುತಾನಿ ದಶೈವ ಚ ।**
**ವಿಕರೋತ್ಯೇಕಶೋ ದೇವೀ ದಿವ್ಯರೂಪಾಣಿ ಯೋಷಿತಾಮ್ ॥ ೧೯೭ ॥**

ಪ್ರತಿಯೊಬ್ಬ ದೇವಿಯೂ ವೈಕ್ರಿಯಿಕಶಕ್ತಿಯಿಂದ ಒಂದು ಲಕ್ಷದ ಇಪ್ಪತ್ತನಾಲ್ಕು ಸಾವಿರ ಸ್ತ್ರೀಯರ ದಿವ್ಯರೂಪಗಳನ್ನು ಮಾಡಿಕೊಳ್ಳುತ್ತಾಳೆ.

**ಚಮೂನಾಂ ಸಪ್ತಕಕ್ಷಾಃ ಸ್ಯುರಾದ್ಯಾತ್ರಾಯುತಯೋರ್ದ್ವಯಮ್ ।**
**ದ್ವಿರ್ದ್ವಿಃ ಶೇಷನಿಕಾಯೇಷು ಮಹಾಬ್ಧೇರಿವ ವೀಚಯಃ ॥ ೧೯೮ ॥**

**ಹಸ್ತ್ಯಶ್ವರಥಪಾದಾತವೃಷಗಂಧರ್ವನರ್ತಕೀಃ ।**
**ಸಪ್ತಾನೀಕಾನ್ಯಶಂತ್ಯಸ್ಯ ಪ್ರತ್ಯೇಕಂ ಚ ಮಹತ್ತರಾನ್ ॥ ೧೯೯ ॥**

ಆ ಅಚ್ಯುತೇಂದ್ರನ ಸೈನ್ಯವು ಆನೆ ಕುದುರೆ ರಥ ಪದಾತಿ ಎತ್ತು ಗಂಧರ್ವ ನರ್ತಕಿಯರೆಂದು ಏಳುಪ್ರಕಾರವಾಗಿದೆ. ಮೊದಲನೆಯ ಭೇದದಲ್ಲಿ ಇಪ್ಪತ್ತುಸಾವಿರ ಆನೆಗಳಿರುತ್ತವೆ. ಎರಡನೆಯ ಭೇದದಲ್ಲಿ ನಲ್ವತ್ತುಸಾವಿರ ಕುದುರೆಗಳಿರುತ್ತವೆ. ಮೂರನೆಯ ಭೇದದಲ್ಲಿ ಎಂಬತ್ತುಸಾವಿರ ರಥಗಳಿರುತ್ತವೆ. ನಾಲ್ಕನೆಯ ಭೇದದಲ್ಲಿ ಒಂದುಲಕ್ಷದ ಅರುವತ್ತುಸಾವಿರ ಪದಾತಿಗಳಿರುತ್ತಾರೆ. ಐದನೆಯ ಭೇದದಲ್ಲಿ ಮೂರುಲಕ್ಷದ ಇಪ್ಪತ್ತುಸಾವಿರ ಎತ್ತುಗಳಿರುತ್ತವೆ. ಆರನೆಯ ಭೇದದಲ್ಲಿ ಆರುಲಕ್ಷದ ನಲ್ವತ್ತುಸಾವಿರ ಗಂಧರ್ವರಿರುತ್ತಾರೆ. ಏಳನೆಯ ಭೇದದಲ್ಲಿ ಹನ್ನೆರಡುಲಕ್ಷದ ಎಂಬತ್ತು ಸಾವಿರ ನರ್ತಕಿಯರಿರುತ್ತಾರೆ. ಹೀಗೆ ದೊಡ್ಡಸಮುದ್ರದ ಅಲೆಗಳಂತೆ ಏಳುಪ್ರಕಾರವಾದ ಮಹಾಸೈನ್ಯಗಳಿರುತ್ತವೆ.

**ಏಕೈಕಸ್ಯಾಶ್ಚ ದೇವ್ಯಾಃ ಸ್ಯಾದಪ್ಸರಃಪರಿಷತ್ತ್ರಯಮ್ ।**
**ಪಂಚವರ್ಗಶ್ಚ ಪಂಚಾಶಚ್ಛತಂ ಚೈವ ಯಥಾಕ್ರಮಮ್ ॥ ೨೦೦ ॥**

ಪ್ರತಿಯೊಬ್ಬ ದೇವಿಗೂ ಅಪ್ಸರಸ್ತ್ರೀಯರ ಮೂರುಸಭೆಗಳಿರುತ್ತವೆ. ಒಳಗಿನ ಸಭೆಯಲ್ಲಿ ಇಪ್ಪತ್ತೈದು ಅಪ್ಸರಸ್ತ್ರೀಯರಿರುತ್ತಾರೆ. ಮಧ್ಯದ ಸಭೆಯಲ್ಲಿ ಐವತ್ತು ಅಪ್ಸರಸ್ತ್ರೀಯರಿರುತ್ತಾರೆ. ಹೊರಗಿನ ಸಭೆಯಲ್ಲಿ ನೂರು ಅಪ್ಸರಸ್ತ್ರೀಯರಿರುತ್ತಾರೆ.

**ಇತ್ಯುಕ್ತಪರಿವಾರೇಣ ಸಾರ್ಧಮಚ್ಯುತಕಲ್ಪಜಾಮ್ ।**
**ಲಕ್ಷ್ಮೀಂ ನಿರ್ವಿಶತಸ್ತಸ್ಯ ವ್ಯಾವರ್ಣ್ಯಾಲಂ ಪರಾಂ ಶ್ರಿಯಮ್ ॥ ೨೦೧ ॥**

ಈಪ್ರಕಾರವಾಗಿ ಹಿಂದೆಹೇಳಿದ ಪರಿವಾರದೊಡನೆ ಅಚ್ಯುತಕಲ್ಪದಲ್ಲಿ ಉಂಟಾದ ಸಂಪತ್ತನ್ನನುಭವಿಸುತ್ತಿರುವ ಆ ಅಚ್ಯುತೇಂದ್ರನ ಪರಮವೈಭವದ ವರ್ಣನೆಯು ಸಾಕು.

**ಮಾನಸೋಽಸ್ಯ [೧]ಪ್ರವೀಚಾರೋ [೨]ವಿಪ್ಸ್ವಾಣೋಽಪ್ಯಸ್ಯ ಮಾನಸಃ ।**
**ದ್ವಾವಿಂಶತಿಸಹಸ್ರೈಶ್ಚ [೩]ಸಮಾನಾಂ ಸಕೃದಾಹರೇತ್ ॥ ೨೦೨ ॥**

ಈ ಅಚ್ಯುತೇಂದ್ರನಿಗೆ ಮಾನಸಿಕವಾದ ಕಾಮಸೇವನೆಯು ಅಂದರೆ ಮನಸ್ಸಿನಲ್ಲಿ ಸ್ಮರಣೆಮಾಡಿದರೆ ತೃಪ್ತಿಯಾಗುವುದು. ಆಹಾರವೂ ಮಾನಸಿಕವಾಗಿರುವುದು. ಇಪ್ಪತ್ತೆರಡುಸಾವಿರವರ್ಷಗಳಿಗೊಂದಾವರ್ತಿ ಆಹಾರವನ್ನು ತೆಗೆದುಕೊಳ್ಳುವನು.

**ತಥೈಕಾದಶಭಿರ್ಮಾಸೈಃ ಸಕೃದುಚ್ಛ್ವಸಿತಂ ಭಜೇತ್ ।**
**ತ್ರ್ಯರತ್ನಿಪ್ರಮಿತೋತ್ಸೇಧದಿವ್ಯದೇಹಧರಃ ಸ ಚ ॥ ೨೦೩ ॥**

ಹಾಗೆಯೇ ಆ ಅಚ್ಯುತೇಂದ್ರನು ಹನ್ನೊಂದುತಿಂಗಳಿಗೊಂದಾವರ್ತಿ ಶ್ವಾಸವನ್ನು ಬಿಡುವನು. ಅವನ ಶರೀರೋತ್ಸೇಧವು ಮೂರು ಗುಡ್ಡುಮೊಳ ಪ್ರಮಾಣವಾಗಿರುವುದು.

**ಧರ್ಮೇಣೇತ್ಯಚ್ಯುತೇಂದ್ರೋಽಸೌ ಪ್ರಾಪತ್ಸಂಪತ್ಪರಂಪರಾಮ್ ।**
**ತಸ್ಮಾತ್ತದರ್ಥಿಭಿರ್ಧರ್ಮೇ ಮತಿಃ ಕಾರ್ಯಾ ಜಿನೋದಿತೇ ॥ ೨೦೪ ॥**

ಈ ಅಚ್ಯುತೇಂದ್ರನು ಪೂರ್ವದಲ್ಲಿ ಧರ್ಮವನ್ನಾಚರಿಸಿದುದರಿಂದ ಹಿಂದೆಹೇಳಿದ ರೀತಿಯಾಗಿ ಅತ್ಯಧಿಕವಾದ ಸಂಪತ್ತನ್ನು ಪಡೆದನು. ಆದುದರಿಂದ ಸ್ವರ್ಗದಲ್ಲಿ ಇಂದ್ರನ ಸಂಪತ್ತನ್ನು ಅಪೇಕ್ಷಿಸುವವರು ಜಿನೇಶ್ವರನು ಹೇಳಿದ ಧರ್ಮದಲ್ಲಿ ಮನಸ್ಸನ್ನಿಡಬೇಕು.

**ಅಥ [೪]ಸುಲಲಿತವೇಷಾ ದಿವ್ಯಯೋಷಾಃ ಸಭೂಷಾಃ ।**
**ಸುರಭಿಕುಸುಮಮಾಲಾಃ [೫]ಸ್ರಸ್ತಚೂಲಾಃ ಸಲೀಲಾಃ ॥**
**ಮಧುರವಿರುತಗಾನಾ[೬]ರಬ್ಧತಾನಾಃ [೭]ಸಮಾನಾಃ ।**
**ಪ್ರಮದಭರಮನೂನಂ ನಿನ್ಯುರೇನಂ ಸುರೇನಮ್ ॥ ೨೦೫ ॥**

ತರುವಾಯ ಮನೋಹರವಾದ ಆಕಾರವುಳ್ಳವರೂ ಆಭರಣಭೂಷಿತರೂ ಪರಿಮಳವಾದ ಪುಷ್ಪಮಾಲೆಗಳನ್ನು ಧರಿಸಿರುವವರೂ ಸಡಿಲಿದ ಕೇಶಪಾಶ(ಹೆರಳು)ಗಳುಳ್ಳವರೂ ವಿಲಾಸಿನಿಯರೂ ಆರಂಭಿಸಿದ ಸ್ವರದಲ್ಲಿ ತಂದುಬಿಡುವುದೆಂಬ ತಾನದಿಂದ ಮನೋಹರವಾಗಿ ಗಾನಮಾಡುವವರೂ ಅಹಂಕಾರಯುಕ್ತರೂ ಆದ ದೇವಸ್ತ್ರೀಯರು ದೇವತೆಗಳಿಗೆ ಪ್ರಭುವಾದ ಈ ಅಚ್ಯುತೇಂದ್ರನಿಗೆ ಅಪರಿಮಿತವಾದ ಆನಂದವನ್ನುಂಟುಮಾಡಿದರು.

**ಲಲಿತಪದವಿಹಾರೈರ್ಭ್ರೂವಿಕಾರೈರುದಾರೈಃ ।**
**ನಯನಯುಗವಿಲಾಸೈರಂಗಲಾಸ್ಯೈಃ ಸಹಾಸ್ಯೈಃ ॥**
**ಪ್ರಕಟಿತ[೧]ಮೃದುಭಾವೈಃ [೨]ಸಾನುಭಾವೈಶ್ಚ [೩]ಭಾವೈಃ ।**
**ಜಗೃಹುರಥ ಮನೋಽಸ್ಯಾಬ್ಜೋಪಮಾಸ್ಯಾ [೪]ವಯಸ್ಯಾಃ ॥ ೨೦೬ ॥**

ತರುವಾಯ ಕಮಲಕ್ಕೆ ಸಮಾನವಾದ ಮುಖವುಳ್ಳ ದೇವಸ್ತ್ರೀಯರು ಮನೋಹರವಾದ ಪಾದಚಲನೆಗಳಿಂದಲೂ ಹುಬ್ಬುಗಳ ವಿಕಾರಗಳಿಂದಲೂ ಗಂಭೀರವಾದ ನೇತ್ರವಿಲಾಸಗಳಿಂದಲೂ ಹಾಸ್ಯಮಿಶ್ರವಾದ ಅವಯವಚಲನೆಗಳಿಂದಲೂ ಮಾರ್ದವವನ್ನು ಪ್ರಕಟಪಡಿಸುವುದರಿಂದಲೂ ಅತಿಶಯವಾದ ಮುಖವಿಕಾರಗಳಿಂದಲೂ ಈ ಅಚ್ಯುತೇಂದ್ರನ ಮನಸ್ಸನ್ನು ಅಪಹರಿಸಿದರು. ಸಂತೋಷಪಡಿಸಿದರೆಂದರ್ಥವು.

**ತಾಸಾಮಿಂದುಕಲಾಮಲೇ ಸ್ವವದನಂ ಪಶ್ಯನ್ಕಪೋಲಾಬ್ದಕೇ ।**
**ತದ್ವಕ್ತ್ರಾಂಬುಜಭೃಂಗತಾಂ ಚ [೫]ಘಟಯನ್ನಾಘ್ರಾತವಕ್ತ್ರಾನಿಲಃ ॥**
**ತನ್ನೇತ್ರೈಶ್ಚ ಮನೋಜಬಾಣಸದೃಶೈರ್ಭ್ರೂಚಾಪಮುಕ್ತೈರ್ಭೃಶಮ್ ।**
**ವಿದ್ಧಂ ಸ್ವಂ ಹೃದಯಂ ತದೀಯಕರಸಂಸ್ಪರ್ಶೈಃ ಸಮಾಶ್ವಾಸಯನ್ ॥**

ಆ ದೇವಸ್ತ್ರೀಯರ ಚಂದ್ರನ ಕಲೆಯಂತೆ ನಿರ್ಮಲವಾದ ಕೆನ್ನೆಯೆಂಬ ಕನ್ನಡಿಯಲ್ಲಿ ತನ್ನ ಮುಖವನ್ನು ನೋಡುತ್ತಿರುವವನೂ ಅವರ ಮುಖಕಮಲಗಳಲ್ಲಿ ಭ್ರಮರಭಾವವನ್ನು ಹೊಂದುವವನೂ ಅವರ ಮುಖದ ಗಾಳಿಯನ್ನು ಆಘ್ರಾಣಮಾಡುವವನೂ ಆದ ಅಚ್ಯುತೇಂದ್ರನು ಹುಬ್ಬುಗಳೆಂಬ ಧನುಸ್ಸುಗಳಿಂದ ಬಿಟ್ಟ ಮತ್ತು ಮನ್ಮಥನ ಬಾಣಗಳಿಗೆ ಸಮಾನವಾದ ಅವರ ನೇತ್ರಗಳಿಂದ ಹೊಡೆಯಲ್ಪಟ್ಟ ತನ್ನ ಹೃದಯವನ್ನು ಆ ದೇವಸ್ತ್ರೀಯರ ಹಸ್ತಸ್ಪರ್ಶಗಳಿಂದ ಶಾಂತಪಡಿಸಿದನು.

**ರೇಮೇ ರಾಮಾನನೇಂದುದ್ಯುತಿರುಚಿರತರೇ**
**ಸ್ವೇ ವಿಮಾನೇ [೬]ವಿಮಾನೇ ।**
**ಭುಂಜಾನೋ ದಿವ್ಯಭೋಗಾನಮರಪರಿವೃತೋ**
**[೭]ಯಾ[೮]ನ್ಸುರೇಭ್ಯೈಃ [೯]ಸುರೇಭ್ಯೈಃ ॥**
**ಜೈನೀಂ ಪೂಜಾಂ ಚ ತನ್ವನ್ಮುಹು[೧೦]ರತನುರುಚಾ**
**ಭಾಸಮಾನೋ[೧೧]ಸಮಾನೋ ।**
**ಲಕ್ಷ್ಮೀವಾನಚ್ಯುತೇಂದ್ರಃ ಸುಚಿರಮುರುತರ[೧೨]ಸ್ವಾಂಸಕಾಂತಃ**
**[೧೩]ಸಕಾಂತಃ ॥ ೨೦೮ ॥**

ದೇವಸ್ತ್ರೀಯರ ಮುಖವೆಂಬ ಚಂದ್ರನ ಕಾಂತಿಯಿಂದ ಅಧಿಕವಾಗಿ ಪ್ರಕಾಶಮಾನವೂ ಅಪರಿಮಿತವಾದ ಪ್ರಮಾಣವುಳ್ಳುದೂ ಆದ ತನ್ನ ವಿಮಾನದಲ್ಲಿ ದಿವ್ಯಭೋಗಗಳನ್ನನುಭವಿಸುವವನೂ ದೇವತೆಗಳ ಪರಿವಾರಸಮೇತನಾಗಿ ಶ್ರೇಷ್ಠವಾದ ಶಬ್ದವನ್ನು ಮಾಡುವ ದೇವಗಜಗಳ ಮೇಲೆ ಸವಾರಿ ಮಾಡುವವನೂ ಅಪಾರವಾದ ಕಾಂತಿಯಿಂದ ಪ್ರಕಾಶಮಾನನೂ ಉಪಮಾತೀತನೂ ಉನ್ನತವಾದ ತನ್ನ ಭುಜಶಿರಸ್ಸುಗಳಿಂದ ಮನೋಹರನೂ ಶ್ರೀಮಂತನೂ ಆದ ಅಚ್ಯುತೇಂದ್ರನು ತನ್ನ ಪ್ರಾಣಕಾಂತೆಯರೊಡನೆ ಬಾರಿಬಾರಿಗೂ ಜಿನಪೂಜೆಯನ್ನು ಮಾಡುವವನಾಗಿ ಬಹುಕಾಲದವರೆಗೆ ಸುಖಪಟ್ಟನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಶ್ರೀಮದಚ್ಯುತೇಂದ್ರೈಶ್ವರ್ಯವರ್ಣನಂ ನಾಮ ದಶಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೋಳ್'' ಶ್ರೀಮದಚ್ಯುತೇಂದ್ರೈಶ್ವರ್ಯವರ್ಣನವೆಂಬ
ಹತ್ತನೆಯ ಪರ್ವವು ಸಮಾಪ್ತವಾದುದು.

೧ ಕಾಮಸೇವಾ. ೨ ಆಹಾರಃ. ೩ ವತ್ಸರಾಣಾಂ. ೪ ಮನೋಜ್ಞತಾಸಹಿತಾಕಾರವಿಶೇಷಾಃ. ೫ ಶ್ಲಥಧಮ್ಮಿಲ್ಲಾಃ. ೬ ಉಪಕ್ರಮಿತಸ್ವರವಿಶ್ರಮಸ್ಥಾನಭೇದಾಃ. ೭ ಅಹಂಕಾರಯುಕ್ತಾಃ.

೧ ಮೃದುತ್ವೈಃ. ೨ ಸಸಾಮರ್ಥ್ಯೈಃ. ೩ ಮುಖವಿಕಾರೈಃ. ೪ ವಯಸ್ವಿನ್ಯಃ. ೫ ಸಂಬಂಧಂ ಕುರ್ವನ್. ೬ ವಿಗತಪ್ರಮಾಣೇ. ೭ ಗಚ್ಛನ್. ೮ ದೇವಗಜೈಃ. ೯ ಶೋಭನಶಬ್ದೈಃ. ೧೦ ಪ್ರಚುರಾ. ೧೧ ಅನುಪಮಃ. ೧೨ ನಿಜಭುಜಶಿಖರಃ. ೧೩ ಕಾಂತಾಭಿಃ ಸಹಿತಃ.

॥ ಶ್ರೀ ವೃಷಭಜಿನಾಯ ನಮಃ ॥

# ಅಥೈಕಾದಶಂ ಪರ್ವ

**ಸ್ಫುರಂತಿ ಯಸ್ಯ ವಾಕ್ಪೂಜಾಪ್ರಾಪ್ತ್ಯ [೧]ಪಾಯಗುಣಾಂಶವಃ ।**
**ಸ ವಃ ಪುನಾತು ಭವ್ಯಾಬ್ಜವನಬೋಧೀ ಜಿನಾಂಶುಮಾನ್ ॥ ೧ ॥**

ಯಾವ ಜಿನೇಶ್ವರನ ವಚನ(ದಿವ್ಯಧ್ವನಿ)ವೂ ಪೂಜೆಯೂ ಘಾತಿಕರ್ಮಗಳ ನಾಶದಿಂದುಂಟಾದ ಅನಂತಜ್ಞಾನಾದಿಗುಣಗಳೆಂಬ ಕಿರಣಗಳೂ ಹೊಳೆಯುತ್ತವೋ ಅಂತಹ ಭವ್ಯರೆಂಬ ಕಮಲಗಳನ್ನರಳಿಸುವ ಜಿನೇಶ್ವರನೆಂಬ ಸೂರ್ಯನು ನಿಮ್ಮನ್ನು ಪವಿತ್ರಮಾಡಲಿ.

**ಅಥ ತಸ್ಮಿನ್ದಿವಂ ಮುಕ್ತ್ವಾ ಭುವ[೨]ಮೇಷ್ಯತಿ ತತ್ತನೌ ।**
**ಮ್ಲಾನಿಮಾಯಾತ್ಕಿಲಾ[೩]ಮ್ಲಾನಪೂರ್ವಾ ಮಂದಾರಮಾಲಿಕಾ ॥ ೨ ॥**

ತರುವಾಯ ಆ ಅಚ್ಯುತೇಂದ್ರನು ಸ್ವರ್ಗವನ್ನು ಬಿಟ್ಟು ಭೂಮಿಯನ್ನು ಹೊಂದುತ್ತಿರಲಾಗಿ ಅವನ ಶರೀರದಲ್ಲಿ ಮೊದಲು ಬಾಡದಿದ್ದ ಪಾರಿಜಾತದ ಪುಷ್ಪಮಾಲಿಕೆಯು ಬಾಡಿತು.

**ಸ್ವರ್ಗಪ್ರಚ್ಯುತಿಲಿಂಗಾನಿ ಯಥಾನ್ಯೇಷಾಂ ಸುಧಾಶಿನಾಮ್ ।**
**ಸ್ಪಷ್ಟಾನಿ ನ ತಥೇಂದ್ರಾಣಾಂ ಕಿಂತು [೪]ಲೇಶೇನ ಕೇನಚಿತ್ ॥ ೩ ॥**

ಬೇರೆ ದೇವತೆಗಳ ಸ್ವರ್ಗಚ್ಯುತಿಯ ಚಿಹ್ನೆಗಳು ಸ್ಪಷ್ಟವಾಗಿರುವಂತೆ ಇಂದ್ರರುಗಳ ಸ್ವರ್ಗಚ್ಯುತಿಯ ಚಿಹ್ನೆಗಳು ಸ್ಪಷ್ಟವಾಗಿರುವುದಿಲ್ಲ. ಏಕದೇಶ(ಸ್ವಲ್ಪಭಾಗ)ದಿಂದ ಸ್ಪಷ್ಟವಾಗುತ್ತವೆ.

**ತತೋಽಬೋಧಿ ಸುರೇಂದ್ರೋಽಸೌ ಸ್ವರ್ಗಪ್ರಚ್ಯುತಿಮಾತ್ಮನಃ ।**
**ತಥಾಪಿ ನ [೫]ವ್ಯಷೀದತ್ಸ ತದ್ಧಿ ಧೈರ್ಯಂ ಮಹಾತ್ಮನಾಮ್ ॥ ೪ ॥**

ಆ ಚಿಹ್ನೆಯಿಂದ ಈ ಅಚ್ಯುತೇಂದ್ರನು ತನ್ನ ಸ್ವರ್ಗಚ್ಯುತಿಯನ್ನು ತಿಳಿದನು. ಹಾಗಿದ್ದರೂ ದುಃಖಪಡಲಿಲ್ಲ. ಅದಲ್ಲವೆ ಮಹಾತ್ಮರ ಧೈರ್ಯವೆಂಬುದು ?

**ಷಣ್ಮಾಸಶೇಷಮಾತ್ರಾಯುಃ ಸಪರ್ಯಾಮರ್ಹತಾಮಸೌ ।**
**ಪ್ರಾರೇಭೇ ಪುಣ್ಯಧೀಃ ಕರ್ತುಂ ಪ್ರಾಯಃ ಶ್ರೇಯೋರ್ಥಿನೋ ಬುಧಾಃ ॥**

ಆಯುಷ್ಯವು ಆರು ತಿಂಗಳು ಉಳಿದಾಗ ಪುಣ್ಯಶಾಲಿಯಾದ ಈ ಅಚ್ಯುತೇಂದ್ರನು ಅರ್ಹತ್ಪರಮೇಶ್ವರರ ಪೂಜೆಯನ್ನು ಮಾಡಲಾರಂಭಿಸಿದನು. ವಿವೇಕಿಗಳು ಪ್ರಾಯಶಃ ಶ್ರೇಯಸ್ಸನ್ನೇ ಇಚ್ಛಿಸುವವರಾಗಿರುತ್ತಾರೆ.

**ಸ ಮನಃ [೬]ಪ್ರಣಿಧಾಯಂತೇ [೭]ಪದೇಷು ಪರಮೇಷ್ಠಿನಾಮ್ ।**
**[೮]ನಿಷ್ಠಿತಾಯುರಭೂತ್ಪುಣ್ಯೈಃ [೯]ಪರಿಶಿಷ್ಟೈರಧಿಷ್ಠಿತಃ ॥ ೬ ॥**

ಸ್ವರ್ಗದಲ್ಲಿ ಅನುಭವಿಸಿ ಉಳಿದ ಪುಣ್ಯಗಳಿಂದ ಯುಕ್ತನಾದ ಆ ಅಚ್ಯುತೇಂದ್ರನು ತನ್ನ ಅವಸಾನಕಾಲದಲ್ಲಿ ಮನಸ್ಸನ್ನು ಪಂಚಪರಮೇಷ್ಠಿಗಳ ಪಾದಗಳಲ್ಲಿ ಏಕಾಗ್ರವಾಗಿರಿಸಿ ಆಯುಷ್ಯವನ್ನು ಪೂರ್ತಿಮಾಡಿದನು. ಸ್ವರ್ಗದಿಂದ ಚ್ಯುತನಾದನೆಂದರ್ಥವು.

**ತಥಾಪಿ ಸುಖಸಾದ್ಭೂತಾ ಮಹಾಧೈರ್ಯಾ ಮಹರ್ದ್ಧಯಃ ।**
**ಪ್ರಚ್ಯವಂತೇ ದಿವೋ ದೇವಾ ಧಿಗೇನಾಂ ಸಂಸೃತಿಸ್ಥಿತಿಮ್ ॥ ೭ ॥**

ದೇವತೆಗಳು ಸದಾ ಸುಖಿಗಳೂ ಮಹಾಧೈರ್ಯಶಾಲಿಗಳೂ ಮಹಾಋದ್ಧಿಧಾರಿಗಳೂ ಆಗಿದ್ದರೂ ಸ್ವರ್ಗದಿಂದ ಚ್ಯುತರಾಗುತ್ತಾರೆ. ಈ ಸಂಸಾರಸ್ಥಿತಿಗೆ ಧಿಕ್ಕಾರವಿರಲಿ.

**ತತೋಽಚ್ಯುತೇಂದ್ರಃ ಪ್ರಚ್ಯುತ್ಯ ಜಂಬೂದ್ವೀಪೇ ಮಹಾದ್ಯುತೌ ।**
**ಪ್ರಾಗ್ವಿದೇಹಾಶ್ರಿತೇ ದೇಶೇ ಪುಷ್ಕಲಾವ[೧]ತ್ಯಭಿಷ್ಟವೇ ॥ ೮ ॥**

**ನಗರ್ಯಾಂ ಪುಂಡರೀಕಿಣ್ಯಾಂ ವಜ್ರಸೇನಸ್ಯ ಭೂಭುಜಃ ।**
**ಶ್ರೀಕಾಂತಾಯಾಶ್ಚ ಪುತ್ರೋಽಭೂದ್ವಜ್ರನಾಭಿರಿತಿ ಪ್ರಭುಃ ॥ ೯ ॥**

ಅಚ್ಯುತೇಂದ್ರನು ಆ ಅಚ್ಯುತಸ್ವರ್ಗದಿಂದ ಚ್ಯುತನಾಗಿ ಜಂಬೂದ್ವೀಪದಲ್ಲಿ ಮಹಾಕಾಂತಿವಿಶಿಷ್ಟವಾದ ಪೂರ್ವವಿದೇಹದಲ್ಲಿ ಪುಷ್ಕಲಾವತಿಯೆಂದು ಹೆಸರುಳ್ಳ ದೇಶದಲ್ಲಿ ಪುಂಡರೀಕಿಣೀನಗರದಲ್ಲಿ ವಜ್ರಸೇನರಾಜನಿಗೂ ಆತನ ಪತ್ನಿ ಶ್ರೀಕಾಂತೆಗೂ ವಜ್ರನಾಭಿಯೆಂಬ ಮಗನಾಗಿ ಹುಟ್ಟಿದನು.

**ತಯೋರೇವ ಸುತಾ ಜಾತಾ ವರದತ್ತಾದಯಃ ಕ್ರಮಾತ್ ।**
**ವಿಜಯೋ ವೈಜಯಂತಶ್ಚ ಜಯಂತೋಽಪ್ಯಪರಾಜಿತಃ ॥ ೧೦ ॥**

ಮೊದಲು ಹುಲಿ ಮೊದಲಾದ ತಿರ್ಯಕ್ಪ್ರಾಣಿಗಳಾಗಿದ್ದ ವರದತ್ತ ಮೊದಲಾದ ಸಾಮಾನಿಕದೇವತೆಗಳೂ ತಮ್ಮ ಆಯುಷ್ಯವು ತೀರಿದನಂತರ ಸ್ವರ್ಗದಿಂದ ಚ್ಯುತರಾಗಿ ಆ ವಜ್ರಸೇನಶ್ರೀಕಾಂತೆಯರಿಗೇ ಕ್ರಮದಿಂದ ವಿಜಯ ವೈಜಯಂತ ಜಯಂತ ಅಪರಾಜಿತರೆಂಬ ಮಕ್ಕಳಾಗಿ ಹುಟ್ಟಿದರು.

**ತಥಾಭೂವಂಸ್ತಯೋರೇವ ಪ್ರಿಯಾಃ ಪುತ್ರಾ ಮಹೋದಯಾಃ ।**
**[೨]ಪೂರ್ವೋದ್ದಿಷ್ಟಾಹಮಿಂದ್ರಾಸ್ತೇಽಪ್ಯಧೋಗ್ರೈವೇಯಕಾಚ್ಚ್ಯುತಾಃ ॥ ೧೧ ॥**

ಹಾಗೆಯೇ ಮೊದಲು ಹೇಳಿದ ಮತಿವರ ಮೊದಲಾದವರಾಗಿದ್ದ ಅಹಮಿಂದ್ರರೂ ಅಧೋಗ್ರೈವೇಯಕಸ್ವರ್ಗದಿಂದ ಚ್ಯುತರಾಗಿ ಆ ವಜ್ರಸೇನನಿಗೂ ಶ್ರೀಕಾಂತೆಗೂ ಮಹಾಭಾಗ್ಯಶಾಲಿಗಳಾದ ಪ್ರಿಯಪುತ್ರರಾಗಿ ಹುಟ್ಟಿದರು.

**[೩]ಸುಬಾಹುರಹಮಿಂದ್ರೋಽಭೂದ್ಯಃ ಪ್ರಾಜ್ಞಮತಿವರಃ ಕೃತೀ ।**
**ಆನಂದಶ್ಚ [೪]ಮಹಾಬಾಹುಃ [೫]ಪೀಠಾಹ್ವೋಽಭೂದಕಂಪನಃ ॥ ೧೨ ॥**

ವಜ್ರಜಂಘಭವದಲ್ಲಿ ಪುಣ್ಯಶಾಲಿಯಾಗಿದ್ದ ಮತಿವರಮಂತ್ರಿಯು ಸ್ವರ್ಗದಲ್ಲಿ ಅಹಮಿಂದ್ರನಾಗಿ ಹುಟ್ಟಿ ಅಲ್ಲಿಂದ ಚ್ಯುತನಾಗಿ ಸುಬಾಹುವೆಂಬ ಪುತ್ರನಾಗಿ ಹುಟ್ಟಿದನು. ಆನಂದನೆಂಬ ಪುರೋಹಿತನಾಗಿದ್ದ ಆತ್ಮನು ಸ್ವರ್ಗದಿಂದ ಚ್ಯುತನಾಗಿ ಮಹಾಬಾಹುವೆಂಬ ಪುತ್ರನಾಗಿ ಹುಟ್ಟಿದನು. ಅಕಂಪನನೆಂಬ ಸೇನಾಪತಿಯಾಗಿದ್ದ ಆತ್ಮನು ಸ್ವರ್ಗದಿಂದ ಚ್ಯುತನಾಗಿ ಪೀಠನೆಂಬ ಪುತ್ರನಾಗಿ ಹುಟ್ಟಿದನು.

**[೬]ಮಹಾಪೀಠೋಽಭವತ್ಸೋಽಪಿ ಧನಮಿತ್ರಚರಃ ಸುರಃ ।**
**ಸಂಸ್ಕಾರೈಃ ಪ್ರಾಕ್ತನೈರೇವ ಘಟನ್ಯೈಕತ್ರ ದೇಹಿನಾಮ್ ॥ ೧೩ ॥**

ಧನಮಿತ್ರನೆಂಬ ಶ್ರೇಷ್ಠಿಯಾಗಿದ್ದ ಆತ್ಮನು ಸ್ವರ್ಗದಿಂದ ಚ್ಯುತನಾಗಿ ಮಹಾಪೀಠನೆಂಬ ಪುತ್ರನಾಗಿ ಹುಟ್ಟಿದನು. ಪೂರ್ವಜನ್ಮದ ಸಂಸ್ಕಾರಗಳಿಂದಲೇ ಪ್ರಾಣಿಗಳು ಒಂದೇ ಕಡೆಯಲ್ಲಿ ಸೇರುವುವು.

---

೧ ಘಾತಿಕರ್ಮಣಾಂ ವಿಯೋಗಃ. ೨ ಆಗಮಿಷ್ಯತಿ ಸತಿ. ೩ ಪೂರ್ವಸ್ಮಿನ್ನಮ್ಲಾನಾ. ೪ ಏಕದೇಶೇನ. ೫ ನ ದುಃಖಿಭೂತ್. ೬ ಏಕಾಗ್ರೀಕೃತ್ಯ. ೭ ಪಾದೇಷು. ೮ ವಿನಾಶಿತಾಯುಃ. ೯ ಅವಶಿಷ್ಟೈಃ.

೧ ಸ್ತವನಂ. ೨ ಮತಿವರಾದಯಃ. ೩ ಭವಿಷ್ಯದ್ಭರತಃ. ೪ ಭವಿಷ್ಯದ್ಬಾಹುಬಲೀ. ೫ ಭವಿಷ್ಯದ್ವೃಷಭಸೇನಃ. ೬ ಭವಿಷ್ಯದನಂತವಿಜಯಃ.

**ನಗರ್ಯಾಂ ಕೇಶವೋತ್ರೈವ ಧನದೇವಾಹ್ವಯೋಽಪ್ಯಭೂತ್ ।**
**ಕುಬೇರದತ್ತವಣಿಜೋಽನಂತಮತ್ಯಾಶ್ಚ ನಂದನಃ ॥ ೧೪ ॥**

ಮೊದಲು ಸುವಿಧಿಯ ಪುತ್ರನಾಗಿದ್ದ ಕೇಶವನೂ ಸ್ವರ್ಗದಲ್ಲಿ ಹುಟ್ಟಿ ಅಲ್ಲಿಂದ ಚ್ಯುತನಾಗಿ ಇದೇ ಪುಂಡರೀಕಿಣೀನಗರದಲ್ಲಿ ಕುಬೇರದತ್ತನೆಂಬ ವರ್ತಕನಿಗೂ ಆತನ ಪತ್ನಿಯಾದ ಅನಂತಮತಿಗೂ ಧನದೇವನೆಂಬ ಪುತ್ರನಾಗಿ ಹುಟ್ಟಿದನು.

**ವಜ್ರನಾಭಿರಥಾಪೂರ್ಣಯೌವನೋ ರುರುಚೇ ಭೃಶಮ್ ।**
**ಬಾಲಾರ್ಕ ಇವ ನಿಷ್ಟಪ್ತಚಾಮೀಕರಸಮದ್ಯುತಿಃ ॥ ೧೫ ॥**

ತರುವಾಯ ಪರಿಪೂರ್ಣವಾದ ಯೌವನಾವಸ್ಥೆಯನ್ನು ಹೊಂದಿದ ವಜ್ರನಾಭಿಯು ಕಾಯಿಸಿದ ಬಂಗಾರಕ್ಕೆ ಸಮಾನವಾದ ಶರೀರಕಾಂತಿಯುಳ್ಳವನಾಗಿ ಬಾಲಸೂರ್ಯನಂತೆ ಅಧಿಕವಾಗಿ ಪ್ರಕಾಶಿಸಿದನು.

**ವಿನೀಲಕುಟಿಲೈಃ ಕೇಶೈಃ ಶಿರೋಽಸ್ಯ ರುಚಿಮಾನಶೇ ।**
**ಪ್ರಾವೃಷೇಣ್ಯಾಂಬುದಚ್ಛನ್ನಮಿವ ಶೃಂಗಂ [೧]ಮಹೀಭೃತಃ ॥ ೧೬ ॥**

ಅತ್ಯಂತ ಕಪ್ಪಾದ ಕುರುಳುಕೂದಲುಗಳಿಂದ ಈ ವಜ್ರನಾಭಿಯ ಮಸ್ತಕವು ವರ್ಷಾಕಾಲದ ಮೇಘದಿಂದ ವ್ಯಾಪ್ತವಾದ ಪರ್ವತದ ಶಿಖರದಂತೆ, ಶೋಭೆಯನ್ನು ಹೊಂದಿತು.

**ಕುಂಡಲಾರ್ಕಕರಸ್ಪೃಷ್ಟಗಂಡಪರ್ಯಂತಶೋಭಿನಾ ।**
**ಸ ಬಭಾಸೇ ಮುಖಾಬ್ಜೇನ ಪದ್ಮಾಕರ ಇವೋ[೨]ನ್ನಿಷನ್ ॥ ೧೭ ॥**

ಕರ್ಣಕುಂಡಲವೆಂಬ ಸೂರ್ಯನ ಕಿರಣಗಳು ಕೆನ್ನೆಯ ಮೇಲೆ ಬಿದ್ದು ಶೋಭಿಸುತ್ತಿರುವ ಮುಖವೆಂಬ ಕಮಲದಿಂದ ಆ ವಜ್ರನಾಭಿಯು ವಿಕಸಿತವಾದ ಕಮಲವುಳ್ಳ ಪದ್ಮಸರೋವರದಂತೆ, ಶೋಭಿಸಿದನು.

**ಲಲಾಟಾದ್ರಿತಟೇ ತಸ್ಯ ಭ್ರೂಲತೇ ರೇಜತುಸ್ತರಾಮ್ ।**
**ನೇತ್ರಾಂಶುಪುಷ್ಪಮಂಜರ್ಯಾ ಮಧುಪಾಯಿತ[೩]ತಾರಯಾ ॥ ೧೮ ॥**

ಆ ವಜ್ರನಾಭಿಯ ಹಣೆಯೆಂಬ ಪರ್ವತಪ್ರದೇಶದಲ್ಲಿ ನೇತ್ರಗಳ ಕಿರಣಗಳೆಂಬ ಪುಷ್ಪದ ಗೊಂಚಲುಗಳಿಂದಲೂ ಕರಿಗುಡ್ಡೆಗಳೆಂಬ ಭ್ರಮರಗಳಿಂದಲೂ ಯುಕ್ತವಾದ ಹುಬ್ಬುಗಳೆಂಬ ಎರಡು ಲತೆಗಳು ಅಧಿಕವಾಗಿ ಶೋಭಿಸಿದುವು.

**ಕಾಮಿನೀನೇತ್ರಭೃಂಗಾಲಿಮಾಕರ್ಷನ್ಮುಖಪಂಕಜಮ್ ।**
**[೪]ಸ್ವಾಮೋದಮಾವಿರಸ್ಯಾಭೂತ್ಸ್ಮಿತ[೫]ಕೇಸರನಿರ್ಗಮಮ್ ॥ ೧೯ ॥**

ಕಾಮುಕಸ್ತ್ರೀಯರ ನೇತ್ರಗಳೆಂಬ ಭ್ರಮರಗಳ ಪಂಕ್ತಿಯನ್ನು ಆಕರ್ಷಿಸುವ ಈ ವಜ್ರನಾಭಿಯ ಮುಖವೆಂಬ ಕಮಲವು ಶ್ರೇಷ್ಠವಾದ ಪರಿಮಳವುಳ್ಳುದೂ ಮುಗುಳುನಗೆಯೆಂಬ ಕುಸುಮಗಳಿಂದ ವ್ಯಾಪ್ತವೂ ಆಗಿ ಆವಿರ್ಭವಿಸಿತು.

**ಕಾಂತ್ಯಾಸವಮಿವಾಪಾತುಮಾಪತಂತ್ಯತ್ರಪತ್ತರಾಮ್ ।**
**ಜನತಾನೇತ್ರಭೃಂಗಾಲೀ ತನ್ಮುಖಾಬ್ಜೇ ವಿಕಾಸಿನಿ ॥ ೨೦ ॥**

ಪ್ರಫುಲ್ಲಿತವಾದ ಆ ವಜ್ರನಾಭಿಯ ಮುಖವೆಂಬ ಕಮಲದ ಕಾಂತಿಯೆಂಬ ಪುಷ್ಪರಸವನ್ನು ಪಾನಮಾಡುವುದಕ್ಕೋಸ್ಕರ ಬಂದು ಬೀಳುತ್ತಿರುವ ಜನರ ನೇತ್ರಗಳೆಂಬ ಭ್ರಮರಗಳ ಪಂಕ್ತಿಯು ಅಧಿಕವಾಗಿ ತೃಪ್ತಿಯನ್ನು ಹೊಂದಿತು.

**ನಾಸಿಕಾಸ್ಯ ರುಚಿಂ ದಧ್ರೇ ನೇತ್ರಯೋರ್ಮಧ್ಯವರ್ತಿನೀ ।**
**ಸೀಮೇವ ರಚಿತಾ ಧಾತ್ರಾ ತಯೋಃ ಕ್ಷೇತ್ರಾ[೬]ನತಿಕ್ರಮೇ ॥ ೨೧ ॥**

ಈ ವಜ್ರನಾಭಿಯ ನೇತ್ರಗಳ ಮಧ್ಯದಲ್ಲಿರುವ ಮೂಗು ಆ ನೇತ್ರಗಳು ತಮ್ಮ ಕ್ಷೇತ್ರವನ್ನು ಮೀರದಿರುವುದಕ್ಕೋಸ್ಕರ ಬ್ರಹ್ಮನು ರಚಿಸಿದ ಎಲ್ಲೆಯಂತೆ ಶೋಭಿಸಿತು.

**ಹಾರೇಣ ಕಂಠಪರ್ಯಂತವರ್ತಿನಾಸೌ ಶ್ರಿಯಂ ದಧೇ ।**
**ಮೃಣಾಲವಲಯೇನೇವ ಲಕ್ಷ್ಮ್ಯಾಲಿಂಗನಸಂಗಿನಾ ॥ ೨೨ ॥**

ಲಕ್ಷ್ಮಿಯನ್ನು ಆಲಿಂಗನೆಮಾಡುವಾಗ ಸಂಬಂಧಿಸಿದ ತಾವರೆಬಳ್ಳಿಯ ಕೊಳವೆಯ ಮಾಲಿಕೆಯಂತಿರುವುದೂ ಕಂಠದ ಸಮೀಪದಲ್ಲಿರುವುದೂ ಆದ ಹಾರದಿಂದ ಈ ವಜ್ರನಾಭಿಯು ವಿಶೇಷವಾಗಿ ಶೋಭಿಸಿದನು.

**ವಕ್ಷೋಽಸ್ಯ ಪದ್ಮರಾಗಾಂಶು[೧]ಚ್ಛುರಿತಂ ರುಚಿಮಾನಶೇ ।**
**ಸಾಂದ್ರಬಾಲಾತಪಚ್ಛನ್ನಸಾನೋಃ [೨]ಕನಕಶೃಂಗಿಣಃ ॥ ೨೩ ॥**

ಪದ್ಮರಾಗರತ್ನದ ಕಾಂತಿಯಿಂದ ಯುಕ್ತವಾದ ಈ ವಜ್ರನಾಭಿಯ ಎದೆಯು ದಟ್ಟವಾದ ಎಳೆಬಿಸಿಲಿನಿಂದ ವ್ಯಾಪ್ತವಾದ ತಪ್ಪಲುಳ್ಳ ಮಹಾಮೇರುವಿನ ಶೋಭೆಯನ್ನು ಧರಿಸಿತು.

**ವಕ್ಷಃಸ್ಥಲಸ್ಯ ಪರ್ಯಂತೇ ತಸ್ಯಾಂಸೌ ರುಚಿಮಾಪತುಃ ।**
**ಲಕ್ಷ್ಮ್ಯಾಃ ಕ್ರೀಡಾರ್ಥಮುತ್ತುಂಗೌ ಕ್ರೀಡಾದ್ರೀ ಘಟಿತಾವಿವ ॥ ೨೪ ॥**

ಆ ವಜ್ರನಾಭಿಯ ಎದೆಯ ಸಮೀಪದಲ್ಲಿ ಉನ್ನತವಾದ ಭುಜಶಿರಸ್ಸುಗಳೆರಡು, ಲಕ್ಷ್ಮೀದೇವಿಯ ಕ್ರೀಡೆಗೋಸ್ಕರ ರಚಿಸಿದ ಉನ್ನತವಾದ ಕ್ರೀಡಾಪರ್ವತಗಳಂತೆ, ಶೋಭಿಸುತ್ತಿದ್ದುವು.

**ವಕ್ಷೋಭವನಪರ್ಯಂತೇ ತೋರಣಸ್ತಂಭವಿಭ್ರಮಮ್ ।**
**ಬಾಹೂ ದಧತುರಸ್ಯೋಚ್ಚೈರ್ಹಾರತೋರಣಧಾರಿಣೌ ॥ ೨೫ ॥**

ಈ ವಜ್ರನಾಭಿಯ ಹಾರವೆಂಬ ತೋರಣಗಳನ್ನು ಧರಿಸಿರುವ ಬಾಹು (ತೋಳು)ಗಳೆರಡು, ಆವನ ಎದೆಯೆಂಬ ಮನೆಯ ಸಮೀಪದಲ್ಲಿ ತೋರಣ ಸ್ತಂಭಗಳಂತೆ, ಶೋಭಿಸುತ್ತಿದ್ದಿತು.

**[೩]ವಜ್ರಾಂಗಬಂಧನಸ್ಯಾಸ್ಯ [೪]ಮಧ್ಯೇನಾಭಿ [೫]ಸಮೈಕ್ಷ್ಯತ ।**
**ವಜ್ರಲಾಂಛನಮುದ್ಭೂತಂ [೬]ವರ್ತ್ಸ್ಯತ್ಸಾಮ್ರಾಜ್ಯಲಾಂಛನಮ್ ॥ ೨೬ ॥**

ವಜ್ರದಂತೆ ಶರೀರಬಂಧನವುಳ್ಳ ಈ ವಜ್ರನಾಭಿಯ ನಾಭಿಮಧ್ಯದಲ್ಲಿ ಮೇಲಕ್ಕೆದ್ದಿರುವ ವಜ್ರಲಾಂಛನವು ಮುಂದೆ ಪ್ರಾಪ್ತವಾಗುವ ಸಾಮ್ರಾಜ್ಯದ ಚಿಹ್ನೆಯಾಗಿ ತೋರುತ್ತಿದ್ದಿತು.

**ಲಸದ್ದುಕೂಲಪುಲಿನಂ ರತಿಹಂಸೀನಿಷೇವಿತಮ್ ।**
**ಪರಾಂ ಶ್ರಿಯಮಧಾದಸ್ಯ ಕಟೀಸ್ಥಾನಸರೋವರಮ್ ॥ ೨೭ ॥**

ಪ್ರಕಾಶಮಾನವಾದ ಪಟ್ಟೆವಸ್ತ್ರವೆಂಬ ಮರಳುಳ್ಳುದೂ ರತಿಕ್ರೀಡೆಯೆಂಬ ಸ್ತ್ರೀಹಂಸಪಕ್ಷಿಯಿಂದ ಸೇವಿಸಲ್ಪಟ್ಟುದೂ ಆದ ಈ ವಜ್ರನಾಭಿಯ ಕಟಿಪ್ರದೇಶವೆಂಬ ಸರೋವರವು ಅಧಿಕವಾದ ಶೋಭೆಯನ್ನು ಹೊಂದಿದ್ದಿತು.

**ಸುವೃತ್ತ[೭]ಮಸೃಣಾವೂರೂ ತಸ್ಯ ಕಾಂತಿಮವಾಪತಾಮ್ ।**
**ಸಂಚರತ್ಕಾಮಗಂಧೇಭ[೮]ರೋಧೇ [೯]ಕ್ಲೃಪ್ತಾವಿವಾ[೧೦]ರ್ಗಲೌ ॥ ೨೮ ॥**

ವರ್ತುಲಾಕಾರವೂ ಕೋಮಲವೂ ಆದ ಆ ವಜ್ರನಾಭಿಯ ತೊಡೆಗಳೆರಡು, ಸಂಚರಿಸುವ ಕಾಮನೆಂಬ ಮದ್ದಾನೆಯನ್ನು ಕಟ್ಟುವುದಕ್ಕೋಸ್ಕರ ಮಾಡಿದ ಆಲಾನಸ್ತಂಭ(ಆನೆಕಟ್ಟುವಕಂಭ)ಗಳಂತೆ, ಶೋಭೆಯನ್ನು ಹೊಂದಿದ್ದುವು.

೧ ಗಿರೇಃ. ೨ ವಿಕಸನ್. ೩ ತಾರಕಾಕ್ಷ್ಣಃ ಕನೀನಿಕೇತ್ಯಮರಃ. ೪ ಸು ಶೋಭನ ಆಮೋದೋ ಯಸ್ಯ ತತ್. ೫ ಕಿಂಜಲ್ಕಪ್ರಸರಣಂ. ೬ ನಿಮಿತ್ತೇ ಸಪ್ತಮೀ.

೧ ಮಿಶ್ರಂ. ೨ ಮೇರೋಃ. ೩ ವಜ್ರಶರೀರಬಂಧನಸ್ಯ. ೪ ನಾಭಿಮಧ್ಯೇ. ೫ ಲೋಕ್ಯತೇ ಸ್ಮ. ೬ ಭವಿಷ್ಯತ್ಸಕಲಚಕ್ರವರ್ತಿತ್ವಂ. ೭ ಕೋಮಲೌ. ೮ ರೋಧನಿಮಿತ್ತಂ. ೯ ರಚಿತೌ. ೧೦ ಆಲಾನಸ್ತಂಭೌ.

**ಜಾನು[೧]ಗುಲ್ಫಸ್ಪೃಶೌ ಜಂಘೇ ತಸ್ಯ ಶಿಶ್ರಿಯತುಃ ಶ್ರಿಯಮ್ ।**
**ಸಂಧಿಮೇವ ಯುವಾಂ ಧತ್ತಮಿತ್ಯಾದೇಷ್ಟುಮಿವೋದ್ಯತೇ ॥ ೨೯ ॥**

ಆ ವಜ್ರನಾಭಿಯ ಮೊಣಕಾಲನ್ನೂ ಪಾದದ ಮಣಿಗಂಟನ್ನೂ ಮುಟ್ಟುವ ಕಣಕಾಲುಗಳೆರಡು, ''ನೀವು ಹೀಗೆ ಸಂಧಿ(ಸಂಬಂಧ)ಯನ್ನು ಮಾಡಿ'' ಎಂಬುದಾಗಿ ಉಪದೇಶಮಾಡುವುದಕ್ಕೋಸ್ಕರ ಉದ್ಯುಕ್ತಗಳಾಗಿವೆಯೋ ಎಂಬಂತೆ, ಶೋಭಿಸಿದುವು.

**ಪದ್ಮಕಾಂತಿಶ್ರಿತಾವಸ್ಯ ಪಾದಾವಂಗುಲಿಪತ್ರಕೌ ।**
**[೨]ಸಿಷೇವೇ ಸುಚಿರಂ ಲಕ್ಷ್ಮೀರ್ನಖೇಂದುದ್ಯುತಿಕೇಸರೌ ॥ ೩೦ ॥**

ಬೆರಳುಗಳೆಂಬ ಎಲೆಗಳುಳ್ಳದೂ ಚಂದ್ರನಂತಿರುವ ಉಗುರುಗಳ ಕಾಂತಿಯೆಂಬ ಕುಸುಮಗಳುಳ್ಳದೂ ಕಮಲದ ಶೋಭೆಯನ್ನು ಹೊಂದಿರುವುದೂ ಆದ ಇವನ ಪಾದಗಳೆರಡನ್ನು ಲಕ್ಷ್ಮೀದೇವಿಯು ಬಹುಕಾಲದವರೆಗೆ ಸೇವಿಸಿದಳು.

**ಇತಿ ಲಕ್ಷ್ಮೀ[೩]ಪರಿಷ್ವಂಗಾದಸ್ಯಾತಿರುಚಿರಂ ವಪುಃ ।**
**ನೂನಂ ಸುರಾಂಗನಾನಾಂ ಚ ಕುರ್ಯಾ[೪]ತ್ಸ್ವೇ ಸ್ಪೃಹಯಾಲುತಾಮ್ ॥**

ಹೀಗೆ ಲಕ್ಷ್ಮಿ(ಶೋಭೆ)ಯ ಆಲಿಂಗನದಿಂದ ಅತ್ಯಂತ ಸುಂದರವಾದ ಈ ವಜ್ರನಾಭಿಯ ದೇಹವು ತನ್ನಲ್ಲಿ ದೇವಸ್ತ್ರೀಯರಿಗೂ ಇಚ್ಛೆಯನ್ನುಂಟು ಮಾಡುವುದಾಗಿದ್ದಿತು.

**ತಥಾಪಿ ಯೌವನಾರಂಭೇ ಮದನಜ್ವರಕೋಪಿನಿ ।**
**ನಾಸ್ಯಾಜನಿ ಮದಃ ಕೋಪಿ [೫]ಸ್ವಭ್ಯಸ್ತಶ್ರುತಸಂಪದಃ ॥ ೩೨ ॥**

ಅಷ್ಟು ಸುಂದರನಾಗಿದ್ದರೂ ಚೆನ್ನಾಗಿ ಶಾಸ್ತ್ರಾಭ್ಯಾಸವನ್ನು ಮಾಡಿದ್ದುದರಿಂದ ಮದನಜ್ವರದ ಪ್ರಕೋಪವುಳ್ಳ ಯೌವನಾರಂಭದಲ್ಲಿ ಈ ವಜ್ರನಾಭಿಗೆ ಯಾವ ಪ್ರಕಾರವಾದ ಮದವೂ ಉಂಟಾಗಲಿಲ್ಲ.

**ಸೋಧೀತೇ ಸ್ಮ ತ್ರಿವರ್ಗಾ[೬]ರ್ಥಸಾಧನೀರ್ವಿಪುಲೋದಯಾಃ ।**
**ಸಮಂತ್ರಾ ರಾಜವಿದ್ಯಾಸ್ತಾ ಲಕ್ಷ್ಮ್ಯುತ್ಕರ್ಷವಿಧೌ ಕ್ಷಮಾಃ ॥ ೩೩ ॥**

ಆ ವಜ್ರನಾಭಿಯು ಧರ್ಮ ಅರ್ಥ ಕಾಮ ಪುರುಷಾರ್ಥಗಳಿಗೆ ಸಾಧಕಗಳೂ ಅಧಿಕವಾದ ಸಂಪತ್ತನ್ನುಂಟುಮಾಡುವುದರಲ್ಲಿ ಸಮರ್ಥಗಳೂ ಮಂತ್ರ ಸಹಿತಗಳೂ ಆದ ರಾಜವಿದ್ಯೆಗಳನ್ನು ಅಧ್ಯಯನಮಾಡಿದನು.

**ತಸ್ಮಿನ್ಲಕ್ಷ್ಮೀಸರಸ್ವತ್ಯೋರತಿ[೭]ವಾಲ್ಲಭ್ಯಮಾಶ್ರಿತೇ ।**
**ಈರ್ಷಯೇವಾಭಜತ್ಕೀರ್ತಿರ್ದಿಗಂತಾನ್ವಿಧುನಿರ್ಮಲಾ ॥ ೩೪ ॥**

ಆ ವಜ್ರನಾಭಿಯು ಲಕ್ಷ್ಮೀಸರಸ್ವತಿಯರಿಗೆ ವಲ್ಲಭನಾದುದನ್ನು ನೋಡಿ ಈರ್ಷ್ಯೆಯಿಂದಲೋ ಎಂಬಂತೆ ಚಂದ್ರನಂತೆ ನಿರ್ಮಲವಾದ ಕೀರ್ತಿಯು ದಿಕ್ಕುಗಳ ಕೊನೆಗಳನ್ನು ಹೊಂದಿತು. ವಜ್ರನಾಭಿಯು ಐಶ್ವರ್ಯವಂತನೂ ವಿದ್ಯಾವಂತನೂ ಕೀರ್ತಿವಂತನೂ ಆಗಿದ್ದನೆಂದು ಭಾವವು.

**ನೂನಂ [೮]ತದ್ಗುಣಸಂಖ್ಯಾನಂ ವೇಧಸಾ [೯]ಸಂವಿಧಿತ್ಸುನಾ ।**
**ಶಲಾಕಾ ಸ್ಥಾಪಿತಾ ವ್ಯೋಮ್ನಿ ತಾರಕಾನಿಕರ[೧೦]ಚ್ಛಲಾತ್ ॥ ೩೫ ॥**

ನಿಜವಾಗಿಯೂ ಆ ವಜ್ರನಾಭಿಯ ಗುಣಗಳನ್ನು ಲೆಕ್ಕಮಾಡಲಿಚ್ಛಿಸಿದ ಬ್ರಹ್ಮನು ಆಕಾಶದಲ್ಲಿ ನಕ್ಷತ್ರಗಳ ಸಮೂಹದ ನೆಪದಿಂದ ಗೆರೆಗಳನ್ನು ಹಾಕಿದ್ದಾನೆ. (ಉತ್ಪ್ರೇಕ್ಷಾ)

**ತಸ್ಯ ತದ್ರೂಪ[೧೧]ಮಾಹಾರ್ಯಂ ಸಾ ವಿದ್ಯಾ ತಚ್ಚ ಯೌವನಮ್ ।**
**ಜನಾ[೧೨]ನಾವರ್ಜಯಂತಿ ಸ್ಮ ಗುಣೈರಾವರ್ಜ್ಯತೇ ನ ಕಃ ॥ ೩೬ ॥**

೧ ಘಂಟಿಕಾ. ೨ ಸೇವಾಮಕರೋತ್. ೩ ಆಲಿಂಗನಾತ್. ೪ ಆತ್ಮನಿ. ೫ ಸುಷ್ಠು. ೬ ಪ್ರಯೋಜನಂ. ೭ ವಲ್ಲಭತ್ವಂ. ೮ ವಜ್ರನಾಭೇಃ. ೯ ಕರ್ತುಮಿಚ್ಛುನಾ. ೧೦ ವ್ಯಾಜಾತ್. ೧೧ ಮನೋರಮಂ. ೧೨ ನಾಮಯಂತಿ ಸ್ಮ.

ಆ ವಜ್ರನಾಭಿಯ ಮನೋಹರವಾದ ಆ ರೂಪವೂ ಆ ವಿದ್ಯೆಯೂ ಆ ಯೌವನವೂ ಜನರನ್ನು ಬಗ್ಗಿಸುತ್ತಿದ್ದುವು. ವಜ್ರನಾಭಿಯ ಈ ಗುಣಗಳನ್ನು ನೋಡಿ ಜನರು ನಮಸ್ಕರಿಸುತ್ತಿದ್ದರೆಂದು ಭಾವವು. ಗುಣಗಳಿಗೆ ಯಾವನು ತಾನೆ ನಮ್ರನಾಗುವುದಿಲ್ಲ ?

**[೧]ಗುಣಾಂಶೈಸ್ತಸ್ಯ ಶೇಷಾಶ್ಚ ಕುಮಾರಾಃ ಕೃತವರ್ಣನಾಃ ।**
**ನನು ಚಂದ್ರಗುಣಾ[೨]ನಂಶೈರ್ಭಜತ್ಯುಡುಗಣೋಪ್ಯಯಮ್ ॥ ೩೭ ॥**

ಹಿಂದೆ ವರ್ಣಿಸಲ್ಪಟ್ಟ ಮಿಕ್ಕ ರಾಜಕುಮಾರರಲ್ಲಿಯೂ ಆ ವಜ್ರನಾಭಿಯ ಕೆಲವು ಗುಣಗಳಿದ್ದುವು. ನಕ್ಷತ್ರಗಳ ಸಮೂಹದಲ್ಲಿಯೂ ಚಂದ್ರನ ಸ್ವಲ್ಪ ಗುಣಗಳು ಇರುತ್ತವಲ್ಲವೆ ?

**ತತೋಸ್ಯ ಯೋಗ್ಯತಾಂ ಮತ್ವಾ ವಜ್ರಸೇನಮಹಾಪ್ರಭುಃ ।**
**ರಾಜ್ಯಲಕ್ಷ್ಮೀಂ ಸಮಗ್ರಾಂ ಸ್ವಾಮಸ್ಮಿನ್ನೇವ ನ್ಯಯೋಜಯತ್ ॥ ೩೮ ॥**

ತರುವಾಯ ವಜ್ರಸೇನ ಮಹಾರಾಜನು ಈ ವಜ್ರನಾಭಿಯ ಯೋಗ್ಯತೆಯನ್ನು ತಿಳಿದು ತನ್ನ ಸಮಸ್ತರಾಜ್ಯಸಂಪತ್ತನ್ನು ವಜ್ರನಾಭಿಗೆ ಕೊಟ್ಟನು.

**ನೃಪೋಭಿಷೇಕಮಸ್ಯೋಚ್ಚೈಃ ಸ್ವಸಮಕ್ಷಮಕಾರಯತ್ ।**
**ಪಟ್ಟಬಂಧಂ ಚ ಸಾಮಾತ್ಯೈರ್ನೃಪೈರ್ಮಕುಟಧಾರಿಭಿಃ ॥ ೩೯ ॥**

ವಜ್ರಸೇನ ಮಹಾರಾಜನು ತನ್ನ ಸಮಕ್ಷದಲ್ಲಿಯೇ ಮಕುಟಧಾರಿಗಳಾದ ರಾಜರಿಂದಲೂ ಮಂತ್ರಿಗಳಿಂದಲೂ ಈ ವಜ್ರನಾಭಿಗೆ ರಾಜ್ಯಾಭಿಷೇಕವನ್ನೂ ಪಟ್ಟಬಂಧವನ್ನೂ ಮಾಡಿಸಿದನು.

**ನೃಪಾಸನಸ್ಥಮೇನಂ ಚ ವೀಜಯಂತಿ ಸ್ಮ ಚಾಮರೈಃ ।**
**ಗಂಗಾತರಂಗ[೩]ಸಚ್ಛಾಯೈ[೪]ರ್ಭಂಗಿಭಿರ್ಲಲಿತಾಂಗನಾಃ ॥ ೪೦ ॥**

ರಾಜಸಿಂಹಾಸನದಲ್ಲಿ ಕುಳಿತಿರುವ ಈ ವಜ್ರನಾಭಿಗೆ ಸುಂದರಸ್ತ್ರೀಯರು ಗಂಗಾನದಿಯ ತೆರೆಮಾಲೆಗಳಿಗೆ ಸಮಾನವೂ ಮನೋಹರವೂ ಆದ ಚಾಮರಗಳಿಂದ ಬೀಸಿದರು.

**ಧುನ್ವಾನಾಶ್ಚಾಮರಾಣ್ಯಸ್ಯ [೫]ತಾ [೬]ಮಮೋತ್ಪ್ರೇಕ್ಷತೇ ಮನಃ ।**
**ಜನಾಪವಾದಜಂ [೭]ಲಕ್ಷ್ಮ್ಯಾ [೮]ರಜೋ[೯]ಪಾಸಿತುಮುದ್ಯತಾಃ ॥ ೪೧ ॥**

ಚಾಮರಗಳನ್ನು ಬೀಸುತ್ತಿರುವ ಆ ಸ್ತ್ರೀಯರನ್ನು ನೋಡಿ ಜನಾಪವಾದದಿಂದುಂಟಾದ ಲಕ್ಷ್ಮಿಯ ದೋಷವನ್ನು ಹೋಗಲಾಡಿಸುವುದಕ್ಕೋಸ್ಕರ ಉದ್ಯುಕ್ತರಾಗಿದ್ದಾರೆಂದು ನನ್ನ(ಕವಿಯ) ಮನಸ್ಸಿಗೆ ತೋರುತ್ತದೆ.

**ವಕ್ಷಸಿ ಪ್ರಣಯಂ ಲಕ್ಷ್ಮೀರ್ದೃಢಮಸ್ಯಾಕರೋತ್ತದಾ ।**
**ಪಟ್ಟಬಂಧಾಪದೇಶೇನ ತಸ್ಮಿ[೧೦]ನ್ವಾಧ್ವಂಕೃತೇವ ಸಾ ॥ ೪೨ ॥**

ಆಗ ಲಕ್ಷ್ಮಿಯು ಪಟ್ಟಬಂಧದ ನೆಪದಿಂದ ಆ ವಜ್ರನಾಭಿಯಲ್ಲಿ ಅನುಕೂಲಳಾಗಿ ಮಾಡಲ್ಪಟ್ಟವಳಂತೆ ಅವನ ಎದೆಯಲ್ಲಿ ದೃಢವಾದ ಪ್ರೇಮವನ್ನು ಮಾಡಿದಳು. ಎದೆಯು ಅಧಿಕವಾಗಿ ಶೋಭಿಸುತ್ತಿದ್ದಿತೆಂದು ಭಾವವು.

**ಮಕುಟಂ ಮೂರ್ಧ್ನಿ ತಸ್ಯಾಧಾ[೧೧]ನ್ನೃಪೋ ನೃಪವರ್ಯೈಃ ಸಮಮ್ ।**
**ಸ್ವಂ ಭಾರಮವತಾರ್ಯಾಸ್ಮಿ[೧೨]ನ್ಸಸಾಕ್ಷಿಕಮಿವಾರ್ಪಯನ್ ॥ ೪೩ ॥**

೧ ಗುಣೈರಸ್ಯೈವೇತಿ ಪಾಠಾಂತರಂ. ೨ ಲೇಶೈಃ. ೩ ಸಮಾನೈಃ. ೪ ಮನೋಜ್ಞೈಃ. ೫ ಚಾಮರಗ್ರಾಹಿಣ್ಯಃ ಕರ್ಮತಾಪನ್ನಾಸ್ತಾಃ ಸ್ತ್ರಿಯಃ. ೬ ಕವೇಃ. ೭ ಸ್ಥಿರಲಕ್ಷ್ಮ್ಯಾಃ. ೮ ದೋಷಃ. ೯ ಅಪಸರಣಾಯ. ೧೦ ಆನುಕೂಲ್ಯಂ ಕೃತಾ. ೧೧ ವಜ್ರಸೇನಃ. ೧೨ ಸಾಕ್ಷಿಸಹಿತಂ ಯಥಾತಥಾ.

ವಜ್ರಸೇನಮಹಾರಾಜನು ಸಾಕ್ಷಿದಾರರ ಸಮಕ್ಷದಲ್ಲಿ ತನ್ನ ಭಾರವನ್ನು ಇಳಿಸಿ ಈ ವಜ್ರನಾಭಿಯಲ್ಲಿ ಅರ್ಪಿಸುವವನಂತೆ ಬೇರೆ ರಾಜರೊಡನೆ ಆ ವಜ್ರನಾಭಿಯ ಮಸ್ತಕದಲ್ಲಿ ಕಿರೀಟವನ್ನಿರಿಸಿದನು.

**ಹಾರೇಣಾಲಂಕೃತಂ ವಕ್ಷೋ ಭುಜಾವಸ್ಯಾಂ [1]ಗದಾದಿಭಿಃ ।**
**ಪಟ್ಟಿಕಾಕಟಸೂತ್ರೇಣ ಕಟೀಪಟ್ಟಾಂಶುಕೇನ ಚ ॥ ೪೪ ॥**

ಈ ವಜ್ರನಾಭಿಯ ಎದೆಯು ಹಾರದಿಂದಲೂ ಭುಜಗಳೆರಡು ತೋಳು ಬಳೆಮೊದಲಾದ ಆಭರಣಗಳಿಂದಲೂ ಕಟಿಪ್ರದೇಶವು ಪಟ್ಟಿಯಂತಿರುವ ಕಟಿಸೂತ್ರ ದಿಂದಲೂ ಪಟ್ಟೆವಸ್ತ್ರದಿಂದಲೂ ಅಲಂಕೃತವಾಗಿದ್ದುವು.

**ಕೃತೀ ಕೃತಾಭಿಷೇಕಾಯ ಸೋಽಸ್ಮೈ [2]ನಾರ್ಪತ್ಯ[3]ಮಾರ್ಪಿಪತ್ ।**
**ನೃಪೈಃ ಸಮಂ ಸಮಾಶಾಸ್ಯ ಮಹಾನ್ಸಮ್ರಾಡ್ಭವೇ[4]ತ್ಯಮುಮ್ ॥ ೪೫ ॥**

ಪುಣ್ಯಶಾಲಿಯಾದ ಆ ವಜ್ರಸೇನಮಹಾರಾಜನು "ದೊಡ್ಡ ಚಕ್ರವರ್ತಿಯಾಗು" ಎಂದು ಪುಣ್ಯಶಾಲಿಯಾದ ಆ ವಜ್ರಸೇನಮಹಾರಾಜನು "ದೊಡ್ಡ ಚಕ್ರವರ್ತಿಯಾಗು" ಎಂದು ಬೇರೆ ರಾಜರೊಡನೆ ಮಗನಿಗೆ ಆಶೀರ್ವದಿಸಿ ಪಟ್ಟಾಭಿಷಿಕ್ತನಾದ ಈ ವಜ್ರನಾಭಿಗೆ ದೊರೆತನವನ್ನು ಕೊಟ್ಟನು.

**ಅನಂತರಂ ಚ ಲೌಕಾಂತಿಕಾಮರ್ಯೈಃ ಪ್ರತಿಬೋಧಿತಃ ।**
**ವಜ್ರಸೇನಮಹಾರಾಜೋ ನ್ಯಧಾನ್ನಿಷ್ಕ್ರಮಣೇ ಮತಿಮ್ ॥ ೪೬ ॥**

ತರುವಾಯ ವಜ್ರಸೇನಮಹಾರಾಜನು ಲೌಕಾಂತಿಕದೇವತೆಗಳಿಂದ ಬೋಧಿಸಲ್ಪಟ್ಟವನಾಗಿ ಮನೆಯಿಂದ ಹೊರಡುವ ವಿಷಯದಲ್ಲಿ ಮನಸ್ಸನ್ನು ಮಾಡಿದನು.

**ಯಥೋಚಿತಾ[5]ಮುಪಚಿತಿಂ ತನ್ವತ್ಸ್ವತ್ರ[6]ನಾಕಿಷು ।**
**[7]ಪರಿನಿಷ್ಕ್ರಮ್ಯ ಚಕ್ರೇಸೌ ಮುಕ್ತಿಲಕ್ಷ್ಮೀಂ ಪ್ರಮೋದಿನೀಮ್ ॥ ೪೭ ॥**

ಲೌಕಾಂತಿಕದೇವತೆಗಳು ಯಥೋಚಿತವಾದ ಪೂಜೆಯನ್ನು ಮಾಡಿದ ನಂತರ ಈ ವಜ್ರಸೇನಮಹಾರಾಜನು ಮನೆಯಿಂದ ಹೊರಟು ದೀಕ್ಷೆಯನ್ನು ತೆಗೆದುಕೊಂಡು ಮೋಕ್ಷಲಕ್ಷ್ಮಿಯನ್ನು ಸಂತೋಷಪಡಿಸಿದನು.

**ಸಮಂ ಭಗವತಾನೇನ ಸಹಸ್ರಗಣನಾಮಿತಾಃ ।**
**ಮಹತ್ಯಾಮ್ರವಣೋದ್ಯಾನೇ ನೃಪಾಃ ಪ್ರಾವ್ರಾಜಿಷುಸ್ತದಾ ॥ ೪೮ ॥**

ಆಗ ಮಹಾತ್ಮನಾದ ಈ ವಜ್ರಸೇನಮಹಾರಾಜನೊಡನೆ ಸಾವಿರಜನ ರಾಜರು ದೊಡ್ಡ ಮಾವಿನ ಮರಗಳ ವನದಲ್ಲಿ ದೀಕ್ಷೆಯನ್ನು ತೆಗೆದುಕೊಂಡರು.

**ರಾಜ್ಯಂ ನಿಷ್ಕಂಟಕೀಕೃತ್ಯ ವಜ್ರನಾಭಿರಪಾಲಯತ್ ।**
**ಭಗವಾನಪಿ ಯೋಗೀಂದ್ರಸ್ತಪಶ್ಚಕ್ರೇ ವಿಕಲ್ಮಷಮ್ ॥ ೪೯ ॥**

ವಜ್ರನಾಭಿಯು ಶತ್ರುಗಳಿಲ್ಲದಂತೆ ಮಾಡಿ ರಾಜ್ಯವನ್ನು ಪರಿಪಾಲಿಸಿದನು. ಪೂಜ್ಯರಾದ ವಜ್ರಸೇನಯೋಗೀಂದ್ರರೂ ನಿರ್ದೋಷವಾದ ತಪಸ್ಸನ್ನು ಮಾಡಿದರು.

**ರಾಜ್ಯಲಕ್ಷ್ಮೀ[8]ಪರಿಷ್ವಂಗಾದ್ವಜ್ರನಾಭಿಸ್ತುತೋಷ ಸಃ ।**
**ತಪೋಲಕ್ಷ್ಮೀ[9]ಸಮಾಸಂಗಾದ್ಗುರುರಸ್ಯಾತಿಪಿಪ್ರಿಯೇ ॥ ೫೦ ॥**

ಆ ವಜ್ರನಾಭಿಯು ರಾಜ್ಯಲಕ್ಷ್ಮಿಯ ಆಲಿಂಗನದಿಂದ ಸಂತೋಷಪಟ್ಟನು. ಈ ವಜ್ರನಾಭಿಯ ಗುರು(ತಂದೆ)ವು ತಪೋಲಕ್ಷ್ಮಿಯ ಸಂಯೋಗದಿಂದ ಬಹಳ ಸಂತೋಷಪಟ್ಟನು.

**ಭ್ರಾತೃಭಿರ್ಧೃತಿರಸ್ಯಾಸೀದ್ವಜ್ರನಾಭೇಃ [10]ಸಮಾಹಿತೈಃ ।**
**ಗುಣೈಸ್ತು ಧೃತಿಮಾತೇನೇ ಯೋಗೀ ಶ್ರೇಯೋಽನುಬಂಧಿಭಿಃ ॥ ೫೧ ॥**

ಸಮಾಧಾನಯುಕ್ತರಾದ ಸಹೋದರರಿಂದ ಈ ವಜ್ರನಾಭಿಯು ಸಂತೋಷಪಟ್ಟನು. ಶ್ರೇಯಸ್ಸನ್ನುಂಟುಮಾಡುವ ಗುಣಗಳಿಂದ ಆ ಯೋಗೀಶ್ವರರು ಸಂತೋಷಪಟ್ಟರು.

**ವಜ್ರನಾಭಿನೃಪೋಮಾತ್ಯೈಃ [1]ಸಂವಿಧತ್ತೇ ಸ್ಮ [2]ರಾಜಕಮ್ ।**
**ಮುನೀಂದ್ರೋಪಿ ತಪೋಯೋಗೈರ್ಗುಣಗ್ರಾಮಮಪೋಷಯತ್ ॥ ೫೨ ॥**

ವಜ್ರನಾಭಿರಾಜನು ತನ್ನ ಮಂತ್ರಿಗಳಿಂದ ಪರರಾಜರ ಗುಂಪನ್ನು ಅನುಕೂಲಪಡಿಸಿದನು. ಮುನೀಂದ್ರರೂ ತಮ್ಮ ತಪೋಯೋಗಗಳಿಂದ ಗುಣಸಮುದಾಯವನ್ನು ವೃದ್ಧಿಪಡಿಸಿದರು.

**ನಿಜೇ ರಾಜ್ಯಾಶ್ರಮೇ ಪುತ್ರೋ ಗುರುರಂ[3]ತ್ಯಾಶ್ರಮೇ ಸ್ಥಿತಃ ।**
**ಪರಾರ್ಥಂ [4]ಬದ್ಧಕಕ್ಷ್ಯೌ ತೌ ಪಾಲಯಾಮಾಸತುಃ [5]ಪ್ರಜಾಃ ॥ ೫೩ ॥**

ತನ್ನ ರಾಜ್ಯಾಶ್ರಮದಲ್ಲಿದ್ದ ಪುತ್ರ(ವಜ್ರನಾಭಿ)ನೂ ಯತ್ಯಾಶ್ರಮದಲ್ಲಿದ್ದ ಗುರು(ವಜ್ರಸೇನಮುನಿ)ಗಳೂ ಪರೋಪಕಾರಕ್ಕೋಸ್ಕರ ಸಹಾಯಕರಾಗಿದ್ದು ಅವರಿಬ್ಬರೂ ಪ್ರಜೆಗಳನ್ನು ಪರಿಪಾಲಿಸುತ್ತಿದ್ದರು. ಮುನಿಗಳು ತತ್ತ್ವೋಪದೇಶ ದಿಂದ ಪ್ರಾಣಿಸಮೂಹವನ್ನು ಕಾಪಾಡುತ್ತಿದ್ದರೆಂದು ಭಾವವು.

**ವಜ್ರನಾಭೇ[6]ರ್ಜಯಾಗಾರೇ ಚಕ್ರಂ ಭಾಸ್ವರಮುದ್ಬಭೌ ।**
**ಯೋಗಿನೋಽಪಿ ಮನೋಗಾರೇ ಧ್ಯಾನಚಕ್ರಂ ಸ್ಫುರದ್ದ್ಯುತಿ ॥ ೫೪ ॥**

ವಜ್ರನಾಭಿಯ ಆಯುಧಶಾಲೆಯಲ್ಲಿ ದೇದೀಪ್ಯಮಾನವಾದ ಚಕ್ರವು ಉದ್ಭವಿಸಿತು. ಯೋಗಿಗಳ ಮನಸ್ಸೆಂಬ ಗೃಹದಲ್ಲಿಯೂ ಪ್ರಕಾಶಮಾನವಾದ ಧ್ಯಾನವೆಂಬ ಚಕ್ರವು ಉದ್ಭವಿಸಿತು.

**ತತೋ ವ್ಯಜೇಷ್ಟ ನಿಃಶೇಷಾಂ ಮಹೀಮೇಷ ಮಹೀಪತಿಃ ।**
**ಮುನಿಃ ಕರ್ಮಜಯಾವಾಪ್ತಮಹಿಮಾ ಜಗತೀಂ ತ್ರಯೀಮ್ ॥ ೫೫ ॥**

ಆ ಚಕ್ರದಿಂದ ವಜ್ರನಾಭಿಮಹಾರಾಜನು ಸಮಸ್ತಪೃಥ್ವಿಯನ್ನು ಜಯಿಸಿದನು. ಧ್ಯಾನಚಕ್ರದಿಂದ ಕರ್ಮವನ್ನು ಜಯಿಸಿ ಮಹಾಮಹಿಮೆಯನ್ನು ಪಡೆದ ಮುನಿಗಳು ಮೂರುಲೋಕವನ್ನು ಜಯಿಸಿದರು.

**ಸ್ಪರ್ಧಮಾನಾವಿವಾನ್ಯೋನ್ಯಮಿತ್ಯಾಸ್ತಾಂ ತೌ ಜಯೋ[7]ದ್ಧುರೌ ।**
**ಕಿಂತ್ವೇಕಸ್ಯ ಜಯೋತ್ಯಲ್ಪಃ ಪರಸ್ಯ ಭುವನಾತಿಗಃ ॥ ೫೬ ॥**

ಹೀಗೆ ಜಯದ ವಿಷಯದಲ್ಲಿ ಉತ್ಕಟರಾದ ಆ ತಂದೆಮಕ್ಕಳಿಬ್ಬರೂ ಒಬ್ಬರಿಗೊಬ್ಬರು ಈರ್ಷ್ಯೆಪಡುವವರಂತಿದ್ದರು. ಆದರೆ ಒಬ್ಬನ ಜಯವು ಬಹಳ ಅಲ್ಪವಾದುದು. ಇನ್ನೊಬ್ಬನ (ಮುನಿಗಳ) ಜಯವು ಲೋಕಾತಿಶಯವಾದುದು.

**[8]ಧನದೇವೋಽಪಿ ತಸ್ಯಾಸೀಚ್ಚಕ್ರಿಣೋ ರತ್ನಮೂರ್ಜಿತಮ್ ।**
**ರಾಜ್ಯಾಂಗಂ ಗೃಹಪತ್ಯಾಖ್ಯಂ ನಿಧೌ ರತ್ನೇ ಚ ಯೋಜಿತಮ್ ॥ ೫೭ ॥**

ಪೂರ್ವದಲ್ಲಿ ಶ್ರೀಮತಿಯಾಗಿದ್ದ ಆತ್ಮನು ಧನದೇವನೆಂಬ ಶ್ರೇಷ್ಠಿಯಾಗಿ ಹುಟ್ಟಿ ಆ ಚಕ್ರವರ್ತಿಯ ನಿಧಿಯಲ್ಲಿಯೂ ಜೀವರತ್ನದಲ್ಲಿಯೂ ರಾಜ್ಯಕ್ಕೆ ಅಂಗಭೂತವಾದ ಗೃಹಪತಿರತ್ನವಾದನು.

**ತತಃ [9]ಕೃತಮತಿ[10]ರ್ಭುಕ್ತ್ವಾ ಚಿರಂ ಪೃಥ್ವೀಂ ಪೃಥೂದಯಃ ।**
**ಗುರೋ[11]ಸ್ತೀರ್ಥಕೃತೋಬೋಧಿ [12]ಬೋಧಿಮತ್ಯಂತದುರ್ಲಭಾಮ್ ॥**

ತರುವಾಯ ಮಹಾಬುದ್ಧಿಶಾಲಿಯೂ ವೈಭವಶಾಲಿಯೂ ಆದ ಆ ವಜ್ರನಾಭಿಚಕ್ರವರ್ತಿಯು ಬಹುಕಾಲದವರೆಗೆ ರಾಜ್ಯವನ್ನು ಪರಿಪಾಲಿಸಿ ಅವನು ತನ್ನ

೧ ಅಂಗದಾಂಶುಭಿರಿತಿ ಪಾಠಾಂತರಂ. ೨ ನೃಪತಿತ್ವಂ. ೩ ಅರ್ಪಿತವಾನ್. ೪ ಪುತ್ರಂ. ೫ ಪೂಜಾಂ. ೬ ಲೌಕಾಂತಿಕದೇವೇಷು. ೭ ಗೃಹಾನ್ನಿರ್ಗತ್ಯ. ೮ ಆಲಿಂಗನಾತ್. ೯ ಸಂಯೋಗಾತ್. ೧೦ ಸಮಾಧಾನಯುಕ್ತೈಃ.

೧ ಅನುಕೂಲಂ ಕರೋತಿ ಸ್ಮ. ೨ ರಾಜಸಮೂಹಂ. ೩ ಬ್ರಹ್ಮಚಾರೀ ಗೃಹೀ ವಾನಪ್ರಸ್ಥೋ ಭಿಕ್ಷುಶ್ಚತುಷ್ಟಯ ಇತ್ಯಮರಃ. ೪ ಕೃತಸಹಾಯೌ. ೫ ಜೀವಸಮೂಹಂ ಚ. ೬ ಶಸ್ತ್ರಶಾಲಾಯಾಂ. ೭ ಉತ್ಕಟೌ. ೮ ಶ್ರೀಮತೀಚರಃ. ೯ ಸಂಪೂರ್ಣಬುದ್ಧಿಃ. ೧೦ ಪಾಲಯಿತ್ವಾ. ೧೧ ತೀರ್ಥಂಕರಾತ್. ೧೨ ಸಮ್ಯಗ್ದರ್ಶನಾದೀನಾಂ ಸಂಪ್ರಾಪ್ತಿರ್ಬೋಧಿರಿತ್ಯುಚ್ಯತೇ.

ತಂದೆಯಾದ ತೀರ್ಥಂಕರರಿಂದ ಅತ್ಯಂತ ದುರ್ಲಭವಾದ ಸಮ್ಯಗ್ದರ್ಶನಮೊದಲಾದ ರತ್ನತ್ರಯವನ್ನು ಬೋಧಿಸಲ್ಪಟ್ಟನು.

**ಸದ್ದೃಷ್ಟಿಜ್ಞಾನಚಾರಿತ್ರತ್ರಯಂ ಯಃ ಸೇವತೇ ಕೃತೀ ।**
**ರಸಾಯನಮಿವಾ[೧]ತರ್ಕ್ಯಂ ಸೋ[೨]ಮೃತಂ ಪದಮಶ್ನುತೇ ॥ ೫೯ ॥**

"ಯಾವ ಪುಣ್ಯಶಾಲಿಯು ಸಮ್ಯಗ್ದರ್ಶನಜ್ಞಾನಚಾರಿತ್ರಗಳನ್ನು ರಸಾಯನವನ್ನೋಪಾದಿಯಲ್ಲಿ ಸೇವಿಸುತ್ತಾನೋ ಅವನು ಅಚಿಂತ್ಯವಾದ ಮೋಕ್ಷಪದವಿಯನ್ನು ಹೊಂದುತ್ತಾನೆ."

**ಇತ್ಯಾ[೩]ಕಲಯ್ಯ ಮನಸಾ ಚಕ್ರೀ ಚಕ್ರೇ ತಪೋಮತಿಮ್ ।**
**ಜರತ್ತೃಣಮಿವಾಶೇಷಂ ಸಾಮ್ರಾಜ್ಯ[೪]ಮವಮತ್ಯ ಸಃ ॥ ೬೦ ॥**

ಹೀಗೆ ಮನಸ್ಸಿನಲ್ಲಿ ವಿಚಾರಮಾಡಿ ಆ ವಜ್ರನಾಭಿಚಕ್ರವರ್ತಿಯು ತನ್ನ ಸಕಲಸಾಮ್ರಾಜ್ಯವನ್ನು ಹಳೆಯದಾದ ಹುಲ್ಲನ್ನೋಪಾದಿಯಲ್ಲಿ ತಿರಸ್ಕರಿಸಿ ತಪಸ್ಸಿನಲ್ಲಿ ಇಚ್ಛೆಯನ್ನು ಮಾಡಿದನು.

**ವಜ್ರದಂತಾಖ್ಯಯೇ ಸೂನೌ ಕೃತರಾಜ್ಯಸಮರ್ಪಣಃ ।**
**ನೃಪೈಃ [೫]ಸ್ವಮೌಲಿಬದ್ಧಾ[೬]ರ್ದ್ಧೈ[೭]ಸ್ತುಗ್ಭಿಶ್ಚ ದಶಭಿಃ ಶತೈಃ ॥ ೬೧ ॥**

**ಸಮಂ ಭ್ರಾತೃಭಿರಷ್ಟಾಭಿರ್ಧನದೇವೇನ ಚಾದಧೇ ।**
**ದೀಕ್ಷಾಂ ಭವ್ಯಜನೋ[೮]ದೀಕ್ಷ್ಯಾಂ ಮುಕ್ತ್ಯೈ ಸ್ವಗುರುಸನ್ನಿಧೌ ॥ ೬೨ ॥**

ತರುವಾಯ ವಜ್ರದಂತನೆಂಬ ಮಗನಿಗೆ ರಾಜ್ಯವನ್ನು ಕೊಟ್ಟು ಹದಿನಾರುಸಾವಿರ ಮಕುಟಬದ್ಧರಾಜರೂ ಒಂದುಸಾವಿರ ಪುತ್ರರೂ ಎಂಟುಮಂದಿ ಸಹೋದರರೂ ಧನದೇವಶ್ರೇಷ್ಠಿಯೂ ಸಹಿತನಾಗಿ ಆ ವಜ್ರನಾಭಿಚಕ್ರವರ್ತಿಯು ಮುಕ್ತಿಗೋಸ್ಕರ ಭವ್ಯ ಜನರು ಇಚ್ಛಿಸುವ ಜಿನದೀಕ್ಷೆಯನ್ನು ತನ್ನ ಗುರುವಿನ ಸಾನ್ನಿಧ್ಯದಲ್ಲಿ ತೆಗೆದುಕೊಂಡನು.

**ತಮನ್ವೀಯುರ್ನೃಪಾ ಜನ್ಮದುಃಖಾರ್ತಾಸ್ತಪಸೇ ವನಮ್ ।**
**ಶೀತಾರ್ತಃ ಕೋ ನ ಕುರ್ವೀತ ಸುಧೀರಾತಪಸೇವನಮ್ ॥ ೬೩ ॥**

ಜನನಮರಣಮೊದಲಾದ ಸಂಸಾರದುಃಖದಿಂದ ಪೀಡಿತರಾದ ಆ ರಾಜರೆಲ್ಲ ತಪಸ್ಸಿಗೋಸ್ಕರ ವಜ್ರನಾಭಿಚಕ್ರವರ್ತಿಯನ್ನು ಹಿಂಬಾಲಿಸಿ ವನಕ್ಕೆ ಹೋದರು. ಶೀತಬಾಧೆಯಿಂದ ಪೀಡಿತನಾದ ಯಾವ ಬುದ್ಧಿಶಾಲಿಯು ತಾನೆ ಬಿಸಿಲನ್ನು ಸೇವಿಸನು ? ಅವಶ್ಯವಾಗಿ ಸೇವನೆಮಾಡುವನೆಂದರ್ಥವು.

**[೯]ತ್ರಿಧಾ ಪ್ರಾಣಿವಧಾನ್ಮಿಥ್ಯಾವಾದಾತ್ಸ್ತೇಯಾತ್ಪರಿಗ್ರಹಾತ್ ।**
**ವಿರತಿಂ ಸ್ತ್ರೀಪ್ರಸಂಗಾಚ್ಚ ಸ ಯಾವಜ್ಜೀವಮಗ್ರಹೀತ್ ॥ ೬೪ ॥**

ಆ ವಜ್ರನಾಭಿಮುನಿಯು ಮನೋವಾಕ್ಕಾಯತ್ರಿಕರಣಗಳಿಂದಲೂ ಪ್ರಾಣಿವಧೆ ಅಸತ್ಯಭಾಷಣ ಕಳ್ಳತನ ಪರಿಗ್ರಹ ಸ್ತ್ರೀಸಂಸರ್ಗಗಳೆಂಬ ಪಂಚಪಾಪಗಳನ್ನು ಮರಣಪರ್ಯಂತವೂ ವ್ರತಮಾಡಿ ಬಿಟ್ಟನು.

**ವ್ರತಸ್ಥಃ ಸಮಿತೀರ್ಗುಪ್ತೀರಾದಧೇಸೌ ಸಭಾವನಾಃ ।**
**[೧೦]ಮಾತೃಷ್ಟಕಮಿದಂ ಪ್ರಾಹುರ್ಮುನೇ[೧೧]ರಿಂದ್ರಸಭಾವನಾಃ ॥ ೬೫ ॥**

ಹೀಗೆ ಪಂಚಪಾಪಗಳನ್ನು ಪರಿತ್ಯಜಿಸಿ ವ್ರತಿಯಾದ ವಜ್ರನಾಭಿಮುನಿಯು ಈರ್ಯಾಸಮಿತಿ ಭಾಷಾಸಮಿತಿ ಏಷಣಾಸಮಿತಿ ಆದಾನನಿಕ್ಷೇಪಣಸಮಿತಿ ವ್ಯುತ್ಸರ್ಗಸಮಿತಿಗಳೆಂಬ ಪಂಚಸಮಿತಿಗಳನ್ನೂ ಮನೋಗುಪ್ತಿ ವಚನಗುಪ್ತಿ ಕಾಯಗುಪ್ತಿಗಳೆಂಬ ತ್ರಿಗುಪ್ತಿಗಳನ್ನೂ ಇವುಗಳ ಭಾವನಾಸಹಿತವಾಗಿ ಪರಿಗ್ರಹಿಸಿದನು. ಇಂದ್ರಸಭೆಯನ್ನು ಕಾಪಾಡುವವರು ಅಥವಾ ಆತ್ಮಭಾವನೆಯೊಡಗೂಡಿದವರು (ಗಣಧರರು) ಈ ಮೇಲೆಹೇಳಿದ ಎಂಟು ಪ್ರವಚನಮಾತೃಕೆಗಳೆಂದು ಹೇಳುತ್ತಾರೆ.

**ಉತ್ಕೃಷ್ಟತಪಸೋ ಧೀರಾನ್ಮುನೀನ್ ಧ್ಯಾಯ[೧]ನ್ನನೇನಸಃ ।**
**[೨]ಏಕಚರ್ಯಾಂ ತತೋ ಭೇಜೇ ಯುಕ್ತಃ ಸದ್ದರ್ಶನೇನ ಸಃ ॥ ೬೬ ॥**

ಉತ್ಕೃಷ್ಟತಪೋಧಾರಿಗಳೂ ಧೀರರೂ ಪಾಪರಹಿತರೂ ಆದ ಮುನಿಗಳನ್ನು ಧ್ಯಾನಮಾಡುವ ಆ ವಜ್ರನಾಭಿಮುನಿಯು ಸಮ್ಯಗ್ದರ್ಶನದಿಂದ ಯುಕ್ತನಾಗಿ ಒಬ್ಬನೇ ಸಂಚರಿಸುವುದಕ್ಕೆ ಪ್ರಾರಂಭಿಸಿದನು.

**ಸ [೩]ಏಕಚರತಾಂ ಪ್ರಾಪ್ಯ ಚಿರಂ ಗಜ ಇವಾ[೪]ಗಜಃ ।**
**[೫]ಮಂಥರಂ ವಿಜಹಾರೋರ್ವೀಂ ಪ್ರಪಶ್ಯ[೬]ನ್ಸವನಂ [೭]ವನಮ್ ॥ ೬೭ ॥**

ಪರ್ವತದಲ್ಲಿ ಹುಟ್ಟಿದ ಆನೆಯಂತೆ ಆ ಮುನಿಯು ಬಹುಕಾಲದವರೆಗೂ ಏಕವಿಹಾರವನ್ನು ಮಾಡಿ ಜಲಸಹಿತವಾದ ಅರಣ್ಯವನ್ನು ನೋಡುತ್ತ ಸಾವಧಾನದಿಂದ ಪೃಥ್ವಿಯಲ್ಲಿ ವಿಹರಿಸಿದನು. ಶೌಚಾರ್ಥವಾಗಿ ನೀರಿರುವ ಪ್ರದೇಶವನ್ನು ನೋಡಿ ವಿಹರಿಸಿದನೆಂದು ಭಾವವು.

**ತತೋಸೌ ಭಾವಯಾಮಾಸ ಭಾವಿತಾತ್ಮಾ ಸುಧೀರಧೀಃ ।**
**ಸ್ವಗುರೋರ್ನಿಕಟೇ ತೀರ್ಥಕೃತ್ತ್ವಸ್ಯಾಂಗಾನಿ ಷೋಡಶ ॥ ೬೮ ॥**

ತರುವಾಯ ಅತ್ಯಂತ ಧೀರವಾದ ಬುದ್ಧಿಯುಳ್ಳವನೂ ಆತ್ಮವಿಚಾರಿಯೂ ಆದ ಈ ವಜ್ರನಾಭಿಮುನಿಯು ತಮ್ಮ ಗುರುಗಳ ಸಮೀಪಕ್ಕೆ ಹೋಗಿ ತೀರ್ಥಕರತ್ವಪ್ರಾಪ್ತಿಗೆ ಕಾರಣವಾದ ಹದಿನಾರುಭಾವನೆಗಳನ್ನು ಭಾವಿಸಿದನು.

**ಸದ್ದೃಷ್ಟಿಂ ವಿನಯಂ ಶೀಲವ್ರತೇಷ್ವನತಿಚಾರತಾಮ್ ।**
**ಜ್ಞಾನೋಪಯೋಗಮಾಭೀಕ್ಷ್ಣ್ಯಾತ್ಸಂವೇಗಂ ಚಾಪ್ಯಭಾವಯತ್ ॥ ೬೯ ॥**

ಶಂಕಾದಿದೋಷರಹಿತವಾದ ಸಮ್ಯಗ್ದರ್ಶನವನ್ನೂ ದೇವರುಗುರುಶಾಸ್ತ್ರಗಳಲ್ಲಿ ವಿನಯವನ್ನೂ ಅತಿಚಾರರಹಿತವಾದ ಶೀಲಗಳನ್ನೂ ವ್ರತಗಳನ್ನೂ ಸರ್ವದಾ ಜ್ಞಾನೋಪಯೋಗವನ್ನೂ ಸಂವೇಗವನ್ನೂ ಭಾವಿಸಿದನು.

**ಯಥಾಶಕ್ತಿ ತಪಸ್ತೇಪೇ [೮]ಸ್ವಯಂ ವೀರ್ಯ[೯]ಮಹಾಪಯನ್ ।**
**ತ್ಯಾಗೇ ಚ ಮತಿಮಾಧತ್ತ ಜ್ಞಾನಸಂಯಮ[೧೦]ಸಾಧನೇ ॥ ೭೦ ॥**

ತನ್ನ ಶಕ್ತಿಗೆ ಅನುಸಾರವಾಗಿ ತಪಸ್ಸನ್ನು ಮಾಡಿದನು. ತನ್ನ ಶಕ್ತಿಯನ್ನು ಮರೆಮಾಚದೆ ಜ್ಞಾನದಾನದಲ್ಲಿಯೂ ಜ್ಞಾನಭಾವನೆಯಲ್ಲಿಯೂ ಸಂಯಮ (ಚಾರಿತ್ರ) ಭಾವನೆಯಲ್ಲಿಯೂ ಮನಸ್ಸನ್ನು ಸ್ಥಿರಮಾಡಿದನು.

**ಸಾವಧಾನಃ [೧೧]ಸಮಾಧಾನೇ ಸಾಧೂನಾಂ ಸೋಭವನ್ಮುಹುಃ ।**
**ಸಮಾಧಯೇ ಹಿ ಸರ್ವೋಯಂ [೧೨]ಪರಿಸ್ಪಂದೋ ಹಿತಾರ್ಥಿನಾಮ್ ॥**

ಆ ಮುನಿಯು ಸಾಧುಗಳ ಸಮಾಧಿಯಲ್ಲಿ (ವಿಘ್ನವನ್ನುದೂರಮಾಡುವುದರಲ್ಲಿ) ಬಾರಿಬಾರಿಗೂ ಸಾವಧಾನವುಳ್ಳವನಾಗಿದ್ದನು. ಹಿತವನ್ನು ಬಯಸುವವರ ಈ ಅನಶನಾದಿತಪಶ್ಚರಣವೆಲ್ಲ ಸಮಾಧಿಯ ಪ್ರಾಪ್ತಿಗೋಸ್ಕರವೇ ಆಗಿದೆ.

**ಸ ವೈಯಾವೃತ್ಯಮಾತೇನೇ ವ್ರತಸ್ಥೇಷ್ವಾಮಯಾದಿಷು ।**
**[೧೩]ಅನಾತ್ಮತರಕೋ ಭೂತ್ವಾ ತಪಸೋ ಹೃದಯಂ ಹಿ ತತ್ ॥ ೭೨ ॥**

೧ ಅಚಿಂತ್ಯಂ. ೨ ಮೋಕ್ಷಪದಂ. ೩ ವಿಚಾರ್ಯ. ೪ ಅವಜ್ಞಾಂ ಕೃತ್ವಾ. ೫ ಸ್ವಸ್ಯ ಚಕ್ರಿಣಃ ದ್ವಾತ್ರಿಂಶತ್ಸಹಸ್ರಮುಕುಟಬದ್ಧಾಸ್ತೇಷ್ವರ್ಧಃ ಷೋಡಶಸಹಸ್ರಪ್ರಮಿತಾಃ. ೬ ಷೋಡಶಸಹಸ್ರೈಃ. ೭ ಪುತ್ರೈಃ. ೮ ಅಭಿಲಷಣೀಯಾಂ. ೯ ಮನೋವಾಕ್ಕಾಯೇನ. ೧೦ ಪ್ರವಚನಮಾತೃಕಾಷ್ಟಕಂ. ೧೧ ಇಂದ್ರಸಭಾಯಾ ಅವನಂ ರಕ್ಷಣಂ ಯೇಭ್ಯಸ್ತೇ ಇತಿ ವಿಗ್ರಹಾತ್, ಇಂದ್ರೆ ಆತ್ಮನಿ ಸಭಾವನಾಃ ಭಾವನಾಸಹಿತಾಃ.

೧ ಅಪಾಪಾನ್. ೨ ಏಕವಿಹಾರಂ. ೩ ಏಕಚಾರಿತ್ವಂ. ೪ ಪರ್ವತಜಾತಃ. ೫ ಶನೈಃ. ೬ ಸಜಲಂ. ೭ ಅರಣ್ಯಂ. ೮ ಸ್ವಸ್ಯೇತ್ಯರ್ಥಃ. ೯ ಅಗೋಪಯನ್. ೧೦ ಸಮಾಧೌ. ೧೧ ಸಮಾಧೌ. ೧೨ ಚೇಷ್ಟಾ, ಅನಶನಾದಿತಪಶ್ಚರಣಮಿತ್ಯರ್ಥಃ. ೧೩ ಅನಾತ್ಮವಂಚಕಃ, ನಿರಹಂಕಾರೀತ್ಯರ್ಥಃ.

ಆ ವಜ್ರನಾಭಿಮುನಿಯು ನಿರಹಂಕಾರಿಯಾಗಿದ್ದು ರೋಗಿಷ್ಠರಾದ ವ್ರತಿಗಳ ಶುಶ್ರೂಷೆಯನ್ನು ಮಾಡಿದನು. ಅಹಂಕಾರವನ್ನು ಪರಿತ್ಯಜಿಸುವುದು ತಪಸ್ಸಿಗೆ ಹೃದಯವಾಗಿದೆ. ತಪಸ್ಸಿಗೆ ಮುಖ್ಯ ಅಂಗವಾಗಿದೆಯೆಂದು ಭಾವವು.

**ಸ ತೇನೇ ಭಕ್ತಿಮರ್ಹತ್ಸು ಪೂಜಾಮರ್ಹತ್ಸು ನಿಶ್ಚಲಾಮ್ ।**
**ಆಚಾರ್ಯಾನ್ಸ್ವಶ್ರಯೀ ಭೇಜೇ ಮುನೀನಪಿ ಬಹುಶ್ರುತಾನ್ ॥ ೭೩ ॥**

ಆ ವಜ್ರನಾಭಿಮುನಿಯು ಅರ್ಹತ್ಪರಮೇಷ್ಠಿಗಳಲ್ಲಿ ನಿಶ್ಚಲವಾದ ಭಕ್ತಿಯನ್ನೂ ಪೂಜೆಯನ್ನೂ ಮಾಡಿದನು. ಆಚಾರ್ಯರಲ್ಲಿಯೂ ಬಹಳ ಶಾಸ್ತ್ರಜ್ಞಾನಿಗಳಾದ ಮುನಿಗಳಲ್ಲಿಯೂ ವಿನಯದಿಂದ ವರ್ತಿಸುತ್ತಿದ್ದನು.

**ಪರಾಂ ಪ್ರವಚನೇ ಭಕ್ತಿ[1]ಮಾಪ್ತೋಪಜ್ಞೇ ತತಾನ ಸಃ ।**
**[2]ನ ಪಾರಯತಿ ರಾಗಾದೀನ್ವಿಜೇತುಂ [3]ಸಂತತಾ[4]ನಸಃ ॥ ೭೪ ॥**

ಆಪ್ತರಿಂದ ಪ್ರಥಮೋಪದಿಷ್ಟವಾದ ಪ್ರವಚನ(ಶಾಸ್ತ್ರ)ದಲ್ಲಿ ಅಧಿಕವಾದ ಭಕ್ತಿಯನ್ನು ಮಾಡಿದನು. ಆಪ್ತನಲ್ಲದಿರುವವನು ವಿಸ್ತಾರವಾದ ರಾಗಾದಿ ಭಾವಗಳನ್ನು ಜಯಿಸುವುದಕ್ಕೆ ಸಮರ್ಥನಾಗುವುದಿಲ್ಲ. ಅಂತಹವನ ವಚನವೂ ಪ್ರಮಾಣವಲ್ಲವೆಂದು ಭಾವವು.

**ಅವಶ್ಯ[5]ಮವಶೋಽಪ್ಯೇಷ [6]ವಶೀ ಸ್ವಾವಶ್ಯಕಂ ದಧೌ ।**
**ಷಡ್ಭೇದಂ ದೇಶಕಾಲಾದಿಸವ್ಯಪೇಕ್ಷಮನೂನಯನ್ ॥ ೭೫ ॥**

ಸ್ವತಂತ್ರನೂ ಜಿತೇಂದ್ರಿಯನೂ ಆದ ಈ ಮುನಿಯು ದೇಶಕಾಲಮೊದಲಾದ ಅಪೇಕ್ಷೆಯನ್ನು ಮಾಡದೆ ಸಾಮಯಿಕ ಪ್ರತಿಕ್ರಮಣ ಪ್ರತ್ಯಾಖ್ಯಾನ ಸ್ತವನ ವಂದನಾ ಕಾಯೋತ್ಸರ್ಗಗಳೆಂಬ ಆರು ಆವಶ್ಯಕಕ್ರಿಯೆಗಳನ್ನು ಮಾಡಿದನು.

**ಮಾರ್ಗಂ ಪ್ರಕಾಶಯಾಮಾಸ ತಪೋಜ್ಞಾನಾದಿದೀಧಿತೀಃ ।**
**ದಧಾನೋಽಸೌ ಮುನೀನೇನೋ ಭವ್ಯಾಬ್ಜಾನಾಂ ಪ್ರಬೋಧಕಃ ॥ ೭೬ ॥**

ತಪಸ್ಸು ಜ್ಞಾನ ಮೊದಲಾದ ಗುಣಗಳೆಂಬ ಕಿರಣಗಳನ್ನು ಧರಿಸಿರುವ ಈ ಮುನೀಶ್ವರನೆಂಬ ಸೂರ್ಯನು ಭವ್ಯರೆಂಬ ಕಮಲಗಳನ್ನು ಅರಳಿಸುತ್ತ ಜೈನಮಾರ್ಗ(ಧರ್ಮ)ವನ್ನು ಪ್ರಕಾಶಪಡಿಸಿದನು.

**ವಾತ್ಸಲ್ಯಮಧಿಕಂ ಚಕ್ರೇ ಸಮುನಿರ್ಧರ್ಮವತ್ಸಲಃ ।**
**ವಿನೇಯಾನ್ ಸ್ಥಾಪಯನ್ಧರ್ಮೇ ಜಿನಪ್ರವಚನಾಶ್ರಿತಾನ್ ॥ ೭೭ ॥**

ಧರ್ಮದಲ್ಲಿ ವಾತ್ಸಲ್ಯವುಳ್ಳ ಆ ಮುನಿಯು ಜಿನಶಾಸನವನ್ನು ಆಶ್ರಯಿಸಿರುವ ಶಿಷ್ಯರನ್ನು ಧರ್ಮದಲ್ಲಿ ಸ್ಥಿರಪಡಿಸಿ ಅವರ ಮೇಲೆ ಬಹಳ ವಾತ್ಸಲ್ಯವನ್ನು ಮಾಡಿದನು.

**ಇತ್ಯಮೂನಿ ಮಹಾಧೈರ್ಯೋ ಮುನಿಶ್ಚಿರಮಭಾವಯತ್ ।**
**ತೀರ್ಥಕೃತ್ತ್ವಸ್ಯ ಸಂಪ್ರಾಪ್ತೌ ಕಾರಣಾನ್ಯೇಷ ಷೋಡಶ ॥ ೭೮ ॥**

ಮಹಾಧೈರ್ಯಶಾಲಿಯಾದ ಈ ವಜ್ರನಾಭಿಮುನಿಯು ತೀರ್ಥಕರತ್ವಪ್ರಾಪ್ತಿಗೆ ಕಾರಣವಾದ ಈ ಹದಿನಾರು ಭಾವನೆಗಳನ್ನು ಬಹುಕಾಲದವರೆಗೆ ಭಾವಿಸಿದನು.

**ತತೋಽಮೂರ್ಭಾವನಾಃ ಸಮ್ಯಗ್ಭಾವಯನ್ಮುನಿಸತ್ತಮಃ ।**
**ಸ ಬಬಂಧ ಮಹತ್ಪುಣ್ಯಂ ತ್ರೈಲೋಕ್ಯಕ್ಷೋಭಕಾರಣಮ್ ॥ ೭೯ ॥**

ತರುವಾಯ ಈ ಭಾವನೆಗಳನ್ನು ಚೆನ್ನಾಗಿ ಭಾವಿಸಿ ಆ ಮುನಿಶ್ರೇಷ್ಠನು ಮೂರುಲೋಕಕ್ಕೂ ಕ್ಷೋಭೆಗೆ ಕಾರಣವಾದ ಮಹಾಪುಣ್ಯವನ್ನು ಕಟ್ಟಿಕೊಂಡನು. ಸಂಪಾದಿಸಿದನೆಂದರ್ಥವು.

೧ ಆಪ್ತಪ್ರಥಮೋಪಕ್ರಮೇ. ೨ ನ ಸಮರ್ಥೋ ಭವತಿ. ೩ ವಿಸ್ತೃತಾನ್. ೪ ಸ ನ ಭವತೀತ್ಯಸಃ, ಅನಾಪ್ತ ಇತ್ಯರ್ಥಃ. ೫ ಅಪರಾಧೀನೋಽಪಿ. ೬ ಪರಾಧೀನಃ, ಜಿತೇಂದ್ರಿಯಶ್ಚ.

**ಸ ಕೋಷ್ಠ ಬುದ್ಧಿಮಮಲಾಂ ಬೀಜಬುದ್ಧಿಂ ಚ ಶಿಶ್ರಿಯೇ ।**
**ಪದಾನುಸಾರಿಣೀಂ ಬುದ್ಧಿಂ ಸಂಭಿನ್ನಶ್ರೋತೃತಾಮಪಿ ॥ ೮೦ ॥**

ಆ ಮುನಿಯು ನಿರ್ಮಲವಾದ ಕೋಷ್ಠಬುದ್ಧಿಯನ್ನೂ ಬೀಜಬುದ್ಧಿಯನ್ನೂ ಪದಾನುಸಾರಿಣೀಬುದ್ಧಿಯನ್ನೂ ಸಂಭಿನ್ನಶ್ರೋತೃತ್ವಬುದ್ಧಿಯನ್ನೂ ಪಡೆದನು. ಆ ಮುನಿಗೆ ತಪೋಬಲದಿಂದ ಈ ಅತಿಶಯವಾದ ಬುದ್ಧಿಗಳುಂಟಾದುವೆಂದು ಭಾವವು.

**ತಾಭಿರ್ಬುದ್ಧಿಭಿರಿದ್ಧರ್ದ್ಧಿಃ ಪರಲೋಕಗತಾಗತಮ್ ।**
**ರಾಜರ್ಷೀರಾಜವಿದ್ಯಾಭಿರಿವ ಸಮ್ಯಗಬುದ್ಧ ಸಃ ॥ ೮೧ ॥**

ಆ ವಜ್ರನಾಭಿಮುನಿಯು ರಾಜನಾಗಿದ್ದಾಗ ನಾಲ್ಕು ರಾಜವಿದ್ಯೆಗಳ ಬಲದಿಂದ ಶತ್ರುಗಳ ಗಮನಾಗಮನವನ್ನು ತಿಳಿದಿದ್ದಂತೆ, ಹಿಂದೆ ಹೇಳಿದ ಬುದ್ಧಿಗಳ ಬಲದಿಂದ ಮಹಾಶಕ್ತಿಸಂಪನ್ನನಾಗಿ ಪರಲೋಕಸಂಬಂಧವಾದ ಗಮನಾಗಮನವನ್ನು ತಿಳಿದನು.

**[1]ಸ ದೀಪ್ತತಪಸಾ ದೀಪ್ತಿಂ ಭೇಜೇ ತಪ್ತತಪಾಃ ಪರಮ್ ।**
**ತೇಪೇ ತಪೋಗ್ರ್ಯಮುಗ್ರಂ ಚ ಘೋರಾಂ[2]ಹೋರಾತಿಮರ್ಮಭಿತ್ ॥**

ಆ ಮುನಿಯು ದೀಪ್ತವಾದ ತಪಸ್ಸಿನಿಂದ ಕಾಂತಿಯನ್ನು ಪಡೆದನು. ಆಮೇಲೆ ತಪ್ತತಪಸ್ಸನ್ನು ಮಾಡಿದನು. ತರುವಾಯ ಭಯಂಕರವಾದ ಕರ್ಮವೆಂಬ ಶತ್ರುವಿನ ಮರ್ಮವನ್ನು ಭೇದಿಸುವುದೂ ಉಗ್ರವೂ ಶ್ರೇಷ್ಠವೂ ಆದ ತಪಸ್ಸನ್ನು ಮಾಡಿದನು.

**ಸ ತಪೋಮಂತ್ರಿಭಿ[3]ರ್ದ್ವಂದ್ವಮಮಂತ್ರಯತ [4]ಮಂತ್ರವಿತ್ ।**
**ಪರಲೋಕಜಯೋದ್ಯುಕ್ತೋ ವಿಜಿಗೀಷುಃ ಪುರಾ ಯಥಾ ॥ ೮೩ ॥**

ಆ ವಜ್ರನಾಭಿಮುನಿಯು ಪೂರ್ವದಲ್ಲಿ ರಾಜ್ಯಭಾರವನ್ನು ಮಾಡುತ್ತಿದ್ದಾಗ ಮಂತ್ರಾಲೋಚನೆಯನ್ನು ತಿಳಿದವನೂ ಶತ್ರುಗಳ ಜಯದಲ್ಲಿ ಉದ್ಯುಕ್ತನೂ ಜಯಶೀಲನೂ ಆಗಿ ಮಂತ್ರಿಗಳೊಡನೆ ಯುದ್ಧವನ್ನು ಪರ್ಯಾಲೋಚಿಸುತ್ತಿದ್ದಂತೆ, ಮುನಿಪದವಿಯನ್ನು ಹೊಂದಿದನಂತರವೂ ಮಂತ್ರವನ್ನು ತಿಳಿದವನೂ ಪರಲೋಕಜಯದಲ್ಲಿ ಉದ್ಯುಕ್ತನೂ ಜಯಶೀಲನೂ ಆಗಿ ತಪಸ್ಸುಗಳೆಂಬ ಮಂತ್ರಿಗಳೊಡನೆ ಪರಿಗ್ರಹವನ್ನೂ ಇಷ್ಟಾನಿಷ್ಟಫಲಗಳನ್ನೂ ವಿಚಾರಮಾಡಿದನು.

**ಅಣಿಮಾದಿಗುಣೋಪೇತಾಂ ವಿಕ್ರಿಯರ್ದ್ಧಿಮವಾಪ ಸಃ ।**
**ಪದಂ ವಾಂಛನ್ನತಾಮ್ಯೈಚ್ಛ[5]ನ್ನಹೀಚ್ಛಾ ಗರಿಮಾಸ್ಪದಮ್ ॥ ೮೪ ॥**

ಆ ಮುನಿಯು ಅಣಿಮಾಮಹಿಮಾಮೊದಲಾದ ಗುಣಗಳೊಡಗೂಡಿದ ವಿಕ್ರಿಯರ್ದ್ಧಿಯನ್ನು ಪಡೆದನು. ಆ ಮುನಿಯು ಶ್ರೇಷ್ಠವಾದ ಪದವಿಯನ್ನು ಬಯಸಿದ್ದರೂ ಆ ವಿಕ್ರಿಯರ್ದ್ಧಿಯನ್ನು ಬಯಸಲಿಲ್ಲ. ಶ್ರೇಷ್ಠವಾದ ಪದವಿಯು ಪ್ರಾಪ್ತವಾಗುವುದಕ್ಕೆ ಇಚ್ಛೆಯೇ ಕಾರಣವಲ್ಲವು.

**ಜಲ್ಲಾದ್ಯೋಷಧಿಸಂಪ್ರಾಪ್ತಿರಸ್ಯಾಸೀಜ್ಜಗತೇ ಹಿತಾ ।**
**ಕಲ್ಪದ್ರುಮಫಲಾವಾಪ್ತಿಃ ಕಸ್ಯ ವಾ ನೋಪಕಾರಿಣೀ ॥ ೮೫ ॥**

ಈ ಮುನಿಗೆ ಲೋಕಕ್ಕೆ ಹಿತಕರವಾದ ಜಲ್ಲೌಷಧಿಮೊದಲಾದ ಋದ್ಧಿಯು ಪ್ರಾಪ್ತವಾಗಿದ್ದಿತು. ತಪೋಬಲದಿಂದ ಶರೀರ ಮಲಾದಿಗಳೂ ಔಷಧರೂಪವಾಗಿ ಪರಿಣತವಾದುವೆಂದು ಭಾವವು. ಕಲ್ಪವೃಕ್ಷದ ಫಲವು ಪ್ರಾಪ್ತವಾದರೆ ಯಾರಿಗೆತಾನೆ ಉಪಕಾರವಾಗುವುದಿಲ್ಲ ? ಎಲ್ಲರಿಗೂ ಉಪಕಾರವಾಗುವುದೆಂದು ಭಾವವು.

**ರಸತ್ಯಾಗಪ್ರತಿಜ್ಞಸ್ಯ [6]ರಸಸಿದ್ಧಿರಭೂನ್ಮುನೇಃ ।**
**ಸೂತೇ ನಿವೃತ್ತಿರಿಷ್ಟಾರ್ಥಾದಧಿಕಂ ಹಿ ಮಹತ್ಫಲಮ್ ॥ ೮೬ ॥**

೧ ಸದೀಪ್ತತಪಸಾ ದೀಪ್ತೋ ಭೇಜೇ ತಪ್ತತಪಃ ಪರಮಿತ್ಯಪಿ ಪಾಠಾಂತರಂ. ೨ ಪಾಪಮೇವ ಶತ್ರುಃ. ೩ ಪರಿಗ್ರಹಂ, ಇಷ್ಟಾನಿಷ್ಟಂ ಚ ಪಕ್ಷೇ ಕಲಹಂ. ೪ ಪಂಚಾಂಗಮಂತ್ರವಿತ್ ಪಕ್ಷೇ ಪಂಚನಮಸ್ಕಾರಮಂತ್ರವಿತ್. ೫ ಮಹೇಚ್ಛೋರಿತ್ಯಪಿ ಪಾಠಃ. ೬ ಅಮೃತಾದಿರಸಸಿದ್ಧಿಃ.

ರಸಪದಾರ್ಥಗಳನ್ನು ಪ್ರತಿಜ್ಞೆಮಾಡಿ ಪರಿತ್ಯಜಿಸಿದ ಆ ವಜ್ರನಾಭಿಮುನಿಗೆ ಅಮೃತಾದಿರಸಗಳ ಸಿದ್ಧಿಯುಂಟಾಯಿತು. ಇಂತಹ ರಸಸಿದ್ಧಿಯುಳ್ಳವರಿಗೆ ಅಮೃತ ಸ್ರಾವಿಗಳೆಂದು ಹೆಸರು. ಇಷ್ಟಪದಾರ್ಥಗಳನ್ನು ಪ್ರತಿಜ್ಞಾಪೂರ್ವಕವಾಗಿ ಬಿಡುವು ದರಿಂದ ಪೂರ್ವಕ್ಕಿಂತಲೂ ಅಧಿಕವಾದ ಫಲವುಂಟಾಗುವುದು.

**ಸ ಬಲರ್ದ್ಧಿರ್ಬಲಾಧಾನಾದಸೋಢೋಗ್ರಾನ್ಪರೀಷಹಾನ್ ।**
**ಅನ್ಯಥಾ ತಾದೃಶಂ [೧]ದ್ವಂದ್ವಂ ಕಃ ಸಹೇತ ಸುದುಸ್ಸಹಮ್ ॥ ೮೭ ॥**

ಆ ಮುನಿಗೆ ಬಲ(ಸಾಮರ್ಥ್ಯ)ಋದ್ಧಿಯು ಪ್ರಾಪ್ತವಾದುದರಿಂದ ಕಠಿನವಾದ ಪರೀಷಹ(ಬಾಧೆ)ಗಳನ್ನು ಸಹಿಸಿದನು. ಹಾಗಲ್ಲದಿದ್ದರೆ ಅಂತಹ ದುಃಸಹವಾದ ಪರೀಷಹವನ್ನು ಯಾವನು ಸಹಿಸುವನು ?

**ಸೋಕ್ಷೀಣರ್ದ್ಧಿಪ್ರಭಾವೇಣಾ[೨]ಕ್ಷೀಣಾ[೩]ನ್ನಾವಸಥೋಭವತ್ ।**
**ಧ್ರುವಂ ತಪೋ[೪]ಕೃಶಂ ತಪ್ತಂ [೫]ಪಂಫುಲೀತ್ಯಕ್ಷಯಂ ಫಲಮ್ ॥ ೮೮ ॥**

ಅಕ್ಷೀಣವೆಂಬ ಋದ್ಧಿಯ ಪ್ರಭಾವದಿಂದ ಆ ಮುನಿಯು ಆಹಾರವನ್ನು ತೆಗೆದುಕೊಂಡ ಮನೆಯಲ್ಲಿ ಆ ದಿನ ಭೋಜನಸಾಮಗ್ರಿಯು ಕಡಿಮೆ ಯಾಗುತ್ತಿರಲಿಲ್ಲ. ಇಂತಹ ಅಕ್ಷೀಣಮಹಾನಸರ್ದ್ಧಿಯೆಂಬ ಶಕ್ತಿಯನ್ನು ಹೊಂದಿ ದನು. ಅಧಿಕವಾಗಿ ತಪಿಸಿದ ತಪಸ್ಸು ನಿಶ್ಚಯವಾಗಿಯೂ ಅಕ್ಷಯವಾದ ಫಲವನ್ನು ಕೊಡುತ್ತದೆ.

**ವಿಶುದ್ಧಭಾವನಃ ಸಮ್ಯಗ್ವಿಶುದ್ಧ್ಯ[೬]ನ್ಸ್ವವಿಶುದ್ಧಿಭಿಃ ।**
**ತದೋಪಶಮಕಶ್ರೇಣೀಮಾರುರೋಹ ಮುನೀಶ್ವರಃ ॥ ೮೯ ॥**

ನಿರ್ಮಲವಾದ ಪರಿಣಾಮವುಳ್ಳ ಆ ವಜ್ರನಾಭಿಮುನಿಯು ಆತ್ಮವಿಶುದ್ಧಿಗಳಿಂದ ಚೆನ್ನಾಗಿ ಪರಿಶುದ್ಧನಾಗಿ ಉಪಶಮಶ್ರೇಣಿಯನ್ನು ಹೊಂದಿದನು.(ಮೋಹನೀಯ ಕರ್ಮಗಳನ್ನು ಉಪಶಮಮಾಡುತ್ತ ಪರಿಣಾಮವಿಶುದ್ಧಿಯನ್ನು ಪಡೆದು ಗುಣ ಸ್ಥಾನಗಳನ್ನು ಏರುವುದಕ್ಕೆ ಉಪಶಮಶ್ರೇಣ್ಯಾರೋಹಣವೆಂದು ಹೆಸರು. ಎಂಟು ಒಂಬತ್ತು ಹತ್ತು ಹನ್ನೊಂದು ಈ ನಾಲ್ಕುಗುಣಸ್ಥಾನಗಳು ಉಪಶಮಶ್ರೇಣೀ ಗುಣಸ್ಥಾನಗಳಾಗಿವೆ. ಮೋಹನೀಯಕರ್ಮಗಳನ್ನು ಕ್ಷಯಮಾಡುತ್ತ ಪರಿಣಾಮ ವಿಶುದ್ಧಿಯನ್ನು ಹೊಂದಿ ಗುಣಸ್ಥಾನಗಳನ್ನು ಏರುವುದಕ್ಕೆ ಕ್ಷಪಕಶ್ರೇಣ್ಯಾರೋಹಣ ವೆಂದು ಹೆಸರು. ಎಂಟು ಒಂಬತ್ತು ಹತ್ತು ಮತ್ತು ಹನ್ನೆರಡು ಈ ನಾಲ್ಕು ಗುಣಸ್ಥಾನಗಳು ಕ್ಷಪಕಶ್ರೇಣೀಗುಣಸ್ಥಾನಗಳಾಗಿವೆ. ಕರ್ಮಗಳ ಉದಯಾದಿ ಅವಸ್ಥೆಗಳಲ್ಲಿ ಉಂಟಾಗುವ ಆತ್ಮಪರಿಣಾಮಕ್ಕೆ ಗುಣಸ್ಥಾನವೆಂದು ಹೆಸರು. ಅಂತಹ ಗುಣಸ್ಥಾನಗಳು ಮಿಥ್ಯಾದೃಷ್ಟಿಮೊದಲಾಗಿ ಹದಿನಾಲ್ಕು).

**ಅಪೂರ್ವಕರಣಂ ಶ್ರಿತ್ವಾನಿವೃತ್ತಿಕರಣೋಭವತ್ ।**
**ಸ [೭]ಸೂಕ್ಷ್ಮರಾಗಃ ಸಂಪ್ರಾಪದುಪಶಾಂತಕಷಾಯತಾಮ್ ॥ ೯೦ ॥**

ಆ ವಜ್ರನಾಭಿಮುನಿಯು ಅಪೂರ್ವಕರಣವನ್ನು ಹೊಂದಿ ಅನಿವೃತ್ತಿಕರಣ ಗುಣಸ್ಥಾನವನ್ನು ಪಡೆದನು. ಆಮೇಲೆ ಸೂಕ್ಷ್ಮ ಸಾಂಪರಾಯಗುಣಸ್ಥಾನವನ್ನು ಹೊಂದಿ ಉಪಶಾಂತಕಷಾಯಗುಣಸ್ಥಾನವರ್ತಿಯಾದನು.

**ಕೃತ್ಸ್ನಸ್ಯ ಮೋಹನೀಯಸ್ಯ ಪ್ರಶಮಾ[೮]ದುಪಪಾದಿತಮ್ ।**
**ತತ್ರೌಪಶಮಿಕಂ ಪ್ರಾಪಚ್ಚಾರಿತ್ರಂ ಸುವಿಶುದ್ಧಿಕಮ್ ॥ ೯೧ ॥**

ಆ ಉಪಶಾಂತಕಷಾಯಗುಣಸ್ಥಾನದಲ್ಲಿ ಸಂಪೂರ್ಣವಾದ ಮೋಹನೀಯ ಕರ್ಮದ ಉಪಶಮದಿಂದುಂಟಾದುದೂ ಅತ್ಯಂತ ಪರಿಶುದ್ಧವೂ ಆದ ಔಪಶಮಿಕಚಾರಿತ್ರವನ್ನು ಹೊಂದಿದನು.

೧ ಪರೀಷಹಂ. ೨ ಅಕ್ಷೀಣಮಹಾನಸರ್ದ್ಧಿಃ. ೩ ಆವಾಸಃ. ೪ ತೀವ್ರಂ. ೫ ಭೃಶಂ ಫಲತಿ, ಪಂಫಲೀತೀತ್ಯಪಿ ಪಾಠಃ. ೬ ಆತ್ಮವಿಶುದ್ಧಿಭಿಃ. ೭ ಸೂಕ್ಷ್ಮಸಾಂಪರಾಯಃ. ೮ ಉದ್ಭೂತಂ.

**ಸೋಂತರ್ಮುಹೂರ್ತಾದ್ಭೂಯೋಪಿ [೧]ಸ್ವಸ್ಥಾನಸ್ಥೋಭವದ್ಯತಿಃ ।**
**ನೋರ್ಧ್ವಂ ಮುಹೂರ್ತಾ[೨]ತ್ತತ್ರಾಸ್ತಿ ನಿಸರ್ಗಾಸ್ಥಿತಿರಾತ್ಮನಃ ॥ ೯೨ ॥**

ಆ ವಜ್ರನಾಭಿಮುನಿಯು ಒಂದು ಅಂತರ್ಮುಹೂರ್ತಕಾಲದವರೆಗೆ ಉಪ ಶಾಂತಕಷಾಯಗುಣಸ್ಥಾನದಲ್ಲಿದ್ದು ಅಲ್ಲಿಂದ ಚ್ಯುತನಾಗಿ ಪುನಃ ಏಳನೆಯ ಅಪ್ರಮತ್ತಗುಣಸ್ಥಾನವರ್ತಿಯಾದನು. ಆ ಉಪಶಾಂತಕಷಾಯಗುಣಸ್ಥಾನದಲ್ಲಿ ಆತ್ಮಸ್ಥಿತಿಯು ಸ್ವಭಾವದಿಂದಲೇ ಒಂದು ಅಂತರ್ಮುಹೂರ್ತಕ್ಕಿಂತ ಹೆಚ್ಚು ಇರುವುದಿಲ್ಲ. (ಉಪಶಮಶ್ರೇಣಿಯನ್ನು ಹತ್ತಿದ ಆತ್ಮನು ನಿಯಮದಿಂದ ಕೆಳಕ್ಕೆ ಬರುತ್ತಾನೆ)

**ಸೋಬುದ್ಧ ಪರಮಂ ಮಂತ್ರಂ ಸೋಬುದ್ಧ ಪರಮಂ ತಪಃ ।**
**ಸೋಬುದ್ಧ ಪರಮಾ[೩]ಮಿಷ್ಟಿಂ ಸೋಬುದ್ಧ ಪರಮಂ ಪದಮ್ ॥ ೯೩ ॥**

ಆ ಮುನಿಯು ಶ್ರೇಷ್ಠವಾದ ಮಂತ್ರವನ್ನೂ ತಪಸ್ಸನ್ನೂ ಭಾವಪೂಜೆಯನ್ನೂ ಉತ್ಕೃಷ್ಟವಾದ ಲಕ್ಷ್ಮಿಯು ಪ್ರಾಪ್ತವಾಗುವ ಪದವಿಯನ್ನೂ ತಿಳಿದನು.

**ತತಃ [೪]ಕಾಲಾತ್ಯಯೇ ಧೀಮಾನ್ ಶ್ರೀಪ್ರಭಾದ್ರೌ ಸಮುನ್ನತೇ ।**
**ಪ್ರಾಯೋಪವೇಶನಂ ಕೃತ್ವಾ ಶರೀರಾಹಾರಮತ್ಯಜತ್ ॥ ೯೪ ॥**

ತರುವಾಯ ಬುದ್ಧಿಶಾಲಿಯಾದ ಆ ವಜ್ರನಾಭಿಮುನಿಯು ತನ್ನ ಆಯುಷ್ಯಾವಸಾನದಲ್ಲಿ ಉನ್ನತವಾದ ಶ್ರೀಪ್ರಭವೆಂಬ ಪರ್ವತದಲ್ಲಿ ಪ್ರಾಯೋ ಪವೇಶನ (ಸನ್ಯಾಸ) ವಿಧಿಯನ್ನು ಮಾಡಿ ಶರೀರದಲ್ಲಿ ಮಮತೆಯನ್ನೂ ಆಹಾರ ವನ್ನೂ ಪರಿತ್ಯಜಿಸಿದನು.

**ರತ್ನತ್ರಯಮಯೀಂ ಶಯ್ಯಾ[೫]ಮಧಿಶಯ್ಯ ತಪೋನಿಧಿಃ ।**
**ಪ್ರಾಯೇಣೋಪವಿಶ[೬]ತ್ಯಸ್ಮಿನ್ನಿತ್ಯನ್ವರ್ಥತ್ವ[೭]ಮಾಪಿಪತ್ ॥ ೯೫ ॥**

ತಪಸ್ಸಿಗೆ ನಿಧಿಪ್ರಾಯನಾದ ಈ ವಜ್ರನಾಭಿಮುನಿಯು ರತ್ನತ್ರಯ (ಸಮ್ಯ ಗ್ದರ್ಶನಜ್ಞಾನಚಾರಿತ್ರ)ಮಯವಾದ ಶಯ್ಯೆ(ಹಾಸಿಗೆ)ಯಲ್ಲಿ ಮಲಗಿ ''ಬಹುಶಃ ಈ ಸನ್ಯಾಸದಲ್ಲಿ ಪ್ರವೇಶಮಾಡುತ್ತಾನೆ'' ಎಂಬ ಸಾರ್ಥಕತ್ವವನ್ನು ಹೊಂದಿಸಿದನು. ''ಪ್ರಾಯೋಪವೇಶನ'' ವೆಂಬ ಶಬ್ದಕ್ಕೆ ಸಾರ್ಥಕ್ಯವನ್ನು ಹೊಂದಿಸಿ ದನೆಂದು ಭಾವವು.

**[೮]ಪ್ರಾಯೇಣೋಪಗಮೋ ಯಸ್ಮಿನ್ರತ್ನತ್ರಿತಯಗೋಚರಃ ।**
**ಪ್ರಾಯೇಣಾಪಗಮೋ ಯಸ್ಮಿನ್ದುರಿತಾರಿ[೯]ಕದಂಬಕಾತ್ ॥ ೯೬ ॥**

**ಪ್ರಾಯೋ ವಾಸ್ಮಾಜ್ಜನಸ್ಥಾನಾದಪಸೃತ್ಯ [೧೦]ಗಮೋಟವೇಃ ।**
**ಪ್ರಾಯೋಪಗಮನಂ ತಜ್ಜ್ಞೈರ್ನಿರುಕ್ತಂ ಶ್ರಮಣೋತ್ತಮೈಃ ॥ ೯೭ ॥**

ಪ್ರಾಯಶಃ ಯಾವ ಸನ್ಯಾಸದಲ್ಲಿ ಉಪವಾಸದಿಂದ ಸಮ್ಯಗ್ದರ್ಶನಾದಿ ರತ್ನತ್ರಯದ ಪ್ರಾಪ್ತಿಯೂ ಪಾಪಗಳೆಂಬ ಶತ್ರುಗಳ ಸಮೂಹದಿಂದ ನಿವೃತ್ತಿಯೂ ಈ ಜನಸ್ಥಾನದಿಂದ ತೊಲಗಿ ಅರಣ್ಯಗಮನವೂ ಆಗುವವೋ ಅದು ಪ್ರಾಯೋಪ ಗಮನವೆಂದು ಆ ವಿಧಿಯನ್ನು ತಿಳಿದ ಮುನಿಶ್ರೇಷ್ಠರು ಹೇಳಿದ್ದಾರೆ.

**ಸ್ವಪರೋಪಕೃತಾಂ ದೇಹೇ ಸೋನಿಚ್ಛಂಸ್ತಾಂ ಪ್ರತಿಕ್ರಿಯಾಮ್ ।**
**ರಿಪೋರಿವ ಶವಂ ತ್ಯಕ್ತ್ವಾ ದೇಹಮಾಸ್ತ ನಿರಾಕುಲಃ ॥ ೯೮ ॥**

ಶರೀರದಲ್ಲುಂಟಾದ ಕ್ಲೇಶವನ್ನು ಪರಿಹರಿಸುವುದಕ್ಕೆ ಆ ಮುನಿಯು ತಾನು ಪ್ರತೀಕಾರವನ್ನಿಚ್ಛಿಸದೆ ಬೇರೆಯವರಿಂದಲೂ ಪ್ರತೀಕಾರವನ್ನು ಮಾಡಿಸಿಕೊಳ್ಳದೆ ಶತ್ರುವಿನ ಶರೀರದೋಪಾದಿಯಲ್ಲಿ ತನ್ನ ಶರೀರದ ಮಮಕಾರವನ್ನು ಬಿಟ್ಟು ವ್ಯಾಕುಲರಹಿತನಾಗಿದ್ದನು.

೧ ಅಪ್ರಮತ್ತಗುಣಸ್ಥಾನಸ್ಥಃ. ೨ ಉಪಶಾಂತಕಷಾಯಗುಣಸ್ಥಾನೇ. ೩ ಭಾವಪೂಜಾಂ. ೪ ಆಯುಷ್ಯಾವಸಾನೇ. ೫ ಆಧಾರೇ ಕರ್ಮ. ೬ ಸನ್ಯಾಸೇ. ೭ ಪ್ರಾಪಯತ್. ೮ ಅನಶನೇನ. ೯ ನಿಕರಾದಪಸೃತ್ಯೇತ್ಯರ್ಥಃ. ೧೦ ಗಮನಂ.

**ತ್ವಗಸ್ಥೀಭೂತಸರ್ವಾಂಗೋ ಮುನಿಃ ಪರಿಕೃಶೋದರಃ ।**
**[೧]ಸತ್ತ್ವಮೇವಾವಲಂಬ್ಯಾಸ್ಥಾ[೨]ದ್ಗಣರಾತ್ರಾ[೩]ನಕಂಪ್ರಧೀಃ ॥ ೯೯ ॥**

ಚರ್ಮವೂ ಮೂಳೆಯೂ ಮಾತ್ರವುಳಿದ ಸರ್ವಾಂಗವುಳ್ಳವನೂ ಕೃಶವಾದ ಹೊಟ್ಟೆಯುಳ್ಳವನೂ ಆದ ಆ ಮುನಿಯು ಮನೋಬಲವನ್ನವಲಂಬಿಸಿ ಬಹುದಿನಗಳವರೆಗೆ ನಿಶ್ಚಲವಾದ ಬುದ್ಧಿಯುಳ್ಳವನಾಗಿದ್ದನು.

**ಕ್ಷುಧಂ ಪಿಪಾಸಾಂ ಶೀತಂ ಚ ತಥೋಷ್ಣಂ [೪]ದಂಶಮಕ್ಷಿಕಮ್ ।**
**[೫]ನಾಗ್ನ್ಯಂ ತಥಾರತಿಂ [೬]ಸ್ತ್ರೈಣಂ ಚರ್ಯಾಂ ಶಯ್ಯಾಂ [೭]ನಿಷದ್ಯಕಾಮ್ ॥**

**[೮]ಆಕ್ರೋಶಂ ವಧಯಾಚ್ಞೇ ಚ ತಥಾಲಾಭಮದರ್ಶನಮ್ ।**
**ರೋಗಂ ಚ ಸತೃಣಸ್ಪರ್ಶಂ ಪ್ರಜ್ಞಾಜ್ಞಾನೇ ಮಲಂ ತಥಾ ॥ ೧೦೧ ॥**

**ಸಸತ್ಕಾರಪುರಸ್ಕಾರಮಸೋಢೈತಾನ್ಪರೀಷಹಾನ್ ।**
**[೯]ಮಾರ್ಗಾಚ್ಯವನ[೧೦]ಮಾಶಂಸುರ್ಮಹತೀಂ ನಿರ್ಜರಾಮಪಿ ॥ ೧೦೨ ॥**

ಮೋಕ್ಷಮಾರ್ಗದಿಂದ ಚ್ಯುತನಾಗದಿರುವುದಕ್ಕೋಸ್ಕರವೂ ಕರ್ಮನಿರ್ಜರೆಯಾಗುವುದಕ್ಕೋಸ್ಕರವೂ ಆ ವಜ್ರನಾಭಿಮುನಿಯು ಮುಂದೆಹೇಳುವ ಇಪ್ಪತ್ತೆರಡು ಪರೀಷಹ(ಬಾಧೆ)ಗಳನ್ನು ಜಯಿಸಿದನು:- ೧ ಹಸಿವೆಯ ಬಾಧೆಯನ್ನು ಸಹಿಸುವುದು ಕ್ಷುತ್ಪರೀಷಹಜಯವು ೨ ಬಾಯಾರಿಕೆಯ ಬಾಧೆಯನ್ನು ಸಹಿಸುವುದು ಪಿಪಾಸಾಪರೀಷಹಜಯವು ೩ ಶೀತಬಾಧೆಯನ್ನು ಸಹಿಸುವುದು ಶೀತಪರೀಷಹಜಯವು ೪ ಉಷ್ಣಬಾಧೆಯನ್ನು ಸಹಿಸುವುದು ಉಷ್ಣಪರೀಷಹಜಯವು. ೫ ಕಾಡುನೊಣ ಸೊಳ್ಳೆ ಮೊದಲಾದ ಕಚ್ಚುವ ಜಂತುಗಳ ಬಾಧೆಯನ್ನು ಸಹಿಸುವುದು ದಂಶಮಶಕಪರೀಷಹಜಯವು. ೬ ನಗ್ನತ್ವಬಾಧೆಯನ್ನು ಸಹಿಸುವುದು ನಾಗ್ನ್ಯಪರೀಷಹಜಯವು. ೭ ಅಪ್ರೀತಿಬಾಧೆಯನ್ನು ಸಹಿಸುವುದು ಅರತಿಪರೀಷಹಜಯವು. ೮ ಸ್ತ್ರೀಮೂಲಕವಾದ ಬಾಧೆಯನ್ನು ಸಹಿಸುವುದು ಸ್ತ್ರೀಪರೀಷಹಜಯವು. ೯ ಸಂಚಾರಕಾಲದಲ್ಲುಂಟಾಗುವ ಬಾಧೆಯನ್ನು ಸಹಿಸುವುದು ಚರ್ಯಾಪರೀಷಹಜಯವು. ೧೦ ಮಲಗುವ ಸ್ಥಾನದಲ್ಲುಂಟಾಗುವ ಬಾಧೆಯನ್ನು ಸಹಿಸುವುದು ಶಯ್ಯಾಪರೀಷಹಜಯವು. ೧೧ ಕುಳಿತುಕೊಳ್ಳುವಾಗ ಉಂಟಾಗುವ ಬಾಧೆಯನ್ನು ಸಹಿಸುವುದು ನಿಷದ್ಯಾಪರೀಷಹಜಯವು. ೧೨ ದುಷ್ಟರು ತೊಂದರೆಪಡಿಸಿದರೆ ಕ್ರೋಧವನ್ನು ಮಾಡದೆ ಆ ಬಾಧೆಯನ್ನು ಸಹಿಸುವುದು ಆಕ್ರೋಶಪರೀಷಹಜಯವು. ೧೩ ಶತ್ರುಗಳು ಖಡ್ಗಮೊದಲಾದ ಅಸ್ತ್ರಗಳಿಂದ ವಧೆಮಾಡಿದರೂ ಪೂರ್ವಕರ್ಮದ ಫಲವೆಂದು ತಿಳಿದು ಪ್ರತೀಕಾರವನ್ನುಮಾಡದೆ ಆ ಬಾಧೆಯನ್ನು ಸಹಿಸುವುದು ವಧಪರೀಷಹಜಯವು. ೧೪ ಆಹಾರನಿಮಿತ್ತವಾಗಿ ದೀನಭಾವವನ್ನು ತೋರಿಸದೆ ಸಹಿಸುವುದು ಯಾಚನಾಪರೀಷಹಜಯವು. ೧೫ ಆಹಾರವು ಪ್ರಾಪ್ತವಾಗದಿದ್ದರೂ ಖೇದಪಡದೆ ಸಹಿಸುವುದು ಅಲಾಭಪರೀಷಹಜಯವು. ೧೬ ತಾನು ಹೆಚ್ಚುಕಾಲತಪಸ್ಸನ್ನು ಮಾಡಿದರೂ ತನ್ನಲ್ಲಿ ಯಾವ ಮಹಿಮೆಯೂ ಉಂಟಾಗದಿರುವುದರಿಂದ ಮಹಾತಪಸ್ವಿಗಳಿಗೆ ಪ್ರಾತಿಹಾರ್ಯಮೊದಲಾದ ಅತಿಶಯಗಳುಂಟಾಗುತ್ತವೆಂಬುದು ಅಸತ್ಯವೆಂದು ತಿಳಿಯದೆ ಸಹಿಸುವುದು ಅದರ್ಶನಪರೀಷಹಜಯವು. ೧೭ ರೋಗವು ಪ್ರಾಪ್ತವಾದರೆ ಪ್ರತೀಕಾರವನ್ನು ಮಾಡಿಕೊಳ್ಳುವ ಶಕ್ತಿಯಿದ್ದರೂ ಶರೀರವು ಅನಿತ್ಯವಾದುದೆಂದು ತಿಳಿದು ಪ್ರತೀಕಾರವನ್ನು ಮಾಡದೆ ಆ ರೋಗಬಾಧೆಯನ್ನು ಸಹಿಸುವುದು ರೋಗಪರೀಷಹಜಯವು. ೧೮ ಸಂಚರಿಸುವಾಗ ಹುಲ್ಲು ಕಲ್ಲು ಮೊದಲಾದ ಕಠಿನಪದಾರ್ಥಗಳ ಬಾಧೆಯನ್ನು ಸಹಿಸುವುದು ತೃಣಸ್ಪರ್ಶಪರೀಷಹಜಯವು. ೧೯ ತರ್ಕವ್ಯಾಕರಣ ಮೊದಲಾದ ಶಾಸ್ತ್ರಗಳಲ್ಲಿ ತಾನು ಪ್ರವೀಣನಾಗಿದ್ದರೂ ಅಹಂಕಾರಪಡದೆ ಸಹಿಸುವುದು ಪ್ರಜ್ಞಾಪರೀಷಹಜಯವು. ೨೦ ಮಹಾತಪಸ್ವಿಯಾದ ತನಗೆ ಉತ್ತಮಜ್ಞಾನವು ಇನ್ನೂ ಪ್ರಾಪ್ತವಾಗಲಿಲ್ಲವೆಂದು ಯೋಚಿಸದೆ ಸಹಿಸುವುದು ಅಜ್ಞಾನಪರೀಷಹಜಯವು. ೨೧ ಸೂಕ್ಷ್ಮಪ್ರಾಣಿಗಳಿಗೆ ಬಾಧೆಯಾಗಬಾರದೆಂಬ ಅಭಿಪ್ರಾಯದಿಂದ ಸ್ನಾನವನ್ನು ಮಾಡದೆ ಶರೀರದಲ್ಲಿ ಕೊಳೆಯಾಗಿ ಬಾಧೆಯುಂಟಾದರೂ ಸಹಿಸುವುದು ಮಲಪರೀಷಹಜಯವು. ೨೨ ಮಹಾತಪಸ್ವಿಯಾದ ತನಗೆ ಸತ್ಕಾರವನ್ನೂ ಪುರಸ್ಕಾರವನ್ನೂ ಮಾಡುವುದಿಲ್ಲವೆಂದು ಭಾವಿಸದೆ ಸಹಿಸುವುದು ಸತ್ಕಾರಪುರಸ್ಕಾರಪರೀಷಹಜಯವು.

೧ ಮನೋಬಲಂ. ೨ ಬಹುನಿಶಾಃ. ೩ ನಿಷ್ಕಂಪ್ರಧೀಃ. ೪ ಮಶಕಂ. ೫ ನಗ್ನತ್ವಂ. ೬ ಸ್ತ್ರೀಸಂಬಂಧಿ. ೭ ಉಪವೇಶನಂ. ೮ ಶಪನಂ. ೯ ಮಾರ್ಗಾಚ್ಯವನನಿರ್ಜರಾರ್ಥಂ ಪರಿಷೋಢವ್ಯಾಃ ಪರೀಷಹಾ ಇತಿ ತತ್ತ್ವಾರ್ಥಸೂತ್ರೇ. ೧೦ ವಾಂಛನ್.

**ಸ ಭೇಜೇ ಮತಿಮಾನ್ ಕ್ಷಾಂತಿಂ ಪರಂ ಮಾರ್ದವಮಾರ್ಜವಮ್ ।**
**[೧]ಶೌಚಂ ಚ ಸಂಯಮಂ ಸತ್ಯಂ ತಪಸ್ತ್ಯಾಗೌ ಚ ನಿರ್ಮದಃ ॥ ೧೦೩ ॥**

**ಆಕಿಂಚನ್ಯಮಥ ಬ್ರಹ್ಮಚರ್ಯಂ ಚ ವದತಾಂವರಃ ।**
**ಧರ್ಮೋ [೨]ದಶತಯೋಽಯಂ ಹಿ ಗಣೇಶಾಮಪಿ ಸಮ್ಮತಃ ॥ ೧೦೪ ॥**

ವಕ್ತೃಗಳಲ್ಲಿ ಶ್ರೇಷ್ಠನೂ ಬುದ್ಧಿಶಾಲಿಯೂ ನಿರಹಂಕಾರಿಯೂ ಆದ ಆ ವಜ್ರನಾಭಿಮುನಿಯು ಗಣಧರರಿಗೂ ಸಮ್ಮತವಾದ ೧ ಉತ್ತಮ ಕ್ಷಮೆ ೨ ಉತ್ತಮ ಮಾರ್ದವ-ನಿರಹಂಕಾರತೆ ೩ ಉತ್ತಮಾರ್ಜವ-ಸರಳತೆ ೪ ಉತ್ತಮಶೌಚ-ನಿರ್ಲೋಭತ್ವ ೫ ಉತ್ತಮಸಂಯಮ-ಇಂದ್ರಿಯನಿಗ್ರಹ, ಪ್ರಾಣಿರಕ್ಷಣೆ ೬ ಉತ್ತಮಸತ್ಯ ೭ ಉತ್ತಮತಪಸ್ಸು ೮ ಉತ್ತಮತ್ಯಾಗ-ಜ್ಞಾನದಾನ ೯ ಉತ್ತಮಾಕಿಂಚನ್ಯ-ಸ್ವಲ್ಪವೂ ಪರಿಗ್ರಹವಿಲ್ಲದಿರುವಿಕೆ ೧೦ ಉತ್ತಮಬ್ರಹ್ಮಚರ್ಯ ಈ ಹತ್ತು ಧರ್ಮಗಳನ್ನು ಸ್ವೀಕರಿಸಿದನು.

**ಸೋ[೩]ನುದಧ್ಯಾವನಿತ್ಯತ್ವಂ ಸುಖಾಯುರ್ಬಲಸಂಪದಾಮ್ ।**
**ತಥಾಶರಣತಾಂ ಮೃತ್ಯುಜರಾಜನ್ಮಭಯೇ ನೃಣಾಮ್ ॥ ೧೦೫ ॥**

**ಸಂಸೃತೇರ್ದುಃಸ್ವಭಾವತ್ವಂ [೪]ವಿಚಿತ್ರಪರಿವರ್ತನೈಃ ।**
**ಏಕತ್ವಮಾತ್ಮನೋ ಜ್ಞಾನದರ್ಶನಾತ್ಮತ್ವಮೀಯುಷಃ ॥ ೧೦೬ ॥**

**ಅನ್ಯತ್ವಮಾತ್ಮನೋ ದೇಹಧನಬಂಧುಕಲತ್ರತಃ ।**
**ತಥಾಶೌಚಂ ಶರೀರಸ್ಯ ನವದ್ವಾರೈ [೫]ರ್ಮಲಸ್ರುತಃ ॥ ೧೦೭ ॥**

**ಅಸ್ರವಂ ಪುಣ್ಯಪಾಪಾತ್ಮಕರ್ಮಣಾಂ ಸಹ ಸಂವರಮ್ ।**
**ನಿರ್ಜರಾಂ [೬]ವಿಪುಲಾಂ [೭]ಬೋಧೇರ್ದುರ್ಲಭತ್ವಂ ಭವಾಂಬುಧೌ ॥**

**ಧರ್ಮಸ್ವಾಖ್ಯಾತತಾಂ ಚೇತಿ [೮]ತತ್ತ್ವಾನುಧ್ಯಾನಭಾವನಾಃ ।**
**ಲೇಶ್ಯಾವಿಶುದ್ಧಿಮಧಿಕಾಂ ದಧಾನಃ ಶುಭಭಾವನಃ ॥ ೧೦೯ ॥**

ಶುಭಭಾವನೆಯುಳ್ಳವನೂ ವಿಶುದ್ಧವಾದ ಲೇಶ್ಯೆಯುಳ್ಳವನೂ ಆದ ಆ ವಜ್ರನಾಭಿಮುನಿಯು ೧ ಸುಖ ಆಯುಷ್ಯಬಲಸಂಪತ್ತು ಇವುಗಳ ಅನಿತ್ಯತ್ವವನ್ನೂ ೨ ಜೀವಗಳಿಗೆ ಜನ್ಮಜರಾಮರಣಗಳಿಂದುಂಟಾಗುವ ಭಯದಲ್ಲಿ ಯಾರೂ ಶರಣರಿಲ್ಲವೆಂಬ ಅಶರಣತ್ವವನ್ನೂ ೩ ನಾನಾಪ್ರಕಾರವಾದ ಪರಿವರ್ತನೆಗಳಿಂದ ದುಃಖವನ್ನುಂಟುಮಾಡುವ ಈ ಸಂಸಾರಸ್ವಭಾವವನ್ನೂ ೪ ಜ್ಞಾನದರ್ಶನಸ್ವಭಾವವನ್ನು ಹೊಂದಿದ ಆತ್ಮನು ಒಬ್ಬನೇ ಎಂಬ ಏಕತ್ವವನ್ನೂ ೫ ಶರೀರಧನಬಂಧುಪತ್ನಿಗಳಿಂದ ಆತ್ಮನು ಬೇರೆಯೆಂಬ ಅನ್ಯತ್ವವನ್ನೂ ೬ ನವದ್ವಾರಗಳಿಂದ ಮಲವನ್ನು ಸುರಿಯುತ್ತಿರುವ ಶರೀರದ ಅಶುಚಿತ್ವವನ್ನೂ ೭ ಪುಣ್ಯಪಾಪಕರ್ಮಗಳ ಆಸ್ರವವನ್ನೂ ೮ ಪುಣ್ಯಪಾಪಕರ್ಮಗಳ ಆಸ್ರವವನ್ನು ತಡೆಯುವ ಸಂವರವನ್ನೂ ೯ ಆ ಕರ್ಮಗಳ ಏಕದೇಶಕ್ಷಯರೂಪವಾದ ನಿರ್ಜರೆಯನ್ನೂ ೧೦ ಲೋಕಸ್ವರೂಪವನ್ನೂ ೧೧ ಭವವೆಂಬ ಸಮುದ್ರದಲ್ಲಿ ಸಮ್ಯಗ್ದರ್ಶನಜ್ಞಾನಚಾರಿತ್ರಗಳ ಪ್ರಾಪ್ತಿಯು ದುರ್ಲಭವಾದುದೆಂಬ ಬೋಧಿದುರ್ಲಭತ್ವವನ್ನೂ ೧೨ ವೀತರಾಗಪರಮೇಶ್ವರನು ಹೇಳಿದ ಧರ್ಮವು ಪ್ರಾಣಿಗಳನ್ನು ಸಂಸಾರದಿಂದ ಪಾರಮಾಡುವುದೆಂಬ ಧರ್ಮಸ್ವರೂಪವನ್ನೂ ಈ ಹನ್ನೆರಡು ಅನುಪ್ರೇಕ್ಷೆಗಳನ್ನು ಭಾವಿಸಿದನು.

೧ ತೀವ್ರಲೋಭಾಭಾವಂ. ೨ ದಶಪ್ರಕಾರಃ. ೩ ಅನ್ವಚಿಂತಯತ್. ೪ ಪಂಚಪರಾವರ್ತನೈಃ. ೫ ಮಲಸ್ರಾವಿಣಃ. ೬ ಲೋಕಾನುಪ್ರೇಕ್ಷಾಂ. ೭ ಅಪ್ರಾಪ್ತಾನಾಂ ಸಮ್ಯಗ್ದರ್ಶನಾದೀನಾಂ ಸಂಪ್ರಾಪ್ತಿಃ. ೮ ತತ್ತ್ವಾನುಸ್ಮೃತಿರೂಪಭಾವನಾಃ.

**ದ್ವಿತೀಯವಾರಮಾರುಹ್ಯ ಶ್ರೇಣೀಮುಪಶಮಾದಿಕಾಮ್ ।**
**ಪೃಥ[೧]ಕ್ತ್ವಧ್ಯಾನಮಾಪೂರ್ಯ [೨]ಸಮಾಧಿಂ ಪರಮಂ ಶ್ರಿತಃ ॥ ೧೧೦ ॥**

ಆ ಮುನಿಯು ಎರಡನೆಯ ಸರ್ತಿ ಉಪಶಮಶ್ರೇಣಿಯನ್ನು ಹತ್ತಿ ಪೃಥಕ್ತ್ವ ವಿತರ್ಕ ವಿಚಾರವೆಂಬ ಪ್ರಥಮಶುಕ್ಲಧ್ಯಾನವನ್ನು ಪೂರ್ತಿಮಾಡಿ ಪರಮಸಮಾಧಿ (ಶಾಂತತೆ)ಯನ್ನು ಹೊಂದಿದನು.

**ಉಪಶಾಂತಗುಣಸ್ಥಾನೇ ಕೃತಪ್ರಾಣವಿಸರ್ಜನಃ ।**
**ಸರ್ವಾರ್ಥಸಿದ್ಧಿಮಾಸಾದ್ಯ ಸಂಪ್ರಾಪತ್ಸೋಽಹಮಿಂದ್ರತಾಮ್ ॥ ೧೧೧ ॥**

ಉಪಶಾಂತಕಷಾಯವೆಂಬ ಹನ್ನೊಂದನೆಯ ಗುಣಸ್ಥಾನದಲ್ಲಿ ಮರಣವನ್ನು ಹೊಂದಿ ಸರ್ವಾರ್ಥಸಿದ್ಧಿಸ್ವರ್ಗದಲ್ಲಿ ಅಹಮಿಂದ್ರದೇವನಾಗಿ ಹುಟ್ಟಿದನು.

**ದ್ವಿಷಟ್ಕಯೋಜನೈರ್ಲೋಕಪ್ರಾಂತಮಪ್ರಾಪ್ಯಯತ್ಸ್ಥಿತಮ್ ।**
**ಸರ್ವಾರ್ಥಸಿದ್ಧಿನಾಮಾಗ್ರ್ಯಂ ವಿಮಾನಂ ತದನುತ್ತರಮ್ ॥ ೧೧೨ ॥**

ಆ ಸರ್ವಾರ್ಥಸಿದ್ಧಿಯೆಂಬ ಶ್ರೇಷ್ಠವಾದ ಅನುತ್ತರವಿಮಾನವು ಹನ್ನೆರಡು ಯೋಜನಗಳಿಂದ ಲೋಕದ ಕೊನೆಯನ್ನು ಮುಟ್ಟದೆಯಿದೆ. ಆ ವಿಮಾನದಿಂದ ಲೋಕದ ಕೊನೆಗೆ ಹನ್ನೆರಡುಯೋಜನಗಳಿವೆಯೆಂದರ್ಥವು.

**ಜಂಬೂದ್ವೀಪಸಮಾಯಾಮವಿಸ್ತಾರ[೩]ಪರಿಮಂಡಲಮ್ ।**
**ತ್ರಿಷಷ್ಟಿಪಟಲಪ್ರಾಂತೇ ಚೂಡಾರತ್ನಮಿವ ಸ್ಥಿತಮ್ ॥ ೧೧೩ ॥**

ಜಂಬೂದ್ವೀಪಕ್ಕೆ ಸಮಾನವಾಗಿ ಉದ್ದಗಲವುಳ್ಳ ವರ್ತುಲಾಕಾರವಾದ ಆ ವಿಮಾನವು ಹದಿನಾರುಸ್ವರ್ಗಗಳ ಸಂಬಂಧವಾದ ಅರವತ್ತಮೂರುಪಟಲಗಳ ಅಗ್ರಭಾಗದಲ್ಲಿ ಚೂಡಾರತ್ನದಂತಿದೆ.

**ಯತ್ರೋತ್ಪನ್ನವತಾಮರ್ಥಾಃ ಸರ್ವೇ ಸಿದ್ಧ್ಯಂತ್ಯಯತ್ನತಃ ।**
**ಇತಿ ಸರ್ವಾರ್ಥಸಿದ್ಧ್ಯಾಖ್ಯಾಂ ಯದ್ವಿಭ[೪]ರ್ತ್ಯರ್ಥಯೋಗಿನೀಮ್ ॥**

ಆ ವಿಮಾನದಲ್ಲಿ ಹುಟ್ಟಿದವರಿಗೆ ಸಮಸ್ತ ಅರ್ಥ(ಪ್ರಯೋಜನ)ಗಳೂ ಯತ್ನವಿಲ್ಲದೆ ಸಿದ್ಧಿಸುವುದರಿಂದ ಆ ವಿಮಾನವು ಸರ್ವಾರ್ಥಸಿದ್ಧಿಯೆಂಬ ಸಾರ್ಥಕವಾದ ಹೆಸರನ್ನು ಪಡೆದಿದೆ.

**ಮಹಾಧಿಷ್ಠಾನಮುತ್ತುಂಗಶಿಖರೋಲ್ಲಾಸಿಕೇತನೈಃ ।**
**ಸಮಾಹ್ವಯದಿವಾಭಾತಿ ಯನ್ಮುನೀನ್ಸುಖ[೫]ದಿತ್ಸಯಾ ॥ ೧೧೫ ॥**

ಮಹಾಸ್ಥಾನವಾದ ಆ ವಿಮಾನವು ಮುನಿಗಳಿಗೆ ಸುಖವನ್ನು ಕೊಡಬೇಕೆಂಬ ಇಚ್ಛೆಯಿಂದ ತನ್ನ ಉನ್ನತವಾದ ಶಿಖರಗಳಲ್ಲಿರುವ ಶುಭ್ರವಾದ ಧ್ವಜಪಟಗಳಿಂದ ಮುನಿಗಳನ್ನು ಕರೆಯುವಂತೆ ಶೋಭಿಸುತ್ತದೆ.

**ಇಂದ್ರನೀಲಮಯೀಂ ಯತ್ರ ಭುವಂ ಪುಷ್ಪೋಪಹಾರಿಣೀಮ್ ।**
**ದೃಷ್ಟ್ವಾ ತಾರಕಿತಂ ವ್ಯೋಮ ಸ್ಮರಂತಿ ತ್ರಿದಿವೌಕಸಃ ॥ ೧೧೬ ॥**

ಆ ವಿಮಾನದಲ್ಲಿ ಇಂದ್ರನೀಲರತ್ನಮಯವಾದ ಭೂಮಿಯಲ್ಲಿ ಪುಷ್ಪಗಳನ್ನು ಚೆಲ್ಲಿರುವುದನ್ನು ನೋಡಿ ದೇವತೆಗಳು ನಕ್ಷತ್ರಗಳಿಂದ ವ್ಯಾಪ್ತವಾದ ಆಕಾಶವನ್ನು ಸ್ಮರಿಸುತ್ತಾರೆ.

**[೬]ದ್ಯುಸದಾಂ ಪ್ರತಿಬಿಂಬಾನಿ ಧಾರಯಂತ್ಯಶ್ಚಕಾಸತಿ ।**
**[೭]ಸಿಸೃಕ್ಷವ ಇವಾಪೂರ್ವಂ ಸ್ವರ್ಗಂ ಯನ್ಮಣಿಭಿತ್ತಯಃ ॥ ೧೧೭ ॥**

ದೇವತೆಗಳ ಪ್ರತಿಬಿಂಬಗಳನ್ನು ಧರಿಸಿರುವ ಆ ವಿಮಾನದ ರತ್ನಖಚಿತವಾದ ಗೋಡೆಗಳು ಅಪೂರ್ವವಾದ ಸ್ವರ್ಗವನ್ನು ಸೃಷ್ಟಿಸಬೇಕೆಂಬ ಇಚ್ಛೆಯುಳ್ಳವುಗಳಂತೆ ಪ್ರಕಾಶಿಸುತ್ತವೆ.

೧ ಪ್ರಥಮಶುಕ್ಲಧ್ಯಾನಂ ಸಂಪೂರ್ಣೀಕೃತ್ಯ. ೨ ಸಮಾಧಾನಂ. ೩ ಪರಿಧಿಃ. ೪ ಅರ್ಥಯುಕ್ತಾಂ. ೫ ದಾತುಮಿಚ್ಛಯಾ. ೬ ದೇವಾನಾಂ. ೭ ಸ್ರಷ್ಟುಮಿಚ್ಛವಃ.

**ಕಿರಣೈರ್ಯತ್ರ ರತ್ನಾನಾಂ ತಮೋ ಧೂತಂ ವಿದೂರತಃ ।**
**ಪದಂ ನ ಕುರ್ವತೇ ಸತ್ಯಂ ನಿರ್ಮಲಾ ಮಲಿನೈಃ ಸಹ ॥ ೧೧೮ ॥**

ಆ ವಿಮಾನದಲ್ಲಿ ರತ್ನಗಳ ಕಿರಣಗಳಿಂದ ಕತ್ತಲೆಯು ದೂರದಲ್ಲಿಯೇ ನಷ್ಟವಾಗುತ್ತಿದ್ದಿತು. ಇದು ನ್ಯಾಯವೇ:- ನಿರ್ಮಲರು ಕೊಳಕರೊಡನೆ ಸಹವಾಸವನ್ನು ಮಾಡುವುದಿಲ್ಲ.

**ರತ್ನಾಂಶುಭಿ[೧]ರ್ಜಟಿಲಿತೈರ್ಯತ್ರ ಶಕ್ರಶರಾಶನಮ್ ।**
**ಪರ್ಯಂತೇ ಲಕ್ಷ್ಯತೇ ದೀಪ್ರಂ ಸಾಲಲೀಲಾಂ ವಿಡಂಬಯತ್ ॥ ೧೧೯ ॥**

ಆ ವಿಮಾನದಲ್ಲಿ ಮಿಶ್ರವಾದ ರತ್ನಕಿರಣಗಳಿಂದ ಶೋಭಿಸುತ್ತಿರುವ ಇಂದ್ರಧನುಸ್ಸು ಕೋಟೆಯ ಶೋಭೆಯನ್ನು ಧರಿಸಿ ಸಮೀಪಪ್ರದೇಶದಲ್ಲಿ ತೋರುತ್ತದೆ.

**ಭಾಂತಿ ಪುಷ್ಪಸ್ರಜೋ ಯತ್ರ ಲಂಬಮಾನಾಃ ಸುಗಂಧಯಃ ।**
**ಸೌಮನಸ್ಯಮಿವೇಂದ್ರಾಣಾಂ ಸೂಚಯಂತ್ಯೋತಿಕೋಮಲಾಃ ॥ ೧೨೦ ॥**

ಆ ವಿಮಾನದಲ್ಲಿ ಅತ್ಯಂತ ಕೋಮಲವೂ ಸುಗಂಧಭರಿತವೂ ಜೋಲುತ್ತಿರುವುದೂ ಆದ ಪುಷ್ಪಮಾಲಿಕೆಗಳು ಇಂದ್ರರ ಉತ್ತಮವಾದ ಮನಸ್ಸನ್ನು ಸೂಚಿಸುವಂತೆ ಶೋಭಿಸುತ್ತಿದ್ದುವು.

**ಮುಕ್ತಾಮಯಾನಿ ದಾಮಾನಿ ಯತ್ರಾಭಾಂತಿ [೨]ನಿರಂತರಮ್ ।**
**[೩]ವಿಸ್ಪಷ್ಟದಶನಾಂಶೂನಿ [೪]ಹಸಿತಾನೀವ [೫]ತಚ್ಛ್ರಿಯಃ ॥ ೧೨೧ ॥**

ಆ ವಿಮಾನದಲ್ಲಿ ಮುತ್ತಿನ ಮಾಲಿಕೆಗಳು ಸ್ವರ್ಗಲಕ್ಷ್ಮಿಯ ಸ್ಪಷ್ಟವಾದ ಹಲ್ಲುಗಳ ಕಾಂತಿಯೊಡಗೂಡಿದ ನಗೆಗಳೋ ಎಂಬಂತೆ ಎಲ್ಲಾಕಡೆಗಳಲ್ಲಿಯೂ ಪ್ರಕಾಶಿಸುತ್ತವೆ.

**ಇತ್ಯಕೃತ್ರಿಮನಿಃಶೇಷಪರಾರ್ಧ್ಯರಚನಾಂಚಿತೇ ।**
**ತತ್ರೋಪಪಾದಶಯನೇ ಸ ಪರ್ಯಾಪ್ತಿಂ ಕ್ಷಣಾದ್ಯಯೌ ॥ ೧೨೨ ॥**

ಈ ಪ್ರಕಾರವಾಗಿ ಅಕೃತ್ರಿಮವೂ ಶ್ರೇಷ್ಠವೂ ಆದ ಸಂಪೂರ್ಣರಚನೆಯುಳ್ಳ ಆ ಸರ್ವಾರ್ಥಸಿದ್ಧಿವಿಮಾನದಲ್ಲಿ ಉಪಪಾದಶಯ್ಯೆಯಲ್ಲಿ ಹಿಂದೆಹೇಳಿದ ವಜ್ರನಾಭಿ ಮುನಿಯು ಒಂದುಕ್ಷಣಕಾಲದಲ್ಲಿ ಷಟ್ಪರ್ಯಾಪ್ತಿ(ಆಹಾರ ಶರೀರ ಇಂದ್ರಿಯ ಉಚ್ಛ್ವಾಸನಿಃಶ್ವಾಸ ಭಾಷಾಮನಃ)ಯನ್ನು ಹೊಂದಿದನು.

**ದೋಷಧಾತುಮಲಸ್ಪರ್ಶವರ್ಜಿತಂ ಚಾರುಲಕ್ಷಣಮ್ ।**
**ಕ್ಷಣಾದಾವಿರಭೂದಸ್ಯ ರೂಪಮಾಪೂರ್ಣಯೌವನಮ್ ॥ ೧೨೩ ॥**

ಅಲ್ಲಿ ಹುಟ್ಟಿದ ಒಂದುಕ್ಷಣಕಾಲದಿಂದಲೇ ಈ ದೇವನ ರೂಪವು ದೋಷರಹಿತವೂ ಸಪ್ತಧಾತುಮಲರಹಿತವೂ ಸುಂದರವಾದ ಲಕ್ಷಣಗಳುಳ್ಳದೂ ಪರಿಪೂರ್ಣವಾದ ಯೌವನವುಳ್ಳದೂ ಆಗಿ ಆವಿರ್ಭವಿಸಿತು.

**ಅಮ್ಲಾನಶೋಭಮಸ್ಯಾಭಾದ್ವಪು[೬]ರವ್ಯಾಜಸುಂದರಮ್ ।**
**ದೃಶೋರುತ್ಸವಮಾತನ್ವದಮೃತೇನೇವ ನಿರ್ಮಿತಮ್ ॥ ೧೨೪ ॥**

ಕುಂದದಿರುವ ಶೋಭೆಯುಳ್ಳದೂ ಸ್ವಭಾವದಿಂದಲೇ ಸುಂದರವೂ ನೇತ್ರಗಳಿಗೆ ಉತ್ಸವವನ್ನುಂಟುಮಾಡುವುದೂ ಆದ ಈ ದೇವನ ಶರೀರವು ಅಮೃತದಿಂದ ನಿರ್ಮಿತವಾದಂತೆ ಶೋಭಿಸುತ್ತಿದ್ದಿತು.

**ಶುಭಾಃ ಸುಗಂಧಯಃ ಸ್ನಿಗ್ಧಾ ಲೋಕೇ ಯೇ ಕೇ ಚನಾಣವಃ ।**
**ತೈರಸ್ಯ ದೇಹನಿರ್ಮಾಣಮಭೂತ್ಪುಣ್ಯಾನುಭಾವತಃ ॥ ೧೨೫ ॥**

ಈ ದೇವನ ಪುಣ್ಯಾತಿಶಯದಿಂದ ಲೋಕದಲ್ಲಿ ಶುಭವೂ ಸುಗಂಧವೂ ಜಿಗುಟೂ ಆದ ಯಾವ ಪರಮಾಣುಗಳಿದ್ದುವೋ ಆ ಪರಮಾಣುಗಳಿಂದ ಈ ದೇವನ ಶರೀರವು ನಿರ್ಮಿತವಾಗಿದ್ದಿತು.

೧ ಮಿಶ್ರಿತೈಃ. ೨ ಸರ್ವತ್ರ. ೩ ವ್ಯಕ್ತಾಃ. ೪ ಹಸನಾನಿ. ೫ ಸ್ವರ್ಗಲಕ್ಷ್ಮ್ಯಾಃ. ೬ ಅನುಪಾಧಿಮಂಜುಲಂ.

**ಪರ್ಯಾಪ್ತ್ಯನಂತರಂ ಸೋಽಭಾತ್ಸ್ವದೇಹಜ್ಯೋತ್ಸ್ನಯಾ ವೃತಃ ।**
**ಶಯ್ಯೋತ್ಸಂಗೇ ನಭೋರಂಗೇ ಶಶೀವಾಖಂಡಮಂಡಲಃ ॥ ೧೨೬ ॥**

ಷಟ್ಪರ್ಯಾಪ್ತಿಗಳು ಪರಿಪೂರ್ಣವಾದನಂತರ ಉಪಪಾದಶಯ್ಯೆಯಲ್ಲಿ ತನ್ನ ದೇಹಕಾಂತಿಯಿಂದ ಸುತ್ತಲ್ಪಟ್ಟ ಆ ದೇವನು ಆಕಾಶವೆಂಬ ರಂಗಭೂಮಿಯಲ್ಲಿ ಪೂರ್ಣಚಂದ್ರನಂತೆ ಶೋಭಿಸಿದನು.

**ದಿವ್ಯಹಂಸಃ ಸ[೧]ತತ್ತಲ್ಪಮಾವಸನ್ ಕ್ಷಣಮಾಬಭೌ ।**
**ಗಂಗಾಸೈಕತಮಾಶ್ಲಿಷ್ಯನ್ನಿವ ಹಂಸಯುವೈಕಕಃ ॥ ೧೨೭ ॥**

ಆ ಶಯ್ಯೆಯಲ್ಲಿ ವಾಸಮಾಡುವ ಆ ದೇವಶ್ರೇಷ್ಠನು ಗಂಗಾನದಿಯ ಮರಳನ್ನು ಆಶ್ರಯಿಸಿರುವ ಒಂಟಿಯಾದ ತರುಣಹಂಸಪಕ್ಷಿಯಂತೆ, ಒಂದುಕ್ಷಣಕಾಲದ ವರೆಗೆ ಶೋಭಿಸಿದನು.

**ಸಿಂಹಾಸನಮಥಾ[೨]ಭ್ಯರ್ಣಮಲಂಕುರ್ವನ್ವ್ಯಭಾದಸೌ ।**
**ಪರಾರ್ಧ್ಯಂ ನಿಷಧೋತ್ಸಂಗಮಾಶ್ರಯನ್ನಿವ ಭಾನುಮಾನ್ ॥ ೧೨೮ ॥**

ತರುವಾಯ ಆ ಉಪಪಾದಶಯ್ಯೆಯ ಸಮೀಪದಲ್ಲಿರುವ ಸಿಂಹಾಸನವನ್ನಲಂಕರಿಸಿದ ಈ ದೇವನು ಶ್ರೇಷ್ಠವಾದ ನಿಷಧಪರ್ವತವನ್ನು ಆಶ್ರಯಿಸಿದ ಸೂರ್ಯನಂತೆ ಪ್ರಕಾಶಿಸಿದನು.

**ಸ್ವಪುಣ್ಯಾಂಬುಭಿರೇವಾಯಮಭ್ಯಷೇಚಿ ನ ಕೇವಲಮ್ ।**
**ಅಲಂಚಕ್ರೇ ಚ ಶಾರೀರೈ[೩]ರ್ಗುಣೈರಿವ ವಿಭೂಷಣೈಃ ॥ ೧೨೯ ॥**

ಈ ದೇವನು ತನ್ನ ಪುಣ್ಯವೆಂಬ ಜಲದಿಂದ ಮಾತ್ರ ಅಭಿಷೇಕಮಾಡಲ್ಪಡಲಿಲ್ಲ. ಆಭರಣಗಳಿಂದ ಅಲಂಕೃತನಾದಂತೆ ತನ್ನ ಶರೀರದಲ್ಲಿ ಉಂಟಾದ ಸೌಕುಮಾರ್ಯ ಮೊದಲಾದ ಗುಣಗಳಿಂದಲೂ ಅಲಂಕೃತನಾದನು.

**ಸೋ[೪]ಧಿವಕ್ಷಃಸ್ಥಲಂ ದಧ್ರೇ ಸ್ರಜಮೇವ ನ ಕೇವಲಮ್ ।**
**ಸಹಜಾಂ ದಿವ್ಯಲಕ್ಷ್ಮೀಂ ಚ [೫]ಯಾವದಾಯು[೬]ರವಿಪ್ಲುತಾಮ್ ॥ ೧೩೦ ॥**

ಆ ದೇವನು ತನ್ನ ಎದೆಯಲ್ಲಿ ಮಾಲಿಕೆಯನ್ನು ಮಾತ್ರ ಧರಿಸಲಿಲ್ಲ. ತನ್ನ ಆಯುಷ್ಯಪರ್ಯಂತವೂ ಬಾಧಾರಹಿತವಾದ ಮತ್ತು ತನ್ನ ಜೊತೆಯಲ್ಲಿಯೇ ಹುಟ್ಟಿದ ದೇವಲೋಕಸಂಬಂಧಿಯಾದ ಲಕ್ಷ್ಮಿಯನ್ನು ಧರಿಸಿದನು.

**ಅಸ್ನಾತಲಿಪ್ತದೀಪ್ತಾಂಗಃ ಸಹಜಾಂಬರಭೂಷಣಃ ।**
**ಸೋದ್ಯುತದ್ದ್ಯುಸದಾಂ [೭]ಮೂರ್ಧ್ನಿ ದ್ಯುಲೋಕೈಕಶಿಖಾಮಣಿಃ ॥ ೧೩೧ ॥**

ಸ್ನಾನವನ್ನೂ ಲೇಪನವನ್ನೂ ಮಾಡದೆ ತೇಜೋಮಯವಾದ ಶರೀರವುಳ್ಳವನೂ ತನ್ನ ಜೊತೆಯಲ್ಲಿಯೇ ಉಂಟಾದ ವಸ್ತ್ರಾಭರಣಗಳುಳ್ಳವನೂ ಆದ ಆ ದೇವನು ದೇವತೆಗಳ ಮುಂಭಾಗದಲ್ಲಿ ಸ್ವರ್ಗಲೋಕಕ್ಕೆ ಮುಖ್ಯವಾದ ಶಿಖಾಮಣಿಯಾಗಿ ಪ್ರಕಾಶಿಸಿದನು.

**[೮]ಶುಚಿಸ್ಫಟಿಕನಿರ್ಭಾಸಿನಿರ್ಮಲೋದಾರವಿಗ್ರಹಃ ।**
**ಸ ಬಭೌ ಪ್ರಜ್ವಲನ್ಮೌಲಿಃ ಪುಣ್ಯರಾಶಿರಿವೋಚ್ಛಿಖಃ ॥ ೧೩೨ ॥**

ಶುದ್ಧಸ್ಫಟಿಕದಂತೆ ನಿರ್ಮಲವೂ ವಿಶಾಲವೂ ಆದ ಶರೀರವುಳ್ಳವನೂ ದೇದೀಪ್ಯಮಾನವಾದ ಕಿರೀಟವುಳ್ಳವನೂ ಆದ ಆ ದೇವನು ವೃದ್ಧಿಯನ್ನು ಹೊಂದಿದ ಪುಣ್ಯಗಳ ರಾಶಿಯೋ ಎಂಬಂತೆ ಪ್ರಕಾಶಿಸಿದನು.

**[೯]ಕಿರೀಟಾಂಗದಕೇಯೂರಕುಂಡಲಾದಿ[೧೦]ಪರಿಷ್ಕೃತಃ।**
**ಸ್ರಗ್ವೀ ಸದಂಶುಕಃ ಶ್ರೀಮಾನ್ಸೋಽಧಾತ್ಕಲ್ಪದ್ರುಮಶ್ರಿಯಮ್ ॥ ೧೩೩ ॥**

ಕಿರೀಟ ತೋಳುಬಳೆ ಭುಜಕೀರ್ತಿ ಕರ್ಣಕುಂಡಲ ಮೊದಲಾದ ಆಭರಣಗಳಿಂದ ಅಲಂಕೃತನೂ ಪುಷ್ಪಮಾಲಿಕೆಯನ್ನು ಧರಿಸಿರುವವನೂ ಶ್ರೇಷ್ಠವಾದ ವಸ್ತ್ರಗಳುಳ್ಳವನೂ ಸಂಪದ್ಯುಕ್ತನೂ ಆದ ಆ ಅಹಮಿಂದ್ರದೇವನು ಕಲ್ಪವೃಕ್ಷದ ಶೋಭೆಯನ್ನು ಧರಿಸಿದನು. ಕಲ್ಪವೃಕ್ಷದಂತೆ ಶೋಭಿಸಿದನೆಂದು ಭಾವವು.

**ಅಣಿಮಾದಿಗುಣೈಃ ಶ್ಲಾಘ್ಯಾಂ ದಧದ್ವೈಕ್ರಿಯಿಕೀಂ ತನುಮ್ ।**
**ಸ್ವಕ್ಷೇತ್ರೇ ವಿಜಹಾರಾಸೌ ಜಿನೇಂದ್ರಾರ್ಚಾಃ ಸಮರ್ಚಯನ್ ॥ ೧೩೪ ॥**

ಅಣಿಮಾ ಮಹಿಮಾ ಮೊದಲಾದ ಗುಣಗಳಿಂದ ಶ್ಲಾಘ್ಯವಾದ ವೈಕ್ರಿಯಿಕ ಶರೀರವನ್ನು ಧರಿಸಿರುವ ಈ ಅಹಮಿಂದ್ರದೇವನು ಜಿನಬಿಂಬಗಳನ್ನು ಪೂಜಿಸುತ್ತ ತನ್ನ ಸ್ವರ್ಗದಲ್ಲಿ ವಿಹರಿಸುತ್ತಿದ್ದನು.

**[೧]ಸಂಕಲ್ಪಮಾತ್ರನಿರ್ವೃತ್ತೈರ್ದಿವ್ಯೈರ್ಗಂಧಾಕ್ಷತಾದಿಭಿಃ।**
**ಪುಣ್ಯಾನುಬಂಧಿನೀಂ ಪೂಜಾಂ ಸ ಜೈನೀಂ ವಿಧಿವದ್ವ್ಯಧಾತ್ ॥ ೧೩೫ ॥**

ಸಂಕಲ್ಪಮಾತ್ರದಿಂದಲೇ ಪ್ರಾಪ್ತವಾದ ಗಂಧಾಕ್ಷತಮೊದಲಾದ ಉತ್ತಮ ವಸ್ತುಗಳಿಂದ ಆ ದೇವನು ಪುಣ್ಯಬಂಧಕ್ಕೆ ಕಾರಣವಾದ ಜಿನಪೂಜೆಯನ್ನು ವಿಧಿ ಪ್ರಕಾರವಾಗಿ ಮಾಡಿದನು.

**ತತ್ರಸ್ಥ ಏವ ಚಾಶೇಶಭುವನೋದರವರ್ತಿನೀಃ ।**
**[೨]ಆನರ್ಚಾ[೩]ರ್ಚಾ ಜಿನೇಂದ್ರಾಣಾಂ ಸೋಗ್ರಣೀಃ[೪]ಪುಣ್ಯಕರ್ಮಣಾಮ್ ॥**

ಪುಣ್ಯವಂತರಲ್ಲಿ ಶ್ರೇಷ್ಠನಾದ ಆ ದೇವನು ಸರ್ವಾರ್ಥಸಿದ್ಧಿವಿಮಾನದಲ್ಲಿಯೇ ಇದ್ದು ಸಂಪೂರ್ಣಲೋಕದಲ್ಲಿರುವ ಜಿನೇಶ್ವರಪ್ರತಿಮೆಗಳನ್ನು ಪೂಜಿಸಿದನು.

**ಜಿನಾರ್ಚಾ[೫]ಸ್ತುತಿವಾದೇಷು ವಾಗ್ವೃತ್ತಿಂ ತದ್ಗುಣಸ್ಮೃತೌ ।**
**ಸ್ವಂ ಮನಸ್ತನ್ನತೌ ಕಾಯಂ ಪುಣ್ಯಧೀಃ ಸ ನ್ಯಯೋಜಯತ್ ॥ ೧೩೭ ॥**

ಪುಣ್ಯಕರವಾದ ಬುದ್ಧಿಯುಳ್ಳ ಆ ದೇವನು ಜಿನೇಶ್ವರಪ್ರತಿಮೆಗಳ ಸ್ತುತಿ ವಚನಗಳಲ್ಲಿ ತನ್ನ ವಾಗ್ವ್ಯಾಪಾರವನ್ನೂ ಆ ಪ್ರತಿಮೆಗಳ ಗುಣಸ್ಮರಣದಲ್ಲಿ ತನ್ನ ಮನಸ್ಸನ್ನೂ ಅವುಗಳನ್ನು ನಮಸ್ಕರಿಸುವುದರಲ್ಲಿ ತನ್ನ ಶರೀರವನ್ನೂ ಪ್ರೇರೇಪಿಸಿದನು.

**ಧರ್ಮಗೋಷ್ಠಿಷ್ವನಾಹೂತಮಿಲಿತೈಃ ಸ್ವಸಮರ್ದ್ಧಿಭಿಃ ।**
**ಸಂಭಾಷಣಾದರೋಽಸ್ಯಾಸೀದಹಮಿಂದ್ರೈಃ [೬]ಶುಭಂಯುಭಿಃ ॥ ೧೩೮ ॥**

ಧರ್ಮಸಂಬಂಧವಾದ ಸಭೆಗಳಲ್ಲಿ ಕರೆಯದೆ ಬಂದು ಸೇರುವವರೂ ತನಗೆ ಸಮಾನವಾದ ಸಂಪತ್ತುಳ್ಳವರೂ ಶುಭವನ್ನುಂಟುಮಾಡುವವರೂ ಆದ ಬೇರೆ ಅಹಮಿಂದ್ರದೇವತೆಗಳೊಡನೆ ವಜ್ರನಾಭಿಯಾಗಿದ್ದ ಈ ಅಹಮಿಂದ್ರನಿಗೆ ಆದರಪೂರ್ವಕವಾದ ಸಂಭಾಷಣೆಯು ಆಗುತ್ತಿದ್ದಿತು.

**ಕ್ಷಾಲಯನ್ನಿವ ದಿಗ್ಭಿತ್ತೀಃ ಸ್ಮಿತಾಂಶುಸಲಿಲಪ್ಲವೈಃ ।**
**ಸಹಾಹಮಿಂದ್ರೈರುಂದ್ರಶ್ರೀಃ ಸ ಚಕ್ರೇ ಧರ್ಮ[೭]ಸಂಕಥಾಮ್ ॥ ೧೩೯ ॥**

ಮುಗುಳುನಗೆಯ ಕಾಂತಿಯೆಂಬ ಜಲದ ಸೇಚನೆಯಿಂದ ದಿಕ್ಕುಗಳೆಂಬ ಗೋಡೆಗಳನ್ನು ತೊಳೆಯುವವನಂತಿರುವವನೂ ಮಹೈಶ್ವರ್ಯಸಂಪನ್ನನೂ ಆದ ಆ ದೇವನು ಧರ್ಮಸಂಬಂಧವಾಗಿ ಬೇರೆ ಅಹಮಿಂದ್ರದೇವತೆಗಳೊಡನೆ ಸೇರುತ್ತಿದ್ದನು.

**ಸ್ವಾವಾಸೋಪಾಂತಿಕೋದ್ಯಾನಸರಃಪುಲಿನಭೂಮಿಷು ।**
**[೮]ದಿವ್ಯಹಂಸಶ್ಚಿರಂ ರೇಮೇ ವಿಹರನ್ಸ ಯದೃಚ್ಛಯಾ ॥ ೧೪೦ ॥**

೧ ಆಧಾರೇ ಕರ್ಮ. ೨ ಸಮೀಪಂ. ೩ ಸೌಕುಮರ್ಯಾದಿಭಿಃ. ೪ ವಕ್ಷಃಸ್ಥಲೇ. ೫ ಆಯುಷ್ಯಪರ್ಯಂತಂ. ೬ ಅಬಾಧಾಂ. ೭ ದೇವಾನಾಮಗ್ರೇ. ೮ ಶುದ್ಧ. ೯ ತಿರೀಟಮಿತ್ಯಪಿ ಪಾಠಃ. ೧೦ ಭೂಷಿತಃ.

೧ ಭಾವನಾಮಾತ್ರನಿಷ್ಪನ್ನೈಃ. ೨ ಪೂಜಯಾಮಾಸ. ೩ ಬಿಂಬಾನಿ. ೪ ಶುಭಕರ್ಮವತಾಂ. ೫ ಸ್ತುತಿವಚನೇಷು. ೬ ಶುಭಾವಹೈಃ. ೭ ಸಂಗೋಷ್ಠಿಂ. ೮ ದೇವಶ್ರೇಷ್ಠಃ.

ಆ ಶ್ರೇಷ್ಠನಾದ ದೇವನು ತನ್ನ ವಾಸಸ್ಥಾನದ ಸಮೀಪದಲ್ಲಿರುವ ಉದ್ಯಾನದ ಸರೋವರಗಳ ಮರಳುಭೂಮಿಗಳಲ್ಲಿ ಯಥೇಚ್ಛವಾಗಿ ವಿಹರಿಸುವವನಾಗಿ ಬಹು ಕಾಲದವರೆಗೆ ಕ್ರೀಡಿಸುತ್ತಿದ್ದನು.

**ಪರಕ್ಷೇತ್ರವಿಹಾರಸ್ತು ನಾಹಮಿಂದ್ರೇಷು ವಿದ್ಯತೇ ।**
**ಶುಕ್ಲಲೇಶ್ಯಾನುಭಾವೇನ [1]ಸ್ವಭೋಗ್ಯೈ[2]ರ್ಧೃತಿಮಾಪುಷಾಮ್ ॥ ೧೪೧ ॥**

**ಸ್ವಸ್ಥಾನೇ ಯಾ ಚ ಸಂಪ್ರೀತಿರ್ನಿರಪಾಯಸುಖೋದಯೇ ।**
**ನ ಸಾನ್ಯತ್ರ ತತೋ ನೈಷಾಂ [3]ರಿರಂಸಾ [4]ಪರಭುಕ್ತಿಷು ॥ ೧೪೨ ॥**

ಅಹಮಿಂದ್ರರಲ್ಲಿ ಪರಕ್ಷೇತ್ರ ವಿಹಾರವು ಇಲ್ಲ. ಅಂದರೆ ಬೇರೆ ಕ್ಷೇತ್ರದಲ್ಲಿ ವಿಹರಿಸುವುದಿಲ್ಲ. ಶುಕ್ಲಲೇಶ್ಯೆಯ ಪ್ರಭಾವದಿಂದ ತಮ್ಮ ಕ್ಷೇತ್ರಗಳಿಂದಲೇ ಸಂತೋಷವನ್ನು ಹೊಂದುವ ದೇವತೆಗಳಿಗೆ ಅಪಾಯರಹಿತವಾದ ಸುಖಾವಿರ್ಭಾವವುಳ್ಳ ತಮ್ಮ ಸ್ಥಾನದಲ್ಲಿಯೇ ಉಂಟಾಗುವ ಪ್ರೀತಿಯು ಬೇರೆಕಡೆಯಲ್ಲಿ ಉಂಟಾಗುವುದಿಲ್ಲ. ಆದುದರಿಂದ ಇವರಿಗೆ ಪರಕ್ಷೇತ್ರಗಳಲ್ಲಿ ಕ್ರೀಡಿಸಬೇಕೆಂಬ ಇಚ್ಛೆಯುಂಟಾಗುವುದಿಲ್ಲ.

**ಅಹಮಿಂದ್ರೋಸ್ಮಿ ನೇಂದ್ರೋನ್ಯೋ [5]ಮತ್ತೋಸ್ತೀತ್ಯಾ[6]ತ್ತಕತ್ಥನಾಃ ।**
**ಅಹಮಿಂದ್ರಾಖ್ಯಯಾ ಖ್ಯಾತಿಂ ಗತಾಸ್ತೇ ಹಿ ಸುರೋತ್ತಮಾಃ ॥ ೧೪೩ ॥**

''ನಾನೇ ಇಂದ್ರನಾಗಿದ್ದೇನೆ. ನನಗಿಂತ ಬೇರೆ ಇಂದ್ರರು ಇಲ್ಲ'' ಎಂದು ತಮಗೆ ತಾವೇ ಪ್ರಶಂಸೆಯನ್ನು ಮಾಡಿಕೊಳ್ಳುವ ಆ ಉತ್ತಮರಾದ ದೇವತೆಗಳು ಅಹಮಿಂದ್ರರೆಂಬ ಹೆಸರಿನಿಂದ ಪ್ರಖ್ಯಾತಿಯನ್ನು ಹೊಂದಿದ್ದಾರೆ.

**ನಾಸೂಯಾ ಪರನಿಂದಾ ವಾ ನಾತ್ಮಶ್ಲಾಘಾ ನ ಮತ್ಸರಃ ।**
**ಕೇವಲಂ ಸುಖಸಾದ್ಭೂತಾ ದೀವ್ಯಂತ್ಯೇತೇ ಪ್ರಮೋದಿನಃ ॥ ೧೪೪ ॥**

ಆ ಸರ್ವಾರ್ಥಸಿದ್ಧಿಸ್ವರ್ಗದಲ್ಲಿ ಅಸೂಯೆಯೂ ಪರನಿಂದೆಯೂ ಆತ್ಮ ಶ್ಲಾಘನೆಯೂ ಮತ್ಸರವೂ ಇಲ್ಲ. ಸಂತೋಷಪಡುತ್ತಿರುವ ಈ ಅಹಮಿಂದ್ರ ದೇವತೆಗಳು ಕೇವಲ ಸುಖಪರವಶರಾಗಿ ಕ್ರೀಡಿಸುತ್ತಾರೆ.

**ಸ ಏಷ ಪರಮಾನಂದಂ ಸ್ವಸಾದ್ಭೂತಂ ಸಮುದ್ವಹನ್ ।**
**ತ್ರಯಸ್ತ್ರಿಂಶತ್ಪಯೋರಾಶಿಪ್ರಮಿತಾಯುರ್ಮಹಾದ್ಯುತಿಃ ॥ ೧೪೫ ॥**

**ಸಮೇನ ಚತುರಸ್ರೇಣ ಸಂಸ್ಥಾನೇನಾತಿಸುಂದರಮ್ ।**
**ಹಸ್ತಮಾತ್ರೋಚ್ಛ್ರಿತಂ ದೇಹಂ ಹಂಸಾಂಸಧವಲಂ ದಧತ್ ॥ ೧೪೬ ॥**

**ಸಹಜಾಂಶುಕದಿವ್ಯಸ್ರಗ್ಭಿಭೂಷಾಭಿರಲಂಕೃತಮ್ ।**
**ಸೌಂದರ್ಯಸ್ಯೇವ ಸಂದೋಹಂ ದಧಾನೋ ರುಚಿರಂ ವಪುಃ ॥ ೧೪೭ ॥**

**ಪ್ರಶಾಂತಲಲಿತೋದಾತ್ತಧೀರನೇಪಥ್ಯವಿಭ್ರಮಃ ।**
**ಸ್ವದೇಹಪ್ರಸರಜ್ಜ್ಯೋತ್ಸ್ನಾಕ್ಷೀರಾಬ್ಧೌ ಮಗ್ನವಿಗ್ರಹಃ ॥ ೧೪೮ ॥**

**ಸ್ಫುರದಾಭರಣೋದ್ದ್ಯೋತದ್ಯೋತಿತಾಖಿಲದಿಙ್ಮುಖಃ ।**
**ತೇಜೋರಾಶಿರಿವೈಕಧ್ಯಮುಪನೀತೋತಿಭಾಸ್ವರಃ ॥ ೧೪೯ ॥**

**ವಿಶುದ್ಧಲೇಶ್ಯಃ ಶುದ್ಧೇದ್ಧದೇಹದೀಧಿತಿದಿಗ್ಧದಿಕ್ ।**
**ಸೌಧೇನೇವ ರಸೇನಾಪ್ತನಿರ್ಮಾಣಃ ಸುಖನಿರ್ವೃತಃ ॥ ೧೫೦ ॥**

**ಸುಧಾಶಿನಾಂ ಸುನಾಸೀರಪ್ರಮುಖಾಣಾಮಗೋಚರಮ್ ।**
**ಸಂಪ್ರಾಪ್ತಃ ಪರಮಾನಂದಪ್ರದಂ ಪದಮನುತ್ತರಮ್ ॥ ೧೫೧ ॥**

೧ ಸ್ವಕ್ಷೇತ್ರೈಃ. ೨ ಸಂತೋಷಂ ಗತವತಾಂ. ೩ ರಮಣೇಚ್ಛಾ. ೪ ಪರಕ್ಷೇತ್ರೇಷು. ೫ ಮತ್ತಃಕಾಶಾತ್. ೬ ಸ್ವೀಕೃತಶ್ಲಾಘಾಃ.

ತನಗೆ ಅಧೀನವಾದ ಪರಮಾನಂದವನ್ನು ವಹಿಸಿರುವವನೂ ಮೂವತ್ತ ಮೂರುಸಾಗರೋಪಮ ಆಯುಷ್ಯವುಳ್ಳವನೂ ಮಹಾಕಾಂತಿಯುಳ್ಳವನೂ ಸಮಚತುರಸ್ರಸಂಸ್ಥಾನ (ಶರೀರಾಕೃತಿವಿಶೇಷ) ದಿಂದ ಸುಂದರವೂ ಒಂದುಮೊಳ ಉದ್ದವೂ ಹಂಸಪಕ್ಷಿಯ ರೆಕ್ಕೆಯಂತೆ ಶುಭ್ರವೂ ಆದ ಶರೀರವನ್ನು ಧರಿಸಿದವನೂ ತನ್ನ ಜೊತೆಯಲ್ಲಿಯೇ ಉಂಟಾಗಿದ್ದ ವಸ್ತ್ರ ಪುಷ್ಪಮಾಲಿಕೆ ಆಭರಣ ಇವುಗಳಿಂದ ಅಲಂಕೃತವೂ ಸೌಂದರ್ಯದ ಸಮೂಹದಂತಿರುವುದೂ ಮನೋಹರವೂ ಆದ ಆಕಾರವನ್ನು ಧರಿಸಿರುವವನೂ ಶಾಂತವೂ ಮನೋಹರವೂ ಉದಾತ್ತವೂ ಧೀರವೂ ಆದ ವೇಷವನ್ನು ಧರಿಸಿರುವವನೂ ತನ್ನ ಶರೀರದಿಂದ ಪಸರಿಸುತ್ತಿರುವ ಕಾಂತಿಯೆಂಬ ಕ್ಷೀರಸಮುದ್ರದಲ್ಲಿ ಮುಳುಗಿರುವ ದೇಹವುಳ್ಳವನೂ ಪ್ರಕಾಶ ಮಾನವಾದ ಆಭರಣಗಳ ಕಾಂತಿಯಿಂದ ಸಮಸ್ತದಿಕ್ಕುಗಳನ್ನೂ ಪ್ರಕಾಶಪಡಿಸು ವವನೂ ಐಕ್ಯವನ್ನು ಹೊಂದಿದ ತೇಜಸ್ಸುಗಳ ರಾಶಿಯಂತೆ ಅತ್ಯಂತ ತೇಜಸ್ವಿಯೂ ವಿಶುದ್ಧವಾದ ಲೇಶ್ಯೆಯುಳ್ಳವನೂ ದಿಕ್ಕುಗಳಲ್ಲಿ ತನ್ನ ಪರಿಶುದ್ಧವಾದ ದೇಹಕಾಂತಿ ಯನ್ನು ಪಸರಿಸುವವನೂ ಅಮೃತರಸದಿಂದ ನಿರ್ಮಿಸಲ್ಪಟ್ಟವ ನಂತಿರುವವನೂ ಸುಖಾನುಭವದಿಂದ ತೃಪ್ತನೂ ಆದ ಆ ಅಹಮಿಂದ್ರದೇವನು ಅಮೃತಾಹಾರಿಗಳಾದ ದೇವೇಂದ್ರ ಮೊದಲಾದ ದೇವತೆಗಳಿಗೆ ಪ್ರಾಪ್ತವಾಗದಿರುವುದೂ ಆನಂದ ದಾಯಕವೂ ಉತ್ಕೃಷ್ಟವೂ ಆದ ಪದವಿಯನ್ನು ಹೊಂದಿದನು.

**ತ್ರಿಸಹಸ್ರಾಧಿಕತ್ರಿಂಷತ್ಸಹಸ್ರಾಬ್ದವ್ಯತಿಕ್ರಮೇ ।**
**ಮಾನಸಂ ದಿವ್ಯಮಾಹಾರಂ ಸ್ವಸಾತ್ಕುರ್ವನ್ಧೃತಿಂ ದಧೌ ॥ ೧೫೨ ॥**

ಮೂವತ್ತಮೂರುಸಾವಿರವರ್ಷಗಳು ಕಳೆದಮೇಲೆ ಆ ದೇವನು ಒಂದಾವರ್ತಿ ದಿವ್ಯವಾದ ಮಾನಸಾಹಾರವನ್ನು ತೆಗೆದುಕೊಂಡು ಸಂತುಷ್ಟನಾಗುತ್ತಿದ್ದನು. ಮೂವತ್ತಮೂರುಸಾವಿರವರ್ಷಗಳಿಗೊಂದಾವರ್ತಿ ಮಾನಸಾಹಾರವನ್ನು ತೆಗೆದು ಕೊಂಡು ಸಂತೋಷಪಟ್ಟನೆಂದು ಭಾವವು.

**ಮಾಸೈಃ ಷೋಡಶಭಿಃ ಪಂಚದಶಭಿಶ್ಚ ದಿನೈರ್ಗತೈಃ ।**
**ಪ್ರಾಪ್ತೋಚ್ಛ್ವಾಸಸ್ಥಿತಿಸ್ತತ್ರ ಸೋಹಮಿಂದ್ರೋವಸತ್ಸುಖಮ್ ॥ ೧೫೩ ॥**

ಹದಿನಾರುವರೆತಿಂಗಳಿಗೊಂದಾವರ್ತಿ ಶ್ವಾಸೋಚ್ಛ್ವಾಸವನ್ನು ಬಿಡುವ ಆ ಅಹಮಿಂದ್ರದೇವನು ಆ ಸರ್ವಾರ್ಥಸಿದ್ಧಿವಿಮಾನದಲ್ಲಿ ಸುಖವಾಗಿ ವಾಸ ಮಾಡಿದನು.

**ಲೋಕನಾಡೀಗತಂ ಯೋಗ್ಯಂ ಮೂರ್ತದ್ರವ್ಯಂ ಸಪರ್ಯಯಮ್ ।**
**ಸ್ವಾವಧಿಜ್ಞಾನದೀಪೇನ ದ್ಯೋತಯನ್ನೋದ್ಯುತತ್ತರಾಮ್ ॥ ೧೫೪ ॥**

ಆ ಅಹಮಿಂದ್ರದೇವನು ಲೋಕನಾಡಿ(ತ್ರಸನಾಡಿ)ಯಲ್ಲಿರುವುದೂ ಯೋಗ್ಯವೂ ಪರ್ಯಾಯಸಹಿತವೂ ಆದ ಮೂರ್ತದ್ರವ್ಯವನ್ನು ತನ್ನ ಅವಧಿ ಜ್ಞಾನವೆಂಬ ದೀಪದಿಂದ ಪ್ರಕಾಶಪಡಿಸಿ ಅಧಿಕವಾಗಿ ಪ್ರಕಾಶಿಸಿದನು. ಅವಧಿಜ್ಞಾನದಿಂದ ತಿಳಿದನೆಂದರ್ಥವು.

**[1]ತನ್ಮಾತ್ರಾಂ ವಿಕ್ರಿಯಾಂ ಕರ್ತುಮಸ್ಯ ಸಾಮರ್ಥ್ಯಮಸ್ತ್ಯದಃ ।**
**ವೀತರಾಗಸ್ತು ತನ್ನೈವಂ ಕುರುತೇ ನಿಷ್ಪ್ರಯೋಜನಃ ॥ ೧೫೫ ॥**

ಈ ದೇವನಿಗೆ ತನ್ನ ಅವಧಿಜ್ಞಾನಕ್ಕೆ ಗೋಚರವಾದ ಕ್ಷೇತ್ರದಷ್ಟು ವಿಕ್ರಿಯೆಯನ್ನು ಮಾಡಿಕೊಳ್ಳುವುದಕ್ಕೆ ಶಕ್ತಿಯಿದೆ. ವೀತರಾಗನೂ ಪ್ರಯೋಜನರಹಿತನೂ ಆಗಿರುವುದರಿಂದ ಹೀಗೆ ವಿಕ್ರಿಯೆಯನ್ನು ಮಾಡುವುದಿಲ್ಲ.

**ನಲಿನಾಭಂ ಮುಖಂ ತಸ್ಯ ನೇತ್ರೇ ನೀಲೋತ್ಪಲೋಪಮೇ ।**
**ಕಪೋಲಾವಿಂದು[2]ಸಚ್ಛಾಯೌ [3]ಬಿಂಬಕಾಂತಿಧರೋಧರಃ ॥ ೧೫೬ ॥**

೧ ಸ್ವಾವಧಿಕ್ಷೇತ್ರಮಾತ್ರಾಂ. ೨ ಸದೃಶೌ. ೩ ಬಿಂಬಿಕಾಪಕ್ವಫಲಕಾಂತಿಧರ ಇತ್ಯರ್ಥಃ.

ಆ ದೇವನ ಮುಖವು ಕಮಲಕ್ಕೆ ಸಮಾನವಾಗಿದ್ದಿತು. ಕಣ್ಣುಗಳು ಕನ್ನೈದಿಲೆಪುಷ್ಪಗಳಿಗೆ ಸಮಾನವಾಗಿದ್ದುವು. ಕೆನ್ನೆಗಳು ಚಂದ್ರನಿಗೆ ಸದೃಶವಾಗಿದ್ದುವು. ತುಟಿಯು ತೊಂಡೆಹಣ್ಣಿನಂತೆ ಕೆಂಪಾಗಿದ್ದಿತು.

**ಇತ್ಯಾದಿವರ್ಣನಾತೀತಂ ವಪುರಸ್ಯಾತಿಭಾಸ್ವರಮ್ ।**
**ಕಾಮನೀಯಕಸರ್ವಸ್ವಮೇಕೀಭೂತಮಿವಾರುಚತ್ ॥ ೧೫೭ ॥**

ಹೀಗೆ ವರ್ಣನೆಯನ್ನು ಮೀರಿದುದೂ ಅತ್ಯಂತ ಪ್ರಕಾಶಮಾನವೂ ಆದ ಈ ದೇವನ ದೇಹವು ಒಂದಾಗಿ ಸೇರಿದ ಸುಂದರತೆಯ ಸಮೂಹವೋ ಎಂಬಂತೆ, ಪ್ರಕಾಶಿಸಿತು.

**ಆಹಾರಕಶರೀರಂ ಯನ್ನಿರಲಂಕಾರಭಾಸ್ವರಮ್ ।**
**ಯೋಗಿನಾಮೃದ್ಧಿಜಂ ತೇನ ಸದೃಗಸ್ಯಾ [೧]ಚಕಾದ್ವಪುಃ ॥ ೧೫೮ ॥**

ಈ ದೇವನ ಶರೀರವು ತಪಸ್ಸಿನ ಪ್ರಭಾವದಿಂದುಂಟಾಗುವುದೂ ಅಲಂಕಾರವಿಲ್ಲದೆ ಪ್ರಕಾಶಮಾನವೂ ಆದ ಯೋಗಿಗಳ ಆಹಾರಕಶರೀರಕ್ಕೆ ಸಮಾನವಾಗಿ ಪ್ರಕಾಶಿಸಿತು.

**[೨]ಏಕಾಂತಸಾತರೂಪಂ ಯತ್ಸುಖಮಾಪ್ತೈರ್ನಿರೂಪಿತಮ್ ।**
**ತದೈಕಧ್ಯಮಿವಾ[೩]ಪನ್ನಮಭೂತ್ತಸ್ಮಿನ್ಸುರೋತ್ತಮೇ ॥ ೧೫೯ ॥**

ಬರೇ ಸುಖಸ್ವರೂಪವಾದ ಯಾವ ಸುಖವನ್ನು ಆಪ್ತರು ನಿರೂಪಿಸಿದ್ದಾರೋ ಆ ಸುಖವೆಲ್ಲ ಶ್ರೇಷ್ಠನಾದ ದೇವನಲ್ಲಿ ಒಂದಾಗಿ ಸೇರಿದಂತಿದ್ದಿತು.

**ತೇಪ್ಯಷ್ಟೌ ಭ್ರಾತರಸ್ತಸ್ಯ ಧನದೇವೋಪ್ಯನಲ್ಪಧೀಃ ।**
**ಜಾತಾಸ್ತತ್ಸದೃಶಾ ಏವ ದೇವಾಃ ಪುಣ್ಯಾನುಭಾವತಃ ॥ ೧೬೦ ॥**

ಆ ವಜ್ರನಾಭಿಯ ಎಂಟುಮಂದಿ ಸಹೋದರರೂ ಮಹಾಬುದ್ಧಿಶಾಲಿಯಾಗಿದ್ದ ಧನದೇವಶ್ರೇಷ್ಠಿಯೂ ಪುಣ್ಯದ ಅತಿಶಯದಿಂದ ಆ ಅಹಮಿಂದ್ರದೇವನಿಗೆ ಸಮಾನರಾದ ದೇವತೆಗಳಾಗಿಯೇ ಹುಟ್ಟಿದರು. ಅವರೂ ಸರ್ವಾರ್ಥಸಿದ್ಧಿ ವಿಮಾನದಲ್ಲಿ ಅಹಮಿಂದ್ರರಾಗಿ ಹುಟ್ಟಿದರೆಂದು ಭಾವವು.

**ಇತಿ ತತ್ರಾಹಮಿಂದ್ರಾಸ್ತೇ ಸುಖಂ ಮೋಕ್ಷಸುಖೋಪಮಮ್ ।**
**ಭುಂಜಾನಾ ನಿಷ್ಪ್ರವೀಚಾರಾಶ್ಚಿರಮಾಸನ್ಪ್ರಮೋದಿನಃ ॥ ೧೬೧ ॥**

ಹೀಗೆ ಕಾಮಸೇವನೆಯನ್ನು ಮಾಡದಿರುವವರೂ ಯಾವಾಗಲೂ ಆನಂದವಾಗಿರುವವರೂ ಆದ ಆ ಅಹಮಿಂದ್ರರು ಮೋಕ್ಷಸುಖಕ್ಕೆ ಸದೃಶವಾದ ಸುಖವನ್ನು ಬಹುಕಾಲದವರೆಗೆ ಅನುಭವಿಸುತ್ತಿದ್ದರು.

**ಪೂರ್ವೋಕ್ತಸಪ್ರವೀಚಾರಸುಖಾನಂತಗುಣಾತ್ಮಕಮ್ ।**
**ಸುಖಮವ್ಯಾಹತಂ ತೇಷಾಂ ಶುಭಕರ್ಮೋದಯೋದ್ಭವಮ್ ॥ ೧೬೨ ॥**

ಆ ಅಹಮಿಂದ್ರರ ಶುಭಕರ್ಮದ ಉದಯದಿಂದುಂಟಾದುದೂ ನಿರ್ಬಾಧವೂ ಆದ ಸುಖವು ಹಿಂದೆಹೇಳಿದ ಕಾಮಸೇವನೆಯಿಂದುಂಟಾಗುವ ಸುಖಕ್ಕಿಂತ ಅನಂತಗುಣಿತವಾಗಿದೆ.

**ಸಂಸಾರೇ ಸ್ತ್ರೀ[೪]ಸಮಾಸಂಗಾದಂಗಿನಾಂ ಸುಖಸಂಗಮಃ ।**
**[೫]ತದಭಾವೇ ಕುತಸ್ತೇಷಾಂ ಸುಖಮಿತ್ಯತ್ರ [೬]ಚರ್ಚ್ಯತೇ ॥ ೧೬೩ ॥**

"ಸಂಸಾರದಲ್ಲಿ ಪ್ರಾಣಿಗಳಿಗೆ ಸ್ತ್ರೀಸಂಸರ್ಗದಿಂದ ಸುಖವುಂಟಾಗುತ್ತದೆ. ಸ್ತ್ರೀಸಂಸರ್ಗದಿಂದುಂಟಾಗುವ ಸುಖವು ಸರ್ವಾರ್ಥಸಿದ್ಧಿಯಲ್ಲಿಲ್ಲದಿರುವುದರಿಂದ ಆ ಅಹಮಿಂದ್ರರಿಗೆ ಸುಖವೆಲ್ಲಿ ಬಂದಿತು?" ಎಂಬೀ ವಿಷಯದಲ್ಲಿ ವಿಚಾರ ಮಾಡುತ್ತೇವೆ.

೧ ಬಭೌ. ೨ ಕೇವಲಸುಖಸ್ವರೂಪಂ, ಶರ್ಮಸಾತಸುಖಾನಿ ಚೇತ್ಯಮರಃ. ೩ ಪ್ರಾಪ್ತಂ. ೪ ಸಂಯೋಗಾತ್. ೫ ಸ್ತ್ರೀಸಂಗಸುಖಾಭಾವೇ. ೬ ವಿಚಾರ್ಯತೇ.

**[೧]ನಿರ್ದ್ವಂದ್ವವೃತ್ತಿತಾಮಾಪ್ತಾಃ [೨]ಶಮುಶಂತೀಹ ದೇಹಿನಾಮ್ ।**
**ತತ್ಕುತಸ್ತ್ಯಂ ಸರಾಗಾಣಾಂ ದ್ವಂದ್ವೋಪಹತಚೇತಸಾಮ್ ॥ ೧೬೪ ॥**

ಪರಿಗ್ರಹವಿಲ್ಲದಿರುವಿಕೆಯು ಪ್ರಾಣಿಗಳಿಗೆ ಸಂಸಾರದಲ್ಲಿ ಸುಖವೆಂದು ಆಪ್ತರು (ಸರ್ವಜ್ಞರು) ಹೇಳುತ್ತಾರೆ. ಅಂತಹ ಸುಖವು ಪರಿಗ್ರಹಗಳಲ್ಲಿ ಮಗ್ನವಾದ ಮನಸ್ಸುಳ್ಳ ರಾಗಿಗಳಿಗೆ (ರಾಗವುಳ್ಳವರಿಗೆ) ಎಲ್ಲಿಬಂತು ?

**ಸ್ತ್ರೀಭೋಗೋ ನ ಸುಖಂ ಚೇತಃಸಮ್ಮೋಹಾ[೩]ದ್ಗಾತ್ರಸಾಧನಾತ್ ।**
**ತೃಷ್ಣಾನುಬಂಧಾತ್ಸಂತಾಪರೂಪತ್ವಾಚ್ಚ ಯಥಾ ಜ್ವರಃ ॥ ೧೬೫ ॥**

ಜ್ವರದಂತೆ ಸ್ತ್ರೀಸಂಭೋಗವು ಮನಸ್ಸನ್ನು ಭ್ರಮೆಗೊಳಿಸುವುದರಿಂದಲೂ ಶರೀರವನ್ನು ಕ್ಲೇಶಪಡಿಸುವುದರಿಂದಲೂ ಆಸೆಯನ್ನು ಹೆಚ್ಚಿಸುವುದರಿಂದಲೂ ಸಂತಾಪರೂಪವಾಗಿರುವುದರಿಂದಲೂ ಸುಖವಲ್ಲ. ಜ್ವರವು ಹೇಗೆ ಸುಖವಲ್ಲವೋ ಹಾಗೆಯೇ ಸ್ತ್ರೀಸಂಭೋಗವೂ ಸುಖವಲ್ಲವೆಂದು ಭಾವವು.

**ಮದನಜ್ವರಸಂತಪ್ತಸ್ತತ್ಪ್ರತೀಕಾರವಾಂಛಯಾ ।**
**ಸ್ತ್ರೀರೂಪಂ ಸೇವತೇ [೪]ಭ್ರಾಂತೋ ಯಥಾ ಕಟ್ವಪಿ ಭೇಷಜಮ್ ॥**

ರೋಗಿಯು ಔಷಧವನ್ನು ಕಹಿಯಾಗಿದ್ದರೂ ಸೇವಿಸುವಂತೆ ಕಾಮಜ್ವರದಿಂದ ಸಂತಪ್ತವಾದ ಪ್ರಾಣಿಯು ಆ ಜ್ವರಕ್ಕೆ ಪ್ರತೀಕಾರವನ್ನು ಮಾಡಬೇಕೆಂಬ ಇಚ್ಛೆಯಿಂದ ಸ್ತ್ರೀರೂಪವನ್ನು ಸೇವಿಸುತ್ತದೆ.

**ಮನೋಜ್ಞವಿಷಯಾಸೇವಾ ತೃಷ್ಣಾಯೈ ನ ವಿತೃಪ್ತಯೇ ।**
**ತೃಷ್ಣಾರ್ಚಿಷಾ ಚ ಸಂತಪ್ತಃ ಕಥಂ ನಾಮ ಸುಖೀ ಜನಃ ॥ ೧೬೭ ॥**

ಮನೋಹರವಾದ ವಿಷಯಗಳ ಸೇವನೆಯಿಂದ ಆಸೆಯು ಹೆಚ್ಚುತ್ತದೆ. ತೃಪ್ತಿಯುಂಟಾಗುವುದಿಲ್ಲ. ಆಸೆಯೆಂಬ ಬೆಂಕಿಯಿಂದ ಸಂತಪ್ತವಾದ ಜನರು ಹೇಗೆ ತಾನೆ ಸುಖಿಯಾಗುವರು ?

**ರುಜಾಂ ಯನ್ನೋ[೫]ಪಘಾತಾಯ ತದೌಷಧಮನೌಷಧಮ್ ।**
**ಯನ್ನೋ[೬]ದನ್ಯಾವಿನಾಶಾಯ ನಾಂಜಸಾ ತಜ್ಜಲಂ ಜಲಮ್ ॥ ೧೬೮ ॥**

ರೋಗಗಳನ್ನು ಪರಿಹರಿಸದಿರುವ ಔಷಧವು ಔಷಧವಲ್ಲ. ಬಾಯಾರಿಕೆಯನ್ನು ಹೋಗಲಾಡಿಸದ ನೀರು ನಿಜವಾಗಿಯೂ ನೀರಲ್ಲ.

**ನ ವಿಹಂತ್ಯಾಪದಂ ಯಚ್ಚ [೭]ನಾರ್ಥತಸ್ತದ್ಧನಂ ಧನಮ್ ।**
**ತಥಾ ತೃಷ್ಣಾಭಿದೇ ಯನ್ನ ನ ತದ್ವಿಷಯಜಂ ಸುಖಮ್ ॥ ೧೬೯ ॥**

ಆಪತ್ತನ್ನು ನಾಶಮಾಡದ ಧನ(ದ್ರವ್ಯ)ವು ನಿಜವಾಗಿಯೂ ಧನವಲ್ಲ. ಹಾಗೆಯೇ ಆಸೆಯನ್ನು ನಾಶಮಾಡದ ವಿಷಯಸುಖವು ಸುಖವಲ್ಲ.

**[೮]ರುಜಾಮೇಷ ಪ್ರತೀಕಾರೋ ಯತ್ಸ್ತ್ರೀಸಂಭೋಗಜಂ ಸುಖಮ್ ।**
**ನಿರ್ವ್ಯಾಧಿಃ ಸ್ವಾಸ್ಥ್ಯಮಾಪನ್ನಃ ಕುರುತೇ ಕಿನ್ನು ಭೇಷಜಮ್ ॥ ೧೭೦ ॥**

ಕಾಮಜ್ವರವೆಂಬ ರೋಗಗಳಿಗೆ ಸ್ತ್ರೀಸಂಭೋಗದಿಂದುಂಟಾಗುವ ಸುಖವು ಪ್ರತೀಕಾರವಾಗುವಪಕ್ಷದಲ್ಲಿ ಪ್ರಾಣಿಯು ರೋಗರಹಿತವಾಗಿ ಆರೋಗ್ಯವನ್ನು ಹೊಂದಬೇಕು. ಪುನಃ ಏತಕ್ಕೆ ಔಷಧವನ್ನು ಮಾಡುತ್ತದೆ? ಪುನಃ ಏತಕ್ಕೆ ಕಾಮಸೇವನೆಯನ್ನು ಮಾಡುತ್ತದೆಂದು ಭಾವವು.

**ಪರಂ ಸ್ವಾಸ್ಥ್ಯಂ ಸುಖಂ ನೈತದ್ವಿಷಯೇಷ್ವನುರಾಗಿಣಾಮ್ ।**
**[೯]ತೇ ಹಿ ಪೂರ್ವಂ [೧೦]ತದಾತ್ವೇ ಚ ಪರ್ಯಂತೇ ಚ [೧೧]ವಿದಾಹಿನಃ ॥**

೧ ನಿಷ್ಪರಿಗ್ರಹವೃತ್ತಿತ್ವಂ. ೨ ಸುಖಂ. ೩ ಶರೀರಕ್ಲೇಶಾತ್. ೪ ರೋಗೀ. ೫ ಪರಿಹಾರಾಯ. ೬ ಪಿಪಾಸಾವಿನಾಶಾಯ. ೭ ಪರಮಾರ್ಥತಃ. ೮ ಕಾಮಜ್ವರರುಜಾಂ. ೯ ವಿಷಯಾಃ. ೧೦ ತತ್ಕಾಲೇ ೧೧ ಸಂತಾಪಕಾರಿಣಃ.

ಭೋಗೋಪಭೋಗವಿಷಯಗಳಲ್ಲಿ ಅನುರಾಗವುಳ್ಳವರಿಗೆ ಈ ವಿಷಯಸುಖವು ಹೆಚ್ಚು ಹಿತಕರವಾದುದಲ್ಲ. ಆ ವಿಷಯಗಳು ಅನುಭವಿಸುವುದಕ್ಕಿಂತ ಮೊದಲೂ ಅನುಭವಿಸುವಾಗಲೂ ಅಂತ್ಯದಲ್ಲಿಯೂ ಸಂತಾಪವನ್ನುಂಟುಮಾಡುವುವು ಗಳಾಗಿವೆ.

**[೧]ಮನೋನಿರ್ವೃತಿಮೇವೇಹ ಸುಖಂ [೨]ವಾಂಛಂತಿ ಕೋವಿದಾಃ ।**
**[೩]ತತ್ಕುತೋ ವಿಷಯಾಂಧಾನಾಂ ನಿತ್ಯ[೪]ಮಾಯಸ್ತಚೇತಸಾಮ್ ॥೧೭೨ ॥**

ಮನಸ್ಸು ತೃಪ್ತಿಯಾಗಿರುವುದೇ ಸಂಸಾರದಲ್ಲಿ ಸುಖವೆಂದು ವಿದ್ವಾಂಸರು ಹೇಳುತ್ತಾರೆ. ಆ ಸುಖವು ಯಾವಾಗಲೂ ಮನಸ್ಸನ್ನು ಆಯಾಸಗೊಳಿಸುವ ವಿಷಯಾಂಧರಿಗೆಲ್ಲಿಂದ ಬಂದೀತು ?

**ವಿಷಯಾನುಭವೇ ಸೌಖ್ಯಂ ಯತ್ಪರಾಧೀನಮಂಗಿನಾಮ್ ।**
**[೫]ಸಾಬಾಧಂ [೬]ಸಾಂತರಂ ಬಂಧಕಾರಣಂ ದುಃಖಮೇವ ತತ್ ॥ ೧೭೩ ॥**

ಪ್ರಾಣಿಗಳಿಗೆ ವಿಷಯಾನುಭವದಿಂದುಂಟಾಗುವ ಸುಖವು ಪರಾಧೀನವೂ ಅವಧಿಯೊಡಗೂಡಿದುದೂ ಸಂಸಾರ ಬಂಧಕ್ಕೆ ಕಾರಣವೂ ಆಗಿರುವುದರಿಂದ ಅದು ದುಃಖವೇ, ಸುಖವಲ್ಲ.

**[೭]ಆಪಾತಮಾತ್ರರಸಿಕಾ ವಿಷಯಾ ವಿಷದಾರುಣಾಃ ।**
**ತದುದ್ಭವಂ ಸುಖಂ ನೄಣಾಂ ಕಂಡೂಕಂಡೂಯನೋಪಮಮ್ ॥**

ಅನುಭವಿಸುವ ಕಾಲದಲ್ಲಿ ಮಾತ್ರ ರಸ(ಪ್ರೀತಿ)ವನ್ನುಂಟು ಮಾಡುವ ಈ ಭೋಗೋಪಭೋಗವಿಷಯಗಳು ಅಂತ್ಯದಲ್ಲಿ ವಿಷದಂತೆ ಭಯಂಕರವಾಗಿವೆ. ಮನುಷ್ಯರಿಗೆ ಆ ವಿಷಯಗಳಿಂದುಂಟಾಗುವ ಸುಖವು ತುರಿಕಜ್ಜಿಯನ್ನು ಕೆರೆದುಕೊಳ್ಳುವುದರಿಂದುಂಟಾಗುವ ಸುಖಕ್ಕೆ ಸಮಾನವಾದುದು.

**ದಗ್ಧವ್ರಣೇ ಯಥಾ ಸಾಂದ್ರಚಂದನದ್ರವಚರ್ಚನಮ್ ।**
**ಕಿಂಚಿದಾಶ್ವಾಸಜನನಂ ತಥಾ ವಿಷಯಜಂ ಸುಖಮ್ ॥ ೧೭೫ ॥**

ಸುಟ್ಟ ವ್ರಣ(ಗಾಯ)ಕ್ಕೆ ಚಂದನವನ್ನು ತೇದು ಲೇಪಮಾಡಿದರೆ ಮೊದಲು ಸ್ವಲ್ಪ ಸುಖವನ್ನುಂಟುಮಾಡಿ ತರುವಾಯ ಬಹಳ ದುಃಖ(ಜ್ವಾಲೆ)ವನ್ನುಂಟು ಮಾಡುವಂತೆ, ವಿಷಯಸುಖವು ಅನುಭವಿಸುವಾಗ ಸುಖವಾಗಿ ತೋರಿ ಕೊನೆಗೆ ದುಃಖವನ್ನುಂಟುಮಾಡುತ್ತದೆ.

**ದುಷ್ಟವ್ರಣೇ ಯಥಾ ಕ್ಷಾರಶಸ್ತ್ರಪಾತಾದ್ಯುಪಕ್ರಮಃ ।**
**ಪ್ರತೀಕಾರೋ ರುಜಾಂ ಜಂತೋಸ್ತಥಾ ವಿಷಯಸೇವನಮ್ ॥ ೧೭೬ ॥**

ದುಷ್ಟವಾದ ವ್ರಣದಲ್ಲಿ ಉಪ್ಪನ್ನು ಹಾಕುವುದಾಗಲಿ ಶಸ್ತ್ರಪ್ರಯೋಗವನ್ನು ಮಾಡುವುದಾಗಲಿ ಹೇಗೆ ಪ್ರತೀಕಾರವೋ ಹಾಗೆಯೇ ವಿಷಯಸೇವನೆಯು ಪ್ರಾಣಿಯ ರೋಗಗಳಿಗೆ ಪ್ರತೀಕಾರವು. ಆ ದುಷ್ಟವ್ರಣವು ಹೆಚ್ಚು ದುಃಖನ್ನುಂಟು ಮಾಡುವಂತೆ ವಿಷಯಸೇವನೆಯು ಹೆಚ್ಚು ದುಃಖಕ್ಕೆ ಕಾರಣವಾಗುತ್ತದೆಂದು ಭಾವವು.

**ಪ್ರಿಯಾಂಗನಾಂಗಸಂಸರ್ಗಾದ್ಯದೀಹ ಸುಖಮಂಗಿನಾಮ್ ।**
**ನನು ಪಕ್ಷಿಮೃಗಾದೀನಾಂ ತಿರಶ್ಚಾಮಸ್ತು ತತ್ಸುಖಮ್ ॥ ೧೭೭ ॥**

ಪ್ರಾಣಿಗಳಿಗೆ ಪ್ರಿಯಸ್ತ್ರೀಯ ಶರೀರಸಂಸರ್ಗದಿಂದ ಸುಖವುಂಟಾಗುವಪಕ್ಷದಲ್ಲಿ ಆ ಸುಖವು ಪಕ್ಷಿಮೃಗಮೊದಲಾದ ತಿರ್ಯಕ್ಪ್ರಾಣಿಗಳಿಗೆ ಉಂಟಾಗಲಿ.

**ಶುನೀ[೮]ಮೈಂದ್ರಮಹೇ ಪೂತಿವ್ರಣೀಭೂತಕುಯೋನಿಕಾಮ್ ।**
**[೯]ಅವಶಂ ಸೇವಮಾನಃ ಶ್ವಾ ಸುಖೀ ಚೇತ್ಸ್ತ್ರೀಜುಷಾಂ ಸುಖಮ್ ॥**

ಕನ್ಯಾಮಾಸ(ಭಾದ್ರಪದಮಾಸ)ದಲ್ಲಿ ದುರ್ಗಂಧವೂ ವ್ರಣವೂ ಆದ ಯೋನಿಯುಳ್ಳ ಹೆಣ್ಣುನಾಯಿಯನ್ನು ಕಾಮಪರವಶವಾಗಿ ಸೇವಿಸುವ (ಭೋಗಿಸುವ) ಗಂಡುನಾಯಿಯು ಸುಖಿಯಾಗುವುದಾದರೆ ಸ್ತ್ರೀಯನ್ನು ಸೇವಿಸುವವರೂ ಸುಖಿಗಳು.

**ನಿಂಬದ್ರುಮೇ ಯಥೋತ್ಪನ್ನಃ ಕೀಟಕಸ್ತದ್ರಸೋಪಭುಕ್ ।**
**ಮಧುರಂ ತದ್ರಸಂ ವೇತ್ತಿ ತಥಾ ವಿಷಯಿಣೋಪ್ಯಮೀ ॥ ೧೭೯ ॥**

**ಸಂಭೋಗಜನಿತಂ ಖೇದಂ ಶ್ಲಾಘಮಾನಾಃ [೧]ಸುಖಾಸ್ಥಯಾ ।**
**ತತ್ರೈವ ರತಿಮಾಯಾಂತಿ ಭವಾವಸ್ಕರಕೀಟಕಾಃ ॥ ೧೮೦ ॥**

ಬೇವಿನ ಮರದಲ್ಲಿ ಹುಟ್ಟಿದ ಹುಳುವು ಬೇವಿನ ರಸವನ್ನು ಸೇವಿಸಿ ಆ ರಸವನ್ನು ಮಧುರವೆಂದು ತಿಳಿಯುವಂತೆ ಭವವೆಂಬ ಅಮೇಧ್ಯ(ಮಲ)ದಲ್ಲಿ ಕ್ರಿಮಿಗಳಂತಿರುವ ಈ ವಿಷಯಾಸಕ್ತರೂ ಸ್ತ್ರೀಸಂಭೋಗದಿಂದುಂಟಾದ ಖೇದವನ್ನು ಸುಖವೆಂಬ ಬುದ್ಧಿಯಿಂದ ಶ್ಲಾಘಿಸುವವರಾಗಿ ಆ ಸ್ತ್ರೀಸಂಭೋಗದಲ್ಲಿಯೇ ಪ್ರೀತಿಪಡುತ್ತಾರೆ.

**ವಿಷಯಾನುಭವಾತ್ಪುಂಸೋ ರತಿಮಾತ್ರಂ ಪ್ರಜಾಯತೇ ।**
**ರತಿಶ್ಚೇತ್ಸುಖ[೨]ಮಾಯಾತಂ ನನ್ವ[೩]ಮೇಧ್ಯಾದನೇಪಿ ತತ್ ॥ ೧೮೧ ॥**

ವಿಷಯಾನುಭವದಿಂದ ಪುರುಷನಿಗೆ ಪ್ರೀತಿಯು ಮಾತ್ರ ಉಂಟಾಗುತ್ತದೆ. ಆ ಪ್ರೀತಿಯು ಸುಖವಾದರೆ ಕ್ರಿಮಿಗೆ ಅಮೇಧ್ಯಭಕ್ಷಣದಲ್ಲಿಯೂ ಆ ಸುಖವುಂಟಾಗುವುದಲ್ಲವೇ ?

**ಯಥಾಮೀ ರತಿಮಾಸಾದ್ಯ ವಿಷಯಾನನುಭುಂಜತೇ ।**
**ತಥಾ ಶ್ವಸೂಕರಕುಲಂ ತದ್ವತ್ಕ್ವಾ[೪]ತ್ತ್ಯಮೇಧ್ಯಕಮ್ ॥ ೧೮೨ ॥**

ವಿಷಯಾಸಕ್ತರು ಪ್ರೀತಿಯಿಂದ ಹೇಗೆ ವಿಷಯಗಳನ್ನನುಭವಿಸುತ್ತಾರೋ ಹಾಗೆಯೇ ನಾಯಿಗಳೂ ಹಂದಿಗಳೂ ಪ್ರೀತಿಯಿಂದಲೇ ಅಮೇಧ್ಯವನ್ನು ತಿನ್ನುತ್ತವೆ.

**ಗೂಥಕ್ರಿಮೇರ್ಯಥಾ ಗೂಥರಸಸೇವಾ ಪರಂ ಸುಖಮ್ ।**
**ತಥೈವ ವಿಷಯಾ[೫]ನೀಪ್ಸೋಃ ಸುಖಂ ಜಂತೋರ್ವಿಗರ್ಹಿತಮ್ ॥**

ಮಲದಲ್ಲಿರುವ ಕ್ರಿಮಿಗೆ ಮಲದ ರಸಸೇವನೆಮಾಡುವುದು ಹೇಗೆ ಪರಮ ಸುಖವೋ ಹಾಗೆಯೇ ವಿಷಯಗಳನ್ನಿಚ್ಛಿಸುವ ಪ್ರಾಣಿಯ ಸುಖವೂ ಅತ್ಯಂತ ನಿಂದ್ಯವಾದುದು.

**ವಿಷಯಾನನುಭುಂಜಾನಃ ಸ್ತ್ರೀಪ್ರಧಾನಾ[೬]ನ್ಸವೇಪಥುಃ ।**
**ಶ್ವಸನ್ಪ್ರಸ್ವಿನ್ನಸರ್ವಾಂಗಃ ಸುಖೀ ಚೇದಸುಖೀಹ ಕಃ ॥ ೧೮೪ ॥**

ಸ್ತ್ರೀ ಮೊದಲಾದ ವಿಷಯಗಳನ್ನು ಸೇವನೆಮಾಡುವಾಗ ಶರೀರದಲ್ಲಿ ಕಂಪ (ನಡುಗುವಿಕೆ)ವುಂಟಾಗುವುದು. ಆಯಾಸದಿಂದ ಉಸಿರು ಬಿಡುವನು. ಮೈಯೆಲ್ಲಾ ಬೆವರುವುದು. ಇಂತಹ ಪುರುಷನು ಸುಖಿಯಾದರೆ ಸಂಸಾರದಲ್ಲಿ ದುಃಖಿ ಯಾವನು ?

**ಆಯಾಸಮಾತ್ರಮತ್ರಾಜ್ಞಃ ಸುಖಮಿತ್ಯಭಿಮನ್ಯತೇ ।**
**ವಿಷಯಾಶಾವಿಮೂಢಾತ್ಮಾ ಶ್ವೇವಾಸ್ಥಿದಶನೈರ್ದಶನ್ ॥ ೧೮೫ ॥**

ವಿಷಯಗಳ ಆಸೆಯಿಂದ ಮೂಢನಾದ ಅಜ್ಞಾನಿಯು ಹಲ್ಲುಗಳಿಂದ ಮೂಳೆ(ಎಲುಬು)ಯನ್ನು ಕಚ್ಚುತ್ತಿರುವ ನಾಯಿಯಂತೆ ಆಯಾಸವನ್ನೇ ಸುಖವನ್ನಾಗಿ ತಿಳಿಯುತ್ತಾನೆ.

೧ ಮನಸ್ತೃಪ್ತಿಂ. ೨ ಕಥಯಂತೀತ್ಯರ್ಥಃ. ೩ ಮನೋನಿರ್ವೃತಿರೂಪಂ ಸುಖಂ. ೪ ಪ್ರಯಾಸೀಕೃತಚೇತಸಾಂ. ೫ ಬಾಧಾಸಹಿತಂ. ೬ ಸಾವಧಿಂ. ೭ ಅನುಭವನಮಾತ್ರರಸಿಕಾಃ. ೮ ಕನ್ಯಾಮಾಸೇ. ೯ ಪರಾಧೀನಂ ಯಥಾ ಭವತಿ ತಥಾ.

೧ ಸುಖಬುದ್ಧ್ಯಾ. ೨ ಆಗತಂ. ೩ ವಿಡ್ಭಕ್ಷಣೇ. ೪ ಭಕ್ಷಯತಿ. ೫ ಪ್ರಾಪ್ತುಮಿಚ್ಛೋಃ. ೬ ಸಕಂಪಃ.

**ತತಃ ಸ್ವಾಭಾವಿಕಂ ಕರ್ಮಕ್ಷಯಾತ್ತತ್ಪ್ರಶಮಾದಪಿ ।**
**ಯದಾಹ್ಲಾದನಮೇತತ್ಸ್ಯಾತ್ಸುಖಂ ನಾ[೧]ನ್ಯವ್ಯಪಾಶ್ರಯಮ್ ॥ ೧೮೬ ॥**

ಆದುದರಿಂದ ಕರ್ಮಗಳ ಕ್ಷಯದಿಂದ ಅಥವಾ ಉಪಶಮದಿಂದ ಉಂಟಾಗುವ ಸ್ವಾಭಾವಿಕವಾದ ಆನಂದವೇ ಸುಖವು. ಭೋಗೋಪಭೋಗವಿಷಯಗಳಿಗೆ ಅಧೀನವಾದ ಸುಖವು ಸುಖವಲ್ಲ.

**[೨]ಪರಿವಾರರ್ದ್ಧಿಸಾಮಗ್ರ್ಯಾ ಸುಖಂ ಸ್ಯಾತ್ಕಲ್ಪವಾಸಿನಾಮ್ ।**
**ತದಭಾವೇಹಮಿಂದ್ರಾಣಾಂ ಕುತಸ್ತ್ಯಮಿತಿ ಚೇತ್ಸುಖಮ್ ॥ ೧೮೭ ॥**

"ಕಲ್ಪವಾಸಿದೇವತೆಗಳಿಗೆ ಸ್ತ್ರೀಮೊದಲಾದ ಪರಿವಾರಧನ ಈ ಸಾಮಗ್ರಿಯಿಂದ ಸುಖವುಂಟಾಗುವುದು. ಅಂತಹ ಸುಖಸಾಮಗ್ರಿಯು ಅಹಮಿಂದ್ರದೇವತೆಗಳಿಗೆ ಇಲ್ಲದಿರುವುದರಿಂದ ಅವರಿಗೆ ಸುಖವೆಲ್ಲಿ ಬಂತು ?" ಎಂದರೆ:

**ಪರಿವಾರರ್ದ್ಧಿ[೩]ಸತ್ತೈವ ಕಿಂ ಸುಖಂ ಕಿಮು ತದ್ವತಾಮ್ ।**
**ತತ್ಸೇವಾಸುಖಮಿತ್ಯೇವಮತ್ರ ಸ್ಯಾದ್ದ್ವಿತಯೀ ಗತಿಃ ॥ ೧೮೮ ॥**

ಪರಿಗ್ರಹವುಳ್ಳವರಿಗೆ "ಸ್ತ್ರೀ ಐಶ್ವರ್ಯ ಮೊದಲಾದ ಪರಿಗ್ರಹಗಳಿರುವುದೇ ಸುಖವೋ ? ಅಥವಾ ಅವುಗಳನ್ನು ಸೇವನೆಮಾಡುವುದರಿಂದ ಸುಖವೋ ?" ಎಂದು ಈ ಪರಿಗ್ರಹದಲ್ಲಿ ಎರಡು ಪ್ರಕಾರವಿದೆ.

**[೪]ಸಾಂತಃಪುರೋ ಧನರ್ದ್ಧೀದ್ಧಪರಿವಾರೋ ಜ್ವರೀ ನೃಪಃ ।**
**ಸುಖೀ ಸ್ಯಾದ್ಯದಿ ಸನ್ಮಾತ್ರಾದ್ವಿಷಯಾತ್ಸುಖಮೀಪ್ಸಿತಮ್ ॥ ೧೮೯ ॥**

ಸ್ತ್ರೀಮೊದಲಾದ ಪರಿಗ್ರಹಗಳು ಇದ್ದಮಾತ್ರದಿಂದಲೇ ಸುಖವಾಗುವ ಪಕ್ಷದಲ್ಲಿ ಜ್ವರದಿಂದ ಸಂತಾಪಪಡುತ್ತಿರುವ ರಾಜನೂ ಅಂತಃಪುರದ ಸ್ತ್ರೀಯರು ಧನಸಂಪತ್ತು ಮೊದಲಾದ ಪರಿವಾರದಿಂದ ಸುಖಿಯಾಗಬೇಕು. ಅವನಿಗೆ ಆ ಪರಿಗ್ರಹಗಳೆಲ್ಲ ಇವೆ.

**ತತ್ಸೇವಾ ಸುಖಮಿತ್ಯತ್ರ ದತ್ತಮೇವೋತ್ತರಂ ಪುರಾ ।**
**ತತ್ಸೇವೀ ತೀವ್ರ[೫]ಮಾಯಸ್ತಃ ಕಥಂ ವಾ ಸುಖಭಾಗ್ಭವೇತ್ ॥ ೧೯೦ ॥**

ಆ ವಿಷಯಗಳನ್ನು ಸೇವಿಸುವುದರಿಂದ ಸುಖವೆಂದು ಹೇಳುವಪಕ್ಷದಲ್ಲಿ ಇದಕ್ಕೆ ಮೊದಲೇ ಉತ್ತರವನ್ನು ಕೊಟ್ಟಿದ್ದೇವೆ. ಆ ವಿಷಯಗಳನ್ನು ಸೇವಿಸುವವನು ಬಹಳವಾಗಿ ಆಯಾಸಪಡುವುದರಿಂದ ಹೇಗೆ ಸುಖಭಾಗಿಯಾಗುವನು ?

**ಪಶ್ಯೈತೇ ವಿಷಯಾಃ ಸ್ವಪ್ನಭೋಗಾಭಾ [೬]ವಿಪ್ರಲಂಭಕಾಃ ।**
**[೭]ಅಸ್ಥಾಯಿಕಾಃ ಕುತಸ್ತೇಭ್ಯಃ ಸುಖ[೮]ಮಾರ್ತಧಿಯಾಂ ನೃಣಾಮ್ ॥**

ನೋಡು ಸ್ವಪ್ನದ ಭೋಗಕ್ಕೆ ಸಮಾನಗಳಾದ ಈ ಭೋಗಗಳು ಪ್ರಾಣಿಗಳನ್ನು ವಂಚಿಸುವುವುಗಳೂ ಅಸ್ಥಿರಗಳೂ ಆಗಿವೆ. ಆರ್ತಧ್ಯಾನಿಗಳಾದ ಮನುಷ್ಯರಿಗೆ ಆ ವಿಷಯಗಳಿಂದ ಸುಖವೆಲ್ಲಿ ಬಂತು ?

**ವಿಷಯಾನರ್ಜಯನ್ನೇವ ತಾವದ್ದುಃಖಂ ಮಹದ್ವ್ರಜೇತ್ ।**
**ತದ್ರಕ್ಷಾಚಿಂತನೇ ಭೂಯೋ ಭವೇದತ್ಯಂತಮಾರ್ತಧೀಃ ॥ ೧೯೨ ॥**

ಮನುಷ್ಯನು ವಿಷಯಗಳನ್ನು ಸಂಪಾದಿಸುವುದರಲ್ಲಿಯೇ ಬಹಳ ದುಃಖವನ್ನನುಭವಿಸುತ್ತಾನೆ. ಪುನಃ ಆ ವಿಷಯಗಳನ್ನು ಕಾಪಾಡುವ ಯೋಚನೆಯಲ್ಲಿ ಅತ್ಯಂತ ಮನೋವ್ಯಥೆ(ಆರ್ತಧ್ಯಾನ)ಯುಳ್ಳವನಾಗುತ್ತಾನೆ.

**ತದ್ವಿಯೋಗೇ ಪುನರ್ದುಃಖಮಪಾರಂ ಪರಿವರ್ತತೇ ।**
**ಪೂರ್ವಾನುಭೂತವಿಷಯಾನ್ ಸ್ಮೃತ್ವಾ ಸ್ಮೃತ್ವಾವಸೀದತಃ ॥ ೧೯೩ ॥**

೧ ವಿಷಯಾಧೀನಂ. ೨ ಸ್ತ್ರ್ಯಾದಿಪರಿಗ್ರಹಃ. ೩ ಅಸ್ತಿತ್ವಮೇವ. ೪ ಅಂತಃಪುರೇಣ ಸಹಿತಃ. ೫ ಆಯಾಸಂ ಪ್ರಾಪ್ತಃ. ೬ ವಂಚಕಾಃ. ೭ ಅಸ್ಥಿರಾಃ. ೮ ಆರ್ತಧ್ಯಾನಿನಾಂ.

ಆ ಇಷ್ಟವಿಷಯಗಳ ವಿಯೋಗವಾದರೆ ಪೂರ್ವದಲ್ಲಿ ಅನುಭವಿಸಿದ ವಿಷಯಗಳನ್ನು ಬಾರಿಬಾರಿಗೂ ಸ್ಮರಿಸಿ ಖೇದಪಡುವ ಆ ಪ್ರಾಣಿಗೆ ಪುನಃ ಅಪಾರವಾದ ದುಃಖವುಂಟಾಗುವುದು.

**[೧]ಅನಾಶಿತಂಭವಾನೇತಾನ್ವಿಷಯಾನ್ವಿಗಪಾಯಿನಃ ।**
**ಯೇಷಾಮಾಸೇವನಂ ಜಂತೋರ್ನ ಸಂತಾಪೋಪಶಾಂತಯೇ ॥ ೧೯೪ ॥**

ಯಾವ ವಿಷಯಗಳ ಸೇವನೆಯಿಂದ ಪ್ರಾಣಿಗೆ ಸಂತಾಪವು ಉಪಶಾಂತಿಯಾಗುವುದಿಲ್ಲವೋ ಅಂತಹ ತೃಪ್ತಿಯನ್ನುಂಟುಮಾಡದ ಮತ್ತು ಅಪಾಯಕರವಾದ ಈ ವಿಷಯಗಳನ್ನು ಸುಡು.

**ವಹ್ನೇರಿವೇಂಧನೈಃ ಸಿಂಧೋಃ [೨]ಸ್ರೋತೋಭಿರಿವ [೩]ಸಾರಿತೈಃ ।**
**ನ ಜಾತು ವಿಷಯೈರ್ಜಂತೋರುಪಭುಕ್ತೈರ್ವಿತೃಷ್ಣತಾ ॥ ೧೯೫ ॥**

ಬೆಂಕಿಗೆ ಕಟ್ಟಿಗೆಗಳಿಂದಲೂ ಸಮುದ್ರಕ್ಕೆ ನದೀಪ್ರವಾಹಗಳಿಂದಲೂ ಹೇಗೆ ತೃಪ್ತಿಯಿಲ್ಲವೋ ಹಾಗೆಯೇ ಪ್ರಾಣಿಗೆ ಉಪಭೋಗಿಸಿದ ವಿಷಯಗಳಿಂದ ಎಂದೂ ತೃಪ್ತಿಯಿಲ್ಲ.

**ಕ್ಷಾರಮಂಬು ಯಥಾ ಪೀತ್ವಾ ತೃಷ್ಯತ್ಯತಿತರಾಂ ನರಃ ।**
**ತಥಾ ವಿಷಯಸಂಭೋಗೈಃ ಪರಂ [೪]ಸಂತರ್ಷಮೃಚ್ಛತಿ ॥ ೧೯೬ ॥**

ಉಪ್ಪುನೀರನ್ನು ಪಾನಮಾಡಿದ ಮನುಷ್ಯನಿಗೆ ಪುನಃ ಹೆಚ್ಚು ಬಾಯಾರಿಕೆಯಾಗುವಂತೆ ವಿಷಯೋಪಭೋಗಗಳಿಂದ ಹೆಚ್ಚು ಅಭಿಲಾಷೆಯುಂಟಾಗುವುದು.

**ಅಹೋ ವಿಷಯಿಣಾಂ ವ್ಯಾಪತ್ಪಂಚೇಂದ್ರಿಯವಶಾತ್ಮನಾಮ್ ।**
**ವಿಷಯಾಮಿಷ[೫]ಗೃಧ್ನೂನಾಮಚಿಂತ್ಯಂ ದುಃಖಮಾಪುಷಾಮ್ ॥ ೧೯೭ ॥**

ಪಂಚೇಂದ್ರಿಯಗಳಿಗೆ ಅಧೀನರೂ ವಿಷಯವೆಂಬ ಮಾಂಸದಲ್ಲಿ ಆಸೆಯುಳ್ಳವರೂ ಅಚಿಂತ್ಯವಾದ ದುಃಖವನ್ನು ಹೊಂದುವವರೂ ಆದ ವಿಷಯಾಸಕ್ತರ ಆಪತ್ತು ಅತ್ಯಂತ ಭಯಂಕರವಾಗಿದೆ. ವಿಷಯಾಸಕ್ತರಿಗೆ ಭಯಂಕರವಾದ ವಿಪತ್ತುಗಳು ಪ್ರಾಪ್ತವಾಗುತ್ತವೆಂದು ಭಾವವು.

**ವನೇ ವನಗಜಾಸ್ತುಂಗಾ ಯೂಥಪಾಃ ಪ್ರೋನ್ಮದಿಷ್ಣವಃ ।**
**[೬]ಅವಪಾತೇಷು ಸೀದಂತಿ ಕರಿಣೀಸ್ಪರ್ಶಮೋಹಿತಾಃ ॥ ೧೯೮ ॥**

ಅರಣ್ಯದಲ್ಲಿ ಆನೆಗಳ ಗುಂಪನ್ನು ಕಾಪಾಡುವುವೂ ಬಹಳವಾಗಿ ಮದಿಸಿರುವುವೂ ಆದ ದೊಡ್ಡ ವನಗಜಗಳು ಹೆಣ್ಣಾನೆಯ ಸ್ಪರ್ಶದಲ್ಲಿ ಮೋಹಪಟ್ಟು ಆನೆಗಳನ್ನು ಹಿಡಿಯುವುದಕ್ಕೆ ಮಾಡಿದ ಹೊಂಡಗಳಲ್ಲಿ ಬಿದ್ದು ದುಃಖಪಡುತ್ತವೆ.

**ಸರಸ್ಸರಸಿ ಸಂಫುಲ್ಲಕಹ್ಲಾರಸ್ವಾದುವಾರಿಣಿ ।**
**ಮತ್ಸ್ಯೋ [೭]ಬಡಿಶಮಾಂಸಾರ್ಥೀ [೮]ಜೀವನಾಶಂ ಪ್ರಣಶ್ಯತಿ ॥ ೧೯೯ ॥**

ವಿಕಸಿತವಾದ ಕಹ್ಲಾರಪುಷ್ಪ(ಎಳೆಗೆಂಪುಳ್ಳ ನೈದಿಲೆಪುಷ್ಪ)ಗಳಿಂದ ಮಧುರವಾದ ನೀರುಳ್ಳ ಸರೋವರದಲ್ಲಿ ಸಂಚರಿಸುತ್ತಿರುವ ಮೀನು ಗಾಳದಲ್ಲಿರುವ ಮಾಂಸಕ್ಕೆ ಅಪೇಕ್ಷೆಪಟ್ಟು ಜೀವಿಸುತ್ತಲೇ ನಾಶವನ್ನು ಹೊಂದುತ್ತದೆ. ಅಧಿಕವಾದ ದುಃಖವನ್ನನುಭವಿಸುತ್ತದೆಂದು ಭಾವವು.

**ಮಧುವ್ರತೋ ಮದಾಮೋದಮಾಜಿಘ್ರನ್ಮದದಂತಿನಾಮ್ ।**
**ಮೃತ್ಯುಮಾಹ್ವಯತೇ ಗುಂಜನ್ಕರ್ಣತಾಲಾಭಿತಾಡನೈಃ ॥ ೨೦೦ ॥**

೧ ಅತೃಪ್ತಿಜನಕಾನ್. ೨ ಪ್ರವಾಹೈಃ. ೩ ಸರಿತ್ಸಂಬಂಧಿಭಿಃ. ೪ ಅಭಿಲಾಷಂ. ೫ ಲುಬ್ಧಾನಾಂ. ೬ ಅವಪಾತಸ್ತು ಪಾತಾಯ ಗರ್ತಃ ಪುಷ್ಕರಿಣಾಂ ಕೃತಃ. ೭ ಮತ್ಸ್ಯಬಂಧನಂ. ೮ ಜೀವನ್ನೇವ ನಶ್ಯತೀತ್ಯರ್ಥಃ.

ಮದಿಸಿದ ಆನೆಗಳ ಕೆನ್ನೆಗಳಲ್ಲಿ ಸುರಿಯುವ ಮದಜಲದ ಪರಿಮಳವನ್ನು ಮೂಸುವ ಭ್ರಮರವು ಆ ಆನೆಗಳ ಕಿವಿಗಳ ಪೆಟ್ಟುಗಳಿಂದ ಝೇಂಕಾರಶಬ್ದವನ್ನು ಮಾಡುತ್ತಮೃತ್ಯುವನ್ನು ಕರೆಯುತ್ತದೆ. ಮರಣವನ್ನು ಹೊಂದುತ್ತದೆಂದರ್ಥವು.

**ಪತಂಗಃ ಪವನಾಲೋಲದೀಪಾರ್ಚಿಷಿ ಪತನ್ಮುಹುಃ ।**
**ಮೃತ್ಯುಮಿಚ್ಛತ್ಯನಿಚ್ಛೋಽಪಿ ಮಷೀಸಾದ್ಭೂತವಿಗ್ರಹಃ ॥ ೨೦೧ ॥**

ಗಾಳಿಯಿಂದ ಚಂಚಲವಾದ ದೀಪದ ಜ್ವಾಲೆಯಲ್ಲಿ ಬಾರಿಬಾರಿಗೂ ಬಿದ್ದು ಕಪ್ಪಾದ ಶರೀರವುಳ್ಳ ಪತಂಗವು ಇಚ್ಛೆಯಿಲ್ಲದಿದ್ದರೂ ಮೃತ್ಯುವನ್ನು ಇಚ್ಛಿಸುತ್ತದೆ.

**ಯಥೇಷ್ಟ[೧]ಮೇತಿಕಾಃ ಪುಷ್ಟಾ ಮೃದುಸ್ವಾದು[೨]ತೃಣಾಂಕುರೈಃ ।**
**ಗೀತಾ[೩]ಸಂಗಾನ್ಮೃತಿಂ ಯಾಂತಿ [೪]ಮೃಗಯೋರ್ಮೃಗಯೋಷಿತಃ ॥**

ತಮ್ಮ ಇಚ್ಛಾನುಸಾರವಾಗಿ ಸಂಚರಿಸುವುವುಗಳೂ ಮೃದುವೂ ರುಚಿಕರವೂ ಆದ ಗರಿಕೆಹುಲ್ಲುಗಳಿಂದ ಪುಷ್ಟಿಯನ್ನು ಹೊಂದಿದುವೂ ಆದ ಹೆಣ್ಣುಜಿಂಕೆಗಳು ಬೇಟೆಗಾರನ ಗಾನದಲ್ಲಿ ಆಸಕ್ತಗಳಾಗಿ ಮರಣವನ್ನು ಹೊಂದುತ್ತವೆ.

**ಇ[೫]ತ್ಯೇಕಶೋಽಪಿ ವಿಷಯೋ ಬಹ್ವಪಾಯೋ ನಿಷೇವಿತಃ ।**
**ಕಿಂ ಪುನರ್ವಿಷಯಾಃ ಪುಂಸಾಂ ಸಾಮಸ್ತ್ಯೇನ ನಿಷೇವಿತಾಃ ॥ ೨೦೩ ॥**

ಹೀಗೆ ಒಂದೊಂದು ಇಂದ್ರಿಯದ ಒಂದೊಂದು ವಿಷಯವನ್ನು ಸೇವಿಸಿ ಮೇಲೆಹೇಳಿದ ಪ್ರಾಣಿಗಳಿಗೆ ಬಹಳ ಅಪಾಯವುಂಟಾಗುವುದು ! ಹೀಗಿರುವಾಗ ಎಲ್ಲಾ ಇಂದ್ರಿಯವಿಷಯಗಳನ್ನು ಸೇವಿಸುವ ಮನುಷ್ಯರಿಗೆ ಹೇಳುವುದೇನು ? ಅತ್ಯಧಿಕವಾದ ಅಪಾಯ(ದುಃಖ)ವುಂಟಾಗುವುದೆಂದು ಭಾವವು.

**ಹೃತೋಽಯಂ ವಿಷಯೈರ್ಜಂತುಃ [೬]ಸ್ರೋತೋಭಿಃ ಸರಿತಾಮಿವ ।**
**[೭]ಶ್ವಭ್ರೇ ಪತಿತ್ವಾ ಗಂಭೀರೇ ದುಃಖಾವರ್ತೇಷು ಸೀದತಿ ॥ ೨೦೪ ॥**

ನದಿಗಳ ಪ್ರವಾಹಗಳೋಪಾದಿಯಲ್ಲಿರುವ ವಿಷಯಗಳಿಗೆ ಅಧೀನವಾದ (ಸಿಕ್ಕಿಕೊಂಡ) ಈ ಸಂಸಾರಿಪ್ರಾಣಿಯು ಆಳವಾದ ನರಕವೆಂಬ ಹೊಂಡದಲ್ಲಿ ಬಿದ್ದು ದುಃಖಗಳೆಂಬ ಸುಳಿಗಳಲ್ಲಿ ಕಷ್ಟಪಡುತ್ತದೆ.

**ವಿಷಯೈರ್ವಿಪ್ರಲಬ್ಧೋಽಯಮಧೀ[೮]ರತಿಧನಾಯತಿ ।**
**[೯]ಧನಾಯಾಯಾಸಿತೋ ಜಂತುಃ ಕ್ಲೇಶಾನಾಪ್ನೋತಿ ದುಃಸಹಾನ್ ॥**

ವಿಷಯಗಳಿಂದ ವಂಚಿಸಲ್ಪಟ್ಟ ಈ ಅಜ್ಞಾನಿಪ್ರಾಣಿಯು ಬಹಳವಾಗಿ ವಿಷಯಗಳನ್ನು ಇಚ್ಛಿಸುತ್ತದೆ. ದ್ರವ್ಯದ ಅಭಿಲಾಷೆಯಿಂದ ಆಯಾಸಪಟ್ಟ ಪ್ರಾಣಿಯು ಸಹಿಸುವುದಕ್ಕೆ ಕಠಿಣವಾದ ಕ್ಲೇಶಗಳನ್ನು ಹೊಂದುತ್ತದೆ.

**ಕ್ಲಿಷ್ಟೋಽಸೌ ಮುಹುರಾರ್ತಃ ಸ್ಯಾದಿಷ್ಟಾಲಾಭೇ ಶುಚಂ ಗತಃ ।**
**ತಸ್ಯ ಲಾಭೇಽಪ್ಯಸಂತುಷ್ಟೋ ದುಃಖಮೇವಾನುಧಾವತಿ ॥ ೨೦೬ ॥**

ಬಾರಿಬಾರಿಗೂ ಕ್ಲೇಶವನ್ನು ಹೊಂದಿದ ಈ ಪ್ರಾಣಿಯು ಇಷ್ಟವಸ್ತುವಿನ ಪ್ರಾಪ್ತಿಯಾಗದಿದ್ದರೆ ಶೋಕವನ್ನು ಹೊಂದಿ ಪೀಡಿತವಾಗುವುದು. ಇಷ್ಟವಸ್ತುವಿನ ಪ್ರಾಪ್ತಿಯಾದರೂ ಸಂತೋಷಪಡದೆ (ತೃಪ್ತವಾಗದೆ) ದುಃಖವನ್ನೇ ಹೊಂದುತ್ತದೆ.

**ತತ[೧೦]ಸ್ತದ್ರಾಗತದ್ದ್ವೇಷದೂಷಿತಾತ್ಮಾ ಜಡಾಶಯಃ ।**
**ಕರ್ಮ ಬಧ್ನಾತಿ ದುರ್ಮೋಚಂ ಯೇನಾಮುತ್ರಾ[೧೧]ವಸೀದತಿ ॥ ೨೦೭ ॥**

ಆದುದರಿಂದ ಇಷ್ಟವಸ್ತುಗಳ ಲಾಭಾಲಾಭಗಳಿಂದ ದುಃಖಿತನಾದ ಮೂರ್ಖನು ಬಿಡುಗಡೆಯನ್ನು ಹೊಂದಿಸುವುದಕ್ಕೆ ಕಠಿಣವಾದ ಕರ್ಮವನ್ನು ಬಂಧಮಾಡಿಕೊಳ್ಳುತ್ತಾನೆ. ಆ ಕರ್ಮದಿಂದ ಪರಲೋಕದಲ್ಲಿ ದುಃಖವನ್ನನುಭವಿಸುತ್ತಾನೆ.

೧ ಚರಂತ್ಯಃ. ೨ ತೃಣೋದಕೈರಿತ್ಯಪಿ ಪಾಠಃ. ೩ ಆಸಕ್ತೇಃ. ೪ ವ್ಯಾಧಸ್ಯ. ೫ ಏಕೈಕೋಪಿ. ೬ ಪ್ರವಾಹೈಃ. ೭ ನರಕೇ, ಗರ್ತೇ ಚ. ೮ ಅತಿಶಯೇನ ವಾಂಛತಿ. ೯ ಧನವಾಂಛಯಾ ಪ್ರಯಾಸೀಕೃತ ಇತ್ಯರ್ಥಃ. ೧೦ ಇಷ್ಟಲಾಭಾಲಾಭರಾಗದ್ವೇಷಃ. ೧೧ ದುಃಖೀಭವತಿ.

**ಕರ್ಮಣಾನೇನ ದೌಃಸ್ಥಿತ್ಯಂ ದುರ್ಗತಾವನುಸಂಶ್ರಿತಃ ।**
**ದುಃಖಾಸಿಕಾಮವಾಪ್ನೋತಿ ಮಹತೀಮತಿಗರ್ಹಿತಾಮ್ ॥ ೨೦೮ ॥**

ಈ ಕರ್ಮದಿಂದ ದುರ್ಗತಿಯಲ್ಲಿ ಅತ್ಯಂತದುರವಸ್ಥೆಯನ್ನು ಹೊಂದಿ ಬಹಳ ನಿಂದ್ಯವಾದ ದುಃಖಜೀವನವನ್ನು ಹೊಂದುತ್ತಾನೆ. ಬಹಳ ದುಃಖವನ್ನನುಭವಿಸುತ್ತಾನೆಂದು ಭಾವವು.

**ವಿಷಯಾನೀಹತೇ ದುಃಖೀ [೧]ತತ್ಪ್ರಾಪ್ತಾವತಿ[೨]ಗೃದ್ಧಿಮಾನ್ ।**
**[೩]ತತೋಽತಿ[೪]ದುರನುಷ್ಠಾನೈಃ ಕರ್ಮ ಬಧ್ನಾತ್ಯಶರ್ಮದಮ್ ॥ ೨೦೯ ॥**

ಹೀಗೆ ದುಃಖಿಯಾದವನು ಪುನಃ ವಿಷಯಗಳನ್ನು ಇಚ್ಛಿಸುತ್ತಾನೆ. ಆ ವಿಷಯಗಳು ಪ್ರಾಪ್ತವಾದ ಮೇಲೆ ಬಹಳ ಲೋಭವುಳ್ಳವನಾಗುತ್ತಾನೆ. ಆ ಲೋಭದಿಂದ ದುರಾಚಾರಗಳನ್ನು ಮಾಡುತ್ತಾನೆ. ಆ ದುರಾಚಾರಗಳಿಂದ ಅತ್ಯಂತ ದುಃಖದಾಯಕವಾದ ಕರ್ಮವನ್ನು ಬಂಧಮಾಡಿಕೊಳ್ಳುತ್ತಾನೆ.

**ಇತಿ ಭೂಯೋಽಪಿ ತೇನೈವ ಚಕ್ರಕೇಣ ಪರಿಭ್ರಮನ್ ।**
**ಸಂಸಾರಾಪಾರದುರ್ವಾರ್ಧೌ ಪತತ್ಯತ್ಯಂತದುಸ್ತರೇ ॥ ೨೧೦ ॥**

ಈ ಪ್ರಕಾರವಾಗಿ ಪುನಃ ಅದೇ ಚಕ್ರದಿಂದ (ಹಿಂದೆಹೇಳಿದ ರೀತಿಯಿಂದ) ಪರಿಭ್ರಮಿಸು(ತಿರುಗು)ವ ಪ್ರಾಣಿಯು ಅತ್ಯಂತ ದುಸ್ತರವೂ ಅಪಾರವೂ ಆದ ಸಂಸಾರಾವೆಂಬ ಸಮುದ್ರದಲ್ಲಿ ಬೀಳುತ್ತದೆ.

**ತಸ್ಮಾದ್ವಿಷಯಜಾಮೇನಾಂ ಮತ್ವಾನರ್ಥಪರಂಪರಾಮ್ ।**
**ವಿಷಯೇಷು ರತಿಸ್ತ್ಯಾಜ್ಯಾ ತೀವ್ರದುಃಖಾನುಬಂಧಿಷು ॥ ೨೧೧ ॥**

ಆದುದರಿಂದ ಭೋಗಪಭೋಗವಿಷಯಗಳಿಂದುಂಟಾದ ಈ ಅನರ್ಥಪರಂಪರೆಯನ್ನು ಪರ್ಯಾಲೋಚಿಸಿ ಅತ್ಯಂತ ದುಃಖವನ್ನುಂಟುಮಾಡುವ ವಿಷಯಗಳಲ್ಲಿ ಪ್ರೀತಿಯನ್ನು ಬಿಡಬೇಕು.

**ಕಾರೀಷಾಗ್ನೀಷ್ಟಕಾಪಾಕತಾರ್ಣಾಗ್ನಿಸದೃಶಾ ಮತಾಃ ।**
**ತ್ರಯೋಽಮೀ ವೇದಸಂತಾಪಾಸ್ತದ್ವಾಞ್ಜಂತುಃ ಕಥಂ ಸುಖೀ ॥ ೨೧೨ ॥**

ಸ್ತ್ರೀವೇದವು ಬೆರಣಿಯ ಬೆಂಕಿಯ ತಾಪಕ್ಕೆ ಸಮಾನವಾದ ತಾಪವನ್ನುಂಟುಮಾಡುವುದು. ನಪುಂಸಕವೇದವು ಇಟ್ಟಿಗೆಯ ಬೆಂಕಿಯ ತಾಪಕ್ಕೆ ಸದೃಶವಾದ ತಾಪವನ್ನುಂಟುಮಾಡುವುದು. ಪುರುಷವೇದವು ಹುಲ್ಲಿನ ಬೆಂಕಿಯ ತಾಪಕ್ಕೆ ಸಮಾನವಾದ ತಾಪವನ್ನುಂಟುಮಾಡುವುದು. ಇಂತಹ ವೇದವುಳ್ಳ ಪ್ರಾಣಿಯು ಹೇಗೆ ಸುಖಿಯಾಗುವುದು ?

**ತತೋಽಧಿಕಮಿದಂ ದಿವ್ಯಂ ಸುಖಮಪ್ರವಿಚಾರಕಮ್ ।**
**ದೇವಾನಾಮಹಮಿಂದ್ರಾಣಾಮಿತಿ ನಿಶ್ಚಿನು ಮಾ[೫]ಗಧ ॥ ೨೧೩ ॥**

ಆದುದರಿಂದ ಎಲೈ ಶ್ರೇಣಿಕನೇ ! ಕಾಮಸೇವನೆಯಿಲ್ಲದಿರುವ ಅಹಮಿಂದ್ರ ದೇವತೆಗಳ ಈ ದಿವ್ಯಸುಖವು ಅಧಿಕವಾದುದೆಂದು ನಿಶ್ಚಯವಾಗಿ ತಿಳಿ.

**ಸುಖ[೬]ಮೇತೇನ ಸಿದ್ಧಾನಾ[೭]ಮತ್ಯುಕ್ತಂ ವಿಷಯಾತಿಗಮ್ ।**
**ಅಪ್ರಮೇಯಮನಂತಂ ಚ ಯದಾತ್ಮೋತ್ಥ[೮]ಮನೀದೃಶಮ್ ॥ ೨೧೪ ॥**

ಈ ಅಹಮಿಂದ್ರರ ಸುಖವರ್ಣನೆಯಿಂದ ಇಂದ್ರಿಯವಿಷಯಗಳನ್ನು ಮೀರಿದುದೂ ಕಲ್ಪನಾತೀತವೂ ಅನಂತವೂ ಆತ್ಮಾನುಭವದಿಂದುಂಟಾಗುವುದೂ ಅನಿರ್ವಚನೀಯವೂ ಆದ ಸಿದ್ಧಪರಮೇಷ್ಠಿಗಳ ಸುಖವು ಅತಿಶಯವಾದುದೆಂದು ಹೇಳಲ್ಪಟ್ಟಿತು.

೧ ವಿಷಯಪ್ರಾಪ್ತೌ. ೨ ಲೋಭವಾನ್. ೩ ಲೋಭಾತ್. ೪ ದುರಾಚಾರೈಃ. ೫ ಶ್ರೇಣಿಕ. ೬ ಅಹಮಿಂದ್ರಸುಖಪ್ರತಿಪಾದನಪರೇಣ. ೭ ಅತಿಶಯೇನೋಕ್ತಂ. ೮ ಅನಿರ್ವಾಚ್ಯಂ.

**ಯದ್ದಿವ್ಯಂ ಯಚ್ಚ ಮಾನುಷ್ಯಂ ಸುಖಂ ತ್ರೈಕಾಲ್ಯಗೋಚರಮ್ ।**
**ತತ್ಸರ್ವಂ ಪಿಂಡಿತಂ [೧]ನಾರ್ಘಃ ಸಿದ್ಧಕ್ಷಣಸುಖಸ್ಯ ಚ ॥ ೨೧೫ ॥**

ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಉಂಟಾಗುವ ದೇವತೆಗಳ ಸುಖವನ್ನೂ ಮನುಷ್ಯರ ಸುಖವನ್ನೂ ರಾಶಿಮಾಡಿದರೆ ಸಿದ್ಧರ ಒಂದುಕ್ಷಣದ ಸುಖಕ್ಕೆ ಬೆಲೆಯಾಗುವುದಿಲ್ಲ. ಸಮಾನವಾಗುವುದಿಲ್ಲವೆಂದರ್ಥವು.

**ಸಿದ್ಧಾನಾಂ ಸುಖಮಾತ್ಮೋತ್ಥಮವ್ಯಾಬಾಧಮಕರ್ಮಜಮ್ ।**
**ಪರಮಾಹ್ಲಾದರೂಪಂ ತದನೌಪಮ್ಯಮನುತ್ತರಮ್ ॥ ೨೧೬ ॥**

ಸಿದ್ಧಪರಮೇಷ್ಠಿಗಳ ಸುಖವು ಆತ್ಮಾನುಭವದಿಂದುಂಟಾಗುವುದೂ ಬಾಧಾರಹಿತವೂ ಕರ್ಮಸಂಬಂಧವಿಲ್ಲದೆ ಉಂಟಾಗುವುದೂ ಆನಂದರೂಪವೂ ಉಪಮಾರಹಿತವೂ ಉತ್ಕೃಷ್ಟವೂ ಆಗಿದೆ.

**ಸರ್ವ[೨]ದ್ವಂದ್ವವಿನಿರ್ಮುಕ್ತಾಃ ಶೀತೀಭೂತಾ ನಿರುತ್ಸುಕಾಃ ।**
**ಸಿದ್ಧಾಶ್ಚೇತ್ಸುಖಿನಃ ಸಿದ್ಧಮಹಮಿಂದ್ರಾಸ್ಪದೇ ಸುಖಮ್ ॥ ೨೧೭ ॥**

ಸಮಸ್ತಪರಿಗ್ರಹರಹಿತರೂ ಶಾಂತತೆಯನ್ನು ಹೊಂದಿದವರೂ ಕುತೂಹಲರಹಿತರೂ ಆದ ಸಿದ್ಧಪರಮೇಷ್ಠಿಗಳು ಸುಖಿಗಳಾದರೆ ಸರ್ವಾರ್ಥಸಿದ್ಧಿಯಲ್ಲಿಯೂ ಸುಖವಿದೆಯೆಂದು ಸಿದ್ಧವಾಗುವುದು. ಸ್ತ್ರೀಮೊದಲಾದ ವಿಷಯಗಳಿಲ್ಲದಿದ್ದರೂ ಸಿದ್ಧರಿಗೆ ಸುಖವಿರುವಂತೆ ಅಹಮಿಂದ್ರರಿಗೂ ಸುಖವಿದೆಯೆಂದು ಭಾವವು.

**[೩]ನಿರತಿಶಯಮುದಾರಂ ನಿಷ್ಪ್ರವೀಚಾರಮಾವಿ- ।**
**ಷ್ಕೃತಸುಕೃತಫಲಾನಾಂ [೪]ಕಲ್ಪಲೋಕೋತ್ತರಾಣಾಮ್ ॥**
**ಸುಖಮಮರವರಾಣಾಂ ದಿವ್ಯ[೫]ಮವ್ಯಾಜರಮ್ಯಮ್ ।**
**ಶಿವಸುಖಮಿವ ತೇಷಾಂ ಸಮ್ಮುಖಾಯಾತಮಾಸೀತ್ ॥ ೨೧೮ ॥**

ಸುಕೃತದ ಫಲವನ್ನು ಪ್ರಕಟಪಡಿಸಿದವರೂ ಕಲ್ಪಾತೀತರೂ ದೇವತೆಗಳಲ್ಲಿ ಶ್ರೇಷ್ಠರೂ ಆದ ಆ ವಜ್ರನಾಭಿಮೊದಲಾದ ಅಹಮಿಂದ್ರದೇವತೆಗಳ ಅತಿಶಯವೂ ಉತ್ಕೃಷ್ಟವೂ ಕಾಮವಾಸನಾರಹಿತವೂ ಸ್ವಭಾವದಿಂದಲೇ ರಮಣೀಯವೂ ಆದ ದಿವ್ಯಸುಖವು ಮೋಕ್ಷಸುಖದಂತೆ ಅವರಿಗೆ ಸಮ್ಮುಖವಾಗಿ ಬಂದಿತು.

**ಸುಖಮಸುಖಮಿತೀದಂ ಸಂಸೃತೌ ದೇಹಭಾಜಾಮ್ ।**
**ದ್ವಿತಯಮುದಿತಮಾಪ್ತೈಃ ಕರ್ಮಬಂಧಾನುರೂಪಮ್ ॥**
**ಸುಕೃತದುರಿತಭೇದಾತ್ತಚ್ಚ ಕರ್ಮ ದ್ವಿಧೋಕ್ತಮ್ ।**
**ಮಧುರಕಟುಕ[೧]ಪಾಕಂ ಭುಕ್ತಮೇಕಂ ಯಥಾನ್ನಮ್ ॥ ೨೧೯ ॥**

ಸಂಸಾರದಲ್ಲಿ ಪ್ರಾಣಿಗಳಿಗೆ ಸುಖದುಃಖಗಳೆರಡು ತಮ್ಮ ಕರ್ಮಬಂಧಕ್ಕನುಸಾರವಾಗಿ ಉಂಟಾಗುತ್ತವೆಂದು ಆಪ್ತರು ಹೇಳಿರುತ್ತಾರೆ. ಊಟಮಾಡಿದ ಅನ್ನವು ಮಧುರವಾಗಿಯೂ ಕಹಿಯಾಗಿಯೂ ಪರಿಣಮಿಸುವಂತೆ ಆ ಕರ್ಮವು ಪುಣ್ಯಪಾಪವೆಂದು ಎರಡುಪ್ರಕಾರವಾಗಿ ಹೇಳಲ್ಪಟ್ಟಿದೆ.

**ಸುಕೃತಫಲಮುದಾರಂ ವಿದ್ಧಿ ಸರ್ವಾರ್ಥಸಿದ್ಧೌ ।**
**ದುರಿತಫಲಮುದಗ್ರಂ ಸಪ್ತಮೀನಾರಕಾಣಾಮ್ ॥**
**ಶಮದಮಯಮ[೨]ಯೋಗೈ[೩]ರಗ್ರಿಮಂ ಪುಣ್ಯಭಾಜಾ- ।**
**ಮಶಮಯಮದಮಾನಾಂ ಕರ್ಮಣಾ ದುಷ್ಕೃತೇನ ॥ ೨೨೦ ॥**

ಸರ್ವಾರ್ಥಸಿದ್ಧಿಯಲ್ಲಿ ಉತ್ಕೃಷ್ಟವಾದ ಪುಣ್ಯಕರ್ಮದ ಫಲವೂ ಏಳನೆಯ ನರಕದಲ್ಲಿರುವ ನಾರಕಿಗಳಿಗೆ ಉತ್ಕೃಷ್ಟವಾದ ಪಾಪಕರ್ಮದ ಫಲವೂ ಸಿಕ್ಕುವುವೆಂದು ತಿಳಿ. ಶಾಂತತೆ ಇಂದ್ರಿಯನಿಗ್ರಹ ಮರಣಪರ್ಯಂತ ಅತಿಚಾರರಹಿತವಾಗಿ ವ್ರತಪರಿಪಾಲನೆ ಧ್ಯಾನ ಇವುಗಳಿಂದ ಪುಣ್ಯಶಾಲಿಗಳಿಗೆ ಮೊದಲನೆಯ ಫಲ(ಸರ್ವಾರ್ಥಸಿದ್ಧಿಸುಖ)ವು ದೊರಕುತ್ತದೆ. ಕ್ರೋಧಿಗಳೂ ವ್ರತಪರಿಪಾಲನೆಮಾಡದಿರುವವರೂ ಇಂದ್ರಿಯನಿಗ್ರಹವನ್ನು ಮಾಡದಿರುವವರೂ ಆದ ಪ್ರಾಣಿಗಳಿಗೆ ಪಾಪಕರ್ಮದಿಂದ ಎರಡನೆಯ ಫಲ(ಏಳನೆಯ ನರಕದ ದುಃಖ)ವು ಪ್ರಾಪ್ತವಾಗುವುದು.

**[೪]ಕೃತಮತಿರಿತಿ [೫]ಧೀಮಾನ್ [೬]ಶಂಕರೀಂ [೭]ಶ್ರೀಜಿನಾಜ್ಞಾಂ ।**
**ಶಮದಮಯಮಶುದ್ಧ್ಯೈ ಭಾವಯೇದಸ್ತತಂದ್ರಃ ॥**
**ಸುಖಮತುಲಮಭೀಪ್ಸುರ್ದುಃಖಭಾರಂ [೮]ಜಿಹಾಸು- ।**
**ರ್ನಿಕಟತರಜಿನಶ್ರೀರ್ವಜ್ರನಾಭಿರ್ಯಥಾಯಮ್ ॥ ೨೨೧ ॥**

ದುಃಖಭಾರವನ್ನು ಬಿಡಬೇಕೆಂಬ ಇಚ್ಛೆಯುಳ್ಳವನೂ ಉಪಮಾರಹಿತವಾದ ಸುಖವನ್ನು ಹೊಂದಬೇಕೆಂಬ ಇಚ್ಛೆಯುಳ್ಳವನೂ ಸಂಪೂರ್ಣಬುದ್ಧಿಶಾಲಿಯೂ ಆದ ವಿದ್ವಾಂಸನು, ಜಿನಲಕ್ಷ್ಮಿಯು ಸಮೀಪವಾಗಿರುವ ಈ ವಜ್ರನಾಭಿಯಂತೆ, ಶಾಂತಿ ಇಂದ್ರಿಯನಿಗ್ರಹ ಯಮವ್ರತಪರಿಪಾಲನೆ ಇವುಗಳ ಶುದ್ಧಿಗೋಸ್ಕರ ಆಲಸ್ಯರಹಿತನಾಗಿ ಸುಖಕರವಾದ ಶ್ರೀಜಿನೇಶ್ವರನ ಆಜ್ಞೆಯನ್ನು ಭಾವಿಸಬೇಕು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವದ್ವಜ್ರನಾಭಿಸರ್ವಾರ್ಥ ಸಿದ್ಧಿಗಮನವರ್ಣನಂ ನಾಮೈಕಾದಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೋಳ್'' ಭಗವದ್ವಜ್ರನಾಭಿಸರ್ವಾರ್ಥಸಿದ್ಧಿಗಮನವರ್ಣನವೆಂಬ
ಹನ್ನೊಂದನೆಯ ಪರ್ವವು ಸಮಾಪ್ತವಾದುದು.

---

೧ ಮೂಲ್ಯಂ ನ. ೨ ಪರಿಗ್ರಹಃ. ೩ ನಿಶ್ಚಿತೋತಿಶಯೋ ಯಸ್ಯ ತತ್. ೪ ಕಲ್ಪಾತೀತಾನಾಂ. ೫ ಅನುಪಾಧಿಮನೋಜ್ಞಂ.

೧ ಪರಿಣಮನಂ. ೨ ಧ್ಯಾನೈಃ. ೩ ಪ್ರಥಮಂ. ೪ ಸಂಪೂರ್ಣಬುದ್ಧಿಃ, ಶಾಸ್ತ್ರಾಭ್ಯಾಸಜನಿತಬುದ್ಧಿರಿತ್ಯರ್ಥಃ. ೫ ವಿದ್ವಾನ್. ೬ ಸುಖದಾಂ. ೭ ತಾಮಿತ್ಯಪಿ ಪಾಠಃ. ೮ ಹಾತುಮಿಚ್ಛುಃ.

# ಅಥ ದ್ವಾದಶಂ ಪರ್ವ

**ಅಥ ತಸ್ಮಿ[೧]ನ್ಮಹಾಭಾಗೇ ಸ್ವರ್ಲೋಕಾದ್ಭುವ[೨]ಮೇಷ್ಯತಿ ।**
**ಯದ್ವೃತ್ತಕಂ ಜಗತ್ಯಸ್ಮಿಂಸ್ತದ್ವಕ್ಷ್ಯೇ ಶೃಣುತಾಧುನಾ ॥ ೧ ॥**

ತರುವಾಯ ಮಹಾಭಾಗ್ಯಶಾಲಿಯಾದ ಆ ಅಹಮಿಂದ್ರದೇವನು ಸ್ವರ್ಗದಿಂದ ಚ್ಯುತನಾಗಿ ಭೂಲೋಕಕ್ಕೆ ಅವತರಿಸುವ ಕಾಲದಲ್ಲಿ ಉಂಟಾಗುವ ಸಮಾಚಾರವನ್ನು ಹೇಳುವೆನು. ಈಗ ಕೇಳಿರಿ.

**[೩]ಅತ್ರಾಂತರೇ ಪುರಾಣಾರ್ಥಕೋವಿದಂ ವದತಾಂವರಮ್ ।**
**ಪಪ್ರಚ್ಛುರ್ಮುನಯೋ ನಮ್ರಾ ಗೌತಮಂ ಗಣನಾಯಕಮ್ ॥ ೨ ॥**

ಈ ಸಮಯದಲ್ಲಿ ಸಮವಸರಣಸಭೆಯಲ್ಲಿದ್ದ ಮುನಿಗಳು ನಮ್ರರಾಗಿ ಪುರಾಣಾರ್ಥವನ್ನು ತಿಳಿದವರೂ ವಕ್ತೃಗಳಲ್ಲಿ ಶ್ರೇಷ್ಠರೂ ಮುನಿಸಂಘಕ್ಕೆ ನಾಯಕರೂ ಆದ ಗೌತಮಗಣಧರರನ್ನು ಪ್ರಶ್ನೆಮಾಡಿದರು.

**ಭಗವನ್ಭಾರತೇ ವರ್ಷೇ ಭೋಗಭೂಮಿಸ್ಥಿತಿಚ್ಯುತೌ ।**
**ಕರ್ಮಭೂಮಿವ್ಯವಸ್ಥಾಯಾಂ ಪ್ರಸೃತಾಯಾಂ[೪]ಯಥಾಯಥಮ್ ॥ ೩ ॥**

**ತದಾ ಕುಲಧರೋತ್ಪತ್ತಿಸ್ತ್ವಯಾ ಪ್ರಾಗೇವ ವರ್ಣಿತಾ ।**
**ನಾಭಿರಾಜಶ್ಚ [೫]ತತ್ರಾಂತ್ಯೋ [೬]ವಿಶ್ವಕ್ಷತ್ರಗಣಾಗ್ರಣೀಃ ॥ ೪ ॥**

**ಸ ಏಷ ಧರ್ಮ[೭]ಸರ್ಗಸ್ಯ [೮]ಸೂತ್ರಧಾರಂ ಮಹಾಧಿಯಮ್ ।**
**ಇಕ್ಷ್ವಾಕುಜ್ಯೇಷ್ಠಮೃಷಭಂ ಕ್ವಾ[೯]ಶ್ರಮೇ ಸಮಜೀಜನತ್ ॥ ೫ ॥**

**ತಸ್ಯ ಸ್ವರ್ಗಾವತಾರಾದಿಕಲ್ಯಾಣರ್ದ್ಧಿಶ್ಚ ಕೀದೃಶೀ ।**
**ಇದಮೇತತ್ತ್ವಯಾ ಬೋದ್ಧುಮಿಚ್ಛಾಮ[೧೦]ಸ್ತ್ವದನುಗ್ರಹಾತ್ ॥ ೬ ॥**

"ಭಗವಂತನೇ ! ಈ ಭಾರತವರ್ಷದಲ್ಲಿ ಭೋಗಭೂಮಿಯ ಸ್ಥಿತಿಯು ನಷ್ಟವಾಗಿ ಕರ್ಮಭೂಮಿಯ ಸ್ಥಿತಿಯು ಪಸರಿಸುತ್ತಿರುವಾಗ ಕ್ರಮವಾಗಿ ಹದಿನಾಲ್ಕು ಮಂದಿ ಕುಲಧರರು ಹುಟ್ಟುತ್ತಾರೆಂದು ಮೊದಲೇ ನೀನು ವರ್ಣನೆಮಾಡಿರುತ್ತಿ. ಆ ಕುಲಧರರಲ್ಲಿ ಕೊನೆಯವನೂ ಸಮಸ್ತಕ್ಷತ್ರಿಯರ ಸಮೂಹಕ್ಕೆ ಶ್ರೇಷ್ಠನೂ ಆದ ಆ ನಾಭಿರಾಜನು ಧರ್ಮಸೃಷ್ಟಿಗೆ ಸೂತ್ರಧಾರ(ಪ್ರವರ್ತಕ)ನೂ ಮಹಾಬುದ್ಧಿಶಾಲಿಯೂ ಇಕ್ಷ್ವಾಕುವಂಶಕ್ಕೆ ಮೊದಲನೆಯವನೂ ಆದ ವೃಷಭ ಸ್ವಾಮಿಯನ್ನು ಯಾವ ಆಶ್ರಮ(ಸ್ಥಾನ)ದಲ್ಲಿ ಪಡೆದನು ? ಆ ಪ್ರಥಮ ತೀರ್ಥಂಕರರ ಸ್ವರ್ಗಾವತಾರ(ಗರ್ಭಾವತರಣ) ಮೊದಲಾದ ಕಲ್ಯಾಣಗಳ ಸಮಯದಲ್ಲಿ ಆದ ವೈಭವವು ಯಾವ ಪ್ರಕಾರವಾದುದು ?ಇದೆಲ್ಲ ಹೀಗೆಯೆಂದು ನಿನ್ನ ಅನುಗ್ರಹದಿಂದ ತಿಳಿಯಲಿಚ್ಛಿಸುತ್ತೇವೆ".

**[೧೧]ತತ್ಪ್ರಶ್ನಾವಸಿತಾವಿತ್ಥಂ ವ್ಯಾಜಹಾರ ಗಣಾಧಿಪಃ ।**
**ಸ[೧೨]ತಾನ್ವಿಕಲ್ಮಷಾನ್ಕುರ್ವನ್ ಶುಚಿಭಿರ್ದಶನಾಂಶುಭಿಃ ॥ ೭ ॥**

ಆ ಮುನಿಗಳ ಪ್ರಶ್ನೆಯು ಪೂರ್ತಿಯಾದ ಮೇಲೆ ಗೌತಮಗಣಧರರು ತಮ್ಮ ನಿರ್ಮಲವಾದ ಹಲ್ಲುಗಳ ಕಿರಣಗಳಿಂದ ಆ ಮುನಿಗಳನ್ನು ನಿಷ್ಕಲಂಕ(ಶುಭ)ರನ್ನಾಗಿ ಮಾಡಿ ಮುಂದೆಹೇಳುವ ಪ್ರಕಾರವಾಗಿ ಹೇಳಿದರು.

**ಇಹ ಜಂಬೂಮತಿ ದ್ವೀಪೇ ಭರತೇ ಖಚರಾಚಲಾತ್ ।**
**ದಕ್ಷಿಣೇ[೧೩]ಮಧ್ಯಮೇ ಖಂಡೇ [೧೪]ಕಾಲಸಂಧೌ ಪುರೋದಿತೇ ॥ ೮ ॥**

**ಪೂರ್ವೋಕ್ತಕುಲಕೃತ್ಸ್ವಂತ್ಯೋ ನಾಭಿರಾಜೋಗ್ರಿಮೋಪ್ಯಭೂತ್ ।**
**ವ್ಯಾವರ್ಣಿತಾಯುರುತ್ಸೇಧರೂಪಸೌಂದರ್ಯವಿಭ್ರಮಃ ॥ ೯ ॥**

"ಈ ಜಂಬೂದ್ವೀಪದ ಭರತಕ್ಷೇತ್ರದ ವಿಜಯಾರ್ಧಪರ್ವತದ ದಕ್ಷಿಣ ದಿಕ್ಕಿನಲ್ಲಿರುವ ಆರ್ಯಖಂಡದಲ್ಲಿ ಹಿಂದೆಹೇಳಿದ ತೃತೀಯಚತುರ್ಥಕಾಲಗಳ ಸಂಧಿಯಲ್ಲಿ ಮೊದಲು ಹೇಳಿದ ಹದಿನಾಲ್ಕುಮಂದಿ ಕುಲಧರರಲ್ಲಿ ಕೊನೆಯವನೂ ಆಕಾಲದಲ್ಲಿ ಮೊದಲನೆ(ಶ್ರೇಷ್ಠ)ಯವನೂ ಹಿಂದೆವರ್ಣಿಸಿದ ಆಯುಷ್ಯ ಉತ್ಸೇಧ ರೂಪ ಸೌಂದರ್ಯ ವಿಲಾಸ ಇವುಗಳುಳ್ಳವನೂ ಆದ ನಾಭಿರಾಜಮನುವು ಹುಟ್ಟಿದನು.

**ಸ ನಾಭಿರ್ಭಾವಿನಾಂ ರಾಜ್ಞಾಂ[೧]ಸನಾಭಿಃ ಸ್ವಗುಣಾಂಶುಭಿಃ ।**
**ಭಾಸ್ವಾನಿವ ಬಭೌ ಲೋಕೇ ಭಾಸ್ವನ್ಮೌಲಿರ್ಮಹಾ[೨]ದ್ಯುತಿಃ ॥ ೧೦ ॥**

ಪ್ರಕಾಶಮಾನವಾದ ಕಿರೀಟವುಳ್ಳವನೂ ಮಹಾತೇಜಸ್ವಿಯೂ ಮುಂದೆ ಹುಟ್ಟುವ ರಾಜರಿಗೆ ಬಂಧುವೂ ಆದ ಆ ನಾಭಿರಾಜನು ಲೋಕದಲ್ಲಿ ತನ್ನ ಗುಣಗಳೆಂಬ ಕಿರಣಗಳಿಂದ ಸೂರ್ಯನಂತೆ ಪ್ರಕಾಶಿಸಿದನು.

**ಶಶೀವ ಸ [೩]ಕಲಾಧಾರಸ್ತೇಜಸ್ವೀ ಭಾನುಮಾನಿವ ।**
**ಪ್ರಭುಃ ಶಕ್ರ ಇವಾಭೀಷ್ಟಫಲದಃ ಕಲ್ಪಶಾಖಿವತ್ ॥ ೧೧ ॥**

ಆ ನಾಭಿರಾಜನು ಚಂದ್ರನಂತೆ ಸಮಸ್ತಕಲೆ(ವಿದ್ಯೆ)ಗಳನ್ನು ಧರಿಸಿದವನೂ ಸೂರ್ಯನಂತೆ ತೇಜಸ್ವಿಯೂ ದೇವೇಂದ್ರನಂತೆ ಸಮರ್ಥನೂ ಕಲ್ಪವೃಕ್ಷದಂತೆ ಇಚ್ಛಿಸಿದ ಫಲವನ್ನು ಕೊಡುವವನೂ ಆಗಿದ್ದನು.

**ತಸ್ಯಾಸೀನ್ಮರುದೇವೀತಿ ದೇವೀ ದೇವೀವ ಸಾ ಶಚೀ ।**
**ರೂಪಲಾವಣ್ಯಕಾಂತಿಶ್ರೀಮತಿದ್ಯುತಿ[೪]ವಿಭೂತಿಭಿಃ ॥ ೧೨ ॥**

ಆ ನಾಭಿರಾಜನಿಗೆ ರೂಪ ಲಾವಣ್ಯ ಕಾಂತಿ ಸಂಪತ್ತು ಬುದ್ಧಿ ತೇಜಸ್ಸು ಐಶ್ವರ್ಯ ಇವುಗಳಿಂದ ಶಚೀದೇವಿಯಂತಿರುವ ಮರುದೇವಿಯೆಂಬವಳು ಪತ್ನಿಯಾಗಿದ್ದಳು.

**ಸಾ ಕಲೇ[೫]ವೈಂದವೀ ಕಾಂತ್ಯಾ ಜನತಾನಂದದಾಯಿನೀ ।**
**ಸ್ವರ್ಗಸ್ತ್ರೀರೂಪಸರ್ವಸ್ವ[೬]ಮುಚ್ಚಿತ್ಯೇವ ವಿನಿರ್ಮಿತಾ ॥ ೧೩ ॥**

ಚಂದ್ರನ ಕಲೆಯಂತೆ ತನ್ನ ಶರೀರಕಾಂತಿಯಿಂದ ಜನರಿಗೆ ಆನಂದವನ್ನುಂಟುಮಾಡುವ ಆ ಮರುದೇವಿಯು ಸ್ವರ್ಗಸ್ತ್ರೀಯರ ರೂಪದ ಸಾರವನ್ನು ರಾಶಿಮಾಡಿ ನಿರ್ಮಿಸಲ್ಪಟ್ಟವಳಂತಿದ್ದಳು.

**ತನ್ವಂಗೀ ಪಕ್ವಬಿಂಬೋಷ್ಠೀ ಸುಭ್ರೂಶ್ಚಾರುಪಯೋಧರಾ ।**
**ಮನೋಭುವಾ ಜಗಜ್ಜೇತುಂ ಸಾ ಪತಾಕೇವ ದರ್ಶಿತಾ ॥ ೧೪ ॥**

ಕೃಶಾಂಗಿಯೂ ಪಕ್ವವಾದ ತೊಂಡೆಹಣ್ಣಿನಂತೆ ತುಟಿಯುಳ್ಳವಳೂ ಸುಂದರವಾದ ಹುಬ್ಬುಗಳುಳ್ಳವಳೂ ಮನೋಹರವಾದ ಸ್ತನಗಳುಳ್ಳವಳೂ ಆದ ಆ ಮರುದೇವಿಯು ಲೋಕವನ್ನು ಜಯಿಸುವುದಕ್ಕೋಸ್ಕರ ಮನ್ಮಥನಿಂದ ತೋರಿಸಲ್ಪಟ್ಟ ಪತಾಕೆಯಂತಿದ್ದಳು.

**ತದ್ರೂಪಸೌಷ್ಠವಂ ತಸ್ಯಾ [೭]ಹಾವಂ ಭಾವಂ ಚ ವಿಭ್ರಮಮ್ ।**
**ಭಾವಯಿತ್ವಾ [೮]ಕೃತೀ ಕೋಽಪಿ ನಾಟ್ಯಶಾಸ್ತ್ರಂ ವ್ಯಧಾದ್ಧ್ರುವಮ್ ॥೧೫ ॥**

೧ ಮಹಾಭಾಗ್ಯವತಿ. ೨ ಆಗಮಿಷ್ಯತಿ ಸತಿ. ೩ ಅವಸರೇ. ೪ ಸತ್ಯಾಂ. ೫ ಕುಲಧರೇಷು. ೬ ಸಕಲಕ್ಷತ್ರಿಯಸಮೂಹಸ್ಯ. ೭ ಸೃಷ್ಟೇಃ. ೮ ಪ್ರವರ್ತಕಂ. ೯ ಸ್ಥಾನೇ. ೧೦ ತವ ಕಾರುಣ್ಯಾತ್. ೧೧ ತನ್ಮುನೀನಾಂ ಪ್ರಶ್ನಾವಸಾನೇ. ೧೨ ಮುನೀನ್. ೧೩ ಆರ್ಯಖಂಡೇ. ೧೪ ತೃತೀಯ ಚತುರ್ಥಕಾಲಯೋಃ ಸಂಧಿರ್ಯಸ್ಯ.

೧ ಬಂಧುಃ. ೨ ತೇಜಃ. ೩ ಕಲಾ ಧರತೀತಿ ಕಲಾಧಾರಃ. ೪ ಅಣಿಮಾದಿಭಿಃ. ೫ ಇಂದೋರಿಯಂ. ೬ ಏಕತ್ರ ರಾಶೀಕೃತ್ಯ. ೭ ಹಾವೋ ಮುಖವಿಕಾರಃ ಸ್ಯಾದ್ಭಾವಃ ಸ್ಯಾಚ್ಚಿತ್ತಸಂಭವಃ । ವಿಲಾಸೋ ನೇತ್ರಜೋ ಜ್ಞೇಯೋ ವಿಭ್ರಮೋ ಭ್ರೂಯುಗಾಂತಯೋಃ. ೮ ಕುಶಲಃ.

ಆ ಮರುದೇವಿಯ ರೂಪಸೌಂದರ್ಯವನ್ನೂ ಮುಖವಿಕಾರವನ್ನೂ ಮನಸ್ಸಿನ ಪರಿಣಾಮವನ್ನೂ ಹುಬ್ಬುಗಳ ವ್ಯಾಪಾರವನ್ನೂ ಮನಸ್ಸಿನಲ್ಲಿ ಭಾವಿಸಿ ಯಾವನೋ ಚತುರನಾದ ಕವಿಯು ನಾಟ್ಯಶಾಸ್ತ್ರವನ್ನು ಮಾಡಿದನು. ಇದು ನಿಜ (ಉತ್ಪ್ರೇಕ್ಷಾ).

**ನೂನಂ ತಸ್ಯಾಃ ಕಲಾಲಾಪೇ[೧]ಭಾವಯನ್ [೨]ಸ್ವರಮಂಡಲಮ್ ।**
**[೩]ಪ್ರಣೀತಗೀತಶಾಸ್ತ್ರಾರ್ಥೋ ಜನೋ ಜಗತಿ ಸಮ್ಮತಃ ॥ ೧೬ ॥**

ನಿಜವಾಗಿಯೂ ಆ ಮರುದೇವಿಯ ಮಧುರವಾದ ಸಂಭಾಷಣೆಯಲ್ಲಿ ಉಂಟಾದ ಸ್ವರಗಳ ಸಮೂಹವನ್ನು ಭಾವಿಸಿ ಲೋಕದಲ್ಲಿ ಜನ(ಕವಿ)ವು ಸಂಗೀತಶಾಸ್ತ್ರದ ಅರ್ಥವನ್ನು ಹೇಳಿತು (ಉತ್ಪ್ರೇಕ್ಷಾ).

**ರೂಪಸರ್ವಸ್ವಹರಣಂ ಕೃತ್ವಾನ್ಯಸ್ತ್ರಿಜನಸ್ಯ ಸಾ ।**
**[೪]ವೈರೂಪ್ಯಂ ಕುರ್ವತೀ ವ್ಯಕ್ತಂ [೫]ಕಿಂರಾಜ್ಞಾಂ ವೃತ್ತಿ[೬]ಮನ್ವಯಾತ್ ॥**

ಆ ಮರುದೇವಿಯು ಬೇರೆ ಸ್ತ್ರೀಯರ ರೂಪಸೌಂದರ್ಯವೆಂಬ ದ್ರವ್ಯವನ್ನೆಲ್ಲ ಅಪಹರಿಸಿ ವಿರೂಪವನ್ನು ಮಾಡಿ (ರೂಪರಹಿತರನ್ನಾಗಿ ಮಾಡಿ) ಅನ್ಯಾಯವಾಗಿ ಬೇರೆಯವರ ದ್ರವ್ಯವನ್ನು ಅಪಹರಿಸುವ ದುಷ್ಟರಾಜರ ವ್ಯಾಪಾರವನ್ನು ಅನುಕರಣಮಾಡಿದಳು. ಇದು ನಿಶ್ಚಯ.

**ಸಾ ದಧೇಧಿಪದದ್ವಂದ್ವಂ ಲಕ್ಷಣಾನಿ ವಿಚಕ್ಷಣಾಃ ।**
**[೭]ಪ್ರಣಿನ್ಯು[೮]ರ್ಲಕ್ಷಣಂ ಸ್ತ್ರೀಣಾಂ ಯೈರುದಾಹರಣೀಕೃತೈಃ ॥ ೧೮ ॥**

ವಿದ್ವಾಂಸರು ಯಾವ ಲಕ್ಷಣಗಳನ್ನು ಉದಾಹರಣೆಗಾಗಿ ತೆಗೆದುಕೊಂಡು ಸ್ತ್ರೀಯರ ಸಾಮುದ್ರಿಕಾಲಕ್ಷಣವನ್ನು ಹೇಳಿದರೋ ಅಂತಹ ಲಕ್ಷಣಗಳನ್ನು ಮರುದೇವಿಯು ತನ್ನ ಎರಡುಪಾದಗಳಲ್ಲಿ ಧರಿಸಿದ್ದಳು.

**ಮೃದ್ವಂಗುಲಿದಲೇ ತಸ್ಯಾಃ ಪಾದಾಬ್ಜೇ [೯]ಶ್ರಿಯ[೧೦]ಮೂಹತುಃ ।**
**ನಖದೀಧಿತಿಸಂತಾನಲಸತ್ಕೇಸರಶೋಭಿನೀ ॥ ೧೯ ॥**

ಮೃದುವಾದ ಬೆರಳುಗಳೆಂಬ ಎಲೆಗಳುಳ್ಳವೂ ಉಗುರುಗಳ ಕಾಂತಿಗಳೆಂಬ ಪ್ರಕಾಶಮಾನವಾದ ಕುಸುಮಗಳಿಂದ ಶೋಭಿಸುವುವೂ ಆದ ಆ ಮರುದೇವಿಯ ಪಾದಗಳೆಂಬ ಕಮಲಗಳು ಶೋಭೆಯನ್ನು ಧರಿಸಿದುವು.

**ಜಿತ್ವಾ ರಕ್ತಾಬ್ಜಮೇತಸ್ಯಾಃ ಕ್ರಮೌ [೧೧]ಸಂಪ್ರಾಪ್ತನಿರ್ವೃತೀ ।**
**ನಖಾಂಶುಮಂಜರೀವ್ಯಾಜಾತ್ ಸ್ಮಿತಮಾತೇನತುರ್ಧ್ರುವಮ್ ॥ ೨೦ ॥**

ಈ ಮರುದೇವಿಯ ಪಾದಗಳೆರಡು ರಕ್ತಕಮಲಗಳನ್ನು ಜಯಿಸಿ ಸುಖವನ್ನು ಹೊಂದಿದುವುಗಳಾಗಿ ಉಗುರುಗಳ ಕಿರಣಗಳೆಂಬ ಗೊಂಚಲಿನ ನೆಪದಿಂದ ನಿಶ್ಚಯವಾಗಿ ಮಂದಹಾಸವನ್ನು ಮಾಡಿದುವು.

**ನಖೈಃ ಕುರವಕಚ್ಛಾಯಾಂ ಕ್ರಮೌ ಜಿತ್ವಾ[೧೨]ಪ್ಯನಿರ್ವೃತೌ ।**
**ವಿಜಿಗ್ಯಾತೇ [೧೩]ಗತೇನಾಸ್ಯಾ ಹಂಸೀನಾಂ ಗತಿವಿಭ್ರಮಮ್ ॥ ೨೧ ॥**

ಆ ಮರುದೇವಿಯ ಪಾದಗಳೆರಡು ತಮ್ಮ ಉಗುರುಗಳಿಂದ ಗೋರಟೆಹೂವಿನ ಶೋಭೆಯನ್ನು ಜಯಿಸಿದರೂ ತೃಪ್ತಿಯನ್ನು ಹೊಂದದೆ ಈಕೆಯ ಗಮನದಿಂದ ಸ್ತ್ರೀಹಂಸಪಕ್ಷಿಗಳ ಗಮನ ಲೀಲೆಯನ್ನೂ ಜಯಿಸಿದುವು.

**ಮಣಿನೂಪುರಝುಂಕಾರಮುಖರೌ ಸುಭ್ರುವಃ ಕ್ರಮೌ ।**
**[೧೪]ಪದ್ಮಾವಿವ ರಣದ್ಭೃಂಗಸಂಗತೌ ರುಚಿಮಾಪತುಃ ॥ ೨೨ ॥**

ಆ ಸುಂದರಿಯಾದ ಮರುದೇವಿಯ ರತ್ನಖಚಿತವಾದ ಪಾದಕಡಗಗಳ ಝೇಂಕಾರದಿಂದ ಶಬ್ದಾಯಮಾನವಾದ ಪಾದಗಳೆರಡು ಶಬ್ದಮಾಡುತ್ತಿರುವ ಭ್ರಮರಗಳಿಂದ ವ್ಯಾಪ್ತವಾದ ಕಮಲಗಳಂತೆ, ಶೋಭಿಸುತ್ತಿದ್ದುವು.

೧ ಸಂಸ್ಕಾರಂ ಕುರ್ವನ್. ೨ ಸ್ವರಸಮೂಹಂ. ೩ ಪ್ರೋಕ್ತಃ. ೪ ವಿರೂಪತ್ವಂ ವಿರುದ್ಧಂ ಚ. ೫ ಕುತ್ಸಿತನೃಪಾಣಾಂ. ೬ ಅನುಕರೋತಿ ಸ್ಮ. ೭ ಊಚುಃ. ೮ ಸಾಮುದ್ರಿಕಾಲಕ್ಷಣಂ. ೯ ಲಕ್ಷ್ಮೀಂ ಶೋಭಾಂ ಚ. ೧೦ ಬಿಭ್ರತುಃ. ೧೧ ಸಂಪ್ರಾಪ್ತಸುಖೌ. ೧೨ ಅಸುಖೌ. ೧೩ ಗಮನೇನ. ೧೪ ವಾಪುಂಸಿರ ಪದ್ಮಮಿತ್ಯಮರಃ.

**ನಿಗೂಢಗುಲ್ಫಸಂಧಿತ್ವಾದ್ಯುಕ್ತಪಾರ್ಷ್ಣಿಪರಿಗ್ರಹಾತ್ ।**
**ಶ್ರಿತೌ [೧]ಯಾನಾಸನಾಭ್ಯಾಂ ಚ ತತ್ಕ್ರಮೌ ವಿಜಿಗೀಷುತಾಮ್ ॥ ೨೩ ॥**

ಗೂಢವಾದ ಗೆಣ್ಣುಗಳ ಸಂಧಿಗಳಿರುವುದರಿಂದಲೂ ಸೇರಿಕೊಂಡಿರುವ ಹಿಂಭಾಗವಿರುವುದರಿಂದಲೂ ಗಮನಸ್ಥಿತಿಗಳಿಂದಲೂ ಆ ಮರುದೇವಿಯ ಪಾದಗಳೆರಡು ಬೇರೆ ಪಾದಗಳನ್ನು ಜಯಿಸಬೇಕೆಂಬ ಇಚ್ಛೆಯುಳ್ಳವಾಗಿದ್ದುವು. (ಲೋಕದಲ್ಲಿ ರಾಜರು ಗುಪ್ತವಾದ ಸಂಧಿಯಿಂದಲೂ ಯುಕ್ತರಾದ ಹಿಂಬಾಲಕರಿಂದಲೂ ಗಮನದಿಂದಲೂ ಸ್ಥಿತಿಯಿಂದಲೂ ಶತ್ರುಗಳನ್ನು ಜಯಿಸಲಿಚ್ಛಿಸುತ್ತಾರೆ. ಅದರಂತೆ ಈ ಪಾದಗಳಿದ್ದುವೆಂದು ಭಾವವು).

**ಶೋಭಾ ಜಂಘಾದ್ವಯೇ ಯಾಸ್ಯಾಃ ಕ್ವಾಪ್ಯನ್ಯತ್ರ ನ ಸಾಸ್ತ್ಯತಃ ।**
**ಅನ್ಯೋನ್ಯೋಪಮಯೈವಾ[೨]ಪ್ತವರ್ಣನಂ ತನ್ನ ವರ್ಣ್ಯತೇ ॥ ೨೪ ॥**

ಈ ಮರುದೇವಿಯ ಎರಡು ಕಣಕಾಲುಗಳಲ್ಲಿರುವ ಶೋಭೆಯು ಬೇರೆ ಎಲ್ಲಿಯೂ ಇಲ್ಲದಿರುವುದರಿಂದ ಪರಸ್ಪರ ಉಪಮೆಯಿಂದಲೇ ವರ್ಣನೆಯನ್ನು ಹೊಂದಿವೆ. ಆದುದರಿಂದ ಬೇರೆ ವರ್ಣನೆಯನ್ನು ಮಾಡುವುದಿಲ್ಲ.

**ಜಾನುದ್ವಯಂ ಸಮಾಶ್ಲಿಷ್ಟಂ ಯದಸ್ಯಾಃ ಕಾಮನೀಯಕಮ್ ।**
**ತದೇವಾಲಂ ಜಗಜ್ಜೇತುಂ ಕಿಂ ತರಾಂ ಚಿಂತಯಾನ್ಯಯಾ ॥ ೨೫ ॥**

ಚೆನ್ನಾಗಿ ಸೇರಿಕೊಂಡು ಮನೋಹರವಾಗಿರುವ ಈ ಮರುದೇವಿಯ ಮೊಣಕಾಲುಗಳೇ ಲೋಕವನ್ನು ಜಯಿಸುವುದಕ್ಕೆ ಸಾಕಾಗಿವೆ. ಅಧಿಕವಾದ ಬೇರೆ ಚಿಂತೆಯಿಂದ ಏನುಫಲವು ?

**ಊರುದ್ವಯಮುದಾರಶ್ರಿ ಚಾರು ಹಾರಿ ಸುಖಾವಹಮ್ ।**
**ಸ್ಪರ್ಧಯೇವ ಸುರಸ್ತ್ರೀಭಿರತಿರಮ್ಯಂ ಬಭಾರ ಸಾ ॥ ೨೬ ॥**

ದೇವಸ್ತ್ರೀಯರೊಡನೆ ಸ್ಪರ್ಧೆಯಿಂದಲೋ ಎಂಬಂತೆ ಆ ಮರುದೇವಿಯು ಬಹಳ ಶೋಭೆಯುಳ್ಳದೂ ಸುಲಕ್ಷಣವೂ ಮನೋಹರವೂ ಸುಖವನ್ನುಂಟು ಮಾಡುವುದೂ ಅತ್ಯಂತರಮಣೀಯವೂ ಆದ ಎರಡು ತೊಡೆಗಳನ್ನು ಧರಿಸಿದ್ದಳು.

**[೩]ವಾಮೋರುರಿತಿ ಯಾ ರೂಢಿಸ್ತಾಂ ಸ್ವಸಾತ್ಕರ್ತು[೪]ಮನ್ವರ್ಥಾ ।**
**[೫]ವಾಮವೃತ್ತೀ ಕೃತಾವೂರೂ ಮನ್ಯೇನ್ಯಸ್ತ್ರೀಜಯೇಮುಯಾ ॥ ೨೭ ॥**

ವಾಮೋರು (ಮನೋಹರವಾದ ತೊಡೆಗಳುಳ್ಳವಳು) ಎಂಬ ರೂಢಿಯನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವುದಕ್ಕೋಸ್ಕರ ಈ ಮರುದೇವಿಯು ಇತರ ಸ್ತ್ರೀಯರ ಜಯದಲ್ಲಿ ತನ್ನ ತೊಡೆಗಳನ್ನು ಮನೋಹರಗಳನ್ನಾಗಿ ಮಾಡಿದಳೆಂದು ತಿಳಿಯುತ್ತೇನೆ.

**[೬]ಕಲತ್ರಸ್ಥಾನಮೇತಸ್ಯಾಃ ಸ್ಥಾನೀಕೃತ್ಯ ಮನೋಭುವಾ ।**
**ವಿನಿರ್ಜಿತಂ ಜಗ[೭]ನ್ನೂನಮನೂನಪರಿಮಂಡಲಮ್ ॥ ೨೮ ॥**

ಈ ಮರುದೇವಿಯ ನಿತಂಬಪ್ರದೇಶವನ್ನು ತನ್ನ ವಾಸಸ್ಥಾನವನ್ನಾಗಿ ಮಾಡಿಕೊಂಡು ಮನ್ಮಥನು ಸಂಪೂರ್ಣವಾದ ಭೂಮಂಡಲವನ್ನು ಜಯಿಸಿದನು. ಇದು ನಿಶ್ಚಯ.

**ಕಟೀಮಂಡಲಮೇತಸ್ಯಾಃ ಕಾಂಚೀಸಾಲ[೮]ಪರಿಷ್ಕೃತಮ್ ।**
**ಮನ್ಯೇ ದುರ್ಗಮನಂಗಸ್ಯ ಜಗ[೯]ಡ್ಡಮರಕಾರಿಣಃ ॥ ೨೯ ॥**

೧. ಗಮನಸ್ಥಿತಿಭ್ಯಾಂ. ೨ ಪ್ರಾಪ್ತಕೀರ್ತನಂ. ೩ ವಾಮೋ ವಕ್ರೋ ಮನೋಹರೇ. ೪ ಪ್ರಕಾರಾಂತರೇಣ, ಸಾರ್ಥಕತ್ವೇನೇತ್ಯರ್ಥಃ. ೫ ಮನೋಹರವೃತ್ತೀ. ೬ ಕಲತ್ರಂ ಶ್ರೋಣಿ ಭಾರ್ಯಯೋಃ. ೭ ನಿಶ್ಚಯೇನ. ೮ ಅಲಂಕೃತಂ. ೯ ವಿಪ್ಲವಕಾರಿಣಃ.

ಡಾಬು ಎಂಬ ಕೋಟೆಯಿಂದ ಅಲಂಕೃತವಾದ ಈ ಮರುದೇವಿಯ ಕಟಿಪ್ರದೇಶವು ಜಗತ್ತಿಗೆ ತೊಂದರೆಯನ್ನು ಮಾಡುವ ಮನ್ಮಥನ ದುರ್ಗವೆಂದು ತಿಳಿಯುತ್ತೇನೆ.

**ಲಸದಂಶುಕಸಂಸಕ್ತಂ ಕಾಂಚೀವೇಷ್ಟಂ ಬಭಾರ ಸಾ ।**
**ಫಣಿನಂ [೧]ಸ್ರಸ್ತನಿರ್ಮೋಕಮಿವ ಚಂದನ [೨]ವಲ್ಲರೀ ॥ ೩೦ ॥**

ಚಂದನಶಾಖೆಯು ಪೊರೆಯನ್ನು ಕಳಚಿರುವ ಸರ್ಪವನ್ನು ಧರಿಸಿರುವಂತೆ ಆ ಮರುದೇವಿಯು ಪ್ರಕಾಶಮಾನವಾದ ವಸ್ತ್ರದಲ್ಲಿ ಸಂಬಂಧಿಸಿರುವ ಡಾಬನ್ನು ಧರಿಸಿದ್ದಳು.

**ರೋಮರಾಜೀ ವಿನೀಲಾಸ್ಯಾ ರೇಜೇ ಮಧ್ಯೇತನೂದರಮ್ ।**
**ಹರಿನೀಲಮಯೀವಾವಷ್ಟಂಭಯಷ್ಟಿರ್ಮನೋಭುವಃ ॥ ೩೧ ॥**

ಈ ಮರುದೇವಿಯ ಕೃಶವಾದ ಹೊಟ್ಟೆಯ ಮಧ್ಯದಲ್ಲಿ ಕಪ್ಪಾದ ರೋಮಗಳ ಪಂಕ್ತಿಯು, ಮನ್ಮಥನಿಗೆ ಆಶ್ರಯವೂ ಇಂದ್ರನೀಲ ರತ್ನಮಯವೂ ಆದ ಕೋಲಿನಂತೆ, ಶೋಭಿಸುತ್ತಿದ್ದಿತು.

**ತನುಮಧ್ಯಂ ಬಭಾರಾಸೌ [೩]ವಲಿಭಂ [೪]ನಿಮ್ನನಾಭಿಕಮ್ ।**
**ಶರನ್ನದೀವ ಸಾವರ್ತಂ [೫]ಸ್ರೋತಃ [೬]ಪ್ರತನುವೀಚಿಕಮ್ ॥ ೩೨ ॥**

ಶರತ್ಕಾಲದ ನದಿಯು ಸ್ವಲ್ಪತೆರೆಮಾಲೆಗಳುಳ್ಳದೂ ಸುಳಿಗಳುಳ್ಳದೂ ಆದ ಪ್ರವಾಹವನ್ನು ಧರಿಸಿರುವಂತೆ, ಈ ಮರುದೇವಿಯು ತ್ರಿವಲಿಗಳಿಂದ ಶೋಭಿಸುವುದೂ ಆಳವಾದ ನಾಭಿಯುಳ್ಳದೂ ಆದ ಶರೀರದ ಮಧ್ಯಭಾಗವನ್ನು ಧರಿಸಿದ್ದಳು.

**ಸ್ತನಾವಸ್ಯಾಃ ಸಮುತ್ತುಂಗೌ ರೇಜತುಃ [೭]ಪರಿಣಾಹಿನೌ ।**
**ಯೌವನಶ್ರೀವಿಲಾಸಾಯ ಕ್ಲೃಪ್ತೌ ಕ್ರೀಡಾಚಲಾವಿವ ॥ ೩೩ ॥**

ವಿಶಾಲವೂ ಉನ್ನತವೂ ಆದ ಈ ಮರುದೇವಿಯ ಕುಚಗಳು ಯೌವನಲಕ್ಷ್ಮಿಯ ವಿಕ್ರೀಡೆಗೋಸ್ಕರ ಮಾಡಿದ ಕ್ರೀಡಾಪರ್ವತಗಳೋಪಾದಿಯಲ್ಲಿ ಶೋಭಿಸಿದುವು.

**ವೃತಾಂಶುಕಮಸೌ ದಧ್ರೇ [೮]ಕುಂಕುಮಾಂಕಂ ಕುಚದ್ವಯಮ್ ।**
**ವೀಚೀರುದ್ಧಮಿವಾ[೯]ನೋಂಗಮಿಥುನಂ ಸುರನಿಮ್ನಗಾ ॥ ೩೪ ॥**

ದೇವಗಂಗೆಯು ತೆರೆಮಾಲೆಗಳಲ್ಲಿ ಸಿಕ್ಕಿಕೊಂಡ ಎರಡು ಚಕ್ರವಾಕಪಕ್ಷಿಗಳನ್ನು ಧರಿಸಿರುವಂತೆ ಈ ಮರುದೇವಿಯು ವಸ್ತ್ರವನ್ನು ಧರಿಸಿರುವುದೂ ಕುಂಕುಮದಿಂದ ಲೇಪಿಸಲ್ಪಟ್ಟಿರುವುದೂ ಆದ ಕುಚಗಳನ್ನು ಧರಿಸಿದ್ದಳು.

**ಸ್ತನಾ[೧೦]ವಲಗ್ನಸಂಲಗ್ನಹಾರರೋಚಿರಸೌ ಬಭೌ ।**
**ಸರೋಜಕುಡ್ಮಲಾಭ್ಯರ್ಣಸ್ಥಿತಫೇನಾ ಯಥಾಬ್ಜಿನೀ ॥ ೩೫ ॥**

ತಾವರೆಮೊಗ್ಗುಗಳ ಸಮೀಪದಲ್ಲಿರುವ ನೊರೆಯಿಂದ ಕಮಲದ ಲತೆಯು ಶೋಭಿಸುವಂತೆ, ಕುಚಗಳ ಮಧ್ಯದಲ್ಲಿ ಸಂಬಂಧಿಸಿರುವ ಹಾರದ ಕಾಂತಿಯಿಂದ ಈ ಮರುದೇವಿಯು ಶೋಭಿಸಿದಳು.

**ವ್ಯರಾಜಿ ಕಂಧರೇಣಾಸ್ಯಾ[೧೧]ಸ್ತನುರಾಜೀವಿರಾಜಿನಾ ।**
**[೧೨]ಉಲ್ಲಿಖ್ಯ ಘಟಿತೇನೇವ ಧಾತ್ರಾ [೧೩]ನಿರ್ಮಾಣಕೌಶಲಾತ್ ॥ ೩೬ ॥**

ಸೂಕ್ಷ್ಮ ರೇಖೆಗಳಿಂದ ಶೋಭಿಸುತ್ತಿರುವ ಈ ಮರುದೇವಿಯ ಕಂಠವು, ತನ್ನ ರಚನಾಚಾತುರ್ಯದಿಂದ ಬ್ರಹ್ಮನು ರಚಿಸಿ ಸೇರಿಸಿದಂತೆ, ಶೋಭಿಸಿತು.

೧ ಚ್ಯುತಃ. ೨ ಶಾಖಾ. ೩ ವಲಿರಸ್ಯಾಸ್ತೀತಿ ವಲಿಭಂ, ತ್ರಿವಲಿಶೋಭಿತಂ. ೪ ಗಂಭೀರನಾಭಿಕಂ. ೫ ಪ್ರವಾಹಃ. ೬ ಸ್ವಲ್ಪತರಂಗಕಂ. ೭ ವಿಶಾಲವಂತೌ. ೮ ಕುಂಕುಮಲಿಪ್ತಂ. ೯ ರಥಾಂಗಮಿಥುನಂ, ಕ್ಲೀಬೇನಃ ಶಕಟೋ ಸ್ತ್ರೀ ಸ್ಯಾದಿತ್ಯಮರಃ. ೧೦ ಮಧ್ಯಂ. ೧೧ ಸ್ವಲ್ಪರೇಖಾ. ೧೨ ಉತ್ಕೀರ್ಯ. ೧೩ ಸರ್ಜನಂ.

**ಆಧಿಕಂಧರಮಾಬದ್ಧಹಾರಯಷ್ಟಿರ್ವ್ಯಭಾದಸೌ ।**
**ಪತದ್ಗಿರಿಸರಿತ್ಸ್ರೋತಾಃ [೧]ಸಾನುಲೇಖೇವ [೨]ಶೃಂಗಿಣಃ ॥ ೩೭ ॥**

ಕಂಠದಲ್ಲಿ ಹಾರವನ್ನು ಧರಿಸಿರುವ ಈ ಮರುದೇವಿಯು, ಗಿರಿನದಿಯ ಪ್ರವಾಹವು ಬೀಳುತ್ತಿರುವ ಪರ್ವತದ ತಪ್ಪಲಿನಂತೆ, ಶೋಭಿಸಿದಳು.

**ಶಿರೀಷಸುಕುಮಾರಾಂಗ್ಯಾಸ್ತಸ್ಯಾ ಬಾಹೂ ವಿರೇಜತುಃ ।**
**ಕಲ್ಪವಲ್ಲ್ಯಾ ಇವಾ[೩]ವಾಗ್ರೌ ವಿಟಪೌ ಮಣಿಭೂಷಣೈಃ ॥ ೩೮ ॥**

ಬಾಗೆಹೂವಿನಂತೆ ಕೋಮಲವಾದ ಶರೀರವುಳ್ಳ ಆ ಮರುದೇವಿಯ ಬಾಹುಗಳು ಆಭರಣಗಳಿಂದ ಬಗ್ಗಿರುವ ಕಲ್ಪಲತೆಯ ಕೊಂಬೆಗಳಂತೆ, ಶೋಭಿಸಿದುವು.

**ಮೃದುಬಾಹುಲತೇ ತಸ್ಯಾ ಕರಪಲ್ಲವಸಂಶ್ರಿತಾಮ್ ।**
**ನಖಾಂಶೂಲ್ಲಸಿತವ್ಯಾಜಾದ್ದಧತುಃ ಪುಷ್ಪಮಂಜರೀಮ್ ॥ ೩೯ ॥**

ಆ ಮರುದೇವಿಯ ಮೃದುವಾದ ಭುಜಗಳು ಉಗುರುಗಳ ಕಿರಣಗಳ ನೆಪದಿಂದ ಕೈಗಳೆಂಬ ತಳಿರುಗಳಲ್ಲಿರುವ ಪುಷ್ಪಗಳ ಗೊಂಚಲನ್ನು ಧರಿಸಿದ್ದುವು.

**ಅಶೋಕಪಲ್ಲವಚ್ಛಾಯಂ ಬಿಭ್ರತೀ ಕರಪಲ್ಲವಮ್ ।**
**ಪಾಣೌಕೃತಮಿವಾಶೇಷಂ ಮನೋರಾಗಮುವಾಹ ಸಾ ॥ ೪೦ ॥**

ಅಶೋಕವೃಕ್ಷದ ತಳಿರಿನ ಕಾಂತಿಯುಳ್ಳ ಕೈಗಳನ್ನು ಧರಿಸಿರುವ ಆ ಮರುದೇವಿಯು ತನ್ನ ಮನಸ್ಸಿನಲ್ಲಿರುವ ರಾಗ(ಪ್ರೀತಿ)ವನ್ನೆಲ್ಲ ಕೈಯಲ್ಲಿ ಧರಿಸಿರುವಂತೆ ತೋರುತ್ತಿದ್ದಳು.

**ಸಾ ದಧೇ [೪]ಕಿಮಪಿ ಸ್ರಸ್ತಾ[೫]ವಂಸೌ ಹಂಸೀವ [೬]ಪಕ್ಷತೀ ।**
**[೭]ಆಸ್ರಸ್ತಕಬರೀಭಾರ[೮]ವಾಹಿಕಾಖೇದಿತಾವಿವ ॥ ೪೧ ॥**

ಸ್ತ್ರೀಹಂಸಪಕ್ಷಿಯು ಎರಡು ರೆಕ್ಕೆಗಳ ಬುಡಗಳನ್ನು ಧರಿಸಿರುವಂತೆ, ಆ ಮರುದೇವಿಯು ಸ್ವಲ್ಪ ಸಡಿಲಿದ ಕೂದಲುಗಳ ಗಂಟಿನ (ಹೆರಳಿನ) ಭಾರವನ್ನು ವಹಿಸಿರುವುದರಿಂದ ಖೇದಗೊಂಡವುಗಳಂತಿರುವ ಸ್ವಲ್ಪ ಬಗ್ಗಿದ ಭುಜಶಿರಸ್ಸುಗಳನ್ನು ಧರಿಸಿದ್ದಳು.

**ಮುಖಮಸ್ಯಾಃ ಸರೋಜಾಕ್ಷ್ಯಾ ಜಹಾಸ ಶಶಿಮಂಡಲಮ್ ।**
**[೯]ಸಕಲಂ ವಿಕಲಂಕಂ ಚ ವಿಕಲಂ ಸಕಲಂಕಕಮ್ ॥ ೪೨ ॥**

ಕಮಲದಂತೆ ನೇತ್ರಗಳುಳ್ಳ ಈ ಮರುದೇವಿಯ ಸಂಪೂರ್ಣಾವಯವಗಳುಳ್ಳದೂ ಕಲಂಕರಹಿತವೂ ಆದ ಮುಖವು ಕಲಾರಹಿತವೂ ಕಲಂಕಸಹಿತವೂ ಆದ ಚಂದ್ರಮಂಡಲವನ್ನು ಪರಿಹಾಸಮಾಡಿತು.

**[೧೦]ವೈಧವ್ಯದೂಷಿತೇಂದುಶ್ರೀರಬ್ಜಶ್ರೀಃ ಪಂಕದೂಷಿತಾ ।**
**ತಸ್ಯಾಃ ಸದೋಜ್ಜ್ವಲಾಸ್ಯಶ್ರೀರ್ವದ [೧೧]ಕೇನೋಪಮೀಯತೇ ॥ ೪೩ ॥**

ಚಂದ್ರನ ಲಕ್ಷ್ಮಿ(ಶೋಭೆ)ಯು ವಿಧವಾತ್ವದಿಂದ, ಚಂದ್ರನ ಸಂಬಂಧದಿಂದ ದೂಷಿತವಾಗಿದೆ. ಕಮಲದ ಶೋಭೆಯು ಕೆಸರಿನಿಂದ ದೂಷಿತವಾಗಿದೆ. ಆ ಮರುದೇವಿಯ ಮುಖದ ಶೋಭೆಯು ಯಾವಾಗಲೂ ಪ್ರಕಾಶಮಾನವಾಗಿದೆ. ಆದುದರಿಂದ ಮುಖದ ಶೋಭೆಯನ್ನು ಯಾವುದರೊಡನೆ ಹೋಲಿಸುವುದು ? ಹೇಳು.

**ದಶನಚ್ಛದರಾಗೋಸ್ಯಾಃ ಸ್ಮಿತಾಂ[೧೨]ಶುಭಿ[೧೩]ರನುದ್ರುತಃ ।**
**ಪಯಃಕಣಾವಕೀರ್ಣಸ್ಯ ವಿದ್ರುಮಸ್ಯಾಜಯಚ್ಛ್ರಿಯಮ್ ॥ ೪೪ ॥**

೧ ನಿತಂಬರೇಖಾ. ೨ ಪರ್ವತಸ್ಯ. ೩ ಆನತೌ. ೪ ಈಷನ್ನತೌ. ೫ ಭುಜೌ. ೬ ಪಕ್ಷಮೂಲೇ. ೭ ಈಷತ್ ಶ್ಲಥಃ. ೮ ವಹನೇನ. ೯ ಸಂಪೂರ್ಣಂ. ೧೦ ವಿಧುತ್ವಂ ಚ. ೧೧ ಕೇನ ಸಹೇತ್ಯರ್ಥಃ. ೧೨ ಅಂಶುಭಿಃ ಸಹ. ೧೩ ಅನುಗತಃ.

ನಗುವಾಗ ಹಲ್ಲುಗಳ ಶುಭ್ರವಾದ ಕಾಂತಿಯೊಡನೆ ಸೇರಿಕೊಂಡಿರುವ ಈ ಮರುದೇವಿಯ ತುಟಿಗಳ ಕೆಂಪಾದ ಕಾಂತಿಯು ನೀರಿನ ಹನಿಗಳಿಂದ ವ್ಯಾಪ್ತವಾದ ಹವಳದ ಶೋಭೆಯನ್ನು ಜಯಿಸಿತು.

**ಸುಕಂಠ್ಯಾಃ ಕಂಠರಾಗೋಸ್ಯಾ ಗೀತಗೋಷ್ಠೀಷು ಪಪ್ರಥೇ ।**
**ಮೌರ್ವೀರವ ಇವಾಕೃಷ್ಟಧನುಷಃ ಪುಷ್ಪಧನ್ವನಃ ॥ ೪೫ ॥**

ಶ್ರೇಷ್ಠವಾದ ಕಂಠವುಳ್ಳ ಈ ಮರುದೇವಿಯ ಕಂಠರಾಗವು ಸಂಗೀತಸಭೆಗಳಲ್ಲಿ ಮನ್ಮಥನ ಹೆದೆಯೇರಿಸಿದ ಧನುಸ್ಸಿನ ಹಗ್ಗದ ಶಬ್ದದಂತೆ ಲೋಕದಲ್ಲಿ ಪ್ರಸಿದ್ಧವಾಗಿದ್ದಿತು.

**ಕಪೋಲಾವಲಕಾನಸ್ಯಾ ದಧತುಃ ಪ್ರತಿಬಿಂಬಿತಾನ್ ।**
**ಶುದ್ಧಿಭಾಜೋನುಗೃಹ್ಣಂತಿ ಮಲಿನಾನಪಿ ಸಂಶ್ರಿತಾನ್ ॥ ೪೬ ॥**

ಈ ಮರುದೇವಿಯ ಕೆನ್ನೆಗಳೆರಡು ಕುರುಳುಕೂದಲುಗಳ ಪ್ರತಿಬಿಂಬಗಳನ್ನು ಧರಿಸಿದ್ದುವು. ಪ್ರಕಾಶಮಾನವಾದ ಕೆನ್ನೆಗಳಲ್ಲಿ ಕುರುಳುಕೂದಲುಗಳು ಪ್ರತಿಬಿಂಬಿಸಿದ್ದುವೆಂದು ಭಾವವು. ಲೋಕದಲ್ಲಿ ಪರಿಶುದ್ಧರಾದವರು ಮಲಿನರಾದ ಆಶ್ರಿತರನ್ನೂ ಅನುಗ್ರಹಿಸುತ್ತಾರೆ. ಪರಿಶುದ್ಧಮಾಡುತ್ತಾರೆಂದರ್ಥವು.

**ತಸ್ಯಾ ನಾಸಾಗ್ರ[೧]ಮವ್ಯಗ್ರಂ ಬಭೌ ಮುಖಮುಭಿಸ್ಥಿತಮ್ ।**
**[೨]ತದಾಮೋದಮಿವಾಘ್ರಾತುಂ ತನ್ನಿಶ್ವಸಿತಮುತ್ಥಿತಮ್ ॥ ೪೭ ॥**

ಆ ಮರುದೇವಿಯ ಮುಖಕ್ಕೆ ಬಗ್ಗಿರುವ ಸ್ಥಿರವಾದ ಮೂಗಿನ ತುದಿಯು ಶ್ವಾಸೋಚ್ಛ್ವಾಸದಲ್ಲಿ ಉಂಟಾದ ಆ ಮುಖದ ಪರಿಮಳವನ್ನು ಮೂಸುವುದಕ್ಕೆ ಬಗ್ಗಿದೆಯೋ ಎಂಬಂತೆ, ಶೋಭಿಸಿತು.

**ನಯನೋತ್ಪಲಯೋಃ ಕಾಂತಿಸ್ತಸ್ಯಾಃ ಕರ್ಣಾಂ[೩]ತಮಾಶ್ರಯತ್ ।**
**ಕರ್ಣೇಜಪತ್ವಮನ್ಯೋನ್ಯಸ್ಪರ್ಧಯೇವ [೪]ಚಿಕೀರ್ಷತೋಃ ॥ ೪೮ ॥**

ಪರಸ್ಪರಸ್ಪರ್ಧೆಯಿಂದ ಚಾಡಿಯನ್ನು ಹೇಳಬೇಕೆಂಬ ಇಚ್ಛೆಯುಳ್ಳವುಗಳಂತಿರುವ ಆ ಮರುದೇವಿಯ ಕಣ್ಣುಗಳೆಂಬ ಕನ್ನೈದಿಲೆಗಳ ಕಾಂತಿಯು ಕಿವಿಗಳ ಸಮೀಪವನ್ನು ಆಶ್ರಯಿಸಿದ್ದಿತು.

**[೫]ಶ್ರುತೇನಾಲಂಕೃತಾವಸ್ಯಾಃ ಕರ್ಣೌ ಪುನರಲಂಕೃತೌ ।**
**ಕರ್ಣಾಭರಣವಿನ್ಯಾಸೈಃ ಶ್ರುತದೇವ್ಯಾ ಇವಾರ್ಚನೈಃ ॥ ೪೯ ॥**

ಶಾಸ್ತ್ರಶ್ರವಣದಿಂದ ಅಲಂಕೃತವಾದ ಮರುದೇವಿಯ ಕಿವಿಗಳು ಸರಸ್ವತೀದೇವಿಯ ಪೂಜಾರ್ಥವಾದ ಪುಷ್ಪಗಳೋ ಎಂಬಂತಿರುವ ಕರ್ಣಾಭರಣಗಳಿಂದ ಶೋಭಿಸಿದುವು.

**ಲಲಾಟೇನಾಷ್ಟಮೀಚಂದ್ರಚಾರುಣಾಸ್ಯಾ ವಿದಿದ್ಯುತೇ ।**
**ಮನೋಜಶ್ರೀವಿಲಾಸಿನ್ಯಾ ದರ್ಪಣೇನೇವ ಹಾರಿಣಾ ॥ ೫೦ ॥**

ಅಷ್ಟಮೀಚಂದ್ರನಂತೆ ಮನೋಹರವಾದ ಈ ಮರುದೇವಿಯ ಹಣೆಯು, ವಿಲಾಸವತಿಯಾದ ಮದನಲಕ್ಷ್ಮಿಯ ಮನೋಹರವಾದ ಕನ್ನಡಿಯಂತೆ, ಪ್ರಕಾಶಿಸುತ್ತಿದ್ದಿತು.

**ವಿನೀಲೈರಲಕೈರಸ್ಯಾ ಮುಖಾಬ್ಜೇ ಮಧುಪಾಯಿತಮ್ ।**
**ಭ್ರೂಭ್ಯಾಂ ವಿನಿರ್ಜಿತಾ [೬]ಸಜ್ಯಾ ಮದನಸ್ಯ ಧನುರ್ಲತಾ ॥ ೫೧ ॥**

ಈ ಮರುದೇವಿಯ ಮುಖಕಮಲದಲ್ಲಿ ಕಪ್ಪಾದ ಕುರುಳುಕೂದಲುಗಳು ಭ್ರಮರಗಳಂತೆ ಶೋಭಿಸುತ್ತಿದ್ದುವು. ಆ ಮರುದೇವಿಯ ಹುಬ್ಬುಗಳು ಸಿಂಜಿನಿಯೊಡಗೂಡಿದ ಮನ್ಮಥನ ಧನುರ್ಲತೆಯನ್ನು ಜಯಿಸಿದುವು.

೧ ಸ್ಥಿರಂ. ೨ ತಹಾಮೋದಮಿತ್ಯಪಿ ಪಾಠಃ. ೩ ಸಮೀಪಂ. ೪ ಕರ್ತುಮಿಚ್ಛತೋಃ. ೫ ಶಾಸ್ತ್ರಶ್ರವಣೇನ. ೬ ಸಗುಣಾ.

**ಕಚಭಾರೋ ಬಭೌ ತಸ್ಯಾ ವಿನೀಲಕುಟಿಲಾಯತಃ ।**
**ಮುಖೇಂದುಗ್ರಾಸಲೋಭೇನ [೧]ವಿಧುಂತುದ ಇವಾಶ್ರಿತಃ ॥ ೫೨ ॥**

ಆ ಮರುದೇವಿಯ ಕಪ್ಪಾಗಿಯೂ ಉದ್ದವಾಗಿಯೂ ಇರುವ ಕುರುಳು ಕೂದಲುಗಳ ಸಮೂಹವು, ಆಕೆಯ ಮುಖವೆಂಬ ಚಂದ್ರನನ್ನು ನುಂಗಬೇಕೆಂಬ ಆಸೆಯಿಂದ ಆಶ್ರಯಿಸಿದ ರಾಹುವಿನಂತೆ, ಶೋಭಿಸುತ್ತಿದ್ದಿತು.

**ವಿಸ್ರಸ್ತಕಬರೀಬಂಧವಿಗಲತ್ಕುಸುಮೋತ್ಕರೈಃ ।**
**ಸೋಪಹಾರಾಮಿವ ಕ್ಷೋಣೀಂ ಚಕ್ರೇ [೨]ಚಂಕ್ರಮಣೇಷು ಸಾ ॥ ೫೩ ॥**

ಆ ಮರುದೇವಿಯು ನಡೆಯುತ್ತಿರುವಾಗಲೆಲ್ಲ ಸಡಿಲಿದ ಹೆರಳಿನಿಂದ ಜಾರಿಬೀಳುತ್ತಿರುವ ಹೂವುಗಳ ಸಮೂಹಗಳಿಂದ ಭೂಮಿಗೆ ಕೈಗಾಣಿಕೆಯನ್ನು ಒಪ್ಪಿಸುವವಳಂತೆ ತೋರುತ್ತಿದ್ದಳು.

**ಸಮಸುಪ್ತವಿಭಕ್ತಾಂಗಮಿತ್ಯಸ್ಯಾ ವಪುರೂರ್ಜಿತಮ್ ।**
**ಸ್ತ್ರೀಸರ್ಗಸ್ಯ [೩]ಪ್ರತಿಚ್ಛಂದಭಾವೇನೇವ ವಿಧಿರ್ವ್ಯಧಾತ್ ॥ ೫೪ ॥**

ಹಿಂದೆ ಹೇಳಿದಂತೆ ಸಮಾನವಾಗಿ ವಿಭಕ್ತವಾದ ಈ ಮರುದೇವಿಯ ಶ್ರೇಷ್ಠವಾದ ಶರೀರವನ್ನು ಬ್ರಹ್ಮನು ಸ್ತ್ರೀಸೃಷ್ಟಿಯ ಪ್ರತಿಕೃತಿಯ ಸ್ವರೂಪವನ್ನೋಪಾದಿಯಲ್ಲಿ ರಚಿಸಿದನು.

**ಸುಯಶಾಃ ಸುಚಿರಾಯುಶ್ಚ [೪]ಸುಪ್ರಜಾಶ್ಚ ಸುಮಂಗಲಾ ।**
**[೫]ಪತಿವತ್ನೀ ಚ ಯಾ ನಾರೀ [೬] ಸಾ ತು [೭]ತಾಮನುವರ್ಣ್ಯತಾ ॥ ೫೫ ॥**

ಒಳ್ಳೆಯ ಯಶಸ್ಸುಳ್ಳವಳೂ ಬಹಳ ಆಯುಷ್ಯವುಳ್ಳವಳೂ ಸುಪುತ್ರರುಳ್ಳವಳೂ ಸುಮಂಗಲೆಯೂ ಪತಿಯುಳ್ಳವಳೂ ಆದ ಸ್ತ್ರೀಯನ್ನು ಮರುದೇವಿಯನಂತರ ವರ್ಣಿಸಬೇಕು. ಅಂತಹ ಸ್ತ್ರೀಯರಲ್ಲೆಲ್ಲ ಮರುದೇವಿಯು ಶ್ರೇಷ್ಠಳೆಂದು ಭಾವವು.

**ಸಾ ಖನಿರ್ಗುಣರತ್ನಾನಾಂ ಸಾವನಿಃ ಪುಣ್ಯಸಂಪದಾಮ್ ।**
**ಪಾವನೀ ಶ್ರುತದೇವೀವ ಸಾನಧೀತ್ಯೈವ ಪಂಡಿತಾ ॥ ೫೬ ॥**

ಆ ಮರುದೇವಿಯು ಗುಣಗಳೆಂಬ ರತ್ನಗಳಿಗೆ ಗಣಿಯೂ ಪುಣ್ಯಸಂಪತ್ತುಗಳಿಗೆ ಸ್ಥಾನವೂ ಶ್ರುತದೇವಿಯಂತೆ ಪವಿತ್ರಳೂ ಶಾಸ್ತ್ರವನ್ನು ಅಭ್ಯಾಸಮಾಡದೆಯೇ ಪಂಡಿತಳೂ

**ಸೌಭಾಗ್ಯಸ್ಯ [೮]ಪರಾಕೋಟಿಃ ಸೌರೂಪ್ಯಸ್ಯ ಪರಾ [೯]ಧೃತಿಃ ।**
**[೧೦]ಸೌಹಾರ್ದಸ್ಯ ಪರಾ ಪ್ರೀತಿಃ ಸೌಜನ್ಯಸ್ಯ ಪರಾ [೧೧]ಗತಿಃ ॥ ೫೭ ॥**

ಸೌಭಾಗ್ಯಕ್ಕೆ ಕೊನೆಯ ಎಲ್ಲೆಯೂ ಸೌಂದರ್ಯಕ್ಕೆ ಶ್ರೇಷ್ಠವಾದ ಆಶ್ರಯವೂ ಒಳ್ಳೆಯ ಹೃದಯಭಾವಕ್ಕೆ ಶ್ರೇಷ್ಠವಾದ ಪ್ರೀತಿಪಾತ್ರಳೂ ಸುಜನತ್ವಕ್ಕೆ ಉತ್ಕೃಷ್ಟವಾದ ಆಧಾರವೂ

**[೧೨]ಪ್ರಸೂತಿಃ [೧೩]ಕಾಮತತ್ತ್ವಸ್ಯ [೧೪]ಕಲಾಗಮಸರಿತ್ಸ್ರುತಿಃ ।**
**[೧೫]ಪ್ರಸೃತಿರ್ಯಶಸಾಂ ಸಾಸೀ[೧೬]ತ್ಸತೀತ್ವಸ್ಯ ಪರಾ [೧೭]ವೃತಿಃ ॥ ೫೮ ॥**

ಕಾಮಶಾಸ್ತ್ರಕ್ಕೆ ಉತ್ಪತ್ತಿಸ್ಥಾನವೂ ಕಲಾಶಾಸ್ತ್ರವೆಂಬ ನದಿಯ ಪ್ರವಾಹವೂ ಯಶಸ್ಸುಗಳ ಪ್ರಸರಣೆಯೂ ಪಾತಿವ್ರತ್ಯಕ್ಕೆ ಉತ್ಕೃಷ್ಟವಾದ ಎಲ್ಲೆಯೂ ಆಗಿದ್ದಳು.

**ತಸ್ಯಾಃ ಕಿಲ [೧೮]ಸಮುದ್ವಾಹೇ ಸುರರಾಜೇನ ಚೋದಿತಾಃ ।**
**ಸುರೋತ್ತಮಾ ಮಹಾಭೂತ್ಯಾ ಚಕ್ರುಃ [೧೯]ಕಲ್ಯಾಣಕೌತುಕಮ್ ॥ ೫೯ ॥**

೧ ರಾಹುಃ. ೨ ಪುನಃ ಪುನರ್ಗಮನೇಷು. ೩ ಪ್ರತಿನಿಧಿಭಾವೇನ. ೪ ಸುಪುತ್ರವತೀ. ೫ ಸಭರ್ತೃಕಾ. ೬ ಸಾನು ಇತ್ಯಪಿ ಪಾಠಃ. ೭ ಮರುದೇವೀಂ. ೮ ಉತ್ಕರ್ಷಃ. ೯ ಧಾರಣಂ. ೧೦ ಸುಹೃದಯತ್ವಸ್ಯ. ೧೧ ಆಧಾರಃ. ೧೨ ಕುಸ್ವತಿರಿತ್ಯಪಿ ಪಾಠಃ. ೧೩ ಕಾಮಶಾಸ್ತ್ರಸ್ಯ. ೧೪ ಕಲಾಶಾಸ್ತ್ರನದ್ಯಾಃ ಪ್ರವಾಹಃ. ೧೫ ಪ್ರಸರಣಂ. ೧೬ ಪಾತಿವ್ರತ್ಯಸ್ಯ. ೧೭ ಸೀಮಾ. ೧೮ ವಿವಾಹೇ. ೧೯ ವಿವಾಹೋತ್ಸಾಹಂ.

ಆ ಮರುದೇವಿಯ ವಿವಾಹದಲ್ಲಿ ದೇವೇಂದ್ರನಿಂದ ಪ್ರೇರಿತರಾದ ದೇವತೆಗಳು ಮಹಾವೈಭವದಿಂದ ವಿವಾಹೋತ್ಸಾಹವನ್ನು ಮಾಡಿದರು.

**ಪುಣ್ಯಸಂಪತ್ತಿರೇವಾಸ್ಯಾ ಜನನೀತ್ವಮುಪಾಗತಾ ।**
**[೧]ಸಖೀಭೂಯಂ ಗತಾ ಲಜ್ಜಾ ಗುಣಾಃ ಪರಿಜನಾಯಿತಾಃ ॥ ೬೦ ॥**

ಪುಣ್ಯಸಂಪತ್ತಿಯೇ ಈ ಮರುದೇವಿಗೆ ಉತ್ಪತ್ತಿಸ್ಥಾನವಾಗಿದ್ದಿತು. ಲಜ್ಜೆಯು ಸಖಿಯಾಗಿದ್ದಿತು. ಗುಣಗಳು ಪರಿವಾರಜನಗಳಾಗಿದ್ದುವು.

**ರೂಪಪ್ರಭಾವವಿಜ್ಞಾನೈರಿತಿ ರೂಢಿಂ ಪರಾಂ ಗತಾ ।**
**ಭರ್ತುರ್ಮನೋಗಜಾ [೨]ಲಾನೇ ಭೇಜೇ ಸಾಲಾನಯಷ್ಟಿತಾಮ್॥ ೬೧ ॥**

ರೂಪ ಪ್ರಭಾವ ವಿಜ್ಞಾನ ಇವುಗಳಿಂದ ರೂಢಿಯನ್ನು ಹೊಂದಿದ (ಯುಕ್ತಳಾದ) ಮರುದೇವಿಯು ಪತಿಯ ಮನಸ್ಸೆಂಬ ಆನೆಯನ್ನು ಕಟ್ಟುವುದಕ್ಕೆ ಕಂಭವಾಗಿದ್ದಳು. ಪತಿಯ ಮನಸ್ಸನ್ನು ಸಂತೋಷಪಡಿಸುತ್ತಿದ್ದಳೆಂದು ಭಾವವು.

**ತದ್ವಕ್ತ್ರೇಂದೋಃ ಸ್ಮಿತಜ್ಯೋತ್ಸ್ನಾ ತನ್ವತೀ ನಯನೋತ್ಸವಮ್ ।**
**ಭರ್ತುಶ್ಚೇತೋಂಬುಧೇಃ ಕ್ಷೋಭಮನುವೇಲಂ ಸಮಾತನೋತ್ ॥**

ನೇತ್ರಗಳಿಗೆ ಆನಂದವನ್ನುಂಟುಮಾಡುವ ಆ ಮರುದೇವಿಯ ಮುಖವೆಂಬ ಚಂದ್ರನ ಮುಗುಳುನಗೆಯೆಂಬ ಬೆಳದಿಂಗಳು ಪತಿಯ ಮನಸ್ಸೆಂಬ ಸಮುದ್ರಕ್ಕೆ ಅಧಿಕವಾದ ಕ್ಷೋಭೆಯನ್ನುಂಟುಮಾಡಿತು. ಮುಗುಳುನಗೆಯೊಡಗೂಡಿದ ಮರುದೇವಿಯ ಮುಖವನ್ನು ನೋಡಿ ಪತಿಗೆ ಅಪಾರವಾದ ಆನಂದವಾಗುತ್ತಿದ್ದಿತೆಂದು ಭಾವವು.

**ರೂಪಲಾವಣ್ಯಸಂಪತ್ತ್ಯಾ [೩]ಪತ್ಯುಃ ಶ್ರೀರಿವ ಸಾ ಮತಾ ।**
**[೪]ಮತಾವಿವ ಮುನಿಸ್ತಸ್ಯಾಮತಾನೀತ್ಸಪರಾಂ [೫]ಧೃತಿಮ್ ॥ ೬೩ ॥**

ರೂಪಸೌಂದರ್ಯಸಂಪತ್ತಿನಿಂದ ಆ ಮರುದೇವಿಯು ಪತಿಗೆ ಲಕ್ಷ್ಮಿಯಂತಿದ್ದಳು. ಮುನಿಯು ಬುದ್ಧಿಯಲ್ಲಿ ಸಂತುಷ್ಟನಾಗಿರುವಂತೆ ಆ ನಾಭಿರಾಜಮನುವು ಮರುದೇವಿಯಲ್ಲಿ ಬಹಳ ಸಂತೋಷವುಳ್ಳವನಾಗಿದ್ದನು.

**ಪರಿಹಾಸೇಷ್ವಮರ್ಮಸ್ಪೃಕ್ಸಂಭೋಗೇಷ್ವನುವರ್ತಿನೀ।**
**[೬]ಸಾಚಿವ್ಯಮಕರೋತ್ತಸ್ಯ [೭]ನರ್ಮಣಃ ಪ್ರಣಯಸ್ಯ ಚ ॥ ೬೪ ॥**

ಪರಿಹಾಸವಚನಗಳಲ್ಲಿ ಮರ್ಮಭೇದಿಯಾದ ಮಾತನ್ನಾಡದಿರುವವಳೂ ಸಂಭೋಗಕ್ರಿಯೆಗಳಲ್ಲಿ ಪತಿಗೆ ಅನುಕೂಲಳೂ ಆದ ಮರುದೇವಿಯು ಆ ನಾಭಿರಾಜನಿಗೆ ಕ್ರೀಡೆಯಲ್ಲಿಯೂ ಪ್ರೀತಿಯಲ್ಲಿಯೂ ಸಹಾಯಕಳಾಗಿದ್ದಳು.

**ಸಾಭವತ್ಪ್ರೇಯಸೀ ತಸ್ಯ ಪ್ರಾಣೇಭ್ಯೋಽಪಿ ಗರೀಯಸೀ ।**
**ಶಚೀವ ದೇವರಾಜಸ್ಯ ಪರಾ [೮]ಪ್ರಣಯಭೂಮಿಕಾ ॥ ೬೫ ॥**

ಆ ನಾಭಿರಾಜನಿಗೆ ಪ್ರಾಣಕ್ಕಿಂತಲೂ ಹೆಚ್ಚುಪ್ರಿಯಳಾದ ಮರುದೇವಿಯು ದೇವೇಂದ್ರನಿಗೆ ಶಚೀದೇವಿಯಂತೆ, ಬಹಳ ಪ್ರೀತಿಪಾತ್ರಳಾಗಿದ್ದಳು.

**ಸ ತಯಾ ಕಲ್ಪವಲ್ಲ್ಯೇವ ಲಸದಂಶುಕಭೂಷಯಾ ।**
**ಸಮಾಶ್ಲಿಷ್ಟತನುಃ ಶ್ರೀಮಾನ್ಕಲ್ಪದ್ರುಮ ಇವಾದ್ಯುತತ್ ॥ ೬೬ ॥**

ಭಾಗ್ಯವಂತನಾದ ಆ ನಾಭಿರಾಜನು ಪ್ರಕಾಶಮಾನವಾದ ವಸ್ತ್ರದಿಂದಲೂ ಆಭರಣಗಳಿಂದಲೂ ಅಲಂಕೃತಳಾದ ಮರುದೇವಿಯಿಂದ ಆಲಿಂಗಿಸಲ್ಪಟ್ಟ ಶರೀರವುಳ್ಳವನಾಗಿ ಕಲ್ಪಲತೆಯು ಹಬ್ಬಿಕೊಂಡಿರುವ ಕಲ್ಪವೃಕ್ಷದಂತೆ, ಶೋಭಿಸಿದನು.

೧ ಸಖೀತ್ವಂ. ೨ ಬಂಧನೇ, ಲಾ ಆಧಾನೇ ಇತಿ ಧಾತುಃ. ೩ ಭರ್ತ್ರುಃ. ೪ ಬುದ್ಧಾವಿವ. ೫ ಸಂತೋಷಂ. ೬ ಸಹಾಯತ್ವಂ. ೭ ಕ್ರೀಡಾಯಾಃ. ೮ ಸ್ನೇಹಸ್ಥಾನಂ.

**ಸ ಏವ ಪುಣ್ಯವಾನ್ಲೋಕೇ ಸೈವ ಪುಣ್ಯವತೀ ಸತೀ ।**
**ಯಯೋ[೧]ರಯೋನಿಜನ್ಮಾಸೌ ವೃಷಭೋ [೨]ಭವಿತಾತ್ಮಜಃ ॥ ೬೭ ॥**

ಲೋಕದಲ್ಲಿ ಆ ನಾಭಿರಾಜನೇ ಪುಣ್ಯವಂತನು. ಪತಿವ್ರತೆಯಾದ ಆ ಮರುದೇವಿಯೇ ಸ್ತ್ರೀಯರಲ್ಲೆಲ್ಲ ಪುಣ್ಯವಂತಳು. ಏತಕ್ಕೆಂದರೆ-ಆ ದಂಪತಿಗಳಿಗೆ ಸ್ವಯಂಭುವಾದ ಈ ವೃಷಭತೀರ್ಥಂಕರರು ಪುತ್ರರಾಗಿ ಹುಟ್ಟುವರು.

**ತೌ ದಂಪತೀ [೩]ತದಾ [೪]ತತ್ರ [೫]ಭೋಗೈಕರಸತಾಂ ಗತೌ ।**
**ಭೋಗಭೂಮಿಶ್ರಿಯಂ ಸಾಕ್ಷಾಚ್ಚಕ್ರತು[೬]ರ್ವಿಯುತಾಮಪಿ ॥ ೬೮ ॥**

ಆ ಸಂಧಿಕಾಲದಲ್ಲಿ ಆರ್ಯಖಂಡದಲ್ಲಿ ಅತ್ಯಂತ ಭೋಗಾಸಕ್ತರಾದ ಆ ದಂಪತಿಗಳು ಭೋಗಭೂಮಿಯ ಚದರಿರುವ ಸಂಪತ್ತನ್ನು ಸಾಕ್ಷಾತ್ಕರಿಸಿದರು. ಅನುಭವಿಸಿದರೆಂದು ಭಾವವು.

**ತಾಭ್ಯಾಮಲಂಕೃತೇ ಪುಣ್ಯೇ ದೇಶೇ ಕಲ್ಪಾಂಘ್ರಿಪಾತ್ಯಯೇ ।**
**ತತ್ಪುಣ್ಯೈರ್ಮುಹುರಾಹೂತಃ ಪುರುಹೂತಃ ಪುರೀಂ ವ್ಯಧಾತ್ ॥ ೬೯ ॥**

ಆ ದಂಪತಿಗಳ ಪುಣ್ಯಗಳಿಂದ ಬಾರಿಬಾರಿಗೂ ಕರೆಯಲ್ಪಟ್ಟ ದೇವೇಂದ್ರನು, ಕಲ್ಪವೃಕ್ಷಗಳು ನಷ್ಟವಾಗಿದ್ದರೂ ಆ ನಾಭಿರಾಜಮರುದೇವಿಯರಿಂದ ಅಲಂಕೃತವಾದ ಪುಣ್ಯಪ್ರದೇಶದಲ್ಲಿ ಒಂದು ಪಟ್ಟಣವನ್ನು ರಚಿಸಿದನು.

**ಸುರಾಃ ಸಸಂಭ್ರಮಾಃ ಸದ್ಯಃ ಪಾಕಶಾಸನಶಾಸನಾತ್ ।**
**ತಾಂ ಪುರೀಂ ಪರಮಾನಂದಾದ್ವ್ಯಧುಃ ಸುರಪುರೀನಿಭಾಮ್ ॥ ೭೦ ॥**

ದೇವೇಂದ್ರನ ಆಜ್ಞೆಯಿಂದ ಉತ್ಸಾಹಯುಕ್ತರಾದ ದೇವತೆಗಳು ತತ್ಕ್ಷಣದಲ್ಲಿಯೇ ದೇವತೆಗಳ ನಗರಕ್ಕೆ ಸಮಾನವಾದ ಆ ಪಟ್ಟಣವನ್ನು ಆನಂದದಿಂದ ರಚಿಸಿದರು.

**ಸ್ವರ್ಗಸ್ಯೇವ [೭]ಪ್ರತಿಚ್ಛಂದಂ ಭೂಲೋಕೇಽಸ್ಮಿನ್ವಿಧಿತ್ಸುಭಿಃ ।**
**ವಿಶೇಷರಮಣೀಯೈವ [೮]ನಿರ್ಮಮೇ ಸಾಮರೈಃ ಪುರೀ ॥ ೭೧ ॥**

ಸ್ವರ್ಗದ ಪ್ರತಿಕೃತಿಯನ್ನು ಈ ಭೂಲೋಕದಲ್ಲಿ ಮಾಡಲಿಚ್ಛೆಯುಳ್ಳವರಂತೆ ದೇವತೆಗಳು ಆ ನಗರವನ್ನು ಅತ್ಯಂತ ರಮಣೀಯವಾಗಿ ನಿರ್ಮಿಸಿದರು.

**[೯]ಸ್ವಸ್ವರ್ಗ[೧೦]ಸ್ತ್ರಿದಶಾವಾಸಃ ಸ್ವಲ್ಪ ಇತ್ಯ[೧೧]ವಮತ್ಯ ತಮ್ ।**
**[೧೨]ಪರಃಶತಜನಾವಾಸಭೂಮಿಕಾಂ ತಾಂ [೧೩]ನು ತೇ ವ್ಯಧುಃ ॥ ೭೨ ॥**

ದೇವತೆಗಳ ವಾಸಸ್ಥಾನವಾದ, ಮೂವತ್ತಮೂರುಜನರಿಗೆ ವಾಸಸ್ಥಾನವಾದ ತಮ್ಮ ಸ್ವರ್ಗವು ಚಿಕ್ಕದಾಗಿದೆಯೆಂದು ತಿಳಿದು ಆ ಸ್ವರ್ಗವನ್ನು ತಿರಸ್ಕರಿಸಿ ಅನೇಕಜನರ ವಾಸಸ್ಥಾನವಾದ ಆ ಪಟ್ಟಣವನ್ನು ರಚಿಸಿದರೋ ಎಂಬಂತೆ ದೇವತೆಗಳು ಆ ಪಟ್ಟಣವನ್ನು ರಚಿಸಿದರು.

**ಇತಸ್ತತಶ್ಚ [೧೪]ವಿಕ್ಷಿಪ್ತಾನಾನೀಯಾನೀಯ ಮಾನವಾನ್ ।**
**ಪುರೀಂ ನಿವೇಶಯಾಮಾಸುರ್ವಿನ್ಯಾಸೈರ್ವಿವಿಧೈಃ ಸುರಾಃ ॥ ೭೩ ॥**

ದೇವತೆಗಳು ಇತ್ತತ್ತ ಚದರಿದ್ದ ಜನರನ್ನು ತಂದು ತಂದು ನಾನಾವಿಧವಾದ ರಚನೆಗಳಿಂದ ನಗರವನ್ನು ನಿರ್ಮಿಸಿದರು.

**ನರೇಂದ್ರಭವನಂ ಚಾಸ್ಯಾಃ ಸುರೈರ್ಮಧ್ಯೇ ನಿವೇಶಿತಮ್ ।**
**ಸುರೇಂದ್ರಭವನಸ್ಪರ್ಧಿ ಪರಾರ್ಧ್ಯವಿಭವಾನ್ವಿತಮ್ ॥ ೭೪ ॥**

ದೇವತೆಗಳು ಈ ನಗರದ ಮಧ್ಯದಲ್ಲಿ ಇಂದ್ರಭವನಕ್ಕೆ ಸಮಾನವೂ ಶ್ರೇಷ್ಠವಾದ ಸಂಪತ್ತಿನೊಡಗೂಡಿದುದೂ ಆದ ರಾಜಭವನವನ್ನು ರಚಿಸಿದರು.

೧ ಸ್ವಯಂಭೂಃ. ೨ ಭವಿಷ್ಯತಿ. ೩ ತಸ್ಮಿನ್ಕಾಲಸಂಧೌ. ೪ ಆರ್ಯಖಂಡೇ. ೫ ಭೋಗ ಮುಖ್ಯಾನುರಾಗತಾಂ. ೬ ವಿಯುಕ್ತಾಂ. ೭ ಪ್ರತಿನಿಧಿಂ. ೮ ನಿರ್ಮಿತಾ. ೯ ಸ್ವಕೀಯಸ್ವರ್ಗಃ. ೧೦ ತ್ರಿಂಶಜ್ಜನಾವಾಸ ಇತಿ ಧ್ವನಿಃ. ೧೧ ಅವಜ್ಞಾಂ ಕೃತ್ವಾ. ೧೨ ಬಹುಜನಾನಾಂ. ೧೩ ಇವ. ೧೪ ವಿಕೀರ್ಣಾನ್.

**ಸುತ್ರಾಮಾ [೧]ಸೂತ್ರಧಾರೋಽಸ್ಯಾಃ ಶಿಲ್ಪಿನಃ ಕಲ್ಪಜಾಃ ಸುರಾಃ ।**
**[೨]ವಾಸ್ತುಜಾತಂ ಮಹೀ ಕೃತ್ಸ್ನಾ ಸೋಽ[೩]ಪ್ಯಾ ನಾಸ್ತು ಕಥಂ ಪುರೀ॥ ೭೫ ॥**

ದೇವೇಂದ್ರನು ಈ ನಗರಿಗೆ ಸೂತ್ರಧಾರ(ಶಿಲ್ಪಕಾಚಾರ್ಯ)ನಾಗಿದ್ದನು. ಕಲ್ಪವಾಸಿಗಳಾದ ದೇವತೆಗಳು ಶಿಲ್ಪಿಗಳಾಗಿದ್ದರು. ಆ ಪಟ್ಟಣದ ಭೂಮಿಯಲ್ಲೆಲ್ಲ ಮನೆಗಳ ಗುಂಪುಗಳಿದ್ದುವು. ಹೀಗಿರುವಾಗ ಆ ಪಟ್ಟಣವು ಪ್ರಶಸ್ತ(ಶ್ರೇಷ್ಠ)ವಾಗಿರಲಾರದೇಕೆ ?

**[೪]ಸಂಚಸ್ಕರುಶ್ಚ ತಾಂ ವಪ್ರಪ್ರಾಕಾರಪರಿಖಾದಿಭಿಃ ।**
**[೫]ಅಯೋಧ್ಯಾಂ ನ ಪರಂ ನಾಮ್ನಾ ಗುಣೇನಾಪ್ಯರಿಭಿಃ ಸುರಾಃ ॥ ೭೬ ॥**

ದೇವತೆಗಳು ಆ ನಗರವನ್ನು ಕಂದಕಕೋಟೆಮೊದಲಾದುವುಗಳಿಂದ ಅಲಂಕರಿಸಿದರು. ಆ ಪಟ್ಟಣವು ಹೆಸರಿನಿಂದ ಮಾತ್ರ ಅಯೋಧ್ಯೆಯಾಗಿರಲಿಲ್ಲ. ಗುಣದಿಂದಲೂ ಶತ್ರುಗಳಿಂದ ಅಯೋಧ್ಯೆ(ಯುದ್ಧಮಾಡಲಶಕ್ಯ)ಯೇ ಆಗಿದ್ದಿತು.

**[೬]ಸಾಕೇತರೂಢಿರಪ್ಯಸ್ಯಾಃ ಶ್ಲಾಘ್ಯೈವ ಸ್ವೈರ್ನಿಕೇತನೈಃ ।**
**ಸ್ವರ್ನಿಕೇತಮಿವಾ[೭]ಹ್ವಾತುಂ [೮]ಸಾಕೂತೈಃ ಕೇತುಬಾಹುಭಿಃ ॥ ೭೭ ॥**

ಸ್ವರ್ಗದಲ್ಲಿರುವ ಗೃಹಗಳೊಡನೆ ಹೋರಾಡುವುದಕ್ಕೋಸ್ಕರ ಅಭಿಪ್ರಾಯ ಗರ್ಭಿತವಾದ ಧ್ವಜಗಳೆಂಬ ಕೈಗಳಿಂದ ಕರೆಯುತ್ತಿವೆಯೋ ಎಂಬಂತಿರುವ ಮನೆಗಳಿಂದ ಈ ನಗರಕ್ಕೆ ಸಾಕೇತ (ಮನೆಗಳೊಡನೆ ಕೂಡಿರುವುದು)ವೆಂಬ ರೂಢಿಯೂ ಶ್ಲಾಘ್ಯವಾಗಿಯೇ ಇದೆ.

**ಸುಕೋಸಲೇತಿ ಚ ಖ್ಯಾತಿಂ ಸಾ ದೇಶಾ[೯]ಭಿಖ್ಯಯಾ ಗತಾ ।**
**ವಿನೀತಜನತಾಕೀರ್ಣಾ ವಿನೀತೇತಿ ಚ ಸಾ ಮತಾ ॥ ೭೮ ॥**

ಆ ನಗರವು ತನ್ನ ದೇಶದ ಶೋಭೆಯಿಂದ ''ಸುಕೋಸಲ'' ವೆಂಬ ಪ್ರಖ್ಯಾತಿಯನ್ನೂ ಹೊಂದಿತು. ವಿನಯವುಳ್ಳ ಜನರಿಂದ ವ್ಯಾಪ್ತವಾದ ಆ ಪಟ್ಟಣಕ್ಕೆ ''ವಿನೀತಾ'' ಎಂದೂ ಹೆಸರು.

**ಬಭೌ ಸುಕೋಸಲಾ [೧೦]ಭಾವಿವಿಷಯಸ್ಯಾ[೧೧]ಲಘೀಯಸಃ ।**
**ನಾಭಿಲಕ್ಷ್ಮೀಂ ದಧಾನಾಸೌ ರಾಜಧಾನೀ ಸುವಿಶ್ರುತಾ ॥ ೭೯ ॥**

ಮುಂದೆ ಉಂಟಾಗುವ ಅತ್ಯಧಿಕವಾದ ವಿಷಯ(ತೀರ್ಥಂಕರ)ಕ್ಕೆ ಉತ್ಪತ್ತಿ ಸ್ಥಾನವಾದ ಸುಕೋಸಲವೆಂಬೀ ರಾಜಧಾನಿಯು ಪ್ರಸಿದ್ಧಿಯನ್ನು ಹೊಂದಿ ಶೋಭಿಸುತ್ತಿದ್ದಿತು.

**ಸನೃಪಾಲಯಮುದ್ವಪ್ರಂ ದೀಪ್ರಶಾಲಂ ಸಖಾತಿಕಮ್ ।**
**ತದ್ವರ್ತ್ಸ್ಯನ್ನಗರಾರಂಭೇ[೧೨]ಪ್ರತಿಚ್ಛಂದಾಯಿತಂ ಪುರಮ್ ॥ ೮೦ ॥**

ರಾಜಭವನದೊಡಗೂಡಿದುದೂ ಉನ್ನತವಾದ ಪ್ರಾಕಾರವುಳ್ಳುದೂ ಪ್ರಕಾಶಮಾನವಾದ ಶಾಲೆಗಳುಳ್ಳುದೂ ಕಂದಕಗಳುಳ್ಳುದೂ ಆದ ಆ ನಗರವು ಮುಂದೆ ರಚಿಸುವ ಬೇರೆ ನಗರಗಳ ಪ್ರತಿಕೃತಿಯಂತೆ ಇದ್ದಿತು.

**ಪುಣ್ಯೇಽಹನಿ ಮುಹೂರ್ತೇ ಚ ಶುಭಯೋಗೇ [೧೩]ಶುಭೋದಯೇ ।**
**ಪುಣ್ಯಾಹಘೋಷಣಾಂ ತತ್ರ ಸುರಾಶ್ಚಕ್ರುಃ ಪ್ರಮೋದಿನಃ ॥ ೮೧ ॥**

ಪುಣ್ಯದಿವಸದಲ್ಲಿ ಪುಣ್ಯಮುಹೂರ್ತ ಮತ್ತು ಶುಭಯೋಗದೊಡಗೂಡಿದ ಶುಭಲಗ್ನದಲ್ಲಿ ದೇವತೆಗಳು ಸಂತುಷ್ಟರಾಗಿ ಆ ನಗರದಲ್ಲಿ ಪುಣ್ಯಾಹವಾಚನೆ(ಇಂದಿನ ದಿನವು ಪುಣ್ಯಕರವಾಗಲೆಂಬ ಶಬ್ದೋಚ್ಚಾರ)ಯನ್ನು ಮಾಡಿದರು.

೧ ಶಿಲ್ಪಾಚಾರ್ಯಃ. ೨ ಗೃಹಸಮೂಹಃ. ೩ ಪ್ರಶಸ್ತಾ. ೪ ಅಲಂಚಕ್ರುಃ. ೫ ಯೋದ್ಧುಮಶಕ್ಯಾಂ. ೬ ಆಕೇತೈರ್ಗೃಹೈಃ ಸಹ ವರ್ತತ ಇತಿ ಸಾಕೇತಂ. ೭ ಸ್ಪರ್ಧಾಂ ಕರ್ತುಂ. ೮ ಸಾಭಿಪ್ರಾಯೈಃ. ೯ ಅಭಿಖ್ಯಾ ನಾಮಶೋಭಯೋಃ. ೧೦ ಭವಿಷ್ಯತ್ತೀರ್ಥಂಕರಸ್ಯ. ೧೧ ಭೂಯಸಃ. ೧೨ ಪ್ರತಿನಿಧಿರಿವಾಚರಿತಂ. ೧೩ ಶುಭಲಗ್ನೇ.

**ಅಧ್ಯವಾಸ್ತಾಂ ತದಾನೀಂ ತೌ ತಾಮಯೋಧ್ಯಾಂ ಮಹರ್ದ್ಧಿಕಾವ್ ।**
**ದಂಪತೀ [೧]ಪರಮಾನಂದಾವಾಪ್ತಸಂಪತ್ಪರಂಪರೌ ॥ ೮೨ ॥**

ಆಗ ಸಕಲಸಂಪತ್ತನ್ನು ಹೊಂದಿ ಆನಂದಪಡುತ್ತಿರುವ ಆ ದಂಪತಿಗಳು ಸಮೃದ್ಧವಾದ ಆ ಅಯೋಧ್ಯೆಯಲ್ಲಿ ವಾಸಮಾಡಿದರು.

**[೨]ವಿಶ್ವದೃಶ್ವೈತಯೋಃ ಪುತ್ರೋ ಜನಿತೇತಿ ಶತಕ್ರತುಃ ।**
**ತಯೋಃ ಪೂಜಾಂ ವ್ಯಧತ್ತೋಚ್ಚೈರಭಿಷೇಕ[೩]ಪುರಃಸರಾಮ್ ॥ ೮೩ ॥**

ಸರ್ವಜ್ಞನು ಈ ದಂಪತಿಗಳಿಗೆ ಪುತ್ರನಾಗಿ ಹುಟ್ಟುವನೆಂದು ತಿಳಿದು ದೇವೇಂದ್ರನು ಆ ದಂಪತಿಗಳಿಗೆ ಅಭಿಷೇಕವನ್ನು ಮಾಡಿ ಬಹಳವಾಗಿ ಪೂಜಿಸಿದನು.

**ಷಡ್ಭಿರ್ಮಾಸೈರಥೈತಸ್ಮಿನ್ಸ್ವರ್ಗಾ[೪]ದವತರಿಷ್ಯತಿ ।**
**ರತ್ನವೃಷ್ಟಿಂ ದಿವೋ ದೇವಾಃ ಪಾತಯಾಮಾಸುರಾದರಾತ್ ॥ ೮೪ ॥**

ತರುವಾಯ ಈ ಸರ್ವಜ್ಞನು ಸ್ವರ್ಗದಿಂದ ಅವತರಿಸುವ ಆರುತಿಂಗಳ ಮೊದಲು ದೇವತೆಗಳು ಆನಂದದಿಂದ ರತ್ನಗಳ ಮಳೆಯನ್ನು ಸುರಿದರು.

**ಸಂಕ್ರಂದನನಿಯುಕ್ತೇನ ಧನದೇನ ನಿಪಾತಿತಾ ।**
**ಸಾಭಾ[೫]ತ್ಸ್ವಸಂಪದೌತ್ಸುಕ್ಯಾತ್ಪ್ರಸ್ಥಿತೇವಾಗ್ರತೋ[೬]ವಿಭೋಃ ॥ ೮೫ ॥**

ದೇವೇಂದ್ರನ ಅಪ್ಪಣೆಯಿಂದ ಕುಬೇರನು ಸುರಿದ ಆ ರತ್ನವೃಷ್ಟಿಯು ಅಹಮಿಂದ್ರನ ಸಂಪತ್ತು, ಕುತೂಹಲದಿಂದ ಅಹಮಿಂದ್ರನ ಮುಂದೆ ಹೊರಟಿತೋ ಎಂಬಂತೆ, ಶೋಭಿಸಿತು.

**[೭]ಹರಿನ್ಮಣಿಮಹಾನೀಲಪದ್ಮರಾಗಾಂಶು[೮]ಕೇಸರೈಃ ।**
**[೯]ಸಾದ್ಯುತತ್ಸುರಚಾಪಶ್ರೀಃ[೧೦]ಪ್ರಗುಣತ್ವಮಿವಾಶ್ರಿತಾ ॥ ೮೬ ॥**

ಪಚ್ಚೆ ನೀಲ ಕೆಂಪು ಈ ರತ್ನಗಳ ಕಾಂತಿಗಳಿಂದ ಆ ರತ್ನವೃಷ್ಟಿಯು ಋಜುತ್ವವನ್ನು ಹೊಂದಿದ ಇಂದ್ರ ಧನುಸ್ಸಿನಂತೆ ಶೋಭಿಸಿತು.

**[೧೧]ರೈಧಾರೈರೈರಾವತಸ್ಥೂಲ[೧೨]ಸಮಾಯತಕರಾಕೃತಿಃ ।**
**ಬಭೌ ಪುಣ್ಯದ್ರುಮಸ್ಯೇವ ಪೃಥುಃ [೧೩]ಪ್ರಾರೋಹಸಂತತಿಃ ॥ ೮೭ ॥**

ದಪ್ಪಕ್ಕೆ ಸರಿಯಾಗಿ ಉದ್ದವಾಗಿರುವ ಐರಾವತಗಜದ ಸೊಂಡಲಿನಂತೆ ಆಕಾರವುಳ್ಳ ಆ ರತ್ನವೃಷ್ಟಿಯ ಧಾರೆಯು ಪುಣ್ಯವೆಂಬ ವೃಕ್ಷದ ದಪ್ಪವಾದ ಬಿಳಲುಗಳ ಸಮೂಹದಂತೆ ಶೋಭಿಸುತ್ತಿದ್ದಿತು.

**[೧೪]ನೀರಂಧ್ರಂ [೧೫]ರೋಧಸೀ ರುದ್ಧ್ವಾ [೧೬]ರಾಯಾಂ ಧಾರಾ ಪತಂತ್ಯಭಾತ್ ।**
**ಸುರದ್ರುಮೈರಿವೋನ್ಮುಕ್ತಾ ಸಾ ಪ್ರಾರೋಹಪರಂಪರಾ ॥ ೮೮ ॥**

ಆಕಾಶಭೂಮಿಗಳನ್ನು ನಿಬಿಡವಾಗಿ ತಡೆದು (ಮಧ್ಯದಲ್ಲಿ ವ್ಯಚ್ಛಿತ್ತಿಯಿಲ್ಲದೆ) ಸುರಿಯುತ್ತಿರುವ ರತ್ನಸುವರ್ಣಗಳ ಮಳೆಯು ಕಲ್ಪವೃಕ್ಷಗಳಿಂದ ಬಿಡಲ್ಪಟ್ಟ ಬಿಳಲುಗಳ ಪಂಕ್ತಿಯಂತೆ, ಶೋಭಿಸಿತು.

**ರೇಜೇ ಹಿರಣ್ಮಯೀ ವೃಷ್ಟಿಃ ಖಾಂಗಣಾನ್ನಿಪತಂತ್ಯಸೌ ।**
**ಜ್ಯೋತಿರ್ಗಣಪ್ರಭೇವೋಚ್ಚೈರಾಯಾಂತೀ ಸುರಸದ್ಮನಃ ॥ ೮೯ ॥**

ಆಕಾಶದಿಂದ ಬೀಳುತ್ತಿರುವ ಈ ಬಂಗಾರಮಯವಾದ ಮಳೆಯು ಸ್ವರ್ಗದಿಂದ ಕೆಳಕ್ಕೆ ಬರುತ್ತಿರುವ ಜ್ಯೋತಿರ್ದೇವತೆಗಳ ಪ್ರಭೆಯಂತೆ, ಶೋಭಿಸಿತು.

೧ ಪರಮಾನಂದಾದಿತ್ಯಪಿ ಪಾಠಃ. ೨ ವಿಶ್ವಂ ದೃಷ್ಟವಾನ್. ೩ ಪುರಃಸರಮಿತ್ಯಪಿ ಪಾಠಃ. ೪ ಆಗಮಿಷ್ಯತಿ ಸತಿ. ೫ ಸ್ವಃ (ಸ್ವರ್ಗಃ) ಇತ್ಯಪಿ ಪಾಠಃ. ೬ ಅಹಮಿಂದ್ರಸ್ಯ. ೭ ಮರಕತಮಣಿಃ. ೮ ಸಂಕರ್ಕೈರಿತ್ಯಪಿ ಪಾಠಃ. ೯ ರತ್ನವೃಷ್ಟಿಃ. ೧೦ ಋಜುಗುಣತ್ವಂ. ೧೧ ಸುವರ್ಣಧಾರಾ. ೧೨ ಸಮಾನಾಯಾಮಃ. ೧೩ ಶಿಫಾ ಸಮೂಹಃ. ೧೪ ನಿಬಿಡಂ. ೧೫ ಭೂಮ್ಯಾಕಾಶೇ. ೧೬ ರತ್ನಸುವರ್ಣಾನಾಂ.

**ಖಾದ್ಭ್ರ[೧]ಷ್ಟಾ ರತ್ನವೃಷ್ಟಿಃ ಸಾ ಕ್ಷಣಮುತ್ಪ್ರೇಕ್ಷಿತಾ ಜನೈಃ ।**
**ಗರ್ಭ[೨]ಸ್ರುತಿರ್ನಿಧೀನಾಂ ಕಿಂ ಜಗತ್ ಕ್ಷೋಭಾದಭೂದಿತಿ ॥ ೯೦ ॥**

ಜನರು ಒಂದು ಕ್ಷಣಕಾಲದವರೆಗೆ ಆಕಾಶದಿಂದ ಸುರಿದ ರತ್ನವೃಷ್ಟಿಯನ್ನು ನೋಡಿ "ಜಗತ್ತಿನ ಕ್ಷೋಭೆಯಿಂದ ನಿಧಿಗಳ ಗರ್ಭಸ್ರಾವವಾಯಿತೋ!" ಎಂದು ತಿಳಿದರು.

**ಖಾಂಗಣೇ ವಿಪ್ರಕೀರ್ಣಾನಿ ರತ್ನಾನಿ ಕ್ಷಣಮಾಬಭುಃ ।**
**[೩]ದ್ರುಶಾಖಿನಾಂ ಫಲಾನೀವ [೪]ಶಾತಿತಾನಿ ಸುರದ್ವಿಪೈಃ ॥ ೯೧ ॥**

ಆಕಾಶದಲ್ಲಿ ಹರಡಿಕೊಂಡಿರುವ ರತ್ನಗಳು, ದೇವಗಜಗಳು ಕೆಡವಿದ ಕಲ್ಪವೃಕ್ಷಗಳ ಫಲಗಳಂತೆ, ಒಂದು ಕ್ಷಣಕಾಲದವರೆಗೆ ಶೋಭಿಸಿದುವು.

**ಖಾಂಗಣೇ ಗಣನಾತೀತಾ ರತ್ನಧಾರಾ ರರಾಜ ಸಾ ।**
**ವಿಪ್ರಕೀರ್ಣೇವ ಕಾಲೇನ ತರಲಾ ತಾರಕಾವಲೀ ॥ ೯೨ ॥**

ಆಕಾಶದಲ್ಲಿ ಅಸಂಖ್ಯಾತವಾದ ಆ ರತ್ನಗಳ ಧಾರೆಯು ಕಾಲ(ರಾತ್ರಿಕಾಲ)ದಲ್ಲಿ ಚದರಿರುವ ನಕ್ಷತ್ರಗಳ ಪಂಕ್ತಿಯಂತೆ, ಶೋಭಿಸಿತು.

**ವಿದ್ಯುದಿಂದ್ರಾಯುಧೇ [೫]ಕಿಂಚಿ[೬]ಜ್ಜಟಿಲೇ ಸುರನಾಯಕೈಃ ।**
**ದಿವೋ [೭]ವಿಗಲಿತೇ ಸ್ಯಾತಾಮಿತ್ಯಸೌ ಕ್ಷಣಮ್ಯೈಕ್ಷ್ಯತ ॥ ೯೩ ॥**

ಈ ರತ್ನವೃಷ್ಟಿಯನ್ನು ನೋಡಿ ದೇವತೆಗಳು ಒಂದುಕ್ಷಣಕಾಲ ಪರಸ್ಪರವಾಗಿ ಸೇರಿಕೊಂಡು ಸ್ವಲ್ಪ ದಟ್ಟವಾಗಿರುವ ಮಿಂಚೂ ಇಂದ್ರಧನುಸ್ಸೂ ಆಕಾಶದಿಂದ ಜಾರಿಬಿದ್ದಿರಬಹುದೆಂದು ತಿಳಿದರು.

**ಕಿಮೇಷಾ [೮]ವೈದ್ಯುತೀ ದೀಪ್ತಿಃ ಕಿಮುತ[೯] ದ್ಯುಸದಾಂ ದ್ಯುತಿಃ ।**
**ಇತಿ ವ್ಯೋಮಚರೈರೈಕ್ಷಿ ಕ್ಷಣಮಾಶಂಕ್ಯ ಸಾಂಬರೇ ॥ ೯೪ ॥**

"ಇದೇನು ಮಿಂಚಿನ ಕಾಂತಿಯೋ? ಅಥವಾ ದೇವತೆಗಳ ಕಾಂತಿಯೋ?" ಎಂದು ಆಕಾಶಚಾರಿಗಳಾದ ವಿದ್ಯಾಧರರು ಮೊದಲಾದವರು ಒಂದು ಕ್ಷಣ ಕಾಲದವರೆಗೆ ಸಂಶಯಪಟ್ಟು ನೋಡಿದರು.

**ಸೈಷಾ ಹಿರಣ್ಮಯೀ ವೃಷ್ಟಿರ್ಧನೇಶೇನ ನಿಪಾತಿತಾ ।**
**ವಿಭೋರ್ಹಿರಣ್ಯಗರ್ಭತ್ವಮಿವ ಬೋಧಯಿತುಂ ಜಗತ್ ॥ ೯೫ ॥**

ಪ್ರಭು(ವೃಷಭತೀರ್ಥಂಕರ)ವಿನ ಹಿರಣ್ಯಗರ್ಭತ್ವವನ್ನು ಲೋಕಕ್ಕೆ ಬೋಧಿಸುವುದಕ್ಕೋಸ್ಕರವೋ ಎಂಬಂತೆ ಕುಬೇರನು ಆ ಈ ರತ್ನವೃಷ್ಟಿಯನ್ನು ಮಾಡಿದನು.

**ಷಣ್ಮಾಸಾನಿತಿ ಸಾಪಪ್ತತ್ಪುಣ್ಯೇ ನಾಭಿನೃಪಾಲಯೇ ।**
**ಸ್ವರ್ಗಾವತರಣಾದ್ಭರ್ತುಃ ಪ್ರಾಕ್ತರಾಂ ದ್ಯುಮ್ನಸಂತತಿಃ ॥ ೯೬ ॥**

ಸ್ವಾಮಿಯು ಸ್ವರ್ಗದಿಂದ ಅವತರಿಸುವುದಕ್ಕಿಂತ ಮೊದಲು ಆರುತಿಂಗಳ ವರೆಗೆ ಪುಣ್ಯಮಯವಾದ ನಾಭಿರಾಜನ ಗೃಹದಲ್ಲಿ ರತ್ನಬಂಗಾರಗಳ ಮಳೆಯು ಸುರಿಯಿತು.

**ಪಶ್ಚಾಚ್ಚ ನವಮಾಸೇಷು ವಸುಧಾರಾ ತಥಾ ಮತಾ ।**
**ಅಹೋ ಮಹಾನ್ಪ್ರಭಾವೋಸ್ಯ ತೀರ್ಥಕೃತ್ತ್ವಸ್ಯ ಭಾವಿನಃ ॥ ೯೭ ॥**

ತದನಂತರ(ಸ್ವಾಮಿಯು ಗರ್ಭಕ್ಕವತರಿಸಿದ ಮೊದಲ್ಗೊಂಡು)ವೂ ಒಂಬತ್ತು ತಿಂಗಳ ವರೆಗೆ ಹಾಗೆಯೇ ರತ್ನವೃಷ್ಟಿಯಾಯಿತು. ಮುಂದೆ ಉಂಟಾಗುವ ತೀರ್ಥಕರತ್ವದ ಮಹಿಮೆಯು ಅತಿಶಯವಾದುದು. ಅಹೋ!

**ರತ್ನಗರ್ಭಾ ಧರಾ ಜಾತಾ ಹರ್ಷಗರ್ಭಾಃ ಸುರೋತ್ತಮಾಃ ।**
**[೧]ಕ್ಷೋಭ[೨]ಮಾಯಾಜ್ಜಗ[೩]ದ್ಗರ್ಭೋ ಗರ್ಭಾಧಾನೋತ್ಸವೇ ವಿಭೋಃ ॥**

ಸ್ವಾಮಿಯ ಗರ್ಭಾವತರಣೋತ್ಸವದಲ್ಲಿ ಭೂಮಿಯು ರತ್ನಗರ್ಭವಾಯಿತು. ದೇವತೆಗಳು ಹರ್ಷಗರ್ಭರಾದರು. ಹರ್ಷಚಿತ್ತರಾದರೆಂದು ಭಾವವು. ಜಗತ್ತಿನ (ಜನಗಳ) ಗರ್ಭವು ಕ್ಷೋಭೆಯನ್ನು ಹೊಂದಿತು.

**ಸಿಕ್ತಾ ಜಲಕಣೈರ್ಗಾಂಗೈರ್ಮಹೀರತ್ನೈರಲಂಕೃತಾ ।**
**ಗರ್ಭಾಧಾನೇ ಜಗದ್ಭರ್ತುರ್ಗರ್ಭಿಣೀವಾಭವದ್ಗುರುಃ ॥ ೯೯ ॥**

ಜಗತ್ಪತಿಯಾದ ಸ್ವಾಮಿಯ ಗರ್ಭಾವತಾರಕಾಲದಲ್ಲಿ ಗಂಗಾನದಿಯ ಜಲಬಿಂದುಗಳಿಂದ ಸೇಚಿಸಲ್ಪಟ್ಟ ಮತ್ತು ರತ್ನಗಳಿಂದ ಅಲಂಕರಿಸಲ್ಪಟ್ಟ ಭೂಮಿಯು ಗರ್ಭಿಣಿಯಂತೆ ಪುಷ್ಟವಾಯಿತು.

**ರತ್ನೈಃ ಕೀರ್ಣಾ ಪ್ರಸೂನೈಶ್ಚ ಸಿಕ್ತಾ [೪]ಗಂಧಾಂಬುಭಿರ್ಬಭೌ ।**
**ತದಾ [೫]ಸ್ನಾತಾನುಲಿಪ್ತೇವ ಭೂಷಿತಾಂಗೀ ಧರಾಂಗನಾ ॥ ೧೦೦ ॥**

ರತ್ನಗಳಿಂದಲೂ ಪುಷ್ಪಗಳಿಂದಲೂ ವ್ಯಾಪ್ತವಾದ ಸುಗಂಧಜಲಗಳಿಂದ ಸೇಚಿಸಲ್ಪಟ್ಟ ಭೂಮಿಯು, ಮೊದಲು ಸ್ನಾನವನ್ನು ಮಾಡಿ ತರುವಾಯ ಲೇಪನೆಯನ್ನು ಮಾಡಿಕೊಂಡು ಅಲಂಕೃತಳಾದ ಸ್ತ್ರೀಯಂತೆ, ಶೋಭಿಸಿತು.

**ಸಮ್ಮತಾ ನಾಭಿರಾಜಸ್ಯ ಪುಷ್ಪವತ್ಯರಜಸ್ವಲಾ ।**
**ವಸುಂಧರಾ ತದಾ ಭೇಜೇ ಜಿನಮಾತು[೬]ರನುಕ್ರಿಯಾಮ್ ॥ ೧೦೧ ॥**

ಸ್ವಾಮಿಯ ಗರ್ಭಾವತಾರಕಾಲದಲ್ಲಿ ನಾಭಿರಾಜನಿಗೆ ಸಮ್ಮತವೂ ಪುಷ್ಪಗಳುಳ್ಳುದೂ ಧೂಳಿಲ್ಲದುದೂ ಆದ ಪೃಥ್ವಿಯು ಗರ್ಭವತಿಯೂ ರಜೋದರ್ಶನವಿಲ್ಲದವಳೂ ಆದ ಜಿನಮಾತೃವಿನ ಸಾದೃಶ್ಯವನ್ನು ಹೊಂದಿತು.

**ಅಥ ಸುಪ್ತೈಕದಾ ದೇವೀ ಸೌಧೇ ಮೃದುನಿ ತಲ್ಪಕೇ ।**
**ಗಂಗಾತರಂಗಸಚ್ಛಾಯೇ ದುಕೂಲಪ್ರಚ್ಛದೋಜ್ಜ್ವಲೇ ॥ ೧೦೨ ॥**

ತರುವಾಯ ಒಂದುದಿನ ಮರುದೇವಿಯು ಉಪ್ಪರಿಗೆಯಲ್ಲಿ ಗಂಗಾನದಿಯ ತೆರೆಮಾಲೆಗೆ ಸದೃಶವೂ ಪಟ್ಟೆಯ ಮೇಲುವಸ್ತ್ರದಿಂದ ಪ್ರಕಾಶಮಾನವೂ ಕೋಮಲವೂ ಆದ ಹಾಸಿಗೆಯಲ್ಲಿ ಮಲಗಿದ್ದಳು.

**ಸಾಪಶ್ಯತ್ಷೋಡಶಸ್ವಪ್ನಾನಿಮಾನ್ ಶುಭಫಲೋದಯಾನ್ ।**
**ನಿಶಾಯಾಃ ಪಶ್ಚಿಮೇ ಯಾಮೇ ಜಿನಜನ್ಮಾನುಶಂಸಿನಃ ॥ ೧೦೩ ॥**

ಮರುದೇವಿಯು ಬೆಳಗಿನ ಝಾವದಲ್ಲಿ ಜಿನೇಶ್ವರನ ಉತ್ಪತ್ತಿಯನ್ನು ಸೂಚಿಸುವ ಮತ್ತು ಶುಭಫಲಗಳನ್ನು ಕೊಡುವ ಹದಿನಾರು ಸ್ವಪ್ನಗಳನ್ನು ಕಂಡಳು.

**ಗಜೇಂದ್ರಮೈಂದ್ರಮಾಮಂದ್ರಬೃಂಹಿತಂ [೭]ತ್ರಿಮದಸ್ರುತಮ್ ।**
**ಧ್ವನಂತಮಿವ [೮]ಸಾಸಾರಂ ಸಾ ದದರ್ಶ ಶರದ್ಘನಮ್ ॥ ೧೦೪ ॥**

ಆ ಮರುದೇವಿಯು ಒಂದನೆಯ ಸ್ವಪ್ನದಲ್ಲಿ ವೇಗದಿಂದ ಜಲವನ್ನು ವರ್ಷಿಸುವುದೂ ಶಬ್ದಮಾಡುತ್ತಿರುವುದೂ ಆದ ಶರತ್ಕಾಲದ ಮೇಘವನ್ನೋಪಾದಿಯಲ್ಲಿ, ಗಂಭೀರವಾಗಿ ಗರ್ಜಿಸುತ್ತಿರುವುದೂ ಎರಡು ಕೆನ್ನೆಗಳಲ್ಲಿಯೂ ಮೂಗಿನ ಅಗ್ರಭಾಗದಲ್ಲಿಯೂ ಮದವನ್ನು ಸುರಿಸುತ್ತಿರುವುದೂ ಆದ ಇಂದ್ರನ ಐರಾವತಗಜವನ್ನು ಕಂಡಳು.

**ಗವೇಂದ್ರಂ ದುಂದುಭಿಸ್ಕಂಧಂ ಕುಮುದಾಪಾಂಡುರದ್ಯುತಿಮ್ ।**
**ಪೀಯೂಷರಾಶಿ[೯]ನೀಕಾಶಂ ಸಾಪಶ್ಯನ್ಮಂದ್ರನಿಃಸ್ವನಮ್ ॥ ೧೦೫ ॥**

೧ ಭ್ರಷ್ಟಾ ಇತ್ಯಪಿ ಪಾಠಃ. ೨ ಸ್ರಾವಃ. ೩ ಕಲ್ಪವೃಕ್ಷಾಣಾಂ. ೪ ಪಾತಿತಾನಿ. ೫ ಕಿಂಚಿದಿತ್ಯಪಿ ಪಾಠಃ. ೬ ಘನೀಭೂತೇ. ೭ ಪತಿತೇ. ೮ ವಿದ್ಯುತ್ಸಂಬಂಧಿನೀ. ೯ ದೇವಾನಾಂ.

೧ ಕೋಲಾಹಲಂ. ೨ ಅಗಚ್ಛತ್. ೩ ಚೇತಃ. ೪ ಗಂಗಾಂಬುಭಿರಿತ್ಯಪಿ ಪಾಠಃ. ೫ ಪೂರ್ವಂ ಸ್ನಾತಾ ಪಶ್ಚಾದನುಲಿಪ್ತಾ ಸ್ನಾತಾನುಲಿಪ್ತಾ. ೬ ಸಾದೃಶ್ಯಂ. ೭ ಕಪೋಲದ್ವಯನಾಸಿಕಾಗ್ರಮಿತಿ ತ್ರಿಸ್ಥಾನಮದಸ್ರಾವಿಣಂ. ೮ ವೇಗವದ್ವರ್ಷಸಹಿತಂ. ೯ ಸದೃಶಂ.

ಆ ಮರುದೇವಿಯು ಎರಡನೆಯ ಸ್ವಪ್ನದಲ್ಲಿ ಭೇರಿಯಂತೆ ಹೆರಳುಳ್ಳುದೂ ಕುಮುದಪುಷ್ಪದಂತೆ ಶುಭ್ರವಾದ ಕಾಂತಿಯುಳ್ಳುದೂ ಅಮೃತದ ರಾಶಿಗೆ ಸಮಾನವಾದುದೂ ಗಂಭೀರವಾದ ಶಬ್ದವುಳ್ಳುದೂ ಆದ ದೊಡ್ಡ ಗೂಳಿಯನ್ನು ಕಂಡಳು.

**ಮೃಗೇಂದ್ರಮಿಂದುಸಚ್ಛಾಯವಪುಷಂ ರಕ್ತಕಂಧರಮ್ ।**
**ಜ್ಯೋತ್ಸ್ನಯಾ ಸಂಧ್ಯಯಾ ಚೈವ [೧]ಘಟಿತಾಂಗಮಿವೈಕ್ಷತ ॥ ೧೦೬ ॥**

ಮೂರನೆಯ ಸ್ವಪ್ನದಲ್ಲಿ ಚಂದ್ರನಿಗೆ ಸಮಾನವಾದ ಶರೀರವುಳ್ಳುದೂ ಕೆಂಪಾದ ಕಂಠವುಳ್ಳುದೂ ಬೆಳದಿಂಗಳಿಂದಲೂ ಸಂಧ್ಯಾಕಾಲದಿಂದಲೂ ರಚಿಸಿದ ಶರೀರವುಳ್ಳಂತಿರುವುದೂ ಆದ ಸಿಂಹವನ್ನು ಕಂಡಳು.

**[೨]ಪದ್ಮಾಂ ಪದ್ಮಮಯೋತ್ತುಂಗವಿಷ್ಟರೇ [೩]ಸುರವಾರಣೈಃ ।**
**ಸ್ನಾಪ್ಯಾಂ ಹಿರಣ್ಮಯೈಃ ಕುಂಭೈರದರ್ಶತ್ಸ್ವಾಮಿವ ಶ್ರಿಯಮ್ ॥ ೧೦೭ ॥**

ನಾಲ್ಕನೆಯ ಸ್ವಪ್ನದಲ್ಲಿ ಉನ್ನತವಾದ ಕಮಲಪೀಠದಲ್ಲಿ ದೇವಗಜಗಳಿಂದ ಬಂಗಾರದ ಕಲಶಗಳಿಂದ ಅಭಿಷೇಕವನ್ನು ಮಾಡಿಸಿಕೊಳ್ಳುತ್ತಿರುವ ಮತ್ತು ತನ್ನ ಸಂಪತ್ತಿನಂತೆ ಸಂಪತ್ತುಳ್ಳ ಲಕ್ಷ್ಮಿಯನ್ನು ಕಂಡಳು.

**ದಾಮನೀ ಕುಸುಮಾಮೋದಸಮಾಲಗ್ನಮಹಾಲಿನೀ ।**
**ತಜ್ಝಂಕೃತೈರಿವಾರಬ್ಧಗಾನೇ ಸಾನಂದಮೈಕ್ಷತ ॥ ೧೦೮ ॥**

ಐದನೆಯ ಸ್ವಪ್ನದಲ್ಲಿ ಕುಸುಮಗಳ ಪರಿಮಳಕ್ಕೆ ಆಸಕ್ತವಾಗಿ ಬಂದ ದೊಡ್ಡ ಭ್ರಮರಗಳುಳ್ಳುವೂ ಆ ಭ್ರಮರಗಳ ಶಬ್ದಗಳಿಂದ ಗಾನವನ್ನು ಮಾಡುವುದಕ್ಕೆ ಆರಂಭಿಸಿದುವೋ ಎಂಬಂತಿರುವುವೂ ಆದ ಎರಡು ಪುಷ್ಪಮಾಲಿಕೆಗಳನ್ನು ಆನಂದವಾಗಿ ಕಂಡಳು.

**ಸಮಗ್ರಬಿಂಬಮುಜ್ಜ್ಯೋತ್ಸ್ನಂ ತಾರಾಧೀಶಂ ಸತಾರಕಮ್ ।**
**ಸ್ಮೇರಂ ಸ್ವಮಿವ ವಕ್ತ್ರಾಬ್ಜಂ ಸಮೌಕ್ತಿಕಮಲೋಕಯತ್ ॥ ೧೦೯ ॥**

ಆರನೆಯ ಸ್ವಪ್ನದಲ್ಲಿ ಸಂಪೂರ್ಣವಾದ ಮಂಡಲವುಳ್ಳವನೂ ಪಸರಿಸುತ್ತಿರುವ ಬೆಳದಿಂಗಳುಳ್ಳವನೂ ನಕ್ಷತ್ರಗಳಿಂದ ಸುತ್ತಲ್ಪಟ್ಟವನೂ ಮುತ್ತುಗಳೊಡನೆ ಕೂಡಿಕೊಂಡಿರುವ ವಿಕಸಿತವಾದ ತನ್ನ ಮುಖ ಕಮಲದಂತಿರುವವನೂ ಆದ ಚಂದ್ರನನ್ನು ಕಂಡಳು.

**ವಿಧೂತಧ್ವಾಂತಮುದ್ಯಂತಂ ಭಾಸ್ವಂತಮುದಯಾಚಲಾತ್ ।**
**ಶಾತಕುಂಭಮಯಂ ಕುಂಭಮಿವಾದ್ರಾಕ್ಷೀತ್ಸ್ವಮಂಗಲೇ ॥ ೧೧೦ ॥**

ಏಳನೆಯ ಸ್ವಪ್ನದಲ್ಲಿ ಅಂಧಕಾರವನ್ನು ಹೋಗಲಾಡಿಸಿ ಉದಯಪರ್ವತದಿಂದ ಉದಯಿಸುತ್ತಿರುವ ಸೂರ್ಯನನ್ನು ತನ್ನ ಮಂಗಲನಿಮಿತ್ತವಾಗಿ ಬಂಗಾರಮಯವಾದ ಕುಂಭವನ್ನೋಪಾದಿಯಲ್ಲಿ ಕಂಡಳು.

**ಕುಂಭೌ ಹಿರಣ್ಮಯೌ ಪದ್ಮಪಿಹಿತಾಸ್ಯೌ ವ್ಯಲೋಕತ ।**
**ಸ್ತನಕುಂಭಾವಿವಾತ್ಮೀಯೌ ಸಮಾಸಕ್ತಕರಾಂಬುಜೌ ॥ ೧೧೧ ॥**

ಎಂಟನೆಯ ಸ್ವಪ್ನದಲ್ಲಿ ಕೈಗಳ ಸ್ಪರ್ಶವುಳ್ಳ ತನ್ನ ಕುಚಗಳಂತಿರುವುದೂ ಬಾಯಿಯಲ್ಲಿ ಕಮಲಗಳುಳ್ಳುದೂ ಆದ ಎರಡು ಬಂಗಾರದ ಕುಂಭಗಳನ್ನು ಕಂಡಳು.

**ಝಷೌ ಸರಸಿ ಸಂಫುಲ್ಲಕುಮುದೋತ್ಪಲಪಂಕಜೇ ।**
**ಸಾಪಶ್ಯನ್ನಯನಾ[೪]ಯಾಮಂ ದರ್ಶಯಂತಾವಿ[೫]ವಾತ್ಮನಃ ॥ ೧೧೨ ॥**

೧ ರಚಿತಂ. ೨ ಲಕ್ಷ್ಮೀಂ. ೩ ಸುರಗಜೈಃ, ಸುರಗಜೈಶ್ಚ ಸಿಂಹಶಾರ್ದೂಲನಾಗಾದ್ಯಾಃ ಪುಂಸಿ ಶ್ರೇಷ್ಠಾರ್ಥಗೋಚರಾ ಇತ್ಯಮರಃ. ೪ ದೈರ್ಘ್ಯಂ. ೫ ಮರುದೇವ್ಯಾ ಇತ್ಯರ್ಥಃ.

ಒಂಬತ್ತನೆಯ ಸ್ವಪ್ನದಲ್ಲಿ ವಿಕಸಿತವಾದ ಕುಮುದಪುಷ್ಪಗಳೂ ನೈದಿಲೆಗಳೂ ಕಮಲಗಳೂ ಉಳ್ಳ ಸರೋವರದಲ್ಲಿ ತನ್ನ ಕಣ್ಣುಗಳ ಉದ್ದಳತೆಯನ್ನು ತೋರಿಸುವುವುಗಳಂತಿರುವ ಎರಡು ಮೀನುಗಳನ್ನು ಕಂಡಳು.

**[೧]ಸರತ್ಸರೋಜಕಿಂಜಲ್ಕಪಿಂಜರೋದಕಮೈಕ್ಷತ ।**
**ಸುವರ್ಣದ್ರವಸಂಪೂರ್ಣಮಿವ ದಿವ್ಯಂ ಸರೋವರಮ್ ॥ ೧೧೩ ॥**

ಹತ್ತನೆಯ ಸ್ವಪ್ನದಲ್ಲಿ ಚಲಿಸುತ್ತಿರುವ ಕಮಲಗಳ ಕುಸುಮಧೂಳಿನಿಂದ ಹಳದಿಬಣ್ಣವಾದ ನೀರುಳ್ಳುದೂ ಬಂಗಾರದ ರಸದಿಂದ ತುಂಬಿರುವ ಸ್ವರ್ಗದ ಸರೋವರದಂತಿರುವುದೂ ಆದ ಸರೋವರವನ್ನು ಕಂಡಳು.

**ಕ್ಷುಭ್ಯಂತಮಬ್ಧಿಮುದ್ವೇಲಂ ಚಲತ್ಕಲ್ಲೋಲ[೨]ಕಾಹಲಮ್ ।**
**ಸಾದರ್ಶಚ್ಛೀಕರೈ[೩]ರ್ಮೋಕ್ತುಮಟ್ಟಹಾಸಮಿವೋದ್ಯತಮ್ ॥ ೧೧೪ ॥**

ಹನ್ನೊಂದನೆಯ ಸ್ವಪ್ನದಲ್ಲಿ ಆಲೋಲಕಲ್ಲೋಲವಾಗುತ್ತಿರುವುದೂ ದಡವನ್ನು ಮೀರಿಬರುತ್ತಿರುವುದೂ ಚಲಿಸುತ್ತಿರುವ ತೆರೆಮಾಲೆಗಳ ಅವ್ಯಕ್ತವಾದ ಶಬ್ದವುಳ್ಳುದೂ ನೀರಿನ ತುಂತುರುಗಳಿಂದ ನಗುವುದಕ್ಕೆ ಪ್ರಯತ್ನಪಟ್ಟಿದೆಯೋ ಎಂಬಂತಿರುವುದೂ ಆದ ಸಮುದ್ರವನ್ನು ಕಂಡಳು.

**[೪]ಸೈಂಹಮಾಸನಮುತ್ತುಂಗಂ ಸ್ಫುರನ್ಮಣಿಹಿರಣ್ಮಯಮ್ ।**
**ಸಾಪಶ್ಯನ್ಮೇರುಶೃಂಗಸ್ಯ [೫]ವೈದಗ್ಧೀಂ ದಧದೂರ್ಜಿತಾಮ್ ॥ ೧೧೫ ॥**

ಹನ್ನೆರಡನೆಯ ಸ್ವಪ್ನದಲ್ಲಿ ಪ್ರಕಾಶಮಾನವಾದ ರತ್ನಬಂಗಾರಮಯವೂ ಉನ್ನತವೂ ಮಹಾಮೇರುಪರ್ವತದ ಶಿಖರದಂತೆ ಉತ್ಕೃಷ್ಟಶೋಭೆಯುಳ್ಳುದೂ ಆದ ಸಿಂಹಾಸನವನ್ನು ಕಂಡಳು .

**[೬]ನಾಕಾಲಯಂ ವ್ಯಲೋಕಿಷ್ಟ ಪರಾರ್ಧ್ಯಮಣಿಭಾಸುರಮ್ ।**
**ಸ್ವಸೂನೋಃ [೭]ಪ್ರಸವಾಗಾರಮಿವ ದೇವೈ[೮]ರುಪಾಹೃತಮ್ ॥ ೧೧೬ ॥**

ಹದಿಮೂರನೆಯ ಸ್ವಪ್ನದಲ್ಲಿ ಶ್ರೇಷ್ಠವಾದ ರತ್ನಗಳಿಂದ ಪ್ರಕಾಶಮಾನವೂ ದೇವತೆಗಳು ಕೈಗಾಣಿಕೆಯಾಗಿ ತಂದ ತನ್ನ ಪುತ್ರನ ಪ್ರಸೂತಿಕಾಗೃಹವೋ ಎಂಬಂತಿರುವುದೂ ಆದ ವಿಮಾನವನ್ನು ಕಂಡಳು.

**ಫಣೀಂದ್ರಭವನಂ ಭೂಮಿಮುದ್ಭಿದ್ಯೋದ್ಗತಮೈಕ್ಷತ ।**
**ಪ್ರಾಗ್ದೃಷ್ಟಸ್ವರ್ವಿಮಾನೇನ ಸ್ಪರ್ಧಾಂ ಕರ್ತುಮಿವೋದ್ಯತಮ್ ॥ ೧೧೭ ॥**

ಹದಿನಾಲ್ಕನೆಯ ಸ್ವಪ್ನದಲ್ಲಿ ಮೊದಲು ಕಂಡ ಸ್ವರ್ಗದ ವಿಮಾನದೊಡನೆ ಹೋರಾಡುವುದಕ್ಕೋಸ್ಕರ ಪ್ರಯತ್ನಪಡುವಂತಿರುವುದೂ ಭೂಮಿಯನ್ನು ಭೇದಿಸಿ ಮೇಲಕ್ಕೆದ್ದಿರುವುದೂ ಆದ ಹುತ್ತವನ್ನು ನೋಡಿದಳು.

**ರತ್ನಾನಾಂ ರಾಶಿಮುತ್ಸರ್ಪದಂಶುಪಲ್ಲವಿತಾಂಬರಮ್ ।**
**ಸಾ [೯]ನಿದಧ್ಯೌ ಧರಾದೇವ್ಯಾ ನಿಧಾನಮಿವ ದರ್ಶಿತಮ್ ॥ ೧೧೮ ॥**

ಹದಿನೈದನೆಯ ಸ್ವಪ್ನದಲ್ಲಿ ಪಸರಿಸುತ್ತಿರುವ ಕಿರಣಗಳಿಂದ ಆಕಾಶವನ್ನು ವ್ಯಾಪಿಸಿಕೊಂಡಿರುವುದೂ ಭೂದೇವಿಯಿಂದ ತೋರಿಸಲ್ಪಟ್ಟ ನಿಧಿಯೋ ಎಂಬಂತಿರುವುದೂ ಆದ ರತ್ನಗಳ ರಾಶಿಯನ್ನು ಕಂಡಳು.

**ಜ್ವಲದ್ಭಾಸುರನಿರ್ಧೂಮವಪುಷಂ[೧೦]ವಿಷಮಾರ್ಚಿಷಮ್ ।**
**ಪ್ರತಾಪಮಿವ ಪುತ್ರಸ್ಯ [೧೧]ಮೂರ್ತಿರೂಪಂ [೧೨]ನ್ಯಚಾಯತ ॥ ೧೧೯ ॥**

ಹದಿನಾರನೆಯ ಸ್ವಪ್ನದಲ್ಲಿ ತನ್ನ ಪುತ್ರನ ಮೂರ್ತೀಭೂತವಾದ ಪ್ರತಾಪವೋ ಎಂಬಂತಿರುವುದೂ ಪ್ರಕಾಶಮಾನವೂ ಧೂಮರಹಿತವೂ ಆದ ಆಕಾರವುಳ್ಳ ಬೆಂಕಿಯನ್ನು ಕಂಡಳು.

೧ ತರತ್ಸರೋಜೇತ್ಯಪಿ ಪಾಠಃ. ೨ ಅವ್ಯಕ್ತಶಬ್ದಂ. ೩ ಕರ್ತುಮಿತ್ಯರ್ಥಃ. ೪ ಸಿಂಹಸ್ಯ ಸಂಬಂಧಿ. ೫ ಶೋಭಾಂ. ೬ ವಿಮಾನಂ. ೭ ಪ್ರಸೂತಿಕಾಗೃಹಂ. ೮ ಉಪಾಯನೀಕೃತ್ಯಾನೀತಂ. ೯ ದದರ್ಶ. ೧೦ ಸಪ್ತಾರ್ಚಿಷಂ. ೧೧ ಮೂರ್ತೀಭೂತಮಿತ್ಯಪಿ ಪಾಠಃ. ೧೨ ಐಕ್ಷತೇತ್ಯರ್ಥಃ.

**[೧]ನ್ಯಶಾಮಯಚ್ಚ ತುಂಗಾಂಗಂ ಪುಂಗವಂ ರುಕ್ಮಸಚ್ಛವಿಮ್ ।**
**ಪ್ರವಿಶಂತಂ ಸ್ವವಕ್ತ್ರಾಬ್ಜಂ ಸ್ವಪ್ನಾಂತೇ ಪೀನಕಂಧರಮ್ ॥ ೧೨೦ ॥**

ಈ ಹದಿನಾರುಸ್ವಪ್ನಗಳನ್ನು ಕಂಡಮೇಲೆ ಉನ್ನತವಾದ ಶರೀರವುಳ್ಳುದೂ ಬಂಗಾರದಂತೆ ಕಾಂತಿಯುಳ್ಳುದೂ ಪುಷ್ಟವಾದ ಕಂಠ(ಕುತ್ತಿಗೆ)ವುಳ್ಳುದೂ ತನ್ನ ಮುಖಕಮಲವನ್ನು ಪ್ರವೇಶಮಾಡುತ್ತಿರುವುದೂ ಆದ ಗೂಳಿಯನ್ನು ಕಂಡಳು.

**ತತಃ [೨]ಪ್ರಾಬೋಧಿಕೈಸ್ತೂರ್ಯೈರ್ಧ್ವನದ್ಭಿಃ ಪ್ರತ್ಯಬುದ್ಧ ಸಾ ।**
**ವಂದಿನಾಂ ಮಂಗಲೋದ್ಗೀತೀಃ ಶೃಣ್ವತೀ[೩]ತಿ ಸುಮಂಗಲಾ ॥ ೧೨೧ ॥**

ತರುವಾಯ ಎಚ್ಚರಿಸುವುದಕ್ಕೆ ನಿಯಮಿಸಿರುವ ವಾದ್ಯಗಳ ಶಬ್ದಗಳಿಂದ ಸ್ತುತಿಪಾಠಕರ ಮುಂದೆ ಹೇಳುವಪ್ರಕಾರವಾದ ಮಂಗಲಗಾನಗಳನ್ನು ಕೇಳುತ್ತಿರುವ ಸುಮಂಗಲೆಯಾದ ಆ ಮರುದೇವಿಯು ಎಚ್ಚತ್ತಳು.

**ಸುಖಪ್ರಬೋಧ[೪]ಮಾಧಾತುಮೇತಸ್ಯಾಃ ಪುಣ್ಯಪಾಠಕಾಃ ।**
**ತದಾ ಪ್ರಪೇಠುರಿತ್ಯುಚ್ಚೈರ್ಮಂಗಲಾನ್ಯಸ್ಖಲದ್ಗಿರಃ ॥ ೧೨೨ ॥**

ತಡೆಯಿಲ್ಲದಿರುವ ವಚನವುಳ್ಳ ಪುಣ್ಯಪಾಠಕರು ಈ ಮರುದೇವಿಗೆ ಸುಖವಾಗಿ ಎಚ್ಚರಿಕೆಯನ್ನುಂಟು ಮಾಡುವುದಕ್ಕೋಸ್ಕರ ಆಗ ಮಂಗಲಮಯವಾದ ಪದ್ಯಗಳನ್ನು ಗಟ್ಟಿಯಾಗಿ ಪಠನಮಾಡಿದರು.

**ಪ್ರಬೋಧಸಮಯೋಽಯಂ ತೇ ದೇವಿ ಸಮ್ಮುಖಮಾಗತಃ ।**
**ರಚಯನ್ [೫]ದರವಿಶ್ಲಿಷ್ಟದಲೈರಬ್ಜೈರಿವಾಂಜಲಿಮ್ ॥ ೧೨೩ ॥**

''ಎಲೈ ದೇವಿಯೇ! ಈ ಎಚ್ಚರವಾಗುವ ಸಮಯವು ಸ್ವಲ್ಪ ಅರಳಿರುವ ಕಮಲಗಳಿಂದ ಪುಷ್ಪಾಂಜಲಿಯನ್ನು ಮಾಡುತ್ತಿದೆಯೋ ಎಂಬಂತೆ ನಿನ್ನ ಸಮ್ಮುಖಕ್ಕೆ ಬಂದಿದೆ.

**ವಿಭಾವರೀ ವಿಭಾತ್ಯೇಷಾ ದಧತೀ ಬಿಂಬಮೈಂದವಮ್ ।**
**ಜಿತಂ ತ್ವನ್ಮುಖಕಾಂತ್ಯೇವ ಗಲಜ್ಜ್ಯೋತ್ಸ್ನಾ[೬]ಪರಿಚ್ಛದಮ್ ॥ ೧೨೪ ॥**

ನಿನ್ನ ಮುಖಕಾಂತಿಯಿಂದ ಜಯಿಸಲ್ಪಟ್ಟಿದೆಯೋ ಎಂಬಂತಿರುವುದೂ ನಾಶವಾಗುತ್ತಿರುವ ಬೆಳದಿಂಗಳೆಂಬ ಪರಿವಾರವುಳ್ಳ ಚಂದ್ರಬಿಂಬವನ್ನು ಧರಿಸಿಕೊಂಡಿರುವುದೂ ಆದ ಈ ರಾತ್ರಿಯು ಶೋಭಿಸುತ್ತಿದೆ.

**ವಿಚ್ಛಾಯತಾಂ ಗತೇ [೭]ಚಂದ್ರಬಿಂಬೇ [೮]ಮಂದೀಕೃತಾದರಮ್ ।**
**ಜಗದಾನಂದಯತ್ವದ್ಯ [೯]ವಿಬುದ್ಧಂ ತ್ವನ್ಮುಖಾಂಬುಜಮ್ ॥ ೧೨೫ ॥**

ಕಾಂತಿಶೂನ್ಯವಾದ ಚಂದ್ರಬಿಂಬದಲ್ಲಿ ಪ್ರೀತಿಯನ್ನು ಕಡಿಮೆಮಾಡಿದ ಜಗತ್ತನ್ನು ಈಗ ವಿಕಸಿತವಾದ ನಿನ್ನ ಮುಖವೆಂಬ ಕಮಲವು ಆನಂದಪಡಿಸಲಿ.

**ದಿಗಂಗನಾಮುಖಾನೀಂದುಃ ಸಂಸ್ಪೃಶನ್ನಸ್ಫುಟೈಃ ಕರೈಃ ।**
**[೧೦]ಆಪಿಪೃಚ್ಛಿಷತೇ ನೂನಂ ಪ್ರವಸನ್ಸ್ವಪ್ರಿಯಾಂಗನಾಃ ॥ ೧೨೬ ॥**

ಪ್ರವಾಸವನ್ನು ಮಾಡಿದ ಚಂದ್ರನು ತನ್ನ ಅಸ್ಪಷ್ಟವಾದ ಕಿರಣಗಳಿಂದ ದಿಕ್ಕುಗಳೆಂಬ ಸ್ತ್ರೀಯರ ಮುಖಗಳನ್ನು ಮುಟ್ಟಿ ತನ್ನ ಪ್ರಿಯಾಂಗನೆಯರನ್ನು ನಿಜವಾಗಿಯೂ ಒಡಂಬಡಿಸಲಿಚ್ಛಿಸುತ್ತಾನೆ. ಚಂದ್ರನು ಅಸ್ತಂಗತನಾಗುತ್ತಿದ್ದಾನೆಂದು ಭಾವವು.

**ತಾರಾತತಿರಿಯಂ ವ್ಯೋಮ್ನಿ [೧೧]ವಿರಲಂ ಲಕ್ಷ್ಯತೇಧುನಾ ।**
**ವಿಪ್ರಕೀರ್ಣೇವ ಹಾರಶ್ರೀರ್ಯಾಮಿನ್ಯಾ ಗತಿಸಂಭ್ರಮಾತ್ ॥ ೧೨೭ ॥**

ಈಗ ಆಕಾಶದಲ್ಲಿ ಸ್ವಲ್ಪವಾಗಿ ಕಾಣುತ್ತಿರುವ ಈ ನಕ್ಷತ್ರಗಳ ಪಂಕ್ತಿಯು, ರಾತ್ರಿಯೆಂಬ ಸ್ತ್ರೀಯ ಗಮನದ ಸಂಭ್ರಮದಿಂದ ಚದರಿದ ಮುಕ್ತಾಹಾರದ ಶೋಭೆಯೋ ಎಂಬಂತೆ, ತೋರುತ್ತದೆ.

**[೧]ರೂಯತೇ ಕಲಮಾಮಂದ್ರಮಿತಃ ಸರಸಿ ಸಾರಸೈಃ ।**
**ಸ್ತೋತುಕಾಮೈರಿವಾಸ್ಮಾಭಿಃ ಸಮಂ [೨]ತ್ವಾ[೩]ಮ್ನಾತಮಂಗಲೈಃ ॥ ೧೨೮ ॥**

ಮಂಗಲಗಾನಗಳನ್ನು ಅಭ್ಯಾಸಮಾಡಿದ ನಮ್ಮೊಡನೆ ನಿನ್ನನ್ನು ಸ್ತೋತ್ರಮಾಡಲಿಚ್ಛಿಸುವುವುಗಳಂತೆ ಸಾರಸಪಕ್ಷಿಗಳು ಈಕಡೆ ಸರೋವರದಲ್ಲಿ ಮಧುರವಾಗಿಯೂ ಗಂಭೀರವಾಗಿಯೂ ಶಬ್ದಮಾಡುತ್ತವೆ.

**[೪]ಉಚ್ಚ್ವಸತ್ಕಮಲಾಸ್ಯೇಯಮಿತೋ[೫]ಧಿಗೃಹದೀರ್ಘಿಕಮ್ ।**
**ಭವತೀಂ ಗಾಯತೀವೋಚ್ಚೈರಬ್ಜಿನೀ ಭ್ರಮರಾರವೈಃ ॥ ೧೨೯ ॥**

ಈಕಡೆ ರಾಜಭವನದ ಬಾವಿಯಲ್ಲಿ ವಿಕಸಿತವಾದ ಕಮಲವನ್ನು ಮುಖದಲ್ಲಿ ಧರಿಸಿಕೊಂಡಿರುವ ಕಮಲಲತೆಯು ಭ್ರಮರಗಳ ಶಬ್ದಗಳಿಂದ ಗಟ್ಟಿಯಾಗಿ ನಿನ್ನನ್ನು ಕುರಿತು ಗಾನಮಾಡುವಂತಿದೆ. ಗುಣಗಾನವನ್ನು ಮಾಡುವಂತಿದೆಯೆಂದರ್ಥವು.

**ನಿಶಾವಿರಹಸಂತಪ್ತಮಿತಶ್ಚಕ್ರಾಹ್ವಯೋರ್ಯುಗಮ್ ।**
**ಸರಸ್ತರಂಗಸಂಸ್ಪರ್ಶೈರಿದಮಾಶ್ವಾಸ್ಯತೇಧುನಾ ॥ ೧೩೦ ॥**

ರಾತ್ರಿಕಾಲದಲ್ಲಿ ಪರಸ್ಪರವಿಯೋಗದಿಂದ ಸಂತಪ್ತವಾದ ಈ ಎರಡು ಚಕ್ರವಾಕಪಕ್ಷಿಗಳು ಸರೋವರದ ತೆರೆಮಾಲೆಗಳ ಸ್ಪರ್ಶದಿಂದ ಈಗ ಶಾಂತಿಯನ್ನು ಹೊಂದುತ್ತವೆ.

**ರಥಾಂಗಮಿಥುನೈರದ್ಯ ಪ್ರಾರ್ಥ್ಯತೇ[೬]ಮಿತ್ರಸನ್ನಿಧಿಃ ।**
**ತೀವ್ರ[೭]ಮಾಯಾಸಿತೈರಂತಃ ಕರೈರಿಂದೋರ್ವಿದಾಹಿಭಿಃ ॥ ೧೩೧ ॥**

ದುಃಖಪಡಿಸುತ್ತಿರುವ ಚಂದ್ರನ ಕಿರಣಗಳಿಂದ ತೀವ್ರವಾಗಿ ಆಯಾಸಗೊಂಡ ಚಕ್ರವಾಕಪಕ್ಷಿಗಳ ಯುಗ್ಮಗಳು ಸೂರ್ಯನ ಸಾಮೀಪ್ಯವನ್ನು ಪ್ರಾರ್ಥಿಸುತ್ತವೆ.

**[೮]ದುನೋತಿ ಕೃಕವಾಕೂಣಾಂ ಧ್ವನಿರೇಷ ಸಮುಚ್ಚರನ್ ।**
**ಕಾಂತಾಸನ್ನವಿಯೋಗಾರ್ತಿ[೯]ಪಿಶುನಃ ಕಾಮಿನಾಂ ಮನಃ ॥ ೧೩೨ ॥**

ಶೀಘ್ರವಾಗಿ ಉಂಟಾಗುವ ಪತ್ನೀವಿಯೋಗದುಃಖವನ್ನು ಸೂಚಿಸುವ ಈ ಕೋಳಿಗಳ ಶಬ್ದವುಂಟಾಗಿ ಅದು ಕಾಮುಕರ ಮನಸ್ಸನ್ನು ಸಂತಾಪಪಡಿಸುತ್ತದೆ.

**ಯದಿಂದೋಃ ಪ್ರಾಪ್ತಮಾಂದ್ಯಸ್ಯ [೧೦]ನೋದಸ್ತಂ ಮೃದುಭಿಃಕರೈಃ ।**
**ತತ್ಪ್ರಲೀನಂ ತಮೋ[೧೧]ನೈಶಂ[೧೨]ಖರಾಂಶಾವುದಯೋನ್ಮುಖೇ ॥ ೧೩೩ ॥**

ಕಳೆಗುಂದಿದ ಚಂದ್ರನ ಮೃದುವಾದ ಕಿರಣಗಳು ನಾಶಮಾಡದಿರುವ ಮತ್ತು ರಾತ್ರಿಯ ಸಂಬಂಧವಾದ ಕತ್ತಲೆಯನ್ನು ಉದಯೋನ್ಮುಖನಾದ ಸೂರ್ಯನು ನಾಶಮಾಡಿದನು.

**ತಮಃ ಶಾರ್ವರಮುದ್ಭಿದ್ಯ [೧೩]ಕರೈರ್ಭಾನೋರುದೇಷ್ಯತಃ ।**
**ಸೇನೇವಾಗ್ರೇಸರೀ ಸಂಧ್ಯಾ ಸ್ಫುರತ್ಯೇಷಾ[೧೪]ನುರಾಗಿಣೀ ॥ ೧೩೪ ॥**

ಈ ಕೆಂಪಾದ ಸಂಧ್ಯಾಸಮಯವು ಮುಂದೆ ಉದಯಿಸುವ ಸೂರ್ಯನ ಕಿರಣಗಳಿಂದ ರಾತ್ರಿಯ ಕತ್ತಲೆಯನ್ನು ಭೇದಿಸಿ ಮುಂದೆ ಹೋಗುತ್ತಿರುವ ಅನುರಾಗವುಳ್ಳ ಸೈನ್ಯದೋಪಾದಿಯಲ್ಲಿ, ಪ್ರಕಾಶಿಸುತ್ತಿದೆ.

**ಮಿತ್ರಮಂಡಲಮುದ್ಗಚ್ಛದಿದಮಾತನುತೇ ದ್ವಯಮ್ ।**
**ವಿಕಾಸಮಬ್ಜಿನೀಷಂಡೇ ಮ್ಲಾನಿಂ ಚ ಕುಮುದಾಕರೇ ॥ ೧೩೫ ॥**

೧ ಅಪಶ್ಯಚ್ಚ. ೨ ಪ್ರಬೋಧೇ ನಿಯುಕ್ತೈಃ. ೩ ವಕ್ಷ್ಯಮಾಣಪಕಾರೇಣ. ೪ ಆಪಾದಯಿತುಂ. ೫ ಈಷದ್ವಿಕಸಿತಂ. ೬ ಪರಿಕರಂ. ೭ ಚಾಂದ್ರೇ ಇತ್ಯಪಿ ಪಾಠಃ. ೮ ಅಲ್ಪೀಕೃತಃ. ೯ ವಿಕಸಿತಂ. ೧೦ ಅನುಜ್ಞಾಪಯಿತುಮಿಚ್ಛತಿ. ೧೧ ಅಲ್ಪಂ ಯಥಾ ತಥಾ.

೧ ಶಬ್ದಿತೇ. ೨ ತ್ವಾಂ. ೩ ಅಭ್ಯಸ್ತಂ. ೪ ವಿಕಸತ್. ೫ ಗೃಹದೀರ್ಘಿಕಾಯಾಂ. ೬ ಸೂರ್ಯಸಮೀಪಂ ಸಹಾಯಕಸಮೀಪಂ ವಾ. ೭ ಪ್ರಯಾಸೀಕೃತೈಃ. ೮ ಪರಿತಾಪಯತಿ. ೯ ಸೂಚಕಃ. ೧೦ ನ ನಾಶಿತಂ. ೧೧ ನಿಶಾಯಾ ಇದಂ. ೧೨ ರವೌ. ೧೩ ಕಿರಣೈರ್ಹಸ್ತೈಶ್ಚ. ೧೪ ಅನುಗತರಕ್ತವರ್ಣಾ, ಹರ್ಷವತೀಚ.

ಮೇಲಕ್ಕೆ ಬರುತ್ತಿರುವ ಈ ಸೂರ್ಯಮಂಡಲವು ಕಮಲಗಳನ್ನು ಅರಳಿಸುತ್ತಿದೆ. ಕುಮುದಪುಷ್ಪಗಳನ್ನು ಮುಚ್ಚಿಸುತ್ತಿದೆ.

**[೧]ವಿಕಸ್ವರಂ ಸಮಾಲೋಕ್ಯ ಪದ್ಮಿನ್ಯಾಃ ಪಂಕಜಾನನಮ್ ।**
**[೨]ಸಾಸೂಯೇವ ಪರಿಮ್ಲಾನಿಂ ಪ್ರಯಾತ್ಯೇಷಾ ಕುಮುದ್ವತೀ ॥ ೧೩೬ ॥**

ಕಮಲಲತೆಯ ಅರಳಿದ ಕಮಲವೆಂಬ ಮುಖವನ್ನು ನೋಡಿ ಅಸೂಯೆ ಪಡುತ್ತಿರುವ ಈ ಕುಮುದಲತೆಯು ಬಾಡುತ್ತಿದೆಯೋ ಎಂಬಂತಿದೆ. ಅಸೂಯೆಯಿಂದಲೋ ಎಂಬಂತೆ ಬಾಡುತ್ತಿದೆಯೆಂದು ಭಾವವು.

**ಪುರಃ ಪ್ರಸಾರಯನ್ನುಚ್ಚೈಃ ಕರಾನು[೩]ದ್ಯಾತಿ ಭಾನುಮಾನ್ ।**
**ಪ್ರಾಚೀದಿಗಂಗನಾಗರ್ಭಾತ್ತೇಜೋಗರ್ಭ ಇವಾರ್ಭಕಃ ॥ ೧೩೭ ॥**

ಸೂರ್ಯನು ಪೂರ್ವದಿಕ್ಕೆಂಬ ಸ್ತ್ರೀಯ ಗರ್ಭದಿಂದ, ಹೊಟ್ಟೆಯಲ್ಲಿ ತೇಜಸ್ಸುಳ್ಳ ಮಗುವು ಹೊರಡುವಂತೆ, ಚೆನ್ನಾಗಿ ತನ್ನ ಕಿರಣಗಳನ್ನು ಮುಂದೆ ಹರಡುತ್ತಾ ಪೂರ್ವದಿಕ್ಕಿನಿಂದ ಉದಯಿಸುತ್ತಾನೆ.

**ಲಕ್ಷ್ಯತೇ ನಿಷಧೋತ್ಸಂಗೇ ಭಾನುರಾರಕ್ತಮಂಡಲಃ ।**
**ಪುಂಜೀಕೃತ ಇವೈಕತ್ರ ಸಾಂಧ್ಯೋ ರಾಗಃ ಸುರೇಶ್ವರೈಃ ॥ ೧೩೮ ॥**

ನಿಷಧಪರ್ವತದಲ್ಲಿ ಸುತ್ತಲೂ ಕೆಂಪಾದ ಮಂಡಲವುಳ್ಳ ಸೂರ್ಯನು, ಸಂಧ್ಯಾಕಾಲದ ರಕ್ತಿಮೆಯು(ಕೆಂಪು)ದೇವತೆಗಳಿಂದ ಒಂದುಕಡೆಯಲ್ಲಿ ರಾಶಿಮಾಡಲ್ಪಟ್ಟಂತೆ, ಕಾಣುತ್ತಾನೆ.

**ತಮೋ ವಿಧೂತಮುದ್ಧೂತಶ್ಚಕ್ರವಾಕಪರಿಕ್ಲಮಃ ।**
**ಪ್ರಬೋಧಿತಾಬ್ಜಿನೀ ಭಾನೋ[೪]ರ್ಜನ್ಮನೋ[೫]ನ್ಮೀಲಿತಂ ಜಗತ್ ॥ ೧೩೯ ॥**

ಎಲೈ ದೇವಿಯೆ ! ಸೂರ್ಯನ ಉದಯದಿಂದ ಕತ್ತಲೆಯು ನಾಶವಾಯಿತು. ಚಕ್ರವಾಕಪಕ್ಷಿಗಳ ವಿಯೋಗದುಃಖವು ದೂರವಾಯಿತು. ತಾವರೆಯು ವಿಕಸಿತವಾಯಿತು. ಲೋಕವು ಪ್ರಕಾಶಿಸಿತು.

**ಸಮಂತಾ[೬]ದಾಪತತ್ಯೇಷ ಪ್ರಭಾತೇ [೭]ಶಿಶಿರೋ ಮರುತ್ ।**
**ಕಮಲಾಮೋದಮಾಕರ್ಷನ್ನಫುಲ್ಲಾದಬ್ಜಿನೀವನಾತ್ ॥ ೧೪೦ ॥**

ಪ್ರಾತಃಕಾಲದಲ್ಲಿ ಅರಳಿದ ಕಮಲವನದಿಂದ ಸುಗಂಧವನ್ನು ತರುತ್ತಿರುವ ಈ ತಂಗಾಳಿಯು ಸುತ್ತಲೂ ಬೀಸುತ್ತಿದೆ.

**ಇತಿ ಪ್ರಸ್ಪಷ್ಟ ಏವಾಯಂ ಪ್ರಬೋಧಸಮಯಸ್ತವ ।**
**ದೇವಿ ಮುಂಚಾಧುನಾ ತಲ್ಪಂ ಶುಚಿ ಹಂಸೀವ ಸೈಕತಮ್ ॥ ೧೪೧ ॥**

ದೇವಿಯೆ ! ಈ ಪ್ರಕಾರವಾಗಿ ನಿನ್ನ ಈ ಪ್ರಬೋಧ (ನಿದ್ರೆಯನ್ನುಬಿಡುವ) ಸಮಯವು ಸ್ಪಷ್ಟವಾಗಿದೆ. ಸ್ತ್ರೀಹಂಸಪಕ್ಷಿಯು ನಿರ್ಮಲವಾದ ಮರಳುರಾಶಿಯನ್ನು ಬಿಡುವಂತೆ ಈಗ ನೀನು ನಿರ್ಮಲವಾದ ಹಾಸಿಗೆಯನ್ನು ಬಿಡು.

**ಸುಪ್ರಾತಮಸ್ತು ತೇ ನಿತ್ಯಂ ಕಲ್ಯಾಣಶತಭಾಗ್ಭವ ।**
**ಪ್ರಾಚೀವಾರ್ಕಂ[೮]ಪ್ರಸೋಷೀಷ್ಠಾಃ ಪುತ್ರಂ ತ್ರೈಲೋಕ್ಯದೀಪಕಮ್ ॥**

ದೇವಿಯೆ !ನಿನಗೆ ಯಾವಾಗಲೂ ಸುಪ್ರಭಾತವಾಗಲಿ. ಅನೇಕ ಶುಭಫಲಗಳನ್ನು ಹೊಂದುವವಳಾಗು. ಪೂರ್ವದಿಕ್ಕು ಸೂರ್ಯನನ್ನು ಪಡೆಯುವಂತೆ, ನೀನು ಮೂರು ಲೋಕವನ್ನು ಪ್ರಕಾಶಪಡಿಸುವ ಮಗನನ್ನು ಪ್ರಸವಿಸು''

**ಸ್ವಪ್ನಸಂದರ್ಶನಾದೇವ ಪ್ರಬುದ್ಧಾ ಪ್ರಾಕ್ತರಾಂ ಪುನಃ ।**
**ಪ್ರಬೋಧಿತೇತ್ಯ ದರ್ಶತ್ಸಾ ಸಂಪ್ರಮೋದಮಯಂ ಜಗತ್ ॥ ೧೪೩ ॥**

೧ ವಿಕಸನಶೀಲಂ. ೨ ಅಸೂಯಯಾ ಸಹಿತಾ. ೩ ಉದೇತಿ. ೪ ಉದಯೇನ. ೫ ಪ್ರಕಾಶಿತಂ. ೬ ಆವಾತಿ. ೭ ಶೈತ್ಯಃ. ೮ ಷೂಙ್ ಪ್ರಾಣಿಪ್ರಸವೇ ಆಶೀರ್ಲಿಙ್ ಮಧ್ಯಮೈಕವಚನಂ.

ಮೊದಲು ಸ್ವಪ್ನದರ್ಶನದಿಂದಲೇ ಎಚ್ಚರಗೊಂಡಿದ್ದ ಮರುದೇವಿಯು ಪುನಃ ಸ್ತುತಿಪಾಠಕರ ವಚನಗಳಿಂದ ಚೆನ್ನಾಗಿ ಎಚ್ಚತ್ತು ಲೋಕವನ್ನೆಲ್ಲ ಆನಂದಮಯವನ್ನಾಗಿ ಕಂಡಳು. ಎಲ್ಲಾ ಕಡೆಗಳಲ್ಲಿಯೂ ಸಂತೋಷಚಿಹ್ನೆಗಳು ತೋರುತ್ತಿದ್ದುವೆಂದು ಭಾವವು.

**ಪ್ರಬುದ್ಧಾ ಚ ಶುಭಸ್ವಪ್ನದರ್ಶನಾನಂದನಿರ್ಭರಾಮ್ ।**
**ತನುಂ ಕಂಟಕಿತಾ[೧]ಮೂಹೇ ಸಾಬ್ಜಿನೀವ ವಿಕಾಸಿನೀ ॥ ೧೪೪ ॥**

ಹೀಗೆ ಎಚ್ಚರಗೊಂಡ ಆ ಮರುದೇವಿಯ ಶರೀರದಲ್ಲಿ, ವಿಕಸಿತವಾದ ಕಮಲಲತೆಯಲ್ಲಿ ಮುಳ್ಳುಗಳಿರುವಂತೆ, ಶುಭಸ್ವಪ್ನಗಳ ದರ್ಶನದಿಂದುಂಟಾದ ಆನಂದದಿಂದ ರೋಮಾಂಚವಾಯಿತು.

**ತತಸ್ತದ್ದರ್ಶನಾನಂದಂ ವೋಢುಂ ಸ್ವಾಂಗೇಷ್ವಿವಾಕ್ಷಮಾ ।**
**ಕೃತಮಂಗಲನೇಪಥ್ಯಾ ಸಾ ಭೇಜೇ ಪತ್ಯುರಂತಿಕಮ್ ॥ ೧೪೫ ॥**

ತರುವಾಯ ಆ ಶುಭಸ್ವಪ್ನಗಳ ದರ್ಶನದಿಂದುಂಟಾದ ಆನಂದವನ್ನು ತನ್ನ ಅವಯವಗಳಲ್ಲಿ ಧರಿಸುವುದಕ್ಕೆ ಅಸಮರ್ಥಳಾದವಳಂತೆ ಆ ಮರುದೇವಿಯು ಮಂಗಲಸೂಚಕವಾದ ಅಲಂಕಾರವನ್ನು ಮಾಡಿಕೊಂಡು ಪತಿಯ ಬಳಿಗೆ ಹೋದಳು.

**ಉಚಿತೇನ ನಿಯೋಗೇನ ದೃಷ್ಟ್ವಾ ಸಾ ನಾಭಿಭೂಭುಜಮ್ ।**
**ತಸ್ಮೈ ನೃಪಾಸನಸ್ಥಾಯ ಸುಖಾಸೀನಾ ವ್ಯಜಿಜ್ಞಪತ್ ॥ ೧೪೬ ॥**

ಉಚಿತವಾದ ವೈಭವದಿಂದ ಯುಕ್ತಳಾದ ಆ ಮರುದೇವಿಯು ನಾಭಿರಾಜನನ್ನು ಕಂಡು ಸುಖಕರವಾದ ಆಸನದಲ್ಲಿ ಕುಳಿತು ರಾಜಸಿಂಹಾಸನದಲ್ಲಿ ಕುಳಿತಿರುವ ಆ ನಾಭಿರಾಜನಿಗೆ ವಿಜ್ಞಾಪಿಸಿಕೊಂಡಳು.

**ದೇವಾದ್ಯ ಯಾಮಿನೀಭಾಗೇ ಪಶ್ಚಿಮೇ ಸುಖನಿದ್ರಿತಾ ।**
**ಅದ್ರಾಕ್ಷಂ ಷೋಡಶಸ್ವಪ್ನಾನಿಮಾನತ್ಯದ್ಭುತೋದಯಾನ್ ॥ ೧೪೭ ॥**

''ಸ್ವಾಮಿಯೆ ! ಈದಿನ ಬೆಳಗಿನ ಝಾವದಲ್ಲಿ ಸುಖವಾಗಿ ನಿದ್ರಿಸುತ್ತಿದ್ದ ನಾನು ಅತ್ಯಾಶ್ಚರ್ಯಕರವಾದ ಅಭ್ಯುದಯವುಳ್ಳ ಹದಿನಾರು ಸ್ವಪ್ನಗಳನ್ನು ಕಂಡೆನು.

**ಗಜೇಂದ್ರಮವದಾತಾಂಗಂ ವೃಷಭಂ ದುಂದುಭಿಸ್ವನಮ್ ।**
**ಸಿಂಹಮುಲ್ಲಂಘಿತಾದ್ರ್ಯಗ್ರಂ ಲಕ್ಷ್ಮೀಂ ಸ್ನಾಪ್ಯಾಂ ಸುರದ್ವಿಪೈಃ ॥ ೧೪೮ ॥**

**ದಾಮನೀ ಲಂಬಮಾನೇ ಖೇ ಶೀತಾಂಶುಂ ದ್ಯೋತಿತಾಂಬರಮ್ ।**
**ಪ್ರೋದ್ಯಂತಮಬ್ಜಿನೀಬಂಧುಂ ಬಂಧುರಂ ಝಷಯುಗ್ಮಕಮ್॥ ೧೪೯ ॥**

**ಕಲಶಾವಮೃತಾಪೂರ್ಣೌ ಸರಃ ಸ್ವಚ್ಛಾಂಬುಸಾಂಬುಜಮ್ ।**
**ವಾರಾಶಿಂ ಕ್ಷುಭಿತಾವರ್ತಂ ಸೈಂಹಂ ಭಾಸುರಮಾಸನಮ್ ॥ ೧೫೦ ॥**

**ವಿಮಾನಮಾಪತತ್ಸ್ವರ್ಗಾ[೨]ದ್ಭುವೋ [೩]ಭವನ[೪]ಮುದ್ಭವತ್ ।**
**ರತ್ನರಾಶಿಂ ಸ್ಫುರದ್ರಶ್ಮಿಂ ಜ್ವಲನಂ ಪ್ರಜ್ವಲದ್ದ್ಯುತಿಮ್ ॥ ೧೫೧ ॥**

**ದೃಷ್ಟ್ವೈತಾನ್ ಷೋಡಶಸ್ವಪ್ನಾನಥಾದರ್ಶಂ ಮಹೀಪತೇ ।**
**ವದನಂ ಮೇ ವಿಶಂತಂ ತಂ ಗವೇಂದ್ರಂ ಕನಕಚ್ಛವಿಮ್ ॥ ೧೫೨ ॥**

ಶುಭ್ರವಾದ ಶರೀರವುಳ್ಳ ಐರಾವತಗಜವನ್ನೂ ಭೇರಿಯಂತೆ ಶಬ್ದಮಾಡುತ್ತಿರುವ ಗೂಳಿ(ಎತ್ತು)ಯನ್ನೂ ಪರ್ವತದ ಶಿಖರಕ್ಕೆ ಹಾರುತ್ತಿದ್ದ ಸಿಂಹವನ್ನೂ ದೇವಗಜಗಳಿಂದ ಸ್ನಾನಮಾಡಿಸಲ್ಪಡುತ್ತಿದ್ದ ಲಕ್ಷ್ಮಿಯನ್ನೂ ಆಕಾಶದಲ್ಲಿ ಜೋಲುತ್ತಿರುವ ಎರಡು ಪುಷ್ಪಮಾಲಿಕೆಗಳನ್ನೂ ಆಕಾಶವನ್ನೆಲ್ಲ ಪ್ರಕಾಶಪಡಿಸಿದ ಚಂದ್ರನನ್ನೂ ಆಗ ತಾನೆ ಉದಯಿಸುತ್ತಿದ್ದ ಸೂರ್ಯನನ್ನೂ ಸುಂದರವಾದ ಎರಡು ಮೀನುಗಳನ್ನೂ

೧ ಧರತಿ ಸ್ಮ. ೨ ಭೂಮೇಃ ಸಕಾಶಾತ್. ೩ ನಾಗಾಲಯಂ. ೪ ಉದ್ಗಚ್ಛತ್.

ಅಮೃತದಿಂದ ತುಂಬಿರುವ ಎರಡು ಕಲಶಗಳನ್ನೂ ಸ್ವಚ್ಛವಾದ ನೀರೂ ಕಮಲಗಳೂ ಉಳ್ಳ ಸರೋವರವನ್ನೂ ಉಕ್ಕಿಬರುತ್ತಿರುವ ಸುಳಿಗಳುಳ್ಳ ಸಮುದ್ರವನ್ನೂ ಪ್ರಕಾಶಮಾನವಾದ ಸಿಂಹಾಸನವನ್ನೂ ಸ್ವರ್ಗದಿಂದ ಕೆಳಕ್ಕೆ ಬರುತ್ತಿರುವ ವಿಮಾನವನ್ನೂ ಭೂಮಿಯಿಂದ ಮೇಲಕ್ಕೆ ಬರುತ್ತಿರುವ ಹುತ್ತವನ್ನೂ ಪ್ರಕಾಶಮಾನವಾದ ಕಿರಣಗಳುಳ್ಳ ರತ್ನಗಳ ರಾಶಿಯನ್ನೂ ದೇದೀಪ್ಯಮಾನವಾದ ಕಾಂತಿಯುಳ್ಳ ಬೆಂಕಿಯನ್ನೂ ಈ ಹದಿನಾರು ಸ್ವಪ್ನಗಳನ್ನು ಕಂಡನಂತರ ಬಂಗಾರದ ಬಣ್ಣವುಳ್ಳ ಆ ದೊಡ್ಡ ವೃಷಭ(ಗೂಳಿ)ವು ನನ್ನ ಮುಖದಲ್ಲಿ ಪ್ರವೇಶಮಾಡುವುದನ್ನು ಕಂಡೆನು.

**ವದೈತೇಷಾಂ ಫಲಂ ದೇವ ಶುಶ್ರೂಷಾ ಮೇ ವಿವರ್ಧತೇ ।**
**ಅಪೂರ್ವದರ್ಶನಾತ್ಕಸ್ಯ ನ ಸ್ಯಾತ್ಕೌತುಕವನ್ಮನಃ ॥ ೧೫೩ ॥**

ಸ್ವಾಮಿಯೆ ! ಈ ಸ್ವಪ್ನಗಳ ಫಲವನ್ನು ಹೇಳು. ನನಗೆ ಆ ಫಲವನ್ನು ಕೇಳಬೇಕೆಂಬ ಇಚ್ಛೆಯು ಹೆಚ್ಚುತ್ತಿದೆ.'' ಇದು ನ್ಯಾಯವಾಗಿದೆ. ಅಪೂರ್ವವಸ್ತುವಿನ ದರ್ಶನದಿಂದ ಯಾರ ಮನಸ್ಸುತಾನೆ ಕುತೂಹಲವುಳ್ಳುದಾಗುವುದಿಲ್ಲ ?

**ಅಥಾಸಾವವಧಿಜ್ಞಾನವಿಬುದ್ಧಸ್ವಪ್ನಸತ್ಫಲಃ ।**
**ಪ್ರೋವಾಚ ತತ್ಫಲಂ ದೇವ್ಯೈ ಲಸದ್ದಶನದೀಧಿತಿಃ ॥ ೧೫೪ ॥**

ಮರುದೇವಿಯು ಈರೀತಿಯಾಗಿ ಪ್ರಶ್ನೆಯನ್ನು ಮಾಡಿದನಂತರ ಪ್ರಕಾಶಮಾನವಾದ ಹಲ್ಲುಗಳ ಕಾಂತಿಯುಳ್ಳ ಈ ನಾಭಿರಾಜನು ಅವಧಿಜ್ಞಾನದಿಂದ ಸ್ವಪ್ನದ ಫಲವನ್ನು ತಿಳಿದು ಮರುದೇವಿಗೆ ಆ ಫಲವನ್ನು ಹೇಳಿದನು.

**ಶೃಣು ದೇವಿ ಮಹಾನ್ಪುತ್ರೋ ಭವಿತಾ ತೇ ಗಜೇಕ್ಷಣಾತ್ ।**
**ಸಮಸ್ತಭುವನಜ್ಯೇಷ್ಠೋ ಮಹಾವೃಷಭದರ್ಶನಾತ್ ॥ ೧೫೫ ॥**

''ಎಲೈ ದೇವಿಯೇ ! ಕೇಳು :- ನೀನು ಸ್ವಪ್ನದಲ್ಲಿ ಆನೆಯನ್ನು ನೋಡಿದುದರಿಂದ ನಿನಗೆ ಶ್ರೇಷ್ಠನಾದ ಪುತ್ರನು ಜನಿಸುವನು. ದೊಡ್ಡ ವೃಷಭವನ್ನು ನೋಡಿದುದರಿಂದ ಆ ಪುತ್ರನು ಸಮಸ್ತಲೋಕಕ್ಕೂ ಶ್ರೇಷ್ಠನಾಗುವನು.

**ಸಿಂಹೇನಾನಂತವೀರ್ಯೋಽಸೌ ದಾಮ್ನಾ ಸದ್ಧರ್ಮತೀರ್ಥಕೃತ್ ।**
**ಲಕ್ಷ್ಮ್ಯಾಭಿಷೇಕ[೧]ಮಾಪ್ತಾಸೌ ಮೇರೋರ್ಮೂರ್ಧ್ನಿ ಸುರೋತ್ತಮೈಃ ॥**

ಸಿಂಹದರ್ಶನದಿಂದ ಅನಂತವೀರ್ಯ(ಶಕ್ತಿ)ನಾಗುವನು. ಪುಷ್ಪಮಾಲಾದರ್ಶನದಿಂದ ಉತ್ತಮವಾದ ಧರ್ಮವೆಂಬ ತೀರ್ಥಕ್ಕೆ ಕರ್ತನಾಗುವನು. ಲಕ್ಷ್ಮೀದರ್ಶನದಿಂದ ಈ ಪುತ್ರನು ಮಹಾಮೇರುಪರ್ವತದ ಶಿಖರದಲ್ಲಿ ದೇವತೆಗಳಿಂದ ಅಭಿಷೇಕವನ್ನು ಮಾಡಿಸಿಕೊಳ್ಳುವನು.

**ಪೂರ್ಣೇಂದುನಾ ಜನಾಹ್ಲಾದೀ ಭಾಸ್ವತಾ ಭಾಸ್ವರದ್ಯುತಿಃ ।**
**ಕುಂಭಾಭ್ಯಾಂ ನಿಧಿಭಾಗೀ ಸ್ಯಾತ್ಸುಖೀ ಮತ್ಸ್ಯಯುಗೇಕ್ಷಣಾತ್ ॥ ೧೫೭ ॥**

ಪೂರ್ಣಚಂದ್ರನನ್ನು ನೋಡಿದುದರಿಂದ ಸಮಸ್ತಜನಗಳಿಗೂ ಆನಂದವನ್ನು ಉಂಟುಮಾಡುವನು. ಸೂರ್ಯದರ್ಶನದಿಂದ ದೇದೀಪ್ಯಮಾನವಾದ ಕಾಂತಿಯುಳ್ಳವನಾಗುವನು. ಎರಡು ಕುಂಭಗಳ ದರ್ಶನದಿಂದ ನಿಧಿಗಳಿಗೆ ಸ್ವಾಮಿಯಾಗುವನು. ಎರಡು ಮೀನುಗಳನ್ನು ನೋಡಿದುದರಿಂದ ಸುಖಿಯಾಗುವನು.

**ಸರಸಾ ಲಕ್ಷಣೋದ್ಭಾಸೀ ಸೋಽಬ್ಧಿನಾ ಕೇವಲೀ ಭವೇತ್ ।**
**ಸಿಂಹಾಸನೇನ ಸಾಮ್ರಾಜ್ಯಮವಾಪ್ಸ್ಯತಿ ಜಗದ್ಗುರುಃ ॥ ೧೫೮ ॥**

ಸರೋವರದರ್ಶನದಿಂದ ಶುಭಲಕ್ಷಣಗಳಿಂದ ಶೋಭಿಸುವನು. ಸಮುದ್ರದರ್ಶನದಿಂದ ಆತನು ಕೇವಲಿಯಾಗುವನು. ಸಿಂಹಾಸನದರ್ಶನದಿಂದ ಜಗತ್ತಿಗೆ ಗುರು(ಅಧಿಪತಿ)ವಾಗಿ ಸಾಮ್ರಾಜ್ಯಪದವಿಯನ್ನು ಹೊಂದುವನು.

೧ ಪ್ರಾಪ್ಸ್ಯತಿ.

**ಸ್ವರ್ವಿಮಾನಾವಲೋಕೇನ ಸ್ವರ್ಗಾದವತರಿಷ್ಯತಿ ।**
**ಫಣೀಂದ್ರಭವನಾಲೋಕಾತ್ಸೋಽವಧಿಜ್ಞಾನಲೋಚನಃ ॥ ೧೫೯ ॥**

ಸ್ವರ್ಗಲೋಕದ ವಿಮಾನವನ್ನು ನೋಡಿದುದರಿಂದ ಸ್ವರ್ಗದಿಂದ ಅವತರಿಸುವನು. ಹುತ್ತವನ್ನು ನೋಡಿದುದರಿಂದ ಆತನು ಅವಧಿಜ್ಞಾನಿಯಾಗಿರುವನು.

**ಗುಣಾನಾಮಾಕರಃ ಪ್ರೋದ್ಯದ್ರತ್ನರಾಶಿ[೧]ನಿಶಾಮನಾತ್ ।**
**[೨]ಕರ್ಮೇಂಧನಧಗಪ್ಯೇಶ ನಿರ್ಧೂಮಜ್ವಲನೇಕ್ಷಣಾತ್ ॥ ೧೬೦ ॥**

ದೇದೀಪ್ಯಮಾನವಾದ ರತ್ನಗಳ ರಾಶಿಯನ್ನು ನೋಡಿದುದರಿಂದ ಗುಣಗಳಿಗೆ ಉತ್ಪತ್ತಿಸ್ಥಾನನಾಗುವನು. ಹೊಗೆಯಿಲ್ಲದ ಬೆಂಕಿಯ ದರ್ಶನದಿಂದ ಈತನು ಕರ್ಮವೆಂಬ ಕಟ್ಟಿಗೆಯನ್ನು ಸುಡುವವನಾಗುವನು.

**ವೃಷಭಾಕಾರಮಾದಾಯ [೩]ಭವತ್ಯಾಸ್ಯಪ್ರವೇಶನಾತ್ ।**
**ತ್ವದ್ಗರ್ಭೇ ವೃಷಭೋ ದೇವಃ [೪]ಸ್ವಮಾಧಾಸ್ಯತಿ ನಿರ್ಮಲೇ ॥ ೧೬೧ ॥**

ವೃಷಭ(ಗೂಳಿ)ದ ಆಕಾರವನ್ನು ತೆಗೆದುಕೊಂಡು (ಧರಿಸಿಕೊಂಡು) ನಿನ್ನ ಮುಖವನ್ನು ಪ್ರವೇಶಮಾಡಿದುದರಿಂದ ನಿರ್ಮಲವಾದ ನಿನ್ನ ಗರ್ಭದಲ್ಲಿ ವೃಷಭದೇವನು ಜನಿಸುವನು''

**ಇತಿ ತದ್ವಚನಾದ್ದೇವೀ ದಧೇ ರೋಮಾಂಚಿತಂ ವಪುಃ ।**
**ಹರ್ಷಾಂಕುರೈರಿವಾಕೀರ್ಣಂ ಪರಮಾನಂದನಿರ್ಭರಮ್ ॥ ೧೬೨ ॥**

ಈಪ್ರಕಾರವಾಗಿ ಮರುದೇವಿಯು ನಾಭಿರಾಜನ ವಚನದಿಂದ ಸ್ವಪ್ನದ ಫಲವನ್ನು [illegible]ದು ಆನಂದದ ಮೊಳಕೆಗಳಿಂದ ವ್ಯಾಪ್ತವಾದಂತಿರುವುದೂ ಪರಮಾನಂದ [illegible]ತವೂ ರೋಮಾಂಚವುಳ್ಳುದೂ ಆದ ಶರೀರವನ್ನು ಧರಿಸಿದಳು. ಸ್ವಪ್ನಫಲವನ್ನು ತಿಳಿದು ಬಹಳ ಸಂತುಷ್ಟಳಾದಳೆಂದು ಭಾವವು.

**([೫]ತೃತೀಯಕಾಲಶೇಷೇಸಾವಶೀತಿಶ್ಚತುರುತ್ತರಾ ।**
**ಪೂರ್ವಲಕ್ಷಾ ತ್ರಿವರ್ಷಾಷ್ಟಮಾಸಪಕ್ಷಯುತಾ ತದಾ ॥ ೧೬೩ ॥**

**ಅವತೀರ್ಯ ಸುರಾದ್ಯಂತೇ ? ಅಖಿಲಾರ್ಥವಿಮಾನತಃ ।**
**ಆಷಾಢಸಿತಪಕ್ಷಸ್ಯ ದ್ವಿತೀಯಾಯಾಂ ಸುರೋತ್ತಮಃ ॥ ೧೬೪ ॥**

**ಉತ್ತರಾಷಾಢನಕ್ಷತ್ರೇ ದೇವ್ಯಾ ಗರ್ಭಂ ಸಮಾಶ್ರಿತಃ ।**
**ಸ್ಥಿತೋ ಯಥಾ ವಿಬಾಧೋಽಸೌ ಮೌಕ್ತಿಕಂ ಶುಕ್ತಿಸಂಪುಟೇ ॥ ೧೬೫ ॥**

ಅವಸರ್ಪಿಣಿಯ ಮೂರನೆಯ ಕಾಲವು ಎಂಬತ್ತನಾಲ್ಕುಲಕ್ಷಪೂರ್ವ ಮೂರು ವರ್ಷ ಎಂಟುತಿಂಗಳು ಹದಿನೈದುದಿನಗಳು ಶೇಷವುಳಿಯುವಾಗ ವಜ್ರನಾಭಿಯಾಗಿದ್ದ ಈ ಅಹಮಿಂದ್ರದೇವನು ಸರ್ವಾರ್ಥಸಿದ್ಧಿವಿಮಾನದಿಂದ ಅವತರಿಸಿ ಆಷಾಢಮಾಸದ ಶುಕ್ಲಪಕ್ಷದ ದ್ವಿತೀಯಾ(ಬಿದಿಗೆ)ತಿಥಿಯ ಉತ್ತರಾಷಾಢನಕ್ಷತ್ರದಲ್ಲಿ ಮರುದೇವಿಯ ಗರ್ಭವನ್ನು ಹೊಂದಿ, ಮುತ್ತಿನ ಚಿಪ್ಪಿನಲ್ಲಿ ಮುತ್ತು ನಿರ್ಬಾಧೆಯಾಗಿರುವಂತೆ, ಸುಖವಾಗಿದ್ದನು.

**ಜ್ಞಾತ್ವಾ ತದಾ ಸ್ವಚಿಹ್ನೇನ ಸರ್ವೇಽಪ್ಯಾಗುಃ ಸುರೇಶ್ವರಾಃ ।**
**ಪುರಂ ಪ್ರದಕ್ಷಿಣೀಕೃತ್ಯ ತದ್ಗುರೂಂಶ್ಚ ವವಂದಿರೇ ॥ ೧೬೬ ॥**

ಭವನವಾಸಿಮೊದಲಾದ ಸಮಸ್ತದೇವತೆಗಳೂ ತಂತಮ್ಮ ವಿಮಾನಗಳಲ್ಲಿ ಆಗುವ ಶಂಖನಾದ ಆಸನಕಂಪ ಮೊದಲಾದ ಚಿಹ್ನೆಗಳಿಂದ ಸ್ವಾಮಿಯು ಗರ್ಭಕ್ಕವತರಿಸಿದ ವಿಷಯವನ್ನು ತಿಳಿದು ಅಯೋಧ್ಯೆಗೆ ಬಂದು ಪಟ್ಟಣಕ್ಕೆ ಪ್ರದಕ್ಷಿಣೆಯನ್ನು ಮಾಡಿ ಸ್ವಾಮಿಯ ಮಾತಾಪಿತೃಗಳನ್ನು ವಂದಿಸಿದರು.

೧ ದರ್ಶನಾತ್. ೨ ಕರ್ಮೇಂಧನದಾಹೀ. ೩ ತ್ವನ್ಮುಖಪ್ರವೇಶನಾತ್. ೪ ಆತ್ಮಾನಂ. ೫ ಶ್ಲೋಕಷಟ್ಕಮಿತಸ್ತಾಲಪತ್ರಪುಸ್ತಕೇ ನಾಸ್ತಿ.



೨೨ ಜನ್ಮಾಭಿಷೇಕ ಕಲ್ಯಾಣ



**ಸಂಗೀತಕಂ ಸಮಾರಬ್ಧಂ ವಜ್ರಿಣಾ ಹಿ ಸಹಾಮರೈಃ ।**
**ಕ್ವಚಿದ್ಗೀತಂ ಕ್ವಚಿದ್ವಾದ್ಯಂ ಕ್ವಚಿನ್ನೃತ್ಯಂ ಮನೋಹರಮ್ ॥ ೧೬೭ ॥**

ದೇವೇಂದ್ರನು ಸಂಗೀತವನ್ನು ಮಾಡಲಾರಂಭಿಸಿದನು. ಬೇರೆ ದೇವತೆಗಳು ಕೆಲವುಕಡೆಯಲ್ಲಿ ಗಾನವನ್ನೂ ಕೆಲವುಕಡೆಯಲ್ಲಿ ವಾದ್ಯವನ್ನೂ ಕೆಲವುಕಡೆಯಲ್ಲಿ ಮನೋಹರವಾದ ನೃತ್ಯವನ್ನೂ ಮಾಡುವುದಕ್ಕಾರಂಭಿಸಿದರು.

**ತತ್ಪ್ರಾಂಗಣಂ ಸಮಾಕ್ರಾಂತಂ ನಾಕಲೋಕೈರಿಹಾಗತೈಃ ।**
**ಕೃತ್ವಾ ಗರ್ಭಕಕಲ್ಯಾಣಂ ಪುನರ್ಜಗ್ಮುರ್ಯಥಾಯಥಮ್) ॥ ೧೬೮ ॥**

ಆಗ ಅಯೋಧ್ಯೆಗೆ ಬಂದ ದೇವತೆಗಳಿಂದ ರಾಜಾಂಗಣವು ತುಂಬಿತು. ಆ ದೇವತೆಗಳು ಗರ್ಭಾವತರಣಕಲ್ಯಾಣಮಹೋತ್ಸವವನ್ನು ಮಾಡಿ ಪುನಃ ಕ್ರಮವಾಗಿ ಹೊರಟು ಹೋದರು.

**ತದಾ ಪ್ರಭೃತಿ ಸುತ್ರಾಮಶಾಸನಾತ್ತಾಂ ಸಿಷೇವಿರೇ ।**
**ದಿಕ್ಕುಮಾರ್ಯೋ[1]ನುಚಾರಿಣ್ಯಸ್ತತ್ಕಾಲೋಚಿತಕರ್ಮಭಿಃ ॥ ೧೬೯ ॥**

ಆ ಲಾಗಾಯಿತು ದೇವೇಂದ್ರನ ಅಪ್ಪಣೆಯಿಂದ ದಿಕ್ಕುಮಾರಿಯರು ಸೇವಕಿಯರಾಗಿದ್ದು ಆ ಕಾಲಕ್ಕೆ ಉಚಿತವಾದ ಕಾರ್ಯಗಳಿಂದ ಮರುದೇವಿಯ ಸೇವೆಯನ್ನು ಮಾಡಿದರು.

**ಶ್ರೀರ್ಹ್ರೀರ್ಧೃತಿಶ್ಚ ಕೀರ್ತಿಶ್ಚ ಬುದ್ಧಿಲಕ್ಷ್ಮ್ಯೌ ಚ ದೇವತಾಃ ।**
**ಶ್ರಿಯಂ ಲಜ್ಜಾಂ ಚ ಧೈರ್ಯಂ ಚ ಸ್ತುತಿಂ ಬೋಧಂ ಚ ವೈಭವಮ್ ॥**

**ತಸ್ಯಾಮಾದಧುರಭ್ಯರ್ಣವರ್ತಿನ್ಯಃ [2]ಸ್ವಾನಿಮಾನ್ಗುಣಾನ್ ।**
**ತತ್ಸಂಸ್ಕಾರಾಚ್ಚ ಸಾ ರೇಜೇ ಸಂಸ್ಕೃತೇವಾಗ್ನಿನಾ ಮಣಿಃ ॥ ೧೭೧ ॥**

ಸದಾ ಸಮೀಪದಲ್ಲಿದ್ದು ಮರುದೇವಿಗೆ ಶ್ರೀದೇವಿಯು ಕಾಂತಿಗುಣವನ್ನೂ ಹ್ರೀದೇವಿಯು ಲಜ್ಜಾಗುಣವನ್ನೂ ಧೃತಿದೇವಿಯು ಧೈರ್ಯಗುಣವನ್ನೂ ಕೀರ್ತಿದೇವಿಯು ಸ್ತುತಿಗುಣವನ್ನೂ ಬುದ್ಧಿದೇವಿಯು ಜ್ಞಾನಗುಣವನ್ನೂ ಲಕ್ಷ್ಮೀದೇವಿಯು ಸಂಪತ್ತನ್ನೂ ಉಂಟುಮಾಡಿದರು. ಆ ಗುಣಗಳ ಸಂಸ್ಕಾರದಿಂದ ಮರುದೇವಿಯು, ಅಗ್ನಿಯಿಂದ ಸಂಸ್ಕರಿಸಲ್ಪಟ್ಟ ರತ್ನದಂತೆ, ಶೋಭಿಸಿದಳು.

**ತಾಸ್ತಸ್ಯಾಃ [3]ಪರಿಚರ್ಯಾಯಾಂ ಗರ್ಭಶೋಧನಮಾದಿತಃ ।**
**ಪ್ರಚಕ್ರುಃ ಶುಚಿಭಿರ್ದ್ರವ್ಯೈಃ ಸ್ವರ್ಗಲೋಕಾ[4]ದುಪಾಹೃತೈಃ ॥ ೧೭೨ ॥**

ಆ ಶ್ರೀಮೊದಲಾದ ದೇವಿಯರು ಸ್ವರ್ಗಲೋಕದಿಂದ ತಂದಿದ್ದ ನಿರ್ಮಲವಾದ ದ್ರವ್ಯಗಳಿಂದ ಆ ಮರುದೇವಿಯ ಉಪಾಸನೆಯಲ್ಲಿ ತತ್ಪರರಾಗಿ ಸ್ವಾಮಿಯು ಅವತರಿಸುವುದಕ್ಕಿಂತ ಮೊದಲು ಗರ್ಭಶೋಧನೆಯನ್ನು ಮಾಡಿದರು.

**ಸ್ವಭಾವನಿರ್ಮಲಾ ಚಾರ್ವೀ ಭೂಯ[5]ಸ್ತಾಭಿರ್ವಿಶೋಧಿತಾ ।**
**ಸಾ ಶುಚಿಸ್ಫಟಿಕೇನೇವ ಘಟಿತಾಂಗೀ ತದಾ ಬಭೌ ॥ ೧೭೩ ॥**

ಸ್ವಭಾವದಿಂದ ನಿರ್ಮಲಳೂ ಸುಂದರಿಯೂ ಆದ ಆ ಮರುದೇವಿಯು ಶ್ರೀ ಮೊದಲಾದ ದೇವಿಯರಿಂದ ಪುನಃ ಪರಿಶೋಧಿಸಲ್ಪಟ್ಟವಳಾಗಿ, ಶುದ್ಧವಾದ ಸ್ಫಟಿಕದಿಂದ ರಚಿಸಲ್ಪಟ್ಟ ಅವಯವಗಳುಳ್ಳವಳಂತೆ, ಪ್ರಕಾಶಿಸಿದಳು.

**ಕಾಶ್ಚಿನ್ಮಂಗಲಧಾರಿಣ್ಯಃ ಕಾಶ್ಚಿತ್ತಾಂಬೂಲದಾಯಿಕಾಃ ।**
**ಕಾಶ್ಚಿ[6]ನ್ಮಜ್ಜನಪಾಲಿನ್ಯಃ ಕಾಶ್ಚಿಚ್ಚಾಸ[7]ನ್ನಸಾಧಿಕಾಃ ॥ ೧೭೪ ॥**

ಕೆಲವು ದೇವಿಯರು ಮಂಗಲರೂಪವಾದ ವಸ್ತುಗಳನ್ನು ಹಿಡಿದುಕೊಂಡರು. ಕೆಲವು ದೇವಿಯರು ಮರುದೇವಿಗೆ ತಾಂಬೂಲವನ್ನು ಕೊಡುತ್ತಿದ್ದರು. ಕೆಲವರು ಸ್ನಾನಸಾಮಗ್ರಿಯನ್ನು ತಯಾರಿಸಿ ಮರುದೇವಿಯ ಸ್ನಾನದ ಸಮಯವನ್ನು ಕಾದುಕೊಂಡಿದ್ದರು. ಕೆಲವು ದೇವಿಯರು ಮರುದೇವಿಯನ್ನು ಅಲಂಕರಿಸುವುದರಲ್ಲಿ ನಿಯುಕ್ತರಾಗಿದ್ದರು.

**ಕಾಶ್ಚಿನ್ಮಹಾನಸೇ ಯುಕ್ತಾಃ ಶಯ್ಯಾವಿರಚನೇ ಪರಾಃ ।**
**[1]ಪಾದಸಂವಾಹನೇ ಕಾಶ್ಚಿತ್ಕಾಶ್ಚಿನ್ಮಾಲ್ಯೈ[2]ರುಪಾಚರನ್ ॥ ೧೭೫ ॥**

ಕೆಲವು ದೇವಿಯರು ಪಾಕಶಾಲೆಯಲ್ಲಿ ಭೋಜನಸಾಮಗ್ರಿಗಳನ್ನು ಮಾಡುವುದರಲ್ಲಿ ನಿಯಮಿಸಲ್ಪಟ್ಟರು. ಕೆಲವು ದೇವಿಯರು ಹಾಸಿಗೆಯನ್ನು ತಯಾರಿಸುವುದರಲ್ಲಿ ತತ್ಪರರಾದರು. ಕೆಲವು ದೇವಿಯರು ಪಾದಗಳನ್ನು ಮರ್ದಿಸುವುದರಲ್ಲಿ ನಿಯಮಿಸಲ್ಪಟ್ಟರು. ಕೆಲವು ದೇವಿಯರು ಪುಷ್ಪಮಾಲಿಕೆಗಳಿಂದ ಉಪಚರಿಸಿದರು.

**[3]ಪ್ರಸಾಧನವಿಧೌ ಕಾಚಿತ್ಸ್ಪೃಶಂತೀ ತನ್ಮುಖಾಂಬುಜಮ್ ।**
**ಸಾನುರಾಗಂ ವ್ಯಧಾ[4]ತ್ಸೂರೀ ಪ್ರಭೇವಾಬ್ಜಂ [5]ಸರೋರುಹಃ ॥ ೧೭೬ ॥**

ಒಬ್ಬಾಳೊಬ್ಬ ದೇವಿಯು ಮರುದೇವಿಯನ್ನು ಅಲಂಕರಿಸುವಾಗ ಆ ಮರುದೇವಿಯ ಮುಖಕಮಲವನ್ನು ಮುಟ್ಟಿ, ಸೂರ್ಯನ ಪ್ರಭೆಯು ಕಮಲಲತೆಯ ಕಮಲವನ್ನರಳಿಸುವಂತೆ, ಅನುರಾಗವಿಶಿಷ್ಟವನ್ನಾಗಿ ಮಾಡಿದಳು.

**ತಾಂಬೂಲ[6]ದಾಯಿನೀ ಕಾಚಿದ್ಬಭೌ ಪತ್ರೈಃ ಕರಸ್ಥಿತೈಃ ।**
**ಶುಕಾಧ್ಯಾಸಿತಶಾಖಾಗ್ರಾ ಲತೇವಾಮರಕಾಮಿನೀ ॥ ೧೭೭ ॥**

ಮರುದೇವಿಗೆ ತಾಂಬೂಲವನ್ನು ಕೊಡುತ್ತಿದ್ದ ಒಬ್ಬಾಳೊಬ್ಬ ದೇವಸ್ತ್ರೀಯು ತನ್ನ ಕೈಯಲ್ಲಿರುವ ಎಲೆಗಳಿಂದ, ಗಿಣಿಯು ಕುಳಿತಿರುವ ಕೊಂಬೆಯುಳ್ಳ ಲತೆಯಂತೆ, ಶೋಭಿಸುತ್ತಿದ್ದಳು.

**ಕಾಚಿದಾಭರಣಾನ್ಯಸ್ಯೈ ದಧತೀ ಮೃದುಪಾಣಿನಾ ।**
**ವಿಬಭೌ ಕಲ್ಪವಲ್ಲೀವ ಶಾಖಾಗ್ರೋದ್ಭಿನ್ನಭೂಷಣಾ ॥ ೧೭೮ ॥**

ತನ್ನ ಮೃದುವಾದ ಕೈಯಿಂದ ಈ ಮರುದೇವಿಗೆ ಆಭರಣಗಳನ್ನು ಕೊಡುತ್ತಿದ್ದ ಒಬ್ಬಳು ದೇವಾಂಗನೆಯು, ಕೊಂಬೆಯ ತುದಿಯಲ್ಲಿ ಆಭರಣಗಳನ್ನು ಬಿಟ್ಟಿರುವ ಕಲ್ಪಲತೆಯಂತೆ, ಶೋಭಿಸುತ್ತಿದ್ದಳು.

**[7]ವಾಸಃ[8]ಕ್ಷೌಮಂ ಸ್ರಜೋ ದಿವ್ಯಾಃ ಸುಮನೋಮಂಜರೀರಪಿ ।**
**ತಸ್ಯೈ ಸಮರ್ಪಯಾಮಾಸುಃ ಕಾಶ್ಚಿತ್ಕಲ್ಪಲತಾ ಇವ ॥ ೧೭೯ ॥**

ಕೆಲವು ದೇವಸ್ತ್ರೀಯರು ಕಲ್ಪಲತೆಗಳಂತೆ ಆ ಮರುದೇವಿಗೆ ವಸ್ತ್ರವನ್ನೂ ಪಟ್ಟೆವಸ್ತ್ರವನ್ನೂ ಶ್ರೇಷ್ಠವಾದ ಪುಷ್ಪಮಾಲಿಕೆಗಳನ್ನೂ ಪುಷ್ಪದ ಗೊಂಚಲುಗಳನ್ನೂ ಸಮರ್ಪಿಸಿದರು.

**ಕಾಚಿತ್ಸೌಗಂಧಿಕಾಹೂತದ್ವಿರೇಫೈರನುಲೇಪನೈಃ ।**
**ಸ್ವಕರಸ್ಥೈಃ ಕೃತಾಮೋದಾ [9]ಗಂಧಯುಕ್ತಿರಿವಾರುಚತ್ ॥ ೧೮೦ ॥**

ಪರಿಮಳಕ್ಕೆ ಭ್ರಮರಗಳು ಮುತ್ತಿಕೊಂಡಿರುವ ಸುಗಂಧವಾದ ಲೇಪನದ್ರವ್ಯಗಳನ್ನು ಕೈಯಲ್ಲಿಟ್ಟುಕೊಂಡು ಮರುದೇವಿಗೆ ಸಂತೋಷವನ್ನುಂಟು ಮಾಡಿದ ಒಬ್ಬಳು ದೇವಸ್ತ್ರೀಯು, ಸುಗಂಧದ್ರವ್ಯವನ್ನು ಮಾಡುವ ಕ್ರಮವನ್ನು ಹೇಳುವ ಶಾಸ್ತ್ರವೋ ಎಂಬಂತೆ, ಶೋಭಿಸುತ್ತಿದ್ದಳು.

**ಅಂಗರಕ್ಷಾವಿಧೌ ಕಾಶ್ಚಿದುತ್ಖಾತಾಸಿಲತಾ ಬಭುಃ ।**
**ಸರಸ್ಯ ಇವ ವಿತ್ರಸ್ತಪಾಠೀನಾಃ ಸುರಯೋಷಿತಃ ॥ ೧೮೧ ॥**

೧ ಚೇಟ್ಯಃ. ೨ ಶ್ರೀಲಜ್ಜಾದೀನ್. ೩ ಉಪಾಸನೇ. ೪ ಆನೀತೈಃ. ೫ ಶ್ರೀಪ್ರಭೃತಿಭಿಃ. ೬ ಕಾಶ್ಚಿದಂಜನೇತಿ ಚ ಪಾಠಃ. ೭ ಅಲಂಕಾರೇ ನಿಯುಕ್ತಾಃ.

೧ ಪಾದಮರ್ದನೇ. ೨ ಉಪಚಾರಮಕುರ್ವನ್. ೩ ಅಲಂಕಾರವಿಧಾನೇ. ೪ ಸೂರಸ್ಯೇಯಂ. ೫ ಸರಸಿ ರೋಹತೀತಿ ಸರೋರುಟ್ ತಸ್ಯಾಃ ಸರೋಜಿನಾ ಇತ್ಯರ್ಥಃ. ೬ ದಾಯಿಕೇತ್ಯಪಿ ಪಾಠಃ. ೭ ವಸ್ತ್ರಂ. ೮ ದುಕೂಲಂ. ೯ ಸುಗಂಧದ್ರವ್ಯಕರಣಪ್ರತಿಪಾದಕಶಾಸ್ತ್ರವಿಶೇಷಃ.

ಮರುದೇವಿಯ ಅಂಗರಕ್ಷಣೆಗಾಗಿ ಲತೆಯಂತಿರುವ ಖಡ್ಗಗಳನ್ನು ಹಿಡಿದಿರುವ ಕೆಲವು ದೇವಸ್ತ್ರೀಯರು, ಭಯಪಟ್ಟು ಚದರಿರುವ ತುರಿಮುಳ್ಳಿನ ಮೀನುಗಳುಳ್ಳ ಸರೋವರಗಳಂತೆ, ಪ್ರಕಾಶಿಸಿದರು.

**ಸಮ್ಮಮಾರ್ಜುರ್ಮಹೀಂ ಕಾಶ್ಚಿದಾಕೀರ್ಣಾಂ ಪುಷ್ಪರೇಣುಭಿಃ ।**
**ತದ್ಗಂಧಾಸಂಗಿನೋ ಭೃಂಗಾನಾಧುನಾನಾಃ ಸ್ತನಾಂಶುಕೈಃ ॥ ೧೮೨ ॥**

ಕೆಲವು ದೇವಸ್ತ್ರೀಯರು ಪುಷ್ಪಧೂಳಿನ ಪರಿಮಳದಲ್ಲಿ ಆಸಕ್ತವಾದ ಭ್ರಮರಗಳನ್ನು ತಮ್ಮ ಕುಚಗಳ ವಸ್ತ್ರ(ಸೆರಗು)ಗಳಿಂದ ದೂರಮಾಡಿ ಪುಷ್ಪಧೂಳು ಗಳಿಂದ ವ್ಯಾಪ್ತವಾದ ಭೂಮಿಯನ್ನು ಗುಡಿಸಿದರು.

**ಕುರ್ವಂತಿ ಸ್ಮಾಪರಾಃ ಸಾಂದ್ರಚಂದನಚ್ಛಟ[೧]ಯೋಕ್ಷಿತಾಮ್ ।**
**ಕ್ಷಿತಿಮಾರ್ದ್ರಾಂಶುಕೈರನ್ಯಾ ನಿರ್ಮಮಾರ್ಜುರತಂದ್ರಿತಾಃ ॥ ೧೮೩ ॥**

ಬೇರೆ ಕೆಲವು ದೇವಾಂಗನೆಯರು ಭೂಮಿಗೆ ದಟ್ಟವಾಗಿ ಗಂಧೋದಕವನ್ನು ಸೇಚನೆಮಾಡಿದರು. ಇನ್ನು ಕೆಲವರು ಆಲಸ್ಯರಹಿತರಾಗಿ ಒದ್ದೆಬಟ್ಟೆಗಳಿಂದ ಭೂಮಿಯನ್ನು ಒರಸಿದರು.

**ಕುರ್ವತೇ [೨]ವಲಿವಿನ್ಯಾಸಂ ರತ್ನಚೂರ್ಣೈಃ [೩]ಪುರೋಪರಾಃ ।**
**ಪುಷ್ಪೈರುಪಹರಂತ್ಯನ್ಯಾಸ್ತತಾಮೋದೈ [೪]ರ್ದ್ರುಶಾಖಿನಾಮ್ ॥ ೧೮೪ ॥**

ಕೆಲವು ದೇವಸ್ತ್ರೀಯರು ಮುಂದುಗಡೆಯಲ್ಲಿ ರಂಗವಲಿಯನ್ನಿಟ್ಟರು. ಇನ್ನು ಕೆಲವರು ಪರಿಮಳವನ್ನು ಹರಡಿರುವ ಕಲ್ಪವೃಕ್ಷಗಳ ಪುಷ್ಪಗಳನ್ನು ಮುಂದುಗಡೆಯಲ್ಲಿ ತಂದು ಅರ್ಪಿಸಿದರು.

**ಕಾಶ್ಚಿದ್ದರ್ಶಿತದಿವ್ಯಾನುಭಾವಾಃ [೫]ಪ್ರಚ್ಛನ್ನವಿಗ್ರಹಾಃ ।**
**ನಿಯೋಗೈರುಚಿತೈರೇನಾಮನಾರತಮುಪಾಚರನ್ ॥ ೧೮೫ ॥**

ಮನುಷ್ಯದೇಹವನ್ನು ಧರಿಸಿಕೊಂಡು ಮಹಾಮಹಿಮೆಯನ್ನು ತೋರಿಸಿದ ಕೆಲವು ದೇವಸ್ತ್ರೀಯರು ಮರುದೇವಿಯ ಉಚಿತವಾದ ಆಜ್ಞೆಗಳನ್ನು ನೆರವೇರಿಸಿ ಸದಾ ಈ ಮರುದೇವಿಯ ಸೇವೆಯನ್ನು ಮಾಡುತ್ತಿದ್ದರು.

**ಪ್ರಭಾತರಲಿತಾಂ ಕಾಶ್ಚಿದ್ದಧಾನಾಸ್ತನುಯಷ್ಟಿಕಾಮ್ ।**
**ಸೌದಾಮಿನ್ಯ ಇವಾನಿನ್ಯುರುಚಿತಂ ರುಚಿತಂ ಚ ಯತ್ ॥ ೧೮೬ ॥**

ದೇಹಕಾಂತಿಯಿಂದ ಥಳಥಳಿಸುತ್ತಿರುವ ಶರೀರವನ್ನು ಧರಿಸಿದ ಮತ್ತು ಮಿಂಚಿನಂತಿರುವ ಕೆಲವು ದೇವಸ್ತ್ರೀಯರು ಉಚಿತವೂ ಇಷ್ಟವೂ ಆದ ವಸ್ತುವನ್ನು ಮರುದೇವಿಗೆ ತಂದು ಕೊಡುತ್ತಿದ್ದರು.

**ಕಾಶ್ಚಿ[೬]ದಂತರ್ಹಿತಾ ದೇವ್ಯೋ ದೇವ್ಯೈ ದಿವ್ಯಾನುಭಾವತಃ ।**
**ಸ್ರಜಮಂಶುಕಮಾಹಾರಂ ಭೂಷಾಂ ಚಾಸ್ಯೈ [೭]ಸಮರ್ಪಯನ್ ॥**

ಕೆಲವು ದೇವಸ್ತ್ರೀಯರು ಮರೆಯಾಗಿದ್ದುಕೊಂಡು ತಮ್ಮ ದಿವ್ಯಮಹಿಮೆಯಿಂದ ಈ ಮರುದೇವಿಗೆ ಪುಷ್ಪಮಾಲಿಕೆಯನ್ನೂ ವಸ್ತ್ರವನ್ನೂ ಆಹಾರವನ್ನೂ ಆಭರಣವನ್ನೂ ಅರ್ಪಿಸುತ್ತಿದ್ದರು.

**ಅಂತರಿಕ್ಷಸ್ಥಿತಾಃ ಕಾಶ್ಚಿದನಾಲಕ್ಷಿತಮೂರ್ತಯಃ ।**
**ಯತ್ನೇನ ರಕ್ಷ್ಯತಾಂ ದೇವೀತ್ಯುಚ್ಚೈರ್ಗಿರ[೮]ಮುದಾಹರನ್ ॥ ೧೮೮ ॥**

ಕೆಲವು ದೇವಸ್ತ್ರೀಯರು ಆಕಾಶದಲ್ಲಿ ಗುಪ್ತವಾಗಿದ್ದುಕೊಂಡು ''ಮರುದೇವಿಯನ್ನು ಬಹುಯತ್ನದಿಂದ ರಕ್ಷಣೆಮಾಡಿರಿ'' ಎಂದು ಗಟ್ಟಿಯಾಗಿ ಹೇಳುತ್ತಿದ್ದರು.

**[೧]ಗತೇಷ್ವಂಶುಕಸಂಧಾನ[೨]ಮಾಸಿತೇಷ್ವಾ[೩]ಸನಾಹೃತಿಮ್ ।**
**[೪]ಸ್ಥಿತೇಷು ಪರಿತಃ ಸೇವಾಂ ಚಕ್ರುರಸ್ಯಾಃ ಸುರಾಂಗನಾಃ ॥ ೧೮೯ ॥**

ಮರುದೇವಿಯು ಸಂಚರಿಸುತ್ತಿರುವಾಗ ದೇವಸ್ತ್ರೀಯರು ಮುಂದುಗಡೆಯಲ್ಲಿ ವಸ್ತ್ರವನ್ನು ಹಾಸುತ್ತಿದ್ದರು. ಕುಳಿತುಕೊಳ್ಳುವ ಸಮಯದಲ್ಲಿ ಪೀಠವನ್ನು ತಂದುಕೊಡುತ್ತಿದ್ದರು. ನಿಂತಾಗ ಈಕೆಯ ಸುತ್ತಲೂ ಸೇವೆಯನ್ನು ಮಾಡುತ್ತಿದ್ದರು.

**ಕಾಶ್ಚಿ[೫]ದುಚ್ಚಿಕ್ಷಿಪುರ್ಜ್ಯೋತಿಸ್ತರಲಾ ಮಣಿದೀಪಿಕಾಃ ।**
**ನಿಶಾಮುಖೇಷು [೬]ಹರ್ಮ್ಯಾಗ್ರಾದ್ವಿಧುನ್ವಾನಾಸ್ತಮೋಭಿತಃ ॥ ೧೯೦ ॥**

ಕೆಲವು ದೇವಾಂಗನೆಯರು ಸಾಯಂಕಾಲದಲ್ಲಿ ಉಪ್ಪರಿಗೆಯನ್ನು ಹತ್ತಿ ಸುತ್ತಲೂ ಕತ್ತಲೆಯನ್ನು ಹೋಗಲಾಡಿಸುವುದರಲ್ಲಿ ಸಮರ್ಥವೂ ಚಂಚಲವಾದ ಕಾಂತಿಯುಳ್ಳುವೂ ಆದ ರತ್ನದೀಪಗಳನ್ನು ಪ್ರಜ್ವಲಿಸಿದರು.

**ಕಾಶ್ಚಿನ್ನೀರಾಜಯಾಮಾಸುರುಚಿತೈರ್ಬಲಿಕರ್ಮಭಿಃ ।**
**[೭]ನ್ಯಾಸ್ಥನ್ಮಂತ್ರಾಕ್ಷರೈಃ ಕಾಶ್ಚಿದಸ್ಯೈ ರಕ್ಷಾ[೮]ಮುಪಕ್ಷಪಮ್ ॥ ೧೯೧ ॥**

ಕೆಲವು ದೇವಸ್ತ್ರೀಯರು ಉಚಿತವಾದ ಬಲಿ ವಿಧಾನಗಳಿಂದ ನಿವಾಳಿಸಿದರು. ಇನ್ನು ಕೆಲವರು ಸಾಯಂಕಾಲದಲ್ಲಿ ಮಂತ್ರಾಕ್ಷರಗಳನ್ನುಚ್ಚರಿಸಿ ಮರುದೇವಿಗೆ ರಕ್ಷಾಬಂಧನವನ್ನು ಮಾಡಿದರು.

**ನಿತ್ಯ[೯]ಜಾಗರಿತೈಃ ಕಾಶ್ಚಿ[೧೦]ನ್ನಿಮೇಷಾಲಸಲೋಚನಾಃ ।**
**[೧೧]ಉಪಾಸಾಂಚಕ್ರಿರೇ [೧೨]ನಕ್ತಂ ತಾಂ ದೇವ್ಯೋ ವಿಧೃತಾಯುಧಾಃ ॥**

ಯಾವಾಗಲೂ ಜಾಗರಣೆಯಾಗಿದ್ದುದರಿಂದ ಆಲಸ್ಯವಾದ ರೆಪ್ಪೆಗಳೊಡಗೂಡಿದ ನೇತ್ರಗಳುಳ್ಳ ಕೆಲವು ದೇವಸ್ತ್ರೀಯರು ಆಯುಧಗಳನ್ನು ಹಿಡಿದುಕೊಂಡು ರಾತ್ರಿಯಲ್ಲಿ ಮರುದೇವಿಯ ಸೇವೆಯನ್ನು ಮಾಡುತ್ತಿದ್ದರು.

**ಕದಾಚಿಜ್ಜಲಕೇಲೀಭಿರ್ವನಕ್ರೀಡಾಭಿರನ್ಯದಾ ।**
**ಕಥಾಗೋಷ್ಠೀಭಿರನ್ಯೇದ್ಯುರ್ದೇವ್ಯಸ್ತಸ್ಯೈ ಧೃತಿಂ[೧೩]ದಧುಃ ॥ ೧೯೩ ॥**

ಆ ದೇವಸ್ತ್ರೀಯರು ಕೆಲವು ವೇಳೆಗಳಲ್ಲಿ ಜಲಕ್ರೀಡೆಗಳಿಂದಲೂ, ಕೆಲವು ವೇಳೆಗಳಲ್ಲಿ ವನಕ್ರೀಡೆಗಳಿಂದಲೂ ಕೆಲವು ವೇಳೆಗಳಲ್ಲಿ ಕಥಾಪ್ರಸಂಗಗಳಿಂದಲೂ ಆ ಮರುದೇವಿಯನ್ನು ಸಂತೋಷಪಡಿಸಿದರು.

**ಕದಾಚಿದ್ಗೀತಗೋಷ್ಠೀಭಿರ್ವಾದ್ಯಗೋಷ್ಠೀಭಿರನ್ಯದಾ ।**
**ಕದಾಚಿನ್ನೃತ್ಯಗೋಷ್ಠೀಭಿರ್ದೇವ್ಯಸ್ತಾಂ[೧೪]ಪರ್ಯುಪಾಸತ ॥ ೧೯೪ ॥**

ಕೆಲವು ವೇಳೆಗಳಲ್ಲಿ ಗಾಯನದಿಂದಲೂ ಕೆಲವು ವೇಳೆಗಳಲ್ಲಿ ವಾದ್ಯಗಳಿಂದಲೂ ಕೆಲವು ವೇಳೆಗಳಲ್ಲಿ ನೃತ್ಯದಿಂದಲೂ ದೇವಸ್ತ್ರೀಯರು ಮರುದೇವಿಯ ಸೇವೆಯನ್ನು ಮಾಡಿದರು.

**ಕಾಶ್ಚಿ[೧೫]ತ್ಪ್ರೇಕ್ಷಣಗೋಷ್ಠೀಷು ಸಲೀಲಾನರ್ತಿತಭ್ರುವಃ ।**
**ವರ್ಧಮಾನ[೧೬]ಲಯೈರ್ನೇಟುಃ[೧೭]ಸಾಂಗಹಾರಾಃ ಸುರಾಂಗನಾಃ ॥೧೯೫ ॥**

ಗುಂಪಾಗಿ ಸೇರಿ ನರ್ತನವನ್ನು ಮಾಡುತ್ತಿರುವಾಗ ಅಂಗವಿಕ್ಷೇಪಸಹಿತರಾದ ಕೆಲವು ದೇವಸ್ತ್ರೀಯರು ಲೀಲೆಯಿಂದ ತಮ್ಮ ಹುಬ್ಬುಗಳನ್ನು ತಿರುಗಿಸುತ್ತ ವೃದ್ಧಿಹೊಂದುತ್ತಿರುವ ಲಯಗಳಿಂದ ನರ್ತನವನ್ನು ಮಾಡಿದರು.

**ಕಾಶ್ಚಿನ್ನೃತ್ತ[೧೮]ವಿನೋದೇಷು ರೇಜಿರೇ [೧೯]ಕೃತರೇಚಕಾಃ ।**
**ನಭೋರಂಗೇ ವಿಲೋಲಾಂಗ್ಯಃ ಸೌದಾಮಿನ್ಯ ಇವೋ[೨೦]ದ್ರುಚಃ ॥೧೯೬ ॥**

೧ ಸಿಕ್ತಾಂ. ೨ ರಂಗವಲಿರಚನಾಂ. ೩ ಪುರೇತ್ಯಪಿ ಪಾಠಃ; ಮಧ್ಯದೀಪಕಮಿದಂ ಪದಂ. ೪ ಕಲ್ಪವೃಕ್ಷಾಣಾಂ. ೫ ಮನುಷ್ಯದೇಹಧಾರಿಣ್ಯ ಇತ್ಯರ್ಥಃ. ೬ ಅಂತರ್ಧಾನಂ ಗತಾಃ. ೭ ಸಮಾರ್ಪಿಪನ್ನಿತ್ಯಪಿ ಪಾಠಃ. ೮ ವದಂತಿ ಸ್ಮ.

೧ ಗಮನೇಷು. ೨ ಉಪವೇಶನೇಷು. ೩ ಪೀಠಾನಯನಂ. ೪ ಸ್ಥಾನೇಷು. ೫ ಜ್ವಲಯಂತಿ ಸ್ಮ. ೬ ಪ್ರಾಸಾದಾಗ್ರಮಾರುಹ್ಯ. ೭ ನ್ಯಸ್ಯಂತಿ ಸ್ಮ. ೮ ರಜನೀಮುಖೇ. ೯ ಜಾಗರಣೈಃ. ೧೦ ನಿರ್ನಿಮೇಷಾಃ. ೧೧ ಸೇವಾಂ ಚಕ್ರುಃ. ೧೨ ರಜನ್ಯಾಂ. ೧೩ ದದುರಿತ್ಯಪಿ ಪಾಠಃ. ೧೪ ಸೇವಾಂ ಚಕ್ರಿರೇ. ೧೫ ಸಮುದಾಯನೃತ್ತಂ. ೧೬ ತಾಲಲಯೈಃ. ೧೭ ಅಂಗವಿಕ್ಷೇಪಸಹಿತಾಃ. ೧೮ ವಿನೋದೇನೇತ್ಯಪಿ ಪಾಠಃ. ೧೯ ಕೃತವಲ್ಗನಾಃ. ೨೦ ಉದ್ಗತಪ್ರಭಾಃ.

ನೃತ್ಯವಿನೋದಗಳಲ್ಲಿ ತಮ್ಮ ಅವಯವಗಳನ್ನು ಕುಣಿಸುತ್ತಿರುವ ಕೆಲವು ದೇವಸ್ತ್ರೀಯರು, ಆಕಾಶವೆಂಬ ರಂಗಸ್ಥಾನದಲ್ಲಿ ಮೇಲಕ್ಕೆದ್ದಿರುವ ಪ್ರಭೆಯುಳ್ಳ ಮಿಂಚುಗಳಂತೆ, ಪ್ರಕಾಶಿಸುತ್ತಿದ್ದರು.

**ಕಾಶ್ಚಿ[೧]ದಾರಚಿತ್ಯೈಃ ಸ್ಥಾನೈರ್ಬಭು[೨]ರ್ವಿಕ್ಷಿಪ್ತಬಾಹವಃ ।**
**ಶಿಕ್ಷಮಾಣಾ ಇವಾನಂಗಾ[೩]ದ್ಧನುರ್ವೇದಂ [೪]ಜಗಜ್ಜಯೇ ॥ ೧೯೭ ॥**

ನಾಟ್ಯಶಾಸ್ತ್ರದಲ್ಲಿ ಹೇಳಿದಂತೆ ಆಯಾಸ್ಥಾನಗಳಲ್ಲಿ ತಮ್ಮ ಭುಜಗಳನ್ನು ಸಂಯೋಜನೆಮಾಡುತ್ತಿದ್ದ ಕೆಲವು ದೇವಸ್ತ್ರೀಯರು ಲೋಕವನ್ನು ಜಯಿಸುವ ನಿಮಿತ್ತವಾಗಿ ಮನ್ಮಥನಿಂದ ಧನುರ್ವಿದ್ಯೆಯನ್ನು ಕಲಿಯುತ್ತಿದ್ದಾರೆಯೋ ಎಂಬಂತೆ ಶೋಭಿಸುತ್ತಿದ್ದರು.

**ಪುಷ್ಪಾಂಜಲಿಂ ಕಿರಂತ್ಯೇಕಾ ಪರಿತೋ [೫]ರಂಗಮಂಡಲಮ್ ।**
**ಮದನಗ್ರಹಮಾವೇಶೇ[೬]ಯೋಕ್ತುಕಾಮೇವ ಲಕ್ಷಿತಾ ॥ ೧೯೮ ॥**

ಮಂಡಲಾಕಾರವಾದ ರಂಗಸ್ಥಾನದ ಸುತ್ತಲೂ ಪುಷ್ಪಾಂಜಲಿಯನ್ನು ಎರಚುತ್ತಿರುವ ಒಬ್ಬಳು ದೇವಾಂಗನೆಯು ಮನ್ಮಥನೆಂಬ ಗ್ರಹವನ್ನು ಆವೇಶದಲ್ಲಿ ಪ್ರಯೋಗಿಸುವುದಕ್ಕೋಸ್ಕರ ಇಚ್ಛೆಯುಳ್ಳವಳಂತೆ ಕಾಣುತ್ತಿದ್ದಳು.

**ತದುರೋಜಸರೋಜಾತಮುಕುಲಾನಿ ಚಕಂಪಿರೇ ।**
**ಅನುನರ್ತಿತುಮೇತಾಸಾಮಿವ ನೃತ್ತಂ ಕುತೂಹಲಾತ್ ॥ ೧೯೯ ॥**

ಆ ದೇವಸ್ತ್ರೀಯರ ಕುಚಗಳೆಂಬ ಕಮಲದ ಮೊಗ್ಗುಗಳು, ಕುತೂಹಲದಿಂದ ಈ ದೇವಸ್ತ್ರೀಯರ ನರ್ತನವನ್ನು ಅನುಸರಿಸಿ ನರ್ತನವನ್ನು ಮಾಡುವುದಕ್ಕೋಸ್ಕರವೋ ಎಂಬಂತೆ, ಕಂಪಿಸಿದುವು.

**ಅಪಾಂಗಶರಸಂಧಾನೈರ್ಭ್ರೂಲತಾಚಾಪಕರ್ಷಣೈಃ ।**
**ಧನು[೭]ರ್ಗುಣನಿಕೇವಾಸೀನ್ನೃತ್ತಗೋಷ್ಠೀ ಮನೋಭುವಃ ॥ ೨೦೦ ॥**

ದೇವಸ್ತ್ರೀಯರ ನರ್ತನಗೋಷ್ಠಿ(ಸಮೂಹ)ಯು ಕಡೆಕಣ್ಣುನೋಟಗಳೆಂಬ ಬಾಣಗಳ ಸಂಧಾನಗಳಿಂದಲೂ ಲತೆಯಂತಿರುವ ಹುಬ್ಬುಗಳೆಂಬ ಧನುಸ್ಸುಗಳ ಆಕರ್ಷಣೆಗಳಿಂದಲೂ ಮನ್ಮಥನ ಧನುರ್ವಿದ್ಯಾಭ್ಯಾಸದಂತಿದ್ದಿತು.

**ಸ್ಮಿತಮುದ್ಭಿನ್ನದಂತಾಂಶು ಪಾಠ್ಯಂ [೮]ಕಲ[೯]ಮನಾಕುಲಮ್ ।**
**ಸಾಪಾಂಗವೀಕ್ಷಿತಂ ಚಕ್ಷುಃ [೧೦]ಸಲಯಶ್ಚ [೧೧]ಪರಿಕ್ರಮಃ ॥ ೨೦೧ ॥**

**ಇತೀದಮನ್ಯದಪ್ಯಾಸಾಂ ಧತ್ತೇನಂಗ[೧೨]ಶರಾಂಗತಾಮ್ ।**
**[೧೩]ಕಿಮಂಗ[೧೪]ಸಂಗತಂ[೧೫]ಭಾವೈರಾಂಗಿಕೈ [೧೬]ರಸತಾಂ ಗತೈಃ ॥ ೨೦೨ ॥**

ದೇವಸ್ತ್ರೀಯರ ವಿಕಸಿತವಾದ ಹಲ್ಲುಗಳ ಕಾಂತಿಯೊಡಗೂಡಿದ ಮುಗುಳುನಗೆಯೂ ಸಂಪೂರ್ಣವೂ ಮನೋಹರವೂ ಆದ ಗಾನವೂ ಕಡೆಕಣ್ಣುನೋಟಗಳೊಡಗೂಡಿದ ನೇತ್ರವೂ ಸಮಸ್ತಾಭಿನಯಗಳ ಸಾಮ್ಯವುಳ್ಳ ನಡಿಗೆಯೂ ಇವು ಮೊದಲಾದ ಕಾರ್ಯಗಳು ಮನ್ಮಥನ ಬಾಣಸ್ವರೂಪಗಳಾಗಿದ್ದುವು. ಈ ಕಾರ್ಯಗಳು ಕಾಮುಕರಿಗೆ ಕಾಮವಿಕಾರವನ್ನುಂಟುಮಾಡುತ್ತಿದ್ದುವೆಂದರ್ಥವು. ಈ ಕಾರ್ಯಗಳು ರಸಭಾವವನ್ನು ಹೊಂದಿದ ಅಂಗಚೇಷ್ಟೆಗಳಿಂದ ಯುಕ್ತವಾದರೆ ಹೇಳುವುದೇನು ?

**[೧೭]ಚಾರಿಭಿಃ [೧೮]ಕರಣೈಶ್ಚಿತ್ರೈಃ ಸಾಂಗಹಾರೈಶ್ಚ [೧೯]ರೇಚಕೈಃ ।**
**ಮನೋಸ್ಯಾಃ ಸುರನರ್ತಕ್ಯಶ್ಚಕ್ರುಃ ಸಂಪ್ರೇಕ್ಷಣೋತ್ಸುಕಮ್ ॥ ೨೦೩ ॥**

೧ ಕೃತ್ಯೈಃ. ೨ ವಿಕೀರ್ಣಾಃ. ೩ ಚಾಪವಿದ್ಯಾಂ. ೪ ನಿಮಿತ್ತಸಪ್ತಮೀ. ೫ ರಂಗಃ ಸ್ಯಾನ್ನರ್ತನಸ್ಥಾನಂ. ೬ ಪ್ರಯೋಕ್ತುಕಾಮೇವ. ೭ ಗುಣನಿಕಾಭ್ಯಾಸ ಇತಿ ಧನಂಜಯಃ. ೮ ಮನೋಹರಂ. ೯ ಸಂಪೂರ್ಣಂ. ೧೦ ಸರ್ವಾಭಿನಯ ಸಾಮ್ಯಂ. ೧೧ ಪಾದವಿಕ್ಷೇಪಃ. ೧೨ ಬಾಣಸ್ವರೂಪತಾಂ. ೧೩ ಕಿಂ ಪುನಃ. ೧೪ ಸಂಗತಂ ಚೇತ್. ೧೫ ಚೇಷ್ಟಿತೈಃ. ೧೬ ರಸಿಕತ್ವಂ. ೧೭ ಗತಿವಿಶೇಷೈಃ. ೧೮ ಪುಷ್ಪಪುಟಾದಿಕರನ್ಯಾಸೈಃ. ೧೯ ವಲ್ಗನೈಃ.

ದೇವನರ್ತಕಿಯರು ಗಮನವಿಶೇಷಗಳಿಂದಲೂ ನಾನಾವಿಧವಾದ ಹಸ್ತವಿನ್ಯಾಸಗಳಿಂದಲೂ ಅಂಗವಿಕ್ಷೇಪಸಹಿತವಾದ ಹಾವಭಾವಗಳಿಂದಲೂ ಈ ಮರುದೇವಿಯ ಮನಸ್ಸಿನಲ್ಲಿ ಈ ಕಾರ್ಯಗಳನ್ನು ನೋಡಬೇಕೆಂಬ ಕುತೂಹಲವನ್ನುಂಟುಮಾಡಿದರು.

**ಕಾಶ್ಚಿತ್ಸಂಗೀತಗೋಷ್ಠೀಷು [೧]ದರೋದ್ಭಿನ್ನಸ್ಮಿತೈರ್ಮುಖೈಃ ।**
**ಬಭುಃ ಪದ್ಮೈರಿವಾಬ್ಜಿನ್ಯೋ ವಿರಲೋದ್ಭಿನ್ನಕೇಸರೈಃ ॥ ೨೦೪ ॥**

ಸಮೂಹವಾಗಿ ಸೇರಿ ಸಂಗೀತವನ್ನು ಮಾಡುವಾಗ ಕೆಲವು ದೇವಸ್ತ್ರೀಯರು ಸ್ವಲ್ಪ ಮುಗುಳುನಗೆಯೊಡಗೂಡಿದ ಮುಖಗಳಿಂದ, ತಾವರೆಬಳ್ಳಿಗಳು ಸ್ವಲ್ಪ ವಿಕಸಿತವಾದ ಕುಸುಮಗಳುಳ್ಳ ಕಮಲಗಳಿಂದ ಶೋಭಿಸುವಂತೆ, ಶೋಭಿಸುತ್ತಿದ್ದರು.

**ಕಾಶ್ಚಿದೋಷ್ಠಾಗ್ರಸಂದಷ್ಟ[೨]ವೇಣವೋಣುಭ್ರುವೋ ಬಭುಃ ।**
**ಮದನಾಗ್ನಿಮಿ[೩]ವಾಧ್ಮಾತುಂ ಕೃತಯತ್ನಾಃ ಸಫೂತ್ಕೃತಮ್ ॥ ೨೦೫ ॥**

ಸೂಕ್ಷ್ಮವಾದ ಹುಬ್ಬುಗಳುಳ್ಳವರೂ ತುಟಿಗಳಲ್ಲಿ ಬಿದಿರು(ಕೊಳಲು) ಗಳನ್ನಿಟ್ಟುಕೊಂಡಿರುವವರೂ ಆದ ಕೆಲವು ದೇವಸ್ತ್ರೀಯರು ಮದನಾಗ್ನಿಯನ್ನು ಉರುಬಿ ಪ್ರಜ್ವಲಿಸುವುದಕ್ಕೋಸ್ಕರ ಪ್ರಯತ್ನಪಡುವವರಂತೆ ಶೋಭಿಸುತ್ತಿದ್ದರು.

**[೪]ವೇಣುಧ್ಮಾ[೫]ವೈಣವೀರ್ಯಷ್ಟೀರ್ಮಾರ್ಜಂತ್ಯಃ ಕರಪಲ್ಲವೈಃ ।**
**ಚಿತ್ರಂ ಪಲ್ಲವಿತಾಂಶ್ಚಕ್ರುಃ ಪ್ರೇಕ್ಷಕಾಣಾಂ ಮನೋದ್ರುಮಾನ್ ॥ ೨೦೬ ॥**

ಕೊಳಲು(ಮುಖವೀಣೆ)ಗಳನ್ನೂದುವ ಸ್ತ್ರೀಯರು ಪಲ್ಲವದಂತಿರುವ ಕೈಗಳಿಂದ ಕೊಳಲುಗಳನ್ನು ಸ್ಪರ್ಶಮಾಡಿ ನೋಡುವವರ ಮನಸ್ಸುಗಳೆಂಬ ವೃಕ್ಷಗಳನ್ನು ಚಿಗುರಿಸಿದರು. ಆಶ್ಚರ್ಯ ! ಪ್ರೇಕ್ಷಕರಿಗೆ ಆನಂದವಾಗುತ್ತಿದ್ದಿತೆಂದು ಭಾವವು.

**ಸಂಗೀತಕವಿಧೌ ಕಾಶ್ಚಿ[೬]ತ್ಸಂಸ್ಪೃತ್ಯ [೭]ಪರಿವಾದಿನೀಃ ।**
**ಕರಾಂಗುಲೀಭಿರಾತೇನುರ್ಗಾನಮಾಮಂದ್ರಮೂರ್ಛನಾಃ ॥ ೨೦೭ ॥**

ಮನೋಹರವಾಗಿ ಗಾನಮಾಡುವ ಕೆಲವು ದೇವಸ್ತ್ರೀಯರು ಸ(ಸಿ)ತಾರನ್ನು ತೆಗೆದುಕೊಂಡು ಸಂಗೀತಮಾಡುವ ವಿಧಾನದಲ್ಲಿ ತಮ್ಮ ಕೈಬೆರಳುಗಳಿಂದ ನುಡಿಸಿ ವಿಸ್ತಾರವಾಗಿ ಗಾನವನ್ನು ಮಾಡಿದರು.

**ತಂತ್ರ್ಯೋ ಮಧುರ[೮]ಮಾರೇಣುಸ್ತತ್ಕರಾಂಗುಲಿತಾಡಿತಾಃ ।**
**ಅಯಂ ತಾಂತ್ರೋ ಗುಣಃ ಕೋಪಿ ತಾಡನಾದ್ಯಾತಿ ಯದ್ವಶಮ್ ॥**

ಆ ದೇವಸ್ತ್ರೀಯರ ಕೈಬೆರಳುಗಳಿಂದ ಮೀಟಲ್ಪಟ್ಟ ತಂತಿಗಳು ಮಧುರವಾಗಿ ಶಬ್ದಮಾಡಿದುವು. ತಂತಿಗಳನ್ನು ಮೀಟುವುದರಿಂದ ಸ(ಸಿ)ತಾರು ವಶವಾಗುತ್ತದೆ. ಮಧುರವಾಗಿ ಶಬ್ದಮಾಡುತ್ತದೆಂದು ಭಾವವು. ಆದುದರಿಂದ ಇದು ಯಾವುದೋ ತಂತ್ರದಿಂದುಂಟಾಗುವ ಗುಣವಾಗಿದೆ.

**ವಂಶೈಃ ಸಂದಷ್ಟಮಾಲೋಕ್ಯ ತಾಸಾಂ ತು ದಶನಚ್ಛದಮ್ ।**
**ವೀಣಾಲಾಬುಭಿರಾಶ್ಲೇಷಿ ಘನಂ ತತ್ಸ್ತನಮಂಡಲಮ್ ॥ ೨೦೯ ॥**

ಬಿದುರು(ಕೊಳಲು)ಗಳು ಆ ದೇವಸ್ತ್ರೀಯರ ತುಟಿಯನ್ನು ಕಚ್ಚಿರುವುದನ್ನು ನೋಡಿ ವೀಣೆಯ ಸೋರೆಬುರುಡೆಗಳು ಅವರ ವರ್ತುಲಾಕಾರವಾದ ಸ್ತನಗಳನ್ನು ಗಟ್ಟಿಯಾಗಿ ಆಲಿಂಗಿಸಿದುವು. ಕೆಲವರು ಕೊಳಲು ನುಡಿಸುವುದಕ್ಕೂ ಕೆಲವರು ವೀಣೆಬಾರಿಸುವುದಕ್ಕೂ ಪ್ರಾರಂಭಿಸಿದರೆಂದು ಭಾವವು.

**ಮೃದಂಗವಾದನೇ ಕಾಶ್ಚಿದ್ಬಭುರುತ್ಕ್ಷಿಪ್ತಬಾಹವಃ ।**
**ತತ್ಕಲಾಕೌಶಲೇ ಶ್ಲಾಘಾಂ ಕರ್ತುಕಾಮಾ ಇವಾತ್ಮನಃ ॥ ೨೧೦ ॥**

೧ ಈಷದುದ್ಭಿನ್ನೈಃ. ೨ ವೇಣುದಂಡಾಃ. ೩ ಸಂಧುಕ್ಷಿತುಂ. ೪ ವೈಣವಿಕಾಃ. ೫ ವೇಣೋರಿಮಾಃ. ೬ ಸ್ಪೃಶಂತ್ಯ ಇತ್ಯಪಿ ಪಾಠಃ. ೭ ಸಪ್ತತಂತ್ರೀ ವೀಣಾ. ೮ ಧ್ವನಂತಿ ಸ್ಮ.

ಮದ್ದಳೆಯನ್ನು ಬಾರಿಸುವಾಗ ತಮ್ಮ ಭುಜಗಳನ್ನು ಹಾರಿಸುತ್ತಿದ್ದ ಕೆಲವು ದೇವಸ್ತ್ರೀಯರು ಆ ಮದ್ದಳೆಬಾರಿಸುವ ಕಲಾಕುಶಲತೆಯಲ್ಲಿ ತಮ್ಮನ್ನು ಶ್ಲಾಘನೆ ಮಾಡುವುದಕ್ಕೆ ಇಚ್ಛೆಯುಳ್ಳವರಂತೆ ಶೋಭಿಸುತ್ತಿದ್ದರು. ತಮ್ಮನ್ನು ತಾವೇ ಶ್ಲಾಘಿಸುವವರಂತೆ ತೋರುತ್ತಿದ್ದರೆಂದರ್ಥವು.

**ಮೃದಂಗಾಸ್ತತ್ಕರಸ್ಪರ್ಶಾತ್ತದಾ ಮಂದ್ರಂ ವಿಸಸ್ವನುಃ ।**
**ತತ್ಕಲಾಕೌಶಲಂ ತಾಸಾ[೧]ಮುತ್ಕುರ್ವಾಣಾ ಇವೋಚ್ಚಕೈಃ ॥ ೨೧೧ ॥**

ಮದ್ದಳೆಯನ್ನು ಬಾರಿಸುವಾಗ ಆ ದೇವಸ್ತ್ರೀಯರ ಹಸ್ತಸ್ಪರ್ಶದಿಂದ ಅವರ ಮದ್ದಳೆಬಾರಿಸುವ ಕಲಾಕುಶಲತೆಯನ್ನು ಮದ್ದಳೆಗಳು ಹೆಚ್ಚಿಸುತ್ತವೆಯೋ ಎಂಬಂತೆ ಗಟ್ಟಿಯಾಗಿಯೂ ಗಂಭೀರವಾಗಿಯೂ ಶಬ್ದಮಾಡಿದುವು.

**[೨]ಮೃದಂಗಾ ನ ವಯಂ ಸತ್ಯಂ ಪಶ್ಯತಾಸ್ಮಾನ್ಹಿರಣ್ಮಯಾನ್ ।**
**ಇತೀವಾ[೩]ರಸಿತಂ ಚಕ್ರುಸ್ತೇ ಮುಹುಸ್ತತ್ಕರಾಹತಾಃ ॥ ೨೧೨ ॥**

ಬಾರಿಬಾರಿಗೂ ಆ ದೇವಸ್ತ್ರೀಯರ ಕೈಗಳಿಂದ ಹೊಡೆಯಲ್ಪಟ್ಟ ಮದ್ದಳೆಗಳು ''ನಾವು ಸತ್ಯವಾಗಿಯೂ ಮಣ್ಣಿನ ಅವಯವಗಳುಳ್ಳವರಲ್ಲ. ಸುವರ್ಣಮಯರಾದ ನಮ್ಮನ್ನು ನೋಡಿ'' ಯೆಂದು ಹೇಳುತ್ತವೆಯೋ ಎಂಬಂತೆ ಶಬ್ದಮಾಡಿದುವು.

**[೪]ಮುರವಾಃ [೫]ಕುರವಾ ನೈತೇ ವಾದನೀಯಾಃ [೬]ಕೃತಶ್ರಮಮ್ ।**
**ಇತೀವ ಸಸ್ವನುರ್ಮಂದ್ರಂ ಪಣವಾದ್ಯಾಃ ಸುರಾನಕಾಃ ॥ ೨೧೩ ॥**

''ಮದ್ದಳೆಗಳು ಕೆಟ್ಟಶಬ್ದವುಳ್ಳುವು. ಶ್ರಮಪಟ್ಟು ಈ ಮದ್ದಳೆಗಳನ್ನು ಬಾರಿಸಬೇಡಿ'' ಎಂದು ಹೇಳುತ್ತವೆಯೋ ಎಂಬಂತೆ ದೇವದುಂದುಭಿಗಳು ಅಥವಾ ತಮ್ಮಟೆಗಳು ಗಂಭೀರವಾಗಿ ಶಬ್ದಮಾಡಿದವು.

**ಪ್ರಭಾತಮಂಗಲೇ ಕಾಶ್ಚಿಚ್ಛಂಖಾನಾ[೭]ಧ್ಮಾಸಿಷುಃ ಪೃಥೂನ್ ।**
**[೮]ತತ್ಕರೋತ್ಪೀಡನಂ ಸೋಢುಮಕ್ಷಮಾನಿವ [೯]ಸಾರವಾನ್ ॥ ೨೧೪ ॥**

ಕೆಲವು ದೇವಸ್ತ್ರೀಯರು ಪ್ರಾತಃಕಾಲದ ಮಂಗಲನಿಮಿತ್ತವಾಗಿ ಅವರ ಕೈಗಳ ಪೀಡನೆಯನ್ನು ಸಹಿಸುವುದಕ್ಕೆ ಅಸಮರ್ಥಗಳಾಗಿಯೋ ಎಂಬಂತೆ ಶಬ್ದಮಾಡುತ್ತಿರುವ ದೊಡ್ಡಶಂಖಗಳನ್ನೂದಿದರು.

**ಕಾಶ್ಚಿತ್ಪ್ರಬೋಧಿಕೈಸ್ತೂರ್ಯೈಃ ಸಮ[೧೦]ಮುತ್ತಾಲತಾಡನೈಃ ।**
**ಜಗುಃ ಕಲಂ ಚ ಮಂದ್ರಂ ಚ ಮಂಗಲಾನಿ ಸುರಾಂಗನಾಃ ॥ ೨೧೫ ॥**

ಕೆಲವು ದೇವಸ್ತ್ರೀಯರು ನಿದ್ರೆಯಿಂದ ಎಚ್ಚರಗೊಳಿಸುವ ವಾದ್ಯಗಳೊಡನೆ ಉನ್ನತವಾದ ತಾಳಗಳನ್ನು ಬಾರಿಸಿ ಮನೋಹರವಾಗಿಯೂ ಗಂಭೀರವಾಗಿಯೂ ಮಂಗಲಗಾನಗಳನ್ನು ಮಾಡಿದರು.

**ಇತಿ ತತ್ಕೃತಯಾ ದೇವೀ ಸಾ ಬಭೌ ಪರಿಚರ್ಯಯಾ ।**
**ತ್ರಿಜಗಚ್ಛ್ರೀರಿ[೧೧]ವೈಕಧ್ಯಮುಪನೀತಾ ಕಥಂಚನ ॥ ೨೧೬ ॥**

ಈ ಪ್ರಕಾರವಾಗಿ ದೇವಸ್ತ್ರೀಯರು ಮಾಡಿದ ಸೇವೆಯಿಂದ ಆ ಮರುದೇವಿಯು, ಅತ್ಯಂತ ಪ್ರಯಾಸದಿಂದ ಒಟ್ಟುಗೂಡಿಸಿದ ಮೂರುಲೋಕದ ಲಕ್ಷ್ಮಿಯಂತೆ, ಪ್ರಕಾಶಿಸಿದಳು.

**ದಿಕ್ಕುಮಾರೀಭಿರಿತ್ಯಾತ್ತಸಂಭ್ರಮಂ ಸಮುಪಾಸಿತಾ ।**
**[೧೨]ತತ್ಪ್ರಭಾವೈರಿವಾ[೧೩]ವಿಷ್ಟೈಃ ಸಾ ಬಭಾರ ಪರಾಂ ಶ್ರಿಯಮ್ ॥ ೨೧೭ ॥**

ಈ ಪ್ರಕಾರವಾಗಿ ದಿಕ್ಕುಮಾರಿಯರಿಂದ ಸಂಭ್ರಮವಾಗಿ ಸೇವೆಯನ್ನು ಮಾಡಿಸಿಕೊಂಡ ಆ ಮರುದೇವಿಯು, ಗರ್ಭಕ್ಕೆ ಪ್ರವೇಶಮಾಡಿದ ಜಿನಬಾಲಕನ ಪ್ರಭಾವಗಳಿಂದಲೋ ಎಂಬಂತೆ, ಅಧಿಕವಾದ ಶೋಭೆಯನ್ನು ಹೊಂದಿದಳು.

೧ ಉತ್ಕರ್ಷಂ ಕುರ್ವಾಣಾಃ. ೨ ಮೃನ್ಮಯಾವಯವಾಃ. ೩ ಧ್ವನಿಂ. ೪ ಮೃದಂಗಾಃ. ೫ ಕುತ್ಸಿತರವಾಃ. ೬ ಕೃತಾಭ್ಯಾಸಂ ಯಥಾ ಭವತಿ ತಥಾ. ೭ ಪೂರಯಂತಿ ಸ್ಮ. ೮ ಸ್ವಕರೋತ್ಪೀಡನಮಿತ್ಯಪಿ ಪಾಠಃ. ೯ ಆರವೇಣ ಸಹಿತಾನ್. ೧೦ ಉನ್ನತಃ. ೧೧ ಏಕತ್ವಂ. ೧೨ ಜಿನಪ್ರಭಾವೈಃ. ೧೩ ಪ್ರವಿಷ್ಟೈಃ.

**[೧]ಅಂತರ್ವತ್ನೀಮಥಾಭ್ಯರ್ಣೇ ನವಮೇ ಮಾಸಿ ಸಾದರಮ್ ।**
**ವಿಶಿಷ್ಟಕಾವ್ಯಗೋಷ್ಠೀಭಿರ್ದೇವ್ಯಸ್ತಾಮಿತ್ಯರಂಜಯನ್ ॥ ೨೧೮ ॥**

ತರುವಾಯ ಆ ದೇವತಾಸ್ತ್ರೀಯರು ಗರ್ಭಿಣಿಯಾದ ಮರುದೇವಿಯ ಸಮೀಪದಲ್ಲಿ ಒಂಬತ್ತನೆಯ ತಿಂಗಳಲ್ಲಿ ಬಹಳ ಆದರದಿಂದ ವಿಶೇಷವಾದ ಕಾವ್ಯಪದ್ಯಗಳನ್ನು ಪಠಿಸಿ ಆ ಮರುದೇವಿಯನ್ನು ಸಂತೋಷಪಡಿಸಿದರು.

**ನಿಗೂಢಾರ್ಥಕ್ರಿಯಾಪಾದ್ಯೈ[೨]ರ್ಬಿಂದುಮಾತ್ರಾಕ್ಷರಚ್ಯುತೈಃ ।**
**ದೇವ್ಯಸ್ತಾಂ ರಂಜಯಾಮಾಸುಃ ಶ್ಲೋಕೈರನ್ಯೈಶ್ಚ ಕೈಶ್ಚನ ॥ ೨೧೯ ॥**

ಗುಪ್ತವಾದ ಅರ್ಥ ಕ್ರಿಯಾಪದ ಚರಣ ಇವುಗಳೂ ಅನುಸ್ವಾರ ಮಾತ್ರಾ ಅಕ್ಷರ ಇವುಗಳೂ ಬಿಟ್ಟುಹೋಗಿರುವ ಶ್ಲೋಕಗಳಿಂದಲೂ ಮನೋರಂಜಕವಾದ ಬೇರೆ ಕಾರ್ಯಗಳಿಂದಲೂ ದೇವಾಂಗನೆಯರು ಆ ಮರುದೇವಿಯನ್ನು ಸಂತೋಷಪಡಿಸಿದರು.

**ಕಿಮಿಂದುರೇಕೋ ಲೋಕೇಽಸ್ಮಿಂಸ್ತ್ವಯಾಂಬ ಮೃದುರೀಕ್ಷಿತಃ ।**
**[೩]ಆಛಿನತ್ಸಿ ಬಲಾದಸ್ಯ [೪]ಯದಶೇಷಂ ಕಲಾಧನಮ್ ॥ ೨೨೦ ॥**

''ಎಲೈ ತಾಯಿಯೇ! ನೀನು ಈ ಚಂದ್ರನ ಕಲೆಗಳೆಂಬ ದ್ರವ್ಯವನ್ನೆಲ್ಲ ಬಲಾತ್ಕಾರವಾಗಿ ಅಪಹರಿಸುವುದರಿಂದ ಈ ಲೋಕದಲ್ಲಿ ಮೃದುಸ್ವಭಾವವುಳ್ಳ ಚಂದ್ರನನ್ನೊಬ್ಬನನ್ನೇ ನೀನು ನೋಡಿರುವುದೋ? ಪ್ರತಿದಿನವೂ ಚಂದ್ರನ ಒಂದೊಂದು ಕಲೆಯು ಕ್ಷೀಣವಾದಹಾಗೆ ಮರುದೇವಿಯ ಒಂದೊಂದು ಕಲೆಯು ವೃದ್ಧಿಯಾಗುತ್ತಿದ್ದಿತೆಂದು ಭಾವವು.

**ಮುಖೇಂದುನಾ ಜಿತಂ ನೂನಂ ತವಾಬ್ಜಂ ಸೋಢುಮಕ್ಷಮಮ್ ।**
**ಬಿಂಬಮಪ್ಯೈಂದವಂ[೫]ಸಾಮ್ಯಾತ್ಸಂಕೋಚಂ ಯಾತ್ಯ[೬]ದೋನಿಶಮ್ ॥**

ನಿನ್ನ ಮುಖವೆಂಬ ಚಂದ್ರನು ಕಮಲವನ್ನೂ ಚಂದ್ರಬಿಂಬವನ್ನೂ ಸಂಪೂರ್ಣವಾಗಿ ಜಯಿಸಿದನು. ನಿನ್ನ ಮುಖದಲ್ಲಿ ಚಂದ್ರನ ಸಾಮ್ಯವೂ ಕಮಲದ ಸಾಮ್ಯವೂ ಇರುವುದರಿಂದ ಇದನ್ನು ನೋಡಿ ಸಹಿಸಲಾರದ ಈ ಚಂದ್ರಬಿಂಬವೂ ಕಮಲವೂ ಯಾವಾಗಲೂ ಸಂಕೋಚವನ್ನು ಹೊಂದುತ್ತವೆ.

**ರಾಜೀವಮಲಿಭಿರ್ಜುಷ್ಟಂ [೭]ಸಾಲಕೇನ ಮುಖೇನ ತೇ ।**
**ಜಿತಂ ಭೀರುತಯಾದ್ಯಾಪಿ ಯಾತಿ [೮]ಸಂಕೋಚನಂ ಮುಹುಃ ॥ ೨೨೨ ॥**

ಚೂರ್ಣಕುಂತಲ(ಮುಂಗುರುಳು)ಗಳೊಡನೆ ಕೂಡಿದ ನಿನ್ನ ಮುಖವು ಭ್ರಮರಗಳಿಂದ ಸೇವಿಸಲ್ಪಟ್ಟ ಕಮಲವನ್ನು ಜಯಿಸಿದುದರಿಂದ ಆ ಕಮಲವು ಈಗಲೂ ಭಯದಿಂದ ಬಾರಿಬಾರಿಗೂ ಸಂಕೋಚವನ್ನು ಹೊಂದುತ್ತದೆ.

**ಆಜಿಘ್ರನ್ಮುಹುರಭ್ಯೇತ್ಯ ತ್ವನ್ಮುಖಂ [೯]ಕಮಲಾಸ್ಥಯಾ ।**
**ನಾ[೧೦]ಭ್ಯಬ್ಜಿನೀಂ ಸಮಭ್ಯೇತಿ ಸಶಂಕ ಇವ ಷಟ್ಪದಃ ॥ ೨೨೩ ॥**

ಭ್ರಮರವು ಕಮಲವೆಂಬ ಬುದ್ಧಿಯಿಂದ ನಿನ್ನ ಮುಖಕಮಲವನ್ನು ಹೊಂದಿ ಬಾರಿಬಾರಿಗೂ ಆಘ್ರಾಣಮಾಡಿ, ತನಗೆ ಅಪಾಯವುಂಟಾಗುವುದೆಂಬ ಸಂದೇಹದಿಂದಲೋ ಎಂಬಂತೆ, ತಾವರೆಯ ಬಳಿಗೆ ಎದುರಾಗಿ ಹೋಗುವುದಿಲ್ಲ.

**ನಾ[೧೧]ಭಿಪಾರ್ಥಿವ[೧೨]ಮನ್ವೇತಿ[೧೩]ನಲಿನಂ ನಲಿನಾನನೇ ।**
**ತ್ವನ್ಮುಖಾಂಬುಜಮಾಘ್ರಾಯ ಕೃತಾರ್ಥೋಽಯಂ ಮಧುವ್ರತಃ ॥ ೨೨೪ ॥**

ಎಲೈ ಕಮಲಮುಖಿಯೇ! ನಿನ್ನ ಮುಖಕಮಲವನ್ನು ಆಘ್ರಾಣಮಾಡಿ ಕೃತಾರ್ಥವಾದ ಈ ಭ್ರಮರವು ಭೂಮಿಯಲ್ಲಿ ಹುಟ್ಟಿದ ಕಮಲವನ್ನು

೧ ಗರ್ಭಿಣೀಂ. ೨ ಬಿಂದುಚ್ಯುತಮಾತ್ರಾಚ್ಯುತಾಕ್ಷರಚ್ಯುತಕೈಃ. ೩ ಅಪಹರಸಿ. ೪ ಯಸ್ಮಾತ್ಕಾರಣಾತ್. ೫ ಚಂದ್ರಸಾಮ್ಯಾತ್, ಅಬ್ಜಸಾದೃಶ್ಯಾಚ್ಚ. ೬ ಅಬ್ಜಂ, ಇಂದುಬಿಂಬಂ ಚ. ೭ ಚೂರ್ಣಕುಂತಲಸಹಿತೇನ. ೮ ಸಾಂಕೋಚನಮಿತ್ಯಪಿ ಪಾಠಃ. ೯ ಕಮಲಬುದ್ಧ್ಯಾ. ೧೦ ಅಬ್ಜಿನ್ಯಾ ಅಭಿಮುಖಂ. ೧೧ ಪೃಥಿವ್ಯಾಂ ಭವಂ ನಾಭಿರಾಜಂ ಚ. ೧೨ ಅನುಗಚ್ಛತ್ಯನುಕರೋತಿ ಚ. ೧೩ ಕಮಲಂ ರಮ್ಯಂ ಚ.

ಹೊಂದುವುದಿಲ್ಲ. ಭ್ರಮರವು ನಾಭಿರಾಜನ ಅನುಕರಣವನ್ನು ಮಾಡುತ್ತದೆಂದು ಎರಡನೆಯ ಅರ್ಥವು. ನಾಭಿರಾಜನನ್ನು ಹೋಲುತ್ತದೆಂದು ಭಾವವು.

**ನಾಭೇರಭಿಮತೋ ರಾಜ್ಞಸ್ತ್ವಯಿ ರಕ್ತೋ ನ ಕಾಮುಕಃ ।**
**ನ [೧]ಕುತೋಽಪ್ಯ[೨]ಧರಃ ಕಾಂತ್ಯಾ ಯಃ [೩]ಸದೋಜೋಽಧರಃ ಸ ಕಃ ॥**

(ದೇವಸ್ತ್ರೀಯರ ಪ್ರಶ್ನೆ)–ನಾಭಿರಾಜನಿಗೆ ಪ್ರಿಯನೂ ನಿನ್ನಲ್ಲಿ ಅನುರಾಗವುಳ್ಳವನೂ ಕೆಂಪಾದವನೂ ಪ್ರೀತಿಸದಿರುವವನೂ ಯಾವಕಾರಣದಿಂದಲೂ ನೀಚನಲ್ಲದವನೂ ಕಾಂತಿಯಿಂದ ಯಾವಾಗಲೂ ತೇಜಸ್ವಿಯೂ ಆದವನು ಯಾವನು ? (ಮರುದೇವಿಯ ಉತ್ತರ)–ಅಧರ(ಕೆಳದುಟಿ)ವು.

**ಕ್ವ ಕೀದೃಕ್ ಶಸ್ಯತೇ ರೇಖಾ ತವಾಣುಭ್ರು [೪]ಸುವಿಭ್ರಮೇ ।**
**ಕರಿಣೀಂ ಚ ವದಾನ್ಯೇನ ಪರ್ಯಾಯೇಣ [೫]ಕರೇಣುಕಾ ॥ ೨೨೬ ॥**

ಸೂಕ್ಷ್ಮವಾದ ಹುಬ್ಬುಗಳುಳ್ಳವಳೂ ಉತ್ತಮವಾದ ಚೇಷ್ಟೆಗಳುಳ್ಳವಳೂ ಆದ ದೇವಿಯೇ ! ನಿನ್ನ ಯಾವ ಅವಯವಗಳಲ್ಲಿ ಎಂತಹ ರೇಖೆಯು ಶ್ರೇಷ್ಠವಾಗಿದೆ ? ಉತ್ತರ-ಕರೇಣುಕಾ (ಕೈಯಲ್ಲಿ ಸೂಕ್ಷ್ಮವಾದ ರೇಖೆಯು). ಪ್ರಶ್ನೆ-ಕರಿಣಿಯನ್ನು ಅದೇ ಅರ್ಥವುಳ್ಳ ಬೇರೆ ಶಬ್ದದಿಂದ ಹೇಳು. ಉತ್ತರ–ಕರೇಣುಕಾ (ಹೆಣ್ಣಾನೆಯು).

**ಕಿಮಾಹುಃ [೬]ಸರಲೋತ್ತುಂಗಸಚ್ಛಾಯತರುಸಂಕುಲಮ್ ।**
**ಕಲಭಾಷಿಣಿ ಕಿಂ ಕಾಂತಂ ತವಾಂಗೇ [೭]ಸಾಲಕಾನನಮ್ ॥ ೨೨೭ ॥**

ಮಧುರಭಾಷಿಣಿಯೇ ! ಸರಳವೂ ಉನ್ನತವೂ ಉತ್ತಮವಾದ ನೆರಳುಳ್ಳುದೂ ಆದ ಮರಗಳ ಗುಂಪು ಯಾವುದೆಂದು ಜನರು ಹೇಳುತ್ತಾರೆ ? ಉತ್ತರ-ಸಾಲಕಾನನಂ-ಸಾಲವೃಕ್ಷಗಳ ಅರಣ್ಯವು. ನಿನ್ನ ಶರೀರದಲ್ಲಿ ಸುಂದರವಾದುದು ಯಾವುದು ? ಉತ್ತರ-ಸಾಲಕಾನನಂ (ಸಾಲಕ-ಮುಂಗುರುಳು ಗಳುಳ್ಳ ಆನನಂ-ಮುಖವು).

**[೮]ನಯನಾನಂದಿನೀಂ ರೂಪಸಂಪದಂ ಗ್ಲಾನಿಮಂಬಿಕೇ ।**
**ಆಹಾರರಸಮುತ್ಸೃಜ್ಯ [೯]ನಾನಾ[೧೦]ಶಾನಾಮೃತಂ [೧೧]ಸತಿ ॥ ೨೨೮ ॥**

ಎಲೈ ತಾಯಿಯೇ ! ನೇತ್ರಗಳಿಗೆ ಆನಂದವನ್ನುಂಟುಮಾಡುವ ನಿನ್ನ ರೂಪಸಂಪತ್ತನ್ನು ಕಳೆಗುಂದಿಸಬೇಡ. ಎಲೈ ಪತಿವ್ರತೆಯೇ ! ಮರ್ತ್ಯಲೋಕದ ಆಹಾರಪ್ರೀತಿಯನ್ನು ಬಿಟ್ಟು ಅನೇಕ ಪ್ರಕಾರವಾದ ಅಮೃತವನ್ನು ಭುಂಜಿಸು. (ಈ ಶ್ಲೋಕದಲ್ಲಿ ''ನಯ, ಅಶಾನ'' ಎಂಬೀ ಎರಡು ಕ್ರಿಯಾಪದಗಳು ಗುಪ್ತವಾಗಿವೆ).

**[೧೨]ಅಧುನಾ[೧೩]ದರಮುತ್ಸೃಜ್ಯ ಕೇಸರೀ ಗಿರಿ[೧೪]ಕಂದರಮ್ ।**
**[೧೫]ಸಮುತ್ಪಿತ್ಸುರ್ಗಿರೇರಗ್ರಂ [೧೬]ಸಟಾಭಾರಂ ಭಯಾನಕಮ್ ॥ ೨೨೯ ॥**

ಈಗ ಸಿಂಹವು ಭಯವನ್ನು ಬಿಟ್ಟು ತಾನು ವಾಸಮಾಡುವ ಪರ್ವತದ ಗುಹೆಯನ್ನು ಪರಿತ್ಯಜಿಸಿ, ಪರ್ವತದ ತುದಿಯನ್ನು ಹತ್ತಬೇಕೆಂಬ ಇಚ್ಛೆಯುಳ್ಳುದಾಗಿ ಭಯಂಕರವಾದ ತನ್ನ ಕೇಶ(ಕೂದಲು)ಗಳನ್ನು ಬಹಳವಾಗಿ ಕೊಡಹಿತು (ಅಧುನಾತ್).

**[೧೭]ಅಧುನಾ ಜಗತಸ್ತಾಪಮಮುನಾ [೧೮]ಗರ್ಭಜನ್ಮನಾ ।**
**ತ್ವಂ ದೇವಿ ಜಗತಾಮೇಕಪಾವನೀ ಭುವನಾಂಬಿಕಾ ॥ ೨೩೦ ॥**

ಎಲೈ ದೇವಿಯೇ ! ಜಗತ್ತನ್ನು ಮುಖ್ಯವಾಗಿ ಪವಿತ್ರಮಾಡುವವಳೂ, ಲೋಕಕ್ಕೆ ತಾಯಿಯೂ ಆದ ನೀನು ಈಗ ಜಗತ್ತಿನ ಸಂತಾಪವನ್ನು ಈ ಗರ್ಭದಲ್ಲಿ ಜನಿಸಿದ ಬಾಲಕನಿಂದ ಹೋಗಲಾಡಿಸಿದೆ. (ಅಧುನಾಃ).

**[೧]ಅಧುನಾ[೨]ಮರಸರ್ಗಸ್ಯ ವರ್ದ್ಧತೇಧಿಕಮುತ್ಸವಃ ।**
**[೩]ಅಧುನಾ[೪]ಮರಸರ್ಗಸ್ಯ ದೈತ್ಯಚಕ್ರೇ [೫]ಘಟಾಮಿತಿ ॥ ೨೩೧ ॥**

ಈಗ ದೇವತೆಗಳ ಸಮೂಹದ ಆನಂದವು ಅಧಿಕವಾಗಿ ವೃದ್ಧಿಹೊಂದುತ್ತದೆ. ಈಗ ಅಸುರರ ಸಮೂಹದಲ್ಲಿ ದೇವಸಮೂಹದ ಮತ್ತು ಚಕ್ರದ ಅರಗಳ ರಚನೆಯ ಘಟನೆ(ಸಂಬಂಧ)ಯನ್ನು ಹೋಗಲಾಡಿಸಿದೆನು (ಅಧುನಾಂ).

**[೬]ವಟ[೭]ವೃಕ್ಷಃ ಪುರೋಯಂ ತೇ[೮]ಘನಚ್ಛಾಯಃ ಸ್ಥಿತೋ ಮಹಾನ್ ।**
**ಇತ್ಯುಕ್ತೋಽಪಿ ನ ತಂ [೯]ಘರ್ಮೇ ಶ್ರಿತಃ ಕೋಽಪಿ ವದಾದ್ಭುತಮ್ ॥ ೨೩೨ ॥**

''ದಟ್ಟವಾದ ನೆರಳುಳ್ಳ ಈ ದೊಡ್ಡ ವಟವೃಕ್ಷ(ಆಲದಮರ)ವು ನಿನ್ನ ಮುಂಭಾಗದಲ್ಲಿದೆ.'' ಹೀಗೆ ಹೇಳಿದರೂ ಬೇಸಿಗೆಯಲ್ಲಿ ಅದನ್ನು ಯಾರೂ ಆಶ್ರಯಿಸಲಿಲ್ಲ. ಆಶ್ಚರ್ಯವೇನು ? ಹೇಳು. ಉತ್ತರ:-''ಎಲೈ ಬಾಲಕನೇ ! ಮೇಘದ ವರ್ಣವುಳ್ಳ ಈ ದೊಡ್ಡ ಕರಡಿಯು ನಿನ್ನ ಮುಂಭಾಗದಲ್ಲಿದೆ'' ಹೀಗೆ ಹೇಳಿದರೆ ಬೇಸಿಗೆಯಲ್ಲಿಯೂ ಯಾರೂ ಅದನ್ನು ಹೊಂದುವುದಿಲ್ಲ.

**[೧೦]ಮುಕ್ತಾಹಾರರುಚಿಃ ಸೋಷ್ಮಾ ಹರಿಚಂದನಚರ್ಚಿತಃ ।**
**ಆಪಾಂಡುರುಚಿರಾಭಾತಿ ವಿರಹೀವ ತವ ಸ್ತನಃ ॥ ೨೩೩ ॥**

ಮುತ್ತಿನ ಹಾರದ ಕಾಂತಿಯುಳ್ಳುದೂ ಉಷ್ಣಸ್ಪರ್ಶವುಳ್ಳುದೂ ಚಂದನದಿಂದ ಲೇಪಿಸಲ್ಪಟ್ಟುದೂ ಸ್ವಲ್ಪ ಶುಭ್ರವಾದ ಕಾಂತಿಯುಳ್ಳುದೂ ಆದ ನಿನ್ನ ಕುಚವು, ಆಹಾರದ ಇಚ್ಛೆಯನ್ನು ಬಿಟ್ಟಿರುವವನೂ ಕಾಮಜ್ವರದಿಂದ ಉಷ್ಣವಾದ ಸ್ಪರ್ಶವುಳ್ಳವನೂ ಚಂದನದಿಂದ ಲೇಪಿಸಲ್ಪಟ್ಟವನೂ ಸ್ವಲ್ಪ ಶುಭ್ರವಾದ ಶರೀರಕಾಂತಿಯುಳ್ಳವನೂ ಆದ ವಿರಹಿಪುರುಷನಂತೆ, ಶೋಭಿಸುತ್ತಿದೆ.

**ಜಗತಾಂ [೧೧]ಜನಿತಾನಂದೋ ನಿರಸ್ತದುರಿತೇಂಧನಃ ।**
**[೧೨]ಸಂತಪ್ತಕನಕಚ್ಛಾಯೋ [೧೩]ಜನಿತಾ ತೇ ಸ್ತನಂಧಯಃ ॥ ೨೩೪ ॥**

ಎಲೈ ದೇವಿಯೇ ! ಜಗತ್ತಿಗೆ ಆನಂದವನ್ನುಂಟುಮಾಡುವವನೂ, ಪಾಪವೆಂಬ ಕಟ್ಟಿಗೆಯನ್ನು ನಾಶಮಾಡುವವನೂ ಚೆನ್ನಾಗಿ ಕಾಯಿಸಿದ ಬಂಗಾರದಂತೆ ಶರೀರವರ್ಣವುಳ್ಳವನೂ ಆದ ಪುತ್ರನು ನಿನಗೆ ಹುಟ್ಟುವನು.

**ಜಗಜ್ಜಯೀ ಜಿತಾನಂಗಃ ಸತಾಂ ಗತಿರನಂತದೃಕ್ ।**
**ತೀರ್ಥಕೃತ್ಕೃತಕೃತ್ಯಶ್ಚ ಜಯತಾತ್ತನಯಃ ಸ ತೇ ॥ ೨೩೫ ॥**

ಎಲೈ ದೇವಿಯೇ ! ಲೋಕವನ್ನು ಜಯಿಸುವವನೂ ಮನ್ಮಥನನ್ನು ಜಯಿಸಿದವನೂ ಸತ್ಪುರುಷರಿಗೆ ಗತಿಯೂ ಸರ್ವಜ್ಞನೂ ತೀರ್ಥಂಕರನೂ ಕೃತಕೃತ್ಯನೂ ಆದ ನಿನ್ನ ಆ ಮಗನು ಜಯಶೀಲನಾಗಲಿ.

**ಸ ತೇ ಕಲ್ಯಾಣಿ ಕಲ್ಯಾಣಶತಂ ಸಂದರ್ಶ್ಯ ನಂದನಃ ।**
**ಯಾಸ್ಯತ್ಯ[೧೪]ನಾಗತಿಸ್ಥಾನಂ ಧೃತಿಂ ಧೇಹಿ ತತಃ ಸತಿ ॥ ೨೩೬ ॥**

ಎಲೈ ಪತಿವ್ರತೆಯಾದ ಮಂಗಳಾಂಗಿಯೇ ! ನಿನ್ನ ಆ ಮಗನು ಅನೇಕ ಕಲ್ಯಾಣಕರವಾದ ಫಲಗಳನ್ನು ಹೊಂದಿ ಮೋಕ್ಷವನ್ನು ಹೊಂದುವನು. ಆದುದರಿಂದ ನೀನು ಧೈರ್ಯವನ್ನು ಹೊಂದು.

---

೧ ಕಸ್ಮಾತ್. ೨ ನೀಚಃ. ೩ ಸಂತತಂ ತೇಜೋಧರಃ ಸಾಮರ್ಥ್ಯಾದಧರಃ. ೪ ಸಂಬೋಧನಂ. ೫ ಕರಿಣೀ, ಹಸ್ತೇ ಸೂಕ್ಷ್ಮರೇಖಾ ಚ. ೬ ಋಜು. ೭ ಸಾಲವನಂ ಅಲಕಸಹಿತಂ ಮುಖಂ ಚ. ೮ ನೇತ್ರೋತ್ಸವಕರೀಂ, ನಯ ಪ್ರಾಪಯ. ೯ ಬಹುವಿಧಂ. ೧೦ ಭುಂಕ್ಷ್ವ. ೧೧ ಪತಿವ್ರತೇ. ೧೨ ಅಧುನಾ ಅದ್ಯ, ಪಕ್ಷೇ ಅಧುನಾತ್ ಧುನಾತಿ ಸ್ಮ. ೧೩ ಭಯಂ ಯಥಾ ತಥಾ, ಪಕ್ಷೇ ಅರಂ ಅತ್ಯರ್ಥಂ. ೧೪ ಗುಹಾಂ. ೧೫ ಸಮುತ್ಪತಿತುಮಿಚ್ಛುಃ. ೧೬ ಕೇಸರಸಮೂಹಂ. ೧೭ ಅದ್ಯ, ಪಕ್ಷೇ ಧುನಾಸಿ ಸ್ಮ. ೧೮ ಗರ್ಭಾರ್ಭಕೇನ.

೧ ಅದ್ಯ. ೨ ದೇವಸಮೂಹಸ್ಯ. ೩ ಅದ್ಯ, ಪಕ್ಷೇ ಧುನಾಮಿ ಸ್ಮ. ೪ ದೇವಸಮೂಹಸ್ಯ, ಪಕ್ಷೇ ಅರಸೃಷ್ಟೇಃ ಚಕ್ರಸ್ಯೇತ್ಯರ್ಥಃ. ೫ ಘಟನಾಂ. ೬ ನ್ಯಗ್ರೋಧಪಾದಪಃ, ಪಕ್ಷೇ ಭೋ ಮಾಣವಕ. ೭ ಭಲ್ಲೂಕಃ. ೮ ಭೂರ್ಯನಾತಪಃ, ಪಕ್ಷೇ ಮೇಘಚ್ಛಾಯಃ. ೯ ನಿದಾಘೇ. ೧೦ ಮೌಕ್ತಿಕಾಹಾರರುಚಿಃ, ಪಕ್ಷೇ ತ್ಯಕ್ತಾಶನರುಚಿಃ. ೧೧ ಉತ್ಪಾದಿತಾನಂದಃ. ೧೨ ಸ ಯಃ ಕನಕಸಚ್ಛಾಯ ಇತಿ ಚ ಪಾಠಃ. ೧೩ ಭವಿಷ್ಯತಿ. ೧೪ ಮುಕ್ತಿಸ್ಥಾನಂ.

**ದ್ವೀಪಂ ನಂದೀಶ್ವರಂ ದೇವಾ ಮಂದರಾಗಂ ಚ ಸೇವಿತುಮ್ ।**
**[೧]ಸುದಂತೀಂದ್ರೈಃ ಸಮಂ ಯಾಂತಿ ಸುಂದರೀಭಿಃ ಸಮುತ್ಸುಕಾಃ ।೨೩೭ ॥**

ಸುಂದರವಾದ ಹಲ್ಲುಗಳುಳ್ಳ ಮರುದೇವಿಯೇ ! ದೇವತೆಗಳು ಅತ್ಯಂತ ಕುತೂಹಲವುಳ್ಳವರಾಗಿ ನಂದೀಶ್ವರದ್ವೀಪವನ್ನೂ ಮಹಾಮೇರುಪರ್ವತವನ್ನೂ ಸೇವಿಸುವುದಕ್ಕೋಸ್ಕರ ತಮ್ಮ ಸ್ತ್ರೀಯರೊಡನೆಯೂ ಇಂದ್ರರೊಡನೆಯೂ ಆನೆಗಳನ್ನು ಹತ್ತಿ ಹೋಗುತ್ತಾರೆ.

**ಲಸದ್ಬಿಂದುಭಿರಾಭಾಂತಿ ಮುಖೈರಮರವಾರಣಾಃ ।**
**[೨]ಘಟಾಘಟನಯಾ ವ್ಯೋಮ್ನಿ ವಿಚರಂತ[೩]ಸ್ತ್ರಿಧಾ [೪]ಸ್ರುತಃ ॥ ೨೩೮ ॥**

ಮೂರುಸ್ಥಾನಗಳಲ್ಲಿ ಮದವನ್ನು ಸುರಿಯುವ ದೇವಗಜಗಳು ಸಮೂಹ ಸೇರುವಿಕೆಯಿಂದ, ಘಂಟೆಗಳ ಸೇರುವಿಕೆಯಿಂದ ಆಕಾಶದಲ್ಲಿ ಸಂಚರಿಸುವುವುಗಳಾಗಿ ಪ್ರಕಾಶಮಾನವಾದ ಬಿಂದು(ಚಿಬ್ಬು)ಗಳುಳ್ಳ ಮುಖಗಳಿಂದ ಶೋಭಿಸುತ್ತಿವೆ. ('ಘಟಾ' ಎಂಬಲ್ಲಿ ಬಿಂದುಚ್ಯುತವಾಗಿರುವುದರಿಂದ ಬಿಂದುಚ್ಯುತಕವು).

**ಮಕರಂದಾರುಣಂ ತೋಯಂ ಧತ್ತೇ ತ್ವತ್ಪುರಖಾತಿಕಾ ।**
**ಸಾಂಬುಜಂ ಕ್ವಚಿದುದ್ಬಿಂದು ಚಲನ್ಮಕರದಾರುಣಮ್ ॥ ೨೩೯ ॥**

ಎಲೈ ದೇವಿಯೇ ! ನಿನ್ನ ಪಟ್ಟಣದ ಕಂದಕವು ಪುಷ್ಪರಸದಿಂದ ಕೆಂಪಾದುದೂ ತಾವರೆಗಳುಳ್ಳುದೂ ಕೆಲವು ಕಡೆ ಸ್ಫುಟವಾದ ಬಿಂದುಗಳುಳ್ಳುದೂ ಸಂಚರಿಸುತ್ತಿರುವ ಮೊಸಳೆಗಳಿಂದ ಭಯಂಕರವೂ ಆದ ನೀರನ್ನು ಧರಿಸಿಕೊಂಡಿದೆ. (ಒಂದುಕಡೆಯಲ್ಲಿ ಮಕರಂದಶಬ್ದದ ಅನುಸ್ವಾರ (ಬಿಂದು) ಚ್ಯುತವಾಗಿರುವುದರಿಂದ ಬಿಂದು ಚ್ಯುತಕವು).

**[೫]ಸಮಜಂ[೬]ಘಾತುಕಂ ಬಾಲಂ ಕ್ಷಣಂ ನೋಪೇಕ್ಷತೇ ಹರಿಃ ।**
**ಕಾ ತುಕಂ ಸ್ತ್ರೀ ಹಿಮೇ ವಾಂಛೇತ್ಸಮಜಂಘಾತುಕಂಬಲಮ್ ॥ ೨೪೦ ॥**

ಸಿಂಹವು ಘಾತುಕವಾದ ಆನೆಯಮರಿಯನ್ನು ಒಂದು ಕ್ಷಣಕಾಲವೂ ಉಪೇಕ್ಷೆಮಾಡುವುದಿಲ್ಲ. ಶೀತಕಾಲದಲ್ಲಿ ಯಾವ ಸ್ತ್ರೀಯು ಯಾವುದನ್ನು ಅಥವಾ ಪುತ್ರನನ್ನಿಚ್ಛಿಸುವಳು ? ಸಮಾನವಾದ ಕಣಕಾಲುಗಳುಳ್ಳ ಸ್ತ್ರೀಯು ಕಂಬಳಿಯನ್ನು ಮತ್ತು ಬಲಿಷ್ಠನಾದ ಪುತ್ರನನ್ನು ಇಚ್ಛಿಸುವಳು. (ಮಾತ್ರಾಚ್ಯುತಕವು).

**[೭]ಜಗೇ ಕಯಾಪಿ [೮]ಸೋತ್ಕಂಠಂ ಕಿಮ[೯]ಪ್ಯಾಕುಲಮೂರ್ಛನಮ್ ।**
**ವಿರಹೇಂಗನಯಾ ಕಾಂತಸಮಾಗಮನಿರಾಶಯಾ ॥ ೨೪೧ ॥**

ಪತಿಯ ಸಮಾಗಮದಲ್ಲಿ ನಿರಾಸೆಯುಳ್ಳ ಒಬ್ಬಾಳೊಬ್ಬ ಸ್ತ್ರೀಯು ಪತಿ ವಿಯೋಗದಲ್ಲಿ ವ್ಯಾಕುಲತೆಯಿಂದ ಸ್ವಲ್ಪ ಮೂರ್ಛಿತಳಾಗಿ ಗದ್ಗದವಾದ ಕಂಠದಿಂದ ಗಾನಮಾಡಿದಳು. (ಇದುವಿರೋಧ) (ಪರಿಹಾರ:-) ಶೋಕಮಾಡಿದಳು. (ಜಗ್ಲೇ ಎಂಬ ಪದದಲ್ಲಿರುವ ಲಕಾರವು ಲುಪ್ತವಾಗಿರುವುದರಿಂದ ವ್ಯಂಜನಚ್ಯುತಕವು).

**ಕಃ ಪಂಜರಮಧ್ಯಾಸ್ತೇ ಕಃ ಪರುಷನಿಸ್ವನಃ ।**
**ಕಃ [೧೦]ಪ್ರತಿಷ್ಠಾ ಜೀವಾನಾಂ ಕಃ ಪಾಠ್ಯೋಕ್ಷರಚ್ಯುತಃ ॥ ೨೪೨ ॥**

ಪಂಜರದಲ್ಲಿ ಯಾವುದಿರುತ್ತದೆ ? ಯಾವುದು ಕಠೋರವಾದ ಶಬ್ದವುಳ್ಳುದು ? ಜೀವಗಳಿಗೆ ಆಶ್ರಯವಾವುದು ? ಅಕ್ಷರಚ್ಯುತವಾದ ಯಾವುದು ಪಠಿಸುವುದಕ್ಕೆ ಯೋಗ್ಯವಾದುದು ?

೧ ಭೋ ಕಾಂತೇ ಉಚ್ಚಾರಣಕಾಲೇ ಬಿಂದುಂ ಸಂಯೋಜ್ಯ ಅಭಿಪ್ರಾಯಕಥನೇ ತ್ಯಜೇತ್. ೨ ಘಟಾನಾಂ ಸಮೂಹಾನಾಂ ಘಟನಾ ತಯಾ, ಪಕ್ಷೇ ಘಂಟಾಘಟನಯಾ ಸಂಘಟನಯೇತ್ಯರ್ಥಃ. ೩ ತ್ರಿಮದಸ್ರಾವಿಣಃ. ೪ ಶ್ರುತಾ ಇತ್ಯಪಿ ಪಾಠಃ. ೫ ಸಾಮಜಂ. ೬ ಹಿಂಸ್ರಕಂ. ೭ ಲಕಾರೇ ಲುಪ್ತೇ ಜಗೇ ಗಾನಂ ಚಕಾರ, ಪಕ್ಷೇ ಜಗ್ಲೇ ಕ್ಲೇಶಂ ಚಕಾರ. ೮ ಸಗದ್ಗದಕಂಠಂ. ೯ ಈಷದಾಕುಲಮೂರ್ಛಾ ಯಥಾ ಭವತಿ ತಥಾ. ೧೦ ಆಶ್ರಯಃ.

**ಶುಕಃ ಪಂಜರಮಧ್ಯಾಸ್ತೇ ಕಾಕಃ ಪರುಷನಿಸ್ವನಃ ।**
**ಲೋಕಃ ಪ್ರತಿಷ್ಠಾ ಜೀವಾನಾಂ ಶ್ಲೋಕಃ ಪಾಠ್ಯೋಕ್ಷರಚ್ಯುತಃ ॥ ೨೪೩ ॥**

(ಮರುದೇವಿಯ ಉತ್ತರ:- ) ಗಿಣಿಯು ಪಂಜರದಲ್ಲಿರುತ್ತದೆ. ಕಾಗೆಯು ಕಠೋರವಾದ ಶಬ್ದವುಳ್ಳುದು. ಜೀವಗಳಿಗೆ ಲೋಕವು ಆಶ್ರಯ. ಅಕ್ಷರಚ್ಯುತವಾದ ಶ್ಲೋಕವು ಪಠಿಸುವುದಕ್ಕೆ ಯೋಗ್ಯವಾದುದು.

**ಕೇ ಮಧುರಾರಾವಾಃ ಕೇ [೧]ಹರಿಕಂಧರೇ ।**
**ಕೇನೋಹ್ಯತೇ ಗಂಧಃ ಕೇನಾಖಿಲಾರ್ಥದೃಕ್ ॥ ೨೪೪ ॥**

ಮಧುರವಾದ ಶಬ್ದವುಳ್ಳುವು ಯಾವುವು ? ಸಿಂಹದ ಕುತ್ತಿಗೆಯಲ್ಲಿ ಏನಿದೆ ? ಯಾವುದು ಪರಿಮಳವನ್ನು ಧರಿಸುತ್ತದೆ ? ಆತ್ಮನು ಯಾವುದರಿಂದ ಸಕಲಪದಾರ್ಥ ಗಳನ್ನು ತಿಳಿಯುವನು ? (ದ್ವ್ಯಕ್ಷರಚ್ಯುತಕಂ).

**ಕೇಕಿನೋ ಮಧುರಾರಾವಾಃ ಕೇಸರಾ [೨]ಹರಿಕಂಧರೇ ।**
**ಕೇತಕೇನೋಹ್ಯತೇ ಗಂಧಃ [೩]ಕೇವಲೇನಾಖಿಲಾರ್ಥದೃಕ್ ॥ ೨೪೫ ॥**

(ಉತ್ತರ:-) ಮಧುರವಾದ ಶಬ್ದವುಳ್ಳುವು ನವಿಲುಗಳು. ಸಿಂಹದ ಕುತ್ತಿಗೆಯಲ್ಲಿ ಕೂದಲುಗಳಿವೆ. ಕೇತಕೀಪುಷ್ಪವು ಪರಿಮಳವನ್ನು ಧರಿಸುತ್ತದೆ. ಕೇವಲಜ್ಞಾನದಿಂದ ಆತ್ಮನು ಸಕಲಪದಾರ್ಥಗಳನ್ನು ತಿಳಿಯುವನು.

**ಕೋ ಮಂಜುಲಾಲಾಪಃ ಕೋ ವಿಟಪೀ ಜರನ್ ।**
**ಕೋ ನೃಪತಿರ್ವರ್ಜ್ಯಃ ಕೋ ವಿದುಷಾಂ ಮತಃ ॥ ೨೪೬ ॥**

ಯಾವುದು ಮನೋಹರವಾದ ಧ್ವನಿಯುಳ್ಳುದು ? ಯಾವ ಮರವು ಶಿಥಿಲ ವಾದುದು ? ಯಾವರಾಜನು ಪರಿತ್ಯಜಿಸುವುದಕ್ಕೆ ಯೋಗ್ಯನು ? ಯಾವನು ವಿದ್ವಾಂಸರಿಗೆ ಸಮ್ಮತನು ? (ದ್ವ್ಯಕ್ಷರಚ್ಯುತಕಂ).

**ಕೋಕಿಲೋ ಮಧುರಾಲಾಪಃ [೪]ಕೋಟರೀ ವಿಟಪೀ ಜರನ್ ।**
**ಕೋಪನೋ ನೃಪತಿರ್ವರ್ಜ್ಯಃ ಕೋವಿದೋ ವಿದುಷಾಂ ಮತಃ ॥**

(ಉತ್ತರ:-) ಕೋಗಿಲೆಯು ಮನೋಹರವಾದ ಧ್ವನಿಯುಳ್ಳುದು. ರಂಧ್ರ (ಪೊಟರೆ)ಗಳುಳ್ಳ ಮರವು ಶಿಥಿಲವಾದುದು. ಕೋಪಿಷ್ಠನಾದ ರಾಜನು ಪರಿ ತ್ಯಜಿಸುವುದಕ್ಕೆ ಯೋಗ್ಯನು. ವಿದ್ವಾಂಸನೇ ವಿದ್ವಾಂಸರಿಗೆ ಸಮ್ಮತನು.

**[೫]ಕಾ ಸ್ವರಭೇದೇಷು ಕಾ [೬]ರುಚಿಹಾ ರುಜಾ ।**
**ಕಾ ರಮಯೇತ್ಯಾಂತಂ ಕಾ [೭]ತಾರನಿಸ್ವನಾ ॥ ೨೪೮ ॥**

ಸ್ವರಭೇದಗಳಲ್ಲಿ ಯಾವುದು ಶ್ಲಾಘ್ಯವಾದುದು ? ಶರೀರಕಾಂತಿಯನ್ನು ನಾಶ ಮಾಡುವ ರೋಗವಾವುದು ? ಯಾವಳು ಪತಿಯನ್ನು ಸಂತೋಷಪಡಿಸುವಳು ? ಗಟ್ಟಿಯಾದ ಧ್ವನಿಯುಳ್ಳುದು ಯಾವುದು ?

**ಕಾಕಲೀ ಸ್ವರಭೇದೇಷು ಕಾಮಲಾ ರುಚಿಹಾ ರುಜಾ ।**
**ಕಾಮುಕೀ ರಮಯೇತ್ಯಾಂತಂ ಕಾಹಲಾ ತಾರನಿಸ್ವನಾ ॥ ೨೪೯ ॥**

(ಉತ್ತರ:-) ಸ್ವರಭೇದಗಳಲ್ಲಿ ಕಾಕಲಿಯೆಂಬ ಅವ್ಯಕ್ತಮಧುರವಾದ ಶಬ್ದವು ಶ್ಲಾಘ್ಯವಾದುದು. ಕಾಮಲರೋಗವು ಶರೀರಕಾಂತಿಯನ್ನು ನಾಶಮಾಡುವುದು. ಕಾಮುಕಸ್ತ್ರೀಯು ತನ್ನ ಪ್ರಿಯನನ್ನು ಸಂತೋಷಪಡಿಸುವಳು. ಕಾಹಳೆ (ತುತೂರಿ)ಯೆಂಬ ವಾದ್ಯವು ಗಟ್ಟಿಯಾದ ಧ್ವನಿಯುಳ್ಳುದು.

**ಕಾ ಕಲಾ ಸ್ವರಭೇದೇಷು ಕಾ ಮತಾ ರುಚಿಹಾ ರುಜಾ ।**
**ಕಾ ಮುಹೂರಮಯೇತ್ಯಾಂತಂ ಕಾ ಹತಾ ತಾರನಿಸ್ವನಾ ॥ ೨೫೦ ॥**

೧-೨ ಪುಷ್ಪಶಾಖಿನ ಇತ್ಯಪಿ ಪಾಠಃ. ೩ ಕೇವಲಜ್ಞಾನೇನ. ೪ ಕೋಟರವಾನ್. ೫ ಕಾ ಪ್ರಶಸ್ಯೇತ್ಯರ್ಥಃ. ೬ ಕಾಂತಿಘ್ನಾ. ೭ ಉಚ್ಚರವಾ.

ಸ್ವರಭೇದಗಳಲ್ಲಿ ಗಂಭೀರವಾದುದು ಯಾವುದು ? (ಉತ್ತರ:-) ಕಾಕಲೀ. ಶರೀರಕಾಂತಿಯನ್ನು ನಾಶಮಾಡುವ ರೋಗವಾವುದೆಂದು ಸಮ್ಮತವಾಗಿದೆ ? (ಉತ್ತರ:-) ಕಾಮಲರೋಗವು ಶರೀರಕಾಂತಿಯನ್ನು ನಾಶಮಾಡುವುದು. ಯಾವಳು ಬಾರಿ ಬಾರಿಗೂ ತನ್ನ ಪ್ರಿಯನನ್ನು ಸಂತೋಷಪಡಿಸುವಳು ? (ಉತ್ತರ:-) ಕಾಮುಕಿಯು. ಯಾವುದನ್ನೂದಿದರೆ ಗಟ್ಟಿಯಾದ ಧ್ವನಿಯಾಗುವುದು ? (ಉತ್ತರ:-) ಕಾಹಲೆಯನ್ನೂದಿದರೆ ಗಟ್ಟಿಯಾದ ಧ್ವನಿಯಾಗುವುದು.

**ಕಾಕಃ ಶ್ರಯತೇ ನಿತ್ಯಂ ಕಾಕೀಂ ಸುರತಪ್ರಿಯಾಮ್ ।**
**ಕಾನನೇ ವದೇದಾನೀಂ ಚರಕ್ಷರ[೧]ವಿಚ್ಯುತಮ್ ॥ ೨೫೧ ॥**

**ಕಾಮುಕಃ ಶ್ರಯತೇ ನಿತ್ಯಂ ಕಾಮುಕೀಂ ಸುರತಪ್ರಿಯಾಮ್ ।**
**ಕಾಂತಾನನೇ ವದೇದಾನೀಂ ಚತುರಕ್ಷರವಿಚ್ಯುತಮ್ ॥ ೨೫೨ ॥**

ದೇವಿಯೇ ! ನಾಲ್ಕು ಚರಣಗಳಲ್ಲಿ ನಾಲ್ಕುಅಕ್ಷರಗಳು ಕಡಿಮೆಯಾಗಿರುವ ಪದ್ಯಕ್ಕೆ ಆ ಅಕ್ಷರಗಳನ್ನು ಸೇರಿಸಿ ಹೇಳು. (ಉತ್ತರ:-) ಕಾಮುಕನು ಸುರತಕ್ರೀಡೆಯಲ್ಲಿ ಪ್ರೀತಿಪಡುವ ಕಾಮುಕಿಯನ್ನು ಯಾವಾಗಲೂ ಆಶ್ರಯಿಸುತ್ತಾನೆ. ಸುಂದರವಾದ ಮುಖವುಳ್ಳವಳೇ ! ನಾಲ್ಕು ಅಕ್ಷರಕಡಿಮೆಯಾದ ಪದ್ಯವನ್ನು ಈಗ ಹೇಳು. (ಇದು ಮೊದಲನೆಯ ಶ್ಲೋಕದೊಡನೆ ಸಂಬಂಧಿಸುತ್ತದೆ).

**ತವಾಂಬ ಕಿಂ ವಸ[೨]ತ್ಯಂತಃ ಕಾ ನಾಸ್ತ್ಯವಿಧವೇ ತ್ವಯಿ ।**
**ಕಾ ಹಂತಿ ಜನ[೩]ಮಾದ್ಯೂನಂ ವದಾದ್ಯೈ ರ್ವ್ಯಂಜನೈಃ ಪೃಥಕ್ ॥ ೨೫೩ ॥**

ಮುತ್ತೈದೆಯಾದ ತಾಯಿಯೇ ! ನಿನ್ನ ಗರ್ಭದಲ್ಲಿ ಯಾವುದು ವಾಸಮಾಡುತ್ತಿದೆ ? ನಿನ್ನಲ್ಲಿ ಯಾವುದಿಲ್ಲ ? ಹೊಟ್ಟೆಬಾಕನಾದ ಮನುಷ್ಯನನ್ನು ಯಾವುದು ನಾಶಗೊಳಿಸುತ್ತದೆ ? ಮೊದಲನೆಯ ವ್ಯಂಜನಾಕ್ಷರಗಳನ್ನು ಬೇರೆಬೇರೆ ಸೇರಿಸಿ ಉತ್ತರವನ್ನು ಹೇಳು. (ಕ್ರಮವಾಗಿ ಉತ್ತರ:–) ತುಕ್-ಶಿಶುವು. ಶುಕ್-ಶೋಕವು. ರುಕ್-ರೋಗವು.

**ವರಾಶನೇಷು ಕೋ ರುಚ್ಯಃ ಕೋ ಗಂಭೀರೋ ಜಲಾಶಯಃ ।**
**ಕಃ ಕಾಂತಸ್ತವ ತನ್ವಂಗಿ ವದಾದಿವ್ಯಂಜನೈಃ ಪೃಥಕ್ ॥ ೨೫೪ ॥**

ಎಲೈ ಕೋಮಲಾಂಗಿಯೇ ! ಉತ್ತಮವಾದ ಭೋಜನಪದಾರ್ಥಗಳಲ್ಲಿ ಹೆಚ್ಚು ರುಚಿಯಾದುದು ಯಾವುದು ? ಆಳವಾದ ನೀರುಳ್ಳದು ಯಾವುದು ? ನಿನಗೆ ಪ್ರಿಯನು ಯಾರು ? ಮೊದನೆಯ ವ್ಯಂಜನಾಕ್ಷರಗಳನ್ನು ಬದಲಾಯಿಸಿ ಉತ್ತರವನ್ನು ಹೇಳು. (ಕ್ರಮವಾಗಿ ಉತ್ತರ:-) ಸೂಪ-ತೊಗೆಯು. ಕೂಪ-ಬಾವಿಯು. ಭೂಪ-ರಾಜನು.

**ಕಃ ಸಮುತ್ಸೃಜ್ಯತೇ ಧಾನ್ಯೇ ಘಟಯತ್ಯಂಬ ಕೋ ಘಟಮ್ ।**
**[೪]ವೃಷಾ[೫]ನ್ನಶತಿ ಕಃ ಪಾಪೀ ವದಾದ್ಯೈರಕ್ಷರೈಃ ಪೃಥಕ್ ॥ ೨೫೫ ॥**

ಧಾನ್ಯಗಳಲ್ಲಿ ಯಾವುದನ್ನು ಬಿಡುತ್ತಾರೆ ? ಘಟವನ್ನು ಯಾವನು ಮಾಡುತ್ತಾನೆ ? ಇಲಿಗಳನ್ನು ಯಾವ ಪಾಪಿಯು ಭಕ್ಷಿಸುತ್ತದೆ ? ಮೊದಲನೆಯ ಅಕ್ಷರಗಳನ್ನು ಬದಲಾಯಿಸಿ ಉತ್ತರವನ್ನು ಹೇಳು. (ಕ್ರಮವಾಗಿ ಉತ್ತರ:) ಪಲಾಲ-ಹೊಟ್ಟು. ಕುಲಾಲ-ಕುಂಬಾರ. ಬಿಡಾಲ-ಬೆಕ್ಕು.

**ಸಂಬೋಧ್ಯಸೇ ಕಥಂ ದೇವಿ ಕಿಮಸ್ತ್ಯರ್ಥಕ್ರಿಯಾಪದಮ್ ।**
**ಶೋಭಾ ಚ ಕೀದೃಶಿ ವ್ಯೋಮ್ನಿ [೬]ಭವತೀದಂ ನಿಗದ್ಯತಾಮ್ ॥ ೨೫೬ ॥**

ಎಲೈ ದೇವಿಯೇ ! ನಿನ್ನನ್ನು ಸಂಬೋಧನೆಯಿಂದ ಕರೆಯುವುದು ಹೇಗೆ ? ಅಸ್ತಿ(ಇದೆ)ಯೆಂಬ ಅರ್ಥವುಳ್ಳ ಕ್ರಿಯಾಪದವು ಯಾವುದು ? ಎಂತಹ ಆಕಾಶದಲ್ಲಿ ಶೋಭೆಯು ? ಇದನ್ನು ನೀನು ಹೇಳು (ಕ್ರಮವಾಗಿ ಉತ್ತರ:-) ಭವತಿಯೆಂದು

೧ ಏಕೋತ್ತರಾಕ್ಷರಚ್ಯುತಪಾದಂ. ೨ ಗರ್ಭೇ. ೩ ಔದರಿಕಂ. ೪ ಮೂಷಕಾನ್. ೫ ಭಕ್ಷಯತಿ. ೬ ಭವತಿ ಇತಿ ಸಂಬೋಧನಂ, ಭವತಿ ಇತಿ ಕ್ರಿಯಾಪದಂ, ಭಾನಿ ನಕ್ಷತ್ರಾಣ್ಯಸ್ಯ ಸಂತೀತಿ ಭವತ್ ತಸ್ಮಿನ್ಭವತಿ ವ್ಯೋಮ್ನೀತ್ಯರ್ಥಃ.

ಸಂಬೋಧಿಸಲ್ಪಡುತ್ತೀನೆ. ಭವತಿಯೆಂಬುದು ಅಸ್ತ್ಯರ್ಥವುಳ್ಳ ಕ್ರಿಯಾಪದವು. ಭವತಿ ಅಂದರೆ ನಕ್ಷತ್ರಗಳುಳ್ಳ ಆಕಾಶದಲ್ಲಿ ಶೋಭೆಯಿದೆ.

**ಜಿನಮಾನಮ್ರನಾಕೌಕೋನಾಯಕಾರ್ಚಿತಸತ್ಕ್ರಮಮ್ ।**
**ಕಮಾಹುಃ ಕರಿಣಂ [೧]ಚೋದ್ಯಲಕ್ಷಣಂ ಕೀದೃಶಂ [೨]ವಿದುಃ ॥ ೨೫೭ ॥**

ಯಾರನ್ನು ನಮಸ್ಕರಿಸುತ್ತಿರುವ ಸ್ವರ್ಗಾಧಿಪತಿಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ಜಿನೇಶ್ವರನನ್ನಾಗಿ ಹೇಳುತ್ತಾರೆ ?(ಉತ್ತರ :–) ಸುರವರದಂ- ದೇವತೆಗಳಿಗೆ ವರಗಳನ್ನು ಕೊಡುವವನನ್ನು ಜಿನೇಶ್ವರನನ್ನಾಗಿ ಹೇಳುತ್ತಾರೆ. ಎಂತಹುದನ್ನು ಪ್ರಶಸ್ತಲಕ್ಷಣಗಳುಳ್ಳ ಆನೆಯೆಂದು ಹೇಳುತ್ತಾರೆ ? (ಉತ್ತರ:-) ಸುರವರದಂ- ಶ್ರೇಷ್ಠವಾದ ಶಬ್ದವೂ ಹಲ್ಲುಗಳೂ ಉಳ್ಳುದನ್ನು ಪ್ರಶಸ್ತಲಕ್ಷಣಗಳುಳ್ಳ ಆನೆಯೆಂದು ಹೇಳುತ್ತಾರೆ. (ಬಹಿರ್ಲಾಪಿಕಾ).

**ಭೋಃ [೩]ಕೇತಕಾದಿವರ್ಣೇನ [೪]ಸಂಧ್ಯಾದಿಸಜುಷಾಮುನಾ ।**
**[೫]ಶರೀರಮಧ್ಯವರ್ಣೇನ [೬]ತ್ವಂ ಸಿಂಹಮುಪಲಕ್ಷಯ ॥ ೨೫೮ ॥**

ಎಲೈ ದೇವಿಯೇ ! ಈ ಸಂಧ್ಯಾರಾಗದಿಂದ ಕೂಡಿರುವ ಮತ್ತು ಸಕಾರದಿಂದ ಕೂಡಿರುವ, ಕೇತಕಿಮೊದಲಾದ ವರ್ಣದಿಂದ ಮತ್ತು ಕೇ ಎಂಬ ಅಕ್ಷರದಿಂದ, ಶರೀರಮಧ್ಯದ ಕೆಂಪುವರ್ಣದಿಂದ ಮತ್ತು ಶರೀರಶಬ್ದದ ಮಧ್ಯದಲ್ಲಿರುವ ರೀಯೆಂಬ ಅಕ್ಷರದಿಂದ ನೀನು ಸಿಂಹವನ್ನು ತೋರಿಸು. (ಉತ್ತರ:-) ಕೇಸರೀ.

**ಆಸಾದಯತಿ ಯದ್ರೂಪಂ ಕರೇಣುಃ ಕರಣೈರ್ವಿನಾ ।**
**ತತ್ತೇ ಕಮಲಪತ್ರಾಕ್ಷಿ ಭವತ್ವಕ್ಷಯಮವ್ಯಯಮ್ ॥ ೨೫೯ ॥**

ಎಲೈ ಕಮಲಲೋಚನೆಯೇ ! ಬೇರೆ ಸಾಧನಗಳಿಲ್ಲದೆ ಹಸ್ತದಲ್ಲಿರುವ ಸೂಕ್ಷ್ಮರೇಖೆಯು ಯಾವುದರ ಸ್ವರೂಪವನ್ನು ತಿಳಿಸುತ್ತದೆಯೋ ಅದು ನಿನಗೆ ಸಂಪೂರ್ಣವಾಗಿರಲಿ. ಅದಾವುದು ?(ಉತ್ತರ:-) ಆಯುಷ್ಯವು.

**ಕಃ ಕೀದೃಙ್ನ ನೃಪೈರ್ದಂಡ್ಯಃ ಕಃ ಖೇ ಭಾತಿ ಕುತೋಂಬ ಭೀಃ ।**
**ಭೀರೋಃ ಕೀದೃಙ್ನಿವೇಶಸ್ತೇ [೭]ನಾನಾಗಾರವಿರಾಜಿತಃ ॥ ೨೬೦ ॥**

ಎಂತಹ ಮನುಷ್ಯನು ರಾಜರಿಂದ ಶಿಕ್ಷಿಸುವುದಕ್ಕೆ ಯೋಗ್ಯನಲ್ಲ ? ಆಕಾಶದಲ್ಲಿ ಯಾವನು ಶೋಭಿಸುತ್ತಾನೆ ? ಭಯಸ್ಥನಿಗೆ ಯಾವುದರಿಂದ ಭಯವು ? ನಿನ್ನ ವಾಸಸ್ಥಾನವು ಎಂತಹುದು ? (ಕ್ರಮವಾಗಿ ಉತ್ತರ:-) ಅನಾಗಾ ನಾ-ಅಪರಾಧವಿಲ್ಲದ ಮನುಷ್ಯನು. ರವಿ:- ಸೂರ್ಯನು. ಆಜಿತ:- ಯುದ್ಧದಿಂದ. ನಾನಾಗಾರವಿರಾಜಿತ:–ಅನೇಕಮನೆಗಳಿಂದ ಶೋಭಿತವಾದುದು.

**ತ್ವತ್ತನೌ ಕಾಂಬ ಗಂಭೀರಾ ರಾಜ್ಞೋ [೮]ದೋರ್ಲಂಬ ಆ[೯]ಕುತಃ ।**
**ಕೀದೃಕ್ಕಿನ್ನು [೧೦]ವಿಗಾಢವ್ಯಂ ತ್ವಂ ಚ ಶ್ಲಾಘ್ಯಾ ಕಥಂ [೧೧]ಸತೀ ॥ ೨೬೧ ॥**

ಎಲೈ ತಾಯಿಯೇ ! ನಿನ್ನ ಶರೀರದಲ್ಲಿ ಆಳವಾದುದಾವುದು ? ರಾಜನ ಬಾಹುಗಳು ಎಲ್ಲಿಯವರೆಗೆ ದೀರ್ಘವಾಗಿವೆ ? ಯಾವುದು ಪ್ರವೇಶಮಾಡುವುದಕ್ಕೆ ಯೋಗ್ಯವಾದುದು ? ಪತಿವ್ರತೆಯಾದ ನೀನು ಹೇಗೆ ಶ್ಲಾಘ್ಯಳು ? (ಕ್ರಮವಾಗಿ ಉತ್ತರ:-) ನಾಭಿರಾಜಾನುಗಾಧಿಕಂ-ನಾಭಿ:- ನಾಭಿಯು. ಆಜಾನು- ಮೊಣಕಾಲಿನವರೆಗೆ. ಗಾಧಿಕಂ- ಆಳವಿಲ್ಲದಸರೋವರ ಮೊದಲಾದುದು. ನಾಭಿರಾಜಾ

೧ ಪ್ರಶಸ್ತಲಕ್ಷಣಂ. ೨ ಸುರವರದಂ–ಸುರೇಭ್ಯೋ ವರಂ ದದಾತೀತಿ ತಂ, ಶೋಭನಧ್ವನಿದಂತಂ ಚ. ೩ ಕೇತಕಕುಂದಾದಿವರ್ಣೇನ ಪಕ್ಷೇ ಕೇತಕಶಬ್ದಸ್ಯಾದಿ ವರ್ಣೇನ. ೪ ಜುಷಾ ರಾಗೇಣ ಸಹಿತಃ ಸಜುಟ್ ಸಂಧ್ಯಾ ಆದಿರ್ಯಸ್ಯಾಸೌ ಸಂಧ್ಯಾದಿಃ ಸ ಇವ ಸಜುಟ್ ಸಂಧ್ಯಾದಿಸಜುಟ್ ತೇನ, ಪಕ್ಷೇ ಸಂಧ್ಯಾಶಬ್ದಸ್ಯಾದಿವರ್ಣಂ ಸಕಾರಂ ಜುಷತೇ ಸೇವತ ಇತಿ ಸಂಧ್ಯಾದಿಸಜುಟ್ ತೇನ ಸಕಾರಯುಕ್ತೇನೇತ್ಯರ್ಥಃ. ೫ ಶರೀರಸ್ಯ ಮಧ್ಯಪ್ರದೇಶಗತರಕ್ತವರ್ಣೇನ ಪಕ್ಷೇ ಶರೀರಶಬ್ದಸ್ಯ ಮಧ್ಯವರ್ತಿನಾರೀತ್ಯಕ್ಷರೇಣ. ೬ ಸಿಂಹತ್ವಮುಪಲಕ್ಷಯೇತ್ಯಪಿ ಪಾಠಃ ಶಬ್ದಪ್ರಹೇಲಿಕಾ. ೭ ನಾನಾಗಾ ವಿವಿಧಾಪರಾಧಃ ಅನಾಗಾ ಅಪರಾಧರಹಿತೋ ನಾ ನರಃ ರವಿಃ ಆಜಿತಃ ಸಂಗ್ರಾಮಾತ್ ವಿವಿಧಗೃಹಶೋಭಿತಶ್ಚ. ೮ ಬಾಹುಲಂಬಃ. ೯ ಕುತಃ. ೧೦ ಪ್ರವೇಷ್ಟವ್ಯಂ. ೧೧ ಪತಿವ್ರತಾ, ನಾಭಿರಾಜಾನುಗಾಧಿಕಂ ನಾಭಿಃ ಆಜಾನು ಜಾನುಪರ್ಯಂತಂ ಗಾಧಿಕಂ ಜಾನುನಾಭಿದಘ್ನಾದಿ ಜಲಾಶಯಃ ನಾಭಿರಾಜಾನುವರ್ತಿನೀ ಚೇದಧಿಕಂ ಶ್ಲಾಘ್ಯಾ ಬಹಿರಾಲಾಪಕಮಂತವಿಷಮಂ ಪ್ರಶ್ನೋತ್ತರಂ.

ನುಗಾ-ನಾಭಿರಾಜನನ್ನು ಅನುವರ್ತಿಸುವವಳಾದರೆ ಅಧಿಕಂ-ಹೆಚ್ಚಾಗಿ ಶ್ಲಾಘ್ಯಳು. (ಬಹಿರ್ಲಾಪಿಕಾ).

**ತ್ವಾಂ ವಿನೋದಯಿತುಂ ದೇವಿ ಪ್ರಾಪ್ತಾ ನಾಕಾಲಯಾದಿಮಾಃ ।**
**ನೃತ್ಯಂತಿ [೧]ಕರಣೈಶ್ಚಿತ್ರೈರ್ನಭೋರಂಗೇ ಸುರಾಂಗನಾಃ ॥ ೨೬೨ ॥**

ಎಲೈ ದೇವಿಯೇ ! ನಿನ್ನನ್ನು ಸಂತೋಷಪಡಿಸುವುದಕ್ಕೋಸ್ಕರ ಸ್ವರ್ಗದಿಂದ ಬಂದ ಈ ದೇವಸ್ತ್ರೀಯರು ನಾನಾಪ್ರಕಾರವಾದ ಹಸ್ತನ್ಯಾಸಮೊದಲಾದ ಸಾಧನ ಗಳಿಂದ ಆಕಾಶವೆಂಬ ರಂಗಸ್ಥಾನದಲ್ಲಿ ನರ್ತನವನ್ನು ಮಾಡುತ್ತಾರೆ.

**ತ್ವಮಂಬ [೨]ರೇಚಿತಂ ಪಶ್ಯ ನಾಟಕೇ ಸುರಸಾನ್ವಿತಮ್ ।**
**[೩]ಸ್ವಮಂಬರೇ[೪]ಚಿತಂ [೫]ವೈಶ್ಯಪೇಟಕಂ [೬]ಸುರಸಾರಿತಮ್ ॥ ೨೬೩ ॥**

ಎಲೈ ತಾಯಿಯೇ! ನೀನು ನಾಟಕದಲ್ಲಿ ಉತ್ತಮವಾದ ಶೃಂಗಾರಾದಿರಸ ಗಳೊಡನೆ ಕೂಡಿದ ಹಾವ ಭಾವಗಳನ್ನು ನೋಡು. ದೇವತೆಗಳಿಂದ ತರಲ್ಪಟ್ಟ ಮತ್ತು ಆಕಾಶದಲ್ಲಿ ತುಂಬಿರುವ ವೇಶ್ಯಾಸ್ತ್ರೀಯರ ಸಮೂಹವನ್ನು ನೋಡು.

**ವಸುಧಾ ರಾಜತೇ ತನ್ವಿ ಪರಿತಸ್ತ್ವದ್ಗೃಹಾಂಗಣಮ್ ।**
**ವಸುಧಾರಾನಿಪಾತೇನ ದಧತೀವ ಮಹಾನಿಧಿಮ್ ॥ ೨೬೪ ॥**

ಎಲೈ ಕೃಶಾಂಗಿಯೇ! ನಿನ್ನ ಮನೆಯ ಅಂಗಣದ ಸುತ್ತಲೂ ಇರುವ ಭೂಮಿಯು, ರತ್ನವೃಷ್ಟಿಯ ಪತನದಿಂದ ಮಹಾನಿಧಿಯನ್ನು ಧರಿಸುತ್ತಿದೆಯೋ ಎಂಬಂತೆ, ಶೋಭಿಸುತ್ತಿದೆ.

**ವಸುಧಾರಾ[೭]ನಿಭೇನಾ[೮]ರಾತ್ಸ್ವರ್ಗಶ್ರೀಸ್ತ್ವಾಮುಪಾಸಿತುಮ್ ।**
**ಸೇಯಮಾಯಾತಿ ಪಶ್ಯೈನಾಂ ನಾನಾರತ್ನಾಂಶುಚಿತ್ರಿತಾಮ್ ॥ ೨೬೫ ॥**

ಎಲೈ ದೇವಿಯೇ! ಈ ಸ್ವರ್ಗಲಕ್ಷ್ಮಿಯು ದ್ರವ್ಯದ ಧಾರೆಯ ನೆಪದಿಂದ ಸಮೀಪದಲ್ಲಿ ನಿನ್ನನ್ನು ಸೇವಿಸುವುದಕ್ಕೋಸ್ಕರ ಬರುತ್ತಿದ್ದಾಳೆ. ಅನೇಕವಿಧವಾದ ರತ್ನಗಳ ಕಿರಣಗಳಿಂದ ನಾನಾಪ್ರಕಾರವಾಗಿ ಮಾಡಲ್ಪಟ್ಟ ಈ ಲಕ್ಷ್ಮಿಯನ್ನು ನೋಡು.

**ಮುದೇಸ್ತು ವಸುಧಾರಾ ತೇ ದೇವತಾಶೀಸ್ತತಾಂಬರಾ ।**
**ಸ್ತುತಾದೇಶೇನ [೯]ಭಾತಾಧಾ ವ[೧೦]ಶೀಶೇ [೧೧]ಸ್ವಸ್ವನಸ್ತಸು ॥ ೨೬೬ ॥**

ದೇವತೆಗಳ ಆಶೀರ್ವಚನಗಳಿಂದ ವ್ಯಾಪ್ತವಾದ ಆಕಾಶವುಳ್ಳ ದ್ರವ್ಯದ ಧಾರೆಯು ನಿನಗೆ ಸಂತೋಷಕ್ಕೋಸ್ಕರ ಆಗಲಿ. ಜಿತೇಂದ್ರಿಯರಾದ ಮುನಿಗಳಿಗೆ ಸ್ವಾಮಿಯಾದ ಸರ್ವಜ್ಞನುಳ್ಳವಳೂ ಶಾಶ್ವತನಾದ ಜಿನೇಶ್ವರನನ್ನು ಹಡೆಯುವವಳೂ ಆದ ದೇವಿಯೇ ! ಕಾಂತಿಯನ್ನು ಧರಿಸಿರುವ ನಿನ್ನನ್ನು ಇಂದ್ರನ ಅಪ್ಪಣೆಯಿಂದ ನಾವು ಸ್ತುತಿಸಿದೆವು"

**ಇತಿ [೧೨]ತಾಭಿಃ ಪ್ರಯುಕ್ತಾನಿ ದುಷ್ಕರಾಣಿ ವಿಶೇಷತಃ ।**
**ಜಾನಾನಾ ಸುಚಿರಂ ಭೇಜೇ ಸಾಂತರ್ವತ್ನೀ [೧೩]ಸುಖಾಸಿಕಾಮ್ ॥೨೬೭ ॥**

ಈ ಪ್ರಕಾರವಾಗಿ ಆ ದೇವಿಯರಿಂದ ಪ್ರಯೋಗಿಸಲ್ಪಟ್ಟ ಅತ್ಯಂತ ಕಠಿನವಾದ ಪದ್ಯಗಳನ್ನು ತಿಳಿಯುವವಳಾಗಿ ಗರ್ಭಿಣಿಯಾದ ಆ ಮರುದೇವಿಯು ಬಹು ಕಾಲದವರೆಗೆ ಸುಖವಾಗಿದ್ದಳು.

೧ ಅಂಗಕರನ್ಯಾಸೈಃ. ೨ ವಲ್ಗಿತಂ. ೩ ಆತ್ಮೀಯಂ. ೪ ನಿಚಿತಂ. ೫ ವೇಶ್ಯಾಸಂಬಂಧಿಸಮೂಹಂ. ೬ ದೇವೈಃ ಪ್ರಾಪಿತಂ, ಅಯಂ ಶ್ಲೋಕೋ ಗೋಮೂತ್ರಿಕಾಬಂಧಃ. ೭ ವ್ಯಾಜೇನ. ೮ ಆರಾದ್ದೂರಸಮೀಪಯೋಃ. ೯ ಭಾಯಾ ಭಾವೋ ಭಾತಾ ತಾಂ ದಧಾತೀತಿ ಭಾತಂ ದೀಪ್ತಿಮಾದಧಾತೀತಿ ವಾ. ೧೦ ವಶಿನಾಂ ಮುನೀನಾಮೀಶಃ ಸರ್ವಜ್ಞಃ ಸ ಅಸ್ಯಾ ಅಸ್ತೀತಿ ವಶೀಶಾ ಮರುದೇವೀ ತಸ್ಯಾಃ ಸಂಬೋಧನಂ ವಶೀ ಈಶೋ ಯಸ್ಯಾಸ್ಸಾವಶೀಶಾ ವಶಿನಃ ಈಶಾ ಸ್ವಾಮಿನೀತಿ ವಾ. ೧೧ ಸುಷ್ಠು ಅಸುಭಿರನಸ್ತೋ ನಾಶರಹಿತಃ ಶಾಶ್ವತಃ ಜಿನ ಇತ್ಯರ್ಥಃ ತಂ ಸೂತ ಇತಿ ಸ್ವಸ್ವನಸ್ತಸೂಃ ತಸ್ಯಾಃ ಸಂಬೋಧನಂ. ೧೨ ದೇವೀಭಿಃ. ೧೩ ಸುಖಸ್ಥಿತಾಂ.

**ನಿಸರ್ಗಾಚ್ಚ [೧]ಧೃತಿಸ್ತಸ್ಯಾಃ ಪರಿಜ್ಞಾನೇಭವತ್ಪರಾ ।**
**ಪ್ರಜ್ಞಾಮಯಂ ಪರಂಜ್ಯೋತಿರುದ್ವಹಂತ್ಯಾ ನಿಜೋದರೇ ॥ ೨೬೮ ॥**

ತನ್ನ ಗರ್ಭದಲ್ಲಿ ಜ್ಞಾನಮಯವಾದ ಪರಂಜ್ಯೋತಿ(ಜಿನೇಶ್ವರ)ಯನ್ನು ಧರಿಸಿರುವ ಆ ಮರುದೇವಿಯು ಸ್ವಭಾವದಿಂದಲೇ ಸಂತೋಷವುಳ್ಳವಳಾಗಿದ್ದಳು. ಜಿನಬಾಲಕನು ಗರ್ಭಕ್ಕವತರಿಸಿದ ವಿಷಯವನ್ನು ತಿಳಿದಮೇಲೆ ಬಹಳ ಸಂತೋಷ ವುಳ್ಳವಳಾದಳು.

**ಸಾ ತದಾತ್ಮೀಯಗರ್ಭಾಂತರ್ಗತಂ [೨]ತೇಜೋತಿಭಾಸುರಮ್ ।**
**ದಧಾನಾರ್ಕಾಂಶುಗರ್ಭೇವ [೩]ಪ್ರಾಚೀ ಪ್ರಾಪ ಪರಾಂ [೪]ರುಚಿಮ್ ॥**

ಆಗ ಆ ಮರುದೇವಿಯು ತನ್ನ ಗರ್ಭದೊಳಗಿರುವ ಅತ್ಯಂತ ಪ್ರಕಾಶಮಾನವಾದ ತೇಜಸ್ಸನ್ನು ಧರಿಸುವವಳಾಗಿ, ಸೂರ್ಯಕಿರಣಗಳನ್ನು ಮಧ್ಯದಲ್ಲಿ ಧರಿಸಿರುವ ಪೂರ್ವದಿಕ್ಕಿನಂತೆ, ಅಧಿಕವಾದ ಶೋಭೆಯನ್ನು ಹೊಂದಿದಳು.

**ಸೂಚಿತಾ ವಸುಧಾರೋರುದೀಪೇನಾಧಃ ಕೃತಾರ್ಚಿಷಾ ।**
**ನಿಧಿಗರ್ಭಸ್ಥಲೀವಾಸೌ ರೇಜೇ ರಾಜೀವಲೋಚನಾ ॥ ೨೭೦ ॥**

ಕಮಲನೇತ್ರೆಯಾದ ಈ ಮರುದೇವಿಯು, ಜ್ವಾಲೆಯನ್ನು ಕೆಳಗೆ ಮಾಡಿದ ದ್ರವ್ಯದ ಧಾರೆಯೆಂಬ ದೊಡ್ಡದೀಪದಿಂದ ಗರ್ಭದಲ್ಲಿ ಜ್ಞಾನಮಯವಾದ ನಿಧಿಯುಳ್ಳವಳೆಂದು ಸೂಚಿಸಲ್ಪಟ್ಟವಳಾಗಿ, ಜ್ವಾಲೆಯನ್ನು ಕೆಳಗೆ ಮಾಡಿದ ದೀಪದಿಂದ ಸೂಚಿಸಲ್ಪಟ್ಟುದೂ ಮಧ್ಯದಲ್ಲಿ ನಿಧಿಯುಳ್ಳುದೂ ಆದ ಭೂಮಿ ಯಂತೆ, ಪ್ರಕಾಶಿಸಿದಳು.

**[೫]ಮಹಾಸತ್ತ್ವೇನ ತೇನಾಸೌ ಗರ್ಭಸ್ಥೇನ ಪರಾಂ ಶ್ರಿಯಮ್ ।**
**ಬಭಾರ ರತ್ನಗರ್ಭೇವ ಭೂಮಿರಾಕರಗೋಚರಾ ॥ ೨೭೧ ॥**

ತನ್ನ ಗರ್ಭದಲ್ಲಿರುವ ಅನಂತವೀರ್ಯವುಳ್ಳ ಆ ಪುತ್ರನಿಂದ ಮರುದೇವಿಯು, ರತ್ನದ ಗಣಿಗಳ ಮಧ್ಯದಲ್ಲಿರುವ ಭೂಮಿಯಂತೆ, ಅಧಿಕವಾಗಿ ಶೋಭಿಸಿದಳು.

**ಸ ಮಾತುರುದರಸ್ಥೋಪಿ ನಾಸ್ಯಾಃ ಪೀಡಾಮಜೀಜನತ್ ।**
**ದರ್ಪಣಸ್ಥೋಪಿ ಕಿಂ ವಹ್ನಿರ್ದಹೇ[೬]ತ್ತಂ ಪ್ರತಿಬಿಂಬಿತಃ ॥ ೨೭೨ ॥**

ಆ ಜಿನಬಾಲಕನು ತಾಯಿಯ ಗರ್ಭದಲ್ಲಿದ್ದರೂ ಈ ಮರುದೇವಿಗೆ ಬಾಧೆ ಯನ್ನುಂಟುಮಾಡಲಿಲ್ಲ. ಕನ್ನಡಿಯಲ್ಲಿ ಪ್ರತಿಬಿಂಬಿಸಿದ ಬೆಂಕಿಯು ಕನ್ನಡಿ ಯಲ್ಲಿ ದ್ದರೂ ಅದನ್ನು ಸುಡುವುದೇ ?

**ತ್ರಿವಲೀಭಂಗುರಂ ತಸ್ಯಾಸ್ತಥೈವಾಸ್ಥಾತ್ತನೂದರಮ್ ।**
**ತಥಾಪಿ ವವೃಧೇ [೭]ಗರ್ಭ[೮]ಸ್ತೇಜಸಃ ಪ್ರಾಭವಂ ಹಿ ತತ್ ॥ ೨೭೩ ॥**

ತ್ರಿವಲಿಗಳಿಂದ ಕೂಡಿದ ಆ ಮರುದೇವಿಯ ಹೊಟ್ಟೆಯು ಇದ್ದಹಾಗೆಯೇ ಇದ್ದಿತು. ಹಾಗಿದ್ದರೂ ಗರ್ಭ(ಶಿಶು)ವು ಬೆಳೆಯಿತು. ಅದು ಆ ತೇಜಸ್ವಿನ (ಸರ್ವಜ್ಞನ) ಮಹಿಮೆಯಲ್ಲವೇ ?

**ನೋದರೇ ವಿಕೃತಿಃ ಕಾಪಿ ಸ್ತನೌ ನಾನೀಲಚೂಚುಕೌ ।**
**ನಾಪಾಂಡುವದನಂ ತಸ್ಯಾ ಗರ್ಭೋಽಪ್ಯವೃಧದದ್ಭುತಮ್ ॥ ೨೭೪ ॥**

೧ ಧೃತಿರ್ಯೋಗಾಂತರೇ ಧೈರ್ಯೇ ಧಾರಣಾಧ್ವರತುಷ್ಟಿಷು. ೨ ತೇಜಃಪಿಂಡರೂಪಾರ್ಭಕಂ. ೩ ಪೂರ್ವದಿಕ್. ೪ ಶೋಭಾಂ. ೫ ಅನಂತವೀರ್ಯೇಣ. ೬ ದರ್ಪಣಂ. ೭ ಭ್ರೂಣಃ. ೮ ಸರ್ವಜ್ಞಸ್ಯ.

ಮರುದೇವಿಯ ಹೊಟ್ಟೆಯಲ್ಲಿ ಯಾವ ವಿಕಾರವೂ ಉಂಟಾಗಲಿಲ್ಲ. ಕುಚಗಳು ಕಪ್ಪಾದ ಅಗ್ರಭಾಗವುಳ್ಳುವುಗಳಾಗಿ ಆಗಲಿಲ್ಲ. ಮುಖವು ಬಿಳಿಯದಾಗಿ ಆಗಲಿಲ್ಲ. ಗರ್ಭ(ಶಿಶು)ವಾದರೋ ಬೆಳೆಯಿತು. ಇದು ಆಶ್ಚರ್ಯ!

**[1]ಸ್ವಾಮೋದಂ ಮುಖಮೇತಸ್ಯಾ ರಾಜಾಘ್ರಾಯೈವ ಸೋತೃಪತ್ ।**
**ಮದಾಲಿರಿವ ಪದ್ಮಿನ್ಯಾಃ ಪದ್ಮಮಸ್ಪೃಷ್ಟಕೇಸರವಮ್ ॥ ೨೭೫ ॥**

ಮದಿಸಿದ ಭ್ರಮರವು ಸ್ಪರ್ಶಿಸಲ್ಪಡದಿರುವ ಕುಸುಮಗಳುಳ್ಳ ಕಮಲಲತೆಯ ಕಮಲವನ್ನು ಆಘ್ರಾಣಮಾಡಿಯೇ ತೃಪ್ತಿಪಡುವಂತೆ ಆ ನಾಭಿರಾಜನು ಒಳ್ಳೆಯ ಪರಿಮಳವುಳ್ಳ ಈ ಮರುದೇವಿಯ ಮುಖವನ್ನು ಆಘ್ರಾಣ ಮಾಡಿ(ಮೂಸಿ)ಯೇ ತೃಪ್ತಿಪಟ್ಟನು.

**ಸೋಭಾದ್ವಿಶುದ್ಧಗರ್ಭಸ್ಥಸ್ತ್ರಿಬೋಧವಿಮಲಾಶಯಃ ।**
**ಸ್ಫಟಿಕಾಗಾರಮಧ್ಯಸ್ಥಃ ಪ್ರದೀಪ ಇವ ನಿಶ್ಚಲಃ ॥ ೨೭೬ ॥**

ಪರಿಶುದ್ಧವಾದ ಗರ್ಭದಲ್ಲಿರುವವನೂ ಮತಿಶ್ರುತಾವಧಿಗಳೆಂಬ ಮೂರು ಜ್ಞಾನಗಳಿಂದ ಪರಿಶುದ್ಧವಾದ ಮನಸ್ಸುಳ್ಳವನೂ ಆದ ಆ ಜಿನಬಾಲಕನು, ಸ್ಫಟಿಕದಿಂದ ಮಾಡಿದ ಮನೆಯ ಮಧ್ಯದಲ್ಲಿರುವ ನಿಶ್ಚಲವಾದ ದೀಪದಂತೆ ಪ್ರಕಾಶಿಸಿದನು.

**ಕುಶೇಶಯಶಯಂ [2]ದೇವಂ ಸಾ ದಧಾನೋ[3]ದರೇಶಯಮ್ ।**
**[4]ಕುಶೇಶಯಶಯೇವಾಸೀ[5]ನ್ಮಾನನೀಯಾ ದಿವೌಕಸಾಮ್ ॥ ೨೭೭ ॥**

ಕಮಲಶಯನನಾಗಿದ್ದು ತನ್ನ ಗರ್ಭದಲ್ಲಿ ಶಯನಮಾಡಿದ ಆದಿಬ್ರಹ್ಮನನ್ನು ಧರಿಸಿಕೊಂಡಿರುವ ಆ ಮರುದೇವಿಯು ಲಕ್ಷ್ಮಿಯಂತೆ ದೇವತೆಗಳಿಗೆ ಪೂಜ್ಯಳಾಗಿ ಆದಳು.

**ನಿಗೂಢಂ ಚ ಶಚೀದೇವಿ ಸಿಷೇವೇ ಕಿಲ ಸಾಪ್ಸರಾ ।**
**[6]ಮಘೋನಾಘವಿನಾಶಾಯ [7]ಪ್ರಹಿತಾ ತಾಂ ಮಹಾಸತೀಮ್ ॥ ೨೭೮ ॥**

ದುರಿತವಿನಾಶಕ್ಕಾಗಿ ದೇವೇಂದ್ರನು ಕಳುಹಿಸಿದ ಶಚೀದೇವಿಯು ಅಪ್ಸರಸ್ತ್ರೀಯರೊಡನೆ ಮಹಾಪತಿವ್ರತೆಯಾದ ಆ ಮರುದೇವಿಯನ್ನು ಗುಪ್ತವಾಗಿ ಸೇವಿಸುತ್ತಿದ್ದಳು.

**ಸಾ[8]ನಂಸೀನ್ನಪರಂ ಕಂಚಿನ್ನಮ್ಯತೇ ಸ್ಮ ಸ್ವಯಂ ಜನೈಃ ।**
**ಚಾಂದ್ರೀ ಕಲೇವ ರುಂದ್ರಶ್ರೀರ್ದೇವೀವ ಚ ಸರಸ್ವತೀ ॥ ೨೭೯ ॥**

ಆ ಮರುದೇವಿಯು ಬೇರೆ ಯಾರನ್ನೂ ನಮಸ್ಕರಿಸಲಿಲ್ಲ. ಅಧಿಕವಾದ ಶೋಭೆಯುಳ್ಳ ಚಂದ್ರನ ಕಲೆಯಂತೆಯೂ ಸರಸ್ವತೀದೇವಿಯಂತೆಯೂ ತಾನೇ ಜನರಿಂದ ನಮಸ್ಕರಿಸಲ್ಪಡುತ್ತಿದ್ದಳು.

**ಬಹುನಾತ್ರ ಕಿಮುಕ್ತೇನ ಶ್ಲಾಘ್ಯಾ ಸೈಕಾ ಜಗತ್ತ್ರಯೇ ।**
**ಯಾ ಸ್ರಷ್ಟುರ್ಜಗತಾಂ [9]ಸ್ರಷ್ಟ್ರೀ ಬಭೂವ ಭುವನಾಂಬಿಕಾ ॥ ೨೮೦ ॥**

ಈ ಮರುದೇವಿಯ ವಿಷಯದಲ್ಲಿ ಬಹಳ ಮಾತಿನಿಂದೇನು ? ಸೃಷ್ಟಿಕರ್ತನಾದ ಆದಿಬ್ರಹ್ಮನನ್ನು ಸೃಷ್ಟಿಸಿ(ಹಡೆದು)ದುದರಿಂದ ಲೋಕಜನನಿಯಾದ ಆ ಮರುದೇವಿಯೇ ಮೂರುಲೋಕದಲ್ಲಿಯೂ ಶ್ಲಾಘ್ಯಳು.

೧ ಶೋಭನಗಂಧಂ. ೨ ಆದಿಬ್ರಹ್ಮಾಣಂ. ೩ ಉದರೇ ಶೇತ ಇತ್ಯುದರೇಶಯಃ. ೪ ಲಕ್ಷ್ಮೀಃ. ೫ ಪೂಜ್ಯಾ. ೬ ಇಂದ್ರೇಣ. ೭ ಪ್ರೇಷಿತಾ. ೮ ನಮತಿ ಸ್ಮ. ೯ ಜನಯಿತ್ರೀ.

**ಸಾ ವಿಬಭಾವಭಿರಾಮತರಾಂಗೀ [1]ಶ್ರೀಭಿರುಪಾಸಿತಮೂರ್ತಿರಮೂಭಿಃ ।**
**ಶ್ರೀಭವನೇ ಭುವನೈಕ[2]ಲಲಾಮ್ನಿ ಶ್ರೀಭೃತಿ [3]ಭೂಭೃತಿ ತನ್ವತಿ ಸೇವಾಮ್ ॥ ೨೮೧ ॥**

ಸಂಪದ್ಯುಕ್ತನಾದ ನಾಭಿರಾಜನು ಸೇವೆಯನ್ನು ಮಾಡುತ್ತಿರಲಾಗಿ ಅತ್ಯಂತ ಸುಂದರಾಂಗಿಯೂ ಈ ಶ್ರೀಹ್ರೀಮೊದಲಾದ ದೇವಿಯರಿಂದ ಸೇವೆಯನ್ನು ಮಾಡಿಸಿಕೊಂಡವಳೂ ಆದ ಆ ಮರುದೇವಿಯು ಲೋಕಕ್ಕೆ ತಿಲಕದಂತಿರುವ ಶೋಭಾಯಮಾನವಾದ ರಾಜಭವನದಲ್ಲಿ ಶೋಭಿಸುತ್ತಿದ್ದಳು.

**ಅತಿರುಚಿರತರಾಂಗೀ ಕಲ್ಪವಲ್ಲೀವ ಸಾಭೂತ್**
**ಸ್ಮಿತಕುಸುಮಮನೂನಂ ದರ್ಶಯಂತೀ ಫಲಾಯ ।**
**ನೃಪತಿರಪಿ ತದಾಸ್ಯಾಃ ಪಾರ್ಶ್ವವರ್ತೀ ರರಾಜೇ**
**ಸುರತರುರಿವ ತುಂಗೋ ಮಂಗಲಶ್ರೀವಿಭೂಷಃ ॥ ೨೮೨ ॥**

ಅತ್ಯಂತ ಮನೋಹರವಾದ ಅವಯವಗಳುಳ್ಳವಳೂ ಪುತ್ರರೂಪವಾದ ಫಲದುತ್ಪತ್ತಿಗೆ ಸೂಚಕವಾದ ಮುಗುಳುನಗೆಯೆಂಬ ಪುಷ್ಪವನ್ನು ತೋರಿಸುವವಳೂ ಆದ ಆ ಮರುದೇವಿಯು ಕಲ್ಪಲತೆಯಂತಿದ್ದಳು. ಆಗ ಮಂಗಲಸೂಚಕವಾದ ಒಳ್ಳೆಯ ಆಭರಣಗಳನ್ನು ಧರಿಸಿಕೊಂಡು ಈ ಮರುದೇವಿಯ ಸಮೀಪದಲ್ಲಿದ್ದ ನಾಭಿರಾಜನೂ ಉನ್ನತವಾದ ಕಲ್ಪವೃಕ್ಷದಂತೆ ಪ್ರಕಾಶಿಸಿದನು.

**ಲಲಿತತರಮಥಾಸ್ಯಾ ವಕ್ತ್ರಪದ್ಮಂ ಸುಗಂಧಿ**
**ಸ್ಫುರಿತದಶನರೋಚಿ[4]ರ್ಮಂಜರೀಕೇಸರಾಢ್ಯಮ್ ।**
**ವಚನ[5]ಮಧುರಸಾಶಾಸಂಸ್ಸಜದ್ರಾಜಹಂಸಮ್**
**ಭೃಶಮನಯತ [6]ಬೋಧಂ ಬಾಲಭಾನುಃ ಸಮುದ್ಯನ್ ॥ ೨೮೩ ॥**

ತರುವಾಯ ಬಾಲಕನೆಂಬ ಸೂರ್ಯನು ಉದಯಿಸಿ ಅತ್ಯಂತ ಸುಂದರವೂ ಪರಿಮಳವುಳ್ಳುದೂ ವಿಕಸಿತವಾದ ಹಲ್ಲುಗಳ ಕಾಂತಿಯ ಸಮೂಹವೆಂಬ ಕುಸುಮಗಳಿಂದ ವ್ಯಾಪ್ತವೂ ವಚನವೆಂಬ ಪುಷ್ಪರಸದ ಆಸೆಯಿಂದ ಆಸಕ್ತನಾದ ರಾಜಹಂಸನುಳ್ಳುದೂ ಆದ ಈ ಮರುದೇವಿಯ ಮುಖವೆಂಬ ಕಮಲವನ್ನು ಅಧಿಕವಾಗಿ ಅರಳಿಸಿದನು.

**ಮುಹುರಮೃತಮಿವಾಸ್ಯಾ ವಕ್ತ್ರಪೂರ್ಣೇಂದುರುದ್ಯತ್**
**ವಚನಮಸೃಜದುಚ್ಚೈರ್ಲೋಕಚೇತೋಭಿನಂದಿ।**
**ನೃಪತಿರಪಿ ಸತೃಷ್ಣ[7]ಸ್ತ[8]ತ್ಪಿಪಾಸನ್ನ ರೇಮೇ**
**[9]ಸ್ವಜನಕುಮುದಶಂಡೈಃ ಸಂವಿಭಕ್ತಂ ಯಥಾಸ್ವಮ್ ॥ ೨೮೪ ॥**

ಈ ಮರುದೇವಿಯ ಮುಖವೆಂಬ ಪೂರ್ಣಚಂದ್ರನು ಉದಯಿಸಿ, ಜನಗಳ ಮನಸ್ಸನ್ನು ಸಂತೋಷಪಡಿಸುವ ವಚನವೆಂಬ ಅಮೃತವನ್ನು ಬಾರಿಬಾರಿಗೂ ಸ್ರವಿಸಿದನು. ಬಾಯಾರಿದ (ಅಭಿಲಾಷೆಯುಳ್ಳ) ಆ ನಾಭಿರಾಜನೂ ಆ ವಚನಾಮೃತವನ್ನು ಪಾನಮಾಡಬೇಕೆಂಬ ಇಚ್ಛೆಯುಳ್ಳವನಾಗಿ ತನ್ನ ಬಂಧುಜನಗಳೆಂಬ ಕುಮುದಪುಷ್ಪಗಳ ಸಮೂಹಕ್ಕೆ ಯಥೋಚಿತವಾಗಿ ಆ ಅಮೃತ ವನ್ನು ವಿಭಾಗಿಸಿ ಸಂತೋಷಪಟ್ಟನು. ನಾಭಿರಾಜನೂ ಆತನ ಬಂಧುಜನಗಳೂ ಮರುದೇವಿಯ ವಚನವನ್ನು ಕೇಳಿ ಸಂತೋಷಪಟ್ಟರೆಂದು ಭಾವವು.

೧ ಶ್ರೀಹ್ರೀಪ್ರಭೃತಿಭಿಃ. ೨ ತಿಲಕೇ. ೩ ನಾಭಿರಾಜೇ. ೪ ಸಮೂಹಃ. ೫ ಮಕರಂದರಸ ವಾಂಛಾತಯಾ ಆಸಕ್ತಹಂಸಂ. ೬ ವಿಕಾಸಂ. ೭ ವಚನಾಮೃತಂ. ೮ ಪಾತುಮಿಚ್ಛನ್. ೯ ಬಂಧುಜನಾಃ.

**ಇತ್ಯಾವಿಷ್ಕೃತಮಂಗಲಾ [1]ಭಗವತೀ ದೇವೀಭಿರಾತ್ತಾದರಂ**
**ದಧ್ರೇ[2]ಂತಃ ಪರಮೋದಯಂ ತ್ರಿಭುವನೇಪ್ಯಾಶ್ಚರ್ಯಭೂತಂ [3]ಮಹಃ ।**
**ರಾಜ್ಯೈನಂ [4]ಜಿನಭಾವಿನಂ ಸುತರವಿಂ [5]ಪದ್ಮಾಕರಸ್ಯಾನುಯನ್**
**ಸಾಕಾಂಕ್ಷಃ [6]ಪ್ರತಿಪಾಲಯ[7]ನ್ಧೃತಿಮಧಾತ್ಪ್ರಾಪ್ತೋದಯಾಂ**
**ಭೂಯಸೀಮ್ ॥ ೨೮೫ ॥**

ಈ ಪ್ರಕಾರವಾಗಿ ದೇವಸ್ತ್ರೀಯರಿಂದ ಆದರಪೂರ್ವಕವಾಗಿ ಮಾಡಲ್ಪಟ್ಟ ಮಂಗಲಕಾರ್ಯಗಳುಳ್ಳ ಭಾಗ್ಯವತಿಯಾದ ಮರುದೇವಿಯು ಮೂರುಲೋಕದಲ್ಲಿಯೂ ಆಶ್ಚರ್ಯಕರವೂ ಅಧಿಕವೂ ಆದ ಉದಯವುಳ್ಳ ತೇಜಸ್ಸನ್ನು ತನ್ನ ಗರ್ಭದಲ್ಲಿ ಧರಿಸಿದಳು. ಕಮಲಸರೋವರವನ್ನು ಅನುಕರಣಮಾಡುವ ನಾಭಿರಾಜನು, ಮುಂದಕ್ಕೆ ಜಿನೇಶ್ವರನಾಗುವ ಪುತ್ರನೆಂಬ ಸೂರ್ಯನನ್ನು ಪ್ರೀತಿಯಿಂದ ಎದುರುನೋಡುವವನಾಗಿ ಬಹಳ ಸಂತೋಷವನ್ನು ಹೊಂದಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವತ್ಸ್ವರ್ಗಾವತರಣವರ್ಣನಂ ನಾಮ ದ್ವಾದಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭಗವಂತನ ಸ್ವರ್ಗಾವತರಣವರ್ಣನೆಯೆಂಬ
ಹನ್ನೆರಡನೆಯ ಪರ್ವವು ಸಂಪೂರ್ಣವಾದುದು.

---

೧ ಭಾಗ್ಯವತೀ. ೨ ಉದರೇ. ೩ ತೇಜಃ. ೪ ಭಾವೀ ಚಾಸೌ ಜಿನಶ್ಚ ಜಿನಭಾವೀ ತಂ. ೫ ಪದ್ಮಾಕರಮನುಕುರ್ವನ್. ೬ ಪ್ರತೀಕ್ಷನ್. ೭ ಸಂತೋಷಂ.

॥ ಶ್ರೀ ವೃಷಭಜಿನಾಯ ನಮಃ ॥

# ಅಥ ತ್ರಯೋದಶಂ ಪರ್ವ

**ಅಥಾತೋ ನವಮಾಸಾನಾಮತ್ಯಯೇ ಸುಷುವೇ ವಿಭುಮ್ ।**
**ದೇವೀ ದೇವೀಭಿರುಕ್ತಾಭಿರ್ಯಥಾಸ್ವಂ [೧]ಪರಿವಾರಿತಾ ॥ ೧ ॥**

ತರುವಾಯ ಒಂಬತ್ತುತಿಂಗಳು ಕಳೆದನಂತರ ಹಿಂದೆ ಹೇಳಿದ ದೇವಸ್ತ್ರೀಯರಿಂದ ಆವರಿಸಲ್ಪಟ್ಟ ಮರುದೇವಿಯು ವೃಷಭಸ್ವಾಮಿಯನ್ನು ಹಡೆದಳು.

**[೨]ಪ್ರಾಚೀವ [೩]ಬಂಧುಮಬ್ಜಾನಾಂ ಸಾ ಲೇಭೇ ಭಾಸ್ವರಂ ಸುತಮ್ ।**
**ಚೈತ್ರೇ ಮಾ[೪]ಸ್ಯಸಿತೇ ಪಕ್ಷೇ ನವಮ್ಯಾಮುದಯೇ ರವೇಃ ॥ ೨ ॥**

ಪೂರ್ವದಿಕ್ಕು ಸೂರ್ಯನನ್ನು ಪಡೆಯುವಂತೆ, ಮರುದೇವಿಯು ಚೈತ್ರಮಾಸದ ಕೃಷ್ಣಪಕ್ಷದ ನವಮೀತಿಥಿಯಲ್ಲಿ ಸೂರ್ಯೋದಯಕಾಲದಲ್ಲಿ ದೇದೀಪ್ಯಮಾನನಾದ ಪುತ್ರನನ್ನು ಪಡೆದಳು.

**ವಿಶ್ವೇ[೫]ಡ್ಬ್ರಹ್ಮಮಹಾಯೋಗೇ ಜಗತಾಮೇಕವಲ್ಲಭಮ್ ।**
**ಭಾಸಮಾನಂ ತ್ರಿಭಿರ್ಬೋಧೈಃ ಶಿಶುಮಪ್ಯಶಿಶುಂ ಗುಣೈಃ ॥ ೩ ॥**

**ತ್ರಿಬೋಧಕಿರಣೋದ್ಭಾಸೀ ಬಾಲಾರ್ಕೋಽಸೌ ಸ್ಫುರದ್ದ್ಯುತಿಃ ।**
**ನಾಭಿರಾಜೋದಯಾದ್ರೀಂದ್ರಾದುದಿತೋ ವಿಬಭೌ ವಿಭುಃ ॥ ೪ ॥**

ಲೋಕಕ್ಕೆ ಮುಖ್ಯನಾಯಕನೂ ಮತಿಶ್ರುತಾವಧಿಗಳೆಂಬ ಮೂರುಜ್ಞಾನಗಳಿಂದ ಪ್ರಕಾಶಮಾನನೂ ವಯಸ್ಸಿನಿಂದ ಶಿಶುವಾಗಿದ್ದರೂ ಗುಣಗಳಿಂದ ಹಿರಿಯನೂ ಮೂರುಜ್ಞಾನಗಳೆಂಬ ಕಿರಣಗಳಿಂದ ಪ್ರಕಾಶಿಸುವವನೂ ವ್ಯಾಪಕನೂ ಪ್ರಕಾಶ ಮಾನವಾದ ದೇಹಕಾಂತಿಯುಳ್ಳವನೂ ಆದ ಈ ಬಾಲಕನೆಂಬ ಸೂರ್ಯನು ಉತ್ತರಾಷಾಢನಕ್ಷತ್ರದಲ್ಲಿ ನಾಭಿರಾಜನೆಂಬ ಉದಯಪರ್ವತದಿಂದ ಉದಯಿಸಿ ಬಹಳವಾಗಿ ಶೋಭಿಸಿದನು.

**ದಿಶಃ [೬]ಪ್ರಸತ್ತಿ[೭]ಮಾಸೇದುರಾಸೀನ್ನಿರ್ಮಲಮಂಬರಮ್ ।**
**ಗುಣಾನಾಮಸ್ಯ ವೈಮಲ್ಯಮನುಕರ್ತುಮಿವ ಪ್ರಭೋಃ ॥ ೫ ॥**

ಆಗ ಈ ಪ್ರಭು(ವೃಷಭಸ್ವಾಮಿ)ವಿನ ಗುಣಗಳ ನೈರ್ಮಲ್ಯವನ್ನು ಅನುಕರಣ ಮಾಡುವುದಕ್ಕೋಸ್ಕರವೋ ಎಂಬಂತೆ ದಿಕ್ಕುಗಳು ಪ್ರಸನ್ನತೆಯನ್ನು ಹೊಂದಿದುವು (ನಿರ್ಮಲವಾದುವು). ಆಕಾಶವೂ ನಿರ್ಮಲವಾಯಿತು.

**ಪ್ರಜಾನಾಂ ವವೃಧೇ ಹರ್ಷಃ ಸುರಾ ವಿಸ್ಮಯಮಾಶ್ರಯನ್ ।**
**ಅಮ್ಲಾನಕುಸುಮಾನ್ಯುಚ್ಚೈರ್ಮುಮುಚುಃ ಸುರಭೂರುಹಾಃ ॥ ೬ ॥**

ಆಗ ಪ್ರಜೆಗಳ ಸಂತೋಷವು ವೃದ್ಧಿಹೊಂದಿತು. ದೇವತೆಗಳು ಆಶ್ಚರ್ಯವನ್ನು ಹೊಂದಿದರು. ಕಲ್ಪವೃಕ್ಷಗಳು ಬಾಡದಿರುವ ಪುಷ್ಪಗಳನ್ನು ಬಹಳವಾಗಿ ಬಿಟ್ಟುವು. ಸುರಿದುವೆಂದರ್ಥವು.

**[೮]ಅನಾಹತಾಃ ಪೃಥುಧ್ವಾನಾ ದಧ್ವನುರ್ದಿವಿಜಾನಕಾಃ ।**
**ಮೃದುಃ ಸುಗಂಧಿಃ ಶಿಶಿರೋ ಮರುನ್ಮಂದಂ ತದಾ ವವೌ ॥ ೭ ॥**

ಆಗ ಗಟ್ಟಿಯಾದ ಶಬ್ದವುಳ್ಳ ದೇವದುಂದುಭಿಗಳು ತಾವೇ ಶಬ್ದಮಾಡಿದುವು. ಕೋಮಲವೂ ಪರಿಮಳವೂ ಶೀತಳವೂ ಆದ ಗಾಳಿಯು ಮೆಲ್ಲನೆ ಬೀಸಿತು.

**ಪ್ರಚಚಾಲ ಮಹೀ ತೋಷಾತ್ ನೃತ್ಯಂತೀವ ಚಲದ್ಗಿರಿಃ ।**
**ಉದ್ವೇಲೋ ಜಲಧಿರ್ನೂನಮಗಮತ್ಪ್ರಮದಂ ಪರಮ್ ॥ ೮ ॥**

೧ ವೇಷ್ಟಿತಾ. ೨ ಪೂರ್ವದಿಕ್. ೩ ರವಿಂ. ೪ ಕೃಷ್ಣೇ. ೫ ಉತ್ತರಾಷಾಢನಕ್ಷತ್ರೇ. ೬ ಪ್ರಸನ್ನತಾಂ. ೭ ಗತಾಃ. ೮ ಆತಾಡಿತಾಃ.

ಭೂಮಿಯು ಸಂತೋಷದಿಂದ ನರ್ತನವನ್ನು ಮಾಡುತ್ತಿದೆಯೋ ಎಂಬಂತೆ ಪರ್ವತಗಳು ಸಹಿತವಾಗಿ ಕಂಪಿಸಿತು. ಸಮುದ್ರಕ್ಕೆ ಬಹಳ ಹರ್ಷವುಂಟಾಗಿ ದಡವನ್ನು ಮೀರಿತು.

**ತತೋಽಬುದ್ಧ ಸುರಾಧೀಶಃ ಸಿಂಹಾಸನವಿಕಂಪನಾತ್ ।**
**ಪ್ರಯುಕ್ತಾವಧಿ[೧]ರುದ್ಭೂತಿಂ ಜಿನಸ್ಯ [೨]ವಿಜಿತೈನಸಃ ॥ ೯ ॥**

ತರುವಾಯ ದೇವೇಂದ್ರನು ತನ್ನ ಸಿಂಹಾಸನವು ಕಂಪಿಸಿದುದರಿಂದ ಅವಧಿ ಜ್ಞಾನವನ್ನು ಪ್ರಯೋಗಿಸಿ ಕರ್ಮವನ್ನು ಜಯಿಸಿದ ವೃಷಭಜಿನೇಶ್ವರರ ಉತ್ಪತ್ತಿ ಯನ್ನು ತಿಳಿದನು.

**ತತೋ ಜನ್ಮಾಭಿಷೇಕಾಯ ಮತಿಂ ಚಕ್ರೇ ಶತಕ್ರತುಃ ।**
**ತೀರ್ಥಕೃದ್ಭಾವಿಭವ್ಯಾಬ್ಜಬಂಧೌ [೩]ತಸ್ಮಿನ್ನುದೇಯುಷಿ ॥ ೧೦ ॥**

ಮುಂದೆ ಭವ್ಯರೆಂಬ ಕಮಲಗಳಿಗೆ ಸೂರ್ಯನಾಗುವ ಆ ತೀರ್ಥಂಕರರು ಉದಯಿಸಿದ ತರುವಾಯ ದೇವೇಂದ್ರನು ಸ್ವಾಮಿಗೆ ಜನ್ಮಾಭಿಷೇಕವನ್ನು ಮಾಡು ವುದಕ್ಕೆ ಮನಸ್ಸುಮಾಡಿದನು.

**ತದಾಸನಾನಿ ದೇವಾನಾ[೪]ಮಕಸ್ಮಾತ್ಪ್ರಚಕಂಪಿರೇ ।**
**ದೇವಾನುಚ್ಚಾಸನೇಭ್ಯೋಽಧಃ ಪಾತಯಂತೀವ ಸಂಭ್ರಮಾತ್ ॥ ೧೧ ॥**

ಆ ಸ್ವಾಮಿಯ ಜನನಕಾಲದಲ್ಲಿ ಉನ್ನತವಾದ ಆಸನಗಳಿಂದ ದೇವತೆಗಳನ್ನು ಸಂಭ್ರಮದಿಂದ ಕೆಳಗೆ ತಳ್ಳುತ್ತವೆಯೋ ಎಂಬಂತೆ ದೇವತೆಗಳ ಆಸನಗಳು ಆಕಸ್ಮಿಕವಾಗಿ ಕಂಪಿಸಿದುವು.

**ಶಿರಾಂಸಿ ಪ್ರಚಲನ್ಮೌಲಿಮಣೀನಿ ಪ್ರಣತಿಂ ದಧುಃ ।**
**ಸುರಾಸುರಗುರೋರ್ಜನ್ಮ ಭಾವಯಂತೀವ ವಿಸ್ಮಯಾತ್ ॥ ೧೨ ॥**

ಆ ದೇವತೆಗಳ ರತ್ನಖಚಿತವಾದ ಮತ್ತು ಚಲಿಸುತ್ತಿರುವ ಕಿರೀಟಗಳುಳ್ಳ ಮಸ್ತಕಗಳು ಆಶ್ಚರ್ಯದಿಂದ ದೇವಾಧಿದೇವನಾದ ಸ್ವಾಮಿಯ ಜನ್ಮವನ್ನು ಭಾವನೆ ಮಾಡುತ್ತವೆಯೋ ಎಂಬಂತೆ ನಮಸ್ಕಾರವನ್ನು ಮಾಡಿದುವು.

**ಘಂಟಾ[೫]ಕಂಠೀರವಧ್ವಾನಭೇರೀಶಂಖಾಃ ಪ್ರದಧ್ವನುಃ ।**
**ಕಲ್ಪೇಶಜ್ಯೋತಿಷಾಂ [೬]ವನ್ಯಭಾವನಾನಾಂ ಚ ವೇಶ್ಮಸು ॥ ೧೩ ॥**

ಕಲ್ಪವಾಸಿದೇವತೆಗಳ ವಿಮಾನಗಳಲ್ಲಿ ಘಂಟೆಯ ಶಬ್ದವಾಯಿತು. ಜ್ಯೋತಿ ರ್ದೇವತೆಗಳ ವಿಮಾನಗಳಲ್ಲಿ ಸಿಂಹನಾದ(ವಾದ್ಯವಿಶೇಷ)ವಾಯಿತು. ವ್ಯಂತರ ದೇವತೆಗಳ ವಾಸಗೃಹಗಳಲ್ಲಿ ಭೇರಿಯ ಶಬ್ದವಾಯಿತು. ಭವನವಾಸಿದೇವತೆಗಳ ಭವನಗಳಲ್ಲಿ ಶಂಖಧ್ವನಿಯಾಯಿತು. ಸ್ವಾಮಿಯ ಪುಣ್ಯವಿಶೇಷದಿಂದ ಈ ಜಡ ಪದಾರ್ಥಗಳೂ ಶಬ್ದಮಾಡಿದುವೆಂದರ್ಥವು.

**ತೇಷಾಮುದ್ಭಿನ್ನವೇಲಾನಾಮಬ್ಧೀನಾಮಿವ ನಿಸ್ವನಮ್ ।**
**ಶ್ರುತ್ವಾ ಬುಬುಧಿರೇ ಜನ್ಮ ವಿಬುಧಾ ಭುವನೇಶಿನಃ ॥ ೧೪ ॥**

ದಡವನ್ನು ಮೀರಿದ ಸಮುದ್ರಗಳ ಶಬ್ದದಂತಿರುವ ಆ ಘಂಟೆಮೊದಲಾದ ವಾದ್ಯಗಳ ಶಬ್ದವನ್ನು ಕೇಳಿ ದೇವತೆಗಳು ಲೋಕಾಧಿಪತಿಯಾದ ಸ್ವಾಮಿಯ ಜನ್ಮವನ್ನು ತಿಳಿದರು.

೧ ಉತ್ಪತ್ತಿಂ. ೨ ವಿಜಿತಕರ್ಮಣಃ. ೩ ಕುಮಾರೇ. ೪ ಆಕಸ್ಮಿಕಾತ್. ೫ ಸಿಂಹನಾದ ಇತಿ ವಾದ್ಯವಿಶೇಷಃ. ೬ ವ್ಯಂತರಾಃ.

**ತತಃ ಶಕ್ರಾಜ್ಞಯಾ ದೇವಪೃತನಾ ನಿರ್ಯಯುರ್ದಿವಃ ।**
**ತಾರತಮ್ಯೇನ ಸಧ್ವಾನಾ ಮಹಾಬ್ಧೇರಿವ ವೀಚಯಃ ॥ ೧೫ ॥**

ತರುವಾಯ ದೇವೇಂದ್ರನ ಆಜ್ಞೆಯಿಂದ ದೇವಸೈನ್ಯಗಳು, ದೊಡ್ಡಸಮುದ್ರದ ತೆರೆಮಾಲೆಗಳಂತೆ, ತರತಮಭಾವದಿಂದ ಶಬ್ದವನ್ನು ಮಾಡುತ್ತ ಸ್ವರ್ಗದಿಂದ ಹೊರಟುವು.

**ಹಸ್ತ್ಯಶ್ವರಥಗಂಧರ್ವನರ್ತಕೀಪತ್ತಯೋ ವೃಷಾಃ ।**
**ಇತ್ಯಮೂನಿ ಸುರೇಂದ್ರಾಣಾಂ ಮಹಾನೀಕಾನಿ ನಿರ್ಯಯುಃ ॥ ೧೬ ॥**

ದೇವೇಂದ್ರರ ಆನೆ ಕುದುರೆ ರಥ ಗಂಧರ್ವ ನರ್ತನಸ್ತ್ರೀ ಕಾಲಾಳು ವೃಷಭ ಈ ಮಹಾಸೈನ್ಯಗಳು ಹೊರಟುವು.

**ಅಥ ಸೌಧರ್ಮಕಲ್ಪೇಶೋ ಮಹೈರಾವತದಂತಿನಮ್ ।**
**ಸಮಾರುಹ್ಯ ಸಮಂ ಶಚ್ಯಾ ಪ್ರತಸ್ಥೇ ವಿಬುಧೈರ್ವೃತಃ ॥ ೧೭ ॥**

ತರುವಾಯ ಸೌಧರ್ಮಕಲ್ಪದ ಇಂದ್ರನು ಶಚೀದೇವಿಯೊಡನೆ ಐರಾವತಗಜವನ್ನೇರಿ ದೇವತೆಗಳಿಂದ ಸುತ್ತಲ್ಪಟ್ಟವನಾಗಿ ಹೊರಟನು.

**ತತಃ ಸಾಮಾನಿಕತ್ರಾಯಸ್ತ್ರಿಂಶತ್ಪಾರಿಷದಾಮರಾಃ ।**
**ಆತ್ಮರಕ್ಷೈಃ ಸಮಂ ಲೋಕಪಾಲಾಸ್ತಂ ಪರಿವವ್ರಿರೇ ॥ ೧೮ ॥**

ಆಮೇಲೆ ಸಾಮಾನಿಕದೇವತೆಗಳೂ ತ್ರಾಯಸ್ತ್ರಿಂಶದ್ದೇವತೆಗಳೂ ಪಾರಿಷದ ದೇವತೆಗಳೂ ಆತ್ಮರಕ್ಷದೇವತೆಗಳೂ ಲೋಕಪಾಲದೇವತೆಗಳೂ ಆ ಸೌಧರ್ಮೇಂದ್ರನನ್ನು ಸುತ್ತಿಕೊಂಡರು.

**ದುಂದುಭೀನಾಂ ಮಹಾಧ್ವಾನೈಃ ಸುರಾಣಾಂ ಜಯಘೋಷಣೈಃ ।**
**ಮಹಾನಭೂತ್ತದಾಧ್ವಾನಃ ಸುರಾನೀಕೇಷು ವಿಸ್ಫುರನ್ ॥ ೧೯ ॥**

ಆಗ ಭೇರಿಗಳ ಮಹಾಶಬ್ದಗಳಿಂದಲೂ ದೇವತೆಗಳ ಜಯಘೋಷಣೆಗಳಿಂದಲೂ ದೇವಸೈನ್ಯಗಳಲ್ಲಿ ಅಧಿಕವಾದ ಶಬ್ದವುಂಟಾಯಿತು.

**ಹಸಂತಿ ಕೇಚಿನ್ನೃತ್ಯಂತಿ ವಲ್ಗಂತ್ಯಾಸ್ಫೋಟಯಂತ್ಯಪಿ ।**
**ಪುರೋ ಧಾವಂತಿ ಗಾಯಂತಿ ಸುರಾಸ್ತತ್ರ ಪ್ರಮೋದಿನಃ ॥ ೨೦ ॥**

ಆ ಸೈನ್ಯದಲ್ಲಿ ಕೆಲವು ದೇವತೆಗಳು ಸಂತೋಷದಿಂದ ನಗುತ್ತಿದ್ದರು. ಕೆಲವು ದೇವತೆಗಳು ನರ್ತನವನ್ನು ಮಾಡುತ್ತಿದ್ದರು. ಕೆಲವು ದೇವತೆಗಳು ಹಾವ ಭಾವಗಳನ್ನು ತೋರಿಸುತ್ತಿದ್ದರು. ಕೆಲವರು ಭುಜಮೊದಲಾದುವುಗಳ ಶಬ್ದವನ್ನು ಮಾಡುತ್ತಿದ್ದರು. ಕೆಲವರು ಮುಂದೆ ಓಡುತ್ತಿದ್ದರು. ಕೆಲವರು ಗಾನ ಮಾಡುತ್ತಿದ್ದರು.

**ನಭೋಂಗಣಂ ತತಃ ಕೃತ್ಸ್ನಮಾರುದ್ಧ್ಯ ತ್ರಿದಶಾಧಿಪಾಃ ।**
**ಸ್ವೈಃ ಸ್ವೈರ್ವಿಮಾನೈರಾಜಗ್ಮುರ್ವಾಹನೈಶ್ಚ [1]ಪೃಥಗ್ವಿಧೈಃ ॥ ೨೧ ॥**

ತರುವಾಯ ಆಕಾಶಪ್ರದೇಶವನ್ನೆಲ್ಲ ತಡೆದು (ವ್ಯಾಪಿಸಿ) ಶ್ರೇಷ್ಠರಾದ ದೇವತೆಗಳು ತಮ್ಮತಮ್ಮ ವಿಮಾನಗಳಿಂದಲೂ ನಾನಾವಿಧವಾದ ವಾಹನಗಳಿಂದಲೂ ಬಂದರು.

**ತೇಷಾ[2]ಮಾಪತತಾಂ [3]ಯಾನವಿಮಾನೈ[4]ರಾತತಂ ನಭಃ ।**
**ತ್ರಿಷಷ್ಟಿಪಟಲೇಭ್ಯೋಽನ್ಯತ್ಸ್ವರ್ಗಾಂತರಮಿವಾಸೃಜತ್ ॥ ೨೨ ॥**

ಹೀಗೆ ಬರುತ್ತಿರುವ ಆ ದೇವತೆಗಳ ವಾಹನಗಳಿಂದಲೂ ವಿಮಾನಗಳಿಂದಲೂ ವ್ಯಾಪ್ತವಾದ ಆಕಾಶವು ಅರುವತ್ತಮೂರು ಪಟಲಗಳು ಹೊರತು ಬೇರೊಂದು ಸ್ವರ್ಗವನ್ನು ಸೃಷ್ಟಿಸಿತೋ ಎಂಬಂತಿದ್ದಿತು.

೧ ನಾನಾವಿಧೈಃ. ೨ ಆಗಚ್ಛತಾಂ. ೩ ವಾಹನಂ. ೪ ವ್ಯಾಪ್ತಂ.

**ನಭಃಸರಸಿ ನಾಕೀಂದ್ರದೇಹೋದ್ಯೋತಾಚ್ಛವಾರಿಣಿ ।**
**ಸ್ಮೇರಾಣ್ಯಪ್ಸರಸಾಂ ವಕ್ತ್ರಾಣ್ಯಾತೇನುಃ ಪಂಕಜಶ್ರಿಯಮ್ ॥ ೨೩ ॥**

ದೇವೇಂದ್ರರ ಶರೀರಕಾಂತಿಯೆಂಬ ಸ್ವಚ್ಛವಾದ ನೀರುಳ್ಳ ಆಕಾಶವೆಂಬ ಸರೋವರದಲ್ಲಿ ಅಪ್ಸರಸ್ತ್ರೀಯರ ನಗುಮುಖಗಳು ಕಮಲಗಳಂತೆ ಶೋಭಿಸಿದುವು.

**ನಭೋಂಬುಧೌ ಸುರಾಧೀಶಪೃತನಾಚಲವೀಚಿಕೇ ।**
**ಮಕರಾ ಇವ ಸಂರೇಜು[1]ರುತ್ಕರಾಃ ಸುರವಾರಣಾಃ ॥ ೨೪ ॥**

ದೇವೇಂದ್ರರ ಸೈನ್ಯಗಳೆಂಬ ಚಂಚಲವಾದ ಅಲೆಗಳುಳ್ಳ ಆಕಾಶವೆಂಬ ಸಮುದ್ರದಲ್ಲಿ ತಮ್ಮ ಸೊಂಡಲುಗಳನ್ನು ಮೇಲಕ್ಕೆತ್ತಿಕೊಂಡಿರುವ ದೇವಗಜಗಳು ಮೊಸಳೆಗಳಂತೆ ಶೋಭಿಸುತ್ತಿದ್ದುವು.

**ಕ್ರಮಾದಥ ಸುರಾನೀಕಾನ್ಯಂಬರಾದವಾರಾದ್ಭುವಮ್ ।**
**ಅವತೀರ್ಯ ಪುರೀಂ ಪ್ರಾಪುರಯೋಧ್ಯಾಂ ಪರಮರ್ದ್ಧಿಕಾಮ್ ॥ ೨೫ ॥**

ಅನಂತರ ಕ್ರಮದಿಂದ ದೇವತೆಗಳ ಸೈನ್ಯಗಳು ಆಕಾಶದಿಂದ ಶೀಘ್ರವಾಗಿ ಭೂಮಿಗಿಳಿದು ಮಹಾವೈಭವದಿಂದ ಕೂಡಿರುವ ಅಯೋಧ್ಯಾಪಟ್ಟಣವನ್ನು ಹೊಂದಿದುವು.

**ತತ್ಪುರಂ ವಿಷ್ವಗಾವೇಷ್ಟ್ಯ ತದಾಸ್ಥುಃ ಸುರಸೈನಿಕಾಃ ।**
**ರಾಜಾಂಗಣಂ ಚ ಸಂರುದ್ಧಮಭೂದಿಂದ್ರೈರ್ಮಹೋತ್ಸವೈಃ ॥ ೨೬ ॥**

ಆಗ ದೇವಸೈನ್ಯಗಳು ಆ ಪಟ್ಟಣವನ್ನೆಲ್ಲ ಮುತ್ತಿಕೊಂಡುವು. ರಾಜಾಂಗಣವು ಅಧಿಕವಾದ ಉತ್ಸವಗಳೊಡನೆ ಬಂದ ದೇವೇಂದ್ರರಿಂದ ತುಂಬಿತು.

**ಪ್ರಸವಾಗಾರಮಿಂದ್ರಾಣೀ ತತಃ ಪ್ರಾವಿಶದುತ್ಸವಾತ್ ।**
**ತತ್ರಾಪಶ್ಯತ್ಕುಮಾರೇಣ ಸಾರ್ದ್ಧಂ ತಾಂ ಜಿನಮಾತರಮ್ ॥ ೨೭ ॥**

ತರುವಾಯ ಇಂದ್ರಾಣಿ(ಶಚಿ)ಯು ಆನಂದದಿಂದ ಪ್ರಸೂತಿಗೃಹ(ಹೆರಿಗೆಯ ಮನೆ)ವನ್ನು ಪ್ರವೇಶಿಸಿ ಅಲ್ಲಿ ಜಿನಮಾತೃವಾದ ಮರುದೇವಿಯನ್ನೂ ಶಿಶುವನ್ನೂ ಕಂಡಳು.

**ಜಿನಮಾತಾ ತದಾ ಶಚ್ಯಾ ದೃಷ್ಟಾ ಸಾ ಸಾನುರಾಗಯಾ ।**
**ಸಂಧ್ಯಯೇವ [2]ಹರಿತ್ಪ್ರಾಚೀ ಸಂಗತಾ ಬಾಲಭಾನುನಾ ॥ ೨೮ ॥**

ಆಗ ಬಾಲಸೂರ್ಯನೊಡನೆ ಕೂಡಿಕೊಂಡಿರುವ ಸಂಧ್ಯೆಯು ಪೂರ್ವದಿಕ್ಕನ್ನು ನೋಡುವಂತೆ ಅನುರಾಗವುಳ್ಳ ಶಚೀದೇವಿಯು ಜಿನಮಾತೃವಾದ ಮರುದೇವಿಯನ್ನು ನೋಡಿದಳು.

**ಮುಹುಃ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಚ ಜಗದ್ಗುರುಮ್ ।**
**ಜಿನಮಾತುಃ ಪುರಃ ಸ್ಥಿತ್ವಾ [3]ಶ್ಲಾಘತೇಸ್ಮೇತಿ ತಾಂ ಶಚೀ ॥ ೨೯ ॥**

ಶಚೀದೇವಿಯು ಬಾರಿಬಾರಿಗೂ ಪ್ರದಕ್ಷಿಣೆಯನ್ನು ಮಾಡಿ ಲೋಕಾಧಿಪತಿಯಾದ ಸ್ವಾಮಿಯನ್ನು ನಮಸ್ಕರಿಸಿ, ಜಿನಮಾತೃವಿನ ಮುಂದೆ ನಿಂತು ಮುಂದೆ ಹೇಳುವರೀತಿಯಾಗಿ ಆ ಜಿನಮಾತೃವನ್ನು ಸ್ತೋತ್ರಮಾಡಿದಳು.

**ತ್ವಮಂಬ ಭುವನಾಂಬಾಸಿ ಕಲ್ಯಾಣೀ ತ್ವಂ ಸುಮಂಗಲಾ ।**
**ಮಹಾದೇವೀ ತ್ವಮೇವಾದ್ಯ ತ್ವಂ ಸಪುಣ್ಯಾ ಯಶಸ್ವಿನೀ ॥ ೩೦ ॥**

"ಎಲೈ ತಾಯಿಯೇ! ಲೋಕಾಧಿಪತಿಯಾದ ಪುತ್ರನನ್ನು ಪಡೆದುದರಿಂದ ನೀನು ಲೋಕಕ್ಕೆಲ್ಲ ತಾಯಿಯಾಗಿರುತ್ತಿ. ಈಗ ನೀನು ಮಂಗಳಸ್ವರೂಪಳೂ ಲೋಕಕ್ಕೆ ಮಂಗಳವನ್ನುಂಟುಮಾಡುವವಳೂ ಮಹಾದೇವಿಯೂ ಪುಣ್ಯಶಾಲಿನಿಯೂ ಯಶಸ್ಸುಳ್ಳವಳೂ ಆಗಿರುತ್ತಿ".

೧ ಉದ್ಧೃತಕರಾಃ. ೨ ದಿಕ್. ೩ ಸ್ತೌತಿ ಸ್ಮ.

**ಇತ್ಯಭಿಷ್ಟುತ್ಯ ಗೂಢಾಂಗೀ ತಾಂ ಮಾಯಾನಿದ್ರಯಾಯುಜತ್ ।**
**ಪುರೋ ನಿಧಾಯ ಸಾ ತಸ್ಯಾ ಮಾಯಾಶಿಶುಮಥಾಪರಮ್ ॥ ೩೧ ॥**

**ಜಗದ್ಗುರುಂ [1]ಸಮಾದಾಯ ಕರಾಭ್ಯಾಂ ಸಾಗಮನ್ಮುದಮ್ ।**
**ಚೂಡಾಮಣಿಮಿವೋತ್ಸರ್ಪತ್ತೇಜಸಾ ವ್ಯಾಪ್ತವಿಷ್ಟಪಮ್ ॥ ೩೨ ॥**

ಗುಪ್ತರೀತಿಯಿಂದ ಪ್ರವೇಶಮಾಡಿದ ಆ ಶಚೀದೇವಿಯು ಹೀಗೆ ಸ್ತೋತ್ರಮಾಡಿ ಮರುದೇವಿಗೆ ಮಾಯಾನಿದ್ರೆಯನ್ನುಂಟುಮಾಡಿದಳು. ತರುವಾಯ ಅವಳ ಮುಂದೆ ಬೇರೊಂದು ಮಾಯಾಶಿಶುವನ್ನಿರಿಸಿ, ಪಸರಿಸುತ್ತಿರುವ ತೇಜಸ್ಸಿನಿಂದ ಲೋಕವನ್ನು ವ್ಯಾಪಿಸುವ ಚೂಡಾರತ್ನವನ್ನೋಪಾದಿಯಲ್ಲಿ, ಜಗದ್ಗುರು(ಶಿಶು)ವನ್ನು ತನ್ನ ಕೈಗಳಿಂದ ತೆಗೆದುಕೊಂಡು ಶಚೀದೇವಿಯು ಬಹಳ ಸಂತೋಷಪಟ್ಟಳು.

**ತದ್ಗಾತ್ರಸ್ಪರ್ಶ[2]ಮಾಸಾದ್ಯ ಸುದುರ್ಲಭಮಸೌ ತದಾ ।**
**ಮೇನೇ ತ್ರಿಭುವನೈಶ್ವರ್ಯಂ [3]ಸ್ವಸಾತ್ಕೃತಮಿವಾಖಿಲಮ್ ॥ ೩೩ ॥**

ಈಗ ಈ ಶಚೀದೇವಿಯು ಪಡೆಯಲಸದಳವಾದ ಆ ಜಿನಬಾಲಕನ ಶರೀರ ಸ್ಪರ್ಶವನ್ನು ಹೊಂದಿ, ಮೂರುಲೋಕದ ಐಶ್ವರ್ಯವನ್ನೆಲ್ಲ ತನ್ನ ಅಧೀನವನ್ನಾಗಿ ಮಾಡಿಕೊಂಡಂತೆ ತಿಳಿದಳು.

**ಮುಹುಸ್ತನ್ಮುಖಮಾಲೋಕ್ಯ ಸ್ಪೃಷ್ಟ್ವಾಽಽಘ್ರಾಯ ಚ ತದ್ವಪುಃ ।**
**ಪರಾಂ ಪ್ರೀತಿಮಸೌ ಭೇಜೇ ಹರ್ಷವಿಸ್ಫಾರಿತೇಕ್ಷಣಾ ॥ ೩೪ ॥**

ಹರ್ಷದಿಂದ ವಿಕಸಿತವಾದ ನೇತ್ರಗಳುಳ್ಳ ಈ ಶಚೀದೇವಿಯು ಬಾರಿಬಾರಿಗೂ ಆ ಜಿನಬಾಲಕನ ಮುಖವನ್ನು ನೋಡಿ ಆ ಮಗುವಿನ ಶರೀರವನ್ನು ಮುಟ್ಟಿ ಆಘ್ರಾಣವನ್ನು ಮಾಡಿ (ಮೂಸಿನೋಡಿ) ಬಹಳವಾಗಿ ಪ್ರೀತಿಪಟ್ಟಳು.

**ತತಃ ಕುಮಾರಮಾದಾಯ ವ್ರಜಂತೀ ಸಾ ಬಭೌ ಭೃಶಮ್ ।**
**ದ್ಯೌರಿವಾರ್ಕಮಭಿವ್ಯಾಪ್ತನಭಸಂ ಭಾಸುರಾಂಶುಭಿಃ ॥ ೩೫ ॥**

ಆಮೇಲೆ ಬಾಲಕನನ್ನು ತೆಗೆದುಕೊಂಡು ಹೋಗುತ್ತಿರುವ ಆ ಶಚೀದೇವಿಯು, ತನ್ನ ದೇದೀಪ್ಯಮಾನವಾದ ಕಿರಣಗಳಿಂದ ಆಕಾಶವನ್ನು ವ್ಯಾಪಿಸಿರುವ ಸೂರ್ಯನನ್ನು ತೆಗೆದುಕೊಂಡು ಹೋಗುವ ಸ್ವರ್ಗವೋ ಎಂಬಂತೆ, ಬಹಳವಾಗಿ ಶೋಭಿಸಿದಳು.

**ತದಾ ಮಂಗಲಧಾರಿಣ್ಯೋ ದಿಕ್ಕುಮಾರ್ಯಃ ಪುರೋ ಯಯುಃ ।**
**ತ್ರಿಜಗನ್ಮಂಗಲಸ್ಯಾಸ್ಯ ಸಮೃದ್ಧಯ ಇವೋ[4]ಚ್ಛಿಖಾಃ ॥ ೩೬ ॥**

ಆಗ ಮಂಗಲದ್ರವ್ಯಗಳನ್ನು ಹಿಡಿದುಕೊಂಡಿರುವ ದಿಕ್ಕುಮಾರಿಯರು ಮೂರು ಲೋಕಕ್ಕೆ ಮಂಗಲಸ್ವರೂಪನಾದ ಈ ಜಿನಬಾಲಕನ ಉನ್ನತವಾದ ಸಮೃದ್ಧಿಗಳೋ ಎಂಬಂತೆ ಮುಂದೆ ಹೋಗುತ್ತಿದ್ದರು.

**ಛತ್ರಂ ಧ್ವಜಂ ಸಕಲಶಂ ಚಾಮರಂ ಸುಪ್ರತಿಷ್ಠಕಮ್ ।**
**ಭೃಂಗಾರಂ ದರ್ಪಣಂ [5]ತಾಲಮಿತ್ಯಾಹುರ್ಮಂಗಲಾಷ್ಟಕಮ್ ॥ ೩೭ ॥**

ಛತ್ರ ಧ್ವಜ ಕಲಶ ಚಾಮರ ಸುಪ್ರತಿಷ್ಠಕ (ಪೂಜಾದ್ರವ್ಯಗಳನ್ನಿರಿಸುವ ಪಾತ್ರವಿಶೇಷ) ಗಿಂಡಿ ಕನ್ನಡಿ ಬೀಸಣಿಗೆ ಈ ಎಂಟುಪದಾರ್ಥಗಳು ಮಂಗಲಗಳೆಂದು ಹೇಳುತ್ತಾರೆ.

**ಸ ತದಾ ಮಂಗಲಾನಾಂ ಚ ಮಂಗಲತ್ವಂ ಪರಂ ವಹನ್ ।**
**ಸ್ವದೀಪ್ತ್ಯಾ [6]ದೀಪಿಕಾಲೋಕಾ[7]ನರುಣತ್ತರುಣಾಂಶುಮಾನ್ ॥ ೩೮ ॥**

೧ ಸಮಾಧಾಯೇತ್ಯಪಿ ಪಾಠಃ. ೨ ಪ್ರಾಪ್ಯ. ೩ ಸ್ವಾಧೀನಂ. ೪ ಉನ್ನತಾಃ. ೫ ತಾಲವೃಂತಕಂ. ೬ ದೀಪಪ್ರಕಾಶಾನ್. ೭ ಛಾದಯತಿ ಸ್ಮ.

ಆಗ ಆ ಮಂಗಲದ್ರವ್ಯಗಳಿಗೂ ಮಂಗಲತ್ವವನ್ನುಂಟುಮಾಡುವ ಆ ಜಿನ ಬಾಲಕನು ಬಾಲಸೂರ್ಯನಂತೆ, ತನ್ನ ಶರೀರಕಾಂತಿಯಿಂದ ದೀಪಪ್ರಕಾಶಗಳನ್ನು ಕಡಿಮೆಮಾಡಿದನು. ಶರೀರಕಾಂತಿಯಿಂದ ದೀಪಪ್ರಕಾಶವು ಮಂದವಾಯಿತೆಂದು ಭಾವವು.

**ತತಃ ಕರತಲೇ ದೇವೀ ದೇವರಾಜಸ್ಯ ತಂ ನ್ಯಧಾತ್ ।**
**ಬಾಲಾರ್ಕ[1]ಮೌದಯೇ ಸಾನೌ ಪ್ರಾಚೀವ ಪ್ರಸ್ಫುರನ್ಮಣೌ ॥ ೩೯ ॥**

ಆಮೇಲೆ ಪೂರ್ವದಿಕ್ಕು ಪ್ರಕಾಶಮಾನವಾದ ರತ್ನಗಳುಳ್ಳ ಉದಯಪರ್ವತದ ತಪ್ಪಲಿನಲ್ಲಿ ಬಾಲಸೂರ್ಯನನ್ನಿರಿಸುವಂತೆ, ಶಚೀದೇವಿಯು ದೇವೇಂದ್ರನ ಹಸ್ತದಲ್ಲಿ ಆ ಜಿನಬಾಲಕನನ್ನಿರಿಸಿದಳು.

**ಗೀರ್ವಾಣೇಂದ್ರಸ್ತಮಿಂದ್ರಾಣ್ಯಾಃ ಕರಾದಾದಾಯ ಸಾದರಮ್ ।**
**ವ್ಯಲೋಕಯತ್ತ್ವ ತದ್ರೂಪಂ ಸಂಪ್ರೀತಿಸ್ಫಾರಿತೇಕ್ಷಣಃ ॥ ೪೦ ॥**

ಆ ದೇವೇಂದ್ರನು ಶಚೀದೇವಿಯ ಕೈಯಿಂದ ಆದರಪೂರ್ವಕವಾಗಿ ಆ ಜಿನಬಾಲಕನನ್ನು ತೆಗೆದುಕೊಂಡು ಅತ್ಯಂತ ಪ್ರೀತಿಯಿಂದ ಕಣ್ಣುಗಳನ್ನು ತೆರೆದು ಆ ಬಾಲಕನ ರೂಪವನ್ನು ನೋಡಿದನು.

**ತ್ವಂ ದೇವ ಜಗತಾಂ ಜ್ಯೋತಿಸ್ತ್ವಂ ದೇವ ಜಗತಾಂ ಗುರುಃ ।**
**ತ್ವಂ ದೇವ ಜಗತಾಂ ಧಾತಾ ತ್ವಂ ದೇವ ಜಗತಾಂ ಪತಿಃ ॥ ೪೧ ॥**

ದೇವೇಂದ್ರನು ಮುಂದೆ ಹೇಳುವ ರೀತಿಯಾಗಿ ಸ್ತೋತ್ರವನ್ನು ಮಾಡಲಾರಂಭಿಸಿದನು– ''ಸ್ವಾಮಿಯೇ ! ನೀನು ಲೋಕಕ್ಕೆ ಜ್ಯೋತಿಃಸ್ವರೂಪನಾಗಿರುತ್ತಿ. ನೀನು ಲೋಕಕ್ಕೆ ಗುರುವಾಗಿರುತ್ತಿ. ನೀನೇ ಜಗದುದ್ಧಾರಕನಾಗಿರುತ್ತಿ. ನೀನೇ ಲೋಕಕ್ಕೆ ಪ್ರಭುವಾಗಿರುತ್ತಿ.

**ತ್ವಾ[2]ಮಾಮನಂತಿ ಸುಧಿಯಃ ಕೇವಲಜ್ಞಾನ[3]ಭಾಸ್ವತಃ ।**
**ಉದಯಾದ್ರಿಂ ಮುನೀಂದ್ರಾಣಾಮಭಿವಂದ್ಯಂ ಮಹೋನ್ನತಿಮ್ ॥ ೪೨ ॥**

ಮುನಿಶ್ರೇಷ್ಠರಿಗೆ ವಂದಿಸುವುದಕ್ಕೆ ಯೋಗ್ಯನೂ ಅತ್ಯಂತ ಉನ್ನತನೂ ಆದ ನಿನ್ನನ್ನು ವಿದ್ವಾಂಸರು ಕೇವಲಜ್ಞಾನವೆಂಬ ಸೂರ್ಯನಿಗೆ ಉದಯಪರ್ವತವನ್ನಾಗಿ ಹೇಳುತ್ತಾರೆ.

**ತ್ವಯಾ ಜಗದಿದಂ ಮಿಥ್ಯಾಜ್ಞಾನಾಂಧತಮಸಾ ವೃತಮ್ ।**
**ಪ್ರಬೋಧಂ ನೇಷ್ಯತೇ ಭವ್ಯಕಮಲಾಕರಬಂಧುನಾ ॥ ೪೩ ॥**

ಭವ್ಯರೆಂಬ ಕಮಲಸರೋವರಗಳಿಗೆ ಸೂರ್ಯನಾದ ನೀನು ಮಿಥ್ಯಾಜ್ಞಾನವೆಂಬ ಗಾಢಾಂಧಕಾರದಿಂದ ಮುಚ್ಚಿಕೊಂಡಿರುವ ಈ ಲೋಕವನ್ನು ಎಚ್ಚರಗೊಳಿಸುವಿ (ಅಜ್ಞಾನವನ್ನು ಹೋಗಲಾಡಿಸುವಿ).

**ತುಭ್ಯಂ ನಮೋಧಿಗುರವೇ ನಮಸ್ತುಭ್ಯಂ ಮಹಾಧಿಯೇ ।**
**ತುಭ್ಯಂ ನಮೋಸ್ತು ಭವ್ಯಾಬ್ಜಬಂಧವೇ ಗುಣಸಿಂಧವೇ ॥ ೪೪ ॥**

ಸ್ವಾಮಿಯೇ ! ಶ್ರೇಷ್ಠಗುರುವಾದ ನಿನಗೆ ನಮಸ್ಕಾರವು. ಮಹಾಜ್ಞಾನಿಯಾದ ನಿನಗೆ ನಮಸ್ಕಾರವು. ಭವ್ಯರೆಂಬ ಕಮಲಗಳಿಗೆ ಸೂರ್ಯನೂ ಗುಣಗಳಿಗೆ ಸಮುದ್ರವೂ ಆದ ನಿನಗೆ ನಮಸ್ಕಾರವು.

**ತ್ವತ್ತಃ ಪ್ರಬೋಧಮಿಚ್ಛಂತಃ[4]ಪ್ರಬುದ್ಧಭುವನತ್ರಯಾತ್ ।**
**ತವ ಪಾದಾಂಬುಜಂ ದೇವ ಮೂರ್ಧ್ನಾ ದಧ್ಮೋ[5]ಧೃತಾದರಮ್ ॥**

ಸ್ವಾಮಿಯೇ ! ಮೂರುಲೋಕವನ್ನು ತಿಳಿದಿರುವ ನಿನ್ನಿಂದ ಉತ್ತಮಜ್ಞಾನವನ್ನು ಹೊಂದಬೇಕೆಂದು ಇಚ್ಛಿಸುವ ನಿನ್ನ ಪಾದಕಮಲವನ್ನು ಆದರಪೂರ್ವಕವಾಗಿ ಮಸ್ತಕದಿಂದ ಧರಿಸುತ್ತೇವೆ.

೧ ಉದಯಾದ್ರಿಸಂಬಂಧಿನಿ. ೨ ವದಂತಿ. ೩ ಸೂರ್ಯಸ್ಯ. ೪ ವಯಂ. ೫ ಯಥಾ ಭವತಿ ತಥಾ.

**ತ್ವಯಿ ಪ್ರಣಯಮಾಧತ್ತೇ ಮುಕ್ತಿಲಕ್ಷ್ಮೀಃ ಸಮುತ್ಸುಕಾ ।**
**ತ್ವಯಿ ಸರ್ವೇ ಗುಣಾಃ [೧]ಸ್ಫಾತಿಂ ಯಾಂತ್ಯಬ್ಧೌ ಮಣಯೋ ಯಥಾ ॥**

ಮೋಕ್ಷಲಕ್ಷ್ಮಿಯು ಅತ್ಯಂತ ಕುತೂಹಲದಿಂದ ನಿನ್ನನ್ನು ಪ್ರೀತಿಸುತ್ತಾಳೆ. ಸಮುದ್ರದಲ್ಲಿ ರತ್ನಗಳು ವೃದ್ಧಿಹೊಂದುವಂತೆ ನಿನ್ನಲ್ಲಿ ಸಮಸ್ತಗುಣಗಳೂ ವೃದ್ಧಿಯನ್ನು ಹೊಂದುತ್ತವೆ.

**ಸ್ತುತ್ವೇತಿ ಸ ತಮಾರೋಪ್ಯ ಸ್ವಮಂಕಂ ಸುರನಾಯಕಃ ।**
**ಹಸ್ತಮುಚ್ಚಾಲಯಾಮಾಸ ಮೇರುಪ್ರಸ್ಥಾನಸಂಭ್ರಮೀ ॥ ೪೭ ॥**

ಈ ಪ್ರಕಾರವಾಗಿ ಸ್ತೋತ್ರವನ್ನು ಮಾಡಿ ಆ ದೇವೇಂದ್ರನು ಜಿನಬಾಲಕನನ್ನು ತನ್ನ ತೊಡೆಯ ಮೇಲಿರಿಸಿ ಮಹಾಮೇರುಪರ್ವತಕ್ಕೆ ಪ್ರಯಾಣಮಾಡುವ ಸಂಭ್ರಮದಿಂದ ತನ್ನ ಕೈಯನ್ನು ಮೇಲಕ್ಕೆತ್ತಿದನು.

**ಜಯೇಶ ನಂದ ವರ್ಧಸ್ವ ತ್ವಮಿತ್ಯುಚ್ಚೈರ್ಗಿರಃ ಸುರಾಃ ।**
**ತದಾ ಕಲಕಲಂ ಚಕ್ರುರ್ಬಧಿರೀಕೃತದಿಙ್ಮುಖಮ್ ॥ ೪೮ ॥**

ಆಗ ''ಸ್ವಾಮಿಯೇ ! ನೀನು ಸರ್ವೋತ್ಕರ್ಷದಿಂದ ವರ್ತಿಸು. ಸಂತೋಷಿಸು. ವೃದ್ಧಿಯನ್ನು ಹೊಂದು '' ಈ ಪ್ರಕಾರವಾಗಿ ಗಟ್ಟಿಯಾಗಿ ಶಬ್ದಮಾಡುತ್ತಿರುವ ದೇವತೆಗಳ ಕಲಕಲಶಬ್ದವು ದಿಕ್ಕುಗಳನ್ನೆಲ್ಲ ವ್ಯಾಪಿಸಿತು.

**ನಭೋಂಗಣಮಥೋತ್ಪೇತುರುಚ್ಚರಜ್ಜಯಘೋಷಣಾಃ ।**
**ಸುರಚಾಪಾನಿ ತನ್ವಂತಃ ಪ್ರಸರದ್ಭೂಷಣಾಂಶುಭಿಃ ॥ ೪೯ ॥**

ಅನಂತರ ಜಯಘೋಷಣೆಯನ್ನುಚ್ಚರಿಸುತ್ತಿರುವವರೂ ಪಸರಿಸುತ್ತಿರುವ ತಮ್ಮ ಆಭರಣಗಳ ಕಿರಣಗಳಿಂದ ಇಂದ್ರಧನುಸ್ಸುಗಳನ್ನು ಮಾಡುವವರೂ ಆದ ದೇವತೆಗಳು ಆಕಾಶಪ್ರದೇಶಕ್ಕೆ ಹಾರಿಹೋದರು.

**ಗಂಧರ್ವಾರಬ್ಧಸಂಗೀತಾ ನೇಟುರಪ್ಸರಸಃ ಪುರಃ ।**
**ಭ್ರೂಪತಾಕಾಃ ಸಮುತ್ಕ್ಷಿಪ್ಯ ನಭೋರಂಗೇ ಚಲತ್ಕುಚಾಃ ॥ ೫೦ ॥**

ಗಂಧರ್ವದೇವತೆಗಳಿಂದ ಆರಂಭಿಸಲ್ಪಟ್ಟ ಸಂಗೀತವುಳ್ಳವರೂ ಚಲಿಸುತ್ತಿರುವ ಕುಚಗಳುಳ್ಳವರೂ ಆದ ಅಪ್ಸರಸ್ತ್ರೀಯರು ತಮ್ಮ ಹುಬ್ಬುಗಳೆಂಬ ಪತಾಕೆಗಳನ್ನು ಮೇಲಕ್ಕೆತ್ತಿ ಆಕಾಶವೆಂಬ ರಂಗಸ್ಥಳದ ಮುಂದೆ ನರ್ತನವನ್ನು ಮಾಡಿದರು.

**ಇತೋಮುತಃ ಸಮಾಕೀರ್ಣಂ ವಿಮಾನೈರ್ದ್ಯುಸದಾಂ ನಭಃ ।**
**ಸರತ್ನೈ[೨]ರುನ್ಮಿಷನ್ನೇತ್ರಮಿವ ರೇಜೇ ವಿನಿರ್ಮಲಮ್ ॥ ೫೧ ॥**

ಎಲ್ಲಾ ಕಡೆಗಳಲ್ಲಿಯೂ ದೇವತೆಗಳ ರತ್ನಖಚಿತವಾದ ವಿಮಾನಗಳಿಂದ ವ್ಯಾಪ್ತವಾದ ಆಕಾಶವು ಕಣ್ಣುಗಳನ್ನು ತೆರೆದಿರುವಂತೆ ನಿರ್ಮಲವಾಗಿ ಶೋಭಿಸಿತು.

**ಸಿತಾಃ ಪಯೋಧರಾ ನೀಲೈಃ ಕರೀಂದ್ರೈಃ ಸಿತಕೇತನೈಃ ।**
**ಸಬಲಾಕೈರ್ವಿನೀಲಾಭ್ರೈಃ ಸಂಗತಾ ಇವ ರೇಜಿರೇ ॥ ೫೨ ॥**

ಕಪ್ಪಾದ ದೊಡ್ಡ ಆನೆಗಳೊಡನೆಯೂ ಶುಭ್ರವಾದ ಧ್ವಜಪತಾಕೆಗಳೊಡನೆಯೂ ಕೂಡಿಕೊಂಡಿರುವ ಶುಭ್ರವಾದ ಮೇಘಗಳು, ಬೆಳ್ಳಕ್ಕಿಗಳೊಡನೆಯೂ ಕಪ್ಪಾದ ಮೇಘಗಳೊಡನೆಯೂ ಕೂಡಿಕೊಂಡಿರುವಂತೆ, ಪ್ರಕಾಶಿಸಿದುವು.

**ಮಹಾವಿಮಾನ[೩]ಸಂಘಟ್ಟೈಃ [೪]ಕ್ಷುಣ್ಣಾ ಜಲಧರಾಃ ಕ್ವಚಿತ್ ।**
**[೫]ಪ್ರಣೇಶುರ್ಮಹತಾಂ ರೋಧಾನ್ನಶ್ಯಂತ್ಯೇವ ಜಡಾತ್ಮಕಾಃ ॥ ೫೩ ॥**

ಕೆಲವು ಕಡೆಗಳಲ್ಲಿ ದೊಡ್ಡ ವಿಮಾನಗಳ ಸಂಘರ್ಷಣೆಗಳಿಂದ ಮೇಘಗಳು ಮರ್ದಿಸಲ್ಪಟ್ಟು ನಾಶವಾದುವು. ಇದು ನ್ಯಾಯವಾಗಿದೆ. ಜಡಾತ್ಮರು ಮಹಾತ್ಮರನ್ನು ತಡೆಯುವುದರಿಂದ ಅವಶ್ಯವಾಗಿ ನಾಶವನ್ನು ಹೊಂದುತ್ತಾರೆ. (ಡಕಾರ ಲಕಾರಗಳಿಗೆ ಅಭೇದವಿರುವುದರಿಂದ ಜಲಾತ್ಮರೆಂದೂ ಅರ್ಥವಾಗುವುದು).

೧ ವೃದ್ಧಿಂ. ೨ ವಿವೃತಚಕ್ಷುರಿವ. ೩ ಸಂಮರ್ದೈಃ. ೪ ಮರ್ದಿತಾಃ. ೫ ನಷ್ಟಾಃ.

**ಸುರೇಭಕಟದಾನಾಂಬುಗಂಧಾಕೃಷ್ಟಮಧುವ್ರತಾಃ ।**
**[೧]ವನಾಭೋಗಾನ್ ಜಹುರ್ಲೋಕಃ ಸತ್ಯಮೇಷ ನವಪ್ರಿಯಃ ॥ ೫೪ ॥**

ದೇವಗಜಗಳ ಕೆನ್ನೆಗಳಲ್ಲಿ ಸುರಿಯುತ್ತಿರುವ ಮದಜಲದ ಪರಿಮಳಕ್ಕೆ ಆಸಕ್ತವಾದ ಭ್ರಮರಗಳು ವಿಸ್ತಾರವಾದ ವನಗಳನ್ನು ಪರಿತ್ಯಜಿಸಿದುವು. ನಿಜ. ಈ ಲೋಕ(ಜನ)ವು ಹೊಸವಸ್ತುವಿನಲ್ಲಿ ಪ್ರೀತಿಯನ್ನು ಮಾಡುತ್ತದೆ. ಪ್ರಾಣಿಯು ಹಳೇಪದಾರ್ಥದಲ್ಲಿ ಪ್ರೀತಿಯನ್ನು ಬಿಟ್ಟು ನವೀನಪದಾರ್ಥದಲ್ಲಿ ಪ್ರೀತಿಯನ್ನು ಮಾಡುತ್ತದೆಂದು ಭಾವವು.

**ಅಂಗಭಾಭಿಃ ಸುರೇಂದ್ರಾಣಾಂ ತೇಜೋರ್ಕಸ್ಯ [೨]ಪರಾಹತಮ್ ।**
**[೩]ನಿಲಿಲ್ಯೇ ಕ್ವಾಪ್ಯವಿಜ್ಞಾತಂ ಲಜ್ಜಾಮಿವ ಪರಾಂ ಗತಮ್ ॥ ೫೫ ॥**

ದೇವೇಂದ್ರರ ಶರೀರಕಾಂತಿಗಳಿಂದ ತಿರಸ್ಕರಿಸಲ್ಪಟ್ಟ ಸೂರ್ಯನ ಕಾಂತಿಯು, ಬಹಳ ನಾಚಿಕೆಯನ್ನು ಹೊಂದಿರುವಂತೆ, ಎಲ್ಲಿಯೋ ಅಡಗಿಕೊಂಡಿತು.

**ದಿವಾಕರಕರಾ[೪]ಶ್ಲೇಷಂ [೫]ವಿಘಟಯ್ಯ ಸುರೇಶಿನಾಮ್ ।**
**ದೇಹೋ[೬]ದ್ಯೋತಾ ದಿಶೋ ಭೇಜುರ್ಭೋಗ್ಯಾ ಹಿ ಬಲಿನಾಂ ಸ್ತ್ರಿಯಃ ॥**

ದೇವತೆಗಳ ಶರೀರಕಾಂತಿಗಳು, ಸೂರ್ಯನ ಕರ(ಕಿರಣ)ಗಳ ಸಂಬಂಧವನ್ನು ಬಿಡಿಸಿ, ತಾವು ದಿಕ್ಕುಗಳನ್ನು ಹೊಂದಿದುವು. ನ್ಯಾಯವೇ. ಬಲಿಷ್ಠರಿಗಲ್ಲವೇ ಸ್ತ್ರೀಯರು ಭೋಗಿಸುವುದಕ್ಕೆ ಯೋಗ್ಯರು ?('ದಿಶ' ಎಂಬ ಶಬ್ದವು ಸ್ತ್ರೀಲಿಂಗವಾಗಿದೆ).

**ಸುರೇಭರದನೋದ್ಭೂತಸುರಾಂಬುಜದಲಾಶ್ರಿತಮ್ ।**
**ನೃತ್ತಮಪ್ಸರಸಾಂ ದೇವಾನಕರೋದ್ರಸಿಕಾನ್ಭೃಶಮ್ ॥ ೫೭ ॥**

ಐರಾವತಗಜದ ದಂತಗಳಲ್ಲಿ ಉಂಟಾದ ದೇವಕಮಲಗಳ ಎಸಳುಗಳಲ್ಲಿ ಅಪ್ಸರಸ್ತ್ರೀಯರು ಮಾಡುತ್ತಿರುವ ನರ್ತನವು ದೇವತೆಗಳಿಗೆ ಬಹಳ ಸಂತೋಷವನ್ನುಂಟುಮಾಡಿತು.

**ಶೃಣ್ವಂತಃ ಕಲಗೀತಾನಿ ಕಿನ್ನರಾಣಾಂ ಜಿನೇಶಿನಃ ।**
**ಗುಣೈರ್ವಿರಚಿತಾನ್ಯಾಪುರಮರಾಃ ಕರ್ಣಯೋಃ ಫಲಮ್ ॥ ೫೮ ॥**

ಜಿನೇಶ್ವರನ ನಿರ್ಮಲವಾದ ಗುಣಗಳನ್ನು ವರ್ಣಿಸುತ್ತಿರುವ ಕಿನ್ನರದೇವತೆಗಳ ಮನೋಹರವಾದ ಗಾನಗಳನ್ನು ಕೇಳಿ ದೇವತೆಗಳು ತಮ್ಮ ಕಿವಿಗಳ ಫಲವನ್ನು ಹೊಂದಿದರು. ಗಾನವನ್ನು ಕೇಳಿ ಶ್ರೋತ್ರೇಂದ್ರಿಯವು ಸಫಲವಾಯಿತೆಂದು ಭಾವವು.

**ವಪುರ್ಭಗವತೋ ದಿವ್ಯಂ ಪಶ್ಯಂತೋನಿಮಿಷೇಕ್ಷಣಾಃ ।**
**ನೇತ್ರಯೋರನಿಮೇಷಾ[೭]ಪ್ತೌ ಫಲಂ ಪ್ರಾಪುಸ್ತದಾಮರಾಃ ॥ ೫೯ ॥**

ಭಗವಂತನ ದಿವ್ಯರೂಪವನ್ನು ರೆಪ್ಪೆಮುಚ್ಚದಿರುವ ಕಣ್ಣುಗಳಿಂದ ನೋಡುತ್ತಿರುವ ದೇವತೆಗಳು ಆಗ ತಮ್ಮ ನೇತ್ರಗಳಿಗೆ ರೆಪ್ಪೆಮುಚ್ಚದಿರುವಿಕೆಯು ಪ್ರಾಪ್ತವಾದುದಕ್ಕೆ ಫಲವನ್ನು ಹೊಂದಿದರು. ರೆಪ್ಪೆಮುಚ್ಚದಿರುವಿಕೆಯ ಪ್ರಾಪ್ತಿಯು ಭಗವಂತನ ದಿವ್ಯರೂಪವನ್ನು ನೋಡುವುದಕ್ಕೆ ಅನುಕೂಲವಾಯಿತೆಂದು ಭಾವವು.

**ಸ್ವಾಂಕಾರೋಪಂ ಸಿತಚ್ಛತ್ರಧೃತಿಂ ಚಾಮರಧೂನನಮ್ ।**
**ಕುರ್ವಂತಃ ಸ್ವಯಮೇವೇಂದ್ರಾಃ ಪ್ರಾಹುರಸ್ಯ ಸ್ಮ ವೈಭವಮ್ ॥ ೬೦ ॥**

ಜಿನಬಾಲಕನನ್ನು ತೊಡೆಯ ಮೇಲೆ ಕುಳ್ಳಿರಿಸಿ ಕೊಂಡು ಶ್ವೇತಛತ್ರವನ್ನು ಹಿಡಿದು ಚಾಮರಗಳನ್ನು ಬೀಸುತ್ತಿರುವ ದೇವೇಂದ್ರರು ತಾವೇ ಈ ಜಿನಬಾಲಕನ ವೈಭವವನ್ನು ಪ್ರಕಟಪಡಿಸಿದರು.

೧ ವನವಿಸ್ತರಾನ್. ೨ ಪರಾಭೂತಂ. ೩ ನಿಲೀನಮಭೂತ್. ೪ ಆಲಿಂಗನಂ. ೫ ಮೋಚಯಿತ್ವಾ. ೬ ದೀಪ್ತಯಃ. ೭ ಪ್ರಾಪ್ತೌ.

**ಸೌಧರ್ಮಾಧಿಪತೇರಂಕಮಧ್ಯಾಸೀನಮಧೀಶಿನಮ್ ।**
**[೧]ಭೇಜೇ ಸಿತಾತಪತ್ರೇಣ ತದ್ವೈಶಾನಸುರೇಶ್ವರಃ ॥ ೬೧ ॥**

ಸೌಧರ್ಮಸ್ವರ್ಗಾಧಿಪತಿಯಾದ ಇಂದ್ರನ ತೊಡೆಯ ಮೇಲೆ ಕುಳಿತಿರುವ ಸ್ವಾಮಿಗೆ ಈಶಾನಸ್ವರ್ಗದ ಇಂದ್ರನು ಶ್ವೇತಚ್ಛತ್ರಿಯನ್ನು ಹಿಡಿದನು.

**ಸನತ್ಕುಮಾರಮಾಹೇಂದ್ರನಾಯಕೌ ಧರ್ಮನಾಯಕಮ್ ।**
**ಚಾಮರೈಸ್ತಂ ವ್ಯಧುನ್ವಾತಾಂ ಬಹು[೨]ಕ್ಷೀರಾಬ್ಧಿವೀಚಿಭಿಃ ॥ ೬೨ ॥**

ಸನತ್ಕುಮಾರಮಾಹೇಂದ್ರಸ್ವರ್ಗಗಳ ಇಂದ್ರರು ಧರ್ಮಕ್ಕೆ ಅಧಿಪತಿಯಾದ ಆ ಸ್ವಾಮಿಗೆ ಕ್ಷೀರಸಮುದ್ರದ ತೆರೆಮಾಲೆಗಳಂತೆ ಶುಭ್ರವಾದ ಚಾಮರಗಳನ್ನು ಬೀಸಿದರು.

**ದೃಷ್ಟ್ವಾ [೩]ತದಾತನೀಂ [೪]ಭೂತಿಂ ಕುದೃಷ್ಟಿ[೫]ಮರುತೋಪರೇ ।**
**ಸನ್ಮಾರ್ಗೇ ರುಚಿಮಾತೇನು[೬]ರಿಂದ್ರಪ್ರಾಮಾಣ್ಯಮಾಸ್ಥಿತಾಃ ॥ ೬೩ ॥**

ಆ ಕಾಲದ ಸಂಪತ್ತನ್ನು ನೋಡಿ ಬೇರೆಮಿಥ್ಯಾದೃಷ್ಟಿದೇವತೆಗಳು ದೇವೇಂದ್ರರನ್ನು ನೋಡಿ ನಂಬಿಕೆಯನ್ನು ಹೊಂದಿ ಸನ್ಮಾರ್ಗದಲ್ಲಿ ಪ್ರೀತಿಯನ್ನು ಮಾಡಿದರು.

**ಕೃತಂ ಸೋಪಾನಮಾಮೇರೋರಿಂದ್ರನೀಲೈರ್ವ್ಯರಾಜತ ।**
**ಭಕ್ತ್ಯಾ ಖಮೇವ ಸೋಪಾನ[೭]ಪರಿಣಾಮಮಿವಾಶ್ರಿತಮ್ ॥ ೬೪ ॥**

ಮಹಾಮೇರುಪರ್ವತದ ವರೆಗೆ ಇಂದ್ರನೀಲರತ್ನಗಳಿಂದ ಮಾಡಿದ ಮೆಟ್ಟಲು, ಆಕಾಶವೇ ಭಕ್ತಿಯಿಂದ ಮೆಟ್ಟಲಾಗಿ ಪರಿಣಮಿಸಿತೋ ಎಂಬಂತೆ, ಶೋಭಿಸಿತು.

**ಜ್ಯೋತಿಃಪಟಲಮುಲ್ಲಂಘ್ಯ ಪ್ರಯಯುಃ ಸುರನಾಯಕಾಃ ।**
**ಅಧಸ್ತಾರಕಿತಾಂ ವೀಥಿಂ ಮನ್ಯಮಾನಾಃ ಕುಮುದ್ವತೀಮ್ ॥ ೬೫ ॥**

ದೇವತೆಗಳು ಜ್ಯೋತಿರ್ದೇವತೆಗಳ ಪಟಲಗಳನ್ನು ಮೀರಿ ಮೇಲಕ್ಕೆ ಹೋಗುತ್ತಿರುವಾಗ ಕೆಳಗೆ ತೋರುತ್ತಿರುವ ನಕ್ಷತ್ರಗಳ ಸಾಲನ್ನು ಕುಮುದ ಪುಷ್ಪಗಳುಳ್ಳ ಭೂಮಿಯನ್ನಾಗಿ ತಿಳಿದರು.

**ತತಃ ಪ್ರಾಪುಃ ಸುರಾಧೀಶಾ ಗಿರಿರಾಜಂ ತಮುಚ್ಛ್ರಿತಮ್ ।**
**ಯೋಜನಾನಾಂ ಸಹಸ್ರಾಣಿ ನವತಿಂ ಚ ನವೈವ ಚ ॥ ೬೬ ॥**

ತರುವಾಯ ದೇವೇಂದ್ರರು ತೊಂಬತ್ತೊಂಬತ್ತುಸಾವಿರಯೋಜನ ಉನ್ನತವಾದ ಆ ಮೇರುಪರ್ವತವನ್ನು ಸೇರಿದರು.

**ಮಕುಟಶ್ರೀರಿವಾಭಾತಿ ಚೂಲಿಕಾ ಯಸ್ಯ ಮೂರ್ಧನಿ ।**
**ಚೂಡಾರತ್ನಶ್ರಿಯಂ ಧತ್ತೇ ಯಸ್ಯಾ[೮]ಮೃಜುವಿಮಾನಕಮ್ ॥ ೬೭ ॥**

ಆ ಮೇರುಪರ್ವತದ ಅಗ್ರಭಾಗದಲ್ಲಿರುವ ಚೂಲಿಕೆ(ಶಿಖರ)ಯು ಕಿರೀಟದಂತೆ ಶೋಭಿಸುತ್ತಿದೆ. ಆ ಚೂಲಿಕೆಯ ಮೇಲಿರುವ ಸೌಧರ್ಮೇಂದ್ರನ ಋಜು(ತು)ವಿಮಾನವು ಚೂಡಾಮಣಿಯಂತೆ ಶೋಭಿಸುತ್ತಿದೆ.

**ಯೋ ಧತ್ತೇ ಸ್ವನಿತಂಭೇನ ಭದ್ರಶಾಲವನಂ ಮಹತ್ ।**
**[೯]ಪರಿಧಾನಮಿವಾನೀಲಂ [೧೦]ಘನಚ್ಛಾಯೈರ್ಮಹಾದ್ರುಮೈಃ ॥ ೬೮ ॥**

ಆ ಮೇರುಪರ್ವತದ ನಿತಂಬಪ್ರದೇಶ(ಸ್ವಲ್ಪಮೇಲ್ಭಾಗ)ದಲ್ಲಿ ದಟ್ಟವಾದ ನೆರಳುಳ್ಳವೂ ಮೇಘದವರ್ಣವುಳ್ಳವೂ ಆದ ದೊಡ್ಡಮರಗಳಿಂದ ಕಪ್ಪಾದ ಭದ್ರಶಾಲವೆಂಬ ದೊಡ್ಡವನವು ಅಧೋವಸ್ತ್ರದಂತಿದೆ.

೧ ಸೇವಾಮಕರೋತ್. ೨ ಕ್ಷೀರಾಬ್ಧಿವೀಚಿಸದೃಶೈಃ ಸುಪಃ ಪ್ರಾಗ್ಬಹುರ್ವತೀಪದಸಮಾಪ್ತೇರ್ಥೇ ಬಹುಪ್ರತ್ಯಯಃ. ೩ ತತ್ಕಾಲಭವಾಂ. ೪ ಸಂಪದಂ. ೫ ದೇವಾಃ. ೬ ಇಂದ್ರೈರ್ವಿಶ್ವಾಸಂ ಗತಾಃ. ೭ ಪರಿಣಮನಂ. ೮ ಋತುವಿಮಾನಕಮಿತ್ಯಪಿ ಪಾಠಃ. ೯ ಅಧೋಂಶುಕಂ. ೧೦ ಮೇಘಸಾಂದ್ರಶ್ಚ.

**ಮೇಖಲಾಯಾಮಥಾದ್ಯಾಯಾಂ ಬಿಭೃತೇ ನಂದನಂ ವನಮ್ ।**
**ಯಃ [೧]ಕಟೀಸೂತ್ರದಾಮೇವ ನಾನಾರತ್ನಮಯಾಂಘ್ರಿಪಮ್ ॥ ೬೯ ॥**

ಆಮೇಲೆ ಮೊದಲನೆಯ ಮೇಖಲೆ(ಜಗತಿ)ಯಲ್ಲಿ ನಂದನವೆಂಬ ವನವಿದೆ. ಆ ವನವು ನಾನಾರತ್ನಮಯವಾದ ವೃಕ್ಷಗಳಿಂದ ಮೇರುಪರ್ವತಕ್ಕೆ ಡಾಬಿನಂತೆ ಶೋಭಿಸುತ್ತಿದೆ.

**ಯಶ್ಚ ಸೌಮನಸೋದ್ಯಾನಂ ಬಿಭರ್ತಿ ಶುಕಸಚ್ಛವಿ ।**
**ಸಪುಷ್ಪ [೨]ಮುಪಸಂವ್ಯಾನಮಿವೋ[೩]ಲ್ಲಸಿತಪಲ್ಲವಮ್ ॥ ೭೦ ॥**

ಅದರ ಮೇಲೆ ಗಿಣಿಯಬಣ್ಣದಂತೆ ಹಸುರು ಬಣ್ಣವುಳ್ಳ ಸೌಮನಸವೆಂಬ ವನವಿದೆ. ಪುಷ್ಪಸಹಿತವೂ ವಿಕಸಿತವಾದ ತಳಿರುಗಳುಳ್ಳದೂ ಆದ ಆ ವನವು, ಪ್ರಕಾಶಮಾನವಾದ ಪದರುಳ್ಳ ಉತ್ತರೀಯವಸ್ತ್ರ (ಮೇಲುವಸ್ತ್ರ) ದಂತೆ, ಶೋಭಿಸುತ್ತದೆ.

**ಯಸ್ಯಾಲಂಕುರುತೇ [೪]ಕೂಟಪರ್ಯಂತಂ ಪಾಂಡುಕಂ ವನಮ್ ।**
**ಆಹೂತಮಧುಪೈಃ ಪುಷ್ಪೈರ್ದಧಾನಂ ಶೇಖರಶ್ರಿಯಮ್ ॥ ೭೧ ॥**

ಆ ಮೇರುಪರ್ವತದ ಚೂಲಿಕೆಯ ಸಮೀಪಭೂಮಿಯಲ್ಲಿ ಪಾಂಡುಕವೆಂಬ ವನವು, ಭ್ರಮರಗಳು ಮುತ್ತಿಕೊಂಡಿರುವ ಪುಷ್ಪಗಳಿಂದ ಕಿರೀಟದಂತೆ, ಶೋಭಿಸುತ್ತಿದೆ.

**ಯಸ್ಮಿನ್ಪ್ರತಿವನಂ ದಿಕ್ಷು ಚೈತ್ಯವೇಶ್ಮಾನಿ ಭಾಂತ್ಯಲಮ್ ।**
**ಹಸಂತೀವ ದ್ಯುಸದ್ಮಾನಿ [೫]ಪ್ರೋನ್ಮಿಷನ್ಮಣಿದೀಪ್ತಿಭಿಃ ॥ ೭೨ ॥**

ಆ ಮೇರುಪರ್ವತದ ಪ್ರತಿಯೊಂದುವನದ ದಿಕ್ಕುಗಳಲ್ಲಿಯೂ ಚೈತ್ಯಾಲಯಗಳು ದೇದೀಪ್ಯಮಾನವಾದ ರತ್ನಗಳ ಕಿರಣಗಳಿಂದ ಸ್ವರ್ಗದ ವಿಮಾನಗಳನ್ನು ಪರಿಹಾಸ್ಯಮಾಡುತ್ತವೆಯೋ ಎಂಬಂತೆ, ಅಧಿಕವಾಗಿ ಶೋಭಿಸುತ್ತವೆ.

**ಹಿರಣ್ಮಯಃ ಸಮುತ್ತುಂಗೋ ಧತ್ತೇ ಯೋ ಮೌಲಿವಿಭ್ರಮಮ್ ।**
**ಜಂಬೂದ್ವೀಪಮಹೀಭರ್ತುರ್ಲವಣಾಂಭೋಧಿವಾಸಸಃ ॥ ೭೩ ॥**

ಸುವರ್ಣಮಯವೂ ಉನ್ನತವೂ ಆದ ಆ ಮೇರುಪರ್ವತವು ಲವಣ ಸಮುದ್ರವೆಂಬ ವಸ್ತ್ರವನ್ನು ಧರಿಸಿರುವ ಜಂಬೂದ್ವೀಪವೆಂಬ ರಾಜನಿಗೆ ಕಿರೀಟದಂತಿದೆ.

**ಜ್ಯೋತಿರ್ಗಣಶ್ಚ [೬]ಸಾತತ್ಯಾದ್ಯಂ [೭]ಪರ್ಯೇತಿ ಮಹೋದಯಮ್ ।**
**ಪುಣ್ಯಾಭಿಷೇಕ[೮]ಸಂಭಾರೈಃ ಪವಿತ್ರೀಕೃತಮರ್ಹತಾಮ್ ॥ ೭೪ ॥**

ಅರ್ಹತ್ಪರಮೇಶ್ವರರ ಪುಣ್ಯಕರವಾದ ಅಭಿಷೇಕಗಳ ಸಮೂಹಗಳಿಂದ ಪವಿತ್ರವಾಗಿ ಮಾಡಲ್ಪಟ್ಟುದೂ ಮಹಾವೈಭವವುಳ್ಳುದೂ ಆದ ಆ ಮೇರುಪರ್ವತವನ್ನು ಸೂರ್ಯಚಂದ್ರಮೊದಲಾದ ಜ್ಯೋತಿರ್ದೇವತೆಗಳು ಯಾವಾಗಲೂ ಪ್ರದಕ್ಷಿಣೆ ಮಾಡುತ್ತಾರೆ.

**ಆರಾಧಯಂತಿ ಯಂ ನಿತ್ಯಂಚಾರಣಾಃ ಪುಣ್ಯವಾಂಛಯಾ ।**
**ವಿದ್ಯಾಧರಾಶ್ಚ ಮುದಿತಾ ಜಿನೇಂದ್ರಮಿವ ಸೂನ್ನತಮ್ ॥ ೭೫ ॥**

ಪುಣ್ಯವನ್ನು ಪಡೆಯಬೇಕೆಂಬ ಇಚ್ಛೆಯಿಂದ ಚಾರಣಮುನಿಗಳೂ ವಿದ್ಯಾಧರರೂ ಯಾವಾಗಲೂ ಸಂತೋಷದಿಂದ ಜಿನೇಶ್ವರರಂತೆ ಉನ್ನತ(ಶ್ರೇಷ್ಠ)ವಾದ ಆ ಮೇರುಪರ್ವತವನ್ನು ಆರಾಧಿಸು(ಸೇವಿಸು)ತ್ತಾರೆ.

**ದೇವೋತ್ತರಕುರೂನ್ಯಶ್ಚ ಸ್ವ[೯]ಪಾದಗಿರಿಭಿಃ ಸದಾ ।**
**ಆವೃತ್ಯ ಪಾತಿ ನಿರ್ಬಾಧಂ ತದ್ಧಿ ಮಾಹಾತ್ಮ್ಯಮುನ್ನತೇಃ ॥ ೭೬ ॥**

೧ ಕಾಂಚೀಧಾಮ. ೨ ಉತ್ತರೀಯವಸನಂ. ೩ ಪ್ರಜ್ವಲಿತಃ. ೪ ಚೂಲಿಕಾಪರ್ಯಂತಭೂಮಿಂ. ೫ ದೇದೀಪ್ಯಮಾನಾಃ. ೬ ಸತತಮೇವ ಸಾತತ್ಯಂ ತಸ್ಮಾತ್. ೭ ಪ್ರದಕ್ಷಿಣೀಕರೋತಿ. ೮ ಸಮೂಹೈಃ. ೯ ಗಜದಂತಪರ್ವತೈಃ.

ಆ ಮೇರುಪರ್ವತವು ತನ್ನ ಬುಡದಲ್ಲಿರುವ ಗಜದಂತಪರ್ವತಗಳಿಂದ ದೇವಕುರು ಉತ್ತರಕುರುಗಳೆಂಬ ಕ್ಷೇತ್ರಗಳನ್ನು ಆವರಿಸಿಕೊಂಡು ಅವುಗಳನ್ನು ಸರ್ವದಾ ನಿರ್ಬಾಧೆಯಾಗಿ ಕಾಪಾಡುತ್ತದೆ. ಆಶ್ರಿತರನ್ನು ಕಾಪಾಡುವುದಲ್ಲವೆ ಉನ್ನತ(ಶೇಷ್ಠ)ವಾಗಿರುವುದರ ಮಾಹಾತ್ಮ್ಯವು ?

**ಯಸ್ಯ ಕಂದರಭಾಗೇಷು ನಿವಸಂತಿ ಸುರಾಸುರಾಃ ।**
**ಸಾಂಗನಾಃ ಸ್ವರ್ಗಮುತ್ಸೃಜ್ಯ ನಾಕಶೋಭಾಪಹಾಸಿಷು ॥ ೭೭ ॥**

ಸ್ವರ್ಗದ ಶೋಭೆಯನ್ನು ಪರಿಹಾಸ್ಯಮಾಡುವ ಆ ಮೇರುವಿನ ಗುಹೆಗಳಲ್ಲಿ ದೇವತೆಗಳು ಸ್ವರ್ಗವನ್ನು ಬಿಟ್ಟು ತಮ್ಮ ಸ್ತ್ರೀಸಮೇತರಾಗಿ ವಾಸಮಾಡುತ್ತಾರೆ.

**ಯಃ ಪಾಂಡುಕವನೋದ್ದೇಶೇ ಶುಚಿಸ್ಫಟಿಕನಿರ್ಮಿತಾಃ ।**
**ಶಿಲಾ ಬಿಭರ್ತಿ ತೀರ್ಥೇಶಾಮಭಿಷೇಕಕ್ರಿಯೋಚಿತಾಃ ॥ ೭೮ ॥**

ಆ ಮೇರುಪರ್ವತದ ಪಾಂಡುಕವನದ ಉನ್ನತಪ್ರದೇಶದಲ್ಲಿ ನಿರ್ಮಲವಾದ ಸ್ಫಟಿಕಶಿಲೆಯಿಂದ ನಿರ್ಮಿತವೂ ತೀರ್ಥಂಕರರ ಜನ್ಮಾಭಿಷೇಕಕ್ರಿಯೆಗೆ ಉಚಿತವೂ ಆದ ಶಿಲೆಗಳಿವೆ.

**ಯಸ್ತುಂಗೋ ವಿಬುಧಾರಾಧ್ಯಃ [೧]ಸತತರ್ತುಸಮಾಶ್ರಯಃ ।**
**ಸೌಧರ್ಮೇಂದ್ರ ಇವಾಭಾತಿ ಸಂಸೇವ್ಯೋ[೨]ಪ್ಸರಸಾಂ ಗಣೈಃ ॥ ೭೯ ॥**

ಉನ್ನತವೂ ದೇವತೆಗಳಿಂದ ಸೇವಿಸುವುದಕ್ಕೆಯೋಗ್ಯವೂ ಯಾವಾಗಲೂ ಆರು ಋತುಗಳನ್ನಾಶ್ರಯಿಸಿರುವುದೂ ಜಲಯುಕ್ತವಾದ ಸರೋವರಗಳ ಸಮೂಹ ಗಳಿಂದ ಸೇವಿಸುವುದಕ್ಕೆ ಯೋಗ್ಯವೂ ಆದ ಆ ಮೇರುಪರ್ವತವು, ಶ್ರೇಷ್ಠನೂ ದೇವತೆಗಳಿಂದ ಸೇವಿಸುವುದಕ್ಕೆ ಯೋಗ್ಯನೂ ಯಾವಾಗಲೂ ಋತುವಿಮಾನವನ್ನು ಹೊಂದಿರುವವನೂ ಅಪ್ಸರಸ್ತ್ರೀಯರ ಸಮೂಹಗಳಿಂದ ಸೇವಿಸುವುದಕ್ಕೆ ಯೋಗ್ಯ ನೂ ಆದ ಸೌಧರ್ಮೇಂದ್ರನಂತೆ, ಪ್ರಕಾಶಿಸುತ್ತದೆ.

**ತಮಾಸಾದ್ಯ ಸುರಾಃ ಪ್ರಾಪುಃ ಪ್ರೀತಿಮುನ್ನತಿಶಾಲಿನಮ್ ।**
**ರಾಮಣೀಯಕ[೩]ಸಂಭೂತಿಂ ಸ್ವರ್ಗಸ್ಯೇವಾಧಿದೈವತಮ್ ॥ ೮೦ ॥**

ಬಹಳ ಉನ್ನತವೂ ಸ್ವರ್ಗದ ಅಧಿದೇವತೆಯೋ ಎಂಬಂತಿರುವುದೂ ರಮಣೀ ಯತೆಗೆ ಉತ್ಪತ್ತಿಸ್ಥಾನವೂ ಆದ ಆ ಮೇರುವನ್ನು ಸೇರಿ ದೇವತೆಗಳು ಬಹಳ ಸಂತೋಷಪಟ್ಟರು.

**ತತಃ [೪]ಪರೀತ್ಯ ತಂ ಪ್ರೀತ್ಯಾ ಸುರರಾಜಃ ಸುರೈಃ ಸಮಮ್ ।**
**ಗಿರಿರಾಜಂ ಜಿನೇಂದ್ರಾರ್ಕಂ ಮೂರ್ಧನ್ಯಸ್ಯ [೫]ನ್ಯಧಾನ್ಮುದಾ ॥ ೮೧ ॥**

ತರುವಾಯ ದೇವೇಂದ್ರನು ದೇವತೆಗಳೊಡನೆ ಪ್ರೀತಿಯಿಂದ ಆ ಮಹಾ ಮೇರುಪರ್ವತಕ್ಕೆ ಪ್ರದಕ್ಷಿಣೆಯನ್ನು ಮಾಡಿ ಈ ಪರ್ವತದ ತುದಿಯಲ್ಲಿ ಸಂತೋಷದಿಂದ ಆ ಜೀನೇಶ್ವರನೆಂಬ ಸೂರ್ಯನನ್ನು ಸ್ಥಾಪಿಸಿದನು.

**ತಸ್ಯ [೬]ಪ್ರಾಗುತ್ತರಾಶಾಯಾಂ ಮಹತೀ ಪಾಂಡುಕಾಹ್ವಯಾ ।**
**ಶಿಲಾಸ್ತಿ ಜಿನನಾಥಾನಾಮಭಿಷೇಕಂ ಬಿಭರ್ತಿ ಯಾ ॥ ೮೨ ॥**

ಆ ಪರ್ವತಶಿಖರದ ಈಶಾನದಿಕ್ಕಿನಲ್ಲಿ ಪಾಂಡುಕವೆಂಬ ದೊಡ್ಡ ಶಿಲೆಯಿದೆ. ಆ ಶಿಲೆಯ ಮೇಲೆ ಜಿನೇಶ್ವರರಿಗೆ ಅಭಿಷೇಕವಾಗುವುದು.

**ಶುಚಿಃ ಸುರಭಿರತ್ಯಂತ[೭]ರಮಣೀಯಾ ಮನೋಹರಾ ।**
**ಪೃಥಿವೀವಾಷ್ಟಮೀ ಭಾತಿ ಯಾ [೮]ಯುಕ್ತಪರಿಮಂಡಲಾ ॥ ೮೩ ॥**

೧ ಸತತಂ ಷಡೃತುಸಮಾಶ್ರಯಃ ಪಕ್ಷೇ ಋತುವಿಮಾನಸಮಾಶ್ರಯಃ. ೨ ಜಲಭರಿತಸರೋವರಾಣಾಂ ಗಣೈಃ ಪಕ್ಷೇ ದೇವಗಣಿಕಾನಾಂ ಸಮೂಹೈಃ. ೩ ಉತ್ಪತ್ತಿಂ. ೪ ಪ್ರದಕ್ಷಿಣೀಕೃತ್ಯ. ೫ ಸ್ಥಾಪಯತಿ ಸ್ಮ. ೬ ಐಶಾನ್ಯಾಂ ದಿಶಿ. ೭ ನಯನಕ್ರೀಡಾಯೋಗ್ಯಾ. ೮ ಯೋಗ್ಯಪರಿಧಿಃ.

ನಿರ್ಮಲವೂ ಸುಗಂಧವೂ ನೋಡುವುದಕ್ಕೆ ಅತ್ಯಂತ ಸುಂದರವೂ ಮನೋ ಹರವೂ ಯೋಗ್ಯವಾದ ಪರಿಧಿಯುಳ್ಳುದೂ ಆದ ಆ ಪಾಂಡುಕಶಿಲೆಯು, ಎಂಟ ನೆಯ ಭೂಮಿ(ಶಿದ್ಧಶಿಲೆ)ಯಂತೆ ಶೋಭಿಸುತ್ತಿದೆ.

**[೧]ಶತಾಯತಾ ತದರ್ಧಂ ಚ ವಿಸ್ತೀರ್ಣಾಷ್ಟೋಚ್ಛ್ರಿತಾ ಮತಾ ।**
**ಜಿನೈರ್ಯೋಜನಮಾನೇನ ಸಾ ಶಿಲಾರ್ಧೇಂದು[೨]ಸಂಸ್ಥಿತಿಃ ॥ ೮೪ ॥**

ಆ ಪಾಂಡುಕಶಿಲೆಯು ನೂರುಯೋಜನ ಉದ್ದವೂ ಐವತ್ತುಯೋಜನ ವಿಸ್ತಾರವೂ ಎಂಟುಯೋಜನ ಎತ್ತರವೂ ಅರ್ಧಚಂದ್ರಾಕಾರವೂ ಆಗಿದೆಯೆಂದು ಜೀನೇಶ್ವರರಿಂದ ತಿಳಿಯಲ್ಪಟ್ಟಿದೆ.

**ಕ್ಷೀರೋದವಾರಿಭಿರ್ಭೂಯಃ ಕ್ಷಾಲಿತಾ ಯಾ ಸುರೋತ್ತಮೈಃ ।**
**[೩]ಶುಚಿತ್ವಸ್ಯ [೪]ಪರಾಂ ಕಾಷ್ಠಾಂ ಸಂಬಿಭರ್ತಿ ಸದೋಜ್ಜ್ವಲಾ ॥ ೮೫ ॥**

ದೇವತೆಗಳು ಕ್ಷೀರಸಮುದ್ರದ ಜಲಗಳಿಂದ ಬಾರಿಬಾರಿಗೂ ಪ್ರಕ್ಷಾಲಿಸಿದ ಆ ಪಾಂಡುಕಶಿಲೆಯು ಸರ್ವದಾ ಪ್ರಕಾಶಮಾನವಾಗಿ ನೈರ್ಮಲ್ಯದ ಪರಮೋತ್ಕರ್ಷತೆ ಯನ್ನು ಹೊಂದುತ್ತಿದೆ.

**ಶುಚಿತ್ವಾನ್ಮಹನೀಯತ್ವಾತ್ಪವಿತ್ರತ್ವಾಚ್ಚ ಭಾತಿ ಯಾ ।**
**ಧಾರಣಾಚ್ಚ ಜಿನೇಂದ್ರಾಣಾಂ ಜಿನಮಾತೇವ ನಿರ್ಮಲಾ ॥ ೮೬ ॥**

ನಿರ್ಮಲವಾಗಿರುವುದರಿಂದಲೂ ಪೂಜ್ಯವಾಗಿರುವುದರಿಂದಲೂ ಪವಿತ್ರವಾಗಿ ರುವುದರಿಂದಲೂ ಜಿನೇಶ್ವರರನ್ನು ಧರಿಸುವುದರಿಂದಲೂ ಆ ಪಾಂಡುಕಶಿಲೆಯು ನಿರ್ಮಲಳಾದ ಜಿನಮಾತೃವಿನಂತೆ, ಶೋಭಿಸುತ್ತದೆ.

**ಯಸ್ಯಾಂ ಪುಷ್ಪೋಪಹಾರಶ್ರೀರ್ವ್ಯಜ್ಯತೇ ಜಾತು ನಾಂಜಸಾ ।**
**[೫]ಸಾವರ್ಣ್ಯಾದಮರೋನ್ಮುಕ್ತವ್ಯಕ್ತಮುಕ್ತಾಫಲಚ್ಛವಿಃ ॥ ೮೭ ॥**

ಪಾಂಡುಕಶಿಲೆಯ ವರ್ಣವೂ ಪುಷ್ಪಗಳ ವರ್ಣವೂ ಸಮಾನವಾಗಿರುವುದರಿಂದ ಆ ಬಿಳಿಯದಾದ ಪಾಂಡುಕಶಿಲೆಯ ಮೇಲೆ ದೇವತೆಗಳು ಸುರಿದ ಸ್ಫುಟವಾದ ಮುತ್ತುಗಳ ಕಾಂತಿಯುಳ್ಳ ಪುಷ್ಪಗಳ ಶೋಭೆಯು ಎಂದೂ ಶೀಘ್ರವಾಗಿ ತಿಳಿಯುವುದಿಲ್ಲ.

**ಜಿನಾನಾಮಭಿಷೇಕಾಯ ಯಾ ಧತ್ತೇ ಸಿಂಹವಿಷ್ಟರಮ್ ।**
**ಮೇರೋರಿವೋಪರಿ ಪರಂ ಪರಾರ್ಧ್ಯಂ ಮೇರುಮುಚ್ಚಕೈಃ ॥ ೮೮ ॥**

ಆ ಪಾಂಡುಕಶಿಲೆಯ ಮೇಲೆ ಜಿನೇಶ್ವರರ ಅಭಿಷೇಕಕ್ಕೋಸ್ಕರ ಒಂದು ಉನ್ನತವಾದ ಸಿಂಹಪೀಠವಿದೆ. ಆ ಪೀಠವು ಮೇರುಪರ್ವತದ ಮೇಲೆ ಶ್ರೇಷ್ಠವಾದ ಬೇರೊಂದು ಮೇರುಪರ್ವತದಂತಿದೆ.

**[೬]ತತ್ಪರ್ಯಂತೇ ಚ ಯಾ ಧತ್ತೇ ಸುಸ್ಥಿತೇ ದಿವ್ಯವಿಷ್ಟರೇ ।**
**[೭]ಜಿನಾಭಿಷೇಚನೇ ಕ್ಲೃಪ್ತೇ ಸೌಧರ್ಮೇಶಾನನಾಥಯೋಃ ॥ ೮೯ ॥**

ಆ ಪಾಂಡುಕಶಿಲೆಯ ಉಭಯಪಾರ್ಶ್ವಗಳಲ್ಲಿಯೂ ಜಿನೇಶ್ವರರಿಗೆ ಅಭಿಷೇಕ ಮಾಡುವುದಕ್ಕೋಸ್ಕರ ಸೌಧರ್ಮೇಂದ್ರ ಈಶಾನೇಂದ್ರರಿಗೆ ನಿಲ್ಲುವುದಕ್ಕೆ ಮಾಡಿದ ಎರಡು ಸುಂದರವಾದ ಪೀಠಗಳಿವೆ.

**ನಿತ್ಯೋಪಹಾರರುಚಿರಾ ಸುರೈರ್ನಿತ್ಯಂ ಕೃತಾರ್ಚನಾ ।**
**ನಿತ್ಯಮಂಗಲಸಂಗೀತನೃತ್ತವಾದಿತ್ರಶೋಭಿನೀ ॥ ೯೦ ॥**

ಆ ಪಾಂಡುಕಶಿಲೆಯು ಫಲಪುಷ್ಪಾದಿದ್ರವ್ಯಗಳಿಂದ ಯಾವಾಗಲೂ ಮನೋ ಹರವಾಗಿದೆ. ದೇವತೆಗಳಿಂದ ಸದಾ ಅರ್ಚಿಸಲ್ಪಡುತ್ತದೆ. ಮಂಗಲಗೀತಗಳಿಂದಲೂ ನೃತ್ಯಗಳಿಂದಲೂ ವಾದ್ಯಗಳಿಂದಲೂ ಸರ್ವದಾ ಶೋಭಿಸುತ್ತಿದೆ.

೧ ಶತಯೋಜನದೈರ್ಘ್ಯಾ. ೨ ಸಂಸ್ಥಾನಾ. ೩ ಶುದ್ಧೇನುಪಹತೇ ವಹ್ನೌ ಬ್ರಾಹ್ಮಣೇ ಸಚಿವೋತ್ತಮೇ । ಆಷಾಢೇಧ್ಯಾತ್ಮಸಂವಿತ್ತೌ ಬ್ರಹ್ಮಚರ್ಯೇ ಶುಚಿರ್ಮತಃ, ನೈರ್ಮಲ್ಯಸ್ಯೋತ್ಕರ್ಷಾ. ೪ ಪರಮೋತ್ಕರ್ಷಾಂ. ೫ ಸಮಾನವರ್ಣತ್ವಾತ್. ೬ ತದುಭಯಪಾರ್ಶ್ವಯೋಃ. ೭ ಜಿನಾಭಿಷೇಚನಾಯ ನಿಮಿತ್ತಸಪ್ತಮೀ.

**ಛತ್ರಚಾಮರಭೃಂಗಾರಸುಪ್ರತಿಷ್ಠಕದರ್ಪಣಮ್ ।**
**ಕಲಶಧ್ವಜ[೧]ತಾಲಾನಿ ಮಂಗಲಾನಿ ಬಿಭರ್ತಿ ಯಾ ॥ ೯೧ ॥**

ಆ ಪಾಂಡುಕಶಿಲೆಯು ಛತ್ರ ಚಾಮರ ಗಿಂಡಿ ಸುಪ್ರತಿಷ್ಠಕ ಕನ್ನಡಿ ಕಲಶ ಧ್ವಜ ಬೀಸಣಿಗೆ ಈ ಎಂಟು ಮಂಗಲದ್ರವ್ಯಗಳನ್ನು ಧರಿಸಿಕೊಂಡಿದೆ.

**ಯಾಮಲಾ ಶೀಲಮಾಲೇವ ಮುನೀನಾಮಭಿಸಮ್ಮತಾ ।**
**ಜೈನೀ ತನುರಿವಾತ್ಯಂತಭಾಸ್ವರಾ ಸುರಭಿಃ ಶುಚಿಃ ॥ ೯೨ ॥**

ಆ ಪಾಂಡುಕಶಿಲೆಯು ಮುನಿಗಳಿಗೆ ಸಮ್ಮತವಾದ ಶೀಲಗಳ ಮಾಲೆಯಂತೆ ನಿರ್ಮಲವೂ ಜಿನೇಶ್ವರನ ಶರೀರದಂತೆ ಅತ್ಯಂತ ಪ್ರಕಾಶಮಾನವೂ ಸುಗಂಧವೂ ಪರಿಶುದ್ಧವೂ ಆಗಿದೆ.

**ಸ್ವಯಂ [೨]ಧೌತಾಪಿ ಯಾ ಧೌತಾ [೩]ಶತಶಃ ಸುರನಾಯಕೈಃ ।**
**ಕ್ಷೀರಾರ್ಣವಾಂಬುಭಿಃ ಪುಣ್ಯೈಃ ಪುಣ್ಯಸ್ಯೇವಾಕರಕ್ಷಿತಿಃ ॥ ೯೩ ॥**

ಆ ಪಾಂಡುಕಶಿಲೆಯು ತಾನು ಶುಭ್ರವೂ ಶುದ್ಧವೂ ಆಗಿದ್ದರೂ ದೇವೇಂದ್ರರಿಂದ ಪುಣ್ಯಕರವಾದ ಕ್ಷೀರಸಮುದ್ರದ ಜಲಗಳಿಂದ ಅನೇಕಾವರ್ತಿ ತೊಳೆಯಲ್ಪಟ್ಟುದಾಗಿ ಪುಣ್ಯದ ಗಣಿಯಂತಿದೆ.

**ಯಸ್ಯಾಃ ಪರ್ಯಂತದೇಶೇಷು [೪]ರತ್ನಾಲೋಕೈರ್ವಿತನ್ವತೇ ।**
**ಪರಿತಃ ಸುರಚಾಪಶ್ರೀ[೫]ರನ್ಯೋನ್ಯವ್ಯತಿಷಂಗಿಭಿಃ ॥ ೯೪ ॥**

ಆ ಪಾಂಡುಕಶಿಲೆಯ ಸಮೀಪಪ್ರದೇಶಗಳಲ್ಲಿ ಪರಸ್ಪರವಾಗಿ ಸಂಬಂಧಿಸಿಕೊಂಡಿರುವ ರತ್ನದ ಪ್ರಕಾಶಗಳು ಸುತ್ತಲೂ ಇಂದ್ರ ಧನುಸ್ಸಿನ ಶೋಭೆಯನ್ನು ಹರಡುತ್ತಿವೆ.

**ತಾಮಾವೇಷ್ಟ್ಯ ಸುರಾಸ್ತಸ್ಥುರ್ಯಥಾಸ್ವಂ ದಿಕ್ಷ್ವನುಕ್ರಮಾತ್ ।**
**ದೃಷ್ಟುಕಾಮಾ ಜಿನಸ್ಯಾಮೂಂ ಜನ್ಮಕಲ್ಯಾಣಸಂಪದಮ್ ॥ ೯೫ ॥**

ಜಿನೇಶ್ವರನ ಈ ಜನ್ಮಕಲ್ಯಾಣದ ಸಂಪತ್ತನ್ನು ನೋಡುವುದಕ್ಕೆ ಇಚ್ಛೆಯುಳ್ಳ ದೇವತೆಗಳು ಆ ಪಾಂಡುಕಶಿಲೆಯ ಸುತ್ತಲೂ ದಿಕ್ಕುಗಳಲ್ಲಿ ಕ್ರಮವಾಗಿ ನಿಂತರು.

**ದಿಕ್ಪಾಲಾಶ್ಚ ಯಥಾಯೋಗ್ಯದಿಗ್ವಿದಿಗ್ಭಾಗಸಂಶ್ರಿತಾಃ ।**
**ತಿಷ್ಠಂತಿ ಸ್ಮ ನಿಕಾಯೈಃ ಸ್ವೈರ್ಜಿನೋತ್ಸವದಿದೃಕ್ಷಯಾ ॥ ೯೬ ॥**

ತಂತಮ್ಮ ದಿಕ್ಕುಗಳನ್ನೂ ವಿದಿಕ್ಕುಗಳನ್ನೂ ಆಶ್ರಯಿಸಿಕೊಂಡಿರುವ ದಿಕ್ಪಾಲಕರು ಜಿನೇಶ್ವರನ ಉತ್ಸವವನ್ನು ನೋಡಬೇಕೆಂಬ ಇಚ್ಛೆಯಿಂದ ತಂತಮ್ಮ ಪರಿವಾರ ಸಮೇತರಾಗಿ ನಿಂತರು.

**ಗಗನಾಂಗಣಮಾರುಧ್ಯ ವ್ಯಾಪ್ಯ ಮೇರೋ[೬]ರಧಿತ್ಯಕಾಮ್ ।**
**[೭]ನಿವೇಶಃ ಸುರಸೈನ್ಯಾನಾಮಭವತ್ಪಾಂಡುಕೇ ವನೇ ॥ ೯೭ ॥**

ದೇವಸೈನ್ಯಗಳ ಸಮೂಹವು ಆಕಾಶಪ್ರದೇಶವನ್ನೂ ಮಹಾಮೇರುಪರ್ವತದ ಮೇಲುಭೂಮಿಯನ್ನೂ ವ್ಯಾಪಿಸಿಕೊಂಡು ಪಾಂಡುಕವನದಲ್ಲಿ ಬೀಡನ್ನು ಮಾಡಿತು.

**ಪಾಂಡುಕಂ ವನಮಾರುದ್ಧಂ ಸಮಂತಾತ್ಸುರನಾಯಕೈಃ ।**
**ಜಹಾಸೇವ ದಿವೋ ಲಕ್ಷ್ಮೀಂ ಕ್ಷ್ಮಾರುಹಾಂ ಕುಸುಮೋತ್ಕರೈಃ ॥ ೯೮ ॥**

ಶ್ರೇಷ್ಠರಾದ ದೇವತೆಗಳಿಂದ ಸುತ್ತಲೂ ಆವರಿಸಲ್ಪಟ್ಟ ಆ ಪಾಂಡುಕವನವು ವೃಕ್ಷಗಳ ಪುಷ್ಪಸಮೂಹಗಳಿಂದ ಸ್ವರ್ಗದ ಶೋಭೆಯನ್ನು ಪರಿಹಾಸ್ಯಮಾಡಿತೋ ಎಂಬಂತಿದ್ದಿತು.

**ಸ್ವಸ್ಥಾನಾಚ್ಚಲಿತಃ ಸ್ವರ್ಗಃ ಸತ್ಯ[೧]ಮುದ್ವಾಸಿತಸ್ತದಾ ।**
**ಮೇರುಸ್ತು ಸ್ವರ್ಗತಾಂ ಪ್ರಾಪ ಧೃತನಾಕೇಶವೈಭವಃ ॥ ೯೯ ॥**

ಆಗ ನಿಜವಾಗಿಯೂ ತನ್ನ ಸ್ಥಾನವನ್ನು ಬಿಟ್ಟು ಚಲಿಸಿದ ಸ್ವರ್ಗವು ಶೂನ್ಯವಾಯಿತು. ದೇವತೆಗಳೆಲ್ಲ ಜನ್ಮಾಭಿಷೇಕಕ್ಕೆ ಹೊರಟುಹೋದುದರಿಂದ ಸ್ವರ್ಗವು ಶೂನ್ಯವಾಗಿದ್ದಿತೆಂದು ಭಾವವು. ದೇವೇಂದ್ರರ ವೈಭವವನ್ನು ಧರಿಸಿಕೊಂಡಿರುವ ಮೇರುಪರ್ವತವಾದರೋ ಸ್ವರ್ಗದ ಭಾವವನ್ನು ಹೊಂದಿತು.

**ತತೋಽಭಿಷೇಚನಂ ಭರ್ತುಃ ಕರ್ತುಮಿಂದ್ರಃ ಪ್ರಚಕ್ರಮೇ ।**
**[೨]ನಿವೇಶ್ಯಾಧಿಶಿಲಂ ಸೈಂಹೇ ವಿಷ್ಟರೇ ಪ್ರಾಙ್ಮುಖಂ ಪ್ರಭುಮ್ ॥ ೧೦೦ ॥**

ತರುವಾಯ ದೇವೇಂದ್ರನು ಪಾಂಡುಕಶಿಲೆಯಲ್ಲಿ ಸಿಂಹಪೀಠದಲ್ಲಿ ಪೂರ್ವಮುಖವಾಗಿ ಸ್ವಾಮಿಯನ್ನು ಸ್ಥಾಪಿಸಿ ಸ್ವಾಮಿಗೆ ಅಭಿಷೇಕವನ್ನು ಮಾಡುವುದಕ್ಕೆ ಪ್ರಾರಂಭಿಸಿದನು.

**ನಭೋಽಶೇಷಂ ತದಾಪೂರ್ಯ ಸುರದುಂದುಭಯೋಽಧ್ವನನ್ ।**
**ಸಮಂತಾತ್ಸುರನಾರೀಭಿರಾರೇಭೇ ನೃತ್ಯಮೂರ್ಜಿತಮ್ ॥ ೧೦೧ ॥**

ಆಗ ದೇವದುಂದುಭಿಗಳ ಶಬ್ದವು ಆಕಾಶವನ್ನೆಲ್ಲ ತುಂಬಿತು. ಎಲ್ಲಾ ಕಡೆಗಳಲ್ಲಿಯೂ ದೇವಸ್ತ್ರೀಯರು ಉಲ್ಲಾಸದಿಂದ ನರ್ತನವನ್ನು ಮಾಡಲಾರಂಭಿಸಿದರು.

**ಮಹಾನ್ಕಾಲಾಗರೂ[೩]ದ್ದಾಮಧೂಪಧೂಮಸ್ತದೋ[೪]ದಗಾತ್ ।**
**ಕಲಂಕ ಇವ ನಿರ್ಧೂತಃ ಪುಣ್ಯೈಃ ಪುಣ್ಯಜನಾ[೫]ಶಯಾತ್ ॥ ೧೦೨ ॥**

ಆಗ ಉತ್ತಮವಾದ ಕಾಲಾಗರುಧೂಪದ ಹೊಗೆಯು, ಪುಣ್ಯಗಳಿಂದ ತೊಳೆಯಲ್ಪಟ್ಟ ಪುಣ್ಯಪುರುಷರ ಹೃದಯದಿಂದ ಹೊರಟ ಕಲ್ಮಷವೋ ಎಂಬಂತೆ ಮೇಲಕ್ಕೆದ್ದಿತು.

**ವಿಕ್ಷಿಪ್ಯಂತೇ ಸ್ಮ ಪುಣ್ಯಾರ್ಘಾಃ ಸಾಕ್ಷತೋದಕಪುಷ್ಪಕಾಃ ।**
**ಶಾಂತಿಪುಷ್ಟಿ[೬]ವಪುಷ್ಕಾಮ್ಯೈರ್ವಿಷ್ವಕ್ಪುಣ್ಯಾಂಶಕಾ ಇವ ॥ ೧೦೩ ॥**

ಶಾಂತಿ ಪುಷ್ಟಿ ತೇಜಸ್ಸು ಇವುಗಳನ್ನು ಇಚ್ಛಿಸುವ ದೇವತೆಗಳು ಎಲ್ಲಾಕಡೆಗಳಲ್ಲಿಯೂ ಪುಣ್ಯದ ಅಂಶಗಳೋ ಎಂಬಂತಿರುವ ಅಕ್ಷತ ಜಲ ಪುಷ್ಪ ಇವು ಮಿಶ್ರವಾದ ಪುಣ್ಯಾರ್ಘ್ಯಗಳನ್ನು ಎತ್ತಿದರು.

**ಮಹಾಮಂಡಪವಿನ್ಯಾಸಸ್ತತ್ರ ಚಕ್ರೇ ಸುರೇಶ್ವರೈಃ ।**
**ಯತ್ರ ತ್ರಿಭುವನಂ ಕೃತ್ಸ್ನಮಾಸ್ತೇ ಸ್ಮಾಬಾಧಿತಂ ಮಿಥಃ ॥ ೧೦೪ ॥**

ಅಲ್ಲಿ ದೇವತೆಗಳು ಮೂರುಲೋಕದ ಪ್ರಾಣಿ ಸಮುದಾಯವು ಪರಸ್ಪರವಾಗಿ ಬಾಧೆಯಿಲ್ಲದಂತೆ ಇರುವುದಕ್ಕೆ ಯೋಗ್ಯವಾದ ಒಂದು ದೊಡ್ಡ ಮಂಟಪವನ್ನು ರಚಿಸಿದರು.

**ಸುರಾನೋಕಹಸಂಭೂತಾ ಮಾಲಾಸ್ತತ್ರಾವಲಂಬಿತಾಃ ।**
**ರೇಜುರ್ಭ್ರಮರಸಂಗೀತೈರ್ಗಾತುಕಾಮಾ ಇವೇಶಿನಮ್ ॥ ೧೦೫ ॥**

ಆ ಮಂಟಪದಲ್ಲಿ ಕಲ್ಪವೃಕ್ಷದ ಪುಷ್ಪಮಾಲಿಕೆಗಳನ್ನು ತೂಗುಹಾಕಿದರು. ಆ ಮಾಲಿಕೆಗಳು ಭ್ರಮರಗಳ ಸಂಗೀತಗಳಿಂದ ಸ್ವಾಮಿಯನ್ನು ಗಾನ ಮಾಡುವುದಕ್ಕೆ ಇಚ್ಛಿಸುತ್ತವೆಯೋ ಎಂಬಂತೆ ಶೋಭಿಸಿದುವು.

೧ ತಾಲವೃಂತಾನಿ. ೨ ಶುಭ್ರಾ ಶುದ್ಧಾ. ೩ ಬಹುವಾರಾನ್. ೪ ರತ್ನೋದ್ಯೋತೈಃ. ೫ ಪರಸ್ಪರಂ ಸಂಯುಕ್ತೈಃ. ೬ ಊರ್ಧ್ವಭೂಮಿಂ. ೭ ನಿವೇಶಃ ಶಿಬಿರಂ ಷಂಡ ಇತ್ಯಮರಃ.

೧ ಶೂನ್ಯೀಕೃತಃ. ೨ ಸ್ಥಾಪಯಿತ್ವಾ. ೩ ಉತ್ತಮಃ. ೪ ಉದ್ಗತೋಽಭೂತ್. ೫ ಹೃದಯಾತ್. ೬ ವರ್ಚಸ್ತೇಜ ಇತ್ಯರ್ಥಃ.

**ಅಥ ಪ್ರಥಮಕಲ್ಪೇಂದ್ರಃ ಪ್ರಭೋಃ ಪ್ರಥಮಮಜ್ಜನೇ ।**
**ಪ್ರಚಕ್ರೇ ಕಲಶೋದ್ಧಾರಂ ಕೃತಪ್ರಸ್ತಾವನಾವಿಧಿಃ ॥ ೧೦೬ ॥**

ತರುವಾಯ ಸೌಧರ್ಮೇಂದ್ರನು ಪ್ರಸ್ತಾವನೆಯ ವಿಧಿಯನ್ನು ಮಾಡಿ ಸ್ವಾಮಿಗೆ ಮೊದಲು ಅಭಿಷೇಕಮಾಡುವುದಕ್ಕೋಸ್ಕರ ಕಲಶವನ್ನು ಎತ್ತಿದನು.

**ಐಶಾನೇಂದ್ರೋಽಪಿ ರುಂದ್ರಶ್ರೀಃ ಸಾಂದ್ರಚಂದನಚರ್ಚಿತಮ್ ।**
**[1]ಪ್ರೋದಾಸ್ಥಾತ್ಕಲಶಂ ಪೂರ್ಣಂ ಕಲಶೋದ್ಧಾರಮಂತ್ರವಿತ್ ॥ ೧೦೭ ॥**

ಅಧಿಕವಾದ ಸಂಪತ್ತುಳ್ಳವನೂ ಕಲಶವನ್ನೆತ್ತುವ ಮಂತ್ರವನ್ನು ತಿಳಿದವನೂ ಆದ ಈಶಾನೇಂದ್ರನೂ ದಟ್ಟವಾಗಿ ಚಂದನವನ್ನು ಲೇಪಿಸಿರುವ ಪೂರ್ಣಕಲಶವನ್ನು ಎತ್ತಿಕೊಂಡನು.

**ಶೇಷೈರಪಿ ಚ ಕಲ್ಪೇಂದ್ರೈಃ ಸಾನಂದಜಯಘೋಷಣೈಃ ।**
**ಪರಿಚಾರಕತಾ ಭೇಜೇ ಯಥೋಕ್ತ [2]ಪರಿಚರ್ಯಯಾ ॥ ೧೦೮ ॥**

ಬೇರೆ ಸ್ವರ್ಗಗಳ ಇಂದ್ರರೂ ಆನಂದದಿಂದ ಜಯಘೋಷವನ್ನು ಮಾಡಿ ಹಿಂದೆಹೇಳಿದ ಉಪಾಸನೆಯಿಂದ ಸೇವೆಯನ್ನು ಮಾಡಿದರು.

**ಇಂದ್ರಾಣೀಪ್ರಮುಖಾ ದೇವ್ಯಃ ಸಾಪ್ಸರಃಪರಿವಾರಿಕಾಃ ।**
**ಬಭೂವುಃ ಪರಿಚಾರಿಣ್ಯೋ ಮಂಗಲದ್ರವ್ಯಸಂಪದಾ ॥ ೧೦೯ ॥**

ಶಚೀಮೊದಲಾದ ದೇವಿಯರೂ ಅಪ್ಸರಸ್ತ್ರೀಯರೂ ಪರಿವಾರದೇವತೆಗಳ ಸ್ತ್ರೀಯರೂ ಮಂಗಲದ್ರವ್ಯಗಳನ್ನು ಧರಿಸಿಕೊಂಡು ಪರಿಚಾರಕಿಯರಾದರು.

**ಶಾತಕುಂಭಮಯೈಃ ಕುಂಭೈರಂಭಃ ಕ್ಷೀರಾಂಬುಧೇಃ ಶುಚಿ ।**
**ಸುರಾಃ ಶ್ರೇಣೀಕೃತಾಸ್ತೋಷಾದಾನೇತುಂ ಪ್ರಸೃತಾಸ್ತತಃ ॥ ೧೧೦ ॥**

ತರುವಾಯ ಸುವರ್ಣಮಯವಾದ ಕುಂಭಗಳಿಂದ ಕ್ಷೀರಸಮುದ್ರದ ನಿರ್ಮಲವಾದ ನೀರನ್ನು ತರುವುದಕ್ಕೋಸ್ಕರ ದೇವತೆಗಳು ಆನಂದದಿಂದ ಸಾಲಾಗಿ ಹೊರಟರು.

**ಪೂತಂ ಸ್ವಾಯಂಭುವಂ ಗಾತ್ರಂ ಸ್ಪ್ರಷ್ಟುಂ ಕ್ಷೀರಾಚ್ಛಶೋಣಿತಮ್ ।**
**ನಾನ್ಯದಸ್ತಿ ಜಲಂ ಯೋಗ್ಯಂ ಕ್ಷೀರಾಬ್ಧಿಸಲಿಲಾದೃತೇ ॥ ೧೧೧ ॥**

**ಮತ್ವೇತಿ ನಾಕಿಭಿರ್ನೂನಮನೂನಪ್ರಮದೋದಯೈಃ ।**
**ಪಂಚಮಸ್ಯಾರ್ಣವಸ್ಯಾಂಭಃ ಸ್ನಾನೀಯ[3]ಮುಪಕಲ್ಪಿತಮ್ ॥ ೧೧೨ ॥**

ಹಾಲಿನಂತೆ ಸ್ವಚ್ಛವಾದ ರಕ್ತವುಳ್ಳವನೂ ಸ್ವಯಂಭುವೂ ಆದ ಸ್ವಾಮಿಯ ನಿರ್ಮಲವಾದ ಶರೀರವನ್ನು ಸ್ಪರ್ಶಮಾಡುವುದಕ್ಕೆ ಕ್ಷೀರಸಮುದ್ರದ ನೀರು ಹೊರತು ಬೇರೆ ನೀರು ಯೋಗ್ಯವಾಗಿಲ್ಲವೆಂದು ತಿಳಿದು ದೇವತೆಗಳು ಅಧಿಕವಾದ ಸಂತೋಷದಿಂದ ಐದನೆಯ ಸಮುದ್ರ(ಕ್ಷೀರಸಮುದ್ರ)ದ ನೀರನ್ನು ಸ್ನಾನಕ್ಕೆ ಯೋಗ್ಯವನ್ನಾಗಿ ಮಾಡಿದರು.

**ಅಷ್ಟಯೋಜನ[4]ಗಂಭೀರೈರ್ಮುಖೇ ಯೋಜನವಿಸ್ತೃತೈಃ ।**
**ಪ್ರಾರೇಭೇ ಕಾಂಚನೈಃ ಕುಂಭೈರ್ಜನ್ಮಾಭಿಷವಣೋತ್ಸವಃ ॥ ೧೧೩ ॥**

ಎಂಟುಯೋಜನ ಆಳವೂ ಮುಖದಲ್ಲಿ ಒಂದುಯೋಜನ ವಿಸ್ತಾರವೂ ಆದ ಬಂಗಾರದ ಕುಂಭಗಳಿಂದ ಜನ್ಮಾಭಿಷೇಕವನ್ನು ಮಾಡುವುದಕ್ಕೆ ಪ್ರಾರಂಭಿಸಿದರು.

**ಮಹಾಮಾನಾ ವಿರೇಜುಸ್ತೇ ಸುರಾಣಾಮುದ್ಧೃತಾಃ ಕರೈಃ ।**
**ಕಲಶಾಃ [5]ಕಲ್ಮಷೋನ್ಮೇಷಮೋಷಿಣೋ [6]ವಿಘ್ನಕಾಷಿಣಃ ॥ ೧೧೪ ॥**

ರಂಧ್ರ ಕಪ್ಪು ಮೊದಲಾದ ದೋಷರಹಿತಗಳೂ ವಿಘ್ನವಿನಾಶಕಗಳೂ ದೊಡ್ಡ ಪರಿಮಾಣವುಳ್ಳವೂ ಆದ ಆ ಕಲಶಗಳು ದೇವತೆಗಳ ಕೈಗಳಿಂದ ಧರಿಸಲ್ಪಟ್ಟು ಅಧಿಕವಾಗಿ ಶೋಭಿಸಿದುವು.

**ಪ್ರಾದುರಾಸನ್ನಭೋಭಾಗೇ ಸ್ವರ್ಣಕುಂಭಾ [1]ಧೃತಾರ್ಣಸಃ ।**
**ಮುಕ್ತಾಫಲಾಂಚಿತಗ್ರೀವಾಶ್ಚಂದನದ್ರವಚರ್ಚಿತಾಃ ॥ ೧೧೫ ॥**

ಕ್ಷೀರಸಮುದ್ರದ ಜಲಭರಿತಗಳೂ ಕಂಠಪ್ರದೇಶದಲ್ಲಿ ಮುತ್ತಿನ ಮಾಲಿಕೆಗಳುಳ್ಳವೂ ಚಂದನ ದ್ರವದಿಂದ ಲೇಪಿಸಲ್ಪಟ್ಟುವೂ ಆದ ಬಂಗಾರದ ಕುಂಭಗಳು ಆಕಾಶಪ್ರದೇಶದಲ್ಲಿ ಕಾಣಿಸಿಕೊಂಡುವು.

**ತೇಷಾಮನ್ಯೋನ್ಯಹಸ್ತಾಗ್ರಸಂಕ್ರಾಂತೈರ್ಜಲಪೂರಿತೈಃ ।**
**ಕಲಶೈರ್ವ್ಯಾನಶೇ ವ್ಯೋಮ ಹೈಮೈಃ ಸಾಂಧ್ಯೈರಿವಾಂಬುಧೈಃ ॥ ೧೧೬ ॥**

ಆಕಾಶವು ಸಂಧ್ಯಾಕಾಲಸಂಬಂಧವಾದ ಬಂಗಾರದ ಮೇಘಗಳಿಂದ ವ್ಯಾಪ್ತವಾದಂತೆ ಆ ದೇವತೆಗಳ ಕೈಯಿಂದ ಕೈಗೆ ಬದಲಾಯಿಸಲ್ಪಟ್ಟ ಜಲಭರಿತವಾದ ಕುಂಭಗಳಿಂದ ವ್ಯಾಪ್ತವಾಯಿತು.

**[2]ವಿನಿರ್ಮಮೇ ಬಹೂನ್ಬಾಹೂಂ[3]ಸ್ತಾ[4]ನಾದಿತ್ಸುಃ ಶತಾಧ್ವರಃ ।**
**[5]ಸ [6]ತೈಃ ಸಾಭರಣೈರ್ಭೇಜೇ ಭೂಷಣಾಂಗ ಇವಾಂಘ್ರಿಪಃ ॥ ೧೧೭ ॥**

ಆ ಕುಂಭಗಳನ್ನು ಸ್ವೀಕರಿಸಬೇಕೆಂಬ ಇಚ್ಛೆಯುಳ್ಳ ದೇವೇಂದ್ರನು ಅನೇಕಕೈಗಳನ್ನು ನಿರ್ಮಿಸಿಕೊಂಡನು. ಆಭರಣಸಹಿತವಾದ ಆ ಕೈಗಳನ್ನು ದೇವೇಂದ್ರನು, ಭೂಷಣಾಂಗವೆಂಬ ಕಲ್ಪವೃಕ್ಷದಂತೆ, ಹೊಂದಿದನು.

**ದೋಃಸಹಸ್ರೋದ್ಧೃತೈಃಕುಂಭೈರೌಕ್ಮೈರ್ಮುಕ್ತಾಫಲಾಂಚಿತೈಃ ।**
**ಭೇಜೇ ಪುಲೋಮಜಾಜಾನಿರ್ಭಾಜನಾಂಗದ್ರುಮೋಪಮಾಮ್ ॥**

ತನ್ನ ಸಾವಿರ ಕೈಗಳಿಂದ ಧರಿಸಲ್ಪಟ್ಟುವೂ ಮುತ್ತುಗಳಿಂದ ಕೂಡಿರುವುವೂ ಆದ ಬಂಗಾರದ ಕುಂಭಗಳಿಂದ ಶಚೀಪತಿಯಾದ ದೇವೇಂದ್ರನು ಭಾಜನಾಂಗವೆಂಬ ಕಲ್ಪವೃಕ್ಷದ ಸಾದೃಶ್ಯವನ್ನು ಹೊಂದಿದನು. ಭಾಜನಾಂಗಕಲ್ಪವೃಕ್ಷದಂತೆ ಶೋಭಿಸುತ್ತಿದ್ದನೆಂದು ಭಾವವು.

**ಜಯೇತಿ ಪ್ರಥಮಾಂ ಧಾರಾಂ ಸೌಧರ್ಮೇಂದ್ರೋ ನ್ಯಪಾತಯುತ್ ।**
**ತದಾ ಕಲಕಲೋ ಭೂಯಾನ್ಪಚಕ್ರೇ ಸುರಕೋಟಿಭಿಃ ॥ ೧೧೯ ॥**

ಸೌಧರ್ಮೇಂದ್ರನು ''ಜಯ'' ವೆಂದು ಹೇಳಿ ಮೊದಲನೆಯ ಜಲಧಾರೆಯನ್ನು ಸುರಿದನು. ಆಗ ಅನೇಕದೇವತೆಗಳು ಅಧಿಕವಾದ ಕಲಕಲಶಬ್ದವನ್ನು ಮಾಡಿದರು.

**ಸೈಷಾ ಧಾರಾ ಜಿನಸ್ಯಾಧಿಮೂರ್ಧ್ನಂ ರೇಜೇ ಪತಂತ್ಯಪಾಮ್ ।**
**ಹಿಮಾದ್ರೇಃ ಶಿರಸೀವೋಚ್ಚೈರಚ್ಛಿನ್ನಾಂಬುರ್ದ್ಯುನಿಮ್ನಗಾ ॥ ೧೨೦ ॥**

ಜಿನೇಶ್ವರನ ಮಸ್ತಕದಲ್ಲಿ ಬೀಳುತ್ತಿರುವ ಆ ಈ ಜಲಧಾರೆಯು, ಹಿಮವತ್ಪರ್ವತದ ಶಿಖರದಲ್ಲಿ ಅವಿಚ್ಛಿನ್ನವಾದ ಜಲಧಾರೆಯುಳ್ಳ ದೇವಗಂಗೆಯಂತೆ, ಶೋಭಿಸಿತು.

**ತತಃ ಕಲ್ಪೇಶ್ವರೈಃ ಸರ್ವೈಃ [7]ಸಮಂ ಧಾರಾ ನಿಪಾತಿತಾಃ ।**
**ಸಂಧ್ಯಾಭ್ರೈರಿವ ಸೌವರ್ಣೈಃ ಕಲಶೈರಂಬುಸಂಭೃತೈಃ ॥ ೧೨೧ ॥**

**ಮಹಾನದ್ಯ ಇವಾಪಪ್ತನ್ಧಾರಾ ಮೂರ್ಧನೀಶಿತುಃ ।**
**ಹೇಲಯೈವ ಮಹಿಮ್ನಾಸೌ ತಾಃ [8]ಪ್ರತ್ಯೈಚ್ಛದ್ಗಿರೀಂದ್ರವತ್ ॥ ೧೨೨ ॥**

ತರುವಾಯ ಕಲ್ಪೇಂದ್ರರೆಲ್ಲ ಸಂಧ್ಯಾಕಾಲದ ಮೇಘಗಳಂತಿರುವುವೂ ಜಲಭರಿತವೂ ಆದ ಸುವರ್ಣಕುಂಭಗಳಿಂದ ದೊಡ್ಡ ನದಿಯ ಜಲಧಾರೆ

೧ ಉದ್ಧರಣಂ ಕೃತವಾನ್. ೨ ಉಪಾಸನೇನ. ೩ ಕೃತಂ. ೪ ನಿಮ್ನೈಃ. ೫ ಛೇದಕಾಲಾದಿ ದೋಷಪ್ರಾಕಟ್ಯರಹಿತಾಃ. ೬ ವಿಘ್ನವಿನಾಶಕಾಃ.

೧ ಭೃತಜಲಾಃ. ೨ ನಿರ್ಮಿತವಾನ್. ೩ ಕುಂಭಾನ್. ೪ ಸ್ವೀಕರ್ತುಮಿಚ್ಛುಃ. ೫ ಇಂದ್ರಃ. ೬ ಬಾಹುಭಿಃ. ೭ ಯುಗಪತ್. ೮ ಸ್ವೀಕರೋತಿ ಸ್ಮ.

**ಅಥ ಪ್ರಥಮಕಲ್ಪೇಂದ್ರಃ ಪ್ರಭೋಃ ಪ್ರಥಮಮಜ್ಜನೇ ।**
**ಪ್ರಚಕ್ರೇ ಕಲಶೋದ್ಧಾರಂ ಕೃತಪ್ರಸ್ತಾವನಾವಿಧಿಃ ॥ ೧೦೬ ॥**

ತರುವಾಯ ಸೌಧರ್ಮೇಂದ್ರನು ಪ್ರಸ್ತಾವನೆಯ ವಿಧಿಯನ್ನು ಮಾಡಿ ಸ್ವಾಮಿಗೆ ಮೊದಲು ಅಭಿಷೇಕಮಾಡುವುದಕ್ಕೋಸ್ಕರ ಕಲಶವನ್ನು ಎತ್ತಿದನು.

**ಐಶಾನೇಂದ್ರೋಪಿ ರುಂದ್ರಶ್ರೀಃ ಸಾಂದ್ರಚಂದನಚರ್ಚಿತಮ್ ।**
**[೧]ಪ್ರೋದಾಸ್ಥಾತ್ಕಲಶಂ ಪೂರ್ಣಂ ಕಲಶೋದ್ಧಾರಮಂತ್ರವಿತ್ ॥ ೧೦೭ ॥**

ಅಧಿಕವಾದ ಸಂಪತ್ತುಳ್ಳವನೂ ಕಲಶವನ್ನೆತ್ತುವ ಮಂತ್ರವನ್ನು ತಿಳಿದವನೂ ಆದ ಈಶಾನೇಂದ್ರನೂ ದಟ್ಟವಾಗಿ ಚಂದನವನ್ನು ಲೇಪಿಸಿರುವ ಪೂರ್ಣಕಲಶವನ್ನು ಎತ್ತಿಕೊಂಡನು.

**ಶೇಷೈರಪಿ ಚ ಕಲ್ಪೇಂದ್ರೈಃ ಸಾನಂದಜಯಘೋಷಣೈಃ ।**
**ಪರಿಚಾರಕತಾ ಭೇಜೇ ಯಥೋಕ್ತ [೨]ಪರಿಚರ್ಯಯಾ ॥ ೧೦೮ ॥**

ಬೇರೆ ಸ್ವರ್ಗಗಳ ಇಂದ್ರರೂ ಆನಂದದಿಂದ ಜಯಘೋಷವನ್ನು ಮಾಡಿ ಹಿಂದೆಹೇಳಿದ ಉಪಾಸನೆಯಿಂದ ಸೇವೆಯನ್ನು ಮಾಡಿದರು.

**ಇಂದ್ರಾಣೀಪ್ರಮುಖಾ ದೇವ್ಯಃ ಸಾಪ್ಸರಃಪರಿವಾರಿಕಾಃ ।**
**ಬಭೂವುಃ ಪರಿಚಾರಿಣ್ಯೋ ಮಂಗಲದ್ರವ್ಯಸಂಪದಾ ॥ ೧೦೯ ॥**

ಶಚೀಮೊದಲಾದ ದೇವಿಯರೂ ಅಪ್ಸರಸ್ತ್ರೀಯರೂ ಪರಿವಾರದೇವತೆಗಳ ಸ್ತ್ರೀಯರೂ ಮಂಗಲದ್ರವ್ಯಗಳನ್ನು ಧರಿಸಿಕೊಂಡು ಪರಿಚಾರಕಿಯರಾದರು.

**ಶಾತಕುಂಭಮಯೈಃ ಕುಂಭೈರಂಭಃ ಕ್ಷೀರಾಂಬುಧೇಃ ಶುಚಿ ।**
**ಸುರಾಃ ಶ್ರೇಣೀಕೃತಾಸ್ತೋಷಾದಾನೇತುಂ ಪ್ರಸೃತಾಸ್ತತಃ ॥ ೧೧೦ ॥**

ತರುವಾಯ ಸುವರ್ಣಮಯವಾದ ಕುಂಭಗಳಿಂದ ಕ್ಷೀರಸಮುದ್ರದ ನಿರ್ಮಲವಾದ ನೀರನ್ನು ತರುವುದಕ್ಕೋಸ್ಕರ ದೇವತೆಗಳು ಆನಂದದಿಂದ ಸಾಲಾಗಿ ಹೊರಟರು.

**ಪೂತಂ ಸ್ವಾಯಂಭುವಂ ಗಾತ್ರಂ ಸ್ಪ್ರಷ್ಟುಂ ಕ್ಷೀರಾಚ್ಛಶೋಣಿತಮ್ ।**
**ನಾನ್ಯದಸ್ತಿ ಜಲಂ ಯೋಗ್ಯಂ ಕ್ಷೀರಾಬ್ಧಿಸಲಿಲಾದೃತೇ ॥ ೧೧೧ ॥**

**ಮತ್ವೇತಿ ನಾಕಿಭಿರ್ನೂನಮನೂನಪ್ರಮದೋದಯೈಃ ।**
**ಪಂಚಮಸ್ಯಾರ್ಣವಸ್ಯಾಂಭಃ ಸ್ನಾನೀಯ[೩]ಮುಪಕಲ್ಪಿತಮ್ ॥ ೧೧೨ ॥**

ಹಾಲಿನಂತೆ ಸ್ವಚ್ಛವಾದ ರಕ್ತವುಳ್ಳವನೂ ಸ್ವಯಂಭುವೂ ಆದ ಸ್ವಾಮಿಯ ನಿರ್ಮಲವಾದ ಶರೀರವನ್ನು ಸ್ಪರ್ಶಮಾಡುವುದಕ್ಕೆ ಕ್ಷೀರಸಮುದ್ರದ ನೀರು ಹೊರತು ಬೇರೆ ನೀರು ಯೋಗ್ಯವಾಗಿಲ್ಲವೆಂದು ತಿಳಿದು ದೇವತೆಗಳು ಅಧಿಕವಾದ ಸಂತೋಷದಿಂದ ಐದನೆಯ ಸಮುದ್ರ(ಕ್ಷೀರಸಮುದ್ರ)ದ ನೀರನ್ನು ಸ್ನಾನಕ್ಕೆ ಯೋಗ್ಯವನ್ನಾಗಿ ಮಾಡಿದರು.

**ಅಷ್ಟಯೋಜನ[೪]ಗಂಭೀರೈರ್ಮುಖೇಯೋಜನವಿಸ್ತೃತೈಃ ।**
**ಪ್ರಾರೇಭೇ ಕಾಂಚನೈಃ ಕುಂಭೈರ್ಜನ್ಮಾಭಿಷವಣೋತ್ಸವಃ ॥ ೧೧೩ ॥**

ಎಂಟುಯೋಜನ ಆಳವೂ ಮುಖದಲ್ಲಿ ಒಂದುಯೋಜನ ವಿಸ್ತಾರವೂ ಆದ ಬಂಗಾರದ ಕುಂಭಗಳಿಂದ ಜನ್ಮಾಭಿಷೇಕವನ್ನು ಮಾಡುವುದಕ್ಕೆ ಪ್ರಾರಂಭಿಸಿದರು.

**ಮಹಾಮಾನಾ ವಿರೇಜುಸ್ತೇ ಸುರಾಣಾಮುದ್ಧೃತಾಃ ಕರೈಃ ।**
**ಕಲಶಾಃ [೫]ಕಲ್ಮಷೋನ್ಮೇಷಮೋಷಿಣೋ [೬]ವಿಘ್ನಕಾಷಿಣಃ ॥ ೧೧೪ ॥**

ರಂಧ್ರ ಕಪ್ಪು ಮೊದಲಾದ ದೋಷರಹಿತಗಳೂ ವಿಘ್ನವಿನಾಶಕಗಳೂ ದೊಡ್ಡ ಪರಿಮಾಣವುಳ್ಳವೂ ಆದ ಆ ಕಲಶಗಳು ದೇವತೆಗಳ ಕೈಗಳಿಂದ ಧರಿಸಲ್ಪಟ್ಟು ಅಧಿಕವಾಗಿ ಶೋಭಿಸಿದುವು.

**ಪ್ರಾದುರಾಸನ್ನಭೋಭಾಗೇ ಸ್ವರ್ಣಕುಂಭಾ [೧]ಧೃತಾರ್ಣಸಃ ।**
**ಮುಕ್ತಾಫಲಾಂಚಿತಗ್ರೀವಾಶ್ಚಂದನದ್ರವಚರ್ಚಿತಾಃ ॥ ೧೧೫ ॥**

ಕ್ಷೀರಸಮುದ್ರದ ಜಲಭರಿತಗಳೂ ಕಂಠಪ್ರದೇಶದಲ್ಲಿ ಮುತ್ತಿನ ಮಾಲಿಕೆಗಳುಳ್ಳವೂ ಚಂದನ ದ್ರವದಿಂದ ಲೇಪಿಸಲ್ಪಟ್ಟುವೂ ಆದ ಬಂಗಾರದ ಕುಂಭಗಳು ಆಕಾಶಪ್ರದೇಶದಲ್ಲಿ ಕಾಣಿಸಿಕೊಂಡುವು.

**ತೇಷಾಮನ್ಯೋನ್ಯಹಸ್ತಾಗ್ರಸಂಕ್ರಾಂತೈರ್ಜಲಪೂರಿತೈಃ ।**
**ಕಲಶೈರ್ವ್ಯಾನಶೇ ವ್ಯೋಮ ಹೈಮೈಃ ಸಾಂಧ್ಯೈರಿವಾಂಬುಧೈಃ ॥ ೧೧೬ ॥**

ಆಕಾಶವು ಸಂಧ್ಯಾಕಾಲಸಂಬಂಧವಾದ ಬಂಗಾರದ ಮೇಘಗಳಿಂದ ವ್ಯಾಪ್ತವಾದಂತೆ ಆ ದೇವತೆಗಳ ಕೈಯಿಂದ ಕೈಗೆ ಬದಲಾಯಿಸಲ್ಪಟ್ಟ ಜಲಭರಿತವಾದ ಕುಂಭಗಳಿಂದ ವ್ಯಾಪ್ತವಾಯಿತು.

**[೨]ವಿನಿರ್ಮಮೇ ಬಹೂನ್ಬಾಹೂಂ[೩]ಸ್ತಾ[೪]ನಾದಿತ್ಸುಃ ಶತಾಧ್ವರಃ ।**
**[೫]ಸ [೬]ತೈಃ ಸಾಭರಣೈರ್ಭೇಜೇ ಭೂಷಣಾಂಗ ಇವಾಂಘ್ರಿಪಃ ॥ ೧೧೭ ॥**

ಆ ಕುಂಭಗಳನ್ನು ಸ್ವೀಕರಿಸಬೇಕೆಂಬ ಇಚ್ಛೆಯುಳ್ಳ ದೇವೇಂದ್ರನು ಅನೇಕಕೈಗಳನ್ನು ನಿರ್ಮಿಸಿಕೊಂಡನು. ಆಭರಣಸಹಿತವಾದ ಆ ಕೈಗಳನ್ನು ದೇವೇಂದ್ರನು, ಭೂಷಣಾಂಗವೆಂಬ ಕಲ್ಪವೃಕ್ಷದಂತೆ, ಹೊಂದಿದನು.

**ದೋಃಸಹಸ್ರೋದ್ಧೃತೈಃಕುಂಭೈರೌಕ್ಮೈರ್ಮುಕ್ತಾಫಲಾಂಚಿತೈಃ ।**
**ಭೇಜೇ ಪುಲೋಮಜಾಜಾನಿರ್ಭಾಜನಾಂಗದ್ರುಮೋಪಮಾಮ್ ॥**

ತನ್ನ ಸಾವಿರ ಕೈಗಳಿಂದ ಧರಿಸಲ್ಪಟ್ಟುವೂ ಮುತ್ತುಗಳಿಂದ ಕೂಡಿರುವುವೂ ಆದ ಬಂಗಾರದ ಕುಂಭಗಳಿಂದ ಶಚೀಪತಿಯಾದ ದೇವೇಂದ್ರನು ಭಾಜನಾಂಗವೆಂಬ ಕಲ್ಪವೃಕ್ಷದ ಸಾದೃಶ್ಯವನ್ನು ಹೊಂದಿದನು. ಭಾಜನಾಂಗಕಲ್ಪವೃಕ್ಷದಂತೆ ಶೋಭಿಸುತ್ತಿದ್ದನೆಂದು ಭಾವವು.

**ಜಯೇತಿ ಪ್ರಥಮಾಂ ಧಾರಾಂ ಸೌಧರ್ಮೇಂದ್ರೋ ನ್ಯಪಾತಯತ್ ।**
**ತದಾ ಕಲಕಲೋ ಭೂಯಾನ್ಪ್ರಚಕ್ರೇ ಸುರಕೋಟಿಭಿಃ ॥ ೧೧೯ ॥**

ಸೌಧರ್ಮೇಂದ್ರನು ''ಜಯ'' ವೆಂದು ಹೇಳಿ ಮೊದಲನೆಯ ಜಲಧಾರೆಯನ್ನು ಸುರಿದನು. ಆಗ ಅನೇಕದೇವತೆಗಳು ಅಧಿಕವಾದ ಕಲಕಲಶಬ್ದವನ್ನು ಮಾಡಿದರು.

**ಸೈಷಾ ಧಾರಾ ಜಿನಸ್ಯಾಧಿಮೂರ್ಧ್ನಂ ರೇಜೇ ಪತಂತ್ಯಪಾಮ್ ।**
**ಹಿಮಾದ್ರೇಃ ಶಿರಸೀವೋಚ್ಚೈರಚ್ಛಿನ್ನಾಂಬುರ್ದ್ಯುನಿಮ್ನಗಾ ॥ ೧೨೦ ॥**

ಜಿನೇಶ್ವರನ ಮಸ್ತಕದಲ್ಲಿ ಬೀಳುತ್ತಿರುವ ಆ ಈ ಜಲಧಾರೆಯು, ಹಿಮವತ್ಪರ್ವತದ ಶಿಖರದಲ್ಲಿ ಅವಿಚ್ಛಿನ್ನವಾದ ಜಲಧಾರೆಯುಳ್ಳ ದೇವಗಂಗೆಯಂತೆ, ಶೋಭಿಸಿತು.

**ತತಃ ಕಲ್ಪೇಶ್ವರೈಃ ಸರ್ವೈಃ [೭]ಸಮಂ ಧಾರಾ ನಿಪಾತಿತಾಃ ।**
**ಸಂಧ್ಯಾಭ್ರೈರಿವ ಸೌವರ್ಣೈಃ ಕಲಶೈರಂಬುಸಂಭೃತೈಃ ॥ ೧೨೧ ॥**

**ಮಹಾನದ್ಯ ಇವಾಪಪ್ತನ್ಧಾರಾ ಮೂರ್ಧನೀಶಿತುಃ ।**
**ಹೇಲಯೈವ ಮಹಿಮ್ನಾಸೌ ತಾಃ [೮]ಪ್ರತ್ಯೈಚ್ಛದ್ಗಿರೀಂದ್ರವತ್ ॥ ೧೨೨ ॥**

ತರುವಾಯ ಕಲ್ಪೇಂದ್ರರೆಲ್ಲ ಸಂಧ್ಯಾಕಾಲದ ಮೇಘಗಳಂತಿರುವುವೂ ಜಲಭರಿತವೂ ಆದ ಸುವರ್ಣಕುಂಭಗಳಿಂದ ದೊಡ್ಡ ನದಿಯ ಜಲಧಾರೆ

೧ ಉದ್ಧರಣಂ ಕೃತವಾನ್. ೨ ಉಪಾಸನೇನ. ೩ ಕೃತಂ. ೪ ನಿಮ್ನೈಃ. ೫ ಛೇದಕಾಲಾದಿ ದೋಷಪ್ರಾಕಟ್ಯರಹಿತಾಃ. ೬ ವಿಘ್ನವಿನಾಶಕಾಃ.

೧ ಭೃತಜಲಾಃ. ೨ ನಿರ್ಮಿತವಾನ್. ೩ ಕುಂಭಾನ್. ೪ ಸ್ವೀಕರ್ತುಮಿಚ್ಛುಃ. ೫ ಇಂದ್ರಃ. ೬ ಬಾಹುಭಿಃ. ೭ ಯುಗಪತ್. ೮ ಸ್ವೀಕರೋತಿ ಸ್ಮ.

ಯನ್ನೋಪಾದಿಯಲ್ಲಿ ಒಟ್ಟಿಗೆ ಸ್ವಾಮಿಯ ಮಸ್ತಕದಲ್ಲಿ ನೀರನ್ನು ಸುರಿದರು. ಈ ವೃಷಭಸ್ವಾಮಿಯು, ಮೇರುಪರ್ವತದಂತೆ, ತಮ್ಮ ಮಹಿಮೆಯಿಂದ ಆ ಜಲಧಾರೆಗಳನ್ನು ಲೀಲೆಯಿಂದಲೇ (ಆಯಾಸವಿಲ್ಲದೆ) ಸ್ವೀಕರಿಸಿದರು.

**ವಿರೇಜುರಪ್ಪಟಾ ದೂರಮುಚ್ಚಲಂತ್ಯೋ ನಭೋಂಗಣೇ ।**
**ಜಿನಾಂಗಸ್ಪರ್ಶಸಂಸರ್ಗಾತ್ಪಾಪಾನ್ಮುಕ್ತಾ ಇವೋರ್ಧ್ವಗಾಃ ॥ ೧೨೩ ॥**

ಆಕಾಶಪ್ರದೇಶದಲ್ಲಿ ಬಹಳ ಮೇಲಕ್ಕೆ ಹಾರಿದ ಜಲಬಿಂದುಗಳು, ಜಿನೇಶ್ವರನ ಶರೀರಸ್ಪರ್ಶದ ಸಂಬಂಧದಿಂದ ಪಾಪದಿಂದ ಬಿಡುಗಡೆಯನ್ನು ಹೊಂದಿ ಮೇಲಕ್ಕೆ ಹೋಗುತ್ತವೆಯೋ ಎಂಬಂತೆ, ಶೋಭಿಸಿದುವು.

**ಕಾಶ್ಚನೋಚ್ಚಲಿತಾ ವ್ಯೋಮ್ನಿ ವಿಬಭುಃ ಶೀಕರಚ್ಛಟಾಃ ।**
**ಛಟಾಮಿವಾಮರಾವಾಸಪ್ರಾಂಗಣೇಷು [1]ತಿತಾಂಸವಃ ॥ ೧೨೪ ॥**

ಮೇಲಕ್ಕೆ ಹಾರಿದ ಕೆಲವು ತಂಪಾದ ಜಲಬಿಂದುಸಮೂಹಗಳು, ದೇವತೆಗಳ ವಾಸಸ್ಥಾನದ ಅಂಗಣಗಳಲ್ಲಿ ಚಳಿಯನ್ನು ಹರಡಬೇಕೆಂಬ ಇಚ್ಛೆಯುಳ್ಳವುಗಳಂತೆ ಆಕಾಶದಲ್ಲಿ ಶೋಭಿಸಿದುವು.

**ತಿರ್ಯಗ್ವಿಸಾರಿಣಃ ಕೇಚಿತ್ಸ್ನಾನಾಂಭಃ ಶೀಕರೋತ್ಕರಾಃ ।**
**ಕರ್ಣಪೂರಶ್ರಿಯಂ ತೇನುರ್ದಿಗ್ವಧೂಮುಖಸಂಗಿನೀಮ್ ॥ ೧೨೫ ॥**

ಅಡ್ಡಲಾಗಿ ಹರಡಿಕೊಂಡ ಕೆಲವು ಜಲಬಿಂದುಗಳು ದಿಕ್ಕನ್ಯೆಯರ ಮುಖದಲ್ಲಿ ಸಂಬಂಧಿಸಿರುವ ಕಿವಿಯ ಆಭರಣದ ಶೋಭೆಯನ್ನುಂಟುಮಾಡಿದುವು. ಕರ್ಣಾಭರಣದಂತೆ ಶೋಭಿಸುತ್ತಿದ್ದುವೆಂದು ಭಾವವು.

**ನಿರ್ಮಲೇ ಶ್ರೀಪತೇರಂಗೇ ಪತಿತ್ವಾತಿಪವಿತ್ರಿತಾಃ ।**
**ಜಲಧಾರಾಃ ಸ್ಫುರಂತಿ ಸ್ಮ [2]ದಿಷ್ಟಿವೃದ್ಧ್ಯೇವ ಸಂಗತಾಃ ॥ ೧೨೬ ॥**

ಜಿನೇಶ್ವರನ ನಿರ್ಮಲವಾದ ಶರೀರದಲ್ಲಿ ಬಿದ್ದು ಪವಿತ್ರಗಳಾದ ಜಲಧಾರೆಗಳು, ಭಾಗ್ಯಾತಿಶಯದಿಂದ ಸಂಬಂಧಿಸಿರುವಂತೆ, ಪ್ರಕಾಶಿಸಿದುವು. ಜಲಧಾರೆಗಳು ಭಾಗ್ಯಾತಿಶಯದೊಡನೆ ಸೇರಿಕೊಂಡಂತೆ ಶೋಭಿಸುತ್ತಿದ್ದುವೆಂದಭಿಪ್ರಾಯವು.

**[3]ಗಿರೇರಿವ ವಿಭೋರ್ಮೂರ್ಧ್ನಿ ಸುರೇಂದ್ರಾಭ್ರೈರ್ನಿಪಾತಿತಾಃ ।**
**ವಿರೇಜುರ್ನಿರ್ಝರಾಕಾರಾ ಧಾರಾಃ ಕ್ಷೀರಾರ್ಣವಾಂಭಸಾಮ್॥ ೧೨೭ ॥**

ಪರ್ವತದ ಶಿಖರದಲ್ಲಿ ಮೇಘಗಳು ಜಲಧಾರೆಗಳನ್ನು ಸುರಿಯುವಂತೆ, ವೃಷಭಸ್ವಾಮಿಯ ಮಸ್ತಕದಲ್ಲಿ ದೇವೇಂದ್ರರು ಸುರಿದ ಕ್ಷೀರಸಮುದ್ರದ ಜಲಧಾರೆಗಳು, ಗಿರಿನದಿಗಳಂತೆ, ಶೋಭಿಸಿದುವು.

**ತೋಷಾದಿವ ಖಮುತ್ಪತ್ಯ ಭೂಯೋಪಿ [4]ನಿಪತಂತ್ಯಧಃ ।**
**ಜಲಾನಿ [5]ಜಹಸುರ್ನೂನಂ ಜಲತಾಂ ಸ್ವಾಂ ಸ್ವಶೀಕರೈಃ ॥ ೧೨೮ ॥**

ಸಂತೋಷದಿಂದಲೋ ಎಂಬಂತೆ ಆಕಾಶಕ್ಕೆ ಹಾರಿ ಪುನಃ ಕೆಳಕ್ಕೆ ಬೀಳುತ್ತಿರುವ ನೀರು, ತನ್ನ ಬಿಂದು(ತುಂತುರು)ಗಳಿಂದ ತನ್ನ ಜಲ(ಜಡ)ತ್ವವನ್ನು ಪರಿಹಾಸ್ಯ ಮಾಡುವಂತೆ, ಶೋಭಿಸಿತು.

**ಸ್ವರ್ಧುನೀಶೀಕರೈಃ ಸಾರ್ದ್ಧಂ ಸ್ಪರ್ಧಾಂ ಕರ್ತುಮಿವೋರ್ಧ್ವಗೈಃ ।**
**ಶೀಕರೈ[6]ರ್ದ್ರಾಕ್ಪುನಾತಿ ಸ್ಮ [7]ಸ್ವರ್ಧಾಮಾನ್ಯಮೃತಪ್ಲವಃ ॥ ೧೨೯ ॥**

ಆ ಕ್ಷೀರಸಮುದ್ರದ ಜಲಾಭಿಷೇಕವು, ದೇವಗಂಗೆಯ ತುಂತುರುಗಳೊಡನೆ ಸ್ಪರ್ಧೆ(ಹೋರಾಟ)ಯನ್ನು ಮಾಡುವುದಕ್ಕೋಸ್ಕರವೋ ಎಂಬಂತೆ, ಮೇಲಕ್ಕೆದ್ದಿರುವ ತುಂತುರುಗಳಿಂದ ಶೀಘ್ರವಾಗಿ ಸ್ವರ್ಗದ ಮನೆಗಳನ್ನು ಪವಿತ್ರಮಾಡಿತು.

೧ ವಿಸ್ತಾರಿತುಮಿಚ್ಛವಃ. ೨ ಭಾಗ್ಯಾತಿಶಯೇನ. ೩ ಗಿರೇರ್ಮೂರ್ಧ್ನೀವೇತ್ಯರ್ಥಃ. ೪ ಜಸ್. ೫ ಹಸಂತಿ ಸ್ಮ. ೬ ರುಟಿತಿ. ೭ ಸ್ವರ್ಗಗೃಹಾಣಿ.

**ಪವಿತ್ರೋ ಭಗವಾನ್ಪೂತೈರಂಗೈಸ್ತ[1]ದಪುನಾಜ್ಜಲಮ್ ।**
**ತತ್ಪುನರ್ಜಗದೇವೇದ[2]ಮಪಾವೀದ್ವ್ಯಾಪ್ತದಿಙ್ಮುಖಮ್ ॥ ೧೩೦ ॥**

ಪವಿತ್ರನಾದ ಭಗವಂತನು ತನ್ನ ಪರಿಶುದ್ಧವಾದ ಅವಯವಗಳಿಂದ ಆ ಜಲವನ್ನು ಪವಿತ್ರಮಾಡಿದನು. ಆ ಜಲವಾದರೋ ದಿಕ್ಕುಗಳನ್ನೆಲ್ಲ ವ್ಯಾಪಿಸಿಕೊಂಡು ಈ ಲೋಕವನ್ನೇ ಪವಿತ್ರಮಾಡಿತು.

**ತೇನಾಂಭಸಾ ಸುರೇಂದ್ರಾಣಾಂ ಪೃತನಾಃ[3]ಪ್ಲಾವಿತಾಃ ಕ್ಷಣಮ್ ।**
**ಲಕ್ಷ್ಯಂತೇ ಸ್ಮ ಪಯೋವಾರ್ಧೌ ನಿಮಗ್ನಾಂಗ್ಯ ಇವಾಕುಲಾಃ ॥ ೧೩೧ ॥**

ಆ ನೀರಿನಿಂದ ಮುಳುಗಿಹೋದ ದೇವೇಂದ್ರನ ಸೈನ್ಯಗಳು ಒಂದು ಕ್ಷಣ ಕಾಲದವರೆಗೆ ಸಮುದ್ರದಲ್ಲಿ ಮುಳುಗಿ ವ್ಯಾಕುಲಪಡುವಂತೆ, ಕಾಣಿಸಿಕೊಳ್ಳುತ್ತಿದ್ದುವು.

**ತದಂಭಃಕಲಶಾಸ್ಯಸ್ಥೈಃ ಸರೋಜೈಃ ಸಮಮಾಪತತ್ ।**
**ಹಂಸೈರಿವ ಪರಾಂ ಕಾಂತಿಮವಾಪಾದ್ರೀಂದ್ರಮಸ್ತಕೇ ॥ ೧೩೨ ॥**

ಮಹಾಮೇರುಪರ್ವತದ ಶಿಖರದಲ್ಲಿ ಕಲಶಗಳ ಮುಖಗಳಲ್ಲಿರುವ ಕಮಲಗಳೊಡನೆ ಬೀಳುತ್ತಿರುವ ಆ ಜಲವು, ಹಂಸ ಪಕ್ಷಿಗಳಿಂದ ಶೋಭಿಸುವಂತೆ, ಅಧಿಕವಾಗಿ ಶೋಭಿಸಿತು.

**ಅಶೋಕಪಲ್ಲವೈಃಕುಂಭಮುಖಮುಕ್ತೈ[4]ಸ್ತತಂ ಪಯಃ ।**
**ಸಚ್ಛಾಯಮಭವತ್ಕೀರ್ಣಂ ವಿದ್ರುಮಾಣಾಮಿವಾಂಕುರೈಃ ॥ ೧೩೩ ॥**

ಕಲಶಗಳ ಮುಖಗಳಿಂದ ಬಿಡಲ್ಪಟ್ಟ ಅಶೋಕವೃಕ್ಷದ ತಳಿರುಗಳಿಂದ ವ್ಯಾಪ್ತವಾದ ಜಲವು ಹವಳಗಳ ಅಂಕುರಗಳಿಂದ ಹರಡಲ್ಪಟ್ಟ ನೆರಳಿನಂತಿದ್ದಿತು.

**ಸ್ಫಾಟಿಕೇ ಸ್ನಾನಪೀಠೇ ತತ್ಸ್ವಚ್ಛಶೋಭಮಭಾಜ್ಜಲಮ್ ।**
**ಭರ್ತುಃ ಪಾದಪ್ರಸಾದೇನ [5]ಪ್ರಸೇದಿವದಿವಾಧಿಕಮ್ ॥ ೧೩೪ ॥**

ಸ್ಫಟಿಕದಿಂದ ಮಾಡಿದ ಸ್ನಾನಪೀಠದಲ್ಲಿ ಸ್ವಚ್ಛವಾಗಿ ಶೋಭಿಸುವ ಆ ಜಲವು, ಸ್ವಾಮಿಯ ಪಾದಪ್ರಸಾದದಿಂದ ಹೆಚ್ಚಾಗಿ ಪ್ರಸನ್ನತೆಯನ್ನು ಹೊಂದಿರುವಂತೆ, ಶೋಭಿಸಿತು.

**[6]ರತ್ನಾಂಶುಭಿಃ ಕ್ವಚಿದ್ವ್ಯಾಪ್ತಂ ವಿಚಿತ್ರೈಸ್ತದ್ವಭೌ ಪಯಃ ।**
**ಚಾಪಮೈಂದ್ರಂ ದ್ರವೀಭೂಯ ಪಯೋಭಾವಮಿವಾಗತಮ್ ॥ ೧೩೫ ॥**

ಕೆಲವು ಕಡೆಗಳಲ್ಲಿ ವಿಚಿತ್ರವಾದ ರತ್ನಗಳ ಕಾಂತಿಗಳಿಂದ ವ್ಯಾಪ್ತವಾದ ಆ ಜಲವು, ಇಂದ್ರಧನುಸ್ಸು ಕರಗಿ ನೀರಾದಂತೆ, ಶೋಭಿಸಿತು.

**ಕ್ವಚಿ[7]ನ್ಮಹೋಪಲೋತ್ಸರ್ಪತ್ಪ್ರಭಾಭಿರರುಣೀಕೃತಮ್ ।**
**ಸಂಧ್ಯಾಂಬುದದ್ರವಚ್ಛಾಯಾಂ ಭೇಜೇ ತತ್ಪಾವನಂ [8]ವನಮ್ ॥ ೧೩೬ ॥**

ಕೆಲವು ಕಡೆಗಳಲ್ಲಿ ಪದ್ಮರಾಗರತ್ನಗಳ ಮೇಲಕ್ಕೆ ಹರಡಿರುವ ಕಾಂತಿಗಳಿಂದ ರಕ್ತವರ್ಣವಾಗಿ ಮಾಡಲ್ಪಟ್ಟ ಆ ಪವಿತ್ರವಾದ ಜಲವು, ಸಂಧ್ಯಾಕಾಲದ ಮೇಘದ ದ್ರವದಂತೆ, ಶೋಭಿಸಿತು.

**ಹರಿನೀಲೋಪಲಚ್ಛಾಯಾ[9]ತತಂ ಕ್ವಚಿದದೋ ಜಲಮ್ ।**
**ತಮೋಘನಮಿ[10]ವೈಕತ್ರ ನಿಲೀನಂ ಸಮದೃಶ್ಯತ ॥ ೧೩೭ ॥**

ಕೆಲವು ಕಡೆಗಳಲ್ಲಿ ಇಂದ್ರನೀಲರತ್ನಗಳ ಕಾಂತಿಯಿಂದ ವ್ಯಾಪ್ತವಾದ ಈ ಜಲವು, ಒಂದೇಕಡೆ(ಕುಂಭ)ಯಲ್ಲಿ ಅವಿತುಕೊಂಡ ಕತ್ತಲೆಯ ಸಮೂಹದಂತೆ, ಕಾಣಿಸಿತು.

೧ ಪವಿತ್ರಮಕರೋತ್. ೨ ಪುನಾತಿ ಸ್ಮ. ೩ ಅವಗಾಹೀಕೃತಾಃ. ೪ ವಿಸ್ತೃತಂ. ೫ ಪ್ರಸನ್ನತಾವತ್. ೬ ಕುಂಭಜಲರತ್ನಾಂಶುಭಿಃ. ೭ ಪದ್ಮರಾಗರತ್ನಾನಾಂ. ೮ ಜಲಂ. ೯ ವಿಸ್ತೃತಂ. ೧೦ ಕುಂಭೇ.

ಜಲಪ್ರವಾಹಗಳಿಂದ ಭೂಮಿಯ ತಳದ ವರೆಗೂ ಎಲ್ಲಾಕಡೆಗಳಲ್ಲಿಯೂ ನೆನೆಯಿಸಲ್ಪಟ್ಟ ಮಹಾಮೇರುಪರ್ವತವು ಪ್ರತ್ಯಕ್ಷಜ್ಞಾನಿಗಳಿಗೂ ಮೊದಲು ತಿಳಿಯದಿರುವ ಭಾವವನ್ನು ಹೊಂದಿತು. ನವೀನವಾದ ಮೇರುಪರ್ವತದಂತಾಯಿತೆಂದು ಭಾವವು.

**ನ [೧]ಮೇರುರಯಮುತ್ಫುಲ್ಲ [೨]ನಮೇರುತರುರಾಜಿತಃ ।**
**[೩]ರಾಜತೋ ಗಿರಿರೇಷಃ ಸ್ಯಾದುಲ್ಲಸ[೪]ದ್ಬಿಸಪಾಂಡುರಃ ॥ ೧೫೩ ॥**

''ವಿಕಸಿತವಾದ ಕಲ್ಪವೃಕ್ಷಗಳಿಂದ ಶೋಭಿಸುವುದೂ ಪ್ರಕಾಶಮಾನವಾದ ತಾವರೆತಂತುವಿನಂತೆ ಶುಭ್ರವೂ ಆದ ಈ ಪರ್ವತವು ಮೇರುವಲ್ಲ. ಇದು ಬೆಳ್ಳಿಯ ಬೆಟ್ಟವಾಗಿರಬಹುದು.

**ಪೀಯೂಷಸ್ಯೈಷ ರಾಶಿರ್ನು ಸ್ಫಾಟಿಕೋ ನು [೫]ಶಿಲೋಚ್ಚಯಃ ।**
**ಸುಧಾಧವಲಿತಃ ಕಿಂನು ಪ್ರಾಸಾದಸ್ತ್ರಿಜಗಚ್ಛ್ರಿಯಃ ॥ ೧೫೪ ॥**

ಇದು (ಮೇರು) ಅಮೃತದ ರಾಶಿಯೋ ? ಸ್ಫಟಿಕಮಯವಾದ ಪರ್ವತವೋ ? ಅಥವಾ ಸುಣ್ಣದಿಂದ ಶುಭ್ರವಾಗಿ ಮಾಡಿದ ಮೂರುಲೋಕದ ಲಕ್ಷ್ಮಿಯ ಮೇಲಂತಸ್ತಿನ ಮನೆಯೋ ?''

**ವಿತರ್ಕಮಿತಿ ತನ್ವಾನೋ ಗಿರಿರಾಜೇ ಪಯಃಪ್ಲವಃ ।**
**ವ್ಯಾನಶೇ [೬]ವಿಶ್ವದಿಕ್ಕಾಂತಾಃ ದಿಕ್ಕಾಂತಾಃ ಸ್ನಪಯನ್ನಿವ ॥ ೧೫೫ ॥**

ಮಹಾಮೇರುಪರ್ವತದ ವಿಷಯದಲ್ಲಿ ಈಪ್ರಕಾರವಾಗಿ ಊಹೆಯನ್ನುಂಟುಮಾಡುವ ಜಲಪ್ರವಾಹವು ದಿಕ್ಕನ್ಯೆಯರನ್ನು ಸ್ನಾನಮಾಡಿಸುತ್ತಿದೆಯೋ ಎಂಬಂತೆ, ಎಲ್ಲಾದಿಕ್ಕುಗಳ ಕೊನೆಗಳನ್ನು ವ್ಯಾಪಿಸಿತು.

**ಊರ್ಧ್ವಮುಚ್ಚಲಿತಾಃ ಕೇಚಿಚ್ಛೀಕರಾ ವಿಶ್ವದಿಗ್ಗತಾಃ ।**
**ಶ್ವೇತಚ್ಛತ್ರಶ್ರಿಯಂ ಮೇರೋರಾತೇನುರ್ವಿಧುನಿರ್ಮಲಾಃ ॥ ೧೫೬ ॥**

ಮೇಲಕ್ಕೆ ಹಾರಿದುದೂ ಎಲ್ಲಾದಿಕ್ಕುಗಳನ್ನು ವ್ಯಾಪಿಸಿದುದೂ ಚಂದ್ರನಂತೆ ನಿರ್ಮಲವೂ ಆದ ಕೆಲವು ಜಲಬಿಂದುಗಳು ಮಹಾಮೇರುಪರ್ವತಕ್ಕೆ ಶ್ವೇತಚ್ಛತ್ರಿಯ ಶೋಭೆಯನ್ನುಂಟುಮಾಡಿದುವು.

**ಹಾರನೀಹಾರಕಹ್ಲಾರಕುಮುದಾಂಭೋಜಸತ್ತ್ವಿಷಃ ।**
**ಪ್ರಾವರ್ತಂತ ಪಯಃಪೂರಾ ಯಶಃಪೂರಾ ಇವಾರ್ಹತಃ ॥ ೧೫೭ ॥**

ಮುಕ್ತಾಹಾರದಂತೆಯೂ ಹಿಮದಂತೆಯೂ ಎಳೆಗೆಂಪಾದ ನೈದಿಲೆಪುಷ್ಪದಂತೆಯೂ ಕುಮುದಪುಷ್ಪದಂತೆಯೂ ಬಿಳಿಯದಾದ ತಾವರೆಯಂತೆಯೂ ಕಾಂತಿಯುಳ್ಳ ಜಲಪ್ರವಾಹಗಳು ಅರ್ಹತ್ಪರಮೇಶ್ವರನ ಯಶಸ್ಸಿನ ಪ್ರವಾಹಗಳೋ ಎಂಬಂತೆ ಪ್ರವರ್ತಿಸಿದುವು. ಪಸರಿಸಿದುವೆಂದರ್ಥವು.

**ಗಗನಾಂಗಣಪುಷ್ಪೋಪಹಾರಾ [೭]ಹಾರಾಮಲತ್ವಿಷಃ ।**
**ದಿಗ್ವಧೂಕರ್ಣಪೂರಾ[೮]ಸ್ತೇ ಬಭುಃ ಸ್ನಾನಾಂಬುಶೀಕರಾಃ ॥ ೧೫೮ ॥**

ಮುಕ್ತಾಹಾರದಂತೆ ನಿರ್ಮಲವಾದ ಕಾಂತಿಯುಳ್ಳ ಆ ಸ್ನಾನಜಲದ ತುಂತುರುಗಳು ಆಕಾಶಪ್ರದೇಶದಲ್ಲಿ ಕೈಗಾಣಿಕೆಯಾಗಿ ಮಾಡಿದ ಪುಷ್ಪಗಳಂತೆಯೂ ದಿಕ್ಕನ್ಯೆಯರ ಕರ್ಣಾಭರಣಗಳಂತೆಯೂ ಪ್ರಕಾಶಿಸಿದುವು.

**ಶೀಕರೈರಾಕಿರನ್ನಾಕಮಾಲೋಕಾಂತವಿಸರ್ಪಿಭಿಃ ।**
**ಜ್ಯೋತಿರ್ಲೋಕಮನುಪ್ರಾಪ್ಯ ಜಜೃಂಭೇ ಸೋಂಭಸಾಂ ಪ್ಲವಃ ॥**

ಆ ಸ್ನಾನಜಲಪ್ರವಾಹವು ಲೋಕಾಂತದ ವರೆಗೂ ವ್ಯಾಪಿಸುವ ಜಲಕಣಗಳಿಂದ ಜ್ಯೋತಿರ್ಲೋಕವನ್ನು ಹೊಂದಿ ಸ್ವರ್ಗವನ್ನು ವ್ಯಾಪಿಸಿ ವೃದ್ಧಿಹೊಂದಿತು.

೧ ಮೇರುಗಿರಿರ್ನ. ೨ ಕಲ್ಪವೃಕ್ಷೈಃ. ೩ ರಜತಮಯಃ. ೪ ಮೃಣಾಲವದ್ಧವಲಃ. ೫ ಪರ್ವತಃ. ೬ ವಿಶ್ವದಿಕ್ಪರ್ಯಂತಾಃ. ೭ ಇವ. ೮ ಇವ.

**ಸ್ನಾನಪೂರೇ ನಿಮಗ್ನಾಂಗ್ಯಸ್ತಾರಾಸ್ತರಲರೋಚಿಷಃ ।**
**ಮುಕ್ತಾಫಲಶ್ರಿಯಂ ಭೇಜುರ್ವಿಪ್ರಕೀರ್ಣಾಃ ಸಮಂತತಃ ॥ ೧೬೦ ॥**

ಆ ಅಭಿಷೇಕದ ಜಲಪ್ರವಾಹದಲ್ಲಿ ಮುಳುಗಿ ಚಂಚಲವಾದ ಕಾಂತಿಯುಳ್ಳ ತಾರೆ(ನಕ್ಷತ್ರ)ಗಳು ಎಲ್ಲಾಕಡೆಗಳಲ್ಲಿಯೂ ಚದರಿದುವುಗಳಾಗಿ ಮುಕ್ತಾಫಲದ ಶೋಭೆಯನ್ನು ಹೊಂದಿದುವು. ಮುತ್ತುಗಳಂತೆ ಶೋಭಿಸುತ್ತಿದ್ದುವೆಂದು ಭಾವವು.

**ತಾರಕಾಃ ಕ್ಷಣಮಧ್ಯಾಸ್ಯ ಸ್ನಾನಪೂರಂ ವಿನಿಃಸೃತಾಃ ।**
**ಪಯೋಲವ[೧]ಸ್ರುತೋ ರೇಜುಃ [೨]ಕರಕಾಣಾಮಿವಾ[೩] ಲಯಃ ॥ ೧೬೧ ॥**

ಒಂದು ಕ್ಷಣಕಾಲದವರೆಗೆ ಸ್ನಾನಜಲಪ್ರವಾಹದಲ್ಲಿದ್ದು ಪುನಃ ಹೊರಟ ತಾರೆಗಳು ನೀರಿನ ಹನಿಗಳನ್ನು ಸ್ರವಿಸುವ ಆಣೆಕಲ್ಲುಗಳ ಸಾಲುಗಳಂತೆ, ಶೋಭಿಸಿದುವು.

**ಸ್ನಾನಾಂಭಸಿ ಬಭೌ ಭಾಸ್ವಾಂಸ್ತತ್ಕ್ಷಣಂ [೪]ಕೃತನಿರ್ವೃತಿಃ ।**
**ತಪ್ತಃ ಪಿಂಡೋ ಮಹಾನ್ ಲೋಹಃ ಪಾನೀಯಮಿವ [೫]ಪಾಯಿತಃ ॥**

ಆಗ ಸ್ವಾಮಿಯ ಸ್ನಾನಜಲದಲ್ಲಿ ಸುಖವನ್ನು ಹೊಂದಿದ ಸೂರ್ಯನು, ಕಾಯಿಸಿದ ದೊಡ್ಡ ಲೋಹದ ಪಿಂಡವು ನೀರನ್ನು ಪಾನಮಾಡುವಂತೆ, ಪ್ರಕಾಶಿಸಿದನು.

**ಪಯಃಪೂರೇ [೬]ಮಹತ್ಯಸ್ಮಿನ್ [೭]ಶ್ವೇತಭಾನುರ್ವ್ಯಭಾವ್ಯತ ।**
**ಜರದ್ಧಂಸ ಇವೋ[೮]ದೂಢಜಡಿಮಾ [೯]ಮಂಥರಂ ತರನ್ ॥ ೧೬೩ ॥**

ಈ ದೊಡ್ಡ ಜಲಪ್ರವಾಹದಲ್ಲಿ ಮೆಲ್ಲನೆ ದಾಟುತ್ತಿರುವ ಚಂದ್ರನು ಜಡತ್ವವನ್ನು ಹೊಂದಿದ ಮುದಿಹಂಸಪಕ್ಷಿಯಂತೆ ಕಾಣಿಸುತ್ತಿದ್ದನು.

**ಗ್ರಹಮಂಡಲಮಾಕೃಷ್ಟಂ [೧೦]ಪರ್ಯಸ್ತೈಃ ಸಲಿಲಪ್ಲವೈಃ ।**
**[೧೧]ವಿಪರ್ಯಸ್ತಾಂ ಗತಿಂ ಭೇಜೇ [೧೨]ವಕ್ರಚಾರಮಿವಾಶ್ರಿತಮ್ ॥ ೧೬೪ ॥**

ಸುತ್ತಲೂ ಹರಡಿರುವ ಜಲಪ್ರವಾಹಗಳಿಂದ ಆಕರ್ಷಿಸಲ್ಪಟ್ಟ ಗ್ರಹಗಳ ಮಂಡಲವು ವಕ್ರಗಮನವನ್ನು ಹೊಂದಿತೋ ಎಂಬಂತೆ, ವಿಪರೀತವಾದ ಗತಿಯನ್ನು ಹೊಂದಿತು.

**[೧೩]ಭಗಣಃ [೧೪]ಪ್ರಗುಣೀಭೂತಕಿರಣಂ ಜಲ[೧೫]ವಿಪ್ಲುತಮ್ ।**
**ಸಿಷೇವೇ [೧೬]ಪೂಷಣಂ ಮೋಹಾ[೧೭]ತ್ತಾಲೇಯಾಂಶುವಿಶಂಕಯಾ ॥**

ನಕ್ಷತ್ರಗಳ ಗುಂಪು ಸರಳವಾದ ಮತ್ತು ತಣ್ಣಗಾದ ಕಿರಣಗಳುಳ್ಳವನೂ ನೀರಿನಲ್ಲಿ ಮುಳುಗಿದವನೂ ಆದ ಸೂರ್ಯನನ್ನು ಚಂದ್ರನೆಂಬ ಭ್ರಮೆಯಿಂದ ಸೇವಿಸಿತು. ಸೂರ್ಯನ ತೇಜಸ್ಸು ಕಡಿಮೆಯಾದುದರಿಂದ ಆಕಾಶದಲ್ಲಿ ನಕ್ಷತ್ರಗಳು ಕಾಣಿಸಿಕೊಂಡುವೆಂದು ಭಾವವು.

**ಜ್ಯೋತಿಶ್ಚಕ್ರಂ [೧೮]ಕ್ಷರಜ್ಜ್ಯೋತಿಃ ಕ್ಷೀರಪೂರಮನುಭ್ರಮತ್ ।**
**[೧೯]ವೇಲಾತಿಕ್ರಮಭೀತ್ಯೇವ ನಾಸ್ಥಾದೇಕಮಪಿ ಕ್ಷಣಮ್ ॥ ೧೬೬ ॥**

ಹಾಲಿನ ಪ್ರವಾಹದಲ್ಲಿ ತಿರುಗುತ್ತಿರುವುದರಿಂದ ನಿಸ್ತೇಜಸ್ಕವಾದ ಜ್ಯೋತಿರ್ಮಂಡಲವು ಕಾಲಾತಿಕ್ರಮದ ಭಯದಿಂದಲೋ ಎಂಬಂತೆ ಒಂದು ಕ್ಷಣಕಾಲದವರೆಗೂ ನಿಲ್ಲಲಿಲ್ಲ. ಕ್ಷಣಕಾಲವೂ ಒಂದುಕಡೆಯಲ್ಲಿ ಸ್ಥಿರವಾಗಿರಲಿಲ್ಲವೆಂದು ಭಾವವು.

೧ ಸ್ರವಂತಃ. ೨ ವರ್ಷೋಪಲಸ್ತು ಕರಕ ಇತ್ಯಮರಃ. ೩. ಪಙ್ತಯಃ. ೪ ಕೃತಸುಖಃ. ೫ ಪಾನಂ ಕಾರಿತಃ. ೬ ವಹತೀತ್ಯಪಿ ಪಾಠಃ. ೭ ಚಂದ್ರಃ. ೮ ಧೃತಜಡತ್ವಃ. ೯ ಮಂದಂ. ೧೦ ಪರಿತಃ ಕ್ಷಿಪ್ತೈಃ. ೧೧ ವಿಪ್ರಕೀರ್ಣಾಂ. ೧೨ ವಕ್ರಗಮನಂ. ೧೩ ನಕ್ಷತ್ರಸಮೂಹಃ. ೧೪ ಋಜೂಭೂತಕಿರಣಂ. ಶೀತೀಭೂತಕರಂ ಚ. ೧೫ ಧೌತಂ. ೧೬ ಸೂರ್ಯಂ. ೧೭ ಚಂದ್ರಸ್ಯ. ೧೮ ಗಚ್ಛತ್. ೧೯ ಕಾಲಃ.

**ಜ್ಯೋತಿಃಪಟಲಮಿತ್ಯಾಸೀತ್ಸ್ನಾನೌ[೧]ಘೈಃ ಕ್ಷಣಮಾಕುಲಮ್ ।**
**ಕುಲಾಲಚಕ್ರಮಾವಿದ್ಧಮಿವ ತಿರ್ಯಕ್ಪರಿಭ್ರಮತ್ ॥ ೧೬೭ ॥**

ಚೆನ್ನಾಗಿ ತಿರುಗಿಸಿದ ಕುಂಬಾರನ ಚಕ್ರದಂತೆ ಅಡ್ಡಲಾಗಿ ತಿರುಗುತ್ತಿರುವ ಜ್ಯೋತಿರ್ಮಂಡಲವು ಹೀಗೆ ಅಭಿಷೇಕದ ಜಲಪ್ರವಾಹಗಳಿಂದ ಒಂದು ಕ್ಷಣ ಕಾಲದವರೆಗೆ ಆಕುಲವುಳ್ಳುದಾಯಿತು.

**ಪರ್ಯಾಪತದ್ಭಿ [೨]ರುತ್ಸಂಗಾದ್ಗಿರೇಃ ಸ್ವರ್ಲೋಕಧಾರಿಣಃ ।**
**[೩]ವಿರಲೈಃ ಸ್ನಾನಪೂರೈಸ್ತೈರ್ನೃಲೋಕಃ ಪಾವನೀಕೃತಃ ॥ ೧೬೮ ॥**

ಸ್ವರ್ಗಲೋಕವನ್ನು ಧರಿಸಿರುವ ಮಹಾಮೇರುಪರ್ವತದ ಮೇಲುಭೂಮಿಯಿಂದ ಬೀಳುತ್ತಿರುವ ದುರ್ಲಭವಾದ ಆ ಅಭಿಷೇಕದ ಜಲಪ್ರವಾಹಗಳು ಮನುಷ್ಯಲೋಕವನ್ನು ಪವಿತ್ರಮಾಡಿದುವು.

**[೪]ನಿರ್ವಾಪಿತಾ ಮಹೀ ಕೃತ್ಸ್ನಾ ಕುಲಶೈಲಾಃ ಪವಿತ್ರಿತಾಃ ।**
**ಕೃತಾ ನಿರೀತಯೋ ದೇಶಾಃ ಪ್ರಜಾಃ ಕ್ಷೇಮೇಣ ಯೋಜಿತಾಃ ॥ ೧೬೯ ॥**

ಸಂಪೂರ್ಣವಾದ ಪೃಥ್ವಿಯು ಶಾಂತವಾಗಿ ಮಾಡಲ್ಪಟ್ಟಿತು. ಕುಲಪರ್ವತಗಳೆಲ್ಲ ಪವಿತ್ರಗಳಾಗಿ ಮಾಡಲ್ಪಟ್ಟುವು. ದೇಶಗಳು ಅನಾವೃಷ್ಟಿಮೊದಲಾದ ಬಾಧಾರಹಿತಗಳಾಗಿ ಮಾಡಲ್ಪಟ್ಟುವು. ಪ್ರಜೆಗಳು ಸುಖಿಗಳಾಗಿ ಮಾಡಲ್ಪಟ್ಟರು.

**ಕೃತ್ಸ್ನಾಮಿತಿ ಜಗನ್ನಾಡೀಂ ಪವಿತ್ರೀಕುರ್ವತಾಮುನಾ ।**
**ಕಿಂ ನಾಮ ಸ್ನಾನಪೂರೇಣ ಶ್ರೇಯಃ ಶೇಷಿತಮಂಗಿನಾಮ್ ॥ ೧೭೦ ॥**

ಈ ಪ್ರಕಾರವಾಗಿ ಲೋಕವನ್ನೆಲ್ಲ ಪವಿತ್ರಮಾಡುವ ಈ ಅಭಿಷೇಕಜಲದ ಪ್ರವಾಹವು ಪ್ರಾಣಿಗಳಿಗೆ ಯಾವಶ್ರೇಯಸ್ಸನ್ನು ತಾನೆ ಮಾಡದೆ ಬಿಟ್ಟಿದೆ ? ಎಲ್ಲಾ ಶ್ರೇಯಸ್ಸನ್ನೂ ಉಂಟುಮಾಡಿತೆಂದರ್ಥವು.

**ಅಥ ತಸ್ಮಿನ್ಮಹಾಪೂರೇ ಧ್ವಾನಾಪೂರಿತದಿಙ್ಮುಖೇ ।**
**ಪ್ರಶಾಂತೇ ಶಮಿತಾಶೇಷಭುವನೋ[೫]ಷ್ಮಣ್ಯಶೇಷತಃ ॥ ೧೭೧ ॥**

ತರುವಾಯ ತನ್ನ ಶಬ್ದದಿಂದ ದಿಕ್ಕುಗಳನ್ನು ವ್ಯಾಪಿಸಿದುದೂ ಲೋಕದ ಉಷ್ಣವನ್ನು ಸಂಪೂರ್ಣವಾಗಿ ಶಾಂತಗೊಳಿಸಿದುದೂ ಆದ ಆ ದೊಡ್ಡ ಪ್ರವಾಹವು ಕಡಮೆಯಾಯಿತು.

**[೬]ರೇಚಿತೇಷು ಮಹಾಮೇರೋಃ ಕಂದರೇಷು ಜಲಪ್ಲವೈಃ ।**
**[೭]ಪ್ರತ್ಯಾಶ್ವಾಸಮಿವಾಯಾತೇ ಮೇರೌ [೮]ಸವನಕಾನನೇ ॥ ೧೭೨ ॥**

ಮಹಾಮೇರುಪರ್ವತದ ಗುಹೆಗಳು ಜಲಪ್ರವಾಹಗಳಿಂದ ಬಿಡಲ್ಪಟ್ಟುವು. ಜಲಸಹಿತವಾದ ವನಗಳುಳ್ಳ ಮೇರುಪರ್ವತವು ನಿದ್ರೆಯನ್ನು ಮಾಡುತ್ತಿದೆಯೋ ಎಂಬಂತಿದ್ದಿತು.

**ಧೂಪೇಷು ದಹ್ಯಮಾನೇಷು ಸುಗಂಧೀಂಧನಯೋನಿಷು ।**
**ಜ್ವಲತ್ಸು ಮಣಿದೀಪೇಷು [೯]ಭಕ್ತಿಮಾತ್ರೋಪಯೋಗಿಷು. ॥ ೧೭೩ ॥**

ಪರಿಮಳವುಳ್ಳ ಕಟ್ಟಿಗೆಗಳಿಂದುಂಟಾದ ಧೂಪಗಳು ದಹಿಸುತ್ತಿದ್ದುವು. ಕೇವಲ ಭಕ್ತಿಗೋಸ್ಕರ ಉಪಯುಕ್ತವಾದ ರತ್ನದೀಪಗಳು ಉರಿಯುತ್ತಿದ್ದುವು.

**[೧೦]ಪುಣ್ಯಪಾಠಾನ್ಪಠತ್ಸೂಚ್ಚೈಃ [೧೧]ಸಂಪಾಠಂ ಸುರವಂದಿಷು ।**
**ಗಾಯಂತೀಷು ಸುಕಂಠೀಷು ಕಿನ್ನರೀಷು ಕಲಸ್ವನಮ್ ॥ ೧೭೪ ॥**

ಸ್ತುತಿಪಾಠಕರಾದ ದೇವತೆಗಳು ಪುಣ್ಯಕರವಾದ ಗದ್ಯಪದ್ಯಗಳನ್ನು ಚೆನ್ನಾಗಿ ಗಟ್ಟಿಯಾಗಿ ಪಠನಮಾಡುತ್ತಿದ್ದರು. ಉತ್ತಮವಾದ ಕಂಠವುಳ್ಳ ಕಿನ್ನರಸ್ತ್ರೀಯರು ಮಧುರಸ್ವರದಿಂದ ಗಾನಮಾಡುತ್ತಿದ್ದರು.

**ಜಿನಕಲ್ಯಾಣಸಂಬಂಧಿಮಂಗಲೋದ್ಗೀತಿನಿಸ್ಸ್ವನೇ ।**
**ಕುರ್ವಾಣೇ ವಿಶ್ವಗೀರ್ವಾಣ[೧]ಲೋಕಸ್ಯ ಶ್ರವಣೋತ್ಸವಮ್ ॥ ೧೭೫ ॥**

ಜಿನೇಶ್ವರನ ಕಲ್ಯಾಣಸಂಬಂಧವಾದ ಮಂಗಲಗಾನದ ಶಬ್ದವು ಎಲ್ಲಾದೇವತೆಗಳ ಕಿವಿಗಳಿಗೆ ಆನಂದವನ್ನುಂಟುಮಾಡಿತು.

**ಜಿನಜನ್ಮಾಭಿಷೇಕಾರ್ಥ[೨]ಪ್ರತಿಬದ್ಧೈ[೩]ರ್ನಿದರ್ಶನೈಃ ।**
**[೪]ನಾಟ್ಯವೇದಂ ಪ್ರಯುಂಜಾನೇ [೫]ಸುರಶೈಲೂಷಪೇಟಕೇ ॥ ೧೭೬ ॥**

ನರ್ತಕರಾದ ದೇವತೆಗಳ ಸಮೂಹವು ಜಿನೇಶ್ವರನ ಜನ್ಮಾಭಿಷೇಕದ ಅರ್ಥದ ಸಂಬಂಧವುಳ್ಳ ದೃಷ್ಟಾಂತಗಳಿಂದ ನೃತ್ಯಶಾಸ್ತ್ರವನ್ನು ಪ್ರಯೋಗಿಸಿತು. ಜನ್ಮಾಭಿಷೇಕದ ಅರ್ಥವನ್ನು ತೋರಿಸುವ ದೃಷ್ಟಾಂತಗಳನ್ನು ಪ್ರಯೋಗಿಸಿ ನೃತ್ಯಶಾಸ್ತ್ರವನ್ನು ಪ್ರತಿಪಾದಿಸಿತೆಂದರ್ಥವು.

**ಗಂಧರ್ವಾರಬ್ಧಸಂಗೀತಮೃದಂಗಧ್ವನಿ[೬]ಮೂರ್ಛಿತೇ ।**
**ದುಂದುಭಿಧ್ವನಿತೇ ಮಂದ್ರೇ ಶ್ರೋತ್ರಾನಂದಂ ಪ್ರತನ್ವತಿ ॥ ೧೭೭ ॥**

ಗಂಧರ್ವರಿಂದ ಆರಂಭಿಸಲ್ಪಟ್ಟ ಸಂಗೀತದಲ್ಲಿರುವ ಮದ್ದಳೆಯ ಧ್ವನಿಯೊಡನೆ ಮಿಶ್ರವಾದ ಭೇರಿಯ ಶಬ್ದವು ಗಂಭೀರವಾಗಿ ಕಿವಿಗಳಿಗೆ ಆನಂದವನ್ನುಂಟು ಮಾಡಿತು.

**ಕುಚಕುಂಭೈಃ ಸುರಸ್ತ್ರೀಣಾಂ ಕುಂಕುಮಾಂಕೈರಲಂಕೃತೇ ।**
**ಹಾರರೋಚಿಃ ಪ್ರಸೂನೌಘಕೃತಪುಷ್ಪೋಪಹಾರಕೇ ॥ ೧೭೮ ॥**

**ಮೇರುರಂಗೇಪ್ಸರೋವೃಂದೇ ಸಲೀಲಂ ಪರಿನೃತ್ಯತಿ ।**
**[೭]ಕರಣೈ[೮]ರಂಗಹಾರೈಶ್ಚ [೯]ಸಲಯೈಶ್ಚ [೧೦]ಪರಿಕ್ರಮೈಃ ॥ ೧೭೯ ॥**

ಕುಂಕುಮದ ಚಿಹ್ನೆಗಳುಳ್ಳ ದೇವಸ್ತ್ರೀಯರ ಕುಂಭದಂತಿರುವ ಕುಚಗಳಿಂದ ಅಲಂಕೃತವೂ ಮುಕ್ತಾಹಾರದ ಕಾಂತಿಯೆಂಬ ಪುಷ್ಪಗಳ ಸಮೂಹದಿಂದ ಮಾಡಿದ ಪುಷ್ಪಗಳ ಹರಡುವಿಕೆಯುಳ್ಳುದೂ ಆದ ಮಹಾಮೇರುಪರ್ವತವೆಂಬ ರಂಗಭೂಮಿಯಲ್ಲಿ ಅಪ್ಸರಸ್ತ್ರೀಯರ ಗುಂಪು ಹಸ್ತವಿನ್ಯಾಸಗಳಿಂದಲೂ ಅಂಗವಿಕ್ಷೇಪಗಳಿಂದಲೂ ತಾಲಲಯಸಹಿತವಾದ ನಡಿಗೆಗಳಿಂದಲೂ ಲೀಲೆಯಾಗಿ ನರ್ತನವನ್ನು ಮಾಡಿತು.

**ಶೃಣ್ವತ್ಸು ಮಂಗಲೋದ್ಗೀತೀಃ ಸಾವಧಾನಂ [೧೧]ಸುಧಾಶಿಷು ।**
**[೧೨]ವೃತ್ತೇಷು ಜನಜಲ್ಪೇಷು ಜಿನಪ್ರಾಭವಶಂಸಿಷು ॥ ೧೮೦ ॥**

ದೇವತೆಗಳು ಸಾವಧಾನವಾಗಿ ಮಂಗಲಗಾನಗಳನ್ನು ಕೇಳುತ್ತಿದ್ದರು. ಜನರ ಸಲ್ಲಾಪಗಳು ಜಿನೇಶ್ವರನ ಪ್ರಭುತ್ವವನ್ನು ಹೊಗಳಲಾರಂಭಿಸಿದುವು.

**[೧೩]ನಾಂದಿತೂರ್ಯರವೇ ವಿಷ್ವಗಾಪೂರಯತಿ [೧೪]ರೋದಸೀ ।**
**ಜಯಘೋಷಪ್ರತಿಧ್ವಾನೈಃ [೧೫]ಸ್ತುವಾನ ಇವ ಮಂದರೇ ॥ ೧೮೧ ॥**

ಮುಂದಾಗುವ ಗಂಧಾಭಿಷೇಕದ ವಾದ್ಯಧ್ವನಿಯು ಎಲ್ಲಾಕಡೆಗಳಲ್ಲಿಯೂ ಆಕಾಶಭೂಮಿಗಳನ್ನು ವ್ಯಾಪಿಸಿತು. ದೇವತೆಗಳು ಮಾಡಿದ ಜಯ ಘೋಷಗಳ ಪ್ರತಿಧ್ವನಿಗಳಿಂದ ಮಹಾಮೇರುಪರ್ವತವು ಸ್ತೋತ್ರಮಾಡುತ್ತಿದೆಯೋ ಎಂಬಂತಿದ್ದಿತು.

---

೧ ಸ್ನಾನಜಲಪ್ರವಾಹೈಃ. ೨ ಉಪರಿಮಭೂಭಾಗಾತ್. ೩ ದುರ್ಲಭೈಃ. ೪ ಶೈತ್ಯಂ ಕೃತಾ. ೫ ಉಷ್ಣೇ. ೬ ಪರಿತ್ಯಕ್ತೇಷು. ೭ ನಿದ್ರಾಂ. ೮ ಸಜಲವನೇ. ೯ ಜಿನದೇಹದೀಪ್ತೇಃ ಸಹಾಶಾನ್ನಿಜದೀಪ್ತೇರ್ವ್ಯರ್ಥತ್ವಾತ್. ೧೦ ಪ್ರಶಸ್ತಗದ್ಯಪದ್ಯಾದೀನ್. ೧೧ ಸಮ್ಯಕ್ಪಾಠಂ ಯಥಾ ಭವತಿ ತಥಾ.

೧ ಜನಸ್ಯ. ೨ ಸಂಬಂಧೈಃ. ೩ ಭೂಮಿಕಾಭಿಃ. ೪ ನೃತ್ಯಶಾಸ್ತ್ರಂ. ೫ ದೇವನರ್ತಕ ವೃಂದೇ. ೬ ಮಿಶ್ರಿತೇ. ೭ ಕರನ್ಯಾಸೈಃ. ೮ ಅಂಗವಿಕ್ಷೇಪೈಃ. ೯ ತಾಲಮಾನಸಹಿತೈಃ. ೧೦ ಪಾದವಿನ್ಯಾಸೈಃ. ೧೧ ದೇವೇಷು. ೧೨ ಪ್ರವೃತ್ತೇಷು ಸತ್ಸು. ೧೩ ವಕ್ಷ್ಯಮಾಣಗಂಧಾಭಿಷೇಕಾರಂಭತೂರ್ಯರವೇ. ೧೪ ದ್ಯಾವಾಭೂಮೀ ಚ ರೋದಸೀ ಇತ್ಯಮರಃ. ೧೫ ಸ್ತುವತೀವ ಜಾತೇ ಸತಿ.

**ಸಂಚರ[1]ತ್ಖಚರೀವಕ್ತ್ರಘರ್ಮಾಂಬುಕಣಚುಂಬಿನಿ ।**
**ಧುತೋಪಾಂತವನೇ ವಾತಿ ಮಂದಂ ಮಂದಂ [2]ನಭಸ್ವತಿ ॥ ೧೮೨ ॥**

ಸಂಚರಿಸುತ್ತಿರುವ ವಿದ್ಯಾಧರಸ್ತ್ರೀಯರ ಮುಖಗಳಲ್ಲಿರುವ ಬೆವರಿನ ಹನಿಗಳನ್ನು ಚುಂಬಿಸುವ (ಹೋಗಲಾಡಿಸುವ) ಮತ್ತು ಸಮೀಪವನವನ್ನು ಪರಿಶುದ್ಧಮಾಡುವ ಗಾಳಿಯು ಮೆಲ್ಲನೆ ಬೀಸಿತು.

**ಸುರದೌವಾರಿಕೈಶ್ಚಿತ್ರವೇತ್ರದಂಡಧರೈರ್ಮುಹುಃ ।**
**[3]ಸಾಮಾಜಿಕಜನೇ ವಿಷ್ವ[4]ಕ್ಸಾರ್ಯಮಾಣೇ ಸಹುಂಕೃತಮ್ ॥ ೧೮೩ ॥**

ನಾನಾಪ್ರಕಾರವಾದ ಬೆತ್ತದ ಚಡಿಗಳನ್ನು ಹಿಡಿದಿರುವ ದ್ವಾರಪಾಲಕದೇವತೆಗಳು ಬಾರಿಬಾರಿಗೂ ಹುಂಕಾರಶಬ್ದದಿಂದ ಸಭಿಕರನ್ನು ಎಲ್ಲಾಕಡೆಗಳಲ್ಲಿಯೂ ದೂರ ಮಾಡು(ದಾರಿಬಿಡಿಸು)ತ್ತಿದ್ದರು.

**ತತ್ಸಮುತ್ಸಾರಣತ್ರಾಸಾನ್ಮೂಕೀಭಾವಮುಪಾಗತೇ ।**
**[5]ಅನಿಯುಕ್ತಜನೇ ಸದ್ಯಶ್ಚಿತ್ರಾರ್ಪಿತ ಇವ ಸ್ಥಿತೇ ॥ ೧೮೪ ॥**

ದೂರಕ್ಕೆ ತಳ್ಳುವುದರಿಂದುಂಟಾದ ಕಷ್ಟದಿಂದ ಮಾತನಾಡದೆ ಸುಮ್ಮನಿದ್ದ ಕರೆಯಲ್ಪಡದೆ ಬಂದ ಜನರು ಚಿತ್ರದಲ್ಲಿ ಬರೆಯಲ್ಪಟ್ಟ ಪ್ರತಿಮೆಯಂತಿದ್ದರು.

**ಶುದ್ಧಾಂಬುಸ್ನಪನೇ [6]ನಿಷ್ಠಾಂ ಗತೇ ಗಂಧಾಂಬುಭಿಃ ಶುಭೈಃ ।**
**ತತೋಭಿಷೇಕ್ತು[7]ಮೀಶಾನಂ [8]ಶತಯಜ್ವಾ ಪ್ರಚಕ್ರಮೇ ॥ ೧೮೫ ॥**

ಶುದ್ಧವಾದ ಜಲಾಭಿಷೇಕವು ಪರಿಸಮಾಪ್ತಿಯಾದನಂತರ ದೇವೇಂದ್ರನು ಮಂಗಲಕರವಾದ ಗಂಧೋದಕಗಳಿಂದ ಸ್ವಾಮಿಗೆ ಅಭಿಷೇಕವನ್ನು ಮಾಡುವುದಕ್ಕೆ ಪ್ರಾರಂಭಿಸಿದನು.

**ಶ್ರೀಮದ್ಗಂಧೋದಕೈರ್ದಿವ್ಯೈರ್ಗಂಧಾಹೂತಮಧುವ್ರತೈಃ ।**
**ಅಭ್ಯಷಿಂಚದ್ವಿಧಾನಜ್ಞೋ ವಿಧಾತಾರಂ ಶತಾಧ್ವರಃ ॥ ೧೮೬ ॥**

ಪೂಜಾವಿಧಾನವನ್ನು ತಿಳಿದ ದೇವೇಂದ್ರನು ಪರಿಮಳಕ್ಕೆ ಆಸಕ್ತವಾದ ಭ್ರಮರಗಳುಳ್ಳ ದಿವ್ಯವಾದ ಗಂಧೋದಕಗಳಿಂದ ಸ್ವಾಮಿಗೆ ಅಭಿಷೇಕವನ್ನು ಮಾಡಿದನು.

**ಪೂತಾ ಗಂಧಾಂಬುಧಾರಾಸಾವಾಪತಂತೀ ತನೌ ವಿಭೋಃ ।**
**ತದ್ಗಂಧಾತಿಶಯಾತ್ಪ್ರಾಪ್ತಲಜ್ಜೇವಾಸೀ[9]ದವಾಙ್ಮುಖೀ ॥ ೧೮೭ ॥**

ಪವಿತ್ರವಾದ ಈ ಗಂಧೋದಕವು ಸ್ವಾಮಿಯ ಶರೀರದಲ್ಲಿ ಬಿದ್ದು ಆ ಶರೀರದಲ್ಲಿರುವ ಅಧಿಕವಾದ ಪರಿಮಳವನ್ನು ನೋಡಿ ನಾಚಿಕೆಯನ್ನು ಹೊಂದಿತೋ ಎಂಬಂತೆ ಕೆಳಮುಖವಾಯಿತು.

**ಕನತ್ಕನಕಭೃಂಗಾರ[10]ನಾಲಾದ್ಧಾರಾ ಪತಂತ್ಯಸೌ ।**
**ರೇಜೇ ಭಕ್ತಿಭರೇಣೇವ ಜಿನ[11]ಮಾನಂತುಮುದ್ಯತಾ ॥ ೧೮೮ ॥**

ಪ್ರಕಾಶಮಾನವಾದ ಬಂಗಾರದ ಗಿಂಡಿಯ ನಾಲದಿಂದ ಬೀಳುತ್ತಿರುವ ಈ ಗಂಧೋದಕಧಾರೆಯು, ಭಕ್ತಿಯ ಭರದಿಂದ ಜಿನೇಶ್ವರನನ್ನು ನಮಸ್ಕರಿಸುವುದಕ್ಕೋಸ್ಕರ ಉದ್ಯುಕ್ತವಾಗಿದೆಯೋ ಎಂಬಂತೆ, ಶೋಭಿಸಿತು.

**ವಿಭೋರ್ದೇಹಪ್ರಭೋತ್ಸರ್ಪೈಸ್ತಡಿದಾಪಿಂಜರೈಸ್ತತಾ ।**
**[12]ಸಾಭಾ[13]ದ್ವಿಭಾವಸೌ ದೀಪ್ತೇ ಪ್ರಯುಕ್ತೇವ ಘೃತಾಹುತಿಃ ॥ ೧೮೯ ॥**

೧ ವಿದ್ಯಾಧರಸ್ತ್ರೀಣಾಂ. ೨ ಪವನೇ. ೩ ಸಭಾಜನೇ. ೪ ಉತ್ಸಾರ್ಯಮಾಣೇ. ೫ ಸ್ವೈರಮಾಗತ್ಯ ನಿಯೋಗಮಂತರೇಣ ಸ್ಥಿತಜನೇ. ೬ ಪರ್ಯಾಪ್ತಿಂ. ೭ ಸರ್ವಜ್ಞಂ. ೮ ಇಂದ್ರಃ. ೯ ಅಧೋಮುಖೀ. ೧೦ ನಾಲಾದಾರಾತ್ಪತಂತ್ಯಸಾವಿತ್ಯಪಿ ಪಾಠಃ. ೧೧ ನಮಸ್ಕರ್ತುಂ. ೧೨ ಗಂಧಾಂಬುಧಾರಾ. ೧೩ ಅಗ್ನೌ.

ಮಿಂಚಿನಂತೆ ಕಪಿಲವರ್ಣವುಳ್ಳ ಸ್ವಾಮಿಯ ಶರೀರಕಾಂತಿಯ ಪ್ರಸರಣೆಗಳಿಂದ ವ್ಯಾಪ್ತವಾದ ಆ ಗಂಧೋದಕಧಾರೆಯು, ಪ್ರಕಾಶಮಾನವಾದ ಅಗ್ನಿಯಲ್ಲಿ ಪ್ರಯೋಗಿಸಿದ ತುಪ್ಪದ ಆಹುತಿಯಂತೆ, ಶೋಭಿಸಿತು.

**ನಿಸರ್ಗಸುರಭಿಣ್ಯಂಗೇ ವಿಭೋರತ್ಯಂತಪಾವನೇ ।**
**ಪತಿತ್ವಾ [1]ಚರಿತಾರ್ಥಾ ಸಾ [2]ಸ್ವಸಾದಕೃತ [3]ತದ್ಗುಣಾನ್ ॥ ೧೯೦ ॥**

ಸ್ವಭಾವದಿಂದ ಪರಿಮಳವೂ ಅತ್ಯಂತ ಪವಿತ್ರವೂ ಸ್ವಾಮಿಯ ಶರೀರದಲ್ಲಿ ಬಿದ್ದು ಕೃತಾರ್ಥವೂ ಆದ ಆ ಗಂಧೋದಕಧಾರೆಯು ಆ ಸ್ವಾಮಿಯ ಶರೀರದ ಸೌಗಂಧ್ಯ ಸೌಕುಮಾರ್ಯಮೊದಲಾದ ಗುಣಗಳನ್ನು ತನ್ನ ಅಧೀನಪಡಿಸಿಕೊಂಡಿತು.

**ಸುಗಂಧಿಕುಸುಮೈರ್ಗಂಧದ್ರವ್ಯೈರಪಿ [4]ಸುವಾಸಿತಾ ।**
**ಸಾಧಾನ್ನಾತಿಶಯಂ ಕಂಚಿದ್ವಿಭೋರಂಗೇಂಭಸಾಂ ತತಿಃ ॥ ೧೯೧ ॥**

ಸುಗಂಧವಾದ ಪುಷ್ಪಗಳಿಂದಲೂ ಪರಿಮಳದ್ರವ್ಯಗಳಿಂದಲೂ ಸಂಸ್ಕರಿಸಲ್ಪಟ್ಟ ಆ ಗಂಧೋದಕಧಾರೆಯು ಸ್ವಾಮಿಯ ದೇಹದಲ್ಲಿ ಯಾವ ಅತಿಶಯವನ್ನು ಉಂಟು ಮಾಡಲಿಲ್ಲ ?

**ಸಮುಸ್ತಾಃ ಪೂರಯಂ[5]ತ್ಯಾಶಾ ಜಗದಾನಂದದಾಯಿನೀ ।**
**ವಸುಧಾರೇವ ಧಾರಾಸೌ [6]ಕ್ಷೀರವಾರಾಂ ಮುದೇಸ್ತು ನಃ ॥ ೧೯೨ ॥**

ದಿಕ್ಕುಗಳನ್ನೆಲ್ಲ ವ್ಯಾಪಿಸುವುದೂ ಜಗತ್ತಿಗೆ ಆನಂದವನ್ನುಂಟುಮಾಡುವುದೂ ಆದ ದ್ರವ್ಯದ ಧಾರೆಯಂತೆ ಹಾಲಿನ ಮತ್ತು ನೀರಿನ ಈ ಧಾರೆಯು ನಮ್ಮ ಸಂತೋಷಕ್ಕೋಸ್ಕರ ಇರಲಿ.

**ಯಾ ಪುಣ್ಯಾಸ್ರವಧಾರೇವ ಸೂತೇ ಸಂಪತ್ಪರಂಪರಾಮ್ ।**
**ಸಾಸ್ಮಾನ್ಗಂಧಪಯೋಧಾರಾ [7]ಧಿನೋ[8]ತ್ವನಿಧನೈರ್ಧನೈಃ ॥ ೧೯೩ ॥**

ಯಾವ ಜಲಧಾರೆಯು ಪುಣ್ಯಾಸ್ರವದ ಧಾರೆಯಂತೆ ಅವಿಚ್ಛಿನ್ನವಾಗಿ ಸಂಪತ್ತನ್ನುಂಟುಮಾಡುತ್ತದೆಯೋ ಅಂತಹ ಗಂಧೋದಕಧಾರೆಯು ನಾಶರಹಿತವೂ ರತ್ನತ್ರಯರೂಪವೂ ಆದ ದ್ರವ್ಯಗಳಿಂದ ನಮ್ಮನ್ನು ಸಂತೋಷಪಡಿಸಲಿ.

**ಯಾ ನಿಶಾತಾಸಿಧಾರೇವ ವಿಘ್ನವರ್ಗಂ ವಿನಿಘ್ನತೀ ।**
**ಪುಣ್ಯಗಂಧಾಂಭಸಾಂ ಧಾರಾ ಸಾ ಶಿವಾಯ ಸದಾಸ್ತು ನಃ ॥ ೧೯೪ ॥**

ಯಾವ ಜಲಧಾರೆಯು ಅತ್ಯಂತ ತೀಕ್ಷ್ಣವಾದ ಖಡ್ಗದ ಧಾರೆಯಂತೆ ವಿಘ್ನಗಳ ಸಮೂಹವನ್ನು ನಾಶಮಾಡುತ್ತದೆಯೋ ಅಂತಹ ಪುಣ್ಯಕರವಾದ ಗಂಧೋದಕ ಧಾರೆಯು ಯಾವಾಗಲೂ ನಮ್ಮ ಕಲ್ಯಾಣಕ್ಕೋಸ್ಕರ ಇರಲಿ.

**[9]ಮಾನನೀಯಾ [10]ಮುನೀಂದ್ರಾಣಾಂ ಜಗತಾಮೇಕಪಾವನೀ ।**
**ಸಾ[11]ವ್ಯಾದ್ಗಂಧಾಂಬುಧಾರಾಸ್ಮಾನ್ಯಾ ಸ್ಮ ವ್ಯೋಮಾಪಗಾಯತೇ ॥ ೧೯೫ ॥**

ಮುನೀಶ್ವರರಿಂದ ಪೂಜಿಸುವುದಕ್ಕೆ ಯೋಗ್ಯವೂ ಜಗತ್ತಿಗೆ ಮುಖ್ಯವಾಗಿ ಪವಿತ್ರವೂ ದೇವಗಂಗೆಯಂತೆ ವರ್ತಿಸುವುದೂ ಆದ ಆ ಗಂಧೋದಕಧಾರೆಯು ನಮ್ಮನ್ನು ರಕ್ಷಿಸಲಿ.

**ತನುಂ ಭಗವತಃ ಪ್ರಾಪ್ಯ ಯಾತಾ ಯಾತಿಪವಿತ್ರತಾಮ್ ।**
**ಪವಿತ್ರಯತು ನಃ ಸ್ವಾಂತಂ ಧಾರಾ ಗಂಧಾಂಭಸಾಮಸೌ ॥ ೧೯೬ ॥**

ಭಗವಂತನ ಶರೀರವನ್ನು ಹೊಂದಿ ಅತ್ಯಂತ ಪವಿತ್ರವಾದ ಈ ಗಂಧೋದಕ ಧಾರೆಯು ನಮ್ಮ ಮನಸ್ಸನ್ನು ಪವಿತ್ರಮಾಡಲಿ.

೧ ಕೃತಾರ್ಥಾ. ೨ ಸ್ವಾಧೀನಮಕರೋತ್. ೩ ತದಂಗ ಸೌಗಂಧ್ಯಸೌಕುಮಾರ್ಯಾದಿಗುಣಾನ್. ೪ ಸಂಸ್ಕಾರಿತಾ. ೫ ದಿಶಃ. ೬ ಕ್ಷೀರಧಾರೇತ್ಯಪಿ ಪಾಠಃ. ೭ ಪ್ರೀಣಯತು. ೮ ಅವಿನಶ್ವರೈ ರತ್ನತ್ರಯಾತ್ಮಕಧನೈಃ. ೯ ಪೂಜ್ಯಾ. ೧೦ ಮುನೀಂದ್ರೈರಿತ್ಯರ್ಥಃ. ೧೧ ರಕ್ಷತು.

**ಕೃತ್ವಾ ಗಂಧೋದಕೈ[೧]ರಿತ್ಥಮಭಿಷೇಕಂ ಸುರೋತ್ತಮಾಃ ।**
**ಜಗತಾಂ ಶಾಂತಯೇ[೨]ಶಾಂತಿಂ ಘೋಷಯಾಮಾಸುರುಚ್ಚಕೈಃ ॥ ೧೯೭ ॥**

ಶ್ರೇಷ್ಠರಾದ ದೇವತೆಗಳು ಈ ಪ್ರಕಾರವಾಗಿ ಗಂಧೋದಕಗಳಿಂದ ಅಭಿಷೇಕವನ್ನು ಮಾಡಿ ಜಗತ್ತಿನ ಶಾಂತಿಗೋಸ್ಕರ ಗಟ್ಟಿಯಾಗಿ ಶಾಂತಿಮಂತ್ರವನ್ನು ಪಠನ ಮಾಡಿದರು.

**ಪ್ರಚಕ್ರುರುತ್ತಮಾಂಗೇಷು ಚಕ್ರುಃ ಸರ್ವಾಂಗ[೩]ಸಂಗತಮ್ ।**
**ಸ್ವರ್ಗಸ್ಯೋಪಾಯನಂ ಚಕ್ರುಸ್ತದ್ಗಂಧಾಂಬು ದಿವೌಕಸಃ ॥ ೧೯೮ ॥**

ದೇವತೆಗಳು ಸ್ವಾಮಿಗೆ ಅಭಿಷೇಕಮಾಡಿದ ಆ ಗಂಧೋದಕವನ್ನು ತಮ್ಮ ಮಸ್ತಕಗಳಲ್ಲಿ ಧರಿಸಿಕೊಂಡರು. ಸರ್ವಾಂಗಗಳಿಗೂ ಲೇಪಿಸಿಕೊಂಡರು. ಸ್ವರ್ಗಕ್ಕೂ ಒಯ್ದರು.

**ಗಂಧಾಂಬುಸ್ನಪನಸ್ಯಾಂತೇ ಜಯಕೋಲಾಹಲೈಃ ಸಮಮ್ ।**
**[೪]ವ್ಯಾತ್ಯುಕ್ಷೀಮಮರಾಶ್ಚಕ್ರುಃ [೫]ಸಚೂರ್ಣೈರ್ಗಂಧವಾರಿಭಿಃ ॥ ೧೯೯ ॥**

ಗಂಧೋದಕಾಭಿಷೇಕವು ಪೂರ್ತಿಯಾದನಂತರ ದೇವತೆಗಳು ಜಯಜಯವೆಂಬ ಶಬ್ದವನ್ನು ಮಾಡಿ ಪರಿಮಳದ್ರವ್ಯಮಿಶ್ರವಾದ ಗಂಧೋದಕಗಳಿಂದ ಪರಸ್ಪರವಾಗಿ ಜಲಸೇಚನೆಯನ್ನು ಮಾಡಿದರು. ಓಕುಳಿಯಾಡಿದರೆಂದರ್ಥವು.

**[೬]ನಿವೃತ್ತಾವಭಿಷೇಕಸ್ಯ [೭]ಕೃತಾವಭೃಥಮಜ್ಜನಾಃ ।**
**ಪರೀತ್ಯ ಪರಮಂ ಜ್ಯೋತಿ[೮]ರಾನರ್ಚುರ್ಭುವನಾರ್ಚಿತಮ್ ॥ ೨೦೦ ॥**

ಅಭಿಷೇಕವು ಪರಿಸಮಾಪ್ತಿಯಾದನಂತರ ದೇವತೆಗಳೆಲ್ಲ ಅವಭೃತಸ್ನಾನವನ್ನು ಮಾಡಿ ಲೋಕಪೂಜಿತವಾದ ಪರಂಜ್ಯೋತಿ(ಸ್ವಾಮಿ)ಗೆ ಪ್ರದಕ್ಷಿಣೆಮಾಡಿ ಪೂಜಿಸಿದರು.

**ಗಂಧೈರ್ಧೂಪೈಶ್ಚ ದೀಪೈಶ್ಚ ಸಾಕ್ಷತೈಃ ಕುಸುಮೋದಕೈಃ ।**
**ಮಂತ್ರಪೂತೈಃ ಫಲೈಃ ಸಾರ್ಘ್ಯೈಃ ಸುರೇಂದ್ರಾ ವಿಭು[೯]ಮೀಜಿರೇ ॥**

ದೇವೇಂದ್ರರು ಮಂತ್ರದಿಂದ ಪವಿತ್ರವಾದ ಜಲ ಗಂಧ ಅಕ್ಷತ ಪುಷ್ಪ ದೀಪ ಧೂಪ ಫಲ ಅರ್ಘ್ಯ ಇವುಗಳಿಂದ ಸ್ವಾಮಿಯನ್ನು ಪೂಜಿಸಿದರು.

**[೧೦]ಕೃತೇಷ್ಟಯಃ [೧೧]ಕೃತಾನಿಷ್ಟವಿಘಾತಾಃ ಕೃತಪೌಷ್ಟಿಕಾಃ ।**
**ಜನ್ಮಾಭಿಷೇಕಮಿತ್ಯುಚ್ಚೈರ್ನಾಕೇಂದ್ರಾ [೧೨]ನಿರತಿಷ್ಠಿಪನ್ ॥ ೨೦೨ ॥**

ಈ ಪ್ರಕಾರವಾಗಿ ದೇವೇಂದ್ರರು ಚೆನ್ನಾಗಿ ಸ್ವಾಮಿಯನ್ನು ಪೂಜಿಸಿ ಶಾಂತಿಕವನ್ನೂ ಪೌಷ್ಟಿಕವನ್ನೂ ಮಾಡಿ ಜನ್ಮಾಭಿಷೇಕವನ್ನು ಪೂರ್ತಿಮಾಡಿದರು.

**ಇಂದ್ರೇಂದ್ರಾಣ್ಯೌ ಸಮಂ ದೇವೈಃ ಪರಮಾನಂದದಾಯಿನಮ್ ।**
**ಕ್ಷಣಂ ಚೂಡಾಮಣಿಂ ಮೇರೋಃ ಪರೀತ್ಯೈನಂ ಪ್ರಣೇಮತುಃ॥ ೨೦೩ ॥**

ದೇವೇಂದ್ರನೂ ಶಚೀದೇವಿಯೂ ಬೇರೆದೇವತೆಗಳೂ ಲೋಕಕ್ಕೆ ಪರಮಾನಂದ ದಾಯಕನೂ ಮಹಾಮೇರುಪರ್ವತಕ್ಕೆ ಚೂಡಾಮಣಿಯೂ ಆದ ಈ ಸ್ವಾಮಿಗೆ ಸ್ವಲ್ಪ ಹೊತ್ತು ಪ್ರದಕ್ಷಿಣೆಯನ್ನು ಮಾಡಿ ನಮಸ್ಕರಿಸಿದರು.

**ದಿವೋಽಪಪ್ತತ್ತದಾ ಪೌಷ್ಪೀ ವೃಷ್ಟಿರ್ಜಲಕಣೈಃ ಸಮಮ್ ।**
**ಮುಕ್ತಾನಂದಾಶ್ರುಬಿಂದೂನಾಂ ಶ್ರೇಣೀವ ತ್ರಿದಿವಶ್ರಿಯಾ ॥ ೨೦೪ ॥**

೧ ಉಕ್ತಪ್ರಕಾರೇಣ. ೨ ಶಾಂತಿಮಂತ್ರಂ. ೩ ಲೇಪನಂ. ೪ ಅನ್ಯೋನ್ಯಸೇಚನಂ. ೫ ಪರಿಮಲದ್ರವ್ಯಮಿಶ್ರಿತೈಃ. ೬ ಪರಿಸಮಾಪ್ತೌ ಸತ್ಯಾಂ. ೭ ವಿಹಿತಯಜನಾನಂತರಕ್ರಿಯಮಾಣಸ್ನಾನಾಃ. ೮ ಅರ್ಚಯಂತಿ ಸ್ಮ. ೯ ಪೂಜಯಾಮಾಸುಃ. ೧೦ ಕೃತಪೂಜಾಃ. ೧೧ ಕೃತಶಾಂತಿಕಾಃ. ೧೨ ನಿರ್ವರ್ತಯಂತಿ ಸ್ಮ.

ಆಗ ಸ್ವರ್ಗಲಕ್ಷ್ಮಿಯು ಆನಂದದಿಂದುಂಟಾದ ಕಣ್ಣೀರಿನ ಬಿಂದುಗಳ ಪಂಕ್ತಿಯನ್ನು ಸುರಿಸಿದಳೋ ಎಂಬಂತೆ ಸ್ವರ್ಗದಿಂದ ನೀರಿನ ಹನಿಗಳೊಡನೆ ಪುಷ್ಪವೃಷ್ಟಿಯಾಯಿತು.

**ರಜಃಪಟಲಮಾಧೂಯ [೧]ಸುರಾಗಸುಮನೋಭವಮ್ ।**
**ಮಾತರಿಶ್ವಾ ವವೌ ಮಂದಂ ಸ್ನಾನಾಂಭಃಶೀಕರಾನ್ಕಿರನ್ ॥ ೨೦೫ ॥**

ಗಾಳಿಯು ಕಲ್ಪವೃಕ್ಷಗಳ ಪುಷ್ಪಗಳಲ್ಲಿ ಉಂಟಾದ ಧೂಳನ್ನು ಕೊಡಹಿ ಅಭಿಷೇಕಜಲದ ತುಂತುರುಗಳನ್ನು ಎರಚುತ್ತ ಮಂದವಾಗಿ ಬೀಸಿತು.

**[೨]ಸಜ್ಯೋತಿರ್ಭಗವಾನ್ಮೇರುಃ ಕುಲಶೈಲಾಯಿತಾಃ ಸುರಾಃ ।**
**ಕ್ಷೀರಮೇಘಾಯಿತಾಃ ಕುಂಭಾಃ ಸುರನಾರ್ಯೋಽ[೩]ಪ್ಸರಾಯಿತಾಃ ॥ ೨೦೬ ॥**

ಆಗ ಜ್ಞಾನಜ್ಯೋತಿಯಿಂದ ಯುಕ್ತನಾದ ಭಗವಂತನು ಮಹಾಮೇರು ಪರ್ವತದಂತೆ ಕಾಣಿಸುತ್ತಿದ್ದನು. ದೇವತೆಗಳು ಕುಲಪರ್ವತಗಳಂತೆ ಕಾಣಿಸುತ್ತಿದ್ದರು. ಅಭಿಷೇಕದ ಕುಂಭಗಳು ಹಾಲಿನ ಮೇಘಗಳಂತೆ ಕಾಣಿಸುತ್ತಿದ್ದುವು. ದೇವಸ್ತ್ರೀಯರು ಸರೋವರಗಳಂತೆ ಕಾಣಿಸುತ್ತಿದ್ದರು.

**ಶಕ್ರಃ ಸ್ನಾಪಯಿತಾದ್ರೀಂದ್ರಃ ಸ್ನಾನಪೀಠೀ ಸುರಾಂಗನಾಃ ।**
**ನರ್ತಕ್ಯಃ ಕಿಂಕರಾ ದೇವಾಃ [೪]ಸ್ನಾನದ್ರೋಣೀ ಪಯೋರ್ಣವಃ ॥ ೨೦೭ ॥**

ಆಗ ದೇವೇಂದ್ರನು ಅಭಿಷೇಕವನ್ನು ಮಾಡುವವನಾಗಿದ್ದನು. ಮಹಾಮೇರು ಪರ್ವತವು ಸ್ನಾನಪೀಠವಾಗಿದ್ದಿತು. ದೇವಸ್ತ್ರೀಯರು ನರ್ತಕಿಯರಾಗಿದ್ದರು. ದೇವತೆಗಳು ಕಿಂಕರರಾಗಿದ್ದರು. ಕ್ಷೀರಸಮುದ್ರವು ಸ್ನಾನದ ತೊಟ್ಟಿಯಾಗಿದ್ದಿತು.

**ಇತಿ ಶ್ಲಾಘ್ಯತಮೋ ಮೇರೌ [೫]ನಿರ್ವೃತ್ತಃ ಸ್ನಪನೋತ್ಸವಃ ।**
**ಸ ಯಸ್ಯ ಭಗವಾನ್ಪೂಯಾತ್ಪೂತಾತ್ಮಾ ವೃಷಭೋ ಜಗತ್ ॥ ೨೦೮ ॥**

ಈ ಪ್ರಕಾರವಾಗಿ ಅತ್ಯಂತ ಶ್ಲಾಘ್ಯವಾದ ಯಾರ ಅಭಿಷೇಕೋತ್ಸವವು ಮಹಾಮೇರುಪರ್ವತದಲ್ಲಿ ಜರುಗಿತೋ ಅಂತಹ ಪವಿತ್ರಾತ್ಮರಾದ ವೃಷಭ ಸ್ವಾಮಿಯು ಜಗತ್ತನ್ನು ಪವಿತ್ರಮಾಡಲಿ.

**ಅಥ ಪವನಕುಮಾರಾಃ [೬]ಸ್ವಾಮಿವ [೭]ಪ್ರಾಜ್ಯಭಕ್ತಿಂ**
**ದಿಶಿ ದಿಶಿ ವಿಭಜಂತೋ ಮಂದಮಂದಂ [೮]ವಿಚೇರುಃ ।**
**ಮುಮುಚುರಮೃತಗರ್ಭಾಃ ಶೀಕರಾಸಾರಧಾರಾಃ**
**ಕಿಲ [೯]ಜಲದಕುಮಾರಾ [೧೦]ಮೈರವೀಷು ಸ್ಥಲೀಷು ॥ ೨೦೯ ॥**

ತರುವಾಯ ವಾಯುಕುಮಾರರು ತಮ್ಮ ಭಕ್ತ್ಯತಿಶಯವನ್ನು ದಿಕ್ಕುದಿಕ್ಕುಗಳಲ್ಲಿ ವಿಭಾಗಮಾಡುವವರಂತೆ ಮಂದಮಂದವಾಗಿ ಸಂಚರಿಸಿದರು. ಮಂದಮಾರುತವು ಬೀಸಿತೆಂದರ್ಥವು. ಮೇಘಕುಮಾರರು ಮಹಾಮೇರುಪರ್ವತಸಂಬಂಧವಾದ ಸ್ಥಳಗಳಲ್ಲಿ ಅಮೃತಯುಕ್ತವಾದ ತುಂತುರುಗಳ ಧಾರೆಗಳನ್ನು ವೇಗದಿಂದ ಸುರಿದರು.

**ಸಪದಿ [೧೧]ವಿಧುತಕಲ್ಪಾನೋಕಹೈರ್ವ್ಯೋಮಗಂಗಾ-**
**ಶಿಶಿರತರತರಂಗೋತ್ಕ್ಷೇಪದಕ್ಷೈರ್ಮರುದ್ಭಿಃ ।**
**ತಟವನಮನುಪುಷ್ಪಾಣ್ಯಾಹರದ್ಭಿಃ ಸಮಂತಾತ್**
**[೧೨]ಪರಿಗತಿಮಿವ ಕರ್ತುಂ ಬಭ್ರಮೇ ಶೈಲಭರ್ತುಃ ॥ ೨೧೦ ॥**

ಶೀಘ್ರವಾಗಿ ಕಲ್ಪವೃಕ್ಷಗಳನ್ನು ಕಂಪಿಸುವುದೂ ಬಹಳ ತಣ್ಣಗಿರುವ ದೇವಗಂಗೆಯ ತೆರೆಮಾಲೆಗಳನ್ನು ಮೇಲಕ್ಕೆ ಎಸೆಯುವುದರಲ್ಲಿ ಸಮರ್ಥವೂ ದಡದಲ್ಲಿರುವ ವನಗಳಿಂದ ಪುಷ್ಪಗಳನ್ನು ತರುವುದೂ ಆದ ಗಾಳಿಯು

೧ ಕಲ್ಪತರುಃ. ೨ ಜ್ಞಾನೇನ ಯುಕ್ತಃ. ೩ ಸರೋವರಾಯಿತಾಃ. ೪ ಸ್ನಾನಕಟಾಹಃ. ೫ ನಿರ್ವರ್ತಿತಃ. ೬ ಆತ್ಮೀಯಾಂ. ೭ ಪ್ರಭೂತಾ. ೮ ವಿಚರಂತಿ ಸ್ಮ. ೯ ಮೇಘಕುಮಾರಾಃ. ೧೦ ಮೇರುಸಂಬಂಧಿಷು. ೧೧ ಕಂಪಿತಃ. ೧೨ ಪರಿಭ್ರಮಂ.

ಮಹಾಮೇರುಪರ್ವತವನ್ನು ಎಲ್ಲಾಕಡೆಗಳಲ್ಲಿಯೂ ಸುತ್ತುವುದಕ್ಕೋಸ್ಕರವೋ ಎಂಬಂತೆ, ಚಲಿಸಿತು.

**ಅನುಚಿತ[೧]ಮಶಿವಾನಾಂ ಸ್ಥಾತುಮದ್ಯ ತ್ರಿಲೋಕ್ಯಾಮ್ ।**
**ಜನಯತಿ[೨] ಶಿವಮಸ್ಮಿನ್ನುತ್ಸವೇ ವಿಶ್ವಭರ್ತುಃ ॥**
**ಇತಿ [೩]ಕಿಲ ಶಿವಮುಚ್ಚೈರ್ಘೋಷಯನ್ದುಂದುಭೀನಾಮ್ ।**
**ಸುರಕರನಿಹತಾನಾಂ ಶುಶ್ರುವೇ ಮಂದ್ರನಾದಃ ॥ ೨೧೧ ॥**

ಲೋಕಾಧಿಪತಿಯ ಈ ಮಹೋತ್ಸವವು ಮಂಗಲವನ್ನುಂಟುಮಾಡುತ್ತಿರಲು ''ಈಗ ಮೂರುಲೋಕದಲ್ಲಿಯೂ ಅಮಂಗಲಗಳಿರುವುದು ಉಚಿತವಾದುದಲ್ಲ'' ಹೀಗೋ ಎಂಬಂತೆ, ಗಟ್ಟಿಯಾಗಿ ಮಂಗಲಘೋಷಣೆಯನ್ನು ಮಾಡುವ ದೇವತೆಗಳ ಕೈಗಳಿಂದ ಹೊಡೆಯಲ್ಪಟ್ಟ ಭೇರಿಗಳ ಗಂಭೀರವಾದ ಶಬ್ದವು ಕೇಳಿಸಿತು.

**ಸುರಕುಜಕುಸುಮಾನಾಂ ವೃಷ್ಟಿರಾಪಪ್ತದುಚ್ಚೈ-**
**ರಮರಕರವಿಕೀರ್ಣಾ ವಿಷ್ವಗಾಕೃಷ್ಟಭೃಂಗಾ ।**
**ಜಿನಜನನ[೪]ಸಪರ್ಯಾಲೋಕನಾರ್ಥಂ ಸಮಂತಾ-**
**ನ್ನಯನತತಿರಿವಾವಿರ್ಭಾವಿತಾ ಸ್ವರ್ಗಲಕ್ಷ್ಮ್ಯಾ ॥ ೨೧೨ ॥**

ಸುತ್ತಲೂ ಭ್ರಮರಗಳಿಂದ ಆಸಕ್ತವೂ ದೇವತೆಗಳ ಕೈಗಳಿಂದ ಎರಚಲ್ಪಟ್ಟದ್ದೂ ಆದ ಕಲ್ಪವೃಕ್ಷಗಳ ಪುಷ್ಪವೃಷ್ಟಿಯು ಜಿನೇಶ್ವರನ ಪೂಜೆಯನ್ನು ನೋಡುವುದ ಕ್ಕೋಸ್ಕರ ಸ್ವರ್ಗಲಕ್ಷ್ಮಿಯು ಸುತ್ತಲೂ ಉಂಟುಮಾಡಿದ ನೇತ್ರಗಳ ಸಾಲೋ ಎಂಬಂತೆ, ಬಹಳವಾಗಿ ಬಿದ್ದಿತು.

**ಇತ್ಥಂ ಯಸ್ಯ ಸುರಾಸುರೈಃ ಪ್ರಮುದಿತೈರ್ಜನ್ಮಾಭಿಷೇಕೋತ್ಸವ-**
**ಶ್ಚಕ್ರೇ ಶಕ್ರಪುರಸ್ಸರೈಃ ಸುರಗಿರೌ ಕ್ಷೀರಾರ್ಣವಸ್ಯಾಂಬುಭಿಃ ।**
**ನೃತ್ಯಂತೀಷು ಸುರಾಂಗನಾಸು ಸಲಯಂ ನಾನಾವಿಧೈ[೫]ರ್ಲಾಸ್ಯಕೈಃ**
**ಸ ಶ್ರೀಮಾನ್ವೃಷಭೋ ಜಗತ್ತ್ರಯಗುರುರ್ಜೀಯಾಜ್ಜಿನಃ ಪಾವನಃ ॥**

ಈಪ್ರಕಾರವಾಗಿ ದೇವಸ್ತ್ರೀಯರು ನಾನಾಪ್ರಕಾರವಾದ ನಾಟ್ಯಗಳಿಂದ ಲಯಕ್ಕೆ ಅನುಸಾರವಾಗಿ ನರ್ತನವನ್ನು ಮಾಡುತ್ತಿರುವಾಗ ದೇವೇಂದ್ರಮೊದಲಾದ ದೇವತೆಗಳೆಲ್ಲ ಸಂತೋಷದಿಂದ ಮಹಾಮೇರುಪರ್ವತದಲ್ಲಿ ಕ್ಷೀರಸಮುದ್ರದ ಜಲಗಳಿಂದ ಯಾರಿಗೆ ಜನ್ಮಾಭಿಷೇಕವನ್ನು ಮಾಡಿದರೋ ಅಂತಹ ಮೂರು ಲೋಕಕ್ಕೆ ಪ್ರಭುವೂ ಅಂತರಂಗಬಹಿರಂಗಲಕ್ಷ್ಮೀರಮಣನೂ ಪವಿತ್ರನೂ ಆದ ಆ ವೃಷಭಜಿನೇಶ್ವರನು ಸರ್ವೋತ್ಕೃಷ್ಟನಾಗಿರಲಿ.

[೧] ಅಮಂಗಲಾನಾಂ. [೨] ಸತಿ. [೩] ಇವ. [೪] ಪೂಜಾ. [೫] ನಾಟ್ಯೈಃ.

**[೧]ಜನ್ಮಾನಂತರಮೇವ ಯಸ್ಯ ಮಿಲಿತೈರ್ದೇವಾಸುರಾಣಾಂ ಗಣೈ-**
**ರ್ನಾನಾಯಾನವಿಮಾನಪಙ್ಕ್ತಿನಿವಹವ್ಯಾರುದ್ಧ[೨]ರೋಧೋಂಗಣೈಃ ।**
**ಕ್ಷೀರಾಬ್ಧೇಃ ಸ[೩]ಮುಪಾಹೃತೈಃ ಶುಚಿಜಲೈಃ ಕೃತ್ವಾಭಿಷೇಕಂ ವಿಭೋ-**
**ರ್ಮೇರೋರ್ಮೂರ್ಧನಿ ಜಾತಕರ್ಮ ವಿದಧೇ**
**ಸೋವ್ಯಾಜ್ಜಿನೋ ನೋಗ್ರಿಮಃ ॥ ೨೧೪ ॥**

ಯಾವ ಸ್ವಾಮಿಯ ಉತ್ಪತ್ತ್ಯನಂತರದಲ್ಲಿಯೇ ಬಂದು ಸೇರಿದ ಅನೇಕಪ್ರಕಾರ ವಾದ ಯಾನ ವಿಮಾನ ಕಾಲಾಳುಗಳ ಸಮೂಹ ಇವುಗಳಿಂದ ಗಗನಾಂಗಣವನ್ನು ತಡೆದ ದೇವತೆಗಳ ಸಮೂಹಗಳು ಕ್ಷೀರಸಮುದ್ರದಿಂದ ತಂದ ನಿರ್ಮಲವಾದ ಜಲಗಳಿಂದ ಮಹಾಮೇರುಪರ್ವತದ ಮಸ್ತಕದಲ್ಲಿ ಅಭಿಷೇಕವನ್ನು ಮಾಡಿ ಜಾತಕರ್ಮವನ್ನು ಮಾಡಿದರೋ ಅಂತಹ ಪ್ರಥಮಜಿನೇಶ್ವರನು ನಮ್ಮನ್ನು ರಕ್ಷಿಸಲಿ.

**ಸದ್ಯಃ ಸಂಹೃತಮೌಷ್ಣ್ಯ[೪]ಮುಷ್ಣಕಿರಣೈ[೫]ರಾಮ್ರೇಡಿತಂ ಶೀಕರೈಃ-**
**ಶ್ಶೈತ್ಯಂ [೬]ಶೀತಕರೈ[೭]ರುದೂಢಮುಡುಭಿ[೮]ರ್ಬದ್ಧೋಡುಪೈಃ ಕ್ರೀಡಿತಮ್ ।**
**ತಾರೌಘೈಸ್ತರಲೈಸ್ತರದ್ಭಿರಧಿಕಂ [೯]ಡಿಂಡೀರಪಿಂಡಾಯಿತಂ-**
**ಯಸ್ಮಿನ್ಮಜ್ಜನಸಂವಿಧೌ ಸ ಜಯತಾಜ್ಜೈನೋ ಜಗತ್ಪಾವನಃ ॥ ೨೧೫ ॥**

ಯಾವ ಜನ್ಮಾಭಿಷೇಕವಿಧಿಯಲ್ಲಿ ಸೂರ್ಯರು ತಮ್ಮ ಉಷ್ಣತೆಯನ್ನು ಸಂಹರಿಸಿದರೋ ಜಲಕಣಗಳು ದ್ವಿಗುಣಿತಗಳಾದುವೋ ಚಂದ್ರರು ಶೈತ್ಯವನ್ನು ಧರಿಸಿದರೋ ನಕ್ಷತ್ರಗಳು ತೆಪ್ಪಗಳಾಗಿ ಕ್ರೀಡಿಸಿದುವೋ ತೇಲುತ್ತಿರುವ ಚಂಚಲವಾದ ತಾರೆಗಳ ಗುಂಪುಗಳು ನೊರೆಗಳ ಪಿಂಡಗಳಂತೆ ಕಾಣಿಸುತ್ತಿದ್ದುವೋ ಅಂತಹ ಜಗತ್ತನ್ನು ಪರಿಶುದ್ಧಮಾಡುವ ಜಿನೇಶ್ವರನ ಜನ್ಮಾಭಿಷೇಕವು ಜಯಿಸಲಿ (ಸರ್ವೋತ್ಕೃಷ್ಟವಾಗಿರಲಿ).

**ಸಾನಂದಂ ತ್ರಿದಶೇಶ್ವರೈಃ [೧೦]ಸಚಕಿತಂ ದೇವೀಭಿರುತ್ಪುಷ್ಕರೈಃ**
**ಸತ್ರಾಸಂ ಸುರವಾರಣೈಃ [೧೧]ಪ್ರಣಿಹಿತೈರಾತ್ತಾದರಂ ಚಾರಣೈಃ ।**
**ಸಾಶಂಕಂ ಗಗನೇಚರೈಃ ಕಿಮಿದಮಿತ್ಯಾಲೋಕಿತೋ ಯಃ ಸ್ಫುರನ್**
**ಮೇರೋರ್ಮೂರ್ಧ್ನಿ ಸ ನೋವತಾಜ್ಜಿನವಿಭೋ**
**[೧೨]ರ್ಜನ್ಮೋತ್ಸವಾಂಭಃಪ್ಲವಃ ॥ ೨೧೬ ॥**

ಮಹಾಮೇರುಪರ್ವತದ ಮಸ್ತಕದಲ್ಲಿ ಪ್ರಕಾಶಮಾನವಾದ ಯಾವ ಅಭಿಷೇಕ ವನ್ನು '' ಇದೇನು ! '' ಎಂದು ದೇವತೆಗಳು ಆನಂದದಿಂದಲೂ ದೇವಸ್ತ್ರೀಯರು ಭಯದಿಂದಲೂ ಸೊಂಡಿಲನ್ನು ಮೇಲಕ್ಕೆಯೆತ್ತಿದ ದೇವಗಜಗಳು ಉದ್ವೇಗ ದಿಂದಲೂ ಧ್ಯಾನಸ್ಥರಾದ ಚಾರಣಮುನಿಗಳು ಪ್ರೀತಿಯಿಂದಲೂ ವಿದ್ಯಾಧರರು ಸಂದೇಹದಿಂದಲೂ ನೋಡಿದರೋ, ಅಂತಹ ಜಿನೇಶ್ವರನ ಜನ್ಮಾಭಿಷೇಕದ ಜಲಪ್ರವಾಹವು ನಮ್ಮನ್ನು ರಕ್ಷಿಸಲಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಭಗವಜ್ಜನ್ಮಾಭಿಷೇಕವರ್ಣನಂ ನಾಮ ತ್ರಯೋದಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ ''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭಗವಜ್ಜನ್ಮಾಭಿಷೇಕವರ್ಣನೆಯೆಂಬ ಹದಿಮೂರನೆಯ ಪರ್ವವು ಸಮಾಪ್ತವಾದುದು.

---

[೧] ಉತ್ಪತ್ತ್ಯನಂತರಂ. [೨] ಗಗನಾಂಗಣೈಃ. [೩] ಉಪಾನೀತೈಃ. [೪] ರವಿಭಿಃ. [೫] ದ್ವಿಗುಣಿತಂ ಯಥಾ ಭವತಿ ತಥಾ. [೬] ಚಂದ್ರೈಃ. [೭] ಧೃತಂ. [೮] ಬದ್ಧಕೋಲ್ಲೈಃ ಸದ್ಭಿಃ. [೯] ಫೇನಪಿಂಡಾಯಿತಂ. [೧೦] ಸಭಯಂ. [೧೧] ಧ್ಯಾನಸ್ಥೈಃ. [೧೨] ಜನ್ಮಾಭಿಷೇಕೋತ್ಸವಜಲಪ್ರವಾಹಃ.

# ಅಥ ಚತುರ್ದಶಂ ಪರ್ವ

**ಅಥಾಭಿಷೇಕ[೧]ನಿರ್ವೃತ್ತೌ ಶಚೀದೇವೀ ಜಗದ್ಗುರೋಃ ।**
**[೨]ಪ್ರಸಾಧನವಿಧೌ ಯತ್ನಮಕರೋ[೩]ತ್ಕೃತಕೌತುಕಾ ॥ ೧ ॥**

ಈಪ್ರಕಾರವಾಗಿ ಅಭಿಷೇಕವು ಪೂರ್ತಿಯಾದನಂತರ, ಶಚೀದೇವಿಯು ಸಂತುಷ್ಟಳಾಗಿ ಜಗದ್ಗುರುವಾದ ವೃಷಭಸ್ವಾಮಿಯನ್ನು ಅಲಂಕರಿಸುವುದಕ್ಕೆ ಪ್ರಯತ್ನಿಸಿದಳು.

**ತಸ್ಯಾಭಿಷಿಕ್ತಮಾತ್ರಸ್ಯ ದಧತಃ ಪಾವನೀಂ ತನುಮ್ ।**
**ಸಾಂಗಲಗ್ನಾನ್ಮಮಾರ್ಜಾಂಭಃಕಣಾನ್ಸ್ವಚ್ಛಾಮಲಾಂಶುಕೈಃ ॥ ೨ ॥**

ಅಭಿಷೇಕಮಾಡಲ್ಪಟ್ಟವನೂ ಪವಿತ್ರವಾದ ಶರೀರವನ್ನು ಧರಿಸಿದವನೂ ಆದ ಆ ಸ್ವಾಮಿಯ ಶರೀರದಲ್ಲಿ ಸಂಬಂಧಿಸಿದ್ದ ನೀರಿನ ಹನಿಗಳನ್ನು ನಿರ್ಮಲವಾದ ತನ್ನ ವಸ್ತ್ರಗಳಿಂದ ಒರಸಿದಳು.

**ಸ್ವಾಸನ್ನಾಪಾಂಗಸಂಕ್ರಾಂತಸಿತಚ್ಛಾಯಂ ವಿಭೋರ್ಮುಖಮ್ ।**
**ಪ್ರಮೃಷ್ಟಮಪಿ ಸಾಮಾರ್ಜೀದ್ಭೂಯೋ [೪]ಜಲಕಣಾಸ್ಥಯಾ ॥ ೩ ॥**

ಶಚೀದೇವಿಯು ಸ್ವಾಮಿಯ ಮುಖವನ್ನು ಒರಸಿದ್ದರೂ ತನ್ನ ಸಮೀಪದಲ್ಲಿರುವ ಕಡೆಕಣ್ಣುಗಳಿಂದ ಸಂಬಂಧಿಸಿದ ಶುಭ್ರವಾದ ಕಾಂತಿಯನ್ನು ನೋಡಿ ಜಲಬಿಂದುಗಳೆಂಬ ಬುದ್ಧಿಯಿಂದ ಪುನಃ ಒರಸಿದಳು. ಸ್ವಾಮಿಯ ಮುಖದ ಮೇಲೆ ಬಿದ್ದ ಕಡೆಕಣ್ಣಿನ ಶುಭ್ರವಾದ ಕಾಂತಿಯನ್ನು ನೋಡಿ ಜಲಬಿಂದುವೆಂದು ಭ್ರಮಿಸಿ ಪುನಃ ಒರಸಿದಳೆಂದು ಭಾವವು.

**ಗಂಧೈಃ ಸುಗಂಧಿಭಿಃ ಸಾಂದ್ರೈರಿಂದ್ರಾಣೀ ಗಾತ್ರಮೀಶಿತುಃ ।**
**ಅನ್ವಲಿಂಪತ ಲಿಂಪದ್ಭಿರಿವಾಮೋದೈಸ್ತ್ರಿವಿಷ್ಟಪಮ್ ॥ ೪ ॥**

ತಮ್ಮ ಪರಿಮಳದಿಂದ ಸ್ವರ್ಗವನ್ನು ಲೇಪಿಸುತ್ತವೆಯೋ ಎಂಬಂತಿರುವ ಸುಗಂಧವಾದ ಗಂಧಗಳಿಂದ ಶಚೀದೇವಿಯು ಸ್ವಾಮಿಯ ಶರೀರವನ್ನು ಲೇಪಿಸಿದಳು.

**ಗಂಧೇನಾಮೋದಿನಾ ಭರ್ತುಃ ಶರೀರಸಹಜನ್ಮನಾ ।**
**ಗಂಧಾಸ್ತೇ [೫]ನ್ಯಕ್ಕೃತಾ ಏವ ಸೌಗಂಧ್ಯೇನಾಪಿ ಸಂಶ್ರಿತಾಃ ॥ ೫ ॥**

ಸ್ವಾಮಿಯ ಶರೀರದಲ್ಲಿರುವ ಸಹಜವಾದ ಪರಿಮಳವುಳ್ಳ ಗಂಧವು ಶಚೀದೇವಿಯು ಲೇಪಿಸಿದ ಗಂಧಗಳು ಉತ್ತಮವಾದ ಪರಿಮಳವುಳ್ಳುವಾಗಿದ್ದರೂ ಅವುಗಳನ್ನು ಕೀಳುಮಾಡಿತು. ಪರಿಮಳದ್ರವ್ಯಗಳಿಂದುಂಟಾದ ಕೃತ್ರಿಮಪರಿಮಳಕ್ಕಿಂತಲೂ ಸ್ವಾಮಿಯ ಶರೀರದ ಸಹಜವಾದ ಪರಿಮಳವು ಶ್ರೇಷ್ಠವಾಗಿದ್ದಿತೆಂದು ಭಾವವು.

**ತಿಲಕಂ ಚ ಲಲಾಟೇಸ್ಯ ಶಚೀ ಚಕ್ರೇ ಕಿಲಾದರಾತ್ ।**
**ಜಗತಾಂ ತಿಲಕಸ್ತೇನ ಕಿಮಲಂಕ್ರಿಯತೇ ವಿಭುಃ ॥ ೬ ॥**

ಈ ಸ್ವಾಮಿಯ ಹಣೆಯಲ್ಲಿ ಶಚೀದೇವಿಯು ಪ್ರೀತಿಯಿಂದ ತಿಲಕವನ್ನಿಟ್ಟಳು. ಆದರೆ ಲೋಕಕ್ಕೆ ತಿಲಕಪ್ರಾಯನಾದ ಸ್ವಾಮಿಯನ್ನು ಆ ತಿಲಕವು ಅಲಂಕರಿಸುವುದೇ ?

೧ ಸಂಪೂರ್ಣೇಸತಿ. ೨ ಅಲಂಕಾರವಿಧಾನೇ. ೩ ವಿಹಿತಸಂತೋಷಾ. ೪ ಅಂಬುಬಿಂದುಬುದ್ಧ್ಯಾ. ೫ ಅಧಃಕೃತಾಃ.

**ಮಂದಾರಮಾಲಯೋ[೧]ತ್ತಂಸಮಿಂದ್ರಾಣೀ ವಿದಧೇ ವಿಭೋಃ ।**
**ತಯಾಲಂಕೃತಮೂರ್ಧಾಸೌ ಕೀರ್ತ್ಯೇವ ವ್ಯರುಚದ್ಭೃಶಮ್ ॥ ೭ ॥**

ಶಚೀದೇವಿಯು ಮಂದಾರಪುಷ್ಪಮಾಲಿಕೆಯಿಂದ ಸ್ವಾಮಿಗೆ ಶಿರೋಭೂಷಣವನ್ನು ಮಾಡಿದಳು. ಆ ಪುಷ್ಪಮಾಲಿಕೆಯಿಂದ ಅಲಂಕೃತವಾದ ಮಸ್ತಕವುಳ್ಳ ಈ ಸ್ವಾಮಿಯು, ಕೀರ್ತಿಯಿಂದ ಅಲಂಕೃತನಾದವನಂತೆ, ಅಧಿಕವಾಗಿ ಪ್ರಕಾಶಿಸಿದನು.

**ಜಗಚ್ಚೂಡಾಮಣೇರಸ್ಯ ಮೂರ್ಧ್ನಿ ಚೂಡಾಮಣಿಂ ನ್ಯಧಾತ್ ।**
**ಸತಾಂ[೨]ಮೂರ್ಧಾಭಿಷಿಕ್ತಸ್ಯ ಪೌಲೋಮೀ [೩]ಭಕ್ತಿನಿರ್ಭರಾ ॥ ೮ ॥**

ಅತಿಶಯವಾದ ಭಕ್ತಿಯುಳ್ಳ ಶಚೀದೇವಿಯು ಸತ್ಪುರುಷರಲ್ಲಿ ಶ್ರೇಷ್ಠನೂ ಲೋಕಕ್ಕೆ ಚೂಡಾಮಣಿಯಂತಿರುವವನೂ ಆದ ಈ ವೃಷಭಸ್ವಾಮಿಯ ಮಸ್ತಕದಲ್ಲಿ ಚೂಡಾಮಣಿಯನ್ನಿರಿಸಿದಳು.

**[೪]ಅನಂಜಿತಾಸಿತೇ ಭರ್ತುರ್ಲೋಚನೇ ಸಾಂದ್ರಪಕ್ಷ್ಮಣೀ ।**
**ಪುನರಂಜನಸಂಸ್ಕಾರಮಾಚಾರ ಇತಿ [೫]ಲಂಭಿತೇ ॥ ೯ ॥**

ಅಂಜನವಿಲ್ಲದೆ ಕಪ್ಪಾದುದೂ ದಟ್ಟವಾದ ರೆಪ್ಪೆಗಳುಳ್ಳುದೂ ಆದ ಸ್ವಾಮಿಯ ಕಣ್ಣುಗಳಿಗೆ ಶಚೀದೇವಿಯು ಶಿಷ್ಟಾಚಾರವೆಂಬುದಾಗಿ ಪುನಃ ಅಂಜನಸಂಸ್ಕಾರವನ್ನು ಮಾಡಿದಳು.

**ಕರ್ಣಾವವಿದ್ಧಸಚ್ಛಿದ್ರೌ ಕುಂಡಲಾಭ್ಯಾಂ ವಿರೇಜತುಃ ।**
**ಕಾಂತಿದೀಪ್ತೀ ಮುಖೇ ದ್ರಷ್ಟುಮಿಂದ್ವರ್ಕಾಭ್ಯಾಮಿವಾಶ್ರಿತೌ ॥ ೧೦ ॥**

ಚುಚ್ಚದೆ ರಂಧ್ರಗಳುಳ್ಳ ಸ್ವಾಮಿಯ ಕಿವಿಗಳೆರಡು, ಮುಖದಲ್ಲಿರುವ ಕಾಂತಿಯನ್ನೂ ದೀಪ್ತಿಯನ್ನೂ ನೋಡುವುದಕ್ಕೋಸ್ಕರ ಚಂದ್ರಸೂರ್ಯರಿಂದ ಆಶ್ರಯಿಸಲ್ಪಟ್ಟಿವೆಯೋ ಎಂಬಂತೆ, ಎರಡು ಕರ್ಣಕುಂಡಲಗಳಿಂದ ಪ್ರಕಾಶಿಸಿದುವು.

**ಹಾರಿಣಾ ಮಣಿಹಾರೇಣ ಕಂಠಶೋಭಾ ಮಹತ್ಯಭೂತ್ ।**
**ಮುಕ್ತಿಶ್ರೀ[೬]ಕಂಠಿಕಾದಾಮ[೭]ಚಾರುಣಾ ತ್ರಿಜಗತ್ಪತೇಃ ॥ ೧೧ ॥**

ಮೋಕ್ಷಲಕ್ಷ್ಮಿಯ ಕಂಠಮಾಲಿಕೆಯಂತೆ ಸುಂದರವೂ ಮನೋಹರವೂ ಆದ ರತ್ನಹಾರದಿಂದ ತ್ರಿಲೋಕಾಧಿಪತಿಯಾದ ಸ್ವಾಮಿಯ ಕಂಠದಲ್ಲಿ ಅಧಿಕವಾದ ಶೋಭೆಯಾಯಿತು.

**ಬಾಹ್ವೋರ್ಯುಗಂ ಚ ಕೇಯೂರಕಟಕಾಂಗದಭೂಷಿತಮ್ ।**
**ತಸ್ಯ ಕಲ್ಪಾಂಘ್ರಿಪಸ್ಯೇವ ವಿಟಪದ್ವಯಮಾಬಭೌ ॥ ೧೨ ॥**

ಭುಜಕೀರ್ತಿ ಕಂಕಣ ಬಾಜೂಬಂದು ಇವುಗಳಿಂದ ಅಲಂಕೃತವಾದ ಆ ಸ್ವಾಮಿಯ ಭುಜಗಳೆರಡು, ಕಲ್ಪವೃಕ್ಷದ ಎರಡುಶಾಖೆ(ಕೊಂಬೆ)ಗಳಂತೆ, ಶೋಭಿಸಿದುವು.

**ರೇಜೇ ಮಣಿಮಯಂ [೮]ದಾಮ ಕಿಂಕಿಣೀಭಿರ್ವಿರಾಜಿತಮ್ ।**
**ಕಟೀತಟೇಸ್ಯ ಕಲ್ಪಾಗಪ್ರಾರೋಹಶ್ರಿಯಮುದ್ವಹತ್ ॥ ೧೩ ॥**

ಈ ಸ್ವಾಮಿಯ ಸೊಂಟದಲ್ಲಿ ಕಲ್ಪವೃಕ್ಷದ ಬಿಳಲಿನ ಶೋಭೆಯನ್ನು ಧರಿಸಿರುವುದೂ ಗೆಜ್ಜೆಗಳಿಂದ ಶೋಭಿಸುವುದೂ ರತ್ನಮಯವೂ ಆದ ಕಟೀಸೂತ್ರವು ಪ್ರಕಾಶಿಸಿತು.

೧ ಶೇಖರಂ. ೨ ಶ್ರೇಷ್ಠಸ್ಯ. ೩ ಭಕ್ತ್ಯತಿಶಯಾ. ೪ ಅಂಜನಮಂತರೇಣ ಕೃಷ್ಣೇ. ೫ ಪ್ರಾಪಿತೇ. ೬ ಕಂಠಮಾಲಾ. ೭ ಇವ. ೮ ಕಟೀಸೂತ್ರಂ.

**ಪಾದೌ [೧]ಗೋಮುಖನಿರ್ಭಾಸೈರ್ಮಣಿಭಿಸ್ತಸ್ಯ ರೇಜತುಃ ।**
**ವಾಚಾಲಿತೌ ಸರಸ್ವತ್ಯಾ ಕೃತಸೇವಾವಿವಾದರಾತ್ ॥ ೧೪ ॥**

ಗೋಮುಖದಂತೆ ಶೋಭಿಸುತ್ತಿರುವ ರತ್ನಗಳಿಂದ ಶಬ್ದಾಯಮಾನಗಳಾದ ಆ ಸ್ವಾಮಿಯ ಪಾದಗಳೆರಡು, ಸರಸ್ವತಿಯಿಂದ ಪ್ರೀತಿಯಿಂದ ಸೇವಿಸಲ್ಪಟ್ಟುವುಗಳಂತೆ, ಪ್ರಕಾಶಿಸಿದುವು.

**ಲಕ್ಷ್ಮ್ಯಾಃ ಪುಂಜ ಇವೋದ್ಭೂತೋ [೨]ಧಾಮ್ನಾಂ ರಾಶಿರಿವೋಚ್ಛಿಖಃ ।**
**[೩]ಭಾಗ್ಯಾನಾಮಿವ [೪]ಸಂಪಾತಸ್ತದಾಭಾದ್ಭೂಷಿತೋ ವಿಭುಃ ॥ ೧೫ ॥**

ಆಗ ಶಚೀದೇವಿಯಿಂದ ಅಲಂಕರಿಸಲ್ಪಟ್ಟ ಸ್ವಾಮಿಯು ಮೇಲಕ್ಕೆದ್ದಿರುವ ಸಂಪತ್ತಿನ ಸಮೂಹದಂತೆಯೂ ಮೇಲಕ್ಕೆದ್ದಿರುವ ಜ್ವಾಲೆಯುಳ್ಳ ತೇಜಸ್ಸುಗಳ ರಾಶಿಯಂತೆಯೂ ಪುಣ್ಯಗಳ ಸಮೂಹದಂತೆಯೂ ಪ್ರಕಾಶಿಸಿದನು.

**ಸೌಂದರ್ಯಸ್ಯೇವ ಸಂದೋಹಃ ಸೌಭಾಗ್ಯಸ್ಯೇವ ಸನ್ನಿಧಿಃ ।**
**ಗುಣಾನಾಮಿವ [೫]ಸಂವಾಸಃ ಸಾಲಂಕಾರೋ ವಿಭುರ್ಬಭೌ ॥ ೧೬ ॥**

ರತ್ನಾಲಂಕಾರಗಳಿಂದ ಯುಕ್ತನಾದ ಪ್ರಭುವು ಸೌಂದರ್ಯದ ಸಮೂಹದಂತೆಯೂ ಸೌಭಾಗ್ಯದ ನಿಧಿಯಂತೆಯೂ ಗುಣಗಳ ಆಶ್ರಯದಂತೆಯೂ ಶೋಭಿಸಿದನು.

**ನಿಸರ್ಗರುಚಿರಂ ಭರ್ತುರ್ವಪುರ್ಭೇಜೇ ಸಭೂಷಣಮ್ ।**
**ಸಾಲಂಕಾರಂ ಕವೇಃ ಕಾವ್ಯಮಿವ ಸುಶ್ಲಿಷ್ಟಬಂಧನಮ್ ॥ ೧೭ ॥**

ಸ್ವಭಾವದಿಂದ ಸುಂದರವಾದ ಸ್ವಾಮಿಯ ಶರೀರವು ರತ್ನಾಭರಣಗಳಿಂದ ಯುಕ್ತವಾಗಿ, ಉಪಮಾಮೊದಲಾದ ಅಲಂಕಾರಗಳುಳ್ಳದೂ ಉತ್ತಮವಾದ ಅರ್ಥ ಪದಬಂಧ ಇವಗಳುಳ್ಳದೂ ಆದ ಕವಿಯ ಕಾವ್ಯದಂತೆ, ಶೋಭಿಸಿತು.

**ಪ್ರತ್ಯಂಗಮಿತಿ ವಿನ್ಯಸ್ತೈಃ ಪೌಲೋಮ್ಯಾ ಮಣಿಭೂಷಣೈಃ ।**
**ಸ ರೇಜೇ ಕಲ್ಪಶಾಖೀವ ಶಾಖೋಲ್ಲಾಸಿವಿಭೂಷಣಃ ॥ ೧೮ ॥**

ಈಪ್ರಕಾರವಾಗಿ ಶಚೀದೇವಿಯು ಪ್ರತಿಯೊಂದು ಅವಯವದಲ್ಲಿಯೂ ತೊಡಿಸಿದ ರತ್ನಾಭರಣಗಳಿಂದ ಸ್ವಾಮಿಯು ಕೊಂಬೆಗಳಲ್ಲಿ ಪ್ರಕಾಶಮಾನವಾದ ಆಭರಣಗಳುಳ್ಳ ಕಲ್ಪವೃಕ್ಷದಂತೆ, ಪ್ರಕಾಶಿಸಿದನು.

**ಇತಿ [೬]ಪ್ರಸಾಧ್ಯ ತಂ ದೇವಮಿಂದ್ರೋತ್ಸಂಗಗತಂ ಶಚೀ ।**
**ಸ್ವಯಂ ವಿಸ್ಮಯಮಾಯಾಸೀತ್ಪಶ್ಯಂತೀ ರೂಪಸಂಪದಮ್ ॥ ೧೯ ॥**

ಈಪ್ರಕಾರವಾಗಿ ಶಚೀದೇವಿಯು ಸೌಧರ್ಮೇಂದ್ರನ ತೊಡೆಯ ಮೇಲೆ ವಿರಾಜಮಾನನಾದ ಸ್ವಾಮಿಯನ್ನಲಂಕರಿಸಿ, ಆ ಜಿನಬಾಲಕನ ರೂಪವನ್ನು ನೋಡುವವಳಾಗಿ ತಾನೂ ಆಶ್ಚರ್ಯಪಟ್ಟಳು.

**ಸಂಕ್ರಂದನೋಪಿ ತದ್ರೂಪಶೋಭಾಂ ದ್ರಷ್ಟುಂ [೭]ತದಾತನೀಮ್ ।**
**ಸಹಸ್ರಾಕ್ಷೋಭವನ್ನೂನಂ ಸ್ಪೃಹಯಾಲುರತೃಪ್ತಿಕಃ ॥ ೨೦ ॥**

ಆ ಕಾಲದಲ್ಲಿ ಉಂಟಾದ ಸ್ವಾಮಿಯ ರೂಪದ ಶೋಭೆಯನ್ನು ನೋಡುವುದಕ್ಕೋಸ್ಕರ ಆಸೆಪಟ್ಟು ತೃಪ್ತಿಯನ್ನು ಹೊಂದದ ದೇವೇಂದ್ರನೂ ಸಾವಿರ ನೇತ್ರಗಳುಳ್ಳವನಾದನು.

**ತದಾ [೮]ನಿಮೇಷವಿಮುಖೈರ್ಲೋಚನೈಸ್ತಂ ಸುರಾಸುರಾಃ ।**
**ದದೃಶುರ್ಗಿರಿರಾಜಸ್ಯ ಶಿಖಾಮಣಿಮಿವ ಕ್ಷಣಮ್ ॥ ೨೧ ॥**

ಆಗ ಒಂದು ಕ್ಷಣ ಕಾಲದವರೆಗೆ ದೇವತೆಗಳು ರೆಪ್ಪೆಮುಚ್ಚದಿರುವ ತಮ್ಮ ನೇತ್ರಗಳಿಂದ ಮೇರುಪರ್ವತದ ಚೂಡಾರತ್ನವನ್ನೋಪಾದಿಯಲ್ಲಿ ಆ ಸ್ವಾಮಿಯನ್ನು ನೋಡಿದರು.

**ತತಸ್ತಂ ಸ್ತೋತುಮಿಂದ್ರಾದ್ಯಾಃ [೧]ಪ್ರಾಕ್ರಮಂತ ಸುರೋತ್ತಮಾಃ ।**
**ವತ್ಸ್ಯತ್ತೀರ್ಥಕರತ್ವಸ್ಯ ಪ್ರಾಭವಂ [೨]ತದ್ಧಿ [೩]ಪುಷ್ಕಲಮ್ ॥ ೨೨ ॥**

ತರುವಾಯ ದೇವೇಂದ್ರಮೊದಲಾದ ದೇವತೆಗಳು ಆ ಸ್ವಾಮಿಯನ್ನು ಮುಂದೆ ಹೇಳುವರೀತಿಯಾಗಿ ಸ್ತೋತ್ರಮಾಡುವುದಕ್ಕೆ ಪ್ರಾರಂಭಿಸಿದರು. ಆ ಸ್ತೋತ್ರವು ಮುಂದೆ ಉಂಟಾಗುವ ತೀರ್ಥಕರತ್ವಪುಣ್ಯದ ಅಧಿಕವಾದ ಮಾಹಾತ್ಮ್ಯವಲ್ಲವೇ ?

**ತ್ವಂ ದೇವ ಪರಮಾನಂದಮಸ್ಮಾಕಂ ಕರ್ತುಮುದ್ಗತಃ ।**
**ಕಿಮು ಪ್ರಬೋಧಮಾಯಾಂತಿ ವಿನಾರ್ಕಾತ್ಕಮಲಾಕರಾಃ ॥ ೨೩ ॥**

''ಎಲೈ ಸ್ವಾಮಿಯೇ! ನೀನು ನಮಗೆ ಪರಮಾನಂದವನ್ನುಂಟುಮಾಡುವುದಕ್ಕೋಸ್ಕರ ಉದ್ಭವಿಸಿದೆ. ಇದು ನ್ಯಾಯವಾಗಿದೆ. ಕಮಲಸರೋವರಗಳು ಸೂರ್ಯನ ಹೊರತು ವಿಕಿಸಿತಗಳಾಗುತ್ತವೆಯೋ ?

**ಮಿಥ್ಯಾಜ್ಞಾನಾಂಧಕೂಪೇಸ್ಮಿನ್ನಿಪತಂತಮಿಮಂ ಜನಮ್ ।**
**ತ್ವಮುದ್ಧರ್ತುಮನಾ ಧರ್ಮಹಸ್ತಾಲಂಬಂ ಪ್ರದಾಸ್ಯಸಿ ॥ ೨೪ ॥**

ಈ ಮಿಥ್ಯಾಜ್ಞಾನವೆಂಬ ಅಂಧಕಾರಮಯವಾದ ಬಾವಿಯಲ್ಲಿ ಬೀಳುತ್ತಿರುವ ಈ ಸಂಸಾರಿಪ್ರಾಣಿಗಳನ್ನು ಉದ್ಧರಿಸಬೇಕೆಂಬ ಮನಸ್ಸುಳ್ಳ ನೀನು ಕೈಗೆ ಧರ್ಮವೆಂಬ ಅವಲಂಬನ(ಆಶ್ರಯ)ವನ್ನು ಕೊಡುವೆ.

**ತವ ವಾಕ್ಕಿರಣೈ[೪]ರ್ನೂನಮಸ್ಮಚ್ಚೇತೋಗತಂ ತಮಃ ।**
**ಪುರಾ ಪ್ರಲೀಯತೇ ದೇವ ತಮೋ ಭಾಸ್ವತ್ಕರೈರಿವ ॥ ೨೫ ॥**

ಎಲೈ ಸ್ವಾಮಿಯೇ ! ಸೂರ್ಯನ ಕಿರಣಗಳಿಂದ ಕತ್ತಲೆಯು ನಾಶವಾಗುವಂತೆ ನಿನ್ನ ವಚನಗಳೆಂಬ ಕಿರಣಗಳಿಂದ ತಳ್ಳಲ್ಪಟ್ಟ ನಮ್ಮ ಮನಸ್ಸಿನಲ್ಲಿರುವ ಅಜ್ಞಾನಾಂಧಕಾರವು ಮೊದಲೇ ನಾಶವಾಗುತ್ತದೆ.

**ತ್ವಮಾದಿದೇವೋ ದೇವಾನಾಂ ತ್ವಮಾದಿರ್ಜಗತಾಂ ಗುರುಃ ।**
**ತ್ವಮಾದಿರ್ಜಗತಾಂ ಸ್ರಷ್ಟಾ ತ್ವಮಾದಿರ್ಧರ್ಮನಾಯಕಃ ॥ ೨೬ ॥**

ನೀನು ದೇವರಲ್ಲೆಲ್ಲ ಮೊದಲನೆಯ ದೇವನಾಗಿರುತ್ತಿ. ನೀನು ಲೋಕಕ್ಕೆ ಮೊದಲನೆಯ ಗುರುವಾಗಿರುತ್ತಿ. ನೀನು ಲೋಕಕ್ಕೆ ಮೊದಲನೆಯ ಸೃಷ್ಟಿಕರ್ತನಾಗಿರುತ್ತಿ. ನೀನು ಧರ್ಮಕ್ಕೆ ಮೊದಲನೆಯ ನಾಯಕನಾಗಿರುತ್ತಿ.

**ತ್ವಮೇವ ಜಗತಾಂ ಭರ್ತಾ ತ್ವಮೇವ ಜಗತಾಂ ಪಿತಾ ।**
**ತ್ವಮೇವ ಜಗತಾಂ [೫]ತ್ರಾತಾ ತ್ವಮೇವ ಜಗತಾಂ [೬]ಗತಿಃ ॥ ೨೭ ॥**

ನೀನೇ ಲೋಕಕ್ಕೆ ಪರಿಪಾಲಕನು. ನೀನೇ ಲೋಕಕ್ಕೆ ತಂದೆ(ಹಿತಚಿಂತಕ)ಯು. ನೀನೇ ಲೋಕಕ್ಕೆ ರಕ್ಷಕನು. ನೀನೇ ಲೋಕಕ್ಕೆ ಆಧಾರನು.

**ತ್ವಂ ಪೂತಾತ್ಮಾ ಜಗದ್ವಿಶ್ವಂ ಪುನಾಸಿ ಪರಮೈರ್ಗುಣೈಃ ।**
**ಸ್ವಯಂ ಧೌತೋ ಯಥಾ ಲೋಕಂ ಧವಲೀಕುರುತೇ ಶಶೀ ॥ ೨೮ ॥**

ಪವಿತ್ರಾತ್ಮನಾದ ನೀನು ಉತ್ತಮವಾದ ನಿನ್ನ ಗುಣಗಳಿಂದ, ಸ್ವತಃ ಶುಭ್ರನಾದ ಚಂದ್ರನು ಲೋಕವನ್ನು ಶುಭ್ರಮಾಡುವಂತೆ, ಜಗತ್ತನ್ನೆಲ್ಲ ಪವಿತ್ರಮಾಡುತ್ತಿ.

**ತ್ವತ್ತಃ ಕಲ್ಯಾಣಮಾಪ್ಸ್ಯಂತಿ ಸಂಸಾರಾ[೭]ಮಯಲಂಘಿತಾಃ ।**
**[೮]ಉಲ್ಲಾಘಿತಾ ಭವದ್ವಾಕ್ಯಭೇಷಜೈರಮೃತೋಪಮೈಃ ॥ ೨೯ ॥**

೧ ಗೋಮುಖವದ್ಭಾಸಮಾನೈಃ. ೨ ತೇಜಸಾಂ. ೩ ಪುಣ್ಯಾನಾಂ. ೪ ಪುಂಜಃ. ೫ ಆಶ್ರಯಃ. ೬ ಅಲಂಕೃತ್ಯ. ೭ ತತ್ಕಾಲಭವಾಂ. ೮ ಅನಿಮೇಷೈಃ.

೧ ಉಪಕ್ರಮಂ ಚಕ್ರರೇ. ೨ ಸ್ತವನಂ. ೩ ಪ್ರಭೂತಂ. ೪ ಅಸ್ತಂ, ನೂನಮಿತ್ಯಪಿ ಪಾಠಃ. ೫ ರಕ್ಷಕಃ. ೬ ಆಧಾರಃ. ೭ ರೋಗಾಕ್ರಾಂತಾಃ. ೮ ವ್ಯಾಧಿನಿರ್ಮುಕ್ತಾಃ.

ಸಂಸಾರವೆಂಬ ರೋಗಾಕ್ರಾಂತರಾದ ಪ್ರಾಣಿಗಳು ಅಮೃತಕ್ಕೆ ಸಮಾನವಾದ ನಿನ್ನ ವಾಕ್ಯಗಳೆಂಬ ಔಷಧಿಗಳಿಂದ ನೀರೋಗಿಗಳಾಗಿ ನಿನ್ನ ದೆಸೆಯಿಂದ ಕಲ್ಯಾಣವನ್ನು ಹೊಂದುವರು.

**ತ್ವಂ ಪೂತಸ್ತ್ವಂ [೧]ಪುನಾನೋಸಿ ಪರಂಜ್ಯೋತಿಸ್ತ್ವ[೨]ಮಕ್ಷರಮ್ ।**
**ನಿರ್ಧೂಯ ನಿಖಿಲಂ ಕ್ಲೇಶಂ [೩]ಯತ್ತ್ವಾ[೪]ಪ್ತಾಸಿ ಪರಂ ಪದಮ್ ॥ ೩೦ ॥**

ನೀನು ಸಮಸ್ತಕ್ಲೇಶಗಳನ್ನು ಹೋಗಲಾಡಿಸಿ ಶ್ರೇಷ್ಠವಾದ ಸ್ಥಾನ(ಮೋಕ್ಷ)ವನ್ನು ಪಡೆಯುವೆ. ಆದುದರಿಂದಲೇ ನೀನು ಪವಿತ್ರನೂ ಬೇರೆಯವರನ್ನು ಪವಿತ್ರ ಮಾಡುವವನೂ ನಾಶರಹಿತವಾದ ಪರಂಜ್ಯೋತಿಸ್ವರೂಪನೂ ಆಗಿರುತ್ತಿ.

**[೫]ಕೂಟಸ್ಥೋಪಿ ನ [೬]ಕೂಟಸ್ಥಸ್ತ್ವಮದ್ಯ ಪ್ರತಿಭಾಸಿ ನಃ ।**
**ತ್ವಯ್ಯೇವ [೭]ಸ್ಫಾತಿಮೇಷ್ಯಂತಿ [೮]ಯದಮೀ [೯]ಯೋಗತೋ ಗುಣಾಃ ॥**

ನಿನ್ನಲ್ಲೇ ಧ್ಯಾನದಿಂದ ಈ ಗುಣಗಳು ವೃದ್ಧಿಯನ್ನು ಹೊಂದುವುವು. ಆದುದರಿಂದ ನೀನು ಕೂಟಸ್ಥ(ಮೇರುಪರ್ವತದ ಶಿಖರದಲ್ಲಿರುವವ, ಛದ್ಮಸ್ಥ)ನಾಗಿ ತೋರುವುದಿಲ್ಲ.

**ಅಸ್ನಾತಪೂತಗಾತ್ರೋಪಿ ಸ್ನಾಪಿತೋಸ್ಯದ್ಯ ಮಂದರೇ ।**
**ಪವಿತ್ರಯಿತುಮೇವೈತಜ್ಜಗದೇನೋಮಲೀಮಸಮ್ ॥ ೩೨ ॥**

ನೀನು ಸ್ನಾನಮಾಡದೆ ಪವಿತ್ರವಾದ ಶರೀರವುಳ್ಳವನಾಗಿದ್ದರೂ ಪಾಪದಿಂದ ಮಲಿನವಾದ ಈ ಜಗತ್ತನ್ನು ಪವಿತ್ರಮಾಡುವುದಕ್ಕೋಸ್ಕರವೇ ಈಗ ಮಹಾಮೇರು ಪರ್ವತದಲ್ಲಿ ಸ್ನಾನಮಾಡಿಸಲ್ಪಟ್ಟೆ.

**ಯುಷ್ಮಜ್ಜನ್ಮಾಭಿಷೇಕೇಣ ವಯಮೇವ ನ ಕೇವಲಮ್ ।**
**ನೀತಾಃ ಪವಿತ್ರತಾಂ ಮೇರುಃ ಕ್ಷೀರಾಬ್ಧಿಸ್ತಜ್ಜಲಾನ್ಯಪಿ ॥ ೩೩ ॥**

ನಿಮ್ಮ ಜನ್ಮಾಭಿಷೇಕದಿಂದ ನಾವು ಮಾತ್ರ ಪವಿತ್ರರಾದುದಲ್ಲದೆ, ಮಹಾಮೇರುಪರ್ವತವೂ ಕ್ಷೀರಸಮುದ್ರವೂ ಆ ಕ್ಷೀರಸಮುದ್ರದ ಜಲಗಳೂ ಪವಿತ್ರವಾದುವು.

**ದಿಙ್ಮುಖೇಷೂಲ್ಲಸಂತಿ ಸ್ಮ ಯುಷ್ಮತ್ಸ್ನಾನಾಂಬುಶೀಕರಾಃ ।**
**ಜಗದಾನಂದಿನಃ ಸಾಂದ್ರಾ ಯಶಸಾಮಿವ ರಾಶಯಃ ॥ ೩೪ ॥**

ನಿಮ್ಮ ಸ್ನಾನಜಲದ ಹನಿಗಳು ದಿಕ್ಕುಗಳಲ್ಲಿ, ಲೋಕಕ್ಕೆ ಸಂತೋಷವನ್ನುಂಟುಮಾಡುವ ದಟ್ಟವಾದ ಯಶಸ್ಸುಗಳ ರಾಶಿಗಳಂತೆ, ಪ್ರಕಾಶಿಸಿದುವು.

**ಅವಿಲಿಪ್ತಸುಗಂಧಿಸ್ತ್ವಮವಿಭೂಷಿತಸುಂದರಃ ।**
**[೧೦]ಭಕ್ತೈರಭ್ಯರ್ಚಿತೋಸ್ಮಾಭಿರ್ಭೂಷಣೈಃ ಸಾನುಲೇಪನೈಃ ॥ ೩೫ ॥**

ಗಂಧಲೇಪನವಿಲ್ಲದೆ ಪರಿಮಳವುಳ್ಳವನೂ ಅಲಂಕರಿಸಲ್ಪಡದೆ ಸುಂದರನೂ ಆದ ನಿನ್ನನ್ನು ಭಕ್ತರಾದ ನಾವು ಆಭರಣಗಳಿಂದಲೂ ಗಂಧಲೇಪನಗಳಿಂದಲೂ ಪೂಜಿಸಿದೆವು.

**ಲೋಕಾಧಿಕಂ ದಧದ್ಧಾಮ ಪ್ರಾದುರಾಸೀಸ್ತ್ವ[೧೧]ಮಾತ್ಮಭೂಃ ।**
**[೧೨]ಮೇರೋರ್ಗರ್ಭಾದಿವ ಕ್ಷ್ಮಾಯಾಸ್ತವ ದೇವ ಸಮುದ್ಭವಃ ॥ ೩೬ ॥**

ಲೋಕಾತಿಶಯವಾದ ತೇಜಸ್ಸನ್ನು ಧರಿಸಿರುವ ನೀನು ಸ್ವಯಂಭುವಾಗಿ ಪ್ರಾದುರ್ಭವಿಸಿದೆ. ಎಲೈ ಸ್ವಾಮಿಯೇ! ಭೂಮಿಯ ಗರ್ಭ(ಮಧ್ಯ)ದಿಂದ ಮಹಾಮೇರುಪರ್ವತದ ಉತ್ಪತ್ತಿಯಂತೆ, ನಿನ್ನ ಉತ್ಪತ್ತಿಯಾಗಿದೆ.

೧ ಪವಿತ್ರಂ ಕುರ್ವಾಣಃ. ೨ ಅನಶ್ವರಂ. ೩ ಯಸ್ಮಾತ್ಕಾರಣಾತ್. ೪ ಗಮಿಷ್ಯಸಿ. ೫ ಮೇರುಶಿಖರಸ್ಥಃ ಛದ್ಮಸ್ಥಶ್ಚ. ೬ ಕಾಲವ್ಯಾಪೀ ಸ ಕೂಟಸ್ಥ ಇತ್ಯಮರಃ. ೭ ಸ್ಫೀತಿಮಿತ್ಯಪಿ ಪಾಠಃ. ೮ ಯಸ್ಮಾತ್ಕಾರಣಾತ್. ೯ ಧ್ಯಾನಾತ್, ಯೋಗಜಾ ಇತ್ಯಪಿ ಪಾಠಃ. ೧೦ ಭಾಕ್ತಿಕೈಃ. ೧೧ ಸ್ವಯಂಭೂಃ. ೧೨ ಮೇರೋರ್ಗರ್ಭಾದಿವೋದ್ಭೂತೋ ಭುವನೈಕಶಿಖಾಮಣಿರಿತ್ಯಪಿ ಪಾಠಃ.

**ಸದ್ಯೋಜಾತ[೧]ಶ್ರುತಿಂ ಬಿಭ್ರತ್ಸ್ವ[೨]ರ್ಗಾವತರಣೇಚ್ಯುತ[೩] ।**
**ತ್ವ[೪]ಮದ್ಯ [೫]ವಾಮತಾಂ ಧತ್ಸೇ ಕಾಮನೀಯಕಮುದ್ವಹನ್ ॥ ೩೭ ॥**

ನಾಶರಹಿತನೇ! ನೀನು ಗರ್ಭಾವತರಣದಲ್ಲಿ 'ಸದ್ಯೋಜಾತ' ನೆಂಬ ಹೆಸರನ್ನು ಪಡೆದು ಈಗ ಜನ್ಮಾಭಿಷೇಕಕಾಲದಲ್ಲಿ ಸುಂದರತೆಯನ್ನು ಧರಿಸಿದವನಾಗಿ ಮನೋಹರತ್ವವನ್ನು ಧರಿಸುತ್ತಿ.

**ಯಥಾ ಶುದ್ಧಾಕರೋದ್ಭೂತೋ ಮಣಿಃ ಸಂಸ್ಕಾರಯೋಗತಃ ।**
**[೬]ದೀಪ್ಯತೇಧಿಕಮೇವ ತ್ವಂ ಜಾತಕರ್ಮಾಭಿಸಂಸ್ಕೃತಃ ॥ ೩೮ ॥**

ಶುದ್ಧವಾದ ಗಣಿಯಿಂದುಂಟಾದ ರತ್ನವು ಸಂಸ್ಕಾರ(ಸಾಣೆಹಿಡಿಯುವುದ)ದಿಂದ ಹೆಚ್ಚು ಪ್ರಕಾಶಿಸುವಂತೆ, ಜಾತಕರ್ಮವಿಧಿಯಿಂದ ಸಂಸ್ಕಾರಮಾಡಲ್ಪಟ್ಟ ನೀನು ಅಧಿಕವಾಗಿ ಪ್ರಕಾಶಿಸುತ್ತಿ.

**[೭]ಆರಾಮಂ [೮]ತಸ್ಯ ಪಶ್ಯಂತಿ ನ [೯]ತಂ ಪಶ್ಯಂತಿ ಕೇ ಚನ ।**
**ಇ[೧೦]ತ್ಯಸ[೧೧]ದ್ಯತ್ಪರಂಜ್ಯೋತಿಃ ಪ್ರತ್ಯಕ್ಷೋಸಿ ತ್ವಮದ್ಯ ನಃ ॥ ೩೯ ॥**

ಪರಂಜ್ಯೋತಿ(ಪರಬ್ರಹ್ಮ)ಸ್ವರೂಪನಾದ ನೀನು ಈಗ ನಮಗೆ ಪ್ರತ್ಯಕ್ಷನಾಗಿರುವುದರಿಂದ 'ಪರಬ್ರಹ್ಮನ ಶರೀರಮೊದಲಾದ ಪರ್ಯಾಯಗಳನ್ನು ಜನಗಳು ನೋಡುತ್ತಾರೆ. ಆ ಪರಬ್ರಹ್ಮನನ್ನು ನೋಡುವುದಿಲ್ಲ' ಈ ಪ್ರಕಾರವಾಗಿ ವೇದಾಂತಿಗಳು ಹೇಳುವ ಮಾತು ಸುಳ್ಳಾಗಿದೆ.

**ತ್ವಾಮಾಮನಂತಿ ಯೋಗೀಂದ್ರಾಃ ಪುರಾಣಪುರುಷಂ ಪುರುಮ್ ।**
**ಕವಿಂ ಪುರಾಣಮಿತ್ಯಾದಿ ಪಠಂತಃ [೧೨]ಸ್ತವವಿಸ್ತರಮ್ ॥ ೪೦ ॥**

ವಿಸ್ತಾರವಾದ ಸ್ತೋತ್ರವನ್ನು ಪಠನಮಾಡುವ ಮುನಿಗಳು ನಿನ್ನನ್ನು ಪುರಾಣಪುರುಷನೆಂದೂ ಪುರುವೆಂದೂ ಕವಿಯೆಂದೂ ಪುರಾಣ(ಪ್ರಾಚೀನ)ವೆಂದೂ ಹೇಳುತ್ತಾರೆ.

**ಪೂತಾತ್ಮನೇ ನಮಸ್ತುಭ್ಯಂ ನಮಃ ಖ್ಯಾತಗುಣಾಯ ತೇ ।**
**ನಮೋ ಭೀತಿ[೧೩]ಭಿದೇ ತುಭ್ಯಂ ಗುಣಾನಾಮೇಕ[೧೪]ಭೂತಯೇ ॥ ೪೧ ॥**

ಪವಿತ್ರಾತ್ಮನಾದ ನಿನಗೆ ನಮಸ್ಕಾರವು. ಪ್ರಸಿದ್ಧವಾದ ಗುಣಗಳುಳ್ಳ ನಿನಗೆ ನಮಸ್ಕಾರವು. ಭೀತಿವಿನಾಶಕನಾದ ನಿನಗೆ ನಮಸ್ಕಾರವು. ಗುಣಗಳಿಗೆ ಮುಖ್ಯ ಉತ್ಪತ್ತಿಸ್ಥಾನನಾದ ನಿನಗೆ ನಮಸ್ಕಾರವು.

**ಕ್ಷಮಾಗುಣ[೧೫]ಪ್ರಧಾನಾಯ ನಮಸ್ತೇ [೧೬]ಕ್ಷಿತಿಮೂರ್ತಯೇ ।**
**ಜಗದಾಹ್ಲಾದಿನೇ ತುಭ್ಯಂ ನಮೋಸ್ತು ಸಲಿಲಾತ್ಮನೇ ॥ ೪೨ ॥**

ಕ್ಷಮಾಗುಣವು ಮುಖ್ಯವಾಗಿರುವುದರಿಂದ ಪೃಥ್ವೀಸ್ವರೂಪನಾದ ನಿನಗೆ ನಮಸ್ಕಾರವು. ಲೋಕಕ್ಕೆ ಆನಂದವನ್ನುಂಟುಮಾಡುವುದರಿಂದ ಜಲಸ್ವರೂಪನಾದ ನಿನಗೆ ನಮಸ್ಕಾರವು.

**ನಿಃಸಂಗವೃತ್ತಯೇ ತುಭ್ಯಂ ಬಿಭ್ರತೇ [೧೭]ಪಾವನೀಂ ತನುಮ್ ।**
**ನಮ[೧೮]ಸ್ತರಸ್ವಿನೇ ರುಗ್ಣಮಹಾಮೋಹ[೧೯]ಮಹೀರುಹೇ ॥ ೪೩ ॥**

ಪರಿಗ್ರಹರಹಿತವಾದ ರೂಪವುಳ್ಳವನೂ ಪವಿತ್ರವಾದ ಶರೀರವನ್ನು ಧರಿಸಿರುವವನೂ ಮಹಾಮೋಹವೆಂಬ ವೃಕ್ಷವನ್ನು ಮುರಿದ ವೇಗವುಳ್ಳವನೂ ಆದ ನಿನಗೆ ನಮಸ್ಕಾರವು.

೧ ಸಂಜ್ಞಾಂ. ೨ ಗರ್ಭಾವತರಣೇ. ೩ ಭೋಃ. ೪ ಜನ್ಮಾಭಿಷೇಕಕಲ್ಯಾಣೇ. ೫ ಮನೋಹರತಾಂ. ೬ ದೀಪ್ಯಸೇ ಇತ್ಯಪಿ ಪಾಠಃ. ೭ ಶರೀರಾದಿಪರ್ಯಾಯಂ. ೮ ಪರಬ್ರಹ್ಮಣಃ. ೯ ಪರಬ್ರಹ್ಮಾಣಂ. ೧೦ ಮೃಷಾ. ೧೧ ಯಸ್ಮಾತ್ಕಾರಣಾತ್. ೧೨ ಸ್ತೋತ್ರಂ. ೧೩ ವಿನಾಶಕಾಯ. ೧೪ ಉತ್ಪತ್ತಯೇ. ೧೫ ಮುಖ್ಯಾಯ. ೧೬ ಕ್ಷಮಾಗುಣಸಾಮ್ಯಾತ್ಕ್ಷಿತಿಮೂರ್ತಿರಿತ್ಯುಕ್ತಂ. ೧೭ ಪವಿತ್ರಾಂ, ಪವನಸಂಬಂಧಿನೀಂ. ೧೮ ವೇಗಿನೇ ವಾಯವೇ ವಾ. ೧೯ ಏತೇನ ವಾಯುಮೂರ್ತಿತ್ವಮುಕ್ತಂ.

**ಕರ್ಮೇಂಧನದಹೇ ತುಭ್ಯಂ ನಮಃ ಪಾವಕಮೂರ್ತಯೇ ।**
**[೧]ಪಿಶಂಗ[೨]ಜಟಿಲಾಂಗಾಯ ಸಮಿದ್ಧಧ್ಯಾನತೇಜಸೇ ॥ ೪೪ ॥**

ಕರ್ಮವೆಂಬ ಕಟ್ಟಿಗೆಯನ್ನು ಸುಡುವವನೂ ಕಪಿಲವರ್ಣವುಳ್ಳ ಜಟೆಯನ್ನು ಧರಿಸಿದ ಮಸ್ತಕವುಳ್ಳವನೂ ಅಥವಾ ಕಪಿಲವರ್ಣಮಯವಾದ ಶರೀರವುಳ್ಳವನೂ ದೇದೀಪ್ಯಮಾನವಾದ ಧ್ಯಾನವೆಂಬ ತೇಜಸ್ಸುಳ್ಳವನೂ ಅಗ್ನಿಮೂರ್ತಿಯೂ ಆದ ನಿನಗೆ ನಮಸ್ಕಾರವು.

**[೩]ಅರಜೋಮಲಸಂಗಾಯ ನಮಸ್ತೇ ಗಗನಾತ್ಮನೇ ।**
**[೪]ವಿಭವೇನಾದ್ಯನಂತಾಯ [೫]ನಿರ್ವಿಕಾರಾಯ ತಾಯಿನೇ ॥ ೪೫ ॥**

ಪಾಪಮಲದ ಸಂಬಂಧರಹಿತನೂ ಪ್ರಭುವೂ ವ್ಯಾಪಕನೂ ಆದ್ಯಂತರಹಿತನೂ ನಿರ್ವಿಕಾರನೂ ರಕ್ಷಕನೂ ಆಕಾಶಸ್ವರೂಪನೂ ಆದ ನಿನಗೆ ನಮಸ್ಕಾರವು.

**[೬]ಸುಯಜ್ವನೇ ನಮಸ್ತುಭ್ಯಂ [೭]ಸರ್ವಕ್ರತುಮಯಾತ್ಮನೇ ।**
**[೮]ನಿರ್ವಾಣದಾಯಿನೇ ತುಭ್ಯಂ ನಮಃ ಶೀತಾಂಶುಮೂರ್ತಯೇ ॥ ೪೬ ॥**

ಸಮಸ್ತಪೂಜಾಸ್ವರೂಪವಾದ ಸ್ವಭಾವವುಳ್ಳವನೂ ಶ್ರೇಷ್ಠನಾದ ಪೂಜಕನೂ ಆದ ನಿನಗೆ ನಮಸ್ಕಾರವು. ನಿತ್ಯಸುಖವನ್ನೂ ಆನಂದವನ್ನೂ ಕೊಡುವವನೂ ಚಂದ್ರ ಮೂರ್ತಿಯೂ ಆದ ನಿನಗೆ ನಮಸ್ಕಾರವು.

**ನಮಸ್ತೇನಂತಬೋಧಾರ್ಕಾ[೯]ದವಿನಿರ್ಭಕ್ತಶಕ್ತಯೇ ।**
**[೧೦]ತೀರ್ಥಕೃದ್ಭಾವಿನೇ ತುಭ್ಯಂ ನಮಃ ಸ್ತಾ[೧೧]ದಷ್ಟಮೂರ್ತಯೇ॥ ೪೭ ॥**

ಅನಂತಜ್ಞಾನವೆಂಬ ಸೂರ್ಯನ ದೆಸೆಯಿಂದ ಬೇರೆಯಾಗದಿರುವ ಶಕ್ತಿಯುಳ್ಳ (ಸೂರ್ಯಮೂರ್ತಿಯಾದ) ನಿನಗೆ ನಮಸ್ಕಾರವು. ಹೀಗೆ ಪೃಥಿವೀಮೊದಲಾದ ಅಷ್ಟಮೂರ್ತಿಸ್ವರೂಪನೂ ಮುಂದೆ ತೀರ್ಥಂಕರನಾಗುವವನೂ ಆದ ನಿನಗೆ ನಮಸ್ಕಾರವಿರಲಿ.

**[೧೨]ಮಹಾಬಲನಮಸ್ತುಭ್ಯಂ [೧೩]ಲಲಿತಾಂಗಾಯ ತೇ ನಮಃ ।**
**ಶ್ರೀಮತೇ [೧೪]ವಜ್ರಜಂಘಾಯ ಧರ್ಮತೀರ್ಥಪ್ರವರ್ತಿನೇ ॥ ೪೮ ॥**

ಮಹಾಶಕ್ತಿಯುಳ್ಳವನೇ! ಮಹಾಬಲನೆಂಬ ವಿದ್ಯಾಧರರಾಜನೇ! ನಿನಗೆ ನಮಸ್ಕಾರವು. ಮನೋಹರವಾದ ಅವಯವವುಳ್ಳ ಲಲಿತಾಂಗದೇವನಾದ ನಿನಗೆ ನಮಸ್ಕಾರವು. ಧರ್ಮತೀರ್ಥಪ್ರವರ್ತಕನೂ ವಜ್ರದಂತೆ ಕಣಕಾಲುಗಳುಳ್ಳವನೂ ವಜ್ರಜಂಘರಾಜನೂ ಸಂಪದ್ಯುಕ್ತನೂ ಆದ ನಿನಗೆ ನಮಸ್ಕಾರವು.

**ನಮಃ ಸ್ತಾ[೧೫]ದಾರ್ಯ ತೇ [೧೬]ಶುದ್ಧಿಶ್ರಿತೇ [೧೭]ಶ್ರೀಧರ ತೇ ನಮಃ ।**
**ನಮಃ [೧೮]ಸುವಿಧಯೇ ತುಭ್ಯ[೧೯]ಮಚ್ಯುತೇಂದ್ರ ನಮೋಸ್ತು ತೇ॥ ೪೯ ॥**

ಪೂಜ್ಯನೂ ಭೋಗಭೂಮಿಜನೂ ಆದ ನಿನಗೆ ನಮಸ್ಕಾರವಿರಲಿ. ಐಶ್ವರ್ಯವನ್ನು ಧರಿಸಿದವನೇ! ಶ್ರೀಧರದೇವನೇ! ದರ್ಶನಶುದ್ಧಿಯನ್ನು ಹೊಂದಿದ ನಿನಗೆ ನಮಸ್ಕಾರವು. ಉತ್ತಮವಾದ ಅದೃಷ್ಟವುಳ್ಳವನೂ ಸುವಿಧಿರಾಜನೂ ಆದ ನಿನಗೆ ನಮಸ್ಕಾರವು. ನಾಶರಹಿತವಾದ ಐಶ್ವರ್ಯವುಳ್ಳವನೇ! ಅಚ್ಯುತಕಲ್ಪದ ಇಂದ್ರನೇ! ನಿನಗೆ ನಮಸ್ಕಾರವು.

**ವಜ್ರಸ್ತಂಭಸ್ಥಿರಾಂಗಾಯ ನಮಸ್ತೇ [೨೦]ವಜ್ರನಾಭಯೇ ।**
**ಸರ್ವಾರ್ಥಸಿದ್ಧಿನಾಥಾಯ ಸರ್ವಾರ್ಥಾಂ ಸಿದ್ಧಿಮೀಯುಷೇ ॥ ೫೦ ॥**

೧ ಕಪಿಲವರ್ಣಃ. ೨ ಜಟಾಧರೋತ್ತಮಾಂಗಾಯ. ೩ ಪಾಪರಜೋಮಲಸಂಗರಹಿತಾಯ. ೪ ಪ್ರಭವೇ, ವ್ಯಾಪಿನೇ ಚ. ೫ ಮಹತ್ತ್ವಾವಧಯೇಪರಮಿತ್ಯಪಿ ಪಾಠಃ. ೬ ಪೂಜಕಾಯ, ಆರಾಧಕಾಯ ಚ. ೭ ಸಕಲಪೂಜಾಸ್ವರೂಪಸ್ವಭಾವಾಯ. ೮ ನಿತ್ಯಸುಖದಾಯಿನೇ, ಆಹ್ಲಾದದಾಯಿನೇ ಚ. ೯ ಅಪೃಥಕ್ಕೃತಶಕ್ತಯೇ. ೧೦ ಭಾವಿತೀರ್ಥಂಕರಾಯ. ೧೧ ಕ್ಷಿತಿಮೂರ್ತ್ಯಾದ್ಯಷ್ಟಮೂರ್ತಯೇ. ೧೨ ಭೋ ಅನಂತವೀರ್ಯವಿದ್ಯಾಧರರಾಜ. ೧೩ ಮನೋಹರಾವಯವಾಯ, ಲಲಿತಾಂಗನಾಮ್ನೇ. ೧೪ ವಜ್ರವಜ್ಜಂಘೇ ಯಸ್ಯ ಸಃ, ವಜ್ರಜಂಘನೃಪಾಯ. ೧೫ ಭೋಃ ಪೂಜ್ಯ, ಭೋಗಭೂಮಿಜ! ೧೬ ದರ್ಶನಶುದ್ಧಿಪ್ರಾಪ್ತಾಯ. ೧೭ ಸಂಪದ್ಧರ, ಶ್ರೀಧರದೇವ! ೧೮ ಶೋಭನದೈವಾಯ, ಸುವಿಧಿನೃಪಾಯ. ೧೯ ಅವಿನಶ್ವರೈಶ್ವರ್ಯ, ಅಚ್ಯುತಕಲ್ಪಾಮರೇಂದ್ರ! ೨೦ ವಜ್ರವನ್ನಾಭಿರ್ಯಸ್ಯ, ವಜ್ರನಾಭಿಚಕ್ರಿಣೇ.

ವಜ್ರದ ಸ್ತಂಭದಂತೆ ಸ್ಥಿರವಾದ ಅವಯವಗಳುಳ್ಳವನೂ ವಜ್ರದಂತೆನಾಭಿಯುಳ್ಳವನೂ ವಜ್ರನಾಭಿಚಕ್ರವರ್ತಿಯೂ ಆದ ನಿನಗೆ ನಮಸ್ಕಾರವು. ಸರ್ವಾರ್ಥಸಿದ್ಧಿಸ್ವರ್ಗಕ್ಕೆ ಪ್ರಭುವೂ ಸಮಸ್ತಾರ್ಥಗಳ ಸಿದ್ಧಿಯನ್ನು ಹೊಂದಿದವನೂ ಆದ ನಿನಗೆ ನಮಸ್ಕಾರವು.

**[೧]ದಶಾವತಾರಚರಮಪರಮೌದಾರಿಕತ್ವಿಷೇ ।**
**ಸೂನವೇ ನಾಭಿರಾಜಸ್ಯ ನಮೋಸ್ತು ಪರಮೇಷ್ಠಿನೇ ॥ ೫೧ ॥**

ಮಹಾಬಲಮೊದಲಾದ ಹತ್ತು ಅವತಾರಗಳಲ್ಲಿ ಕೊನೆಯದಾದ ಪರಮೌದಾರಿಕದೇಹ ಕಾಂತಿಯನ್ನು ಹೊಂದಿರುವವನೂ ನಾಭಿರಾಜನ ಪುತ್ರನೂ ಶ್ರೇಷ್ಠವಾದ ಸ್ಥಾನದಲ್ಲಿರುವವನೂ ಆದ ನಿನಗೆ ನಮಸ್ಕಾರವು.

**ಭವಂತಮಿತ್ಯಭಿಷ್ಟುತ್ಯ [೨]ಫಲ[೩]ಮಾಶಾಸ್ಮಹೇ ವಯಮ್ ।**
**ಭಕ್ತಿಸ್ತ್ವಯ್ಯೇವ [೪]ನೋ ಭೂಯಾದಲಮನ್ಯೈರ್ಮಿತೈಃ ಫಲೈಃ ॥ ೫೨ ॥**

ಈಪ್ರಕಾರವಾಗಿ ನಿನ್ನನ್ನು ಸ್ತೋತ್ರಮಾಡಿ ನಿನ್ನಲ್ಲೇ ನಮ್ಮ ಭಕ್ತಿಯು ಸ್ಥಿರವಾಗಿರಲೆಂಬ ಫಲವನ್ನು ಮಾತ್ರ ನಿನ್ನಲ್ಲಿ ಬೇಡುತ್ತೇವೆ. ಬೇರೆ ಪರಿಮಿತವಾದ ಫಲಗಳು ಸಾಕು."

**ಇತಿ ಸ್ತುತ್ವಾ ಸುರೇಂದ್ರಾಸ್ತಂ ಪರಮಾನಂದ[೫]ನಿರ್ಭರಾಃ ।**
**ಅಯೋಧ್ಯಾಗಮನೇ ಭೂಯೋ ಮತಿಂ ಚಕ್ರುಃ ಕೃತೋತ್ಸವಾಃ ॥ ೫೩ ॥**

ಪರಮಾನಂದಭರಿತರಾದ ದೇವೇಂದ್ರರು ಈ ಪ್ರಕಾರವಾಗಿ ಸ್ವಾಮಿಯನ್ನು ಸ್ತುತಿಸಿ, ಉತ್ಸವದಿಂದ ಪುನಃ ಅಯೋಧ್ಯೆಗೆ ಹೋಗುವುದಕ್ಕೆ ಮನಸ್ಸನ್ನು ಮಾಡಿದರು.

**ತಥೈವ ಪ್ರಹತಾ ಭೇರ್ಯಸ್ತಥೈವಾಘೋಷಿತೋ ಜಯಃ ।**
**ತಥೈವೈರಾವತೇಭೇಂದ್ರಸ್ಕಂಧಾರೂಢಂ ವ್ಯಧುರ್ಜಿನಮ್ ॥ ೫೪ ॥**

ಅಯೋಧ್ಯೆಯಿಂದ ಮೇರುಪರ್ವತಕ್ಕೆ ಹೊರಟಾಗ ಭೇರಿಗಳನ್ನು ಹೊಡೆದಂತೆಯೂ ಜಯಘೋಷವನ್ನು ಮಾಡಿದಂತೆಯೂ ಐರಾವತಗಜದ ಭುಜದಲ್ಲಿ ಸ್ವಾಮಿಯನ್ನು ಕುಳ್ಳಿರಿಸಿದಂತೆಯೂ, ಈಗ ಮೇರುಪರ್ವತದಿಂದ ಅಯೋಧ್ಯೆಗೆ ಹೊರಟಾಗಲೂ ಭೇರಿಗಳನ್ನು ಹೊಡೆದರು. ಜಯಘೋಷವನ್ನು ಮಾಡಿದರು. ಸ್ವಾಮಿಯನ್ನು ಐರಾವತಗಜದ ಭುಜದಲ್ಲಿ ಕುಳ್ಳಿರಿಸಿದರು.

**ಮಹಾಕಲಕಲೈರ್ಗೀತೈರ್ನೃತ್ತೈಃ ಸಜಯಘೋಷಣೈಃ ।**
**ಗಗನಾಂಗಣ[೬]ಮುತ್ಪತ್ಯ ದ್ರಾಗಾಜಗ್ಮುರಮೂಂ ಪುರೀಮ್ ॥ ೫೫ ॥**

ದೇವತೆಗಳು ಜಯಘೋಷದೊಡಗೂಡಿದ ದೊಡ್ಡಕಲಕಲಶಬ್ದಗಳೊಡನೆಯೂ ಗೀತನೃತ್ಯಗಳೊಡನೆಯೂ ಆಕಾಶಕ್ಕೆ ನೆಗೆದು ಶೀಘ್ರವಾಗಿ ಈ ಅಯೋಧ್ಯಾಪಟ್ಟಣಕ್ಕೆ ಬಂದರು.

**ಯಾ[೭]ಚಕಾದ್ಗಗನೋಲ್ಲಂಘಿಶಿಖರೈಃ ಪೃಥುಗೋಪುರೈಃ ।**
**ಸ್ವರ್ಗ[೮]ಮಾಹ್ವಯಮಾನೇವ ಪವನೋಚ್ಛ್ರಿತಕೇತನೈಃ ॥ ೫೬ ॥**

ಆ ಅಯೋಧ್ಯಾನಗರಿಯು, ಆಕಾಶವನ್ನು ಉಲ್ಲಂಘಿಸುವ ಶಿಖರಗಳೂ ಗಾಳಿಯಿಂದ ಚಲಿಸುತ್ತಿರುವ ಧ್ವಜಪಟಗಳೂ ಉಳ್ಳ ದೊಡ್ಡಗೋಪುರಗಳಿಂದ ಸ್ವರ್ಗವನ್ನು ಕರೆಯುತ್ತದೆಯೋ ಎಂಬಂತೆ, ಪ್ರಕಾಶಿಸಿತು.

**ಯಸ್ಯಾಂ ಮಣಿಮಯೀ ಭೂಮಿಸ್ತಾರಕಾ[೯]ಪ್ರತಿಬಿಂಬಿತೈಃ ।**
**ದಧೇ ಕುಮುದ್ವತೀಲಕ್ಷ್ಮೀ[೧೦]ಮಕ್ಷುಣ್ಣಾಂ[೧೧]ಕ್ಷಣದಾಮುಖೇ ॥ ೫೭ ॥**

೧ ಮಹಾಬಲಾದಿದಶಾವತಾರೇಷ್ವಂತ್ಯಪರಮೌದಾರಿಕದೇಹಮರೀಚಯೇ. ೨ ನಾನ್ಯದಾಶಾಸ್ಮಹೇ ವಯಮಿತ್ಯಪಿ ಪಾಠಃ. ೩ ಯಾಚಾಮಹೇ. ೪ ಅಸ್ಮಾಕಂ. ೫ ಅತಿಶಯಾಃ. ೬ ಉತ್ಕ್ರಮ್ಯ. ೭ ಆಭಾತ್. ೮ ಸ್ಪರ್ಧಮಾನಾ. ೯ ಪ್ರತಿಬಿಂಬೈಃ. ೧೦ ಅಕ್ಷೂಣಾಮಿತ್ಯಪಿ ಪಾಠಃ. ೧೧ ರಾತ್ರಿಮುಖೇ.

ಆ ಅಯೋಧ್ಯೆಯಲ್ಲಿ ರಾತ್ರಿಯ ಪ್ರಾರಂಭದಲ್ಲಿ ರತ್ನಮಯವಾದ ಭೂಮಿಯು ನಕ್ಷತ್ರಗಳ ಪ್ರತಿಬಿಂಬಗಳಿಂದ ಕುಮುದಪುಷ್ಪಗಳುಳ್ಳ ಭೂಮಿಯ ಸಂಪೂರ್ಣ ಶೋಭೆಯನ್ನು ಧರಿಸಿತು.

**ಯಾ ಪತಾಕಾಕರೈರ್ದೂರಮುತ್ಕ್ಷಿಪ್ತೈಃ ಪವನಾಹತೈಃ ।**
**[1]ಆಜುಹೂಷುರಿವ ಸ್ವರ್ಗವಾಸಿನೋಽಭೂತ್ಕುತೂಹಲಾತ್ ॥ ೫೮ ॥**

ಆ ಅಯೋಧ್ಯಾನಗರವು ದೂರವಾಗಿ ಚಾಚಿಕೊಂಡಿರುವ ಮತ್ತು ಗಾಳಿಯಿಂದ ಹೊಡೆಯಲ್ಪಟ್ಟ ಧ್ವಜಪತಾಕೆಗಳೆಂಬ ಕೈಗಳಿಂದ ಸ್ವರ್ಗವಾಸಿಗಳಾದ ದೇವತೆಗಳನ್ನು ಕುತೂಹಲದಿಂದ ಕರೆಯುವುದಕ್ಕೆ ಇಚ್ಛಿಸುತ್ತದೆಯೋ ಎಂಬಂತಿದ್ದಿತು.

**ಯಸ್ಯಾಂ ಮಣಿಮಯೈರ್ಹರ್ಮ್ಯೈಃ ಕೃತದಂಪತಿ[2]ಸಂಶ್ರಯೈಃ ।**
**[3]ಆಕ್ಷಿಪ್ತೇವ ಸುರಾಧೀಶವಿಮಾನಶ್ರೀ[4]ರಸಂಭ್ರಮಮ್ ॥ ೫೯ ॥**

ಆ ಅಯೋಧ್ಯಾಪುರದಲ್ಲಿ ದಂಪತಿಗಳು ಆಶ್ರಯಿಸಿಕೊಂಡಿರುವ ರತ್ನಮಯವಾದ ಮನೆಗಳಿಂದ ಆಕುಲತೆಯಿಲ್ಲದೆ ದೇವೇಂದ್ರನ ವಿಮಾನದ ಶೋಭೆಯು ತಿರಸ್ಕರಿಸಲ್ಪಟ್ಟಿತೋ ಎಂಬಂತಿದ್ದಿತು. ಮನೆಗಳು ದೇವೇಂದ್ರನ ವಿಮಾನಕ್ಕಿಂತಲೂ ಶೋಭಾಯಮಾನಗಳಾಗಿದ್ದುವೆಂದು ಭಾವವು.

**ಯತ್ರ ಸೌಧಾಗ್ರಸಂಲಗ್ನೈರಿಂದುಕಾಂತಶಿಲಾ[5]ತಲೈಃ ।**
**ಚಂದ್ರಪಾದಾಭಿಸಂಸ್ಪರ್ಶಾತ್ಸ್ಯರದ್ಭಿರ್ಜಲದಾಯಿತಮ್ ॥ ೬೦ ॥**

ಆ ಅಯೋಧ್ಯಾನಗರದಲ್ಲಿ ಚಂದ್ರನ ಕಿರಣಗಳ ಸಂಸ್ಪರ್ಶದಿಂದ ನೀರನ್ನು ಸುರಿಯುವ ಉಪ್ಪರಿಗೆಯ ಮೇಲುಭಾಗದಲ್ಲಿ ಸಂಬಂಧಿಸಿಕೊಂಡಿರುವ ಚಂದ್ರಕಾಂತಶಿಲಾತಲಗಳು ಮೇಘದಂತೆ ಕಾಣಿಸುತ್ತಿದ್ದುವು.

**ಯಾ ಧತ್ತೇ ಸ್ಮ ಮಹಾಸೌಧಶಿಖರೈರ್ಮಣಿಭಾಸುರೈಃ ।**
**ಸುರಚಾಪಶ್ರಿಯಂ ದಿಕ್ಷು ವಿತತಾಂ ರತ್ನಭಾಮಯೀಮ್ ॥ ೬೧ ॥**

ಆ ಅಯೋಧ್ಯಾನಗರವು ರತ್ನಗಳಿಂದ ಪ್ರಕಾಶಮಾನವಾದ ದೊಡ್ಡ ಉಪ್ಪರಿಗೆ ಮನೆಗಳ ಶಿಖರಗಳಿಂದ ದಿಕ್ಕುಗಳಲ್ಲಿ ವಿಸ್ತಾರವೂ ರತ್ನಗಳ ಕಾಂತಿಮಯವೂ ಆದ ಇಂದ್ರಧನುಸ್ಸಿನ ಶೋಭೆಯನ್ನು ಧರಿಸಿತು.

**[6]ಸರೋಜರಾಗಮಾಣಿಕ್ಯಕಿರಣೈಃ ಕ್ವಚಿದಂಬರಮ್ ।**
**ಯತ್ರ ಸಂಧ್ಯಾಂಬುದಚ್ಛನ್ನಮಿವಾಲಕ್ಷ್ಯತ ಪಾಟಲಮ್ ॥ ೬೨ ॥**

ಆ ಅಯೋಧ್ಯಾಪಟ್ಟಣದಲ್ಲಿ ಕೆಲವುಕಡೆಗಳಲ್ಲಿ ಪದ್ಮರಾಗಮಾಣಿಕ್ಯರತ್ನಗಳ ಕಿರಣಗಳಿಂದ ವ್ಯಾಪ್ತವಾದ ಆಕಾಶವು ಸಂಧ್ಯಾಕಾಲದ ಮೇಘದಿಂದ ವ್ಯಾಪ್ತವಾದಂತೆ ಕೆಂಪಾಗಿತೋರುತ್ತಿದ್ದಿತು.

**ಇಂದ್ರನೀಲೋಪಲೈಃ ಸೌಧಕೂಟಲಗ್ನೈ[7]ರ್ವಿಲಂಘಿತಮ್ ।**
**ಸ್ಫುರದ್ಭಿರ್ಜ್ಯೋತಿಷಾಂ ಚಕ್ರಂ ಯತ್ರ ನಾಲಕ್ಷ್ಯತಾಂಬರೇ ॥ ೬೩ ॥**

ಆ ಅಯೋಧ್ಯಾನಗರಿಯ ಉಪ್ಪರಿಗೆಗಳಲ್ಲಿ ಹಾಸಿದ ಪ್ರಕಾಶಮಾನವಾದ ಇಂದ್ರನೀಲ ರತ್ನಗಳ ದೆಸೆಯಿಂದ ಜ್ಯೋತಿರ್ದೇವತೆಗಳ ಸಮೂಹವು ಆಕಾಶದಲ್ಲಿ ಕಾಣಿಸುತ್ತಿರಲಿಲ್ಲ.

**ಗಿರಿಕೂಟತಟಾನೀವ ಸೌಧಕೂಟಾನಿ ಶಾರದಾಃ ।**
**ಘನಾ ಯತ್ರಾಶ್ರಯಂತಿ ಸ್ಮ [8]ಸೂನ್ನತಃ ಕಸ್ಯ ನಾಶ್ರಯಃ ॥ ೬೪ ॥**

ಆ ಅಯೋಧ್ಯಾನಗರದಲ್ಲಿ ಶರತ್ಕಾಲಸಂಬಂಧವಾದ ಮೇಘಗಳು, ಪರ್ವತ ಶಿಖರಗಳನ್ನೋಪಾದಿಯಲ್ಲಿ, ಉಪ್ಪರಿಗೆಮನೆಗಳ ಶಿಖರಗಳನ್ನು ಆಶ್ರಯಿಸುತ್ತವೆ. ನ್ಯಾಯವಾಗಿದೆ. ಉನ್ನತ(ಶ್ರೇಷ್ಠ)ವಾದ ಪದಾರ್ಥವು ಯಾರಿಗೆ ಆಶ್ರಯವಲ್ಲವು ?

೧ ಆಹ್ವಾತುಮಿಚ್ಛುರಿವ. ೨ ಸಂಶ್ರಿತ್ಯೈರಿತ್ಯಪಿ ಪಾಠಃ. ೩ ತಿರಸ್ಕೃತೇವ. ೪ ನಿರಾಕುಲಂ ಯಥಾ ತಥಾ. ೫ ಶತೈರಿತ್ಯಪಿ ಪಾಠಃ. ೬ ಪದ್ಮರಾಗಃ. ೭ ಆಕ್ರಾಂತಂ. ೮ ಶ್ರೇಷ್ಠಃ.

**ಪ್ರಾಕಾರವಲಯೋ ಯಸ್ಯಾಶ್ಚಾಮೀಕರಮಯೋದ್ಯುತತ್ ।**
**ಮಾನುಷೋತ್ತರಶೈಲಸ್ಯ ಶ್ರಿಯಂ ರತ್ನೈರಿವಾ[1]ಹಸನ್ ॥ ೬೫ ॥**

ಅಯೋಧ್ಯಾನಗರದ ಬಂಗಾರಮಯವಾದ ಕೋಟೆಯು, ರತ್ನಗಳಿಂದ ಮಾನುಷೋತ್ತರಪರ್ವತದ ಶೋಭೆಯನ್ನು ಪರಿಹಾಸ್ಯಮಾಡುತ್ತದೆಯೋ ಎಂಬಂತೆ, ಪ್ರಕಾಶಿಸಿತು.

**ಯತ್ಖಾತಿಕಾ ಮಹಾಂಭೋಧೇರ್ಲೀಲಾಂ [2]ಯಾದೋಭಿರುದ್ಧತೈಃ ।**
**ಧತ್ತೇ ಸ್ಮ ಕ್ಷುಭಿತಾಲೋಲಕಲ್ಲೋಲಾವರ್ತಭೀಷಣಾ ॥ ೬೬ ॥**

ಕ್ಷೋಭೆಗೊಂಡು ಅಲ್ಲೋಲಕಲ್ಲೋಲವಾಗುವ ಸುಳಿಗಳಿಂದ ಭಯಂಕರವಾದ ಅಯೋಧ್ಯಾನಗರದ ಕಂದಕವು ಉದ್ಧತವಾದ ಜಲಚರಪ್ರಾಣಿಗಳಿಂದ ದೊಡ್ಡ ಸಮುದ್ರದ ಲೀಲೆಯನ್ನುಧರಿಸಿತು. ಕಂದಕವು ದೊಡ್ಡಸಮುದ್ರದಂತೆ ತೋರುತ್ತಿದ್ದಿತೆಂದು ಭಾವವು.

**ಜಿನಪ್ರಸವಭೂಮಿತ್ವಾದ್ಯಾ ಶುದ್ಧಾಕರಭೂಮಿವತ್ ।**
**ಸೂತೇ ಸ್ಮ ಪುರುಷಾ[3]ನರ್ಘ್ಯಮಹಾರತ್ನಾನಿ ಕೋಟಿಶಃ ॥ ೬೭ ॥**

ರತ್ನಗಳಿಗೆ ಉತ್ಪತ್ತಿಸ್ಥಾನವಾದ ಗಣಿಯ ಭೂಮಿಯಂತೆ ಶುದ್ಧವಾದ ಆ ಅಯೋಧ್ಯಾನಗರವು ಜಿನೇಶ್ವರನ ಉತ್ಪತ್ತಿಯ ಭೂಮಿಯಾದುದರಿಂದ ಪುರುಷರೆಂಬ ಅಮೂಲ್ಯವಾದ ಮಹಾರತ್ನಗಳನ್ನು ಅನೇಕವಾಗಿ ಪ್ರಸವಿಸಿತು.

**ಯಸ್ಯಾಶ್ಚ ಬಹಿರುದ್ಯಾನೈರನೇಕಾನೋಕಹಾಕುಲೈಃ ।**
**ಫಲ[4]ಚ್ಛಾಯಾಪ್ರದೈಃ ಕಲ್ಪತರು[5]ಚ್ಛಾಯಾ ಸ್ಮ ಲಂಘ್ಯತೇ ॥ ೬೮ ॥**

ಅನೇಕವೃಕ್ಷಗಳಿಂದ ವ್ಯಾಪ್ತವಾದ ಮತ್ತು ಫಲಗಳ ಶೋಭೆಯನ್ನು ಕೊಡುವ ಆ ಅಯೋಧ್ಯಾನಗರದ ಬಾಹ್ಯೋದ್ಯಾನಗಳು ಕಲ್ಪವೃಕ್ಷಗಳ ಶೋಭೆಯನ್ನು ಜಯಿಸಿದುವು.

**ಯಸ್ಯಾಃ [6]ಪರ್ಯಂತಮಾವೇಷ್ಟ್ಯ ಸ್ಥಿತಾ ಸಾ [7]ಸರಯೂರ್ನದೀ ।**
**ಲಸತ್ಪುಲಿನಸಂಸುಪ್ತಸಾರಸಾ ಹಂಸನಾದಿನೀ ॥ ೬೯ ॥**

ಪ್ರಕಾಶಮಾನವಾದ ಮರಳಿನಲ್ಲಿ ಮಲಗಿರುವ ಸಾರಸಪಕ್ಷಿಗಳುಳ್ಳುದೂ ಹಂಸಪಕ್ಷಿಗಳ ಶಬ್ದವುಳ್ಳುದೂ ಪ್ರಸಿದ್ಧವೂ ಆದ ಸರಯೂನದಿಯು ಆ ಅಯೋಧ್ಯಾನಗರದ ಬಾಹ್ಯ ಪ್ರದೇಶವನ್ನು ಆವರಿಸಿಕೊಂಡಿತು.

**[8]ಯಾಮಾಹುರತಿದುರ್ಲಂಘ್ಯಾಮಯೋಧ್ಯಾಂ[9]ಯೋಧಸಂಕುಲಾಮ್ ।**
**[10]ವಿನೀತಾಖಂಡಮಧ್ಯಸ್ಥಾ ಯಾ ತನ್ನಾಭಿರಿವಾಬಭೌ ॥ ೭೦ ॥**

ವೀರಭಟರಿಂದ ಭರಿತವಾದ ಆ ಅಯೋಧ್ಯಾನಗರವನ್ನು ಶತ್ರುಗಳಿಂದ ಮೀರಲಶಕ್ಯವನ್ನಾಗಿ ಹೇಳುತ್ತಾರೆ. ಆರ್ಯಖಂಡದ ಮಧ್ಯದಲ್ಲಿರುವ ಆ ಅಯೋಧ್ಯೆಯು ಆರ್ಯಖಂಡದ ನಾಭಿಯಂತೆ ಶೋಭಿಸಿತು.

**ತಾಮಾರುಧ್ಯ ಪುರೀಂ ವಿಷ್ವ[11]ಗನೀಕಾನಿ ಸುಧಾಶಿನಾಮ್ ।**
**ತಸ್ಥುರ್ಜಗಂತಿ ತಚ್ಛೋಭಾಮಾಗತಾನೀವ ವೀಕ್ಷಿತುಮ್ ॥ ೭೧ ॥**

ಆ ಅಯೋಧ್ಯಾನಗರದ ಶೋಭೆಯನ್ನು ನೋಡುವುದಕ್ಕೋಸ್ಕರ ಲೋಕಗಳು ಬಂದುವೋ ಎಂಬಂತೆ ದೇವತೆಗಳ ಸೈನ್ಯಗಳು ಆ ಪಟ್ಟಣವನ್ನು ಆವರಿಸಿಕೊಂಡು ಸುತ್ತಲೂ ನಿಂತುವು.

೧ ಆಹಸದಿತ್ಯಪಿ ಪಾಠಃ. ೨ ಮಕರಾದಿಜಲಜಂತುಭಿಃ, ಯಾದಾಂಸಿ ಜಲಜಂತವ ಇತ್ಯಮರಃ. ೩ ಅಮೂಲ್ಯಾನಿ. ೪ ಶೋಭಾ. ೫ ಶೋಭಾ. ೬ ಬಹಿರ್ಭಾಗಂ. ೭ ನಾಮ. ೮ ಯಾಂ ಪ್ರಾಹುರರಿದುರ್ಲಂಘ್ಯಾಮಿತ್ಯಪಿ ಪಾಠಃ. ೯ ಯೌಧಸಂಕುಲಾಮಿತ್ಯಪಿ ಪಾಠಃ. ೧೦ ಆರ್ಯಖಂಡಃ. ೧೧ ಸಪ್ತಾನೀಕಾನಿ.

**ತತಃ ಕತಿಪಯೈರ್ದೇವೈರ್ದೇವಮಾದಾಯ ದೇವರಾಟ್ ।**
**ಪ್ರವಿವೇಶ ನೃಪಾಗಾರಂ ಪರಾರ್ಧ್ಯಶ್ರೀಪರಂಪರಮ್ ॥ ೭೨ ॥**

ತರುವಾಯ ಕೆಲವು ದೇವತೆಗಳೊಡನೆ ದೇವೇಂದ್ರನು ಸ್ವಾಮಿಯನ್ನು ತೆಗೆದುಕೊಂಡು ಬಹಳ ಬೆಲೆಬಾಳುವ ಸಂಪತ್ತಿನ ರಾಶಿಯುಳ್ಳ ರಾಜಭವನವನ್ನು ಪ್ರವೇಶಮಾಡಿದನು.

**ತತ್ರಾಮರಕೃತಾನೇಕವಿನ್ಯಾಸೇ ಶ್ರೀಗೃಹಾಂಗಣೇ ।**
**ಹರ್ಯಾಸನೇ ಕುಮಾರಂ ತಂ ಸೌಧರ್ಮೇಂದ್ರೋ [೧]ನ್ಯವೀವಿಶತ್ ॥**

ದೇವತೆಗಳಿಂದ ಮಾಡಲ್ಪಟ್ಟ ಅನೇಕ ರಚನೆಯುಳ್ಳ ಆ ರಾಜಭವನದ ಅಂಗಣದಲ್ಲಿ ಸೌಧರ್ಮೇಂದ್ರನು ಆ ಜಿನಬಾಲಕನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿದನು.

**ನಾಭಿರಾಜಃ ಸಮುದ್ಭಿನ್ನಪುಲಕಂ ಗಾತ್ರಮುದ್ವಹನ್ ।**
**ಪ್ರೀತಿವಿಸ್ಫಾರಿತಾಕ್ಷಸ್ತಂ ದದರ್ಶ [೨]ಪ್ರಿಯದರ್ಶನಮ್ ॥ ೭೪ ॥**

ಆಗ ನಾಭಿರಾಜನು ರೋಮಾಂಚವಾದ ಶರೀರವನ್ನು ಧರಿಸಿದವನೂ ಪ್ರೀತಿಯಿಂದ ವಿಕಸಿತವಾದ ನೇತ್ರಗಳುಳ್ಳವನೂ ಆಗಿ ನೋಡುವುದಕ್ಕೆ ಪ್ರಿಯನಾದ ಆ ಬಾಲಕನನ್ನು ನೋಡಿದನು.

**ಮಾಯಾನಿದ್ರಾಮಪಾಕೃತ್ಯ ದೇವೀ ಶಚ್ಯಾ ಪ್ರಬೋಧಿತಾ ।**
**ದೇವೀಭಿಃ ಸಮಮೈಕ್ಷಿಷ್ಟ ಪ್ರಹೃಷ್ಟಾ ಜಗತಾಂ ಪತಿಮ್ ॥ ೭೫ ॥**

ಮಾಯಾನಿದ್ರೆಯನ್ನು ಹೋಗಲಾಡಿಸಿ ಶಚೀದೇವಿಯಿಂದ ಎಚ್ಚರಿಸಲ್ಪಟ್ಟ ಮರುದೇವಿಯು ದೇವಸ್ತ್ರೀಯರೊಡನೆ ಸಂತುಷ್ಟಳಾಗಿ ಲೋಕಾಧಿಪತಿಯಾದ ಬಾಲಕನನ್ನು ಕಂಡಳು. ಬಾಲಕನನ್ನು ನೋಡಿ ಬಹಳ ಸಂತೋಷಪಟ್ಟಳೆಂದರ್ಥವು.

**ತೇಜಃಪುಂಜಮಿವೋದ್ಭೂತಂ ಸಾಪಶ್ಯತ್ಸ್ವಂ ಸುತಂ ಸತೀ ।**
**[೩]ಬಾಲಾರ್ಕೇಣ ಚ ಸಾ ತೇನ ದಿಗ್ವೈಂದ್ರೀವ ವಿದಿದ್ಯುತೇ ॥ ೭೬ ॥**

ಪತಿವ್ರತೆಯಾದ ಆ ಮರುದೇವಿಯು ಮೇಲಕ್ಕೆದ್ದ ತೇಜಸ್ಸುಗಳ ರಾಶಿಯಂತಿರುವ ತನ್ನ ಮಗನನ್ನು ಕಂಡು ಬಾಲಸೂರ್ಯನೊಡನೆ ಪೂರ್ವದಿಕ್ಕು ಶೋಭಿಸುವಂತೆ ಆ ಬಾಲಕನೊಡನೆ ಶೋಭಿಸಿದಳು.

**ಶಚ್ಯಾ ಸಮಂ ಚ ನಾಕೇಶಂ ತಾವದ್ರಾಷ್ಟಾಂ ಜಗದ್ಗುರೋಃ ।**
**ಪಿತರೌ ನಿತರಾಂ ಪ್ರೀತೌ ಪರಿಪೂರ್ಣಮನೋರಥೌ ॥ ೭೭ ॥**

ಪರಿಪೂರ್ಣವಾದ ಮನೋರಥವುಳ್ಳವರೂ ಜಗದ್ಗುರುವಾದ ಸ್ವಾಮಿಯ ತಂದೆತಾಯಿಗಳೂ ಆದ ಆ ನಾಭಿರಾಜಮರುದೇವಿಯರು ಶಚೀದೇವೀಸಹಿತನಾಗಿದ್ದ ದೇವೇಂದ್ರನನ್ನು ನೋಡಿ ಬಹಳ ಸಂತೋಷಪಟ್ಟರು.

**ತತಸ್ತೌ ಜಗತಾಂ ಪೂಜ್ಯೌ ಪೂಜಯಾಮಾಸ ವಾಸವಃ ।**
**ವಿಚಿತ್ರೈರ್ಭೂಷಣೈಃ ಸ್ರಗ್ಭಿ[೪]ರಂಶುಕೈಶ್ಚ ಮಹಾರ್ಘ್ಯಕೈಃ ॥ ೭೮ ॥**

ತರುವಾಯ ದೇವೇಂದ್ರನು ಲೋಕಕ್ಕೆ ಪೂಜ್ಯರಾದ ಆ ನಾಭಿರಾಜಮರುದೇವಿಯರನ್ನು ನಾನಾಪ್ರಕಾರವಾದ ಆಭರಣಗಳಿಂದಲೂ ಪುಷ್ಪಮಾಲಿಕೆಗಳಿಂದಲೂ ಅಮೂಲ್ಯವಾದ ವಸ್ತ್ರಗಳಿಂದಲೂ ಪೂಜಿಸಿದನು.

**ತೌ ಪ್ರೀತಃ ಪ್ರಶಶಂಸೇತಿ ಸೌಧರ್ಮೇಂದ್ರಃ ಸುರೈಃ ಸಮಮ್ ।**
**ಯುವಾಂ ಪುಣ್ಯಧನೌ ಧನ್ಯೌ ಯಯೋರ್ಲೋಕಾಗ್ರಣೀಃ ಸುತಃ ॥೭೯ ॥**

ದೇವತೆಗಳೊಡನೆ ಸಂತುಷ್ಟನಾದ ಸೌಧರ್ಮೇಂದ್ರನು ಆ ದಂಪತಿಗಳನ್ನು ಮುಂದೆಹೇಳುವರೀತಿಯಾಗಿ ಹೊಗಳಿದನು. "ನಾಭಿರಾಜಮರುದೇವಿಯರೇ! ಲೋಕೋತ್ತಮನಾದ ಪುತ್ರನನ್ನು ಪಡೆದ ನೀವು ಪುಣ್ಯಶಾಲಿಗಳೂ ಧನ್ಯರೂ ಆಗಿರುತ್ತೀರಿ.

೧ ಸ್ಥಾಪಯಾಮಾಸ. ೨ ಪ್ರೀತಿಕರಾಲೋಕನಂ. ೩ ಬಾಲಾರ್ಕೇಣೇವೇತ್ಯಪಿ ಪಾಠಃ. ೪ ಅದ್ಭುತೈರಿತ್ಯಪಿ ಪಾಠಃ.

**ಯುವಾಮೇವ ಮಹಾಭಾಗೌ ಯುವಾಂ ಕಲ್ಯಾಣಭಾಗಿನೌ ।**
**ಯುವಯೋರ್ನ ತುಲಾ ಲೋಕೇ ಯುವಾ[೧]ಮಧಿಗುರೋ[೨]ರ್ಗುರೂ ॥**

ನೀವೇ ಮಹಾಭಾಗ್ಯವಂತರು. ನೀವೇ ಕಲ್ಯಾಣಭಾಗಿಗಳು. ಲೋಕಾಧಿಪತಿಯಾದ ಸ್ವಾಮಿಗೆ ನೀವು ತಂದೆತಾಯಿಗಳಾಗಿರುವುದರಿಂದ ಲೋಕದಲ್ಲಿ ನಿಮಗೆ ಸಮಾನರಿಲ್ಲ.

**ಭೋ ನಾಭಿರಾಜ ಸತ್ಯಂ ತ್ವಮುದಯಾದ್ರಿ[೩]ರ್ಮಹೋದಯಃ ।**
**ದೇವೀ [೪]ಪ್ರಾಚ್ಯೇವ ಯಜ್ಜ್ಯೋತಿ[೫]ರ್ಯುಷ್ಮತ್ತಃ ಪರಮುದ್ಬಭೌ ॥ ೮೧ ॥**

ನಾಭಿರಾಜನೇ! ನಿಮ್ಮಿಂದ ಆ ಪರಂಜ್ಯೋತಿಯು ಉದ್ಭವಿಸಿದುದರಿಂದ ಸತ್ಯವಾಗಿಯೂ ನೀನು ಬಹಳ ಉನ್ನತವಾದ ಅಥವಾ ಅಭ್ಯುದಯವುಳ್ಳ ಉದಯಪರ್ವತವಾಗಿರುತ್ತಿ. ಮರುದೇವಿಯು ಪೂರ್ವದಿಕ್ಕೇ ಆಗಿದ್ದಾಳೆ.

**[೬]ದೇವಧಿಷ್ಣ್ಯಮಿವಾಗಾರಮಿದಮಾರಾಧ್ಯಮದ್ಯ [೭]ವಾವಮ್ ।**
**ಪೂಜ್ಯೌ ಯುವಾಂ ಚ [೮]ನಃ ಶಶ್ವತ್ಪಿತರೌ ಜಗತಾಂ ಪಿತುಃ ॥ ೮೨ ॥**

ಈಗ ದೇವತೆಗಳ ಮನೆಯಂತಿರುವ ಈ ನಿಮ್ಮ ಮನೆಯೂ ಲೋಕಾಧಿಪತಿಯಾದ ಸ್ವಾಮಿಗೆ ತಂದೆತಾಯಿಗಳಾದ ನೀವೂ ಸದಾ ನಮ್ಮಿಂದ ಪೂಜಿಸುವುದಕ್ಕೆ ಯೋಗ್ಯರಾಗಿರುತ್ತೀರಿ."

**ಇತ್ಯಭಿಷ್ಟುತ್ಯ ತೌ ದೇವಮರ್ಪಯಿತ್ವಾ ಚ [೯]ತತ್ಕರೇ ।**
**ಶತಾಧ್ವರಃ ಕ್ಷಣಂ ತಸ್ಥೌ ಕುರ್ವಂ[೧೦]ಸ್ತಾಮೇವ [೧೧]ಸಂಕಥಾಮ್ ॥ ೮೩ ॥**

ಈ ಪ್ರಕಾರವಾಗಿ ಆ ನಾಭಿರಾಜಮರುದೇವಿಯರನ್ನು ಸ್ತೋತ್ರಮಾಡಿ ದೇವೇಂದ್ರನು ಸ್ವಾಮಿಯನ್ನು ನಾಭಿರಾಜನ ಕೈಯಲ್ಲಿ ಅರ್ಪಿಸಿ ಒಂದುಕ್ಷಣಕಾಲದವರೆಗೆ ಆ ಜನ್ಮಾಭಿಷೇಕಸಂಬಂಧಿಯಾದ ಸಮಾಚಾರವನ್ನೇ ಹೇಳುತ್ತ ನಿಂತನು.

**ತೌ ಶಕ್ರೇಣ [೧೨]ಯಥಾವೃತ್ತಮಾವೇದಿತಜಿನೋತ್ಸವೌ ।**
**ಪ್ರಮದಸ್ಯ ಪರಾಂ ಕೋಟಿಮಾರೂಢೌ ವಿಸ್ಮಯಸ್ಯ ಚ ॥ ೮೪ ॥**

ಆ ನಾಭಿರಾಜಮರುದೇವಿಯರು ಸ್ವಾಮಿಗೆ ಮೇರುಪರ್ವತದಲ್ಲಿ ನಡೆದ ಉತ್ಸವವನ್ನು ದೇವೇಂದ್ರನಿಂದ ತಿಳಿದು ಬಹಳ ಸಂತೋಷವನ್ನೂ ಆಶ್ಚರ್ಯವನ್ನೂ ಹೊಂದಿದರು.

**ಜಾತಕರ್ಮೋತ್ಸವಂ ಭೂಯಶ್ಚಕ್ರತುಸ್ತೌ ಶತಕ್ರತೋಃ ।**
**ಲಬ್ಧಾನುಮತಿಮಿದ್ಧರ್ದ್ಧ್ಯಾ ಸಮಂ ಪೌರೈರ್ಧೃತೋತ್ಸವೈಃ ॥ ೮೫ ॥**

ದೇವೇಂದ್ರನ ಅನುಮತಿಯನ್ನು ಪಡೆದು ಆ ನಾಭಿರಾಜಮರುದೇವಿಯರು ಬಹಳ ಆನಂದವನ್ನು ಹೊಂದಿದ ಪುರನಿವಾಸಿಗಳೊಡನೆ ವೈಭವದಿಂದ ಪುನಃ ಜಾತಕರ್ಮೋತ್ಸವವನ್ನು ಮಾಡಿದರು.

**ಸಾ ಕೇತುಮಾಲಿಕಾಕೀರ್ಣಾ ಪುರೀ [೧೩]ಸಾಕೇತಸಾಹ್ವಯಾ ।**
**ತದಾಸೀತ್ಸ್ವರ್ಗ[೧೪]ಮಾಹ್ವಾತುಂ [೧೫]ಸಾಕೂತೇವಾತ್ತ[೧೬]ಕೌತುಕಾ ॥ ೮೬ ॥**

೧ ಲೋಕತ್ರಯಗುರೋಃ. ೨ ಪಿತರೌ. ೩ ಮಹಾನುದಯ ಉನ್ನತಿರಭ್ಯುದಯೋ ವಾ ಯಸ್ಯ. ೪ ಪೂರ್ವದಿಗೇವ. ೫ ಯುವಾಭ್ಯಾಂ. ೬ ದೇವತಾಗೃಹಂ. ೭ ಯುವಯೋಃ. ೮ ಅಸ್ಮಾಭಿಃ, ವಾ ನಾಕಸ್ಯೇತಿ ಕರ್ತರಿ ಷಷ್ಠೀ. ೯ ನಾಭಿರಾಜಸ್ಯ. ೧೦ ಜನ್ಮಾಭಿಷೇಕಸಂಬಂಧಿನೀಂ. ೧೧ ವಾರ್ತಾಂ. ೧೨ ಯಥಾವರ್ತಿತಂ ತಥಾಜ್ಞಾಪಿತಂ. ೧೩ ಆಹ್ವಯೇನ ಸಹಿತಾ ಸಾಹ್ವಯಾ, ಸಾಕೇತಮಿತಿ ಸಾಹ್ವಯಾ. ೧೪ ಸ್ಪರ್ಧಾಂ ಕರ್ತುಂ. ೧೫ ಸಾಭಿಪ್ರಾಯಾ. ೧೬ ಉತ್ಸವಾ.

ಆಗ ಧ್ವಜಪತಾಕೆಗಳಿಂದ ವ್ಯಾಪ್ತವಾದ ಸಾಕೇತವೆಂದು ಹೆಸರುಳ್ಳ ಆ ಪಟ್ಟಣವು ಕುತೂಹಲದಿಂದ ಸ್ವರ್ಗವನ್ನು ಸ್ಪರ್ಧೆಮಾಡುವುದಕ್ಕೋಸ್ಕರ ಅಭಿಪ್ರಾಯಸಹಿತ ವಾಗಿರುವಂತಿದ್ದಿತು.

**ಪುರೀ ಸ್ವರ್ಗಪುರೀವಾಸೌ ಸಮಾಃ ಪೌರಾ ದಿವೌಕಸಾಮ್ ।**
**ತದಾ ಸಂಧೃತ[1]ನೇಪಥ್ಯಾಃ ಪುರನಾರ್ಯೋಽಪ್ಸರಃಸಮಾಃ ॥ ೮೭ ॥**

ಆಗ ಈ ಅಯೋಧ್ಯಾನಗರವು ಸ್ವರ್ಗಪುರಿಗೆ ಸಮಾನವಾಗಿ ಆಯಿತು. ಪಟ್ಟಣವಾಸಿಗಳು ದೇವತೆಗಳಿಗೆ ಸಮಾನರಾಗಿ ಆದರು. ಅಲಂಕಾರವನ್ನು ಧರಿಸಿಕೊಂಡ ಪುರಸ್ತ್ರೀಯರು ಅಪ್ಸರಸ್ತ್ರೀಯರಿಗೆ ಸಮಾನರಾಗಿ ಆದರು.

**ಧೂಪಾಮೋದೈರ್ದಿಶೋ ರುದ್ಧಾಃ [2]ಪಟವಾಸೈಸ್ತತಂ ನಭಃ ।**
**ಸಂಗೀತಮುರಜಧ್ವಾನೈರ್ದಿಕ್ಚಕ್ರಂ ಬಧಿರೀಕೃತಮ್ ॥ ೮೮ ॥**

ದಿಕ್ಕುಗಳು ಧೂಪದ ಪರಿಮಳಗಳಿಂದ ವ್ಯಾಪ್ತವಾದುವು. ಆಕಾಶವು ಸುಗಂಧ ಚೂರ್ಣಗಳಿಂದ ವ್ಯಾಪ್ತವಾಯಿತು. ದಿಙ್ಮಂಡಲವು ಸಂಗೀತದ ಮತ್ತು ಮದ್ದಳೆಯ ಶಬ್ದಗಳಿಂದ ವ್ಯಾಪ್ತವಾಯಿತು.

**ಪುರವೀಥ್ಯಸ್ತದಾಭೂವನ್ರತ್ನಚೂರ್ಣೈರಲಂಕೃತಾಃ ।**
**ನಿರುದ್ಧಾತಪ[3]ಸಂಪಾತಾಃ ಪ್ರಚಲತ್ಕೇತನಾಂಶುಕೈಃ ॥ ೮೯ ॥**

ಆಗ ಚಲಿಸುತ್ತಿದ್ದ ಧ್ವಜಪತಾಕೆಗಳಿಂದ ಬಿಸಲಿನ ಸಂಪರ್ಕವಿಲ್ಲದ ಪುರಬೀದಿಗಳು ರತ್ನದ ಚೂರ್ಣಗಳಿಂದ ಅಲಂಕೃತಗಳಾದುವು.

**ಚಲತ್ಪತಾಕಮಾಬದ್ಧ ತೋರಣಾಂಚಿತಗೋಪುರಮ್ ।**
**ಕೃತೋಪಶೋಭಮಾರಬ್ಧಸಂಗೀತರವರುದ್ಧದಿಕ್ ॥ ೯೦ ॥**

**ಪ್ರನೃತ್ಯದಿವ [4]ಸೌಮುಖ್ಯಮಿವ ತದ್ದರ್ಶಯತ್ಪುರಮ್ ।**
**[5]ಸನೇಪಥ್ಯಮಿವಾನಂದಾತ್ಪ್ರಜಲ್ಪದಿವ ಚಾಭವತ್ ॥ ೯೧ ॥**

ಚಲಿಸುತ್ತಿರುವ ಪತಾಕೆಗಳುಳ್ಳದೂ ತೋರಣಗಳನ್ನು ಕಟ್ಟಿದ ಗೋಪುರಗಳುಳ್ಳದೂ ಕೃತ್ರಿಮವಾದ ಶೋಭೆಯುಳ್ಳದೂ ಪ್ರಾರಂಭಿಸಿದ ಸಂಗೀತ ಶಬ್ದದಿಂದ ವ್ಯಾಪ್ತವಾದ ದಿಕ್ಕುಗಳುಳ್ಳದೂ ಆದ ಆ ಪಟ್ಟಣವು ತನ್ನ ಸುಂದರವಾದ ಮುಖಭಾವವನ್ನು ತೋರಿಸಿ ನರ್ತನವನ್ನು ಮಾಡುವಂತೆಯೂ ಅಲಂಕಾರಸಹಿತವಾಗಿರುವಂತೆಯೂ ಆನಂದದಿಂದ ಮಾತನಾಡುವಂತೆಯೂ ಇದ್ದಿತು.

**ತತೋ ಗೀತೈಶ್ಚ ನೃತ್ತೈಶ್ಚ [6]ವಾದಿತ್ರೈಶ್ಚ ಸಮಂಗಲೈಃ ।**
**ವ್ಯಗ್ರಃ ಪೌರಜನಃ ಸರ್ವೋಽಪ್ಯಾಸೀದಾನಂದನಿರ್ಭರಃ ॥ ೯೨ ॥**

ತರುವಾಯ ಮಂಗಲಕರವಾದ ಗೀತಗಳಿಂದಲೂ ನೃತ್ಯಗಳಿಂದಲೂ ವಾದ್ಯಗಳಿಂದಲೂ ಆ ಉತ್ಸವದಲ್ಲಿ ಮಗ್ನವಾದ ಪಟ್ಟಣವಾಸಿಜನರೆಲ್ಲ ಬಹಳ ಆನಂದವುಳ್ಳವರಾದರು.

**ನ ತದಾ ಕೋಽಪ್ಯಭೂದ್ದೀನೋ ನ ತದಾ ಕೋಽಪಿ ದುರ್ವಿಧಃ ।**
**ನ ತದಾ ಕೋಽಪ್ಯಪೂರ್ಣೇಚ್ಛೋ ನ ತದಾ ಕೋ[7]ಽಪ್ಯಕೌತುಕಃ ॥ ೯೩ ॥**

ಆ ಉತ್ಸವಕಾಲದಲ್ಲಿ ಲೋಭಿಯೂ ಗರೀಬನೂ ತನ್ನ ಇಚ್ಛಾಪರಿಪೂರ್ಣವಾಗದಿರುವವನೂ ಆನಂದವಾಗದಿರುವವನೂ ಯಾವನೂ ಇರಲಿಲ್ಲ.

**ಸಪ್ರಮೋದಮಯಂ ವಿಶ್ವಮಿತ್ಯಾತನ್ವನ್ಮಹೋತ್ಸವಃ ।**
**ಯಥಾ ಮೇರೌ ತಥೈವಾಸ್ಮಿನ್ಪುರೇ ಸಾಂತಃಪುರೇವೃತತ್ ॥ ೯೪ ॥**

೧ ಅಲಂಕಾರಾಃ. ೨ ಪಟವಾಸಚೂರ್ಣೈಃ. ೩ ಸಂಪರ್ಕಾಃ. ೪ ಸುಮುಖತ್ವಂ. ೫ ಸಾಲಂಕಾರಂ. ೬ ವಾದ್ಯೈಃ. ೭ ಅನುತ್ಸವಃ.

ಈ ಪ್ರಕಾರವಾಗಿ ಲೋಕವನ್ನು ಆನಂದಮಯವನ್ನಾಗಿ ಮಾಡಿದ ಈ ಮಹೋತ್ಸವವು, ಮಹಾಮೇರುಪರ್ವತದಲ್ಲಿ ನಡೆದಂತೆ, ಈ ಅಯೋಧ್ಯಾನಗರದಲ್ಲಿಯೂ ಅಂತಃಪುರದಲ್ಲಿಯೂ ನಡೆಯಿತು.

**ದೃಷ್ಟ್ವಾ [1]ಪ್ರಮುದಿತಂ [2]ತೇಷಾಂ ಸ್ವಂ ಪ್ರಮೋದಂ ಪ್ರಕಾಶಯನ್ ।**
**ಸಂಕ್ರಂದನೋ ಮನೋವೃತ್ತಿಮಾ[3]ನಂದಾನಂದನಾಟಕೇ ॥ ೯೫ ॥**

ನಾಭಿರಾಜಮೊದಲಾದವರ ಆನಂದವನ್ನು ನೋಡಿ ದೇವೇಂದ್ರನು ತನ್ನ ಆನಂದವನ್ನು ಪ್ರಕಟಪಡಿಸುವವನಾಗಿ ಆನಂದನಾಟಕದಲ್ಲಿ ತನ್ನ ಮನೋವೃತ್ತಿಯನ್ನು ಬಂಧಿಸಿದನು. ಆನಂದನರ್ತನವನ್ನು ಮಾಡುವುದಕ್ಕೆ ಮನಸ್ಸುಮಾಡಿದ ಸಂದರ್ಭವು.

**ನೃತ್ತಾರಂಭೇ [4]ಮಹೇಂದ್ರಸ್ಯ ಸಜ್ಜಃ ಸಂಗೀತವಿಸ್ತರಃ ।**
**ಗಂಧರ್ವೈಸ್ತದ್ವಿಧಾನಜ್ಞೈ[5]ರ್ಭಾಂಡೋಪವಹನಾದಿಭಿಃ ॥ ೯೬ ॥**

ದೇವೇಂದ್ರನ ನರ್ತನಾರಂಭಕಾಲದಲ್ಲಿ ಸಂಗೀತವಿಧಿಯನ್ನು ತಿಳಿದ ಗಂಧರ್ವ ದೇವತೆಗಳು ವಾದ್ಯಗಳನ್ನು ಧರಿಸುವುದುಮೊದಲಾದ ಕಾರ್ಯಗಳಿಂದ ಸಂಗೀತಕ್ಕೆ ಸಿದ್ಧಪಡಿಸಿದರು.

**ಕೃತಾನುಕರಣಂ ನಾಟ್ಯಂ ತತ್ಪ್ರಯೋಜ್ಯಂ [6]ಯಥಾಗಮಮ್ ।**
**ಸ ಚಾಗಮೋ ಮಹೇಂದ್ರಾದ್ಯೈ[7]ರ್ಯಥಾಮ್ನಾಯ[8]ಮನುಸ್ಮೃತಃ ॥**

ಪೂರ್ವದಲ್ಲಿ ಮಾಡಿದ ಕಾರ್ಯವನ್ನು ಅಭಿನಯಿಸುವುದಕ್ಕೆ ನಾಟ್ಯವೆಂದು ಹೆಸರು. ಅದನ್ನು ನಾಟ್ಯಶಾಸ್ತ್ರಕ್ಕನುಸಾರವಾಗಿ ಪ್ರಯೋಗಿಸಬೇಕು. ಆ ಶಾಸ್ತ್ರವನ್ನು ದೇವೇಂದ್ರಮೊದಲಾದವರು ಪರಂಪರೆಯನ್ನತಿಕ್ರಮಿಸದೆ ತಿಳಿದರು.

**ವಕ್ತೄಣಾಂ [9]ತತ್ಪ್ರಯೋಕ್ತೄತ್ವೇ [10]ಲಾಲಿತ್ಯಂ ಕಿಮು ವರ್ಣ್ಯತೇ ।**
**[11]ಪಾತ್ರಾಂತರೇಪಿ ಸಂಕ್ರಾಂತಂ [12]ಯತ್ಸತಾಂ ಚಿತ್ತರಂಜನಮ್ ॥ ೯೮ ॥**

ಆ ನಾಟ್ಯಶಾಸ್ತ್ರವು ಬೇರೆ ಪಾತ್ರದಲ್ಲಿ ಸಂಬಂಧಿಸಿದಮಾತ್ರಕ್ಕೆ ಸತ್ಪುರುಷರಿಗೆ ಮನೋರಂಜಕವಾಗುತ್ತದೆ. ಹೀಗಿರುವಾಗ ಆ ಶಾಸ್ತ್ರವನ್ನು ಹೇಳುವವರೇ ಪ್ರಯೋಗಿಸಿ ತೋರಿಸಿದರೆ ಅದರ ಮನೋಹರತೆಯನ್ನು ವರ್ಣಿಸುವುದೇನು ?

**[13]ತತಃ ಶ್ರವ್ಯಂ ಚ ದೃಶ್ಯಂ ಚ [14]ತತ್ಪ್ರಯುಕ್ತಂ [15]ಮಹಾತ್ಮನಾ ।**
**[16]ಪಾಠ್ಯೈ[17]ರ್ನಾನಾವಿಧೈಶ್ಚಿತ್ರೈ[18]ರಾಂಗಿಕಾಭಿನಯೈರಪಿ ॥ ೯೯ ॥**

ಆದುದರಿಂದ ಮಹಾತ್ಮನಾದ ದೇವೇಂದ್ರನು ನಾನಾಪ್ರಕಾರವಾದ ಗದ್ಯ ಪದ್ಯಗಳಿಂದಲೂ ನಾನಾವಿಧವಾದ ಅಂಗಾಭಿನಯಗಳಿಂದಲೂ ಪ್ರಯೋಗಿಸಿದ ಆ ನಾಟ್ಯವು ಕೇಳುವುದಕ್ಕೂ ನೋಡುವುದಕ್ಕೂ ಮನೋಹರವಾಗಿದ್ದಿತು.

**[19]ವಿಕೃಷ್ಟಃ [20]ಕುತಪನ್ಯಾಸೋ ಮಹೀ ಸಕುಲಭೂಧರಾ ।**
**ರಂಗ[21]ಸ್ತ್ರಿಭುವನಾಭೋಗಃ ಸಹಸ್ರಾಕ್ಷೋ [22]ಮಹಾನಟಃ ॥ ೧೦೦ ॥**

**ಪ್ರೇಕ್ಷಕಾ ನಾಭಿರಾಜಾದ್ಯಾಃ [23]ಸಮಾರಾಧ್ಯೋ ಜಗದ್ಗುರುಃ ।**
**ಫಲಂ ತ್ರಿವರ್ಗ[24]ಸಂಭೂತಿಃ ಪರಮಾನಂದ ಏವ ಚ ॥ ೧೦೧ ॥**

**ಇತ್ಯೇಕಶೋಽಪಿ ಸಂಪ್ರೀತ್ಯೈ ವಸ್ತುಜಾತಮಿದಂ ಸತಾಮ್ ।**
**ಕಿಮು ತತ್ಸರ್ವಸಂದೋಹಃ ಪುಣ್ಯೈರೇಕತ್ರ ಸಂಗತಃ ॥ ೧೦೨ ॥**

೧ ಪ್ರಮೋದಂ. ೨ ನಾಭಿರಾಜಾದೀನಾಂ. ೩ ಬಬಂಧ, ಆದುಬಂಧನೇ ಲಿಟ್. ೪ ದೇವೇಂದ್ರಸ್ಯ. ೫ ವಾದ್ಯಧಾರಣಾದಿಭಿಃ. ೬ ನಾಟ್ಯಶಾಸ್ತ್ರಾನತಿಕ್ರಮೇಣ. ೭ ಸಂತತಿಮನತಿಕ್ರಮ್ಯ. ೮ ಜ್ಞಾತಃ. ೯ ನಾಟ್ಯಪ್ರಯೋಕ್ತೃತ್ವೇ. ೧೦ ಲಲಿತತ್ವಂ. ೧೧ ಪಾತ್ರಭೇದೇಽಪಿ. ೧೨ ನಾಟ್ಯಶಾಸ್ತ್ರಂ ಪಾತ್ರಾಂತರೇಽಪಿ ಸಂಕ್ರಾಂತಂ ಚೇತ್. ೧೩ ಕಾರಣಾತ್. ೧೪ ನಾಟ್ಯಂ. ೧೫ ಇಂದ್ರೇಣ. ೧೬ ಗದ್ಯಪದ್ಯಾದಿಭಿಃ. ೧೭ ನಾನಾಪ್ರಕಾರೈಃ. ೧೮ ಅಂಗಜನಿತಾಭಿನಯೈಃ. ೧೯ ತಾಡಿತ ಇತ್ಯರ್ಥಃ. ೨೦ ವಾದ್ಯಾನಾಂ ನ್ಯಾಸಃ. ೨೧ ತ್ರಿಲೋಕಸ್ಯಾಭೋಗೋ ವಿಸ್ತಾರೋ ಯಸ್ಯ ಸಃ. ೨೨ ಮಹಾನರ್ತಕಃ. ೨೩ ಸಭಾಪತಿಃ. ೨೪ ಉತ್ಪತ್ತಿಃ.

ವಾದ್ಯಗಳು ಬಾರಿಸಲ್ಪಟ್ಟುವು. ಕುಲಪರ್ವತಸಹಿತವಾದ ಭೂಮಿಯು ಮೂರು ಲೋಕದ ವಿಸ್ತಾರವುಳ್ಳ ರಂಗಸ್ಥಳವಾಗಿದ್ದಿತು. ದೇವೇಂದ್ರನು ಮಹಾನರ್ತಕ ನಾಗಿದ್ದನು. ನಾಭಿರಾಜಮೊದಲಾದವರು ಪ್ರೇಕ್ಷಕರಾಗಿದ್ದರು. ಲೋಕಾಧಿಪತಿ ಯಾದ ಸ್ವಾಮಿಯು ಸಭಾಪತಿಯಾಗಿದ್ದನು. ಧರ್ಮ ಅರ್ಥ ಕಾಮ ಇವುಗಳ ಉತ್ಪತ್ತಿಯೂ ಪರಮಾನಂದ(ಮೋಕ್ಷ)ವೂ ಫಲಗಳಾಗಿದ್ದುವು. ಹೀಗೆ ನರ್ತಕ ಸಭ್ಯ ಸಭಾಪತಿ ಮೊದಲಾದ ಒಂದೊಂದು ವಸ್ತುವೂ ಸತ್ಪುರುಷರಿಗೆ ಪ್ರೀತಿಯನ್ನುಂಟು ಮಾಡುತ್ತದೆ. ಪುಣ್ಯಗಳಿಂದ ಆ ವಸ್ತುಗಳೆಲ್ಲ ಒಂದೇ ಕಡೆಯಲ್ಲಿ ಸಮೂಹವಾಗಿ ಸೇರಿದರೆ ಹೇಳುವುದೇನು ?

**ಕೃತ್ವಾ [೧]ಸಮವತಾರಂ ತು ತ್ರಿವರ್ಗಫಲಸಾಧನಮ್ ।**
**ಜನ್ಮಾಭಿಷೇಕಸಂಬಂಧಂ [೨]ಪ್ರಾಯುಂಕ್ತೈನಂ ತದಾ [೩]ಹರಿಃ ॥ ೧೦೩ ॥**

ಆಗ ದೇವೇಂದ್ರನು ಧರ್ಮ ಅರ್ಥ ಕಾಮಫಲಗಳಿಗೆ ಸಾಧನವಾದ ರಂಗ ಪ್ರವೇಶದ ನಾಂದೀಮಂಗಲವನ್ನು ಮಾಡಿ ಜನ್ಮಾಭಿಷೇಕಸಂಬಂಧವಾದ ನಾಟಕದ ಪ್ರಯೋಗವನ್ನು ಮಾಡಿ ತೋರಿಸಿದನು.

**ತದಾ ಪ್ರಯುಕ್ತಮನ್ಯಚ್ಚ [೪]ರೂಪಕಂ ಬಹುರೂಪಕಮ್ ।**
**[೫]ದಶಾವತಾರ ಸಂದರ್ಭಮಧಿಕೃತ್ಯ ಜಿನೇಶಿನಃ ॥ ೧೦೪ ॥**

ಆಗ ಜಿನೇಶ್ವರನ ಮಹಾಬಲಮೊದಲಾದ ಹತ್ತು ಅವತಾರಗಳನ್ನಾಶ್ರಯಿಸಿ ಅನೇಕವಿಧವಾದ ನಾಟಕವನ್ನು ಆರಂಭಿಸಿದನು.

**ತತ್ಪ್ರಯೋಗವಿಧೌ ಪೂರ್ವಂ ಪೂರ್ವರಂಗಂ ಸಮಂಗಲಮ್ ।**
**ಪ್ರಾರೇಭೇ ಮಘವಾಘಾನಾಂ ವಿಘಾತಾಯ [೬]ಸಮಾಹಿತಃ ॥ ೧೦೫ ॥**

ಆ ನಾಟಕಪ್ರಯೋಗವಿಧಿಯ ಮೊಟ್ಟಮೊದಲು ದೇವೇಂದ್ರನು ಸಾವಧಾನ ಪರನಾಗಿ ಪಾಪವಿನಾಶಕ್ಕೋಸ್ಕರ ಮಂಗಲಾಚರಣವನ್ನು ಮಾಡಿ ಪೂರ್ವರಂಗವನ್ನು ಪ್ರಾರಂಭಿಸಿದನು.

**ಪೂರ್ವರಂಗಪ್ರಸಂಗೇನ ಪುಷ್ಪಾಂಜಲಿಪುರಸ್ಸರಮ್ ।**
**[೭]ತಾಂಡವಾರಂಭಮೇವಾ [೮]ಗ್ರೇ[೯]ಸುರಪ್ರಾಗ್ರಹರೋಗ್ರಹೀತ್ ॥ ೧೦೬ ॥**

ದೇವತೆಗಳಲ್ಲಿ ಶ್ರೇಷ್ಠನಾದ ದೇವೇಂದ್ರನು ಪೂರ್ವರಂಗದ ಸಂದರ್ಭದಲ್ಲಿ ಪುಷ್ಪಾಂಜಲಿಯನ್ನು ಚೆಲ್ಲಿ ಮೊದಲು ತಾಂಡವನರ್ತನವನ್ನೇ ಆರಂಭಿಸಿದನು.

**ಪ್ರಯೋಜ್ಯ ನಾಂದೀಮಂತೇಸ್ಮಾ ವಿಶನ್ರಂಗಂ ಬಭೌ ಹರಿಃ ।**
**ಧೃತ[೧೦]ಮಂಗಲನೇಪಥ್ಯೋ[೧೧]ನಾಟ್ಯವೇದಾವತಾರವತ್ ॥ ೧೦೭ ॥**

ಮಂಗಲಾಲಂಕಾರಗಳನ್ನು ಧರಿಸಿದ ದೇವೇಂದ್ರನು ನಾಂದಿಯನ್ನು ಪ್ರಯೋ ಗಿಸಿದನಂತರ ರಂಗಭೂಮಿಯನ್ನು ಪ್ರವೇಶಮಾಡುವವನಾಗಿ ನಾಟ್ಯಶಾಸ್ತ್ರದ ಅವತಾರದಂತೆ ಶೋಭಿಸಿದನು.

**ಸ ರಂಗಮವತೀರ್ಣೋಭಾದ್ವೈಶಾಖಸ್ಥಾನಮಾಸ್ಥಿತಃ ।**
**ಲೋಕಸ್ಕಂಧ ಇವೋದ್ಭೂತೋ[೧೨]ಮರುದ್ಭಿರಭಿತೋ ವೃತಃ ॥ ೧೦೮ ॥**

ರಂಗಭೂಮಿಗೆ ಅವತರಿಸಿದವನೂ ಎರಡು ಕಾಲುಗಳನ್ನು ಪಸರಿಸಿ ಕೈಗಳನ್ನು ಸೊಂಟದಲ್ಲಿಟ್ಟವನೂ ದೇವತೆಗಳಿಂದ ಸುತ್ತಲ್ಪಟ್ಟವನೂ ಆದ ಆ ದೇವೇಂದ್ರನು, ಗಾಳಿಗಳಿಂದ ಆವರಿಸಲ್ಪಟ್ಟ ಲೋಕನಾಡಿಯಂತೆ, ಶೋಭಿಸಿದನು.

**[೧೩]ಮಧ್ಯೇರಂಗಮಸೌ ರೇಜೇ ಕ್ಷಿಪನ್ಪುಷ್ಪಾಂಜಲಿಂ ಹರಿಃ ।**
**[೧೪]ವಿಭಜನ್ನಿವ ಪೀತಾವಶೇಷಂ ನಾಟ್ಯರಸಂ ಸ್ವಯಮ್ ॥ ೧೦೯ ॥**

ರಂಗಭೂಮಿಯ ಮಧ್ಯದಲ್ಲಿ ಪುಷ್ಪಾಂಜಲಿಯನ್ನು ಎರಚುತ್ತಿರುವ ಈ ದೇವೇಂದ್ರನು, ತಾನು ಪಾನಮಾಡಿ ಉಳಿದ ನಾಟ್ಯರಸವನ್ನು ದಿಕ್ಕುದಿಕ್ಕುಗಳಲ್ಲಿ ವಿಭಾಗಮಾಡುವವನಂತೆ, ಶೋಭಿಸಿದನು.

**[೧]ಲಲಿತೋದ್ಭಟನೇಪಥ್ಯೋ ಲಸನ್ನಯನಸಂತತಿಃ ।**
**ಸ ರೇಜೇ ಕಲ್ಪಶಾಖೀವ ಸಪ್ರಸೂನಃ ಸಭೂಷಣಃ ॥ ೧೧೦ ॥**

ಮನೋಹರವೂ ವ್ಯಕ್ತವೂ ಆದ ಅಲಂಕಾರವುಳ್ಳವನೂ ಪ್ರಕಾಶಮಾನವಾದ ನೇತ್ರಪಂಕ್ತಿಯುಳ್ಳವನೂ ಆದ ಆ ದೇವೇಂದ್ರನು, ಪುಷ್ಪಗಳೊಡನೆಯೂ ಅಲಂಕಾರ ಗಳೊಡನೆಯೂ ಕೂಡಿಕೊಂಡಿರುವ ಕಲ್ಪವೃಕ್ಷದಂತೆ, ಶೋಭಿಸಿದನು.

**ಪುಷ್ಪಾಂಜಲಿಃ ಪತನ್ರೇಜೇ ಮತ್ತಾಲಿಭಿ[೨]ರನುದ್ರುತಃ ।**
**ನೇತ್ರೌಘ ಇವ [೩]ವೃತ್ರಘ್ನಃ [೪]ಕಲ್ಮಾಷಿತನಭೋಂಗಣಃ ॥ ೧೧೧ ॥**

ಮದಿಸಿದ ಭ್ರಮರಗಳಿಂದ ಸುತ್ತಲ್ಪಟ್ಟು ಬೀಳುತ್ತಿರುವ ಪುಷ್ಪಾಂಜಲಿಯು, ಆಕಾಶಪ್ರದೇಶವನ್ನು ನಾನಾವರ್ಣವನ್ನಾಗಿ ಮಾಡಿದ ದೇವೇಂದ್ರನ ನೇತ್ರಗಳ ಸಮೂಹದಂತೆ, ಪ್ರಕಾಶಿಸಿತು.

**ಪರಿತಃ [೫]ಪರಿತಸ್ತಾರ [೬]ತಾರಾಸ್ಯ ನಯನಾವಲೀ ।**
**ರಂಗಮಾತ್ಮಪ್ರಭೋತ್ಸರ್ಪೈಃ ಶ್ರಿತ್ಯೈರ್ಯವನಿಕಾಶ್ರಿಯಮ್ ॥ ೧೧೨ ॥**

ಈ ದೇವೇಂದ್ರನ ಪ್ರಕಾಶಮಾನವಾದ ನೇತ್ರಗಳ ಪಂಕ್ತಿಯು ಘರದೆಯ ಶೋಭೆಯನ್ನು ಹೊಂದಿರುವ (ಘರದೆಯಂತಿರುವ) ತನ್ನ ಪ್ರಭೆಗಳ ಪ್ರಸರಣೆಗಳಿಂದ ಸುತ್ತಲೂ ರಂಗಭೂಮಿಯನ್ನು ಆಚ್ಛಾದಿಸಿತು.

**[೭]ಸಲಯೈಃ ಪದವಿನ್ಯಾಸೈಃ ಪರಿತೋ ರಂಗಮಂಡಲಮ್ ।**
**[೮]ಪರಿಕ್ರಾಮನ್ನಸೌ ರೇಜೇ [೯]ಮಿಮಾನ ಇವ [೧೦]ಕಾಶ್ಯಪೀಮ್ ॥ ೧೧೩ ॥**

ತಾಳಲಯಸಹಿತವಾದ ಪಾದವಿನ್ಯಾಸಗಳಿಂದ ಮಂಡಲಾಕಾರವಾದ ರಂಗ ಭೂಮಿಯ ಸುತ್ತಲೂ ಸುತ್ತುತ್ತಿರುವ ಈ ದೇವೇಂದ್ರನು, ಭೂಮಿಯನ್ನು ಅಳೆ ಯುವವನಂತೆ, ಶೋಭಿಸಿದನು.

**ಕೃತಪುಷ್ಪಾಂಜಲೇರಸ್ಯ ತಾಂಡವಾರಂಭಸಂಭ್ರಮೇ ।**
**ಪುಷ್ಪವರ್ಷಂ ದಿವೋಮುಂಚನ್ಸುರಾ[೧೧]ಸ್ತದ್ಭಕ್ತಿತೋಷಿತಾಃ ॥ ೧೧೪ ॥**

ಪುಷ್ಪಾಂಜಲಿಯನ್ನು ಮಾಡಿದ ಈ ದೇವೇಂದ್ರನ ತಾಂಡವನರ್ತನಾರಂಭದ ಆತುರದಲ್ಲಿ ದೇವೇಂದ್ರನಿಗೆ ಸ್ವಾಮಿಯಲ್ಲಿರುವ ಭಕ್ತಿಯಿಂದ ಸಂತುಷ್ಟರಾದ ದೇವತೆಗಳು ಅವನ ಮೇಲೆ ಸ್ವರ್ಗದಿಂದ ಪುಷ್ಪವೃಷ್ಟಿಯನ್ನು ಮಾಡಿದರು.

**ತದಾ [೧೨]ಪುಷ್ಕರವಾದ್ಯಾನಿ ಮಂದ್ರಂ ದಧ್ವನು[೧೩]ರಕ್ರಮಾತ್ ।**
**ದಿಕ್ತಟೇಷು ಪ್ರತಿಧ್ವಾನಾನಾತನ್ವಾನಾನಿ ಕೋಟಿಶಃ ॥ ೧೧೫ ॥**

ಆಗ ದಿಕ್ಪ್ರದೇಶಗಳಲ್ಲಿ ಪ್ರತಿಧ್ವನಿಯನ್ನುಂಟುಮಾಡುವ ಅನೇಕ ಚರ್ಮ ವಾದ್ಯಗಳು ಒಂದೇಕಾಲದಲ್ಲಿ ಗಂಭೀರವಾಗಿ ಶಬ್ದಮಾಡಿದುವು.

**ವೀಣಾ ಮಧುರಮಾರೇಣುಃ ಕಲಂ ವಂಶಾ ವಿಸಸ್ವನುಃ ।**
**[೧೪]ಗೇಯಾನ್ಯನುಗತಾನ್ಯೇಷಾಂ ಸಮಂ ತಾಲೈ[೧೫]ರರಾಣಿಷುಃ ॥ ೧೧೬ ॥**

ವೀಣೆಗಳು ಇಂಪಾಗಿ ಶಬ್ದಮಾಡಿದುವು. ಕೊಳಲುಗಳು ಮಧುರವಾಗಿ ಶಬ್ದಮಾಡಿದುವು. ಇವುಗಳ ತಾಳವನ್ನನುಸರಿಸಿ ಗಾಯಕರು ಪದ್ಯಗಳನ್ನು ಹಾಡಿದರು.

---

೧ ರಂಗಪ್ರವೇಶನಂ ನಾಂದೀಮಂಗಲಂ. ೨ ಪ್ರಯುಕ್ತವಾನ್. ೩ ಇಂದ್ರಃ. ೪ ಭೂಮಿಕಾ. ೫ ಮಹಾಬಲಾದಿಃ. ೬ ಅವಧಾನಪರಃ. ೭ ಲಲಿತಭೀಷಣಗರ್ಭಲಾಸ್ಯಂ. ೮ ಪ್ರಥಮೇ. ೯ ಸುರಶ್ರೇಷ್ಠಃ. ೧೦ ಮಂಗಲಾಲಂಕಾರಃ. ೧೧ ನಾಟ್ಯಶಾಸ್ತ್ರಂ. ೧೨ ದೇವೈರ್ವಾಯುಭಿಶ್ಚ. ೧೩ ರಂಗಸ್ಯ ಮಧ್ಯೇ. ೧೪ ದಿಶಿ ದಿಶಿ ವಿಭಾಗೀಕುರ್ವನ್.

೧ ಮನೋಜ್ಞೋಲ್ಲಣಾಲಂಕಾರಃ. ೨ ಅನುಗತಃ. ೩ ಇಂದ್ರಸ್ಯ. ೪ ಕರ್ಬುರಿತಃ. ೫ ಸ್ತ್ಯ್ಾಚ್ಛಾದನೇ ಲಿಟ್. ೬ ಸ್ಫುರಂತೀ. ೭ ತಾಲಲಯೈಸ್ಸಮಂ. ೮ ಪರಿಭ್ರಮನ್. ೯ ಪ್ರಮಾಣಂ ಕುರ್ವನ್. ೧೦ ಪೃಥ್ವೀಂ. ೧೧ ಇಂದ್ರಭಕ್ತ್ಯಾ. ೧೨ ಚರ್ಮಬದ್ಧಮುಖತೂರ್ಯಾಣಿ. ೧೩ ಯುಗಪತ್. ೧೪ ಪ್ರಬಂಧಾಃ. ೧೫ ಗಾನಂ ಚಕ್ರುಃ.

**[೧]ಉಪವಾದಕವಾದ್ಯಾನಿ [೨]ಪರಿವಾದಕವಾದಿತ್ರೈಃ ।**
**ಬಭೂವುಃ [೩]ಸಂಗತಾನ್ಯೇವ [೪]ಸಾಂಗತ್ಯಂ ಹಿ [೫]ಸಯೋನಿಷು ॥ ೧೧೭ ॥**

ಜೊತೆಯಲ್ಲಿ ಬಾರಿಸಲ್ಪಡುವ ವಾದ್ಯಗಳು ಪ್ರಧಾನವಾದ್ಯಗಳೊಡನೆ ಸೇರಿ ಮನೋಹರಗಳಾದುವು. ಸಮಾನಧರ್ಮವುಳ್ಳವರಲ್ಲಿ ಮಿತ್ರತ್ವವು ನ್ಯಾಯವಾದುದಲ್ಲವೇ ?

**[೬]ಕಾಕಲೀಕಲಮಾಮಂದ್ರತಾರ[೭]ಮೂರ್ಛನ[೮]ಮುಜ್ಜಗೇ ।**
**ತದೋ[೯]ಪವೀಣಯಂತೀಭಿಃ ಕಿನ್ನರೀಭಿ[೧೦]ರನುಲ್ಬಣಮ್ ॥ ೧೧೮ ॥**

ಆಗ ವೀಣೆಯೊಡನೆ ಗಾನಮಾಡುತ್ತಿರುವ ಕಿನ್ನರ ಸ್ತ್ರೀಯರು ಗಂಭೀರವೂ ಏರಿಕೆಯೂ ಕ್ರಮಯುಕ್ತವೂ ಆದ ಸಪ್ತಸ್ವರಗಳುಳ್ಳ ಅವ್ಯಕ್ತಮಧುರಧ್ವನಿಯಿಂದ ಸಾವಧಾನವಾಗಿ ಗಾನಮಾಡಿದರು.

**ಧ್ವನದ್ಭಿರ್ಮಧುರಂ[೧೧]ಮೌಖಂ ಸಂಬಂಧಂ ಪ್ರಾಪ್ಯ ಶಿಷ್ಯವತ್ ।**
**ಕೃತಂ [೧೨]ವಂಶೋಚಿತಂ ವಂಶೈಃ ಪ್ರಯೋಗೇ[೧೩]ಷ್ವವಿವಾದಿಭಿಃ ॥ ೧೧೯ ॥**

ಪ್ರಯೋಗಗಳಲ್ಲಿ ಗುರುವಿನೊಡನೆ ವಿವಾದವನ್ನು ಮಾಡದಿರುವವರೂ ಗುರುಮುಖದ ಸಂಬಂಧವನ್ನು ಹೊಂದಿ ಮಧುರವಾಗಿ ಪಠನಮಾಡುವವರೂ ಆದ ಶಿಷ್ಯರು ತಮ್ಮ ಕುಲಕ್ಕೆ ಯೋಗ್ಯವಾದ ಕಾರ್ಯವನ್ನು ಮಾಡುವಂತೆ, ಪ್ರಯೋಗಗಳಲ್ಲಿ ವಿವಾದ(ವೈಪರೀತ್ಯ)ವನ್ನು ಮಾಡದಿರುವುವೂ ಮುಖದ ಸಂಬಂಧವನ್ನು ಹೊಂದಿ ಮಧುರವಾಗಿ ಶಬ್ದಮಾಡುವುವೂ ಆದ ಕೊಳಲುಗಳು ಬಿದಿರಿಗೆ ಯೋಗ್ಯವಾದ ಕಾರ್ಯವನ್ನು ಮಾಡಿದುವು.

**ಪ್ರಯುಜ್ಯ ಮಘವಾ ಶುದ್ಧಂ ಪೂರ್ವರಂಗಮನುಕ್ರಮಾತ್ ।**
**[೧೪]ಕರಣೈ[೧೫]ರಂಗಹಾರೈಶ್ಚ ಚಿತ್ರಂ ಪ್ರಾಯುಂಕ್ತ ತಂ ಪುನಃ ॥ ೧೨೦ ॥**

ದೇವೇಂದ್ರನು ಮೊದಲು ಶುದ್ಧವಾದ ಪೂರ್ವರಂಗವನ್ನು ಪ್ರಯೋಗಿಸಿ ಪುನಃ ಕ್ರಮವಾಗಿ ಹಸ್ತವಿನ್ಯಾಸಗಳಿಂದಲೂ ಅಂಗವಿಕ್ಷೇಪಗಳಿಂದಲೂ ನಾನಾಪ್ರಕಾರವಾಗಿ ಆ ಪೂರ್ವರಂಗವನ್ನು ಪ್ರಯೋಗಿಸಿದನು. (ನಾಟ್ಯದ ಉಪಕ್ರಮಕ್ಕೆ ಪೂರ್ವರಂಗವೆಂದು ಹೆಸರು).

**ಚಿತ್ರೈಶ್ಚ [೧೬]ರೇಚಕೈಃ ಪಾದಕಟೀಕಂಠಕರಾಶ್ರಿತೈಃ ।**
**ನನಾಟ ತಾಂಡವಂ ಶಕ್ರೋ ದರ್ಶಯನ್ರಸಮೂರ್ಜಿತಮ್ ॥ ೧೨೧ ॥**

ದೇವೇಂದ್ರನು ತನ್ನ ಪಾದ ಸೊಂಟ ಕಂಠ ಕೈ ಇವುಗಳ ನಾನಾವಿಧವಾದ ಭ್ರಮಣೆಗಳಿಂದ ಉತ್ತಮವಾದ ರಸವನ್ನು ತೋರಿಸಿ ತಾಂಡವನರ್ತನವನ್ನು ಮಾಡಿದನು.

**[೧೭]ತಸ್ಮಿನ್ಬಾಹುಸಹಸ್ರಾಣಿ ವಿಕೃತ್ಯ ಪ್ರಣೃತ್ಯತಿ[೧೮] ।**
**ಧರಾ ಚರಣವಿನ್ಯಾಸೈಃ [೧೯]ಸ್ಫುಟಂತೀವ ತದಾಚಲತ್ ॥ ೧೨೨ ॥**

ದೇವೇಂದ್ರನು ಸಾವಿರ ಭುಜಗಳನ್ನು ವಿಗುರ್ವಿಸಿ ನರ್ತನವನ್ನು ಮಾಡುತ್ತಿರುವಾಗ ಅವನ ಪಾದವಿನ್ಯಾಸಗಳಿಂದ ಭೂಮಿಯು, ಶೀಳುತ್ತಿದೆಯೋ ಎಂಬಂತೆ, ಚಲಿಸಿತು.

**ಕುಲಾಚಲಾಶ್ಚಲಂತಿ ಸ್ಮ ತೃಣಾನಾಮಿವ ರಾಶಯಃ ।**
**ಅಭೂಜ್ಜಲಧಿರುದ್ವೇಲಃ ಪ್ರಮದಾದಿವ [೨೦]ನಿರ್ಧ್ವನನ್ ॥ ೧೨೩ ॥**

ಕುಲಪರ್ವತಗಳು ಹುಲ್ಲುಗಳ ರಾಶಿಗಳಂತೆ ಚಲಿಸಿದುವು. ಅಧಿಕವಾಗಿ ಶಬ್ದಮಾಡುತ್ತಿರುವ ಸಮುದ್ರವು ಸಂತೋಷದಿಂದಲೋ ಎಂಬಂತೆ, ದಡಮೀರಿತು.

**ಲಸದ್ಬಾಹುರ್ಮಹೋದಗ್ರವಿಗ್ರಹಃ ಸುರನಾಯಕಃ ।**
**ಕಲ್ಪಾಂಘ್ರಿಪ ಇವಾನರ್ತೀಚ್ಚಲದಂಶುಕಭೂಷಣಃ ॥ ೧೨೪ ॥**

ಪ್ರಕಾಶಮಾನವಾದ ಭುಜಗಳುಳ್ಳವನೂ ಅತ್ಯಂತ ಉನ್ನತವಾದ ಶರೀರವುಳ್ಳವನೂ ಚಲಿಸುತ್ತಿರುವ ವಸ್ತ್ರಗಳೂ ಆಭರಣಗಳೂ ಉಳ್ಳವನೂ ಆದ ದೇವೇಂದ್ರನು, ಕಲ್ಪವೃಕ್ಷದಂತೆ, ನರ್ತನವನ್ನು ಮಾಡಿದನು.

**ಚಲತ್ತನ್ಮೌಲಿರತ್ನಾಂಶುಪರಿವೇಷೈರ್ನಭಸ್ಥಲಮ್ ।**
**ತದಾ ವಿದಿದ್ಯುತೇ ವಿದ್ಯುತ್ಸಹಸ್ರೈರಿವ [೧]ಸಂತತಮ್ ॥ ೧೨೫ ॥**

ಆಗ ಚಲಿಸುತ್ತಿರುವ ಆ ದೇವೇಂದ್ರನ ಕಿರೀಟದಲ್ಲಿರುವ ರತ್ನಗಳ ಕಿರಣಗಳ ಮಂಡಲ(ಸಮೂಹ)ಗಳಿಂದ ವ್ಯಾಪ್ತವಾದ ಆಕಾಶವು ಸಾವಿರಾರು ಮಿಂಚುಗಳಿಂದ ವ್ಯಾಪ್ತವಾದಂತೆ ಪ್ರಕಾಶಿಸಿತು.

**[೨]ವಿಕ್ಷಿಪ್ತಾ ಬಾಹು[೩]ವಿಕ್ಷೇಪೈಸ್ತಾರಕಾಃ ಪರಿತೋಭ್ರಮನ್ ।**
**ಭ್ರಮಣಾ[೪]ವಿದ್ಧವಿಚ್ಛಿನ್ನಹಾರಮುಕ್ತಾಫಲಶ್ರಿಯಃ ॥ ೧೨೬ ॥**

ದೇವೇಂದ್ರನ ಭುಜಗಳ ಪ್ರಸರಣೆಗಳಿಂದ (ಕೈಗಳನ್ನು ಚಾಚುವುದರಿಂದ) ಚದರಿದ ನಕ್ಷತ್ರಗಳು ಭ್ರಮಣದಿಂದ ಪ್ರೇರಿತವಾಗಿ ಹರಿದುಹೋದ ಹಾರದ ಮುತ್ತುಗಳ ಶೋಭೆಯನ್ನು ಧರಿಸಿದುವುಗಳಾಗಿ ಸುತ್ತಲೂ ಚಲಿಸಿದುವು.

**ನೃತ್ಯತೋಽಸ್ಯ ಭುಜೋಲ್ಲಾಸೈಃ ಪಯೋದಾಃ [೫]ಪರಿಘಟ್ಟಿತಾಃ ।**
**[೬]ಪಯೋಲವಚ್ಯುತೋ ರೇಜುಃ [೭]ಶುಚೇವ [೮]ಕ್ಷರದಶ್ರವಃ ॥ ೧೨೭ ॥**

ನರ್ತನವನ್ನು ಮಾಡುತ್ತಿರುವ ಈ ದೇವೇಂದ್ರನ ಭುಜಗಳ ಚಲನೆಗಳಿಂದ ಮರ್ದಿಸಲ್ಪಟ್ಟು ಜಲಬಿಂದುಗಳನ್ನು ಸುರಿಯುತ್ತಿರುವ ಮೇಘಗಳು, ಶೋಕದಿಂದ ಕಣ್ಣೀರನ್ನು ಸುರಿಯುವುವುಗಳಂತೆ, ಶೋಭಿಸಿದುವು.

**[೯]ರೇಚಕೇಽಸ್ಯ ಚಲನ್ಮೌಲಿಪ್ರೋಚ್ಚಲನ್ಮಣಿ[೧೦]ರೀತಯಃ ।**
**[೧೧]ವೇಗಾವಿದ್ಧಾಃ ಸಮಂ ಭ್ರೇಮು[೧೨]ರಲಾತವಲಯಾಯಿತಾಃ ॥ ೧೨೮ ॥**

ಈ ದೇವೇಂದ್ರನು ಸುತ್ತುವ ಕಾಲದಲ್ಲಿ ಚಲಿಸುತ್ತಿದ್ದ ಕಿರೀಟದ ದೇದೀಪ್ಯಮಾನವಾದ ರತ್ನಗಳ ಸಾಲುಗಳು ವೇಗದಿಂದ ವಕ್ರಗಳೂ ಬೆಂಕಿಯ ಕೊಳ್ಳಿಯಂತಿರುವುವೂ ಆಗಿ ಒಂದೇಸಲ ತಿರುಗಿದುವು.

**ನೃತ್ತಕ್ಷೋಭಾನ್ಮಹೀಕ್ಷೋಭೇ ಕ್ಷುಭಿತಾ ಜಲರಾಶಯಃ ।**
**ಕ್ಷಾಲಯಂತಿ ಸ್ಮ ದಿಗ್ಭಿತ್ತೀಃ ಪ್ರೋಚ್ಚಲಜ್ಜಲಶೀಕರೈಃ ॥ ೧೨೯ ॥**

ದೇವೇಂದ್ರನ ನರ್ತನದ ಕ್ಷೋಭೆಯಿಂದ ಭೂಮಿಯಲ್ಲಿ ಕ್ಷೋಭೆಯುಂಟಾಗುತ್ತಿರಲು ಅಲ್ಲೋಲಕಲ್ಲೋಲವಾದ ಸಮುದ್ರಗಳು ಮೇಲಕ್ಕೆ ಹಾರುತ್ತಿರುವ ನೀರಿನ ತುಂತುರುಗಳಿಂದ ದಿಕ್ಕುಗಳೆಂಬ ಗೋಡೆಗಳನ್ನು ತೊಳೆದುವು.

**ಕ್ಷಣಾದೇಕಃ ಕ್ಷಣಾ[೧೩]ನ್ನೈಕಃ ಕ್ಷಣಾದ್ವ್ಯಾಪೀ ಕ್ಷಣಾದಣುಃ ।**
**ಕ್ಷಣಾದಾರಾತ್ಕ್ಷಣಾದ್ದೂರೇ ಕ್ಷಣಾದ್ವ್ಯೋಮ್ನಿ ಕ್ಷಣಾದ್ಭುವಿ ॥ ೧೩೦ ॥**

**ಇತಿ ಪ್ರತನ್ವತಾತ್ಮೀಯಂ ಸಾಮರ್ಥ್ಯಂ ವಿಕ್ರಿಯೋತ್ಥಿತಮ್ ।**
**ಇಂದ್ರಜಾಲಮಿವೇಂದ್ರೇಣ ಪ್ರಯುಕ್ತಮಭವತ್ತದಾ ॥ ೧೩೧ ॥**

೧ ಕೋಣವಾದ್ಯಾನಿ. ೨ ಪ್ರಧಾನವಾದ್ಯಂ. ೩ ಸಂಗತಾನಿ ಹೃದಯಂಗಮಾನಿ ವಾ. ೪ ಮಿತ್ರತ್ವಂ. ೫ ಸಮಾನಧರ್ಮವತ್ಸು. ೬ ಕಾಕಲೀ ತು ಕಲೇ ಸೂಕ್ಷ್ಮೇ ಧ್ವನೌ ತು ಮಧುರಾ ಸ್ಫುಟೇ, ಇತ್ಯಮರಃ. ೭ ಕ್ರಮಯುಕ್ತಾಃ ಸ್ವರಾಃ ಸಪ್ತಮೂರ್ಛನಾಃ ಪರಿಕೀರ್ತಿತಾಃ. ೮ ಗೈಶಬ್ದೇ ಕರ್ಮಣಿ ಲಿಟ್. ೯ ವೀಣಯೋಪಗಾಯಂತೀಭಿಃ. ೧೦ ಅನುತ್ಕಟಂ ಯಥಾ ತಥಾ. ೧೧ ಮುಖಾಜ್ಜಾತಂ. ೧೨ ವೇಣೋರನ್ವಯಸ್ಯ ಚೋಚಿತಂ. ೧೩ ವಿವಾದಮಕುರ್ವದ್ಭಿಃ. ೧೪ ಕರನ್ಯಾಸೈಃ. ೧೫ ಅಂಗವಿಕ್ಷೇಪೈಃ. ೧೬ ಭ್ರಮಣೈಃ. ೧೭ ದೇವೇಂದ್ರೇ. ೧೮ ಸತಿ. ೧೯ ವಿದಾರಯಂತೀ. ೨೦ ನಿತರಾಂ ಧ್ವನನ್.

೧ ವಿಸ್ತೃತಂ. ೨ ವಿಪ್ರಕೀರ್ಣಾಃ. ೩ ಪ್ರಸರಣೈಃ. ೪ ಪ್ರೇರಿತಾಃ. ೫ ಮರ್ದಿತಾಃ. ೬ ಜಲಕಣಮುಚಃ. ೭ ಶೋಕೇನ. ೮ ಅಶ್ರುಬಿಂದವಃ. ೯ ಭ್ರಮಣೇ. ೧೦ ಪಙ್ಕ್ತಯಃ. ೧೧ ವೇಗೇನ ವಕ್ರಿತಾಃ. ೧೨ ಕಾಷ್ಠಾಗ್ನೇಃ. ೧೩ ಅನೇಕಃ.

ಆ ನರ್ತನಕಾಲದಲ್ಲಿ ದೇವೇಂದ್ರನು ಕ್ಷಣಕಾಲದಲ್ಲಿ ಒಬ್ಬನೂ ಕ್ಷಣಕಾಲದಲ್ಲಿ ಅನೇಕನೂ ಕ್ಷಣಕಾಲದಲ್ಲಿ ವ್ಯಾಪಕನೂ ಕ್ಷಣಕಾಲದಲ್ಲಿ ಅಣುಸ್ವರೂಪನೂ, ಕ್ಷಣಕಾಲದಲ್ಲಿ ಸಮೀಪದಲ್ಲಿ, ಕ್ಷಣಕಾಲದಲ್ಲಿ ದೂರದಲ್ಲಿ, ಕ್ಷಣಕಾಲದಲ್ಲಿ ಆಕಾಶದಲ್ಲಿ, ಕ್ಷಣಕಾಲದಲ್ಲಿ ಭೂಮಿಯಲ್ಲಿ ಈ ಪ್ರಕಾರವಾಗಿ ವಿಕ್ರಿಯೆಯಿಂದುಂಟಾದ ತನ್ನ ಸಾಮರ್ಥ್ಯವನ್ನು ವಿಸ್ತರಿಸುವವನೂ ಆಗಿ ಇಂದ್ರಜಾಲವನ್ನು ಪ್ರಯೋಗಿಸಿದನೋ ಎಂಬಂತೆ ತೋರುತ್ತಿದ್ದನು.

**ನೇಟುರಪ್ಸರಸಃ ಶಕ್ರಭುಜಶಾಖಾಸು ಸಸ್ಮಿತಾಃ ।**
**ಸಲೀಲಭ್ರೂಲತೋತ್ಕ್ಷೇಪಮಂಗಹಾರ್ಯೈಃ [೧]ಸಚಾರಿಭಿಃ ॥ ೧೩೨ ॥**

ದೇವೇಂದ್ರನ ಭುಜಗಳಲ್ಲಿ ಮುಗುಳುನಗೆಯೊಡಗೂಡಿದ ಅಪ್ಸರಸ್ತ್ರೀಯರು ಪಾದವಿನ್ಯಾಸದ ಭೇದಸಹಿತವಾದ ಅಂಗವಿಕ್ಷೇಪಗಳಿಂದ ಲೀಲೆಯುಳ್ಳ ಹುಬ್ಬುಗಳನ್ನು ಹಾರಿಸುತ್ತ ನರ್ತನವನ್ನು ಮಾಡಿದರು.

**[೨]ವರ್ದ್ಧಮಾನಲಯೈಃ ಕಾಶ್ಚಿತ್ಕಾಶ್ಚಿ[೩]ತ್ತಾಂಡವಲಾಸ್ಯಕೈಃ ।**
**ನನೃತುಃ ಸುರನರ್ತಕ್ಯಶ್ಚಿತ್ರೈ[೪]ರಭಿನಯೈಸ್ತದಾ ॥ ೧೩೩ ॥**

ಆಗ ಕೆಲವು ಅಪ್ಸರಸ್ತ್ರೀಯರು ವೃದ್ಧಿಹೊಂದುತ್ತಿರುವ ಲಯಗಳಿಂದಲೂ ಕೆಲವು ನರ್ತಕಿಯರು ತಾಂಡವನರ್ತನಗಳಿಂದಲೂ ಕೆಲವರು ನಾನಾವಿಧವಾದ ಅಭಿನಯಗಳಿಂದಲೂ ನರ್ತನವನ್ನು ಮಾಡಿದರು.

**ಕಾಶ್ಚಿದೈರಾವತೀಂ [೫]ಪಿಂಡಿಮೈಂದ್ರೀಂ[೬]ಬಧ್ವಾಮರಾಂಗನಾಃ ।**
**ಪ್ರಾನರ್ತಿಷುಃ ಪ್ರವೇಶೈಶ್ಚ ನಿಷ್ಕ್ರಮೈಶ್ಚ ನಿಯಂತ್ರಿತೈಃ ॥ ೧೩೪ ॥**

ಕೆಲವು ದೇವಸ್ತ್ರೀಯರು ಐರಾವತಗಜದ ಶರೀರವನ್ನೂ ಇಂದ್ರನ ಶರೀರವನ್ನೂ ವಿಗುರ್ವಿಸಿ ನಾಟ್ಯಶಾಸ್ತ್ರೋಕ್ತವಾದ ಪ್ರವೇಶಗಳಿಂದಲೂ ನಿರ್ಗಮನಗಳಿಂದಲೂ ನರ್ತನವನ್ನು ಮಾಡಿದರು.

**ಕಲ್ಪದ್ರುಮಸ್ಯ ಶಾಖಾಸು ಕಲ್ಪವಲ್ಲ್ಯ ಇವೋದ್ಗತಾಃ ।**
**ರೇಜಿರೇ ಸುರರಾಜಸ್ಯ ಬಾಹುಶಾಖಾಸು [೭]ತಾಸ್ತದಾ ॥ ೧೩೫ ॥**

ಆಗ ದೇವೇಂದ್ರನ ಶಾಖೆಯಂತಿರುವ ಭುಜಗಳಲ್ಲಿ ನರ್ತನಸ್ತ್ರೀಯರು ಕಲ್ಪವೃಕ್ಷದ ಶಾಖೆಗಳಲ್ಲಿ ಮೇಲಕ್ಕೆದ್ದಿರುವ ಕಲ್ಪಲತೆಗಳಂತೆ, ಪ್ರಕಾಶಿಸಿದರು.

**ಸ ತಾಭಿಸ್ಸಮಮಾರಬ್ಧ[೮]ರೇಚಕೋ ವ್ಯರುಚತ್ತರಾಮ್ ।**
**[೯]ಚಕ್ರಾಂದೋಲ ಇವ ಶ್ರೀಮಾಂಶ್ಚಲನ್ಮಕುಟಶೇಖರಃ ॥ ೧೩೬ ॥**

ಚಲಿಸುತ್ತಿರುವ ಕಿರೀಟದ ಶಿಖರವುಳ್ಳವನೂ ಸಂಪದ್ಯುಕ್ತನೂ ಆದ ದೇವೇಂದ್ರನು ಆ ನರ್ತನಸ್ತ್ರೀಯರೊಡನೆ ಸುತ್ತುವುದಕ್ಕೆ ಆರಂಭಿಸಿ, ಚಕ್ರವು ತಿರುಗುವಂತೆ, ಅಧಿಕವಾಗಿ ಪ್ರಕಾಶಿಸಿದನು.

**ಸಹಸ್ರಾಕ್ಷ [೧೦]ಸಮುತ್ಫುಲ್ಲವಿಲಸ[೧೧]ತ್ಪಂಕಜಾಕರೇ ।**
**[೧೨]ತಾಃ ಪದ್ಮಿನ್ಯ ಇವಾಭೂವನ್ಸ್ಮೇರವಕ್ತ್ರಾಂಬುಜಶ್ರಿಯಃ ॥ ೧೩೭ ॥**

ವಿಕಸಿತವೂ ಪ್ರಕಾಶಮಾನವೂ ಆದ ಸಾವಿರ ನೇತ್ರಗಳೆಂಬ ಕಮಲಗಳುಳ್ಳ ದೇವೇಂದ್ರನೆಂಬ ಸರೋವರದಲ್ಲಿ ನಗುಮುಖಗಳೆಂಬ ಕಮಲಗಳ ಶೋಭೆಯುಳ್ಳ ಆ ನರ್ತನಸ್ತ್ರೀಯರು ಕಮಲಲತೆಗಳಂತಿದ್ದರು.

**ಸ್ಮಿತಾಂಶುಭಿ[೧೩]ರ್ವಿಭಿನ್ನಾನಿ ತದ್ವಕ್ತ್ರಾಣಿ ಚಕಾಶಿರೇ ।**
**[೧೪]ವಿಕಸ್ವರಾಣಿ ಪದ್ಮಾನಿ [೧೫]ಪ್ಲುತಾನೀವಾಮೃತ[೧೬]ಪ್ಲವೈಃ ॥ ೧೩೮ ॥**

೧ ಪದನ್ಯಾಸಭೇದಸಹಿತೈಃ. ೨ ಸರ್ವಾಭಿನಯಸಾಮ್ಯೈಃ. ೩ ಲಲಿತಭೀಷಣಾಗರ್ಭಲಾಸ್ಯಂ. ೪ ಹಸ್ತಾಭಿನಯೈಃ. ೫ ಸಂಘಾತಗ್ರಾಸಯೋಃ ಪಿಂಡಿರ್ದ್ವಯೋಃ ಪುಂಸಿ ಕಲೇಬರೇ. ೬ ವಿಗುರ್ವಣಾಂ ಕೃತ್ವಾ. ೭ ನರ್ತಕ್ಯಃ. ೮ ಭ್ರಮಣಃ. ೯ ಚಕ್ರಭ್ರಮಣಃ. ೧೦ ವಿಕಸತ್. ೧೧ ಪದ್ಮಸರೋವರೇ. ೧೨ ನರ್ತಕ್ಯಃ. ೧೩ ಯುಕ್ತಾನಿ. ೧೪ ವಿಕಸನಶೀಲಾನಿ. ೧೫ ಧೌತಾನಿ. ೧೬ ಪ್ರವಾಹೈಃ.

ಮಂದಹಾಸದ ಕಾಂತಿಗಳಿಂದ ಯುಕ್ತವಾದ ಆ ಸ್ತ್ರೀಯರ ಮುಖಗಳು ಅರಳಿರುವುವೂ ಅಮೃತಪ್ರವಾಹಗಳಿಂದ ನೆನಸಲ್ಪಟ್ಟುವೂ ಆದ ಕಮಲಗಳೋಪಾದಿಯಲ್ಲಿ, ಪ್ರಕಾಶಿಸಿದುವು.

**ಕುಲಶೈಲಾಯಿತಾನಸ್ಯ [೧]ಭುಜಾನಧ್ಯಾಸ್ಯ ಕಾಶ್ಚನ ।**
**ರೇಜಿರೇ ಪರಿನೃತ್ಯಂತ್ಯೋ ಮೂರ್ತಿಮತ್ಯ ಇವ ಶ್ರಿಯಃ ॥ ೧೩೯ ॥**

ಕುಲಪರ್ವತಗಳಂತಿರುವ ದೇವೇಂದ್ರನ ಭುಜಗಳಲ್ಲಿದ್ದು ನರ್ತನವನ್ನು ಮಾಡುವ ಕೆಲವು ದೇವಸ್ತ್ರೀಯರು, ಆಕಾರವನ್ನು ಧರಿಸಿರುವ ಲಕ್ಷ್ಮಿಗಳಂತೆ, ಪ್ರಕಾಶಿಸಿದರು.

**ನೇಟುರೈರಾವತಾಲಾನಸ್ತಂಭಯುಷ್ಟಿ[೨]ಸಮಾಯತಾನ್ ।**
**ಅಧ್ಯಾಸೀನಾ ಭುಜಾನಸ್ಯ ವೀರಲಕ್ಷ್ಮ್ಯ ಇವಾಪರಾಃ ॥ ೧೪೦ ॥**

ಐರಾವತಗಜವನ್ನು ಕಟ್ಟುವ ಸ್ತಂಭದಂತೆ ದೀರ್ಘವಾದ ದೇವೇಂದ್ರನ ಭುಜಗಳಲ್ಲಿದ್ದು ನರ್ತನಮಾಡುವ ದೇವಸ್ತ್ರೀಯರು, ಬೇರೆ ವೀರಲಕ್ಷ್ಮಿಗಳೋ ಎಂಬಂತೆ, ನರ್ತನವನ್ನು ಮಾಡಿದರು.

**ಹಾರಮುಕ್ತಾಫಲೇಷ್ವನ್ಯಾಃ ಸಂಕ್ರಾಂತ[೩]ಪ್ರತಿಯಾತನಾಃ ।**
**ನನೃತುರ್ಬಹುರೂಪಿಣ್ಯೋ ವಿದ್ಯಾ ಇವ [೪]ಬಿಡೌಜಸಃ ॥ ೧೪೧ ॥**

ಕಂಠದಲ್ಲಿರುವ ಹಾರದ ಮುತ್ತುಗಳಲ್ಲಿ ಪ್ರತಿಬಿಂಬಿಸಿರುವ ಕೆಲವು ದೇವಸ್ತ್ರೀಯರು, ದೇವೇಂದ್ರನ ನಾನಾರೂಪಗಳನ್ನು ಧರಿಸಿರುವ ಬಹುರೂಪಿಣೀ ವಿದ್ಯೆಗಳೋಪಾದಿಯಲ್ಲಿ ನರ್ತನವನ್ನು ಮಾಡಿದರು.

**ಕರಾಂಗುಲೀಷು ಶಕ್ರಸ್ಯ ನ್ಯಸ್ಯಂತ್ಯಃ [೫]ಪಾದಪಲ್ಲವಾನ್ ।**
**ಸಲೀಲಮನಟನ್ಕಾಶ್ಚಿತ್ಸೂಚೀನಾಟ್ಯಮಿವಾ[೬]ಸ್ಥಿತಾಃ ॥ ೧೪೨ ॥**

ದೇವೇಂದ್ರನ ಕೈಬೆರಳುಗಳಲ್ಲಿ ತಳಿರಿನಂತಿರುವ ತಮ್ಮ ಪಾದಗಳನ್ನಿರಿಸಿ ನರ್ತನವನ್ನು ಮಾಡುವ ಕೆಲವು ದೇವಸ್ತ್ರೀಯರು, ಸೂಜಿಯ ಅಗ್ರಭಾಗದಲ್ಲಿದ್ದು ನರ್ತನವನ್ನು ಮಾಡುವವರಂತೆ, ಲೀಲೆಯಾಗಿ ನರ್ತನವನ್ನು ಮಾಡಿದರು.

**ಭ್ರೇಮುಃ ಕರಾಂಗುಲೀ[೭]ರನ್ಯಾಃ [೮]ಸುಪರ್ವಾಸ್ತ್ರಿದಿವೇಶಿನಃ ।**
**ವಂಶಯಷ್ಟೀರಿವಾರುಹ್ಯ ತದಗ್ರಾರ್ಪಿತನಾಭಯಃ ॥ ೧೪೩ ॥**

ಬೇರೆಕೆಲವು ಅಪ್ಸರಸ್ತ್ರೀಯರು ದೇವೇಂದ್ರನ ಸುಂದರವಾದ ಗೆಣ್ಣುಗಳುಳ್ಳ ಕೈಬೆರಳುಗಳನ್ನು, ಸುಂದರವಾದ ಗೆಣ್ಣುಗಳುಳ್ಳ ಬಿದಿರುಗಳನ್ನು ಹತ್ತುವಂತೆ, ಹತ್ತಿ ಆ ಬೆರಳುಗಳ ಅಗ್ರಭಾಗದಲ್ಲಿ ಹೊಕ್ಕಳನ್ನಿರಿಸಿ ತಿರುಗಿದರು. ಗಣೆಯ ಮರದಲ್ಲಿ ತಿರುಗುವಂತೆ ತಿರುಗಿದರೆಂದು ಭಾವವು.

**ಪ್ರತಿಬಾಹ್ವಮರೇಂದ್ರಸ್ಯ ಸನ್ನಟಂತ್ಯೋಮರಾಂಗನಾಃ ।**
**ಸಯತ್ನಂ ಸಂಚರಂತಿ ಸ್ಮ [೯]ಪಂಚಯಂತ್ಯೋ[೧೦]ಕ್ಷಿಸಂಕುಲಮ್॥ ೧೪೪ ॥**

ದೇವೇಂದ್ರನ ಪ್ರತಿಯೊಂದು ಭುಜದಲ್ಲಿಯೂ ನರ್ತನವನ್ನು ಮಾಡುವ ದೇವತಾಸ್ತ್ರೀಯರು ತಮ್ಮ ನೇತ್ರಗಳ ಸಮೂಹವನ್ನು ವಿಸ್ತರಿಸಿ ಯತ್ನದಿಂದ ಸಂಚರಿಸಿದರು.

**[೧೧]ಸ್ಫುಟನ್ನಿವ ಕಟಾಕ್ಷೇಷು ಕಪೋಲೇಷು ಸ್ಫುರನ್ನಿವ ।**
**ಪ್ರಸರನ್ನಿವ ಪಾದೇಷು ಕರೇಷು ವಿಲಸನ್ನಿವ ॥ ೧೪೫ ॥**

**ವಿಹಸನ್ನಿವ ವಕ್ತ್ರೇಷು ನೇತ್ರೇಷು ವಿಕಸನ್ನಿವ ।**
**ರಜ್ಯನ್ನಿವಾಂ[೧೨]ಗರಾಗೇಷು ನಿಮಜ್ಜನ್ನಿವ ನಾಭಿಷು ॥ ೧೪೬ ॥**

೧ ಭುಜೇಷು. ೨ ದೀರ್ಘಾನ್. ೩ ಪ್ರತಿಬಿಂಬಾಃ. ೪ ಇಂದ್ರಸ್ಯ. ೫ ಕ್ರಮಪಲ್ಲವಾನಿತ್ಯಪಿ ಪಾಠಃ. ೬ ಆಶ್ರಿತಾ ಇತ್ಯಪಿ ಪಾಠಃ. ೭ ನರ್ತಕ್ಯಃ. ೮ ಸುಗ್ರಂಥೀಃ. ೯ ವಂಚಯಂತ್ಯ ಇತ್ಯಪಿ ಪಾಠಃ. ೧೦ ದೃಷ್ಟಿಸಮೂಹಂ. ೧೧ ಸ್ಫುರನ್ನಿತ್ಯಪಿ ಪಾಠಃ. ೧೨ ಅನುಲೇಪನದ್ರವ್ಯೇಷು.

**ಚಲನ್ನಿವ ಕಟೀಷ್ವಾಸಾಂ ಮೇಖಲಾಸು ಸ್ಖಲನ್ನಿವ ।**
**ತದಾ ನಾಟ್ಯರಸೋಂಗೇಷು ವವೃಧೇ ವರ್ದ್ಧಿತೋತ್ಸವಃ ॥ ೧೪೭ ॥**

ನರ್ತನವನ್ನು ಮಾಡುವಾಗ ನಾಟ್ಯರಸವು ದೇವಸ್ತ್ರೀಯರ ಕಡೆಕಣ್ಣುಗಳಲ್ಲಿ ಉಕ್ಕಿಬರುವಂತೆಯೂ ಕೆನ್ನೆಗಳಲ್ಲಿ ಪ್ರಕಾಶಿಸುವಂತೆಯೂ ಪಾದಗಳಲ್ಲಿ ಹರಡಿಕೊಂಡಿರುವಂತೆಯೂ ಕೈಗಳಲ್ಲಿ ವಿಲಾಸಮಾಡುವಂತೆಯೂ ಮುಖಗಳಲ್ಲಿ ನಗುವಂತೆಯೂ ಕಣ್ಣುಗಳಲ್ಲಿ ವಿಕಾಸಿಸುವಂತೆಯೂ ಅಂಗಲೇಪನ ದ್ರವ್ಯಗಳಲ್ಲಿ ಅನುರಕ್ತವಾಗಿರುವಂತೆಯೂ ನಾಭಿಗಳಲ್ಲಿ ಮುಳುಗಿರುವಂತೆಯೂ ಸೊಂಟಗಳಲ್ಲಿ ಚಲಿಸುವಂತೆಯೂ ಒಡ್ಯಾಣ(ಡಾಬು)ಗಳಲ್ಲಿ ಜಾರಿಬೀಳುವಂತೆಯೂ ಸರ್ವಾವಯವಗಳಲ್ಲಿಯೂ ವೃದ್ಧಿಯನ್ನು ಹೊಂದಿತು.

**ಪ್ರತ್ಯಂಗಮಮರೇಂದ್ರಸ್ಯ ಯಾಶ್ಚೇಷ್ಟಾ ನೃತ್ಯತೋಭವನ್ ।**
**ತಾ ಏವ ತೇಷು [1]ಪಾತ್ರೇಷು ಸಂವಿಭಕ್ತಾ ಇವಾ[2]ರುಚನ್ ॥ ೧೪೮ ॥**

ದೇವೇಂದ್ರನ ಪ್ರತಿಯೊಂದು ಅವಯವದಲ್ಲಿಯೂ ನರ್ತನದಿಂದುಂಟಾದ ಚೇಷ್ಟೆಗಳೇ ಆ ನರ್ತನಪಾತ್ರಗಳಲ್ಲಿ ವಿಭಾಗಿಸಲ್ಪಟ್ಟುವೋ ಎಂಬಂತೆ ಪ್ರಕಾಶಿಸಿದುವು.

**[3]ರಸಾಸ್ತ ಏವ ತೇ [4]ಭಾವಾಸ್ತೇ[5]ನುಭಾವಾಸ್ತ[6]ದಿಂಗಿತಮ್ ।**
**ಅನುಪ್ರವೇಶಿತೋ ನೂನಮಾತ್ಮಾ [7]ತೇಷ್ವಮರೇಶಿನಾ ॥ ೧೪೯ ॥**

ಆ ಪಾತ್ರ(ನರ್ತಕಿ)ಗಳಲ್ಲಿ ಶೃಂಗಾರಮೊದಲಾದ ರಸಗಳೂ ಮನಸ್ಸಿನ ಉನ್ನತಿಗಳೂ ಭಾವಬೋಧಕವಾದ ವ್ಯಾಪಾರಗಳೂ ಮನೋವಿಕಾರವೂ ದೇವೇಂದ್ರನ ಸಂಬಂಧವಾದುವುಗಳೇ ಆಗಿದ್ದುದರಿಂದ ನಿಜವಾಗಿ ದೇವೇಂದ್ರನು ತಾನೇ ಆ ಪಾತ್ರಗಳಲ್ಲಿ ಪ್ರವೇಶಮಾಡಿದ್ದನು. ಹಾಗೆ ಕಾಣುತ್ತಿದ್ದಿತೆಂದು ಭಾವವು.

**[8]ಸೋಭಾತ್ಸ್ವಭುಜದಂಡೇಷು ನರ್ತಯನ್ಸುರನರ್ತಕೀಃ ।**
**ಶಾರವೀಃ [9]ಪುತ್ರಿಕಾ ಯಂತ್ರಫಲಕೇಷ್ವಿವ [10]ಯಾಂತ್ರಿಕಃ ॥ ೧೫೦ ॥**

ತನ್ನ ಭುಜಗಳಲ್ಲಿ ಆ ದೇವನರ್ತಕಿಯರನ್ನು ನರ್ತನಮಾಡಿಸುವ ದೇವೇಂದ್ರನು ಮರದ ಬೊಂಬೆಗಳನ್ನು ಯಂತ್ರದ ಹಲಿಗೆಗಳಲ್ಲಿ ಕುಣಿಸುತ್ತಿರುವ ಸೂತ್ರಧಾರನಂತೆ, ಶೋಭಿಸಿದನು.

**ಊರ್ಧ್ವ[11]ಮುಚ್ಚಾಲಯನ್ವ್ಯೋಮ್ನಿ ನಟಂತೀರ್ದರ್ಶಯನ್ಪುನಃ ।**
**ಕ್ಷಣಾತ್ಕುರ್ವನ್ನದೃಶ್ಯಾ[12]ಸ್ತಾಃ ಸೋಭೂನ್ಮಾಹೇಂದ್ರಜಾಲಿಕಃ ॥ ೧೫೧ ॥**

ದೇವೇಂದ್ರನು ಆ ನರ್ತಕಿಯರನ್ನು ಆಕಾಶದಲ್ಲಿ ಮೇಲೆಹಾರಿಸಿ ಪುನಃ ನರ್ತನಮಾಡುವವರನ್ನಾಗಿ ತೋರಿಸಿ ಒಂದು ಕ್ಷಣಕಾಲದಲ್ಲಿ ಅದೃಶ್ಯರನ್ನಾಗಿ ಮಾಡುವವನಾಗಿ ಇಂದ್ರಜಾಲಿಕನಂತೆ ಆದನು.

**ಇತಶ್ಚೇತಃ ಸ್ವದೋ[13]ರ್ಜಾಲೇ ಗೂಢಂ ಸಂಚಾರಯನ್ನಟೀಃ ।**
**ಸ [14]ಭವಾನ್ ಹಸ್ತಸಂಚಾರಮಿವಾಸೀದಾಚರನ್ಹರಿಃ ॥ ೧೫೨ ॥**

ನರ್ತಕಿಯರನ್ನು ತನ್ನ ಭುಜಗಳ ಸಮೂಹದಲ್ಲಿ ಗುಪ್ತವಾಗಿ ಇತ್ತಿತ್ತ ಸಂಚಾರಮಾಡಿಸುವ ಪೂಜ್ಯನಾದ ಆ ದೇವೇಂದ್ರನು ಹಸ್ತಸಂಚಾರವನ್ನು ಮಾಡುವವನಂತಿದ್ದನು. ಕೈಚಾತುರ್ಯವಿದ್ಯೆಯನ್ನು ಮಾಡುವ ಇಂದ್ರಜಾಲಿಕನಂತಿದ್ದನೆಂದು ಭಾವವು.

**ನರ್ತಯನ್ನೇಕತೋ [15]ಯೂನೋ ಯುವತೀರನ್ಯತೋ ಹರಿಃ ।**
**ಭುಜಶಾಖಾಸು ಸೋನರ್ತೀದ್ದರ್ಶಿತಾದ್ಭುತವಿಕ್ರಿಯಃ ॥ ೧೫೩ ॥**

ದೇವೇಂದ್ರನು ತನ್ನ ಭುಜಗಳೆಂಬ ಶಾಖೆಗಳಲ್ಲಿ ಒಂದುಕಡೆಯಲ್ಲಿ ಯುವಕರಾದ ದೇವತೆಗಳನ್ನೂ ಇನ್ನೊಂದುಕಡೆಯಲ್ಲಿ ಯುವತಿಯರಾದ ದೇವಸ್ತ್ರೀಯರನ್ನೂ ನರ್ತನಮಾಡಿಸುವವನಾಗಿ ಅದ್ಭುತವಾದ ತನ್ನ ವಿಕ್ರಿಯೆಯನ್ನು ತೋರಿಸಿ ನರ್ತನಮಾಡಿದನು.

೧ ನಾಟ್ಯೇಷ್ವಧಿಕೃತಂ ಪಾತ್ರಂ. ೨ ಭಾಂತಿ ಸ್ಮ. ೩ ಶೃಂಗಾರಾದಯಃ. ೪ ಚಿತ್ತಸಮುನ್ನತಯಃ. ೫ ಭಾವಬೋಧಕಾಃ. ೬ ವಿಕೃತಿಃ. ೭ ಪಾತ್ರೇಷು. ೮ ತರುಸಂಬಂಧಿನೀಃ. ೯ ಪಾಂಚಾಲಿಕಾಃ. ೧೦ ಸೂತ್ರಧಾರಃ. ೧೧ ಉದ್ಧಾಯನಂ ಕುರ್ವನ್. ೧೨ ನರ್ತಕೀಃ. ೧೩ ಸಮೂಹೇ. ೧೪ ಪೂಜ್ಯಃ. ೧೫ ಕುಮಾರವಯಸ್ಕಾನ್.

**ನೇಟುಸ್ತದ್ಭುಜರಂಗೇಷು ತೇ ಚ ತಾಶ್ಚ [1]ಪರಿಕ್ರಮೈಃ ।**
**ಸುತ್ರಾಮಾ ಸೂತ್ರಧಾರೋಭೂನ್ನಾಟ್ಯವೇದವಿದಾಂವರಃ ॥ ೧೫೪ ॥**

ಆ ತರುಣರಾದ ದೇವತೆಗಳೂ ದೇವಿಯರೂ ದೇವೇಂದ್ರನ ಭುಜಗಳೆಂಬ ರಂಗಸ್ಥಳಗಳಲ್ಲಿ ಪಾದಸಂಚಾರಗಳಿಂದ ನರ್ತನವನ್ನು ಮಾಡಿದರು. ಆಗ ನಾಟ್ಯಶಾಸ್ತ್ರವನ್ನು ತಿಳಿದವರಲ್ಲಿ ಶ್ರೇಷ್ಠನಾದ ದೇವೇಂದ್ರನು ಸೂತ್ರಧಾರನಾಗಿದ್ದನು.

**[2]ದೀಪ್ತೋ[3]ದ್ಧತರಸಪ್ರಾಯಂ ನೃತ್ತಂ ತಾಂಡವಮೇಕತಃ ।**
**[4]ಸುಕುಮಾರಪ್ರಯೋಗಾಢ್ಯಂ ಲಲಿತಂ ಲಾಸ್ಯಮನ್ಯತಃ ॥ ೧೫೫ ॥**

ಒಂದು ಕಡೆಯಲ್ಲಿ ಸ್ಪಷ್ಟವೂ ಭಯಂಕರವೂ ಆದ ರಸದ ಮಯವಾಗಿರುವ ತಾಂಡವನರ್ತನವಾಯಿತು. ಇನ್ನೊಂದುಕಡೆಯಲ್ಲಿ ಮೃದುಪ್ರಯೋಗವುಳ್ಳ ಸುಂದರವಾದ ನರ್ತನವು ನಡೆಯಿತು.

**[5]ವಿಭಿನ್ನರಸಮಿತ್ಯುಚ್ಚೈರ್ದರ್ಶಯನ್ನಾಟ್ಯಮದ್ಭುತಮ್ ।**
**ಸಾಮಾಜಿಕಜನೇ ಶಕ್ರಃ ಪರಾಂ ಪ್ರೀತಿಮಜೀಜನತ್ ॥ ೧೫೬ ॥**

ಈ ಪ್ರಕಾರವಾಗಿ ನಾನಾರಸಗಳುಳ್ಳುದೂ ಬಹಳ ಆಶ್ಚರ್ಯಕರವೂ ಆದ ನಾಟ್ಯವನ್ನು ತೋರಿಸಿ ದೇವೇಂದ್ರನು ಸಭಿಕರಲ್ಲಿ ಅತ್ಯಂತ ಪ್ರೀತಿಯನ್ನುಂಟುಮಾಡಿದನು. ಸಭಿಕರಿಗೆ ಬಹಳ ಪ್ರೀತಿಯನ್ನುಂಟುಮಾಡಿದನೆಂದರ್ಥವು.

**ಗಂಧರ್ವನಾಯಕಾರಬ್ಧವಿವಿಧಾತೋದ್ಯ[6]ಸಂವಿಧಿಃ ।**
**ಆನಂದನೃತ್ಯಮಿತ್ಯುಚ್ಚೈರ್ಮಘವಾ ನಿರವರ್ತಯತ್ ॥ ೧೫೭ ॥**

ಹಿಂದೆಹೇಳಿದ ರೀತಿಯಾಗಿ ದೇವೇಂದ್ರನು ಗಂಧರ್ವದೇವತೆಗಳಿಂದ ಆರಂಭಿಸಲ್ಪಟ್ಟ ನಾನಾಪ್ರಕಾರವಾದ ವಾದ್ಯಸಾಮಗ್ರಿಗಳುಳ್ಳವನಾಗಿ ಆನಂದನರ್ತನವನ್ನು ನೆರವೇರಿಸಿದನು.

**[7]ಸಕಂಸತಾಲ[8]ಮುದ್ವೇಣು [9]ವಿತತಧ್ವನಿಸಂಕುಲಮ್ ।**
**[10]ಸಾಪ್ಸರ[11]ಸ್ಸರಸಂ ನೃತ್ತಂ ತದುದ್ಯಾನಮಿವಾದ್ಯುತತ್ ॥ ೧೫೮ ॥**

ಕಂಚಿನ ತಾಳಸಹಿತವೂ ಉತ್ಕೃಷ್ಟವಾದ ಕೊಳಲುಳ್ಳುದೂ ತಮ್ಮಟೆಮೊದಲಾದ ವಾದ್ಯಧ್ವನಿಯಿಂದ ನಿಬಿಡವೂ ದೇವಸ್ತ್ರೀಸಹಿತವೂ ಶೃಂಗಾರಮೊದಲಾದ ರಸಸಹಿತವೂ ಆದ ಆ ನರ್ತನವು, ನವಿಲುಸಹಿತವೂ ತಾಲವೃಕ್ಷಸಹಿತವೂ ಉನ್ನತವಾದ ಬಿದಿರುಗಳುಳ್ಳುದೂ ವಿಸ್ತಾರವಾದ ಶಬ್ದದಿಂದ ವ್ಯಾಪ್ತವೂ ಜಲಭರಿತವಾದ ಸರೋವರಗಳುಳ್ಳುದೂ ರಸಯುಕ್ತವೂ ಆದ ಉದ್ಯಾನದಂತೆ, ಪ್ರಕಾಶಿಸಿತು.

**ನಾಭಿರಾಜಃ ಸಮಂ ದೇವ್ಯಾ ದೃಷ್ಟ್ವಾ ತನ್ನಾಟ್ಯಮದ್ಭುತಮ್ ।**
**ವಿಸಿಸ್ಮಿಯೇ ಪರಾಂ ಶ್ಲಾಘಾಂ ಪ್ರಾಪಚ್ಚ ಸುರಸತ್ತಮೈಃ ॥ ೧೫೯ ॥**

ನಾಭಿರಾಜನು ಮರುದೇವಿಯೊಡನೆ ಆಶ್ಚರ್ಯಕರವಾದ ಆ ನಾಟ್ಯವನ್ನು ನೋಡಿ ಆಶ್ಚರ್ಯಪಟ್ಟನು. ದೇವೇಂದ್ರರು ಈ ದಂಪತಿಗಳನ್ನು ಬಹಳವಾಗಿ ಶ್ಲಾಘಿಸಿದರು.

**ವೃಷಭೋಯಂ ಜಗಜ್ಜ್ಯೇಷ್ಠೋ ವರ್ಷಿಷ್ಯತಿ ಜಗದ್ಧಿತಮ್ ।**
**ಧರ್ಮಾಮೃತಮಿತೀಂದ್ರಾಸ್ತಮಕಾರ್ಷುರ್ವೃಷಭಾಹ್ವಯಮ್ ॥ ೧೬೦ ॥**

೧ ಪದಸಂಚಾರೈಃ. ೨ ಉಲ್ಬಣಃ. ೩ ದಾರುಣಃ. ೪ ಮೃದುಪ್ರಯೋಗಃ. ೫ ನಾನಾರಸಂ. ೬ ಸಾಮಗ್ರಿಕಃ. ೭ ಕಾಂಸ್ಯತಾಲಸಹಿತಂ ಪಕ್ಷೇ ಸಮಯೂರಂ ಸತಾಲವೃಕ್ಷಂ. ೮ ಉತ್ಕೃಷ್ಟವಾಸಾದಿ ಪಕ್ಷೇ ಉನ್ನತವಂಶಂ. ೯ ಪಟಹಾದಿವಾದ್ಯಧ್ವನಿಸಂಕೀರ್ಣಂ ಪಕ್ಷೇ ವಿಸ್ತೃತಧ್ವನಿಸಂಕೀರ್ಣಂ. ೧೦ ದೇವಸ್ತ್ರೀಸಹಿತಂ ಪಕ್ಷೇ ಜಲಭರಿತಸರೋವರಸಹಿತಂ. ೧೧ ಶೃಂಗಾರಾದಿಯುಕ್ತಂ ಪಕ್ಷೇ ರಸಯುಕ್ತಂ.

ಜಗತ್ತಿಗೆ ಜ್ಯೇಷ್ಠನಾದ ಈ ವೃಷಭಸ್ವಾಮಿಯು ಲೋಕಕ್ಕೆ ಹಿತಕರವಾದ ಧರ್ಮವೆಂಬ ಅಮೃತವನ್ನು ವರ್ಷಿಸುವನೆಂದು ತಿಳಿದು ದೇವೇಂದ್ರರು ಆ ಸ್ವಾಮಿಗೆ ''ವೃಷಭ'' ನೆಂದು ಹೆಸರನ್ನಿಟ್ಟರು.

**ವೃಷೋ ಹಿ [೧]ಭಗವಾನ್ಧರ್ಮಸ್ತೇನ [೨]ಯದ್ಭಾತಿ ತೀರ್ಥಕೃತ್ ।**
**ತತೋಽಯಂ ವೃಷಭಸ್ವಾಮೀ[೩]ತ್ಯಾಹ್ವಾಸ್ತೈನಂ ಪುರಂದರಃ ॥ ೧೬೧ ॥**

ಪೂಜ್ಯವಾದ ಧರ್ಮಕ್ಕೆ ವೃಷವೆಂದು ಹೆಸರು. ಅಂತಹ ವೃಷದಿಂದ ಈ ತೀರ್ಥಂಕರರು ಶೋಭಿಸುವುದರಿಂದ ದೇವೇಂದ್ರನು ಇವರನ್ನು ವೃಷಭಸ್ವಾಮಿಯೆಂದು ಕರೆದನು.

**ಸ್ವರ್ಗಾವತರಣೇ ದೃಷ್ಟಃ ಸ್ವಪ್ನೇಽಸ್ಯ ವೃಷಭೋ ಯತಃ ।**
**ಜನನ್ಯಾ ತದಯಂ ದೇವೈರಾಹೂತೋ ವೃಷಭಾಖ್ಯಯಾ ॥ ೧೬೨ ॥**

ಈ ಸ್ವಾಮಿಯು ಸ್ವರ್ಗದಿಂದ ಅವತರಿಸುವ ಕಾಲದಲ್ಲಿ ಇವರ ತಾಯಿಯಾದ ಮರುದೇವಮ್ಮನವರು ಮೊದಲನೆಯ ಸ್ವಪ್ನದಲ್ಲಿ ವೃಷಭ(ಗೂಳಿ-ಹೋರಿ)ವನ್ನು ನೋಡಿದುದರಿಂದಲೂ ದೇವತೆಗಳು ಈ ಸ್ವಾಮಿಯನ್ನು ವೃಷಭನೆಂಬ ಹೆಸರಿನಿಂದ ಕರೆದರು.

**ಪುರುಹೂತಃ ಪುರುಂ ದೇವಮಾಹ್ವಯನ್ನಾಖ್ಯಯಾನಯಾ ।**
**ಪುರುಹೂತ ಇತಿಖ್ಯಾತಿಂ ಬಭಾರಾನ್ವರ್ಥತಾಂ ಗತಾಮ್ ॥ ೧೬೩ ॥**

ದೇವೇಂದ್ರನು ಸ್ವಾಮಿಯನ್ನು ಪುರುವೆಂಬ ಹೆಸರಿನಿಂದ ಕರೆದುದರಿಂದ ಪುರುಹೂತನೆಂಬ ಸಾರ್ಥಕವಾದ ಪ್ರಸಿದ್ಧಿಯನ್ನು ಹೊಂದಿದನು.

**[೪]ತತೋಽಸ್ಯ [೫]ಸವಯೋರೂಪವೇಷಾನ್ಸುರಕುಮಾರಕಾನ್ ।**
**[೬]ನಿರೂಪ್ಯ ಪರಿಚರ್ಯಾಯೈ ದಿವಂ ಜಗ್ಮುರ್ದ್ಯುನಾಯಕಾಃ ॥ ೧೬೪ ॥**

ತರುವಾಯ ದೇವೇಂದ್ರರು ಈ ಸ್ವಾಮಿಗೆ ಸಮಾನವಾದ ವಯಸ್ಸು ರೂಪ ಆಭರಣ ಇವುಗಳುಳ್ಳ ದೇವಕುಮಾರರನ್ನು ಸ್ವಾಮಿಯ ಸೇವೆಗೋಸ್ಕರ ಸ್ಥಾಪಿಸಿ ಸ್ವರ್ಗಕ್ಕೆ ಹೊರಟುಹೋದರು.

**ಧಾತ್ರ್ಯೋ ನಿಯೋಜಿತಾಶ್ಚಾಸ್ಯ ದೇವ್ಯಃ ಶಕ್ರೇಣ ಸಾದರಮ್ ।**
**ಮಜ್ಜನೇ ಮಂಡನೇ [೭]ಸ್ತನ್ಯೇ ಸಂಸ್ಕಾರೇ ಕ್ರೀಡನೇಽಪಿ ಚ ॥ ೧೬೫ ॥**

ಈ ಜಿನಬಾಲಕನ ಸ್ನಾನ ಅಲಂಕಾರ ಸ್ತನ್ಯವನ್ನು ಕೊಡುವ ವಿಧಿ ಅಂಗಸಂಸ್ಕಾರ ಕ್ರೀಡಾ ಮೊದಲಾದ ಕಾರ್ಯಗಳಿಗೋಸ್ಕರ ದೇವೇಂದ್ರನು ಪ್ರೀತಿಯಿಂದ ದೇವಸ್ತ್ರೀಯರನ್ನು ಉಪಮಾತೃ(ಸಾಕುವತಾಯಿ)ಗಳನ್ನಾಗಿ ನಿಯಮಿಸಿದನು.

**ತತೋಽಸೌ ಸ್ಮಿತಮಾತನ್ವನ್ಸಂಸರ್ಪನ್ಮಣಿಭೂಮಿಷು ।**
**ಪಿತ್ರೋರ್ಮುದಂ ತತಾನಾದ್ಯೇ ವಯಸ್ಯದ್ಭುತಚೇಷ್ಟಿತಃ ॥ ೧೬೬ ॥**

ತರುವಾಯ ಮಂದಹಾಸವನ್ನು ಮಾಡುತ್ತ ರತ್ನಖಚಿತವಾದ ಭೂಮಿಗಳಲ್ಲಿ ಹರಿದಾಡುವ ಈ ಜಿನಬಾಲಕನು ಬಾಲ್ಯವಯಸ್ಸಿನಲ್ಲಿ ಆಶ್ಚರ್ಯಕರವಾದ ಚೇಷ್ಟೆಗಳುಳ್ಳವನಾಗಿ ತಾಯಿತಂದೆಗಳಿಗೆ ಆನಂದವನ್ನುಂಟಮಾಡಿದನು.

**ಜಗದಾನಂದಿ ನೇತ್ರಾಣಾಮುತ್ಸವಪ್ರದಮೂರ್ಜಿತಮ್ ।**
**[೮]ಕಲೋಜ್ಜ್ವಲಂ ತದಾಸ್ಯಾಸೀಚ್ಛೈಶವಂ ಶಶಿನೋ ಯಥಾ ॥ ೧೬೭ ॥**

ಜಗತ್ತಿಗೆ ಆನಂದವನ್ನುಂಟುಮಾಡುವುದೂ ಜನರ ನೇತ್ರಗಳಿಗೆ ಉತ್ಸವವನ್ನುಂಟುಮಾಡುವುದೂ ವೃದ್ಧಿಹೊಂದುತ್ತಿರುವುದೂ ಕಲೆಗಳಿಂದ ಪ್ರಕಾಶಮಾನವೂ ಆದ ಈ ಸ್ವಾಮಿಯ ಬಾಲ್ಯಾವಸ್ಥೆಯು, ಚಂದ್ರನ ಬಾಲ್ಯಾವಸ್ಥೆಯಂತೆ, ಇದ್ದಿತು.

೧ ಪೂಜ್ಯಃ. ೨ ಕಾರಣಾತ್. ೩ ಆಹ್ವಯತಿ ಸ್ಮ. ೪ ಅನಂತರಂ. ೫ ಸಮಾನಪ್ರಾಯರೂಪಾಭರಣಾನ್. ೬ ಉಕ್ತ್ವಾ, ಸ್ಥಾಪಯಿತ್ವೇತ್ಯರ್ಥಃ. ೭ ಸ್ತನದಾಯಿಕಾವಿಧೌ. ೮ ಕಲಾಭಿರುಜ್ಜ್ವಲಂ.

**[೧]ಮುಗ್ಧಸ್ಮಿತಮಭೂದಸ್ಯ ಮುಖೇಂದೌ ಚಂದ್ರಿಕಾಮಲಮ್ ।**
**ತೇನ ಪಿತ್ರೋರ್ಮನಸ್ತೋಷಜಲಧಿರ್ವವೃಧೇ ತರಾಮ್ ॥ ೧೬೮ ॥**

ಈ ಜಿನಬಾಲಕನ ಚಂದ್ರನಂತಿರುವ ಮುಖದಲ್ಲಿ ಬೆಳದಿಂಗಳಿನಂತೆ ನಿರ್ಮಲವೂ ಮನೋಹರವೂ ಆದ ಮಂದಹಾಸವುಂಟಾಯಿತು. ಆ ಮಂದಹಾಸದಿಂದ ತಾಯಿತಂದೆಗಳ ಮನಸ್ಸಂತೋಷವೆಂಬ ಸಮುದ್ರವು ಅಧಿಕವಾಗಿ ವೃದ್ಧಿಯನ್ನು ಹೊಂದಿತು.

**[೨]ಗೀತಬಂಧಃ ಸರಸ್ವತ್ಯಾ ಲಕ್ಷ್ಮ್ಯಾಃ ಹಸಿತವಿಭ್ರಮಃ ।**
**ಕೀರ್ತಿವಲ್ಲ್ಯಾ ವಿಕಾಸೋಽಸ್ಯ ಮುಖೇ ಮುಗ್ಧಸ್ಮಿಯೋಽಭವತ್ ॥ ೧೬೯ ॥**

ಈ ವೃಷಭಸ್ವಾಮಿಯ ಮುಖದಲ್ಲಿ ಉಂಟಾಗುತ್ತಿದ್ದ ಮಂದಹಾಸವು ಸರಸ್ವತಿಯ ಗೀತರಚನೆಯಂತೆಯೂ ಲಕ್ಷ್ಮೀದೇವಿಯ ಹಾಸ್ಯದ ವಿಲಾಸದಂತೆಯೂ ಕೀರ್ತಿಯೆಂಬ ಲತೆಯ ವಿಕಾಸದಂತೆಯೂ ಇದ್ದಿತು.

**ಶ್ರೀಮನ್ಮುಖಾಂಬುಜೇಽಸ್ಯಾಸೀತ್ಕ್ರಮಾನ್ಮ[೩]ನ್ಮನಭಾರತೀ ।**
**ಸರಸ್ವತೀವ [೪]ತದ್ಬಾಲ್ಯಮನುಕರ್ತುಂ[೫]ತದಾ ಶ್ರಿತಾ ॥ ೧೭೦ ॥**

ಈ ಸ್ವಾಮಿಯ ಶೋಭಾಯಮಾನವಾದ ಮುಖಕಮಲದಲ್ಲಿ ಕ್ರಮವಾಗಿ ಹೊರಟ ಅವ್ಯಕ್ತವಾದ ವಚನವು ಸಾಕ್ಷಾತ್ ಸರಸ್ವತಿಯು ಆ ಜಿನಬಾಲಕನ ಬಾಲ್ಯವನ್ನು ಅನುಕರಣಮಾಡುವುದಕ್ಕೋಸ್ಕರ ಬಾಲ್ಯತನವನ್ನು ಹೊಂದಿದಳೋ ಎಂಬಂತೆ, ಇದ್ದಿತು.

**ಸ್ಖಲತ್ಪದಂ ಶನೈರಿಂದ್ರನೀಲಭೂಮಿಷು ಸಂಚರನ್ ।**
**ಸ ರೇಜೇ ವಸುಧಾಂ ರಕ್ತೈರಬ್ಜೈ[೬]ರುಪಹರನ್ನಿವ ॥ ೧೭೧ ॥**

ಇಂದ್ರನೀಲದ ಭೂಮಿಗಳಲ್ಲಿ ಜಾರುತ್ತಿರುವ ಹೆಜ್ಜೆಗಳಿಂದ ಮೆಲ್ಲನೆ ಸಂಚರಿಸುತ್ತಿರುವ ಆ ಜಿನಬಾಲಕನು, ಕೆಂದಾವರೆಪುಷ್ಪಗಳಿಂದ ಭೂಮಿಗೆ ಕೈಗಾಣಿಕೆಯನ್ನರ್ಪಿಸುವವನಂತೆ, ಶೋಭಿಸುತ್ತಿದ್ದನು.

**[೭]ರತ್ನಪಾಂಸುಷು ಚಿಕ್ರೀಡ ಸ ಸಮಂ ಸುರದಾರಕೈಃ ।**
**ಪಿತ್ರೋರ್ಮನಸಿ ಸಂತೋಷಮಾತನ್ವನ್ಲಲಿತಾಕೃತಿಃ ॥ ೧೭೨ ॥**

ಮನೋಹರವಾದ ಆಕಾರವುಳ್ಳ ಆ ಜಿನಬಾಲಕನು ತಾಯಿತಂದೆಗಳ ಮನಸ್ಸಿನಲ್ಲಿ ಆನಂದವನ್ನುಂಟುಮಾಡುವವನಾಗಿ ದೇವಕುಮಾರರೊಡನೆ ರಂಗವಲ್ಲಿಯ ರತ್ನಧೂಳುಗಳಲ್ಲಿ ಕ್ರೀಡಿಸಿದನು.

**ಪ್ರಜಾನಾಂ [೮]ದಧದಾನಂದಂ ಗುಣೈರಾಹ್ಲಾದಿಭಿರ್ನಿಜೈಃ ।**
**ಕೀರ್ತಿಜ್ಯೋತ್ಸ್ನಾಪರೀತಾಂಗಃ ಸ ಬಭೌ ಬಾಲಚಂದ್ರಮಾಃ ॥ ೧೭೩ ॥**

ಆಹ್ಲಾದವನ್ನುಂಟುಮಾಡುವ ತನ್ನ ಗುಣಗಳಿಂದ ಪ್ರಜೆಗಳಿಗೆ ಆನಂದವನ್ನುಂಟುಮಾಡುವ ಆ ಜಿನಬಾಲಕನು ಕೀರ್ತಿಯೆಂಬ ಬೆಳದಿಂಗಳಿಂದ ಆವರಿಸಲ್ಪಟ್ಟ ದೇಹವುಳ್ಳವನಾಗಿ, ಬಾಲಚಂದ್ರನಂತೆ, ಶೋಭಿಸಿದನು.

**ಬಾಲಾವಸ್ಥಾಮತೀತಸ್ಯ ತಸ್ಯಾಭೂದ್ರುಚಿರಂ [೯]ವಪುಃ ।**
**[೧೦]ಕೌಮಾರಂ [೧೧]ದೇವನಾಥಾನಾಮರ್ಚಿತಸ್ಯ ಮಹೌಜಸಃ ॥ ೧೭೪ ॥**

ದೇವೇಂದ್ರರಿಂದ ಪೂಜಿಸಲ್ಪಟ್ಟವನೂ ಮಹಾತೇಜಸ್ವಿಯೂ ಬಾಲ್ಯಾವಸ್ಥೆಯನ್ನು ಕಳೆದವನೂ ಆದ ಆ ವೃಷಭಸ್ವಾಮಿಯ ಕುಮಾರಸಂಬಂಧಿಯಾದ ದೇಹವು ಅತ್ಯಂತ ಮನೋಹರವಾಗಿದ್ದಿತು. ಸ್ವಾಮಿಯು ಕೌಮಾರಾವಸ್ಥೆಯಲ್ಲಿ ಬಹಳ ಮನೋಹರರಾಗಿದ್ದರೆಂದು ಭಾವವು.

೧ ಮನೋಜ್ಞಮಂದಹಾಸಂ. ೨ ಪೀಠಬಂಧ ಇತ್ಯಪಿ ಪಾಠಃ. ೩ ಅವ್ಯಕ್ತವಾಕ್. ೪ ಕುಮಾರಸ್ಯ ಬಾಲ್ಯಂ. ೫ ತಥೇತ್ಯಪಿ ಪಾಠಃ. ೬ ಉಪಹಾರಂ ಕುರ್ವನ್ನಿವ. ೭ ರಂಗವಲ್ಲೀರತ್ನಧೂಲಿಷು. ೮ ಕುರ್ವನ್. ೯ ವಯ ಇತ್ಯಪಿ ಪಾಠಃ. ೧೦ ಕುಮಾರಸಂಬಂಧಿ. ೧೧ ದೇವೇಂದ್ರೈಃ.

**ವಪುಷೋ [೧]ವೃದ್ಧಿಮನ್ವಸ್ಯ ಗುಣಾ ವವೃಧಿರೇ ವಿಭೋಃ ।**
**ಶಶಾಂಕಮಂಡಲಸ್ಯೇವ ಕಾಂತಿದೀಪ್ತ್ಯಾದಯೋಽನ್ವಹಮ್ ॥ ೧೭೫ ॥**

ಚಂದ್ರಮಂಡಲದಂತೆ ಈ ವೃಷಭಸ್ವಾಮಿಯ ಕಾಂತಿದೀಪ್ತಿ ಮೊದಲಾದ ಗುಣಗಳು ಸ್ವಾಮಿಯ ಶರೀರವು ವೃದ್ಧಿಹೊಂದಿದಹಾಗೆಯೇ ಸದಾ ವೃದ್ಧಿಯನ್ನು ಹೊಂದುತ್ತಿದ್ದುವು.

**ವಪುಃ ಕಾಂತಂ ಪ್ರಿಯಾ ವಾಣೀ ಮಧುರಂ ತಸ್ಯ [೨]ವೀಕ್ಷಿತಮ್ ।**
**ಜಗತಾಂ ಪ್ರೀತಿಮಾತೇನುಃ ಸಸ್ಮಿತಂ ಚ [೩]ಪ್ರಜಲ್ಪಿತಮ್ ॥ ೧೭೬ ॥**

ಆ ಸ್ವಾಮಿಯ ಸುಂದರವಾದ ಶರೀರವೂ ಪ್ರಿಯವಾದ ವಚನವೂ ಮಧುರವಾದ ನೋಟವೂ ಮಂದಹಾಸಯುಕ್ತವಾದ ಸಂಭಾಷಣೆಯೂ ಲೋಕಕ್ಕೆ ಸಂತೋಷ ವನ್ನುಂಟುಮಾಡಿದುವು.

**ಕಲಾಶ್ಚ ಸಕಲಾಸ್ತಸ್ಯ ವೃದ್ಧೌ ವೃದ್ಧಿಮುಪಾಯಯುಃ ।**
**ಇಂದೋರಿವ ಜಗಚ್ಚೇತೋ[೪]ನಂದನಸ್ಯ ಜಗತ್ಪತೇಃ ॥ ೧೭೭ ॥**

ಲೋಕಕ್ಕೆ ಆನಂದವನ್ನುಂಟುಮಾಡುವ ಚಂದ್ರನ ಕಲೆಗಳು ಚಂದ್ರನೊಡನೆ ವೃದ್ಧಿಹೊಂದುವಂತೆ ಜನರ ಮನಸ್ಸಿಗೆ ಆನಂದವನ್ನುಂಟುಮಾಡುವ ಲೋಕಾಧಿ ಪತಿಯಾದ ಆ ವೃಷಭಸ್ವಾಮಿಯ ಕಲೆಗಳೆಲ್ಲ (ವಿದ್ಯೆಗಳೆಲ್ಲ) ಸ್ವಾಮಿಯೊಡನೆ ವೃದ್ಧಿಯನ್ನು ಹೊಂದಿದುವು.

**ಮತಿಶ್ರುತೇ ಸಹೋತ್ಪನ್ನೇ ಜ್ಞಾನಂ ಚಾವಧಿಸಂಜ್ಞಕಮ್ ।**
**[೫]ತತೋಽಬೋಧಿ ಸ ನಿಃಶೇಷಾ ವಿದ್ಯಾ ಲೋಕಸ್ಥಿತೀರಪಿ ॥ ೧೭೮ ॥**

ಮತಿಶ್ರುತಾವಧಿಗಳೆಂಬ ಮೂರು ಜ್ಞಾನಗಳು ಸ್ವಾಮಿಯು ಹುಟ್ಟುವಾಗಲೇ ಇದ್ದುವು. ಆ ಜ್ಞಾನದಿಂದ ಸಮಸ್ತವಿದ್ಯೆಗಳನ್ನೂ ಲೋಕಸ್ಥಿತಿಗಳನ್ನೂ ಸ್ವಾಮಿಯು ತಿಳಿದರು.

**[೬]ವಿಶ್ವವಿದ್ಯೇಶ್ವರಸ್ಯಾಸ್ಯ ವಿದ್ಯಾಃ ಪರಿಣತಾಃ ಸ್ವಯಮ್ ।**
**ನನು ಜನ್ಮಾಂತರಾಭ್ಯಾಸಃ ಸ್ಮೃತಿಂ ಪುಷ್ಣಾತಿ ಪುಷ್ಕಲಾಮ್ ॥ ೧೭೯ ॥**

ಕೇವಲಜ್ಞಾನಾಧಿಪತಿಯಾದ ಈ ವೃಷಭಸ್ವಾಮಿಗೆ ವಿದ್ಯೆಗಳೆಲ್ಲ ತಾವಾಗಿ ಪ್ರಾಪ್ತವಾದುವು. ಇದು ನ್ಯಾಯವಾಗಿದೆ. ಜನ್ಮಾಂತರದ ಅಭ್ಯಾಸವು ಸಂಪೂರ್ಣ ವಾದ ಸ್ಮರಣೆಯನ್ನುಂಟುಮಾಡುವುದು.

**ಕಲಾಸು ಕೌಶಲಂ ಶ್ಲಾಘ್ಯಂ ವಿಶ್ವವಿದ್ಯಾಸು ಪಾಟವಮ್ ।**
**ಕ್ರಿಯಾಸು [೭]ಕರ್ಮಠತ್ವಂ ಚ ಸ ಭೇಜೇ ಶಿಕ್ಷಯಾ ವಿನಾ ॥ ೧೮೦ ॥**

ಆ ವೃಷಭಸ್ವಾಮಿಯು ಶಿಕ್ಷಣೆ(ಉಪದೇಶ)ಯಿಲ್ಲದೆ ಕಲೆಗಳಲ್ಲಿ ಶ್ಲಾಘ್ಯವಾದ ಕುಶಲತೆಯನ್ನೂ ಸಮಸ್ತವಿದ್ಯೆಗಳಲ್ಲಿ ನಿಪುಣತೆಯನ್ನೂ ಕಾರ್ಯಗಳಲ್ಲಿ ಕರ್ಮ ಶೂರತ್ವವನ್ನೂ ಹೊಂದಿದರು.

**[೮]ವಾಙ್ಮಯಂ ಸಕಲಂ ತಸ್ಯ [೯]ಪ್ರತ್ಯಕ್ಷಂ [೧೦]ವಾಕ್ಪಭೋರಭೂತ್ ।**
**[೧೧]ಯೇನ ವಿಶ್ವಸ್ಯ ಲೋಕಸ್ಯ [೧೨]ವಾಚಸ್ಪತ್ಯಾದಭೂದ್ಗುರುಃ ॥ ೧೮೧ ॥**

ವಾಚಸ್ಪತಿಯಾದ ಆ ವೃಷಭಸ್ವಾಮಿಗೆ ಸಮಸ್ತವಾದ ವಾಗ್ಜಾಲ(ಶಾಸ್ತ್ರ)ವು ಪ್ರತ್ಯಕ್ಷವಾಗಿದ್ದಿತು. ಸ್ವಾಮಿಯು ಹಾಗೆ ವಾಚಸ್ಪತಿಯಾಗಿದ್ದುದರಿಂದ ಲೋಕಕ್ಕೆಲ್ಲ ಗುರುವಾದರು.

**ಪುರಾಣಃ ಸ ಕವಿರ್ವಾಗ್ಮೀ ಗಮಕಶ್ಚೇತಿ ನೋಚ್ಯತೇ ।**
**ಕೋಷ್ಠಬುದ್ಧ್ಯಾದಯೋ ಬೋಧಾ ಯೇನ ತಸ್ಯ ನಿಸರ್ಗಜಾಃ ॥ ೧೮೨ ॥**

೧ ಅಭಿವೃದ್ಧ್ಯಾ ಸಹ. ೨ ಆಲೋಕನಂ. ೩ ಪ್ರಜಲ್ಪನಂ. ೪ ಆಹ್ಲಾದನಕರಸ್ಯ. ೫ ಜ್ಞಾನಾತ್. ೬ ಕೇವಲಜ್ಞಾನೇಶ್ವರಸ್ಯ. ೭ ಕರ್ಮಶೂರತ್ವಂ. ೮ ವಾಗ್ಜಾಲಂ. ೯ ಸ್ಪಷ್ಟಂ. ೧೦ ವಾಕ್ಪತೇಃ. ೧೧ ವಾಙ್ಮಯೇನ. ೧೨ ವಾಕ್ಪತಿತ್ವಾತ್.

ವೃಷಭಸ್ವಾಮಿಯು ಪ್ರಾಚೀನಕವಿಯೂ ವಾಚಾಳರೂ ಬೋಧಕರೂ ಆಗಿ ದ್ದುದು ಮಾತ್ರವಲ್ಲದೆ ಆ ಸ್ವಾಮಿಗೆ ಕೋಷ್ಠಬುದ್ಧಿ ಮೊದಲಾದ ಬುದ್ಧಿವಿಶೇಷಗಳೂ ಸ್ವಾಭಾವಿಕವಾಗಿ ಉಂಟಾದುವು.

**ಕ್ಷಾಯಿಕಂ ದರ್ಶನಂ ತಸ್ಯ ಚೇತೋಮಲಮಪಾಹರತ್ ।**
**ವಾಙ್ಮಲಂ ಚ ನಿಸರ್ಗೇಣ ಪ್ರಸೃತಾಸ್ಯ ಸರಸ್ವತೀ ॥ ೧೮೩ ॥**

ಕ್ಷಾಯಿಕಸಮ್ಯಗ್ದರ್ಶನವು ಆ ವೃಷಭಸ್ವಾಮಿಯ ಮನಸ್ಸಿನ ಕಲ್ಮಷವನ್ನು ನಾಶಮಾಡಿತು. ಸ್ವಭಾವದಿಂದ ಹೊರಟ ಇವರ ವಾಣಿಯು ವಚನದೋಷವನ್ನು ನಾಶಮಾಡಿತು.

**ಶ್ರುತಂ ನಿಸರ್ಗತೋಽಸ್ಯಾಸೀ[೧]ತ್ಪಸೂತಃ ಪ್ರಶಮಃ ಶ್ರುತಾತ್ ।**
**[೨]ತತೋ ಜಗದ್ಧಿತಾಸ್ಯಾಸೀಚ್ಚೇಷ್ಟಾ ಸಾಪಾಲಯತ್ಪ್ರಜಾಃ ॥ ೧೮೪ ॥**

ಈ ಸ್ವಾಮಿಗೆ ಸ್ವಭಾವದಿಂದಲೇ ಶಾಸ್ತ್ರಜ್ಞಾನವುಂಟಾಗಿದ್ದಿತು. ಆ ಶಾಸ್ತ್ರದಿಂದ ಶಾಂತಿಯುಂಟಾಯಿತು. ಆ ಶಾಂತಿಯಿಂದ ಲೋಕಕ್ಕೆ ಹಿತಕರವಾದ ವ್ಯಾಪಾರ (ಚೇಷ್ಟೆ)ವುಂಟಾಯಿತು. ಆ ವ್ಯಾಪಾರವು ಪ್ರಜೆಗಳನ್ನು ಕಾಪಾಡಿತು.

**ಯಥಾ ಯಥಾಸ್ಯ ವರ್ಧಂತೇ ಗುಣಾಂಶಾ ವಪುಷಾ ಸಮಮ್ ।**
**ತಥಾ ತಥಾಸ್ಯ ಜನತಾ ಬಂಧುತಾ ಚಾಗಮನ್ಮುದಮ್ ॥ ೧೮೫ ॥**

ಈ ವೃಷಭಸ್ವಾಮಿಯ ಗುಣಗಳೂ ಶರೀರವೂ ವೃದ್ಧಿಹೊಂದಿದಹಾಗೆಲ್ಲ ಜನರೂ ಬಂಧುಗಳೂ ಆನಂದವನ್ನು ಹೊಂದಿದರು.

**ಸ ಪಿತ್ರೋಃ ಪರಮಾನಂದಂ ಬಂಧುತಾಯಾಶ್ಚ [೩]ನಿರ್ವೃತಿಮ್ ।**
**ಜಗಜ್ಜನಸ್ಯ ಸಂಪ್ರೀತಿಂ ವರ್ಧಯನ್ನಮವರ್ಧತ ॥ ೧೮೬ ॥**

ಆ ವೃಷಭಸ್ವಾಮಿಯು ತಾಯಿತಂದೆಗಳಿಗೆ ಅತ್ಯಂತಾನಂದವನ್ನೂ ಬಂಧುಜನ ಗಳಿಗೆ ಸುಖವನ್ನೂ ಲೋಕದ ಜನರಿಗೆ ಬಹಳ ಪ್ರೀತಿಯನ್ನೂ ವೃದ್ಧಿಹೊಂದಿ ಸುವವರಾಗಿ ಬೆಳೆಯುತ್ತಿದ್ದರು.

**ಪರಮಾಯುರಥಾಸ್ಯಾಭೂಚ್ಚರಮಂ ಬಿಭ್ರತೋ ವಪುಃ ।**
**ಸಂಪೂರ್ಣಾ ಪೂರ್ವಲಕ್ಷಾಣಾಮಶೀತಿಶ್ಚತುರುತ್ತರಾ ॥ ೧೮೭ ॥**

ಅಂತಿಮಶರೀರವನ್ನು ಧರಿಸಿರುವ ಈ ವೃಷಭಸ್ವಾಮಿಗೆ ಎಂಬತ್ತನಾಲ್ಕುಲಕ್ಷ ಪೂರ್ವ ಪರಮಾಯುಷ್ಯವಿದ್ದಿತು.

**[೪]ದೀರ್ಘದರ್ಶೀ ಸುದೀರ್ಘಾಯುರ್ದೀರ್ಘಬಾಹುಶ್ಚ [೫]ದೀರ್ಘದೃಕ್ ।**
**ಸೋ[೬]ದೀರ್ಘಸೂತ್ರೋ ಲೋಕಾನಾಮಭಜತ್ಸೂತ್ರಧಾರತಾಮ್ ॥**

ಬಹುದೂರವಿಚಾರಮಾಡಿ ಮಾತನಾಡುವವರೂ ದೀರ್ಘಾಯುಷ್ಯವುಳ್ಳವರೂ ದೀರ್ಘವಾದ ಬಾಹುಗಳುಳ್ಳವರೂ ವಿಶಾಲವಾದ ನೇತ್ರಗಳುಳ್ಳವರೂ ಶೀಘ್ರವಾಗಿ ಕಾರ್ಯವನ್ನು ಮಾಡುವವರೂ ಆದ ಆ ವೃಷಭಸ್ವಾಮಿಯು ಲೋಕಕ್ಕೆ ಸೂತ್ರ ಧಾರತ್ವವನ್ನು ಹೊಂದಿದರು. ಲೋಕದ ಜನರಿಗೆ ಸೂತ್ರಧಾರಪ್ರಾಯರಾಗಿದ್ದರೆಂದು ಭಾವವು.

**ಕದಾಚಿ[೭]ಲ್ಲಿಪಿಸಂಖ್ಯಾನ[೮]ಗಾಂಧರ್ವಾದಿ[೯]ಕಲಾಗಮಮ್ ।**
**[೧೦]ಸ್ವಭ್ಯಸ್ತಪೂರ್ವಮಭ್ಯಸ್ಯನ್ಸ್ವಯ[೧೧]ಮಭ್ಯಾಸಯತ್ಪರಾನ್ ॥ ೧೮೯ ॥**

ಕೆಲವು ಸಮಯದಲ್ಲಿ ಆ ಸ್ವಾಮಿಯು ಪೂರ್ವದಲ್ಲಿ ಅಭ್ಯಾಸಮಾಡಿದ್ದ ಗಣಿತ ಸಂಗೀತ ಮೊದಲಾದ ಕಲಾಶಾಸ್ತ್ರವನ್ನು ತಾವು ಅಭ್ಯಾಸಮಾಡುವವರಾಗಿ ಬೇರೆ ಯವರಿಗೂ ಅಭ್ಯಾಸಮಾಡಿಸಿದರು.

೧ ಉತ್ಪನ್ನಃ. ೨ ಪ್ರಶಮಾತ್. ೩ ಸುಖಂ. ೪ ಸಮ್ಯಗ್ವಿಚಾರ್ಯ ವಕ್ತಾ. ೫ ವಿಶಾಲಾಕ್ಷಃ. ೬ ಅವಿಲಂಬ್ಯ ಕಾರ್ಯಕಾರೀ. ೭ ಗಣಿತಂ. ೮ ಸಂಗೀತಂ. ೯ ಕಲಾಶಾಸ್ತ್ರಂ. ೧೦ ಸುಷ್ಠು ಪೂರ್ವಸ್ಮಿನ್ನಭ್ಯಸ್ತಂ. ೧೧ ಅಭ್ಯಾಸಯನ್ನಿತ್ಯಪಿ ಪಾಠಃ.

[೧]ಛಂದೋವಿಚಿತ್ಯಲಂಕಾರಪ್ರಸ್ತಾರಾದಿ[೨]ವಿವೇಚನೈಃ ।
ಕದಾಚಿದ್ಭಾವಯನ್ಗೋಷ್ಠೀಶ್ಚಿತ್ರಾದ್ಯೈಶ್ಚ [೩]ಕಲಾಗಮೈಃ ॥ ೧೯೦ ॥

ಕದಾಚಿ[೪]ತ್ಪದಗೋಷ್ಠೀಭಿಃ ಕಾವ್ಯಗೋಷ್ಠೀಭಿರನ್ಯದಾ ।
ವಾವದೂಕೈಃ ಸಮಂ ಕೈಶ್ಚಿಜ್ಜಲ್ಪಗೋಷ್ಠೀಭಿರೇಕದಾ ॥ ೧೯೧ ॥

[೫]ಕರ್ಹಿಚಿದ್ಗೀತಗೋಷ್ಠೀಭಿರ್ನೃತ್ತಗೋಷ್ಠೀಭಿರೇಕದಾ ।
ಕದಾಚಿದ್ವಾದ್ಯಗೋಷ್ಠೀಭಿರ್ವೀಣಾಗೋಷ್ಠೀಭಿರನ್ಯದಾ ॥ ೧೯೨ ॥

ಕರ್ಹಿಚಿದ್ಬರ್ಹಿರೂಪೇಣ ನಟತಃ [೬]ಸುರಚೇಟಕಾನ್ ।
ನಾಟಯನ್ಕರತಾಲೇನ ಲಯಮಾರ್ಗಾನುಯಾಯಿನಾ ॥ ೧೯೩ ॥

ಕಾಂಶ್ಚಿಚ್ಚ ಶುಕರೂಪೇಣ ಸಮಾಸಾದಿತವಿಕ್ರಿಯಾನ್ ।
ಸಂಪಾಠಂ ಪಾಠಯನ್ ಶ್ಲೋಕಾ[೭]ನಮ್ಲಿಷ್ಟಮಧುರಾಕ್ಷರಮ್ ॥ ೧೯೪ ॥

ಹಂಸವಿಕ್ರಿಯಯಾ ಕಾಂಶ್ಚಿ[೮]ತ್ಕೂಜತೋ ಮಂದ್ರಗದ್ಗದಮ್ ।
ಬಿಸ[೯]ಭಂಗೈಃ ಸ್ವಹಸ್ತೇನ ದತ್ತೈಃ ಸಂಭಾವಯನ್ಮುಹುಃ ॥ ೧೯೫ ॥

ಗಜವಿಕ್ರಿಯಯಾ ಕಾಂಶ್ಚಿದ್ದಧತಃ [೧೦]ಕಾಲಭೀಂ ದಶಾಮ್ ।
[೧೧]ಸಾಂತ್ವಯನ್ಮುಹು[೧೨]ರಾನಾಥ್ಯ [೧೩]ಕರಮಾಕ್ರೀಡಯನ್ಮುದಾ ॥ ೧೯೬ ॥

ಮಣಿಕುಟ್ಟಿಮಸಂಕ್ರಾಂತೈಃ ಸ್ವೈರೇವ ಪ್ರತಿಬಿಂಬಕೈಃ ।
[೧೪]ಕೃಕವಾಕೂಯಿತಾನ್ಕಾಂಶ್ಚಿದ್ಯೋದ್ಧುಕಾಮಾ[೧೫]ನ್ಪರಾಮೃಶನ್ ॥ ೧೯೭ ॥

ಮಲ್ಲವಿಕ್ರಿಯಯಾ ಕಾಂಶ್ಚಿ[೧೬]ದ್ಯುಯುತ್ಸೂನ[೧೭]ನಭಿದ್ರುಹಃ ।
ಪ್ರೋತ್ಸಾಹಯನ್ಕೃತಾಸ್ಫೋಟವಲ್ಗನಾನಭಿನೃತ್ಯತಃ ॥ ೧೯೮ ॥

ಕ್ರೌಂಚಸಾರಸರೂಪೇಣ ತಾರಕ್ರೇಂಕಾರಕಾರಿಣಾಮ್ ।
ಶೃಣ್ವನ್ನನುಗತಂ ಶಬ್ದಂ ಕೇಷಾಂ ಚಿಚ್ಛ್ರುತಿಪೇಶಲಮ್ ॥ ೧೯೯ ॥

ಸ್ರಗ್ವಿಣಃ ಶುಚಲಿಪ್ತಾಂಗಾ[೧೮]ನ್ಸಮೇತಾನ್ಸುರದಾರಕಾನ್ ।
[೧೯]ದಾಂಡಾಂ [೨೦]ಕ್ರೀಡಾಂ ಸಮಾಯೋಜ್ಯ ನರ್ತಯಂಶ್ಚ ಕದಾಚನ ॥

ಅನಾರತಂ ಚ ಕುಂದೇಂದುಮಂದಾಕಿನ್ಯಪ್ಛಟಾಮಲಮ್ ।
ಸುರವಂದಿಭಿರುದ್ಗೀತಂ [೨೧]ಸ್ವಂ ಸಮಾಕರ್ಣಯನ್ಯಶಃ ॥ ೨೦೧ ॥

[೨೨]ಅತಂದ್ರಿತಂ ಚ ದೇವೀಭಿ[೨೩]ರ್ನ್ಯಸ್ಯಮಾನಂ ಗೃಹಾಂಗಣೇ ।
ರತ್ನಚೂರ್ಣೈರ್ಬಲಿಂ ಚಿತ್ರಂ ಸಾನಂದಮವಲೋಕಯನ್ ॥ ೨೦೨ ॥

ಸಂಭಾವಯನ್ಕದಾಚಿಚ್ಚ [೨೪]ಪ್ರಕೃತೀರ್ದ್ರಷ್ಟುಮಾಗತಾಃ ।
ವೀಕ್ಷಿತೈರ್ಮಧುರೈಃ ಸ್ನಿಗ್ಧೈಃ ಸ್ಮಿತೈಃ ಸಾದರಭಾಷಿತೈಃ ॥ ೨೦೩ ॥

ಕದಾಚಿದ್ದೀರ್ಘಿಕಾಂಭಸ್ಸು ಸಮಂ ಸುರಕುಮಾರಕೈಃ ।
ಜಲಕ್ರೀಡಾವಿನೋದೇನ ರಮಮಾಣಃ ಸಸಮ್ಮದಮ್ ॥ ೨೦೪ ॥

[೨೫]ಸಾರವಂ ಜಲಮಾಸಾದ್ಯ [೨೬]ಸಾರವಂ ಹಂಸಕೂಜಿತೈಃ ।
[೨೭]ತಾರವೈ[೨೮]ರ್ಯಂತ್ರಕೈಃ ಕ್ರೀಡಞ್ಜಲಾಸ್ಫಾಲ[೨೯]ಕೃತಾರವೈಃ ॥ ೨೦೫ ॥

೧ ಛಂದಃ ಪ್ರತಿಪಾದಕಶಾಸ್ತ್ರಂ. ೨ ವಿವರಣೈಃ. ೩ ಕಲಾಶಾಸ್ತ್ರೈಃ. ೪ ವ್ಯಾಕರಣಶಾಸ್ತ್ರಪ್ರಸಂಗೈಃ. ೫ ಕದಾಚಿತ್. ೬ ಸುರಸಮೂಹಾನ್. ೭ ವ್ಯಕ್ತಂ. ೮ ಧ್ವನತಃ. ೯ ಖಂಡೈಃ. ೧೦ ಕಲಭಸಂಬಂಧಿನೀಂ. ೧೧ ಸಾಮವಚನೈರನುನಯನ್. ೧೨ ಸಂಪ್ರಾರ್ಥ್ಯ. ೧೩ ಶುಂಡಾದಂಡಮಾವರ್ತಯನ್. ೧೪ ಕೃಕವಾಕವ ಇವಾಚರಿತಾಸ್ತಾನ್. ೧೫ ಸ್ಪೃಶನ್. ೧೬ ಯೋದ್ಧುಮಿಚ್ಛೂನ್. ೧೭ ಪರಸ್ಪರಮಬಾಧಕಾನ್. ೧೮ ಸಮ್ಮಿಲಿತಾನ್. ೧೯ ದಂಡಸಂಬಂಧಿನೀಂ. ೨೦ ಕ್ರಿಯಾಮಿತ್ಯಪಿ ಪಾಠಃ. ೨೧ ಆತ್ಮೀಯಂ. ೨೨ ಅಜಾಡ್ಯಂ ಯಥಾ ತಥಾ. ೨೩ ರಚ್ಯಮಾನಂ. ೨೪ ಪ್ರಜಾಪರಿವಾರಾನ್. ೨೫ ಸರಯ್ವಾಂ ಭವಂ ಸಾರವಂ. ೨೬ ಆರವೇಣ ಸಹಿತಂ. ೨೭ ತರುಸಂಬಂಧಿಭಿಃ. ೨೮ ದ್ರೋಣ್ಯಾದಿಭಿಃ. ೨೯ ಕೃತಸ್ವನೈಃ.

(ಜಲಕೇಲಿವಿಧಾವೇನಂ ಭಕ್ತ್ಯಾ ಮೇಘಕುಮಾರಕಾಃ ।
ಭೇಜುರ್ಧಾರಾಗೃಹೀಭೂಯ ಸ್ಫುರದ್ಧಾರಾಃ ಸಮಂತತಃ) ॥ ೨೦೬ ॥

ಕದಾಚಿನ್ನಂದನಸ್ಪರ್ಧಿತರುಶೋಭಾಂಚಿತೇ ವನೇ ।
ವನಕ್ರೀಡಾಂ ಸಮಾತನ್ವ[೧]ನ್ವಯಸ್ಯೈರನ್ವಿತಃ ಸುರೈಃ ॥ ೨೦೭ ॥

(ವನಕ್ರೀಡಾವಿನೋದೇಸ್ಯ ವಿರಜೀಕೃತಭೂತಲಾಃ ।
ಮಂದಂ [೨]ದುಧುವುರುದ್ಯಾನಪಾದಪಾನ್ಪವನಾಮರಾಃ) ॥ ೨೦೮ ॥

ಇತಿ ಕಾಲೋಚಿತಾಃ [೩]ಕ್ರೀಡಾ [೪]ವಿನೋದಾಂಶ್ಚ ಸ [೫]ನಿರ್ವಿಶನ್ ।
[೬]ಆಸಾಂಚಕ್ರೇ ಸುಖಂ ದೇವಃ ಸಮಂ ದೇವಕುಮಾರಕೈಃ ॥ ೨೦೯ ॥

ಕೆಲವು ಸಮಯದಲ್ಲಿ ಸಭೆಯನ್ನು ಸೇರಿಸಿ ಛಂದಸ್ಸು ಅಲಂಕಾರ ಇವುಗಳ ಪ್ರಸ್ತಾರಮೊದಲಾದ ವಿವರಣೆಗಳಿಂದಲೂ ಚಿತ್ರಮೊದಲಾದ ಕಲಾಶಾಸ್ತ್ರಗಳಿಂದಲೂ ವಿಚಾರಮಾಡುವವರಾಗಿ, ಕೆಲವು ಸಮಯದಲ್ಲಿ ವ್ಯಾಕರಣಶಾಸ್ತ್ರಪ್ರಸಂಗಗಳಿಂದಲೂ ಕೆಲವು ಸಮಯದಲ್ಲಿ ಕಾವ್ಯಪ್ರಸಂಗಗಳಿಂದಲೂ ಒಂದುಕಾಲದಲ್ಲಿ ಕೆಲವು ಶ್ರೇಷ್ಠರಾದ ವಾಚಾಳುಗಳೊಡನೆ ಸಂಭಾಷಣೆಯ ಪ್ರಸಂಗಗಳಿಂದಲೂ ಕೆಲವು ಸಮಯದಲ್ಲಿ ಸಂಗೀತಪ್ರಸಂಗಗಳಿಂದಲೂ ಕೆಲವು ಸಮಯದಲ್ಲಿ ನೃತ್ಯದ ಪ್ರಸಂಗಗಳಿಂದಲೂ ಕೆಲವುಸಮಯದಲ್ಲಿ ವಾದ್ಯಗೋಷ್ಠಿಗಳಿಂದಲೂ ಇನ್ನೊಂದು ಸಮಯದಲ್ಲಿ ವೀಣಾಪ್ರಸಂಗಗಳಿಂದಲೂ ಕೆಲವುಸಮಯದಲ್ಲಿ ನವಿಲಿನ ರೂಪವನ್ನು ಧರಿಸಿ ನರ್ತನಮಾಡುತ್ತಿರುವ ದೇವತೆಗಳ ಸಮೂಹಗಳನ್ನು ಲಯಕ್ಕನುಸಾರವಾದ ತಾಳದಿಂದ ನರ್ತನ ಮಾಡಿಸುತ್ತಲೂ ಗಿಣಿಯ ರೂಪವನ್ನು ವಿಗುರ್ವಿಸಿಕೊಂಡ ಕೆಲವು ದೇವತೆಗಳಿಂದ ಸ್ಪಷ್ಟವಾಗಿಯೂ ಮಧುರವಾಗಿಯೂ ಶ್ಲೋಕಗಳನ್ನು ಪಠನಮಾಡಿಸುತ್ತಲೂ ಗಂಭೀರವಾಗಿಯೂ ತೊದಲಾಗಿಯೂ ಶಬ್ದಮಾಡುತ್ತಿರುವ ಹಂಸಪಕ್ಷಿಯ ರೂಪವನ್ನು ವಿಗುರ್ವಿಸಿಕೊಂಡ ಕೆಲವು ದೇವತೆಗಳಿಗೆ ಬಾರಿಬಾರಿಗೂ ತಮ್ಮ ಕೈಯಿಂದ ತಾವರೆದಂಟಿನ ತುಂಡುಗಳನ್ನು ಕೊಟ್ಟು ಲಾಲನೆಮಾಡುತ್ತಲೂ ಆನೆಯ ರೂಪವನ್ನು ವಿಗುರ್ವಿಸಿ ಆನೆಮರಿಯ ಅವಸ್ಥೆಯನ್ನು ಧರಿಸಿದ ಕೆಲವು ದೇವತೆಗಳನ್ನು ಬಾರಿಬಾರಿಗೂ ಸಮಾಧಾನವಚನಗಳಿಂದ ಶಾಂತಪಡಿಸಿ ಆನಂದದಿಂದ ಸೊಂಡಲನ್ನು ತಿರಿಗಿಸುತ್ತಲೂ ಕೋಳಿಯ ರೂಪವನ್ನು ವಿಗುರ್ವಿಸಿ ರತ್ನಖಚಿತವಾದ ನೆಲಗಳಲ್ಲಿ ಸಂಬಂಧಿಸಿರುವ ತಮ್ಮ ಪ್ರತಿಬಿಂಬಗಳೊಡನೆಯೇ ಯುದ್ಧಮಾಡಲಪೇಕ್ಷಿಸಿದ ಕೆಲವು ದೇವತೆಗಳನ್ನು ಸ್ಪರ್ಶಿಸುತ್ತಲೂ ಜಟ್ಟಿಗಳ ರೂಪವನ್ನು ವಿಗುರ್ವಿಸಿ ಪರಸ್ಪರಬಾಧೆಯಿಲ್ಲದೆ ಯುದ್ಧಮಾಡಬೇಕೆಂಬ ಅಪೇಕ್ಷೆಯುಳ್ಳವರೂ ತೊಡೆಗಳನ್ನೂ ಭುಜಗಳನ್ನೂ ತಟ್ಟಿ ನರ್ತನವನ್ನು ಮಾಡುತ್ತಿರುವವರೂ ಆದ ಕೆಲವು ದೇವತೆಗಳನ್ನು ಪ್ರೋತ್ಸಾಹಪಡಿಸುತ್ತಲೂ ಕ್ರೌಂಚಪಕ್ಷಿಯ ರೂಪವನ್ನೂ ಸಾರಸಪಕ್ಷಿಯ ರೂಪವನ್ನೂ ಧರಿಸಿ ಗಟ್ಟಿಯಾದ ಕ್ರೇಂಕಾರಶಬ್ದವನ್ನು ಮಾಡುವ ಕೆಲವು ದೇವತೆಗಳ ಕರ್ಣಮಧುರವಾದ ಶಬ್ದವನ್ನು ಕೇಳುತ್ತಲೂ ಒಂದುಕಾಲದಲ್ಲಿ ಪುಷ್ಪಮಾಲಿಕೆಗಳನ್ನು ಧರಿಸಿರುವವರೂ ಸುಗಂಧದ್ರವ್ಯಗಳನ್ನು ಅಂಗಕ್ಕೆ ಲೇಪನಮಾಡಿರುವವರೂ ಕುಮಾರರೂಪವನ್ನು ಧರಿಸಿಕೊಂಡು ಸೇರಿರುವವರೂ ಆದ ಕೆಲವು ದೇವತೆಗಳನ್ನು ಕೋಲಾಟದಿಂದ ನರ್ತನಮಾಡಿಸುತ್ತಲೂ ಕುಂದಪುಷ್ಪ(ಕೋಲುಮಲ್ಲಿಗೆ)ದಂತೆಯೂ ಚಂದ್ರನಂತೆಯೂ ಗಂಗಾನದಿಯ ಜಲಧಾರೆಯಂತೆಯೂ ನಿರ್ಮಲವಾದ ಸ್ವಾಮಿಯ ಯಶಸ್ಸನ್ನು ಸ್ತುತಿಪಾಠಕರಾದ ದೇವತೆಗಳು ಯಾವಾಗಲೂ ಗಾನಮಾಡುವುದನ್ನು ಕೇಳುತ್ತಲೂ ಮನೆಯ ಅಂಗಣದಲ್ಲಿ ದೇವಸ್ತ್ರೀಯರು ಆಲಸ್ಯವನ್ನು ಬಿಟ್ಟು ರತ್ನಚೂರ್ಣಗಳಿಂದ ರಚಿಸಿದ ವಿಚಿತ್ರವಾದ ಉಪಹಾರ(ನಜರು)ವನ್ನು ನೋಡುತ್ತಲೂ ಒಂದುಕಾಲದಲ್ಲಿ ತಮ್ಮನ್ನು ನೋಡುವುದಕ್ಕೆ ಬಂದ ಪ್ರಜಾಪರಿವಾರಜನರನ್ನು ಮಧುರವಾದ ನೋಟಗಳಿಂದಲೂ ಪ್ರೀತಿಯುಕ್ತವಾದ ಮಂದಹಾಸಗಳಿಂದಲೂ ಆದರಪೂರ್ವಕವಾದ ಭಾಷಣೆಗಳಿಂದಲೂ ಉಪಚರಿಸುತ್ತಲೂ ಕೆಲವು ಸಮಯದಲ್ಲಿ ಚದರವಾದ ಬಾವಿಯ ನೀರಿನಲ್ಲಿ ದೇವಕುಮಾರರೊಡನೆ ಜಲಕ್ರೀಡಾವಿನೋದದಿಂದ ಸಂತೋಷವಾಗಿ ಆಟವಾಡುತ್ತಲೂ ಹಂಸಪಕ್ಷಿಗಳ ಶಬ್ದಗಳಿಂದ ಶಬ್ದಸಹಿತವಾಗಿರುವ

೧ ಮಿತ್ರೈಃ. ೨ ಕಂಪಯಂತಿ ಸ್ಮ. ೩ ಜಲಕ್ರೀಡಾದಿಕಾಃ. ೪ ಗಜಬರ್ಹಿಹಂಸಕಾನ್. ೫ ಅನುಭವನ್. ೬ ಆಸ್ತೇ ಸ್ಮ.

ಸರಯೂನದಿಯ ನೀರನ್ನು ಹೊಂದಿ ನೀರಿನ ಹೊಡೆತದಿಂದ ಶಬ್ದಮಾಡುತ್ತಿರುವ ಮರದ ಯಂತ್ರ(ದೋಣಿ ಮೊದಲಾದುವು)ಗಳಿಂದ ಕ್ರೀಡಿಸುತ್ತಲೂ (ಸ್ವಾಮಿಯು ಜಲಕ್ರೀಡೆಯನ್ನಾಡುವಾಗ ಮೇಘಕುಮಾರರೆಂಬ ದೇವತೆಗಳು ಧಾರಾಗೃಹ—ಸ್ನಾನಗೃಹದ ರೂಪವನ್ನು ವಿಗುರ್ವಿಸಿ ಸುತ್ತಲೂ ಪ್ರಕಾಶಮಾನವಾದ ಜಲಧಾರೆಗಳನ್ನು ಬಿಡುತ್ತ ಭಕ್ತಿಯಿಂದ ಸ್ವಾಮಿಯ ಸೇವೆಯನ್ನು ಮಾಡಿದರು). ಕೆಲವು ಸಮಯದಲ್ಲಿ ನಂದನವನದ ಶೋಭೆಯನ್ನು ತಿರಸ್ಕರಿಸುವ ವೃಕ್ಷಗಳ ಶೋಭೆಯುಳ್ಳ ವನದಲ್ಲಿ ಮಿತ್ರರಾದ ದೇವತೆಗಳೊಡನೆ ಕೂಡಿಕೊಂಡು ವನಕ್ರೀಡೆಯನ್ನು ಮಾಡುತ್ತಲೂ (ಸ್ವಾಮಿಯ ವನಕ್ರೀಡಾವಿನೋದಕಾಲದಲ್ಲಿ ವಾಯುಕುಮಾರರೆಂಬ ದೇವತೆಗಳು ಭೂಮಿಯ ಧೂಳನ್ನು ಹೋಗಲಾಡಿಸಿ ಸ್ವಚ್ಛಮಾಡಿ ಉದ್ಯಾನದ ವೃಕ್ಷಗಳನ್ನು ಮಂದವಾಗಿ ಕೊಡಹಿದರು). ಆ ವೃಷಭಸ್ವಾಮಿಯು ಹಿಂದೆಹೇಳಿದ ಪ್ರಕಾರವಾಗಿ ಕಾಲೋಚಿತವಾದ ಜಲಕ್ರೀಡೆಮೊದಲಾದ ಕ್ರೀಡೆಗಳನ್ನೂ ವಿನೋದಗಳನ್ನೂ ಅನುಭವಿಸುತ್ತ ಸುಖವಾಗಿದ್ದರು.

**ಇತಿ ಭುವನಪತೀನಾಮರ್ಚನೀಯೋ[1]ಭಿಗಮ್ಯಃ**
**ಸಕಲಗುಣಮಣೀನಾಮಾಕರಃ ಪುಣ್ಯಮೂರ್ತಿಃ ।**
**ಸಮಮುಮರಕುಮಾರೈರ್ನಿರ್ವಿಶನ್ದಿವ್ಯಭೋಗಾ-**
**ನರಮತ ಚಿರಮಸ್ಮಿ[2]ನ್ಪುಣ್ಯಗೇಹೇ ಸ ದೇವಃ ॥ ೨೧೦ ॥**

ಹೀಗೆ ಲೋಕಾಧಿಪತಿಗಳಾದ ದೇವೇಂದ್ರಮೊದಲಾದವರಿಂದ ಪೂಜಿಸುವುದಕ್ಕೆ ಯೋಗ್ಯರೂ ಆಶ್ರಯಿಸುವುದಕ್ಕೆ ಯೋಗ್ಯರೂ ಸಮಸ್ತಗುಣಗಳೆಂಬ ರತ್ನಗಳಿಗೆ ಉತ್ಪತ್ತಿಸ್ಥಾನರೂ ಪುಣ್ಯಮೂರ್ತಿಯೂ ಆದ ಆ ವೃಷಭಸ್ವಾಮಿಯು ದೇವಕುಮಾರರೊಡನೆ ಈ ಪುಣ್ಯಗೃಹದಲ್ಲಿ ದಿವ್ಯಭೋಗಗಳನ್ನನುಭವಿಸುತ್ತ ಬಹುಕಾಲದ ವರೆಗೆ ಕ್ರೀಡಿಸುತ್ತಿದ್ದರು.

**ಪ್ರತಿದಿನಮಮರೇಂದ್ರೋ[3]ಪಾಹೃತಾನ್ಭೋಗಸಾರಾ-**
**ನ್ಸುರಭಿಕುಸುಮಮಾಲಾಚಿತ್ರಭೂಷಾಂಬರಾದೀನ್ ।**
**ಲಲಿತಸುರಕುಮಾರೈರಿಂಗಿತಜ್ಞೈರ್ವಯಸ್ಯೈಃ**
**ಸಮ[4]ಮುಪಹಿತರಾಗಸ್ಸೋಽನ್ವಭೂತ್ಪುಣ್ಯಪಾಕಾತ್ ॥ ೨೧೧ ॥**

ಅಭಿಪ್ರಾಯವನ್ನು ತಿಳಿದವರೂ ಮಿತ್ರರೂ ಸುಂದರರೂ ಆದ ದೇವಕುಮಾರರೊಡನೆ ಅನುರಾಗವನ್ನು ಹೊಂದಿದ ಆ ವೃಷಭಸ್ವಾಮಿಯು ತಮ್ಮ ಪುಣ್ಯೋದಯದಿಂದ ಪ್ರತಿದಿವಸದಲ್ಲಿಯೂ ದೇವೇಂದ್ರರು ತಂದ ಸುಗಂಧವಾದ ಪುಷ್ಪಮಾಲಿಕೆ ನಾನಾವಿಧವಾದ ಆಭರಣ ವಸ್ತ್ರ ಮೊದಲಾದ ಉತ್ತಮಭೋಗಗಳನ್ನು ಅನುಭವಿಸಿದರು.

**ಸ ಶ್ರೀಮಾನ್ನೃಸುರಾಸುರಾರ್ಚಿತಪದೋ ಬಾಲ್ಯೇ[1]ಪ್ಯಬಾಲಕ್ರಿಯೋ**
**ಲೀಲಾಹಾಸವಿಲಾಸವೇಷಚತುರಾಮಾಬಿಭ್ರದುಚ್ಚೈಸ್ತನುಮ್ ।**
**ತನ್ವಾನಃ ಪ್ರಮದಂ ಜಗಜ್ಜನಮನಃಪ್ರಹ್ಲಾದಿಭಿರ್ವಾಕ್ಕರೈ-**
**ರ್ಬಾಲೇಂದುರ್ವವೃಧೇ ಶನೈರಮಲಿನಃ ಕೀರ್ತ್ಯುರ್ಜ್ವಲಚ್ಚಂದ್ರಿಕಃ ॥**

ಮನುಷ್ಯರಿಂದಲೂ ದೇವತೆಗಳಿಂದಲೂ ಪೂಜಿಸಲ್ಪಟ್ಟ ಪಾದಗಳುಳ್ಳವರೂ ಬಾಲ್ಯದಲ್ಲಿಯೂ ವೃದ್ಧರ ವ್ಯಾಪಾರವುಳ್ಳವರೂ ಲೀಲಾ ಹಾಸ್ಯ ವಿಲಾಸ ವೇಷ ಇವುಗಳಿಂದ ಸುಂದರವೂ ಉನ್ನತವೂ ಆದ ಶರೀರವನ್ನು ಧರಿಸಿರುವವರೂ ಜಗತ್ತಿನಲ್ಲಿರುವ ಜನರ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ ವಚನಗಳೆಂಬ ಕಿರಣಗಳಿಂದ ಸಂತೋಷವನ್ನುಂಟುಮಾಡುವವರೂ ಕೀರ್ತಿಯೆಂಬ ದೇದೀಪ್ಯಮಾನವಾದ ಬೆಳದಿಂಗಳುಳ್ಳವರೂ ಪರಿಶುದ್ಧರೂ ಬಾಲಚಂದ್ರನಂತಿರುವವರೂ ಶೋಭಾಯುಕ್ತರೂ ಆದ ಆ ವೃಷಭಸ್ವಾಮಿಯು ದಿನಕ್ರಮದಿಂದ ವೃದ್ಧಿ ಹೊಂದುತ್ತಿದ್ದರು.

**[2]ತಾರಾಲೀತರಲಾಂ ದಧತ್ಸಮುಚಿತಾಂ ವಕ್ಷಸ್ಸ್ಥಲಾಸಂಗಿನೀಮ್**
**ಲಕ್ಷ್ಮ್ಯಾಂದೋಲನವಲ್ಲರೀಮಿವ ತತಾಂ ತಾಂ ಹಾರಯಷ್ಟಿಂ ಪೃಥುಮ್ ।**
**[3]ಜ್ಯೋತ್ಸ್ನಾ ಸ್ನಂಮನ್ಯಮಥಾಂಶುಕಂ ಪರಿದಧತ್ಕಾಂಚೀಕಲಾಪಾಂಚಿತಮ್**
**ರೇಜೇಸೌ ಸುರದಾರಕೈ[4]ರುಡುಸಮೈಃ ಕ್ರೀಡನ್ನಿನೇಂದುರ್ಭೃಶಮ್ ॥**

ಲಕ್ಷ್ಮೀದೇವಿಯ ಉಯ್ಯಾಲೆಯಲ್ಲಿರುವ ಪುಷ್ಪದ ಗೊಂಚಲಿನಂತೆ ಹರಡಿಕೊಂಡಿರುವುದೂ ನಕ್ಷತ್ರಗಳ ಸಮೂಹದಂತೆ ಕಾಂತಿಯಿಂದ ಚಂಚಲವೂ ಉಚಿತವೂ ವಕ್ಷಸ್ಥಲದಲ್ಲಿ ಸಂಬಂಧಿಸಿರುವುದೂ ಆದ ದೊಡ್ಡ ಹಾರವನ್ನು ಧರಿಸಿರುವವರೂ ಸೊಂಟದ ಪಟ್ಟಿಯಿಂದ ಕೂಡಿರುವ ತನ್ನನ್ನು ಬೆಳದಿಂಗಳನ್ನಾಗಿ ತಿಳಿಯುವ (ಬೆಳದಿಂಗಳಂತಿರುವ) ವಸ್ತ್ರವನ್ನು ಧರಿಸಿರುವವರೂ ಚಂದ್ರನಂತಿರುವವರೂ ಆದ ಈ ವೃಷಭಜಿನೇಶ್ವರರು ನಕ್ಷತ್ರಗಳಿಗೆ ಸಮಾನರಾದ ದೇವಕುಮಾರರೊಡನೆ ಕ್ರೀಡಿಸುವವರಾಗಿ ಅಧಿಕವಾಗಿ ಶೋಭಿಸಿದರು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವಜ್ಜಾತಕರ್ಮೋತ್ಸವವರ್ಣನಂ ನಾಮ ಚತುರ್ದಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭಗವಜ್ಜಾತಕರ್ಮೋತ್ಸವವರ್ಣನೆಯೆಂಬ
ಹದಿನಾಲ್ಕನೆಯ ಪರ್ವವು ಸಮಾಪ್ತವಾದುದು.

---

೧ ಆಶ್ರಯಣೀಯಃ. ೨ ಪವಿತ್ರಗೇಹೇ. ೩ ಉಪಾನೀತಾನ್. ೪ ಪ್ರಾಪ್ತಃ.

೧ ವೃದ್ಧವ್ಯಾಪಾರಃ. ೨ ತಾರಕಾನಿಕರವತ್ಕಾಂತ್ಯಾ ಚಂಚಲಾಂ. ೩ ಆತ್ಮಾನಂ ಜ್ಯೋತ್ಸ್ನಾಂ ಮನ್ಯಮಾನಂ. ೪ ನಕ್ಷತ್ರಸದೃಶೈಃ.

# ಅಥ ಪಂಚದಶಂ ಪರ್ವ

**ಅಥಾಸ್ಯ ಯೌವನೇ ಪೂರ್ಣೇ ವಪುರಾಸೀನ್ಮನೋಹರಮ್ ।**
**ಪ್ರಕೃತ್ಯೈವ ಶಶೀ ಕಾಂತಃ ಕಿಂ ಪುನಃ ಶರದಾಗಮೇ ॥ ೧ ॥**

ತರುವಾಯ ಈ ವೃಷಭಸ್ವಾಮಿಯ ಪರಿಪೂರ್ಣವಾದ ಯೌವನದಲ್ಲಿ ಇವರ ದೇಹವು ಅತ್ಯಂತ ಮನೋಹರವಾಗಿದ್ದಿತು. ಚಂದ್ರನು ಸ್ವಭಾವದಿಂದಲೇ ಸುಂದರನಾಗಿರುತ್ತಾನೆ. ಪುನಃ ಶರತ್ಕಾಲವು ಪ್ರಾಪ್ತವಾದಮೇಲೆ ಹೇಳುವುದೇನು ?

**ನಿಷ್ಟಪ್ತಕನಕಚ್ಛಾಯಂ ನಿಃಸ್ವೇದಂ ನೀರಜೋಮಲಮ್ ।**
**ಕ್ಷೀರಾಚ್ಛಕ್ಷತಜಂ [೧]ದಿವ್ಯಸಂಸ್ಥಾನಂ ವಜ್ರ[೨]ಸಂಹತಮ್ ॥ ೨ ॥**

**ಸೌರೂಪ್ಯಸ್ಯ ಪರಾಂ ಕೋಟಿಂ ದಧಾನಂ ಸೌರಭಸ್ಯ ಚ ।**
**ಅಷ್ಟೋತ್ತರಸಹಸ್ರೇಣ ಲಕ್ಷಣಾನಾಮಲಂಕೃತಮ್ ॥ ೩ ॥**

**ಅಪ್ರಮೇಯಂ ಮಹಾವೀರ್ಯಂ ದಧತ್ಪ್ರಿಯಹಿತಂ ವಚಃ ।**
**ಕಾಂತಮಾವಿರಭೂದಸ್ಯ ರೂಪ[೩]ಮಪ್ರಾಕೃತಂ ಪ್ರಭೋಃ ॥ ೪ ॥**

ಪುಟಕ್ಕಿಟ್ಟ ಬಂಗಾರದಂತೆ ಕಾಂತಿಯುಳ್ಳದೂ ಬೆವರದಿರುವುದೂ ನಿರ್ಮಲವೂ ಹಾಲಿನಂತೆ ಶುಭ್ರವಾದ ರಕ್ತವುಳ್ಳದೂ ಸಮಚತುರಸ್ರಸಂಸ್ಥಾನವುಳ್ಳದೂ ವಜ್ರವೃಷಭನಾರಾಚಸಂಹನನವುಳ್ಳದೂ ಅತ್ಯಂತಸುಂದರವೂ ಪರಿಮಳವೂ ಸಾವಿರದೆಂಟು ಲಕ್ಷಣಗಳಿಂದ ಅಲಂಕೃತವೂ ಅಲ್ಪಜ್ಞಾನಕ್ಕೆ ವಿಷಯವಲ್ಲದುದೂ ಬಹಳವಾದ ಬಲವುಳ್ಳದೂ ಪ್ರಿಯವೂ ಹಿತವೂ ಆದ ವಚನವುಳ್ಳದೂ ಮನೋಹರವೂ ಅಸಾಧಾರಣವೂ ಆದ ಈ ವೃಷಭಸ್ವಾಮಿಯ ರೂಪವು ಪ್ರಕಟವಾಯಿತು.

**ಮುಕುಟಾಲಂಕೃತಂ ತಸ್ಯ ಶಿರೋ ನೀಲಶಿರೋರುಹಮ್ ।**
**[೪]ಸುರೇಂದ್ರಮಣಿಭಿಃ ಕಾಂತಂ ಮೇರೋಃ ಶೃಂಗಮಿವಾಬಭೌ ॥ ೫ ॥**

ಕಪ್ಪಾದ ಕೂದಲುಗಳುಳ್ಳ ಆ ವೃಷಭಸ್ವಾಮಿಯ ಮಸ್ತಕವು ಕಿರೀಟದಿಂದ ಅಲಂಕೃತವಾಗಿ ಇಂದ್ರನೀಲರತ್ನಗಳಿಂದ ಮನೋಹರವಾದ ಮಹಾಮೇರು ಪರ್ವತದ ಶಿಖರದಂತೆ ಶೋಭಿಸಿತು.

**ರುರುಚೇ ಮೂರ್ಧ್ನಿ ಮಾಲಾಸ್ಯ ಕಲ್ಪಾನೋಕಹಸಂಭವಾ ।**
**ಹಿಮಾದ್ರೇಃ ಕೂಟಮಾವೇಷ್ಟ್ಯ ಪತಂತೀವಾಮರಾಪಗಾ ॥ ೬ ॥**

ಈ ವೃಷಭಸ್ವಾಮಿಯ ಮಸ್ತಕದಲ್ಲಿ ಕಲ್ಪವೃಕ್ಷಗಳಿಂದುಂಟಾದ ಪುಷ್ಪಮಾಲಿಕೆಯು, ಹಿಮವತ್ಪರ್ವತದ ಶಿಖರವನ್ನು ಆವರಿಸಿಕೊಂಡು ಬೀಳುತ್ತಿರುವ ದೇವಗಂಗೆಯಂತೆ, ಶೋಭಿಸಿತು.

**ಲಲಾಟಪಟ್ಟೇ ವಿಸ್ತೀರ್ಣೇ ರುಚಿರಸ್ಯ ಮಹತ್ಯಭೂತ್ ।**
**ವಾಗ್ದೇವೀಲಲಿತಾ[೫]ಕ್ರೀಡಸ್ಥಲಲೀಲಾಂ ವಿತನ್ವತಿ ॥ ೭ ॥**

ವಾಗ್ದೇವಿಯ ಸುಂದರವಾದ ಉದ್ಯಾನದ ಲೀಲೆಯನ್ನು ವಿಸ್ತರಿಸುತ್ತಿರುವ ವಿಸ್ತಾರವಾದ ವೃಷಭಸ್ವಾಮಿಯ ಹಣೆಯಲ್ಲಿ ಅಧಿಕವಾದ ಕಾಂತಿಯುಂಟಾಯಿತು.

**ಭ್ರೂಲತೇ ರೇಜತುರ್ಭರ್ತುರ್ಲಲಾಟಾದ್ರಿತಟಾಶ್ರಿತೇ ।**
**[೬]ವಾಗುರೇ ಮದನೈಣಸ್ಯ [೭]ಸಂರೋಧಾಯೇವ ಕಲ್ಪಿತೇ ॥ ೮ ॥**

ವೃಷಭಸ್ವಾಮಿಯ ಹಣೆಯೆಂಬ ಪರ್ವತದ ತಪ್ಪಲನ್ನು ಹೊಂದಿರುವ ಹುಬ್ಬುಗಳೆಂಬ ಎರಡು ಲತೆಗಳು ಮನ್ಮಥನೆಂಬ ಜಿಂಕೆಯನ್ನು ಬಂಧಿಸುವುದಕ್ಕೋಸ್ಕರ ಮಾಡಿದ ಎರಡು ಬಲೆಗಳಂತೆ ಶೋಭಿಸಿದುವು.

**ನಯನೋತ್ಪಲಯೋರಸ್ಯ ಕಾಂತಿರಾನೀಲತಾರಯೋಃ ।**
**ಆಸೀದ್ದ್ವಿರೇಫಸಂಯುಕ್ತಮಹೋತ್ಪಲದಲಶ್ರಿಯೋಃ ॥ ೯ ॥**

ಕಪ್ಪಾದ ರೆಪ್ಪೆಗಳುಳ್ಳ ಈ ವೃಷಭಸ್ವಾಮಿಯ ನೇತ್ರಗಳೆಂಬ ನೈದಿಲೆಗಳ ಕಾಂತಿಯು ಭ್ರಮರಗಳಿಂದ ಕೂಡಿರುವ ಕಮಲದ ಎಸಳುಗಳ ಕಾಂತಿಯಂತೆ ಇದ್ದಿತು.

**ಮಣಿಕುಂಡಲಭೂಷಾಭ್ಯಾಂ ಕರ್ಣಾವಸ್ಯ ರರಾಜತುಃ ।**
**[೧]ಪರ್ಯಂತೌ ಗಗನಸ್ಯೇವ ಚಂದ್ರಾರ್ಕಾಭ್ಯಾಮಲಂಕೃತೌ ॥ ೧೦ ॥**

ರತ್ನಖಚಿತವಾದ ಕರ್ಣಕುಂಡಲಗಳಿಂದ ಅಲಂಕೃತವಾದ ಈ ವೃಷಭಸ್ವಾಮಿಯ ಕಿವಿಗಳೆರಡು ಸೂರ್ಯಚಂದ್ರರಿಂದ ಅಲಂಕೃತವಾದ ಆಕಾಶದ ಉಭಯಪಾರ್ಶ್ವಗಳಂತೆ ಶೋಭಿಸಿದುವು.

**ಮುಖೇಂದೌ ಯಾ ದ್ಯುತಿಸ್ತಸ್ಯ ನ ಸಾನ್ಯತ್ರ ತ್ರಿವಿಷ್ಟಪೇ ।**
**ಅಮೃತೇ ಯಾ [೨]ಧೃತಿಃ ಸಾ ಕಿಂ ಕ್ವಚಿದನ್ಯತ್ರ ಲಕ್ಷ್ಯತೇ ॥ ೧೧ ॥**

ಆ ವೃಷಭಸ್ವಾಮಿಯ ಮುಖವೆಂಬ ಚಂದ್ರನಲ್ಲಿದ್ದ ಕಾಂತಿಯು ಮೂರುಲೋಕದಲ್ಲಿ ಬೇರೆ ಯಾವಪದಾರ್ಥದಲ್ಲಿಯೂ ಇರಲಿಲ್ಲವು. ನ್ಯಾಯವೇ:- ಅಮೃತದಲ್ಲಿರುವ ಸಂತೋಷವು ಬೇರೆ ಯಾವಪದಾರ್ಥದಲ್ಲಿಯಾದರೂ ಕಾಣುವುದೇ ?

**ಸ್ಮಿತಾಂಶುರುಚಿರಂ ತಸ್ಯ ಮುಖಮಾಪಾಟಲಾಧರಮ್ ।**
**ಲಸದ್ದಲಸ್ಯ ಪದ್ಮಸ್ಯ ಸಫೇನಸ್ಯ ಶ್ರಿಯಂ ದಧೌ ॥ ೧೨ ॥**

ಹೆಚ್ಚಾಗಿ ಕೆಂಪಾದ ತುಟಿಗಳುಳ್ಳದೂ ಮುಗುಳುನಗೆಯ ಕಾಂತಿಯಿಂದ ಮನೋಹರವೂ ಆದ ಆ ವೃಷಭಸ್ವಾಮಿಯ ಮುಖವು ಪ್ರಕಾಶಮಾನವಾದ ಎಸಳುಗಳುಳ್ಳದೂ ನೊರೆಯೊಡಗೂಡಿದುದೂ ಆದ ತಾವರೆಯ ಶೋಭೆಯನ್ನು ಧರಿಸಿತು. ತಾವರೆಯಂತೆ ಶೋಭಿಸಿತೆಂದು ಭಾವವು.

**ದಧೇಸ್ಯ ನಾಸಿಕೋತ್ತುಂಗಾ ಶ್ರಿಯಮಾಯತಿಶಾಲಿನೀಮ್ ।**
**ಸರಸ್ವತ್ಯವತಾರಾಯ ಕಲ್ಪಿತೇವ [೩]ಪ್ರಣಾಲಿಕಾ ॥ ೧೩ ॥**

ಈ ವೃಷಭಸ್ವಾಮಿಯ ಉನ್ನತವಾದ ಮೂಗು ಸರಸ್ವತಿಯ ಅವತಾರಕ್ಕೋಸ್ಕರ ಮಾಡಿದ ಪ್ರವೇಶದ್ವಾರದಂತೆ ವಿಸ್ತಾರವಾದ ಶೋಭೆಯನ್ನು ಧರಿಸಿತು.

**ಧತ್ತೇ ಸ್ಮ ರುಚಿರಾ ರೇಖಾಃ ಕಂಧರೋಸ್ಯಾಸ್ಯಸದ್ಮನಃ ।**
**[೪]ಉಲ್ಲಿಖ್ಯ ಘಟಿತೋ ಧಾತ್ರಾ [೫]ರೌಕ್ಮಸ್ತಂಭ ಇವೈಕಕಃ ॥ ೧೪ ॥**

ಈ ವೃಷಭಸ್ವಾಮಿಯ ಮುಖವೆಂಬ ಮನೆಗೆ ಬ್ರಹ್ಮನು ಬರೆದು ಸೇರಿಸಿದ ಬಂಗಾರಮಯವಾದೊಂದು ಸ್ತಂಭದಂತಿರುವ ಕಂಠವು ಮನೋಹರವಾದ ರೇಖೆಗಳನ್ನು ಧರಿಸಿತು. ವೃಷಭಸ್ವಾಮಿಯ ಕಂಠದಲ್ಲಿ ಸುಂದರವಾದ ರೇಖೆಗಳಿದ್ದುವೆಂದು ಭಾವವು.

---

೧ ಸಮಚತುರಸ್ರಸಂಸ್ಥಾನಂ. ೨ ಸಂಹನನಂ. ೩ ಅಸಾಧಾರಣಂ. ೪ ಇಂದ್ರನೀಲಮಣಿಭಿಃ. ೫ ಉದ್ಯಾನಂ. ೬ ಮೃಗಬಂಧಿನ್ಯೌ. ೭ ಸಂಧಾರಣಾಯ.

೧ ಉಭಯಭಾಗೌ. ೨ ಸಂತೋಷಃ. ೩ ಪ್ರವೇಶದ್ವಾರಂ. ೪ ಉತ್ಕೀರ್ಯ ಘಟಿತಃ. ೫ ಸುವರ್ಣಮಯಃ.

[1]ಮಹಾನಾಯಕಸಂಸಕ್ತಾಂ ಹಾರಯಷ್ಟಿಮಸೌ ದಧೇ ।
ವಕ್ಷಸಾ [2]ಗುಣರಾಜನ್ಯಪೃತನಾಮಿವ [3]ಸಂಹತಾಮ್ ॥ ೧೫ ॥

ಈ ವೃಷಭಸ್ವಾಮಿಯು ಗುಣವಂತರಾದ ರಾಜಪುತ್ರರ ಸೈನ್ಯದಂತೆ ಸೇರಿರುವುದೂ ಮಧ್ಯದಲ್ಲಿರುವ ದೊಡ್ಡ ರತ್ನದಿಂದ ಯುಕ್ತವೂ ಆದ ಹಾರವನ್ನು ಎದೆಯಲ್ಲಿ ಧರಿಸಿದರು.

ಇಂದ್ರಚ್ಛಂದಂ ಮಹಾಹಾರಮಧತ್ತಾಸೌ ಸ್ಫುರದ್ದ್ಯುತಿಃ ।
ವಕ್ಷಸಾ ಸಾನುನಾದ್ರೀಂದ್ರೋ ಯಥಾನಿರ್ಝರ[4]ಸಂಕರಮ್ ॥ ೧೬ ॥

ಮಹಾಮೇರುಪರ್ವತವು ತಪ್ಪಲುಪ್ರದೇಶದಲ್ಲಿ ಗಿರಿನದಿಯ ಪ್ರವಾಹವನ್ನು ಧರಿಸುವಂತೆ ದೇದೀಪ್ಯಮಾನರಾದ ಈ ವೃಷಭಸ್ವಾಮಿಯು ಎದೆಯಲ್ಲಿ ಇಂದ್ರಚ್ಛಂದವೆಂಬ ದೊಡ್ಡ ಹಾರವನ್ನು ಧರಿಸಿದರು.

ಹಾರೇಣ ಹಾರಿಣಾ ತೇನ ತದ್ವಕ್ಷೋರುಚಿಮಾನಶೇ ।
ಗಂಗಾಪ್ರವಾಹಸಂಸಕ್ತಹಿಮಾದ್ರಿತಟಸಂಭವಾಮ್ ॥ ೧೭ ॥

ಮನೋಹರವಾದ ಆ ರತ್ನಹಾರದಿಂದ ವೃಷಭಸ್ವಾಮಿಯ ಎದೆಯು ಗಂಗಾನದಿಯ ಪ್ರವಾಹದಿಂದ ಸಂಬಂಧಿಸಿರುವ ಹಿಮವತ್ಪರ್ವತದ ತಪ್ಪಲಲ್ಲಿ ಉಂಟಾದ ಶೋಭೆಯನ್ನು ಹೊಂದಿತು. ಹಿಮವತ್ಪರ್ವತದ ತಪ್ಪಲಲ್ಲಿ ಗಂಗಾನದಿಯ ಪ್ರವಾಹವು ಶೋಭಿಸುವಂತೆ ವೃಷಭಸ್ವಾಮಿಯ ಎದೆಯಲ್ಲಿ ಆ ರತ್ನಹಾರವು ಶೋಭಿಸಿತೆಂದು ಭಾವವು.

ವಕ್ಷಸ್ಸರಸಿ ರಮ್ಯೇಸ್ಯ ಹಾರರೋಚಿಶ್ಛಟಾಂಭಸಾ ।
ಸಂಭೃತೇ ಸುಚಿರಂ ರೇಮೇ ದಿವ್ಯಶ್ರೀಕಲಹಂಸಿಕಾ ॥ ೧೮ ॥

ಹಾರದ ಕಾಂತಿಯ ಪರಂಪರೆಯೆಂಬ ನೀರಿನಿಂದ ತುಂಬಿದ ಈ ವೃಷಭಸ್ವಾಮಿಯ ರಮಣೀಯವಾದ ಎದೆಯೆಂಬ ಸರೋವರದಲ್ಲಿ ದಿವ್ಯ ಲಕ್ಷ್ಮಿಯೆಂಬ ಸ್ತ್ರೀಹಂಸ ಪಕ್ಷಿಯು ಬಹುಕಾಲದ ವರೆಗೆ ಕ್ರೀಡಿಸಿತು.

ವಕ್ಷಃಶ್ರೀಗೇಹಪರ್ಯಂತೇ ತಸ್ಯಾಂ[5]ಸೌ ಶ್ರಿಯಮಾಪತುಃ ।
ಜಯಲಕ್ಷ್ಮೀಕೃತಾವಾಸೌ ತುಂಗಾವಟ್ಟಾಲಕಾವಿವ ॥ ೧೯ ॥

ಆ ವೃಷಭಸ್ವಾಮಿಯ ವಕ್ಷಸ್ಥಲವೆಂಬ ಲಕ್ಷ್ಮೀಗೃಹದ ಸಮೀಪದಲ್ಲಿರುವ ಭುಜಶಿರಸ್ಸುಗಳು ಜಯಲಕ್ಷ್ಮಿಯು ವಾಸಮಾಡುವ ಉನ್ನತವಾದ ಉಪ್ಪರಿಗೆಗಳಂತೆ ಶೋಭಿಸಿದುವು.

ಬಾಹೂ ಕೇಯೂರಸಂಘಟ್ಟಮಸೃಣಾಂಸೌ ದಧೇ ವಿಭುಃ ।
ಕಲ್ಪಾಂಘ್ರಿಪಾವಿವಾಭೀಷ್ಟಫಲದೌ [6]ಶ್ರೀಲತಾಶ್ರಿತೌ ॥ ೨೦ ॥

ವೃಷಭಸ್ವಾಮಿಯು ಕಲ್ಪವೃಕ್ಷಗಳಂತೆ ಇಷ್ಟಾರ್ಥವನ್ನು ಕೊಡುವುವೂ ಲಕ್ಷ್ಮಿಯೆಂಬ ಲತೆಯಿಂದ ಆಶ್ರಯಿಸಲ್ಪಟ್ಟುವೂ ಬಾಹುಮುರಿಯ ಸಂಘರ್ಷಣದಿಂದ ಮೃದುವಾದ ಭುಜಶಿರಸ್ಸುಗಳುಳ್ಳುವೂ ಆದ ಎರಡು ಭುಜಗಳನ್ನು ಧರಿಸಿದ್ದರು.

ನಖಾ[7]ನೂಹೇ [8]ಸುಖಾಲೋಕಾನ್ಸ ಕರಾಂಗುಲಿಸಂಶ್ರಿತಾನ್ ।
[9]ದಶಾವತಾರಸಂಭುಕ್ತಲಕ್ಷ್ಮೀವಿಭ್ರಮದರ್ಪಣಾನ್ ॥ ೨೧ ॥

ವೃಷಭಸ್ವಾಮಿಯು ಮಹಾಬಲಮೊದಲಾದ ಹತ್ತು ಅವತಾರಗಳಲ್ಲಿ ಅನುಭವಿಸಿದ ಲಕ್ಷ್ಮಿಯ ವಿಲಾಸಾರ್ಥವಾದ ಕನ್ನಡಿಗಳಂತಿರುವುವೂ ಸುಖಕರವಾದ ಪ್ರಕಾಶವುಳ್ಳುವೂ ಕೈಬೆರಳುಗಳಲ್ಲಿರುವುವೂ ಆದ ಉಗುರುಗಳನ್ನು ಧರಿಸಿದರು.

೧ ಮಹಾಮಧ್ಯಮಣಿಯುಕ್ತಾಂ. ೨ ಗುಣವದ್ರಾಜಪುತ್ರಸೈನ್ಯಂ. ೩ ಸಂಯುಕ್ತಾಂ. ೪ ಪ್ರವಾಹಂ. ೫ ಭುಜಶಿರಸೀ. ೬ ಶ್ರೀರೇವ ಲತಾ. ೭ ಧೃತವಾನ್. ೮ ಸುಖಪ್ರಕಾಶಕಾನ್. ೯ ಮಹಾಬಲಾದಿದಶಾವತಾರೇಷು ಸಂಭುಕ್ತಲಕ್ಷ್ಮೀವಿಲಾಸಮುಕುರಾನ್.

[1]ಮಧ್ಯೇಕಾಯಮಸೌ ನಾಭಿಮದಧಾನ್ನಾಭಿನಂದನಃ ।
ಸರಸೀಮಿವ ಸಾವರ್ತಾಂ ಲಕ್ಷ್ಮೀಹಂಸೀನಿಷೇವಿತಾಮ್ ॥ ೨೨ ॥

ನಾಭಿರಾಜನ ಪುತ್ರರಾದ ಈ ವೃಷಭತೀರ್ಥಂಕರರು ತಮ್ಮ ಶರೀರಮಧ್ಯದಲ್ಲಿ ಲಕ್ಷ್ಮಿಯೆಂಬ ಸ್ತ್ರೀಹಂಸಪಕ್ಷಿಯಿಂದ ಸೇವಿಸಲ್ಪಟ್ಟುದೂ ಸುಳಿಗಳೊಡನೆ ಕೂಡಿರುವುದೂ ಆದ ಸರೋವರದಂತಿರುವ ನಾಭಿಯನ್ನು ಧರಿಸಿದರು.

[2]ಸಮೇಖಲಮಧಾತ್ಕಾಂತಿಂ ಜಘನಂ ತಸ್ಯ ಸಾಂಶುಕಮ್ ।
ನಿತಂಬಮಿವ ಭೂಭರ್ತುಃ ಸತಡಿಚ್ಛರದಂಬುದಮ್ ॥ ೨೩ ॥

ಕಾಂಚೀದಾಮ(ಉಡುದಾರ)ವನ್ನೂ ಸೂಕ್ಷ್ಮವಸ್ತ್ರವನ್ನೂ ಧರಿಸಿರುವ ಆ ವೃಷಭಸ್ವಾಮಿಯ ಸೊಂಟವು ಮಿಂಚುಸಹಿತವಾದ ಶರತ್ಕಾಲದ ಮೇಘವನ್ನು ಧರಿಸಿರುವ ಪರ್ವತದ ತಪ್ಪಲುಪ್ರದೇಶದಂತೆ ಕಾಂತಿಯನ್ನು ಧರಿಸಿತು.

ಬಭಾರೋರುದ್ವಯಂ ಧೀರಃ ಕಾರ್ತಸ್ವರವಿಭಾಸ್ವರಮ್ ।
ಲಕ್ಷ್ಮೀದೇವ್ಯಾ ಇವಾಂದೋಲಸ್ತಂಭಯುಗ್ಮಕಮುಚ್ಚಕೈಃ ॥ ೨೪ ॥

ಧೀರರಾದ ಆ ವೃಷಭಸ್ವಾಮಿಯು ಲಕ್ಷ್ಮೀದೇವಿಯ ಉನ್ನತವಾದ ಎರಡು ಉಯ್ಯಾಲೆಕಂಭಗಳಂತಿರುವುವೂ ಬಂಗಾರದ ಕಾಂತಿಯುಳ್ಳುವೂ ಆದ ಎರಡು ತೊಡೆಗಳನ್ನು ಧರಿಸಿದರು.

ಜಂಘೇ ಮದನಮಾತಂಗದುರ್ಲಂಘ್ಯಾರ್ಗಲವಿಭ್ರಮೇ ।
ಲಕ್ಷ್ಮ್ಯೈವೋ[3]ದ್ವರ್ತಿತೇ ಭರ್ತುಃ ಪರಾಂ ಕಾಂತಿಮವಾಪತಾಮ್ ॥

ಮನ್ಮಥನೆಂಬ ಆನೆಗೆ ದಾಟುವುದಕ್ಕಶಕ್ಯವಾದ ಅಗಳಿ(ಒದೆ)ಮರದಂತಿರುವ ವೃಷಭಸ್ವಾಮಿಯ ಕಣಕಾಲುಗಳೆರಡು ಲಕ್ಷ್ಮೀದೇವಿಯಿಂದ ಉಜ್ವಲ್ಪಟ್ಟವೆಯೋ ಎಂಬಂತೆ ಅಧಿಕವಾದ ಕಾಂತಿಯನ್ನು ಧರಿಸಿದುವು.

ಪಾದಾರವಿಂದಯೋಃ ಕಾಂತಿರಸ್ಯ ಕೇನೋಪಮೀಯತೇ ।
ತ್ರಿಜಗಚ್ಛ್ರೀಸಮಾಶ್ಲೇಷಸೌಭಾಗ್ಯಮದಶಾಲಿನೋಃ ॥ ೨೬ ॥

ಮೂರುಲೋಕದ ಲಕ್ಷ್ಮಿಯ ಸಂಬಂಧದಿಂದುಂಟಾದ ಸೌಭಾಗ್ಯದ ಮದದಿಂದ ಮನೋಹರಗಳಾಗಿರುವ ಈ ವೃಷಭಸ್ವಾಮಿಯ ಪಾದಕಮಲಗಳ ಕಾಂತಿಯನ್ನು ಯಾವ ಪದಾರ್ಥದೊಡನೆ ಹೋಲಿಸುವುದು ? ಲೋಕದಲ್ಲಿರುವ ಎಲ್ಲಾ ವಸ್ತುಗಳಿಗಿಂತಲೂ ಸ್ವಾಮಿಯ ಪಾದಕಮಲಗಳು ಸುಂದರವಾಗಿದ್ದುವೆಂದು ಭಾವವು.

ಇತ್ಯಸ್ಯಾವಿರಭೂತ್ಕಾಂತಿ[4]ರಾಲಕಾಗ್ರಂ ನಖಾಗ್ರತಃ ।
ನೂನಮನ್ಯತ್ರ ನಾಲಬ್ಧ ಸಾ [5]ಪ್ರತಿಷ್ಠಾಂ ಸ್ವವಾಂಛಿತಾಮ್ ॥ ೨೭ ॥

ಹೀಗೆ ಈ ವೃಷಭಸ್ವಾಮಿಯ ಉಗುರಿನ ತುದಿಯಿಂದ ತಲೆಯ ಕೂದಲುಗಳ ತುದಿಯವರೆಗೂ ಕಾಂತಿಯು ಆವಿರ್ಭವಿಸಿತು. ನಿಜವಾಗಿಯೂ ಆ ಕಾಂತಿಗೆ ಇಷ್ಟವಾದ ಆಶ್ರಯವು ಬೇರೆ ಎಲ್ಲಿಯೂ ದೊರೆಯಲಿಲ್ಲವೆಂದು ತೋರುತ್ತದೆ.

ನಿಸರ್ಗಸುಂದರಂ ತಸ್ಯ ವಪುರ್ವಜ್ರಾಸ್ಥಿಬಂಧನಮ್ ।
ವಿಷಶಸ್ತ್ರಾದ್ಯಭೇದ್ಯತ್ವಂ ಭೇಜೇ ರುಕ್ಮಾದ್ರಿಸಚ್ಛವಿ ॥ ೨೮ ॥

ಸ್ವಭಾವದಿಂದ ಸುಂದರವೂ ವಜ್ರದಂತೆ ದೃಢವಾದ ಅಸ್ಥಿ(ಎಲುಬು) ಬಂಧನವುಳ್ಳುದೂ ಬಂಗಾರದ ಬೆಟ್ಟ(ಮೇರು)ದಂತೆ ಕಾಂತಿಯುಳ್ಳುದೂ ಆದ ಆ ಸ್ವಾಮಿಯ ಶರೀರವು ವಿಷಶಸ್ತ್ರಮೊದಲಾದುವುಗಳಿಂದ ಅಭೇದ್ಯತ್ವವನ್ನು ಹೊಂದಿತು. ಅಭೇದ್ಯವಾಗಿದ್ದಿತೆಂದರ್ಥವು.

೧ ಶರೀರಮಧ್ಯೇ. ೨ ಕಾಂಚೇದಾಮಸಹಿತಂ. ೩ ಉತ್ತೇಜಿತೇ. ೪ ಅಲಕಾಗ್ರಾದಾರಭ್ಯ. ೫ ಆಶ್ರಯಂ.

**ಯತ್ರ ವಜ್ರಮಯಾಸ್ಥೀನಿ [೧]ವಜ್ರೈರ್ವಲಯಿತಾನಿ ಚ ।**
**ವಜ್ರನಾರಾಚ[೨]ಭಿನ್ನಾನಿ ತತ್ಸಂಹನನಮೀಶಿತುಃ ॥ ೨೯ ॥**

ಸ್ವಾಮಿಯ ಶರೀರದಲ್ಲಿ ವಜ್ರಮಯವಾದ ಮೂಳೆ(ಎಲುಬು)ಗಳು ವಜ್ರಮಯವಾದ ವೇಷ್ಟನಗಳಿಂದ ಸುತ್ತಲ್ಪಟ್ಟುವೂ ವಜ್ರಮಯವಾದ ಕೀಲುಗಳಿಂದ ಕೀಲಿತಗಳೂ ಆಗಿದ್ದುವು. ಅಂತಹ ಶರೀರಬಂಧನಕ್ಕೆ ವಜ್ರವೃಷಭನಾರಾಚ ಸಂಹನನವೆಂದು ಹೆಸರು.

**[೩]ತ್ರಿದೋಷಜಾ ಮಹಾತಂಕಾ ನಾಸ್ಯ ದೇಹೇ ವ್ಯಧುಃ ಪದಮ್ ।**
**ಮರುತಾಂ ಚಲಿತಾ[೪]ಗಾನಾಂ ನನು ಮೇರುರಗೋಚರಃ ॥ ೩೦ ॥**

ಈ ವೃಷಭಸ್ವಾಮಿಯ ಶರೀರದಲ್ಲಿ ವಾತಪಿತ್ತಶ್ಲೇಷ್ಮಗಳಿಂದುಂಟಾಗುವ ಮಹಾವ್ಯಾಧಿಗಳು ಸ್ಥಾನವನ್ನು ಮಾಡಲಿಲ್ಲ. ಸ್ವಾಮಿಯ ದೇಹದಲ್ಲಿ ರೋಗಗಳುಂಟಾಗುತ್ತಿರಲಿಲ್ಲವೆಂದು ಭಾವವು. ಸಾಮಾನ್ಯವಾದ ಪರ್ವತಗಳನ್ನು ಅಲ್ಲಾಡಿಸುವ ಗಾಳಿಗಳು ಮಹಾಮೇರುಪರ್ವತವನ್ನು ಅಲ್ಲಾಡಿಸುವುವೇ ?

**ನ ಜರಾಸ್ಯ ನ ಖೇದೋ ವಾ ನೋಪಘಾತೋಽಪಿ ಜಾತು ಚಿತ್ ।**
**ಕೇವಲಂ ಸುಖಸಾದ್ಭೂತೋ ಮಹೀತಲ್ಪೇ[೫]ಮಹೀಯತ ॥ ೩೧ ॥**

ಈ ವೃಷಭಸ್ವಾಮಿಗೆ ಮುಪ್ಪೂ ಮನಃಖೇದವೂ ಇಚ್ಛಾಪ್ರತಿಬಂಧವೂ ಎಂದೂ ಉಂಟಾಗಲಿಲ್ಲ. ಪೃಥ್ವಿಯಲ್ಲಿ ಕೇವಲ ಸುಖಾಧೀನರಾಗಿ ಪೂಜಿಸಲ್ಪಡುತ್ತಿದ್ದರು.

**ತದಸ್ಯ ರುರುಚೇ ಗಾತ್ರಂ ಪರಮೌದಾರಿಕಾಹ್ವಯಮ್ ।**
**ಮಹಾಭ್ಯುದಯನಿಃಶ್ರೇಯಸಾರ್ಥಾನಾಂ ಮೂಲಕಾರಣಮ್ ॥ ೩೨ ॥**

ಅಧಿಕವಾದ ಅಭ್ಯುದಯಸುಖಕ್ಕೂ ಮೋಕ್ಷಸುಖಕ್ಕೂ ಮೂಲಕಾರಣವಾದ ಈ ವೃಷಭಸ್ವಾಮಿಯ ಪರಮೌದಾರಿಕವೆಂಬ ಶರೀರವು ಬಹಳವಾಗಿ ಪ್ರಕಾಶಿಸಿತು.

**[೬]ಮಾನೋನ್ಮಾನಪ್ರಮಾಣಾನಾಮನ್ಯೂನಾಧಿಕತಾಂ ಶ್ರಿತಮ್ ।**
**ಸಂಸ್ಥಾನಮಾದ್ಯಮಸ್ಯಾಸೀಚ್ಚತುರಸ್ರಂ ಸಮಂತತಃ ॥ ೩೩ ॥**

ಈ ವೃಷಭಸ್ವಾಮಿಗೆ ಎತ್ತರ ಮತ್ತು ವಿಸ್ತಾರಮೊದಲಾದ ಪರಿಮಾಣಗಳಲ್ಲಿ ಹೆಚ್ಚುಕಡಮೆಯಿಲ್ಲದಿರುವ ಸಮಚತುರಸ್ರವೆಂಬ ಮೊದಲನೆಯ ಸಂಸ್ಥಾನ (ಶರೀರಾಕೃತಿ)ವಾಗಿದ್ದಿತು.

**ಯಥಾಸ್ಯ ರೂಪಸಂಪತ್ತಿಸ್ತಥಾ ಭೋಗೈಶ್ಚ ಪಪ್ರಥೇ ।**
**ನ ಹಿ ಕಲ್ಪಾಂಘ್ರಿಪೋದ್ಭೂತಿರನಾಭರಣಭಾಸುರಾ ॥ ೩೪ ॥**

ಈ ವೃಷಭಸ್ವಾಮಿಯ ರೂಪಸಂಪತ್ತಿಯು ಹೇಗೆ ಪ್ರಸಿದ್ಧವಾಗಿದ್ದಿತೋ ಹಾಗೆಯೇ ಸ್ವಾಮಿಯ ಭೋಗಸಾಮಗ್ರಿಗಳೂ ಪ್ರಸಿದ್ಧಗಳಾಗಿದ್ದುವು. ನ್ಯಾಯವೇ :- ಆಭರಣಗಳ ಪ್ರಕಾಶದಿಂದ ರಹಿತವಾದ ಕಲ್ಪವೃಕ್ಷಗಳ ಉತ್ಪತ್ತಿಯು ಇಲ್ಲವಷ್ಟೇ ?

**ಲಕ್ಷಣಾನಿ ಬಭುರ್ಭರ್ತುರ್ದೇಹಮಾಶ್ರಿತ್ಯ ನಿರ್ಮಲಮ್ ।**
**ಜ್ಯೋತಿಷಾಮಿವ ಬಿಂಬಾನಿ ಮೇರೋರ್ಮಣಿಮಯಂ ತಟಮ್ ॥**

ಮಹಾಮೇರುಪರ್ವತದ ರತ್ನಮಯವಾದ ತಪ್ಪಲನ್ನು ಹೊಂದಿ ಸೂರ್ಯಚಂದ್ರಮೊದಲಾದ ಜ್ಯೋತಿರ್ಗಣಗಳ ಪ್ರತಿಬಿಂಬಗಳು ಶೋಭಿಸುವಂತೆ ಸ್ವಾಮಿಯ ನಿರ್ಮಲವಾದ ಶರೀರವನ್ನು ಹೊಂದಿ ಉತ್ತಮಲಕ್ಷಣಗಳು ಶೋಭಿಸಿದುವು.

**ವಿಭುಃ ಕಲ್ಪತರುಚ್ಛಾಯಾಂ ಬಭಾರಾಭರಣೋಜ್ಜ್ವಲಃ ।**
**ಶುಭಾನಿ ಲಕ್ಷಣಾನ್ಯಸ್ಮಿನ್ಕುಸುಮಾನೀವ ರೇಜಿರೇ ॥ ೩೬ ॥**

ರತ್ನಾಭರಣಗಳಿಂದ ದೇದೀಪ್ಯಮಾನರಾದ ಸ್ವಾಮಿಯು ಕಲ್ಪವೃಕ್ಷದಂತೆ ಶೋಭಿಸಿದರು. ಈ ಸ್ವಾಮಿಯಲ್ಲಿ ಶುಭಲಕ್ಷಣಗಳು ಪುಷ್ಪಗಳಂತೆ ಶೋಭಿಸಿದುವು.

**ತಾನಿ ಶ್ರೀವೃಕ್ಷಶಂಖಾಬ್ಜಸ್ವಸ್ತಿಕಾಂಕುಶತೋರಣಮ್ ।**
**[೧]ಪ್ರಕೀರ್ಣಕಸಿತಚ್ಛತ್ರಸಿಂಹವಿಷ್ಟರ[೨]ಕೇತನಮ್ ॥ ೩೭ ॥**

**ಝಷೌ ಕುಂಭೌ ಚ ಕೂರ್ಮಾಶ್ಚ ಚಕ್ರಮಬ್ಧಿಃ ಸರೋವರಮ್ ।**
**[೩]ವಿಮಾನಭವನೇ [೪]ನಾಗೋ ನರನಾರ್ಯೌ ಮೃಗಾಧಿಪಃ ॥ ೩೮ ॥**

**ಬಾಣಬಾಣಾಸನೇ ಮೇರುಃ ಸುರರಾಟ್ಸುರನಿಮ್ನಗಾ ।**
**ಪುರಂ ಗೋಪುರಮಿಂದ್ವರ್ಕೌ ಜಾತ್ಯಶ್ವಸ್ತಾಲವೃಂತಕಮ್ ॥ ೩೯ ॥**

**[೫]ವೇಣುರ್ವೀಣಾ ಮೃದಂಗಶ್ಚ ಸ್ರಜೌ ಪಟ್ಟಾಂಶುಕಾಪಣೌ ।**
**ಸ್ಫುರಂತಿ ಕುಂಡಲಾದೀನಿ ವಿಚಿತ್ರಾಭರಣಾನಿ ಚ ॥ ೪೦ ॥**

**ಉದ್ಯಾನಂ ಫಲಿತಂ ಕ್ಷೇತ್ರಂ ಸುಪಕ್ವಕಲಮಾಂಚಿತಮ್ ।**
**ರತ್ನದ್ವೀಪಶ್ಚ ವಜ್ರಂ ಚ ಮಹೀ ಲಕ್ಷ್ಮೀಃ ಸರಸ್ವತೀ ॥ ೪೧ ॥**

**[೬]ಸುರಭಿಃ [೭]ಸೌರಭೇಯಶ್ಚ ಚೂಡಾರತ್ನಂ ಮಹಾನಿಧಿಃ ।**
**ಕಲ್ಪವಲ್ಲೀ ಹಿರಣ್ಯಂ ಚ ಜಂಬೂವೃಕ್ಷಶ್ಚ [೮]ಪಕ್ಷಿರಾಟ್ ॥ ೪೨ ॥**

**[೯]ಉಡೂನಿ ತಾರಕಾಃ ಸೌಧಂ ಗ್ರಹಾಃ ಸಿದ್ಧಾರ್ಥಪಾದಪಾಃ ।**
**[೧೦]ಪ್ರಾತಿಹಾರ್ಯಾಣ್ಯ[೧೧]ಹಾರ್ಯಾಣಿ ಮಂಗಲಾನ್ಯಪರಾಣಿ ಚ ॥ ೪೩ ॥**

**ಲಕ್ಷಣಾನ್ಯೇವಮಾದೀನಿ ವಿಭೋರಷ್ಟೋತ್ತರಂ ಶತಮ್ ।**
**[೧೨]ವ್ಯಂಜನಾನ್ಯಪರಾಣ್ಯಾಸನ್ ಶತಾನಿ ನವಸಂಖ್ಯಯಾ ॥ ೪೪ ॥**

ಆ ಲಕ್ಷಣಗಳು :- ಶ್ರೀವೃಕ್ಷ (ಬಿಲ್ವವೃಕ್ಷ) ಶಂಖ ಕಮಲ ಸ್ವಸ್ತಿಕ ಅಂಕುಶ ತೋರಣ ಚಾಮರ ಶ್ವೇತಚ್ಛತ್ರ ಸಿಂಹಪೀಠ ಧ್ವಜ ಎರಡುಮೀನುಗಳು ಎರಡುಕುಂಭಗಳು ಆಮೆ ಚಕ್ರ ಸಮುದ್ರ ಸರೋವರ ದೇವವಿಮಾನ ನಾಗೇಂದ್ರಭವನ ಆನೆ ಮನುಷ್ಯ ಮಾನುಷೀ (ಸ್ತ್ರೀ) ಸಿಂಹ ಬಾಣ ಧನುಸ್ಸು ಮಹಾಮೇರು ದೇವೇಂದ್ರ ದೇವಗಂಗಾ ಪಟ್ಟಣ ಗೋಪುರ ಚಂದ್ರ ಸೂರ್ಯ ಉತ್ತಮವಾದ ಕುದುರೆ ಬೀಸಣಿಗೆ ಕೊಳಲು ವೀಣೆ ಮದ್ದಳೆ ಎರಡುಪುಷ್ಪಮಾಲಿಕೆಗಳು ಪಟ್ಟೆಯವಸ್ತ್ರ ಅಂಗಡಿ ಕರ್ಣಕುಂಡಲ ಮೊದಲಾದ ಅನೇಕ ಪ್ರಕಾರವಾದ ಆಭರಣಗಳು ಫಲಭರಿತವಾದ ಉದ್ಯಾನ ಪರಿಪಕ್ವವಾದ ಭತ್ತದ ಪೈರುಳ್ಳ ಕ್ಷೇತ್ರ ರತ್ನದ್ವೀಪ ವಜ್ರ ಭೂಮಿ ಲಕ್ಷ್ಮೀ ಸರಸ್ವತೀ ಕಾಮಧೇನು ವೃಷಭ (ಗೂಳಿ) ಶಿರೋರತ್ನ ಮಹಾನಿಧಿ ಕಲ್ಪಲತಾ ಬಂಗಾರ ನೇರಳೆಯವೃಕ್ಷ ಗರುಡ ನಕ್ಷತ್ರಗಳು ತಾರೆಗಳು ರಾಜಭವನ ಅಂಗಾರಕಾದಿಗ್ರಹಗಳು ಸಿದ್ಧಾರ್ಥವೃಕ್ಷ ಸ್ವಾಭಾವಿಕವಾದ ಅಷ್ಟಮಹಾಪ್ರಾತಿಹಾರ್ಯಗಳು ಬೇರೆ ಮಂಗಲದ್ರವ್ಯಗಳು ಇವು ಮೊದಲಾದ ನೂರೆಂಟು ಮಹಾಲಕ್ಷಣಗಳೂ ಒಂಬೈನೂರು ತಿಲಮಸೂರಿಕಾಮೊದಲಾದ ಸಾಮಾನ್ಯಲಕ್ಷಣಗಳೂ ಸ್ವಾಮಿಯ ಶರೀರದಲ್ಲಿದ್ದುವು.

**ಅಭಿರಾಮಂ ವಪುರ್ಭರ್ತುರ್ಲಕ್ಷಣೈರೇಭಿರೂರ್ಜಿತೈಃ ।**
**ಜ್ಯೋತಿರ್ಭಿರಿವ ಸಂಛನ್ನಂ ಗಗನಪ್ರಾಂಗಣಂ ಬಭೌ ॥ ೪೫ ॥**

ಈ ಉತ್ತಮವಾದ ಲಕ್ಷಣಗಳಿಂದ ಮನೋಹರವಾಗಿರುವ ಸ್ವಾಮಿಯ ಶರೀರವು ಸೂರ್ಯಚಂದ್ರಾದಿಜ್ಯೋತಿರ್ಗಣಗಳಿಂದ ವ್ಯಾಪ್ತವಾದ ಆಕಾಶಪ್ರದೇಶದಂತೆ, ಶೋಭಿಸಿತು.

---

೧ ವಜ್ರಮಯವೇಷ್ಟನೈಃ ವೇಷ್ಟಿತಾನಿ. ೨ ಕೀಲಿತಾನಿ. ೩ ವಾತಪಿತ್ತಶ್ಲೇಷ್ಮಜಾ ಮಹಾವ್ಯಾಧಯಃ. ೪ ವೃಕ್ಷಾಣಾಂ. ೫ ಪೂಜ್ಯೋಽಭೂತ್. ೬ ಉತ್ಸೇಧವಲಯವಿಸ್ತಾರಾಣಾಂ.

೧ ಚಾಮರ. ೨ ಧ್ವಜಃ. ೩ ಸುರವಿಮಾನನಾಗಾಲಯೌ. ೪ ಗಜಃ. ೫ ವಾಂಶಃ. ೬ ಧೇನುಃ. ೭ ವೃಷಭಃ. ೮ ಗರುಡಃ. ೯ ನಕ್ಷತ್ರಾಣಿ. ೧೦ ಅಶೋಕವೃಕ್ಷಾದೀನಿ. ೧೧ ಸ್ವಾಭಾವಿಕಾನಿ. ೧೨ ತಿಲಮಸೂರಿಕಾದೀನಿ.

**ಲಕ್ಷ್ಮಣಾಂ ಚ ಧ್ರುವಂ ಕಿಂಚಿದಸ್ತ್ಯಂತರ್ಲಕ್ಷಣಂ ಶುಭಮ್ ।**
**ಯೇನ [೧]ತೈಃ ಶ್ರೀಪತೇರಂಗಂ ಸ್ಪೃಷ್ಟಂ ಲಬ್ಧಮಕಲ್ಮಷಮ್ ॥ ೪೬ ॥**

ನಿಜವಾಗಿಯೂ ಆ ಲಕ್ಷಣಗಳೂ ವೃಷಭಸ್ವಾಮಿಯ ಪವಿತ್ರವಾದ ಶರೀರವನ್ನು ಸ್ಪರ್ಶಮಾಡುವುದಕ್ಕೋಸ್ಕರ ಶುಭವಾದ ಬೇರೊಂದು ಅಂತರ್ಲಕ್ಷಣವನ್ನು ಪಡೆದಿವೆ.

**ಲಕ್ಷ್ಮೀರ್ನಿಕಾಮಕಠಿನೇ ವಿರಾಗಸ್ಯ ಜಗದ್ಗುರೋಃ ।**
**[೨]ಕಥಂಕಥಮಪಿ ಪ್ರಾಪದವಕಾಶಂ ಮನೋಗೃಹೇ ॥ ೪೭ ॥**

ವೀತರಾಗರೂ ಜಗದ್ಗುರುವೂ ಆದ ವೃಷಭಸ್ವಾಮಿಯ ಅತ್ಯಂತ ಕಠಿಣವಾದ ಮನಸ್ಸೆಂಬ ಗೃಹದಲ್ಲಿ ಲಕ್ಷ್ಮಿಯು ಬಹಳ ಪ್ರಯಾಸದಿಂದ ಸ್ಥಾನವನ್ನು ಪಡೆದಳು.

**ಸರಸ್ವತೀ ಪ್ರಿಯಾಸ್ಯಾಸೀತ್ಕೀರ್ತಿಶ್ಚಾಕಲ್ಪವರ್ತಿನೀ ।**
**ಲಕ್ಷ್ಮೀಂ ತಡಿಲ್ಲತಾಲೋಲಾಂ ಮಂದಪ್ರೇಮ್ಣೈವ ಸೋವಹತ್ ॥ ೪೮ ॥**

ಸರಸ್ವತಿಯಲ್ಲಿಯೂ ಕಲ್ಪಕಾಲದವರೆಗಿರುವ ಕೀರ್ತಿಯಲ್ಲಿಯೂ ವೃಷಭ ಸ್ವಾಮಿಗೆ ಬಹಳ ಪ್ರೀತಿಯಿದ್ದಿತು. ಸ್ವಾಮಿಯು ಲಕ್ಷ್ಮಿಯನ್ನು ಮಿಂಚಿನಂತೆ ಚಂಚಲಳೆಂದು ತಿಳಿದು ಅವಳನ್ನು ಸ್ವಲ್ಪ ಪ್ರೇಮದಿಂದ ಧರಿಸಿದರು.

**ತದೀಯರೂಪಲಾವಣ್ಯಯೌವನಾದಿಗುಣೌ[೩]ದ್ಗಮೈಃ ।**
**ಆಕೃಷ್ಟಾ ಜನತಾನೇತ್ರಭೃಂಗಾ ನಾನ್ಯತ್ರ ರೇಮಿರೇ ॥ ೪೯ ॥**

ಆ ಸ್ವಾಮಿಯ ರೂಪಲಾವಣ್ಯಯೌವನ ಮೊದಲಾದ ಗುಣಗಳೆಂಬ ಪುಷ್ಪಗಳಿಂದ ಆಕರ್ಷಿಸಲ್ಪಟ್ಟ ಜನರ ನೇತ್ರಗಳೆಂಬ ಭ್ರಮರಗಳು ಬೇರೆಕಡೆಯಲ್ಲಿ ಪ್ರೀತಿಪಡಲಿಲ್ಲ.

**ನಾಭಿರಾಜೋನ್ಯದಾ ದೃಷ್ಟ್ವಾ ಯೌವನಾರಂಭಮೀಶಿತುಃ ।**
**[೪]ಪರಿಣಾಯಯಿತುಂ ದೇವಮಿತಿ ಚಿಂತಾಂ ಮನಸ್ಯಧಾತ್ ॥ ೫೦ ॥**

ಒಂದುದಿವಸ ನಾಭಿರಾಜಮನುವು ಸ್ವಾಮಿಗೆ ಯೌವನದಶೆಯು ಪ್ರಾರಂಭ ವಾದುದನ್ನು ನೋಡಿ ಸ್ವಾಮಿಗೆ ವಿವಾಹಮಾಡುವುದಕ್ಕೋಸ್ಕರ ಮುಂದೆ ಹೇಳು ವಂತೆ ಮನಸ್ಸಿನಲ್ಲಿ ಯೋಚಿಸಿದನು.

**ದೇವೋಯಮತಿಕಾಂತಾಂಗಃ ಕಾಸ್ಯ ಸ್ಯಾಚ್ಚಿತ್ತಹಾರಿಣೀ ।**
**ಸುಂದರೀ ಮಂದರಾಗೇಸ್ಮಿ[೫]ನ್ನಾರಂಭೋ ದುರ್ಘಟೋ ಹ್ಯಯಮ್ ॥**

''ಈ ಸ್ವಾಮಿಯು ಅತ್ಯಂತ ಸುಂದರರಾಗಿದ್ದಾರೆ. ಇವರ ಮನಸ್ಸನ್ನು ಹರಣ ಮಾಡುವ ಸುಂದರಿಯು ಲೋಕದಲ್ಲಿ ಯಾವಳಿರುವಳೋ. ಭೋಗೋಪ ಭೋಗಗಳಲ್ಲಿ ಮಂದವಾದ ಅನುರಾಗವುಳ್ಳ ಈ ಸ್ವಾಮಿಯಲ್ಲಿ ಈ ವಿವಾಹಾರಂಭವು ಅತ್ಯಂತ ಕಠಿಣವಾಗಿದೆ. ಸ್ವಾಮಿಯು ವಿವಾಹಕ್ಕೆ ಸಮ್ಮತಿಸುವುದು ಕಷ್ಟವೆಂದರ್ಥವು.

**ಅಪಿ ಚಾಸ್ಯ ಮಹಾನಸ್ತಿ [೬]ಪ್ರಾರಂಭ[೭]ಸ್ತೀರ್ಥವರ್ತನೇ ।**
**ಸೋ[೮]ತಿವರ್ತೀವ ಗಂಧೇಭೋ ನಿಯಮಾತ್ಪವಿಶೇ[೯]ದ್ವನಮ್ ॥ ೫೨ ॥**

ಆದರೆ ಗೃಹಸ್ಥಧರ್ಮಪ್ರವರ್ತನೆಯ ನಿಮಿತ್ತವಾಗಿ ಇವರ ಈ ಮಹಾ ವಿವಾಹಾರಂಭವಾಗಿದೆ. ಅತಿ ಕ್ರಮಿಸು(ಮೀರು)ವುದೇ ಸ್ವಭಾವವಾಗಿ ಉಳ್ಳ ಮದ ಗಜದಂತೆ ಸ್ವಾಮಿಯು ನಿಶ್ಚಯವಾಗಿ ತಪೋವನವನ್ನು ಪ್ರವೇಶಮಾಡುವರು.

**ತಥಾಪಿ ಕಾಲಲಬ್ಧಿಃ ಸ್ಯಾದ್ಯಾವದಸ್ಯ [೧೦]ತಪಸ್ಯಿತುಮ್ ।**
**ತಾವತ್ಕಲತ್ರಮುಚಿತಂ ಚಿಂತ್ಯಂ [೧೧]ಲೋಕಾನುರೋಧತಃ ॥ ೫೩ ॥**

೧ ಲಕ್ಷಣೈಃ. ೨ ಅತ್ಯಂತಪ್ರಯಾಸೇನ. ೩ ಪುಷ್ಪೈಃ. ೪ ವಿವಾಹಯಿತುಂ. ೫ ವಿವಾಹೋಪಕ್ರಮಃ. ೬ ವಿವಾಹಪ್ರಾರಂಭಃ. ೭ ಸಾಗಾರಧರ್ಮವರ್ತನೇ. ೮ ಅತಿಕ್ರಮಣಶೀಲಃ. ೯ ತಪೋವನಂ. ೧೦ ತಪಃ ಕರ್ತುಂ. ೧೧ ಜನಾನುವರ್ತನತಃ.

ಹಾಗಿದ್ದರೂ ಇವರಿಗೆ ತಪಸ್ಸುಮಾಡುವುದಕ್ಕೆ ಕಾಲಲಬ್ಧಿಯು ಬರುವವರೆಗೂ ಲೋಕರೂಢಿಗನುಸಾರವಾಗಿ ಯೋಗ್ಯವಾದ ಕಲತ್ರ(ಸ್ತ್ರೀ)ವನ್ನು ಯೋಚಿಸಬೇಕು.

**ತತಃ ಪುಣ್ಯವತೀ ಕಾಚಿ[೧]ದುಚಿತಾಭಿಜನಾ ವಧೂಃ ।**
**ಕಲಹಂಸೀವ [೨]ನಿಷ್ಪಂಕಮಸ್ಯಾವಸತು [೩]ಮಾನಸಮ್ ॥ ೫೪ ॥**

ಆದುದರಿಂದ ಪುಣ್ಯವತಿಯೂ ಸತ್ಕುಲಪ್ರಸೂತಳೂ ಆದ ಯಾವಳಾದ ರೊಬ್ಬಳು ಸ್ತ್ರೀಯು, ಕೆಸರಿಲ್ಲದಿರುವ ಮಾನಸ ಸರೋವರದಲ್ಲಿ ಸ್ತ್ರೀಹಂಸಪಕ್ಷಿಯು ವಾಸಮಾಡುವಂತೆ, ನಿರ್ದೋಷವಾದ ಈ ಸ್ವಾಮಿಯ ಮನಸ್ಸಿನಲ್ಲಿ ವಾಸಮಾಡಲಿ.

**ಇತಿ ನಿಶ್ಚಿತ್ಯ ಲಕ್ಷ್ಮೀವಾನ್ನಾಭಿರಾಜೋತಿಸಂಭ್ರಮೀ ।**
**[೪]ಸಸಾಂತ್ವಮುಪಸೃತ್ಯೇದಮವೋಚದ್ವದತಾಂವರಮ್ ॥ ೫೫ ॥**

ಈ ಪ್ರಕಾರವಾಗಿ ನಿಶ್ಚಯಿಸಿ ಲಕ್ಷ್ಮೀವಂತನೂ ಬಹಳ ತ್ವರೆಯುಳ್ಳವನೂ ಆದ ನಾಭಿರಾಜಮನುವು ವಕ್ತೃಗಳಲ್ಲಿ ಶ್ರೇಷ್ಠರಾದ ಸ್ವಾಮಿಯ ಸಮೀಪಕ್ಕೆ ಹೋಗಿ ಸಾವಧಾನದಿಂದ ಮುಂದೆಹೇಳುವ ಮಾತನ್ನು ಹೇಳಿದನು.

**ದೇವ ಕಿಂಚಿ[೫]ದ್ವಿವಕ್ಷಾಮಿ ಸಾವಧಾನಮಿತಃ ಶೃಣು ।**
**ತ್ವಯೋಪಕಾರೋ ಲೋಕಸ್ಯ ಕರಣೀಯೋ ಜಗತ್ಪತೇ ॥ ೫೬ ॥**

''ಲೋಕಾಧಿಪತಿಯಾದ ದೇವನೇ ! ಒಂದು ವಿಷಯವನ್ನು ಹೇಳಲಿಚ್ಛಿಸುತ್ತೇನೆ. ಸಾವಧಾನದಿಂದ ಈ ಕಡೆಗೆ ಗಮನಕೊಟ್ಟು ಕೇಳಬೇಕು. ನೀನು ಲೋಕಕ್ಕೆ ಉಪಕಾರವನ್ನು ಮಾಡಬೇಕಾಗಿದೆ.

**ಹಿರಣ್ಯಗರ್ಭಸ್ತ್ವಂ ಧಾತಾ ಜಗತಾಂ ತ್ವಂ [೬]ಸ್ವಭೂರಸಿ ।**
**[೭]ನಿಭಮಾತ್ರಂ ತ್ವದುತ್ಪತ್ತೌ [೮]ಪಿತೃಮನ್ಯಾ ಯತೋ ವಯಮ್ ॥ ೫೭ ॥**

ನೀನು ಹಿರಣ್ಯಗರ್ಭ(ಬ್ರಹ್ಮ)ನೂ ಲೋಕೋದ್ಧಾರಕನೂ ಸ್ವಯಂಭುವೂ ಆಗಿರುತ್ತಿ. ನಾವು ನಿನ್ನ ಉತ್ಪತ್ತಿಯಲ್ಲಿ ನೆಪಮಾತ್ರಕ್ಕೆ ತಾಯಿತಂದೆಗಳೆಂದು ತಿಳಿಯುವವರಾಗಿದ್ದೇವೆ.

**ಯಥಾರ್ಕಸ್ಯ ಸಮುದ್ಭೂತೌ ನಿಮಿತ್ತಮುದಯಾಚಲಃ ।**
**ಸ್ವತಸ್ತು ಭಾಸ್ವಾನುದ್ಯಾತಿ ತಥೈವಾ[೯]ಸ್ಮದ್ಭವಾನಪಿ ॥ ೫೮ ॥**

ಸೂರ್ಯನ ಉತ್ಪತ್ತಿಯಲ್ಲಿ ಉದಯಪರ್ವತವು ಹೇಗೆ ನಿಮಿತ್ತವಾಗಿದೆಯೋ ಆದರೆ ಸೂರ್ಯನು ಹೇಗೆ ತಾನಾಗಿ ಉದಯಿಸುತ್ತಾನೋ ಹಾಗೆಯೇ ನೀನು ನಮ್ಮಿಂದ ಉದ್ಭವಿಸಿದುದೆಂಬುದು. ನಿನ್ನ ಉತ್ಪತ್ತಿಗೆ ನಾವು ನಿಮಿತ್ತಮಾತ್ರ ರಾಗಿರುವುದಾಗಿದೆ.

**ಗರ್ಭಗೇಹೇ [೧೦]ಶುಚೌ ಮಾತುಸ್ತ್ವಂ ದಿವ್ಯೇ ಪದ್ಮವಿಷ್ಟರೇ ।**
**ನಿಧಾಯ [೧೧]ಸ್ವಾಂ ಪರಾಂ ಶಕ್ತಿಮುದ್ಭೂತೋ [೧೨]ನಿಷ್ಕಲೋಸ್ಯತಃ ॥**

ಶ್ರೀದೇವಿಮೊದಲಾದವರಿಂದ ಪರಿಶೋಧಿಸಲ್ಪಟ್ಟು ಪರಿಶುದ್ಧವಾದ ನಿನ್ನ ತಾಯಿಯ ಗರ್ಭವೆಂಬ ಗೃಹದಲ್ಲಿ ದಿವ್ಯವಾದ ಪದ್ಮಾಸನದಲ್ಲಿ ನೀನು ನಿನ್ನ ಉತ್ಕೃಷ್ಟವಾದ ಶಕ್ತಿಯನ್ನು ಸ್ಥಾಪಿಸಿ ಉದ್ಭವಿಸಿದೆ. ಈ ಕಾರಣದಿಂದ ನೀನು ಅಶರೀರನಾಗಿರುತ್ತಿ.

**ಗುರುಬ್ರುವೋಹಂ [೧೩]ತದ್ದೇವ ತ್ವಾಮಿ[೧೪]ತ್ಯಭ್ಯರ್ಥಯೇ ವಿಭುಮ್ ।**
**ಮತಿಂ ವಿಧೇಹಿ ಲೋಕಸ್ಯ [೧೫]ಸರ್ಜನಂ ಪ್ರತಿ ಸಂಪ್ರತಿ ॥ ೬೦ ॥**

೧ ಯೋಗ್ಯಕುಲಾ. ೨ ಅಕಲ್ಮಷಂ, ಅಕರ್ದಮಂ ಚ. ೩ ಮನಃ, ಮಾನಸಂ ನಾಮ ಸರಶ್ಚ. ೪ ಸಾಮಸಹಿತಂ, ಅತಿಮಧುರಂ ವಾ. ೫ ವಕ್ತುಮಿಚ್ಛಾಮಿ. ೬ ಸ್ವಯಂಭೂಃ. ೭ ವ್ಯಾಜಮಾತ್ರಂ. ೮ ಪಿತೃಂಮನ್ಯಾ ಇತ್ಯಪಿ ಪಾಠಃ. ೯ ಹಾ (ಪಂಚಮೀ). ೧೦ ಶ್ರೀದೇವ್ಯಾದಿಭಿಃ ಶೋಧಿತೇ. ೧೧ ಭವತ್ಸಂಬಂಧಿನೀಂ. ೧೨ ನಿಃಶರೀರಃ. ೧೩ ತಸ್ಮಾತ್ಕಾರಣಾತ್. ೧೪ ಪ್ರಾರ್ಥಯೇ. ೧೫ ಸೃಷ್ಟಿಂ.

ಆದುದರಿಂದ ಎಲೈ ದೇವನೇ! ತಂದೆಯೆನಿಸಿಕೊಳ್ಳುವ ನಾನು ಲೋಕದ ಸೃಷ್ಟಿಯ ವಿಷಯದಲ್ಲಿ ಈಗ ನೀನು ಮನಸ್ಸನ್ನು ಮಾಡಬೇಕೆಂದು ಪ್ರಭುವಾದ ನಿನ್ನನ್ನು ಪ್ರಾರ್ಥಿಸುತ್ತೇನೆ.

**ತ್ವಾಮಾದಿಪುರುಷಂ ದೃಷ್ಟ್ವಾ ಲೋಕೋಽಪ್ಯೇ[೧]ವಂ ಪ್ರವರ್ತತಾಮ್ ।**
**ಮಹತಾಂ ಮಾರ್ಗವರ್ತಿನ್ಯಃ ಪ್ರಜಾಃ [೨]ಸುಪ್ರಜಸೋ ಹ್ಯಮೂಃ ॥ ೬೧ ॥**

ಆದಿಪುರುಷನಾದ ನಿನ್ನನ್ನು ನೋಡಿ ಲೋಕವು ನಿನ್ನಂತೆ ಪ್ರವರ್ತಿಸಲಿ. ಮಹಾಪುರುಷರ ಮಾರ್ಗವನ್ನನುಸರಿಸುವ ಈ ಪ್ರಜೆಗಳೂ ಸುಪುತ್ರರುಳ್ಳವರಾಗುವರಲ್ಲವೇ ?

**ತತಃ ಕಲತ್ರಮತ್ರೇಷ್ಟಂ ಪರಿಣೇತುಂ ಮನಃ ಕುರು ।**
**ಪ್ರಜಾಸಂತತಿ[೩]ರೇವಂ ಹಿ [೪]ನೋಚ್ಛೇತ್ಸ್ಯತಿ ವಿದಾಂವರ ॥ ೬೨ ॥**

ಆದುದರಿಂದ ಎಲೈ ಜ್ಞಾನಿಯೇ! ಈಗ ನೀನು ಇಷ್ಟವಾದ ಸ್ತ್ರೀಯನ್ನು ವಿವಾಹಮಾಡಿಕೊಳ್ಳುವುದಕ್ಕೋಸ್ಕರ ಮನಸ್ಸನ್ನು ಮಾಡು. ಹೀಗಾದರೆ ಪ್ರಜೆಗಳ ವಂಶವು ನಾಶವಾಗುವುದಿಲ್ಲ.

**ಪ್ರಜಾಸಂತತ್ಯವಿಚ್ಛೇದೇ ತನುತೇ ಧರ್ಮಸಂತತಿಃ ।**
**[೫]ಮನುಷ್ವ [೬]ಮಾನವಂ ಧರ್ಮಂ ತತೋ ದೇವ್ಯೈನಮಚ್ಯುತ ॥ ೬೩ ॥**

ಪ್ರಜಾಸಂತತಿಯು ವಿಚ್ಛೇದವಾಗದಿದ್ದರೆ ಧರ್ಮಸಂತತಿಯು ವೃದ್ಧಿಯಾಗುತ್ತದೆ. ಪ್ರಜೆಗಳಿಲ್ಲದಿದ್ದರೆ ಧರ್ಮವಿಲ್ಲವೆಂದರ್ಥವು. ಆದುದರಿಂದ ಎಲೈ ನಾಶರಹಿತನಾದ ಸ್ವಾಮಿಯೆ! ಈ ಧರ್ಮವು ಮನುಸಂಬಂಧಿಯಾದುದೆಂದು ತಿಳಿ.

**ದೇವೇಮಂ ಗೃಹಿಣಾಂ ಧರ್ಮಂ ವಿದ್ಧಿ ದಾರಪರಿಗ್ರಹಮ್ ।**
**ಸಂತಾನರಕ್ಷಣೇ ಯತ್ನಃ ಕಾರ್ಯೋ ಹಿ ಗೃಹಮೇಧಿನಾಮ್ ॥ ೬೪ ॥**

ಎಲೈ ದೇವನೇ! ಸ್ತ್ರೀಯನ್ನು ಪರಿಗ್ರಹಿಸುವಿಕೆಯು ಗೃಹಸ್ಥರ ಧರ್ಮವೆಂದು ತಿಳಿ. ಸಂತಾನರಕ್ಷಣೆಯಲ್ಲಿ ಪ್ರಯತ್ನವನ್ನು ಮಾಡುವುದು ಗೃಹಸ್ಥರ ಕರ್ತವ್ಯವಾಗಿದೆ.

**ತ್ವಯಾ ಗುರುರ್ಮತೋಽಯಂ ಚೇ[೭]ಜ್ಜನಃ ಕೇನಾಪಿ ಹೇತುನಾ ।**
**ವಚೋ ನೋಲ್ಲಂಘ್ಯಮೇವಾಸ್ಯ ನೇಷ್ಟಂ ಹಿ ಗುರುಲಂಘನಮ್ ॥ ೬೫ ॥**

ಯಾವುದಾದರೊಂದು ಕಾರಣದಿಂದ ಈ ಜನವು ಗುರುವೆಂದು ನಿನಗೆ ಸಮ್ಮತವಾಗಿರುವುದಾದರೆ ಈ ಜನದ ಮಾತನ್ನು ಮೀರಲೇ ಬಾರದು. ಹಿರಿಯರ ಮಾತನ್ನು ಮೀರುವುದು ಇಷ್ಟವಲ್ಲವಷ್ಟೆ ?"

**ಇತ್ಯುದೀರ್ಯ ಗಿರಂ ಧೀರೋ [೮]ವ್ಯರಂಸೀನ್ನಾಭಿಪಾರ್ಥಿವಃ ।**
**ದೇವಸ್ತು ಸಸ್ಮಿತಂ ತಸ್ಯ ವಚಃ ಪ್ರತ್ಯೈಚ್ಛ[೯]ದೋಮಿತಿ ॥ ೬೬ ॥**

ಈ ಪ್ರಕಾರವಾದ ಮಾತನ್ನು ಹೇಳಿ ಧೀರನಾದ ನಾಭಿರಾಜನು ವಿರಾಮವನ್ನು ಹೊಂದಿದನು. ಸ್ವಾಮಿಯಾದರೋ ಮುಗುಳುನಗೆಯಿಂದ ಆ ನಾಭಿರಾಜನ ವಚನವನ್ನು "ಆಗಬಹುದು" ಎಂದು ಅಂಗೀಕರಿಸಿದರು.

**ಕಿಮೇತತ್ಪಿತೃದಾಕ್ಷಿಣ್ಯಂ ಕಿಂ ಪ್ರಜಾನುಗ್ರಹೈಷಿತಾ ।**
**[೧೦]ನಿಯೋಗಃ ಕೋಽಪಿ ವಾ ತಾದೃಗ್ಯೇನೈಚ್ಛತ್ತಾದೃಶಂ ವಶೀ ॥ ೬೭ ॥**

ಜಿತೇಂದ್ರಿಯರಾದ ಸ್ವಾಮಿಯು ಹೀಗೆ ವಿವಾಹಕ್ಕೆ ಇಚ್ಛೆಪಟ್ಟುದು ತಂದೆಯ ದಾಕ್ಷಿಣ್ಯದಿಂದಲೋ? ಪ್ರಜೆಗಳನ್ನು ಅನುಗ್ರಹಿಸಬೇಕೆಂಬ ಇಚ್ಛೆಯಿಂದಲೋ? ಯಾವುದಾದರೂ ಅದೃಷ್ಟ(ಭವಿತವ್ಯತೆ)ವೇ ಆ ಪ್ರಕಾರವಾಗಿದ್ದುದರಿಂದಲೋ? ಈ ಮೂರರಲ್ಲಿ ಯಾವುದಾದರೊಂದು ಕಾರಣವಿರಬಹುದೆಂದರ್ಥವು.

೧ ತ್ವಮಿವ. ೨ ಸುಪುತ್ರವತ್ಯಃ. ೩ ಏವಂ ಸತಿ. ೪ ವ್ಯುಚ್ಛಿನ್ನಾ ನ ಭವಿಷ್ಯತಿ. ೫ ಜಾನೀಹಿ. ೬ ಮನುಸಂಬಂಧಿನಂ. ೭ ಅಹಮಿತ್ಯರ್ಥಃ. ೮ ತೂಷ್ಣೀಂ ಸ್ಥಿತಃ. ೯ ತಥಾಸ್ತ್ವಿತಿ. ೧೦ ನಿಯಮೇನ ಕರ್ತವ್ಯಃ.

**ತತೋಽಸ್ಯಾನುಮತಿಂ [೧]ಮತ್ವಾ ವಿಶಂಕೋ ನಾಭಿಭೂಪತಿಃ ।**
**ಮಹದ್ವಿವಾಹಕಲ್ಯಾಣಮಕರೋತ್ಸರಯಾ ಮುದಾ ॥ ೬೮ ॥**

ತರುವಾಯ ನಾಭಿರಾಜನು ಸ್ವಾಮಿಯ ಅನುಮತಿಯನ್ನು ತಿಳಿದು ಸಂದೇಹವಿಲ್ಲದವನಾಗಿ ಬಹಳ ಸಂತೋಷದಿಂದ ಅತಿಶಯವಾದ ವಿವಾಹಮಂಗಲವನ್ನು ಮಾಡಲಾರಂಭಿಸಿದನು.

**ಸುರೇಂದ್ರಾನುಮತಾತ್ಕನ್ಯೇ ಸುಶೀಲೇ ಚಾರುಲಕ್ಷಣೇ ।**
**[೨]ಸತ್ಯೌ ಸುರುಚಿರಾಕಾರೇ [೩]ವರಯಾಮಾಸ ನಾಭಿರಾಟ್ ॥ ೬೯ ॥**

ನಾಭಿರಾಜನು ದೇವೇಂದ್ರನ ಅನುಮತಿಯನ್ನು ಪಡೆದು ಸುಶೀಲೆಯರೂ ಉತ್ತಮವಾದ ಲಕ್ಷಣಗಳುಳ್ಳವರೂ ಪತಿವ್ರತೆಯರೂ ಸುಂದರವಾದ ಆಕಾರವುಳ್ಳವರೂ ಆದ ಇಬ್ಬರು ಕನ್ಯೆಯರನ್ನು ಯಾಚಿಸಿದನು. ಸ್ವಾಮಿಗೋಸ್ಕರ ಇಬ್ಬರು ಕನ್ಯೆಯರನ್ನು ಪ್ರಾರ್ಥಿಸಿದನೆಂದರ್ಥವು.

**ತನ್ವ್ಯೌ ಕಚ್ಛಮಹಾಕಚ್ಛ[೪]ಜಾಮ್ಯೌ ಸೌಮ್ಯೇ [೫]ಪತಿಂವರೇ ।**
**ಯಶಸ್ವತೀಸುನಂದಾಖ್ಯೇ ಸ [೬]ಏನಂ ಪರ್ಯಣೀನಯತ್ ॥ ೭೦ ॥**

ಸುಂದರಿಯರೂ ಕ್ರಮವಾಗಿ ಕಚ್ಛಮಹಾಕಚ್ಛರಾಜರ ಸಹೋದರಿಯರೂ ಶಾಂತಸ್ವಭಾವದವರೂ ವಿವಾಹಯೋಗ್ಯವಾದ ಕಾಲವುಳ್ಳವರೂ ಆದ ಯಶಸ್ವತೀಸುನಂದೆಯರೆಂಬ ಇಬ್ಬರು ಕನ್ಯೆಯರನ್ನು ನಾಭಿರಾಜನು ಸ್ವಾಮಿಗೆ ವಿವಾಹಮಾಡಿದನು.

**ಪುರುಃ ಪುರುಗುಣೋ ದೇವಃ [೭]ಪರಿಣೇತೇತಿ ಸಂಭ್ರಮಾತ್ ।**
**ಪರಂ ಕಲ್ಯಾಣಮಾತೇನುಃ ಸುರಾಃ ಪ್ರೀತಿಪರಾಯಣಾಃ ॥ ೭೧ ॥**

ಉತ್ತಮವಾದ ಗುಣಗಳುಳ್ಳ ವೃಷಭಸ್ವಾಮಿಯು ವಿವಾಹಮಾಡಿಕೊಳ್ಳುವರೆಂದು ತಿಳಿದು ಸಂತುಷ್ಟರಾದ ದೇವತೆಗಳು ಸಂಭ್ರಮದಿಂದ ಅತಿಶಯವಾದ ಮಂಗಲೋತ್ಸವವನ್ನು ಮಾಡಿದರು.

**ಪಶ್ಯ[೮]ನ್ಪಾಣಿಗೃಹೀತ್ಯೌ ತೇ ನಾಭಿರಾಜಃ [೯]ಸನಾಭಿಭಿಃ ।**
**ಸಮಂ ಸಮತುಷತ್ಪ್ರಾಯೋ [೧೦]ಲೋಕಧರ್ಮಪ್ರಿಯೋ ಜನಃ ॥ ೭೨ ॥**

ವೃಷಭಸ್ವಾಮಿಯಿಂದ ವಿವಾಹಿತರಾದ ಆ ಇಬ್ಬರು ಕನ್ಯೆಯರನ್ನು ನೋಡಿ ನಾಭಿರಾಜನು ತನ್ನ ಬಂಧುಗಳೊಡನೆ ಬಹಳ ಸಂತೋಷಪಟ್ಟನು. ಜನರು ಹೆಚ್ಚಾಗಿ ಲೌಕಿಕಧರ್ಮಪ್ರಿಯರಾಗಿರುತ್ತಾರೆ.

**ಪುರುದೇವಸ್ಯ ಕಲ್ಯಾಣೇ ಮರುದೇವೀ ತುತೋಷ ಸಾ ।**
**ದಾರಕರ್ಮಣಿ ಪುತ್ರಾಣಾಂ ಪ್ರೀತ್ಯುತ್ಕರ್ಷೋ ಹಿ ಯೋಷಿತಾಮ್ ॥**

ಪುರುದೇವರ (ವೃಷಭಸ್ವಾಮಿಯ) ವಿವಾಹಕಾರ್ಯದಲ್ಲಿ ಆ ಮರುದೇವಿಯು ಬಹಳವಾಗಿ ಸಂತೋಷಪಟ್ಟಳು. ಸ್ತ್ರೀಯರಿಗೆ ಮಕ್ಕಳ ವಿವಾಹಕಾರ್ಯದಲ್ಲಿ ಅಧಿಕವಾದ ಪ್ರೀತಿಯುಂಟಾಗುವುದಲ್ಲವೆ ?

**[೧೧]ದಿಷ್ಟ್ಯಾ ಸ್ಮ ವರ್ಧತೇ ದೇವೀ ಪುತ್ರಕಲ್ಯಾಣಸಂಪದಾ ।**
**ಕಲಯೇಂದೋರಿವಾಂ[೧೨]ಭೋಧಿವೇಲಾಕಲ್ಲೋಲಮಾಲಿನೀ ॥ ೭೪ ॥**

ತೆರೆಮಾಲೆಗಳುಳ್ಳ ಸಮುದ್ರದಡವು ಚಂದ್ರನ ಕಲೆಯಿಂದ ವೃದ್ಧಿಹೊಂದುವಂತೆ ಮರುದೇವಿಯು ಮಗನ ವಿವಾಹಸಂಪತ್ತಿನಿಂದುಂಟಾದ ಆನಂದದಿಂದ ವೃದ್ಧಿಹೊಂದಿದಳು.

**ಪುರೋರ್ವಿವಾಹಕಲ್ಯಾಣೇ ಪ್ರೀತಿಂ ಭೇಜೇಽಖಿಲೋ ಜನಃ ।**
**[೧೩]ಸ್ವಭೋಗೀನತಯಾ[೧೪]ಭೋಕ್ತುರ್ಭೋಗಾನ್ಲೋಕೋ[೧೫]ನುರುಧ್ಯತೇ ॥**

೧ ಜ್ಞಾತ್ವೇತ್ಯಪಿ ಪಾಠಃ. ೨ ಪತಿವ್ರತೇ. ೩ ಯಯಾಚೇ. ೪ ಭಗಿನ್ಯೌ. ೫ ಪ್ರಾಪ್ತವಿವಾಹಕಾಲೇ. ೬ ಜಿನಕುಮಾರಂ, ಏನೇ ಇತ್ಯಪಿ ಪಾಠಃ. ೭ ಪರಿಣೇಷ್ಯತಿ. ೮ ವಿವಾಹಿತೇ. ೯ ಬಂಧುಭಿಃ. ೧೦ ಲೌಕಿಕಧರ್ಮಃ. ೧೧ ಆನಂದೇನ. ೧೨ ಅಂಭೋಧೇರಿತ್ಯಪಿ ಪಾಠಃ. ೧೩ ಸ್ವಭೋಗಹಿತತ್ವೇನ. ೧೪ ಭರ್ತುಃ. ೧೫ ಅನುವರ್ತತೇ.

ವೃಷಭಸ್ವಾಮಿಯ ವಿವಾಹಮಂಗಲದಲ್ಲಿ ಜನರೆಲ್ಲ ಪ್ರೀತಿಯನ್ನು ಹೊಂದಿದರು. ಜನರು ತಮ್ಮ ಪ್ರಭುವಿನ ಭೋಗಗಳನ್ನು ತಮ್ಮ ಹಿತಭೋಗವೆಂದು ಅನುಸರಿಸುತ್ತಾರೆ. ಪ್ರಭುವಿನ ಹಿತವನ್ನು ಪ್ರಜೆಗಳು ತಮ್ಮ ಹಿತವನ್ನಾಗಿ ತಿಳಿಯುತ್ತಾರೆಂದರ್ಥವು.

**ಪ್ರಮೋದಾಯ ನೃಲೋಕಸ್ಯ ನ ಪರಂ ಸ ಮಹೋತ್ಸವಃ ।**
**ಸ್ವರ್ಲೋಕಸ್ಯಾಪಿ ಸಂಪ್ರೀತಿಮತನೋ[೧]ದತನೀಯಸೀಮ್ ॥ ೭೬ ॥**

ಆ ವಿವಾಹಮಹೋತ್ಸವವು ಮನುಷ್ಯಲೋಕಕ್ಕೆ ಮಾತ್ರ ಆನಂದವನ್ನುಂಟುಮಾಡಿದುದಲ್ಲದೆ ಸ್ವರ್ಗಲೋಕಕ್ಕೂ ಅತ್ಯಂತಾನಂದವನ್ನುಂಟುಮಾಡಿದ್ದಿತು.

**ವರೋರೂ ಚಾರುಜಂಘೇ [೨]ತೇ ಮೃದುಪಾದಪಯೋರುಹೇ ।**
**[೩]ಸುಶ್ರೋಣಿನಾಧರೇಣಾಪಿ ಕಾಯೇನಾಜಯತಾಂ ಜಗತ್ ॥ ೭೭ ॥**

ಶ್ರೇಷ್ಠವಾದ ತೊಡೆಗಳುಳ್ಳವರೂ ಸುಂದರವಾದ ಕಣಕಾಲುಗಳುಳ್ಳವರೂ ಕೋಮಲವಾದ ಪಾದಕಮಲಗಳುಳ್ಳವರೂ ಆದ ಆ ಯಶಸ್ವತೀಸುನಂದೆಯರು ಸುಂದರವಾದ ಕಟಿ ಪಶ್ಚಾದ್ಭಾಗದಿಂದಲೂ ನಾಭಿಯ ಕೆಳಗಿನ ಪ್ರದೇಶದಿಂದಲೂ ಜಗತ್ತನ್ನು ಜಯಿಸಿದರು. ಅತ್ಯಂತ ಸುಂದರಿಯರಾಗಿದ್ದರೆಂದು ಭಾವವು.

**[೪]ವರಾರೋಹೇ ತನೂದರ್ಯೌ ರೋಮರಾಜಿಂ ತನೀಯಸೀಮ್ ।**
**ಅಧತ್ತಾಂ ಕಾಮಗಂಧೇಭ[೫]ಮದಸ್ರುತಿಮಿವಾಗ್ರಿಮಾಮ್ ॥ ೭೮ ॥**

ಕೃಶೋದರಿಯರಾದ ಆ ಉತ್ತಮಕನ್ಯೆಯರ ಸೂಕ್ಷ್ಮವಾದ ರೋಮಪಂಕ್ತಿಯು, ಮನ್ಮಥನೆಂಬ ಮದಗಜದ ಶ್ರೇಷ್ಠವಾದ ಮದಪ್ರವಾಹವೋ ಎಂಬಂತೆ, ಶೋಭಿಸಿತು.

**ನಾಭಿಂ ಕಾಮರಸಸ್ಯೈಕಕೂಪಿಕಾಂ ಬಿಭೃತಃ ಸ್ಮ ತೇ ।**
**ರೋಮರಾಜೀಲತಾಮೂಲೇ ಬದ್ಧಾಂ [೬]ಪಾಲಿಮಿವಾಭಿತಃ ॥ ೭೯ ॥**

ಆ ಕನ್ಯೆಯರು ಕಾಮರಸಕ್ಕೆ ಮುಖ್ಯವಾದ ಬಾವಿಯಂತಿರುವ ನಾಭಿಯನ್ನು, ರೋಮರಾಜಿಯೆಂಬ ಲತೆಯ ಬುಡದಲ್ಲಿ ಸುತ್ತಲೂ ಕಟ್ಟಿದ ಪಾತಿಯನ್ನೋಪಾದಿಯಲ್ಲಿ, ಧರಿಸಿದರು.

**ಸ್ತನಾಬ್ಜಕುಡ್ಮಲೇ ದೀರ್ಘರೋಮರಾಜ್ಯೇಕನಾಲಕೇ ।**
**ತೇ ಪದ್ಮಿನ್ಯಾವಿವಾಧತ್ತಾಂ ನೀಲಚೂಚುಕಷಟ್ಪದೇ ॥ ೮೦ ॥**

ಆ ಯಶಸ್ವತೀಸುನಂದೆಯರು ದೀರ್ಘವಾದ ರೋಮಪಂಕ್ತಿಯೆಂಬ ಒಂದೇ ನಾಳವುಳ್ಳವೂ ಕಪ್ಪಾದ ಕುಚಾಗ್ರಗಳೆಂಬ ಭ್ರಮರಗಳುಳ್ಳವೂ ಆದ ಕುಚಗಳೆಂಬ ತಾವರೆಯಮೊಗ್ಗುಗಳನ್ನು ಧರಿಸಿದರು.

**ಮುಕ್ತಾಹಾರೇಣ ತನ್ನೂನಂ ತಪಸ್ತೇಪೇ [೭]ಸ್ವನಾಮಜಮ್ ।**
**ಯತೋವಾಪ ಸ ತತ್ಕಂಠಕುಚಸ್ಪರ್ಶಸುಖಾಮೃತಮ್ ॥ ೮೧ ॥**

ಯಶಸ್ವತೀಸುನಂದೆಯರು ಧರಿಸಿದ್ದ ಮುಕ್ತಾಹಾರವು ಅವರ ಕಂಠದ ಮತ್ತು ಕುಚಗಳ ಸ್ಪರ್ಶಸುಖವೆಂಬ ಅಮೃತವನ್ನು ಹೊಂದಿರುವುದರಿಂದ ನಿಜವಾಗಿಯೂ ಆ ಮುಕ್ತಾಹಾರವು ತನ್ನ ಹೆಸರಿನಿಂದುಂಟಾದ ಮುಕ್ತಾಹಾರ(ಅನಶನ)ವೆಂಬ ತಪಸ್ಸನ್ನು ಮಾಡಿದ್ದಿತು.

**ಏಕಾವಲ್ಯಾ ಸ್ತನೋಪಾಂತಸ್ಪರ್ಶಿನ್ಯಾ ತೇ ವಿರೇಜತುಃ ।**
**ಸಖ್ಯೇವ ಕಂಠಸಂಗಿನ್ಯಾ ಸ್ವಚ್ಛಯಾ [೮]ಸ್ನಿಗ್ಧಮುಕ್ತಯಾ ॥ ೮೨ ॥**

ಆ ಯಶಸ್ವತೀಸುನಂದೆಯರು, ಅತ್ಯಂತಪ್ರಿಯಳಾದ ಸಖಿಯಿಂದ ಕಳುಹಿಸಲ್ಪಟ್ಟವಳೂ ಕಂಠದಲ್ಲಿ ಆಲಿಂಗನಮಾಡುವವಳೂ ನಿರ್ಮಲಳೂ ಆದ ಸಖಿಯಿಂದ ಶೋಭಿಸುವಂತೆ, ಕುಚಗಳ ಸಮೀಪಪ್ರದೇಶವನ್ನು ಸ್ಪರ್ಶಿಸುತ್ತಿರುವುದೂ ನಿರ್ಮಲವೂ ಕಂಠದಲ್ಲಿ ಸಂಬಂಧಿಸಿರುವುದೂ ಪ್ರಕಾಶಮಾನವಾದ ಮುತ್ತುಗಳುಳ್ಳದೂ ಆದ ಏಕಾವಲೀಹಾರದಿಂದ ಶೋಭಿಸಿದರು.

**ಹಾರಂ ನಕ್ಷತ್ರಮಾಲಾಖ್ಯಂ ತೇ ಸ್ತನಾಂತರಲಂಬಿನಮ್ ।**
**ದಧತುಃ ಕುಚಸಂಸ್ಪರ್ಶಾದ್ಧಸಂತಮಿವ ರೋಚಿಷಾ ॥ ೮೩ ॥**

ಆ ಸ್ತ್ರೀಯರು ತಮ್ಮ ಸ್ತನಗಳ ಮಧ್ಯದಲ್ಲಿ ಜೋಲುತ್ತಿರುವ ನಕ್ಷತ್ರಮಾಲೆಯೆಂಬ ಹಾರವನ್ನು ಧರಿಸಿದರು. ಆ ಹಾರವು ಅವರ ಕುಚಸ್ಪರ್ಶದಿಂದ ಸಂತುಷ್ಟವಾಗಿ ತನ್ನ ಕಾಂತಿಯಿಂದ ನಗುತ್ತಿದೆಯೋ ಎಂಬಂತಿದ್ದಿತು.

**ಮೃದೂ ಭುಜಲತೇ ಚಾರ್ವ್ಯಾ[೧]ವಧಿಷಾತಾಂ [೨]ಸುಸಂಹತೇ ।**
**ನಖಾಂಶುಕುಸುಮೋ[೩]ದ್ಭೇದೈರ್ದಧಾನೇ ಹಸಿತಶ್ರಿಯಮ್ ॥ ೮೪ ॥**

ಆ ಯಶಸ್ವತೀಸುನಂದೆಯರು ಕೋಮಲವೂ ಸುಂದರವೂ ಚೆನ್ನಾಗಿ ಸೇರಿರುವುದೂ ಉಗುರುಗಳ ಕಿರಣಗಳೆಂಬ ಪುಷ್ಪವಿಕಸನಗಳಿಂದ ನಗೆಯ ಶೋಭೆಯನ್ನು ಧರಿಸಿರುವುದೂ ಆದ ಎರಡುಭುಜಗಳೆಂಬ ಲತೆಗಳನ್ನು ಧರಿಸಿದರು.

**ಮುಖೇಂದುರೇನಯೋಃ ಕಾಂತಿಮಧಾನ್ಮುಗ್ಧಸ್ಮಿತಾಂಶುಭಿಃ ।**
**ಜ್ಯೋತ್ಸ್ನಾಲಕ್ಷ್ಮೀಂ ಸಮಾತನ್ವನ್ ಜಗತಾಂ [೪]ಕಾಂತದರ್ಶನಃ ॥ ೮೫ ॥**

ಲೋಕಕ್ಕೆ ಮನೋಹರವಾದ ದರ್ಶನವುಳ್ಳವನೂ ನಗೆಯ ಕಾಂತಿಗಳಿಂದ ಬೆಳದಿಂಗಳ ಶೋಭೆಯನ್ನುಂಟುಮಾಡುವವನೂ ಆದ ಈ ಯಶಸ್ವತೀಸುನಂದೆಯರ ಮುಖವೆಂಬ ಚಂದ್ರನು ಕಾಂತಿಯನ್ನು ಧರಿಸಿದನು.

**ಸುಪಕ್ಷ್ಮಣೀ ತಯೋರ್ನೇತ್ರೇ ರೇಜಾತೇ ಸ್ನಿಗ್ಧತಾರಕೇ ।**
**ಯಥೋತ್ಪಲೇ ಸಮುತ್ಫುಲ್ಲೇ ಕೇಸರಾಲಗ್ನಷಟ್ಪದೇ ॥ ೮೬ ॥**

ಸುಂದರವಾದ ರೆಪ್ಪೆಗಳೂ ಪ್ರಕಾಶಮಾನವಾದ ಕರಿಗುಡ್ಡಗಳೂ ಉಳ್ಳ ಆ ಸ್ತ್ರೀಯರ ನೇತ್ರಗಳು, ಕುಸುಮಗಳಲ್ಲಿ ಸಂಬಂಧಿಸಿರುವ ಭ್ರಮರಗಳುಳ್ಳ ವಿಕಸಿತವಾದ ನೈದಿಲೆಗಳಂತೆ, ಶೋಭಿಸಿದುವು.

**ನಾಮಕರ್ಮವಿನಿರ್ಮಾಣರುಚಿರೇ ಸುಭ್ರುವೋರ್ಭ್ರುವೌ ।**
**ಚಾಪಯಷ್ಟಿರನಂಗಸ್ಯ ನಾ[೫]ನುಯಾತುಮಲಂ ತರಾಮ್ ॥ ೮೭ ॥**

ನಾಮಕರ್ಮದ ರಚನೆಯಿಂದ ಮನೋಹರವಾದ ಯಶಸ್ವತೀಸುನಂದೆಯರ ಹುಬ್ಬುಗಳ ಹೋಲಿಕೆಯನ್ನು ಹೊಂದುವುದಕ್ಕೋಸ್ಕರ ಮನ್ಮಥನ ಧನುಸ್ಸು ಸಮರ್ಥವಾಗಲೇ ಇಲ್ಲ. ಮನ್ಮಥನ ಧನುಸ್ಸಿಗಿಂತಲೂ ಹುಬ್ಬುಗಳು ಸುಂದರವಾಗಿದ್ದುವೆಂದು ಭಾವವು.

**ನೀಲೋತ್ಪಲಾವತಂಸೇನ ತತ್ಕರ್ಣೌ ದಧತುಃ ಶ್ರಿಯಮ್ ।**
**ಮಿಥಃ [೬]ಪ್ರಮಿತ್ಸುನೇವೋಚ್ಚೈರಾಯತಿಂ ನಯನಾಬ್ಜಯೋಃ ॥ ೮೮ ॥**

ನೇತ್ರಗಳೆಂಬ ಕಮಲಗಳ ವಿಸ್ತಾರವನ್ನು ಪರಸ್ಪರವಾಗಿ ಅಳತೆಮಾಡುವುದಕ್ಕೋಸ್ಕರ ಇಚ್ಛಿಸುವಂತಿರುವುದೂ ನೀಲೋತ್ಪಲಪುಷ್ಪದಿಂದ ನಿರ್ಮಿತವೂ ಆದ ಕರ್ಣಾಭರಣದಿಂದ ಆ ಯಶಸ್ವತೀಸುನಂದೆಯರ ಕಿವಿಗಳು ಅಧಿಕವಾದ ಶೋಭೆಯನ್ನು ಧರಿಸಿದುವು.

**ತೇ ಲಲಾಟತಟಾಲಂಬಾನಲಕಾ[೭]ನೂಹತುರ್ಭೃಶಮ್ ।**
**ಸುವರ್ಣಪಟ್ಟಪರ್ಯಂತಖಚಿತೇಂದ್ರೋಪಲತ್ವಿಷಃ ॥ ೮೯ ॥**

೧ ಭೂಯಸೀಂ. ೨ ಕನ್ಯೇ. ೩ ಶೋಭನಜಘನೇನ. ೪ ಉತ್ತಮಕನ್ಯೇ. ೫ ಮದಪ್ರವಾಹಂ. ೬ ಆಲವಾಲಂ. ೭ ಅನಶನಮಿತ್ಯರ್ಥಃ. ೮ ಪ್ರಿಯತಮಪ್ರೇಷಿತಯಾ.

೧ ಬಿಭೃತಃ ಸ್ಮ. ೨ ಸುಸಂಯುತೇ. ೩ ವಿಕಾಸೈಃ. ೪ ಮನೋಹರದರ್ಶನಃ. ೫ ಅನುಕರ್ತುಂ. ೬ ಪ್ರಮಾತುಮಿಚ್ಛುನಾ. ೭ ದಧತುಃ.

ಆ ಯಶಸ್ವತೀಸುನಂದೆಯರು, ಬಂಗಾರದ ಪಟ್ಟ(ಪಟ್ಟಿ)ದ ಸುತ್ತಲೂ ಖಚಿತವಾದ ಇಂದ್ರನೀಲರತ್ನದ ಕಾಂತಿಯುಳ್ಳುವೂ ಹಣೆಯ ಪ್ರದೇಶದಲ್ಲಿ ಜೋಲುತ್ತಿರುವುವೂ ಆದ ಕುರುಳುಕೂದಲುಗಳನ್ನು ಧರಿಸಿದ್ದರು.

**ಸ್ರಸ್ತಸ್ರಕ್ಕಬರೀಬಂಧಸ್ತಯೋರುತ್ಪ್ರೇಕ್ಷಿತೋ ಜನೈಃ ।**
**ಕೃಷ್ಣಾಹಿರಿವ ಶುಕ್ಲಾಹಿಂ ನಿಗೀರ್ಯ ಪುನರುದ್ಗಿರನ್ ॥ ೯೦ ॥**

ಜನರು ಶಿಥಿಲವಾದ ಪುಷ್ಪಮಾಲಿಕೆಗಳುಳ್ಳ ಆ ಯಶಸ್ವತೀಸುನಂದೆಯರ ಹೆರಳುಗಳನ್ನು ನೋಡಿ, ಕೃಷ್ಣಸರ್ಪವು ಬಿಳಿಯ ಸರ್ಪವನ್ನು ನುಂಗಿ ಪುನಃ ವಮನ ಮಾಡುವಂತೆ, ಉತ್ಪ್ರೇಕ್ಷಿಸಿದರು.

**ಇತಿ ಸ್ವಭಾವಮಧುರಾಮಾಕೃತಿಂ ಭೂಷಣೋಜ್ಜ್ವಲಾಮ್ ।**
**ದಧಾನೇ ದಧತುರ್ಲೀಲಾಂ ಕಲ್ಪವಲ್ಲ್ಯೋಃ ಸ್ಫುರತ್ತ್ವಿಷೋಃ ॥ ೯೧ ॥**

ಈ ಪ್ರಕಾರವಾಗಿ ಸ್ವಭಾವದಿಂದ ಮನೋಹರವೂ ಆಭರಣಗಳಿಂದ ಪ್ರಕಾಶಮಾನವೂ ಆದ ಆಕಾರವನ್ನು ಧರಿಸಿರುವ ಯಶಸ್ವತೀಸುನಂದೆಯರು ದೇದೀಪ್ಯಮಾನವಾದ ಕಾಂತಿಯುಳ್ಳ ಕಲ್ಪಲತೆಗಳ ಶೋಭೆಯನ್ನು ಧರಿಸಿದರು. ಕಲ್ಪಲತೆಗಳಂತೆ ಶೋಭಿಸುತ್ತಿದ್ದರೆಂದು ಭಾವವು.

**ದೃಷ್ಟ್ವೈನಯೋರದೋ ರೂಪಂ ಜನಾನಾಂ ಮತಿರಿತ್ಯಭೂತ್ ।**
**ಏತಾಭ್ಯಾಂ ನಿರ್ಜಿತಾಃ ಸತ್ಯಂ ಸ್ತ್ರಿಯಂಮನ್ಯಾಃ ಸುರಸ್ತ್ರಿಯಃ ॥ ೯೨ ॥**

ಯಶಸ್ವತೀಸುನಂದೆಯರ ಈ ರೂಪವನ್ನು ನೋಡಿ ಜನರು "ಸ್ತ್ರೀಯರೆಂದು ತಿಳಿಯುವ ದೇವಸ್ತ್ರೀಯರು ನಿಜವಾಗಿಯೂ ಈ ಯಶಸ್ವತೀಸುನಂದೆಯರಿಂದ ಜಯಿಸಲ್ಪಟ್ಟರು" ಎಂದು ತಿಳಿದರು.

**ಸ ತಾಭ್ಯಾಂ ಕೀರ್ತಿಲಕ್ಷ್ಮೀಭ್ಯಾಮಿವ ರೇಜೇ ವರೋತ್ತಮಃ ।**
**ತೇ ಚ ತೇನ ಮಹಾನದ್ಯೌ ವಾರ್ಧಿನೇವ [೧]ಸಮೀಯತುಃ ॥ ೯೩ ॥**

ವರರಲ್ಲಿ ಉತ್ತಮರಾದ ಆ ವೃಷಭಸ್ವಾಮಿಯು ಕೀರ್ತಿಲಕ್ಷ್ಮಿಗಳಿಂದ ಶೋಭಿಸುವಂತೆ ಆ ಯಶಸ್ವತೀಸುನಂದೆಯರಿಂದ ಶೋಭಿಸಿದರು. ಆ ಯಶಸ್ವತೀಸುನಂದೆಯರೂ ದೊಡ್ಡನದಿಗಳು ಸಮುದ್ರದೊಡನೆ ಸಂಗಮವಾಗಿರುವಂತೆ, ಆದೀಶ್ವರಸ್ವಾಮಿಯೊಡನೆ ಕೂಡಿದ್ದರು.

**[೨]ಸರೂಪೇ ಸದ್ಯುತೀ ಕಾಂತೇ ತೇ ಮನೋ ಜಹ್ರತುರ್ವಿಭೋಃ ।**
**ಮನೋಭುವ ಇವಾಶೇಷಂ ಜಿಗೀಷೋರ್ವೈಜಯಂತಿಕೇ ॥ ೯೪ ॥**

ಲೋಕವನ್ನೆಲ್ಲ ಜಯಿಸಬೇಕೆಂಬ ಇಚ್ಛೆಯುಳ್ಳ ಮನ್ಮಥನ ಎರಡು ಪತಾಕೆಗಳಂತಿರುವವರೂ ಸಮಾನವಾದ ರೂಪವುಳ್ಳವರೂ ಸಮಾನವಾದ ಕಾಂತಿಯುಳ್ಳವರೂ ಆದ ಆ ಯಶಸ್ವತೀಸುನಂದಾದೇವಿಯರಿಬ್ಬರೂ ಸ್ವಾಮಿಯ ಮನಸ್ಸನ್ನು ಅಪಹರಿಸಿದರು.

**ತಯೋರಪಿ ಮನಸ್ತೇನ ರಂಜಿತಂ ಭುವನೇಶಿನಾ ।**
**ಹಾರಯಷ್ಟ್ಯೋರಿವಾ[೩]ರಕ್ತಮಣಿನಾ ಮಧ್ಯ[೪]ಮುದ್ರುಚಾ ॥ ೯೫ ॥**

ಉದ್ಗತವಾದ ಕಾಂತಿಯುಳ್ಳ ಪದ್ಮರಾಗರತ್ನವು ಹಾರಗಳ ಮಧ್ಯಭಾಗವನ್ನು ಪ್ರಕಾಶಪಡಿಸುವಂತೆ ಲೋಕಾಧಿಪತಿಯಾದ ವೃಷಭಸ್ವಾಮಿಯು ಆ ಯಶಸ್ವತೀಸುನಂದೆಯರ ಮನಸ್ಸನ್ನು ಸಂತೋಷಪಡಿಸಿದರು.

**ಬಹುಶೋ ಭಗ್ನಮಾನೋಽಪಿ [೫]ಯತ್ಪುರೋಽಸ್ಯ [೬]ಮನೋಭವಃ ।**
**ಚಚಾರ ಗೂಢಸಂಚಾರಃ ಕಾರಣಂ ತತ್ರ ಚಿಂತ್ಯತಾಮ್ ॥ ೯೬ ॥**

ಈ ವೃಷಭಸ್ವಾಮಿಯ ಮುಂದೆ ಮನ್ಮಥನಿಗೆ ಅನೇಕಾವರ್ತಿ ಮಾನಭಂಗವಾಗಿದ್ದರೂ ಇವರನ್ನು ವಶಪಡಿಸಿಕೊಳ್ಳುವುದಕ್ಕೋಸ್ಕರ ಗುಪ್ತವಾಗಿ ಸಂಚರಿಸುತ್ತಿದ್ದನು. ಆ ಗೂಢಸಂಚಾರದಲ್ಲಿ ಕಾರಣವೇನಿರಬಹುದೆಂದು ಯೋಚಿಸಿರಿ. (ಮುಂದಿನ ಶ್ಲೋಕದಿಂದ ಕಾರಣವು ವ್ಯಕ್ತವಾಗುವುದು).

**ನೂನಮೇನಂ [೧]ಪ್ರಕಾಶಾತ್ಮಾ ವ್ಯದ್ಧುಂ [೨]ಹೃದಿಶಯೋಽಕ್ಷಮಃ ।**
**ಅನಂಗತಾಂ ತದಾ ಭೇಜೇ ಸೋಽಪಾಯಾ ಹಿ ಜಿಗೀಷವಃ ॥ ೯೭ ॥**

ನಿಜವಾಗಿಯೂ ಮನ್ಮಥನು ಪ್ರಕಟವಾಗಿ ಈ ವೃಷಭಸ್ವಾಮಿಯನ್ನು ಹೊಡೆಯುವುದಕ್ಕೆ ಅಸಮರ್ಥನಾಗಿ ಆಗ ಅನಂಗತ್ವ(ಅಶರೀರತ್ವ)ವನ್ನು ಹೊಂದಿದನು. ಜಯಿಸಲಿಚ್ಛಿಸುವವರು ಉಪಾಯವನ್ನು ಹುಡುಕುತ್ತಿರುತ್ತಾರಲ್ಲವೇ ?

**ಅನಂಗತ್ವೇನ ತನ್ವ್ಯೋರ್ನ[೩]ಮೇನಯೋಃ ಪ್ರವಿಶನ್ವಪುಃ ।**
**ದುರ್ಗಾಶ್ರಿತ ಇವಾನಂಗೋ ವಿವ್ಯಾ[೪]ಧ್ಯೈನಂ ಸ್ವಸಾಯಕೈಃ ॥ ೯೮ ॥**

ಆದುದರಿಂದ ಮನ್ಮಥನು ನಿಜವಾಗಿಯೂ ಅಶರೀರತ್ವದಿಂದ ಈ ಯಶಸ್ವತೀಸುನಂದೆಯರ ಶರೀರವನ್ನು ಪ್ರವೇಶಿಸಿ, ದುರ್ಗವನ್ನಾಶ್ರಯಿಸಿದವನಂತೆ, ಈ ಆದೀಶ್ವರಸ್ವಾಮಿಯನ್ನು ತನ್ನ ಬಾಣಗಳಿಂದ ಹೊಡೆದನು.

**ತಾಭ್ಯಾಮಿತಿ ಸಮಂ ಭೋಗಾನ್ಭುಂಜಾನಸ್ಯ ಜಗದ್ಗುರೋಃ ।**
**ಕಾಲೋ ಮಹಾನಗಾದೇಕಕ್ಷಣವ[೫]ಚ್ಛಶ್ವತತಕ್ಷಣೈಃ ॥ ೯೯ ॥**

ಈ ಪ್ರಕಾರವಾಗಿ ಆ ಯಶಸ್ವತೀಸುನಂದೆಯರೊಡನೆ ಭೋಗಗಳನ್ನನುಭವಿಸುತ್ತಿದ್ದ ಜಗತ್ಪತಿಗೆ ಬಹಳ ಕಾಲವು ನಿತ್ಯೋತ್ಸವಗಳಿಂದ ಒಂದು ಕ್ಷಣದಂತೆ ಕಳೆಯಿತು.

**ಅಥಾನ್ಯದಾ ಮಹಾದೇವೀ ಸೌಧೇ ಸುಪ್ತಾ ಯಶಸ್ವತೀ ।**
**ಸ್ವಪ್ನೇಽಪಶ್ಯನ್ಮಹೀಂ ಗ್ರಸ್ತಾಂ ಮೇರುಂ ಸೂರ್ಯಂ ಚ ಸೋ[೬]ಡುಪವಮ್ ॥**

**ಸರಃ [೭]ಸಹಂಸಮಬ್ಧಿಂ ಚ ಚಲದ್ವೀಚಿಕಮೈಕ್ಷತ ।**
**ಸ್ವಪ್ನಾಂತೇ ಚ ವ್ಯಬುದ್ಧಾಸೌ ಪಠನ್ಮಾಗಧನಿಸ್ವನೈಃ ॥ ೧೦೧ ॥**

ತರುವಾಯ ಒಂದುದಿನ ಉಪ್ಪರಿಗೆಯಲ್ಲಿ ಮಲಗಿದ್ದ ಯಶಸ್ವತೀಮಹಾದೇವಿಯು ಸ್ವಪ್ನದಲ್ಲಿ ತನ್ನಿಂದ ನುಂಗಲ್ಪಟ್ಟ ಪೃಥ್ವಿಯನ್ನೂ ಮಹಾಮೇರುಪರ್ವತವನ್ನೂ ಸೂರ್ಯನನ್ನೂ ಚಂದ್ರನನ್ನೂ ಹಂಸಪಕ್ಷಿಗಳೊಡನೆ ಕೂಡಿದ್ದ ಸರೋವರವನ್ನೂ ಚಲಿಸುತ್ತಿರುವ ತೆರೆಮಾಲೆಗಳುಳ್ಳ ಸಮುದ್ರವನ್ನೂ ಕಂಡಳು. ಸ್ವಪ್ನದ ಅಂತ್ಯದಲ್ಲಿ ಈ ಯಶಸ್ವತೀಮಹಾದೇವಿಯು ಮುಂದೆ ಹೇಳುವ ಮಂಗಲಪದ್ಯಗಳನ್ನು ಪಠಿಸುತ್ತಿರುವ ಸ್ತುತಿಪಾಠಕರ ಶಬ್ದಗಳಿಂದ ಎಚ್ಚತ್ತಳು.

**ತ್ವಂ [೮]ವಿಬುದ್ಧ್ಯಸ್ವ ಕಲ್ಯಾಣಿ ಕಲ್ಯಾಣಶತಭಾಗಿನಿ ।**
**[೯]ಪ್ರಬೋಧಸಮಯೋಽಯಂ ತೇ ಸಹಾಬ್ಜಿನ್ಯಾ ಧೃತಶ್ರಿಯಃ[೧೦] ॥ ೧೦೨ ॥**

"ಅನೇಕ ಕಲ್ಯಾಣಗಳನ್ನು ಹೊಂದುವ ಮಂಗಳಾಂಗಿಯೇ ! ನೀನು ಜಾಗರೂಕಳಾಗು (ನಿದ್ರೆಯನ್ನು ಬಿಡು). ಕಮಲಲತೆಗೆ ಸದೃಶವಾದ ಶೋಭೆಯನ್ನು ಧರಿಸಿರುವ ನಿನಗೆ ಇದು ಪ್ರಭಾತಸಮಯವಾಗಿದೆ.

**ಮುದೇ ತವಾಂಬ ಭೂಯಾಸುರಿಮೇ ಸ್ವಪ್ನಾಃ ಶುಭಾವಹಾಃ ।**
**ಮಹೀಮೇರೂದಧೀಂದ್ವರ್ಕಸರೋವರಪುರಸ್ಸರಾಃ ॥ ೧೦೩ ॥**

ಎಲೈ ತಾಯಿಯೆ ! ಪೃಥ್ವೀ ಮಹಾಮೇರು ಸಮುದ್ರ ಚಂದ್ರ ಸೂರ್ಯ ಸರೋವರ ಮೊದಲಾದ ಈ ಶುಭಸ್ವಪ್ನಗಳು ನಿನಗೆ ಸಂತೋಷವನ್ನುಂಟು ಮಾಡುವುವುಗಳಾಗಿರಲಿ.

೧ ಸಂಗಮೀಯತುಃ. ೨ ಸಮಾನರೂಪೇ. ೩ ಪದ್ಮರಾಗಮಣಿನಾ. ೪ ಉದ್ಗತಕಾಂತಿನಾ. ೫ ಯಸ್ಮಾತ್ಕಾರಣಾತ್. ೬ ಸ್ಮರಃ.

೧ ವ್ಯಕ್ತಸ್ವರೂಪಃ. ೨ ಮನ್ಮಥಃ. ೩ ಸುನಂದಾಯಶಸ್ವತ್ಯೋಃ. ೪ ಆದಿಬ್ರಹ್ಮಾಣಂ. ೫ ನಿತ್ಯೋತ್ಸವೈಃ. ೬ ಚಂದ್ರಂ. ೭ ಹಂಸಸಹಿತಂ. ೮ ಜಾಗರೂಕಾ ಭವ. ೯ ಪ್ರಭಾತಸಮಯಃ. ೧೦ ತವ.

**ನಭಃಸರೋವರೇನ್ವಿಷ್ಯ ಚಿರಂ ತಿಮಿರಶೈವಲಮ್ ।**
**ಖೇದಾದಿವಾಧುನಾ[೧]ಭ್ಯೇತಿ ಶಶಿಹಂಸೋ[೨]ಸ್ತಪಾದಪಮ್ ॥ ೧೦೪ ॥**

ಆಕಾಶವೆಂಬ ಸರೋವರದಲ್ಲಿ ಕತ್ತಲೆಯೆಂಬ ಆವಚಿಯನ್ನು ಬಹುಕಾಲದವರೆಗೆ ಹುಡುಕಿ ಖೇದದಿಂದಲೋ ಎಂಬಂತೆ ಚಂದ್ರನೆಂಬ ಹಂಸಪಕ್ಷಿಯು ಈಗ ಅಸ್ತಪರ್ವತವೆಂಬ ವೃಕ್ಷವನ್ನು ಹೊಂದುತ್ತಿದೆ. ಚಂದ್ರನು ಅಸ್ತಂಗತನಾಗುತ್ತಿದ್ದಾನೆಂದರ್ಥವು.

**ಜ್ಯೋತ್ಸ್ನಾಂಭಸಿ ಚಿರಂ [೩]ತೀರ್ತ್ವಾ ತಾರಾಹಂಸ್ಯೋ ನಭೋಹ್ರದೇ ।**
**ನೂನಂ [೪]ನಿಲೇತುಮಸ್ತಾದ್ರೇಃ ಶಿಖರಾಣ್ಯಾಶ್ರಯಂತ್ಯಮೂಃ ॥ ೧೦೫ ॥**

ಆಕಾಶವೆಂಬ ಆಳವಾದ ಸರೋವರದಲ್ಲಿ ಬೆಳದಿಂಗಳೆಂಬ ನೀರಿನಲ್ಲಿ ಈ ನಕ್ಷತ್ರಗಳೆಂಬ ಸ್ತ್ರೀಹಂಸಪಕ್ಷಿಗಳು ಬಹುಕಾಲದವರೆಗೆ ಈಜಾಡಿ ವಾಸಮಾಡುವುದಕ್ಕೋಸ್ಕರ ನಿಜವಾಗಿಯೂ ಅಸ್ತಪರ್ವತದ ಶಿಖರಗಳನ್ನು ಆಶ್ರಯಿಸುತ್ತಿವೆ.

**ನಿದ್ರಾಕಷಾಯಿತೈರ್ನೇತ್ರೈಃ [೫]ಕೋಕೀನಾಂ [೬]ಸೇರ್ಷ್ಯಮೀಕ್ಷಿತಃ ।**
**[೭]ತದ್ದೃಷ್ಟಿದೂಷಿತಾತ್ಮೇವ ವಿಧು[೮]ರ್ವಿಚ್ಛಾಯತಾಂ ಗತಃ ॥ ೧೦೬ ॥**

ನಿದ್ರೆಯಿಂದ ಕೆಂಪಾಗಿ ಮಾಡಲ್ಪಟ್ಟ ಹೆಣ್ಣುಚಕ್ರವಾಕಪಕ್ಷಿಗಳ ಕಣ್ಣುಗಳಿಂದ ಈರ್ಷೆಯಿಂದ ನೋಡಲ್ಪಟ್ಟ ಚಂದ್ರನು ಆ ದೃಷ್ಟಿಪಾತದಿಂದ ಮಲಿನವಾಗಿ ಮಾಡಲ್ಪಟ್ಟ ಸ್ವರೂಪವುಳ್ಳವನಂತೆ ಕಾಂತಿರಹಿತನಾದನು.

**ಪ್ರಯಾತಿ [೯]ಯಾಮಿನೀ [೧೦]ಯಾಮಾನಿವಾನೇತುಂ ಪುರೋ ಗತಾನ್ ।**
**ಜ್ಯೋತ್ಸ್ನಾಂ[೧೧]ಶುಕೇನ ಸಂವೇಷ್ಟ್ಯ ತಾರಾಸರ್ವಸ್ವಮಾತ್ಮನಃ ॥ ೧೦೭ ॥**

ರಾತ್ರಿಯು ಬೆಳದಿಂಗಳೆಂಬ ವಸ್ತ್ರದಿಂದ ನಕ್ಷತ್ರಗಳೆಂಬ ತನ್ನ ದ್ರವ್ಯವನ್ನೆಲ್ಲ ಕಟ್ಟಿಕೊಂಡು ಹಿಂದೆ ಕಳೆದುಹೋದ ಜಾವಗಳನ್ನು ತರುವುದಕ್ಕೋಸ್ಕರವೋ ಎಂಬಂತೆ ಹೋಗುತ್ತಿದೆ.

**ಇತೋಸ್ತಮೇತಿ ಶೀತಾಂಶುರಿತೋ ಭಾಸ್ವಾನುದೀಯತೇ ।**
**ಸಂಸಾರಸ್ಯೇವ ವೈಚಿತ್ರ್ಯಮುಪದೇಷ್ಟುಂ ಸಮುದ್ಯತೌ ॥ ೧೦೮ ॥**

ಈ ಕಡೆಯಲ್ಲಿ ಚಂದ್ರನು ಅಸ್ತಮಿಸುತ್ತಾನೆ. ಈ ಕಡೆಯಲ್ಲಿ ಸೂರ್ಯನು ಉದಯಿಸುತ್ತಾನೆ. ಈ ಸೂರ್ಯಚಂದ್ರರಿಬ್ಬರೂ ಸಂಸಾರದ ವಿಚಿತ್ರತೆಯನ್ನು ಉಪದೇಶಮಾಡುವುದಕ್ಕೆ ಪ್ರಯತ್ನಪರರಾಗಿರುವಂತೆ ಕಾಣಿಸುತ್ತಾರೆ.

**ತಾರಕಾ ಗಗನಾಂಭೋಧೌ ಮುಕ್ತಾಫಲನಿಭಶ್ರಿಯಃ ।**
**ಅರುಣೌರ್ವಾನಲೇನೇಮಾ ವಿಲೀಯಂತೇ ಗತತ್ವಿಷಃ ॥ ೧೦೯ ॥**

ಆಕಾಶವೆಂಬ ಸಮುದ್ರದಲ್ಲಿ ಮುತ್ತುಗಳಿಗೆ ಸಮಾನವಾದ ಕಾಂತಿಯುಳ್ಳ ಈ ನಕ್ಷತ್ರಗಳು ಸೂರ್ಯನೆಂಬ ಬಡಬಾಗ್ನಿಯಿಂದ ನಿಸ್ತೇಜಸ್ಕಗಳಾಗಿ ಅಸ್ತವಾಗುತ್ತವೆ.

**ಸರಿತಾಂ ಸೈಕತಾದೇಷ ಚಕ್ರವಾಕೋ [೧೨]ರುವನ್ನುಷನ್ ।**
**[೧೩]ಅನ್ವಿಚ್ಛತಿ ನಿಜಾಂ ಕಾಂತಾಂ ನಿಶಾವಿರಹ[೧೪]ವಿಕ್ಲವಃ ॥ ೧೧೦ ॥**

ರಾತ್ರಿಯಲ್ಲಿ ಪತ್ನೀವಿಯೋಗದಿಂದ ಬಳಲಿದ ಈ ಚಕ್ರವಾಕಪಕ್ಷಿಯು ಕೂಗಿಕೂಗಿ ನದಿಯ ಮರಳಿನಿಂದೆದ್ದು ತನ್ನ ಪತ್ನಿಯನ್ನು ಹುಡುಕುತ್ತಿದೆ.

**ಅಯಂ ಹಂಸಯುವಾ ಹಂಸ್ಯಾ [೧೫]ಸುಷುಪ್ಸತಿ ಸಮಂ [೧೬]ಸತಿ ।**
**ಮೃಣಾಲಶಕಲೇನಾಂಗಂ ಕಂಡೂಯಂಶ್ಚಂಚುಲಂಬಿನಾ ॥ ೧೧೧ ॥**

ಎಲೈ ಪತಿವ್ರತೆಯಾದ ದೇವಿಯೆ ! ಈ ತರುಣಹಂಸಪಕ್ಷಿಯು ತನ್ನ ಕೊಕ್ಕಿನಲ್ಲಿ ಜೋಲಾಡುತ್ತಿರುವ ತಾವರೆಯದಂಟಿನ ತುಂಡಿನಿಂದ ತನ್ನ ಶರೀರವನ್ನು ಕೆರದುಕೊಳ್ಳುತ್ತ ಸ್ತ್ರೀಹಂಸದೊಡನೆ ಮಲಗುವುದಕ್ಕೆ ಅಪೇಕ್ಷಿಸುತ್ತದೆ.

**ಅಬ್ಜಿನೀಯಮಿತೋ ಧತ್ತೇ ವಿಕಸತ್ಪಂಕಜಾನನಮ್ ।**
**ಇತಶ್ಚ ಮ್ಲಾನಿಮಾಸಾದ್ಯ [೧]ನಮ್ರಾಸ್ಯೇಯಂ ಕುಮುದ್ವತೀ ॥ ೧೧೨ ॥**

ಈ ಕಡೆಯಲ್ಲಿ ಈ ಕಮಲಲತೆಯು ವಿಕಸಿತವಾದ ಕಮಲವೆಂಬ ಮುಖವನ್ನು ಧರಿಸಿದೆ. ಈ ಕಡೆಯಲ್ಲಿ ಈ ಕುಮುದಲತೆಯು ನಮ್ರವಾದ ಮುಖವುಳ್ಳದಾಗಿ ಬರುತ್ತಿದೆ.

**ಸರಸಾಂ ಪುಲಿನೇಷ್ವೇತಾಃ ಕುರರ್ಯಃ ಕುರ್ವತೇ ರುತಮ್ ।**
**ಯುಷ್ಮನ್ನೂಪುರ[೨]ಸಂವಾದಿ ತಾರಂ ಮಧುರಮೇವ ಚ ॥ ೧೧೩ ॥**

ಸರೋವರಗಳ ಮರಳುಗಳಲ್ಲಿ ಈ ಹೆಣ್ಣುಕುರವ ಹಕ್ಕಿಗಳು ನಿಮ್ಮ ಪಾದಕಡಗಕ್ಕೆ ಸದೃಶವೂ ಗಟ್ಟಿಯೂ ಮಧುರವೂ ಆದ ಶಬ್ದವನ್ನು ಮಾಡುತ್ತಿವೆ.

**ಸ್ವನೀಡಾದುತ್ಪತಂತ್ಯದ್ಯ ಕೃತಕೋಲಾಹಲಸ್ವನಾಃ ।**
**ಪ್ರಭಾತಮಂಗಲಾನೀವ ಪಠಂತೋಮೀ ಶಕುಂತಯಃ ॥ ೧೧೪ ॥**

ಪ್ರಭಾತಸಮಯದ ಮಂಗಲ ಪದ್ಯಗಳನ್ನು ಪಠಿಸುತ್ತಿವೆಯೋ ಎಂಬಂತೆ ಕೋಲಾಹಲಶಬ್ದವನ್ನು ಮಾಡುತ್ತಿರುವ ಈ ಪಕ್ಷಿಗಳು ಈಗ ತಮ್ಮ ಗೂಡುಗಳಿಂದ ಮೇಲಕ್ಕೆ ಹಾರುತ್ತಿವೆ.

**ಅಪ್ರಾಪ್ತ[೩]ಸ್ತ್ರೈಣಸಂಸ್ಕಾರಾಃ [೪]ಪರಿಕ್ಷೀಣದಶಾ ಇಮೇ ।**
**ಕಾಂಚುಕೀಯೈಃ ಸಮಂ ದೀಪಾ ಯಾಂತಿ ಕಾಲೇನ ಮಂದತಾಮ್ ॥**

ಸ್ತ್ರೀಸಂಬಂಧವಾದ ಸಂಸ್ಕಾರವಿಲ್ಲದವರೂ ವೃದ್ಧರೂ ಆದ ಅಂತಃಪುರದ ಸೇವಕರೊಡನೆ ಸ್ತ್ರೀಲಿಂಗಪ್ರತ್ಯಯಸಂಬಂಧವಿಲ್ಲದಿರುವುವೂ ನಷ್ಟವಾದ ಬತ್ತಿಗಳುಳ್ಳುವೂ ಆದ ಈ ದೀಪಗಳು ಪ್ರಾತಃಕಾಲದ ಬೆಳಕಿನಿಂದ ಮೊಬ್ಬಾಗುತ್ತವೆ.

**ಇತೋ ನಿಜಗೃಹೇ ದೇವಿ ತ್ವನ್ಮಂಗಲವಿಧಿತ್ಸಯಾ ।**
**[೫]ಕುಬ್ಜವಾಮನಿಕಾಪ್ರಾಯಃ ಪರಿವಾರಃ [೬]ಪ್ರತೀಚ್ಛತಿ ॥ ೧೧೬ ॥**

ಎಲೈ ದೇವಿಯೇ! ಈಕಡೆ ನಿಮ್ಮ ಮನೆಗಳಲ್ಲಿ ಕುಬ್ಜರೂ ಕುಳ್ಳರೂ ಆದ ಸ್ತ್ರೀಯರೇ ಅಧಿಕವಾಗಿರುವ ಪರಿವಾರಜನರು ನಿನ್ನ ಮಂಗಲವಿಧಿಯನ್ನು ಮಾಡಬೇಕೆಂಬ ಇಚ್ಛೆಯಿಂದ ಎದುರಾಗಿ ಬರುತ್ತಿದ್ದಾರೆ.

**ವಿಮುಂಚ ಶಯನಂ ತಸ್ಮಾನ್ನದೀಪುಲಿನಸನ್ನಿಭಮ್ ।**
**ಹಂಸೀವ [೭]ರಾಜಹಂಸಸ್ಯ ವಲ್ಲಭಾ [೮]ಮಾನಸಾಶ್ರಯಾ ॥ ೧೧೭ ॥**

ಆದುದರಿಂದ ರಾಜಹಂಸಪಕ್ಷಿಯ ಪತ್ನಿಯೂ ಮಾನಸಸರೋವರದ ಆಶ್ರಯವುಳ್ಳದೂ ಆದ ಸ್ತ್ರೀಹಂಸಪಕ್ಷಿಯು ಮರಳನ್ನು ಬಿಡುವಂತೆ ರಾಜಶ್ರೇಷ್ಠನ ಪತ್ನಿಯೂ ಮನಸ್ಸಿಗೆ ಆಶ್ರಯಳೂ ಆದ ನೀನು ನದಿಯ ಮರಳಿಗೆ ಸಮಾನವಾದ ಶಯನವನ್ನು ಬಿಡು."

**ಇತ್ಯುಚ್ಚೈರ್ವಂದಿವೃಂದೇಷು ಪಠತ್ಸು ಸಮಯೋಚಿತಮ್ ।**
**ಪ್ರಾಬೋಧಿಕಾನಕಧ್ವಾನೈಃ ಸಾ [೯]ವಿನಿದ್ರಾಭವಚ್ಛನೈಃ ॥ ೧೧೮ ॥**

ಈರೀತಿಯಾಗಿ ಸ್ತುತಿಪಾಠಕರು ಸಮಯೋಚಿತವಾದ ಪದ್ಯವನ್ನು ಗಟ್ಟಿಯಾಗಿ ಪಠಿಸುತ್ತಿರಲು ಆ ಯಶಸ್ವತೀದೇವಿಯು ಪ್ರಾತಃಕಾಲದಲ್ಲಿ ಎಚ್ಚರಗೊಳಿಸುವ ತಮ್ಮಟೆಯ ಶಬ್ದಗಳಿಂದ ಮೆಲ್ಲನೆ ಎಚ್ಚತ್ತಳು.

---

೧ ಅಭಿಗಚ್ಛತಿ. ೨ ಅಸ್ತಾಚಲವೃಕ್ಷಂ. ೩ ತರಣಂ ಕೃತ್ವಾ. ೪ ವಸ್ತುಂ. ೫ ಚಕ್ರವಾಕೀನಾಂ. ೬ ಈರ್ಷಯಾ ಸಹಿತಂ. ೭ ದೃಷ್ಟಿಪಾತೇನ ಮಲಿನೀಕೃತಸ್ವರೂಪ ಇವ. ೮ ವಿಗತಕಾಂತಿತಾಂ. ೯ ರಾತ್ರಿಃ. ೧೦ ಪ್ರಹರಾನ್. ೧೧ ವಸ್ತ್ರೇಣ. ೧೨ ಕೂಜನ್ನೂಜನ್. ೧೩ ಮೃಗಯತೇ. ೧೪ ವಿಹ್ವಲಃ. ೧೫ ಶಯಿತುಮಿಚ್ಛತಿ. ೧೬ ಭೋ ಸತಿ.

೧ ನತಮುಖಾ. ೨ ಸದೃಶಂ. ೩ ಸ್ತ್ರೀಸಂಬಂಧೀ. ೪ ವರ್ತಿಕಾಃ, ಪರಿಕ್ಷೀಣವಯಸ್ಕಾಶ್ಚ. ೫ ಹ್ರಸ್ವಾಂಗಸ್ತ್ರೀ. ೬ ಆಗಚ್ಛತಿ. ೭ ರಾಜಶ್ರೇಷ್ಠಸ್ಯ, ರಾಜಮರಾಲಸ್ಯ ಚ. ೮ ಚಿತ್ತಸ್ಯ, ಮಾನಸನಾಮಸರಸಶ್ಚ ಆಶ್ರಯೋ ಯಸ್ಯಾಸ್ಸಾ. ೯ ಗತನಿದ್ರಾ.

**ವಿಮುಕ್ತ[೧]ಶಯನಾ ಚೈಷಾ ಕೃತಮಂಗಲಮಜ್ಜನಾ ।**
**ಪ್ರಷ್ಟುಕಾಮಾ ಸ್ವದೃಷ್ಟಾನಾಂ ಸ್ವಪ್ನಾನಾಂ ತತ್ತ್ವತಃ ಫಲಮ್ ॥ ೧೧೯ ॥**

**ಪ್ರೀತಿಕಂಟಕಿತಾ ಭೇಜೇ ಪದ್ಮಿನೀವಾರ್ಕ[೨]ಮುದ್ರುಚಮ್ ।**
**ಪ್ರಾಣನಾಥಂ ಜಗತ್ಪ್ರಾಣಿ[೩]ಸ್ವಾಂತಧ್ವಾಂತನುದಂ ವಿಭುಮ್ ॥ ೧೨೦ ॥**

ಹಾಸಿಗೆಯಿಂದೆದ್ದ ಈ ಯಶಸ್ವತೀದೇವಿಯು ಮಂಗಲಸ್ನಾನವನ್ನು ಮಾಡಿಕೊಂಡು ತಾನು ಕಂಡ ಸ್ವಪ್ನಗಳ ನಿಜವಾದ ಫಲವನ್ನು ಕೇಳಬೇಕೆಂಬ ಇಚ್ಛೆಯುಳ್ಳವಳೂ ಪ್ರೀತಿಯಿಂದ ರೋಮಾಂಚವಾದ ಶರೀರವುಳ್ಳವಳೂ ಆಗಿ, ಕಮಲಲತೆಯು ಉನ್ನತವಾದ ಕಾಂತಿಯುಳ್ಳ ಸೂರ್ಯನನ್ನು ಹೊಂದುವಂತೆ, ಲೋಕದ ಪ್ರಾಣಿಗಳ ಮನಸ್ಸಿನಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಹೋಗಲಾಡಿಸುವ ಪ್ರಾಣನಾಥರಾದ ವೃಷಭಸ್ವಾಮಿಯನ್ನು ಹೊಂದಿದಳು.

**ತಮುಪೇತ್ಯ ಸುಖಾಸೀನಾ ಸ್ವೋಚಿತೇ ಭದ್ರವಿಷ್ಟರೇ ।**
**ಲಕ್ಷ್ಮೀರಿವ [೪]ರುಚಿಂ ಭೇಜೇ ಭರ್ತುರ್[೫]ರಭ್ಯರ್ಣವರ್ತಿನೀ ॥ ೧೨೧ ॥**

ಯಶಸ್ವತೀದೇವಿಯು ಪತಿಯ ಸಮೀಪಕ್ಕೆ ಹೋಗಿ ತನಗೆ ಉಚಿತವಾದ ಭದ್ರಪೀಠದಲ್ಲಿ ಸುಖವಾಗಿ ಕುಳಿತು ಪತಿಯ ಸಮೀಪದಲ್ಲಿರುವವಳಾಗಿ ಲಕ್ಷ್ಮಿಯಂತೆ ಶೋಭಿಸಿದಳು.

**ಸಾ [೬]ಪತ್ಯೇ ಸ್ವಪ್ನಮಾಲಾಂ ತಾಂ ಯಥಾದೃಷ್ಟಂ ನ್ಯವೇದಯತ್ ।**
**[೭]ದಿವ್ಯಚಕ್ಷುರಸೌ ದೇವಸ್ತತ್ಫಲಾನೀತ್ಯಭಾಷತ ॥ ೧೨೨ ॥**

ಯಶಸ್ವತೀದೇವಿಯು ಆ ಸ್ವಪ್ನಪರಂಪರೆಯನ್ನು ತಾನು ನೋಡಿದಂತೆಯೇ ಪತಿಗೆ ತಿಳಿಸಿದಳು. ಅವಧಿಜ್ಞಾನವೆಂಬ ನೇತ್ರವುಳ್ಳ ಈ ವೃಷಭಸ್ವಾಮಿಯು ಆ ಸ್ವಪ್ನಫಲಗಳನ್ನು ಮುಂದೆ ಹೇಳುವ ರೀತಿಯಾಗಿ ತಿಳಿಸಿದರು.

**ತ್ವಂ ದೇವಿ ಪುತ್ರಮಾಪ್ತಾಸಿ [೮]ಗಿರೀಂದ್ರಾಚ್ಚಕ್ರವರ್ತಿನಮ್ ।**
**ತಸ್ಯ [೯]ಪ್ರತಾಪಿತಾಮರ್ಕಃ ಶಾಸ್ತೀಂದುಃ ಕಾಂತಿಸಂಪದಮ್ ॥ ೧೨೩ ॥**

"ಎಲೈ ದೇವಿಯೇ! ಮಹಾಮೇರುಪರ್ವತದ ದರ್ಶನದಿಂದ ನೀನು ಚಕ್ರವರ್ತಿಯಾಗುವ ಪುತ್ರನನ್ನು ಪಡೆಯುವೆ. ಸೂರ್ಯದರ್ಶನದಿಂದ ಅವನು ಪ್ರತಾಪಿಯಾಗುವನು. ಚಂದ್ರದರ್ಶನದಿಂದ ಕಾಂತಿಯುಳ್ಳವನಾಗುವನು.

**ಸರೋಜಾಕ್ಷಿ ಸರೋದೃಷ್ಟೇರಸೌ ಪಂಕಜವಾಸಿನೀಮ್ ।**
**ವೋಢಾ [೧೦]ವ್ಯೂಢೋರಸಾ ಪುಣ್ಯಲಕ್ಷಣಾಂ[೧೧]ಕಿತವಿಗ್ರಹಃ ॥ ೧೨೪ ॥**

ಎಲೈ ಕಮಲಲೋಚನೆಯೇ! ನೀನು ಸ್ವಪ್ನದಲ್ಲಿ ಸರೋವರವನ್ನು ನೋಡಿದುದರಿಂದ ವಿಶಾಲವಾದ ವಕ್ಷಸ್ಥಲವುಳ್ಳವನೂ ಪುಣ್ಯಕರವಾದ ಲಕ್ಷಣಗಳುಳ್ಳ ಶರೀರವುಳ್ಳವನೂ ಆದ ಈ ನಿನ್ನ ಪುತ್ರನು ಲಕ್ಷ್ಮಿಯನ್ನು ಧರಿಸುವನು.

**ಮಹೀಗ್ರಸನತಃ ಕೃತ್ಸ್ನಾಂ ಮಹೀಂ ಸಾಗರವಾಸಸಮ್ ।**
**ಪ್ರತಿಪಾಲಯಿತಾ ದೇವಿ ವಿಶ್ವರಾಟ್ತವ ಪುತ್ರಕಃ ॥ ೧೨೫ ॥**

ಎಲೈ ದೇವಿಯೇ! ಪೃಥ್ವಿಯನ್ನು ನುಂಗಿದ ಸ್ವಪ್ನವನ್ನು ನೋಡಿದುದರಿಂದ ಚಕ್ರವರ್ತಿಯಾಗುವ ನಿನ್ನ ಪುತ್ರನು ಸಮುದ್ರವೇ ವಸ್ತ್ರವಾಗಿರುವ ಸಮಸ್ತಪೃಥ್ವಿಯನ್ನು ಪರಿಪಾಲಿಸುವನು.

**ಸಾಗರಾಚ್ಚರಮಾಂಗೋಸೌ ತರಿತಾ ಜನ್ಮಸಾಗರಮ್ ।**
**ಜ್ಯಾಯಾನ್ಪುತ್ರಶತಸ್ಯಾಯಮಿಕ್ಷ್ವಾಕುಕುಲ[೧೨]ನಂದನಃ ॥ ೧೨೬ ॥**

ಸ್ವಪ್ನದಲ್ಲಿ ಸಮುದ್ರವನ್ನು ನೋಡಿದುದರಿಂದ ಅಂತಿಮಶರೀರಧಾರಿ (ತದ್ಭವ ಮೋಕ್ಷಗಾಮಿ) ಯಾದ ಈ ನಿನ್ನ ಪುತ್ರನು ಜನ್ಮವೆಂಬ ಸಮುದ್ರವನ್ನು ದಾಟುವನು.

೧ ಮಂಚಃ. ೨ ಉದ್ಗತಪ್ರಭಂ. ೩ ಚಿತ್ತಸ್ಥಾಜ್ಞಾನಧ್ವಾಂತವಿದಾರಕಂ. ೪ ಶೋಭಾಂ. ೫ ಸಮೀಪಃ. ೬ ನಾಯಕಾಯ. ೭ ಅವಧಿಜ್ಞಾನದೃಷ್ಟಿಃ. ೮ ಮೇರುದರ್ಶನಾತ್. ೯ ಪ್ರತಾಪಿತ್ವಂ. ೧೦ ವಿಶಾಲವಕ್ಷಸ್ಥಲಃ. ೧೧ ಅಂಚಿತ ಇತ್ಯಪಿ ಪಾಠಃ. ೧೨ ಸಂತೋಷಕರಃ.

ನಿನಗೆ ಹುಟ್ಟುವ ನೂರು ಮಕ್ಕಳಲ್ಲಿ ಇವನು ಜ್ಯೇಷ್ಠಪುತ್ರನಾಗಿ ಇಕ್ಷ್ವಾಕುವಂಶಕ್ಕೆ ಆನಂದವನ್ನುಂಟುಮಾಡುವನು."

**ಇತಿ ಶ್ರುತ್ವಾ ವಚೋ ಭರ್ತುಃ ಸಾ ತದಾ ಪ್ರಮದೋದಯಾತ್ ।**
**ವವೃಧೇ ಜಲಧೇರ್ವೇಲಾ ಯಥೇಂದೌ ಸಮುದೇಷ್ಯತಿ ॥ ೧೨೭ ॥**

ಈ ಪ್ರಕಾರವಾದ ಪತಿಯ ವಚನವನ್ನು ಕೇಳಿ ಆ ಯಶಸ್ವತಿಯು ಆಗ ಸಂತೋಷದಿಂದ, ಚಂದ್ರನು ಉದಯಿಸುತ್ತಿರಲಾಗಿ ಸಮುದ್ರದ ದಡವು ವೃದ್ಧಿಹೊಂದುವಂತೆ, ವೃದ್ಧಿಹೊಂದಿದಳು.

**ತತಃ ಸರ್ವಾರ್ಥಸಿದ್ಧಿಸ್ಥೋ ಯೋಸೌ ವ್ಯಾಘ್ರಚರಃ ಸುರಃ ।**
**[೧]ಸುಬಾಹುರಹಮಿಂದ್ರೋತಶ್ಚ್ಯುತ್ವಾ ತದ್ಗರ್ಭಮಾವಸತ್ ॥ ೧೨೮ ॥**

ತರುವಾಯ ಮೊದಲು ಹುಲಿಯಾಗಿದ್ದು ಅನಂತರ ಮತಿವರಸುಬಾಹು ಮೊದಲಾದ ಅವಸ್ಥೆಗಳನ್ನು ಹೊಂದಿ ಕೊನೆಗೆ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾಗಿ ಹುಟ್ಟಿದ ದೇವನು ಸರ್ವಾರ್ಥಸಿದ್ಧಿಯಿಂದ ಚ್ಯುತನಾಗಿ ಯಶಸ್ವತಿಯ ಗರ್ಭದಲ್ಲ ವಾಸಮಾಡಿದನು. ಯಶಸ್ವತಿಯ ಗರ್ಭಕ್ಕವತರಿಸಿದನೆಂದರ್ಥವು.

**ಸಾ ಗರ್ಭಮವಹದ್ದೇವೀ [೨]ದೇವಾದ್ದಿವ್ಯಾ[೩]ನುಭಾವಜಮ್ ।**
**ಯೇನ ನಾಸಹತಾರ್ಕಂ ಚ ಸಮಾಕ್ರಾಮಂತಮಂಬರೇ ॥ ೧೨೯ ॥**

ಆ ಯಶಸ್ವತೀದೇವಿಯು ವೃಷಭಸ್ವಾಮಿಯ ದಿವ್ಯಸಾಮರ್ಥ್ಯದಿಂದುಂಟಾದ ಗರ್ಭವನ್ನು ಧರಿಸಿದುದರಿಂದ ಆಕೆಯು ಆಕಾಶದಲ್ಲಿ ಆಕ್ರಮಿಸುತ್ತಿರುವ ಸೂರ್ಯನನ್ನು ನೋಡಿ ಸಹಿಸಲಿಲ್ಲ. ಪ್ರತಾಪಿಯಾದ ಪುತ್ರನು ಗರ್ಭದಲ್ಲಿದ್ದುದರಿಂದ ಆಕೆಯು ಸೂರ್ಯನನ್ನು ನೋಡಿ ಸಹಿಸಲಿಲ್ಲವೆಂದು ಭಾವವು.

**ಸಾಪಶ್ಯತ್ಸ್ವಮುಖಚ್ಛಾಯಾಂ [೪]ವೀರಸೂ[೫]ರಸಿದರ್ಪಣೇ ।**
**ತತ್ರ [೬]ಪ್ರಾತಿಪಿಕೀಂ ಸ್ವಾಂ ಚ ಛಾಯಾಂ ನಾಸೋಢ ಮಾನಿನೀ॥ ೧೩೦ ॥**

ವೀರಮಾತೃವಾದ ಆ ಯಶಸ್ವತಿಯು ಖಡ್ಗವೆಂಬ ಕನ್ನಡಿಯಲ್ಲಿ ತನ್ನ ಮುಖದ ಪ್ರತಿಬಿಂಬವನ್ನು ನೋಡಿ ತನಗೆ ಪ್ರತಿಕೂಲವಾಗಿರುವ ತನ್ನ ಪ್ರತಿಬಿಂಬವನ್ನೇ ಆ ಮಾನವತಿಯು ಸಹಿಸಲಿಲ್ಲ.

**ಅಂತರ್ವತ್ನೀಮಪಶ್ಯತ್ತಾಂ ಪತಿರುತ್ಸುಕಯಾ ದೃಶಾ ।**
**ಜಲಗರ್ಭಾಮಿವಾಂಭೋದಮಾಲಾಂ ಕಾಲೇ [೭]ಶಿಖಾವಲಃ ॥ ೧೩೧ ॥**

ವರ್ಷಾಕಾಲದಲ್ಲಿ ನವಿಲು, ಮಧ್ಯದಲ್ಲಿ ಜಲವುಳ್ಳ ಮೇಘಪಂಕ್ತಿಯನ್ನು, ನೋಡುವಂತೆ ಆ ವೃಷಭಸ್ವಾಮಿಯು ಗರ್ಭಿಣಿಯಾದ ಆ ಯಶಸ್ವತೀದೇವಿಯನ್ನು ಕುತೂಹಲವಿಶಿಷ್ಟವಾದ ನೇತ್ರದಿಂದ ನೋಡಿದರು.

**ರತ್ನಗರ್ಭೇವ ಸಾ ಭೂಮಿಃ ಫಲಗರ್ಭೇವ ವಲ್ಲರೀ ।**
**ತೇಜೋಗರ್ಭೇವ ದಿಕ್ಪ್ರಾಚೀ ನಿತರಾಂ ರುಚಮಾನಶೇ ॥ ೧೩೨ ॥**

ಆ ಯಶಸ್ವತೀದೇವಿಯು ಮಧ್ಯದಲ್ಲಿ ರತ್ನಗಳುಳ್ಳ ಭೂಮಿಯಂತೆಯೂ ಮಧ್ಯದಲ್ಲಿ ಫಲಗಳುಳ್ಳ ಲತೆಯಂತೆಯೂ ಮಧ್ಯದಲ್ಲಿ ತೇಜಸ್ಸುಳ್ಳ ಪೂರ್ವದಿಕ್ಕಿನಂತೆಯೂ ಅಧಿಕವಾಗಿ ಶೋಭಿಸಿದಳು.

**ಸಾ ಮಂದಂ ಗಮನಂ ಭೇಜೇ ಮಣಿಕುಟ್ಟಿಮಭೂಮಿಷು ।**
**ಹಂಸೀವ ನೂಪುರೋದಾರಶಿಂಜಾನೈರ್ಮಂಜುಭಾಷಿಣೀ ॥ ೧೩೩ ॥**

೧ ಪ್ರಾಙ್ಮತಿವರಃ. ೨ ಪುರುಪರಮೇಶ್ವರಾತ್. ೩ ಸಾಮರ್ಥ್ಯಜಂ. ೪ ವೀರಮಾತಾ. ೫ ಖಡ್ಗದರ್ಪಣೇ. ೬ ಪ್ರತಿಕೂಲಾಂ. ೭ ಕೇಕೀ.

ಮನೋಹರವಾಗಿ ಮಾತನಾಡುವ ಆ ಯಶಸ್ವತಿಯು ತನ್ನ ಪಾದಕಡಗದ ಗಂಭೀರವಾದ ಶಬ್ದಗಳಿಂದ ಸ್ತ್ರೀಹಂಸಪಕ್ಷಿಯಂತೆ ರತ್ನಖಚಿತವಾದ ಭೂಮಿಗಳಲ್ಲಿ ಮಂದಗಮನವನ್ನು ಮಾಡಿದಳು.

**[1]ಸಾವಷ್ಟಂಭಪದನ್ಯಾಸೈರ್ಮುದ್ರಯಂತೀವ ಸಾ ಧರಾಮ್ ।**
**[2]ಸ್ವಭುಕ್ತ್ಯೈ [3]ಮಂಥರಂ ಯಾತಮಭಜನ್ಮಣಿಭೂಮಿಷು ॥ ೧೩೪ ॥**

ಆ ಯಶಸ್ವತೀದೇವಿಯು ನಿಂತುನಿಂತು ಹೆಜ್ಜೆಗಳನ್ನಿಡುವುದರಿಂದ, ಭೂಮಿಗೆ ಮುದ್ರೆಯನ್ನು ಮಾಡುತ್ತಾಳೋ ಎಂಬಂತೆ, ಅಪಾಯದಿಂದ ತನ್ನನ್ನು ರಕ್ಷಿಸಿಕೊಳ್ಳುವುದಕ್ಕೋಸ್ಕರ ರತ್ನಖಚಿತವಾದ ಭೂಮಿಗಳಲ್ಲಿ ಮಂದಗಮನವನ್ನು ಮಾಡಿದಳು. ರತ್ನಖಚಿತವಾದ ಭೂಮಿಗಳಲ್ಲಿ ಜಾರಿಬೀಳುವ ಭಯದಿಂದ ಮೆಲ್ಲನೆ ಸಂಚರಿಸಿದಳೆಂದರ್ಥವು.

**ಉದರೇಸ್ಯಾ [4]ವಲೀಭಂಗೋ ನಾದೃಶ್ಯತ ಯಥಾ ಪುರಾ ।**
**ಅಭಂಗಂ ತತ್ಸುತಸ್ಯೇವ ದಿಗ್ಜಯಂ ಸೂಚಯನ್ನಸೌ ॥ ೧೩೫ ॥**

ಈ ಯಶಸ್ವತೀದೇವಿಯ ಹೊಟ್ಟೆಯಲ್ಲಿ ತೆರೆಮಾಲೆಯಂತಿರುವ ತ್ರಿವಲಿಗಳು ಮೊದಲಿನಂತೆ ಕಾಣಿಸಲಿಲ್ಲವು. ಈ ವಲಿತ್ರಯವು ಯಶಸ್ವತೀದೇವಿಯ ಪುತ್ರನ ಅಪ್ರತಿಹತವಾದ ದಿಗ್ವಿಜಯವನ್ನು ಸೂಚಿಸುತ್ತಿದೆಯೋ ಎಂಬಂತಿದ್ದಿತು.

**[5]ನೀಲಿಮಾ ತತ್ಕುಚೋಪಾಗ್ರೇ[6]ಮಾಸ್ಪೃಶದ್ಗರ್ಭಸಂಭವೇ।**
**ಗರ್ಭಸ್ಥೋಸ್ಯಾಃ ಸುತೋನ್ಯೇಷಾಂ ನಿರ್ದಹೇನ್ನೂನಮುನ್ನತಿಮ್ ॥**

ಗರ್ಭವು ಸಂಭವಿಸಿದ ತರುವಾಯ ಆ ಯಶಸ್ವತಿಯ ಕುಚಗಳ ಅಗ್ರಭಾಗವು ಕಪ್ಪಾಯಿತು. ಇದು ''ಈ ಯಶಸ್ವತಿಯ ಗರ್ಭದಲ್ಲಿರುವ ಪುತ್ರನು ಬೇರೆಯವರ (ಶತ್ರುಗಳ) ಉನ್ನತಿಯನ್ನು ದಹಿಸುವನು'' ಎಂಬುದನ್ನು ತಿಳಿಸುವಂತಿದ್ದಿತು.

**ದೌಹೃದಂ ಪರಮೋದಾತ್ತಮಾಹಾರೇ ಮಂದಿಮಾ ರುಚೇಃ ।**
**ಸಾಲಸಂ [7]ಗತ[8]ಮಾಯಾಸಾತ್ಸ್ರಸ್ತಾಂಗಂ ಶಯನಂ ಭುವಿ ॥ ೧೩೭ ॥**

**ಮುಖಮಾಪಾಂಡು ಗಂಡಾಂತಂ ವೀಕ್ಷಣಂ ಸಾಲಸೇಕ್ಷಿತಮ್ ।**
**[9]ಆಪಾಟಲಾಧರಂ ವಕ್ತ್ರಂ [10]ಮೃತ್ಸ್ನಾಸುರಭಿಗಂಧಿ ಚ ॥ ೧೩೮ ॥**

**ಇತ್ಯಸ್ಯಾ ಗರ್ಭಚಿಹ್ನಾನಿ ಮನಃ ಪತ್ಯುರರಂಜಯನ್ ।**
**ವವೃಧೇ ಚ ಶನೈರ್ಗರ್ಭೋ ದ್ವಿಷಚ್ಛಕ್ತೀರರಂಜಯನ್ ॥ ೧೩೯ ॥**

ಯಶಸ್ವತಿಯ ಅತ್ಯುತ್ತಮವಾದ ಗರ್ಭಚಿಹ್ನೆಯೂ ಆಹಾರದ ಇಚ್ಛೆಯು ಕಡಿಮೆಯಾದುದೂ ಆಲಸ್ಯಯುಕ್ತವಾದ ಗಮನವೂ ಆಯಾಸದಿಂದ ಶರೀರವು ಶಿಥಿಲವಾದುದೂ ಭೂಮಿಯಲ್ಲಿ ಶಯನವೂ ಕೆನ್ನೆಗಳವರೆಗೂ ಬೆಳ್ಳಗಾದ ಮುಖವೂ ಆಲಸ್ಯಯುಕ್ತವಾದ ನೋಟವುಳ್ಳ ನೇತ್ರವೂ ಸ್ವಲ್ಪಕೆಂಪಾದ ತುಟಿಗಳುಳ್ಳುದೂ ಮಣ್ಣಿನಂತೆ ಪರಿಮಳವಾದ ಗಂಧವುಳ್ಳುದೂ ಆದ ಮುಖವೂ ಈ ಗರ್ಭಚಿಹ್ನೆಗಳು ಪತಿಯಾದ ವೃಷಭಸ್ವಾಮಿಯ ಮನಸ್ಸನ್ನು ಸಂತೋಷಪಡಿಸಿದುವು. ಶತ್ರುಗಳ ಶಕ್ತಿಗಳನ್ನು ಶೀಘ್ರವಾಗಿ ಜಯಿಸುವ ಗರ್ಭವೂ ಕ್ರಮೇಣ ವೃದ್ಧಿ ಹೊಂದಿತು.

**ನವಮಾಸೇಷ್ವತೀತೇಷು ತದಾ ಸಾ ಸುಷುವೇ ಸುತಮ್ ।**
**ಪ್ರಾಚೀವಾರ್ಕಂ ಸ್ಫುರತ್ತೇಜಃ ಪರಿವೇಷಂ ಮಹೋದಯಮ್ ॥ ೧೪೦ ॥**

ಒಂಬತ್ತು ತಿಂಗಳು ಕಳೆದನಂತರ ಪೂರ್ವದಿಕ್ಕು ದೇದೀಪ್ಯಮಾನವಾದ ಕಾಂತಿಯುಳ್ಳವನೂ ಪರಿಧಿಯುಳ್ಳವನೂ ಮಹೋದಯವುಳ್ಳವನೂ ಆದ ಸೂರ್ಯನನ್ನು ಪಡೆಯುವಂತೆ ಆ ಯಶಸ್ವತೀದೇವಿಯು ಪುತ್ರನನ್ನುಹಡೆದಳು.

೧ ಸ್ಥಿತಿಸಹಿತಪದನ್ಯಾಸೈಃ. ೨ ಸ್ವಪಾಲನಾಯ. ೩ ಮಂದಗಮನಂ. ೪ ತ್ರಿವಲೀಭಂಗಃ. ೫ ಕೃಷ್ಣತ್ವಂ. ೬ ಸ್ಪೃಶತಿ ಸ್ಮ. ೭ ಗಮನಂ. ೮ ಪ್ರಯಾಸಾತ್. ೯ ಈಷದ್ರಕ್ತಾಧರಂ. ೧೦ ಮೃತ್ತಿಕಾವತ್ಪರಿಮಲಂ.

**ಶುಭೇ ದಿನೇ ಶುಭೇ ಲಗ್ನೇ ಯೋಗೇ [1]ಧುರಧುರಾಹ್ವಯೇ ।**
**ಸಾ [2]ಪ್ರಾಸೋಷ್ಟ ಸುತಾಗ್ರಣ್ಯಂ ಸ್ಫುರತ್ಸಾಮ್ರಾಜ್ಯಲಕ್ಷಣಮ್ ॥ ೧೪೧ ॥**

ಆ ಯಶಸ್ವತೀದೇವಿಯು ಶುಭದಿನದಲ್ಲಿ ಶುಭಲಗ್ನದಲ್ಲಿ ಧ್ರುವಯೋಗದಲ್ಲಿ ಪ್ರಕಾಶಮಾನವಾದ ಚಕ್ರವರ್ತಿಯ ಲಕ್ಷಣಗಳುಳ್ಳವನೂ ಶ್ರೇಷ್ಠನೂ ಆದ ಪುತ್ರನನ್ನು ಹಡೆದಳು.

**ಆಶ್ಲಿಷ್ಯ ಪೃಥಿವೀಂ ದೋರ್ಭ್ಯಾಂ ಯದಸಾವುದಪದ್ಯತ ।**
**ತತೋಸ್ಯ ಸಾರ್ವಭೌಮತ್ವಂ ಜಗುರ್ನೈಮಿತ್ತಿಕಾಸ್ತದಾ ॥ ೧೪೨ ॥**

ಈ ಪುತ್ರನು ತನ್ನ ಎರಡು ಭುಜಗಳಿಂದ ಭೂಮಿಯನ್ನು ಆಲಿಂಗಿಸಿ ಜನಿಸಿದುದರಿಂದ ಆಗ ನಿಮಿತ್ತಜ್ಞಾನಿಗಳು ಇವನು ಮುಂದೆ ಚಕ್ರವರ್ತಿಯಾಗುವನೆಂದು ಹೇಳಿದರು.

**ಸುತೇಂದುನಾತಿಸೌಮ್ಯೇನ ವ್ಯದ್ಯುತಚ್ಛರ್ವರೀವ ಸಾ ।**
**ಬಾಲಾರ್ಕೇಣ ಪಿತುಶ್ಚಾಸೀದ್ದಿವಸಸ್ಯೇವ ದೀಪ್ತತಾ ॥ ೧೪೩ ॥**

ಅತ್ಯಂತ ಸೌಮ್ಯನಾದ ಪುತ್ರನೆಂಬ ಚಂದ್ರನಿಂದ ಆ ಯಶಸ್ವತಿಯು ರಾತ್ರಿಯಂತೆ ಅಧಿಕವಾಗಿ ಶೋಭಿಸಿದಳು. ಬಾಲಸೂರ್ಯನಿಂದ ದಿವಸಕ್ಕೆ ದೀಪ್ತಿಯುಂಟಾಗುವಂತೆ, ಈ ಪುತ್ರನಿಂದ ತಂದೆಗೂ ಅಧಿಕವಾದ ದೀಪ್ತಿಯುಂಟಾಯಿತು.

**[3]ಪಿತಾಮಹೌ ಚ [4]ತಸ್ಯಾಮೂ ಪ್ರಮೋದಂ ಪರಮೀಯತುಃ ।**
**ಯಥಾ ಸವೇಲೋ ಜಲಧಿರುದಯೇ ಶಶಿನಃ ಶಿಶೋಃ ॥ ೧೪೪ ॥**

ಚಂದ್ರೋದಯದಲ್ಲಿ ದಡಸಹಿತವಾದ ಸಮುದ್ರವು ವೃದ್ಧಿಹೊಂದುವಂತೆ, ಆ ಭರತಕುಮಾರನ ಉತ್ಪತ್ತಿಯಿಂದ ಅವನ ಪಿತಾಮಹರಾದ ಮರುದೇವೀನಾಭಿರಾಜರೂ ಪರಮಾನಂದವನ್ನು ಹೊಂದಿದರು.

**ತಾಂ ತದಾ ವರ್ದ್ಧಯಾಮಾಸುಃ ಪುಣ್ಯಾಶೀರ್ಭಿಃ [5]ಪುರಂಧ್ರಿಕಾಃ ।**
**ಸುಖಂ ಪ್ರಸೂಷ್ವ ಪುತ್ರಾಣಾಂ ಶತಮಿತ್ಯಧಿಕೋತ್ಸವಾಃ ॥ ೧೪೫ ॥**

ಆಗ ಅಧಿಕವಾದ ಉತ್ಸವವುಳ್ಳ ಪತಿವ್ರತಾಸ್ತ್ರೀಯರು (ಮುತ್ತೈದೆಯರು) ''ನೂರುಮಂದಿ ಮಕ್ಕಳನ್ನು ಸುಖವಾಗಿ ಪ್ರಸವಿಸು'' ಎಂದು ಪುಣ್ಯಕರವಾದ ಆಶೀರ್ವಾದಗಳಿಂದ ಆ ಯಶಸ್ವತೀದೇವಿಯನ್ನು ಹರಸಿದರು.

**ತದಾನಂದಮಹಾಭೇರ್ಯಃ ಪ್ರಹತಾಃ ಕೋಣ[6]ಕೋಟಿಭಿಃ ।**
**ದಧ್ವನುರ್ಧ್ವನದಂಭೋಧಿಗಭೀರಂ ನೃಪಮಂದಿರೇ ॥ ೧೪೬ ॥**

ಯಶಸ್ವತೀದೇವಿಯು ಪುತ್ರನನ್ನು ಪ್ರಸವಿಸಿದ ಕಾಲದಲ್ಲಿ ದಂಡ(ಕೋಲು)ಗಳ ಅಗ್ರಭಾಗಗಳಿಂದ ಹೊಡೆಯಲ್ಪಟ್ಟ ದೊಡ್ಡ ಆನಂದಭೇರಿಗಳು ರಾಜಭವನದಲ್ಲಿ ಶಬ್ದಮಾಡುತ್ತಿರುವ ಸಮುದ್ರದಂತೆ, ಗಂಭೀರವಾಗಿ ಧ್ವನಿಮಾಡಿದುವು.

**[7]ತುಟೀಪಟಹಝುಲ್ಲರ್ಯಃ ಪಣವಾ[8]ಸ್ತುಣವಾಸ್ತದಾ ।**
**ಸಶಂಖಕಾಹಲಾಸ್ತಾಲಾಃ ಪ್ರಮದಾದಿವ ಸಸ್ವನುಃ ॥ ೧೪೭ ॥**

ಆಗ ತುಡುಮು ತಮ್ಮಟೆ ಝುಲ್ಲರಿಯೆಂಬವಾದ್ಯ ಗೋಮುಖವಾದ್ಯ ಡಕ್ಕೆ ಶಂಖ ಕಾಹಳೆ (ತುತೂರಿ) ತಾಳ ಈ ವಾದ್ಯಗಳೆಲ್ಲ, ಸಂತೋಷದಿಂದಲೋ ಎಂಬಂತೆ, ಶಬ್ದಮಾಡಿದುವು.

**ತದಾ ಸುರಭಿರಮ್ಲಾನಿರಪತತ್ಕುಸುಮೋತ್ಕರಃ ।**
**ದಿವೋ ದೇವಕರೋನ್ಮುಕ್ತೋ ಭ್ರಮದ್ಭ್ರಮರಸೇವಿತಃ ॥ ೧೪೮ ॥**

೧ ಧ್ರುವನಾಮ್ನಿ. ೨ ಸುಷುವೇ. ೩ ಮರುದೇವೀನಾಭಿರಾಜೌ. ೪ ಭರತಸ್ಯ. ೫ ಸುಚರಿತ್ರಾಃ. ೬ ಅಗ್ರಭಾಗೈಃ. ೭ ವಾದ್ಯಭೇದಃ (ತುಡುಮು). ೮ ವಾದ್ಯಭೇದಃ (ಡಕ್ಕೆ).

ಆಗ ಸ್ವರ್ಗದಿಂದ ದೇವತೆಗಳ ಕೈಗಳಿಂದ ಬಿಡಲ್ಪಟ್ಟುದೂ ಸುತ್ತುತ್ತಿರುವ ಭ್ರಮರಗಳಿಂದ ಸೇವಿಸಲ್ಪಟ್ಟುದೂ ಬಾಡದಿರುವುದೂ ಸುಗಂಧವೂ ಆದ ಪುಷ್ಪಗಳ ಸಮೂಹವು ಆಕಾಶದಿಂದ ಬಿದ್ದಿತು. ಪುಷ್ಪವೃಷ್ಟಿಯಾಯಿತೆಂದು ಭಾವವು.

**ಮೃದುರ್ಮಂದಮಮಂದೇನ ಮಂದಾರರಜಸಾ [೧]ತತಃ ।**
**ಮಾ[೨]ವಾವಾ ರಜಸಾಮಪ್ಪಟಾಶಿಶಿರೋ ಮರುತ್ ॥ ೧೪೯ ॥**

ಅಧಿಕವಾದ ಮಂದಾರಪುಷ್ಪಗಳ ಧೂಳಿನಿಂದ ವ್ಯಾಪ್ತವೂ ಮೃದುವೂ ಧೂಳುಗಳನ್ನು ಹೊಗಲಾಡಿಸಿದುವೂ ನೀರಿನ ಹನಿಗಳಿಂದ ತಂಪಾದುದೂ ಆದ ಗಾಳಿಯು ಮಂದವಾಗಿ ಬೀಸಿತು.

**ಜಯೇ[೩]ತ್ಯಮಾನುಷೀ ವಾಕ್ಚ ಜಜೃಂಭೇ ಪಥಿ ವಾರ್ಮುಚಾಮ್ ।**
**ಜೀವೇತಿ ದಿಕ್ಷು [೪]ದಿವ್ಯಾನಾಂ ವಾಚಃ ಪಪ್ರಥಿರೇ ಭೃಶಮ್ ॥ ೧೫೦ ॥**

ಮೇಘಮಾರ್ಗ(ಆಕಾಶ)ದಲ್ಲಿ ''ಜಯ'' ವೆಂಬ ದೇವವಾಣಿಯು ವ್ಯಾಪಿಸಿತು. ದಿಕ್ಕುಗಳಲ್ಲೆಲ್ಲ ದೇವತೆಗಳ ''ಜೀವ'' ಎಂಬ ವಚನಗಳು ಬಹಳವಾಗಿ ವ್ಯಾಪಿಸಿದುವು.

**ವರ್ಧಮಾನಲಯೈ[೫]ರ್ನೃತ್ತಮಾರಪ್ಸತ [೬]ಜಿತಾಪ್ಸರಃ ।**
**ನರ್ತಕ್ಯಃ ಸುರನರ್ತಕ್ಯೋ [೭]ಯಕಾಭಿರ್ಹೇಲಯಾ ಜಿತಾಃ ॥ ೧೫೧ ॥**

ದೇವನರ್ತಕಿಯರನ್ನು ಲೀಲೆಯಿಂದ (ಸುಲಭದಿಂದ) ಜಯಿಸಿದ ನರ್ತನ ಸ್ತ್ರೀಯರು ವೃದ್ಧಿಹೊಂದುತ್ತಿರುವ ಲಯಗಳಿಂದ ಅಪ್ಸರಸ್ತ್ರೀಯರನ್ನು ಜಯಿಸುವಂತೆ ನರ್ತನವನ್ನು ಮಾಡಿದರು. ತಾಳಲಯಕ್ಕನುಸಾರವಾಗಿ ನರ್ತನವನ್ನು ಮಾಡಿದರೆಂದರ್ಥವು.

**ಪುರವೀಥ್ಯಸ್ತದಾ ರೇಜುಶ್ಚಂದನಾಂಭಶ್ಛಟೋಕ್ಷಿತಾಃ ।**
**ಕೃತಾಭಿ[೮]ರುಪಶೋಭಾಭಿಃ ಪ್ರಹಸಂತ್ಯೋ ದಿವಃ ಶ್ರಿಯಮ್ ॥ ೧೫೨ ॥**

ಆಗ ಗಂಧೋದಕಗಳಿಂದ ತಳಿಸಲ್ಪಟ್ಟ ಪಟ್ಟಣದ ಬೀದಿಗಳು, ರಂಗವಲೀ ಮೊದಲಾದ ಕಾರ್ಯಗಳ ಶೋಭೆಗಳಿಂದ ಸ್ವರ್ಗದ ಶೋಭೆಯನ್ನು ಪರಿಹಾಸ್ಯ ಮಾಡುತ್ತಿವೆಯೋ ಎಂಬಂತೆ, ಪ್ರಕಾಶಸಿದುವು.

**ರತ್ನತೋರಣವಿನ್ಯಾಸಾಃ ಪುರೇ ರೇಜುರ್ಗೃಹೇ ಗೃಹೇ ।**
**ಇಂದ್ರಚಾಪತಡಿದ್ವಲ್ಲೀ[೯]ಲಲಿತಂ ದಧತೋಂಬರೇ ॥ ೧೫೩ ॥**

ಆಕಾಶದಲ್ಲಿ ಇಂದ್ರಧನುಸ್ಸಿನ ಶೋಭೆಯನ್ನೂ ಮಿಂಚಿನ ಶೋಭೆಯನ್ನೂ ಧರಿಸಿದ ರತ್ನತೋರಣಗಳ ರಚನೆಗಳು ಪಟ್ಟಣದ ಪ್ರತಿಯೊಂದು ಮನೆಯಲ್ಲಿಯೂ ಶೋಭಿಸುತ್ತಿದ್ದುವು.

**ಕೃತರಂಗವಲೌ ರತ್ನಚೂರ್ಣೈರ್ಭೂಮೌ ಮಹೋದರಾಃ ।**
**ಕುಂಭಾ ಹಿರಣ್ಮಯಾ ರೇಜೂ [೧೦]ರೌಕ್ಮಾಬ್ಜಪಿಹಿತಾನನಾಃ ॥ ೧೫೪ ॥**

ರತ್ನಚೂರ್ಣಗಳಿಂದ ಮಾಡಲ್ಪಟ್ಟ ರಂಗವಲಿಯುಳ್ಳ ಭೂಮಿಯಲ್ಲಿ ವಿಶಾಲವಾದ ಮಧ್ಯವುಳ್ಳುವೂ ಬಂಗಾರದ ಕಮಲಗಳಿಂದ ಮುಚ್ಚಲ್ಪಟ್ಟ ಮುಖಗಳುಳ್ಳುವೂ ಆದ ಸುವರ್ಣಕುಂಭಗಳು ಶೋಭಿಸಿದುವು.

**ತಸ್ಮಿನ್ನೃಪೋತ್ಸವೇ ಸಾಸೀತ್ಪುರೀ ಸರ್ವೈವ ಸೋತ್ಸವಾ ।**
**ಯಥಾಬ್ಧಿವೃದ್ಧೌ ಸಂವೃದ್ಧಿಂ ಯಾತಿ ವೇಲಾಶ್ರಿತಾ ನದೀ ॥ ೧೫೫ ॥**

ಸಮುದ್ರವು ಉಕ್ಕಿದಾಗ ದಡದಲ್ಲಿರುವ ನದಿಯೂ ಉಕ್ಕುವಂತೆ, ಆ ರಾಜಪುತ್ರನ ಜನ್ಮೋತ್ಸವದಲ್ಲಿ ಪಟ್ಟಣವೆಲ್ಲ ಉತ್ಸವವುಳ್ಳುದಾಯಿತು.

**ನ ದೀನೋಭೂತ್ತದಾ ಕಶ್ಚಿ[೧೧]ನ್ನದೀನೋದಕ[೧೨]ಭೂಯಸೀಮ್ ।**
**ದಾನಧಾರಾಂ ನೃಪೇಂದ್ರೇಭೇ ಮುಕ್ತಧಾರಂ ಪ್ರವರ್ಷತಿ ॥ ೧೫೬ ॥**

ಆಗ ಆದಿ(ವೃಷಭ)ರಾಜನೆಂಬ ಆನೆಯು ಸಮುದ್ರದ ನೀರಿಗೆ ಸಮಾನವಾದ ದಾನದ ಜಲಧಾರೆಯನ್ನು ಅವಿಚ್ಛಿನ್ನವಾಗಿ ವರ್ಷಿಸುತ್ತಿರಲು ಯಾರೂ ಗರೀಬರು ಉಳಿಯಲಿಲ್ಲ. ಎಲ್ಲರೂ ಅನುಕೂಲಸ್ಥರಾದರೆಂದರ್ಥವು.

**ಇತಿ ಪ್ರಮೋದಮುತ್ಪಾದ್ಯ ಪುರೇ ಸಾಂತಃಪುರೇ ಪರಮ್ ।**
**ವೃಷಭಾಬ್ಧೇರಸೌ [೧]ಬಾಲಪ್ರಾಲೇಯದ್ಯುತಿರುದ್ಯಯೌ ॥ ೧೫೭ ॥**

ಈ ಪ್ರಕಾರವಾಗಿ ಪಟ್ಟಣದಲ್ಲಿಯೂ ಅಂತಃಪುರದಲ್ಲಿಯೂ ಪರಮಾನಂದವನ್ನುಂಟುಮಾಡಿ, ವೃಷಭಸ್ವಾಮಿಯೆಂಬ ಸಮುದ್ರದಿಂದ ಈ ಬಾಲಕನೆಂಬ ಚಂದ್ರನು ಉದ್ಭವಿಸಿದನು.

**ಪ್ರಮೋದಭರತಃ ಪ್ರೇಮನಿರ್ಭರಾ ಬಂಧುತಾ ತದಾ ।**
**ತ[೨]ಮಾಹ್ವದ್ಭರತಂ ಭಾವಿಸಮಸ್ತಭರತಾಧಿಪಮ್ ॥ ೧೫೮ ॥**

ಆಗ ಪ್ರೇಮಭರಿತರಾದ ಬಂಧುಗಳು ಸಂತೋಷದ ಭಾರದಿಂದ ಮುಂದೆ ಭರತಖಂಡಕ್ಕೆಲ್ಲ ಅಧಿಪತಿಯಾಗುವ ಆ ಬಾಲಕನನ್ನು ''ಭರತ'' ನೆಂದು ಕರೆದರು.

**ತನ್ನಾಮ್ನಾ ಭಾರತಂ ವರ್ಷಮಿತೀ[೩]ಹಾಸೀಜ್ಜನಾಸ್ಪದಮ್ ।**
**ಹಿಮಾದ್ರೇರಾಸಮುದ್ರಾಚ್ಚ ಕ್ಷೇತ್ರಂ ಚಕ್ರಭೃತಾಮಿದಮ್ ॥ ೧೫೯ ॥**

ಈಗಲೂ ಹಿಮವತ್ಪರ್ವತದಿಂದ ಸಮುದ್ರದ ವರೆಗೂ ಚಕ್ರವರ್ತಿಗಳ ಈ ಕ್ಷೇತ್ರವು ಜನರಿಗೆ ವಾಸಸ್ಥಾನವಾಗಿ ಆ ಭರತನ ಹೆಸರಿನಿಂದ ಭಾರತವರ್ಷವೆಂದು ಪ್ರಸಿದ್ಧಿಯನ್ನು ಹೊಂದಿದೆ.

**ಸ ತನ್ವನ್ಪರಮಾನಂದಂ ಬಂಧುತಾಕುಮುದಾಕರೇ ।**
**ಧುನ್ವನ್ವೈರಿಕುಲಧ್ವಾಂತಮವೃಧದ್ಬಾಲಚಂದ್ರಮಾಃ ॥ ೧೬೦ ॥**

ಆ ಬಾಲಕನೆಂಬ ಚಂದ್ರನು ಬಂಧುಗಳೆಂಬ ಕುಮುದಪುಷ್ಪಸರೋವರದಲ್ಲಿ ಪರಮಾನಂದವನ್ನುಂಟುಮಾಡುವವನೂ ಶತ್ರುಸಮೂಹವೆಂಬ ಕತ್ತಲೆಯನ್ನು ನಾಶಮಾಡುವವನೂ ಆಗಿ ವೃದ್ಧಿಹೊಂದಿದನು.

**ಸ್ತನಂ [೪]ಧಯನ್ನಸೌ ಮಾತುಃ ಸ್ತನ್ಯಂ ಗಂಡೂಷಿತಂ ಮುಹುಃ ।**
**ಸಮುದ್ಗಿರನ್ಯಶೋ ದಿಕ್ಷು ವಿಭಜನ್ನಿವ ದಿದ್ಯುತೇ ॥ ೧೬೧ ॥**

ತಾಯಿಯ ಸ್ತನವನ್ನು ಪಾನಮಾಡುವ ಈ ಬಾಲಕನು ಬಾಯಿಯಲ್ಲಿರುವ ಹಾಲನ್ನು ಬಾರಿಬಾರಿಗೂ ಉಗುಳುವವನಾಗಿ, ದಿಕ್ಕುಗಳಲ್ಲಿ ತನ್ನ ಯಶಸ್ಸುಗಳನ್ನು ವಿಭಾಗಮಾಡುತ್ತಾನೋ ಎಂಬಂತೆ, ಶೋಭಿಸಿದನು.

**ಸ್ಮಿತೈಶ್ಚ ಹಸಿತೈರ್ಮುಗ್ಧೈಃ ಸರ್ಪಣೈರ್ಮಣಿಭೂಮಿಷು ।**
**[೫]ಮನ್ಮನಾಲಪಿತೈಃ ಪಿತ್ರೋಃ ಸ ಸಂಪ್ರೀತಿಮಜೀಜನತ್ ॥ ೧೬೨ ॥**

ಆ ಬಾಲಕನು ಮುಗುಳುನಗೆಗಳಿಂದಲೂ ಮನೋಹರವಾದ ನಗೆಗಳಿಂದಲೂ ಮಣಿಮಯವಾದ ಭೂಮಿಗಳಲ್ಲಿ ಗಮನಗಳಿಂದಲೂ ಅವ್ಯಕ್ತವಾದ ಮಾತುಗಳಿಂದಲೂ ತಂದೆತಾಯಿಗಳಿಗೆ ಪ್ರೀತಿಯನ್ನುಂಟುಮಾಡಿದನು.

**ತಸ್ಯ ವೃದ್ಧಾವಭೂದ್ವೃದ್ಧಿರ್ಗುಣಾನಾಂ ಸಹ ಜನ್ಮನಾಮ್ ।**
**ನೂನಂ ತೇ ತಸ್ಯ [೬]ಸೋದರ್ಯಾಸ್ತದ್ವೃದ್ಧ್ಯನುವಿಧಾಯಿನಃ ॥ ೧೬೩ ॥**

ಆ ಬಾಲಕನು ವೃದ್ಧಿಯಾದ ಹಾಗೆಲ್ಲ ಅವನ ಒಡಹುಟ್ಟಿದ ಗುಣಗಳೂ ವೃದ್ಧಿಹೊಂದಿದುವು. ಆ ಗುಣಗಳು ನಿಜವಾಗಿಯೂ ಭರತನ ಸಹೋದರರೂ ಅವನಂತೆ ವೃದ್ಧಿಹೊಂದುವರೆಂಬುದನ್ನು ಸೂಚಿಸುತ್ತಿದ್ದುವು.

**ಅನ್ನಪ್ರಾಶನಚೌಲೋಪನಯನಾದೀನನುಕ್ರಮಾತ್ ।**
**ಕ್ರಿಯಾವಿಧೀನ್ವಿಧಾನಜ್ಞಃ ಸ್ರಷ್ಟೈವಾಸ್ಯ [೭]ನಿಸ್ಸೃಷ್ಟವಾನ್ ॥ ೧೬೪ ॥**

೧ ವಿಸ್ತೃತಃ. ೨ ಅಪನೇತಾ. ೩ ದೇವವಾಕ್. ೪ ದೇವಾನಾಂ. ೫ ನೃತ್ಯಂ. ೬ ಕ್ರಿಯಾವಿಶೇಷಣಂ. ೭ ಯಾಭಿಃ. ೮ ರಂಗವಲ್ಯಾದಿಭಿಃ. ೯ ಶೋಭಾಂ. ೧೦ ಹೇಮಕಮಲೈಃ. ೧೧ ಸಮುದ್ರಃ. ೧೨ ಸದೃಶಾಂ.

೧ ಬಾಲಚಂದ್ರಮಾಃ. ೨ ಆಹ್ವಯಾಮಾಸ. ೩ ಕಾಲೇ. ೪ ಪಿಬನ್. ೫ ಅವ್ಯಕ್ತಾಲಾಪಿತೈಃ. ೬ ಭ್ರಾತರಃ, ಸೌಂದರ್ಯಾ ಇತ್ಯಪಿ ಪಾಠಃ. ೭ ಕೃತವಾನ್.

**ಸ ಬಭಾರ ಭುಜಸ್ತಂಭಪರ್ಯಂತಪರಿಲಂಬಿನೀಮ್ ।**
**ಲಕ್ಷ್ಮೀದೇವ್ಯಾ ಇವಾಂದೋಲವಲ್ಲರೀಂ ಹಾರವಲ್ಲರೀಮ್ ॥ ೧೯೪ ॥**

ಆ ಭರತನು ತನ್ನ ಭುಜಗಳೆಂಬ ಸ್ತಂಭಗಳ ಪಾರ್ಶ್ವಗಳಲ್ಲಿ ಜೋಲುತ್ತಿರುವುದೂ ಲಕ್ಷ್ಮೀದೇವಿಯ ಉಯ್ಯಾಲೆಯೆಂಬ ಲತೆಯಂತಿರುವುದೂ ಆದ ಹಾರವೆಂಬ ಲತೆಯನ್ನು ಧರಿಸಿದನು.

**ಜಯಶ್ರೀರ್ಭುಜಯೋರಸ್ಯ [1]ಬಬಂಧ ಪ್ರೇಮನಿಘ್ನತಾಮ್ ।**
**ಕೇಯೂರಕೋಟಿಸಂಘಟ್ಟಕಿಣೀಭೂತಾಂಸಪೀಠಯೋಃ ॥ ೧೯೫ ॥**

ಜಯಲಕ್ಷ್ಮಿಯು ಬಾಹುಪುರಿಯ ಅಗ್ರಭಾಗದ ಸಂಘರ್ಷಣೆಯಿಂದ ಒಣಗಿದ ವ್ರಣವುಳ್ಳ ಭುಜಶಿರಸ್ಸುಗಳೆಂಬ ಪೀಠಗಳುಳ್ಳ ಈ ಭರತನ ಭುಜಗಳಲ್ಲಿ ಅತ್ಯಂತ ಪ್ರೀತಿಯನ್ನು ಮಾಡಿದಳು.

**ಬಾಹುದಂಡೇಸ್ಯ ಭೂಲೋಕಮಾನದಂಡ ಇವಾಯತೇ ।**
**ಕುಲಶೈಲಾ[2]ಸ್ಥಯಾ ನೂನಂ ತೇನೇ ಲಕ್ಷ್ಮೀಃ ಪರಾಂ ಧೃತಿಮ್ ॥ ೧೯೬ ॥**

ಭೂಲೋಕವನ್ನು ಅಳತೆಮಾಡುವ ದಂಡ(ಕೋಲು)ದಂತೆ ದೀರ್ಘವಾದ ಈ ಭರತನ ಬಾಹುದಂಡದಲ್ಲಿ ಲಕ್ಷ್ಮಿಯು ನಿಜವಾಗಿಯೂ ಕುಲಪರ್ವತವೆಂಬ ಬುದ್ಧಿಯಿಂದ ಬಹಳ ಸಂತೋಷಪಟ್ಟಳು.

**ಶಂಖಚಕ್ರಗದಾಕೂರ್ಮಝಷಾದಿಶುಭಲಕ್ಷಣೈಃ ।**
**ರೇಜೇ ಹಸ್ತತಲಂ ತಸ್ಯ ನಭಸ್ಥಲಮಿವೋಡುಭಿಃ ॥ ೧೯೭ ॥**

ನಕ್ಷತ್ರಗಳಿಂದ ಆಕಾಶವು ಶೋಭಿಸುವಂತೆ, ಆ ಭರತನ ಹಸ್ತವು ಶಂಖ ಚಕ್ರ ಗದೆ ಆಮೆ ಮೀನು ಮೊದಲಾದ ಶುಭಲಕ್ಷಣಗಳಿಂದ ಶೋಭಿಸಿತು.

**ಅಂಸಾವಲಂಬಿನಾ [3]ಬ್ರಹ್ಮಸೂತ್ರೇಣಾಸೌ ದಧೇ ಶ್ರಿಯಮ್ ।**
**ಹಿಮಾದ್ರಿರಿವ ಗಾಂಗೇನ ಸ್ರೋತಸೋತ್ಸಂಗಸಂಗಿನಾ ॥ ೧೯೮ ॥**

ಪರ್ವತದ ತಪ್ಪಲನ್ನು ಹೊಂದಿರುವ ಗಂಗಾನದಿಯ ಪ್ರವಾಹದಿಂದ ಹಿಮವತ್ಪರ್ವತವು ಶೋಭಿಸುವಂತೆ, ಈ ಭರತನು ಭುಜಶಿರಸ್ಸಿನಲ್ಲಿ ಜೋಲುತ್ತಿರುವ ಯಜ್ಞೋಪವೀತದಿಂದ ಶೋಭಿಸಿದನು.

**ಹಸನ್ನಿವಾ[4]ಧರಂ ಕಾಯಮೂರ್ಧ್ವಕಾಯೋಸ್ಯ ದಿದ್ಯುತೇ ।**
**ಕಟಕಾಂಗದಕೇಯೂರಹಾರಾದ್ಯೈಃ ಸ್ವೈರ್ವಿಭೂಷಣೈಃ ॥ ೧೯೯ ॥**

ಈ ಭರತನ ಮೇಲಿನ ಶರೀರವು ಕೆಳಗಿನ ಶರೀರವನ್ನು ನೋಡಿ ನಗುತ್ತಿದೆಯೋ ಎಂಬಂತೆ, ಕಡಗ ನಾಗಮುರಿ ಬಾಹುಪುರಿ ಮೊದಲಾದ ತನ್ನ ಆಭರಣಗಳಿಂದ ಪ್ರಕಾಶಿಸಿತು.

**ವರ್ಣಿತೇ ಪೂರ್ವಕಾಯೇಸ್ಯ ಕಾಯೋ ವ್ಯಾವರ್ಣಿತೋಧರಃ ।**
**ಯಥೋಪರಿ ತಥಾಧಶ್ಚ ನನು ಶ್ರೀಃ ಕಲ್ಪಪಾದಪೇ ॥ ೨೦೦ ॥**

ಹಿಂದೆ ವರ್ಣಿಸಲ್ಪಟ್ಟ ಆವನ ಮೇಲಿನ ಶರೀರದಲ್ಲಿ ಕೆಳಗಿನ ಶರೀರವೂ ವರ್ಣಿಸಲ್ಪಟ್ಟಂತಾಯಿತು. ಮೇಲಿನ ಶರೀರದಂತೆಯೇ ಕೆಳಗಿನ ಶರೀರವೂ ಮನೋಹರವಾಗಿದ್ದಿತೆಂದು ಭಾವವು. ಕಲ್ಪವೃಕ್ಷದಲ್ಲಿ ಮೇಲಿನಂತೆ ಕೆಳಗೂ (ಬುಡದಲ್ಲಿಯೂ) ಶೋಭೆಯಿರುತ್ತದಲ್ಲವೇ ?

**[5]ಪುನರುಕ್ತಂ ತಥಾಪ್ಯಸ್ಯ ಕ್ರಿಯತೇ ವರ್ಣನಾದರಃ ।**
**ಪಙ್ಕ್ತಿಭೇದೇ ಮಹಾನ್ ದೋಷಃ ಸ್ಯಾದಿ[6]ತ್ಯುದ್ದೇಶಮಾತ್ರತಃ ॥ ೨೦೧ ॥**

ಕೆಳಗಿನ ಶರೀರದ ವರ್ಣನೆಯನ್ನು ಮಾಡಿದರೆ ಪುನರುಕ್ತದೋಷವಾಗುತ್ತದೆ. ಆದರೂ ಈ ಕೆಳಗಿನ ಶರೀರದ ವರ್ಣನೆಯನ್ನು ಮಾಡಬೇಕೆಂಬ ಪ್ರೀತಿಯಿಂದ ವರ್ಣನೆಯನ್ನು ಮಾಡುತ್ತೇನೆ. ಪಂಕ್ತಿಭೇದವನ್ನು ಮಾಡಿದರೆ ಮಹಾದೋಷವಾಗುತ್ತದೆಂಬುದರಿಂದ ನಾಮಮಾತ್ರದಿಂದ ವರ್ಣಿಸುತ್ತೇನೆ.

೧ ಅಕರೋದಿತ್ಯರ್ಥಃ. ೨ ಬುದ್ಧ್ಯಾ. ೩ ಯಜ್ಞೋಪವೀತೇನ. ೪ ಅಧಃಕಾಯಂ. ೫ ಉಕ್ತೇ ಸತಿ ಪುನರುಕ್ತಂ ಭವತಿ. ೬ ನಾಮಸಂಕೀರ್ತನಮುದ್ದೇಶಃ.

**ಲಾವಣ್ಯರಸ[1] ನಿಷ್ಯಂದವಾಹಿನೀಂ ನಾಭಿಕೂಪಿಕಾಮ್ ।**
**ಸ ಬಭಾರಾ[2]ಪತತ್ಕಾಮಗಂಧೇಭಸ್ಯೇವ [3]ಪದ್ಧತಿಮ್ ॥ ೨೦೨ ॥**

ಆ ಭರತನು ಲಾವಣ್ಯವೆಂಬ ರಸದ ಪ್ರವಾಹವನ್ನು ಧರಿಸಿರುವುದೂ ಬರುತ್ತಿರುವ ಮನ್ಮಥನೆಂಬ ಮದಗಜದ ಹೆಜ್ಜೆಯಂತಿರುವುದೂ ಆದ ನಾಭಿಯೆಂಬ ಬಾವಿಯನ್ನು ಧರಿಸಿದನು.

**ಸ [4]ಶಾರರಸನೋ[5]ಲ್ಲಾಸಿದುಕೂಲಂ ಜಘನಂ ದಧೌ ।**
**ಸೇಂದ್ರಚಾಪಶರ[6]ನ್ಮೇಘಂ ನಿತಂಬಮಿವ ಮಂದರಃ ॥ ೨೦೩ ॥**

ಮಹಾಮೇರುಪರ್ವತವು ಇಂದ್ರಧನುಸ್ಸಿನೊಡನೆಯೂ ಶರತ್ಕಾಲದ ಮೇಘದೊಡನೆಯೂ ಕೂಡಿರುವ ತಪ್ಪಲುಪ್ರದೇಶವನ್ನು ಧರಿಸಿರುವಂತೆ, ಆ ಭರತನು ನಾನಾವರ್ಣವುಳ್ಳ ಕಟೀಸೂತ್ರ(ಉಡುದಾರ)ದಿಂದ ಪ್ರಕಾಶಮಾನವಾದ ಪಟ್ಟೆವಸ್ತ್ರದೊಡಗೂಡಿದ ಕಟಿಪ್ರದೇಶವನ್ನು ಧರಿಸಿದನು.

**ಪೀವರೌ ಸ ಬಭಾರೋರೂ [7]ಯುಕ್ತಾಯಾಮೌ ಕನದ್ದ್ಯುತೀ ।**
**ಮನೋಭುವೇವ ವಿನ್ಯಸ್ತೌ ಸ್ತಂಭೌ ಸ್ವೇ ವಾಸವೇಶ್ಮನಿ ॥ ೨೦೪ ॥**

ಆ ಭರತನು ಯೋಗ್ಯವಾದ ವಿಸ್ತಾರವೂ ಪ್ರಕಾಶಮಾನವಾದ ಕಾಂತಿಯುಳ್ಳದೂ ಪುಷ್ಟವೂ ಆದ ಎರಡು ತೊಡೆಗಳನ್ನು ಧರಿಸಿದ್ದನು. ಆ ತೊಡೆಗಳು ಮನ್ಮಥನಿಂದ ತನ್ನ ಮನೆಯಲ್ಲಿ ಸ್ಥಾಪಿಸಲ್ಪಟ್ಟ ಕಂಭಗಳಂತಿದ್ದುವು.

**ಜಂಘೇ ಸುರುಚಿರಾಕಾರೇ ಚಾರುಕಾಂತೀ ದಧೇಧಿರಾಟ್ ।**
**[8]ಉದ್ವರ್ತ್ಯ [9]ಕಣಯೇನೇವ ಘಟಿತೇ [10]ಚಿತ್ತಜನ್ಮನಾ ॥ ೨೦೫ ॥**

ಭರತರಾಜನು ಮನೋಹರವಾದ ಆಕಾರವೂ ಸುಂದರವಾದ ಕಾಂತಿಯೂ ಉಳ್ಳ ಎರಡು ಕಣಕಾಲುಗಳನ್ನು ಧರಿಸಿದ್ದನು. ಮನ್ಮಥನು ಆ ಕಣಕಾಲುಗಳನ್ನು ಕಣಯವೆಂಬ ಆಯುಧದಿಂದ ಸರಿಪಡಿಸಿ (ಕಡೆದು) ಸೇರಿಸಿದ್ದಾನೆಯೋ ಎಂಬಂತೆ, ಅವು ಶೋಭಿಸಿದುವು.

**ತತ್ಪದಾಂಬುಜಯೋರ್ಯುಗ್ಮಮಧ್ಯುವಾಸಾನಪಾಯಿನೀ ।**
**ಲಕ್ಷ್ಮೀರ್ಭೃಂಗಾಂಗನೇವಾವಿರ್ಭವದಂಗುಲಿಪತ್ರಕಮ್ ॥ ೨೦೬ ॥**

ಆವಿರ್ಭವಿಸುತ್ತಿರುವ ಬೆರಳುಗಳೆಂಬ ಎಸಳುಗಳುಳ್ಳ ಆ ಭರತನ ಪಾದಗಳೆಂಬ ಕಮಲಗಳ ಯುಗಳದಲ್ಲಿ, ಹೆಣ್ಣುಭ್ರಮರದಂತೆ, ನಾಶರಹಿತಳಾದ ಲಕ್ಷ್ಮಿಯು ವಾಸ ಮಾಡಿದಳು.

**ತತ್ಕ್ರಮೌ ರೇಜತುಃ ಕಾಂತ್ಯಾ ಲಕ್ಷ್ಮೀಂ ಜಿತ್ವಾಂ[11]ಬುಜನ್ಮನಃ ।**
**ಪ್ರಹಾಸಮಿವ ತನ್ವಾನೌ ನಖೋದ್ಯೋತೈ[12]ರ್ವಿಸಾರಿಭಿಃ ॥ ೨೦೭ ॥**

ಆ ಭರತನ ಪಾದಗಳು ತಮ್ಮ ಕಾಂತಿಯಿಂದ ಕಮಲದ ಲಕ್ಷ್ಮಿ(ಶೋಭೆ)ಯನ್ನು ಜಯಿಸಿ, ಕಾಂತಿಯನ್ನು ಹರಡುತ್ತಿರುವ ಉಗುರುಗಳಿಂದ ನಗುತ್ತಿವೆಯೋ ಎಂಬಂತೆ, ಶೋಭಿಸುತ್ತಿದ್ದುವು.

**ಚಕ್ರಚ್ಛತ್ರಾಸಿದಂಡಾದಿರತ್ನಾನ್ಯಸ್ಯ ಪದಾಬ್ಜಯೋಃ ।**
**ಲಗ್ನಾನಿ ಲಕ್ಷಣವ್ಯಾಜಾತ್ಪೂರ್ವಸೇವಾಮಿವ ವ್ಯಧುಃ ॥ ೨೦೮ ॥**

ಈ ಭರತನ ಪಾದಕಮಲಗಳಲ್ಲಿ ಸಂಬಂಧಿಸಿರುವ ಚಕ್ರ ಛತ್ರ ಖಡ್ಗ ದಂಡ ಮೊದಲಾದ ರತ್ನಗಳು ಲಕ್ಷಣಗಳೆಂಬ ನೆಪದಿಂದ ಚಕ್ರವರ್ತಿಯಾಗುವುದಕ್ಕಿಂತ ಪೂರ್ವದಲ್ಲಿಯೇ ಸೇವೆಯನ್ನು ಮಾಡುತ್ತಿವೆಯೋ ಎಂಬಂತೆ ತೋರುತ್ತಿದ್ದುವು.

೧ ಪ್ರವಾಹಧಾರಿಣೀಂ. ೨ ಆಗಚ್ಛತ್ಕಾಮಗಜಸ್ಯ. ೩ ಪದಹತಿಂ. ೪ ನಾನಾವರ್ಣಾ. ೫ ಉದ್ಭಾಸಿ. ೬ ಮೇಘನಿತಂಬಮಿತ್ಯಪಿ ಪಾಠಃ. ೭ ಯೋಗ್ಯಾಯಾಮೌ. ೮ ಉತ್ತೇಜಿತಂ ಕೃತ್ವಾ. ೯ ಆಯುಧವಿಶೇಷೇಣ. ೧೦ ಕಾಮೇನ. ೧೧ ಪದ್ಮಸ್ಯ. ೧೨ ಪ್ರಸಾರಿಭಿಃ.

**ಸಮಾಕ್ರಾಂತಧರಾಚಕ್ರಃ ಕ್ರಮಯೋರೇವ [೧]ವಿಕ್ರಮಃ ।**
**[೨]ಸರ್ವಾಂಗೀಣಸ್ತು ಕೇನಾಸ್ಯ [೩]ಸೋಢಪೂರ್ವಃ ಸಮಾನಿನಃ ॥ ೨೦೯ ॥**

ಮಾನಿಷ್ಠನಾದ ಈ ಭರತನ ಪಾದಗಳ ಹೆಜ್ಜೆಯೇ ಭೂಮಂಡಲವನ್ನು ಆಕ್ರಮಿಸಿರುವಾಗ ಇನ್ನು ಸರ್ವಾವಯವಗಳಿಂದುಂಟಾದ ಪರಾಕ್ರಮವು ಮೊದಲು ಯಾವನಿಂದ ಸಹಿಸಲ್ಪಟ್ಟಿತು ?

**ಚರಮಾಂಗತಯೈವಾಸ್ಯ ವರ್ಣಿತಂ ಬಲಮಾಂಗಿಕಮ್ ।**
**[೪]ಸಾತ್ತ್ವಿಕಂ ತು ಬಲಂ ಬಾಹ್ಯೈರ್ಲಿಂಗೈರ್ದಿಗ್ವಿಜಯಾದಿಭಿಃ ॥ ೨೧೦ ॥**

ಈ ಭರತನ ಶರೀರವು ಚರಮಾಂಗ(ಅಂತ್ಯಶರೀರ)ವಾದುದರಿಂದಲೇ ಅದರ ಶಕ್ತಿಯನ್ನು ವರ್ಣಿಸಿದಂತಾಯಿತು. ಮಾನಸಿಕಶಕ್ತಿಯಾದರೋ ದಿಗ್ವಿಜಯ ಮೊದಲಾದ ಬಾಹ್ಯಚಿಹ್ನೆಗಳಿಂದ ವರ್ಣಿಸಲ್ಪಟ್ಟಿತು.

**ಯದ್ಬಲಂ ಚಕ್ರಭೃತ್ಕ್ಷೇತ್ರವರ್ತಿನಾಂ ನೃಸುಧಾಶಿನಾಮ್ ।**
**ತತೋಧಿಕಗುಣಂ ತಸ್ಯ ಬಭೂವ ಭುಜಯೋರ್ಬಲಮ್ ॥ ೨೧೧ ॥**

ಚಕ್ರವರ್ತಿಯ ಕ್ಷೇತ್ರದಲ್ಲಿರುವ ಮನುಷ್ಯರ ಮತ್ತು ದೇವತೆಗಳ ಬಲಕ್ಕಿಂತಲೂ ಅಧಿಕವಾದ ಬಲವು ಆ ಭರತನ ಭುಜಗಳಲ್ಲಿದ್ದಿತು.

**ರೂಪಾ[೫]ನುರೂಪಮೇವಾಸ್ಯ ಬಭೂವೇ ಗುಣಸಂಪದಾ ।**
**ಗುಣೈರ್ವಿಮುಚ್ಯತೇ ಜಾತು ನ ಹಿ [೬]ತಾದೃಗ್ವಿಧಂ ವಪುಃ ॥ ೨೧೨ ॥**

ಈ ಭರತನ ಶರೀರದಲ್ಲಿ ಸೌಂದರ್ಯಕ್ಕೆ ಅನುರೂಪವಾದ ಗುಣಗಳೂ ಇದ್ದುವು. ಅಂತಹ ಸುಂದರವಾದ ಶರೀರವು ಗುಣಗಳಿಂದ ಎಂದೂ ಬಿಡಲ್ಪಡುವುದಿಲ್ಲ.

**ಯತ್ರಾ[೭]ಕೃತಿರ್ಗುಣಾಸ್ತತ್ರ ವಸಂತೀತಿ ನ ಸಂಶಯಃ ।**
**ಯತೋಸ್ಯಾನೀದೃಗಾಕಾರೋ ಗುಣೈರೇತ್ಯ ಸ್ವಯಂ ವೃತಃ ॥ ೨೧೩ ॥**

ಗುಣಗಳು ತಾವಾಗಿಯೇ ಬಂದು ಈ ಭರತನ ಅಸದೃಶವಾದ ಆಕಾರವನ್ನು ವರಿಸಿದುದರಿಂದ ''ಸೌಂದರ್ಯವಿರುವಲ್ಲಿ ಗುಣಗಳು ವಾಸಮಾಡುತ್ತವೆ'' ಎಂಬುದು ನಿಃಸಂಶಯವಾಗಿದೆ.

**ಸತ್ಯಂ ಶೌಚಂ ಕ್ಷಮಾ ತ್ಯಾಗಃ ಪ್ರಜ್ಞೋತ್ಸಾಹೋ ದಯಾ [೮]ದಮಃ ।**
**[೯]ಪ್ರಶಮೋ ವಿನಯಶ್ಚೇತಿ ಗುಣಾಃ [೧೦]ಸತ್ತ್ವಾ[೧೧]ನುಷಂಗಿಣಃ ॥ ೨೧೪ ॥**

ಯಥಾರ್ಥಭಾಷಣ ಬಾಹ್ಯಾಭ್ಯಂತರಶುದ್ಧಿ ಸಹನಶೀಲತೆ ದಾನ ಬುದ್ಧಿ ಉತ್ಸಾಹ ದಯಾ ಇಂದ್ರಿಯನಿಗ್ರಹ ಕ್ರೋಧಮೊದಲಾದ ಕಷಾಯಗಳ ಉಪಶಮ ವಿನಯ ಇವುಗಳು ಮನಸ್ಸನ್ನು ಸಂಬಂಧಿಸಿಕೊಂಡಿರುವ ಗುಣಗಳಾಗಿವೆ.

**ವಪುಃ ಕಾಂತಿಶ್ಚ ದೀಪ್ತಿಶ್ಚ ಲಾವಣ್ಯಂ ಪ್ರಿಯವಾಕ್ಯತಾ ।**
**ಕಲಾಕುಶಲತಾ ಚೇತಿ ಶರೀರಾನ್ವಯಿನೋ ಗುಣಾಃ ॥ ೨೧೫ ॥**

ಶರೀರಕಾಂತಿ ದೀಪ್ತಿ ಲಾವಣ್ಯ ಪ್ರಿಯಭಾಷಣ ಕಲಾಚಾತುರ್ಯ ಇವುಗಳು ಶರೀರವನ್ನು ಸಂಬಂಧಿಸಿಕೊಂಡಿರುವ ಗುಣಗಳಾಗಿವೆ.

**ನಿಸರ್ಗರುಚಿರಾಕಾರೋ ಗುಣೈರೇಭಿರ್ವಿಭೂಷಿತಃ ।**
**ಸ ರೇಜೇ ನಿತರಾಂ ಯದ್ವನ್ಮಣಿಃ ಸಂಸ್ಕಾರಯೋಗತಃ ॥ ೨೧೬ ॥**

ಸಂಸ್ಕಾರದ ಸಂಬಂಧದಿಂದ ರತ್ನವು ವಿಶೇಷವಾಗಿ ಶೋಭಿಸುವಂತೆ, ಸ್ವಭಾವದಿಂದ ಸುಂದರವಾದ ಆಕಾರವುಳ್ಳ ಆ ಭರತರಾಜನು ಹಿಂದೆಹೇಳಿದ ಸಾತ್ತ್ವಿಕಗುಣಗಳಿಂದಲೂ ಆಂಗಿಕಗುಣಗಳಿಂದಲೂ ಅಲಂಕೃತನಾಗಿ ಅಧಿಕವಾಗಿ ಶೋಭಿಸಿದನು.

೧ ವಿಕ್ಷೇಪಃ, ಪರಾಕ್ರಮಶ್ಚ. ೨ ಸರ್ವಾವಯವಸಮುತ್ಪನ್ನಃ. ೩ ಪೂರ್ವಸ್ಮಿನ್‌ಸೋಢಃ. ೪ ಮನೋಜನಿತಂ. ೫ ಅನುಕೂಲಂ. ೬ ಸುರೂಪಂ. ೭ ಸುರೂಪತ್ವಂ. ೮ ಇಂದ್ರಿಯಜಯಃ. ೯ ಕಷಾಯೋಪಶಮಃ. ೧೦ ಮನಃ. ೧೧ ಅವಿನಾಭಾವಿನಃ.

**[೧]ಅಪ್ರಾಕೃತಾಕೃತಿರ್ದಿವ್ಯಮನುಷ್ಯೋ ಮಹಸಾಂ ನಿಧಿಃ ।**
**ಲಕ್ಷ್ಮ್ಯಾಃ ಪುಂಜೋಯಮಿತ್ಯುಚ್ಚೈರ್ಬಭೂವಾದ್ಭುತಚೇಷ್ಟಿತಃ ॥ ೨೧೭ ॥**

ಅಸಾಧಾರಣವಾದ ಆಕಾರವುಳ್ಳವನೂ ಮೊದಲು ದೇವನಾಗಿದ್ದು ಮನುಷ್ಯ ಪರ್ಯಾಯವನ್ನು ಹೊಂದಿದವನೂ ತೇಜಸ್ಸುಗಳಿಗೆ ನಿಧಿಪ್ರಾಯನೂ ಶೋಭೆಯ ರಾಶಿಯೂ ಆದ ಈ ಭರತನು ಹಿಂದೆ ಹೇಳಿದಂತೆ ಅತ್ಯದ್ಭುತವಾದ ವ್ಯಾಪಾರವುಳ್ಳವನಾದನು.

**ರೂಪಸಂಪದಮಿತ್ಯುಚ್ಚೈರ್ದೃಷ್ಟ್ವಾ ನಾನ್ಯತ್ರ ಭಾವಿನೀಮ್ ।**
**ಜನಾಃ ಪುರಾತನೀಮಸ್ಯ ಶಶಂಸುಃ ಪುಣ್ಯಸಂಪದಮ್ ॥ ೨೧೮ ॥**

ಜನಗಳು ಈಪ್ರಕಾರವಾಗಿ ಬೇರೆಕಡೆಯಲ್ಲಿಲ್ಲದಿರುವ ರೂಪಸಂಪತ್ತನ್ನು ಚೆನ್ನಾಗಿ ನೋಡಿ ಈ ಭರತನ ಪೂರ್ವಜನ್ಮದ ಪುಣ್ಯಸಂಪತ್ತನ್ನು ಪ್ರಶಂಸೆಮಾಡಿದರು.

**ವಪುರಾರೋಗ್ಯಮೈಶ್ವರ್ಯಂ ಧನರ್ದ್ಧಿಃ ಕಾಮನೀಯಕಮ್ ।**
**ಬಲಮಾಯುರ್ಯಶೋ ಮೇಧಾ ವಾಕ್ಸೌಭಾಗ್ಯಂ ವಿದಗ್ಧತಾ ॥ ೨೧೯ ॥**

**ಇತಿ ಯಾವಾಂಶ್ಚಗತ್ಯಸ್ಮಿನ್ಪುರುಷಾರ್ಥಃ ಸುಖೋಚಿತಃ ।**
**ಸ ಸರ್ವೋಭ್ಯುದಯಃ ಪುಣ್ಯಪರಿಪಾಕಾದಿಹಾಂಗಿನಾಮ್ ॥ ೨೨೦ ॥**

ಸುಂದರವಾದ ಶರೀರ ಆರೋಗ್ಯ ಐಶ್ವರ್ಯ ಧನ ಅತಿಶಯ ಸೌಂದರ್ಯ ಬಲ ಆಯುಷ್ಯ ಕೀರ್ತಿ ಬುದ್ಧಿ ಮಧುರಭಾಷಣ ಪಾಂಡಿತ್ಯ ಹೀಗೆ ಈ ಲೋಕದಲ್ಲಿ ಸುಖಕ್ಕೆ ಉಚಿತವಾದ ಎಷ್ಟು ಪುರುಷಾರ್ಥವಿದೆಯೋ ಅಭ್ಯುದಯರೂಪವಾದ ಅದೆಲ್ಲವೂ ಪುಣ್ಯದ ಪರಿಪಾಕದಿಂದ ಪ್ರಾಣಿಗಳಿಗೆ ಈ ಲೋಕದಲ್ಲಿ ಉಂಟಾಗುತ್ತದೆ.

**ನ ವಿನಾಭ್ಯುದಯಃ ಪುಣ್ಯಾದಸ್ತಿ ಕಶ್ಚನ ಪುಷ್ಕಲಃ ।**
**ತಸ್ಮಾದಭ್ಯುದಯಂ ಪ್ರೇಪ್ಸುಃ ಪುಣ್ಯಂ ಸಂಚಿನುಯಾದ್ಬುಧಃ ॥ ೨೨೧ ॥**

ಪುಣ್ಯವಿಲ್ಲದಿದ್ದರೆ ಸಂಪೂರ್ಣವಾದ ಯಾವ ಅಭ್ಯುದಯವೂ ಉಂಟಾಗುವುದಿಲ್ಲ. ಆದುದರಿಂದ ಅಭ್ಯುದಯವನ್ನು ಪಡೆಯಲಿಚ್ಛಿಸುವ ವಿದ್ವಾಂಸನು ಪುಣ್ಯವನ್ನು ಸಂಪಾದಿಸಬೇಕು.

**ಇತ್ಯಾನಂದಪರಂಪರಾಂ ಪ್ರತಿದಿನಂ ಸಂವರ್ದ್ಧಯನ್ಸ್ವೈರ್ಗುಣೈಃ ।**
**ಪಿತ್ರೋರ್ಬಂಧುಜನಸ್ಯ ಚ ಪ್ರಶಮಯನ್ಲೋಕಸ್ಯ ದುಃಖಾ[೨]ಸಿಕಾಮ್ ॥**
**[೩]ನಾಭೇಯೋದಯಭೂಧರಾ[೪]ದಧರಿತಕ್ಷೋಣೀ ಧರಾದುದ್ಗತಃ ।**
**[೫]ಪ್ರಾಲೇಯಾಂಶುರಿವಾಬಭೌ ಭರತರಾಡ್ಭೂಲೋಕಮುದ್ಭಾಸಯನ್ ॥**

ಈ ಪ್ರಕಾರವಾಗಿ ತನ್ನಗುಣಗಳಿಂದ ತಂದೆತಾಯಿಗಳಿಗೂ ಬಂಧುಗಳಿಗೂ ಪ್ರತಿದಿವಸದಲ್ಲಿಯೂ ಆನಂದಪರಂಪರೆಯನ್ನು ವೃದ್ಧಿಪಡಿಸುವವನೂ ಜನರ ದುಃಖಸ್ಥಿತಿಯನ್ನು ಶಾಂತಪಡಿಸುವವನೂ ರಾಜರನ್ನು ಪರ್ವತಗಳನ್ನು ಕೀಳುಮಾಡಿದ ಆದಿಬ್ರಹ್ಮರೆಂಬ ಉದಯಪರ್ವತದಿಂದ ಉದ್ಭವಿಸಿದವನೂ ಆದ ಭರತರಾಜನು ಭೂಲೋಕವನ್ನು ಪ್ರಕಾಶಪಡಿಸುತ್ತ ಚಂದ್ರನಂತೆ ಶೋಭಿಸಿದನು.

**ಶ್ರೀಮಾ[೬]ನ್ಹೇಮಶಿಲಾಘನೈ[೭]ರಪಘನೈಃ [೮]ಪ್ರಾಂಶುಃ ಪ್ರಕೃತ್ಯಾ ಗುರುಃ**
**[೯]ಪಾದಾಕ್ರಾಂತಧರಾತಲೋ ಗುರುಭರಂ ವೋಢುಂ [೧೦]ಕ್ಷಮಾಯಾಃ ಕ್ಷಮಃ ।**
**ಹಾರಂ ನಿರ್ಝರಚಾರುಕಾಂತಿಮುರಸಾ ಬಿಭ್ರತ್ತಟಸ್ಪರ್ದ್ಧಿನಾ**
**ಚಕ್ರಾಂಕೋದಯಭೂಧರಃ ಸ ರುರುಚೇ ಮೌಲೀದ್ಧಕೂಟೋ[೧೧]ದ್ಧುರಃ ॥**

೧ ಅಸಾಧಾರಣಾಕೃತಿರಿತಿ ಯಾವತ್. ೨ ಸ್ಥಿತಿಂ. ೩ ಆದಿಬ್ರಹ್ಮಾ. ೪ ಅಧಃಕೃತಭೂಪತೇಃ, ಭೂಧರಾಚ್ಚ. ೫ ಚಂದ್ರಃ. ೬ ಹೇಮಶಿಲಾ ಇವ ಬೃಹಂತಸ್ತೈಃ. ೭ ಅವಯವೈಃ. ೮ ಉನ್ನತಃ. ೯ ಚರಣಾಕ್ರಾಂತಃ, ಪ್ರತ್ಯಂತಪರ್ವತಾಕ್ರಾಂತಶ್ಚ. ೧೦ ಭೂಮೇಃ. ೧೧ ಅಧಿಕಃ.

ಬಂಗಾರವಿರುವ ಕಲ್ಲುಗಳಂತೆ ದೃಢವಾದ ಅವಯವಗಳಿಂದ ಉನ್ನತನೂ (ಉನ್ನತವೂ) ಸ್ವಭಾವದಿಂದ ಗಂಭೀರನೂ (ದೊಡ್ಡದೂ) ಪಾದಾಕ್ರಾಂತವಾದ ಭೂತಲವುಳ್ಳವನೂ ( ಪ್ರತ್ಯಂತಪರ್ವತಾಕ್ರಾಂತವಾದ ಭೂತಲವುಳ್ಳದೂ ) ಕ್ಷಮೆಯ (ಪೃಥಿವಿಯ) ಅಧಿಕವಾದ ಭಾರವನ್ನು ವಹಿಸುವುದಕ್ಕೋಸ್ಕರ ಸಮರ್ಥನೂ (ಸಮರ್ಥವೂ) ಗಿರಿನದಿಯಂತೆ ಮನೋಹರವಾದ ಕಾಂತಿಯುಳ್ಳ ಹಾರವನ್ನು ಪರ್ವತದ ತಪ್ಪಲಿನೊಡನೆ ಸ್ಪರ್ಧೆಮಾಡುವ ಎದೆಯಿಂದ ಧರಿಸುವವನೂ ಕಿರೀಟದ ಪ್ರಕಾಶಮಾನವಾದ ಶಿಖರದಿಂದ ಉನ್ನತನೂ (ಅಗ್ರಭಾಗದಲ್ಲಿ ಪ್ರಕಾಶಮಾನವಾದ ಶಿಖರದಿಂದ ಹೆಚ್ಚು ಉನ್ನತವೂ) ಚಕ್ರವೆಂಬ ಸೂರ್ಯನಿಗೆ ಉದಯಪರ್ವತಂತಿರುವವನೂ ಸಂಪದ್ಯುಕ್ತನೂ ಆದ ಆ ಭರತಚಕ್ರವರ್ತಿಯು ಶೋಭಿಸಿದನು. ಎರಡನೆಯ ಅರ್ಥವು ಉದಯಪರ್ವತಪರವಾದುದು.

**ಸಂಪಶ್ಯನ್ನಯನೋತ್ಸವಂ ಸುರುಚಿರಂ [1]ತದ್ವಕ್ತ್ರಮಪ್ರಾಕೃತಂ ।**
**ಸಂಶೃಣ್ವನ್ಕಲನಿಕ್ವಣಂ ಶ್ರುತಿಸುಖಂ ಸಪ್ರಶ್ರಯಂ ತದ್ವಚಃ ॥**
**[1]ಆಶ್ಲಿಷ್ಯನ್ಪ್ರಣತೋತ್ಥಿತಂ ಮುಹುರಮುಂ ಸ್ವೋತ್ಸಂಗಮಾರೋಪಯನ್ ।**
**ಶ್ರೀಮಾನ್ನಾಭಿಸುತಃ ಪರಾಂ ಧೃತಿಮಗಾ–[2]ದ್ಭರ್ತ್ಸ್ಯಜ್ಜಿನಶ್ರೀರ್ವಿಭುಃ ॥ ೨೨೪ ॥**

ಮುಂದೆ ತೀರ್ಥಂಕರಸಂಪತ್ತನ್ನು ಹೊಂದುವವರೂ ಸಂಪದ್ಯುಕ್ತರೂ ಪ್ರಭುವೂ ನಾಭಿರಾಜನ ಪುತ್ರರೂ ಆದ ವೃಷಭತೀರ್ಥಂಕರರು, ನೇತ್ರಗಳಿಗೆ ಉತ್ಸವವನ್ನುಂಟುಮಾಡುವುದೂ ಮನೋಹರವೂ ಅಸಾಧಾರಣವೂ ಆದ ಆ ಭರತನ ಮುಖವನ್ನು ನೋಡಿಯೂ ಕೇಳುವುದಕ್ಕೆ ಸುಖಕರವೂ ವಿನಯಯುಕ್ತವೂ ಮಧುರವಾದ ಧ್ವನಿಯುಳ್ಳದೂ ಆದ ಆ ಭರತನ ವಚನವನ್ನು ಕೇಳಿಯೂ ತಮಗೆ ನಮಸ್ಕರಿಸಿ ಮೇಲಕ್ಕೆದ್ದ ಈ ಭರತನನ್ನು ತಮ್ಮ ತೊಡೆಯ ಮೇಲಿರಿಸಿ ಬಾರಿ ಬಾರಿಗೂ ಆಲಿಂಗಿಸಿಯೂ ಬಹಳ ಸಂತೋಷಪಟ್ಟರು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಭರತೋತ್ಪತ್ತಿವರ್ಣನಂ ನಾಮ ಪಂಚದಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭರತೋತ್ಪತ್ತಿವರ್ಣನೆಯೆಂಬ
ಹದಿನೈದನೆಯ ಪರ್ವವು ಸಮಾಪ್ತವಾದುದು.

---

೧ ಭರತಮುಖಂ.

೧ ಆಶ್ಲಿಷ್ಯೇತ್ಯಪಿ ಪಾಠಃ. ೨ ಭವಿಷ್ಯತ್.

# ಅಥ ಷೋಡಶಂ ಪರ್ವ

**ಅಥ ಕ್ರಮಾದ್ಯಶಸ್ವತ್ಯಾಂ ಜಾತಾಃ [೧]ಸ್ರಷ್ಟುರಿಮೇ ಸುತಾಃ ।**
**ಅವತೀರ್ಯ ದಿವೋ ಮೂರ್ಧ್ನಸ್ತೇಹಮಿಂದ್ರಾಃ ಪುರೋದಿತಾಃ ॥ ೧ ॥**

ತರುವಾಯ ಹಿಂದೆ ಹೇಳಿದ ಅಹಮಿಂದ್ರರು ಸ್ವರ್ಗದಿಂದ ಅವತರಿಸಿ ವೃಷಭ ಸ್ವಾಮಿಗೆ ಯಶಸ್ವತಿಯಲ್ಲಿ ಕ್ರಮವಾಗಿ ಈ ಮುಂದೆ ಹೇಳುವ ಪುತ್ರರಾಗಿ ಹುಟ್ಟಿದರು.

**ಪೀಠೋ ವೃಷಭಸೇನೋಭೂತ್ಕನೀಯಾನ್ಭರತೇಶ್ವರಾತ್ ।**
**ಮಹಾಪೀಠೋಭವತ್ತಸ್ಯ ಸೋನಂತವಿಜಯೋನುಜಃ ॥ ೨ ॥**

ಹಿಂದೆ ವಜ್ರನಾಭಿಗೆ ಬಂಧುವಾಗಿದ್ದ ಪೀಠನೆಂಬವನು ಭರತೇಶ್ವರನಿಗೆ ತಮ್ಮನಾದ ವೃಷಭಸೇನನಾಗಿ ಹುಟ್ಟಿದನು. ಮಹಾಪೀಠನಾಗಿದ್ದವನು ಅನಂತವಿಜಯನೆಂಬ ತಮ್ಮನಾಗಿ ಹುಟ್ಟಿದನು (೧೧ನೆಯ ಪರ್ವದಲ್ಲಿ ೧೨ ನೆಯ ಮತ್ತು ೧೩ ನೆಯ ಶ್ಲೋಕಗಳನ್ನು ನೋಡಿ).

**ವಿಜಯೋನಂತವೀರ್ಯೋಭೂದ್ವೈಜಯಂತೋಚ್ಯುತೋಭವತ್ ।**
**ಜಯಂತೋ ವೀರ ಇತ್ಯಾಸೀದ್ವರವೀರೋಪರಾಜಿತಃ ॥ ೩ ॥**

ವಜ್ರನಾಭಿಗೆ ಬಂಧುವಾಗಿದ್ದ ವಿಜಯನು ಭರತನಿಗೆ ಅನಂತವೀರ್ಯನೆಂಬ ತಮ್ಮನಾಗಿ ಹುಟ್ಟಿದನು. ವೈಜಯಂತನು ಅಚ್ಯುತನೆಂಬ ತಮ್ಮನಾಗಿ ಹುಟ್ಟಿದನು. ಜಯಂತನು ವೀರನೆಂಬ ಅನುಜನಾಗಿ ಹುಟ್ಟಿದನು. ಅಪರಾಜಿತನು ವರವೀರನೆಂಬ ಅನುಜನಾಗಿ ಹುಟ್ಟಿದನು. (೧೧ನೆಯ ಪರ್ವದಲ್ಲಿ ೧೦ನೆಯ ಶ್ಲೋಕವನ್ನು ನೋಡಿ).

**ಇ[೨]ತ್ಯೇಕೋನಶತಂ ಪುತ್ರಾ ಬಭೂವುರ್ವೃಷಭೇಶಿನಃ ।**
**ಭರತಸ್ಯಾನುಜನ್ಮಾನಶ್ಚರಮಾಂಗಾ ಮಹೌಜಸಃ ॥ ೪ ॥**

ಈಪ್ರಕಾರವಾಗಿ ಚರಮಶರೀರಿಗಳೂ ಮಹಾತೇಜಸ್ವಿಗಳೂ ಆದ ತೊಂಬತ್ತೊಂಬತ್ತು ಮಂದಿ ವೃಷಭಸ್ವಾಮಿಯ ಪುತ್ರರು ಭರತನಿಗೆ ಅನುಜರಾಗಿ ಹುಟ್ಟಿದರು.

**ತತೋ ಬ್ರಾಹ್ಮೀಂ ಯಶಸ್ವತ್ಯಾಂ ಬ್ರಹ್ಮಾ ಸಮುದಪಾದಯತ್ ।**
**ಕಲಾಮಿವಾ[೩]ಪರಾಶಾಯಾಂ [೪]ಜ್ಯೌತ್ಸ್ನಪಕ್ಷೋಮಲಾಂ ವಿಧೋಃ ॥ ೫ ॥**

ತರುವಾಯ ಶುಕ್ಲಪಕ್ಷವು ಪಶ್ಚಿಮ ದಿಕ್ಕಿನಲ್ಲಿ ಚಂದ್ರನ ನಿರ್ಮಲವಾದ ಕಲೆಯನ್ನುಂಟುಮಾಡುವಂತೆ ಆದಿಬ್ರಹ್ಮರು ಯಶಸ್ವತಿಯಲ್ಲಿ ಬ್ರಾಹ್ಮಿಯೆಂಬ ಪುತ್ರಿಯನ್ನು ಹುಟ್ಟಿಸಿದರು.

**ಸುನಂದಾಯಾಂ ಮಹಾಬಾಹುರಹಮಿಂದ್ರೋ ದಿವೋಗ್ರತಃ ।**
**ಚ್ಯುತ್ವಾ ಬಾಹುಬಲೀತ್ಯಾಸೀತ್ಕುಮಾರೋಮರಸನ್ನಿಭಃ ॥ ೬ ॥**

ವಜ್ರನಾಭಿಗೆ ಮಹಾಬಾಹುವೆಂಬ ಬಂಧುವಾಗಿದ್ದು ತರುವಾಯ ಅಹ ಮಿಂದ್ರನಾಗಿದ್ದ ದೇವನು ಸ್ವರ್ಗದಿಂದ ಚ್ಯುತನಾಗಿ ವೃಷಭಸ್ವಾಮಿಯ ಎರಡನೆಯ ಪತ್ನಿಯಾದ ಸುನಂದೆಯಲ್ಲಿ ದೇವನಿಗೆ ಸಮಾನನಾದ ಬಾಹುಬಲಿಯೆಂಬ ಪುತ್ರನಾಗಿ ಹುಟ್ಟಿದನು. (೧೧ನೆಯ ಪರ್ವದಲ್ಲಿ ೧೨ ನೆಯ ಮತ್ತು ೧೩ ನೆಯ ಶ್ಲೋಕಗಳನ್ನು ನೋಡಿ).

೧ ನಾಭೇಯಾತ್. ೨ ಏಕಾನ್ನಶತಮಿತ್ಯಪಿ ಪಾಠಃ. ೩ ಪಶ್ಚಿಮದಿಶಿ. ೪ ಶುಕ್ಲಪಕ್ಷಃ, ಜ್ಯೋತ್ಸ್ನಃ ಪಕ್ಷೇ ಇತ್ಯಪಿ ಪಾಠಃ.

**ವಜ್ರಜಂಘಭವೇ ಯಾಸ್ಯ ಭಗಿನ್ಯಾಸೀ[೧]ದನುಂಧರೀ ।**
**ಸಾ ಸುಂದರೀತ್ಯಭೂತ್ಪುತ್ರೀ ವೃಷಭಸ್ಯಾತಿಸುಂದರೀ ॥ ೭ ॥**

ವೃಷಭಸ್ವಾಮಿಯ ವಜ್ರಜಂಘಭವದಲ್ಲಿ ಸಹೋದರಿಯಾಗಿದ್ದ ಅನುಂಧರಿಯೆಂಬವಳು ಸುನಂದೆಯಲ್ಲಿ ವೃಷಭಸ್ವಾಮಿಗೆ ಅತ್ಯಂತ ಸುಂದರಿಯಾದ ಸುಂದರಿಯೆಂಬ ಪುತ್ರಿಯಾಗಿ ಹುಟ್ಟಿದಳು.

**ಸುನಂದಾ ಸುಂದರೀಂ ಪುತ್ರೀಂ ಪುತ್ರಂ ಬಾಹುಬಲೀಶಿನಮ್ ।**
**ಲಬ್ಧ್ವಾ [೨]ರುಚಿಂ ಪರಾಂ [೩]ಭೇಜೇ ಪ್ರಾಚೀವಾರ್ಕಂ ಸಹ ತ್ವಿಷಾ ॥ ೮ ॥**

ಪೂರ್ವದಿಕ್ಕು ಕಾಂತಿಯೊಡನೆ ಸೂರ್ಯನನ್ನು ಪಡೆದು ಶೋಭಿಸುವಂತೆ, ಸುನಂದೆಯು ಸುಂದರಿಯೆಂಬ ಪುತ್ರಿಯನ್ನೂ ಬಾಹುಬಲಿಯೆಂಬ ಪುತ್ರನನ್ನೂ ಪಡೆದು ಅಧಿಕವಾದ ಶೋಭೆಯನ್ನು ಹೊಂದಿದಳು.

**[೪]ತತ್ಕಾಲೇ ಕಾಮದೇವೋಭೂದ್ಯುವಾ ಬಾಹುಬಲೀ ಬಲೀ ।**
**ರೂಪಸಂಪದಮುತ್ತುಂಗಾಂ ದಧಾನೋಸುಮತಾಂ ಮತಾಮ್ ॥ ೯ ॥**

ಎಲ್ಲರಿಗೂ ಸಮ್ಮತವೂ ಶ್ರೇಷ್ಠವೂ ಆದ ರೂಪಸಂಪತ್ತನ್ನು ಧರಿಸಿರುವವನೂ ಯುವಕನೂ ಬಲಶಾಲಿಯೂ ಆದ ಬಾಹುಬಲಿಯು ಆ ಕಾಲದಲ್ಲಿ ಮನ್ಮಥನಾಗಿದ್ದನು.

**ತಸ್ಯ ತದ್ರೂಪಮನ್ಯತ್ರ ಸಮುದೃಶ್ಯತ ನ ಕ್ವಚಿತ್ ।**
**ಕಲ್ಪದ್ರುಮಾತ್ಕಿಮನ್ಯತ್ರ ದೃಶ್ಯತೇ ಹಾರಿಭೂಷಣಮ್ ॥ ೧೦ ॥**

ಬಾಹುಬಲಿಯ ಆ ರೂಪವು ಬೇರೆಯೆಲ್ಲಿಯೂ ಕಾಣಲ್ಪಡುತ್ತಿರಲಿಲ್ಲವು. ಇದು ನ್ಯಾಯವಾಗಿದೆ:- ಮನೋಹರವಾದ ಆಭರಣವು ಕಲ್ಪವೃಕ್ಷವನ್ನು ಬಿಟ್ಟು ಬೇರೆ ಕಡೆಯಲ್ಲಿ ಕಾಣಲ್ಪಡುವುದೆ ?

**[೫]ಕುಂಚಿತಾಸ್ತಸ್ಯ [೬]ಕೇಶಾಂತಾ ವಿಬಭುರ್ಭ್ರಮರತ್ವಿಷಃ ।**
**ಮನೋಭುವಃ ಶಿರಸ್ತ್ರಾಣಸೂಕ್ಷ್ಮ[೭]ಯೋವಲಯೈಃ ಸಮಾಃ ॥ ೧೧ ॥**

ಭ್ರಮರದಂತೆ ಕಾಂತಿಯುಳ್ಳ ಬಾಹುಬಲಿಯ ಕುರುಳುಕೂದಲುಗಳ ಅಗ್ರ ಭಾಗಗಳು, ಮನ್ಮಥನ ಕುಲಾವಿಯಂತೆ, ಸೂಕ್ಷ್ಮವಾದ ಕಬ್ಬಿಣದ ಬಳೆಗಳಿಗೆ ಸಮಾನಗಳಾಗಿ ಶೋಭಿಸಿದುವು.

**ಲಲಾಟಮಷ್ಟಮೀಚಂದ್ರಚಾರು ತಸ್ಯ ದಧೇ ರುಚಿಮ್ ।**
**ಧಾತ್ರೇವ ರಾಜ್ಯಪಟ್ಟಸ್ಯ ನಿವೇಶಾಯ ಪೃಥೂಕೃತಮ್ ॥ ೧೨ ॥**

ಅಷ್ಟಮೀಚಂದ್ರನಂತೆ ಸುಂದರವಾದ ಆ ಬಾಹುಬಲಿಯ ಹಣೆಯು, ರಾಜ್ಯ ಪಟ್ಟವನ್ನಿರಿಸುವುದಕ್ಕೆ ಬ್ರಹ್ಮನಿಂದ ವಿಸ್ತಾರವಾಗಿ ಮಾಡಲ್ಪಟ್ಟಿದೆಯೋ ಎಂಬಂತೆ, ಶೋಭಿಸಿತು.

**ಕುಂಡಲದ್ವಯಸಂಶೋಭಿ ತಸ್ಯ ವಕ್ತ್ರಮದೀಪ್ಯತ ।**
**[೮]ಸರೋರುಹಮಿವೋಪಾಂತವರ್ತಿ ಚಕ್ರಾಹ್ವಯುಗ್ಮಕಮ್ ॥ ೧೩ ॥**

ಎರಡು ಕರ್ಣಕುಂಡಲಗಳಿಂದ ಶೋಭಿಸುತ್ತಿರುವ ಆ ಬಾಹುಬಲಿಯ ಮುಖವು, ಸಮೀಪದಲ್ಲಿರುವ ಎರಡು ಚಕ್ರವಾಕಪಕ್ಷಿಗಳುಳ್ಳ ಕಮಲದಂತೆ, ಪ್ರಕಾಶಿಸಿತು.

೧ ಅನುಂದರೀತ್ಯಪಿ ಪಾಠಃ. ೨ ಶೋಭಾಂ. ೩ ಲೇಭೇ ಇತ್ಯಪಿ ಪಾಠಃ. ೪ ತತ್ಕಾಲಕಾಮದೇವ ಇತ್ಯಪಿ ಪಾಠಃ. ೫ ಕುಟಿಲೀಭೂತಾಃ. ೬ ಕೇಶಾಗ್ರಾಣಿ. ೭ ಆಯೋಮಯ್ಯೈಃ. ೮ ಕಮಲಂ.

**ನೇತ್ರೋತ್ಪಲದ್ವಯೇನಾಸ್ಯ ಬಭೌ ವಕ್ತ್ರಸರೋವರಮ್ ।**
**ಸ್ಮಿತಾಂಶು[೧]ಸಲಿಲೋತ್ಪೀಡಂ ಲಕ್ಷ್ಮ್ಯಾವಾಸಪವಿತ್ರಿತಮ್ ॥ ೧೪ ॥**

ಮಂದಹಾಸದ ಕಾಂತಿಯೆಂಬ ಜಲಬಿಂದು ಸಮೂಹವುಳ್ಳದೂ ಲಕ್ಷ್ಮಿಯ ವಾಸದಿಂದ ಪವಿತ್ರವೂ ಆದ ಈ ಬಾಹುಬಲಿಯ ಮುಖವೆಂಬ ಸರೋವರವು ನೇತ್ರಗಳೆಂಬ ಎರಡು ನೈದಿಲೆಯ ಪುಷ್ಪಗಳಿಂದ ಶೋಭಿಸಿತು.

**ವಿಜಯಚ್ಛಂದಹಾರೇಣ ವಕ್ಷಸ್ಥಲವಿಲಂಬಿನಾ ।**
**ಸೋಢಾಸ್ಮರಕತಾ[೨]ಗಸ್ಯ ಶ್ರಿಯಂ ನಿರ್ಝರಶೋಭಿನಃ ॥ ೧೫ ॥**

ಎದೆಯಲ್ಲಿ ಜೋಲುತ್ತಿರುವ ವಿಜಯಚ್ಛಂದವೆಂಬ ಮುಕ್ತಾಹಾರದಿಂದ ಆ ಬಾಹುಬಲಿಯು, ಗಿರಿನದಿಯಿಂದ ಶೋಭಿಸುತ್ತಿರುವ ಪಚ್ಚೆಯ ರತ್ನಗಳುಳ್ಳ ಪರ್ವತದ ಶೋಭೆಯನ್ನು ಧರಿಸಿದನು. (೫೦೪ ಎಳೆಗಳುಳ್ಳ ಹಾರಕ್ಕೆ ವಿಜಯಚ್ಛಂದವೆಂದು ಹೆಸರು).

**ತಸ್ಯಾಂಸೌ ವಕ್ಷಸಃ ಪ್ರಾಂತೇ ಶ್ರಿಯಮಾತೇನತುಃ ಪರಾಮ್ ।**
**ದ್ವೀಪಸ್ಥಲಸ್ಯ ಪರ್ಯಂತೇ ಸ್ಥಿತೌ ಕ್ಷುದ್ರನಗಾವಿವಾ ॥ ೧೬ ॥**

ಆ ಬಾಹುಬಲಿಯ ಎದೆಯ ಉಭಯಪಾರ್ಶ್ವಗಳಲ್ಲಿರುವ ಭುಜಶಿರಸ್ಸುಗಳು, ದ್ವೀಪದ ಸಮೀಪಪ್ರದೇಶದಲ್ಲಿರುವ ಎರಡು ಸಣ್ಣಪರ್ವತಗಳಂತೆ, ಅಧಿಕವಾಗಿ ಶೋಭಿಸಿದುವು.

**ಬಾಹೂ ತಸ್ಯ ಮಹಾಬಾಹೋರಧಾತಾಂ ಬಲಮೂರ್ಜಿತಮ್ ।**
**ಯತೋ ಬಾಹುಬಲೀತ್ಯಾಸೀನ್ನಾಮಾಸ್ಯ [೩]ಮಹಸಾಂ ನಿಧೇಃ ॥ ೧೭ ॥**

ದೊಡ್ಡ ಬಾಹುಗಳುಳ್ಳವನೂ ತೇಜಸ್ಸುಗಳಿಗೆ ನಿಧಿಪ್ರಾಯನೂ ಆದ ಆ ಬಾಹುಬಲಿಯ ಬಾಹುಗಳು ಅತ್ಯಂತ ಬಲಿಷ್ಠವಾಗಿದ್ದುದರಿಂದ ಇವನ ಹೆಸರು ಬಾಹುಬಲಿಯೆಂದಾಯಿತು.

**ಮಧ್ಯೇಗಾತ್ರಮಸೌ ದಧ್ರೇ ಗಂಭೀರಂ ನಾಭಿಮಂಡಲಮ್ ।**
**ಕುಲಾದ್ರಿರಿವ [೪]ಪದ್ಮಾಯಾಃ ಸೇವನೀಯಂ ಮಹತ್ಸರಃ ॥ ೧೮ ॥**

ಕುಲಪರ್ವತವು ಲಕ್ಷ್ಮೀದೇವಿಗೆ ಸೇವಿಸುವುದಕ್ಕೆ ಯೋಗ್ಯವಾದ ದೊಡ್ಡ ಸರೋವರವನ್ನು ಧರಿಸುವಂತೆ, ಈ ಬಾಹುಬಲಿಯು ಶರೀರಮಧ್ಯದಲ್ಲಿ ಆಳವೂ ವರ್ತುಲಾಕಾರವೂ ಆದ ನಾಭಿಯನ್ನು ಧರಿಸಿದನು.

**ಕಟೀತಟಂ ಬಭಾವಸ್ಯ ಕಟೀಸೂತ್ರೇಣ ವೇಷ್ಟಿತಮ್ ।**
**ಮಹಾಹಿನೇವ ವಿಸ್ತೀರ್ಣಂ ತಟಂ ಮೇರೋರ್ಮಹೋನ್ನತೇಃ ॥ ೧೯ ॥**

ಉಡುದಾರದಿಂದ ಸುತ್ತಲ್ಪಟ್ಟ ಈ ಬಾಹುಬಲಿಯ ಸೊಂಟವು ಅತ್ಯಂತ ಉನ್ನತವಾದ ಮಹಾಮೇರುಪರ್ವತದ ವಿಸ್ತಾರವೂ ದೊಡ್ಡಸರ್ಪದಿಂದ ಸುತ್ತಲ್ಪಟ್ಟುದೂ ಆದ ತಪ್ಪಲುಪ್ರದೇಶದಂತೆ ಶೋಭಿಸಿತು.

**ಕದಲೀಸ್ತಂಭ[೫]ನಿರ್ಭಾಸಾವೂರೂ ತಸ್ಯ ವಿರೇಜತುಃ ।**
**ಲಕ್ಷ್ಮೀಕರತಲಾ[೬]ಜಸ್ರಸ್ಪರ್ಶಾದಿವ ಸಮುಜ್ಜ್ವಲೌ ॥ ೨೦ ॥**

ಬಾಳೆಯ ಕಂಭಗಳಿಗೆ ಸಮಾನವಾದ ಆ ಬಾಹುಬಲಿಯ ತೊಡೆಗಳೆರಡು, ಯಾವಾಗಲೂ ಲಕ್ಷ್ಮೀದೇವಿಯ ಹಸ್ತಸ್ಪರ್ಶದಿಂದ ಪ್ರಕಾಶಮಾನಗಳಾಗಿರುವಂತೆ, ಶೋಭಿಸಿದುವು.

**ಶುಶುಭಾತೇ ಶುಭೇ ಜಂಘೇ ತಸ್ಯ ವಿಕ್ರಮಶಾಲಿನಃ ।**
**ಭವಿಷ್ಯತ್ಪ್ರತಿಮಾಯೋಗ[೭]ತಪಃಸಿದ್ಧ್ಯಂಗತಾಂ ಗತೇ ॥ ೨೧ ॥**

೧ ಜಲಕಣಪ್ರಚಯಂ, ಸಲಿಲೋತ್ಪಿಂಡಮಿತ್ಯಪಿ ಪಾಠಃ. ೨ ಪರ್ವತಸ್ಯ. ೩ ತೇಜಸಾಂ. ೪ ಲಕ್ಷ್ಮ್ಯಾಃ. ೫ ಸಮಾನೌ. ೬ ಅನಾರತಂ. ೭ ತಪಃಸಿದ್ಧೇಃ ಕಾರಣತಾಂ.

ಪರಾಕ್ರಮಶಾಲಿಯಾದ ಆ ಬಾಹುಬಲಿಯ ಮುಂದಾಗುವ ಪ್ರತಿಮಾಯೋಗ ತಪಸ್ಸಿನ ಸಿದ್ಧಿಗೆ ಕಾರಣವಾದ ಎರಡು ಕಣಕಾಲುಗಳು ಅಧಿಕವಾಗಿ ಶೋಭಿಸಿದುವು.

**ಕ್ರಮೌ ಮೃದುತಲೌ ತಸ್ಯ ಲಸದಂಗುಲಿಸದ್ದಲೌ ।**
**[೧]ರುಚಂ ದಧತುರಾರಕ್ತೌ ರಕ್ತಾಂಭೋಜಸ್ಯ ಸಶ್ರಿಯಃ ॥ ೨೨ ॥**

ಮೃದುವಾದ ತಲಗಳೂ ಪ್ರಕಾಶಮಾನವಾದ ಬೆರಳುಗಳೆಂಬ ಎಸಳುಗಳೂ ಉಳ್ಳ ಆ ಬಾಹುಬಲಿಯ ಕೆಂಪಾದ ಪಾದಗಳೆರಡು ಶೋಭಾಯಮಾನವಾದ ಕೆಂದಾವರೆಯ ಶೋಭೆಯನ್ನು ಧರಿಸಿದುವು.

**ಇತ್ಯಸೌ ಪರಮೋದಾರಂ ದಧಾನಶ್ಚರಮಂ ವಪುಃ ।**
**ಸಮ್ಮಾತಿ ಸ್ಮ ಕಥಂ ನಾಮ ಮಾನಿನೀಹೃತ್ಕುಟೀರಕೇ ॥ ೨೩ ॥**

ಹೀಗೆ ದೊಡ್ಡದಾದ ಚರಮಶರೀರವನ್ನು ಧರಿಸಿರುವ ಈ ಬಾಹುಬಲಿಯು, ಮಾನವತಿಯರಾದ ಸ್ತ್ರೀಯರ ಹೃದಯವೆಂಬ ಗುಡಿಸಲಿನಲ್ಲಿ ಹೇಗೆ ಅಡಕವಾಗುವನು ?

**ಸ್ವಪ್ನೇಪಿ ತಸ್ಯ ತದ್ರೂಪಮನನ್ಯಮನಸೋಂಗನಾಃ ।**
**ಪಶ್ಯಂತಿ ಸ್ಮ ಮನೋಹಾರಿ [೨]ನಿಖಾತಮಿವ ಚೇತಸಿ ॥ ೨೪ ॥**

ಬೇರೆ ಕಡೆಯಲ್ಲಿ ಮನಸ್ಸನ್ನಿರಿಸದಿರುವ ಸ್ತ್ರೀಯರು ಮನೋಹರವಾದ ಆ ಬಾಹುಬಲಿಯ ರೂಪವನ್ನು, ತಮ್ಮ ಮನಸ್ಸಿನಲ್ಲಿ ಕೆತ್ತಿದಂತೆ, ಸ್ವಪ್ನದಲ್ಲಿಯೂ ನೋಡುತ್ತಿದ್ದರು.

**ಮನೋಭವೋ ಮನೋಜಶ್ಚ ಮನೋಭೂರ್ಮನ್ಮಥೋಂಗಜಃ ।**
**ಮದನೋನನ್ಯಜಶ್ಚೇತಿ [೩]ವ್ಯಾಜಹ್ರುಸ್ತಂ ತದಾಂಗನಾಃ ॥ ೨೫ ॥**

ಆಗ ಸ್ತ್ರೀಯರು ಬಾಹುಬಲಿಯನ್ನು ಮನೋಭವ ಮನೋಜ ಮನೋಭೂ ಮನ್ಮಥ ಅಂಗಜ ಮದನ ಅನನ್ಯಜ ಎಂದು ಹೇಳಿದರು.

**ಸುಮನೋಮಂಜರೀಬಾಣೈರಿಕ್ಷುಧನ್ವಾ ಕಿಲಾಂಗಜಃ ।**
**ಜಗ[೪]ತ್ಸಂಹಾರಕಾರೀತಿ ಕಃ [೫]ಶ್ರದ್ದಧ್ಯಾದಯುಕ್ತಿಕಮ್ ॥ ೨೬ ॥**

ಇಕ್ಷುದಂಡವೇ ಧನುಸ್ಸಾಗಿರುವ ಮನ್ಮಥನು ಪುಷ್ಪಬಾಣಗಳಿಂದ ಜಗತ್ತನ್ನು ಸಂಹರಿಸುವನಂತೆ ! ಈ ಯುಕ್ತಿಶೂನ್ಯವಾದ ವಚನವನ್ನು ಯಾವನು ನಂಬುವನು ? ಕೋಮಲವಾದ ಪುಷ್ಪಗಳು ತೀವ್ರವೇದನೆಯನ್ನುಂಟುಮಾಡಲಾರವೆಂದರ್ಥವು.

**ಸಮಾ ಭರತರಾಜೇನ [೬]ರಾಜನ್ಯಾಃ ಸರ್ವ ಏವ ತೇ ।**
**ವಿದ್ಯಯಾ [೭]ಕಲಯಾ [೮]ದೀಪ್ತ್ಯಾ ಕಾಂತ್ಯಾ ಸೌಂದರ್ಯ[೯]ಲೀಲಯಾ ॥**

ಭರತರಾಜನ ಸಹೋದರರಾದ ಆ ರಾಜಕುಮಾರರೆಲ್ಲರೂ ವಿದ್ಯೆಯಿಂದಲೂ ಅಕ್ಷರಗಣಿತ ಮೊದಲಾದ ಕಲೆಯಿಂದಲೂ ತೇಜಸ್ಸಿನಿಂದಲೂ ಕಾಂತಿಯಿಂದಲೂ ಸೌಂದರ್ಯದ ಶೋಭೆಯಿಂದಲೂ ಭರತರಾಜನಿಗೆ ಸಮಾನರಾಗಿದ್ದರು.

**ಶತಮೇಕೋತ್ತರಂ ಪುತ್ರಾ ಭರ್ತುಸ್ತೇ ಭರತಾದಯಃ ।**
**ಕ್ರಮಾತ್ಪ್ರಾಪುರ್ಯುವಾವಸ್ಥಾಂ ಮದಾವಸ್ಥಾಮಿವ ದ್ವಿಪಾಃ ॥ ೨೮ ॥**

ವೃಷಭಸ್ವಾಮಿಯ ಭರತಮೊದಲಾದ ಆ ನೂರೊಂದುಮಂದಿ ಮಕ್ಕಳು ಆನೆಗಳು ಮದಾವಸ್ಥೆಯನ್ನು ಹೊಂದುವಂತೆ ಕ್ರಮವಾಗಿ ಯೌವನಾವಸ್ಥೆಯನ್ನು ಹೊಂದಿದರು.

೧ ಶೋಭಾಂ, ರುಚಿಮಿತ್ಯಪಿ ಪಾಠಃ. ೨ ಟಂಕೋತ್ಕೀರ್ಣಮಿವ. ೩ ಬ್ರುವಂತಿ ಸ್ಮ. ೪ ಸಮ್ಮೋಹಕಾರೀತ್ಯಪಿ ಪಾಠಃ. ೫ ವಿಶ್ವಾಸಂ ಕುರ್ಯಾತ್. ೬ ರಾಜಕುಮಾರಾಃ. ೭ ಅಕ್ಷರಗಣಿತಾದಿರೂಪಯಾ. ೮ ತೇಜಸಾ. ೯ ಶೋಭಯಾ.

**ತದ್ಯೌವನಮಭೂತ್ತೇಷು ರಮಣೀಯತರಂ ತದಾ ।**
**ಉದ್ಯಾನಪಾದಪೌಘೇಷು ವಸಂತಸ್ಯೇವ [೧]ಜೃಂಭಿತಮ್ ॥ ೨೯ ॥**

ಉದ್ಯಾನದ ವೃಕ್ಷಸಮೂಹಗಳಲ್ಲಿ ವಸಂತಕಾಲದ ವಿಕಾಸದಂತೆ ಆಗ ಆ ರಾಜಕುಮಾರರಲ್ಲಿ ಆ ಯೌವನವು ಅತ್ಯಂತ ರಮಣೀಯವಾಗಿದ್ದಿತು.

**ಸ್ಮಿತಾಂಶುಮಂಜರೀಃ ಶುಭ್ರಾಃ [೨]ಸತಾಮ್ರಾನ್ ಪಾಣಿಪಲ್ಲವಾನ್ ।**
**ಭುಜಶಾಖಾಃ ಫಲೋದಗ್ರಾಸ್ತೇದಧು[೩]ರ್ಯುವಪಾರ್ಥಿವಾಃ ॥ ೩೦ ॥**

ಆ ತರುಣರಾದ ರಾಜಕುಮಾರರು ಶುಭ್ರವಾದ ಮುಗುಳುನಗೆಯ ಕಿರಣಗಳೆಂಬ ಪುಷ್ಪದ ಗೊಂಚಲುಗಳನ್ನೂ ಕೆಂಪಾದ ಹಸ್ತಗಳೆಂಬ ತಳಿರುಗಳನ್ನೂ ಅಧಿಕವಾದ ಫಲಗಳುಳ್ಳ ಭುಜಗಳೆಂಬ ಕೊಂಬೆಗಳನ್ನೂ ಧರಿಸಿದರು. ತರುಣವೃಕ್ಷಗಳ ಸಾದೃಶ್ಯವನ್ನು ಹೊಂದಿದರೆಂದು ಭಾವವು.

**ತತಾಮೋದೇನ ಧೂಪೇನ [೪]ವಾಸಿತಾಸ್ತಚ್ಛಿರೋರುಹಾಃ ।**
**ಗಂಧಾಂಧೈರಲಿಭಿರ್ಲೀನೈಃ ಕೃತಾಃ ಸೋಪಚಯಾ ಇವ ॥ ೩೧ ॥**

ಹರಡುತ್ತಿರುವ ಪರಿಮಳವುಳ್ಳ ಧೂಪದಿಂದ ಸುಗಂಧಿತವಾದ ಆ ರಾಜಕುಮಾರರ ಕೂದಲುಗಳು, ಪರಿಮಳದಿಂದ ಮತ್ತವಾಗಿ ಸಂಬಂಧಿಸಿರುವ ದುಂಬಿಗಳಿಂದ ಮಾಡಲ್ಪಟ್ಟ ಸಮೂಹಗಳಂತೆ, ಶೋಭಿಸುತ್ತಿದ್ದುವು. ಕೂದಲುಗಳು ಭ್ರಮರಗಳ ಗುಂಪಿನಂತಿದ್ದುವೆಂದರ್ಥವು.

**ತನ್ಮುಖಾಮೋದಮಾಘ್ರಾತುಮಾಯಾಂತೀ ಭ್ರಮರಾವಲೀ ।**
**[೫]ಸರ್ವಾಂಗೀಣಂ ತದಾಮೋದಮನ್ವಭೂತ್ಕ್ಷಣಮಾಕುಲಾ ॥ ೩೨ ॥**

ಆ ರಾಜಕುಮಾರರ ಮುಖದ ಪರಿಮಳವನ್ನು ಆಘ್ರಾಣಮಾಡುವುದಕ್ಕೋಸ್ಕರ ಬರುತ್ತಿರುವ ದುಂಬಿಗಳ ಪಂಕ್ತಿಯು ಆಗ ಒಂದುಕ್ಷಣಕಾಲ ವ್ಯಾಕುಲಪಟ್ಟು ಸರ್ವಾವಯಗಳಲ್ಲಿಯೂ ಉಂಟಾದ ಪರಿಮಳವನ್ನನುಭವಿಸಿತು. ಭ್ರಮರಗಳು ಎಲ್ಲಾ ಅವಯವಗಳಲ್ಲಿಯೂ ಸುಗಂಧವಿದ್ದುದರಿಂದ ಮೊದಲು ಯಾವುದನ್ನು ಅನುಭವಿಸಬೇಕೆಂದು ತಿಳಿಯದೆ ಒಂದುಕ್ಷಣಕಾಲ ವ್ಯಾಕುಲಪಟ್ಟುವೆಂದು ಭಾವವು.

**ರತ್ನಕುಂಡಲಯುಗ್ಮೇನ ಮಕರಾಂಕೇಣ ಭೂಷಿತಮ್ ।**
**ಕರ್ಣದ್ವಯಂ ಬಭೌ ತೇಷಾಂ ಮದನೇನೇವ ಚಿಹ್ನಿತಮ್ ॥ ೩೩ ॥**

ಮಕರ(ನೆಗಳು)ಚಿಹ್ನೆಯುಳ್ಳ ರತ್ನಕುಂಡಲಗಳಿಂದ ಅಲಂಕೃತವಾದ ಆ ರಾಜಕುಮಾರರ ಕಿವಿಗಳು ಮನ್ಮಥನಿಂದ ಗುರುತುಮಾಡಲ್ಪಟ್ಟುವುಗಳಂತೆ ಶೋಭಿಸಿದುವು.

**ನೇತ್ರೋತ್ಪಲದ್ವಯಂ ತೇಷಾಮಿಷೂಕೃತ್ಯ ಮನೋಭವಃ ।**
**ಭ್ರೂಲತಾಚಾಪಯಷ್ಟಿಭ್ಯಾಂ ಸ್ತ್ರೀಸೃಷ್ಟಿಂ ವಶಮಾನಯತ್ ॥ ೩೪ ॥**

ಮನ್ಮಥನು ಆ ರಾಜಕುಮಾರರ ನೇತ್ರಗಳೆಂಬ ಕನ್ನೈದಿಲೆಯ ಪುಷ್ಪಗಳನ್ನು ಬಾಣಗಳನ್ನಾಗಿ ಮಾಡಿಕೊಂಡು ಲತೆಯಂತಿರುವ ಹುಬ್ಬುಗಳೆಂಬ ಧನುಸ್ಸುಗಳಿಂದ ಸ್ತ್ರೀಸೃಷ್ಟಿಯನ್ನು ವಶಪಡಿಸಿಕೊಂಡನು. ಸಮಸ್ತಸ್ತ್ರೀಯರೂ ಮೋಹಿತರಾದರೆಂದು ಭಾವವು.

**ವಪುರ್ದೀಪ್ತಂ ಮುಖಂ ಕಾಂತಂ ಮಧುರೋ ನೇತ್ರವಿಭ್ರಮಃ ।**
**ಕರ್ಣಾ[೬]ವಭ್ಯರ್ಣವಿಶ್ರಾಂತನೇತ್ರೋತ್ಪಲವತಂಸಿತೌ ॥ ೩೫ ॥**

ಆ ರಾಜಕುಮಾರರ ಪ್ರಕಾಶಮಾನವಾದ ಶರೀರವೂ ಸುಂದರವಾದ ಮುಖವೂ ಮಧುರವಾದ ನೇತ್ರಗಳ ವಿಭ್ರಮವೂ ಸಮೀಪದಲ್ಲಿ ವ್ಯಾಪಿಸಿರುವ ನೇತ್ರಗಳೆಂಬ ಕನ್ನೈದಿಲೆಯ ಪುಷ್ಪಗಳಿಂದ ಅಲಂಕೃತವಾಗಿರುವ ಎರಡು ಕಿವಿಗಳೂ

೧ ಜೃಂಭಣಂ. ೨ ಸಾರುಣಾನ್. ೩ ತರುಣಭೂಪಾಃ, ಯುವಪಾದಪಾಶ್ಚ. ೪ ಪರಿಮಲಿತಾಃ. ೫ ಸರ್ವಾವಯವೇಷು ಭವಂ. ೬ ಸಮೀಪೇ.

**ಭ್ರುವೌ ಸವಿಭ್ರಮೋ ಶಸ್ತಂ ಲಲಾಟಂ ನಾಸಿಕಾಂ[೧]ಚಿತಾ ।**
**ಕಪೋಲಾವುಪಮಾತೀತಾ[೨]ವಪೋದಿತಶಶಿಶ್ರಿಯೌ ॥ ೩೬ ॥**

ವಿಲಾಸಯುಕ್ತವಾದ ಎರಡು ಹುಬ್ಬುಗಳೂ ಪ್ರಶಸ್ತವಾದ ಹಣೆಯೂ ಸುಂದರವಾದ ಮೂಗೂ ಉಪಮಾರಹಿತವೂ ಚಂದ್ರನ ಶೋಭೆಯನ್ನು ತಿರಸ್ಕರಿಸುವುವೂ ಆದ ಎರಡು ಕೆನ್ನೆಗಳೂ

**[೩]ರಕ್ತೋ ರಾಗರಸೇನೇವ ಪಾಟಲೋ ದಶನಚ್ಛದಃ ।**
**ಸ್ವರೋ ಮೃದಂಗನಿರ್ಘೋಷಗಂಭೀರಃ [೪]ಶ್ರುತಿಪೇಶಲಃ ॥ ೩೭ ॥**

ಪ್ರೀತಿಯೆಂಬ ರಸದಿಂದ ಲೇಪಿಸಲ್ಪಟ್ಟಂತಿರುವ ಕೆಂಪಾದ ತುಟಿಯೂ ಮದ್ದಳೆಯ ಶಬ್ದದಂತೆ ಗಂಭೀರವೂ ಕಿವಿಗಳಿಗೆ ಇಂಪೂ ಆದ ಸ್ವರವೂ

**[೫]ಸೂತ್ರಮಾರ್ಗಮನುಪ್ರೋತ್ಯೈರ್ಜಗಚ್ಚೇತೋಭಿನಂದಿಭಿಃ ।**
**[೬]ಕಂಠ್ಯೈರಿವಾಕ್ಷರೈಃ [೭]ಶುದ್ಧೈಃ ಕಂಠೋ ಮುಕ್ತಾಫಲೈರ್ವೃತಃ ॥ ೩೮ ॥**

ಸೂತ್ರರೀತಿಯನ್ನನುಸರಿಸಿ ರಚಿಸಲ್ಪಟ್ಟುದೂ ಜನಗಳ ಮನಸ್ಸಿಗೆ ಆನಂದವನ್ನುಂಟುಮಾಡುವುದೂ ಕಂಠದಲ್ಲಿ ಉತ್ಪನ್ನವಾಗುವುದೂ ಶಬ್ದಾರ್ಥಾದಿ ದೋಷರಹಿತವೂ ಆದ ಅಕ್ಷರಗಳಂತೆ, ತಂತುವಿನ ಮಾರ್ಗವನ್ನನುಸರಿಸಿ ಪೋಣಿಸಲ್ಪಟ್ಟುವೂ ಜನಗಳ ಮನಸ್ಸಿಗೆ ಆನಂದವನ್ನುಂಟುಮಾಡುವುವೂ ಕಂಠಕ್ಕೆ ಯೋಗ್ಯವೂ ಕಲಂಕಮೊದಲಾದ ದೋಷರಹಿತಗಳೂ ಆದ ಮುತ್ತುಗಳಿಂದ ಆವರಿಸಲ್ಪಟ್ಟ ಕಂಠವೂ,

**ವಕ್ಷೋ ಲಕ್ಷ್ಮ್ಯಾ [೮]ಪರಿಷ್ವಕ್ತಮಂಸೌ ಚ ವಿಜಯಶ್ರಿಯಾ ।**
**[೯]ವ್ಯಾಯಾಮಕರ್ಕಶೌ ಬಾಹೂ ಪೀನಾವಾಜಾನುಲಂಬಿನೌ ॥ ೩೯ ॥**

ರಾಜ್ಯಲಕ್ಷ್ಮಿಯಿಂದ ಆಲಿಂಗಿತವಾದ ಎದೆಯೂ, ಜಯಲಕ್ಷ್ಮಿಯಿಂದ ಆಲಿಂಗಿತವಾದ ಭುಜಶಿರಸ್ಸುಗಳೂ, ಶಸ್ತ್ರಮೊದಲಾದ ಅಭ್ಯಾಸದಿಂದ ಕಠಿಣವೂ ಪುಷ್ಟವೂ ಮೊಣಕಾಲುವರೆಗೆ ಜೋಲುತ್ತಿರುವುದೂ ಆದ ಬಾಹುಗಳೂ

**ನಾಭಿಃ ಶೋಭಾನಿಧಾನೋರ್ವೀ [೧೦]ಚಾರ್ವೀ ನಿರ್ವಾಪಣೀ ದೃಶಾಮ್ ।**
**ತನುಮಧ್ಯಂ ಜಗನ್ಮಧ್ಯ[೧೧]ನಿರ್ವಿಶೇಷಮಶೇಷತಃ ॥ ೪೦ ॥**

ನೇತ್ರಗಳಿಗೆ ಆನಂದವನ್ನುಂಟುಮಾಡುವುದೂ ಸುಂದರವೂ ಶೋಭೆಯೆಂಬ ನಿಧಿಗೆ ಭೂಮಿಯೂ ಆದ ನಾಭಿಯೂ, ಸಂಪೂರ್ಣವಾಗಿ ಲೋಕದ ಮಧ್ಯಕ್ಕೆ ಸಮಾನವಾದ ಶರೀರದ ಮಧ್ಯಭಾಗವೂ

**ಲಸದ್ವಸನಮಾಮುಕ್ತರಶನಂ ಜಘನಂ ಘನಮ್ ।**
**[೧೨]ಕಾಯಮಾನಮಿವಾನಂಗನೃಪತೇಃ ಕೃತನಿರ್ವೃತಿ ॥ ೪೧ ॥**

ಮನ್ಮಥನೆಂಬ ರಾಜನಿಗೆ ಆನಂದವನ್ನುಂಟುಮಾಡುವ ಡೇರೆಯಂತಿರುವುದೂ ಪ್ರಕಾಶಮಾನವಾದ ವಸ್ತ್ರವುಳ್ಳುದೂ ಜೋಲುತ್ತಿರುವ ಉಡುದಾರವುಳ್ಳುದೂ ದೃಢವೂ ಆದ ಕಟಿಪ್ರದೇಶವೂ

**ಪೀನೌ ಚಾರುರುಚಾವೂರೂ ನಾರೀಜನಮನೋರಮೌ ।**
**ಜಂಘೇ ವಿನಿರ್ಜಿತಾನಂಗ[೧೩]ನಿಷಂಗರುಚಿರಾಕೃತೀ ॥ ೪೨ ॥**

ಪುಷ್ಟವೂ ಸುಂದರವಾದ ಕಾಂತಿಯುಳ್ಳುದೂ ಸ್ತ್ರೀಜನರ ಮನಸ್ಸನ್ನು ಸಂತೋಷಪಡಿಸುವುದೂ ಆದ ತೊಡೆಗಳೂ ಮನ್ಮಥನ ಬತ್ತಳಿಕೆಯ ಸುಂದರವಾದ ಆಕಾರವನ್ನು ಜಯಿಸಿದ ಎರಡು ಕಣಕಾಲುಗಳೂ

೧ ಪೂಜಿತಾ. ೨ ದೂಷಿತಃ. ೩ ರಂಜಿತಃ. ೪ ಶ್ರವಣಮನೋಹರಃ. ೫ ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋ ಮುಖಮ್। ಅಕ್ಷೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ. ೬ ಕಂಠಯೋಗ್ಯೈಃ, ಕಂಠಭವೈಃ. ೭ ಕಲಂಕಾದಿದೋಷರಹಿತೈಃ, ಶಬ್ದಾರ್ಥಾದಿದೋಷರಹಿತೈಃ. ೮ ಆಲಿಂಗಿತಂ. ೯ ಶಸ್ತ್ರಾದ್ಯಭ್ಯಾಸಃ. ೧೦ ಸುಖಕಾರಿಣೀ. ೧೧ ಸಮಾನಂ. ೧೨ ಪಟಕುಟೀ. ೧೩ ಇಷುಧಿಃ.

ಸರ್ವಾಂಗಸಂಗತಾಂ ಕಾಂತಿಮಿವೋ[1]ಚ್ಚಿತ್ಯ [2]ಸ್ರುತಾಮಧಃ ।
ಕ್ರಮೌ ವಿನಿರ್ಮಿತೌ ಲಕ್ಷ್ಮ್ಯಾ [3]ನ್ಯಕ್ಕೃತಾರುಣಪಂಕಜೌ ॥ ೪೩ ॥

ಸರ್ವಾಂಗಗಳಲ್ಲಿಯೂ ಸಂಬಂಧಿಸಿರುವುದೂ ಕೆಳಕ್ಕೆ ಸುರಿಯುತ್ತಿರುವುದೂ ಆದ ಕಾಂತಿಯನ್ನು ಸಂಗ್ರಹಿಸಿಯೋ ಎಂಬಂತೆ ಲಕ್ಷ್ಮಿಯಿಂದ ನಿರ್ಮಿಸಲ್ಪಟ್ಟ ಕೆಂದಾವರೆಗಳನ್ನು ಕೀಳುಮಾಡಿರುವ ಪಾದಗಳೂ ಶೋಭಿಸುತ್ತಿದ್ದುವು.

ತೇಷಾಂ ಪ್ರತ್ಯಂಗಮತ್ಯು[4]ದ್ಧಾ ಶೋಭಾ ಸ್ವಾತ್ಮಗತೈವ ಯಾ ।
ತತ್ಸಮುತ್ಕೀರ್ತನೈವಾ[5]ಲಂ ಖಲೂಕ್ತ್ವಾ ವರ್ಣನಾಂತರಮ್ ॥ ೪೪ ॥

ಈ ರೀತಿಯಾಗಿ ಆ ರಾಜಕುಮಾರರ ಪ್ರತಿಯೊಂದು ಅವಯವದಲ್ಲಿಯೂ ಅತ್ಯಂತ ಶ್ರೇಷ್ಠವಾದ ಯಾವ ಶೋಭೆಯುಂಟಾಗುತ್ತಿದ್ದಿತೋ ಆ ಶೋಭೆಯು ಅವರಲ್ಲೇ ಇದ್ದಿತು. ಬೇರೆಯವರಲ್ಲಿ ಅಂತಹ ಶೋಭೆಯಿರಲಿಲ್ಲವೆಂದು ಭಾವವು. ಬೇರೆವರ್ಣನೆಯನ್ನು ಮಾಡದೆ ಆ ಅವಯವಗಳ ಹೆಸರುಗಳನ್ನು ಹೇಳುವುದೇ ಸಾಕಾಗಿದೆ. ಸೌಂದರ್ಯವರ್ಣನೆಯನ್ನು ಮಾಡಿದಷ್ಟೂ ಪೂರ್ತಿಯಾಗದೆಂದು ಭಾವವು.

ನಿಸರ್ಗರುಚಿರಾಣ್ಯೇಷಾಂ ವಪೂಂಷಿ ಮಣಿಭೂಷಣೈಃ ।
ಭೃಶಂ ರುರುಚಿರೇ ಪುಷ್ಪೈರ್ವನಾನೀವ ವಿಕಾಸಿಭಿಃ ॥ ೪೫ ॥

ವಿಕಸಿತವಾದ ಪುಷ್ಪಗಳಿಂದ ವನಗಳು ವಿಶೇಷವಾಗಿ ಶೋಭಿಸುವಂತೆ ಈ ರಾಜಕುಮಾರರ ಸ್ವಭಾವದಿಂದ ಸುಂದರವಾದ ಶರೀರಗಳು ರತ್ನಾಭರಣಗಳಿಂದ ಅಧಿಕವಾಗಿ ಶೋಭಿಸಿದುವು.

ತೇಷಾಂ ವಿಭೂಷಣಾನ್ಯಾಸನ್ ಮುಕ್ತಾರತ್ನಮಯಾನಿ ವೈ ।
ಯಷ್ಟಯೋ ಹಾರಭೇದಾಶ್ಚ ರತ್ನಾವಲ್ಯಶ್ಚ [6]ನೈಕಧಾ ॥ ೪೬ ॥

ಅನೇಕಪ್ರಕಾರವಾದ ಯಷ್ಟಿ(ಎಳೆ)ಗಳು ಹಾರಗಳು ರತ್ನಾವಲಿಹಾರಗಳು ಮೊದಲಾದ ಆ ರಾಜಕುಮಾರರ ಆಭರಣಗಳೆಲ್ಲ ಮುತ್ತುರತ್ನಮಯವಾಗಿದ್ದುವು.

ಯಷ್ಟಯಃ ಶೀರ್ಷಕಂ ಚೋಪಶೀರ್ಷಕಂ ಚಾವಘಾಟಕಮ್ ।
ಪ್ರಕಾಂಡಕಂ ಚ ತರಲಪ್ರಬಂಧಶ್ಚೇತಿ ಪಂಚಧಾ ॥ ೪೭ ॥

ಯಷ್ಟಿಯು ಶೀರ್ಷಕ ಉಪಶೀರ್ಷಕ ಅವಘಾಟಕ ಪ್ರಕಾಂಡಕ ತರಲಪ್ರಬಂಧವೆಂದು ಐದುಪ್ರಕಾರವಾಗಿದೆ.

[7]ಕೇಷಾಂ ಚಿಚ್ಛೀರ್ಷಕಂ ಯಷ್ಟಿಃ ಕೇಷಾಂ ಚಿದುಪಶೀರ್ಷಕಮ್ ।
ಅವಘಾಟಕಮನ್ಯೇಷಾಮಪರೇಷಾಂ ಪ್ರಕಾಂಡಕಮ್ ॥ ೪೮ ॥

ಕೆಲವು ರಾಜಕುಮಾರರಿಗೆ ಶೀರ್ಷಕವೂ ಕೆಲವರಿಗೆ ಉಪಶೀರ್ಷಕವೂ ಇನ್ನು ಕೆಲವರಿಗೆ ಅವಘಾಟಕವೂ ಮತ್ತೆಕೆಲವರಿಗೆ ಪ್ರಕಾಂಡಕವೂ

[8]ತರಲಪ್ರತಿಬಂಧಶ್ಚ ಕೇಷಾಂಚಿತ್ಕಂಠಭೂಷಣಮ್ ।
ಮಣಿಮಧ್ಯಾಶ್ಚ ಶುದ್ಧಾಶ್ಚ ತಾ[9]ಸ್ತೇಷಾಂ ಯಷ್ಟಯೋಭವನ್ ॥ ೪೯ ॥

ಬೇರೆ ಕೆಲವರಿಗೆ ತರಲ ಪ್ರಬಂಧವೂ ಕಂಠಾಭರಣಗಳಾಗಿದ್ದುವು. ರಾಜಕುಮಾರರ ಆ ಐದುವಿಧವಾದ ಯಷ್ಟಿಗಳೂ ಮಣಿಮಧ್ಯ(ಮಧ್ಯದಲ್ಲಿ ಮಣಿಯುಳ್ಳುವು) ಗಳೆಂದೂ ಶುದ್ಧಗಳೆಂದೂ ಎರಡುವಿಧವಾಗಿದ್ದುವು.

ಸೂತ್ರಮೇಕಾವಲೀ ಸೈವ ಯಷ್ಟಿಃ ಸ್ಯಾನ್ಮಣಿಮಧ್ಯಮಾ ।
ರತ್ನಾವಲೀ ಭವೇತ್ಸೈವ ಸುವರ್ಣಮಣಿಚಿತ್ರಿತಾ ॥ ೫೦ ॥

೧ ಸಂಗೃಹ್ಯ. ೨ ಸ್ಯಂದಮಾನಾಂ. ೩ ಅಧಃಕೃತಂ. ೪ ಪ್ರಶಸ್ತಾ. ೫ ಪರ್ಯಾಪ್ತಂ. ೬ ನಾನಾಪ್ರಕಾರಾಃ. ೭ ಕುಮಾರಾಣಾಂ. ೮ ತರಲಪ್ರತಿಬಂಧಶ್ಚೇತಿ ಯಷ್ಟಿಃ. ೯ ಕುಮಾರಾಣಾಂ.

ಮಧ್ಯದಲ್ಲಿ ಮಣಿಯುಳ್ಳ ಆ ಯಷ್ಟಿಗೇ ಸೂತ್ರವೆಂದೂ ಏಕಾವಲಿಯೆಂದೂ ಹೆಸರು. ಬಂಗಾರದಿಂದಲೂ ರತ್ನಗಳಿಂದಲೂ ನಾನಾವರ್ಣವಾಗಿ ಮಾಡಲ್ಪಟ್ಟ ಆ ಯಷ್ಟಿಯೇ ರತ್ನಾವಲಿಯೆನಿಸುವುದು.

ಯುಕ್ತಪ್ರಮಾಣಸೌವರ್ಣಮಣಿಮಾಣಿಕ್ಯಮೌಕ್ತಿಕೈಃ ।
ಸಾಂತರಂ ಗ್ರಥಿತಾ ಭೂಷಾ ಭವೇಯುರಪವರ್ತಿಕಾಃ ॥ ೫೧ ॥

ಮಧ್ಯದಲ್ಲಿ ಸ್ಥಳವನ್ನು ಬಿಟ್ಟು ಯೋಗ್ಯವಾದ ಅಳತೆಯುಳ್ಳ ಬಂಗಾರ ಮಣಿ ಮಾಣಿಕ್ಯ ಮುತ್ತು ಇವುಗಳಿಂದ ಪೋಣಿಸಲ್ಪಟ್ಟ ಆಭರಣಗಳಿಗೆ ಅಪವರ್ತಿಕೆಗಳೆಂದು ಹೆಸರು.

ಯಷ್ಟಿಃ ಶೀರ್ಷಕಸಂಜ್ಞಾ ಸ್ಯಾನ್ಮಧ್ಯೈಕಸ್ಥೂಲಮೌಕ್ತಿಕಾ ।
ಮಧ್ಯೇಸ್ತ್ರಿಭಿಃ ಕ್ರಮಸ್ಥೂಲೈರ್ಮೌಕ್ತಿಕೈರುಪಶೀರ್ಷಕಮ್ ॥ ೫೨ ॥

ಮಧ್ಯದಲ್ಲಿ ದೊಡ್ಡದಾದ ಮುತ್ತುಳ್ಳ ಯಷ್ಟಿಗೆ ಶೀರ್ಷಕವೆಂದು ಹೆಸರು. ಮಧ್ಯದಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದು ದೊಡ್ಡದಾಗಿರುವ ಮೂರುಮುತ್ತುಗಳಿಂದ ಯುಕ್ತವಾದ ಯಷ್ಟಿಗೆ ಉಪಶೀರ್ಷಕವೆಂದು ಹೆಸರು.

ಪ್ರಕಾಂಡಕಂ ಕ್ರಮಸ್ಥೂಲೈಃ ಪಂಚಭಿರ್ಮಧ್ಯಮೌಕ್ತಿಕೈಃ ।
ಮಧ್ಯಾದನುಕ್ರಮಾದ್ಧೀನೈರ್ಮೌಕ್ತಿಕೈರವಘಾಟಕಮ್ ॥ ೫೩ ॥

ಮಧ್ಯದಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದು ಸಣ್ಣದಾಗಿರುವ ಮುತ್ತುಗಳಿಂದ ಮಾಡಲ್ಪಟ್ಟ ಯಷ್ಟಿಗೆ ಅವಘಾಟಕವೆಂದು ಹೆಸರು.

ತರಲಪ್ರತಿಬಂಧಃ ಸ್ಯಾತ್ಸರ್ವತ್ರ ಸಮಮೌಕ್ತಿಕೈಃ ।
ತಥೈವ ಮಣಿಯುಕ್ತಾನಾಮೂಹ್ಯಾ ಭೇದಾ[1]ಸ್ತ್ರಿಧಾತ್ಮನಾಮ್ ॥ ೫೪ ॥

ಎಲ್ಲಾಕಡೆಗಳಲ್ಲಿಯೂ ಸಮಾನವಾದ ಮುತ್ತುಗಳುಳ್ಳ ಯಷ್ಟಿಗೆ ತರಲಪ್ರತಿಬಂಧವೆಂದು ಹೆಸರು. ಹಾಗೆಯೇ(ಹಿಂದೆಹೇಳಿದಂತೆ) ಮಣಿಯುಕ್ತವಾದ ಏಕಾವಲೀ ರತ್ನಾವಲೀ ಅಪವರ್ತಿಕಾ ಈ ಮೂರುಪ್ರಕಾರವಾದ ಹಾರಗಳ ಭೇದಗಳನ್ನು ತಿಳಿಯಬೇಕು.

ಹಾರೋ ಯಷ್ಟಿ[2]ಕಲಾಪಃ ಸ್ಯಾತ್ಸ ಚೈಕಾದಶಧಾ ಮತಃ ।
ಇಂದ್ರಚ್ಛಂದಾದಿಭೇದೇನ ಯಷ್ಟಿಸಂಖ್ಯಾವಿಶೇಷತಃ ॥ ೫೫ ॥

ಹಿಂದೆ ಹೇಳಿದ ಯಷ್ಟಿಗಳ ಸಮೂಹಕ್ಕೆ ಹಾರವೆಂದು ಹೆಸರು. ಯಷ್ಟಿಗಳ ಸಂಖ್ಯಾವಿಶೇಷದಿಂದ ಹಾರವು ಇಂದ್ರಚ್ಛಂದಮೊದಲಾದ ಭೇದದಿಂದ ಹನ್ನೊಂದು ಪ್ರಕಾರವಾಗಿದೆ.

ಯಷ್ಟಯೋ[3]ಷ್ಟಸಹಸ್ರಂ ತು ಯತ್ರೇಂದ್ರಚ್ಛಂದಸಂಜ್ಞಕಃ ।
ಸ ಹಾರಃ ಪರಮೋದಾರಃ ಶಕ್ರಚಕ್ರಿಜಿನೇಶಿನಾಮ್ ॥ ೫೬ ॥

ಸಾವಿರದೆಂಟು ಯಷ್ಟಿಗಳುಳ್ಳ ಹಾರಕ್ಕೆ ಇಂದ್ರಚ್ಛಂದವೆಂದು ಹೆಸರು. ಬಹಳ ದೊಡ್ಡದಾದ ಈ ಇಂದ್ರಚ್ಛಂದಹಾರವನ್ನು ದೇವೇಂದ್ರ ಚಕ್ರವರ್ತಿ ಮತ್ತು ತೀರ್ಥಂಕರರು ಧರಿಸುತ್ತಾರೆ.

ತದರ್ಧಪ್ರಮಿತೋ ಯಸ್ತು ವಿಜಯಚ್ಛಂದಸಂಜ್ಞಕಃ ।
ಸೋರ್ಧಚಕ್ರಧರಸ್ಯೋಕ್ತೋ ಹಾರೋನ್ಯೇಷು ಸ [4]ಕೇಷು ಚಿತ್ ॥

ಇಂದ್ರಚ್ಛಂದದ ಅರ್ಧಸಂಖ್ಯೆಯುಳ್ಳ (೫೦೪) ಯಷ್ಟಿಗಳುಳ್ಳ ಹಾರಕ್ಕೆ ವಿಜಯಚ್ಛಂದವೆಂದು ಹೆಸರು. ಆ ವಿಜಯಚ್ಛಂದಹಾರವನ್ನು ಅರ್ಧಚಕ್ರವರ್ತಿಗಳೂ ಬಲದೇವಕಾಮದೇವ ಮೊದಲಾದವರೂ ಧರಿಸುತ್ತಾರೆ.

೧ ಏಕಾವಲೀ ರತ್ನಾವಲೀ ಅಪವರ್ತಿಕಾ ಇತಿ ತ್ರಯೋ ಭೇದಾಃ. ೨ ಸಮೂಹಃ. ೩ ಅಷ್ಟೋತ್ತರಸಹಸ್ರಮಿತಿ. ೪ ಬಲದೇವಕಾಮದೇವಾದಿಷು.

**ಶತಮಷ್ಟೋತ್ತರಂ ಯತ್ರ ಯಷ್ಟೀನಾಂ ಹಾರ ಏವ ಸಃ ।**
**ಏಕಾಶೀತ್ಯಾ ಭವೇದ್ದೇವಚ್ಛಂದೋ ಮೌಕ್ತಿಕಯಷ್ಟಿಭಿಃ ॥ ೫೮ ॥**

ನೂರೆಂಟು ಯಷ್ಟಿಗಳುಳ್ಳ ಹಾರಕ್ಕೆ ಹಾರವೆಂದೇ ಹೆಸರು. ಎಂಬತ್ತೊಂದು ಮುತ್ತಿನ ಯಷ್ಟಿಗಳುಳ್ಳ ಹಾರಕ್ಕೆ ದೇವಚ್ಛಂದವೆಂದು ಹೆಸರು.

**ಚತುಃಷಷ್ಟ್ಯಾರ್ಧಹಾರಃ ಸ್ಯಾಚ್ಚತುಃಪಂಚಾಶತಾ ಪುನಃ ।**
**ಭವೇದ್ರಶ್ಮಿಕಲಾಪಾಖ್ಯೋ ಗುಚ್ಛೋ ದ್ವಾತ್ರಿಂಶತಾ ಮತಃ ॥ ೫೯ ॥**

ಅರುವತ್ತನಾಲ್ಕು ಯಷ್ಟಿಗಳಿಂದ ಮಾಡಲ್ಪಟ್ಟ ಹಾರಕ್ಕೆ ಅರ್ಧಹಾರವೆಂದು ಹೆಸರು. ಐವತ್ತನಾಲ್ಕು ಯಷ್ಟಿಗಳಿಂದ ಮಾಡಲ್ಪಟ್ಟ ಹಾರಕ್ಕೆ ರಶ್ಮಿಕಲಾಪವೆಂದು ಹೆಸರು. ಮೂವತ್ತೆರಡು ಯಷ್ಟಿಗಳುಳ್ಳ ಹಾರಕ್ಕೆ ಗುಚ್ಛವೆಂದು ಹೆಸರು.

**ಯಷ್ಟೀನಾಂ ಸಪ್ತವಿಂಶತ್ಯಾ ಭವೇನ್ನಕ್ಷತ್ರಮಾಲಿಕಾ ।**
**ಶೋಭಾಂ ನಕ್ಷತ್ರಮಾಲಾಯಾ [1]ಯಾ ಹಸಂತೀ ಸ್ವಮೌಕ್ತಿಕೈಃ ॥ ೬೦ ॥**

ಇಪ್ಪತ್ತೇಳು ಯಷ್ಟಿಗಳುಳ್ಳ ಹಾರಕ್ಕೆ ನಕ್ಷತ್ರಮಾಲಿಕೆಯೆಂದು ಹೆಸರು. ಆ ನಕ್ಷತ್ರಮಾಲಿಕೆಯೆಂಬ ಹಾರವು ತನ್ನ ಮುತ್ತುಗಳಿಂದ ನಕ್ಷತ್ರಗಳ ಪಂಕ್ತಿಯ ಶೋಭೆಯನ್ನು ಪರಿಹಾಸ್ಯಮಾಡುವುದಾಗಿರುತ್ತದೆ.

**ಚತುರ್ವಿಂಶತ್ಯಾರ್ಧಗುಚ್ಛೋ ವಿಂಶತ್ಯಾ ಮಾಣವಾಹ್ವಯಃ ।**
**ಭವೇನ್ಮೌಕ್ತಿಕಯಷ್ಟೀನಾಂ [2]ತದರ್ಧೇನಾರ್ಧಮಾಣವಃ ॥ ೬೧ ॥**

ಇಪ್ಪತ್ತನಾಲ್ಕು ಯಷ್ಟಿಗಳುಳ್ಳ ಹಾರಕ್ಕೆ ಅರ್ಧಗುಚ್ಛವೆಂದು ಹೆಸರು. ಇಪ್ಪತ್ತು ಯಷ್ಟಿಗಳುಳ್ಳ ಹಾರಕ್ಕೆ ಮಾಣವವೆಂದು ಹೆಸರು. ಮುತ್ತಿನ ಹತ್ತುಯಷ್ಟಿಗಳುಳ್ಳ ಹಾರಕ್ಕೆ ಅರ್ಧಮಾಣವವೆಂದು ಹೆಸರು.

**ಇಂದ್ರಚ್ಛಂದಾದಿಹಾರಾಸ್ತೇ ಯದಾ ಸ್ಯುರ್ಮಣಿಮಧ್ಯಮಾಃ ।**
**ಮಾಣವಾಖ್ಯಾ ವಿಭೂಷಾಃ ಸ್ಯು[3]ಸ್ತತ್ಪದೋಪಪದಾಸ್ತದಾ ॥ ೬೨ ॥**

ಹಿಂದೆಹೇಳಿದ ಇಂದ್ರಚ್ಛಂದ ಮೊದಲಾದ ಹಾರಗಳಿಗೆ ಮಧ್ಯದಲ್ಲಿ ಮಣಿಯನ್ನು ಸೇರಿಸಿದರೆ ಇಂದ್ರಚ್ಛಂದಮಾಣವ ವಿಜಯಚ್ಛಂದಮಾಣವ ಮೊದಲಾದ ಭೇದಗಳಾಗುತ್ತವೆ.

**ಯ [4]ಏಕಶೀರ್ಷಕಃ ಶುದ್ಧಹಾರಃ ಸ್ಯಾಚ್ಛೀರ್ಷಕಾತ್ಪರಃ ।**
**ಇಂದ್ರಚ್ಛಂದಾದ್ಯುಪಪದಃ ಸ ಚೈಕಾದಶಭೇದಭಾಕ್ ॥ ೬೩ ॥**

ಒಂದು ಶೀರ್ಷಕಯಷ್ಟಿಯುಳ್ಳ ಹಾರವು ಶೀರ್ಷಕಕ್ಕಿಂತ ಬೇರೆಯಾದ ಶುದ್ಧಹಾರವೆನಿಸುವುದು. ಅದು ಇಂದ್ರಚ್ಛಂದಶುದ್ಧಹಾರ ವಿಜಯಚ್ಛಂದಶುದ್ಧಹಾರ ಮೊದಲಾದ ಹನ್ನೊಂದು ಭೇದಗಳುಳ್ಳುದಾಗುವುದು.

**ತಥೋಪಶೀರ್ಷಕಾಧೀನಾಮಪಿ ಶುದ್ಧಾತ್ಮನಾಂ ಭಿದಾ ।**
**ತರ್ಕ್ಯಾಃ ಶುದ್ಧಾಸ್ತತೋ ಹಾರಾಃ ಪಂಚಪಂಚಾಶದೇವ ಹಿ ॥ ೬೪ ॥**

ಹಾಗೆಯೇ ಉಪಶೀರ್ಷಕ ಮೊದಲಾದ ನಾಲ್ಕುಭೇದಗಳಲ್ಲಿಯೂ ಇಂದ್ರಚ್ಛಂದೋಪಶೀರ್ಷಕ ಶುದ್ಧಹಾರ ಮೊದಲಾಗಿ ಹನ್ನೊಂದು ಹನ್ನೊಂದು ಭೇದಗಳಾಗುತ್ತವೆ. ಆದುದರಿಂದ ಹಾರಗಳು ಐವತ್ತೈದು ಪ್ರಕಾರವಾಗಿವೆ.

**ಭವೇತ್ಫಲಕಹಾರಾಖ್ಯೋ ಮಣಿಮಧ್ಯೋರ್ಧಮಾಣವಃ ।**
**ತ್ರಿಹೈಮಫಲಕಃ ಪಂಚಫಲಕೋ ವಾ ಯದಾ ತದಾ ॥ ೬೫ ॥**

ಹಿಂದೆ ಹೇಳಿದ ಅರ್ಧಮಾಣವವೆಂಬ ಹಾರಕ್ಕೆ ಮಧ್ಯದಲ್ಲಿ ಮಣಿಯಿದ್ದು ಮೂರು ಅಥವಾ ಐದು ಬಂಗಾರದ ಫಲಕ(ಹಲಿಗೆ-ನಾಣ್ಯ)ಗಳಿದ್ದರೆ ಅದಕ್ಕೆ ಫಲಕಹಾರವೆಂದು ಹೆಸರು.

೧ ನಕ್ಷತ್ರಮಾಲಾ. ೨ ವಿಂಶತೇರರ್ಧೇನ. ೩ ಮಾಣವಾಖ್ಯಪದೋಪಪದಾ ಇಂದ್ರಚ್ಛಂದಮಾಣವಾ. ೪ ಏಕಶೀರ್ಷಕಯಷ್ಟಿವಾನ್.

**ಸೋಪಾನಮಣಿಸೋಪಾನದ್ವೈವಿಧ್ಯಾತ್ಸ ಮತೋ ದ್ವಿಧಾ ।**
**ಸೋಪಾನಾಖ್ಯಸ್ತು ಫಲಕೈ ರೌಕ್ಮೈರನ್ಯಃ ಸರತ್ನಕೈಃ ॥ ೬೬ ॥**

ಆ ಫಲಕಹಾರವು ಸೋಪಾನಫಲಕವೆಂದೂ ಮಣಿಸೋಪಾನಫಲಕವೆಂದೂ ಎರಡುವಿಧವಾಗಿದೆ. ಇವೆರಡರಲ್ಲಿ ಬಂಗಾರದ ಫಲಕಗಳುಳ್ಳ ಹಾರಕ್ಕೆ ಸೋಪಾನ ಫಲಕವೆಂದು ಹೆಸರು. ರತ್ನಫಲಕಗಳುಳ್ಳ ಹಾರಕ್ಕೆ ಮಣಿಸೋಪಾನಫಲಕವೆಂದು ಹೆಸರು.

**ಇತ್ಯಮೂನಿ ಯುಗಾರಂಭೇ ಕಂಠೋರೋಭೂಷಣಾನಿ ವೈ ।**
**[1]ಸೃಷ್ಟ್ವಾಸೃಜತ್ಸ್ವಪುತ್ರೇಭ್ಯೋ ಯಥಾಸ್ವಂ ತೇ ಚ ತಾ[2]ನ್ದಧುಃ ॥ ೬೭ ॥**

ಹೀಗೆ ಯುಗಾರಂಭದಲ್ಲಿ ಆದಿಬ್ರಹ್ಮರು ಈ ಹಿಂದೆಹೇಳಿದ ಕಂಠಾಭರಣಗಳನ್ನೂ ಎದೆಯ ಆಭರಣಗಳನ್ನೂ ತಮ್ಮ ಮಕ್ಕಳಿಗೋಸ್ಕರ ಸೃಷ್ಟಿಸಿದರು. ಆ ಮಕ್ಕಳೂ ಯೋಗ್ಯತಾನುಸಾರವಾಗಿ ಆ ಆಭರಣಗಳನ್ನು ಧರಿಸಿದರು.

**ಇತ್ಯಾದ್ಯಾಭರಣೈಃ ಕಂಠ್ಯೈರನ್ಯೈ[3]ಶ್ಚಾನ್ಯತ್ರ ಭಾವಿಭಿಃ ।**
**ತೇ [4]ರಾಜನ್ಯಾ [5]ವ್ಯರಾಜಂತ ಜ್ಯೋತಿರ್ಗಣಮಯಾ ಇವ ॥ ೬೮ ॥**

ಇವು ಮೊದಲಾದ ಕಂಠಾಭರಣಗಳಿಂದಲೂ ಬೇರೆ ಅವಯವಗಳಲ್ಲಿರುವ ಬೇರೆ ಆಭರಣಗಳಿಂದಲೂ ಆ ರಾಜಕುಮಾರರು ಜ್ಯೋತಿರ್ಗಣಗಳಂತೆ ಪ್ರಕಾಶಿಸಿದರು.

**ತೇಷು ತೇಜಸ್ವಿನಾಂ [6]ಧುರ್ಯೋ ಭರತೋರ್ಕ ಇವಾದ್ಯುತತ್ ।**
**ಶಶೀವ ಜಗತಃ ಕಾಂತೋ ಯುವಾ ಬಾಹುಬಲೀ ಬಭೌ ॥ ೬೯ ॥**

ಆ ರಾಜಕುಮಾರರ ಮಧ್ಯದಲ್ಲಿ ತೇಜಸ್ವಿಗಳಲ್ಲಿ ಅಗ್ರಗಣ್ಯನಾದ ಭರತರಾಜನು ಸೂರ್ಯನಂತೆ ಪ್ರಕಾಶಿಸಿದನು. ಲೋಕಕ್ಕೆ ಆನಂದದಾಯಕನೂ ತರುಣನೂ ಆದ ಬಾಹುಬಲಿಯು ಚಂದ್ರನಂತೆ ಪ್ರಕಾಶಿಸಿದನು.

**ಶೇಷಾಶ್ಚ ಗ್ರಹನಕ್ಷತ್ರತಾರಾಗಣನಿಭಾ ಬಭುಃ ।**
**ಬ್ರಾಹ್ಮೀ ದೀಪ್ತಿರಿವೈತೇಷಾಮಭೂಜ್ಜ್ಯೋತ್ಸ್ನೇವ ಸುಂದರೀ ॥ ೭೦ ॥**

ಉಳಿದ ಕುಮಾರರು ಗ್ರಹ ನಕ್ಷತ್ರ ತಾರಾಗಣ ಇವುಗಳಂತೆ ಪ್ರಕಾಶಿಸಿದರು. ಇವರ ಸಹೋದರಿಯರಾದ ಬ್ರಾಹ್ಮಿಯು ಕಾಂತಿಯಂತಿದ್ದಳು. ಸುಂದರಿಯು ಬೆಳದಿಂಗಳಿನಂತಿದ್ದಳು.

**ಸ ತೈಃ ಪರಿವೃತಃ ಪುತ್ರೈರ್ಭಗವಾನ್ವೃಷಭೋ ಬಭೌ ।**
**ಜ್ಯೋತಿರ್ಗಣೈಃ[7]ಪರಿಕ್ಷಿಪ್ತೋ ಯಥಾ ಮೇರುರ್ಮಹೋದಯಃ ॥ ೭೧ ॥**

ಆ ಪುತ್ರರಿಂದ ಸುತ್ತಲ್ಪಟ್ಟ ಭಗವಾನ್ ವೃಷಭಸ್ವಾಮಿಯು ಜ್ಯೋತಿರ್ಗಣಗಳಿಂದ ಸುತ್ತಲ್ಪಟ್ಟ ಮಹಾತಿಶಯವಾದ ಮೇರುಪರ್ವತದಂತೆ ಶೋಭಿಸುತ್ತಿದ್ದರು.

**ಅಥೈಕದಾ ಸುಖಾಸೀನೋ ಭಗವಾನ್ಹರಿವಿಷ್ಟರೇ ।**
**ಮನೋ ವ್ಯಾಪಾರಯಾಮಾಸ ಕಲಾವಿದ್ಯೋಪದೇಶನೇ ॥ ೭೨ ॥**

ತರುವಾಯ ಒಂದಾನೊಂದು ಕಾಲದಲ್ಲಿ ಸಿಂಹಪೀಠದಲ್ಲಿ ಸುಖವಾಗಿ ಕುಳಿತಿದ್ದ ಭಗವಂತನು ಮಕ್ಕಳಿಗೆ ಕಲೆಗಳನ್ನೂ ವಿದ್ಯೆಗಳನ್ನೂ ಉಪದೇಶಮಾಡಬೇಕೆಂದು ಯೋಚಿಸಿದನು.

**ತಾವಚ್ಚ ಪುತ್ರಿಕೇ ಭರ್ತುರ್ಬ್ರಾಹ್ಮೀ ಸುಂದ[8]ರ್ಯಭಿಷ್ಟವೇ ।**
**ಧೃತಮಂಗಲನೇಪಥ್ಯೇ ಸಂಪ್ರಾಪ್ತೇ ನಿಕಟಂ [9]ಗುರೋಃ ॥ ೭೩ ॥**

ಅಷ್ಟರಲ್ಲಿ ಸ್ವಾಮಿಯ ಪುತ್ರಿಯರಾದ ಬ್ರಾಹ್ಮೀಸುಂದರಿಯರು ಮಂಗಲಾಲಂಕಾರವನ್ನು ಮಾಡಿಕೊಂಡು ತಂದೆಯ ಬಳಿಗೆ ಬಂದರು.

೧ ಆದಿಬ್ರಹ್ಮಾ. ೨ ಧರಂತಿ ಸ್ಮ. ೩ ಅನ್ಯತ್ರ ಭವದ್ಭಿಃ. ೪ ರಾಜಕುಮಾರಾಃ. ೫ ಭಾಂತಿ ಸ್ಮ. ೬ ಧುರಂಧರಃ. ೭ ಪರಿವೃತಃ. ೮ ನಾಮಧೇಯೇ. ೯ ವಿಭೋರಿತ್ಯಪಿ ಪಾಠಃ.

ತೇ ಚ ಕಿಂಚಿದಿವೋದ್ಭಿನ್ನಸ್ತನಕುಡ್ಮಲಶೋಭಿನಿ ।
ವಯಸ್ಯನಂತರೇ ಬಾಲ್ಯಾದ್ವರ್ತಮಾನೇ ಮನೋಹರೇ ॥ ೭೪ ॥

ಆ ಇಬ್ಬರು ಪುತ್ರಿಯರೂ ಸ್ವಲ್ಪ ಮೂಡಿರುವ ಕುಚಗಳೆಂಬ ಮೊಗ್ಗುಗಳಿಂದ ಶೋಭಾಯಮಾನವಾದ ಬಾಲ್ಯಾವಸ್ಥೆಯನ್ನತಿಕ್ರಮಿಸಿದ ವಯಸ್ಸಿನಲ್ಲಿರುವವರೂ ಮನೋಹರ(ಸುಂದರ)ರೂ

ಮೇಧಾವಿನ್ಯೌ ವಿನೀತೇ ಚ ಸುಶೀಲೇ ಚಾರುಲಕ್ಷಣೇ ।
ರೂಪವತ್ಯೌ [೧]ಯಶಸ್ವಿನ್ಯೌ ಶ್ಲಾಘ್ಯೇ [೨]ಮಾನವತೀಜನೈಃ ॥ ೭೫ ॥

ಬುದ್ಧಿಮತಿಯರೂ ವಿನಯವತಿಯರೂ ಸದಾಚಾರಿಣಿಯರೂ ಸುಂದರವಾದ ಲಕ್ಷಣಗಳುಳ್ಳವರೂ ರೂಪವತಿಯರೂ ಕೀರ್ತಿಯುಳ್ಳವರೂ ಮಾನ್ಯಸ್ತ್ರೀಜನರಿಂದ ಶ್ಲಾಘಿಸುವುದಕ್ಕೆ ಯೋಗ್ಯರೂ

[೩]ಅಧಿಕ್ಷೋಣಿ ಪದನ್ಯಾಸೈರ್ಹಂಸೀಗತಿ[೪]ವಿಡಂಬಿಭಿಃ ।
ರಕ್ತಾಂಬುಜೋಪಹಾರಸ್ಯ ತನ್ವಾನೇ ಪರಿತಃ ಶ್ರಿಯಮ್ ॥ ೭೬ ॥

ಭೂಮಿಯಲ್ಲಿ ಸ್ತ್ರೀಹಂಸಪಕ್ಷಿಯ ಗಮನವನ್ನು ತಿರಸ್ಕರಿಸುವ ಪಾದವಿನ್ಯಾಸಗಳಿಂದ ಸುತ್ತಲೂ ಕೆಂದಾವರೆಗಳ ಕೈಗಾಣಿಕೆಯ ಶೋಭೆಯನ್ನು ವಿಸ್ತರಿಸುವವರೂ

ನಖದರ್ಪಣಸಂಕ್ರಾಂತಸ್ವಾಂಗಚ್ಛಾಯಾಪದೇಶತಃ
ಕಾಂತ್ಯಾ [೫]ನ್ಯಕ್ಕೃತದಿಕ್ಕನ್ಯಾಃ ಪದ್ಭ್ಯಾಂ [೬]ಕೃಷ್ಟುಮಿವೋದ್ಯತೇ ॥ ೭೭ ॥

ಉಗುರುಗಳೆಂಬ ಕನ್ನಡಿಯಲ್ಲಿ ಪ್ರತಿಬಿಂಬಿಸಿರುವ ತಮ್ಮ ದೇಹದ ನೆರಳಿನ ನೆಪದಿಂದ ತಮ್ಮ ಕಾಂತಿಯಿಂದ ತಿರಸ್ಕೃತರಾದ ದಿಕ್ಕನ್ಯೆಯರನ್ನು ಪಾದಗಳಿಂದ ಆಕರ್ಷಣಮಾಡುವುದಕ್ಕೆ ಪ್ರಯತ್ನಪಡುವಂತಿರುವವರೂ

ಸಲೀಲಪದವಿನ್ಯಾಸರಣನ್ನೂಪುರನಿಕ್ವಣೈಃ ।
ಶಿಕ್ಷಯಂತ್ಯಾವಿವಾಹೂಯ ಹಂಸೀಃ ಸ್ವಂ ಗತಿವಿಭ್ರಮಮ್ ॥ ೭೮ ॥

ವಿಲಾಸಯುಕ್ತವಾದ ಪಾದವಿನ್ಯಾಸಗಳಿಂದ ಧ್ವನಿಮಾಡುತ್ತಿರುವ ಪಾದ ಕಡಗಗಳ ಶಬ್ದಗಳಿಂದ ಸ್ತ್ರೀಹಂಸಪಕ್ಷಿಗಳನ್ನು ಕರೆದು ತಮ್ಮ ಗಮನದ ವಿಭ್ರಮವನ್ನು ಕಲಿಸುವಂತಿರುವವರೂ

ಚಾರೂರೂ ರುಚಿಮಜ್ಜಂಘೇ [೭]ತತ್ಕಾಂತಿ[೮]ಮತಿರೇಕಿಣೀಮ್ ।
ಜನಾನಾಂ ದೃಕ್ಪಥೇ ಸ್ವೈರಂ ವಿಕ್ಷಿಪಂತ್ಯಾವಿವಾಭಿತಃ ॥ ೭೯ ॥

ಸುಂದರವಾದ ತೊಡೆಗಳುಳ್ಳವರೂ ಪ್ರಕಾಶಮಾನವಾದ ಕಣಕಾಲುಗಳುಳ್ಳವರೂ ಆ ತೊಡೆಗಳ ಮತ್ತು ಕಣಕಾಲುಗಳ ಅತ್ಯಧಿಕವಾದ ಕಾಂತಿಯನ್ನು ಸುತ್ತಲೂ ಯಥೇಚ್ಛವಾಗಿ ಜನರ ಕಣ್ಣುಗಳಿಗೆ ಬೀರುವಂತಿರುವವರೂ

ದಧಾನೇ ಜಘನಾ[೯]ಭೋಗಂ ಕಾಂಚೀ[೧೦]ತೂರ್ಯರವಾ[೧೧]ಂಚಿತಮ್ ।
ಸೌಭಾಗ್ಯದೇವತಾ[೧೨]ವಾಸಮಿವಾಂಶುಕವಿತಾನಕಮ್ ॥ ೮೦ ॥

ಸೂಕ್ಷ್ಮವಸ್ತ್ರದ ಮೇಲ್ಕಟ್ಟುಳ್ಳ ಸೌಭಾಗ್ಯವೆಂಬ ದೇವತೆಯ ಮನೆಯಂತಿರುವ ಡಾಬೆಂಬ ವಾದ್ಯದ ಶಬ್ದದಿಂದ ಪೂಜಿಸಲ್ಪಟ್ಟುದೂ ವಿಸ್ತಾರವೂ ಆದ ಕಟಿಪ್ರದೇಶ(ಸೊಂಟ)ವನ್ನು ಧರಿಸಿರುವವರೂ

ಲಾವಣ್ಯದೇವತಾಂ [೧೩]ಯಷ್ಟುಮನಂಗಾ[೧೪]ಧ್ವರ್ಯುಣಾ ಕೃತಮ್ ।
ಹೋಮಕುಂಡಮಿವಾ[೧೫]ನಿಮ್ನಂ ದಧತ್ಯೌ ನಾಭಿಮಂಡಲಮ್ ॥ ೮೧ ॥

ಲಾವಣ್ಯವೆಂಬ ದೇವತೆಯನ್ನು ಪೂಜಿಸುವುದಕ್ಕೋಸ್ಕರ ಮನ್ಮಥನೆಂಬ ಯಾಜಕನು ಮಾಡಿದ ಹೋಮಕುಂಡದಂತೆ ಆಳವೂ ಮಂಡಲಾಕಾರವೂ ಆದ ನಾಭಿಯನ್ನು ಧರಿಸಿರುವವರೂ

[೧]ವಹಂತ್ಯೌ ಕಿಂಚಿ[೨]ದುದ್ಭೂತ[೩]ಶ್ಯಾಮಿಕಾಂ ರೋಮರಾಜಿಕಾಮ್ ।
[೪]ಮನೋಭವಗ್ರಹಾವೇಶಧೂಪಧೂಮಶಿಖಾಮಿವ ॥ ೮೨ ॥

ಮನ್ಮಥನೆಂಬ ಗ್ರಹದ ಆವೇಶಕ್ಕೋಸ್ಕರ ತೋರಿಸುವ ಧೂಪದ ಹೊಗೆಯ ಶಿಖೆಯಂತಿರುವುದೂ ಸ್ವಲ್ಪ ಕಪ್ಪೂ ಆದ ರೋಮಗಳ ಸಾಲನ್ನು ಧರಿಸಿರುವವರೂ

ತನುಮಧ್ಯೇ ಕೃಶೋದರ್ಯಾವಾರಕ್ತಕರಪಲ್ಲವೇ ।
ಮೃದುಬಾಹುಲತೇ ಕಿಂಚಿದುದ್ಭಿನ್ನಕುಚಕುಡ್ಮಲೇ ॥ ೮೩ ॥

ಕೃಶವಾದ ಮಧ್ಯಭಾಗವುಳ್ಳವರೂ ಕೃಶವಾದ ಹೊಟ್ಟೆಯುಳ್ಳವರೂ ಕೆಂಪಾದ ತಳಿರಿನಂತಿರುವ ಕೈಗಳುಳ್ಳವರೂ ಕೋಮಲವಾದ ಲತೆಯಂತಿರುವ ಬಾಹು(ತೋಳು)ಗಳುಳ್ಳವರೂ ಸ್ವಲ್ಪ ಮೂಡಿದ ಮೊಗ್ಗುಗಳಂತಿರುವ ಕುಚಗಳುಳ್ಳವರೂ

ದಧಾನೇ ರುಚಿರಂ ಹಾರಮಾಕ್ರಾಂತಸ್ತನಮಂಡಲಮ್ ।
ತದಾಶ್ಲೇಷಸುಖಾ[೫]ಸಂಗಾ[೬]ತ್ಸ್ಮಯಮಾನಮಿವಾಂ[೭]ಶುಭಿಃ ॥ ೮೪ ॥

ಮಂಡಲಾಕಾರವಾದ ಕುಚಗಳನ್ನು ಆಕ್ರಮಿಸಿ ಆ ಕುಚಗಳ ಸಂಬಂಧದಿಂದುಂಟಾದ ಸುಖದ ಆಸಕ್ತಿಯ ದೆಸೆಯಿಂದ ತನ್ನ (ಹಾರದ) ಕಾಂತಿಗಳಿಂದ ನಗುವಂತಿರುವ ಸುಂದರವಾದ ಹಾರವನ್ನು ಧರಿಸಿಕೊಂಡಿರುವವರೂ

ಸುಕಂಠ್ಯೌ ಕೋಕಿಲಾಲಾಪ[೮]ನಿರ್ಹಾರಿಮಧುರಸ್ವರೇ ।
[೯]ತಾಮ್ರಾಧರೇ [೧೦]ದರೋದ್ಭಿನ್ನಸ್ಮಿತಾಂಶುರುಚಿರಾನನೇ ॥ ೮೫ ॥

ಸುಂದರವಾದ ಕಂಠವುಳ್ಳವರೂ ಕೋಗಿಲೆಯ ಧ್ವನಿಯಂತೆ ಅತ್ಯಂತ ಮನೋಹರವೂ ಮಧುರವೂ ಆದ ಸ್ವರವುಳ್ಳವರೂ ಕೆಂಪಾದ ತುಟಿಗಳುಳ್ಳವರೂ ಸ್ವಲ್ಪ ಆವಿರ್ಭವಿಸಿರುವ ಮಂದಹಾಸದ ಕಿರಣಗಳಿಂದ ಮನೋಹರವಾದ ಮುಖವುಳ್ಳವರೂ

[೧೧]ಸುದತ್ಯೌ ಲಲಿತಾಪಾಂಗವೀಕ್ಷಿತೇ ಸಾಂದ್ರಪಕ್ಷ್ಮಣೀ ।
ಮದನಸ್ಯೇವ ಜೈತ್ರಾಸ್ತ್ರೇ ದಧಾನೇ ನಯನೋತ್ಪಲೇ ॥ ೮೬ ॥

ಸುಂದರವಾದ ಹಲ್ಲುಗಳುಳ್ಳವರೂ ಮನೋಹರವಾದ ಕಡೆಕಣ್ಣುನೋಟವುಳ್ಳವರೂ ದಟ್ಟವಾದ ಕಣ್ಣಿನ ಮೇಲ್ಭಾಗದ ಕೂದಲುಗಳುಳ್ಳವರೂ ಮನ್ಮಥನ ಜಯಶೀಲವಾದ ಅಸ್ತ್ರಗಳಂತಿರುವ ನೇತ್ರಗಳೆಂಬ ಕನ್ನೈದಿಲೆಯ ಪುಷ್ಪಗಳನ್ನು ಧರಿಸಿರುವವರೂ

ಲಸತ್ಕಪೋಲಸಂಕ್ರಾಂತೈರಲಕಪ್ರತಿಬಿಂಬಕೈಃ ।
[೧೨]ಹ್ರೇಪಯಂತ್ಯಾವಭಿವ್ಯಕ್ತಲಕ್ಷ್ಮಣಃ ಶಶಿನಃ ಶ್ರಿಯಮ್ ॥ ೮೭ ॥

ಪ್ರಕಾಶಮಾನವಾದ ಕೆನ್ನೆಗಳಲ್ಲಿ ಸಂಬಂಧಿಸಿರುವ ಕುರುಳುಕೂದಲುಗಳ ಪ್ರತಿಬಿಂಬಗಳಿಂದ ವ್ಯಕ್ತವಾದ ಚಿಹ್ನೆಯುಳ್ಳ ಚಂದ್ರನ ಶೋಭೆಯನ್ನು ಕೀಳುಮಾಡುವವರೂ

ಸಮಾಲ್ಯಂ [೧೩]ಕಬರೀಭಾರಂ ಧಾರಯಂತ್ಯೌ ತರಂಗಿತಮ್ ।
ಸ್ವಾಂತಃಸಂಕ್ರಾಂತ[೧೪]ಗಾಂಗೌಘಂ ಪ್ರವಾಹಮಿವ [೧೫]ಯಾಮುನಮ್ ॥

೧ ಕೀರ್ತಿಮತ್ಯೌ. ೨ ಮಾನ್ಯಸ್ತ್ರೀಜನ್ಯೈಃ. ೩ ಪೃಥಿವ್ಯಾಂ. ೪ ತಿರಸ್ಕುರ್ವದ್ಭಿಃ. ೫ ಅಧಃಕೃತಾಃ. ೬ ಆಕರ್ಷಣಾಯ. ೭ ಊರುಜಂಘಾಕಾಂತಿಂ. ೮ ಅತ್ಯುತ್ಕಟಾಂ. ೯ ವಿಸ್ತಾರಂ. ೧೦ ವಾದ್ಯಂ. ೧೧ ಪೂಜಿತಂ. ೧೨ ಗೃಹಂ. ೧೩ ಪೂಜಿತುಂ. ೧೪ ಯಾಜಕೇನ. ೧೫ ಗಂಭೀರಂ.

೧ ಧಾರಯಂತ್ಯೌ. ೨ ಉತ್ಪನ್ನಃ. ೩ ಕೃಷ್ಣವರ್ಣಾಂ. ೪ ಸ್ಮರಃ. ೫ ಆಸಕ್ತೇಃ. ೬ ಹಸಂತಂ. ೭ ಹಾರಕಾಂತಿಭಿಃ. ೮ ಅತ್ಯಂತಮನೋಹಾರಿ. ೯ ಅರುಣಃ. ೧೦ ಈಷತ್. ೧೧ ಶೋಭನದಂತವತ್ಯೌ. ೧೨ ಅಧಃಕುರ್ವಂತ್ಯೌ. ೧೩ ಕೇಶಭಾರಂ. ೧೪ ಗಂಗಾಸಂಬಂಧಿಪ್ರವಾಹಂ. ೧೫ ಯಮುನಾ ಸಂಬಂಧಿನಂ.

ತನ್ನೊಳಗೆ ಸೇರಿರುವ ಗಂಗಾನದಿಯ ಪ್ರವಾಹವುಳ್ಳ ಯಮುನಾನದಿಯ ಅಲೆಗಳುಳ್ಳ ಪ್ರವಾಹದೋಪಾದಿಯಲ್ಲಿರುವುದೂ ಪುಷ್ಪಮಾಲಿಕೆಯೊಡಗೂಡಿದುದೂ ಆದ ಹೆರಳನ್ನು ಧರಿಸಿರುವವರೂ

**ಇತಿ ಪ್ರತ್ಯಂಗಸಂಗಿನ್ಯಾ ಕಾಂತ್ಯಾ ಕಾಂತತಮಾಕೃತೀ ।**
**ಸೌಂದರ್ಯಸ್ಯೇವ ಸಂದೋಹಮೇಕೀಕೃತ್ಯ ವಿನಿರ್ಮಿತೇ ॥ ೮೯ ॥**

ಹೀಗೆ ಪ್ರತಿಯೊಂದು ಅವಯವಗಳಲ್ಲಿಯೂ ಸಂಬಂಧಿಸಿ ಕಾಂತಿಯಿಂದ ಅತ್ಯಂತ ಸುಂದರವಾದ ಆಕಾರವುಳ್ಳವರೂ ಸೌಂದರ್ಯದ ಸಮೂಹವನ್ನು ಸಂಗ್ರಹಿಸಿ ನಿರ್ಮಿಸಲ್ಪಟ್ಟಂತಿರುವವರೂ

**ಕಿಮೇತೇ ದಿವ್ಯಕನ್ಯೇ [1]ಸ್ತಾಂ ಕಿನ್ನು ಕನ್ಯೇ ಫಣೀಶಿನಾಮ್ ।**
**ದಿಕ್ಕನ್ಯೇ ಕಿಮುತ ಸ್ಯಾತಾಂ ಕಿಂ ವಾ ಸೌಭಾಗ್ಯದೇವತೇ ॥ ೯೦ ॥**

''ಇವರೇನು ದೇವಕನ್ಯೆಯರಾಗಿರಬಹುದೋ ? ನಾಗಕನ್ಯೆಯರೋ ? ದಿಕ್ಕನ್ಯೆಯರೋ ? ಅಥವಾ ಸೌಭಾಗ್ಯದ ಅಧಿದೇವತೆಗಳೋ ?

**ಕಿಮಿಮೇ ಶ್ರೀಸರಸ್ವತ್ಯೌ ಕಿಂ ವಾ ತದಧಿದೇವತೇ ।**
**ಕಿಂ ಸ್ಯಾ[2]ತ್ತದವತಾರೋಽಯಮೇವಂ ರೂಪಃ ಪ್ರತೀಯತೇ ॥ ೯೧ ॥**

ಇವರೇನು ಲಕ್ಷ್ಮೀಸರಸ್ವತಿಯರೋ ? ಲಕ್ಷ್ಮೀಸರಸ್ವತಿಯರ ಅಧಿದೇವತೆಯರೋ ? ಅಥವಾ ಆ ಅಧಿದೇವತೆಗಳ ಈ ಅವತಾರವು ಈ ರೂಪವಾಗಿ ತೋರುತ್ತಿದೆಯೋ ?

**ಲಕ್ಷ್ಮ್ಯಾವಿಮೇ ಜಗನ್ನಾಥಮಹಾವಾರ್ಧೇಃ ಕಿಮುದ್ಗತೇ ।**
**ಕಲ್ಯಾಣ[3]ದಾಯಿನೀ ಚ ಸ್ಯಾದನಯೋರಿಯಮಾಕೃತಿಃ ॥ ೯೨ ॥**

ಇವರು ಜಗತ್ಪತಿಯಾದ ವೃಷಭಸ್ವಾಮಿಯೆಂಬ ದೊಡ್ಡ ಸಮುದ್ರದಿಂದ ಉತ್ಪನ್ನರಾದ ಲಕ್ಷ್ಮೀದೇವಿಯರೋ ?ಇವರ ಈ ಆಕಾರವು ಶುಭದಾಯಕವಾಗಿದೆ.''

**ಇತಿ ಸಂಶ್ಲಾಘ್ಯಮಾನೇ ತೇ ಜನೈರುತ್ಪನ್ನವಿಸ್ಮಯೈಃ ।**
**ಸಪ್ರಶ್ರಯಮುಪಾಶ್ರಿತ್ಯ ಜಗನ್ನಾಥಂ ಪ್ರಣೇಮತುಃ ॥ ೯೩ ॥**

ಆಶ್ಚರ್ಯವನ್ನು ಹೊಂದಿದ ಜನರಿಂದ ಈ ರೀತಿಯಾಗಿ ಶ್ಲಾಘಿಸಲ್ಪಟ್ಟವರೂ ಆದ ಆ ಬ್ರಾಹ್ಮೀಸುಂದರಿಯರು ವಿನಯಪೂರ್ವಕವಾಗಿ ಸಮೀಪಕ್ಕೆ ಬಂದು ಜಗತ್ಪತಿಯಾದ ಆದಿಬ್ರಹ್ಮರಿಗೆ ನಮಸ್ಕರಿಸಿದರು.

**ಪ್ರಣತೇ ತೇ ಸಮುತ್ಥಾಪ್ಯ ದೂರಾನಮಿತಮಸ್ತಕೇ ।**
**ಪ್ರೀತ್ಯಾ ಸ್ವಮಂಕಮಾರೋಪ್ಯ ಸ್ಪೃಷ್ಟ್ವಾಽಘ್ರಾಯ ಚ ಮಸ್ತಕೇ ॥ ೯೪ ॥**

ದೂರದಿಂದಲೇ ತಲೆಯನ್ನು ಬಾಗಿಸಿ ನಮಸ್ಕರಿಸಿದ ಆ ಪುತ್ರಿಯರನ್ನು ಮೇಲಕ್ಕೆ ಏಳಿಸಿ ಪ್ರೀತಿಯಿಂದ ಸ್ವಾಮಿಯು ತಮ್ಮ ತೊಡೆಯ ಮೇಲೆ ಕುಳ್ಳಿರಿಸಿ ಮಸ್ತಕವನ್ನು ಮುಟ್ಟಿ ಆಘ್ರಾಣಮಾಡಿ

**ಸಪ್ರಹಾಸಮುವಾಚೈವ[4]ಮೇತಂ [5]ಮನ್ಯೇ ಸುರೈಃ ಸಮಮ್ ।**
**[6]ಯಾಸ್ಯಥೋದ್ಯಾಮರೋದ್ಯಾನಂ ನೈವಮೇತೇ ಗತಾಃ ಸುರಾಃ ॥ ೯೫ ॥**

ಪರಿಹಾಸ್ಯವಾಗಿ ಹೀಗೆ ಹೇಳಿದರು ''ನೀವಿಬ್ಬರೂ ಬನ್ನಿ. ಈಗ ನೀವು ದೇವತೆಗಳೊಡನೆ ಅಮರೋದ್ಯಾನ (ಮುಕ್ತಿಕ್ಷೇತ್ರ) ಕ್ಕೆ ಹೋಗುವೆವೆಂದು ತಿಳಿಯುತ್ತೀರಿ. ಇಲ್ಲ. ಈ ದೇವತೆಗಳು ಹೋದರು. (ಹೋಗಲಿಲ್ಲವೆಂದರ್ಥವು) ಹೇಗೆ ದೇವತೆಗಳು ಅಮರೋದ್ಯಾನ(ಮುಕ್ತಿ)ವನ್ನು ಹೊಂದುವುದಿಲ್ಲವೋ ಹಾಗೆ ನೀವೂ ಹೊಂದಲಾರಿರಿ.'' ಸ್ತ್ರೀಪರ್ಯಾಯದಿಂದ ಮುಕ್ತಿಯನ್ನು ಹೊಂದಲಾಗುವುದಿಲ್ಲವೆಂದು ಭಾವವು.

೧ ಭವತಾಂ. ೨ ಅಧಿದೇವತಯೋಃ. ೩ ಭಾಗಿನೀತ್ಯಪಿ ಪಾಠಃ. ೪ ಆಗಚ್ಛತಂ. ೫ ಪ್ರಹಾಸೇ ಮನ್ಯೋಪಪದೇ ಮನ್ಯತೇರುತ್ತಮ ಏಕವಚ್ಚ. ೬ ಗಮಿಷ್ಯಥಃ.

**ಇತ್ಯಾಕ್ರೀಡ್ಯ ಕ್ಷಣಂ ಭೂಯೋಽಪ್ಯೇವಮಾಖ್ಯದ್ಗಿರಾಂಪತಿಃ ।**
**ಯುವಾಂ ಯುವಜರತ್ಯೌ [1]ಸ್ಥಃ ಶೀಲೇನ ವಿನಯೇನ ಚ ॥ ೯೬ ॥**

ಹೀಗೆ ಒಂದು ಕ್ಷಣಕಾಲದವರೆಗೆ ವಿನೋದಿಸಿ ಸ್ವಾಮಿಯು ಪುನಃ ಮುಂದೆ ಹೇಳುವ ರೀತಿಯಾಗಿ ಹೇಳಿದರು. ''ನೀವಿಬ್ಬರೂ ಯೌವನಸ್ಥರಾಗಿದ್ದರೂ ಶೀಲದಿಂದಲೂ ವಿನಯದಿಂದಲೂ ವೃದ್ಧಸ್ತ್ರೀಯರಂತೆ ಇರುತ್ತೀರಿ.

**ಇದಂ ವಪುರ್ವಯಶ್ಚೇದಮಿದಂ ಶೀಲಮನೀದೃಶಮ್ ।**
**ವಿದ್ಯಯಾ ಚೇದ್ವಿಭೂಷ್ಯೇತ ಸಫಲಂ ಜನ್ಮ [2]ವಾಮಿದಮ್ ॥ ೯೭ ॥**

ನಿಮ್ಮ ಈ ಶರೀರವೂ ಈ ವಯಸ್ಸೂ ಉಪಮಾರಹಿತವಾದ ಈ ಶೀಲವೂ ವಿದ್ಯೆಯಿಂದ ಅಲಂಕೃತವಾದರೆ ನಿಮ್ಮ ಈ ಜನ್ಮವು ಸಫಲವಾಗುವುದು.

**ವಿದ್ಯಾವಾನ್ಪುರುಷೋ ಲೋಕೇ [3]ಸಮ್ಮತಿಂ ಯಾತಿ ಕೋವಿದೈಃ ।**
**ನಾರೀ ಚ ತದ್ವತೀ ಧತ್ತೇ ಸ್ತ್ರೀಸೃಷ್ಟೇರಗ್ರಿಮಂ ಪದಮ್ ॥ ೯೮ ॥**

ಲೋಕದಲ್ಲಿ ವಿದ್ಯಾವಂತನಾದ ಪುರುಷನು ವಿದ್ವಾಂಸರುಗಳಿಂದ ಸನ್ಮಾನವನ್ನು ಹೊಂದುತ್ತಾನೆ. ವಿದ್ಯಾವತಿಯಾದ ಸ್ತ್ರೀಯೂ ಸ್ತ್ರೀಸೃಷ್ಟಿಯ ಮೊದಲನೆಯ ಸ್ಥಾನವನ್ನು ಪಡೆಯುತ್ತಾಳೆ. ಸ್ತ್ರೀಯರಲ್ಲಿ ಶ್ರೇಷ್ಠಳಾಗುತ್ತಾಳೆಂದು ಭಾವವು.

**ವಿದ್ಯಾ ಯಶಸ್ಕರೀ ಪುಂಸಾಂ ವಿದ್ಯಾ ಶ್ರೇಯಸ್ಕರೀ ಮತಾ ।**
**ಸಮ್ಯಗಾರಾಧಿತಾ ವಿದ್ಯಾ ದೇವತಾ ಕಾಮದಾಯಿನೀ ॥ ೯೯ ॥**

ಮನುಷ್ಯರಿಗೆ ವಿದ್ಯೆಯು ಯಶಸ್ಸನ್ನುಂಟುಮಾಡುವುದೂ ಶ್ರೇಯಸ್ಸನ್ನುಂಟುಮಾಡುವುದೂ ಆಗಿದೆ. ಚೆನ್ನಾಗಿ ಆರಾಧಿಸಲ್ಪಟ್ಟ ವಿದ್ಯಾದೇವತೆಯು ಇಷ್ಟಾರ್ಥವನ್ನು ಕೊಡುತ್ತದೆ.

**ವಿದ್ಯಾ ಕಾಮದುಘಾ ಧೇನುರ್ವಿದ್ಯಾ ಚಿಂತಾಮಣಿರ್ನೃಣಾಮ್ ।**
**ತ್ರಿವರ್ಗಫಲಿತಾಂ ಸೂತೇ ವಿದ್ಯಾ ಸಂಪತ್ಪರಂಪರಾಮ್ ॥ ೧೦೦ ॥**

ವಿದ್ಯೆಯು ಮನುಷ್ಯರಿಗೆ ಇಷ್ಟಾರ್ಥವನ್ನು ಕರೆಯುವ ಕಾಮಧೇನುವೂ ಚಿಂತಾಮಣಿಯೂ ಆಗಿದೆ. ವಿದ್ಯೆಯು ಧರ್ಮ ಅರ್ಥ ಕಾಮ ಇವುಗಳಿಂದುಂಟಾದ ಅಧಿಕ ಸಂಪತ್ತನ್ನುಂಟುಮಾಡುತ್ತದೆ.

**ವಿದ್ಯಾ ಬಂಧುಶ್ಚ ಮಿತ್ರಂ ಚ ವಿದ್ಯಾ ಕಲ್ಯಾಣಕಾರಕಮ್ ।**
**ಸಹಯಾಯಿ ಧನಂ ವಿದ್ಯಾ ವಿದ್ಯಾ ಸರ್ವಾರ್ಥಸಾಧನೀ ॥ ೧೦೧ ॥**

ವಿದ್ಯೆಯು ಬಂಧುವೂ ಮಿತ್ರನೂ ಆಗಿದೆ. ವಿದ್ಯೆಯು ಮಂಗಲವನ್ನುಂಟುಮಾಡುವುದಾಗಿದೆ. ವಿದ್ಯೆಯು ಜೊತೆಯಲ್ಲಿ ಹೋಗುವ ದ್ರವ್ಯವಾಗಿದೆ. ವಿದ್ಯೆಯು ಸಮಸ್ತಪ್ರಯೋಜನಗಳನ್ನುಂಟುಮಾಡುವುದಾಗಿದೆ.

**[4]ತದ್ವಿದ್ಯಾಗ್ರಹಣೇ ಯತ್ನಂ ಪುತ್ರಿಕೇ ಕುರುತಂ ಯುವಾಮ್ ।**
**ತತ್ಸಂಗ್ರಹಣಕಾಲೋಽಯಂ ಯುವಯೋರ್ವರ್ತತೇಽಧುನಾ ॥ ೧೦೨ ॥**

ಆದುದರಿಂದ ಎಲೈ ಪುತ್ರಿಯರೇ ! ನೀವು ವಿದ್ಯಾಗ್ರಹಣದಲ್ಲಿ ಪ್ರಯತ್ನವನ್ನು ಮಾಡಿ. ಈಗ ನಿಮಗೆ ವಿದ್ಯೆಯನ್ನು ಗ್ರಹಣಮಾಡುವುದಕ್ಕೆ ಇದು ಯೋಗ್ಯವಾದ ಕಾಲವಾಗಿದೆ.''

**ಇತ್ಯುಕ್ತ್ವಾ ಮುಹುರಾಶಾಸ್ಯ ವಿಸ್ತೀರ್ಣೇ ಹೇಮಪಟ್ಟಕೇ ।**
**ಅಧಿವಾಸ್ಯ ಸ್ವಚಿತ್ತಸ್ಥಾಂ ಶ್ರುತದೇವೀಂ [5]ಸಪರ್ಯಯಾ ॥ ೧೦೩ ॥**

ಈಪ್ರಕಾರವಾಗಿ ಹೇಳಿ ಬಾರಿಬಾರಿಗೂ ಆಶೀರ್ವಾದಮಾಡಿ ವಿಸ್ತಾರವಾದ ಬಂಗಾರದ ಹಲಿಗೆಯಲ್ಲಿ ತಮ್ಮ ಮನಸ್ಸಿನಲ್ಲಿದ್ದ ಶ್ರುತದೇವಿಯನ್ನು ಪೂಜಾಪುರಸ್ಸರವಾಗಿ ಸ್ಥಾಪಿಸಿ,

೧ ಭವಥಃ. ೨ ಯುವಯೋಃ. ೩ ಸಮ್ಮಾನಂ. ೪ ತಸ್ಮಾತ್ಕಾರಣಾತ್. ೫ ಪೂಜಯಾ.

ವಿಭುಃ ಕರದ್ವಯೇನಾಭ್ಯಾಂ ಲಿಖನ್ನಕ್ಷರಮಾಲಿಕಾಮ್ ।
ಉಪಾದಿಶಲ್ಲಿಪಿಂ ಸಂಖ್ಯಾಸ್ಥಾನಂ ಚಾಂಕೈರನುಕ್ರಮಾತ್ ॥ ೧೦೪ ॥

ಸ್ವಾಮಿಯು ಎರಡು ಕೈಗಳಿಂದಲೂ ಅಕ್ಷರಮಾಲಿಕೆಯನ್ನು ಬರೆದು ಈ ಪುತ್ರಿಯರಿಗೆ ಲಿಪಿಯನ್ನೂ ಒಂದು ಎರಡು ಮೊದಲಾದ ಅಂಕೆಗಳಿಂದ ಕ್ರಮವಾಗಿ ಸಂಖ್ಯಾಸ್ಥಾನವನ್ನೂ ಉಪದೇಶಮಾಡಿದರು.

ತತೋ ಭಗವತೋ ವಕ್ತ್ರಾನ್ನಿಃಸೃತಾಮಕ್ಷರಾವಲೀಮ್ ।
ಸಿದ್ಧಂನಮ ಇತಿ ವ್ಯಕ್ತಮಂಗಲಾಂ ಸಿದ್ಧಮಾತೃಕಾಮ್ ॥ ೧೦೫ ॥

ಅಕಾರಾದಿಹಕಾರಾಂತಾಂ ಶುದ್ಧಾಂ ಮುಕ್ತಾವಲೀಮಿವ ।
ಸ್ವರವ್ಯಂಜನಭೇದೇನ ದ್ವಿಧಾ ಭೇದಮುಪೇಯುಷೀಮ್ ॥ ೧೦೬ ॥

[೧]ಅಯೋಗವಾಹಪರ್ಯಂತಾಂ ಸರ್ವವಿದ್ಯಾಸು [೨]ಸಂತತಾಮ್ ।
ಸಂಯೋಗಾಕ್ಷರಸಂಭೂತಿಂ ನೈಕಬೀಜಾಕ್ಷರೈಶ್ಚಿತಾಮ್ ॥ ೧೦೭ ॥

[೩]ಸಮವಾದೀದಧದ್ಬ್ರಾಹ್ಮೀ ಮೇಧಾವಿನ್ಯತಿಸುಂದರೀ ।
ಸುಂದರೀ ಗಣಿತಂ ಸ್ಥಾನಕ್ರಮೈಃ ಸಮ್ಯಗಧಾರಯತ್ ॥ ೧೦೮ ॥

ತರುವಾಯ ಭಗವಂತನ ಮುಖದಿಂದ ಹೊರಟುದೂ ಸಿದ್ಧಮಾತೃಕೆಯೆಂಬ ಹೆಸರುಳ್ಳ 'ಸಿದ್ಧಂನಮಃ' ಎಂಬ ವ್ಯಕ್ತವಾದ ಮಂಗಲವುಳ್ಳುದೂ ಅಕಾರಮೊದಲಾಗಿ ಹಕಾರಕೊನೆಯಾಗಿರುವುದೂ ಮುತ್ತುಗಳ ಪಂಕ್ತಿಯಂತೆ ಶುದ್ಧವಾಗಿರುವುದೂ ಸ್ವರವ್ಯಂಜನಭೇದದಿಂದ ಎರಡು ಭೇದವನ್ನು ಹೊಂದಿರುವುದೂ 'ಅಂ ಅಃ ಷ್ಕ ಷ್ಪ' ಎಂಬ ಅಯೋಗವಾಹಕ್ಷರಪರ್ಯಂತವಾಗಿರುವುದೂ ಸಮಸ್ತ ವಿದ್ಯೆಗಳಲ್ಲಿಯೂ ಅವಿಚ್ಛಿನ್ನವಾಗಿರುವುದೂ ಸಂಯೋಗಾಕ್ಷರಗಳ ಉತ್ಪತ್ತಿಯುಳ್ಳುದೂ ಅನೇಕ ಬೀಜಾಕ್ಷರಗಳಿಂದ ಕೂಡಿರುವುದೂ ಆದ ಅಕ್ಷರಮಾಲಿಕೆಯನ್ನು ಬುದ್ಧಿಮತಿಯಾದ ಬ್ರಾಹ್ಮಿಯು ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡಳು. ಅತ್ಯಂತ ಸುಂದರಿಯಾದ ಸುಂದರಿಯು ಒಂದು ಎರಡು ಮೊದಲಾದ ಸ್ಥಾನಕ್ರಮದಿಂದ ಗಣಿತವನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊಂಡಳು.

ನ ವಿನಾ ವಾಙ್ಮಯಾತ್ಕಿಂಚಿದಸ್ತಿ ಶಾಸ್ತ್ರಂ ಕಲಾಪಿ ವಾ ।
ತತೋ ವಾಙ್ಮಯಮೇವಾದೌ ವೇಧಾಸ್ತಾಭ್ಯಾಮುಪಾದಿಶತ್ ॥ ೧೦೯ ॥

ವಾಙ್ಮಯವನ್ನು ಬಿಟ್ಟು ಶಾಸ್ತ್ರವಾಗಲಿ ಕಲೆಯಾಗಲಿ ಯಾವುದೂ ಇಲ್ಲದಿರುವುದರಿಂದ ಆದಿಬ್ರಹ್ಮರು ಮೊದಲು ಆ ಪುತ್ರಿಯರಿಗೆ ವಾಙ್ಮಯ(ವ್ಯಾಕರಣ ಛಂದಸ್ಸು ಅಲಂಕಾರ)ವನ್ನೇ ಉಪದೇಶಮಾಡಿದರು.

ಸುಮೇಧಸಾ[೪]ವಸಮ್ಮೋಹಾದಧ್ಯೇಷಾತಾಂ ಗುರೋರ್ಮುಖಾತ್ ।
ವಾಗ್ದೇವ್ಯಾವಿವ ನಿಃಶೇಷಂ ವಾಙ್ಮಯಂ [೫]ಗ್ರಂಥತೋರ್ಥತಃ ॥ ೧೧೦ ॥

ಸರಸ್ವತಿಯಂತಿರುವವರೂ ಬುದ್ಧಿಮತಿಯರೂ ಆದ ಬ್ರಾಹ್ಮೀಸುಂದರಿಯರು ಗುರು(ಸ್ವಾಮಿ)ಮುಖದಿಂದ ಕ್ರಮವಾಗಿ ಗ್ರಂಥವನ್ನೂ ಅರ್ಥವನ್ನೂ ತಿಳಿಯುತ್ತ ಸಮಸ್ತ ಶಾಸ್ತ್ರವನ್ನೂ ಅಧ್ಯಯನಮಾಡಿದರು.

[೬]ಪದವಿದ್ಯಾಮಥ ಛಂದೋ [೭]ವಿಚಿತಿಂ ವಾಗಲಂಕೃತಿಮ್ ।
ತ್ರಯೀಂ ಸಮುದಿತಾ[೮]ಮೇತಾಂ ತದ್ವಿದೋ ವಾಙ್ಮಯಂ ವಿದುಃ ॥

ವಚನಕ್ಕೆ ಶೋಭೆಯನ್ನುಂಟುಮಾಡುವ ವ್ಯಾಕರಣವಿದ್ಯಾಛಂದಶ್ಶಾಸ್ತ್ರ ಅಲಂಕಾರ ವಿದ್ಯಾ ಈ ಮೂರರ ಸಮುದಾಯಕ್ಕೆ ವಿದ್ವಾಂಸರು ವಾಙ್ಮಯವೆಂದು ಹೇಳುತ್ತಾರೆ.

೧ ವಿಸರ್ಜನೀಯಃ, ಅಕಾರೇಣ ಸಹ ಯೋಗಂ ವಹತ ಇತಿ. ೨ ಅವಿಚ್ಛಿನ್ನಾಂ. ೩ ಸಮ್ಯಗವಧಾರಯತಿ ಸ್ಮ. ೪ ಅಭ್ರಾಂತೇಃ. ೫ ಶಬ್ದತಃ. ೬ ವ್ಯಾಕರಣಶಾಸ್ತ್ರಂ. ೭ ಶಬ್ದಾಲಂಕಾರಂ. ೮ ಪೂರ್ವೋಕ್ತಾಂ.

ತದಾ [೧]ಸ್ವಾಯಂಭುವಂ ನಾಮ ಪದಶಾಸ್ತ್ರಮಭೂನ್ಮಹತ್ ।
ಯತ್ತತ್ಪರಃಶತಾಧ್ಯಾಯೈರತಿಗಂಭೀರಮಬ್ಧಿವತ್ ॥ ೧೧೨ ॥

ಆಗ ನೂರಕ್ಕಿಂತ ಹೆಚ್ಚಾದ ಅಧ್ಯಾಯಗಳಿಂದ ಸಮುದ್ರದಂತೆ ಅತ್ಯಂತ ಗಂಭೀರವಾದ ''ಸ್ವಾಯಂಭುವ'' ವೆಂದು ಹೆಸರುಳ್ಳ ದೊಡ್ಡ ವ್ಯಾಕರಣಶಾಸ್ತ್ರ ವುಂಟಾಯಿತು.

ಛಂದೋವಿಚಿತಿಮಪ್ಯೇವಂ ನಾನಾಧ್ಯಾಯೈರುಪಾದಿಶತ್ ।
ಉಕ್ತಾತ್ಯುಕ್ತಾದಿಭೇದಾಂಶ್ಚ ಷಡ್ವಿಂಶತಿ[೨]ಮದೀದೃಶತ್ ॥ ೧೧೩ ॥

ಹೀಗೇ ಛಂದಶ್ಶಾಸ್ತ್ರವನ್ನೂ ಅಲಂಕಾರಶಾಸ್ತ್ರವನ್ನೂ ಅನೇಕ ಅಧ್ಯಾಯಗಳಿಂದ ಉಪದೇಶಮಾಡಿದರು. ಉಕ್ತಾ ಅತ್ಯುಕ್ತಾ ಮಧ್ಯಾ ಪ್ರತಿಷ್ಠಾ ಮೊದಲಾದ ಛಂದಶ್ಶಾಸ್ತ್ರದ ಇಪ್ಪತ್ತಾರು ಭೇದಗಳನ್ನೂ ಉಪದೇಶಮಾಡಿದರು.

ಪ್ರಸ್ತಾರಂ ನಷ್ಟಮುದ್ದಿಷ್ಟಮೇಕದ್ವಿತ್ರಿಲಗಕ್ರಿಯಾಮ್ ।
ಸಂಖ್ಯಾಮಥಾಧ್ವಯೋಗಂ ಚ ವ್ಯಾಜಹಾರ ಗಿರಾಂಪತಿಃ ॥ ೧೧೪ ॥

ಸ್ವಾಮಿಯು ಪ್ರಸ್ತಾರ ನಷ್ಟ ಉದ್ದಿಷ್ಟ ಏಕದ್ವಿತ್ರಿಲಗಕ್ರಿಯಾ ಸಂಖ್ಯಾ ಅಧ್ವಯೋಗ ಈ ಆರು ಛಂದಶ್ಶಾಸ್ತ್ರದ ಭೇದ(ಅಂಗ)ಗಳನ್ನೂ ಹೇಳಿದರು.

ಉಪಮಾದೀನಲಂಕಾರಾಂಸ್ತ[೩]ನ್ಮಾರ್ಗದ್ವಯವಿಸ್ತರಮ್ ।
[೪]ದಶಪ್ರಾಣಾನಲಂಕಾರಸಂಗ್ರಹೇ ವಿಭುರಭ್ಯಧಾತ್ ॥ ೧೧೫ ॥

ಸ್ವಾಮಿಯು ಉಪಮಾ ಮೊದಲಾದ ಅಲಂಕಾರಗಳನ್ನೂ ಆ ಅಲಂಕಾರಗಳ ಗೌಡವೈದರ್ಭಗಳೆಂಬೆರಡು ರೀತಿಗಳನ್ನೂ ಹತ್ತುಪ್ರಾಣ(ಔದಾರ್ಯಾದಿಗುಣ)ಗಳನ್ನೂ ಅಲಂಕಾರಸಂಗ್ರಹದಲ್ಲಿ ಹೇಳಿದರು.

ಅಥೈನಯೋಃ [೫]ಪದಜ್ಞಾನದೀಪಿಕಾಭಿಃ ಪ್ರಕಾಶಿತಾಃ ।
ಕಲಾವಿದ್ಯಾಶ್ಚ ನಿಃಶೇಷಾಃ ಸ್ವಯಂ ಪರಿಣತಿಂ ಯಯುಃ ॥ ೧೧೬ ॥

ತರುವಾಯ ಈ ಬ್ರಾಹ್ಮೀಸುಂದರಿಯರ ಸಮಸ್ತಕಲೆಗಳೂ ವಿದ್ಯೆಗಳೂ ವ್ಯಾಕರಣಶಾಸ್ತ್ರಜ್ಞಾನವೆಂಬ ದೀಪಗಳಿಂದ ಪ್ರಕಾಶಿತಗಳಾಗಿ ಸ್ವಯಂ ವೃದ್ಧಿಯನ್ನು ಹೊಂದಿದುವು.

ಇತೀಹಾಧೀತನಿಃಶೇಷವಿದ್ಯೇ ತೇ ಗುರ್ವನುಗ್ರಹಾತ್ ।
ವಾಗ್ದೇವತಾ[೬]ವತಾರಾಯ ಕನ್ಯೇ ಪಾತ್ರತ್ವಮೀಯತುಃ ॥ ೧೧೭ ॥

ಹೀಗೆ ಗುರುವಿನ ಅನುಗ್ರಹದಿಂದ ಸಮಸ್ತ ವಿದ್ಯೆಗಳನ್ನು ಅಧ್ಯಯನಮಾಡಿದ ಆ ಇಬ್ಬರು ಕನ್ಯೆಯರೂ ಸರಸ್ವತಿಯ ಅವತಾರಕ್ಕೆ ಯೋಗ್ಯತೆಯನ್ನು ಪಡೆದರು. ಸರಸ್ವತಿಯ ಅವತಾರದಂತಿದ್ದರೆಂದು ಭಾವವು.

ಪುತ್ರಾಣಾಂ ಚ ಯಥಾಮ್ನಾಯಂ ವಿನಯಾ[೭]ದಾನಪೂರ್ವಕಮ್ ।
ಶಾಸ್ತ್ರಾಣಿ ವ್ಯಾಜಹಾರೈವ[೮]ಮಾನುಪೂರ್ವ್ಯಾ ಜಗದ್ಗುರುಃ ॥ ೧೧೮ ॥

ಲೋಕಾಧಿಪತಿಯಾದ ಸ್ವಾಮಿಯು ಪುತ್ರರಿಗೂ ಶಾಸ್ತ್ರವಿಧಿಯನ್ನನುಸರಿಸಿ ವಿನಯಸ್ವೀಕಾರಪೂರ್ವಕವಾಗಿ ಕ್ರಮದಿಂದ ಶಾಸ್ತ್ರಗಳನ್ನು ಹೇಳಿದರು.

ಭರತಾಯಾ[೯]ರ್ಥಶಾಸ್ತ್ರಂ ಚ ಭರತಂ ಚ ಸಸಂಗ್ರಹಮ್ ।
ಅಧ್ಯಾಯೈರತಿವಿಸ್ತೀರ್ಣೈಃ ಸ್ಫುಟೀಕೃತ್ಯ ಜಗೌ ಗುರುಃ ॥ ೧೧೯ ॥

ಸ್ವಾಮಿಯು ಭರತನಿಗೆ ನೀತಿಶಾಸ್ತ್ರವನ್ನೂ ಸಂಗ್ರಹಸಹಿತವಾಗಿ ಸಂಗೀತ ಶಾಸ್ತ್ರವನ್ನೂ ಅತ್ಯಂತ ವಿಸ್ತಾರವಾದ ಅಧ್ಯಾಯಗಳಿಂದ ವ್ಯಕ್ತಪಡಿಸಿ ಹೇಳಿದರು.

೧ ಸ್ವಾಯಂಭುವನಾಮಧೇಯವ್ಯಾಕರಣಶಾಸ್ತ್ರಂ. ೨ ದರ್ಶಯತಿ ಸ್ಮ, ಅದೀದಿಶದಿತ್ಯಪಿ ಪಾಠಃ. ೩ ಗೌಡವಿದರ್ಭಮಾರ್ಗದ್ವಯಸ್ಯ. ೪ ಔದಾರ್ಯಾದಿಗುಣಾನ್. ೫ ವ್ಯಾಕರಣಶಾಸ್ತ್ರಪ್ರದೀಪೈಃ. ೬ ಆಗಮನಾಯ. ೭ ಸ್ವೀಕಾರಪೂರ್ವಕಂ. ೮ ಪರಿಪಾಟ್ಯಾ. ೯ ನೀತಿಶಾಸ್ತ್ರಂ.

**ವಿಭುರ್ವೃಷಭಸೇನಾಯ ಗೀತವಾದ್ಯಾರ್ಥಸಂಗ್ರಹಮ್ ।**
**ಗಂಧರ್ವಶಾಸ್ತ್ರಮಾಚಖ್ಯೌ ಯತ್ರಾಧ್ಯಾಯಾಃ ಪರಃಶತಮ್ ॥ ೧೨೦ ॥**

ಸ್ವಾಮಿಯು ವೃಷಭಸೇನನಿಗೆ ಗೀತವಾದ್ಯ ಮೊದಲಾದುವುಗಳ ಅರ್ಥವು ಸಂಗ್ರಹಿಸಲ್ಪಟ್ಟಿರುವುದೂ ನೂರಕ್ಕಿಂತಲೂ ಹೆಚ್ಚಾದ ಅಧ್ಯಾಯಗಳುಳ್ಳುದೂ ಆದ ಗಂಧರ್ವಶಾಸ್ತ್ರ(ಗಾಯನ)ವನ್ನು ಹೇಳಿದರು.

**ಅನಂತವಿಜಯಾಯಾಖ್ಯದ್ವಿದ್ಯಾಂ ಚಿತ್ರಕಲಾಶ್ರಿತಾಮ್ ।**
**ನಾನಾಧ್ಯಾಯಶತಾಕೀರ್ಣಾಂ ಸಾ ಕಲಾ ಸಕಲಾಃ ಕಲಾಃ ॥ ೧೨೧ ॥**

ಅನಂತವೀರ್ಯನೆಂಬ ಪುತ್ರನಿಗೆ ನಾನಾಪ್ರಕಾರವಾದ ಅನೇಕ ಅಧ್ಯಾಯಗಳಿಂದ ವ್ಯಾಪ್ತವಾದ ಚಿತ್ರಕಲಾವಿದ್ಯೆಯನ್ನು ಹೇಳಿದರು. ಆ ಚಿತ್ರಕಲೆಯು ಇತರವಾದ ಸಮಸ್ತಕಲೆಗಳನ್ನು ಹೇಳಿತು. ಅನಂತವೀರ್ಯನಿಗೆ ಚಿತ್ರಕಲಾಜ್ಞಾನದಿಂದ ಸಮಸ್ತಕಲೆಗಳೂ ಪ್ರಾಪ್ತವಾದುವೆಂದು ಭಾವವು.

**ವಿಶ್ವಕರ್ಮಮತಂ ಚಾಸ್ಮೈ ವಾಸ್ತುವಿದ್ಯಾಮುಪಾದಿಶತ್ ।**
**ಅಧ್ಯಾಯವಿಸ್ತರಸ್ತತ್ರ ಬಹುಭೇದೋ[೧]ವಧಾರಿತಃ ॥ ೧೨೨ ॥**

ವಿಶ್ವಕರ್ಮನ ಮತ(ಶಿಲ್ಪಶಾಸ್ತ್ರ)ವನ್ನೂ ವಾಸ್ತುವಿದ್ಯೆ(ಗೃಹನಿರ್ಮಾಣವಿದ್ಯೆ)ಯನ್ನೂ ಈ ಅನಂತವೀರ್ಯನಿಗೆ ಉಪದೇಶಮಾಡಿದರು. ಆ ವಾಸ್ತುವಿದ್ಯೆಯಲ್ಲಿ ಅಧ್ಯಾಯಗಳ ವಿಸ್ತಾರವು ಅನೇಕಭೇದವುಳ್ಳುದಾಗಿದೆಯೆಂದು ನಿಶ್ಚಿತವಾಗಿದೆ.

**[೨]ಕಾಮನೀತಿಮಥ ಸ್ತ್ರೀಣಾಂ ಪುರುಷಾಣಾಂ ಚ ಲಕ್ಷಣಮ್ ।**
**[೩]ಆಯುರ್ವೇದಂ [೪]ಧನುರ್ವೇದಂ [೫]ತಂತ್ರಂ ಚಾಶ್ವೇಭಗೋಚರಮ್ ॥**

**ತಥಾ ರತ್ನಪರೀಕ್ಷಾಂ ಚ ಬಾಹುಬಲ್ಯಾಖ್ಯಸೂನವೇ ।**
**ವ್ಯಾಚಖ್ಯೌ ಬಹುಧಾ[೬]ವ್ಯಾಸ್ತೈರಧ್ಯಾಯೈರತಿವಿಸ್ತೃತೈಃ ॥ ೧೨೪ ॥**

ತರುವಾಯ ಪುತ್ರನಾದ ಬಾಹುಬಲಿಸ್ವಾಮಿಗೆ ಕಾಮಶಾಸ್ತ್ರವನ್ನೂ ಸ್ತ್ರೀಪುರುಷರ ಲಕ್ಷಣವನ್ನೂ ವೈದ್ಯಶಾಸ್ತ್ರವನ್ನೂ ಧನುರ್ವಿದ್ಯೆಯನ್ನೂ ಆನೆಕುದುರೆಗಳ ಲಕ್ಷಣಶಾಸ್ತ್ರವನ್ನೂ ರತ್ನಪರೀಕ್ಷೆಯನ್ನೂ ಅನೇಕಪ್ರಕಾರವಾಗಿ ಹೇಳಲ್ಪಟ್ಟುವೂ ಅತ್ಯಂತ ವಿಸ್ತಾರವೂ ಆದ ಅಧ್ಯಾಯಗಳಿಂದ ಹೇಳಿದರು.

**ಕಿಮತ್ರ ಬಹುನೋಕ್ತೇನ ಶಾಸ್ತ್ರಂ ಲೋಕೋಪಕಾರಿ ಯತ್ ।**
**ತತ್ಸರ್ವಮಾದಿಕರ್ತಾಸೌ [೭]ಸ್ವಾಃ ಸಮನ್ವಶಿಷ[೮]ತ್ಪ್ರಜಾಃ ॥ ೧೨೫ ॥**

ಇಲ್ಲಿ ಹೆಚ್ಚು ಹೇಳುವುದರಿಂದೇನು ? ಈ ಆದಿಬ್ರಹ್ಮರು ಲೋಕೋಪಕಾರಕವಾದ ಸಮಸ್ತಶಾಸ್ತ್ರವನ್ನೂ ತಮ್ಮ ಮಕ್ಕಳಿಗೆ ಕಲಿಸಿದರು.

**ಸಮುದ್ದೀಪಿತವಿದ್ಯಸ್ಯ ಕಾಪ್ಯಾಸೀದ್ದೀಪ್ತತಾ ವಿಭೋಃ ।**
**ಸ್ವಭಾವಭಾಸ್ವರಸ್ಯೇವ ಭಾಸ್ವತಃ ಶರದಾಗಮೇ ॥ ೧೨೬ ॥**

ಸ್ವಭಾವದಿಂದ ಪ್ರಕಾಶಮಾನನಾದ ಸೂರ್ಯನಿಗೆ ಶರತ್ಕಾಲದಲ್ಲಿ ಹೆಚ್ಚು ಪ್ರಕಾಶವುಂಟಾಗುವಂತೆ, ಸಮಸ್ತವಿದ್ಯೆಗಳನ್ನೂ ಪ್ರಕಾಶಗೊಳಿಸಿದ ಸ್ವಾಮಿಗೆ ಅನಿರ್ವಚನೀಯವಾದ ಕಾಂತಿಯುಂಟಾಯಿತು.

**ಸುತೈರಧೀತನಿಃಶೇಷವಿದ್ಯೈರದ್ಯುತದೀಶಿತಾ ।**
**ಕಿರಣೈರಿವ ತಿಗ್ಮಾಂಶು[೯]ರಾಸಾದಿತಶರದ್ದ್ಯುಭಿಃ ॥ ೧೨೭ ॥**

ಶರತ್ಕಾಲದಲ್ಲಿ ಆಕಾಶವನ್ನು ವ್ಯಾಪಿಸುವ ಕಿರಣಗಳಿಂದ ಸೂರ್ಯನು ಪ್ರಕಾಶಿಸುವಂತೆ, ಸ್ವಾಮಿಯು ಸಮಸ್ತವಿದ್ಯೆಗಳನ್ನು ಅಧ್ಯಯನಮಾಡಿದ ಪುತ್ರರಿಂದ ಪ್ರಕಾಶಿಸಿದರು.

೧ ನಿಶ್ಚಿತಃ. ೨ ಶಾಸ್ತ್ರಂ. ೩ ವೈದ್ಯಶಾಸ್ತ್ರಂ. ೪ ಧನುರ್ವಿದ್ಯಾಂ. ೫ ಶಾಸ್ತ್ರಂ. ೬ ಕಥಿತೈಃ. ೭ ಸ್ವಕೀಯಾನ್. ೮ ಪುತ್ರಾನ್. ೯ ವ್ಯಾಪ್ತಶರನ್ನಭೋಭಿಃ.

**ಪುತ್ರೈರಿಷ್ಟೈಃ ಕಲತ್ರೈಶ್ಚ ವೃತಸ್ಯ ಭುವನೇಶಿನಃ ।**
**ಮಹಾನ್ಕಾಲೋ[೧]ವ್ಯತೀಯಾಯ ದಿವ್ಯೈರ್ಭೋಗೈರನಾರತೈಃ ॥ ೧೨೮ ॥**

ಇಷ್ಟಪುತ್ರರಿಂದಲೂ ಪತ್ನಿಯರಿಂದಲೂ ಸುತ್ತಲ್ಪಟ್ಟ ಜಗತ್ಪತಿಗೆ ಯಾವಾಗಲೂ ದಿವ್ಯಭೋಗಗಳಿಂದ ಬಹಳ ಕಾಲವು ಕಳೆಯಿತು. ದಿವ್ಯಭೋಗಗಳನ್ನನುಭವಿಸುತ್ತ ಬಹುಕಾಲವನ್ನು ಕಳೆದರೆಂದು ಭಾವವು.

**ತತಃ ಕುಮಾರಕಾಲೋಽಸ್ಯ [೨]ಕಲಿತೋ ಮುನಿಸತ್ತಮೈಃ ।**
**ವಿಂಶತಿಃ ಪೂರ್ವಲಕ್ಷಾಣಾಂ ಪೂರ್ಯತೇ ಸ್ಮ[೩]ಮಹಾಧಿಯಃ ॥ ೧೨೯ ॥**

ತರುವಾಯ ಮಹಾಬುದ್ಧಿಶಾಲಿಯಾದ ಈ ವೃಷಭಸ್ವಾಮಿಗೆ ಇಪ್ಪತ್ತುಲಕ್ಷ ಪೂರ್ವಗಳ ಕುಮಾರಕಾಲವು ಕಳೆಯಿತೆಂದು ಗಣಧರಾದಿಮುನಿಗಳು ಹೇಳಿರುತ್ತಾರೆ.

**[೪]ಅತ್ರಾಂತರೇ ಮಹೌಷಧ್ಯೋ ದೀಪ್ತೌಷಧ್ಯಶ್ಚ ಪಾದಪಾಃ ।**
**ಸಸರ್ವೌಷಧಯಃ ಕಾಲಾಜ್ಜಾತಾಃ ಪ್ರಕ್ಷೀಣಶಕ್ತಿಕಾಃ ॥ ೧೩೦ ॥**

ಈ ಕಾಲದಲ್ಲಿ ಮಹೌಷಧಿಗಳೂ ದೀಪ್ತೌಷಧಿಗಳೂ ಕಲ್ಪವೃಕ್ಷಗಳೂ ಸರ್ವೌಷಧಿಗಳೂ ಕಾಲಸ್ವಭಾವದಿಂದ ಶಕ್ತಿಹೀನಗಳಾದುವು.

**[೫]ಸಸ್ಯಾನ್ಯಕೃಷ್ಟಪಚ್ಯಾನಿ ಯಾನ್ಯಾಸನ್ [೬]ಸ್ಥಿತಯೇ ನೃಣಾಮ್ ।**
**ಪ್ರಾಯಸ್ತಾನ್ಯಪಿ ಕಾಲೇನ ಯಯುರ್ವಿರಲತಾಂ ಭುವಿ ॥ ೧೩೧ ॥**

ಭೂಮಿಯಲ್ಲಿ ಮನುಷ್ಯರ ಜೀವನಕ್ಕೋಸ್ಕರ ತಾವಾಗಿ ಬೆಳೆದು ಪರಿಪಕ್ವವಾಗಿದ್ದ ಧಾನ್ಯಗಳೂ ಕಾಲಸ್ವಭಾವದಿಂದ ವಿರಳವಾದುವು.

**[೭]ರಸವೀರ್ಯ[೮]ವಿಪಾಕೈಸ್ತೇ ಪ್ರಹೀಣಾಃ ಪಾದಪಾ ಯದಾ ।**
**ತದಾತಂಕಾದಿಬಾಧಾಭಿಃ ಪ್ರಜಾ ವ್ಯಾಕುಲತಾಂ ಗತಾಃ ॥ ೧೩೨ ॥**

ಸ್ವಾದುಶಕ್ತಿ ಪರಿಣಮನ ಇವುಗಳಿಂದ ಆ ವೃಕ್ಷಗಳು ಹೀನಾವಸ್ಥೆಯನ್ನು ಹೊಂದಿದಾಗ ಪ್ರಜೆಗಳೆಲ್ಲ ರೋಗಾದಿಬಾಧೆಗಳಿಂದ ವ್ಯಾಕುಲಪಟ್ಟರು.

**ತತ್ಪ್ರಹಾಣಾನ್ಮನೋವೃತ್ತಿಂ ದಧಾನಾ ವ್ಯಾಕುಲೀಕೃತಾಮ್ ।**
**ನಾಭಿರಾಜ[೯]ಮುಪಾಸೇದುಃ ಪ್ರಜಾ ಜೀವಿತಕಾಮ್ಯಯಾ ॥ ೧೩೩ ॥**

ಕಲ್ಪವೃಕ್ಷಗಳ ನಾಶದಿಂದ ವ್ಯಾಕುಲವಾದ ಮನೋವ್ಯಾಪಾರವನ್ನು ಧರಿಸಿದ ಪ್ರಜೆಗಳು ಜೀವನದ ಇಚ್ಛೆಯಿಂದ ನಾಭಿರಾಜರ ಸಮೀಪಕ್ಕೆ ಹೋದರು.

**ನಾಭಿರಾಜಾಜ್ಞಯಾ ಸ್ರಷ್ಟುಸ್ತತೋಽಂತಿಕಮುಪಾಯಯುಃ ।**
**ಪ್ರಜಾಃ ಪ್ರಣತಮೂರ್ಧಾನೋ ಜೀವಿತೋಪಾಯಲಿಪ್ಸಯಾ ॥ ೧೩೪ ॥**

ತರುವಾಯ ನಾಭಿರಾಜರ ಆಜ್ಞೆಯಿಂದ ಪ್ರಜೆಗಳು ಜೀವನೋಪಾಯವನ್ನು ಪಡೆಯಬೇಕೆಂಬ ಇಚ್ಛೆಯಿಂದ ವೃಷಭಸ್ವಾಮಿಯ ಸಮೀಪವನ್ನು ಹೊಂದಿ ತಲೆಯನ್ನು ಬಾಗಿಸಿ ನಮಸ್ಕರಿಸಿದರು.

**ಅಥ ವಿಜ್ಞಾಪಯಾಮಾಸುರಿತ್ಯುಪೇತ್ಯ [೧೦]ಸನಾತನಮ್ ।**
**ಪ್ರಜಾಃ ಪ್ರಜಾತಸಂತ್ರಾಸಾಃ [೧೧]ಶರಣ್ಯಂ ಶರಣಾಶ್ರಿತಾಃ ॥ ೧೩೫ ॥**

ತರುವಾಯ ಕಷ್ಟಪಡುತ್ತಿರುವ ಪ್ರಜೆಗಳು ಶರಣವನ್ನು ಹೊಂದಿದವರಾಗಿ ಶರಣಭೂತರಾದ ಆದಿಬ್ರಹ್ಮರ ಸಮೀಪವನ್ನು ಹೊಂದಿ ಮುಂದೆ ಹೇಳುವ ರೀತಿಯಾಗಿ ವಿಜ್ಞಾಪಿಸಿಕೊಂಡರು.

೧ ಅತೀತೋಽಭೂತ್. ೨ ಕಥಿತ ಇತ್ಯರ್ಥಃ. ೩ ಇತೀತ್ಯಧ್ಯಾಹಾರಃ. ೪ ಅಸ್ಮಿನ್ನವಸರೇ. ೫ ಅಷ್ಟಾದಶಧಾನ್ಯಾದಯಃ. ೬ ಜೀವನಾಯ. ೭ ಸ್ವಾದುಃ. ೮ ಪರಿಣಮನೈಃ. ೯ ಜಗ್ಮುಃ. ೧೦ ವೃಷಭಜಿನಂ. ೧೧ ಜಿನಂ.

ವಾಂಛಂತ್ಯೋ ಜೀವಿಕಾಂ ದೇವ ತ್ವಾಂ ವಯಂ ಶರಣಂ ಶ್ರಿತಾಃ ।
[೧]ತನ್ನಸ್ತ್ರಾಯಸ್ವ ಲೋಕೇಶ ತದುಪಾಯಪ್ರದರ್ಶನಾತ್ ॥ ೧೩೬ ॥

"ಲೋಕಾಧಿಪತಿಯಾದ ಪ್ರಭುವೆ! ಜೀವನೋಪಾಯವನ್ನು ಇಚ್ಛಿಸುವ ನಾವುಗಳು ನಿನ್ನ ಶರಣವನ್ನು ಹೊಂದಿದೆವು. ಆದುದರಿಂದ ಜೀವನೋಪಾಯವನ್ನು ತೋರಿಸಿಕೊಟ್ಟು ನಮ್ಮನ್ನು ಕಾಪಾಡು.

ವಿಭೋ ಸಮೂಲ[೨]ಮುತ್ಸನ್ನಾಃ ಪಿತೃಕಲ್ಪಾ ಮಹಾಂಘ್ರಿಪಾಃ ।
ಫಲಂತ್ಯಕೃಷ್ಟಪಚ್ಯಾನಿ ಸಸ್ಯಾನ್ಯಪಿ ಚ ನಾಧುನಾ ॥ ೧೩೭ ॥

ಸ್ವಾಮಿಯೇ ! ತಂದೆಗೆ ಸಮಾನಗಳಾಗಿದ್ದ ದೊಡ್ಡ ವೃಕ್ಷಗಳು ಬೇರುಸಹಿತವಾಗಿ ನಾಶವಾದುವು. ಉಳದೆ ತಾವಾಗಿ ಬೆಳೆಯುವ ಪೈರುಗಳೂ ಈಗ ಫಲಿಸುವುದಿಲ್ಲ.

ಕ್ಷುತ್ಪಿಪಾಸಾದಿಬಾಧಾಶ್ಚ [೩]ಧುನ್ವಂತ್ಯಸ್ಮಾ[೪]ನ್ಸಮುತ್ಥಿತಾಃ ।
ನ ಕ್ಷಮಾಃ ಕ್ಷಣಮಪ್ಯೇಕಂ [೫]ಪ್ರಾಣಿತುಂ [೬]ಪ್ರೋಜ್ಝಿತಾಶನಾಃ ॥ ೧೩೮ ॥

ಹಸಿವು ಬಾಯಾರಿಕೆ ಮೊದಲಾದ ಬಾಧೆಗಳುಂಟಾಗಿ ನಮ್ಮನ್ನು ಸಂತಾಪ ಪಡಿಸುತ್ತವೆ. ನಾವು ಆಹಾರವನ್ನು ಬಿಟ್ಟು ಒಂದುಕ್ಷಣಕಾಲದವರೆಗೂ ಜೀವಿಸುವುದಕ್ಕೆ ಸಮರ್ಥರಾಗುವುದಿಲ್ಲ.

ಶೀತಾತಪಮಹಾವಾತಪ್ರವರ್ಷೋ[೭]ಪಪ್ಲವಶ್ಚ ನಃ ।
ನಿರಾಶ್ರಯಾನ್ದುನೋತ್ಯದ್ಯ ಬ್ರೂಹಿ ನಸ್ತತ್ಪ್ರತಿಕ್ರಿಯಾಮ್ ॥ ೧೩೯ ॥

ಶೀತ ಬಿಸಲು ಅಧಿಕವಾದ ಗಾಳಿ ಹೆಚ್ಚಾದ ಮಳೆ ಇವುಗಳ ಬಾಧೆಯು ಆಶ್ರಯ(ಮನೆ)ವಿಲ್ಲದಿರುವ ನಮ್ಮನ್ನು ದುಃಖಪಡಿಸುತ್ತದೆ. ಈಗ ನಮಗೆ ಅದಕ್ಕೆ ಪ್ರತೀಕಾರವನ್ನು ಹೇಳು.

ತ್ವಾಂ ದೇವ[೮]ಮಾದಿಕರ್ತಾರಂ ಕಲ್ಪಾಂಘ್ರಿಪಮಿವೋನ್ನತಮ್ ।
ಸಮಾಶ್ರಿತಾಃ ಕಥಂ ಭೀತೇಃ ಪದಂ [೯]ಸ್ಯಾಮ ವಯಂ ವಿಭೋ ॥

ಪ್ರಭುವೆ ! ಪ್ರಥಮಕರ್ತನೂ ಕಲ್ಪವೃಕ್ಷದಂತೆ ಉನ್ನತನೂ ಸ್ವಾಮಿಯೂ ಆದ ನಿನ್ನನ್ನು ಹೊಂದಿದ ನಾವು ಹೇಗೆ ಭಯಕ್ಕೆ ಪಾತ್ರರಾಗುವೆವು ?

ತತೋಽಸ್ಮಾಕಂ ಯಥಾದ್ಯ ಸ್ಯಾಜ್ಜೀವಿಕಾ ನಿರುಪದ್ರವಾ ।
ತಥೋಪದೇಷ್ಟುಮುದ್ಯೋಗಂ ಕುರು ದೇವ ಪ್ರಸೀದ ನಃ ॥ ೧೪೧ ॥

ಆದುದರಿಂದ ಎಲೈ ದೇವನೆ! ಈಗ ನಮಗೆ ಉಪದ್ರವವಿಲ್ಲದಿರುವ ಜೀವನೋಪಾಯವಾಗುವ ಹಾಗೆ ಉಪದೇಶಮಾಡುವುದಕ್ಕೆ ಉದ್ಯೋಗವನ್ನು ಮಾಡು. ನಮ್ಮ ಮೇಲೆ ಪ್ರಸನ್ನನಾಗು."

ಶ್ರುತ್ವೇತಿ ತದ್ವಚೋ ದೀನಂ ಕರುಣಾಪ್ರೇರಿತಾಶಯಃ ।
ಮನಃ [೧೦]ಪ್ರಣಿದಧಾವೇವಂ ಭಗವಾನಾದಿಪೂರುಷಃ ॥ ೧೪೨ ॥

ಈ ಪ್ರಕಾರವಾದ ಪ್ರಜೆಗಳ ದೀನವಚನವನ್ನು ಕೇಳಿ ದಯೆಯಿಂದ ಪ್ರೇರಿತವಾದ ಮನಸ್ಸುಳ್ಳ ಆದಿಪುರುಷನಾದ ಭಗವಂತನು ಮುಂದೆ ಹೇಳುವರೀತಿಯಾಗಿ ಮನಸ್ಸನ್ನು ಏಕಾಗ್ರಪಡಿಸಿದನು.

ಪೂರ್ವಾಪರವಿದೇಹೇಷು ಯಾ ಸ್ಥಿತಿಃ ಸಮವಸ್ಥಿತಾ ।
ಸಾದ್ಯ ಪ್ರವರ್ತನೀಯಾತ್ರ ತತೋ ಜೀವಂತ್ಯಮೂಃ ಪ್ರಜಾಃ ॥ ೧೪೩ ॥

"ಪೂರ್ವಾಪರವಿದೇಹಗಳಲ್ಲಿರುವ ಸ್ಥಿತಿಯನ್ನು ಈಗ ಇಲ್ಲಿ ಪ್ರಚಾರಮಾಡಬೇಕು. ಅದರಿಂದ ಈ ಪ್ರಜೆಗಳು ಜೀವಿಸುವರು.

ಷಟ್ಕರ್ಮಾಣಿ ಯಥಾ ತತ್ರ ಯಥಾ ವರ್ಣಾಶ್ರಮಸ್ಥಿತಿಃ ।
ಯಥಾ ಗ್ರಾಮಗೃಹಾದೀನಾಂ [೧]ಸಂಸ್ತ್ಯಾಯಾಶ್ಚ [೨]ಪೃಥಗ್ವಿಧಾಃ ॥ ೧೪೪ ॥

ವಿದೇಹಕ್ಷೇತ್ರಗಳಲ್ಲಿ ಅಸಿ ಮಷಿ ಕೃಷಿ ವಾಣಿಜ್ಯ ವಿದ್ಯಾ ಶಿಲ್ಪಗಳೆಂಬ ಷಟ್ಕರ್ಮಗಳೂ ಕ್ಷತ್ರಿಯ ವೈಶ್ಯ ಶೂದ್ರವರ್ಣಾಶ್ರಮಗಳ ಸ್ಥಿತಿಯೂ ಗ್ರಾಮ ಗೃಹ ಮೊದಲಾದುವುಗಳ ನಾನಾವಿಧವಾದ ರಚನೆಗಳೂ ಹೇಗೆ ಇವೆಯೋ

ತಥಾತ್ರಾಪ್ಯುಚಿತಾ ವೃತ್ತಿರುಪಾಯೈರೇಭಿರಂಗಿನಾಮ್ ।
ನೋಪಾಯಾಂತರಮಸ್ತ್ಯೇಷಾಂ ಪ್ರಾಣಿನಾಂ ಜೀವಿಕಾಂ ಪ್ರತಿ ॥ ೧೪೫ ॥

ಹಾಗೆಯೇ ಇಲ್ಲಿಯೂ ಪ್ರಾಣಿಗಳಿಗೆ ಈ ಉಪಾಯಗಳಿಂದ ವೃತ್ತಿಯೂ ಉಚಿತವಾಗಿದೆ. ಈ ಪ್ರಾಣಿಗಳಿಗೆ ಜೀವನಕ್ಕೆ ಬೇರೆ ಉಪಾಯವಿಲ್ಲ.

ಕರ್ಮಭೂರದ್ಯ ಜಾತೇಯಂ ವ್ಯತೀತೌ ಕಲ್ಪಭೂರುಹಾಮ್ ।
ತತೋಽತ್ರ ಕರ್ಮಭಿಃ ಷಡ್ಭಿಃ ಪ್ರಜಾನಾಂ ಜೀವಿಕೋಚಿತಾ ॥ ೧೪೬ ॥

ಕಲ್ಪವೃಕ್ಷಗಳು ನಷ್ಟವಾಗುತ್ತಿರಲು ಈಗ ಈ ಕರ್ಮಭೂಮಿಯ ಸ್ಥಿತಿಯು ಉಂಟಾಯಿತು. ಆದುದರಿಂದ ಇಲ್ಲಿ ಪ್ರಜೆಗಳಿಗೆ ಷಟ್ಕರ್ಮಗಳಿಂದ ಜೀವನವು ಉಚಿತವಾಗಿದೆ."

ಇ[೩]ತ್ಯಾಕಲಯ್ಯ ತತ್ಕ್ಷೇಮವೃತ್ತ್ಯುಪಾಯಂ ಕ್ಷಣಂ ವಿಭುಃ ।
ಮುಹುರಾಶ್ವಾಸಯಾಮಾಸ ಮಾಭೈಷ್ಟೇತಿ ತದಾ ಪ್ರಜಾಃ ॥ ೧೪೭ ॥

ಈ ರೀತಿಯಾಗಿ ಸ್ವಾಮಿಯು ಒಂದು ಕ್ಷಣಕಾಲದವರೆಗೆ ಪ್ರಜೆಗಳ ಕ್ಷೇಮ ವೃತ್ತಿಯ ಉಪಾಯವನ್ನು ನಿಶ್ಚಯಿಸಿ ಆಗ ಪ್ರಜೆಗಳನ್ನು ಕುರಿತು "ಹೆದರಬೇಡಿರಿ" ಎಂದು ಬಾರಿಬಾರಿಗೂ ಸಮಾಧಾನ ಪಡಿಸಿದರು.

ಅಥಾ[೪]ನುಧ್ಯಾನಮಾತ್ರೇಣ ವಿಭೋಃ ಶಕ್ರಃ ಸಹಾಮರೈಃ ।
ಪ್ರಾಪ್ತಸ್ತಜ್ಜೀವನೋಪಾಯಾನಿತ್ಯಕಾರ್ಷೀ[೫]ದ್ವಿಭಾಗತಃ ॥ ೧೪೮ ॥

ಆಮೇಲೆ ಸ್ವಾಮಿಯು ಸ್ಮರಿಸಿದ ಮಾತ್ರದಿಂದಲೇ ದೇವೇಂದ್ರನು ದೇವತೆಗಳೊಡನೆ ಬಂದು ಆ ಪ್ರಜೆಗಳ ಜೀವನೋಪಾಯವನ್ನು ಮುಂದೆ ಹೇಳುವ ರೀತಿಯಾಗಿ ವಿಭಾಗಮಾಡಿದನು.

ಶುಭೇ ದಿನೇ ಸುನಕ್ಷತ್ರೇ ಸುಮುಹೂರ್ತೇ ಶುಭೋದಯೇ ।
ಸ್ವೋಚ್ಚಸ್ಥೇಷು ಗ್ರಹೇಷೂಚ್ಚೈರಾನುಕೂಲ್ಯೇ ಜಗದ್ಗುರೋಃ ॥ ೧೪೯ ॥

ಕೃತಪ್ರಥಮಮಾಂಗಲ್ಯೇ ಸುರೇಂದ್ರೋ ಜಿನಮಂದಿರಮ್ ।
[೬]ನ್ಯವೇಶಯತ್ಪುರಸ್ಯಾಸ್ಯ ಮಧ್ಯೇ ದಿಕ್ಷ್ವಪ್ಯನುಕ್ರಮಾತ್ ॥ ೧೫೦ ॥

ಶುಭದಿವಸದಲ್ಲಿ ಶುಭನಕ್ಷತ್ರದಲ್ಲಿ ಶುಭಮುಹೂರ್ತದಲ್ಲಿ ಶುಭಲಗ್ನದಲ್ಲಿ ಸೂರ್ಯಚಂದ್ರಮೊದಲಾದ ಗ್ರಹಗಳು ಉಚ್ಚಸ್ಥಾನಗಳಲ್ಲಿರುವಾಗ ಜಗತ್ಪತಿಯಾದ ಸ್ವಾಮಿಗೆ ಅನುಕೂಲವಾದ ಗ್ರಹದಲ್ಲಿ ಮೊದಲುಮಾಡಲ್ಪಟ್ಟ ಮಂಗಲವುಳ್ಳ ಈ ಅಯೋಧ್ಯಾಪಟ್ಟಣದ ಮಧ್ಯಭಾಗದಲ್ಲಿಯೂ ಪೂರ್ವಾದಿ ದಿಕ್ಕುಗಳಲ್ಲಿಯೂ ಕ್ರಮವಾಗಿ ದೇವೇಂದ್ರನು ಜಿನಮಂದಿರವನ್ನು ನಿರ್ಮಿಸಿದನು.

ಕೋಸಲಾದೀನ್ಮಹಾದೇಶಾನ್ಸಾಕೇತಾದಿಪುರಾಣಿ ಚ ।
[೭]ಸಾರಾಮಸೀಮನಿಗಮಾನ್ಖೇಟಾದೀಂಶ್ಚ ನ್ಯವೇಶಯತ್ ॥ ೧೫೧ ॥

ಕೋಸಲಮೊದಲಾದ ದೇಶಗಳನ್ನೂ ಅಯೋಧ್ಯಾಮೊದಲಾದ ಪಟ್ಟಣಗಳನ್ನೂ ಉದ್ಯಾನಸೀಮಾಯುಕ್ತವಾದ .ಗ್ರಾಮಗಳನ್ನೂ ಖೇಟಮೊದಲಾದುವುಗಳನ್ನೂ ರಚಿಸಿದನು.

---

೧ ಕಾರಣಾತ್. ೨ ನಷ್ಟಾಃ. ೩ ಉಪತಾಪಯಂತಿ. ೪ ಉದ್ಭೂತಾಃ. ೫ ಜೀವಿತುಂ. ೬ ತ್ಯಕ್ತಾಹಾರಾಃ. ೭ ಬಾಧಾ. ೮ ಆದಿಜಿನಂ. ೯ ಭವೇಮ. ೧೦ ಏಕಾಗ್ರಂ ಚಕಾರ.

೧ ಸನ್ನಿವೇಶಾಃ. ೨ ನಾನಾವಿಧಾಃ. ೩ ನಿಶ್ಚಿತ್ಯ. ೪ ಸ್ಮರಣಮಾತ್ರೇಣ. ೫ ವಿಭಾಗಾತ್. ೬ ನಿರ್ಮಿತವಾನ್. ೭ ಆರಾಮಸೀಮಯುಕ್ತಗ್ರಾಮಾನ್.

**ದೇಶಾಃ ಸುಕೋಶಲಾವಂತೀ ಪುಂಡ್ರೋಗ್ರಾಶ್ಮಕರಮ್ಯಕಾಃ ।**
**ಕುರುಕಾಶೀಕಲಿಂಗಾಂಗವಂಗಸುಹ್ಮಾಃ ಸಮುದ್ರಕಾಃ ॥ ೧೫೨ ॥**

**ಕಾಶ್ಮೀರೋಶೀನರಾನರ್ತವತ್ಸಪಂಚಾಲಮಾಲವಾಃ ।**
**ದಶಾರ್ಣಾಃ ಕಚ್ಛಮಗಧಾ ವಿದರ್ಭಾಃ ಕುರುಜಾಂಗಲಮ್ ॥ ೧೫೩ ॥**

**ಕರಹಾಟಮಹಾರಾಷ್ಟ್ರಸುರಾಷ್ಟ್ರಾಭೀರಕೊಂಕಣಾಃ ।**
**[೧]ವನವಾಸ್ಯಾಂಧ್ರಕರ್ಣಾಟಕೋಶಲಾಶ್ಚೋಲಕೇರಲಾಃ ॥ ೧೫೪ ॥**

**ದಾರ್ವಾಭಿಸಾರಸೌವೀರಶೂರಸೇನಾಪರಾಂತಕಾಃ ।**
**ವಿದೇಹಸಿಂಧುಗಾಂಧಾರಯವನಾಶ್ಚೇದಿಪಲ್ಲವಾಃ ॥ ೧೫೫ ॥**

**ಕಾಂಭೋಜಾರಟ್ಟಬಾಹ್ಲೀಕತುರುಷ್ಕಶಕಕೇಕಯಾಃ ।**
**ನಿವೇಶಿತಾಸ್ತಥಾನ್ಯೇಽಪಿ ವಿಭಕ್ತಾ [೨]ವಿಷಯಾಸ್ತದಾ ॥ ೧೫೬ ॥**

ಆಗ ಸುಕೋಶಲ ಅವಂತೀ ಪುಂಡ್ರ ಉಗ್ರ ಅಶ್ಮಕ ರಮ್ಯಕ ಕುರು ಕಾಶೀ ಕಲಿಂಗ ಅಂಗ ವಂಗ ಸುಹ್ಮ ಸಮುದ್ರಕ ಕಾಶ್ಮೀರ ಉಶೀನರ ಆನರ್ತ ವತ್ಸ ಪಂಚಾಲ ಮಾಲವ ದಶಾರ್ಣ ಕಚ್ಛ ಮಗಧ ವಿದರ್ಭ ಕುರುಜಾಂಗಲ ಕರಹಾಟ ಮಹಾರಾಷ್ಟ್ರ ಸುರಾಷ್ಟ್ರ ಆಭೀರ ಕೊಂಕಣ ವನವಾಸ್ಯ (ತೌಳವ) ಆಂಧ್ರ ಕರ್ಣಾಟ ಕೋಶಲ ಚೋಲ ಕೇರಳ ದಾರು ಅಭಿಸಾರ ಸೌವೀರ ಶೂರಸೇನ ಅಪರಾಂತಕ ವಿದೇಹ ಸಿಂಧು ಗಾಂಧಾರ ಯವನ ಚೇದಿ ಪಲ್ಲವ ಕಾಂಭೋಜ ಆರಟ್ಟ ಬಾಹ್ಲೀಕ ತುರುಷ್ಕಶಕ ಕೇಕಯ ಈ ದೇಶಗಳನ್ನೂ ಹಾಗೆಯೇ ಬೇರೆ ದೇಶಗಳನ್ನೂ ವಿಭಾಗಿಸಿ ನಿರ್ಮಾಣಮಾಡಿದನು.

**[೩]ಅದೇವಮಾತೃಕಾಃ ಕೇಚಿ[೪]ದ್ವಿಷಯಾ [೫]ದೇವಮಾತೃಕಾಃ ।**
**ಪರೇ [೬]ಸಾಧಾರಣಾಃ ಕೇಚಿದ್ಯಥಾಸ್ವಂ ತೇ ನಿವೇಶಿತಾಃ ॥ ೧೫೭ ॥**

ಹೊಳೆಯ ನೀರಿನಿಂದ ಬೆಳೆಯಾಗುವ ಕೆಲವು ದೇಶಗಳನ್ನೂ ಮಳೆಯ ನೀರಿನಿಂದ ಬೆಳೆಯಾಗುವ ದೇಶಗಳನ್ನೂ ಹೊಳೆಯ ನೀರಿನಿಂದಲೂ ಮಳೆಯ ನೀರಿನಿಂದಲೂ ಬೆಳೆಯಾಗುವ ಸಾಮಾನ್ಯದೇಶಗಳನ್ನೂ ಕ್ರಮವಾಗಿ ನಿರ್ಮಾಣಮಾಡಿದನು.

**ಅಭೂತಪೂರ್ವೈರುದ್ಭೂತೈರ್ಭೂರಭಾತ್ತೈ[೭]ರ್ಜನಾಸ್ಪದೈಃ ।**
**ದಿವಃ ಖಂಡೈರಿವಾಯಾತೈಃ [೮]ಕೌತುಕಾದ್ಧರಣೀತಲಮ್ ॥ ೧೫೮ ॥**

ಕುತೂಹಲದಿಂದ ಭೂಮಿಗಿಳಿದು ಬಂದ ಸ್ವರ್ಗದ ಅಂಶ(ಚೂರು)ಗಳಂತಿರುವುವೂ ಹೊಸದಾಗಿ ಉದ್ಭವಿಸಿದುವೂ ಆದ ಆ ದೇಶಗಳಿಂದ ಭೂಮಿಯು ಶೋಭಿಸಿತು.

**ದೇಶೈಃ ಸಾಧಾರಣಾನೂಪಜಾಂಗಲೈಸ್ತೈ[೯]ಸ್ತತಾ ಮಹೀ ।**
**ರೇಜೇ [೧೦]ರಜತಭೂಭರ್ತು[೧೧]ರಾರಾ[೧೨]ದಾ ಚ ಪಯೋನಿಧೇಃ ॥**

ಸಾಧಾರಣವೂ ಜಲಮಯವೂ ನಿರ್ಜನವೂ ಆದ ಆ ದೇಶಗಳಿಂದ ಭೂಮಿಯು ವಿಜಯಾರ್ಧಪರ್ವತಸಮೀಪದಿಂದ ಸಮುದ್ರದ ವರೆಗೂ ವಿಸ್ತೃತವಾಗಿ ಶೋಭಿಸಿತು.

**[೧೩]ತದಂತೇಷ್ವಂತಪಾಲಾನಾಂ ದುರ್ಗಾಣಿ ಪರಿತೋಽಭವನ್ ।**
**ಸ್ಥಾನಾನಿ ಲೋಕಪಾಲಾನಾಮಿವ ಸ್ವರ್ಧಾಮಸೀಮಸು ॥ ೧೬೦ ॥**

ಸ್ವರ್ಗದ ಎಲ್ಲೆ(ಅವಧಿ)ಗಳಲ್ಲಿ ಲೋಕಪಾಲದೇವತೆಗಳ ಸ್ಥಾನಗಳಂತೆ, ಆ ದೇಶಗಳ ಕೊನೆ(ಸೀಮಾ)ಗಳಲ್ಲಿ ಸುತ್ತಲೂ ದೇಶದ ಕೊನೆಯ ಭಾಗಗಳನ್ನು ರಕ್ಷಿಸುವ ರಾಜರುಗಳ ದುರ್ಗಗಳಿದ್ದುವು.

೧ ತೌಳವದೇಶಃ. ೨ ದೇಶಾಃ. ೩ ನದ್ಯಂಬುಸಂಪನ್ನವ್ರೀಹಿಪಾಲಿತಾಃ. ೪ ದೇಶಾಃ. ೫ ವೃಷ್ಟ್ಯಂಬುಸಂಪನ್ನವ್ರೀಹಿಪಾಲಿತಾಃ. ೬ ನದೀಮಾತೃಕದೇವ ಮಾತೃಕಮಿಶ್ರಾಃ. ೭ ದೇಶೈಃ. ೮ ಉತ್ಸವಾತ್. ೯ ವಿಸ್ತೃತಾ. ೧೦ ವಿಜಯಾರ್ಧಸ್ಯ. ೧೧ ಸಮೀಪಾತ್. ೧೨ ಸಮುದ್ರಪರ್ಯಂತಂ. ೧೩ ತೇಷಾಂ ದೇಶಾನಾಮಂತೇಷು.

**ತದಂತರಾಲದೇಶಾಶ್ಚ ಬಭೂವುರನುರಕ್ಷಿತಾಃ ।**
**ಲುಬ್ಧಕಾರಣ್ಯಚರಕಪುಲಿಂದಶಬರಾದಿಭಿಃ ॥ ೧೬೧ ॥**

ಆ ದೇಶಗಳ ಮಧ್ಯದಲ್ಲಿರುವ ಸಣ್ಣಸಣ್ಣದೇಶಗಳನ್ನು ಬೇಡರು ಅರಣ್ಯ ಸಂಚಾರಿಗಳು ಕಿರಾತರು ಭಿಲ್ಲರು ಮೊದಲಾದವರು ರಕ್ಷಿಸುತ್ತಿದ್ದರು.

**[೧]ಮಧ್ಯೇಜನಪದಂ ರೇಜೂರಾಜಧಾನ್ಯಃ [೨]ಪರಿಷ್ಕೃತಾಃ ।**
**ವಪ್ರಪ್ರಾಕಾರಪರಿಖಾಗೋಪುರಾಟ್ಟಾಲಕಾದಿಭಿಃ ॥ ೧೬೨ ॥**

ದೇಶಮಧ್ಯದಲ್ಲಿ ಅಗಳು ಕೋಟೆ ಕಂದಕ ಗೋಪುರ ಉಪ್ಪರಿಗೆಯ ಮನೆ ಮೊದಲಾದುವುಗಳಿಂದ ಅಲಂಕೃತವಾದ ರಾಜಧಾನಿಗಳು ಪ್ರಕಾಶಿಸಿದುವು.

**ತಾನಿ ಸ್ಥಾನೀಯಸಂಜ್ಞಾನಿ ದುರ್ಗಾಣ್ಯಾವೃತ್ಯ ಸರ್ವತಃ ।**
**ಗ್ರಾಮಾದೀನಾಂ [೩]ನಿವೇಶೋಽಭೂದ್ಯಥಾಭಿಹಿತಲಕ್ಷಣಾಮ್ ॥ ೧೬೩ ॥**

ಸ್ಥಾನೀಯವೆಂದು ಹೆಸರುಳ್ಳ ಆ ರಾಜಧಾನಿಗಳನ್ನೂ ದುರ್ಗಗಳನ್ನೂ ಸುತ್ತಲೂ ಆವರಿಸಿಕೊಂಡು ಯಥೋಕ್ತವಾದ ಲಕ್ಷಣವುಳ್ಳ ಗ್ರಾಮಮೊದಲಾದುವುಗಳ ರಚನೆಯಾಯಿತು.

**ಗ್ರಾಮಾ ವೃತಿಪರಿಕ್ಷೇಪಮಾತ್ರಾಸ್ಸ್ಯು[೪]ರುಚಿತಾಶ್ರಯಾಃ ।**
**ಶೂದ್ರ[೫]ಕರ್ಷಕ[೬]ಭೂಯಿಷ್ಠಾಃ [೭]ಸಾರಾಮಾಃ ಸಜಲಾಶಯಾಃ ॥ ೧೬೪ ॥**

ಸುತ್ತಲೂ ಬೇಲಿಯೂ ಯೋಗ್ಯವಾದ ಮನೆಗಳೂ ಹೆಚ್ಚಾಗಿ ಶೂದ್ರರೂ ಕೃಷೀವಲರೂ ಉಳ್ಳ ಗ್ರಾಮಗಳು ಉದ್ಯಾನಸಹಿತಗಳೂ ಸರೋವರಸಹಿತಗಳೂ ಆಗಿದ್ದುವು.

**ಗ್ರಾಮಃ [೮]ಕುಲಶತೇನೇಷ್ಟೋ [೯]ನಿಕೃಷ್ಟಃ ಸಮಧಿಷ್ಠಿತಃ ।**
**[೧೦]ಪರಸ್ತತ್ಪಂಚಶತ್ಯಾ ಸ್ಯಾತ್ಸುಸಮೃದ್ಧಕೃಷೀವಲಃ ॥ ೧೬೫ ॥**

ನೂರುಮನೆಗಳ ಸಮುದಾಯವು ಜಘನ್ಯ(ಚಿಕ್ಕ)ಗ್ರಾಮವೆನಿಸುತ್ತದೆ. ಹೆಚ್ಚಾಗಿ ಕೃಷೀವಲರುಳ್ಳ ಐನೂರು ಮನೆಗಳ ಸಮುದಾಯವು ಉತ್ಕೃಷ್ಟ(ದೊಡ್ಡ) ಗ್ರಾಮವೆನಿಸುತ್ತದೆ.

**ಕ್ರೋಶದ್ವಿಕ್ರೋಶಸೀಮಾನೋ ಗ್ರಾಮಾಃ ಸ್ಯುರಧಮೋತ್ತಮಾಃ ।**
**[೧೧]ಸಂಪನ್ನಸಸ್ಯಸುಕ್ಷೇತ್ರಾಃ [೧೨]ಪ್ರಭೂತಯವಸೋದಕಾಃ ॥ ೧೬೬ ॥**

ಫಲಭರಿತವಾದ ಪೈರುಗಳ ಉತ್ತಮಕ್ಷೇತ್ರಗಳುಳ್ಳವೂ ಅಧಿಕವಾದ ಹುಲ್ಲೂ ನೀರೂ ಉಳ್ಳವೂ ಆದ ಆ ಜಘನ್ಯೋತ್ಕೃಷ್ಟಗ್ರಾಮಗಳು ಒಂದು ಅಥವಾ ಎರಡುಹರದಾರಿ ಸರಹದ್ದುಗಳುಳ್ಳವಾಗಿರುವುವು.

**ಸರಿದ್ಗಿರಿ[೧೩]ದರೀ[೧೪]ಗೃಷ್ಟಿಕ್ಷೀರಕಂಟಕಶಾಖಿನಃ ।**
**ವನಾನಿ ಸೇತವಶ್ಚೇತಿ ತೇಷಾಂ ಸೀಮೋಪಲಕ್ಷಣಮ್ ॥ ೧೬೭ ॥**

ನದೀ ಪರ್ವತ ಗುಹೆ ಸ್ಮಶಾನ ಹಾಲುಬರುವ ಮರಗಳು ಮುಳ್ಳುಗಳುಳ್ಳ ಮರಗಳು ವನಗಳು ಸೇತುವೆಗಳು ಇವುಗಳೆಲ್ಲ ಆ ಗ್ರಾಮಗಳ ಅವಧಿ (ಎಲ್ಲೆ) ಗಳಾಗಿವೆ.

**ತತ್ಕರ್ತೃಭೋಕ್ತೃನಿಯಮೋ [೧೫]ಯೋಗಕ್ಷೇಮಾನುಚಿಂತನಮ್ ।**
**ವಿಷ್ಟಿದಂಡಕರಾಣಾಂ ಚ [೧೬]ನಿಬಂಧೋ [೧೭]ರಾಜಸಾದ್ಭವೇತ್ ॥ ೧೬೮ ॥**

೧ ದೇಶಮಧ್ಯೇ. ೨ ಅಲಂಕೃತಾಃ. ೩ ರಚನಾ. ೪ ಯೋಗ್ಯಗೃಹಾಃ. ೫ ಕೃಷೀವಲಃ. ೬ ಬಹುಲಾಃ. ೭ ಆರಾಮಸಹಿತಾಃ. ೮ ಗೃಹಶತೇನ. ೯ ಜಘನ್ಯಃ. ೧೦ ಉತ್ಕೃಷ್ಟಃ. ೧೧ ಫಲಿತಃ. ೧೨ ಬಹುತೃಣೋದಕಾಃ. ೧೩ ಗುಹಾ. ೧೪ ಶ್ಮಶಾನಂ. ೧೫ ಅಲಬ್ಧಲಾಭೋ ಯೋಗಃ, ಲಬ್ಧಪರಿರಕ್ಷಣಂ ಕ್ಷೇಮಸ್ತಯೋಶ್ಚಿಂತನಂ. ೧೬ ಸಂಬಂಧಃ. ೧೭ ರಾಜಾಧೀನಃ.

ಆ ಗ್ರಾಮಗಳ ನಿರ್ಮಾಣಕಾರ್ಯ ಅವುಗಳ ಅನುಭೋಗ ಯೋಗಕ್ಷೇಮಚಿಂತನೆ ಬಿಟ್ಟಿಹಿಡಿಯುವಿಕೆ ಶಿಕ್ಷಿಸುವಿಕೆ ಕಂದಾಯವನ್ನು ತೆಗೆದುಕೊಳ್ಳುವಿಕೆ ಇವುಗಳ ಸಂಬಂಧ ಇವೆಲ್ಲ ರಾಜಾಧೀನವಾಗಿರುವುವು.

**ಪರಿಖಾಗೋಪುರಾಟ್ಟಾಲವಪ್ರಪ್ರಾಕಾರಮಂಡಿತಮ್ ।**
**ನಾನಾಭವನವಿನ್ಯಾಸಂ ಸೋದ್ಯಾನಂ ಸಜಲಾಶಯಮ್ ॥ ೧೭೯ ॥**

**ಪುರಮೇವಂವಿಧಂ ಶಸ್ತಮುಚಿತೋದ್ದೇಶಸುಸ್ಥಿತಮ್ ।**
**ಪೂರ್ವೋತ್ತರಪ್ಲವಾಂಭಸ್ಕಂ ಪ್ರಧಾನಪುರುಷೋಚಿತಮ್ ॥ ೧೮೦ ॥**

ಕಂದಕ ಗೋಪುರ ಉಪ್ಪರಿಗೆಯ ಮನೆ ಅಗಳು ಕೋಟೆ ಇವುಗಳಿಂದ ಅಲಂಕೃತವೂ ನಾನಾವಿಧವಾದ ಮನೆಗಳ ರಚನೆಯುಳ್ಳುದೂ ಉದ್ಯಾನವುಳ್ಳುದೂ ಸರೋವರಸಹಿತವೂ ಪ್ರಶಸ್ತವೂ ಯೋಗ್ಯಪ್ರದೇಶದಲ್ಲಿರುವುದೂ ಪೂರ್ವೋತ್ತರ ದಿಕ್ಕುಗಳಲ್ಲಿ ಹರಿಯುತ್ತಿರುವ ನೀರುಳ್ಳುದೂ ಪ್ರಧಾನಪುರುಷರಿಗೆ ಉಚಿತವೂ ಆದ ಊರಿಗೆ ಪುರವೆಂದು ಹೆಸರು.

**ಸರಿದ್ಗಿರಿಭ್ಯಾಂ [೧]ಸಂರುದ್ಧಂ ಖೇಡಮಾಹುರ್ಮನೀಷಿಣಃ ।**
**ಕೇವಲಂ ಗಿರಿಸಂರುದ್ಧಂ ಖರ್ವಟಂ ತತ್ಪ್ರಚಕ್ಷತೇ ॥ ೧೮೧ ॥**

ನದಿಯಿಂದಲೂ ಪರ್ವತದಿಂದಲೂ ಸುತ್ತಲ್ಪಟ್ಟ ಗ್ರಾಮಕ್ಕೆ ವಿದ್ವಾಂಸರು ಖೇಡವೆಂದು ಹೇಳುತ್ತಾರೆ. ಕೇವಲ ಪರ್ವತಗಳಿಂದ ಸುತ್ತಲ್ಪಟ್ಟ ಊರಿಗೆ ಖರ್ವಟವೆಂದು ಹೇಳುತ್ತಾರೆ.

**ಮಡಂಬಮಾಮನಂತಿ ಜ್ಞಾಃ ಪಂಚಗ್ರಾಮಶತೀವೃತಮ್ ।**
**ಪತ್ತನಂ ತತ್ಸಮುದ್ರಾಂತೇ ಯನ್ನೌಭಿರವತೀರ್ಯತೇ ॥ ೧೮೨ ॥**

ಐನೂರುಗ್ರಾಮಗಳಿಂದ ಸುತ್ತಲ್ಪಟ್ಟ ಊರಿಗೆ ಜ್ಞಾನಿಗಳು ಮಡಂಬವೆಂದು ಹೇಳುತ್ತಾರೆ. ಸಮುದ್ರದ ಸಮೀಪದಲ್ಲಿ ಹಡುಗುಗಳಿಂದ ಇಳಿಯಲರ್ಹವಾದ ಊರಿಗೆ ಪಟ್ಟಣವೆಂದು ಹೆಸರು.

**ಭವೇದ್ದ್ರೋಣಮುಖಂ ನಾಮ್ನಾ ನಿಮ್ನಗಾತಟಮಾಶ್ರಿತಮ್ ।**
**ಸಂವಾಹಸ್ತು ಶಿರೋವ್ಯೂಢಧಾನ್ಯಸಂಚಯ ಇಷ್ಯತೇ ॥ ೧೮೩ ॥**

ನದಿಯ ದಡದಲ್ಲಿರುವ ಗ್ರಾಮಕ್ಕೆ ದ್ರೋಣಮುಖವೆಂದು ಹೆಸರು. ಮಸ್ತಕದ ವರೆಗೆ (ಆಳುದ್ದ) ಧಾನ್ಯರಾಶಿಗಳಿರುವ ಊರಿಗೆ ಸಂವಾಹವೆಂದು ಹೆಸರು.

**[೨]ಪುಟಭೇದನಭೇದಾನಾಮಮೀಷಾಂ ಚ ಕ್ವಚಿತ್ಕ್ವಚಿತ್ ।**
**ಸನ್ನಿವೇಶೋಭವತ್ಪೃಥ್ವ್ಯಾಂ ಯಥೋದ್ದೇಶಮಿತೋಮುತಃ ॥ ೧೮೪ ॥**

ಉದ್ದೇಶಾನುಸಾರವಾಗಿ ಪೃಥ್ವಿಯಲ್ಲಿ ಈ ಪಟ್ಟಣಭೇದಗಳ ರಚನೆಯು ಅಲ್ಲಲ್ಲಿ ಈಕಡೆಗಾಕಡೆಗೆ ಉಂಟಾಯಿತು.

**ಶತಾನ್ಯಷ್ಟೌ ಚ ಚತ್ವಾರಿ ದ್ವೇ ಚ ಸ್ಯುರ್ಗ್ರಾಮಸಂಖ್ಯಯಾ ।**
**ರಾಜಧಾನ್ಯಾಸ್ತಥಾದ್ರೋಣಮುಖಖರ್ವಟಯೋಃ ಕ್ರಮಾತ್ ॥ ೧೮೫ ॥**

ಎಂಟುನೂರುಗ್ರಾಮಾಗಳಿಂದ ರಾಜಧಾನಿಯೂ ನಾಲ್ಕುನೂರುಗ್ರಾಮಗಳಿಂದ ದ್ರೋಣಮುಖವೂ ಇನ್ನೂರುಗ್ರಾಮಗಳಿಂದ ಖರ್ವಟವೂ ಆಗುವುವು.

**[೩]ದಶಗ್ರಾಮ್ಯಾಸ್ತು ಮಧ್ಯೇ ಯೋ ಮಹಾನ್ಗ್ರಾಮಃ ಸ [೪]ಸಂಗ್ರಹಃ ।**
**ತಥಾ [೫]ಘೋಷಾಕರಾದೀನಾಮಪಿ ಲಕ್ಷ್ಮ ವಿಕಲ್ಪ್ಯತಾಮ್ ॥ ೧೮೬ ॥**

ಹತ್ತುಗ್ರಾಮಗಳ ಗುಂಪಿನ ಮಧ್ಯದಲ್ಲಿರುವ ದೊಡ್ಡಗ್ರಾಮಕ್ಕೆ ಸಂಗ್ರಹವೆಂದು ಹೆಸರು. ಹಾಗೆಯೇ ಗೊಲ್ಲರ ಹಳ್ಳಿ ಗಣಿ ಮೊದಲಾದುವುಗಳ ಲಕ್ಷಣವನ್ನೂ ಊಹಿಸಿಕೊಳ್ಳಬೇಕು.

೧ ವೇಷ್ಟಿತಂ. ೨ ಪತ್ತನಂ. ೩ ದಶಗ್ರಾಮಸಮಾಹಾರಸ್ಯ. ೪ ನಾಮಾ. ೫ ಆಭೀರಪಲ್ಲೀ.

**[೧]ಪುರಾಂ ವಿಭಾಗಮಿತ್ಯುಚ್ಚೈಃ ಕುರ್ವನ್ಗೀರ್ವಾಣನಾಯಕಃ ।**
**ತದಾ [೨]ಪುರಂದರಖ್ಯಾತಿಮಗಾದನ್ವರ್ಥತಾಂ ಗತಾಮ್ ॥ ೧೮೭ ॥**

ಈರೀತಿಯಾಗಿ ದೇವೇಂದ್ರನು ಪುರಗಳ ವಿಭಾಗವನ್ನು ಮಾಡಿದುದರಿಂದ ಆಗ ಅವನು ಸಾರ್ಥಕವಾದ ''ಪುರಂದರ'' ನೆಂಬ ಖ್ಯಾತಿಯನ್ನು ಹೊಂದಿದನು.

**ತತಃ ಪ್ರಜಾ ನಿವೇಶ್ಯೈಷು ಸ್ಥಾನೇಷು ಸ್ರಷ್ಟುರಾಜ್ಞಯಾ ।**
**ಜಗಾಮ ಕೃತಕಾರ್ಯೋ [೩]ಗಾಂ ಮಘವಾನುಜ್ಞಯಾ [೪]ಪ್ರಭೋಃ ॥**

ತರುವಾಯ ಸೃಷ್ಟಿಕರ್ತನಾದ ಭಗವಂತನ ಆಜ್ಞೆಯಿಂದ ಈ ಹಿಂದೆಹೇಳಿದ ಸ್ಥಾನಗಳಲ್ಲಿ ಪ್ರಜೆಗಳನ್ನಿರಿಸಿ ದೇವೇಂದ್ರನು ಸ್ವಾಮಿಯ ಆಜ್ಞೆಯನ್ನು ಪಡೆದು ಸ್ವರ್ಗಕ್ಕೆ ಹೊರಟುಹೋದನು.

**ಅಸಿರ್ಮಷಿಃ ಕೃಷಿರ್ವಿದ್ಯಾ ವಾಣಿಜ್ಯಂ ಶಿಲ್ಪಮೇವ ಚ ।**
**ಕರ್ಮಾಣೀಮಾನಿ ಷೋಢಾ ಸ್ಯುಃ ಪ್ರಜಾಜೀವನಹೇತವಃ ॥ ೧೮೯ ॥**

ಅಸಿ ಮಷಿ ಕೃಷಿ ವಿದ್ಯಾ ವಾಣಿಜ್ಯ ಶಿಲ್ಪ ಈ ಆರು ಕರ್ಮಗಳು ಪ್ರಜೆಗಳ ಜೀವನಕ್ಕೆ ಕಾರಣಗಳಾಗಿರುವುವು.

**[೫]ತತ್ರ ವೃತ್ತಿಂ ಪ್ರಜಾನಾಂ ಸ ಭಗವಾನ್ಮತಿಕೌಶಲಾತ್ ।**
**ಉಪಾದಿಶತ್ಸರಾಗೋ ಹಿ ಸ ತದಾಸೀಜ್ಜಗದ್ಗುರುಃ ॥ ೧೯೦ ॥**

ಆಗ ಜಗದ್ಗುರುವಾದ ಆದಿಬ್ರಹ್ಮರು ವೀತರಾಗರಾಗಿರಲಿಲ್ಲವಾದುದರಿಂದ ತಮ್ಮ ಬುದ್ಧಿಕುಶಲತೆಯಿಂದ ಪ್ರಜೆಗಳಿಗೆ ಹಿಂದೆಹೇಳಿದ ಆರುಕರ್ಮಗಳಲ್ಲಿ ಜೀವನೋಪಾಯವನ್ನು ಉಪದೇಶಮಾಡಿದರು.

**ತತ್ರಾಸಿಕರ್ಮ ಸೇವಾಯಾಂ ಮಷಿರ್ಲಿಪಿವಿಧೌ ಸ್ಮೃತಾ ।**
**ಕೃಷಿರ್ಭೂಕರ್ಷಣೇ ಪ್ರೋಕ್ತಾ ವಿದ್ಯಾ ಶಾಸ್ತ್ರೋಪಜೀವನೇ ॥ ೧೯೧ ॥**

ಆ ಷಟ್ಕರ್ಮಗಳಲ್ಲಿ ಖಡ್ಗಧಾರಣೆಯನ್ನು ಮಾಡಿ ಪ್ರಜಾಸೇವೆಯಿಂದ ಜೀವನಮಾಡುವುದಕ್ಕೆ ಅಸಿಕರ್ಮವೆಂದು ಹೆಸರು. ಬರವಣಿಗೆಯಿಂದ ಜೀವನಮಾಡುವುದಕ್ಕೆ ಮಷಿಕರ್ಮವೆಂದು ಹೆಸರು. ಭೂಮಿಯನ್ನು ಉತ್ತು ಜೀವನಮಾಡುವುದಕ್ಕೆ ಕೃಷಿಕರ್ಮವೆಂದು ಹೆಸರು. ಶಾಸ್ತ್ರದಿಂದ ಜೀವನಮಾಡುವುದಕ್ಕೆ ವಿದ್ಯಾಕರ್ಮವೆಂದು ಹೆಸರು.

**ವಾಣಿಜ್ಯಂ ವಣಿಜಾಂ ಕರ್ಮ ಶಿಲ್ಪಂ ಸ್ಯಾತ್ಕರಕೌಶಲಮ್ ।**
**ತಚ್ಚ ಚಿತ್ರಕಲಾ[೬]ಪತ್ರಚ್ಛೇದಾದಿ ಬಹುಧಾ ಸ್ಮೃತಮ್ ॥ ೧೯೨ ॥**

ವೈಶ್ಯರ ವ್ಯಾಪರಕ್ಕೆ ವಾಣಿಜ್ಯವೆಂದು ಹೆಸರು. ಹಸ್ತಕುಶಲತೆಯಿಂದ ಮಾಡುವ ಕಾರ್ಯಕ್ಕೆ ಶಿಲ್ಪವೆಂದು ಹೆಸರು. ಆ ಶಿಲ್ಪವು ಚಿತ್ರಲೇಖನ ಮಕರಿಕಾಪತ್ರಚ್ಛೇದ ಮೊದಲಾಗಿ ಅನೇಕವಿಧವಾಗಿದೆ.

**ಉತ್ಪಾದಿತಾಸ್ತ್ರಯೋ ವರ್ಣಾಸ್ತದಾ ತೇನಾದಿವೇಧಸಾ ।**
**ಕ್ಷತ್ರಿಯಾ ವಣಿಜಃ ಶೂದ್ರಾಃ [೭]ಕ್ಷತತ್ರಾಣಾದಿಭಿರ್ಗುಣೈಃ ॥ ೧೯೩ ॥**

ಆಗ ಆದಿಬ್ರಹ್ಮರು ದುಃಖಿತಪ್ರಾಣಿರಕ್ಷಣಮೊದಲಾದ ಗುಣಗಳಿಂದ ಕ್ಷತ್ರಿಯ ವೈಶ್ಯ ಶೂದ್ರ ಈ ಮೂರು ವರ್ಣಾಶ್ರಮಗಳನ್ನು ನಿರ್ಮಾಣಮಾಡಿದರು.

**ಕ್ಷತ್ರಿಯಾಃ ಶಸ್ತ್ರಜೀವಿತ್ವಮನುಭೂಯ ತದಾಭವನ್ ।**
**ವೈಶ್ಯಾಶ್ಚ ಕೃಷಿವಾಣಿಜ್ಯಪಾಶುಪಾಲ್ಯೋಪಜೀವಿನಃ ॥ ೧೯೪ ॥**

ಆಗ ಶಸ್ತ್ರಧಾರಣವನ್ನು ಮಾಡಿ ಜೀವಿಸುತ್ತಿದ್ದವರು ಕ್ಷತ್ರಿಯರಾದರು. ಕೃಷಿ ವ್ಯಾಪಾರ ಪಶುಪಾಲನ ಈ ಮೂರರಿಂದ ಜೀವಿಸುತ್ತಿದ್ದವರು ವೈಶ್ಯರಾದರು.

೧ ನಗರಾಣಾಂ. ೨ ಪುರಾಣಿ ದಾರಯತಿ ವಿಭಜತೀತಿ ಪುರಂದರಃ. ೩ ಸ್ವರ್ಗಂ. ೪ ಸರ್ವಜ್ಞಸ್ಯ. ೫ ಷಟ್ಕರ್ಮವೃತ್ತಿಷು. ೬ ಮಕರಿಕಾಪತ್ರಚ್ಛೇದಾದಿ. ೭ ದುಃಖಿತತ್ರಾಣಾದಿಭಿಃ.

**[೧]ತೇಷಾಂ [೨]ಶುಶ್ರೂಷಣಾಚ್ಛೂದ್ರಾಸ್ತೇ ದ್ವಿಧಾ ಕಾರ್ವಕಾರವಃ ।**
**ಕಾರವೋ ರಜಕಾದ್ಯಾಃ ಸ್ಯುಸ್ತತೋಽನ್ಯೇ ಸ್ಯುರಕಾರವಃ ॥ ೧೮೫ ॥**

ಆ ಕ್ಷತ್ರಿಯವೈಶ್ಯರ ಸೇವೆಯನ್ನು ಮಾಡಿ ಜೀವಿಸುತ್ತಿದ್ದವರು ಶೂದ್ರರಾದರು. ಆ ಶೂದ್ರರಲ್ಲಿ ಕಾರು ಅಕಾರುಗಳೆಂದು ಎರಡು ಭೇದಗಳಿವೆ. ಅಗಸಮೊದಲಾದವರು ಕಾರುಗಳೆಂಬ ಶೂದ್ರರು. ಉಳಿದವರು ಅಕಾರುಗಳೆಂಬ ಶೂದ್ರರು.

**ಕಾರವೋಽಪಿ ಮತಾ ದ್ವೇಧಾ ಸ್ಪೃಶ್ಯಾಸ್ಪೃಶ್ಯವಿಕಲ್ಪತಃ ।**
**ತತ್ರಾ[೩]ಸ್ಪೃಶ್ಯಾಃ ಪ್ರಜಾಬಾಹ್ಯಾಃ[೪] ಸ್ಪೃಶ್ಯಾಃ ಸ್ಯುಃ [೫]ಕರ್ತಕಾದಯಃ ॥ ೧೮೬ ॥**

ಕಾರುಗಳೂ ಸ್ಪೃಶ್ಯರು ಅಸ್ಪೃಶ್ಯರು ಎಂದು ಎರಡು ಪ್ರಕಾರವಾಗಿದ್ದಾರೆ. ಅವರಲ್ಲಿ ಪ್ರಜಾಬಾಹ್ಯರಾದವರು ಅಸ್ಪೃಶ್ಯ ಶೂದ್ರರೆನಿಸುವರು. ಕ್ಷೌರಿಕ ಕುಂಭಕಾರ ಗಾಣಿಗ ಮೊದಲಾದವರು ಸ್ಪೃಶ್ಯಶೂದ್ರರೆನಿಸುವರು.

**ಯಥಾಸ್ವಂ ಸ್ವೋಚಿತಂ ಕರ್ಮ ಪ್ರಜಾ ದಧುರಸಂಕರಮ್ ।**
**ವಿವಾಹಜಾತಿಸಂಬಂಧವ್ಯವಹಾರಶ್ಚ [೬]ತನ್ಮತಮ್ ॥ ೧೮೭ ॥**

ಪ್ರಜೆಗಳು ಯೋಗ್ಯತಾನುಸಾರವಾಗಿ ತಮಗೆ ಉಚಿತವಾದ ಕಾರ್ಯವನ್ನು, ಒಂದು ವೃತ್ತಿಗೆ ಇನ್ನೊಂದು ವೃತ್ತಿಯನ್ನು ಬೆರಸದೆ ಮಾಡುತ್ತಿದ್ದರು. ವೃಷಭಸ್ವಾಮಿಯ ಅಭಿಪ್ರಾಯದಂತೆ ವಿವಾಹ ಸಂಬಂಧದ ವ್ಯವಹಾರವೂ ಜಾತಿಸಂಬಂಧದ ವ್ಯವಹಾರವೂ ನಡೆಯುತ್ತಿದ್ದುವು.

**ಯಾವತೀ ಜಗತೋ ವೃತ್ತಿ[೭]ರಪಾಪೋಪಹತಾ ಚ ಯಾ ।**
**ಸಾ ಸರ್ವಾಸ್ಯ ಮತೇನಾಸೀತ್ಸ ಹಿ ಧಾತಾ [೮]ಸನಾತನಃ ॥ ೧೮೮ ॥**

ವೃಷಭಸ್ವಾಮಿಯು ನಿತ್ಯನಾದ ಬ್ರಹ್ಮನಾಗಿದ್ದುದರಿಂದ ಪುಣ್ಯಯುಕ್ತವಾದ ಸಮಸ್ತಜಗದುತ್ಪತ್ತಿಯೂ ಈ ಆದಿಬ್ರಹ್ಮರ ಮತಾನುಸಾರವಾಗಿ ಆಯಿತು.

**ಯುಗಾದಿಬ್ರಹ್ಮಣಾ ತೇನ [೯]ಯದಿತ್ಥಂ ಸ ಕೃತೋ ಯುಗಃ ।**
**ತತಃ ಕೃತಯುಗಂ ನಾಮ್ನಾ ತಂ ಪುರಾಣವಿದೋ ವಿದುಃ ॥ ೧೮೯ ॥**

ಯುಗದ ಆದಿಬ್ರಹ್ಮರಾದ ವೃಷಭಸ್ವಾಮಿಯು ಹಿಂದೆಹೇಳಿದ ರೀತಿಯಾಗಿ ಯುಗವನ್ನು ಮಾಡಿದುದರಿಂದ ಆ ಯುಗವನ್ನು ಪುರಾಣಜ್ಞಾನಿಗಳು ಕೃತಯುಗ ವನ್ನಾಗಿ ತಿಳಿದರು.

**ಆಷಾಢಮಾಸಬಹುಲಪ್ರತಿಪದ್ದಿವಸೇ ಕೃತೀ ।**
**ಕೃತ್ವಾ ಕೃತಯುಗಾರಂಭಂ [೧೦]ಪ್ರಾಜಾಪತ್ಯಮುಪೇಯಿವಾನ್ ॥ ೧೯೦ ॥**

ಪುಣ್ಯಶಾಲಿಯಾದ ಸ್ವಾಮಿಯು ಆಷಾಢಬಹುಳ ಪಾಡ್ಯದ ದಿವಸ ಕೃತಯುಗದ ಆರಂಭವನ್ನು ಮಾಡಿ ''ಪ್ರಜಾಪತಿ'' ಯೆಂಬ ಹೆಸರನ್ನು ಗಳಿಸಿದರು.

**ಕಿಯತ್ಯಪಿ ಗತೇ ಕಾಲೇ ಷಟ್ಕರ್ಮವಿನಿಯೋಗತಃ ।**
**ಯದಾ ಸೌಸ್ಥಿತ್ಯ[೧೧]ಮಾಯಾತಾಃ ಪ್ರಜಾಃ ಕ್ಷೇಮೇಣ ಯೋಜಿತಾಃ ॥**

**ತದಾಸ್ಯಾವಿರಭೂ[೧೨]ದ್ದ್ಯಾವಾಪೃಥಿವ್ಯೋಃ ಪ್ರಾಭವಂ ಮಹತ್ ।**
**ಆಧಿರಾಜ್ಯೇಽಭಿಷಿಕ್ತಸ್ಯ ಸುರೈರಾಗತ್ಯ ಸತ್ವರಮ್ ॥ ೧೯೨ ॥**

ಷಟ್ಕರ್ಮಗಳ ವಿನಿಯೋಗದಿಂದ ಎಷ್ಟೋ ಕಾಲವು ಕಳೆದು ಸ್ವಾಮಿಯಿಂದ ಕ್ಷೇಮವನ್ನು ಹೊಂದಿಸಲ್ಪಟ್ಟ ಪ್ರಜೆಗಳು ಉತ್ತಮಸ್ಥಿತಿಯನ್ನು ಹೊಂದಿದಾಗ, ಶೀಘ್ರವಾಗಿ ದೇವತೆಗಳು ಬಂದು ಸ್ವಾಮಿಗೆ ಆಧಿರಾಜಪದವಿಯಲ್ಲಿ ಅಭಿಷೇಕವನ್ನು

೧ ಕ್ಷತ್ರಿಯವೈಶ್ಯಾನಾಂ. ೨ ಸೇವಾಯಾಃ ಸಕಾಶಾತ್. ೩ ರಜಕಸ್ತಕ್ಷಕಶ್ಚೈವಾಯಸ್ಕಾರೋ ಲೋಹ ಕಾರಕಃ । ಸ್ವರ್ಣಕಾರಶ್ಚ ಪಂಚೈತೇ ಭವಂತ್ಯಸ್ಪೃಶ್ಯಕಾರಕಾಃ. ೪ ಶಾಲಿಕೋ ಮಾಲಿಕಶ್ಚೈವ ಕುಂಭ ಕಾರಸ್ತಿಲಂತುದಃ । ನಾಪಿತಶ್ಚೇತಿಪಂಚಾಮೀ ಭವಂತಿ ಸ್ಪೃಶ್ಯಕಾರಕಾಃ. ೫ ನಾಪಿತಃ. ೬ ಪುರುನಾಥ ಮತಂ ಯಥಾ ತಥಾ. ೭ ಪುಣ್ಯಸಹಿತಾ. ೮ ನಿತ್ಯಃ. ೯ ಕಾರಣಾತ್. ೧೦ ಪ್ರಜಾಪತಿತ್ವಂ. ೧೧ ಗತಾಃ. ೧೨ ಆಕಾಶಭೂಮ್ಯೋಃ.

ಮಾಡಿದರು. ಆಗ ಸ್ವಾಮಿಗೆ ಅಂತರಿಕ್ಷದಲ್ಲಿಯೂ ಭೂಮಿಯಲ್ಲಿಯೂ ಮಹಾ ಪ್ರಭುತ್ವವುಂಟಾಯಿತು.

**ಸುರೈಃ ಕೃತಾದರೈರ್ದಿವ್ಯೈಃ ಸಲಿಲೈರಾದಿವೇಧಸಃ ।**
**ಕೃತೋಽಭಿಷೇಕ ಇತ್ಯೇವ ವರ್ಣನಾಸ್ತು ಕಿಮನ್ಯಯಾ ॥ ೧೯೩ ॥**

ಆದಿಬ್ರಹ್ಮರಿಗೆ ದೇವತೆಗಳು ಆದರಪೂರ್ವಕವಾಗಿ ದಿವ್ಯಜಲಗಳಿಂದ ಅಭಿಷೇಕ ವನ್ನು ಮಾಡಿದರು. ಇದೇ ವರ್ಣನೆಯಾಗಿರಲಿ. ಬೇರೆ ವರ್ಣನೆಯಿಂದೇನು ಪ್ರಯೋಜನ ? ವರ್ಣನೆಮಾಡಿ ತೀರದೆಂದರ್ಥವು.

**ತಥಾ[೧]ಪ್ಯನೂದ್ಯತೇ ಕಿಂಚಿತ್ತದ್ಗತಂ ವರ್ಣನಾಂತರಮ್ ।**
**[೨]ಸುಪ್ರತೀತಮಪಿ ಪ್ರಾಯೋ ಯನ್ನಾವೈತಿ [೩]ಪೃಥಗ್ಜನಃ ॥ ೧೯೪ ॥**

ಹಾಗಿದ್ದರೂ ಆ ಅಭಿಷೇಕಸಂಬಂಧವಾದ ಸ್ವಲ್ಪ ವರ್ಣನೆಯನ್ನು ಮಾಡುತ್ತೇವೆ. ಅದು ಪ್ರಸಿದ್ಧವಾಗಿದ್ದರೂ ಸಾಮಾನ್ಯಜನರಿಗೆ ಬಹುಶಃ ಗೊತ್ತಾಗುವುದಿಲ್ಲ.

**ತದಾ ಕಿಲ ಜಗದ್ವಿಶ್ವಂ ಬಭೂವಾನಂದನಿರ್ಭರಮ್ ।**
**ದಿವೋ[೪]ವಾತಾರಿಷುರ್ದೇವಾಃ [೫]ಪುರೋಧಾಯ ಪುರಂದರಮ್ ॥**

ಆ ಅಭಿಷೇಕಕಾಲದಲ್ಲಿ ಜಗತ್ತೆಲ್ಲವೂ ಆನಂದಭರಿತವಾಯಿತು. ದೇವೇಂದ್ರನನ್ನು ಮುಂದೆಮಾಡಿಕೊಂಡು ಸ್ವರ್ಗದಿಂದ ದೇವತೆಗಳು ಭೂಮಿಗವತರಿಸಿದರು.

**ಕೃತೋಪಶೋಭಮಭವತ್ಪುರಂ ಸಾಕೇತ[೬]ಸಾಹ್ವಯಮ್ ।**
**ಹರ್ಮ್ಯಾ[೭]ಗ್ರಭೂಮಿಕಾಬದ್ಧಕೇತುಮಾಲಾ[೮]ಕುಲಾಂಬರಮ್ ॥ ೧೯೬ ॥**

ದೊಡ್ಡಮನೆಗಳ ಶಿಖರಭಾಗದಲ್ಲಿ ಕಟ್ಟಿದ ಧ್ವಜಪತಾಕೆಗಳ ಸಾಲಿನಿಂದ ವ್ಯಾಪ್ತ ವಾದ ಆಕಾಶಪ್ರದೇಶವುಳ್ಳ ಸಾಕೇತವೆಂಬ ಪಟ್ಟಣವು ಅಲಂಕರಿಸಲ್ಪಟ್ಟಿತು.

**ತದಾನಂದಮಹಾಭೇರ್ಯಃ [೯]ಪ್ರಣೇದುರ್ನೃಪಮಂದಿರೇ ।**
**ಮಂಗಲಾನಿ ಜಗು[೧೦]ರ್ವಾರನಾರ್ಯೋ ನೇಟುಃ ಸುರಾಂಗನಾಃ ॥**

ಆಗ ರಾಜಭವನದಲ್ಲಿ ದೊಡ್ಡ ಆನಂದಭೇರಿಗಳು ಧ್ವನಿಮಾಡಿದುವು. ವೇಶ್ಯಾ ಸ್ತ್ರೀಯರು ಮಂಗಲಪದ್ಯಗಳನ್ನು ಹಾಡಿದರು. ದೇವಸ್ತ್ರೀಯರು ನರ್ತನವನ್ನು ಮಾಡಿದರು.

**ಸುರ[೧೧]ವೈತಾಲಿಕಾಃ ಪೇಠು[೧೨]ರುತ್ಸಾಹಾನ್ಸಹ ಮಂಗಲೈಃ ।**
**ಪ್ರಚಕ್ರುರಮರಾಸ್ತೋಷಾಜ್ಜಯ ಜೀವೇತಿ ಘೋಷಣಾಮ್ ॥ ೧೯೮ ॥**

ಸುತ್ತಿಪಾಠಕರಾದ ದೇವತೆಗಳು ಮಂಗಲಪದ್ಯಗಳೊಡನೆ ತಮ್ಮ ಉತ್ಸಾಹಗಳನ್ನು ಅಥವಾ ಸ್ವಾಮಿಯ ಬಲ ಕಥನವನ್ನು ಮಾಡಿದರು. ದೇವತೆಗಳು ಸಂತೋಷದಿಂದ ''ಜಯಶೀಲನಾಗು. ಬದುಕು.'' ಎಂದು ಘೋಷಣೆ ಮಾಡಿದರು.

**ಪ್ರಥಮಂ ಪೃಥಿವೀಮಧ್ಯೇ ಮೃತ್ಸ್ನಾರಚಿತವೇದಿಕೇ ।**
**ಸುರಶಿಲ್ಪಿಸಮಾರಬ್ಧ[೧೩]ಪರಾರ್ಧ್ಯಾನಂದಮಂಡಪೇ ॥ ೧೯೯ ॥**

ಮೊದಲು ಭೂಮಿಯ ಮಧ್ಯಭಾಗದಲ್ಲಿ ಮಣ್ಣಿನಿಂದ ಮಾಡಿದ ವೇದಿಕೆ ಯುಳ್ಳುದೂ ದೇವಶಿಲ್ಪಿಗಳಿಂದ ರಚಿತವೂ ಅನರ್ಘ್ಯವೂ ಆದ ಆನಂದಮಂಟಪ ದಲ್ಲಿರುವುದೂ

**ರತ್ನಚೂರ್ಣ[೧೪]ಚಯನ್ಯಸ್ತರಂಗವಲ್ಯುಪಚಿತ್ರಿತೇ ।**
**[೧೫]ಪ್ರತ್ಯಗ್ರೋದ್ಭಿನ್ನವಿಕ್ಷಿಪ್ತಸುಮನಃಪ್ರಕರಾಂಚಿತೇ ॥ ೨೦೦ ॥**

೧ ಉಚ್ಯತೇ. ೨ ಪ್ರಸಿದ್ಧಂ. ೩ ಸಾಧಾರಣಜನಃ. ೪ ಅವತರಂತಿ ಸ್ಮ, ಅವತಾರಿಷುರಿತ್ಯಪಿ ಪಾಠಃ. ೫ ಅಗ್ರೇ ಕೃತ್ವಾ. ೬ ನಾಮಸಹಿತಂ. ೭ ಶಿಖರಂ. ೮ ವ್ಯಾಪ್ತಂ. ೯ ದಧ್ವನುಃ. ೧೦ ವೇಶ್ಯಾಸ್ತ್ರಿಯಃ. ೧೧ ಬೋಧಕರಾಃ. ೧೨ ವೀರ್ಯಾಣಿ. ೧೩ ಅನರ್ಘ್ಯಃ. ೧೪ ಸಮೂಹನಿಕ್ಷಿಪ್ತಾ. ೧೫ ನವವಿಕಸಿತಾನಿ.

ರತ್ನಚೂರ್ಣಗಳ ಸಮೂಹದಿಂದ ಮಾಡಿದ ರಂಗವಲಿಯಿಂದ ನಾನಾವರ್ಣವುಳ್ಳದೂ ಹೊಸದಾಗಿ ಅರಳಿದ ಮತ್ತು ಚೆಲ್ಲಲ್ಪಟ್ಟ ಪುಷ್ಪಗಳ ಸಮೂಹದಿಂದ ವ್ಯಾಪ್ತವೂ

**ಮಣಿಕುಟ್ಟಿಮಸಂಕ್ರಾಂತಬಿಂಬವಮೌಕ್ತಿಕಲಂಬಿತೇ ।**
**ಲಸದ್ವಿತಾನಕಕ್ಷೌಮಚ್ಛಾಯಾಚಿತ್ರಿತರಂಗಕೇ ॥ ೨೦೧ ॥**

ರತ್ನದ ನೆಲಗಟ್ಟುಗಳಲ್ಲಿ ಸಂಬಂಧಿಸಿರುವ ಪ್ರತಿಬಿಂಬಗಳುಳ್ಳವೂ ತೂಗಲ್ಪಟ್ಟಿರುವುವೂ ಆದ ಮುತ್ತಿನ ಹಾರಗಳುಳ್ಳದೂ ಪ್ರಕಾಶಮಾನವಾದ ಸೂಕ್ಷ್ಮವಸ್ತ್ರದ ಮೇಲ್ಕಟ್ಟಿನ ನೆರಳಿನಿಂದ ನಾನಾವರ್ಣವಾದ ರಂಗವುಳ್ಳದೂ

**ಧೃತಮಂಗಲನಾಕಸ್ತ್ರೀರುದ್ಧಸಂಚಾರವರ್ತ್ಮನಿ ।**
**[೧]ಪರ್ಯಂತನಿಹಿತಾನಲ್ಪಮಂಗಲದ್ರವ್ಯಸಂಪದಿ ॥ ೨೦೨ ॥**

ಮಂಗಲದ್ರವ್ಯಗಳನ್ನು ಹಿಡಿದಿರುವ ದೇವಸ್ತ್ರೀಯರು ಆವರಿಸಿಕೊಂಡಿರುವ ಸಂಚಾರಮಾರ್ಗವುಳ್ಳದೂ ಸಮೀಪದಲ್ಲಿರಿಸಲ್ಪಟ್ಟ ಅನೇಕ ಮಂಗಲದ್ರವ್ಯಗಳ ಸಂಪತ್ತುಳ್ಳದೂ

**ಸುರವಾರವಧೂಹಸ್ತವಿಧೂತಚಲಚಾಮರೇ ।**
**ಅನ್ಯೋನ್ಯಹಸ್ತಸಂಕ್ರಾಂತನಾನಾಸ್ನಾನ[೨]ಪರಿಚ್ಛದೇ ॥ ೨೦೩ ॥**

ದೇವವೇಶ್ಯಾಸ್ತ್ರೀಯರ ಕೈಗಳಿಂದ ಕೊಡಹಲ್ಪಟ್ಟ ಚಂಚಲವಾದ ಚಾಮರಗಳುಳ್ಳದೂ ಪ್ರತಿಯೊಬ್ಬರ ಕೈಯಲ್ಲಿಯೂ ಸಂಬಂಧಿಸಲ್ಪಟ್ಟ ನಾನಾವಿಧವಾದ ಸ್ನಾನಸಾಮಗ್ರಿಯುಳ್ಳದೂ

**ಸಲೀಲಪದವಿನ್ಯಾಸಸಂಚರನ್ನಾಕಕಾಮಿನೀ-**
**ರಣನ್ನೂಪುರಝುಂಕಾರಮುಖರೀಕೃತದಿಙ್ಮುಖೇ ॥ ೨೦೪ ॥**

ಲೀಲೆಯಿಂದ ಹೆಜ್ಜೆಗಳನ್ನಿರಿಸಿ ಸಂಚರಿಸುತ್ತಿರುವ ದೇವಸ್ತ್ರೀಯರ ಶಬ್ದಮಾಡುತ್ತಿರುವ ಪಾದಕಡಗಗಳ ಝೇಂಕಾರದಿಂದ ಶಬ್ದಮಾಡಲ್ಪಟ್ಟ ದಿಙ್ಮುಖಗಳುಳ್ಳದೂ

**ನೃಪಾಂಗಣಮಹೀರಂಗೇ ಧೃತಮಂಗಲಸಂಗ್ರಹೇ ।**
**ನಿವೇಶ್ಯ ಪ್ರಾಙ್ಮುಖಂ ದೇವಮುಚಿತೇ ಹರಿವಿಷ್ಟರೇ ॥ ೨೦೫ ॥**

ರಾಜಾಂಗಣದ ಭೂಮಿಯೆಂಬ ರಂಗದಲ್ಲಿ ಧರಿಸಲ್ಪಟ್ಟ ಮಂಗಲದ್ರವ್ಯಗಳ ಸಂಗ್ರಹ(ಸಮೂಹ)ವುಳ್ಳದೂ ಉಚಿತವೂ ಆದ ಸಿಂಹಪೀಠದಲ್ಲಿ ಪೂರ್ವಾಭಿಮುಖವಾಗಿ ಸ್ವಾಮಿಯನ್ನು ಕುಳ್ಳಿರಿಸಿ

**ಗಂಧರ್ವಾರಬ್ಧಸಂಗೀತಮೃದಂಗಾಮಂದ್ರನಿಸ್ವನೇ ।**
**ತ್ರಿವಿಷ್ಟಪಕುಟೀ[೩]ಕ್ರೋಡಮಾಕ್ರಾಮತಿ ಸದಿಕ್ತಟಮ್ ॥ ೨೦೬ ॥**

ಗಂಧರ್ವರಿಂದ ಆರಂಭಿಸಲ್ಪಟ್ಟುದೂ ಗಂಭೀರವೂ ಆದ ಸಂಗೀತದ ಮತ್ತು ಮದ್ದಳೆಯ ಶಬ್ದಗಳು ದಿಕ್ಕುಗಳುಸಹಿತವಾದ ಮೂರುಲೋಕವೆಂಬ ಪರ್ಣಶಾಲೆಯ ಮಧ್ಯಭಾಗವನ್ನು ಆಕ್ರಮಿಸುತ್ತಿರಲು,

**ನೃತ್ಯನ್ನಾಕಾಂಗನಾ[೪]ಪಾಠ್ಯನಿಸ್ವನಾನುಗತಸ್ವರಮ್ ।**
**ಗಾಯಂತೀಷು ಯಶೋ ಜಿಷ್ಣೋಃ ಕಿನ್ನರೀಷು ಶ್ರವಃಸುಖಮ್ ॥**

ಕಿನ್ನರ ಸ್ತ್ರೀಯರು ನರ್ತನಮಾಡುತ್ತಿರುವ ದೇವಸ್ತ್ರೀಯರ ಗದ್ಯಪದ್ಯಗಳ ಶಬ್ದಕ್ಕನುಸಾರವಾದ ಸ್ವರದಿಂದ ಜಯಶೀಲನಾದ ಸ್ವಾಮಿಯ ಯಶಸ್ಸನ್ನು ಕಿವಿಗೆ ಇಂಪಾಗಿ ಗಾನಮಾಡುತ್ತಿರಲು

೧ ರಂಗಮಂಡಪೇ. ೨ ಪರಿಕರೇ. ೩ ಮಧ್ಯಂ. ೪ ಗದ್ಯಪದ್ಯಾದೀನಾಂ.

**ತತೋಭಿಷೇಚನಂ ಭರ್ತುಃ ಕರ್ತುಮಾರೇಭಿರೇಮರಾಃ ।**
**ಶಾತಕುಂಭವಿನಿರ್ಮಾಣೈಃ ಕುಂಭೈಸ್ತೀರ್ಥಾಂಬುಸಂಭೃತೈಃ ॥ ೨೦೮ ॥**

ದೇವತೆಗಳು ತೀರ್ಥಜಲಗಳಿಂದ ತುಂಬಲ್ಪಟ್ಟ ಸುವರ್ಣಕುಂಭಗಳಿಂದ ಸ್ವಾಮಿಗೆ ಅಭಿಷೇಕವನ್ನು ಮಾಡುವುದಕ್ಕೆ ಪ್ರಾರಂಭಿಸಿದರು.

**ಗಂಗಾಸಿಂಧ್ವೋರ್ಮಹಾನದ್ಯೋರಪ್ರಾಪ್ಯ ಧರಣೀತಲಮ್ ।**
**ಪ್ರಪಾತೇ ಹಿಮವತ್ಕೂಟಾದ್ಯದಂಬು ಸಮುಪಾಹೃತಮ್ ॥ ೨೦೯ ॥**

ಹಿಮವತ್ಪರ್ವತದಿಂದ ಬೀಳುತ್ತಿರುವ ಗಂಗಾಸಿಂಧುನದಿಗಳ ಜಲಪಾತದಿಂದ ಭೂಮಿಗೆ ಬೀಳುವುದಕ್ಕೆ ಮೊದಲೇ ತಂದ ಜಲವೂ

**ಯಚ್ಚ ಗಾಂಗಂ ಪಯಃ ಸ್ವಚ್ಛಂ ಗಂಗಾಕುಂಡಾ[೧]ತ್ಸಮಾಹೃತಮ್ ।**
**ಸಿಂಧುಕುಂಡಾತ್ಸಮಾನೀತಂ ಸಿಂಧೋರ್ಯ[೨]ತ್ಕ[೩]ಮಪಂಕಕಮ್ ॥**

ಗಂಗಾಕುಂಡದಿಂದ ತಂದ ಸ್ವಚ್ಛವಾದ ಗಂಗಾನದಿಯ ಜಲವೂ ಸಿಂಧುಕುಂಡದಿಂದ ತಂದ ನಿರ್ಮಲವಾದ ಸಿಂಧುನದಿಯ ಜಲವೂ

**ಶೇಷವ್ಯೋಮಾಪಗಾನಾಂ ಚ ಸಲಿಲಂ ಯ[೪]ದನಾವಿಲಮ್ ।**
**[೫]ತತ್ತತ್ಕುಂಡತದಾಪಾತ[೬]ಸಮಾಸಾದಿತಜನ್ಮಕಮ್ ॥ ೨೧೧ ॥**

ಉಳಿದ ರೋಹಿದ್ರೋಹಿತಾಸ್ಯಾಮೊದಲಾದ ನದಿಗಳ ಆಯಾ ಕುಂಡಗಳಲ್ಲಿ ಉಂಟಾದ ನಿರ್ಮಲವಾದ ಜಲವೂ

**ಶ್ರೀದೇವೀಭಿರ್ಯದಾನೀತಂ ಪದ್ಮಾದಿಸರಸಾಂ ಪಯಃ ।**
**ಹೇಮಾರವಿಂದಕಿಂಜಲ್ಕಪುಂಜಸಂಜಾತರಂಜನಮ್ ॥ ೨೧೨ ॥**

ಶ್ರೀಹ್ರೀಮೊದಲಾದ ದೇವಿಯರಿಂದ ತರಲ್ಪಟ್ಟುದೂ ಸುವರ್ಣತಾವರೆಯ ಕುಸುಮಗಳ ಸಮೂಹದಿಂದುಂಟಾದ ವರ್ಣವುಳ್ಳದೂ ಆದ ಪದ್ಮ ಮಹಾಪದ್ಮ ಮೊದಲಾದ ಸರೋವರಗಳ ಜಲವೂ

**ಯದ್ವಾರಿ [೭]ಸಾರಸಂ ಹಾರಿ ಕಲ್ಹಾರ[೮]ಸ್ವಾದು ಸೋತ್ಪಲಮ್ ।**
**ಯಚ್ಚ [೯]ತನ್ಮೌಕ್ತಿಕೋದ್ಗಾರಶಾ(ತಾ)ರಂ [೧೦]ಲಾವಣಸೈಂಧವಮ್ ॥**

ಕನ್ನೈದಿಲೆಯ ಪುಷ್ಪಗಳುಳ್ಳದೂ ಕಲ್ಹಾರ ಪುಷ್ಪಗಳಿಂದ ಮನೋಹರವೂ ಸರೋವರಸಂಬಂಧಿಯೂ ಆದ ಜಲವೂ ಸಮುದ್ರದ ಮುತ್ತುಗಳಿಂದ ನಾನಾವರ್ಣವಾದ ಲವಣಸಮುದ್ರದ ಜಲವೂ

**ಯಸ್ತಾ ನಂದೀಶ್ವರದ್ವೀಪೇ ವಾಪ್ಯೋ ನಂದೋತ್ತರಾದಯಃ ।**
**ಸುಪ್ರಸನ್ನೋದಕಾಸ್ತಾಸಾ[೧೧]ಮಾಪೋ ಯಾಶ್ಚ ವಿಕಲ್ಮಷಾಃ ॥ ೨೧೪ ॥**

ನಂದೀಶ್ವರದ್ವೀಪದಲ್ಲಿ ನಿರ್ಮಲವಾದ ಜಲವುಳ್ಳ ನಂದೋತ್ತರಮೊದಲಾದ ಬಾವಿಗಳಿಂದ ತರಲ್ಪಟ್ಟುದೂ ಕಲ್ಮಷರಹಿತವೂ ಆದ ಜಲವೂ

**ಯಚ್ಚಾಂಭಃ ಸಂಭೃತಂ ಕ್ಷೀರಸಿಂಧೋರ್ನಂದೀಶ್ವರಾರ್ಣವಾತ್ ।**
**ಸ್ವಯಂಭೂರಮಣಾಬ್ಧೇಶ್ಚ ದಿವ್ಯೈಃ ಕುಂಭೈರ್ಹಿರಣ್ಮಯೈಃ ॥ ೨೧೫ ॥**

ಕ್ಷೀರಸಮುದ್ರದಿಂದಲೂ ನಂದೀಶ್ವರಸಮುದ್ರದಿಂದಲೂ ಸ್ವಯಂಭೂರಮಣಸಮುದ್ರದಿಂದಲೂ ತರಲ್ಪಟ್ಟುದೂ ಶ್ರೇಷ್ಠವೂ ಬಂಗಾರಮಯವೂ ಆದ ಕುಂಭಗಳಲ್ಲಿ ತುಂಬಲ್ಪಟ್ಟಿರುವುದೂ ಆದ ನೀರೂ

**ಇ[೧೨]ತ್ಯಾಮ್ನಾತೈರ್ಜಲೈರೇಭಿರಭಿಷಿಕ್ತೋ ಜಗದ್ಗುರುಃ ।**
**ಸ್ವಯಂ ಪೂತತಮೈರಂಗೈರಪುನಾ[೧೩]ತ್ತಾನಿ ಕೇವಲಮ್ ॥ ೨೧೬ ॥**

೧ ಸಮಾನೀತಂ. ೨ ಜಲಂ. ೩ ನಿರ್ದೋಷಂ. ೪ ಅಕಲುಷಂ. ೫ ತಾನಿ ತಾನಿ ಚ ತಾನಿ ಕುಂಡಾನಿ ಚ. ೬ ಸಂಪ್ರಾಪ್ತಜನನಂ. ೭ ಸರಸ್ಸಂಬಂಧಿ. ೮ ಮನೋಹರಂ. ೯ ಸಮುದ್ರಮುಕ್ತಾಫಲಶಬಲಂ. ೧೦ ಲವಣಸಿಂಧೋಃ ಸಂಬಂಧಿ. ೧೧ ಉಪಾನೀತಾ ಇತ್ಯಧ್ಯಾಹಾರಃ. ೧೨ ಆಖ್ಯಾತೈಃ. ೧೩ ಜಲಾನಿ.

ಈ ಪ್ರಕಾರವಾಗಿ ಈ ಮೇಲೆ ಹೇಳಿದ ಜಲಗಳಿಂದ ಅಭಿಷೇಕ ಮಾಡಲ್ಪಟ್ಟ ಜಗದ್ಗುರುವು, ತಾವೇ ಅತ್ಯಂತ ಪವಿತ್ರಗಳಾದ ತನ್ನ ಅವಯವಗಳಿಂದ ಆ ಜಲಗಳನ್ನೇ ಪವಿತ್ರಮಾಡಿದನು. ಜಲಗಳಿಂದ ಸ್ವಾಮಿಯು ಪವಿತ್ರರಾಗಲಿಲ್ಲ, ಸ್ವಾಮಿಯ ಪವಿತ್ರವಾದ ಅಂಗಸ್ಪರ್ಶದಿಂದ ಜಲಗಳೇ ಪವಿತ್ರಗಳಾದುವೆಂದು ಭಾವವು.

**ಸುರೈರಾವರ್ಜಿತಾ ವಾರಾಂ ಧಾರಾ ಮೂರ್ಧ್ನಿ ವಿಭೋರಭಾತ್ ।**
**ರಾಜಲಕ್ಷ್ಮ್ಯಾಃ [೧]ನಿವೇಶೋಽಯಮಿತಿ ಧಾರೇವ ಪಾತಿತಾ ॥ ೨೧೭ ॥**

ಸ್ವಾಮಿಯ ಮಸ್ತಕದಲ್ಲಿ ದೇವತೆಗಳು ಸುರಿದ ಜಲಧಾರೆಯು, ಇದು ರಾಜ ಲಕ್ಷ್ಮಿಯ ವಿವಾಹ ಅಥವಾ ಆಶ್ರಯವೆಂದು ತೋರಿಸಿ ಸುರಿದ ಜಲಧಾರೆಯಂತೆ, ಶೋಭಿಸಿತು.

**ಚರಾಚರಗುರೋರ್ಮೂರ್ಧ್ನಿ ಪತಂತ್ಯೋ ರೇಜುರಪ್ಛಟಾಃ ।**
**ಜಗತ್ತಾಪಚ್ಛಿದಃ ಸ್ವಚ್ಛಾ ಗುಣಾನಾಮಿವ ಸಂಪದಃ ॥ ೨೧೮ ॥**

ಚರಾಚರಪದಾರ್ಥಗಳಿಗೆ ಗುರುವಾದ ಆದಿಬ್ರಹ್ಮರ ಮಸ್ತಕದಲ್ಲಿ ಬಿದ್ದ ಜಲ ಧಾರೆಗಳು, ಜಗತ್ತಿನ ಸಂತಾಪವನ್ನು ನಾಶಮಾಡುವ ಸ್ವಾಮಿಯ ಗುಣಗಳ ಸ್ವಚ್ಛವಾದ ಸಂಪತ್ತುಗಳಂತೆ, ಪ್ರಕಾಶಿಸಿದುವು.

**ಸುರೇಂದ್ರೈರಭಿಷಿಕ್ತಸ್ಯ ಸಲಿಲೈಃ [೨]ಸೌರಸೈಂಧವೈಃ ।**
**ನಿಸರ್ಗಶುಚಿಗಾತ್ರಸ್ಯ ಪರಾಶುದ್ಧಿರಭೂದ್ವಿಭೋಃ ॥ ೨೧೯ ॥**

ದೇವತೆಗಳಿಂದ ಗಂಗಾನದಿಯ ಸಂಬಂಧವಾದ ಜಲಗಳಿಂದ ಅಭಿಷೇಕ ಮಾಡ ಲ್ಪಟ್ಟ ಸ್ವಾಮಿಯ ಸ್ವಭಾವದಿಂದ ನಿರ್ಮಲವಾದ ಶರೀರಕ್ಕೆ ಅಧಿಕವಾದ ಶುದ್ಧಿ ಯುಂಟಾಯಿತು.

**ನಾಕೀಂದ್ರಾಃ ಕ್ಷಾಲಯಾಂಚಕ್ರುರ್ವಿಭೋರ್ನಾಂಗಾನಿ ಕೇವಲಮ್ ।**
**ಪ್ರೇಕ್ಷಕಾಣಾಂ ಮನೋವೃತ್ತಿರ್ನೇತ್ರಾ[೩]ಣ್ಯಪಘನಾನ್ಯಪಿ ॥ ೨೨೦ ॥**

ಆಗ ದೇವೇಂದ್ರರು ಸ್ವಾಮಿಯ ಅವಯವಗಳನ್ನು ತೊಳೆದುದು ಮಾತ್ರವಲ್ಲದೆ ಅಭಿಷೇಕವನ್ನು ನೋಡುತ್ತಿದ್ದವರ ಮನೋವೃತ್ತಿಗಳನ್ನೂ ಕಣ್ಣುಗಳನ್ನೂ ಶರೀರ ಗಳನ್ನೂ ತೊಳೆದರು. ಸ್ವಾಮಿಯ ಅಭಿಷೇಕವನ್ನು ನೋಡಿ ಪ್ರೇಕ್ಷಕರು ಸರ್ವಭಾಗ ದಲ್ಲಿಯೂ ಪವಿತ್ರರಾದರೆಂದು ಭಾವವು.

**ನೃತ್ಯತ್ಸುರಾಂಗನಾಪಾಂಗಶರಾಸ್ತಸ್ಮಿನ್ನ್ವವೇಂಭಸಾಮ್ ।**
**ಪಾಯಿತಾ [೪]ನು ಜಲಂ ತೀವ್ರಂ [೫]ಯಚ್ಚೇತಾಂಸ್ಯ[೬]ಭಿದನ್ನೃಣಾಮ್ ॥**

ನರ್ತನಮಾಡುತ್ತಿದ್ದ ದೇವಸ್ತ್ರೀಯರ ಕಡೆಕಣ್ಣಿನ ನೋಟಗಳೆಂಬ ಬಾಣಗಳು, ಸ್ವಾಮಿಯ ಅಭಿಷೇಕಜಲಗಳ ಆ ಪ್ರವಾಹದಲ್ಲಿ ಹೆಚ್ಚಾಗಿ ನೀರುಕುಡಿಸಲ್ಪಟ್ಟವೆಯೋ ಎಂಬಂತೆ, ಮನುಷ್ಯರ ಮನಸ್ಸುಗಳನ್ನು ಭೇದಿಸಿದುವು. ಬಾಣವನ್ನು ಮಾಡುವಾಗ ಕಾಯಿಸಿ ಹದವಾಗಿ ನೀರನ್ನು ಕೊಟ್ಟರೆ ಅದು ಹರಿತವಾಗುವುದು ಪ್ರಸಿದ್ಧವಾಗಿದೆ.

**ಜಲೈ[೭]ರನಾವಿಲೈರ್ಭರ್ತುರಂಗಸಂಗಾತ್ಪವಿತ್ರಿತೈಃ ।**
**ಧರಾಕ್ರಾಂತಾ ಧ್ರುವಂ [೮]ದಿಷ್ಟ್ಯಾ ವರ್ಧಿತಾ ಸ್ವಾಮಿಸಂಪದಾ ॥ ೨೨೨ ॥**

ಸ್ವಾಮಿಯ ಶರೀರಸಂಬಂಧದಿಂದ ಪವಿತ್ರವೂ ಕಲ್ಮಷರಹಿತವೂ ಆದ ಜಲಗಳಿಂದ ಆಕ್ರಮಿಸಲ್ಪಟ್ಟ ಪೃಥ್ವಿಯು ಸ್ವಾಮಿಯ ಸಂಪತ್ತನ್ನು ಹೊಂದಿ ಸಂತೋಷದಿಂದ ಉಬ್ಬಿದಂತೆ ಕಾಣುತ್ತಿದ್ದಿತು.

**ಕೃತಾಭಿಷೇಕೋ ರುರುಚೇ ಭಗವಾನ್ಸುರನಾಯಕೈಃ ।**
**ಹೈಮೈಃ ಕುಂಭೈರ್ಘನೈಃ ಸಾಂಧ್ಯೈರ್ಯಥಾ ಮಂದರಭೂಧರಃ ॥ ೨೨೩ ॥**

ದೇವೇಂದ್ರರಿಂದ ಸುವರ್ಣಕುಂಭಗಳಿಂದ ಅಭಿಷೇಕಮಾಡಲ್ಪಟ್ಟ ಭಗವಂತನು, ಸಂಧ್ಯಾಕಾಲದ ಮೇಘಗಳಿಂದ ಅಭಿಷೇಕಮಾಡಲ್ಪಟ್ಟ ಮಹಾಮೇರುಪರ್ವತದಂತೆ, ಪ್ರಕಾಶಿಸಿದನು.

**ನೃಪಾ ಮೂರ್ಧಾಭಿಷಿಕ್ತಾ ಯೇ ನಾಭಿರಾಜಪುರಃಸರಾಃ ।**
**ರಾಜವದ್ರಾಜಸಿಂಹೋಽಯಮಭ್ಯಷಿಚ್ಯತ ತೈಃ ಸಮಮ್ ॥ ೨೨೪ ॥**

ಪಟ್ಟಾಭಿಷಿಕ್ತರಾದ ನಾಭಿರಾಜಮೊದಲಾದ ರಾಜರು ರಾಜನಿಗೆ ಅಭಿಷೇಕ ಮಾಡುವಂತೆ, ಈ ಶ್ರೇಷ್ಠನಾದ ರಾಜ(ಸ್ವಾಮಿ)ನಿಗೆ ಎಲ್ಲರು ಒಂದೇಸರ್ತಿ ಅಭಿಷೇಕ ಮಾಡಿದರು.

**ಪೌರಾಶ್ಚ ನಲಿನೀಪತ್ರಪುಟೈಃ ಕುಂಭೈಶ್ಚ ಮಾರ್ತಿಕೈಃ ।**
**ಸಾರವೇಣಾಂಬುನಾ ಚಕ್ರುರ್ಭರ್ತುಃ ಪಾದಾಭಿಷೇಚನಮ್ ॥ ೨೨೫ ॥**

ಪುರನಿವಾಸಿಗಳೂ ತಾವರೆಯೆಲೆಗಳ ದೊನ್ನೆಗಳಿಂದಲೂ ಮಣ್ಣಿನ ಕುಂಭ ಗಳಿಂದಲೂ ಸರಯೂನದಿಯ ನೀರನ್ನು ತಂದು ಸ್ವಾಮಿಯ ಪಾದಗಳಿಗೆ ಅಭಿ ಷೇಕಮಾಡಿದರು.

**ಮಾಗಧಾದ್ಯಾಶ್ಚ [೧]ವನ್ಯೇಂದ್ರಾ[೨]ಸ್ತ್ರಿಜ್ಞಾನಧರ[೩]ಮಾರ್ಚಯನ್ ।**
**ನಾಥೋಽಸ್ಮದ್ವಿಷಯಸ್ಯೇತಿ ಪ್ರೀತಾಃ ಪುಣ್ಯಾಭಿಷೇಚನೈಃ ॥ ೨೨೬ ॥**

ಮಾಗಧಮೊದಲಾದ ವ್ಯಂತರೇಂದ್ರರೂ "ನಮ್ಮ ದೇಶದ ಸ್ವಾಮಿ" ಎಂದು ಸಂತುಷ್ಟರಾಗಿ ಪುಣ್ಯಕರವಾದ ಅಭಿಷೇಕಗಳಿಂದ ಮತಿಶ್ರುತಾವಧಿಗಳೆಂಬ ಮೂರು ಜ್ಞಾನಧಾರಕನಾದ ಸ್ವಾಮಿಯನ್ನು ಪೂಜಿಸಿದರು.

**ಪೂತಸ್ತೀರ್ಥಾಂಬುಭಿಃ ಸ್ನಾತಃ ಕಷಾಯಸಲಿಲೈಃ ಪುನಃ ।**
**ಧೌತೋ ಗಂಧಾಂಬುಭಿ[೪]ರ್ದಿವ್ಯೈರಸ್ನಾಪಿ [೫]ಚರಮಂ ವಿಭುಃ ॥ ೨೨೭ ॥**

ಪವಿತ್ರನಾದ ಸ್ವಾಮಿಯು ತೀರ್ಥೋದಕಗಳಿಂದ ಸ್ನಾನಮಾಡಿಸಲ್ಪಟ್ಟನಂತರ ಕಷಾಯಜಲಗಳಿಂದ ತೊಳೆಯಲ್ಪಟ್ಟನು. ಕೊನೆಗೆ ಶ್ರೇಷ್ಠವಾದ ಗಂಧೋದಕಗಳಿಂದ ಸ್ನಾನಮಾಡಿಸಲ್ಪಟ್ಟನು.

**ಕೃತಾವಗಾಹನೋ ಭೂಯೋ ಹೈಮೇ ಸ್ನಾನೋದಕುಂಡಕೇ ।**
**ಸುಖೋಷ್ಣೈಃ ಸಲಿಲೈರ್ಧಾತಾ ಸುಖಮಜ್ಜನಮನ್ವಭೂತ್ ॥ ೨೨೮ ॥**

ಆದಿಬ್ರಹ್ಮರು ಬಂಗಾರದಿಂದ ಮಾಡಿದ ಸ್ನಾನಜಲದ ಕುಂಡದಲ್ಲಿ ಮುಳುಗಿ ಸುಖವಾದ ಉಷ್ಣವುಳ್ಳ ನೀರಿನಿಂದ ಪುನಃ ಸುಖಸ್ನಾನವನ್ನನುಭವಿಸಿದರು.

**ಸ್ನಾನಾಂತೋಜ್ಝಿತವಿಕ್ಷಿಪ್ತಮಾಲ್ಯಾಂಶುಕವಿಭೂಷಣೈಃ ।**
**ಭರ್ತುಃ ಪ್ರಾಪ್ತಾಂಗಸಂಸ್ಪೃಷ್ಟಿದಾಯೇವಾಸೀದ್ಧರಾಂಗನಾ ॥ ೨೨೯ ॥**

ಸ್ನಾನವಾದ ಮೇಲೆ ತೆಗೆದಿಟ್ಟ ಮಾಲಿಕೆ ವಸ್ತ್ರ ಆಭರಣ ಇವುಗಳಿಂದ ಭೂಮಿ ಯೆಂಬ ಸ್ತ್ರೀಯು ಸ್ವಾಮಿಯಿಂದ ಅಂಗಸ್ಪರ್ಶವೆಂಬ ದ್ರವ್ಯವನ್ನು ಪಡೆದವ ಳಂತಿದ್ದಳು. ಪತಿಯಿಂದ ಪತ್ನಿಯು ಆಭರಣಾದಿಪದಾರ್ಥಗಳನ್ನು ಹೊಂದು ವಂತಿದ್ದಿತೆಂದು ಭಾವವು.

**ಸುಸ್ನಾನಮಂಗಲಾನ್ಯುಚ್ಚೈಃ ಪಠತ್ಸು ಸುರವಂದಿಷು ।**
**ರಾಜ್ಯಲಕ್ಷ್ಮೀ[೬]ಸಮುದ್ವಾಹಸ್ನಾನಂ [೭]ನಿರವಿಶದ್ವಿಭುಃ ॥ ೨೩೦ ॥**

ಸ್ತುತಿಪಾಠಕರಾದ ದೇವತೆಗಳು ಸ್ನಾನಕಾಲದಲ್ಲಿ ಹೇಳುವ ಮಂಗಲಪದ್ಯಗಳನ್ನು ಗಟ್ಟಿಯಾಗಿ ಪಠನಮಾಡುತ್ತಿರುವಾಗ ಸ್ವಾಮಿಯು ರಾಜ್ಯಲಕ್ಷ್ಮಿಯ ವಿವಾಹ ಸ್ನಾನವನ್ನನುಭವಿಸಿದರು.

೧ ವಿವಾಹಃ, ಆಶ್ರಯೋ ವಾ. ೨ ಸುರಸಿಂಧುಸಂಬಂಧಿಭಿಃ. ೩ ಶರೀರಾಣಿ. ೪ ಇವ. ೫ ಕಾರಣಾತ್. ೬ ವಿದಾರಯಂತಿ ಸ್ಮ. ೭ ಅಕಲ್ಮಷೈಃ. ೮ ಸಂತೋಷೇಣ.

೧ ವ್ಯಂತರೇಂದ್ರಾಃ. ೨ ಜಿನಂ. ೩ ಪೂಜಯಾಮಾಸುಃ. ೪ ದ್ರವ್ಯೈರಿತ್ಯಪಿ ಪಾಠಃ. ೫ ಪಶ್ಚಾತ್. ೬ ವಿವಾಹಃ. ೭ ಅನ್ವಭವತ್.

**ಅಥ ನಿರ್ವರ್ತಿತಸ್ನಾನಂ ಕೃತ[1]ನೀರಾಜನಂ ವಿಭುಮ್ ।**
**[2]ಸ್ವರ್ಭುವೋ ಭೂಷಯಾಮಾಸುರ್ದಿವ್ಯೈಃ ಸ್ರಗ್ಭೂಷಣಾಂಬರೈಃ ॥**

ತರುವಾಯ ಸ್ನಾನವನ್ನು ಪೂರೈಸಿದ ಸ್ವಾಮಿಗೆ ದೇವಸ್ತ್ರೀಯರು ಆರತಿಯನ್ನೆತ್ತಿದರು. ದೇವತೆಗಳು ದೇವಲೋಕ ಸಂಬಂಧವಾದ ಪುಷ್ಪಮಾಲಿಕೆ ಆಭರಣ ವಸ್ತ್ರ ಇವುಗಳಿಂದ ಸ್ವಾಮಿಯನ್ನು ಅಲಂಕರಿಸಿದರು.

**ನಾಭಿರಾಜಃ ಸ್ವಹಸ್ತೇನ ಮೌಲಿಮಾರೋಪಯತ್ಪ್ರಭೋಃ ।**
**ಮಹಾಮುಕುಟಬದ್ಧಾನಾಮಧಿರಾಡ್ಭಗವಾನಿತಿ ॥ ೨೩೨ ॥**

"ಭಗವಂತನು ಮಹಾಮುಕುಟಬದ್ಧರಾದ ರಾಜರಿಗೆ ಪ್ರಭು" ವೆಂದು ನಾಭಿರಾಜನು ತನ್ನ ಕೈಯಿಂದ ಸ್ವಾಮಿಗೆ ಕಿರೀಟವನ್ನಿಟ್ಟನು.

**ಪಟ್ಟಬಂಧೋ ಜಗದ್ಬಂಧೋರ್ಲಲಾಟೇ [3]ವಿನಿವೇಶಿತಃ ।**
**ಬಂಧನಂ ರಾಜ್ಯಲಕ್ಷ್ಮ್ಯಾಃ [4]ಸ್ವಿ[5]ದ್ಗತ್ವಯೋಃ [6]ಸ್ಥೈರ್ಯಸಾಧನಮ್ ॥**

ಗಮನಶೀಲ(ಚಂಚಲ)ಳಾದ ರಾಜ್ಯಲಕ್ಷ್ಮಿಯ ಸ್ಥಿರತ್ವಕ್ಕೆ ಕಾರಣವಾದ ಬಂಧನದಂತೆ, ಜಗದ್ಬಂಧುವಾದ ಸ್ವಾಮಿಯ ಹಣೆಯಲ್ಲಿ ಪಟ್ಟಬಂಧವು ಸ್ಥಾಪಿಸಲ್ಪಟ್ಟಿತು.

**ಸ್ರಗ್ವೀ ಸದಂಶುಕಃ ಕರ್ಣದ್ವಯೋಲ್ಲಸಿತಕುಂಡಲಃ ।**
**ದಧಾನೋ ಮುಕುಟಂ ಮೂರ್ಧ್ನಾ ಲಕ್ಷ್ಮ್ಯಾಃ ಕ್ರೀಡಾಚಲಾಯಿತಮ್ ॥**

ಪುಷ್ಪಮಾಲಿಕೆಯನ್ನು ಧರಿಸಿರುವವನೂ ಉತ್ತಮವಾದ ವಸ್ತ್ರವುಳ್ಳವನೂ ಎರಡು ಕಿವಿಗಳಲ್ಲಿ ಪ್ರಕಾಶಮಾನವಾದ ಕುಂಡಲಗಳುಳ್ಳವನೂ ಮಸ್ತಕದಲ್ಲಿ ಲಕ್ಷ್ಮೀದೇವಿಯ ಕ್ರೀಡಾಪರ್ವತದಂತಿರುವ ಮುಕುಟವನ್ನು ಧರಿಸಿದವನೂ

**ಕಂಠೇ ಹಾರಲತಾಂ ಬಿಭ್ರತ್ಕಟೀಸೂತ್ರಂ ಕಟೀತಟೇ ।**
**ಬ್ರಹ್ಮಸೂತ್ರೋಪವೀತಾಂಗಃ ಸ [7]ಗಾಂಗೌಘ ಇವಾದ್ರಿರಾಟ್ ॥ ೨೩೫ ॥**

ಕಂಠದಲ್ಲಿ ಲತೆಯಂತಿರುವ ಹಾರವನ್ನು ಧರಿಸಿದವನೂ ಸೊಂಟದಲ್ಲಿ ಕಟಿಸೂತ್ರ(ಉಡುದಾರ)ವನ್ನು ಧರಿಸಿದವನೂ ಪ್ರಸಿದ್ಧವಾದ ಮಹಾಮೇರು ಪರ್ವತವು ಗಂಗಾನದಿಯ ಪ್ರವಾಹವುಳ್ಳುದಾಗಿರುವಂತೆ, ಯಜ್ಞೋಪವೀತವನ್ನು ಧರಿಸಿದವನೂ

**ಕಟಕಾಂಗದಕೇಯೂರಭೂಷಿತಾಯತದೋರ್ಯುಗಃ ।**
**ಪರ್ಯುಲ್ಲಸನ್ಮಹಾಶಾಖಃ ಕಲ್ಪಶಾಖೀವ ಜಂಗಮಃ ॥ ೨೩೬ ॥**

ಕಡಗ ನಾಗಮುರಿ ಬಾಹುಪುರಿ (ವಂಕಿ) ಮೊದಲಾದ ಆಭರಣಗಳಿಂದ ಅಲಂಕೃತವೂ ದೀರ್ಘವೂ ಆದ ಭುಜಗಳುಳ್ಳವನೂ ಪ್ರಕಾಶಮಾನವಾದ ದೊಡ್ಡ ಶಾಖೆ(ಕೊಂಬೆ)ಗಳುಳ್ಳುದೂ ಚಲಿಸುವುದೂ ಆದ ಕಲ್ಪವೃಕ್ಷದಂತಿರುವವನೂ

**ಸ ನೀಲರತ್ನನಿರ್ಮಾಣನೂಪುರಾವುದ್ವಹನ್ಕ್ರಮೌ ।**
**[8]ನಿಲೀನಭೃಂಗಸಂಫುಲ್ಲರಕ್ತತಾಮರಸಶ್ರಿಯೌ ॥ ೨೩೭ ॥**

ಭ್ರಮರಗಳು ಸಂಬಂಧಿಸಿಕೊಂಡಿರುವ ಅರಳಿದ ಕೆಂದಾವರೆಯ ಶೋಭೆಯುಳ್ಳ ಪಾದಗಳಲ್ಲಿ ನೀಲರತ್ನಗಳಿಂದ ಮಾಡಲ್ಪಟ್ಟ ಪಾದಕಡಗಗಳನ್ನು ಧರಿಸಿ ಕೊಂಡಿರುವವನೂ

**ಇತಿ ಪ್ರತ್ಯಂಗಸಂಗಿನ್ಯಾ ಬಭೌ ಭೂಷಣಸಂಪದಾ ।**
**ಭಗವಾನಾದಿಮೋ ಬ್ರಹ್ಮಾ ಭೂಷಣಾಂಗ ಇವಾಂಘ್ರಿಪಃ ॥ ೨೩೮ ॥**

೧ ಆರತಿಂ. ೨ ದೇವಾಃ. ೩ ಸ್ಥಾಪಿತಃ. ೪ ಇವ. ೫ ಗಮನಶೀಲಾಯಾಃ. ೬ ಸ್ಥಿರತ್ವಸ್ಯ ಕಾರಣಂ. ೭ ಗಾಂಗೌಘಮಿತ್ಯಪಿ ಪಾಠಃ. ೮ ವಿಲೀನಭೃಂಗ ಇತ್ಯಪಿ ಪಾಠಃ.

ಭಗವಂತನೂ ಆದ ಆದಿಬ್ರಹ್ಮನು ಹಿಂದೆಹೇಳಿದರೀತಿಯಾಗಿ ಪ್ರತಿಯೊಂದು ಅವಯವದಲ್ಲಿಯೂ ಸಂಬಂಧಿಸಿರುವ ಆಭರಣಸಂಪತ್ತಿನಿಂದ ಭೂಷಣಾಂಗವೆಂಬ ಕಲ್ಪವೃಕ್ಷದಂತೆ, ಪ್ರಕಾಶಿಸಿದನು.

**ತತಃ ಸಾನಂದಮಾನಂದನಾಟಕಂ ನಾಟ್ಯವೇದವಿತ್ ।**
**ಪ್ರಯುಜ್ಯ [1]ಸ್ಥಾಯಿಕಾರಂಗೇ ಪ್ರತ್ಯಗಾ[2]ದ್ದ್ಯಾಂ [3]ಸಹಸ್ರಗುಃ ॥ ೨೩೯ ॥**

ತರುವಾಯ ನಾಟ್ಯಶಾಸ್ತ್ರಜ್ಞಾನಿಯಾದ ದೇವೇಂದ್ರನು ಆನಂದವಾಗಿ ಸಭಾರಂಗಸ್ಥಾನದಲ್ಲಿ ಆನಂದನಾಟಕವನ್ನು ಪ್ರಯೋಗಿಸಿ ಸ್ವರ್ಗಕ್ಕೆ ಹೊರಟುಹೋದನು.

**ವ್ರಜಂತಮನುಜಗ್ಮುಸ್ತಂ ಕೃತಕಾರ್ಯಾಃ ಸುರಾಸುರಾಃ ।**
**ಭಗವತ್ಪಾದಸಂಸೇವಾನಿಯುಕ್ತ[4]ಸ್ವಾಂತವೃತ್ತಯಃ ॥ ೨೪೦ ॥**

ಹೋಗುತ್ತಿರುವ ಆ ದೇವೇಂದ್ರನನ್ನು ಹಿಂಬಾಲಿಸಿ ಭಗವಂತನ ಪಾದಸೇವೆಯಲ್ಲಿ ದತ್ತಚಿತ್ತರಾಗಿದ್ದ ದೇವತೆಗಳೂ ಅಸುರದೇವತೆಗಳೂ ಕಾರ್ಯವನ್ನು ಪೂರೈಸಿ ಹೊರಟುಹೋದರು.

**ಅಥಾಧಿರಾಜ್ಯಮಾಸಾದ್ಯ ನಾಭಿರಾಜಸ್ಯ ಸನ್ನಿಧೌ ।**
**ಪ್ರಜಾನಾಂ ಪಾಲನೇ ಯತ್ನಮಕರೋದಿತಿ ವಿಶ್ವಸೃಟ್ ॥ ೨೪೧ ॥**

ತರುವಾಯ ಜಗತ್ಕರ್ತರಾದ ವೃಷಭಸ್ವಾಮಿಯು ನಾಭಿರಾಜನ ಸನ್ನಿಧಿಯಲ್ಲಿ ಅಧಿರಾಜಪದವಿಯನ್ನು ಹೊಂದಿ ಮುಂದೆಹೇಳುವರೀತಿಯಾಗಿ ಪ್ರಜಾರಕ್ಷಣೆಯಲ್ಲಿ ಯತ್ನವನ್ನು ಮಾಡಿದರು.

**ಕೃತ್ವಾ[5]ದಿತಃ ಪ್ರಜಾ[6]ಸರ್ಗಂ ತದ್ವೃತ್ತಿನಿಯಮಂ [7]ಪುನಃ ।**
**[8]ಸ್ವಧರ್ಮಾನತಿವೃತ್ತ್ಯೈವ [9]ನಿಯಚ್ಛ[10]ನ್ನನ್ವಶಾತ್ಪ್ರಜಾಃ ॥ ೨೪೨ ॥**

ಮೊದಲು ಪ್ರಜೆಗಳ ಸೃಷ್ಟಿಯನ್ನು ಮಾಡಿ ತರುವಾಯ ಆ ಪ್ರಜೆಗಳ ಜೀವನೋಪಾಯವನ್ನು ಕಲ್ಪಿಸಿಕೊಟ್ಟು ಅವರು ತಮ್ಮ ವರ್ಣಾಶ್ರಮಧರ್ಮವನ್ನು ಮೀರದಂತೆ ನಿಯಮವನ್ನು ಮಾಡಿ ಪ್ರಜೆಗಳನ್ನು ಕಾಪಾಡಿದರು. ಮೊದಲು ವರ್ಣಾಶ್ರಮಧರ್ಮವನ್ನು ಕಲ್ಪಿಸಿ ಪ್ರಜೆಗಳನ್ನು ಕ್ರಮಪಡಿಸಿದರೆಂದರ್ಥವು. ಇಲ್ಲದಿದ್ದ ಪ್ರಜೆಗಳನ್ನು ಹೊಸದಾಗಿ ಸೃಷ್ಟಿಸಿದರೆಂದಭಿಪ್ರಾಯವಲ್ಲವು.

**ಸ್ವದೋರ್ಭ್ಯಾಂ ಧಾರಯನ್ ಶಸ್ತ್ರಂ ಕ್ಷತ್ರಿಯಾನಸೃಜದ್ವಿಭುಃ ।**
**ಕ್ಷತತ್ರಾಣೇ ನಿಯುಕ್ತಾ ಹಿ ಕ್ಷತ್ರಿಯಾಃ ಶಸ್ತ್ರಪಾಣಯಃ ॥ ೨೪೩ ॥**

ಕೈಯಲ್ಲಿ ಶಸ್ತ್ರವನ್ನು ಧರಿಸಿ ದುಃಖಪಡುವ ಪ್ರಾಣಿಗಳ ರಕ್ಷಣೆಯಲ್ಲಿ ನಿಯುಕ್ತರಾದವರು ಕ್ಷತ್ರಿಯರಾಗಿರುವುದರಿಂದ ಸ್ವಾಮಿಯು ತಮ್ಮ ಕೈಗಳಿಂದ ಶಸ್ತ್ರಧಾರಣ ಮಾಡಿ ಕ್ಷತ್ರಿಯರನ್ನು ಸೃಷ್ಟಿಸಿದರು. ಬಲಿಷ್ಠರಾದ ಕೆಲವು ಪ್ರಜೆಗಳು ಸ್ವಾಮಿಯನ್ನು ನೋಡಿ ಶಸ್ತ್ರಧಾರಣವನ್ನು ಮಾಡಿದರೆಂದು ಭಾವವು.

**ಊರುಭ್ಯಾಂ ದರ್ಶಯನ್ಯಾತ್ರಾಮಸ್ರಾಕ್ಷೀದ್ವಣಿಜಃ ಪ್ರಭುಃ ।**
**ಜಲಸ್ಥಲಾದಿಯಾತ್ರಾಭಿಸ್ತದ್ವೃತ್ತಿ[11]ವಾರ್ತಯಾ [12]ಯತಃ ॥ ೨೪೪ ॥**

ಕೃಷಿ ಪಶುಪಾಲನ ವ್ಯಾಪಾರ ಈ ಮೂರು ವೈಶ್ಯರ ವೃತ್ತಿಯಾಗಿರುವುದರಿಂದ ಸ್ವಾಮಿಯು ತಮ್ಮ ತೊಡೆಗಳಿಂದ ಜಲಯಾತ್ರಾ ಸ್ಥಲಯಾತ್ರಾ ಮೊದಲಾದ ಯಾತ್ರೆಗಳಿಂದ ಯಾತ್ರೆಮಾಡುವುದನ್ನು ತೋರಿಸಿಕೊಟ್ಟು ವೈಶ್ಯರನ್ನು ಸೃಷ್ಟಿಸಿದರು. ಹೆಚ್ಚಾಗಿ ವೈಶ್ಯರು ವ್ಯಾಪಾರಸಂಬಂಧವಾಗಿ ಪ್ರವಾಸಮಾಡಬೇಕಾಗಿರುವುದರಿಂದ ಸ್ವಾಮಿಯು ತಾವು ಪ್ರವಾಸವನ್ನು ಮಾಡಿ ತೋರಿಸಿ ವೈಶ್ಯರ ಜೀವನೋಪಾಯವನ್ನು ತೋರಿಸಿಕೊಟ್ಟರೆಂದೂ ಅದನ್ನು ನೋಡಿ ಕೆಲವರು ವೈಶ್ಯವೃತ್ತಿಯನ್ನನುಸರಿಸಿದರೆಂದೂ ಭಾವವು.

೧ ಸಭಾ. ೨ ಸ್ವರ್ಗಂ. ೩ ಸಹಸ್ರಾಕ್ಷಃ. ೪ ಚಿತ್ತವೃತ್ತಯಃ. ೫ ಆದೌ. ೬ ಸೃಷ್ಟಿಂ. ೭ ಪಶ್ಚಾತ್. ೮ ಕ್ಷತ್ರಿಯಾದೀನಾಂ. ೯ ನಿಯಮಯನ್. ೧೦ ಅಪಾಲಯತ್. ೧೧ ಕೃಷಿಪಾಶುಪಾಲ್ಯ ವಾಣಿಜ್ಯ ರೂಪಯಾ. ೧೨ ಕಾರಣಾತ್.

[೧]ನ್ಯಗ್ವೃತ್ತಿನಿಯತಾನ್ ಶೂದ್ರಾನ್ಪದ್ಭ್ಯಾಮೇವಾಸೃಜತ್ಸುಧೀಃ ।
ವರ್ಣೋತ್ತಮೇಷು [೨]ಶುಶ್ರೂಷಾ ತದ್ವೃತ್ತಿ[೩]ರ್ನೈಕಧಾ ಸ್ಮೃತಾ ॥ ೨೪೫ ॥

ಜ್ಞಾನಿಯಾದ ಸ್ವಾಮಿಯು ನೀಚವೃತ್ತಿಯಲ್ಲಿ ತತ್ಪರರಾದ ಶೂದ್ರರನ್ನು ಪಾದಗಳಿಂದ ಸೃಷ್ಟಿಸಿದರು. ತಮ್ಮ ಪಾದಸೇವೆಯನ್ನು ಮಾಡಿಸಿಕೊಂಡು ಶೂದ್ರರಿಗೆ ಸೇವಾವೃತ್ತಿಯನ್ನು ತೋರಿಸಿಕೊಟ್ಟರೆಂದು ಭಾವವು. ಉತ್ತಮವರ್ಣದವರಲ್ಲಿ ಅನೇಕ ಪ್ರಕಾರವಾಗಿ ಸೇವೆಮಾಡುವುದು ಶೂದ್ರವೃತ್ತಿಯಾಗಿದೆ.

ಮುಖತೋಧ್ಯಾಪಯನ್ಶಾಸ್ತ್ರಂ ಭರತಃ ಸ್ರಕ್ಷ್ಯತಿ ದ್ವಿಜಾನ್ ।
[೪]ಅಧೀತ್ಯಧ್ಯಾಪನೇ ದಾನಂ [೫]ಪ್ರತೀಚ್ಛೇಜ್ಯೇತಿ ತತ್ಕ್ರಿಯಾಃ ॥ ೨೪೬ ॥

ಭರತರಾಜನು ಮುಖದಿಂದ ಶಾಸ್ತ್ರವನ್ನು ಅಧ್ಯಯನಮಾಡಿಸಿ ಮುಂದೆ ಬ್ರಾಹ್ಮಣರನ್ನು ಸೃಷ್ಟಿಸುವನು. ಅಧ್ಯಯನಮಾಡುವುದು ಅಧ್ಯಯನಮಾಡಿಸುವುದು ದಾನ (ಕೊಡುವುದು) ದಾನತೆಗೆದುಕೊಳ್ಳುವುದು ಪೂಜೆಮಾಡುವುದು ಇವು ಆ ಬ್ರಾಹ್ಮಣರ ಕ್ರಿಯೆಗಳಾಗಿವೆ.

ಶೂದ್ರಾ ಶೂದ್ರೇಣ ವೋಢವ್ಯಾ ನಾನ್ಯಾ ತಾಂ [೬]ಸ್ವಾಂ ಚ [೭]ನೈಗಮಃ ।
[೮]ವಹೇ[೯]ತ್ಸ್ವಾಂ ತೇ ಚ [೧೦]ರಾಜನ್ಯಃ [೧೧]ಸ್ವಾಂ ದ್ವಿಜನ್ಮಾ ಕ್ವಚಿಚ್ಚ [೧೨]ತಾಃ ॥

ಶೂದ್ರನು ಶೂದ್ರಸ್ತ್ರೀಯನ್ನು ವಿವಾಹಮಾಡಿಕೊಳ್ಳಬೇಕು. ಬೇರೆ ಸ್ತ್ರೀಯನ್ನು ವಿವಾಹಮಾಡಿಕೊಳ್ಳಬಾರದು. ವೈಶ್ಯನು ಶೂದ್ರಸ್ತ್ರೀಯನ್ನೂ ವೈಶ್ಯಸ್ತ್ರೀಯನ್ನೂ ವಿವಾಹಮಾಡಿಕೊಳ್ಳಬಹುದು. ಕ್ಷತ್ರಿಯನು ಕ್ಷತ್ರಿಯಸ್ತ್ರೀಯನ್ನೂ ಶೂದ್ರ ಸ್ತ್ರೀಯನ್ನೂ ವೈಶ್ಯಸ್ತ್ರೀಯನ್ನೂ ವಿವಾಹಮಾಡಿಕೊಳ್ಳಬಹುದು. ಬ್ರಾಹ್ಮಣನು ಶೂದ್ರಸ್ತ್ರೀಯನ್ನೂ ವೈಶ್ಯಸ್ತ್ರೀಯನ್ನೂ ಕ್ಷತ್ರಿಯಸ್ತ್ರೀಯನ್ನೂ ಬ್ರಾಹ್ಮಣಸ್ತ್ರೀಯನ್ನೂ ವಿವಾಹಮಾಡಿಕೊಳ್ಳಬಹುದು.

ಸ್ವಾಮಿಮಾಂ ವೃತ್ತಿಮುತ್ಕ್ರಮ್ಯ ಯಸ್ತ್ವನ್ಯಾಂ ವೃತ್ತಿಮಾಚರೇತ್ ।
ಸ ಪಾರ್ಥಿವೈ[೧೩]ರ್ನಿಯಂತವ್ಯೋ ವರ್ಣ[೧೪]ಸಂಕೀರ್ಣಿರನ್ಯಥಾ ॥ ೨೪೮ ॥

ಈ ತನ್ನ ವೃತ್ತಿಯನ್ನು ಮೀರಿ ಬೇರೆ ವೃತ್ತಿಯನ್ನು ಆಚರಿಸುವವನನ್ನು ರಾಜರು ದಂಡಿಸಬೇಕು. ಹಾಗಿಲ್ಲದೆಹೋದರೆ ವರ್ಣಸಂಕರವಾಗುವುದು.

ಕೃಷ್ಯಾದಿಕರ್ಮಷಟ್ಕಂ ಚ ಸ್ರಷ್ಟಾ ಪ್ರಾಗೇವ ಸೃಷ್ಟವಾನ್ ।
ಕರ್ಮಭೂಮಿರಿಯಂ ತಸ್ಮಾತ್ತದಾಸೀತ್ತದ್ವ್ಯವಸ್ಥಯಾ ॥ ೨೪೯ ॥

ಆದಿಬ್ರಹ್ಮರು ಮೊದಲೇ ಕೃಷಿಮೊದಲಾದ ಆರು ಕರ್ಮಗಳನ್ನು ಸೃಷ್ಟಿಸಿದರು. ಆದುದರಿಂದ ಆಗ ಕರ್ಮವ್ಯವಸ್ಥೆಯಿಂದ ಇದು ಕರ್ಮಭೂಮಿಯಾಗಿ ಆಯಿತು.

ಸೃಷ್ಟ್ವೇತಿ ತಾಃ ಪ್ರಜಾಃ ಸ್ರಷ್ಟಾ ತದ್ಯೋಗಕ್ಷೇಮಸಾಧನಮ್ ।
ಪ್ರಾಯುಂಕ್ತ ಯುಕ್ತಿತೋ ದಂಡಂ ಹಾಮಾಧಿಕ್ಕಾರಲಕ್ಷಣಮ್ ॥ ೨೫೦ ॥

ಈರೀತಿಯಾಗಿ ಆ ಪ್ರಜೆಗಳನ್ನು ಸೃಷ್ಟಿಸಿ ಆದಿಬ್ರಹ್ಮರು ಆ ಪ್ರಜೆಗಳ ಯೋಗಕ್ಷೇಮಕ್ಕೆ ಕಾರಣವಾದ ಹಾ ಮಾ ಧಿಕ್ಕಾರರೂಪವಾದ ಶಿಕ್ಷೆಯನ್ನು ಯುಕ್ತಿಯಿಂದ ಪ್ರಯೋಗಿಸಿದರು. ಈ ಶಬ್ದಗಳಿಂದ ಪ್ರಜೆಗಳನ್ನು ದಂಡಿಸುತ್ತಿದ್ದರೆಂದು ಭಾವವು.

ದುಷ್ಟಾನಾಂ ನಿಗ್ರಹಃ ಶಿಷ್ಟಪ್ರತಿಪಾಲನಮಿತ್ಯಯಮ್ ।
ನ ಪುರಾಸೀತ್ಕ್ರಮೋ ಯಸ್ಮಾತ್ಪ್ರಜಾಃ ಸರ್ವಾ [೧೫]ನಿರಾಗಸಃ ॥ ೨೫೧ ॥

ಮೊದಲು ಪ್ರಜೆಗಳು ನಿರ್ದೋಷಿಗಳಾಗಿದ್ದುದರಿಂದ ದುಷ್ಟನಿಗ್ರಹ ಶಿಷ್ಟ ಪರಿಪಾಲನವೆಂಬ ಕ್ರಮವು ಪೂರ್ವದಲ್ಲಿರಲಿಲ್ಲ.

೧ ನೀಚವೃತ್ತಿತತ್ಪರಾನ್. ೨ ಸೇವಾರೂಪಾ. ೩ ಅನೇಕಧಾ. ೪ ಅಧ್ಯಯನಂ. ೫ ಪ್ರತ್ಯಾದಾನಂ. ೬ ವೈಶ್ಯಾಂ. ೭ ವಣಿಕ್. ೮ ಉದ್ವಹೇತ್. ೯ ಕ್ಷತ್ರಿಯಾಂ. ೧೦ ಕ್ಷತ್ರಿಯಃ. ೧೧ ಬ್ರಾಹ್ಮಣೀಂ. ೧೨ ಶೂದ್ರಾದಯಸ್ತಿಸ್ರಃ. ೧೩ ದಂಡನೀಯಃ. ೧೪ ಸಂಕರಃ. ೧೫ ನಿರ್ದೋಷಾಃ.

ಪ್ರಜಾ ದಂಡಧರಾಭಾವೇ [೧]ಮಾತ್ಸ್ಯನ್ಯಾಯಂ ಶ್ರಯಂತ್ಯಮೂಃ ।
ಗ್ರಸ್ಯತೇಂ[೨]ತಃ ಪ್ರದುಷ್ಟೇನ ನಿಬಲೋ ಹಿ ಬಲೀಯಸಾ ॥ ೨೫೨ ॥

ಪ್ರಜೆಗಳನ್ನು ದಂಡಿಸುವವನಿಲ್ಲದಿದ್ದರೆ ಈ ಪ್ರಜೆಗಳು ಬಲಿಷ್ಠವಾದ ಮೀನು ಬಲಹೀನಗಳಾದ ಮೀನುಗಳನ್ನು ನುಂಗುವುದೆಂಬ ಮತ್ಸ್ಯನ್ಯಾಯವನ್ನಾಶ್ರಯಿಸುವರು. ದುಷ್ಟಮನಸ್ಸುಳ್ಳ ಬಲಿಷ್ಠನು ಬಲಹೀನನನ್ನು ಬಾಧೆಪಡಿಸುವನು.

ದಂಡಭೀತ್ಯಾ ಹಿ ಲೋಕೋಯಮಪಥಂ ನಾನುಧಾವತಿ ।
[೩]ಯುಕ್ತದಂಡಧರಸ್ತಸ್ಮಾತ್ಪಾರ್ಥಿವಃ ಪೃಥಿವೀಂ ಜಯೇತ್ ॥ ೨೫೩ ॥

ಶಿಕ್ಷೆಯ ಭಯದಿಂದಲ್ಲವೆ ಈ ಲೋಕವು ದುರ್ಮಾರ್ಗಪ್ರವರ್ತಕವಾಗುವುದಿಲ್ಲ? ಆದುದರಿಂದ ಯೋಗ್ಯವಾದ ಶಿಕ್ಷೆಯನ್ನು ಮಾಡುವ ರಾಜನು ಪೃಥ್ವಿಯನ್ನು ಜಯಿಸಬಹುದು.

[೪]ಪಯಸ್ವಿನ್ಯಾ ಯಥಾಕ್ಷೀರ[೫]ಮದ್ರೋಹೇಣೋ[೬]ಪಜೀವ್ಯತೇ ।
ಪ್ರಜಾಪ್ಯೇವಂ ಧನಂ ದೋಹ್ಯಾ ನಾತಿಪೀಡಾಕರೈಃ ಕರೈಃ ॥ ೨೫೪ ॥

ಹಾಲುಳ್ಳ ದನಕ್ಕೆ ಉಪದ್ರವಪಡಿಸದಿದ್ದರೆ ಹಾಲು ಹೆಚ್ಚುವಂತೆ, ಪ್ರಜೆಗಳಿಂದಲೂ ಹೆಚ್ಚು ಪೀಡೆಯನ್ನುಂಟುಮಾಡದಿರುವ ಕಂದಾಯಗಳಿಂದ ದ್ರವ್ಯವನ್ನು ಸ್ವೀಕರಿಸಬೇಕು. ಪ್ರಜೆಗಳನ್ನು ಪೀಡಿಸದೆ ಕಂದಾಯವನ್ನು ತೆಗೆದುಕೊಳ್ಳಬೇಕೆಂದರ್ಥವು.

ತತೋ ದಂಡಧರಾ[೭]ನೇತಾನನುಮೇನೇ ನೃಪಾನ್ಪ್ರಭುಃ ।
ತದಾಯತ್ತಂ ಹಿ ಲೋಕಸ್ಯ ಯೋಗಕ್ಷೇಮಾನುಚಿಂತನಮ್ ॥ ೨೫೫ ॥

ಆದುದರಿಂದ ಸ್ವಾಮಿಯು ಮುಂದೆಹೇಳುವ ರಾಜರನ್ನು ಶಿಕ್ಷೆಯನ್ನು ವಿಧಿಸುವವರನ್ನಾಗಿ ಸಮ್ಮತಿಸಿದರು. ಶಿಕ್ಷಾವಿಧಾಯಕರನ್ನಾಗಿ ನಿಯಮಿಸಿದರೆಂದರ್ಥವು. ಲೋಕದ ಯೋಗಕ್ಷೇಮಚಿಂತನೆಯು ರಾಜಾಧೀನವಾಗಿರುವುದಲ್ಲವೆ ?

ಸಮಾಹೂಯ ಮಹಾಭಾಗಾನ್ ಹರ್ಯಕಂಪನಕಾಶ್ಯಪಾನ್ ।
ಸೋಮಪ್ರಭಂ ಚ [೮]ಸನ್ಮಾನ್ಯ ಸತ್ಕೃತ್ಯ ಚ ಯಥೋಚಿತಮ್ ॥ ೨೫೬ ॥

ಕೃತಾಭಿಷೇಚನಾ[೯]ನೇತಾನ್ಮಹಾಮಂಡಲಿಕಾನ್ನೃಪಾನ್ ।
[೧೦]ಚತುಃಸಹಸ್ರಭೂನಾಥಪರಿವಾರಾನ್ವ್ಯಧಾದ್ವಿಭುಃ ॥ ೨೫೭ ॥

ಸ್ವಾಮಿಯು ಮಹಾಭಾಗ್ಯಶಾಲಿಗಳಾದ ಹರಿ ಅಕಂಪನ ಕಾಶ್ಯಪ ಸೋಮಪ್ರಭ ಈ ನಾಲ್ವರನ್ನು ಯೋಗ್ಯತಾನುಸಾರವಾಗಿ ಪ್ರಿಯ ವಚನಗಳಿಂದ ಸನ್ಮಾನಿಸಿಯೂ ಸತ್ಕರಿಸಿಯೂ ಇವರಿಗೆ ಪಟ್ಟಾಭಿಷೇಕವನ್ನು ಮಾಡಿ ಪ್ರತಿಯೊಬ್ಬನಿಗೂ ನಾಲ್ಕು ಸಾವಿರ ಪರಿವಾರಕರಾಜರನ್ನು ಕೊಟ್ಟು ಇವರನ್ನು ಮಹಾಮಂಡಲಿಕರಾಜರನ್ನಾಗಿ ಮಾಡಿದರು.

ಸೋಮಪ್ರಭಃ ಪ್ರಭೋರಾಪ್ತಕುರುರಾಜಸಮಾಹ್ವಯಃ ।
[೧೧]ಕುರೂಣಾಮಧಿರಾಜೋಭೂತ್ಕುರುವಂಶಶಿಖಾಮಣಿಃ ॥ ೨೫೮ ॥

ಸ್ವಾಮಿಯಿಂದ ಕುರುರಾಜನೆಂಬ ಹೆಸರನ್ನು ಪಡೆದವನೂ ಕುರುವಂಶಕ್ಕೆ ಶಿಖಾಮಣಿಯೂ ಆದ ಸೋಮಪ್ರಭನು ಕುರುವಂಶದವರಿಗೆ ಅಧಿರಾಜನಾಗಿ ಆದನು.

ಹರಿಶ್ಚ ಹರಿಕಾಂತಾಖ್ಯಾಂ ದಧಾನಸ್ತದನುಜ್ಞಯಾ ।
ಹರಿವಂಶಮಲಂಚಕ್ರೇ ಶ್ರೀಮಾನ್ [೧೨]ಹರಿಪರಾಕ್ರಮಃ ॥ ೨೫೯ ॥

೧ ಬಲಿಷ್ಠೋ ಮತ್ಸ್ಯಃ ಬಲಹೀನಾನ್ಮತ್ಸ್ಯಾನ್ಗಿಲತೀತ್ಯಮುಂ ನ್ಯಾಯಂ. ೨ ಮನಸಿ. ೩ ಯೋಗ್ಯಃ. ೪ ಕ್ಷೀರವದ್ಧೇನೋಃ. ೫ ಅನುಪದ್ರವೇಣ. ೬ ವರ್ದ್ಧತೇ. ೭ ವಕ್ಷ್ಯಮಾಣಾನ್. ೮ ಪ್ರಿಯವಚನೈಃ. ೯ ಉಕ್ತಾನ್. ೧೦ ಪ್ರತ್ಯೇಕಂ. ೧೧ ಕುರುವಂಶಜಾನಾಂ. ೧೨ ಸಿಂಹಃ.

ಭಾಗ್ಯಶಾಲಿಯೂ ಸಿಂಹದಂತೆ ಪರಾಕ್ರಮಿಯೂ ಆದ ಹರಿಯು ಸ್ವಾಮಿಯ ಅಪ್ಪಣೆಯಿಂದ ಹರಿಕಾಂತನೆಂಬ ಹೆಸರನ್ನು ಪಡೆದು ಹರಿವಂಶವನ್ನಲಂಕರಿಸಿದನು.

**ಅಕಂಪನೋಽಪಿ [೧]ಸೃಷ್ಟೀಶಾತ್ಪ್ರಾಪ್ತಶ್ರೀಧರನಾಮಕಃ ।**
**ನಾಥವಂಶಸ್ಯ [೨]ನೇತಾಭೂತ್ಪ್ರಸನ್ನೇ ಭುವನೇಶಿನಿ ॥ ೨೬೦ ॥**

ಲೋಕಾಧಿಪತಿಯಾದ ಸ್ವಾಮಿಯು ಪ್ರಸನ್ನರಾಗುತ್ತಿರಲು ಆ ಸೃಷ್ಟಿಕರ್ತರಾದ ಸ್ವಾಮಿಯಿಂದ ಶ್ರೀಧರನೆಂಬ ಹೆಸರನ್ನು ಪಡೆದ ಅಕಂಪನನೂ ನಾಥವಂಶಕ್ಕೆ ಅಧಿಪತಿಯಾದನು.

**ಕಾಶ್ಯಪೋಽಪಿ ಗುರೋಃ ಪ್ರಾಪ್ತಮಘವಾಖ್ಯಃ ಪತಿ[೩]ರ್ವಿಶಾಮ್ ।**
**ಉಗ್ರವಂಶಸ್ಯ [೪]ವಂಶ್ಯೋಽಭೂತ್ಕಿಂ ನಾ[೫]ಪ್ಯಂ ಸ್ವಾಮಿಸಂಪದಾ ॥ ೨೬೧ ॥**

ಕಾಶ್ಯಪರಾಜನೂ ಸ್ವಾಮಿಯಿಂದ ಮಘವನೆಂಬ ಹೆಸರನ್ನು ಪಡೆದು ಉಗ್ರವಂಶಕ್ಕೆ ಶ್ರೇಷ್ಠನಾದನು. ಸ್ವಾಮಿಯ ಸಂಪತ್ತಿನಿಂದ ಹೊಂದುವುದಕ್ಕೆ ಯೋಗ್ಯವಲ್ಲದುದು ಯಾವುದು ? ಎಲ್ಲವೂ ಸ್ವಾಮಿಯ ಅನುಗ್ರಹದಿಂದ ಪ್ರಾಪ್ತವಾಗುವುದೆಂದು ಭಾವವು.

**ತಥಾ ಕಚ್ಛಮಹಾಕಚ್ಛಪ್ರಮುಖಾನಪಿ ಭೂಭುಜಃ ।**
**ಸೋಽಧಿರಾಜಪದೇ ದೇವಃ ಸ್ಥಾಪಯಾಮಾಸ ಸತ್ಕೃತಾನ್ ॥ ೨೬೨ ॥**

ಹಾಗೆಯೇ ಸ್ವಾಮಿಯು ಕಚ್ಛಮಹಾಕಚ್ಛಮೊದಲಾದ ರಾಜರನ್ನೂ ಸತ್ಕರಿಸಿ ಅಧಿರಾಜಪದವಿಯಲ್ಲಿ ಸ್ಥಾಪಿಸಿದರು.

**ಪುತ್ರಾನಪಿ ತಥಾ ಯೋಗ್ಯವಸ್ತುವಾಹನಸಂಪದಾ ।**
**ಭಗವಾ[೬]ನ್ಸಂವಿಭಜತೇ ಸ್ಮ ತದ್ಧಿ ರಾಜ್ಯಾರ್ಜನೇ ಫಲಮ್ ॥ ೨೬೩ ॥**

ಹಾಗೆಯೇ ಭಗವಂತನು ಪುತ್ರರಿಗೂ ಯೋಗ್ಯವಾದ ವಸ್ತುವಾಹನಸಂಪತ್ತುಗಳನ್ನು ವಿಭಾಗಮಾಡಿಕೊಟ್ಟನು. ಹಾಗೆ ಯೋಗ್ಯರೀತಿಯಿಂದ ವಿನಿಯೋಗಿಸುವುದಲ್ಲವೆ ರಾಜ್ಯವನ್ನು ಸಂಪಾದಿಸಿದುದಕ್ಕೆ ಫಲವು ?

**[೭]ಆಕಾನಾಚ್ಚ ತದೇಕ್ಷೂಣಾಂ ರಸಸಂಗ್ರಹಣೇ ನೃಣಾಮ್ ।**
**ಇಕ್ಷ್ವಾಕುರಿತ್ಯಭೂದ್ದೇವೋ ಜಗತಾಮಭಿಸಮ್ಮತಃ ॥ ೨೬೪ ॥**

ಜನಗಳಿಗೆ ಕಬ್ಬುಗಳ ರಸವನ್ನು ಸಂಗ್ರಹಿಸುವ ಉಪಾಯವನ್ನು ಹೇಳಿದುದರಿಂದ ಜಗತ್ತಿನಲ್ಲಿ ಸ್ವಾಮಿಗೆ ಇಕ್ಷ್ವಾಕುವೆಂಬ ಹೆಸರು ಸಮ್ಮತವಾಯಿತು.

**ಗೌಃ ಸ್ವರ್ಗಃ ಸ ಪ್ರಕೃಷ್ಟಾ[೮]ತ್ಮಾ ಗೋತಮೋಽಭಿಮತಃ ಸತಾಮ್ ।**
**ಸ ತಸ್ಮಾದಾಗತೋ ದೇವೋ ಗೌತಮ[೯]ಶ್ರುತಿಮನ್ವಭೂತ್ ॥ ೨೬೫ ॥**

'ಗೌ' ಎಂದು ಸ್ವರ್ಗಕ್ಕೆ ಹೆಸರು. ಶ್ರೇಷ್ಠವಾದ ಸ್ವರ್ಗಕ್ಕೆ ಸತ್ಪುರುಷರು ಗೋತಮವೆಂದು ಹೇಳುತ್ತಾರೆ. ಅಂತಹ ಸ್ವರ್ಗ(ಸರ್ವಾರ್ಥಸಿದ್ಧಿಸ್ವರ್ಗ)ದಿಂದ ಅವತರಿಸಿದ ಸ್ವಾಮಿಯು ಗೌತಮನೆಂಬ ಹೆಸರನ್ನು ಪಡೆದರು.

**ಕಾಶ್ಯಮಿತ್ಯುಚ್ಯತೇ ತೇಜಃ ಕಾಶ್ಯಪಸ್ತಸ್ಯ ಪಾಲನಾತ್ ।**
**ಜೀವನೋಪಾಯಮನನಾನ್ಮನುಃ ಕುಲಧರೋಽಪ್ಯಸೌ ॥ ೨೬೬ ॥**

ಕಾಶ್ಯವೆಂದು ತೇಜಸ್ಸಿಗೆ ಹೆಸರು. ಆ ತೇಜಸ್ಸನ್ನು ಕಾಪಾಡುವುದರಿಂದ ಸ್ವಾಮಿಗೆ ಕಾಶ್ಯಪನೆಂದು ಹೆಸರಾಯಿತು. ಪ್ರಜೆಗಳ ಜೀವನೋಪಾಯವನ್ನು ಚಿಂತಿಸಿದುದರಿಂದ ಸ್ವಾಮಿಗೆ ಮನುವೆಂದೂ ಕುಲಧರನೆಂದೂ ಹೆಸರಾಯಿತು.

**ವಿಧಾತಾ ವಿಶ್ವಕರ್ಮಾ ಚ ಸ್ರಷ್ಟಾ ಚೇತ್ಯಾದಿನಾಮಭಿಃ ।**
**ಪ್ರಜಾಸ್ತಂ [೧೦]ವ್ಯಾಹರಂತಿ ಸ್ಮ ಜಗತಾಂ ಪತಿಮಚ್ಯುತಮ್ ॥ ೨೬೭ ॥**

ಪ್ರಜೆಗಳು ನಾಶರಹಿತನೂ ಜಗತ್ಪತಿಯೂ ಆದ ಸ್ವಾಮಿಯನ್ನು ವಿಧಾತ (ಬ್ರಹ್ಮ) ವಿಶ್ವಕರ್ಮ ಸೃಷ್ಟಿಕರ್ತ ಮೊದಲಾದ ಹೆಸರುಗಳಿಂದ ಕರೆದರು.

**ತ್ರಿಷಷ್ಟಿಲಕ್ಷಾಃ ಪೂರ್ವಾಣಾಂ ರಾಜ್ಯಕಾಲೋಽಸ್ಯ ಸಮ್ಮತಃ ।**
**[೧]ಸ ತಸ್ಯ ಪುತ್ರಪೌತ್ರಾದಿವೃತಸ್ಯಾವಿದಿತೋಽಗಮತ್ ॥ ೨೬೮ ॥**

ಈ ಸ್ವಾಮಿಯ ರಾಜ್ಯಭಾರಕಾಲವು ಅರುವತ್ತಮೂರು ಲಕ್ಷಪೂರ್ವವೆಂದು ಶಾಸ್ತ್ರಸಮ್ಮತವಾಗಿದೆ. ಪುತ್ರಪೌತ್ರಾದಿಗಳೊಡನೆ ಕೂಡಿದ್ದ ಸ್ವಾಮಿಗೆ ಆ ಕಾಲವು ಅಗೋಚರವಾಗಿ ಕಳೆದು ಹೋಯಿತು. ಸುಖದಲ್ಲಿ ಕಾಲವು ಕಳೆದುದು ಗೊತ್ತಾಗಲಿಲ್ಲವೆಂದು ಭಾವವು.

**ಸ ಸಿಂಹಾಸನ[೨]ಮಾಯೋಧ್ಯಮಧ್ಯಾಸೀನೋ ಮಹಾದ್ಯುತಿಃ ।**
**ಸುಖಾ[೩]ದುಪನತಾಂ ಪುಣ್ಯೈಃ ಸಾಮ್ರಾಜ್ಯಶ್ರಿಯಮನ್ವಭೂತ್ ॥ ೨೬೯ ॥**

ಮಹಾಕಾಂತಿಯುಳ್ಳ ಭಗವಂತನು ಅಯೋಧ್ಯಾಸಂಬಂಧವಾದ ಸಿಂಹಾಸನದಲ್ಲಿ ಕುಳಿತು ತಮ್ಮ ಪುಣ್ಯದಿಂದ ನಿರಾಯಾಸವಾಗಿ ಪ್ರಾಪ್ತವಾದ ಸಾಮ್ರಾಜ್ಯಸಂಪತ್ತನ್ನನುಭವಿಸಿದನು.

**ಇತ್ಥಂ ಸುರಾಸುರಗುರುರ್ಗುರುಪುಣ್ಯಯೋಗಾ-**
**ದ್ಭೋಗಾನ್ನಿತನ್ವತಿ ತದಾ ಸುರಲೋಕನಾಥೇ ।**
**ಸೌಖ್ಯೈರಗಾ[೪]ದ್ಧೃತಿಮಚಿಂತ್ಯ[೫]ಧೃತಿಃ ಸ [೬]ಧೀರಃ**
**ಪುಣ್ಯಾರ್ಜನೇ ಕುರುತ ಯತ್ನಮತೋ ಬುಧೇಂದ್ರಾಃ ॥ ೨೭೦ ॥**

ಈ ರೀತಿಯಾಗಿ ಆಗ ಸ್ವಾಮಿಯ ಪುಣ್ಯದಿಂದ ದೇವೇಂದ್ರನು ಭೋಗ ಸಾಮಗ್ರಿಗಳನ್ನುಂಟುಮಾಡುತ್ತಿರಲು ದೇವತೆಗಳಿಗೂ ಅಸುರದೇವತೆಗಳಿಗೂ ಗುರುವೂ ಅಚಿಂತ್ಯವಾದ ಧೈರ್ಯವುಳ್ಳವರೂ ಜ್ಞಾನಿಯೂ ಆದ ಸ್ವಾಮಿಯು ಸಂತೋಷವಾಗಿ ಸುಖವನ್ನನುಭವಿಸಿದರು. ಆದುದರಿಂದ ಎಲೈ ಜ್ಞಾನಿಗಳೇ! ಪುಣ್ಯವನ್ನು ಸಂಪಾದಿಸುವುದಕ್ಕೆ ಯತ್ನಮಾಡಿರಿ.

**ಪುಣ್ಯಾತ್ಸುಖಂ ನ ಸುಖಮಸ್ತಿ ವಿನೇಹ ಪುಣ್ಯಾ-**
**ದ್ಬೀಜಾದ್ವಿನಾ ನ ಹಿ ಭವೇಯುರಿಹ [೭]ಪ್ರರೋಹಾಃ ।**
**ಪುಣ್ಯಂ ಚ ದಾನ[೮]ದಮ[೯]ಸಂಯಮ[೧೦]ಸತ್ಯ[೧೧]ಶೌಚ-**
**[೧೨]ತ್ಯಾಗ[೧೩]ಕ್ಷಮಾದಿಶುಭಚೇಷ್ಟಿತ[೧೪]ಮೂಲಮಿಷ್ಟಮ್ ॥ ೨೭೧ ॥**

ಪುಣ್ಯದಿಂದ ಸುಖವುಂಟಾಗುವುದು. ಲೋಕದಲ್ಲಿ ಬೀಜವಿಲ್ಲದಿದ್ದರೆ ಹೇಗೆ ಅಂಕುರಗಳಿಲ್ಲವೋ ಹಾಗೆ ಪುಣ್ಯವಿಲ್ಲದಿದ್ದರೆ ಈ ಜನ್ಮದಲ್ಲಿ ಸುಖವಿಲ್ಲವು. ದಾನ ಇಂದ್ರಿಯನಿಗ್ರಹ ವ್ರತಧಾರಣ ಮೊದಲಾದ ಸಂಯಮ ಸತ್ಯ ಲೋಭವಿಲ್ಲದಿರುವಿಕೆ ಪರಿಗ್ರಹಗಳನ್ನು ಬಿಡುವಿಕೆ ಶಾಂತಿ ಮೊದಲಾದ ಶುಭವ್ಯಾಪಾರ ಇವುಗಳು ಪುಣ್ಯಕ್ಕೆ ಕಾರಣಗಳಾಗಿವೆ.

**ಪುಣ್ಯಾತ್ಸುರಾಸುರನರೋರಗಭೋಗಸಾರಾಃ**
**ಶ್ರೀರಾಯುರಪ್ರಮಿತರೂಪಸಮೃದ್ಧಯೋ ಧೀಃ ।**
**[೧೫]ಸಾಮ್ರಾಜ್ಯ[೧೬]ಮೈಂದ್ರಮಪುನರ್ಭವಭಾವನಿಷ್ಠ-**
**ಮಾರ್ಹಂತ್ಯಮಂತ್ಯರಹಿತಾ[೧೭]ಖಿಲಸೌಖ್ಯಮಗ್ರ್ಯಮ್ ॥ ೨೭೨ ॥**

ದೇವತೆಗಳು ಅಸುರಕುಮಾರರು ಮನುಷ್ಯರು ನಾಗದೇವತೆಗಳು ಇವರ ಶ್ರೇಷ್ಠವಾದ ಭೋಗಗಳು ಐಶ್ವರ್ಯ ಆಯುಷ್ಯ ಉಪಮಾತೀತವಾದ ರೂಪ ಸಮೃದ್ಧಿ ಬುದ್ಧಿ ಚಕ್ರವರ್ತಿಪದವಿ ಇಂದ್ರಪದವಿ ಪುನರ್ಜನ್ಮವನ್ನು ಹೊಂದದಿರುವ

೧ ಪ್ರಭೋಃ. ೨ ನಾಯಕಃ. ೩ ನೃಣಾಂ. ೪ ಶ್ರೇಷ್ಠಃ. ೫ ಪ್ರಾಪ್ಯಂ. ೬ ಸಂವಿಭಾಗಂ ಕರೋತಿ ಸ್ಮ. ೭ ವಚನಾದಿತ್ಯರ್ಥಃ. ೮ ಸ್ವರೂಪಃ. ೯ ನಾಮ. ೧೦ ಬ್ರುವಂತಿ ಸ್ಮ.

೧ ಕಾಲಃ. ೨ ಅಯೋಧ್ಯಾಸಂಬಂಧಿ. ೩ ಪ್ರಾಪ್ತಾಂ. ೪ ಸಂತೋಷಂ. ೫ ಧೈರ್ಯಃ. ೬ ಧಿಯಂ ರಾತೀತಿ ಧೀರಃ ಪ್ರಕೃಷ್ಟಜ್ಞಾನೀತ್ಯರ್ಥಃ. ೭ ಪ್ರರೋಹಾಃ, ಅಂಕುರಾಣಿ. ೮ ಇಂದ್ರಿಯನಿಗ್ರಹಃ. ೯ ವ್ರತಸಮಿತಿಕಷಾಯದಂಡೇಂದ್ರಿಯಾಣಾಂ ಕ್ರಮೇಣ ಧಾರಣಪಾಲನನಿಗ್ರಹತ್ಯಾಗಜಯಃ ಸಂಯಮಃ. ೧೦ ಪ್ರಶಸ್ತವಚನೇ ಸಾಧುವಚನಂ. ೧೧ ಪ್ರಕೃಷ್ಟಲೋಭನಿವೃತ್ತಿಃ. ೧೨ ಬಾಹ್ಯಾಭ್ಯಂತರ ಪರಿಗ್ರಹತ್ಯಜನಂ. ೧೩ ದುಷ್ಟಜನಕೃತಾಕ್ರೋಶಪ್ರಹಸನಾವಜ್ಞಾತಾಡನಾದಿಪ್ರಾಪ್ತೌ ಕಾಲುಷ್ಯಾಭಾವಃ. ೧೪ ಕಾರಣಂ. ೧೫ ಚಕ್ರಿತ್ವಂ. ೧೬ ಇಂದ್ರಪದಂ. ೧೭ ಮೋಕ್ಷಸುಖಂ.

ಅರ್ಹತ್ವಪದವಿ ಶ್ರೇಷ್ಠವೂ ಅಂತ್ಯರಹಿತವೂ ಆದ ಮೋಕ್ಷಸುಖ ಇವೆಲ್ಲವೂ ಪುಣ್ಯದಿಂದ ಪ್ರಾಪ್ತವಾಗುತ್ತವೆ.

**ತಸ್ಮಾದ್ಬುಧಾಃ ಕುರುತ ಧರ್ಮಮವಾಪ್ತುಕಾಮಾಃ**
**ಸ್ವರ್ಗಾಪವರ್ಗಸುಖಮಗ್ರ್ಯಮಚಿಂತ್ಯಸಾರವ್ ।**
**[೧]ಪ್ರಾಪಯ್ಯ ಸೋಽಭ್ಯುದಯಭೋಗಮನಂತಸೌಖ್ಯ-**
**ಮಾನಂತ್ಯಮಾಪಯತಿ ಧರ್ಮಫಲಂ ಹಿ ಶರ್ಮ ॥ ೨೭೩ ॥**

ಆದುದರಿಂದ ಎಲೈ ವಿದ್ವಾಂಸರೆ! ಸ್ವರ್ಗಸುಖವನ್ನೂ ಅಚಿಂತ್ಯವಾದ ಸಾರವುಳ್ಳುದೂ ಶ್ರೇಷ್ಠವೂ ಆದ ಮೋಕ್ಷಸುಖವನ್ನೂ ಹೊಂದಲಿಚ್ಛಿಸುವ ನೀವುಗಳು ಧರ್ಮವನ್ನು ಮಾಡಿರಿ. ಆ ಧರ್ಮವು ಸ್ವರ್ಗಸುಖವನ್ನುಂಟುಮಾಡಿ, ಕೊನೆಗೆ ಅಂತ್ಯರಹಿತವಾದ ಅನಂತಸುಖ(ಮೋಕ್ಷಸುಖ)ವನ್ನುಂಟುಮಾಡುತ್ತದೆ. ಸುಖವೇ ಧರ್ಮದ ಫಲವಾಗಿದೆ.

**ದಾನಂ ಪ್ರದತ್ತಮುದಿತಾ ಮುನಿಪುಂಗವೇಭ್ಯಃ**
**ಪೂಜಾಂ ಕುರುಧ್ವ[೨]ಮುಪನಮ್ಯ ಚ ತೀರ್ಥಕೃದ್ಭ್ಯಃ ।**
**ಶೀಲಾನಿ ಪಾಲಯತ ಪರ್ವದಿನೋಪವಾಸಾನ್**
**[೩]ವಿಸ್ಮಾರ್ಷ್ಟ ಮಾ ಸ್ಮ ಸುಧಿಯಃ ಸುಖಮೀಪ್ಸವಶ್ಚೇತ್ ॥ ೨೭೪ ॥**

ಎಲೈ ವಿದ್ವಾಂಸರೇ !ನೀವು ಸುಖವನ್ನಿಚ್ಛಿಸುತ್ತೀರಾದರೆ ಸಂತುಷ್ಟರಾಗಿ ಶ್ರೇಷ್ಠರಾದ ಮುನಿಗಳಿಗೆ ದಾನವನ್ನು ಕೊಡಿರಿ. ತೀರ್ಥಕರರನ್ನು ನಮಸ್ಕರಿಸಿ ಪೂಜೆಯನ್ನು ಮಾಡಿರಿ. ಶೀಲಗಳನ್ನು ಪಾಲಿಸಿರಿ. ಪರ್ವದಿನಗಳಲ್ಲಿ ಉಪವಾಸಗಳನ್ನು ಮರೆಯದಿರಿ. ಪರ್ವತಿಥಿಗಳಲ್ಲಿ ಮರೆಯದೆ ಉಪವಾಸಗಳನ್ನು ಮಾಡಿರೆಂದಭಿಪ್ರಾಯವು.

**ಸ ಶ್ರೀಮಾನಿತಿ ನಿತ್ಯಭೋಗನಿರತಃ ಪುತ್ರೈಶ್ಚ ಪೌತ್ರೈರ್ನಿಜೈ-**
**[೧]ರಾರೂಢಪ್ರಣಯೈ[೨]ರುಪಾಹಿತಧೃತಿಃ ಸಿಂಹಾಸನಾಧ್ಯಾಸಿತಃ ।**
**ಶಕ್ರಾರ್ಕೇಂದುಪುರಃಸರೈಃ ಸುರವರೈ[೩]ರ್ವ್ಯೂಢೋಲ್ಲಸಚ್ಛಾಸನಃ**
**ಶಾಸ್ತಿಸ್ಮಾಪ್ರತಿಶಾಸನೋ ಭುವಮಿಮಾಮಾಸಿಂಧುಸೀಮಾಂ ಜಿನಃ ॥**

ಈಪ್ರಕಾರವಾಗಿ ನಿತ್ಯಭೋಗಗಳಲ್ಲಿ ನಿರತರೂ ಶ್ರೀಮಂತರೂ ಪ್ರೇಮಪಾತ್ರರಾದ ತಮ್ಮ ಪುತ್ರಪೌತ್ರರಿಂದ ಪ್ರಾಪ್ತವಾದ ಸಂತೋಷವುಳ್ಳವರೂ ಸಿಂಹಾಸನಾರೂಢರೂ ಇಂದ್ರ ಸೂರ್ಯ ಚಂದ್ರ ಮೊದಲಾದ ದೇವತೆಗಳಿಂದ ಧರಿಸಲ್ಪಟ್ಟ ಶ್ರೇಷ್ಠವಾದ ಆಜ್ಞೆಯುಳ್ಳವರೂ ಆದ ಆ ಜಿನೇಶ್ವರರು ಸಮುದ್ರವೇ ಎಲ್ಲೆಯಾಗಿರುವ ಈ ಪೃಥ್ವಿಯನ್ನು ತಡೆಯಿಲ್ಲದ ತಮ್ಮ ಆಜ್ಞೆಯುಳ್ಳವರಾಗಿ ಆಳಿದರು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವತ್ಸಾಮ್ರಾಜ್ಯವರ್ಣನಂ ನಾಮ ಷೋಡಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭಗವತ್ಸಾಮ್ರಾಜ್ಯವರ್ಣನೆಯೆಂಬ
ಹದಿನಾರನೆಯ ಪರ್ವವು ಸಮಾಪ್ತವಾದುದು.

---

೧ ನೀತ್ವಾ. ೨ ನಮಸ್ಕೃತ್ಯ. ೩ ಮಾ ವಿಸ್ಮರತ.

೧ ಧೃತಸ್ನೇಹೈಃ. ೨ ಪ್ರಾಪ್ತಸಂತೋಷಃ. ೩ ಧೃತಃ.

# ಅಥ ಸಪ್ತದಶಂ ಪರ್ವ

**ಅಥಾನ್ಯೇದ್ಯುರ್ಮಹಾಸ್ಥಾನಮಧ್ಯೇ ನೃಪ[೧]ಶ್ಚತ್ರೈರ್ವೃತಃ ।**
**ಸ ಸಿಂಹಾಸನಮಧ್ಯಾಸ್ತ ಯಥಾರ್ಕೋ [೨]ನೈಷಧಂ ತಟಮ್ ॥ ೧ ॥**

ತರುವಾಯ ಒಂದುದಿನ ಮಹಾಸಭಾಮಧ್ಯದಲ್ಲಿ ಅನೇಕರಾಜರಿಂದ ಸುತ್ತಲ್ಪಟ್ಟ ಆ ವೃಷಭಸ್ವಾಮಿಯು, ಸೂರ್ಯನು ನಿಷಧಪರ್ವತದ ತಪ್ಪಲನ್ನು ಹೊಂದುವಂತೆ, ಸಿಂಹಾಸನದಲ್ಲಿ ಕುಳಿತರು.

**ತಥಾಸೀನಂ ಚ ತಂ ದೇವಂ [೩]ದೇವರಾ[೪]ಟ್ಪರ್ಯುಪಾಸಿತುಮ್ ।**
**ಸಾಪ್ಸರಾಃ ಸಹ ಗಂಧರ್ವೈಃ [೫]ಸಸಪರ್ಯ[೬]ಮುಪಾಸದತ್ ॥ ೨ ॥**

ಹಾಗೆ ಕುಳಿತಿದ್ದ ಆ ಸ್ವಾಮಿಯನ್ನು ಆರಾಧಿಸುವುದಕ್ಕೋಸ್ಕರ ದೇವೇಂದ್ರನು ಅಪ್ಸರಸ್ತ್ರೀಸಮೇತನೂ ಗಂಧರ್ವದೇವತೆಗಳೊಡನೆ ಕೂಡಿದವನೂ ಆಗಿ ಪೂಜಾ ಸಹಿತವಾಗಿ ಸಮೀಪಕ್ಕೆ ಬಂದನು.

**ತತೋ ಯಥೋಚಿತಂ ಸ್ಥಾನಮಧ್ಯಾಸಿಷ್ಟಾ[೭]ಧಿವಿಷ್ಟರಮ್ ।**
**ಜಯನ್ನುದಯಮೂರ್ಧಸ್ಥಮರ್ಕಮಾತ್ಮೀಯತೇಜಸಾ ॥ ೩ ॥**

ತರುವಾಯ ಉದಯಪರ್ವತದ ಅಗ್ರಭಾಗದಲ್ಲಿರುವ ಸೂರ್ಯನನ್ನು ತಮ್ಮ ತೇಜಸ್ಸಿನಿಂದ ಜಯಿಸುತ್ತಿರುವ ಸ್ವಾಮಿಯು ಉಚಿತವಾದ ಸ್ಥಾನದಲ್ಲಿ ಸಿಂಹ ಪೀಠದಲ್ಲಿ ಕುಳಿತರು.

**[೮]ಆರಿರಾಧಯಿಷುರ್ದೇವಂ ಸುರರಾಡ್ಭಕ್ತಿನಿರ್ಭರಃ ।**
**[೯]ಪ್ರಾಯೂಯುಜತ್ಸಗಂಧರ್ವಂ ನೃತ್ಯ[೧೦]ಮಾಪ್ಸರಸಂ ತದಾ ॥ ೪ ॥**

ಆಗ ಭಕ್ತಿನಿರ್ಭರನಾದ ದೇವೇಂದ್ರನು ಸ್ವಾಮಿಯನ್ನು ಆರಾಧಿಸಬೇಕೆಂಬ ಇಚ್ಛೆಯುಳ್ಳವನಾಗಿ ಗಂಧರ್ವದೇವತೆಗಳುಳ್ಳ ಅಪ್ಸರಸ್ತ್ರೀಯರ ನೃತ್ಯವನ್ನು ಪ್ರಯೋಗಿಸಿದನು.

**ತನ್ನೃತ್ಯಂ ಸುರನಾರೀಣಾಂ ಮನೋಽಸ್ಯಾರಂಜಯತ್ಪ್ರಭೋಃ ।**
**ಸ್ಫಾಟಿಕೋ ಹಿ ಮಣಿಃ ಶುದ್ಧೋಽಪ್ಯಾದತ್ತೇ ರಾಗ[೧೧]ಮನ್ಯತಃ ॥ ೫ ॥**

ದೇವಸ್ತ್ರೀಯರ ಆ ನೃತ್ಯವು ಈ ಸ್ವಾಮಿಯ ಮನಸ್ಸನ್ನು ಸಂತೋಷಪಡಿಸಿತು. ಸ್ಫಟಿಕ ಮಣಿಯು ಶುದ್ಧವಾಗಿದ್ದರೂ ದಾಸವಾಳದ ಪುಷ್ಪಮೊದಲಾದ ಬೇರೆ ಪದಾರ್ಥದ ಸಂಬಂಧದಿಂದ ಕೆಂಪುವರ್ಣವನ್ನು ಹೊಂದುವುದಲ್ಲವೆ?

**ರಾಜ್ಯಭೋಗಾತ್ಕಥಂ ನಾಮ [೧೨]ವಿರಜ್ಯೇದ್ಭಗವಾನಿತಿ ।**
**[೧೩]ಪ್ರಕ್ಷೀಣಾಯುರ್ದಶಂ ಪಾತ್ರಂ ತದಾ ಪ್ರಾಯುಂಕ್ತ ದೇವರಾಟ್ ॥**

''ಭಗವಂತನು ರಾಜ್ಯಭೋಗದಿಂದ ಹೇಗೆ ವಿರಕ್ತನಾಗುವನು'' ಎಂದು ದೇವೇಂದ್ರನು ಯೋಚಿಸಿ ಆಗ ಆಯುಷ್ಯಾವಸ್ಥೆಯು ನಷ್ಟವಾದ ಒಂದು ಪಾತ್ರವನ್ನು ಪ್ರಯೋಗಿಸಿದನು. ಸ್ವಾಮಿಗೆ ವೈರಾಗ್ಯವನ್ನುಂಟುಮಾಡುವುದಕ್ಕೋಸ್ಕರ ಸ್ವಲ್ಪಾಯುಷ್ಯವುಳ್ಳ ಸ್ತ್ರೀಪಾತ್ರವನ್ನು ನರ್ತನಕ್ಕೆ ಪ್ರಯೋಗಿಸಿದನೆಂದು ಭಾವವು.

**ತತೋ ನೀಲಾಂಜನಾನಾಮ ಲಲಿತಾ ಸುರನರ್ತಕೀ ।**
**ರಸಭಾವಲಯೋಪೇತಂ ನಟಂತೀ ಸಪರಿಕ್ರಮಮ್ ॥ ೭ ॥**

೧ ಸಮೂಹೈರಿತಿ ಯಾವತ್. ೨ ನಿಷಧಸಂಬಂಧಿ. ೩ ದೇವೇಂದ್ರಃ. ೪ ಆರಾಧಯಿತುಂ. ೫ ಪೂಜಾಸಹಿತಂ ಯಥಾ ತಥಾ. ೬ ಆಗತವಾನ್. ೭ ಸಿಂಹಾಸನೇ. ೮ ಆರಾಧಯಿತುಮಿಚ್ಛುಃ. ೯ ಪ್ರಯೋಜಯತಿ ಸ್ಮ. ೧೦ ಅಪ್ಸರಸಾಮಿದಂ. ೧೧ ಜಪಾಕುಸುಮಾದೇಃ. ೧೨ ವಿರಕ್ತೋ ಭವೇತ್. ೧೩ ಪ್ರಣಷ್ಟಾಯುಷ್ಯಾವಸ್ಥಂ.

**ಕ್ಷಣಾದದೃಶ್ಯತಾಂ ಪ್ರಾಪ ಕಿಲಾಯುರ್ದೀಪಸಂಕ್ಷಯೇ ।**
**ಪ್ರಭಾತರಲಿತಾಂ ಮೂರ್ತಿಂ ದಧಾನಾ ತಡಿದುಜ್ಜ್ವಲಾಮ್ ॥ ೮ ॥**

**ಸೌದಾಮಿನೀಲತೇವಾಸೌ ದೃಷ್ಟನಷ್ಟಾಭವತ್ಕ್ಷಣಾತ್ ।**
**ರಸಭಂಗಭಯಾದಿಂದ್ರಃ [೧]ಸಂದಧೇತ್ರಾಪರಂ ವಪುಃ ॥ ೯ ॥**

ತರುವಾಯ ಸುಂದರಿಯಾದ ನೀಲಾಂಜನೆಯೆಂಬ ದೇವನರ್ತಕಿಯು ಶೃಂಗಾರಾದಿರಸ ಭಾವ ಲಯ ಇವುಗಳಿಗನುಸಾರವಾಗಿ ಸುಖವಾಗಿ ತಿರುಗಿ ನರ್ತನವನ್ನು ಮಾಡುತ್ತ ಆಯುಷ್ಯವೆಂಬ ದೀಪವು ನಷ್ಟವಾಗುತ್ತಿರಲು ಕ್ಷಣಕಾಲದಲ್ಲಿ ಅದೃಶ್ಯಳಾದಳು. ಪ್ರಭೆಯಿಂದ ಚಂಚಲವೂ ಮಿಂಚಿನಂತೆ ಪ್ರಕಾಶಮಾನವೂ ಆದ ಶರೀರಾಕೃತಿಯನ್ನು ಧರಿಸಿರುವ ಈ ನೀಲಾಂಜನೆಯು ಮಿಂಚಿನಂತೆ, ಕಾಣಿಸಿಕೊಂಡು ಒಂದುಕ್ಷಣಕಾಲದಲ್ಲಿ ನಾಶವನ್ನು ಹೊಂದಿದಳು. ರಸಭಂಗವಾಗುವುದೆಂಬ ಭಯದಿಂದ ದೇವೇಂದ್ರನು ಈ ನೀಲಾಂಜನೆಯ ಸ್ಥಾನದಲ್ಲಿ ಬೇರೊಂದು ಶರೀರವನ್ನು ಸಂಯೋಜನೆಮಾಡಿದನು. ಬೇರೊಬ್ಬ ನರ್ತನಸ್ತ್ರೀಯನ್ನು ಸಿದ್ಧಪಡಿಸಿದನೆಂದು ಭಾವವು.

**ತದೇವ ಸ್ಥಾನಕಂ ರಮ್ಯಂ ಸಾ ಭೂಮಿಃ ಸ [೨]ಪರಿಕ್ರಮಃ ।**
**ತಥಾಪಿ ಭಗವಾ[೩]ನ್ವೇದ ತತ್ತ್ವರೂಪಾಂತರಂ ತದಾ ॥ ೧೦ ॥**

ರಮಣೀಯವಾದ ನರ್ತನಸ್ಥಾನವೂ ಅದೇ, (ಮೊದಲಿನದೇ) ರಂಗಭೂಮಿಯೂ ಅದೇ, ಹೆಜ್ಜೆಗಳನ್ನಿಡುವಿಕೆಯೂ ಅದೇ. ಎರಡನೆಯ ನರ್ತಕಿಯು ಸರ್ವಭಾಗದಲ್ಲಿಯೂ ನೀಲಾಂಜನೆಯಂತಿದ್ದಳೆಂದರ್ಥವು. ಹಾಗಿದ್ದರೂ ಸ್ವಾಮಿಯು ಆಗ ಆ ಬೇರೆರೂಪವನ್ನು ತಿಳಿದರು. ಈ ಮರ್ಮವನ್ನು ಸ್ವಾಮಿಯು ತಿಳಿದರೆಂದು ಭಾವವು.

**ತತೋಽಸ್ಯ ಚೇತಸೀತ್ಯಾಸೀಚ್ಚಿಂತಾ ಭೋಗಾ[೪]ದ್ವಿರಜ್ಯತಃ ।**
**ಪರಾಂ ಸಂವೇಗನಿರ್ವೇದಭಾವನಾ[೫]ಮುಪಜಗ್ಮುಷಃ ॥ ೧೧ ॥**

ತರುವಾಯ ಶ್ರೇಷ್ಠವಾದ ಧರ್ಮದಲ್ಲಿಯೂ ಧರ್ಮಫಲದಲ್ಲಿಯೂ ಪ್ರೀತಿರೂಪವಾದ ಸಂವೇಗಭಾವನೆಯನ್ನೂ ನಿರ್ವೇದ (ವೈರಾಗ್ಯ) ಭಾವನೆಯನ್ನೂ ಹೊಂದಿದವರೂ ಭೋಗದಿಂದ ವಿರಕ್ತರೂ ಆದ ಈ ಸ್ವಾಮಿಯ ಮನಸ್ಸಿನಲ್ಲಿ ಮುಂದೆಹೇಳುವ ರೀತಿಯಾದ ಯೋಚನೆಯುಂಟಾಯಿತು.

**ಅಹೋ ಜಗದಿದಂ [೬]ಭಂಗಿ ಶ್ರೀಸ್ತಟಿದ್ವಲ್ಲರೀಚಲಾ ।**
**ಯೌವನಂ ವಪುರಾರೋಗ್ಯಮೈಶ್ವರ್ಯಂ ಚ [೭]ಚಲಾಚಲಮ್ ॥ ೧೨ ॥**

''ಅಹೋ! ಈ ಜಗತ್ತು ನಾಶಸ್ವಭಾವವುಳ್ಳದು. ಸಂಪತ್ತು ಮಿಂಚಿನಂತೆ ಚಂಚಲವಾದುದು. ಯೌವನವೂ ಶರೀರವೂ ಆರೋಗ್ಯವೂ ಐಶ್ವರ್ಯವೂ ಅತ್ಯಂತ ಚಂಚಲವಾದುವು.

**ರೂಪಯೌವನಸೌಭಾಗ್ಯಮದೋನ್ಮತ್ತಃ [೮]ಪೃಥಗ್ಜನಃ ।**
**[೯]ಬಧ್ನಾತಿ ಸ್ಥಾಯಿನೀಂ ಬುದ್ಧಿಂ ಕಿನ್ನ್ವತ್ರ ನ ವಿನಶ್ವರಮ್ ॥ ೧೩ ॥**

ರೂಪ ಯೌವನ ಸೌಭಾಗ್ಯ ಇವುಗಳಿಂದ ಮದೋನ್ಮತ್ತವಾದ ಅವಿವೇಕಿಜನವು ಈ ವಸ್ತುಗಳೆಲ್ಲ ಸ್ಥಿರವಾದುವುಗಳೆಂದು ತಿಳಿಯುತ್ತದೆ. ಈ ಲೋಕದಲ್ಲಿ ನಾಶವಾಗದಿರುವ ವಸ್ತುವಾವುದು ?

೧ ಸಂಯೋಜಯತಿಸ್ಮ. ೨ ಪದಚಾರಿಃ. ೩ ವೇತ್ತಿ ಸ್ಮ. ೪ ವಿರಕ್ತಿಂಗತಸ. ೫ ಉಪಗತಸ್ಯ. ೬ ವಿನಾಶಿ. ೭ ಅತ್ಯಂತಚಂಚಲಂ. ೮ ಪಾಮರಃ. ೯ ಸಂಬಂಧಂ ಕರೋತಿ.

**ಸಂಧ್ಯಾರಾಗನಿಭಾ ರೂಪಶೋಭಾ ತಾರುಣ್ಯಮುಜ್ಜ್ವಲಮ್ ।**
**ಪಲ್ಲವಚ್ಛವಿವತ್ಸದ್ಯಃ ಪರಿಮ್ಲಾನಿಮುಪಾಶ್ನುತೇ ॥ ೧೪ ॥**

ಸಂಜೆಗೆಂಪಿಗೆ ಸಮಾನವಾದ ರೂಪದ ಶೋಭೆಯೂ ಪ್ರಕಾಶಮಾನವಾದ ತಾರುಣ್ಯವೂ ತಳಿರಿನ ಕಾಂತಿಯಂತೆ ತತ್ಕ್ಷಣದಲ್ಲೇ ಬಾಡಿಹೋಗುವುವು.

**ಯೌವನಂ ವನವಲ್ಲೀನಾಮಿವ ಪುಷ್ಪಂ ಪರಿಕ್ಷಯಿ ।**
**ವಿಷವಲ್ಲೀನಿಭಾ ಭೋಗಸಂಪದೋ ಭಂಗಿ ಜೀವಿತಮ್ ॥ ೧೫ ॥**

ಯೌವನವು, ವನದಲ್ಲಿರುವ ಲತೆಗಳ ಪುಷ್ಪದಂತೆ, ನಾಶಸ್ವಭಾವವಾದುದು. ಭೋಗಸಂಪತ್ತುಗಳು ವಿಷದ ಬಳ್ಳಿಗೆ ಸಮಾನವಾದುವು. ಜೀವನವು ನಾಶ ಸ್ವಭಾವವುಳ್ಳುದು.

**ಘಟಿಕಾಜಲಧಾರೇವ ಗಲತ್ಯಾಯುಃಸ್ಥಿತಿರ್ದ್ರುತಮ್ ।**
**ಶರೀರಮಿದಮತ್ಯಂತಪೂತಿಗಂಧಿಜುಗುಪ್ಸಿತಮ್ ॥ ೧೬ ॥**

ಗಳಿಗೆಬಟ್ಟಲಿನಲ್ಲಿ ಹಾಕಿದ ಜಲಧಾರೆಯಂತೆ ಆಯುಷ್ಯಸ್ಥಿತಿಯು ಶೀಘ್ರವಾಗಿ ಕಳೆದುಹೋಗುತ್ತದೆ. ಈ ಶರೀರವು ಅತ್ಯಂತ ದುರ್ಗಂಧದಿಂದ ನಿಂದ್ಯವಾದುದು.

**ನಿಃಸಾರೇ ಖಲು ಸಂಸಾರೇ ಸುಖಲೇಶೋಽಪಿ ದುರ್ಲಭಃ ।**
**ದುಃಖಮೇವ ಮಹತ್ತಸ್ಮಿನ್ಸುಖಂ ಕಾಮ್ಯತಿ ಮಂದಧೀಃ ॥ ೧೭ ॥**

ನಿಸ್ಸಾರವಾದ ಸಂಸಾರದಲ್ಲಿ ಸುಖದ ಲೇಶವೂ ದುರ್ಲಭವಾಗಿದೆ. ದುಃಖವೇ ಅಧಿಕವಾಗಿದೆ. ಅಂತಹ ಸಂಸಾರದಲ್ಲಿ ಅಜ್ಞಾನಿಯು ಸುಖವನ್ನಿಚ್ಛಿಸುತ್ತಾನೆ.

**ನರಕೇಷು ಯ[1]ದೇತೇನ ದುಃಖಮಾಸೇವಿತಂ ಮಹತ್ ।**
**ತಚ್ಚೇತ್ಸ್ಮರ್ಯೇತ ಕಃ ಕುರ್ಯಾದ್ಭೋಗೇಷು ಸ್ಪೃಹಯಾಲುತಾಮ್ ॥**

ಈ ಜೀವನು ನರಕಗಳಲ್ಲಿ ಅನುಭವಿಸಿದ ಅಧಿಕವಾದ ದುಃಖವನ್ನು ಸ್ಮರಿಸಿದರೆ ಈ ಭೋಗಗಳಿಗೆ ಯಾವನು ಆಸೆಪಡುವನು ?

**ನೂನಮಾರ್ತಧಿಯಾಂ ಭುಕ್ತಾ ಭೋಗಾಃ ಸರ್ವೇಽಪಿ ದೇಹಿನಾಮ್ ।**
**ದುಃಖರೂಪೇಣ ಪಚ್ಯಂತೇ ನಿರಯೇ [2]ನಿರಯೋದಯೇ ॥ ೧೯ ॥**

ನಿಜವಾಗಿಯೂ ಆರ್ತಬುದ್ಧಿಯುಳ್ಳ ಪ್ರಾಣಿಗಳು ಭೋಗಿಸಿದ ಭೋಗಗಳೆಲ್ಲ ಶುಭಕರ್ಮೋದಯರಹಿತವಾದ ನರಕದಲ್ಲಿ ದುಃಖರೂಪವಾಗಿ ಪರಿಣಮಿಸುತ್ತವೆ. ದುಃಖರೂಪದಿಂದ ಉದಯಕ್ಕೆ ಬರುತ್ತವೆಂದು ಭಾವವು.

**ಸ್ವಪ್ನಜಂ ಚ ಸುಖಂ ನಾಸ್ತಿ ನರಕೇ ದುಃಖಭೂಯಸಿ ।**
**ದುಃಖಂ ದುಃಖಾನುಬಂಧ್ಯೇವ ಯತಸ್ತತ್ರ ದಿವಾನಿಶಮ್ ॥ ೨೦ ॥**

ಅಪಾರವಾದ ದುಃಖವುಳ್ಳ ನರಕದಲ್ಲಿ ಸ್ವಪ್ನದಲ್ಲಿಯೂ ಸುಖವೆಂಬುದಿಲ್ಲ. ಆ ನರಕದಲ್ಲಿ ರಾತ್ರಿಹಗಲು ಅನುಭವಿಸುವ ದುಃಖವು ಮುಂದಿನ ಜನ್ಮಕ್ಕೂ ದುಃಖಸಂಬಂಧವನ್ನೇ ಉಂಟುಮಾಡುತ್ತದೆ.

**ತತೋ ವಿನಿಃಸೃತೋ ಜಂತುಸ್ತೈರಶ್ಚಂ ದುಃಖ[3]ಮಾಯತಮ್ ।**
**[4]ಸ್ವಸಾತ್ಕರೋತಿ ಮಂದಾತ್ಮಾ ನಾನಾಯೋನಿಷು ಪರ್ಯಟನ್ ॥ ೨೧ ॥**

ಆ ನರಕದಿಂದ ಹೊರಟ ಮಂದಬುದ್ಧಿಯುಳ್ಳ ಪ್ರಾಣಿಯು ನಾನಾಯೋನಿಗಳಲ್ಲಿ ಸುತ್ತಿ ಅಧಿಕವಾದ ತಿರ್ಯಗ್ದುಃಖವನ್ನು ಸ್ವಾಧೀನಮಾಡಿಕೊಳ್ಳುತ್ತದೆ. ತಿರ್ಯಗ್ದುಃಖವನ್ನನುಭವಿಸುತ್ತದೆಂದು ಭಾವವು.

**ಪೃಥಿವ್ಯಾಮಪ್ಸು ವಹ್ನೌ ಚ ಪವನೇ ಸ ವನಸ್ಪತೌ ।**
**ಬಂಭ್ರಮ್ಯತೇ ಮಹಾದುಃಖ[5]ಮಶ್ನುವಾನೋ ಬತಾಜ್ಞಕಃ ॥ ೨೨ ॥**

ಆ ಅಜ್ಞಾನಿಯಾದ ಜೀವನು ಅಪಾರವಾದ ದುಃಖವನ್ನನುಭವಿಸುತ್ತ ಪೃಥಿವೀ ಜಲ ಅಗ್ನಿ ಗಾಳಿ ವನಸ್ಪತಿ ಈ ಯೋನಿಗಳಲ್ಲಿ ಪುನಃಪುನಃ ತಿರುಗುತ್ತಾನೆ. ಅಹೋ ಕಷ್ಟ !

**ಖನನೋತ್ತಾಪನ[1]ಜ್ವಾಲೀಜ್ವಾಲಾವಿಧ್ಮಾಪನೈರಪಿ ।**
**[2]ಘನಾಭಿಘಾತೈಶ್ಛೇದೈಶ್ಚ ದುಃಖಂ [3]ತತ್ರೈ[4]ತಿ ದುಸ್ತರಮ್ ॥ ೨೩ ॥**

ಭೂಮಿಯನ್ನು ಅಗೆಯುವುದರಿಂದಲೂ ಜಲವನ್ನು ಕುದಿಸುವುದರಿಂದಲೂ ಅಗ್ನಿಜ್ವಾಲೆಯನ್ನು ಆರಿಸುವುದರಿಂದಲೂ ಗಾಳಿಗೆ ಮೇಘದ ಹೊಡೆತದಿಂದಲೂ ವನಸ್ಪತಿಗಳನ್ನು ಕತ್ತರಿಸುವುದರಿಂದಲೂ ಆ ಯೋನಿಗಳಲ್ಲಿ ಜೀವನು ದುಸ್ತರವಾದ ದುಃಖವನ್ನು ಹೊಂದುತ್ತಾನೆ.

**ಸೂಕ್ಷ್ಮಬಾದರಪರ್ಯಾಪ್ತ[5]ತದ್ವಿಪಕ್ಷಾತ್ಮಯೋನಿಷು ।**
**ಪರ್ಯಟತ್ಯಸಕೃಜ್ಜೀವೋ ಘಟೀಯಂತ್ರಸ್ಥಿತಿಂ ದಧತ್ ॥ ೨೪ ॥**

ಜೀವನು ಪೃಥ್ವೀಮೊದಲಾದ ಏಕೇಂದ್ರಿಯಜೀವಗಳಲ್ಲಿ ಸೂಕ್ಷ್ಮಪರ್ಯಾಪ್ತ ಅಪರ್ಯಾಪ್ತ ಬಾದರ(ಸ್ಥೂಲ)ಪರ್ಯಾಪ್ತ ಅಪರ್ಯಾಪ್ತ ಈ ಯೋನಿಗಳಲ್ಲಿ, ನೀರನ್ನು ಸೇದುವ ರಾಟೆಯಂತೆ, ತಿರುಗುತ್ತಾನೆ. (ಸೂಕ್ಷ್ಮಪರ್ಯಾಪ್ತ ಏಕೇಂದ್ರಿಯ ಸೂಕ್ಷ್ಮಅಪರ್ಯಾಪ್ತ ಏಕೇಂದ್ರಿಯ; ಬಾದರಪರ್ಯಾಪ್ತ ಏಕೇಂದ್ರಿಯ, ಬಾದರ ಅಪರ್ಯಾಪ್ತ ಏಕೇಂದ್ರಿಯ; ಹೀಗೆ ಏಕೇಂದ್ರಿಯದಲ್ಲಿ ನಾಲ್ಕುಭೇದಗಳಿವೆ. ಪೃಥ್ವೀಮೊದಲಾಗಿ ೫ x ೪ = ೨೦).

**ತ್ರಸಕಾಯೇಷ್ವಪಿ ಪ್ರಾಣೀ ವಧಬಂಧೋ[6]ಪರೋಧನೈಃ ।**
**[7]ದುಃಖಾಸಿಕಾಮವಾಪ್ನೋತಿ [8]ಸರ್ವಾವಸ್ಥಾನುಯಾಯಿನೀಮ್ ॥ ೨೫ ॥**

ಪ್ರಾಣಿಯು ದ್ವೀಂದ್ರಿಯ ತ್ರೀಂದ್ರಿಯ ಮೊದಲಾದ ತ್ರಸಕಾಯಗಳಲ್ಲಿಯೂ ವಧ ಬಂಧನ ಅನ್ನಪಾನನಿರೋಧ ಇವುಗಳಿಂದ ಬಾಲ್ಯಮೊದಲಾದ ಸರ್ವಾವಸ್ಥೆಗಳಲ್ಲಿಯೂ ಅನುಸರಿಸಿ ಬರುವ ದುಃಖಸ್ಥಿತಿಯನ್ನು ಹೊಂದುತ್ತದೆ.

**ಜನ್ಮದುಃಖಂ ತತೋ ದುಃಖಂ ಜರಾಮೃತ್ಯುಸ್ತತೋಽಧಿಕಮ್ ।**
**ಇತಿ ದುಃಖಶತಾವರ್ತೇ ಜನ್ಮಾಬ್ಧೌ ಸ ನಿಮಗ್ನವಾನ್ ॥ ೨೬ ॥**

ಜೀವನಿಗೆ ಜನ್ಮವು ದುಃಖಕರವಾದುದು. ಅದಕ್ಕಿಂತಲೂ ದುಃಖಕರವಾದುದು ಮುಪ್ಪು. ಅದಕ್ಕಿಂತಲೂ ಹೆಚ್ಚು ದುಃಖಕರವಾದುದು ಮರಣವು. ಹೀಗೆ ಅನೇಕ ದುಃಖಗಳೆಂಬ ಸುಳಿಗಳುಳ್ಳ ಜನ್ಮವೆಂಬ ಸಮುದ್ರದಲ್ಲಿ ಪ್ರಾಣಿಯು ಮುಳುಗಿದೆ.

**ಕ್ಷಣಾನ್ನಶ್ಯನ್ ಕ್ಷಣಾಜ್ಜೀರ್ಯನ್ ಕ್ಷಣಾಜ್ಜನ್ಮ[9]ಸಮಾಪ್ನುವನ್ ।**
**ಜನ್ಮಮೃತ್ಯುಜರಾತಂಕಪಂಕೇ ಮಜ್ಜತಿ ಗೌರಿವ ॥ ೨೭ ॥**

ಒಂದು ಕ್ಷಣಕಾಲದಿಂದ ನಾಶವನ್ನು ಹೊಂದುತ್ತಲೂ ಕ್ಷಣಕಾಲದಿಂದ ಶಿಥಿಲ ವಾಗುತ್ತಲೂ ಕ್ಷಣಕಾಲದಿಂದ ಜನ್ಮವನ್ನು ಹೊಂದುತ್ತಲೂ ಪ್ರಾಣಿಯು ಜನ್ಮ ಜರಾಮರಣರೋಗಗಳೆಂಬ ಕೆಸರಿನಲ್ಲಿ, ಗೋವಿನಂತೆ, ಮುಳುಗುತ್ತದೆ.

**ಅನಂತಂ ಕಾಲಮಿತ್ಯಜ್ಞಸ್ತಿರ್ಯಕ್ತ್ವೇ ದುಃಖಮಶ್ನುತೇ ।**
**ದುಃಖಸ್ಯ ಹಿ ಪರಂ ಧಾಮ ತಿರ್ಯಕ್ತ್ವಂ ಮನ್ವತೇ ಜಿನಾಃ ॥ ೨೮ ॥**

ಈರೀತಿಯಾಗಿ ಜ್ಞಾನಶೂನ್ಯವಾದ ಪ್ರಾಣಿಯು ಅನಂತಕಾಲದ ವರೆಗೂ ತಿರ್ಯಗ್ಗತಿಯಲ್ಲಿ ದುಃಖವನ್ನನುಭವಿಸುತ್ತದೆ. ದುಃಖಕ್ಕೆ ಮುಖ್ಯವಾದ ಸ್ಥಾನವು ತಿರ್ಯಗ್ಗತಿಯೆಂದು ಜಿನೇಶ್ವರರು ತಿಳಿಯುತ್ತಾರೆ.

**ತತಃ ಕೃಚ್ಛ್ರಾದ್ವಿನಿಃಸೃತ್ಯ ಶಿಥಿಲೇ ದುಷ್ಕೃತೇ ಮನಾಕ್ ।**
**ಮನುಷ್ಯಭಾವಮಾಪ್ನೋತಿ ಕರ್ಮಸಾರಥಿಚೋದಿತಃ ॥ ೨೯ ॥**

೧ ಜೀವೇನ. ೨ ಆಯೋದಯಾನ್ನಿಷ್ಕ್ರಾಂತೇ, ಶುಭಕರ್ಮೋದಯರಹಿತ ಇತ್ಯರ್ಥಃ. ೩ ಭೂಯಿಷ್ಠಮಿತ್ಯರ್ಥಃ. ೪ ಸ್ವಾಧೀನಂ ಕರೋತಿ. ೫ ಪ್ರಾಪ್ನುವನ್.

೧ ಅಗ್ನಿಜ್ವಾಲಾಪ್ರಶಮನೈಃ. ೨ ಮೇಘತಾಡನೈಃ. ೩ ಪೃಥಿವ್ಯಾದೌ. ೪ ಗಚ್ಛತಿ. ೫ ಅಪರ್ಯಾಪ್ತಃ. ೬ ಅನ್ನಪಾನಾದ್ಯುಪರೋಧನೈಃ. ೭ ದುಃಖಸ್ಥತಾಂ. ೮ ಬಾಲ್ಯಾದ್ಯವಸ್ಥಾನುಗಾಮಿನೀಂ. ೯ ಪ್ರಾಪ್ನುವನ್.

ಪಾಪಕರ್ಮವು ಸ್ವಲ್ಪ ಶಿಥಿಲವಾಗುತ್ತಿರಲು ಪ್ರಾಣಿಯು ಆ ತಿರ್ಯಗ್ಭವದಿಂದ ಪ್ರಯಾಸದಿಂದ ಹೊರಟು ಕರ್ಮವೆಂಬ ಸಾರಥಿಯಿಂದ ಪ್ರೇರಿತವಾಗಿ ಮನುಷ್ಯತ್ವ ವನ್ನು ಪಡೆಯುತ್ತದೆ.

**ತತ್ರಾಪಿ ವಿವಿಧಂ ದುಃಖಂ [೧]ಶಾರೀರಂ ಚೈವ ಮಾನಸಮ್ ।**
**ಪ್ರಾಪ್ನೋತ್ಯನಿಚ್ಛುರೇವಾತ್ಮಾ ನಿರುದ್ಧಃ ಕರ್ಮಶತ್ರುಭಿಃ ॥ ೩೦ ॥**

ಆ ಮನುಷ್ಯಭವದಲ್ಲಿಯೂ ಕರ್ಮಗಳೆಂಬ ಶತ್ರುಗಳಿಂದ ಸುತ್ತಲ್ಪಟ್ಟ ಆತ್ಮನು ತನಗೆ ಇಚ್ಛೆಯಿಲ್ಲದಿದ್ದರೂ ನಾನಾವಿಧವಾದ ಶರೀರಸಂಬಂಧವಾದ ದುಃಖವನ್ನೂ ಕ್ರೋಧಮೊದಲಾದ ಮನಸ್ಸಿನಲ್ಲಿ ಉಂಟಾಗುವ ದುಃಖವನ್ನೂ ಪಡೆಯುತ್ತಾನೆ.

**ಪರಾರಾಧನದಾರಿದ್ರ್ಯಚಿಂತಾಶೋಕಾದಿಸಂಭವಮ್ ।**
**ದುಃಖಂ ಮಹನ್ಮನುಷ್ಯಾಣಾಂ ಪ್ರತ್ಯಕ್ಷನರಕಾಯತೇ ॥ ೩೧ ॥**

ಮನುಷ್ಯರಿಗೆ ಪರರಸೇವೆ ಬಡತನ ಚಿಂತೆ ಶೋಕ ಮೊದಲಾದುವು ಗಳಿಂದುಂಟಾಗುವ ಮಹಾ ದುಃಖವು ಪ್ರತ್ಯಕ್ಷನರಕದಂತೆ ತೋರುತ್ತದೆ.

**ಶರೀರಶಕಟಂ ದುಃಖದುರ್ಭಾಂಡೈಃ ಪರಿಪೂರಿತಮ್ ।**
**ದಿನೈಸ್ತ್ರಿಚತುರೈರೇವ [೨]ಪರ್ಯಸ್ಯತಿ ನ ಸಂಶಯಃ ॥ ೩೨ ॥**

ದುಃಖವೆಂಬ ದುಷ್ಟಭಾಜನಗಳಿಂದ ತುಂಬಿರುವ ಶರೀರವೆಂಬ ಗಾಡಿಯು ಮೂರುನಾಲ್ಕು ದಿವಸಗಳಿಂದಲೇ ನಾಶವಾಗುತ್ತದೆ. ಇದರಲ್ಲಿ ಸಂದೇಹವಿಲ್ಲ.

**[೩]ದಿವ್ಯಭಾವೇ ಕಿಲೈತೇಷಾಂ ಸುಖಭಾಕ್ತ್ವಂ ಶರೀರಿಣಾಮ್ ।**
**ತತ್ರಾಪಿ ತ್ರಿದಿವಾತ್ಪಾತಃ ಪರಂ ದುಃಖಂ ದುರುತ್ತರಮ್ ॥ ೩೩ ॥**

ಈ ಪ್ರಾಣಿಗಳಿಗೆ ದೇವಪರ್ಯಾಯದಲ್ಲಿ ಸುಖಪ್ರಾಪ್ತಿಯಿದ್ದರೂ ಸ್ವರ್ಗದಿಂದ ಚ್ಯುತವಾಗುವುದು ಅಪಾರವಾದ ದುಃಖವಾಗಿದೆ. ಆಯುಷ್ಯವು ಮುಗಿದಮೇಲೆ ಸ್ವರ್ಗದಿಂದ ಚ್ಯುತನಾಗುವಾಗ ಜೀವನಿಗೆ ಅಪಾರವಾದ ದುಃಖವಾಗುವುದೆಂದು ಭಾವವು.

**ತತ್ರಾಪೀಷ್ಟವಿಯೋಗೋಸ್ತಿ [೪]ನ್ಯೂನಾಸ್ತತ್ರಾಪಿ [೫]ಕೇಚನ ।**
**[೬]ತತೋ ಮಾನಸಮೇತೇಷಾಂ ದುಃಖಂ [೭]ದುಃಖೇನ ಲಂಘ್ಯತೇ ॥**

ಸ್ವರ್ಗದಲ್ಲಿಯೂ ಇಷ್ಟವಸ್ತುಗಳ ವಿಯೋಗವಿದೆ. ಆ ಸ್ವರ್ಗದಲ್ಲಿಯೂ ಕೆಲವು ದೇವತೆಗಳು ಕೀಳು ದರ್ಜೆಯವರಿರುತ್ತಾರೆ. ಉಚ್ಚನೀಚಭೇದವಿದೆಯೆಂದು ಭಾವವು. ಆದುದರಿಂದ ಈ ದೇವತೆಗಳ ಮಾನಸದುಃಖವು ಬಹಳಕಷ್ಟದಿಂದ ಕಳೆಯುತ್ತದೆ. ಇಷ್ಟವಸ್ತುವಿಯೋಗದಿಂದಲೂ ಉಚ್ಚನೀಚಭೇದದಿಂದಲೂ ದುಃಖ ವುಂಟಾಗುವುದೆಂದು ಭಾವವು.

**ಇತಿ ಸಂಸಾರಚಕ್ರೇಸ್ಮಿನ್ವಿಚಿತ್ರೈಃ ಪರಿವರ್ತನೈಃ ।**
**ದುಃಖಮಾಪ್ನೋತಿ ದುಷ್ಕರ್ಮ[೮]ಪರಿಪಾಕಾದ್ವರಾಕಕಃ ॥ ೩೫ ॥**

ಈ ರೀತಿಯಾಗಿ ಈ ಸಂಸಾರವೆಂಬ ಚಕ್ರದಲ್ಲಿ ವಿಚಿತ್ರವಾದ ಪರಿಭ್ರಮಣಗಳಿಂದ ಅಜ್ಞಾನಿಯಾದ ಪ್ರಾಣಿಯು ಪಾಪಕರ್ಮದ ಉದಯದಿಂದ ದುಃಖವನ್ನು ಹೊಂದುತ್ತದೆ.

**[೯]ನಾರೀರೂಪಮಯಂ ಯಂತ್ರಮಿದಮತ್ಯಂತ[೧೦]ಪೇಲವಮ್ ।**
**ಪಶ್ಯತಾಮೇವ ನಃ ಸಾಕ್ಷಾತ್ಕಥಮೇತದಗಾಲ್ಲಯಮ್ ॥ ೩೬ ॥**

ಸ್ತ್ರೀರೂಪ(ನೀಲಾಂಜನಾ)ಮಯವೂ ಅತ್ಯಂತ ಚಂಚಲವೂ ಆದ ಈ ಯಂತ್ರವು ಪ್ರತ್ಯಕ್ಷವಾಗಿ ನೋಡುತ್ತಿದ್ದ ನಮ್ಮನ್ನು ಅನಾದರಿಸಿ ಹೇಗೆ ನಾಶವನ್ನು ಹೊಂದಿತು ?

೧ ಶಾರೀರಾ ಜ್ವರಕುಷ್ಠಾದ್ಯಾಃ ಸಹಜಾಃ ಕ್ಷುತ್ತೃಷಾದಯಃ । ಆಗಂತವೋಭಿಘಾತೋತ್ಥಾಃ ಕ್ರೋಧಾದ್ಯಾ ಮಾನಸಾಃ ಸ್ಮೃತಾಃ. ೨ ನಶ್ಯತಿ. ೩ ದೇವತ್ವೇ. ೪ ಹೀನಾಃ. ೫ ವಾಹನದೇವಾಃ. ೬ ಕಾರಣಾತ್. ೭ ಮಹಾಕಷ್ಟೇನ. ೮ ಉದಯಾತ್. ೯ ನೀಲಾಂಜನಾರೂಪಾತ್ಮಕಂ. ೧೦ ಚಂಚಲಂ.

**ರಮಣೀಯಮಿದಂ ಮತ್ವಾ ಸ್ತ್ರೀರೂಪಂ ಬಹಿರುಜ್ಜ್ವಲಮ್ ।**
**ಪತಂತಸ್ತತ್ರ ನಶ್ಯಂತಿ ಪತಂಗಾ ಇವ ಕಾಮುಕಾಃ ॥ ೩೭ ॥**

ಹೊರಗೆ ಪ್ರಕಾಶಮಾನವಾದ ಈ ಸ್ತ್ರೀರೂಪವು ರಮಣೀಯವಾದುದೆಂದು ತಿಳಿದು ಕಾಮುಕರು, ದೀಪದಲ್ಲಿ ಪತಂಗಗಳು ಬಿದ್ದು ನಾಶವಾಗುವಂತೆ, ಆ ಸ್ತ್ರೀರೂಪದಲ್ಲಿ ಬಿದ್ದು (ಮೋಹಿತರಾಗಿ) ನಾಶವಾಗುತ್ತಾರೆ.

**[೧]ಕೂಟನಾಟಕಮೇತತ್ತು ಪ್ರಯುಕ್ತಮಮರೇಶಿನಾ ।**
**ನೂನಮಸ್ಮತ್ಪ್ರ[೨]ಬೋಧಾಯ[೩]ಸ್ಮೃತಿಮಾಧಾಯ ಧೀಮತಾ ॥ ೩೮ ॥**

ಬುದ್ಧಿವಂತನಾದ ದೇವೇಂದ್ರನು ಯೋಚಿಸಿ ನಿಜವಾಗಿಯೂ ನಮಗೆ ಬೋಧಿ ಸುವುದಕ್ಕೋಸ್ಕರ ಈ ಕಪಟನಾಟಕವನ್ನು ಪ್ರಯೋಗಿಸಿದನು.

**ಯಥೇ[೪]ದಮೇವಮನ್ಯಚ್ಚ ಭೋಗಾಂ[೫]ಗಂ ಯತ್ಕಿಲಾಂಗಿನಾಮ್ ।**
**[೬]ಭಂಗುರಂ [೭]ನಿಯತಾಪಾಯಂ ಕೇವಲಂ ತ[೮]ತ್ಪ್ರಲಂಭಕಮ್ ॥ ೩೯ ॥**

ಪ್ರಾಣಿಗಳ ಸಂಸಾರಶರೀರ ಮೊದಲಾದುವು ವಿನಶ್ವರವಾಗಿರುವಂತೆ, ಪ್ರಾಣಿ ಗಳನ್ನು ವಂಚಿಸುವ ಬೇರೆ ಭೋಗಕಾರಣವೂ ನಿಜವಾಗಿ ನಾಶವಾಗುವುದು.

**ಕಿಂ ಕಿಲಾಭರಣೈರ್ಭಾರ್ಯೈಃ ಕಿಂ ಮಲ್ಯೈರನುಲೇಪನೈಃ ।**
**ಉನ್ಮತ್ತಚೇಷ್ಟಿತೈರ್ನೃತ್ತೈರಲಂ ಗೀತೈಶ್ಚ [೯]ಶೋಚಿತೈಃ ॥ ೪೦ ॥**

ಭಾರವಾಗಿರುವ ಈ ಆಭರಣಗಳಿಂದೇನು ಪ್ರಯೋಜನ ?ಕೊಳೆಯಂತಿರುವ ಈ ಲೇಪನಗಳಿಂದೇನು ಪ್ರಯೋಜನ ? ಹುಚ್ಚರ ಕಾರ್ಯದಂತಿರುವ ಈ ನರ್ತನ ಗಳಿಂದಲೂ ಗೀತಗಳಿಂದಲೂ ಶೋಕಗಳಿಂದಲೂ ಏನು ಪ್ರಯೋಜನ ? ಸಾಕು. ವಿನಶ್ವರವಾದ ಆಭರಣ ಮೊದಲಾದುವುಗಳಿಂದ ಆತ್ಮನಿಗೆ ಪ್ರಯೋಜನವಿಲ್ಲ ದುದರಿಂದ ಅವುಗಳಲ್ಲಿ ಮೋಹಪಡುವುದು ವ್ಯರ್ಥವೆಂದು ಭಾವವು.

**ಯದ್ಯಸ್ತಿ ಸ್ವಗತಾ ಶೋಭಾ ಕಿಂ ಕಿಲಾಲಂಕೃತೈಃ [೧೦]ಕೃತಮ್ ।**
**ಯದಿ ನಾಸ್ತಿ ಸ್ವತಃ ಶೋಭಾ ಭಾರ್ಯೈ[೧೧]ರೇಭಿಸ್ತಥಾಪಿ ಕಿಮ್ ॥ ೪೧ ॥**

ಆತ್ಮಜನ್ಯವಾದ ಶೋಭೆಯಿದ್ದರೆ ಅಲಂಕಾರಗಳಿಂದೇನು ಪ್ರಯೋಜನ ? ಆತ್ಮಜನ್ಯವಾದ ಶೋಭೆಯಿಲ್ಲದಿದ್ದರೂ ಭಾರವಾದ ಈ ಆಭರಣಗಳಿಂದೇನು ಪ್ರಯೋಜನ ?ಸಾಕು. ಉಭಯತೋಪಿ ಆಭರಣಗಳಿಂದ ಶೋಭೆಯಿಲ್ಲದುದರಿಂದ ವ್ಯಾಮೋಹಪಡುವುದು ವ್ಯರ್ಥವೆಂದು ಭಾವವು.

**ತಸ್ಮಾದ್ಧಿಗ್ಧಿಗಿದಂ ರೂಪಂ ಧಿಕ್ಸಂಸಾರಮಸಾರಕಮ್ ।**
**ರಾಜ್ಯಭೋಗಂ ಧಿಗಸ್ತ್ವೇನಂ ಧಿಗ್ಧಿ[೧೨]ಗಾಕಾಲಿಕೀಂ ಶ್ರಿಯಃ ॥ ೪೨ ॥**

ಆದುದರಿಂದ ಈ ರೂಪಕ್ಕೆ ಧಿಕ್ಕಾರವಿರಲಿ. ಅಸಾರವಾದ ಸಂಸಾರಕ್ಕೂ ಧಿಕ್ಕಾರವಿರಲಿ. ಈ ರಾಜ್ಯಭೋಗಕ್ಕೂ ಧಿಕ್ಕಾರವಿರಲಿ. ಮಿಂಚಿನಂತೆ ಚಂಚಲವಾದ ಈ ಸಂಪತ್ತಿಗೂ ಧಿಕ್ಕಾರವಿರಲಿ.''

**ಇತಿ [೧೩]ನಿರ್ವಿದ್ಯ ಭೋಗೇಭ್ಯೋ ವಿರಕ್ತಾತ್ಮಾ [೧೪]ಸನಾತನಃ ।**
**[೧೫]ಮುಕ್ತ್ಯಾ[೧೬]ವೃತ್ತಿಷ್ಟತೇ ಸ್ಮಾಶು ಕಾಲಲಬ್ಧಿಮುಪಾಶ್ರಿತಃ ॥ ೪೩ ॥**

ಈರೀತಿಯಾಗಿ ವೈರಾಗ್ಯವನ್ನು ಹೊಂದಿ ಭೋಗವಸ್ತುಗಳಿಂದ ವಿರಕ್ತಿಯನ್ನು ಹೊಂದಿದ ನಿತ್ಯರಾದ ಸ್ವಾಮಿಯು ಕಾಲ ಲಬ್ಧಿಯನ್ನು ಹೊಂದಿದವರಾಗಿ ಶೀಘ್ರವಾಗಿ ಮುಕ್ತಿಗೋಸ್ಕರ ಉದ್ಯುಕ್ತರಾದರು.

**ತದಾ[೧೭]ವಿಶುದ್ಧಯಸ್ತಸ್ಯ ಹೃದಯೇ ಪದಮಾದಧುಃ ।**
**ಮುಕ್ತಿಲಕ್ಷ್ಮ್ಯೇವ[೧೮] ಸಂದಿಷ್ಟಾ[೧೯]ಸ್ತತ್ಸಖ್ಯಃ ಸಮ್ಮುಖಾಗತಾಃ ॥ ೪೪ ॥**

೧ ಕಪಟಂ. ೨ ಬೋಧನಾಯ. ೩ ಮತಿಂ. ೪ ಸಂಸಾರಶರೀರಾದಿಕಂ. ೫ ಕಾರಣಂ. ೬ ವಿನಶ್ವರಂ. ೭ ನಿಯಮೇನ. ೮ ವಂಚಕಂ. ೯ ಶೋಕ್ಯೈಃ. ೧೦ ಅಲಂ. ೧೧ ಆಭರಣೈಃ. ೧೨ ವಿದ್ಯುದಿವ ಚಂಚಲಾಂ. ೧೩ ನಿರ್ವೇದಂ ಪ್ರಾಪ್ಯ. ೧೪ ನಿತ್ಯಃ. ೧೫ ಮುಕ್ತ್ಯರ್ಥಂ. ೧೬ ಉದ್ಯುಕ್ತೋ ಬಭೂವ. ೧೭ ವಿಶುದ್ಧಪರಿಣಾಮಾಃ. ೧೮ ಪ್ರೇರಿತಾಃ. ೧೯ ಮುಕ್ತಿಲಕ್ಷ್ಮೀಸಖ್ಯಃ.

ಆಗ ಸ್ವಾಮಿಯ ಹೃದಯದಲ್ಲಿ, ಮುಕ್ತಿಯೆಂಬ ಲಕ್ಷ್ಮಿಯಿಂದ ಪ್ರೇರಿತರಾಗಿ ಸಮ್ಮುಖಕ್ಕೆ ಬಂದ ಆ ಮುಕ್ತಿಲಕ್ಷ್ಮಿಯ ಸಖಿಯರೋ ಎಂಬಂತೆ, ಪರಿಶುದ್ಧವಾದ ಪರಿಣಾಮಗಳುಂಟಾದುವು.

**ತದಾಸ್ಯ ಸರ್ವಮ[೧]ಪ್ಯೇತಚ್ಛೂನ್ಯವತ್ಪ್ರತ್ಯಭಾಸತ ।**
**ಮುಕ್ತ್ಯಂಗನಾ[೨]ಸಮಾಸಂಗೇ ಪರಾಂ ಚಿಂತಾಮುಪೇಯುಷಃ ॥ ೪೫ ॥**

ಆಗ ಮುಕ್ತಿಯೆಂಬ ಸ್ತ್ರೀಯ ಸಂಸರ್ಗದಲ್ಲಿ ಏಕಾಗ್ರಮನಸ್ಸನ್ನಿಟ್ಟ ಸ್ವಾಮಿಗೆ ಈ ಸಂಸಾರಶರೀರಭೋಗಮೊದಲಾದುದೆಲ್ಲವೂ ಶೂನ್ಯವಾಗಿ ತೋರಿತು.

**ಸೌಧರ್ಮೇಂದ್ರಸ್ತತೋಬೋಧಿ ಗುರೋ[೩]ರಂತಃಸಮೀಹಿತಮ್ ।**
**ಪ್ರಯುಕ್ತಾವಧಿರೀಶಸ್ಯ[೪]ಬೋಧಿರ್ಜಾತೇತಿ ತತ್ಕ್ಷಣಮ್ ॥ ೪೬ ॥**

ತರುವಾಯ ಆಗಲೇ ಸೌಧರ್ಮಸ್ವರ್ಗದ ದೇವೇಂದ್ರನು ಅವಧಿಜ್ಞಾನವನ್ನು ಪ್ರಯೋಗಿಸಿ ಸ್ವಾಮಿಗೆ ತತ್ತ್ವಜ್ಞಾನವುಂಟಾಯಿತೆಂದು ಸ್ವಾಮಿಯ ಮನೋಭಿಪ್ರಾಯವನ್ನು ತಿಳಿದನು. (ಬೋಧಿಶಬ್ದಕ್ಕೆ ರತ್ನತ್ರಯವೆಂದೂ ಅರ್ಥವಿದೆ).

**ಪ್ರಭೋಃ ಪ್ರಬೋಧ[೫]ಮಾಧಾತುಂ ತದಾ ಲೌಕಾಂತಿಕಾಮರಾಃ ।**
**[೬]ಪರಿನಿಷ್ಕ್ರಮಣೇಜ್ಯಾಯೈ ಬ್ರಹ್ಮಲೋಕಾ[೭]ದವಾತರನ್ ॥ ೪೭ ॥**

ಆಗ ಲೌಕಾಂತಿಕದೇವತೆಗಳು ಸ್ವಾಮಿಗೆ ಉಪದೇಶಮಾಡುವುದಕ್ಕೋಸ್ಕರವೂ ಪರಿನಿಷ್ಕ್ರಮಣ(ದೀಕ್ಷಾ)ಕಲ್ಯಾಣಪೂಜೆಗೋಸ್ಕರವೂ ಬ್ರಹ್ಮಲೋಕದಿಂದ ಇಳಿದರು.

**ತೇ ಚ ಸಾರಸ್ವತಾದಿತ್ಯಾ ವಹ್ನ್ಯಶ್ಚಾರುಣ ಏವ ಚ ।**
**ಗರ್ದತೋಯಃ ಸತುಷಿತೋಽವ್ಯಾಬಾಧೋಽರಿಷ್ಟ ಏವ ಚ ॥ ೪೮ ॥**

**ಇತ್ಯಷ್ಟಧಾ [೮]ನಿಕಾಯಾಖ್ಯಾಂ ದಧಾನಾ ವಿಬುಧೋತ್ತಮಾಃ ।**
**[೯]ಪ್ರಾಗ್ಭವೇಭ್ಯಸ್ತನಿಃಶೇಷ[೧೦]ಶ್ರುತಾರ್ಥಾಃ ಶುಭಭಾವನಾಃ ॥ ೪೯ ॥**

**ಬ್ರಹ್ಮಲೋಕಾಲಯಾಃ ಸೌಮ್ಯಾಃ ಶುಭಲೇಶ್ಯಾಃ ಮಹರ್ದ್ಧಿಕಾಃ ।**
**ತಲ್ಲೋಕಾಂತನಿವಾಸಿತ್ವಾದ್ಗತಾ ಲೌಕಾಂತಿಕ[೧೧]ಶ್ರುತಿಮ್ ॥ ೫೦ ॥**

**[೧೨]ದಿವ್ಯಹಂಸಾ ವಿರೇಜುಸ್ತೇ ಶಿವೋರುಪುಲಿನೋತ್ಸುಕಾಃ ।**
**ಪರಿನಿಷ್ಕ್ರಾಂತಿಕಲ್ಯಾಣಶರದಾಗಮಶಂಸಿನಃ ॥ ೫೧ ॥**

ಆ ಲೌಕಾಂತಿಕದೇವತೆಗಳು ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ದತೋಯ ತುಷಿತ ಅವ್ಯಾಬಾಧ ಅರಿಷ್ಟ ಹೀಗೆ ಎಂಟುಪ್ರಕಾರವಾಗಿ ಸಮೂಹಸಂಜ್ಞೆಯನ್ನು ಹೊಂದಿದವರೂ ದೇವತೆಗಳಲ್ಲಿ ಶ್ರೇಷ್ಠರೂ ಪೂರ್ವಭವದಲ್ಲಿ ಸಮಸ್ತಶಾಸ್ತ್ರಗಳನ್ನು ಅಭ್ಯಾಸಮಾಡಿದವರೂ ಶುಭಭಾವನೆಯುಳ್ಳವರೂ ಬ್ರಹ್ಮಲೋಕವೇ ವಾಸಸ್ಥಾನವಾಗಿರುವವರೂ ಸೌಮ್ಯರೂ ಶುಭಲೇಶ್ಯೆ(ಪರಿಣಾಮವಿಶೇಷ)ಯುಳ್ಳವರೂ ಮಹಾಬುದ್ಧಿಸಂಪನ್ನರೂ ಬ್ರಹ್ಮಲೋಕದ ಅಂತದಲ್ಲಿ ವಾಸಮಾಡುವುದರಿಂದ ಲೌಕಾಂತಿಕರೆಂಬ ಸಂಜ್ಞೆಯನ್ನು ಪಡೆದವರೂ ಆಗಿ ಪರಿನಿಷ್ಕ್ರಮಣಕಲ್ಯಾಣವೆಂಬ ಶರತ್ಕಾಲದ ಆಗಮನವನ್ನು ಸೂಚಿಸುವ ಆ ಲೌಕಾಂತಿಕದೇವತೆಗಳೆಂಬ ಹಂಸಪಕ್ಷಿಗಳು ಮೋಕ್ಷವೆಂಬ ಮರಳಿನಲ್ಲಿ ಕುತೂಹಲವುಳ್ಳವಾಗಿ ಶೋಭಿಸಿದುವು.

**ಸುಮನೋಂಜಲಯೋ ಮುಕ್ತಾ ಬಭುರ್ಲೌಕಾಂತಿಕಾಮರೈಃ ।**
**ವಿಭೋರುಪಾಸಿತುಂ ಪಾದೌ ಸ್ವಚಿತ್ತಾಂಶಾ ಇವಾರ್ಪಿತಾಃ ॥ ೫೨ ॥**

ಲೌಕಾಂತಿಕದೇವತೆಗಳು ಸುರಿದ ಪುಷ್ಪಾಂಜಲಿಗಳು ಸ್ವಾಮಿಯ ಪಾದಗಳನ್ನು ಸೇವಿಸುವುದಕ್ಕೋಸ್ಕರ ಅರ್ಪಿಸಿದ ತಮ್ಮ (ದೇವತೆಗಳ) ಮನಸ್ಸಿನ ಅಂಶಗಳೋ ಎಂಬಂತೆ, ಪ್ರಕಾಶಿಸಿದುವು.

೧ ಸಂಸಾರಶರೀರಭೋಗಾದಿಕಂ. ೨ ಸಂಸರ್ಗೇ. ೩ ಅಂತರಂಗಸಮಾಧಾನಂ. ೪ ರತ್ನತ್ರಯಂ. ೫ ಕರ್ತುಂ. ೬ ಪರಿನಿಷ್ಕ್ರಮಣಕಲ್ಯಾಣಾಯ. ೭ ಅವತರಂತಿ ಸ್ಮ. ೮ ಸಮುದಾಯಸಂಜ್ಞಾಂ. ೯ ಪೂರ್ವಭವೇ. ೧೦ ಚತುರ್ದಶಪೂರ್ವಿಣಃ. ೧೧ ಸಂಜ್ಞಾಂ. ೧೨ ದೇವಹಂಸಾಃ.

**ತೇಽಭ್ಯರ್ಚ್ಯ ಭಗವತ್ಪಾದೌ ಪ್ರಸೂನೈಃ [೧]ಸುರಭೂರುಹಾಮ್ ।**
**ತತಃ ಸ್ತುತಿಭಿರರ್ಥ್ಯಾಭಿಃ ಸ್ತೋತುಂ ಪ್ರಾರೇಭಿರೇ ವಿಭುಮ್ ॥ ೫೩ ॥**

ಆ ಲೌಕಾಂತಿಕದೇವತೆಗಳು ಕಲ್ಪವೃಕ್ಷಗಳ ಪುಷ್ಪಗಳಿಂದ ಭಗವಂತನ ಪಾದಗಳನ್ನು ಪೂಜಿಸಿ, ತರುವಾಯ ಅರ್ಥಯುಕ್ತವಾದ ಸ್ತುತಿಗಳಿಂದ ಮುಂದೆ ಹೇಳುವಂತೆ ಸ್ವಾಮಿಯನ್ನು ಸ್ತೋತ್ರಮಾಡುವುದಕ್ಕೆ ಪ್ರಾರಂಭಿಸಿದರು.

**ಮೋಹಾರಿವಿಜಯೋದ್ಯೋಗಮಧುನಾ ಸಂವಿಧಿತ್ಸುನಾ ।**
**ಭಗವನ್ಭವ್ಯಲೋಕಸ್ಯ [೨]ಬಂಧುಕೃತ್ಯಂ ತ್ವಯೇ[೩]ಹಿತಮ್ ॥ ೫೪ ॥**

''ಎಲೈ ಭಗವಂತನೇ ! ಈಗ ಮೋಹವೆಂಬ ಶತ್ರುವನ್ನು ಜಯಿಸುವುದಕ್ಕೆ ಉದ್ಯೋಗವನ್ನು ಮಾಡಲಿಚ್ಛಿಸುವ ನೀನು ಭವ್ಯಜನಗಳಿಗೆ ಬಂಧುವ್ಯಾಪಾರವನ್ನು ಮಾಡಿದೆ. ಭವ್ಯಜನಗಳಿಗೆ ಬಂಧುಗಳಂತೆ ಹಿತಚಿಂತಕನಾದೆಯೆಂದು ಭಾವವು.

**ತ್ವಂ ದೇವ ಪರಮಂ ಜ್ಯೋತಿಸ್ತ್ವಾಮಾಹುಃ ಕಾರಣಂ ಪರಮ್ ।**
**ತ್ವಮಿದಂ [೪]ವಿಶ್ವಮಜ್ಞಾನ [೫]ಪ್ರಪಾತಾದುದ್ಧರಿಷ್ಯಸಿ ॥ ೫೫ ॥**

ಎಲೈ ಸ್ವಾಮಿಯೇ !ನೀನು ಉತ್ಕೃಷ್ಟವಾದ ಜ್ಯೋತಿಸ್ಸ್ವರೂಪನಾಗಿರುತ್ತಿ. ನೀನು ಜಗತ್ತಿಗೆ ಮುಖ್ಯಕಾರಣನೆಂದು ಜ್ಞಾನಿಗಳು ಹೇಳುತ್ತಾರೆ. ನೀನು ಈ ಜಗತ್ತನ್ನು ಅಜ್ಞಾನವೆಂಬ ಬೆಟ್ಟದ ಜರಿಯಿಂದ ಉದ್ಧರಿಸುವೆ.

**ತ್ವಯಾದ್ಯ ದರ್ಶಿತಂ ಧರ್ಮತೀರ್ಥಮಾಸಾದ್ಯ ದುಸ್ತರಮ್ ।**
**ಭವ್ಯಾಃ ಸಂಸಾರಭೀಮಾಬ್ಧಿಮುತ್ತರಿಷ್ಯಂತಿ ಹೇಲಯಾ ॥ ೫೬ ॥**

ಈಗ ನೀನು ತೋರಿಸಿದ ದುಸ್ತರವಾದ ಧರ್ಮವೆಂಬ ತೀರ್ಥವನ್ನು ಹೊಂದಿ ಭವ್ಯಪ್ರಾಣಿಗಳು ಭಯಂಕರವಾದ ಸಂಸಾರವೆಂಬ ಸಮುದ್ರವನ್ನು ಸುಲಭದಿಂದ ದಾಟುವರು.

**ತವ ವಾಗಂಶವೋ [೬]ದೀಪ್ತಾ ದ್ಯೋತಯಂತೋಽಖಿಲಂ ಜಗತ್ ।**
**ಭವ್ಯಪದ್ಮಾಕರೇ [೭]ಬೋಧ[೮]ಮಾಧಾಸ್ಯಂತಿ ರವೇರಿವ ॥ ೫೭ ॥**

ಪ್ರಕಾಶಮಾನವಾದ ನಿನ್ನ ವಚನಗಳೆಂಬ ಕಿರಣಗಳು ಲೋಕವನ್ನೆಲ್ಲ ಪ್ರಕಾಶಪಡಿಸುತ್ತ ಸೂರ್ಯನು ಕಮಲಸರೋವರದಲ್ಲಿ ವಿಕಾಸವನ್ನುಂಟುಮಾಡುವಂತೆ, ಭವ್ಯರೆಂಬ ಕಮಲಸರೋವರಗಳಲ್ಲಿ ವಿಕಾಸವನ್ನುಂಟುಮಾಡುತ್ತವೆ.

**ಧಾತಾರಮಾಮನಂತಿ ತ್ವಾಂ ಜೇತಾರಂ ಕರ್ಮವಿದ್ವಿಷಾಮ್ ।**
**ನೇತಾರಂ ಧರ್ಮತೀರ್ಥಸ್ಯ ತ್ರಾತಾರಂ ಚ ಜಗದ್ಗುರುಮ್ ॥ ೫೮ ॥**

ಜ್ಞಾನಿಗಳು ನಿನ್ನನ್ನು ಜಗತ್ಕರ್ತನಾದ ಬ್ರಹ್ಮನೆಂದೂ ಕರ್ಮಶತ್ರುಗಳನ್ನು ಜಯಿಸುವವನೆಂದೂ ಧರ್ಮತೀರ್ಥಪ್ರವರ್ತಕನೆಂದೂ ರಕ್ಷಕನಾದ ಜಗದ್ಗುರುವೆಂದೂ ತಿಳಿಯುತ್ತಾರೆ.

**[೯]ಮೋಹಪಂಕೇ ಮಹತ್ಯಸ್ಮಿನ್ ಜಗನ್ಮಗ್ನಮಶೇಷತಃ ।**
**ಧರ್ಮಹಸ್ತಾವಲಂಬೇನ ತ್ವಯಾ[೧೦]ಮಂಕ್ಷೂದ್ಧರಿಷ್ಯತೇ ॥ ೫೯ ॥**

ಅಪಾರವಾದ ಈ ಅಜ್ಞಾನವೆಂಬ ಕೆಸರಿನಲ್ಲಿ ಸಂಪೂರ್ಣವಾಗಿ ಮುಳುಗಿರುವ ಜಗತ್ತನ್ನು ಧರ್ಮವೆಂಬ ಕೈಯ ಆಶ್ರಯದಿಂದ ಶೀಘ್ರವಾಗಿ ನೀನು ಉದ್ಧರಿಸುವೆ.

**ತ್ವಂ ಸ್ವಯಂಭೂಃ ಸ್ವಯಂ ಬುದ್ಧ[೧೧]ಸನ್ಮಾರ್ಗೋ ಮುಕ್ತಿ[೧೨]ಪದ್ಧತಿಮ್ ।**
**[೧೩]ಯತ್ತ್ವ[೧೪]ಬೋಧಯಿತಾಸ್ಯಸ್ಮಾ[೧೫]ನಕಸ್ಮಾ[೧೬]ತ್ಕರುಣಾರ್ದ್ರಧೀಃ ॥ ೬೦ ॥**

೧ ಕಲ್ಪವೃಕ್ಷಾಣಾಂ. ೨ ಬಂಧುತ್ವಂ. ೩ ಚೇಷ್ಟಿತಂ. ೪ ಜಗತ್. ೫ ಪ್ರಪಾತಸ್ತು ತಟೋ ಭೃಗುಃ. ೬ ದೀಪ್ರಾ ಇತ್ಯಪಿ ಪಾಠಃ. ೭ ವಿಕಾಸಂ. ೮ ಕರಿಷ್ಯಂತಿ. ೯ ಅಜ್ಞಾನಂ. ೧೦ ಸಪದಿ. ೧೧ ಮೋಕ್ಷಮಾರ್ಗಃ. ೧೨ ಮಾರ್ಗಂ. ೧೩ ಕಾರಣಾತ್. ೧೪ ಪ್ರಬೋಧಯಿಷ್ಯಸಿ. ೧೫ ವಿನಾ ಕಾರಣಾತ್. ೧೬ ಕರುಣಾಯಾಃ ಕಾರ್ಯದರ್ಶನಾದುಪಚಾರಾತ್ಕರುಣಾರ್ದ್ರಧೀರಿತ್ಯುಚ್ಯತೇ ಮುಖ್ಯತಸ್ತು ಮೋಹನೀಯ ಕಾರ್ಯಭೂತಾಯಾಃ ಕರುಣಾಯಾ ಅಭಾವಃ.

ದಯಾರ್ದ್ರವಾದ ಬುದ್ಧಿಯುಳ್ಳ ನೀನು ನಿಷ್ಕಾರಣವಾಗಿ ಮುಂದೆ ನಮಗೆ ಮೋಕ್ಷಮಾರ್ಗವನ್ನು ಬೋಧಿಸುವುದರಿಂದ ನೀನು ಸ್ವಯಂಭುವೂ ತಾನೇ ಮೋಕ್ಷಮಾರ್ಗವನ್ನು ತಿಳಿದವನೂ ಆಗಿರುತ್ತಿ.

**ತ್ವಂ ಬುದ್ಧೋಽಸಿ ಸ್ವಯಂಬುದ್ಧಸ್ತ್ರಿಬೋಧಾಮಲಲೋಚನಃ ।**
**[೧]ಯ[೨]ದ್ವೇತ್ಸಿ ಸ್ವತ ಏವಾದ್ಯ ಮೋಕ್ಷಸ್ಯ [೩]ಪದವೀಂ ತ್ರಯೀಮ್ ॥ ೬೧ ॥**

ಮತಿಜ್ಞಾನ ಶ್ರುತಜ್ಞಾನ ಅವಧಿಜ್ಞಾನಗಳೆಂಬ ನಿರ್ಮಲವಾದ ಕಣ್ಣುಗಳುಳ್ಳ ನೀನು ತಾನಾಗಿಯೇ ಈಗ ಸಮ್ಯಗ್ದರ್ಶನ ಸಮ್ಯಜ್ಞಾನ ಸಮ್ಯಕ್ಚಾರಿತ್ರರೂಪವಾದ ಮೋಕ್ಷಮಾರ್ಗವನ್ನು ತಿಳಿದುದರಿಂದ ಬುದ್ಧ(ಜ್ಞಾನಿ)ನೂ ಸ್ವಯಂಬುದ್ಧ (ತಾನಾಗಿ ತಿಳಿದವ)ನೂ ಆಗಿರುತ್ತಿ.

**ಸ್ವಯಂ ಪ್ರಬುದ್ಧಸನ್ಮಾರ್ಗಸ್ತ್ವಂ ನ ಬೋಧ್ಯೋಽಸ್ಮದಾದಿಭಿಃ ।**
**ಕಿಂ[೪]ತ್ವಾಸ್ಮಾಕೋ ನಿಯೋಗೋಽಯಂ ಮುಖರೀಕುರುತೇಽದ್ಯ ನಃ ॥ ೬೨ ॥**

ನೀನು ತಾನಾಗಿಯೇ ಸನ್ಮಾರ್ಗವನ್ನು ತಿಳಿದಿರುತ್ತಿ. ನಮ್ಮಿಂದ ಬೋಧಿಸಿ ಕೊಳ್ಳುವವನಾಗಿಲ್ಲ. ಆದರೆ ನಮ್ಮ ಈ ಕರ್ತವ್ಯವು ನಮ್ಮನ್ನು ಹೇಳಿಸುತ್ತದೆ. ಸ್ವಾಮಿಯು ಸ್ವಯಂಜ್ಞಾನಿಯಾಗಿದ್ದರೂ ಉಪದೇಶಮಾಡುವುದು ಆ ದೇವತೆಗಳ ಕರ್ತವ್ಯವೆಂದು ಭಾವವು.

**ಜಗತ್ಪ್ರಬೋಧನೋದ್ಯೋಗೇ ನ ತ್ವಮನ್ಯೈರ್ನಿಯುಜ್ಯಸೇ ।**
**ಭುವನೋದ್ಯೋತನೇ ಕಿಂನು ಕೇನಾಪ್ಯುತ್ಥಾಪ್ಯತೇಂ[೫]ಶುಮಾನ್ ॥ ೬೩ ॥**

ಲೋಕಕ್ಕೆ ಹಿತೋಪದೇಶವನ್ನು ಮಾಡುವ ಕಾರ್ಯದಲ್ಲಿ ನಿನಗೆ ಬೇರೆಯವರು ಹೇಳಬೇಕಾದುದಿಲ್ಲ. ಲೋಕವನ್ನು ಪ್ರಕಾಶಪಡಿಸುವುದಕ್ಕೆ ಸೂರ್ಯನನ್ನು ಯಾರಾವರು ಪ್ರೇರೇಪಿಸುತ್ತಾರೋ ?

**ಅಥವಾ [೬]ಬೋಧಿತೋಽಪ್ಯಸ್ಮಾನ್ಬೋಧಯಸ್ಯಪುನರ್ಭವ ।**
**[೭]ಬೋಧಿತೋಽಪಿ ಯಥಾ ದೀಪೋ ಭುವನಸ್ಯೋಪಕಾರಕಃ ॥ ೬೪ ॥**

ಅಥವಾ ದೀಪವನ್ನು ಪ್ರಕಾಶಪಡಿಸಿದರೆ ಅದು ಪ್ರತಿಯಾಗಿ ಲೋಕಕ್ಕೆ ಉಪಕಾರವನ್ನು ಮಾಡುವಂತೆ, ಎಲೈ ಪುನರ್ಜನ್ಮರಹಿತನಾದ ಭಗವಂತನೇ ! ನಾವು ನಿನಗೆ ಉಪದೇಶಮಾಡಿದರೂ ಪ್ರತಿಯಾಗಿ ನೀನು ನಮಗೆ ಬೋಧಿಸುವೆ.

**ಸದ್ಯೋಜಾತಸ್ತ್ವ[೮]ಮಾದ್ಯೇಽಭೂಃ ಕಲ್ಯಾಣೇ [೯]ವಾಮತಾಮತಃ ।**
**ಪ್ರಾಪ್ತೋ[೧೦]ನಂತರಕಲ್ಯಾಣೇ ಧತ್ಸೇ ಸಂಪ್ರ[೧೧]ತ್ಯಘೋರತಾಮ್ ॥ ೬೫ ॥**

ನೀನು ಮೊದಲನೆಯ ಗರ್ಭಾವತರಣಕಲ್ಯಾಣಕಾಲದಲ್ಲಿ ಸದ್ಯೋಜಾತ (ಆಗಲೇಸ್ವರ್ಗದಿಂದವತರಿಸಿದವ)ನಾಗಿದ್ದೆ. ಎರಡನೆಯ ಜನ್ಮಾಭಿಷೇಕಕಲ್ಯಾಣಕಾಲದಲ್ಲಿ ಮನೋಹರನಾಗಿದ್ದೆ. ಈಗ ದೀಕ್ಷಾಕಲ್ಯಾಣಕಾಲದಲ್ಲಿ ಶಾಂತತೆಯನ್ನು ಹೊಂದಿರುತ್ತಿ.

**ಭುವನಸ್ಯೋಪಕಾರಾಯ ಕುರೂದ್ಯೋಗಂ ತ್ವ[೧೨]ಮೀಶಿತಃ ।**
**ತ್ವಾಂ ನವಾ[೧೩]ಬ್ದಮಿವಾ[೧೪]ಸೇವ್ಯ ಪ್ರಿಯಂತಾಂ ಭವ್ಯಚಾತಕಾಃ ॥ ೬೬ ॥**

ಎಲೈ ಸ್ವಾಮಿಯೇ ! ನೀನು ಲೋಕೋಪಕಾರಕ್ಕೋಸ್ಕರ ಪ್ರಯತ್ನಮಾಡು. ಹೊಸದಾದ ಮೇಘದಂತಿರುವ ನಿನ್ನನ್ನು ಸೇವಿಸಿ ಭವ್ಯಪ್ರಾಣಿಗಳೆಂಬ ಚಾತಕ ಪಕ್ಷಿಗಳು ಸಂತೋಷಪಡಲಿ.

**ತವ ಧರ್ಮಾಮೃತಂ ಸ್ರಷ್ಟುಮೇಷ ಕಾಲಃ [೧೫]ಸನಾತನಃ ।**
**ಧರ್ಮಸೃಷ್ಟಿ[೧೬]ಮತೋ ದೇವ ವಿಧಾತುಂ [೧೭]ಧಾತರರ್ಹಸಿ ॥ ೬೭ ॥**

ಎಲೈ ಬ್ರಹ್ಮನೇ ! ಧರ್ಮವೆಂಬ ಅಮೃತವನ್ನು ಸೃಷ್ಟಿಸುವುದಕ್ಕೆ ನಿತ್ಯವಾದ ಈ ಕಾಲವು ನಿನಗೆ ಉಚಿತವಾಗಿದೆ. ಈ ಕಾರಣದಿಂದ ಸ್ವಾಮಿಯೇ ! ನೀನು ಧರ್ಮ ಸೃಷ್ಟಿಯನ್ನು ಮಾಡುವುದಕ್ಕೆ ಅರ್ಹನಾಗಿರುತ್ತಿ.

**ಜಯ ತ್ವಮೀಶ ಕರ್ಮಾರೀಂಜ್ಜಯ ಮೋಹಮಹಾಸುರಮ್ ।**
**ಪರೀಷಹಭಟಾ[೧]ನ್ದೃಪ್ತಾನ್ವಿಜಯಸ್ವ ತಪೋಬಲಾತ್ ॥ ೬೮ ॥**

ಎಲೈ ಪ್ರಭುವೇ ! ನೀನು ಕರ್ಮಶತ್ರುಗಳನ್ನು ಜಯಿಸು. ಮೋಹವೆಂಬ ಮಹಾದೈತ್ಯನನ್ನು ಜಯಿಸು. ಪರೀಷಹಗಳೆಂಬ ಗರ್ವಿಷ್ಠರಾದ ಭಟರನ್ನು ತಪಸ್ಸಿನ ಸಾಮರ್ಥ್ಯದಿಂದ ಜಯಿಸು.

**[೨]ಉತ್ತಿಷ್ಠತಾಂ ಭವಾನ್ಮುಕ್ತೌ ಭುಕ್ತೈರ್ಭೋಗೈರಲಂ ತರಾಮ್ ।**
**ನ [೩]ಸ್ವಾದ್ವಂತರಮೇಷು ಸ್ಯಾದ್ಭೂಯೋಽಪ್ಯನುಭವೇಂಗಿನಾಮ್ ॥ ೬೯ ॥**

ನೀನು ಮುಕ್ತಿಗೋಸ್ಕರ ಉದ್ಯುಕ್ತನಾಗು. ಭೋಗಗಳನ್ನು ಭೋಗಿಸುವುದು ಸಾಕು. ಈ ಭೋಗಗಳನ್ನು ಪುನಃಪುನಃ ಅನುಭವಿಸಿದರೂ ಪ್ರಾಣಿಗಳಿಗೆ ಬೇರೆ ಮಾಧುರ್ಯವುಂಟಾಗದು.''

**ಇತಿ ಲೌಕಾಂತಿಕೈರ್ದೇವೈಸ್ತುವಾನ್ಯೈ[೪]ರುಪನಾಥಿತಃ ।**
**ಪರಿನಿಷ್ಕ್ರಮಣೇ ಬುದ್ಧಿಮಧಾ[೫]ದ್ಧಾತಾ ದೃಢೀಯಸೀಮ್ ॥ ೭೦ ॥**

ಈರೀತಿಯಾಗಿ ಸ್ತೋತ್ರಮಾಡುತ್ತಿರುವ ಲೌಕಾಂತಿಕದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಆದಿಬ್ರಹ್ಮರು ದೀಕ್ಷೆಯಲ್ಲಿ ಮನಸ್ಸನ್ನು ದೃಢಪಡಿಸಿದರು.

**ತಾವತ್ಯೈವ ನಿಯೋಗೇನ ಕೃತಾರ್ಥಾಸ್ತೇ ದಿವಂ ಯಯುಃ ।**
**[೬]ಹಂಸಾ ಇವ ನಭೋವಿಥೀಂ ದ್ಯೋತಯಂತೋಂಗದೀಪ್ತಿಭಿಃ ॥ ೭೧ ॥**

ಅಷ್ಟುಕಾರ್ಯದಿಂದ ಕೃತಾರ್ಥರಾದ ಆ ಲೌಕಾಂತಿಕದೇವತೆಗಳು, ಸೂರ್ಯರಂತೆ, ತಮ್ಮ ಶರೀರಕಾಂತಿಗಳಿಂದ ಆಕಾಶಮಾರ್ಗವನ್ನು ಪ್ರಕಾಶಪಡಿಸುತ್ತ ಸ್ವರ್ಗಕ್ಕೆ ಹೊರಟು ಹೋದರು.

**ತಾವಚ್ಚ ನಾಕಿನೋ ನೈಕವಿಕ್ರಿಯಾಃ ಕಂಪಿತಾಸನಾಃ ।**
**ಪುರೋಭೂವನ್ಪುರೋರಸ್ಯ [೭]ಪುರೋಧಾಯ ಪುರಂದರಮ್ ॥ ೭೨ ॥**

ಅಷ್ಟರಲ್ಲಿ ಕಂಪಿತವಾದ ಆಸನಗಳುಳ್ಳ ದೇವತೆಗಳು ಅನೇಕಪ್ರಕಾರವಾದ ವಿಕ್ರಿಯೆಗಳುಳ್ಳವರಾಗಿ ದೇವೇಂದ್ರನನ್ನು ಮುಂದೆಮಾಡಿಕೊಂಡು ಈ ಪುರುಜಿನೇಶ್ವರನ ಮುಂದೆ ಬಂದರು.

**ನಭೋಂಗಣಮಥಾರುಧ್ಯ ತೇಯೋಧ್ಯಾಂ ಪರಿತಃ ಪುರೀಮ್ ।**
**ತಸ್ಥುಃ[೮]ಸವಾಹನಾನೀಕಾ [೯]ನಾಕನಾಥಾ [೧೦]ನಿಕಾಯಶಃ ॥ ೭೩ ॥**

ತರುವಾಯ ಆ ದೇವತೆಗಳು ಆಕಾಶಪ್ರದೇಶವನ್ನು ಆಕ್ರಮಿಸಿ ತಮ್ಮ ವಾಹನ ಸಮೂಹಗಳೊಡನೆ ಅಯೋಧ್ಯಾಪಟ್ಟಣದ ಸುತ್ತಲೂ ಸಮೂಹವಾಗಿ ನಿಂತರು.

**ತತೋಽಸ್ಯ ಪರಿನಿಷ್ಕ್ರಾಂತಿಮಹಾಕಲ್ಯಾಣಸಂವಿಧೌ ।**
**ಮಹಾಭಿಷೇಕಮಿಂದ್ರಾದ್ಯಾಶ್ಚಕ್ರುಃ ಕ್ಷೀರಾರ್ಣವಾಂಬುಭಿಃ ॥ ೭೪ ॥**

ತರುವಾಯ ಈ ಸ್ವಾಮಿಯ ಪರಿನಿಷ್ಕ್ರಮಣಮಹಾಕಲ್ಯಾಣದಲ್ಲಿ ದೇವೇಂದ್ರ ಮೊದಲಾದ ದೇವತೆಗಳು ಕ್ಷೀರಸಮುದ್ರದ ಜಲಗಳಿಂದ ಮಹಾಭಿಷೇಕವನ್ನು ಮಾಡಿದರು.

---

೧ ಕಾರಣಾತ್. ೨ ವೇತ್ಥೇತ್ಯಪಿ ಪಾಠಃ. ೩ ರತ್ನತ್ರಯಮಿತ್ಯರ್ಥಃ. ೪ ಅಸ್ಮತ್ಸಂಬಂಧೀ. ೫ ಸೂರ್ಯಃ. ೬ ಅಸ್ಮಾಭಿರಿತ್ಯರ್ಥಃ. ೭ ಪ್ರಕಾಶಿತೋಽಪಿ. ೮ ಪ್ರಥಮೇ. ೯ ಮನೋಹರತಾಂ. ೧೦ ಜನ್ಮಾಭಿಷೇಕ ಕಲ್ಯಾಣೇ. ೧೧ ಶಾಂತತಾಂ. ೧೨ ಭೋ ನಾಥ ! ೧೩ ಮೇಘಂ. ೧೪ ಉಪಾಸ್ಯ. ೧೫ ನಿತ್ಯಃ. ೧೬ ಅಸ್ಮಾತ್ಕಾರಣಾತ್. ೧೭ ಭೋ ಬ್ರಹ್ಮನ್.

೧ ದರ್ಪಾವಿಷ್ಟಾನ್. ೨ ಉದ್ಯುಕ್ತೋ ಭವ. ೩ ಅನ್ಯನ್ಮಧುರತ್ವಂ. ೪ ಪ್ರಾರ್ಥಿತಃ. ೫ ಆದಿಬ್ರಹ್ಮಾ. ೬ ಸೂರ್ಯಾಃ. ೭ ಪುರಸ್ಕೃತ್ಯ. ೮ ಸ್ವವಾಹನಾನೀಕಾ ಇತ್ಯಪಿ ಪಾಠಃ. ೯ ನಾಕಿನಾಥಾ ಇತ್ಯಪಿ ಪಾಠಃ. ೧೦ ನಿಕಾಯೋ ನಿಲಯೇ ಲಕ್ಷ್ಯೇ ಸಂಹತಾನಾಂ ಸಮುಚ್ಚಯೇ । ಏಕಾರ್ಥಭಾಜಿ ನಿವಹೇ ಪರಮಾತ್ಮನಿ ಚೇಷ್ಯತೇ.

**ಅಭಿಷಿಚ್ಯ ವಿಭುಂ ದೇವಾ ಭೂಷಯಾಂಚಕ್ರುರಾದೃತಾಃ ।**
**ದಿವ್ಯೈರ್ವಿಭೂಷಣೈರ್ವಸ್ತ್ರೈರ್ಮಾಲ್ಯೈಶ್ಚ[೧]ಮಲಯೋದ್ಭವೈಃ ॥ ೮೫ ॥**

ದೇವತೆಗಳು ಪ್ರೀತಿಯಿಂದ ಸ್ವಾಮಿಗೆ ಅಭಿಷೇಕವನ್ನು ಮಾಡಿ ಶ್ರೇಷ್ಠವಾದ ಆಭರಣಗಳಿಂದಲೂ ವಸ್ತ್ರಗಳಿಂದಲೂ ಮಾಲಿಕೆಗಳಿಂದಲೂ ಗಂಧಗಳಿಂದಲೂ ಸ್ವಾಮಿಯನ್ನು ಅಲಂಕರಿಸಿದರು.

**ತತೋಽಭಿಷಿಚ್ಯ [೨]ಸಾಮ್ರಾಜ್ಯೇ ಭರತಂ ಸೂನು[೩] ಮಗ್ರಿಮಮ್ ।**
**[೪]ಭಗವಾನ್ಭಾರತಂ [೫]ವರ್ಷಂ [೬]ತತ್ಸನಾಥಂ ವ್ಯಧಾದಿದಮ್ ॥ ೮೬ ॥**

ತರುವಾಯ ಭಗವಂತನು ಪ್ರಥಮಪುತ್ರನಾದ ಭರತನಿಗೆ ಸಾಮ್ರಾಜ್ಯನಿಮಿತ್ತವಾಗಿ ಅಭಿಷೇಕವನ್ನು ಮಾಡಿ ಈ ಭರತಕ್ಷೇತ್ರಕ್ಕೆ ಭರತನನ್ನು ರಾಜನನ್ನಾಗಿ ಮಾಡಿದನು.

**ಯೌವರಾಜ್ಯೇ ಚ ತಂ ಬಾಹುಬಲಿನಂ ಸಮತಿಷ್ಠಿಪತ್ ।**
**ತದಾ ರಾಜನ್ವತೀತ್ಯಾಸೀತ್ಪೃಥ್ವೀ ತಾಭ್ಯಾ[೭]ಮಧಿಷ್ಠಿತಾ ॥ ೮೭ ॥**

ಆ ಬಾಹುಬಲಿಯನ್ನು ಯುವರಾಜಪದವಿಯಲ್ಲಿ ಸ್ಥಾಪಿಸಿದನು. ಆಗ ಆ ಭರತಬಾಹುಬಲಿಗಳಿಂದ ಆಶ್ರಯಿಸಲ್ಪಟ್ಟ ಈ ಭೂಮಿಯು ಪ್ರಶಸ್ತರಾಜರುಳ್ಳದಾಯಿತು.

**ಪರಿನಿಷ್ಕ್ರಾಂತಿರಾಜ್ಯಾನುಸಂಕ್ರಾಂತಿದ್ವಿತಯೋತ್ಸವೇ ।**
**ತದಾ ಸ್ವರ್ಲೋಕಭೂಲೋಕಾವಾಸ್ತಾಂ ಪ್ರಮದನಿರ್ಭರೌ ॥ ೮೮ ॥**

ಆಗ ಸ್ವಾಮಿಯ ಪರಿನಿಷ್ಕ್ರಮಣಕಲ್ಯಾಣೋತ್ಸವದಲ್ಲಿಯೂ ಭರತನ ರಾಜ್ಯಪ್ರಾಪ್ತಿಯ ಉತ್ಸವದಲ್ಲಿಯೂ ಸ್ವರ್ಗಲೋಕಭೂಲೋಕಗಳು ಸಂತೋಷಭರಿತಗಳಾದುವು.

**ಭಗವತ್ಪರಿನಿಷ್ಕ್ರಾಂತಿಕಲ್ಯಾಣೋತ್ಸವ ಏಕತಃ ।**
**ಸ್ಫೀತರ್ದ್ಧಿರನ್ಯತೋ[೮]ಯೂನೋಃ ಪೃಥ್ವೀ[೯]ರಾಜ್ಯಾರ್ಪಣಕ್ಷಣಃ ॥ ೮೯ ॥**

ಒಂದುಕಡೆಯಲ್ಲಿ ಸ್ವಾಮಿಯ ಪರಿನಿಷ್ಕ್ರಮಣಕಲ್ಯಾಣೋತ್ಸವ ಇನ್ನೊಂದುಕಡೆಯಲ್ಲಿ ತರುಣರಾದ ಭರತಬಾಹುಬಲಿಗಳ ಮಹಾವೈಭವವುಳ್ಳ ರಾಜ್ಯಾಭಿಷೇಕೋತ್ಸವ.

**ಬದ್ಧ[೧೦]ಕಕ್ಷಸ್ತಪೋರಾಜ್ಯೇ ಸಜ್ಜೋ ರಾಜರ್ಷಿರೇಕತಃ ।**
**ಯುವಾನಾವನ್ಯತೋ ರಾಜ್ಯಲಕ್ಷ್ಮ್ಯಾ[೧೧]ದ್ವಾಹೇ ಕೃತೋದ್ಯಮೌ ॥ ೯೦ ॥**

ಒಂದುಕಡೆಯಲ್ಲಿ ರಾಜರ್ಷಿಯಾದ ಸ್ವಾಮಿಯು ತಪಸ್ಸೆಂಬ ರಾಜ್ಯದಲ್ಲಿ ಪ್ರಯತ್ನಪರರಾಗಿ ಸಿದ್ಧರಾಗಿದ್ದರು. ಇನ್ನೊಂದುಕಡೆಯಲ್ಲಿ ಭರತಭುಜಬಲಿಗಳು ರಾಜ್ಯಲಕ್ಷ್ಮಿಯ ವಿವಾಹದಲ್ಲಿ ಪ್ರಯತ್ನಪರರಾಗಿದ್ದರು.

**ಏಕತಃ ಶಿಬಿಕಾಯಾನನಿರ್ಮಾಣಂ ಸುರಶಿಲ್ಪಿನಾಮ್ ।**
**[೧೨]ವಾಸ್ತುವೇದಿಭಿರಾರಬ್ಧಃ ಪರಾರ್ಧ್ಯೋ ಮಂಡಪೋನ್ಯತಃ ॥ ೯೧ ॥**

ಒಂದುಕಡೆಯಲ್ಲಿ ದೇವಶಿಲ್ಪಿಗಳು ಪಾಲಕಿಯನ್ನು ಮಾಡುತ್ತಿದ್ದರು. ಇನ್ನೊಂದುಕಡೆಯಲ್ಲಿ ಮನೆಯ ಲಕ್ಷಣವನ್ನು ತಿಳಿದವರು ಶ್ರೇಷ್ಠವಾದ ಮಂಡಪವನ್ನು ಮಾಡುತ್ತಿದ್ದರು.

**ಶಚೀದೇವ್ಯೈಕತೋ ರಂಗವಲ್ಯಾದಿರಚನಾ ಕೃತಾ ।**
**ದೇವ್ಯಾನ್ಯತೋ ಯಶಸ್ವತ್ಯಾ ಸಾನಂದಂ ಸಸುನಂದಯಾ ॥ ೯೨ ॥**

೧ ಗಂಧೈಃ. ೨ ಸಾಮ್ರಾಜ್ಯನಿಮಿತ್ತಂ. ೩ ಮುಖ್ಯಂ. ೪ ಆದಿಜಿನಃ. ೫ ಕ್ಷೇತ್ರಂ. ೬ ತೇನ ಭರತೇನ ಸ್ವಾಮಿಕಂ. ೭ ಆಶ್ರಿತಾ. ೮ ಭರತಭುಜಬಲಿನೋಃ. ೯ ರಾಜ್ಯಾಭಿಷೇಕೋತ್ಸವಃ. ೧೦ ಪ್ರಯತ್ನಃ, ಕಕ್ಷ್ಯ ಇತ್ಯಪಿ ಪಾಠಃ. ೧೧ ವಿವಾಹೇ. ೧೨ ಗೃಹಲಕ್ಷಣವೇದಿಭಿಃ.

ಒಂದುಕಡೆಯಲ್ಲಿ ಶಚೀದೇವಿಯು ರಂಗವಲೀ ಮೊದಲಾದ ರಚನೆಯನ್ನು ಮಾಡಿದಳು. ಇನ್ನೊಂದುಕಡೆಯಲ್ಲಿ ಯಶಸ್ವತೀಸುನಂದೆಯರು ಆನಂದವಾಗಿ ರಂಗವಲೀ ಮೊದಲಾದ ರಚನೆಯನ್ನು ಮಾಡಿದರು.

**ಏಕತೋ ಮಂಗಲದ್ರವ್ಯಧಾರಿಣ್ಯೋ ದಿಕ್ಕುಮಾರಿಕಾಃ ।**
**ಅನ್ಯತಃ[೧]ಕೃತನೇಪಥ್ಯಾ [೨]ವಾರಮುಖ್ಯಾ [೩]ವರಸ್ತ್ರಿಯಃ ॥ ೯೩ ॥**

ಒಂದುಕಡೆಯಲ್ಲಿ ದಿಕ್ಕುಮಾರಿಯರು ಮಂಗಲದ್ರವ್ಯಗಳನ್ನು ಧರಿಸಿದರು. ಇನ್ನೊಂದುಕಡೆಯಲ್ಲಿ ಆಭರಣಾಲಂಕಾರವನ್ನು ಮಾಡಿಕೊಂಡ ಸುಂದರ ಸ್ತ್ರೀಯರಾದ ವೇಶ್ಯೆಯರು ಮಂಗಲದ್ರವ್ಯಗಳನ್ನು ಧರಿಸಿದರು.

**[೪]ಸುರವೃಂದಾರಕೈಃ ಪ್ರೀತ್ಯೈರ್ಭಗವಾನೇಕತೋ ವೃತಃ ।**
**ಕ್ಷತ್ರಿಯಾಣಾಂ ಸಹಸ್ರೇಣ ಕುಮಾರಾವನ್ಯತೋ ವೃತೌ ॥ ೯೪ ॥**

ಒಂದುಕಡೆಯಲ್ಲಿ ಸಂತುಷ್ಟರಾದ ಮುಖ್ಯದೇವತೆಗಳು ಸ್ವಾಮಿಯನ್ನು ಆವರಿಸಿಕೊಂಡರು. ಇನ್ನೊಂದುಕಡೆಯಲ್ಲಿ ಸಾವಿರಾರು ಕ್ಷತ್ರಿಯರು ಭರತ ಬಾಹುಬಲಿಗಳನ್ನು ಆವರಿಸಿಕೊಂಡರು.

**ಪುಷ್ಪಾಂಜಲಿಃ ಸುರೈರ್ಮುಕ್ತಃ ಸ್ತುವಾನೈರ್ಭರ್ತುರೇಕತಃ ।**
**ಅನ್ಯತಃ [೫]ಸಾಶಿಷಾಃ [೬]ಶೇಷಾಃ ಕ್ಷಿಪ್ತಾಃ ಪೌರೈರ್ಯುವೇಶಿನೋಃ ॥ ೯೫ ॥**

ಒಂದುಕಡೆಯಲ್ಲಿ ಸ್ವಾಮಿಯನ್ನು ಸ್ತುತಿಸುತ್ತಿರುವ ದೇವತೆಗಳು ಪುಷ್ಪಾಂಜಲಿಯನ್ನು ಸುರಿದರು. ಇನ್ನೊಂದುಕಡೆಯಲ್ಲಿ ಯುವಕರಾದ ಭರತಬಾಹುಬಲಿಗಳಿಗೆ ಪುರನಿವಾಸಿಗಳು ಆಶೀರ್ವಾದಸಹಿತವಾದ ಅಕ್ಷತೆಗಳನ್ನು ಎರಚಿದರು.

**ಏಕತೋಽಪ್ಸರಸಾಂ ನೃತ್ತಮಸ್ಪೃಷ್ಟಧರಣೀತಲಮ್ ।**
**ಸಲೀಲಪದವಿನ್ಯಾಸಮನ್ಯತೋ ವಾರಯೋಷಿತಾಮ್ ॥ ೯೬ ॥**

ಒಂದುಕಡೆಯಲ್ಲಿ ಅಪ್ಸರಸ್ತ್ರೀಯರು ಭೂಮಿಯನ್ನು ಮುಟ್ಟದೆ ನರ್ತನವನ್ನು ಮಾಡುತ್ತಿದ್ದರು. ಇನ್ನೊಂದುಕಡೆಯಲ್ಲಿ ವಾರಸ್ತ್ರೀಯರು ವಿಲಾಸಯುಕ್ತವಾಗಿ ಹೆಜ್ಜೆಗಳನ್ನಿಡುತ್ತ ನರ್ತನವನ್ನು ಮಾಡುತ್ತಿದ್ದರು.

**ಏಕತಃ[೭]ಸುರತೂರ್ಯಾಣಾಂ ಪ್ರಧ್ವಾನೋ [೮]ರುದ್ಧದಿಙ್ಮುಖಃ ।**
**ನಾಂದೀಪಟಹನಿರ್ಘೋಷಪ್ರವಿಜೃಂಭಿತಮನ್ಯತಃ ॥ ೯೭ ॥**

ಒಂದುಕಡೆಯಲ್ಲಿ ದೇವಲೋಕದ ವಾದ್ಯಗಳು ದಿಕ್ಕುಗಳನ್ನು ವ್ಯಾಪಿಸುವ ಶಬ್ದವನ್ನು ಮಾಡಿದುವು. ಬೇರೊಂದುಕಡೆಯಲ್ಲಿ ಮಂಗಳಾರ್ಥವಾದ ತಮ್ಮಟೆಯ ಶಬ್ದವಾಯಿತು.

**ಏಕತಃ ಕಿಂನರಾರಬ್ಧಕಲಮಂಗಲನಿಃಕ್ವಣಃ ।**
**ಅನ್ಯತೋಽಂತಃಪುರಸ್ತ್ರೀಣಾಂ ಮಂಗಲೋದ್ಗೀತಿನಿಸ್ವನಃ ॥ ೯೮ ॥**

ಒಂದುಕಡೆಯಲ್ಲಿ ಕಿನ್ನರದೇವತೆಗಳು ಪ್ರಾರಂಭಿಸಿದ ಮನೋಹರವಾದ ಮಂಗಲಧ್ವನಿಯಾಯಿತು. ಇನ್ನೊಂದುಕಡೆಯಲ್ಲಿ ಅಂತಃಪುರಸ್ತ್ರೀಯರ ಮಂಗಲಗಾನದ ಧ್ವನಿಯಾಯಿತು.

**ಏಕತಃ ಸುರಕೋಟೀನಾಂ ಜಯಕೋಲಾಹಲಧ್ವನಿಃ ।**
**ಪುಣ್ಯಪಾಠಕಕೋಟೀನಾಂ ಸಂಪಾಠಧ್ವನಿರನ್ಯತಃ ॥ ೯೯ ॥**

ಒಂದುಕಡೆಯಲ್ಲಿ ಕೋಟ್ಯವಧಿದೇವತೆಗಳ ಜಯಜಯವೆಂಬ ಕೋಲಾಹಲಶಬ್ದವಾಯಿತು. ಬೇರೊಂದುಕಡೆಯಲ್ಲಿ ಅನೇಕ ಪುಣ್ಯಕರವಾದ ಪದ್ಯಗಳನ್ನು ಪಠನಮಾಡುವವರ ಪಠನಧ್ವನಿಯಾಯಿತು.''

೧ ಕೃತಾಭರಣಾಲಂಕಾರಾಃ. ೨ ವೇಶ್ಯಾಃ. ೩ ಬಹುಶ್ರಿಯ ಇತ್ಯಪಿ ಪಾಠಃ, ಶ್ರೀದೇವೀಸದೃಶಾ ಇತ್ಯರ್ಥಃ. ೪ ದೇವಮುಖ್ಯೈಃ. ೫ ಆಶೀರ್ಭಿಃ ಸಹಿತಾಃ. ೬ ಶೇಷಾಕ್ಷತಾದಿದಾನೇ ಸ್ಯಾನ್ನಿರ್ಮಾಲ್ಯೇ ಮರುತಾಮಪಿ. ೭ ವಾದ್ಯಾನಾಂ. ೮ ವ್ಯಾಪ್ತದಿಙ್ಮುಖಃ.

**ಇತ್ಯುಚ್ಚೈರುತ್ಸವ[೧]ದ್ವೈತವ್ಯಗ್ರ[೨]ದ್ಯುಜನಭೂಜನಮ್ ।**
**[೩]ಪರಮಾನಂದಸಾದ್ಭೂತಮಭೂತ್ತದ್ರಾಜಮಂದಿರಮ್ ॥ ೯೦ ॥**

ಈರೀತಿಯಾಗಿ ಅತಿಶಯವಾದ ಎರಡು ಉತ್ಸವಗಳಲ್ಲಿ ವ್ಯಗ್ರರಾದ ದೇವತೆಗಳೂ ಮನುಷ್ಯರೂ ಉಳ್ಳ ಆ ರಾಜಭವನವು ಪರಮಾನಂದಮಯವಾಯಿತು. ಸ್ವಾಮಿಯ ದೀಕ್ಷಾಕಲ್ಯಾಣೋತ್ಸವದಲ್ಲಿ ದೇವತೆಗಳು ವ್ಯಗ್ರರಾಗಿದ್ದರು; ಭರತಬಾಹುಬಲಿಗಳ ರಾಜ್ಯಾಭಿಷೇಕೋತ್ಸವದಲ್ಲಿ ಮನುಷ್ಯರು ವ್ಯಗ್ರರಾಗಿದ್ದರೆಂದು ಭಾವವು.

**[೪]ವಿತೀರ್ಣರಾಜ್ಯಭಾರಸ್ಯ ವಿಭೋ[೫]ರಧಿಯುವೇಶ್ವರಮ್ ।**
**ಪರಿನಿಷ್ಕ್ರಮಣೋದ್ಯೋಗಸ್ತದಾ [೬]ಜಜ್ಞೇ ನಿರಾಕುಲಃ ॥ ೯೧ ॥**

ಆಗ ಯುವಕರಾದ ಭರತಬಾಹುಬಲಿಗಳಲ್ಲಿ ರಾಜ್ಯಭಾರವನ್ನಿರಿಸಿದ ಸ್ವಾಮಿಯ ಪರಿನಿಷ್ಕ್ರಮಣಕಲ್ಯಾಣದ ಉದ್ಯೋಗವು ಯಾರಿಗೂ ಮನೋವ್ಯಾಕುಲತೆಯನ್ನುಂಟುಮಾಡದೆ, ಜರುಗಿತು.

**ಶೇಷೇಭ್ಯೋಽಪಿ ಸ್ವಸೂನುಭ್ಯಃ ಸಂವಿಭಜ್ಯ ಮಹೀಮಿಮಾಮ್ ।**
**ವಿಭು[೭]ರ್ವಿಶ್ರಾಣಯಾಮಾಸ ನಿರ್ಮುಮುಕ್ಷು[೮]ರಸಂಭ್ರಮೀ ॥ ೯೨ ॥**

ನಿರಾಕುಲರಾಗಿ ಮೋಕ್ಷವನ್ನು ಪಡೆಯಲಿಚ್ಛಿಸಿದ ಸ್ವಾಮಿಯು ಉಳಿದ ಮಕ್ಕಳಿಗೂ ಈ ಭೂಮಿಯನ್ನು ವಿಭಾಗಮಾಡಿ ಕೊಟ್ಟರು.

**ಸುರೇಂದ್ರನಿರ್ಮಿತಾಂ ದಿವ್ಯಾಂ ಶಿಬಿಕಾಂ ಸ ಸುದರ್ಶನಾಮ್ ।**
**[೯]ಸನಾಭೀನ್ನಾಭಿರಾಜಾದೀನಾ[೧೦]ಪೃಚ್ಛ್ಯ[೧೧]ರುಕ್ಷ[೧೨]ದಕ್ಷರಃ ॥ ೯೩ ॥**

ನಾಶರಹಿತರಾದ ಆ ಸ್ವಾಮಿಯು ನಾಭಿರಾಜಮೊದಲಾದ ಬಂಧುಗಳನ್ನು ಪ್ರಿಯವಚನಗಳಿಂದ ಸಂತೋಷಪಡಿಸಿ, ದೇವೇಂದ್ರನಿಂದ ನಿರ್ಮಿತವಾದ ಸುದರ್ಶನವೆಂಬ ಶ್ರೇಷ್ಠವಾದ ಪಾಲಕಿಯನ್ನು ಹತ್ತಿದರು.

**ಸಾದರಂ ಚ ಶಚೀನಾಥದತ್ತಹಸ್ತಾವಲಂಬನಃ ।**
**ಪ್ರತಿಜ್ಞಾಮಿವ [೧೩]ದೀಕ್ಷಾಯಾಮಾರೂಢಶಿಬಿಕಾಂ ಪ್ರಭುಃ ॥ ೯೪ ॥**

ಆದರಪೂರ್ವಕವಾಗಿ ದೇವೇಂದ್ರನಿಂದ ಕೊಡಲ್ಪಟ್ಟ ಹಸ್ತಾವಲಂಬನವುಳ್ಳ ಸ್ವಾಮಿಯು ದೀಕ್ಷಾನಿಮಿತ್ತವಾಗಿ ಪ್ರತಿಜ್ಞೆಯನ್ನು ಹೊಂದುವಂತೆ, ಪಾಲಕಿಯನ್ನು ಹತ್ತಿದರು.

**ದೀಕ್ಷಾಂಗನಾಪರಿಷ್ವಂಗಪರಿವರ್ಧಿತಕೌತುಕಃ ।**
**ಪ್ರಶಯ್ಯಾಂ [೧೪]ನು ಸಮಾರೂಢಃ ಸ ಧಾತಾ ಶಿಬಿಕಾಛಲಾತ್ ॥ ೯೫ ॥**

ದೀಕ್ಷೆಯೆಂಬ ಸ್ತ್ರೀಯ ಆಲಿಂಗನದಲ್ಲಿ ವೃದ್ಧಿಹೊಂದುತ್ತಿರುವ ಕುತೂಹಲವುಳ್ಳ ಆದಿಬ್ರಹ್ಮರು ಪಾಲಕಿಯೆಂಬ ನೆಪದಿಂದ ದೀಕ್ಷಾಂಗನೆಯ ಹಾಸಿಗೆಯನ್ನು ಹತ್ತಿದರೋ ಎಂಬಂತೆ ತೋರುತ್ತಿದ್ದರು.

**ಸ್ರಗ್ವೀಮಲಯಜಾಲಿಪ್ತದೀಪ್ತಮೂರ್ತಿರಲಂಕೃತಃ ।**
**ಸ ರೇಜೇ ಶಿಬಿಕಾರೂಢಸ್ತಪೋಲಕ್ಷ್ಮ್ಯಾ ವರೋತ್ತಮಃ ॥ ೯೬ ॥**

ಮಾಲಿಕೆಗಳನ್ನು ಧರಿಸಿರುವವರೂ ಚಂದನದಿಂದ ಲೇಪಿಸಲ್ಪಟ್ಟ ದೇದೀಪ್ಯಮಾನವಾದ ದೇಹವುಳ್ಳವರೂ ಅಲಂಕರಿಸಲ್ಪಟ್ಟವರೂ ತಪೋಲಕ್ಷ್ಮಿಯೆಂಬ ವಧೂವಿಗೆ ಉತ್ತಮವರನೂ ಆದ ಆ ಸ್ವಾಮಿಯು ಪಾಲಕಿಯನ್ನು ಹತ್ತಿದವರಾಗಿ ಶೋಭಿಸುತ್ತಿದ್ದರು.

**ಪರಾಂ ವಿಶುದ್ಧಿಮಾರೂಢಃ ಪ್ರಾಕ್ಪಶ್ಚಾಚ್ಛಿಬಿಕಾಂ ವಿಭುಃ ।**
**ತದಾಕರೋದಿವಾಭ್ಯಾಸಂ ಗುಣಶ್ರೇಣ್ಯಧಿರೋಹಣೇ ॥ ೯೭ ॥**

೧ ದ್ವಯೇ. ೨ ಸುರಜನಾಃ. ೩ ಪರಮಾನಂದಮಯಮಿತ್ಯರ್ಥಃ. ೪ ನಿಕ್ಷಿಪ್ತಂ. ೫ ಯುವೇಶ್ವರಯೋರ್ಭರತಬಾಹುಬಲಿನೋಃ. ೬ ಜಾತಃ. ೭ ದದೌ. ೮ ಅನಾಕುಲಃ. ೯ ಬಂಧೂನ್. ೧೦ ಪ್ರಿಯವಾಗ್ಭಿಸ್ತೋಷಯಿತ್ವಾ. ೧೧ ಆರುರೋಹ. ೧೨ ಅವಿನಶ್ವರಃ. ೧೩ ದೀಕ್ಷಾನಿಮಿತ್ತಂ. ೧೪ ಇವಾರ್ಥೇ ನುಃ.

ಮೊದಲು ಅಧಿಕವಾದ ಪರಿಣಾಮವಿಶುದ್ಧಿಯನ್ನೂ ಆಮೇಲೆ ಪಾಲಕಿಯನ್ನೂ ಹತ್ತಿದ ಸ್ವಾಮಿಯು ಆಗ ಗುಣಸ್ಥಾನಗಳೆಂಬ ನಿಚ್ಚಣಿಗೆ(ಏಣಿ)ಯನ್ನು ಹತ್ತುವುದಕ್ಕೆ ಅಭ್ಯಾಸವನ್ನು ಮಾಡಿದರೋ ಎಂಬಂತಿದ್ದರು.

**ಪದಾನಿ ಸಪ್ತ [೧]ತಾ[೨]ಮೂಹುಃ ಶಿಬಿಕಾಂ ಪ್ರಥಮಂ ನೃಪಾಃ ।**
**ತತೋ ವಿದ್ಯಾಧರಾ ನಿನ್ಯುರ್ವ್ಯೋಮ್ನಿ ಸಪ್ತಪದಾಂತರಮ್ ॥ ೯೮ ॥**

ಆ ಪಾಲಕಿಯನ್ನು ಮೊದಲು ಏಳುಹೆಜ್ಜೆಗಳ ವರೆಗೆ ರಾಜರು ಹೊತ್ತರು. ತರುವಾಯ ಆಕಾಶದಲ್ಲಿ ಏಳುಹೆಜ್ಜೆಗಳ ವರೆಗೆ ವಿದ್ಯಾಧರರು ತೆಗೆದುಕೊಂಡು ಹೋದರು.

**[೩]ಸ್ಕಂಧಾಧಿರೋಪಿತಾಂ ಕೃತ್ವಾ ತತೋಮೂ[೪]ಮವಿಲಂಬಿತಮ್ ।**
**ಸುರಾಸುರಾಃ ಖಮುತ್ಪೇತುರಾರೂಢಪ್ರಮದೋದಯಾಃ ॥ ೯೯ ॥**

ತರುವಾಯ ಆನಂದ ಪರವಶರಾದ ದೇವತೆಗಳೂ ಅಸುರಕುಮಾರರೆಂಬ ದೇವತೆಗಳೂ ಶೀಘ್ರವಾಗಿ ಈ ಪಾಲಕಿಯನ್ನು ತಮ್ಮ ಹೆಗಲುಗಳ ಮೇಲಿಟ್ಟುಕೊಂಡು ಆಕಾಶಕ್ಕೆ ಹಾರಿದರು.

**[೫]ಪರ್ಯಾಪ್ತಮಿದಮೇವಾಸ್ಯ ಪ್ರಭೋರ್ಮಾಹಾತ್ಮ್ಯಶಂಸನಮ್ ।**
**ಯತ್ತದಾ ತ್ರಿದಿವಾಧೀಶಾ ಜಾತಾ[೬]ಯುಗ್ಯಕವಾಹಿನಃ ॥ ೧೦೦ ॥**

ಸ್ವಾಮಿಯ ಪರಿನಿಷ್ಕ್ರಮಣಕಲ್ಯಾಣಕಾಲದಲ್ಲಿ ಸ್ವರ್ಗದ ದೇವೇಂದ್ರರು ಪಾಲಕಿಯನ್ನು ಹೊರುವವರಾದರೆಂಬುದರಿಂದಲೇ ಈ ಸ್ವಾಮಿಯ ಮಾಹಾತ್ಮ್ಯವರ್ಣನೆಯು ಸಾಕಾಗಿದೆ. ಇಷ್ಟರಿಂದಲೇ ಸ್ವಾಮಿಯ ಮಾಹಾತ್ಮ್ಯವು ಅಪಾರವಾದುದೆಂದು ಗೊತ್ತಾಗುವುದೆಂದು ಭಾವವು.

**ತದಾ [೭]ವಿಚಕರುಃ ಪುಷ್ಪವರ್ಷಮಾಮೋದಿ [೮]ಗುಹ್ಯಕಾಃ ।**
**ವವೌ ಮಂದಾಕಿನೀಸೀಕರಾ[೯]ಹಾರಃ [೧೦]ಶಿಶಿರೋ ಮರುತ್ ॥ ೧೦೧ ॥**

ಆಗ ಗುಹ್ಯಕರೆಂಬ ದೇವತೆಗಳು ಸುಗಂಧವಾದ ಪುಷ್ಪವೃಷ್ಟಿಯನ್ನು ಎರಚಿದರು. ಗಂಗಾನದಿಯ ತುಂತುರುಗಳುಳ್ಳ ತಂಗಾಳಿಯು ಬೀಸಿತು.

**ಪ್ರಸ್ಥಾನಮಂಗಲಾನ್ಯುಚ್ಚೈಃ ಪ್ರಪೇಠುಃ [೧೧]ಸುರವಂದಿನಃ ।**
**ತದಾ ಪ್ರಯಾಣಭೇರ್ಯಶ್ಚ ವಿಷ್ವಗಾ[೧೨]ಸ್ಫಾಲಿತಾಃ ಸುರೈಃ ॥ ೧೦೨ ॥**

ಆಗ ಸ್ತುತಿಪಾಠಕರಾದ ದೇವತೆಗಳು ಪ್ರಯಾಣಕಾಲದಲ್ಲಿ ಹೇಳುವ ಮಂಗಲ ಪದ್ಯಗಳನ್ನು ಗಟ್ಟಿಯಾಗಿ ಹೇಳಿದರು. ದೇವತೆಗಳು ಎಲ್ಲಾ ಕಡೆಗಳಲ್ಲಿಯೂ ಪ್ರಯಾಣಸೂಚಕವಾದ ಭೇರಿಗಳನ್ನು ಹೊಡೆದರು.

**ಮೋಹಾರಿವಿಜಯೋದ್ಯೋಗಸಮಯೋಽಯಂ ಜಗದ್ಗುರೋಃ ।**
**ಇತ್ಯುಚ್ಚೈರ್ಘೋಷಯಾಮಾಸುಸ್ತದಾ ಶಕ್ರಾಜ್ಞಯಾಮರಾಃ ॥ ೧೦೩ ॥**

ಆಗ ದೇವತೆಗಳು ದೇವೇಂದ್ರನ ಆಜ್ಞೆಯಿಂದ “ಇದು ಜಗದ್ಗುರುವಾದ ಸ್ವಾಮಿಯು ಮೋಹವೆಂಬ ಶತ್ರುವನ್ನು ಜಯಿಸುವುದಕ್ಕೆ ಉದ್ಯೋಗಮಾಡುವ ಸಮಯವು” ಎಂದು ಗಟ್ಟಿಯಾಗಿ ಘೋಷಣೆಮಾಡಿದರು.

**ಜಯಕೋಲಾಹಲಂ ಭರ್ತುರಗ್ರೇ [೧೩]ಹೃಷ್ಟಾಃ ಸುರಾಸುರಾಃ ।**
**ತದಾ ಚಕ್ರುರ್ನಭೋಶೇಷ[೧೪]ಮಾರುಧ್ಯ ಪ್ರಮದೋದಯಾತ್॥ ೧೦೪ ॥**

ಆಗ ಸಂತುಷ್ಟರಾದ ದೇವತೆಗಳೂ ಅಸುರಕುಮಾರರೂ ಆಕಾಶವನ್ನೆಲ್ಲ ವ್ಯಾಪಿಸಿ ಸಂತೋಷದಿಂದ ಸ್ವಾಮಿಯ ಮುಂದೆ ಜಯಜಯವೆಂಬ ಕೋಲಾಹಲವನ್ನು ಮಾಡಿದರು.

೧ ಶಿಬಿಕಾಂ. ೨ ವಹಂತಿ ಸ್ಮ. ೩ ಭುಜಶಿಖರೇ. ೪ ಆಶು. ೫ ಅಲಂ. ೬ ಯಾನವಾಹಕಾಃ. ೭ ಕಿರಂತಿ ಸ್ಮ. ೮ ದೇವಭೇದಾಃ. ೯ ವಹಃ. ೧೦ ಶೀತಃ. ೧೧ ದೇವಪಾಠಕಾಃ. ೧೨ ತಾಡಿತಾಃ. ೧೩ ಸಂತುಷ್ಟಾಃ. ೧೪ ವ್ಯಾಪ್ಯ.

**ತದಾ ಮಂಗಲಸಂಗೀತ್ಯೈಃ[೧]ಪ್ರಕೃತ್ಯೈರ್ಜಯಘೋಷಣೈಃ ।**
**ನಭೋ [೨]ಮಹಾನಕಧ್ವಾನೈರಾರುದ್ಧಂ ಶಬ್ದಸಾದಭೂತ್ ॥ ೧೦೫ ॥**

ಆಗ ಪ್ರಾರಂಭಿಸಿದ ಮಂಗಲಕರವಾದ ಸಂಗೀತಗಳಿಂದಲೂ ಜಯಘೋಷಣೆಗಳಿಂದಲೂ ದೊಡ್ಡ ಭೇರಿಯ ಶಬ್ದಗಳಿಂದಲೂ ವ್ಯಾಪ್ತವಾದ ಆಕಾಶವು ಶಬ್ದಾಧೀನವಾಯಿತು. ಶಬ್ದಮಯವಾಯಿತೆಂದು ಭಾವವು.

**ದೇಹೋ[೩]ದ್ಯೋತಸ್ತದೇಂದ್ರಾಣಾಂ ನಭಃ ಕೃತ್ಸ್ನ[೪]ಮದಿದ್ಯುತತ್ ।**
**ದುಂದುಭೀನಾಂ ಚ [೫]ನಿಹ್ರಾದೀ ಧ್ವನಿರ್ವಿಶ್ವಮದಿಧ್ವನತ್ ॥ ೧೦೬ ॥**

ಆಗ ದೇವೇಂದ್ರರ ಶರೀರಕಾಂತಿಯು ಆಕಾಶವನ್ನೆಲ್ಲ ಪ್ರಕಾಶಪಡಿಸಿತು. ಭೇರಿಗಳ ಮನೋಹರವಾದ ಧ್ವನಿಯು ಜಗತ್ತೆಲ್ಲ ಶಬ್ದವಾಗುವಂತೆ ಮಾಡಿತು.

**ಸುರೇಂದ್ರ[೬]ಕರವಿಕ್ಷಿಪ್ತೈಃ ಪ್ರಚಲದ್ಭಿರಿತೋಽಮುತಃ ।**
**ತದಾ ಹಂಸಾಯಿತಂ ವ್ಯೋಮ್ನಿ ಚಾಮರಾಣಾಂ ಕದಂಬಕೈಃ ॥ ೧೦೭ ॥**

ಆಗ ಆಕಾಶದಲ್ಲಿ ದೇವೇಂದ್ರರ ಕೈಗಳಿಂದ ಬೀಸಲ್ಪಟ್ಟು ಸ್ವಾಮಿಯ ಉಭಯ ಪಾರ್ಶ್ವಗಳಲ್ಲಿಯೂ ಚಲಿಸುತ್ತಿರುವ ಚಾಮರಗಳ ಸಮೂಹಗಳು ಹಂಸಪಕ್ಷಿಗಳಂತೆ ತೋರುತ್ತಿದ್ದುವು.

**ಧ್ವನಂತೀಷು ನಭೋ ವ್ಯಾಪ್ಯ ಸುರೇಂದ್ರಾನಕಕೋಟಿಷು ।**
**[೭]ಕೋಟಿಶಃ ಸುರ[೮]ಚೇಟಾನಾಂ ಕರಕೋಣಾಭಿತಾಡನೈಃ ॥ ೧೦೮ ॥**

ಸೇವಕರಾದ ಅನೇಕ ದೇವತೆಗಳ ಕೈಗಳಲ್ಲಿರುವ ದಂಡ(ಕೊಲು)ಗಳ ತಾಡನ (ಪೆಟ್ಟು)ಗಳಿಂದ ದೇವೇಂದ್ರರ ಅನೇಕ ಭೇರಿಗಳು ಆಕಾಶವನ್ನು ವ್ಯಾಪಿಸಿ ಶಬ್ದಮಾಡುತ್ತಿರಲು

**ನಟಂತೀಷು ನಭೋರಂಗೇ ಸುರಸ್ತ್ರೀಷು ಸವಿಭ್ರಮಮ್ ।**
**ವಿಚಿತ್ರ[೯]ಕರಣೋಪೇತಚ್ಛತ್ರಬಂಧಾದಿಲಾಘವೈಃ ॥ ೧೦೯ ॥**

ಆಕಾಶವೆಂಬ ರಂಗಸ್ಥಾನದಲ್ಲಿ ದೇವಸ್ತ್ರೀಯರು ವಿಲಾಸದಿಂದ ನಾನಾಪ್ರಕಾರವಾದ ಹಸ್ತಾಭಿನಯಗಳುಳ್ಳ ಛತ್ರಬಂಧಮೊದಲಾದ ಅಭಿನಯವಿಶೇಷಗಳಿಂದ ನರ್ತನಮಾಡುತ್ತಿರಲು

**ಗಾಯಂತೀಷು ಸುಕಂಠೀಷು ಕಿನ್ನರೀಷು ಕಲಸ್ವನಮ್ ।**
**ಶ್ರವಃಸುಖಂ ಚ ಹೃದ್ಯಂ ಚ ಪರಿನಿಷ್ಕ್ರಮಣೋತ್ಸವಮ್ ॥ ೧೧೦ ॥**

ಉತ್ತಮವಾದ ಕಂಠಗಳುಳ್ಳ ಕಿನ್ನರಸ್ತ್ರೀಯರು ಪರಿನಿಷ್ಕ್ರಮಣಕಲ್ಯಾಣೋತ್ಸವವನ್ನು ಕಿವಿಗಳಿಗೆ ಸುಖಕರವಾಗಿಯೂ ಮನೋಹರವಾಗಿಯೂ ಒಳ್ಳೆಯ ಶಬ್ದದಿಂದ ಗಾನಮಾಡುತ್ತಿರಲು

**ಮಂಗಲಾನಿ ಪಠತ್ಸೂಚ್ಚೈಃ [೧೦]ಸುರವಂ ಸುರವಂದಿಷು ।**
**ತತ್ಕಾಲೋಚಿತ[೧೧]ಮನ್ಯಚ್ಚ ವಚಶ್ಚೇತೋಽನುರಂಜನಮ್ ॥ ೧೧೧ ॥**

ಸ್ತುತಿಪಾಠಕರಾದ ದೇವತೆಗಳು ಶ್ರೇಷ್ಠವಾದ ಶಬ್ದದಿಂದ ಮಂಗಲಪದ್ಯಗಳನ್ನೂ ಆ ಕಾಲಕ್ಕೆ ಉಚಿತವೂ ಮನೋಹರವೂ ಆದ ಬೇರೆ ವಚನವನ್ನೂ ಗಟ್ಟಿಯಾಗಿ ಪಠಿಸುತ್ತಿರಲು

**[೧೨]ಭೂತೇಷೂದ್ಭೂತಹರ್ಷೇಷು ಚಿತ್ರಕೇತನಧಾರಿಷು ।**
**ನಾನಾ[೧೩]ಲಾಸ್ಯೈಃ ಪ್ರಧಾವತ್ಸು [೧೪]ಸಸಂಘರ್ಷಮಿತೋಽಮುತಃ॥ ೧೧೨ ॥**

೧ ಪ್ರಾರಬ್ಧೈಃ. ೨ ಭೇರೀ. ೩ ಪ್ರಕಾಶಃ. ೪ ದ್ಯೋತಯತಿ ಸ್ಮ. ೫ ಮನೋಹಾರೀ. ೬ ಕರವಿಕ್ಷಿಪ್ತೈರಿತ್ಯಪಿ ಪಾಠಃ. ೭ ಬಹುಷು. ೮ ಕಿಂಕರಾಣಾಂ. ೯ ಕರಾಭಿನಯಃ. ೧೦ ಶೋಭನಧ್ವನಿ ಯಥಾ ತಥಾ. ೧೧ ಶ್ಲಾಘ್ಯವಚನಂ. ೧೨ ವ್ಯಂತರದೇವೇಷು. ೧೩ ವಲ್ಗನಾದಿನೃತ್ಯೈಃ. ೧೪ ಸಮ್ಮರ್ದನಸಹಿತಂ ಯಥಾ ತಥಾ.

ನಾನಾಪ್ರಕಾರವಾದ ಧ್ವಜಪತಾಕೆಗಳನ್ನು ಧರಿಸಿದವರೂ ಪ್ರಾದುರ್ಭೂತವಾದ ಸಂತೋಷವುಳ್ಳವರೂ ಆದ ಭೂತರೆಂಬ ವ್ಯಂತರದೇವತೆಗಳು ನಾನಾಪ್ರಕಾರವಾದ ನರ್ತನಗಳಿಂದ ಒಬ್ಬರಿಗೊಬ್ಬರು ಸಂಘರ್ಷಣೆಯಿಂದ ಓಡಾಡುತ್ತಿರಲು

**ಶಂಖಾನಾಧ್ಮಾತಗಂಡೇಷು ಪಿಂಡೀಭೂತಾಂಗಯಷ್ಟಿಷು ।**
**ಸಕಾಹಲಾ[೧]ನ್ನಿಲಿಂಪೇಷು ಪೂರಯತ್ಸ್ವನುರಾಗತಃ ॥ ೧೧೩ ॥**

ಉಬ್ಬಿದ ಕೆನ್ನೆಗಳುಳ್ಳವರೂ ಸಂಕೋಚವಾದ ದೇಹವುಳ್ಳವರೂ ಆದ ದೇವತೆಗಳು ಪ್ರೀತಿಯಿಂದ ಶಂಖಗಳನ್ನೂ ತುತ್ತೂರಿಗಳನ್ನೂ ಊದುತ್ತಿರಲು

**[೨]ಅಗ್ರೇಸರೀಷು [೩]ಲಕ್ಷ್ಮೀಷು [೪]ಪಂಕಜ[೫]ವ್ಯಗ್ರಪಾಣಿಷು ।**
**ಸಮಂ ಸಮಂಗಲಾರ್ಘಾಭಿರ್ದಿಕ್ಕುಮಾರೀಭಿರಾದರಾತ್ ॥ ೧೧೪ ॥**

ಕಮಲಗಳಲ್ಲಿ ಆಸಕ್ತವಾದ ಕೈಗಳುಳ್ಳ ಶ್ರೀಹ್ರೀಮೊದಲಾದ ದೇವಿಯರು ಮಂಗಲಾರ್ಘ್ಯಗಳನ್ನು ಹಿಡಿದಿರುವ ದಿಕ್ಕುಮಾರಿಯರೊಡನೆ ಪ್ರೀತಿಯಿಂದ ಮುಂದೆ ಸರಿಯುತ್ತಿರಲು

**ಇ[೬]ತ್ಯಮೀಷು ವಿಶೇಷೇಷು [೭]ಪ್ರಭವತ್ಸು ಯಥಾಯಥಮ್ ।**
**[೮]ಸ ಪ್ರಮೋದಮಯಂ ವಿಶ್ವಮಾತನ್ವನ್ನದ್ಭುತೋದಯಃ ॥ ೧೧೫ ॥**

ಈರೀತಿಯಾಗಿ ಹಿಂದೆಹೇಳಿದ ವಿಶೇಷಗಳು ಕ್ರಮವಾಗಿ ಪ್ರಾದುರ್ಭವಿಸುತ್ತಿರಲು, ಆಶ್ಚರ್ಯಕರವಾದ ಉದಯವುಳ್ಳ ಆ ಸ್ವಾಮಿಯು ಜಗತ್ತನ್ನು ಆನಂದಮಯವನ್ನಾಗಿ ಮಾಡುವವರೂ

**ಪರಾರ್ಧ್ಯರತ್ನನಿರ್ಮಾಣಂ ದಿವ್ಯಂ ಯಾನಮಧಿಷ್ಠಿತಃ ।**
**[೯]ರತ್ನಕ್ಷೋಣೀಪ್ರತಿಷ್ಠಸ್ಯ ಶ್ರಿಯಂ ಮೇರೋ[೧೦]ರ್ವಿಡಂಬಯನ್ ॥**

ಬಹಳ ಬೆಲೆಬಾಳುವ ರತ್ನಗಳಿಂದ ಮಾಡಿದ ಶ್ರೇಷ್ಠವಾದ ಪಾಲಕಿಯನ್ನು ಹತ್ತಿ ರತ್ನಭೂಮಿಯಲ್ಲಿ ಪ್ರತಿಷ್ಠಿತವಾಗಿರುವ ಮಹಾಮೇರುಪರ್ವತದ ಶೋಭೆಯನ್ನು ತಿರಸ್ಕರಿಸುವವರೂ

**ಕಂಠಾಭರಣ[೧೧]ಭಾಭಾರಪರಿವೇಷೋ[೧೨]ಪರಕ್ತಯಾ ।**
**ಮುಖಾರ್ಕಭಾಸಾ [೧೩]ನ್ಯಕ್ಕುರ್ವನ್ ಜ್ಯೋತಿರ್ಜ್ಯೋತಿರ್ಗಣೇಶಿನಾಮ್ ॥**

ಕಂಠಾಭರಣದ ಮಂಡಲಾಕಾರವಾದ ಕಾಂತಿಯಿಂದ ವ್ಯಾಪ್ತವಾದ ಮುಖವೆಂಬ ಸೂರ್ಯನ ಕಾಂತಿಯಿಂದ ಜ್ಯೋತಿರ್ಗಣಕ್ಕೆ ಅಧಿಪತಿಗಳಾದ ಸೂರ್ಯಚಂದ್ರರ ಕಾಂತಿಯನ್ನು ತಿರಸ್ಕರಿಸುವವರೂ

**ಉತ್ತಮಾಂಗಧೃತೇನೋಚ್ಚೈ[೧೪]ರ್ಮೌಲಿನಾವಿರ್ಮಣಿತ್ವಿಷಾ ।**
**ಧುನ್ವಾನೋಗ್ನೀಂದ್ರಮೌಲೀನಾಂ ತ್ವಿಷಮಾವಿಷ್ಕೃತಾರ್ಚಿಷಾಮ್ ॥**

ಪ್ರಕಾಶಮಾನವಾದ ರತ್ನಗಳ ಕಾಂತಿಯುಳ್ಳ ಮಸ್ತಕದಲ್ಲಿ ಧರಿಸಿರುವ ಉನ್ನತವಾದ ಕಿರೀಟದಿಂದ ಪ್ರಾದುರ್ಭೂತವಾದ ಜ್ವಾಲೆಗಳುಳ್ಳ ಅಗ್ನೀಂದ್ರನ ಕಿರೀಟಗಳ ಕಾಂತಿಯನ್ನು ತಿರಸ್ಕರಿಸುವವರೂ

**[೧೫]ತಿರೀಟೋತ್ಸಂಗಸಂಗಿನ್ಯಾ ಸುಮನಃಶೇಖರಸ್ರಜಾ ।**
**ಮನಃಪ್ರಸಾದಮಾತ್ಮೀಯಂ ಮೂರ್ಧ್ನೇವೋದ್ಧೃತ್ಯ ದರ್ಶಯನ್ ॥**

ಕಿರೀಟಭಾಗದಲ್ಲಿ ಸಂಬಂಧಿಸಿರುವ ಪುಷ್ಪಮಾಲಿಕೆಯಿಂದ ತಮ್ಮ ಮನಸ್ಸಿನ ಪ್ರಸನ್ನತೆಯನ್ನು ಮಸ್ತಕದಿಂದ ಎತ್ತಿ ತೋರಿಸುತ್ತಾರೋ ಎಂಬಂತಿರುವವರೂ

**ಪ್ರಸನ್ನಯಾ ದೃಶೋಽರ್ಭಾಸಾ ಪ್ರೋಲ್ಲಸಂತ್ಯಾ ಸಮಂತತಃ ।**
**ದೃಗ್ವಿಲಾಸಂ[೧೬]ಸಹಸ್ರಾಕ್ಷೇ [೧೭]ಸಾನ್ಯಾಸಿಕಮಿವಾರ್ಪಯನ್ ॥ ೧೨೦ ॥**

೧ ದೇವೇಷು. ೨ ಪುರೋಗಾಮಿನೀಷು. ೩ ಶ್ರೀಹ್ರೀಪ್ರಭೃತಿಷು. ೪ ಪದ್ಮೇ. ೫ ಆಸಕ್ತಹಸ್ತೇಷು. ೬ ಪೂರ್ವೋಕ್ತೇಷು. ೭ ಪ್ರಾದುರ್ಭವತ್ಸು. ೮ ವೃಷಭಸ್ವಾಮೀ. ೯ ವಜ್ರಭೂಮೌ. ೧೦ ತಿರಸ್ಕುರ್ವನ್. ೧೧ ಕಾಂತಿಃ. ೧೨ ಅನುರಂಜಿತಯಾ. ೧೩ ತಿರಸ್ಕುರ್ವನ್. ೧೪ ಮುಕುಟೇನ. ೧೫ ಮುಕುಟತಟಾಶ್ರಿತಯಾ. ೧೬ ಇಂದ್ರೇ. ೧೭ ನಿಕ್ಷೇಪಾರ್ಹಂ ಧನಂ.

ನಿರ್ಮಲವೂ ಎಲ್ಲಾ ಕಡೆಗಳಲ್ಲಿಯೂ ಪ್ರಕಾಶಮಾನವೂ ಆದ ನೇತ್ರಗಳ ಕಾಂತಿಯಿಂದ ಆ ನೇತ್ರಗಳಲ್ಲಿರುವ ವಿಲಾಸವನ್ನು, ಹುಗಿದಿಡುವುದಕ್ಕೆ ಅರ್ಹವಾದ ದ್ರವ್ಯವನ್ನೋಪಾದಿಯಲ್ಲಿ, ದೇವೇಂದ್ರನಲ್ಲಿ ಅರ್ಪಿಸುವವರೂ

**ತಿರಸ್ಕೃತಾಧರಚ್ಛಾಯೈರ್ದರೋದ್ಭಿನ್ನೈಃ ಸ್ಮಿತಾಂಶುಭಿಃ ।**
**ಕ್ಷಾಲಯನ್ನಿವ ನಿಃಶೇಷಂ ರಾಗಶೇಷಂ ಸ್ವಶುದ್ಧಿಭಿಃ ॥ ೧೨೧ ॥**

ತುಟಿಗಳ ಕಾಂತಿಯನ್ನು ತಿರಸ್ಕರಿಸಿರುವುದೂ ಸ್ವಲ್ಪ ವಿಕಸಿತವೂ ಆದ ಮುಗುಳು ನಗೆಯ ಕಿರಣಗಳಿಂದ ಸಮಸ್ತವಾದ ರಾಗಭಾವವನ್ನು ತಮ್ಮ ಅಂತಃಕರಣಶುದ್ಧಿಗಳಿಂದ ತೊಳೆಯುತ್ತಿದ್ದಾರೋ ಎಂಬಂತಿರುವವರೂ

**ಹಾರೇಣ ಹಾರಿಣಾ ಚಾರುವಕ್ಷಃಸ್ಥಲವಿಲಂಬಿನಾ ।**
**ವಿಡಂಬಯನ್ನಿವಾದ್ರೀಂದ್ರಪ್ರಾಂತಪರ್ಯಸ್ತನಿರ್ಝರಮ್ ॥ ೧೨೨ ॥**

ಸುಂದರವಾದ ಎದೆಯಲ್ಲಿ ಜೋಲುತ್ತಿರುವ ಮನೋಹರವಾದ ಹಾರದಿಂದ ಮಹಾಮೇರುಪರ್ವತದ ತಪ್ಪಲಿನಲ್ಲಿ ಹರಿಯುತ್ತಿರುವ ಗಿರಿನದಿಯನ್ನು ತಿರಸ್ಕರಿಸುವಂತಿರುವವರೂ

**ಭುಜಯೋಃ ಶೋಭಯಾ ದೀಪ್ತಕಟಕಾಂಗದಭೂಷಯಾ ।**
**ನಿರ್ಭರ್ತ್ಸಯನ್ ಫಣೀಂದ್ರಾಣಾಂ ಫಣಾರತ್ನರುಚಾಂ ಚಯಮ್ ॥**

ಭುಜಗಳಲ್ಲಿರುವ ಪ್ರಕಾಶಮಾನವಾದ ಕಡಗ ಭುಜಕೀರ್ತಿ ಮೊದಲಾದ ಆಭರಣಗಳ ಶೋಭೆಯಿಂದ ನಾಗೇಂದ್ರರ ಹೆಡೆಗಳಲ್ಲಿರುವ ರತ್ನಕಾಂತಿಗಳ ಸಮೂಹವನ್ನು ತಿರಸ್ಕರಿಸುವವರೂ

**ಕಾಂಚೀದಾಮಪರಿಕ್ಷಿಪ್ತಜಘನಸ್ಥಲಲೀಲಯಾ ।**
**[೧]ಸ್ವೀಕುರ್ವನ್ವೇದಿಕಾರುದ್ಧಜಂಬೂದ್ವೀಪಸ್ಥಲಶ್ರಿಯಮ್ ॥ ೧೨೪ ॥**

ಉಡುದಾರದಿಂದ ಸುತ್ತಲ್ಪಟ್ಟ ಸೊಂಟದ ಶೋಭೆಯಿಂದ ವೇದಿಕೆಯಿಂದ ಸುತ್ತಲ್ಪಟ್ಟ ಜಂಬೂದ್ವೀಪಸ್ಥಲದ ಶೋಭೆಯನ್ನು ಸ್ವೀಕರಿಸುವವರೂ

**[೨]ಕ್ರಮೋಪಧಾನಪರ್ಯಂತೋಲ್ಲಸತ್ಪದನಖಾಂಶುಭಿಃ ।**
**ಪ್ರಸಾದಾಂಶೈರಿವಾಶೇಷಂ [೩]ಪುನಾನಃ ಪ್ರಣತಂ ಜನಮ್ ॥ ೧೨೫ ॥**

ಪಾದಗಳ ದಿಂಬಿನ ಸಮೀಪದಲ್ಲಿ ಪ್ರಕಾಶಮಾನವಾದ ಪಾದದ ಉಗುರುಗಳ ಕಿರಣಗಳಿಂದ, ನಮಸ್ಕರಿಸಿದ ಜನರನ್ನೆಲ್ಲ ತಮ್ಮ ಪ್ರಸಾದದ ಅಂಶಗಳಿಂದ, ಪವಿತ್ರಮಾಡುತ್ತಾರೋ ಎಂಬಂತಿರುವವರೂ

**[೪]ನ್ಯಕ್ಕೃತಾರ್ಕರುಚಾ ಸ್ವಾಂಗದೀಪ್ತ್ಯಾ ವ್ಯಾಪ್ತ[೫]ಕಕುಬ್ಮುಖಃ ।**
**[೬]ಸ್ವೇನೌಜಸಾಧರೀಕುರ್ವನ್ಸರ್ವಾನ್ಗೀರ್ವಾಣನಾಯಕಾನ್ ॥ ೧೨೬ ॥**

ಸೂರ್ಯನ ಕಾಂತಿಯನ್ನು ತಿರಸ್ಕರಿಸುತ್ತಿರುವ ತಮ್ಮ ಶರೀರಕಾಂತಿಯಿಂದ ದಿಕ್ಕುಗಳನ್ನೆಲ್ಲ ವ್ಯಾಪಿಸಿದವರೂ, ತಮ್ಮ ಕಾಂತಿಯಿಂದ ಸಮಸ್ತ ದೇವೇಂದ್ರರನ್ನು ಕೀಳುಮಾಡುವವರೂ

**ಇತಿ ಪ್ರತ್ಯಂಗಸಂಗಿನ್ಯಾ [೭]ನೈಃಸಂಗ್ಯೋಚಿತಯಾ [೮]ಶ್ರಿಯಾ ।**
**[೯]ನಿರ್ವಾಸಯನ್ನಿವಾ[೧೦]ಸಂಗಂ ಚಿರಕಾಲೋಪಲಾಲಿತಮ್ ॥ ೧೨೭ ॥**

ಹೀಗೆ ಪ್ರತಿಯೊಂದು ಅವಯವಗಳಲ್ಲಿಯೂ ಸಂಬಂಧಿಸಿರುವ ನಿರ್ಗ್ರಂಥತ್ವಕ್ಕೆ ಯೋಗ್ಯವಾದ ದೇಹಕಾಂತಿಯಿಂದ ಬಹುಕಾಲದಿಂದ ಪೋಷಿಸಲ್ಪಟ್ಟ ಪರಿಗ್ರಹವನ್ನು ಅಥವಾ ಆಸಕ್ತಿಯನ್ನು ಹೊರಕ್ಕೆ ಹೊರಡಿಸುವಂತಿರುವವರೂ

೧ ತಿರಸ್ಕುರ್ವನ್ನಿತ್ಯರ್ಥಃ. ೨ ಚರಣಕೂರ್ಪಾಸಪರ್ಯಂತೇ. ೩ ಪವಿತ್ರೀಕುರ್ವನ್ನಿವ. ೪ ಅಧಃಕೃತಾ. ೫ ದಿಙ್ಮುಖಃ. ೬ ಸ್ವಕೀಯೇನ. ೭ ನಿರ್ಗ್ರಂಥೋಚಿತಯಾ. ೮ ದೀಪ್ತ್ಯಾ. ೯ ನಿಷ್ಕಾಶಯನ್. ೧೦ ಪರಿಗ್ರಹಮಾಸಕ್ತಿಂ ವಾ.

**ವಿಧೃತೇನ ಸಿತಚ್ಛತ್ರಮಂಡಲೇನಾಮಲತ್ವಿಷಾ ।**
**[೧]ವಿಧುನೇವೋಪರಿಸ್ಥೇನ ಸೇವ್ಯಮಾನಃ [೨]ಕ್ಲಮಚ್ಛಿದಾ ॥ ೧೨೮ ॥**

ನಿರ್ಮಲವಾದ ಕಾಂತಿಯುಳ್ಳದೂ ಸ್ವಾಮಿಯ ಮೇಲೆ ಹಿಡಿಯಲ್ಪಟ್ಟುದೂ ಮಂಡಲಾಕಾರವೂ ಆದ ಶ್ವೇತಚ್ಛತ್ರದಿಂದ ಶ್ರಮವನ್ನು ನಾಶಮಾಡುವ ಮತ್ತು ಮೇಲ್ಭಾಗದಲ್ಲಿರುವ ಚಂದ್ರನಿಂದ ಸೇವಿಸಲ್ಪಡುವಂತಿರುವವರೂ

**ಪ್ರಕೀರ್ಣಕ[೩]ಪ್ರತಾನೇನ ವಿಧೂತೇನಾಮರೇಶ್ವರೈಃ ।**
**ಜನ್ಮೋತ್ಸವಕ್ಷಣಪ್ರೀತ್ಯಾ [೪]ಕ್ಷೀರೋದೇನೇವ ಸೇವಿತಃ ॥ ೧೨೯ ॥**

ದೇವೇಂದ್ರರಿಂದ ಬೀಸಲ್ಪಟ್ಟ ಚಾಮರಗಳ ಸಮೂಹದಿಂದ ಜನ್ಮೋತ್ಸವಕಾಲದ ಪ್ರೀತಿಯಿಂದ ಬಂದ ಕ್ಷೀರಸಮುದ್ರದಿಂದ ಸೇವಿಸಲ್ಪಡುವಂತಿರುವವರೂ

**ಇತ್ಯಾವಿಷ್ಕೃತಮಾಹಾತ್ಮ್ಯಃ ಸುರೇಂದ್ರೈಃ ಪರಿತೋ ವೃತಃ ।**
**ಪುರುಃ ಪುರಾ[೫]ದ್ವಿನಿಷ್ಕ್ರಾಂತಃ ಪೌರೈರಿತ್ಯಭಿನಂದಿತಃ ॥ ೧೩೦ ॥**

ಈರೀತಿಯಾಗಿ ಪ್ರಕಟಪಡಿಸಲ್ಪಟ್ಟ ಮಾಹಾತ್ಮ್ಯವುಳ್ಳವರೂ ಸುತ್ತಲೂ ದೇವೇಂದ್ರರಿಂದ ಸುತ್ತಲ್ಪಟ್ಟವರೂ ಆದ ವೃಷಭಸ್ವಾಮಿಯು ಮುಂದೆಹೇಳುವ ರೀತಿಯಾಗಿ ಪುರನಿವಾಸಿಗಳಿಂದ ಸ್ತೋತ್ರಮಾಡಲ್ಪಟ್ಟವರಾಗಿ ಪಟ್ಟಣದಿಂದ ಹೊರಟರು.

**ವ್ರಜ ಸಿದ್ಧ್ಯೈ ಜಗನ್ನಾಥ ಶಿವಃ ಪಂಥಾಃ ಸಮಸ್ತು ತೇ ।**
**[೬]ನಿಷ್ಠಿತಾರ್ಥಃ ಪುನರ್ದೇವ ದೃಕ್ಪಥೇ ನೋ ಭವಾಚಿರಾತ್ ॥ ೧೩೧ ॥**

''ಲೋಕಾಧಿಪತಿಯೇ !ನೀನು ಸಿದ್ಧಿಯನ್ನು ಹೊಂದುವುದಕ್ಕೋಸ್ಕರ ಹೋಗು. ನಿನಗೆ ಮಾರ್ಗವು ಮಂಗಲವಾಗಿರಲಿ. ನಿನ್ನ ಪ್ರಯೋಜನವು ಕೈಗೂಡಿದ ಮೇಲೆ ಶೀಘ್ರವಾಗಿ ಪುನಃ ನಮ್ಮ ಕಣ್ಣುಗಳಿಗೆ ಗೋಚರನಾಗು.

**ನಾಥಾನಾಥಂ ಜನಂ ತ್ರಾತುಂ ನಾನ್ಯಸ್ತ್ವಮಿವ [೭]ಕರ್ಮಠಃ ।**
**ತಸ್ಮಾದಸ್ಮತ್ಪರಿತ್ರಾಣೇ [೮]ಪ್ರಣಿಧೇಹಿ ಮನಃ ಪುನಃ ॥ ೧೩೨ ॥**

ಪ್ರಭುವೇ ! ಅನಾಥರಾದ ಜನರನ್ನು ರಕ್ಷಿಸುವುದಕ್ಕೋಸ್ಕರ ನಿನ್ನಂತಹ ಕರ್ಮಶೂರನು ಬೇರೆಯಿಲ್ಲ. ಆದುದರಿಂದ ನಮ್ಮನ್ನು ರಕ್ಷಿಸುವ ವಿಷಯದಲ್ಲಿ ಪುನಃ ಮನಸ್ಸನ್ನು ಏಕಾಗ್ರವನ್ನಾಗಿ ಮಾಡು.

**ಪರಾನುಗ್ರಹಕಾರೀಣಿ ಚೇಷ್ಟಿತಾನಿ ತವ ಪ್ರಭೋ ।**
**ನಿರ್ವ್ಯಪೇಕ್ಷಂ ವಿಹಾಯಾಸ್ಮಾನ್ಕೋನುಗ್ರಾಹ್ಯಸ್ತ್ವಯಾಪರಃ ॥ ೧೩೩ ॥**

ಪ್ರಭುವೇ !ನಿನ್ನ ಕೆಲಸಗಳೆಲ್ಲ ಬೇರೆಯವರಿಗೆ ಅನುಗ್ರಹವನ್ನುಂಟುಮಾಡುವುವುಗಳಾಗಿವೆ. ಪ್ರತಿಫಲಾಪೇಕ್ಷೆಯಿಲ್ಲದೆ ಅನುಗ್ರಹಿಸುವ ನಿನಗೆ ನಮ್ಮನ್ನು ಬಿಟ್ಟು ಅನುಗ್ರಹಪಾತ್ರನು ಬೇರೆ ಯಾವನಿರುವನು ?''

**ಇತಿ ಶ್ಲಾಘ್ಯಂ ಪ್ರಸನ್ನಂ ಚ [೯]ಸಾನುತರ್ಷಂ [೧೦]ಸನಾಥನಮ್ ।**
**ಕೈಶ್ಚಿ[೧೧]ತ್ಸಂಜಲ್ಪಿತಂ ಪೌರೈರಾರಾತ್ಪ್ರಣತಮೂರ್ಧಭಿಃ ॥ ೧೩೪ ॥**

ದೂರದಿಂದ ತಲೆಬಾಗಿಸಿ ನಮಸ್ಕರಿಸುತ್ತಿರುವ ಕೆಲವು ಪುರನಿವಾಸಿಗಳು ಹಿಂದೆಹೇಳಿದಪ್ರಕಾರವಾಗಿ ಶ್ಲಾಘ್ಯವೂ ಪ್ರಸನ್ನವೂ ಇಚ್ಛಾಸಹಿತವೂ ಪ್ರಾರ್ಥನಾಸಹಿತವೂ ಆದ ವಚನವನ್ನು ಹೇಳಿದರು.

**ಅಯಂ ಸ ಭಗವಾನ್ದೂರಂ ದೇವೈರುತ್ಕ್ಷಿಪ್ಯ ನೀಯತೇ ।**
**ನ ವಿದ್ಮಃ ಕಾರಣಂ ಕಿಂತು ಕ್ರೀಡೇಯಮಥವೇದೃಶೀ ॥ ೧೩೫ ॥**

೧ ಚಂದ್ರೇಣೇವ. ೨ ಗ್ಲಾನಿಂ. ೩ ಸಮೂಹೇನ. ೪ ಕ್ಷೀರಸಮುದ್ರೇಣ. ೫ ವಿನಿಷ್ಕ್ರಾಮನ್ನಿತ್ಯಪಿ ಪಾಠಃ. ೬ ನಿಷ್ಪನ್ನಪ್ರಯೋಜನಃ. ೭ ಕರ್ಮಶೂರಃ. ೮ ಏಕಾಗ್ರಂ ಕುರು. ೯ ವಾಂಛಾಸಹಿತಂ. ೧೦ ಪ್ರಾರ್ಥನಾಸಹಿತಂ. ೧೧ ಉಕ್ತಂ.

"ಆ ಈ ಭಗವಂತನನ್ನು ಎತ್ತಿಕೊಂಡು ದೇವತೆಗಳು ದೂರ ತೆಗೆದುಕೊಂಡು ಹೋಗುತ್ತಾರೆ. ಆದರೆ ಕಾರಣವು ನಮಗೆ ತಿಳಿಯದು. ಅಥವಾ ಈರೀತಿಯಾದ ಇದೊಂದು ಕ್ರೀಡೆಯಿರಬಹುದು.

**ಭವೇದಪಿ ಭವೇದೇತನ್ನೀತೋ ಮೇರುಂ ಪುರಾಪ್ಯಯಮ್ ।**
**ಪ್ರತ್ಯಾನೀತಶ್ಚ ನಾಕೇಂದ್ರೈರ್ಜನ್ಮೋತ್ಸವವಿಧಿತ್ಸಯಾ ॥ ೧೩೬ ॥**

ಇದು ಇದ್ದರೂ ಇರಬಹುದೋ? ಮೊದಲೂ ಈ ಸ್ವಾಮಿಯನ್ನು ದೇವೇಂದ್ರರು ಜನ್ಮಾಭಿಷೇಕವನ್ನು ಮಾಡಬೇಕೆಂಬ ಇಚ್ಛೆಯಿಂದ ಮಹಾಮೇರು ಪರ್ವತಕ್ಕೆ ತೆಗೆದುಕೊಂಡು ಹೋಗಿ ಪುನಃ ತಂದಿದ್ದರು.

**ಸ ಏವಾದ್ಯಾಪಿ ವೃತ್ತಾಂತೋ ಜಾತ್ವಸ್ಮದ್ಭಾಗ್ಯತೋ ಭವೇತ್ ।**
**ತತೋ ನ ಕಾಚನಾಸ್ಮಾಕಂ ವ್ಯಥೇತ್ಯನ್ಯೇ ಮಿಥೋಬ್ರುವನ್ ॥ ೧೩೭ ॥**

ಒಂದುವೇಳೆ ನಮ್ಮ ಭಾಗ್ಯದಿಂದ ಈಗಲೂ ಅದೇ ಸಮಾಚಾರವಿರಬಹುದು. ಆದುದರಿಂದ ನಮಗೇನೂ ವ್ಯಸನವಿಲ್ಲ" ಹೀಗೆ ಬೇರೆ ಕೆಲವು ಅಜ್ಞಾನಿಗಳು ಪರಸ್ಪರವಾಗಿ ಹೇಳುತ್ತಿದ್ದರು.

**ಕಿಮೇಷ ಭಗವಾನ್ಭಾನುರಾಸ್ಥಿತಃ ಶಿಬಿಕಾಮಿಮಾಮ್ ।**
**ದಿದೀಪ್ಯತೇಂಬರೇ ಭಾಭಿಃ ಪ್ರತುದನ್ನಿವ ನೋ ದೃಶಃ ॥ ೧೩೮ ॥**

"ಈ ಪಾಲಕಿಯಲ್ಲಿ ಕುಳಿತಿರುವ ಈ ಭಗವಂತನು ಸಾಕ್ಷಾತ್ ಸೂರ್ಯನೋ? ಏತಕ್ಕೆಂದರೆ:- ಆಕಾಶದಲ್ಲಿ ತನ್ನ ಕಾಂತಿಗಳಿಂದ ನಮ್ಮ ಕಣ್ಣುಗಳಿಗೆ ಪೀಡೆಯನ್ನುಂಟು ಮಾಡುವವನಂತೆ, ಅಧಿಕವಾಗಿ ಪ್ರಕಾಶಿಸುತ್ತಾನೆ.

**ಧೃತಮೌಲಿರ್ವಿಭಾತ್ಯುಚ್ಚೈಸ್ತಪ್ತಚಾಮೀಕರಚ್ಛವಿಃ।**
**ವಿಭುರ್ಮಧ್ಯೇ ಸುರೇಂದ್ರಾಣಾಂ ಕುಲಾದ್ರೀಣಾಮಿವಾದ್ರಿರಾಟ್ ॥**

ಕಿರೀಟವನ್ನು ಧರಿಸಿದವನೂ ಕಾಯಿಸಿದ ಬಂಗಾರದಂತೆ ಕಾಂತಿಯುಳ್ಳವನೂ ಆದ ಪ್ರಭುವು ಕುಲಪರ್ವತಗಳ ಮಧ್ಯದಲ್ಲಿ ಮಹಾಮೇರುಪರ್ವತದಂತೆ, ದೇವೇಂದ್ರರ ಮಧ್ಯದಲ್ಲಿ ಅಧಿಕವಾಗಿ ಪ್ರಕಾಶಿಸುತ್ತಾನೆ.

**ವಿಭೋರ್ಮುಖೋನ್ಮುಖೀದೃಷ್ಟಿರ್ದಧಾನೋದ್ಭುತವಿಕ್ರಿಯಃ ।**
**ಕಃ ಸ್ವಿದಾಜ್ಞಾತಮಸ್ಮಾಭಿರ್ಜ್ಞಾಕರಃ ಸೋಽಯಂ ಪುರಂದರಃ ॥ ೧೪೦ ॥**

ಸ್ವಾಮಿಯ ಮುಖದಲ್ಲಿ ತನ್ನ ದೃಷ್ಟಿಗಳನ್ನಿಟ್ಟಿರುವವನೂ ಆಶ್ಚರ್ಯಕರವಾದ ನಾನಾರೂಪಗಳನ್ನು ಧಾರಣೆಮಾಡುವವನೂ ಆದ ಇವನಾರು? ಆಃ! ತಿಳಿಯಿತು. ಇವನು ಸ್ವಾಮಿಯ ಸೇವಕನಾದ ಆ ದೇವೇಂದ್ರನು.

**ಶಿಬಿಕಾವಾಹಿನಾಮೇಷಾಮಂಗಭಾಸೋ ಮಹೌಜಸಾಮ್ ।**
**ಸಮಂತಾತ್ಪ್ರೋಲ್ಲಸಂತ್ಯೇತಾಸ್ತಡಿತಾಮಿವ ರೀತಯಃ ॥ ೧೪೧ ॥**

ಮಹಾಕಾಂತಿಯುಳ್ಳ ಈ ಪಾಲಕಿಯನ್ನು ಹೊರುವವರ ಈ ಶರೀರಕಾಂತಿಗಳು ಎಲ್ಲಾ ಕಡೆಗಳಲ್ಲಿಯೂ, ಮಿಂಚುಗಳ ಮಾಲೆಗಳಂತೆ ಪ್ರಕಾಶಿಸುತ್ತವೆ.

**ಮಹತ್ಪುಣ್ಯಮಹೋಭರ್ತುರವಾಙ್ಮಾನಸಗೋಚರಮ್ ।**
**ಪಶ್ಯತಾನಿಮಿಷಾನೇತಾನ್ಪ್ರಣಮ್ರಾನಿತೋಮುತಃ ॥ ೧೪೨ ॥**

ಆಹೋ! ಸ್ವಾಮಿಯ ಅತಿಶಯವಾದ ಪುಣ್ಯವು ವಚನಕ್ಕೂ ಮನಸ್ಸಿಗೂ ಆಗೋಚರವಾಗಿದೆ. ಸುತ್ತಲೂ ವಿಶೇಷವಾಗಿ ನಮಸ್ಕರಿಸುತ್ತಿರುವ ಈ ದೇವತೆಗಳನ್ನು ನೋಡಿರಿ.

**ಇತೋ ಮಧುರಗಂಭೀರಂ ಧ್ವನಂತ್ಯೇತೇ ಸುರಾನಕಾಃ ।**
**ಇತೋ ಮಂದ್ರಂ ಮೃದಂಗಾನಾಮುಚ್ಚೈರುಚ್ಚರತಿ ಧ್ವನಿಃ ॥ ೧೪೩ ॥**

ಈಕಡೆಯಲ್ಲಿ ಮಧುರವಾಗಿಯೂ ಗಂಭೀರವಾಗಿಯೂ ದೇವತೆಗಳ ಈ ಭೇರಿಗಳು ಶಬ್ದಮಾಡುತ್ತಿವೆ. ಈಕಡೆಯಲ್ಲಿ ಮದ್ದಳೆಗಳ ಗಟ್ಟಿಯಾದ ಶಬ್ದವು ಗಂಭೀರವಾಗಿ ಉಂಟಾಗುತ್ತಿದೆ.

**ಇತೋ ನೃತ್ಯಮಿತೋ ಗೀತಮಿತಃ ಸಂಗೀತಮಂಗಲಮ್ ।**
**ಇತಶ್ಚಾಮರಸಂಘಾತ ಇತಶ್ಚಾಮರಸಂಹತಿಃ ॥ ೧೪೪ ॥**

ಈಕಡೆಯಲ್ಲಿ ನರ್ತನವಾಗುತ್ತಿದೆ. ಈಕಡೆಯಲ್ಲಿ ಗೀತವಾಗುತ್ತಿದೆ. ಈಕಡೆಯಲ್ಲಿ ಮಂಗಲಗಾನವಾಗುತ್ತಿದೆ. ಈಕಡೆಯಲ್ಲಿ ಚಾಮರಗಳ ಸಮೂಹವಿದೆ. ಈಕಡೆಯಲ್ಲಿ ದೇವತೆಗಳ ಸಮೂಹವಿದೆ.

**ಸಂಚಾರೀ ಕಿಮಯಂ ಸ್ವರ್ಗಃ ಸಾಪ್ಸರಾಃ ಸವಿಮಾನಕಃ ।**
**ಕಿಂವಾಪೂರ್ವಮಿದಂ ಚಿತ್ರಂ ಲಿಖಿತಂ ವ್ಯೋಮ್ನಿ ಕೇನ ಚಿತ್ ॥ ೧೪೫ ॥**

ಇದೇನು ಅಪ್ಸರಸ್ತ್ರೀಯರೊಡನೆಯೂ ವಿಮಾನಗಳೊಡನೆಯೂ ಕೂಡಿ ಸಂಚರಿಸುತ್ತಿರುವ ಸ್ವರ್ಗವೋ? ಅಥವಾ ಅಪೂರ್ವವಾದ ಇದು ಆಕಾಶದಲ್ಲಿ ಯಾರಿಂದಾದರೂ ಬರೆಯಲ್ಪಟ್ಟ ಚಿತ್ರವೋ?

**ಕಿಮಿಂದ್ರಜಾಲಮೇತತ್ಸ್ಯಾದುತಾಸ್ಮನ್ಮತಿವಿಭ್ರಮಃ ।**
**ಅದೃಷ್ಟಪೂರ್ವಮಾಶ್ಚರ್ಯಮಿದಮೀದೃಗ್ನ ಜಾತು ಚಿತ್ ॥ ೧೪೬ ॥**

ಇದೇನು ಇಂದ್ರಜಾಲವೋ? ಅಥವಾ ನಮ್ಮ ಬುದ್ಧಿಭ್ರಮೆಯೋ? ಈ ಆಶ್ಚರ್ಯವು ಪೂರ್ವದಲ್ಲಿ ಕಂಡಿರಲಿಲ್ಲ. ಇಂತಹ ಆಶ್ಚರ್ಯವು ಎಂದೂ ಉಂಟಾಗಿರಲಿಲ್ಲ."

**ಇತಿ ಕೈಶ್ಚಿತ್ತದಾಶ್ಚರ್ಯಂ ಪಶ್ಯದ್ಭಿಃ ಪ್ರಾಪ್ತವಿಸ್ಮಯೈಃ ।**
**ಸ್ವೈರಂ ಸಂಜಲ್ಪಿತಂ ಪೌರೈರ್ಜಲ್ಪಾಕೈಃ ಸವಿಕಲ್ಪಕೈಃ ॥ ೧೪೭ ॥**

ಈಪ್ರಕಾರವಾಗಿ ಆ ಆಶ್ಚರ್ಯವನ್ನು ನೋಡಿ ವಿಸ್ಮಯವನ್ನು ಹೊಂದಿದವರೂ ವಾಚಾಳುಗಳೂ ನಾನಾವಿಕಲ್ಪಗಳುಳ್ಳವರೂ ಆದ ಪುರನಿವಾಸಿಗಳು ಸ್ವಚ್ಛಂದವಾಗಿ ಮಾತನಾಡುತ್ತಿದ್ದರು.

**ಯದಾಪ್ರಭೃತಿ ದೇವೋಽಯಮವತೀರ್ಣೋ ಧರಾತಲಮ್ ।**
**ತದಾಪ್ರಭೃತಿ ದೇವಾನಾಂ ನ ಗತ್ಯಾಗಮವಿಚ್ಛಿದಾ ॥ ೧೪೮ ॥**

"ಈ ಸ್ವಾಮಿಯು ಭೂಮಿಗೆ ಅವತರಿಸಿದಂದಿನಿಂದ ದೇವತೆಗಳು ಬರುವುದಕ್ಕೂ ಹೋಗುವುದಕ್ಕೂ ವಿರಾಮವೇ ಇಲ್ಲ.

**ನೃತ್ತಂ ನೀಲಾಂಜನಾಖ್ಯಾಯಾಃ ಪಶ್ಯತಃ ಸುರಯೋಷಿತಃ ।**
**ಉದಪಾದಿ ವಿಭೋರ್ಭೋಗವೈರಾಗ್ಯಂ ನಿರ್ನಿಮಿತ್ತಿಕಮ್ ॥ ೧೪೯ ॥**

ದೇವಸ್ತ್ರೀಯಾದ ನೀಲಾಂಜನೆಯೆಂಬವಳ ನರ್ತನವನ್ನು ನೋಡುತ್ತಿದ್ದ ಸ್ವಾಮಿಗೆ ನಿಷ್ಕಾರಣವಾಗಿ ಭೋಗಗಳಲ್ಲಿ ವೈರಾಗ್ಯವುಂಟಾಯಿತು.

**ತತ್ಕಾಲೋಪನತೈರ್ಮಾನ್ಯೈಃ ಸುರೈರ್ಲೋಕಾಂತಿಕಾಹ್ವಯೈಃ ।**
**ಬೋಧಿತಸ್ಯಾಸ್ಯ ವೈರಾಗ್ಯೇ ದೃಢಮಾಸಂಜಿತಂ ಮನಃ ॥ ೧೫೦ ॥**

ಆ ಕಾಲದಲ್ಲಿ ಬಂದ ಪೂಜ್ಯರಾದ ಲೌಕಾಂತಿಕರೆಂಬ ದೇವತೆಗಳಿಂದ ಬೋಧಿಸಲ್ಪಟ್ಟ ಈ ಸ್ವಾಮಿಯ ಮನಸ್ಸು ವೈರಾಗ್ಯದಲ್ಲಿ ದೃಢವಾಗಿ ಖಚಿತವಾಯಿತು.

**ವಿರಕ್ತಃ ಕಾಮಭೋಗೇಷು ಸ್ವಶರೀರೇಽಪಿ ನಿಸ್ಪೃಹಃ ।**
**ಸ ವಸ್ತುವಾಹನಂ ರಾಜ್ಯಂ ತೃಣವನ್ಮನ್ಯತೇಧುನಾ ॥ ೧೫೧ ॥**

೧ ಮುಗ್ಧಾಃ. ೨ ಸ್ವಿತ್ಪ್ರಶ್ನೇ ಚ ವಿತರ್ಕೇ ಚ. ೩ ಅಪ್ರಗೃಹ್ಯಸ್ಯ ತೌ. ೪ ಕಿಂಕರಃ. ೫ ಮಾಲಾಃ.

೧ ನೃತ್ತಮಿತ್ಯಪಿಪಾಠಃ. ೨ ವಾಚಾಲೈಃ. ೩ ಗಮನಾಗಮನೇ. ೪ ಆಗತೈಃ. ೫ ಸಂಯೋಜಿತಂ.

ಕಾಮಭೋಗಗಳಲ್ಲಿ ವಿರಕ್ತನೂ ತನ್ನ ಶರೀರದಲ್ಲಿಯೂ ಇಚ್ಛೆಯಿಲ್ಲದವನೂ ಆದ ಆ ಸ್ವಾಮಿಯು ಈಗ ವಸ್ತುವಾಹನ ರಾಜ್ಯ ಮೊದಲಾದುವುಗಳನ್ನು ತೃಣದಂತೆ ತಿಳಿಯುತ್ತಾನೆ.

**ಮತಂಗಜ ಇವ ಸ್ವೈರವಿಹಾರಸುಖಲಿಪ್ಸಯಾ ।**
**[೧]ಪ್ರವಿವಿಕ್ಷುರ್ವನಂ ದೇವಃ ಸುರೈಃ ಪ್ರೋತ್ಸಾಹ್ಯ ನೀಯತೇ ॥ ೧೫೨ ॥**

ಆನೆಯಂತೆ ಸ್ವಚ್ಛಂದವಾದ ವಿಹಾರದ ಸುಖವನ್ನು ಪಡೆಯಬೇಕೆಂಬ ಇಚ್ಛೆಯಿಂದ ವನವನ್ನು ಪ್ರವೇಶಮಾಡಲಿಚ್ಛಿಸುವ ಸ್ವಾಮಿಯನ್ನು ದೇವತೆಗಳು ಪ್ರೋತ್ಸಾಹಿಸಿ ಒಯ್ಯುತ್ತಾರೆ.

**ಸ್ವಾಧೀನಂ ಸುಖಮಸ್ತ್ಯೇವ ವನೇಪಿ ವಸತಃ ಪ್ರಭೋಃ ।**
**ಪ್ರಜಾನಾಂ [೨]ಕ್ಷೇಮವೃತ್ತ್ಯೈ ಚ ಪುತ್ರಾ ರಾಜ್ಯೇ ನಿವೇಶಿತಾ ॥ ೧೫೩ ॥**

ಪ್ರಜೆಗಳ ಕ್ಷೇಮಕ್ಕೋಸ್ಕರ ರಾಜ್ಯದಲ್ಲಿ ಪುತ್ರರನ್ನಿರಿಸಿ ವನದಲ್ಲಿ ವಾಸಮಾಡುತ್ತಿದ್ದರೂ ಸ್ವಾಮಿಗೆ ಆತ್ಮಜನ್ಯವಾದ ಸುಖವು ಇದ್ದೇ ಇರುವುದು.

**[೩]ತದಿಯಂ ಪ್ರಸ್ತುತಾ [೪]ಯಾತ್ರಾ ಭೂಯಾದ್ಭರ್ತುಃ ಸುಖಾವಹಾ ।**
**[೫]ದಿಷ್ಟ್ಯಾಯಂ ವರ್ಧತಾಂ ಲೋಕೋ ವಿಷೀದನ್ಮಾಸ್ಮ ಕಶ್ಚನ ॥ ೧೫೪ ॥**

ಆದುದರಿಂದ ಈ ಪ್ರಕೃತವಾದ ದೀಕ್ಷಾಯಾತ್ರೆಯು ಸ್ವಾಮಿಗೆ ಸುಖವನ್ನುಂಟುಮಾಡುವುದಾಗಿ ಆಗಲಿ. ಈ ಲೋಕವು ಸಂತೋಷದಿಂದ ವೃದ್ಧಿಹೊಂದಲಿ. ಯಾರೂ ದುಃಖಪಡಬಾರದು.

**ಸುಚಿರಂ ಜೀವತಾದ್ದೇವೋ ಜಯತಾದಭಿನಂದತಾತ್ ।**
**ಪ್ರತ್ಯಾವೃತ್ತಃ ಪುನಶ್ಚಾಸ್ಮಾ[೬]ನಕ್ಷತಾತ್ಮಾಧಿರಕ್ಷತಾತ್ ॥ ೧೫೫ ॥**

ನಾಶರಹಿತವಾದ ಸ್ವರೂಪವುಳ್ಳ ಸ್ವಾಮಿಯು ಬಹುಕಾಲದವರೆಗೆ ಜೀವಿಸಲಿ. ಜಯಶೀಲನಾಗಿರಲಿ. ಸಂತುಷ್ಟನಾಗಿರಲಿ. ಪುನಃ ಹಿಂದಿರುಗಿ ಬಂದು ನಮ್ಮನ್ನು ಕಾಪಾಡಲಿ.

**ದೀಯತೇದ್ಯ ಮಹಾದಾನಂ ಭರತೇನ ಮಹಾತ್ಮನಾ ।**
**ವಿಭೋರಾಜ್ಞಾಂ ಸಮಾಸಾದ್ಯ ಜಗದಾಶಾ[೭]ಪ್ರಪೂರಣಮ್ ॥ ೧೫೬ ॥**

ಮಹಾತ್ಮನಾದ ಭರತನು ಈದಿನ ಸ್ವಾಮಿಯ ಆಜ್ಞೆಯನ್ನು ಪಡೆದು ಜಗತ್ತಿನ ಆಸೆಯು ಪೂರ್ತಿಯಾಗುವವರೆಗೆ ಮಹಾದಾನವನ್ನು ಮಾಡುತ್ತಾನೆ.

**ವಿತೀರ್ಣೇನಾಮುನಾ ಭೂಯಾದ್ಧೃತಿ[೮]ಶ್ಚಾಮೀಕರೇಣ ವಃ ।**
**ದೀಯಂತೇಶ್ವಾಃ ಸಹಾ[೯]ಯೋಗ್ಯೈರಿತಶ್ಚಾಮೀ [೧೦]ಕರೇಣವಃ ॥ ೧೫೭ ॥**

ದಾನಮಾಡಲ್ಪಟ್ಟ ಈ ಬಂಗಾರದಿಂದ ನಿಮಗೆ ಸಂತೋಷವಾಗಲಿ. ಈಕಡೆಯಲ್ಲಿ ಲಗಾಮುಸಹಿತವಾಗಿ ಕುದುರೆಗಳನ್ನೂ ಈ ಆನೆಗಳನ್ನೂ ದಾನಮಾಡುತ್ತಾನೆ."

**ಇತ್ಯ[೧೧]ನುಗ್ಧೈಃ ಪ್ರಬುದ್ಧೈಶ್ಚ ಜನಾಲಾಪೈಃ ಪೃಥಗ್ವಿಧೈಃ ।**
**ಶ್ಲಾಘ್ಯಮಾನಃ ಶನೈರ್ನಾಥಃ[೧೨]ಪುರೋಪಾಂತಂ [೧೩]ವ್ಯತೀಯಿವಾನ್ ॥**

ಈಪ್ರಕಾರವಾಗಿ ಅಜ್ಞಾನಿಗಳ ಮತ್ತು ಜ್ಞಾನಿಗಳ ಬೇರೆಬೇರೆ ಸಂಭಾಷಣೆಗಳಿಂದ ಶ್ಲಾಘಿಸಲ್ಪಟ್ಟ ಸ್ವಾಮಿಯು ಮೆಲ್ಲನೆ ಪಟ್ಟಣದ ದ್ವಾರಕ್ಕೆ ಹೋದರು.

**ಅಥ ಸಂಪ್ರಸ್ಥಿತೇ ದೇವೇ [೧೪]ದೇವ್ಯೋ[೧೫]ಮಾತ್ಯೈರಧಿಷ್ಠಿತಾಃ ।**
**ಅನುಪ್ರಚೇಲು[೧೬]ರೀಶಾನಂ ಶುಚಾಂತರ್ಬಾಷ್ಪಲೋಚನಾಃ ॥ ೧೫೯ ॥**

೧ ಪ್ರವೇಷ್ಟುಮಿಚ್ಛುಃ. ೨ ಕ್ಷೇಮಧೃತ್ಯೈ ಇತ್ಯಪಿ ಪಾಠಃ. ೩ ಕಾರಣಾತ್. ೪ ದೀಕ್ಷಾಯಾತ್ರಾ. ೫ ಸಂತೋಷೇಣ. ೬ ಅವಿನಶ್ವರರೂಪಃ. ೭ ಕ್ರಿಯಾವಿಶೇಷಣಂ. ೮ ಸುವರ್ಣೇನ. ೯ ಪಲ್ಯಯನ್ಯೈಃ. ೧೦ ದಂತಿನಃ. ೧೧ ಅಪ್ರೌಢ್ಯೈಃ. ೧೨ ಪುರದ್ವಾರಂ. ೧೩ ಗತವಾನ್. ೧೪ ಯಶಸ್ವತ್ಯಾದಯಃ. ೧೫ ಪ್ರಧಾನೈರಾಶ್ರಿತಾಃ. ೧೬ ಸ್ವಾಮಿನಂ.

ತರುವಾಯ ಸ್ವಾಮಿಯು ಹೊರಟು ಹೋಗುತ್ತಿರುವಾಗ ಯಶಸ್ವತೀ ಮೊದಲಾದ ದೇವಿಯರೂ ಮಂತ್ರಿಮೊದಲಾದ ಪ್ರಧಾನರೂ ಶೋಕದಿಂದ ಕಣ್ಣುಗಳೊಳಗೆ ಕಣ್ಣೀರನ್ನು ತುಂಬಿಕೊಂಡವರಾಗಿ ಸ್ವಾಮಿಯನ್ನು ಹಿಂಬಾಲಿಸಿ ಹೋದರು.

**ಲತಾ ಇವ ಪರಿಮ್ಲಾನಗಾತ್ರಶೋಭಾ[೧]ವಿಭೂಷಣಾಃ ।**
**ಕಾಶ್ಚಿತ್ಪಲತ್ಪದನ್ಯಾಸಮನುಜಗ್ಮುರ್ಜಗತ್ಪತಿಮ್ ॥ ೧೬೦ ॥**

ಲತೆಗಳಂತೆ ಕಂದಿದ ಶರೀರಶೋಭೆಯುಳ್ಳವರೂ ಆಭರಣಗಳನ್ನು ಪರಿತ್ಯಜಿಸಿದವರೂ ಆದ ಕೆಲವು ಸ್ತ್ರೀಯರು ಎಡವುತ್ತಿರುವ ಹೆಜ್ಜೆಗಳನ್ನು ಹಾಕುತ್ತ ಸ್ವಾಮಿಯನ್ನು ಹಿಂಬಾಲಿಸಿದರು.

**ಶೋಕಾನಿಲಹತಾಃ ಕಾಶ್ಚಿ[೨]ದ್ವೇಪಮಾನಾಂಗಯಷ್ಟಯಃ ।**
**ನಿಪೇತುರ್ಧರಣೀಪೃಷ್ಠೇ ಮೂರ್ಚ್ಛಾ[೩]ಮೀಲಿತಲೋಚನಾಃ ॥ ೧೬೧ ॥**

ಶೋಕವೆಂಬ ಗಾಳಿಯಿಂದ ಹೊಡೆಯಲ್ಪಟ್ಟವರೂ ನಡುಗುತ್ತಿರುವ ಶರೀರವುಳ್ಳವರೂ ಆದ ಕೆಲವು ಸ್ತ್ರೀಯರು ಮೂರ್ಛೆಯಿಂದ ಸ್ವಲ್ಪ ಮುಚ್ಚಿದ ಕಣ್ಣುಗಳುಳ್ಳವರಾಗಿ ಭೂಮಿಯ ಮೇಲೆ ಬಿದ್ದರು.

**ಕ್ವ ಪ್ರಸ್ಥಿತೋಸಿ ಹಾ ನಾಥ ಕ್ವ ಗತ್ವಾಸ್ಮಾ[೪]ನ್ಪ್ರತೀಕ್ಷಸೇ ।**
**ಕಿಯದ್ದೂರಂ ಚ ಗಂತವ್ಯಮಿತ್ಯನ್ಯಾ [೫]ಮುಮುಹುರ್ಮುಹುಃ ॥ ೧೬೨ ॥**

"ಹಾ ! ಪ್ರಭುವೇ !! ಎಲ್ಲಿ ಹೊರಟಿರುತ್ತಿ ? ಎಲ್ಲಿ ಹೋಗಿ ನಮ್ಮನ್ನು ತಿರುಗಿನೋಡುತ್ತಿ ? (ಕಾಪಾಡುತ್ತಿ ?) ಎಷ್ಟುದೂರ ಹೋಗಬೇಕು ?" ಈರೀತಿಯಾಗಿ ಹೇಳುತ್ತ ಇನ್ನುಕೆಲವು ಸ್ತ್ರೀಯರು ಬಾರಿಬಾರಿಗೂ ಮೂರ್ಛೆ ಹೋದರು.

**ಹೃದಿ ವೇಪಥುಮುತ್ಕಂಪಂ ಸ್ತನಯೋರ್ಮ್ಲಾನತಾಂ ತನೌ ।**
**ವಾಚಿ ಗದ್ಗದತಾಮಕ್ಷ್ಣೋರ್ಬಾಷ್ಪಂ ಚಾನ್ಯಾಃ ಶುಚಾ ದಧುಃ ॥ ೧೬೩ ॥**

ಬೇರೆಕೆಲವು ಸ್ತ್ರೀಯರಿಗೆ ಶೋಕದಿಂದ ಹೃದಯದಲ್ಲಿ ಕಂಪವುಂಟಾಯಿತು. ಕುಚಗಳು ಚಲಿಸಿದುವು. ಶರೀರವು ಕಂದಿತು. ಮಾತಿನಲ್ಲಿ ತೊದಲು ಉಂಟಾಯಿತು. ಕಣ್ಣುಗಳಲ್ಲಿ ಕಣ್ಣೀರುಂಟಾಯಿತು.

**ಅಮಂಗಲ[೬]ಮಲಂ ಬಾಲೇ ರುದಿತ್ವೇತಿ ನಿವಾರಿತಾ ।**
**ಕಾಚಿದಂತರ್ನಿರುದ್ಧಾಶ್ರುಃ ಸ್ಫುಟಂತೀವ ಶುಚಾಭವತ್ ॥ ೧೬೪ ॥**

"ಎಲೈ ಬಾಲಕಿಯೇ ! ಅಮಂಗಲವಾಗಿ ಅಳುವುದು ಸಾಕು" ಎಂದು ತಡೆಯಲ್ಪಟ್ಟ ಒಬ್ಬಳು ಸ್ತ್ರೀಯು ಕಣ್ಣೀರನ್ನು ತಡೆದು ಶೋಕದಿಂದ ಬಿರಿದು ಹೋಗುವವಳಂತೆ, ಆದಳು.

**ಪ್ರಸ್ಥಾನಮಂಗಲಂ [೭]ಭಂಕ್ತುಮಕ್ಷಮಾ ಕಾಪ್ಯುದಶ್ರುದೃಕ್ ।**
**ಶುಚಾಮಂತಃ ಪ್ರವಿಷ್ಟೇ[೮]ವ ದೃಷ್ಟಾ ದೃಕ್ಪುತ್ರಿಕಾಛಲಾತ್ ॥ ೧೬೫ ॥**

ಗಮನಕಾಲದ ಮಂಗಲವನ್ನು ನಾಶಮಾಡುವುದಕ್ಕೆ ಅಸಮರ್ಥಳೂ ಉಕ್ಕುತ್ತಿರುವ ಕಣ್ಣೀರುಳ್ಳ ಕಣ್ಣುಗಳುಳ್ಳವಳೂ ಆದ ಒಬ್ಬಾಳೊಬ್ಬ ಸ್ತ್ರೀಯು ಕಣ್ಣಿನ ಬೊಂಬೆಯ ನೆಪದಿಂದ ಶೋಕಗಳ ಮಧ್ಯದಲ್ಲಿ ಪ್ರವೇಶಮಾಡಿದವಳಂತೆ, ಕಂಡಳು.

**ಗತಿಸಂಭ್ರಮವಿಚ್ಛಿನ್ನಹಾರವ್ಯಾಕೀರ್ಣಮೌಕ್ತಿಕಾಃ ।**
**ಸ್ಥೂಲಾನಶ್ರುಲವಾನ್ಕಾಶ್ಚಿ[೯]ಚ್ಛನ್ನಂ ತಚ್ಛದ್ಮನಾಮುಚನ್ ॥ ೧೬೬ ॥**

೧ ವಿಗತಭೂಷಣಾಃ. ೨ ಕಂಪಮಾನಾಃ. ೩ ಈಷನ್ಮೀಲಿತೇ. ೪ ಪ್ರತಿಪಾಲಯಸೇ. ೫ ಮೂರ್ಛಾಂಗತಾಃ. ೬ ರುದಿತೇನಾಲಮಿತ್ಯರ್ಥಃ. ೭ ನಾಶಯಿತುಂ. ೮ ಇವಶಬ್ದೋ ವಾಕ್ಯಾಲಂಕಾರೇ. ೯ ಗೂಢಂ.

ಗಮನದ ತ್ವರೆಯಿಂದ ಹರಿದು ಹೋದ ಮುತ್ತಿನ ಹಾರದಿಂದ ಚೆಲ್ಲುತ್ತಿರುವ ಮುತ್ತುಗಳುಳ್ಳ ಕೆಲವು ಸ್ತ್ರೀಯರು, ಆ ಚೆಲ್ಲುತ್ತಿರುವ ಮುತ್ತುಗಳ ನೆಪದಿಂದ ಗುಪ್ತವಾಗಿ ದಪ್ಪವಾದ ಕಣ್ಣೀರಿನ ಬಿಂದುಗಳನ್ನು ಬಿಡುತ್ತಿದ್ದರು.

**ವಿಸ್ರಸ್ತಕಬರೀಭಾರವಿಗಲತ್ಕುಸುಮಸ್ರಜಃ ।**
**ಸ್ರಸ್ತಸ್ತನಾಂಶುಕಾಃ [೧]ಸಾಶ್ರಾಃ ಕಾಶ್ಚಿಚ್ಛೋಚ್ಯಾಂ ದಶಾ[೨]ಮಧುಃ ॥ ೧೬೭ ॥**

ಬಿಚ್ಚಿಹೋದ ಹೆರಳಿನಿಂದ ಜಾರುತ್ತಿರುವ ಪುಷ್ಪಮಾಲಿಕೆಗಳುಳ್ಳವರೂ ಬಿಚ್ಚಿ ಹೋದ ಕುಪ್ಪಸಗಳುಳ್ಳವರೂ ಕಣ್ಣೀರುಳ್ಳವರೂ ಆದ ಕೆಲವು ಸ್ತ್ರೀಯರು ಶೋಚನೀಯವಾದ ಅವಸ್ಥೆಯನ್ನು ಹೊಂದಿದರು.

**[೩]ಉತ್ಕ್ಷಿಪ್ಯ ಶಿಬಿಕಾಸ್ವನ್ಯಾ ನಿಕ್ಷಿಪ್ತಾಃ ಶೋಕ[೪]ವಿಕ್ಲವಾಃ ।**
**ಕಥಂಕಥಮಪಿ ಪ್ರಾಣೈರ್ನವ್ಯಯುಜ್ಯಂತ [೫]ಸಾಂತ್ವಿತಾಃ ॥ ೧೬೮ ॥**

ಶೋಕದಿಂದ ಬಳಲಿದವರಾಗಿದ್ದುದರಿಂದ ಎತ್ತಿ ಪಾಲಕಿಯಲ್ಲಿರಿಸಲ್ಪಟ್ಟ ಬೇರೆ ಕೆಲವು ಸ್ತ್ರೀಯರು ಬಹಳ ಪ್ರಯಾಸದಿಂದ ಸಮಾಧಾನಪಡಿಸಲ್ಪಟ್ಟವರಾಗಿ ಪ್ರಾಣಗಳಿಂದ ವಿಯೋಗವನ್ನು ಹೊಂದಲಿಲ್ಲ. ಸಾಯಲಿಲ್ಲವೆಂದು ಭಾವವು.

**ಧೀರಾಃ ಕಾಶ್ಚಿ[೬]ದಧೀರಾಕ್ಷ್ಯೋ [೭]ಧೀರಿತಾಃ ಸ್ವಾಮಿಸಂಪದಾ ।**
**ವಿಭುಮನ್ವೀಯು[೮]ರವ್ಯಗ್ರಾ ರಾಜಪತ್ನ್ಯಃ ಶುಚಿವ್ರತಾಃ ॥ ೧೬೯ ॥**

ಧೈರ್ಯಶಾಲಿಗಳೂ ಚಪಲನೇತ್ರೆಯರೂ ಆದ ಕೆಲವು ರಾಜಪತ್ನಿಯರು ಸ್ವಾಮಿಯ ಸಂಪತ್ತಿನಿಂದ ಧೈರ್ಯವನ್ನು ಹೊಂದಿದವರೂ ವ್ಯಾಕುಲತೆಯಿಲ್ಲದವರೂ ಪರಿಶುದ್ಧವಾದ ವ್ರತವುಳ್ಳವರೂ ಆಗಿ ಸ್ವಾಮಿಯನ್ನು ಹಿಂಬಾಲಿಸಿದರು.

**ಪ್ರಸ್ಥಾನಮಂಗಲೇ [೯]ಜಾತೇ ನಾ[೧೦]ಭಿಜಾತಂ ಪುರೋದನಮ್ ।**
**ನಾಥಃ ಶನೈರನುವ್ರಾಜ್ಯೋ ಮಾತರ್ಮಾ ಸ್ಮ ಶುಚಂ ಗಮಃ ॥ ೧೭೦ ॥**

"ಮಂಗಲಕರವಾದ ಗಮನವುಂಟಾಗುತ್ತಿರಲು ಅಳುವುದು ಪ್ರಶಸ್ತವಾದುದಲ್ಲವು. ಮೆಲ್ಲನೆ ಸ್ವಾಮಿಯನ್ನು ಹಿಂಬಾಲಿಸಿ ಹೋಗಬೇಕು. ತಾಯಿಯೇ! ಶೋಕಪಡಬೇಡ.

**[೧೧]ತ್ವರ್ಯತಾಂ [೧೨]ಚರ್ಯತಾಂ ದೇವಿ ಶೋಕವೇಗೋಪವಾರ್ಯತಾಮ್ ।**
**ದೇವೋಯಂ ನೀಯತೇ ದೇವೈ[೧೩]ರ್ದಿಷ್ಟ್ಯಾಸ್ಮದ್ದೃಷ್ಟಿಗೋಚರೇ ॥**

ದೇವಿಯೇ! ನಮಗೆ ಕಾಣಿಸುವಹಾಗೆ ದೇವತೆಗಳು ಸಂತೋಷದಿಂದ ಸ್ವಾಮಿಯನ್ನು ಒಯ್ಯುತ್ತಾರೆ. ತ್ವರೆಮಾಡು; ನಡೆ; ಶೋಕವನ್ನು ಬಿಡು".

**ಇತ್ಯಂತಃಪುರವೃದ್ಧಾಭಿರ್ಮುಹುರಾಶ್ವಾಸಿತಾ ಸತೀ ।**
**ಯಶಸ್ವತೀ ಸುನಂದಾ ಚ ಪ್ರತಸ್ಥೇ ಪಾದಚಾರಿಣೀ ॥ ೧೭೨ ॥**

ಈರೀತಿಯಾಗಿ ಯಶಸ್ವತೀಸುನಂದೆಯರು ಅಂತಃಪುರದ ವೃದ್ಧಸ್ತ್ರೀಯರಿಂದ ಬಾರಿಬಾರಿಗೂ ಶಾಂತಪಡಿಸಲ್ಪಟ್ಟವರಾಗಿ ನಡೆದು ಹೋದರು.

**ಬಹುನಾತ್ರ ಕಿಮುಕ್ತೇನ ಮುಕ್ತಸರ್ವ[೧೪]ಪರಿಚ್ಛದಾಃ ।**
**ದೇವ್ಯೋ ಯಥಾಶ್ರುತಂ ಭರ್ತುರನುಮಾರ್ಗಂ ಪ್ರತಸ್ಥಿರೇ ॥ ೧೭೩ ॥**

ಈ ವಿಷಯದಲ್ಲಿ ಹೆಚ್ಚುಹೇಳುವುದರಿಂದೇನು ಪ್ರಯೋಜನ? ದೇವಿಯರೆಲ್ಲ ಹಿಂದೆಹೇಳಿದಂತೆ ಛತ್ರಚಾಮರಮೊದಲಾದ ಪರಿವಾರಗಳನ್ನೆಲ್ಲ ಬಿಟ್ಟು ಸ್ವಾಮಿಯು ಹೋದ ಮಾರ್ಗದಲ್ಲಿ ಹೊರಟರು.

**ಮಾ ಭೂದ್ವ್ಯಾಕುಲತಾ ಕಾಚಿದ್ಭರ್ತುರಿ[೧೫]ತ್ಯನುಯಾಯಿಭಿಃ ।**
**ರುದ್ಧಃ ಸರ್ವಾವರೋಧಸ್ತ್ರೀಸಾರ್ಥಃ ಕಸ್ಮಿಂಶ್ಚಿದಂತರೇ ॥ ೧೭೪ ॥**

೧ ಅಶ್ರುಸಹಿತಾಃ. ೨ ಧರಂತಿ ಸ್ಮ. ೩ ಉದ್ಧೃತ್ಯ. ೪ ವಿಹ್ವಲಾಃ. ೫ ಪ್ರಿಯವಚನೈರಿತ್ಯರ್ಥಃ. ೬ ಚಂಚಲಾಕ್ಷ್ಯಃ. ೭ ಧೀರತಾಂ ನೀತಾಃ. ೮ ನಿರಾಕುಲಾಃ. ೯ ಜಾತಮಿತ್ಯಪಿ ಪಾಠಃ. ೧೦ ಮಂಗಲಂ. ೧೧ ಶೀಘ್ರಂ ಕ್ರಿಯತಾಂ. ೧೨ ಗಮ್ಯತಾಂ. ೧೩ ಸಂತೋಷೇಣ. ೧೪ ಛತ್ರಚಾಮರಾದಿಪರಿಕರಾಃ. ೧೫ ಸಹಗಚ್ಛದ್ಭಿಃ.

ಸ್ವಾಮಿಗೆ ಯಾವ ವ್ಯಾಕುಲತೆಯೂ ಉಂಟಾಗಬಾರದೆಂದು ಸ್ವಾಮಿಯ ಜೊತೆಯಲ್ಲಿ ಹೋಗುತ್ತಿದ್ದ ಪುರುಷರು ಸ್ವಲ್ಪದೂರದಲ್ಲಿ ಅಂತಃಪುರಸ್ತ್ರೀಯರನ್ನೆಲ್ಲ ತಡೆದರು.

**ಬ್ರುವಾಣೈರ್ಭರ್ತುರಾಜ್ಞೇತಿ ರಾಜ್ಞೀವರ್ಗೋ ಮಹತ್ತರೈಃ ।**
**ಸಂರುದ್ಧಃ ಸರಿತಾಮೋಘಃ ಪ್ರವೃದ್ಧೋಪಿ ಯಥಾರ್ಣವೈಃ ॥ ೧೭೫ ॥**

ವೃದ್ಧಿಹೊಂದುತ್ತಿದ್ದರೂ ನದಿಗಳ ಸಮೂಹವನ್ನು ಸಮುದ್ರವು ತಡೆಯುವಂತೆ, ಸ್ವಾಮಿಯ ಅಪ್ಪಣೆ" ಎಂದು ಹೇಳುತ್ತಿರುವ ಮುಖ್ಯಸ್ಥರು ಪಟ್ಟಮಹಿಷಿಯರ ಗುಂಪನ್ನು ತಡೆದರು.

**ನಿಶ್ವಸ್ಯ ದೀರ್ಘಮುಷ್ಣಂ ಚ ನಿಂದನ್ತ್ಯೋಭಾಗ್ಯಮಾತ್ಮನಃ ।**
**ನ್ಯವೃತತ್ತಾಪ್ತನೈರಾಶ್ಯೋ ನೃಪವಲ್ಲಭಿಕಾಜನಃ ॥ ೧೭೬ ॥**

ನಿರಾಶೆಯನ್ನು ಹೊಂದಿದ ಪಟ್ಟಮಹಿಷಿಯರು ದೀರ್ಘವಾಗಿಯೂ ಉಷ್ಣವಾಗಿಯೂ ನಿಟ್ಟುಸಿರನ್ನು ಬಿಟ್ಟು ತಮ್ಮ ಅದೃಷ್ಟವನ್ನು ನಿಂದಿಸುತ್ತ ಹಿಂದಿರುಗಿದರು.

**ಮಹಾದೇವ್ಯೌ ತು [೧]ಶುದ್ಧಾಂತಮುಖ್ಯಾಭಿಃ ಪರಿವಾರಿತೇ ।**
**ಭರ್ತುರಿಚ್ಛಾನುವರ್ತಿನ್ಯಾವನ್ವಯಾತಾಂ [೨]ಸಪರ್ಯಯಾ ॥ ೧೭೭ ॥**

ಸ್ವಾಮಿಯ ಇಚ್ಛಾನುಸಾರಿಗಳಾದ ಯಶಸ್ವತೀಸುನಂದಾಮಹಾದೇವಿಯರು ಅಂತಃಪುರದ ಮುಖ್ಯಸ್ತ್ರೀಯರಿಂದ ಸುತ್ತಲ್ಪಟ್ಟವರಾಗಿ ಪೂಜಾದ್ರವ್ಯದೊಡನೆ ಸ್ವಾಮಿಯನ್ನು ಹಿಂಬಾಲಿಸಿ ಹೋದರು.

**ಮರುದೇವ್ಯಾ ಸಮಂ ನಾಭಿರಾಜೋ ರಾಜಶತೈರ್ವೃತಃ ।**
**[೩]ಅನೂತ್ತಸ್ಥೌ ತದಾ ದ್ರಷ್ಟುಂ ವಿಭೋರ್ನಿಷ್ಕ್ರಮಣೋತ್ಸವಮ್ ॥**

ಆಗ ಅನೇಕ ರಾಜರುಗಳಿಂದ ಸುತ್ತಲ್ಪಟ್ಟ ನಾಭಿರಾಜನು ಸ್ವಾಮಿಯ ಪರಿನಿಷ್ಕ್ರಮಣಕಲ್ಯಾಣೋತ್ಸವವನ್ನು ನೋಡುವುದಕ್ಕೋಸ್ಕರ ಮರುದೇವೀಸಮೇತನಾಗಿ ಸ್ವಾಮಿಯನ್ನು ಹಿಂಬಾಲಿಸಿ ಹೋದನು.

**ಸಮಂ ಪೌರೈರಮಾತ್ಯೈಶ್ಚ ಪಾರ್ಥಿವೈಶ್ಚ ಮಹಾನ್ವಯೈಃ ।**
**ಸಾನುಜೋ ಭರತಾಧೀಶೋ ಮಹರ್ದ್ಧ್ಯಾ ಗುರುಮನ್ವಗಾತ್ ॥ ೧೭೯ ॥**

ಪುರನಿವಾಸಿಗಳೂ ಮಂತ್ರಿಗಳೂ ಮಹಾವಂಶಿಕರಾದ ರಾಜರೂ ತಮ್ಮಂದಿರೂ ಸಹಿತನಾಗಿ ಭರತರಾಜನು ಮಹಾವೈಭವದಿಂದ ಸ್ವಾಮಿಯನ್ನು ಹಿಂಬಾಲಿಸಿ ಹೋದನು.

**ನಾತಿದೂರಂ ಖಮುತ್ಪತ್ಯ ಜನಾನಾಂ ದೃಷ್ಟಿಗೋಚರೇ ।**
**ಯಥೋಕ್ತೈರ್ಮಂಗಲಾರಂಭೈಃ ಪ್ರಸ್ಥಾನಮಕರೋತ್ಪ್ರಭುಃ ॥ ೧೮೦ ॥**

ಸ್ವಾಮಿಯು ಆಕಾಶಮಾರ್ಗದಲ್ಲಿ ಜನರ ಕಣ್ಣುಗಳಿಗೆ ಗೋಚರವಾಗುವಷ್ಟು ದೂರದಲ್ಲಿ ಹಿಂದೆ ಹೇಳಿದ ಮಂಗಲಕಾರ್ಯಗಳ ಆರಂಭಗಳಿಂದ ಪ್ರಯಾಣ ಮಾಡಿದರು.

**ನಾತಿದೂರೇ ಪುರಸ್ಯಾಸ್ಯ ನಾತ್ಯಾಸನ್ನೇತಿವಿಸ್ತೃತಮ್ ।**
**ಸಿದ್ಧಾರ್ಥಕವನೋದ್ದೇಶ[೪]ಮಭಿಪ್ರಾಯಾಜ್ಜಗದ್ಗುರುಃ ॥ ೧೮೧ ॥**

ಜಗದ್ಗುರುವಾದ ಸ್ವಾಮಿಯು ಈ ಅಯೋಧ್ಯಾಪಟ್ಟಣಕ್ಕೆ ಬಹಳ ದೂರವಲ್ಲದೆಯೂ ಬಹಳ ಸಮೀಪವಲ್ಲದೆಯೂ ಇರುವ ಬಹಳ ವಿಸ್ತಾರವಾದ ಸಿದ್ಧಾರ್ಥಕವೆಂಬ ವನಪ್ರದೇಶಕ್ಕೆ ಹೋದರು.

೧ ಅಂತಃಪುರಮುಖ್ಯಾಭಿಃ. ೨ ಪೂಜಾದ್ರವ್ಯೇಣ ಸಹ. ೩ ಅನ್ವಗಚ್ಛತ್. ೪ ಅಭ್ಯಗಚ್ಛತ್.

**ತತಃ ಪ್ರಾಪ ಸುರೇಂದ್ರಾಣಾಂ ಪೃತನಾ ವ್ಯಾಪ್ಯ ರೋದಸೀ ।**
**[1]ವಯೋರುತೈರಿವಾಹ್ವಾನಂ ಕುರ್ವತ್ಸಿದ್ಧಾರ್ಥಕಂ ವನಮ್ ॥ ೧೮೨ ॥**

ತರುವಾಯ ದೇವೇಂದ್ರರ ಸೈನ್ಯವು ಆಕಾಶಭೂಮಿಗಳನ್ನು ವ್ಯಾಪಿಸಿ ಪಕ್ಷಿಗಳ ಶಬ್ದಗಳಿಂದ ಕರೆಯುತ್ತದೋ ಎಂಬಂತಿರುವ ಸಿದ್ಧಾರ್ಥಕವನಕ್ಕೆ ಹೋಯಿತು.

**ತತ್ರೈಕಸ್ಮಿನ್ಶಿಲಾಪಟ್ಟೇ ಸುರೈಃ ಪ್ರಾಗುಪಕಲ್ಪಿತೇ ।**
**ಪೃಥೀಯಸಿ ಶುಚೌ ಸ್ವಸ್ಮಿನ್ಪರಿಣಾಮ ಇವೋನ್ನತೇ ॥ ೧೮೩ ॥**

**ಚಂದ್ರಕಾಂತಮಯೇ ಚಂದ್ರಕಾಂತಶೋಭೋ[2]ಪಹಾಸಿನಿ ।**
**ಪುಂಜೀಭೂತ ಇವೈಕತ್ರ ಸ್ವಸ್ಮಿನ್ಯಶಸಿ ನಿರ್ಮಲೇ ॥ ೧೮೪ ॥**

**ಸ್ವಭಾವಭಾಸ್ವರೇ ರಮ್ಯೇ ಸುವೃತ್ತಪರಿಮಂಡಲೇ ।**
**ಸಿದ್ಧಕ್ಷೇತ್ರ ಇವ ದ್ರಷ್ಟುಂ ತಾಂ [3]ಭೂತಿಂ ಭುವಮಾಗತೇ ॥ ೧೮೫ ॥**

**ಸುಶೀತಲತರುಚ್ಛಾಯಾನಿರುದ್ಧೋಷ್ಣಕರತ್ವಿಷಿ ।**
**ಪರ್ಯಂತಶಾಖಿಶಾಖಾಗ್ರವಿಗಲತ್ಕುಸುಮೋತ್ಕರೇ ॥ ೧೮೬ ॥**

**ಶ್ರೀಖಂಡದ್ರವದತ್ತಾಚ್ಛಚ್ಛಟಾಮಂಗಲಸಂಗತೇ ।**
**ಶಚೀಸ್ವಹಸ್ತವಿನ್ಯಸ್ತರತ್ನಚೂರ್ಣೋಪಹಾರಕೇ ॥ ೧೮೭ ॥**

**ವಿಶಂಕಟಪಟೀಕ್ಲ್ಪ್ತವಿಚಿತ್ರಪಟಮಂಡಪೇ ।**
**ಮಂದಾನಿಲಚಲಚ್ಚಿತ್ರಕೇತುಮಾಲಾತತಾಂಬರೇ ॥ ೧೮೮ ॥**

**ಸಮಂತಾದುಚ್ಚರದ್ಧೂಪಧೂಮಾಮೋದಿತದಿಙ್ಮುಖೇ ।**
**ಪರ್ಯಂತನಿಹಿತಾನಲ್ಪಮಂಗಲದ್ರವ್ಯಸಂಪದಾ ॥ ೧೮೯ ॥**

**ಇತ್ಯನಲ್ಪಗುಣೇ ತಸ್ಮಿನ್ಪ್ರಸ್ತವಾಸ್ತುಪ್ರತಿಷ್ಠಿತೇ ।**
**ಯಾನಾದವಾತರದ್ದೇವಃ ಸುರೈಃ ಕ್ಷ್ಮಾಮವತಾರಿತಾತ್ ॥ ೧೯೦ ॥**

ಆ ಸಿದ್ಧಾರ್ಥಕವನಪ್ರದೇಶದಲ್ಲಿ ದೇವತೆಗಳಿಂದ ಮೊದಲೇ ರಚಿಸಲ್ಪಟ್ಟುದೂ ವಿಸ್ತಾರವೂ ನಿರ್ಮಲವೂ ಸ್ವಾಮಿಯ ಪರಿಣಾಮದಂತೆ ಉನ್ನತವೂ ಚಂದ್ರಕಾಂತ ಶಿಲಾಮಯವೂ ಚಂದ್ರಕಾಂತಶಿಲೆಯ ಶೋಭೆಯನ್ನು ಪರಿಹಾಸ್ಯ ಮಾಡುವುದೂ ಒಂದೇಕಡೆಯಲ್ಲಿ ರಾಶಿಯಾಗಿರುವ ಸ್ವಾಮಿಯ ನಿರ್ಮಲವಾದ ಯಶಸ್ಸಿನಂತಿರುವುದೂ ಸ್ವಭಾವದಿಂದ ಪ್ರಕಾಶಮಾನವೂ ರಮಣೀಯವೂ ವರ್ತುಲಾಕಾರವೂ ಆ ಪರಿನಿಷ್ಕ್ರಮಣಕಲ್ಯಾಣಸಂಪತ್ತನ್ನು ನೋಡುವುದಕ್ಕೋಸ್ಕರ ಸಿದ್ಧಕ್ಷೇತ್ರವು ಭೂಮಿಗಿಳಿದು ಬಂದಿದೆಯೋ ಎಂಬಂತಿರುವುದೂ ಅತ್ಯಂತ ಶೀತಲವಾದ ವೃಕ್ಷಗಳ ನೆರಳಿನಿಂದ ತಡೆಯಲ್ಪಟ್ಟ ಸೂರ್ಯಕಿರಣಗಳುಳ್ಳುದೂ ಸಮೀಪದಲ್ಲಿರುವ ವೃಕ್ಷಗಳ ಕೊಂಬೆಗಳ ಅಗ್ರಭಾಗದಿಂದ ಸುರಿಯಲ್ಪಟ್ಟ ಪುಷ್ಪಸಮೂಹವುಳ್ಳುದೂ ನಿರ್ಮಲವೂ ಮಂಗಲಕರವೂ ಆದ ಗಂಧದಿಂದ ಲೇಪಿಸಲ್ಪಟ್ಟಿರುವುದೂ ರತ್ನದ ಪುಡಿಗಳಿಂದ ಶಚೀದೇವಿಯು ಮಾಡಿದ ಕೈಗಾಣಿಕೆಯುಳ್ಳುದೂ (ಅಲಂಕರಿಸಲ್ಪಟ್ಟಿರುವುದೆಂದು ಭಾವವು) ವಿಶಾಲವಾದ ವಸ್ತ್ರದಿಂದ ಮಾಡಿದ ನಾನಾಪ್ರಕಾರವಾದ ವಸ್ತ್ರದಮಂಟಪಗಳುಳ್ಳುದೂ ಮಂದಮಾರುತದಿಂದ ಚಲಿಸುತ್ತಿರುವ ನಾನಾಪ್ರಕಾರವಾದ ಧ್ವಜಪತಾಕೆಗಳ ಸಾಲುಗಳಿಂದ ವ್ಯಾಪ್ತವಾದ ಆಕಾಶಪ್ರದೇಶವುಳ್ಳುದೂ ಸುತ್ತಲೂ ಮೇಲಕ್ಕೇಳುತ್ತಿರುವ ಧೂಪದ ಹೊಗೆಯಿಂದ ಸುವಾಸನೆಯಾದ ದಿಕ್ಕುಗಳುಳ್ಳುದೂ ಸಮೀಪದಲ್ಲಿರಿಸಲ್ಪಟ್ಟ ಅನೇಕ ಮಂಗಲದ್ರವ್ಯಗಳುಳ್ಳುದೂ ಈ ರೀತಿಯಾಗಿ ಅಪಾರವಾದ ಗುಣಗಳುಳ್ಳುದೂ ಪ್ರಶಸ್ತವಾದ ಮಂದಿರದಲ್ಲಿ ಪ್ರತಿಷ್ಠೆ ಮಾಡಲ್ಪಟ್ಟಿರುವುದೂ ಆದ ಕಲ್ಲಿನ ಪೀಠದಲ್ಲಿ ಸ್ವಾಮಿಯು ದೇವತೆಗಳು ಭೂಮಿಗಿಳಿಸಿದ ಯಾನ(ಪಾಲಕಿ)ದಿಂದ ಅವತರಿಸಿದರು.

೧ ಪಕ್ಷಿಸ್ವನೈಃ. ೨ ಅಪಹಾಸಿನೀತ್ಯಪಿ ಪಾಠಃ. ೩ ಪರಿನಿಷ್ಕ್ರಮಣಸಂಪದಂ.

**ಧೃತಜನ್ಮಾಭಿಷೇಕರ್ದ್ಧಿರ್ಯಾ ಶಿಲಾ ಪಾಂಡುಕಾಹ್ವಯಾ ।**
**ಪಶ್ಯನ್ನೇನಂ ಶಿಲಾಪಟ್ಟಂ ವಿಭುಸ್ತಸ್ಯಾಃ ಸಮಸ್ಮರತ್ ॥ ೧೯೧ ॥**

ಸ್ವಾಮಿಯು ಈ ಕಲ್ಲಿನ ಪೀಠವನ್ನು ನೋಡಿ ಮೊದಲು ಸ್ವಾಮಿಯ ಜನ್ಮಾಭಿಷೇಕವೈಭವವನ್ನು ಧರಿಸಿದ ಪಾಂಡುಕಶಿಲೆಯನ್ನು ಸ್ಮರಿಸಿದರು.

**ತತ್ರ[1]ಕ್ಷಣ[2]ಮಿವಾಸೀನೋ ಯಥಾಸ್ವ[3]ಮನುಶಾಸನೈಃ ।**
**ವಿಭುಃ [4]ಸಭಾಜಯಾಮಾಸ ಸಭಾಂ ಸನ್ನಸುರಾಸುರಾಮ್ ॥ ೧೯೨ ॥**

ಆ ಪೀಠದಲ್ಲಿ ಸ್ವಾಮಿಯು ಒಂದುಕ್ಷಣಕಾಲಪರ್ಯಂತ ಕುಳಿತು ಮನುಷ್ಯರೂ ದೇವತೆಗಳೂ ಅಸುರದೇವತೆಗಳೂ ಉಳ್ಳ ಸಭೆಯನ್ನು ಯಥೋಚಿತವಾಗಿ ಆಜ್ಞಾವಚನಗಳಿಂದ ಸಂತೋಷಪಡಿಸಿದರು.

**ಭೂಯೋಽಪಿ ಭಗವಾನುಚ್ಚೈರ್ಗಿರಾ [5]ಮಂದ್ರ[6]ಗಭೀರಯಾ ।**
**ಆಪಪೃಚ್ಛೇ ಜಗದ್ಬಂಧುರ್ಬಂಧೂನ್ನಿಃಸ್ನೇಹಬಂಧನಃ ॥ ೧೯೩ ॥**

ಜಗತ್ತಿಗೆ ಬಂಧುವೂ ಸ್ನೇಹಬಂಧನವನ್ನು ಕಿತ್ತುಹಾಕಿದವನೂ ಆದ ಭಗವಂತನು ಶಬ್ದದಿಂದಲೂ ಅರ್ಥದಿಂದಲೂ ಗಂಭೀರವಾದ ವಚನದಿಂದ ಪುನಃ ಬಂಧುಗಳನ್ನು ಕೇಳಿಕೊಂಡನು. ದೀಕ್ಷೆಗೆ ಸಮ್ಮತಿಯನ್ನು ಕೇಳಿದನೆಂದು ಭಾವವು.

**ಪ್ರಶಾಂತೇಽಥ ಜನಕ್ಷೋಭೇ ದೂರಂ ಪ್ರೋತ್ಸಾರಿತೇ ಜನೇ ।**
**[7]ಗಂಭೀರಮಂಗಲಾರಂಭೇ ಸುಪ್ರಮುಕ್ತೇ [8]ಪ್ರಗೇತನೇ ॥ ೧೯೪ ॥**

**ಮಧ್ಯೇಯವನಿಕಂ ಸ್ಥಿತ್ವಾ ಸುರೇಂದ್ರೇ ಪರಿಚಾರಿಣಿ ।**
**[9]ಸರ್ವತ್ರ ಸಮತಾಂ ಸಮ್ಯಗ್ಭಾವಯನ್ನುಭಭಾವನಃ ॥ ೧೯೫ ॥**

**ವ್ಯುತ್ಸೃಷ್ಟಾಂತರ್ಬಹಿಃಸಂಗೋ [10]ನೈಸ್ಸಂಗ್ಯೇ [11]ಕೃತಸಂಗರಃ ।**
**ವಸ್ತ್ರಾಭರಣಮಾಲ್ಯಾನಿ ವ್ಯಸೃಜನ್ಮೋಹಹಾನಯೇ ॥ ೧೯೬ ॥**

ತರುವಾಯ ಜನರ ಕ್ಷೋಭೆ(ಗಲಿಬಿಲಿ)ಯು ಶಾಂತವಾಗುತ್ತಿರಲು ಜನರೆಲ್ಲ ದೂರವಾಗಿ ಸರಿಸಲ್ಪಡುತ್ತಿರಲು ಪ್ರಾತಃಕಾಲದಲ್ಲಿ ಗಂಭೀರವಾದ ಮಂಗಲಗೀತದ ಆರಂಭವಾಗುತ್ತಿರಲು ತೆರೆಯ ಮಧ್ಯದಲ್ಲಿದ್ದು ದೇವೇಂದ್ರನು ಸೇವೆಮಾಡುತ್ತಿರಲು ಶತ್ರುಮಿತ್ರ ಮೊದಲಾದವರಲ್ಲಿ ಸಮತಾಭಾವವನ್ನು ಚೆನ್ನಾಗಿ ಭಾವಿಸುವವರೂ ಶುಭಭಾವನೆಯುಳ್ಳವರೂ ಅಂತರಂಗಬಹಿರಂಗಪರಿಗ್ರಹಗಳನ್ನು ಪರಿತ್ಯಜಿಸಿದವರೂ ನಿಷ್ಪರಿಗ್ರಹತ್ವದಲ್ಲಿ ಪ್ರತಿಜ್ಞೆಯನ್ನು ಮಾಡಿದವರೂ ಆದ ಸ್ವಾಮಿಯು ಮೋಹದ ನಾಶಕ್ಕೋಸ್ಕರ ವಸ್ತ್ರಗಳನ್ನೂ ಆಭರಣಗಳನ್ನೂ ಮಾಲಿಕೆಗಳನ್ನೂ ಪರಿತ್ಯಜಿಸಿದರು.

**ತದಂಗವಿರಹಾದ್ವೇಜುರ್ವಿಚ್ಛಾಯತ್ವಂ ತದಾ ಭೃಶಮ್ ।**
**ದೀಪ್ರಾಣ್ಯಾಭರಣಾನಿ ಪ್ರಾಕ್ ಸ್ಥಾನಭ್ರಂಶೇ ಹಿ ಕಾ ದ್ಯುತಿಃ ॥ ೧೯೭ ॥**

ಆಗ ಆಭರಣಗಳು ಮೊದಲು ಪ್ರಕಾಶಮಾನಗಳಾಗಿದ್ದರೂ ಸ್ವಾಮಿಯ ಶರೀರದ ವಿಯೋಗದಿಂದ ಕಾಂತಿರಹಿತಗಳಾದುವು. ನ್ಯಾಯವೇ – ಸ್ಥಾನಭ್ರಷ್ಟವಾದರೆ ಕಾಂತಿಯೆಲ್ಲಿ ಬಂದಿತು ?

**ದಾಸೀದಾಸಗವಾಶ್ವಾದಿ ಯತ್ಕಿಂಚನ ಸಚೇತನಮ್ ।**
**ಮಣಿಮುಕ್ತಾಪ್ರವಾಲಾದಿ ಯಚ್ಚ ದ್ರವ್ಯಮಚೇತನಮ್ ॥ ೧೯೮ ॥**

**ತತ್ಸರ್ವಂ ವಿಭುರತ್ಯಾಕ್ಷೀನ್ನಿರ್ವ್ಯಪೇಕ್ಷಂ [12]ತ್ರಿಸಾಕ್ಷಿಕಮ್ ।**
**ನಿಃಪರಿಗ್ರಹತಾಮುಖ್ಯಾ[13]ಮಾಸ್ಥಾಯ ವ್ರತಭಾವನಾಮ್ ॥ ೧೯೯ ॥**

೧ ಕ್ಷಣಕಾಲಪರ್ಯಂತಂ. ೨ ಪಾದಪೂರಣೇ. ೩ ನಿಯೋಗ್ಯೈಃ. ೪ ಸಂತೋಷಯಾಮಾಸ. ೫ ಶಬ್ದಗಂಭೀರಃ. ೬ ಅರ್ಥಗಂಭೀರಃ. ೭ ಸಂಗೀತಮಂಗಲಾರಂಭ ಇತ್ಯಪಿ ಪಾಠಃ. ೮ ಪ್ರಭಾತಸಮಯೇ. ೯ ಶತ್ರುಮಿತ್ರಾದಿಷು. ೧೦ ನಿಸ್ಸಂಗತ್ವೇ. ೧೧ ಕೃತಪ್ರತಿಜ್ಞಃ. ೧೨ ಆತ್ಮೇಂದ್ರಸಿದ್ಧಸಾಕ್ಷಿಕಂ. ೧೩ ಆಶ್ರಿತ್ಯ.

ಸ್ವಾಮಿಯು ಮುಖ್ಯವಾಗಿ ಪರಿಗ್ರಹ ರಹಿತವಾದ ವ್ರತಭಾವನೆಯನ್ನಾಶ್ರಯಿಸಿ ಅಪೇಕ್ಷೆಯಿಲ್ಲದೆ ಸಮಸ್ತವಾದ ಸೇವಕಿ ಸೇವಕ ಗೋವು ಕುದುರೆ ಮೊದಲಾದ ಸಚೇತನದ್ರವ್ಯವನ್ನೂ ರತ್ನ ಮುತ್ತು ಹವಳ ಮೊದಲಾದ ಅಚೇತನದ್ರವ್ಯವನ್ನೂ ಆತ್ಮ ಇಂದ್ರ ಮತ್ತು ಸಿದ್ಧಪರಮೇಷ್ಠಿಗಳು ಸಾಕ್ಷಿಯಾಗಿ ಪರಿತ್ಯಾಗಮಾಡಿದರು.

**ತತಃ ಪೂರ್ವಮುಖಂ ಸ್ಥಿತ್ವಾ ಕೃತಸಿದ್ಧನಮಸ್ಕ್ರಿಯಃ ।**
**ಕೇಶಾ[೧]ನಲುಂಚದಾಬದ್ಧಪಲ್ಯಂಕಃ ಪಂಚಮುಷ್ಟಿಕಮ್ ॥ ೨೦೦ ॥**

ತರುವಾಯ ಸ್ವಾಮಿಯು ಪಲ್ಯಂಕಾಸನದಲ್ಲಿ ಪೂರ್ವಮುಖವಾಗಿ ಕುಳಿತು ಸಿದ್ಧಪರಮೇಷ್ಠಿಗಳನ್ನು ನಮಸ್ಕರಿಸಿ ಐದುಮುಷ್ಟಿ ತಲೆಯ ಕೂದಲುಗಳನ್ನು ಕಿತ್ತರು.

**ನಿರ್ಲುಚ್ಯ ಬಹು[೨]ಮೋಹಾಗ್ರವಲ್ಲರೀಃ ಕೇಶವಲ್ಲರೀಃ ।**
**ಜಾತರೂಪಧರೋ ಧೀರೋ ಜೈನೀಂ ದೀಕ್ಷಾಮುಪಾದದೇ ॥ ೨೦೧ ॥**

ಜಾತರೂಪ(ದಿಗಂಬರ)ಧಾರಿಯೂ ಧೀರರೂ ಆದ ಸ್ವಾಮಿಯು ಅಧಿಕವಾದ ಮೋಹನೀಯ ಕರ್ಮವೆಂಬ ಲತೆಯ ಅಗ್ರಭಾಗದಂತಿರುವ ಕೂದಲುಗಳೆಂಬ ಲತೆಗಳನ್ನು ಕತ್ತರಿಸಿ ಜಿನದೀಕ್ಷೆಯನ್ನು ತೆಗೆದುಕೊಂಡರು.

**ಕೃತ್ಸ್ನಾದ್ವಿರಮ್ಯ ಸಾವದ್ಯಾಚ್ಛ್ರಿತಃ ಸಾಮಾಯಿಕಂ ಯಮಮ್ ।**
**ವ್ರತಗುಪ್ತಿಸಮಿತ್ಯಾದೀಂಸ್ತದ್ಭೇದಾನಾದದೇ ವಿಭುಃ ॥ ೨೦೨ ॥**

ಸ್ವಾಮಿಯು ಸಮಸ್ತವಾದ ಪಾಪಕಾರ್ಯದಿಂದ ವಿರಾಮವನ್ನು ಹೊಂದಿ ಸಾಮಾಯಿಕವ್ರತವನ್ನಾಶ್ರಯಿಸಿದವರಾಗಿ ವ್ರತ ಸಮಿತಿ ಗುಪ್ತಿ ಮೊದಲಾದ ಆ ವ್ರತಗಳ ಭೇದಗಳನ್ನು ಸ್ವೀಕರಿಸಿದರು.

**ಚೈತ್ರೇ ಮಾಸ್ಯಸಿತೇ ಪಕ್ಷೇ ಸುಮುಹೂರ್ತೇ ಶುಭೋದಯೇ ।**
**ನವಮ್ಯಾಮುತ್ತರಾಷಾಢೇ ಸಾಯಾಹ್ನೇ ಪ್ರಾವ್ರಜ[೩]ತ್ಪ್ರಭುಃ ॥ ೨೦೩ ॥**

ಸ್ವಾಮಿಯು ಚೈತ್ರಮಾಸದ ಕೃಷ್ಣಪಕ್ಷದ ನವಮೀತಿಥಿಯಲ್ಲಿ ಉತ್ತರಾಷಾಢ ನಕ್ಷತ್ರದಲ್ಲಿ ಶುಭ ಮುಹೂರ್ತದಲ್ಲಿ ಶುಭೋದಯದಲ್ಲಿ ಸಾಯಂಕಾಲಸಮಯದಲ್ಲಿ ದೀಕ್ಷೆಯನ್ನು ತೆಗೆದುಕೊಂಡರು.

**ಕೇಶಾನ್ಭಗವತೋ ಮೂರ್ಧ್ನಿ ಚಿರವಾಸಾತ್ಪವಿತ್ರಿತಾನ್ ।**
**[೪]ಪ್ರತ್ಯೈಚ್ಛನ್ಮಘವಾ ರತ್ನಪಟಲ್ಯಾಂ ಪ್ರೀತಮಾನಸಃ ॥ ೨೦೪ ॥**

ಸ್ವಾಮಿಯ ಮಸ್ತಕದಲ್ಲಿ ಬಹು ಕಾಲ ವಾಸಮಾಡಿದುದರಿಂದ ಪವಿತ್ರವಾದ ಆ ಕೂದಲುಗಳನ್ನು ಸಂತುಷ್ಟವಾದ ಮನಸ್ಸುಳ್ಳ ದೇವೇಂದ್ರನು ರತ್ನದ ತಟ್ಟೆಯಲ್ಲಿ ತೆಗೆದುಕೊಂಡನು.

**ಸಿತಾಂಶುಕ[೫]ಪ್ರತಿಚ್ಛನ್ನೇ ಪೃಥೌ ರತ್ನ[೬]ಸಮುದ್ಗಕೇ ।**
**ಸ್ಥಿತಾ ರೇಜುರ್ವಿಭೋಃ ಕೇಶಾ ಯಥೇಂದೋರ್ಲಕ್ಷ್ಮಲೇಶಕಾಃ ॥ ೨೦೫ ॥**

ಬಿಳಿಯ ವಸ್ತ್ರದಿಂದ ಹೊದಿಸಲ್ಪಟ್ಟ ದಪ್ಪವಾದ ರತ್ನದ ಕರಡಿಗೆಯಲ್ಲಿ ಸ್ವಾಮಿಯ ಕೂದಲುಗಳು ಚಂದ್ರನಲ್ಲಿರುವ ಕಪ್ಪು ಚಿಹ್ನೆಯ ಅಂಶಗಳಂತೆ ಶೋಭಿಸಿದುವು.

**ವಿಭೂತ್ತಮಾಂಗಸಂಸ್ಪರ್ಶಾದಿಮೇ ಮೂರ್ಧನ್ಯತಾಮಿತಾಃ ।**
**ಸ್ಥಾಪ್ಯಾಃ ಸಮುಚಿತೇ ದೇಶೇ ಕಸ್ಮಿಂಶ್ಚಿದನುಪದ್ರುತೇ ॥ ೨೦೬ ॥**

ಸ್ವಾಮಿಯ ಮಸ್ತಕದ ಸ್ಪರ್ಶದಿಂದ ಶ್ರೇಷ್ಠತ್ವವನ್ನು ಹೊಂದಿದ ಈ ಕೂದಲುಗಳನ್ನು ಉಪದ್ರವರಹಿತವಾದ ಯಾವುದಾದರೂ ಉಚಿತಪ್ರದೇಶದಲ್ಲಿ ಸ್ಥಾಪಿಸಬೇಕು.

೧ ಲುಂಚ ಅಪನಯನೇ. ೨ ಮೋಹನೀಯಾಗ್ರವಲ್ಲರೀಸದೃಶಾಃ. ೩ ವಿಭುರಿತ್ಯಪಿ ಪಾಠಃ. ೪ ಆದದೇ. ೫ ಆಚ್ಛಾದಿತೇ. ೬ ಸಂಪುಟಕೇ.

**ಪಂಚಮಸ್ಯಾರ್ಣವಸ್ಯಾತಿಪವಿತ್ರಸ್ಯ ನಿಸರ್ಗತಃ ।**
**ನೀತ್ವೋಪಾಯನತಾಮೇತೇ ಸ್ಥಾಪ್ಯಾಸ್ತಸ್ಯ ಶುಚೌ ಜಲೇ ॥ ೨೦೭ ॥**

ಸ್ವಭಾವದಿಂದ ಅತ್ಯಂತ ಪವಿತ್ರವಾದ ಐದನೆಯ ಸಮುದ್ರ(ಕ್ಷೀರ ಸಮುದ್ರ)ಕ್ಕೆ ಕೈಗಾಣಿಕೆಯಾಗಿ ತೆಗೆದುಕೊಂಡು ಹೋಗಿ ಆ ಸಮುದ್ರದ ಸ್ವಚ್ಛವಾದ ನೀರಿನಲ್ಲಿ ಈ ಕೂದಲುಗಳನ್ನು ಸ್ಥಾಪಿಸಬೇಕು.

**ಧನ್ಯಾಃ ಕೇಶಾ ಜಗದ್ಭರ್ತುರ್ಯೇ[೧]ಧಿಮೂರ್ಧಮಧಿಷ್ಠಿತಾಃ ।**
**ಧನ್ಯೋಽಸೌ ಕ್ಷೀರಸಿಂಧುಶ್ಚ ಯಸ್ತಾನಾಪ್ಸ್ಯತ್ಯುಪಾಯನಮ್ ॥ ೨೦೮ ॥**

ಲೋಕೋದ್ಧಾರಕರಾದ ಸ್ವಾಮಿಯ ಮಸ್ತಕದಲ್ಲಿರುವ ಕೂದಲುಗಳೂ ಧನ್ಯವಾದುವು. ಆ ಕೂದಲುಗಳನ್ನು ಕೈಗಾಣಿಕೆಯಾಗಿ ಹೊಂದುವ ಈ ಕ್ಷೀರಸಮುದ್ರವೂ ಧನ್ಯವಾದುದು.''

**ಇತ್ಯಾಕಲಯ್ಯ [೨]ನಾಕೇಶಾಃ ಕೇಶಾನಾದಾಯ ಸಾದರಮ್ ।**
**ವಿಭೂತ್ಯಾ ಪರಯಾ ನೀತ್ವಾ ಕ್ಷೀರೋದೇ ತಾ[೩]ನ್ವಿಚಿಕ್ಷಿಪುಃ ॥ ೨೦೯ ॥**

ಈ ರೀತಿಯಾಗಿ ದೇವೇಂದ್ರರು ಯೋಚಿಸಿ ಪ್ರೀತಿಪೂರ್ವಕವಾಗಿ ಆ ಕೂದಲುಗಳನ್ನು ಬಹಳ ವೈಭವದಿಂದ ತೆಗೆದುಕೊಂಡುಹೋಗಿ ಕ್ಷೀರಸಮುದ್ರದಲ್ಲಿ ಚೆಲ್ಲಿದರು.

**ಮಹತಾಂ ಸಂಶ್ರಯಾನ್ನೂನಂ ಯಾಂತೀಜ್ಯಾಂ ಮಲಿನಾ ಅಪಿ ।**
**ಮಲಿನೈರಪಿ ಯತ್ಕೇಶೈಃ ಪೂಜಾವಾಪ್ತಾ ಶ್ರಿತೈರ್ಗುರುಮ್ ॥ ೨೧೦ ॥**

ಸ್ವಾಮಿಯನ್ನಾಶ್ರಯಿಸಿದ ಕೂದಲುಗಳು ಮಲಿನಗಳಾಗಿದ್ದರೂ ಸತ್ಕಾರವನ್ನು ಹೊಂದಿದುದರಿಂದ ನಿಶ್ಚಯವಾಗಿಯೂ ಮಹಾತ್ಮರ ಆಶ್ರಯದಿಂದ ಮಲಿನರೂ (ದೋಷಿಗಳೂ) ಪೂಜ್ಯತ್ವವನ್ನು ಹೊಂದುತ್ತಾರೆ.

**ವಸ್ತ್ರಾಭರಣಮಾಲ್ಯಾನಿ ಯಾನ್ಯುನ್ಮುಕ್ತಾನ್ಯಧೀಶಿನಾ ।**
**ತಾನ್ಯಪ್ಯನನ್ಯಸಾಮಾನ್ಯಾಂ ನಿನ್ಯುರತ್ಯುನ್ನತಿಂ ಸುರಾಃ ॥ ೨೧೧ ॥**

ಸ್ವಾಮಿಯು ಪರಿತ್ಯಜಿಸಿದ ವಸ್ತ್ರಗಳನ್ನೂ ಆಭರಣಗಳನ್ನೂ ಮಾಲಿಕೆಗಳನ್ನೂ ಪಡೆದ ದೇವತೆಗಳು ಬೇರೆಯವರಿಗೆ ಸಾಮಾನ್ಯವಲ್ಲದಿರುವ ಉನ್ನತಿ(ಮಾನ)ಯನ್ನು ಗಳಿಸಿದರು.

**ಚತುಃಸಹಸ್ರಗಣನಾ ನೃಪಾಃ ಪ್ರಾವ್ರಾಜಿಷುಸ್ತದಾ ।**
**ಗುರೋರ್ಮತಮಜಾನಾನಾಃ ಸ್ವಾಮಿಭಕ್ತ್ಯೈವ[೪]ಚೋದಿತಾಃ ॥ ೨೧೨ ॥**

ಆಗ ಸ್ವಾಮಿಭಕ್ತಿಯಿಂದ ಮಾತ್ರ ಪ್ರೇರಿತರಾದ ನಾಲ್ಕುಸಾವಿರರಾಜರು ಸ್ವಾಮಿಯ ಅಭಿಪ್ರಾಯವನ್ನು ತಿಳಿಯದವರಾಗಿ ದೀಕ್ಷೆಯನ್ನು ತೆಗೆದುಕೊಂಡರು.

**ಯದಸ್ಮೈ ರುಚಿತಂ ಭರ್ತ್ರೇ ತದಸ್ಮಭ್ಯಂ ವಿಶೇಷತಃ ।**
**ಇತಿ ಪ್ರಸನ್ನದೀಕ್ಷಾಸ್ತೇ ಕೇವಲಂ ದ್ರವ್ಯಲಿಂಗಿನಃ ॥ ೨೧೩ ॥**

''ಈ ಸ್ವಾಮಿಗೆ ಇಷ್ಟವಾದುದು ನಮಗೆ ವಿಶೇಷವಾಗಿ ಇಷ್ಟವಾಗಿದೆ'' ಎಂದು ಸಂತೋಷದಿಂದ ಆ ರಾಜರು ದೀಕ್ಷೆಯನ್ನು ಪಡೆದು ಕೇವಲ ದ್ರವ್ಯಲಿಂಗಿಗಳಾಗಿದ್ದರು. ಬಾಹ್ಯಚಿಹ್ನೆಯಿಂದ ಮಾತ್ರ ಮುನಿಗಳಾಗಿದ್ದರು. ಪರಿಣಾಮದಿಂದಲ್ಲವೆಂದರ್ಥವು.

**[೫]ಛಂದಾನುವರ್ತನಂ ಭರ್ತುರ್ಭೃತ್ಯಾಚಾರಃ ಕಿಲೇತ್ಯಮೀ ।**
**ಭೇಜುಃ [೬]ಸಮೌಂಡ್ಯಂ ನೈರ್ಗ್ರಂಥ್ಯಂ ದ್ರವ್ಯತೋ ನ ತು ಭಾವತಃ ॥**

ಸ್ವಾಮಿಯ ಇಚ್ಛೆಯನ್ನನುಸರಿಸುವುದು ಭೃತ್ಯರ ಧರ್ಮವೆಂದು ಈ ರಾಜರು ಶರೀರವನ್ನು ಮುಂಡನಮಾಡಿಕೊಳ್ಳುವ ನಿರ್ಗ್ರಂಥತ್ವವನ್ನು ಹೊಂದಿದರು. ಭಾವ

೧ ಮೂರ್ಧ್ನಿ. ೨ ನಾಕೀಶಾ ಇತ್ಯಪಿ ಪಾಠಃ. ೩ ನಿಚಿಕ್ಷಿಪುರಿತ್ಯಪಿ ಪಾಠಃ. ೪ ಕೇವಲಮಿತ್ಯಪಿ ಪಾಠಃ. ೫ ಇಚ್ಛಾನುವರ್ತನಂ. ೬ ಸಮೌಢ್ಯಮಿತ್ಯಪಿ ಪಾಠಃ.

ದಿಂದ ನಿರ್ಗ್ರಂಥತ್ವವನ್ನು ಹೊಂದಲಿಲ್ಲ. ಪರಿಣಾಮಶುದ್ಧಿಯಿಲ್ಲದೆ ಬಾಹ್ಯಚಿಹ್ನೆಯನ್ನು ಧರಿಸಿದವನಿಗೆ ದ್ರವ್ಯಲಿಂಗಿಯೆಂದು ಹೆಸರು.

**ಗರೀಯಸೀಂ ಗುರೌ ಭಕ್ತಿಮುಚ್ಚೈರಾವಿಶ್ಚಿಕೀರ್ಷವಃ ।**
**ತದ್ವೃತ್ತಿಂ ಬಿಭರಾಮಾಸುಃ ಪಾರ್ಥಿವಾಸ್ತೇ [೧]ಮಹಾನ್ವಯಾಃ ॥ ೨೧೫ ॥**

ಸ್ವಾಮಿಯಲ್ಲಿ ತಮಗಿರುವ ಅಧಿಕವಾದ ಭಕ್ತಿಯನ್ನು ಪ್ರಕಟಪಡಿಸಬೇಕೆಂದಿಚ್ಛಿಸಿದ ದೊಡ್ಡ ಕುಲದವರಾದ ಆ ರಾಜರು ಮುನಿವೃತ್ತಿಯನ್ನು ಧರಿಸಿದರು.

**ಗುರುಃ ಪ್ರಮಾಣಮಸ್ಮಾಕಮಾತ್ರಿಕಾಮುತ್ರಿಕಾರ್ಥಯೋಃ ।**
**ಇತಿ ಕಚ್ಛಾದಯೋ ದೀಕ್ಷಾಂ ಭೇಜಿರೇ ನೃಪ[೨]ಸತ್ತಮಾಃ ॥ ೨೧೬ ॥**

''ನಮಗೆ ಇಹಲೋಕದ ಪ್ರಯೋಜನದಲ್ಲಿಯೂ ಪರಲೋಕದ ಪ್ರಯೋಜನದಲ್ಲಿಯೂ ಸ್ವಾಮಿಯೇ ಪ್ರಮಾಣವು'' ಎಂದು ಕಚ್ಛಮೊದಲಾದ ರಾಜಶ್ರೇಷ್ಠರು ದೀಕ್ಷೆಯನ್ನು ಪಡೆದರು.

**ಸ್ನೇಹಾತ್ಕೇಚಿತ್ಪರೇ ಮೋಹಾದ್ಭಯಾತ್ಕೇಚನ ಪಾರ್ಥಿವಾಃ ।**
**[೩]ತಪಸ್ಯಾಂ [೪]ಸಂಗಿರಂತೇ ಸ್ಮ ಪುರೋಧಾಯಾದಿವೇಧಸಮ್ ॥ ೨೧೭ ॥**

ಆ ನಾಲ್ಕುಸಾವಿರರಾಜರಲ್ಲಿ ಕೆಲವು ರಾಜರು ಸ್ವಾಮಿಯ ಸ್ನೇಹದಿಂದಲೂ ಕೆಲವರು ಅಜ್ಞಾನದಿಂದಲೂ ಕೆಲವರು ಭಯದಿಂದಲೂ ಆದಿಬ್ರಹ್ಮರನ್ನು ಮುಂದೆ ಮಾಡಿಕೊಂಡು ತಪಸ್ಸನ್ನು ಪ್ರತಿಜ್ಞೆಮಾಡಿದರು. ಸ್ವಾಮಿಯು ತಪಸ್ಸುಮಾಡುವುದನ್ನು ನೋಡಿ ತಾವೂ ತಪಸ್ಸುಮಾಡುವುದಕ್ಕೆ ಪ್ರತಿಜ್ಞೆಯನ್ನು ಮಾಡಿದರೆಂದು ಭಾವವು.

**ಸ ತೈಃ ಪರಿವೃತೋ ರೇಜೇ ವಿಭುರವ್ಯಕ್ತಸಂಯತೈಃ ।**
**ಕಲ್ಪಾಂಘ್ರಿಪ ಇವೋದಗ್ರಃ ಪರಿತೋ ಬಾಲಪಾದಪೈಃ ॥ ೨೧೮ ॥**

ಆ ಸ್ವಾಮಿಯು ಅಸ್ಫುಟವಾದ ಸಂಯಮ(ಚಾರಿತ್ರ)ವುಳ್ಳ ಆ ರಾಜರಿಂದ ಸುತ್ತಲ್ಪಟ್ಟವರಾಗಿ, ಸುತ್ತಲೂ ಸಣ್ಣವೃಕ್ಷಗಳಿಂದ ಸುತ್ತಲ್ಪಟ್ಟ ಉನ್ನತವಾದ ಕಲ್ಪವೃಕ್ಷದಂತೆ, ಪ್ರಕಾಶಿಸಿದರು.

**ಸ್ವಭಾವಭಾಸ್ವರಂ ತೇಜಸ್ತಪೋದೀಪ್ತ್ಯೋಪಬೃಂಹಿತಮ್ ।**
**ದಧಾನಃ ಶಾರದೋ [೫]ವಾರ್ಕೋ ದಿದೀಪೇತಿತರಾಂ ವಿಭುಃ ॥ ೨೧೯ ॥**

ತಪಸ್ಸಿನ ಪ್ರಭಾವದಿಂದ ವೃದ್ಧಿಹೊಂದುತ್ತಿರುವ ಮತ್ತು ಸ್ವಭಾವದಿಂದ ಪ್ರಕಾಶಮಾನವಾದ ತೇಜಸ್ಸನ್ನು ಧರಿಸಿದ ಸ್ವಾಮಿಯು ಶರತ್ಕಾಲದ ಸೂರ್ಯನಂತೆ ಅಧಿಕವಾಗಿ ಪ್ರಕಾಶಿಸಿದರು.

**[೬]ಜಾತರೂಪಮಿವೋದಾರಕಾಂತಿ ಕಾಂತತರಂ ಬಭೌ ।**
**ಜಾತರೂಪಂ ಪ್ರಭೋರ್ದೀಪ್ತಂ ಯಥಾರ್ಚಿ[೭]ರ್ಜಾತವೇದಸಃ ॥ ೨೨೦ ॥**

ಬಂಗಾರದಂತೆ ಅಧಿಕವಾದ ಕಾಂತಿಯುಳ್ಳದೂ ಅತ್ಯಂತ ಮನೋಹರವೂ ಪ್ರಕಾಶಮಾನವೂ ಆದ ಸ್ವಾಮಿಯ ನಗ್ನರೂಪವು ಬೆಂಕಿಯ ಜ್ವಾಲೆಯಂತೆ ಪ್ರಕಾಶಿಸಿತು.

**ತತಃ ಸ ಭಗವಾನಾದಿದೇವೋ ದೇವೈಃ ಕೃತಾರ್ಚನಃ ।**
**ದೀಕ್ಷಾವಲ್ಲ್ಯಾ ಪರಿಷ್ವಕ್ತಃ ಕಲ್ಪಾಂಘ್ರಿಪ ಇವಾಬಭೌ ॥ ೨೨೧ ॥**

ತರುವಾಯ ದೇವತೆಗಳಿಂದ ಪೂಜಿಸಲ್ಪಟ್ಟ ಭಗವಂತನಾದ ಆದೀಶ್ವರಸ್ವಾಮಿಯು ದೀಕ್ಷೆಯೆಂಬ ಲತೆಯಿಂದ ಸುತ್ತಲ್ಪಟ್ಟವರಾಗಿ ಕಲ್ಪವೃಕ್ಷದಂತೆ ಪ್ರಕಾಶಿಸಿದರು.

೧ ಸಮಾನಕುಲಾಃ, ಸಮನ್ವಯಾ ಇತ್ಯಪಿ ಪಾಠಃ. ೨ ಶ್ರೇಷ್ಠಾಃ. ೩ ತಪಃ. ೪ ಪ್ರತಿಜ್ಞಾಂ ಕುರ್ವಂತಿ ಸ್ಮ. ೫ ಇವ. ೬ ಸ್ವರ್ಣಮಿವ. ೭ ಅಗ್ನೇಃ.

**ತದಾ ಭಗವತೋ ರೂಪ[೧]ಮುಪರೂಪಂ ವಿಭಾಸ್ವರಮ್ ।**
**ಪಶ್ಯನ್ನೇತ್ರಸಹಸ್ರೇಣ [೨]ನಾಪತ್ತೃಪ್ತಿಂ ಸಹಸ್ರದೃಕ್ ॥ ೨೨೨ ॥**

ಆಗ ಉಪಮಾತೀತವೂ ಪ್ರಕಾಶಮಾನವೂ ಆದ ಸ್ವಾಮಿಯ ರೂಪವನ್ನು ದೇವೇಂದ್ರನು ಸಾವಿರಕಣ್ಣುಗಳಿಂದ ನೋಡಿ ತೃಪ್ತಿಯನ್ನು ಹೊಂದಲಿಲ್ಲವು.

**ತತಸ್ತ್ರಿಜಗದೀಶಾನಂ ಪರಂಜ್ಯೋತಿರ್ಗಿರಾಂಪತಿಮ್ ।**
**ತುಷ್ಟಾಸ್ತುಷ್ಟುವುರಿತ್ಯುಚ್ಚೈಃ [೩]ಸ್ವಃಪ್ರಷ್ಠಾಃ ಪರಮೇಷ್ಠಿನಮ್ ॥ ೨೨೩ ॥**

ತರುವಾಯ ತ್ರಿಲೋಕಾಧಿಪತಿಯೂ ಪರಂಜ್ಯೋತಿಯೂ ವಾಚಸ್ಪತಿಯೂ ಆದ ಪರಮೇಷ್ಠಿ(ವೃಷಭಸ್ವಾಮಿ)ಯನ್ನು ಸ್ವರ್ಗದಲ್ಲಿ ಶ್ರೇಷ್ಠರಾದ ದೇವೇಂದ್ರರು ಸಂತುಷ್ಟರಾಗಿ ಮುಂದೆಹೇಳುವರೀತಿಯಾಗಿ ಸ್ತೋತ್ರಮಾಡಿದರು.

**ಜಗತ್ಸ್ರಷ್ಟಾರಮೀಶಾನಮಭೀಷ್ಟಫಲದಾಯಿನಮ್ ।**
**ತ್ವಾಮನಿಷ್ಟವಿಘಾತಾಯ [೪]ಸಮಭಿಷ್ಟುಮಹೇ ವಯಮ್ ॥ ೨೨೪ ॥**

''ನಾವು ಜಗತ್ತನ್ನು ಸೃಷ್ಟಿಸುವವನೂ ಪ್ರಭುವೂ ಇಷ್ಟವಾದ ಫಲವನ್ನು ಕೊಡುವವನೂ ಆದ ನಿನ್ನನ್ನು ಅನಿಷ್ಟವಿನಾಶಕ್ಕೋಸ್ಕರ ಸ್ತೋತ್ರಮಾಡುತ್ತೇವೆ.

**ಗುಣಾಸ್ತೇ ಗಣನಾತೀತಾಃ ಸ್ತೂಯಂತೇಸ್ಮದ್ವಿಧೈಃ ಕಥಮ್ ।**
**ಭಕ್ತ್ಯಾ ತಥಾಪಿ [೫]ತದ್ವ್ಯಾಜಾ[೬]ತ್ತನ್ಮಃ [೭]ಪ್ರೋನ್ನತಿ[೮]ಮಾತ್ಮನಃ ॥ ೨೨೫ ॥**

ಅಸಂಖ್ಯಾತವಾದ ನಿನ್ನ ಗುಣಗಳನ್ನು ನಮ್ಮಂತಹವರು ಹೇಗೆ ಸ್ತೋತ್ರಮಾಡಬಲ್ಲರು ? ಹಾಗಿದ್ದರೂ ಭಕ್ತಿಯಿಂದ ಸ್ತೋತ್ರಮಾಡುವ ನೆಪದಿಂದ ನಿನ್ನ ಮಹತ್ತ್ವವನ್ನು ವಿಸ್ತರಿಸುತ್ತೇವೆ.

**[೯]ಬಹಿರಂತರ್ಮಲಾಪಾಯಾತ್ಸ್ಫುರಂತೀಶ ಗುಣಾಸ್ತವ ।**
**[೧೦]ಘನೋಪರೋಧನಿರ್ಮುಕ್ತಮೂರ್ತೇರಿವ ರವೇಃ ಕರಾಃ ॥ ೨೨೬ ॥**

ಎಲೈ ಸ್ವಾಮಿಯೇ ! ದ್ರವ್ಯಕರ್ಮಭಾವಕರ್ಮಗಳ ನಾಶದಿಂದ ನಿನ್ನ ಗುಣಗಳು, ಮೇಘದ ಆವರಣವಿಲ್ಲದಿರುವ ಸೂರ್ಯನ ಕಿರಣಗಳಂತೆ, ಪ್ರಕಾಶಿಸುತ್ತವೆ.

**ತ್ರಿಲೋಕಪಾವನೀಂ ಪುಣ್ಯಾಂ ಜೈನೀಂ [೧೧]ಶ್ರುತಿಮಿವಾಮಲಾಮ್ ।**
**ಪ್ರವ್ರಜ್ಯಾಂ ದಧತೇ ತುಭ್ಯಂ ನಮಃ[೧೨]ಸಾರ್ವಾಯ ಶಂಭವೇ ॥ ೨೨೭ ॥**

ಮೂರುಲೋಕವನ್ನು ಪವಿತ್ರಮಾಡುವ ಪುಣ್ಯಕರವಾದ ಜಿನಾಗಮದಂತಿರುವವನೂ ನಿರ್ಮಲವಾದ ದೀಕ್ಷೆಯನ್ನು ಧರಿಸಿದವನೂ ಸಮಸ್ತಪ್ರಾಣಿಗಳಿಗೂ ಹಿತೋಪದೇಶವನ್ನು ಮಾಡುವವನೂ ಸುಖಕ್ಕೆ ಉತ್ಪತ್ತಿಸ್ಥಾನನೂ ಆದ ನಿನಗೆ ನಮಸ್ಕಾರ.

**[೧೩]ವಿಧ್ಯಾಪಿತಜಗತ್ತಾಪಾ ಜಗತಾಮೇಕಪಾವನೀ ।**
**ಸ್ವರ್ಧುನೀವ ಪುನೀಯಾನ್ನೋ ದೀಕ್ಷೇಯಂ ಪಾರಮೇಶ್ವರೀ ॥ ೨೨೮ ॥**

ಜಗತ್ತಿನ ಸಂತಾಪವನ್ನು ನಾಶಮಾಡುವುದೂ ಲೋಕಕ್ಕೆ ಮುಖ್ಯವಾಗಿ ಪವಿತ್ರಕರವೂ ಪರಮೇಶ್ವರಸಂಬಂಧಿಯೂ ಆದ ಈ ದೀಕ್ಷೆಯು ಗಂಗಾನದಿಯಂತೆ ನಮ್ಮನ್ನು ಪವಿತ್ರಮಾಡಲಿ.

**[೧೪]ಸುವರ್ಣಾ [೧೫]ರುಚಿರಾ [೧೬]ಹೃದ್ಯಾ ರತ್ನೈರ್ದೀಪ್ರೈರಲಂಕೃತಾ ।**
**[೧೭]ರೈಧಾರೇವಾ[೧೮]ಭಿನಿಷ್ಕ್ರಾಂತಿಯರ್ಾಷ್ಮಾಕೀಯಂ [೧೯]ಧಿನೋತಿ ನಃ ॥**

ಕ್ಷತ್ರಿಯಮೊದಲಾದ ವರ್ಣಗಳುಳ್ಳದೂ ಉತ್ತಮವಾದ ಕಾಂತಿಯುಳ್ಳದೂ ನೇತ್ರಾನಂದಕರವೂ ಮನೋಹರವೂ ದೇದೀಪ್ಯಮಾನವಾದ ರತ್ನಗಳಿಂದ ಅಲಂ

೧ ಅಸದೃಶಂ. ೨ ನಾಪತ್ತೃಪ್ತಿಮಿತ್ಯಪಿ ಪಾಠಃ. ೩ ಸ್ವರ್ಗಶ್ರೇಷ್ಠಾಃ. ೪ ಸ್ತೋತ್ರಂ ಕುರ್ಮಹೇ. ೫ ಸ್ತುತಿವ್ಯಾಜಾತ್. ೬ ವಿಸ್ತಾರಯಾಮಃ. ೭ ಮಹತ್ತ್ವಂ. ೮ ತವ. ೯ ದ್ರವ್ಯಭಾವಕರ್ಮಮಲಸ್ಯ. ೧೦ ಮೇಘಸ್ಯ. ೧೧ ಆಗಮಂ. ೧೨ ಸರ್ವಪ್ರಾಣಿಹಿತೋಪದೇಶಕಾಯ. ೧೩ ನಿರ್ವಾಪಿತಜಗತ್ತಾಪಾ. ೧೪ ಕ್ಷತ್ರಿಯಾದಿವರ್ಣಾ, ಶೋಭನಕಾಂತಿಮತೀ ಚ. ೧೫ ನೇತ್ರಹಾರಿಣೀ. ೧೬ ಮನೋಹಾರಿಣೀ. ೧೭ ರತ್ನವೃಷ್ಟಿಃ. ೧೮ ಪರಿನಿಷ್ಕ್ರಮಣಂ. ೧೯ ಪ್ರೀಣಾತಿ.

ಕೃತವೂ ಆದ ಈ ನಿಮ್ಮ ಪರಿನಿಷ್ಕ್ರಮಣ(ದೀಕ್ಷೆ)ವು ರತ್ನವೃಷ್ಟಿಯಂತೆ ನಮ್ಮನ್ನು ಸಂತೋಷಪಡಿಸುತ್ತದೆ.

**[೧]ಮುಕ್ತ್ಯಾ[೨]ವುತ್ತಿಷ್ಠಮಾನಸ್ತ್ವಂ ತತ್ಕಾಲೋ[೩]ಪನತೈಃ[೪]ಪಿತೈಃ ।**
**ಪ್ರಬುದ್ಧಃ ಪರಿಣಾಮೈಃ ಪ್ರಾಕ್ಪಶ್ಚಾಲ್ಲೌಕಾಂತಿಕಾಮರೈಃ ॥ ೨೩೦ ॥**

ಮುಕ್ತಿಗೋಸ್ಕರ ಉದ್ಯೋಗವನ್ನು ಮಾಡುತ್ತಿರುವ ನೀನು ಆ ಕಾಲದಲ್ಲಿ ಪ್ರಾಪ್ತವಾದ ಶುದ್ಧಪರಿಣಾಮಗಳಿಂದ ಮೊದಲು ತಿಳುವಳಿಕೆಯನ್ನು ಹೊಂದಿದವನಾಗಿ ಪುನಃ ಲೌಕಾಂತಿಕದೇವತೆಗಳಿಂದ ಬೋಧಿಸಲ್ಪಟ್ಟೆ.

**ಪರಿನಿಷ್ಕ್ರಮಣೇ ಯೋಽಯಮಭಿಪ್ರಾಯೋ ಜಗತ್ಸೃಜಃ ।**
**ಸ ತೇ ಯತಃ ಸ್ವತೋ ಜಾತಃ ಸ್ವಯಂಬುದ್ಧೋಽಸ್ಯತೋ ಮುನೇ ॥**

ಎಲೈ ಮುನಿಯೇ ! ಜಗತ್ಕರ್ತನಾದ ನಿನಗೆ ದೀಕ್ಷೆಯಲ್ಲಿ ಸ್ವತಃ ಅಭಿಪ್ರಾಯವುಂಟಾದುದರಿಂದ ನೀನು ಸ್ವಯಂಬುದ್ಧನಾಗಿರುತ್ತಿ.

**ರಾಜ್ಯಲಕ್ಷ್ಮೀಮಸಂಭೋಗ್ಯಾ[೫]ಮಾಕಲಯ್ಯ ಚಲಾಮಿಮಾಮ್ ।**
**ಕ್ಲೇಶ[೬]ಹಾನಾಯ ನಿರ್ವಾಣದೀಕ್ಷಾಂ ತ್ವಂ ಪ್ರತ್ಯಪದ್ಯಥಾಃ ॥ ೨೩೨ ॥**

ನೀನು ಚಂಚಲವಾದ ಈ ರಾಜ್ಯಸಂಪತ್ತು ಭೋಗಿಸುವುದಕ್ಕೆ ಯೋಗ್ಯವಾದುದಲ್ಲವೆಂದು ನಿಶ್ಚಯಿಸಿ ದುಃಖದ ನಾಶಕ್ಕೋಸ್ಕರ ನಿರ್ವಾಣದೀಕ್ಷೆಯನ್ನು ಹೊಂದಿದೆ.

**ಸ್ನೇಹಾಲಾನಕಮುನ್ಮೂಲ್ಯ ವಿಶತೋದ್ಯ ವನಂ ತವ ।**
**ನ ಕಶ್ಚಿತ್ಪ್ರತಿರೋಧೋಽಭೂನ್ಮದಾಂಧಸ್ಯೇವ ದಂತಿನಃ ॥ ೨೩೩ ॥**

ಸ್ನೇಹವೆಂಬ ಬಂಧನಸ್ತಂಭವನ್ನು ಬುಡಸಹಿತವಾಗಿ ಕಿತ್ತು ಈಗ ವನವನ್ನು ಪ್ರವೇಶಮಾಡುತ್ತಿರುವ ನಿನಗೆ ಮದಾಂಧವಾದ ಆನೆಯೋಪಾದಿಯಲ್ಲಿ, ಯಾವ ತಡೆಯೂ ಆಗಲಿಲ್ಲ.

**ಸ್ವಪ್ನಸಂಭೋಗ[೭]ನಿರ್ಭಾಸಾ ಭೋಗಾಃ ಸಂಪತ್ತ್ವಣಶ್ವರೀ ।**
**ಜೀವಿತಂ ಚಲಮಿ[೮]ತ್ಯಾಧಾಸ್ತ್ವಂ ಮನಃ ಶಾಶ್ವತೇ ಪಥಿ ॥ ೨೩೪ ॥**

ಭೋಗಗಳು ಸ್ವಪ್ನದ ಭೋಗಕ್ಕೆ ಸಮಾನವಾದುವು. ಸಂಪತ್ತು ನಾಶಶೀಲವಾದುದು. ಜೀವಮಾನವು ಚಂಚಲವಾದುದು. ಹೀಗೆಂದು ನೀನು ಶಾಶ್ವತವಾದ ಮಾರ್ಗದಲ್ಲಿ ಮನಸ್ಸನ್ನು ಮಾಡಿದೆ.

**[೯]ಅವಧೂಯ ಚಲಾಂ ಲಕ್ಷ್ಮೀಂ [೧೦]ನಿರ್ಧೂಯ ಸ್ನೇಹಬಂಧನಮ್ ।**
**ಧನಂ ರಜ ಇವೋ[೧೧]ದ್ಧೂಯ ಮುಕ್ತ್ಯಾ [೧೨]ಸಂಗಂಸ್ಯತೇ ಭವಾನ್ ॥**

ಚಂಚಲವಾದ ಲಕ್ಷ್ಮಿಯನ್ನು ತಿರಸ್ಕರಿಸಿ, ಸ್ನೇಹವೆಂಬ ಬಂಧನವನ್ನು ಕತ್ತರಿಸಿ ಧೂಳಿನಂತೆ ದ್ರವ್ಯವನ್ನು ಚೆಲ್ಲಿ, ನೀನು ಮೋಕ್ಷಲಕ್ಷ್ಮಿಯೊಡನೆ ಸೇರುವೆ.

**ರಾಜ್ಯಲಕ್ಷ್ಮ್ಯಾಃ ಪರಿಮ್ಲಾನಿಂ ಮುಕ್ತಿಲಕ್ಷ್ಮ್ಯಾಃ ಪರಾಂ ಮುದಮ್ ।**
**[೧೩]ಪ್ರವ್ಯಂಜಯಂಸ್ತಪೋಲಕ್ಷ್ಮ್ಯಾ[೧೪]ಮಾ[೧೫]ಸಜಸ್ತ್ವಂ ವಿನಾ [೧೬]ರತೇಃ ॥**

ನೀನು ರಾಜ್ಯಲಕ್ಷ್ಮಿಗೆ ಶೋಕವನ್ನೂ ಮುಕ್ತಿಲಕ್ಷ್ಮಿಗೆ ಪರಮಸಂತೋಷವನ್ನೂ ಪ್ರಕಟಪಡಿಸುವವನಾಗಿ ಅನುರಾಗವಿಲ್ಲದೆ ತಪೋಲಕ್ಷ್ಮಿಯೊಡನೆ ಆಸಕ್ತನಾದೆ.

**ರಾಜ್ಯಶ್ರಿಯಾಂ ವಿರಕ್ತೋಽಸಿ ಸಂರಕ್ತೋಽಸಿ ತಪಃಶ್ರಿಯಾಮ್ ।**
**ಮುಕ್ತಿಶ್ರಿಯಾಂ ಚ ಸೋತ್ಕಂಠೋ ಗತೈ[೧೭]ವಂ ತೇ ವಿರಾಗತಾ ॥ ೨೩೭ ॥**

೧ ಮೋಕ್ಷಾರ್ಥಂ. ೨ ಉದ್ಯೋಗಂ ಕುರ್ವಾಣಃ. ೩ ಉಪಾಗತೈಃ. ೪ ಶುದ್ಧೈಃ. ೫ ನಿಶ್ಚಿತ್ಯ. ೬ ನಾಶಾಯ. ೭ ಸಮಾನಾಃ. ೮ ಕರೋಷಿ ಸ್ಮ. ೯ ತಿರಸ್ಕೃತ್ಯ. ೧೦ ವಿಚ್ಛೇದ್ಯ. ೧೧ ವಿಕ್ಷಿಪ್ಯ. ೧೨ ಘಟಿಷ್ಯಸೇ. ೧೩ ಪ್ರವ್ಯಕ್ತೀಕುರ್ವನ್. ೧೪ ಸಹ. ೧೫ ಆಸಕ್ತೋ ಭೂಃ. ೧೬ ರಾಗಾತ್. ೧೭ ಸತಿ.

ನೀನು ರಾಜ್ಯಲಕ್ಷ್ಮಿಯಲ್ಲಿ ವಿರಕ್ತನಾಗಿರುತ್ತಿ. ತಪೋಲಕ್ಷ್ಮಿಯಲ್ಲಿ ಪ್ರೀತಿಯುಳ್ಳವನಾಗಿರುತ್ತಿ. ಮೋಕ್ಷಲಕ್ಷ್ಮಿಯಲ್ಲಿ ಕುತೂಹಲವುಳ್ಳವನಾಗಿರುತ್ತಿ. ಹೀಗಿರುತ್ತಿರಲು ನಿನ್ನ ವೀತರಾಗತ್ವವು ನಷ್ಟವಾಯಿತು.

**ಜ್ಞಾತ್ವಾ ಹೇಯಮುಪೇಯಂ ಚ ಹಿತ್ವಾ ಹೇಯಮಿವಾಖಿಲಮ್ ।**
**ಉಪಾದೇಯಮುಪಾದಿತ್ಸೋಃ ಕಥಂ ತೇ ಸಮದರ್ಶಿತಾ ॥ ೨೩೮ ॥**

ತ್ಯಜಿಸುವುದಕ್ಕೆ ಯೋಗ್ಯವಾದ ಪದಾರ್ಥವನ್ನೂ ಪರಿಗ್ರಹಿಸುವುದಕ್ಕೆ ಯೋಗ್ಯವಾದ ಪದಾರ್ಥವನ್ನೂ ತಿಳಿದು ತ್ಯಜಿಸುವುದಕ್ಕೆ ಯೋಗ್ಯವಾದ ಪದಾರ್ಥವನ್ನೆಲ್ಲ ಬಿಟ್ಟು ಪರಿಗ್ರಹಿಸುವುದಕ್ಕೆ ಯೋಗ್ಯವಾದ ಪದಾರ್ಥವನ್ನು ಸ್ವೀಕರಿಸಬೇಕೆಂದಿಚ್ಛಿಸುವ ನಿನಗೆ ಎಲ್ಲಾ ವಸ್ತುಗಳಲ್ಲಿಯೂ ಸಮಾನದೃಷ್ಟಿಯೆಂಬುದು ಹೇಗೆ ?

**ಪರಾಧೀನಂ ಸುಖಂ ಹಿತ್ವಾ ಸುಖಂ ಸ್ವಾಧೀನ[೧]ಮೀಪ್ಸತಃ ।**
**ತ್ಯಕ್ತ್ವಾಲ್ಪಾಂ ವಿಪುಲಾಂ ಚರ್ದ್ಧಿಂ ವಾಂಛತೋ ವಿರತಿಃ ಕ್ವ ತೇ ॥ ೨೩೯ ॥**

ಪರಾಧೀನವಾದ ಸುಖವನ್ನು ಬಿಟ್ಟು ಸ್ವಾಧೀನ(ಆತ್ಮಾಧೀನ)ವಾದ ಸುಖವನ್ನಿಚ್ಛಿಸುವ ಮತ್ತು ಅಲ್ಪಸಂಪತ್ತನ್ನು ಬಿಟ್ಟು ಅಧಿಕಸಂಪತ್ತನ್ನಿಚ್ಛಿಸುವ ನಿನಗೆ ವ್ರತವೆಂಬುದೆಲ್ಲಿ ?

**ಆಮನಂತ್ಯಾತ್ಮವಿಜ್ಞಾನಂ ಯೋಗಿನಾಂ [೨]ಹೃದಯಂ ಪರಮ್ ।**
**ಕೀದೃಕ್ತವಾತ್ಮವಿಜ್ಞಾನಮಾತ್ಮವತ್ಪಶ್ಯತಃ ಪರಾನ್ ॥ ೨೪೦ ॥**

ಯೋಗಿಗಳಿಗೆ ಆತ್ಮಜ್ಞಾನವು ಪರಮರಹಸ್ಯವಾದ ಧರ್ಮವೆಂದು ಜ್ಞಾನಿಗಳು ಹೇಳುತ್ತಾರೆ. ಆದರೆ ಬೇರೆಯವರನ್ನು ತನ್ನಂತೆ ಕಾಣುವ ನಿನಗೆ ಆತ್ಮವಿಜ್ಞಾನವು ಎಂತಹದು ?

**ತಥಾ [೩]ಪರಿಚರಂತ್ಯೇತೇ [೪]ಯಥಾಪೂರ್ವಂ ಸುರಾಸುರಾಃ ।**
**ತ್ವಾಮುಪಾಸ್ತೇ ಚ ಗೂಢಂ ಶ್ರೀಃ ಕುತಸ್ತ್ಯಸ್ತೇ [೫]ತಪಃಸ್ಮಯಃ ॥ ೨೪೧ ॥**

ಹಾಗೆಯೇ ಈ ದೇವತೆಗಳೂ ಅಸುರಕುಮಾರರೂ ಮೊದಲಿನಂತೆ ನಿನ್ನ ಸೇವೆಯನ್ನು ಮಾಡುತ್ತಾರೆ. ಲಕ್ಷ್ಮಿ(ಶೋಭೆ)ಯೂ ಗುಪ್ತವಾಗಿ ನಿನ್ನ ಸೇವೆ ಮಾಡುತ್ತಾಳೆ. ನಿನಗೆ ತಪಸ್ಸಿನ ಅಹಂಕಾರವೆಲ್ಲಿಯದು ?

**ನೈಸ್ಸಂಗೀ[೬]ಮಾಸ್ಥಿತ[೭]ಶ್ಚರ್ಯಾಂ [೮]ಸುಖಾನುಶಯಮ[೯]ಪ್ಯಹನ್ ।**
**ಸುಖೀತಿ ಕೃತಿಭಿರ್ದೇವ ತ್ವಂ ತಥಾಪ್ಯಭಿಲಪ್ಯಸೇ ॥ ೨೪೨ ॥**

ಎಲೈ ದೇವನೇ ! ನೀನು ಪರಿಗ್ರಹರಹಿತವಾದ ಚಾರಿತ್ರವನ್ನಾಶ್ರಯಿಸಿ ಸುಖದ ಸಂಬಂಧವನ್ನು ನಾಶಮಾಡಿದರೂ ನೀನು ಸುಖವುಳ್ಳವನೆಂದು ಜ್ಞಾನಿಗಳು ಹೇಳುತ್ತಾರೆ.

**[೧೦]ಜ್ಞಾನಶಕ್ತಿತ್ರಯೀಮೂಢ್ವಾ [೧೧]ಬಿಭಿತ್ಸೋಃ [೧೨]ಕರ್ಮಸಾಧನಮ್ ।**
**ಜಿಗೀಷುವೃತ್ತಮದ್ಯಾಪಿ ತಪೋರಾಜ್ಯೇ ತವಾಸ್ಪದಃ ॥ ೨೪೩ ॥**

ಮತಿಶ್ರುತಾವಧಿಜ್ಞಾನತ್ರಯದ ಶಕ್ತಿಯನ್ನೂ ಪ್ರಭುಮಂತ್ರೋತ್ಸಾಹಶಕ್ತಿತ್ರಯವನ್ನೂ ಧರಿಸಿ ಜ್ಞಾನಾವರಣಮೊದಲಾದ ಕರ್ಮಸೇನೆಯನ್ನೂ ಶತ್ರುಸೇನೆಯನ್ನೂ ನಾಶಮಾಡಲಿಚ್ಛಿಸುವ ನಿನ್ನಲ್ಲಿ ಈಗಲೂ ತಪಸ್ಸೆಂಬ ರಾಜ್ಯದಲ್ಲಿಯೂ ಈ ಜಯಿಸಲಿಚ್ಛಿಸುವವನ ವ್ಯಾಪಾರವು ಇದೆ.

**ಮೋಹಾಂಧತಮ[೧೩]ಸಧ್ವಂಸೇ [೧೪]ಬೋಧಿತಾಂ ಜ್ಞಾನದೀಪಿಕಾಮ್ ।**
**ತ್ವ[೧೫]ಮಾದಾಯ [೧೬]ಚರೋ ನೈವ ಕ್ಲೇಶಾಪಾತೇವಸೀದಸಿ ॥ ೨೪೪ ॥**

೧ ವಾಂಛತಃ. ೨ ರಹಸ್ಯಂ, ಸ್ವರೂಪಂಚ. ೩ ಉಪಾಸತೇ. ೪ ರಾಜ್ಯಕಾಲೇ. ೫ ತಪೋಹಂಕಾರಃ. ೬ ಆಶ್ರಿತಃ. ೭ ಚಾರಿತ್ರಂ. ೮ ಸುಖಾನುಬಂಧಂ. ೯ ಹಂಸಿ ಸ್ಮ. ೧೦ ಮತಿಶ್ರುತಾವಧಿಜ್ಞಾನ ಶಕ್ತಿತ್ರಯಂ, ಪ್ರಭುಮಂತ್ರೋತ್ಸಾಹಶಕ್ತಿತ್ರಯಂ ಚ. ೧೧ ಭೇತ್ತುಮಿಚ್ಛೋಃ. ೧೨ ಜ್ಞಾನಾವರಣಾದಿಕರ್ಮಸೇನಾಂ, ಅರಿಸೇನಾಂ ಚ. ೧೩ ವಿನಾಶಾರ್ಥಂ. ೧೪ ಜ್ವಾಲಿತಾಂ. ೧೫ ಸ್ವೀಕೃತ್ಯ. ೧೬ ಗಚ್ಛನ್.

ಅಜ್ಞಾನವೆಂಬ ಕತ್ತಲೆಯನ್ನು ನಾಶಮಾಡುವುದಕ್ಕೋಸ್ಕರ ಉರಿಸಿದ ಜ್ಞಾನವೆಂಬ ದೀಪವನ್ನು ತೆಗೆದುಕೊಂಡು ಹೋಗುತ್ತಿರುವ ನೀನು ದುಃಖವೆಂಬ ಹೊಂಡದಲ್ಲಿ ಖೇದಪಡುವುದೇ ಇಲ್ಲ.

[೧]ಭಟ್ಟಾರಕ [೨]ಬರೀಭೃಷ್ಟಿಃ ಕರ್ಮಣೋಷ್ಪತಯಸ್ಯ ಯಾ ।
ತಾಂ ಪ್ರತಿ ಪ್ರಜ್ವಲತ್ಯೇಷಾ ತ್ವದ್ಧ್ಯಾನಾಗ್ನಿಶಿಖೋ[೩]ಚ್ಛಿಖಾ ॥ ೨೫೫ ॥

ಪೂಜ್ಯನೇ ! ಜ್ಞಾನಾವರಣ ಮೊದಲಾದ ಎಂಟುಕರ್ಮದ ಪರಿಪಾಕಕ್ಕೋಸ್ಕರ ಮೇಲು ಮುಖವಾದ ಈ ನಿನ್ನ ಧ್ಯಾನವೆಂಬ ಅಗ್ನಿಯ ಜ್ವಾಲೆಯು ಪ್ರಜ್ವಲಿಸುತ್ತಿದೆ.

ದೃಷ್ಟತತ್ತ್ವ [೪]ವರೀವೃಷ್ಟಿಃ ಕರ್ಮಾಷ್ಟಕವನಸ್ಯ ಯಾ ।
ತತ್ರೋತ್ಕ್ಷಿಪ್ತಾ ಕುಠಾರೀಯಂ ರತ್ನತ್ರಯಮಯೀ ತ್ವಯಾ ॥ ೨೫೬ ॥

ತತ್ತ್ವಜ್ಞಾನಿಯೇ !ಜ್ಞಾನಾವರಣಮೊದಲಾದ ಎಂಟು ಕರ್ಮಗಳೆಂಬ ವನವನ್ನು ಸಂಪೂರ್ಣವಾಗಿ ಕತ್ತರಿಸುವುದಕ್ಕೋಸ್ಕರ ಈ ಸಮ್ಯಗ್ದರ್ಶನಜ್ಞಾನಚಾರಿತ್ರಮಯವಾದ ಕೊಡಲಿಯು ನಿನ್ನಿಂದ ಎಸೆಯಲ್ಪಟ್ಟಿತು.

ಜ್ಞಾನವೈರಾಗ್ಯಸಂಪತ್ತಿಸ್ತವೈಷಾನನ್ಯಗೋಚರಾ ।
ವಿಮುಕ್ತಿಸಾಧನಾಯಾಲಂ ಭಕ್ತಾನಾಂ ಚ ಭವಚ್ಛಿದೇ ॥ ೨೫೭ ॥

ಬೇರೆಯವರಲ್ಲಿಲ್ಲದಿರುವ ಈ ನಿನ್ನ ಜ್ಞಾನವೈರಾಗ್ಯಸಂಪತ್ತು ಮುಕ್ತಿಯನ್ನು ಸಾಧಿಸುವುದಕ್ಕೂ ಭಕ್ತರ ಭವವನ್ನು ನಾಶಮಾಡುವುದಕ್ಕೂ ಸಾಕಾಗಿದೆ.

ಇತಿ ಸ್ವಾರ್ಥಂ ಪರಾರ್ಥಂ ಚ ಬೋಧಸಂಪದಮೂರ್ಜಿತಾಮ್ ।
ದಧತೇಪಿ ನಮಸ್ತುಭ್ಯಂ ವಿರಾಗಾಯ ಗರೀಯಸೇ ॥ ೨೫೮ ॥

ಈ ರೀತಿಯಾಗಿ ತನ್ನ ಪ್ರಯೋಜನಕ್ಕೂ ಪರಪ್ರಯೋಜನಕ್ಕೂ ಉತ್ತಮವಾದ ಜ್ಞಾನಸಂಪತ್ತನ್ನು ಧರಿಸಿದವನೂ ವೀತರಾಗನೂ ಮಹಾತ್ಮನೂ ಆದ ನಿನಗೆ ನಮಸ್ಕಾರವು."

ಇತ್ಯಭಿಷ್ಟುತ್ಯ ನಾಕೀಂದ್ರಾಃ ಪ್ರತಿಜಗ್ಮುಃ ಸ್ವಮಾಸ್ಪದಮ್ ।
ತದ್ಗುಣಾನುಸ್ಮೃತಿಂ ಪೂತಾಮಾದಾಯ ಸ್ವೇನ ಚೇತಸಾ ॥ ೨೫೯ ॥

ಈ ಪ್ರಕಾರವಾಗಿ ದೇವೇಂದ್ರರು ಸ್ತೋತ್ರಮಾಡಿ ತಮ್ಮ ಮನಸ್ಸಿನಿಂದ ಆ ಸ್ವಾಮಿಯ ಪವಿತ್ರವಾದ ಗುಣಗಳನ್ನು ಸ್ಮರಿಸಿ ತಮ್ಮ ಸ್ಥಾನಕ್ಕೆ ಹೊರಟುಹೋದರು.

ತತೋ ಭರತರಾಜೋಪಿ ಗುರುಂ ಭಕ್ತಿಭರಾನತಃ ।
ಪೂಜಯಾಮಾಸ ಲಕ್ಷ್ಮೀವಾನುಚ್ಚಾವಚವಚಃಸ್ರಜಾ ॥ ೨೬೦ ॥

ತರುವಾಯ ಶ್ರೀಮಂತನೂ ಭಕ್ತಿಯ ಭಾರದಿಂದ ನಮ್ರನೂ ಆದ ಭರತರಾಜನೂ ನಾನಾಪ್ರಕಾರವಾದ ವಚನಗಳೆಂಬ ಪುಷ್ಪಮಾಲಿಕೆಯಿಂದ ಸ್ವಾಮಿಯನ್ನು ಪೂಜಿಸಿದನು.

ಅಥ ಭರತನರೇಂದ್ರೋ ರುಂದ್ರಭಕ್ತ್ಯಾ ಮುನೀಂದ್ರಂ
ಸಮುಧಿಗತಸಮಾಧಿಂ ಸಾವಧಾನಂ ಸ್ವಸಾಧ್ಯೇ ।
ಸುರಭಿಸಲಿಲಧಾರಾಗಂಧಪುಷ್ಪಾಕ್ಷತಾರ್ಘ್ಯೈ
ರಯಜತ ಜಿತಮೋಹಂ ಸಪ್ರದೀಪೈಶ್ಚ ಧೂಪೈಃ ॥ ೨೬೧ ॥

ತರುವಾಯ ಭರತರಾಜನು ಧ್ಯಾನಾರೂಢರೂ ಆತ್ಮಸ್ವರೂಪವನ್ನು ಸಾಧಿಸುವುದರಲ್ಲಿ ಸಾವಧಾನರೂ ಮೋಹವನ್ನು ಜಯಿಸಿದವರೂ ಆದ ಮುನೀಂದ್ರ(ಸ್ವಾಮಿ)ರನ್ನು ಅಧಿಕವಾದ ಭಕ್ತಿಯಿಂದ ಪರಿಮಳವಾದ ಜಲಧಾರೆಯಿಂದಲೂ ಗಂಧದಿಂದಲೂ ಪುಷ್ಪಗಳಿಂದಲೂ ಅಕ್ಷತೆಗಳಿಂದಲೂ ದೀಪಗಳಿಂದಲೂ ಧೂಪಗಳಿಂದಲೂ ಪೂಜಿಸಿದನು.

[೧]ಪರಿಣತಫಲಭೇದೈರಾಮ್ರಜಂಬೂಕಪಿತ್ಥೈಃ
ಪನಸಲಕುಚ[೨]ಮೋಚೈರ್ದಾಡಿಮೈರ್ಮಾತುಲುಂಗೈಃ ।
ಕ್ರಮುಕರುಚಿರಗುಚ್ಛೈರ್ನಾಲಿಕೇರೈಶ್ಚ ರಮ್ಯೈಃ
ಗುರುಚರಣ[೩]ಸಪರ್ಯಾಮಾತನೋದಾತತಶ್ರೀಃ ॥ ೨೬೨ ॥

ಅಪಾರವಾದ ಸಂಪತ್ತುಳ್ಳ ಭರತರಾಜನು ಪಕ್ವಫಲಗಳಾದ ಮಾವಿನ ಹಣ್ಣು ನೇರಳೆಯ ಹಣ್ಣು ಬೇಲದ ಹಣ್ಣು ಹಲಸಿನ ಹಣ್ಣು ನಿಂಬೆಯ ಹಣ್ಣು ದಾಳಿಂಬದ ಹಣ್ಣು ಮಾದಲಹಣ್ಣು ಇವುಗಳಿಂದಲೂ ಮನೋಹರವಾದ ಅಡಿಕೆಯ ಗೊಂಚಲುಗಳಿಂದಲೂ ರಮಣೀಯವಾದ ತೆಂಗಿನ ಫಲಗಳಿಂದಲೂ ಸ್ವಾಮಿಯ ಪಾದಪೂಜೆಯನ್ನು ಮಾಡಿದನು.

ಕೃತಚರಣಸಪರ್ಯೋ ಭಕ್ತಿನಮ್ರೇಣ ಮೂರ್ಧ್ನಾ
ಧರಣಿನಿಹಿತಜಾನುಃ ಪ್ರೋದ್ಗತಾನಂದಬಾಷ್ಪಃ ।
ಪ್ರಣತಿ[೪]ಮತನುತೋಚ್ಚೈರ್ಮೌಲಿಮಾಣಿಕ್ಯರಶ್ಮಿ-
ಪ್ರವಿಮಲಸಲಿಲೌಘೈಃ ಕ್ಷಾಲಯನ್ಪತ್ಸರೋಜಾಂ ॥ ೨೬೩ ॥

ಪಾದಪೂಜೆಯನ್ನು ಮಾಡಿ ಭರತರಾಜನು ಉಕ್ಕಿಬರುತ್ತಿರುವ ಆನಂದಾಶ್ರುವುಳ್ಳವನಾಗಿ ಭೂಮಿಯಲ್ಲಿ ಮೊಣಕಾಲುಗಳನ್ನಿಟ್ಟು ಉನ್ನತವಾದ ಕಿರೀಟದಲ್ಲಿರುವ ಮಾಣಿಕ್ಯರತ್ನದ ಕಿರಣಗಳೆಂಬ ನಿರ್ಮಲವಾದ ಜಲಪ್ರವಾಹಗಳಿಂದ ಸ್ವಾಮಿಯ ಪಾದಗಳನ್ನು ತೊಳೆಯುತ್ತ ಭಕ್ತಿಯಿಂದ ನಮ್ರವಾದ ಮಸ್ತಕದಿಂದ ನಮಸ್ಕಾರವನ್ನು ಮಾಡಿದನು.

ಸ್ತುತಿಭಿರನುಗತಾರ್ಥಾಲಂಕ್ರಿಯಾಶ್ಲಾಘನೀಭಿಃ
ಪ್ರಕಟಿತಗುರುಭಕ್ತಿಃ ಕಲ್ಮಷಧ್ವಂಸಿನೀಭಿಃ ।
ಸಮಮುಮವನಿಪಪುತ್ರೈಃ ಸ್ವಾನುಜನ್ಮಾ[೫]ನುಯಾತೋ
ಭರತಪತಿರುದಾರಶ್ರೀರಯೋಧ್ಯೋನ್ಮುಖೋಭೂತ್ ॥ ೨೬೪ ॥

ರಾಜಪುತ್ರರಿಂದಲೂ ತನ್ನ ತಮ್ಮಂದಿರಿಂದಲೂ ಹಿಂಬಾಲಿಸಲ್ಪಟ್ಟವನೂ ಅಪಾರವಾದ ಸಂಪತ್ತುಳ್ಳವನೂ ಆದ ಭರತರಾಜನು ಯೋಗ್ಯವಾದ ಅರ್ಥ ಮತ್ತು ಅಲಂಕಾರಗಳಿಂದ ಶ್ಲಾಘ್ಯವೂ ಪಾಪನಾಶಕವೂ ಆದ ಸ್ತುತಿಗಳಿಂದ ಸ್ವಾಮಿಯಲ್ಲಿ ತನಗಿರುವ ಭಕ್ತಿಯನ್ನು ಪ್ರಕಟಪಡಿಸಿ ಅಯೋಧ್ಯೆಗೆ ಅಭಿಮುಖನಾದನು. ಅಯೋಧ್ಯೆಗೆ ಹೊರಟನೆಂದು ಭಾವವು.

ಅಥ[೬]ಸರಸಿಜಬಂಧೌ ಮಂದಮಂದಾಯಮಾನೈಃ
ಪರಿಮೃಶತಿ ಕರಾಗ್ರೈಃ ಪಶ್ಚಿಮಾಶಾಂಗನಾಸ್ಯಮ್ ।
[೭]ಧುವತಿ ಮರುತಿ ಮಂದಂ ಪ್ರೋಲ್ಲಸತ್ಕೇತುಮಾಲಾಂ
ಪ್ರಭುರವಿಶದಲಂಘ್ಯಾಂ ಸ್ವಾಮಿವಾಜ್ಞಾಮಯೋಧ್ಯಾಮ್ ॥ ೨೬೫ ॥

ತರುವಾಯ ಸೂರ್ಯನು ಅತ್ಯಂತ ಮಂದವಾಗುತ್ತಿರುವ ಕಿರಣಗಳೆಂಬ ಕೈಗಳಿಂದ ಪಶ್ಚಿಮದಿಕ್ಕೆಂಬ ಸ್ತ್ರೀಯ ಮುಖವನ್ನು ಸ್ಪರ್ಶಿಸುತ್ತಿರಲು ಮಂದಮಾರುತವು ಪ್ರಕಾಶಮಾನವಾದ ಧ್ವಜಪತಾಕೆಗಳನ್ನು ಕೊಡಹುತ್ತಿರಲು, ಭರತರಾಜನು, ತನ್ನ ಆಜ್ಞೆಯಂತೆ, ಮೀರಲಶಕ್ಯವಾದ ಅಯೋಧ್ಯೆಯನ್ನು ಪ್ರವೇಶಿಸಿದನು.

ತತ್ರಸ್ಥೋ [೮]ಗುರುಮಾದರಾತ್ಪರಿಚರ[೯]ನ್ಪೂರಾದುದಾರೋದಯಃ
ಕುರ್ವನ್ಸರ್ವಜನೋಪಕಾರಕರಣೀಂ ವೃತ್ತಿಂ ಸ್ವರಾಜ್ಯಸ್ಥಿತೌ ।
ತನ್ವಾನಃ ಪ್ರಮದಂ ಸನಾಭಿಷು [೧೦]ಗುರೂನ್ಸಂಭಾವಯನ್ಸಾದರಂ
ಭಾವೀಚಕ್ರಧರೋ ಧರಾಂ ಚಿರ[೧೧]ಮಪಾದೇಕಾತಪತ್ರಾಂಕಿತಾಮ್ ॥

ಮುಂದೆ ಚಕ್ರವರ್ತಿಯಾಗುವ ಮಹಾಭಾಗ್ಯಶಾಲಿಯಾದ ಭರತರಾಜನು ಅಯೋಧ್ಯೆಯಲ್ಲಿದ್ದು ಅತಿಶಯವಾದ ಪ್ರೀತಿಯಿಂದ ಪರಮೇಶ್ವರನನ್ನು ಪೂಜಿಸುವವನೂ ತನ್ನ ರಾಜ್ಯಸ್ಥಿತಿಯಲ್ಲಿ ಸಕಲಜನರಿಗೂ ಉಪಕಾರವಾಗುವ ಕಾರ್ಯವನ್ನು

೧ ಪೂಜ್ಯ. ೨ ಅತಿಪಾಕಃ. ೩ ಉದ್ಗತಾಗ್ರಾ. ೪ ಅತಿಶಯೇನ ಛೇದನಂ.

೧ ಪಕ್ವಾನಿ. ೨ ಕದಳೀಫಲೈಃ. ೩ ಪೂಜಾಂ. ೪ ಕರೋತಿ ಸ್ಮ. ೫ ಅನುಗತಃ. ೬ ರವೌ. ೭ ವಾತಿಸತಿ. ೮ ಪರಮೇಶ್ವರಂ. ೯ ಅತಿಶಯಾತ್. ೧೦ ನಾಭಿರಾಜಾದೀನ್. ೧೧ ಪಾಲಯತಿ ಸ್ಮ.

ಮಾಡುವವನೂ ಬಂಧುಗಳಿಗೆ ಆನಂದವನ್ನುಂಟುಮಾಡುವವನೂ ನಾಭಿರಾಜ ಮೊದಲಾದವರನ್ನು ಪ್ರೀತಿಯಿಂದ ಸತ್ಕರಿಸುವವನೂ ಆಗಿ ಬಹುಕಾಲದ ವರೆಗೆ ಏಕಚ್ಛತ್ರಾಧಿಪತ್ಯದಿಂದ ಭೂಮಿಯನ್ನಾಳಿದನು.

**ಇತ್ಥಂ ನಿಷ್ಕ್ರಮಣೇ ಗುರೋಃ ಸಮುಚಿತಂ ಕೃತ್ವಾ ಸಪರ್ಯಾವಿಧಿಂ**
**[1]ಪ್ರತ್ಯಾವೃತ್ಯ ಪುರೀಂ ನಿಜಾಮನುಗತೋ ರಾಜಾಧಿರಾಜೋನುಜೈಃ ।**
**ಪ್ರಾತಃ ಪ್ರಾತರನೂತ್ಥಿತೋ ನೃಪಗಣೈರ್ಭಕ್ತ್ಯಾ ಗುರೋಃ [2]ಸಂಸ್ಮರನ್**
**ದಿಕ್ಚಕ್ರಂ ವಿಧುತಾರಿಚಕ್ರಮಭುನಕ್ಪೂರ್ವಂ ಯಥಾಸೌ ಜಿನಃ ॥ ೨೫೭ ॥**

ಈರೀತಿಯಾಗಿ ರಾಜಾಧಿರಾಜನಾದ ಭರತನು ಸ್ವಾಮಿಯ ದೀಕ್ಷಾಕಲ್ಯಾಣದಲ್ಲಿ ಉಚಿತವಾದ ಪೂಜಾವಿಧಿಯನ್ನು ಮಾಡಿಕೊಂಡು ತಮ್ಮಂದಿರೊಡನೆ ತನ್ನ ಪಟ್ಟಣಕ್ಕೆ ಬಂದು ಪ್ರತಿದಿವಸವೂ ಪ್ರಾತಃಕಾಲದಲ್ಲಿಯೆದ್ದು ರಾಜರುಗಳ ಸಮೂಹ ಸಮೇತನಾಗಿ ಭಕ್ತಿಯಿಂದ ಸ್ವಾಮಿಯನ್ನು ಧ್ಯಾನಿಸಿ, ನಾಶಮಾಡಲ್ಪಟ್ಟ ಶತ್ರು ಸಮೂಹವುಳ್ಳ ದಿಙ್ಮಂಡಲವನ್ನು, ಮೊದಲು ಈ ವೃಷಭಜಿನೇಶ್ವರರು ಅನುಭವಿಸಿದಂತೆ, ಅನುಭವಿಸಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವತ್ಪರಿನಿಷ್ಕ್ರಮಣವರ್ಣನಂ ನಾಮ ಸಪ್ತದಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭಗವಂತನ ಪರಿನಿಷ್ಕ್ರಮಣವರ್ಣನೆಯೆಂಬ
ಹದಿನೇಳನೆಯ ಪರ್ವವು ಸಮಾಪ್ತವಾದುದು.

---

೧ ಪ್ರತ್ಯಾಗತ್ಯ. ೨ ಗುರುಂ ಧ್ಯಾಯನ್.

॥ ಶ್ರೀ ವೃಷಭಜಿನಾಯ ನಮಃ ॥

# ಅಥಾಷ್ಟಾದಶಂ ಪರ್ವ

**ಅಥ [೧]ಕಾಯಂ ಸಮುತ್ಸೃಜ್ಯ ತಪೋಯೋಗೇ ಸಮಾಹಿತಃ ।**
**[೨]ವಾಚಂ ಯಮತ್ವಮಾಸ್ಥಾಯ ತಸ್ಥೌ ವಿಶ್ವೇಡ್ವಿಮುಕ್ತಯೇ ॥ ೧ ॥**

ಅನಂತರದಲ್ಲಿ ಕಾಯೋತ್ಸರ್ಗದಿಂದಿದ್ದು ತಪೋಯೋಗದಲ್ಲಿ ದತ್ತಚಿತ್ತರಾದ ಸ್ವಾಮಿಯು ಮುಕ್ತಿಗೋಸ್ಕರ ಮೌನವನ್ನಾಶ್ರಯಿಸಿದ್ದರು.

**ಷಣ್ಮಾಸಾನಶನಂ ಧೀರಃ [೩]ಪ್ರತಿಜ್ಞಾಯ [೪]ಮಹಾಧೃತಿಃ ।**
**[೫]ಯೋಗೈಕಾಗ್ರ್ಯನಿರುದ್ಧಾಂತರ್ಬಹಿಷ್ಕರಣವಿಕ್ರಿಯಃ ॥ ೨ ॥**

ಧ್ಯಾನದ ಏಕಾಗ್ರತೆಯಿಂದ ದ್ರವ್ಯೇಂದ್ರಿಯಭಾವೇಂದ್ರಿಯ ವ್ಯಾಪಾರಗಳನ್ನು ತಡೆದವರೂ ಮಹಾಸಂತೋಷವುಳ್ಳವರೂ ಧೈರ್ಯಶಾಲಿಗಳೂ ಆದ ಸ್ವಾಮಿಯು ಆರುತಿಂಗಳ ವರೆಗೆ ಉಪವಾಸವನ್ನು ಕೈಗೊಂಡರು.

**[೬]ವಿತಸ್ತ್ಯಂತರಪಾದಾಗ್ರಂ ತ[೭]ತ್ತ್ರ್ಯಂಶಾಂತರಪಾರ್ಷ್ಣಿಕಮ್ ।**
**ಸಮಮೃಜ್ವಾಗತಂ ಸ್ಥಾನ[೮]ಮಾಸ್ಥಾಯ ರಚಿತಸ್ಥಿತಿಃ ॥ ೩ ॥**

ಸಮಾನವೂ ಸರಳವೂ ಆದ ಸ್ಥಾನವನ್ನು ಹೊಂದಿ, ಹನ್ನೆರಡು ಅಂಗುಲ ದೂರದಲ್ಲಿ ಪಾದಗಳ ತುದಿಯಿರುವಂತೆಯೂ ನಾಲ್ಕು ಅಂಗುಲ ದೂರದಲ್ಲಿ ಪಾದಗಳ ಹಿಂಭಾಗವಿರುವಂತೆಯೂ ನಿಂತರು.

**ಕಠಿನೇಽಪಿ ಶಿಲಾಪಟ್ಟೇ ನ್ಯಸ್ತಪಾದಪಯೋರುಹಃ ।**
**[೯]ಲಕ್ಷ್ಮ್ಯೋ[೧೦]ಪಢೌಕಿತಂ ಗೂಢಮಾಸ್ಥಿತಃ ಪದ್ಮವಿಷ್ಟರಮ್ ॥ ೪ ॥**

ಒರಟಾದ ಕಲ್ಲಿನ ಪೀಠದಲ್ಲಿ ತಮ್ಮ ಪಾದಕಮಲಗಳನ್ನಿರಿಸಿದ ಸ್ವಾಮಿಯು ಶ್ರೀದೇವಿಯು ಗುಪ್ತವಾಗಿ ತಂದಿಟ್ಟ ಕಮಲಪೀಠದಲ್ಲಿ ವಿರಾಜಮಾನರಾದರು.

**ಕಮಪ್ಯಂತರ್ಗತಂ ಜಲ್ಪನ್ನವ್ಯಕ್ತಾಕ್ಷರ[೧೧]ಮಕ್ಷರಃ ।**
**ನಿಗೂಢನಿರ್ಝರಾರಾವಗುಂಜದ್ಗುಹ ಇವಾಚಲಃ ॥ ೫ ॥**

ಒಳಭಾಗದಲ್ಲಿರುವ ಗಿರಿನದಿಯ ಶಬ್ದದಂತೆ ಧ್ವನಿಮಾಡುತ್ತಿರುವ ಗುಹೆಯುಳ್ಳ ಪರ್ವತದಂತಿರುವವರೂ ನಿತ್ಯರೂ ಆದ ಸ್ವಾಮಿಯು ಅಸ್ಫುಟವಾದ ಅಕ್ಷರಗಳುಳ್ಳ ಯಾವುದನ್ನೋ ಹೃದಯದೊಳಗೆ ಹೇಳುತ್ತಿದ್ದರು.

**ಸುಪ್ರಸನ್ನೋಜ್ಜ್ವಲಾಂ ಮೂರ್ತಿಂ ಪ್ರಲಂಬಿತಭುಜದ್ವಯಾಮ್ ।**
**ಶಮಸ್ಯೇವ ಪರಾಂ ಮೂರ್ತಿಂ ದಧಾನೋ ಧ್ಯಾನಸಿದ್ಧಯೇ ॥ ೬ ॥**

ಧ್ಯಾನದ ಸಿದ್ಧಿಗೋಸ್ಕರ ಶಾಂತಿಯ ಉತ್ಕೃಷ್ಟವಾದ ಆಕಾರವನ್ನು ಧರಿಸಿದ್ದಾರೋ ಎಂಬಂತೆ, ಪ್ರಸನ್ನವೂ ದೇದೀಪ್ಯಮಾನವೂ ಜೋಲುತ್ತಿರುವ ಎರಡು ಭುಜಗಳುಳ್ಳುದೂ ಆದ ಶರೀರಾಕೃತಿಯನ್ನು ಧರಿಸಿದ್ದರು.

**ಶಿರಃ [೧೨]ಶಿರೋರುಹಾಪಾಯಾತ್ಸುವ್ಯಕ್ತ[೧೩]ಪರಿಮಂಡಲಮ್ ।**
**[೧೪]ರೋಚಿಷ್ಣು[೧೫]ಷ್ಣೀಷಮುಷ್ಣಾಂಶುಮಂಡಲಸ್ಪರ್ಧಿ ಧಾರಯನ್ ॥ ೭ ॥**

ಕೂದಲುಗಳಿಲ್ಲದಿರುವುದರಿಂದ ಚೆನ್ನಾಗಿ ದುಂಡಾಗಿಯೂ ಪ್ರಕಾಶಮಾನವೂ ಬ್ರಹ್ಮದ್ವಾರದಲ್ಲಿರುವ ಗಂಟುಳ್ಳುದೂ ಸೂರ್ಯಮಂಡಲದೊಡನೆ ಸ್ಪರ್ಧೆ ಮಾಡುವುದೂ ಆದ ಮಸ್ತಕವನ್ನು ಧರಿಸಿದ್ದರು.

೧ ಕಾಯೋತ್ಸರ್ಗೇಣ ಸ್ಥಿತ್ವಾ. ೨ ಮೌನಿತ್ವಂ. ೩ ಆಶ್ರಿತ್ಯ. ೪ ಮಹಾಸಂತೋಷಃ. ೫ ಧ್ಯಾನಾನನ್ಯವೃತ್ತಿಪ್ರತಿಬಂಧಿತದ್ರವ್ಯಭಾವೇಂದ್ರಿಯವ್ಯಾಪಾರಃ. ೬. ದ್ವಾದಶಾಂಗುಲಾಂತರಂ. ೭ ಚತುರಂಗುಲಾಂತರಂ. ೮ ಆಶ್ರಿತ್ಯ. ೯ ಶ್ರೀದೇವ್ಯಾ. ೧೦ ಉಪನೀತಂ. ೧೧ ನಿತ್ಯಃ. ೧೨ ಕೇಶಾಪಾಯಾತ್. ೧೩ ವೃತ್ತಂ. ೧೪ ಪ್ರಕಾಶನಶೀಲಂ. ೧೫ ಬ್ರಹ್ಮದ್ವಾರಸ್ಥೋ ಗ್ರಂಥಿವಿಶೇಷಃ.

**ಅಭ್ರೂಭಂಗ[೧]ಮಪಾಪಾಂಗವೀಕ್ಷಣಂ [೨]ಸ್ತಿಮಿತೇಕ್ಷಣಮ್ ।**
**ಬಿಭ್ರಾಣೋ ಮುಖ[೩]ಮಕ್ಲಿಷ್ಟಂ [೪]ಸುಶ್ಲಿಷ್ಟದಶನಚ್ಛದಮ್ ॥ ೮ ॥**

ಹುಬ್ಬುಗಂಟಿಲ್ಲದಿರುವುದೂ ಕಡೆಕಣ್ಣಿನೋಟವಿಲ್ಲದಿರುವುದೂ ಸ್ಥಿರವಾದ ನೋಟವುಳ್ಳುದೂ ಬಾಧೆಯಿಲ್ಲದುದೂ ಸಂಬಂಧಿಸಿಕೊಂಡಿರುವ ತುಟಿಗಳುಳ್ಳುದೂ ಆದ ಮುಖವನ್ನು ಧರಿಸಿದ್ದರು.

**ಸುಗಂಧಿಮುಖನಿಃಶ್ವಾಸಗಂಧಾಹೂತೈರಲಿವ್ರಜೈಃ ।**
**ಬಹಿರ್ನಿಷ್ಕಾಶಿತಾಶುದ್ಧಲೇಶ್ಯಾಂಶೈರಿವ ಲಕ್ಷಿತಃ ॥ ೯ ॥**

ಹೊರಗೆ ಹೊರಡಿಸಲ್ಪಟ್ಟ ಕೃಷ್ಣಮೊದಲಾದ ಅಶುದ್ಧಲೇಶ್ಯೆಗಳ ಅಂಶಗಳಂತಿರುವುವೂ ಸುಗಂಧವಾದ ಮುಖದ ನಿಃಶ್ವಾಸದ ಪರಿಮಳಕ್ಕೆ ಆಸಕ್ತಗಳೂ ಆದ ಭ್ರಮರಗಳ ಸಮೂಹಗಳಿಂದ ಯುಕ್ತವಾಗಿದ್ದರು.

**ಪ್ರಲಂಬಿತಮಹಾಬಾಹು[೫]ದೀಪ್ತಪ್ರೋತ್ತುಂಗವಿಗ್ರಹಃ ।**
**ಕಲ್ಪಾಂಘ್ರಿಪ ಇವಾ[೬]ವಾಗ್ರಶಾಖಾದ್ವಯ[೭]ಪರಿಷ್ಕೃತಃ ॥ ೧೦ ॥**

ಬಗ್ಗಿದ ಎರಡು ಶಾಖೆ(ಕೊಂಬೆ)ಗಳಿಂದ ಅಲಂಕೃತವಾದ ಕಲ್ಪವೃಕ್ಷದಂತೆ, ಜೋಲುತ್ತಿರುವ ದೊಡ್ಡ ಭುಜಗಳಿಂದ ಪ್ರಕಾಶಮಾನವೂ ಉನ್ನತವೂ ಆದ ಶರೀರವುಳ್ಳವರಾಗಿದ್ದರು.

**ಅಲಕ್ಷ್ಯೇಣಾತಪತ್ರೇಣ ತಪೋಮಾಹಾತ್ಮ್ಯಜನ್ಮನಾ ।**
**ಕೃತಚ್ಛಾಯೋಽಪ್ಯನರ್ಥಿತ್ವಾ[೮]ದಕೃತೇಚ್ಛಃ [೯]ಪರಿಚ್ಛದೇ ॥ ೧೧ ॥**

ಸ್ವಾಮಿಯ ತಪೋಮಾಹಾತ್ಮ್ಯದಿಂದುಂಟಾದ ಗುಪ್ತವಾದ ಛತ್ರಿಯ ನೆರಳುಳ್ಳವರಾಗಿದ್ದರೂ ಭೋಗೋಪಭೋಗಸಾಮಗ್ರಿಯಲ್ಲಿ ಅಪೇಕ್ಷೆಯಿಲ್ಲದವರಾಗಿದ್ದುದರಿಂದ ಆ ಛತ್ರಿಯ ನೆರಳನ್ನು ಇಚ್ಛಿಸಲಿಲ್ಲ.

**ಪರ್ಯಂತ[೧೦]ತರುಶಾಖಾಗ್ರೈರ್ಮಂದಾನಿಲವಿಧೂನಿತೈಃ ।**
**[೧೧]ಪ್ರಕೀರ್ಣಕೈರಿವಾಯತ್ನವಿಧೂತೈ[೧೨]ರ್ವಿಧುತಕ್ಲಮಃ ॥ ೧೨ ॥**

ಮಂದಮಾರುತದಿಂದ ಕೊಡಹಲ್ಪಟ್ಟ ಚಾಮರಗಳಂತಿರುವುವೂ ಪ್ರಯತ್ನವಿಲ್ಲದೆ ಕೊಡಹಲ್ಪಟ್ಟುವೂ ಆದ ಸಮೀಪದಲ್ಲಿರುವ ಮರಗಳ ಕೊಂಬೆಗಳ ಅಗ್ರಭಾಗಗಳಿಂದ ನಷ್ಟವಾದ ಶ್ರಮವುಳ್ಳವರಾಗಿದ್ದರು. ಚಾಮರದಂತೆ ಮಂದಮಾರುತದಿಂದ ಬೀಸಲ್ಪಟ್ಟ ಮರದ ಕೊಂಬೆಗಳಿಂದ ಸ್ವಾಮಿಯು ಶ್ರಮರಹಿತರಾಗಿದ್ದರೆಂದು ಭಾವವು.

**ದೀಕ್ಷಾನಂತರಮುದ್ಭೂತಮನಃಪರ್ಯಯಬೋಧನಃ ।**
**ಚತುರ್ಜ್ಞಾನಧರಃ ಶ್ರೀಮಾನ್ಸಾಂತರ್ದೀಪ ಇವಾಲಯಃ ॥ ೧೩ ॥**

ದೀಕ್ಷೆಯನ್ನು ತೆಗೆದುಕೊಂಡನಂತರ ಉಂಟಾದ ಮನಃಪರ್ಯಯಜ್ಞಾನವುಳ್ಳ ಪುಣ್ಯಶಾಲಿಯಾದ ಸ್ವಾಮಿಯು ಒಳಗೆ ದೀಪವಿರುವ ಮನೆಯಂತೆ ಮತಿ ಶ್ರುತ ಅವಧಿ ಮನಃಪರ್ಯಯಗಳೆಂಬ ನಾಲ್ಕು ಜ್ಞಾನಧಾರಿಗಳಾಗಿದ್ದರು.

**ಚತುರ್ಭಿರೂರ್ಜಿತೈರ್ಬೋಧೈರಮಾತ್ಯೈರಿವ [೧೩]ಚರ್ಚಿತಮ್ ।**
**ವಿಲೋಕಯನ್ ವಿಭುಃ ಕೃತ್ಸ್ನಂ [೧೪]ಪರಲೋಕಗತಾಗತಮ್ ॥ ೧೪ ॥**

೧ ಅಪಗತಃ. ೨ ಸ್ಥಿರದೃಷ್ಟಿಂ. ೩ ಅಬಾಧಿತಂ. ೪ ಕಿಂಚಿತ್ಸ್ಪೃಷ್ಟಾಧರಂ. ೫ ದೀಪ್ರ ಇತ್ಯಪಿ ಪಾಠಃ. ೬ ಆನತಂ. ೭ ಅಲಂಕೃತಃ. ೮ ಅಕ್ಷತೇಚ್ಛ ಇತ್ಯಪಿ ಪಾಠಃ. ೯ ಪರಿಕರೇ. ೧೦ ಶಾಖೀತ್ಯಪಿ ಪಾಠಃ. ೧೧ ಚಾಮರೈಃ. ೧೨ ವಿನಾಶಿತಶ್ರಮಃ. ೧೩ ವಿಚಾರಿತಂ. ೧೪ ಉತ್ತರಗತಿಗಮನಾಗಮನಂ, ಶತ್ರುಜನಗಮನಾಗಮನಂ ಚ.

ಮಂತ್ರಿಗಳಂತಿರುವ ಈ ನಾಲ್ಕು ಶ್ರೇಷ್ಠವಾದ ಜ್ಞಾನಗಳಿಂದ ಸ್ವಾಮಿಯು ಮುಂದಿನ ಗತಿಯ, ಶತ್ರುಜನದ (ಎರಡನೆಯ ಅರ್ಥ), ಊಹಾಪೋಹವನ್ನೆಲ್ಲ, ಗಮನಾಗಮನವನ್ನೆಲ್ಲ ನೋಡಿ ವಿಚಾರಿಸುತ್ತಿದ್ದರು.

**ಯದ್ಯೆವಂ ಸ್ಥಿತವಾನ್ದೇವಃ ಪುರುಃ ಪರಮನಿಃಸ್ಪೃಹಃ ।**
**ತದಾ[1]ಮೀಷಾಂ ನೃಪರ್ಷೀಣಾಂ[2]ಧೃತೇಃ ಕ್ಷೋಭೋ ಮಹಾನಭೂತ್ ॥**

ಹೀಗೆ ಪುರುಪರಮೇಶ್ವರರು ಅತ್ಯಂತ ನಿಃಸ್ಪೃಹರಾಗಿರುತ್ತಿರುವಾಗ ಈ ಕಚ್ಛ ಮೊದಲಾದ ರಾಜರ್ಷಿಗಳ ಧೈರ್ಯಕ್ಕೆ ಮಹಾಕ್ಷೋಭೆಯುಂಟಾಯಿತು. ಧೈರ್ಯ ಗುಂದಿದರೆಂದು ಭಾವವು.

**ಮಾಸಾ ದ್ವಿತ್ರಾಶ್ಚ ನೋ ಯಾವತ್ತಾವತ್ತೇ ಮುನಿಮಾನಿನಃ ।**
**ಪರೀಷಹಮಹಾವಾತೈರ್ಭಗ್ನಾಃ ಸದ್ಯೋ [3]ಧೃತಿಂ ಜಹುಃ ॥ ೧೬ ॥**

ಎರಡು ಮೂರುತಿಂಗಳುಗಳೊಳಗಾಗಿ, ತಾವು ಮುನಿಗಳೆಂದು ಅಹಂಕಾರ ಪಡುತ್ತಿದ್ದ ಆ ಕಚ್ಛಮೊದಲಾದ ರಾಜರ್ಷಿಗಳು, ಪರೀಷಹಗಳೆಂಬ ದೊಡ್ಡ ಗಾಳಿ ಗಳಿಂದ ವ್ರತಭ್ರಷ್ಟರಾಗಿ, ಆಗಲೇ ಧೈರ್ಯವನ್ನು ಬಿಟ್ಟರು.

**ಅಶಕ್ತಾಃ [4]ಪದವೀಂ ಗಂತುಂ ಗುರೋರತಿಗರೀಯಸೀಮ್ ।**
**ತ್ಯಕ್ತ್ವಾಭಿಮಾನಮಿತ್ಯುಚ್ಚೈರ್ಜಜಲ್ಪುಸ್ತೇ ಪರಸ್ಪರಮ್ ॥ ೧೭ ॥**

ಸ್ವಾಮಿಯ ಅತ್ಯಂತ ವಿಸ್ತಾರವಾದ ಮಾರ್ಗ(ವ್ರತ)ದಲ್ಲಿ ಹೋಗುವುದಕ್ಕೆ ಅಶಕ್ತ ರಾದ ಆ ರಾಜರ್ಷಿಗಳು ಅಭಿಮಾನವನ್ನು ಬಿಟ್ಟು ಮುಂದೆಹೇಳುವ ರೀತಿಯಾಗಿ ಒಬ್ಬರಿಗೊಬ್ಬರು ಗಟ್ಟಿಯಾಗಿ ಮಾತನಾಡಿಕೊಂಡರು.

**ಅಹೋ [5]ಧೈರ್ಯಮಹೋ ಸ್ಥೈರ್ಯಮಹೋ ಜಂಘಾಬಲಂ ಪ್ರಭೋಃ ।**
**ಕೋ ನಾಮ್ಯೆವಮಿನಂ ಮುಕ್ತ್ವಾ ಕುರ್ಯಾತ್ಸಾಹಸಮೀದೃಶಮ್ ॥**

"ಸ್ವಾಮಿಯ ಮನೋಬಲವೂ ಸ್ಥಿರತ್ವವೂ ಕಣಕಾಲುಗಳ ಶಕ್ತಿಯೂ ಆಶ್ಚರ್ಯ ಕರವಾದುವು. ಹೀಗೆ ಸ್ವಾಮಿಯ ಹೊರತು ಯಾವನು ತಾನೆ ಇಂತಹ ಸಾಹಸವನ್ನು ಮಾಡುವನು ?

**ಕಿಯಂತಮಥವಾ ಕಾಲಂ ತಿಷ್ಠೇದೇವಮತಂದ್ರಿತಃ ।**
**ಸೋಢ್ವಾ ಬಾಧಾಃ ಕ್ಷುಧಾದ್ಯುತ್ಥಾ ಗಿರೀಂದ್ರ ಇವ ನಿಶ್ಚಲಃ ॥ ೧೯ ॥**

ಅಥವಾ ಹಸಿವೆಮೊದಲಾದುವುಗಳಿಂದುಂಟಾದ ಬಾಧೆಗಳನ್ನು ಸಹಿಸಿಕೊಂಡು ಮಹಾಮೇರುಪರ್ವತದಂತೆ ನಿಶ್ಚಂಚಲನೂ ಆಲಸ್ಯರಹಿತನೂ ಆಗಿ ಹೀಗೆ ಎಷ್ಟುಕಾಲವರೆಗೆ ನಿಲ್ಲುವನು ?

**ತಿಷ್ಠೇದೇಕಂ ದಿನಂ ದ್ವೇವಾ ಕಾಮಂ ತ್ರಿಚತುರಾಣಿ ವಾ ।**
**ಪರಂ [6]ಮಾಸಾವಧೇಸ್ತಿಷ್ಠನ್ನಸ್ಮಾನ್ಕ್ಲೇಶಯತೀಶಿತಾ ॥ ೨೦ ॥**

ಸ್ವಾಮಿಯು ಒಂದೆರಡು ಅಥವಾ ಮೂರುನಾಲ್ಕುದಿವಸಗಳವರೆಗೆ ಯಥೇಚ್ಛ ವಾಗಿ ನಿಲ್ಲಲಿ. ಆದರೆ ತಿಂಗಳುಗಟ್ಟಲೆ ನಮ್ಮನ್ನು ಕ್ಲೇಶಪಡಿಸುತ್ತಾನೆ.

**ಕಾಮಂ ತಿಷ್ಠತು ವಾ ಭುಕ್ತ್ವಾ ಪೀತ್ವಾ [7]ನಿರ್ವಾಪ್ಯ ನಃ ಪುನಃ ।**
**[8]ಅನಾಶ್ವಾನ್ನಿಃಪ್ರತೀಕಾರಸ್ತಿಷ್ಠ [9]ನ್ನಿಷ್ಠಾಂ ಕರೋತಿ [10]ನಃ ॥ ೨೧ ॥**

ಭೋಜನವನ್ನೂ ಪಾನವನ್ನೂ ಮಾಡಿ ನಮ್ಮನ್ನು ಸಂತೋಷಪಡಿಸಿ ಪುನಃ ಯಥೇಚ್ಛವಾಗಿರಲಿ. ಯಾವ ಪ್ರತಿಕಾರವನ್ನೂ ಮಾಡದೆ ಉಪವಾಸವಾಗಿದ್ದು ನಮ್ಮನ್ನು ನಾಶಮಾಡುತ್ತಾನೆ.

೧ ಕಚ್ಛಾದೀನಾಂ. ೨ ಧೈರ್ಯಸ್ಯ. ೩ ಧೈರ್ಯಂ. ೪ ಮಾರ್ಗಂ. ೫ ಮನೋಬಲಂ. ೬ ಮಾಸಾವಧಿರಿತ್ಯಪಿ ಪಾಠಃ. ೭ ಸಂತರ್ಪ್ಯ. ೮ ಅನಶನವಾನ್. ೯ ನಾಶಂ. ೧೦ ಅಸ್ಮಾಕಂ.

**[1]ಸಾಧ್ಯಂ ಕಿಮಥವೋದ್ದಿಶ್ಯ ತಿಷ್ಠೇ[2]ದೂರ್ಧ್ವಜ್ಞುರೀಶಿತಾ ।**
**ಷಾಡ್ಗುಣ್ಯೇ ಪಠಿತೋ ನೈಷ ಗುಣಃ ಕೋಽಪಿ [3]ಮಹೀಕ್ಷಿತಾಮ್ ॥ ೨೨ ॥**

ಅಥವಾ ಸ್ವಾಮಿಯು ಉದ್ದೇಶಪಟ್ಟು ಮೊಣಕಾಲನ್ನು ಮೇಲೆಮಾಡಿ ನಿಂತು ಸಾಧಿಸಬೇಕಾದ ಕಾರ್ಯವೇನಿದೆ ?ರಾಜರುಗಳ ಸಂಧಿ ವಿಗ್ರಹ ಯಾನ ಆಸನ ದ್ವೈಧ ಆಶ್ರಯ ಈ ಆರುಗುಣಗಳಲ್ಲಿ ಮೊಣಕಾಲುಮೇಲೆಮಾಡಿ ನಿಲ್ಲುವುದನ್ನು ಹೇಳಿಲ್ಲ.

**ಅನೇಕೋಪದ್ರವಾಕೀರ್ಣೇ ವನೇಽಸ್ಮಿನ್ರಕ್ಷಯಾ ವಿನಾ ।**
**ತಿಷ್ಠನ್ನ ನೀತಿವಿದ್ಭರ್ತಾ ರಕ್ಷ್ಯೋ ಹ್ಯಾತ್ಮಾ ಪ್ರಯತ್ನತಃ ॥ ೨೩ ॥**

ಅನೇಕ ಉಪದ್ರವಗಳಿಂದ ಕೂಡಿರುವ ಈ ವನದಲ್ಲಿ ರಕ್ಷಣೆಯಿಲ್ಲದೆ ವಾಸ ಮಾಡುತ್ತಿರುವ ಸ್ವಾಮಿಗೆ ನೀತಿಯು ತಿಳಿಯದು. ಪ್ರಯತ್ನದಿಂದ ಆತ್ಮರಕ್ಷಣೆ ಯನ್ನು ಮಾಡಿಕೊಳ್ಳಬೇಕಲ್ಲವೇ ?

**ಪ್ರಾಯಃ ಪ್ರಾಣೇಷು [4]ನಿರ್ವಿಣ್ಣೋ ದೇಹಮುತ್ಸ್ರಷ್ಟುಮೀಹತೇ ।**
**[5]ನಿರ್ವಿಣ್ಣಾ ವಯಮೇತೇನ ತಪಸಾ ಪ್ರಾಣಹಾರಿಣಾ ॥ ೨೪ ॥**

ಸ್ವಾಮಿಯು ಪ್ರಾಯಶಃ ಪ್ರಾಣಗಳಲ್ಲಿ ವಿರಕ್ತನಾಗಿ ಶರೀರವನ್ನು ಬಿಡಲಿಚ್ಛಿಸು ತ್ತಾನೆ. ನಾವು ಈ ಪ್ರಾಣಹಾರಿಯಾದ ತಪಸ್ಸಿನಿಂದ ವಿರಕ್ತರಾಗಿದ್ದೇವೆ. ತಪೋ ವಿಮುಖರಾಗಿದ್ದೇವೆಂದು ಭಾವವು.

**[6]ವನ್ಯೈಃ [7]ಕಶಿಪುಭಿಸ್ತಾವತ್ಕಂದಮೂಲಫಲಾದಿಭಿಃ ।**
**ಪ್ರಾಣಯಾತ್ರಾಂ ಕರಿಷ್ಯಾಮೋ ಯಾವದ್ಯೋಗಾವಧಿರ್ಗುರೋಃ ॥ ೨೫ ॥**

ಸ್ವಾಮಿಯ ಧ್ಯಾನವು ಪೂರ್ತಿಯಾಗುವವರೆಗೂ ನಾವು ವನದಲ್ಲಿ ಉಂಟಾದ ಆಹಾರವಸ್ತು ಗೆಡ್ಡೆ ಗೆಣಸು ಫಲ ಮೊದಲಾದುವುಗಳಿಂದ ಪ್ರಾಣರಕ್ಷಣೆಯನ್ನು ಮಾಡಿಕೊಳ್ಳೋಣ."

**ಇತಿ ದೀನತರಂ ಕೇಚಿನ್ನಿರ್ವ್ಯಪೇಕ್ಷಾಸ್ತಪೋವಿಧೌ ।**
**ಬ್ರುವಾಣಾಃ ಕಾತರಾ ದೀನಾಂ ವೃತ್ತಿಂ ಪ್ರತ್ಯುನ್ಮುಖಾಃ ಸ್ಥಿತಾಃ ॥ ೨೬ ॥**

ಈ ರೀತಿಯಾಗಿ ಅತ್ಯಂತದೀನಭಾವದಿಂದ ಮಾತನಾಡುತ್ತಿರುವ ದುರ್ಬಲರಾದ ಕೆಲವು ರಾಜರ್ಷಿಗಳು ತಪಸ್ಸನ್ನು ಮಾಡುವುದರಲ್ಲಿ ಅಪೇಕ್ಷೆಯಿಲ್ಲದವರಾಗಿ ಕಷ್ಟಕರವಾದ ವೃತ್ತಿಯನ್ನಾಶ್ರಯಿಸಿದರು.

**[8]ಪರೇ [9]ಪರಾಪರಜ್ಞಂ ತಂ ಪರಿತೋಽಭ್ಯರ್ಣವರ್ತಿನಃ ।**
**ಇತಿ ಕರ್ತವ್ಯತಾಮೂಢಾಸ್ತಸ್ಥು [10]ರಂತಶ್ಚಲಾಚಲಾಃ ॥ ೨೭ ॥**

ಬೇರೆ ಕೆಲವು ರಾಜರ್ಷಿಗಳು ಪೂರ್ವಾಪರವಿಷಯವನ್ನು ತಿಳಿಯುವ ಆ ಸ್ವಾಮಿಯ ಸುತ್ತಲೂ ಸಮೀಪದಲ್ಲಿದ್ದುಕೊಂಡು " ಹೀಗೆ ಮಾಡಬೇಕು" ಎಂಬ ಕಾರ್ಯವನ್ನು ತಿಳಿಯದವರಾಗಿ ಮನಸ್ಸಿನಲ್ಲಿ ಚಂಚಲರೂ ನಿಶ್ಚಂಚಲರೂ ಆಗಿದ್ದರು. ಕೆಲವು ಕಾಲದಲ್ಲಿ ಚಂಚಲರೂ ಕೆಲವು ಕಾಲದಲ್ಲಿ ನಿಶ್ಚಂಚಲರೂ ಆಗಿದ್ದರೆಂದು ಭಾವವು.

**ಶಯಾನೇ ಶಯಿತಂ ಭುಕ್ತಂ ಭುಂಜಾನೇ ತಿಷ್ಠತಿ ಸ್ಥಿತಮ್ ।**
**ಗತಂ ಗಚ್ಛತಿ ರಾಜ್ಯಸ್ಥೇ ತಪಃಸ್ಥೇಽಪ್ಯಾಸ್ಥಿತಂ ತಪಃ ॥ ೨೮ ॥**

**ಭೃತ್ಯಾಚಾರೋಽಯಮಸ್ಮಾಭಿಃ ಪೂರ್ವಂ ಸರ್ವೋಽಪ್ಯನುಷ್ಠಿತಃ ।**
**ಕಾಲಃ ಕುಲಾಭಿಮಾನಸ್ಯ ಗತೋಽದ್ಯ ಪ್ರಾಣಸಂಕಟೇ ॥ ೨೯ ॥**

"ಪೂರ್ವದಲ್ಲಿ ಸ್ವಾಮಿಯು ಮಲಗಿದಾಗ ನಾವು ಮಲಗಿದೆವು. ಸ್ವಾಮಿಯು ಭೋಜನಮಾಡಿದಾಗ ಭೋಜನ ಮಾಡಿದೆವು. ಕುಳಿತಾಗ ಕುಳಿತೆವು. ನಡೆದಾಗ ನಡೆದೆವು. ರಾಜ್ಯಕಾರ್ಯವನ್ನು ಮಾಡಿದಾಗ ರಾಜ್ಯಕಾರ್ಯವನ್ನು ಮಾಡಿದೆವು.

೧ ಕಾರ್ಯಂ. ೨ ಊರ್ಧ್ವಜಾನುಃ. ೩ ಕ್ಷತ್ರಿಯಾಣಾಂ. ೪ ವಿರಕ್ತಃ. ೫ ವಿರಕ್ತಾಃ, ವಿಶೀರ್ಣಾ ಇತ್ಯರ್ಥಃ. ೬ ವನೇಭವೈಃ. ೭ ಅಶನಾಚ್ಛಾದನೈಃ. ೮ ನೃಪಾಃ. ೯ ಪರಾಪರವಿದಂ. ೧೦ ಅಂತರಂಗೇ.

ತಪಸ್ಸನ್ನು ಮಾಡಿದಾಗ ತಪಸ್ಸನ್ನು ಮಾಡಿದೆವು. ಹೀಗೆ ಸೇವಕರ ಕರ್ತವ್ಯವನ್ನೆಲ್ಲ ನಾವು ಮಾಡಿದೆವು. ಈಗ ಈ ಪ್ರಾಣಸಂಕಟದಲ್ಲಿ ಸತ್ಕುಲೀನರೆಂದು ಅಹಂಕಾರ ಪಡುವ ಕಾಲವು ಹೋಯಿತು. ನಿರತಿಚಾರವಾಗಿರುವುದು ಕಷ್ಟವೆಂದರ್ಥವು.

**ವನೇ ಪ್ರವಸತೋಽಸ್ಮಾಭಿರ್ನ ಭುಕ್ತಂ [೧]ಜೀವನಂ ಪ್ರಭೋಃ ।**
**ಯಾವಚ್ಛಕ್ತಾಃ ಸ್ಥಿತಾಸ್ತಾವದಶಕ್ತಾಃ ಕಿಂನು ಕುರ್ಮಹೇ ॥ ೩೦ ॥**

ವನದಲ್ಲಿ ವಾಸಮಾಡುತ್ತಿರುವ ಸ್ವಾಮಿಯಿಂದ ನಮಗೆ ಅನ್ನಪಾನಾದಿಗಳಿಂದ ಜೀವನವು ದೊರೆಯಲಿಲ್ಲ. ನಮಗೆ ಶಕ್ತಿಯಿರುವಷ್ಟುಕಾಲ ಇದ್ದೆವು. ನಿರತಿಚಾರ ದಿಂದಿದ್ದೆವೆಂದು ಭಾವವು. ಈಗ ನಾವು ಅಶಕ್ತರಾಗಿದ್ದೇವೆ. ಏನು ಮಾಡಬೇಕು ?

**ಮಿಥ್ಯಾ ಕಾರಯತೇ ಯೋಗಂ ಪ್ರಭುರಸ್ಮಾಸು ನಿರ್ದಯಃ ।**
**ಸ್ಪರ್ಧಾಂ ಕೃತ್ವಾ ಸಹೈತೇನ ಮರ್ತವ್ಯಂ ಕಿಮಶಕ್ತಕೈಃ ॥ ೩೧ ॥**

ಸ್ವಾಮಿಯು ನಮ್ಮಲ್ಲಿ ದಯೆಯಿಲ್ಲದವನಾಗಿ ವ್ಯರ್ಥವಾಗಿ ತಪಸ್ಸನ್ನು ಮಾಡಿಸು ತ್ತಾನೆ. ಅಶಕ್ತರಾದ ನಾವು ಈ ಸ್ವಾಮಿಯೊಡನೆ ಹೋರಾಡಿ ಸಾಯಬೇಕೆ ?

**ಅತಿವರ್ತೀ ಗುರುಃ ಸೋಽಯಂ ಕೋಽಸ್ಯಾನ್ವೇತುಂ ಪದಂ ಕ್ಷಮಃ ।**
**ದೇವಃ ಸ್ವಚ್ಛಂದಚಾರ್ಯೇಷ ನ [೨]ದೇವಚರಿತಂ ಚರೇತ್ ॥ ೩೨ ॥**

ಈ ಸ್ವಾಮಿಯು ಕಾಲವನ್ನು ಅತಿಕ್ರಮಿಸುತ್ತಾನೆ. ಇವನ ಮಾರ್ಗವನ್ನು ಯಾವನು ಅನುಸರಿಸಬಲ್ಲನು ? ಈ ಸ್ವಾಮಿಯು ಸ್ವಚ್ಛಂದಚಾರಿಯು. ಸ್ವಾಮಿಯ ಆಚರಣೆಯನ್ನು ಆಚರಿಸಬಾರದು.

**ಕಚ್ಚಿಜ್ಜೀವತಿ ಮೇ ಮಾತಾ ಕಚ್ಚಿಜ್ಜೀವತಿ ಮೇ ಪಿತಾ ।**
**ಕಚ್ಚಿ[೩]ತ್ಸ್ಮರತಿ ಮೇ ಕಾಂತಾ ಕಚ್ಚಿನ್ನಃ ಸುಸ್ಥಿತಾಃ [೪]ಪ್ರಜಾಃ ॥ ೩೩ ॥**

ನನ್ನ ತಾಯಿಯು ಬದುಕಿರಬಹುದು. ನನ್ನ ತಂದೆಯು ಬದುಕಿರಬಹುದು. ನನ್ನ ಪತ್ನಿಯು ನನ್ನನ್ನು ಸ್ಮರಿಸುತ್ತಿರಬಹುದು. ನನ್ನ ಮಕ್ಕಳು ಸೌಖ್ಯವಾಗಿರಬಹುದು.

**ಇತಿ ಸ್ವಾಂತರ್ಗತಂ ಕೇಚಿ[೫]ದಚ್ಛೋದ್ಯ [೬]ಸ್ಥಾತುಮಕ್ಷಮಾಃ ।**
**[೭]ಅನುವ್ರಜ್ಯ ಗುರೋಃ ಪಾದೌ ಪ್ರಣತಾ ಗಮನೋತ್ಸುಕಾಃ ॥ ೩೪ ॥**

ತಪಸ್ಸಿನಲ್ಲಿರುವುದಕ್ಕೆ ಅಶಕ್ತರಾದ ಕೆಲವರು ಮೇಲೆಹೇಳಿದಂತೆ ಮನೋಭಿ ಪ್ರಾಯವನ್ನು ಸ್ಪಷ್ಟವಾಗಿ ಹೇಳಿ, ಸ್ವಾಮಿಯ ಬಳಿಗೆ ಹೋಗಿ ಕಾಲುಗಳಿಗೆ ನಮಸ್ಕಾರ ಮಾಡಿ ಹಿಂದಿರುಗಿ ಹೋಗುವುದಕ್ಕೆ ಉತ್ಸುಕರಾದರು.

**ಅಹೋ ಗುರುರಯಂ ಧೀರಃ ಕಿಮಪ್ಯುದ್ದಿಶ್ಯ ಕಾರಣಮ್ ।**
**ಜಿತಾತ್ಮಾ ತ್ಯಕ್ತರಾಜ್ಯಶ್ರೀಃ ಪುನಃ [೮]ಸಂಯೋಕ್ಷ್ಯತೇ ತಯಾ ॥ ೩೫ ॥**

ಜಿತಮನಸ್ಸುಳ್ಳವನೂ ಧೈರ್ಯಶಾಲಿಯೂ ಆದ ಈ ಸ್ವಾಮಿಯು ಮನಸ್ಸಿನಲ್ಲಿ ಯಾವುದೋ ಕಾರಣವನ್ನು ಉದ್ದೇಶಿಸಿ ರಾಜ್ಯಲಕ್ಷ್ಮಿಯನ್ನು ಪರಿತ್ಯಜಿಸಿದನು. ಆಶ್ಚರ್ಯವು ! ಪುನಃ ಆ ರಾಜ್ಯಲಕ್ಷ್ಮಿಯೊಡನೆ ಸಮಾಗಮವನ್ನು ಹೊಂದುವನು.

**ಯದಾಯಮದ್ಯ ವಾ ಶ್ವೋ ವಾ ಯೋಗಂ [೯]ಸಂಹೃತ್ಯ ಧೀರಧೀಃ ।**
**ನಿಜರಾಜ್ಯಶ್ರಿಯಾ ಭೂಯೋ ಯೋಕ್ಷ್ಯತೇ ವದತಾಂವರಃ ॥ ೩೬ ॥**

ಧೈರ್ಯಶಾಲಿಯೂ ವಕ್ತೃಗಳಲ್ಲಿ ಶ್ರೇಷ್ಠನೂ ಆದ ಈ ಸ್ವಾಮಿಯು ಈ ಹೊತ್ತೋ ನಾಳೆಯೋ ಧ್ಯಾನವನ್ನು ಬಿಟ್ಟು ತನ್ನ ರಾಜ್ಯಲಕ್ಷ್ಮಿಯೊಡನೆ ಸೇರಿದಾಗ

**ತದಾಸ್ಮಾನ್ಸ್ವಾಮಿಕಾರ್ಯೇಽಸ್ಮಿ[೧೦]ನ್ನಗ್ನೋತ್ಸಾಹಾನ್ಕೃತಚ್ಛಲಾನ್ ।**
**[೧೧]ನಿರ್ವಾಸಯೇದಸತ್ಕೃತ್ಯ ಕುರ್ಯಾದ್ವಾ ವೀತಸಂಪದಃ ॥ ೩೭ ॥**

೧ ಅಶನಪಾನಾದ್ಯೈರ್ಜೀವನಂ. ೨ ರಾಜಚರಿತಂ. ೩ ಸ್ಮರಂತಿ ನಃ ಕಾಂತಾ ಇತ್ಯಪಿ ಪಾಠಃ. ೪ ಪುತ್ರಾ ಇತ್ಯರ್ಥಃ. ೫ ದೃಢಮಭಿಧಾಯ. ೬ ವಸ್ತುಂ. ೭ ಅಚ್ಛನ್ನವ್ರಜ್ಯೇತ್ಯಪಿ ಪಾಠಃ. ೮ ಸಂಯೋಜ್ಯತೇ ಇತ್ಯಪಿ ಪಾಠಃ. ೯ ಸಂಹೃತ್ಯೇತ್ಯಪಿ ಪಾಠಃ. ೧೦ ನಷ್ಟೋದ್ಯೋಗಾನ್. ೧೧ ನಿಷ್ಕಾಸಯೇತ್.

ಈ ಸ್ವಾಮಿಕಾರ್ಯದಲ್ಲಿ ಉತ್ಸಾಹಹೀನರೂ ಹಠಶಾಲಿಗಳೂ ಆದ ನಮ್ಮನ್ನು ಸತ್ಕರಿಸದೆ ಗಡಿಪಾರುಮಾಡುವನೋ ಅಥವಾ ನಮ್ಮ ಸಂಪತ್ತನ್ನು ಕಿತ್ತುಕೊಳ್ಳು ವನೋ ತಿಳಿಯದು.

**ಭರತೋ ವಾ ಗುರುಂ ತ್ಯಕ್ತ್ವಾ ಗತಾನಸ್ಮಾ[೧]ನ್ವಿಕರ್ಶಯೇತ್ ।**
**[೨]ತದ್ಯಾವದ್ಯೋಗನಿಷ್ಪತ್ತಿರ್ವಿಭೋಸ್ತಾವತ್ಸಹಾಮಹೇ ॥ ೩೮ ॥**

ಅಥವಾ ಭರತನು ಸ್ವಾಮಿಯನ್ನು ಬಿಟ್ಟು ಹೊರಟುಹೋಗುವ ನಮಗೆ ಬಾಧೆಪಡಿಸಬಹುದು. ಆದುದರಿಂದ ಸ್ವಾಮಿಯ ಧ್ಯಾನವು ಪೂರ್ತಿಯಾಗುವವರೆಗೆ ಸಹಿಸೋಣ.

**ಭಗವಾನಯಮದ್ಯ ಶ್ವಃ ಸಿದ್ಧಯೋಗೋ ಭವೇದ್ಧ್ರುವಮ್ ।**
**[೩]ಸಿದ್ಧೇ ಯೋಗೇ ಕೃತಕ್ಲೇಶಾನಸ್ಮಾ[೪]ನಭ್ಯವಪತ್ಸ್ಯತೇ ॥ ೩೯ ॥**

ಈ ಭಗವಂತನಿಗೆ ನಿಶ್ಚಯವಾಗಿಯೂ ಈಹೊತ್ತೋ ನಾಳೆಯೋ ಧ್ಯಾನವು ಸಿದ್ಧಿಯಾಗುವುದು. ಧ್ಯಾನವು ಸಿದ್ಧಿಯಾದನಂತರ ಶ್ರಮಪಟ್ಟ ನಮ್ಮನ್ನು ಕಾಪಾಡು ವನು.

**ಗುರೋರ್ವಾ ಗುರುಪುತ್ರಾದ್ವಾ ಪೀಡ್ಯೈ[೫]ವಂ ನೈವ ಜಾತು ನಃ ।**
**ಪೂಜಾಸತ್ಕಾರಲಾಭೈಶ್ಚ ಪ್ರೀತಃ ಸಂಪ್ರೀಣಯೇತ್ಸ ನಃ ॥ ೪೦ ॥**

ಧ್ಯಾನವು ಸಿದ್ಧಿಸುವವರೆಗೆ ನಾವು ದೃಢವಾಗಿದ್ದರೆ ಸ್ವಾಮಿಯಿಂದಾಗಲಿ ಸ್ವಾಮಿಯ ಪುತ್ರನಿಂದಾಗಲಿ ನಮಗೊಂದೂ ಬಾಧೆಯುಂಟಾಗದು. ಸ್ವಾಮಿಯು ನಮ್ಮ ಪೂಜಾಸತ್ಕಾರಗಳನ್ನು ಹೊಂದಿ ಸಂತುಷ್ಟನಾಗಿ ನಮ್ಮನ್ನು ಸಂತೋಷಪಡಿ ಸುವನು.''

**ಇತಿ ಧೀರತಯಾ ಕೇಚಿದಂತಃಕ್ಷೋಭೇಽಪಿ [೬]ನಾತುರಾಃ ।**
**ಧೀರಯಂತೋಽಪಿ ನಾತ್ಮಾನಂ ಶೇಕುಃ ಸ್ಥಾಪಯಿತುಂ [೭]ಸ್ಥಿತೌ ॥ ೪೧ ॥**

ಈರೀತಿಯಾಗಿ ಕೆಲವರು ಮನಸ್ಸಿನಲ್ಲಿ ಕ್ಷೋಭೆಯುಂಟಾದರೂ ಧೈರ್ಯದಿಂದ ವ್ಯಾಕುಲಪಡೆದ ಮನಸ್ಸನ್ನು ದೃಢಪಡಿಸಿದರಾದರೂ ಆತ್ಮನನ್ನು ಧ್ಯಾನಸ್ಥಿತಿಯಲ್ಲಿ ಸ್ಥಾಪಿಸುವುದಕ್ಕೆ ಸಮರ್ಥರಾಗಲಿಲ್ಲ.

**ಅಭಿಮಾನಧನಾಃ ಕೇಚಿದ್ಭೂಯೋಽಪಿ ಸ್ಥಾತುಮುದ್ಯತಾಃ ।**
**ಪತಿತ್ವಾಪ್ಯವಶಂ ಭೂಮೌ ಸಂಸ್ಮರುರ್ಗುರುಪಾದಯೋಃ ॥ ೪೨ ॥**

ಅಭಿಮಾನವೆಂಬ ಧನವುಳ್ಳ ಕೆಲವರು ಪುನಃ ತಪಸ್ಸಿನಲ್ಲಿ ಸ್ಥಿರವಾಗಿರುವುದಕ್ಕೆ ಪ್ರಯತ್ನಪಟ್ಟು ಸ್ವಾಧೀನತಪ್ಪಿ ಭೂಮಿಯಮೇಲೆ ಬಿದ್ದೂ ಸ್ವಾಮಿಯ ಪಾದಗಳನ್ನು ಸ್ಮರಿಸಿದರು.

**ಇ[೮]ತ್ಯುಚ್ಚಾವಚಸಂಜಲ್ಪೈಃ ಸಂಕಲ್ಪೈಶ್ಚ ಪೃಥಗ್ವಿಧೈಃ ।**
**ವಿರಮ್ಯತೇ ತಪಃಕ್ಲೇಶಾಜ್ಜೀವಿಕಾಯಾಂ ಮತಿಂ [೯]ವ್ಯಧುಃ ॥ ೪೩ ॥**

ಈರೀತಿಯಾಗಿ ನಾನಾಪ್ರಕಾರವಾದ ಸಂಭಾಷಣೆಗಳಿಂದಲೂ ನಾನಾಪ್ರಕಾರವಾದ ಸಂಕಲ್ಪಗಳಿಂದಲೂ ಆ ರಾಜರ್ಷಿಗಳು ತಪಸ್ಸಿನ ಕ್ಲೇಶದಿಂದ ವಿರಾಮವನ್ನು ಹೊಂದಿ ಜೀವನೋಪಾಯವನ್ನು ಹುಡುಕುವುದಕ್ಕೆ ಮನಸ್ಸುಮಾಡಿದರು. ತಪೋಭ್ರಷ್ಟರಾಗಿ ಜೀವನೋಪಾಯವನ್ನು ಹುಡುಕಲಾರಂಭಿಸಿದರೆಂದು ಭಾವವು.

**[೧೦]ಮುಖೋನ್ಮುಖಂ [೧೧]ವಿಭೋರ್ದತ್ತದೃಷ್ಟಯಃ ಪೃಷ್ಠತೋ ಮುಖಾಃ ।**
**ಅಶಕ್ತ್ಯಾ ಲಜ್ಜಯಾ ವಾನ್ಯೇ ಭೇಜಿರೇ ಸ್ಖಲಿತಾಂ ಗತಿಮ್ ॥ ೪೪ ॥**

೧ ಪೀಡಯೇತ್. ೨ ಕಾರಣಾತ್. ೩ ಸಿದ್ಧಯೋಗೇ ಇತ್ಯಪಿ ಪಾಠಃ. ೪ ಪಾಲಯಿಷ್ಯತಿ, ಅಭ್ಯುಪಪತ್ಸ್ಯತೇ ಇತ್ಯಪಿ ಪಾಠಃ. ೫ ಯೋಗಸಿದ್ಧಿಪರ್ಯಂತಂ ಸ್ಥಿತೇ ಸತಿ. ೬ ಅನಾಕುಲಾಃ. ೭ ಧ್ಯಾನಸ್ಥಿತೌ. ೮ ನಾನಾವಿಧಾಃ. ೯ ನ್ಯಧುರಿತ್ಯಪಿ ಪಾಠಃ. ೧೦ ಮುಖಸ್ಯಾಭಿಮುಖಂ. ೧೧ ವಿಧುರಿತ್ಯಪಿ ಪಾಠಃ.

ಇನ್ನು ಕೆಲವರು ಸ್ವಾಮಿಯ ಮುಖಕ್ಕೆದುರಾಗಿ ದೃಷ್ಟಿಯನ್ನಿಟ್ಟು ಅಶಕ್ತಿಯಿಂದಲೋ ನಾಚಿಕೆಯಿಂದಲೋ ಮುಖವನ್ನು ತಿರುಗಿಸಿ ಎಡವುತ್ತ ಹೋದರು.

**ಅನಾಪೃಚ್ಛ್ಯ ಗುರುಂ ಕೇಚಿತ್ಕೇಚಿದಾಪೃಚ್ಛ್ಯ ಯೋಗಿನಮ್ ।**
**ಪರೀತ್ಯ ಪ್ರಣತಾಃ [೧]ಪ್ರಾಣಯಾತ್ರಾಯಾಂ ಮತಿಮಾದಧುಃ ॥ ೪೫ ॥**

ಕೆಲವರು ಸ್ವಾಮಿಯನ್ನು ಕೇಳದೆಯೂ ಕೆಲವರು ಸ್ವಾಮಿಗೆ ಪ್ರದಕ್ಷಿಣೆಬಂದು ನಮಸ್ಕಾರವನ್ನು ಮಾಡಿ ಕೇಳಿಯೂ ಜೀವನೋಪಾಯವನ್ನು ಹುಡುಕುವುದಕ್ಕೆ ಮನಸ್ಸುಮಾಡಿದರು.

**ಕೇಚಿತ್ತ್ವಮೇವ ಶರಣಂ ನಾನ್ಯಾ ಗತಿರಿಹಾಸ್ತಿ ನಃ ।**
**ಇತಿ ಬ್ರುವಾಣಾ [೨]ವಿದ್ರಾಣಾಃ ಪ್ರಾಣತ್ರಾಣೇ ಮತಿಂ ವ್ಯಧುಃ ॥ ೪೬ ॥**

ಕೆಲವರು "ನೀನೇ ನಮಗೆ ಶರಣವು. ಈ ಲೋಕದಲ್ಲಿ ನಮಗೆ ಬೇರೆ ಗತಿಯಿಲ್ಲವು" ಎಂದು ಹೇಳಿ ಓಡಿಹೋಗುತ್ತ ತಮ್ಮ ಪ್ರಾಣರಕ್ಷಣೆಯಲ್ಲಿ ಮನಸ್ಸುಮಾಡಿದರು.

**[೩]ಅಪತ್ರಪಿಷ್ಣವಃ ಕೇಚಿದ್ವೇಪಮಾನಪ್ರತೀಕಕಾಃ ।**
**ಗುರೋಃ ಪರಾಙ್ಮುಖೀಭೂಯ ಜಾತಾ ವ್ರತಪರಾಙ್ಮುಖಾಃ ॥ ೪೭ ॥**

ಕೆಲವರು ನಾಚಿಕೆಪಟ್ಟು ನಡುಗುತ್ತಿರುವ ಶರೀರಾವಯವವುಳ್ಳವರಾಗಿ ಸ್ವಾಮಿಗೆ ಪರಾಙ್ಮುಖರಾಗಿ ವ್ರತವನ್ನು ಬಿಟ್ಟರು. ವ್ರತಭ್ರಷ್ಟರಾದರೆಂದು ಭಾವವು.

**ಪಾದಯೋಃ ಪತಿತಾಃ ಕೇಚಿ[೪]ತ್ಪರಿತ್ರಾಯಸ್ವ ನಃ ಪ್ರಭೋ ।**
**ಕ್ಷ[೫]ತ್ಕ್ಷಾಮಾಂಗಾನ್ಕ್ಷಮಸ್ವೇತಿ ಬ್ರುವಂತೋಂತರ್ಹಿತಾ ಗುರೋಃ ॥**

ಕೆಲವರು ಸ್ವಾಮಿಯ ಪಾದಗಳಲ್ಲಿ ಬಿದ್ದು "ಪ್ರಭುವೇ! ನಮ್ಮನ್ನು ಕಾಪಾಡು. ಹಸಿವೆಯಿಂದ ಕೃಶವಾದ ಶರೀರವುಳ್ಳ ನಮ್ಮನ್ನು ಕ್ಷಮಿಸು" ಎಂದು ಹೇಳಿ ಸ್ವಾಮಿಯ ದೆಸೆಯಿಂದ ಮರೆಯಾದರು.

**ಅಹೋ [೬]ಕಿಮೃಷಯೋ ಭಗ್ನಾ ಮಹರ್ಷೇರ್ಗಂತುಮಕ್ಷಮಾಃ ।**
**ಪದವೀಂ ತಾ[೭]ಮನಾಲೀಢಾಮನ್ಯೈಃ ಸಾಮಾನ್ಯಮರ್ತ್ಯಕೈಃ ॥ ೪೯ ॥**

ಬೇರೆ ಸಾಮಾನ್ಯ ಮನುಷ್ಯರಿಂದ ಸ್ಪರ್ಶಿಸಲ್ಪಡದಿರುವ ಮಹರ್ಷಿಯ ಮಾರ್ಗದಲ್ಲಿ ಹೋಗುವುದಕ್ಕೆ ಅಸಮರ್ಥರಾದ ಆ ಕುತ್ಸಿತಮುನಿಗಳು ತಪೋಭ್ರಷ್ಟರಾದರು. ಆಶ್ಚರ್ಯ!

**ಕಿಂ ಮಹಾದಂತಿನೋ ಭಾರಂ ನಿರ್ವೋಢುಂ ಕಲಭಾಃ ಕ್ಷಮಾಃ ।**
**ಪುಂಗವೈರ್ವಾ ಭರಂ [೮]ಕೃಷ್ಟಂ [೯]ಕರ್ಷೇಯುಃ ಕಿಮು ದಮ್ಯಕಾಃ ॥ ೫೦ ॥**

ದೊಡ್ಡ ಆನೆಗಳು ಹೊರುವ ಭಾರವನ್ನು ಆನೆಯಮರಿಗಳು ಹೊರಬಲ್ಲುವೇ? ಅಥವಾ ದೊಡ್ಡ ಎತ್ತುಗಳು ಹೊರುವ ಭಾರವನ್ನು ಸಣ್ಣ ಹೋರಿಕರುಗಳು ಹೊರಬಲ್ಲುವೇ?

**ತತಃ ಪರೀಷಹೈರ್ಭಗ್ನಾಃ ಫಲಾನ್ಯಾಹರ್ತುಮಿಚ್ಛವಃ ।**
**ಪ್ರಸಸ್ರುರ್ವನಷಂಡೇಷು ಸರಸ್ಸು ಚ ಪಿಪಾಸಿತಾಃ ॥ ೫೧ ॥**

ಆದುದರಿಂದ ಕ್ಷುಧಾದಿಬಾಧೆಗಳಿಂದ ವ್ರತಭ್ರಷ್ಟರಾಗಿ ಫಲಗಳನ್ನು ತಿನ್ನಬೇಕೆಂಬ ಇಚ್ಛೆಯಿಂದ ವನಗಳಿಗೆ ಹೋದರು. ಬಾಯಾರಿಕೆಯುಳ್ಳವರಾಗಿ ಸರೋವರಗಳಿಗೆ ಹೋದರು.

**[೧೦]ಫಲೇಗ್ರಹೀನಿಮಾನ್ದೃಷ್ಟ್ವಾ ಪಿಪಾಸೂಂಶ್ಚ [೧೧]ಸ್ವಯಂಗ್ರಹೈಃ ।**
**ನ್ಯಷೇಧನ್ನ್ಯೆ[೧೨]ವಮೀಹಧ್ವಮಿತಿ ತಾನ್ವನದೇವತಾಃ ॥ ೫೨ ॥**

ತಾವಾಗಿಯೇ ಫಲಗಳನ್ನು ಸ್ವೀಕರಿಸುತ್ತಿರುವ ಮತ್ತು ನೀರನ್ನು ಕುಡಿಯುತ್ತಿರುವ ಈ ಮುನಿಗಳನ್ನು ನೋಡಿ ವನದೇವತೆಗಳು "ಈ ರೂಪದಿಂದ ಹೀಗೆ ಪ್ರವರ್ತಿಸಬೇಡಿ" ಎಂದು ತಡೆದರು.

**ಇದಂ ರೂಪಮದೀನಾನಾಮರ್ಹತಾಂ ಚಕ್ರಿಣಾಮಪಿ ।**
**[೧]ನಿಷೇವ್ಯಂ ಕಾತರತ್ವಸ್ಯ ಪದಂ [೨]ಮಾಕಾರ್ಷ್ಟ ಬಾಲಿಶಾಃ ॥ ೫೩ ॥**

"ಎಲೈ ಅಜ್ಞಾನಿಗಳೇ! ಈ ರೂಪ(ಮುನಿರೂಪ)ವು ಶ್ರೇಷ್ಠರಾದ ಅರ್ಹಂತರಿಂದಲೂ ಚಕ್ರವರ್ತಿಗಳಿಂದಲೂ ಸೇವಿಸುವುದಕ್ಕೆ ಯೋಗ್ಯವಾದುದು. ನೀವು ಅಧೈರ್ಯ ಪಡಬೇಡಿ."

**ಇತಿ ತದ್ವಚನಾದ್ಭೀತಾಸ್ತದ್ರೂಪೇಣ ತಥೇಹಿತುಮ್ ।**
**ನಾನಾವಿಧಾನಿಮಾನ್ವೇಷಾಞ್ಜಗೃಹುರ್ದೀನಚೇಷ್ಟಿತಾಃ ॥ ೫೪ ॥**

ಈಪ್ರಕಾರವಾದ ಆ ವನದೇವತೆಗಳ ವಚನವನ್ನು ಕೇಳಿ ಆ ಮುನಿರೂಪದಿಂದ ಹಾಗೆ ಸ್ವಚ್ಛಂದವಾಗಿ ಪ್ರವರ್ತಿಸುವುದಕ್ಕೆ ಭಯಪಟ್ಟು ದೀನವ್ಯಾಪಾರವುಳ್ಳವರಾಗಿ ಮುಂದೆಹೇಳುವ ನಾನಾಪ್ರಕಾರವಾದ ವೇಷಗಳನ್ನು ಸ್ವೀಕರಿಸಿದರು.

**ಕೇಚಿದ್ವಲ್ಕಲಿನೋ ಭೂತ್ವಾ ಫಲಾ[೩]ನ್ಯಾದನ್ಪಪುಃ ಪಯಃ ।**
**[೪]ಪರಿಧಾಯ ಪರೇ ಜೀರ್ಣಂ ಕೌಪೀನಂ ಚಕ್ರುರೀಪ್ಸಿತಮ್ ॥ ೫೫ ॥**

ಕೆಲವರು ಮರದ ತೊಗಟೆಗಳನ್ನು ಧರಿಸಿ ಫಲಗಳನ್ನು ತಿಂದು ನೀರನ್ನು ಕುಡಿದರು. ಬೇರೆಕೆಲವರು ಹಳೆಯದಾದ ಕೌಪೀನವನ್ನುಟ್ಟುಕೊಂಡು ಇಷ್ಟವಾದ ಕಾರ್ಯವನ್ನು ಮಾಡತೊಡಗಿದರು.

**ಅಪರೇ ಭಸ್ಮನೋ[೫]ದ್ಧೂಳ್ಯ ಸ್ವಾನ್ದೇಹಾನ್ಜಟಿನೋಭವನ್ ।**
**ಏಕದಂಡಧರಾಃ ಕೇಚಿತ್ಕೇಚಿಚ್ಚಾಸಂಸ್ತ್ರಿದಂಡಿನಃ ॥ ೫೬ ॥**

ಇನ್ನು ಕೆಲವರು ತಮ್ಮ ಶರೀರಕ್ಕೆ ಬೂದಿಯನ್ನು ಹಚ್ಚಿಕೊಂಡು ಜಟಾಧಾರಿಗಳಾದರು. ಕೆಲವರು ಏಕದಂಡಧಾರಿಗಳೂ ಕೆಲವರು ತ್ರಿದಂಡಧಾರಿಗಳೂ ಆದರು.

**ಪ್ರಾಣೈ[೬]ರಾರ್ತಾಸ್ತದೇತ್ಯಾದಿವೇಷೈರ್ವವೃತಿರೇ ಚಿರಮ್ ।**
**ವನ್ಯೈಃ ಕಶಿಪುಭಿಃ ಸ್ವಚ್ಛೈರ್ಜಲೈಃ ಕಂದಾದಿಭಿಶ್ಚ ತೇ ॥ ೫೭ ॥**

ಆಗ ಪ್ರಾಣಬಾಧೆಗಳಿಂದ ದುಃಖಿತರಾದ ಆ ಮುನಿಗಳು ಹಿಂದೆಹೇಳಿದ ವೇಷಗಳಿಂದಲೂ ವನದಲ್ಲಿ ಉತ್ಪನ್ನವಾದ ಆಹಾರಪದಾರ್ಥಗಳಿಂದಲೂ ಸ್ವಚ್ಛವಾದ ಜಲಗಳಿಂದಲೂ ಗೆಡ್ಡೆಗೆಣಸು ಮೊದಲಾದುವುಗಳಿಂದಲೂ ಬಹುಕಾಲದವರೆಗೆ ಜೀವಿಸಿಕೊಂಡಿದ್ದರು.

**ಭರತಾದ್ಬಿಭ್ಯತಾಂ ತೇಷಾಂ ದೇಶತ್ಯಾಗ[೭]ಸ್ತತೋಭವತ್ ।**
**ತತಸ್ತೇ ವನಮಾಶ್ರಿತ್ಯ ತಸ್ಥುಸ್ತತ್ರ [೮]ಕೃತೋಟಜಾಃ ॥ ೫೮ ॥**

ಭರತನ ಭಯದಿಂದ ಆ ಮುನಿಗಳು ದೇಶವನ್ನು ಪರಿತ್ಯಜಿಸಿ ವನದಲ್ಲಿ ಪರ್ಣಶಾಲೆಗಳನ್ನು ಮಾಡಿಕೊಂಡಿದ್ದರು.

**ತದಾಸಂ[೯]ಸ್ತಾಪಸಾಃ ಪೂರ್ವಂ [೧೦]ಪರಿವ್ರಾಜಶ್ಚ ಕೇಚನ ।**
**[೧೧]ಪಾಷಂಡಿನಾಂ ತೇ [೧೨]ಪ್ರಥಮೇ ಬಭೂವುರ್ಮೋಹದೂಷಿತಾಃ ॥**

ಆಗ ಮೊಟ್ಟಮೊದಲು ಜಟಾಧಾರಿಗಳೂ ದಂಡಧಾರಿಗಳೂ ಆದ ಕೆಲವು ತಪಸ್ವಿಗಳು ಅಜ್ಞಾನದಿಂದ ದೂಷಿತರಾಗಿ ಮಿಥ್ಯಾತಪಸ್ವಿಗಳಿಗೆಲ್ಲ ಮುಖ್ಯರಾದರು.

---

೧ ಪ್ರಾಣವೃತ್ತೌ. ೨ ಪಲಾಯಮಾನಾಃ. ೩ ಲಜ್ಜಾಶೀಲೋಪತ್ರಪಿಷ್ಣುರಿತ್ಯಮರಃ. ೪ ರಕ್ಷ. ೫ ಕೃಶಾಂಗಾನ್. ೬ ಕುತ್ಸಿತಮುನಯಃ. ೭ ಅಸ್ಪೃಷ್ಟಾಂ. ೮ ಧೃತಂ. ೯ ವಹೇಯುಃ. ೧೦ ಫಲಾನಿ ಸ್ವೀಕುರ್ವಾಣಾನ್. ೧೧ ನಿಜಸ್ವೀಕಾರೈಃ. ೧೨ ಏತಜ್ಜೀವನರೂಪೇಣ.

೧ ಆರಾಧ್ಯಂ. ೨ ಮಾ ಕುರುಧ್ವಂ. ೩ ಭಕ್ಷಯಂತಿ ಸ್ಮ. ೪ ಅಧೋವಸ್ತ್ರಂ ಕೃತ್ವಾ. ೫ ಆಚ್ಛಾದ್ಯ, ಅನುಲೇಪ್ಯೇತ್ಯರ್ಥಃ. ೬ ದುಃಖಿತಾಃ. ೭ ಸ್ವತ ಇತ್ಯಪಿ ಪಾಠಃ. ೮ ಕೃತಪರ್ಣಶಾಲಾಃ. ೯ ಜಟಿಲಾಃ. ೧೦ ಏಕದಂಡ್ಯಾದಯಃ. ೧೧ ಪಾಷಂಡಿನಾಂ ಮಧ್ಯೇ. ೧೨ ಮುಖ್ಯಾಃ.

**ಪುಷ್ಪೋಪಹಾರೈಃ ಸಜಲೈರ್ಭರ್ತುರ್ಃ ಪಾದಾ[೧]ವಯುಕ್ಷತ ।**
**ನ ದೇವತಾಂತರಂ ತೇಷಾಮಾಸೀನ್ಮುಕ್ತ್ವಾ ಸ್ವಯಂಭುವಮ್ ॥ ೬೦ ॥**

ಪುಷ್ಪಗಳಿಂದಲೂ ಜಲಗಳಿಂದಲೂ ಸ್ವಾಮಿಯ ಪಾದಗಳನ್ನು ಪೂಜಿಸಿದರು. ಆ ತಪಸ್ವಿಗಳಿಗೆ ವೃಷಭಸ್ವಾಮಿಯ ಹೊರತು ಬೇರೆ ದೇವತೆಯಿರಲಿಲ್ಲವು.

**ಮರೀಚಿಶ್ಚ ಗುರೋರ್ನಪ್ತಾ [೨]ಪರಿವ್ರಾಡ್ಭೂಯ[೩]ಮಾಸ್ಥಿತಃ ।**
**ಮಿಥ್ಯಾತ್ವವೃದ್ಧಿಮಕರೋ[೪]ದಪಸಿದ್ಧಾಂತಭಾಷಿತೈಃ ॥ ೬೧ ॥**

ಸ್ವಾಮಿಯ ಮೊಮ್ಮಗನಾದ ಮರೀಚಿಕುಮಾರನು ಸನ್ಯಾಸಿಯಾಗಿ ಮಿಥ್ಯಾ ಶಾಸ್ತ್ರದ ಉಪದೇಶಗಳಿಂದ ಮಿಥ್ಯಾತ್ವವನ್ನು ವೃದ್ಧಿಪಡಿಸಿದನು.

**ತದುಪಜ್ಞಮಭೂ[೫]ದ್ಯೋಗಶಾಸ್ತ್ರಂ ತಂತ್ರಂ ಚ [೬]ಕಾಪಿಲಮ್ ।**
**ಯೇನಾಯಂ ಮೋಹಿತೋ ಲೋಕಃ ಸಮ್ಯಜ್ಞಾನಪರಾಙ್ಮುಖಃ ॥ ೬೨ ॥**

ಮೊಟ್ಟ ಮೊದಲು ಆ ಮರೀಚಿಕುಮಾರನು ಯೋಗಶಾಸ್ತ್ರವನ್ನೂ ಸಾಂಖ್ಯ ಶಾಸ್ತ್ರವನ್ನೂ ನಿರ್ಮಾಣಮಾಡಿದನು. ಆ ಮಿಥ್ಯಾಶಾಸ್ತ್ರಗಳಿಂದ ಮೋಹಿತವಾದ ಲೋಕವು ಸಮ್ಯಜ್ಞಾನದಿಂದ ವಿಮುಖವಾಯಿತು.

**ಇತಿ ತೇಷು ತಥಾಭೂತಾಂ ವೃತ್ತಿಮಾಸೇದಿವತ್ಸು ಸಃ ।**
**ತಪಸ್ಯನ್ಧೀಬಲೋಪೇತಸ್ತಸ್ಥೌವಾಸ್ಥಾನ್ಮಹಾಮುನಿಃ ॥ ೬೩ ॥**

ಈರೀತಿಯಾಗಿ ಆ ಮುನಿಗಳು ಹಿಂದೆಹೇಳಿದ ಜೀವನೋಪಾಯವನ್ನು ಹೊಂದುತ್ತಿರಲು, ಆ ಮಹಾಮುನಿ(ಸ್ವಾಮಿ)ಯು ತನ್ನ ಬುದ್ಧಿಬಲಯುಕ್ತನಾಗಿ ತಪಸ್ಸನ್ನು ಮಾಡುತ್ತ ನಿಶ್ಚಂಚಲನಾಗಿದ್ದನು.

**ಸ ಮೇರುರಿವ ನಿಷ್ಕಂಪಃ ಸೋ[೭]ಕ್ಷೋಭ್ಯೋ ಜಲರಾಶಿವತ್ ।**
**ಸ ವಾಯುರಿವ ನಿಃಸಂಗೋ ನಿರ್ಲೇಪೋಂಬರವತ್ಪ್ರಭುಃ ॥ ೬೪ ॥**

ಆ ಸ್ವಾಮಿಯು ಮಹಾಮೇರುಪರ್ವತದಂತೆ ನಿಶ್ಚಂಚಲನೂ ಸಮುದ್ರದಂತೆ ಗಂಭೀರನೂ ಗಾಳಿಯಂತೆ ನಿಸ್ಸಂಗ(ಪರಿಗ್ರಹರಹಿತ)ನೂ ಆಕಾಶದಂತೆ ನಿರ್ಲೇಪನೂ ಆಗಿದ್ದನು.

**ತಪಸ್ತಾಪೇನ ತೀವ್ರೇಣ ದೇಹೋಸ್ಯ ವ್ಯದ್ಯುತತ್ತರಾಮ್ ।**
**ನಿಷ್ಟಪ್ತಸ್ಯ ಸುವರ್ಣಸ್ಯ ನನು ಚ್ಛಾಯಾಂತರಂ ಭವೇತ್ ॥ ೬೫ ॥**

ಚೆನ್ನಾಗಿ ಕಾಯಿಸಿದ ಬಂಗಾರದಲ್ಲಿ ಮೊದಲಿಗಿಂತ ವಿಲಕ್ಷಣವಾದ ದೀಪ್ತಿಯುಂಟಾಗುವಂತೆ, ಘೋರವಾದ ತಪಸ್ಸಿನ ತಾಪದಿಂದ ಈ ಸ್ವಾಮಿಯ ದೇಹವು ವಿಶೇಷವಾಗಿ ಶೋಭಿಸಿತು.

**ಗುಪ್ತಯೋ [೮]ಗುಪ್ತಿರಸ್ಯಾಸನ್ನಂಗತ್ರಾಣಂ ಚ ಸಂಯಮಃ ।**
**ಗುಣಾಶ್ಚ ಸೈನಿಕಾ ಜಾತಾಃ ಕರ್ಮಶತ್ರೂನ್ ಜಿಗೀಷತಃ ॥ ೬೬ ॥**

ಕರ್ಮಗಳೆಂಬ ಶತ್ರುಗಳನ್ನು ಜಯಿಸಲಿಚ್ಛಿಸುವ ಈ ಸ್ವಾಮಿಗೆ ಮನೋವಾಕ್ಕಾಯ ಗುಪ್ತಿಗಳು ರಕ್ಷಕಗಳಾಗಿದ್ದುವು. ಸಂಯಮವು ಅಂಗರಕ್ಷಕವಾಗಿದ್ದಿತು. ಗುಣಗಳು ಸೈನಿಕಗಳಾಗಿದ್ದುವು.

**ತಪೋನಶನಮಾದ್ಯಂ ಸ್ಯಾದ್ದ್ವಿತೀಯಮವಮೋದರಮ್ ।**
**ತೃತೀಯಂ ವೃತ್ತಿಸಂಖ್ಯಾನಂ ರಸತ್ಯಾಗಶ್ಚತುರ್ಥಕಮ್ ॥ ೬೭ ॥**

**ಪಂಚಮಂ [೯]ತನುಸಂತಾಪೋ [೧೦]ವಿವಿಕ್ತಶಯನಾಸನಮ್ ।**
**ಷಷ್ಠಮಿತ್ಯಸ್ಯ ಬಾಹ್ಯಾನಿ ತಪಾಂಸ್ಯಾಸನ್ಮಹಾಧೃತೇಃ ॥ ೬೮ ॥**

೧ ಪೂಜಯಂತಿ ಸ್ಮ. ೨ ಪರಿವ್ರಾಜಕತ್ವಂ. ೩ ಆಶ್ರಿತಃ. ೪ ಮಿಥ್ಯಾಶಾಸ್ತ್ರೈಃ. ೫ ಧ್ಯಾನಶಾಸ್ತ್ರಂ. ೬ ಸಾಂಖ್ಯಂ. ೭ ಗಂಭೀರಃ. ೮ ರಕ್ಷಣಂ. ೯ ಕಾಯಕ್ಲೇಶಃ. ೧೦ ಜನವರ್ಜಿತಂ.

ಮಹಾಧೈರ್ಯಶಾಲಿಯಾದ ಈ ವೃಷಭಮುನಿಗೆ ಆರುವಿಧವಾದ ಬಾಹ್ಯ ತಪಸ್ಸುಗಳಿದ್ದುವು. ಅವುಗಳಲ್ಲಿ ಉಪವಾಸವನ್ನು ಮಾಡುವುದು ಅನಶನವೆಂಬ ಮೊದಲನೆಯ ತಪಸ್ಸಾಗಿದೆ. ಅಲ್ಪಾಹಾರವನ್ನು ತೆಗೆದುಕೊಳ್ಳುವುದು ಅವಮೋದರವೆಂಬ ಎರಡನೆಯ ತಪಸ್ಸಾಗಿದೆ. ಆಹಾರನಿಮಿತ್ತವಾಗಿ ಇಷ್ಟೇ ಮನೆಗಳಿಗೆ ಅಥವಾ ಇಂತಹ ಗಲ್ಲಿಯವರೆಗೆ ಹೋಗುತ್ತೇನೆಂದು ನಿಯಮಮಾಡಿಕೊಳ್ಳುವುದು ವೃತ್ತಿಸಂಖ್ಯಾನವೆಂಬ ಮೂರನೆಯ ತಪಸ್ಸಾಗಿದೆ. ಹಾಲು ತುಪ್ಪ ಮೊದಲಾದ ರಸಪದಾರ್ಥಗಳನ್ನು ಬಿಡುವುದು ರಸತ್ಯಾಗವೆಂಬ ನಾಲ್ಕನೆಯ ತಪಸ್ಸಾಗಿದೆ. ಶರೀರವನ್ನು ದಂಡಿಸುವುದು ಕಾಯಕ್ಲೇಶವೆಂಬ ಐದನೆಯ ತಪಸ್ಸಾಗಿದೆ. ನಿರ್ಜನವಾದ ಪ್ರದೇಶದಲ್ಲಿ ಮಲಗುವುದೂ ಕುಳಿತುಕೊಳ್ಳುವುದೂ ವಿವಿಕ್ತಶಯ್ಯಾಸನವೆಂಬ ಆರನೆಯ ತಪಸ್ಸಾಗಿದೆ.

**ಪ್ರಾಯಶ್ಚಿತ್ತಾದಿಭೇದೇನ ಷೋಢೈವಾಭ್ಯಂತರಂ ತಪಃ ।**
**[೧]ತತ್ರಾಸ್ಯ ಧ್ಯಾನ ಏವಾಸೀತ್ಪರಂ ತಾತ್ಪರ್ಯಮೀಶಿತುಃ ॥ ೬೯ ॥**

ಪ್ರಾಯಶ್ಚಿತ್ತ ವಿನಯ ವೈಯಾವೃತ್ಯ ಸ್ವಾಧ್ಯಾಯ ವ್ಯುತ್ಸರ್ಗ ಧ್ಯಾನಗಳೆಂದು ಅಭ್ಯಂತರತಪಸ್ಸು ಆರುವಿಧವಾಗಿದೆ. ಆ ಹನ್ನೆರಡುತಪಸ್ಸುಗಳಲ್ಲಿ ಸ್ವಾಮಿಗೆ ಧ್ಯಾನದಲ್ಲೇ ಹೆಚ್ಚು ಪ್ರೀತಿಯಿದ್ದಿತು.

**ವ್ರತಾನಿ ಪಂಚಪಂಚೈವ ಸಮಿತ್ಯಾಖ್ಯಾಃ ಪ್ರಯತ್ನಕಾಃ ।**
**[೨]ಪಂಚೈವೇಂದ್ರಿಯಸಂರೋಧಾಃ ಷೋಢಾವಶ್ಯಕಮಿಷ್ಯತೇ ॥ ೭೦ ॥**

ಅಹಿಂಸಾ ಸತ್ಯ ಅಚೌರ್ಯ ಬ್ರಹ್ಮಚರ್ಯ ಅಪರಿಗ್ರಹಗಳೆಂದು ವ್ರತಗಳು ಐದು. ಈರ್ಯಾ(ಗಮನ)ಭಾಷಾ ಏಷಣಾ(ಆಹಾರ)ಆದಾನನಿಕ್ಷೇಪಣ ವ್ಯುತ್ಸರ್ಗ(ಮಲ ಮೂತ್ರ ವಿಸರ್ಜನ)ಗಳೆಂದು ಸಮಿತಿ(ಶುದ್ಧಿ)ಗಳು ಐದು. ಸ್ಪರ್ಶನಾದಿ ಇಂದ್ರಿಯಗಳ ನಿಗ್ರಹಗಳು ಐದು. ಸಾಮಾಯಿಕ ಸ್ತವನ ವಂದನಾ ಪ್ರತಿಕ್ರಮಣ ಪ್ರತ್ಯಾಖ್ಯಾನ ಕಾಯೋತ್ಸರ್ಗಗಳೆಂದು ಆವಶ್ಯಕಕ್ರಿಯೆಗಳು ಆರು.

**ಕೇಶಲೋಚಶ್ಚ ಭೂಶಯ್ಯಾ ದಂತಾಧಾವನಮೇವ ಚ ।**
**ಅಚೇಲತ್ವಮಥಾಸ್ನಾನಂ [೩]ಸ್ಥಿತಿಭೋಜನಮಪ್ಯದಃ ॥ ೭೧ ॥**

**ಏಕಭುಕ್ತಂ ಚ ತಸ್ಯಾಸನ್ಗುಣಾ ಮೌಲಾಃ ಪದಾತಯಃ ।**
**ತೇಷ್ವಸ್ಯ ಮಹತೀ ಶುದ್ಧಿರಭೂ[೪]ದ್ಧ್ಯಾನವಿಶುದ್ಧಿತಃ । ॥ ೭೨ ॥**

ಕೇಶಲೋಚ ಭೂಮಿಶಯ್ಯಾ ದಂತಧಾವನಮಾಡದಿರುವುದು ವಸ್ತ್ರತ್ಯಾಗ ಸ್ನಾನತ್ಯಾಗ ನಿಂತು ಆಹಾರತೆಗೆದುಕೊಳ್ಳುವುದು ಏಕಭೋಜನ ಈ ಇಪ್ಪತ್ತೆಂಟು ಮೂಲಗುಣಗಳು ಆ ಸ್ವಾಮಿಗೆ ಕಾಲಾಳುಗಳಂತಿದ್ದುವು. ಧ್ಯಾನದಿಂದ ಶುದ್ಧಿಯನ್ನು ಹೊಂದಿದ ಈ ವೃಷಭಸ್ವಾಮಿಗೆ ಆ ಇಪ್ಪತ್ತೆಂಟು ಮೂಲಗುಣಗಳಲ್ಲಿ ಅತ್ಯಂತ ಪರಿಶುದ್ಧಿಯುಂಟಾಯಿತು. ಅತಿಚಾರವಿಲ್ಲದೆ ಮೂಲಗುಣಗಳನ್ನು ಪಾಲಿಸುತ್ತಿದ್ದರೆಂದು ಭಾವವು.

**ಮಹಾನಶನಮಸ್ಯಾಸೀತ್ತಪಃ ಷಣ್ಮಾಸಗೋಚರಮ್ ।**
**ಶರೀರೋ[೫]ಪಚಯಸ್ತ್ವಿದ್ಧಸ್ತಸ್ಥೌವಾಸ್ಥಾದಹೋ [೬]ಧೃತಿಃ ॥ ೭೩ ॥**

ಈ ವೃಷಭಸ್ವಾಮಿಯ ಉಪವಾಸವೆಂಬ ಮಹಾತಪಸ್ಸು ಆರುತಿಂಗಳ ಅವಧಿಯುಳ್ಳದಾಗಿದ್ದಿತು. ಪ್ರಕಾಶಮಾನವಾದ ಶರೀರಪುಷ್ಟಿಯಾದರೋ ಒಂದೇ ರೀತಿಯಾಗಿದ್ದಿತು. ಸ್ವಾಮಿಯ ಧೈರ್ಯವು ಆಶ್ಚರ್ಯಕರವಾದುದು.

**ನಾ[೭]ನಾಶುಷೋಪ್ಯಭೂದ್ಭರ್ತುಃ ಸ್ವಲ್ಪೋಪ್ಯಂಗೇ ಪರಿಶ್ರಮಃ ।**
**[೮]ನಿರ್ಮಾಣಾತಿಶಯಃ ಕೋಪಿ ದಿವ್ಯಃ [೯]ಸ ಹಿ ಮಹಾತ್ಮನಃ ॥ ೭೪ ॥**

೧ ದ್ವಾದಶವಿಧೇಷು. ೨ ಪಂಚ ಚೇಂದ್ರಿಯಸಂರೋಧಾ ಇತ್ಯಪಿ ಪಾಠಃ. ೩ ಸ್ಥಿತಭೋಜನಮಿತ್ಯಪಿ ಪಾಠಃ. ೪ ವಿಶುದ್ಧಸ್ಯ ವಿಶುದ್ಧಿತ ಇತ್ಯಪಿ ಪಾಠಃ. ೫ ಪುಷ್ಟಿಃ. ೬ ಧೈರ್ಯಂ ಸಂತೋಷೋ ವಾ. ೭ ಅನಶನವ್ರತಿನಃ. ೮ ಶರೀರವರ್ಗಣಾತಿಶಯಃ, ನಿರ್ಮಾಣಕರ್ಮಪುಣ್ಯಾತಿಶಯೋ ವಾ. ೯ ಅಪರಿಶ್ರಮಃ.

ಉಪವಾಸವ್ರತವುಳ್ಳವರಾಗಿದ್ದರೂ ಸ್ವಾಮಿಯ ಶರೀರದಲ್ಲಿ ಸ್ವಲ್ಪವೂ ಆಯಾಸ ವುಂಟಾಗಲಿಲ್ಲ. ಆ ಮಹಾತ್ಮರಾದ ಸ್ವಾಮಿಗೆ ಶ್ರಮವಾಗದಿರುವುದಕ್ಕೆ ಯಾವುದೋ ಶ್ರೇಷ್ಠವಾದ ಶರೀರನಿರ್ಮಾಣವೆಂಬ ಪುಣ್ಯಕರ್ಮದ ಅತಿಶಯವು ಕಾರಣ.

**ಸಂಸ್ಕಾರವಿರಹಾತ್ಕೇಶಾ ಜಟೀಭೂತಾಸ್ತದಾ ವಿಭೋಃ ।**
**[೧]ನೂನಂ ತೇಪಿ ತಪಃ ಕ್ಲೇಶಮನುಸೋಢುಂ [೨]ತಥಾ ಸ್ಥಿತಾಃ ॥ ೭೫ ॥**

ಸ್ವಾಮಿಯು ತಪಸ್ಸನ್ನು ಮಾಡುತ್ತಿದ್ದಾಗ ಯಾವ ಸಂಸ್ಕಾರವೂ ಇಲ್ಲದೆ ಜಟೆ ಯಾಗಿದ್ದ ಅವರ ಕೂದಲುಗಳೂ ತಪಸ್ಸಿನ ಕ್ಲೇಶವನ್ನು ಸಹಿಸುವುದಕ್ಕೋಸ್ಕರ ಹಾಗೆ ಜಟೆಕಟ್ಟಿದ್ದುವೋ ಎಂಬಂತಿದ್ದುವು.

**ಮುನೇರ್ಮೂರ್ಧ್ನಿ ಜಟಾ ದೂರಂ ಪ್ರಸಸ್ರುಃ ಪವನೋದ್ಧತಾಃ ।**
**ಧ್ಯಾನಾಗ್ನಿನೇವ ತಪ್ತಸ್ಯ ಜೀವಸ್ವರ್ಣಸ್ಯ ಕಾಲಿಕಾಃ ॥ ೭೬ ॥**

ಮುನಿಯ ಮಸ್ತಕದಲ್ಲಿ ಗಾಳಿಯಿಂದ ಕೊಡಹಲ್ಪಟ್ಟ ಜಟೆಯ ಕೂದಲುಗಳು, ಧ್ಯಾನವೆಂಬ ಅಗ್ನಿಯಿಂದ ಕಾಯಿಸಲ್ಪಟ್ಟ ಜೀವವೆಂಬ ಬಂಗಾರದ ಕಶ್ಮಲಗಳೋ ಪಾದಿಯಲ್ಲಿ, ದೂರವಾಗಿ ಸರಿಡಿಕೊಂಡಿದ್ದುವು.

**ತತ್ತಪೋತಿಶಯಾತ್ತಸ್ಮಿನ್ವಾನನೇಭೂತ್ಪರಾ [೩]ದ್ಯುತಿಃ ।**
**ನಕ್ತಂದಿವಾ ಚ ಬಾಲಾರ್ಕತೇಜಸೇವಾತತಾಂತಿಕೇ ॥ ೭೭ ॥**

ರಾತ್ರಿಹಗಲು ಬಾಲಸೂರ್ಯನ ತೇಜಸ್ಸಿನಿಂದ ವ್ಯಾಪ್ತವಾದ ಸಮೀಪ ಪ್ರದೇಶವುಳ್ಳಂತಿರುವ ಆ ವನದಲ್ಲಿ ಸ್ವಾಮಿಯ ತಪಸ್ಸಿನ ಮಾಹಾತ್ಮ್ಯದಿಂದ ಅಧಿಕ ವಾದ ಕಾಂತಿಯುಂಟಾಗಿದ್ದಿತು.

**ಶಾಖಾಃ ಪುಷ್ಪಫಲಾನಮ್ರಾಃ ಶಾಖಿನಾಂ ತತ್ರ ಕಾನನೇ ।**
**ಬಭುರ್ಭಗವತಃ ಪಾದೌ ನಮಂತ್ಯ ಇವ ಭಕ್ತಿತಃ ॥ ೭೮ ॥**

ಆ ತಪೋವನದಲ್ಲಿ ಪುಷ್ಪಫಲಗಳಿಂದ ಬಗ್ಗಿದ ಮರಗಳ ಕೊಂಬೆಗಳು ಭಕ್ತಿಯಿಂದ ಭಗವಂತನ ಪಾದಗಳನ್ನು ನಮಸ್ಕರಿಸುತ್ತಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ತಸ್ಮಿನ್ವನೇ ವನಲತಾ ಭೃಂಗಸಂಗೀತನಿಃಸ್ವನೈಃ ।**
**[೪]ಉಪವೀಣಿತಮಾತೇನುರಿವ ಭಕ್ತ್ಯಾ ಜಗದ್ಗುರೋಃ ॥ ೭೯ ॥**

ಆ ತಪೋವನದಲ್ಲಿ ಲತೆಗಳು, ಜಗದ್ಗುರುವಾದ ಸ್ವಾಮಿಯಲ್ಲಿ ಭಕ್ತಿಯಿಂದ ಭ್ರಮರಗಳ ಸಂಗೀತಶಬ್ದಗಳೊಡನೆ ವೀಣೆಯ ಜೊತೆಯಲ್ಲಿ, ಗಾನಮಾಡು ವಂತಿದ್ದುವು.

**ಪರ್ಯಂತವರ್ತಿನಃ ಕ್ಷ್ಮಾಜಾ ಗಲದ್ಭಿಃ ಕುಸುಮೈಃ ಸ್ವಯಮ್ ।**
**ಪುಷ್ಪೋಪಹಾರಮಾತನ್ವನ್ನಿವ ಭಕ್ತ್ಯಾಸ್ಯ ಪಾದಯೋಃ ॥ ೮೦ ॥**

ಸಮೀಪದಲ್ಲಿರುವ ವೃಕ್ಷಗಳು ತಾವಾಗಿ ಸುರಿಯುತ್ತಿರುವ ಪುಷ್ಪಗಳಿಂದ ಈ ಸ್ವಾಮಿಯ ಪಾದಗಳಿಗೆ ಭಕ್ತಿಯಿಂದ ಪುಷ್ಪಾರ್ಚನೆಯನ್ನು ಮಾಡುವಂತಿದ್ದುವು.

**ಮೃಗಶಾಬಾಃ ಪದೋಪಾಂತಂ ಸ್ವೈರಮಧ್ಯಾಸಿತಾ ಮುನೇಃ ।**
**[೫]ತದಾಶ್ರಮಸ್ಯ ಶಾಂತತ್ವಮಾಚಖ್ಯುಃ [೬]ಸಾಮಿನಿದ್ರಿತಾಃ ॥ ೮೧ ॥**

ಮುನಿಯ ಪಾದಸಮೀಪದಲ್ಲಿ ಯಥೇಚ್ಛವಾಗಿ ವಾಸಮಾಡುವ ಜಿಂಕೆಯ ಮರಿಗಳು ಸ್ವಲ್ಪ ನಿದ್ರಿಸುತ್ತ ಆ ತಪೋವನದ ಶಾಂತತೆಯನ್ನು ಹೇಳುತ್ತಿದ್ದುವು.

**ಮೃಗಾರಿತ್ವಂ ಸಮುತ್ಸೃಜ್ಯ ಸಿಂಹಾ[೭]ಸ್ಸಂಹತವೃತ್ತಯಃ ।**
**ಬಭೂವುರ್ಗಜಯೂಥೇನ ಮಾಹಾತ್ಮ್ಯಂ ತದ್ಧಿ ಯೋಗಜಮ್ ॥ ೮೨ ॥**

೧ ಇವ. ೨ ಜಟೀಭೂತಾಃ. ೩ ಧೃತಿರಿತ್ಯಪಿ ಪಾಠಃ. ೪ ವೀಣಯಾ ಉಪಗಾನಂ. ೫ ಸರ್ವಜ್ಞಾಶ್ರಮಸ್ಯ. ೬ ಈಷತ್. ೭ ಯುಕ್ತವೃತ್ತಯಃ.

ಸಿಂಹಗಳು ಮೃಗಗಳಲ್ಲಿ ತಮಗಿರುವ ವೈರವನ್ನು ಬಿಟ್ಟು ಆನೆಗಳ ಗುಂಪಿನೊಡನೆ ಸೇರಿ ಶಾಂತವೃತ್ತಿಯುಳ್ಳವುಗಳಾದುವು. ಹಾಗಿರುವುದು ಸ್ವಾಮಿಯ ತಪಸ್ಸಿನಿಂದುಂಟಾದ ಮಾಹಾತ್ಮ್ಯವಲ್ಲವೇ ?

**ಕಂಟಕಾಲಗ್ನವಾಲಾಗ್ರಾಶ್ಚಮರೀಶ್ಚ [೧]ಮರೀಮೃಜಾಃ ।**
**ನಖರೈಃ ಸ್ವೈರಹೋ ವ್ಯಾಘ್ರಾಃ ಸಾನುಕಂಪಂ ವ್ಯಮೋಚಯನ್ ॥ ೮೩ ॥**

ಮುಳ್ಳುಗಳಲ್ಲಿ ಸಿಕ್ಕಿಕೊಂಡ ಬಾಲದ ತುದಿಗಳನ್ನು ಬಿಡಿಸುವುದಕ್ಕೆ ಪುನಃ ಪುನಃ ಉಜ್ಜುತ್ತಿರುವ ಹೆಣ್ಣು ಚಮರೀಮೃಗಗಳನ್ನು ನೋಡಿ ದಯೆಯಿಂದ ಹುಲಿಗಳು ತಮ್ಮ ಉಗುರುಗಳಿಂದ ಬಿಡಿಸಿದುವು. ಆಶ್ಚರ್ಯ !

**[೨]ಪ್ರಸ್ನುವಾನಾ ಮಹಾವ್ಯಾಘ್ರೀರುಪೇತ್ಯ ಮೃಗಶಾಬಕಾಃ ।**
**ಸ್ವಜನ[೩]ನ್ಯಾಸ್ಥಯಾ ಸ್ವೈರಂ ಪೀತ್ವಾ ಸ್ಮ ಸುಖಮಾಸತೇ ॥ ೮೪ ॥**

ಜಿಂಕೆಯ ಮರಿಗಳು ಹಾಲನ್ನು ಸುರಿಯುತ್ತಿರುವ ಹೆಣ್ಣುಹುಲಿಗಳ ಸಮೀಪಕ್ಕೆ ಹೋಗಿ ತಮ್ಮ ತಾಯಿಯೆಂಬ ಬುದ್ಧಿಯಿಂದ ಯಥೇಚ್ಛವಾಗಿ ಸ್ತನ್ಯಪಾನವನ್ನು ಮಾಡಿ ಸುಖವಾಗಿದ್ದುವು.

**ಪದಯೋರಸ್ಯ ವನ್ಯೇಭಾಃ ಸಮುತ್ಫುಲ್ಲಂ ಸರೋರುಹಮ್ ।**
**[೪]ಢೌಕಯಾಮಾಸುರಾನೀಯ ತಪಃಶಕ್ತಿರಹೋ ಪರಾ ॥ ೮೫ ॥**

ಕಾಡಾನೆಗಳು ಈ ಸ್ವಾಮಿಯ ಪಾದಗಳಲ್ಲಿ ಅರಳಿದ ತಾವರೆಗಳನ್ನು ತಂದಿರಿ ಸಿದುವು. ಉತ್ಕೃಷ್ಟವಾದ ತಪಸ್ಸಿನ ಶಕ್ತಿಯು ಆಶ್ಚರ್ಯಕರವಾದುದು.

**ಬಭೌ ರಾಜೀವಮಾರಕ್ತಂ ಕರಿಣಾಂ [೫]ಪುಷ್ಕರಾಶ್ರಿತಮ್ ।**
**[೬]ಪುಷ್ಕರಶ್ರಿಯ[೭]ಮಾಮ್ರೇಡೀಕುರ್ವದ್ಭರ್ತು[೮]ರುಪಾಸನೇ ॥ ೮೬ ॥**

ಆನೆಗಳ ಸೊಂಡಲಿನಲ್ಲಿರುವ ಕೆಂದಾವರೆಯು, ಸ್ವಾಮಿಯ ಸೇವೆಯಲ್ಲಿ ಆನೆಯ ಸೊಂಡಲಿನ ತುದಿಯ ಶೋಭೆಯನ್ನು ದ್ವಿಗುಣಮಾಡಿ, ಶೋಭಿಸಿತು.

**ಪ್ರಶಮಸ್ಯ ವಿಭೋರಂಗಾದ್ವಿಸರ್ಪಂತ ಇವಾಂಶಕಾಃ ।**
**[೯]ಪ್ರಸಹ್ಯ ವಶಮಾನಿನ್ಯುರವಶಾನಪಿ ತಾನ್ಮೃಗಾನ್ ॥ ೮೭ ॥**

ಪ್ರಭುವಿನ ಶರೀರದಿಂದ ಪಸರಿಸುತ್ತಿರುವ ಶಾಂತಿಯ ಅಂಶಗಳು ಅಧೀನ ವಾಗದಿರುವ ಆ ಕ್ರೂರಮೃಗಗಳನ್ನು ಬಲಾತ್ಕರಿಸಿ ವಶಪಡಿಸಿದುವೋ ಎಂಬಂತಿ ದ್ದುವು.

**[೧೦]ಅನಾಶುಷೋಪಿ ನಾಸ್ಯಾಸೀತ್ಕ್ಷುದ್ಬಾಧಾ ಭುವನೇಶಿನಃ ।**
**ಸಂತೋಷಭಾವನೋತ್ಕರ್ಷಾಜ್ಜಯೇ[೧೧]ದ್ಗೃದ್ಧಿ[೧೨]ಮಗೃಧ್ನುತಾ ॥ ೮೮ ॥**

ಉಪವಾಸವ್ರತವುಳ್ಳವರಾಗಿದ್ದರೂ ಲೋಕಾಧಿಪತಿಯಾದ ಈ ಸ್ವಾಮಿಗೆ ಹಸಿ ವೆಯ ಬಾಧೆಯುಂಟಾಗಲಿಲ್ಲ. ಅಧಿಕವಾದ ಸಂತೋಷಭಾವನೆಯಿಂದ ನಿರಾಶೆಯು ಅಭಿಲಾಷೆಯನ್ನು ಜಯಿಸುವುದು.

**ಚಲಂತಿ ಸ್ಮ ತದೇಂದ್ರಾಣಾಮಾಸನಾನ್ಯಸ್ಯ ಯೋಗತಃ ।**
**ಚಿತ್ರಂ ಹಿ ಮಹತಾಂ ಧೈರ್ಯಂ ಜಗದಾಕಂಪಕಾರಣಮ್ ॥ ೮೯ ॥**

ಆಗ ಈ ಸ್ವಾಮಿಯ ಧ್ಯಾನದ ಮಾಹಾತ್ಮ್ಯದಿಂದ ದೇವೇಂದ್ರರ ಆಸನಗಳು ಕಂಪಿಸಿದುವು. ಜಗತ್ತನ್ನು ಕಂಪಿಸುವುದಕ್ಕೆ ಕಾರಣವಾದ ಮಹಾತ್ಮರ ಧೈರ್ಯವು ವಿಚಿತ್ರವಾದುದಲ್ಲವೇ ?

**ಇತಿ [೧೩]ಷಣ್ಮಾಸನಿರ್ವರ್ತ್ಸ್ಯತ್ಕೃತಿಮಾಯೋಗ[೧೪]ಮಾಪುಷಃ ।**
**ಸ ಕಾಲಃ ಕ್ಷಣವದ್ಭರ್ತುರಗಮದ್ಧೈರ್ಯಶಾಲಿನಃ ॥ ೯೦ ॥**

೧ ಪುನಃಪುನರ್ಮಾರ್ಜನಂ ಕುರ್ವಂತಃ. ೨ ಕ್ಷೀರಂ ಕ್ಷರಂತೀಃ. ೩ ಬುದ್ಧ್ಯಾ. ೪ ಸ್ಥಾಪಯಾಮಾಸುಃ, ಪೂಜಯಾಮಾಸುರಿತ್ಯರ್ಥಃ. ೫ ಹಸ್ತಾಗ್ರಾಶ್ರಿತಂ. ೬ ಕರಿಹಸ್ತಾಗ್ರಶೋಭಾಂ. ೭ ದ್ವಿಗುಣೀಕುರ್ವತ್. ೮ ಆರಾಧನೇ. ೯ ಬಲಾತ್ಕೃತ್ಯ. ೧೦ ಅನಶನವ್ರತಿನಃ. ೧೧ ಕಾಂಕ್ಷಾಂ. ೧೨ ಅನಭಿಲಾಷಿತಾ. ೧೩ ಷಣ್ಮಾಸಾವಸಾನೇ ಪರ್ಯಾಪ್ತಂ ಭವಿಷ್ಯತ್. ೧೪ ಗತಸ್ಯ.

ಈಪ್ರಕಾರವಾಗಿ ಆರುತಿಂಗಳಲ್ಲಿ ಪೂರ್ತಿಯಾಗುವ ಪ್ರತಿಮಾಯೋಗವನ್ನು ಹೊಂದಿದ ಧೈರ್ಯಶಾಲಿಯಾದ ಸ್ವಾಮಿಗೆ ಆ ಕಾಲವು ಒಂದುಕ್ಷಣದಂತೆ ಕಳೆಯಿತು.

**ಅತ್ರಾಂತರೇ ಕಿಲಾ[೧]ಯಾತಾಂ ಕುಮಾರೌ ಸುಕುಮಾರಕೌ ।**
**ಸೂನೂ ಕಚ್ಛಮಹಾಕಚ್ಛನೃಪಯೋರ್ನಿಕಟಂ ಗುರೋಃ ॥ ೯೧ ॥**

ಈ ಸಮಯದಲ್ಲಿ ಕಚ್ಛಮಹಾಕಚ್ಛರೆಂಬ ರಾಜರ ಪುತ್ರರೂ ಸುಕುಮಾರರೂ ಆದ ಇಬ್ಬರು ಕುಮಾರರು ಸ್ವಾಮಿಯ ಸಮೀಪಕ್ಕೆ ಬಂದರು.

**ನಮಿಶ್ಚ ವಿನಮಿಶ್ಚೇತಿ ಪ್ರತೀತೌ ಭಕ್ತಿನಿರ್ಭರೌ ।**
**ಭಗವತ್ಪಾದಸಂಸೇವಾಂ ಕರ್ತುಕಾಮೌ ಯುವೇಶಿನೌ ॥ ೯೨ ॥**

ನಮಿವಿನಮಿಗಳೆಂದು ಪ್ರಸಿದ್ಧರೂ ಭಕ್ತಿಭರಿತರೂ ಯುವಕರೂ ಆದ ಆ ರಾಜಕುಮಾರರು ಸ್ವಾಮಿಯ ಪಾದಸೇವೆಯನ್ನು ಮಾಡುವುದಕ್ಕೆ ಇಚ್ಛೆಯುಳ್ಳವರಾಗಿದ್ದರು.

**ಭೋಗೇಷು [೨]ಸತೃಷಾವೇತೌ ಪ್ರಸೀದೇತಿ ಕೃತಾನತೀ ।**
**ಪದದ್ವಯೇಸ್ಯ ಸಂಲಗ್ನೌ ಭೇಜತುರ್ಧ್ಯಾನವಿಘ್ನತಾಮ್ ॥ ೯೩ ॥**

ಭೋಗಗಳಲ್ಲಿ ಅಭಿಲಾಷೆಯುಳ್ಳ ಈ ರಾಜಪುತ್ರರು "ಸ್ವಾಮಿಯೇ! ಪ್ರಸನ್ನನಾಗು" ಎಂದು ಹೇಳಿ ನಮಸ್ಕಾರವನ್ನುಮಾಡಿ ಈ ಸ್ವಾಮಿಯ ಪಾದಗಳಲ್ಲಿ ಬಿದ್ದು ಸ್ವಾಮಿಯ ಧ್ಯಾನಕ್ಕೆ ವಿಘ್ನವನ್ನುಂಟುಮಾಡಿದರು.

**ತ್ವಯೇಶ ಪುತ್ರನಪ್ತೃಭ್ಯಃ ಸಂವಿಭಕ್ತಮಭೂದಿದಮ್ ।**
**ಸಾಮ್ರಾಜ್ಯಂ ವಿಸ್ಮೃತಾವಾವಾಮತೋ ಭೋಗಾನ್ಪ್ರಯಚ್ಛ [೩]ನೌ ॥ ೯೪ ॥**

"ಸ್ವಾಮಿಯೇ! ನೀನು ಮಕ್ಕಳುಮೊಮ್ಮಕ್ಕಳಿಗೆಲ್ಲ ಈ ರಾಜ್ಯವನ್ನು ವಿಭಾಗ ಮಾಡಿಕೊಟ್ಟು ನಮ್ಮನ್ನು ಮರೆತುಬಿಟ್ಟಿರುವೆ. ಈಕಾರಣದಿಂದ ನಮಗೆ ಭೋಗ ವಸ್ತುಗಳನ್ನು ಕೊಡು."

**ಇತ್ಯೇವ[೪]ಮನುಬಧ್ನಂತೌ ಯುಕ್ತಾಯುಕ್ತಾನಭಿಜ್ಞಕೌ ।**
**ತೌ ತದಾ ಜಲಪುಷ್ಪಾರ್ಘ್ಯೈ[೫]ರುಪಾಸಾಮಾಸತುರ್ವಿಭುಮ್ ॥ ೯೫ ॥**

ಈರೀತಿಯಾಗಿ ತೊಂದರೆಪಡಿಸುತ್ತಿರುವ ಯುಕ್ತಾಯುಕ್ತಗಳನ್ನರಿಯದ ಆ ರಾಜಕುಮಾರರು ಆಗ ಜಲ ಪುಷ್ಪ ಅರ್ಘ್ಯ ಇವುಗಳಿಂದ ಸ್ವಾಮಿಯನ್ನು ಪೂಜಿಸಿದರು.

**ತತಃ ಸ್ವಾಸನಕಂಪೇನ [೬]ತದಜ್ಞಾಸೀತ್ಫಣೀಶ್ವರಃ ।**
**ಧರಣೇಂದ್ರ ಇತಿ ಖ್ಯಾತಿಮುದ್ವಹನ್ಭಾವನಾಮರಃ ॥ ೯೬ ॥**

ತರುವಾಯ ಧರಣೇಂದ್ರನೆಂದು ಪ್ರಸಿದ್ಧಿಯನ್ನು ಹೊಂದಿದವನೂ ಭವನವಾಸಿ ದೇವನೂ ಆದ ನಾಗೇಂದ್ರನು ಸ್ವಾಮಿಯ ಧ್ಯಾನಕ್ಕೆ ವಿಘ್ನವಾದುದನ್ನು ಆಸನ ಕಂಪದಿಂದ ತಿಳಿದನು.

**ಜ್ಞಾತ್ವಾ ಚಾವಧಿಬೋಧೇನ ತತ್ಸರ್ವಂ [೭]ಸಂವಿಧಾನಕಮ್ ।**
**[೮]ಸಸಂಭ್ರಮಮಥೋತ್ಥಾಯ ಸೋಽಂತಿಕಂ ಭರ್ತುರಾಗಮತ್ ॥ ೯೭ ॥**

ಧರಣೇಂದ್ರನು ಅವಧಿಜ್ಞಾನದಿಂದ ಆ ಸಮಸ್ತವೃತ್ತಾಂತವನ್ನು ತಿಳಿದನಂತರ ಶೀಘ್ರವಾಗಿ ಎದ್ದು ಸ್ವಾಮಿಯಸಮೀಪಕ್ಕೆ ಬಂದನು.

**[೯]ಸಸಪರ್ಯಃ ಸಮುದ್ಭಿದ್ಯ ಭುವಃ ಪ್ರಾಪ್ತಃ ಸ ತತ್ಕ್ಷಣಾತ್ ।**
**ಸಮೈಕ್ಷಿಷ್ಟ ಮುನಿಂ ದೂರಾನ್ಮಹಾಮೇರುಮಿವೋನ್ನತಮ್ ॥ ೯೮ ॥**

ಆ ಧರಣೇಂದ್ರನು ಪೂಜಾದ್ರವ್ಯಸಹಿತನಾಗಿ ಭೂಮಿಯನ್ನು ಭೇದಿಸಿಬಂದ ಕೂಡಲೆ ಮಹಾಮೇರುಪರ್ವತದಂತೆ ಉನ್ನತನಾದ ವೃಷಭಮುನಿಯನ್ನು ದೂರದಿಂದ ನೋಡಿದನು.

**ಸಮಿದ್ಧಯಾ ತಪೋದೀಪ್ತ್ಯಾ ಜ್ವಲದ್ಭಾಸುರವಿಗ್ರಹಮ್ ।**
**ನಿವಾತನಿಶ್ಚಲಂ ದೀಪಮಿವ ಯೋಗೇ ಸಮಾಹಿತಮ್ ॥ ೯೯ ॥**

ವೃದ್ಧಿಹೊಂದುತ್ತಿರುವ ತಪಸ್ಸಿನ ದೀಪ್ತಿಯಿಂದ ಪ್ರಕಾಶಮಾನವಾದ ಶರೀರವುಳ್ಳವರೂ ಗಾಳಿಯಿಲ್ಲದಿರುವ ಪ್ರದೇಶದಲ್ಲಿ ನಿಶ್ಚಂಚಲವಾಗಿರುವ ದೀಪದಂತೆ, ಧ್ಯಾನದಲ್ಲಿ ಲೀನರೂ

**ಕರ್ಮಾಹುತೀರ್ಮಹಾಧ್ಯಾನಹುತಾಶೇ ದಗ್ಧುಮುದ್ಯತಮ್ ।**
**ಸುಯಜ್ಞಾನಮಿವಾ[೧]ಹೇಯದಯಾಪತ್ನೀಪರಿಗ್ರಹಮ್ ॥ ೧೦೦ ॥**

ಮಹಾಧ್ಯಾನವೆಂಬ ಬೆಂಕಿಯಲ್ಲಿ ಕರ್ಮಗಳೆಂಬ ಆಹುತಿಗಳನ್ನು ಸುಡುವುದಕ್ಕೆ ಪ್ರಯತ್ನಪರನಾದ ಉತ್ತಮ ಯಾಜ್ಞಿಕನಂತಿರುವವರೂ ಬಿಡುವುದಕ್ಕೆ ಯೋಗ್ಯವಲ್ಲದ ದಯೆಯೆಂಬ ಪತ್ನಿಯನ್ನು ಪರಿಗ್ರಹಿಸಿರುವವರೂ

**ಮಹೋದಯಮುದಗ್ರಾಂಗಂ ಸುವಂಶಂ ಮುನಿಕುಂಜರಮ್ ।**
**ರುದ್ಧಂ ತಪೋಮಹಾಲಾನಸ್ತಂಭೇ ಸದ್ವ್ರತರಜ್ಜುಭಿಃ ॥ ೧೦೧ ॥**

ಅಧಿಕವಾದ ಉದಯವುಳ್ಳವರೂ ಉನ್ನತವಾದ ದೇಹವುಳ್ಳವರೂ ಉತ್ತಮವಾದ ವಂಶವುಳ್ಳವರೂ ಮುನಿಶ್ರೇಷ್ಠರೂ ತಪಸ್ಸೆಂಬ ದೊಡ್ಡ ಸ್ತಂಭದಲ್ಲಿ ಶ್ರೇಷ್ಠವಾದ ವ್ರತಗಳೆಂಬ ಹಗ್ಗಗಳಿಂದ ಕಟ್ಟಲ್ಪಟ್ಟವರೂ

**ಅಕಂಪ್ರಸ್ಥಿತಿಮುತ್ತುಂಗಂ [೨]ಮಹಾಸತ್ತ್ವೈರುಪಾಸಿತಮ್ ।**
**ಮಹಾದ್ರಿಮಿವ ಬಿಭ್ರಾಣಂ [೩]ಕ್ಷಮಾಭರಸಹಂ ವಪುಃ ॥ ೧೦೨ ॥**

ನಿಶ್ಚಂಚಲವಾದ ಸ್ಥಿತಿಯುಳ್ಳವರೂ ಉನ್ನತರೂ ಕ್ಷತ್ರಿಯಮೊದಲಾದವರಿಂದಲೂ ದೊಡ್ಡಮೃಗಗಳಿಂದಲೂ ಸೇವಿಸಲ್ಪಡುವವರೂ ಭೂಮಿಯ ಭಾರವನ್ನು ಸಹಿಸುವ ದೊಡ್ಡ ಪರ್ವತದಂತೆ ಕ್ಷಮೆಯ ಭಾರವನ್ನು ಸಹಿಸುವ ಶರೀರವನ್ನು ಧರಿಸಿರುವವರೂ

**ಯೋಗಾಂತ[೪]ರ್ನಿಭೃತಾತ್ಮಾನಮತಿಗಂಭೀರಚೇಷ್ಟಿತಮ್ ।**
**ನಿವಾತಸ್ತಿಮಿತಸ್ಯಾಬ್ಧೇರ್ನ್ಯಕ್ಕುರ್ವಾಣಂ ಗಭೀರತಾಮ್ ॥ ೧೦೩ ॥**

ಧ್ಯಾನದಿಂದ ಒಳಗೆ ಲೀನವಾದ ಆತ್ಮನುಳ್ಳವರೂ ಅತ್ಯಂತ ಗಂಭೀರವಾದ ವ್ಯಾಪಾರವುಳ್ಳವರೂ ಗಾಳಿಯಿಲ್ಲದೆ ಸ್ತಿಮಿತವಾಗಿರುವ ಸಮುದ್ರದ ಗಂಭೀರತ್ವವನ್ನು ತಿರಸ್ಕರಿಸುವವರೂ

**ಪರೀಷಹಮಹಾವಾತೈ[೫]ರಕ್ಷೋಭ್ಯ[೬]ಮಜಲಾಶಯಮ್ ।**
**ದೋಷಯಾದೋಭಿರಸ್ಪೃಷ್ಟಮಪೂರ್ವಮಿವ ವಾರಿಧಿಮ್ ॥ ೧೦೪ ॥**

ಪರೀಷಹಗಳೆಂಬ ಮಹಾಗಾಳಿಗಳಿಂದ ಚಲಿಸುವುದಕ್ಕಾಗದಿರುವ ಸರೋವರದಂತಿರುವವರೂ ಜಡಾಭಿಪ್ರಾಯವಿಲ್ಲದಿರುವವರೂ ದೋಷಗಳೆಂಬ ಜಲಜಂತುಗಳಿಂದ ಸ್ಪರ್ಶಿಸಲ್ಪಡದಿರುವ ಅಪೂರ್ವವಾದ ಸಮುದ್ರದಂತಿರುವವರೂ ಆದ ಸ್ವಾಮಿಯನ್ನು

**ಸಾದರಂ ಚ ಸಮಾಸಾದ್ಯ ಪಶ್ಯನ್ಭಗವತೋ ವಪುಃ ।**
**ವಿಸಿಷ್ಮಿಯೇ ತಪೋಲಕ್ಷ್ಮ್ಯಾ [೭]ಪರಿರಬ್ಧ[೮]ಮಧೀದ್ಧಯಾ ॥ ೧೦೫ ॥**

ಆದರಪೂರ್ವಕವಾಗಿ ಕಂಡು ಅಧಿಕವಾಗಿ ವೃದ್ಧಿಹೊಂದಿದ ತಪಸ್ಸಿನ ಶೋಭೆಯಿಂದ ಯುಕ್ತವಾದ ಭಗವಂತನ ರೂಪವನ್ನು ನೋಡಿ ಆಶ್ಚರ್ಯಪಟ್ಟನು.

೧ ಆಗತೌ. ೨ ವಾಂಛಾಸಹಿತೌ. ೩ ಆವಯೋಃ. ೪ ಉಪರೋಧಯಂತೌ. ೫ ಆರಾಧನಾಂ ಚಕ್ರತುಃ. ೬ ಧ್ಯಾನವಿಘ್ನತ್ವಂ. ೭ ಪ್ರಚ್ಛನ್ನಕಾರ್ಯಂ, ವೃತ್ತಾಂತಮಿತ್ಯರ್ಥಃ. ೮ ಸಂಭ್ರಮೇಣ ಸಹಿತಂ. ೯ ಪೂಜಾದ್ರವ್ಯೇಣ ಸಹಿತಃ.

೧ ಅತ್ಯಾಜ್ಯಾ. ೨ ಕ್ಷತ್ರಿಯಾದಿಭಿಃ ದೇವವಿದ್ಯಾಧರಮಹಾಮೃಗೈಶ್ಚ. ೩ ಕ್ಷಾಂತೇಃ, ಭುವಶ್ಚ. ೪ ಅಂತರ್ಲೀನಾತ್ಮಾನಂ. ೫ ನಿಶ್ಚಲಂ. ೬ ಅಜಡಾಭಿಪ್ರಾಯಂ ಪಕ್ಷೇ ಅಜಲಾಶಯಂ. ೭ ಆಲಿಂಗಿತಂ. ೮ ಅತ್ಯರ್ಥಂ ಪ್ರವೃದ್ಧಯಾ.

**ಪರೀತ್ಯ ಪ್ರಣತೋ ಭಕ್ತ್ಯಾ ಸ್ತುತ್ವಾ ಚ ಸ ಜಗದ್ಗುರುಂ ।**
**ಕುಮಾರಾವಿತಿ ಸೋಪಾಯಮವದ[೧]ತ್ಸಂವೃತಾಕೃತಿಃ ॥ ೧೦೬ ॥**

ಆ ಧರಣೇಂದ್ರನು ಜಗದ್ಗುರುವಾದ ಸ್ವಾಮಿಗೆ ಪ್ರದಕ್ಷಿಣೆಬಂದು ಭಕ್ತಿಯಿಂದ ನಮಸ್ಕರಿಸಿ ಸ್ತೋತ್ರವನ್ನೂ ಮಾಡಿ ತನ್ನ ಆಕಾರವನ್ನು ಬದಲಾಯಿಸಿ ಬೇರೆ ಆಕಾರವನ್ನು ಧರಿಸಿಕೊಂಡು ಆ ನಮಿವಿನಮಿಗಳಿಗೆ ಉಪಾಯದಿಂದ ಮುಂದೆ ಹೇಳುವರೀತಿಯಾಗಿ ಹೇಳಿದನು.

**ಯುವಾಂ ಯುವಾನೌ ದೃಶ್ಯೇಥೇ ಸಾಯುಧೌ ವಿಕೃತಾಕೃತೀ ।**
**ತಪೋವನಂ ಚ ಪಶ್ಯಾಮಿ ಪ್ರಶಾಂತಮಿದಮೂರ್ಜಿತಮ್ ॥ ೧೦೭ ॥**

"ಯುವಕರಾದ ನೀವು ಆಯುಧಪಾಣಿಗಳೂ ವಿಕಾರವಾದ ಆಕಾರವುಳ್ಳವರೂ ಆಗಿ ಕಾಣುತ್ತೀರಿ. ಶ್ರೇಷ್ಠವಾದ ಈ ತಪೋವನವಾದರೋ ಅತ್ಯಂತ ಶಾಂತವಾಗಿದೆ.

**ಕ್ವೇದಂ ತಪೋವನಂ ಶಾಂತಂ ಕ್ವ ಯುವಾಂ ಭೀಷಣಾಕೃತೀ ।**
**ಪ್ರಕಾಶತಮಸೋರೇಷ ಸಂಗಮೋ [೨]ನನ್ವಸಂಗತಃ ॥ ೧೦೮ ॥**

ಶಾಂತವಾದ ಈ ತಪೋವನವೆಲ್ಲಿ ? ಭಯಂಕರವಾದ ಆಕಾರವುಳ್ಳ ನೀವೆಲ್ಲಿ ? ಇದು ಪ್ರಕಾಶ ಮತ್ತು ಕತ್ತಲೆಗಳ ಅಸಂಗತವಾದ ಸಮಾಗಮದಂತಿದೆ.

**ಅಹೋ ನಿಂದ್ಯತರಾ ಭೋಗಾ ಯೈರಸ್ಥಾನೇಪಿ ಯೋಜಯೇತ್ ।**
**ಪ್ರಾರ್ಥನಾಮರ್ಥಿನಾಂ ಕಾ ವಾ ಯುಕ್ತಾಯುಕ್ತವಿಚಾರಣಾ ॥ ೧೦೯ ॥**

ಭೋಗಾಭಿಲಾಷೆಯುಳ್ಳ ಮನುಷ್ಯನು ಅಯೋಗ್ಯವಾದ ಸ್ಥಾನದಲ್ಲಿಯೂ ಆ ಭೋಗಗಳನ್ನು ಯಾಚಿಸುವುದರಿಂದ ಅವು ಅತ್ಯಂತ ನಿಂದ್ಯವಾದುವುಗಳು. ಅಹೋ ! ಯಾಚಕರಿಗೆ ಯುಕ್ತಾಯುಕ್ತವಿಚಾರವೆಂಬುದಾವುದು ? ಯುಕ್ತಾಯುಕ್ತವಿಚಾರ ವಿಲ್ಲವೆಂದು ಭಾವವು.

**ಪ್ರವಾಂಛಥೋ ಯುವಾಂ ಭೋಗಾನ್ದೇವೋಯಂ ಭೋಗನಿಃಸ್ಪೃಹಃ ।**
**[೩]ತ[೪]ದ್ವಾಂ ಶಿಲಾತಲೇಂಭೋಜವಾಂಛಾ [೫]ಚಿತ್ರೀಯತೇದ್ಯ [೬]ನಃ ॥೧೧೦ ॥**

ನೀವು ಭೋಗಗಳನ್ನಿಚ್ಛಿಸುತ್ತೀರಿ. ಈ ಸ್ವಾಮಿಯು ಭೋಗಗಳಲ್ಲಿ ನಿಸ್ಪೃಹ ರಾಗಿದ್ದಾರೆ. ಆದುದರಿಂದ ಈಗ ಕಲ್ಲಿನ ಮೇಲೆ ಕಮಲದ ಇಚ್ಛೆಯಂತಿರುವ ನಿಮ್ಮ ಇಚ್ಛೆಯು ನಮಗೆ ಆಶ್ಚರ್ಯವನ್ನುಂಟುಮಾಡುತ್ತದೆ.

**ಸಸ್ಪೃಹಃ ಸ್ವಯಮನ್ಯಾಂಶ್ಚ ಸಸ್ಪೃಹಾನೇವ ಮನ್ಯತೇ ।**
**ಕೋ ನಾಮ ಸ್ಪೃಹಯೇದ್ಧೀಮಾನ್ಭೋಗಾ[೭]ನ್ಪರ್ಯಂತತಾಪಿನಃ ॥ ೧೧೧ ॥**

ಭೋಗಗಳಲ್ಲಿ ಇಚ್ಛೆಯುಳ್ಳ ಪುರುಷನು ಬೇರೆಯವರನ್ನೂ ಇಚ್ಛೆಯುಳ್ಳವರ ನ್ನಾಗಿಯೇ ತಿಳಿಯುತ್ತಾನೆ. ಪರ್ಯವಸಾನ(ಅಂತ)ದಲ್ಲಿ ದುಃಖವನ್ನುಂಟು ಮಾಡುವ ಭೋಗಗಳನ್ನು ಬುದ್ಧಿಶಾಲಿಯಾದ ಯಾವನು ತಾನೆ ಇಚ್ಛಿಸುವನು ?

**[೮]ಆಪಾತಮಾತ್ರರಮ್ಯಾಣಾಂ ಭೋಗಾನಾಂ ವಶಗಃ ಪುಮಾನ್ ।**
**ಮಹಾನಪ್ಯರ್ಥಿತಾದೋಷಾತ್ಸದ್ಯಸ್ತೃಣಲಘುರ್ಭವೇತ್ ॥ ೧೧೨ ॥**

ಅನುಭವಿಸುವಕಾಲದಲ್ಲಿ ಮಾತ್ರ ರಮಣೀಯವಾಗಿರುವ ಭೋಗಗಳಿಗೆ ಅಧೀನ ನಾದ ಪುರುಷನು ದೊಡ್ಡವ(ಮಹಾತ್ಮ)ನಾಗಿದ್ದರೂ ಯಾಚಕತ್ವದ ದೋಷದಿಂದ ಆಗಲೇ ಹುಲ್ಲಿನಂತೆ ಲಘುವಾಗುವನು.

**ಯುವಾಂ ಚೇ[೯]ದ್ಭೋಗಕಾಮ್ಯಂತೌ ವ್ರಜತಂ ಭರತಾಂತಿಕಮ್ ।**
**ಸ ಹಿ ಸಾಮ್ರಾಜ್ಯ[೧೦]ಧೌರೇಯೋ ವರ್ತತೇ ನೃಪಪುಂಗವಃ ॥ ೧೧೩ ॥**

೧ ಆಕಾರಾಂತರೇಣಾಚ್ಛಾದಿತನಿಜಾಕಾರಃ. ೨ ಪ್ರಶ್ನಾವಧಾರಣಾನುಜ್ಞಾನುನಯಾಮಂತ್ರಣೇ ನನು. ೩ ಕಾರಣಾತ್. ೪ ಯುವಯೋಃ. ೫ ಚಿತ್ರಂ ಕರೋತಿ. ೬ ಅಸ್ಮಾಕಂ. ೭ ಪರಿಣಮನಕಾಲೇ. ೮ ಅನುಭವಮಾತ್ರರಮ್ಯಾಣಾಂ. ೯ ಭೋಗಮಿಚ್ಛಂತೌ. ೧೦ ಧುರಂಧರಃ.

ನೀವು ಭೋಗಗಳನ್ನಿಚ್ಛಿಸುವವರಾದರೆ ಭರತನ ಸಮೀಪಕ್ಕೆ ಹೋಗಿ. ರಾಜ ಶ್ರೇಷ್ಠನಾದ ಆ ಭರತನಾದರೋ ರಾಜ್ಯಭಾರವನ್ನು ವಹಿಸಿದ್ದಾನೆ.

**ಭಗವಾಂಸ್ತ್ಯಕ್ತರಾಗಾದಿಸಂಗೋ ದೇಹೇಪಿ ನಿಃಸ್ಪೃಹಃ ।**
**ಕುತೋ [೧]ವಾಮಧುನಾ ದದ್ಯಾದ್ಭೋಗಾನ್ಭೋಗಸ್ಪೃಹಾವತೋಃ ॥**

ರಾಗಾದಿಪರಿಗ್ರಹಗಳನ್ನು ತೊರೆದ ಭಗವಂತನು ತನ್ನ ದೇಹದಲ್ಲಿಯೂ ಇಚ್ಛೆಯಿಲ್ಲದವನಾಗಿದ್ದಾನೆ. ಭೋಗಗಳನ್ನಿಚ್ಛಿಸುವ ನಿಮಗೆ ಈಗ ಭೋಗಗಳನ್ನು ಎಲ್ಲಿಂದ ಕೊಡುವನು ?

**[೨]ತತೋಽಲ[೩]ಮುಪರುಧ್ಯೈನಂ ದೇವಂ ಮುಕ್ತ್ಯರ್ಥಮುದ್ಯತಮ್ ।**
**ಭುಕ್ತಿಕಾಮೌ ಯುವಾಂ ಯಾತಂ ಭರತಂ ಪರ್ಯುಪಾಸಿತುಮ್॥ ೧೧೫ ॥**

ಆದುದರಿಂದ ಮುಕ್ತಿಗೋಸ್ಕರ ಪ್ರಯತ್ನಪಡುತ್ತಿರುವ ಈ ಸ್ವಾಮಿಯನ್ನು ನಿರ್ಬಂಧಪಡಿಸುವುದು ಸಾಕು. ಭೋಗಗಳನ್ನಿಚ್ಛಿಸುವ ನೀವು ಭರತನನ್ನು ಸೇವಿಸು ವುದಕ್ಕೋಸ್ಕರ ಹೊರಟುಹೋಗಿ."

**ಇತಿ ತದ್ವಚನಸ್ಯಾಂತೇ ಕುಮಾರೌ ಪ್ರತ್ಯವೋಚತಾಮ್ ।**
**ಪರಕಾರ್ಯೇಷು ವಃ ಕಾ[೪]ಸ್ಥಾ ತೂಷ್ಣೀಂ ಯಾತ ಮಹಾಧಿಯಃ ॥**

ಈಪ್ರಕಾರವಾಗಿ ಆ ಧರಣೇಂದ್ರನು ಹೇಳಿದನಂತರ ಆ ನಮಿವಿನಮಿಕುಮಾರರು ಮುಂದೆಹೇಳುವಂತೆ ಉತ್ತರವನ್ನಿತ್ತರು. "ಮಹಾಬುದ್ಧಿಶಾಲಿಗಳೇ ! ಬೇರೆಯವರ ಕಾರ್ಯಗಳಲ್ಲಿ ನಿಮಗೇನು ಕೆಲಸ ? ಸುಮ್ಮನೆ ಹೊರಟು ಹೋಗಿ.

**ಯದತ್ರ ಯುಕ್ತ[೫]ಮನ್ಯದ್ವಾ ಜಾನೀಮಸ್ತದ್ದ್ವಯಂ ವಯಮ್ ।**
**ಅನಭಿಜ್ಞಾ ಭವಂತೋ[೬]ತ್ರ ಸಾಧಯಂತು ಯಥೇಹಿತಮ್ ॥ ೧೧೭ ॥**

ಈ ವಿಷಯದಲ್ಲಿ ಯುಕ್ತಾಯುಕ್ತಗಳೆರಡೂ ನಮಗೆ ಗೊತ್ತಿದೆ. ನಮ್ಮ ವಿಷಯದಲ್ಲಿ ನಿಮಗೆ ತಿಳುವಳಿಕೆಯಿಲ್ಲ. ನಿಮ್ಮ ಇಷ್ಟಕಾರ್ಯವನ್ನು ಸಾಧಿಸಿರಿ.

**[೭]ವರ್ಷೀಯಾಂಸೋ [೮]ಯವೀಯಾಂಸ ಇತಿ ಭೇದೋ ವಯಸ್ಕೃತಃ ।**
**ನ ಬೋಧವೃದ್ಧಿರ್ವಾರ್ಧಕ್ಯೇ ನ ಯೂನ್ಯಪಚಯೋ ಧಿಯಃ ॥ ೧೧೮ ॥**

ವೃದ್ಧರು ಯುವಕರು ಎಂಬ ಭೇದವು ವಯಸ್ಸಿನಿಂದುಂಟಾಗುತ್ತದೆ. ವೃದ್ಧಾಪ್ಯ ದಲ್ಲಿ ಜ್ಞಾನವು ವೃದ್ಧಿಯಾಗುವುದಿಲ್ಲ. ಯುವಕನಲ್ಲಿ ಜ್ಞಾನವು ಕ್ಷೀಣವಾಗುವುದಿಲ್ಲ. ವಯಸ್ಸಿನಿಂದ ವೃದ್ಧರಾದಮಾತ್ರಕ್ಕೆ ಜ್ಞಾನಿಗಳೆಂದು ಹೇಳಲಾಗುವುದಿಲ್ಲವೆಂದು ಭಾವವು.

**ವಯಸಃ ಪರಿಣಾಮೇನ ಧಿಯಃ ಪ್ರಾಯೇಣ ಮಂದಿಮಾ ।**
**[೯]ಕೃತಾತ್ಮನಾಂ ವಯಸ್ಯಾದ್ಯೇ ನನು ಮೇಧಾ ವಿವರ್ಧತೇ ॥ ೧೧೯ ॥**

ಪ್ರಾಯಶಃ ವಯಸ್ಸಾದಹಾಗೆಲ್ಲ ಬುದ್ಧಿಯು ಮಂಕಾಗುತ್ತದೆ. ಪುಣ್ಯಶಾಲಿಗಳಿಗೆ ಪ್ರಥಮವಯಸ್ಸಿನಲ್ಲಿಯೂ ಬುದ್ಧಿಶಕ್ತಿಯು ವೃದ್ಧಿಯಾಗುತ್ತದೆ.

**ನವಂ ವಯೋ ನ ದೋಷಾಯ ನ ಗುಣಾಯ [೧೦]ದಶಾಂತರಮ್ ।**
**ನವೋಪೀಂದುರ್ಜನಾಹ್ಲಾದೀ ದಹತ್ಯಗ್ನಿರ್ಜರನ್ನಪಿ ॥ ೧೨೦ ॥**

ತಾರುಣ್ಯ ವಯಸ್ಸು ದೋಷಾಸ್ಪದವಾದುದಲ್ಲವು. ಮುದಿತನವು ಗುಣಾಸ್ಪದ ವಾದುದಲ್ಲವು. ಚಂದ್ರನು ನವೀನನಾಗಿದ್ದರೂ ಜನರಿಗೆ ಆನಂದವನ್ನುಂಟು ಮಾಡುತ್ತಾನೆ. ಬೆಂಕಿಯು ಹಳೆಯದಾಗಿದ್ದರೂ ಸುಡುತ್ತದೆ.

**ಅಪೃಷ್ಟಃ ಕಾರ್ಯಮಾಚಷ್ಟೇ ಯಃ ಸ ಧೃಷ್ಟತರೋ ಮತಃ ।**
**ನ [೧೧]ಪಿಪೃಚ್ಛಿಷಿತಾ ಯೂಯಮಾವಾಭ್ಯಾಂ ಕಾರ್ಯಮೀದೃಶಮ್ ॥**

೧ ಯುವಯೋಃ. ೨ ಕಾರಣಾತ್. ೩ ಉಪರೋಧಂ ಕೃತ್ವಾ. ೪ ತಾತ್ಪರ್ಯಂ. ೫ ಆಯುಕ್ತಂ. ೬ ಅಸ್ಮದ್ವಿಷಯೇ. ೭ ವೃದ್ಧಾಃ. ೮ ಯುವಾನಃ. ೯ ಪುಣ್ಯಾತ್ಮನಾಂ. ೧೦ ವಾರ್ಧಕ್ಯಂ. ೧೧ ಪ್ರಷ್ಟುಮಿಷ್ಟಾಃ.

ಪ್ರಶ್ನೆಮಾಡಲ್ಪಡದೆ ಕಾರ್ಯವನ್ನು ಹೇಳುವವನು ದಿಟ್ಟತನವುಳ್ಳವನೆಂದು ಲೋಕದಲ್ಲಿ ಪ್ರಸಿದ್ಧಿಯಿದೆ. ಇಂತಹ ಕಾರ್ಯವಾಗಬೇಕೆಂದು ನಾವು ನಿಮ್ಮನ್ನು ಕೇಳಲಿಲ್ಲ.

**ಅಪೃಷ್ಟಕಾರ್ಯ[1]ನಿರ್ದೇಶೈ[2]ರ್ವ್ಯಲೀಕಾನಿಷ್ಟ[3]ಚಾಟುಭಿಃ ।**
**ಛಲಯಂತಿ ಖಲಾ ಲೋಕಂ ನ ಸದ್ವೃತ್ತಾ ಭವದ್ವಿಧಾಃ ॥ ೧೨೨ ॥**

ಕೇಳಲ್ಪಡದಿರುವ ಕಾರ್ಯದ ಉಪದೇಶಗಳಿಂದಲೂ ಅಸತ್ಯವೂ ಅನಿಷ್ಟವೂ ಆದ ಚಾಟುವಚನಗಳಿಂದಲೂ ದುಷ್ಟರು ಲೋಕವನ್ನು ಮೋಸಗೊಳಿಸುತ್ತಾರೆ. ತಮ್ಮಂತಹ ಸದಾಚಾರಿಗಳು ಮೋಸಗೊಳಿಸುವುದಿಲ್ಲ.

**ನಾಮ್ನುಪಷ್ಟಭಾಷಿಣೀ ಜಿಹ್ವಾ ಚೇಷ್ಟಾ ನಾನಿಷ್ಟಕಾರಿಣೀ ।**
**ನಾನ್ಯೋಪಘಾತಪರುಷಾ ಸ್ಮೃತಿಃ ಸ್ವಪ್ನೇಪಿ ಧೀಮತಾಮ್ ॥ ೧೨೩ ॥**

ಬುದ್ಧಿಶಾಲಿಗಳ ನಾಲಿಗೆಯು ಸ್ವಪ್ನದಲ್ಲಿಯೂ ಅಶುದ್ಧಭಾಷಣವನ್ನು ಮಾಡುವುದಿಲ್ಲ; ಅವರ ವ್ಯಾಪಾರವು ಅನಿಷ್ಟಕಾರ್ಯವನ್ನು ಮಾಡುವುದಲ್ಲ; ಅವರ ಚಿಂತನೆಯು ಬೇರೆಯವರಿಗೆ ಹಾನಿಯನ್ನು ಮಾಡುವುದಿಲ್ಲ.

**ವಿದಿತಾಖಿಲ[4]ವೇದ್ಯಾನಾಂ ನೋಪದೇಶ್ಯೋ ಭವಾದೃಶಾಮ್ ।**
**ನ್ಯಾಯೋಸ್ಮದಾದಿಭಿಃ ಸಂತೋ ಯತೋ ನ್ಯಾಯೈಕಜೀವಿಕಾಃ ॥ ೧೨೪ ॥**

ಸತ್ಪುರುಷರು ನ್ಯಾಯದಿಂದಲೇ ಜೀವಿಸುವವರಾಗಿರುವುದರಿಂದ ಸಮಸ್ತ ವಿಷಯಗಳನ್ನೂ ತಿಳಿದಿರುವ ತಮ್ಮಂತಹವರಿಗೆ ನಾವು ನ್ಯಾಯವನ್ನು ಉಪದೇಶ ಮಾಡತಕ್ಕುದಲ್ಲವು.

**ಶಾಂತೋ ವಯೋನುರೂಪೋಯಂ ವೇಷಃ ಸೌಮ್ಯೇಯಮಾಕೃತಿಃ ।**
**ವಚಃ ಪ್ರಸನ್ನ[5]ಮೂರ್ಜಸ್ವಿ ವ್ಯಾಚಷ್ಟೇ ವಃ ಪ್ರಬುದ್ಧತಾಮ್ ॥ ೧೨೫ ॥**

ವಯಸ್ಸಿಗೆ ಅನುರೂಪವೂ ಶಾಂತವೂ ಆದ ಈ ವೇಷವೂ ಸೌಮ್ಯವಾದ ಈ ಆಕೃತಿಯೂ ಪ್ರಸನ್ನವೂ ತೇಜಸ್ವಿಯೂ ಆದ ವಚನವೂ ತಾವು ಬುದ್ಧಿಶಾಲಿಗಳೆಂಬುದನ್ನು ಹೇಳುತ್ತವೆ.

**ಬಹಿಃ ಸ್ಫುರತ್ಕಿಮಪ್ಯಂತರ್ಗೂಢಂ ತೇಜೋ ಜನಾತಿಗಮ್ ।**
**ಮಹಾನುಭಾವತಾಂ ವಕ್ತಿ ವಪು[6]ರಪ್ರಾಕೃತಂ ಚ ವಃ ॥ ೧೨೬ ॥**

ಒಳಗೆ ಗುಪ್ತವಾಗಿದ್ದು ಹೊರಗೆ ಸ್ವಲ್ಪ ಪ್ರಕಾಶಿಸುತ್ತಿರುವುದೂ ಲೋಕೋತ್ತರವೂ ಆದ ತಮ್ಮ ತೇಜಸ್ಸೂ ಅಸಾಧಾರಣವಾದ ತಮ್ಮ ರೂಪವೂ ತಾವು ಮಹಾನುಭಾವರೆಂಬುದನ್ನು ತಿಳಿಸುತ್ತವೆ.

**ಇತ್ಯಭಿವ್ಯಕ್ತ[7]ವೈಶಿಷ್ಟ್ಯಾ ಭವಂತೋ ಭದ್ರಶೀಲಕಾಃ ।**
**ಕಾರ್ಯೇಸ್ಮದೀಯೇ ಮುಹ್ಯಂತಿ ನ ವಿದ್ಮಃ ಕಿಂನು ಕಾರಣಮ್॥ ೧೨೭ ॥**

ಈರೀತಿಯಾಗಿ ವ್ಯಕ್ತವಾದ ವಿಶಿಷ್ಟತೆಯುಳ್ಳವರೂ ಭದ್ರಸ್ವಭಾವವುಳ್ಳವರೂ ಆದ ತಾವು ನಮ್ಮ ಕಾರ್ಯದಲ್ಲಿ ಭ್ರಾಂತರಾಗುತ್ತೀರಿ. ಕಾರಣವೇನೋ ನಾವು ತಿಳಿಯೆವು.

**ಗುರು[8]ಪ್ರಸಾಧನಂ ಶ್ಲಾಘ್ಯಮಾವಾಭ್ಯಾಂ ಫಲಮೀಪ್ಸಿತಮ್ ।**
**ಯೂಯಂ [9]ತತ್ಪ್ರತಿಬಂಧಾರಃ ಪರಕಾರ್ಯೇಷು [10]ಶೀತಲಾಃ॥ ೧೨೮ ॥**

ನಾವು ಸ್ವಾಮಿಯ ಶ್ಲಾಘ್ಯವಾದ ಪ್ರಸನ್ನತೆಯನ್ನು ಫಲವನ್ನಾಗಿ ಇಚ್ಛಿಸಿದೆವು. ನಮ್ಮ ಇಷ್ಟಕಾರ್ಯಕ್ಕೆ ಪ್ರತಿಬಂಧಕರಾದ ನೀವು ಪರರ ಕಾರ್ಯಗಳಲ್ಲಿ ಬುದ್ಧಿಹೀನರಾಗಿದ್ದೀರಿ.

೧ ಉಪದೇಶೈಃ. ೨ ಅಸತ್ಯಃ. ೩ ಚಾಟುಕಾರ್ಯೈಃ. ೪ ಜ್ಞೇಯಪದಾರ್ಥಾನಾಂ. ೫ ತೇಜಸ್ವಿ. ೬ ಅಸಾಧಾರಣಂ. ೭ ವಿಶಿಷ್ಟತ್ವಸಹಿತಾಃ. ೮ ಪ್ರಸನ್ನತಾ. ೯ ಅಸ್ಮದಭೀಷ್ಟಪ್ರತಿನಿರೋಧಕಾಃ. ೧೦ ಜಡಬುದ್ಧಯಃ.

**ಪರೇಷಾಂ ವೃದ್ಧಿಮಾಲೋಕ್ಯ ನ[1]ನ್ವಸೂಯತಿ ದುರ್ಜನಃ ।**
**ಯುಷ್ಮಾದೃಶಾಂ ತು ಮಹತಾಂ ಸತಾಂ ಪ್ರತ್ಯುತ ಸಾ ಮುದೇ॥ ೧೨೯ ॥**

ಪರರ ವೃದ್ಧಿಯನ್ನು ನೋಡಿ ದುರ್ಜನನಲ್ಲವೆ ಅಸೂಯೆಪಡುತ್ತಾನೆ ? ಸತ್ಪುರುಷರಾದ ನಿಮ್ಮಂತಹ ಮಹಾತ್ಮರಿಗಾದರೋ ಪರರ ವೃದ್ಧಿಯು ಸಂತೋಷವನ್ನುಂಟುಮಾಡುತ್ತದೆ.

**ವನೇಪಿ ವಸತೋ ಭರ್ತುಃ ಪ್ರಭುತ್ವಂ ಕಿಂ ಪರಿಚ್ಯುತಮ್ ।**
**ಪಾದಮೂಲೇ ಜಗದ್ವಿಶ್ವಂ ಯಸ್ಯಾದ್ಯಾಪಿ ಚರಾಚರಮ್ ॥ ೧೩೦ ॥**

ಯಾವ ಸ್ವಾಮಿಯ ಪಾದಮೂಲದಲ್ಲಿ ಈಗಲೂ ಸಮಸ್ತವಾದ ಚರಾಚರಜಗತ್ತು ಇದೆಯೋ ಅಂತಹ ಸ್ವಾಮಿಯು ವನದಲ್ಲಿ ವಾಸಮಾಡುತ್ತಿದ್ದರೂ ಪ್ರಭುತ್ವವು ನಷ್ಟವಾಯಿತೆ ?

**ಕಲ್ಪಾನೋಕಹಮುತ್ಸೃಜ್ಯ ಕೋ ನಾಮಾನ್ಯಂ ಮಹೀರುಹಮ್ ।**
**ಸೇವೇತ ಪಟುಧೀರೀಪ್ಸನ್ಫಲಂ ವಿಪುಲ[2]ಮೂರ್ಜಿತಮ್ ॥ ೧೩೧ ॥**

ವೃದ್ಧಿಹೊಂದುತ್ತಿರುವ ಅಧಿಕವಾದ ಫಲವನ್ನಿಚ್ಛಿಸುವ ಯಾವ ಬುದ್ಧಿಶಾಲಿಯು ತಾನೆ ಕಲ್ಪವೃಕ್ಷವನ್ನು ಬಿಟ್ಟು ಬೇರೆ ವೃಕ್ಷವನ್ನು ಸೇವಿಸುವನು ?

**ಮಹಾಬ್ಧಿಮಥವಾ ಹಿತ್ವಾ ರತ್ನಾರ್ಥೀ ಕಿಮು ಸಂಶ್ರಯೇತ್ ।**
**ಪಲ್ವಲಂ ಶುಷ್ಕಶೈವಾಲಂ ಶಾಲ್ಯರ್ಥೀ ವಾ[3]ಪಲಾಲಕಮ್ ॥ ೧೩೨ ॥**

ಅಥವಾ ರತ್ನಗಳನ್ನಿಚ್ಛಿಸುವವನು ಸಮುದ್ರವನ್ನು ಬಿಟ್ಟು ಒಣಗಿದ ಆವಟಿಯುಳ್ಳ ಹಳ್ಳವನ್ನು ಹೊಂದುವನೇ ?ಭತ್ತದ ಅಪೇಕ್ಷೆಯುಳ್ಳವನು ಜಳ್ಳನ್ನು ಹೊಂದುವನೇ ?

**ಭರತಸ್ಯ ಗುರೋಶ್ಚಾಪಿ ಕಿಮು ನಾಸ್ತ್ಯಂತರಂ ಮಹತ್ ।**
**ಗೋಷ್ಪದಸ್ಯ ಸಮುದ್ರೇಣ [4]ಸಮಕಕ್ಷ್ಯತ್ವಮಸ್ತಿ ವಾ ॥ ೧೩೩ ॥**

ಭರತನಿಗೂ ಗುರುವಿಗೂ ಬಹಳ ವ್ಯತ್ಯಾಸವಿಲ್ಲವೆ ? ಗೋವಿನ ಹೆಜ್ಜೆಗೆ ಸಮುದ್ರದೊಡನೆ ಸಾದೃಶ್ಯವಿದೆಯೇ ?

**[5]ಸ್ವಚ್ಛಾಂಭಃಕಲಿತಾ ಲೋಕೇ ಕಿಂ ನ ಸಂತಿ ಜಲಾಶಯಾಃ ।**
**ಚಾತಕಸ್ಯಾಗ್ರಹಃ ಕೋಪಿ ಯದ್ವಾಂಛತ್ಯಂಬುದಾತ್ಪಯಃ ॥ ೧೩೪ ॥**

ಲೋಕದಲ್ಲಿ ಸ್ವಚ್ಛಜಲಯುಕ್ತವಾದ ಸರೋವರಗಳಿಲ್ಲವೇನು ? ಆದರೆ ಚಾತಕಪಕ್ಷಿಗೆ ಯಾವುದೋ ಹಠವಿರುವುದರಿಂದ ಮೇಘದಿಂದ ಜಲವನ್ನ ಪೇಕ್ಷಿಸುತ್ತದೆ.

**ತದುನ್ನತೇರಿದಂ [6]ವಿತ್ತ [7]ವೃತ್ತಂ ಯದ್ವಿಪುಲಂ ಫಲಮ್ ।**
**ವಾಂಛಂತಿ ಪರಮೋದಾರಂ ಸ್ಥಾನಮಾಶ್ರಿತ್ಯ ಮಾನಿನಃ ॥ ೧೩೫ ॥**

ಮಾನಿಷ್ಠರು ಶ್ರೇಷ್ಠವಾದ ಸ್ಥಾನವನ್ನು ಹೊಂದಿ ಅಧಿಕವಾದ ಫಲವನ್ನಿಚ್ಛಿಸುವುದರಿಂದ ಇದು ಶ್ರೇಷ್ಠತೆಯ ನಡತೆಯೆಂದು ತಿಳಿಯಿರಿ.''

**ಇತ್ಯದೀನತರಾಂ ವಾಚಂ ಶ್ರುತ್ವಾಹೀಂದ್ರಃ ಕುಮಾರಯೋಃ ।**
**ನಿತರಾಂ ಸೋತುಷಚ್ಚಿತ್ತೇ ಶ್ಲಾಘ್ಯಂ ಧೈರ್ಯಂ ಹಿ ಮಾನಿನಾಮ್ ॥**

ಈಪ್ರಕಾರವಾಗಿ ಆ ನಮಿವಿನಮಿಕುಮಾರರ ದೀನಭಾವವಿಲ್ಲದಿರುವ ವಚನವನ್ನು ಕೇಳಿ ಆ ಧರಣೇಂದ್ರನು ಮನಸ್ಸಿನಲ್ಲಿ ಬಹಳ ಸಂತೋಷಪಟ್ಟನು. ಮಾನವಂತರ ಧೈರ್ಯವು ಶ್ಲಾಘ್ಯವಾದುದಲ್ಲವೆ ?

**ಅಹೋ ಮಹೇಚ್ಛತಾ ಯೂನೋರಹೋ ಗಾಂಭೀರ್ಯಮೇತಯೋಃ ।**
**ಅಹೋ ಗುರೌ ಪರಾ ಭಕ್ತಿರಹೋ ಶ್ಲಾಘ್ಯಾ ಸ್ಪೃಹಾನಯೋಃ ॥ ೧೩೭ ॥**

೧ ಈರ್ಷ್ಯಾಂ ಕರೋತಿ. ೨ ಉಪರ್ಯುಪರಿ ಪ್ರವರ್ಧಮಾನಂ. ೩ ನಿಷ್ಫಲಕಂ. ೪ ಸದೃಶತ್ವಂ. ೫ ಸ್ವಚ್ಛಾಂಭಸಾ ಯುಕ್ತಾಃ. ೬ ಜಾನೀತ. ೭ ವರ್ತನಂ.

"ಈ ಯುವಕರ ಅಧಿಕವಾದ ಇಚ್ಛೆಯೂ ಇವರ ಗಾಂಭೀರ್ಯವೂ ಸ್ವಾಮಿಯಲ್ಲಿ ಉತ್ಕೃಷ್ಟವಾದ ಭಕ್ತಿಯೂ ಶ್ಲಾಘ್ಯವಾದ ಇವರ ಇಚ್ಛೆಯೂ ಆಶ್ಚರ್ಯಕರವಾಗಿದೆ."

**ಇತಿ ಪ್ರೀತಸ್ತದಾತ್ಮೀಯಂ ರೂಪಂ ದಿವ್ಯಂ ಪ್ರದರ್ಶಯನ್ ।**
**[೧]ಪುನರಿತ್ಯವದತ್ಪ್ರೀತಿಲತಾಯಾಃ ಕುಸುಮಂ ವಚಃ ॥ ೧೩೮ ॥**

ಎಂದು ಧರಣೇಂದ್ರನು ಸಂತೋಷಪಟ್ಟು ಆಗ ತನ್ನ ದಿವ್ಯರೂಪವನ್ನು ತೋರಿಸಿ ಪುನಃ ಪ್ರೀತಿಯೆಂಬ ಲತೆಯ ಪುಷ್ಪದಂತಿರುವ ವಚನವನ್ನು ಮುಂದೆಹೇಳುವ ರೀತಿಯಾಗಿ ಹೇಳಿದನು.

**ಯುವಾಂ ಯುವಜರಂತೌ [೨]ಸ್ಥ [೩]ಸ್ತುಷ್ಟೋ [೪]ವಾಂ ಧೀರಚೇಷ್ಟಿತೈಃ ।**
**ಅಹಂ ಹಿ ಧರಣೋ ನಾಮ ಫಣಿನಾಂ ಪತಿರಗ್ರಿಮಃ ॥ ೧೩೯ ॥**

"ಎಲೈ ಕುಮಾರರೇ ! ನೀವು ವಯಸ್ಸಿನಲ್ಲಿ ಯುವಕರಾಗಿದ್ದರೂ ಆಚರಣೆಯಲ್ಲಿ ವೃದ್ಧರಾಗಿದ್ದೀರಿ. ನಿಮ್ಮ ಧೈರ್ಯವಾದ ಆಚರಣೆಗಳಿಂದ ನಾನು ಸಂತುಷ್ಟನಾದೆನು. ನಾನು ನಾಗದೇವತೆಗಳಿಗೆ ಅಧಿಪತಿಯಾದ ಧರಣೇಂದ್ರನು.

**ಮಾಂ [೫]ವಿತ್ತಂ ಕಿಂಕರಂ ಭರ್ತುಃ ಪಾತಾಲಸ್ವರ್ಗವಾಸಿನಮ್ ।**
**ಯುವಯೋರ್ಭೋಗಭಾಗಿತ್ವಂ ವಿಧಾತುಂ ಸಮುಪಾಗತಮ್॥ ೧೪೦ ॥**

ಪಾತಾಳಸ್ವರ್ಗದಲ್ಲಿ ವಾಸಮಾಡುವ ನನ್ನನ್ನು ಸ್ವಾಮಿಯ ಸೇವಕನನ್ನಾಗಿ ತಿಳಿಯಿರಿ. ನಿಮಗೆ ಭೋಗವಸ್ತುಗಳನ್ನು ಕಲ್ಪಿಸಿಕೊಡುವುದಕ್ಕೋಸ್ಕರ ಬಂದೆನು.

**[೬]ಆದಿಷ್ಟೋಸ್ಮ್ಯಹಮೀಶೇನ ಕುಮಾರೌ ಭಾಕ್ತಿಕಾವಿಮೌ ।**
**ಭೋಗೈರಿಷ್ಟೈ [೭]ರ್ನಿಯುಂಕ್ಷ್ವೇತಿ ದ್ರುತಂ ತೇನಾಗತೋಸ್ಮ್ಯಹಮ್ ॥**

"ಭಕ್ತಿವಂತರಾದ ಈ ಕುಮಾರರಿಗೆ ಇಷ್ಟವಾದ ಭೋಗಗಳನ್ನು ಕಲ್ಪಿಸಿಕೊಡು" ಎಂದು ಸ್ವಾಮಿಯು ನನಗೆ ಆಜ್ಞೆಮಾಡಿದ್ದಾರೆ. ಆದುದರಿಂದ ನಾನು ಶೀಘ್ರವಾಗಿ ಬಂದೆನು.

**[೮]ತದುತ್ತಿಷ್ಠತ ಮಾ [೯]ಪೃಚ್ಛ್ಯ ಭಗವಂತಂ [೧೦]ಜಗತ್ಸೃಜಮ್ ।**
**ಯುವಯೋರ್ಭೋಗಮದ್ಯಾಹಂ ದಾಸ್ಯಾಮಿ ಗುರುದೇಶಿತಮ್ ॥**

ಆದುದರಿಂದ ಜಗತ್ಕರ್ತನಾದ ಭಗವಂತನಲ್ಲಿ ಬೇಡದೆ ಮೇಲಕ್ಕೆ ಏಳಿ. ಸ್ವಾಮಿಯ ಆಜ್ಞಾನುಸಾರವಾಗಿ ಈಗ ನಿಮಗೆ ಭೋಗಸಾಮಗ್ರಿಯನ್ನು ನಾನು ಕೊಡುವೆನು."

**ಇತ್ಯಸ್ಯ ವಚನಾತ್ಪ್ರೀತೌ ಕುಮಾರೌ ತಮವೋಚತಾಮ್ ।**
**ಸತ್ಯಂ ಗುರುಃ ಪ್ರಸನ್ನೋ [೧೧]ನೌ ಭೋಗಾ[೧೨]ನ್ದಿತ್ಸತಿ ವಾಂಛಿತಾನ್ ॥**

ಈ ಪ್ರಕಾರವಾದ ಧರಣೇಂದ್ರನ ವಚನದಿಂದ ಸಂತುಷ್ಟರಾದ ಆ ನಮಿವಿನಮಿಕುಮಾರರು ಧರಣೇಂದ್ರನನ್ನು ಕುರಿತು ಮುಂದೆಹೇಳುವರೀತಿಯಾಗಿ ಹೇಳಿದರು "ನಿಜವಾಗಿಯೂ ನಮ್ಮ ವಿಷಯದಲ್ಲಿ ಗುರುವು ಪ್ರಸನ್ನಚಿತ್ತನಾಗಿ ನಮಗೆ ಇಷ್ಟವಾದ ಭೋಗಗಳನ್ನು ಕೊಡುವುದಕ್ಕೆ ಇಚ್ಛಿಸುತ್ತಾನೆ.

**ತದ್ಬ್ರೂಹಿ ಧರಣಾಧೀಶ ಯತ್ಸತ್ಯಂ ಮತಮೀಶಿತುಃ ।**
**ಗುರೋರ್ಮತಾದ್ವಿನಾ ಭೋಗಾ ನಾವಯೋರಭಿಸಮ್ಮತಾಃ ॥ ೧೪೪ ॥**

ಆದುದರಿಂದ ಧರಣೇಂದ್ರನೆ ! ಸ್ವಾಮಿಯ ನಿಜವಾದ ಅಭಿಪ್ರಾಯವನ್ನು ಹೇಳು. ಗುರುವಿನ ಸಮ್ಮತಿಯಿಲ್ಲದಿದ್ದರೆ ನಮಗೆ ಭೋಗಗಳು ಇಷ್ಟವಾಗಿಲ್ಲ."

೧ ಪುನರಪ್ಯವದದಿತ್ಯಪಿ ಪಾಠಃ. ೨ ಭವಥಃ. ೩ ಹೃಷ್ಟಃ. ೪ ಯುವಯೋಃ. ೫ ಜಾನೀತಂ. ೬ ಆಜ್ಞಾಪಿತಃ. ೭ ನಿಯೋಜಯ. ೮ ಕಾರಣಾತ್. ೯ ಪೃಷ್ಟ್ವಾ. ೧೦ ಜಗತ್ಕರ್ತಾರಂ. ೧೧ ಆವಯೋಃ. ೧೨ ದಾತುಮಿಚ್ಛತಿ.

**ಇತ್ಯುಕ್ತವಂತೌ [೧]ಪ್ರತ್ಯಾಯ್ಯ ಸೋಪಾಯಂ ಫಣಿನಾಂ ಪತಿಃ ।**
**ಭಗವಂತಂ ಪ್ರಣಮ್ಯಾಶು ಯುವಾನಾ[೨]ವನಯ[೩]ತ್ಸಮಮ್ ॥ ೧೪೫ ॥**

ಈಪ್ರಕಾರವಾಗಿ ಹೇಳಿದ ನಮಿವಿನಮಿಕುಮಾರರಿಗೆ ಧರಣೇಂದ್ರನು ಉಪಾಯವಾಗಿ ನಂಬಿಕೆಯನ್ನು ಹುಟ್ಟಿಸಿ ಭಗವಂತನನ್ನು ವಂದಿಸಿ ಆ ಯುವಕರನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಹೋದನು.

**ಸ ತಾಭ್ಯಾಂ ಫಣಿನಾಂ ಭರ್ತಾ ರೇಜೇ ಗಗನಮುತ್ಪತನ್ ।**
**ಯುತಸ್ತಾಪಪ್ರಕಾಶಾಭ್ಯಾಮಿವ ಭಾಸ್ವಾನ್ಮಹೋದಯಃ ॥ ೧೪೬ ॥**

ಆ ನಮಿವಿನಮಿಕುಮಾರರೊಡನೆ ಆಕಾಶಕ್ಕೆ ನೆಗೆದ ಆ ಧರಣೇಂದ್ರನು, ತಾಪಪ್ರಕಾಶಗಳೊಡನೆ ಕೂಡಿಕೊಂಡಿರುವ ಮಹಾ ಉದಯವುಳ್ಳ ಸೂರ್ಯನಂತೆ, ಪ್ರಕಾಶಿಸಿದನು.

**ಬಭೌ ಫಣಿಕುಮಾರಾಭ್ಯಾಮಿವ ತಾಭ್ಯಾಂ ಸಮನ್ವಿತಃ ।**
**ಪ್ರಶ್ರಯಪ್ರಶಮಾಭ್ಯಾಂ ವಾ ಯುಕ್ತೋ ಯೋಗೀವ ಭೋಗಿರಾಟ್ ॥**

ನಾಗಕುಮಾರರಂತಿರುವ ಆ ನಮಿವಿನಮಿಕುಮಾರರೊಡನೆ ಕೂಡಿಕೊಂಡಿರುವ ಆ ಧರಣೇಂದ್ರನು, ವಿನಯ ಮತ್ತು ಶಾಂತತೆಯೊಡಗೂಡಿರುವ ಮುನಿಯಂತೆ, ಶೋಭಿಸಿದನು.

**ಸ ವ್ಯೋಮಮಾರ್ಗಮುತ್ಪತ್ಯ ವಿಮಾನಮಧಿರೋಪ್ಯ ತೌ ।**
**ದ್ರಾಕ್ಪ್ರಾಪ ವಿಜಯಾರ್ಧಾದ್ರಿಂ ಭೂದೇವ್ಯಾ ಹಸಿತೋಪಮಮ್ ॥**

ಆ ನಾಗೇಂದ್ರನು ಆಕಾಶಮಾರ್ಗಕ್ಕೆ ನೆಗೆದು ಆ ನಮಿವಿನಮಿಕುಮಾರರನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಭೂಮಿದೇವಿಯ ನಗೆಯಂತಿರುವ ವಿಜಯಾರ್ಧ ಪರ್ವತವನ್ನು ಶೀಘ್ರವಾಗಿ ತಲುಪಿದನು.

**ಸ್ವಪೂರ್ವಾಪರ[೪]ಕೋಟಿಭ್ಯಾಂ ವಿಗಾಹ್ಯ ಲವಣಾರ್ಣವಮ್ ।**
**ಮಧ್ಯೇ ಭಾರತವರ್ಷಸ್ಯ ಸ್ಥಿತಂ ತನ್ಮಾನದಂಡವತ್ ॥ ೧೪೯ ॥**

ತನ್ನ (ವಿಜಯಾರ್ಧಪರ್ವತದ) ಪೂರ್ವಾಪರಭಾಗಗಳಿಂದ ಲವಣಸಮುದ್ರವನ್ನು ಪ್ರವೇಶಿಸಿ ಭರತಕ್ಷೇತ್ರವನ್ನು ಅಳತೆಮಾಡುವ ಕೋಲಿನಂತೆ ಭರತಕ್ಷೇತ್ರದ ಮಧ್ಯದಲ್ಲಿರುವುದೂ

**ವಿರಾಜಮಾನಮುತ್ತುಂಗೈರ್ನಾನಾರತ್ನಾಂಶುಚಿತ್ರಿತೈಃ ।**
**ಮುಕುಟೈರಿವ ಕೂಟೈಃ ಸ್ವೈಃ ಸ್ವೈರಮಾರುದ್ಧಖಾಂಗಣೈಃ ॥ ೧೫೦ ॥**

ಅನೇಕಪ್ರಕಾರವಾದ ರತ್ನಗಳ ಕಿರಣಗಳಿಂದ ನಾನಾಪ್ರಕಾರವೂ ಕಿರೀಟಗಳಂತಿರುವುವೂ ಸ್ವಚ್ಛಂದವಾಗಿ ಆಕಾಶಪ್ರದೇಶವನ್ನು ವ್ಯಾಪಿಸಿರುವುವೂ ಉನ್ನತವೂ ಆದ ತನ್ನ ಶಿಖರಗಳಿಂದ ಶೋಭಾಯಮಾನವೂ

**ನಿಪತನ್ನಿರ್ಝರಾರಾವೈರಾಪೂರಿತಗುಹಾಮುಖಮ್ ।**
**[೫]ವ್ಯಾಜುಹೂಷುಮಿವಾ[೬]ತಾಂತಂ [೭]ವಿಶ್ರಾಂತ್ಯೈ ಸುರದಂಪತೀನ್ ॥**

ಬೀಳುತ್ತಿರುವ ಜಲಪ್ರವಾಹಗಳ ಶಬ್ದಗಳಿಂದ ಗುಹೆಗಳ ಬಾಗಿಲುಗಳನ್ನು ತುಂಬುತ್ತಿರುವುದೂ ವಿಶ್ರಮಿಸುವುದಕ್ಕೋಸ್ಕರ ದೇವದಂಪತಿಗಳನ್ನು ಕರೆಯುವುದಕ್ಕೆ ಇಚ್ಛೆಪಡುತ್ತಿದೆಯೋ ಎಂಬಂತೆ ಪ್ರಸನ್ನವಾದುದೂ

**ಮಹದ್ಭಿ[೮]ರಚಲೋದಗ್ರೈಃ ಸಂಚರದ್ಭಿರಿತೋಮುತಃ ।**
**ಘನಾಘನೈರ್ಘನಧ್ವಾನೈರ್ವಿಷ್ವಗಾರುದ್ಧಮೇಖಲಮ್ ॥ ೧೫೨ ॥**

೧ ವಿಶ್ವಾಸಂನೀತ್ವಾ. ೨ ಪ್ರಾಪಯತಿ ಸ್ಮ. ೩ ಸ್ವೇನ ಸಹೇತ್ಯರ್ಥಃ. ೪ ಭಾಗಾಭ್ಯಾಂ. ೫ ವ್ಯಾಹ್ವಾತುಮಿಚ್ಛುಂ. ೬ ಪ್ರಸನ್ನಂ. ೭ ವಿಶ್ರಮಣಾಯ. ೮ ಅಚಲವದುನ್ನತೈಃ.

ಪರ್ವತದಂತೆ ಉನ್ನತವೂ ಈಕಡೆಗಾಕಡೆಗೆ ಸಂಚರಿಸುತ್ತಿರುವುವೂ ಅಧಿಕವಾದ ಶಬ್ದವನ್ನು ಮಾಡುತ್ತಿರುವುವೂ ಆದ ದೊಡ್ಡ ಮೇಘಗಳಿಂದ ಸುತ್ತಲೂ ವ್ಯಾಪ್ತವಾದ ತಪ್ಪಲುಪ್ರದೇಶಗಳುಳ್ಳುದೂ

**ಸ್ಫುರಚ್ಚಾಮೀಕರ[೧]ಪ್ರಸ್ಥೈರ್ದೀಪ್ತೈರುಷ್ಣಾಂಶುರಶ್ಮಿಭಿಃ ।**
**ಜ್ವಲದ್ದಾವಾನಲಾಶಂಕಾಂ ಜನಯಂತಂ [೨]ನಭೋಜುಷಾಮ್ ॥ ೧೫೩ ॥**

ದೇದೀಪ್ಯಮಾನವಾದ ಸೂರ್ಯನ ಕಿರಣಗಳಿಂದಲೂ ಪ್ರಕಾಶಮಾನವೂ ಸುವರ್ಣಮಯವೂ ಆದ ತಪ್ಪಲುಪ್ರದೇಶಗಳಿಂದಲೂ ವಿದ್ಯಾಧರರಿಗೆ ಉರಿಯುತ್ತಿರುವ ಕಾಡುಕಿಚ್ಚಿನ ಸಂಶಯವನ್ನುಂಟುಮಾಡುತ್ತಿರುವುದೂ

**[೩]ಕ್ಷರದ್ಭಿಃ ಶಿಖರೋಪಾಂತಾದ್ವ್ಯಾಯತಾದ್ಗುರುನಿರ್ಝರೈಃ ।**
**[೪]ಘನೈ[೫]ರ್ಜರ್ಜರಿತೈರಾರಾದಾರಬ್ಧಬಹುನಿರ್ಝರವಮ್ ॥ ೧೫೪ ॥**

ವಿಸ್ತಾರವಾದ ಶಿಖರಗಳ ಸಮೀಪಪ್ರದೇಶದಿಂದ ಹರಿಯುತ್ತಿರುವ ಜಲಪ್ರವಾಹಗಳಿಂದ ಭೇದಿಸಲ್ಪಟ್ಟಿರುವ ಮೇಘಗಳಿಂದುಂಟಾದ ಅನೇಕ ಜಲಪ್ರವಾಹಗಳುಳ್ಳುದೂ

**[೬]ನೂನಮಾಮೋದಲೋಭೇನ ಪ್ರೋತ್ಫುಲ್ಲಾ ವನವಲ್ಲರೀಃ ।**
**ವಿನೀಲೈರಂಶುಕೈರ್ವಿಷ್ವಕ್ಪಿದಧಾನಮಲಿಚ್ಛಲಾತ್ ॥ ೧೫೫ ॥**

ಪರಿಮಳದ ಆಸೆಯಿಂದ ಬಂದ ಭ್ರಮರಗಳ ನೆಪದಿಂದ ಎಲ್ಲಾಕಡೆಯಲ್ಲಿಯೂ ಕಪ್ಪಾದ ವಸ್ತ್ರಗಳಿಂದ ವಿಕಸಿತವಾದ ಅರಣ್ಯಪುಷ್ಪದ ಗೊಂಚಲುಗಳನ್ನು ಮುಚ್ಚುವಂತಿರುವುದೂ

**ಲತಾಭವನವಿಶ್ರಾಂತಕಿನ್ನರೋದ್ಗೀತಿನಿಃಸ್ವನೈಃ ।**
**ಸದಾರಮ್ಯಾನ್ವನೋದ್ದೇಶಾನ್ದಧಾನ[೭]ಮಧಿಮೇಖಲಮ್ ॥ ೧೫೬ ॥**

ಮೇಲುಭಾಗದಲ್ಲಿರುವ ಲತಾಮಂಟಪಗಳಲ್ಲಿ ವಿಶ್ರಮಿಸುತ್ತಿರುವ ಕಿನ್ನರದೇವತೆಗಳ ಉತ್ತಮವಾದ ಗಾನದ ಶಬ್ದಗಳಿಂದ ಯಾವಾಗಲೂ ರಮಣೀಯವಾದ ವನಪ್ರದೇಶಗಳನ್ನು ಧರಿಸಿರುವುದೂ

**ಲತಾಗೃಹಾಂತರಾಬದ್ಧದೋಲಾರೂಢನಭಶ್ಚರೀಃ ।**
**ವನಾಧಿದೇವತಾ[೮]ದೇಶ್ಯಾ ವಹಂತಂ ವನವೀಥಿಷು ॥ ೧೫೭ ॥**

ವನದ ಸಾಲುಗಳಲ್ಲಿ ವನದ ಅಧಿದೇವತೆಗಳಿಗೆ ಸಮಾನರಾದ ಲತಾಗೃಹದ ಮಧ್ಯದಲ್ಲಿ ಕಟ್ಟಿರುವ ಉಯ್ಯಾಲೆಗಳನ್ನು ಹತ್ತಿರುವ ವಿದ್ಯಾಧರಸ್ತ್ರೀಯರನ್ನು ಧರಿಸಿರುವುದೂ

**ಸಂಚರತ್ಖಚರೀವಕ್ತ್ರಪಂಕಜೈಃ ಪ್ರತಿಬಿಂಬಿತೈಃ ।**
**ಪ್ರೋದ್ವಹಂತಂ ಮಹಾನೀಲಸ್ಥಲೀ[೯]ರೂಢಾಬ್ಜಿನೀಶ್ರಿಯಃ ॥ ೧೫೮ ॥**

ಸಂಚಾರಮಾಡುತ್ತಿರುವ ವಿದ್ಯಾಧರಸ್ತ್ರೀಯರ ಮುಖಕಮಲಗಳ ಪ್ರತಿಬಿಂಬಗಳಿಂದ ಹೆಚ್ಚು ಕಪ್ಪಾದ ಭೂಮಿಯಲ್ಲಿ ಬೆಳೆದಿರುವ ಕಮಲಗಳ ಶೋಭೆಯನ್ನು ಧರಿಸಿರುವುದೂ

**ವಿಚರತ್ಖಚರೀಚಾರುಚರಣಾಲಕ್ತಕಾರುಣಾಃ ।**
**[೧೦]ಕೃತಾರ್ಚಾ ಇವ ರಕ್ತಾಬ್ಜೈರ್ದಧತಂ ಸ್ಫಾಟಿಕೀಃ ಸ್ಥಲೀಃ ॥ ೧೫೯ ॥**

ಸಂಚರಿಸುತ್ತಿರುವ ವಿದ್ಯಾಧರಸ್ತ್ರೀಯರ ಸುಂದರವಾದ ಕಾಲುಗಳ ಅಲತಿಗೆಯ ರಸದಿಂದ ಕೆಂಪಾಗಿರುವುದೂ ಕೆಂದಾವರೆಗಳಿಂದ ಮಾಡಲ್ಪಟ್ಟ ಕೈಗಾಣಿಗೆಯಂತಿರುವುದೂ ಸ್ಫಟಿಕಮಯವೂ ಆದ ಸ್ಥಳಗಳನ್ನು ಧರಿಸಿರುವುದೂ

೧ ಸಾನುಭಿಃ. ೨ ಖೇಚರಾಣಾಂ. ೩ ಪ್ರವದ್ಭಿಃ. ೪ ಮೇಘೈಃ. ೫ ಭಿನ್ನೈಃ. ೬ ಇವ. ೭ ಶ್ರೇಣ್ಯಾಂ. ೮ ಸದೃಶಾಃ. ೯ ಧೃತಾ. ೧೦ ಕೃತೋಪಹಾರಾಃ.

**ವಿದೂರಲಂಘಿನೋ ಧೀರಧ್ವನಿತಾನಮಲಚ್ಛವೀನ್ ।**
**ನಿರ್ಝರಾನಿವ ಬಿಭ್ರಾಣಂ ಮೃಗೇಂದ್ರಾನಧಿಕಂದರಮ್ ॥ ೧೬೦ ॥**

ಬಹುದೂರ ಹಾರುತ್ತಿರುವುವೂ ಗಟ್ಟಿಯಾದ ಶಬ್ದವುಳ್ಳುವೂ ನಿರ್ಮಲವಾದ ಕಾಂತಿಯುಳ್ಳುವೂ ಆದ ಬೆಟ್ಟದ ಜಲಪ್ರವಾಹಗಳಂತಿರುವ ಸಿಂಹಗಳನ್ನು ಗುಹೆಗಳಲ್ಲಿ ಧರಿಸಿರುವುದೂ

**[೧]ಅಧ್ಯುಪತ್ಯಕಮಾರೂಢಪ್ರಣಯಾನ್ಸುರದಂಪತೀನ್ ।**
**ಸಂಭೋಗಾಂತೇ ಕೃತಾತೋದ್ಯವಿನೋದಾನ್ದಧತಂ ಮಿಥಃ ॥ ೧೬೧ ॥**

ಪರ್ವತದ ಸಮೀಪಭೂಮಿಯಲ್ಲಿ ಪ್ರಣಯಕೋಪವನ್ನು ಧರಿಸಿರುವವರೂ ಸಂಭೋಗವಾದನಂತರ ಪರಸ್ಪರವಾಗಿ ವಾದ್ಯವಿನೋದವುಳ್ಳವರೂ ಆದ ದೇವದಂಪತಿಗಳನ್ನು ಧರಿಸಿರುವುದೂ

**ಶ್ರೇಣೀದ್ವಯಂ [೨]ವಿತತ್ಯ [೩]ಸ್ವಂ ಪಕ್ಷದ್ವಯಮಿವಾಯತಮ್ ।**
**ವಿದ್ಯಾಧರಾ[೪]ಧಿವಸತೀರ್ಧಾರಯಂತಂ ಪುರೀಃ ಪರಾಃ ॥ ೧೬೨ ॥**

ಉದ್ದವಾದ ಎರಡು ರೆಕ್ಕೆಗಳಂತೆ ತನ್ನ ಉತ್ತರದಕ್ಷಿಣಶ್ರೇಣಿಗಳೆರಡನ್ನು ಹರಡಿಕೊಂಡು ವಿದ್ಯಾಧರರಿಗೆ ವಾಸಸ್ಥಾನವೂ ಶ್ರೇಷ್ಠವೂ ಆದ ಪಟ್ಟಣಗಳನ್ನು ಧರಿಸಿರುವುದೂ

**[೫]ಅಧ್ಯಧಿತ್ಯಕಮಾಬದ್ಧಕೇತನೈರಿವ ನಿರ್ಝರಾನ್ ।**
**ದಧದ್ಭಿಃ ಶಿಖರೈಃ [೬]ಖಾಗ್ರಂ ಲಂಘಯಂತಮಿವೋಚ್ಛ್ರಿತೈಃ ॥ ೧೬೩ ॥**

ಪರ್ವತದ ಮೇಲ್ಭೂಮಿಯಲ್ಲಿ ಕಟ್ಟಿರುವ ಧ್ವಜಪಟಗಳಂತಿರುವುವೂ ಜಲಪ್ರವಾಹಗಳನ್ನು ಧರಿಸಿರುವುವೂ ಉನ್ನತವೂ ಆದ ಶಿಖರಗಳಿಂದ ಆಕಾಶದ ಅಗ್ರಭಾಗಕ್ಕೆ ಹಾರುವಂತಿರುವುದೂ

**ಅಚ್ಛಿನ್ನಧಾರ[೭]ಮಾಚ್ಛೇದಾನ್ನಿರ್ಝರೈಃ ಶಿಖರಸ್ರುತೈಃ ।**
**ಜಗನ್ನಾಡೀಮಿವೋನ್ಮಾತುಂ ವಿಧೃತಾಯತದಂಡಕಮ್ ॥ ೧೬೪ ॥**

ಭೂಮಿಯವರೆಗೂ ಅವಿಚ್ಛಿನ್ನವಾದ ಧಾರೆಯಿರುವಂತೆ ಶಿಖರಗಳಿಂದ ಸ್ರವಿಸುತ್ತಿರುವ ಜಲಪ್ರವಾಹಗಳಿಂದ ಲೋಕನಾಡಿಯನ್ನು ಅಳತೆಮಾಡುವುದಕ್ಕೋಸ್ಕರ ಧರಿಸಿರುವ ಉದ್ದವಾದ ದಂಡವುಳ್ಳಂತಿರುವುದೂ

**ಚಂದ್ರಕಾಂತೋಪಲೈಶ್ಚಂದ್ರಕರಾ[೮]ಮರ್ಶಾ[೯]ದನುಕ್ಷಪಮ್ ।**
**ಕ್ಷರದ್ಭಿರ್ದಾವಭೀತ್ಯೇವ ಸಿಂಚಂತಂ ಸ್ವತಟದ್ರುಮಾನ್ ॥ ೧೬೫ ॥**

ಪ್ರತಿರಾತ್ರಿಯಲ್ಲಿಯೂ ಚಂದ್ರನ ಕಿರಣಗಳ ಸ್ಪರ್ಶದಿಂದ ನೀರನ್ನು ಸ್ರವಿಸುವ ಚಂದ್ರಕಾಂತಶಿಲೆಗಳಿಂದ ತನ್ನ ತಪ್ಪಲಲ್ಲಿರುವ ವೃಕ್ಷಗಳನ್ನು ಕಾಡುಕಿಚ್ಚಿನ ಭಯದಿಂದ ಸೇಚನೆಮಾಡವಂತಿರುವುದೂ

**ಶಶಿಕಾಂತೋಪಲೈರಿಂದುಂ ತಾರಕಾಃ ಕುಮುದೋತ್ಕರೈಃ ।**
**[೧೦]ಉಡೂನಿ ನಿರ್ಝರ[೧೧]ಚ್ಛೇದೈ[೧೨]ರ್ನ್ಯಕ್ಕೃತ್ಯೇವೋಚ್ಚಕೈಃ ಸ್ಥಿತಮ್ ॥**

ಚಂದ್ರಕಾಂತಶಿಲೆಗಳಿಂದ ಚಂದ್ರನನ್ನೂ ಕುಮುದಪುಷ್ಪಗಳ ಸಮೂಹಗಳಿಂದ ತಾರೆಗಳನ್ನೂ ಜಲಪ್ರವಾಹಗಳ ತುಂತುರುಗಳಿಂದ ನಕ್ಷತ್ರಗಳನ್ನೂ ತಿರಸ್ಕರಿಸುವಂತೆ ಉನ್ನತವಾಗಿರುವುದೂ

**ಸಿತೈರ್ಘನೈಸ್ತಟೀಃ ಶುಭ್ರಾಃ ಶ್ರಯದ್ಭಿರನಿಲಾಹೃತೈಃ ।**
**ಕೃತೋಪಚಯಮಾರುದ್ಧವನಾಭೋಗೈ[೧೩]ರ್ಘನಾತ್ಯಯೇ ॥ ೧೬೭ ॥**

೧ ಆಸನ್ನಭೂಮೌ. ೨ ಪ್ರಸಾರ್ಯ. ೩ ಆತ್ಮೀಯಂ. ೪ ಅಧಿವಾಸಾಃ. ೫ ಉಪರಿಮಭೂಮೌ. ೬ ಆಕಾಶಾಗ್ರಂ. ೭ ಆಭೂಮಿಭಾಗಾದಿತ್ಯರ್ಥಃ. ೮ ಸ್ಪರ್ಶಾತ್. ೯ ಪ್ರತಿರಾತ್ರಿ. ೧೦ ನಕ್ಷತ್ರಾಣಿ. ೧೧ ಕಣೈಃ. ೧೨ ಅಧಃಕೃತ್ಯ. ೧೩ ಶರದಾಗಮೇ.

ಶರತ್ಕಾಲದ ಪ್ರಾರಂಭದಲ್ಲಿ ಶುಭ್ರವಾದ ತಪ್ಪಲುಪ್ರದೇಶಗಳನ್ನು ಆಶ್ರಯಿಸುತ್ತಿರುವುವೂ ಗಾಳಿಯಿಂದ ತರಲ್ಪಟ್ಟುವೂ ವಿಸ್ತಾರವಾದ ವನವನ್ನು ವ್ಯಾಪಿಸಿರುವುವೂ ಶುಭ್ರವೂ ಆದ ಮೇಘಗಳಿಂದ ಮಾಡಲ್ಪಟ್ಟ ಅಭಿವೃದ್ಧಿಯುಳ್ಳುದೂ

**ಪ್ರೋತ್ತುಂಗೋ ಮೇರುರೇಕಾಂತಾನ್ನ ಮದ್ವತ್ಸ ಧೃತಾಯತಿಃ ।**
**ಇತಿ ತೋಷಾದಿವೋನ್ಮುಕ್ತಪ್ರಹಾಸಂ ನಿರ್ಝರಾರವೈಃ ॥ ೧೬೮ ॥**

"ಮಹಾಮೇರುಪರ್ವತವು ಬರೇ ಉನ್ನತವಾಗಿದೆ. ಅದು ನನ್ನಂತೆ ಉದ್ದವಾಗಿಲ್ಲ" ಎಂದು ಸಂತೋಷದಿಂದ ಜಲಪ್ರವಾಹಗಳ ಶಬ್ದಗಳಿಂದ ನಗುವಂತಿರುವುದೂ

**ಸುವಿಶುದ್ಧೋಹಮಾಮೂಲಾದಾಶೃಂಗಂ [೧]ರಜತೋಚ್ಚಯಃ ।**
**ಶುದ್ಧಾಃ ಕುಲಾದ್ರಯೋ ನೈವಮಿತಿ ವಾವಿಷ್ಕೃತೋನ್ನತಿಮ್ ॥ ೧೬೯ ॥**

"ಬೆಳ್ಳಿಯ ಬೆಟ್ಟವಾಗಿರುವ ನಾನು ಬುಡದಿಂದ ಶಿಖರದವರೆಗೂ ಅತ್ಯಂತ ಪರಿಶುದ್ಧನಾದವನು. ಹೀಗೆ ಕುಲಪರ್ವತಗಳು ಶುದ್ಧವಾದುವಲ್ಲವು" ಎಂಬಂತೆ ಪ್ರಕಟಪಡಿಸಿದ ಔನ್ನತ್ಯವುಳ್ಳುದೂ

**ಖಚರೈಃ ಸಹ ಸಂಬಂಧಾದ್ಗಂಗಾಸಿಂಧ್ವೋ[೨]ರಧಃಸ್ಥಿತೇಃ ।**
**ಜಿತ್ವೇವ [೩]ಕುಲಕುತ್ಕೀಲಾನ್ಬಿಭ್ರಾಣಂ ವಿಜಯಾರ್ಧತಾಮ್ ॥ ೧೭೦ ॥**

ವಿದ್ಯಾಧರರೊಡನೆ ಸಂಬಂಧವಿರುವುದರಿಂದಲೂ ಗಂಗಾಸಿಂಧುನದಿಗಳು ತನ್ನ ಕೆಳಭಾಗದಲ್ಲಿರುವುದರಿಂದಲೂ ಕುಲಪರ್ವತಗಳನ್ನು ಜಯಿಸಿಯೋ ಎಂಬಂತೆ ವಿಜಯಾರ್ಧವೆಂಬ ಹೆಸರನ್ನು ಧರಿಸಿರುವುದೂ

**ಅಚಲಸ್ಥಿತಿಮುತ್ತುಂಗಂ [೪]ಶುದ್ಧಿಭಾಜಂ [೫]ಜಗದ್ಗುರುಮ್ ।**
**ಜಿನೇಂದ್ರಮಿವ ನಾಕೀಂದ್ರೈಃ ಶಶ್ವದಾರಾಧ್ಯಮಾದರಾತ್ ॥ ೧೭೧ ॥**

ನಿಶ್ಚಂಚಲವಾದ ಸ್ಥಿತಿಯುಳ್ಳವನೂ ಉನ್ನತನೂ ಶುದ್ಧಪರಿಣಾಮವುಳ್ಳವನೂ ಲೋಕಾಧಿಪತಿಯೂ ದೇವೇಂದ್ರರಿಂದ ಆಗಾಗ ಪ್ರೀತಿಯಿಂದ ಆರಾಧಿಸುವುದಕ್ಕೆ ಯೋಗ್ಯನೂ ಆದ ಜಿನೇಂದ್ರನೋಪಾದಿಯಲ್ಲಿರುವುದೂ

**[೬]ಅಕ್ಷರತ್ವಾದಭೇದ್ಯತ್ವಾದಲಂಘ್ಯತ್ವಾನ್ಮಹೋನ್ನತೇಃ ।**
**ಗುರುತ್ವಾಚ್ಚ [೭]ಜಗದ್ಧಾತುರಾತನ್ವಾನ[೮]ಮನುಕ್ರಿಯಾಮ್ ॥ ೧೭೨ ॥**

ನಾಶರಹಿತವಾಗಿರುವುದರಿಂದಲೂ ಅಭೇದ್ಯವಾಗಿರುವುದರಿಂದಲೂ ಅಲಂಘ್ಯವಾಗಿರುವುದರಿಂದಲೂ ಹೆಚ್ಚು ಉನ್ನತವಾಗಿರುವುದರಿಂದಲೂ ದೊಡ್ಡದಾಗಿರುವುದರಿಂದಲೂ ಲೋಕಾಧಿಪತಿಯಾದ ಸ್ವಾಮಿಯ ಅನುಕರಣವನ್ನು ಮಾಡುವುದೂ

**ದಿಗ್ಜಯ[೯]ಪ್ರಸವಾಗಾರಂ ದಧಾನಂ [೧೦]ತದ್ಗುಹಾದ್ವಯಮ್ ।**
**[೧೧]ಸುಸಂವೃತಂ [೧೨]ಸುಗುಪ್ತಂ ಚ ಗೂಢಾಂತರ್ಗರ್ಭನಿರ್ಗಮಮ್ ॥**

ಚಕ್ರವರ್ತಿಯ ದಿಗ್ವಿಜಯಕ್ಕೆ ಸೂತಿಕಾಗೃಹ(ಉತ್ಪತ್ತಿಸ್ಥಾನ)ದಂತಿರುವುದೂ ಚೆನ್ನಾಗಿ ಗುಪ್ತವಾಗಿರುವುದೂ ದೇವತೆಗಳಿಂದ ಸುರಕ್ಷಿತವಾಗಿರುವುದೂ ಹೋಗಿ ಬರುವ ಗುಪ್ತವಾದ ಮಾರ್ಗಗಳುಳ್ಳುದೂ ಪ್ರಸಿದ್ಧವೂ ಆದ ಎರಡು ಗುಹೆಗಳನ್ನು ಧರಿಸಿರುವುದೂ

**ಕೂಟೈರ್ನವಭಿರುತ್ತುಂಗೈರ್ಭೂದೇವ್ಯಾ ಮುಕುಟೋಪಮೈಃ ।**
**ವಿರಾಜಮಾನಮಾನೀಲ[೧೩]ವನಾನೀ[೧೪]ಪರಿಧಾನಕಮ್ ॥ ೧೭೪ ॥**

೧ ರಜತಪರ್ವತಃ. ೨ ಸ್ವಸ್ಯಾಧೋಭಾಗೇ ಸ್ಥಿತೇಃ. ೩ ಕುಲಪರ್ವತಾನ್. ೪ ನೈರ್ಮಲ್ಯಂ ಪಕ್ಷೇ ಅಚ್ಛಪರಿಣಾಮಂ. ೫ ಜಗತಿ ಗುರುಂ ಪಕ್ಷೇ ತ್ರಿಜಗದ್ಗುರುಂ. ೬ ಅನಶ್ವರತ್ವಾತ್. ೭ ಸರ್ವಜ್ಞಸ್ಯ. ೮ ಅನುಕೃತಿಂ. ೯ ಸೂತಿಕಾಗೃಹಂ. ೧೦ ಪ್ರಸಿದ್ಧಂ. ೧೧ ಸುಪ್ರಚ್ಛನ್ನಂ. ೧೨ ದೇವೈಃ ಸುರಕ್ಷಿತಂ. ೧೩ ವನಾಲಿರಿತ್ಯಪಿ ಪಾಠಃ. ೧೪ ಅಧೋಂಶುಕಂ.

ಭೂದೇವಿಯ ಕಿರೀಟಕ್ಕೆ ಸದೃಶವೂ ಉನ್ನತವೂ ಆದ ಒಂಬತ್ತು ಶಿಖರಗಳಿಂದ ವಿರಾಜಮಾನವೂ ಸುತ್ತಲೂ ಕಪ್ಪಾಗಿರುವ ವನಗಳ ಸಮೂಹವೆಂಬ ಕೆಳವಸ್ತ್ರವುಳ್ಳುದೂ

**[೧]ಪೃಥುಂ ಪಂಚಾಶತಂ ಮೂಲೇ ತದರ್ಧಂ ಚ ಸಮುಚ್ಛ್ರಿತಮ್ ।**
**ತತ್ತುರ್ಯ[೨]ಮವಗಾಢಂ [೩]ಗಾಂ [೪]ದಿವ್ಯಯೋಜನಮಾನತಃ ॥ ೧೭೫ ॥**

ಬುಡದಲ್ಲಿ ಐವತ್ತು ಮಹಾಯೋಜನ ಅಗಲವೂ ಇಪ್ಪತ್ತೈದುಯೋಜನ ಉನ್ನತವೂ ಇಪ್ಪತ್ತೈದು ಹರದಾರಿ ಭೂಮಿಯನ್ನು ಪ್ರವೇಶಿಸಿರುವುದೂ

**ಮಹೀತಲಾದ್ದಶೋತ್ಪತ್ಯ ತ್ರಿಂಶದ್ಯೋಜನವಿಸ್ತೃತಮ್ ।**
**ತತೋಪ್ಯೂರ್ಧ್ವಂ [೫]ದಶೋತ್ಪತ್ಯ ದಶವಿಸ್ತೃತಮಗ್ರತಃ ॥ ೧೭೬ ॥**

ಭೂಮಿಯ ತಲದಿಂದ ಹತ್ತುಯೋಜನದ ಮೇಲೆ ಮೂವತ್ತುಯೋಜನ ಅಗಲವೂ ಅಲ್ಲಿಂದ ಹತ್ತು ಯೋಜನದ ಮೇಲೆ ತುದಿಯಲ್ಲಿ ಹತ್ತುಯೋಜನ ಅಗಲವೂ

**ಕ್ವಚಿದುನ್ನತಮಾನಿಮ್ನಂ ಕ್ವಚಿತ್ಸಮತಲಂ ಕ್ವಚಿತ್ ।**
**ಕ್ವಚಿ[೬]ದುಚ್ಚಾವಚಗ್ರಾವ[೭]ಸ್ಥಪುಟಂ ದಧತಂ ತಟಮ್ ॥ ೧೭೭ ॥**

ಕೆಲವು ಕಡೆಯಲ್ಲಿ ಉನ್ನತವೂ ಕೆಲವು ಕಡೆಯಲ್ಲಿ ಹಳ್ಳವೂ ಕೆಲವು ಕಡೆಯಲ್ಲಿ ಸಮಭೂಮಿಯೂ ಕೆಲವು ಕಡೆಯಲ್ಲಿ ನಾನಾಪ್ರಕಾರವಾದ ಕಲ್ಲುಗಳಿಂದ ಹಳ್ಳದಿಣ್ಣೆಯೂ ಆದ ತಪ್ಪಲನ್ನು ಧರಿಸಿರುವುದೂ

**ಕ್ವಚಿ[೮]ದ್ವ್ರಧ್ನಕರೋತ್ತಪ್ತರತ್ನಗ್ರಾವಾಗ್ರಗೋಚರಾತ್ ।**
**ಅಪಸರ್ಪತ್ಕಪಿವ್ರಾತಕೃತಕೋಲಾಹಲಾಕುಲಮ್ ॥ ೧೭೮ ॥**

ಕೆಲವು ಕಡೆಯಲ್ಲಿ ಸೂರ್ಯನ ಕಿರಣಗಳಿಂದ ಕಾದಿರುವ ರತ್ನದ ಕಲ್ಲುಗಳ ಅಗ್ರಭಾಗವುಳ್ಳ ಪ್ರದೇಶದಿಂದ ತೊಲಗುತ್ತಿರುವ ಕಪಿಗಳ ಸಮೂಹದಿಂದ ಮಾಡಲ್ಪಟ್ಟ ಕೋಲಾಹಲಶಬ್ದದಿಂದ ವ್ಯಾಪ್ತವೂ

**ಕ್ವಚಿತ್ಕಂಠೀರವಾರಾವ[೯]ತ್ರಸ್ತಾನೇಕಪಯೂಥಪಮ್ ।**
**[೧೦]ಕಲಕಂಠೀಕಲಾಲಾಪವಾಚಾಲಿತವನಂ ಕ್ವಚಿತ್ ॥ ೧೭೯ ॥**

ಕೆಲವು ಕಡೆಯಲ್ಲಿ ಸಿಂಹದ ಶಬ್ದದಿಂದ ಹೆದರಿದ ಆನೆಗಳ ಸಮೂಹವುಳ್ಳುದೂ ಕೆಲವು ಕಡೆಯಲ್ಲಿ ಹೆಣ್ಣುಕೋಗಿಲೆಯ ಮಧುರವಾದ ಶಬ್ದದಿಂದ ಶಬ್ದಾಯಮಾನವಾದ ವನವುಳ್ಳುದೂ

**ಕ್ವಚಿಚ್ಛಿಖಿಮುಖೋದ್ಗೀರ್ಣಕೇಕಾರವ[೧೧]ವಿಭೀಷಿತೈಃ ।**
**ಸರ್ಪೈಃ [೧೨]ಸತ್ರಾಸ[೧೩]ಮಾಸೃಪ್ತಕಾಂತಾರಾಂತಬಿಲಾಂತರಮ್ ॥ ೧೮೦ ॥**

ಕೆಲವು ಕಡೆಯಲ್ಲಿ ನವಿಲುಗಳ ಮುಖದಿಂದ ಹೊರಟ ಶಬ್ದದಿಂದ ಭಯಪಟ್ಟ ಸರ್ಪಗಳಿಂದ ಭಯದಿಂದ ಹೊಂದಲ್ಪಟ್ಟುವೂ ಅರಣ್ಯದ ಕೊನೆಯಲ್ಲಿರುವುವೂ ಆದ ಬೇರೆ ಬಿಲಗಳುಳ್ಳುದೂ

**ಚಾಮೀಕರಮಯು[೧೪]ಪ್ರಸ್ಥಚ್ಛಾಯಾಸಂಶ್ರಯಿಣೀರ್ಮೃಗೀಃ ।**
**ಹಿರಣ್ಮಯೀರಿವಾ[೧೫]ರೂಢತಚ್ಛಾಯಾ ದಧತಂ ಕ್ವಚಿತ್ ॥ ೧೮೧ ॥**

ಕೆಲವು ಕಡೆಯಲ್ಲಿ ಬಂಗಾರಮಯವಾದ ತಪ್ಪಲಿನ ನೆರಳನ್ನು ಆಶ್ರಯಿಸಿರುವ ಹೆಣ್ಣುಜಿಂಕೆಗಳನ್ನು ಬಂಗಾರದ ನೆರಳನ್ನು ಧರಿಸಿರುವ ಸುವರ್ಣಮಯವಾದ ಜಿಂಕೆಗಳನ್ನೋಪಾದಿಯಲ್ಲಿ ಧರಿಸಿರುವುದೂ

೧ ವಿಷ್ಕಂಭಂ. ೨ ಪ್ರವಿಷ್ಟಂ. ೩ ಪೃಥ್ವೀಂ. ೪ ಮಹಾಯೋಜನಸ್ಯ. ೫ ದಶಯೋಜನಮುತ್ಕ್ರಮ್ಯ. ೬ ನಾನಾಪ್ರಕಾರಪಾಷಾಣೈಃ. ೭ ವಿಷಮೋನ್ನತಂ. ೮ ಸೂರ್ಯಕರಸಂತಪ್ತಸೂರ್ಯಕಾಂತಶಿಲಾಗ್ರಪ್ರದೇಶಾತ್. ೯ ಭೀತಗಜಯೂಥಪಂ. ೧೦ ಕೋಕಿಲಸ್ತ್ರೀ. ೧೧ ಭೀತಿಂ ನೀತೈಃ. ೧೨ ಸಂತ್ರಾಸಮಿತ್ಯಪಿ ಪಾಠಃ. ೧೩ ಪ್ರಾಪ್ತಂ. ೧೪ ಸಾನೋಃ. ೧೫ ಧೃತಚಾಮೀಕರಚ್ಛಾಯಾಃ.

**ಕ್ವಚಿದ್ವಿಚಿತ್ರರತ್ನಾಂಶುರಚಿತೇಂದ್ರಧನುರ್ಲತಾಮ್ ।**
**ದಧಾನಮನಿಲೋದ್ಧೂತಾಂ ತತಾಂ ಕಲ್ಪಲತಾಮಿವ ॥ ೧೮೨ ॥**

ಕೆಲವು ಕಡೆಯಲ್ಲಿ ಕಲ್ಪಲತೆಯಂತೆ ವಿಸ್ತಾರವೂ ಗಾಳಿಯಿಂದ ಕೊಡಹಲ್ಪಟ್ಟುದೂ ಆದ ನಾನಾಪ್ರಕಾರವಾದ ರತ್ನದ ಕಿರಣಗಳಿಂದ ರಚಿತವಾದ ಇಂದ್ರಧನುಸ್ಸೆಂಬ ಲತೆಯನ್ನು ಧರಿಸಿರುವುದೂ

**ಕ್ವಚಿಚ್ಚ ವಿಚರದ್ದಿವ್ಯಕಾಮಿನೀನೂಪುರಾರವೈಃ ।**
**ರಮಣೀಯಸರಸ್ತೀರಂ ಹಂಸೀವಿರುತ[೧]ಮೂರ್ಛಿತೈಃ ॥ ೧೮೩ ॥**

ಕೆಲವು ಕಡೆಯಲ್ಲಿ ಹೆಣ್ಣುಹಂಸಪಕ್ಷಿಯ ಶಬ್ದದೊಡನೆ ಮಿಶ್ರವಾಗಿರುವ ಸಂಚರಿಸುವ ದೇವಸ್ತ್ರೀಯರ ಪಾದಕಡಗಗಳ ಶಬ್ದಗಳಿಂದ ರಮಣೀಯವಾದ ಸರೋವರದ ದಡವುಳ್ಳುದೂ

**ಕ್ವಚಿ[೨]ದ್ವಿಚತುರಕ್ರೀಡಾಮಾಚರದ್ಭಿರನೇಕಪೈಃ ।**
**ಸಲೀಲಾಂದೋಲಿತಾಲಾನೈರಾಲೋಲಿತವನದ್ರುಮಮ್ ॥ ೧೮೪ ॥**

ಕೆಲವು ಕಡೆಯಲ್ಲಿ ಲೀಲೆಯಿಂದ ಅಳ್ಳಾಡಿಸಲ್ಪಡುತ್ತಿರುವ ಆಲಾನಸ್ತಂಭಗಳುಳ್ಳವೂ ಚತುರವಾದ ಕ್ರೀಡೆಯನ್ನು ಮಾಡುತ್ತಿರುವುವೂ ಆದ ಆನೆಗಳಿಂದ ಅಳ್ಳಾಡಿಸಲ್ಪಡುತ್ತಿರುವ ವನವೃಕ್ಷಗಳುಳ್ಳುದೂ

**ಕ್ವಚಿತ್ಪುಲಿನಸಂಸುಪ್ತಸಾರಸೀ[೩]ರುತಮೂರ್ಛಿತೈಃ ।**
**ಕಲಹಂಸೀಕಲಕ್ವಾಣೈರ್ವಾಚಾಲಿತಸರೋಜಲಮ್ ॥ ೧೮೫ ॥**

ಕೆಲವು ಕಡೆಯಲ್ಲಿ ಮರಳಿನಲ್ಲಿ ಮಲಗಿರುವ ಹೆಣ್ಣುಸಾರಸಪಕ್ಷಿಗಳ ಶಬ್ದದೊಡನೆ ಮಿಶ್ರವಾಗಿರುವ ಹೆಣ್ಣುಕಲಹಂಸಪಕ್ಷಿಗಳ ಮನೋಹರವಾದ ಶಬ್ದಗಳಿಂದ ಶಬ್ದಾಯಮಾನವಾಗಿ ಮಾಡಲ್ಪಟ್ಟ ಸರೋವರದ ಜಲವುಳ್ಳುದೂ

**ಕ್ವಚಿತ್ಕ್ರುದ್ಧಾಹಿಶೂತ್ಕಾರೈಃ [೪]ಶ್ವಸಂತಮಿವ ಹೇಲಯಾ ।**
**ಕ್ವಚಿಚ್ಚ ಚಮರೀಯೂಥೈರ್ಹಸಂತಮಿವ ನಿರ್ಮಲೈಃ ॥ ೧೮೬ ॥**

ಕೆಲವು ಕಡೆಯಲ್ಲಿ ಕೋಪಗೊಂಡ ಸರ್ಪಗಳ ಶೂತ್ಕಾರಗಳಿಂದ ಲೀಲೆಯಾಗಿ ಉಚ್ಛ್ವಾಸವನ್ನು ಬಿಡುವಂತಿರುವುದೂ ಕೆಲವು ಕಡೆಯಲ್ಲಿ ನಿರ್ಮಲವಾದ ಹೆಣ್ಣುಚಮರೀಮೃಗಗಳ ಸಮೂಹಗಳಿಂದ ನಗುವಂತಿರುವುದೂ

**ಗುಹಾನಿಲೈಃ ಕ್ವಚಿದ್ವ್ಯಕ್ತಮುಚ್ಛ್ವಸಂತಮಿವಾ[೫]ಯತಮ್ ।**
**ಕ್ವಚಿಚ್ಚ ಪವನಾಧೂತೈ[೬]ರ್ಘೂರ್ಣಂತಮಿವ ಪಾದಪೈಃ ॥ ೧೮೭ ॥**

ಕೆಲವು ಕಡೆಯಲ್ಲಿ ಗುಹೆಗಳ ಗಾಳಿಗಳಿಂದ ವ್ಯಕ್ತವಾಗಿಯೂ ದೀರ್ಘವಾಗಿಯೂ ಉಚ್ಛ್ವಾಸವನ್ನು ಬಿಡುವಂತಿರುವುದೂ ಕೆಲವು ಕಡೆಯಲ್ಲಿ ಗಾಳಿಯಿಂದ ಕೊಡಹಲ್ಪಟ್ಟ ವೃಕ್ಷಗಳಿಂದ ತಿರುಗುವಂತಿರುವುದೂ

**[೭]ನಿಭೃತಂ ಚಿಂತಯಂತೀಭಿರಿಷ್ಟಕಾಮುಕಸಂಗಮಮ್ ।**
**[೮]ವಿಜನೇ ಖೇಚರಸ್ತ್ರೀಭಿರ್ಮೂಕೀಭೂತಮಿವ ಕ್ವಚಿತ್ ॥ ೧೮೮ ॥**

ಕೆಲವು ಕಡೆಯಲ್ಲಿ ನಿಶ್ಚಲವಾಗಿದ್ದು ಏಕಾಂತದಲ್ಲಿ ಇಷ್ಟನಾದ ಕಾಮುಕಪುರುಷನ ಸಂಗಮವನ್ನು ಚಿಂತಿಸುತ್ತಿರುವ ವಿದ್ಯಾಧರಸ್ತ್ರೀಯರಿಂದ ಮೂಕವಾಗಿರುವಂತಿರುವುದೂ

**ಕ್ವಚಿಚ್ಚ [೯]ಚಟುಲೋ[೧೦]ದಂಚ[೧೧]ಚ್ಚಂಚರೀಕಕಲಸ್ವನೈಃ ।**
**ಕಿಮಪ್ಯಾರಬ್ಧಸಂಗೀತಮಿವ [೧೨]ವ್ಯಾಯತಮೂರ್ಛನಮ್ ॥ ೧೮೯ ॥**

ಕೆಲವು ಕಡೆಯಲ್ಲಿ ಶ್ಲಾಘ್ಯವೂ ಮೇಲಕ್ಕೆ ಹಾರುತ್ತಿರುವುವೂ ಆದ ಭ್ರಮರಗಳ ಮಧುರವಾದ ಶಬ್ದಗಳಿಂದ ಸ್ವರವಿಶ್ರಾಮಸ್ಥಾನವುಳ್ಳ ಯಾವುದೋ ಸಂಗೀತವನ್ನು ಆರಂಭಿಸಿದಂತಿರುವುದೂ

೧ ಮಿಶ್ರಿತೈಃ. ೨ ವಿಶೇಷೇಣ ಚತುರಾ. ೩ ಧ್ವನಿಸಂಮಿಶ್ರೈಃ. ೪ ಉಚ್ಛ್ವಸಂತಮಿವ. ೫ ದೀರ್ಘಂ ಯಥಾ ತಥಾ. ೬ ಭ್ರಮಂತಮಿವ. ೭ ನಿಶ್ಚಲಂ. ೮ ಏಕಾಂತೇ. ೯ ಶ್ಲಾಘ್ಯಾಃ. ೧೦ ಉದ್ಗಚ್ಛತ್. ೧೧ ಭ್ರಮರಾಣಾಂ. ೧೨ ಊರ್ಜಿತಗಾನಂ, ಸ್ವರವಿಶ್ರಾಮಸ್ಥಾನಂ.

**ಕದಂಬಾಮೋದ[೧]ಸಂಪಾದಿಸುರಭಿಶ್ವಸಿತೈರ್ಮುಖೈಃ ।**
**ತರುಣಾರ್ಕಕರಸ್ಪರ್ಶಾದ್ವಿಬುದ್ಧೈರಿವ ಪಂಕಜೈಃ ॥ ೧೯೦ ॥**

ಬಾಲಸೂರ್ಯನ ಕಿರಣಗಳ ಸ್ಪರ್ಶದಿಂದ ವಿಕಸಿತವಾದ ಕಮಲಗಳಂತಿರುವುವೂ ಕದಂಬವೃಕ್ಷದ ಪರಿಮಳಕ್ಕೆ ಸಮಾನವಾದ ಪರಿಮಳವುಳ್ಳ ಉಸಿರುಳ್ಳುವೂ ಆದ ಮುಖಗಳಿಂದಲೂ

**ನೇತ್ರೈರ್ಮಧುಮದಾತಾಮ್ರೈರಿಂದೀವರ[೨]ದಲಾಯತೈಃ ।**
**ಮದನಸ್ಯೇವ ಜೈತ್ರಾಸ್ತ್ರೈಃ [೩]ಸಾಲಸಾಪಾಂಗವೀಕ್ಷಿತೈಃ ॥ ೧೯೧ ॥**

ಪುಷ್ಪರಸದ ಮದದಿಂದ ಕೆಂಪಾದ ಕನ್ನೈದಿಲೆಯ ಪುಷ್ಪದ ಎಸಳಿನಂತೆ ವಿಸ್ತಾರವಾದ ನೇತ್ರಗಳಿಂದಲೂ ಮನ್ಮಥನ ಜಯಶೀಲವಾದ ಅಸ್ತ್ರಗಳಂತಿರುವ ಆಲಸ್ಯಯುಕ್ತವಾದ ಕಡೆಕಣ್ಣುನೋಟಗಳಿಂದಲೂ

**[೪]ಅರಾಲೈರಲಿನೀಲಾಭೈಃ ಕೇಶೈರ್ಗತಿ[೫]ವಿಸಂಸ್ಥುಲೈಃ ।**
**[೬]ವಿಸ್ರಸ್ತಕಬರೀಬಂಧವಿಗಲತ್ಪುಷ್ಪದಾಮಕೈಃ ॥ ೧೯೨ ॥**

ವಕ್ರವೂ ಭ್ರಮರದಂತೆ ಕಪ್ಪೂ ಗಮನದಿಂದ ಚಲಿಸುತ್ತಿರುವುವೂ ಬಿಚ್ಚಿದ ಹೆರಳಿನಿಂದ ಜಾರುತ್ತಿರುವ ಪುಷ್ಪಮಾಲಿಕೆಗಳುಳ್ಳುವೂ ಆದ ಕೂದಲುಗಳಿಂದಲೂ

**ಜಿತೇಂದುಕಾಂತಿಭಿಃ ಕಾಂತೈಃ ಕಪೋಲೈ[೭]ರಲಕಾಂಚಿತೈಃ ।**
**ಮದನಸ್ಯ ಸು[೮]ಸಮ್ಮೃಷ್ಟೈರಾ[೯]ಲೇಖ್ಯಫಲಕೈರಿವ ॥ ೧೯೩ ॥**

ಚೆನ್ನಾಗಿ ಒರಸಲ್ಪಟ್ಟಿರುವ ಮತ್ತು ಚಿತ್ರವನ್ನು ಬರೆಯುವುದಕ್ಕೆ ಯೋಗ್ಯವಾದ ಮನ್ಮಥನ ಹಲಿಗೆಯಂತಿರುವುವೂ ಚಂದ್ರನ ಕಾಂತಿಯನ್ನು ಜಯಿಸಿದುವೂ ಮನೋಹರವೂ ಕುರುಳುಕೂದಲುಗಳಿಂದ ಯುಕ್ತವೂ ಆದ ಕೆನ್ನೆಗಳಿಂದಲೂ

**ಅಧರೈಃ ಪಕ್ವಬಿಂಬಾಭೈಃ ಸ್ಮಿತಾಂಶುಭಿ[೧೦]ರನುದ್ರುತೈಃ ।**
**ಸಿಕ್ತೈರ್ಜಲಕಣೈರ್ದ್ವಿತ್ರೈರಿವ[೧೧]ವಿದ್ರುಮಭಂಗಕೈಃ ॥ ೧೯೪ ॥**

ಎರಡುಮೂರು ನೀರಿನ ಹನಿಗಳಿಂದ ಸೇಚನೆಮಾಡಲ್ಪಟ್ಟ ಹವಳದ ತುಂಡುಗಳಂತಿರುವುವೂ ನಗೆಯ ಕಿರಣಗಳಿಂದ ಯುಕ್ತವೂ ಪಕ್ವವಾದ ತೊಂಡೆಯ ಹಣ್ಣಿಗೆ ಸಮಾನವೂ ಆದ ತುಟಿಗಳಿಂದಲೂ

**[೧೨]ಪರಿಣಾಹಿಭಿರುತ್ತುಂಗೈಃ ಸುವೃತ್ತೈಃ ಸ್ತನಮಂಡಲೈಃ ।**
**ಸ್ರಸ್ತಾಂಶುಕಸ್ಫುಟಾಲಕ್ಷ್ಯಲಸ[೧೩]ನ್ನಖಪದಾಂಕನೈಃ ॥ ೧೯೫ ॥**

ವಿಶಾಲವೂ ಉನ್ನತವೂ ದುಂಡೂ ವಸ್ತ್ರವು ಜಾರಿರುವುದರಿಂದ ಚೆನ್ನಾಗಿ ತೋರುತ್ತಿರುವ ಪ್ರಕಾಶಮಾನವಾದ ಉಗುರುಗಳ ರೇಖೆಯ ಗುರುತುಗಳುಳ್ಳುವೂ ಆದ ಕುಚಗಳಿಂದಲೂ

**ಹರಿಚಂದನ[೧೪]ಸಮ್ಮೃಷ್ಟೈರ್ಹಾರಜ್ಯೋತ್ಸ್ನೋ[೧೫]ಪಹಾರಿತೈಃ ।**
**ಕುಚನರ್ತನರಂಗಾಭೈಃ [೧೬]ಪ್ರೇಕ್ಷಣೀಯೈರುರೋಗೃಹೈಃ ॥ ೧೯೬ ॥**

ಚಂದನದಿಂದ ಲೇಪಿಸಲ್ಪಟ್ಟಿರುವುವೂ ಹಾರದ ಕಾಂತಿಯಿಂದ ಮಿಶ್ರಿತವೂ ಕುಚಗಳ ನರ್ತನಕ್ಕೆ ರಂಗಭೂಮಿಯೂ ನೋಡುವುದಕ್ಕೆ ಯೋಗ್ಯವೂ ಆದ ವಕ್ಷಃಪ್ರದೇಶಗಳಿಂದಲೂ

**ನಖೋಜ್ಜ್ವಲೈಸ್ತಾಮ್ರತಲೈಃ ಸಲೀಲಾಂದೋಲಿತೈರ್ಭುಜೈಃ ।**
**ಸಪುಷ್ಪಪಲ್ಲವೋಲ್ಲಾಸಿಲತಾ[೧೭]ವಿಟಪಕೋಮಲೈಃ ॥ ೧೯೭ ॥**

ಉಗುರುಗಳಿಂದ ಪ್ರಕಾಶಮಾನವೂ ಕೆಂಪಾದ ಅಂಗೈಗಳುಳ್ಳುವೂ ಲೀಲೆಯಿಂದ ಅಳ್ಳಾಡಿಸಲ್ಪಟ್ಟುವೂ ಪುಷ್ಪಸಹಿತವಾದ ತಳಿರಿನಿಂದ ಪ್ರಕಾಶಮಾನವಾದ ಲತೆಯ ಕೊಂಬೆಯಂತೆ ಕೋಮಲವೂ ಆದ ಭುಜಗಳಿಂದಲೂ

೧ ಸದೃಶಾನಿ. ೨ ದಲಾಯಿತೈರಿತ್ಯಪಿ ಪಾಠಃ. ೩ ಆಲಸೇನ ಸಹಿತಾನಿ. ೪ ವಕ್ರೈಃ. ೫ ಚಲದ್ಭಿಃ. ೬ ಶ್ಲಥಃ. ೭ ಅಲಕಾಂಕಿತೈರಿತ್ಯಪಿ ಪಾಠಃ. ೮ ಸಮ್ಮಾರ್ಜಿತೈಃ. ೯ ಲಿಖಿತುಂ ಯೋಗ್ಯಾಃ. ೧೦ ಅನುಗತೈಃ. ೧೧ ಪ್ರವಾಲಖಂಡೈಃ. ೧೨ ವಿಶಾಲವದ್ಭಿಃ. ೧೩ ನಖರೇಖಾಚಿಹ್ನೈಃ. ೧೪ ಸಮ್ಮಾರ್ಜಿತೈಃ, ಅನುಲಿಪ್ತೈರಿತ್ಯರ್ಥಃ. ೧೫ ಮಿಶ್ರಿತೈಃ. ೧೬ ದರ್ಶನೀಯೈಃ. ೧೭ ಶಾಖಾ.

**ತನೂದರೈಃ ಕೃಶೈರ್ಮಧ್ಯೈಸ್ತ್ರಿವಲೀಭಂಗಶೋಭಿಭಿಃ ।**
**ನಾಭಿವಲ್ಮೀಕನಿಸ್ಸರ್ಪದ್ರೋಮಾಲೀಕಾಲಭೋಗಿಭಿಃ ॥ ೧೯೮ ॥**

ಸಣ್ಣದಾದ ಹೊಟ್ಟೆಯುಳ್ಳವೂ ಕೃಶವೂ ಮೂರು ರೇಖೆಗಳಿಂದ ಶೋಭಿಸುವುವೂ ನಾಭಿಯೆಂಬ ಹುತ್ತದಿಂದ ಹೊರಡುತ್ತಿರುವ ರೋಮಗಳ ಸಾಲೆಂಬ ಕೃಷ್ಣಸರ್ಪಗಳುಳ್ಳವೂ ಆದ ಮಧ್ಯಪ್ರದೇಶಗಳಿಂದಲೂ

**ಲಸದ್ದುಕೂಲವಸನೈರ್ವಿಪುಲೈರ್ಜಘನಸ್ಥಲೈಃ ।**
**ಸಕಾಂಚೀಬಂಧನೈಃ ಕಾಮನೃಪಕಾರಾಲಯಾಯಿತೈಃ ॥ ೧೯೯ ॥**

ಪ್ರಕಾಶಮಾನವಾದ ಪಟ್ಟೆವಸ್ತ್ರವುಳ್ಳವೂ ವಿಸ್ತಾರವೂ ಒಡ್ಯಾಣವುಳ್ಳವೂ ಮನ್ಮಥನೆಂಬ ರಾಜನ ಕಾರಾಗೃಹದಂತಿರುವುವೂ ಆದ ಜಘನಪ್ರದೇಶಗಳಿಂದಲೂ

**ಸ್ಖಲದ್ಗತಿವಶಾದುಚ್ಚೈರಾರಣನ್ಮಣಿನೂಪುರೈಃ।**
**ಚರಣೈರರುಣಾಂಭೋಜೈರಿವ ವ್ಯಕ್ತಾಲಿಝುಂಕೃತೈಃ ॥ ೨೦೦ ॥**

ಜಾರುತ್ತಿರುವ ನಡಿಗೆಯಿಂದ ಚೆನ್ನಾಗಿ ಶಬ್ದಮಾಡುತ್ತಿರುವ ರತ್ನಖಚಿತವಾದ ಪಾದಕಡಗಗಳುಳ್ಳವೂ ಭ್ರಮರಗಳ ಸ್ಫುಟವಾದ ಝೇಂಕಾರಶಬ್ದಗಳುಳ್ಳ ಕೆಂದಾವರೆಗಳಂತಿರುವುವೂ ಆದ ಪಾದಗಳಿಂದಲೂ

**ಸಲೀಲ[೧]ಮಂಥರೈ[೨]ರ್ಯಾತೈರ್ಜಿತಹಂಸೀ[೩]ಪರಿಕ್ರಮೈಃ ।**
**ಶ್ವಸಿತೈಃ ಸಕುಚೋತ್ಕಂಪೈ[೪]ರ್ವ್ಯಂಜಿತಾಂಗಗತ[೫]ಕ್ಲಮೈಃ ॥ ೨೦೧ ॥**

ಸ್ತ್ರೀಹಂಸಪಕ್ಷಿಗಳ ಪಾದವಿನ್ಯಾಸವನ್ನು ಜಯಿಸಿರುವುವೂ ಲೀಲಾಯುಕ್ತವೂ ಆದ ಮಂದಗಮನಗಳಿಂದಲೂ ಶರೀರದಲ್ಲಿರುವ ಆಯಾಸವನ್ನು ವ್ಯಕ್ತಪಡಿಸುವುವೂ ಕುಚಗಳ ಚಲನೆಯೊಡಗೂಡಿದುವೂ ಆದ ಶ್ವಾಸೋಚ್ಛ್ವಾಸಗಳಿಂದಲೂ ಕೂಡಿರುವವರೂ

**ಸಮಂ ಯುವಭಿ[೬]ರಾರೂಢನವಯೌವನಕರ್ಕಶಾಃ ।**
**ವಿಚರಂತೀರ್ವನಾಂತೇಷು ದಧಾನಂ ಖಚರೀಃ ಕ್ವಚಿತ್ ॥ ೨೦೨ ॥**

ನವಯೌವನಾವಿರ್ಭಾವದಿಂದ ಕಠಿಣರೂ ಯುವಕರೊಡನೆ ವನಪ್ರದೇಶಗಳಲ್ಲಿ ಸಂಚರಿಸುವವರೂ ಆದ ವಿದ್ಯಾಧರಸ್ತ್ರೀಯರನ್ನು ಕೆಲವು ಕಡೆಯಲ್ಲಿ ಧರಿಸಿರುವುದೂ

**ಅಲಕಾಲೀ[೭]ಲಲದ್ಭೃಂಗಾಸ್ತನ್ವೀಃ ಕೋಮಲವಿಗ್ರಹಾಃ ।**
**ಲತಾನುಕಾರಿಣೀರೂಢಸ್ಮಿತಪುಷ್ಪೋದ್ಗಮಶ್ರಿಯಃ ॥ ೨೦೩ ॥**

ಕುರುಳುಕೂದಲುಗಳ ಸಾಲೆಂಬ ಚಲಿಸುತ್ತಿರುವ ಭ್ರಮರಗಳುಳ್ಳವರೂ ಸುಂದರಿಯರೂ ಕೋಮಲವಾದ ಶರೀರವುಳ್ಳವರೂ ಲತೆಯನ್ನು ಹೋಲುವವರೂ ಮಂದಹಾಸವೆಂಬ ಪುಷ್ಪಾವಿರ್ಭಾವದ ಶೋಭೆಯುಳ್ಳವರೂ

**ಪ್ರಸೂನರಚಿತಾ[೮]ಕಲ್ಪಾವತಂಸೀಕೃತಪಲ್ಲವಾಃ ।**
**ಕುಸುಮೋಪಚಯೇ ಸಕ್ತಾಃ ಸಂಚರಂತೀರಿತಸ್ತತಃ ॥ ೨೦೪ ॥**

ಪುಷ್ಪಗಳಿಂದ ಶೃಂಗಾರಮಾಡಿಕೊಂಡಿರುವವರೂ ತಳಿರುಗಳನ್ನು ಶಿರೋಭೂಷಣವಾಗಿ ಮಾಡಿಕೊಂಡಿರುವವರೂ ಪುಷ್ಪಗಳನ್ನು ಬಿಡಿಸಿಕೊಳ್ಳುವುದರಲ್ಲಿ ಆಸಕ್ತರೂ ಈಕಡೆ ಆಕಡೆ ಸಂಚರಿಸುತ್ತಿರುವವರೂ

**ವನಲಕ್ಷ್ಮೀರಿವ ವ್ಯಕ್ತಲಕ್ಷಣಾ ವನಜೇಕ್ಷಣಾಃ ।**
**ಧಾರಯಂತ[೧]ಮನೂದ್ಯಾನಂ ವಿದ್ಯಾಧರವಧೂಃ ಕ್ವಚಿತ್ ॥ ೨೦೫ ॥**

ವನಲಕ್ಷ್ಮಿಗಳಂತೆ ವ್ಯಕ್ತವಾದ ಲಕ್ಷಣಗಳುಳ್ಳವರೂ ಕಮಲದಂತೆ ಕಣ್ಣುಗಳುಳ್ಳವರೂ ಆದ ವಿದ್ಯಾಧರಸ್ತ್ರೀಯರನ್ನು ಪ್ರತಿಯೊಂದು ಉದ್ಯಾನದಲ್ಲಿಯೂ ಅಲ್ಲಲ್ಲಿ ಧರಿಸಿರುವುದೂ

**ತಮಿತ್ಯದ್ರೀಂದ್ರಮುದ್ಭೂತಮಾಹಾತ್ಮ್ಯಂ ಭುವನಾತಿಗಮ್ ।**
**ಜಿನಾಧಿಪಮಿವಾಸಾದ್ಯ ಕುಮಾರೌ [೨]ಧೃತಿಮಾಪತುಃ ॥ ೨೦೬ ॥**

ಆವಿರ್ಭೂತವಾದ ಮಾಹಾತ್ಮ್ಯವುಳ್ಳದೂ ಲೋಕಾತಿಶಯವಾದುದೂ ಆದ ಆ ವಿಜಯಾರ್ಧಪರ್ವತವನ್ನು ಹೊಂದಿ, ಜಿನೇಶ್ವರನನ್ನು ಹೊಂದಿ ಸಂತೋಷಪಡುವಂತೆ, ಆ ನಮಿವಿನಮಿಕುಮಾರರು ಸಂತೋಷಪಟ್ಟರು.

**ಧುತತಟವನಾಭೋಗಾ ಭಾಗೀರಥೀತಟವೇದಿಕಾ-**
**ಪರಿಸರಸರೋವೀಚೀ[೩]ಭೇದಾದುಪೋಢಪಯಃಕಣಾಃ ।**
**ವನಕರಿಕಟಾದಾಕೃಷ್ಟಾಲಿವ್ರಜಾ ಮರುತೋ ಗಿರೇ-**
**[೪]ರುಪವನಭುವೋ [೫]ಯೂನೋರಧ್ವಶ್ರಮಂ [೬]ವ್ಯಪನಿನ್ಯಿರೇ ॥ ೨೦೭ ॥**

ಗಾಳಿಯಿಂದ ಚಲಿಸುತ್ತಿರುವ ವಿಸ್ತಾರವಾದ ವನವುಳ್ಳವೂ ಗಂಗಾನದಿಯ ದಡದ ವೇದಿಕೆಯ ಸಮೀಪದಲ್ಲಿರುವ ಸರೋವರಗಳ ಅಲೆಗಳ ಆಶ್ರಯದಿಂದುತ್ಪನ್ನವಾದ ಜಲಬಿಂದುಗಳುಳ್ಳವೂ ವನಗಜಗಳ ಕೆನ್ನೆಯ ಗಂಧದಿಂದ ಆಕರ್ಷಿಸಲ್ಪಟ್ಟ ಭ್ರಮರಗಳುಳ್ಳವೂ ಪರ್ವತದ ಉಪವನಗಳಲ್ಲಿ ಉತ್ಪನ್ನವೂ ಆದ ಗಾಳಿಗಳು ಯುವಕರಾದ ನಮಿವಿನಮಿಕುಮಾರರ ಮಾರ್ಗಾಯಾಸವನ್ನು ನಾಶಮಾಡಿದುವು.

**ಮದಕಲಕಲಕಂಠೀಡಿಂಡಿಮಾರಾವರಮ್ಯಾ**
**ಮಧುರವಿರುತಭೃಂಗೀಮಂಗಲೋದ್ಗೀತಿಹೃದ್ಯಾಃ ।**
**ಪರಿಧೃತಕುಸುಮಾರ್ಘಾಸ್ಸಂಪತದ್ಭಿರ್ಮರುದ್ಭಿಃ**
**ಫಣಿಪತಿಮಿವ ದೂರಾ[೭]ತ್ಪ್ರತ್ಯುದೀಯುರ್ವನಾಂತಾಃ ॥ ೨೦೮ ॥**

ಮದದಿಂದ ಮನೋಹರವಾಗಿರುವ ಹೆಣ್ಣುಕೋಗಿಲೆಯೆಂಬ ಡಮರುವಾದ್ಯದ ಶಬ್ದದಿಂದ ರಮಣೀಯವೂ ಮಧುರವಾಗಿ ಶಬ್ದಮಾಡುತ್ತಿರುವ ಹೆಣ್ಣುಭ್ರಮರದ ಮಂಗಲಗಾನದಿಂದ ಮನೋಹರವೂ ಪುಷ್ಪಮೊದಲಾದ ಪೂಜಾದ್ರವ್ಯಗಳನ್ನು ಧರಿಸಿರುವುವೂ ಆದ ವನಪ್ರದೇಶಗಳು ಬೀಸುತ್ತಿರುವ ಗಾಳಿಗಳಿಂದ ಧರಣೇಂದ್ರನನ್ನು ದೂರದಿಂದ ಇದಿರ್ಗೊಂಡುವೋ ಎಂಬಂತೆ ಕಾಣುತ್ತಿದ್ದುವು.

**ರಜತಗಿರಿಮಹೀಂದ್ರೋ ನಾತಿದೂರಾದುದಾರಂ**
**ಪ್ರಸವಭವನಮೇಕಂ [೮]ವಿಶ್ವವಿದ್ಯಾನಿಧೀನಾಮ್ ।**
**ಜಿನಮಿವ ಭವನಾಂತವ್ಯಾಪಿಕೀರ್ತಿಂ ಪ್ರಪಶ್ಯ-**
**ನ್ಪ್ರಮದ[೯]ಮಬಿಭ[೧೦]ರಂತಃಸಾರ್ಧಮಾಭ್ಯಾಂ ಯುವಾಭ್ಯಾಮ್ ॥ ೨೦೯ ॥**

ವಿಸ್ತಾರವೂ ವಿದ್ಯಾಧರರಿಗೆ ಉತ್ಪತ್ತಿಸ್ಥಾನವೂ ಜಿನೇಶ್ವರನಂತೆ ಲೋಕಾಂತದವರೆಗೆ ವ್ಯಾಪಿಸಿರುವ ಕೀರ್ತಿಯುಳ್ಳದೂ ಆದ ವಿಜಯಾರ್ಧಪರ್ವತವನ್ನು ಸಮೀಪದಲ್ಲಿ ನೋಡಿ ಧರಣೇಂದ್ರನೂ ಯುವಕರಾದ ನಮಿವಿನಮಿಕುಮಾರರೂ ಮನಸ್ಸಿನಲ್ಲಿ ಆನಂದಭರಿತರಾದರು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಧರಣೇಂದ್ರವಿಜಯಾರ್ಧೋಪಗಮನಂ ನಾಮಾಷ್ಟಾದಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಧರಣೇಂದ್ರವಿಜಯಾರ್ಧೋಪಗಮನವೆಂಬ
ಹದಿನೆಂಟನೆಯ ಪರ್ವವು ಸಮಾಪ್ತವಾದುದು.

---

೧ ಮಂದ್ಯೈಃ. ೨ ಗಮನೈಃ. ೩ ಪಾದನ್ಯಾಸೈಃ. ೪ ವ್ಯಂಜಿತಾಂತರ್ಗತಕ್ಲಮೈರಿತ್ಯಪಿ ಪಾಠಃ. ೫ ಶ್ರಮೈಃ. ೬ ಆವಿರ್ಭೂತಂ. ೭ ಚಲತ್, ಲಸದಿತ್ಯಪಿ ಪಾಠಃ. ೮ ಶೃಂಗಾರಾಃ.

೧ ಉದ್ಯಾನಮುದ್ಯಾನಂ ಪ್ರತಿ. ೨ ಸಂತೋಷಂ. ೩ ಆಶ್ರಯಣಾತ್. ೪ ಉಪವನೇ ಜಾತಾಃ. ೫ ನಮಿವಿನಮಿನಾಮ್ನೋಃ. ೬ ಅಪಹರಂತಿ ಸ್ಮ. ೭ ಅಭಿಮುಖಮಾಯಯುಃ. ೮ ವಿದ್ಯಾಧರಾಣಾಂ. ೯ ಅಧಾತ್. ೧೦ ಮನಸಿ.

# ಅಥೈಕೋನವಿಂಶಂ ಪರ್ವ

**ಅಥಾಸ್ಯ ಮೇಖಲಾಮಾದ್ಯಾಮವತೀರ್ಣಃ ಫಣೀಶ್ವರಃ ।**
**ತತ್ರ ವ್ಯೋಮಚರೇಂದ್ರಾಣಾಂ ಲೋಕಂ [೧]ತಾವಿತ್ಯ[೨]ದೀದೃಶತ್ ॥ ೧ ॥**

ತರುವಾಯ ಧರಣೇಂದ್ರನು ಈ ವಿಜಯಾರ್ಧಪರ್ವತದ ಮೊದಲನೆಯ ತಪ್ಪಲುಪ್ರದೇಶಕ್ಕೆ ಇಳಿದು ಅಲ್ಲಿ ಆ ನಮಿವಿನಮಿಕುಮಾರರಿಗೆ ವಿದ್ಯಾಧರಾಧಿಪತಿಗಳ ಲೋಕವನ್ನು ಮುಂದೆ ಹೇಳುಪರೀತಿಯಾಗಿ ತೋರಿಸಿದನು. ವರ್ಣಿಸಿದನೆಂದು ಭಾವವು.

**ಅಯಂ ಗಿರಿ[೩]ರಸಂಭೂಷ್ಣುರ್ನೂನಮೂರ್ಧ್ವಂ ಮಹತ್ತಯಾ ।**
**[೪]ವಿತತ್ಯ ತಿರ್ಯಗಾತ್ಮಾನ[೫]ಮವಗಾಢೋ ಮಹಾರ್ಣವಮ್ ॥ ೨ ॥**

''ಈ ಪರ್ವತವು ನಿಜವಾಗಿಯೂ ಅನಾದಿನಿಧನವಾದುದು. ತನ್ನ ಮಹತ್ತ್ವದಿಂದ ಮೇಲಕ್ಕೆ ವಿಸ್ತರಿಸಿ ಅಡ್ಡಲಾಗಿ ತಾನು ಮಹಾಸಮುದ್ರವನ್ನು ಪ್ರವೇಶಿಸಿದೆ.

**ಶ್ರೇಣ್ಯೌ ಸದಾನಪಾಯಿನ್ಯೌ ಭೂಭೃತೋಽಸ್ಯ ವಿರಾಜತಃ ।**
**ದೇವ್ಯಾವಿವ ಮಹಾಭೋಗಸಂಪನ್ನೇ [೬]ವಿಧೃತಾಯತೀ ॥ ೩ ॥**

ಈ ವಿಜಯಾರ್ಧಪರ್ವತದ ಯಾವಾಗಲೂ ನಾಶವಿಲ್ಲದಿರುವ ಉತ್ತರದಕ್ಷಿಣ ಶ್ರೇಣಿಗಳೆರಡು ಮಹಾಭೋಗಸಂಪನ್ನರೂ ಶೋಭಾಯುಕ್ತರೂ ಆದ ಇಬ್ಬರು ದೇವಿಯರಂತೆ ಶೋಭಿಸುತ್ತವೆ.

**ಯೋಜನಾನಿ ದಶೋ[೭]ತ್ಪತ್ಯ ಗಿರೇರಸ್ಯಾ[೮]ಧಿಮೇಖಲಮ್ ।**
**ವಿದ್ಯಾಧರನಿವಾಸೋಽಯಂ ಭಾತಿ ಸ್ವರ್ಗೈಕ[೯]ಖಂಡವತ್ ॥ ೪ ॥**

ಈ ಪರ್ವತದ ಹತ್ತುಯೋಜನದ ಮೇಲಿರುವ ತಪ್ಪಲಿನಲ್ಲಿ ವಿದ್ಯಾಧರರ ಈ ವಾಸಸ್ಥಾನವು ಸ್ವರ್ಗದ ಒಂದು ಅಂಶದಂತೆ ಶೋಭಿಸುತ್ತಿದೆ.

**ವಿದ್ಯಾಧರಾ ವಿಭಾಂತ್ಯಸ್ಮಿನ್ ಶ್ರೇಣೀದ್ವಯ[೧೦]ಮಧಿಷ್ಠಿತಾಃ ।**
**ಸ್ವರ್ಗಾದಿವ ಸಮಾಗತ್ಯ ಕೃತಾವಾಸಾಃ [೧೧]ಸುಧಾಶನಾಃ ॥ ೫ ॥**

ಈ ಪರ್ವತದಲ್ಲಿ ಎರಡು ಶ್ರೇಣಿಗಳನ್ನು ಆಶ್ರಯಿಸಿರುವ ವಿದ್ಯಾಧರರು ಸ್ವರ್ಗದಿಂದ ಬಂದು ವಾಸಮಾಡುತ್ತಿರುವ ದೇವತೆಗಳಂತೆ ಶೋಭಿಸುತ್ತಾರೆ.

**ವಿದ್ಯಾಧರಾಧಿವಾಸೋಽಯಂ ಧತ್ತೇಽಸ್ಮಲ್ಲೋಕ[೧೨]ವಿಭ್ರಮಮ್ ।**
**ನಿಷೇವಿತೋ [೧೩]ಮಹಾಭೋಗ್ಯೈಃ ಫಣೀಂದ್ರೈರಿವ ಖೇಚರೈಃ ॥ ೬ ॥**

ದೊಡ್ಡ ಹೆಡೆಗಳುಳ್ಳ ನಾಗೇಂದ್ರರಂತಿರುವ ಮಹಾಸುಖಿಗಳಾದ ವಿದ್ಯಾಧರರಿಂದ ಸೇವಿಸಲ್ಪಟ್ಟ ಈ ವಿದ್ಯಾಧರರ ವಾಸಸ್ಥಾನವು ನಮ್ಮ ಪಾತಾಳಲೋಕದ ವಿಲಾಸವನ್ನು ಧರಿಸುತ್ತದೆ.

**[೧೪]ಪಾತಾಲಸ್ವರ್ಗಲೋಕಸ್ಯ ಸತ್ಯಮದ್ಯ ಸ್ಮರಾಮ್ಯಹಮ್ ।**
**ನಾಗಕನ್ಯಾ ಇವ ಪ್ರೇಕ್ಷ್ಯಾಃ ಪಶ್ಯನ್ಖಚರಕನ್ಯಕಾಃ ॥ ೭ ॥**

ನಾಗಕನ್ನಿಕೆಯರಂತೆ ನೋಡುವುದಕ್ಕೆ ಸುಂದರಿಯರಾದ ವಿದ್ಯಾಧರಕನ್ನಿಕೆಯರನ್ನು ನೋಡಿ ಈಗ ನಾನು ನಿಜವಾಗಿಯೂ ಪಾತಾಳಸ್ವರ್ಗಲೋಕವನ್ನು ಸ್ಮರಿಸುತ್ತೇನೆ.

**ನಾತ್ರ [೧]ಪ್ರತಿಭಯಂ ತೀವ್ರಂ ಸ್ವಚಕ್ರಪರಚಕ್ರಜಮ್ ।**
**ನೇತಯೋ ನೈವ ರೋಗಾದಿಬಾಧಾಃ ಸಂತೀಹ ಜಾತು ಚಿತ್ ॥ ೮ ॥**

ಇಲ್ಲಿ ಸ್ವಜನಗಳ ಸಮೂಹದಿಂದಲೂ ಶತ್ರುಜನಗಳ ಸಮೂಹದಿಂದಲೂ ತೀವ್ರವಾದ ಭಯವಿಲ್ಲವು. ಇಲ್ಲಿ ಅತಿವೃಷ್ಟಿ ಅನಾವೃಷ್ಟಿ ಮೊದಲಾದ ಈತಿಬಾಧೆಗಳೂ ರೋಗಾದಿಬಾಧೆಗಳೂ ಎಂದೂ ಇಲ್ಲ.

**ಪ್ರಾರಂಭೇ ಚಾ[೨]ಪವರ್ಗೇ ಚ ತುರ್ಯಕಾಲಸ್ಯ ಯಾ ಸ್ಥಿತಿಃ ।**
**ಮಹಾ[೩]ಭಾರತವರ್ಷೇಽಸ್ಮಿನ್ ಸಾ[೪]ತ್ರೋತ್ಕರ್ಷಾಪಕರ್ಷತಃ ॥ ೯ ॥**

ಈ ಭರತಕ್ಷೇತ್ರದಲ್ಲಿ ನಾಲ್ಕನೆಯ ಕಾಲದ ಆದಿಯಲ್ಲಿಯೂ ಅಂತದಲ್ಲಿಯೂ ಯಾವ ಸ್ಥಿತಿಯಿರುವುದೋ ಅದೇ ಈ ವಿಜಯಾರ್ಧಪರ್ವತದಲ್ಲಿ ವೃದ್ಧಿಕ್ಷಯರೂಪದಿಂದ ಪ್ರವರ್ತಿಸುತ್ತದೆ.

**[೫]ಪರಾ ಸ್ಥಿತಿರ್ನೃಣಾಂ [೬]ಪೂರ್ವಕೋಟಿವರ್ಷಶತಾಂತರೇ ।**
**ಉತ್ಸೇಧಹಾನಿ[೭]ರಾಸಪ್ತಾರತ್ನಿಃ ಪಂಚಧನುಃ[೮]ಶತಾತ್ ॥ ೧೦ ॥**

ಮನುಷ್ಯರ ಉತ್ಕೃಷ್ಟಾಯುಷ್ಯಸ್ಥಿತಿಯು ಪೂರ್ವಕೋಟಿವರ್ಷಗಳು. ಜಘನ್ಯಾಯುಷ್ಯಸ್ಥಿತಿಯು ನೂರುವರ್ಷಗಳು. ಉತ್ಕೃಷ್ಟಶರೀರಪರಿಮಾಣವು ಐನೂರು ಧನುಸ್ಸು. ಜಘನ್ಯಶರೀರಪರಿಮಾಣವು ಏಳು ಗುಡ್ಡುಮೊಳ.

**ಕರ್ಮಭೂಮಿನಿಯೋಗೋ ಯಃ ಸ ಸರ್ವೋಽಪ್ಯತ್ರ [೯]ಪುಷ್ಕಲಃ ।**
**ವಿಶೇಷಸ್ತು ಮಹಾವಿದ್ಯಾ ದದ[೧೦]ತ್ಯೇಷಾಮಭೀಪ್ಸಿತಮ್ ॥ ೧೧ ॥**

ಕರ್ಮಭೂಮಿಯ ಸ್ಥಿತಿಯೆಲ್ಲವು ಈ ವಿಜಯಾರ್ಧಪರ್ವತದಲ್ಲಿ ಸಂಪೂರ್ಣವಾಗಿದೆ. ಈ ವಿದ್ಯಾಧರರಿಗೆ ಮಹಾವಿದ್ಯೆಗಳು ಇಷ್ಟಾರ್ಥವನ್ನು ಕೊಡುತ್ತವೆ. ಇಲ್ಲಿ ಇದೊಂದು ವಿಶೇಷವು.

**ಮಹಾಪ್ರಜ್ಞಪ್ತಿವಿದ್ಯಾದ್ಯಾಃ ಸಿದ್ಧ್ಯಂತೀಹ ಖಗೇಶಿನಾಮ್ ।**
**ವಿದ್ಯಾಃ ಕಾಮದುಘಾ ಯಾಸ್ತಾಃ ಫಲಿಷ್ಯಂತೀಪ್ಸಿತಂ ಫಲಮ್ ॥ ೧೨ ॥**

ಇಲ್ಲಿ ವಿದ್ಯಾಧರರಿಗೆ ಇಷ್ಟಾರ್ಥವನ್ನು ಕೊಡುವ ಮಹಾಪ್ರಜ್ಞಪ್ತಿಮೊದಲಾದ ವಿದ್ಯೆಗಳು ಸಿದ್ಧಿಯಾಗಿ ಇಚ್ಛಿಸಿದ ಫಲವನ್ನು ಕೊಡುತ್ತವೆ.

**[೧೧]ಕುಲ[೧೨]ಜಾತ್ಯಾಶ್ರಿತಾ ವಿದ್ಯಾಸ್ತಪೋವಿದ್ಯಾಶ್ಚ ತಾ ದ್ವಿಧಾ ।**
**ಕುಲಾಮ್ನಾಯಾಗತಾಃ ಪೂರ್ವಾ ಯತ್ನೇನಾರಾಧಿತಾಃ ಪರಾಃ ॥ ೧೩ ॥**

ಆ ವಿದ್ಯೆಗಳು ತಂದೆತಾಯಿಗಳ ವಂಶಪರಂಪರೆಯಿಂದ ಬಂದ ವಿದ್ಯೆಗಳೆಂತಲೂ ತಪೋವಿದ್ಯೆಗಳೆಂತಲೂ ಎರಡುವಿಧವಾಗಿವೆ. ಮೊದಲನೆಯ ವಿದ್ಯೆಗಳು ಕುಲಪರಂಪರೆಯಿಂದ ಪ್ರಾಪ್ತವಾಗುತ್ತವೆ. ಎರಡನೆಯ ತಪೋವಿದ್ಯೆಗಳು ಯತ್ನದಿಂದ ಸಾಧಿಸಲ್ಪಡುವುವುಗಳಾಗಿವೆ.

---

೧ ಕುಮಾರೌ. ೨ ದರ್ಶಯತಿ ಸ್ಮ. ೩ ಅನಾದ್ಯನಿಧನಃ, ಅಸಂಭೃಷ್ಣುರಿತ್ಯಪಿ ಪಾಠಃ. ೪ ವಿಸ್ತೃತ್ಯ. ೫ ಪ್ರವಿಷ್ಟಃ. ೬ ವಿಧೃತದೈರ್ಘ್ಯೇ ಪಕ್ಷೇಧೃತಶ್ರಿಯೌ. ೭ ಉತ್ಕ್ರಮ್ಯ. ೮ ಶ್ರೇಣ್ಯಾಂ. ೯ ಏಕದೇಶವದಿತ್ಯಪಿ ಪಾಠಃ. ೧೦ ಆಶ್ರಿತಾಃ. ೧೧ ಸುಧಾಶಿನ ಇತ್ಯಪಿ ಪಾಠಃ. ೧೨ ವಿಲಾಸಂ. ೧೩ ಮಹಾಸುಖ್ಯೈಃ ಪಕ್ಷೇ ಮಹಾಫಣೈಃ. ೧೪ ಭವನಾಮರಲೋಕಂ.

೧ ಭೀತಿಃ. ೨ ಅವಸಾನೇ. ೩ ಭರತಕ್ಷೇತ್ರೇ. ೪ ವಿಜಯಾರ್ಧೇ. ೫ ಆದ್ಯವಸಾನೋತ್ಕೃಷ್ಟಾಯುಃ. ೬ ಪೂರ್ವಕೋಟಿವರ್ಷಶತಭೇದೌ. ೭ ಅರತ್ನಿಸಪ್ತಕಪರ್ಯಂತಂ. ೮ ಆರಭ್ಯ. ೯ ಸಂಪೂರ್ಣಃ. ೧೦ ವಿದ್ಯಾಧರಾಣಾಂ. ೧೧ ಪಿತುಃ. ೧೨ ಮಾತುಃ.

**ತಾಸಾಮಾರಾಧನೋಪಾಯಃ ಸಿದ್ಧಾಯತನಸನ್ನಿಧೌ ।**
**ಅನ್ಯತ್ರ ವಾಶುಚೌ ದೇಶೇ ದ್ವೀಪಾದ್ರಿಪುಲಿನಾದಿಕೇ ॥ ೧೪ ॥**

**ಸಂಪೂಜ್ಯ ಶುಚಿವೇಷೇಣ ವಿದ್ಯಾ [೧]ದೇವವ್ರತಾಶ್ರಿತೈಃ ।**
**ಮಹೋಪವಾಸೈರಾರಾಧ್ಯಾ ನಿತ್ಯಾರ್ಚನಪುರಃಸರೈಃ ॥ ೧೫ ॥**

**ಸಿದ್ಧ್ಯಂತಿ ವಿಧಿನಾನೇನ ಮಹಾವಿದ್ಯಾ ನಭೋಜುಷಾಮ್ ।**
**[೨]ತಪಶ್ಚರಣನಿತ್ಯಾರ್ಚಾಜಪಹೋಮಾದ್ಯನುಕ್ರಮಾತ್ ॥ ೧೬ ॥**

ಆ ತಪೋವಿದ್ಯೆಗಳನ್ನು ಸಾಧಿಸುವ ಉಪಾಯವು ಹೇಗೆಂದರೆ:— ಸಿದ್ಧಚೈತ್ಯಾಲಯಗಳ ಸನ್ನಿಧಿಯಲ್ಲಾಗಲಿ ಬೇರೆ ಶುಚಿಯಾದ ದ್ವೀಪದ ಅಥವಾ ಪರ್ವತದ ಮರಳುಪ್ರದೇಶಗಳಲ್ಲಾಗಲಿ ಶುಚಿರ್ಭೂತವಾದ ವೇಷದಿಂದ ಯಾವಾಗಲೂ ಮೊದಲು ಪೂಜೆಯನ್ನುಮಾಡಿ ಬ್ರಹ್ಮಚರ್ಯವ್ರತವನ್ನು ಕೈಕೊಂಡು ಮಹೋಪವಾಸಗಳಿಂದ ಆ ವಿದ್ಯೆಗಳನ್ನು ಪೂಜಿಸಿ ಸಾಧಿಸಬೇಕು. ಈ ಪ್ರಕಾರವಾದ ವಿಧಿಯಿಂದ ಮಹಾವಿದ್ಯೆಗಳು ವಿದ್ಯಾಧರರಿಗೆ ಸಿದ್ಧಿಸುತ್ತವೆ. ಕ್ರಮವಾಗಿ ತಪಸ್ಸು ನಿತ್ಯಪೂಜೆ ಜಪ ಹೋಮ ಮೊದಲಾದುವುಗಳನ್ನು ಮಾಡಬೇಕು.

**ಸಿದ್ಧವಿದ್ಯೈಸ್ತತಃ ಸಿದ್ಧಪ್ರತಿಮಾರ್ಚನಪೂರ್ವಕಮ್ ।**
**ವಿದ್ಯಾಫಲಾನಿ ಭೋಗ್ಯಾನಿ ವಿಯದ್ಗಮನ[೩]ಚುಂಚುಭಿಃ ॥ ೧೭ ॥**

ಆಕಾಶಗಮನದಲ್ಲಿ ಪ್ರಸಿದ್ಧರಾದ ವಿದ್ಯಾಧರರು ವಿದ್ಯಾಸಿದ್ಧಿಯಾದನಂತರ ಮೊದಲು ಸಿದ್ಧಪ್ರತಿಮೆಗಳನ್ನು ಪೂಜಿಸಿ ವಿದ್ಯಾಫಲಗಳನ್ನು ಅನುಭವಿಸಬೇಕು.

**ಯಥಾ ವಿದ್ಯಾಫಲಾನ್ಯೇಷಾಂ ಭೋಗ್ಯಾನೀಹ ಖಗೇಶಿನಾಮ್ ।**
**ತಥೈವ ಸ್ವೈರಸಂಭೋಗ್ಯಾಃ ಸಸ್ಯಾದಿಫಲಸಂಪದಃ ॥ ೧೮ ॥**

ಈ ವಿಜಯಾರ್ಧಪರ್ವತದಲ್ಲಿ ವಿದ್ಯಾಧರರಿಗೆ ವಿದ್ಯಾಫಲಗಳು ಭೋಗಾರ್ಹವಾಗಿರುವಂತೆ ಸಸ್ಯಮೊದಲಾದ ಫಲಸಂಪತ್ತುಗಳೂ ಯಥೇಚ್ಛವಾಗಿ ಭೋಗಿಸುವುದಕ್ಕೆ ಯೋಗ್ಯಗಳಾಗಿವೆ.

**ಸಸ್ಯಾನ್ಯಕೃಷ್ಟಪಚ್ಯಾನಿ [೪]ವಾಪ್ಯಃ [೫]ಸೋತ್ಫುಲ್ಲಪಂಕಜಾಃ ।**
**ಗ್ರಾಮಾಃ ಸಂಸಕ್ತಸೀಮಾನಃ ಸಾರಾಮಾಃ ಸಫಲದ್ರುಮಾಃ ॥ ೧೯ ॥**

ಕೃಷಿಮಾಡದೆ ತಾನಾಗಿ ಬೆಳೆದು ಪಕ್ವವಾಗಿ ಪೈರುಗಳು ವಿಕಸಿತವಾದ ಕಮಲಗಳುಳ್ಳ ಬಾವಿಗಳು ಉದ್ಯಾನಗಳೊಡನೆಯೂ ಫಲಭರಿತವಾದ ವೃಕ್ಷಗಳೊಡನೆಯೂ ಕೂಡಿರುವುವೂ ಎಲ್ಲೆಗಳುಳ್ಳುವೂ ಆದ ಗ್ರಾಮಗಳು

**ಸರತ್ನಸಿಕತಾ ನದ್ಯೋ ಹಂಸಾಧ್ಯಾಸಿತ[೬]ಸೈಕತಾಃ ।**
**[೭]ದೀರ್ಘಿಕಾ [೮]ಪುಷ್ಕರಿಣ್ಯಾದ್ಯಾಃ ಸ್ವಚ್ಛತೋಯಾ ಜಲಾಶಯಾಃ ॥ ೨೦ ॥**

ರತ್ನಸಹಿತವಾದ ಮರಳುಗಳೂ ಹಂಸಪಕ್ಷಿಗಳಿಂದ ವಾಸಮಾಡಲ್ಪಟ್ಟ ಮರಳುಗಳೂ ಉಳ್ಳ ನದಿಗಳು ಸ್ವಚ್ಛವಾದ ಜಲವುಳ್ಳ ಇಳಿಯುವ ಬಾವಿಗಳು ಚೌಕವಾದ ಬಾವಿಮೊದಲಾದುವುಗಳು

**ರಮಣೀಯಾ ವನೋದ್ದೇಶಾಃ ಪುಂಸ್ಕೋಕಿಲಕಲಸ್ವನೈಃ ।**
**ಲತಾಃ ಕುಸುಮಿತಾ ಗುಂಜ[೯]ದ್ಭೃಂಗಸಂಗೀತಸಂಗತಾಃ ॥ ೨೧ ॥**

ಕೋಗಿಲೆಗಳ ಮನೋಹರವಾದ ಶಬ್ದಗಳಿಂದ ರಮಣೀಯವಾದ ವನಪ್ರದೇಶಗಳು ಶಬ್ದಮಾಡುತ್ತಿರುವ ಭ್ರಮರಗಳ ಸಂಗೀತದೊಡಗೂಡಿದುದೂ ಪುಷ್ಪಿತವೂ ಆದ ಲತೆಗಳು

೧ ಬ್ರಹ್ಮಚರ್ಯವ್ರತಂ. ೨ ಪುರಶ್ಚರಣನಿತ್ಯಾರ್ಚೇತ್ಯಪಿ ಪಾಠಃ, ಪುರಶ್ಚರಣಂ ಪೂರ್ವಸೇವಾ. ೩ ಪ್ರತೀತೈಃ, ಚಂಚುಭಿರಿತ್ಯಪಿ ಪಾಠಃ. ೪ ವರ್ತುಲಾಕಾರಾಃ. ೫ ಸೋತ್ಪಲಪಂಕಜಾ ಇತ್ಯಪಿ ಪಾಠಃ. ೬ ಪುಲಿನಾಃ. ೭ ಆಯತಚತುರಸ್ರೋ ಜಲಾಶಯಃ. ೮ ಸಮಚತುರಸ್ರೋ ಜಲಾಶಯಃ. ೯ ಭೃಂಗೀತ್ಯಪಿ ಪಾಠಃ.

**ಚಂದ್ರಕಾಂತಶಿಲಾ[೧]ನದ್ಧಸೋಪಾನಾಃ ಸಲತಾಗೃಹಾಃ ।**
**ಖಚರೀಜನಸಂಭೋಗ್ಯಾಃ ಸೇವ್ಯಾಶ್ಚ ಕೃತಕಾದ್ರಯಃ ॥ ೨೨ ॥**

ಚಂದ್ರಕಾಂತಶಿಲೆಗಳಿಂದ ಕಟ್ಟಲ್ಪಟ್ಟ ಮೆಟ್ಟಲುಗಳೂ ಲತಾಗೃಹಗಳೂ ಉಳ್ಳುವೂ ವಿದ್ಯಾಧರಸ್ತ್ರೀಯರಿಗೆ ಭೋಗಾರ್ಹವೂ ಸೇವಿಸುವುದಕ್ಕೆ ಯೋಗ್ಯವೂ ಆದ ಕ್ರೀಡಾಪರ್ವತಗಳು

**ರಮ್ಯಾಃ ಪುರಾಕರಗ್ರಾಮ[೨]ಸನ್ನಿವೇಶಾಶ್ಚ ವಿಸ್ತೃತಾಃ ।**
**ಸರಿತ್ಸರೋವರಾರಾಮಶಾಲೀಕ್ಷುವನಮಂಡನಾಃ ॥ ೨೩ ॥**

ನದೀ ಸರೋವರ ಉದ್ಯಾನ ಭತ್ತದ ಕ್ಷೇತ್ರ ಕಬ್ಬಿನ ತೋಟ ಇವುಗಳಿಂದ ಅಲಂಕೃತವೂ ರಮಣೀಯವೂ ವಿಸ್ತಾರವೂ ಆದ ಪಟ್ಟಣಗಳ ರಚನೆಗಳು ಸ್ಥಾನರಚನೆಗಳು ಗ್ರಾಮರಚನೆಗಳು

**ಸ್ತ್ರೀಪುಂಸಃ ಸೃಷ್ಟಿ [೩]ರತ್ರತ್ಯಾ ರತ್ಯನಂಗಾನುಕಾರಿಣೀ ।**
**ಸಮಗ್ರಭೋಗಸಂಪತ್ಯಾ [೪]ಸ್ವರ್ಭೋಗೇಷ್ವಪ್ಯನುತ್ಸುಕಾ ॥ ೨೪ ॥**

ರತಿದೇವೀಮನ್ಮಥರನ್ನು ಹೋಲುತ್ತಿರುವುದೂ ಈ ವಿಜಯಾರ್ಧಪರ್ವತದಲ್ಲಿ ಉಂಟಾದುದೂ ಸಂಪೂರ್ಣವಾದ ಭೋಗಸಂಪತ್ತಿನಿಂದ ಸ್ವರ್ಗದ ಭೋಗಗಳಲ್ಲಿಯೂ ಕುತೂಹಲವಿಲ್ಲದುದೂ ಆದ ಸ್ತ್ರೀಪುರುಷರ ಸೃಷ್ಟಿಯು

**[೫]ಏವಂ ಪ್ರಾಯಾ ವಿಶೇಷಾ ಯೇ ನೃಣಾಂ ಸಂಪ್ರೀತಿಹೇತವಃ ।**
**ಸ್ವರ್ಗೇಪ್ಯಸುಲಭಾಸ್ತೇಮೀ ಸಂತ್ಯೇವಾತ್ರ ಪದೇ ಪದೇ ॥ ೨೫ ॥**

ಇವು ಮೊದಲಾದ ವಿಶೇಷಗಳು ಮನುಷ್ಯರಿಗೆ ಪ್ರೀತಿಹೇತುಗಳಾಗಿವೆ. ಸ್ವರ್ಗದಲ್ಲಿಯೂ ದುರ್ಲಭವಾದ ಈ ವಿಶೇಷಗಳು ಇಲ್ಲಿ ಪ್ರತಿಯೊಂದುಸ್ಥಾನದಲ್ಲಿಯೂ ಇದ್ದೇ ಇವೆ.

**ಇತಿ ರಮ್ಯತರಾನೇಷ ವಿಶೇಷಾನ್ಖಚರೋಚಿತಾನ್ ।**
**ಧತ್ತೇ ಸ್ವ[೬]ಮಂಕಮಾರೋಪ್ಯ ಕೌತುಕಾದಿವ ಭೂಧರಃ ॥ ೨೬ ॥**

ಈಪ್ರಕಾರವಾಗಿ ಈ ವಿಜಯಾರ್ಧಪರ್ವತವು ಕುತೂಹಲದಿಂದ ತನ್ನ ತೊಡೆ (ಉಭಯಪಾರ್ಶ್ವ)ಯ ಮೇಲಿರಿಸಿಯೋ ಎಂಬಂತೆ, ಅತ್ಯಂತ ರಮಣೀಯವೂ ವಿದ್ಯಾಧರರಿಗೆ ಉಚಿತವೂ ಆದ ವಿಶೇಷಗಳನ್ನು ಧರಿಸುತ್ತದೆ.

**ಶ್ರೇಣ್ಯೋರಥೈನಯೋರುಕ್ತಶೋಭಾಸಂಪನ್ನಿಧಾನಯೋಃ ।**
**[೭]ಪುರಾಣಾಂ ಸನ್ನಿವೇಶೋಯಂ ಲಕ್ಷ್ಯತೇತ್ಯಂತಸುಂದರಃ ॥ ೨೭ ॥**

ಹಿಂದೆಹೇಳಿದ ಶೋಭಾಸಂಪತ್ತಿಗೆ ಮೂಲಕಾರಣವಾದ ಈ ದಕ್ಷಿಣೋತ್ತರ ಶ್ರೇಣಿಗಳಲ್ಲಿ ಮುಂದೆಹೇಳುವ ಪಟ್ಟಣಗಳ ರಚನೆಯು ಅತ್ಯಂತ ಸುಂದರವಾಗಿ ಕಾಣುತ್ತದೆ.

**ಪೃಥಕ್ಪೃಥಗುಭೇ ಶ್ರೇಣ್ಯೌ ದಶಯೋಜನವಿಸ್ತೃತೇ ।**
**[೮]ಅನುಪರ್ವತದೀರ್ಘತ್ವಮಾಯತೇ ಚಾಪಯೋನಿಧೇಃ ॥ ೨೮ ॥**

ಈ ಶ್ರೇಣಿಗಳೆರಡೂ ಹತ್ತುಹತ್ತು ಯೋಜನ ವಿಸ್ತಾರಗಳೂ ಸಮುದ್ರದವರೆಗೂ ಪರ್ವತದಷ್ಟು ಉದ್ದವುಳ್ಳುವೂ ಆಗಿವೆ.

**ವಿಷ್ಕಂಭಾದಿಕೃತಃ ಶ್ರೇಣ್ಯೋರ್ನ ಭೇದೋಸ್ತೀಹ ಕಶ್ಚನ ।**
**ಆಯಾಮಸ್ತೂತ್ತರ[೯]ಶ್ರೇಣ್ಯಾ ಧತ್ತೇ [೧೦]ಸಾಭ್ಯಧಿಕಾಂ ಮಿತಿಮ್ ॥ ೨೯ ॥**

೧ ಬದ್ಧಾಃ. ೨ ರಚನಾವಿಶೇಷಾಃ. ೩ ವಿಜಯಾರ್ದ್ಧೇ ಭವಾ. ೪ ಸ್ವರ್ಗಭೋಗೇಷು. ೫ ಏವಮಾದ್ಯಾಃ. ೬ ಊರುಂ, ಸ್ವೋಭಯ ತಟಂ ಚ. ೭ ಪುರೀಣಾಂ. ೮ ಯಾವತ್ಪರ್ವತದೀರ್ಘತ್ವಂ. ೯ ಶ್ರೇಣ್ಯಾಮಿತ್ಯಪಿ ಪಾಠಃ. ೧೦ ಸಾಭ್ಯಾಧಿಕಾಮಿತ್ಯಪಿ ಪಾಠಃ.

ಈ ಎರಡುಶ್ರೇಣಿಗಳಲ್ಲಿಯೂ ವಿಸ್ತಾರಮೊದಲಾದ ಯಾವ ಭೇದವೂ ಇಲ್ಲ. ಆದರೆ ಉತ್ತರಶ್ರೇಣಿಯ ಉದ್ದಳತೆಯು ದಕ್ಷಿಣ ಶ್ರೇಣಿಯ ಉದ್ದಳತೆಗಿಂತ ಅಧಿಕವಾಗಿದೆ.

**ಸ್ವರ್ಗಾವಾಸಾಪಹಾಸೀನಿ ಪುರಾಣ್ಯತ್ರ ಚಕಾಸತಿ ।**
**ದಕ್ಷಿಣೋತ್ತರಯೋಃ ಶ್ರೇಣ್ಯೋಃ ಪಂಚಾಶತ್ ಷಷ್ಟಿರೇವ ಚ ॥ ೩೦ ॥**

ಈ ವಿಜಯಾರ್ಧಪರ್ವತದಲ್ಲಿ ಸ್ವರ್ಗದ ವಾಸಸ್ಥಾನಗಳನ್ನು ಪರಿಹಾಸ್ಯ ಮಾಡುತ್ತಿರುವ ಐವತ್ತು ಪಟ್ಟಣಗಳು ದಕ್ಷಿಣಶ್ರೇಣಿಯಲ್ಲಿಯೂ, ಅರುವತ್ತು ಪಟ್ಟಣಗಳು ಉತ್ತರಶ್ರೇಣಿಯಲ್ಲಿಯೂ, ಪ್ರಕಾಶಿಸುತ್ತಿವೆ.

**ವಿದ್ಯಾಧರಾ ವಸಂತ್ಯೇಷು ನಗರೇಷು ಮಹರ್ದ್ಧಿಷು ।**
**ಸ್ವಪುಣ್ಯೋಪಾರ್ಜಿತಾನ್ಭೋಗಾನ್ಭುಂಜಾನಾಃ ಸ್ವರ್ಗಿಣೋ ಯಥಾ॥ ೩೧ ॥**

ಬಹಳ ಐಶ್ವರ್ಯಸಂಪನ್ನವಾದ ಈ ಪಟ್ಟಣಗಳಲ್ಲಿ ಸ್ವರ್ಗಿಕರಂತೆ, ತಮ್ಮ ಪುಣ್ಯದಿಂದ ಸಂಪಾದಿಸಿದ ಭೋಗಗಳನ್ನು ಭೋಗಿಸುವ ವಿದ್ಯಾಧರರು ವಾಸ ಮಾಡುತ್ತಾರೆ.

**ಇತಃ ಕಿಂನಾಮಿತಂ ನಾಮ್ನಾ ಪುರಂ ಭಾತಿ ಪುರೋದಿಶಿ ।**
**ಸೌಧೈರಭ್ರಂಕಷೈಃ ಸ್ವರ್ಗಮಿವ [೧]ಸ್ಪ್ರಷ್ಟುಂ ಸಮುದ್ಯತೈಃ ॥ ೩೨ ॥**

ಈಕಡೆ ಪೂರ್ವದಿಕ್ಕಿನಲ್ಲಿ ಸ್ವರ್ಗವನ್ನು ಮುಟ್ಟುವುದಕ್ಕೋಸ್ಕರ ಪ್ರಯತ್ನಪಡುತ್ತಿವೆಯೋ ಎಂಬಂತೆ ಆಕಾಶವನ್ನು ಸಂಘರ್ಷಿಸುತ್ತಿರುವ ದೊಡ್ಡ ಮನೆಗಳಿಂದ ಕಿನ್ನಾಮಿತವೆಂಬ ಪಟ್ಟಣವು ಪ್ರಕಾಶಿಸುತ್ತದೆ.

**[೨]ತತಃ ಕಿಂನರಗೀತಾಖ್ಯಂ ಪುರಮಿದ್ಧರ್ದ್ಧಿ ಲಕ್ಷ್ಯತೇ ।**
**ಯಸ್ಯೋದ್ಯಾನಾನಿ ಸೇವ್ಯಾನಿ ಗೀತೈಃ ಕಿನ್ನರಯೋಷಿತಾಮ್ ॥ ೩೩ ॥**

ಆದರನಂತರ ಮಹಾ ಐಶ್ವರ್ಯಸಂಪನ್ನವಾದ ಕಿನ್ನರಗೀತವೆಂಬ ಪಟ್ಟಣವು ಕಾಣುತ್ತದೆ. ಆ ಪಟ್ಟಣದ ಉದ್ಯಾನಗಳು ಕಿನ್ನರಸ್ತ್ರೀಯರ ಗೀತಗಳಿಂದ ಸೇವಿಸುವುದಕ್ಕೆ ಯೋಗ್ಯಗಳಾಗಿವೆ.

**[೩]ನರಗೀತಂ ವಿಭಾತೀತಃ ಪುರಮೇತನ್ಮಹರ್ದ್ಧಿಕಮ್ ।**
**ಸದಾ ಪ್ರಮುದಿತಾ ಯತ್ರ ನರಾ ನಾರ್ಯಶ್ಚ ಸೋತ್ಸವಾಃ ॥ ೩೪ ॥**

ಈಕಡೆಯಲ್ಲಿ ಮಹಾ ಐಶ್ವರ್ಯಸಂಪನ್ನವಾದ ಈ ನರಗೀತವೆಂಬ ಪಟ್ಟಣವು ಪ್ರಕಾಶಿಸುತ್ತದೆ. ಆ ಪಟ್ಟಣದಲ್ಲಿ ಯಾವಾಗಲೂ ಸಂತುಷ್ಟರಾಗಿರುವ ಸ್ತ್ರೀಪುರುಷರು ಉತ್ಸವಸಹಿತರಾಗಿರುತ್ತಾರೆ.

**ಬಹುಕೇತುಕಮೇತಚ್ಚ ಪ್ರೋಲ್ಲಸದ್ಬಹುಕೇತುಕಮ್ ।**
**ಕೇತುಬಾಹುಭಿರಾಹ್ವಾತುಮಸ್ಮಾನಿವ ಸಮುದ್ಯತಮ್ ॥ ೩೫ ॥**

ಪ್ರಕಾಶಮಾನವಾದ ಬಹಳ ಧ್ವಜಪತಾಕೆಗಳುಳ್ಳ ಈ ಬಹುಕೇತುಕವೆಂಬ ಪಟ್ಟಣವು ಧ್ವಜಪತಾಕೆಗಳೆಂಬ ಭುಜಗಳಿಂದ ನಮ್ಮನ್ನು ಕರೆಯುವುದಕ್ಕೋಸ್ಕರ ಪ್ರಯತ್ನಪಟ್ಟಿದೆಯೋ ಎಂಬಂತಿದೆ.

**ಪುಂಡರೀಕಮಿದಂ ಯತ್ರ ಪುಂಡರೀಕವನೇಷ್ವಮೀ ।**
**ಹಂಸಾಃ ಕಲರುತೈರ್ಮಂದ್ರಂ ಸ್ವನಂತಿ [೪]ಶ್ರೋತ್ರಹಾರಿಭಿಃ ॥ ೩೬ ॥**

ಇದು ಪುಂಡರೀಕವೆಂಬ ನಗರ. ಇಲ್ಲಿ ಬಿಳೀಕಮಲವನಗಳಲ್ಲಿ ಈ ಹಂಸಪಕ್ಷಿಗಳು ಕಿವಿಗಿಂಪಾದ ಮಧುರಶಬ್ದಗಳಿಂದ ಗಂಭೀರವಾಗಿ ಶಬ್ದ ಮಾಡುತ್ತವೆ.

**ಸಿಂಹಧ್ವಜಮಿದಂ ಸೈಂಹೈರ್ಧ್ವಜೈಃ ಸೌಧಾಗ್ರವರ್ತಿಭಿಃ ।**
**ನಿರುಣದ್ಧಿ [೫]ಸುರೇಭಾಣಾಂ ಮಾರ್ಗಂ ಸಿಂಹವಿಶಂಕಿನಾಮ್ ॥ ೩೭ ॥**

ಸಿಂಹಧ್ವಜವೆಂಬ ಈ ನಗರವು ದೊಡ್ಡ ಮನೆಗಳ ಅಗ್ರಭಾಗದಲ್ಲಿರುವ ಸಿಂಹದ ಚಿತ್ರಗಳುಳ್ಳ ಧ್ವಜಗಳಿಂದ ಸಿಂಹಗಳೆಂದು ಸಂದೇಹಪಡುವ ದೇವಗಜಗಳ ಮಾರ್ಗವನ್ನು ತಡೆಯುತ್ತದೆ.

**ಶ್ವೇತಕೇತುಪುರಂ ಭಾತಿ ಶ್ವೇತೈಃ ಕೇತುಭಿರಾತತೈಃ ।**
**ಸೌಧಾಗ್ರವರ್ತಿಭಿರ್ದೂರಾ[೧]ಜ್ಝಷಕೇತುಮಿವಾಹ್ವಯತ್ ॥ ೩೮ ॥**

ಮನ್ಮಥನನ್ನು ದೂರದಿಂದ ಕರೆಯುವಂತಿರುವ ಈ ಶ್ವೇತಕೇತುವೆಂಬ ಪಟ್ಟಣವು ದೊಡ್ಡಮನೆಗಳ ಅಗ್ರಭಾಗದಲ್ಲಿರುವ ವಿಸ್ತಾರವಾದ ಬಿಳಿಯಧ್ವಜಗಳಿಂದ ಪ್ರಕಾಶಿಸುತ್ತದೆ.

**ಗರುಡಧ್ವಜಸಂಜ್ಞಂ ಚ ಪುರ[೨]ಮಾರಾದ್ವಿರಾಜತೇ ।**
**[೩]ಗರುಡಗ್ರಾವನಿರ್ಮಾಣೈಃ ಸೌಧಾಗ್ರೈರ್ಗ್ರಸ್ತಖಾಂಗಣಮ್ ॥ ೩೯ ॥**

ಗರುಡೋದ್ಗಾರಮಣಿಗಳಿಂದ ಮಾಡಿದ ದೊಡ್ಡಮನೆಗಳ ಅಗ್ರಭಾಗಗಳಿಂದ ಆಕಾಶಪ್ರದೇಶವನ್ನು ವ್ಯಾಪಿಸಿಕೊಂಡಿರುವ ಗರುಡಧ್ವಜವೆಂದು ಹೆಸರುಳ್ಳ ಪಟ್ಟಣವು ಸಮೀಪದಲ್ಲಿ ಪ್ರಕಾಶಿಸುತ್ತದೆ.

**ಶ್ರೀಪ್ರಭಂ [೪]ಶ್ರೀಪ್ರಭೋಪೇತಂ ಶ್ರೀಧರಂ ಚ ಪುರೋತ್ತಮಮ್ ।**
**ಭಾತೀದಂ ದ್ವಯಮನ್ಯೋನ್ಯಸ್ಪರ್ಧಯೇವ ಶ್ರಿಯಂ ಶ್ರಿತಮ್ ॥ ೪೦ ॥**

ಲಕ್ಷ್ಮಿಯ ಶೋಭೆಯುಳ್ಳದೂ ಶ್ರೇಷ್ಠವೂ ಆದ ಶ್ರೀಪ್ರಭಪಟ್ಟಣವೂ ಶ್ರೀಧರ ಪಟ್ಟಣವೂ ಒಂದಕ್ಕೊಂದು ಅಸೂಯೆಯಿಂದಲೋ ಎಂಬಂತೆ ಐಶ್ವರ್ಯ ಯುಕ್ತಗಳಾಗಿ ಪ್ರಕಾಶಿಸುತ್ತಿವೆ.

**ಲೋಹಾರ್ಗಲಮಿದಂ ಲೌಹೈರರ್ಗಲೈರತಿದುರ್ಗಮಮ್ ।**
**ಅರಿಂಜಯಂ ಚ ಜಿತ್ವಾರೀನ್ ಹಸತೀವ ಸ್ವಗೋಪುರೈಃ ॥ ೪೧ ॥**

ಇದು ಲೋಹದ ಅಗಣಿಗಳಿಂದ ಅತ್ಯಂತ ದುಷ್ಪ್ರವೇಶವಾದ ಲೋಹಾರ್ಗಲವೆಂಬ ಪಟ್ಟಣ. ಅರಿಂಜಯವೆಂಬ ನಗರವು ಶತ್ರುಗಳನ್ನು ಜಯಿಸಿ ತನ್ನ ಗೋಪುರಗಳಿಂದ ನಗುತ್ತಿದೆಯೋ ಎಂಬಂತಿದೆ.

**ವಜ್ರಾರ್ಗಲಂ ಚ ವಜ್ರಾಢ್ಯಂ ವಿಭಾತೀತಃ ಪುರದ್ವಯಮ್ ।**
**[೫]ವಜ್ರಾಕರೈಃ ಸಮೀಪಸ್ಥೈಃ ಸಮುನ್ಮಿಷದಿವಾನ್ವಹಮ್ ॥ ೪೨ ॥**

ಸಮೀಪದಲ್ಲಿರುವ ವಜ್ರದ ಗಣಿಗಳಿಂದ ಯಾವಾಗಲೂ ವಿಕಸಿತವಾಗಿವೆಯೋ ಎಂಬಂತಿರುವ ವಜ್ರಾರ್ಗಲವಜ್ರಾಢ್ಯಗಳೆಂಬ ಎರಡು ಪಟ್ಟಣಗಳು ಈಕಡೆಯಲ್ಲಿ ಪ್ರಕಾಶಿಸುತ್ತವೆ.

**ಇದಂ ಪುರಂ ವಿಮೋಚಾಖ್ಯಂ ಪುರಮೇತ[೬]ತ್ಪುರಂಜಯಮ್ ।**
**ಏತಾಭ್ಯಾಂ ನಿರ್ಜಿತಂ ನೂನಮಧೋಗಾತ್ಫಣಿನಾಂ ಜಗತ್ ॥ ೪೩ ॥**

ಇದು ವಿಮೋಚವೆಂಬ ಪಟ್ಟಣ. ಇದು ಜಯಪುರವೆಂಬ ಪಟ್ಟಣ. ನಿಜವಾಗಿಯೂ ಈ ಪಟ್ಟಣಗಳಿಂದ ನಾಗಲೋಕವು ಜಯಿಸಲ್ಪಟ್ಟು ಕೆಳಕ್ಕೆ ಹೋಯಿತು.

**ಶಕಟಾದಿಮುಖೀ ಚೈವ ಪುರೀ ಭಾತಿ ಚತುರ್ಮುಖೀ ।**
**ಚತುರ್ಭಿರ್ಗೋಪುರೈಸ್ತುಂಗೈರ್ಲಂಘಯಂತೀವ ಖಾಂಗಣಮ್ ॥ ೪೪ ॥**

ಇದು ಶಕಟಮುಖೀಯೆಂಬ ನಗರ. ಚತುರ್ಮುಖೀಯೆಂಬ ಈ ನಗರವು ತನ್ನ ಉನ್ನತವಾದ ನಾಲ್ಕುಗೋಪುರಗಳಿಂದ ಆಕಾಶಪ್ರದೇಶವನ್ನು ಮೀರುತ್ತಿದೆಯೋ ಎಂಬಂತೆ ಶೋಭಿಸುತ್ತದೆ.

---

೧ ಆಸ್ಪೃಷ್ಟುಮಿತ್ಯಪಿ ಪಾಠಃ. ೨ ತಚ್ಚೇತ್ಯಪಿ ಪಾಠಃ. ೩ ಪುರಂ. ೪ ಶ್ರೋತ್ರಹಾರಿಭಿರಿತ್ಯಪಿ ಪಾಠಃ. ೫ ದೇವಗಜಾನಾಂ, ಸುರೇಂದ್ರಾಣಾಮಿತ್ಯಪಿ ಪಾಠಃ.

೧ ಕಾಮಂ. ೨ ಸಮೀಪೇ. ೩ ಗರುಡೋದ್ಗಾರಮಣಿನಿರ್ಮಿತೈಃ. ೪ ಲಕ್ಷ್ಮೀಶೋಭಾಸಹಿತಂ. ೫ ವಜ್ರಾಕಾರ್ಯೈರಿತ್ಯಪಿ ಪಾಠಃ. ೬ ಜಯಪುರಮಿತ್ಯರ್ಥಃ.

ಬಹುಮುಖ್ಯರಜಸ್ಕಾ ಚ ವಿರಜಸ್ಕಾ ಚ ನಾಮತಃ ।
ನಗರ್ಯೋ ಭುವನಸ್ಯೇವ ತ್ರಯಸ್ಯ ಮಿಲಿತಾಃ ಶ್ರಿಯಃ ॥ ೪೫ ॥

ಬಹುಮುಖೀ ಅರಜಸ್ಕಾ ವಿರಜಸ್ಕಾಗಳೆಂಬ ಈ ಮೂರು ಪಟ್ಟಣಗಳು ಒಂದೇಕಡೆಯಲ್ಲಿ ಸೇರಿರುವ ಮೂರುಲೋಕದ ಸಂಪತ್ತುಗಳೋ ಎಂಬಂತಿವೆ.

ರಥನೂಪುರಪೂರ್ವಂ ಚ ಚಕ್ರವಾಲಾಹ್ವಯಂ ಪುರಮ್ ।
ಉಕ್ತಾನಾಂ ವಕ್ಷ್ಯಮಾಣಾನಾಂ [೧]ಪುರಾಂ ಚ ತಿಲಕಾಯತೇ ॥ ೪೬ ॥

ರಥನೂಪುರಚಕ್ರವಾಲವೆಂಬೀಪಟ್ಟಣವು ಹಿಂದೆಹೇಳಲ್ಪಟ್ಟ ಪಟ್ಟಣಗಳಿಗೂ ಮುಂದೆಹೇಳಲ್ಪಡುವ ಪಟ್ಟಣಗಳಿಗೂ ತಿಲಕದೋಪಾದಿಯಲ್ಲಿದೆ.

ರಾಜಧಾನೀಯಮೇತಸ್ಯಾಂ ವಿದ್ಯಾಭೃಚ್ಚಕ್ರವರ್ತಿನಃ ।
ನಿವಸಂತಿ ಪರಾಂ ಲಕ್ಷ್ಮೀಂ ಭುಂಜಾನಾಃ [೨]ಸುಕೃತೋದಯಾತ್ ॥ ೪೭ ॥

ಇದು ರಾಜಧಾನಿಯು. ಇದರಲ್ಲಿ ವಿದ್ಯಾಧರಚಕ್ರವರ್ತಿಗಳು ತಮ್ಮ ಪುಣ್ಯೋದಯದಿಂದ ಅಧಿಕವಾದ ಭೋಗವನ್ನನುಭವಿಸುತ್ತ ವಾಸಮಾಡುತ್ತಾರೆ.

ಮೇಖಲಾಗ್ರಪುರಂ ರಮ್ಯಮಿತಃ ಕ್ಷೇಮಪುರೀ ಪುರೀ ।
ಅಪರಾಜಿತಮೇತಸ್ಮಾತ್ಕಾಮಪುಷ್ಪಮಿತಃ ಪುರಮ್ ॥ ೪೮ ॥

ಇದು ರಮಣೀಯವಾದ ಮೇಖಲಾಗ್ರವೆಂಬ ಪಟ್ಟಣ. ಈಕಡೆ ಕ್ಷೇಮಪುರೀಪಟ್ಟಣವಿದೆ. ಇದು ಅಪರಾಜಿತವೆಂಬ ಪಟ್ಟಣ. ಈಕಡೆ ಕಾಮಪುಷ್ಪವೆಂಬ ಪಟ್ಟಣವಿದೆ.

ಗಗನಾದಿಚರೀಯಂ ಸಾ ವಿನಯಾದಿಚರೀ ಪುರೀ ।
ಪರಂ [೩]ಚಕ್ರಪುರಂ ಚೈತತ್ತ್ರಿಂಶತ್ಸಂಖ್ಯಾನಪೂರಣಮ್ ॥ ೪೯ ॥

ಇದು ಗಗನಚರೀಯೆಂಬ ಪಟ್ಟಣ. ಅದು ವಿನಯಚರೀಯೆಂಬ ಪಟ್ಟಣ. ಇದು ಮೂವತ್ತನೆಯ ಚಕ್ರಪುರವೆಂಬ ನಗರ.

ಸಂಜಯಂತೀ ಜಯಂತೀ ಚ ವಿಜಯಾ ವೈಜಯಂತ್ಯಪಿ ।
ಕ್ಷೇಮಂಕರಂ ಚ ಚಂದ್ರಾಭಂ ಸೂರ್ಯಾಭಂ ಚಾತಿಭಾಸ್ವರಮ್ ॥ ೫೦ ॥

ಇವು ಸಂಜಯಂತೀ ಜಯಂತೀ ವಿಜಯಾ ವೈಜಯಂತೀ ಕ್ಷೇಮಂಕರ ಚಂದ್ರಾಭ ಪ್ರಕಾಶಮಾನವಾದ ಸೂರ್ಯಾಭಗಳೆಂಬ ಪಟ್ಟಣಗಳಾಗಿವೆ.

[೪]ರತಿಚಿತ್ರಮಹದ್ಧೇಮತ್ರಿಮೇಘೋಪಪದಾನಿ ವೈ ।
ಕೂಟಾನಿ ಸ್ಯುರ್ವಿಚಿತ್ರಾದಿಕೂಟಂ [೫]ವೈಶ್ರವಣಾದಿ ಚ ॥ ೫೧ ॥

ಇವು ರತಿಕೂಟ ಚಿತ್ರಕೂಟ ಮಹತ್ಕೂಟ ಹೇಮಕೂಟ ತ್ರಿಕೂಟ ಮೇಘಕೂಟ ವಿಚಿತ್ರಕೂಟ ವೈಶ್ರವಣಕೂಟಗಳೆಂಬ ನಗರಗಳಾಗಿವೆ.

ಸೂರ್ಯಚಂದ್ರಪುರೇ ಚಾಮೂ ನಿತ್ಯೋದ್ಯೋತಿನ್ಯನುಕ್ರಮಾತ್ ।
ವಿಮುಖೀನಿತ್ಯವಾಹಿನ್ಯೌ ಸುಮುಖೀ ಚೈವ ಪಶ್ಚಿಮಾ ॥ ೫೨ ॥

ಇವು ಯಾವಾಗಲೂ ಪ್ರಕಾಶಮಾನವಾದ ಸೂರ್ಯಪುರ ಚಂದ್ರಪುರಗಳೆಂಬ ನಗರಗಳಾಗಿವೆ. ಇವು ವಿಮುಖೀ ನಿತ್ಯವಾಹಿನೀ ಸುಮುಖೀಗಳೆಂಬ ನಗರಗಳಾಗಿವೆ.

ನಗರ್ಯೋ ದಕ್ಷಿಣಶ್ರೇಣ್ಯಾಂ ಪಂಚಾಶತ್ಸಂಖ್ಯಯಾ ಮಿತಾಃ ।
ಪ್ರಾಕಾರಗೋಪುರೋತ್ತುಂಗಾಃ [೬]ಖಾತಾಭಿಸ್ತಿಸೃಭಿರ್ವೃತಾಃ ॥ ೫೩ ॥

ಹೀಗೆ ದಕ್ಷಿಣಶ್ರೇಣಿಯಲ್ಲಿ ಐವತ್ತು ಪಟ್ಟಣಗಳಿವೆ. ಇವುಗಳ ಕೋಟೆಗಳೂ ಗೋಪುರಗಳೂ ಉನ್ನತವಾಗಿವೆ. ಈ ಪಟ್ಟಣಗಳು ಮೂರು ಕಂದಕಗಳಿಂದ ಸುತ್ತಲ್ಪಟ್ಟಿವೆ.

೧ ಪುರಾಣಾಂ. ೨ ಸ್ವಕೃತೋದಯಾದಿತ್ಯಪಿ ಪಾಠಃ. ೩ ಶುಕ್ರಪುರಮಿತ್ಯಪಿ ಪಾಠಃ. ೪ ಇತ ಇತ್ಯಪಿ ಪಾಠಃ. ೫ ವೈಶ್ರವಣಕೂಟಂ. ೬ ಖಾತಿಕಾಭಿಃ, ಖಾತಿಭಿರಿತ್ಯಪಿ ಪಾಠಃ.

ತಿಸೃಣಾಮಪಿ ಖಾತಾನಾಮಂತರಂ [೧]ದಂಡಸಮ್ಮಿತಮ್ ।
ದಂಡಾಶ್ಚತುರ್ದಶೈಕಸ್ಯಾ ವ್ಯಾಸೋ [೨]ದ್ವ್ಯೂನೋನ್ಯಯೋರ್ದ್ವಯೋಃ ॥

ಮೂರು ಕಂದಕಗಳೂ ಒಂದೊಂದು ದಂಡ (ನಾಲ್ಕುಮೊಳ) ಪ್ರಮಾಣದೂರದಲ್ಲಿವೆ. ಒಂದು ಕಂದಕದಿಂದ ಇನ್ನೊಂದು ಕಂದಕಕ್ಕೆ ಒಂದು ದಂಡಪ್ರಮಾಣದೂರವಿದೆಯೆಂದು ಭಾವವು. ಮೊದಲನೆಯ ಕಂದಕವು ಹದಿನಾಲ್ಕು ದಂಡಪ್ರಮಾಣ ವಿಸ್ತಾರ(ಅಗಲ)ವಾಗಿದೆ. ಎರಡನೆಯ ಕಂದಕವು ಹನ್ನೆರಡು ದಂಡಪ್ರಮಾಣ ವಿಸ್ತಾರವಾಗಿದೆ. ಮೂರನೆಯ ಕಂದಕವು ಹತ್ತುದಂಡಪ್ರಮಾಣ ವಿಸ್ತಾರವಾಗಿದೆ.

[೩]ವಿಷ್ಕಂಭಾ[೪]ದವಗಾಢಾ[೫]ಸ್ತಾಃ [೬]ಪಾದೋನಂ ವಾರ್ಧಮೇವ ವಾ ।
[೭]ತ್ರಿಭಾಗಮೂಲಾಸ್ತಾ ಜ್ಞೇಯಾ ಮೂಲಾದ್ವಾ ಚತುರಸ್ರಿಕಾಃ ॥ ೫೫ ॥

ಆ ಕಂದಕಗಳು ಕೆಲವು ಕಡೆಗಳಲ್ಲಿ ಅಗಲದ ನಾಲ್ಕನೆಯ ಮೂರಂಶ ಆಳವೂ ಕೆಲವು ಕಡೆಗಳಲ್ಲಿ ಅರ್ಧಾಂಶ ಆಳವೂ ಕೆಲವು ಕಡೆಗಳಲ್ಲಿ ಮೂರನೆಯ ಒಂದಂಶ ಆಳವೂ ಕೆಲವು ಕಡೆಗಳಲ್ಲಿ ನಾಲ್ಕನೆಯ ಒಂದಂಶ ಆಳವೂ ಆಗಿವೆ.

ರತ್ನೋಪಲ್ಯೈ[೮]ರುಪಹಿತಾಃ ಸ್ವರ್ಣೇಷ್ಟಕಚಿತಾಶ್ಚ ತಾಃ ।
[೯]ತೌಯಾಂತಿಕ್ಯಃ [೧೦]ಪರೀವಾಹಯುಕ್ತಾ ವಾ ನಿರ್ಮಲೋದಕಾಃ ॥ ೫೬ ॥

ಅವು ರತ್ನದ ಕಲ್ಲುಗಳಿಂದಲೂ ಬಂಗಾರದ ಇಟ್ಟಿಗೆಗಳಿಂದಲೂ ನಿರ್ಮಿಸಲ್ಪಟ್ಟಿವೆ. ಅಧಿಕವಾಗಿ ಜಲವುಳ್ಳವೂ ತುಳುಕಾಡುವುವೂ ನಿರ್ಮಲವಾದ ನೀರುಳ್ಳವೂ ಆಗಿವೆ.

ಪದ್ಮೋತ್ಪಲವತಂಸಿನ್ಯೋ [೧೧]ಯಾದೋದೋರ್ಘಟ್ಟನಕ್ಷಮಾಃ ।
ಮಹಾಬ್ಧಿಭಿರಿವ ಸ್ಪರ್ಧಾಂ ಕುರ್ವಾಣಾಸ್ತುಂಗವೀಚಿಭಿಃ ॥ ೫೭ ॥

ಕಮಲಗಳೂ ನೈದಿಲೆಗಳೂ ಭೂಷಣವಾಗಿರುವುವೂ ಜಲಚರಪ್ರಾಣಿಗಳ ಭುಜಗಳ ಹೊಡೆತಗಳನ್ನು ಸಹಿಸುವುವೂ ಆದ ಆ ಕಂದಕಗಳು ಉನ್ನತವಾದ ಅಲೆಗಳಿಂದ ದೊಡ್ಡ ಸಮುದ್ರಗಳೊಡನೆ ಹೋರಾಡುವಂತಿವೆ.

ಚತುರ್ದಂಡಾಂತರಶ್ಚಾತೋ ವಪ್ರಃ ಷಡ್ಧನುರುಚ್ಛ್ರಿತಃ ।
ಸ್ವರ್ಣಪಾಂಸೂಪಲೈಶ್ಛನ್ನಃ [೧೨]ಸ್ವೋತ್ಸೇಧಾದ್ದ್ವಿಶ್ಚ ವಿಸ್ತೃತಃ ॥ ೫೮ ॥

ಈ ಕಂದಕಗಳ ಮಧ್ಯದಲ್ಲಿ ನಾಲ್ಕು ದಂಡಪ್ರಮಾಣ ದೂರದಲ್ಲಿ ಆರು ಧನುಸ್ಸು ಉನ್ನತವೂ ಹನ್ನೆರಡು ಧನುಸ್ಸು ಅಗಲವೂ ಬಂಗಾರದ ಪುಡಿಗಳಿಂದಲೂ ಕಲ್ಲುಗಳಿಂದಲೂ ಮುಚ್ಚಲ್ಪಟ್ಟುದೂ ಆದ ಅಗಳು ಇದೆ.

ತ[೧೩]ಮೂರ್ಧ್ವಚಯಮಿಚ್ಛಂತಿ ತಥಾ ಮಂಚಕಪೃಷ್ಠಕಮ್ ।
[೧೪]ಕುಂಭಕುಕ್ಷಿಸಮಾಕಾರಂ [೧೫]ಗೋಖುರಕ್ಷೋದನಿಸ್ತಲಮ್ ॥ ೫೯ ॥

ಆ ಅಗಳಿನ ಮೇಲ್ಭಾಗಕ್ಕೆ ಮಂಚಕಪೃಷ್ಠವೆಂದು ಹೆಸರು. ಅದು ಕುಂಭಕ್ಕೆ ಸದೃಶವಾದ ಆಕಾರವುಳ್ಳುದೂ ಗೋವಿನ ಗೊರಸಿನಂತೆ ದುಂಡೂ ಆಗಿದೆ.

ವಪ್ರಸ್ಯೋಪರಿ ಸಾಲೋಭೂ[೧೬]ದ್ವಿಷ್ಕಂಭಾದ್ದ್ವಿಗುಣೋಚ್ಛ್ರಿತಃ ।
ಚತುರ್ವಿಂಶತಿ[೧೭]ಮುದ್ವಿದ್ಧೋ ಧನುಷಾಂ [೧೮]ತಲಮೂಲತಃ ॥ ೬೦ ॥

ಆ ಅಗಳಿನ ಮೇಲೆ ಬುಡದಿಂದ ವಿಸ್ತಾರದ ಎರಡರಷ್ಟು ಉನ್ನತವಾದ ಅಂದರೆ ಇಪ್ಪತ್ತನಾಲ್ಕು ಧನುಸ್ಸು ಉನ್ನತವಾದ ಕೋಟೆಯಿದೆ.

೧ ಏಕೈಕದಂಡಪ್ರಮಾಣಂ ಭವತೀತ್ಯರ್ಥಃ. ೨ ದ್ವಾಭ್ಯಾಂ ಊನಃ, ಚತುರ್ದಶ ದ್ವಾದಶದಶದಂಡ ವ್ಯಾಸಪ್ರಮಾಣಾ ಇತ್ಯರ್ಥ. ೩ ವ್ಯಾಸಾತ್. ೪ ಅಗಾಧಾಃ. ೫ ಖಾತಿಕಾಃ. ೬ ನಿಜನಿಜಚತುರ್ಥಾಂಶ ರಹಿತಾವಗಾಢಾಃ. ೭ ನಿಜನಿಜವ್ಯಾಸಸ್ಯ ತೃತೀಯಭಾಗೋ ಮೂಲೇ ಯಾಸಾಂ ತಾಃ. ೮ ಘಟಿತಾಃ. ೯ ತೋಯಸ್ಯಾಂತಸ್ತೋಯಾಂತಃ, ತಮರ್ಹಂತಿ ತೇನ ದೀವ್ಯಂತೀತಿ ವಾ ತೌಯಾಂತಿಕ್ಯಃ. ೧೦ ಜಲೋಚ್ಛ್ವಾಸಾಃ. ೧೧ ಜಲಜಂತುಭುಜಾಸ್ಫಾಲನ ಸಹಾಃ. ೧೨ ನಿಜೋತ್ಸೇಧಾದ್ದ್ವಿಗುಣವ್ಯಾಸಃ. ೧೩ ವಪ್ರಸ್ಯೋಪರಿಮಭಾಗಂ. ೧೪ ಕುಂಭಪಾರ್ಶ್ವಂ. ೧೫ ಗೋಕ್ಷುರ ಇತ್ಯಪಿ ಪಾಠಃ. ೧೬ ನಿಜವ್ಯಾಸದ್ವಿಗುಣೋನ್ನತಃ. ೧೭ ಉತ್ಸೇಧಃ. ೧೮ ಅಧಿಷ್ಠಾನಮೂಲಾತ್.

[೧]ಮುರಜೈಃ [೨]ಕಪಿಶೀರ್ಷೈಶ್ಚ ರಚಿತಾಗ್ರಃ ಸಮಂತತಃ ।
ಚಿತ್ರಹೈಮೇಷ್ಟಕಚಿತಃ ಕ್ವಚಿದ್ರತ್ನಶಿಲಾಮಯಃ ॥ ೬೧ ॥

ಎಲ್ಲಾಕಡೆಯಲ್ಲಿಯೂ ಆ ಕೋಟೆಯ ಅಗ್ರಭಾಗವು ಮದ್ದಳೆಯ ಆಕಾರವುಳ್ಳ ಶಿಖರಗಳಿಂದಲೂ ಕಪಿಯ ತಲೆಯ ಆಕಾರವುಳ್ಳ ಶಿಖರಗಳಿಂದಲೂ ರಚಿಸಲ್ಪಟ್ಟಿದ್ದಿತು. ಕೆಲವು ಕಡೆಯಲ್ಲಿ ನಾನಾಪ್ರಕಾರವಾದ ಬಂಗಾರದ ಇಟ್ಟಿಗೆಗಳಿಂದ ನಿರ್ಮಿತವಾಗಿದ್ದಿತು. ಕೆಲವು ಕಡೆಯಲ್ಲಿ ರತ್ನಮಯವಾಗಿದ್ದಿತು.

ವಿಷ್ಕಂಭಚತುರಸ್ರಾಶ್ಚ ತತ್ರಾಟ್ಟಾಲಕಪಙ್ಕ್ತಯಃ ।
ತ್ರಿಂಶದರ್ಧಂ ಚ ದಂಡಾನಾಂ ರುಂದ್ರಾಶ್ಚ ದ್ವಿಗುಣೋಚ್ಛ್ರಿತಾಃ ॥ ೬೨ ॥

ಆ ಕೋಟೆಯ ಮೇಲೆ ವಿಸ್ತಾರವಾದ ನಾಲ್ಕು ಮೂಲೆಗಳುಳ್ಳುದೂ ಹದಿನೈದು ಧನುಸ್ಸು ಅಗಲವೂ ಮೂವತ್ತು ಧನುಸ್ಸು ಉನ್ನತವೂ ಆದ ಮುಖಮಂಟಪಗಳಿವೆ.

ತ್ರಿಂಶದ್ದಂಡಾಂತರಾಶ್ಚೈತಾ ಮಣಿಹೇಮವಿಚಿತ್ರಿತಾಃ ।
ಉತ್ಸೇಧಸದೃಶಾರೋಹಸೋಪಾನಾ ಗಗನಸ್ಪೃಶಃ ॥ ೬೩ ॥

ರತ್ನಗಳಿಂದಲೂ ಬಂಗಾರದಿಂದಲೂ ನಾನಾಪ್ರಕಾರವೂ ಆಕಾಶಪ್ರದೇಶವನ್ನು ಸ್ಪರ್ಶಮಾಡುವುವೂ ಎತ್ತರದಷ್ಟು ಹತ್ತುವ ಮೆಟ್ಟಿಲುಗಳುಳ್ಳುವೂ ಆದ ಈ ಮುಖಮಂಟಪಗಳು ಮೂವತ್ತು ಧನುಸ್ಸು ದೂರ ಬಿಟ್ಟಿವೆ. ಮೂವತ್ತುಧನುಸ್ಸು ದೂರಕ್ಕೆ ಒಂದರಂತಿವೆಯೆಂದು ಭಾವವು.

ದ್ವಯೋರಟ್ಟಾಲಯೋರ್ಮಧ್ಯೇ ಗೋಪುರಂ ರತ್ನತೋರಣಮ್ ।
ಪಂಚಾಶದ್ಧನುರುತ್ಸೇಧಂ ತದರ್ಧಮಪಿ ವಿಸ್ತೃತಮ್ ॥ ೬೪ ॥

ಎರಡುಮುಖಮಂಟಪಗಳ ಮಧ್ಯದಲ್ಲಿ ರತ್ನಮಯವಾದ ತೋರಣಗಳುಳ್ಳುದೂ ಐವತ್ತುಧನುಸ್ಸು ಉನ್ನತವೂ ಇಪ್ಪತ್ತೈದುಧನುಸ್ಸು ವಿಸ್ತಾರವೂ ಆದ ಗೋಪುರವಿದೆ.

ಗೋಪುರಾಟ್ಟಾಲಯೋರ್ಮಧ್ಯೇ ತ್ರಿಧಾನುಷ್ಕಾವಗಾಹನಮ್ ।
ಇಂದ್ರಕೋಶಮಭೂತ್ತಾಸ್[೩]ಪಿಧಾನೈರ್ಯುಕ್ತಂ ಗವಾಕ್ಷಕೈಃ ॥ ೬೫ ॥

ಆ ಗೋಪುರಗಳ ಮತ್ತು ಮುಖಮಂಟಪಗಳ ಮಧ್ಯದಲ್ಲಿ ಮೂರುಧನುಸ್ಸು ವಿಸ್ತಾರವೂ ಬಾಗಿಲುಗಳುಳ್ಳ ಕಿಡಿಕಿಗಳಿಂದ ಯುಕ್ತವೂ ಆದ ಕಟ್ಟೆ(ಜಗಲಿ)ಯಿದೆ.

ತದಂತರೇಷು ರಾಜಂತೇ ಸುಸ್ಥಾ [೪]ದೇವಪಥಾಸ್ತಥಾ ।
ತ್ರಿಹಸ್ತವಿಸ್ತೃತಾಃ ಪಾರ್ಶ್ವೇ ತಚ್ಚತುರ್ಗುಣಮಾಯತಾಃ ॥ ೬೬ ॥

ಹಾಗೆಯೇ ಆ ಕಟ್ಟೆಗಳ ಮಧ್ಯದಲ್ಲಿ ಮೂರುಮೊಳ ವಿಸ್ತಾರವೂ ಹನ್ನೆರಡುಮೊಳ ಉದ್ದವೂ ದೃಢವೂ ಆದ ದೇವಪಥ(ಭೇರಿಯ ಆಕಾರವುಳ್ಳರಚನೆ)ಗಳು ಶೋಭಿಸುತ್ತಿವೆ.

ಇತ್ಯುಕ್ತಖಾತಿಕಾವಪ್ರಪ್ರಾಕಾರೈಃ ಪರಿತೋ ವೃತಾಃ ।
ವಿಭಾಸಂತೇ ನಗರ್ಯೋಮೂಃ [೫]ಪರಿಧಾನೈರಿವಾಂಗನಾಃ ॥ ೬೭ ॥

ಈರೀತಿಯಾಗಿ. ಹಿಂದೆಹೇಳಿದ ಕಂದಕಗಳಿಂದಲೂ ಅಗಳುಗಳಿಂದಲೂ ಕೋಟೆಗಳಿಂದಲೂ ಸುತ್ತಲೂ ಆವರಿಸಲ್ಪಟ್ಟ ಈ ಪಟ್ಟಣಗಳು, ಕೆಳಗಿನ ವಸ್ತ್ರಗಳಿಂದ ಸ್ತ್ರೀಯರು ಶೋಭಿಸುವಂತೆ, ಶೋಭಿಸುತ್ತವೆ.

೧ ಮುರಜಾಕಾರಶಿಖರೈಃ. ೨ ಕಪಿಶೀರ್ಷಂ ತು ಸಾಲಾಗ್ರಂ. ೩ ಕವಾಟಸಹಿತೈಃ. ೪ ಭೇರ್ಯಾಕಾರ ರಚನಾವಿಶೇಷಾಃ. ೫ ಅಧೋಂಶುಕೈಃ.

[೧]ಚತುಷ್ಕಾಣಾಂ ಸಹಸ್ರಂ ಸ್ಯಾದ್ವೀಥ್ಯಸ್[೨]ದ್ವಾದಶಾಹತಮ್ ।
ದ್ವಾರಾಣ್ಯೇಕಸಹಸ್ರಂ ತು ಮಹಾಂತಿ ಕ್ಷುದ್ರಕಾಣಿ ವೈ ॥ ೬೮ ॥

[೩]ತದರ್ಧಂ [೪]ತದ್ವಿಶತ್ಯಗ್ರಿಮಾಣಿ ದ್ವಾರಾಣಿ ತಾನಿ ಚ ।
ಸಕವಾಟಾನಿ ರಾಜಂತೇ ನೇತ್ರಾಣೀವ ಪುರ[೫]ಶ್ರಿಯಃ ॥ ೬೯ ॥

ನಾಲ್ಕುಮಾರ್ಗಗಳ ಮಧ್ಯದಲ್ಲಿ ಜನರಿಗೆ ಆಶ್ರಯಯೋಗ್ಯವಾದ ಸಾವಿರ ಮಂಟಪಗಳಿವೆ. ಹನ್ನೆರಡುಸಾವಿರ ರಾಜಮಾರ್ಗಗಳಿವೆ. ಒಂದು ಸಾವಿರ ಮಹಾದ್ವಾರಗಳಿವೆ. ಐನೂರು ಸಣ್ಣದ್ವಾರಗಳಿವೆ. ಇನ್ನೂರು ದ್ವಾರಗಳು ರಾಜರ ಗಮನಾಗಮನಕ್ಕೆ ಯೋಗ್ಯವಾಗಿವೆ. ಬಾಗಿಲುಸಹಿತವಾದ ಆ ದ್ವಾರಗಳು, ನಗರಲಕ್ಷ್ಮಿಯ ನೇತ್ರಗಳೋ ಎಂಬಂತೆ, ಶೋಭಿಸುತ್ತವೆ.

ಪೂರ್ವಾಪರೇಣ ರುಂದ್ರಾಃ ಸ್ಯುರ್ಯೋಜನಾನಿ ನವೈವ [೬]ತಾಃ ।
ದಕ್ಷಿಣೋತ್ತರತೋ ದೀರ್ಘಾ ದ್ವಾದಶ ಪ್ರಾಙ್ಮುಖಂ ಸ್ಥಿತಾಃ ॥ ೭೦ ॥

ಆ ನಗರಗಳು ಪೂರ್ವಪಶ್ಚಿಮಕ್ಕೆ ಒಂಬತ್ತುಯೋಜನ ವಿಸ್ತಾರವೂ ದಕ್ಷಿಣೋತ್ತರಕ್ಕೆ ಹನ್ನೆರಡುಯೋಜನ ಉದ್ದವೂ ಪೂರ್ವಾಭಿಮುಖವೂ ಆಗಿವೆ.

ರಾಜಗೇಹಾದಿವಿಸ್ತಾರಮಾಸಾಂ ಕೋ ನಾಮ ವರ್ಣಯೇತ್ ।
ಮಮಾಪಿ ನಾಗರಾಜಸ್ಯ ಯತ್ರ ಮೋಮುಹ್ಯತೇ ಮತಿಃ ॥ ೭೧ ॥

ಈ ಪಟ್ಟಣಗಳ ರಾಜಭವನಮೊದಲಾದುವುಗಳ ವಿಸ್ತಾರವನ್ನು ಯಾವನು ವರ್ಣಿಸಬಲ್ಲನು ? ಆ ವರ್ಣನೆಯಲ್ಲಿ ನಾಗೇಂದ್ರನಾದ ನನ್ನ ಬುದ್ಧಿಯೂ ಭ್ರಮೆಗೊಳ್ಳುತ್ತದೆ.

ಗ್ರಾಮಾಣಾಂ ಕೋಟಿರೇಕಾ ಸ್ಯಾತ್ಪರಿವಾರಃ ಪುರಂ ಪ್ರತಿ ।
ತಥಾ ಖೇಟಮಡಂಬಾದಿ[೭]ನಿವೇಶಶ್ಚ [೮]ಪೃಥಗ್ವಿಧಃ ॥ ೭೨ ॥

ಪ್ರತಿಯೊಂದು ನಗರದ ಸುತ್ತಲೂ ಒಂದು ಕೋಟಿ ಗ್ರಾಮಗಳಿವೆ. ಹಾಗೆಯೇ ಖೇಡ ಮಡಂಬ ಮೊದಲಾದುವುಗಳ ರಚನೆಯೂ ನಾನಾಪ್ರಕಾರವಾಗಿದೆ.

ಅಕೃಷ್ಟಪಚ್ಯೈಃ ಕಲಮೈರ್ಧಾನ್ಯೈರನ್ಯೈಶ್ಚ [೯]ಸಂಭೃತಾಃ ।
ಪುಂಡ್ರೇಕ್ಷುವನಸಂಛನ್ನಸೀಮಾನೋ ನಿಗಮಾಃ ಸದಾ ॥ ೭೩ ॥

ಯಾವಾಗಲೂ ಕೃಷಿಮಾಡದೆ ಪರಿಪಕ್ವವಾದ ಭತ್ತಗಳಿಂದಲೂ ಬೇರೆ ಧಾನ್ಯಗಳಿಂದಲೂ ಭರಿತವಾದ ಶಾಖಾನಗರಗಳ ಎಲ್ಲೆಗಳು ರಸದಾಳೆಯ ಕಬ್ಬುಗಳ ವನಗಳಿಂದ ವ್ಯಾಪ್ತವಾಗಿವೆ.

ಪುರಾಣಾಮಂತರಂಚಾ[೧೦]ತ್ರ ಸ್ಯಾ[೧೧]ತ್ಪಂಚನವತಂ ಶತಮ್ ।
ಪ್ರಮಾಣಯೋಜನೋದ್ದಿಷ್ಟಂ ಮಾನಮಾಪ್ತೈರ್ನಿದರ್ಶಿತಮ್ ॥ ೭೪ ॥

ಈ ವಿಜಯಾರ್ಧಪರ್ವತದಲ್ಲಿ ಮೇಲೆಹೇಳಿದ ಪಟ್ಟಣಗಳು ಒಂದಕ್ಕೊಂದು ನೂರತೊಂಬತ್ತೈದು ಮಹಾಯೋಜನದೂರ ಬಿಟ್ಟಿವೆಯೆಂದು ಆಪ್ತರು (ಸರ್ವಜ್ಞರು) ಹೇಳಿದ್ದಾರೆ.

ಪುರಾಣಿ ದಕ್ಷಿಣಶ್ರೇಣ್ಯಾಂ ಯಥೈತಾನಿ ತಥೈವ ವೈ ।
ಭವೇಯುರುತ್ತರಶ್ರೇಣ್ಯಾಮಪಿ ತಾನಿ [೧೨]ಸಮೃದ್ಧಿಭಿಃ ॥ ೭೫ ॥

ದಕ್ಷಿಣಶ್ರೇಣಿಯಲ್ಲಿ ಆ ಪಟ್ಟಣಗಳು ಹೇಗೋ ಹಾಗೆಯೇ ಉತ್ತರ ಶ್ರೇಣಿಯಲ್ಲಿಯೂ ಐಶ್ವರ್ಯಸಮೃದ್ಧವಾಗಿವೆ.

೧ ಚತುಷ್ಪಥಮಧ್ಯಸ್ಥಿತಜನಾಶ್ರಯಣಯೋಗ್ಯಮಂಡಪವಿಶೇಷಾಣಾಂ. ೨ ದ್ವಾದಶಗುಣಿತಂ ಸಹಸ್ರಮಿತ್ಯರ್ಥಃ. ೩ ಸಹಸ್ರಾರ್ಧಂ. ೪ ತೇಷು ದ್ವಾರೇಷು ಶತದ್ವಯಂ ಶ್ರೇಷ್ಠಾನಿ ರಾಜಗಮನಾಗಮನಯೋಗ್ಯಾನಿ ದ್ವಾರಾಣಿ ಭವಂತಿ. ೫ ಶ್ರಿಯಾಮಿತ್ಯಪಿ ಪಾಠಃ. ೬ ಪುರ್ಯಃ. ೭ ರಚನಾ. ೮ ನಾನಾಪ್ರಕಾರಃ. ೯ ಭರಿತಾಃ. ೧೦ ವಿಜಯಾರ್ಧೇ. ೧೧ ಪಂಚನವತ್ಯಧಿಕಂ ಶತಂ. ೧೨ ಐಶ್ವರ್ಯೈಃ.

**ಕಿಂತ್ವಂತರಂ ಪುರಾಣಾಂ ಸ್ಯಾ[೧]ತ್ತತ್ರೈಕೈಕಂ [೨]ಪ್ರಮಾಣತಃ ।**
**ಯೋಜನಾನಾಂ [೩]ಶತಂ ಚಾಷ್ಟಸಪ್ತತಿಶ್ಚೈವ ಸಾಧಿಕಾ ॥ ೭೬ ॥**

ಆದರೆ ಉತ್ತರಶ್ರೇಣಿಯಲ್ಲಿ ಆ ಪಟ್ಟಣಗಳು ಒಂದಕ್ಕೊಂದು ನೂರೆಪ್ಪತ್ತೆಂಟು ಮಹಾಯೋಜನದೂರ ಬಿಟ್ಟಿವೆ.

**ತೇಷಾಂ ಚ ನಾಮನಿರ್ದೇಶೋ ಭವೇದಯಮನುಕ್ರಮಾತ್ ।**
**ಪಶ್ಚಿಮಾಂ ದಿಶಮಾರಭ್ಯ ಯಾವತ್[೪]ಷಷ್ಟಿತಮಂ ಪುರಮ್ ॥ ೭೭ ॥**

ಪಶ್ಚಿಮದಿಕ್ಕಿನಿಂದ ಆರಂಭಿಸಿ ಅರವತ್ತನೆಯ ಪಟ್ಟಣದವರೆಗೆ ಆ ಪಟ್ಟಣಗಳ ಹೆಸರುಗಳು ಕ್ರಮವಾಗಿ ಮುಂದೆಹೇಳುವಪ್ರಕಾರವಾಗಿವೆ.

**ಅರ್ಜುನೀ ಚಾರುಣೀ ಚೈವ [೫]ಸಕೈಲಾಸಾ ಚ ವಾರುಣೀ ।**
**ವಿದ್ಯುತ್ಪ್ರಭಂ ಕಿಲಿಕಿಲಂ ಚೂಡಾಮಣಿ[೬]ಶಶಿಪ್ರಭೇ ॥ ೭೮ ॥**

ಅರ್ಜುನೀ ಅರುಣೀ ಕೈಲಾಸಾ ವಾರುಣೀ ವಿದ್ಯುತ್ಪ್ರಭ ಕಿಲಿಕಿಲ ಚೂಡಾಮಣಿ ಶಶಿಪ್ರಭ

**ವಂಶಾಲಂ ಪುಷ್ಪಚೂಲಂ ಚ ಹಂಸಗರ್ಭಬಲಾಹಕೌ ।**
**ಶಿವಂಕರಂ ಚ ಶ್ರೀಹರ್ಮ್ಯಂ ಚಮರಂ ಶಿವಮಂದಿರಮ್ ॥ ೭೯ ॥**

ವಂಶಾಲ ಪುಷ್ಪಚೂಲ ಹಂಸಗರ್ಭ ಬಲಾಹಕ ಶಿವಂಕರ ಶ್ರೀಹರ್ಮ್ಯ ಚಮರ ಶಿವಮಂದಿರ

**[೭]ವಸುಮತ್ಕಂ ವಸುಮತೀ ನಾಮ್ನಾ ಸಿದ್ಧಾರ್ಥಕಂ ಪರಮ್ ।**
**ಶತ್ರುಂಜಯಂ ತತಃ ಕೇತುಮಾಲಾಖ್ಯಂ ಚ ಭವೇತ್ಪುರಮ್ ॥ ೮೦ ॥**

ವಸುಮತ್ಕ ವಸುಮತೀ ಸಿದ್ಧಾರ್ಥಕ ಶತ್ರುಂಜಯ ಕೇತುಮಾಲಾ

**ಸುರೇಂದ್ರಕಾಂತಮನ್ಯತ್ಸ್ಯಾತ್ತತೋ ಗಗನನಂದನಮ್ ।**
**ಅಶೋಕಾನ್ಯಾ ವಿಶೋಕಾ ಚ ವೀತಶೋಕಾ ಚ ಸತ್ಪುರೀ ॥ ೮೧ ॥**

ಸುರೇಂದ್ರಕಾಂತ ಗಗನನಂದನ ಅಶೋಕಾ ವಿಶೋಕಾ ವೀತಶೋಕಾ

**ಅಲಕಾ ತಿಲಕಾಖ್ಯಾ ಚ [೮]ತಿಲಕಾಂತಂ ತಥಾಂಬರಮ್ ।**
**ಮಂದಿರಂ ಕುಮುದಂ ಕುಂದಮತೋ ಗಗನವಲ್ಲಭಮ್ ॥ ೮೨ ॥**

ಅಲಕಾ ತಿಲಕಾ ಅಂಬರತಿಲಕ ಮಂದಿರ ಕುಮುದ ಕುಂದ ಗಗನವಲ್ಲಭ

**[೯]ದ್ಯುಭೂಮಿತಿಲಕೇ ಪುರ್ಯೌ ಪುರಂ ಗಂಧರ್ವಸಾಹ್ವಯಮ್ ।**
**ಮುಕ್ತಾಹಾರಃ [೧೦]ಸನಿಮಿಷಂ ಚಾಗ್ನಿಜ್ವಾಲಮತಃ ಪರಮ್ ॥ ೮೩ ॥**

ದಿವ್ಯತಿಲಕ ಭೂಮಿತಿಲಕ ಗಂಧರ್ವ ಮುಕ್ತಾಹಾರ ನಿಮಿಷ ಅಗ್ನಿಜ್ವಾಲ

**ಮಹಾಜ್ವಾಲಂ ಚ ವಿಜ್ಞೇಯಂ ಶ್ರೀನಿಕೇತೋ ಜಯಾಹ್ವಯಮ್ ।**
**ಶ್ರೀವಾಸೋ ಮಣಿವಜ್ರಾಖ್ಯಂ ಭದ್ರಾಶ್ವಂ [೧೧]ಸಧನಂಜಯಮ್ ॥ ೮೪ ॥**

ಮಹಾಜ್ವಾಲ ಶ್ರೀನಿಕೇತ ಜಯ ಶ್ರೀವಾಸ ಮಣಿವಜ್ರ ಭದ್ರಾಶ್ವ ಧನಂಜಯ

**ಗೋಕ್ಷೀರಫೇನಮಕ್ಷೋಭ್ಯಂ [೧೨]ಗಿರ್ಯಾದಿಶಿಖರಾಹ್ವಯಮ್ ।**
**ಧರಣೀ ಧಾರಣೀ ದುರ್ಗಂ ದುರ್ದ್ಧರಾಖ್ಯಂ ಸುದರ್ಶನಮ್ ॥ ೮೫ ॥**

ಗೋಕ್ಷೀರಫೇನ ಅಕ್ಷೋಭ್ಯಗಿರಿಶಿಖರ ಧರಣೀ ಧಾರಣೀ ದುರ್ಗ ದುರ್ಧರ ಸುದರ್ಶನ

೧ ಉತ್ತರಶ್ರೇಣ್ಯಾಂ. ೨ ಪುರಾಣತ ಇತ್ಯಪಿ ಪಾಠಃ. ೩ ಸಾಧಿಕಾಷ್ಟಸಪ್ತತಿಸಹಿತಶತಂ. ೪ ಷಷ್ಟಿಪೂರಣಾಂ. ೫ ಕೈಲಾಸಪುರೇಣ ಸಹಿತಾ. ೬ ಶಿಖಿಪ್ರಭೇ ಇತ್ಯಪಿ ಪಾಠಃ. ೭ ವಸಮುತ್ಕಮಿತ್ಯಪಿ ಪಾಠಃ. ೮ ಅಂಬರತಿಲಕಂ. ೯ ದಿವ್ಯತಿಲಕಭೂಮಿತಿಲಕೇ. ೧೦ ನಿಮೇಷಪುರೇಣ ಸಹಿತಂ. ೧೧ ಧನಂಜಯ ಪುರೇಣ ಸಹಿತಂ, ಭವನಂಜಯಮಿತ್ಯಪಿ ಪಾಠಃ. ೧೨ ಗಿರಿಶಿಖರಂ.

**ಮಹೇಂದ್ರಾಖ್ಯಪುರಂ ಚೈವ ಪುರಂ ವಿಜಯಸಾಹ್ವಯಮ್ ।**
**ಸುಗಂಧಿನೀ ಚ [೧]ವಜ್ರಾರ್ದ್ಧತರಂ ರತ್ನಾಕರಾಹ್ವಯಮ್ ॥ ೮೬ ॥**

ಮಹೇಂದ್ರ ವಿಜಯ ಸುಗಂಧಿನೀ ವಜ್ರಾರ್ಧತರ ರತ್ನಾಕರ

**ಭವೇ[೨]ದ್ರತ್ನಪುರಂ ಚಾಂತ್ಯಮುತ್ತರಸ್ಯಾಂ ಪುರಾಣಿ ವೈ ।**
**ಶ್ರೇಣ್ಯಾಂ ಸ್ವರ್ಗಪುರಶ್ರೀಣಿ ಭಾಂತ್ಯೇತಾನಿ ಮಹಾಂತ್ಯಲಮ್ ॥ ೮೭ ॥**

ರತ್ನಪುರ ಈ ಮಹಾನಗರಗಳು ಸ್ವರ್ಗಪುರದ ಸಂಪತ್ತುಳ್ಳವುಗಳಾಗಿ ಉತ್ತರ ಶ್ರೇಣಿಯಲ್ಲಿ ಅಧಿಕವಾಗಿ ಶೋಭಿಸುತ್ತಿವೆ.

**ಪುರಾಣೀಂದ್ರಪುರಾಣೀವ ಸೌಧಾನಿ [೩]ಸ್ವರ್ವಿಮಾನತಃ ।**
**ಪ್ರತಿಪ್ರತಿಪುರಂ ವ್ಯಸ್ತ[೪]ವಿಭವಪ್ರತಿವೈಭವಮ್ ॥ ೮೮ ॥**

ಪಟ್ಟಣಗಳು ದೇವೇಂದ್ರನ ನಗರಕ್ಕೆ ಸಮಾನವಾಗಿವೆ. ದೊಡ್ಡ ಮನೆಗಳು ಸ್ವರ್ಗದ ವಿಮಾನಕ್ಕೆ ಸಮಾನವಾಗಿವೆ. ಪ್ರತಿಯೊಂದು ನಗರವೂ ಬೇರೆಬೇರೆ ಸಂಪತ್ತುಳ್ಳದಾಗಿದೆ. ಒಂದಕ್ಕಿಂತ ಒಂದು ಅತಿಶಯವಾಗಿದೆಯೆಂದು ಭಾವವು.

**ನರಾಃ ಸುರಕುಮಾರಾಭಾ ನಾರ್ಯಶ್ಚಾಪ್ಸರಸಾಂ ಸಮಾಃ ।**
**ಸರ್ವರ್ತು ವಿಷಯಾನ್ಭೋಗಾನ್ಭುಂಜತೇಮೀ ಯಥೋಚಿತಮ್॥ ೮೯ ॥**

ದೇವಕುಮಾರರಿಗೆ ಸಮಾನರಾದ ಈ ಮನುಷ್ಯರೂ ಅಪ್ಸರಸ್ತ್ರೀಯರಿಗೆ ಸಮಾನರಾದ ಸ್ತ್ರೀಯರೂ ಸಮಸ್ತ ಋತುಗಳಲ್ಲಿಯೂ ಉಂಟಾಗುವ ಭೋಗ ವಸ್ತುಗಳನ್ನು ಯಥೋಚಿತವಾಗಿ ಅನುಭವಿಸುತ್ತಾರೆ.

**ಇತಿ ಪುರಾಣಿ ಪುರಾಣಕವೀಶಿನಾ**
**ಮಪಿ ವಚೋಭಿರಶಕ್ಯನುತೀನ್ಯಯಮ್ ।**
**ದಧ[೫]ದಧಿತ್ಯಕಯಾ ಗಿರಿರುಚ್ಚಕೈ**
**[೬]ರ್ದ್ಯುವಸತೇಃ [೭]ಶ್ರಿಯ[೮]ಮಾಹ್ವಯತೇ ಧ್ರುವಮ್ ॥ ೯೦ ॥**

ಈರೀತಿಯಾಗಿ ಪ್ರಾಚೀನಕವಿಗಳ ವಚನಗಳಿಂದಲೂ ವರ್ಣಿಸುವುದಕ್ಕೆ ಅಶಕ್ಯವಾದ ಪಟ್ಟಣಗಳನ್ನು ಮೇಲ್ಭಾಗದಲ್ಲಿ ಧರಿಸಿರುವ ಉನ್ನತವಾದ ಈ ವಿಜಯಾರ್ಧಪರ್ವತವು ಸ್ವರ್ಗವಾಸದ ಲಕ್ಷ್ಮಿಯನ್ನು ಕರೆಯುವಂತಿದೆ.

**ಗಿರಿರಯಂ ಗುರುಭಿಃ ಶಿಖರೈರ್ದಿವಂ**
**ಪೃಥುವಿಪುಲೇನ ತಲೇನ ಚ ಭೂತಲಮ್ ।**
**ದಧದುಪಾಂತಚರೈಃ ಖಚರೋರಗೈಃ**
**ಪೃಥಯತಿ ತ್ರಿಜಗಚ್ಛ್ರಿಯಮೇಕತಃ ॥ ೯೧ ॥**

ದೊಡ್ಡಶಿಖರಗಳಿಂದ ಸ್ವರ್ಗವನ್ನೂ ವಿಸ್ತಾರವಾದ ಬುಡದಿಂದ ಭೂತಲವನ್ನೂ ಧರಿಸಿರುವ ಈ ಪರ್ವತವು ಸಮೀಪದಲ್ಲಿ ಸಂಚರಿಸುವ ವಿದ್ಯಾಧರರಿಂದಲೂ ನಾಗದೇವತೆಗಳಿಂದಲೂ ಮೂರುಲೋಕದ ಸಂಪತ್ತನ್ನು ಒಂದುಕಡೆಯಲ್ಲಿ ಪ್ರಸಿದ್ಧಪಡಿಸುವಂತಿದೆ.

**[೯]ನಿಧುವನಾನಿ ವನಾಂತಲತಾಲಯೈ-**
**[೧೦]ರ್ಮೃದಿತಪಲ್ಲವಸಂಸ್ಕರಣಾತತೈಃ ।**
**ಪಿಶುನಯು[೧೧]ತ್ಕುಪಭೋಗಸುಗಂಧಿಭಿ-**
**ರ್ಗಿರಿರಯಂ ಗಗನೇಚರಯೋಷಿತಾಮ್ ॥ ೯೨ ॥**

ಈ ಪರ್ವತವು ಉಪಭೋಗಯೋಗ್ಯವಾದ ಕರ್ಪೂರ ಚಂದನ ಮೊದಲಾದ ಸುಗಂಧದ್ರವ್ಯಗಳುಳ್ಳವೂ ಮರ್ದಿಸಲ್ಪಟ್ಟ ಚಿಗುರೆಲೆಗಳ ಹಾಸಿಗೆಗಳಿಂದ ವ್ಯಾಪ್ತವೂ

೧ ವಜ್ರಾಖ್ಯಂಪರಮಿತ್ಯಪಿ ಪಾಠಃ. ೨ ಚಂದ್ರಪುರಮಿತ್ಯಪಿ ಪಾಠಃ. ೩ ಸ್ವರ್ಗವಿಮಾನಾನಾಂ ಪ್ರತಿನಿಧಯ ಇತ್ಯರ್ಥಃ. ೪ ವ್ಯತ್ಯಾಸಿತವಿಭವಪ್ರತಿವೈಭವಂ, ವ್ಯಸ್ತವಿಭವಮಿತ್ಯಪಿ ಪಾಠಃ. ೫ ಶ್ರೇಣ್ಯಾ. ೬ ಸ್ವರ್ಗವಾಸಸ್ಯ. ೭ ಲಕ್ಷ್ಮೀಂ. ೮ ಸ್ಪರ್ದ್ಧಾಯಾಂ ತಙ್, ಸ್ಪರ್ದ್ಧಯಾಹ್ವಾನಂ ಕರೋತೀತ್ಯರ್ಥಃ. ೯ ರತಾನಿ. ೧೦ ಮರ್ದಿತಪಲ್ಲವಶಯ್ಯಾವಿಸ್ತೃತೈಃ. ೧೧ ಉಪಭೋಗಯೋಗ್ಯ ಶ್ರೀಖಂಡ ಕರ್ಪೂರಾದಿ ಸುರಭಿಭಿಃ.

ವನದ ಮಧ್ಯದಲ್ಲಿರುವುವೂ ಆದ ಲತಾಗೃಹಗಳಿಂದ ವಿದ್ಯಾಧರಸ್ತ್ರೀಯರ ರತಿ ಕ್ರೀಡೆಗಳನ್ನು ಸೂಚಿಸುತ್ತದೆ.

ಇಹ ಸುರಾಸುರಕಿನ್ನರಪನ್ನಗಾ
[1]ನಿಯುತಮಸ್ಯ ತಟೇಷು ಮಹೀಭೃತಃ ।
ಪ್ರತಿವಸಂತಿ ಸಮಂ ಪ್ರಮದಾಜನೈಃ
ಸ್ವರುಚಿತೈರುಚಿತೈಶ್ಚ ರತೋತ್ಸವೈಃ ॥ ೯೩ ॥

ಈ ವಿಜಯಾರ್ಧಪರ್ವತದ ತಪ್ಪಲುಗಳಲ್ಲಿ ದೇವತೆಗಳೂ ಅಸುರಕುಮಾರರೂ ಕಿನ್ನರದೇವತೆಗಳೂ ನಾಗದೇವತೆಗಳೂ ತಮ್ಮ ಸ್ತ್ರೀಯರೊಡನೆ ತಮಗೆ ಇಷ್ಟವೂ ಉಚಿತವೂ ಆದ ರತಿಕ್ರೀಡೆಗಳಿಂದ ವಾಸಮಾಡುತ್ತಾರೆ.

[2]ಸುರಸಿಷೇವಿಷಿತೇಷು [3]ನಿಷೇದುಷೀಃ
ಸರಿದುಪಾಂತಲತಾಭವನೇಷ್ವಮೂಃ ।
ಪ್ರಣಯಕೋಪ[4]ವಿಜಿಹ್ಮಮುಖೀರ್ವಧೂ-
ರನುನಯಂತಿ ಸದಾತ್ರ ನಭಶ್ಚರಾಃ ॥ ೯೪ ॥

ಈ ವಿಜಯಾರ್ಧಪರ್ವತದಲ್ಲಿ ದೇವತೆಗಳಿಗೆ ಸೇವಿಸುವುದಕ್ಕೆ ಇಷ್ಟವಾದುವೂ ನದಿಯ ಸಮೀಪದಲ್ಲಿರುವುವೂ ಆದ ಲತಾಭವನಗಳಲ್ಲಿ ಕುಳಿತಿರುವವರೂ ಪ್ರಣಯಕೋಪದಿಂದ ವಕ್ರವಾದ ಮುಖವುಳ್ಳವರೂ ಆದ ಈ ಸ್ತ್ರೀಯರನ್ನು ವಿದ್ಯಾಧರರು ಯಾವಾಗಲೂ ಸಂತೈಸುತ್ತಾರೆ.

ಇಹ ಮೃಣಾಲನಿಯೋಜಿತಬಂಧನೈ-
ರಿಹ [5]ವತಂಸಸರೋರುಹತಾಡನೈಃ ।
ಇಹ [6]ಮುಖಾಸವಸೇಚನಕೈಃ ಪ್ರಿಯಾ-
ನ್ವಿಮುಖಯಂತಿ [7]ರತೇ ಕುಪಿತಾಃ ಸ್ತ್ರಿಯಃ ॥ ೯೫ ॥

ಕೋಪಗೊಂಡ ಸ್ತ್ರೀಯರು ಇಲ್ಲಿ ತಾವರೆಯ ದಂಟುಗಳ ಬಂಧನಗಳಿಂದಲೂ ಇಲ್ಲಿ ಕರ್ಣಾಭರಣವಾದ ತಾವರೆಗಳ ಹೊಡೆತಗಳಿಂದಲೂ ಇಲ್ಲಿ ಬಾಯಿಯಲ್ಲಿರುವ ಪುಷ್ಪರಸದ ಸೇಚನೆ(ಉಗುಳುವಿಕೆ)ಗಳಿಂದಲೂ ತಮ್ಮ ಪ್ರಾಣಕಾಂತರನ್ನು ರತಿ ಕ್ರೀಡೆಯಲ್ಲಿ ವಿಮುಖರನ್ನಾಗಿ ಮಾಡುತ್ತಾರೆ.

ಕ್ವಚಿದನಂಗ[8]ನಿವೇಶ ಇವಾಮರೀ-
ಲಲಿತನರ್ತನಗೀತಮನೋಹರಃ ।
ಮದಕಲಧ್ವನಿಕೋಕಿಲಡಿಂಡಿಮೈಃ
ಕ್ವಚಿದನಂಗಜಯೋತ್ಸವವಿಭ್ರಮಃ ॥ ೯೬ ॥

ಕೆಲವು ಕಡೆಯಲ್ಲಿ ಈ ಪರ್ವತವು ಮನ್ಮಥನ ವಾಸಸ್ಥಾನದಂತೆ ದೇವಸ್ತ್ರೀಯರ ಸುಂದರವಾದ ನರ್ತನದಿಂದಲೂ ಗೀತದಿಂದಲೂ ಮನೋಹರವಾಗಿದೆ. ಕೆಲವು ಕಡೆಯಲ್ಲಿ ಮದದಿಂದ ಮನೋಹರವೂ ಶಬ್ದವನ್ನು ಮಾಡುತ್ತಿರುವುವೂ ಆದ ಕೋಗಿಲೆಗಳೆಂಬ ಡಿಂಡಿಮ (ಢಕ್ಕೆ) ವಾದ್ಯಗಳಿಂದ ಮನ್ಮಥನ ಜಯೋತ್ಸವದ ವಿಲಾಸವುಳ್ಳುದಾಗಿದೆ.

ಕ್ವಚಿ[9]ದುಪೋಢಪಯಃಕಣಶೀತಲೈ-
ರ್ಧುತಸರೋಜವನೈಃ ಪವನೈಃ ಸುಖಃ ।
[10]ಮದಕಲಾಲಿಕುಲಾಕುಲಪಾದಪೈ-
ರುಪವನೈರತಿರಮ್ಯತರಃ ಕ್ವಚಿತ್ ॥ ೯೭ ॥

ಕೆಲವು ಕಡೆಯಲ್ಲಿ ಶೀತಲವಾದ ನೀರಿನ ಹನಿಗಳನ್ನು ಧರಿಸಿ ತಾವರೆಯ ವನಗಳ ಮೇಲೆ ಬೀಸುತ್ತಿರುವ ಗಾಳಿಗಳಿಂದ ಸುಖಕರವಾಗಿದೆ. ಕೆಲವು ಕಡೆಯಲ್ಲಿ ಮದಿಸಿದ ಭ್ರಮರಗಳ ಸಮೂಹದಿಂದ ವ್ಯಾಪ್ತವಾದ ವೃಕ್ಷಗಳುಳ್ಳ ಉದ್ಯಾನಗಳಿಂದ ಅತ್ಯಂತ ರಮಣೀಯವಾಗಿದೆ.

ಕ್ವಚಿ[1]ದನೇಕಪಯೂಥನಿಷೇವಿತಃ
ಕ್ವಚಿ[2]ದನೇಕಪತತ್ಪತಗಾತತಃ ।
ಕ್ವಚಿ[3]ದನೇಕಪರಾರ್ಧ್ಯಮಣಿದ್ಯುತಿ-
ಚ್ಛುರಿತರಾಜತಸಾನುವಿರಾಜಿತಃ ॥ ೯೮ ॥

ಕೆಲವು ಕಡೆಯಲ್ಲಿ ಆನೆಗಳ ಸಮೂಹದಿಂದ ಸೇವಿಸಲ್ಪಡುತ್ತಿದೆ. ಕೆಲವು ಕಡೆಯಲ್ಲಿ ಮೇಲೆ ಹಾರುತ್ತಿರುವ ಅನೇಕ ಪಕ್ಷಿಗಳಿಂದ ವಿಸ್ತೃತವಾಗಿದೆ. ಕೆಲವು ಕಡೆಯಲ್ಲಿ ನಾನಾವಿಧವಾದ ಉತ್ಕೃಷ್ಟರತ್ನಗಳ ಕಾಂತಿಯಿಂದ ಮಿಶ್ರಿತವಾದ ಮತ್ತು ಬೆಳ್ಳಿಯ ಮಯವಾದ ತಪ್ಪಲುಪ್ರದೇಶಗಳಿಂದ ಶೋಭಿಸುತ್ತಿದೆ.

ಕ್ವಚಿ[4]ದಕಾಂಡವಿನರ್ತಿತಕೇಕಿಭಿ-
ರ್ಘನನಿಭೈರ್ಹರಿನೀಲತಟೈರ್ಯುತಃ ।
ಕ್ವಚಿದಕಾಲಕೃತೌ[5]ಷಸವಿಪ್ಲವೈಃ
[6]ಪರಿಗತೋರುಣರತ್ನಶಿಲಾತಲೈಃ ॥ ೯೯ ॥

ಕೆಲವು ಕಡೆಯಲ್ಲಿ ಅಕಾಲದಲ್ಲಿ ನರ್ತನಮಾಡುತ್ತಿರುವ ನವಿಲುಗಳುಳ್ಳುದೂ ಮೇಘಕ್ಕೆ ಸಮಾನವೂ ಇಂದ್ರನೀಲರತ್ನಮಯವೂ ಆದ ತಪ್ಪಲುಗಳುಳ್ಳುದಾಗಿದೆ. ಕೆಲವು ಕಡೆಯಲ್ಲಿ ಅಕಾಲದಲ್ಲಿ ಉಂಟಾದ ಪ್ರಾತಃಕಾಲದ ಎಳೇಬಿಸಲಿನ ಪ್ರವಾಹ ದಂತಿರುವ ಪದ್ಮರಾಗರತ್ನದ ಕಲ್ಲುಗಳಿಂದ ಯುಕ್ತವಾಗಿದೆ.

ಕ್ವಚನ ಕಾಂಚನಭಿತ್ತಿ[7]ಪರಾಹತೈ-
ರವಿಕರೈರಭಿದೀಪಿತಕಾನನಃ ।
ನಭಸಿ ಸಂಚರತಾಂ ಜನಯತ್ಯಯಂ
ಗಿರಿ[8]ರುದೀರ್ಣದವಾನಲಸಂಶಯಮ್ ॥ ೧೦೦ ॥

ಕೆಲವು ಕಡೆಯಲ್ಲಿ ಬಂಗಾರದ ಗೋಡೆಗಳಿಂದ ತಡೆಯಲ್ಪಟ್ಟ ಸೂರ್ಯನ ಕಿರಣಗಳಿಂದ ಪ್ರಕಾಶಿತವಾದ ಅರಣ್ಯವುಳ್ಳ ಈ ವಿಜಯಾರ್ಧಪರ್ವತವು ಆಕಾಶದಲ್ಲಿ ಸಂಚರಿಸುವವರಿಗೆ ಕಾಡುಕಿಚ್ಚು ಉಂಟಾಯಿತೆಂಬ ಸಂಶಯವನ್ನುಂಟು ಮಾಡುತ್ತಿದೆ.

ಇತಿ ವಿಶೇಷಪರಂಪರಯಾನ್ವಹಂ
[9]ಪರಿಗತೋ ಗಿರಿರೇಷ ಸುರೇಶಿನಾಮ್ ।
ಅಪಿ ಪುನಃ ಪರಿವರ್ಧಿತಕೌತುಕಂ
ವಿತನುತೇ ಕಿಮುತಾಂಬರಚಾರಿಣಾಮ್ ॥ ೧೦೧ ॥

ಈರೀತಿಯಾದ ವಿಶೇಷಗಳಿಂದ ಯುಕ್ತವಾಗಿರುವ ಈ ಪರ್ವತವು ಯಾವಾಗಲೂ ದೇವತೆಗಳಿಗೂ ಕುತೂಹಲವನ್ನು ಹೆಚ್ಚಿಸುತ್ತದೆ. ಇನ್ನು ವಿದ್ಯಾಧರರಿಗೆ ಹೇಳಬೇಕಾದುದೇನು ?

ಸುರಸರಿಜ್ಜಲಸಿಕ್ತ[10]ತಟೀದ್ರುಮೋ
ಜಲದಚುಂಬಿತಸಾನುವನೋದಯಃ ।
ಮಣಿಮಯೈಃ ಶಿಖರೈಃ [11]ಖಚರೋಷಿತೈ
ರ್ವಿಜಯತೇ ಗಿರಿರೇಷ [12]ಸುರಾಚಲಾನ್ ॥ ೧೦೨ ॥

ದಡದಲ್ಲಿ ಗಂಗಾನದಿಯ ಜಲದಿಂದ ಸೇಚಿಸಲ್ಪಟ್ಟ ವೃಕ್ಷಗಳುಳ್ಳುದೂ ತಪ್ಪಲುಗಳಲ್ಲಿ ಮೇಘಮಾರ್ಗವನ್ನು ಮುಟ್ಟುತ್ತಿರುವ ವನಗಳುಳ್ಳುದೂ ಆದ ಈ ವಿಜಯಾರ್ಧಪರ್ವತವು ವಿದ್ಯಾಧರರಿಗೆ ಆಶ್ರಯವೂ ರತ್ನಮಯವೂ ಆದ ಶಿಖರಗಳಿಂದ ಸುರಗಿರಿ(ಮೇರು)ಗಳನ್ನು ಜಯಿಸುತ್ತದೆ.

---

೧ ನಿಯಮೇನ. ೨ ಅಮರೈರ್ನಿಷೇವಿತುಮಿಷ್ಟೇಷು. ೩ ಸ್ಥಿತವತೀಃ. ೪ ವಕ್ರಂ. ೫ ಕರ್ಣಪೂರಂ. ೬ ಮಧುಗಂಡೂಷಸೇಚನೈಃ. ೭ ಕ್ರೀಡಾಯಾಂ. ೮ ಆಶ್ರಯಃ. ೯ ಧೃತಃ. ೧೦ ಮದೋತ್ಕಟೋ ಮದಕಲಃ.

೧ ಗಜಾನಾಂ. ೨ ವಿವಿಧೋದ್ಗಚ್ಛತ್ಪಕ್ಷಿವಿಸ್ತೃತಃ. ೩ ವಿವಿಧೋತ್ಕೃಷ್ಟ ರತ್ನಕಾಂತಿಮಿಶ್ರಿತ ರಜತಮಯನಿತಂಬಶೋಭಿತಃ. ೪ ಆಕಾಲೇ. ೫ ಉಷಃಸಂಬಂಧಿಬಾಲಾತಪಪೂರೈಃ. ೬ ಯುಕ್ತಃ. ೭ ಪ್ರತಿಹತೈಃ. ೮ ಉದ್ಗತಃ. ೯ ಯುತಃ. ೧೦ ತಟದ್ರುಮ ಇತ್ಯಪಿ ಪಾಠಃ. ೧೧ ವಿದ್ಯಾಧರಾಶ್ರಿತೈಃ. ೧೨ ಕುಲಾಚಲಾನಿತ್ಯಪಿ ಪಾಠಃ.

**ಸುರನದೀಸಲಿಲ[೧]ಪ್ಲುತಪಾದಪೈ-**
**ಸ್ತಟವನೈಃ [೨]ಕುಸುಮಾಂಚಿತಮೂರ್ಧಭಿಃ ।**
**ಮುಖರಿತಾಲಿಭಿರೇಷ ಮಹಾಚಲೋ**
**ವಿಹಸತೀವ [೩]ಸುರೋಪವನಶ್ರಿಯಮ್ ॥ ೧೦೩ ॥**

ಗಂಗಾನದಿಯ ಜಲದಿಂದ ಪ್ರಕ್ಷಾಲಿಸಲ್ಪಟ್ಟ ವೃಕ್ಷಗಳುಳ್ಳುದೂ ಪುಷ್ಪಗಳಿಂದ ಯುಕ್ತವಾದ ಅಗ್ರಭಾಗಗಳುಳ್ಳುದೂ ಶಬ್ದ ಮಾಡುತ್ತಿರುವ ಭ್ರಮರಗಳುಳ್ಳುದೂ ಆದ ತಪ್ಪಲಿನ ವನಗಳಿಂದ ಈ ದೊಡ್ಡ ಪರ್ವತವು ನಂದನವನದ ಶೋಭೆಯನ್ನು ಪರಿಹಾಸ್ಯಮಾಡುತ್ತಿದೆಯೋ ಎಂಬಂತಿದೆ.

**ಇಯಮಿತಃ [೪]ಸುರಸಿಂಧುರಪಾಂ ಛಟಾಃ**
**[೫]ಪ್ರಕಿರತೀಹ ವಿಭಾತಿ ಪುರೋದಿಶಿ ।**
**ವಹತಿ ಸಿಂಧು[೬]ರಿತಶ್ಚ ಮಹಾನದೀ**
**ಮುಖರಿತಾ ಕಲಹಂಸಕಲಸ್ವನೈಃ ॥ ೧೦೪ ॥**

ಇಲ್ಲಿ ನೀರಿನ ತುಂತುರುಗಳನ್ನು ಎರಚುತ್ತಿರುವ ಈ ಗಂಗಾನದಿಯು ಈಕಡೆ ಪೂರ್ವದಿಕ್ಕಿನಲ್ಲಿ ಶೋಭಿಸುತ್ತಿದೆ. ಈಕಡೆ ಪಶ್ಚಿಮದಿಕ್ಕಿನಲ್ಲಿ ಸಿಂಧುಮಹಾನದಿಯು ಶಬ್ದಮಾಡುತ್ತಿರುವ ಕಲಹಂಸಪಕ್ಷಿಗಳ ಮನೋಹರವಾದ ಶಬ್ದಗಳೊಡನೆ ಹರಿಯುತ್ತದೆ.

**ಹಿಮವತಃ ಶಿರಸಃ ಕಿಲ ನಿಃಸೃತೇ**
**[೭]ಸಕಮಲಾಲಯತಃ [೮]ಸರಿತಾವಿಮೇ ।**
**ಶುಚಿತಯಾ[೯]ಸ್ಯ ತು ಪಾದ[೧೦]ಮುಪಾಶ್ರಿತೇ**
**[೧೧]ಶುಚಿರಲಂಘ್ಯತರೋ ಹಿ [೧೨]ವೃಥೋನ್ನತೇಃ ॥ ೧೦೫ ॥**

ಪದ್ಮಸರೋವರಸಹಿತವಾಗಿರುವ ಹಿಮವತ್ಪರ್ವತದ ಶಿಖರದಿಂದ ಹೊರಟ ಈ ಗಂಗಾಸಿಂಧುನದಿಗಳು ವಿಜಯಾರ್ಧಪರ್ವತವು ಪರಿಶುದ್ಧವಾಗಿರುವುದರಿಂದ ಇದರ ಪಾದ(ಪ್ರತ್ಯಂತಪರ್ವತ)ವನ್ನಾಶ್ರಯಿಸಿದುವು. ವ್ಯರ್ಥವಾಗಿ ಉನ್ನತನಾದವನು ಪರಿಶುದ್ಧನಾದವನನ್ನು ಮೀರಲಾಗುವುದಿಲ್ಲವಷ್ಟೇ? ಹಿಮವತ್ಪರ್ವತವು ವಿಜಯಾರ್ಧಪರ್ವತಕ್ಕಿಂತ ಉನ್ನತವಾಗಿದ್ದರೂ ಪರಿಶುದ್ಧವಾದುದಲ್ಲವೆಂದು ಭಾವವು.

**ಇಹ [೧೩]ಸದೈವ [೧೪]ಸದೈವಪಿಚೇಷ್ಟಿತೈಃ**
**[೧೫]ಸುಕೃತಿನಃ [೧೬]ಕೃತಿನಃ ಖಚರಾಧಿಪಾಃ ।**
**[೧೭]ಕೃತನಯಾ[೧೮]ಸ್ತನಯಾ ಇವ ಸತ್ಪಿತುಃ**
**ಸಮುಪಯಾಂತಿ ಫಲಾನ್ಯಮುತೋ ಗಿರೇಃ ॥ ೧೦೬ ॥**

ವಿನಯಪರರಾದ ಮಕ್ಕಳು ಶ್ರೇಷ್ಠನಾದ ತಂದೆಯಿಂದ ಪ್ರಯೋಜನಗಳನ್ನು ಹೊಂದುವಂತೆ, ಇಲ್ಲಿ ಯಾವಾಗಲೂ ಪುಣ್ಯಕೃತ್ಯಗಳಿಂದ ಪುಣ್ಯಶಾಲಿಗಳೂ ಚತುರರೂ ಆದ ವಿದ್ಯಾಧರಾಧಿಪತಿಗಳು ಈ ಪರ್ವತದಿಂದ ಫಲಗಳನ್ನು ಹೊಂದುತ್ತಾರೆ.

**ಕ್ಷಿತಿರಕೃಷ್ಟ[೧೯]ಪಚೇಲಿಮ[೨೦]ಸಸ್ಯಸೂಃ**
**ಖನಿರಯತ್ನಜರತ್ನವಿಶೇಷಸೂಃ ।**
**ಇಹ ವನಸ್ಪತಯಶ್ಚ ಸದೋನ್ನತಾ**
**ದಧತಿ ಪುಷ್ಪಫಲರ್ದ್ಧಿಮಕಾಲಜಾಮ್ ॥ ೧೦೭ ॥**

ಈ ವಿಜಯಾರ್ಧಪರ್ವತದಲ್ಲಿ ಭೂಮಿಯು ಕೃಷಿಯಿಲ್ಲದೆ ಪಕ್ವವಾದ ಬೆಳೆಯನ್ನು ಕೊಡುತ್ತದೆ. ಗಣಿಯು ಯತ್ನವಿಲ್ಲದೆ ವಿಶೇಷವಾದ ರತ್ನಗಳನ್ನುಂಟುಮಾಡುವುದಾಗಿದೆ. ಉನ್ನತವಾದ ವೃಕ್ಷಗಳು ಯಾವಾಗಲೂ ಅಕಾಲದಲ್ಲಿ ಉಂಟಾದ ವಿಶೇಷಫಲಪುಷ್ಪಗಳನ್ನು ಧರಿಸುತ್ತವೆ.

೧ ಪ್ರಕ್ಷಾಲಿತಾಃ. ೨ ಕುಸುಮಾಚಿತಮೂರ್ಧಭಿರಿತ್ಯಪಿ ಪಾಠಃ. ೩ ನಂದನವನಶ್ರಿಯಂ. ೪ ಗಂಗಾ. ೫ ಪ್ರವಿಕಿರತಿ. ೬ ಪಶ್ಚಿಮದಿಶಿ. ೭ ಪದ್ಮಸರೋವರಸಹಿತಾತ್. ೮ ದ್ವೇ ನದ್ಯೌ. ೯ ವಿಜಯಾರ್ಧಸ್ಯ. ೧೦ ಆಶ್ರಯತ ಇತ್ಯರ್ಥಃ. ೧೧ ಸತ್ಪುರುಷಃ. ೧೨ ವೃಥಾ ಉನ್ನತಿರ್ಯಸ್ಯ ತಸ್ಯ ಸಕಾಶಾತ್. ೧೩ ಅನವರತಮೇವ. ೧೪ ಪುಣ್ಯಸಹಿತಾನಿ. ೧೫ ಪುಣ್ಯವಂತಃ. ೧೬ ಕುಶಲಾಃ. ೧೭ ಕೃತಬುದ್ಧಯಃ. ೧೮ ಪುತ್ರಾಃ. ೧೯ ಪಕ್ವಾನಿ. ೨೦ ಸಸ್ಯೋತ್ಪತ್ತಿಃ.

**ಸರಸಿ ಸಾರಸಹಂಸವಿಕೂಜಿತೈಃ**
**ಕುಸುಮಿತಾಸು ಲತಾಸ್ವಲಿನಿಸ್ವನೈಃ ।**
**ಉಪವನೇಷು ಚ ಕೋಕಿಲನಿಕ್ವಣೈ**
**[೧]ರ್ಹೃದಿಶಯೋತ್ರ ಸದೈವ [೨]ವಿನಿದ್ರಿತಃ ॥ ೧೦೮ ॥**

ಸರೋವರದಲ್ಲಿ ಸಾರಸ ಮತ್ತು ಹಂಸಪಕ್ಷಿಗಳ ಶಬ್ದಗಳಿಂದಲೂ ಪುಷ್ಪಿತವಾದ ಲತೆಗಳಲ್ಲಿ ಭ್ರಮರಗಳ ಶಬ್ದಗಳಿಂದಲೂ ಉದ್ಯಾನಗಳಲ್ಲಿ ಕೋಗಿಲೆಗಳ ಶಬ್ದಗಳಿಂದಲೂ ಯಾವಾಗಲೂ ಈ ವಿಜಯಾರ್ಧಪರ್ವತದಲ್ಲಿ ಮನ್ಮಥನು ನಿದ್ರಾರಹಿತನಾಗಿದ್ದಾನೆ.

**ಕಮಲಿನೀವನರೇಣು[೩]ವಿಕರ್ಷಿಭಿಃ**
**ಕುಸುಮಿತೋಪವನದ್ರುಮಧೂನಕೈಃ ।**
**[೪]ಧೃತಿಮುಪೈತಿ ಸದಾ ಖಚರೀಜನೋ**
**[೫]ರತಿಪರಿಶ್ರಮನುದ್ಭಿರಿಹಾನಿಲೈಃ ॥ ೧೦೯ ॥**

ತಾವರೆಯ ಬಳ್ಳಿಗಳ ಸಮೂಹದಿಂದ ಪುಷ್ಪಧೂಳಿಯನ್ನು ಸ್ವೀಕರಿಸುವುವೂ ಪುಷ್ಪಿತವಾದ ಉದ್ಯಾನಗಳ ವೃಕ್ಷಗಳನ್ನು ಕೊಡಹುವುವೂ ರತಿಕ್ರೀಡೆಯ ಶ್ರಮವನ್ನು ನಾಶಪಡಿಸುವುವೂ ಆದ ಗಾಳಿಗಳಿಂದ ಇಲ್ಲಿ ಯಾವಾಗಲೂ ವಿದ್ಯಾಧರಸ್ತ್ರೀಜನವು ಸಂತೋಷವನ್ನು ಹೊಂದುತ್ತದೆ.

**ಹರಿರಿತಃ ಪ್ರತಿಗರ್ಜತಿ ಕಾನನೇ**
**ಕರಿಕುಲಂ ವನಮುಜ್ಝತಿ ತದ್ಭಯಾತ್ ।**
**ಪರಿಗಲತ್ಕಬಲಂ ಚ ಮೃಗೀಕುಲಂ**
**[೬]ಗಿರಿನಿಕುಂಜಕುಲಾದವಸರ್ಪತಿ ॥ ೧೧೦ ॥**

ಈಕಡೆ ಅರಣ್ಯದಲ್ಲಿ ಸಿಂಹವು ಗರ್ಜಿಸುತ್ತದೆ. ಅದರ ಭಯದಿಂದ ಆನೆಗಳ ಹಿಂಡು ವನವನ್ನು ಬಿಟ್ಟು ಹೋಗುತ್ತಿದೆ. ಬಾಯಿಯಿಂದ ಉದುರುತ್ತಿರುವ ಕಬಲವುಳ್ಳ ಹೆಣ್ಣುಜಿಂಕೆಗಳ ಗುಂಪು ಪರ್ವತದ ಪೊದರು(ಲತಾಗೃಹ)ಗಳ ಸಮೂಹದಿಂದ ತೊಲಗುತ್ತದೆ.

**ಸರಸಿ ಹಂಸವಧೂರಿಯಮುತ್ಸುಕಾ**
**ಕಮಲರೇಣುವಿಪಿಂಜರಮಂಜಸಾ ।**
**ಸಮನುಯಾತಿ ನ ಕೋಕವಿಶಂಕಿನೀ**
**[೭]ಸಹಚರಂ ಗಲದಶ್ರು ವಿರೌತಿ ಚ ॥ ೧೧೧ ॥**

ಕುತೂಹಲವುಳ್ಳ ಈ ಹಂಸಪಕ್ಷಿಯ ಪತ್ನಿಯು ಸರೋವರದಲ್ಲಿ ಚೆನ್ನಾಗಿ ಕಮಲದ ಧೂಳಿನಿಂದ ಹೊಂಬಣ್ಣವಾದ ಪ್ರಾಣಕಾಂತನನ್ನು ಚಕ್ರವಾಕಪಕ್ಷಿಯೆಂದು ಸಂಶಯಪಟ್ಟು ಪತಿಯ ಸಮೀಪವನ್ನು ಹೊಂದುವುದಿಲ್ಲ. ಕಣ್ಣೀರನ್ನು ಸುರಿಸುತ್ತ ಅಳುತ್ತಿದೆ.

**ಇಯಮಿತೋ ಬತ [೮]ಕೋಕಕುಟುಂಬಿನೀ**
**ಕಮಲಿನೀನವಪತ್ರತಿರೋಹಿತಮ್ ।**
**ಅನವಲೋಕ್ಯ ಮುಹುಃ [೯]ಸಹಚಾರಿಣಂ**
**ಭ್ರಮತಿ ದೀನರುತೈಃ ಪರಿತಃ ಸರಃ ॥ ೧೧೨ ॥**

ಈಕಡೆಯಲ್ಲಿ ಈ ಚಕ್ರವಾಕಪಕ್ಷಿಯ ಹೆಂಡತಿಯು ತಾವರೆಯ ಬಳ್ಳಿಯ ಹೊಸ ಎಲೆಯಿಂದ ಮರೆಯಾದ ಪತಿಯನ್ನು ಕಾಣದೆ ಬಾರಿಬಾರಿಗೂ ದೀನವಾದ ರೋದನಗಳಿಂದ ಸರೋವರದ ಸುತ್ತಲೂ ತಿರುಗುತ್ತಿದೆ.

೧ ಮದನಃ. ೨ ವಿಗತನಿದ್ರಃ. ೩ ಸ್ವೀಕುರ್ವಾಣೈಃ. ೪ ಸಂತೋಷಂ. ೫ ಸುರತಖೇದವಿನಾಶಕೈಃ. ೬ ಗಿರಿನಿಕುಂಜತಲಾದಪಸರ್ಪತೀತ್ಯಪಿ ಪಾಠಃ. ೭ ಪ್ರಿಯತಮಂ. ೮ ಚಕ್ರವಾಕಸ್ತ್ರೀ. ೯ ಪ್ರಿಯಂ.

ಇಹ ಶರದ್ಘನಮಲ್ಪಕಮಾಶ್ರಿತಂ
ಮಣಿತಟಂ ಸುರಖೇಚರಕನ್ಯಕಾಃ ।
ಲಘುತಯಾ [೧]ಸುಖಹಾರ್ಯಮಿತಸ್ತತಃ
ಪ್ರಚಲಯಂತಿ ನಯಂತಿ ಚ [೨]ಕರ್ಷಣೈಃ ॥ ೧೧೩ ॥

ಇಲ್ಲಿ ದೇವಕನ್ಯೆಯರೂ ವಿದ್ಯಾಧರಕನ್ಯೆಯರೂ ರತ್ನಮಯವಾದ ತಪ್ಪಲನ್ನು ಹೊಂದಿರುವ ಶರತ್ಕಾಲದ ಸಣ್ಣ ಮೇಘವನ್ನು ಭಾರವಿಲ್ಲದಿರುವುದರಿಂದ ಸುಖದಿಂದ ತೆಗೆದುಕೊಳ್ಳಬಹುದೆಂದು ಈಕಡೆಗಾಕಡೆಗೆ ಅಳ್ಳಾಡಿಸುತ್ತಲೂ ಎಳೆಯುತ್ತಲೂ ಇದ್ದಾರೆ.

ಅಸುಮತಾಂ [೩]ಸುಮತಾಂಭಸಮಾತತಾಂ
[೪]ಧೃತಘನಾಂತಘನಾಮಿವ ವೀಚಿಭಿಃ ।
[೫]ತತವನಾಂತವನಾಮಮರಾಪಗಾಂ
ವಹತಿ ಸಾನುಭಿರೇಷ ಮಹಾಚಲಃ ॥ ೧೧೪ ॥

ಈ ದೊಡ್ಡ ಪರ್ವತವು ಪ್ರಾಣಿಗಳಿಗೆ ಇಷ್ಟವಾದ ಜಲವುಳ್ಳದೂ ವಿಸ್ತಾರವೂ ಅಲೆಗಳಿಂದ ಶರತ್ಕಾಲದ ಮೇಘವನ್ನು ಧರಿಸಿರುವಂತಿರುವುದೂ ವಿಸ್ತಾರವಾದ ವನ ಮಧ್ಯದಲ್ಲಿ ಜಲವುಳ್ಳದೂ ಆದ ಗಂಗಾನದಿಯನ್ನು ತನ್ನ ತಪ್ಪಲುಗಳಿಂದ ಧರಿಸುತ್ತದೆ.

[೬]ಅಸುತರಾಂ [೭]ಸುತರಾಂ ಪೃಥುಮಂಭಸಾಂ
[೮]ಪತಿ[೯]ಮಿತಾಂ [೧೦]ತಿಮಿತಾಂತಲತಾವನಾಮ್ ।
[೧೧]ಅನುಗತಾಂ [೧೨]ನು ಗತಾಂ [೧೩]ಸ್ವತಟೋಪಗಾಂ
ವಹತಿ ಸಿಂಧುಮಯಂ ಧರಣೀಧರಃ ॥ ೧೧೫ ॥

ಈ ಪರ್ವತವು ಸಂಪೂರ್ಣವಾಗಿ ದಾಟಲಶಕ್ಯವೂ ದೊಡ್ಡ ಸಮುದ್ರವನ್ನು ಹೊಂದಿರುವುದೂ ಸಮೀಪದಲ್ಲಿ ದ್ರವಿಸಿದ ಲತೆಗಳ ವನಗಳುಳ್ಳದೂ ಭೃತ್ಯತ್ವವನ್ನು ಹೊಂದಿದೆಯೋ ಎಂಬಂತಿರುವುದೂ ತನ್ನ ತಪ್ಪಲಿನ ಸಮೀಪದಲ್ಲಿ ಹರಿಯುತ್ತಿರುವುದೂ ಆದ ಸಿಂಧುನದಿಯನ್ನು ಧರಿಸುತ್ತದೆ.

ಇತಿ ಯದೇವ ಯದೇವ ನಿರೂಪ್ಯತೇ
ಬಹುವಿಶೇಷಗುಣೇತ್ರ ನಗಾಧಿಪೇ ।
[೧೪]ಕಿಮು ತದೇವ ತದೇವ ಸುಖಾವಹಂ
ಹೃದಯಹಾರಿ ದೃಶಾಂ ಚ [೧೫]ವಿಲೋಭನಮ್ ॥ ೧೧೬ ॥

ಈರೀತಿಯಾಗಿ ಅನೇಕ ವಿಶೇಷಗುಣಗಳುಳ್ಳ ಈ ವಿಜಯಾರ್ಧಪರ್ವತದಲ್ಲಿ ಆವಾವ ಪದಾರ್ಥವನ್ನು ನೋಡುತ್ತೇವೋ ಅದದೆಲ್ಲವೂ ಸುಖಕರವೂ ಮನೋಹರವೂ ಕಣ್ಣುಗಳಿಗೆ ಆನಂದದಾಯಕವೂ ಆಗಿದೆ. ವರ್ಣಿಸುವುದೇನು ?

ಧತ್ತೇಽಸ್ಯ ಸಾನೌ ಕುಸುಮಾಚಿತೇಯಂ
ನೀಲಾ ವನಾಲೀ [೧೬]ಪರಿಧಾನಲಕ್ಷ್ಮೀಮ್ ।
ಶೃಂಗಾಗ್ರಲಗ್ನಾ ಚ ಸಿತಾಭ್ರಪಂಕ್ತಿಃ
[೧೭]ಸಂವ್ಯಾನಲೀಲಾಮಿಯಮಾತನೋತಿ ॥ ೧೧೭ ॥

ಈ ಪರ್ವತದ ತಪ್ಪಲಲ್ಲಿ ಪುಷ್ಪಗಳಿಂದ ವ್ಯಾಪ್ತವಾದ ಈ ಕಪ್ಪುವನಗಳ ಸಾಲು ಕೆಳವಸ್ತ್ರದ ಶೋಭೆಯನ್ನು ಧರಿಸುತ್ತದೆ. ಪರ್ವತಶಿಖರದ ಅಗ್ರಭಾಗದಲ್ಲಿರುವ ಶುಭ್ರವಾದ ಈ ಮೇಘಪಂಕ್ತಿಯು ಮೇಲುವಸ್ತ್ರದ ಶೋಭೆಯನ್ನು ಧರಿಸುತ್ತದೆ.

೧ ಸುಖೇನ ಪ್ರಾಪಣೀಯಂ. ೨ ಆಕರ್ಷಣೈಃ. ೩ ಸುಷ್ಠು ಸಮ್ಮತಜಲಾಂ. ೪ ಶರತ್ಕಾಲಮೇಘಾಂ. ೫ ವಿಸ್ತೃತವನಮಧ್ಯಜಲಾಂ. ೬ ದುಸ್ತರಾಂ. ೭ ನಿತರಾಂ. ೮ ಲವಣಾಬ್ಧಿಂ. ೯ ಗತಾಂ. ೧೦ ಆರ್ದ್ರೀತಸಮೀಪವಲ್ಲೀವನಾಂ. ೧೧ ಭೃತ್ಯತಾಂ. ೧೨ ಇವ. ೧೩ ಸ್ವತಟ ಸಮೀಪಗಾಮಿನೀಂ, ಸ್ವತಟೋಪಮಾಮಿತ್ಯಪಿ ಪಾಠಃ. ೧೪ ಕಿಂ ವರ್ಣನೀಯಮಿತ್ಯರ್ಥಃ. ೧೫ ಲೋಭಕರಂ. ೧೬ ಅಧೋಂಶುಕಶೋಭಾಂ. ೧೭ ಉತ್ತರೀಯವಸ್ತ್ರವಿಲಾಸಂ.

[೧]ತಿರಸ್ಕರಿಣ್ಯೇವ ಸಿತಾಭ್ರಪಙ್ಕ್ತ್ಯಾ
[೨]ಪರಿಷ್ಕೃತಾಂತೇಽಸ್ಯ ನಿಕುಂಜದೇಶೇ ।
ಮಣಿಪ್ರಭೋತ್ಸರ್ಪಹತಾಂಧಕಾರೇ
ಸಮಂ ರಮಂತೇ ಖಚರೈಃ ಖಚರ್ಯಃ ॥ ೧೧೮ ॥

ತೆರೆಯಂತಿರುವ ಶುಭ್ರವಾದ ಮೇಘಪಂಕ್ತಿಯಿಂದ ಸುತ್ತಲ್ಪಟ್ಟ ರತ್ನಗಳ ಕಾಂತಿಯ ಹರಡುವಿಕೆಯಿಂದ ನಷ್ಟವಾದ ಕತ್ತಲೆಯುಳ್ಳ ಈ ವಿಜಯಾರ್ಧಪರ್ವತದ ಪೊದರುಳ್ಳ ಪ್ರದೇಶದಲ್ಲಿ ವಿದ್ಯಾಧರಸ್ತ್ರೀಯರು ವಿಧ್ಯಾಧರರೊಡನೆ ಕ್ರೀಡಿಸುತ್ತಾರೆ.

ಶರದ್ಘನಸ್ಯೋಪರಿ ಸುಸ್ಥಿತೇ ಘನೇ
ವಿತಾನತಾಂ ತನ್ವತಿ ಖೇಚರಾಂಗನಾಃ ।
ಕೃತಾಲಯಾ[೩]ಸ್ತತ್ರ ಚಿರಂ ರಿರಂಸಯಾ
ಘನಾತಪೇಪ್ಯಹ್ನಿ ನ ಜಾನತೇ ಕ್ಲಮಮ್ ॥ ೧೧೯ ॥

ಶರತ್ಕಾಲದ ಮೇಘದ ಮೇಲ್ಭಾಗದಲ್ಲಿ ಮೇಲ್ಕಟ್ಟಿನಂತಿರುವ ಗಟ್ಟಿಯಾದ ಮೇಘದಲ್ಲಿ ವಾಸಸ್ಥಾನವನ್ನು ಮಾಡಿಕೊಂಡಿರುವ ವಿದ್ಯಾಧರಸ್ತ್ರಿಯರು ಆ ಎರಡು ಮೇಘಗಳ ಮಧ್ಯದಲ್ಲಿ ಕ್ರೀಡಿಸಬೇಕೆಂಬ ಇಚ್ಛೆಯಿಂದ ತೀವ್ರವಾದ ಬಿಸಲುಳ್ಳ ದಿನದಲ್ಲಿಯೂ ಶ್ರಮವನ್ನು ತಿಳಿಯುವುದಿಲ್ಲ.

ಸಮುಲ್ಲಸನ್ನೀಲಮಣಿಪ್ರಭಾ[೪]ಪ್ಲುತಾನ್
ಶರದ್ಘನಾನ್ಕಾಲಘನಾಘನಾಯಿತಾನ್ ।
ವಿಲೋಕ್ಯ ಹೃಷ್ಟೋತ್ರ ರುವನ್ ಶಿಖಾವಲಃ
ಪ್ರನೃತ್ಯತಿ ವ್ಯಾತತಬರ್ಹಮುನ್ಮದಃ ॥ ೧೨೦ ॥

ಈ ವಿಜಯಾರ್ಧಪರ್ವತದಲ್ಲಿ ಪ್ರಕಾಶಮಾನವಾದ ನೀಲರತ್ನದ ಕಾಂತಿಯೊಡನೆ ಮಿಶ್ರವಾಗಿ ಕಪ್ಪುಮೇಘದಂತಿರುವ ಶರತ್ಕಾಲದ ಮೇಘಗಳನ್ನು ನೋಡಿ ಸಂತುಷ್ಟವಾದ ನವಿಲು ಮದಿಸಿ ರೆಕ್ಕೆಗಳನ್ನು ಹರಡಿಕೊಂಡು ಕೂಗುತ್ತ ನರ್ತನವನ್ನು ಮಾಡುತ್ತದೆ.

ಸಿತಾನ್ಘನಾನಿಹ ತಟಸಂಶ್ರಿತಾನಿಮಾನ್
ಸ್ಥಲಾಸ್ಥಯಾ ಸಮುಪಾಗತಾಃ ಖಗಾಂಗನಾಃ ।
ದುಕೂಲ[೫]ಸಂಸ್ತರಣ ಇವಾತಿವಿಸ್ತೃತೇ
[೬]ವಿಶಾಯಿಕಾ[೭]ಮುಪರಚಯಂತಿ ತತ್ತಲೇ ॥ ೧೨೧ ॥

ಈ ವಿಜಯಾರ್ಧಪರ್ವತದ ತಪ್ಪಲನ್ನು ಹೊಂದಿರುವ ಈ ಶುಭ್ರಮೇಘಗಳನ್ನು ನೋಡಿ ಸ್ಥಳವೆಂಬ ಬುದ್ಧಿಯಿಂದ ಬಂದ ವಿದ್ಯಾಧರಸ್ತ್ರೀಯರು, ವಸ್ತ್ರದಿಂದ ಮಾಡಿದ ಹಾಸಿಗೆಯಲ್ಲಿ ಮಲಗುವಂತೆ, ಅತ್ಯಂತ ವಿಸ್ತಾರವಾದ ಆ ಮೇಘವಿರುವ ಪ್ರದೇಶದಲ್ಲಿ ಮಲಗುತ್ತಾರೆ.

ಸರಸ್ತಟಂ ಕಲರುತಸಾರಸಾಕುಲಂ
ವನದ್ವಿಪೇ ವಿಶತಿ ಸಿತಚ್ಛದಾವಲೀ ।
ನಭೋಭಿಯಾ ಸಮುಪಗತಾತ್ರ ಲಕ್ಷ್ಯತೇ
ನಭಃಶ್ರಿಯಃ ಪೃಥುತರಹಾರಯಷ್ಟಿವತ್ ॥ ೧೨೨ ॥

ಮಧುರವಾದ ಶಬ್ದವನ್ನು ಮಾಡುತ್ತಿರುವ ಸಾರಸಪಕ್ಷಿಗಳಿಂದ ವ್ಯಾಪ್ತವಾದ ಸರೋವರದ ತೀರವನ್ನು ಕಾಡಾನೆಯು ಪ್ರವೇಶಮಾಡುತ್ತಿರಲು ಆಕಾಶವೆಂಬ ಭಯದಿಂದ ಹೊಂದಿದ ಹಂಸಪಕ್ಷಿಗಳ ಸಮೂಹವು ಇಲ್ಲಿ ಆಕಾಶಲಕ್ಷ್ಮಿಯ ವಿಸ್ತಾರವಾದ ಹಾರದಂತೆ ತೋರುತ್ತದೆ.

೧ ಪ್ರತಿಸೀರಾ ಯವನಿಕಾ ಸ್ಯಾತ್ತಿರಸ್ಕರಿಣೀ ಚ ಸಾ ಇತ್ಯಮರಃ. ೨ ವೇಷ್ಟಿತಃ. ೩ ಮೇಘದ್ವಯಮಧ್ಯೇ. ೪ ಮಿಶ್ರಿತಾನ್. ೫ ಶಯ್ಯಾಯಾಂ. ೬ ಸ್ವಪನಂ, ವಿಶಾಕಿಕಾಮಿತ್ಯಪಿ ಪಾಠಃ. ೭ ಕುರ್ವಂತಿ.

**ಕ್ವಚಿ[೧]ದ್ಧರಿನ್ಮಣಿತಟರೋಚಿಷಾಂ ಚಯೈಃ**
**[೨]ಪರಿಷ್ಕೃತಂ ವಪುರಿಹ ತಿಗ್ಮದೀಧಿತೇಃ ।**
**ಸರೋಜಿನೀಹರಿತ[೩]ಪಲಾಶಶಂಕಯಾ**
**ನಭಶ್ಚರೈರುಪತಟಮೀಕ್ಷ್ಯತೇ ಮುಹುಃ ॥ ೧೨೩ ॥**

ಈ ವಿಜಯಾರ್ಧಪರ್ವತದ ಕೆಲವು ಕಡೆಯಲ್ಲಿ ಪಚ್ಚೆರತ್ನದಿಂದ ಮಾಡಿದ ದಡಗಳ ಕಾಂತಿಗಳ ಸಮೂಹಗಳಿಂದ ಸುತ್ತಲ್ಪಟ್ಟ ಸೂರ್ಯನ ಶರೀರವನ್ನು, ವಿದ್ಯಾಧರರು ಕಮಲಲತೆಯ ಹಸುರಾದ ಎಲೆಯ ಸಂದೇಹದಿಂದ, ಬಾರಿಬಾರಿಗೂ ದಡದ ಸಮೀಪದಲ್ಲಿ ನೋಡುತ್ತಾರೆ.

**ಕ್ವಚಿದ್ವನದ್ವಿರದಕಪೋಲಘಟ್ಟನೈಃ**
**ಕ್ಷತತ್ವಚೋ ವನತರವಃ ಸರಸ್ತಟೇ ।**
**ರುದಂತಿ [೪]ನು ಚ್ಯುತಕುಸುಮಾಶ್ರುಬಿಂದವೋ**
**ನಿಲೀನಷಟ್ಪದಕರುಣ[೫]ಸ್ವರಾನ್ವಿತಾಃ ॥ ೧೨೪ ॥**

ಕೆಲವು ಕಡೆಯಲ್ಲಿ ವನಗಜಗಳ ಕೆನ್ನೆಗಳ ಘರ್ಷಣೆಗಳಿಂದ ನಷ್ಟವಾದ ತ್ವಗಟೆಗಳುಳ್ಳ ವೃಕ್ಷಗಳು ಸರೋವರದ ದಡದಲ್ಲಿ ಉದುರುತ್ತಿರುವ ಪುಷ್ಪಗಳೆಂಬ ಕಣ್ಣೀರಿನ ಬಿಂದುಗಳುಳ್ಳವೂ ಅವಿತುಕೊಂಡಿರುವ ಭ್ರಮರಗಳ ಕರುಣಸ್ವರದಿಂದ ಕೂಡಿದುವೂ ಆಗಿ ಅಳುತ್ತಿವೆಯೋ ಎಂಬಂತಿವೆ.

**ಇತಃ ಕಲಂ ಕಮಲವನೇಷು [೬]ರೂಯತೇ**
**ಮದೋದ್ಧುರಧ್ವನಿಕಲಹಂಸಸಾರಸೈಃ ।**
**ಇತಶ್ಚ ಕೋಕಿಲಕಲನಾದ[೭]ಮೂರ್ಛಿತಂ**
**ಮಹೋಹರಂ ಶಿಖಿವಿರುತಂ [೮]ಪ್ರತಾಯತೇ ॥ ೧೨೫ ॥**

ಈಕಡೆ ಕಮಲ ವನಗಳಲ್ಲಿ ಮದೋನ್ಮತ್ತವಾಗಿ ಧ್ವನಿಮಾಡುತ್ತಿರುವ ಕಲಹಂಸಪಕ್ಷಿಗಳೂ ಸಾರಸಪಕ್ಷಿಗಳೂ ಮಧುರವಾಗಿ ಶಬ್ದಮಾಡುತ್ತವೆ. ಈಕಡೆಯಲ್ಲಿ ಕೋಗಿಲೆಯ ಮಧುರವಾದ ಶಬ್ದದೊಡನೆ ಮಿಶ್ರವೂ ಮನೋಹರವೂ ಆದ ನವಿಲಿನ ಶಬ್ದವು ಹರಡುತ್ತಿದೆ.

**ಇತಃ ಶರದ್ಘನಘನಕಾಲಮೇಘಯೋ-**
**ರ್ಯದೃಚ್ಛಯಾ ವನ ಇವ ಸನ್ನಿಧಿರ್ಭವನ್ ।**
**[೯]ಮುಖೋನ್ಮುಖಪ್ರಹಿತಕರಃ ಪ್ರವರ್ತತೇ**
**ಸಿತಾಸಿತದ್ವಿರದನಯೋರಯಂ ರಣಃ ॥ ೧೨೬ ॥**

ಈಕಡೆ ವನದಲ್ಲಿ ಬಿಳುಪಾದ ಆನೆಯೂ ಕಪ್ಪಾದ ಆನೆಯೂ ಪರಸ್ಪರ ಮುಖಕ್ಕೆದುರಾಗಿ ಉಪಯೋಗಿಸುತ್ತಿರುವ ಸೊಂಡಲುಳ್ಳ ಈ ಯುದ್ಧವು, ಆಕಸ್ಮಾತ್ತಾಗಿ ಶರತ್ಕಾಲದ ಮೇಘಕ್ಕೂ ವರ್ಷಾಕಾಲದ ಮೇಘಕ್ಕೂ ಉಂಟಾದ ಸಮಾಗಮದಂತೆ, ಪ್ರವರ್ತಿಸುತ್ತದೆ.

**ವನಸ್ಥಲೀಮನಿಲವಿಲೋಲಿತದ್ರುಮಾ-**
**ಮಿಮಾಮಿತಃ ಕುಸುಮರಜೋ[೧೦]ವಗುಂಠಿತಾಮ್ ।**
**ಅಲಕ್ಷಿತಾ[೧೧]ಮಧಿ[೧೨]ಗಮಯತ್ಯಲಿವ್ರಜಃ**
**ಸಮಾವ್ರಜನ್ಪರಿಮಲಲೋಲುಪೋಭಿತಃ ॥ ೧೨೭ ॥**

ಈಕಡೆಯಲ್ಲಿ ಗಾಳಿಯಿಂದ ಚಲಿಸುತ್ತಿರುವ ವೃಕ್ಷಗಳುಳ್ಳದೂ ಪುಷ್ಪಧೂಳಿನಿಂದ ಆಚ್ಛಾದಿತವಾಗಿ ಕಾಣಲ್ಪಡದಿರುವುದೂ ಆದ ವನಪ್ರದೇಶವನ್ನು ಸುತ್ತಲೂ ಪರಿಮಳಕ್ಕೆ ಆಸಕ್ತವಾಗಿ ಬರುತ್ತಿರುವ ಭ್ರಮರಗಳ ಸಮೂಹವು ಸೂಚಿಸುತ್ತದೆ.

೧ ಮರಕತರತ್ನಂ. ೨ ವೇಷ್ಟಿತಂ. ೩ ಪತ್ರಂ. ೪ ಇವ. ೫ ಸ್ವನಾನ್ವಿತಮಿತ್ಯಪಿ ಪಾಠಃ. ೬ ಧ್ವನ್ಯತೇ. ೭ ಮಿಶ್ರಿತಂ. ೮ ಪ್ರತನ್ಯತೇ, ಪ್ರತೀಯತ ಇತ್ಯಪಿ ಪಾಠಃ. ೯ ಮುಖಾಭಿಮುಖಸ್ಥಾಪಿತಶುಂಡಾದಂಡಃ. ೧೦ ಆಚ್ಛಾದಿತಾಂ, ಅವಕುಂಠಿತಾಮಿತ್ಯಪಿ ಪಾಠಃ. ೧೧ ಅಪೀತ್ಯಪಿ ಪಾಠಃ. ೧೨ ಜ್ಞಾಪಯತಿ.

**ಇತೋ ವನಂ ವನಗಜಯೂಥಸೇವಿತಂ**
**[೧]ವಿಭಾವ್ಯತೇ ಮದಜಲಸಿಕ್ತಪಾದಪಮ್ ।**
**ಸಮಾಪತನ್ಮದಕಲಭೃಂಗಮಾಲಿಕಾ-**
**ಸಮಾಕುಲದ್ರುಮ[೨]ಲತ[೩]ಮಂತರಾಂತರೇ ॥ ೧೨೮ ॥**

ಈಕಡೆಯಲ್ಲಿ ಕಾಡಾನೆಗಳ ಸಮೂಹದಿಂದ ಸೇವಿಸಲ್ಪಡುವುದೂ ಮದಜಲದಿಂದ ಸೇಚಿಸಲ್ಪಟ್ಟ ವೃಕ್ಷಗಳುಳ್ಳದೂ ಮಧ್ಯಮಧ್ಯದಲ್ಲಿ ಮದೋನ್ಮತ್ತವಾಗಿ ಬರುತ್ತಿರುವ ಭ್ರಮರಸಮೂಹದಿಂದ ವ್ಯಾಪ್ತವಾದ ವೃಕ್ಷಗಳೂ ಲತೆಗಳೂ ಉಳ್ಳದೂ ಆದ ವನವಿದೆಯೆಂದು ಊಹಿಸಲ್ಪಡುತ್ತದೆ.

**ಇಹ ಖಗವನಿತಾ ನಿತಾಂತರಮ್ಯಾಃ**
**ಸುರಭಿಸರೋಜವನಾ ವನಾಂತ[೪]ವೀಥೀಃ ।**
**[೫]ಪರಿಹಿತರಸನೈಃ ಶನೈಃ ಶ್ರಯಂತೇ**
**ಜಿತಪುಲಿನೈರ್ಜಘನೈರ್ಘನೈಃ ಸುದತ್ಯಃ ॥ ೧೨೯ ॥**

ಇಲ್ಲಿ ಸುಂದರವಾದ ಹಲ್ಲುಗಳುಳ್ಳ ವಿದ್ಯಾಧರಸ್ತ್ರೀಯರು ಜಾರುತ್ತಿರುವ ಡಾಬುಗಳುಳ್ಳದೂ ಮರಳಿನ ರಾಶಿಯನ್ನು ಜಯಿಸಿರುವುದೂ ದೃಢವೂ ಆದ ಕಟಿಪ್ರದೇಶಗಳುಳ್ಳವರಾಗಿ ಅತ್ಯಂತ ರಮಣೀಯವೂ ಪರಿಮಳವುಳ್ಳ ತಾವರೆಗಳ ಸಮೂಹವುಳ್ಳದೂ ಆದ ವನಪಂಕ್ತಿಗಳನ್ನು ಮೆಲ್ಲನೆ ಹೊಂದುತ್ತಾರೆ.

**ಸರಸಕಿಸಲಯಪ್ರಸೂನ[೬]ಕ್ಲೃಪ್ತಿಂ**
**[೭]ವಿತತರಿಷೂಣಿ ವನಾನಿ [೮]ನೂನಮಸ್ಮಿನ್ ।**
**[೯]ದ್ರುತಮಿತ ಇತ ಇತ್ಯಮೂಃ ಖಗಸ್ತ್ರೀ-**
**ರಲಿವಿರುತೈ[೧೦]ರವಿರಾಮಮಾಹ್ವಯಂತಿ ॥ ೧೩೦ ॥**

ಈ ಪರ್ವತದಲ್ಲಿ ರಸಭರಿತವಾದ ತಳಿರು ಮತ್ತು ಪುಷ್ಪಗಳ ರಚನೆಯನ್ನು ವಿಸ್ತರಿಸುವುದಕ್ಕೆ ಇಚ್ಛಿಸುವಂತಿರುವ ವನಗಳು ''ಶೀಘ್ರವಾಗಿ ಬನ್ನಿ ಬನ್ನಿ'' ಎಂದು ಭ್ರಮರಗಳ ಶಬ್ದಗಳಿಂದ ಯಾವಾಗಲೂ ಈ ವಿದ್ಯಾಧರಸ್ತ್ರೀಯರನ್ನು ಕರೆಯುತ್ತವೋ ಎಂಬಂತಿವೆ.

**ಕುಸುಮಿತವನ[೧೧]ಷಂಡಮಧ್ಯಮೇತಾ-**
**ಸ್ತರುಗಹನೇನ ಘನೀಕೃತಾಂಧಕಾರಮ್ ।**
**[೧೨]ಸ್ವತನುರುಚಿವಿಧೂತದೃಷ್ಟಿರೋಧಾಃ**
**ಖಗವನಿತಾ [೧೩]ಬಹುದೀಪಿಕಾ ವಿಶಂತಿ ॥ ೧೩೧ ॥**

ತಮ್ಮ ದೇಹಕಾಂತಿಯಿಂದ ಕತ್ತಲೆಯನ್ನು ಹೋಗಲಾಡಿಸುವವರೂ ದೀಪಕ್ಕೆ ಸಮಾನರೂ ಆದ ಈ ವಿದ್ಯಾಧರಸ್ತ್ರೀಯರು ದಟ್ಟವಾದ ವೃಕ್ಷಗಳಿಂದ ನಿಬಿಡವಾದ ಕತ್ತಲೆಯುಳ್ಳದೂ ಪುಷ್ಪಗಳನ್ನು ಬಿಟ್ಟಿರುವುದೂ ಆದ ವನಸಮೂಹದ ಮಧ್ಯಭಾಗಕ್ಕೆ ಪ್ರವೇಶಮಾಡುತ್ತಾರೆ.

**ಕುಸುಮರಸಪಿಪಾಸಯಾ ನಿಲೀನೈ-**
**ರಲಿಭಿರನಾರತ[೧೪]ಮಾರುವದ್ಭಿರಾಸಾಮ್ ।**
**ಯುವತಿ[೧೫]ಕರಜಲೂನಪಲ್ಲವಾನಾ-**
**[೧೬]ಮನುರುದಿತಂ ನು ವಿತನ್ಯತೇ ಲತಾನಾಮ್ ॥ ೧೩೨ ॥**

ಯುವತಿಯರ ಕೈಗಳ ಉಗುರುಗಳಿಂದ ಕತ್ತರಿಸಲ್ಪಟ್ಟ ತಳಿರುಗಳುಳ್ಳ ಈ ಲತೆಗಳ ಪುಷ್ಪರಸವನ್ನು ಪಾನಮಾಡಬೇಕೆಂಬ ಇಚ್ಛೆಯಿಂದ ಯಾವಾಗಲೂ ಆಸಕ್ತವಾಗಿ ಎಲ್ಲಾ ಕಡೆಯಿಂದಲೂ ಶಬ್ದಮಾಡುತ್ತಿರುವ ಭ್ರಮರಗಳು ಅನುಸರಿಸಿ ರೋದನವನ್ನು ಮಾಡುವಂತಿದೆ.

೧ ಅನುಮೀಯತೇ. ೨ ತಲಮಿತ್ಯಪಿ ಪಾಠಃ. ೩ ಅಂತರಾಂತರೇತ್ಯಪಿ ಪಾಠಃ. ೪ ಗುಲ್ಮಾದಿಪಂಕ್ತೀಃ. ೫ ಪರಿಕ್ಷಿಪ್ತಕಾಂಚೀದಾಮಭಿಃ. ೬ ರಚನಾಂ. ೭ ವಿಸ್ತರಿತುಮಿಚ್ಛೂನಿ. ೮ ಇವ. ೯ ದ್ರುಮಮಿತ್ಯಪಿ ಪಾಠಃ. ೧೦ ಅನವರತಂ. ೧೧ ಖಂಡಮಧ್ಯಮಿತ್ಯಪಿ ಪಾಠಃ. ೧೨ ನಿಜದೇಹಕಾಂತಿ ನಿರ್ಧೂತಾಂಧಕಾರಾಃ. ೧೩ ದೀಪಿಕಾಸದೃಶಾಃ. ೧೪ ಆಸಮಂತಾದ್ಧ್ವನದ್ಭಿಃ. ೧೫ ನಖಚ್ಛೇದಿತಾಃ. ೧೬ ಅನುಗತ ರೋದನಂ.

**ಕುಸುಮರಚಿತಭೂಷಣಾವತಂಸಾಃ**
**ಕುಸುಮರಜಃಪರಿಪಿಂಜರಸ್ತನಾಂತಾಃ ।**
**ಕುಸುಮಶರಶರಾಯಿತಾಯತಾಕ್ಷ್ಯ-**
**ಸ್ತದಪಚಿತಾವಿಹ ಭಾಂತ್ಯಮೂಃ ಖಚರ್ಯಃ ॥ ೧೩೩ ॥**

ಇಲ್ಲಿ ಮನ್ಮಥನ ಬಾಣದಂತಿರುವ ದೀರ್ಘವಾದ ನೇತ್ರಗಳುಳ್ಳ ಈ ವಿದ್ಯಾಧರಸ್ತ್ರೀಯರು ಪುಷ್ಪವನ್ನು ಬಿಡಿಸುವಾಗ ಕಿವಿಯಲ್ಲಿ ಪುಷ್ಪಗಳ ಆಭರಣವನ್ನು ರಚಿಸಿಕೊಂಡವರೂ ಪುಷ್ಪಧೂಳಿಯಿಂದ ಹೊಂಬಣ್ಣವಾದ ಕುಚಪ್ರದೇಶವುಳ್ಳವರೂ ಆಗಿ ಶೋಭಿಸುತ್ತಾರೆ.

**ತಾಃ ಸಂಚರಂತಿ ಕುಸುಮಾಪಚಯೇ ತರುಣ್ಯಃ**
**ಸಕ್ತಾ ವನೇಷು ಲಲಿತಭ್ರುವಿಲೋಲನೇತ್ರಾಃ ।**
**ತನ್ವ್ಯೋ ನಖೋರುಕಿರಣೋ[೧]ದ್ಗಮಮಂಜರೀಕಾ-**
**ವ್ಯಾಲೋಲಷಟ್ಪದಕುಲಾ ಇವ ಹೇಮವಲ್ಲ್ಯಃ ॥ ೧೩೪ ॥**

ಪುಷ್ಪವನ್ನು ಬಿಡಿಸಿಕೊಳ್ಳುವುದರಲ್ಲಿ ಆಸಕ್ತರೂ ಸುಂದರವಾದ ಹುಬ್ಬುಗಳುಳ್ಳ ಚಂಚಲವಾದ ನೇತ್ರಗಳುಳ್ಳವರೂ ಸುಂದರಿಯರೂ ಉಗುರುಗಳ ಶ್ರೇಷ್ಠವಾದ ಕಾಂತಿಯೆಂಬ ಪುಷ್ಪದ ಗೊಂಚಲುಗಳುಳ್ಳವರೂ ಆದ ಆ ತರುಣಿಯರು, ಚಲಿಸುತ್ತಿರುವ ಭ್ರಮರಗಳಿಂದ ವ್ಯಾಪ್ತವಾದ ಸುವರ್ಣಲತೆಗಳಂತೆ, ವನಗಳಲ್ಲಿ ಸಂಚರಿಸುತ್ತಾರೆ.

**ಮೃದುತರಪವನೇ ವನೇ ಪ್ರಫುಲ್ಲೇ**
**ಕುಸುಮಿತಮಾಲತಿಕಾತಿಕಾಂತಪಾರ್ಶ್ವೇ ।**
**ಮರುದಯಮಧುನಾ [೨]ಧುನೋತಿ ವೀಥೀ**
**[೩]ರವನಿರುಹಾಂ ಮಲಿನಾಲಿನಾಮಮುಷ್ಮಿನ್ ॥ ೧೩೫ ॥**

ಅತ್ಯಂತ ಕೋಮಲವಾದ ಗಾಳಿಯುಳ್ಳುದೂ ವಿಕಸಿತವೂ ಪುಷ್ಪವನ್ನು ಬಿಟ್ಟಿರುವ ಜಾಜಿಯ ಗಿಡದಿಂದ ಅತ್ಯಂತ ಸುಂದರವಾದ ಪಾರ್ಶ್ವಗಳುಳ್ಳುದೂ ಆದ ಈ ವನದಲ್ಲಿ ಈಗ ಈ ಗಾಳಿಯು ಮಲಿನವಾದ ಭ್ರಮರಗಳುಳ್ಳ ವೃಕ್ಷಗಳ ಸಾಲುಗಳನ್ನು ಅಲ್ಲಾಡಿಸುತ್ತದೆ.

**[೪]ಆಧೂತಕಲ್ಪತರುವೀಥಿರತೋ ನಭಸ್ವಾ-**
**ನ್ಮಂದಾರಸಾಂದ್ರರಜಸಾ ಸುರಭೀಕೃತಾಶಃ ।**
**ಮತ್ತಾಲಿಕೋಕಿಲರುತಾನಿ ಹರನ್ಸಮಂತಾ-**
**ದಾವಾತಿ ಪಲ್ಲವಪುಟಾನಿ ಶನೈರ್ವಿಭಿಂದನ್ ॥ ೧೩೬ ॥**

ಈಕಡೆಯಲ್ಲಿ ಎಲ್ಲಾಕಡೆಯಿಂದಲೂ ಕಲ್ಪವೃಕ್ಷಗಳ ಸಾಲನ್ನು ಅಲ್ಲಾಡಿಸುತ್ತಿರುವುದೂ ಮಂದಾರಪುಷ್ಪಗಳ ದಟ್ಟವಾದ ಧೂಳಿನಿಂದ ಪರಿಮಳವಾದ ದಿಕ್ಕುಗಳುಳ್ಳುದೂ ಆದ ಗಾಳಿಯು ಮದಿಸಿದ ಭ್ರಮರಗಳ ಮತ್ತು ಕೋಗಿಲೆಗಳ ಶಬ್ದಗಳನ್ನು ತೆಗೆದುಕೊಂಡು ಮೆಲ್ಲನೆ ಚಿಗುರೆಲೆಗಳನ್ನು ಭೇದಿಸುತ್ತ ಎಲ್ಲಾಕಡೆಯಲ್ಲಿಯೂ ಬೀಸುತ್ತದೆ.

**ಧೃತಕಮಲವನೇ [೫]ವನೇ ತರಂಗಾ-**
**[೬]ನುಪರಚಯನ್ಮಕರಂದಗಂಧಬಂಧುಃ ।**
**ಅಯಮತಿಶಿಶಿರಃ ಶಿರಸ್ತರೂಣಾಂ**
**ಸಕುಸುಮಮಾಸ್ಪೃಶತೀಹ ಗಂಧವಾಹಃ ॥ ೧೩೭ ॥**

ಕಮಲವನವುಳ್ಳ ಜಲದಲ್ಲಿ ಅಲೆಗಳನ್ನುಂಟುಮಾಡಿ ಪುಷ್ಪಧೂಳಿನ ಪರಿಮಳ [illegible]ಕ್ತವೂ ಹೆಚ್ಚು ತಂಪೂ ಆದ ಈ ಗಾಳಿಯು ಇಲ್ಲಿ ವೃಕ್ಷಗಳ ಪುಷ್ಪಯುಕ್ತವಾದ [illegible]ಭಾಗವನ್ನು ಸ್ಪರ್ಶಮಾಡುತ್ತದೆ.

**[೧]ಮೃದಿತಮೃದುಲತಾಗ್ರಪಲ್ಲವೈ-**
**ರ್ವಲಯಿತನಿರ್ಝರಶೀಕರೋತ್ಕರೈಃ ।**
**ಅನುವನಮಿಹ ನೀಯತೇನಿಲೈಃ**
**ಕುಸುಮರಜೋ ವಿಧುತಂ ವಿತಾನತಾಮ್ ॥ ೧೩೮ ॥**

ಇಲ್ಲಿ ಪ್ರತಿಯೊಂದು ವನದಲ್ಲಿಯೂ ಮರ್ದಿಸಲ್ಪಟ್ಟ ಕೋಮಲವಾದ ಲತೆಗಳ ಅಗ್ರಭಾಗಗಳಲ್ಲಿರುವ ತಳಿರುಗಳುಳ್ಳುವೂ ಸುತ್ತುತ್ತಿರುವ ಗಿರಿನದಿಗಳ ತುಂತುರುಗಳ ಸಮೂಹಗಳುಳ್ಳುವೂ ಆದ ಗಾಳಿಗಳು ಹರಡಿದ ಪುಷ್ಪಧೂಳಿಯನ್ನು ಆಕಾಶದಲ್ಲಿ ಮೇಲ್ಕಟ್ಟಿನಂತೆ ಮಾಡುತ್ತವೆ.

**ಚಲ[೨]ವಲಯರವೈ[೩]ರವಾತತೈ-**
**ರನುಗತನೂಪುರಹಾರಿಝಂಕೃತೈಃ ।**
**ಸುಪರಿಗಮಮಿಹಾಂಬರೇ ಚರೀ-**
**ರತ[೪]ಮತಿವರ್ತಿ ವನೇಷು ಕಿನ್ನರೈಃ ॥ ೧೩೯ ॥**

ಇಲ್ಲಿ ವನಗಳಲ್ಲಿ ಕಿನ್ನರದೇವತೆಗಳೊಡನೆ ಅನುಸರಿಸುವ ಪಾದ ಕಡಗಗಳ ಮನೋಹರವಾದ ಝಂಕಾರಶಬ್ದಗಳುಳ್ಳುವೂ ಎಲ್ಲಾಕಡೆಯಲ್ಲಿಯೂ ವಿಸ್ತಾರವೂ ಚಲಿಸುತ್ತಿರುವುವೂ ಆದ ಕಂಕಣದ ಶಬ್ದಗಳಿಂದ ಕಿನ್ನರಸ್ತ್ರೀಯರ ಅತ್ಯಧಿಕವಾದ ರತಿಕ್ರೀಡೆಯು ಚೆನ್ನಾಗಿ ಗೊತ್ತಾಗುತ್ತದೆ.

**ಅತ್ರವನಾಂತೇ [೫]ಪತ್ರಿಗಣೋಯಂ**
**ಶ್ರೋತ್ರಹರಂ ನಃ ಕೂಜತಿ ಚಿತ್ರಮ್ ।**
**[೬]ಸತ್ರಿಪತಾಕಂ ನೃತ್ಯತಿ ನೂನಂ**
**ತತ್ತತನಾದೈರ್ಮತ್ತಶಿಖಂಡೀ ॥ ೧೪೦ ॥**

ಈ ವನಪ್ರದೇಶದಲ್ಲಿ ಈ ಪಕ್ಷಿಗಳ ಸಮೂಹವು ನಮ್ಮ ಕಿವಿಗಳಿಗಿಂಪಾದ ಅನೇಕಪ್ರಕಾರವಾದ ಶಬ್ದವನ್ನು ಮಾಡುತ್ತದೆ. ಮದಿಸಿರುವ ನವಿಲು ವಿಸ್ತೃತವಾದ ಶಬ್ದಗಳಿಂದ ರೆಕ್ಕೆಗಳನ್ನು ಮೇಲಕ್ಕೆ ಹರಡಿಕೊಂಡು ಚೆನ್ನಾಗಿ ನರ್ತನಮಾಡುತ್ತದೆ.

**ಅಸ್ಯ ಮಹಾದ್ರೇರನುತಟಮೇಷಾ**
**ರಾಜತಿ ನಾನಾದ್ರುಮವನರಾಜೀ ।**
**[೭]ಪಶ್ಯತಮೇನಾಮನಿಲವಿಧೂತೈ-**
**ರ್ನರ್ತಿತುಕಾಮಾಮಿವ ವಿಟಪೈಃ ಸ್ವೈಃ ॥ ೧೪೧ ॥**

ಈ ದೊಡ್ಡ ಪರ್ವತದ ತಪ್ಪಲುಗಳಲ್ಲಿ ಈ ನಾನಾಪ್ರಕಾರವಾದ ವೃಕ್ಷಗಳುಳ್ಳ ವನಗಳ ಸಾಲು ಶೋಭಿಸುತ್ತದೆ. ಗಾಳಿಯಿಂದ ಅಲ್ಲಾಡಿಸಲ್ಪಟ್ಟ ತನ್ನ ಶಾಖೆಗಳಿಂದ ನರ್ತನಮಾಡುವುದಕ್ಕೆ ಇಚ್ಛಿಸುತ್ತದೋ ಎಂಬಂತಿರುವ ಈ ವನಪಂಕ್ತಿಯನ್ನು ನೋಡಿ.

**ಕೂಜದ್ದ್ವಿರೇಫಾ ವನರಾಜಿರೇಷಾ**
**ಪ್ರೋದ್ಗಾತುಕಾಮೇವ ಮಹೀಧ್ರಮೇನಮ್ ।**
**ಪುಷ್ಪಾಂಜಲಿಂ ವಿಕ್ಷಿಪತೀವ ವಿಷ್ವ-**
**ಗ್ವಿಕೀರ್ಣಮಾಣೈಃ ಸುಮನಃ[೮]ಪ್ರತಾನೈಃ ॥ ೧೪೨ ॥**

ಈ ಪರ್ವತವನ್ನು ಸ್ತೋತ್ರಮಾಡಬೇಕೆಂಬ ಇಚ್ಛೆಯುಳ್ಳಂತಿರುವುದೂ ಶಬ್ದ ಮಾಡುತ್ತಿರುವ ಭ್ರಮರಗಳುಳ್ಳುದೂ ಆದ ಈ ವನಪಂಕ್ತಿಯು ಸುತ್ತಲೂ ಚೆಲ್ಲುತ್ತಿರುವ ವಿಸ್ತಾರವಾದ ಪುಷ್ಪಗಳಿಂದ ಪುಷ್ಪಾಂಜಲಿಯನ್ನು ಎರಚುತ್ತದೆಯೋ ಎಂಬಂತಿದೆ.

[illegible] ೨ ಕಂಪಯತಿ, ಧುನಾತೀತ್ಯಪಿ ಪಾಠಃ. ೩ ಪಾದಪಾನಾಂ. ೪ ಆಸಮಂತಾತ್ಕಂಪಿತಾಃ. ೫ [illegible] ೬ ಕುರ್ವನ್.

೧ ಮರ್ದಿತಃ. ೨ ಕಟಕಃ. ೩ ಆವಸಮಂತಾದ್ವಿಸ್ತೃತೈಃ. ೪ ಅತಿಮಾತ್ರಂ ವರ್ತನಂ ಯಸ್ಯ. ೫ ಪಕ್ಷಿಸಮೂಹಃ. ೬ ಕರಣವಿಶೇಷಯುಕ್ತಂ, ಸಬಂಧಭಾರಂ. ೭ ವಿಲೋಕಯತಂ. ೮ ವಿಸ್ತಾರೈಃ.

ವನದ್ರುಮಾಃ ಷಟ್ಪದಚೌರಬೃಂದ್ಯೈ-
ರ್ವಿಲುಪ್ಯಮಾನಪ್ರಸವಾರ್ಘಸಾರಾಃ ।
[೧]ಚೋಕೂಯಮಾನಾ ಇವ ಭಾಂತ್ಯಮುಷ್ಮಿ-
ನ್ನಮುಚ್ಚರತ್ಕೋಕಿಲಕೂಜಿತೇನ ॥ ೧೪೩ ॥

ಈ ಪರ್ವತದಲ್ಲಿ ಭ್ರಮರಗಳೆಂಬ ಕಳ್ಳರ ಗುಂಪುಗಳಿಂದ ಅಪಹರಿಸಲ್ಪಟ್ಟ ಪುಷ್ಪಗಳಿಂದ ಶ್ರೇಷ್ಠವಾದ ದ್ರವ್ಯವುಳ್ಳ ವನದ ವೃಕ್ಷಗಳು ಹಾರಾಡುತ್ತಿರುವ ಕೋಗಿಲೆಗಳ ಶಬ್ದದಿಂದ ಗಟ್ಟಿಯಾಗಿ ಶಬ್ದಮಾಡುತ್ತವೆಯೋ ಎಂಬಂತೆ ಶೋಭಿಸುತ್ತವೆ.

ಮಹಾದ್ರೇರಮುಷ್ಯ ಸ್ಥಲೀಃ [೨]ಕಾಲಧೌತೀ-
ರುಪೇತ್ಯ ಸ್ಫುಟಂ ನೃತ್ಯತಾಂ ಬರ್ಹಿಣಾನಾಮ್ ।
ಪ್ರತಿಚ್ಛಾಯಯಾ ತನ್ಯತೇ ವ್ಯಕ್ತಮಸ್ಮಿ-
ನ್ನಮುತ್ಫುಲ್ಲನೀಲಾಬ್ಜ[೩]ಖಂಡಸ್ಯ ಲಕ್ಷ್ಮೀಃ ॥ ೧೪೪ ॥

ಈ ದೊಡ್ಡ ಪರ್ವತದ ಸುವರ್ಣಮಯವಾದ ಸ್ಥಳಗಳನ್ನು ಹೊಂದಿ ವ್ಯಕ್ತವಾಗಿ ನರ್ತನಮಾಡುತ್ತಿರುವ ನವಿಲುಗಳ ಪ್ರತಿಬಿಂಬವು ಈ ಪರ್ವತದಲ್ಲಿ ಅರಳಿದ ಕನ್ನೈದಿಲೆಯ ತುಂಡಿನ ಶೋಭೆಯನ್ನು ವಿಸ್ತರಿಸುತ್ತದೆ.

[೪]ಅತುಲಿತಮಹಿಮಾ ಹಿಮಾವದಾತ-
ದ್ಯುತಿರನತಿಕ್ರಮಣೀಯಪುಣ್ಯಮೂರ್ತಿಃ ।
ರಜತಗಿರಿರಯಂ [೫]ವಿಲಂಘಿತಾಬ್ಧಿಃ
ಸುರಸರಿದೋಘ ಇವಾವಭಾತಿ ಪೃಥ್ವ್ಯಾಮ್ ॥ ೧೪೫ ॥

ಉಪಮಾರಹಿತವಾದ ಮಹಿಮೆಯುಳ್ಳುದೂ ಹಿಮದಂತೆ ಶುಭ್ರವಾದ ಕಾಂತಿಯುಳ್ಳುದೂ ಉಲ್ಲಂಘಿಸುವುದಕ್ಕಾಗದಿರುವ ಪುಣ್ಯಕರವಾದ ಆಕಾರವುಳ್ಳುದೂ ಪೂರ್ವಾಪರಭಾಗಗಳಿಂದ ಲವಣಸಮುದ್ರವನ್ನು ಮೀರಿರುವುದೂ ಆದ ಈ ಬೆಳ್ಳಿಯ ಬೆಟ್ಟವು ಗಂಗಾನದಿಯ ಪ್ರವಾಹದಂತೆ ಪೃಥ್ವಿಯಲ್ಲಿ ಶೋಭಿಸುತ್ತದೆ.

ಅಸ್ಯ ಮಹಾದ್ರೇರನುತಟಮುಚ್ಚೈಃ
ಪ್ರೇಕ್ಷ್ಯ ವಿನೀಲಾಮುಪವನರಾಜೀಮ್ ।
ನೃತ್ಯತಿ ಹೃಷ್ಟೋ ಜಲದವಿಶಂಕೀ
ಬರ್ಹಿಗಣೋಯಂ ವಿರಚಿತಬರ್ಹಃ ॥ ೧೪೬ ॥

ಈ ದೊಡ್ಡ ಪರ್ವತದ ತಪ್ಪಲುಗಳಲ್ಲಿ ಕಪ್ಪಾಗಿರುವ ಉದ್ಯಾನಗಳ ಸಾಲನ್ನು ಚೆನ್ನಾಗಿ ನೋಡಿ ಮೇಘವೆಂದು ಸಂದೇಹಪಟ್ಟು ಸಂತುಷ್ಟವಾದ ಈ ನವಿಲು ತನ್ನ ರೆಕ್ಕೆಗಳನ್ನು ಹರಡಿ ನರ್ತನಮಾಡುತ್ತದೆ.

ಅಸ್ಯಾನುಸಾನು ಸುರಪನ್ನಗಖೇಚರಾಣಾ-
[೬]ಮಾಕ್ರೀಡನಾನ್ಯುಪವನಾನಿ ವಿಭಾಂತ್ಯಮೂನಿ ।
ನಾನಾಲತಾಲಯಸರಃ[೭]ಸಿಕತೋಚ್ಚಯಾನಿ
ನಿತ್ಯಪ್ರವಾಲಕುಸುಮೋಜ್ಜ್ವಲಪಾದಪಾನಿ ॥ ೧೪೭ ॥

ಈ ಪರ್ವತದ ತಪ್ಪಲಿನಲ್ಲಿ ದೇವತೆಗಳ ನಾಗದೇವತೆಗಳ ಮತ್ತು ವಿದ್ಯಾಧರರ ಕ್ರೀಡೆಗಳುಳ್ಳುದೂ ಅನೇಕ ಲತಾಮಂಟಪಗಳೂ ಸರೋವರಗಳೂ ಮರಳಿನ ರಾಶಿಗಳೂ ಉಳ್ಳುವೂ ಯಾವಾಗಲೂ ತಳಿರುಗಳಿಂದಲೂ ಪುಷ್ಪಗಳಿಂದಲೂ ಪ್ರಕಾಶಮಾನವಾದ ವೃಕ್ಷಗಳುಳ್ಳುವೂ ಆದ ಈ ಉದ್ಯಾನಗಳು ಶೋಭಿಸುತ್ತವೆ.

೧ ಭೃಶಂ ಧ್ವನಂತಃ. ೨ ಕಲಧೌತಮಯೀಃ. ೩ ಷಂಡಸ್ಯೇತ್ಯಪಿ ಪಾಠಃ. ೪ ಅನುಪಮಃ. ೫ ಪೂರ್ವಾಪರಕೋಟಿಭ್ಯಾಂ ಲಂಘಿತಾಬ್ಧಿಃ. ೬ ಆ ಸಮಂತಾತ್ಕ್ರೀಡನಂ ಯೇಷಾಂ ತಾನಿ. ೭ ಪುಲಿನಾನಿ.

ಅಸ್ಯ ಮಹಾದ್ರೇರುಪತಟ[೧]ಮ್ಯುಚ್ಛ-
[೨]ನ್ಮೂರ್ಚ್ಛತಿ ನಾನಾಮಣಿಕಿರಣೌಘೈಃ ।
ಚಿತ್ರಿತಮೂರ್ತಿ[೩]ರ್ವಿಯತಿ [೪]ಪತಂಗ-
[೫]ಶ್ಚಿತ್ರಪತಂಗಚ್ಛವಿಮಿಹ ಧತ್ತೇ ॥ ೧೪೮ ॥

ಈ ದೊಡ್ಡ ಪರ್ವತದ ತಪ್ಪಲಿನ ಸಮೀಪವನ್ನು ಹೊಂದುತ್ತಿರುವ ಸೂರ್ಯನು ನಾನಾಪ್ರಕಾರವಾದ ರತ್ನಗಳ ಕಿರಣಗಳಿಂದ ಆಕಾಶವು ವ್ಯಾಪ್ತವಾಗುತ್ತಿರಲು ಇಲ್ಲಿ ನಾನಾಪ್ರಕಾರವಾದ ಆಕಾರವುಳ್ಳವನಾಗಿ ಚಿತ್ರದಲ್ಲಿ ಬರೆದ ಪಕ್ಷಿಯ ಕಾಂತಿಯನ್ನು ಧರಿಸುತ್ತಾನೆ.

ಮಣಿದ್ಯುತಿ[೬]ತತಾಂತರೈಃ ಪ್ರಮುದಿತೋರಗವ್ಯಂತರೈ-
ರ್ನಿರುದ್ಧರವಿಮಂಡಲೈಃ [೭]ಸ್ಥಗಿತವಿಶ್ವದಿಙ್ಮಂಡಲೈಃ ।
[೮]ಮರುದ್ಗತಿನಿವಾರಿಭಿಃ ಸುರವಧೂಮನೋಹಾರಿಭಿ-
ರ್ವಿಭಾತಿ ಶಿಖರೈರ್ಘನೈರ್ಗಿರಿರಯಂ ನಭೋಲಂಘನೈಃ ॥ ೧೪೯ ॥

ಈ ಪರ್ವತವು ರತ್ನಗಳ ಕಾಂತಿಯಿಂದ ವ್ಯಾಪ್ತವಾದ ಮಧ್ಯಪ್ರದೇಶಗಳುಳ್ಳುವೂ ಸಂತುಷ್ಟರಾದ ನಾಗದೇವತೆಗಳೂ ವ್ಯಂತರದೇವತೆಗಳೂ ಉಳ್ಳುವೂ ಸೂರ್ಯಮಂಡಲವನ್ನು ತಡೆದಿರುವುವೂ ದಿಙ್ಮಂಡಲಗಳನ್ನು ಮರೆಮಾಡಿರುವುವೂ ಮೇಘದ ಗಮನವನ್ನು ತಡೆಯುವುವೂ ದೇವಸ್ತ್ರೀಯರಿಗೆ ಮನೋಹರವೂ ಆಕಾಶವನ್ನು ಮೀರುತ್ತಿರುವುವೂ ದೃಢವೂ ಆದ ಶಿಖರಗಳಿಂದ ಶೋಭಿಸುತ್ತದೆ.

ಏಷ [೯]ಭೀಷಣೋ ಮಹಾಹಿರಸ್ಯ ಕಂದರಾದ್ಗಿರೇ-
ರೀಷ[೧೦]ದುನ್ಮಿಷನ್ಪಯೋನಿಧೇರಿವಾ[೧೧]ಯತಸ್ತಿಮಿಃ ।
[೧೨]ಕಾಷಪೇಷಿತಾಂತಿಕಸ್ಥಲಸ್ಥಗುಲ್ಮಪಾದಪೋ
[೧೩]ರೋಷಪೂತ್ಕೃತೋಷ್ಮಣಾ ದಹತ್ಯುಪಾಂತಕಾನನಮ್ ॥ ೧೫೦ ॥

ಸಮುದ್ರದಿಂದ ತಿಮಿಯೆಂಬ ದೀರ್ಘವಾದ ಮೀನಿನಂತೆ, ಈ ಪರ್ವತದ ಗುಹೆಯಿಂದ ಸ್ವಲ್ಪ ಮೇಲಕ್ಕೆ ಬರುತ್ತಿರುವುದೂ ಮೈಯನ್ನು ಉಜ್ಜುವುದರಿಂದ ಚೂರ್ಣವಾದ ಸಮೀಪಪ್ರದೇಶದಲ್ಲಿರುವ ಪೊದರುಗಳೂ ವೃಕ್ಷಗಳೂ ಉಳ್ಳುದೂ ಭಯಂಕರವೂ ಆದ ಈ ದೊಡ್ಡ ಸರ್ಪವು ಕೋಪದಿಂದ ಬಿಡುತ್ತಿರುವ ಪೂತ್ಕಾರಶಬ್ದದ ಉಷ್ಣತೆಯಿಂದ ಸಮೀಪದಲ್ಲಿರುವ ಅರಣ್ಯವನ್ನು ಸುಡುತ್ತದೆ.

ರತ್ನಾ[೧೪]ಲೋಕೈಃ [೧೫]ಕೃತಪರಭಾಗೇ ತಟಭಾಗೇ
ಸಂಧ್ಯಾರಾಗೇ ಪ್ರಸರತಿ ಸಾಂದ್ರಾ[೧೬]ರುಣರಾಗೇ ।
ರೌಪ್ಯೋ ದೀಪ್ರಾಂ [೧೭]ಪ್ರಕೃತಿವಿರುದ್ಧಾಮಪಿ ಧತ್ತೇ
ಪ್ರೇಕ್ಷ್ಯಾಂ ಲಕ್ಷ್ಮೀಂ ಕನಕಮಯಾದ್ರೇರಯಮದ್ರಿಃ ॥ ೧೫೧ ॥

ರತ್ನದ ಪ್ರಭೆಗಳಿಂದ ಮಾಡಲ್ಪಟ್ಟ ಶೋಭೆಯುಳ್ಳ ತಪ್ಪಲುಪ್ರದೇಶವುಳ್ಳುದೂ ನಿಬಿಡವಾದ ಕೆಂಪುಬಣ್ಣವುಳ್ಳುದೂ ಆದ ಸಂಜೆಗೆಂಪು ಹರಡುತ್ತಿರಲು ಈ ಬೆಳ್ಳಿಯ ಬೆಟ್ಟವು ತನ್ನ ಸ್ವಭಾವವಿರುದ್ಧವಾದರೂ ಪ್ರಕಾಶಮಾನವೂ ನೋಡುವುದಕ್ಕೆ ಯೋಗ್ಯವೂ ಆದ ಸ್ವರ್ಣಮಯವಾದ ಮೇರುಪರ್ವತದ ಶೋಭೆಯನ್ನು ಧರಿಸುತ್ತದೆ.

[೧೮]ಉದ್ಧೂತಃ ಪರುಷ[೧೯]ರಯೇಣ ವಾಯುನೋಚ್ಚೈ-
[೨೦]ರಾಬಭ್ರುರ್ನಭಸಿ ಪರಿಸ್ಫುರನ್ನನಲ್ಪಃ ।
ಅಸ್ಯಾದ್ರೇರುಪತಟಮಾಸನಃ ಪರಾಗಃ
ಸಂಧತ್ತೇ ಕನಕಕೃತಾತಪತ್ರಲೀಲಾಮ್ ॥ ೧೫೨ ॥

ಈ ಪರ್ವತದ ತಪ್ಪಲಿನ ಸಮೀಪದಲ್ಲಿ ತೀವ್ರವಾದ ವೇಗವುಳ್ಳ ಗಾಳಿಯಿಂದ ಚೆನ್ನಾಗಿ ಅಳ್ಳಾಡಿಸಲ್ಪಟ್ಟುದೂ ಸುತ್ತಲೂ ಹೊಂಬಣ್ಣವೂ ಆಕಾಶದಲ್ಲಿ ವ್ಯಾಪಿ

೧ ಗಚ್ಛನ್. ೨ ವ್ಯಾಪ್ತೇ ಸತಿ. ೩ ಆಕಾಶೇ. ೪ ಸೂರ್ಯಃ. ೫ ಚಿತ್ರಪಕ್ಷಿಚ್ಛವಿಂ.೬ ವಿಸ್ತೃತಾಂತರೈಃ. ೭ ಆಚ್ಛಾದಿತಂ. ೮ ಮೇಘಸ್ಯ. ೯ ಭಯಂಕರಃ. ೧೦ ಉದ್ಗಚ್ಛನ್. ೧೧ ದೀರ್ಘಮತ್ಸ್ಯಃ. ೧೨ ಅಂಗಕರ್ಷಣಚೂರ್ಣಿತಃ. ೧೩ ರೋಷಮುಕ್ತಶೂತ್ಕೃತ ಇತ್ಯಪಿ ಪಾಠಃ. ೧೪ ಉದ್ಯೋತೈಃ. ೧೫ ಕೃತಶೋಭೇ. ೧೬ ಸೂರ್ಯೇ. ೧೭ ಸ್ವರೂಪಸ್ಯ. ೧೮ ಕಂಪಿತಃ. ೧೯ ವೇಗೇನ. ೨೦ ಆಪಿಂಜರಃ.

ಸಿರುವುದೂ ಅಧಿಕವೂ ಆದ ಹೊನ್ನೆಯ ಪುಷ್ಪದ ಧೂಳಿಯು ಬಂಗಾರದಿಂದ ಮಾಡಿದ ಛತ್ರಿಯ ಶೋಭೆಯನ್ನು ಧರಿಸುತ್ತದೆ.

**ಏತಾಃ ಕ್ಷರನ್ಮದಜಲಾ[೧]ವಿಲಗಂಡಭಿತ್ತಿ-**
**ಕಂಡೂಯನ[೨]ವ್ಯತಿಕರಾದ್ರಿತಗಂಡಶೈಲಾಃ ।**
**[೩]ಭಗ್ನದ್ರುಮಾಸ್ತಟ[೪]ಭುವೋ [೫]ಧರಣೀಭೃತೋಽಸ್ಯ**
**ಸಂಸೂಚಯಂತಿ ಪದವೀರ್ವನವಾರಣಾನಾಮ್ ॥ ೧೫೩ ॥**

ಸ್ರವಿಸಿದ ಮದಜಲದಿಂದ ನೆನೆದಿರುವ ಕೆನ್ನೆಗಳೆಂಬ ಗೋಡೆಗಳನ್ನು ಉಜ್ಜುವುದರಿಂದ ನೆನೆದಿರುವ ಬೆಟ್ಟದಿಂದ ಜಾರಿದ ದೊಡ್ಡ ಕಲ್ಲುಗಳುಳ್ಳದೂ ಮುರಿದಿರುವ ವೃಕ್ಷಗಳುಳ್ಳದೂ ಆದ ಈ ಪರ್ವತದ ಈ ತಪ್ಪಲುಭೂಮಿಗಳು ಕಾಡಾನೆಗಳ ಮಾರ್ಗಗಳನ್ನು ಚೆನ್ನಾಗಿ ಸೂಚಿಸುತ್ತವೆ.

**ಇಹಾಮೀ ಮೃಗೌಘಾ ವನಾಂತಸ್ಥಲಾಂತೇ**
**[೬]ಸ್ಫುರದ್ಘೋಣಮಾಘ್ರಾಯ [೭]ತೃಣ್ಯಾಮಗಣ್ಯಾಮ್ ।**
**ಯದೇವಾತ್ರ [೮]ತೃಣ್ಯಂ ತೃಣಂ ಯಚ್ಚ ರುಚ್ಯಂ**
**ತದೇವಾತ್ರ ಕುಂಜೇ [೯]ಜಿಘತ್ಸಂತ್ಯಮುಷ್ಮಿನ್ ॥ ೧೫೪ ॥**

ಇಲ್ಲಿ ಈ ಜಿಂಕೆಗಳ ಸಮೂಹಗಳು ವನಮಧ್ಯಪ್ರದೇಶದಲ್ಲಿ ಮೂಗುಗಳನ್ನರಳಿಸಿ ಅಪಾರವಾದ ಹುಲ್ಲುಗಳ ಸಮೂಹವನ್ನು ಮೂಸಿನೋಡಿ ಈ ಬೆಟ್ಟದ ಪೊದೆಯಲ್ಲಿ ತಿನ್ನುವುದಕ್ಕೆ ಯೋಗ್ಯವೂ ರುಚಿಕರವೂ ಆದ ಹುಲ್ಲನ್ನೇ ತಿನ್ನಲಿಚ್ಛಿಸುತ್ತವೆ.

**ಯದ್ಯತ್ತಟಂ ಯದ್ವಿಧರತ್ನಜಾತ್ಯಾ**
**ಸಂಪ್ರಾಪ್ತನಿರ್ಮಾಣಮಿಹಾಚಲೇಂದ್ರೇ ।**
**ತತ್ತತ್ಸಮಾಸಾದ್ಯ ಮೃಗಾಸ್ತದಾಭಾಂ**
**ಭಜಂತಿ ಜಾತ್ಯಂತರತಾಮಿ[೧೦]ವೇತಾಃ ॥ ೧೫೫ ॥**

ಈ ದೊಡ್ಡ ಪರ್ವತದಲ್ಲಿ ಯಾವಯಾವ ತಪ್ಪಲುಭೂಮಿಯು ಯಾವಯಾವ ಜಾತಿಯ ರತ್ನದಿಂದ ನಿರ್ಮಿತವಾಗಿದೆಯೋ ಆಯಾ ತಪ್ಪಲುಭೂಮಿಯನ್ನು ಮೃಗಗಳು ಸೇರಿ, ಬೇರೆ ಜಾತಿಯ ಭಾವವನ್ನು ಹೊಂದಿದುವುಗಳಂತೆ, ಆ ರತ್ನದ ಕಾಂತಿಯನ್ನು ಹೊಂದುತ್ತವೆ. ಬೇರೆಬೇರೆಜಾತಿಯ ರತ್ನಗಳ ಕಾಂತಿಯಿಂದ ವ್ಯಾಪ್ತವಾದ ಮೃಗಗಳು ಬೇರೆಬೇರೆ ಜಾತಿಯ ಮೃಗಗಳಂತೆ ಕಾಣುತ್ತಿದ್ದುವೆಂದು ಭಾವವು.

**ಹರಿನ್ಮಣೀನಾಂ ವಿತತಾನ್ಮಯೂಖಾಂ-**
**ಸ್ತೃಣಾ[೧೧]ಸ್ಥಯಾಸ್ವಾದ್ಯ ಮೃಗೀಗಣೋಽಯಮ್ ।**
**[೧೨]ಅಲಬ್ಧಕಾಮಸ್ತದುಪಾಂತಭಾಂಜಿ**
**ತೃಣಾನಿ ಸತ್ಯಾನ್ಯಪಿ [೧೩]ನೋಪಯುಂಜತೇ ॥ ೧೫೬ ॥**

ಈ ಹೆಣ್ಣುಜಿಂಕೆಗಳ ಗುಂಪು ಪಚ್ಚೆಯ ರತ್ನಗಳ ವಿಸ್ತಾರವಾದ ಕಾಂತಿಗಳನ್ನು ಹುಲ್ಲೆಂಬ ಬುದ್ಧಿಯಿಂದ ಆಸ್ವಾದಿಸಿ ಇಷ್ಟವಸ್ತು(ಹುಲ್ಲು)ವನ್ನು ಹೊಂದದಿರುವುದರಿಂದ ಯಥಾರ್ಥವಾದ ಹುಲ್ಲುಗಳನ್ನೂ ತಿನ್ನುವುದಿಲ್ಲ.

**ಗಾಯಂತೀನಾಂ ಕಿನ್ನರೀಣಾಂ ವನಾಂತೇ**
**ಶೃಣ್ವದ್ಗೀತಂ [೧೪]ಹಾರಿಣಂ [೧೫]ಹಾರಿಯೂಥಮ್ ।**
**ಅರ್ಧಗ್ರಸ್ತೋತ್ಸೃಷ್ಟನಿರ್ಯತ್ತೃಣಾಗ್ರ**
**[೧೬]ಗ್ರಾಸಂ ಕಿಂಚಿನ್ಮೀಲಿತಾಕ್ಷಂ ತದಾಸ್ತೇ ॥ ೧೫೭ ॥**

ವನಮಧ್ಯಪ್ರದೇಶದಲ್ಲಿ ಗಾನಮಾಡುತ್ತಿರುವ ಕಿನ್ನರದೇವಸ್ತ್ರೀಯರ ಮನೋಹರವಾದ ಗಾನವನ್ನು ಕೇಳುತ್ತಿರುವ ಜಿಂಕೆಗಳ ಸಮೂಹವು ಆಗ ಅರ್ಧವನ್ನು ತಿಂದು ತೆರೆದ ಬಾಯಿಯಿಂದ ಜಾರುತ್ತಿರುವ ಹುಲ್ಲಿನ ಪ್ರಥಮಕವಳವುಳ್ಳದಾಗಿ ಕಣ್ಣುಗಳನ್ನು ಸ್ವಲ್ಪ ಮುಚ್ಚಿದೆ.

೧ ಆದ್ರಿತಾ. ೨ ಸಂಬಂಧೇನ. ೩ ರುಗ್ಣ ಇತ್ಯಪಿ ಪಾಠಃ. ೪ ಭೂಮಯಃ. ೫ ಗಿರೇಃ. ೬ ಸ್ಫುರನ್ನಾಸಿಕಂ ಯಥಾತಥಾ. ೭ ತೃಣಸಂಹತಿಂ. ೮ ಭಕ್ಷಣೀಯಂ. ೯ ಅತ್ತುಮಿಚ್ಛಂತಿ. ೧೦ ಏತೇ ಇತ್ಯಪಿ ಪಾಠಃ, ಇತಾಃ ಪ್ರಾಪ್ತಾಃ. ೧೧ ಬುದ್ಧ್ಯಾ. ೧೨ ಅಪ್ರಾಪ್ತೇಷ್ಟಃ. ೧೩ ನ ಭುಂಜತ ಇತ್ಯರ್ಥಃ. ೧೪ ಹರಿಣಾನಾಮಿದಂ. ೧೫ ಮನೋಜ್ಞಂ. ೧೬ ಪ್ರಥಮಕಬಲಂ.

**[೧]ಯಾ[೨]ತ್ಯಂತರ್ಧಿಂ ಬ್ರಧ್ನಬಿಂಬೇ ಮಹೀಧ್ರ-**
**ಸ್ಯಾಸ್ಯೋತ್ಸಂಗೇ ಕಿಂ ಗತೋಽಸ್ತಂ [೩]ಪತಂಗಃ ।**
**ಇತ್ಯಾಶಂಕಾವ್ಯಾಕುಲಾಭ್ಯೇತಿ ಭೀತಿಂ**
**ಪ್ರಾಕ್ಸಾಯಾಹ್ನಾತ್ಕೋಕಕಾಂತೋಪಕಾಂತಮ್ ॥ ೧೫೮ ॥**

ಈ ಪರ್ವತದ ತಪ್ಪಲಿನಲ್ಲಿ ಸೂರ್ಯಬಿಂಬವು ಮರೆಯಾಗುತ್ತಿರಲು ''ಸೂರ್ಯನು ಅಸ್ತಮಾನನಾದನೋ'' ಎಂಬ ಸಂದೇಹದಿಂದ ವ್ಯಾಕುಲವಾದ ಹೆಣ್ಣುಚಕ್ರವಾಕಪಕ್ಷಿಯು ಸಾಯಂಕಾಲವಾಗುವುದಕ್ಕಿಂತ ಮೊದಲು ಪತಿಯ ಸಮೀಪದಲ್ಲಿ ಭೀತಿಯನ್ನು ಹೊಂದುತ್ತದೆ.

**ಸದಾ ಪ್ರಫುಲ್ಲಾ ವಿತತಾ ನಲಿನ್ಯಃ**
**ಸದಾತ್ರ ತನ್ವಂತಿ ರವಾನ[೪]ಲಿನ್ಯಃ ।**
**ಕ್ಷರನ್ಮದಾಃ ಸಂತತಮೇವ [೫]ನಾಗಾಃ**
**[೬]ಸದಾ ಚ ರಮ್ಯಾಃ [೭]ಫಲಿನೋ [೮]ವನಾಗಾಃ ॥ ೧೫೯ ॥**

ಇಲ್ಲಿ ವಿಸ್ತಾರವಾದ ಕಮಲಲತೆಗಳು ಯಾವಾಗಲೂ ವಿಕಸಿತಗಳಾಗಿರುತ್ತವೆ. ಭ್ರಮರಗಳು ಯಾವಾಗಲೂ ಶಬ್ದಗಳನ್ನು ಮಾಡುತ್ತವೆ. ಆನೆಗಳು ಯಾವಾಗಲೂ ಮದವನ್ನು ಸುರಿಯುತ್ತವೆ. ಫಲವನ್ನು ಬಿಟ್ಟಿರುವ ವನವೃಕ್ಷಗಳು ಯಾವಾಗಲೂ ರಮಣೀಯವಾಗಿವೆ.

**ಅಸ್ಯಾ[೯]ನುಸಾನು ವನರಾಜಿರಿಯಂ ವಿನೀಲಾ**
**ಧತ್ತೇ ಶ್ರಿಯಂ ನಗಪತೇಃ ಶರ[೧೦]ದಭ್ರಭಾಸಃ ।**
**[೧೧]ಶಾಟೀ [೧೨]ವಿನೀಲರುಚಿ[೧೩]ರಪ್ರತಿಪಾಂಡುಕಾಂತೇ**
**[೧೪]ರ್ನೀಲಾಂಬರಸ್ಯ ರಚಿತೇವ [೧೫]ನಿತಂಬದೇಶೇ ॥ ೧೬೦ ॥**

ಶರತ್ಕಾಲಸಂಬಂಧವಾದ ಮೇಘದ ಕಾಂತಿಯುಳ್ಳ ಈ ದೊಡ್ಡ ಪರ್ವತದ ತಪ್ಪಲಲ್ಲಿರುವ ಈ ಕಪ್ಪಾದ ವನಗಳ ಸಾಲು, ಅಸದೃಶವಾದ ಶುಭ್ರಕಾಂತಿಯುಳ್ಳ ಬಲರಾಮನ ಸೊಂಟದಲ್ಲಿ ರಚಿಸಿದ ಕಪ್ಪಾದ ಕಾಂತಿಯುಳ್ಳ ವಸ್ತ್ರದಂತೆ, ಶೋಭೆಯನ್ನು ಧರಿಸುತ್ತದೆ.

**ಬಿಭ್ರಚ್ಛ್ರೇಣೀದ್ವಿತಯವಿಭಾಗೇ ವನಷಂಡಂ**
**ಭಾತಿ ಶ್ರೀಮಾನಯ[೧೬]ಮವನೀಧ್ರೋ [೧೭]ವಿಧುವೀಧ್ರಃ ।**
**[೧೮]ವೇಗಾವಿದ್ಧಂ ರುಚಿರಸಿತಾಭ್ರೋಜ್ಜ್ವಲಮೂರ್ತಿಃ**
**ಪರ್ಯಂತಸ್ಥಂ ಘನಮಿವ [೧೯]ನೀಲಂ ಸುರದಂತೀ ॥ ೧೬೧ ॥**

ಚಂದ್ರನಂತೆ ಶುಭ್ರವೂ ಶೋಭಾಯುಕ್ತವೂ ದಕ್ಷಿಣೋತ್ತರಶ್ರೇಣಿಗಳಲ್ಲಿ ವನಸಮೂಹವನ್ನು ಧರಿಸಿರುವುದೂ ಆದ ಈ ಪರ್ವತವು ಮನೋಹರವೂ ಶುಭ್ರವೂ ಆದ ಮೇಘದಂತೆ ಪ್ರಕಾಶಮಾನವಾದ ಆಕಾರವುಳ್ಳದೂ ವೇಗದಿಂದ ಸಂಬದ್ಧವಾದ ಸಮೀಪದಲ್ಲಿರುವ ಕಪ್ಪುಮೇಘವನ್ನು ಧರಿಸಿದುದೂ ಆದ ಐರಾವತಗಜದಂತೆ, ಶೋಭಿಸುತ್ತದೆ.

**ಸುರಭಿಕುಸುಮರೇಣೂನಾಕಿರನ್ವಿಶ್ವದಿಕ್ಕಂ**
**ಪರಿಮಲಮಿಲಿತಾಲಿವ್ಯಕ್ತಝುಂಕಾರಹೃದ್ಯಃ ।**
**ಪ್ರತಿವನಮಿಹ ಶೈಲೇ ವಾತಿ ಮಂದಂ [೨೦]ನಭಸ್ವಾ-**
**[೨೧]ನ್ನತಿವಿಹಿತ[೨೨]ನಭೋಗ[೨೩]ಸ್ತ್ರೈಣಸಂಭೋಗಖೇದಃ ॥ ೧೬೨ ॥**

೧ ಸತಿ. ೨ ಪಿಧಾನಂ. ೩ ಸೂರ್ಯಃ. ೪ ಭ್ರಮರ್ಯಃ. ೫ ಕರಿಣಃ. ೬ ಸದಾತ್ರೇತ್ಯಪಿ ಪಾಠಃ. ೭ ಫಣಿನ ಇತ್ಯಪಿ ಪಾಠಃ. ೮ ವನವೃಕ್ಷಾಃ. ೯ ಸಾನೌ. ೧೦ ಮೇಘರುಚಃ. ೧೧ ವಸ್ತ್ರಂ. ೧೨ ನೀಲವರ್ಣಾಃ. ೧೩ ಅಸಮಾನಧವಲಶರೀರದೀಧಿತೇಃ. ೧೪ ಬಲಭದ್ರಸ್ಯ. ೧೫ ಜಘನೇ. ೧೬ ಗಿರಿಃ. ೧೭ ಚಂದ್ರವದ್ಧವಲಃ. ೧೮ ವೇಗೇನ ಸಂಬದ್ಧಂ. ೧೯ ನೀಲಂ ಮೇಘಂ ಬಿಭ್ರದೈರಾವತಗಜ ಇವ ಭಾತೀತಿ ಭಾವಃ. ೨೦ ವಾಯುಃ. ೨೧ ಚಿಕಿತ್ಸಿತಃ ನಿರಾಕೃತೋ ವಾ. ೨೨ ಖೇಚರಃ. ೨೩ ನಿರಾಕೃತಸ್ತ್ರೀಸಮೂಹಸಂಭೋಗಖೇದಃ.

ಪರಿಮಳವುಳ್ಳ ಪುಷ್ಪಧೂಳಿಗಳನ್ನು ಎಲ್ಲಾದಿಕ್ಕುಗಳಿಗೂ ಎರಚುತ್ತಿರುವುದೂ ಪರಿಮಳಕ್ಕೆ ಮುತ್ತಿರುವ ಭ್ರಮರಗಳ ವ್ಯಕ್ತವಾದ ಝೇಂಕಾರಶಬ್ದದಿಂದ ಮನೋಹರವೂ ಖೇಚರ ಸ್ತ್ರೀಸಮೂಹದ ಸಂಭೋಗಖೇದವನ್ನು ಹೋಗಲಾಡಿಸುವುದೂ ಆದ ಗಾಳಿಯು ಈ ಪರ್ವತದ ಪ್ರತಿಯೊಂದು ವನದಲ್ಲಿಯೂ ಮೆಲ್ಲನೆ ಬೀಸುತ್ತದೆ.

**ಸುರಯುವತಿಸಮಾಜಸ್ಯಾ[೧]ಸ್ಯ ಚ ಸ್ತ್ರೀಜನಸ್ಯ**
**[೨]ಪ್ರಕೃತಿಕೃತಮಿಯತ್ಸ್ಯಾದಂತರಂ ವ್ಯಕ್ತರೂಪಮ್ ।**
**[೩]ಸ್ತಿಮಿತನಯನ[೪]ಮೈಂದ್ರಂ ಸ್ತ್ರೈಣಮೇತತ್ತು ಲೀಲಾ-**
**ವಲಿತಲಲಿತಲೋಲಾಪಾಂಗವೀಕ್ಷಾವಿಲಾಸಮ್ ॥ ೧೬೩ ॥**

ದೇವಸ್ತ್ರೀಯರಿಗೂ ಈ ವಿಜಯಾರ್ಧಪರ್ವತದಲ್ಲಿರುವ ವಿದ್ಯಾಧರಸ್ತ್ರೀಯರಿಗೂ ಸ್ವಭಾವದಿಂದ ಮಾಡಲ್ಪಟ್ಟ ವ್ಯಕ್ತವಾದ ಭೇದವು ಇಷ್ಟು:— ಇಂದ್ರನ ಸಂಬಂಧವಾದ ಸ್ತ್ರೀಸಮೂಹವು ನಿಶ್ಚಲವಾದ ನೇತ್ರಗಳುಳ್ಳುದಾಗಿದೆ. ವಿದ್ಯಾಧರಸ್ತ್ರೀಸಮೂಹವಾದರೋ ಲೀಲೆಯಿಂದ ತಿರಿಗಿಸಲ್ಪಟ್ಟು ಮನೋಹರವೂ ಚಂಚಲವೂ ಆದ ಕಡೆಕಣ್ಣುನೋಟಗಳ ವಿಲಾಸವುಳ್ಳುದಾಗಿದೆ.

**ಅತ್ರಾಯಮುನ್ಮದಮಧುವ್ರತಸೇವ್ಯಮಾನ-**
**ಗಂಡಸ್ಥಲೋ ಗಜಪತಿರ್ವನ[೫]ಮಾಜಿಹಾನಃ ।**
**ದೃಷ್ಟ್ವಾ ಹಿರಣ್ಮಯತಟೀರ್ಗಿರಿಭರ್ತುರಸ್ಯ**
**ದಾವಾನಲ[೬]ಪ್ರತಿಭಯಾದ್ವನಮುಜ್ಜಹಾತಿ ॥ ೧೬೪ ॥**

ಇಲ್ಲಿ ಮದಿಸಿರುವ ಭ್ರಮರಗಳಿಂದ ಸೇವಿಸಲ್ಪಡುತ್ತಿರುವ ಕೆನ್ನೆಗಳುಳ್ಳುದೂ ವನಕ್ಕೆ ಬರುತ್ತಿರುವುದೂ ಆದ ಈ ಸಲಗವು ಈ ಪರ್ವತದ ಬಂಗಾರಮಯವಾದ ತಪ್ಪಲು ಪ್ರದೇಶಗಳನ್ನು ನೋಡಿ ಕಾಡುಕಿಚ್ಚಿನ ಭಯದಿಂದ ವನವನ್ನು ಬಿಡುತ್ತದೆ.

**ಅತ್ರಾನೀಲಂ ಮಣಿತಟಮುಚ್ಚೈಃ ಪಶ್ಯನ್**
**ಮೇಘಾಶಂಕೀ ನಟತಿ ಕಲಾಪೀ ಹೃಷ್ಟಃ ।**
**[೭]ಕೇಕಾಃ ಕುರ್ವನ್ವಿರಚಿತಬರ್ಹಾ[೮]ಟೋಪೋ**
**ಲೋಕ[೯]ಸ್ತತ್ತ್ವಂ ಗಣಯತಿ ನಾ[೧೦]ರ್ಥೀ ಮೂಢಃ ॥ ೧೬೫ ॥**

ಇಲ್ಲಿ ಸುತ್ತಲೂ ಕಪ್ಪಾಗಿರುವ ರತ್ನಮಯವಾದ ತಪ್ಪಲುಪ್ರದೇಶವನ್ನು ಚೆನ್ನಾಗಿ ನೋಡಿ ಮೇಘವೆಂದು ಸಂದೇಹಪಡುತ್ತಿರುವುದೂ, ಸಂತುಷ್ಟವೂ ಶಬ್ದವನ್ನು ಮಾಡುತ್ತಿರುವುದೂ ವಿಸ್ತಾರವಾಗಿ ಗರಿಗಳನ್ನು ಹರಡಿರುವುದೂ ಆದ ನವಿಲು ನರ್ತನಮಾಡುತ್ತದೆ. ನ್ಯಾಯವೇ:— ವಿಷಯಾಭಿಲಾಷೆಯುಳ್ಳ ಮೂಢಜನವು ಯಥಾರ್ಥಸ್ವರೂಪವನ್ನು ಯೋಚಿಸುವುದಿಲ್ಲ.

**ಸರಸಿ ಕಲಮಮೀ ರುವಂತಿ ಹಂಸಾ-**
**ಸ್ತರುಷು ಚ ಕೋಕಿಲಷಟ್ಪದಾಃ ಸ್ವನಂತಿ ।**
**ಫಲನಮಿತಶಿಖಾಶ್ಚ ಪಾದಪೌಘಾ-**
**[೧೧]ಶ್ಚಲವಿಟಪೈರ್ಧ್ರುವಮಾಹ್ವಯಂ[೧೨]ತ್ಯನಂಗಮ್ ॥ ೧೬೬ ॥**

ಈ ಹಂಸಪಕ್ಷಿಗಳು ಸರೋವರದಲ್ಲಿ ಮಧುರವಾಗಿ ಶಬ್ದಮಾಡುತ್ತವೆ. ಕೋಗಿಲೆಗಳೂ ಭ್ರಮರಗಳೂ ಮರಗಳಲ್ಲಿ ಧ್ವನಿಮಾಡುತ್ತವೆ. ಫಲಗಳಿಂದ ನಮ್ರವಾದ ಅಗ್ರಭಾಗಗಳುಳ್ಳ ವೃಕ್ಷಗಳ ಸಮೂಹಗಳು ಚಲಿಸುತ್ತಿರುವ ಶಾಖೆಗಳಿಂದ ನಿಜವಾಗಿ ಮನ್ಮಥನನ್ನು ಕರೆಯುತ್ತವೆ.

**[೧೩]ಮಂಥರಂ ವ್ರಜತಿ ಕಾನನಮಧ್ಯಾ-**
**ದೇಷ [೧೪]ವಾಜಿವದನಃ [೧೫]ಸಹಕಾಂತಃ ।**
**ಸಂಸ್ಪೃಶಂಸ್ತನತಟಂ ದಯಿತಾಯಾ-**
**[೧೬]ಸ್ತತ್ಸುಖಾನುಭವಮೀಲಿತನೇತ್ರಃ ॥ ೧೬೭ ॥**

ಪತ್ನೀಸಹಿತನೂ ಪತ್ನಿಯ ಕುಚಗಳನ್ನು ಸ್ಪರ್ಶಿಸಿ ಆ ಸ್ತನಸ್ಪರ್ಶದಿಂದುಂಟಾದ ಸುಖಾನುಭವದಿಂದ ಕಣ್ಣುಗಳನ್ನು ಮುಚ್ಚಿದವನೂ ಆದ ಈ ಕಿನ್ನರದೇವನು ಅರಣ್ಯಮಧ್ಯದಿಂದ ಮೆಲ್ಲನೆ ಹೋಗುತ್ತಾನೆ.

**ಏಷ ಸಿಂಹಚಮರೀಮೃಗಕೋಟೀಃ**
**ಸಾನುಭಿರ್ವಹತಿ ನಿರ್ಮಲಮೂರ್ತಿಃ ।**
**[೧]ಸಂತತೀರಿವ ಯಶೋ[೨]ವಿಸರಸ್ಯ**
**ಸ್ವಸ್ಯ [೩]ಲೋಧ್ರಧವಲಾ ರಜತಾದ್ರಿಃ ॥ ೧೬೮ ॥**

ನಿರ್ಮಲವಾದ ಆಕಾರವುಳ್ಳ ಈ ವಿಜಯಾರ್ಧಪರ್ವತವು, ಹರಡುತ್ತಿರುವ ತನ್ನ ಯಶಸ್ಸಿನ ಲೋಧ್ರಪುಷ್ಪದಂತೆ ಶುಭ್ರವಾದ ಪುತ್ರಿಯರನ್ನು ಧರಿಸುವಂತೆ, ತನ್ನ ತಪ್ಪಲುಗಳಿಂದ ಸಿಂಹಗಳ ಸಮೂಹವನ್ನೂ ಚಮರೀಮೃಗಗಳ ಸಮೂಹವನ್ನೂ ಧರಿಸುತ್ತದೆ.

**ಯಾಸ್ಯ ಸಾನುಷು ಧೃತಿರ್ವಿಬುಧಾನಾಂ**
**[೪]ರಾಜತೇಷು [೫]ವನಿತಾನುಗತಾನಾಮ್ ।**
**ಸಾ ನ [೬]ನಾಕವಸತೌ ನ ಹಿಮಾದ್ರೌ**
**ನಾಪಿ ಮಂದರಗಿರೇಸ್ತಟಭಾಗೇ ॥ ೧೬೯ ॥**

ಈ ವಿಜಯಾರ್ಧಪರ್ವತದ ಬೆಳ್ಳಿಯ ಮಯವಾದ ತಪ್ಪಲುಪ್ರದೇಶಗಳಲ್ಲಿ ಪತ್ನೀಸಹಿತರಾದ ದೇವತೆಗಳಿಗೆ ಯಾವ ಸಂತೋಷವುಂಟಾಗುತ್ತಿದೆಯೋ ಆ ಸಂತೋಷವು ಸ್ವರ್ಗವಾಸದಲ್ಲಿಯೂ ಉಂಟಾಗುವುದಿಲ್ಲ. ಹಿಮವತ್ಪರ್ವತದಲ್ಲಿಯೂ ಉಂಟಾಗುವುದಿಲ್ಲ. ಮಹಾಮೇರುಪರ್ವತದ ತಪ್ಪಲುಪ್ರದೇಶದಲ್ಲಿಯೂ ಉಂಟಾಗುವುದಿಲ್ಲ.

**[೭]ಗಂಡೋಪಲಂ ವನಕರೀಂದ್ರಕಪೋಲ[೮]ಕಾಷ-**
**ಸಂಕ್ರಾಂತದಾನಸಲಿಲ[೯]ಪ್ಲುತಮತ್ರ ಶೈಲೇ ।**
**ಪಶ್ಯನ್ನಯಂ [೧೦]ದ್ವಿಪವಿಶಂಕಿಮನಾ ಮೃಗೇಂದ್ರೋ**
**ಭೂಯೋ[೧೧]ಭಿಹಂತಿ ನಖರೈರ್ವಿಲಿಖತ್ಯುಪಾಂತಮ್ ॥ ೧೭೦ ॥**

ಈ ಪರ್ವತದಲ್ಲಿ ದೊಡ್ಡ ಕಾಡಾನೆಯ ಕೆನ್ನೆಗಳ ಉಜ್ಜುವಿಕೆಯಿಂದ ಸಂಬಂಧಿಸಿದ ಮದಜಲದಿಂದ ನೆನೆದಿರುವ ದೊಡ್ಡ ಕಲ್ಲನ್ನು ನೋಡಿ ಆನೆಯೆಂದು ಮನಸ್ಸಿನಲ್ಲಿ ಸಂದೇಹಪಡುತ್ತಿರುವ ಈ ಸಿಂಹವು ಆ ಕಲ್ಲಿನ ಸಮೀಪಪ್ರದೇಶವನ್ನು ಹೊಡೆಯುತ್ತದೆ. ಪುನಃ ಉಗುರುಗಳಿಂದ ಪರಚುತ್ತದೆ.

**ಸಿಂಹೋಯಮತ್ರ [೧೨]ಗಹನೇ [೧೩]ಶನಕೈರ್ವಿಬುದ್ಧೋ**
**ವ್ಯಾಜೃಂಭತೇ ಶಿಖರಮುತ್ಪತಿತುಂ ಕೃತೇಚ್ಛಃ ।**
**ತನ್ವನ್ಗಿರೇ[೧೪]ರಧಿಗುಹಾಮುಖಮಟ್ಟಹಾಸ-**
**ಲಕ್ಷ್ಮೀಂ ಶರಚ್ಛಶಿಧರಾಮಲದೇಹಕಾಂತಿಃ ॥ ೧೭೧ ॥**

ಈ ಅರಣ್ಯದಲ್ಲಿ ಮೆಲ್ಲನೆ ಎಚ್ಚತ್ತಿರುವುದೂ ಶಿಖರಕ್ಕೆ ಹಾರುವುದಕ್ಕೋಸ್ಕರ ಇಚ್ಛೆಯನ್ನು ಮಾಡಿರುವುದೂ ಶರತ್ಕಾಲದ ಚಂದ್ರನಂತೆ ನಿರ್ಮಲವಾದ ಶರೀರಕಾಂತಿಯುಳ್ಳುದೂ ಪರ್ವತದ ಗುಹೆಗಳ ಬಾಗಿಲಲ್ಲಿ ಅಟ್ಟಹಾಸವನ್ನು ಮಾಡುತ್ತಿರುವುದೂ ಆದ ಈ ಸಿಂಹವು ಆಕಳಿಸುತ್ತದೆ.

**[೧೫]ರಂಧ್ರಾದದ್ರೇರಯಮಜಗರಃ [೧೬]ಸಾಮಿಕರ್ಷನ್ಸ್ವಮಂಗಂ**
**ಪುಂಜೀಭೂತೋ [೧೭]ಗುರುರಿವ ಗಿರೇರಾಂತ್ರಭಾರೋ [೧೮]ನಿಕುಂಜೇ ।**
**ರುದ್ಧಶ್ವಾಸಂ ವದನಕುಹರಂ [೧೯]ವ್ಯಾದದಾ[೨೦]ತ್ಯಾಪತದ್ಭಿ-**
**ರ್ವನ್ಯೈಃ ಸತ್ತ್ವೈಃ ಕಿಲ ಬಿಲಧಿಯಾ ಕ್ಷುತ್ಪ್ರತೀಕಾರಮಿಚ್ಛುಃ ॥ ೧೭೨ ॥**

೧ ವಿಜಯಾರ್ಧಗಿರಿಸಂಬಂಧಿನಃ. ೨ ಸ್ವಭಾವವಿಹಿತಂ. ೩ ಸ್ಥಿರಂ. ೪ ಇಂದ್ರಸಂಬಂಧಿ. ೫ ಆಗಚ್ಛನ್. ೬ ಭೀತೇಃ. ೭ ಕೇಕಾಮಿತ್ಯಪಿ ಪಾಠಃ. ೮ ವಿಸ್ತಾರಃ. ೯ ಸ್ವರೂಪಂ. ೧೦ ವಿಷಯಾರ್ಥೀ. ೧೧ ಚಲವಿಟಪಾ ಇತ್ಯಪಿ ಪಾಠಃ. ೧೨ ಸ್ಮರಂ. ೧೩ ಮಂದಂ. ೧೪ ಕಿನ್ನರಃ. ೧೫ ಸ್ತ್ರೀಸಹಿತಃ. ೧೬ ಸ್ತನಸ್ಪರ್ಶಜಸುಖಸ್ಯ.

೧ ಪುತ್ರೀರಿವ. ೨ ಪ್ರಸರಸ್ಯ. ೩ ಲೋಧ್ರಪುಷ್ಪವದ್ಧವಲಾಃ. ೪ ರಜತಮಯೇಷು. ೫ ಸ್ತ್ರೀಸಹಿತಾನಾಂ. ೬ ಸ್ವರ್ಗಾಲಯೇ. ೭ ಸ್ಥೂಲಪಾಷಾಣಂ. ೮ ಕರ್ಷಣಂ. ೯ ಆರ್ದ್ರಿತಂ. ೧೦ ಗಜ ಇತಿ ವಿಶಂಕಿ. ೧೧ ತಾಡಯತಿ. ೧೨ ವನೇ. ೧೩ ಶನೈಃ. ೧೪ ಗುಹಾಮುಖೇ. ೧೫ ಗುಹಾವಿವರಾತ್. ೧೬ ಅರ್ಧಂ ಗಮಯನ್. ೧೭ ಸ್ಥೂಲಃ. ೧೮ ವನೇ. ೧೯ ವಿವೃಣೋತಿ. ೨೦ ಆಗಚ್ಛದ್ಭಿಃ.

ಪರ್ವತದ ಪೊದರಿನಲ್ಲಿ ಗುಹೆಯ ಬಿಲದಿಂದ ತನ್ನ ಶರೀರವನ್ನು ಅರ್ಧ ಎಳೆದು ರಾಶಿಯಾದ ದೊಡ್ಡ ಪರ್ವತದ ಕರುಳುಗಳ ಸಮೂಹದಂತಿರುವ ಈ ದಾಸರಹಾವು ಬಿಲವೆಂಬ ಬುದ್ಧಿಯಿಂದ ಬರುತ್ತಿರುವ ಅರಣ್ಯಪ್ರಾಣಿಗಳಿಂದ ಹಸಿವೆಯ ಪ್ರತೀಕಾರ(ಆಹಾರ)ವನ್ನಿಚ್ಛಿಸುವುದಾಗಿ ಉಸಿರನ್ನು ತಡೆದು ಬಾಯಿಯನ್ನು ತೆರೆಯುತ್ತದೆ.

ಅಯಂ ಜಲನಿಧೇರ್ಜಲಂ ಸ್ಪೃಶತಿ ಸಾನುಭಿರ್ವಾರಿಧಿ-
ಸ್ತಟಾನಿ ಶಿಶಿರೀಕರೋತಿ ಗಿರಿಭರ್ತುರಸ್ಯಾನ್ವಹಮ್ ।
ಮರುದ್ವಿಧುತವೀಚಿಶೀಕರ[೧]ಕರೈರಜಸ್ರೋತ್ಥಿತೈ-
ರ್ವಣಾ[೨]ನುಪಗತಂ ಜನಂ ಶಿಶಿರಯತ್ಯ[೩]ನುಷ್ಣಾಶಯಃ ॥ ೧೭೩ ॥

ಈ ಪರ್ವತವು ತಪ್ಪಲುಗಳಿಂದ ಸಮುದ್ರದ ಜಲವನ್ನು ಸ್ಪರ್ಶಮಾಡುತ್ತದೆ. ಸಮುದ್ರವು ಯಾವಾಗಲೂ ಏಳುತ್ತಿರುವ ಮತ್ತು ಗಾಳಿಯಿಂದ ಕೊಡಹಲ್ಪಟ್ಟ ಅಲೆಗಳೆಂಬ ತಣ್ಣಗಿರುವ ಕೈಗಳಿಂದ ಈ ಪರ್ವತದ ತಪ್ಪಲುಗಳನ್ನು ಯಾವಾಗಲೂ ತಂಪುಮಾಡುತ್ತದೆ. ನ್ಯಾಯವೇ:— ಶಾಂತವಾದ ಹೃದಯವುಳ್ಳ ಮಹಾಪುರುಷನು ತನ್ನನ್ನು ಹೊಂದಿದ ಜನವನ್ನು ಶಾಂತಪಡಿಸುತ್ತಾನೆ.

ಗಂಗಾಸಿಂಧೂ ಹೃದಯಮಿವಾಸ್ಯ ಸ್ಫುಟಮದ್ರೇ-
ರ್ಭಿತ್ವಾ[೪]ಯಾತಾಂ ರಸಿಕತಯಾಮೂ ತಟಭಾಗಮ್ ।
ಸ್ಪೃಷ್ಟ್ವಾ ಸ್ಪೃಷ್ಟ್ವಾ ಪವನವಿಧೂತೋರ್ಮಿಕರೈಃ ಸ್ವೈ-
ರ್ಭೇದ್ಯಂ ಸ್ತ್ರೀಣಾಂ ನನು ಮಹತಾಮಪ್ಯುರುಚೇತಃ ॥ ೧೭೪ ॥

ಈ ಗಂಗಾಸಿಂಧುನದಿಗಳು ರಸಿಕಭಾವದಿಂದ ಈ ವಿಜಯಾರ್ಧಪರ್ವತದ ಹೃದಯದಂತಿರುವ ಮಧ್ಯಭಾಗವನ್ನು ಚೆನ್ನಾಗಿ ಭೇದಿಸಿ ಗಾಳಿಯಿಂದ ಕಂಪಿಸಲ್ಪಟ್ಟ ತಮ್ಮ ಅಲೆಗಳೆಂಬ ಕೈಗಳಿಂದ ತಪ್ಪಲುಪ್ರದೇಶವನ್ನು ಮುಟ್ಟಿಮುಟ್ಟಿ ಹೋದುವು. ಮಹಾತ್ಮರ ದೊಡ್ಡ ಮನಸ್ಸನ್ನು ಕೂಡ ಸ್ತ್ರೀಯರು ಭೇದಿಸುತ್ತಾರಲ್ಲವೇ ?

ಸಾನೂನಸ್ಯ ದ್ರುತಮುಪಯಾಂತೀ [೫]ಘನಸಾರಾನ್
[೬]ಸಾರಾಸಾರಾ [೭]ಜಲದಘಟೇಯಂ [೮]ಸಮಸಾರಾನ್ ।
[೯]ತಾರಾತಾರಾ ಧರಣಿಧರಸ್ಯ [೧೦]ಸ್ವರಸಾರಾ
ಸಾರಾದ್ವ್ಯಕ್ತಿಂ ಮುಹುರುಪಯಾತಿ [೧೧]ಸ್ತನಿತೇನ ॥ ೧೭೫ ॥

ಸಮಾನವಾದ ಸ್ಥಿರಾವಯವಗಳುಳ್ಳುದೂ ಹೆಚ್ಚು ಬಲವುಳ್ಳುದೂ ಆದ ಇದರ ತಪ್ಪಲುಗಳನ್ನು ಶೀಘ್ರವಾಗಿ ಹೊಂದುವುದೂ ಹೆಚ್ಚು ವೇಗದಿಂದ ವರ್ಷಿಸುವುದೂ ಅತ್ಯಂತ ನಿರ್ಮಲವೂ ಉತ್ಕೃಷ್ಟವಾದ ಶಬ್ದವುಳ್ಳುದೂ ಆದ ಈ ಮೇಘಗಳ ಸಮೂಹವು ಗರ್ಜನೆಯಿಂದ ಬಾರಿಬಾರಿಗೂ ಸಮೀಪದಲ್ಲಿ ಕಾಣಿಸಿಕೊಳ್ಳುತ್ತದೆ.

[೧೨]ಸಾರಾಸಾರಾ ಸಾರಸಮಾಲಾ ಸರಸೀಯಂ
ಸಾರಂ ಕೂಜತ್ಯತ್ರ ವನಾಂತೇ [೧೩]ಸುರಕಾಂತೇ ।
[೧೪]ಸಾರಾಸಾರಾ ನೀರದಮಾಲಾ ನಭಸೀಯಂ
ತಾರಂ [೧೫]ಮಂದ್ರಂ ನಿಸ್ವನತೀತಃ [೧೬]ಸ್ವನಸಾರಾ ॥ ೧೭೬ ॥

ದೇವತೆಗಳಿಂದ ಮನೋಹರವಾದ ಈ ಅರಣ್ಯಪ್ರದೇಶದಲ್ಲಿ ಹೋಗಿಬರುತ್ತಿರುವ ಈ ಸಾರಸಪಕ್ಷಿಗಳ ಸಮೂಹವು ಸರೋವರದಲ್ಲಿ ಮಧುರವಾಗಿ ಶಬ್ದ ಮಾಡುತ್ತಿದೆ. ಈಕಡೆ ಆಕಾಶದಲ್ಲಿ ಶ್ರೇಷ್ಠವಾದ ಶಬ್ದವುಳ್ಳ ಈ ಅತ್ಯುತ್ಕೃಷ್ಟವಾದ ಮೇಘಪಂಕ್ತಿಯು ಗಟ್ಟಿಯಾಗಿಯೂ ಗಂಭೀರವಾಗಿಯೂ ಶಬ್ದಮಾಡುತ್ತದೆ.

೧ ಶತ್ರೈರಿತ್ಯಪಿ ಪಾಠಃ. ೨ ಆಶ್ರಿತಂ. ೩ ಶೈತ್ಯಹೃದಯಃ. ೪ ಆಗಚ್ಛತಾಂ. ೫ ಅಧಿಕಬಲಾನ್. ೬ ಉತ್ಕೃಷ್ಟವೇಗವರ್ಷವತೀ. ೭ ಮೇಘಸಮೂಹಃ. ೮ ಸಮಾನಸ್ಥಿರಾವಯವಾನ್. ೯ ಅತಿನಿರ್ಮಲಾ. ೧೦ ಶಬ್ದೇನೋತ್ಕೃಷ್ಟಾ. ೧೧ ಗರ್ಜಿತೇನ. ೧೨ ಗಮನಾಗಮನವತೀ. ೧೩ ಅಮರೈರ್ಮನೋಹರೇ. ೧೪ ಅಧಿಕೋತ್ಕೃಷ್ಟಾ, ಉತ್ಕೃಷ್ಟವೇಗವತೀ ವಾ. ೧೫ ಗಂಭೀರಂ. ೧೬ ನಿರ್ಘೋಷೇಣೋತ್ಕೃಷ್ಟಾ.

ಶ್ರಿತ್ವಾಸ್ಯಾದ್ರೇಃ [೧]ಸಾರಮಣೀದ್ಧಂ ತಟಭಾಗಂ
[೨]ಸಾರಂ [೩]ತಾರಂ [೪]ಚಾರುತರಾಗಂ ರಮಣೀಯಮ್ ।
ಸಂಭೋಗಾಂತೇ ಗಾಯತಿ ಕಾಂತಂ [೫]ರಮಯಂತೀ
ಸಾ[೬]ರಂತಾರಂ [೭]ಚಾರುತರಾಗಂ [೮]ರಮಣೀಯಮ್ ॥ ೧೭೭ ॥

ಈ ಪರ್ವತದ ಉತ್ಕೃಷ್ಟವಾದ ರತ್ನಗಳಿಂದ ನಿರ್ಮಿತವೂ ಅತಿಮನೋಹರವಾದ ವೃಕ್ಷಗಳುಳ್ಳುದೂ ರಮಣೀಯವೂ ಆದ ತಪ್ಪಲುಪ್ರದೇಶವನ್ನು ಹೊಂದಿ ಆ ಈ ಸ್ತ್ರೀಯು ಸ್ಥಿರನೂ ಗಂಭೀರನೂ ಸಂಭೋಗವಾದ ತರುವಾಯ ಶಬ್ದವನ್ನು ಮಾಡುತ್ತಿರುವವನೂ ರತಿಕ್ರೀಡಾಸ್ವಭಾವವುಳ್ಳವನೂ ಆದ ಪತಿಯನ್ನು ಪ್ರೀತಿಪಡಿಸುವವಳಾಗಿ ಗಾನಮಾಡುತ್ತಾಳೆ.

ಇಹ ಖಚರವಧೂರ್ನಿತಂಬದೇಶೇ
ಲಲಿತಲತಾಲಯಸಂಶ್ರಿತಾಃ [೯]ಸಹೇಶಾಃ ।
ಪ್ರಣಯಪರವಶಾಃ ಸಮಿದ್ಧದೀಪ್ತೀ-
ರ್ಹ್ರಿಯಮುಪಯಾಂತಿ ವಿಲೋಕ್ಯ [೧೦]ಸಿದ್ಧನಾರ್ಯಃ ॥ ೧೭೮ ॥

ಈ ತಪ್ಪಲುಪ್ರದೇಶದಲ್ಲಿ ಮನೋಹರವಾದ ಲತಾಮಂಟಪಗಳನ್ನಾಶ್ರಯಿಸಿರುವವರೂ ಪತಿಸಹಿತರೂ ಪ್ರೀತಿಪರವಶರೂ ದೇದೀಪ್ಯಮಾನವಾದ ಕಾಂತಿಯುಳ್ಳವರೂ ಆದ ವಿದ್ಯಾಧರಸ್ತ್ರೀಯರನ್ನು ನೋಡಿ ಸಿದ್ಧರೆಂಬ ದೇವಸ್ತ್ರೀಯರು ಲಜ್ಜೆಪಡುತ್ತಾರೆ. ಸಿದ್ಧದೇವಸ್ತ್ರೀಯರಿಗಿಂತಲೂ ವಿದ್ಯಾಧರಸ್ತ್ರೀಯರು ಸುಂದರಿಯರಾಗಿದ್ದರೆಂದು ಭಾವವು.

ಶ್ರೀಮಾನಯಂ ನೃಸುರಖೇಚರಚಾರಣಾನಾಂ
ಸೇವ್ಯೋ ಜಗತ್ತ್ರಯಗುರು[೧೧]ರ್ವಿಧುವೀಧ್ರಕೀರ್ತಿಃ ।
ತುಂಗಃ ಶುಚಿ[೧೨]ರ್ಭರತಸಂಶ್ರಿತಪಾದಮೂಲಃ
ಪಾಯಾದ್ಯುವಾಂ ಪುರುರಿವಾನವಮೋ ಮಹೀಧ್ರಃ ॥ ೧೭೯ ॥

ಸಂಪತ್ತುಳ್ಳುದೂ ಮನುಷ್ಯರಿಗೂ ದೇವತೆಗಳಿಗೂ ವಿದ್ಯಾಧರರಿಗೂ ಚಾರಣರಿಗೂ ಸೇವಿಸುವುದಕ್ಕೆ ಯೋಗ್ಯವೂ ಮೂರುಲೋಕಕ್ಕೆ ಪೂಜ್ಯವೂ ಚಂದ್ರನಂತೆ ನಿರ್ಮಲವಾದ ಕೀರ್ತಿಯುಳ್ಳುದೂ ಉನ್ನತವೂ ಪರಿಶುದ್ಧವೂ ಭರತಕ್ಷೇತ್ರವನ್ನು ಹೊಂದಿದ ಪ್ರತ್ಯಂತಪರ್ವತಗಳ ಮೂಲವುಳ್ಳುದೂ, ಭರತೇಶ್ವರನಿಂದ ಸೇವಿಸಲ್ಪಟ್ಟ ಪಾದಮೂಲವುಳ್ಳವರೂ, ಸುಂದರವೂ ಆದ ಈ ಪರ್ವತವು, ವೃಷಭಸ್ವಾಮಿಯಂತೆ, ನಿಮ್ಮನ್ನು (ನಮಿವಿನಮಿಗಳನ್ನು) ಕಾಪಾಡಲಿ."

ಇತ್ಥಂ [೧೩]ಗಿರಃ ಫಣಿಪತೌ [೧೪]ಸನಯಂ ಬ್ರುವಾಣೇ
ತೌ ತಂ ಗಿರೀಂದ್ರ[೧೫]ಮಭಿನಂದ್ಯ [೧೬]ಕೃತಾವತಾರೌ ।
[೧೭]ಪ್ರಾವಿಕ್ಷತಾಂ ಸಮಮನೇನ ಪುರಂ ಪರಾರ್ಧ್ಯ-
ಮುತ್ತುಂಗಕೇತುರಥನೂಪುರಚಕ್ರವಾಲಮ್ ॥ ೧೮೦ ॥

ಈಪ್ರಕಾರವಾಗಿ ಧರಣೇಂದ್ರನು ಸಕಾರಣವಾಗಿ ವಚನಗಳನ್ನು ಹೇಳುತ್ತಿರಲು ಆ ನಮಿವಿನಮಿಕುಮಾರರು ಆ ವಿಜಯಾರ್ಧಪರ್ವತವನ್ನು ಶ್ಲಾಘಿಸಿ ಈ ಧರಣೇಂದ್ರನೊಡನೆ ವಿಮಾನದಿಂದ ಇಳಿದು ಶ್ರೇಷ್ಠವೂ ಉನ್ನತವಾದ ಧ್ವಜಗಳುಳ್ಳುದೂ ಆದ ರಥನೂಪುರಚಕ್ರವಾಲವೆಂಬ ಪಟ್ಟಣ ಪ್ರವೇಶಮಾಡಿದರು.

ತತ್ರಾಧಿರೋಪ್ಯ ಹರಿವಿಷ್ಟರಮೀಶಿತಾರೌ
ಯುಷ್ಮಾಕಮಿ[೧೮]ತ್ಯಭಿದಧತ್ಪಚರಾನ್ಸಮಸ್ತಾನ್ ।
ರಾಜ್ಯಾಭಿಷೇಕಮನಯೋಃ ಪ್ರಚಕಾರ [೧೯]ಧೀರೋ
ವಿದ್ಯಾಧರೀಕರಧೃತೈಃ ಪೃಥುಹೇಮಕುಂಭೈಃ ॥ ೧೮೧ ॥

೧ ಉತ್ಕೃಷ್ಟರತ್ನಪ್ರವೃದ್ಧಂ. ೨ ಸ್ಥಿರಂ. ೩ ಗಭೀರಂ, ಉಜ್ಜ್ವಲಂ ವಾ. ೪ ಕಾಂತತರವೃಕ್ಷಂ. ೫ ಪ್ರೀತಿಂ ನಯಂತೀ. ೬ ರತಿಕ್ರೀಡಾಶೀಲಂ. ೭ ಅಭಿಹಿತರಾಗಂ. ೮ ಸ್ತ್ರೀ. ೯ ಪ್ರಿಯತಮಸಹಿತಾಃ. ೧೦ ದೇವಭೇದಸ್ತ್ರಿಯಃ. ೧೧ ಚಂದ್ರವನ್ನಿರ್ಮಲಕೀರ್ತಿಃ. ೧೨ ಭರತಕ್ಷೇತ್ರೇ ಸಂಶ್ರಿತಪ್ರತ್ಯಂತಪರ್ವತಮೂಲಃ, ಭರತೇಶ್ವರೇಣ ಸಂಸೇವಿತಪಾದಮೂಲಃ. ೧೩ ವಚನಾನಿ ಗಿರಾವಿತ್ಯಪಿ ಪಾಠಃ. ೧೪ ಸಹೇತುಕಂ. ೧೫ ಪ್ರಶಸ್ಯ. ೧೬ ವಿಹಿತಾವತರಣೌ. ೧೭ ಪ್ರಾವಿಶತಾಂ. ೧೮ ಬ್ರುವನ್. ೧೯ ಧರಣೇಂದ್ರಃ.

ಧರಣೇಂದ್ರನು ಆ ಸ್ಥಳದಲ್ಲಿ ನಮಿವಿನಮಿಕುಮಾರರನ್ನು ಸಿಂಹಪೀಠದಲ್ಲಿ ಕುಳ್ಳಿರಿಸಿ "ನಿಮಗೆ ಅಧಿಪತಿಗಳು" ಎಂದು ವಿದ್ಯಾಧರರಿಗೆಲ್ಲ ಹೇಳಿ ವಿದ್ಯಾಧರ ಸ್ತ್ರೀಯರು ಕೈಗಳಲ್ಲಿ ಧರಿಸಿರುವ ದೊಡ್ಡ ಬಂಗಾರದ ಕುಂಭಗಳಿಂದ ಈ ನಮಿ ವಿನಮಿಕುಮಾರರಿಗೆ ರಾಜ್ಯಾಭಿಷೇಕವನ್ನು ಮಾಡಿದನು.

**ಭರ್ತಾ ನಮಿರ್ಭವತು ಸಂಪ್ರತಿ ದಕ್ಷಿಣಸ್ಯಾಃ**
**ಶ್ರೇಣ್ಯಾ ದಿವಃ ಶತಮಖೋಧಿಪತಿರ್ಯಥೈವ ।**
**ಶ್ರೇಣ್ಯಾಂ ಭವೇದ್ವಿನಮಿರಪ್ಯವನಮ್ರಮಾನೋ**
**ವಿದ್ಯಾಧರೈ[೧]ರವಹಿತೈಶ್ಚಿರಮುತ್ತರಸ್ಯಾಮ್** ॥ ೧೮೨ ॥

"ಸ್ವರ್ಗಕ್ಕೆ ದೇವೇಂದ್ರನು ಅಧಿಪತಿಯಾಗಿರುವಂತೆ, ನಮಿಕುಮಾರನು ಈಗ ದಕ್ಷಿಣಶ್ರೇಣಿಗೆ ಪ್ರಭುವಾಗಲಿ. ವಿನಮಿಕುಮಾರನೂ ಬಹುಕಾಲವರೆಗೆ ಉತ್ತರ ಶ್ರೇಣಿಯಲ್ಲಿ ಜಾಗರೂಕರಾದ ವಿದ್ಯಾಧರರಿಂದ ನಮಸ್ಕರಿಸಲ್ಪಡುವವನಾಗಿ ಪ್ರಭುವಾಗಲಿ.

**ದೇವೋ ಜಗದ್ಗುರುರಸೌ ವೃಷಭೋ[೨]ನುಮತ್ಯ**
**ಶ್ರೀಮಾನಿಮೌ [೩]ಪ್ರಹಿತವಾನ್ ಜಗತಾಂ ವಿಧಾತಾ ।**
**[೪]ತೇನಾನಯೋಃ ಖಚರಭೂಪತಯೋನುರಾಗಾ-**
**ದಾಜ್ಞಾಂ ವಹಂತು ಶಿರಸೇತ್ಯವದತ್ಫಣೀಂದ್ರಃ** ॥ ೧೮೩ ॥

ಎಲೈ ವಿದ್ಯಾಧರರಾಜರೇ ! ಜಗದ್ಗುರುವೂ ಲಕ್ಷ್ಮೀವಂತನೂ ಜಗತ್ಕರ್ತನೂ ಆದ ಈ ವೃಷಭದೇವನು ಸಮ್ಮತಿಸಿ ಇವರಿಬ್ಬರನ್ನು ಕಳುಹಿಸಿದ್ದಾನೆ. ಆದುದರಿಂದ ಇವರ ಆಜ್ಞೆಯನ್ನು ಪ್ರೀತಿಯಿಂದ ನೀವು ಮಸ್ತಕದಿಂದ ಧರಿಸಬೇಕು" ಈರೀತಿಯಾಗಿ ಧರಣೇಂದ್ರನು ಹೇಳಿದನು.

**[೫]ತತ್ಪುಣ್ಯತೋ ಗುರುನಿಯೋಗನಿರೂಪಣಾಚ್ಚ**
**ನಾಗಾಧಿಭರ್ತುರುಚಿತಾದನುಶಾಸನಾಚ್ಚ ।**
**ತೇ ತತ್ತಥೈವ ಖಚರಾಃ [೬]ಪ್ರತಿಪೇದಿರೇ ದ್ರಾ-**
**ಕ್ಕಾರ್ಯಂ ಹಿ ಸಿಧ್ಯತಿ ಮಹದ್ಭಿ[೭]ರಧಿಷ್ಠಿತಂ ಯತ್** ॥ ೧೮೪ ॥

ಆ ನಮಿವಿನಮಿಕುಮಾರರ ಪುಣ್ಯದಿಂದಲೂ ವೃಷಭಸ್ವಾಮಿಯ ಆಜ್ಞೆಯನ್ನು ತಿಳಿಸಿದುದರಿಂದಲೂ ಧರಣೇಂದ್ರನ ಉಚಿತವಾದ ಆಜ್ಞೆಯಿಂದಲೂ ಆ ವಿದ್ಯಾಧರರು "ಹಾಗೆಯೇ ಆಗಲಿ" ಎಂದು ಅಂಗೀಕರಿಸಿದರು. ಮಹಾತ್ಮರಿಂದ ಆಶ್ರಿತವಾದ ಕಾರ್ಯವು ಶೀಘ್ರವಾಗಿ ಸಿದ್ಧಿಸುತ್ತದಲ್ಲವೇ ? ಮಹಾತ್ಮರು ಮಾಡುವುದಕ್ಕೆ ತೊಡಗಿದ ಕಾರ್ಯವು ಶೀಘ್ರವಾಗಿ ಸಿದ್ಧಿಸುವುದೆಂದು ಭಾವವು.

**[೮]ಗಾಂಧಾರಪನ್ನಗಪದೋಪಪದೇ ಚ ವಿದ್ಯೇ**
**ದತ್ವಾ ಫಣಾವದಧಿಪೋ [೯]ವಿಧಿವತ್ಸ ತಾಭ್ಯಾಮ್ ।**
**ಧೀರೋ ವಿಸರ್ಜ್ಯ ನಯವಿದ್ವಿನತೌ ಕುಮಾರೌ**
**ಸ್ವಾವಾಸಮೇವ ಚ ಜಗಾಮ ಕೃತೇಷ್ಟಕಾರ್ಯಃ** ॥ ೧೮೫ ॥

ನೀತಿಯನ್ನು ತಿಳಿದವನೂ ಧೈರ್ಯಶಾಲಿಯೂ ಆದ ಆ ಧರಣೇಂದ್ರನು ಮೂಲಮಂತ್ರಸಹಿತವಾಗಿ ಗಾಂಧಾರವಿದ್ಯಾ ಪನ್ನಗವಿದ್ಯಾ ಈ ಎರಡು ವಿದ್ಯೆಗಳನ್ನು ಆ ನಮಿವಿನಮಿಕುಮಾರರಿಗೆ ಕೊಟ್ಟು ವಿನಯಪರರಾದ ಆ ಕುಮಾರರನ್ನು ಬಿಟ್ಟು ತನ್ನ ಇಷ್ಟಕಾರ್ಯಸಿದ್ಧಿಯುಳ್ಳವನಾಗಿ ತನ್ನ ವಾಸಸ್ಥಾನ(ಪಾತಾಳ)ಕ್ಕೆ ಹೋದನು.

**ಅಥ ಗತವತಿ ತಸ್ಮಿನ್ನಾಗರಾಜೇಗರಾಜೇ**
**[೧೦]ಧೃತಿಮಧಿಕಮಧತ್ತಾಂ ತೌ ಯುವಾನೌ [೧೧]ಯುವಾನೌ ।**
**ಮುಹುರುಪಹೃತನಾನಾ[೧೨]ನೂನಭೋಗೈರ್ನಭೋಗೈ-**
**[೧೩]ರ್ಮುಕುಲಿತಕರಮೌಲಿ ವ್ಯಕ್ತಮಾರಾಧ್ಯಮಾನೌ** ॥ ೧೮೬ ॥

೧ ಸಾವಧಾನ್ಯೈಃ. ೨ ಅನುಮತಿಂ ಕೃತ್ವಾ. ೩ ಪ್ರೇಷಿತವಾನ್. ೪ ಕಾರಣೇನ. ೫ ಕುಮಾರಯೋಃ ಸುಕೃತಾತ್. ೬ ಅನುಮೇನಿರೇ. ೭ ಆಶ್ರಿತಂ. ೮ ಗಾಂಧಾರವಿದ್ಯಾ ಪನ್ನಗವಿದ್ಯಾ ಚೇತಿ ದ್ವೇ ವಿದ್ಯೇ. ೯ ಮೂಲಮಂತ್ರಸಹಿತಂ. ೧೦ ಸಂತೋಷಂ. ೧೧ ಸಂಪರ್ಕಂ ಕುರ್ವಾಣೌ. ೧೨ ಸಂಪೂರ್ಣಾಃ. ೧೩ ಕುಡ್ಮಲಿತಹಸ್ತಘಟಿತಮುಕುಟಂ ಯಥಾ ತಥಾ.

ತರುವಾಯ ಆ ಧರಣೇಂದ್ರನು ಹೊರಟು ಹೋಗುತ್ತಿರಲು ವಿದ್ಯಾಧರರು ಬಾರಿಬಾರಿಗೂ ತಂದರ್ಪಿಸಿದ ನಾನಾಪ್ರಕಾರವಾದ ಸಂಪೂರ್ಣಭೋಗವಸ್ತುಗಳ ಸಂಪರ್ಕವನ್ನು ಮಾಡುವವರೂ ಮುಕುಲಿತವಾದ ಕೈಗಳಿಂದ ಕಿರೀಟವನ್ನು ಹಿಡಿದು ವ್ಯಕ್ತವಾಗಿ ಸೇವಿಸಲ್ಪಡುವವರೂ ಯುವಕರೂ ಆದ ಆ ನಮಿವಿನಮಿಕುಮಾರರು ಆ ವಿಜಯಾರ್ಧಪರ್ವತದಲ್ಲಿ ಅಧಿಕವಾದ ಸಂತೋಷವನ್ನು ಹೊಂದಿದರು.

**[೧]ನಿಯುತಿಮಿವ ಖಗಾದ್ರೇ[೨]ರ್ಮೇಖಲಾಂ ತಾಮಲಂಘ್ಯಾಂ**
**[೩]ಸುಕೃತಿಜನನಿವಾಸಾವಾಪ್ತ[೪]ನಾಕಾನುಕಾರಾಮ್ ।**
**ಜಿನಸಮವಸೃತಿಂ [೫]ವಾ ವಿಶ್ವಲೋಕಾಭಿನಂದ್ಯಾಂ**
**ನಮಿವಿನಮಿಕುಮಾರಾ[೬]ವಧ್ಯವಾತ್ತಾಮುದಾತ್ತಾಮ್** ॥ ೧೮೭ ॥

ಅದೃಷ್ಟದಂತೆ ಮೀರಲಶಕ್ಯವೂ ಶ್ರೇಷ್ಠವೂ ಪುಣ್ಯವಂತರಾದ ಜನರ ಮತ್ತು ದೇವತೆಗಳ ವಾಸದಿಂದ ಸ್ವರ್ಗದ ಸಾದೃಶ್ಯವನ್ನು ಹೊಂದಿರುವುದೂ ಜಿನೇಶ್ವರನ ಸಮವಸರಣದಂತೆ ಸಮಸ್ತ ಲೋಕಕ್ಕೂ ಆನಂದಕರವೂ ಆದ ವಿಜಯಾರ್ಧ ಪರ್ವತದ ಆ ಶ್ರೇಣಿಗಳಲ್ಲಿ ನಮಿವಿನಮಿಕುಮಾರರು ವಾಸಮಾಡಿದರು.

**ವಿದ್ಯಾಸಿದ್ಧಿಂ [೭]ವಿಧಿನಿಯಮಿತಾಂ [೮]ಮಾನಯಂತೌ ನಯಂತೌ ವಿದ್ಯಾ**
**ವೃದ್ಧೈಃ ಸಮಮಭಿಮತಾ [೯]ಮರ್ಥಸಿದ್ಧಿಂ ಪ್ರಸಿದ್ಧಿಮ್ ।**
**ವಿದ್ಯಾಧೀನಾನ್ಷಡೃತುಸುಖದಾನ್ನಿರ್ವಿಶಂತೌ ಚ ಭೋಗಾಂ-**
**ಸ್ತೌ ತತ್ರಾದ್ರೌ [೧೦]ಸ್ಥಿತಿಮಭಜತಾಂ ಖೇಚರೈಃ ಸಂವಿಭಕ್ತಾಮ್** ॥ ೧೮೮ ॥

ವಿಧಿಯಿಂದ ಮಾಡಬೇಕಾದ ವಿದ್ಯಾಸಿದ್ಧಿಯನ್ನು ಸತ್ಕರಿಸುವವರೂ ಜ್ಞಾನವೃದ್ಧರೊಡನೆ ಇಷ್ಟವಾದ ಪ್ರಯೋಜನಗಳ ಸಿದ್ಧಿಯನ್ನು ಪ್ರಸಿದ್ಧಪಡಿಸುವವರೂ ವಿದ್ಯಾಧೀನವಾಗಿ ಆರು ಋತುಗಳಲ್ಲಿಯೂ ಸುಖವನ್ನು ಕೊಡುವ ಭೋಗಗಳನ್ನು ಅನುಭವಿಸುವವರೂ ಆದ ಆ ನಮಿವಿನಮಿಕುಮಾರರು ಆ ವಿಜಯಾರ್ಧಪರ್ವತದಲ್ಲಿ ವಿದ್ಯಾಧರರಿಂದ ವಿಭಾಗಿಸಲ್ಪಟ್ಟ ಎಲ್ಲೆ(ಅವಧಿ)ಯನ್ನು ಹೊಂದಿದರು. ವಿದ್ಯಾಧರರು ವಿಭಾಗಿಸಿ ಕೊಟ್ಟ ದಕ್ಷಿಣೋತ್ತರಶ್ರೇಣಿಗಳನ್ನು ಅನುಭವಿಸುತ್ತಿದ್ದರೆಂದು ಭಾವವು.

**ಆಜ್ಞಾಮೂಹುಃ [೧೧]ಖಚರನರಪಾಃ ಸನ್ನತೈರುತ್ತಮಾಂಗೈ-**
**ರ್ಯೂನೋಃ ಸೇವಾಮನುನಯಪರಾಮೇನಯೋರಾಚರಂತಃ ।**
**ಕ್ಷೇಮೌ ಜಾತೌ ಕ್ವ ಚ ಪದಮಿದಂ ನ್ಯಕ್ಕೃತಾರಾತಿಚಕ್ರಂ**
**[೧೨]ಖೇ ಖೇಂದ್ರಾಣಾಂ ಘಟಯತಿ ನೃಣಾಂ**
**ಪುಣ್ಯಮೇವಾ[೧೩]ತ್ಮನೀನಮ್** ॥ ೧೮೯ ॥

ಯುವಕರಾದ ಈ ನಮಿವಿನಮಿಕುಮಾರರ ಸೇವೆಯನ್ನು ವಿನಯದಿಂದ ಮಾಡುತ್ತಿರುವ ವಿದ್ಯಾಧರರಾಜರು ನಮ್ರವಾದ ಮಸ್ತಕಗಳಿಂದ ಅವರ ಆಜ್ಞೆಯನ್ನು ಧರಿಸಿದರು. ಈ ಕುಮಾರರು ಎಲ್ಲಿ ಹುಟ್ಟಿದವರು ? ವಿದ್ಯಾಧರರ ಪಟ್ಟಣದಲ್ಲಿ ಶತ್ರುಸಮೂಹವನ್ನು ಕೀಳುಮಾಡಿದ ಈ ಸ್ಥಾನವೆಲ್ಲಿ ? ಮನುಷ್ಯರಿಗೆ ಪುಣ್ಯವೇ ಆತ್ಮಹಿತವಾದ ವಸ್ತುವನ್ನು ಒದಗಿಸುತ್ತದೆ.

**ನಮಿರನಮಯದುಚ್ಚೈ[೧೪]ರ್ಭೋಗಸಂಪತ್ಪ್ರತೀತಾನ್**
**ಗಗನಚರಪುರೀಂದ್ರಾನ್ದಕ್ಷಿಣಶ್ರೇಣಿಭಾಜಃ ।**
**ವಿನಮಿರಪಿ ವಿನಮ್ರಾನಾತನೋತಿ ಸ್ಮ ವಿಶ್ವಾ-**
**ನ್ಖಚರಪುರವರೇಶಾನುತ್ತರಶ್ರೇಣಿಭಾಜಃ** ॥ ೧೯೦ ॥

ನಮಿಕುಮಾರನು ಚೆನ್ನಾಗಿ ಭೋಗಸಂಪತ್ತುಗಳಿಂದ ಪ್ರಸಿದ್ಧರೂ ದಕ್ಷಿಣಶ್ರೇಣಿಯಲ್ಲಿರುವವರೂ ಆದ ವಿದ್ಯಾಧರಪಟ್ಟಣಗಳ ರಾಜರನ್ನು ನಮ್ರರನ್ನಾಗಿ ಮಾಡಿದನು. ವಶಪಡಿಸಿಕೊಂಡನೆಂದು ಭಾವವು. ವಿನಮಿಕುಮಾರನು ಉತ್ತರಶ್ರೇಣಿಯಲ್ಲಿರುವ ಎಲ್ಲಾ ವಿದ್ಯಾಧರಪಟ್ಟಣಗಳ ರಾಜರನ್ನು ನಮ್ರರನ್ನಾಗಿ(ವಶ) ಮಾಡಿದನು.

೧ ವಿಧಿಂ. ೨ ಶ್ರೇಣೀಂ. ೩ ಪುಣ್ಯವಜ್ಜನಾಃ ಪಕ್ಷೇ ಸುರಜನಾಃ. ೪ ಸ್ವರ್ಗಸಾದೃಶ್ಯಾಂ. ೫ ಇವ. ೬ ಅಧಿವಸತಃ ಸ್ಮ. ೭ ವಿಧಾನಂ. ೮ ಪೂಜಯಂತೌ. ೯ ಪ್ರಯೋಜನಸ್ಥಿತಿಂ. ೧೦ ಮರ್ಯಾದಾಂ. ೧೧ ಖಚರತನಯಾ ಇತ್ಯಪಿ ಪಾಠಃ. ೧೨ ಪತ್ತನೇ, ಖೇಟೇಂದ್ರಾಣಾಮಿತ್ಯಪಿ ಪಾಠಃ. ೧೩ ಆತ್ಮಹಿತಂ ವಸ್ತು. ೧೪ ಭೋಗಸಂಪದ್ಗತಾನ್.

ತಾವಿತ್ಥಂ ಪ್ರವಿಭಜ್ಯ ರಾಜತನಯೌ [1]ವೈದ್ಯಾಧರೀಂ ತಾಂ ಶ್ರಿಯಂ
ಭುಂಜಾನೌ ವಿಜಯಾರ್ಧಪರ್ವತತಟೇ ನಿಷ್ಕಂಟಕಂ ತಸ್ಥತುಃ ।
ಪುಣ್ಯಾದಿತ್ಯನಯೋರ್ವಿಭೂತಿರಭವ[2]ಲ್ಲೋಕೇಶಪಾದಾಶ್ರಿತೋಃ
ಪುಣ್ಯಂ [3]ತೇನ ಕುರುಧ್ವಮಭ್ಯುದಯದಾಂ ಲಕ್ಷ್ಮೀಂ [4]ಸಮಾಶಂಸವಃ
॥ ೧೯೧ ॥

ಈಪ್ರಕಾರವಾಗಿ ವಿಭಾಗಿಸಿ ಆ ವಿದ್ಯಾಧರಸಂಪತ್ತನ್ನನುಭವಿಸುತ್ತಿರುವ ಆ ರಾಜಕುಮಾರರು ವಿಜಯಾರ್ಧಪರ್ವತದ ಪ್ರದೇಶದಲ್ಲಿ ನಿಷ್ಕಂಟಕವಾಗಿದ್ದರು. ಲೋಕಾಧಿಪತಿಯಾದ ವೃಷಭಸ್ವಾಮಿಯ ಪಾದಗಳನ್ನು ಹೊಂದಿದ ಈ ರಾಜ ಕುಮಾರರ ಪುಣ್ಯದಿಂದ ಈರೀತಿಯಾಗಿ ಸಂಪತ್ತುಂಟಾಯಿತು. ಆದುದರಿಂದ ಅತಿಶಯವಾದ ಸಂಪತ್ತನ್ನಿಚ್ಛಿಸುವವರು ಪುಣ್ಯವನ್ನು ಮಾಡಿರಿ.

ನತ್ವಾ ದೇವಮಿಮಂ ಚರಾಚರಗುರುಂ ತ್ರೈಲೋಕ್ಯನಾಥಾರ್ಚಿತಂ
ಭಕ್ತ್ಯಾ ತೌ ಸುಖ[1]ಮಾಸತುಃ ಸಮುಚಿತಂ ವಿದ್ಯಾಧರಾಧೀಶ್ವರೌ ।
ತಸ್ಮಾದಾದಿಗುರುಂ ಪ್ರಣಮ್ಯ ಶಿರಸಾ ಭಕ್ತ್ಯಾ[2]ರ್ಚಯಂತ್ವಂಗಿನೋ
ವಾಂಛಂತಃ ಸುಖಮಕ್ಷಯಂ ಜಿನಗುಣಪ್ರಾಪ್ತಿಂ ಚ ನೈಶ್ರೇಯಸೀಮ್
॥ ೧೯೨ ॥

ಚರಾಚರಗುರುವೂ ತ್ರಿಲೋಕಾಧಿಪತಿಗಳಿಂದ ಪೂಜಿಸಲ್ಪಟ್ಟವನೂ ಆದ ಈ ವೃಷಭಸ್ವಾಮಿಯನ್ನು ನಮಸ್ಕರಿಸಿ ಭಕ್ತರಾದ ಆ ವಿದ್ಯಾಧರಾಧಿಪತಿ (ನಮಿ ವಿನಮಿ)ಗಳು ಉಚಿತವಾದ ಸುಖವನ್ನು ಹೊಂದಿದರು. ಆದುದರಿಂದ ನಾಶ ರಹಿತವಾದ ಸುಖವನ್ನೂ ಜಿನೇಶ್ವರನ ಗುಣಗಳ ಪ್ರಾಪ್ತಿಯನ್ನೂ ಮೋಕ್ಷ ಸಂಪತ್ತನ್ನೂ ಇಚ್ಛಿಸುವವರು ವೃಷಭಸ್ವಾಮಿಯನ್ನು ಮಸ್ತಕದಿಂದ ನಮಸ್ಕರಿಸಿ ಭಕ್ತಿಯಿಂದ ಪೂಜಿಸಲಿ.

ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ
ನಮಿವಿನಮಿರಾಜ್ಯಪ್ರತಿಷ್ಠಾಪನಂ ನಾಮೈಕೋನವಿಂಶತಿತಮಂ ಪರ್ವ ॥

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯದಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ನಮಿವಿನಮಿಕುಮಾರರನ್ನು ರಾಜ್ಯದಲ್ಲಿ ಸ್ಥಾಪಿಸುವುದೆಂಬ
ಹತ್ತೊಂಬತ್ತನೆಯ ಪರ್ವವು ಸಮಾಪ್ತವಾದುದು.

---

೧ ವಿದ್ಯಾಧರಸಂಬಂಧಿನೀಂ. ೨ ಪುರುಪರಮೇಶ್ವರಚರಣಾಶ್ರಿತಯೋಃ. ೩ ಕಾರಣೇನ. ೪ ಇಚ್ಛವಃ.

೧ ಆಪತುರಿತ್ಯಪಿ ಪಾಠಃ. ೨ ಅರ್ಚಯಂತೀತ್ಯಪಿ ಪಾಠಃ.

॥ ಶ್ರೀ ವೃಷಭಜಿನಾಯ ನಮಃ ॥

# ಅಥ ವಿಂಶಂ ಪರ್ವ

**ಪ್ರಪೂರ್ಯಂತೇ ಸ್ಮ ಷಣ್ಮಾಸಾಸ್ತಸ್ಯಾಥೋ ಯೋಗಧಾರಿಣಃ ।**
**ಗುರೋರ್ಮೇರೋರಿವಾಚಿಂತ್ಯಮಾಹಾತ್ಮ್ಯಸ್ಯಾಚಲಸ್ಥಿತೇಃ ॥ ೧ ॥**

ತರುವಾಯ ಮಹಾಮೇರುಪರ್ವತದಂತೆ ಅಚಿಂತ್ಯವಾದ ಮಾಹಾತ್ಮ್ಯವುಳ್ಳವರೂ ನಿಶ್ಚಲವಾದ ಸ್ಥಿತಿಯುಳ್ಳವರೂ ಯೋಗಾರೂಢರೂ ಆದ ಆ ಸ್ವಾಮಿಗೆ ಆರುತಿಂಗಳು ಪೂರ್ತಿಯಾಯಿತು.

**ತತೋಽಸ್ಯ ಮತಿರಿತ್ಯಾಸೀ[೧]ದ್ಯತಿಚರ್ಯಾಪ್ರಬೋಧನೇ ।**
**ಕಾಯಸ್ಥಿತ್ಯರ್ಥನಿರ್ದೋಷ[೨]ವಿಷ್ವಾಣಾನ್ವೇಷಣಂ ಪ್ರತಿ ॥ ೨ ॥**

ಆಮೇಲೆ ಶರೀರಸ್ಥಿತಿಗೋಸ್ಕರ ನಿರ್ದೋಷವಾದ ಆಹಾರವನ್ನು ಹುಡುಕುವುದರ ಮೂಲಕ ಯತ್ಯಾಚಾರವನ್ನು ಪ್ರಚಾರಪಡಿಸುವುದರಲ್ಲಿ ಈ ಸ್ವಾಮಿಯ ಬುದ್ಧಿಯು ಮುಂದೆಹೇಳುವರೀತಿಯಾಗಿ ಪ್ರವರ್ತಿಸಿತು.

**ಅಹೋ ಭಗ್ನಾ ಮಹಾವಂಶಾ ಬತಾಮೀ ನವಸಂಯತಾಃ ।**
**ಸನ್ಮಾರ್ಗಸ್ಯಾಪರಿಜ್ಞಾನಾತ್ಸದ್ಯೋಮೀಭಿಃ ಪರೀಷಹೈಃ ॥ ೩ ॥**

"ಮಹಾವಂಶದವರೂ ಹೊಸದಾಗಿ ದೀಕ್ಷಿತರೂ ಆದ ಈ ಯತಿಗಳು ಸನ್ಮಾರ್ಗದ ಪರಿಜ್ಞಾನವಿಲ್ಲದಿರುವುದರಿಂದ ಈ ಪರೀಷಹ(ಬಾಧೆ)ಗಳಿಂದ ಆಗಲೇ ತಪೋಭ್ರಷ್ಟರಾದರು. ಅಹೋ ! ಕಷ್ಟ !

**ಮಾರ್ಗಪ್ರಬೋಧನಾರ್ಥಂ ಚ ಮುಕ್ತೇಶ್ಚ ಸುಖಸಿದ್ಧಯೇ ।**
**ಕಾಯಸ್ಥಿತ್ಯರ್ಥಮಾಹಾರಂ ದರ್ಶಯಾಮಸ್ತತೋಽಧುನಾ ॥ ೪ ॥**

ಆದುದರಿಂದ ಮುನಿಮಾರ್ಗವನ್ನು ಬೋಧಿಸುವುದಕ್ಕೋಸ್ಕರವೂ ಮುಕ್ತಿಯ ಸುಖವು ಸಿದ್ಧಿಸುವುದಕ್ಕೋಸ್ಕರವೂ ಶರೀರಸ್ಥಿತಿಗೋಸ್ಕರವೂ ಈಗ ಆಹಾರವನ್ನು ತೋರಿಸುತ್ತೇವೆ.

**ನ ಕೇವಲಮಯಂ ಕಾಯಃ [೩]ಕರ್ಶನೀಯೋ ಮುಮುಕ್ಷುಭಿಃ ।**
**ನಾಪ್ಯುತ್ಕಟರಸೈಃ ಪೋಷ್ಯೋ [೪]ಮೃಷ್ಟೈರಿಷ್ಟೈಶ್ಚ [೫]ವಲ್ಭನೈಃ ॥ ೫ ॥**

ಮೋಕ್ಷಾಭಿಲಾಷಿಗಳು ಈ ಶರೀರವನ್ನು ಕೃಶಮಾಡಲೂ ಬಾರದು; ಅಧಿಕವಾದ ರಸವುಳ್ಳದೂ ಬಾಯಿಗೆ ಪ್ರಿಯವೂ ಇಷ್ಟವೂ ಆದ ಭೋಜನಗಳಿಂದ ಪೋಷಿಸಲೂ ಬಾರದು.

**ವಶೇ ಯಥಾಸ್ಯುರಕ್ಷಾಣಿ ನೋತ [೬]ಧಾವಂತ್ಯ[೭]ನುತ್ಪಥಮ್ ।**
**ತಥಾ ಪ್ರಯತಿತವ್ಯಂ ಸ್ಯಾದ್ವೃತ್ತಿಮಾಶ್ರಿತ್ಯ ಮಧ್ಯಮಾಮ್ ॥ ೬ ॥**

ಇಂದ್ರಿಯಗಳು ದುರ್ಮಾರ್ಗಕ್ಕೆ ಹೋಗದೆ ಅಧೀನದಲ್ಲಿರುವಂತೆ ಮಧ್ಯಮ ತರಹದ ವೃತ್ತಿಯನ್ನಾಶ್ರಯಿಸಿ ಪ್ರಯತ್ನಮಾಡಬೇಕು.

**ದೋಷನಿರ್ಹರಣಾಯೇಷ್ಟಾ ಉಪವಾಸಾದ್ಯು[೮]ಪಕ್ರಮಾಃ ।**
**ಪ್ರಾಣಸಂಧಾರಣಾಯಾಯಮಾಹಾರಃ [೯]ಸೂತ್ರದರ್ಶಿತಃ ॥ ೭ ॥**

ಉಪವಾಸಮೊದಲಾದ ಆಚಾರಗಳು ದೋಷಗಳ ನಿವಾರಣೆಗೋಸ್ಕರ ಇಷ್ಟವಾಗಿವೆ. ಈ ಆಹಾರವನ್ನು ಪ್ರಾಣಧಾರಣೆಗೋಸ್ಕರ ಪರಮಾಗಮದಲ್ಲಿ ತೋರಿಸಿದ್ದಾರೆ.

೧ ಯತ್ಯಾಚಾರಸ್ಯ. ೨ ಭಿಕ್ಷಾಗವೇಷಣಾಂ. ೩ ಕೃಶೀಕರಣೀಯಃ. ೪ ಮುಖಪ್ರಿಯೈಃ. ೫ ಭೋಜನೈಃ. ೬ ಗಚ್ಛಂತಿ. ೭ ಉನ್ಮಾರ್ಗಂ ಪ್ರತಿ. ೮ ಆಚಾರಾಃ. ೯ ಪರಮಾಗಮೇ ಪ್ರತಿಪಾದಿತಃ.

**ಕಾಯಕ್ಲೇಶೇ ಮತಸ್ತಾವಾನ್ನ ಸಂಕ್ಲೇಶೋಽಸ್ತಿ [೧]ಯಾವತಾ ।**
**ಸಂಕ್ಲೇಶೇ ಹ್ಯ[೨]ಸಮಾಧಾನಂ ಮಾರ್ಗಾತ್ಪ್ರಚ್ಯುತಿರೇವ ಚ ॥ ೮ ॥**

ಎಷ್ಟುಕಾಯಕ್ಲೇಶದಿಂದ ದುಃಖವುಂಟಾಗುವುದಿಲ್ಲವೋ ಅಷ್ಟುಕಾಯಕ್ಲೇಶವು ಸಮ್ಮತವಾಗಿದೆ. ಮನಸ್ಸಿಗೆ ಕ್ಲೇಶ(ದುಃಖ)ವುಂಟಾದರೆ ವ್ಯಾಧಿಯೂ ಮಾರ್ಗದಿಂದ ತಪ್ಪುವಿಕೆ(ಆಚಾರಭ್ರಷ್ಟತ್ವ)ಯೂ ಉಂಟಾಗುವುವು.

**ಸಿದ್ಧ್ಯೈ ಸಂಯಮ[೩]ಯಾತ್ರಾಯಾ[೪]ಸ್ತತ್ತನುಸ್ಥಿತಿಮಿಚ್ಛುಭಿಃ ।**
**ಗ್ರಾಹ್ಯೋ ನಿರ್ದೋಷ ಆಹಾರೋ [೫]ರಸಾಸಂಗಾದ್ವಿನರ್ಷಿಭಿಃ ॥ ೯ ॥**

ಆದುದರಿಂದ ಸಂಯಮಸಿದ್ಧಿಗೋಸ್ಕರ ಶರೀರಸ್ಥಿತಿಯನ್ನಿಚ್ಛಿಸುವ ಮುನಿಗಳು ರುಚಿಯ ಆಸಕ್ತಿಯನ್ನು ಬಿಟ್ಟು ನಿರ್ದೋಷವಾದ ಆಹಾರವನ್ನು ಗ್ರಹಣ ಮಾಡಬೇಕು."

**ಭಗವಾನಿತಿ ನಿಶ್ಚಿನ್ವನ್ಯೋಗಂ [೬]ಸಂಹೃತ್ಯ ಧೀರಧೀಃ ।**
**ಪ್ರಚಚಾಲ ಮಹೀಂ ಕೃತ್ಸ್ನಾಂ ಚಾಲಯನ್ನಿವ [೭]ವಿಕ್ರಮೈಃ ॥ ೧೦ ॥**

ಧೈರ್ಯವಾದ ಬುದ್ಧಿಯುಳ್ಳ ಭಗವಂತನು ಈರೀತಿಯಾಗಿ ನಿಶ್ಚಯಮಾಡಿ ಧ್ಯಾನವನ್ನು ಬಿಟ್ಟು ಪಾದವಿನ್ಯಾಸಗಳಿಂದ ಸಮಸ್ತವಾದ ಭೂಮಿಯನ್ನು ಅಳ್ಳಾಡಿಸುವವನಂತೆ ಸಂಚರಿಸಿದನು.

**ತದಾ [೮]ಭಟ್ಟಾರಕೇ [೯]ಯಾತಿ ಮಹಾಮೇರಾವಿವೋನ್ನತೇ ।**
**[೧೦]ಧರಣೀ ಪಾದವಿನ್ಯಾಸಾ[೧೧]ನ್ಪ್ರತ್ಯೈಚ್ಛದ[೧೨]ನುಕಂಪಿನೀ ॥ ೧೧ ॥**

ಆಗ ಮಹಾಮೇರುಪರ್ವತದಂತೆ ಉನ್ನತನಾದ ಸ್ವಾಮಿಯು ಹೋಗುತ್ತಿರಲು ಚಲಿಸುತ್ತಿರುವ ಭೂಲಕ್ಷ್ಮಿಯು ಸ್ವಾಮಿಯ ಪಾದವಿನ್ಯಾಸಗಳನ್ನು ಸ್ವೀಕರಿಸಿದಳು.

**ಧಾತ್ರೀ ಪದಭರಾಕ್ರಾಂತಾ [೧೩]ಸಂನ್ಯಮಂಕ್ಷ್ಯದಧಸ್ತಲೇ ।**
**ನಾಭವಿಷ್ಯತ್ಪ್ರಯತ್ನಶ್ಚೇತ್ತಪಸೀ[೧೪]ರ್ಯಾಶ್ರಿತೇ ವಿಭೋಃ ॥ ೧೨ ॥**

ಸ್ವಾಮಿಯು ಈರ್ಯಾಸಮಿತಿಯನ್ನಾಶ್ರಯಿಸಿದ ತಪಸ್ಸಿನಲ್ಲಿ ಪ್ರಯತ್ನವನ್ನು ಮಾಡದಿರುತ್ತಿದ್ದರೆ ಪಾದಗಳ ಭಾರದಿಂದ ಆಕ್ರಾಂತವಾದ ಭೂಮಿಯು ಕೆಳಕ್ಕೆ ಮುಳುಗಿ ಹೋಗುತ್ತಿದ್ದಿತು. ಸ್ವಾಮಿಯು ಸಂಚರಿಸದೆ ಒಂದೇಕಡೆಯಲ್ಲಿ ನಿಂತಿದ್ದರೆ ಅವರ ಪಾದಗಳ ಭಾರದಿಂದ ಭೂಮಿಯು ಕೆಳಕ್ಕೆ ಹಳ್ಳವಾಗುತ್ತಿದ್ದಿತೆಂದು ಭಾವವು.

**ತತಃ ಪುರಾಕರಗ್ರಾಮಾನ್ಸಮಡಂಬಾನ್ಸಖರ್ವಡಾನ್ ।**
**ಸಖೇಟಾನ್ವಿಜಹಾರೋಚ್ಚೈಃ ಸ ಶ್ರೀಮಾನ್ ಜಂಗಮಾದ್ರಿವತ್ ॥ ೧೩ ॥**

ಅನಂತರದಲ್ಲಿ ಆ ಸ್ವಾಮಿಯು, ಚಲಿಸುತ್ತಿರುವ ಪರ್ವತವೋ ಎಂಬಂತೆ, ಪುರ ಆಕರ ಗ್ರಾಮ ಮಡಂಬ ಖರ್ವಡ ಖೇಟ ಇವುಗಳಲ್ಲಿ ಚೆನ್ನಾಗಿ ವಿಹರಿಸಿದರು. ಸಂಚರಿಸಿದರೆಂದರ್ಥವು.

**ಯತೋ ಯತಃ ಪದಂ ಧತ್ತೇ [೧೫]ಮೌನೀಂ [೧೬]ಚರ್ಯಾಂ ಸ್ಮ ಸಂಶ್ರಿತಃ ।**
**ತತಸ್ತತೋ ಜನಾಃ ಪ್ರೀತಾಃ ಪ್ರಣಮಂತ್ಯೇ[೧೭]ತ್ಯ ಸಂಭ್ರಮಾತ್ ॥ ೧೪ ॥**

೧ ಕಾಯಕ್ಲೇಶೇನ. ೨ ವ್ಯಾಧಿಃ. ೩ ಪ್ರಾಪಣಾಯಾಃ. ೪ ಕಾರಣಾತ್. ೫ ಸ್ವಾದ್ವಾಸಕ್ತಿಮಂತರೇಣ. ೬ ಪರಿಹೃತ್ಯ. ೭ ಪಾದನ್ಯಾಸೈಃ. ೮ ಆದಿಬ್ರಹ್ಮಣಿ. ೯ ಗಚ್ಛತಿ ಸತಿ. ೧೦ ಭೂಲಕ್ಷ್ಮೀಃ. ೧೧ ಸ್ವೀಕೃತವತೀ. ೧೨ ಚಲನವತೀ. ೧೩ ಅಧಿಕಂ ನಿಮಜ್ಜನಮಕರಿಷ್ಯತ್. ೧೪ ಈರ್ಯಾಸಮಿತ್ಯಾಶ್ರಿತೇ. ೧೫ ಮುನಿಸಂಬಂಧಿನೀಂ. ೧೬ ವರ್ತನಾಂ. ೧೭ ಆಗತ್ಯ.

ಮುನಿಸಂಬಂಧವಾದ ವರ್ತನೆ(ಆಚರಣೆ)ಯನ್ನು ಹೊಂದಿ ಎಲ್ಲೆಲ್ಲಿ ಹೆಜ್ಜೆಯನ್ನಿಟ್ಟರೋ ಅಲ್ಲಲ್ಲಿ ಸಂತುಷ್ಟರಾದ ಜನಗಳು ತ್ವರೆಯಿಂದ ಬಂದು ನಮಸ್ಕರಿಸಿದರು.

**ಪ್ರಸೀದ ದೇವ ಕಿಂ ಕೃತ್ಯಮಿತಿ [೧]ಕೇಚಿ[೨]ಜ್ಜಗುರ್ಗಿರಮ್ ।**
**ತೂಷ್ಣೀಂಭಾವಂ ವ್ರಜಂತಂ ಚ ಕೇಚಿತ್ತಮನುವವ್ರಜುಃ ॥ ೧೫ ॥**

ಕೆಲವರು "ಸ್ವಾಮಿಯೆ ! ಪ್ರಸನ್ನನಾಗು ಏನುಕಾರ್ಯ ?" ಎಂದು ಹೇಳಿದರು. ಕೆಲವರು ಸುಮ್ಮನೆ ಹೋಗುತ್ತಿರುವ ಸ್ವಾಮಿಯನ್ನು ಹಿಂಬಾಲಿಸಿ ಹೋದರು.

**ಪರೇ ಪರಾರ್ಧ್ಯರತ್ನಾನಿ ಸಮಾನೀಯ ಪುರೋ ನ್ಯಧುಃ ।**
**ಇತ್ಯೂಚುಶ್ಚ ಪ್ರಸೀದೈನಾಮಿಜ್ಯಾಂ ಪ್ರತಿಗೃಹಾಣ ನಃ ॥ ೧೬ ॥**

ಬೇರೆ ಕೆಲವರು ಬಹಳ ಬೆಲೆಬಾಳುವ ರತ್ನಗಳನ್ನು ತಂದು ಸ್ವಾಮಿಯ ಮುಂದಿಟ್ಟು "ನಮ್ಮನ್ನನುಗ್ರಹಿಸು. ಈ ಪೂಜೆಯನ್ನು ಸ್ವೀಕರಿಸು" ಎಂದು ಹೇಳಿದರು.

**ವಸ್ತುವಾಹನಕೋಟೀಶ್ಚ ವಿಭೋಃ ಕೇಚಿ[೩]ದಢೌಕಯನ್ ।**
**ಭಗವಾಂಸ್ತಾಸ್ವನರ್ಥಿತ್ವಾ[೪]ತ್ತೂಷ್ಣೀಕಾಂ ವಿಜಹಾರ ಸಃ ॥ ೧೭ ॥**

ಕೆಲವರು ಸ್ವಾಮಿಗೆ ವಸ್ತುಗಳನ್ನೂ ವಾಹನಗಳನ್ನೂ ತಂದು ಕೊಟ್ಟರು. ಭಗವಂತನಿಗೆ ಆ ಪದಾರ್ಥಗಳಲ್ಲಿ ಇಚ್ಛೆಯಿಲ್ಲದಿದ್ದುದರಿಂದ ಸುಮ್ಮನೆ ವಿಹರಿಸಿದನು.

**ಕೇಚಿತ್ಸ್ರಗ್ವಸ್ತ್ರಗಂಧಾದೀನಾನಯಂತಿ ಸ್ಮ ಸಾದರಮ್ ।**
**ಭಗವ[೫]ನ್ಪರಿಧತ್ಸ್ವೇತಿ ಪಟಲ್ಯಾಂ ಸಹ ಭೂಷಣೈಃ ॥ ೧೮ ॥**

ಕೆಲವರು "ಭಗವಂತನೆ ! ಸ್ವೀಕರಿಸು" ಎಂದು ಆಭರಣ ಪುಷ್ಪಮಾಲಿಕೆ ವಸ್ತ್ರ ಗಂಧ ಮೊದಲಾದ ಪದಾರ್ಥಗಳನ್ನು ಪ್ರೀತಿಯಿಂದ ತಟ್ಟೆಯಲ್ಲಿ ತಂದರು.

**ಕೇಚಿತ್ಕನ್ಯಾಃ ಸಮಾನೀಯ ರೂಪಯೌವನಶಾಲಿನೀಃ ।**
**[೬]ಪರಿಣಾಯಯಿತುಂ ದೇವಮುದ್ಯತಾ ಧಿಗ್ವಿಮೂಢತಾಮ್ ॥ ೧೯ ॥**

ಕೆಲವರು ರೂಪಯೌವನಸಂಪನ್ನರಾದ ಕನ್ಯೆಯರನ್ನು ತಂದು ಸ್ವಾಮಿಗೆ ವಿವಾಹ ಮಾಡುವುದಕ್ಕೆ ಉದ್ಯುಕ್ತರಾದರು. ಜನರ ಈ ಮೂರ್ಖತನಕ್ಕೆ ಧಿಕ್ಕಾರವಿರಲಿ.

**ಕೇಚಿನ್ಮಜ್ಜನಸಾಮಗ್ರ್ಯಾ [೭]ಸಂಶ್ರಿತ್ಯೋ[೮]ಪಾರುಧನ್ವಿಭುಮ್ ।**
**ಪರೇ ಭೋಜನಸಾಮಗ್ರೀಂ ಪುರಸ್ಕೃತ್ಯೋ[೯]ಪತಸ್ಥಿರೇ ॥ ೨೦ ॥**

ಕೆಲವರು ಸ್ನಾನಸಾಮಗ್ರಿಯೊಡನೆ ಸ್ವಾಮಿಯ ಬಳಿಗೆ ಬಂದು ಪ್ರಾರ್ಥಿಸಿದರು. ಬೇರೆ ಕೆಲವರು ಭೋಜನಸಾಮಗ್ರಿಯನ್ನು ತೆಗೆದುಕೊಂಡು ಸ್ವಾಮಿಯ ಸಮೀಪಕ್ಕೆ ಬಂದರು.

**ವಿಭೋ ಭೋಜನಮಾನೀತಂ ಪ್ರಸೀದೋಪವಿಶಾಸನೇ ।**
**ಸಮಂ ಮಜ್ಜನಸಾಮಗ್ರ್ಯಾ ನಿರ್ವಿಶ ಸ್ನಾನಭೋಜನೇ ॥ ೨೧ ॥**

"ಪ್ರಭುವೇ ! ಸ್ನಾನಸಾಮಗ್ರಿಯನ್ನೂ ಭೋಜನಸಾಮಗ್ರಿಯನ್ನೂ ತಂದಿರುತ್ತೇವೆ, ಪ್ರಸನ್ನನಾಗು. ಪೀಠದಲ್ಲಿ ಕುಳಿತುಕೊ. ಸ್ನಾನಭೋಜನಗಳನ್ನು ಸ್ವೀಕರಿಸು.

**ವಿಷೋಂಜಲಿಃ ಕೃತೋಸ್ಮಾಭಿಃ ಪ್ರಸೀದಾನುಗೃಹಾಣ [೧೦]ನಃ ।**
**ಇತ್ಯೇಕೇ[೧೧]ಧ್ಯೈಷಿಷನ್ಮುಗ್ಧಾ ವಿಭುಮಜ್ಞಾತತತ್ಕ್ರಮಾಃ ॥ ೨೨ ॥**

೧ ಜನಾಃ. ೨ ಊಚುಃ. ೩ ಪ್ರಾಪಯಾಮಾಸುಃ. ೪ ಸ್ವಾರ್ಥೇ ಕಪ್ರತ್ಯಯಾತ್ತೂಷ್ಣೀಮಿತ್ಯರ್ಥಃ. ೫ ಸ್ವೀಕುರು. ೬ ವಿವಾಹಯಿತುಂ. ೭ ಸಹ. ೮ ಪ್ರಾರ್ಥಯಂತಿ ಸ್ಮ. ೯ ಸಮೀಪಂ ಪ್ರಾಪ್ತುರಿತ್ಯರ್ಥಃ. ೧೦ ಅಸ್ಮಾನ್. ೧೧ ಸತ್ಕಾರಪೂರ್ವಕಂ ಪ್ರಾರ್ಥಿತವಂತಃ.

ನಾವು ಈ ಕೈಗಳನ್ನು ಜೋಡಿಸುತ್ತೇವೆ. ಪ್ರಸನ್ನನಾಗು. ನಮ್ಮನ್ನನುಗ್ರಹಿಸು" ಎಂದು ಅಜ್ಞಾನಿಗಳೂ ಮುನಿಗಳಿಗೆ ಆಹಾರವನ್ನು ಕೊಡುವ ಕ್ರಮವನ್ನು ತಿಳಿಯದವರೂ ಆದ ಕೆಲವರು ಸ್ವಾಮಿಯನ್ನು ಸತ್ಕಾರಪೂರ್ವಕವಾಗಿ ಪ್ರಾರ್ಥಿಸಿದರು.

**ಕೇಚಿತ್ಪಾದಾವುಪಾದಾಯ ತತ್ಪಾಂಶುಸ್ಪರ್ಶಪಾವನೈಃ ।**
**ಪ್ರಣತೈರ್ಮಸ್ತಕೈರ್ನಾಥ[೧]ಮನಾಥಿಷತ ಭುಕ್ತಯೇ ॥ ೨೩ ॥**

ಕೆಲವರು ಸ್ವಾಮಿಯ ಪಾದಗಳನ್ನು ತೆಗೆದುಕೊಂಡು ಆ ಪಾದಗಳ ಧೂಳಿನ ಸ್ಪರ್ಶದಿಂದ ಪವಿತ್ರವೂ ನಮ್ರವೂ ಆದ ಮಸ್ತಕಗಳಿಂದ ಭೋಜನ ಮಾಡುವುದಕ್ಕೋಸ್ಕರ ಸ್ವಾಮಿಯನ್ನು ಪ್ರಾರ್ಥಿಸಿಕೊಂಡರು.

**ಇದಂ ಖಾದ್ಯಮಿದಂ ಸ್ವಾದ್ಯಮಿದಂ ಭೋಜ್ಯಂ ಪೃಥಗ್ವಿಧಮ್ ।**
**ಮುಹುರ್ಮುಹುರಿದಂ ಪೇಯಂ ಹೃದ್ಯ[೨]ಮಾಪ್ಯಾಯನಂ ತನೋಃ ॥**

"ಇದು ತಿನ್ನುವುದಕ್ಕೆ ಯೋಗ್ಯವಾದ ವಸ್ತು. ಇದು ರುಚಿಕರವಾದ ವಸ್ತು. ಇದು ನಾನಾವಿಧವೂ ಭೋಗಿಸುವುದಕ್ಕೆ ಯೋಗ್ಯವೂ ಆದ ಪದಾರ್ಥ. ಇದು ಬಾರಿ ಬಾರಿಗೂ ಮನೋಹರವೂ ಶರೀರಕ್ಕೆ ಸುಖಕರವೂ ಪಾನಮಾಡುವುದಕ್ಕೆ ಯೋಗ್ಯವೂ ಆದ ವಸ್ತು."

**ತೈರಿತ್ಯ[೩]ಭ್ಯೇಷ್ಯಮಾಣೋಪಿ [೪]ಸಂಭ್ರಾಂತೈರನಭಿಜ್ಞಕೈಃ ।**
**ನ ಕಲ್ಪ್ಯಮಿತಿ ಮನ್ವಾನಸ್ತೂಷ್ಣೀಮೇವಾ[೫]ಪಸಸ್ರಿವಾನ್ ॥ ೨೪ ॥**

ಈಪ್ರಕಾರವಾಗಿ ಈಕಡೆಗಾಕಡೆಗೆ ಓಡಾಡುತ್ತಿರುವ ಅಜ್ಞಾನಿಗಳಾದ ಆ ಜನರಿಂದ ಪ್ರಾರ್ಥಿಸಲ್ಪಟ್ಟವನಾದರೂ ಭಗವಂತನು ಉಚಿತವಲ್ಲವೆಂದು ತಿಳಿದು ಸುಮ್ಮನೆ ಹೊರಟು ಹೋದನು.

**ವಿಭೋ[೬]ರ್ನಿಗೂಢಚರ್ಯಸ್ಯ [೭]ಮತಂ ಜ್ಞಾತು[೮]ಮನೀಶ್ವರಾಃ ।**
**ಕೇಚಿತ್ಕರ್ತವ್ಯತಾಮೂಢಾಃ ಸ್ಥಿತಾಶ್ಚಿತ್ರೇಷ್ವಿವಾರ್ಪಿತಾಃ ॥ ೨೫ ॥**

ಗುಪ್ತವಾದ ಚಾರಿತ್ರವುಳ್ಳ ಸ್ವಾಮಿಯ ಅಭಿಪ್ರಾಯವನ್ನು ತಿಳಿಯುವುದಕ್ಕೆ ಅಸಮರ್ಥರಾದ ಕೆಲವರು ಹೀಗೇ ಮಾಡಬೇಕೆಂಬ ವಿಷಯವನ್ನು ತಿಳಿಯದವರಾಗಿ ಚಿತ್ರಗಳಲ್ಲಿ ಬರೆಯಲ್ಪಟ್ಟವರಂತಿದ್ದರು.

**ಸಪುತ್ರದಾರೈರನ್ಯೈಶ್ಚ ಪದಾಲಗ್ನೈರುದಶ್ರುಭಿಃ ।**
**ಕ್ಷಣವಿಘ್ನಿತತಚ್ಚರ್ಯೋ ಭೂಯೋಪಿ ವಿಜಹಾರ ಸಃ ॥ ೨೭ ॥**

ಹೆಂಡತಿಮಕ್ಕಳುಸಹಿತರಾಗಿ ಕಣ್ಣೀರನ್ನು ಸುರಿಸುತ್ತಿರುವ ಬೇರೆ ಕೆಲವರಿಂದ ಕ್ಷಣಕಾಲದವರೆಗೆ ವಿಘ್ನಮಾಡಲ್ಪಟ್ಟ ಗಮನವುಳ್ಳ ಆ ಸ್ವಾಮಿಯು ಪುನಃ ವಿಹರಿಸಿದರು.

**ಇತ್ಯಸ್ಯ ಪರಮಾಂ ಚರ್ಯಾಂ ಚರತೋಜ್ಞಾತಚರ್ಯಯಾ ।**
**ಜಗದಾಶ್ಚರ್ಯಕಾರಿಣ್ಯಾ ಮಾಸಾಃ ಷಡಪರೇ ಯಯುಃ ॥ ೨೮ ॥**

ಈರೀತಿಯಾಗಿ ಉತ್ಕೃಷ್ಟವಾದ ಚಾರಿತ್ರವನ್ನು ಪರಿಪಾಲಿಸುತ್ತಿರುವ ಈ ಸ್ವಾಮಿಯ ಇನ್ನು ಆರುತಿಂಗಳು ಲೋಕಕ್ಕೆ ಆಶ್ಚರ್ಯವನ್ನುಂಟುಮಾಡುವುದೂ ಜನರ ತಿಳುವಳಿಕೆಗೆ ಬಾರದಿರುವುದೂ ಆದ ಚಾರಿತ್ರದಿಂದ ಕಳೆಯಿತು.

**ತತಃ ಸಂವತ್ಸರೇ ಪೂರ್ಣೇ ಪುರಂ [೯]ಹಾಸ್ತಿನಸಾಹ್ವಯಮ್ ।**
**ಕುರುಜಾಂಗಲದೇಶಸ್ಯ [೧೦]ಲಲಾಮೇವಾ[೧೧]ಸಸಾದ ಸಃ ॥ ೨೯ ॥**

ತರುವಾಯ ವರ್ಷವು ಪೂರ್ತಿಯಾಗುತ್ತಿರಲು ಆ ಸ್ವಾಮಿಯು ಕುರುಜಾಂಗಲ ವೆಂಬ ದೇಶಕ್ಕೆ ತಿಲಕದಂತಿರುವ ಹಸ್ತಿನವೆಂಬ ನಗರವನ್ನು ತಲುಪಿದರು.

೧ ಪ್ರಾರ್ಥಯಾಮಾಸುಃ. ೨ ಸಂತೃಪ್ತಿಕರಂ. ೩ ಪ್ರಾರ್ಥ್ಯಮಾನಃ. ೪ ಇತಸ್ತತಃ ಪರಿಭ್ರಮದ್ಭಿಃ. ೫ ಅಪಸರತಿ ಸ್ಮ. ೬ ನಿಗೂಢಚಾರಿತ್ರಸ್ಯ. ೭ ಅಭಿಪ್ರಾಯಂ. ೮ ಅಸಮರ್ಥಾಃ. ೯ ಹಾಸ್ತಿನಮಿತ್ಯಾಹ್ವಯೇನ ಸಹಿತಂ. ೧೦ ತಿಲಕಮಿವ. ೧೧ ಪ್ರಾಪ.

**ತಸ್ಯ [೧]ಪಾತಾ ತದಾಸೀಚ್ಚ ಕುರುವಂಶಶಿಖಾಮಣಿಃ ।**
**ಸೋಮಪ್ರಭಃ [೨]ಪ್ರಸನ್ನಾತ್ಮಾ [೩]ಸೋಮಸೌಮ್ಯಾನನೋ ನೃಪಃ ॥ ೩೦ ॥**

ಆಗ ಕುರುವಂಶಕ್ಕೆ ಶಿಖಾಮಣಿಯೂ ನಿರ್ಮಲವಾದ ಬುದ್ಧಿಯುಳ್ಳವನೂ ಚಂದ್ರನಂತೆ ಸೌಮ್ಯವಾದ ಮುಖವುಳ್ಳವನೂ ಆದ ಸೋಮಪ್ರಭನೆಂಬ ರಾಜನು ಆ ದೇಶದ ಪರಿಪಾಲಕನಾಗಿದ್ದನು.

**ತಸ್ಯಾನುಜಃ ಕುಮಾರೋಽಭೂ[೪]ಚ್ಛ್ರೇಯಾನ್ [೫]ಶ್ರೇಯಾನ್ಗುಣೋದಯೈಃ ।**
**ರೂಪೇಣ ಮನ್ಮಥಃ ಕಾಂತ್ಯಾ ಶಶೀ [೬]ದೀಪ್ತ್ಯಾ ಸ ಭಾನುಮಾನ್ ॥೩೧ ॥**

ಆ ಸೋಮಪ್ರಭರಾಜನಿಗೆ ಶ್ರೇಯಾಂಸಕುಮಾರನು ತಮ್ಮನಾಗಿದ್ದನು. ಆ ಕುಮಾರನು ಗುಣಗಳಿಂದ ಶ್ರೇಷ್ಠನೂ ರೂಪದಿಂದ ಮನ್ಮಥನೂ ಕಾಂತಿಯಿಂದ ಚಂದ್ರನೂ ತೇಜಸ್ಸಿನಿಂದ ಸೂರ್ಯನೂ ಆಗಿದ್ದನು.

**ಧನದೇವಚರೋ ಯೋಽಸಾವಹಮಿಂದ್ರೋ ದಿವಶ್ಚ್ಯುತಃ ।**
**ಸ ಶ್ರೇಯಾನಿತ್ಯಭೂಚ್ಛ್ರೇಯಃ ಪ್ರಜಾನಾಂ ಶ್ರೇಯಸಾಂ ನಿಧಿಃ ॥ ೩೨ ॥**

ಈ ಕುಮಾರನು ಮೊದಲು ಒಂದು ಭವದಲ್ಲಿ ಧನದೇವನೆಂಬ ಶ್ರೇಷ್ಠಿಯಾಗಿದ್ದು ತರುವಾಯ ಸ್ವರ್ಗದಲ್ಲಿ ಅಹಮಿಂದ್ರದೇವನಾಗಿ ಹುಟ್ಟಿ ಅಲ್ಲಿಂದ ಚ್ಯುತನಾಗಿ ಪ್ರಜೆಗಳಿಗೆ ಆಶ್ರಯಭೂತನೂ ಶ್ರೇಯಸ್ಸುಗಳಿಗೆ ನಿಧಿಯೂ ಆದ ಶ್ರೇಯಾಂಸ ಕುಮಾರನಾಗಿ ಹುಟ್ಟಿದನು.

**ಸೋಽದರ್ಶ[೭]ದ್ಭಗವತ್ಯಸ್ಯಾಂ ಪುರಿ ಸನ್ನಿಧಿ[೮]ಮೇಷ್ಯತಿ ।**
**ಶರ್ವರ್ಯಾಃ ಪಶ್ಚಿಮೇ ಯಾಮೇ ಸ್ವಪ್ನಾನೇತಾನ್ ಶುಭಾವಹಾನ್ ॥**

ಭಗವಂತನು ಆ ಹಸ್ತಿನಪುರದ ಸಮೀಪಕ್ಕೆ ಬರುತ್ತಿರಲು ಆ ರಾತ್ರಿಯ ಬೆಳಗಿನ ಜಾವದಲ್ಲಿ ಶ್ರೇಯಾಂಸಕುಮಾರನು ಶುಭಕರವಾದ ಈ ಮುಂದೆಹೇಳುವ ಸ್ವಪ್ನ ಗಳನ್ನು ಕಂಡನು.

**ಸುಮೇರುಮೈಕ್ಷತೋತ್ತುಂಗಂ ಹಿರಣ್ಮಯಮಹಾತನುಮ್ ।**
**ಕಲ್ಪದ್ರುಮಂ ಚ ಶಾಖಾಗ್ರಲಂಬಿಭೂಷಣಭೂಷಿತಮ್ ॥ ೩೪ ॥**

ಉನ್ನತವೂ ಸುವರ್ಣಮಯವಾದ ದೊಡ್ಡ ಆಕಾರವುಳ್ಳುದೂ ಆದ ಮಹಾ ಮೇರುಪರ್ವತವನ್ನೂ ಶಾಖೆ(ಕೊಂಬೆ)ಗಳ ಅಗ್ರಭಾಗಗಳಲ್ಲಿ ಜೋಲುತ್ತಿರುವ ಆಭರಣಗಳಿಂದ ಅಲಂಕೃತವಾದ ಕಲ್ಪವೃಕ್ಷವನ್ನೂ

**ಸಿಂಹಂ [೯]ಸಂಹಾರಸಂಧ್ಯಾಭಕೇಸರೋ[೧೦]ದ್ಧುರಕಂಧರಮ್ ।**
**ಶೃಂಗಾಗ್ರಲಗ್ನಮೃತ್ಸ್ನಂ ಚ ವೃಷಭಂ [೧೧]ಕೂಲಮುದ್ರುಜಮ್ ॥ ೩೫ ॥**

ಪ್ರಳಯಕಾಲದ ಸಂಧ್ಯಾಕಾಲಕ್ಕೆ ಸಮಾನವಾದ ಜಟೆಯಿಂದ ಉಬ್ಬಿದ ಕೊರಳುಳ್ಳ ಸಿಂಹವನ್ನೂ ದಡವನ್ನು ಕೆದಕುತ್ತಿರುವುದೂ ಕೊಂಬುಗಳ ಅಗ್ರಭಾಗದಲ್ಲಿ ಸಂಬಂಧಿಸಿದ ಮಣ್ಣುಳ್ಳುದೂ ಆದ ವೃಷಭ (ಹೋರಿ) ವನ್ನೂ

**ಸೂರ್ಯೇಂದೂ ಭುವನಸ್ಯೇವ ನಯನೇ ಪ್ರಸ್ಫುರದ್ದ್ಯುತೀ ।**
**[೧೨]ಸರಸ್ವಂತಮಪಿ ಪ್ರೋಚ್ಚೈರ್ವೀಚಿಂ [೧೩]ರತ್ನಾಚಿತಾರ್ಣಸಮ್ ॥ ೩೬ ॥**

ಲೋಕದ ಕಣ್ಣುಗಳೋ ಎಂಬಂತೆ ದೇದೀಪ್ಯಮಾನವಾದ ಕಾಂತಿಯುಳ್ಳ ಸೂರ್ಯಚಂದ್ರರನ್ನೂ ಉನ್ನತವಾದ ಅಲೆಗಳುಳ್ಳುದೂ ರತ್ನಗಳಿಂದ ವ್ಯಾಪ್ತವಾದ ಜಲವುಳ್ಳುದೂ ಆದ ಸಮುದ್ರವನ್ನೂ

೧ ಪಾಲಕಃ. ೨ ಪ್ರಸನ್ನಬುದ್ಧಿಃ. ೩ ಚಂದ್ರವತ್ಸೌಮ್ಯಾನನಃ. ೪ ಶ್ರೇಯೋನ್ನೃಪಃ. ೫ ಶ್ರೇಷ್ಠಃ. ೬ ತೇಜಸಾ. ೭ ಸರ್ವಜ್ಞೇ. ೮ ಸತಿ. ೯ ಪ್ರಲಯಕಾಲಸಂಧ್ಯಾಸದೃಶಃ. ೧೦ ಉತ್ಕಟಃ. ೧೧ ಕೂಲಂ ಖನಂತಂ. ೧೨ ಸಮುದ್ರಂ. ೧೩ ರತ್ನಾಕೀರ್ಣಜಲಂ.

**ಅಷ್ಟಮಂಗಲಧಾರೀಣಿ [೧]ಭೂತರೂಪಾಣಿ ಚಾ[೨]ಗ್ರತಃ ।**
**ಸೋಽಪಶ್ಯದ್ಭಗವತ್ಪಾದದರ್ಶನೈಕಫಲಾನಿ [೩]ಮಾನ್ ॥ ೩೭ ॥**

ಆ ಶ್ರೇಯಾಂಸಕುಮಾರನು ಮುಂಭಾಗದಲ್ಲಿ ಅಷ್ಟಮಂಗಲದ್ರವ್ಯಗಳನ್ನು ಧರಿಸಿರುವ ವ್ಯಂತರದೇವತಾರೂಪಗಳನ್ನೂ ಭಗವಂತನ ಪಾದದರ್ಶನವೇ ಮುಖ್ಯ ಫಲವಾಗಿರುವ ಈ ಸ್ವಪ್ನಗಳನ್ನು ಕಂಡನು.

**ಸಪ್ರಶ್ರಯಮಥಾಸಾದ್ಯ ಪ್ರಭಾತೇ ಪ್ರೀತಮಾನಸಃ ।**
**ಸೋಮಪ್ರಭಾಯ ತಾನ್ಸ್ವಪ್ನಾನ್ಯಥಾದೃಷ್ಟಂ ನ್ಯವೇದಯತ್ ॥ ೩೮ ॥**

ತರುವಾಯ ಪ್ರಾತಃಕಾಲದಲ್ಲಿ ಸಂತುಷ್ಟವಾದ ಮನಸ್ಸುಳ್ಳವನಾಗಿ ವಿನಯದಿಂದ ಸೋಮಪ್ರಭನನ್ನು ಕಂಡು ಆ ಸ್ವಪ್ನಗಳನ್ನು ತಾನು ಕಂಡಂತೆಯೇ ಹೇಳಿದನು.

**ತತಃ [೪]ಪುರೋಧಾಃ ಕಲ್ಯಾಣಂ ಫಲಂ ತೇಷಾಮಭಾಷತ ।**
**ಪ್ರಸರದ್ದಶನಜ್ಯೋತ್ಸ್ನಾಪ್ರಧೌತ[೫]ಕಕುಬಂತರಃ ॥ ೩೯ ॥**

ತರುವಾಯ ಪುರೋಹಿತನು ಹಲ್ಲುಗಳ ವಿಸ್ತರಿಸುತ್ತಿರುವ ಕಾಂತಿಯಿಂದ ದಿಕ್ಕುಗಳ ಮಧ್ಯಪ್ರದೇಶಗಳನ್ನು ತೊಳೆಯುವವನಾಗಿ ಆ ಸ್ವಪ್ನಗಳ ಮಂಗಲಕರವಾದ ಫಲವನ್ನು ಹೇಳಿದನು.

**ಮೇರುಸಂದರ್ಶನಾದ್ದೇವೋ ಯೋ ಮೇರುರಿವ ಸೂನ್ನತಃ ।**
**ಮೇರೌ ಪ್ರಾಪ್ತಾಭಿಷೇಕಃ ಸ ಗೃಹಮೇಷ್ಯತಿ ನಃ ಸ್ಫುಟಮ್ ॥ ೪೦ ॥**

''ಮಹಾಮೇರುಪರ್ವತದ ದರ್ಶನದಿಂದ ಮಹಾಮೇರುಪರ್ವತದಂತೆ ಉನ್ನತನೂ ಮಹಾಮೇರುಪರ್ವತದಲ್ಲಿ ಜನ್ಮಾಭಿಷೇಕವನ್ನು ಹೊಂದಿದವನೂ ಆದ ಸ್ವಾಮಿಯು ನಿಜವಾಗಿ ನಮ್ಮ ಮನೆಗೆ ಬರುವನು.

**ತದ್ಗುಣೋನ್ನತಿಮನ್ಯೇ ಚ ಸ್ವಪ್ನಾಃ ಸಂಸೂಚಯಂತ್ಯಮೀ ।**
**[೬]ತಸ್ಯಾನುರೂಪವಿನಯೈರ್ಮಹಾನ್ಪುಣ್ಯೋದಯೋಽದ್ಯ ನಃ ॥ ೪೧ ॥**

ಬೇರೆ ಈ ಸ್ವಪ್ನಗಳೂ ಆ ಸ್ವಾಮಿಯ ಶ್ರೇಷ್ಠವಾದ ಗುಣಗಳನ್ನು ಸೂಚಿಸುತ್ತವೆ. ಆ ವೃಷಭಸ್ವಾಮಿಗೆ ಯೋಗ್ಯವಾದ ವಿನಯಗಳಿಂದ ನಮಗೀಗ ದೊಡ್ಡ ಪುಣ್ಯೋದಯವುಂಟಾಗುವುದು.

**ಪ್ರಶಂಸಾಂ ಜಗತಿ ಖ್ಯಾತಿಮನಲ್ಪಾಂ ಲಾಭಸಂಪದಮ್ ।**
**ಪ್ರಾಪ್ಸ್ಯಾಮೋ ನಾತ್ರ [೭]ಸಂದಿಹ್ಮಃ [೮]ಕುಮಾರಶ್ಚಾ[೯]ತ್ರ ತತ್ತ್ವವಿತ್ ॥ ೪೨ ॥**

ಹೊಗಳಿಕೆಯನ್ನೂ ಜಗತ್ತಿನಲ್ಲಿ ಖ್ಯಾತಿಯನ್ನೂ ಅಧಿಕವಾದ ಸಂಪತ್ತಿನ ಲಾಭವನ್ನೂ ಪಡೆಯುವೆವು. ಈ ವಿಚಾರದಲ್ಲಿ ನಾವು ಸಂದೇಹಪಡುವುದಿಲ್ಲ. ಇದರ ನಿಜಾಂಶವನ್ನು ಶ್ರೇಯಾಂಸಕುಮಾರನು ತಿಳಿಯುವವನಾಗಿದ್ದಾನೆ.''

**ಇತಿ [೧೦]ತದ್ವಚನಾತ್ಪ್ರೀತೌ ತೌ ತತ್ಸಂಕಥಯಾ ಸ್ಥಿತೌ ।**
**ಯಾವತ್ತಾವಚ್ಚ ಯೋಗೀಂದ್ರಃ ಪ್ರಾವಿಶದ್ಧಾಸ್ತಿನಂ ಪುರಮ್ ॥ ೪೩ ॥**

ಈಪ್ರಕಾರವಾಗಿ ಪುರೋಹಿತನ ವಚನದಿಂದ ಸಂತುಷ್ಟರಾದ ಆ ಸೋಮಪ್ರಭ ಶ್ರೇಯಾಂಸರು ಸ್ವಾಮಿಯ ಆಗಮನಮೊದಲಾದ ವಿಚಾರವನ್ನು ಮಾತನಾಡುತ್ತಿರುವಷ್ಟರಲ್ಲಿ ಸ್ವಾಮಿಯು ಹಸ್ತಿನಪುರಕ್ಕೆ ಪ್ರವೇಶಮಾಡಿದರು.

**ತದಾ ಕೋಲಾಹಲೋ [೧೧]ಭೂಯಾನಭೂತ್ತತ್ಸಂದಿದೃಕ್ಷಯಾ ।**
**ಇತಸ್ತತಶ್ಚ ಮಿಲತಾಂ ಪೌರಾಣಾಂ ಮುಖ[೧೨]ನಿಃಸೃತಃ ॥ ೪೪ ॥**

೧ ವ್ಯಂತರದೇವತಾರೂಪಾಣಿ. ೨ ಪುರಃ. ೩ ಸ್ವಪ್ನಾನ್. ೪ ಪುರೋಹಿತಃ. ೫ ದಿಗಂತರಃ. ೬ ವೃಷಭಸ್ಯ. ೭ ಸಂದೇಹಂ ಕುರ್ಮಃ. ೮ ಶ್ರೇಯಾನ್. ೯ ಅಸ್ಮಿನ್ವಿಷಯೇ. ೧೦ ಪುರೋಹಿತವಚನಾತ್. ೧೧ ಬಹುಲಃ. ೧೨ ನಿರ್ಗತಃ.

ಆಗ ಆ ಸ್ವಾಮಿಯನ್ನು ನೋಡಬೇಕೆಂಬ ಇಚ್ಛೆಯಿಂದ ಈಕಡೆ ಆಕಡೆ ಸೇರುತ್ತಿರುವ ಪುರನಿವಾಸಿಗಳ ಮುಖದಿಂದ ಹೊರಟ ಅಧಿಕವಾದ ಕೋಲಾಹಲ ಶಬ್ದವುಂಟಾಯಿತು.

**ಭಗವಾನಾದಿಕರ್ತಾಸ್ಮಾನ್ಪಾಲಯಿತುಮಾಗತಃ ।**
**ಪಶ್ಯಾಮೋತ್ರ ದ್ರುತಂ ಗತ್ವಾ ಪೂಜಯಾಮಶ್ಚ ಭಕ್ತಿತಃ ॥ ೪೫ ॥**

"ಭಗವಂತನಾದ ಆದಿಬ್ರಹ್ಮನು ನಮ್ಮನ್ನು ಕಾಪಾಡುವುದಕ್ಕೋಸ್ಕರ ಬಂದನು. ಇಲ್ಲಿ ಶೀಘ್ರವಾಗಿ ಹೋಗಿ ನೋಡುತ್ತೇವೆ. ಭಕ್ತಿಯಿಂದ ಪೂಜೆಯನ್ನೂ ಮಾಡುತ್ತೇವೆ.

**ವನಪ್ರವೇಶಾದ್ಭಗವಾ[೧]ನ್ನಿತ್ಯಾವೃತ್ತಃ [೨]ಸನಾತನಃ ।**
**ಅನುಗೃಹೀತುಮೇವಾಸ್ಮಾನಿತ್ಯೂಚುಃ ಕೇಚನೋ[೩]ಚಿತಮ್ ॥ ೪೬ ॥**

ನಿತ್ಯನಾದ ಭಗವಂತನು ನಮ್ಮನ್ನು ಅನುಗ್ರಹಿಸುವುದಕ್ಕೋಸ್ಕರವೇ ಅರಣ್ಯ ಪ್ರದೇಶದಿಂದ ಹಿಂದಿರುಗಿ ಬಂದನು." ಈಪ್ರಕಾರವಾಗಿ ಕೆಲವರು ಉಚಿತವಚನ ವನ್ನು ಹೇಳಿದರು.

**ಕೇಚಿ[೪]ತ್ಪರಾಪರಜ್ಞಸ್ಯ ಸಂದರ್ಶನಸಮುತ್ಸುಕಾಃ ।**
**ಪೌರಾ[೫]ಸ್ತ್ಯಕ್ತಾನ್ಯಕರ್ತವ್ಯಾಃ [೬]ಸಂದಧಾವುರಿತೋಮುತಃ ॥ ೪೭ ॥**

ಪೂರ್ವಾಪರವಿಷಯವನ್ನು ತಿಳಿದಿರುವ ಸ್ವಾಮಿಯ ದರ್ಶನದಲ್ಲಿ ಕುತೂಹಲ ವುಳ್ಳ ಕೆಲವು ಪುರನಿವಾಸಿಗಳು ಮಾಡಬೇಕಾದ ಬೇರೆ ಕಾರ್ಯಗಳನ್ನು ಬಿಟ್ಟು ಈಕಡೆಗಾಕಡೆಗೆ ಓಡಾಡುತ್ತಿದ್ದರು.

**ಅಯಂ ಸ ಭಗವಾನ್ದೂರಾಲ್ಲಕ್ಷ್ಯತೇ [೭]ಪ್ರಾಂಶುವಿಗ್ರಹಃ ।**
**ಗಿರೀಂದ್ರ ಇವ ನಿಷ್ಟಪ್ತಜಾತ್ಯಕಾಂಚನಸಚ್ಛವಿಃ ॥ ೪೮ ॥**

"ಮಹಾಮೇರುಪರ್ವತದಂತೆ ತಪಿಸಿದ ಉತ್ತಮವಾದ ಬಂಗಾರದ ಕಾಂತಿ ಯುಳ್ಳವನೂ ಉನ್ನತವಾದ ಶರೀರವುಳ್ಳವನೂ ಆದ ಆ ಭಗವಂತನು ದೂರ ದಿಂದಲೇ ಕಾಣಿಸುತ್ತಾನೆ.

**ಶ್ರೂಯತೇ ಯಃ [೮]ಶ್ರುತಶ್ರುತ್ಯಾ ಜಗದೇಕಪಿತಾಮಹಃ ।**
**ಸ ನಃ ಸನಾತನೋ [೯]ದಿಷ್ಟ್ಯಾ ಯಾತಃ ಪ್ರತ್ಯಕ್ಷಸನ್ನಿಧಿಮ್ ॥ ೪೯ ॥**

ಜಗತ್ತಿಗೆ ಮುಖ್ಯ ಪಿತಾಮಹ(ತಾತ)ನಾದ ಯಾವ ಭಗವಂತನನ್ನು ಶ್ರೋತ್ರ ಪರಂಪರೆಯಿಂದ ಕೇಳಿದ್ದೆವೋ ನಿತ್ಯನಾದ ಅಂತಹ ಭಗವಂತನು ನಮ್ಮಭಾಗ್ಯದಿಂದ ಪ್ರತ್ಯಕ್ಷಸಾನ್ನಿಧ್ಯವನ್ನು ಹೊಂದಿದನು.

**ದೃಷ್ಟೇ[೧೦]ಸ್ಮಿನ್ಸಫಲೇ ನೇತ್ರೇ ಶ್ರುತೇಸ್ಮಿನ್ಸಫಲೇ ಶ್ರುತೀ ।**
**ಸ್ಮೃತೇಸ್ಮಿನ್ ಜಂತುರಜ್ಞೋಪಿ ವ್ರಜ[೧೧]ತ್ಯಂತಃ ಪವಿತ್ರತಾಮ್ ॥ ೫೦ ॥**

ಈ ಸ್ವಾಮಿಯನ್ನು ನೋಡಿದುದರಿಂದ ಕಣ್ಣುಗಳು ಸಫಲವಾದುವು. ಸ್ವಾಮಿಯ ವಿಷಯವನ್ನು ಕೇಳಿದುದರಿಂದ ಕಿವಿಗಳು ಸಫಲವಾದುವು. ಈ ಸ್ವಾಮಿಯನ್ನು ಸ್ಮರಿಸುವುದರಿಂದ ತಿಳುವಳಿಕೆಯಿಲ್ಲದ ಪ್ರಾಣಿಯೂ ಅಂತರಂಗದಲ್ಲಿ ಶುದ್ಧಿಯನ್ನು ಹೊಂದುತ್ತದೆ.

**ಸರ್ವಸಂಗವಿನಿರ್ಮುಕ್ತೋ ದೀಪ್ರಪ್ರೋತ್ತುಂಗವಿಗ್ರಹಃ ।**
**ಘನೋಪರೋಧನಿರ್ಮುಕ್ತೋ ಭಾತಿ ಭಾಸ್ವಾನಿವ ಪ್ರಭುಃ ॥ ೫೧ ॥**

ಸಮಸ್ತಪರಿಗ್ರಹರಹಿತನೂ ದೇದೀಪ್ಯಮಾನವೂ ಉನ್ನತವೂ ಆದ ಶರೀರ ವುಳ್ಳವನೂ ಆದ ಸ್ವಾಮಿಯು, ಮೇಘದ ಆವರಣವಿಲ್ಲದಿರುವ ಸೂರ್ಯನಂತೆ, ಪ್ರಕಾಶಿಸುತ್ತಾನೆ.

೧ ಪುನರಾಗತಃ. ೨ ನಿತ್ಯಃ. ೩ ಉಚಿತವಚನಂ. ೪ ಪೂರ್ವಾಪರವೇದಿನಃ. ೫ ತ್ಯಕ್ತಾನ್ಯಕರ್ತವ್ಯಾಃ. ೬ ವೇಗೇನ ಗಚ್ಛತಿ ಸ್ಮ. ೭ ಉನ್ನತಶರೀರಃ. ೮ ಶ್ರವಣಪರಂಪರಯಾ. ೯ ಭಾಗ್ಯೇನ. ೧೦ ಪುರುಪರಮೇಶ್ವರೇ. ೧೧ ಚಿತ್ತಶುದ್ಧಿತ್ವಂ.

**ಇದಮಾಶ್ಚರ್ಯಮಾಶ್ಚರ್ಯಂ ಯದೇಷ ಜಗತಾಂ ಪತಿಃ ।**
**ವಿಹರತ್ಯೇವಮೇಕಾಕೀ ತ್ಯಕ್ತ[೧]ಸರ್ವಪರಿಚ್ಛದಃ ॥ ೫೨ ॥**

ಜಗತ್ಪತಿಯಾದ ಈ ಸ್ವಾಮಿಯು ವಸ್ತ್ರಮೊದಲಾದ ಸಮಸ್ತವಸ್ತುಗಳನ್ನು ಬಿಟ್ಟು ಒಬ್ಬನೇ ಹೀಗೆ ವಿಹರಿಸುತ್ತಾನೆ. ಇದು ಅತ್ಯಂತ ಆಶ್ಚರ್ಯಕರವಾಗಿದೆ !

**ಅಥವಾ ಶ್ರುತಮಸ್ಮಾಭಿಃ ಸ್ವಾಧೀನಸುಖಕಾಮ್ಯಯಾ ।**
**ಕರೀವ ಯೂಥಪೋ ನಾಥೋ ವನಂ [೨]ಪ್ರಸ್ಥಿತವಾನಿತಿ ॥ ೫೩ ॥**

ಅಥವಾ ಸಲಗದಂತೆ ಸ್ವಾಮಿಯು ಸ್ವಾಧೀನವಾದ ಸುಖದ ಇಚ್ಛೆಯಿಂದ ವನಕ್ಕೆ ಹೊರಟನೆಂದು ನಾವು ಕೇಳಿದ್ದೇವೆ.

**[೩]ತತ್ಸತ್ಯಮಧುನಾ ಸ್ವೈರಂ ಮುಕ್ತಸಂಗೋ ನಿರಂಬರಃ ।**
**[೪]ಅವ್ಯಥೋ ವಿಹರತ್ಯೇವ[೫]ಮೇಕಕಃ ಪರಮೇಶ್ವರಃ ॥ ೫೪ ॥**

ವನಕ್ಕೆ ಹೊರಟನೆಂಬ ವಚನವು ಈಗ ಸತ್ಯವಾಯಿತು. ಪರಿಗ್ರಹವನ್ನು ತ್ಯಜಿಸಿ ದವನೂ ವಸ್ತ್ರರಹಿತನೂ ಬಾಧಾರಹಿತನೂ ಏಕಾಕಿಯೂ ಆದ ಸ್ವಾಮಿಯು ಹೀಗೆ ಯಥೇಚ್ಛವಾಗಿ ವಿಹರಿಸುತ್ತಾನೆ.

**ಯಥಾಸ್ವಂ ವಿಹರನ್ದೇಶಾನಸ್ಮದ್ಭಾಗ್ಯಾದಿಹಾಗತಃ ।**
**ವಂದ್ಯಃ ಪೂಜ್ಯೋ[೬]ಭಿಗಮ್ಯಶ್ಚೇತ್ಯೇ[೭]ಕೇ ಶ್ಲಾಘ್ಯಂ ವಚೋ ಜಗುಃ ॥**

ಕ್ರಮವಾಗಿ ದೇಶಗಳಲ್ಲಿ ವಿಹರಿಸುತ್ತ ನಮ್ಮ ಪುಣ್ಯದಿಂದ ಇಲ್ಲಿಗೆ ಬಂದನು. ಸ್ವಾಮಿಯು ವಂದಿಸುವುದಕ್ಕೆ ಯೋಗ್ಯನೂ ಪೂಜ್ಯನೂ ಅಭಿಮುಖವಾಗಿ ಹೋಗುವುದಕ್ಕೆ ಯೋಗ್ಯನೂ ಆಗಿದ್ದಾನೆ" ಎಂದು ಕೆಲವು ಜನರು ಶ್ಲಾಘ್ಯವಾದ ವಚನವನ್ನು ಹೇಳಿದರು.

**[೮]ಚೇಟಿ ಬಾಲಕಮಾದಾಯ ಸ್ತನಂ ಪಾಯಯ ಯಾಮ್ಯಹಮ್ ।**
**ದ್ರಷ್ಟುಂ ಭಗವತಃ ಪಾದಾವಿತಿ ಕಾಚಿತ್ಸ್ತ್ರ್ಯಭಾಷತ ॥ ೫೬ ॥**

"ಸೇವಕಳೆ ! ಮಗುವನ್ನು ತೆಗೆದುಕೊಂಡು ಸ್ತನವನ್ನು ಕುಡಿಸು. ನಾನು ಭಗವಂತನ ಪಾದಗಳನ್ನು ನೋಡುವುದಕ್ಕೆ ಹೋಗುತ್ತೇನೆ." ಎಂದು ಒಬ್ಬ ಸ್ತ್ರೀಯು ಮಾತನಾಡಿದಳು.

**[೯]ಪ್ರಸಾಧನಮಿದಂ ತಾವದಾಸ್ತಾಂ ಮೇ ಸಹ ಮಜ್ಜನಮ್ ।**
**ಪೂತೈರ್ದೃಷ್ಟಿಜಲೈರ್ಭರ್ತುಃ ಸ್ನಾಸ್ಯಾಮೀತ್ಯಪರಾ ಜಗುಃ ॥ ೫೭ ॥**

"ಜೊತೆಯಲ್ಲಿ ಸ್ನಾನಮಾಡುವುದೂ ಈ ನನ್ನ ಅಲಂಕಾರವೂ ಇರಲಿ. ಮೊದಲು ಭಗವಂತನ ಪವಿತ್ರವಾದ ದರ್ಶನವೆಂಬ ಜಲಗಳಿಂದ ಸ್ನಾನಮಾಡುವೆನು" ಎಂದು ಬೇರೊಬ್ಬಳು ಹೇಳಿದಳು.

**ಭಗವನ್ಮುಖಬಾಲಾರ್ಕದರ್ಶನಾ[೧೦]ನ್ನೋ ಮನೋಂಬುಜಮ್ ।**
**ಚಿರಂ ಪ್ರಬೋಧಮಾಯಾತು ಪಶ್ಯಾಮೋದ್ಯ ಜಗದ್ಗುರುಮ್ ॥ ೫೮ ॥**

"ಭಗವಂತನ ಮುಖವೆಂಬ ಬಾಲಸೂರ್ಯನ ದರ್ಶನದಿಂದ ನಮ್ಮ ಮನಸ್ಸೆಂಬ ಕಮಲವು ಬಹುಕಾಲದವರೆಗೆ ವಿಕಸಿತವಾಗಲಿ. ಈದಿನ ನಾವು ಜಗದ್ಗುರುವಾದ ಭಗವಂತನನ್ನು ನೋಡುತ್ತೇವೆ.

**[೧೧]ಖಲುಭುಕ್ತ್ವಾ [೧೨]ಲಘೂತ್ತಿಷ್ಠ ಗೃಹಾಣಾರ್ಘಮಿಮಂ ಸಖಿ ।**
**ಪೂಜಯಾಮೋ ಜಗತ್ಪೂಜ್ಯಂ ಗತ್ವೇತ್ಯನ್ಯಾ ಜಗೌ ಗಿರಮ್ ॥ ೫೯ ॥**

೧ ವಸ್ತ್ರಾದಿಃ. ೨ ಗತವಾನ್. ೩ ವನಂ ಪ್ರಸ್ಥಿತವಾನಿತಿ ವಚನಂ. ೪ ಅಬಾಧಃ. ೫ ಏಕಾಕೀ. ೬ ಅಭಿಮುಖಂ ಗಂತುಂ ಯೋಗ್ಯಃ. ೭ ಜನಾಃ. ೮ ಸಂಬೋಧನಂ. ೯ ಅಲಂಕಾರಃ. ೧೦ ಅಸ್ಮಾಕಂ. ೧೧ ಭೋಜನೇನಾಲಂ. ೧೨ ಶೀಘ್ರಂ.

ಸಖಿಯೆ ! ಭೋಜನಮಾಡುವುದು ಸಾಕು. ಶೀಘ್ರವಾಗಿ ಏಳು. ಈ ಅರ್ಘ್ಯವನ್ನು ತೆಗೆದುಕೋ. ಲೋಕಪೂಜ್ಯನಾದ ಸ್ವಾಮಿಯ ಬಳಿಗೆ ಹೋಗಿ ಪೂಜಿಸೋಣ'' ಎಂದು ಇನ್ನೊಬ್ಬಳು ಹೇಳಿದಳು.

**ಸ್ನಾನಾಶನಾದಿ[೧]ಸಾಮಗ್ರೀಮಪವಮತ್ಯ [೨]ಪುರೋಗತಾಮ್ ।**
**ಗತಾ ಏವ ತದಾ ಪೌರಾಃ ಪ್ರಭುಂ ದ್ರಷ್ಟುಂ [೩]ಪುರೋಗತಾಮ್ ॥ ೬೦ ॥**

ಆಗ ಪುರನಿವಾಸಿಗಳು ಮುಂದಿರುವ ಸ್ನಾನಭೋಜನಮೊದಲಾದ ಸಾಮಗ್ರಿಯನ್ನು ಪರಿತ್ಯಜಿಸಿ ಸ್ವಾಮಿಯನ್ನು ನೋಡುವುದಕ್ಕೋಸ್ಕರ ಅಗ್ರಗಾಮಿತ್ವವನ್ನೇ ಹೊಂದಿದರು. ಮುಂದೆ ಹೋದರೆಂದರ್ಥವು.

**ಗತಾನುಗತಿಕಾಃ ಕೇಚಿತ್ಕೇಚಿದ್ಭಕ್ತಿಮುಪಾಗತಾಃ ।**
**ಪರೇ [೪]ಕೌತುಕಸಾದ್ಭೂತಾ ಭೂತೇಶಂ ದ್ರಷ್ಟುಮುದ್ಯತಾಃ ॥ ೬೧ ॥**

ಕೆಲವರು ಬೇರೆಯವರನ್ನು ನೋಡಿ ಹಿಂಬಾಲಿಸಿ ಹೋಗಿ ಸ್ವಾಮಿಯನ್ನು ನೋಡುವುದಕ್ಕೆ ಉದ್ಯುಕ್ತರಾದರು. ಕೆಲವರು ಭಕ್ತಿಯನ್ನು ಹೊಂದಿದವರಾಗಿಯೂ ಕೆಲವರು ಆಶ್ಚರ್ಯಾಧೀನರಾಗಿಯೂ ಸ್ವಾಮಿಯನ್ನು ನೋಡುವುದಕ್ಕೆ ಉದ್ಯುಕ್ತರಾದರು.

**ಇತಿ ನಾನಾವಿಧೈರ್ಜಲ್ಪೈಃ ಸಂಕಲ್ಪೈಶ್ಚ [೫]ಹಿರುಕ್ಕೃತೈಃ ।**
**ತಮೀಕ್ಷಾಂಚಕ್ರಿರೇ ಪೌರಾ ದೂರಾತ್ತ್ರಾತಾರಮಾನತಾಃ ॥ ೬೨ ॥**

ಹೀಗೆ ನಾನಾವಿಧವಾದ ಭಾಷಣಗಳಿಂದಲೂ ಬೇರೆಬೇರೆ ಸಂಕಲ್ಪಗಳಿಂದಲೂ ನಮ್ರರಾದ ಪುರನಿವಾಸಿಗಳು ರಕ್ಷಕನಾದ ಸ್ವಾಮಿಯನ್ನು ದೂರದಿಂದ ನೋಡಿದರು.

**ಅಹಂ ಪೂರ್ವಮಹಂ ಪೂರ್ವಮಿತ್ಯು[೬]ಪೇತೈಃ ಸಮಂತತಃ ।**
**ತದಾ ರುದ್ಧಮಭೂತ್ಪೌರೈಃ ಪುರ[೭]ಮಾರಾಜಮಂದಿರಾತ್ ॥ ೬೩ ॥**

ಆಗ ನಾನುಮುಂದೆ ತಾನುಮುಂದೆ ಯೆಂದು ಎಲ್ಲಾಕಡೆಗಳಿಂದಲೂ ಬಂದು ಸೇರಿದ ಪುರನಿವಾಸಿಗಳಿಂದ ರಾಜಭವನದವರೆಗೂ ಪಟ್ಟಣವೆಲ್ಲ ತುಂಬಿ ಹೋಯಿತು.

**ಸ ತು ಸಂವೇಗವೈರಾಗ್ಯಸಿದ್ಧ್ಯೈ [೮]ಬದ್ಧಪರಿಚ್ಛದಃ ।**
**ಜಗತ್ಕಾಯಸ್ವಭಾವಾದಿತತ್ತ್ವಾ[೯]ನುಧ್ಯಾನ[೧೦]ಮಾಮನನ್ ॥ ೬೪ ॥**

ಆ ಸ್ವಾಮಿಯಾದರೋ ಧರ್ಮದಲ್ಲಿಯೂ ಧರ್ಮದ ಫಲದಲ್ಲಿಯೂ ಪ್ರೀತಿಯ ಸಿದ್ಧಿಗೋಸ್ಕರವೂ ವೈರಾಗ್ಯದ ಸಿದ್ಧಿಗೋಸ್ಕರವೂ ಶುಭಭಾವನಾಮೊದಲಾದ ಸಲಕರಣವುಳ್ಳವರೂ ಜಗತ್ತಿನಸ್ವಭಾವ ಶರೀರಸ್ವಭಾವ ಮೊದಲಾದ ತತ್ತ್ವಗಳ ಸ್ಮರಣೆಯನ್ನು ಅಭ್ಯಾಸಮಾಡುವವರೂ

**ಮೈತ್ರೀಪ್ರಮೋದಕಾರುಣ್ಯಮಾಧ್ಯಸ್ಥಾನ್ಯನುಭಾವಯನ್ ।**
**ಸತ್ತ್ವಸ್ವಷ್ಟಿಗುಣೋತ್ಕೃಷ್ಟಕ್ಲಿಷ್ಟಾನಿಷ್ಟಾನುಶಿಷ್ಟಿಷು ॥ ೬೫ ॥**

ಪ್ರಾಣಿಸಮೂಹದಲ್ಲಿ ಮಿತ್ರಭಾವವನ್ನೂ ಹೆಚ್ಚು ಗುಣವುಳ್ಳವರಲ್ಲಿ ಪ್ರಮೋದ ಭಾವವನ್ನೂ ದುಃಖಪಡುವವರಲ್ಲಿ ಕಾರುಣ್ಯಭಾವವನ್ನೂ ಅನಿಷ್ಟ ಕಾರ್ಯವನ್ನು ಮಾಡುವವರಲ್ಲಿ ಮಾಧ್ಯಸ್ಥಭಾವವನ್ನೂ ಭಾವಿಸುವವರೂ

**ಯುಗಪ್ರಮಿತಮಧ್ವಾನಂ ಪಶ್ಯನ್ನಾತಿವಿಲಂಬಿತಮ್ ।**
**ನಾತಿದ್ರುತಂ ಚ ವಿನ್ಯಸ್ಯನ್ಪದಂ ಗಂಧೇಭಲೀಲಯಾ ॥ ೬೬ ॥**

ನೊಗದಷ್ಟು ಪರಿಮಾಣವುಳ್ಳ ಮಾರ್ಗವನ್ನು ಮುಂದೆ ನೋಡಿಕೊಂಡು ಹೆಚ್ಚು ವಿಳಂಬವಿಲ್ಲದೆಯೂ ಹೆಚ್ಚು ತ್ವರೆಯಿಲ್ಲದೆಯೂ ಮದಗಜದ ಲೀಲೆಯಿಂದ ಪಾದವನ್ನಿರಿಸುವವರೂ

೧ ಪೂಜಾದ್ರವ್ಯಂ. ೨ ಅಗ್ರೇ ಸ್ಥಿತಾಂ. ೩ ಅಗ್ರಗಾಮಿತ್ವಂ. ೪ ಆಶ್ಚರ್ಯಾಧೀನಾಃ. ೫ ಪೃಥಕ್ಕೃತೈಃ ಹಿರುಜ್ಞಾನಾ ಚ ವರ್ಜನೇ. ೬ ಸಂಭೂತೈಃ. ೭ ರಾಜಭವನಪರ್ಯಂತಂ. ೮ ಶುಭಭಾವನಾದಿಪರಿಕರಃ. ೯ ಅನುಸ್ಮರಣಂ. ೧೦ ಅಭ್ಯಾಸಂ ಕುರ್ವನ್.

**ತಥಾಪ್ಯಸ್ಮಿನ್ ಜನಾಕೀರ್ಣೇ ಶೂನ್ಯಾರಣ್ಯಕೃತಾಸ್ಥಯಾ ।**
**[೧]ನಿರ್ವ್ಯಗ್ರೋ ಭಗವಾಂ[೨]ಶ್ಚಾಂದ್ರೀಂ [೩]ಚರ್ಯಾಮಾಶ್ರಿತ್ಯ ಪರ್ಯಟನ್ ॥**

ಹಾಗೆಯೇ ಸ್ವಾಮಿಯು ಜನಭರಿತವಾದ ಈ ಹಸ್ತಿನಪುರದಲ್ಲಿಯೂ ಶೂನ್ಯವಾದ ಅರಣ್ಯವೆಂಬ ಬುದ್ಧಿಯಿಂದ ನಿರಾಕುಲರಾಗಿ ಚಂದ್ರಸಂಬಂಧವಾದ ಗಮನವನ್ನು (ಮಂದಗಮನವನ್ನು) ಆಶ್ರಯಿಸಿ ಸಂಚರಿಸುವವರೂ

**ಗೇಹಂ ಗೇಹಂ ಯಥಾಯೋಗ್ಯಂ ಪ್ರವಿಶನ್ರಾಜಮಂದಿರಮ್ ।**
**ಪ್ರವೇಷ್ಟುಕಾಮೋಭ್ಯಗಮತ್ಸೋಽಯಂ ಧರ್ಮಃ ಸನಾತನಃ ॥ ೬೮ ॥**

ಯೋಗ್ಯತಾನುಸಾರವಾಗಿ ಪ್ರತಿಯೊಂದು ಮನೆಗೂ ಪ್ರವೇಶಮಾಡಿ ರಾಜಭವನವನ್ನು ಪ್ರವೇಶಮಾಡಬೇಕೆಂಬ ಇಚ್ಛೆಯುಳ್ಳವರೂ ಆಗಿ ರಾಜಭವನಕ್ಕಭಿಮುಖರಾಗಿ ಹೋದರು. ಬೇರೆ ಮನೆಗಳಲ್ಲಿ ವಿಧಿಪೂರ್ವಕವಾದ ಆಹಾರವು ದೊರೆಯದಿದ್ದುದರಿಂದ ಕೊನೆಗೆ ರಾಜಭವನವನ್ನು ಪ್ರವೇಶಮಾಡುವುದಕ್ಕೆ ಇಚ್ಛೆಪಟ್ಟರೆಂದು ಭಾವವು. ಇದೇ ಅನಾದಿಪರಂಪರೆಯಿಂದ ಬಂದ ಧರ್ಮವು.

**ತತಃ ಸಿದ್ಧಾರ್ಥನಾಮೈತ್ಯ ದ್ರುತಂ ದೌವಾರಪಾಲಕಃ ।**
**[೪]ಭಗವತ್ಸನ್ನಿಧಿಂ ರಾಜ್ಞೇ ಸಾನುಜಾಯ ನ್ಯವೇದಯತ್ ॥ ೬೯ ॥**

ತರುವಾಯ ಸಿದ್ಧಾರ್ಥನೆಂಬ ದ್ವಾರಪಾಲಕನು ಶೀಘ್ರವಾಗಿ ಹೋಗಿ ಭಗವಂತನ ಆಗಮನವನ್ನು ರಾಜನಿಗೂ ಅವನ ಅನುಜನಿಗೂ ನಿವೇದಿಸಿದನು.

**ಅಥ ಸೋಮಪ್ರಭೋ ರಾಜಾ ಶ್ರೇಯಾನಪಿ ಯುವಾ ನೃಪಃ ।**
**ಸಾಂತಃಪುರೌ ಸಸೇನಾನ್ಯೌ ಸಾಮಾತ್ಯಾವುದತಿಷ್ಠತಾಮ್ ॥ ೭೦ ॥**

ತರುವಾಯ ಸೋಮಪ್ರಭರಾಜನೂ ಯುವಕನಾದ ಶ್ರೇಯಾಂಸರಾಜನೂ ಅಂತಃಪುರಜನಸಹಿತರೂ ಸೇನಾಪತಿಸಹಿತರೂ ಮಂತ್ರಿಸಹಿತರೂ ಆಗಿ ಎದ್ದು ನಿಂತರು.

**[೫]ಪ್ರತ್ಯುದ್ಗಮ್ಯ ತತೋ ಭಕ್ತ್ಯಾ [೬]ಯಾವದ್ರಾಜಾಂಗಣಾದ್ಬಹಿಃ ।**
**ದೂರಾದವನತೌ ಭರ್ತುಶ್ಚರಣೌ ತೌ ಪ್ರಣೇಮತುಃ ॥ ೭೧ ॥**

ತರುವಾಯ ಭಕ್ತಿಯಿಂದ ರಾಜಾಂಗಣದ ಹೊರಕ್ಕೆ ಸ್ವಾಮಿಗೆ ಅಭಿಮುಖವಾಗಿ ಹೋಗಿ ದೂರದಿಂದ ನಮ್ರರಾದ ಆ ರಾಜರಿಬ್ಬರೂ ಭಗವಂತನ ಕಾಲುಗಳಿಗೆ ನಮಸ್ಕಾರ ಮಾಡಿದರು.

**[೭]ಸಾರ್ಘ್ಯಂ [೮]ಪಾದ್ಯಂ [೯]ನಿವೇದ್ಯಾಂಘ್ರ್ಯೋಃ ಪರೀತ್ಯ ಚ ಜಗದ್ಗುರುಮ್ ।**
**ತೌ ಪರಂ ಜಗ್ಮತುಸ್ತೋಷಂ ನಿಧಾವಿವ ಗೃಹಾಗತೇ ॥ ೭೨ ॥**

ಅವರಿಬ್ಬರೂ ಜಗದ್ಗುರುವಾದ ಸ್ವಾಮಿಗೆ ಪ್ರದಕ್ಷಿಣೆಬಂದು ರತ್ನಮೊದಲಾದ ಪದಾರ್ಥಸಹಿತವಾದ ಜಲವನ್ನು ಪಾದಗಳಿಗೆ ಸಮರ್ಪಿಸಿ, ನಿಧಿಯು ಮನೆಗೆ ಬಂದಂತೆ, ಅಧಿಕವಾದ ಸಂತೋಷವನ್ನು ಹೊಂದಿದರು.

**ತೌ ದೇವದರ್ಶನಾತ್ಪ್ರೀತೌ ಗಾತ್ರೇ [೧೦]ಪುಲಕಮೂಹತುಃ ।**
**ಮಲಯಾನಿಲಸಂಸ್ಪರ್ಶಾದ್ಭೂರುಹಾವಂಕುರಂ ಯಥಾ ॥ ೭೩ ॥**

ಮಲಯ ಪರ್ವತದ ಗಾಳಿಯ ಸ್ಪರ್ಶದಿಂದ ವೃಕ್ಷಗಳು ಅಂಕುರವನ್ನು ಧರಿಸುವಂತೆ, ಆ ಸೋಮಪ್ರಭಶ್ರೇಯಾಂಸರು ಸ್ವಾಮಿಯ ದರ್ಶನದಿಂದ ಸಂತುಷ್ಟರಾಗಿ ಶರೀರದಲ್ಲಿ ರೋಮಾಂಚನಗೊಂಡರು.

೧ ನಿರಾಕುಲಃ. ೨ ಚಂದ್ರಸಂಧಿನೀಂ. ೩ ಗತಿಂ. ೪ ಭಗವದಾಗಮನಂ. ೫ ಸಂಮುಖಂ ಗತ್ವಾ. ೬ ರಾಜಾಂಗಣದ್ವಾರಬಹಿಃಪ್ರದೇಶಪರ್ಯಂತಮಿತ್ಯರ್ಥಃ. ೭ ರತ್ನಾದಿಪದಾರ್ಥಸಹಿತಂ. ೮ ಪಾದಾಯ ವಾರಿ. ೯ ಸಮರ್ಪ್ಯ. ೧೦ ರೋಮಾಂಚಂ.

**ಭಗವನ್ಮುಖಸಂಪ್ರೇಕ್ಷಾವಿಕಸನ್ಮುಖಪಂಕಜೌ ।**
**ವಿಬುದ್ಧಕಮಲೌ [೧]ಪ್ರಾತಸ್ತನೌ ಪದ್ಮಾಕರಾವಿವ ॥ ೭೪ ॥**

**ಪ್ರಮೋದನಿರ್ಭರೌ ಭಕ್ತಿಭರಾನಮಿತಮಸ್ತಕೌ ।**
**[೨]ಪ್ರಶ್ರಯಪ್ರಶಮೌ ಮೂರ್ತಾವಿವ ತೌ ರೇಜತುಸ್ತದಾ ॥ ೭೫ ॥**

ಪ್ರಾತಃಕಾಲದಲ್ಲಿ ಉಂಟಾದ ಅರಳಿದ ಕಮಲಗಳುಳ್ಳ ಕಮಲಸರೋವರಗಳಂತೆ, ಭಗವಂತನ ಮುಖಕಮಲದ ಸಂದರ್ಶನದಿಂದ ವಿಕಸಿತವಾದ ಮುಖಕಮಲಗಳುಳ್ಳವರೂ ಆನಂದಭರಿತರೂ ಭಕ್ತಿಯ ಭಾರದಿಂದ ನಮ್ರವಾದ ಮಸ್ತಕವುಳ್ಳವರೂ ಆದ ಆ ರಾಜಕುಮಾರರು ಆಗ ಆಕಾರವನ್ನು ಧರಿಸಿದ ವಿನಯ ಮತ್ತು ಉಪಶಮ(ಶಾಂತಿ)ಗಳಂತೆ, ಶೋಭಿಸಿದರು.

**ಭಗವಚ್ಚರಣೋಪಾಂತೇ ತೌ ತದಾ ಭೇಜತುಃ ಶ್ರಿಯಮ್ ।**
**ಸೌಧರ್ಮೈಶಾನಕಲ್ಪೇಶೌ ವಿಭುಂ ದ್ರಷ್ಟುಮಿವಾಗತೌ ॥ ೭೬ ॥**

ಆಗ ಭಗವಂತನ ಪಾದಸಮೀಪದಲ್ಲಿ ಆ ರಾಜಕುಮಾರರಿಬ್ಬರೂ, ಸ್ವಾಮಿಯನ್ನು ನೋಡುವುದಕ್ಕೆ ಬಂದ ಸೌಧರ್ಮ ಈಶಾನಕಲ್ಪಗಳ ಇಂದ್ರರಂತೆ, ಶೋಭಿಸಿದರು.

**ಪರ್ಯಂತವರ್ತಿನೋರ್ಮಧ್ಯೇ ತಯೋರ್ಭರ್ತಾ ಸ್ಮ ರಾಜತೇ ।**
**ಮಹಾಮೇರುರಿವೋದ್ಭೂತೋ ಮಧ್ಯೇ ನಿಷಧನೀಲಯೋಃ ॥ ೭೭ ॥**

ಸಮೀಪದಲ್ಲಿರುವ ಆ ರಾಜಕುಮಾರರ ಮಧ್ಯದಲ್ಲಿ ಸ್ವಾಮಿಯು, ನಿಷಧ ನೀಲಪರ್ವತಗಳ ಮಧ್ಯದಲ್ಲಿ ಉದ್ಭವಿಸಿದ ಮಹಾಮೇರುಪರ್ವತದಂತೆ, ಶೋಭಿಸಿದರು.

**ಸಂಪ್ರೇಕ್ಷ್ಯ ಭಗವದ್ರೂಪಂ ಶ್ರೇಯಾಞ್ಜಾತಿಸ್ಮರೋಭವತ್ ।**
**[೩]ತತೋ ದಾನೇ ಮತಿಂ ಚಕ್ರೇ ಸಂಸ್ಕಾರೈಃ ಪ್ರಾಕ್ತನೈರ್ಯುತಃ ॥ ೭೮ ॥**

ಶ್ರೇಯಾಂಸಕುಮಾರನು ಭಗವಂತನ ರೂಪವನ್ನು ನೋಡಿ ಜಾತಿಸ್ಮರಣೆಯುಳ್ಳವನಾದನು. ಆ ಜಾತಿಸ್ಮರಣೆಯಿಂದ ಪೂರ್ವಭವದ ಸಂಸ್ಕಾರಗಳಿಂದ ಯುಕ್ತನಾಗಿ ದಾನದಲ್ಲಿ ಮನಸ್ಸುಮಾಡಿದನು. ಪೂರ್ವಭವದಲ್ಲಿ ಚಾರಣ ಮುನಿಗಳಿಗೆ ಕೊಟ್ಟ ಆಹಾರದಾನದ ವಿಧಿಯು ಸ್ಮರಣೆಗೆ ಬಂದುದರಿಂದ ಸ್ವಾಮಿಗೆ ಆಹಾರ ದಾನವನ್ನು ಕೊಡುವುದಕ್ಕೆ ಉದ್ಯುಕ್ತನಾದನೆಂದು ಭಾವವು.

**ಶ್ರೀಮತೀವಜ್ರಜಂಘಾದಿವೃತ್ತಾಂತಂ ಸರ್ವಮೇವ ತತ್ ।**
**ತದಾ ಚಾರಣಯುಗ್ಮಾಯ ದತ್ತಂ ದಾನಂ ಚ [೪]ಸೋ[೫]ಧ್ಯಗಾತ್ ॥ ೭೯ ॥**

ಆ ಶ್ರೇಯಾಂಸರಾಜನು ಶ್ರೀಮತೀವಜ್ರಜಂಘಮೊದಲಾದ ಆ ಎಲ್ಲಾವೃತ್ತಾಂತವನ್ನೂ ಆಗ ಇಬ್ಬರು ಚಾರಣಮುನಿಗಳಿಗೆ ಕೊಟ್ಟ ದಾನವನ್ನೂ ಸ್ಮರಿಸಿದನು.

**[೬]ಸತೀ [೭]ಗೋಚಾರವೇಲೇಯಂ ದಾನಯೋಗ್ಯಾ ಮುನೀಶಿನಾಮ್ ।**
**[೮]ತೇನ ಭರ್ತ್ರೇ [೯]ದದ್ಮೈ ದಾನಮಿತಿ ನಿಶ್ಚಿತ್ಯ ಪುಣ್ಯಧೀಃ ॥ ೮೦ ॥**

**ಶ್ರದ್ಧಾದಿಗುಣಸಂಪನ್ನಃ ಪುಣ್ಯೈರ್ನವಭಿರನ್ವಿತಃ ।**
**[೧೦]ಪ್ರಾದಾದ್ಭಗವತೇ ದಾನಂ ಶ್ರೇಯಾ[೧೧]ನ್ದಾನಾದಿತೀರ್ಥಕೃತ್ ॥ ೮೧ ॥**

"ಇದು ಮುನಿಗಳಿಗೆ ದಾನಕೊಡುವುದಕ್ಕೆ ಯೋಗ್ಯವೂ ಶ್ರೇಷ್ಠವೂ ಆದ ಭಿಕ್ಷಾಕಾಲವಾಗಿದೆ. ಆದುದರಿಂದ ಸ್ವಾಮಿಗೆ ದಾನವನ್ನು ಕೊಡುತ್ತೇನೆ" ಎಂದು ನಿಶ್ಚಯಿಸಿ ಪುಣ್ಯಕರವಾದ ಬುದ್ಧಿಯುಳ್ಳವನೂ ಶ್ರದ್ಧಾ ಶಕ್ತಿ ಮೊದಲಾದ ಗುಣಸಂಪನ್ನನೂ ಒಂಬತ್ತು ಪುಣ್ಯಗಳಿಂದ ಯುಕ್ತನೂ ದಾನವೆಂಬ ತೀರ್ಥದ ಪ್ರಥಮಪ್ರವರ್ತಕನೂ ಆದ ಶ್ರೇಯಾಂಸರಾಜನು ಭಗವಂತನಿಗೆ ದಾನವನ್ನು ಕೊಟ್ಟನು.

೧ ಪ್ರಾತಃಕಾಲೇ ಸಂಜಾತೌ. ೨ ವಿನಯೋಪಶಮೌ. ೩ ಜಾತಿಸ್ಮರಣಾತ್. ೪ ಶ್ರೇಯೋಮಹೀಪಾಲಃ. ೫ ಅಸ್ಮರತ್. ೬ ಸಮೀಚೀನಾ. ೭ ಭಿಕ್ಷಾಕಾಲಃ. ೮ ಕಾರಣೇನ. ೯ ತಂಜ್‌ಲೇಡುತ್ತಮಪುರುಷಃ. ೧೦ ದದಾತಿ ಸ್ಮ. ೧೧ ಪ್ರಥಮದಾನತೀರ್ಥಕೃದಿತ್ಯರ್ಥಃ.

**ಶ್ರದ್ಧಾ ಶಕ್ತಿಶ್ಚ ಭಕ್ತಿಶ್ಚ ವಿಜ್ಞಾನಂ ಚಾಪ್ಯಲುಬ್ಧತಾ ।**
**ಕ್ಷಮಾ ತ್ಯಾಗಶ್ಚ ಸಪ್ತೈತೇ ಪ್ರೋಕ್ತಾ ದಾನಪತೇರ್ಗುಣಾಃ ॥ ೮೨ ॥**

ಶ್ರದ್ಧಾ ಶಕ್ತಿ ಭಕ್ತಿ ವಿಜ್ಞಾನ ಅಲುಬ್ಧತೆ ಕ್ಷಮಾ ತ್ಯಾಗ ಈ ಏಳು ದಾನಕೊಡುವವನ ಗುಣಗಳೆಂದು ಹೇಳಲ್ಪಟ್ಟಿವೆ.

**ಶ್ರದ್ಧಾ[೧]ಸ್ತಿಕ್ಯಮನಾಸ್ತಿಕ್ಯೇ ಪ್ರದಾನೇ ಸ್ಯಾದನಾದರಃ ।**
**ಭವೇಚ್ಛಕ್ತಿರನಾಲಸ್ಯಂ ಭಕ್ತಿಃ ಸ್ಯಾ[೨]ತ್ತದ್ಗುಣಾದರಃ ॥ ೮೩ ॥**

ದಾನದಲ್ಲಿ ಆಸ್ತಿಕ್ಯ (ಪರಲೋಕಮೊದಲಾದುದಿದೆ) ಬುದ್ಧಿಯೂ ನಾಸ್ತಿಕ್ಯದಲ್ಲಿ ಪ್ರೀತಿಯಿಲ್ಲದಿರುವಿಕೆಯೂ ಶ್ರದ್ಧೆಯೆನಿಸುವುದು. ದಾನದಲ್ಲಿ ಆಲಸ್ಯವಿಲ್ಲದಿರುವಿಕೆಗೆ ಶಕ್ತಿಯೆಂದು ಹೆಸರು. ಪಾತ್ರನಲ್ಲಿರುವ ಗುಣಗಳ ಪ್ರೀತಿಗೆ ಭಕ್ತಿಯೆಂದು ಹೆಸರು.

**ವಿಜ್ಞಾನಂ ಸ್ಯಾತ್ಕ್ರಮಜ್ಞತ್ವಂ [೩]ದೇಯಾಸಕ್ತಿರಲುಬ್ಧತಾ ।**
**ಕ್ಷಮಾ [೪]ತಿತಿಕ್ಷಾ [೫]ದದತಸ್ತ್ಯಾಗಃ [೬]ಸದ್ವ್ಯಯಶೀಲತಾ ॥ ೮೪ ॥**

ದಾನದ ವಿಧಿಯ ತಿಳಿವಳಿಕೆಗೆ ವಿಜ್ಞಾನವೆಂದು ಹೆಸರು. ಕೊಡುವುದಕ್ಕೆ ಯೋಗ್ಯವಾದ ವಸ್ತುಗಳಲ್ಲಿ ಆಸಕ್ತಿ(ಲೋಭ)ಯಿಲ್ಲದಿರುವಿಕೆಗೆ ಅಲುಬ್ಧತೆಯೆಂದು ಹೆಸರು. ಕೋಪವಿಲ್ಲದಿರುವಿಕೆಗೆ ಕ್ಷಮೆಯೆಂದು ಹೆಸರು. ಕೊಡುವುದಕ್ಕೆ ಯೋಗ್ಯವಾದ ವಸ್ತುವನ್ನು ಸತ್ಪಾತ್ರಗಳಲ್ಲಿ ವ್ಯಯಮಾಡುವುದಕ್ಕೆ ತ್ಯಾಗವೆಂದು ಹೆಸರು.

**ಇತಿ ಸಪ್ತಗುಣೋಪೇತೋ ದಾತಾ ಸ್ಯಾ[೭]ತ್ಪಾತ್ರಸಂಪದಿ ।**
**ವ್ಯಪೇತಶ್ಚ ನಿದಾನಾದೇರ್ದೋಷಾನ್ನಿಃಶ್ರೇಯಸೋದ್ಯತಃ ॥ ೮೫ ॥**

ಹೀಗೆ ಏಳುಗುಣಗಳಿಂದ ಯುಕ್ತನೂ ಮುಂದಿನ ಭವದ ಸುಖಾಭಿಲಾಷೆ ಮೊದಲಾದ ದೋಷರಹಿತನೂ ಮೋಕ್ಷದಲ್ಲಿ ಉದ್ಯುಕ್ತನೂ ಆದವನು, ಶ್ರೇಷ್ಠವಾದ ಪಾತ್ರವು ದೊರಕಿದಾಗ, ದಾತೃವೆನಿಸುವನು.

**[೮]ಪ್ರತಿಗ್ರಹಣಮತ್ಯುಚ್ಚೈಃ ಸ್ಥಾನೇ[೯]ಸ್ಯ ವಿನಿವೇಶನಮ್ ।**
**ಪಾದ[೧೦]ಪ್ರಧಾವನಂ ಚಾ[೧೧]ರ್ಚಾ ನತಿಃ ಶುದ್ಧಿಶ್ಚ ಸಾ [೧೨]ತ್ರಯೀ ॥ ೮೬ ॥**

**[೧೩]ವಿಶುದ್ಧಿಶ್ಚಾಶನಸ್ಯೇತಿ ನವ ಪುಣ್ಯಾನಿ ದಾನಿನಾಮ್ ।**
**ಸ ತಾನಿ ಕುಶಲೋ ಭೇಜೇ [೧೪]ಪೂರ್ವಸಂಸ್ಕಾರಚೋದಿತಃ ॥ ೮೭ ॥**

ಪಾತ್ರದ ಸ್ಥಾಪನೆ (ತಡೆದುನಿಲ್ಲಿಸುವಿಕೆ) ಉನ್ನತವಾದ ಸ್ಥಾನದಲ್ಲಿ ಕುಳ್ಳಿರಿಸುವಿಕೆ ಪಾದಪ್ರಕ್ಷಾಲನೆ ಪೂಜೆ ನಮಸ್ಕಾರ ಮನಃಶುದ್ಧಿ ವಚನಶುದ್ಧಿ ಕಾಯಶುದ್ಧಿ ಆಹಾರಶುದ್ಧಿ ಈ ಒಂಬತ್ತು ದಾತೃಗಳ ಪುಣ್ಯಗಳಾಗಿವೆ. ಚತುರನೂ ಪೂರ್ವಭವಸಂಸ್ಕಾರಪ್ರೇರಿತನೂ ಆದ ಆ ಶ್ರೇಯಾಂಸಕುಮಾರನು ಆ ಪುಣ್ಯಗಳನ್ನು ಪಡೆದಿದ್ದನು.

**ಇಷ್ಟಶ್ಚಾ[೧೫]ಯಂ ವಿಶಿಷ್ಟಶ್ಚೇತ್ಯ[೧೬]ಸೌ ತುಷ್ಟಿಂ ಪರಾಂ ಶ್ರಿತಃ ।**
**ದದೇ ಭಗವತೇ ದಾನಂ ಪ್ರಾಸುಕಾಹಾರಕಲ್ಪಿತಮ್ ॥ ೮೮ ॥**

ಈ ಸ್ವಾಮಿಯು ಇಷ್ಟನೂ ವಿಶೇಷಗುಣಗಳುಳ್ಳವನೂ ಆಗಿದ್ದಾನೆಂದು ಈ ಶ್ರೇಯಾಂಸಕುಮಾರನು ಅಧಿಕವಾದ ಸಂತೋಷವನ್ನು ಹೊಂದಿದವನಾಗಿ ಭಗವಂತನಿಗೆ ಶುದ್ಧವಾದ ಆಹಾರದಾನವನ್ನು ಮಾಡಿದನು.

೧ ಅಸ್ತಿಪರಲೋಕಾದಿಕಮಿತಿ ಮತಿರ್ಯಸ್ಯ ಸ ಆಸ್ತಿಕಸ್ತಸ್ಯ ಭಾವಃ. ೨ ಪಾತ್ರಗುಣಪ್ರೀತಿಃ. ೩ ದೇಯವಸ್ತುಷ್ವನಾಸಕ್ತಿಃ. ೪ ಕ್ಷಾಂತಿಃ. ೫ ದೇಯವಸ್ತುನಃ. ೬ ಸತ್ಪಾತ್ರೇಷು ವ್ಯಯಶೀಲತಾ. ೭ ಪಾತ್ರಸಮೃದ್ಧೌ ಸತ್ಯಾಂ. ೮ ಸ್ಥಾಪನಂ. ೯ ಪಾತ್ರಸ್ಯ. ೧೦ ಪ್ರಕ್ಷಾಲನಂ. ೧೧ ಅರ್ಚನಂ. ೧೨ ಮನೋವಾಕ್ಕಾಯಸಂಬಂಧಿನೀ. ೧೩ ಏಷಣಾಶುದ್ಧಿರಿತ್ಯರ್ಥಃ. ೧೪ ಪೂರ್ವಭವಸಂಸ್ಕಾರಪ್ರೇರಿತಃ. ೧೫ ದೇವಃ. ೧೬ ಶ್ರೇಯಾನ್.

[೧]ಸಂತೋಷೋ ಯಾಚನಾಪಾಯೋ ನೈಃಸಂಗ್ಯಂ [೨]ಸ್ವಪ್ರಧಾನತಾ ।
ಇತಿ ಮತ್ವಾ ಗುಣಾನ್ಪಾಣಿಪಾತ್ರೇಣಾಹಾರಮಿಚ್ಛತೇ ॥ ೮೯ ॥

ಪಾಣಿಪಾತ್ರದಲ್ಲಿ ಸಂತೋಷ ಯಾಚಿಸದಿರುವಿಕೆ ಪರಿಗ್ರಹರಹಿತತ್ವ ಆತ್ಮಪ್ರಧಾನತ್ವ ಈ ಗುಣಗಳಿವೆಯೆಂದು ತಿಳಿದು ಕೈಗಳಿಂದ ಆಹಾರವನ್ನಿಚ್ಛಿಸುವವನೂ

[೩]ತುಷ್ಟಿರ್ವಿಶಿಷ್ಟಪೀಠಾದಿಸಂಪ್ರಾಪ್ತಾ[೪]ವನ್ಯಥಾ [೫]ದ್ವಿಷಿಃ ।
ಅಸಂಯಮಶ್ಚ [೬]ಸತ್ಯೇವಮಿತಿ [೭]ಸ್ಥಿತ್ವಾಶನ್ಯೈಷಿಣೇ ॥ ೯೦ ॥

ಉತ್ತಮವಾದ ಪೀಠಮೊದಲಾದ ಆಸನಗಳು ಪ್ರಾಪ್ತವಾದರೆ ಸಂತೋಷವೂ ಇಲ್ಲದಿದ್ದರೆ ದ್ವೇಷವೂ ಉಂಟಾಗುತ್ತಿರಲು ಚಾರಿತ್ರವು ಕೆಡುವುದೆಂದು ತಿಳಿದು ನಿಂತುಕೊಂಡು ಭೋಜನವನ್ನಿಚ್ಛಿಸುವವನೂ

[೮]ಕಾಯಾಸುಖತಿತಿಕ್ಷಾರ್ಥಂ ಸುಖಾಸಕ್ತೇಶ್ಚ ಹಾನಯೇ ।
ಧರ್ಮಪ್ರಭಾವನಾರ್ಥಂ ಚ ಕಾಯಕ್ಲೇಶ[೯]ಮುಪೇಯುಷೇ ॥ ೯೧ ॥

ಶರೀರದುಃಖವನ್ನು ಸಹಿಸುವುದಕ್ಕೋಸ್ಕರವೂ ಸುಖದ ಇಚ್ಛೆಯನ್ನು ಕಡಿಮೆ ಮಾಡುವುದಕ್ಕೋಸ್ಕರವೂ ಧರ್ಮಪ್ರಭಾವನೆಗೋಸ್ಕರವೂ ಶರೀರಕ್ಲೇಶವನ್ನು ಹೊಂದಿದವನೂ

[೧೦]ನೈಷ್ಕಿಂಚನ್ಯಪ್ರಧಾನಂ ಯತ್ಪರಂ ನಿರ್ವಾಣಕಾರಣಮ್ ।
ಹಿಂಸಾರಕ್ಷಣಯಾಚ್ಞಾದಿದೋಷೈರಸ್ಪೃಷ್ಟಮೂರ್ಜಿತಮ್ ॥ ೯೨ ॥

[೧೧]ಅಶಕ್ಯಂ [೧೨]ಪ್ರಾರ್ಥನೀಯತ್ವರಹಿತಂ ಚ ಸಮೀಯುಷೇ ।
ಜಾತರೂಪಂ ಯಥಾಜಾತಮವಿಕಾರಮವಿಪ್ಲವಮ್ ॥ ೯೩ ॥

ಮೋಕ್ಷಕ್ಕೆ ಮುಖ್ಯಕಾರಣವೂ ನಿಷ್ಪರಿಗ್ರಹತ್ವಪ್ರಧಾನವೂ ಹಿಂಸಾ ರಕ್ಷಣ ಯಾಚನಾ ಮೊದಲಾದ ದೋಷಗಳಿಲ್ಲದಿರುವುದೂ ಶ್ರೇಷ್ಠವೂ ಬೇರೆಯವರಿಂದ ಮಾಡಲಶಕ್ಯವೂ ಸಂಸಾರಸಂಬಂಧವಾದ ಕರ್ತವ್ಯರಹಿತವೂ ಹುಟ್ಟಿದಕಾಲದಲ್ಲಿ ಹೇಗಿದ್ದಿತೋ ಹಾಗೇ ಇರುವುದೂ ವಿಕಾರರಹಿತವೂ ಬಾಧಾರಹಿತವೂ ಆದ ದಿಗಂಬರತ್ವವನ್ನು ಹೊಂದಿದವನೂ

ತೈಲಾದೇರ್ಯಾಚನಂ [೧೩]ತಸ್ಯ ಲಾಭಾಲಾಭದ್ವಯೇ ಸತಿ ।
ರಾಗದ್ವೇಷದ್ವಯಾಸಂಗಃ ಕೇಶಜಪ್ರಾಣಿಹಿಂಸನಮ್ ॥ ೯೪ ॥

ಇತ್ಯಾದಿದೋಷಸದ್ಭಾವಾದಸ್ನಾನವ್ರತಧಾರಿಣೇ ।
[೧೪]ಹಾಯನಾನಶನೇಪ್ಯಂಗೇ ಪುಷ್ಟಿಂ ದೀಪ್ತಿಂ ಚ ಬಿಭ್ರತೇ ॥ ೯೫ ॥

ಎಣ್ಣೆಮೊದಲಾದ ಪದಾರ್ಥವನ್ನು ಕೇಳುವಿಕೆ ಪ್ರಾಪ್ತವಾದರೆ ಪ್ರೀತಿಮಾಡುವಿಕೆ ಇಲ್ಲದಿದ್ದರೆ ದ್ವೇಷಮಾಡುವಿಕೆ ಕೂದಲುಗಳಲ್ಲಿ ಹುಟ್ಟಿದ ಪ್ರಾಣಿಗಳ ಹಿಂಸೆ ಮೊದಲಾದ ದೋಷಗಳಿರುವುದರಿಂದ ಸ್ನಾನಮಾಡದಿರುವ ವ್ರತವನ್ನು ಧರಿಸಿದವನೂ ಒಂದುವರ್ಷದ ಉಪವಾಸದಲ್ಲಿಯೂ ಶರೀರದಲ್ಲಿ ಪುಷ್ಟಿಯನ್ನೂ ಕಾಂತಿಯನ್ನೂ ಧರಿಸಿದವನೂ

[೧೫]ಕ್ಷುರಕ್ರಿಯಾಯಾಂ ತದ್ಯೋಗ್ಯ[೧೬]ಸಾಧನಾರ್ಜನರಕ್ಷಣೇ ।
ತದಪಾಯೇ ಚ ಚಿಂತಾ ಸ್ಯಾತ್ಕೇಶೋತ್ಪಾಟ[೧೭]ಮಿತೀಚ್ಛತೇ ॥ ೯೬ ॥

ಮುಂಡನಕಾರ್ಯದಲ್ಲಿ ಅದಕ್ಕೆ ಯೋಗ್ಯವಾದ ಅಸ್ತ್ರದ ಸಂಪಾದನೆಯೂ ರಕ್ಷಣೆಯೂ ಆ ಅಸ್ತ್ರವು ಕಳೆದುಹೋದರೆ ಚಿಂತೆಯೂ ಆಗುವುದೆಂದು ತಿಳಿದು ಕೂದಲುಗಳನ್ನು ಕಿತ್ತುಕೊಳ್ಳುವುದಕ್ಕಿಚ್ಛಿಸುವವನೂ

೧ ವಿಷಯವೈತೃಷ್ಣ್ಯಂ. ೨ ಆತ್ಮೈವ ಪ್ರಧಾನತ್ವಂ. ೩ ಸಂತೋಷಃ. ೪ ಕುತ್ಸಿತಪೀಠಾದಿಪ್ರಾಪ್ತೌ. ೫ ದ್ವೇಷಃ. ೬ ಸ್ಯಾದಿತ್ಯಧ್ಯಾಹಾರಃ. ೭ ಸ್ಥಿತಿಭೋಜನಮಿಚ್ಛತೇ ತಸ್ಮೈ. ೮ ಶರೀರದುಃಖಸಹನಾರ್ಥಂ. ೯ ಗತಾಯ. ೧೦ ನಾಸ್ತಿ ಕಿಂಚನ ಯಸ್ಯಾಸಾವಕಿಂಚನಸ್ತಸ್ಯ ಭಾವಃ. ೧೧ ಅನ್ಯೈರನುಷ್ಠಾತುಮಶಕ್ಯಂ. ೧೨ ಕರ್ತವ್ಯತ್ವರಹಿತಂ. ೧೩ ತೈಲಾದೇಃ. ೧೪ ಸಂವತ್ಸರೋಪವಾಸೇಪಿ. ೧೫ ಮುಂಡನೇ. ೧೬ ಶಸ್ತ್ರಾದೇಃ. ೧೭ ಇತಿ ಮತ್ವಾ ಕೇಶೋತ್ಪಾಟನಮಿಚ್ಛತೇ.

[೧]ಪಂಚಭಿಃ ಶಮಿತಾಯಾಸ್ಮೈ ತ್ರಿಭಿರ್ಗುಪ್ತಾಯ [೨]ತಾಯಿನೇ ।
ಮಹಾವ್ರತಾಯ ಮಹತೇ ನಿರ್ಮೋಹಾಯ [೩]ನಿರಾಶಿಷೇ ॥ ೯೭ ॥

ಈರ್ಯಾಸಮಿತಿ ಭಾಷಾಸಮಿತಿ ಮೊದಲಾದ ಐದು ಸಮಿತಿಗಳುಳ್ಳವನೂ ಮನೋಗುಪ್ತಿ ವಚನಗುಪ್ತಿ ಕಾಯಗುಪ್ತಿ ಈ ತ್ರಿಗುಪ್ತಿಗಳುಳ್ಳವನೂ ರಕ್ಷಕನೂ ಮಹಾವ್ರತವುಳ್ಳವನೂ ಮಹಾತ್ಮನೂ ಮೋಹರಹಿತನೂ ಇಚ್ಛಾರಹಿತನೂ

ಸಂಯಮಕ್ರಿಯಯಾ ಸರ್ವಪ್ರಾಣಿಭ್ಯೋಭಯದಾಯಿನೇ ।
[೪]ಸರ್ವೀಯಜ್ಞಾನದಾನಾಯ ಸಾರ್ವಾಯ [೫]ಪ್ರಭವಿಷ್ಣವೇ ॥ ೯೮ ॥

ಆಚಾರಕ್ರಿಯೆಯಿಂದ ಸರ್ವಪ್ರಾಣಿಗಳಿಗೂ ಅಭಯದಾನಮಾಡುವವನೂ ಸರ್ವಪ್ರಾಣಿಗಳಿಗೂ ಹಿತಕಾರವಾದ ಜ್ಞಾನದಾನಮಾಡುವವನೂ ಸರ್ವಪ್ರಾಣಿಗಳಿಗೂ ಹಿತಕರನೂ ಸಮರ್ಥನೂ

ದಾತುರಾ[೬]ಹಾರದಾನಸ್ಯ [೭]ಮಹಾನಿಸ್ತಾರಕಾತ್ಮನೇ ।
ತ್ರಿಜಗತ್ಸರ್ವಭೂತಾನಾಂ ಹಿತಾರ್ಥಂ ಮಾರ್ಗದೇಶಿನೇ ॥ ೯೯ ॥

ಆಹಾರದಾನವನ್ನು ಮಾಡುವ ದಾತೃವನ್ನು ಸಂಸಾರಸಮುದ್ರದಿಂದ ದಾಟಿಸುವ ಆತ್ಮನುಳ್ಳವನೂ ಮೂರುಲೋಕದಲ್ಲಿರುವ ಸರ್ವಪ್ರಾಣಿಗಳ ಹಿತಕ್ಕೋಸ್ಕರ ಸನ್ಮಾರ್ಗವನ್ನುಪದೇಶಿಸುವವನೂ

ಶ್ರೇಯಾನ್ಸೋಮಪ್ರಭೇಣಾ[೮]ಮಾ [೯]ಲಕ್ಷ್ಮೀಮತ್ಯಾ ಚ ಸಾದರಮ್ ।
ರಸಮಿಕ್ಷೋ[೧೦]ರದಾ[೧೧]ತ್ಪ್ರಾಸು[೧೨]ಮುತ್ತಾನೀಕೃತಪಾಣಯೇ ॥ ೧೦೦ ॥

ಮೇಲ್ಮುಖವಾಗಿ ಮಾಡಿದಕೈಗಳುಳ್ಳವನೂ ಆದ ವೃಷಭಸ್ವಾಮಿಗೆ ಶ್ರೇಯಾಂಸಕುಮಾರನು ಸೋಮಪ್ರಭುನೂ ಆತನ ಪತ್ನಿಯಾದ ಲಕ್ಷ್ಮೀಮತಿಯೂ ಸಹಿತನಾಗಿ ಪ್ರೀತಿಯಿಂದ ಪ್ರಾಸುಕ(ನಿರ್ದೋಷ)ವಾದ ಕಬ್ಬಿನರಸವನ್ನು ಕೊಟ್ಟನು.

ಪುಂಡ್ರೇಕ್ಷುರಸಧಾರಾಂ ತಾಂ ಭಗವತ್ಪಾಣಿಪಾತ್ರಕೇ ।
ಸ ಸಮಾವರ್ಜಯನ್ ರೇಜೇ ಪುಣ್ಯಧಾರಾಮಿವಾಮಲಾಮ್ ॥ ೧೦೧ ॥

ನಿರ್ಮಲವಾದ ಪುಣ್ಯಧಾರೆಯಂತಿರುವ ಆ ರಸದಾಳಿ ಕಬ್ಬುಗಳ ರಸಧಾರೆಯನ್ನು ಭಗವಂತನ ಪಾಣಿಪಾತ್ರದಲ್ಲಿ ಸುರಿಯುತ್ತಿರುವ ಆ ಶ್ರೇಯಾಂಸಕುಮಾರನು ಅಧಿಕವಾಗಿ ಶೋಭಿಸಿದನು.

ರತ್ನವೃಷ್ಟಿರಥಾಪಪ್ತದಂಬರಾದಮರೇಶಿನಾಮ್ ।
ಕರೈರ್ಮುಕ್ತಾ ಮಹಾದಾನಫಲಸ್ಯೇವ ಪರಂಪರಾ ॥ ೧೦೨ ॥

ತರುವಾಯ ಶ್ರೇಷ್ಠರಾದ ದೇವತೆಗಳ ಕೈಗಳಿಂದ ಬಿಡಲ್ಪಟ್ಟ ರತ್ನಗಳ ವೃಷ್ಟಿಯು ಮಹಾದಾನದ ಫಲಪರಂಪರೆ(ಸಾಲು)ಯೋ ಎಂಬಂತೆ, ಆಕಾಶದಿಂದ ಬಿದ್ದಿತು.

ತದಾಪಪ್ತದ್ದಿವೋ ದೇವಕರೈರ್ಮುಕ್ತಾಲಿಸಂಕುಲಾ ।
ವೃಷ್ಟಿಃ [೧೩]ಸುಮನಸಾಂ ದೃಷ್ಟಿಮಾಲೇವ ತ್ರಿದಿವೌಕಸಾಮ್ ॥ ೧೦೩ ॥

ಆಗ ದೇವತೆಗಳ ಕೈಗಳಿಂದ ಬಿಡಲ್ಪಟ್ಟ ಮತ್ತು ಭ್ರಮರಗಳಿಂದ ವ್ಯಾಪ್ತವಾದ ಪುಷ್ಪವೃಷ್ಟಿಯು ದೇವತೆಗಳ ನೇತ್ರಗಳ ಮಾಲಿಕೆಯೋ ಎಂಬಂತೆ, ಸ್ವರ್ಗದಿಂದ ಬಿದ್ದಿತು.

[೧೪]ನೇದುಃ ಸುರಾನಕಾ ಮಂದ್ರಂ ಬಧಿರೀಕೃತವಿಷ್ಟಪಾಃ ।
ಸಂಚಚಾರ ಮರು[೧೫]ಚ್ಛೀತಃ ಸುರಭಿರ್ಮಾಂದ್ಯಸುಂದರಃ ॥ ೧೦೪ ॥

ಲೋಕವನ್ನು ಕಿವುಡುಮಾಡುತ್ತಿರುವ ದೇವದುಂದುಭಿಗಳು ಗಂಭೀರವಾಗಿ ಶಬ್ದಮಾಡಿದುವು. ಶೈತ್ಯ ಸೌರಭ್ಯ (ಪರಿಮಳ) ಮಾಂದ್ಯ ಈ ಗುಣಗಳಿಂದ ರಮಣೀಯವಾದ ಗಾಳಿಯು ಬೀಸಿತು.

೧ ಪಂಚಸಮಿತಿಯುಕ್ತಾಯೇತ್ಯರ್ಥಃ. ೨ ಪಾಲಕಾಯ. ೩ ಇಚ್ಛಾರಹಿತಾಯ. ೪ ಸರ್ವಹಿತಂ. ೫ ಶಕ್ತಾಯ. ೬ ಕರ್ಮಣಿ ಷಷ್ಠೀ. ೭ ಸಂಸಾರಸಾಗರತಾರಕಾತ್ಮನೇ. ೮ ಸಹ. ೯ ಸೋಮಪ್ರಭಪತ್ನ್ಯಾ. ೧೦ ದದಾತಿ ಸ್ಮ. ೧೧ ಪ್ರಾಸುಕಂ. ೧೨ ಊರ್ಧ್ವಮುಖೋದ್ಧೃತಹಸ್ತಾಯ. ೧೩ ಪುಷ್ಪಾಣಾಂ. ೧೪ ಧ್ವನಂತಿ ಸ್ಮ. ೧೫ ಶೀತಲಃ.

**ಪ್ರೋಚ್ಚಚಾರ ಮಹಾನ್ಧ್ವಾನೋ ದೇವಾನಾಂ ಪ್ರೀತಿ[1]ಮೀಯುಷಾಮ್ ।**
**ಅಹೋ ದಾನಮಹೋ ಪಾತ್ರಮಹೋ ದಾತೇತಿ ಖಾಂಗಣೇ ॥ ೧೦೫ ॥**

ಪ್ರೀತಿಯನ್ನು ಹೊಂದಿದ ದೇವತೆಗಳ ''ಅಹೋ ದಾನವು ! ಅಹೋ ಪಾತ್ರವು ! ಅಹೋ ದಾತೃವು !'' ಎಂಬ ಮಹಾಶಬ್ದವು ಆಕಾಶದಲ್ಲಿ ಕೊಂಡಾಡಿತು. ಮೂರೂ ಅಸದೃಶವಾದುವೆಂದು ಭಾವವು.

**ಕೃತಾರ್ಥತರಮಾತ್ಮಾನಂ ಮೇನೇ ತದ್ಭ್ರಾತೃಯುಗ್ಮಕಮ್ ।**
**ಕೃತಾರ್ಥೋಽಪಿ [2]ವಿಭುರ್ಯಸ್ಮಾದಪುನಾ[3]ತ್ಸ್ವಂ ಗೃಹಾಂಗಣಮ್ ॥**

ಸ್ವಾಮಿಯು ಕೃತಾರ್ಥರಾಗಿದ್ದರೂ ತಮ್ಮ ಮನೆಯ ಅಂಗಣವನ್ನು ತಮ್ಮ ಪಾದಸ್ಪರ್ಶದಿಂದ ಪವಿತ್ರಮಾಡಿದುದರಿಂದ ಆ ಇಬ್ಬರು ಸಹೋದರರೂ ತಮ್ಮನ್ನು ಅತ್ಯಂತ ಕೃತಾರ್ಥರನ್ನಾಗಿ ತಿಳಿದರು.

**ದಾನಾನುಮೋದನಾತ್ಪುಣ್ಯಂ ಪರೇಽಪಿ ಬಹವೋಽಭಜನ್ ।**
**ಯಥಾಸಾದ್ಯ ಪರಂ ರತ್ನಂ ಸ್ಫಟಿಕಸ್ತದ್ರುಚಿಂ ಭಜೇತ್ ॥ ೧೦೭ ॥**

ಬೇರೆ ಅನೇಕ ಜನರೂ ದಾನವನ್ನು ನೋಡಿ ಅನುಮೋದದಿಂದ ಸ್ಫಟಿಕವು ಶ್ರೇಷ್ಠವಾದ ರತ್ನವನ್ನು ಹೊಂದಿ ಆ ರತ್ನದ ಕಾಂತಿಯನ್ನು ಪಡೆಯುವಂತೆ, ಪುಣ್ಯವನ್ನು ಪಡೆದರು.

**ಕಾರಣಂ ಪರಿಣಾಮಃ ಸ್ಯಾದ್ಬಂಧನೇ ಪುಣ್ಯಪಾಪಯೋಃ ।**
**ಬಾಹ್ಯಂ ತು ಕಾರಣಂ ಪ್ರಾಹುರಾಪ್ತಾಃ [4]ಕಾರಣಕಾರಣಮ್ ॥ ೧೦೮ ॥**

ಪುಣ್ಯಪಾಪಗಳ ಬಂಧದಲ್ಲಿ ಕಾರಣವು ತನ್ನ ಪರಿಣಾಮವಾಗಿದೆ. ಆಪ್ತರು ಬಾಹ್ಯಕಾರಣವನ್ನು ಕಾರಣ(ಪರಿಣಾಮ)ಕ್ಕೆ ಕಾರಣವನ್ನಾಗಿ ಹೇಳುತ್ತಾರೆ. ಪುಣ್ಯ ಪಾಪಗಳ ಬಂಧಕ್ಕೆ ಪರಿಣಾಮವು ಮುಖ್ಯಕಾರಣವೆಂದು ಭಾವವು.

**ಪರಿಣಾಮಃ [5]ಪ್ರಧಾನಾಂಗಂ ಯತಃ ಪುಣ್ಯಸ್ಯ ಸಾಧನೇ ।**
**ಮತಂ [6]ತತೋಽನುಮಂತೄಣಾ[7]ಮಾದಿಷ್ಟಸ್ತತ್ಫಲೋದಯಃ ॥ ೧೦೯ ॥**

ಪುಣ್ಯಸಾಧನದಲ್ಲಿ ಪರಿಣಾಮವು ಮುಖ್ಯಕಾರಣವೆಂದು ಸಮ್ಮತವಾಗಿರುವುದರಿಂದ ಅನುಮೋದಿಸುವವರಿಗೂ ಪುಣ್ಯದ ಫಲವುಂಟಾಗುವುದೆಂದು ಹೇಳಲ್ಪಟ್ಟಿದೆ.

**[8]ಕೃತ್ವಾ ತನುಸ್ಥಿತಿಂ ಧೀಮಾನ್ಯೋಗೀಂದ್ರೋ ಜಾತಕೌತುಕೌ ।**
**ಪ್ರಣತಾವ[9]ಭಿನಂದ್ಯೈತೌ ಭ್ರಾತರೌ [10]ಪ್ರಸ್ಥಿತೋ ವನಮ್ ॥ ೧೧೦ ॥**

ಜ್ಞಾನಿಯಾದ ಭಗವಂತನು ಆಹಾರವನ್ನು ಸ್ವೀಕರಿಸಿ ಕುತೂಹಲವುಳ್ಳವರೂ ನಮಸ್ಕರಿಸುತ್ತಿರುವವರೂ ಆದ ಆ ಸಹೋದರರನ್ನು ಸಂತೋಷಪಡಿಸಿ ವನಕ್ಕೆ ಹೊರಟುಹೋದನು.

**ಭಗವಂತಮನುವ್ರಜ್ಯ ವ್ರಜಂತಂ ಕಿಂಚಿದಂತರಮ್ ।**
**ಸ [11]ಶ್ರೇಯಾನ್ಕು[12]ರುಶಾರ್ದೂಲೋ ನ್ಯವೃತನ್ನಿಭೃತಂ ಪುನಃ ॥ ೧೧೧ ॥**

ಕುರುವಂಶಶ್ರೇಷ್ಠನಾದ ಆ ಶ್ರೇಯಾಂಸನು ನಿಶ್ಶಬ್ದವಾಗಿ ಹೋಗುತ್ತಿರುವ ಭಗವಂತನನ್ನು ಹಿಂಬಾಲಿಸಿ ಸ್ವಲ್ಪದೂರ ಹೋಗಿ ಪುನಃ ಹಿಂದಿರುಗಿದನು.

**ನಿರ್ವ್ಯಪೇಕ್ಷಂ ವ್ರಜಂತಂ ತಂ ಭಗವಂತಂ ವನಾಂತರಮ್ ।**
**ಪರಾವರ್ತ್ಯ ಮುಖಂ ಕಿಂಚಿದ್ವೀಕ್ಷಮಾಣಾವನುಕ್ಷಣಮ್ ॥ ೧೧೨ ॥**

೧ ಪ್ರಾಪ್ತವತಾಂ. ೨ ತೀರ್ಥಂಕರಃ. ೩ ಅಸ್ಮದೀಯಂ. ೪ ತಾಸಃ. ೫ ಮುಖ್ಯಕಾರಣಂ. ೬ ತಸ್ಮಾತ್ಕಾರಣಾತ್. ೭ ಮಹೀಷ್ಟ ಇತ್ಯಪಿ ಪಾಠಃ. ೮ ಆಹಾರಂ ಸ್ವೀಕೃತ್ಯ. ೯ ಸಂತೋಷಂ ನೀತ್ವಾ. ೧೦ ಗತಃ. ೧೧ ಸಾನುಜಃ. ೧೨ ಕುರುಶ್ರೇಷ್ಠಃ.

ಯಾವ ಅಪೇಕ್ಷೆಯೂ ಇಲ್ಲದೆ ಅರಣ್ಯಮಧ್ಯಕ್ಕೆ ಹೋಗುತ್ತಿರುವ ಆ ಭಗವಂತನನ್ನು ಪ್ರತಿಕ್ಷಣದಲ್ಲಿಯೂ ಮುಖವನ್ನು ಸ್ವಲ್ಪ ತಿರುಗಿಸಿ ನೋಡುವವರೂ

**ತದುನ್ಮುಖೀಂ ದೃಶಂ ಚೇತೋವೃತ್ತಿಂ ಚ ತಮನೂತ್ಥಿತಾಮ್ ।**
**ಯಾವದ್ದೃಗ್ಗೋಚರಸ್ತಾವನ್ನಿವರ್ತಯಿತುಮಕ್ಷಮೌ ॥ ೧೧೩ ॥**

ಆ ಭಗವಂತನಿಗೆ ಅಭಿಮುಖವಾದ ನೇತ್ರವನ್ನೂ ಆ ಸ್ವಾಮಿಯನ್ನನುಸರಿಸಿ ಉಂಟಾದ ಮನೋವ್ಯಾಪಾರವನ್ನೂ ಸ್ವಾಮಿಯು ಕಣ್ಣಿಗೆ ಕಾಣುವವರೆಗೂ ಹಿಂದಿರುಗಿಸುವುದಕ್ಕೆ ಅಸಮರ್ಥರೂ

**ಸಂಕಥಾಂ ತದ್ಗತಾಮೇವ ಪ್ರಸ್ತುವಾನೌ ಮುಹುರ್ಮುಹುಃ ।**
**ಸ್ತುವಾನೌ ತದ್ಗುಣಾನ್ಭೂಯೋ ಮನ್ವಾನೌ [1]ಸ್ವಾಂ ಕೃತಾರ್ಥತಾಮ್ ॥**

ಆ ಭಗವಂತನ ವಿಷಯವನ್ನೇ ಬಾರಿಬಾರಿಗೂ ಪ್ರಕೃತವನ್ನಾಗಿ ಮಾಡುವವರೂ (ಮಾತನಾಡುವವರೂ) ಪುನಃಪುನಃ ಆ ಸ್ವಾಮಿಯ ಗುಣಗಳನ್ನು ಹೊಗಳುವವರೂ ತಮ್ಮ ಕೃತಾರ್ಥತೆಯನ್ನು ತಿಳಿಯುವವರೂ

**ಭಗವತ್ಪಾದಸಂಸ್ಪರ್ಶಪೂತಾಂ [2]ಕ್ಷ್ಮಾಂ ವ್ಯಕ್ತಲಕ್ಷಣೈಃ ।**
**ತತ್ಪದೈರಂಕಿತಾಂ ಪ್ರೀತ್ಯಾ [3]ನಿಧ್ಯಾಯಂತೌ ಕೃತಾನತೀ ॥ ೧೧೫ ॥**

ಭಗವಂತನ ಪಾದಸ್ಪರ್ಶದಿಂದ ಪವಿತ್ರವೂ ಸ್ಫುಟವಾದ ಲಕ್ಷಣಗಳುಳ್ಳ ಆ ಸ್ವಾಮಿಯ ಪಾದಗಳಿಂದ ಅಂಕಿತವೂ ಆದ ಭೂಮಿಯನ್ನು ಪ್ರೀತಿಯಿಂದ ನಮಸ್ಕರಿಸಿ ನೋಡುವವರೂ

**ಸುಭ್ರಾತಾ [4]ಕುರುನಾಥೋಽಯಂ ಕೃತಾರ್ಥಃ ಸುಕೃತೀ [5]ಕೃತೀ ।**
**ಯಸ್ಯಾಯಮೀದೃಶೋ ಭ್ರಾತಾ ಜಾತೋ ಜಾತಮಹೋದಯಃ ॥**

''ಯಾವನಿಗೆ ಇಂತಹ ಮಹಾಭಾಗ್ಯಶಾಲಿಯಾದ ಈ ಸಹೋದರನು ಹುಟ್ಟಿದನೋ ಅಂತಹ ಕುರುವಂಶಾಧಿಪತಿಯಾದ ಈ ಸೋಮಪ್ರಭರಾಜನು ಒಳ್ಳೆಯ ಸಹೋದರನುಳ್ಳವನೂ ಕೃತಾರ್ಥನೂ ಪುಣ್ಯಶಾಲಿಯೂ ಕುಶಲನೂ ಆದನು.

**ಶ್ರೇಯಾನಯಂ ಬಹುಶ್ರೇಯಾನ್ಪ್ರಜ್ಞಾ ಯಸ್ಯೇಯಮೀದೃಶೀ ।**
**ಪೌರೈರಿ[6]ತ್ಯುನ್ಮುಖೈರಾರಾತ್ಕೀರ್ತ್ಯಮಾನಗುಣೋತ್ಕರೌ ॥ ೧೧೭ ॥**

ಯಾವನ ಬುದ್ಧಿಯು ಈಪ್ರಕಾರವಾದುದೋ ಅಂತಹ ಈ ಶ್ರೇಯಾಂಸ ಕುಮಾರನೂ ಬಹಳ ಪುಣ್ಯವುಳ್ಳವನು'' ಈ ರೀತಿಯಾಗಿ ಅಭಿಮುಖರಾದ ಪುರನಿವಾಸಿಗಳಿಂದ ಸಮೀಪದಲ್ಲಿ ಸ್ತೋತ್ರಮಾಡಲ್ಪಡುವವರೂ

**[7]ಶೂರ್ಪೋನ್ಮೇಯಾನಿ ರತ್ನಾನಿ ಮಹಾವೀಥೀಷ್ವಿತಸ್ತತಃ ।**
**[8]ಸಂಚಿನ್ವಾನಾನ್ಯಥಾಕಾಮಮಾನಂದಂತೌ [9]ಪೃಥಗ್ಜನಾನ್ ॥ ೧೧೮ ॥**

ದೊಡ್ಡ ಬೀದಿಗಳಲ್ಲಿ ಈಕಡೆ ಆಕಡೆ ಮೊರದಿಂದ ತುಂಬಿಕೊಳ್ಳುವುದಕ್ಕೆ ಯೋಗ್ಯವಾದ ರತ್ನಗಳನ್ನು ಯಥೇಚ್ಛವಾಗಿ ಸ್ವೀಕರಿಸುತ್ತಿರುವ ಸಾಧಾರಣಜನರನ್ನು ಆನಂದಪಡಿಸುವವರೂ

**[10]ಉಚ್ಚಾವಚಸುರೋನ್ಮುಕ್ತರತ್ನ[11]ಗ್ರಾವತತಾಂತರಮ್ ।**
**ಕ್ರಾಂತ್ವಾ ನೃಪಾಂಗಣಂ ಕೃಚ್ಛ್ರಾಜ್ಜನೈರಾಶಾಸಿತೌ ಮುಹುಃ ॥ ೧೧೯ ॥**

ದೇವತೆಗಳಿಂದ ಸುರಿಯಲ್ಪಟ್ಟ ನಾನಾ ಪ್ರಕಾರವಾದ ರತ್ನದ ಕಲ್ಲುಗಳಿಂದ ವ್ಯಾಪ್ತವಾದ ಪ್ರದೇಶವುಳ್ಳ ರಾಜಾಂಗಣವನ್ನು ಕಷ್ಟದಿಂದ ದಾಟಿ ಜನರಿಂದ ಬಾರಿಬಾರಿಗೂ ಆಶೀರ್ವಾದ ಮಾಡಲ್ಪಟ್ಟವರೂ

೧ ಸ್ವಕೃತಾರ್ಥತಾಮಿತ್ಯಪಿ ಪಾಠಃ. ೨ ಭೂಮಿಂ. ೩ ವಿಲೋಕಯಂತೌ. ೪ ಸೋಮಪ್ರಭಃ. ೫ ಕುಶಲಃ. ೬ ಅಭಿಮುಖೈಃ. ೭ ಪ್ರಸ್ಫೋಟನೇನೋನ್ಮಾತುಂ ಯೋಗ್ಯಾನಿ. ೮ ಸ್ವೀಕುರ್ವಾಣಾನಿ. ೯ ಸಾಧಾರಣಜನಾನ್. ೧೦ ನಾನಾಭೇದಃ. ೧೧ ಪಾಷಾಣವಿಸ್ತೃತಾವಕಾಶಂ.

[೧]ಪುರಂ ಪರಾರ್ಧ್ಯಶೋಭಾಭಿರ್ಗತಮನ್ಯಾಮಿವಾಕೃತಿಮ್ ।
ಪ್ರಾವಿಕ್ಷತಾಂ [೨]ಧೃತಾನಂದಂ ಪ್ರೇಕ್ಷ್ಯಮಾಣೌ ಕುರು[೩]ಧ್ವಜೌ ॥ ೧೨೦ ॥

ಸಂತೋಷದಿಂದ ನೋಡಲ್ಪಡುತ್ತಿರುವವರೂ ಕುರುವಂಶಶ್ರೇಷ್ಠರೂ ಆದ ಆ ಸೋಮಪ್ರಭಶ್ರೇಯಾಂಸರಾಜರಿಬ್ಬರೂ ಅಪಾರವಾದ ಶೋಭೆಗಳಿಂದ ಬೇರೆ ಆಕಾರವನ್ನು ಹೊಂದಿದೆಯೋ ಎಂಬಂತಿರುವ ತಮ್ಮ ಮಂದಿರವನ್ನು ಪ್ರವೇಶಿಸಿದರು.

ತಪೋವನಮಥೋ ಭೇಜೇ ಭಗವಾನ್ಕೃತಪಾರಣಃ ।
[೪]ಜಗಜ್ಜನತಯಾ ಸಮ್ಯಗಭಿಷ್ಟುತಮಹೋದಯಃ ॥ ೧೨೧ ॥

ತರುವಾಯ ಪಾರಣೆ(ಭೋಜನ)ಯನ್ನು ಮಾಡಿದ ಸ್ವಾಮಿಯು ಜಗತ್ತಿನ ಜನಸಮೂಹದಿಂದ ಚೆನ್ನಾಗಿ ಸ್ತೋತ್ರಮಾಡಲ್ಪಟ್ಟ ಮಹಾಭ್ಯುದಯವುಳ್ಳವರಾಗಿ ತಪೋವನವನ್ನು ಸೇರಿದರು.

[೫]ಅಹೋ ಶ್ರೇಯ [೬]ಇತಿ ಶ್ರೇಯ[೭]ಸ್ತಥ್ಯೈ ್ರೇಯಶ್ಚೇತ್ಯಭೂತ್ತದಾ ।
[೮]ಶ್ರೇಯೋ ಯಶೋಮಯಂ ವಿಶ್ವಂ ಸದ್ದಾನಂ ಹಿ ಯಶಃಪ್ರದಮ್ ॥

ಆಗ ''ಆಶ್ಚರ್ಯಕರನಾದ ಶ್ರೇಯಾಂಸನು ! ಈಪ್ರಕಾರನಾದ ಶ್ರೇಯಾಂಸನು ! ಆಪ್ರಕಾರನಾದ ಶ್ರೇಯಾಂಸನು !'' ಎಂದು ಜಗತ್ತೆಲ್ಲ ಶ್ರೇಯಾಂಸನ ಯಶೋಮಯವಾಯಿತು. ಉತ್ತಮವಾದ ದಾನವು ಯಶಸ್ಸನ್ನು ಕೊಡುವುದಲ್ಲವೇ ?

ತದಾದಿ [೯]ತದುಪಜ್ಞಂ ತದ್ದಾನಂ ಜಗತಿ ಪಪ್ರಥೇ ।
ತತೋ ವಿಸ್ಮಯಮಾಸೇದುರ್ಭರತಾದ್ಯಾ ನರೇಶ್ವರಾಃ ॥ ೧೨೩ ॥

ಶ್ರೇಯಾಂಸರಾಜನು ಮೊದಲನೆಯವನಾಗುಳ್ಳದೂ ಆ ಶ್ರೇಯಾಂಸರಾಜನಿಂದ ಮೊದಲು ಪ್ರಾರಂಭಿಸಲ್ಪಟ್ಟದ್ದೂ ಆದ ಆ ದಾನವು ಲೋಕದಲ್ಲಿ ಹರಡಿತು. ಆದುದರಿಂದ ಭರತಮೊದಲಾದ ರಾಜರು ಆಶ್ಚರ್ಯವನ್ನು ಹೊಂದಿದರು.

ಕಥಂ ಭರ್ತುರಭಿಪ್ರಾಯೋ ವಿದಿತೋ[೧೦]ನೇನ ಮೌನಿನಃ ।
[೧೧]ಕಲಯನ್ನಿತಿ ಚಿತ್ತೇನ ಭರತೇಶೋ ವಿಸಿಷ್ಮಿಯೇ ॥ ೧೨೪ ॥

''ಈ ಶ್ರೇಯಾಂಸನು ಮುನಿಯಾದ ಪ್ರಭುವಿನ ಅಭಿಪ್ರಾಯವನ್ನು ಹೇಗೆ ತಿಳಿದನು ?'' ಹೀಗೆ ಮನಸ್ಸಿನಿಂದ ವಿಚಾರಮಾಡಿದ ಭರತರಾಜನು ಆಶ್ಚರ್ಯವನ್ನು ಹೊಂದಿದನು.

ಸುರಾಶ್ಚ ವಿಸ್ಮಯಂತೇ ಸ್ಮ ತೇ ಸಂಭೂಯ ಸಮಾಗತಾಃ ।
[೧೨]ಪ್ರತೀತಾಃ ಕುರುರಾಜಂ ತಂ ಪೂಜಯಾಮಾಸುರಾದರಾತ್॥ ೧೨೫ ॥

ಸಮೂಹಸೇರಿ ಬಂದವರೂ ವಿಶ್ವಾಸವನ್ನು ಹೊಂದಿದವರೂ ಪ್ರಸಿದ್ಧರೂ ಆದ ದೇವತೆಗಳೂ ಆಶ್ಚರ್ಯಪಟ್ಟರು. ಪ್ರೀತಿಯಿಂದ ಆ ಕುರುರಾಜನಾದ ಶ್ರೇಯಾಂಸನನ್ನು ಪೂಜಿಸಿದರು.

ತತೋ ಭರತರಾಜೇನ ಶ್ರೇಯಾನ[೧೩]ಪ್ರಚ್ಛಿ ಸಾದರಮ್ ।
ಮಹಾದಾನಪತೇ ಬ್ರೂಹಿ ಕಥಂ ಜ್ಞಾತ[೧೪]ಮಿದಂ ತ್ವಯಾ ॥ ೧೨೬ ॥

ತರುವಾಯ ಭರತರಾಜನು ಶ್ರೇಯಾಂಸನನ್ನು ಆದರಪೂರ್ವಕವಾಗಿ ''ಮಹಾದಾನಕ್ಕೆ ಪ್ರಭುವೆ ! ನೀನು ಇದನ್ನು(ದಾನಕೊಡುವ ವಿಧಿಯನ್ನು) ಹೇಗೆ ತಿಳಿದೆ ? ಹೇಳು'' ಎಂದು ಪ್ರಶ್ನೆಮಾಡಿದನು.

೧ ಆಗಾರೇ ನಗರೇ ಪುರಂ, ಮಂದಿರಮಿತ್ಯರ್ಥಃ. ೨ ವಿಹಿತಸಂತೋಷಂ ಯಥಾತಥಾ. ೩ ಮುಖ್ಯೌ. ೪ ಜಗಜ್ಜನಸಮೂಹೇನ. ೫ ಆಶ್ಚರ್ಯಭೂತಃ ಶ್ರೇಯಾನ್ ಯಸ್ಮಿನ್ ತತ್. ೬ ಈದೃಕ್ ಶ್ರೇಯಾನ್ಯಸ್ಮಿನ್ ತತ್. ೭ ತಾದೃಕ್ ಶ್ರೇಯಾನ್ಯಸ್ಮಿನ್ ತತ್. ೮ ಶ್ರೇಯೋನೃಪಸ್ಯ ಯಶಸಃ ಪ್ರಚುರಂ ಯಸ್ಮಿನ್ ತತ್. ೯ ತೇನ ಪ್ರಥಮೋಪಕ್ರಾಂತಂ. ೧೦ ಶ್ರೇಯೋನೃಪೇಣ. ೧೧ ವಿಚಾರಯನ್. ೧೨ ವಿಶ್ವಾಸಂ ಗತಾಃ. ೧೩ ಪೃಷ್ಟಃ. ೧೪ ದಾನವಿಧಾನಂ.

ಅದೃಷ್ಟಪೂರ್ವಂ ಲೋಕೇಸ್ಮಿನ್ದಾನಂ ಕೋರ್ಹತಿ ವೇದಿತುಮ್ ।
ಭಗವಾನಿವ ಪೂಜ್ಯೋಸಿ ಕುರುರಾಜ ತ್ವಮದ್ಯ ನಃ ॥ ೧೨೭ ॥

''ಎಲೈ ಕುರುರಾಜನೆ ! ಈ ಲೋಕದಲ್ಲಿ ಮೊದಲು ಕಾಣದಿದ್ದ ದಾನವನ್ನು ತಿಳಿಯುವುದಕ್ಕೆ ಯಾವನು ಯೋಗ್ಯನು ? ನೀನು ನಮಗೆ ಈಗ ಸ್ವಾಮಿಯಂತೆ ಪೂಜ್ಯನಾಗಿರುತ್ತಿ.

ತ್ವಂ ದಾನ[೧]ತೀರ್ಥಕೃಚ್ಛ್ರೇಯಾಂಸ್ತ್ವಂ ಮಹಾಪುಣ್ಯಭಾಗಸಿ ।
ತತಸ್ತ್ವಾಮಿತಿ ಪೃಚ್ಛಾಮಿ [೨]ಯತ್ಸತ್ಯಂ ಕಥಯಾದ್ಯ ಮೇ ॥ ೧೨೮ ॥

ಶ್ರೇಷ್ಠನಾದ ನೀನು ದಾನತೀರ್ಥಪ್ರವರ್ತಕನೂ ಮಹಾಪುಣ್ಯಭಾಗಿಯೂ ಆಗಿರುತ್ತಿ. ಆದುದರಿಂದ ನಿನ್ನನ್ನು ಈ ರೀತಿಯಾಗಿ ಪ್ರಶ್ನೆಮಾಡುತ್ತೇನೆ. ಈಗ ನನಗೆ ಸತ್ಯವನ್ನು ಹೇಳು.''

ಇತ್ಯಸೌ [೩]ತೇನ ಸಂಪೃಷ್ಟಃ ಶ್ರೇಯಾನ್ನೃಪಮಬ್ರವೀದಿದಮ್ ।
ದಶನಾಂಶು[೪]ಕಲಾಪೇನ ಜ್ಯೋತ್ಸ್ನಾಂ ತನ್ವನ್ನಿವಾ[೫]ಂತರೇ ॥ ೧೨೯ ॥

ಈಪ್ರಕಾರವಾಗಿ ಆ ಭರತರಾಜನಿಂದ ಪ್ರಶ್ನೆಮಾಡಲ್ಪಟ್ಟ ಈ ಶ್ರೇಯಾಂಸರಾಜನು, ಮಧ್ಯದಲ್ಲಿ ಹಲ್ಲುಗಳ ಕಿರಣಸಮೂಹದಿಂದ ಬೆಳದಿಂಗಳನ್ನು ಹರಡುವವನಂತೆ, ಈ ಮುಂದೆಹೇಳುವ ಮಾತನ್ನು ಹೇಳಿದನು.

ರುಜಾಹರಮಿವಾಸಾದ್ಯ [೬]ಸಾಮಯಃ ಪರಮೌಷಧಮ್ ।
ಪಿಪಾಸಿತೋ ವಾ ಸ್ವಚ್ಛಾಂಬುಕಲಿತಂ ಸೋತ್ಪಲಂ ಸರಃ ॥ ೧೩೦ ॥

ದೃಷ್ಟ್ವಾ [೭]ಭಾಗವತಂ ರೂಪಂ ಪರಂ ಪ್ರೀತೋಸ್ಮ್ಯತೋ ಮಮ ।
ಜಾತಿಸ್ಮರತ್ವಮುದಭೂತ್ತೇನಾ[೮]ಭುತ್ಸಿ ಗುರೋರ್ಮತಮ್ ॥ ೧೩೧ ॥

''ರೋಗವನ್ನು ನಾಶಮಾಡುವ ಪರಮೌಷಧವನ್ನು ಹೊಂದಿ ರೋಗಿಯು ಸಂತೋಷಪಡುವಂತೆಯೂ ಸ್ವಚ್ಛವಾದ ಜಲಯುಕ್ತವೂ ನೈದಿಲೆಗಳುಳ್ಳದೂ ಆದ ಸರೋವರವನ್ನು ಹೊಂದಿ ಬಾಯಾರಿದ ಮನುಷ್ಯನು ಸಂತೋಷಪಡುವಂತೆಯೂ ನಾನು ಭಗವಂತನ ರೂಪವನ್ನು ನೋಡಿ ಬಹಳ ಸಂತುಷ್ಟನಾಗಿದ್ದೇನೆ. ಇದರಿಂದ ನನಗೆ ಜಾತಿಸ್ಮರಣೆಯುಂಟಾಯಿತು. ಆ ಜಾತಿಸ್ಮರಣೆಯಿಂದ ಸ್ವಾಮಿಯ ಅಭಿಪ್ರಾಯವನ್ನು ತಿಳಿದೆನು.

ಅಹಂ ಹಿ ಶ್ರೀಮತೀನಾಮ ವಜ್ರಜಂಘಭವೇ ವಿಭೋಃ ।
[೯]ವಿದೇಹೇ ಪುಂಡರೀಕಿಣ್ಯಾಮಭೂವಂ ಪ್ರಾಣವಲ್ಲಭಾ ॥ ೧೩೨ ॥

ನಾನಾದರೋ ಪೂರ್ವವಿದೇಹದಲ್ಲಿ ಪುಂಡರೀಕಿಣೀನಗರದಲ್ಲಿ ಸ್ವಾಮಿಯ ವಜ್ರಜಂಘಭವದಲ್ಲಿ ಶ್ರೀಮತಿಯೆಂಬ ಪ್ರಾಣಕಾಂತೆಯಾಗಿದ್ದೆನು.

ಸಮಂ ಭಗವತಾನೇನ ಬಿಭ್ರತಾ [೧೦]ವಜ್ರಜಂಘತಾಮ್ ।
ತದಾ ಚಾರಣಯುಗ್ಮಾಯ ದತ್ತಂ ದಾನಮಭೂನ್ಮಯಾ ॥ ೧೩೩ ॥

ಆಗ ವಜ್ರಜಂಘನಾಗಿದ್ದ ಈ ಭಗವಂತನೊಡನೆ ನಾನು ಇಬ್ಬರು ಚಾರಣ ಮುನಿಗಳಿಗೆ ದಾನವನ್ನು ಕೊಟ್ಟೆನು.

ವಿಶುದ್ಧತರಮುತ್ಸೃಷ್ಟಕಲಂಕಂ ಖ್ಯಾತಿಕಾರಣಮ್ ।
ಮಹದ್ದಾನಂ ಚ ಕಾವ್ಯಂ ಚ ಪುಣ್ಯಾಲ್ಲಭ್ಯಮಿದಂ ದ್ವಯಮ್ ॥ ೧೩೪ ॥

ಅತ್ಯಂತ ಪರಿಶುದ್ಧವೂ ದೋಷರಹಿತವೂ ಪ್ರಖ್ಯಾತಿಗೆ ಕಾರಣವೂ ಆದ ಮಹಾದಾನವು ಕಾವ್ಯವು ಇವೆರಡೂ ಪುಣ್ಯದಿಂದ ಲಭಿಸುವುದಕ್ಕೆ ಯೋಗ್ಯವಾದುವು. ಪುಣ್ಯವಿಲ್ಲದಿದ್ದರೆ ಇವು ಪ್ರಾಪ್ತವಾಗುವುವಲ್ಲವೆಂದರ್ಥವು.

೧ ತೀರ್ಯತೇ ಸಂಸಾರೋ ಯೇನ ತತ್ತೀರ್ಥಂ. ೨ ಯತ್ತದೋರ್ನಿತ್ಯಸಂಬಂಧಃ. ೩ ಭರತೇನ. ೪ ಸಮೂಹೇನ. ೫ ಮಧ್ಯೇ. ೬ ಸರೋಗಃ. ೭ ಭಗವತ್ಸಂಬಂಧಿ. ೮ ಜಾನಾಮಿ ಸ್ಮ. ೯ ಪೂರ್ವಸ್ಮಿನ್ವಿದೇಹೇ. ೧೦ ವಜ್ರಜಂಘತ್ವಂ.

**ಕಾ ಚೇದ್ದಾನಸ್ಯ ಸಂಶುದ್ಧಿಃ ಶೃಣು ಭೋ ಭರತಾಧಿಪ ।**
**[೧]ಅನುಗ್ರಹಾರ್ಥಂ [೨]ಸ್ವಸ್ಯಾ[೩]ತಿಸರ್ಗೋ ದಾನಂ [೪]ತ್ರಿಶುದ್ಧಿಕಮ್ ॥೧೩೫ ॥**

ದಾನದ ಶುದ್ಧಿಯು ಯಾವುದೆಂದರೆ, ಎಲೈ ಭರತರಾಜನೆ ! ಕೇಳು. ತನ್ನ ಮತ್ತು ಪರರ ಉಪಕಾರಕ್ಕೋಸ್ಕರ ಮನೋವಾಕ್ಕಾಯಶುದ್ಧಿಯಿಂದ ದ್ರವ್ಯವನ್ನು ಕೊಡುವುದು ದಾನವೆನಿಸುತ್ತದೆ.

**ದಾತುರ್ವಿಶುದ್ಧತಾ ದೇಯಂ ಪಾತ್ರಂ ಚ ಪ್ರಪುನಾತಿ ಸಾ ।**
**ಶುದ್ಧಿರ್ದೇಯಸ್ಯ ದಾತಾರಂ ಪುನೀತೇ ಪಾತ್ರಮಪ್ಯದಃ ॥ ೧೩೬ ॥**

ದಾತೃವಿನ ವಿಶುದ್ಧತೆಯು ದಾನಮಾಡುವುದಕ್ಕೆ ಯೋಗ್ಯವಾದ ವಸ್ತುವನ್ನೂ ಪಾತ್ರವನ್ನೂ ಪವಿತ್ರಮಾಡುತ್ತದೆ. ದಾನಮಾಡಲರ್ಹವಾದ ವಸ್ತುವಿನ ಶುದ್ಧಿಯು ದಾತೃವನ್ನೂ ಈ ಪಾತ್ರವನ್ನೂ ಪವಿತ್ರಮಾಡುತ್ತದೆ.

**ಪಾತ್ರಸ್ಯ ಶುದ್ಧಿರ್ದಾತಾರಂ ದೇಯಂ ಚೈವ ಪುನಾತ್ಯದಃ ।**
**[೫]ನವಕೋಟಿವಿಶುದ್ಧಂ ತದ್ದಾನಂ ಭೂರಿಫಲೋದಯಮ್ ॥ ೧೩೭ ॥**

ಪಾತ್ರದ ಶುದ್ಧಿಯು ದಾತೃವನ್ನೂ ದಾನಮಾಡುವುದಕ್ಕೆ ಯೋಗ್ಯವಾದ ಈ ವಸ್ತುವನ್ನೂ ಪವಿತ್ರಮಾಡುತ್ತದೆ. ಒಂಬತ್ತುವಿಧ(ಮನೋವಾಕ್ಕಾಯಕೃತಕಾರಿತಾನುಮೋದ)ದಿಂದ ಪರಿಶುದ್ಧವಾದ ಆ ದಾನವು ಅಧಿಕವಾದ ಫಲವನ್ನುಂಟುಮಾಡುತ್ತದೆ.

**ದಾತಾ ಶ್ರದ್ಧಾದಿಭಿರ್ಯುಕ್ತೋ ಗುಣೈಃ ಪುಣ್ಯಸ್ಯ [೬]ಸಾಧನೈಃ ।**
**ದೇಯಮಾಹಾರಭೈಷಜ್ಯಶಾಸ್ತ್ರಾಭಯವಿಕಲ್ಪಿತಮ್ ॥ ೧೩೮ ॥**

ಪುಣ್ಯಕ್ಕೆ ಕಾರಣವಾದ ಶ್ರದ್ಧಾಮೊದಲಾದ ಗುಣಗಳಿಂದ ಯುಕ್ತನಾದವನು ದಾತೃವು. ಆಹಾರಾಭಯಭೈಷಜ್ಯಶಾಸ್ತ್ರಗಳೆಂಬ ಭೇದವುಳ್ಳದು ದಾನ ಮಾಡಲರ್ಹವಾದ ವಸ್ತು(ದೇಯ)ವು.

**ಪಾತ್ರಂ ರಾಗಾದಿಭಿರ್ದೋಷೈರಸ್ಪೃಷ್ಟೋ ಗುಣವಾನ್ಭವೇತ್ ।**
**ತಚ್ಚ ತ್ರೇಧಾ ಜಘನ್ಯಾದಿಭೇದೈರ್ಭೇದ[೭]ಮುಪೇಯಿವತ್ ॥ ೧೩೯ ॥**

ರಾಗಮೊದಲಾದ ದೋಷಗಳಿಂದ ಸ್ಪರ್ಶಿಸಲ್ಪಡದಿರುವ ಗುಣವಂತನು ಪಾತ್ರವೆನಿಸುತ್ತಾನೆ. ಜಘನ್ಯಾದಿಭೇದಗಳಿಂದ ಭೇದವನ್ನು ಹೊಂದಿದ ಆ ಪಾತ್ರವು ಮೂರುವಿಧವಾಗಿದೆ. ಜಘನ್ಯಮಧ್ಯಮೋತ್ತಮಭೇದದಿಂದ ಪಾತ್ರವು ಮೂರು ವಿಧವಾಗಿದೆಯೆಂದು ಭಾವವು.

**ಜಘನ್ಯಂ ಶೀಲವಾನ್ಮಿಥ್ಯಾದೃಷ್ಟಿಶ್ಚ ಪುರುಷೋ ಭವೇತ್ ।**
**ಸದ್ದೃಷ್ಟಿರ್ಮಧ್ಯಮಂ ಪಾತ್ರಂ ನಿಃಶೀಲವ್ರತಭಾವನಃ ॥ ೧೪೦ ॥**

ಆಚಾರಸಂಪನ್ನನಾದ ಮಿಥ್ಯಾದೃಷ್ಟಿಪುರುಷನು ಜಘನ್ಯಪಾತ್ರನು. ಶೀಲ ಮತ್ತು ವ್ರತಗಳ ಭಾವನೆಯಿಲ್ಲದಿರುವ ಸಮ್ಯಗ್ದೃಷ್ಟಿಯು ಮಧ್ಯಮಪಾತ್ರನು.

**ಸದ್ದೃಷ್ಟಿಃ ಶೀಲಸಂಪನ್ನಃ ಪಾತ್ರಮುತ್ತಮಮಿಷ್ಯತೇ ।**
**ಕುದೃಷ್ಟಿರ್ಯೋ ವಿಶೀಲಶ್ಚ ನೈವಪಾತ್ರಮಸೌ ಮತಃ ॥ ೧೪೧ ॥**

ಶೀಲಸಂಪನ್ನನಾದ ಸಮ್ಯಗ್ದೃಷ್ಟಿಯು ಉತ್ತಮ ಪಾತ್ರನೆನಿಸುತ್ತಾನೆ. ಆಚಾರರಹಿತನಾದ ಮಿಥ್ಯಾದೃಷ್ಟಿಯು ಪಾತ್ರನೇ ಅಲ್ಲ.

೧ ಸ್ವಪರೋಪಕಾರಾಯ. ೨ ಧನಸ್ಯ. ೩ ತ್ಯಾಗಃ. ೪ ಮನೋವಾಕ್ಕಾಯಶುದ್ಧಿಮತ್. ೫ ಮನೋವಾಕ್ಕಾಯಕೃತಕಾರಿತಾನುಮೋದೇನ. ೬ ಕಾರಣೈಃ. ೭ ಪ್ರಾಪ್ತಂ.

**[೧]ಕುಮಾನುಷತ್ವಮಾಪ್ನೋತಿ ಜಂತುರ್ದದದಪಾತ್ರಕೇ ।**
**ಅಶೋಧಿತಮಿವಾಲಾಬು ತದ್ಧಿ ದಾನಂ [೨]ಪ್ರದೂಷಯೇತ್ ॥ ೧೪೨ ॥**

ಅಪಾತ್ರದಲ್ಲಿ ದಾನಮಾಡುವ ಪ್ರಾಣಿಯು ಕುಭೋಗಭೂಮಿಯಲ್ಲಿ ಮನುಷ್ಯಭವವನ್ನು ಹೊಂದುತ್ತಾನೆ. ಶುದ್ಧಿಮಾಡದಿರುವ ಕಹಿಯಾದ ಸೋರೆಯ ಕಾಯಿಯಂತೆ, ಆ ದಾನವು ದುಷ್ಟವಾಗುವುದು.

**ಆಮಪಾತ್ರೇ ಯಥಾ ಕ್ಷಿಪ್ತಂ [೩]ಮಂಕ್ಷು ಕ್ಷೀರಾದಿ ನಶ್ಯತಿ ।**
**ಅಪಾತ್ರೇಽಪಿ ತಥಾ ದತ್ತಂ [೪]ತದ್ಧಿ [೫]ಸ್ವಂ [೬]ತಚ್ಚ ನಾಶಯೇತ್ ॥ ೧೪೩ ॥**

ಹಸಿಯದಾದ ಪಾತ್ರದಲ್ಲಿ ಹಾಕಿದ ಹಾಲುಮೊದಲಾದ ಪದಾರ್ಥವು ನಾಶವಾಗುವಂತೆ, ಅಪಾತ್ರದಲ್ಲಿ ಕೊಡಲ್ಪಟ್ಟ ದಾನವು ತನ್ನನ್ನೂ (ದಾತೃವನ್ನೂ) ಪಾತ್ರವನ್ನೂ ನಾಶಮಾಡುವುದು.

**[೭]ಪಾತ್ರಂ ತ[೮]ತ್ಪಾತ್ರವಜ್ಜ್ಞೇಯಂ ವಿಶುದ್ಧಗುಣಧಾರಣಾತ್ ।**
**ಯಾನಪಾತ್ರಮಿವಾಭೀಷ್ಟದೇಶೇ ಸಂಪ್ರಾಪಕಂ ಚ ಯತ್ ॥ ೧೪೪ ॥**

ಆದುದರಿಂದ ಸತ್ಪಾತ್ರವು ವಿಶುದ್ಧವಾದ ಗುಣಗಳನ್ನು ಧರಿಸುವುದರಿಂದ ಅದನ್ನು ಒಳ್ಳೆಯ ಪಾತ್ರದಂತೆ ತಿಳಿಯಬೇಕು. ಅಂತಹ ಸತ್ಪಾತ್ರವು ಹಡಗಿನಂತೆ, ಇಷ್ಟವಾದ ದೇಶವನ್ನು ತಲುಪಿಸುವುದೂ ಆಗಿದೆ.

**ನ ಹಿ ಲೋಹಮಯಂ ಯಾನಪಾತ್ರಮುತ್ತಾರಯೇ[೯]ತ್ಪರಮ್ ।**
**ತಥಾ ಕರ್ಮಭರಾಕ್ರಾಂತೋ ದೋಷವಾನ್ನೈವ ತಾರಕಃ ॥ ೧೪೫ ॥**

ಲೋಹಮಯವಾದ ಹಡಗು ಬೇರೆಯವರನ್ನು ದಾಟಿಸಲಾರದು. ಹಾಗೆಯೇ ಕರ್ಮವೆಂಬ ಭಾರದಿಂದ ಆಕ್ರಾಂತನೂ ದೋಷವುಳ್ಳವನೂ ಆದ ಪುರುಷನು ಬೇರೆಯವರನ್ನು ಸಂಸಾರದಿಂದ ಪಾರಮಾಡುವವನೇ ಅಲ್ಲವು.

**ತತಃ ಪರಮನಿರ್ವಾಣ[೧೦]ಸಾಧಕಂ ರೂಪಮುದ್ವಹನ್ ।**
**ಕಾಯಸ್ಥಿತ್ಯರ್ಥಮಾಹಾರಮಿಚ್ಛನ್ ಜ್ಞಾನಾದಿಸಿದ್ಧಯೇ ॥ ೧೪೬ ॥**

ಆದುದರಿಂದ ಪರಮಮುಕ್ತಿ ಸಾಧಕವಾದ ರೂಪವನ್ನು ಧರಿಸಿದವನೂ ಶರೀರವಿರುವುದಕ್ಕೋಸ್ಕರವೂ ಜ್ಞಾನಮೊದಲಾದ ಗುಣಗಳ ಸಿದ್ಧಿಗೋಸ್ಕರವೂ ಆಹಾರವನ್ನಿಚ್ಛಿಸುವವನೂ

**ನ ವಾಂಛನ್ಬಲಮಾಯುರ್ವಾ [೧೧]ಸ್ವಾದಂ ವಾ ದೇಹಪೋಷಣಮ್ ।**
**ಕೇವಲಂ ಪ್ರಾಣಧೃತ್ಯರ್ಥಂ ಸಂತುಷ್ಟೋ ಗ್ರಾಸಮಾತ್ರಯಾ ॥ ೧೪೭ ॥**

ಶಕ್ತಿಯನ್ನೂ ಆಯುಷ್ಯವನ್ನೂ ರುಚಿಕರವಾದ ಶರೀರಪೋಷಣೆಯ ಪದಾರ್ಥವನ್ನೂ ಇಚ್ಛಿಸದಿರುವವನೂ ಪ್ರಾಣಧಾರಣೆಗೋಸ್ಕರವೇ ಕವಳಮಾತ್ರದಿಂದ ಸಂತುಷ್ಟನೂ

**ಪಾತ್ರಂ ಭವೇದ್ಗುಣೈರೇಭಿರ್ಮುನಿಃ ಸ್ವಪರತಾರಕಃ ।**
**ತಸ್ಮೈ ದತ್ತಂ [೧೨]ಪುನಾತ್ಯನ್ನಮಪುನರ್ಜನ್ಮಕಾರಣಮ್ ॥ ೧೪೮ ॥**

ಈ ಗುಣಗಳಿಂದ ತನ್ನನ್ನೂ ಇತರರನ್ನೂ ಸಂಸಾರದಿಂದ ಪಾರಮಾಡುವವನೂ ಆದ ಮುನಿಯು ಪಾತ್ರನಾಗುತ್ತಾನೆ. ಅಂತಹ ಪಾತ್ರಕ್ಕೆ ಕೊಟ್ಟ ಅನ್ನವು ಪುನರ್ಜನ್ಮವಾಗದಿರುವುದಕ್ಕೆ ಕಾರಣವಾಗಿ ದಾತೃವನ್ನು ಪವಿತ್ರ ಮಾಡುತ್ತದೆ.

**[೧೩]ತದುದಾಹರಣಂ [೧೪]ಪುಷ್ಪಮಿದಮೇವ ಮಹೋದಯಮ್ ।**
**ಮಹತ್ತ್ವೇ ದಾನಪುಣ್ಯಸ್ಯ ಪಂಚಾಶ್ಚರ್ಯಮಿಹಾ[೧೫]ಪಿ ಯತ್ ॥ ೧೪೯ ॥**

ದಾನದಿಂದುಂಟಾಗುವ ಪುಣ್ಯದ ಮಹತ್ತ್ವದಲ್ಲಿ ಇಲ್ಲಿ ನಾವು ಪಡೆದ ಈ ಅತಿಶಯವಾದ ಪಂಚಾಶ್ಚರ್ಯವೇ ದಾನಕ್ಕೆ ಸಂಪೂರ್ಣವಾದ ಉದಾಹರಣೆಯಾಗಿದೆ.

೧ ಕುಭೋಗಭೂಮಿಮಾನುಷತ್ವಂ. ೨ ದುಷ್ಟೋ ಭವತಿ. ೩ ಸಪದಿ. ೪ ದಾನಂ. ೫ ಆತ್ಮಾನಂ. ೬ ಪಾತ್ರಮಪಿ. ೭ ಸತ್ಪಾತ್ರಂ. ೮ ಭಾಜನವತ್. ೯ ಅನ್ಯಂ. ೧೦ ಸಾಧನಮಿತ್ಯಪಿ ಪಾಠಃ. ೧೧ ರುಚಿಂ. ೧೨ ಪವಿತ್ರಯತಿ. ೧೩ ದಾನೋದಾಹರಣಂ. ೧೪ ಪರಿಪೂರ್ಣಂ. ೧೫ ಅಸ್ಮಾಭಿಃ ಪ್ರಾಪ್ತಂ.

**[೧]ತತೋ ಭರತರಾಜರ್ಷೇ ದಾನಂ [೨]ದೇಯಮನುತ್ತರಮ್ ।**
**ಪ್ರಸರಿಷ್ಯಂತಿ ಪಾತ್ರಾಣಿ ಭಗವತ್ತೀರ್ಥಸನ್ನಿಧೌ ॥ ೧೫೦ ॥**

ಆದುದರಿಂದ ಎಲೈ ಭರತರಾಜರ್ಷಿಯೆ ! ಭಗವಂತನ ತೀರ್ಥಸಾನ್ನಿಧ್ಯದಲ್ಲಿ ಸತ್ಪಾತ್ರಗಳು(ಮಹಾತ್ಮರು) ಪಸರಿಸುತ್ತವೆ. ಉತ್ತಮವಾದ ದಾನವನ್ನು ಕೊಡಬೇಕು. ಭಗವಂತನ ತೀರ್ಥಕಾಲದಲ್ಲಿ ಅನೇಕ ಮಹಾತ್ಮರುಂಟಾಗುತ್ತಾರೆ.''

**ತೇಭ್ಯಃ ಶ್ರೇಯಾನ್ಕಥಾ[೩]ಚಖ್ಯೌ [೪]ಸ್ವಭರ್ತೃಭವವಿಸ್ತರಮ್ ।**
**ತತಃ [೫]ಸದಸ್ಯಾಸ್ತೇ ಸರ್ವೇ ಸದ್ದಾನರುಚಯೋಭವನ್ ॥ ೧೫೧ ॥**

ಶ್ರೇಯಾಂಸನು ಭರತರಾಜಮೊದಲಾದವರಿಗೆ ತನ್ನ ಮತ್ತು ಸ್ವಾಮಿಯ ಭವದ ವಿಸ್ತಾರವನ್ನು ಹೇಳಿದನು. ತರುವಾಯ ಆ ಸಭಿಕರೆಲ್ಲರು ಉತ್ತಮವಾದ ದಾನದಲ್ಲಿ ಪ್ರೀತಿಯುಳ್ಳವರಾದರು.

**ಇತಿ ಪ್ರಹ್ಲಾದಿನೀಂ ವಾಚಂ ತಸ್ಯ ಪುಣ್ಯಾನುಬಂಧಿನೀಮ್ ।**
**ಶುಶ್ರುವಾನ್ಭರತಾಧೀಶಃ ಪರಾಂ ಪ್ರೀತಿಮವಾಪ ಸಃ ॥ ೧೫೨ ॥**

ಈ ಪ್ರಕಾರವಾಗಿ ಆನಂದಕರವೂ ಪುಣ್ಯಬಂಧಕವೂ ಆದ ಆ ಶ್ರೇಯಾಂಸನ ಮಾತನ್ನು ಕೇಳಿದ ಭರತರಾಜನು ಅಧಿಕವಾದ ಪ್ರೀತಿಯನ್ನು ಹೊಂದಿದನು.

**ಪ್ರೀತಃ ಸಂಪೂಜ್ಯ ತಂ ಭೂಯಃ ಪರಂ [೬]ಸೌಹಾರ್ದಮುದ್ವಹನ್ ।**
**ಗುರೋರ್ಗುಣಾನನುಧ್ಯಾಯನ್ ಪ್ರತ್ಯಗಾತ್ಸ ಸ್ವಮಾಲಯಮ್ ॥ ೧೫೩ ॥**

ಸಂತುಷ್ಟನಾದ ಭರತರಾಜನು ಪುನಃ ಆ ಶ್ರೇಯಾಂಸನನ್ನು ಪೂಜಿಸಿ ಉತ್ತಮವಾದ ಅಂತಃಕರಣವನ್ನು ಧರಿಸುವವನೂ ಸ್ವಾಮಿಯ ಗುಣಗಳನ್ನು ಪುನಃಪುನಃ ಧ್ಯಾನಿಸುವವನೂ ಆಗಿ ತನ್ನ ಮನೆಗೆ ಹೊರಟು ಹೋದನು.

**ಭಗವಾನಥ ಸಂಜಾತ[೭]ಬಲ[೮]ವೀರ್ಯೋ ಮಹಾಧೃತಿಃ ।**
**ಭೇಜೇ ಪರಂ ತಪೋಯೋಗಂ ಯೋಗವಿ[೯]ಜ್ಜೈನಕಲ್ಪಿತಮ್ ॥ ೧೫೪ ॥**

ತರುವಾಯ ಆಹಾರದಿಂದುಂಟಾದ ಶಕ್ತಿಯನ್ನೂ—ಸ್ವಾಭಾವಿಕವಾದ ಶಕ್ತಿಯನ್ನೂ ಹೊಂದಿದವನೂ, ಮಹಾಧೈರ್ಯಶಾಲಿಯೂ ಯೋಗವನ್ನು ತಿಳಿದವನೂ ಆದ ಭಗವಂತನು ಜೀನೇಶ್ವರರ ದಿವ್ಯಧ್ವನಿಯಿಂದ ಹೇಳಲ್ಪಟ್ಟ ಶ್ರೇಷ್ಠವಾದ ತಪೋಯೋಗವನ್ನು ಹೊಂದಿದನು.

**ಮೋಹಾಂಧತಮಸಂಧ್ವಂಸ[೧೦]ಕಲ್ಯಾ ಸನ್ಮಾರ್ಗ[೧೧]ದರ್ಶಿನೀ ।**
**ದಿದೀಪೇಸ್ಯ ಮನೋಗಾರೇ ಸಮಿದ್ಧಾ ಬೋಧದೀಪಿಕಾ ॥ ೧೫೫ ॥**

ಈ ಸ್ವಾಮಿಯ ಮನಸ್ಸೆಂಬ ಮನೆಯಲ್ಲಿ ಮೋಹವೆಂಬ ಗಾಢಾಂಧಕಾರವನ್ನು ನಾಶಮಾಡುವುದರಲ್ಲಿ ಸಿದ್ಧವೂ ದೇದೀಪ್ಯಮಾನವೂ ಆದ ಜ್ಞಾನವೆಂಬ ದೀಪವು ಪ್ರಕಾಶಿಸಿತು.

**ಗುಣಾ[೧೨]ನ್ಗುಣಾಸ್ಥಯಾ ಪಶ್ಯೇದ್ದೋಷಾನ್ದೋಷಧಿಯಾಪಿ ಯಃ ।**
**ಹೇಯೋಪಾದೇಯವಿತ್ಸ ಸ್ಯಾತ್ಕ್ವಾಜ್ಞಸ್ಯ [೧೩]ಗತಿರೀದೃಶೀ ॥ ೧೫೬ ॥**

ಗುಣಗಳನ್ನು ಗುಣಗಳೆಂಬ ಬುದ್ಧಿಯಿಂದಲೂ ದೋಷಗಳನ್ನು ದೋಷಗಳೆಂಬ ಬುದ್ಧಿಯಿಂದಲೂ ನೋಡುವವನು ಹೇಯೋಪಾದೇಯಜ್ಞಾನವುಳ್ಳವನಾಗುವನು. ಅಜ್ಞಾನಿಗೆ ಈಪ್ರಕಾರವಾದ ಬುದ್ಧಿಯು ಎಲ್ಲಿ ಬಂದಿತು ?

**ತತಸ್ತತ್ತ್ವಪರಿಜ್ಞಾನಾತ್ ಗುಣಾಗುಣವಿಭಾಗವಿತ್ ।**
**ಗುಣೇಷ್ವಾ[೧೪]ಸಜತೇಸ್ಮಾಸೌ ಹಿತ್ವಾ ದೋಷಾನಶೇಷತಃ ॥ ೧೫೭ ॥**

ತರುವಾಯ ತತ್ತ್ವಜ್ಞಾನದಿಂದ ಗುಣದೋಷಗಳ ವಿಭಾಗವನ್ನು ತಿಳಿದ ಈ ಸ್ವಾಮಿಯು ಸಂಪೂರ್ಣವಾಗಿ ದೋಷಗಳನ್ನು ಬಿಟ್ಟು ಗುಣಗಳಲ್ಲಿ ಆಸಕ್ತರಾದರು.

೧ ಕಾರಣಾತ್. ೨ ದಾತವ್ಯಂ. ೩ ಅವೋಚತ್. ೪ ಸ್ವಶ್ಚ ಭರ್ತಾ ಚ ಸ್ವಭರ್ತಾರೌ ತಯೋರ್ಭವವಿಸ್ತರಸ್ತಂ. ೫ ಸಭ್ಯಾಃ. ೬ ಸುಹೃದಯತ್ವಂ. ೭ ಆಹಾರಜನಿತಾ ಶಕ್ತಿಃ. ೮ ನೈಸರ್ಗಿಕೀ ಶಕ್ತಿಃ. ೯ ದಿವ್ಯಧ್ವನಿನಾ ನಿರೂಪಿತಮಿತ್ಯರ್ಥಃ. ೧೦ ಕಲ್ಯಾ ಸಜ್ಜನಿರಾಮಯಾವಿತ್ಯಭಿಧಾನಾತ್ ಸನ್ನದ್ಧೇತ್ಯರ್ಥಃ. ೧೧ ದೇಶಿನೀತ್ಯಪಿ ಪಾಠಃ. ೧೨ ಗುಣಬುದ್ಧ್ಯಾ. ೧೩ ಬುದ್ಧಿಃ. ೧೪ ಆಸಕ್ತೋ ಭವತಿ ಸ್ಮ, ಅಸಜ್ಯತ ಇತ್ಯಪಿ ಪಾಠಃ.

**ಸಾವದ್ಯ[೧]ವಿರತಿಂ ಕೃತ್ಸ್ನಾ[೨]ಮೂರೀಕೃತ್ಯ ಪ್ರಬುದ್ಧಧೀಃ ।**
**[೩]ತದ್ಭೇದಾನ್ಪಾಲಯಾಮಾಸ ವ್ರತಸಂಜ್ಞಾವಿಶೇಷಿತಾನ್ ॥ ೧೫೮ ॥**

ವಿಶೇಷಜ್ಞಾನಿಯಾದ ಭಗವಂತನು ಸಮಸ್ತವಾದ ದೋಷಗಳನ್ನು ತ್ಯಜಿಸಿ ವ್ರತವಿಶೇಷ ಸಹಿತವಾದ ಆ ದೋಷತ್ಯಾಗದ ಭೇದಗಳನ್ನು ಪರಿಪಾಲಿಸಿದನು. ಅಹಿಂಸಾವ್ರತಮೊದಲಾದುವನ್ನು ಪಾಲಿಸಿದನೆಂದು ಭಾವವು.

**ದಯಾಂಗನಾ[೪]ಪರಿಷ್ವಂಗಃ ಸತ್ಯೇ ನಿತ್ಯಾನುರಕ್ತತಾ ।**
**ಅಸ್ತೇಯವ್ರತತಾತ್ಪರ್ಯಂ ಬ್ರಹ್ಮಚರ್ಯೈ[೫]ಕತಾನತಾ ॥ ೧೫೯ ॥**

**ಪರಿಗ್ರಹೇಷ್ವ [೬]ನಾಸಂಗೋ [೭]ವಿಕಾಲಾಶನವರ್ಜನಮ್ ।**
**ವ್ರತಾ[೮]ನ್ಯಮೂನಿ [೯]ತತ್ಸಿದ್ಧ್ಯೈ ಭಾವಯಾಮಾಸ ಭಾವನಾಃ ॥ ೧೬೦ ॥**

ದಯೆಯೆಂಬ ಸ್ತ್ರೀಯ ಆಲಿಂಗನವೂ ಸತ್ಯದಲ್ಲಿ ಯಾವಾಗಲೂ ಪ್ರೀತಿಯುಳ್ಳವನಾಗಿರುವಿಕೆಯೂ ಅಚೌರ್ಯವ್ರತಬುದ್ಧಿಯೂ ಬ್ರಹ್ಮಚರ್ಯದಲ್ಲಿ ಏಕಾಗ್ರತೆಯೂ ಪರಿಗ್ರಹಗಳಲ್ಲಿ ಆಸಕ್ತಿಯಿಲ್ಲದಿರುವಿಕೆಯೂ ರಾತ್ರಿಭೋಜನ ತ್ಯಾಗವೂ ಇವು ವ್ರತಗಳಾಗಿವೆ. ಆ ವ್ರತಗಳ ಸಿದ್ಧಿಗೋಸ್ಕರ ಮುಂದೆಹೇಳುವ ಭಾವನೆಗಳನ್ನು ಭಾವಿಸಿದನು.

**ಮನೋಗುಪ್ತಿರ್ವಚೋಗುಪ್ತಿ[೧೦]ರೀರ್ಯಾಕಾಯನಿಯಂತ್ರಣೇ ।**
**[೧೧]ವಿಷ್ವಾಣಸಮಿತಿಶ್ಚೇತಿ ಪ್ರಥಮವ್ರತಭಾವನಾಃ ॥ ೧೬೧ ॥**

ಮನೋಗುಪ್ತಿ ವಚನಗುಪ್ತಿ ಈರ್ಯಾ (ಗಮನ) ಸಮಿತಿ ಕಾಯಗುಪ್ತಿ ಏಷಣಾ (ಭೋಜನ) ಸಮಿತಿ ಇವೈದು ಅಹಿಂಸಾವ್ರತದ ಭಾವನೆಗಳಾಗಿವೆ.

**ಕ್ರೋಧಲೋಭಭಯತ್ಯಾಗಾ [೧೨]ಹಾಸ್ಯಾಸಂಗ[೧೩]ವಿವರ್ಜನಮ್ ।**
**[೧೪]ಸೂತ್ರಾನುಗಾ ಚ ವಾಣೀತಿ ದ್ವಿತೀಯವ್ರತಭಾವನಾಃ ॥ ೧೬೨ ॥**

ಕ್ರೋಧತ್ಯಾಗ ಲೋಭತ್ಯಾಗ ಭಯತ್ಯಾಗ ಹಾಸ್ಯದ ಆಸಕ್ತಿತ್ಯಾಗ ಪರಮಾಗಮಕ್ಕೆ ಅನುಗುಣವಾದ ವಚನ ಈ ಐದು ಸತ್ಯವ್ರತದ ಭಾವನೆಗಳಾಗಿವೆ.

**[೧೫]ಮಿತೋ[೧೬]ಚಿತಾ[೧೭]ಭ್ಯನುಜ್ಞಾತಗ್ರಹಣಾನ್ಯ [೧೮]ಗ್ರಹೋನ್ಯಥಾ ।**
**ಸಂತೋಷೋ ಭಕ್ತಪಾನೇ ಚ ತೃತೀಯವ್ರತಭಾವನಾಃ ॥ ೧೬೩ ॥**

ಪರಿಮಿತವಾದ ಆಹಾರವನ್ನು ತೆಗೆದುಕೊಳ್ಳುವುದು ತನಗೆ ಯೋಗ್ಯವಾದ ಆಹಾರವನ್ನು ತೆಗೆದುಕೊಳ್ಳುವುದು ದಾತೃವಿನಿಂದ ಸಮ್ಮತವಾದ ಆಹಾರವನ್ನು ತೆಗೆದುಕೊಳ್ಳುವುದು ನಿಯಮಕ್ಕೆ ವಿರುದ್ಧವಾಗಿ ಆಹಾರವನ್ನು ತೆಗೆದುಕೊಳ್ಳದಿರುವುದು ಅನ್ನಪಾನಗಳಲ್ಲಿ ಸಂತೋಷ ಈ ಐದು ಅಚೌರ್ಯಾಣುವ್ರತದ ಭಾವನೆಗಳಾಗಿವೆ.

**ಸ್ತ್ರೀಕಥಾಲೋಕಸಂಸರ್ಗಪ್ರಾಗ್ರತಸ್ಮೃತಿಯೋಜನಾಃ ।**
**[೧೯]ವರ್ಜ್ಯಾ [೨೦]ವೃಷ್ಯರಸೇನಾಮಾ ಚತುರ್ಥವ್ರತಭಾವನಾಃ ॥ ೧೬೪ ॥**

ಸ್ತ್ರೀಕಥೆಯನ್ನು ಕೇಳದಿರುವುದು ಸ್ತ್ರೀಯರ ಮನೋಹರವಾದ ಅಂಗವನ್ನು ನೋಡದಿರುವುದು ಸ್ತ್ರೀಯರ ಸಂಸರ್ಗವನ್ನು ಮಾಡದಿರುವುದು ಪೂರ್ವದಲ್ಲಿ ಅನುಭವಿಸಿದ ರತಿಕ್ರೀಡೆಯನ್ನು ಸ್ಮರಿಸದಿರುವುದು ವೀರ್ಯವರ್ಧಕವಾದ ರಸ ಪದಾರ್ಥವನ್ನು ಸೇವಿಸದಿರುವುದು ಈ ಐದು ಬ್ರಹ್ಮಚರ್ಯವ್ರತದ ಭಾವನೆಗಳಾಗಿವೆ.

೧ ನಿವೃತ್ತಿಂ. ೨ ಅಂಗೀಕೃತ್ಯ. ೩ ಸಾವದ್ಯವಿರತಿಭೇದಾನ್. ೪ ಆಲಿಂಗನಂ. ೫ ಅನನ್ಯವೃತ್ತಿತಾ. ೬ ಅನಾಸಕ್ತಿಃ. ೭ ರಾತ್ರಿಭೋಜನವರ್ಜನಂ. ೮ ಪೂರ್ವೋಕ್ತಾನಿ ಮಹಾವ್ರತಾನಿ. ೯ ವ್ರತಸಿದ್ಧ್ಯರ್ಥಂ. ೧೦ ಈರ್ಯಾಸಮಿತಿಕಾಯಗುಪ್ತೀ ಇತ್ಯರ್ಥಃ. ೧೧ ಏಷಣಾಸಮಿತಿಃ. ೧೨ ಹಾಸ್ಯಾಸಕ್ತಿತ್ಯಾಗಃ. ೧೩ ವಿಸರ್ಜನಮಿತ್ಯಪಿ ಪಾಠಃ. ೧೪ ಪರಮಾಗಮಾನುಗತಾ. ೧೫ ಪರಿಮಿತಃ. ೧೬ ಸ್ವಯೋಗ್ಯಃ. ೧೭ ದಾತ್ರನುಮತಿಪ್ರಾರ್ಥಿತಃ. ೧೮ ಅಸ್ವೀಕಾರಃ. ೧೯ ತ್ಯಾಜ್ಯಾಃ. ೨೦ ವೀರ್ಯವರ್ಧಕಕ್ಷೀರಾದಿರಸೇನ ಸಹ.

[೧]ಬಾಹ್ಯಾಭ್ಯಂತರಭೇದೇಷು ಸಚಿತ್ತಾಚಿತ್ತವಸ್ತುಷು ।
ಇಂದ್ರಿಯಾರ್ಥೇಷ್ವ[೨]ನಾಸಂಗೋ [೩]ನೈಸ್ಸಂಗ್ಯವ್ರತಭಾವನಾಃ ॥ ೧೬೫ ॥

ಪಂಚೇಂದ್ರಿಯವಿಷಯವಾದ ಬಾಹ್ಯಾಭ್ಯಂತರಭೇದವುಳ್ಳ ಸಚಿತ್ತವಸ್ತುಗಳಲ್ಲಿಯೂ ಅಚಿತ್ತವಸ್ತುಗಳಲ್ಲಿಯೂ ಆಸಕ್ತಿಯಿಲ್ಲದಿರುವಿಕೆಯು ಪರಿಗ್ರಹತ್ಯಾಗವ್ರತದ ಭಾವನೆಗಳಾಗಿವೆ.

[೪]ಧೃತಿಮತ್ತಾ ಕ್ಷಮಾವತ್ತಾ ಧ್ಯಾನಯೋಗೈಕತಾನತಾ ।
ಪರೀಷಹೈರಭಂಗಶ್ಚ ವ್ರತಾನಾಂ ಭಾವನೋತ್ತರಾ ॥ ೧೬೬ ॥

ಧೈರ್ಯವಾಗಿರುವಿಕೆಯೂ ಕ್ಷಮೆಯುಳ್ಳವನಾಗಿರುವಿಕೆಯೂ ಧ್ಯಾನದಲ್ಲಿ ಏಕಾಗ್ರತೆಯಿರುವಿಕೆಯೂ ಹಸಿವೆ ಮೊದಲಾದ ಬಾಧೆಗಳಿಂದ ಚಲಿಸದಿರುವುದೂ ಇವು ನಾಲ್ಕು ಎಲ್ಲಾವ್ರತಗಳಿಗೂ ಉತ್ತರಭಾವನೆಗಳಾಗಿವೆ.

ಭಾವನಾಸಂಸ್ಕೃತಾನ್ಯೇವಂ ವ್ರತಾನ್ಯಯಮಪಾಲಯತ್ ।
[೫]ಕ್ಷಾಲನೇ [೬]ಸ್ವಾಗಸಾಂ ಸರ್ವಪ್ರಜಾನಾಮನುಪಾಲಕಃ ॥ ೧೬೭ ॥

ಸಮಸ್ತಪ್ರಜೆಗಳ ಪರಿಪಾಲಕನಾದ ಈ ಸ್ವಾಮಿಯು ತನ್ನ ಕರ್ಮಗಳ ನಾಶಕ್ಕೋಸ್ಕರ ಹೀಗೆ ಭಾವನೆಗಳಿಂದ ಪರಿಶೋಧಿಸಲ್ಪಟ್ಟ ವ್ರತಗಳನ್ನು ಪರಿಪಾಲಿಸಿದನು.

[೭]ಸಮಾತೃಕಾಪದಾನ್ಯೇವಂ ಸಹೋತ್ತರಪದಾನಿ ಚ ।
ವ್ರತಾನಿ ಭಾವನೀಯಾನಿ ಮನೀಷಿಭಿರತಂದ್ರಿತಮ್ ॥ ೧೬೮ ॥

ಭಗವಂತನು ಭಾವಿಸಿದಂತೆ ಇತರ ಬುದ್ಧಿಶಾಲಿಗಳು ಆಲಸ್ಯರಹಿತರಾಗಿ ಪಂಚಸಮಿತಿತ್ರಿಗುಪ್ತಿಗಳೂ ಉತ್ತರಗುಣಗಳೂ ಸಹಿತವಾಗಿರುವ ವ್ರತಗಳನ್ನು ಭಾವಿಸಬೇಕು.

ಯಾನಿ ಕಾನ್ಯಪಿ ಶಲ್ಯಾನಿ ಗರ್ಹಿತಾನಿ ಜಿನಾಗಮೇ ।
ವ್ಯುತ್ಸೃಜ್ಯ ತಾನಿ ಸರ್ವಾಣಿ ನಿಃಶಲ್ಯೋ ವಿಹರೇನ್ಮುನಿಃ ॥ ೧೬೯ ॥

ಜಿನಶಾಸ್ತ್ರದಲ್ಲಿ ಯಾವ ಶಲ್ಯಗಳು(ಮಾಯಾಮಿಥ್ಯಾನಿದಾನಶಲ್ಯಗಳು) ನಿಂದಿತವಾಗಿವೆಯೋ ಆ ಶಲ್ಯಗಳನ್ನೆಲ್ಲ ಬಿಟ್ಟು ಮುನಿಯು ಶಲ್ಯ (ದುಷ್ಪರಿಣಾಮ) ರಹಿತನಾಗಿ ವಿಹರಿಸ(ವರ್ತಿಸ)ಬೇಕು.

ಇತಿ [೮]ಸ್ಥವಿರಕಲ್ಪೋಽಯಂ [೯]ಜಿನಕಲ್ಪೇಽಪಿ ಯೋಜಿತಃ ।
ಯಥಾಗಮ[೧೦]ಮಿಹೋಚ್ಚಿತ್ಯ ಜಿನಕಲ್ಪೋ[೧೧]ಽನುಗಮ್ಯತಾಮ್ ॥ ೧೭೦ ॥

ಹೀಗೆ ಈ ಸ್ಥವಿರಕಲ್ಪ (ಮುನಿಗಳ ವಿಚಾರ—ಗಣಧರಾದಿಚರಿತ್ರ) ವು ಜಿನಕಲ್ಪ (ಜಿನರ ಚರಿತ್ರ) ದಲ್ಲಿ ಸೇರಿಸಲ್ಪಟ್ಟಿದೆ. ಮುನಿಗಳು ಕ್ರಮದಿಂದ ಜಿನರಾಗುವುದರಿಂದ ಸ್ಥವಿರಕಲ್ಪವು ಜಿನಕಲ್ಪದಲ್ಲಿ ಸೇರುವುದೆಂದರ್ಥವು. ಆದುದರಿಂದ ಈ ಸ್ಥವಿರಕಲ್ಪದಲ್ಲಿ ಜಿನಕಲ್ಪವನ್ನು ಸಂಗ್ರಹಿಸಿ ಆಗಮಾನುಸಾರವಾಗಿ ತಿಳಿಯಬೇಕು.

[೧೨]ಅಪ್ರತಿಕ್ರಮಣೇ ಧರ್ಮೇ ಜಿನಾಃ ಸಾಮಾಯಿಕಾಹ್ವಯೇ ।
ಚರಂತ್ಯೇ[೧೩]ಕಯಮೇ ಪ್ರಾಯಶ್ಚತುರ್ಜ್ಞಾನವಿಲೋಚನಾಃ ॥ ೧೭೧ ॥

ಮತಿಶ್ರುತಾವಧಿ ಮನಃಪರ್ಯಯಜ್ಞಾನಗಳೆಂಬ ನೇತ್ರಗಳುಳ್ಳ ಜಿನರು ನಿಯಮರಹಿತವಾದ ಸಾಮಾಯಿಕವೆಂಬ ಒಂದು ವ್ರತರೂಪವಾದ ಧರ್ಮದಲ್ಲಿ ಪ್ರಾಯಶಃ ವರ್ತಿಸುತ್ತಾರೆ.

೧ ದ್ರವ್ಯಭಾವಭೇದೇಷು. ೨ ಅನಾಸಕ್ತಿಃ. ೩ ನಿಷ್ಪರಿಗ್ರಹವ್ರತಸ್ಯ. ೪ ಧೈರ್ಯವತ್ವಂ. ೫ ಪ್ರಕ್ಷಾಲನನಿಮಿತ್ತಂ. ೬ ನಿಜಕರ್ಮಣಾಂ. ೭ ಪಂಚಸಮಿತಿತ್ರಿಗುಪ್ತೀನಾಂ ಪ್ರವಚನಮಾತೃಕೇತಿ ಸಂಜ್ಞಾ. ೮ ಗಣಧರಾದಿಚರಿತ್ರಂ. ೯ ಭದ್ರಸ್ಥಾನಾಮರ್ಹತಾಂ ಚರಿತ್ರಂ ಜಿನಕಲ್ಪಸ್ತಸ್ಮಿನ್. ೧೦ ಸ್ಥವಿರಕಲ್ಪೇ ಸಂಗೃಹ್ಯ. ೧೧ ಅನುಜ್ಞಾಯತಾಂ. ೧೨ ನಿಯಮರಹಿತೇ. ೧೩ ಏಕವ್ರತೇ.

ಛೇದೋಪಸ್ಥಾಪನಾಭೇದ[೧]ಪ್ರಪಂಚೋಽನ್ಯೋ[೨]ಽನ್ಯಯೋಗಿನಾಮ್ ।
ದರ್ಶಿತ[೩]ಸ್ತೈರ್ಯಥಾಕಾಲಂ ಬಲಾಯುರ್ಜ್ಞಾನ[೪]ವೀಕ್ಷಯಾ ॥ ೧೭೨ ॥

ಆ ಚತುರ್ಜ್ಞಾನಧಾರಿಗಳಾದ ಮುನಿಗಳು, ಇತರ ಮುನಿಗಳ ಶಕ್ತಿಯನ್ನೂ ಆಯುಷ್ಯವನ್ನೂ ಜ್ಞಾನವನ್ನೂ ಆಲೋಚಿಸಿ ವ್ರತಭಂಗವಾದರೆ ಪ್ರಾಯಶ್ಚಿತ್ತದಿಂದ ದೋಷವನ್ನು ಪರಿಹರಿಸಿ ಪುನಃ ವ್ರತಧಾರಣಮಾಡುವುದೆಂಬ ಛೇದೋಪಸ್ಥಾಪನಾಚಾರಿತ್ರದ ಹದಿಮೂರು ಭೇದಗಳನ್ನು ತೋರಿಸಿದರು.

ಜ್ಞಾನದರ್ಶನಚಾರಿತ್ರತಪೋವೀರ್ಯವಿಶೇಷಿತಮ್ ।
ಚಾರಿತ್ರಂ [೫]ಸಂಯಮತ್ರಾಣಂ ಪಂಚಧೋಕ್ತಂ ಜಿನಾಧಿಪೈಃ ॥ ೧೭೩ ॥

ಜ್ಞಾನ ದರ್ಶನ ಚಾರಿತ್ರ ತಪಸ್ಸು ಶಕ್ತಿ ಇವುಗಳಿಂದ ವಿಶಿಷ್ಟವೂ ಇಂದ್ರಿಯನಿಗ್ರಹ ಪ್ರಾಣಿರಕ್ಷಣರೂಪವೂ ಆದ ಚಾರಿತ್ರವನ್ನು ಜಿನೇಶ್ವರರು ಐದುಪ್ರಕಾರವಾಗಿ ಹೇಳಿದ್ದಾರೆ.

ತತಃ ಸಂಯಮಸಿದ್ಧ್ಯರ್ಥಂ ಸ ತಪೋ ದ್ವಾದಶಾತ್ಮಕಮ್ ।
ಜ್ಞಾನ[೬]ಧೈರ್ಯಬಲೋಪೇತ[೭]ಶ್ಚಚಾರ ಪರಮಃ ಪುಮಾನ್ ॥ ೧೭೪ ॥

ತರುವಾಯ ಜ್ಞಾನ ಮನೋಬಲ ಶಕ್ತಿ ಇವುಗಳಿಂದ ಯುಕ್ತನಾದ ಆ ಪರಮಪುರುಷನು ಹಿಂದೆ ಹೇಳಿದ ಚಾರಿತ್ರದ ಶುದ್ಧಿಗೋಸ್ಕರ ಹನ್ನೆರಡುವಿಧವಾದ ತಪಸ್ಸನ್ನು ಮಾಡಿದನು.

ತಪೋಽನಶನಮತ್ಯುಗ್ರಂ ತೇಪೇ ದೀಪ್ತತಪಾ ಮುನಿಃ ।
ಅವಮೋದರ್ಯಮಪ್ಯೇ[೮]ಕಸಿಕ್ಥಾದೀತ್ಯಾಚರತ್ತಪಃ ॥ ೧೭೫ ॥

ತೀವ್ರವಾದ ತಪಸ್ಸನ್ನು ಮಾಡುವ ಮುನಿಯು ಅತ್ಯಂತ ಕಠಿಣವಾದ ಅನಶನ (ಉಪವಾಸ) ತಪಸ್ಸನ್ನು ಮಾಡಿದನು. ಒಂದು ಅನ್ನದ ಅಗಳು ಮೊದಲುಗೊಂಡು ಅರ್ಧಹೊಟ್ಟೆ ಭೋಜನಮಾಡುವುದೆಂಬ ಅವಮೋದರ್ಯತಪಸ್ಸನ್ನೂ ಆಚರಿಸಿದನು.

ಕದಾಚಿದ್ವೃತ್ತಿಸಂಖ್ಯಾನಂ ತಪೋತಪ್ತ ಸ ದುರ್ಧರಮ್ ।
[೯]ವೀಥೀಚರ್ಯಾದಯೋ ಯಸ್ಯ ವಿಶೇಷಾ ಬಹುಭೇದಕಾಃ ॥ ೧೭೬ ॥

ಕೆಲವು ವೇಳೆಯಲ್ಲಿ ಆ ಸ್ವಾಮಿಯು ನಿಯಮಿತವಾದ ಬೀದಿ ಮನೆ ಮೊದಲಾದ ಬಹುಭೇದಗಳುಳ್ಳ ವೃತ್ತಿಪರಿಸಂಖ್ಯಾನವೆಂಬ ಕಠಿಣವಾದ ತಪಸ್ಸನ್ನು ಮಾಡಿದರು. (ಕೆಲವು ಬೀದಿ ಮನೆ ಮೊದಲಾದುವನ್ನು ನಿಯಮಮಾಡಿಕೊಂಡು ಅಷ್ಟರಲ್ಲಿ ಆಹಾರವು ದೊರೆಯದಿದ್ದರೆ ಹಿಂದಿರುಗಿಬರುವುದಕ್ಕೆ ವೃತ್ತಿಪರಿಸಂಖ್ಯಾನತಪಸ್ಸೆಂದು ಹೆಸರು).

ರಸತ್ಯಾಗಂ ತಪೋ ಘೋರಂ ತೇಪೇ ನಿತ್ಯಮತಂದ್ರಿತಃ ।
ಕ್ಷೀರಸರ್ಪಿರ್ಗುಡಾದೀನಿ ಪರಿತ್ಯಜ್ಯಾಗ್ರಿಮಃ ಪುಮಾನ್ ॥ ೧೭೭ ॥

ಯಾವಾಗಲೂ ಆಲಸ್ಯರಹಿತನಾದ ಆದಿಪುರುಷನು ಹಾಲು ತುಪ್ಪ ಬೆಲ್ಲ ಮೊದಲಾದ ರಸಪದಾರ್ಥಗಳನ್ನು ಪರಿತ್ಯಜಿಸಿ ಘೋರವಾದ ರಸತ್ಯಾಗವೆಂಬ ತಪಸ್ಸನ್ನು ಮಾಡಿದನು.

[೧೦]ತ್ರಿಷು ಕಾಲೇಷು ಯೋಗೀ ಸನ್ನಸೌ ಕಾಯ[೧೧]ಮಚಿಕ್ಲಿಶತ್ ।
ಕಾಯಸ್ಯ ನಿಗ್ರಹಂ ಪ್ರಾಹುಸ್ತಪಃ ಪರಮದುಶ್ಚರಮ್ ॥ ೧೭೮ ॥

ಈ ಸ್ವಾಮಿಯು ಶೀತಕಾಲ ಉಷ್ಣಕಾಲ ಮಳೆಗಾಲ ಈ ಮೂರುಕಾಲಗಳಲ್ಲಿಯೂ ಯೋಗಾರೂಢರಾಗಿ ಶರೀರವನ್ನು ದಂಡಿಸಿದರು. ಶರೀರನಿಗ್ರಹವು ಅತ್ಯಂತ ಕಠಿಣವಾದ ತಪಸ್ಸೆಂದು ಹೇಳುತ್ತಾರೆ.

೧ ತ್ರಯೋದಶವಿಧಚಾರಿತ್ರಂ. ೨ ಚತುರ್ಜ್ಞಾನಧರಾದನ್ಯಯೋಗಿನಾಂ. ೩ ಚತುರ್ಜ್ಞಾನಧರೈಃ. ೪ ಆಲೋಚನೇನ. ೫ ಇಂದ್ರಿಯಸಂಯಮಪ್ರಾಣಿಸಂಯಮರಕ್ಷಣಂ. ೬ ಮನೋಬಲೇನ. ೭ ಆಚರತಿಸ್ಮ. ೮ ಏಕಾನ್ನಪುಲಕಾದಿ. ೯ ನಿಯಮಿತವೀಥೀಗೃಹಬಾಲಕಯುಕ್ತಸ್ತ್ರೀತ್ಯಾದಿಚರ್ಯಾದಯಃ. ೧೦ ಹಿಮಂತಗ್ರೀಷ್ಮಪ್ರಾವೃಟ್ಕಾಲೇಷು. ೧೧ ಉತ್ತಪ್ತಮಕರೋತ್.

**[೧]ನಿಗೃಹೀತಶರೀರೇಣ ನಿಗೃಹೀತಾನ್ಯಸಂಶಯಮ್ ।**
**ಚಕ್ಷುರಾದೀನಿ ರುದ್ಧೇಷು ತೇಷು ರುದ್ಧಂ ಮನೋ ಭವೇತ್ ॥ ೧೭೯ ॥**

ಶರೀರವನ್ನು ನಿಗ್ರಹಿಸಿದ ಪುರುಷನು ನಿಸ್ಸಂದೇಹವಾಗಿ ನೇತ್ರಮೊದಲಾದ ಇಂದ್ರಿಯಗಳನ್ನೂ ನಿಗ್ರಹಿಸಿದವನು. ಆ ಇಂದ್ರಿಯಗಳು ನಿಗ್ರಹಿಸಲ್ಪಟ್ಟರೆ ಮನೋ ನಿಗ್ರಹವಾಗುವುದು.

**ಮನೋರೋಧಃ ಪರಂ ಧ್ಯಾನಂ ತತ್ಕರ್ಮಕ್ಷಯ[೨]ಸಾಧನಮ್ ।**
**[೩]ತತೋನಂತಸುಖಾವಾಪ್ತಿಸ್ತತಃ ಕಾಯಂ [೪]ಪ್ರಕರ್ಷಯೇತ್ ॥ ೧೮೦ ॥**

ಮನಸ್ಸನ್ನು ತಡೆಯುವುದು ಉತ್ಕೃಷ್ಟವಾದ ಧ್ಯಾನವು. ಆ ಉತ್ಕೃಷ್ಟಧ್ಯಾನವು ಕರ್ಮಕ್ಷಯಕ್ಕೆ ಕಾರಣವು. ಆ ಕರ್ಮಕ್ಷಯದಿಂದ ಅನಂತ ಸುಖವು ಪ್ರಾಪ್ತವಾಗುವುದು. ಆದುದರಿಂದ ಶರೀರವನ್ನು ಚೆನ್ನಾಗಿ ಕೃಶಮಾಡಬೇಕು.

**ಗರ್ಭಾತ್ಪ್ರಭೃತ್ಯಸೌ ದೇವೋ ಜ್ಞಾನತ್ರಿತಯಮುದ್ವಹನ್ ।**
**ದೀಕ್ಷಾನಂತರಮೇವಾಪ್ತಮನಃಪರ್ಯಯಬೋಧನಃ ॥ ೧೮೧ ॥**

ಈ ಸ್ವಾಮಿಯು ಗರ್ಭದಲ್ಲಿ ಜನಿಸಿದ ಮೊದಲುಗೊಂಡು ಮತಿಶ್ರುತಾವಧಿಗಳೆಂಬ ಮೂರುಜ್ಞಾನಗಳನ್ನು ಧರಿಸಿದವರಾಗಿ ದೀಕ್ಷೆಯನ್ನು ಹೊಂದಿದನಂತರವೇ ಮನಃಪರ್ಯಯಜ್ಞಾನವನ್ನು ಪಡೆದರು.

**ತಥಾಪ್ಯುಗ್ರಂ ತಪೋತಪ್ತ [೫]ಸೇದ್ಧವ್ಯೇ [೬]ಧ್ರುವಭಾವಿನಿ ।**
**ಸ ಜ್ಞಾನಲೋಚನೋ ಧೀರಃ ಸಹಸ್ರಂ [೭]ವಾರ್ಷಿಕಂ ಪರಮ್ ॥ ೧೮೨ ॥**

ಹಾಗಿದ್ದರೂ ಜ್ಞಾನಗಳೆಂಬ ನೇತ್ರಗಳುಳ್ಳವರೂ ಧೀರರೂ ಆದ ಆ ಸ್ವಾಮಿಯು ಸಾಧಿಸುವುದಕ್ಕೆ ಯೋಗ್ಯವೂ ನಿತ್ಯವೂ ಆದ ಮುಕ್ತಿಸುಖನಿಮಿತ್ತವಾಗಿ ಅನೇಕ ವರ್ಷಗಳ ವರೆಗೆ ಉಗ್ರವಾದ ತಪಸ್ಸನ್ನು ಮಾಡಿದರು.

**[೮]ತೇನಾಭೀಷ್ಟಂ ಮುನೀಂದ್ರಾಣಾಂ ಕಾಯಕ್ಲೇಶಾಹ್ವಯಂ ತಪಃ ।**
**ತಪೋಂಗೇಷು ಪ್ರಧಾನಾಂಗ[೯]ಮುತ್ತಮಾಂಗಮಿವಾಂಗಿನಾಮ್ ॥ ೧೮೩ ॥**

ಆದುದರಿಂದ ಪ್ರಾಣಿಗಳಿಗೆ ಮಸ್ತಕವು ಮುಖ್ಯವಾದ ಅಂಗವಾಗಿರುವಂತೆ, ತಪಸ್ಸಿನ ಅಂಗಗಳಲ್ಲಿ ಮುಖ್ಯಾಂಗವಾದ ಕಾಯಕ್ಲೇಶವೆಂಬ ತಪಸ್ಸು ಮುನೀಂದ್ರರಿಗೆ ಇಷ್ಟವಾಗಿದೆ.

**[೧೦]ತತ್ತದಾತಪ್ತ ಯೋಗೀಂದ್ರಃ ಸೋಢಾಶೇಷಪರೀಷಹಃ ।**
**ತಪಃ ಸುದುಸ್ಸಹತರಂ ಪರಂ ನಿರ್ವಾಣಸಾಧನಮ್ ॥ ೧೮೪ ॥**

ಆಗ ಸಮಸ್ತಬಾಧೆಗಳನ್ನು ಸಹಿಸಿದ ಯೋಗಿವರ್ಯರು ಸಹಿಸುವುದಕ್ಕೆ ಅತ್ಯಂತ ಕಠಿಣವೂ ಮೋಕ್ಷಕ್ಕೆ ಮುಖ್ಯಕಾರಣವೂ ಆದ ಆ ಕಾಯಕ್ಲೇಶತಪಸ್ಸನ್ನು ಮಾಡಿದರು.

**ಕರ್ಮೇಂಧನಾನಿ ನಿರ್ದಗ್ಧುಮುದ್ಯತಃ ಸ ತಪೋಗ್ನಿನಾ ।**
**ದಿದೀಪೇ ನಿತರಾಂ ಧೀರಃ ಪ್ರಜ್ವಲನ್ನಿವ ಪಾವಕಃ ॥ ೧೮೫ ॥**

ತಪಸ್ಸೆಂಬ ಬೆಂಕಿಯಿಂದ ಕರ್ಮಗಳೆಂಬ ಕಟ್ಟಿಗೆಗಳನ್ನು ಸುಡುವುದಕ್ಕೋಸ್ಕರ ಉದ್ಯುಕ್ತನೂ ಧೀರನೂ ಆದ ಆ ಸ್ವಾಮಿಯು ಪ್ರಜ್ವಲಿಸುವ ಬೆಂಕಿಯಂತೆ, ಅಧಿಕವಾಗಿ ಪ್ರಕಾಶಿಸಿದನು.

**[೧೧]ಅಸಂಖ್ಯಾತಗುಣಶ್ರೇಣ್ಯಾ ಧುನ್ವ[೧೨]ನ್ಕರ್ಮತಮೋಘನಮ್ ।**
**ತಪೋದೀಪ್ತ್ಯಾತಿದೀಪ್ತಾಂಗಃ ಸೋಂಶುಮಾನಿವ ದಿದ್ಯುತೇ ॥ ೧೮೬ ॥**

೧ ಪುರುಷೇಣ. ೨ ಕಾರಣಂ. ೩ ಕರ್ಮಕ್ಷಯಾತ್. ೪ ಪ್ರಕರ್ಷೇಣ ಕೃಶೀಕುರ್ಯಾತ್. ೫ ಸಾಧಿತುಂ ಯೋಗ್ಯೇ. ೬ ನಿತ್ಯಮುಕ್ತಿಸುಖೇ. ೭ ವರ್ಷಸಂಬಂಧಿ. ೮ ಕಾರಣೇನ. ೯ ಶಿರಃ. ೧೦ ಕಾಯಕ್ಲೇಶಂ. ೧೧ ಪ್ರತಿಸಮಯಮಸಂಖ್ಯಾತಗುಣಿತಕ್ರಮೇಣ ಕರ್ಮಣಾಂ ನಿರ್ಜರಾ ತಯಾ. ೧೨ ಘನಂ ಕರ್ಮತಮ ಇತ್ಯನ್ವಯಃ.

ಪ್ರತಿಸಮಯದಲ್ಲಿಯೂ ಅಸಂಖ್ಯಾತ ಗುಣಿತಕ್ರಮದಿಂದ ಕರ್ಮಗಳ ನಿರ್ಜರೆಯಿಂದ ನಿಬಿಡವಾದ ಕರ್ಮವೆಂಬ ಕತ್ತಲೆಯನ್ನು ನಾಶಮಾಡುವವನೂ ತಪಸ್ಸಿನ ತೇಜಸ್ಸಿನಿಂದ ಅತ್ಯಂತ ಪ್ರಕಾಶಮಾನವಾದ ಶರೀರವುಳ್ಳವನೂ ಆದ ಆ ಭಗವಂತನು, ಸೂರ್ಯನಂತೆ, ಪ್ರಕಾಶಿಸಿದನು.

**ಶಯ್ಯಾಸ್ಯ ವಿಜನೇ ದೇಶೇ [೧]ಜಾಗರೂಕಸ್ಯ ಯೋಗಿನಃ ।**
**ಕದಾಚಿದಾಸನಂ ಚಾಸೀಚ್ಛುಚೌ ನಿರ್ಜಂತು[೨]ಕಾಂತರೇ ॥ ೧೮೭ ॥**

ಜಾಗರಣಶೀಲನಾದ ಈ ಯೋಗಿಗೆ ಕೆಲವು ವೇಳೆಯಲ್ಲಿ ಶಯನವೂ ಆಸನ (ಕುಳಿತುಕೊಳ್ಳುವಿಕೆ) ವೂ, ಶುಚಿಯೂ ನಿರ್ಜಂತುಕವಾದ ಪ್ರದೇಶವುಳ್ಳುದೂ ಆದ ನಿರ್ಜನಪ್ರದೇಶದಲ್ಲಿ ಕೆಲವು ವೇಳೆಯಲ್ಲಿ ಶಯನವೂ ಆಸನವೂ ಆದುವು.

**ನ ಶಿಶ್ಯೇ ಜಾಗರೂಕೋಸೌ ನಾಸೀನಶ್ಚಾಭವದ್ಭೃಶಮ್ ।**
**[೩]ಪ್ರಯತೋ ವಿಜಹಾರೋರ್ವೀಂ [೪]ತ್ಯಕ್ತಭುಕ್ತಿರ್ಜಿತೇಂದ್ರಿಯಃ ॥ ೧೮೮ ॥**

ಜಾಗರಣಸ್ವಭಾವವುಳ್ಳ ಈ ಸ್ವಾಮಿಯು ಚೆನ್ನಾಗಿ ಮಲಗಲೂ ಇಲ್ಲ. ಕುಳಿತುಕೊಳ್ಳಲೂ ಇಲ್ಲ. ಆಹಾರವನ್ನು ತ್ಯಜಿಸಿದವನೂ ಜಿತೇಂದ್ರಿಯನೂ ಪವಿತ್ರನೂ ಆದ ಸ್ವಾಮಿಯು ಪೃಥ್ವಿಯಲ್ಲಿ ವಿಹರಿಸಿದನು.

**ಇತಿ ಬಾಹ್ಯಂ ತಪಃ ಷೋಢಾಚರನ್ಪರಮದುಶ್ಚರಮ್ ।**
**ಆಭ್ಯಂತರಂ ಚ ಷಡ್ಭೇದಂ ತಪೋ ಭೇಜೇ ಸ ಯೋಗಿರಾಟ್ ॥ ೧೮೯ ॥**

ಹೀಗೆ ಮಾಡುವುದಕ್ಕೆ ಅತ್ಯಂತ ಕಠಿಣವಾದ ಆರುವಿಧವಾದ ಬಾಹ್ಯತಪಸ್ಸನ್ನು ಮಾಡುವವನಾಗಿ ಆ ಯೋಗಿರಾಜನು ಆರುಪ್ರಕಾರವಾದ ಅಭ್ಯಂತರ ತಪಸ್ಸನ್ನೂ ಕೈಗೊಂಡನು.

**ಪ್ರಾಯಶ್ಚಿತ್ತಂ ತಪಸ್ತಸ್ಮಿನ್ಮುನೌ ನಿರತಿಚಾರಕೇ ।**
**[೫]ಚರಿತಾರ್ಥಮಭೂತ್ಕಿಂ ನು ಭಾನೋರಸ್ತ್ಯಾಂತರಂ ತಮಃ ॥ ೧೯೦ ॥**

ಅತಿಚಾರರಹಿತನಾದ ಆ ಮುನಿಯಲ್ಲಿ ಪ್ರಾಯಶ್ಚಿತ್ತವೆಂಬ ತಪಸ್ಸು ಕೃತಾರ್ಥವಾಯಿತು. ಸ್ವಾಮಿಯು ಅತಿಚಾರರಹಿತರಾಗಿದ್ದುದರಿಂದ ಪ್ರಾಯಶ್ಚಿತ್ತವನ್ನು ಮಾಡುವ ಆವಶ್ಯಕತೆಯೇ ಇರಲಿಲ್ಲವೆಂದರ್ಥವು. ಸೂರ್ಯನಿಗೆ ಅಂತರಂಗ ಸಂಬಂಧವಾದ ಕತ್ತಲೆಯಿದೆಯೇ ? ಸ್ವಾಮಿಯಲ್ಲಿ ಅತಿಚಾರವಿರಲಿಲ್ಲವೆಂದರ್ಥವು.

**ಪ್ರಶ್ರಯಶ್ಚ ತದಾಸ್ಯಾಸೀ[೬]ತ್ಪ್ರಶ್ರಿತೋಂತರ್ನಿಲೀನತಾಮ್ ।**
**[೭]ವಿನೇತಾ ವಿನಯಂ ಕಸ್ಯ ಸ ಕುರ್ಯಾದಗ್ರಿಮಃ ಪುಮಾನ್ ॥ ೧೯೧ ॥**

ಆಗ ಈ ಸ್ವಾಮಿಯ ವಿನಯಗುಣವು ಒಳಕ್ಕೆ ಅಡಗಿಕೊಂಡಿತು. ಜನರನ್ನು ವಿನಯಪರರನ್ನಾಗಿ ಮಾಡುವ ಆ ಆದಿಪುರುಷನು ಯಾರಿಗೆ ವಿನಯವನ್ನು ಮಾಡಬೇಕು ?

**ಅಥವಾ ಪ್ರಶ್ರಯೀ ಸಿದ್ಧಾನಸೌ ಭೇಜೇ [೮]ಸಿಷಿತ್ಸಯಾ ।**
**ನಮಃ ಸಿದ್ಧೇಭ್ಯ ಇತ್ಯೇವ ಯತೋ ದೀಕ್ಷಾ[೯]ಮುಪಾಯತ ॥ ೧೯೨ ॥**

ಅಥವಾ ವಿನಯವುಳ್ಳ ಈ ಸ್ವಾಮಿಯು ಸಿದ್ಧಿಯನ್ನು ಹೊಂದಬೇಕೆಂಬ ಇಚ್ಛೆಯಿಂದ ''ನಮಃ ಸಿದ್ಧೇಭ್ಯಃ'' ಎಂದು ದೀಕ್ಷೆಯನ್ನು ಸ್ವೀಕರಿಸಿದುದರಿಂದ ಸಿದ್ಧರನ್ನು ಹೊಂದಿದನು. ಸಿದ್ಧರಿಗೆ ವಿನಯವನ್ನು ಮಾಡಿದನೆಂದು ಭಾವವು.

**ಜ್ಞಾನದರ್ಶನಚಾರಿತ್ರತಪೋವೀರ್ಯಗುಣೇಷು ಚ ।**
**ಯಥಾರ್ಹಂ [೧೦]ವಿನಯೋಸ್ಯಾಸೀ[೧೧]ದ್ಯತಮಾನಸ್ಯ ತತ್ತ್ವತಃ ॥ ೧೯೩ ॥**

೧ ಜಾಗರಣಶೀಲಸ್ಯ. ೨ ಅವಕಾಶೇ. ೩ ಪವಿತ್ರಃ. ೪ ತ್ಯಕ್ತಮುಕ್ತಜಿತೇಂದ್ರಿಯ ಇತ್ಯಪಿ ಪಾಠಃ. ೫ ಕೃತಾರ್ಥಂ. ೬ ಪ್ರಸೃತ ಇತ್ಯಪಿ ಪಾಠಃ. ೭ ಜನಾನ್ ವಿನಯವತಃ ಕುರ್ವನ್. ೮ ಸಿದ್ಧಿಂ ಪ್ರಾಪ್ತುಮಿಚ್ಛಯಾ. ೯ ಸ್ವೀಕೃತವಾನ್. ೧೦ ಗುಣೇಷ್ವಾದರಃ, ಅಕಷಾಯತ್ವಂ ವಾ. ೧೧ ಪ್ರಯತ್ನಂ ಕುರ್ವಾಣಸ್ಯ.

ಯಥಾರ್ಥವಾಗಿ ಪ್ರಯತ್ನಮಾಡುತ್ತಿರುವ ಈ ಸ್ವಾಮಿಗೆ ಜ್ಞಾನ ದರ್ಶನ ಚಾರಿತ್ರ ತಪಸ್ಸು ವೀರ್ಯ ಈ ಗುಣಗಳಲ್ಲಿಯೂ ಯಥಾಯೋಗ್ಯವಾಗಿ ವಿನಯವಿದ್ದಿತು.

**ವೈಯಾವೃತ್ಯಂ ಚ ತಸ್ಯಾಸೀ[೧]ನ್ಮಾರ್ಗವ್ಯಾಪೃತಿಮಾತ್ರಕಮ್ ।**
**ಭಗವಾನ್ಪರಮೇಷ್ಠೀ ಹಿ ಕ್ವಾನ್ಯತ್ರ ವ್ಯಾಪೃತೋ ಭವೇತ್ ॥ ೧೯೪ ॥**

ಆ ಸ್ವಾಮಿಗೆ ರತ್ನತ್ರಯರೂಪವಾದ ಮಾರ್ಗದಲ್ಲಿ ಮಾತ್ರ ವ್ಯಾಪಾರವುಳ್ಳ ವೈಯಾವೃತ್ಯ(ಸೇವಾ)ವಿದ್ದಿತು. ರತ್ನತ್ರಯದಲ್ಲಿ ಆಸಕ್ತನಾಗಿದ್ದನೆಂದು ಭಾವವು. ಪರಮಪದದಲ್ಲಿರುವ ಭಗವಂತನು ಬೇರೆ ಎಲ್ಲಿ ವೈಯಾವೃತ್ಯವನ್ನು ಮಾಡಬೇಕು ?

**ಇದಮತ್ರ ತು ತಾತ್ಪರ್ಯಂ ಪ್ರಾಯಶ್ಚಿತ್ತಾದಿಕೇ ತ್ರಯೇ ।**
**ತಪಸ್ಯಸ್ಮಿ[೨]ನ್ನಿಯಂತೃತ್ವಂ ನ [೩]ನಿಯಮ್ಯತ್ವಮೀಶಿತುಃ ॥ ೧೯೫ ॥**

ಸ್ವಾಮಿಗೆ ಪ್ರಾಯಶ್ಚಿತ್ತಮೊದಲಾದ ಈ ಮೂರು ತಪಸ್ಸಿನಲ್ಲಿ ಪ್ರಭುತ್ವವಿದ್ದಿತು. ಅಧೀನತೆಯಿರಲಿಲ್ಲ. ಈ ಮೂರು ತಪಸ್ಸುಗಳನ್ನು ಬೇರೆಯವರಿಗೆ ಮಾಡಿಸುವವರಾಗಿದ್ದರು. ತಾವು ಮಾಡುವವರಾಗಿರಲಿಲ್ಲವೆಂದು ಇಲ್ಲಿ ತಾತ್ಪರ್ಯವು.

**ಯೂವಾನ್ಧರ್ಮಮಯಃ ಸರ್ಗಸ್ತಂ ಕೃತ್ಸ್ನಂ ಸ ಸನಾತನಃ ।**
**ಯುಗಾದೌ ಪ್ರಥಯಾಮಾಸ [೪]ಸ್ವಾನುಷ್ಠಾನೈರ್ನಿದರ್ಶನೈಃ ॥ ೧೯೬ ॥**

ಧರ್ಮಮಯವಾದ ಸೃಷ್ಟಿಯನ್ನೆಲ್ಲ ನಿತ್ಯನಾದ ಆ ಭಗವಂತನು ದೃಷ್ಟಾಂತ ರೂಪವಾದ ತನ್ನ ಆಚರಣೆಗಳಿಂದ ಕೃತಯುಗದ ಆದಿಯಲ್ಲಿ ಪ್ರಸಿದ್ಧಪಡಿಸಿದನು.

**[೫]ಸ್ವಧೀತಿನೋಽಪಿ ತಸ್ಯಾಸೀತ್ಸ್ವಾಧ್ಯಾಯಃ ಶುದ್ಧಯೇ ಧಿಯಃ ।**
**[೬]ಸೌವಾಧ್ಯಾಯಿಕತಾಂ [೭]ಪ್ರಾಪನ್ಯತೋ[೮]ದ್ಯತ್ವೇಽಪಿ ಸಂಯತಾಃ ॥ ೧೯೭ ॥**

ಚೆನ್ನಾಗಿ ಅಧ್ಯಯನವನ್ನು ಮಾಡಿದವನಾದರೂ ಆ ಭಗವಂತನು ಬುದ್ಧಿಯ ಶುದ್ಧಿಗೋಸ್ಕರ ಸ್ವಾಧ್ಯಾಯವನ್ನು ಮಾಡಿದನು. ಆದರಿಂದ ಈ ಕಾಲದಲ್ಲಿಯೂ ಮುನಿಗಳು ಸ್ವಾಧ್ಯಾಯದಲ್ಲಿ ಪ್ರವೃತ್ತಿಯನ್ನು ಹೊಂದಿದರು.

**ಸ ಬಾಹ್ಯಾಭ್ಯಂತರೇ ಚಾಸ್ಮಿಂಸ್ತಪಸಿ [೯]ದ್ವಾದಶಾತ್ಮಕೇ ।**
**ನ ಭವಿಷ್ಯತಿ ನೈವಾಸ್ತಿ ಸ್ವಾಧ್ಯಾಯೇನ ಸಮಂ ತಪಃ ॥ ೧೯೮ ॥**

ಆ ಸ್ವಾಧ್ಯಾಯವು ಹನ್ನೆರಡುಪ್ರಕಾರವಾದ ಈ ಬಾಹ್ಯಾಭ್ಯಂತರತಪಸ್ಸುಗಳಲ್ಲಿ ಮುಖ್ಯವಾದುದು. ಸ್ವಾಧ್ಯಾಯಕ್ಕೆ ಸಮಾನವಾದ ತಪಸ್ಸು ಮುಂದೆ ಆಗುವುದಿಲ್ಲ. ಈಗ ಇಲ್ಲವೇ ಇಲ್ಲ.

**ಸ್ವಾಧ್ಯಾಯೇಭಿರತೋ ಭಿಕ್ಷು[೧೦]ರ್ನಿಭೃತಃ ಸಂವೃತೇಂದ್ರಿಯಃ ।**
**ಭವೇದೇಕಾಗ್ರಧೀರ್ಧೀಮಾನ್ವಿನಯೇನ [೧೧]ಸಮಾಹಿತಃ ॥ ೧೯೯ ॥**

ಸ್ವಾಧ್ಯಾಯದಲ್ಲಿ ಪ್ರೀತಿಯುಳ್ಳ ಮುನಿಯು ನಿಶ್ಚಲನೂ ಇಂದ್ರಿಯನಿಗ್ರಹವುಳ್ಳವನೂ ವಿನಯದಿಂದ ಯುಕ್ತನೂ ಬುದ್ಧಿಶಾಲಿಯೂ ಏಕಾಗ್ರವಾದ ಬುದ್ಧಿಯುಳ್ಳವನೂ ಆಗುವನು.

**ವಿವಿಕ್ತೇಷು ವನಾಂತಾದ್ರಿಕುಂಜಪ್ರೇತವನಾದಿಷು ।**
**ಮುಹುರ್ವ್ಯುತ್ಸೃಷ್ಟಕಾಯಸ್ಯ ವ್ಯುತ್ಸರ್ಗಾಖ್ಯಮಭೂತ್ತಪಃ ॥ ೨೦೦ ॥**

ನಿರ್ಜನವಾದ ಅರಣ್ಯಮಧ್ಯ ಪರ್ವತ ಪೊದರು ಶ್ಮಶಾನ ಮೊದಲಾದುವುಗಳಲ್ಲಿ ಬಾರಿಬಾರಿಗೂ ಶರೀರದಲ್ಲಿ ಮಮತೆಯನ್ನು ಬಿಟ್ಟು ಕಾಯೋತ್ಸರ್ಗದಿಂದಿದ್ದ ಸ್ವಾಮಿಗೆ ವ್ಯುತ್ಸರ್ಗತಪಸ್ಸುಂಟಾಯಿತು.

೧ ರತ್ನತ್ರಯವ್ಯಾಪಾರಮಾತ್ರಕಂ. ೨ ನಾಯಕತ್ವಂ. ೩ ನೇಯತ್ವಂ. ೪ ಸಾನುಷ್ಠಾನೈರಿತ್ಯಪಿ ಪಾಠಃ. ೫ ಸುಷ್ಠು ಅಧೀತಮನೇನೇತಿ ಸ್ವಧೀತೀ ತಸ್ಯ. ೬ ಸ್ವಾಧ್ಯಾಯಪ್ರವೃತ್ತತ್ವಂ. ೭ ಪ್ರಾಪ್ತಾಃ. ೮ ಇದಾನೀಂತನಕಾಲೇ. ೯ ದ್ವಾದಶಾತ್ಮನೀತ್ಯಪಿ ಪಾಠಃ. ೧೦ ನಿಶ್ಚಲಃ. ೧೧ ಯುಕ್ತಃ.

**ದೇಹಾ[೧]ದ್ವಿವಿಕ್ತಮಾತ್ಮಾನಂ ಪಶ್ಯನ್ಗುಪ್ತಿತ್ರಯೀಂ ಶ್ರಿತಃ ।**
**ವ್ಯುತ್ಸರ್ಗಂ ಸ ತಪೋ ಭೇಜೇ ಸ್ವಸ್ಮಿನ್ಗಾತ್ರೇಽಪಿ ನಿಸ್ಪೃಹಃ ॥ ೨೦೧ ॥**

ಆತ್ಮನನ್ನು ಶರೀರದಿಂದ ಬೇರೆಯನ್ನಾಗಿ ನೋಡುವವನೂ ತ್ರಿಗುಪ್ತಿಗಳನ್ನಾಶ್ರಯಿಸಿದವನೂ ತನ್ನ ಶರೀರದಲ್ಲಿಯೂ ಇಚ್ಛೆಯಿಲ್ಲದಿರುವವನೂ ಆದ ಆ ಭಗವಂತನು ವ್ಯುತ್ಸರ್ಗವೆಂಬ ತಪಸ್ಸನ್ನು ಹೊಂದಿದನು.

**ತತೋ ವ್ಯುತ್ಸರ್ಗಪೂರ್ವೋಽಸ್ಯ [೨]ಧ್ಯಾನಯೋಗೋಽಭವದ್ವಿಭೋಃ ।**
**ಮುನಿರ್ವ್ಯುತ್ಸೃಷ್ಟಕಾಯೋ ಹಿ ಸ್ವಾಮೀ ಸದ್ಧ್ಯಾನಸಂಪದಃ[೩] ॥ ೨೦೨ ॥**

ತರುವಾಯ ಈ ಭಗವಂತನಿಗೆ ಧ್ಯಾನದ ಸಂಯೋಜನವು ವ್ಯುತ್ಸರ್ಗಪೂರ್ವಕವಾಗಿ ಆಯಿತು. ಶರೀರಮಮತೆಯನ್ನು ಬಿಟ್ಟ ಮುನಿಯು ಧ್ಯಾನಸಂಪತ್ತಿಗೆ ಅಧಿಕಾರಿಯಲ್ಲವೆ ?(ಬಾಹ್ಯಾಭ್ಯಂತರಪರಿಗ್ರಹತ್ಯಾಗಕ್ಕೆ ವ್ಯುತ್ಸರ್ಗವೆಂದು ಹೆಸರು).

**ಧ್ಯಾನಾಭ್ಯಾಸಂ ತತಃ ಕುರ್ವನ್ಯೋಗೀ ಸ [೪]ನಿಭೃತೋ[೫]ಭವತ್ ।**
**[೬]ಶೇಷಃ ಪರಿಕರಃ ಸರ್ವೋ ಧ್ಯಾನಮೇವೋತ್ತಮಂ ತಪಃ ॥ ೨೦೩ ॥**

ತರುವಾಯ ಧ್ಯಾನದ ಅಭ್ಯಾಸವನ್ನು ಮಾಡುತ್ತಿರುವ ಆ ಯೋಗಿಯು ನಿಶ್ಚಂಚಲನಾದನು. ಬೇರೆ (ಹನ್ನೊಂದುವಿಧವಾದ ತಪಸ್ಸು) ಯೆಲ್ಲವೂ ಧ್ಯಾನಕ್ಕೆ ಸಲಕರಣವು. ಧ್ಯಾನವೇ ಉತ್ತಮವಾದ ತಪಸ್ಸು.

**ಮನೋ[೭]ಕ್ಷಗ್ರಾಮಕಾಯಾನಾಂ ತಪನಾತ್ಸನ್ನಿರೋಧನಾತ್ ।**
**ತಪೋ ನಿರುಚ್ಯತೇ ತಜ್ಜ್ಞೈಸ್ತದಿದಂ ದ್ವಾದಶಾತ್ಮಕಮ್ ॥ ೨೦೪ ॥**

ಮನಸ್ಸು ಇಂದ್ರಿಯಗಳ ಸಮೂಹ ಶರೀರ ಇವುಗಳನ್ನು ಸಂತಪಿಸು (ಕ್ಲೇಶಪಡಿಸು)ವುದರಿಂದಲೂ ಚೆನ್ನಾಗಿ ತಡೆಯುವುದರಿಂದಲೂ ತಪಸ್ಸುಂಟಾಗುವುದೆಂದು ತಿಳಿದವರು ಹೇಳುತ್ತಾರೆ. ಅಂತಹ ತಪಸ್ಸು ಹಿಂದೆ ಹೇಳಿದಂತೆ ಹನ್ನೆರಡುವಿಧವಾಗಿದೆ.

**ವಿಪುಲಾಂ ನಿರ್ಜರಾಮಿಚ್ಛ[೮]ನ್ಮಹೋದರ್ಕಂ ಚ ಸಂವರಮ್ ।**
**ಯುತತೇ ಸ್ಮ ತಪಸ್ಯಸ್ಮಿನ್ದ್ವಿಷಡ್ಭೇದೇ [೯]ವಿದಾಂವರಃ ॥ ೨೦೫ ॥**

ಜ್ಞಾನಿಯಾದ ವೃಷಭಸ್ವಾಮಿಯು ಅತಿಶಯವಾದ ಕರ್ಮನಿರ್ಜರೆಯನ್ನೂ ಅಧಿಕವಾದ ಉತ್ತರಫಲವನ್ನೂ ಸಂವರೆಯನ್ನೂ ಇಚ್ಛಿಸುವವರಾಗಿ ಹನ್ನೆರಡು ಪ್ರಕಾರವಾದ ಈ ತಪಸ್ಸಿನಲ್ಲಿ ಪ್ರಯತ್ನಮಾಡಿದರು.

**ಸಗುಪ್ತಿಸಮಿತೀ ಧರ್ಮಂ ಸಾನುಪ್ರೇಕ್ಷಂ ಕ್ಷಮಾದಿಕಮ್ ।**
**ಪರೀಷಹಾಜ್ಞ್ಯಯನ್ಸಮ್ಯಕ್ಚಾರಿತ್ರಂ ಚಾಚರಚ್ಚಿರಮ್ ॥ ೨೦೬ ॥**

ಕ್ಷುಧಾ ಪಿಪಾಸಾ ಶೀತ ಉಷ್ಣ ದಂಶಮಶಕ ನಾಗ್ನ್ಯ ಅರತಿ ಸ್ತ್ರೀಚರ್ಯಾ ನಿಷದ್ಯಾ ಶಯ್ಯಾ ಆಕ್ರೋಶ ವಧ ಯಾಚನಾ ಅಲಾಭ ರೋಗ ತೃಣಸ್ಪರ್ಶ ಮಲ ಸತ್ಕಾರಪುರಸ್ಕಾರ ಪ್ರಜ್ಞಾ ಅಜ್ಞಾನ ಅದರ್ಶನ ಈ ಇಪ್ಪತ್ತೆರಡು ಪರೀಷಹಗಳನ್ನು ಜಯಿಸುತ್ತಿರುವ ಆ ಭಗವಂತನು, ಮನೋಗುಪ್ತಿ ವಚನಗುಪ್ತಿ ಕಾಯಗುಪ್ತಿ ಈ ಮೂರು ಗುಪ್ತಿಗಳನ್ನೂ, ಈರ್ಯಾಸಮಿತಿ ಭಾಷಾಸಮಿತಿ ಏಷಣಸಮಿತಿ ಆದಾನ ನಿಕ್ಷೇಪಣಸಮಿತಿ ಉತ್ಸರ್ಗಸಮಿತಿ ಈ ಐದು ಸಮಿತಿಗಳನ್ನೂ, ಅನಿತ್ಯ ಅಶರಣ ಸಂಸಾರ ಏಕತ್ವ ಅನ್ಯತ್ವ ಅಶುಚಿತ್ವ ಆಸ್ರವ ಸಂವರ ನಿರ್ಜರಾ ಲೋಕ ಬೋಧಿ ದುರ್ಲಭ ಧರ್ಮ ಈ ಹನ್ನೆರಡು ಅನುಪ್ರೇಕ್ಷೆಗಳನ್ನೂ ಉತ್ತಮಕ್ಷಮಾ ಮಾರ್ದವ ಆರ್ಜವ ಶೌಚ ಸತ್ಯ ಸಂಯಮ ತಪ ತ್ಯಾಗ ಆಕಿಂಚನ್ಯ ಬ್ರಹ್ಮಚರ್ಯ ಈ ಹತ್ತು ಧರ್ಮಗಳನ್ನೂ ಸಮ್ಯಕ್ಚಾರಿತ್ರವನ್ನೂ ಬಹುಕಾಲದವರೆಗೆ ಆಚರಿಸಿದನು.

**ತತೋ [೧೦]ದಿಧ್ಯಾಸುನಾನೇನ ಯೋಗ್ಯಾ ದೇಶಾಃ ಸಿಷೇವಿರೇ ।**
**[೧೧]ವಿವಿಕ್ತಾ ರಮಣೀಯಾ ಯೇ ವಿಯುಕ್ತಾ ರಾಗಕಾರಣೈಃ ॥ ೨೦೭ ॥**

೧ ಭಿನ್ನಂ. ೨ ಧ್ಯಾನಯೋಜನಂ. ೩ ಷಷ್ಠೀ. ೪ ಸುನಿಶ್ಚಲಃ, ಸುನಿವೃತ ಇತ್ಯಪಿ ಪಾಠಃ. ೫ ಭವೇದಿತ್ಯಪಿ ಪಾಠಃ. ೬ ಧ್ಯಾನಾದನ್ಯದೇಕಾದಶವಿಧಂ ತಪಃ. ೭ ಇಂದ್ರಿಯಸಮೂಹಃ. ೮ ಮಹೋತ್ತರಫಲಂ. ೯ ಪುರುಪರಮೇಶ್ವರಃ. ೧೦ ಧ್ಯಾತುಮಿಚ್ಛುನಾ. ೧೧ ವಿಜನಾಃ.

ತರುವಾಯ ಧ್ಯಾನಮಾಡಲಿಚ್ಛಿಸುವ ಈ ಸ್ವಾಮಿಯು ಅನುರಾಗದ ಕಾರಣಗಳಿಂದ ಬಿಡಲ್ಪಟ್ಟನದೂ ನಿರ್ಜನವೂ ರಮಣೀಯವೂ ಯೋಗ್ಯವೂ ಆದ ಪ್ರದೇಶಗಳನ್ನು ಸೇರಿದನು.

**ಗುಹಾಪುಲಿನಗಿರ್ಯಗ್ರಜೀರ್ಣೋದ್ಯಾನವನಾದಯಃ ।**
**ನಾತ್ಯುಷ್ಣಶೀತಸಂಪಾತಾ ದೇಶಾಃ ಸಾಧಾರಣಾಶ್ಚ ಯೇ ॥ ೨೦೮ ॥**

**ಕಾಲಶ್ಚ ನಾತಿಶೀತೋಷ್ಣಭೂಯಿಷ್ಠೋ ಜನತಾಸುಖಃ ।**
**ಭಾವಶ್ಚ ಜ್ಞಾನವೈರಾಗ್ಯಧೃತಿಕ್ಷಾಂತ್ಯಾದಿಲಕ್ಷಣಃ ॥ ೨೦೯ ॥**

ಗುಹೆ ಮರಳಿನರಾಶಿ ಪರ್ವತದ ಅಗ್ರಭಾಗ ಶಿಥಿಲವಾದ ಉದ್ಯಾನ ಅರಣ್ಯ ಇವು ಮೊದಲಾದ ಪ್ರದೇಶಗಳನ್ನೂ, ಹೆಚ್ಚು ಶೀತೋಷ್ಣಗಳಿಲ್ಲದಿರುವ ಸಾಧಾರಣ ಪ್ರದೇಶಗಳನ್ನೂ ಹೆಚ್ಚು ಶೀತೋಷ್ಣಗಳಿಲ್ಲದಿರುವುದೂ ಜನ ಸಮೂಹಕ್ಕೆ ಸುಖವನ್ನುಂಟುಮಾಡುವುದೂ ಆದ ಕಾಲವನ್ನೂ ಜ್ಞಾನ ವೈರಾಗ್ಯ ಧೈರ್ಯ ಅಥವಾ ಸಂತೋಷ ಸಹನ ಇವು ಮೊದಲಾದ ಗುಣಗಳೇ ಲಕ್ಷಣವಾಗಿರುವ ಭಾವವನ್ನೂ ಧ್ಯಾನದ ಸಿದ್ಧಿಗೋಸ್ಕರ ಹೊಂದಿದನು.

**[೧]ದ್ರವ್ಯಾಣ್ಯಪ್ಯನುಕೂಲಾನಿ ಯಾನಿ ಸಂಕ್ಲೇಶಹಾನಯೇ ।**
**[೨]ಪ್ರಭವಿಷ್ಣೂನಿ ತಾನೀ[೩]ಶಃ ಸಿಷೇವೇ ಧ್ಯಾನಸಿದ್ಧಯೇ ॥ ೨೧೦ ॥**

ಮನಃಕ್ಲೇಶದ ಹಾನಿಗೋಸ್ಕರ ಸಮರ್ಥವೂ ಅನುಕೂಲವೂ ಆದ ಆಹಾರಾದಿ ಪದಾರ್ಥಗಳನ್ನೂ ಸ್ವಾಮಿಯು ಧ್ಯಾನದ ಸಿದ್ಧಿಗೋಸ್ಕರ ಸೇವಿಸಿದನು.

**ಕದಾಚಿದ್ಗಿರಿ[೪]ಕುಂಜೇಷು ಕದಾಚಿದ್ಗಿರಿ[೫]ಕಂದರೇ ।**
**ಕದಾಚಿಚ್ಚಾದ್ರಿಶೃಂಗೇಷು [೬]ದಧ್ಯಾವಧ್ಯಾತ್ಮತತ್ತ್ವವಿತ್ ॥ ೨೧೧ ॥**

ಅಧ್ಯಾತ್ಮತತ್ತ್ವಜ್ಞಾನಿಯಾದ ಸ್ವಾಮಿಯು ಕೆಲವು ವೇಳೆಯಲ್ಲಿ ಪರ್ವತದ ಪೊದರುಗಳಲ್ಲಿಯೂ ಕೆಲವು ವೇಳೆಯಲ್ಲಿ ಪರ್ವತದ ಗುಹೆಯಲ್ಲಿಯೂ ಕೆಲವು ವೇಳೆಯಲ್ಲಿ ಪರ್ವತದ ಶಿಖರಗಳಲ್ಲಿಯೂ ಧ್ಯಾನಮಾಡಿದರು.

**[೭]ಕರ್ಹಿಚಿದ್ಬರ್ಹಿಣಾರಾವರಮ್ಯೋಪಾಂತೇಷು ಹಾರಿಷು ।**
**ಗಿರ್ಯಗ್ರೇಷು [೮]ಶಿಲಾಪಟ್ಟಾನಧ್ಯಾಸ್ತಾಧ್ಯಾತ್ಮಶುದ್ಧಯೇ ॥ ೨೧೨ ॥**

ಕೆಲವು ವೇಳೆಯಲ್ಲಿ ಆತ್ಮಶುದ್ಧಿಗೋಸ್ಕರ ನವಿಲುಗಳ ಶಬ್ದದಿಂದ ರಮಣೀಯವಾದ ಸಮೀಪಪ್ರದೇಶವುಳ್ಳದೂ ಮನೋಹರವೂ ಆದ ಪರ್ವತಗಳ ಅಗ್ರಭಾಗಗಳಲ್ಲಿ ವಿಶಾಲವಾದ ಕಲ್ಲುಗಳಲ್ಲಿ ಕುಳಿತರು.

**[೯]ಅಗೋಷ್ಪದೇಷ್ವರಣ್ಯೇಷು ಕದಾಚಿ[೧೦]ದನುಪದ್ರುತೇ ।**
**ನಿರ್ಜಂತುಕೇ [೧೧]ವಿವಿಕ್ತೇ ಚ [೧೨]ಸ್ಥಾಂಡಿಲೇಸ್ಥಾತ್ಸಮಾಧಯೇ ॥ ೨೧೩ ॥**

ಕೆಲವು ವೇಳೆಯಲ್ಲಿ ಅಪರಿಮಿತವಾದ ಅಥವಾ ಗೋವುಗಳು ಸಂಚಾರ ಮಾಡಲಾಗದ ಅರಣ್ಯಗಳಲ್ಲಿ ಉಪದ್ರವರಹಿತವೂ ಪ್ರಾಣಿರಹಿತವೂ ಜನರಹಿತವೂ ಆದ ಸಣ್ಣ ಕಲ್ಲುಗಳುಳ್ಳ ಭೂಮಿಯಲ್ಲಿ ಸಮಾಧಿಗೋಸ್ಕರ ನಿಂತರು.

**ಕದಾಚಿತ್ಪ್ರಾಂತ[೧೩]ಪರ್ಯಸ್ತನಿರ್ಝರೈಸ್ತತಶೀಕರೈಃ ।**
**ಕೃತಶೈತ್ಯೇ ನಗೋತ್ಸಂಗೇ ಸೋಗಾದ್ಯೋ[೧೪]ಗೈಕತಾನತಾಮ್ ॥ ೨೧೪ ॥**

ಆ ಸ್ವಾಮಿಯು ಕೆಲವು ವೇಳೆಯಲ್ಲಿ ವಿಸ್ತಾರವಾದ ಜಲಬಿಂದುಗಳುಳ್ಳ ಸಮೀಪಪ್ರದೇಶದಲ್ಲಿ ವ್ಯಾಪ್ತವಾದ ಗಿರಿನದಿಗಳ ಪ್ರವಾಹಗಳಿಂದ ತಂಪಾದ ಪರ್ವತದ ತಪ್ಪಲಲ್ಲಿ ಧ್ಯಾನದ ಏಕಾಗ್ರತೆಯನ್ನು ಹೊಂದಿದರು.

೧ ಆಹಾರಾದೀನಿ. ೨ ಸಮರ್ಥಾನಿ. ೩ ಪ್ರಭುಃ. ೪ ಲತಾದಿಪಿಹಿತೋದರಪ್ರದೇಶೇಷು. ೫ ದರ್ಯಾಂ. ೬ ಧ್ಯಾಯತಿ ಸ್ಮ. ೭ ಕದಾಚಿತ್. ೮ ಆಧಾರೇ ಕರ್ಮ. ೯ ಮಾನರಹಿತೇಷು, ಅಗೋಗಮ್ಯೇಷು ವಾ, ಗೋಷ್ಪದಂ ಗೋಖುರಶ್ವಭ್ರೇ ಮಾನಗೋಗಮ್ಯಯೋರಿತಿ. ೧೦ ಉಪದ್ರವರಹಿತೇ. ೧೧ ಪೂತೇ. ೧೨ ಕ್ಷುದ್ರಪಾಷಾಣಭೂಮೌ, ಸ್ಥಂಡಿಲ ಇತ್ಯಪಿ ಪಾಠಃ. ೧೩ ವ್ಯಾಪ್ತಾಃ. ೧೪ ಧ್ಯಾನೈಕಾಗ್ರತಾಂ.

**[೧]ನಕ್ತಂ [೨]ನಕ್ತಂಚರೈರ್ಭೀಮೈಃ ಸ್ವೈರಮಾರಬ್ಧತಾಂಡವೇ ।**
**ವಿಭುಃ ಪಿತೃವನೋಪಾಂತೇ ಧ್ಯಾಯನ್ನೋಸ್ಥಾತ್ಕದಾಚನ ॥ ೨೧೫ ॥**

ಆ ಪ್ರಭುವು ಕೆಲವು ವೇಳೆಯಲ್ಲಿ ರಾತ್ರಿಕಾಲದಲ್ಲಿ ಭಯಂಕರರಾದ ರಾಕ್ಷಸರು ಯಥೇಚ್ಛವಾಗಿ ಪ್ರಾರಂಭಿಸಿದ ನರ್ತನವುಳ್ಳ ಶ್ಮಶಾನಸಮೀಪದಲ್ಲಿ ಧ್ಯಾನ ಮಾಡುತ್ತಿದ್ದರು.

**ಕದಾಚಿನ್ನಿಮ್ನಗಾತೀರೇ ಶುಚಿಸೈಕತಚಾರುಣಿ ।**
**ಕದಾಚಿಚ್ಚ ಸರಸ್ತೀರೇ ವನೋದ್ದೇಶೇಷು ಹಾರಿಷು ॥ ೨೧೬ ॥**

ಕೆಲವು ವೇಳೆಯಲ್ಲಿ ನಿರ್ಮಲವಾದ ಮರಳಿನಿಂದ ಮನೋಹರವಾದ ನದೀತೀರದಲ್ಲಿಯೂ ಕೆಲವುವೇಳೆಯಲ್ಲಿ ಸರೋವರದದಡದಲ್ಲಿಯೂ ಕೆಲವುವೇಳೆಯಲ್ಲಿ ಮನೋಹರವಾದ ಅರಣ್ಯಪ್ರದೇಶಗಳಲ್ಲಿಯೂ

**ಮನೋ[೩]ವ್ಯಾಕ್ಷೇಪಹೀನೇಷು ದೇಶೇಷ್ವನ್ಯೇಷು ಚ ಕ್ಷಮೀ ।**
**ಧ್ಯಾನಾಭ್ಯಾಸಮಸೌ ಕುರ್ವನ್ವಿಜಹಾರ ಮಹೀಮಿಮಾಮ್ ॥ ೨೧೭ ॥**

ಮನೋವ್ಯಾಕುಲತೆಯಿಲ್ಲದಿರುವ ಬೇರೆ ಪ್ರದೇಶಗಳಲ್ಲಿಯೂ ಧ್ಯಾನದ ಅಭ್ಯಾಸವನ್ನು ಮಾಡುತ್ತಿರುವ ಮತ್ತು ಕ್ಷಮೆಯುಳ್ಳ ಈ ಭಗವಂತನು ಈ ಪೃಥ್ವಿಯಲ್ಲಿ ವಿಹರಿಸಿದನು.

**ಮೌನೀ ಧ್ಯಾನೀ ಸ ನಿರ್ಮಾನೋ ದೇಶಾನ್ಸವಿಹರನ್ ಶನೈಃ ।**
**[೪]ಪುರಂ ಪುರಿಮತಾಲಾಖ್ಯಂ ಸುಧೀರನ್ಯೇದ್ಯುರಾಸದತ್ ॥ ೨೧೮ ॥**

ಮುನಿಯೂ ಧ್ಯಾನಿಯೂ ಅಹಂಕಾರರಹಿತನೂ ಜ್ಞಾನಿಯೂ ಆದ ಆ ಭಗವಂತನು ದೇಶಗಳಲ್ಲಿ ವಿಹರಿಸುತ್ತ ಕ್ರಮದಿಂದ ಬೇರೊಂದು ದಿವಸ ಪುರಿಮತಾಲವೆಂಬ ನಗರವನ್ನು ಸೇರಿದನು.

**ನಾತ್ಯಾಸನ್ನವಿದೂರೇಸ್ಮಾದುದ್ಯಾನೇ ಶಕಟಾಹ್ವಯೇ ।**
**ಶುಚೌ ನಿರಾಕುಲೇ ರಮ್ಯೇ ವಿವಿಕ್ತೇಸ್ಥಾದ್ವಿಜಂತುಕೇ ॥ ೨೧೯ ॥**

ಈ ನಗರದಿಂದ ಬಹಳ ಸಮೀಪವೂ ದೂರವೂ ಇಲ್ಲದಿರುವುದೂ ನಿರ್ಮಲವೂ ವ್ಯಾಕುಲರಹಿತವೂ ರಮಣೀಯವೂ ಜನರಹಿತವೂ ಪ್ರಾಣಿರಹಿತವೂ ಆದ ಶಕಟವೆಂಬ ಉದ್ಯಾನದಲ್ಲಿ ಸ್ವಾಮಿಯು ಗಮನವನ್ನು ನಿಲ್ಲಿಸಿದರು. ಆ ಉದ್ಯಾನದಲ್ಲಿ ನಿಂತರೆಂದರ್ಥವು.

**ನ್ಯಗ್ರೋಧಪಾದಪಸ್ಯಾಧಃ ಶಿಲಾಪಟ್ಟಂ ಶುಚಿಂ ಪೃಥುಮ್ ।**
**ಸೋಧ್ಯಾಸೀನಃ ಸಮಾಧಾನ[೫]ಮಧಾದ್ಧ್ಯಾನಾಯ ಶುದ್ಧಧೀಃ ॥ ೨೨೦ ॥**

ಪರಿಶುದ್ಧಬುದ್ಧಿಯುಳ್ಳ ಆ ಸ್ವಾಮಿಯು ವಟವೃಕ್ಷದ ಕೆಳಗೆ ನಿರ್ಮಲವೂ ವಿಶಾಲವೂ ಆದ ಕಲ್ಲಿನಲ್ಲಿ ಕುಳಿತವರಾಗಿ ಧ್ಯಾನಕ್ಕೋಸ್ಕರ ಸಮಾಧಾನವನ್ನು ಧರಿಸಿದರು.

**[೬]ತತ್ರ ಪೂರ್ವಮುಖಂ ಸ್ಥಿತ್ವಾ [೭]ಕೃತಪರ್ಯಂಕಬಂಧನಃ ।**
**ಧ್ಯಾನೇ ಪ್ರಣಿದಧೌ ಚಿತ್ತಂ ಲೇಶ್ಯಾಶುದ್ಧಿಂ ಪರಾಂ ದಧತ್ ॥ ೨೨೧ ॥**

ಅಲ್ಲಿ ಪೂರ್ವಾಭಿಮುಖವಾಗಿದ್ದು ಪರ್ಯಂಕಾಸನವನ್ನು ಮಾಡಿ ಉತ್ಕೃಷ್ಟವಾದ ಲೇಶ್ಯಾ (ಪರಿಣಾಮವಿಶೇಷ) ಶುದ್ಧಿಯನ್ನು ಧರಿಸಿದವರಾಗಿ ಧ್ಯಾನದಲ್ಲಿ ಮನಸ್ಸನ್ನು ಸ್ಥಿರಪಡಿಸಿದರು.

**ಚೇತಸಾ ಸೋಭಿಸಂಧಾಯ ಪರಂ ಪದಮನುತ್ತರಮ್ ।**
**ದಧೌ ಸಿದ್ಧಗುಣಾನಷ್ಟೌ ಪ್ರಾಗೇವ ಸುವಿಶುದ್ಧಧೀಃ ॥ ೨೨೨ ॥**

೧ ರಾತ್ರೌ. ೨ ರಾಕ್ಷಸೈಃ. ೩ ವ್ಯಾಕುಲಃ. ೪ ವೃಷಭಸೇನಕುಮಾರಸ್ಯ ನಗರಮಿತ್ಯರ್ಥಃ. ೫ ಧರತಿ ಸ್ಮ. ೬ ಶಿಲಾಪಟ್ಟೇ. ೭ ಕೃತಪಲ್ಯಂಕಬಂಧನ ಇತ್ಯಪಿ ಪಾಠಃ.

ಚೆನ್ನಾಗಿ ಪರಿಶುದ್ಧವಾದ ಬುದ್ಧಿಯುಳ್ಳ ಆ ಸ್ವಾಮಿಯು ಶ್ರೇಷ್ಠವಾದ ಪರಮಪದ(ಮುಕ್ತಿಸ್ಥಾನ)ವನ್ನು ಮನೋಭಿಪ್ರಾಯದಲ್ಲಿರಿಸಿ ಸಿದ್ಧರ ಎಂಟು ಗುಣಗಳನ್ನು ಮೊಟ್ಟಮೊದಲು ಧ್ಯಾನಮಾಡಿದರು.

**ಸಮ್ಯಕ್ತ್ವಂ ದರ್ಶನಂ ಜ್ಞಾನಮನಂತಂ ವೀರ್ಯಮದ್ಭುತಮ್ ।**
**[1]ಸೌಕ್ಷ್ಮ್ಯಂ[2]ವಗಾಹ್ಯಾವ್ಯಾಬಾಧಾಃ ಸಹಾಗುರುಲಘುತ್ವಕಾಃ ॥ ೨೨೩ ॥**

**ಪ್ರೋಕ್ತಾಃ ಸಿದ್ಧಗುಣಾಹ್ಯಷ್ಟೌ ಧ್ಯೇಯಾಃ ಸಿದ್ಧಿಮಭೀಪ್ಸುನಾ ।**
**[3]ದ್ರವ್ಯತಃ [4]ಕ್ಷೇತ್ರತಃ [5]ಕಾಲಾ[6]ದ್ಭಾವತಶ್ಚ ತಥಾ[7]ಪರೇ ॥ ೨೨೪ ॥**

ಸಿದ್ಧಿಯನ್ನು ಹೊಂದಬೇಕೆಂಬ ಇಚ್ಛೆಯುಳ್ಳವನು ಸಮ್ಯಕ್ತ್ವ ಅನಂತದರ್ಶನ ಅನಂತಜ್ಞಾನ ಅದ್ಭುತವೀರ್ಯ (ಶಕ್ತಿ) ಸೂಕ್ಷ್ಮತ್ವ ಅವಗಾಹಿತ್ವ ಅವ್ಯಾಬಾಧತ್ವ ಅಗುರುಲಘುತ್ವ ಸಿದ್ಧರ ಈ ಎಂಟು ಗುಣಗಳನ್ನು ಧ್ಯಾನಮಾಡಬೇಕು. ಹಾಗೆಯೇ ದ್ರವ್ಯ ಕ್ಷೇತ್ರ ಕಾಲ ಭಾವ ಇವುಗಳನ್ನಾಶ್ರಯಿಸಿ ಕ್ರಮವಾಗಿ ಚೇತನತ್ವ ಅಸಂಖ್ಯಾತಪ್ರದೇಶಿತ್ವ ತ್ರಿಕಾಲವ್ಯಾಪಿತ್ವ ಪಾರಿಣಾಮಿಕ ಮೊದಲಾದ ಸಾಧಾರಣ ಗುಣಗಳನ್ನೂ ಧ್ಯಾನಮಾಡಬೇಕು.

**ಗುಣ್ಯೈ[8]ರ್ದ್ವಾದಶಭಿರ್ಯುಕ್ತೋ ಮುಕ್ತಃ ಸೂಕ್ಷ್ಮೋ ನಿರಂಜನಃ ।**
**ಸ ಧ್ಯೇಯೋ ಯೋಗಿಭಿ[9]ರ್ವ್ಯಕ್ತೋ ನಿತ್ಯಃ ಶುದ್ಧೋ ಮುಮುಕ್ಷುಭಿಃ ॥**

ಈ ಹನ್ನೆರಡು ಗುಣಗಳಿಂದ ಯುಕ್ತನೂ ಮುಕ್ತನೂ ಸೂಕ್ಷ್ಮನೂ ನಿರಂಜನ (ಕರ್ಮರಹಿತ)ನೂ ದ್ರವ್ಯಭಾವಕರ್ಮರಹಿತನೂ ನಿತ್ಯನೂ ಶುದ್ಧನೂ ಆದ ಸಿದ್ಧಪರಮೇಷ್ಠಿಯನ್ನು ಮೋಕ್ಷವನ್ನು ಹೊಂದಲಿಚ್ಛಿಸುವ ಯೋಗಿಗಳು ಧ್ಯಾನಮಾಡಬೇಕು.

**ತತೋ ದಧ್ಯಾವನುಪ್ರೇಕ್ಷಾ [10]ದಿಧ್ಯಾಸು[11]ರ್ಧರ್ಮ್ಯಮುತ್ತಮಮ್ ।**
**[12]ಪಾರಿಕರ್ಯ್ಯಮಿತಾಸ್ತಸ್ಯ [13]ಶುದ್ಧಾ ದ್ವಾದಶಭಾವನಾಃ ॥ ೨೨೬ ॥**

ತರುವಾಯ ಉತ್ತಮವಾದ ಧರ್ಮಧ್ಯಾನವನ್ನು ಧ್ಯಾನಿಸುವುದಕ್ಕೆ ಇಚ್ಛಿಸುವ ಆ ಸ್ವಾಮಿಯು ಅನುಪ್ರೇಕ್ಷೆಗಳನ್ನು ಧ್ಯಾನಿಸಿದನು. ಧರ್ಮಕ್ಕೆ ಶುದ್ಧವಾದ ಹನ್ನೆರಡು ಭಾವನೆಗಳು ಪರಿಕರ(ಸಲಕರಣ)ತ್ವವನ್ನು ಹೊಂದಿದುವು. ಧರ್ಮಧ್ಯಾನಕ್ಕೆ ಅಂಗಗಳಾದುವೆಂದು ಭಾವವು.

**ತಾಸಾಂ ನಾಮಸ್ವರೂಪಂ ಚ ಪೂರ್ವಮೇವಾನುವರ್ಣಿತಮ್ ।**
**ತತೋ ಧರ್ಮ್ಯಮಸೌ ಧ್ಯಾನಂ ಪ್ರಪೇದೇ [14]ಧೀದ್ಧಶುದ್ಧಿಕಃ ॥ ೨೨೭ ॥**

ಆ ಭಾವನೆಗಳ ಹೆಸರೂ ಸ್ವರೂಪವೂ ಮೊದಲೇ (ವಜ್ರನಾಭಿಭವದಲ್ಲಿ ಭಾವನೆಗಳನ್ನು ಹೇಳುವಾಗ) ವರ್ಣಿಸಲ್ಪಟ್ಟಿವೆ. ಆದುದರಿಂದ ಸಂಪೂರ್ಣವಾಗಿ ಶುದ್ಧವಾದ ಬುದ್ಧಿಯುಳ್ಳ ಈ ಭಗವಂತನು ಧರ್ಮಧ್ಯಾನವನ್ನು ಹೊಂದಿದನು.

**[15]ಆಜ್ಞಾ[16]ವಿಚಯಮಾದ್ಯಂ [17]ತದಪಾಯವಿಚಯಂ ತಥಾ ।**
**[18]ವಿಪಾಕವಿಚಯಂ ಚಾನ್ಯ[19]ತ್ಸಂಸ್ಥಾನವಿಚಯಂ ಪರಮ್ ॥ ೨೨೮ ॥**

ಆ ಧರ್ಮಧ್ಯಾನವು ನಾಲ್ಕುವಿಧವಾಗಿದೆ. ಮೊದಲನೆಯದು ಆಜ್ಞಾವಿಚಯ (ಆಗಮದಲ್ಲಿ ಹೇಳಿದ ವಸ್ತುವಿಚಾರ) ಧರ್ಮಧ್ಯಾನವು. ಎರಡನೆಯದು ಕರ್ಮಗಳ ಅಪಾಯ (ತೊಲಗುವಿಕೆ) ವಿಚಯಧರ್ಮಧ್ಯಾನವು. ಮೂರನೆಯದು ವಿಪಾಕ ವಿಚಯ (ಕರ್ಮಗಳ ಪರಿಪಾಕವಿಚಾರ) ಧರ್ಮಧ್ಯಾನವು. ನಾಲ್ಕನೆಯದು ಸಂಸ್ಥಾನವಿಚಯ (ಲೋಕಾಕಾರವಿಚಾರ) ಧರ್ಮಧ್ಯಾನವು.

೧ ಸೂಕ್ಷ್ಮತ್ವಂ. ೨ ಅವಗಾಹಿತ್ವಂ. ೩ ದ್ರವ್ಯಮಾಶ್ರಿತ್ಯ ಚೇತನತ್ವಾದಯಃ. ೪ ಕ್ಷೇತ್ರಮಾಶ್ರಿತ್ಯ ಅಸಂಖ್ಯಾತಪ್ರದೇಶಿತ್ವಾದಯಃ. ೫ ಕಾಲಮಾಶ್ರಿತ್ಯ ತ್ರಿಕಾಲವ್ಯಾಪಿತ್ವಾದಯಃ. ೬ ಭಾವಮಾಶ್ರಿತ್ಯ ಪಾರಿಣಾಮಿಕಾದಯಃ. ೭ ಸಾಧಾರಣಗುಣಾಃ. ೮ ಸಮ್ಯಕ್ತ್ವಾದ್ಯಷ್ಟೌ ದ್ರವ್ಯಾದ್ಯಾಶ್ರಯತಶ್ಚತ್ವಾರ ಇತಿ ದ್ವಾದಶಗುಣೈಃ. ೯ ದ್ರವ್ಯಭಾವಕರ್ಮರಹಿತಃ. ೧೦ ಧ್ಯಾತುಮಿಚ್ಛುಃ. ೧೧ ಧರ್ಮ್ಯಮಿತ್ಯಪಿ ಪಾಠಃ. ೧೨ ಪರಿಕರತ್ವಂ. ೧೩ ಶುಭಾ ಇತ್ಯಪಿ ಪಾಠಃ. ೧೪ ಧಿಯ ಇದ್ಧಾ ಸಮೃದ್ಧಾ ಶುದ್ಧಿರ್ಯಸ್ಯ ಸಃ. ೧೫ ಆಗಮಃ. ೧೬ ವಿಚಾರಃ. ೧೭ ಕರ್ಮಣಾಂ. ೧೮ ಶುಭಾಶುಭಕರ್ಮೋದಯ ಜನಿತಸುಖದುಃಖ ಭೇದಪ್ರಭೇದಚಿಂತಾ. ೧೯ ಲೋಕಸ್ಥಾನವಿಚಾರಂ.

**ಸ್ವನಾಮವ್ಯ[1]ಕ್ತತತ್ತ್ವಾನಿ ಧರ್ಮ್ಯಧ್ಯಾನಾನಿ ಸೋ[2]ಧ್ಯಗಾತ್ ।**
**ಯತೋ ಮಹತ್ತಮಂ ಪುಣ್ಯಂ ಸ್ವರ್ಗಾಗ್ರಸುಖಸಾಧನಮ್ ॥ ೨೨೯ ॥**

ಅವುಗಳ ಹೆಸರುಗಳಿಂದಲೇ ವ್ಯಕ್ತವಾದ ಸ್ವರೂಪವುಳ್ಳ ಧರ್ಮಧ್ಯಾನಗಳನ್ನು ಆ ಭಗವಂತನು ಧ್ಯಾನಿಸಿದನು. ಈ ಧರ್ಮಧ್ಯಾನದಿಂದ ಶ್ರೇಷ್ಠವಾದ ಸ್ವರ್ಗಸುಖಕ್ಕೆ ಕಾರಣವೂ ಅಧಿಕವೂ ಆದ ಪುಣ್ಯವು ಪ್ರಾಪ್ತವಾಗುವುದು.

**ಕ್ಷಾಲಿತಾಗಃ ಪರಾಗಸ್ಯ ವಿರಾಗಸ್ಯಾಸ್ಯ ಯೋಗಿನಃ ।**
**ಪ್ರಮಾದಃ ಕೋಪ್ಯಭೂನ್ನೈತಸ್ತದಾ ಜ್ಞಾನಾದಿಶಕ್ತಿಭಿಃ ॥ ೨೩೦ ॥**

ಪಾಪವೆಂಬ ಧೂಳನ್ನು ತೊಳೆದವನೂ ವೀತರಾಗನೂ ಆದ ಈ ಯೋಗಿಗೆ ಆಗ ಜ್ಞಾನಮೊದಲಾದ ಶಕ್ತಿಗಳಿಂದ ಯಾವ ಪ್ರಮಾದ(ದೋಷ)ವೂ ಪ್ರಾಪ್ತವಾಗಲಿಲ್ಲ.

**ಜ್ಞಾನಾದಿಪರಿಣಾಮೇಷು ಪರಾಂ ಶುದ್ಧಿಮುಪೇಯುಷಃ ।**
**ಲೇಶತೋಪ್ಯಸ್ಯ ನಾಭೂವನ್ದುರ್ಲೇಶ್ಯಾಃ ಕ್ಲೇಶಹೇತವಃ ॥ ೨೩೧ ॥**

ಜ್ಞಾನಮೊದಲಾದ ಪರಿಣಾಮಗಳಲ್ಲಿ ಉತ್ಕೃಷ್ಟವಾದ ಶುದ್ಧಿಯನ್ನು ಹೊಂದಿದ ಈ ಸ್ವಾಮಿಗೆ ದುಃಖಕ್ಕೆ ಕಾರಣವಾದ ದುರ್ಲೇಶ್ಯ(ದುಷ್ಪರಿಣಾಮ)ಗಳು ಸ್ವಲ್ಪವೂ ಉಂಟಾಗಲಿಲ್ಲ.

**ತದಾ ಧ್ಯಾನಮಯೀ ಶಕ್ತಿಃ ಸ್ಫುರಂತೀ ದದೃಶೇ ವಿಭೋಃ ।**
**ಮೋಹಾರಿನಾಶಪಿಶುನಾ ಮಹೋ[3]ಲ್ಕೇವ ವಿಜೃಂಭಿತಾ ॥ ೨೩೨ ॥**

ಆಗ ಸ್ವಾಮಿಯ ಪ್ರಕಾಶಮಾನವೂ ಧ್ಯಾನಮಯವೂ ಆದ ಶಕ್ತಿಯು, ಮೋಹವೆಂಬ ಶತ್ರುವಿನ ನಾಶಕ್ಕೆ ಸೂಚಕವಾಗಿ ವೃದ್ಧಿಹೊಂದುತ್ತಿರುವ ದೊಡ್ಡ ನಕ್ಷತ್ರದ ಪತನದಂತೆ, ಕಾಣುತ್ತಿದ್ದಿತು.

**ಆರಚಯ್ಯ ತದಾ ಕೃತ್ಸ್ನಂ [4]ವಿಶುದ್ಧಿಬಲಮಗ್ರತಃ ।**
**ನಿಕೃಷ್ಟಮಧ್ಯಮೋತ್ಕೃಷ್ಟವಿಭಾಗೇನ ತ್ರಿಧಾ ಕೃತಮ್ ॥ ೨೩೩ ॥**

**[5]ಕೃತಾಂತಃ ಶುದ್ಧಿ[6]ರುದ್ಧೂತಕೃತಾಂತಕೃತವಿಕ್ರಿಯಃ ।**
**[7]ಉತ್ತಸ್ಥೇ ಸರ್ವಸಾಮಗ್ರ್ಯಾ [8]ಮೋಹಾರಿಪೃತನಾಜಯೇ ॥ ೨೩೪ ॥**

ಆಗ ಜಘನ್ಯಮಧ್ಯಮೋತ್ಕೃಷ್ಟವಿಭಾಗದಿಂದ ಮೂರುಪ್ರಕಾರವಾಗಿ ಮಾಡಲ್ಪಟ್ಟ ಸಮಸ್ತವಾದ ಪರಿಣಾಮಶಕ್ತಿಯನ್ನು-ವಿಶ್ವಾಸಕ್ಕೆ ಪಾತ್ರವಾದ ಸೈನ್ಯವನ್ನು ಮುಂದೆ ಮಾಡಿ, ಅಂತಃಕರಣಶುದ್ಧಿಯನ್ನು ಒಳಗಿನ ಸೈನ್ಯಶುದ್ಧಿಯನ್ನು ಮಾಡಿದವನೂ ಯಮನಿಂದ ಮಾಡಲ್ಪಟ್ಟ ವಿಕಾರವನ್ನು ನಾಶಮಾಡಿದವನೂ ಆದ ಭಗವಂತನು ಮೋಹನೀಯವೆಂಬ ಶತ್ರುವಿನ ಸೈನ್ಯದ ಜಯಕ್ಕೋಸ್ಕರ ಸಮಸ್ತಸಾಮಗ್ರಿಯೊಡನೆ ಉದ್ಯುಕ್ತನಾದನು.

**[9]ಶಿರಸ್ತ್ರಾಣಂ [10]ತನುತ್ರಂ ಚ ತಸ್ಯಾಸೀ[11]ತ್ಸಂಯಮದ್ವಯಮ್ ।**
**ಜೈತ್ರಮಸ್ತ್ರಂ ಚ ಸದ್ಧ್ಯಾನಂ ಮೋಹಾರಾತಿಂ [12]ಬಿಭಿತ್ಸತಃ ॥ ೨೩೫ ॥**

ಮೋಹವೆಂಬ ಶತ್ರುವನ್ನು ಭೇದಿಸುವುದಕ್ಕೆ ಇಚ್ಛಿಸುವ ಆ ಸ್ವಾಮಿಗೆ ಇಂದ್ರಿಯ ಸಂಯಮ ಪ್ರಾಣಿಸಂಯಮಗಳೆರಡು ಮಸ್ತಕದ ಕವಚ (ಟೋಪಿ- ಟೊಪ್ಪಿ) ಶರೀರದ ಕವಚಗಳಾಗಿದ್ದುವು. ಶ್ರೇಷ್ಠವಾದ ಧ್ಯಾನವು ಜಯಶೀಲವಾದ ಅಸ್ತ್ರವಾಗಿದ್ದಿತು.

೧ ಸ್ವರೂಪಾಣಿ. ೨ ಧ್ಯಾಯತಿ ಸ್ಮ. ೩ ನಕ್ಷತ್ರಪಾತಃ. ೪ ಪರಿಣಾಮಶಕ್ತಿಃ, ವಿಶ್ವಾಸಹೇತುಭೂತಂ ಸೈನ್ಯಂ ಚ. ೫ ಕೃತಾಂತಃಕರಣಶುದ್ಧಿಃ, ಕೃತಸೇನಾಂತಃಶುದ್ಧಿಶ್ಚ. ೬ ಉದ್ಧೂತಾ ನಿರಸ್ತಾ ಕೃತಾಂತೇನ ಯಮೇನ ಕೃತಾ ಕ್ರಿಯಾ ವಿಕಾರೋ ಯೇನಾಸೌ. ೭ ಉದ್ಯುಕ್ತೋಭೂತ್. ೮ ಮೋಹನೀಯ ಶತ್ರುಸೇನಾಜಯಾರ್ಥಂ. ೯ ಶಿರಃಕವಚಂ. ೧೦ ವರ್ಮ. ೧೧ ಇಂದ್ರಿಯಪ್ರಾಣಿಸಂಯಮಯೋರ್ದ್ವಯಂ. ೧೨ ಭೇತುಮಿಚ್ಛತಃ.

[೧]ಬಲವ್ಯಸನರಕ್ಷಾರ್ಥಂ ಜ್ಞಾನಾಮಾತ್ಯಾಃ ಪುರಸ್ಕೃತಾಃ ।
ವಿಶುದ್ಧಪರಿಣಾಮಶ್ಚ [೨]ಸೇನಾಪತ್ಯೇ ನಿಯೋಜಿತಃ ॥ ೨೩೬ ॥

ಜ್ಞಾನಗಳೆಂಬ ಅಮಾತ್ಯ(ಸಮೀಪಸ್ಥ)ರು ಪರಿಣಾಮವಿಶುದ್ಧಿಶಕ್ತಿಯ ಚ್ಯುತಿಯನ್ನು—ಸೈನ್ಯಚ್ಯುತಿಯನ್ನು ಪರಿಹರಿಸುವುದಕ್ಕೋಸ್ಕರ ಮುಂದೆ ಮಾಡಲ್ಪಟ್ಟರು. ವಿಶುದ್ಧ ಪರಿಣಾಮವು ಸೇನಾಪತಿಯ ಕಾರ್ಯದಲ್ಲಿ ಸೇರಿಸಲ್ಪಟ್ಟಿತು.

ಗುಣಾಃ [೩]ಸೈನಿಕತಾಂ ನೀತಾ ದುರ್ಭೇದಾ [೪]ಧ್ರುವಯೋಧಿನಃ ।
ತೇಷಾಂ ಹಂತವ್ಯಪಕ್ಷೇ ಚ ರಾಗಾದ್ಯಾಃ ಪ್ರತಿಚರ್ಚಿತಾಃ ॥ ೨೩೭ ॥

ಭೇದಿಸುವುದಕ್ಕೆ ಕಠಿಣವೂ ನಿಯಮದಿಂದ ಯುದ್ಧಮಾಡುವುದೂ ಆದ ಗುಣಗಳು ಸೈನಿಕತ್ವವನ್ನು ಹೊಂದಿಸಲ್ಪಟ್ಟುವು. ಸೈನಿಕರಾದುವೆಂದರ್ಥವು. ಆ ಗುಣಗಳೆಂಬ ಸೈನಿಕರಿಗೆ ಪ್ರತಿಪಕ್ಷದಲ್ಲಿ ರಾಗದ್ವೇಷಮೊದಲಾದುವು ಹೇಳಲ್ಪಟ್ಟಿವೆ. ಕೊಲ್ಲುವುದಕ್ಕೆ ಯೋಗ್ಯರಾದ ಪ್ರತಿಪಕ್ಷದವರು ರಾಗಮೊದಲಾದುವು ಗಳೆಂದರ್ಥ.

ಇತ್ಯಾಯೋಜಿತಸೈನ್ಯಸ್ಯ ಜಯೋದ್ಯೋಗೇ ಜಗದ್ಗುರೋಃ ।
[೫]ಗುಣಶ್ರೇಣಿಬಲಾ[೬]ದ್ದೀರ್ಣಂ [೭]ಕರ್ಮಸೈನ್ಯೈ[೮]ರ್ನು [೯]ಶಲ್ಕಶಃ ॥ ೨೩೮ ॥

ಈರೀತಿಯಾಗಿ ಸೈನ್ಯವನ್ನು ಸೇರಿಸಿದ ಜಗದ್ಗುರುವಿನ ಜಯದ ಉದ್ಯೋಗದಲ್ಲಿ ಗುಣಗಳೆಂಬ ಭಟರ ಸಾಲುಗಳ ಬಲದಿಂದ ಗುಣಗಳೆಂಬ ಸೈನಿಕರಿಂದ ಕರ್ಮವು ಚೂರುಚೂರಾಗಿ ಶೀಳಲ್ಪಟ್ಟಿತು.

ಯಥಾ ಯಥೋತ್ತರಾ ಶುದ್ಧಿ[೧೦]ರಾಸ್ಕಂದತಿ ತಥಾ ತಥಾ ।
ಕರ್ಮಸೈನ್ಯಸ್ಥಿತೇರ್ಭಂಗಃ ಸಂಜಾತಶ್ಚ [೧೧]ರಸಕ್ಷಯಃ ॥ ೨೩೯ ॥

ಹೇಗೆಹೇಗೆ ಸ್ವಾಮಿಯ ಪರಿಣಾಮವು ಶುದ್ಧಿಯಾಗುತ್ತ ಹೋಯಿತೋ ಹಾಗೆಹಾಗೆ ಕರ್ಮಸೈನ್ಯದ ಸ್ಥಿತಿಯ ಭಂಗವೂ ಶಕ್ತಿಯ ನಾಶವೂ ಹರ್ಷಕ್ಷಯವೂ ಉಂಟಾಯಿತು.

[೧೨]ಪರಪ್ರಕೃತಿಸಂಕ್ರಾಂತಿಃ ಸ್ಥಿತೇರ್ಭೇದೋ [೧೩]ರಸಚ್ಯುತಿಃ ।
[೧೪]ನಿರ್ಜೀರ್ಣಿಶ್ಚ ಗುಣಶ್ರೇಣ್ಯಾ ತದಾಸೀತ್ಕರ್ಮವೈರಿಣಾಮ್ ॥ ೨೪೦ ॥

ಆಗ ಕರ್ಮಗಳೆಂಬ ಶತ್ರುಗಳ ಬಂಧದಿಂದ ಬಿಡುಗಡೆಯಾದ ಅಪ್ರಶಸ್ತ ಕರ್ಮಪ್ರಕೃತಿಗಳ ಪ್ರತಿಸಮಯದಲ್ಲಿಯೂ ಅಸಂಖ್ಯಾತಗುಣಿತವಾಗಿ ಬಂಧವಾಗುವ ಸಜಾತೀಯಕರ್ಮಪ್ರಕೃತಿಗಳಲ್ಲಿ ಸಂಕ್ರಮಣವೂ ಬೇರೆ ಸೈನ್ಯದೊಡನೆ ಸಂಕ್ರಮಣವೂ ಸ್ಥಿತಿಯ ನಾಶವೂ ಅನುಭಾಗಶಕ್ತಿಕ್ಷಯವೂ ಹರ್ಷಕ್ಷಯವೂ ಅಸಂಖ್ಯಾತ ಗುಣಿತಕ್ರಮದಿಂದ ಕರ್ಮಗಳ ನಿರ್ಜರೆಯೂ ಶತ್ರುಗಳ ನಾಶವೂ ಆದುವು. (ಕರ್ಮಪಕ್ಷದಲ್ಲಿ ಮೊದಲನೆಯ ಅರ್ಥವು. ಶತ್ರುಪಕ್ಷದಲ್ಲಿ ಎರಡನೆಯ ಅರ್ಥವು)

[೧೫]ಅಂತಃಪ್ರಕೃತಿಸಂಕ್ಷೋಭಂ[೧೬]ಮೂಲೋದ್ವರ್ತಂ ಚ ಕರ್ಮಣಾಮ್ ।
ಯೋಗಶಕ್ತ್ಯಾ ಸ ಯೋಗೀಂದ್ರೋ ವಿಜಿಗೀಷುರಿವಾತನೋತ್ ॥೨೪೧ ॥

ಆ ಯೋಗಿಶ್ರೇಷ್ಠರು ಜಯಿಸುವುದಕ್ಕೆ ಇಚ್ಛಿಸುವವನಂತೆ ಯೋಗಶಕ್ತಿಯಿಂದ ಕರ್ಮಗಳಲ್ಲಿ ಭಾವಕರ್ಮಪ್ರಕೃತಿಗಳ ನಾಶವನ್ನು ಆಪ್ತಸೈನ್ಯದ ನಾಶವನ್ನು ಮೂಲಪ್ರಕೃತಿಗಳ ಮರ್ದನವನ್ನು ಮೂಲಸೈನ್ಯದ ಮರ್ದನವನ್ನು ಮಾಡಿದರು.

೧ ವಿಶುದ್ಧಿಶಕ್ತೇರ್ಭ್ರಂಶಪರಿಹಾರಾರ್ಥಂ, ಸೇನಾಭ್ರಂಶಪರಿಹಾರಾರ್ಥಂ ಚ. ೨ ಸೇನಾಪತಿತ್ವೇ. ೩ ಸೇನಾಚರತ್ವಂ. ೪ ನಿಯಮೇನ ಯೋದ್ಧಾರಃ. ೫ ಗುಣಭಟಾನಾಂ. ೬ ವಿದಾರಿತಂ. ೭ ಗುಣಸೇನಾಭಿಃ. ೮ ಇವ. ೯ ಖಂಡಶಃ. ೧೦ ಗಚ್ಛತಿ. ೧೧ ಶಕ್ತಿಕ್ಷಯಃ, ಹರ್ಷಕ್ಷಯಶ್ಚ. ೧೨ ಅಪ್ರಶಸ್ತಾನಾಂ ಬಂಧೋಚಿತಾನಾಂ ಪ್ರಕೃತೀನಾಂ ದ್ರವ್ಯಸ್ಯ ಪ್ರತಿಸಮಯಮಸಂಖ್ಯೇಯಗುಣಂ ಬಧ್ಯಮಾನಸಜಾತೀಯಪ್ರಕೃತಿಷು ಸಂಕ್ರಮಣಂ. ೧೩ ಅನುಭಾಗಹಾನಿಃ, ಹರ್ಷಕ್ಷಯಶ್ಚ. ೧೪ ನಿರ್ಜರಾ. ೧೫ ಭಾವಕರ್ಮ, ಆಪ್ತಬಲಂ ಚ. ೧೬ ಮೂಲಪ್ರಕೃತಿಮರ್ದನಂ, ಮೂಲಬಲಮರ್ದನಂ ಚ.

ಭೂಯೋಽಪ್ರಮತ್ತತಾಂ ಪ್ರಾಪ್ಯ ಭಾವಯನ್ ಶುದ್ಧಿ[೧]ಮುದ್ಧುರಾಮ್ ।
ಆರುಕ್ಷತ್ಕ್ಷಪಕಶ್ರೇಣೀಂ ನಿಶ್ರೇಣೀಂ ಮೋಕ್ಷಸದ್ಮನಃ ॥ ೨೪೨ ॥

ಪುನಃ ಅಪ್ರಮತ್ತಭಾವ(ಪ್ರಮಾದರಹಿತಭಾವ)ವನ್ನು ಹೊಂದಿ ಅಧಿಕವಾದ ಶುದ್ಧಿಯನ್ನು ಭಾವನೆಮಾಡುವವರಾಗಿ ಮೋಕ್ಷವೆಂಬ ಮನೆಗೆ ನಿಚ್ಚಣಿಗೆ (ಏಣಿ) ಯಾದ ಕ್ಷಪಕ (ಕರ್ಮಗಳನ್ನು ನಾಶಮಾಡುವ) ಶ್ರೇಣಿಯನ್ನು ಹತ್ತಿದರು.

ಅಧಃಪ್ರವೃತ್ತಕರಣಮುಪವಾದೇನ ಭಾವಯನ್ ।
ಅಪೂರ್ವಕರಣೋ ಭೂತ್ವಾನಿವೃತ್ತಿಕರಣೋಽಭವತ್ ॥ ೨೪೩ ॥

ಅಪ್ರಮಾದದಿಂದ ಅಧಃಪ್ರವೃತ್ತಕರಣವನ್ನು ಭಾವಿಸಿ ಅಪೂರ್ವಕರಣರಾಗಿ ಅನಿವೃತ್ತಿಕರಣರಾದರು. (ಕರಣಶಬ್ದಕ್ಕೆ ಪರಿಣಾಮವೆಂದರ್ಥವು. ನಾನಾಜೀವಾಪೇಕ್ಷೆಯಿಂದ ಉತ್ತರಪರಿಣಾಮಗಳು ಪೂರ್ವಪರಿಣಾಮಗಳೊಡನೆ ಸಾದೃಶ್ಯವನ್ನು ಹೊಂದುವುದಕ್ಕೆ ಅಧಃಪ್ರವೃತ್ತಕರಣವೆಂದು ಹೆಸರು. ಭಿನ್ನಸಮಯದಲ್ಲಿರುವ ಜೀವಗಳ ಪರಿಣಾಮಗಳು ಪೂರ್ವಪರಿಣಾಮಗಳೊಡನೆ ಸಾದೃಶ್ಯವನ್ನು ಹೊಂದದೆ ನವೀನವಾಗಿರುವುದಕ್ಕೆ ಅಪೂರ್ವಕರಣವೆಂದು ಹೆಸರು. ನಾನಾಜೀವಗಳ ಪರಿಣಾಮಗಳು ಪ್ರತಿಸಮಯದಲ್ಲಿಯೂ ಪರಸ್ಪರ ವೈಸಾದೃಶ್ಯವನ್ನು ಹೊಂದದೆ ಸದೃಶವಾಗಿರುವುದಕ್ಕೆ ಅನಿವೃತ್ತಿಕರಣವೆಂದು ಹೆಸರು. ಇವು ೭, ೮, ೯ ನೆಯ ಗುಣಸ್ಥಾನಗಳ ಕ್ರಮವಾದ ಹೆಸರುಗಳಾಗಿವೆ.)

ತತ್ರಾದ್ಯಂ ಶುಕ್ಲಮಾಪೂರ್ಯ ಧ್ಯಾನೀ[೨]ದ್ಧ್ಯಾ ನೀತಶುದ್ಧಿಕಃ ।
ಮೋಹರಾಜಬಲಂ ಕೃತ್ಸ್ನಮುಪಾತಯ[೩]ದಸಾಧ್ವಸಃ ॥ ೨೪೪ ॥

ಜ್ಞಾನಪ್ರಕಾಶದಿಂದ ಶುದ್ಧಿಯನ್ನು ಹೊಂದಿದ ಧ್ಯಾನಿಯಾದ ಸ್ವಾಮಿಯು ಅನಿವೃತ್ತಿಕರಣಗುಣಸ್ಥಾನದಲ್ಲಿ ಮೊದಲನೆಯ ಪೃಥಕ್ತ್ವವಿತರ್ಕವೀಚಾರವೆಂಬ ಶುಕ್ಲಧ್ಯಾನವನ್ನು ಪೂರ್ತಿಮಾಡಿ ನಿರ್ಭಯರಾಗಿ ಮೋಹನೀಯಕರ್ಮವೆಂಬ ರಾಜನ ಸೈನ್ಯವನ್ನೆಲ್ಲ ಕೆಡಹಿದರು.

ಅಂಗರಕ್ಷಾನಿವಾಸ್ಯಾಷ್ಟೌ ಕಷಾಯಾ[೪]ನ್ನಿಷ್ಪಿಪೇಷ ಸಃ ।
[೫]ವೇದಶಕ್ತೀಸ್ತತಸ್ತಿಸ್ರೋ [೬]ನೋಕಷಾಯಾಹ್ವಯಾನ್ಭಟಾನ್ ॥ ೨೪೫ ॥

ಆ ಸ್ವಾಮಿಯು ಮೋಹರಾಜನ ಅಂಗರಕ್ಷಕರಂತಿರುವ ಅಪ್ರತ್ಯಾಖ್ಯಾನ ಕ್ರೋಧ ಮಾನಮಾಯಾಲೋಭ ಪ್ರತ್ಯಾಖ್ಯಾನಕ್ರೋಧಮಾನಮಾಯಾಲೋಭಗಳೆಂಬ ಎಂಟು ಕಷಾಯಗಳನ್ನು ಚೂರುಚೂರುಮಾಡಿದರು. ತರುವಾಯ ಪುಂವೇದ ಸ್ತ್ರೀವೇದ ನಪುಂಸಕವೇದ ಈ ಮೂರುಶಕ್ತಿಗಳನ್ನೂ ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹ ಶಕ್ತಿ ಈ ಮೂರುಶಕ್ತಿಗಳನ್ನೂ ಹಾಸ್ಯ ರತಿ ಅರತಿ ಶೋಕ ಭಯ ಜುಗುಪ್ಸಾ ಈ ಆರು ನೋಕಷಾಯಗಳೆಂಬ ಭಟರನ್ನೂ ನಾಶಮಾಡಿದರು.

ತತಃ ಸಂಜ್ವಲನಕ್ರೋಧಂ ಮಹಾನಾಯಕ[೭]ಮಗ್ರಹವಮ್ ।
ಮಾನಮಪ್ಯಸ್ಯ [೮]ಪಾಶ್ಚಾತ್ಯಂ ಮಾಯಾಂ ಲೋಭಂ ಚ ಬಾದರಮ್ ॥

ತರುವಾಯ ಮೋಹರಾಜನಿಗೆ ದೊಡ್ಡ ನಾಯಕನಂತಿರುವ ಸಂಜ್ವಲನಕ್ರೋಧವನ್ನು ಈ ಮೋಹರಾಜನ ಹಿಂಭಾಗದಲ್ಲಿರುವ ಹಿಡಿಯಲಶಕ್ಯವಾದ ಮಾನವನ್ನು ಮಾಯೆಯನ್ನು ಸ್ಥೂಲವಾದ ಲೋಭವನ್ನು

[೯]ಪ್ರವ್ಯಮೃದ್ಯ[೧೦]ನಾನ್ಮಹಾಧ್ಯಾನರಂಗೇ ಚಾರಿತ್ರಸದ್ಧ್ವಜಃ ।
ನಿಶಾತಜ್ಞಾನನಿಸ್ತ್ರಿಂಶೋ ದಯಾಕವಚ[೧೧]ವರ್ಮಿತಃ ॥ ೨೪೭ ॥

ಈ ಸಂಜ್ವಲನಕ್ರೋಧಮೊದಲಾದ ನಾಲ್ಕು ಕಷಾಯಗಳನ್ನು ಮಹಾಧ್ಯಾನವೆಂಬ ರಂಗಸ್ಥಾನದಲ್ಲಿ ಚೂರ್ಣಮಾಡಿ ಚಾರಿತ್ರವೆಂಬ ಉತ್ತಮವಾದ ಧ್ವಜವುಳ್ಳವರೂ ತೀಕ್ಷ್ಣವಾದ ಜ್ಞಾನವೆಂಬ ಖಡ್ಗವುಳ್ಳವರೂ ದಯೆಯೆಂಬ ಕವಚದಿಂದ ಸನ್ನದ್ಧರೂ

೧ ಉತ್ತರಾಮಿತ್ಯಪಿ ಪಾಠಃ. ೨ ಇದ್ಧ್ಯಾ ಜ್ಞಾನದೀಪ್ತ್ಯಾ, ಧ್ಯಾನಂ ಧ್ಯಾನಾತ್ತಶುದ್ಧಿಕ ಇತ್ಯಪಿ ಪಾಠಃ. ೩ ನಿರ್ಭಯಃ. ೪ ಚೂರ್ಣೀಚಕಾರ. ೫ ಪುಂವೇದಾದಿಶಕ್ತೀಃ, ಪ್ರಭುಮಂತ್ರೋತ್ಸಾಹಶಕ್ತೀಶ್ಚ. ೬ ಹಾಸ್ಯಾದಿಷಟ್ಕಾನ್. ೭ ದುರ್ಗ್ರಾಹ್ಯಂ, ಅಗ್ರಗಮಿತಿ ಚ ಪಾಠಃ. ೮ ಪಶ್ಚಾದ್ಭವಂ. ೯ ಚೂರ್ಣೀಕೃತ್ಯ. ೧೦ ಸಂಜ್ವಲನಕ್ರೋಧಾದಿಚತುರಃ. ೧೧ ಸನ್ನದ್ಧಃ.

**ಜಗ್ರಾಹ [೧]ಜಯಭೂಮಿಂ ತಾ[೨]ಮನಿವೃತ್ತಿಂ ಮಹಾಭಟಃ ।**
**ಭಟಾನಾಂ ಹ್ಯನಿವೃತ್ತೀನಾಂ [೩]ಪರಕೀಯಂ ನ ಚಾಗ್ರತಃ ॥ ೨೪೮ ॥**

ಮಹಾಭಟರೂ ಆದ ಸ್ವಾಮಿಯು ಅನಿವೃತ್ತಿಕರಣಗುಣಸ್ಥಾನವೆಂಬ ಆ ಜಯಸ್ಥಾನವನ್ನು ಹಿಡಿದರು. ತಿರುಗದಿರುವ ಭಟರ ಮುಂದೆ ಬೇರೆಯವರ ಸೈನ್ಯವು ನಿಲ್ಲುವುದಿಲ್ಲವಷ್ಟೆ ? ಮೋಹರಾಜನು ಪ್ರತಿಭಟಿಸಲಾರದೆ ಹೋದನೆಂದು ಭಾವವು.

**ಕರಣತ್ರಯಯಾಥಾತ್ಮ್ಯವ್ಯಕ್ತಯೇ[೪]ರ್ಥಪದಾನಿ ವೈ ।**
**ಜ್ಞೇಯಾ[೫]ನ್ಯಮೂನಿ [೬]ಸೂತ್ರಾರ್ಥಸದ್ಭಾವಜ್ಞೈರನುಕ್ರಮಾತ್ ॥ ೨೪೯ ॥**

ಹಿಂದೆ ಹೇಳಿದ ಮೂರು ಕರಣಗಳ ಯಥಾರ್ಥಸ್ವರೂಪದ ಅಭಿವ್ಯಕ್ತಿಗೋಸ್ಕರ ಮುಂದೆ ಹೇಳುವ ಅರ್ಥಕ್ಕನುಸಾರವಾದ ಪದಗಳನ್ನು ಆಗಮಾರ್ಥದ ಸೂಕ್ಷ್ಮಾಭಿಪ್ರಾಯಜ್ಞರು ಯಥಾಕ್ರಮವಾಗಿ ತಿಳಿಯಬೇಕು.

**ಕರಣಾಃ ಪರಿಣಾಮಾ ಯೇ ವಿಭಕ್ತಾಃ ಪ್ರಥಮಕ್ಷಣೇ ।**
**ತೇ ಭವೇಯುರ್ದ್ವಿತೀಯಸ್ಮಿನ್ಕ್ಷಣೇ[೭]ನ್ಯೇ ಚ ಪೃಥಗ್ವಿಧಾಃ ॥ ೨೫೦ ॥**

ಪ್ರಥಮಕ್ಷಣದಲ್ಲಿ ವಿಭಕ್ತವಾದ ಪರಿಣಾಮಗಳೂ ವಿಜಾತೀಯವಾದ ಬೇರೆ ಪರಿಣಾಮಗಳೂ ದ್ವಿತೀಯಕ್ಷಣದಲ್ಲಿರಬಹುದು. ಪ್ರಥಮಕ್ಷಣವರ್ತಿಪರಿಣಾಮಗಳೂ ದ್ವಿತೀಯಕ್ಷಣವರ್ತಿಪರಿಣಾಮಗಳೂ ಸದೃಶವಾಗಬಹುದೆಂದು ಭಾವವು.

**ದ್ವಿತೀಯಕ್ಷಣಸಂಬಂಧಿಪರಿಣಾಮಕದಂಬಕಮ್ ।**
**ತಚ್ಚಾ[೮]ನ್ಯಚ್ಚ ತೃತೀಯೇ ಸ್ಯಾದೇವ[೯]ಮಾಚರಮಕ್ಷಣಾತ್ ॥ ೨೫೧ ॥**

ದ್ವಿತೀಯಕ್ಷಣಸಂಬಂಧಿಪರಿಣಾಮಸಮೂಹವೂ ಪ್ರಥಮಕ್ಷಣಸಂಬಂಧಿ ಪರಿಣಾಮಸಮೂಹವೂ ಬೇರೆ ಪರಿಣಾಮಸಮೂಹವೂ ತೃತೀಯ ಕ್ಷಣದಲ್ಲಿರಬಹುದು. ಹೀಗೆ ಅಧಃಪ್ರವೃತ್ತಕರಣದ ಅಂತ್ಯಸಮಯದ ವರೆಗೂ ಆಗಬಹುದು.

**[೧೦]ತತಶ್ಚಾಧಃಪ್ರವೃತ್ತಾಖ್ಯಂ ಕರಣಂ ತ[೧೧]ನ್ನಿರುಚ್ಯತೇ ।**
**ಅಪೂರ್ವಕರಣೇನ್ಯೈ[೧೨]ವಂ [೧೩]ತೇಹ್ಯಪೂರ್ವಾಃ ಪ್ರತಿಕ್ಷಣಮ್ ॥ ೨೫೨ ॥**

ಆದುದರಿಂದ ಆ ಪರಿಣಾಮಸಮೂಹವು ಅಧಃಪ್ರವೃತ್ತಕರಣ (ಕೆಳಗೆ ಪ್ರವೃತ್ತಿಸುವ—ಸದೃಶವಾಗುವಪರಿಣಾಮ)ವೆಂದು ನಿರುಕ್ತಿಪೂರ್ವಕವಾಗಿ ಹೇಳಲ್ಪಡುತ್ತದೆ. ಅಧಃಪ್ರವೃತ್ತಕರಣದಲ್ಲಿ ಹೇಳಿದ ಲಕ್ಷಣದಂತೆ ಅಪೂರ್ವಕರಣದಲ್ಲಿಲ್ಲ. ಆ ಪರಿಣಾಮಗಳು ಪ್ರತಿಕ್ಷಣದಲ್ಲಿಯೂ ಅಪೂರ್ವಗಳಾಗಿಯೇ ಇರುತ್ತವೆ.

**ಕರಣೇತ್ವನಿವೃತ್ತ್ಯಾಖ್ಯೇ ನ [೧೪]ನಿವೃತ್ತಿರಿಹಾಂಗಿನಾಮ್ ।**
**ಪರಿಣಾಮೈರ್ಮಿಥಸ್ತೇ ಹಿ ಸಮಭಾವಾಃ ಪ್ರತಿಕ್ಷಣಮ್ ॥ ೨೫೩ ॥**

ಈ ಅನಿವೃತ್ತಿಯೆಂಬ ಕರಣದಲ್ಲಿ ಪ್ರಾಣಿಗಳಿಗೆ ಪರಿಣಾಮಗಳಿಂದ ಭೇದವಿಲ್ಲ. ಆ ಪರಿಣಾಮಗಳು ಪರಸ್ಪರವಾಗಿ ಪ್ರತಿಕ್ಷಣದಲ್ಲಿಯೂ ಸಮಾನವಾಗಿರುತ್ತವೆ.

**[೧೫]ತತ್ರಾದ್ಯೇ ಕರಣೇ ನಾಸ್ತಿ ಸ್ಥಿತಿಘಾತಾದ್ಯುಪಕ್ರಮಃ ।**
**[೧೬]ಹಾಪಯೇತ್ಕೇವಲಂ ಶುದ್ಧ್ಯನ್ಬಂಧಂ ಸ್ಥಿತ್ಯನುಭಾಗಯೋಃ ॥ ೨೫೪ ॥**

ಆ ಮೂರು ಕರಣಗಳಲ್ಲಿ ಮೊದಲನೆಯ ಅಧಃಪ್ರವೃತ್ತಕರಣದಲ್ಲಿ ಸ್ಥಿತಿ ಅನುಭಾಗ ಗುಣಶ್ರೇಣಿನಿರ್ಜರೆ ಗುಣಸಂಕ್ರಮಣ ಇವುಗಳ ನಾಶದ ಉಪಕ್ರಮ (ಆರಂಭ)ವಾಗುವುದಿಲ್ಲ. ಶುದ್ಧಿಯನ್ನು ಹೊಂದುವವನಾಗಿ ಸ್ಥಿತಿಬಂಧ ಅನುಭಾಗಬಂಧಗಳನ್ನು ಮಾತ್ರ ನಾಶ (ತಡೆ) ಮಾಡುವನು.

೧ ಜಯಸ್ಥಾನಂ. ೨ ಅನಿವೃತ್ತಿಕರಣಗುಣಸ್ಥಾನಂ. ೩ ಪರಬಲಂ. ೪ ಅರ್ಥಮನುಗತಾನಿ ಪದಾನಿ. ೫ ವಕ್ಷ್ಯಮಾಣಾನಿ. ೬ ಆಗಮಾರ್ಥಸೂಕ್ಷ್ಮಾಭಿಪ್ರಾಯವಿದ್ಭಿಃ. ೭ ಅಪರೇಪಿ ಪರಿಣಾಮಾಃ. ೮ ಅಪರಮಪಿ ಪರಿಣಾಮಕದಂಬಕಂ. ೯ ಅಧಃಪ್ರವೃತ್ತಕರಣಚರಮಸಮಯಪರ್ಯಂತಂ. ೧೦ ತಸ್ಮಾತ್ಕಾರಣಾತ್. ೧೧ ನಿರುಕ್ತಿರೂಪೇಣ ನಿಗದ್ಯತೇ. ೧೨ ಅಧಃಪ್ರವೃತ್ತಕರಣೋಕ್ತಲಕ್ಷಣವತ್. ೧೩ ಪರಿಣಾಮಾಃ. ೧೪ ಭೇದಃ. ೧೫ ಅಧಃಪ್ರವೃತ್ತಾದಿತ್ರಯೇ. ೧೬ ಹಾನಿಂ ಕುರ್ಯಾತ್.

**ಅಪೂರ್ವಕರಣೇಪ್ಯೇವಂ ಕಿಂತು ಸ್ಥಿತ್ಯನುಭಾಗಯೋಃ ।**
**ಹನ್ಯಾದಗ್ರಂ ಗುಣಶ್ರೇಣ್ಯಾ ಕುರ್ವ[೧]ನ್ಸಂಕ್ರಮನಿರ್ಜರೇ ॥ ೨೫೫ ॥**

ಅಪೂರ್ವಕರಣದಲ್ಲಿಯೂ ಹೀಗೆಯೇ, ಆದರೆ ಗುಣಶ್ರೇಣಿಯಿಂದ ಹಿಂದೆ ಹೇಳಿದ ಗುಣಸಂಕ್ರಮಣವನ್ನೂ ನಿರ್ಜರೆಯನ್ನೂ ಮಾಡುವವನಾಗಿ ಸ್ಥಿತಿ ಅನುಭಾಗಗಳ ಅಗ್ರಭಾಗ (ವೃದ್ಧಿ) ವನ್ನು ನಾಶಮಾಡುವನು.

**ತೃತೀಯೇ ಕರಣೇಪ್ಯೇವಂ ಘಟಮಾನಃ [೨]ಪಟಿಷ್ಟಧೀಃ ।**
**ಅಕೃತ್ವಾಂ[೩]ತರಮುಚ್ಛಿಂದ್ಯಾತ್ಕರ್ಮಾರೀನ್ ಷೋಡಶಾಷ್ಟ ಚ ॥ ೨೫೬ ॥**

ಮೂರನೆಯ ಅನಿವೃತ್ತಿಕರಣದಲ್ಲಿಯೂ ಹೀಗೆಯೇ ಮಾಡುತ್ತಿರುವ ಚತುರವಾದ ಬುದ್ಧಿಯುಳ್ಳ ಯೋಗಿಯು ವಿಲಂಬವನ್ನು ಮಾಡದೆ ಕ್ರಮವಾಗಿ ಹದಿನಾರು ಎಂಟು ಕರ್ಮಗಳೆಂಬ ಶತ್ರುಗಳನ್ನು ನಾಶಮಾಡುವನು.

**ಗತ್ಯೋರಥಾದ್ಯಯೋ[೪]ರ್ನಾಮಪ್ರಕೃತೀರ್ನಿಯತೋದಯಾಃ ।**
**[೫]ಸ್ತ್ಯಾನಗೃದ್ಧಿತ್ರಿಕಂ ಚಾ[೬]ಸ್ಯೇದ್ಘಾತೇನೈ[೭]ಕೇನ ಯೋಗಿರಾಟ್ ॥ ೨೫೭ ॥**

ತರುವಾಯ ಯೋಗಿರಾಜನು ಒಂದೇ ಪೆಟ್ಟಿನಿಂದ ನಿಯತವಾದ ಉದಯವುಳ್ಳ ನರಕಗತಿ ನರಕಗತ್ಯಾನುಪೂರ್ವೀ ತಿರ್ಯಗ್ಗತಿ ತಿರ್ಯಗ್ಗತ್ಯಾನುಪೂರ್ವೀ ಏಕೇಂದ್ರಿಯ ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯ ಉದ್ಯೋತ ಆತಪ ಸಾಧಾರಣ ಸೂಕ್ಷ್ಮ ಸ್ಥಾವರ ನಿದ್ರಾನಿದ್ರಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ ಈ ಹದಿನಾರು ಪ್ರಕೃತಿಗಳನ್ನು ನಾಶಮಾಡುವನು.

**ತತೋ[೮]ಷ್ಟೌ ಚ ಕಷಾಯಾಂಸ್ತಾನ್ಹನ್ಯಾದಧ್ಯಾತ್ಮತತ್ತ್ವವಿತ್ ।**
**ಪುನಃ ಕೃತಾಂ[೯]ತರಃ ಶೇಷಾಃ[೧೦]ಪ್ರಕೃತೀರಪ್ಯನುಕ್ರಮಾತ್ ॥ ೨೫೮ ॥**

ಅನಂತರದಲ್ಲಿ ಅಧ್ಯಾತ್ಮತತ್ತ್ವವನ್ನು ತಿಳಿದ ಯೋಗಿಯು ಅಪ್ರತ್ಯಾಖ್ಯಾನಕ್ರೋಧ ಮಾನಮಾಯಾಲೋಭ ಪ್ರತ್ಯಾಖ್ಯಾನಕ್ರೋಧಮಾನಮಾಯಾಲೋಭಗಳೆಂಬ ಎಂಟು ಕಷಾಯಗಳನ್ನು ನಾಶಮಾಡುವನು. ಪುನಃ ಅವಕಾಶಮಾಡಿಕೊಂಡು ಉಳಿದ ಕರ್ಮಪ್ರಕೃತಿ(೯ ನೋಕಷಾಯ ೩ ಸಂಜ್ವಲನಕಷಾಯ)ಗಳನ್ನೂ ಕ್ರಮವಾಗಿ ನಾಶಮಾಡುವನು.

**ಅಶ್ವಕರ್ಣಕ್ರಿಯಾಕೃಷ್ಟಿಕರಣಾದಿಶ್ಚ ಯೋ ವಿಧಿಃ ।**
**ಸೋತ್ರ ವಾಚ್ಯಸ್ತತಃ ಸೂಕ್ಷ್ಮಸಾಂಪರಾಯತ್ವಸಂಶ್ರಯಃ ॥ ೨೫೯ ॥**

ಕುದುರೆಯ ಕಿವಿಯು ಚಲಿಸದೆ ನೆಟ್ಟಗಿರುವ ವಿಧಿಯನ್ನು ಈ ಅನಿವೃತ್ತಿಕರಣಗುಣಸ್ಥಾನದಲ್ಲಿ ಹೇಳಬೇಕು. (ಕುದುರೆಯ ಕಿವಿಯಲ್ಲಿ ಚಲನಕ್ರಿಯೆಯು ಕಡಿಮೆಯಾಗಿರುವಂತೆ ಈ ಗುಣಸ್ಥಾನದಲ್ಲಿ ಧ್ಯಾನಿಯು ಚಂಚಲನಾಗುವುದಿಲ್ಲವೆಂದರ್ಥವು). ತರುವಾಯ ಹತ್ತನೆಯ ಸೂಕ್ಷ್ಮಸಾಂಪರಾಯಗುಣಸ್ಥಾನವನ್ನು ಹೊಂದುತ್ತಾನೆ.

**ಸೂಕ್ಷ್ಮೀಕೃತಂ ತತೋ ಲೋಭಂ ಜಯನ್ಮೋಹಂ ವ್ಯಜೇಷ್ಟ ಸಃ ।**
**[೧೧]ಕರ್ಶಿತೋಹ್ಯರಿರುಗ್ರೋಪಿ ಸುಜಯೋ ವಿಜಿಗೀಷುಣಾ ॥ ೨೬೦ ॥**

ತರುವಾಯ ಕೃಶಮಾಡಲ್ಪಟ್ಟ ಸಂಜ್ವಲನಲೋಭಕಷಾಯವನ್ನು ಜಯಿಸುವ ಆ ಯೋಗಿಯು ಮೋಹವನ್ನು ಜಯಿಸಿದನು. ಕ್ರೂರನಾದ ಶತ್ರುವನ್ನಾದರೂ ಜಯಿಸಲಿಚ್ಛಿಸುವವನು ಕೃಶಮಾಡಿದರೆ ಸುಲಭವಾಗಿ ಜಯಿಸುವನು.

೧ ಅಪ್ರಶಸ್ತಾನಾಂ ಬಂಧೋಜ್ಝಿತಾನಾಂ ಪ್ರಕೃತೀನಾಂ ದ್ರವ್ಯಸ್ಯ ಪ್ರತಿಸಮಯಮಸಂಖ್ಯಗುಣಂ ಬಧ್ಯಮಾನಸಜಾತೀಯಪ್ರಕೃತಿಷು ಸಂಕ್ರಮಣಂ ಗುಣಸಂಕ್ರಮಃ. ೨ ಅತಿಶಯೇನ ಪಟುಧೀಃ. ೩ ವಿಲಂಬನಂ. ೪ ನರಕದ್ವಿಕತಿರ್ಯಗ್ದ್ವಿಕವಿಕಲತ್ರಯೋದ್ಯೋತಾತಪೈಕೇಂದ್ರಿಯಸಾಧಾರಣ ಸೂಕ್ಷ್ಮ ಸ್ಥಾವರಾಃ. ೫ ನಿದ್ರಾನಿದ್ರಾಪ್ರಚಲಾಪ್ರಚಲಾಸ್ತ್ಯಾನಗೃದ್ಧಿತ್ರಯಂ. ೬ ಪ್ರತಿಕ್ಷಿಪೇತ್. ೭ ಯುಗಪತ್. ೮ ಅಪ್ರತ್ಯಾಖ್ಯಾನಾದಿಕಷಾಯಾಷ್ಟಕಾನ್. ೯ ಅವಕಾಶಃ. ೧೦ ಕರ್ಮಪರಿವಾರಾನ್. ೧೧ ಕೃಶೀಕೃತಶ್ಚೇತ್.

**ತೀವ್ರಂ ಜ್ವಲನ್ನಸೌ ಶ್ರೇಣೀರಂಗೇ ಮೋಹಾರಿನಿರ್ಜಯಾತ್ ।**
**ಜ್ಯೇಷ್ಠೋ ಮಲ್ಲ ಇವಾವಲ್ಗನ್ನಿರಪ್ರತಿಮಲ್ಲಕಃ ॥ ೨೮೧ ॥**

ಮೋಹವೆಂಬ ಶತ್ರುವಿನ ಜಯದಿಂದ ಶ್ರೇಣಿಯೆಂಬ ರಂಗಸ್ಥಾನದಲ್ಲಿ ತೀವ್ರವಾಗಿ ಜ್ವಲಿಸುತ್ತಿರುವ ಈ ಅಪ್ರತಿಭಟರಾದ ವೃಷಭಮುನಿಗಳು ದೊಡ್ಡ ಜಟ್ಟಿಯಂತೆ, ಅಲೆದಾಡುತ್ತಿದ್ದರು.

**ತತಃ ಕ್ಷೀಣಕಷಾಯತ್ವಮಕ್ಷೀಣಗುಣಸಂಗ್ರಹಃ ।**
**ಪ್ರಾಪ್ಯ ತತ್ರ ರಜೋಶೇಷಮಧುನಾ[೧]ಸ್ನಾತಕೋ [೨]ಭವನ್ ॥ ೨೮೨ ॥**

ತರುವಾಯ ನಾಶವಾಗದಿರುವ ಗುಣಗಳ ಸಂಗ್ರಹವುಳ್ಳವರಾಗಿ ಕ್ಷೀಣ ಕಷಾಯವೆಂಬ ಹನ್ನೆರಡನೆಯ ಗುಣಸ್ಥಾನವನ್ನು ಹೊಂದಿ ಅಲ್ಲಿ ಸ್ನಾತಕರಾದರು. ಸಂಪೂರ್ಣವಾದ ಘಾತಿಕರ್ಮವನ್ನೂ ನಾಶಮಾಡಿದರು. (ಸಮಸ್ತಘಾತಿಕರ್ಮಗಳನ್ನು ನಾಶಮಾಡುವ ಕೇವಲಿಗಳಿಗೆ ಸ್ನಾತಕರೆಂದು ಹೆಸರು).

**[೩]ಜ್ಞಾನದರ್ಶನವೀರ್ಯಾದಿವಿಘ್ನಾ ಯೇ ಕೇಚದುದ್ಧತಾಃ ।**
**ತಾನಶೇಷಾನ್ದ್ವಿತೀಯೇನ ಶುಕ್ಲಧ್ಯಾನೇನ ಚಚ್ಛಿದೇ ॥ ೨೮೩ ॥**

ತೀವ್ರವಾದ ಮತಿಶ್ರುತಾವಧಿಮನಃಪರ್ಯಯಕೇವಲಜ್ಞಾನಾವರಣೀಯ ಕರ್ಮಗಳು ಚಕ್ಷುರ್ದರ್ಶನಾವರಣ ಅಚಕ್ಷುರ್ದರ್ಶನಾವರಣ ಅವಧಿ ದರ್ಶನಾವರಣ ಕೇವಲದರ್ಶನಾವರಣ ನಿದ್ರಾ ಪ್ರಚಲಾ ಈ ಆರು ದರ್ಶನಾವರಣಕರ್ಮಗಳು ದಾನಾಂತರಾಯ ಲಾಭಾಂತರಾಯ ಭೋಗಾಂತರಾಯ ಉಪಭೋಗಾಂತರಾಯ ವೀರ್ಯಾಂತರಾಯ ಈ ಐದು ಅಂತರಾಯಕರ್ಮಗಳು ಇವುಗಳನ್ನೆಲ್ಲ ಏಕತ್ವ ವಿತರ್ಕವೆಂಬ ದ್ವಿತೀಯಶುಕ್ಲಧ್ಯಾನದಿಂದ ನಾಶಮಾಡಿದರು.

**ಚತಸ್ರಃ[೪]ಕಟುಕಾಃ ಕರ್ಮಪ್ರಕೃತೀರ್ಧ್ಯಾನವಹ್ನಿನಾ ।**
**ನಿರ್ದಹನ್ನುನಿರುದ್ಭೂತಕೈವಲ್ಯೋಽಭೂತ್ಸ ವಿಶ್ವದೃಕ್ ॥ ೨೮೪ ॥**

ಆ ಮುನಿವರ್ಯ(ವೃಷಭಸ್ವಾಮಿ)ರು ಧ್ಯಾನವೆಂಬ ಬೆಂಕಿಯಿಂದ ನಾಲ್ಕು ವಿಧವಾದ ಘಾತಿಕರ್ಮಪ್ರಕೃತಿಗಳನ್ನು ದಹಿಸುವವರೂ ಉತ್ಪನ್ನವಾದ ಕೇವಲಜ್ಞಾನವುಳ್ಳವರೂ ಸರ್ವಜ್ಞರೂ ಆದರು.

**ಅನಂತಜ್ಞಾನದೃಗ್ವೀರ್ಯ[೫]ವಿರತಿಃ ಶುದ್ಧದರ್ಶನಮ್ ।**
**ದಾನಲಾಭೌ ಚ ಭೋಗೋಪಭೋಗಾವಾನಂತ್ಯಮಾಶ್ರಿತಾಃ ॥ ೨೮೫ ॥**

**ನವಕೇವಲಲಬ್ಧೀಸ್ತಾ ಜಿನಭಾಸ್ವಾನ್ನ್ಯತೀರಿವ ।**
**ಸ ಭೇಜೇ ಜಗದುದ್ಭಾಸೀ ಭವ್ಯಾಂಭೋಜಾನಿ ಬೋಧಯನ್॥ ೨೮೬ ॥**

ಜಗತ್ತನ್ನು ಪ್ರಕಾಶಪಡಿಸುವವನೂ ಭವ್ಯರೆಂಬ ಕಮಲಗಳನ್ನು ಅರಳಿಸುವವನೂ ಆದ ಆ ಜಿನೇಶ್ವರನೆಂಬ ಸೂರ್ಯನು, ಕಾಂತಿಗಳನ್ನೋಪಾದಿಯಲ್ಲಿ ಅನಂತಜ್ಞಾನ ಅನಂತದರ್ಶನ ಅನಂತವೀರ್ಯ ಸಮ್ಯಕ್ಚಾರಿತ್ರ ಕ್ಷಾಯಿಕಸಮ್ಯಕ್ತ್ವ ಕ್ಷಾಯಿಕ ದಾನಕ್ಷಾಯಿಕಲಾಭ ಕ್ಷಾಯಿಕಭೋಗ ಕ್ಷಾಯಿಕಉಪಭೋಗ ಈ ನವಕೇವಲ ಲಬ್ಧಿಗಳನ್ನು ಹೊಂದಿದನು.

**ಇತಿ ಧ್ಯಾನಾಗ್ನಿನಿರ್ದಗ್ಧಕರ್ಮೇಂಧನಚಯೋ ಜಿನಃ ।**
**ಬಭಾವುದ್ಭೂತಕೈವಲ್ಯ[೬]ವಿಭವೋ [೭]ವಿಭವೋದ್ಭವಃ ॥ ೨೮೭ ॥**

ಈಪ್ರಕಾರವಾಗಿ ಧ್ಯಾನವೆಂಬ ಬೆಂಕಿಯಿಂದ ಸುಡಲ್ಪಟ್ಟ ಕರ್ಮಗಳೆಂಬ ಕಟ್ಟಿಗೆಗಳ ಸಮೂಹವುಳ್ಳವನೂ ಆವಿರ್ಭವಿಸಿದ ಕೇವಲಜ್ಞಾನವೆಂಬ ಸಂಪತ್ತುಳ್ಳವನೂ ಸಂಸಾರದಿಂದ ಪಾರಾದವನೂ ಅಥವಾ ಸಮಸರಣಮೊದಲಾದ ಬಾಹ್ಯಸಂಪತ್ತುಗಳ ಉತ್ಪತ್ತಿಯುಳ್ಳವನೂ ಆದ ಜಿನೇಶ್ವರನು ಪ್ರಕಾಶಿಸಿದನು.

**ಫಾಲ್ಗುನೇ ಮಾಸಿ [೧]ತಾಮಿಸ್ರಪಕ್ಷಸ್ಯೈಕಾದಶೀತಿಥೌ ।**
**ಉತ್ತರಾಷಾಢನಕ್ಷತ್ರೇ ಕೈವಲ್ಯಮುದಭೂದ್ವಿಭೋಃ ॥ ೨೮೮ ॥**

ಫಾಲ್ಗುಣಮಾಸದ ಕೃಷ್ಣಪಕ್ಷದ ಏಕಾದಶೀತಿಥಿಯಲ್ಲಿ ಉತ್ತರಾಷಾಢನಕ್ಷತ್ರದಲ್ಲಿ ಸ್ವಾಮಿಗೆ ಕೇವಲಜ್ಞಾನೋತ್ಪತ್ತಿಯಾಯಿತು.

**ಭಗವತಿ ಜಿತಮೋಹೇ ಕೇವಲಜ್ಞಾನಲಕ್ಷ್ಮ್ಯಾ**
**ಸ್ಫುರತಿ ಸತಿ ಸುರೇಂದ್ರಾ [೨]ಪ್ರಾಣಮನ್ಭಕ್ತಿಭಾರಾತ್ ।**
**ನಭಸಿ ಜಯನಿನಾದೋ ವಿಶ್ವದಿಕ್ಕಂ ಜಜೃಂಭೇ**
**ಸುರಪಟಹರವೈಶ್ಚಾರುದ್ಧಮಾಸೀತ್ತ್ವರಂಧ್ರಮ್ ॥ ೨೮೯ ॥**

ಮೋಹವನ್ನು ಜಯಿಸಿದ ಭಗವಂತನು ಕೇವಲಜ್ಞಾನವೆಂಬ ಲಕ್ಷ್ಮಿಯಿಂದ ಪ್ರಕಾಶಿಸುತ್ತಿರಲು ದೇವೇಂದ್ರರು ಭಕ್ತಿಯ ಭಾರದಿಂದ ನಮಸ್ಕರಿಸಿದರು. ಆಕಾಶದಲ್ಲಿ ಜಯಧ್ವನಿಯು ಸಮಸ್ತದಿಕ್ಕುಗಳನ್ನು ವ್ಯಾಪಿಸಿತು. ದೇವದುಂದುಭಿಗಳ ಶಬ್ದಗಳು ಆಕಾಶವನ್ನು ವ್ಯಾಪಿಸಿದುವು.

**ಸುರಕುಜಕುಸುಮಾನಾಂ ವೃಷ್ಟಿರಾಪಪ್ತದುಚ್ಚೈ-**
**ರ್ಭ್ರಮರಮುಖರಿತದ್ಯೌಃ [೩]ಶಾರಯಂತೀ ದಿಗಂತಾನ್ ।**
**ವಿರಲಮವತರದ್ಭಿರ್ನಾಕಭಾಜಾಂ ವಿಮಾನೈ-**
**ರ್ಗಗನಜಲಧಿರುದ್ಯನ್ನೌರಿವಾಭೂತ್ಸಮಂತಾತ್ ॥ ೨೯೦ ॥**

ಭ್ರಮರಗಳಿಂದ ಶಬ್ದಾಯಮಾನವಾಗಿ ಮಾಡಲ್ಪಟ್ಟ ಆಕಾಶವುಳ್ಳದೂ ದಿಕ್ಕೊನೆಗಳನ್ನು ನಾನಾವರ್ಣವುಳ್ಳವುಗಳನ್ನಾಗಿ ಮಾಡುವುದೂ ಆದ ಕಲ್ಪವೃಕ್ಷಗಳ ಪುಷ್ಪವೃಷ್ಟಿಯು ಅಧಿಕವಾಗಿ ಬಿದ್ದಿತು. ವಿರಳವಾಗಿ ಅವತರಿಸು(ಇಳಿಯು)ತ್ತಿರುವ ಸ್ವರ್ಗಿಕರ ವಿಮಾನಗಳಿಂದ ಆಕಾಶವೆಂಬ ಸಮುದ್ರವು ಸುತ್ತಲೂ ಆವಿರ್ಭವಿಸುತ್ತಿರುವ ಹಡಗುಗಳುಳ್ಳದಾಗಿರುವಂತಾಯಿತು.

**ಮದಕಲರುತಭೃಂಗೈರನ್ವಿತಃ [೪]ಸ್ವಃಸ್ರವಂತ್ಯಾಃ**
**ಶಿಶಿರತರತರಂಗಾನಾಸ್ಪೃಶನ್ಮಾತರಿಶ್ವಾ।**
**ಧುತಸುರಭಿವನಾಂತಃಪದ್ಮಕಿಂಜಲ್ಕಬಂಧು-**
**ರ್ಮೃದುತರಮಭಿತೋ [೫]ವಾನ್ವ್ಯಾನಶೇ ದಿಙ್ಮುಖಾನಿ ॥ ೨೯೧ ॥**

ಮದದಿಂದ ಸುಂದರವಾದ ಶಬ್ದವುಳ್ಳ ಭ್ರಮರಗಳಿಂದ ಯುಕ್ತವೂ ಗಂಗಾ ನದಿಯ ಹೆಚ್ಚು ತಂಪಾಗಿರುವ ಅಲೆಗಳನ್ನು ಸ್ಪರ್ಶಿಸುವುದೂ ವನದೊಳಗಿರುವ ಪರಿಮಳವಾದ ಕಮಲಗಳ ಕುಸುಮಗಳನ್ನು ಅಲ್ಲಾಡಿಸುವುದೂ ಸುತ್ತಲೂ ಅತ್ಯಂತ ಕೋಮಲವಾಗಿ ಬೀಸುತ್ತಿರುವುದೂ ಆದ ಗಾಳಿಯು ದಿಕ್ಕುಗಳನ್ನು ವ್ಯಾಪಿಸಿತು.

**ಯುಗಪದಥ [೬]ನಭಸ್ತೋ [೭]ನಭ್ರುತಾದ್ವೃಷ್ಟಿಪಾತೋ**
**[೮]ವಿರಜಯತಿ ತದಾ ಸ್ಮ ಪ್ರಾಂಗಣಂ ಲೋಕನಾಡ್ಯಾಃ ।**
**ಸಮವಸರಣಭೂಮೇಃ ಶೋಧನಾಯೇವ ವಿಷ್ವ-**
**ಗ್ವಿತತಸಲಿಲಬಿಂದುರ್ವಿಶ್ವಭರ್ತುರ್[೯]ಜಿನೇಶಃ ॥ ೨೯೨ ॥**

ತರುವಾಯ ಆಗ ಸುತ್ತಲೂ ಜಲಬಿಂದುಗಳನ್ನು ಹರಡುತ್ತಿರುವ ಮಳೆಯು ಮೇಘವಿಲ್ಲದಿರುವ ಆಕಾಶದಿಂದ ಬಿದ್ದು, ಲೋಕಾಧಿಪತಿಯಾದ ಜಿನೇಶ್ವರನ ಸಮವಸರಣಭೂಮಿಯ ಶೋಧನೆಗೋಸ್ಕರವೋ ಎಂಬಂತೆ, ಲೋಕನಾಡಿಯ ಪ್ರದೇಶವನ್ನು ಏಕಕಾಲದಲ್ಲಿ ಧೂಳಿಲ್ಲದನ್ನಾಗಿ ಮಾಡಿತು.

---

೧ ಸಮಾಪ್ತವೇದಃ. ೨ ಅಭವದಿತ್ಯಪಿ ಪಾಠಃ. ೩ ಜ್ಞಾನಾವರಣಪಂಚಕಂ ದರ್ಶನಾವರಣಚತುಷ್ಕಂ ನಿದ್ರಾಪ್ರಚಲಾಂತರಾಯಪಂಚಕಂಚೇತಿ ಷೋಡಶ. ೪ ಘಾತಿಕರ್ಮಾಣೀತ್ಯರ್ಥಃ. ೫ ಚಾರಿತ್ರಂ. ೬ ಕೇವಲಜ್ಞಾನಸಂಪತ್ತಿಃ. ೭ ವಿಗತಸಂಸಾರೋದಯಃ, ಸಮವಸರಣಾದಿಬಹಿರ್ಭೂತೀನಾಮುದ್ಭವೋ ಯಸ್ಯೇತಿ ವಾ.

೧ ಕೃಷ್ಣಪಕ್ಷಸ್ಯ. ೨ ಪ್ರಣಮಂತಿ ಸ್ಮ. ೩ ನಾನಾವರ್ಣಾನ್ಕುರ್ವಂತೀ. ೪ ಗಂಗಾಯಾಃ. ೫ ವಾತೀತಿ ವಾನ್. ೬ ಆಕಾಶಾತ್. ೭ ಮೇಘರಹಿತಾತ್. ೮ ರಜೋರಹಿತಂ ಕರೋತಿ. ೯ ಜಿನೇಂದ್ರಸ್ಯ.

**ಇತ್ಥಂ ತದಾ ತ್ರಿಭುವನೇ ಪ್ರಮದಂ ವಿತನ್ವ-**
**ನ್ನುದ್ಭೂತಕೇವಲರವೇರ್ವೃಷಭೋದಯಾದ್ರೇಃ ।**
**ಆಸೀಜ್ಜಗಜ್ಜನಹಿತಾಯ ಜಿನಾಧಿಪತ್ಯ-**
**ಪ್ರಖ್ಯಾಪಕಃ ಸಪದಿ [೧]ತೀರ್ಥಕರಾನುಭಾವಃ ॥ ೨೭೩ ॥**

ಆ ಕಾಲದಲ್ಲಿ ಹಿಂದೆ ಹೇಳಿದ ಪ್ರಕಾರವಾಗಿ ಮೂರು ಲೋಕದಲ್ಲಿಯೂ ಸಂತೋಷವನ್ನು ಹರಡುವುದೂ ಉದ್ಭವಿಸಿದ ಕೇವಲಜ್ಞಾನವೆಂಬ ಸೂರ್ಯನುಳ್ಳ ವೃಷಭಸ್ವಾಮಿಯೆಂಬ ಉದಯಪರ್ವತದಿಂದ ಶೀಘ್ರವಾಗಿ ಜಿನಾಧಿಪತಿತ್ವವನ್ನು ಪ್ರಕಟಪಡಿಸುವುದೂ ಆದ ತೀರ್ಥಕರನಾಮವೆಂಬ ಶುಭಕರ್ಮದ ಅತಿಶಯವು ಜಗತ್ತಿನ ಜನರ ಹಿತಕ್ಕೋಸ್ಕರ ಉಂಟಾಯಿತು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವತ್ಕೈವಲ್ಯೋತ್ಪತ್ತಿವರ್ಣನಂ ನಾಮ ವಿಂಶತಿತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ತ್ರಿಷಷ್ಟಿಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
''ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭಗವಂತನ ಕೇವಲಜ್ಞಾನೋತ್ಪತ್ತಿವರ್ಣನೆಯೆಂಬ
ಇಪ್ಪತ್ತನೆಯ ಪರ್ವವು ಸಮಾಪ್ತವಾದುದು.

---

೧ ತೀರ್ಥಕರನಾಮಕರ್ಮಾನುಭಾವಃ.

॥ ಶ್ರೀ ವೃಷಭಜಿನಾಯ ನಮಃ ॥

# ಅಥೈಕವಿಂಶಂ ಪರ್ವ

**ಅಥಾತಃ ಶ್ರೇಣಿಕೋ ನಮ್ರೋ ಮುನಿಂ ಪಪ್ರಚ್ಛ ಗೌತಮಮ್ ।**
**ಭಗವನ್ಬೋದ್ಧುಮಿಚ್ಛಾಮಿ ತ್ವತ್ತೋ ಧ್ಯಾನಸ್ಯ ವಿಸ್ತರಮ್ ॥ ೧ ॥**

ಅನಂತರದಲ್ಲಿ ನಮ್ರನಾದ ಶ್ರೇಣಿಕನು ಗೌತಮಮುನಿಯನ್ನು ಮುಂದೆ ಹೇಳುವ ರೀತಿಯಾಗಿ ಪ್ರಶ್ನೆಮಾಡಿದನು "ಭಗವಂತನೆ! ನಿನ್ನಿಂದ ಧ್ಯಾನದ ವಿಸ್ತಾರವನ್ನು ತಿಳಿಯಲಿಚ್ಛಿಸುತ್ತೇನೆ.

**ಕಿಮಸ್ಯ ಲಕ್ಷಣಂ ಯೋಗಿನ್ಕೇ ಭೇದಾಃ ಕಿಂಚ ನಿರ್ವಚಃ ।**
**[೧]ಕಿಂಸ್ವಾಮಿಕಂ ಕಿಯತ್ಕಾಲಂ [೨]ಕಿಂಹೇತುಫಲಮ[೩]ಪ್ಯದಃ ॥ ೨ ॥**

ಯೋಗಿಯೆ! ಈ ಧ್ಯಾನದ ಲಕ್ಷಣವೇನು? ಭೇದಗಳಾವುವು? ಧ್ಯಾನಶಬ್ದಕ್ಕೆ ಅರ್ಥವೇನು? ಈ ಧ್ಯಾನಕ್ಕೆ ಸ್ವಾಮಿಯಾರು? ಧ್ಯಾನವು ಎಷ್ಟುಕಾಲವರೆಗಿರುವುದು? ಇದಕ್ಕೆ ಕಾರಣವಾವುದು? ಫಲವಾವುದು?

**ಕೋಽಸ್ಯ ಭಾವೋ ಭವೇತ್ಕಿಂ ವಾ ಸ್ಯಾದಧಿಷ್ಠಾನ[೪]ಮೀಶಿತಃ ।**
**ಭೇದಾನಾಂ ಕಾನಿ ನಾಮಾನಿ ಕ[೫]ಶ್ಚೈಷಾಮರ್ಥನಿಶ್ಚಯಃ ॥ ೩ ॥**

ಸ್ವಾಮಿಯೆ! ಈ ಧ್ಯಾನದ ಭಾವ(ಪರಿಣಾಮ)ವು ಯಾವುದು? ಈ ಧ್ಯಾನಕ್ಕೆ ಉತ್ಪತ್ತಿಸ್ಥಾನವಾವುದು? ಧ್ಯಾನಭೇದಗಳ ಹೆಸರುಗಳೇನು? ಈ ಧ್ಯಾನಭೇದಗಳ ನಿಶ್ಚಯವಾದ ಅರ್ಥವಾವುದು?

**ಕಿ[೬]ಮಾಲಂಬನಮೇತಸ್ಯ [೭]ಬಲಾಧಾನಂ ಚ ಕಿಂ ಭವೇತ್ ।**
**ತದಿದಂ ಸರ್ವಮೇವಾಹಂ [೮]ಬುಭುತ್ಸೇ ವದತಾಂವರ ॥ ೪ ॥**

ವಕ್ತೃಗಳಲ್ಲಿ ಶ್ರೇಷ್ಠನಾದ ಸ್ವಾಮಿಯೆ! ಈ ಧ್ಯಾನಕ್ಕೆ ವಿಷಯವಾವುದು? ಈ ಧ್ಯಾನವು ಯಾವುದರಿಂದ ವೃದ್ಧಿಹೊಂದುವುದು? ಇದನ್ನೆಲ್ಲ ನಾನು ತಿಳಿಯಲಿಚ್ಛಿಸುತ್ತೇನೆ.

**ಪರಂ ಸಾಧನಮಾಮ್ನಾತಂ ಧ್ಯಾನಂ ಮೋಕ್ಷಸ್ಯ ಸಾಧನೇ ।**
**[೯]ತತೋಽಸ್ಯ ಭಗವನ್ಬ್ರೂಹಿ ತತ್ತ್ವಂ [೧೦]ಗೋಪ್ಯಂ ಯತೀಶಿನಾಮ್ ॥**

ಭಗವಂತನೆ! ಧ್ಯಾನವು ಮೋಕ್ಷಸಾಧನದಲ್ಲಿ ಉತ್ಕೃಷ್ಟವಾದ ಸಾಧನ(ಕಾರಣ)ವೆಂದು ಹೇಳಲ್ಪಟ್ಟಿದೆ. ಆದುದರಿಂದ ಯತಿಶ್ರೇಷ್ಠರು ರಕ್ಷಿಸುವುದಕ್ಕೆ ಯೋಗ್ಯವಾದ ಈ ಧ್ಯಾನದ ನಿಜಸ್ವರೂಪವನ್ನು ಹೇಳು."

**ಇತಿ ಪೃಷ್ಟವತೇ ತಸ್ಮೈ ಭಗವಾನ್ಗೌತಮೋಽಬ್ರವೀತ್ ।**
**ಪ್ರಸರದ್ದಶನಾ[೧೧]ಭೀಷುಜಲಸ್ನಪಿತತತ್ತನುಃ ॥ ೬ ॥**

ಈ ಪ್ರಕಾರವಾಗಿ ಪ್ರಶ್ನೆಮಾಡಿದ ಆ ಶ್ರೇಣಿಕನಿಗೆ ಭಗವಂತನಾದ ಗೌತಮ ಸ್ವಾಮಿಯು, ಹಲ್ಲುಗಳ ಹರಡುತ್ತಿರುವ ಕಿರಣಗಳೆಂಬ ಜಲದಿಂದ ಶ್ರೇಣಿಕನ ಶರೀರವನ್ನು ಸ್ನಾನಮಾಡಿಸುವವರಾಗಿ ಮುಂದೆಹೇಳುವ ರೀತಿಯಾಗಿ ಹೇಳಿದರು.

**ಯತ್ಕರ್ಮಕ್ಷಪಣೇ ಸಾಧ್ಯೇ ಸಾಧನಂ ಪರಮಂ ತಪಃ ।**
**ತತ್ತೇ ಧ್ಯಾನಾಹ್ವಯಂ ಸಮ್ಯಗನುಶಾಸ್ಮಿ [೧೨]ಯಥಾಶ್ರುತಮ್ ॥ ೭ ॥**

"ಎಲೈ ರಾಜನೆ! ಕರ್ಮಕ್ಷಯವನ್ನು ಮಾಡುವುದಕ್ಕೆ ಉತ್ಕೃಷ್ಟವಾದ ತಪಸ್ಸು ಕಾರಣವಾಗಿರುವುದರಿಂದ ಆಗಮಾನುಸಾರವಾಗಿ ಧ್ಯಾನವೆಂಬ ತಪಸ್ಸನ್ನು ಚೆನ್ನಾಗಿ ನಿನಗೆ ಉಪದೇಶಮಾಡುತ್ತೇನೆ.

**[೧]ಐಕಾಗ್ರ್ಯೇಣ ನಿರೋಧೋ ಯಶ್ಚಿತ್ತಸ್ಯೈ[೨]ಕತ್ರ ವಸ್ತುನಿ ।**
**ತದ್ಧ್ಯಾನಂ ವಜ್ರಕಾಯಸ್ಯ ಭವೇ[೩]ದಾಂತರ್ಮುಹೂರ್ತತಃ ॥ ೮ ॥**

ಜೀವತತ್ತ್ವಮೊದಲಾದ ಒಂದೇ ವಸ್ತುವಿನಲ್ಲಿ ಏಕಾಗ್ರತೆಯಿಂದ ಮನಸ್ಸನ್ನು ತಡೆದು ನಿಲ್ಲಿಸುವುದು ಧ್ಯಾನವೆನಿಸುವುದು. ಅಂತಹ ಧ್ಯಾನವು ವಜ್ರದಂತೆ ದೃಢವಾದ ಶರೀರವುಳ್ಳ ಪುರುಷನಿಗೆ ಒಂದು ಅಂತರ್ಮುಹೂರ್ತಪರ್ಯಂತ ಉಂಟಾಗುವುದು.

**ಸ್ಥಿರ[೪]ಮಧ್ಯವಸಾನಂ ಯತ್ತದ್ಧ್ಯಾನಂ ಯಚ್ಚಲಾಚಲಮ್ ।**
**[೫]ಸಾನುಪ್ರೇಕ್ಷಾಥವಾ ಚಿಂತಾ [೬]ಭಾವನಾಚಿತ್ತಮೇವ ವಾ ॥ ೯ ॥**

ಸ್ಥಿರವಾದ ಪರಿಣಾಮಕ್ಕೆ ಧ್ಯಾನವೆಂದು ಹೆಸರು. ಚಂಚಲವಾದ ಪರಿಣಾಮಕ್ಕೆ ಅನುಪ್ರೇಕ್ಷಾ(ವಿಚಾರ)ಚಿಂತಾಷೋಡಶಭಾವನಾಯುಕ್ತಚಿತ್ತವೆಂದಾದರೂ ಹೆಸರು.

**[೭]ಛದ್ಮಸ್ಥೇಷು ಭವೇದೇತಲ್ಲಕ್ಷಣಂ [೮]ವಿಶ್ವದೃಶ್ವನಾಮ್ ।**
**[೯]ಯೋಗಾಸ್ರವಸ್ಯ ಸಂರೋಧೇ ಧ್ಯಾನತ್ವಮುಪಚರ್ಯತೇ ॥ ೧೦ ॥**

ಈ ಚಂಚಲವಾದ ಧ್ಯಾನವು ಛದ್ಮಸ್ಥರಲ್ಲಿ ಉಂಟಾಗುವುದು. (ಹನ್ನೆರಡನೆಯ ಗುಣಸ್ಥಾನದವರೆಗೆ ಛದ್ಮಸ್ಥರೆಂದು ಹೆಸರು). ಸರ್ವಜ್ಞರಿಗೆ ಶರೀರವಾಙ್ಮನಃಕರ್ಮರೂಪವಾದ ಆಸ್ರವವಿಲ್ಲದಿರುವುದರಿಂದ ಅವರಲ್ಲಿ ಧ್ಯಾನವೆಂಬುದು ಗೌಣವಾಗಿದೆ. ಉಪಚಾರದಿಂದ ಹೇಳಲ್ಪಟ್ಟಿದೆಯೆಂದು ಭಾವವು.

**ಧೀಬಲಾಯತ್ತವೃತ್ತಿತ್ವಾದ್ಧ್ಯಾನಂ ತಜ್ಜ್ಞೈರ್ನಿರುಚ್ಯತೇ ।**
**[೧೦]ಯಥಾರ್ಥ[೧೧]ಮಭಿಸಂಧಾನಾ[೧೨]ದಪಧ್ಯಾನ[೧೩]ಮತೋಽನ್ಯಥಾ ॥ ೧೧ ॥**

ಧ್ಯಾನವು ಬುದ್ಧಿಶಕ್ತಿಗೆ ಅಧೀನವಾಗಿರುವುದರಿಂದಲೂ ಯಥಾರ್ಥವಾದ ವಸ್ತುವನ್ನು ವಿಷಯೀಕರಿಸುವುದರಿಂದಲೂ ಧ್ಯಾನಿಗಳು ಧ್ಯಾನವೆಂದು ಹೇಳುತ್ತಾರೆ. ಹಾಗಿಲ್ಲದಿದ್ದರೆ ಅಪಧ್ಯಾನ(ದುರ್ಧ್ಯಾನ)ವೆಂದು ಹೇಳುತ್ತಾರೆ.

**ಯೋಗೋ ಧ್ಯಾನಂ ಸಮಾಧಿಶ್ಚ ಧೀರೋಧಃ ಸ್ವಾಂತನಿಗ್ರಹಃ ।**
**ಅಂತಃಸಂಲೀನತಾ ಚೇತಿ [೧೪]ತತ್ಪರ್ಯಾಯಾಃ ಸ್ಮೃತಾ ಬುಧೈಃ ॥ ೧೨ ॥**

ಯೋಗ ಧ್ಯಾನ ಸಮಾಧಿ ಧೀರೋಧ (ಬುದ್ಧಿಯನ್ನು ತಡೆಯುವುದು) ಸ್ವಾಂತನಿಗ್ರಹ (ಮನೋನಿಗ್ರಹ) ಅಂತಃಸಂಲೀನತಾ (ಆತ್ಮನಲ್ಲಿ ಲೀನವಾಗುವುದು) ಇವುಗಳು ಆ ಧ್ಯಾನದ ಪರ್ಯಾಯಗಳೆಂದು ವಿದ್ವಾಂಸರು ತಿಳಿದಿದ್ದಾರೆ.

**ಧ್ಯಾಯತ್ಯರ್ಥಾ[೧೫]ನನೇನೇತಿ ಧ್ಯಾನಂ ಕರಣಸಾಧನಮ್ ।**
**ಧ್ಯಾಯತೀತಿ ಚ ಕರ್ತೃತ್ವಂ ವಾಚ್ಯಂ ಸ್ವಾತಂತ್ರ್ಯಸಂಭವಾತ್ ॥ ೧೩ ॥**

---

೧ ಕೀದೃಕ್ ಸ್ವಾಮೀ ಯಸ್ಯ ತತ್. ೨ ಕೀದೃಶೇ ಹೇತುಫಲೇ ಯಸ್ಯ ತತ್. ೩ ಧ್ಯಾನಂ. ೪ ಭೋಃ ಸ್ವಾಮಿನ್. ೫ ನಾಮ್ನಾಂ. ೬ ವಿಷಯಃ. ೭ ಬಲಜೃಂಭಣಂ. ೮ ಬೋದ್ಧುಮಿಚ್ಛಾಮಿ. ೯ ಕಾರಣಾತ್. ೧೦ ರಕ್ಷಣೀಯಂ. ೧೧ ಕಿರಣಃ. ೧೨ ಆಗಮಾನುಸಾರೇಣ.

೧ ಅನನ್ಯಚಿತ್ತವೃತ್ತ್ಯಾ. ೨ ಜೀವತತ್ತ್ವಾದೌವಸ್ತುನಿ. ೩ ಅಂತರ್ಮುಹೂರ್ತಪರ್ಯಂತಂ. ೪ ಪರಿಣಾಮಂ. ೫ ಸವಿಚಾರಾ. ೬ ಷೋಡಶಭಾವನಾಯುಕ್ತಂ. ೭ ಛದಿ ಸಂವರಣೇ. ೮ ಸರ್ವಜ್ಞಾನಾಂ. ೯ ಕಾಯವಾಙ್ಮನಃಕರ್ಮರೂಪಾಸ್ರವಸ್ಯ. ೧೦ ಧ್ಯಾನಲಕ್ಷಣಯುಕ್ತಂ. ೧೧ ಅಭಿಪ್ರಾಯಮಾತ್ರಾತ್. ೧೨ ಚಿಂತಾದಿರೂಪಂ. ೧೩ ಉಕ್ತಲಕ್ಷಣಧ್ಯಾನಾತ್. ೧೪ ಧ್ಯಾನಪರ್ಯಾಯಾಃ. ೧೫ ಜ್ಞಾನೇನ.

**ಭಾವಮಾತ್ರಾಭಿಧಿತ್ಸಾಯಾಂ ಧ್ಯಾತಿರ್ವಾ ಧ್ಯಾನಮಿಷ್ಯತೇ ।**
**ಶಕ್ತಿಭೇದಾ[೧]ಜ್ಞತತ್ತ್ವಸ್ಯ ಯುಕ್ತ[೨]ಮೇಕತ್ರ [೩]ತತ್ತ್ರಯಮ್ ॥ ೧೪ ॥**

ಆತ್ಮನು ಪದಾರ್ಥಗಳನ್ನು ಈ ಜ್ಞಾನಮೂಲಕವಾಗಿ ಧ್ಯಾನಿಸುವುದರಿಂದ ಧ್ಯಾನವೆಂದು ಕರಣವ್ಯುತ್ಪತ್ತಿಯಿಂದಲೂ ಧ್ಯಾನಶಬ್ದವು ಸಿದ್ಧವಾಗುತ್ತದೆ. ಆತ್ಮನಿಗೂ ಜ್ಞಾನಕ್ಕೂ ಅಭೇದಾಪೇಕ್ಷೆಯಿಂದ ಸ್ವಾತಂತ್ರ್ಯವು ಸಂಭವವಾಗುವುದರಿಂದ ಧ್ಯಾನ ಮಾಡುವುದು ಧ್ಯಾನವು ಎಂದು ಕರ್ತೃವ್ಯುತ್ಪತ್ತಿಯಿಂದಲೂ ಸಿದ್ಧವಾಗುತ್ತದೆ. ಭಾವವನ್ನು ಮಾತ್ರ ಹೇಳುವುದಕ್ಕೆ ಅಪೇಕ್ಷಿಸಿದಾಗ ಧ್ಯಾನಿಸುವುದು ಧ್ಯಾನವು ಎಂದು ಭಾವವ್ಯುತ್ಪತ್ತಿಯಿಂದಲೂ ಸಿದ್ಧವಾಗುತ್ತದೆ. ಆತ್ಮತತ್ತ್ವದ ಶಕ್ತಿಭೇದದಿಂದ ಒಂದೇ ಧ್ಯಾನದಲ್ಲಿ ಹಿಂದೆ ಹೇಳಿದ ಕರಣಕರ್ತೃಭಾವವ್ಯುತ್ಪತಿಗಳು ಮೂರೂ ಯುಕ್ತವಾಗಿವೆ. ಭೇದಾಭೇದಾಪೇಕ್ಷೆಯಿಂದ ಮೂರೂ ಸಮಂಜಸವಾಗಿವೆಯೆಂದು ಭಾವವು.

**ಯದ್ಯಪಿ ಜ್ಞಾನಪರ್ಯಾಯೋ ಧ್ಯಾನಾಖ್ಯೋ ಧ್ಯೇಯಗೋಚರಃ ।**
**ತಥಾಪ್ಯೇಕಾಗ್ರ[೪]ಸಂದಷ್ಟೋ ಧತ್ತೇ ಬೋಧಾದಿವಾ[೫]ನ್ಯತಾಮ್ ॥ ೧೫ ॥**

ಧ್ಯಾನಮಾಡುವುದಕ್ಕೆಯೋಗ್ಯವಾದ ವಸ್ತುವನ್ನು ವಿಷಯೀಕರಿಸುವ ಧ್ಯಾನವು ಜ್ಞಾನದ ಪರ್ಯಾಯವಾಗಿದ್ದರೂ ಒಂದೇ ವಸ್ತುವಿನಲ್ಲಿ ಸಂಬದ್ಧವಾಗಿ ಜ್ಞಾನಕ್ಕಿಂತ ಬೇರೆಯಾಗಿರುವಂತೆ ತೋರುತ್ತದೆ. ಜ್ಞಾನದಿಂದ ಧ್ಯಾನವು ಕಥಂಚಿದ್ಭಿನ್ನವಾಗಿದೆಯೆಂದು ಭಾವವು.

**ಹರ್ಷಾ[೬]ಮರ್ಷಾದಿವತ್ಸೋಽಯಂ ಚಿದ್ಧರ್ಮೋಽಪ್ಯವಬೋಧಿತಃ ।**
**ಪ್ರಕಾಶತೇ ವೈ [೭]ಭಿನ್ನಾತ್ಮಾ ಕಥಂಚಿ[೮]ತ್ತಿಮಿತಾತ್ಮಕಃ ॥ ೧೬ ॥**

ಈ ಧ್ಯಾನವೆಂಬುದು, ಸಂತೋಷ ಮತ್ತು ಕೋಪ ಇವುಗಳಂತೆ, ಆತ್ಮನ ಧರ್ಮವಾಗಿದ್ದರೂ ನಿಶ್ಚಲರೂಪವಾಗಿರುವುದರಿಂದ ಕಥಂಚಿದ್ಭೇದರೂಪವಾಗಿ ಪ್ರಕಾಶಿಸುತ್ತದೆ. ಜ್ಞಾನಕ್ಕಿಂತ ಬೇರೆಯಾಗಿ ತೋರುತ್ತದೆಂದು ಭಾವವು.

**ಧ್ಯಾನಸ್ಯಾಲಂಬನಂ ಕೃತ್ಸ್ನಂ ಜಗತ್ತತ್ತ್ವಂ ಯಥಾಸ್ಥಿತಮ್ ।**
**ವಿನಾ[೯]ತ್ಮಾತ್ಮೀಯಸಂಕಲ್ಪಾದೌದಾಸೀನ್ಯೇ ನಿವೇಶಿತಮ್ ॥ ೧೭ ॥**

ನಾನು, ನನ್ನದು (ಅಹಂಕಾರಮಮಕಾರ) ಎಂಬ ಸಂಕಲ್ಪವಿಲ್ಲದೆ ಉದಾಸೀನಭಾವದಲ್ಲಿ ತಿಳಿಯಲ್ಪಟ್ಟ ಸ್ವಸ್ವರೂಪದಲ್ಲಿರುವ ಸಮಸ್ತವಾದ ಜಗತ್ತತ್ತ್ವವು ಧ್ಯಾನಕ್ಕೆ ಆಲಂಬನ(ಆಶ್ರಯ)ವಾಗಿದೆ.

**ಅಥವಾ ಧ್ಯೇಯಮಧ್ಯಾತ್ಮತತ್ತ್ವಂ ಮುಕ್ತೇತರಾತ್ಮಕಮ್ ।**
**ತತ್ತತ್ತ್ವಚಿಂತನಂ ಧ್ಯಾತುರುಪಯೋಗಸ್ಯ ಶುದ್ಧಯೇ ॥ ೧೮ ॥**

ಅಥವಾ ಮುಕ್ತ ಮತ್ತು ಸಂಸಾರೀ ಈ ಎರಡು ಆತ್ಮತತ್ತ್ವಗಳು ಧ್ಯಾನಕ್ಕೆ ಆಶ್ರಯ(ವಿಷಯ)ವಾಗಿವೆ. ಆ ತತ್ತ್ವಚಿಂತನೆಯು ಧ್ಯಾನಮಾಡುವವನ ಉಪಯೋಗ(ಜ್ಞಾನ)ದ ಶುದ್ಧಿಗೆ ಕಾರಣವಾಗಿದೆ.

**ಉಪಯೋಗವಿಶುದ್ಧೌ ಚ ಬಂಧಹೇತೂ[೧೦]ನ್ವ್ಯುದಸ್ಯತಃ ।**
**ಸಂವರೋ ನಿರ್ಜರಾ ಚೈವ ತತೋ ಮುಕ್ತಿರಸಂಶಯಮ್ ॥ ೧೯ ॥**

ಜ್ಞಾನದ ಪರಿಶುದ್ಧತೆಯಿಂದ ಕರ್ಮಬಂಧದ ಕಾರಣಗಳನ್ನು ದೂರಮಾಡುವ ಪುರುಷನಿಗೆ ಕರ್ಮಗಳ ಸಂವರೆ(ತಡೆ)ಯೂ ಸ್ವಲ್ಪಸ್ವಲ್ಪವಾಗಿ ನಾಶವೂ ಆಗಿ ತರುವಾಯ ನಿಸ್ಸಂಶಯವಾಗಿ ಮುಕ್ತಿಯಾಗುವುದು.

**ಮುಮುಕ್ಷೋರ್ಧ್ಯಾತುಕಾಮಸ್ಯ ಸರ್ವಮಾಲಂಬನಂ ಜಗತ್ ।**
**ಯದ್ಯದ್ಯಥಾಸ್ಥಿತಂ ವಸ್ತು ತಥಾ ತತ್ತ[೧೧]ದ್ವ್ಯವಸ್ಯತಃ ॥ ೨೦ ॥**

ಯಾವಯಾವ ಪದಾರ್ಥವು ಹೇಗೆಹೇಗೆ ಇದೆಯೋ ಹಾಗೆಹಾಗೆಯೇ ನಿಶ್ಚಯಿಸುವವನೂ ಧ್ಯಾನವನ್ನು ಮಾಡಬೇಕೆಂಬ ಇಚ್ಛೆಯುಳ್ಳವನೂ ಮೋಕ್ಷವನ್ನು ಪಡೆಯಬೇಕೆಂಬ ಇಚ್ಛೆಯುಳ್ಳವನೂ ಆದ ಧ್ಯಾನಿಗೆ ಸಮಸ್ತವಾದ ಜಗತ್ತು ಆಲಂಬನ(ಆಶ್ರಯ)ವಾಗಿದೆ. ಧ್ಯಾನಕ್ಕೆ ವಿಷಯವಾಗಿದೆಯೆಂದು ಭಾವವು.

**ಕಿ[೧]ಮತ್ರ ಬಹುನಾ ಯೋ ಯಃ ಕಶ್ಚಿದ್ಭಾವಃ ಸಪರ್ಯಯಃ ।**
**ಸ ಸರ್ವೋಽಪಿ [೨]ಯಥಾಮ್ನಾಯಂ ಧ್ಯೇಯಕೋಟಿಂ [೩]ವಿಗಾಹತೇ ॥ ೨೧ ॥**

ಈ ಧ್ಯೇಯವಿಷಯದಲ್ಲಿ ಬಹಳ ಹೇಳುವುದರಿಂದೇನು ? ಪರ್ಯಾಯಸಹಿತವಾದ ಯಾವಯಾವ ಪದಾರ್ಥವಿದೆಯೋ ಅದೆಲ್ಲವೂ ಪ್ರಮಾಣಾನುಸಾರವಾಗಿ ಧ್ಯಾನಕ್ಕೆ ವಿಷಯವಾಗುತ್ತದೆ. ಎಲ್ಲವೂ ಧ್ಯೇಯವಾಗಿದೆಯೆಂದು ಭಾವವು.

**[೪]ಶುಭಾಭಿಸಂಧಿತೋ ಧ್ಯಾನೇ ಸ್ಯಾದೇವಂ [೫]ಧ್ಯೇಯಕಲ್ಪನಾ ।**
**ಪ್ರೀತ್ಯಪ್ರೀತ್ಯಭಿಸಂಧಾನಾದಸದ್ಧ್ಯಾನೇ ವಿಪರ್ಯಯಃ ॥ ೨೨ ॥**

ಶುಭಪರಿಣಾಮವನ್ನಾಶ್ರಯಿಸಿ ಧ್ಯಾನದಲ್ಲಿ ಹಿಂದೆಹೇಳಿದ ರೀತಿಯಾಗಿ ಧ್ಯೇಯದ ವರ್ಣನೆಯಾಗುವುದು. ಇಷ್ಟಾನಿಷ್ಟವಸ್ತುವಿಷಯಕವಾದ ಪರಿಣಾಮದಿಂದ ದುರ್ಧ್ಯಾನದಲ್ಲಿ ಧ್ಯೇಯವರ್ಣನೆಯು ವಿಪರೀತವಾಗಿರುವುದು. ದುರ್ಧ್ಯೇಯವೆನಿಸುವುದೆಂದು ಭಾವವು.

**ಅತತ್ತ್ವದಿತ್ಯತತ್ತ್ವಜ್ಞೋ ವೈಪರೀತ್ಯೇನ ಭಾವಯನ್ ।**
**ಪ್ರೀತ್ಯಪ್ರೀತೀ ಸ[೬]ಮಾಧಾಯ ಸಂಕ್ಲಿಷ್ಟಂ ಧ್ಯಾನಮೃಚ್ಛತಿ ॥ ೨೩ ॥**

ತತ್ತ್ವಜ್ಞಾನಿಯಲ್ಲದ ಪುರುಷನು ಸದ್ವಸ್ತುವನ್ನು ಅಸದ್ವಸ್ತುವನ್ನಾಗಿಯೂ, ಅಸದ್ವಸ್ತುವನ್ನು ಸದ್ವಸ್ತುವನ್ನಾಗಿಯೂ ವಿಪರೀತವಾಗಿ ಭಾವಿಸುವವನಾಗಿ, ಪ್ರಿಯವಿಷಯದಲ್ಲಿ ಅಪ್ರೀತಿಯನ್ನೂ, ಅಪ್ರಿಯವಿಷಯದಲ್ಲಿ ಪ್ರೀತಿಯನ್ನೂ ಹೊಂದಿ ಕ್ಲೇಶಯುಕ್ತವಾದ ಧ್ಯಾನವನ್ನು ಹೊಂದುತ್ತಾನೆ.

**ಸಂಕಲ್ಪವಶಗೋ ಮೂಢೋ ವಸ್ತ್ವಿಷ್ಟಾನಿಷ್ಟತಾಂ ನಯೇತ್ ।**
**ರಾಗದ್ವೇಷೌ [೭]ತತಸ್ತಾಭ್ಯಾಂ ಬಂಧಂ ದುರ್ಮೋಚಮಶ್ನುತೇ ॥ ೨೪ ॥**

ಮನಸ್ಸಿನ ಸಂಕಲ್ಪಕ್ಕೆ ವಶೀಭೂತನಾದ ಅಜ್ಞಾನಿಯು ವಸ್ತುವಿನಲ್ಲಿ ಇಷ್ಟಾನಿಷ್ಟಕಲ್ಪನೆಯನ್ನು ಮಾಡಿ ಆ ಮೂಲಕ ರಾಗದ್ವೇಷಪರಿಣಾಮಗಳನ್ನು ಹೊಂದುತ್ತಾನೆ. ಆ ಪರಿಣಾಮಗಳಿಂದ ಬಿಡಿಸುವುದಕ್ಕೆ ಅತ್ಯಂತ ಕಠಿಣವಾದ ಕರ್ಮಬಂಧವನ್ನು ಹೊಂದುತ್ತಾನೆ. ವಸ್ತುವಿನಲ್ಲಿ ಇಷ್ಟಾನಿಷ್ಟಗುಣಗಳಿಲ್ಲ. ಅಜ್ಞಾನಿಯು ಕಲ್ಪಿಸಿಕೊಂಡು ರಾಗದ್ವೇಷಪರಿಣಾಮಗಳಿಂದ ಕರ್ಮವನ್ನು ಬಂಧಿಸಿಕೊಳ್ಳುತ್ತಾನೆಂದು ಭಾವವು.

**ಸಂಕಲ್ಪೋ ಮಾನಸೀ ವೃತ್ತಿರ್ವಿಷಯೇ[೮]ಷ್ವನುತರ್ಷಿಣೀ ।**
**ಸೈವ [೯]ದುಃಪ್ರಣಿಧಾನಂ ಸ್ಯಾದಪಧ್ಯಾನಮತೋ ವಿದುಃ ॥ ೨೫ ॥**

ಸಂಕಲ್ಪವೆಂಬುದು ಭೋಗೋಪಭೋಗ ವಸ್ತುಗಳಲ್ಲಿ ಅಭಿಲಾಷೆಯುಳ್ಳ ಮನಸ್ಸಿನ ವ್ಯಾಪಾರವಾಗಿದೆ. ಅದೇ ದುಷ್ಟಚಿಂತೆಯೆಂಬುದು. ಈ ಕಾರಣದಿಂದ ಜ್ಞಾನಿಗಳು, ಆ ದುಷ್ಟಚಿಂತೆಯು ಅಪಧ್ಯಾನವೆಂದು ಹೇಳುತ್ತಾರೆ.

**ತಸ್ಮಾ[೧೦]ದಾಶಯಶುದ್ಧ್ಯರ್ಥಮಿಷ್ಟಾ ತತ್ತ್ವಾರ್ಥಭಾವನಾ ।**
**ಜ್ಞಾನಶುದ್ಧಿರತಸ್ತಸ್ಯಾ ಧ್ಯಾನಶುದ್ಧಿರುದಾಹೃತಾ ॥ ೨೬ ॥**

ಆದುದರಿಂದ ಚಿತ್ತಶುದ್ಧಿಗೋಸ್ಕರ ತತ್ತ್ವಾರ್ಥಭಾವನೆಯು ಇಷ್ಟವಾಗಿದೆ. ಈ ಚಿತ್ತಶುದ್ಧಿಯಿಂದ ಜ್ಞಾನಶುದ್ಧಿಯಾಗುವುದು. ಜ್ಞಾನಶುದ್ಧಿಯಿಂದ ಧ್ಯಾನಶುದ್ಧಿಯುಂಟಾಗುವುದು.

೧ ಆತ್ಮರೂಪಸ್ಯ. ೨ ಧ್ಯಾನೇ. ೩ ಕರಣಕರ್ತೃಭಾವಸಾಧನಾತ್ರಯಂ. ೪ ಸಂಬದ್ಧೋ ಭೂತ್ವಾ. ೫ ಭಿನ್ನತ್ವಂ. ೬ ಕ್ರೋಧಃ. ೭ ಭಿನ್ನಸ್ವರೂಪಃ ಸನ್. ೮ ನಿಶ್ಚಲಾತ್ಮಕೋ ಭೂತ್ವಾ. ೯ ಅಹಂಕಾರಮಮಕಾರಸಂಕಲ್ಪಾತ್. ೧೦ ನಿರಸ್ಯತಃ. ೧೧ ನಿಶ್ಚಿನ್ವತಃ.

೧ ಧ್ಯೇಯೇ. ೨ ಯಥಾಪ್ರಮಾಣಂ, ಯಥಾಮ್ನಾಯಮಿತ್ಯಪಿ ಪಾಠಃ. ೩ ಪ್ರಾಪ್ನೋತಿ. ೪ ಶುಭಾಭಿಪ್ರಾಯಮಾಶ್ರಿತ್ಯ. ೫ ಧ್ಯೇಯನಿರೂಪಣಾ. ೬ ಆಶ್ರಿತ್ಯ. ೭ ಇಷ್ಟಾನಿಷ್ಟನಯನಾತ್. ೮ ವಾಂಛಾವತೀ. ೯ ದುಷ್ಟಚಿಂತಾ. ೧೦ ಚಿತ್ತಶುದ್ಧ್ಯರ್ಥಂ.

**ಪ್ರಶಸ್ತಮಪ್ರಶಸ್ತಂ ಚ ಧ್ಯಾನಂ ಸಂಸ್ಮರ್ಯತೇ ದ್ವಿಧಾ ।**
**ಶುಭಾಶುಭಾಭಿಸಂಧಾನಾತ್ಪ್ರತ್ಯೇಕಂ ತದ್ದ್ವಯಂ ದ್ವಿಧಾ ॥ ೨೭ ॥**

ಶುಭ ಮತ್ತು ಅಶುಭಗಳನ್ನು ವಿಷಯೀಕರಿಸುವುದರಿಂದ ಧ್ಯಾನವು ಪ್ರಶಸ್ತ ಮತ್ತು ಅಪ್ರಶಸ್ತವೆಂದು ಎರಡು ಪ್ರಕಾರವಾಗಿದೆ. ಪುನಃ ಪ್ರಶಸ್ತಧ್ಯಾನವೂ ಅಪ್ರಶಸ್ತಧ್ಯಾನವೂ ಎರಡೆರಡು ವಿಧವಾಗಿವೆ.

**ಚತುರ್ಧಾ ತತ್ಖಲು ಧ್ಯಾನಮಿತ್ಯಾಪ್ತೈರನುವರ್ಣಿತವ್ ।**
**ಆರ್ತಂ ರೌದ್ರಂ ಚ ಧರ್ಮ್ಯಂ ಚ ಶುಕ್ಲಂ ಚೇತಿ ವಿಕಲ್ಪತಃ ॥ ೨೮ ॥**

ಹೀಗೆ ಹಿಂದೆ ಹೇಳಿದ ಧ್ಯಾನವು ಆರ್ತ ರೌದ್ರ ಧರ್ಮ್ಯ ಶುಕ್ಲವೆಂಬ ಭೇದದಿಂದ ನಾಲ್ಕುಪ್ರಕಾರವಾಗಿ ಆಪ್ತರಿಂದ ವರ್ಣಿಸಲ್ಪಟ್ಟಿದೆ.

**ಹೇಯಮಾದ್ಯಂ ದ್ವಯಂ ವಿದ್ಧಿ ದುರ್ಧ್ಯಾನಂ ಭವವರ್ಧನಮ್ ।**
**ಉತ್ತರಂ ದ್ವಿತಯಂ ಧ್ಯಾನಮುಪಾದೇಯಂ ತು ಯೋಗಿನಾಮ್॥ ೨೯ ॥**

ಎಲೈ ರಾಜನೆ ! ಸಂಸಾರವನ್ನು ವೃದ್ಧಿಗೊಳಿಸುವ ಮೊದಲನೆಯ ಆರ್ತರೌದ್ರ ಗಳೆಂಬೆರಡು ದುರ್ಧ್ಯಾನಗಳು ಪರಿತ್ಯಜಿಸುವುದಕ್ಕೆ ಯೋಗ್ಯಗಳೆಂದು ತಿಳಿ. ಧರ್ಮ ಶುಕ್ಲಗಳೆಂಬ ಕೊನೆಯ ಎರಡು ಧ್ಯಾನಗಳಾದರೋ ಯೋಗಿಗಳಿಗೆ ಗ್ರಾಹ್ಯವಾಗಿವೆ.

**ತೇಷಾ[1]ಮಂತರ್ಭಿದಾ ವಕ್ಷ್ಯೇ ಲಕ್ಷ್ಮ [2]ನಿರ್ವಚನಂ ತಥಾ ।**
**[3]ಬಲಾಧಾನಮಧಿಷ್ಠಾನಂ ಕಾಲಭಾವಫಲಾನ್ಯಪಿ ॥ ೩೦ ॥**

ಹಾಗೆಯೇ ಆ ಧ್ಯಾನಗಳ ಒಳಭೇದಗಳನ್ನೂ ಲಕ್ಷಣವನ್ನೂ ನಿರುಕ್ತಿಯನ್ನೂ ಶಕ್ತಿನಿಷ್ಪತ್ತಿಯನ್ನೂ ಆಶ್ರಯವನ್ನೂ ಕಾಲವನ್ನೂ ಫಲವನ್ನೂ ಹೇಳುವೆನು.

**ಋತೇ ಭವಮಥಾರ್ತಂ ಸ್ಯಾದ್ಧ್ಯಾನಮಾದ್ಯಂ ಚತುರ್ವಿಧವ್ ।**
**ಇಷ್ಟಾನವಾಪ್ತ್ಯನಿಷ್ಟಾಪ್ತಿನಿದಾನಾಸಾತಹೇತುಕವ್ ॥ ೩೧ ॥**

ಮನೋವ್ಯಥೆಯಲ್ಲುಂಟಾಗುವ ಮೊದಲನೆಯ ಆರ್ತಧ್ಯಾನವು, ಇಷ್ಟಪದಾರ್ಥ ಗಳ ಅಪ್ರಾಪ್ತಿ ಅನಿಷ್ಟಪದಾರ್ಥಗಳ ಪ್ರಾಪ್ತಿ ನಿದಾನ ವೇದನಾ, ಈ ಕಾರಣಗಳಿಂದ, ನಾಲ್ಕುವಿಧವಾಗಿದೆ.

**ವಿಪ್ರಯೋಗೇ ಮನೋಜ್ಞಸ್ಯ ತತ್ಸಂಯೋಗಾ[4]ನುತರ್ಷಣಾವ್ ।**
**ಅಮನೋಜ್ಞಾರ್ಥಸಂಯೋಗೇ ತದ್ವಿಯೋಗಾನುಚಿಂತನವ್ ॥ ೩೨ ॥**

ಇಷ್ಟವಾದ ವಸ್ತುವಿನ ವಿಯೋಗವಾದರೆ ಆ ವಸ್ತುವಿನ ಸಂಯೋಗದ ಇಚ್ಛೆಯು ಮೊದಲನೆಯ ಆರ್ತಧ್ಯಾನವಾಗಿದೆ. ಅನಿಷ್ಟವಸ್ತುವಿನ ಸಂಯೋಗವಾದರೆ ಆ ವಸ್ತುವಿನ ವಿಯೋಗಚಿಂತನೆಯು ಎರಡನೆಯ ಆರ್ತಧ್ಯಾನವಾಗಿದೆ.

**ನಿದಾನಂ ಭೋಗಕಾಂಕ್ಷೋತ್ಥಂ ಸಂಕ್ಲಿಷ್ಟಸ್ಯಾ[5]ನ್ಯಭೋಗತಃ ।**
**[6]ಸ್ಮೃತ್ಯನ್ವಾಹರಣಂ ಚೈವ [7]ವೇದನಾರ್ತಸ್ಯ [8]ತತ್ಕ್ಷಯೇ ॥ ೩೩ ॥**

ಬೇರೆಯವರ ಭೋಗವನ್ನು ನೋಡುವುದರಿಂದ ಸಂಕ್ಲೇಶಪರಿಣಾಮವುಳ್ಳ ಪುರುಷನಿಗೆ ಉಂಟಾಗುವ ಭೋಗಕಾಂಕ್ಷೆಯು ಮೂರನೆಯ ನಿದಾನವೆಂಬ ಆರ್ತಧ್ಯಾನವಾಗಿದೆ. ವೇದನೆಯಿಂದ ದುಃಖಿತನಾದವನಿಗೆ ಆ ವೇದನೆಯ ನಾಶನಿಮಿತ್ತವಾಗಿ ಉಂಟಾಗುವ ಅವಿಚ್ಛಿನ್ನವಾದ ಸ್ಮರಣೆಯು ನಾಲ್ಕನೆಯ ಆರ್ತಧ್ಯಾನವಾಗಿದೆ.

**ಋತೇ ವಿನಾ ಮನೋಜ್ಞಾರ್ಥಾದ್ಭವಮಿಷ್ಟವಿಯೋಗಜವ್ ।**
**[9]ನಿದಾನಪ್ರತ್ಯಯಂ ಚೈವಮಪ್ರಾಪ್ತೇಷ್ಟಾರ್ಥಚಿಂತನಾತ್ ॥ ೩೪ ॥**

೧ ಅವಾಂತರಭೇದಾನ್. ೨ ನಿರುಕ್ತಿಂ. ೩ ಬಲಜೃಂಭಣಂ. ೪ ವಾಂಛಾ. ೫ ಅನ್ಯಭೋಗವೀಕ್ಷಣಾತ್. ೬ ಸ್ಮೃತ್ಯವಿಚ್ಛಿನ್ನಪ್ರವರ್ತನಂ. ೭ ಅಸಾತವೇದನಾರ್ತಸ್ಯ. ೮ ವೇದನಾನಾಶೇ. ೯ ನಿದಾನಹೇತುಕಂ.

ಮನಸ್ಸಿಗೆ ಪ್ರಿಯವಾದ ವಸ್ತುವು ಕಳೆದುಹೋಗುವುದರಿಂದ ಮನೋವ್ಯಥೆ ಯಲ್ಲಿ ಉಂಟಾಗುವ ಚಿಂತನೆಗೆ ಇಷ್ಟವಿಯೋಗಜ ಆರ್ತಧ್ಯಾನವೆಂದು ಹೆಸರು. ಹೊಂದಲ್ಪಡದಿರುವ ಇಷ್ಟವಸ್ತುವಿನ ಚಿಂತನೆಯಿಂದ ನಿದಾನಹೇತುಕವಾದ ಮೂರ ನೆಯ ಆರ್ತಧ್ಯಾನವುಂಟಾಗುವುದು.

**ಋತೇಽಪ್ಯುಪಗತೇಽನಿಷ್ಟೇ ಭವಮಾರ್ತಂ ದ್ವಿತೀಯಕವ್ ।**
**ಭವೇಚ್ಚತುರ್ಥಮಪ್ಯೇವಂ ವೇದನೋಪಗಮೋದ್ಭವವ್ ॥ ೩೫ ॥**

ಅನಿಷ್ಟವಸ್ತುವು ಪ್ರಾಪ್ತವಾದರೆ ಮನೋವ್ಯಥೆಯಿಂದುಂಟಾಗುವುದು ಅನಿಷ್ಟ ಸಂಯೋಗಜವೆಂಬ ಎರಡನೆಯ ಆರ್ತಧ್ಯಾನವು. ಹೀಗೆಯೇ ವೇದನಾಪ್ರಾಪ್ತಿ ಯಿಂದುಂಟಾಗುವ ಚಿಂತನೆಯು ನಾಲ್ಕನೆಯ ಆರ್ತಧ್ಯಾನವಾಗಿದೆ.

**ಪ್ರಾಪ್ತ್ಯಪ್ರಾಪ್ತ್ಯೋರ್ಮನೋಜ್ಞೇತರಾರ್ಥಯೋಃ ಸ್ಮೃತಿಯೋಜನೇ ।**
**ನಿದಾನವೇದನಾಪಾಯವಿಷಯೇ ಚಾನುಚಿಂತನೇ ॥ ೩೬ ॥**

ಇಷ್ಟವಸ್ತುವು ಪ್ರಾಪ್ತವಾಗಬೇಕೆಂದು ಸ್ಮರಿಸುವುದೂ ಅನಿಷ್ಟವಸ್ತುವು ಪ್ರಾಪ್ತ ವಾಗಬಾರದೆಂದು ಸ್ಮರಿಸುವುದೂ ಭೋಗವು ಪ್ರಾಪ್ತವಾಗಬೇಕೆಂದು ಸ್ಮರಿಸುವುದೂ ವೇದನೆಯು ನಾಶವಾಗಬೇಕೆಂದು ಸ್ಮರಿಸುವುದೂ ಆರ್ತಧ್ಯಾನಗಳಾಗಿವೆ.

**ಇತ್ಯುಕ್ತಮಾರ್ತಮಾರ್ತಾತ್ಮಚಿಂತ್ಯಂ ಧ್ಯಾನಂ ಚತುರ್ವಿಧವ್ ।**
**ಪ್ರಮಾದಾಧಿಷ್ಠಿತಂ ತತ್ತು ಷಡ್ಗುಣಸ್ಥಾನಸಂಶ್ರಿತವ್ ॥ ೩೭ ॥**

ಈ ಪ್ರಕಾರವಾಗಿ ಖೇದಪಡುತ್ತಿರುವ ಆತ್ಮನು ಚಿಂತಿಸುವ ಆರ್ತಧ್ಯಾನವು ನಾಲ್ಕುವಿಧವಾಗಿದೆಯೆಂದು ಹೇಳಲ್ಪಟ್ಟಿದೆ. ಪ್ರಮಾದದೋಷಯುಕ್ತವಾದ ಆ ಧ್ಯಾನವು ಮೊದಲನೆಯ ಗುಣಸ್ಥಾನದಿಂದ ಆರನೆಯ ಗುಣಸ್ಥಾನಪರ್ಯಂತ ವುಂಟಾಗುವುದು.

**ಅಪ್ರಶಸ್ತತಮಂ ಲೇಶ್ಯಾತ್ರಯಮಾಶ್ರಿತ್ಯ ಜೃಂಭಿತವ್ ।**
**ಅಂತರ್ಮುಹೂರ್ತಕಾಲಂ ತದಪ್ರಶಸ್ತಾವಲಂಬನವ್ ॥ ೩೮ ॥**

ಆ ಧ್ಯಾನವು ಅತ್ಯಂತ ಅಪ್ರಶಸ್ತವಾದ ಕೃಷ್ಣ ನೀಲ ಕಪೋತಗಳೆಂಬ ಮೂರು ಲೇಶ್ಯೆಗಳನ್ನು ಹೊಂದಿ ವೃದ್ಧಿಹೊಂದುತ್ತದೆ. ಆ ಲೇಶ್ಯೆಗಳ ಅವಲಂಬನವು ಒಂದು ಅಂತರ್ಮುಹೂರ್ತಕಾಲದವರೆಗೆ ಇರುತ್ತದೆ.

**ಕ್ಷಾಯೋಪಶಮಿಕೋಽಸ್ಯ ಸ್ಯಾದ್ಭಾವಸ್ತಿರ್ಯಗ್ಗತಿಃ ಫಲವ್ ।**
**ತಸ್ಮಾದ್ದುರ್ಧ್ಯಾನಮಾರ್ತಾಖ್ಯಂ ಹೇಯಂ ಶ್ರೇಯೋರ್ಥಿನಾಮಿದವ್ ॥**

ಈ ಧ್ಯಾನದ ಭಾವವು ಕ್ಷಾಯೋಪಶಮಿಕವಾಗಿದೆ. ತಿರ್ಯಗ್ಗತಿಯು ಈ ಧ್ಯಾನಕ್ಕೆ ಫಲವಾಗಿದೆ. ಆದುದರಿಂದ ಶ್ರೇಯಸ್ಸನ್ನು ಬಯಸುವವರಿಗೆ ಈ ಆರ್ತವೆಂಬ ದುರ್ಧ್ಯಾನವು ಹೇಯವಾಗಿದೆ.

**ಮೂರ್ಛಾ[1]ಕೌಶೀಲ್ಯ[2]ಕೈನಾಶ್ಯ[3]ಕೌಶೀದ್ಯಾನ್ಯ[4]ತಿಗೃಧ್ನುತಾ ।**
**ಭಯೋ[5]ದ್ವೇಗಾನುಶೋಕಾಶ್ಚ ಲಿಂಗಾನ್ಯಾರ್ತೇ ಸ್ಮೃತಾನಿ ವೈ ॥ ೪೦ ॥**

ಪರಿಗ್ರಹದಲ್ಲಿ ಆಸಕ್ತಿ ದುಷ್ಟಸ್ವಭಾವ ಲುಬ್ಧತ್ವ ಅಥವಾ ಕೃತಘ್ನತ್ವ ಆಲಸ್ಯ ಅತ್ಯಂತಾಭಿಲಾಷೆ ಭಯ ಚಿತ್ತಚಾಂಚಲ್ಯ ಪಶ್ಚಾತ್ತಾಪ ಇವುಗಳು ಆರ್ತಧ್ಯಾನದ ಚಿಹ್ನೆ(ಗುರುತು)ಗಳಾಗಿವೆ.

**ಬಾಹ್ಯಂ ಚ ಲಿಂಗಮಾರ್ತಸ್ಯ [6]ಗಾತ್ರಗ್ಲಾನಿರ್ವಿವರ್ಣತಾ ।**
**ಹಸ್ತನ್ಯಸ್ತಕಪೋಲತ್ವಂ [7]ಸಾಶ್ರುತಾನ್ಯಚ್ಚ ತಾದೃಶವ್ ॥ ೪೧ ॥**

೧ ಕುಶೀಲತ್ವಂ. ೨ ಲುಬ್ಧತ್ವಂ ಕೃತಘ್ನತ್ವಂ ವಾ. ೩ ಆಲಸ್ಯಂ. ೪ ಅತ್ಯಭಿಲಾಷಿತಂ. ೫ ಚಿತ್ತಚಲನಂ. ೬ ಶರೀರಶೋಷಣಂ, ಗಾತ್ರಮ್ಲಾನಿರಿತ್ಯಪಿ ಪಾಠಃ. ೭ ಬಾಷ್ಪವಾರಿಸಹಿತತ್ವಂ.

ಶರೀರಬಣಗುವಿಕೆಯೂ ಶರೀರವು ಕಂದಿಹೋಗುವಿಕೆಯೂ ಕೈಯ ಮೇಲೆ ಕೆನ್ನೆಯನ್ನಿಡುವಿಕೆಯೂ ಕಣ್ಣೀರುಸುರಿಸುವಿಕೆಯೂ ಇನ್ನೂ ಇಂತಹ ಕಾರ್ಯಗಳು ಆರ್ತಧ್ಯಾನದ ಬಾಹ್ಯಚಿಹ್ನೆಗಳಾಗಿವೆ.

**ಪ್ರಾಣಿನಾಂ ರೋದನಾದ್ರುದ್ರಃ ಕ್ರೂರಃ ಸತ್ತ್ವೇಷು ನಿರ್ಘೃಣಃ ।**
**ಪುಮಾಂಸ್ತತ್ರ ಭವಂ ರೌದ್ರಂ ವಿದ್ಧಿ ಧ್ಯಾನಂ ಚತುರ್ವಿಧಮ್ ॥ ೪೨ ॥**

ಪ್ರಾಣಿಗಳಿಗೆ ರೋದನಮಾಡಿಸುವುದರಿಂದ ಅಂದರೆ ದುಃಖಪಡಿಸುವುದರಿಂದ ರುದ್ರ(ಭಯಂಕರ)ನೂ ಕ್ರೂರ ಸ್ವಭಾವವುಳ್ಳವನೂ ಪ್ರಾಣಿಗಳಲ್ಲಿ ನಿರ್ದಯನೂ ಆದ ಪುರುಷನಲ್ಲಿ ಉಂಟಾಗುವ ಧ್ಯಾನಕ್ಕೆ ರೌದ್ರಧ್ಯಾನವೆಂದು ಹೆಸರು. ಈ ಧ್ಯಾನವೂ ನಾಲ್ಕು ಪ್ರಕಾರವಾಗಿದೆಯೆಂದು ತಿಳಿ.

**ಹಿಂಸಾನಂದಮೃಷಾನಂದಸ್ತೇಯಸಂರಕ್ಷಣಾತ್ಮಕಮ್ ।**
**ಷಷ್ಠಾತ್ತು ತದ್ಗುಣಸ್ಥಾನಾತ್ಪ್ರಾಕ್ಪಂಚಗುಣಭೂಮಿಕಮ್ ॥ ೪೩ ॥**

ಹಿಂಸಾನಂದ ಮೃಷಾನಂದ ಸ್ತೇಯಾನಂದ ಸಂರಕ್ಷಣಾನಂದವೆಂದು ನಾಲ್ಕುವಿಧವಾದ ರೌದ್ರ ಧ್ಯಾನವು ಆರನೆಯ ಗುಣಸ್ಥಾನದ ಮೊದಲು ಅಂದರೆ ಮಿಥ್ಯಾದೃಷ್ಟಿ ಗುಣಸ್ಥಾನಮೊದಲಾಗಿ ಐದುಗುಣಸ್ಥಾನದವರೆಗೆ ಉಂಟಾಗುತ್ತದೆ.

**ಪ್ರಕೃಷ್ಟತರದುರ್ಲೇಶ್ಯಾತ್ರಯೋ[೧]ಪೋದ್ವಲಬೃಂಹಿತಮ್ ।**
**ಅಂತರ್ಮುಹೂರ್ತಕಾಲೋತ್ಥಂ ಪೂರ್ವವ[೨]ದ್ಭಾವ ಇಷ್ಯತೇ ॥ ೪೪ ॥**

ಅತ್ಯಂತ ದುಷ್ಟವಾದ ಕೃಷ್ಣ ನೀಲ ಕಪೋತಗಳೆಂಬ ಮೂರು ಲೇಶ್ಯೆಗಳ ಸಹಾಯದಿಂದ ವೃದ್ಧಿಹೊಂದಿದ ಆ ರೌದ್ರಧ್ಯಾನವು ಒಂದು ಅಂತರ್ಮುಹೂರ್ತಕಾಲದವರೆಗೆ ಇರುತ್ತದೆ. ಆಗ ಜೀವನ ಭಾವವು ಹಿಂದೆ ಆರ್ತಧ್ಯಾನದಲ್ಲಿ ಹೇಳಿದಂತೆ ಕ್ಷಾಯೋಪಶಮಿಕವಾಗಿರುತ್ತದೆ.

**ವಧಬಂಧಾ[೩]ಭಿಸಂಧಾನಮಂಗಚ್ಛೇದೋಪತಾಪನೇ ।**
**ದಂಡಪಾರುಷ್ಯಮಿತ್ಯಾದಿ ಹಿಂಸಾನಂದಃ ಸ್ಮೃತೋ ಬುಧೈಃ ॥ ೪೫ ॥**

ಪ್ರಾಣಿಗಳಿಗೆ ಹೊಡೆಯಬೇಕೆಂಬ ಅಭಿಪ್ರಾಯವೂ ಕಟ್ಟಿಹಾಕಬೇಕೆಂಬ ಅಭಿಪ್ರಾಯವೂ ಅವಯವಗಳನ್ನು ಕತ್ತರಿಸುವುದೂ ತೊಂದರೆಪಡಿಸುವುದೂ ದಂಡಿಸುವುದೂ ಕ್ರೂರತ್ವವನ್ನಾಚರಿಸುವುದೂ ಮೊದಲಾದುದು ಹಿಂಸಾನಂದವೆಂದು ವಿದ್ವಾಂಸರು ಹೇಳಿದ್ದಾರೆ.

**ಹಿಂಸಾನಂದಂ [೪]ಸಮಾಧಾಯ ಹಿಂಸ್ರಃ ಪ್ರಾಣಿಷು ನಿರ್ಘೃಣಃ ।**
**ಹಿನಸ್ತ್ಯಾತ್ಮಾನಮೇವ ಪ್ರಾಕ್ಪಶ್ಚಾದ್ಧನ್ಯಾನ್ನ ವಾಪರಾನ್ ॥ ೪೬ ॥**

ಹಿಂಸಾನಂದವನ್ನವಲಂಬಿಸಿ ಪ್ರಾಣಿಗಳಲ್ಲಿ ನಿರ್ದಯೆಯುಳ್ಳ ಘಾತುಕನು ಮೊದಲು ತನ್ನನ್ನೇ ಹಿಂಸಿಸುತ್ತಾನೆ. ಆಮೇಲೆ ಬೇರೆಯವರನ್ನು ಹಿಂಸಿಸಲಿ ಅಥವಾ ಹಿಂಸಿಸದಿರಲಿ, ಪರಪ್ರಾಣಿಹಿಂಸೆಗಿಂತಲೂ ಆತ್ಮ (ಪರಿಣಾಮ) ಹಿಂಸೆಯು ಮೊದಲಾಗುವುದೆಂದು ಭಾವವು.

**ಸಿಕ್ಥಮತ್ಸ್ಯಃ ಕಿಲೈಕೋಽಸೌ ಸ್ವಯಂಭೂರಮಣಾಂಬುಧೌ ।**
**ಮಹಾಮತ್ಸ್ಯ[೫]ಸಮಾನ್ದೋಷಾನವಾಪ[೬]ಸ್ಮೃತಿದೋಷತಃ ॥ ೪೭ ॥**

ಸ್ವಯಂಭೂರಮಣಸಮುದ್ರದಲ್ಲಿ ಒಂದು ಸಿಕ್ಥಮತ್ಸ್ಯವೆಂಬ ಸಣ್ಣಮೀನು ತನ್ನ ಸ್ಮರಣೆಯ ದೋಷದಿಂದ ಮಹಾಮತ್ಸ್ಯದ ದೋಷಗಳಿಗೆ ಸಮಾನವಾದ ದೋಷಗಳನ್ನು ಹೊಂದಿತಂತೆ. ಮಹಾಮತ್ಸ್ಯವು ಬಾಯಿಯನ್ನು ತೆರೆದಿರುವಾಗ ಅನೇಕ ಸಣ್ಣ ಜಲಚರಪ್ರಾಣಿಗಳು ಬಾಯಿಯೊಳಗೂ ಹೊರಕ್ಕೂ ಸಂಚರಿಸುತ್ತಿರುವುದನ್ನು ನೋಡಿ ಮಹಾಮತ್ಸ್ಯದ ಕಿವಿಯಲ್ಲಿ ವಾಸಮಾಡಿ ಕೊಂಡಿರುವ ಸಣ್ಣ ಸಿಕ್ಥವೆಂಬ ಮೀನು ''ನಾನು ಮಹಾಮತ್ಸ್ಯದಷ್ಟು ದೊಡ್ಡವನಾಗಿರುತ್ತಿದ್ದರೆ ಅನೇಕಪ್ರಾಣಿಗಳನ್ನು ಭಕ್ಷಿಸುತ್ತಿದ್ದೆ'' ಯೆಂದು ಚಿಂತಿಸುವುದರಿಂದ ಮಹಾಮತ್ಸ್ಯದ ಪಾಪದಷ್ಟು ಪಾಪಕ್ಕೆ ಗುರಿಯಾಗುವುದೆಂದಭಿಪ್ರಾಯವು.

**ಪುರಾ ಕಿಲಾರವಿಂದಾಖ್ಯಃ ಪ್ರಖ್ಯಾತಃ ಖಚರಾಧಿಪಃ ।**
**ರುಧಿರಸ್ನಾನರೌದ್ರಾ[೧]ಭಿಸಂಧಿಃ [೨]ಶ್ವಾಭ್ರೀಂ ವಿವೇಶ ಸಃ ॥ ೪೮ ॥**

ಪೂರ್ವದಲ್ಲಿ ಅರವಿಂದನೆಂದು ಪ್ರಸಿದ್ಧನಾದ ವಿದ್ಯಾಧರರಾಜನು ರಕ್ತದಲ್ಲಿ ಸ್ನಾನಮಾಡಬೇಕೆಂಬ ರೌದ್ರಾಭಿಪ್ರಾಯವುಳ್ಳವನಾಗಿ ನರಕಗತಿಯನ್ನು ಹೊಂದಿದನಂತೆ. ರಕ್ತದಲ್ಲಿ ಸ್ನಾನಮಾಡದಿದ್ದರೂ ರೌದ್ರಾಭಿಪ್ರಾಯಮಾತ್ರದಿಂದ ನರಕಗತಿಯನ್ನು ಹೊಂದಿದನೆಂದಭಿಪ್ರಾಯವು.

**ಅನಾ[೩]ನೃಶಂಸ್ಯಂ ಹಿಂಸೋಪಕರಣಾದಾನತತ್ಕಥಾಃ ।**
**[೪]ನಿಸರ್ಗಹಿಂಸ್ರತಾ ಚೇತಿ ಲಿಂಗಾನ್ಯ[೫]ಸ್ಯ ಸ್ಮೃತಾನಿ ವೈ ॥ ೪೯ ॥**

ಕ್ರೂರತ್ವ, ಶಸ್ತ್ರ ಮೊದಲಾದ ಹಿಂಸೆಯ ಸಾಧನಗಳನ್ನು ಪರಿಗ್ರಹಿಸುವುದು, ಹಿಂಸಾಸಂಬಂಧವಾದ ಕಥೆಗಳನ್ನು ಕೇಳುವುದು ಮತ್ತು ಹೇಳುವುದು, ಸ್ವಭಾವದಿಂದ ಹಿಂಸಾಪರಿಣಾಮ ಇವು ಮೊದಲಾದುವು ರೌದ್ರಧ್ಯಾನದ ಚಿಹ್ನೆಗಳಾಗಿವೆ.

**ಮೃಷಾನಂದೋ ಮೃಷಾವಾದ್ಯೈರತಿ[೬]ಸಂಧಾನಚಿಂತನಮ್ ।**
**ವಾಕ್ಪಾರುಷ್ಯಾದಿಲಿಂಗಂ [೭]ತದ್ದ್ವಿತೀಯಂ ರೌದ್ರಮಿಷ್ಯತೇ ॥ ೫೦ ॥**

ಅಸತ್ಯವಾದ ಭಾಷಣಗಳಿಂದ ಮೋಸಗೊಳಿಸಬೇಕೆಂಬ ವಿಚಾರವು ಮೃಷಾನಂದವೆಂಬ ಎರಡನೆಯ ರೌದ್ರಧ್ಯಾನವಾಗಿದೆ. ಕಠೋರವಾದ ವಚನ ಮೊದಲಾದುದು ಆ ಧ್ಯಾನದ ಚಿಹ್ನೆಯಾಗಿದೆ.

**ಸ್ತೇಯಾನಂದಃ ಪರದ್ರವ್ಯಹರಣೇ ಸ್ಮೃತಿಯೋಜನಮ್ ।**
**ಭವೇತ್ಸಂರಕ್ಷಣಾನಂದಃ ಸ್ಮೃತಿರರ್ಥಾರ್ಜನಾದಿಷು ॥ ೫೧ ॥**

ಬೇರೆಯವರ ದ್ರವ್ಯವನ್ನು ಅಪಹರಿಸುವ ಚಿಂತನೆಗೆ ಸ್ತೇಯಾನಂದವೆಂದು ಹೆಸರು. ದ್ರವ್ಯಸಂಪಾದನೆಮೊದಲಾದ ವಿಷಯಗಳನ್ನು ವಿಚಾರಮಾಡುತ್ತಿರುವುದಕ್ಕೆ ಸಂರಕ್ಷಣಾನಂದವೆಂದು ಹೆಸರು.

**ಪ್ರತೀತಲಿಂಗಮೇವೈತದ್ರೌದ್ರಧ್ಯಾನದ್ವಯಂ ಭುವಿ ।**
**ನಾರಕಂ ದುಃಖಮಸ್ಯಾಹುಃ ಫಲಂ ರೌದ್ರಸ್ಯ ದುಸ್ತರಮ್ ॥ ೫೨ ॥**

ಲೋಕದಲ್ಲಿ ಸ್ತೇಯಾನಂದ, ಸಂರಕ್ಷಣಾನಂದ ಈ ಎರಡು ರೌದ್ರಧ್ಯಾನಗಳ ಲಕ್ಷಣಗಳು ಪ್ರಸಿದ್ಧವಾಗಿವೆ. ಈ ರೌದ್ರಧ್ಯಾನಕ್ಕೆ ದುಸ್ತರವಾದ ನರಕದುಃಖವು ಫಲವೆಂದು ಮಹಾತ್ಮರು ಹೇಳುತ್ತಾರೆ.

**ಬಾಹ್ಯಂ ತು ಲಿಂಗಮಸ್ಯಾಹುರ್ಭ್ರೂಭಂಗಂ ಮುಖವಿಕ್ರಿಯಾಮ್ ।**
**ಪ್ರಸ್ವೇದಮಂಗಕಂಪಂ ಚ ನೇತ್ರಯೋಶ್ಚಾತಿತಾಮ್ರತಾಮ್ ॥ ೫೩ ॥**

ಹುಬ್ಬುಗಳನ್ನು ಗಂಟುಹಾಕುವುದೂ, ಮುಖವಿಕಾರವೂ, ಮೈಬೆವರುವುದೂ, ಮೈನಡುಗುವುದೂ, ಕಣ್ಣುಗಳು ಕೆಂಪಾಗುವುದೂ ಈ ರೌದ್ರಧ್ಯಾನಕ್ಕೆ ಬಾಹ್ಯ ಲಕ್ಷಣಗಳೆಂದು ಹೇಳುತ್ತಾರೆ.

**ಪ್ರಯತ್ನೇನ ವಿನೈವೈತದಸದ್ಧ್ಯಾನದ್ವಯಂ ಭವೇತ್ ।**
**ಅನಾದಿವಾಸನೋದ್ಭೂತಮತಸ್ತದ್ವಿಸೃಜೇನ್ಮುನಿಃ ॥ ೫೪ ॥**

ಅನಾದಿಕಾಲದ ಸಂಸ್ಕಾರದಿಂದುಂಟಾದ ಈ ಹಿಂದೆ ಹೇಳಿದ ಆರ್ತರೌದ್ರಧ್ಯಾನಗಳೆರಡು ಪ್ರಯತ್ನವಿಲ್ಲದೆಯೇ ಉಂಟಾಗುತ್ತವೆ. ಈ ಕಾರಣದಿಂದ ಮುನಿಯು ಆ ದುರ್ಧ್ಯಾನಗಳನ್ನು ಬಿಡಬೇಕು.

೧ ಸಹಾಯಃ. ೨ ಕ್ಷಾಯೋಪಶಮಿಕಭಾವಃ. ೩ ಅಭಿಪ್ರಾಯಃ. ೪ ಅವಲಂಬ್ಯ. ೫ ಸಮಮಿತ್ಯಪಿ ಪಾಠಃ. ೬ ಸ್ಮೃತಿರೋಷತ ಇತ್ಯಪಿ ಪಾಠಃ.

೧ ಅಭಿಪ್ರಾಯಃ. ೨ ನಾರಕೀಂ ಗತಿಮಿತ್ಯರ್ಥಃ. ೩ ನ ನೃಶಂಸಃ ಅನೃಶಂಸಃ ತಸ್ಯ ಭಾವಃ ಆನೃಶಂಸ್ಯಂ, ನ ಆ ನೃಶಂಸ್ಯಂ ಅನಾನೃಶಂಸ್ಯಂ ಕ್ರೌರ್ಯಮಿತ್ಯರ್ಥಃ. ೪ ಸ್ವಭಾವಹಿಂಸನಶೀಲತಾ. ೫ ರೌದ್ರಸ್ಯ. ೬ ಅತಿವಂಚನಂ. ೭ ಧ್ಯಾನಂ.

ಧ್ಯಾನದ್ವಯಂ ವಿಸೃಜ್ಯಾದ್ಯ[೧]ಮಸತ್ಸಂಸಾರಕಾರಣಮ್ ।
ಯದೋತ್ತರಂ ದ್ವಯಂ ಧ್ಯಾನಂ ಮುನಿನಾ[೨]ಭ್ಯಸಿಸಿಷ್ಯತೇ ॥ ೫೫ ॥

ತದೇದಂ [೩]ಪರಿಕರ್ಮೇಷ್ಟಂ ದೇಶಾವಸ್ಥಾದ್ಯುಪಾಶ್ರಯಮ್ ।
ಬಹಿಃಸಾಮಗ್ರ್ಯಧೀನಂ ಹಿ ಫಲಮತ್ರ [೪]ದ್ವಯಾತ್ಮಕಮ್ ॥ ೫೬ ॥

ಸಂಸಾರಕ್ಕೆ ಕಾರಣವಾದ ಮೊದಲನೆಯ ಎರಡು ದುರ್ಧ್ಯಾನಗಳನ್ನು ಬಿಟ್ಟು ಮುನಿಯು ಮುಂದಿನ ಎರಡು ಧ್ಯಾನಗಳನ್ನು ಅಭ್ಯಾಸಮಡುವುದಕ್ಕೆ ಇಚ್ಛಿಸಿದಾಗ ದೇಶ ಅವಸ್ಥಾ ಮೊದಲಾದ ಈ ಸಾಮಗ್ರಿಗಳು ಅಭೀಷ್ಟವಾಗುತ್ತವೆ. ಧ್ಯಾನಯೋಗ್ಯವಾದ ದೇಶ ಕಾಲ ಮೊದಲಾದ ಸಾಮಗ್ರಿಗಳು ಬೇಕಾಗುತ್ತವೆಂದರ್ಥವು. ನಿಶ್ಚಯವ್ಯವಹಾರ ಅಥವಾ ಗೌಣಮುಖ್ಯರೂಪವಾದ ಫಲವು ಬಾಹ್ಯಸಾಮಗ್ರಿಗಳಿಗೆ ಅಧೀನವಾಗಿರುತ್ತದೆ.

ಶೂನ್ಯಾಲಯೇ ಶ್ಮಶಾನೇ ವಾ ಜರದುದ್ಯಾನಕೇಪಿ ವಾ ।
ಸರಿತ್ಪುಲಿನಗಿರ್ಯಗ್ರಗಹ್ವರೇ ದ್ರುಮಕೋಟರೇ ॥ ೫೭ ॥

ಜನಶೂನ್ಯವಾದ ಮನೆಯಲ್ಲಾಗಲಿ ಸುಡುಗಾಡಿನಲ್ಲಾಗಲಿ ಜೀರ್ಣವಾದ ಉದ್ಯಾನದಲ್ಲಾಗಲಿ ನದೀದಡದ ಮರಳಿನಲ್ಲಾಗಲಿ ಪರ್ವತದ ತುದಿಯಲ್ಲಾಗಲಿ ಗುಹೆಯಲ್ಲಾಗಲಿ ಮರದ ಪೊಟರೆಯಲ್ಲಾಗಲಿ

ಶುಚಾವನ್ಯತಮೇ ದೇಶೇ ಚಿತ್ತಹಾರಿಣ್ಯಪಾತಪೇ ।
ನಾತ್ಯುಷಶಿಶಿರೇ ನಾಪಿ ಪ್ರವೃದ್ಧತರಮಾರುತೇ ॥ ೫೮ ॥

[೫]ವಿಮುಕ್ತವರ್ಷಸಂಬಾಧೇ ಸೂಕ್ಷ್ಮಜಂತ್ವನುಪದ್ರುತೇ ।
[೬]ಜನಸಂಪಾತನಿರ್ಮುಕ್ತೇ ಮಂದಮಂದನಭಸ್ವತಿ ॥ ೫೯ ॥

ಬಿಸಲು ಇಲ್ಲದುದೂ ಅತ್ಯುಷ್ಣಶೀತಗಳಿಲ್ಲದುದೂ ಹೆಚ್ಚಾದ ಗಾಳಿಯಿಲ್ಲದುದೂ ಮಳೆಯ ಬಾಧೆಯಿಲ್ಲದುದೂ ಸೂಕ್ಷ್ಮಜಂತುಗಳ ಉಪದ್ರವವಿಲ್ಲದುದೂ ಜನರ ಸಮೂಹವಿಲ್ಲದುದೂ ಮಂದಮಂದವಾಗಿ ಬೀಸುತ್ತಿರುವ ಗಾಳಿಯುಳ್ಳದೂ ಮನೋಹರವೂ ನಿರ್ಮಲವೂ ಆದ ಬೇರೆಪ್ರದೇಶದಲ್ಲಾಗಲಿ

ಪಲ್ಯಂಕಮಾಸನಂ ಬಧ್ವಾ ಸುನಿವಿಷ್ಟೋ ಮಹೀತಲೇ ।
ಸಮಮೃಜ್ವಾಯತಂ ಬಿಭ್ರದ್ಗಾತ್ರ[೭]ಮಸ್ತಬ್ಧವೃತ್ತಿಕಮ್ ॥ ೬೦ ॥

ಪದ್ಮಾಸನವನ್ನು ಮಾಡಿಕೊಂಡು ಪ್ರಯತ್ನದಿಂದ ತನ್ನ ಶರೀರವನ್ನು ಸಮಾನವಾಗಿಯೂ ಸರಳವಾಗಿಯೂ ದೀರ್ಘವಾಗಿಯೂ ಮಾಡಿಕೊಂಡು ನೆಲದಮೇಲೆ ಕುಳಿತವನಾಗಿ

ಸ್ವಪರ್ಯಂಕೇ ಕರಂ ವಾಮಂ ನ್ಯಸ್ಯೋತ್ತಾನತಲಂ ಪುನಃ ।
ತಸ್ಯೋಪರೀ[೮]ತರಂ ಪಾಣಿಮಪಿ ವಿನ್ಯಸ್ಯ ತತ್ಸಮಮ್ ॥ ೬೧ ॥

ತನ್ನ ತೊಡೆಯ ಮೇಲೆ ಎಡಗೈಯನ್ನು ಮೇಲುಮುಖವಾಗಿರಿಸಿ ಪುನಃ ಆದರ ಮೇಲೆ ಬಲಗೈಯನ್ನೂ ಎಡಗೈಗೆ ಸಮಾನವಾಗಿರಿಸಿ

ನಾತ್ಯುನ್ಮಿಷನ್ನ ಚಾತ್ಯಂತಂ ನಿಮಿಷನ್ಮಂದಮುಚ್ಛ್ವಸನ್ ।
ದಂತೈರ್ದಂತಾಗ್ರಸಂಧಾನಪರೋ ಧೀರೋ [೯]ನಿರುದ್ಧಧೀಃ ॥ ೬೨ ॥

ಕಣ್ಣುಗಳನ್ನು ಹೆಚ್ಚಾಗಿ ಮುಚ್ಚಿಕೊಳ್ಳದವನೂ ಹೆಚ್ಚು ತೆರೆಯದವನೂ ಮಂದವಾಗಿ ಉಸಿರುಬಿಡುವವನೂ ಹಲ್ಲುಗಳಲ್ಲಿ ಹಲ್ಲುಗಳ ತುದಿಯನ್ನು ಸೇರಿಸುವವನೂ (ಮೇಲಿನ ಹಲ್ಲುಗಳನ್ನು ಕೆಳಗಿನ ಹಲ್ಲುಗಳ ತುದಿಯಲ್ಲಿ ಸೇರಿಸುವವನೂ) ಧೀರನೂ ಮನಸ್ಸನ್ನು ತಡೆದವನೂ ಆಗಿ

ಹೃದಿ ಮೂರ್ಧ್ನಿ ಲಲಾಟೇ ವಾ ನಾಭೇರೂರ್ಧ್ವಂ [೧]ಪರತ್ರ ವಾ ।
ಸ್ವಾಭ್ಯಾಸವಶತಶ್ಚಿತ್ತಂ ನಿಧಾಯಾಧ್ಯಾತ್ಮವಿನ್ಮುನಿಃ ॥ ೬೩ ॥

ಅಧ್ಯಾತ್ಮವಿಷಯವನ್ನು ತಿಳಿದಿರುವ ಮುನಿಯು ಹೃದಯದಲ್ಲಾಗಲಿ ಮಸ್ತಕದಲ್ಲಾಗಲಿ ಹಣೆಯಲ್ಲಾಗಲಿ ನಾಭಿಯ ಮೇಲುಭಾಗದಲ್ಲಾಗಲಿ ಕಂಠಮೊದಲಾದ ಬೇರೆ ಸ್ಥಾನದಲ್ಲಾಗಲಿ ತನ್ನ ಅಭ್ಯಾಸಾನುಸಾರವಾಗಿ ಮನಸ್ಸನ್ನಿರಿಸಿ

ಧ್ಯಾಯೇದ್ದ್ರವ್ಯಾದಿಯಾಥಾತ್ಮ್ಯಮಾಗಮಾರ್ಥಾನುಸಾರತಃ ।
ಪರೀಷಹೋತ್ಥಿತಾ ಬಾಧಾಃ ಸಹಮಾನೋ ನಿರಾಕುಲಃ ॥ ೬೪ ॥

ಪರೀಷಹಗಳಿಂದುಂಟಾದ ಬಾಧೆಗಳನ್ನು ವ್ಯಾಕುಲರಹಿತನಾಗಿ ಸಹಿಸಿ ಶಾಸ್ತ್ರದಲ್ಲಿ ಹೇಳಿರುವ ಅರ್ಥಕ್ಕನುಸಾರವಾಗಿ ಜೀವಮೊದಲಾದ ದ್ರವ್ಯಗಳ ಯಥಾರ್ಥ ಸ್ವರೂಪವನ್ನು ಧ್ಯಾನಮಾಡಬೇಕು.

[೨]ಪ್ರಾಣಾಯಾಮೇತಿತೀವ್ರೇ ಸ್ಯಾ[೩]ದವಶಸ್ಯಾಕುಲಂ ಮನಃ ।
ವ್ಯಾಕುಲಸ್ಯ ಸಮಾಧಾನಭಂಗಾನ್ನ ಧ್ಯಾನಸಂಭವಃ ॥ ೬೫ ॥

ಅತ್ಯಂತ ಕಠಿನವಾದ ಪ್ರಾಣಾಯಾಮದಲ್ಲಿ ಪರವಶನಾದ ಧ್ಯಾನಿಯ ಮನಸ್ಸು ವ್ಯಾಕುಲವಾಗುವುದು. ವ್ಯಾಕುಲವಾದ ಮನುಸ್ಸುಳ್ಳವನಿಗೆ ಏಕಾಗ್ರತೆಯು ಭಂಗವಾಗುವುದರಿಂದ ಧ್ಯಾನವು ಸಂಭವಿಸುವುದಿಲ್ಲ.

ಅಪಿ [೪]ವ್ಯುತ್ಸೃಷ್ಟಕಾಯಸ್ಯ ಸಮಾಧಿ[೫]ಪ್ರತಿಪತ್ತಯೇ ।
ಮಂದೋಚ್ಛ್ವಾಸನಿಮೇಷಾದಿವೃತ್ತೇರ್ನಾಸ್ತಿ ನಿಷೇಧನಮ್ ॥ ೬೬ ॥

ಧ್ಯಾನದ ನಿಶ್ಚಯ(ದೃಢತೆ)ಕ್ಕೋಸ್ಕರ ಶರೀರಮಮಕಾರವನ್ನು ಬಿಟ್ಟ ಯೋಗಿಗೂ ಮಂದವಾಗಿ ಉಸಿರುಬಿಡುವುದೂ ಸ್ವಲ್ಪ ಕಣ್ಣುಗಳನ್ನು ತೆರೆಯುವುದು ನಿಷೇಧವಲ್ಲವು. ದೋಷವಲ್ಲವೆಂದು ಭಾವವು.

ಸಮಾವಸ್ಥಿತಕಾಯಸ್ಯ ಸ್ಯಾತ್ಸಮಾಧಾನಮಂಗಿನಃ ।
ದುಃಸ್ಥಿತಾಂಗಸ್ಯ ತದ್ಭಂಗಾದ್ಭವೇದಾಕುಲತಾ ಧಿಯಃ ॥ ೬೭ ॥

ಶರೀರವನ್ನು ಸಮವಾಗಿರಿಸಿರುವ ಪ್ರಾಣಿ(ಧ್ಯಾನಿ)ಯ ಮನಸ್ಸಿಗೆ ಸಮಾಧಾನವುಂಟಾಗುವುದು. ಶರೀರವನ್ನು ಅವ್ಯವಸ್ಥೆಯಾಗಿರಿಸಿರುವವನ ಸಮಾಧಾನಕ್ಕೆ ಭಂಗವುಂಟಾಗುವುದರಿಂದ ಮನಸ್ಸಿಗೆ ಆಕುಲತೆಯುಂಟಾಗುವುದು.

ತತೋ ಯಥೋಕ್ತಪಲ್ಯಂಕಲಕ್ಷಣಾಸನಮಾಸ್ಥಿತಃ ।
ಧ್ಯಾನಾಭ್ಯಾಸಂ ಪ್ರಕುರ್ವೀತ ಯೋಗೀ [೬]ವ್ಯಾಕ್ಷೇಪಮುತ್ಸೃಜನ್ ॥ ೬೮

ಆದುದರಿಂದ ಯೋಗಿಯು ಬೇರೆ ಕಾರ್ಯಗಳಲ್ಲಿ ಮನಸ್ಸಿನ ಚಾಂಚಲ್ಯವ ಬಿಟ್ಟು ಶಾಸ್ತ್ರದಲ್ಲಿ ಹೇಳಿರುವ ಲಕ್ಷಣಗಳುಳ್ಳ ಪದ್ಮಾಸನದಲ್ಲಿದ್ದು ಧ್ಯಾನದ ಅಭ್ಯಾಸವನ್ನು ಮಾಡಬೇಕು.

ಪಲ್ಯಂಕ ಇವ ದಿಧ್ಯಾಸೋಃ ಕಾಯೋತ್ಸರ್ಗೋಪಿ ಸಮ್ಮತಃ ।
ಸಮಪ್ರಯುಕ್ತಸರ್ವಾಂಗೋ ದ್ವಾತ್ರಿಂಶದ್ದೋಷವರ್ಜಿತಃ ॥ ೬೯ ॥

ಧ್ಯಾನಮಾಡಬೇಕೆಂಬ ಇಚ್ಛೆಯುಳ್ಳವನಿಗೆ ಪದ್ಮಾಸನದಂತೆ ಕಾಯೋತ್ಸರ್ಗ (ಖಡ್ಗಾಸನ-ನಿಂತಿರುವುದು)ವೂ ಶಾಸ್ತ್ರಸಮ್ಮತವಾಗಿದೆ. ಆ ಕಾಯೋತ್ಸರ್ಗವು ಸಮಸ್ತ ಅಂಗಗಳೂ ಸಮವಾಗಿರುವುದೂ ಮೂವತ್ತೆರಡು ದೋಷಗಳಿಂದ ರಹಿತವೂ ಆಗಿರಬೇಕು.

[೭]ವಿಸಂಸ್ಥುಲಾಸನಸ್ಥಸ್ಯ ಧ್ರುವಂ ಗಾತ್ರಸ್ಯ ನಿಗ್ರಹಃ ।
ತನ್ನಿಗ್ರಹಾನ್ಮನಃಪೀಡಾ ತತಶ್ಚ ವಿಮನಸ್ಕತಾ ॥ ೭೦ ॥

೧ ಅಸಾಧು. ೨ ಅಭ್ಯಸಿತುಮಿಷ್ಯತೇ. ೩ ಪರಿಕರಂ. ೪ ನಿಶ್ಚಯವ್ಯವಹಾರಾತ್ಮಕಂ ಮುಖ್ಯಾಮುಖ್ಯಾತ್ಮಕಂ ವಾ. ೫ ವಿಯುಕ್ತವರ್ಷಸಂಬಾಧ ಇತ್ಯಪಿ ಪಾಠಃ. ೬ ಜಲಸಂಪಾತನಿರ್ಮುಕ್ತ ಇತ್ಯಪಿ ಪಾಠಃ. ೭ ಪ್ರಯತ್ನಪರವೃತ್ತಿಕಂ. ೮ ದಕ್ಷಿಣಹಸ್ತಂ. ೯ ನಿರುದ್ಧಮನಾಃ.

೧ ಕಂಠಾದೌ. ೨ ಯೋಗನಿಗ್ರಹೇ. ೩ ಪರವಶಸ್ಯ ಧ್ಯಾನಿನಃ. ೪ ತ್ಯಕ್ತಶರೀರಮಮಕಾರಸ್ಯ. ೫ ನಿಶ್ಚಯಾಯ. ೬ ಕಾರ್ಯಾಂತರಪಾರವಶ್ಯಂ. ೭ ವಿಷಮೋನ್ನತಾಸನಸ್ಥಸ್ಯ ಅಥವಾ ವಜ್ರವೀರಾಸನ ಕುಕ್ಕುಟಾಸನಾದಿವಿಷಮಾಸನಸ್ಥಸ್ಯ.

ವಿಷಮವಾದ ವಜ್ರಾಸನ ವೀರಾಸನ ಕುಕ್ಕುಟಾಸನ ಮೊದಲಾದ ಆಸನಗಳಲ್ಲಿರುವ ಯೋಗಿಯ ಶರೀರಕ್ಕೆ ನಿಜವಾಗಿಯೂ ತೊಂದರೆಯಾಗುವುದು. ಆದರಿಂದ ಮನಸ್ಸಿಗೆ ಪೀಡೆಯಾಗುವುದು. ಮನಃಪೀಡೆಯಿಂದ ಮನಸ್ಸು ವಿಮುಖವಾಗುವುದು. ಮನಃಪೀಡೆಯಿಂದ ಧ್ಯಾನದಲ್ಲಿ ಮನಸ್ಸು ವಿಮುಖವಾಗುವುದೆಂದರ್ಥವು.

**ವೈಮನಸ್ಯೇಚ ಕಿಂ ಧ್ಯಾಯೇತ್ತಸ್ಮಾದಿಷ್ಟಂ ಸುಖಾಸನಮ್ ।**
**ಕಾಯೋತ್ಸರ್ಗಶ್ಚ ಪರ್ಯಂಕ[೧]ಸ್ತತೋನ್ಯದ್ವಿಷಮಾಸನಮ್ ॥ ೭೧ ॥**

ಮನಸ್ಸು ವಿಮುಖವಾದರೆ ಏನನ್ನು ಧ್ಯಾನಿಸುವನು ? ಆದುದರಿಂದ ಕಾಯೋತ್ಸರ್ಗವೂ ಪದ್ಮಾಸನವೂ ಧ್ಯಾನಕ್ಕೆ ಇಷ್ಟವಾದ ಸುಖಾಸನಗಳಾಗಿವೆ. ಈ ಎರಡು ಆಸನಗಳಲ್ಲದೆ ಬೇರೆ ಆಸನಗಳೆಲ್ಲಾ ವಿಷಮಾಸನಗಳಾಗಿವೆ. ಅವು ಧ್ಯಾನಕ್ಕೆ ಯೋಗ್ಯವಾದ ಆಸನಗಳಲ್ಲವೆಂದು ಭಾವವು.

**ತದವಸ್ಥಾ[೨]ದ್ವಯಸ್ಯೈವ ಪ್ರಾಧಾನ್ಯಂ ಧ್ಯಾಯತೋ ಯತೇಃ ।**
**ಪ್ರಾಯ[೩]ಸ್ತತ್ರಾಪಿ ಪಲ್ಯಂಕಮಾಮನಂತಿ ಸುಖಾಸನಮ್ ॥ ೭೨ ॥**

ಧ್ಯಾನಮಾಡುವ ಯತಿಗೆ ಆ ಕಾಯೋತ್ಸರ್ಗಪದ್ಮಾಸನಗಳೆರಡೇ ಮುಖ್ಯವಾದ ಆಸನಗಳು. ಅವೆರಡು ಆಸನಗಳಲ್ಲಿಯೂ ಕಾಯೋತ್ಸರ್ಗಕ್ಕಿಂತ ಪದ್ಮಾಸನವು ಸುಖಾಸನವೆಂದು ಹೇಳುತ್ತಾರೆ.

**ವಜ್ರಕಾಯಾ [೪]ಮಹಾಸತ್ತ್ವಾಃ [೫]ಸರ್ವಾವಸ್ಥಾಂತರಸ್ಥಿತಾಃ ।**
**ಶ್ರೂಯಂತೇ [೬]ಧ್ಯಾನಯೋಗೇನ ಸಂಪ್ರಾಪ್ತಾಃ ಪದಮವ್ಯಯಮ್ ॥**

ವಜ್ರದಂತೆ ದೃಢವಾದ ಶರೀರವುಳ್ಳವರೂ ಮಹಾಮನೋಬಲವುಳ್ಳವರೂ ಎಲ್ಲಾ ಆಸನಗಳಲ್ಲಿಯೂ ಸ್ಥಿರವಾಗಿರುವವರೂ ಆದ ಯೋಗಿಗಳು ಧ್ಯಾನದಿಂದ ನಾಶರಹಿತವಾದ ಮೋಕ್ಷಪದವಿಯನ್ನು ಹೊಂದಿದರೆಂದು ನಾವು ಕೇಳಿದ್ದೇವೆ.

**[೭]ಬಾಹುಲ್ಯಾಪೇಕ್ಷಯಾ [೮]ತಸ್ಮಾ[೯]ದವಸ್ಥಾದ್ವಯಸಂಗರಃ ।**
**[೧೦]ಸಕ್ತಾನಾಂ ತೂಪಸರ್ಗಾದ್ಯೈ[೧೧]ಸ್ತದ್ವೈಚಿತ್ರ್ಯಂ ನ ದುಷ್ಯತಿ ॥ ೭೪ ॥**

ಆದುದರಿಂದ ವಜ್ರಾಸನ ವೀರಾಸನ ಮೊದಲಾದ ಆಸನಗಳಲ್ಲಿ ಕಾಯೋತ್ಸರ್ಗ ಪದ್ಮಾಸನಗಳೆರಡು ಮೋಕ್ಷಪ್ರಾಪ್ತಿಗೆ ಉಪಯುಕ್ತವಾದುವುಗಳೆಂದು ಹೇಳಿದ್ದಾರೆ. ಉಪಸರ್ಗ ಮೊದಲಾದುವುಗಳಿಗೆ ಸಿಕ್ಕಿದ ಯೋಗಿಗಳಿಗಾದರೋ ಬೇರೆ ಆಸನಗಳೂ ದೋಷವಲ್ಲವು.

**ದೇಹಾವಸ್ಥಾ ಪುನ[೧೨]ರ್ಯೈವ ನ ಸ್ಯಾದ್ಧ್ಯಾನೋಪರೋಧಿನೀ ।**
**[೧೩]ತದವಸ್ಥೋ ಮುನಿರ್ಧ್ಯಾಯೇತ್ಸ್ಥಿತ್ವಾ[೧೪]ಸಿತ್ವಾಧಿಶಯ್ಯ ವಾ ॥ ೭೫ ॥**

ಆ ಉಪಸರ್ಗದಿಂದುಂಟಾದ ಶರೀರದ ಅವಸ್ಥೆಯಾದರೋ ಧ್ಯಾನಕ್ಕೆ ತಡೆಯಾಗಲಾರದು. ಆ ಉಪಸರ್ಗಾವಸ್ಥೆಯಲ್ಲಿರುವ ಮುನಿಯು ನಿಂತು ಕುಳಿತುಕೊಂಡು ಅಥವಾ ಮಲಗಿಕೊಂಡು ಧ್ಯಾನವನ್ನು ಮಾಡಬಹುದು.

**ದೇಶಾದಿನಿಯಮೋಪ್ಯೇವಂ [೧೫]ಪ್ರಾಯೋ ವೃತ್ತಿವ್ಯಪಾಶ್ರಯಃ ।**
**[೧೬]ಕೃತಾತ್ಮನಾಂ ತು ಸರ್ವೋಪಿ ದೇಶಾದಿರ್ಧ್ಯಾನಸಿದ್ಧಯೇ ॥ ೭೬ ॥**

ಹೀಗೆಯೇ ದೇಶಕಾಲಮೊದಲಾದ ನಿಯಮವೂ ಚಂಚಲವಾದ ಮನಸ್ಸುಳ್ಳವರಿಗೆ ವಿಧಾಯಕವಾಗಿರುವುದು. ದೃಢಚಿತ್ತವುಳ್ಳವರಿಗೆ ಎಲ್ಲಾ ದೇಶಕಾಲ ಮೊದಲಾದುವು ಧ್ಯಾನದ ಸಿದ್ಧಿಗೆ ಸಹಕಾರಿಗಳಾಗಿವೆ.

೧ ಕಾಯೋತ್ಸರ್ಗಪರ್ಯಂಕಾಭ್ಯಾಂ. ೨ ಕಾಯೋತ್ಸರ್ಗಪರ್ಯಂಕಾಸನದ್ವಯರೂಪಸ್ಯೈವ. ೩ ಕಾಯೋತ್ಸರ್ಗಪಲ್ಯಂಕಾಸನಯೋರ್ಮಧ್ಯೇ. ೪ ಮಹಾಮನೋಬಲಾಃ. ೫ ಸರ್ವಾಸನಾಂತರಸ್ಥಿರಾಃ. ೬ ಧ್ಯಾನಯೋಜನೇನ. ೭ ವಜ್ರವೀರಾಸನಾದಿಬಾಹುಲ್ಯಾಪೇಕ್ಷಯಾ. ೮ ಅವ್ಯಯಪದಪ್ರಾಪ್ತಿತ್ವಾತ್. ೯ ಕಾಯೋತ್ಸರ್ಗಪಲ್ಯಂಕಾಸನದ್ವಯಪ್ರತಿಜ್ಞಾ. ೧೦ ಶಕ್ತಾನಾಮಿತ್ಯಪಿ ಪಾಠಃ. ೧೧ ತತ್ಕಾಯೋತ್ಸರ್ಗವರಾಹಾಸನಾದಿವಿಚಿತ್ರತಾ. ೧೨ ಉಪಸರ್ಗಜಾ. ೧೩ ಉಪಸರ್ಗಾಜ್ಜಾತಾವಸ್ಥಃ. ೧೪ ಉಪವಿಶ್ಯ. ೧೫ ಪ್ರಚುರವೃತ್ತಿಸಮಾಶ್ರಯಃ. ೧೬ ನಿಶ್ಚಿತಾತ್ಮನಾಂ.

**ಸ್ತ್ರೀಪಶುಕ್ಲೀಬ[೧]ಸಂಸಕ್ತರಹಿತಂ ವಿಜನಂ ಮುನೇಃ ।**
**[೨]ಸರ್ವದೈವೋಚಿತಂ ಸ್ಥಾನಂ ಧ್ಯಾನಕಾಲೇ ವಿಶೇಷತಃ ॥ ೭೭ ॥**

ಮುನಿಗೆ ಯಾವಾಗಲೂ ಸ್ತ್ರೀಯರ, ಪಶುಗಳ ಮತ್ತು ನಪುಂಸಕರ ಸಂಸರ್ಗವಿಲ್ಲದಿರುವ ನಿರ್ಜನಸ್ಥಾನವು ಉಚಿತವಾದುದು. ವಾಸಕ್ಕೆ ಯೋಗ್ಯವಾದುದೆಂದರ್ಥವು. ಧ್ಯಾನಕಾಲದಲ್ಲಾದರೋ ವಿಶೇಷವಾಗಿ ನಿರ್ಜನಸ್ಥಾನವು ಉಚಿತವಾದುದು.

**ವಸತೋಸ್ಯ ಜನಾಕೀರ್ಣೇ ವಿಷಯಾನಭಿಪಶ್ಯತಃ ।**
**ಬಾಹುಲ್ಯಾದಿಂದ್ರಿಯಾರ್ಥಾನಾಂ ಜಾತು [೩]ವ್ಯಗ್ರೀಭವೇನ್ಮನಃ ॥ ೭೮ ॥**

ಜನಗಳಿಂದ ವ್ಯಾಪ್ತವಾಗಿರುವ ಸ್ಥಾನದಲ್ಲಿ ವಾಸಮಾಡಿ ಬಾಹ್ಯವಿಷಯಗಳನ್ನು ನೋಡುತ್ತಿರುವ ಈ ಮುನಿಗೆ ಇಂದ್ರಿಯವಿಷಯಗಳ ಆಧಿಕ್ಯದಿಂದ ಯಾವಾಗಲಾದರೂ ಮನಸ್ಸು ಚಂಚಲವಾಗಬಹುದು. ಅಧಿಕವಾದ ಇಂದ್ರಿಯವಿಷಯಗಳ ಸಂಪರ್ಕದಿಂದ ಯಾವಾಗಲಾದರೂ ಮನಸ್ಸು ಚಂಚಲವಾಗಬಹುದೆಂದು ಭಾವವು.

**ತತೋ ವಿವಿಕ್ತಶಾಯಿತ್ವಂ ವನೇ ವಾಸಶ್ಚ ಯೋಗಿನಾಮ್ ।**
**ಇತಿ ಸಾಧಾರಣೋ ಮಾರ್ಗೋ ಜಿನಸ್ಥವಿರಕಲ್ಪಯೋಃ ॥ ೭೯ ॥**

ಆದುದರಿಂದ ಜಿನಕಲ್ಪಸ್ಥವಿರಕಲ್ಪಗಳಲ್ಲಿರುವ ಯೋಗಿಗಳಿಗೆ ನಿರ್ಜನವಾದ ಪ್ರದೇಶದಲ್ಲಿ ಮಲಗುವುದೂ ವನದಲ್ಲಿ ವಾಸಮಾಡುವುದೂ ಸಾಧಾರಣವಾದ ಮಾರ್ಗ(ರೀತಿ)ವಾಗಿದೆ.

**ಇತ್ಯಮುಷ್ಯಾಂ ವ್ಯವಸ್ಥಾಯಾಂ ಸತ್ಯಾಂ ಧೀರಾಸ್ತು ಕೇಚನ ।**
**ವಿಹರಂತಿ ಜನಾಕೀರ್ಣೇ ಶೂನ್ಯೇ ಚ ಸಮದರ್ಶಿನಃ ॥ ೮೦ ॥**

ಈ ವ್ಯವಸ್ಥೆಯು ಹೀಗಿದ್ದರೂ ಧೀರರಾದ ಕೆಲವು ಯೋಗಿಗಳು ಜನರಿಂದ ವ್ಯಾಪ್ತವಾದ ಪ್ರದೇಶದಲ್ಲಿಯೂ ಜನಶೂನ್ಯವಾದ ಪ್ರದೇಶದಲ್ಲಿಯೂ ಸಮಾನವಾಗಿ ವಿಹರಿಸುತ್ತಾರೆ.

**ನ ಚಾಹೋರಾತ್ರಸಂಧ್ಯಾದಿಲಕ್ಷಣಃ ಕಾಲಪರ್ಯಯಃ ।**
**ನಿಯತೋಸ್ಯಾಸ್ತಿ [೪]ದಿಧ್ಯಾಸೋ[೫]ಸ್ತದ್ಧ್ಯಾನಂ ಸಾರ್ವಕಾಲಿಕಮ್ ॥ ೮೧ ॥**

ಧ್ಯಾನಮಾಡಬೇಕೆಂಬ ಇಚ್ಛೆಯುಳ್ಳ ಮತ್ತು ಸರ್ವತ್ರ ಸಮದರ್ಶಿಯಾದ ಈ ಯೋಗಿಗೆ ಹಗಲು ರಾತ್ರಿ ಸಂಧ್ಯಾಮೊದಲಾದ ಕಾಲನಿಯಮವಿಲ್ಲ. ಆದುದರಿಂದ ಸರ್ವಕಾಲದಲ್ಲಿಯೂ ಧ್ಯಾನವುಂಟಾಗುವುದು.

**[೬]ಯದ್ದೇಶಕಾಲ[೭]ಚೇಷ್ಟಾಸು ಸರ್ವಾಸ್ವೇವ [೮]ಸಮಾಹಿತಾಃ ।**
**[೯]ಸಿದ್ಧಾಃ [೧೦]ಸಿದ್ಧ್ಯಂತಿ [೧೧]ಸೇತ್ಸ್ಯಂತಿ ನಾತ್ರ [೧೨]ತನ್ನಿಯಮೋಸ್ತ್ಯತಃ ॥**

ಸಮಾಧಾನಯುಕ್ತರಾದ ಯೋಗಿಗಳು ಸಮಸ್ತದೇಶಕಾಲಗಳಲ್ಲಿಯೂ ಆಸನಗಳಲ್ಲಿಯೂ ಸಿದ್ಧರಾದರು. ಸಿದ್ಧರಾಗುತ್ತಾರೆ. ಸಿದ್ಧರಾಗುವರು. ಆದುದರಿಂದ ಮುಕ್ತರಾಗುವ ವಿಷಯದಲ್ಲಿ ದೇಶಕಾಲಮೊದಲಾದುವುಗಳ ನಿಯಮವಿಲ್ಲ.

**ಯದಾ ಯತ್ರ ಯಥಾವಸ್ಥೋ ಯೋಗೀ ಧ್ಯಾನಮವಾಪ್ನುಯಾತ್ ।**
**ಸ ಕಾಲಃ ಸ ಚ ದೇಶಃ ಸ್ಯಾದ್ಧ್ಯಾನೇ[೧೩]ವಸ್ಥಾ ಚ ಸಾ ಮತಾ ॥ ೮೩ ॥**

ಯೋಗಿಯು ಯಾವ ಕಾಲದಲ್ಲಿ ಯಾವ ದೇಶದಲ್ಲಿ ಯಾವ ಅವಸ್ಥೆಯಲ್ಲಿ ಧ್ಯಾನವನ್ನು ಹೊಂದುವನೋ ಅದೇ ಕಾಲ ಅದೇ ದೇಶ ಅದೇ ಅವಸ್ಥೆಯು ಧ್ಯಾನಕ್ಕೆ ಯೋಗ್ಯವಾಗಿವೆ.

೧ ಸಂಸರ್ಗರಹಿತಂ. ೨ ಧ್ಯಾನರಹಿತಕಾಲೇಪಿ. ೩ ಚಂಚಲಂ ಭವೇತ್. ೪ ಧ್ಯಾತುಮಿಚ್ಛೋಃ. ೫ ತಸ್ಮಾತ್ಕಾರಣಾತ್. ೬ ಯಸ್ಮಾತ್ಕಾರಣಾತ್. ೭ ಆಸನಂ. ೮ ಸಮಾಧಾನಯುಕ್ತಾಃ. ೯ ಸಿದ್ಧಪರಮೇಷ್ಠಿನೋ ಬಭೂವುರಿತ್ಯರ್ಥಃ. ೧೦ ಸಿದ್ಧಾ ಭವಂತಿ. ೧೧ ಸಿದ್ಧಾ ಭವಿಷ್ಯಂತಿ. ೧೨ ತದ್ದೇಶಕಾಲಾದಿನಿಯಮಃ. ೧೩ ಆಸನಭೇದಃ.

**ಪ್ರೋಕ್ತಾ ಧ್ಯಾತುರವಸ್ಥೇಯಮಿದಾನೀಂ ತಸ್ಯ ಲಕ್ಷಣಮ್ ।**
**ಧ್ಯೇಯಂ ಧ್ಯಾನಂ ಫಲಂ ಚೇತಿ [೧]ವಾಚ್ಯಮೇತಚ್ಚತುಷ್ಟಯಮ್ ॥ ೮೪ ॥**

ಈ ಪ್ರಕಾರವಾಗಿ ಧ್ಯಾನಮಾಡುವ ಯೋಗಿಯ ಅವಸ್ಥೆ(ದೇಶ ಕಾಲ ಆಸನ ಮೊದಲಾದುದು)ಯು ಹೇಳಲ್ಪಟ್ಟಿತು. ಈಗ ಆ ಧ್ಯಾನಮಾಡುವ ಯೋಗಿಯ ಲಕ್ಷಣ, ಧ್ಯಾನಮಾಡುವುದಕ್ಕೆ ಯೋಗ್ಯವಾದ ವಸ್ತು, ಧ್ಯಾನ, ಧ್ಯಾನದ ಫಲ ಈ ನಾಲ್ಕನ್ನು ಹೇಳಬೇಕಾಗಿದೆ.

**ವಜ್ರಸಂಹನನಂ ಕಾಯಮುದ್ವಹನ್ಬಲವತ್ತಮಮ್ ।**
**[೨]ಓಘಶೂರಸ್ತಪೋಯೋಗೇ ಸ್ವಭ್ಯಸ್ತಶ್ರುತವಿಸ್ತರಃ ॥ ೮೫ ॥**

ಬಲಿಷ್ಠವಾದ ವಜ್ರದೇಹವನ್ನು ಧರಿಸಿದವನೂ ಮುನಿಸಮೂಹದಲ್ಲಿ ಶ್ರೇಷ್ಠನೂ ತಪಸ್ಸನ್ನು ಮಾಡುವುದರಲ್ಲಿ ಚತುರನೂ ಅನೇಕ ಶಾಸ್ತ್ರಗಳನ್ನು ಚೆನ್ನಾಗಿ ಅಭ್ಯಾಸ ಮಾಡಿರುವವನೂ

**ದೂರೋತ್ಸಾರಿತದುರ್ಧ್ಯಾನೋ ದುರ್ಲೇಶ್ಯಾಃ ಪರಿವರ್ಜಯನ್ ।**
**ಲೇಶ್ಯಾವಿಶುದ್ಧಿಮಾಲಂಬ್ಯ ಭಾವಯನ್ನಪ್ರಮತ್ತತಾಮ್ ॥ ೮೬ ॥**

ದುರ್ಧ್ಯಾನಗಳನ್ನು ದೂರಮಾಡಿದವನೂ ದುಷ್ಟಲೇಶ್ಯೆ(ಪರಿಣಾಮವಿಶೇಷ)ಗಳನ್ನು ತ್ಯಜಿಸುವವನೂ ಲೇಶ್ಯೆಗಳ ಪರಿಶುದ್ಧತೆಯನ್ನು ಹೊಂದಿ ಕ್ರೋಧಾದಿ ಪ್ರಮಾದರಹಿತಭಾವವನ್ನು ಭಾವಿಸುವವನೂ

**ಪ್ರಜ್ಞಾಪಾರಮಿತೋ ಯೋಗೀ ಧ್ಯಾತಾ ಸ್ಯಾದ್ಧೀಬಲಾನ್ವಿತಃ ।**
**[೩]ಸೂತ್ರಾರ್ಥಾಲಂಬನೋ ಧೀರಃ ಸೋಢಾಶೇಷಪರೀಷಹಃ ॥ ೮೭ ॥**

ಸಂಪೂರ್ಣಜ್ಞಾನಿಯೂ ಬುದ್ಧಿಬಲವುಳ್ಳವನೂ ಆಗಮಾರ್ಥವನ್ನನುಸರಿಸುವವನೂ ಧೀರನೂ ಸಮಸ್ತಬಾಧೆಗಳನ್ನು ಸಹಿಸುವವನೂ ಆದ ಯೋಗಿಯು ಧ್ಯಾನಮಾಡುವವನೆಂದು ತಿಳಿಯತಕ್ಕುದು. ಧ್ಯಾನಮಾಡುವವನಿಗೆ ಮೇಲೆಹೇಳಿದ ಲಕ್ಷಣಗಳಿರಬೇಕೆಂದು ಭಾವವು.

**ಅಪಿ ಚೋದ್ಭೂತಸಂವೇಗಃ ಪ್ರಾಪ್ತನಿರ್ವೇದಭಾವನಃ ।**
**ವೈರಾಗ್ಯಭಾವನೋತ್ಕರ್ಷಾತ್ಪಶ್ಯನ್ಭೋಗಾ[೪]ನತರ್ಪಕಾನ್ ॥ ೮೮ ॥**

ಮತ್ತು ಉತ್ಪನ್ನವಾದ ಸಂಸಾರಭೀತಿಯುಳ್ಳವನೂ ವೈರಾಗ್ಯಭಾವನೆಯನ್ನು ಹೊಂದಿದವನೂ ಆ ವೈರಾಗ್ಯಭಾವನೆಯ ಆಧಿಕ್ಯದಿಂದ ಭೋಗಗಳು ಅತೃಪ್ತಿಕರಗಳೆಂದು ನೋಡುವವನೂ

**ಸಜ್ಜ್ಞಾನಭಾವನಾ[೫]ಪಾಸ್ತಮಿಥ್ಯಾಜ್ಞಾನ[೬]ತಮೋಘನಃ ।**
**ವಿಶುದ್ಧದರ್ಶನಾಪೋಢಗಾಢಮಿಥ್ಯಾತ್ವಶಲ್ಯಕಃ ॥ ೮೯ ॥**

ಸಮ್ಯಗ್ಜ್ಞಾನ ಭಾವನೆಯಿಂದ ಮಿಥ್ಯಾಜ್ಞಾನವೆಂಬ ಕತ್ತಲೆಯ ಸಮೂಹವನ್ನು ಹೋಗಲಾಡಿಸಿದವನೂ ಸಮ್ಯಗ್ದರ್ಶನದಿಂದ ಪ್ರಬಲವಾದ ಮಿಥ್ಯಾತ್ವವೆಂಬ ಶಲ್ಯವನ್ನು ದೂರಮಾಡಿದವನೂ

**ಕ್ರಿಯಾನಿಃಶ್ರೇಯಸೋದರ್ಕಾಃ ಪ್ರಪದ್ಯೋಜ್ಝಿತದುಷ್ಕ್ರಿಯಃ ।**
**ಪ್ರೋದ್ಯತಃ [೭]ಕರಣೀಯೇಷು ವ್ಯುತ್ಸೃಷ್ಟಾಕರಣೀಯಕಃ ॥ ೯೦ ॥**

ಮುಂದೆ (ಉತ್ತರಕಾಲದಲ್ಲಿ) ಮೋಕ್ಷವನ್ನು ಕೊಡುವ ಕ್ರಿಯೆಗಳನ್ನು ಹೊಂದಿ ದುಷ್ಕ್ರಿಯೆಗಳನ್ನೆಲ್ಲ ಪರಿತ್ಯಜಿಸಿದವನೂ ಮಾಡಬೇಕಾದ ಕಾರ್ಯಗಳಲ್ಲಿ ಉದ್ಯೋಗವುಳ್ಳವನೂ ಮಾಡಬಾರದ ಕಾರ್ಯಗಳನ್ನು ಪರಿತ್ಯಜಿಸಿದವನೂ

**ವ್ರತಾನಾಂ ಪ್ರತ್ಯನೀಕಾಯೇ ದೋಷಾ ಹಿಂಸಾನೃತಾದಯಃ ।**
**ತಾನಶೇಷಾನ್ನಿರಾಕೃತ್ಯ ವ್ರತಶುದ್ಧಿಮುಪೇಯಿವಾನ್ ॥ ೯೧ ॥**

ಅಹಿಂಸಾ ಸತ್ಯ ಮೊದಲಾದ ವ್ರತಗಳಿಗೆ ಪ್ರತಿಕೂಲವಾದ ಹಿಂಸಾ ಅಸತ್ಯ ಮೊದಲಾದ ದೋಷಗಳನ್ನೆಲ್ಲ ದೂರಮಾಡಿ ಶುದ್ಧವಾದ ವ್ರತಗಳನ್ನು ಹೊಂದಿದವನೂ

**ಸ್ವೈರುದಾರತರೈಃ ಕ್ಷಾಂತಿಮಾರ್ದವಾರ್ಜವಲಾಘವೈಃ ।**
**ಕಷಾಯವೈರಿಣಸ್ತೀವ್ರಾನ್ಕ್ರೋಧಾದೀನ್ವಿನಿವರ್ತಯನ್ ॥ ೯೨ ॥**

ಅತ್ಯುತ್ತಮವಾದ ತನ್ನ ಶಾಂತತೆ ಮೃದುಸ್ವಭಾವ ಸರಳಪರಿಣಾಮ ಲಘುತ್ವಗುಣ ಇವುಗಳಿಂದ ಕ್ರೋಧ ಮಾನ ಮೊದಲಾದ ತೀವ್ರಕಷಾಯಗಳೆಂಬ ವೈರಿಗಳನ್ನು ದೂರಮಾಡುವವನೂ

**ಅನಿತ್ಯಾನಶುಚೀನ್ದುಃಖಾನ್ಪಶ್ಯ[೧]ನ್ಭಾವಾ[೨]ನನಾತ್ಮಕಾನ್ ।**
**ವಪುರಾಯುರ್ಬಲಾರೋಗ್ಯಯೌವನಾದಿವಿಕಲ್ಪಿತಾನ್ ॥ ೯೩ ॥**

ಆತ್ಮಸ್ವರೂಪವಲ್ಲದ ಶರೀರ ಆಯುಷ್ಯ ಬಲ ಆರೋಗ್ಯ ಯೌವನ ಮೊದಲಾದ ಪರ್ಯಾಯರೂಪವಾದ ಪರಪದಾರ್ಥಗಳು ಅನಿತ್ಯಗಳೂ ಅಶುಚಿಗಳೂ ದುಃಖವನ್ನುಂಟುಮಾಡುವುವುಗಳೂ ಎಂದು ನೋಡುವವನೂ (ವಿಚಾರ ಮಾಡುವವನೂ)

**ಸಮುತ್ಸೃಜ್ಯ [೩]ಚಿರಾಭ್ಯಸ್ತಾನ್ಭಾವಾನ್ರಾಗಾದಿಲಕ್ಷಣಾನ್ ।**
**ಭಾವಯನ್ ಜ್ಞಾನವೈರಾಗ್ಯಭಾವನಾಃ ಪ್ರಾಗಭಾವಿತಾಃ ॥ ೯೪ ॥**

ಅನಾದಿಕಾಲದಿಂದ ಅಭ್ಯಾಸಿಸಲ್ಪಟ್ಟ ರಾಗದ್ವೇಷಮೊದಲಾದ ಪರಿಣಾಮಗಳನ್ನು ಬಿಟ್ಟು ಪೂರ್ವದಲ್ಲಿ ಭಾವಿಸದಿರುವ ಜ್ಞಾನವೈರಾಗ್ಯಭಾವನೆಗಳನ್ನು ಭಾವಿಸುವವನೂ

**ಭಾವನಾಭಿ[೪]ರಸಂಮೂಢೋ ಮುನಿರ್ಧ್ಯಾನೇ [೫]ಸ್ಥಿರೋ ಭವೇತ್ ।**
**ಜ್ಞಾನದರ್ಶನಚಾರಿತ್ರವೈರಾಗ್ಯೋಪಗತಾಶ್ಚ ತಾಃ ॥ ೯೫ ॥**

ಮುಂದೆ ಹೇಳುವ ಭಾವನೆಗಳಿಂದ ಕ್ಷೋಭೆಗೊಳ್ಳದಿರುವವನೂ ಆದ ಮುನಿಯು ಧ್ಯಾನದಲ್ಲಿ ಸ್ಥಿರನಾಗುವನು. ಆ ಭಾವನೆಗಳು ಜ್ಞಾನ ದರ್ಶನ ಚಾರಿತ್ರ ವೈರಾಗ್ಯಗಳೆಂದು ನಾಲ್ಕುವಿಧವಾಗಿವೆ.

**[೬]ವಾಚನಾ[೭]ಪೃಚ್ಛನೇ [೮]ಸಾನುಪ್ರೇಕ್ಷಣಂ [೯]ಪರಿವರ್ತನಮ್ ।**
**ಸದ್ಧರ್ಮದೇಶನಂ ಚೇತಿ ಜ್ಞಾತವ್ಯಾ ಜ್ಞಾನಭಾವನಾಃ ॥ ೯೬ ॥**

ಪಠನ ಮಾಡುವುದು ಪ್ರಶ್ನೆಮಾಡುವುದು ವಿಚಾರಸಹಿತವಾಗಿ ಬಾರಿಬಾರಿಗೂ ಚಿಂತಿಸುವುದು ಸದ್ಧರ್ಮವನ್ನುಪದೇಶಮಾಡುವುದು ಇವುಗಳೆಲ್ಲ ಜ್ಞಾನ ಭಾವನೆಗಳೆಂದು ತಿಳಿಯಬೇಕು.

**[೧೦]ಸಂವೇಗಃ [೧೧]ಪ್ರಶಮಃ ಸ್ಥೈರ್ಯಮಸಂಮೂಢತ್ವಮಸ್ಮಯಃ ।**
**[೧೨]ಆಸ್ತಿಕ್ಯ[೧೩]ಮನುಕಂಪೇತಿ ಜ್ಞೇಯಾಃ ಸಮ್ಯಕ್ತ್ವಭಾವನಾಃ ॥ ೯೭ ॥**

ಸಂಸಾರಕ್ಕೆ ಭಯಪಡುವುದು ರಾಗದ್ವೇಷಮೊದಲಾದ ಪರಿಣಾಮಗಳಿಲ್ಲದಿರುವುದು ಸ್ಥಿರವಾಗಿರುವುದು ಮೋಹವಿಲ್ಲದಿರುವುದು ಅಹಂಕಾರವಿಲ್ಲದಿರುವುದು ಪರಲೋಕಾದಿ ಆಸ್ತಿಕ್ಯಬುದ್ಧಿಯು ದಯೆ ಇವುಗಳೆಲ್ಲ ಸಮ್ಯಕ್ತ್ವಭಾವನೆಗಳೆಂದು ತಿಳಿಯಬೇಕು.

**ಈರ್ಯಾದಿವಿಷಯಾ ಯತ್ನಾ ಮನೋವಾಕ್ಕಾಯಗುಪ್ತಯಃ ।**
**ಪರೀಷಹಸಹಿಷ್ಣುತ್ವಮಿತಿ ಚಾರಿತ್ರಭಾವನಾಃ ॥ ೯೮ ॥**

---

೧ ವಕ್ತವ್ಯಂ. ೨ ಸಮೂಹೇ ಶೂರಃ, ಸಮುದಾಯಶ್ರೇಷ್ಠ ಇತಿವಾ. ೩ ಆಗಮಾರ್ಥಾಶ್ರಯಃ. ೪ ಅತೃಪ್ತಿಕರಾನ್. ೫ ನಿರಸ್ತ. ೬ ತಮೋಬಾಹುಲ್ಯಂ. ೭ ಕರ್ತುಂ ಯೋಗ್ಯೇಷು.

೧ ಪರ್ಯಾಯರೂಪಾನರ್ಥಾನ್. ೨ ಆತ್ಮಸ್ವರೂಪಾದನ್ಯಾನ್. ೩ ಅನಾದಿಕಾಲವಾಸಿತಾನ್. ೪ ಅಕ್ಷುಭಿತಃ. ೫ ಸ್ಥಿರೀಭವೇದಿತ್ಯಪಿ ಪಾಠಃ. ೬ ಪಠನಂ. ೭ ಪ್ರಶ್ನಃ. ೮ ವಿಚಾರಸಹಿತಂ. ೯ ಪರಿಚಿಂತನಂ. ೧೦ ಸಂಸಾರಭೀರುತ್ವಂ. ೧೧ ರಾಗಾದಿವಿಗಮಃ. ೧೨ ಅಖಿಲತತ್ತ್ವಮತಿಃ. ೧೩ ಅಖಿಲಸತ್ತ್ವೇಷು ಕೃಪಾ.

ಈರ್ಯಾ (ಗಮನ) ಮೊದಲಾದ ಐದು ಸಮಿತಿಗಳು ಮನಸ್ಸುವಚನಕಾಯಗಳ ಮೂರು ಗುಪ್ತಿಗಳು ಕ್ಷುಧಾತೃಷಾಮೊದಲಾದ ಇಪ್ಪತ್ತೆರಡುವಿಧವಾದ ಬಾಧೆಗಳನ್ನು ಸಹಿಸುವುದು ಇವುಗಳೆಲ್ಲ ಚಾರಿತ್ರಭಾವನೆಗಳಾಗಿವೆ.

**ವಿಷಯೇ[೧]ಷ್ವನಭಿಷ್ವಂಗಃ [೨]ಕಾಯತತ್ತ್ವಾನುಚಿಂತನಮ್ ।**
**ಜಗತ್ಸ್ವಭಾವಚಿಂತೇತಿ ವೈರಾಗ್ಯಸ್ಥೈರ್ಯಭಾವನಾಃ ॥ ೯೯ ॥**

ಇಂದ್ರಿಯವಿಷಯಗಳಲ್ಲಿ ಆಸಕ್ತಿ(ಪ್ರೀತಿ)ಯಿಲ್ಲದಿರುವುದು ಶರೀರ ಸ್ವಭಾವವನ್ನೂ ಜಗತ್ತಿನಸ್ವಭಾವವನ್ನೂ ಚಿಂತಿಸುವುದು ಇವುಗಳೆಲ್ಲ ವೈರಾಗ್ಯವು ಸ್ಥಿರವಾಗುವುದಕ್ಕೋಸ್ಕರ ಮಾಡತಕ್ಕ ಭಾವನೆಗಳಾಗಿವೆ.

**ಏವಂ ಭಾವಯತೋಽಸ್ಯ ಜ್ಞಾನ[೩]ಚರ್ಯಾದಿಸಂಪದಿ ।**
**ತತ್ತ್ವಜ್ಞಸ್ಯ ವಿರಾಗಸ್ಯ ಭವೇ[೪]ದವ್ಯಗ್ರತಾ ಧಿಯಃ ॥ ೧೦೦ ॥**

ಈ ರೀತಿಯಾಗಿ ಭಾವಿಸುವವನೂ ತತ್ತ್ವಜ್ಞಾನಿಯೂ ರಾಗವಿಲ್ಲದವನೂ ಆದ ಈ ಯೋಗಿಗೆ ಜ್ಞಾನಚಾರಿತ್ರಮೊದಲಾದ ಸಂಪತ್ತಿನಲ್ಲಿ ಬುದ್ಧಿಯು ದೃಢವಾಗುವುದು.

**ಸ ಚತುರ್ದಶಪೂರ್ವಜ್ಞೋ ದಶಪೂರ್ವಧರೋಽಪಿ ವಾ ।**
**ನವಪೂರ್ವಧರೋ ವಾ ಸ್ಯಾದ್ಧ್ಯಾತಾ ಸಂಪೂರ್ಣಲಕ್ಷಣಃ ॥ ೧೦೧ ॥**

ಸಂಪೂರ್ಣಲಕ್ಷಣಗಳುಳ್ಳ ಆ ಧ್ಯಾನಮಾಡುವ ಯೋಗಿಯು ಹನ್ನೆರಡನೆಯ ಅಂಗ(ವೇದ)ದ ಭೇದಗಳಾದ ಹದಿನಾಲ್ಕು ಪೂರ್ವಗಳನ್ನು ತಿಳಿದವನಾಗಿಯಾದರೂ ಇರಬಹುದು. ಹತ್ತುಪೂರ್ವಗಳನ್ನು ತಿಳಿದವನಾಗಿಯಾದರೂ ಇರಬಹುದು. ಒಂಬತ್ತು ಪೂರ್ವಗಳನ್ನು ತಿಳಿದವನಾಗಿಯಾದರೂ ಇರಬಹುದು.

**ಶ್ರುತೇನ ವಿಕಲೇನಾಪಿ ಸ್ಯಾದ್ಧ್ಯಾತಾ ಮುನಿಸತ್ತಮಃ ।**
**ಪ್ರಬುದ್ಧಧೀ[೫]ರಧಃ ಶ್ರೇಣ್ಯಾ ಧರ್ಮ್ಯಧ್ಯಾನಸ್ಯ [೬]ಸುಶ್ರುತಃ ॥ ೧೦೨ ॥**

ಸಂಪೂರ್ಣಶ್ರುತಜ್ಞಾನವಿಲ್ಲದಿದ್ದರೂ ವಿಕಸಿತವಾದ ಬುದ್ಧಿಯುಳ್ಳ ಮುನಿಶ್ರೇಷ್ಠನು ಉಪಶಮ ಮತ್ತು ಕ್ಷಪಕಶ್ರೇಣಿಯನ್ನು ಹತ್ತುವ ಎಂಟನೆಯ ಗುಣಸ್ಥಾನದ ಕೆಳಗೆ ಧರ್ಮ್ಯಧ್ಯಾನವನ್ನು ಧ್ಯಾನಮಾಡುವ ಪ್ರಸಿದ್ಧವಾದ ಧ್ಯಾನಿಯಾಗುವನು.

**ಸ ಏವಂ ಲಕ್ಷಣೋ ಧ್ಯಾತಾ ಸಾಮಗ್ರೀಂ ಪ್ರಾಪ್ಯ ಪುಷ್ಕಲಾಮ್ ।**
**ಕ್ಷಪಕೋಪಶಮಶ್ರೇಣ್ಯೋ[೭]ರುತ್ಕೃಷ್ಟಂ ಧ್ಯಾನ[೮]ಮೃಚ್ಛತಿ ॥ ೧೦೩ ॥**

ಈಪ್ರಕಾರವಾದ ಲಕ್ಷಣವುಳ್ಳ ಆ ಯೋಗಿಯು ಸಂಪೂರ್ಣವಾದ ಧ್ಯಾನಸಾಮಗ್ರಿಯನ್ನು ಹೊಂದಿ ಕ್ಷಪಕಶ್ರೇಣಿಯಲ್ಲಿ ಅಥವಾ ಉಪಶಮಶ್ರೇಣಿಯಲ್ಲಿ ಉತ್ಕೃಷ್ಟವಾದ ಶುಕ್ಲಧ್ಯಾನವನ್ನು ಹೊಂದುತ್ತಾನೆ.

**ಆದ್ಯಸಂಹನನೇನೈವ ಕ್ಷಪಕಶ್ರೇಣ್ಯಧಿಶ್ರಿತಃ ।**
**ತ್ರಿಭಿರಾದ್ಯೈರ್ಭಜೇಚ್ಛ್ರೇಣೀಮಿತರಾಂ ಶ್ರುತತತ್ತ್ವವಿತ್ ॥ ೧೦೪ ॥**

ಮೊದಲನೆಯ ವಜ್ರವೃಷಭನಾರಾಚಸಂಹನನದಿಂದಲೇ ಧ್ಯಾನಿಯು ಕ್ಷಪಕಶ್ರೇಣಿಯನ್ನು ಹತ್ತುವನು. ಬೇರೆ ಸಂಹನನಗಳಿಂದ ಕ್ಷಪಕಶ್ರೇಣಿಯನ್ನು ಹೊಂದುವುದಕ್ಕಾಗುವುದಿಲ್ಲವೆಂದು ಭಾವವು. ಶಾಸ್ತ್ರಜ್ಞಾನಿಯಾದ ಯೋಗಿಯು ಮೊದಲನೆಯ ವಜ್ರವೃಷಭನಾರಾಚ ವಜ್ರನಾರಾಚ ನಾರಾಚ ಈ ಮೂರುಸಂಹನನಗಳಿಂದ ಉಪಶಮಶ್ರೇಣಿಯನ್ನು ಹೊಂದುವನು. ಮೊದಲನೆಯ ಮೂರುಸಂಹನನಗಳಲ್ಲಿ ಯಾವುದಾದರೊಂದು ಸಂಹನನದಿಂದ ಉಪಶಮಶ್ರೇಣಿಯನ್ನು ಹೊಂದಬಹುದೆಂದಭಿಪ್ರಾಯವು.

[೧]**ಕಿಂಚಿದ್ದೃಷ್ಟಿ[೨]ಮುಪಾವರ್ತ್ಯ ಬಹಿರರ್ಥಕದಂಬಕಾತ್ ।**
**ಸ್ಮೃತಿಮಾತ್ಮನಿ ಸಂಧಾಯ ಧ್ಯಾಯೇದಧ್ಯಾತ್ಮವಿನ್ಮುನಿಃ ॥ ೧೦೫ ॥**

ಅಧ್ಯಾತ್ಮಜ್ಞಾನಿಯಾದ ಮುನಿಯು ತನ್ನ ಜ್ಞಾನದೃಷ್ಟಿಯನ್ನು ಬಾಹ್ಯಪದಾರ್ಥಗಳ ಸಮೂಹದಿಂದ ತಪ್ಪಿಸಿ ಆತ್ಮನ ಕಡೆಗೆ ತಿರುಗಿಸಿ ತನ್ನ ಸ್ಮರಣೆಯನ್ನು ಆತ್ಮನಲ್ಲಿ ಸ್ಥಿರವಾಗಿರಿಸಿ ಧ್ಯಾನಮಾಡಬೇಕು.

[೩]**ಹೃಷೀಕಾಣಿ [೪]ತದರ್ಥೇಭ್ಯಃ [೫]ಪ್ರತ್ಯಾಹೃತ್ಯ ತತೋ ಮನಃ ।**
[೬]**ಸಂಹೃತ್ಯ ಧಿಯಮವ್ಯಗ್ರಾಂ ಧಾರಯೇದ್ಧ್ಯೇಯವಸ್ತುನಿ ॥ ೧೦೬ ॥**

ಮುನಿಯು ಮೊದಲು ಇಂದ್ರಿಯಗಳನ್ನು ಆ ಇಂದ್ರಿಯವಿಷಯಗಳಿಂದ ಹಿಂದಿರುಗಿಸಿ ತರುವಾಯ ಮನಸ್ಸನ್ನು ಸ್ಥಿರಗೊಳಿಸಿ ನಿಶ್ಚಲವಾದ ಬುದ್ಧಿಯನ್ನು ಧ್ಯಾನಮಾಡುವುದಕ್ಕೆ ಯೋಗ್ಯವಾದ ವಸ್ತುವಿನಲ್ಲಿರಿಸಬೇಕು.

**ಧ್ಯೇಯ[೭]ಮಧ್ಯಾತ್ಮತತ್ತ್ವಂ ಸ್ಯಾತ್ಪುರುಷಾರ್ಥೋ[೮]ಪಯೋಗಿ ಯತ್ ।**
**ಪುರುಷಾರ್ಥಶ್ಚ [೯]ನಿರ್ಮೋಕ್ಷೋ ಭವೇತ್ತತ್ಸಾಧನಾನಿ ಚ ॥ ೧೦೭ ॥**

ಮೋಕ್ಷಪುರುಷಾರ್ಥಕ್ಕೆ ಸಹಕಾರಿಯಾದ ಆತ್ಮಸ್ವರೂಪವು ಧ್ಯಾನಮಾಡುವುದಕ್ಕೆ ಯೋಗ್ಯವಾದ ವಸ್ತುವಾಗಿದೆ. ಸಂಪೂರ್ಣವಾದ ಕರ್ಮಕ್ಷಯವೂ ಆ ಕರ್ಮಕ್ಷಯಕ್ಕೆ ಸಾಧನಗಳಾದ ಸಮ್ಯಗ್ದರ್ಶನ ಮೊದಲಾದುವೂ ಪುರುಷಾರ್ಥಗಳಾಗಿವೆ.

[೧೦]**ಅಹಂ ಮಮಾಸ್ರವೋ ಬಂಧಃ ಸಂವರೋ ನಿರ್ಜರಾ ಕ್ಷಯಃ ।**
**ಕರ್ಮಣಾಮಿತಿ ತತ್ತ್ವಾರ್ಥಾ ಧ್ಯೇಯಾಃ ಸಪ್ತ ನವಾಥವಾ ॥ ೧೦೮ ॥**

ನಾನು, ನನಗೆ ಕರ್ಮಗಳ ಬರುವಿಕೆ, ಆತ್ಮನಿಗೂ ಕರ್ಮಗಳಿಗೂ ಪರಸ್ಪರ ಸಂಬಂಧ, ಕರ್ಮಗಳು ಬರುವುದನ್ನು ತಡೆಯುವುದು, ಕರ್ಮಗಳ ಸ್ವಲ್ಪಭಾಗನಾಶ, ಸಂಪೂರ್ಣನಾಶ, ಈ ಏಳು ತತ್ತ್ವಗಳು ಧ್ಯಾನಮಾಡುವುದಕ್ಕೆ ಯೋಗ್ಯವಾದುವು. ಅಥವಾ ಪುಣ್ಯಪಾಪಸಹಿತವಾಗಿ ಒಂಬತ್ತು ಪದಾರ್ಥಗಳು ಧ್ಯಾನಿಸುವುದಕ್ಕೆ ಯೋಗ್ಯವಾಗಿವೆ.

**ಷಟ್ತ್ರಯದ್ರವ್ಯಪರ್ಯಾಯಯಾಥಾತ್ಮ್ಯಸ್ಯಾನುಚಿಂತನಮ್ ।**
[೧೧]**ಯತೋ ಧ್ಯಾನಂ ತತೋ ಧ್ಯೇಯಃ ಕೃತ್ಸ್ನಃ ಷಡ್ದ್ರವ್ಯವಿಸ್ತರಃ ॥**

ಜೀವ ಪುದ್ಗಲ ಧರ್ಮ ಅಧರ್ಮ ಆಕಾಶ ಕಾಲ ಈ ಆರುದ್ರವ್ಯಗಳ ಮತ್ತು ಈ ದ್ರವ್ಯಗಳಲ್ಲಿ ಉಂಟಾಗುವ ಪರ್ಯಾಯ(ಅವಸ್ಥಾ)ಗಳ ನಿಜಸ್ವರೂಪವನ್ನು ಚಿಂತಿಸುವುದು ಧ್ಯಾನವಾಗಿದೆ. ಆ ಆರುದ್ರವ್ಯಗಳ ವಿಸ್ತಾರವೆಲ್ಲ ಧ್ಯಾನಮಾಡುವುದಕ್ಕೆ ಯೋಗ್ಯವಾದ ವಿಷಯವಾಗಿದೆ.

**ನಯಪ್ರಮಾಣಜೀವಾದಿಪದಾರ್ಥಾ [೧೨]ನ್ಯಾಯಭಾಸುರಾ ।**
**ಜಿನೇಂದ್ರವಕ್ತ್ರಪ್ರಸೃತಾ ಧ್ಯೇಯಾ [೧೩]ಸಿದ್ಧಾಂತಪದ್ಧತಿಃ ॥ ೧೧೦ ॥**

ನೈಗಮಮೊದಲಾದ ನಯಗಳನ್ನೂ ಪ್ರತ್ಯಕ್ಷಪರೋಕ್ಷಪ್ರಮಾಣಗಳನ್ನೂ ಜೀವ ಮೊದಲಾದ ಪದಾರ್ಥಗಳನ್ನೂ ಒಳಗೊಂಡಿರುವುದೂ ಸಪ್ತಭಂಗೀರೂಪವಾದ ವಿಚಾರಗಳಿಂದ ಪ್ರಕಾಶಮಾನವೂ ಜಿನೇಶ್ವರರ ಮುಖದಿಂದ ಹೊರಟಿರುವುದೂ ಆದ ಆಗಮರಚನೆಯು ಧ್ಯೇಯ(ಧ್ಯಾನಯೋಗ್ಯ)ವಾಗಿದೆ.

**ಶ್ರುತ[೧೪]ಮರ್ಥಾ[೧೫]ಭಿಧಾನಂ ಚ [೧೬]ಪ್ರತ್ಯಯಶ್ಚೇತ್ಯದಸ್ತ್ರಿಧಾ ।**
**ತಸ್ಮಿನ್ಧ್ಯೇಯೇ ಜಗತ್ತತ್ತ್ವಂ ಧ್ಯೇಯತಾಮೇತಿ ಕಾರ್ತ್ಸ್ನ್ಯತಃ ॥ ೧೧೧ ॥**

ಆ ಧ್ಯೇಯದಲ್ಲಿ ಶಾಸ್ತ್ರ, ಜೀವ ಮೊದಲಾದ ವಸ್ತುಗಳ ಶಬ್ದ, ಜ್ಞಾನ ಹೀಗೆ ಮೂರು ಭೇದಗಳಿವೆ. ಸಂಪೂರ್ಣವಾದ ಜಗತ್ತತ್ತ್ವವು ಧ್ಯೇಯತ್ವವನ್ನು ಹೊಂದುತ್ತದೆ. ಅಂದರೆ ಧ್ಯಾನಮಾಡುವುದಕ್ಕೆ ಯೋಗ್ಯವಾಗಿದೆ.

೧ ಅನಾಸಕ್ತಿಃ. ೨ ಕಾಯಸ್ವರೂಪಂ. ೩ ಚಾರಿತ್ರಂ. ೪ ನಿಶ್ಚಲತಾ. ೫ ಶ್ರೇಣಿದ್ವಯಾದಧಃ ಅಸಂಯತಾದಿಚತುರ್ಗುಣಸ್ಥಾನೇಷು ಧರ್ಮ್ಯಧ್ಯಾನಸ್ಯ ಧ್ಯಾತಾ ಭವತೀತ್ಯರ್ಥಃ, ಅಸಂಯತೇ ಸ್ಮೃತಿಃ ದೇಶಸಂಯತೇನುಸ್ಮೃತಿಃ, ಪ್ರಮತ್ತೇ ಭಾವನಾ, ಅಪ್ರಮತ್ತೇ ಧರ್ಮ್ಯಧ್ಯಾನಂ. ೬ ಪ್ರಸಿದ್ಧಃ. ೭ ಶುಕ್ಲಂ. ೮ ಗಚ್ಛತಿ.

೧ ಜ್ಞಾನದೃಷ್ಟಿಂ. ೨ ಸಮೀಪೇ ವರ್ತಯಿತ್ವಾ. ೩ ಇಂದ್ರಿಯಾಣಿ. ೪ ಇಂದ್ರಿಯವಿಷಯೇಭ್ಯಃ. ೫ ನಿವರ್ತ್ಯ. ೬ ಲಯಂ ನೀತ್ವಾ. ೭ ಆತ್ಮಸ್ವರೂಪಂ. ೮ ಉಪಕಾರಿ. ೯ ನಿರವಶೇಷಕ್ಷಯಃ. ೧೦ ಆತ್ಮಾ. ೧೧ ಯಸ್ಮಾತ್ಕಾರಣಾತ್. ೧೨ ಸಪ್ತಭಂಗೀಸ್ವರೂಪವಿಚಾರೈರ್ಭಾಸುರಾ. ೧೩ ಪ್ರವಚನರಚನಾ. ೧೪ ಪ್ರತಿಪಾದ್ಯಜೀವಾದಿವಸ್ತು. ೧೫ ಶಬ್ದಃ. ೧೬ ಜ್ಞಾನಂ.

**ಅಥವಾ ಪುರುಷಾರ್ಥಸ್ಯ ಪರಾಂ [೧]ಕಾಷ್ಠಾಮಧಿಷ್ಠಿತಃ ।**
**ಪರಮೇಷ್ಠೀ ಜಿನೋ ಧ್ಯೇಯೋ [೨]ನಿಷ್ಠಿತಾರ್ಥೋ ನಿರಂಜನಃ॥ ೧೧೨ ॥**

ಅಥವಾ ಧರ್ಮಾದಿಪುರುಷಾರ್ಥಗಳ ಉತ್ಕೃಷ್ಟಾವಸ್ಥೆಯನ್ನು ಹೊಂದಿದವನೂ ಕೃತಕೃತ್ಯನೂ ಕರ್ಮಮಲರಹಿತನೂ ಆದ ಜಿನಪರಮೇಷ್ಠಿಯು ಧ್ಯಾನಮಾಡುವುದಕ್ಕೆ ಯೋಗ್ಯನು.

**[೩]ಸ ಹಿ ಕರ್ಮಮಲಾಪಾಯಾಚ್ಛುದ್ಧಿಮಾತ್ಯಂತಿಕೀಂ ಶ್ರಿತಃ ।**
**[೪]ಸಿದ್ಧೋ ನಿರಾಮಯೋ ಧ್ಯೇಯೋ ಧ್ಯಾತೄಣಾಂ ಭಾವ[೫]ಶುದ್ಧಯೇ ॥**

ಕರ್ಮಮಲವಿಲ್ಲದಿರುವುದರಿಂದ ಅತ್ಯಂತ ಪರಿಶುದ್ಧತೆಯನ್ನು ಹೊಂದಿದವನೂ ಶರೀರರಹಿತನೂ ರೋಗರಹಿತನೂ ಆದ ಆ ಜಿನಪರಮೇಷ್ಠಿಯು ಧ್ಯಾನಮಾಡುವವರ ಪರಿಣಾಮಶುದ್ಧಿಗೋಸ್ಕರ ಧ್ಯಾನಯೋಗ್ಯನಾಗಿದ್ದಾನೆ.

**ಕ್ಷಾಯಿಕಾನಂತದೃಗ್ಬೋಧಸುಖವೀರ್ಯಾದಿಭಿರ್ಗುಣೈಃ ।**
**ಯುಕ್ತೋಽಸೌ ಯೋಗಿನಾಂ [೬]ಗಮ್ಯಃ ಸೂಕ್ಷ್ಮೋಽಪಿ ವ್ಯಕ್ತಲಕ್ಷಣಃ ॥**

ಕರ್ಮಗಳ ಕ್ಷಯದಿಂದುಂಟಾದ ಅನಂತದರ್ಶನ ಅನಂತಜ್ಞಾನ ಅನಂತಸುಖ ಅನಂತವೀರ್ಯ ಮೊದಲಾದ ಗುಣಗಳಿಂದ ಯುಕ್ತನಾಗಿರುವ ಈ ಜಿನೇಶ್ವರನು ಸೂಕ್ಷ್ಮನಾಗಿದ್ದರೂ ವ್ಯಕ್ತವಾದ ಲಕ್ಷಣಗಳುಳ್ಳವನಾಗಿ ಯೋಗಿಗಳಿಗೆ ತಿಳಿಯುವುದಕ್ಕೆ ಯೋಗ್ಯನಾಗಿದ್ದಾನೆ. ಸೂಕ್ಷ್ಮನಾಗಿದ್ದರೂ ಯೋಗಿಗಳ ಜ್ಞಾನಕ್ಕೆ ವಿಷಯನಾಗುತ್ತಾನೆಂದು ಭಾವವು.

**ಅಮೂರ್ತೋ [೭]ನಿಷ್ಕಲೋಽಪ್ಯೇಷ ಯೋಗಿನಾಂ ಧ್ಯಾನಗೋಚರಃ ।**
**ಕಿಂಚಿನ್ನ್ಯೂನಾಂತ್ಯದೇಹಾನುಕಾರೀ ಜೀವಘನಾಕೃತಿಃ ॥ ೧೧೫ ॥**

ಈ ಪರಮೇಶ್ವರನು ಅಮೂರ್ತನೂ ಅಶರೀರನೂ ಆಗಿದ್ದರೂ ಯೋಗಿಗಳಿಗೆ ಧ್ಯಾನಕ್ಕೆ ವಿಷಯನಾಗುತ್ತಾನೆ. ಜೀವನ (ಮುಕ್ತಾತ್ಮನ) ಘನಾಕಾರವು ಮುಕ್ತಿಯನ್ನು ಹೊಂದುವ ಅಂತ್ಯಶರೀರದಿಂದ ಸ್ವಲ್ಪ ಕಡಮೆಯಾದ ಆಕಾರವುಳ್ಳದಾಗಿರುತ್ತದೆ.

**ನಿಃಶ್ರೇಯಸಾರ್ಥಿಭಿರ್ಭವ್ಯೈಃ ಪ್ರಾಪ್ತನಿಃಶ್ರೇಯಸಃ ಸ ಹಿ ।**
**ಧ್ಯೇಯಃ ಶ್ರೇಯಸ್ಕರಃ[೮]ಸಾರ್ವಃ [೯]ಸರ್ವದೃಕ್ಸರ್ವ[೧೦]ಭಾವವಿತ್॥ ೧೧೬ ॥**

ಮುಕ್ತಿಯನ್ನು ಹೊಂದಿರುವವನೂ ಮಂಗಳಕರನೂ ಸಕಲಪ್ರಾಣಿಗಳಿಗೂ ಹಿತಕರನೂ ಸಕಲವಸ್ತುಗಳನ್ನು ನೋಡುವವನೂ ತಿಳಿಯುವವನೂ ಆದ ಆ ಮುಕ್ತಾತ್ಮನು ಮೋಕ್ಷಾರ್ಥಿಗಳಾದ ಭವ್ಯರಿಗೆ ಧ್ಯಾನಯೋಗ್ಯನಾಗಿದ್ದಾನೆ.

**ಸ ಸಾಕಾರೋಽಪ್ಯನಾಕಾರೋ ನಿರಾಕಾರೋಽಪಿ [೧೧]ಸಾಕೃತಿಃ ।**
**[೧೨]ಸ್ವಸಾತ್ಕೃತಾಖಿಲಜ್ಞೇಯಃ[೧೩]ಸುಜ್ಞಾನೋ ಜ್ಞಾನಚಕ್ಷುಷಾಮ್॥ ೧೧೭ ॥**

ಆ ಮುಕ್ತಾತ್ಮನು ಅಂತ್ಯಶರೀರಾಕಾರವುಳ್ಳವನಾಗಿದ್ದರೂ ಆಕಾರರಹಿತನಾಗಿದ್ದಾನೆ. ಪುದ್ಗಲದ್ರವ್ಯಸಂಬಂಧವಾದ ಆಕೃತಿಯಿಲ್ಲವೆಂದು ಭಾವವು. ನಿರಾಕಾರನಾಗಿದ್ದರೂ ಸ್ವಲ್ಪ ನ್ಯೂನವಾದ ಅಂತ್ಯಶರೀರಾಕಾರವುಳ್ಳವನಾಗಿದ್ದಾನೆ. ತಿಳಿಯುವುದಕ್ಕೆ ಯೋಗ್ಯವಾದ ಸಮಸ್ತಪದಾರ್ಥಗಳನ್ನೂ ತನ್ನ ಅಧೀನ ಮಾಡಿಕೊಂಡವನಾಗಿರುತ್ತಾನೆ. ತಿಳಿದಿದ್ದಾನೆಂದು ಭಾವವು. ಜ್ಞಾನದೃಷ್ಟಿಯುಳ್ಳ ಯೋಗಿಗಳಿಗೆ ಉತ್ಕೃಷ್ಟವಾದಜ್ಞಾನಸ್ವರೂಪನಾಗಿದ್ದಾನೆ.

**ಮಣಿದರ್ಪಣಸಂಕ್ರಾಂತ[೧೪]ಚ್ಛಾಯಾತ್ಮೇವ ಸ್ಫುಟಾಕೃತಿಮ್ ।**
**ದಧಜ್ಜೀವಘನಾಕಾರಮಮೂರ್ತೋಽಪ್ಯಚಲಸ್ಥಿತಿಃ ॥ ೧೧೮ ॥**

ರತ್ನಮಯವಾದ ಕನ್ನಡಿಯಲ್ಲಿ ಪ್ರತಿಬಿಂಬಿಸಿರುವ ನೆರಳಿನಂತೆ ಆಕಾರವುಳ್ಳವನೂ ವ್ಯಕ್ತವಾದ ಆಕಾರವನ್ನೂ ಜೀವಮಯವಾದ ಘನಾಕಾರವನ್ನೂ ಧರಿಸಿದವನೂ ಆದ ಮುಕ್ತಾತ್ಮನು ಅಮೂರ್ತನಾಗಿದ್ದರೂ ಸ್ಥಿರವಾಗಿರುವವನಾಗಿದ್ದಾನೆ.

**ವೀತರಾಗೋಽಪ್ಯಸೌ ಧ್ಯೇಯೋ ಭವ್ಯಾನಾಂ ಭವವಿಚ್ಛಿದೇ ।**
**ವಿಚ್ಛಿನ್ನಬಂಧನಸ್ಯಾಸ್ಯ ತಾದೃಗ್ನೈಸರ್ಗಿಕೋ ಗುಣಃ ॥ ೧೧೯ ॥**

ಈ ಮುಕ್ತಾತ್ಮನು ವೀತರಾಗನಾಗಿದ್ದರೂ ಭವ್ಯಪ್ರಾಣಿಗಳ ಭವವಿನಾಶಕ್ಕೋಸ್ಕರ ಭವ್ಯರಿಗೆ ಧ್ಯಾನಯೋಗ್ಯನಾಗಿದ್ದಾನೆ. ಕರ್ಮಬಂಧನವನ್ನು ನಾಶಮಾಡಿರುವ ಈ ಜಿನೇಶ್ವರ(ಮುಕ್ತ)ನಿಗೆ ಭವ್ಯರ ಭವವಿನಾಶವನ್ನು ಮಾಡುವುದು ಸ್ವಾಭಾವಿಕವಾದ ಗುಣವಾಗಿದೆ.

**ಅಥವಾ [೧]ಸ್ನಾತಕಾವಸ್ಥಾಂ ಪ್ರಾಪ್ತೋ ಘಾತಿವ್ಯಪಾಯತಃ ।**
**ಜಿನೋಽರ್ಹನ್ಕೇವಲೀ ಧ್ಯೇಯೋ ಬಿಭ್ರತ್ತೇಜೋಮಯಂ ವಪುಃ ॥**

ಅಥವಾ ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಅಂತರಾಯಗಳೆಂಬ ಘಾತಿಕರ್ಮಗಳ ನಾಶದಿಂದ ಪರಿಪೂರ್ಣವಾದ ಜ್ಞಾನಾವಸ್ಥೆಯನ್ನು ಹೊಂದಿರುವವನೂ ತೇಜೋಮಯವಾದ ಶರೀರವನ್ನು ಧರಿಸಿದವನೂ ಆದ ಜಿನೇಶ್ವರನೂ ಅರ್ಹಂತನೂ ಕೇವಲಿಯೂ ಧ್ಯಾನಯೋಗ್ಯನಾಗಿದ್ದಾನೆ. ಜಿನೇಶ್ವರ ಅರ್ಹನ್ ಕೇವಲಿ ಈ ಮೂರೂ ಪರ್ಯಾಯವಾಚಕ ಶಬ್ದಗಳಾಗಿವೆ.

**ರಾಗಾದ್ಯವಿದ್ಯಾಜಯನಾಜ್ಜಿನೋಽರ್ಹನ್ಘಾತಿನಾಂ ಹತೇಃ ।**
**ಸ್ವಾತ್ಮೋಪಲಬ್ಧಿತಃ ಸಿದ್ಧೋ ಬುದ್ಧಸ್ತ್ರೈಲೋಕ್ಯಬೋಧನಾತ್ ॥ ೧೨೧ ॥**

ಅವನು ರಾಗಮೊದಲಾದ ಅಜ್ಞಾನಗಳನ್ನು ಜಯಿಸಿರುವುದರಿಂದ ಜಿನನೂ ಘಾತಿಕರ್ಮಗಳನ್ನು ನಾಶಮಾಡಿರುವುದರಿಂದ ಅರ್ಹಂತನೂ ನಿಜಸ್ವರೂಪವನ್ನು ಪಡೆದಿರುವುದರಿಂದ ಸಿದ್ಧನೂ ಮೂರುಲೋಕವನ್ನು ತಿಳಿಯುವುದರಿಂದ ಬುದ್ಧನೂ ಎಂದು ಹೇಳಲ್ಪಡುತ್ತಾನೆ.

**ತ್ರಿಕಾಲಗೋಚರಾನಂತಪರ್ಯಾಯೋಪಚಿತಾರ್ಥದೃಕ್ ।**
**ವಿಶ್ವಜ್ಞೋ ವಿಶ್ವದರ್ಶೀ ಚ ವಿಶ್ವಸಾದ್ಭೂತಚಿದ್ಗುಣಃ ॥ ೧೨೨ ॥**

ಮೂರುಕಾಲಗಳಲ್ಲಿ ಉಂಟಾಗುವ ಅನಂತಪರ್ಯಾಯಯುಕ್ತವಾಗಿರುವ ಪದಾರ್ಥಗಳನ್ನು ನೋಡುವವನೂ ಸಮಸ್ತವಿಷಯಗಳನ್ನು ನೋಡುವವನೂ ತಿಳಿಯುವವನೂ ಲೋಕವನ್ನೆಲ್ಲ ವ್ಯಾಪಿಸಿರುವ ಚೈತನ್ಯಗುಣವುಳ್ಳವನೂ

**ಕೇವಲೀ ಕೇವಲಾಲೋಕವಿಶಾಲಾಮಲಲೋಚನಃ ।**
**ಘಾತಿಕರ್ಮಕ್ಷಯಾದಾವಿರ್ಭೂತಾನಂತಚತುಷ್ಟಯಃ ॥ ೧೨೩ ॥**

ಕೇವಲಜ್ಞಾನವೆಂಬ ಬೆಳಕುಳ್ಳುದೂ ವಿಸ್ತಾರವೂ ನಿರ್ಮಲವೂ ಆದ ಕೇವಲಜ್ಞಾನಜ್ಯೋತಿಯೆಂಬ ನೇತ್ರವುಳ್ಳವನೂ ಘಾತಿಕರ್ಮಕ್ಷಯದಿಂದ ಆವಿರ್ಭವಿಸಿದ ಅನಂತಚತುಷ್ಟಯ (ಅನಂತಜ್ಞಾನ ಅನಂತದರ್ಶನ ಅನಂತವೀರ್ಯ ಅನಂತಸುಖ) ವುಳ್ಳವನೂ ಕೇವಲಿಯೂ

**[೨]ದ್ವಿಷಡ್ಭೇದಗಣಾಕೀರ್ಣಾಂ ಸಭಾವನಿಮಧಿಷ್ಠಿತಃ ।**
**ಪ್ರಾತಿಹಾರ್ಯೈರಭಿವ್ಯಕ್ತತ್ರಿಜಗತ್ಪ್ರಾಭವೋ ವಿಭುಃ ॥ ೧೨೪ ॥**

ಹನ್ನೆರಡುಗಣ(ಸಮೂಹ)ಗಳಿಂದ ವ್ಯಾಪ್ತವಾಗಿರುವ ಸಮವಸರಣ ಸಭಾಭೂಮಿಯಲ್ಲಿರುವವನೂ ಎಂಟು ಪ್ರಾತಿಹಾರ್ಯಗಳಿಂದ ಮೂರುಲೋಕದಲ್ಲಿಯೂ ವ್ಯಕ್ತವಾದ ಪ್ರಭುತ್ವವುಳ್ಳವನೂ ವ್ಯಾಪಕನೂ ಆದ

---

೧ ಅವಸ್ಥಾಂ. ೨ ಕೃತಕೃತ್ಯಃ. ೩ ಜಿನಃ. ೪ ಅಶರೀರಃ. ೫ ಸಿದ್ಧಯೇ ಇತ್ಯಪಿ ಪಾಠಃ. ೬ ಜ್ಞಾತುಂ ಯೋಗ್ಯಃ. ೭ ಅಶರೀರಃ. ೮ ಸರ್ವಹಿತಃ. ೯ ಸರ್ವದರ್ಶೀ. ೧೦ ಪದಾರ್ಥಃ. ೧೧ ಕಿಂಚಿನ್ನ್ಯೂನಘನಾಕೃತಿಃ. ೧೨ ಸ್ವಾಧೀನೀಕೃತನಿಖಿಲಜ್ಞೇಯಪದಾರ್ಥಃ. ೧೩ ಶೋಭನಜ್ಞಾನಃ. ೧೪ ಛಾಯಾಸ್ವರೂಪಮಿವ.

೧ ಪರಿಪೂರ್ಣಜ್ಞಾನಪರಿಣತಿಂ. ೨ ದ್ವಾದಶಗಣಾಕೀರ್ಣಾಂ.

**ನಿಯತಾಕೃತಿರಪ್ಯೇಷ ವಿಶ್ವರೂಪಃ [೧]ಸ್ವಚಿದ್ಗುಣೇ ।**
**[೨]ಸಂಕ್ರಾಂತಾ[೩]ಶೇಷವಿಜ್ಞೇಯಪ್ರತಿಬಿಂಬಾನುಕಾರತಃ ॥ ೧೨೫ ॥**

ಈ ಜಿನೇಶ್ವರನು ನಿಯತವಾದ-ಗೊತ್ತಾದ ಆಕಾರವುಳ್ಳವನಾಗಿದ್ದರೂ ತನ್ನ ಜ್ಞಾನದಲ್ಲಿ ಪ್ರತಿಬಿಂಬಿಸಿರುವ ಸಮಸ್ತ ಜ್ಞೇಯಪದಾರ್ಥಗಳ ಆಕಾರಗಳಿಂದ ಅನೇಕಾಕಾರವುಳ್ಳವನಾಗಿದ್ದಾನೆ.

**ವಿಶ್ವವ್ಯಾಪೀ ಸ ವಿಶ್ವಾರ್ಥವ್ಯಾಪಿವಿಜ್ಞಾನಯೋಗತಃ ।**
**[೪]ವಿಶ್ವಾಸ್ಯೋ ವಿಶ್ವತಶ್ಚಕ್ಷುರ್ವಿಶ್ವಲೋಕಶಿಖಾಮಣಿಃ ॥ ೧೨೬ ॥**

ಆ ಜಿನೇಶ್ವರನು ಸಮಸ್ತಪದಾರ್ಥಗಳಲ್ಲಿಯೂ ವ್ಯಾಪಿಸುವ (ತಿಳಿಯುವ) ಜ್ಞಾನದ ಸಂಬಂಧದಿಂದ ಸರ್ವವ್ಯಾಪಿಯೂ ಸರ್ವತೋಮುಖನೂ ಸಕಲ ಪದಾರ್ಥಗಳಲ್ಲಿಯೂ ದೃಷ್ಟಿಯುಳ್ಳವನೂ ಸಮಸ್ತಲೋಕಕ್ಕೂ ಚೂಡಾಮಣಿ ಯಂತಿರುವವನೂ ಆಗಿದ್ದಾನೆ.

**ಸಂಸಾರಸಾಗರಾದ್ದೂರಮುತ್ತೀರ್ಣಃ [೫]ಸುಖಸಾದ್ಭವಃ ।**
**ವಿಧೂತಸಕಲಕ್ಲೇಶೋ ವಿಚ್ಛಿನ್ನಭವಬಂಧನಃ ॥ ೧೨೭ ॥**

ಸಂಸಾರವೆಂಬ ಸಮುದ್ರದಿಂದ ದೂರವಾಗಿ ದಾಟಿರುವವನೂ ಸುಖಾಧೀನ ನಾದವನೂ ಸಮಸ್ತ ಕ್ಲೇಶಗಳನ್ನು ನಾಶಮಾಡಿದವನೂ ಸಂಸಾರಬಂಧನವನ್ನು ದೂರಮಾಡಿದವನೂ

**ನಿರ್ಭಯಶ್ಚ [೬]ನಿರಾಕಾಂಕ್ಷೋ ನಿರಾಬಾಧೋ ನಿರಾಕುಲಃ ।**
**[೭]ನಿರ್ವ್ಯಪೇಕ್ಷೋ ನಿರಾತಂಕೋ ನಿತ್ಯೋ [೮]ನಿಷ್ಕರ್ಮಕಲ್ಮಷಃ ॥ ೧೨೮ ॥**

ಭಯರಹಿತನೂ ಧನಮೊದಲಾದ ವಸ್ತುಗಳಲ್ಲಿ ಆಸೆಯಿಲ್ಲದವನೂ ಬಾಧೆ ಯಿಲ್ಲದವನೂ ವ್ಯಾಕುಲರಹಿತನೂ ಅಪೇಕ್ಷೆಯಿಲ್ಲದವನೂ ರೋಗರಹಿತನೂ ನಿತ್ಯನೂ ಕರ್ಮಮಲರಹಿತನೂ

**ನವಕೇವಲಲಬ್ಧ್ಯಾದಿಗುಣಾರಬ್ಧ[೯]ವಪುಷ್ಪರಃ ।**
**[೧೦]ಅಭೇದ್ಯಸಂಹತಿರ್ವಜ್ರಶಿಲೋ[೧೧]ತ್ಕೀರ್ಣ ಇವಾ[೧೨]ಚಲಃ ॥ ೧೨೯ ॥**

ನವಕೇವಲಲಬ್ಧಿಮೊದಲಾದ ಗುಣಗಳಿಂದುಂಟಾದ ಉತ್ಕೃಷ್ಟಶರೀರವುಳ್ಳವನೂ ವಜ್ರದ ಕಲ್ಲುಗಳಿಂದ ಮಾಡಲ್ಪಟ್ಟ ಪರ್ವತದಂತೆ ಅಭೇದ್ಯವಾದ ಶರೀರವುಳ್ಳವನೂ

**ಸ ಏವಂ ಲಕ್ಷಣೋ ಧ್ಯೇಯಃ ಪರಮಾತ್ಮಾ ಪರಃ ಪುಮಾನ್ ।**
**ಪರಮೇಷ್ಠೀ ಪರಂ ತತ್ತ್ವಂ ಪರಮಜ್ಯೋತಿರಕ್ಷರಮ್ ॥ ೧೩೦ ॥**

ಈ ಮೇಲೆಹೇಳಿದ ಲಕ್ಷಣಗಳುಳ್ಳವನೂ ಪರಮಾತ್ಮನೂ ಪರಮಪುರುಷನೂ ಪರಮೇಷ್ಠಿಯೂ ಉತ್ಕೃಷ್ಟವಾದ ತತ್ತ್ವವೂ ಉತ್ಕೃಷ್ಟವಾದ ಜ್ಯೋತಿಯೂ ನಾಶರಹಿತನೂ ಆದ ಆ ಜಿನೇಶ್ವರನು ಧ್ಯೇಯ(ಧ್ಯಾನಯೋಗ್ಯ)ನಾಗಿದ್ದಾನೆ.

**ಸಾಧಾರಣಮಿದಂ ಧ್ಯೇಯಂ ಧ್ಯಾನಯೋರ್ಧರ್ಮ್ಯಶುಕ್ಲಯೋಃ ।**
**ವಿಶುದ್ಧಿಸ್ವಾಮಿಭೇದಾತ್ತು [೧೩]ತದ್ವಿಶೇಷೋವಧಾರ್ಯತಾಮ್ ॥ ೧೩೧ ॥**

ಈ ಹಿಂದೆಹೇಳಿದ ಧ್ಯೇಯವು ಧರ್ಮಧ್ಯಾನ ಶುಕ್ಲಧ್ಯಾನಗಳೆರಡಕ್ಕೂ ಸಮಾನವಾಗಿದೆ. ಪರಿಣಾಮವಿಶುದ್ಧಿಯ ಭೇದದಿಂದಲೂ ಧ್ಯಾನವನ್ನು ಮಾಡುವ ಸ್ವಾಮಿ(ಕರ್ತೃ)ಭೇದದಿಂದಲೂ ಆ ಧರ್ಮಧ್ಯಾನಶುಕ್ಲಧ್ಯಾನಗಳಿಗೆ ವಿಶೇಷ(ಭೇದ) ವಿದೆಯೆಂದು ತಿಳಿಯಬೇಕು.

**ಪ್ರಶಸ್ತಪ್ರಣಿಧಾನಂ ಯತ್ಸ್ಥಿರಮೇಕತ್ರ ವಸ್ತುನಿ ।**
**ತದ್ಧ್ಯಾನಮುಕ್ತಂ ಮುಕ್ತ್ಯಂಗಂ ಧರ್ಮ್ಯಂ ಶುಕ್ಲಮಿತಿ ದ್ವಿಧಾ ॥ ೧೩೨ ॥**

೧ ಸ್ವಚಿದ್ಗುಣೈರಿತ್ಯಪಿ ಪಾಠಃ. ೨ ಸಂಲಗ್ನಃ. ೩ ನಿಃಶೇಷಜ್ಞೇಯಃ. ೪ ವಿಶ್ವತೋಮುಖಃ. ೫ ಸುಖಾಧೀನಭೂತಃ. ೬ ಧನಾದಿವಾಂಛಾರಹಿತಃ. ೭ ಕಿಮಪ್ಯನಪೇಕ್ಷ ಸುಖಕಾರೀತಿ ಭಾವಃ. ೮ ಕರ್ಮಮಲರಹಿತ ಇತ್ಯರ್ಥಃ. ೯ ಅತಿಶಯವಪುಃ. ೧೦ ಅಭೇದ್ಯಶರೀರಃ. ೧೧ ಕೃತಃ. ೧೨ ಪರ್ವತಃ. ೧೩ ಧ್ಯಾನವಿಶೇಷಃ.

ಒಂದೇ ವಸ್ತುವಿನಲ್ಲಿ ಸ್ಥಿರವೂ ಪ್ರಶಸ್ತವೂ ಆದ ಏಕಾಗ್ರಪರಿಣಾಮವೇ ಮುಕ್ತಿಗೆ ಸಾಧನವಾದ ಧ್ಯಾನವಾಗಿದೆ. ಅಂತಹ ಧ್ಯಾನವು ಧರ್ಮವೆಂದೂ ಶುಕ್ಲವೆಂದೂ ಎರಡುವಿಧವಾಗಿವೆ.

**[೧]ತತ್ರಾನಪೇತಂ ಯದ್ಧರ್ಮಾತ್ತದ್ಧ್ಯಾನಂ ಧರ್ಮ್ಯಮಿಷ್ಯತೇ ।**
**ಧರ್ಮೋ ಹಿ ವಸ್ತುಯಾಥಾತ್ಮ್ಯಮುತ್ಪಾದಾ[೨]ದಿತ್ರಯಾತ್ಮಕಮ್ ॥ ೧೩೩ ॥**

ಆ ಧರ್ಮಶುಕ್ಲಧ್ಯಾನಗಳೆರಡರಲ್ಲಿ ಧರ್ಮದಿಂದ ಚ್ಯುತವಾಗದಿರುವ ಪರಿ ಣಾಮಕ್ಕೆ ಧರ್ಮಧ್ಯಾನವೆಂದು ಹೆಸರು. ಉತ್ಪತ್ತಿ ನಾಶ ಸ್ಥಿರತ್ವ ಈ ಮೂರರಿಂದ ಕೂಡಿರುವ ವಸ್ತುವಿನ ನಿಜವಾದ ಸ್ವರೂಪಕ್ಕೆ ಧರ್ಮವೆಂದು ಹೆಸರು.

**ತದಾಜ್ಞಾಪಾಯಸಂಸ್ಥಾನವಿಪಾಕವಿಚಯಾತ್ಮಕಮ್ ।**
**ಚತುರ್ವಿಕಲ್ಪಮಾಮ್ನಾತಂ ಧ್ಯಾನ[೩]ಮಾಮ್ನಾಯವೇದಿಭಿಃ ॥ ೧೩೪ ॥**

ಆ ಧರ್ಮಧ್ಯಾನವು ಆಜ್ಞಾವಿಚಯ ಅಪಾಯವಿಚಯ ಸಂಸ್ಥಾನವಿಚಯ ವಿಪಾಕವಿಚಯ ಹೀಗೆ ನಾಲ್ಕುವಿಧವಾಗಿದೆಯೆಂದು ಪರಮಾಗಮವನ್ನು ತಿಳಿದವರು ಹೇಳಿದ್ದಾರೆ.

**ತತ್ರಾಜ್ಞೇತ್ಯಾಗಮಃ ಸೂಕ್ಷ್ಮವಿಷಯಃ ಪ್ರಣಿಗದ್ಯತೇ ।**
**[೪]ದೃಶ್ಯಾನುಮೇಯವರ್ಜ್ಯೇ ಹಿ ಶ್ರದ್ಧೇಯಾಂಶೇ [೫]ಗತಿಃ [೬]ಶ್ರುತೇಃ ॥**

ಆ ನಾಲ್ಕುವಿಧಗಳಲ್ಲಿ ಸೂಕ್ಷ್ಮಾರ್ಥವನ್ನು ವಿಷಯೀಕರಿಸುವ ಆಗಮಕ್ಕೆ ಆಜ್ಞಾವೆಂದು ಹೇಳುತ್ತಾರೆ. ಪ್ರತ್ಯಕ್ಷಾನುಮಾನಪ್ರಮಾಣಗಳಿಗೆ ವಿಷಯವಾಗದಿರುವ ಮತ್ತು ನಂಬಿಕೆಗೆ ಯೋಗ್ಯವಾದ ವಿಷಯದಲ್ಲಿ ಆಗಮದ ಜ್ಞಾನವು ಪ್ರವರ್ತಿಸುತ್ತದೆ.

**ಶ್ರುತಿಃ ಸೂನೃತಮಾಜ್ಞಾಪ್ತವಚೋ[೭]ವೇದೋಂಗಮಾಗಮಃ ।**
**ಆಮ್ನಾಯಶ್ಚೇತಿ ಪರ್ಯಾಯೈಃ ಸೋಧಿಗಮ್ಯೋ ಮನೀಷಿಭಿಃ ॥ ೧೩೬ ॥**

ವಿದ್ವಾಂಸರು ಶ್ರುತಿ ಸೂನೃತ ಆಜ್ಞಾ ಆಪ್ತವಚನ ವೇದ ಅಂಗ ಆಗಮ ಆಮ್ನಾಯ ಇವುಗಳು ಆ ಶಾಸ್ತ್ರಕ್ಕೆ ಪರ್ಯಾಯನಾಮಗಳೆಂದು ತಿಳಿಯಬೇಕು.

**ಅನಾದಿನಿಧನಂ ಸೂಕ್ಷ್ಮಂ [೮]ಸದ್ಭೂತಾರ್ಥಪ್ರಕಾಶನಮ್ ।**
**ಪುರುಷಾರ್ಥೋಪದೇಶಿತ್ವಾದ್ಭೂತಹಿತಮೂರ್ಜಿತಮ್ ॥ ೧೩೭ ॥**

ಆದ್ಯಂತರಹಿತವೂ ಸೂಕ್ಷ್ಮವೂ ನಿಜವಾದ ಅರ್ಥವನ್ನು ಪ್ರಕಾಶಪಡಿಸುವುದೂ ಪರಮಪುರುಷಾರ್ಥ(ಮೋಕ್ಷ)ವನ್ನು ಉಪದೇಶಮಾಡುವುದರಿಂದ ಪ್ರಾಣಿಗಳಿಗೆ ಹಿತಕರವೂ ಶ್ರೇಷ್ಠವೂ

**ಅಜಯ್ಯಮಮಿತಂ [೯]ತೀರ್ಥ್ಯೈರನಾಲೀಢಮಹೋದಯಮ್ ।**
**ಮಹಾನುಭಾವಮರ್ಥಾವಗಾಢಂ ಗಂಭೀರ[೧೦]ಶಾಸನಮ್ ॥ ೧೩೮ ॥**

ಪರವಾದಿಗಳಿಂದ ಜಯಿಸುವುದಕ್ಕೆ ಅಶಕ್ಯವೂ ಅಪಾರವೂ ಪರವಾದಿಗಳಿಗೆ ಅಗೋಚರವಾದ ಮಹಾಶ್ರೇಷ್ಠತೆಯುಳ್ಳುದೂ ಮಹಾಮಹಿಮೆಯುಳ್ಳುದೂ ಅರ್ಥಗರ್ಭಿತವಾದುದೂ ಗಂಭೀರವಾದ ಉಪದೇಶವುಳ್ಳುದೂ

**ಪರಂ ಪ್ರವಚನಂ [೧೧]ಸೂಕ್ತಮಾಪ್ತೋಪಜ್ಞಮ[೧೨]ನನ್ಯಥಾ ।**
**ಮನ್ಯಮಾನೋ ಮುನಿರ್ಧ್ಯಾಯೇದ್ಭಾವಾನಾಜ್ಞಾವಿಭಾವಿತಾನ್ ॥ ೧೩೯ ॥**

ಸತ್ಯವೂ ಆಪ್ತ(ಸರ್ವಜ್ಞ)ರ ಜ್ಞಾನಸ್ವರೂಪವೂ ಆದ ಆಗಮವನ್ನು ಇದ್ದಹಾಗೆ ತಿಳಿಯುವ ಮುನಿಯು ಪರಮಾಗಮದಲ್ಲಿ ಹೇಳಿರುವ ಪದಾರ್ಥಗಳನ್ನು ಧ್ಯಾನಮಾಡಬೇಕು.

೧ ಧ್ಯಾನದ್ವಯೇ. ೨ ಉತ್ಪಾದವ್ಯಯಧ್ರೌವ್ಯಾತ್ಮಕಂ. ೩ ಪರಮಾಗಮವೇದಿಭಿಃ. ೪ ಪ್ರತ್ಯಕ್ಷಾನುಮಾನರಹಿತೇ. ೫ ಅವಗಮನಂ. ೬ ಆಗಮಸ್ಯ. ೭ ವೇದಾಂಗಮಿತ್ಯಪಿ ಪಾಠಃ. ೮ ಸತ್ಯಸ್ವರೂಪಾರ್ಥಸ್ಯ. ೯ ಪರವಾದಿಭಿಃ. ೧೦ ಆಜ್ಞಾ. ೧೧ ಸೂಕ್ಷ್ಮಮಿತ್ಯಪಿ ಪಾಠಃ. ೧೨ ವಿಪರೀತಾಭಾವೇನ.

**ಜೈನೀಂ ಪ್ರಮಾಣಯನ್ನಾಜ್ಞಾಂ ಯೋಗೀ ಯೋಗವಿದಾಂ ವರಃ ।**
**ಧ್ಯಾಯೇದ್ಧರ್ಮಾಸ್ತಿಕಾಯಾದೀನ್ಭಾವಾನ್ಸೂಕ್ಷ್ಮಾನ್ಯಥಾಗಮಮ್ ॥ ೧೪೦ ॥**

ಧ್ಯಾನವನ್ನು ತಿಳಿದವರಲ್ಲಿ ಶ್ರೇಷ್ಠನಾದ ಯೋಗಿಯು ಜಿನೇಶ್ವರನ ಆಜ್ಞೆಯು ಪ್ರಮಾಣವೆಂದು ನಂಬಿ ಸೂಕ್ಷ್ಮವಾಗಿರುವ ಧರ್ಮಾಸ್ತಿಕಾಯಮೊದಲಾದ ಪದಾರ್ಥಗಳನ್ನು ಶಾಸ್ತ್ರದಲ್ಲಿ ಹೇಳಿರುವಂತೆ ಧ್ಯಾನಮಾಡಬೇಕು.

**ಆಜ್ಞಾವಿಚಯ ಏಷ ಸ್ಯಾದಪಾಯವಿಚಯಃ ಪುನಃ ।**
**[೧]ತಾಪತ್ರಯಾದಿಜನ್ಮಾಬ್ಧಿಗತಾಪಾಯವಿಚಿಂತನಮ್ ॥ ೧೪೧ ॥**

ಈ ಹಿಂದೆಹೇಳಿದ ಪ್ರಕಾರವಾದ ಧ್ಯಾನವು ಆಜ್ಞಾವಿಚಯಧ್ಯಾನವೆನಿಸುವುದು. ಜನ್ಮ ಜರಾ ಮರಣ ಅಥವಾ ರಾಗ ದ್ವೇಷ ಮೋಹ ರೂಪವಾದ ಭವವೆಂಬ ಸಮುದ್ರದಲ್ಲಿರುವ ಅಪಾಯವನ್ನು ಚಿಂತಿಸುವುದು ಅಪಾಯವಿಚಯವೆಂಬ ಧರ್ಮಧ್ಯಾನವಾಗಿದೆ.

**ತದಪಾಯಪ್ರತೀಕಾರಚಿತ್ರೋಪಾಯಾನುಚಿಂತನಮ್ ।**
**[೨]ಅತ್ರೈವಾಂತರ್ಗತಂ ಧ್ಯೇಯಮನುಪ್ರೇಕ್ಷಾದಿಲಕ್ಷಣಮ್ ॥ ೧೪೨ ॥**

ಆ ಭವಸಾಗರದಲ್ಲಿ ಉಂಟಾಗುವ ಅಪಾಯವನ್ನು ಹೋಗಲಾಡಿಸುವುದಕ್ಕೋಸ್ಕರ ನಾನಾವಿಧವಾದ ಉಪಾಯಗಳನ್ನು ಚಿಂತಿಸುವುದೂ ಅನುಪ್ರೇಕ್ಷಾದಿ ಲಕ್ಷಣಗಳುಳ್ಳ ಧ್ಯೇಯವೂ ಈ ಅಪಾಯವಿಚಯಧರ್ಮಧ್ಯಾನದಲ್ಲಿಯೇ ಅಂತರ್ಭಾವವಾಗುತ್ತವೆ.

**ಶುಭಾಶುಭವಿಭಕ್ತಾನಾಂ ಕರ್ಮಣಾಂ ಪರಿಪಾಕತಃ ।**
**ಭವಾವರ್ತಸ್ಯ ವೈಚಿತ್ರ್ಯ[೩]ಮಭಿಸಂದಧತೋ ಮುನೇಃ ॥ ೧೪೩ ॥**

**ವಿಪಾಕವಿಚಯಂ ಧರ್ಮ್ಯಮಾಮ್ನಂತಿ [೪]ಕೃತಾಗಮಾಃ ।**
**ವಿಪಾಕಶ್ಚ ದ್ವಿಧಾ[೫]ಮ್ನಾತಃ ಕರ್ಮಣಾ[೬]ಮಾಪ್ತಸೂಕ್ತಿಷು ॥ ೧೪೪ ॥**

ಶುಭಾಶುಭಕರ್ಮಗಳ ಪರಿಪಾಕದಿಂದುಂಟಾದ ಭವವೆಂಬ ಸುಳಿಯ ವಿಚಿತ್ರತೆಯನ್ನು ಧ್ಯಾನಿಸುವ ಮುನಿಯ ಚಿಂತನೆಗೆ ಸಂಪೂರ್ಣವಾದ ಆಗಮಜ್ಞಾನಿಗಳು ವಿಪಾಕವಿಚಯಧರ್ಮಧ್ಯಾನವೆಂದು ಹೇಳುತ್ತಾರೆ. ಪರಮಾಗಮಗಳಲ್ಲಿ ಕರ್ಮಗಳ ಪರಿಪಾಕವು ಎರಡುವಿಧವಾಗಿದೆಯೆಂದು ಹೇಳಲ್ಪಟ್ಟಿದೆ.

**ಯಥಾಕಾಲಮುಪಾಯಾಚ್ಚ ಫಲ[೭]ಪಕ್ತಿರ್ವನಸ್ಪತೇಃ ।**
**ಯಥಾ ತಥೈವ ಕರ್ಮಾಪಿ ಫಲಂ ದತ್ತೇ ಶುಭಾಶುಭಮ್ ॥ ೧೪೫ ॥**

ವೃಕ್ಷದ ಫಲವು ಯೋಗ್ಯಕಾಲದಲ್ಲಿಯೂ ಉಪಾಯ(ಅಡಹಾಕುವುದು)ದಿಂದಲೂ ಹೇಗೆ ಹಣ್ಣಾಗುವುದೋ ಹಾಗೆಯೇ ಶುಭಾಶುಭಕರ್ಮವೂ ಫಲ ಕೊಡುತ್ತದೆ. ಕರ್ಮವು ನಿಯತಕಾಲದಲ್ಲಿಯೂ ತಪಸ್ಸುಮೊದಲಾದ ಉಪಾಯದಿಂದ ಮಧ್ಯಕಾಲದಲ್ಲಿಯೂ ಪಕ್ವವಾಗುತ್ತದೆ ಅಂದರೆ ಫಲ ಕೊಡುತ್ತದೆಯೆಂದು ಭಾವವು.

**ಮೂಲೋತ್ತರಪ್ರಕೃತ್ಯಾದಿಬಂಧ[೮]ಸತ್ತ್ವಾ[೯]ದ್ಯುಪಾಶ್ರಯಃ ।**
**ಕರ್ಮಣಾಮುದಯಶ್ಚಿತ್ರಃ ಪ್ರಾಪ್ಯ ದ್ರವ್ಯಾ[೧೦]ದಿಸನ್ನಿಧಿಮ್ ॥ ೧೪೬ ॥**

ಜ್ಞಾನಾವರಣ ಮೊದಲಾದ ಎಂಟು ಮೂಲಪ್ರಕೃತಿಗಳ ಮತ್ತು ಮತಿಜ್ಞಾನಾವರಣಮೊದಲಾದ ಉತ್ತರಪ್ರಕೃತಿಗಳ ಬಂಧ ಸತ್ತ್ವ ಉದಯ ಉದೀರಣಾ ಈ ಅವಸ್ಥೆಗಳನ್ನು ಹೊಂದಿರುವ ಕರ್ಮಗಳ ಉದಯ(ಪಾಕ)ವು, ದ್ರವ್ಯ ಕ್ಷೇತ್ರ ಕಾಲ ಭಾವ ಇವುಗಳ ಸಾನ್ನಿಧ್ಯವನ್ನು ಹೊಂದಿ ನಾನಾಪ್ರಕಾರವಾಗಿ ಆಗುತ್ತದೆ. ದ್ರವ್ಯ ಕ್ಷೇತ್ರ

೧ ಜಾತಿಜರಾಮರಣರೂಪಂ, ರಾಗದ್ವೇಷಮೋಹರೂಪಂ ವಾ. ೨ ಅಪಾಯವಿಚಯೇ. ೩ ಅಪೀತ್ಯಪಿ ಪಾಠಃ, ಧ್ಯಾಯತಃ. ೪ ಸಂಪೂರ್ಣಾಗಮಾಃ. ೫ ಜ್ಞಾತ ಇತ್ಯಪಿ ಪಾಠಃ. ೬ ಪರಮಾಗಮೇಷು. ೭ ಪಾಕಃ. ೮ ಸತ್ತಾದೀತ್ಯಪಿ ಪಾಠಃ. ೯ ಆದಿಶಬ್ದೇನೋದಯೋದೀರಣೇ ಗೃಹ್ಯೇತೇ. ೧೦ ದ್ರವ್ಯಕ್ಷೇತ್ರಕಾಲಭಾವಾಃ.

ಕಾಲ ಭಾವ ಇವುಗಳ ನಿಮಿತ್ತದಿಂದ ಕರ್ಮಗಳ ಉದಯವು ವಿಲಕ್ಷಣವಾಗಿ ಆಗುತ್ತದೆಂದು ಭಾವವು.

**[೧]ಯತಶ್ಚ [೨]ತದ್ವಿಪಾಕಜ್ಞ[೩]ಸ್ತದಪಾಯಾಯ ಚೇಷ್ಟತೇ ।**
**ತತೋ ಧ್ಯೇಯಮಿದಂ ಧ್ಯಾನಂ ಮುಕ್ತ್ಯುಪಾಯೋ ಮುಮುಕ್ಷುಭಿಃ ॥**

ಕರ್ಮಗಳ ಉದಯವನ್ನು ತಿಳಿದಿರುವ ಪುರುಷನು ಆ ಕರ್ಮಗಳನ್ನು ದೂರ ಮಾಡುವುದಕ್ಕೆ ಉದ್ಯತನಾಗುವುದರಿಂದ ಮುಕ್ತಿಯನ್ನು ಪಡೆಯಬೇಕೆಂಬ ಇಚ್ಛೆಯುಳ್ಳ ಯೋಗಿಗಳು ಮುಕ್ತಿಗೆ ಸಾಧನವಾದ ಈ ವಿಪಾಕವಿಚಯಧರ್ಮಧ್ಯಾನವನ್ನು ಧ್ಯಾನಿಸಬೇಕು.

**ಸಂಸ್ಥಾನವಿಚಯಂ ಪ್ರಾಹುರ್ಲೋಕಾಕಾರಾನುಚಿಂತನಮ್ ।**
**ತದಂತರ್ಭೂತಜೀವಾದಿತತ್ತ್ವಾ[೪]ನ್ವೀಕ್ಷಣ[೫]ಲಕ್ಷಿತಮ್ ॥ ೧೪೮ ॥**

ಲೋಕದೊಳಗಿರುವ ಜೀವಮೊದಲಾದ ತತ್ತ್ವಗಳ ವಿಚಾರಯುಕ್ತವಾದ ಲೋಕಾಕಾರಚಿಂತನೆಯನ್ನು ಸಂಸ್ಥಾನವಿಚಯಧರ್ಮಧ್ಯಾನವನ್ನಾಗಿ ಹೇಳುತ್ತಾರೆ. ಜೀವಾದಿತತ್ತ್ವಗಳೊಡಗೂಡಿದ ಲೋಕದ ಆಕಾರವನ್ನು ಚಿಂತಿಸುವುದು ಸಂಸ್ಥಾನವಿಚಯವೆಂದರ್ಥವು.

**ದ್ವೀಪಾಬ್ಧಿವಲಯಾನದ್ರೀನ್ಸರಿತಶ್ಚ ಸರಾಂಸಿ ಚ ।**
**ವಿಮಾನಭವನವ್ಯಂತರಾವಾಸನರಕಕ್ಷಿತೀಃ ॥ ೧೪೯ ॥**

**ತ್ರಿಜಗತ್ಸನ್ನಿವೇಶೇನ ಸಮಮೇತಾನ್ಯಥಾಗಮಮ್ ।**
**ಭಾವಾನ್ಮುನಿರನುಧ್ಯಾಯೇತ್ಸಂಸ್ಥಾನವಿಚಯೋಪಗಃ ॥ ೧೫೦ ॥**

ಸಂಸ್ಥಾನವಿಚಯಧರ್ಮಧ್ಯಾನವನ್ನು ಹೊಂದಿದ ಮುನಿಯು ಮೂರು ಲೋಕದ ರಚನೆಯನ್ನೂ ದ್ವೀಪ ಸಮುದ್ರ ಪರ್ವತ ನದೀ ಸರೋವರ ವಿಮಾನ ಭವನದೇವತೆಗಳ ವಾಸಸ್ಥಾನ ವ್ಯಂತರದೇವತೆಗಳ ವಾಸಸ್ಥಾನ ನರಕಭೂಮಿ ಈ ಪದಾರ್ಥಗಳನ್ನು ಆಗಮ(ಶಾಸ್ತ್ರ)ದಲ್ಲಿ ಹೇಳಿರುವಂತೆ ಧ್ಯಾನಮಾಡಬೇಕು.

**ಜೀವಭೇದಾಂಶ್ಚ [೬]ತತ್ರತ್ಯಾನ್ಧ್ಯಾಯೇನ್ಮುಕ್ತೇತರಾತ್ಮಕಾನ್ ।**
**ಜ್ಞತ್ವಕರ್ತೃತ್ವಭೋಕ್ತೃತ್ವದ್ರಷ್ಟೃತ್ವಾದೀಂಶ್ಚ [೭]ತದ್ಗುಣಾನ್ ॥ ೧೫೧ ॥**

ಆ ಮೂರು ಲೋಕದಲ್ಲಿರುವ ಮತ್ತು ಮುಕ್ತಜೀವಗಳಲ್ಲದ ಸಂಸಾರಿ ಜೀವಗಳ ಭೇದಗಳನ್ನೂ, ತಿಳುವಳಿಕೆ ಕರ್ತೃತ್ವ ಭೋಕ್ತೃತ್ವ ನೋಡುವಸ್ವಭಾವ ಮೊದಲಾದ ಜೀವಗುಣಗಳನ್ನೂ ಧ್ಯಾನಮಾಡಬೇಕು.

**ತೇಷಾಂ ಸ್ವಕೃತಕರ್ಮಾನುಭಾವೋತ್ಥಮತಿದುಸ್ತರಮ್ ।**
**ಭವಾಬ್ಧಿಂ ವ್ಯಸನಾವರ್ತಂ ದೋಷಯಾದಃಕುಲಾಕುಲಮ್ ॥ ೧೫೨ ॥**

**ಸಜ್ಜ್ಞಾನನಾವಾ ಸಂತಾರ್ಯಮತಾರ್ಯಂ [೮]ಗ್ರಂಥಿಕಾತ್ಮಭಿಃ ।**
**ಅಪಾರಮತಿಗಂಭೀರಂ ಧ್ಯಾಯೇದಧ್ಯಾತ್ಮವಿದ್ಯತಿಃ ॥ ೧೫೩ ॥**

ಆ ಸಂಸಾರಿಜೀವಗಳು ತಾವು ಮಾಡಿದ ಕರ್ಮಾತಿಶಯದಿಂದುಂಟಾದುದೂ ದಾಟುವುದಕ್ಕೆ ಅತ್ಯಂತ ಕಠಿನವೂ ವ್ಯಸನ(ದುಃಖ)ಗಳೆಂಬ ಸುಳಿಗಳುಳ್ಳದೂ ದೋಷಗಳೆಂಬ ಜಲಜಂತುಗಳ ಸಮೂಹದಿಂದ ವ್ಯಾಪ್ತವೂ ಸಮ್ಯಜ್ಜ್ಞಾನವೆಂಬ ದೋಣಿಯಿಂದ ದಾಟುವುದಕ್ಕೆ ಯೋಗ್ಯವೂ ಪರಿಗ್ರಹವುಳ್ಳವರಿಂದ ದಾಟುವುದಕ್ಕಶಕ್ಯವೂ ಅಪಾರವೂ ಅತ್ಯಂತಗಂಭೀರ(ಆಳ)ವೂ ಆದ ಭವವೆಂಬ ಸಮುದ್ರವನ್ನು ಅಧ್ಯಾತ್ಮಜ್ಞಾನಿಯಾದ ಯತಿಯು ಧ್ಯಾನಮಾಡಬೇಕು. ಸಂಸಾರಸ್ವರೂಪವನ್ನು ಧ್ಯಾನಮಾಡಬೇಕೆಂದರ್ಥವು.

೧ ಯಸ್ಮಾತ್ಕಾರಣಾತ್. ೨ ಕರ್ಮಣಾಮುದಯವಿತ್ಪುಮಾನ್. ೩ ಕರ್ಮಾಪಾಯಾಯ. ೪ ವಿಚಾರಃ. ೫ ಲಕ್ಷಣಮಿತ್ಯಪಿ ಪಾಠಃ. ೬ ತ್ರಿಜಗತಿ ಭವಾನ್. ೭ ಜೀವಗುಣಾನ್. ೮ ಪರಿಗ್ರಹವದ್ಭಿಃ.

**ಕಿಮತ್ರ ಬಹುನೋಕ್ತೇನ ಸರ್ವೋಪ್ಯಾಗಮವಿಸ್ತರಃ ।**
**[೧]ನಯಭಂಗಶತಾಕೀರ್ಣೋ ಧ್ಯೇಯೋಧ್ಯಾತ್ಮವಿಶುದ್ಧಯೇ ॥ ೧೫೪ ॥**

ಈ ವಿಷಯದಲ್ಲಿ ಹೆಚ್ಚು ಹೇಳುವುದರಿಂದೇನುಪ್ರಯೋಜನವು ? ಅನೇಕನಯ ಭೇದಗಳಿಂದ ವ್ಯಾಪ್ತವಾಗಿರುವ ವಿಸ್ತಾರವಾದ ಆಗಮವನ್ನೆಲ್ಲ ಆತ್ಮ ವಿಶುದ್ಧಿ ಗೋಸ್ಕರ ಧ್ಯಾನಮಾಡಬೇಕು.

**[೨]ತದಪ್ರಮತ್ತತಾಲಂಬಂ ಸ್ಥಿತಿಮಾಂತರ್ಮುಹೂರ್ತಿಕೀಮ್ ।**
**ದಧಾನ[೩]ಮಪ್ರಮತ್ತೇಷು ಪರಾಂ ಕೋಟಿಮಧಿಷ್ಠಿತಮ್ ॥ ೧೫೫ ॥**

ಜಾಗರೂಕತೆಯನ್ನಾಶ್ರಯಿಸಿರುವುದೂ ಅಂತರ್ಮುಹೂರ್ತಸ್ಥಿತಿಯುಳ್ಳುದೂ ಆದ ಆ ಧರ್ಮಧ್ಯಾನವು ಅಪ್ರಮತ್ತರಲ್ಲಿ (ಅಪ್ರಮತ್ತ ಮೊದಲಾದ ಗುಣ ಸ್ಥಾನವರ್ತಿಗಳಲ್ಲಿ) ಉತ್ಕೃಷ್ಟಾವಸ್ಥೆಯನ್ನು ಹೊಂದುತ್ತದೆ.

**ಸದ್ದೃಷ್ಟಿಷು ಯಥಾಮ್ನಾಯಂ ಶೇಷೇಷ್ವಪಿ ಕೃತಸ್ಥಿತಿ ।**
**ಪ್ರಕೃಷ್ಟಶುದ್ಧಿಮಲ್ಲೇಶ್ಯಾತ್ರಯೋ[೪]ಪೋದ್ಬಲಬೃಂಹಿತಮ್ ॥ ೧೫೬ ॥**

ಶಾಸ್ತ್ರದಲ್ಲಿ ಹೇಳಿರುವಂತೆ ಅಸಂಯತಮೊದಲಾದ ಬೇರೆ ಸಮ್ಯಗ್ದೃಷ್ಟಿ ಗಳಲ್ಲಿಯೂ ಇರುವುದೂ ಅತ್ಯಂತ ಶುದ್ಧವಾದ ಪೀತ ಪದ್ಮ ಶುಕ್ಲಲೇಶ್ಯೆಗಳ ಸಹಾಯಶಕ್ತಿಯಿಂದ ವೃದ್ಧಿಹೊಂದಿರುವುದೂ

**ಕ್ಷಾಯೋಪಶಮಿಕಂ ಭಾವಂ ಸ್ವಸಾತ್ಕೃತ್ಯ ವಿಜೃಂಭಿತಮ್ ।**
**ಮಹೋದರ್ಕಂ ಮಹಾ[೫]ಪ್ರಾಜ್ಞೈರ್ಮಹರ್ಷಿಭಿರುಪಾಸಿತಮ್॥ ೧೫೭ ॥**

ಕರ್ಮಗಳ ಕ್ಷಯ ಮತ್ತು ಉಪಶಮಾವಸ್ಥೆಗಳಲ್ಲಿ ಉಂಟಾಗುವ ಕ್ಷಾಯೋಪ ಶಮಿಕಭಾವವನ್ನು ತನ್ನ ವಶಪಡಿಸಿಕೊಂಡು ವೃದ್ಧಿಹೊಂದಿದುದೂ ಉತ್ಕೃಷ್ಟವಾದ ಉತ್ತರಫಲವುಳ್ಳುದೂ ಮಹಾಬುದ್ಧಿಶಾಲಿಗಳಾದ ಮಹರ್ಷಿಗಳಿಂದ ಸೇವಿಸ ಲ್ಪಟ್ಟುದೂ

**ವಸ್ತುಧರ್ಮಾನುಯಾಯಿತ್ವಾತ್ಪ್ರಾಪ್ತಾನ್ವರ್ಥನಿರುಕ್ತಿಕಮ್ ।**
**ಧರ್ಮ್ಯಂ ಧ್ಯಾನಮನುಧ್ಯೇಯಂ ಯಥೋಕ್ತಧ್ಯೇಯವಿಸ್ತರಮ್ ॥**

ವಸ್ತುಗಳ ಧರ್ಮವನ್ನನುಸರಿಸಿ ಉಂಟಾಗುವುದರಿಂದ ಸಾರ್ಥಕವಾದ ಹೆಸ ರುಳ್ಳುದೂ ಹಿಂದೆ ಹೇಳಿದಂತೆ ವಿಸ್ತಾರವಾದ ಧ್ಯಾನಯೋಗ್ಯ ವಿಷಯಗಳುಳ್ಳುದೂ ಆದ ಧರ್ಮಧ್ಯಾನವನ್ನು ಧ್ಯಾನಿಸಬೇಕು.

**ಪ್ರಸನ್ನಚಿತ್ತತಾ ಧರ್ಮಸಂವೇಗಃ [೬]ಶುಭಯೋಗತಾ ।**
**ಸುಶ್ರುತತ್ವಂ ಸಮಾಧಾನ[೭]ಮಾಜ್ಞಾಧಿಗಮಜಾ ರುಚಿಃ ॥ ೧೫೯ ॥**

ಮನಸ್ಸಿನ ಪರಿಶುದ್ಧತೆಯೂ ಧರ್ಮದಲ್ಲಿ ಪ್ರೀತಿಯೂ ಶುಭಪರಿಣಾಮತ್ವವೂ ಚೆನ್ನಾಗಿ ಶಾಸ್ತ್ರಪರಿಜ್ಞಾನವೂ ಸಮಾಧಾನ(ಶಾಂತಿ)ವೂ ಜಿನೇಶ್ವರರು ಅಸತ್ಯವನ್ನು ಹೇಳುವವರಲ್ಲವೆಂಬ ನಂಬಿಕೆಯಿಂದಲೂ ಶಾಸ್ತ್ರಪರಿಜ್ಞಾನದಿಂದಲೂ ಉಂಟಾದ ಅಭಿರುಚಿ(ಪ್ರೀತಿ)ಯೂ

**ಭವಂತ್ಯೇತಾನಿ ಲಿಂಗಾನಿ ಧರ್ಮ್ಯಸ್ಯಾಂತರ್ಗತಾನಿ ವೈ ।**
**ಸಾನುಪ್ರೇಕ್ಷಾಶ್ಚ ಪೂರ್ವೋಕ್ತಾ ವಿವಿಧಾಃ ಶುಭಭಾವನಾಃ ॥ ೧೬೦ ॥**

ಹಿಂದೆಹೇಳಿದ ಅನುಪ್ರೇಕ್ಷಾಸಹಿತವೂ ನಾನಾವಿಧವೂ ಆದ ಶುಭಭಾವನೆಗಳೂ ಇವುಗಳೆಲ್ಲ ಧರ್ಮಧ್ಯಾನದ ಅಂತರಂಗಚಿನ್ಹೆಗಳಾಗಿವೆ.

**ಬಾಹ್ಯಂ ಚ ಲಿಂಗಮಂಗಾನಾಂ [೮]ಸನ್ನಿವೇಶಃ ಪುರೋದಿತಃ ।**
**ಪ್ರಸನ್ನವಕ್ತ್ರತಾ ಸೌಮ್ಯಾ ದೃಷ್ಟಿಶ್ಚೇತ್ಯಾದಿ ಲಕ್ಷ್ಯತಾಂ ॥ ೧೬೧ ॥**

ಹಿಂದೆಹೇಳಿದ ಅವಯವಗಳನ್ನು ಸರಿಯಾಗಿರಿಸಿಕೊಳ್ಳುವಿಕೆಯೂ (ಪಲ್ಯಂಕಾಸನ ಮೊದಲಾದುದೂ) ಪ್ರಸನ್ನವಾದ ಮುಖಭಾವವೂ ಸೌಮ್ಯವಾದ ದೃಷ್ಟಿಯೂ ಇವುಮೊದಲಾದುವು ಆ ಧರ್ಮಧ್ಯಾನದ ಬಾಹ್ಯಚಿನ್ಹೆಗಳಾಗಿವೆ.

**ಫಲಂ ಧ್ಯಾನವರಸ್ಯಾಸ್ಯ ವಿಪುಲಾ ನಿರ್ಜರೈನಸಾಮ್ ।**
**ಶುಭಕರ್ಮೋದಯೋದ್ಭೂತಂ ಸುಖಂ ಚ ವಿಬುಧೇಶಿನಾಮ್॥ ೧೬೨ ॥**

ಹೆಚ್ಚಾಗಿ ಕರ್ಮಗಳು ನಿರ್ಜರೆ(ನಾಶ)ಯಾಗುವುದೂ ಶುಭಕರ್ಮಗಳ ಉದಯ ದಿಂದುಂಟಾದ ದೇವೇಂದ್ರರ ಸುಖವೂ ಈ ಶ್ರೇಷ್ಠವಾದ ಧರ್ಮಧ್ಯಾನದ ಫಲ ಗಳಾಗಿವೆ.

**ಸ್ವರ್ಗಾಪವರ್ಗಸಂಪ್ರಾಪ್ತಿಂ ಫಲಮಸ್ಯ ಪ್ರಚಕ್ಷತೇ ।**
**ಸಾಕ್ಷಾತ್ಸ್ವರ್ಗಪರಿಪ್ರಾಪ್ತಿಃ ಪಾರಂಪರ್ಯಾತ್ಪರಂ ಪದಮ್ ॥ ೧೬೩ ॥**

ಸ್ವರ್ಗಮೋಕ್ಷಗಳ ಪ್ರಾಪ್ತಿಯು ಈ ಧರ್ಮಧ್ಯಾನಕ್ಕೆ ಫಲವೆಂದು ಹೇಳುತ್ತಾರೆ. ಸಾಕ್ಷಾತ್ತಾಗಿ ಸ್ವರ್ಗಪ್ರಾಪ್ತಿಯೂ ಪರಂಪರೆಯಿಂದ ಮೋಕ್ಷಪ್ರಾಪ್ತಿಯೂ ಆಗುತ್ತವೆ. ಧರ್ಮ್ಯಧ್ಯಾನದಿಂದ ಶುಕ್ಲಧ್ಯಾನವೂ, ಶುಕ್ಲಧ್ಯಾನದಿಂದ ಮೋಕ್ಷಪ್ರಾಪ್ತಿಯೂ ಆಗು ವುದೆಂದು ಭಾವವು.

**ಧ್ಯಾನೇಪ್ಯು[೧]ಪರತೇ ಧೀಮಾ[೨]ನಭೀಕ್ಷ್ಣಂ ಭಾವಯೇನ್ಮುನಿಃ ।**
**ಸಾನುಪ್ರೇಕ್ಷಾಃ ಶುಭೋದರ್ಕಾ ಭವಾಭಾವಾಯ ಭಾವನಾಃ ॥ ೧೬೪ ॥**

ಧ್ಯಾನವು ಪೂರ್ಣವಾದರೂ ಬುದ್ಧಿಶಾಲಿಯಾದ ಮುನಿಯು ಸಂಸಾರದ ನಾಶ ಕ್ಕೋಸ್ಕರ ಅನುಪ್ರೇಕ್ಷಾಸಹಿತವೂ, ಶುಭವೂ ಆದ ಉತ್ತರಫಲಗಳುಳ್ಳ ಭಾವನೆ ಗಳನ್ನು ಪುನಃ ಪುನಃ ಭಾವಿಸಬೇಕು.

**ಇತ್ಯುಕ್ತಲಕ್ಷಣಂ ಧರ್ಮ್ಯಂ ಮಗಧಾಧೀಶ ! ನಿಶ್ಚಿನು ।**
**ಶುಕ್ಲಧ್ಯಾನಮಿತೋ ವಕ್ಷ್ಯೇ ಸಾಕ್ಷಾ[೩]ನ್ಮುಕ್ತ್ಯಂಗಮಂಗಿನಾಮ್ ॥ ೧೬೫ ॥**

ಎಲೈ ಶ್ರೇಣಿಕನೆ ! ಧರ್ಮಧ್ಯಾನವು ಈ ಹಿಂದೆಹೇಳಿದ ಲಕ್ಷಣಗಳುಳ್ಳುದೆಂದು ನಿಶ್ಚಯಿಸು. ಇನ್ನು ಪ್ರಾಣಿಗಳಿಗೆ ಸಾಕ್ಷಾತ್ತಾಗಿ ಮುಕ್ತಿಗೆ ಸಾಧನವಾದ ಶುಕ್ಲ ಧ್ಯಾನವನ್ನು ಹೇಳುವೆನು.

**ಕಷಾಯಮಲವಿಶ್ಲೇಷಾಚ್ಛುಕ್ಲಶಬ್ದಾಭಿಧೇಯತಾಮ್ ।**
**[೪]ಉಪೇಯಿವದಿದಂ ಧ್ಯಾನಂ [೫]ಸಾಂತರ್ಭೇದಂ [೬]ನಿಬೋಧ ಮೇ ॥**

ಕ್ರೋಧಮೊದಲಾದ ಕಷಾಯಗಳೆಂಬ ಕೊಳೆಯು ನಾಶವಾಗಿರುವುದರಿಂದ ಶುಕ್ಲವೆಂಬ ಶಬ್ದಾರ್ಥವನ್ನು ಹೊಂದಿರುವುದೂ ಅಂತರ್ಭೇದಗಳುಳ್ಳುದೂ ಆದ ಈ ಧ್ಯಾನವನ್ನು ನನ್ನಿಂದ ತಿಳಿ.

**ಶುಕ್ಲಂ ಪರಮಶುಕ್ಲಂ ಚೇ[೭]ತ್ಯಾಮ್ನಾಯೇ ತದ್ವಿಧೋದಿತಮ್ ।**
**ಛದ್ಮಸ್ಥಸ್ವಾಮಿಕಂ ಪೂರ್ವಂ ಪರಂ ಕೇವಲಿನಾಂ ಮತಮ್ ॥ ೧೬೭ ॥**

ಆ ಧ್ಯಾನವು ಪರಮಾಗಮದಲ್ಲಿ ಶುಕ್ಲವೆಂದೂ ಪರಮಶುಕ್ಲವೆಂದೂ ಎರಡು ವಿಧವಾಗಿ ಹೇಳಲ್ಪಟ್ಟಿದೆ. ಮೊದಲನೆಯ ಧ್ಯಾನವು ಛದ್ಮಸ್ಥರಿಗೂ ಎರಡನೆಯ ಧ್ಯಾನವು ಕೇವಲಿಗಳಿಗೂ ಉಂಟಾಗುತ್ತವೆಂದು ಸಮ್ಮತವಾಗಿವೆ.

**ದ್ವೇಧಾದ್ಯಂ ಸ್ಯಾ[೮]ತ್ಪೃಥಕ್ತ್ವಾದಿವಿಚಾರಾಂತವಿತರ್ಕಣಮ್ ।**
**ತಥೈ[೯]ಕತ್ವಾದ್ಯ ವೀಚಾರಪದಾಂತಂ ಚ ವಿತರ್ಕಣಮ್ ॥ ೧೬೮ ॥**

ಮೊದಲನೆಯ ಶುಕ್ಲಧ್ಯಾನವು ಪೃಥಕ್ತ್ವವಿತರ್ಕವಿಚಾರವೆಂದೂ ಏಕತ್ವವಿತರ್ಕ ವೆಂದೂ ಎರಡು ವಿಧವಾಗಿದೆ.

---

೧ ನಯಭೇದಃ. ೨ ಧರ್ಮಧ್ಯಾನಂ. ೩ ಅಸಂಯತದೇಶಸಂಯತಾಪ್ರಮತ್ತೇಷು. ೪ ಸಹಾಯ ಬಲವಿಜೃಂಭಿತಂ. ೫ ಪ್ರಜ್ಞೈರಿತ್ಯಪಿಪಾಠಃ. ೬ ಶುಭಪರಿಣಾಮತಾ. ೭ ನಾನ್ಯಥಾ ವಾದಿನೋ ಜಿನಾ ಇತಿ ಶ್ರದ್ಧಾನಮಾಜ್ಞಾ, ಪ್ರವಚನಪರಿಜ್ಞಾನಮಧಿಗಮಸ್ತಾಭ್ಯಾಂ ಜಾತಾ ರುಚಿಃ. ೮ ಪಲ್ಯಂಕಾದಿಃ.

೧ ಸಂಪೂರ್ಣೇ ಸತಿ. ೨ ಮುಹುರ್ಮುಹುಃ. ೩ ಮೋಕ್ಷಕಾರಣಂ. ೪ ಪ್ರಾಪ್ತಂ. ೫ ಮಧ್ಯೇಭೇದಂ. ೬ ಜಾನೀಹಿ. ೭ ಪರಮಾಗಮೇ. ೮ ಪೃಥಕ್ತ್ವವಿತರ್ಕವಿಚಾರಂ. ೯ ಏಕತ್ವವಿತರ್ಕಾವಿಚಾರಂ.

**ಇತ್ಯಾದ್ಯಸ್ಯ [೧]ಭಿದೇ ಸ್ಯಾತಾಮನ್ವರ್ಥಾಂ [೨]ಶ್ರುತಿಮಾಶ್ರಿತೇ ।**
**ತದರ್ಥವ್ಯಕ್ತಯೇ ಚೈತತ್ತನ್ನಾಮದ್ವಯನಿರ್ವಚಃ ॥ ೧೬೯ ॥**

ಈ ಪ್ರಕಾರವಾಗಿ ಮೊದಲನೆಯ ಶುಕ್ಲಧ್ಯಾನದ ಎರಡುಭೇದಗಳು ಸಾರ್ಥಕವಾದ ಹೆಸರನ್ನು ಹೊಂದಿದುವುಗಳಾಗಿವೆ. ಆ ಶಬ್ದಾರ್ಥವನ್ನು ವ್ಯಕ್ತಪಡಿಸುವುದಕ್ಕೋಸ್ಕರ ಆ ಧ್ಯಾನಗಳ ಎರಡು ಹೆಸರುಗಳು ಹೇಳಲ್ಪಡುತ್ತವೆ.

**ಪೃಥಕ್ತ್ವೇನ [೩]ವಿತರ್ಕಸ್ಯ ವೀಚಾರೋ ಯತ್ರ ತ[೪]ದ್ವಿದುಃ ।**
**ಸವಿತರ್ಕಂ ಸವೀಚಾರಂ ಪೃಥಕ್ತ್ವಾದಿಪದಾಹ್ವಯಮ್ ॥ ೧೭೦ ॥**

ಯಾವ ಧ್ಯಾನದಲ್ಲಿ ಆಗಮದ ವಿಚಾರವು ನಾನಾವಿಧದಿಂದ ಆಗುವುದೋ ಅದು ಪೃಥಕ್ತ್ವವಿತರ್ಕವಿಚಾರವೆಂದು ಹೇಳುತ್ತಾರೆ.

**ಏಕತ್ವೇನ ವಿತರ್ಕಸ್ಯ ಸ್ಯಾದ್ಯತ್ರಾ[೫]ವಿಚರಿಷ್ಣುತಾ ।**
**ಸವಿತರ್ಕಮವೀಚಾರಮೇಕತ್ವಾದಿಪದಾಭಿದಮ್ ॥ ೧೭೧ ॥**

ಯಾವ ಧ್ಯಾನದಲ್ಲಿ ಶ್ರುತಜ್ಞಾನದ ಒಂದೇ ಉಪಯೋಗದಿಂದ ಮನಸ್ಸು ನಿಶ್ಚಲವಾಗಿರುವುದೋ ಅದು ಏಕತ್ವವಿತರ್ಕವೆಂದು ಹೇಳುತ್ತಾರೆ.

**ಪೃಥಕ್ತ್ವಂ ವಿದ್ಧಿ ನಾನಾತ್ವಂ ವಿತರ್ಕಃ ಶ್ರುತಮುಚ್ಯತೇ ।**
**ಅರ್ಥವ್ಯಂಜನ[೬]ಯೋಗಾನಾಂ ವೀಚಾರಃ ಸಂಕ್ರಮೋ ಮತಃ ॥ ೧೭೨ ॥**

**ಅರ್ಥಾದರ್ಥಾಂತರಂ ಗಚ್ಛೇ[೭]ಸ್ವ್ಯಂಜನಾ[೮]ದ್ವ್ಯಂಜನಾಂತರಮ್ ।**
**ಯೋಗಾದ್ಯೋಗಾಂತರಂ ಗಚ್ಛನ್ಧ್ಯಾಯತೀದಂ ವಶೀ ಮುನಿಃ ॥ ೧೭೩ ॥**

ಪೃಥಕ್ತ್ವವೆಂದರೆ ನಾನಾವಿಧವೆಂದರ್ಥವು. ವಿತರ್ಕವೆಂದು ಆಗಮ(ಶ್ರುತ)ಕ್ಕೆ ಹೆಸರು. ಅರ್ಥ, ವ್ಯಂಜನ (ಶಬ್ದ), ಯೋಗ (ಮನೋವಚನಕಾಯಗಳ ಕಾರ್ಯ) ಇವುಗಳ ಸಂಕ್ರಮ(ಬದಲಾವಣೆ)ಕ್ಕೆ ವೀ(ವಿ)ಚಾರವೆಂದು ಹೆಸರು. ಹೇಗೆಂದರೆ:- ಜಿತೇಂದ್ರಿಯನಾದ ಮುನಿಯು ಧ್ಯಾನಯೋಗ್ಯವಾದ ದ್ರವ್ಯ ಅಥವಾ ಪರ್ಯಾಯವನ್ನು ಧ್ಯಾನಿಸಿ ಇನ್ನೊಂದು ದ್ರವ್ಯವನ್ನು ಅಥವಾ ಪರ್ಯಾಯವನ್ನೂ, ಒಂದು ಶಬ್ದವನ್ನು ಧ್ಯಾನಿಸಿ ಇನ್ನೊಂದು ಶಬ್ದವನ್ನೂ ಮನೋವಾಕ್ಕಾಯಕ್ರಿಯೆಗಳೆಂಬ ಮೂರು ಯೋಗಗಳಲ್ಲಿ ಯಾವುದಾದರೊಂದು ಯೋಗವನ್ನು ಹೊಂದಿ ಧ್ಯಾನಿಸಿ ಅದನ್ನು ಬಿಟ್ಟು ಇನ್ನೊಂದು ಯೋಗವನ್ನೂ ಹೊಂದಿ ಧ್ಯಾನಿಸುತ್ತಾನೆ.

**[೯]ತ್ರಿಯೋಗಃ[೧೦]ಪೂರ್ವವಿದ್ಯಸ್ಮಾದ್ಧ್ಯಾಯತ್ಯೇನನ್ಮುನೀಶ್ವರಃ ।**
**ಸವಿತರ್ಕಂ ಸವೀಚಾರಮತಃ ಸ್ಯಾಚ್ಛುಕ್ಲಮಾದಿಮಮ್ ॥ ೧೭೪ ॥**

ಮನೋವಾಕ್ಕಾಯಕ್ರಿಯೆಗಳೆಂಬ ಮೂರು ಯೋಗಗಳುಳ್ಳವನೂ ಹದಿನಾಲ್ಕು ಪೂರ್ವಶಾಸ್ತ್ರಗಳನ್ನು ತಿಳಿದವನೂ ಆದ ಮುನೀಶ್ವರನು ಇದನ್ನು ಧ್ಯಾನಿಸುವುದರಿಂದ ಮೊದಲನೆಯ ಶುಕ್ಲಧ್ಯಾನವು ವಿತರ್ಕವೀಚಾರಗಳಿಂದ ಯುಕ್ತವಾಗಿದೆ. ಪೃಥಕ್ತ್ವವಿತರ್ಕವೀಚಾರವೆಂಬ ಹೆಸರುಳ್ಳದಾಗಿದೆಯೆಂದರ್ಥವು.

**ಧ್ಯೇಯಮಸ್ಯ ಶ್ರುತಸ್ಕಂಧವಾರ್ಧೇ[೧೧]ರ್ವಾಗರ್ಥವಿಸ್ತರಃ ।**
**ಫಲಂ ಸ್ಯಾನ್ಮೋಹನೀಯಸ್ಯ ಪ್ರಕ್ಷಯಃ ಪ್ರಶಮೋಽಪಿ ವಾ ॥ ೧೭೫ ॥**

ಯೋಗಿಯು ಈ ಶ್ರುತಸ್ಕಂಧ(ಶಾಸ್ತ್ರ)ವೆಂಬ ಸಮುದ್ರದ ವಿಸ್ತಾರವಾದ ಶಬ್ದಗಳನ್ನೂ ಅರ್ಥಗಳನ್ನೂ ಧ್ಯಾನಿಸಬೇಕು. ಈ ಧ್ಯಾನಕ್ಕೆ ಮೋಹನೀಯಕರ್ಮದ ನಾಶ ಅಥವಾ ಉಪಶಮ ಇವು ಫಲವಾಗಿರುವುವು.

**ಇದಮತ್ರ ತು ತಾತ್ಪರ್ಯಂ ಶ್ರುತಸ್ಕಂಧಮಹಾರ್ಣವಾತ್ ।**
**ಅರ್ಥಮೇಕಂ ಸಮಾದಾಯ ಧ್ಯಾಯನ್ನರ್ಥಾಂತರಂ ವ್ರಜೇತ್॥ ೧೭೬ ॥**

೧ ಭೇದೌ. ೨ ಸಂಜ್ಞಾಂ. ೩ ಆಗಮಸ್ಯ. ೪ ವದಂತಿ. ೫ ಅವಿಚಾರಶೀಲತಾ. ೬ ಮನೋವಾಕ್ಕಾಯಕರ್ಮಣಾಂ. ೭ ಶಬ್ದಾತ್. ೮ ಶಬ್ದಾಂತರಂ. ೯ ಮನೋವಾಕ್ಕಾಯಕರ್ಮವಾನ್. ೧೦ ಪೂರ್ವಶ್ರುತವೇದೀ. ೧೧ ಶಬ್ದಾರ್ಥಃ.

**ಶಬ್ದಾಚ್ಛಬ್ದಾಂತರಂ[೧]ಯಾಯಾದ್ಯೋಗಂ ಯೋಗಾಂತರಾದಪಿ ।**
**ಸವೀಚಾರಮಿದಂ ತಸ್ಮಾತ್ಸವಿತರ್ಕಂ ಚ ಲಕ್ಷ್ಯತೇ ॥ ೧೭೭ ॥**

ಯೋಗಿಯು ಶ್ರುತಸ್ಕಂಧವೆಂಬ ಮಹಾಸಮುದ್ರದಿಂದ ಒಂದು ಅರ್ಥವನ್ನು ತೆಗೆದುಕೊಂಡು ಧ್ಯಾನಿಸುವವನಾಗಿ ಇನ್ನೊಂದರ್ಥವನ್ನೂ, ಒಂದು ಶಬ್ದವನ್ನು ಧ್ಯಾನಿಸುವವನಾಗಿ ಅದನ್ನು ಬಿಟ್ಟು ಇನ್ನೊಂದು ಶಬ್ದವನ್ನೂ, ಒಂದು ಯೋಗವನ್ನು ಬಿಟ್ಟು ಇನ್ನೊಂದು ಯೋಗವನ್ನೂ ಹೊಂದುವನು. ಆದುದರಿಂದ ಈ ಧ್ಯಾನವು ವಿತರ್ಕವೀಚಾರಸಹಿತವಾದುದೆಂದು ಹೇಳಲ್ಪಟ್ಟಿದೆ. ಇದೇ ಇಲ್ಲಿ ಮುಖ್ಯ ತಾತ್ಪರ್ಯವು.

**[೨]ವಾಗರ್ಥರತ್ನಸಂಪೂರ್ಣಂ [೩]ನಯಭಂಗತರಂಗಕಮ್ ।**
**[೪]ಪ್ರಸೃತಧ್ವಾನ[೫]ಗಂಭೀರ[೬]ಪದ[೭]ವಾಕ್ಯಮಹಾಜಲಮ್ ॥ ೧೭೮ ॥**

ಶಬ್ದಾರ್ಥಗಳೆಂಬ ರತ್ನಗಳಿಂದ ತುಂಬಿರುವುದೂ ನಯಭೇದಗಳೆಂಬ ಅಲೆಗಳುಳ್ಳದೂ ಋಷಿಗಳ ಮುಖಗಳಿಂದ ಹೊರಡುತ್ತಿರುವ ಶಬ್ದದಿಂದ ಗಂಭೀರವೂ, ಪದವಾಕ್ಯಗಳೆಂಬ ಅಧಿಕಜಲವುಳ್ಳದೂ

**[೮]ಉತ್ಪಾದಾದಿತ್ರಯೋದ್ವೇಲಂ ಸಪ್ತಭಂಗೀಬೃಹದ್ಧ್ವನಿಮ್ ।**
**ಪೂರ್ವಪಕ್ಷವಶಾಯಾತ[೯]ಮತಯಾದಃ ಕುಲಾಕುಲಮ್ ॥ ೧೭೯ ॥**

ಉತ್ಪತ್ತಿ, ವಿನಾಶ, ಧ್ರೌವ್ಯ(ಸ್ಥಿರತ್ವ)ಗಳೆಂಬ ಉನ್ನತವಾದ ದಡಗಳುಳ್ಳದೂ ಸ್ಯಾದಸ್ತಿ ಸ್ಯಾನ್ನಾಸ್ತಿ ಸ್ಯಾದಸ್ತಿನಾಸ್ತಿ ಸ್ಯಾದವಕ್ತವ್ಯ ಸ್ಯಾದಸ್ತ್ಯವಕ್ತವ್ಯ ಸ್ಯಾನ್ನಾಸ್ತ್ಯವಕ್ತವ್ಯ ಸ್ಯಾದಸ್ತಿನಾಸ್ತ್ಯವಕ್ತವ್ಯರೂಪವಾದ ಸಪ್ತಭಂಗಿಯೆಂಬ ಮಹಾಶಬ್ದವುಳ್ಳದೂ, ಪೂರ್ವಪಕ್ಷ(ವಿರುದ್ಧವಾಗಿಮಾತನಾಡುವ)ನಿಮಿತ್ತದಿಂದ ಪ್ರಾಪ್ತವಾದ ಬೌದ್ಧ ಮೊದಲಾದ ಮತಗಳೆಂಬ ಜಲಜಂತುಗಳಿಂದ ವ್ಯಾಪ್ತವೂ

**ಕೃತಾ[೧೦]ವತಾರಮುದ್ಬೋಧಯಾನಪಾತ್ರೈರ್ಮಹರ್ಧಿಭಿಃ ।**
**ಗಣಾಧೀಶಮಹಾಸಾರ್ಥವಾಹೈಶ್ಚಾರಿತ್ರಕೇತನೈಃ ॥ ೧೮೦ ॥**

ಶ್ರೇಷ್ಠವಾದ ಜ್ಞಾನವೆಂಬ ದೋಣಿಯುಳ್ಳವರೂ ಮಹರ್ದ್ಧಿಸಂಪನ್ನರೂ, ಚಾರಿತ್ರವೆಂಬ ಧ್ವಜಪತಾಕೆಯುಳ್ಳವರೂ ಆದ ಗಣಧರರೆಂಬ ಮಹಾವರ್ತಕರಿಂದ ಅವತರಿಸಲ್ಪಟ್ಟಿರುವುದೂ

**[೧೧]ನಯೋ[೧೨]ಪನಯ[೧೩]ಸಂಪಾತಮಹಾವಾತ[೧೪]ವಿಘೂರ್ಣಿತಮ್ ।**
**ರತ್ನತ್ರಯಮಯ್ಯೈ[೧೫]ರ್ದ್ವೀಪ್ಯೈ[೧೬]ರವಗಾಢಮನೇಕಧಾ ॥ ೧೮೧ ॥**

ದ್ರವ್ಯಾರ್ಥಿಕಪರ್ಯಾಯಾರ್ಥಿಕನಯಗಳೂ ನೈಗಮಸಂಗ್ರಹ ಮೊದಲಾದ ಉಪನಯಗಳೂ ಇವುಗಳ ಸಮೂಹವೆಂಬ ದೊಡ್ಡ ಗಾಳಿಯಿಂದ ಕಂಪಿಸುವುದೂ ಸಮ್ಯಗ್ದರ್ಶನಜ್ಞಾನಚಾರಿತ್ರಮಯವಾದ ಬಡಬಾಗ್ನಿಯ ನಿವಾಸಕುಂಡಗಳಿಂದ ಅನೇಕವಿಧವಾಗಿ ವ್ಯಾಪ್ತವೂ ಆದ

**ಶ್ರುತಸ್ಕಂಧಮಹಾಸಿಂಧುಮವಗಾಹ್ಯ ಮಹಾಮುನಿಃ ।**
**ಧ್ಯಾಯೇತ್ಪೃಥಕ್ತ್ವಸತ್ತರ್ಕ ವೀಚಾರಂ ಧ್ಯಾನಮಗ್ರಿಮಮ್ ॥ ೧೮೨ ॥**

ಶ್ರುತಸ್ಕಂಧವೆಂಬ ಮಹಾಸಮುದ್ರವನ್ನು ಪ್ರವೇಶಮಾಡಿ ಮಹಾಮುನಿಯು ಮೊದಲನೆಯ ಪೃಥಕ್ತ್ವವಿತರ್ಕವೀಚಾರವೆಂಬ ಶುಕ್ಲಧ್ಯಾನವನ್ನು ಧ್ಯಾನಿಸಬೇಕು.

**ಪ್ರಶಾಂತಕ್ಷೀಣಮೋಹೇಷು ಶ್ರೇಣ್ಯೋಃ [೧೭]ಶೇಷಗುಣೇಷು ಚ ।**
**ಯಥಾಮ್ನಾಯಮಿದಂ ಧ್ಯಾನಮಾಮನಂತಿ ಮನೀಷಿಣಃ ॥ ೧೮೩ ॥**

೧ ಗಚ್ಛೇತ್. ೨ ಶಬ್ದಾರ್ಥಃ. ೩ ನಯವಿಕಲ್ಪಃ. ೪ ಋಷಿಗಣಮುಖಪ್ರಸೃತಶಬ್ದೇನ ಗಂಭೀರಂ. ೫ ಗಂಭೀರಮಿತ್ಯಪಿ ಪಾಠಃ. ೬ ವರ್ಣಸಮುದಾಯಃ. ೭ ಪದಕದಂಬಕಂ. ೮ ಉತ್ಪಾದವ್ಯಯಧ್ರೌವ್ಯತ್ರಯಂ. ೯ ಬೌದ್ಧಾದಿಮತಜಲಚರಸಮೂಹಃ. ೧೦ ಅವತರಣಂ. ೧೧ ದ್ರವ್ಯಾರ್ಥಿಕಪರ್ಯಾರ್ಥಿಕಾಃ. ೧೨ ನೈಗಮಾದಯಃ. ೧೩ ಸಂಪ್ರಾಪ್ತಿಃ. ೧೪ ಪ್ರಕಂಪಿತಂ. ೧೫ ಬಡಬಾಗ್ನಿನಿವಾಸಕುಂಡ್ಯೈಃ. ೧೬ ಪ್ರವಿಷ್ಟಂ. ೧೭ ಅಪೂರ್ವಕರಣಾನಿವೃತ್ತಿಕರಣ ಸೂಕ್ಷ್ಮಸಾಂಪರಾಯೇಷು.

ಹನ್ನೊಂದನೆಯ ಉಪಶಾಂತಕಷಾಯಗುಣಸ್ಥಾನದಲ್ಲಿಯೂ ಹನ್ನೆರಡನೆಯ ಕ್ಷೀಣಕಷಾಯಗುಣಸ್ಥಾನದಲ್ಲಿಯೂ, ಉಪಶಮ ಮತ್ತು ಕ್ಷಪಕಶ್ರೇಣಿಗಳಲ್ಲಿರುವ ಅಪೂರ್ವಕರಣ ಅನಿವೃತ್ತಿಕರಣ ಸೂಕ್ಷ್ಮಸಾಂಪರಾಯ ಗುಣಸ್ಥಾನಗಳಲ್ಲಿಯೂ ಆಗಮದಲ್ಲಿ ಹೇಳಿರುವಂತೆ ಈ ಪ್ರಥಮಶುಕ್ಲಧ್ಯಾನವು ಉಂಟಾಗುತ್ತದೆಂದು ವಿದ್ವಾಂಸರು ಹೇಳುತ್ತಾರೆ.

**ದ್ವಿತೀಯಮಾದ್ಯವಜ್ಞ್ಞೇಯಂ ವಿಶೇಷಸ್ತ್ವೇ[1]ಕಯೋಗಿನಃ ।**
**ಪ್ರಕ್ಷೀಣಮೋಹನೀಯಸ್ಯ [2]ಪೂರ್ವಜ್ಞಸ್ಯಾ[3]ಮಿತದ್ಯುತೇಃ ॥ ೧೮೪ ॥**

ಎರಡನೆಯ ಶುಕ್ಲಧ್ಯಾನವು ಮೊದಲನೆಯ ಧ್ಯಾನದಂತೆಯೆಂದು ತಿಳಿಯಬೇಕು. ಆದರೆ ಈ ಧ್ಯಾನವು ಮನೋವಾಕ್ಕಾಯಗಳೆಂಬ ಮೂರು ಯೋಗಗಳಲ್ಲಿ ಯಾವುದಾದರೊಂದು ಯೋಗವುಳ್ಳವನೂ, ಮೋಹನೀಯಕರ್ಮವನ್ನು ನಾಶಮಾಡಿದವನೂ, ಪೂರ್ವವೆಂಬ ಶಾಸ್ತ್ರವನ್ನು ತಿಳಿದವನೂ ಅಪಾರವಾದ ತೇಜಸ್ಸುಳ್ಳವನೂ ಆದ ಮುನಿಗೆ ಮಾತ್ರವುಂಟಾಗುತ್ತದೆಂಬುದು ವಿಶೇಷವಾಗಿದೆ.

**ಸವಿತರ್ಕಮವೀಚಾರಮೇಕತ್ವಧ್ಯಾನಮೂರ್ಜಿತಮ್ ।**
**ಧ್ಯಾಯತ್ಯಸ್ತಕಷಾಯೋಽಸೌ ಘಾತಿಕರ್ಮಾಣಿ [4]ಶಾತಯನ್ ॥ ೧೮೫ ॥**

ಚಾರಿತ್ರಮೋಹನೀಯಕಷಾಯಗಳನ್ನು ನಾಶಮಾಡಿದ ಈ ಮುನಿಯು ಘಾತಿಕರ್ಮಗಳನ್ನು ನಾಶಮಾಡುವವನಾಗಿ ಉತ್ಕೃಷ್ಟವಾದ ಏಕತ್ವವಿತರ್ಕವೆಂಬ ದ್ವಿತೀಯ ಶುಕ್ಲಧ್ಯಾನವನ್ನು ಧ್ಯಾನಿಸುತ್ತಾನೆ.

**ಫಲಮಸ್ಯ ಭವೇದ್ಧಾತಿತ್ರಿತಯಪ್ರಕ್ಷಯೋದ್ಭವಮ್ ।**
**ಕೈವಲ್ಯಂ [5]ಪ್ರಮಿತಾಶೇಷಪದಾರ್ಥಂ ಜ್ಯೋತಿರಕ್ಷರಮ್ ॥ ೧೮೬ ॥**

ಜ್ಞಾನಾವರಣ ದರ್ಶನಾವರಣ ಅಂತರಾಯಗಳೆಂಬ ಮೂರು ಘಾತಿಕರ್ಮಗಳ ಕ್ಷಯದಿಂದುಂಟಾದುದೂ ಸಮಸ್ತಪದಾರ್ಥಗಳನ್ನು ತಿಳಿದುದೂ ನಾಶರಹಿತವಾದ ಜ್ಯೋತಿಃಸ್ವರೂಪವೂ ಆದ ಕೈವಲ್ಯ(ಕೇವಲಜ್ಞಾನ)ವು ಈ ಎರಡನೆಯ ಶುಕ್ಲಧ್ಯಾನಕ್ಕೆ ಫಲವಾಗಿರುವುದು.

**[6]ತತಃ ಪೂರ್ವವಿದಾಮಾದ್ಯೇ ಶುಕ್ಲೇ ಶ್ರೇಣ್ಯೋ[7]ರ್ಯಥಾಯಥಮ್ ।**
**ವಿಜ್ಞೇಯೇ [8]ತ್ರ್ಯೇಕಯೋಗಾನಾಂ ಯಥೋಕ್ತಫಲ[9]ಯೋಗಿನೀ ॥**

ಆದುದರಿಂದ ಹಿಂದೆಹೇಳಿದ ಫಲಗಳನ್ನು ಕೊಡುವ ಮೊದಲನೆಯ ಎರಡು ಶುಕ್ಲಧ್ಯಾನಗಳು ಯಥಾಯೋಗ್ಯವಾಗಿ ಉಪಶಮ ಮತ್ತು ಕ್ಷಪಕಶ್ರೇಣಿಗಳಲ್ಲಿರುವವರೂ ಪೂರ್ವಶಾಸ್ತ್ರಗಳನ್ನು ತಿಳಿದಿರುವವರೂ ಮನೋವಾಕ್ಕಾಯಗಳೆಂಬ ಮೂರು ಯೋಗಗಳುಳ್ಳವರೂ ಆದ ಮುನಿಗಳಿಗೂ ಮೂರು ಯೋಗಗಳಲ್ಲಿ ಯಾವುದಾದರೊಂದು ಯೋಗವುಳ್ಳ ಮುನಿಗಳಿಗೂ ಉಂಟಾಗುತ್ತವೆ. ಮೂರು ಯೋಗಗಳುಳ್ಳವರಿಗೆ ಮೊದಲನೆಯ ಧ್ಯಾನವೂ ಒಂದು ಯೋಗವುಳ್ಳವರಿಗೆ ಎರಡನೆಯ ಧ್ಯಾನವೂ ಉಂಟಾಗುತ್ತವೆಂದು ಭಾವವು.

**[10]ಸ್ನಾತಕಃ ಕರ್ಮವೈಕಲ್ಯಾತ್ಕೈವಲ್ಯಂ ಪದಮಾಪಿವಾನ್ ।**
**ಸ್ವಾಮೀ ಪರಮಶುಕ್ಲಸ್ಯ ದ್ವಿಧಾ ಭೇದಮುಪೇಯುಷಃ ॥ ೧೮೮ ॥**

ಕರ್ಮಗಳ ನಾಶದಿಂದ ಕೈವಲ್ಯಪದವಿಯನ್ನು ಪಡೆದವನೂ ಸಂಪೂರ್ಣ ಜ್ಞಾನಿಯೂ ಆದ ಜೀವನು ಎರಡು ಭೇದಗಳುಳ್ಳ ಮುಂದಿನ ಪರಮಶುಕ್ಲಧ್ಯಾನಕ್ಕೆ ಅಧಿಕಾರಿಯಾಗಿರುತ್ತಾನೆ.

**ಸ ಹಿ ಯೋಗನಿರೋಧಾರ್ಥಮುದ್ಯತಃ ಕೇವಲೀ ಜಿನಃ ।**
**ಸಮುದ್ಘಾತವಿಧಿಂ ಪೂರ್ವಮಾವಿಃಕುರ್ಯಾನ್ನಿಸರ್ಗತಃ ॥ ೧೮೯ ॥**

ಮನೋವಾಕ್ಕಾಯಯೋಗಗಳನ್ನು ತಡೆಯುವುದಕ್ಕೆ ಪ್ರಯತ್ನಶೀಲನಾದ ಆ ಕೇವಲಿ ಜಿನನು ಸ್ವಾಭಾವಿಕವಾಗಿ ಮೊದಲು ಸಮುದ್ಘಾತವಿಧಿಯನ್ನು ಪ್ರಕಟ ಮಾಡುವನು.

**ದಂಡಮುಚ್ಚೈಃ ಕವಾಟಂ ಚ ಪ್ರತರಂ ಲೋಕಪೂರಣಮ್ ।**
**ಚತುರ್ಭಿಃ ಸಮಯೈಃ ಕುರ್ವನ್ಲೋಕಮಾಪೂರ್ಯ ತಿಷ್ಠತಿ ॥ ೧೯೦ ॥**

ಆ ಜೀವನು ಕ್ರಮವಾಗಿ ನಾಲ್ಕು ಸಮಯಗಳಲ್ಲಿ ದಂಡ, ಕವಾಟ, ಪ್ರತರ, ಲೋಕಪೂರಣಗಳೆಂಬ ನಾಲ್ಕು ಅವಸ್ಥೆಗಳನ್ನು ಹೊಂದಿ ಲೋಕವನ್ನೆಲ್ಲ ವ್ಯಾಪಿಸಿರುತ್ತಾನೆ.

**ತದಾ ಸರ್ವಗತಃ ಸಾರ್ವಃ ಸರ್ವವಿತ್ಪೂರಕೋ ಭವೇತ್ ।**
**[1]ತದಂತೇ [2]ರೇಚಕಾವಸ್ಥಾಮಧಿತಿಷ್ಠನ್ಮಹೀಯತೇ ॥ ೧೯೧ ॥**

ಆಗ ಆ ಕೇವಲಿಯು ಸರ್ವವ್ಯಾಪಕನೂ ಸಮಸ್ತಜೀವಗಳಿಗೂ ಹಿತಕರನೂ ಸರ್ವಜ್ಞನೂ ಲೋಕಪೂರ್ಣನೂ ಆಗುವನು. ಲೋಕಪೂರಣಾವಸ್ಥೆಯನ್ನು ಹೊಂದಿದನಂತರ ಉಪಸಂಹಾರ (ಸಂಕೋಚ) ಅವಸ್ಥೆಯಲ್ಲಿರುವವನಾಗಿ ಪೂಜಿಸಲ್ಪಡುತ್ತಾನೆ.

**ಜಗದಾಪೂರ್ಯ ವಿಶ್ವಜ್ಞಃ ಸಮಯಾತ್ತತ್ತರಂ ಶ್ರಿತಃ ।**
**ತತಃ ಕವಾಟಂ ದಂಡಂ ಚ ಕ್ರಮೇಣೈವೋಪಸಂಹರನ್ ॥ ೧೯೨ ॥**

ಆ ಸರ್ವಜ್ಞನು ಲೋಕಪೂರಣವನ್ನು ಮಾಡಿ ಒಂದು ಸಮಯದಲ್ಲಿ ಪ್ರತರಾವಸ್ಥೆಯನ್ನು ಹೊಂದುತ್ತಾನೆ. ತರುವಾಯ ಕ್ರಮದಿಂದಲೇ ಕವಾಟಾವಸ್ಥೆಯನ್ನೂ ದಂಡಾವಸ್ಥೆಯನ್ನೂ ಹೊಂದಿ ಉಪಸಂಹಾರಮಾಡಿಕೊಳ್ಳುತ್ತಾನೆ. ಆಯುಷ್ಯಸ್ಥಿತಿಯು ಅಂತರ್ಮುಹೂರ್ತವಿದ್ದು ಇತರ ಮೂರು ಅಘಾತಿಕರ್ಮಗಳ ಸ್ಥಿತಿಯು ಅದಕ್ಕಿಂತ ಹೆಚ್ಚಾಗಿದ್ದರೆ ಕೇವಲಿಯು ಕ್ರಮವಾಗಿ ಒಂದೊಂದು ಸಮಯದಲ್ಲಿ ದಂಡ ಕವಾಟ ಪ್ರತರ ಲೋಕಪೂರಣಗಳೆಂಬ ಯೋಗವನ್ನು ಮಾಡಿ ಅಂದರೆ ಕ್ರಮದಿಂದ ಲೋಕವ್ಯಾಪಕನಾಗಿ ಪುನಃ ಲೋಕಪೂರಣದಿಂದ ಪ್ರತರ ಕವಾಟ ದಂಡ ಈ ಅವಸ್ಥೆಗಳಿಗೆ ಕ್ರಮದಿಂದ ಉಪಸಂಹರಿಸಿಕೊಳ್ಳುತ್ತಾನೆ. ಇದಕ್ಕೆ ಕೇವಲಸಮುದ್ಘಾತವೆಂದು ಹೆಸರು.

**ತತ್ರಾಘಾತಿಸ್ಥಿತೇರ್ಭಾಗಾನಸಂಖ್ಯೇಯಾನ್ನಿಹಂತ್ಯಸೌ ।**
**ಅನುಭಾಗಸ್ಯ ಚಾನಂತಾನ್ಭಾಗಾನಶುಭಕರ್ಮಣಾಮ್ ॥ ೧೯೩ ॥**

ಆ ಸಮುದ್ಘಾತಾವಸ್ಥೆಯಲ್ಲಿ ಈ ಕೇವಲಿಯು ಅಘಾತಿಕರ್ಮಗಳ ಸ್ಥಿತಿಯ ಅಸಂಖ್ಯಾತ ಭಾಗಗಳನ್ನೂ ಅಶುಭಕರ್ಮಗಳ ಅನುಭಾಗಬಂಧದ ಅನಂತ ಭಾಗಗಳನ್ನೂ ನಾಶಮಾಡುತ್ತಾನೆ.

**ಪುನರಂತರ್ಮುಹೂರ್ತೇನ ನಿರುಂಧನ್ಯೋಗಮಾಸ್ರವಮ್ ।**
**ಕೃತ್ವಾ ವಾಙ್ಮನಸೇ ಸೂಕ್ಷ್ಮೇ [3]ಕಾಯಯೋಗವ್ಯಪಾಶ್ರಯಾತ್ ॥ ೧೯೪ ॥**

**ಸೂಕ್ಷ್ಮೀಕೃತ್ಯ ಪುನಃ ಕಾಯಯೋಗಂ ಚ [4]ತದುಪಾಶ್ರಯಮ್ ।**
**ಧ್ಯಾಯೇತ್ಸೂಕ್ಷ್ಮಕ್ರಿಯಂ ಧ್ಯಾನಂ [5]ಪ್ರತಿಪಾತಪರಾಙ್ಮುಖಮ್ ॥ ೧೯೫ ॥**

ಪುನಃ ಅಂತರ್ಮುಹೂರ್ತದಿಂದ (ಆಯುಷ್ಯಸ್ಥಿತಿಯು ಅಂತರ್ಮುಹೂರ್ತವುಳಿಯುವಾಗ) ಯೋಗರೂಪವಾದ ಆಸ್ರವವನ್ನು ತಡೆಯುವವನಾಗಿ ಕೇವಲಿಯು ಬಾದರ (ಸ್ಥೂಲ) ಕಾಯಯೋಗದ ಆಶ್ರಯದಿಂದ ವಾಙ್ಮನೋಯೋಗಗಳನ್ನು ಸೂಕ್ಷ್ಮಮಾಡಿ, ಪುನಃ ಆ ವಾಙ್ಮನೋಯೋಗಗಳನ್ನು ಸೂಕ್ಷ್ಮಮಾಡುವುದಕ್ಕೆ ಆಶ್ರಯವಾದ ಬಾದರಕಾಯಯೋಗವನ್ನೂ ಸೂಕ್ಷ್ಮಮಾಡಿ ಆ ಧ್ಯಾನದ ನಿಯತ ಕಾಲಪರ್ಯಂತ ವಿನಾಶರಹಿತವಾದ ಸೂಕ್ಷ್ಮಕ್ರಿಯಾಧ್ಯಾನವನ್ನು ಮಾಡುವನು.

---

೧ ತ್ರಿಷು ಮಧ್ಯೇ. ೨ ಪೂರ್ವಶ್ರುತವೇದಿನಃ. ೩ ಉಪಮಾರಹಿತತೇಜಸಃ. ೪ ನಿಪಾತಯನ್. ೫ ಜ್ಞಾತಃ. ೬ ಕಾರಣಾತ್. ೭ ಯಥಾಯೋಗ್ಯಂ. ೮ ತ್ರಿಯೋಗಾನಾಮೇಕಯೋಗಾನಾಂ ಚ. ೯ ಪೂರ್ವೋಕ್ತಫಲಸ್ಯ ಯೋಗೋ ಯಯೋಸ್ತೇ. ೧೦ ಸಂಪೂರ್ಣಜ್ಞಾನೀ.

೧ ಲೋಕಪೂರಣಾನಂತರೇ. ೨ ಉಪಸಂಹಾರಾವಸ್ಥಾಂ. ೩ ಬಾದರಕಾಯಯೋಗಾಶ್ರಯಾತ್. ೪ ವಾಙ್ಮಾನಸಸೂಕ್ಷ್ಮೀಕರಣೇ ಆಶ್ರಯಭೂತಂ. ೫ ಸ್ವಕಾಲಪರ್ಯಂತಂ ವಿನಾಶರಹಿತಂ.

**ತತೋ ನಿರುದ್ಧಯೋಗಃ ಸನ್ನಯೋಗೀ ವಿಗತಾಸ್ರವಃ ।**
**ಸಮುಚ್ಛಿನ್ನಕ್ರಿಯಂ ಧ್ಯಾನ[1]ಮನಿವರ್ತಿ ತದಾ ಭಜೇತ್ ॥ ೧೯೬ ॥**

ತರುವಾಯ ಕೇವಲಿಯು ಮನೋವಾಕ್ಕಾಯಯೋಗಗಳನ್ನೂ ಕರ್ಮಗಳ ಆಸ್ರವವನ್ನೂ ತಡೆದು ಅಯೋಗಿಕೇವಲಿಗುಣಸ್ಥಾನವರ್ತಿಯಾಗಿ ನಾಶರಹಿತವಾದ ಸಮುಚ್ಛಿನ್ನಕ್ರಿಯೆಯೆಂಬ ನಾಲ್ಕನೆಯ ಶುಕ್ಲಧ್ಯಾನವನ್ನು ಹೊಂದುವನು.

**ಅಂತರ್ಮುಹೂರ್ತಮಾತ್ರಂ ತದ್ಧ್ಯಾನಮತಿನಿರ್ಮಲಮ್ ।**
**[2]ವಿಧೂತಾಶೇಷಕರ್ಮಾಂಶೋ ಜಿನೋ [3]ನಿರ್ವಾತ್ಯನಂತರಮ್ ॥**

ಜಿನೇಶ್ವರನು ಅತ್ಯಂತ ನಿರ್ಮಲವಾದ ಆ ಸಮುಚ್ಛಿನ್ನಕ್ರಿಯೆಯೆಂಬ ಶುಕ್ಲ ಧ್ಯಾನವನ್ನು ಅಂತರ್ಮುಹೂರ್ತಕಾಲಪರ್ಯಂತ ಧ್ಯಾನಿಸಿ ಸಮಸ್ತಕರ್ಮಗಳನ್ನೂ ನಾಶಮಾಡಿ ತರುವಾಯ ಮುಕ್ತನಾಗುತ್ತಾನೆ.

**ತ್ರಯೋದಶಾಸ್ಯ ಪ್ರಕ್ಷೀಣಾಃ ಕರ್ಮಾಂಶಾಶ್ಚರಮೇ ಕ್ಷಣೇ ।**
**ದ್ವಾಸಪ್ತತಿರುಪಾಂತೇ ಸ್ಯುರಯೋಗಪರಮೇಷ್ಠಿನಃ ॥ ೧೯೮ ॥**

ಈ ಅಯೋಗಕೇವಲಿಗೆ ಅಂತ್ಯಸಮಯದ ಸಮೀಪಸ್ಥವಾದ ಎರಡನೆಯ ಸಮಯದಲ್ಲಿ ಅಸಾತಾವೇದನೀಯ, ದೇವಗತ್ಯೌದಾರಿಕವೈಕ್ರಿಯಕಾಹಾರಕತೈಜಸ ಕಾರ್ಮಣಶರೀರ, ಆರು ಸಂಸ್ಥಾನ, ಔದಾರಿಕವೈಕ್ರಿಯಕಾಹಾರಕಶರೀರಾಂಗೋಪಾಂಗ, ಆರು ಸಂಹನನ, ಪಂಚ ಪ್ರಶಸ್ತವರ್ಣ, ಪಂಚ ಅಪ್ರಶಸ್ತವರ್ಣ, ಗಂಧದ್ವಯ, ಪಂಚ ಪ್ರಶಸ್ತರಸ, ಪಂಚ ಅಪ್ರಶಸ್ತರಸ, ಎಂಟು ಸ್ಪರ್ಶ, ದೇವಗತಿ ಪ್ರಾಯೋಗ್ಯಾನು ಪೂರ್ವ್ಯ, ಅಗುರುಲಘೂಪಘಾತಪರಘಾತೋಚ್ಛ್ವಾಸಪ್ರಶಸ್ತಾ ಪ್ರಶಸ್ತವಿಹಾ ಯೋಗತ್ಯಪರ್ಯಾಪ್ತಕಪ್ರತ್ಯೇಕ ಶರೀರಸ್ಥಿರಾಸ್ಥಿರ ಶುಭಾಶುಭ ದುರ್ಭಗಸುಸ್ವರ ದುಃಸ್ವರಾನಾದೇಯಾಯಶಃಕೀರ್ತಿನಿರ್ಮಾಣ ನಾಮ ನೀಚೈರ್ಗೋತ್ರಗಳೆಂಬ ಎಪ್ಪತ್ತೆರಡು ಕರ್ಮಪ್ರಕೃತಿಗಳೂ, ಅಂತ್ಯಸಮಯದಲ್ಲಿ ಸಾತಾವೇದನೀಯ ಮನುಷ್ಯಾ ಯುರ್ಮನುಷ್ಯಗತಿ ಪಂಚೇಂದ್ರಿಯಜಾತಿ ಮನುಷ್ಯಗತಿಪ್ರಾಯೋಗ್ಯಾನುಪೂರ್ವ್ಯ ತ್ರಸಬಾದರ ಪರ್ಯಾಪ್ತಕಸುಭಗಾದೇಯ ಯಶಃಕೀರ್ತಿ ತೀರ್ಥಕರನಾಮೋಚ್ಚೈ ರ್ಗೋತ್ರಗಳೆಂಬ ಹದಿಮೂರು ಕರ್ಮಪ್ರಕೃತಿಗಳೂ ನಾಶವಾಗುತ್ತವೆ.

**ನಿರ್ಲೇಪೋ ನಿಷ್ಕಲಃ ಶುದ್ಧೋ ನಿರ್ವ್ಯಾಬಾಧೋ ನಿರಾಮಯಃ ।**
**ಸೂಕ್ಷ್ಮೋ ವ್ಯಕ್ತಸ್ತಥಾವ್ಯಕ್ತೋ ಮುಕ್ತೋ ಲೋಕಾಂತಮಾವಸನ್ ॥**

ಆಗ ಕರ್ಮದ ಲೇಪವಿಲ್ಲದವನೂ ಶರೀರರಹಿತನೂ ಶುದ್ಧನೂ ಬಾಧಾರಹಿತನೂ ರೋಗರಹಿತನೂ ಸೂಕ್ಷ್ಮನೂ ವ್ಯಕ್ತನೂ (ಸ್ವಸ್ವರೂಪ ಪ್ರಾಪ್ತಿಯುಳ್ಳವನೂ) ಅವ್ಯಕ್ತನೂ (ಇಂದ್ರಿಯಾಗೋಚರನೂ) ಆದ ಅಯೋಗಿಕೇವಲಿಯು ಕರ್ಮಗಳಿಂದ ಬಿಡುಗಡೆಯನ್ನು ಪಡೆದು ಲೋಕದ ತುದಿಯಲ್ಲಿ ವಾಸಮಾಡುತ್ತಾನೆ.

**[4]ಊರ್ಧ್ವಂವ್ರಜ್ಯಾಸ್ವಭಾವತ್ವಾ[5]ತ್ಸಮಯೇನೈವ ನೀರಜಾಃ ।**
**ಲೋಕಾಂತಂ ಪ್ರಾಪ್ಯ ಶುದ್ಧಾತ್ಮಾ ಸಿದ್ಧಶ್ಚೂಡಾಮಣೀಯತೇ ॥ ೨೦೦ ॥**

ಕರ್ಮಮಲರಹಿತನಾದ ಆ ಶುದ್ಧಾತ್ಮನು ಮೇಲೆ ಹೋಗುವ ಸ್ವಭಾವ ವಿರುವುದರಿಂದ ಒಂದೇ ಸಮಯದಲ್ಲಿ ಲೋಕದ ಕೊನೆಯನ್ನು ಹೊಂದಿ ಸಿದ್ಧನಾಗಿ ಚೂಡಾಮಣಿಯಂತಿರುತ್ತಾನೆ.

**ತತ್ರ ಕರ್ಮಮಲಾಪಾಯಾಚ್ಛುದ್ಧಿರಾದ್ಯಂತಿಕೀ ಮತಾ ।**
**ಶರೀರಾಪಾಯತೋಽನಂತಂ ಭವೇತ್ಸುಖಮತೀಂದ್ರಿಯಮ್ ॥ ೨೦೧ ॥**

ಆ ಲೋಕಾಗ್ರಭಾಗದಲ್ಲಿ ಕರ್ಮಮಲವಿಲ್ಲದಿರುವುದರಿಂದ ಸಂಪೂರ್ಣವಾದ ಶುದ್ಧಿಯುಂಟಾಗುವುದೆಂದು ಶಾಸ್ತ್ರಸಮ್ಮತವಾಗಿದೆ. ಶರೀರವಿಲ್ಲದಿರುವುದರಿಂದ ಅತೀಂದ್ರಿಯವಾದ ಅನಂತಸುಖವುಂಟಾಗುವುದು.

೧ ನಾಶರಹಿತಂ. ೨ ವಿಧುತೇತ್ಯಪಿ ಪಾಠಃ. ೩ ಮುಕ್ತೋ ಭವತಿ. ೪ ಊರ್ಧ್ವಗತಿಸ್ವಭಾವತ್ವಾತ್. ೫ ಏಕಸಮಯೇನ.

**ನಿಷ್ಕರ್ಮಾ ವಿಧುತಾಶೇಷಸಾಂಸಾರಿಕಸುಖಾಸುಖಃ ।**
**ಚರಮಾಂಗಾತ್ಕಿಮಪ್ಯೂನ[1]ಪರಿಮಾಣ[2]ಸ್ತದಾಕೃತಿಃ ॥ ೨೦೨ ॥**

**ಅಮೂರ್ತೋಽಪ್ಯಯಮಂತ್ಯಾಂಗಸಮಾಕಾರೋಪಲಕ್ಷಣಾತ್ ।**
**ಮೂಷಾಗರ್ಭನಿರುದ್ಧಸ್ಯ ಸ್ಥಿತಿಂ ವ್ಯೋಮ್ನಃ [3]ಪರಾಮೃಶನ್ ॥ ೨೦೩ ॥**

ಕರ್ಮರಹಿತನೂ ಸಂಸಾರಜನ್ಯವಾದ ಸಮಸ್ತಸುಖದುಃಖಗಳನ್ನು ನಾಶಮಾಡಿ ದವನೂ ಅಂತ್ಯಶರೀರದಿಂದ ಸ್ವಲ್ಪ ಕಡಮೆಯಾದ ಪರಿಮಾಣವುಳ್ಳವನೂ ಆ ಅಂತ್ಯ ಶರೀರಾಕಾರವುಳ್ಳವನೂ ಆದ ಈ ಸಿದ್ಧಾತ್ಮನು ಅಮೂರ್ತನಾಗಿದ್ದರೂ ಅಂತ್ಯ ಶರೀರಕ್ಕೆ ಸಮಾನವಾದ ಆಕಾರಯುಕ್ತನಾಗಿರುವುದರಿಂದ ಮೂಸೆಯ ಮಧ್ಯದಲ್ಲಿ ಅಡಕವಾಗಿರುವ ಆಕಾಶದ ಸ್ಥಿತಿ(ರೀತಿ)ಯನ್ನು ಹೋಲುವವನಾಗಿರುತ್ತಾನೆ.

**ಶಾರೀರಮಾನಸಾಶೇಷದುಃಖಬಂಧನವರ್ಜಿತಃ ।**
**[4]ನಿರ್ದ್ವಂದ್ವೋ ನಿಷ್ಕ್ರಿಯಃ ಶುದ್ಧೋ ಗುಣೈರಷ್ಟಾಭಿರನ್ವಿತಃ ॥ ೨೦೪ ॥**

ಶರೀರ ಮತ್ತು ಮನಸ್ಸಂಬಂಧವಾದ ಸಮಸ್ತದುಃಖಬಂಧನಗಳಿಂದ ಬಿಡಲ್ಪಟ್ಟ ವನೂ ಪರಿಗ್ರಹರಹಿತನೂ ನಿಷ್ಕ್ರಿಯನೂ ಶುದ್ಧನೂ ಸಮ್ಯಕ್ತ್ವಜ್ಞಾನ ದರ್ಶನ ವೀರ್ಯ ಸೂಕ್ಷ್ಮತ್ವ ಅವಗಹನ ಅಗುರುಲಘುತ್ವ ಅವ್ಯಾಬಾಧತ್ವಗಳೆಂಬ ಎಂಟು ಗುಣಗಳಿಂದ ಕೂಡಿದವನೂ

**ಅಭೇದ್ಯಸಂಹತಿರ್ಲೋಕಶಿಖರೈಕಶಿಖಾಮಣಿಃ ।**
**ಜ್ಯೋತಿರ್ಮಯಃ ಪರಿಪ್ರಾಪ್ತ[5]ಸ್ವಾತ್ಮಾ ಸಿದ್ಧಃ[6]ಸುಖಾಯತೇ ॥ ೨೦೫ ॥**

ನಾಶರಹಿತವಾದ ಆಕಾರವುಳ್ಳವನೂ ಲೋಕದ ಅಗ್ರಭಾಗದಲ್ಲಿ ಮುಖ್ಯವಾದ ಚೂಡಾಮಣಿಯಂತಿರುವವನೂ ಜ್ಯೋತಿಸ್ಸ್ವರೂಪನೂ ಆತ್ಮಸ್ವರೂಪವನ್ನು ಹೊಂದಿದವನೂ ಆದ ಸಿದ್ಧಾತ್ಮನು ಸುಖವನ್ನನುಭವಿಸುತ್ತಾನೆ.

**[7]ಕೃತಾರ್ಥಾ ನಿಷ್ಠಿತಾಃ ಸಿದ್ಧಾಃ ಕೃತಕೃತ್ಯಾ ನಿರಾಮಯಾಃ ।**
**ಸೂಕ್ಷ್ಮಾ ನಿರಂಜನಾಶ್ಚೇತಿ ಪರ್ಯಾಯಾಃ [8]ಸಿದ್ಧಿ[9]ಮಾಪುಷಾಮ್ ॥**

ಕೃತಾರ್ಥರೂ ನಿಷ್ಠಿತರೂ ಸಿದ್ಧರೂ ಕೃತಕೃತ್ಯರೂ ನಿರಾಮಯರೂ ಸೂಕ್ಷ್ಮರೂ ನಿರಂಜನರೂ ಎಂದು ಆತ್ಮಸ್ವರೂಪವನ್ನು ಹೊಂದಿದ ಸಿದ್ಧಾತ್ಮರಿಗೆ ಪರ್ಯಾಯ ಶಬ್ದಗಳು.

**ತೇಷಾಮತೀಂದ್ರಿಯಂ ಸೌಖ್ಯಂ ದುಃಖಪ್ರಕ್ಷಯಲಕ್ಷಣಮ್ ।**
**ತದೇವ ಹಿ ಪರಂ ಪ್ರಾಹುಃ ಸುಖ[10]ಮಾನಂತ್ಯವೇದಿನಃ ॥ ೨೦೭ ॥**

ಆ ಸಿದ್ಧಾತ್ಮರ ದುಃಖನಾಶಸ್ವರೂಪವಾದ ಅತೀಂದ್ರಿಯಸೌಖ್ಯವೇ ಉತ್ಕೃಷ್ಟವಾದ ಸುಖವೆಂದು ಕೇವಲಜ್ಞಾನಿಗಳು ಹೇಳುತ್ತಾರೆ.

**ಕ್ಷುಧಾದಿವೇದನಾಭಾವಾನ್ನೈಷಾಂ [11]ವಿಷಯಕಾಮಿತಾ ।**
**ಕಿಮು ಸೇವೇತ ಭೈಷಜ್ಯಂ ಸ್ವಸ್ಥಾವಸ್ಥಃ ಸುಧೀಃ ಪುಮಾನ್ ॥ ೨೦೮ ॥**

ಈ ಮುಕ್ತಾತ್ಮರಿಗೆ ಕ್ಷುಧಾ ತೃಷಾ ಮೊದಲಾದ ವೇದನೆಗಳಿಲ್ಲದಿರುವುದರಿಂದ ಭೋಗೋಪಭೋಗಪದಾರ್ಥಗಳಲ್ಲಿ ಅಪೇಕ್ಷೆಯಿಲ್ಲ. ಆರೋಗ್ಯಾವಸ್ಥೆಯಲ್ಲಿರುವ ವಿವೇಕಿಯಾದ ಮನುಷ್ಯನು ಔಷಧವನ್ನೇಕೆ ಸೇವಿಸುವನು ? ಹಾಗೆಯೇ ಕ್ಷುಧಾದಿವೇದನೆಗಳಿಲ್ಲದಿರುವುದರಿಂದ ವಿಷಯಸೇವನೆಯನ್ನು ಮಾಡುವುದಿಲ್ಲ ವೆಂದು ಭಾವವು.

**ನ ತತ್ಸುಖಂ ಪರದ್ರವ್ಯಸಂಬಂಧಾದುಪಜಾಯತೇ ।**
**ನಿತ್ಯಮವ್ಯಯಮಕ್ಷಯ್ಯಮಾತ್ಮೋತ್ಥಂ ಹಿ ಪರಂ [12]ಶಿವಮ್ ॥ ೨೦೯ ॥**

೧ ಪ್ರಮಾಣಃ. ೨ ಚರಮಾಂಗಾಕೃತಿಃ. ೩ ಅನುಕುರ್ವನ್. ೪ ನಿಷ್ಪರಿಗ್ರಹಃ. ೫ ಸ್ವಸ್ವರೂಪಃ. ೬ ಸುಖಮನುಭವತಿ. ೭ ನಿಷ್ಪನ್ನಾಃ. ೮ ಸ್ವಾತ್ಮೋಪಲಬ್ಧಿಂ. ೯ ಪ್ರಾಪ್ತವತಾಂ. ೧೦ ಕೇವಲಜ್ಞಾನಿನಃ. ೧೧ ವಿಷಯೈಷಿತಾ. ೧೨ ಸುಖಂ.

ಪರವಸ್ತುಗಳ ಸಂಬಂಧದಿಂದುಂಟಾಗುವುದು ಸುಖವಲ್ಲ. ಶಾಶ್ವತವೂ ಕಡಮೆಯಾಗದಿರುವುದೂ ನಾಶರಹಿತವೂ ಆತ್ಮನಲ್ಲಿ ಜನಿಸಿದುದೂ ಆದ ಸುಖವೇ ಶ್ರೇಷ್ಠವಾದ ಸುಖವು.

**[೧]ಸ್ವಾಸ್ಥ್ಯಂ ಚೇತ್ಸುಖಮೇತೇಷಾಮಥೋಸ್ತ್ಯಾನಂತ್ಯಮಾಶ್ರಿತಮ್ ।**
**ತತೋನ್ಯಚ್ಚೇತ್ಸುಖಂ ನಾಮ ನ ಕಿಂಚಿದ್ಭುವನೋದರೇ ॥ ೨೧೦ ॥**

ಸ್ವಸ್ವರೂಪಾವಸ್ಥೆಯು ಸುಖವೆಂದಾದರೆ ಈ ಸಿದ್ಧಾತ್ಮರಿಗಿರುವ ಅನಂತಸುಖವೇ ನಿಜವಾದ ಸುಖವು. ಅದಕ್ಕಿಂತ ಬೇರೆ ಸುಖವೆಂಬುದು ಲೋಕದಲ್ಲಿ ಯಾವುದೂ ಇಲ್ಲ. ಮುಕ್ತಾತ್ಮರಿಗುಂಟಾಗುವ ಸುಖಕ್ಕೆ ಸಮಾನವಾದ ಸುಖವು ಲೋಕದಲ್ಲಿ ಯಾವುದೂ ಇಲ್ಲವೆಂದರ್ಥವು.

**ಸಕಲಕ್ಲೇಶನಿರ್ಮುಕ್ತೋ ನಿರ್ಮೋಹೋ ನಿರುಪದ್ರವಃ ।**
**ಕೇನಾಸೌ ಬಾಧ್ಯತೇ ಸೂಕ್ಷ್ಮ[೨]ಸ್ತದಸ್ಯಾತ್ಯಂತಿಕಂ ಸುಖಮ್ ॥ ೨೧೧ ॥**

ಸಮಸ್ತದುಃಖಗಳಿಂದ ಬಿಡಲ್ಪಟ್ಟವನೂ ಮೋಹರಹಿತನೂ ಉಪದ್ರವರಹಿತನೂ ಸೂಕ್ಷ್ಮನೂ ಆದ ಈ ಮುಕ್ತಾತ್ಮನು ಯಾರಿಂದ ಬಾಧಿಸಲ್ಪಡುತ್ತಾನೆ? ಯಾರಿಂದಲೂ ಬಾಧಿಸಲ್ಪಡುವುದಿಲ್ಲವೆಂದರ್ಥವು. ಆದುದರಿಂದ ಈ ಮುಕ್ತಾತ್ಮನ ಸುಖವು ಅನಂತವಾಗಿದೆ.

**[೩]ಇದಂ ಧ್ಯಾನಫಲಂ ಪ್ರಾಹುರಾನಂತ್ಯಮೃಷಿಪುಂಗವಾಃ ।**
**ತದರ್ಥಂ ಹಿ ತಪಸ್ಯಂತಿ ಮುನಯೋ [೪]ವಾತವಲ್ಕಲಾಃ ॥ ೨೧೨ ॥**

ಈ ಅನಂತಸುಖವು ಧ್ಯಾನದ ಫಲವೆಂದು ಮುನಿಶ್ರೇಷ್ಠರು ಹೇಳುತ್ತಾರೆ. ಆ ಸುಖವನ್ನು ಹೊಂದುವುದಕ್ಕೋಸ್ಕರ ದಿಗಂಬರರಾದ ಮುನಿಗಳು ತಪಸ್ಸನ್ನು ಮಾಡುವರು.

**ಯದ್ವದ್ವಾತಾಹತಾಃ ಸದ್ಯೋ ವಿಲೀಯಂತೇ ಘನಾಘನಾಃ ।**
**ತದ್ವತ್ಕರ್ಮಘನಾ ಯಾಂತಿ ಲಯಂ ಧ್ಯಾನಾನಿಲಾಹತಾಃ ॥ ೨೧೩ ॥**

ಗಾಳಿಯಿಂದ ಹೊಡೆಯಲ್ಪಟ್ಟ ಮೇಘಗಳು ಶೀಘ್ರವಾಗಿ ನಷ್ಟವಾಗುವಂತೆ ಧ್ಯಾನವೆಂಬ ಗಾಳಿಯಿಂದ ಹೊಡೆಯಲ್ಪಟ್ಟ ಕರ್ಮಗಳೆಂಬ ಮೇಘಗಳು ನಾಶವನ್ನು ಹೊಂದುತ್ತವೆ.

**ಸರ್ವಾಂಗೀಣಂ ವಿಷಂ ಯದ್ವನ್ಮಂತ್ರಶಕ್ತ್ಯಾ[೫]ಪಕೃಷ್ಯತೇ ।**
**ತದ್ವತ್ಕರ್ಮವಿಷಂ ಕೃತ್ಸ್ನಂ ಧ್ಯಾನಶಕ್ತ್ಯಾಪಸಾರ್ಯತೇ ॥ ೨೧೪ ॥**

ಸರ್ವಾಂಗಗಳಲ್ಲಿಯೂ ವ್ಯಾಪ್ತವಾಗಿರುವ ವಿಷವು ಮಂತ್ರಶಕ್ತಿಯಿಂದ ಹೋಗಲಾಡಿಸಲ್ಪಡುವಂತೆ ಸಮಸ್ತವಾದ ಕರ್ಮವೆಂಬ ವಿಷವು ಧ್ಯಾನಶಕ್ತಿಯಿಂದ ಹೋಗಲಾಡಿಸಲ್ಪಡುತ್ತದೆ.

**ಧ್ಯಾನಸ್ಯೈವ ತಪೋಯೋಗಾಃ ಶೇಷಾಃ ಪರಿಕರಾ ಮತಾಃ ।**
**ಧ್ಯಾನಾಭ್ಯಾಸೇ ತತೋ ಯತ್ನಃ ಶಶ್ವತ್ಕಾರ್ಯೋ ಮುಮುಕ್ಷುಭಿಃ ॥**

ಉಳಿದ ಎಲ್ಲಾ ತಪಸ್ಸುಗಳೂ ಯೋಗಗಳೂ ಧ್ಯಾನಕ್ಕೇ ಸಾಮಗ್ರಿಗಳೆಂದು ಶಾಸ್ತ್ರಸಮ್ಮತವಾಗಿವೆ. ಆದುದರಿಂದ ಮೋಕ್ಷಾಪೇಕ್ಷೆಯುಳ್ಳ ಮುನಿಗಳು ಧ್ಯಾನಾಭ್ಯಾಸದಲ್ಲಿ ಬಾರಿಬಾರಿಗೂ ಪ್ರಯತ್ನವನ್ನು ಮಾಡಬೇಕು.''

**ಇತಿ ಧ್ಯಾನವಿಧಿಂ ಶ್ರುತ್ವಾ ತುತೋಷ ಮಗಧಾಧಿಪಃ ।**
**ತದಾ ವಿಬುದ್ಧಮಸ್ಯಾಸೀ[೬]ತ್ತಮೋಪಾಯಾನ್ಮನೋಂಬುಜಮ್ ॥ ೨೧೬ ॥**

೧ ಸ್ವಸ್ವರೂಪಾವಸ್ಥಾಯಿತ್ವಂ. ೨ ತಸ್ಮಾತ್ಕಾರಣಾತ್. ೩ ಸುಖಂ. ೪ ದಿಗಂಬರಾಃ. ೫ ನಿರಸ್ಯತೇ. ೬ ಅಜ್ಞಾನಂ.

ಈಪ್ರಕಾರವಾದ ಧ್ಯಾನದ ವಿಧಿಯನ್ನು ಕೇಳಿ ಮಗಧಾಧಿಪತಿಯಾದ ಶ್ರೇಣಿಕ ಮಹಾಮಂಡಲೇಶ್ವರನು ಸಂತೋಷಪಟ್ಟನು. ಆಗ ಈ ಶ್ರೇಣಿಕನ ಅಜ್ಞಾನವು ಕಳೆದು ಹೋದುದರಿಂದ ಮನಸ್ಸೆಂಬ ಕಮಲವು ಅರಳಿತು.

**ತತಸ್ತಮೃಷಯೋ ಭಕ್ತ್ಯಾ ಗೌತಮಂ ಕೃತವಂದನಾಃ ।**
**ಪಪ್ರಚ್ಛುರಿತಿ ಯೋಗೀಂದ್ರಂ ಯೋಗ[೧]ದ್ವೈಧಾನಿ ಕಾನಿ ಚಿತ್ ॥ ೨೧೭ ॥**

ತರುವಾಯ ಋಷಿಗಳು ಯೋಗಿಶ್ರೇಷ್ಠರಾದ ಗೌತಮಗಣಧರರನ್ನು ಭಕ್ತಿಯಿಂದ ವಂದಿಸಿ ಕೆಲವು ಧ್ಯಾನಭೇದಗಳನ್ನು ಮುಂದೆ ಹೇಳುವಪ್ರಕಾರವಾಗಿ ಕೇಳಿದರು.

**ಭಗವ[೨]ನ್ಯೋಗಶಾಸ್ತ್ರಸ್ಯ ತತ್ತ್ವಂ ತ್ವತ್ತಃ ಶ್ರುತಂ ಮುಹುಃ ।**
**ಇದಾನೀಂ ಬೋದ್ಧುಮಿಚ್ಛಾಮಸ್ತ[೩]ದ್ದಿಗಂತರಶೋಧನಮ್ ॥ ೨೧೮ ॥**

''ಎಲೈ ಭಗವಂತನೆ! ತಮ್ಮಿಂದ ಧ್ಯಾನಶಾಸ್ತ್ರದ ಸ್ವರೂಪವನ್ನು ಬಾರಿಬಾರಿಗೂ ಕೇಳಿದೆವು. ಈಗ ಆ ಯೋಗಶಾಸ್ತ್ರಕ್ಕೆ ಬೇರೆಯವರು ಮಾಡಿರುವ ಉಪದೇಶಗಳ ಶೋಧನೆಯನ್ನು ತಿಳಿಯಲಿಚ್ಛಿಸುತ್ತೇವೆ. ಬೇರೆಯವರ ಉಪದೇಶಗಳ ನಿರಾಕರಣವನ್ನು ತಿಳಿಯಲಿಚ್ಛಿಸುತ್ತೇವೆಯೆಂದರ್ಥವು.

**[೪]ತದಸ್ಯ ಧ್ಯಾನಶಾಸ್ತ್ರಸ್ಯ ಯಾಸ್ತಾ [೫]ವಿಪ್ರತಿಪತ್ತಯಃ ।**
**ನಿರಾಕುರುಷ್ವ ತಾ ದೇವ ಭಾಸ್ವಾನಿವ ತಮಸ್ತತೀಃ ॥ ೨೧೯ ॥**

ಆದುದರಿಂದ ಎಲೈ ದೇವನೆ! ಸೂರ್ಯನು ಕತ್ತಲೆಯ ಪರಂಪರೆ (ಸಮೂಹ)ಗಳನ್ನು ಹೋಗಲಾಡಿಸುವಂತೆ ನೀನು ಈ ಧ್ಯಾನಶಾಸ್ತ್ರಕ್ಕಿರುವ ಪ್ರತಿಕೂಲ(ವಿವಾದ)ಗಳನ್ನು ನಿರಾಕರಿಸು. ಧ್ಯಾನಶಾಸ್ತ್ರದ ವಿಷಯದಲ್ಲಿರುವ ವಿವಾದಗಳನ್ನು ಖಂಡಿಸೆಂದು ಭಾವವು.

**ಋದ್ಧಿಪ್ರಾಪ್ತೇರೃಷಿಸ್ತ್ವಂ ಹಿ ತ್ವಂ [೬]ಹ ಪ್ರತ್ಯಕ್ಷವಿನ್ಮುನಿಃ ।**
**ಅನಗಾರೋಸ್ಯಸಂಗತ್ವಾದ್ಯತಿಃ ಶ್ರೇಣೀದ್ವಯೋನ್ಮುಖಃ ॥ ೨೨೦ ॥**

ಎಲೈ ಸ್ವಾಮಿಯೆ! ನೀನು ಋದ್ಧಿಪ್ರಾಪ್ತನಾಗಿರುವುದರಿಂದ ಋಷಿಯೂ ಜೀವಾದಿಪದಾರ್ಥಗಳನ್ನು ಪ್ರತ್ಯಕ್ಷವಾಗಿ ತಿಳಿಯುವುದರಿಂದ ಮುನಿಯೂ ಪರಿಗ್ರಹರಹಿತನಾಗಿರುವುದರಿಂದ ಅನಗಾರನೂ ಉಪಶಮಶ್ರೇಣಿಗೂ ಕ್ಷಪಕಶ್ರೇಣಿಗೂ ಅಭಿಮುಖನಾಗಿರುವುದರಿಂದ ಯತಿಯೂ ಆಗಿರುತ್ತಿ.

**ತತೋ [೭]ಭಾಗವತಾದೀನಾಂ [೮]ಯೋಗಾನಾಮಭಿಭೂತಯೇ ।**
**ಬ್ರೂಹಿ[೯]ನೋ ಯೋಗಬೀಜಾನಿ [೧೦]ಹೇತ್ವಾಜ್ಞಾಭ್ಯಾಂ ಯಥಾಶ್ರುತಮ್ ॥**

ಆದುದರಿಂದ ವೈಷ್ಣವಮೊದಲಾದವರ ಧ್ಯಾನಗಳ ನಿರಾಕರಣೆಗೋಸ್ಕರ ಧ್ಯಾನದ ಮೂಲಕಾರಣಗಳನ್ನು ಸರ್ವಜ್ಞರ ಮುಖದಿಂದ ಕೇಳಿದಂತೆ ಯುಕ್ತಿ (ಅನುಮಾನ) ಮತ್ತು ಆಗಮಪ್ರಮಾಣಗಳಿಂದ ನಮಗೆ ಹೇಳು.''

**ಇತಿ ತದ್ವಚನಂ ಶ್ರುತ್ವಾ ಭಗವಾನ್ಸ್ವ[೧೧]ಹ ಗೌತಮಃ ।**
**ಯತ್ಪೃಷ್ಟಂ ಯೋಗತತ್ತ್ವಂ ವಃ ಕಥಯಿಷ್ಯಾಮಿ ತತ್ಸ್ಫುಟಮ್। ೨೨೨ ॥**

ಈಪ್ರಕಾರವಾಗಿ ಆ ಮುನಿಗಳ ವಚನವನ್ನು ಕೇಳಿ ಪೂಜ್ಯರಾದ ಗೌತಮಗಣಧರರು ''ನೀವು ಪ್ರಶ್ನೆಮಾಡಿದ ಧ್ಯಾನಸ್ವರೂಪವನ್ನು ಸ್ಫುಟವಾಗಿ ನಿಮಗೆ ಹೇಳುವೆನು'' ಎಂದು ಹೇಳಿದರು.

**ಷಡ್ಭೇದಯೋಗವಾದೀ [೧೨]ಯಃ ಸೋ[೧೩]ನುಯೋಜ್ಯಃ [೧೪]ಸಮಾಹಿತ್ಯೈಃ ।**
**ಯೋಗಃ ಕಃ ಕಿಂ ಸಮಾಧಾನಂ ಪ್ರಾಣಾಯಾಮಶ್ಚ ಕೀದೃಶಃ ॥ ೨೨೩ ॥**

೧ ಭೇದಾನ್. ೨ ಧ್ಯಾನಶಾಸ್ತ್ರಸ್ಯ. ೩ ಯೋಗಮಾರ್ಗೋಪದೇಶಾಂತರನಿರಾಕರಣಂ. ೪ ತಸ್ಮಾತ್ಕಾರಣಾತ್. ೫ ಪ್ರತಿಕೂಲಾಃ. ೬ ಪಾದಪೂರಣೇ. ೭ ವೈಷ್ಣವಾದೀನಾಂ. ೮ ಧ್ಯಾನಾನಾಂ ಯೋಗಾದೀನಾಮಿತಿ ವಾ. ೯ ಅಸ್ಮಾಕಂ. ೧೦ ಯುಕ್ತ್ಯಾಗಮಾಭ್ಯಾಂ. ೧೧ ಕಥಿತವಾನ್. ೧೨ ಯೌಗಃ. ೧೩ ಪ್ರಷ್ಟವ್ಯಃ. ೧೪ ಸಮಾಧಾನೋಪೇತ್ಯೈಃ.

**ಕಾ ಧಾರಣಾ ಕಿಮಾಧ್ಯಾನಂ ಕಿಂ ಧ್ಯೇಯಂ ಕೀದೃಶೀ ಸ್ಮೃತಿಃ ।**
**ಕಿಂ ಫಲಂ ಕಾನಿ ಬೀಜಾನಿ ಪ್ರತ್ಯಾಹಾರೋ[೧]ಸ್ಯ ಕೀದೃಶಃ ॥ ೨೨೪ ॥**

"ಆರುವಿಧವಾದ ಧ್ಯಾನಭೇದಗಳನ್ನು ಹೇಳುವ ಯೌಗನನ್ನು ಕುರಿತು 'ಯೋಗವಾವುದು ? ಸಮಾಧಾನವೆಂದರೇನು ? ಪ್ರಾಣಾಯಾಮವು ಯಾವ ಪ್ರಕಾರವಾದುದು ? ಧಾರಣಾವೆಂಬುದು ಯಾವುದು ? ಆಧ್ಯಾನ ಯಾವುದು ? ಧ್ಯೇಯಯಾವುದು ? ಸ್ಮೃತಿಯಸ್ವರೂಪವೇನು ? ಧ್ಯಾನಕ್ಕೆ ಫಲವೇನು ? ಧ್ಯಾನಕ್ಕೆ ಬೀಜಾಕ್ಷರಗಳಾವುವು ?ಪ್ರತ್ಯಾಹಾರವೆಂಬುದು ಯಾವಪ್ರಕಾರವಾದುದು ?' ಎಂದು ಸಮಾಧಾನಯುಕ್ತರಾಗಿ ನೀವು ಪ್ರಶ್ನೆಮಾಡಬೇಕು.

**ಕಾಯವಾಙ್ಮನಸಾಂ ಕರ್ಮ ಯೋಗೋ ಯೋಗವಿದಾಂ ಮತಃ ।**
**[೨]ಸ ಶುಭಾಶುಭಭೇದೇನ ಭಿನ್ನೋ ದ್ವೈವಿಧ್ಯ[೩]ಮಶ್ನುತೇ ॥ ೨೨೫ ॥**

(ಈ ಪ್ರಶ್ನೆಗಳಿಗೆ ಯೌಗನು ಸ್ವಮತಸಿದ್ಧಾಂತಪ್ರಕಾರವಾಗಿ ಹೇಳುವ ಉತ್ತರಗಳನ್ನು ಕೇಳಿ ಆ ಉತ್ತರಗಳು ಸಮಂಜಸವಲ್ಲವೆಂದು ಹೇಳಿ ಯೋಗಮತ ಮೊದಲಾದುವುಗಳ ಸ್ವರೂಪವು ಮುಂದೆಹೇಳುವ ಪ್ರಕಾರವಾಗಿದೆಯೆಂದು ಯೋಚಿಸಿ ಹೇಳುತ್ತಾರೆ) ಯೋಗವನ್ನು ತಿಳಿದವರು ಶರೀರ ವಚನ ಮನಸ್ಸು ಇವುಗಳ ಕ್ರಿಯೆಯನ್ನು ಯೋಗವೆಂದು ಹೇಳುತ್ತಾರೆ. ಆ ಯೋಗವು ಶುಭ ಮತ್ತು ಅಶುಭ ಭೇದದಿಂದ ಎರಡುವಿಧವಾಗಿದೆ.

**ಯತ್ಸಮ್ಯಕ್ಪರಿಣಾಮೇಷು ಚಿತ್ತಸ್ಯಾ[೪]ಧಾನಮಂಜಸಾ ।**
**ಸ ಸಮಾಧಿರಿತಿ ಜ್ಞೇಯಃ ಸ್ಮೃತಿರ್ವಾ ಪರಮೇಷ್ಠಿನಾಮ್ ॥ ೨೨೬ ॥**

ಉತ್ತಮಪರಿಣಾಮಗಳಲ್ಲಿ ಮನಸ್ಸನ್ನು ದೃಢವಾಗಿರಿಸುವುದು ಅಥವಾ ಪಂಚ ಪರಮೇಷ್ಠಿಗಳ ಸ್ಮರಣೆಯು ಸಮಾಧಿಯೆಂದು ತಿಳಿಯಬೇಕು.

**ಪ್ರಾಣಾಯಾಮೋ ಭವೇದ್ಯೋಗನಿಗ್ರಹಃ ಶುಭಭಾವನಃ ।**
**ಧಾರಣಾ ಶ್ರುತನಿರ್ದಿಷ್ಟಬೀಜಾನಾಮವಧಾರಣಮ್ ॥ ೨೨೭ ॥**

ಶುಭಪರಿಣಾಮಯುಕ್ತವಾದ ಮನೋವಾಕ್ಕಾಯಕ್ರಿಯೆಗಳ ತಡೆಯು ಪ್ರಾಣಾಯಾಮವಾಗಿದೆ. ಶಾಸ್ತ್ರದಲ್ಲಿ ಹೇಳಿರುವ ಬೀಜಾಕ್ಷರಗಳನ್ನು ಸ್ಮರಣೆಯಲ್ಲಿರಿಸುವುದಕ್ಕೆ ಧಾರಣೆಯೆಂದು ಹೆಸರು.

**ಆಧ್ಯಾನಂ ಸ್ಯಾದನುಧ್ಯಾನಮನಿತ್ಯತ್ವಾದಿಚಿಂತನೈಃ ।**
**ಧ್ಯೇಯಂ ಸ್ಯಾತ್ಪರಮಂ [೫]ತತ್ತ್ವಮವಾಙ್ಮಾನಸಗೋಚರಮ್ ॥ ೨೨೮ ॥**

ಅನಿತ್ಯತ್ವ ಅಶರಣತ್ವ ಮೊದಲಾದ ಭಾವನೆಗಳನ್ನು ಬಾರಿಬಾರಿ ಚಿಂತಿಸುವುದು ಆಧ್ಯಾನವು. ವಚನಕ್ಕೂ ಅಶುದ್ಧವಾದ ಮನಸ್ಸಿಗೂ ವಿಷಯವಾಗದಿರುವ ಆತ್ಮತತ್ತ್ವವು ಧ್ಯೇಯವಾಗಿದೆ.

**ಸ್ಮೃತಿರ್ಜೀವಾದಿತತ್ತ್ವಾನಾಂ ಯಾಥಾತ್ಮ್ಯಾನುಸ್ಮೃತಿಃ ಸ್ಮೃತಾ ।**
**ಗುಣಾನುಸ್ಮರಣಂ ವಾ ಸ್ಯಾತ್ಸಿದ್ಧಾರ್ಹತ್ಪರಮೇಷ್ಠಿನಾಮ್ ॥ ೨೨೯ ॥**

ಜೀವ ಅಜೀವ ಮೊದಲಾದ ತತ್ತ್ವಗಳ ಯಥಾರ್ಥಸ್ವರೂಪವನ್ನು ಬಾರಿಬಾರಿ ಸ್ಮರಿಸುವುದು ಸ್ಮೃತಿಯಾಗಿದೆ; ಅಥವಾ ಸಿದ್ಧಪರಮೇಷ್ಠಿಗಳ ಮತ್ತು ಅರ್ಹತ್ಪರಮೇಷ್ಠಿಗಳ ಗುಣಗಳನ್ನು ಬಾರಿಬಾರಿ ಸ್ಮರಿಸುವುದು ಸ್ಮೃತಿಯೆನಿಸುವುದು.

**ಫಲಂ [೬]ಯಥೋಕ್ತಂ ಬೀಜಾನಿ ವಕ್ಷ್ಯಮಾಣಾನ್ಯನುಕ್ರಮಾತ್ ।**
**ಪ್ರತ್ಯಾಹಾರಸ್ತು [೭]ತಸ್ಯೋಪಸಂಹೃತೌ [೮]ಚಿತ್ತನಿರ್ವೃತಿಃ ॥ ೨೩೦ ॥**

ಹಿಂದೆ ಧರ್ಮಧ್ಯಾನಮೊದಲಾದುವುಗಳನ್ನು ವರ್ಣನೆ ಮಾಡುವ ಸಂದರ್ಭದಲ್ಲಿ ಹೇಳಿದುದು ಫಲವು. ಕ್ರಮವಾಗಿ ಮುಂದೆ ಹೇಳಲ್ಪಡುವುವು ಬೀಜಾಕ್ಷರಗಳಾಗಿವೆ. ಆ ಯೋಗದ ಉಪಸಂಹಾರಕಾಲದಲ್ಲಿ ಉಂಟಾಗುವ ಮನಃಪ್ರಸನ್ನತೆಯು ಪ್ರತ್ಯಾಹಾರವಾಗಿದೆ.

೧ ಧ್ಯಾನಸ್ಯ. ೨ ಯೋಗಃ. ೩ ಗಚ್ಛತಿ. ೪ ಧಾರಣಂ. ೫ ಆತ್ಮತತ್ತ್ವಂ. ೬ ಧರ್ಮಧ್ಯಾನಾದೌ ಪ್ರೋಕ್ತಂ. ೭ ಯೋಗಸ್ಯ. ೮ ಚಿತ್ತಪ್ರಸಾದಃ.

**[೧]ಅಕಾರಾದಿಹಕಾರಾಂತರೇಫಮಧ್ಯಾಂತಬಿಂದುಕಮ್ ।**
**ಧ್ಯಾಯನ್ಪರಮಿದಂ ಬೀಜಂ ಮುಕ್ತ್ಯರ್ಥೀ [೨]ನಾವಸೀದತಿ ॥ ೨೩೧ ॥**

ಆದಿಯಲ್ಲಿ ಅಕಾರವು ಅಂತದಲ್ಲಿ ಹಕಾರವೂ ಮಧ್ಯದಲ್ಲಿ ರೇಫೆಯೂ ಕೊನೆಯಲ್ಲಿ ಅನುಸ್ವಾರವೂ ಉಳ್ಳ ಈ ಬೀಜಮಂತ್ರ(ಅರ್ಹಂ)ವನ್ನು ಧ್ಯಾನಿಸುವ ಮೋಕ್ಷಾಪೇಕ್ಷಿಯು (ಯೋಗಿಯು) ಕ್ಲೇಶವುಳ್ಳವನಾಗುವುದಿಲ್ಲ.

**ಷಡಕ್ಷರಾತ್ಮಕಂ ಬೀಜಮಿಹಾರ್ಹದ್ಭ್ಯೋ ನಮೋಸ್ತ್ವಿತಿ ।**
**ಧ್ಯಾತ್ವಾ ಮುಮುಕ್ಷುರಾರ್ಹಂತ್ಯಮನಂತಗುಣ[೩]ಮೃಚ್ಛತಿ ॥ ೨೩೨ ॥**

ಮೋಕ್ಷವನ್ನು ಹೊಂದಲಿಚ್ಛೆಯುಳ್ಳ ಯೋಗಿಯು 'ಅರ್ಹದ್ಭ್ಯೋ ನಮೋಸ್ತು' ಎಂದು ಆರಕ್ಷರಗಳುಳ್ಳ ಬೀಜಮಂತ್ರವನ್ನು ಧ್ಯಾನಿಸಿ ಅನಂತವಾದ ಗುಣಗಳುಳ್ಳ ಅರ್ಹತ್ಪದವಿಯನ್ನು ಹೊಂದುತ್ತಾನೆ.

**ನಮಃ ಸಿದ್ಧೇಭ್ಯ ಇತ್ಯೇತದ್ವಶಾರ್ಥಸ್ತವನಾಕ್ಷರಮ್ ।**
**ಜಪಞ್ಜಪ್ಯೇಷು ಭವ್ಯಾತ್ಮಾ ಸ್ವೇಷ್ಟಾನ್ಕಾಮಾನವಾಪ್ಸ್ಯತಿ ॥ ೨೩೩ ॥**

ಜಪಿಸುವುದಕ್ಕೆ ಯೋಗ್ಯವಾದ ಮಂತ್ರಗಳಲ್ಲಿ 'ನಮಃ ಸಿದ್ಧೇಭ್ಯಃ' ಎಂದು ಐದು ಬೀಜಾಕ್ಷರಗಳುಳ್ಳ ಈ ಮಂತ್ರವನ್ನು ಜಪಿಸುವ ಭವ್ಯಾತ್ಮನು ತನಗಿಷ್ಟವಾದ ಸುಖಗಳನ್ನು ಹೊಂದುವನು.

**ಅಷ್ಟಾಕ್ಷರಂ ಪರಂ ಬೀಜಂ ನಮೋಽರ್ಹತ್ಪರಮೇಷ್ಠಿನೇ ।**
**ಇತೀದಮನುಸಂಸ್ಮೃತ್ಯ ಪುನರ್ದುಃಖಂ ನ ಪಶ್ಯತಿ ॥ ೨೩೪ ॥**

ಭವ್ಯಾತ್ಮನು 'ನಮೋಽರ್ಹತ್ಪರಮೇಷ್ಠಿನೇ' ಎಂದು ಎಂಟು ಬೀಜಾಕ್ಷರಗಳುಳ್ಳ ಈ ಶ್ರೇಷ್ಠವಾದ ಮಂತ್ರವನ್ನು ಸ್ಮರಿಸಿ ಪುನಃ ದುಃಖವನ್ನು ನೋಡುವುದಿಲ್ಲ. ಪುನಃ ದುಃಖವನ್ನು ಹೊಂದುವುದಿಲ್ಲವೆಂದರ್ಥವು.

**ಯ[೪]ತ್ಷೋಡಶಾಕ್ಷರಂ ಬೀಜಂ ಸರ್ವಬೀಜಪದಾನ್ವಿತಮ್ ।**
**ತತ್ತ್ವವಿತ್ತದನುಧ್ಯಾಯನ್ಧ್ರುವಮೇಷ [೫]ಮುಮುಕ್ಷತೇ ॥ ೨೩೫ ॥**

'ಅರಹಂತ ಸಿದ್ಧ ಆಇರಿಯ ಉವಜ್ಝಾಯ ಸಾಹು' ಎಂದು ಹದಿನಾರು ಬೀಜಾಕ್ಷರಗಳುಳ್ಳ ಮತ್ತು ಸಮಸ್ತಬೀಜಪದಗಳಿಂದ ಯುಕ್ತವಾದ ಮಂತ್ರವನ್ನು ಪುನಃ ಪುನಃ ಧ್ಯಾನಮಾಡುವ ಈ ತತ್ತ್ವಜ್ಞಾನಿಯು ನಿಶ್ಚಯವಾಗಿ ಮೋಕ್ಷವನ್ನು ಹೊಂದಲಿಚ್ಛಿಸುತ್ತಾನೆ.

**[೬]ಪಂಚಬ್ರಹ್ಮಮಯೈರ್ಮಂತ್ರೈಃ [೭]ಸಕಲೀಕೃತ್ಯ[೮]ನಿಷ್ಕಲಮ್ ।**
**ಪರಂ ತತ್ತ್ವಮನುಧ್ಯಾಯನ್ಯೋಗೀ ಸ್ಯಾ[೯]ದ್ಬ್ರಹ್ಮತತ್ತ್ವವಿತ್ ॥ ೨೩೬ ॥**

ಶರೀರರಹಿತವಾದ ಪರಬ್ರಹ್ಮತತ್ತ್ವವನ್ನು ಪಂಚಪರಮೇಷ್ಠಿಸ್ವರೂಪವಾದ ಮಂತ್ರಗಳಿಂದ ಆಕಾರವುಳ್ಳುದನ್ನಾಗಿ ಮಾಡಿ ಪುನಃಪುನಃ ಧ್ಯಾನಮಾಡುವ ಯೋಗಿಯು ಪರಬ್ರಹ್ಮಸ್ವರೂಪವನ್ನು ತಿಳಿಯುವವನಾಗುವನು.

**ಯೋಗಿನಃ ಪರಮಾನಂದೋ ಯೋಽಸ್ಯ ಸ್ಯಾ[೧೦]ಚ್ಚಿತ್ತನಿರ್ವೃತೇಃ ।**
**ಸ ಏ[೧೧]ವೈಶ್ವರ್ಯಪರ್ಯಂತೋ ಯೋಗಜಾಃ ಕಿಮುತರ್ದ್ಧಯಃ ॥**

ಈ ಯೋಗಿಗೆ ಮನಃಪ್ರಸನ್ನತೆಯಿಂದ ಉಂಟಾಗುವ ಪರಮಾನಂದವೇ ಐಶ್ವರ್ಯದ ಚರಮಾವಧಿಯಾಗಿದೆ. ಇದಕ್ಕಿಂತ ಶ್ರೇಷ್ಠವಾದ ಐಶ್ವರ್ಯವಿಲ್ಲವೆಂದು ಭಾವವು. ಧ್ಯಾನದಿಂದುಂಟಾಗುವ ಋದ್ಧಿಗಳನ್ನು ಏನೆಂದು ಹೇಳೋಣ ? ಧ್ಯಾನದಿಂದುಂಟಾಗುವ ಅತಿಶಯಗಳು ಅಪರಿಮಿತವಾದುವುಗಳೆಂದರ್ಥವು.

೧ ಅರ್ಹಮಿತಿ ಬೀಜಪದಂ. ೨ ಸಂಕ್ಲಿಷ್ಟೋ ನ ಭವತಿ. ೩ ಗಚ್ಛತಿ. ೪ ಅರಹಂತ ಸಿದ್ಧ ಆಇರಿಯ ಉವಜ್ಝಾಯ ಸಾಹು. ೫ ಮೋಕ್ತುಮಿಚ್ಛತಿ. ೬ ಪಂಚಪರಮೇಷ್ಠಿಸ್ವರೂಪೈಃ. ೭ ಸಶರೀರೀಕೃತ್ಯ. ೮ ಅಶರೀರಂ. ೯ ಪರಬ್ರಹ್ಮಸ್ವರೂಪವೇದೀ. ೧೦ ಚಿತ್ತಪ್ರಸಾದಾತ್. ೧೧ ಐಶ್ವರ್ಯಪರಮಾವಧಿಃ.

**ಅಣಿಮಾದಿಗುಣೈರ್ಯುಕ್ತಮೈಶ್ವರ್ಯಂ ಪರಮೋದಯಮ್ ।**
**ಭುಕ್ತ್ವೇಹೈವ ಪುನರ್ಮುಕ್ತ್ವಾ ಮುನಿ[1] ರ್ನಿರ್ವಾತಿ ಯೋಗವಿತ್ ॥**

ಅಣಿಮಾಮಹಿಮಾಮೊದಲಾದ ಗುಣಗಳಿಂದ ಯುಕ್ತವೂ ಪರಮೋತ್ಕೃಷ್ಟವೂ ಆದ ಐಶ್ವರ್ಯವನ್ನು ಈ ಸಂಸಾರದಲ್ಲಿ ಅನುಭವಿಸಿಯೇ ಧ್ಯಾನವಿಷಯವನ್ನು ತಿಳಿದ ಮುನಿಯು ಪುನಃ ಅದನ್ನು ಬಿಟ್ಟು ಮುಕ್ತಿಯನ್ನು ಪಡೆಯುತ್ತಾನೆ.

**ಬೀಜಾನ್ಯೇತಾನ್ಯಜಾನಾನೋ ನಾಮಮಾತ್ರೇಣ ಮಂತ್ರವಿತ್ ।**
**ಮಿಥ್ಯಾಭಿಮಾನೋಪಹತೋ ಬಧ್ಯತೇ ಕರ್ಮಬಂಧನೈಃ ॥ ೨೩೯ ॥**

ಮೇಲೆ ಹೇಳಿದ ಬೀಜಾಕ್ಷರಮಂತ್ರಗಳನ್ನು ತಿಳಿಯದೆ ಹೆಸರಿನಿಂದ ಮಾತ್ರ ಮಂತ್ರವನ್ನು ತಿಳಿದವನೆನಿಸಿಕೊಳ್ಳುವ ಯೋಗಿಯು ಮಿಥ್ಯಾಭಿಮಾನಯುಕ್ತನಾಗಿ ಕರ್ಮಬಂಧನಗಳಿಂದ ಬಂಧಿಸಲ್ಪಡುತ್ತಾನೆ.

**ನಿತ್ಯೋ ವಾ ಸ್ಯಾದನಿತ್ಯೋ ವಾ ಜೀವೋ [2]ಯೋಗಾಭಿಮಾನಿನಾಮ್ ।**
**ನಿತ್ಯಶ್ಚೇ[3]ದವಿಕಾರ್ಯತ್ವಾನ್ನ ಧ್ಯೇಯಧ್ಯಾನಸಂಗತಿಃ ॥ ೨೪೦ ॥**

ಯೋಗವಲ್ಲದುದನ್ನು ಯೋಗವೆಂದು ತಿಳಿಯುವ ಯೌಗರಿಗೆ ಜೀವನು ನಿತ್ಯನೋ ? ಅನಿತ್ಯನೋ ? ಜೀವನು ನಿತ್ಯನೆಂದು ಹೇಳುವುದಾದರೆ ಯಾವ ವಿಕಾರವೂ (ಬದಲಾವಣೆ) ಉಂಟಾಗದಿರುವುದರಿಂದ ಧ್ಯೇಯಧ್ಯಾನಗಳೆಂಬ ವಿಚಾರವೇ ಸಮಂಜಸವಾಗುವುದಿಲ್ಲ. ಸರ್ವಥಾ ನಿತ್ಯಪದಾರ್ಥದಲ್ಲಿ ರೂಪಾಂತರಗಳುಂಟಾಗದಿರುವುದರಿಂದ ಧ್ಯೇಯವೂ ಧ್ಯಾನವೂ ಸಂಭವಿಸುವುದಿಲ್ಲವೆಂದು ಭಾವವು.

**ಸುಖಾಸುಖಾನುಭವನಸ್ಮರಣೇಚ್ಛಾದ್ಯಸಂಭವಾತ್ ।**
**ಪ್ರಾಗೇವಾ[4]ಸ್ಯ ನ [5]ದಿಧ್ಯಾಸಾ ದೂರಾತ್ತತ್ತ್ವಾನುಚಿಂತನಮ್ ॥ ೨೪೧ ॥**

ನಿತ್ಯಜೀವನಿಗೆ ಸುಖದುಃಖಗಳ ಅನುಭವ ಪೂರ್ವಾನುಭೂತಸ್ಮರಣೆ ಇಚ್ಛೆ ಮೊದಲಾದ ಪರಿಣಾಮಗಳುಂಟಾಗದಿರುವುದರಿಂದ ಮೊದಲು ಧ್ಯಾನಮಾಡಬೇಕೆಂಬ ಇಚ್ಛೆಯೇ ಉಂಟಾಗುವುದಿಲ್ಲ. ತತ್ತ್ವಗಳ ಚಿಂತನೆಯು ದೂರವಿರಲಿ. ತತ್ತ್ವಗಳ ಚಿಂತನೆಗೆ ಮೂಲಕಾರಣವಾದ ಇಚ್ಛೆಯೇ ನಿತ್ಯಜೀವನಲ್ಲಿ ಅಸಂಭವವಾಗಿದೆಯೆಂದು ಭಾವವು.

**[6]ತನ್ನಿವೃತ್ತೌ ಕುತೋ ಧ್ಯಾನಂ ಕುತಸ್ತ್ಯೋ ವಾ ಫಲೋದಯಃ ।**
**ಬಂಧಮೋಕ್ಷಾದ್ಯಧಿಷ್ಠಾನಾ [7]ಪ್ರಕ್ರಿಯಾಪ್ಯಫಲಾ [8]ತತಃ ॥ ೨೪೨ ॥**

ತತ್ತ್ವಗಳ ಚಿಂತನೆಯಿಲ್ಲದಿದ್ದರೆ ಧ್ಯಾನವೆಲ್ಲಿ ? ಧ್ಯಾನವಿಲ್ಲದಿದ್ದರೆ ಫಲೋತ್ಪತ್ತಿಯೆಲ್ಲಿಯದು ? ಆದುದರಿಂದ ಬಂಧಮೋಕ್ಷ ಮೊದಲಾದ ತತ್ತ್ವಗಳಿಗೆ ಆಶ್ರಯವಾದ ಶುಭಾಶುಭಕರ್ಮವಿವರಣೆಯೂ ನಿಷ್ಫಲವು.

**ಕ್ಷಣಿಕಾನಾಂ ಚ [9]ಚಿತ್ತಾನಾಂ ಸಂತತೌ ಕಾ[10]ನುಭಾವನಾ ।**
**ಧ್ಯಾನಸ್ಯ ಸ್ವಾನುಭೂತಾರ್ಥಸ್ಮೃತಿರೇವಾ[11]ತ್ರ ದುರ್ಘಟಾ ॥ ೨೪೩ ॥**

ಜೀವನು ಕ್ಷಣಿಕ(ಅನಿತ್ಯ)ನೆಂದು ಹೇಳುವ ಪಕ್ಷದಲ್ಲಿ ಜ್ಞಾನಗಳೂ ಕ್ಷಣಿಕಗಳಾಗಿರುವುವು. ಆ ಕ್ಷಣಿಕಜ್ಞಾನಗಳ ಪರಂಪರೆಯಲ್ಲಿಯೂ ಧ್ಯಾನವನ್ನುಂಟು ಮಾಡುವ ಸಾಮರ್ಥ್ಯವಿಲ್ಲವು. ಪೂರ್ವಾನುಭೂತವಾದ ಅರ್ಥದ ಸ್ಮರಣೆಗೆ ಧ್ಯಾನವೆಂದು ಹೆಸರು. ಈ ಕ್ಷಣಿಕಜ್ಞಾನದಲ್ಲಿ ಪೂರ್ವಾನುಭೂತಾರ್ಥಸ್ಮರಣೆಯು ಅಸಂಭವವಾಗಿದೆ. ಅನಿತ್ಯಪಕ್ಷದಲ್ಲಿ ಜೀವನೂ ಜ್ಞಾನಗಳೂ ಪ್ರತಿಕ್ಷಣದಲ್ಲಿಯೂ ಬೇರೆ ಬೇರೆಯಾಗಿರುವುದರಿಂದ ಧ್ಯಾನವು ಸಂಭವಿಸುವುದಿಲ್ಲವೆಂದು ಭಾವವು.

೧ ಮುಕ್ತೋ ಭವತಿ. ೨ ಅಯೋಗೇ ಯೋಗಬುದ್ಧಿರ್ಯೋಗಾಭಿಮಾನಸ್ತದ್ವತಾಂ ಯೌಗಾನಾಂ. ೩ ಅಪರಿಣಾಮತ್ವಾತ್. ೪ ನಿತ್ಯಜೀವತತ್ತ್ವಸ್ಯ. ೫ ಧ್ಯಾತುಮಿಚ್ಛಾ. ೬ ತತ್ತ್ವಾನುಚಿಂತನಾಭಾವೇ. ೭ ಶುಭಾಶುಭರೂಪಕರ್ಮವಿವರಣಂ. ೮ ತಸ್ಮಾತ್ಕಾರಣಾತ್. ೯ ಜ್ಞಾನಾನಾಂ. ೧೦ ಸಾಮರ್ಥ್ಯಂ. ೧೧ ಕ್ಷಣಿಕರೂಪಚಿತ್ತೇ.

**[1]ಸಂತಾನಾಂತರವ[2]ತ್ತಸ್ಮಾನ್ನ ದಿಧ್ಯಾಸಾದಿಸಂಭವಃ ।**
**ನ ಧ್ಯಾನಂ ನ ಚ ನಿರ್ಮೋಕ್ಷೋ ನಾ[3]ಪ್ಯಸ್ಯಾಷ್ಟಾಂಗಭಾವನಾ ॥ ೨೪೪ ॥**

ಒಬ್ಬ ಮನುಷ್ಯನಲ್ಲಿ ಧ್ಯಾನಮಾಡಬೇಕೆಂಬ ಇಚ್ಛೆಯೂ ಇನ್ನೊಬ್ಬ ಮನುಷ್ಯನಲ್ಲಿ ಧ್ಯಾನವೂ ಹೇಗೆ ಅಸಂಭವವೋ ಹಾಗೆಯೇ ಕ್ಷಣಿಕಪಕ್ಷದಲ್ಲಿ ಧ್ಯಾನದ ಇಚ್ಛೆ ಮೊದಲಾದುವೂ ಧ್ಯಾನವೂ ಮೋಕ್ಷವೂ ಈ ಮೋಕ್ಷನಿಮಿತ್ತವಾಗಿ ಯಮ ನಿಯಮಾದಿ ಅಷ್ಟಾಂಗಭಾವನೆಗಳೂ ಸಂಭವಿಸುವುದಿಲ್ಲ. ಕ್ಷಣಿಕಪಕ್ಷದಲ್ಲಿ ಧ್ಯಾನ ಮಾಡಬೇಕೆಂಬ ಇಚ್ಛೆಯುಳ್ಳ ಆತ್ಮನು ಧ್ಯಾನಕಾಲದಲ್ಲಿರುವುದಿಲ್ಲ. ಧ್ಯಾನಮಾಡುವ ಆತ್ಮನು ಮೋಕ್ಷಕಾಲದಲ್ಲಿರುವುದಿಲ್ಲವೆಂದು ಭಾವವು.

**ತಥಾ [4]ಪುದ್ಗಲವಾದೇಪಿ ದೇಹಿಪುದ್ಗಲತತ್ತ್ವಯೋಃ ।**
**[5]ತತ್ತ್ವಾನ್ಯತ್ವಾದ್ಯವಕ್ತವ್ಯಸಂಗರಾದ್ಧ್ಯಾತು[6]ರಸ್ಥಿತೇಃ ॥ ೨೪೫ ॥**

ಹಾಗೆಯೇ ಚಾರ್ವಾಕನ ಜಡವಾದದಲ್ಲಿಯೂ ಜೀವಪುದ್ಗಲತತ್ತ್ವಗಳಿಗೆ ತತ್ತ್ವ, ಅನ್ಯತ್ವ, ಏಕತ್ವ, ವಸ್ತುತ್ವ ಮೊದಲಾದ ಧರ್ಮಗಳನ್ನು ಹೇಳುವ ಪ್ರತಿಜ್ಞೆಯನ್ನು ಮಾಡದಿರುವುದರಿಂದಲೂ ಧ್ಯಾನಮಾಡುವ ಜೀವವೆಂಬ ವಸ್ತುವಿಲ್ಲದಿರುವುದರಿಂದಲೂ ಧ್ಯಾನಮಾಡುವ ಇಚ್ಛೆ, ತತ್ತ್ವಚಿಂತನೆ ಮೊದಲಾದುವು ಸಂಭವಿಸುವುದಿಲ್ಲ. ಜೀವಪುದ್ಗಲಗಳ ಬೇರೆಬೇರೆ ಸ್ವರೂಪವರ್ಣನೆಯನ್ನು ಮಾಡದೆ ಪುದ್ಗಲದಲ್ಲಿಯೇ ಅಂತರ್ಭಾವಮಾಡಿದುದರಿಂದ ಧ್ಯಾನಮೊದಲಾದುವು ಸಂಭವಿಸುವುದಿಲ್ಲವೆಂದು ಭಾವವು.

**ದಿಧ್ಯಾಸಾಪೂರ್ವಿಕಾ ಧ್ಯಾನಪ್ರವೃತ್ತಿರ್ನಾ[7]ತ್ರ ಯುಜ್ಯತೇ ।**
**ನ ಚಾಸತಃ ಖಪುಷ್ಪಸ್ಯ ಕಾಚಿದ್ಗಂಧಾದಿಕಲ್ಪನಾ ॥ ೨೪೬ ॥**

ಇಲ್ಲದಿರುವ ಆಕಾಶಪುಷ್ಪದ ಗಂಧಮೊದಲಾದ ಗುಣಗಳ ಕಲ್ಪನೆಯು ಹೇಗೆ ಅಸಂಭವವೋ ಹಾಗೆಯೇ ಈ ಜಡವಾದದಲ್ಲಿ ಧ್ಯಾನದ ಇಚ್ಛಾಪೂರ್ವಕವಾದ ಧ್ಯಾನಪ್ರವೃತಿಯು ಅಸಂಭವವು.

**[8]ವಿಜ್ಞಪ್ತಿಮಾತ್ರವಾದೇ ಚ ಜ್ಞಪ್ತೇರ್ನಾಸ್ತ್ಯೇವ [9]ಗೋಚರಃ ।**
**ತತೋ ನಿರ್ವಿಷಯಾ ಜ್ಞಪ್ತಿಃ ಕ್ವಾ[10]ತ್ಮಾನಂ ಬಿಭೃಯಾತ್ಕಥಮ್ ॥**

ಜ್ಞಾನಹೊರತು ಆತ್ಮ ಮೊದಲಾದ ಬೇರೆ ಯಾವವಸ್ತುವೂ ಇಲ್ಲವೆಂಬ ವಾದ (ವಿಜ್ಞಾನಾದ್ವೈತವಾದ)ದಲ್ಲಿಯೂ ಜ್ಞಾನಕ್ಕೆ ವಿಷಯವೇ ಇಲ್ಲದಿರುವುದರಿಂದ ವಿಷಯವಿಲ್ಲದಿರುವ ಜ್ಞಾನವು ಹೇಗೆ ಯಾವ ಆಧಾರದಲ್ಲಿರುವುದು ? ಜ್ಞಾನಕ್ಕೆ ಆಧಾರವಾದ ಆತ್ಮನೇ ಇಲ್ಲದಿರುವುದರಿಂದ ಆಧೇಯವಾದ ಜ್ಞಾನವೂ ಇರುವುದಿಲ್ಲವೆಂದು ಭಾವವು.

**[11]ತದಭಾವೇ ಚ ನ ಧ್ಯಾನಂ ನಾ[12]ಧ್ಯಾನಂ ಮೋಕ್ಷ ಏವ ವಾ ।**
**ಪ್ರದೀಪಾರ್ಕಹುತಾಶಾ[13]ದೌ ಸತ್ಯರ್ಥೇ ಚಾರ್ಥಭಾಸನಮ್ ॥ ೨೪೮ ॥**

ಧ್ಯೇಯವಾದ ಆತ್ಮನೇ ಇಲ್ಲದಿದ್ದರೆ ಧ್ಯಾನವೂ ಧ್ಯಾನವಿಲ್ಲದಿರುವಿಕೆಯೂ ಮೋಕ್ಷವೂ ಇರುವುದಿಲ್ಲ. ದೀಪ ಸೂರ್ಯ ಬೆಂಕಿ ಮೊದಲಾದ ತೇಜಃಪದಾರ್ಥಗಳು ಬೇರೆ ವಸ್ತುಗಳಿದ್ದರೇನೇ ಅವುಗಳನ್ನು ಪ್ರಕಾಶಪಡಿಸುತ್ತವೆ.

**[14]ನೈರಾತ್ಮ್ಯವಾದಪಕ್ಷೇಪಿ ಕಿನ್ನು ಕೇನ ಪ್ರಮೀಯತೇ ।**
**[15]ಕಚ್ಛಪಾಂಗರುಹೈ[16]ಸ್ತತ್ಸ್ಯಾತ್ಖಪುಷ್ಪಾ[17]ಪೀಡಬಂಧನಮ್ ॥ ೨೪೯ ॥**

ಆತ್ಮನೇ ಇಲ್ಲವೆಂಬ ಶೂನ್ಯವಾದಪಕ್ಷದಲ್ಲಿಯೂ ಯಾವುದು ಯಾವುದನ್ನು ತಿಳಿಯುವುದು ? ಧ್ಯಾನವೂ ಧ್ಯೇಯವೂ ಇರುವುದಿಲ್ಲವೆಂದು ಭಾವವು. ಆ

೧ ದೇವದತ್ತಚಿತ್ತಸಂತಾನಂ ಪ್ರತಿ ಯಜ್ಞದತ್ತಚಿತ್ತಸಂತಾನವತ್. ೨ ಕಾರಣಾತ್. ೩ ಮೋಕ್ಷಸ್ಯ. ೪ ಭೂತಚತುಷ್ಟಯವಾದೇ. ೫ ಏಕತ್ವನಾನಾತ್ವವಸ್ತುತ್ವಪ್ರಮೇಯತ್ವಾದೀನಾಮವಕ್ತವ್ಯಪ್ರತಿಜ್ಞಾಯಾಃ. ೬ ಅಭಾವಾತ್. ೭ ಭೂತವಾದೇ. ೮ ವಿಜ್ಞಾನಾದ್ವೈತವಾದೇ ಚ. ೯ ವಿಷಯಃ. ೧೦ ಸ್ವಂ. ೧೧ ಧ್ಯೇಯಾಭಾವೇ. ೧೨ ಧ್ಯಾನಾಭಾವಃ. ೧೩ ರತ್ನಾದೌ. ೧೪ ಶೂನ್ಯವಾದಪಕ್ಷೇಪಿ. ೧೫ ಕೂರ್ಮಶರೀರರೋಮಭಿಃ. ೧೬ ನೈರಾತ್ಮ್ಯಂ. ೧೭ ಶೇಖರಃ.

ಶೂನ್ಯವಾದವು ಆಮೆಯ ರೋಮಗಳಿಂದ ಆಕಾಶಪುಷ್ಪಗಳನ್ನು ಕಟ್ಟಿ ಜುಟ್ಟಿನಲ್ಲಿ ಧರಿಸಿದಂತಿರುವುದು.

**ಧ್ಯೇಯತತ್ತ್ವೇಽಪಿ ನೇತವ್ಯಾ ವಿಕಲ್ಪದ್ವಯಯೋಜನಾ ।**
**ಅನಾಧೇಯಾಪ್ರಹೇಯಾತಿಶಯೋ ಸ್ಥಾಸ್ನೌ ನ ಕಿಂಚನ ॥ ೨೫೦ ॥**

ಧ್ಯಾನಮಾಡುವುದಕ್ಕೆ ಯೋಗ್ಯವಾದ ಆತ್ಮತತ್ತ್ವವಿಷಯದಲ್ಲಿಯೂ ಶೂನ್ಯವಾದಿಯನ್ನು ಕುರಿತು 'ಈ ಆತ್ಮತತ್ತ್ವವು ಗ್ರಾಹ್ಯವೋ ಅಗ್ರಾಹ್ಯವೋ' ಎಂದು ಕೇಳಬೇಕು. ಅತಿಶಯವನ್ನು ಆರೋಪಣೆಮಾಡುವುದಕ್ಕೂ ನಾಶಮಾಡುವುದಕ್ಕೂ ಅಶಕ್ಯವಾಗಿರುವ ಮತ್ತು ಅಸ್ಥಿರವಾದ ಆ ಧ್ಯೇಯತತ್ತ್ವದ ವಿಷಯದಲ್ಲಿ ಯಾವ ಉತ್ತರವೂ ಸಮಂಜಸವಾಗುವುದಿಲ್ಲ.

**ಮುಕ್ತಾತ್ಮನೋಽಪಿ ಚೈತನ್ಯವಿರಹಾ[೧]ಲ್ಲಕ್ಷಣಕ್ಷತೇಃ ।**
**ನ ಧ್ಯೇಯಂ ಕಾಪಿಲಾನಾಂ ಸ್ಯಾನ್ನಿರ್ಗುಣತ್ವಾಚ್ಚ ಖಾಬ್ಜವತ್ ॥ ೨೫೧ ॥**

ಸಾಂಖ್ಯಮತಾನುಸಾರವಾಗಿ ಮುಕ್ತಾತ್ಮನಿಗೂ ಚೈತನ್ಯಗುಣವಿಲ್ಲದಿರುವುದರಿಂದ 'ಬುದ್ಧಿಯಿಂದ ನಿಶ್ಚಯಿಸಲ್ಪಟ್ಟ ಅರ್ಥವನ್ನು ಪುರುಷನು ತಿಳಿಯುತ್ತಾನೆ' ಎಂಬ ಲಕ್ಷಣಕ್ಕೆ ಚ್ಯುತಿಬರುವುದು. ಇದರಿಂದಲೂ ಆತ್ಮನು ಚೈತನ್ಯಗುಣರಹಿತ ನಾಗಿರುವುದರಿಂದಲೂ ಆಕಾಶಪುಷ್ಪದಂತೆ ಸಾಂಖ್ಯರಿಗೆ ಧ್ಯಾನಯೋಗ್ಯವಾದ ವಸ್ತು ವಿಲ್ಲವು.

**[೨]ಸುಷುಪ್ತಸದೃಶೋ ಮುಕ್ತಃ ಸ್ಯಾದಿತ್ಯೇವಂ [೩]ಬ್ರುವಾಣಕಃ ।**
**[೪]ಸುಷುಪ್ಸತ್ಯೇಷ ಮೂಢಾತ್ಮಾ ಧ್ಯೇಯತತ್ತ್ವವಿಚಾರಣೇ ॥ ೨೫೨ ॥**

'ಮುಕ್ತಾತ್ಮನು ಚೆನ್ನಾಗಿ ನಿದ್ರಿಸುವವನಿಗೆ ಸಮಾನನಾಗಿರುವನು' ಎಂದು ಹೇಳುವ ಮೂರ್ಖನಾದ ಈ ದುಷ್ಟ ಸಾಂಖ್ಯನು ಧ್ಯಾನಯೋಗ್ಯವಾದ ತತ್ತ್ವವನ್ನು ವಿಚಾರಮಾಡುವುದರಲ್ಲಿ ನಿದ್ರೆಮಾಡಲಿಚ್ಛಿಸುತ್ತಾನೆ. ಧ್ಯೇಯತತ್ತ್ವದ ವಿಚಾರದಲ್ಲಿ ಅಜಾಗರೂಕನಾಗಿದ್ದಾನೆಂದು ಭಾವವು.

**ಶೇಷೇಷ್ವಪಿ [೫]ಪ್ರವಾದೇಷು ನ ಧ್ಯಾನಧ್ಯೇಯನಿರ್ಣಯಃ ।**
**ಏಕಾಂತದೋಷದುಷ್ಟತ್ವಾದ್ದ್ವೈತಾದ್ವೈತಾದಿವಾದಿನಾಮ್ ॥ ೨೫೩ ॥**

ದ್ವೈತ ಅದ್ವೈತ ಮೊದಲಾದ ಬೇರೆ ವಾದ(ಮತ)ಗಳು ಏಕಾಂತದೋಷದಿಂದ ದುಷ್ಟವಾಗಿರುವುದರಿಂದ ಆ ಮತಗಳಲ್ಲಿಯೂ ಧ್ಯಾನಧ್ಯೇಯಗಳ ನಿರ್ಣಯವಾಗುವುದಿಲ್ಲ.

**ನಿತ್ಯಾನಿತ್ಯಾತ್ಮಕಂ ಜೀವತತ್ತ್ವಮಭ್ಯುಪಗಚ್ಛತಾಮ್ ।**
**ಧ್ಯಾನಂ ಸ್ಯಾದ್ವಾದಿನಾಮೇವ ಘಟತೇ ನಾನ್ಯವಾದಿನಾಮ್ ॥ ೨೫೪ ॥**

ಜೀವತತ್ತ್ವವು ನಿತ್ಯಸ್ವರೂಪವೂ ಅನಿತ್ಯಸ್ವರೂಪವೂ ಆಗಿದೆಯೆಂದು ಅಂಗೀಕಾರ ಮಾಡುವ ಸ್ಯಾದ್ವಾದಿ(ಜೈನ)ಗಳಿಗೆ ಧ್ಯಾನವು ಸಮಂಜಸವಾಗಿದೆ. ಬೇರೆ ಏಕಾಂತ ವಾದಿಗಳಿಗೆ ಸಮಂಜಸವಾಗುವುದಿಲ್ಲ.

**[೬]ವಿರುದ್ಧಧರ್ಮಯೋರೇಕಂ ವಸ್ತು ನಾಧಾರತಾಂ ವ್ರಜೇತ್ ।**
**ಇತಿ ಚೇನ್ನಾ[೭]ರ್ಪಣಾಭೇದಾದವಿರೋಧಪ್ರಸಿದ್ಧಿತಃ ॥ ೨೫೫ ॥**

ಶೀತೋಷ್ಣಗಳಂತೆ ಪರಸ್ಪರವಿರುದ್ಧವಾದ ನಿತ್ಯಾನಿತ್ಯಧರ್ಮಗಳಿಗೆ ಒಂದು ಆತ್ಮ ವಸ್ತುವು ಆಧಾರವಾಗುವುದಿಲ್ಲವೆಂದು ಹೇಳಕೂಡದು. ಏತಕ್ಕೆಂದರೆ- ನಿರೂಪಣ ಮಾಡುವ ಭೇದದಿಂದ ವಿರೋಧವಿಲ್ಲವೆಂದು ಪ್ರಸಿದ್ಧಿಯಿದೆ.

**ನಿತ್ಯೋ [೮]ದ್ರವ್ಯಾರ್ಪಣಾದಾತ್ಮಾ ನ ಪರ್ಯಾಯ[೯]ಭಿದಾರ್ಪಣಾತ್ ।**
**ಅನಿತ್ಯಃ ಪರ್ಯಯೋತ್ಪಾದವಿನಾಶೈರ್ದ್ರವ್ಯತೋ ನ ತು ॥ ೨೫೬ ॥**

೧ ಬುದ್ಧ್ಯಧ್ಯವಸಿತಮರ್ಥಂ ಪುರುಷಶ್ಚೇತಯತ ಇತಿ ಲಕ್ಷಣಾಭಾವಾತ್. ೨ ಭೃಶಂ ನಿದ್ರಾವಶಗತ ಸದೃಶಃ. ೩ ಕುತ್ಸಿತಂ ಬ್ರುವಾಣಃ ಸಾಂಖ್ಯಃ. ೪ ಸ್ವಪಿತುಮಿಚ್ಛತಿ. ೫ ಪರಮತೇಷು. ೬ ಶೀತೋಷ್ಣವನ್ನಿತ್ಯಾನಿತ್ಯಯೋಃ. ೭ ನಿರೂಪಣಂ. ೮ ದ್ರವ್ಯನಿರೂಪಣಾತ್. ೯ ಭೇದಃ.

ದ್ರವ್ಯದ ನಿರೂಪಣವನ್ನು ಮಾಡುವ ಪಕ್ಷದಲ್ಲಿ ಆತ್ಮನು ನಿತ್ಯನು. ಪರ್ಯಾಯ (ಅವಸ್ಥಾ)ಗಳಿಗೆ ಉತ್ಪತ್ತಿವಿನಾಶಗಳಿರುವುದರಿಂದ ಆ ಪರ್ಯಾಯಭೇದಗಳನ್ನು ನಿರೂಪಣಮಾಡುವಪಕ್ಷದಲ್ಲಿ ಆತ್ಮನು ಅನಿತ್ಯನು. ದ್ರವ್ಯಾಪೇಕ್ಷೆಯಿಂದ ಅನಿತ್ಯನಲ್ಲ.

**ದೇವದತ್ತಃ ಪಿತಾ ಚ ಸ್ಯಾತ್ಪುತ್ರಶ್ಚೈವಾರ್ಪಣಾವಶಾತ್ ।**
**[೧]ವಿಪಕ್ಷೇತರಯೋರ್ಯೋಗಃ ಸ್ಯಾದ್ವಸ್ತು[೨]ನ್ಯುಭಯಾತ್ಮನಿ ॥ ೨೫೭ ॥**

ದೇವದತ್ತನೆಂಬವನು ನಿರೂಪಣಭೇದದಿಂದ ತಂದೆಯೂ ಆಗಬಹುದು. ಮಗನೂ ಆಗಬಹುದು. ಅಂದರೆ ದೇವದತ್ತನ ಮಗನ ಅಪೇಕ್ಷೆಯಿಂದ ತಂದೆಯೂ, ದೇವದತ್ತನ ತಂದೆಯ ಅಪೇಕ್ಷೆಯಿಂದ ಮಗನೂ ಆಗಬಹದು. ದೇವದತ್ತನಲ್ಲಿ ನಿರೂಪಣಭೇದದಿಂದ ಪರಸ್ಪರವಿರುದ್ಧವಾಗಿರುವ ಪಿತೃತ್ವಧರ್ಮವೂ ಪುತ್ರತ್ವಧರ್ಮವೂ ಇರಬಹುದೆಂದು ಭಾವವು. ಹಾಗೆಯೇ ನಿತ್ಯಾನಿತ್ಯಸ್ವರೂಪವಾದ ವಸ್ತುವಿನಲ್ಲಿ ನಿತ್ಯಾನಿತ್ಯಧರ್ಮಗಳ ಸಂಬಂಧವೂ ಇರಬಹುದು.

**ಜಿನಪ್ರವಚನಾಭ್ಯಾಸಪ್ರಸರದ್ಬೋಧಸಂಪದಾಮ್ ।**
**ಯುಕ್ತಂ ಸ್ಯಾದ್ವಾದಿನಾಂ ಧ್ಯಾನಂ ನಾನ್ಯೇಷಾಂ ದುರ್ದೃಶಾಮಿದಮ್ ॥**

ಜಿನಶಾಸ್ತ್ರದ ಅಭ್ಯಾಸದಿಂದ ವಿಸ್ತರಿಸಿದ ಜ್ಞಾನಸಂಪತ್ತುಳ್ಳ ಸ್ಯಾದ್ವಾದಿಗಳ ಧ್ಯಾನವು ಯುಕ್ತ(ಸಮಂಜಸ)ವಾಗಿದೆ. ಬೇರೆ ಮಿಥ್ಯಾದೃಷ್ಟಿಗಳ ಧ್ಯಾನವು ಯುಕ್ತವಾಗಿಲ್ಲ. ಮಿಥ್ಯಾದೃಷ್ಟಿಗಳು ಹೇಳುವ ಧ್ಯಾನವು ಯುಕ್ತವಾಗಿಲ್ಲವೆಂದು ತಾತ್ಪರ್ಯ.

**ಜಿನೋ ಮೋಹಾರಿವಿಜಯಾದಾಪ್ತಃ ಸ್ಯಾ[೩]ದ್ವೀತಧೀಮಲಃ ।**
**ವಾಚಸ್ಪತಿರಸೌ ವಾಗ್ಭಿಃ ಸನ್ಮಾರ್ಗಪ್ರತಿಬೋಧನಾತ್ ॥ ೨೫೯ ॥**

ಈ ಭಗವಂತನು ಮೋಹನೀಯಕರ್ಮವೆಂಬ ಶತ್ರುವನ್ನು ಜಯಿಸಿದುದರಿಂದ ಜಿನನೂ ಬುದ್ಧಿಯ ದೋಷ(ಜ್ಞಾನಾವರಣೀಯಕರ್ಮ)ವು ನಷ್ಟವಾಗಿರುವುದರಿಂದ ಆಪ್ತನೂ ವಚನಗಳಿಂದ ಸನ್ಮಾರ್ಗದ ಉಪದೇಶವನ್ನು ಮಾಡುವುದರಿಂದ ವಾಚಸ್ಪತಿಯೂ ಆಗಿರುವನು.

**ಸ್ಯಾದರ್ಹನ್ನರಿಘಾತಾದಿಗುಣೈ[೪]ರಪರಗೋಚರೈಃ ।**
**ಬುದ್ಧಸ್ತ್ರೈಲೋಕ್ಯವಿಶ್ವಾರ್ಥಬೋಧನಾ[೫]ದ್ವಿಶ್ವಭುದ್ವಿಭುಃ ॥ ೨೬೦ ॥**

ಬೇರೆಯವರಿಗೆ ವಿಷಯವಲ್ಲದಿರುವ ಶತ್ರು (ಕರ್ಮಶತ್ರು) ಸಂಹಾರ ಮೊದಲಾದ ಗುಣಗಳಿಂದ ಅರ್ಹಂತನೂ ಮೂರುಲೋಕಗಳಲ್ಲಿರುವ ಸಮಸ್ತ ಪದಾರ್ಥಗಳನ್ನು ತಿಳಿಯುವುದರಿಂದ ಬುದ್ಧನೂ ಲೋಕವನ್ನು ಅನುಭವಿಸು (ತಿಳಿಯು) ವುದರಿಂದ ವಿಭುವೂ ಆಗಿರುವನು.

**ಸ [೬]ವಿಷ್ಣುಶ್ಚ ವಿಜಿಷ್ಣುಶ್ಚ ಶಂಕರೋಽಪ್ಯಭಯಂಕರಃ ।**
**ಶಿವಃ ಸನಾತನಃ ಸಿದ್ಧೋ ಜ್ಯೋತಿಃ ಪರಮ[೭]ಮಕ್ಷರಮ್ ॥ ೨೬೧ ॥**

ಆ ಜಿನೇಶ್ವರನು ಸರ್ವವ್ಯಾಪಕನಾಗಿರುವುದರಿಂದ ವಿಷ್ಣುವೂ ಕರ್ಮಶತ್ರುಗಳನ್ನು ಜಯಿಸಿರುವುದರಿಂದ ವಿಜಿಷ್ಣುವೂ ಸುಖವನ್ನುಂಟುಮಾಡುವುದರಿಂದ ಶಂಕರನೂ ಅಭಯವನ್ನು ಕೊಡುವುದರಿಂದ ಅಭಯಂಕರನೂ ಸುಖಮಯನಾಗಿರುವುದರಿಂದ ಶಿವನೂ ಆದಿಯಿಲ್ಲದವನಾದುದರಿಂದ ಸನಾತನನೂ ಮಾಡಬೇಕಾದಕಾರ್ಯವನ್ನು ಮಾಡಿದುದರಿಂದ ಅಥವಾ ಸಿದ್ಧತ್ವವನ್ನು ಪಡೆದುದರಿಂದ ಸಿದ್ಧನೂ ನಾಶರಹಿತವಾದ ಜ್ಞಾನಮಯನಾಗಿರುವುದರಿಂದ ಪರಂಜ್ಯೋತಿಯೂ ಆಗಿರುವನು.

**ಇತ್ಯನ್ವರ್ಥಾನಿ ನಾಮಾನಿ ಯಸ್ಯ ಲೋಕೇಶಿನಃ ಪ್ರಭೋಃ ।**
**ವಿದುಷಾಂ ಹೃದಯೇಷ್ವಾಪ್ತಬುದ್ಧಿಂ ಕರ್ತುಮಲಂ ತರಾಮ್ ॥ ೨೬೨ ॥**

೧ ನಿತ್ಯಾನಿತ್ಯಯೋಃ. ೨ ನಿತ್ಯಾನಿತ್ಯಾತ್ಮನಿ. ೩ ವಿಗತಧೀಮಲಃ. ೪ ಪರೇಷಾಮವಿಷಯೈರಿತ್ಯರ್ಥಃ. ೫ ವಿಶ್ವಂ ಬೋಧತೀತಿ. ೬ ವೇವೇಷ್ಟೀತಿ. ೭ ಅವಿನಶ್ವರಂ.

ಲೋಕಾಧಿಪತಿಯಾದ ಯಾವ ಪ್ರಭುವಿನ ಮೇಲೆಹೇಳಿದ ಸಾರ್ಥಕವಾದ ಹೆಸರುಗಳು ವಿದ್ವಾಂಸರ ಹೃದಯಗಳಲ್ಲಿ ಆಪ್ತನೆಂಬ ಬುದ್ಧಿಯನ್ನುಂಟುಮಾಡುವುದಕ್ಕೆ ಸಮರ್ಥಗಳಾಗಿವೆಯೋ

**ಯಸ್ಯ ರೂಪ[೧]ಮಧಿಜ್ಯೋತಿರನಂಬರವಿಭೂಷಣಮ್ ।**
**[೨]ಶಾಸ್ತಿ ಕಾಮಜ್ವರಾಪಾಯಮಕಟಾಕ್ಷನಿರೀಕ್ಷಣಮ್ ॥ ೨೬೩ ॥**

**ನಿರಾಯುಧತ್ವಾನ್ನಿರ್ಧೂತಭಯಕೋಪಮಕೋಪನಾತ್ ।**
**ಅರಕ್ತನಯನಂ ಸೌಮ್ಯಂ ಸದಾ ಪ್ರಹಸಿತಾಯಿತಮ್ ॥ ೨೬೪ ॥**

ಅಧಿಕವಾದ ಪ್ರಕಾಶವುಳ್ಳುದೂ ವಸ್ತ್ರಾಭರಣಗಳಿಲ್ಲದುದೂ ಆದ ಯಾವ ಭಗವಂತನ ರೂಪವು ಕಾಮಸಂತಾಪವಿಲ್ಲವೆಂಬುದನ್ನೂ ಕಡೆಕಣ್ಣಿನೋಟವಿಲ್ಲವೆಂಬುದನ್ನೂ ಕೈಯಲ್ಲಿ ಆಯುಧವಿಲ್ಲದಿರುವುದರಿಂದ ಅವನಿಗೆ ಭಯವಿಲ್ಲವೆಂಬುದನ್ನೂ ಕೋಪವಿಲ್ಲವೆಂಬುದನ್ನೂ ಸೂಚಿಸುತ್ತದೆಯೋ ಕೋಪವಿಲ್ಲದಿರುವುದರಿಂದ ಕಣ್ಣುಗಳು ಕೆಂಪಾಗಿಲ್ಲವೋ ಯಾವಾಗಲೂ ಹಸನ್ಮುಖಿಯಾಗಿರುವುದರಿಂದ ಆಕಾರವು ಸೌಮ್ಯವಾಗಿದೆಯೋ

**ರಾಗಾದ್ಯಶೇಷದೋಷಾಣಾಂ ನಿರ್ಜಯಾ[೩]ದತಿಮಾನುಷಮ್ ।**
**ಮುಖಾಬ್ಜಂ ಯಸ್ಯ [೪]ಶಾಸ್ತ್ರೃತ್ವಮನುಶಾಸ್ತಿಸುಮೇಧಸಃ ॥ ೨೬೫ ॥**

ರಾಗಮೊದಲಾದ ದೋಷಗಳನ್ನು ಜಯಿಸಿರುವುದರಿಂದ ಯಾವ ಜ್ಞಾನಿಯಾದ ಭಗವಂತನ ಅಮಾನುಷವಾದ ದಿವ್ಯಮುಖಕಮಲವು ಧರ್ಮೋಪದೇಶಕ ಭಾವವನ್ನು ಸೂಚಿಸುತ್ತದೆಯೋ

**ಸ ಏವಾಪ್ತೋ ಜಗದ್ವ್ಯಾಪ್ತಜ್ಞಾನವೈರಾಗ್ಯವೈಭವಃ ।**
**[೫]ತದುಪಜ್ಞಮತೋ ಧ್ಯಾನಂ [೬]ಶ್ರೇಯಂ ಶ್ರೇಯೋರ್ಥಿನಾ[೭]ಮಿದಮ್ ॥**

ಅವನೇ ಜಗತ್ತಿನಲ್ಲಿ ವ್ಯಾಪಿಸಿರುವ (ಲೋಕವಿಖ್ಯಾತವಾದ) ಜ್ಞಾನ ಮತ್ತು ವೈರಾಗ್ಯಸಂಪತ್ತುಳ್ಳ ಆಪ್ತನು. ಅಂತಹ ಆಪ್ತನು ಮೊತ್ತಮೊದಲು ಪ್ರಚಾರಪಡಿಸಿದ ಈ ಮೇಲೆಹೇಳಿದ ಧ್ಯಾನವನ್ನು ಮೋಕ್ಷಸುಖಾಪೇಕ್ಷೆಯುಳ್ಳವರು ಹೊಂದಬೇಕು.''

**ಇತಿ [೧]ಗದತಿ ಗಣೇಂದ್ರೇ ಧ್ಯಾನತತ್ತ್ವಂ ಮಹರ್ದ್ಧಿ**
**ಮುನಿಸದಸಿ ಮುನೀಂದ್ರಾಃ [೨]ಪ್ರಾತುಷನ್ಭಕ್ತಿಭಾಜಃ ।**
**ಘನಪುಲಕಿತಮೂಹುರ್ಗಾತ್ರಮಾವಿರ್ಮುಖಾಬ್ಜಂ**
**ದಿನಕರಕರಯೋಗಾ[೩]ದಾಕರಾವಾಂಬುಜಾನಾಮ್ ॥ ೨೬೭ ॥**

ಈಪ್ರಕಾರವಾಗಿ ಮಹಾಬುದ್ಧಿಸಂಪನ್ನರಾದ ಗೌತಮಗಣಧರರು ಮುನಿಗಳ ಸಭೆಯಲ್ಲಿ ಧ್ಯಾನದ ಸ್ವರೂಪವನ್ನು ಹೇಳುತ್ತಿರಲು ಭಕ್ತಿಯುಕ್ತರಾದ ಮುನಿಶ್ರೇಷ್ಠರು ಬಹಳ ಸಂತೋಷಪಟ್ಟರು. ಸೂರ್ಯಕಿರಣಗಳ ಸಂಯೋಗದಿಂದ ಕಮಲ ಸರೋವರಗಳು ಪ್ರಫುಲ್ಲಿತವಾಗುವಂತೆ, ಆ ಮುನಿಶ್ರೇಷ್ಠರು ವಿಕಸಿತಮುಖ ಕಮಲವುಳ್ಳ ಮತ್ತು ದಟ್ಟವಾದ ರೋಮಾಂಚವುಳ್ಳ ಶರೀರವನ್ನು ಧರಿಸಿದರು.

**ಸ್ತುತಿಮುಖರಮುಖಾಸ್ತೇ ಯೋಗಿನೋ ಯೋಗಿಮುಖ್ಯಂ**
**[೪]ಕ್ಷಣಮಿವ [೫]ಜಿನಸೇನಾಧೀಶ್ವರಂ ತಂ ಪ್ರಣುತ್ಯ ।**
**ಪ್ರಣಿದಧುರಥ ಚೇತಃ ಶ್ರೋತುಮಾರ್ಹಂತ್ಯಲಕ್ಷ್ಮೀಂ**
**ಸಮಧಿಗತಸಮಗ್ರಜ್ಞಾನಧಾಮ್ನಃ ಸ್ವಧಾಮ್ನಃ ॥ ೨೬೮ ॥**

ಮುಖದಿಂದ ಸ್ತುತಿಯ ಶಬ್ದವನ್ನು ಮಾಡುತ್ತಿರುವ ಆ ಮುನಿಗಳು ಜಿನೇಶ್ವರನ ಸಮವಸರಣದಲ್ಲಿರುವ ಭವ್ಯಸಮೂಹಕ್ಕೆ ಮುಖ್ಯರಾದ ಆ ಗೌತಮಗಣಧರರನ್ನು ಒಂದು ಕ್ಷಣಕಾಲಪರ್ಯಂತ ನಮಸ್ಕರಿಸಿ ನಂತರ ಸಂಪೂರ್ಣವಾದ ಜ್ಞಾನಜ್ಯೋತಿಯನ್ನು ಹೊಂದಿರುವ ಮತ್ತು ಸ್ವತಃ ಪ್ರಕಾಶಮಾನನಾದ ಭಗವಂತನ ಅರ್ಹತ್ವದವಿಯ ಐಶ್ವರ್ಯವನ್ನು ಕೇಳುವುದಕ್ಕೋಸ್ಕರ ಮನಸ್ಸನ್ನು ಮಾಡಿದರು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಧ್ಯಾನತತ್ತ್ವಾನುವರ್ಣನಂ ನಾಮ ಏಕವಿಂಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ ''ಕನ್ನಡಭಾವದೀಪಿಕಾವ್ಯಾಖ್ಯೆಯೋಳ್'' ಧ್ಯಾನತತ್ತ್ವವರ್ಣನೆಯೆಂಬ ಇಪ್ಪತ್ತೊಂದನೆಯ ಪರ್ವವು ಸಮಾಪ್ತವಾಯಿತು.

---

೧ ಅಧಿಕಂ ಜ್ಯೋತಿರ್ಯಸ್ಯ ತತ್. ೨ ಉಪದಿಶತಿ. ೩ ಮಾನುಷಮತೀತಂ ದಿವ್ಯಂ. ೪ ಶಿಕ್ಷಕತ್ವಂ. ೫ ತೇನ ಸರ್ವಜ್ಞೇನ ಪ್ರಥಮಮುಪಕ್ರಾಂತಂ. ೬ ಶ್ರಯಣೀಯಂ. ೭ ಇತೀತ್ಯಪಿ ಪಾಠಃ.

೧ ವದತಿ ಸತಿ. ೨ ಪ್ರಾತೃಷನ್ನಿತ್ಯಪಿ ಪಾಠಃ. ೩ ಆಕರೋವೇತ್ಯೇಕವಚನಪಾಠೋಪಿ. ೪ ಕ್ಷಣಕಾಲಪರ್ಯಂತಂ. ೫ ಜಿನಸ್ಯ ಸೇನಾ ಸಮವಸರಣಸ್ಥಭವ್ಯಸಂತತಿಃ, ತಸ್ಯಾ ಅಧೀಶ್ವರೋ ಗೌತಮಸ್ತಂ.



ಸೌಜನ್ಯ : ಶ್ರೀ ಎ. ಜ್ವಾಲನಯ್ಯನವರು, ಹಾಸನ

ಸಾಕೇತಪಟ್ಟಣದೊಳ್ ನಾಭಿರಾಜಮಹಾರಾಜಂಗಂ ಮರುದೇವೀ ಮಹಾದೇವಿಗಂ ಉತ್ತರಾಷಾಢಾನಕ್ಷತ್ರದೊಳುದಯಿಸಿದ ಸುವರ್ಣವರ್ಣಮನುಳ್ಳ ಐದುನೂರುಬಿಲ್ಲುತ್ಸೇಧಮನುಳ್ಳ ವೃಷಭಲಾಂಛನಮನುಳ್ಳ ಇಕ್ಷ್ವಾಕುವಂಶಮನುಳ್ಳ ಗೋಮುಖಚಕ್ರೇಶ್ವರೀ–ಯಕ್ಷಯಕ್ಷಿಯರನುಳ್ಳ ಎಂಬತ್ತನಾಲ್ಕುಲಕ್ಷ ಪೂರ್ವಾಯುಷ್ಯಮನುಳ್ಳ ಕೈಲಾಸಪರ್ವತದೊಳ್ ಕರ್ಮಕ್ಷಯಮಂ ಮಾಡಿದ ಶ್ರೀ ವೃಷಭತೀರ್ಥೇಶ್ವರಂಗೆ ನಮಸ್ಕಾರಮಂ ಮಾಳ್ಪೆಂ ॥

# ಅಥ ದ್ವಾವಿಂಶಂ ಪರ್ವ

**ಅಥ ಘಾತಿಜಯೇ ಜಿಷ್ಣೋರನುಷ್ಣೀಕೃತವಿಷ್ಟಪೇ ।**
**ತ್ರಿಲೋಕ್ಯಾಮಭವತ್ಕ್ಷೋಭಃ ಕೈವಲ್ಯೋತ್ಪತ್ತಿ[೧]ವಾತ್ಯಯಾ ॥ ೧ ॥**

ಅನಂತರದಲ್ಲಿ ವೃಷಭಸ್ವಾಮಿಯ ಘಾತಿಕರ್ಮಗಳ ಜಯವು ಲೋಕದ ಸಂತಾಪವನ್ನು ದೂರಮಾಡಿ ಅದನ್ನು ಶಾಂತಪಡಿಸುತ್ತಿರಲು, ಜಯಶೀಲರಾದ ಆ ಸ್ವಾಮಿಯ ಕೈವಲ್ಯ(ಕೇವಲಜ್ಞಾನ)ಉತ್ಪತ್ತಿಯೆಂಬ ಗಾಳಿಯ ಸಮೂಹದಿಂದ ಮೂರುಲೋಕದಲ್ಲಿಯೂ ಕ್ಷೋಭೆ (ದಿವ್ಯ ವಚನವನ್ನು ಕೇಳಬೇಕೆಂಬಸಂಭ್ರಮ) ಉಂಟಾಯಿತು.

**ತದಾ ಪ್ರಕ್ಷುಭಿತಾಂಭೋಧಿವೇಲಾಧ್ವಾನಾನುಕಾರಿಣೀ ।**
**ಘಂಟಾ[೨]ಮುಖರಯಾಮಾಸ ಜಗತ್ಕಲ್ಪಾಮರೇಶಿನಾಮ್ ॥ ೨ ॥**

ಆಗ ಅಲ್ಲೋಲಕಲ್ಲೋಲವಾದ ಸಮುದ್ರತೀರದ ಧ್ವನಿಯನ್ನು ಹೋಲುತ್ತಿರುವ, ಕಲ್ಪವಾಸಿಗಳಾದ ದೇವೇಂದ್ರರ ಘಂಟೆಯು ಲೋಕವನ್ನು ಶಬ್ದಗೊಳಿಸಿತು. ಕಲ್ಪಗಳಲ್ಲಿ ಘಂಟಾನಾದವಾಯಿತೆಂದು ಭಾವವು.

**ಜ್ಯೋತಿರ್ಲೋಕೇ ಮಹಾನ್ಸಿಂಹಪ್ರಣಾದೋಭೂತ್ಸಮುತ್ಥಿತಃ ।**
**ಯೇನಾಶು [೩]ವಿಮದೀಭಾವಮವಾಪನ್ಸುರವಾರಣಾಃ ॥ ೩ ॥**

ಜ್ಯೋತಿರ್ಲೋಕದಲ್ಲಿ ಮಹಾಸಿಂಹನಾದವುಂಟಾಯಿತು. ಅದರಿಂದ ದೇವಗಜಗಳು ಶೀಘ್ರವಾಗಿ ಮದರಹಿತತ್ವವನ್ನು ಹೊಂದಿದುವು. ಮದವನ್ನು ಬಿಟ್ಟುವೆಂದರ್ಥವು.

**[೪]ದಧ್ವಾನ ಧ್ವನ[೫]ದಂಭೋದಧ್ವನಿತಾನಿ [೬]ತಿರೋದಧತ್ ।**
**[೭]ವೈಯಂತರೇಷು ಗೇಹೇಷು ಮಹಾನಾನಕನಿಃಸ್ವನಃ ॥ ೪ ॥**

ವ್ಯಂತರದೇವತೆಗಳ ಮಂದಿರಗಳಲ್ಲಿ, ಶಬ್ದಮಾಡುತ್ತಿರುವ ಮೇಘಧ್ವನಿಗಳನ್ನು ಮರೆಮಾಡುವ, ದೊಡ್ಡ ಭೇರಿಯ ಶಬ್ದವುಂಟಾಯಿತು.

**ಶಂಖಃ [೮]ಶಂ [೯]ಖಚರೈಃ ಸಾರ್ದ್ಧಂ [೧೦]ಯೂಯ[೧೧]ಮೇತ[೧೨]ಜಿಘೃಕ್ಷವಃ ।**
**ಇತೀವ ಘೋಷಯನ್ನುಚ್ಚೈಃ ಫಣೀಂದ್ರಭವನೇ[೧೩]ಧ್ವನತ್ ॥ ೫ ॥**

''ಸುಖವನ್ನು ಹೊಂದಬೇಕೆಂಬ ಇಚ್ಛೆಯುಳ್ಳ ನೀವುಗಳು (ವ್ಯಂತರರು) ಕಲ್ಪವಾಸಿಗಳೊಡನೆ ಬನ್ನಿ'' ರೆಂದು ಶಬ್ದಮಾಡುತ್ತದೆಯೋ ಎಂಬಂತೆ ಧರಣೇಂದ್ರನ ಮಂದಿರದಲ್ಲಿ ಗಟ್ಟಿಯಾಗಿ ಶಂಖನಾದವಾಯಿತು.

**ವಿಷ್ಟರಾಣ್ಯಮರೇಶಾನಾ[೧೪]ಮಶನೈಃ ಪ್ರಚಕಂಪಿರೇ ।**
**ಅಕ್ಷಮಾಣೀವ ತದ್ಗರ್ವಂ ಸೋಢುಂ ಜಿನಜಯೋತ್ಸವೇ ॥ ೬ ॥**

ದೇವೇಂದ್ರರ ಆಸನಗಳು, ಜಿನೇಶ್ವರನ ಘಾತಿಕರ್ಮ ಜಯದ ಉತ್ಸವದಲ್ಲಿ ಆ ಜಿನೇಶ್ವರನ ಗರ್ವವನ್ನು ಸಹಿಸುವುದಕ್ಕೆ ಅಸಮರ್ಥಗಳಾಗಿವೆಯೋ ಎಂಬಂತೆ, ಶೀಘ್ರವಾಗಿ ಕಂಪಿಸಿದುವು.

**[೧೫]ಪುಷ್ಕರೈಃ ಸ್ವೈರಥೋ[೧೬]ತ್ಕ್ಷಿಪ್ತಪುಷ್ಕರಾರ್ಘಾಃ ಸುರದ್ವಿಪಾಃ ।**
**ನನೃತುಃ ಪರ್ವತೋದಗ್ರಾ ಮಹಾಹಿಭಿರಿವಾದ್ರಯಃ ॥ ೭ ॥**

೧ ವಾತಸಮೂಹೇನ. ೨ ವಾಚಾಲಂ ಚಕಾರ. ೩ ಮದರಹಿತತ್ವಂ. ೪ ಧ್ವನತಿ ಸ್ಮ. ೫ ಮೇಘರವಾನ್. ೬ ಆಚ್ಛಾದಯನ್. ೭ ವ್ಯಂತರಸಂಬಂಧಿಷು. ೮ ಸುಖಂ. ೯ ಕಲ್ಪವಾಸಿಭಿಃ. ೧೦ ಭವನವಾಸಿನಃ. ೧೧ ಆಗಚ್ಛತ. ೧೨ ಗೃಹೀತುಮಿಚ್ಛವಃ. ೧೩ ಧ್ವನತಿ ಸ್ಮ. ೧೪ ಶೀಘ್ರಂ. ೧೫ ಶುಂಡಾದಂಡೈಃ. ೧೬ ಉದ್ಧೃತಶತಪತ್ರಪೂಜಾದ್ರವ್ಯಾಃ.

ತರುವಾಯ ಪರ್ವತಗಳು ದೊಡ್ಡ ಸರ್ಪಗಳಿಂದ ಕೂಡಿ ನರ್ತನವನ್ನು ಮಾಡುವಂತೆ, ತಮ್ಮ ಸೊಂಡಿಲುಗಳಿಂದ ತಾವರೆಮೊದಲಾದ ಪೂಜಾದ್ರವ್ಯಗಳನ್ನು ಎತ್ತಿ ಹಿಡಿದುಕೊಂಡಿರುವ ಮತ್ತು ಪರ್ವತದಂತೆ ಉನ್ನತವಾದ ದೇವಗಜಗಳು ನರ್ತನವನ್ನು ಮಾಡಿದುವು.

**ಪುಷ್ಪಾಂಜಲಿಮಿವಾತೇನುಃ ಸಮಂತಾತ್ಸುರಭೂರುಹಾಃ ।**
**ಚಲಚ್ಛಾಖಾಕರೈರ್ದೀರ್ಘೈರ್ವಿಗಲತ್ಕುಸುಮೋತ್ಕರೈಃ ॥ ೮ ॥**

ಕಲ್ಪವೃಕ್ಷಗಳು ಪುಷ್ಪಗಳನ್ನು ಸುರಿಯುತ್ತಿರುವ ಉದ್ದವಾದ ಕೊಂಬೆಗಳೆಂಬ ಚಲಿಸುತ್ತಿರುವ ಕೈಗಳಿಂದ ಸುತ್ತಲೂ ಪುಷ್ಪಾಂಜಲಿಯನ್ನು ಮಾಡುತ್ತವೆಯೋ ಎಂಬಂತಿದ್ದುವು.

**ದಿಶಃ ಪ್ರಸತ್ತಿಮಾಸೇದುರ್ಬಭ್ರಾಜೇ [೧]ವ್ಯಭ್ರಮಂಬರಮ್ ।**
**ವಿರಜೀಕೃತಭೂಲೋಕಃ ಶಿಶಿರೋ ಮರುದಾವವೌ ॥ ೯ ॥**

ದಿಕ್ಕುಗಳು ನಿರ್ಮಲವಾದುವು. ಆಕಾಶವು ಮೇಘವಿಲ್ಲದಂತೆ ಪ್ರಕಾಶಿಸಿತು. ಭೂಲೋಕವು ಧೂಳುರಹಿತವಾಗಿ ಮಾಡಲ್ಪಟ್ಟಿತು. ತಂಗಾಳಿಯು ಬೀಸಿತು.

**ಇತಿ ಪ್ರಮೋದಮಾತನ್ವನ್ನಕಸ್ಮಾದ್ಭುವನೋದರೇ ।**
**ಕೇವಲಜ್ಞಾನಪೂರ್ಣೇಂದುರ್ಜಗದಬ್ಧಿ[೨]ಮವೀವೃಧತ್ ॥ ೧೦ ॥**

ಈಪ್ರಕಾರವಾಗಿ ಕೇವಲಜ್ಞಾನವೆಂಬ ಪೂರ್ಣಚಂದ್ರನು ಅಕಸ್ಮಾತ್ತಾಗಿ ಲೋಕದಲ್ಲಿ ಸಂತೋಷವನ್ನುಂಟುಮಾಡುವವನಾಗಿ ಜಗತ್ತೆಂಬ ಸಮುದ್ರವನ್ನು ವೃದ್ಧಿಪಡಿಸಿದನು.

**ಚಿಹ್ನೈರಮೀಭಿ[೩]ರಹ್ನಾಯ ಸುರೇಂದ್ರೋಬೋಧಿ ಸಾವಧಿಃ ।**
**[೪]ವೈಭವಂ ಭುವನವ್ಯಾಪಿ [೫]ವೈ [೬]ಭವಧ್ವಂಸಿವೈಭವಮ್ ॥ ೧೧ ॥**

ಅವಧಿಜ್ಞಾನಸಂಪನ್ನನಾದ ದೇವೇಂದ್ರನು ಶೀಘ್ರವಾಗಿ ಹಿಂದೆ ಹೇಳಿದ ಚಿಹ್ನೆಗಳಿಂದ, ಭವವಿನಾಶಕಾಲದಲ್ಲಿ ಉಂಟಾಗುವುದೂ ಲೋಕವ್ಯಾಪಿಯೂ ಆದ ವೃಷಭಸ್ವಾಮಿಯ ವೈಭವವನ್ನು ಸ್ಫುಟವಾಗಿ ತಿಳಿದನು. ದೇವೇಂದ್ರನು ಘಂಟಾನಾದ ಆಸನಕಂಪ ಮೊದಲಾದ ಚಿಹ್ನೆಗಳನ್ನು ನೋಡಿ ತನ್ನ ಅವಧಿಜ್ಞಾನದಿಂದ ವೃಷಭಸ್ವಾಮಿಯ ಮಹಿಮೆಯನ್ನು ತಿಳಿದನೆಂದು ಭಾವವು.

**ಅಥೋತ್ಥಾಯಾಸನಾದಾಶು ಪ್ರಮೋದಂ ಪರಮುದ್ವಹನ್ ।**
**ತದ್ಭರಾದಿವ ನಮ್ರೋಭೂನ್ನತಮೂರ್ಧಾ ಶಚೀಪತಿಃ ॥ ೧೨ ॥**

ತರುವಾಯ ದೇವೇಂದ್ರನು ಶೀಘ್ರವಾಗಿ ಆಸನದಿಂದೆದ್ದು ಅಧಿಕವಾಗಿ ಸಂತೋಷಗೊಂಡು ಆ ಸಂತೋಷದ ಭಾರದಿಂದ ನಮ್ರನಾದನೋ ಎಂಬಂತೆ ಮಸ್ತಕವನ್ನು ಬಗ್ಗಿಸಿದನು. ವೃಷಭಸ್ವಾಮಿಯನ್ನು ವಂದಿಸಿದನೆಂದು ಭಾವವು.

**ಕಿಮೇತದಿತಿ ಪೃಚ್ಛಂತೀಂ [೭]ಪೌಲೋಮೀಮತಿಸಂಭ್ರಮಾತ್ ।**
**[೮]ಹರಿಃ ಪ್ರಬೋಧಯಾಮಾಸ ವಿಭೋಃ ಕೈವಲ್ಯಸಂಭವಮ್ ॥ ೧೩ ॥**

೧ ವಿಗತಮೇಘಂ. ೨ ವರ್ಧಯತಿ ಸ್ಮ. ೩ ಸಪದಿ. ೪ ವಿಗತೋ ಭವೋ ವಿಭವೋ ವಿಭವೇ ಭವಂ ವೈಭವಂ, ಸಂಸಾರಚ್ಯುತೌ ಜಾತಮಿತಿ ಯಾವತ್. ೫ ಸ್ಫುಟಂ. ೬ ಪುರುಪರಮೇಶ್ವರಸ್ಯ ವೈಭವಂ. ೭ ಶಚೀಂ. ೮ ಇಂದ್ರಃ.

ಬಹಳ ಗಾಬರಿಯಿಂದ "ಇದೇನು ?" ಎಂದು ಕೇಳುತ್ತಿರುವ ಶಚೀದೇವಿಗೆ ದೇವೇಂದ್ರನು ಸ್ವಾಮಿಯ ಕೇವಲಜ್ಞಾನೋತ್ಪತ್ತಿಯನ್ನು ಬೋಧಿಸಿದನು. ತಿಳುಹಿಸಿದನೆಂದರ್ಥವು.

**ಪ್ರಯಾಣಪಟಹೇಷೂಚ್ಚೈಃ ಪ್ರಧ್ವನತ್ಸು ಶತಾಧ್ವರಃ ।**
**ಭರ್ತುಃ ಕೈವಲ್ಯಪೂಜಾಯೈ [೧]ನಿಶ್ಚಕ್ರಾಮ ಸುರೈರ್ವೃತಃ ॥ ೧೪ ॥**

ಪ್ರಯಾಣಕಾಲದ ಭೇರಿ ಮೊದಲಾದ ವಾದ್ಯಗಳು ಗಟ್ಟಿಯಾಗಿ ಶಬ್ದಮಾಡುತ್ತಿರಲು ದೇವೇಂದ್ರನು ದೇವತೆಗಳೊಡನೆ ಸ್ವಾಮಿಯ ಕೇವಲಜ್ಞಾನಪೂಜೆಗೋಸ್ಕರ ಹೊರಟನು.

**ತತೋ ಬಲಾಹಕಾಕಾರಂ ವಿಮಾನಂ [೨]ಕಾಮಗಾಹ್ವಯಮ್ ।**
**ಚಕ್ರೇ [೩]ಬಲಾಹಕೋ ದೇವೋ ಜಂಬೂದ್ವೀಪ[೪]ಪ್ರಮಾನ್ವಿತಮ್ ॥ ೧೫ ॥**

ತರುವಾಯ ಬಲಾಹಕನೆಂಬ ದೇವನು, ಮೇಘದ ಆಕಾರವೂ ಜಂಬೂದ್ವೀಪದ ಪರಿಮಾಣವೂ ಉಳ್ಳ "ಕಾಮಗ" ವೆಂಬ ವಿಮಾನವನ್ನು ಮಾಡಿದನು.

**ಮುಕ್ತಾಲಂಬನಸಂಶೋಭಿ ತದಭಾದ್ರತ್ನನಿರ್ಮಿತಮ್ ।**
**ತೋಷಾತ್ಪ್ರಹಾಸಮಾತನ್ವದಿವ [೫]ಕಿಂಕಿಣಿಕಾಸ್ವನೈಃ ॥ ೧೬ ॥**

ಜೋಲಾಡುತ್ತಿರುವ ಮುತ್ತಿನ ಜಲ್ಲಿಗಳಿಂದ ಶೋಭಿಸುವುದೂ ರತ್ನನಿರ್ಮಿತವೂ ಆದ ಆ ವಿಮಾನವು ಸಣ್ಣ ಗೆಜ್ಜೆಗಳ ಶಬ್ದಗಳಿಂದ ಸಂತೋಷದಿಂದ ನಗುತ್ತಿದೆಯೋ ಎಂಬಂತೆ ಪ್ರಕಾಶಿಸಿತು.

**ಶಾರದಾಭ್ರಮಿವಾ[೬]ದಭ್ರಂ ಶ್ವೇತಿತಾಖಿಲದಿಙ್ಮುಖಮ್ ।**
**[೭]ನಾಗದತ್ತಾಭಿಯೋಗ್ಯೇಶೋ [೮]ನಾಗಮೈರಾವತಂ ವ್ಯಧಾತ್ ॥ ೧೭ ॥**

ನಾಗದತ್ತನೆಂಬ ವಾಹನದೇವತೆಗಳ ಅಧಿಪತಿಯು ಶರತ್ಕಾಲದ ಮೇಘದಂತೆ ದೊಡ್ಡದೂ ಸಮಸ್ತದಿಕ್ಕುಗಳನ್ನು ಶುಭ್ರಪಡಿಸಿದುದೂ ಆದ ಐರಾವತಗಜವನ್ನು ಮಾಡಿದನು. ನಾಗದತ್ತನೆಂಬ ವಾಹನದೇವನು ಐರಾವತಗಜದ ಆಕಾರವನ್ನು ಧರಿಸಿದನೆಂದು ತಾತ್ಪರ್ಯ.

**ತತಸ್ತದ್ವಿಕ್ರಿಯಾರಬ್ಧಮಾರೂಢೋ ದಿವ್ಯವಾಹನಮ್ ।**
**[೯]ಹರಿವಾಹಃ [೧೦]ಸಹೈಶಾನಃ ಪ್ರತಸ್ಥೇ [೧೧]ಸಪುಲೋಮಜಃ ॥ ೧೮ ॥**

ತರುವಾಯ ಆ ನಾಗದತ್ತವಾಹನದೇವನ ವಿಕ್ರಿಯೆಯಿಂದ ಮಾಡಲ್ಪಟ್ಟ ದಿವ್ಯವಿಮಾನವನ್ನು ಹತ್ತಿ ದೇವೇಂದ್ರನು ಈಶಾನೇಂದ್ರ ಮತ್ತು ಶಚೀದೇವೀಸಹಿತನಾಗಿ ಹೊರಟನು.

**ಇಂದ್ರಸಾಮಾನಿಕತ್ರಾಯಸ್ತ್ರಿಂಶಪಾರಿಷದಾಮರಾಃ ।**
**ಸಾತ್ಮರಕ್ಷಜಗತ್ಪಾಲಾಃ ಸಾನೀಕಾಃ ಸಪ್ರಕೀರ್ಣಕಾಃ ॥ ೧೯ ॥**

**ಪುರಃ ಕಿಲ್ಬಿಷಿಕೇಷೂಚ್ಚೈರಾತನ್ವತ್ಸ್ವಾನಕಸ್ವನಾನ್ ।**
**ಸ್ವೈರಂ ಸ್ವೈರ್ವಾಹನೈಃ ಶಕ್ರಂ ವ್ರಜಂತಮನುವವ್ರಜುಃ ॥ ೨೦ ॥**

ಮುಂಭಾಗದಲ್ಲಿ ಕಿಲ್ಬಿಷಿಕಜಾತಿಯ ದೇವತೆಗಳು ಗಟ್ಟಿಯಾಗಿ ಭೇರೀಶಬ್ದವನ್ನು ಮಾಡುತ್ತಿರಲು ದೇವೇಂದ್ರನು ತನ್ನ ವಾಹನಾರೂಢನಾಗಿ ಹೋಗುತ್ತಿದ್ದನು. ಆಗ ಇಂದ್ರ ಸಾಮಾನಿಕ ತ್ರಾಯಸ್ತ್ರಿಂಶ ಪಾರಿಷದ ಆತ್ಮರಕ್ಷ ಜಗತ್ಪಾಲ ಅನೀಕ ಪ್ರಕೀರ್ಣಕ, ಈ ದೇವತೆಗಳು ತಂತಮ್ಮ ವಿಮಾನಾರೂಢರಾಗಿ ದೇವೇಂದ್ರನನ್ನು ಹಿಂಬಾಲಿಸಿ ಹೋದರು.

೧ ನಿರ್ಗಚ್ಛತಿಸ್ಮ. ೨ ಕಾಮಕಾಹ್ವಯಮಿತ್ಯಪಿ ಪಾಠಃ. ೩ ಬಲಾಹಕನಾಮಾ. ೪ ಪ್ರಮಾಣಂ. ೫ ಕ್ಷುದ್ರಘಂಟಿಕಾ. ೬ ಪೃಥುಲಂ. ೭ ನಾಗದತ್ತನಾಮ ವಾಹನದೇವಮುಖ್ಯಃ. ೮ ಗಜಂ. ೯ ಇಂದ್ರಃ. ೧೦ ಈಶಾನೇಂದ್ರಸಹಿತಃ. ೧೧ ಇಂದ್ರಾಣೀಸಹಿತಃ.

**ಅಪ್ಸರಸ್ಸು ನಟಂತೀಷು ಗಂಧರ್ವಾತೋದ್ಯವಾದನೈಃ ।**
**[೧]ಕಿನ್ನರೇಷು ಚ ಗಾಯತ್ಸು ಚಚಾಲ ಸುರವಾಹಿನೀ ॥ ೨೧ ॥**

ಗಂಧರ್ವದೇವತೆಗಳ ವಾದ್ಯವನ್ನನುಸರಿಸಿ ಅಪ್ಸರಸ್ತ್ರೀಯರು ನರ್ತನ ಮಾಡುತ್ತಿರಲು ಮತ್ತು ಕಿನ್ನರದೇವತೆಗಳು ಗಾನಮಾಡುತ್ತಿರಲು ದೇವಸೈನ್ಯವು ಮುಂದೆ ಚಲಿಸಿತು.

**ಇಂದ್ರಾದೀನಾಮಥೈತೇಷಾಂ ಲಕ್ಷ್ಮ ಕಿಂಚಿ[೨]ದನೂದ್ಯತೇ ।**
**[೩]ಇಂದನಾದಣಿಮಾದ್ಯಷ್ಟಗುಣೈರಿಂದ್ರೋಽಹ್ಯನನ್ಯಜೈಃ ॥ ೨೨ ॥**

ಈಗ ಈ ಮೇಲೆಹೇಳಿದ ಇಂದ್ರಮೊದಲಾದ ದೇವತೆಗಳ ಲಕ್ಷಣವನ್ನು ಸಂಕ್ಷೇಪವಾಗಿ ಹೇಳುತ್ತೇವೆ. ಸಾಮಾನ್ಯರಿಗುಂಟಾಗದಿರುವ ಅಣಿಮಾ ಮಹಿಮಾ ಮೊದಲಾದ ಎಂಟು ಗುಣಗಳಿಂದ ಪರಮೈಶ್ವರ್ಯವನ್ನನುಭವಿಸುವ ದೇವನಿಗೆ ಇಂದ್ರನೆಂದು ಹೆಸರು.

**ಆಜ್ಞೈಶ್ವರ್ಯಾದ್ವಿನಾನ್ಯೈಸ್ತು ಗುಣೈರಿಂದ್ರೇಣ [೪]ಸಮ್ಮಿತಾಃ ।**
**ಸಾಮಾನಿಕಾ ಭವೇಯುಸ್ತೇ ಶಕ್ರೇಣಾಪಿ ಗುರೂಕೃತಾಃ ॥ ೨೩ ॥**

ಆಜ್ಞಾ ಮತ್ತು ಐಶ್ವರ್ಯ ಹೊರತು ಬೇರೆ ಗುಣಗಳಿಂದ ಇಂದ್ರನಿಗೆ ಸಮಾನರೂ ಇಂದ್ರನಿಂದಲೂ ಗೌರವಿಸಲ್ಪಡುವವರೂ ಆದ ದೇವತೆಗಳಿಗೆ ಸಾಮಾನಿಕದೇವತೆಗಳೆಂದು ಹೆಸರು.

**ಪಿತೃಮಾತೃಗುರುಪ್ರಖ್ಯಾಃ ಸಮ್ಮತಾಸ್ತೇ ಸುರೇಶಿನಾಮ್ ।**
**ಲಭಂತೇ ಸಮಮಿಂದ್ರೈಶ್ಚ [೫]ಸತ್ಕಾರಂ ಮಾನ್ಯತೋಚಿತಮ್ ॥ ೨೪ ॥**

ಆ ಸಾಮಾನಿಕದೇವತೆಗಳು ದೇವೇಂದ್ರರಿಗೆ ತಂದೆತಾಯಿಗಳಿಗೆ ಮತ್ತು ಗುರುಗಳಿಗೆ ಸಮಾನ(ಪೂಜ್ಯ)ರಾಗಿರುತ್ತಾರೆ. ಬೇರೆ ದೇವತೆಗಳು ದೇವೇಂದ್ರರನ್ನು ಸತ್ಕರಿಸುವಂತೆ ಈ ಸಾಮಾನಿಕದೇವತೆಗಳನ್ನು ಯೋಗ್ಯತಾನುಸಾರವಾಗಿ ಸತ್ಕರಿಸುತ್ತಾರೆ.

**ತ್ರಾಯಸ್ತ್ರಿಂಶಾಸ್ತ್ರಯಸ್ತ್ರಿಂಶದೇವ ದೇವಾಃ ಪ್ರಕೀರ್ತಿತಾಃ ।**
**ಪುರೋಧೋಮಂತ್ರ್ಯಮಾತ್ಯಾನಾಂ ಸದೃಶಾಸ್ತೇ [೬]ದಿವೀಶಿನಾಮ್ ॥ ೨೫ ॥**

ದೇವೇಂದ್ರರಿಗೆ ಪುರೋಹಿತ ಮಂತ್ರಿ ಮತ್ತು ಅಮಾತ್ಯ ಇವರಿಗೆ ಸಮಾನರಾದ ದೇವತೆಗಳು ಮೂವತ್ತಮೂರುಮಂದಿಗಳೇ ಇರುವುದರಿಂದ ಅವರಿಗೆ ತ್ರಾಯಸ್ತ್ರಿಂಶದೇವತೆಗಳೆಂದು ಹೆಸರು.

**ಭವಾಃ ಪರಿಷದೀತ್ಯಾಸನ್ನುರಾಃ ಪಾರಿಷದಾಹ್ವಯಾಃ ।**
**ತೇ [೭]ಪೀಠಮರ್ದಸದೃಶಾಃ ಸುರೇಂದ್ರೈರತಿಲಾಲಿತಾಃ ॥ ೨೬ ॥**

ಇಂದ್ರರ ಸಭೆಯಲ್ಲಿರುವ ದೇವತೆಗಳಿಗೆ ಪಾರಿಷದರೆಂದು ಹೆಸರು. ಆ ದೇವತೆಗಳು ಸಂಧಾನ(ಸಂಧಿ)ವನ್ನು ಮಾಡುವ ಪುರುಷರಿಗೆ ಸಮಾನರಾಗಿದ್ದು ದೇವೇಂದ್ರರ ಪ್ರೀತಿಗೆ ಪಾತ್ರರಾಗಿರುತ್ತಾರೆ.

**ಆತ್ಮರಕ್ಷಾಃ [೮]ಶಿರೋರಕ್ಷಸಮಾನಾಃ ಪ್ರೋದ್ಯತಾಸಯಃ ।**
**ವಿಭವಾಯೈವ ಪರ್ಯಂತೇ ಪರ್ಯಟಂತ್ಯಮರೇಶಿನಾಮ್ ॥ ೨೭ ॥**

ಖಡ್ಗಗಳನ್ನು ಹಿಡಿದುಕೊಂಡಿರುವ ಅಂಗರಕ್ಷಕರಿಗೆ ಸಮಾನರಾದ ದೇವತೆಗಳಿಗೆ ಆತ್ಮರಕ್ಷರೆಂದು ಹೆಸರು. ಇವರು ದೇವೇಂದ್ರರ ವೈಭವವನ್ನು ತೋರಿಸುವುದಕ್ಕೋಸ್ಕರವೇ ಸಮೀಪದಲ್ಲಿ ಸಂಚರಿಸುತ್ತಾರೆ. ದೇವೇಂದ್ರರಿಗೆ ಶತ್ರುಬಾಧೆಯಿಲ್ಲದಿರುವುದರಿಂದ ಕೇವಲ ವೈಭವವನ್ನು ತೋರಿಸುವುದಕ್ಕೋಸ್ಕರವೇ ಆತ್ಮರಕ್ಷದೇವತೆಗಳಿರುವುದೆಂದು ಭಾವವು.

೧ ಕಿನ್ನರೀಷ್ವಿತ್ಯಪಿ ಪಾಠಃ. ೨ ಅನುವಕ್ಷ್ಯತೇ. ೩ ಇದಿಪರಮೈಶ್ವರ್ಯೇ. ೪ ಸಮಾನೀಕೃತಾಃ. ೫ ಅನ್ಯಸುರೈಃ ಕೃತಸತ್ಕಾರಂ. ೬ ತ್ರಿದಿವೇಶಿನಾಂ. ೭ ಸಂಧಾನಕಾರಿಪುರುಷಸದೃಶಾಃ. ೮ ಅಂಗರಕ್ಷಕಸದೃಶಾಃ.

**ಲೋಕಪಾಲಾಸ್ತು ಲೋಕಾಂತಪಾಲಕಾ [೧]ದುರ್ಗಪಾಲವತ್ ।**
**ಪದಾತ್ಯಾದೀನ್ಯನೀಕಾನಿ ದಂಡಕಲ್ಪಾನಿ ಸಪ್ತ ವೈ ॥ ೨೮ ॥**

ರಾಜ್ಯದ ಎಲ್ಲೆಯಲ್ಲಿರುವ ದುರ್ಗವನ್ನು ಕಾಪಾಡುವ ಪುರುಷರಂತೆ ಸ್ವರ್ಗ ಲೋಕದ ಅಂತ್ಯಪ್ರದೇಶಗಳನ್ನು ಕಾಪಾಡುವ ದೇವತೆಗಳಿಗೆ ಲೋಕಪಾಲರೆಂದು ಹೆಸರು. ಸೈನ್ಯಕ್ಕೆ ಸಮಾನರಾದ ಗಜ ರಥ ಅಶ್ವ ಕಾಲಾಳು ವೃಷಭ ಗಂಧರ್ವ ನರ್ತಕೀ ಈ ಏಳುಪ್ರಕಾರವಾದ ದೇವತೆಗಳಿಗೆ ಅನೀಕರೆಂದು ಹೆಸರು.

**ಪೌರಜಾನಪದ[೨]ಪ್ರಖ್ಯಾಃ ಸುರಾ ಜ್ಞೇಯಾಃ ಪ್ರಕೀರ್ಣಕಾಃ ।**
**ಭವೇಯುರಾಭಿಯೋಗ್ಯಾಖ್ಯಾ ದಾಸಕರ್ಮಕರೋಪಮಾಃ ॥ ೨೯ ॥**

ಪುರನಿವಾಸಿಗಳಾದ ಮತ್ತು ದೇಶನಿವಾಸಿಗಳಾದ ಜನರಿಗೆ ಸಮಾನರಾದ ದೇವತೆಗಳಿಗೆ ಪ್ರಕೀರ್ಣಕರೆಂದು ಹೆಸರು. ಸೇವಕರಿಗೆ ಮತ್ತು ಭೃತ್ಯರಿಗೆ ಸಮಾನರಾದ ದೇವತೆಗಳಿಗೆ ಅಭಿಯೋಗ್ಯರೆಂದು ಹೆಸರು.

**ಮತಾಃ [೩]ಕಿಲ್ಬಿಷಮಸ್ತ್ಯೇಷಾಮಿತಿ ಕಿಲ್ಬಿಷಿಕಾಮರಾಃ ।**
**ಬಾಹ್ಯಾಃ [೪]ಪ್ರಜಾ ಇವ ಸ್ವರ್ಗೇ ಸ್ವಲ್ಪಪುಣ್ಯೋದಿತರ್ದ್ಧಯಃ ॥ ೩೦ ॥**

ಕಿಲ್ಬಿಷವೆಂದು ಪಾಪಕ್ಕೆ ಹೆಸರು. ಆ ಕಿಲ್ಬಿಷವುಳ್ಳ ದೇವತೆಗಳಿಗೆ ಕಿಲ್ಬಿಷಿಕರೆಂದು ಹೆಸರು. ಆ ದೇವತೆಗಳು ಮಧ್ಯಲೋಕದಲ್ಲಿ ಚಾಂಡಾಲಮೊದಲಾದ ಬಾಹ್ಯ ಪ್ರಜೆಗಳಂತೆ ಸ್ವರ್ಗದಲ್ಲಿ ಸ್ವಲ್ಪಪುಣ್ಯದಿಂದುಂಟಾದ ಋದ್ಧಿ(ಮಹಿಮೆ)ಯುಳ್ಳವರಾಗಿರುತ್ತಾರೆ.

**ಏಕೈಕಸ್ಮಿನ್ನಿಕಾಯೇ ಸ್ಯುರ್ದಶಭೇದಾಃ ಸುರಾಸ್ತ್ವಮೇ ।**
**ವ್ಯಂತರಾ ಜ್ಯೋತಿಷ[೫]ಸ್ತ್ರಾಯಸ್ತ್ರಿಂಶಲೋಕಪವರ್ಜಿತಾಃ ॥ ೩೧ ॥**

ಭವನವಾಸಿಮೊದಲಾದ ಒಂದೊಂದು ನಿಕಾಯ(ಗುಂಪು)ದಲ್ಲಿ ಮೇಲೆಹೇಳಿದ ಹತ್ತು ವಿಧವಾದ ದೇವತೆಗಳಿದ್ದಾರೆ. ವ್ಯಂತರಜ್ಯೋತಿಷ್ಕನಿಕಾಯಗಳಲ್ಲಿ ಮಾತ್ರ ತ್ರಾಯಸ್ತ್ರಿಂಶ ಮತ್ತು ಲೋಕಪಾಲ ಈ ಎರಡುಭೇದಗಳಿಲ್ಲ.

**ಇಂದ್ರಸ್ತಂಬೇರಮಃ ಕೀದೃಗಿತಿ ಚೇತ್ಸೋಽನುವರ್ಣ್ಯತೇ ।**
**ತುಂಗ[೬]ವಂಶೋ ಮಹಾವರ್ಷ್ಮಾ ಸುವೃತ್ತೋನ್ನತಮಸ್ತಕಃ ॥ ೩೨ ॥**

**ಬಹ್ವಾನನೋ ಬಹುರದೋ [೭]ಬಹುದೋ[೮]ರ್ವಿಪುಲಾಸನಃ ।**
**ಲಕ್ಷಣೈ[೯]ರ್ವ್ಯಂಜನೈರ್ಯುಕ್ತಃ [೧೦]ಸಾತ್ತ್ವಿಕೋ [೧೧]ಜವನೋ ಬಲೀ ॥**

**ಕಾಮಗಃ ಕಾಮರೂಪೀ ಚ ಶೂರಃ ಸದ್ವೃತ್ತಕಂಧರಃ ।**
**[೧೨]ಸಮಸಂಬಂಧನೋ [೧೩]ಧುರ್ಯೋ [೧೪]ಮಧುಸ್ನಿಗ್ಧರದೇಕ್ಷಣಃ ॥**

**ತಿರ್ಯಗ್ಲೋಲಾಯತಸ್ಥೂಲಸಮವೃತ್ತರ್ಜುಸತ್ಕರಃ ।**
**ಸ್ನಿಗ್ಧತಾಮ್ರಪೃಥುಸ್ರೋತೋ [೧೫]ದೀರ್ಘಾಂಗುಲಿಸಪುಷ್ಕರಃ ॥ ೩೫ ॥**

**[೧೬]ವೃತ್ತಗಾತ್ರಾಪರಃ [೧೭]ಸ್ಥೇಯಾನ್ದೀರ್ಘ[೧೮]ಮೇಹನವಾಲಧಿಃ ।**
**[೧೯]ವ್ಯೂಢೋರಸ್ಕೋ [೨೦]ಮಹಾಧ್ವಾನಕರ್ಣಃ ಸತ್ಕರ್ಣಪಲ್ಲವಃ ॥ ೩೬ ॥**

**ಅರ್ಧೇಂದುನಿಭಸುಶ್ಲಿಷ್ಟವಿದ್ರುಮಾಭನಖೋತ್ಕರಃ ।**
**[೨೧]ಸಚ್ಛಾಯಸ್ತಾಮ್ರತಾಲ್ವಾಸ್ಯಃ ಶೈಲೋದಗ್ರೋ ಮಹಾ[೨೨]ಕಟಃ ॥ ೩೭ ॥**

೧ ಸೀಮಾಂತವರ್ತಿದುರ್ಗಪಾಲಸದೃಶಾಃ. ೨ ಸಮಾನಾಃ. ೩ ಪಾಪಂ. ೪ ಚಂಡಾಲಾದಿಬಾಹ್ಯಪ್ರಜಾವತ್. ೫ ತ್ರಾಯಸ್ತ್ರಿಂಶೈರ್ಲೋಕಪಾಲೈಶ್ಚ ರಹಿತಾಃ. ೬ ಪೃಷ್ಠಾಸ್ಥಿ. ೭ ಬಹುಕರಃ. ೮ ಪೃಥುಸ್ಕಂಧಪ್ರದೇಶಃ. ೯ ಸೂಕ್ಷ್ಮಶುಭಚಿಹ್ನೈಃ. ೧೦ ಆತ್ಮಶಕ್ತಿಕಃ. ೧೧ ವೇಗೀ. ೧೨ ಸಮಾನದೇಹಬಂಧನಃ. ೧೩ ಧುರಂಧರಃ. ೧೪ ಕ್ಷೌದ್ರವತ್ ಮಸೃಣಃ. ೧೫ ಆಯತದ್ವಯಾಂಗುಲಿಯುತಕರಾಗ್ರಃ. ೧೬ ವರ್ತುಲಾಪರಕಾಯಃ. ೧೭ ಸ್ಥಿರತರಃ. ೧೮ ಮೇಢ್ರಃ. ೧೯ ವಿಶಾಲವಕ್ಷಸ್ಥಲಃ. ೨೦ ಮಹಾಧ್ವನಿಯುಕ್ತಶ್ರವಣಃ. ೨೧ ಪ್ರಶಸ್ತವರ್ಣಃ. ೨೨ ಕಪೋಲಃ.

**ವರಾಹಜಘನಃ [೧]ಶ್ರೀಮಾನ್ದೀರ್ಘೋಷ್ಠೋ ದುಂದುಭಿಸ್ವನಃ ।**
**ಸುಗಂಧಿದೀರ್ಘನಿಃಶ್ವಾಸಃ ಸೋ[೨]ಮಿತಾಯುಃ [೩]ಕೃತಾದರಃ ॥ ೩೮ ॥**

**ಅನ್ವರ್ಥವೇದೀ [೪]ಕಲ್ಯಾಣಃ ಕಲ್ಯಾಣ[೫]ಪ್ರಕೃತಿಃ ಶುಭಃ ।**
**ಅಯೋನಿಜಃ [೬]ಸುಜಾತಶ್ಚ [೭]ಸಪ್ತಧಾ ಸುಪ್ರತಿಷ್ಠಿತಃ ॥ ೩೯ ॥**

**ಮದನಿರ್ಝರಸಂಸಿಕ್ತಕರ್ಣಚಾಮರಲಂಬಿನೀಃ ।**
**ಮದಸ್ರುತೀರಿವಾಬಿಭ್ರದಪರಾಃ ಷಟ್ಪದಾವಲೀಃ ॥ ೪೦ ॥**

**ಮುಖೈರ್ಬಹುಭಿರಾಕೀರ್ಣೋ ಗಜರಾಜಃ ಸ್ಮ ರಾಜತೇ ।**
**ಸೇವ್ಯಮಾನ ಇವಾಯಾತೈರ್ಭಕ್ತ್ಯಾ ವಿಶ್ವೈರನೇಕಪೈಃ ॥ ೪೧ ॥**

ಇಂದ್ರನ ಆನೆಯು ಯಾವವಿಧವಾದುದೆಂದರೆ ಅದನ್ನು ವರ್ಣಿಸುತ್ತೇವೆ:— ಉನ್ನತವಾದ ಬೆನ್ನೆಲುಬುಳ್ಳದೂ ದೊಡ್ಡ ಶರೀರವುಳ್ಳದೂ ವರ್ತುಲಾಕಾರವೂ ಉನ್ನತವೂ ಆದ ಮಸ್ತಕವುಳ್ಳದೂ ಅನೇಕ ಮುಖಗಳುಳ್ಳದೂ ಅನೇಕದಂತಗಳುಳ್ಳದೂ ವಿಸ್ತಾರವಾದ ಆಸನ(ಭುಜ)ವುಳ್ಳದೂ ಲಕ್ಷಣಗಳಿಂದಲೂ ಸೂಕ್ಷ್ಮವಾದ ಶುಭಚಿಹ್ನೆಗಳಿಂದಲೂ ಕೂಡಿರುವುದೂ ಆತ್ಮಶಕ್ತಿಯುಳ್ಳದೂ ವೇಗವುಳ್ಳದೂ ಬಲಶಾಲಿಯೂ ಇಷ್ಟವಾದ ಸ್ಥಾನಕ್ಕೆ ಹೋಗುವುದೂ ಇಷ್ಟವಾದ ರೂಪವನ್ನು ಧರಿಸುವುದೂ ಪರಾಕ್ರಮಿಯೂ ವರ್ತುಲಾಕಾರ(ದುಂಡಾದ)ವಾದ ಕುತ್ತಿಗೆಯುಳ್ಳದೂ ಸಮಾನವಾದ ಶರೀರಬಂಧ(ಕಟ್ಟು)ವುಳ್ಳದೂ ಭಾರವನ್ನು ವಹಿಸುವುದೂ ಮಕರಂದದಂತೆ ಜಿಗುಟಾದ ದಂತಗಳೂ ಕಣ್ಣುಗಳೂ ಉಳ್ಳದೂ ಅಡ್ಡಲಾಗಿ ಅಳ್ಳಾಡುತ್ತಿರುವುದೂ ದೊಡ್ಡದೂ ಸಮವಾಗಿ ದುಂಡಾದುದೂ ಸರಳವೂ ಆದ ಸೊಂಡಲುಳ್ಳದೂ ಜಿಗುಟಾಗಿ ತಾಮ್ರವರ್ಣವುಳ್ಳ ವಿಸ್ತಾರವಾದ ಮೂಗಿನ ರಂಧ್ರಗಳುಳ್ಳದೂ ಉದ್ದವಾದ ಬೆರಳುಗಳುಳ್ಳ ಸೊಂಡಲಿನ ತುದಿಯುಳ್ಳದೂ ದುಂಡಾದ ಹಿಂಭಾಗಶರೀರವುಳ್ಳದೂ ಸ್ಥಿರವಾದುದೂ ಉದ್ದವಾದ ಲಿಂಗ ಮತ್ತು ಬಾಲ ಇವುಗಳುಳ್ಳದೂ ವಿಶಾಲವಾದ ಎದೆಯುಳ್ಳದೂ ಮಹಾಶಬ್ದಮಾಡುವ ಕಿವಿಗಳುಳ್ಳದೂ ತಳಿರಿನಂತೆ ಕಿವಿಗಳುಳ್ಳದೂ, ಅರ್ಧಚಂದ್ರಾಕಾರವಾಗಿ ಸೇರಿರುವ ಮತ್ತು ಹವಳದ ವರ್ಣವುಳ್ಳ ಉಗುರುಗಳುಳ್ಳದೂ ಪ್ರಶಸ್ತವಾದ ವರ್ಣವುಳ್ಳದೂ ತಾಮ್ರವರ್ಣವಾದ ಮುಖ ಮತ್ತು ದವಡೆಗಳುಳ್ಳದೂ ಪರ್ವತದಂತೆ ಉನ್ನತವೂ ದೊಡ್ಡ ಕೆನ್ನೆಗಳುಳ್ಳದೂ ಹಂದಿಯಂತೆ ಪಿರ್ರೆಗಳುಳ್ಳದೂ ಶೋಭಾಯುಕ್ತವೂ ಉದ್ದವಾದ ತುಟಿಗಳುಳ್ಳದೂ ಭೇರಿಯಂತೆ ಶಬ್ದವುಳ್ಳದೂ ಸುಗಂಧವೂ ದೀರ್ಘವೂ ಆದ ನಿಟ್ಟುಸಿರುಳ್ಳದೂ ದೀರ್ಘಾಯುಷ್ಯವುಳ್ಳದೂ ಎಲ್ಲರಿಂದಲೂ ಪ್ರೀತಿಸಲ್ಪಡುವುದೂ ಶಬ್ದಗಳ ನಿಜವಾದ ಅರ್ಥವನ್ನು ತಿಳಿಯುವುದೂ ಮಂಗಲ ಮೂರ್ತಿಯೂ ಒಳ್ಳೆಯ ಸ್ವಭಾವವುಳ್ಳದೂ ಶುಭಕರವೂ ಯೋನಿ ಸಂಬಂಧವಾದ ಉತ್ಪತ್ತಿರಹಿತವಾದುದೂ ಉತ್ತಮವಾದ ಜಾತಿಯುಳ್ಳದೂ ''ಓಜಸ್ತೇಜೋ ಬಲಂ ಶೌರ್ಯಂ ಸತ್ತ್ವಂ ಸಂಹನನಂ ಜವಃ'' ಎಂಬ ಏಳು ಗುಣಗಳಿಂದ ಪ್ರತಿಷ್ಠಿತವಾಗಿರುವುದೂ ಮದಜಲದ ಪ್ರವಾಹದಿಂದ ಸೇಚಿಸಲ್ಪಟ್ಟ ಕಿವಿಗಳೆಂಬ ಚಾಮರಗಳಲ್ಲಿ ಜೋಲಾಡುತ್ತಿರುವ ಭ್ರಮರಗಳ ಪಂಕ್ತಿಗಳನ್ನು ಬೇರೆ ಮದಜಲದ ಪ್ರವಾಹಗಳನ್ನೋಪಾದಿಯಲ್ಲಿ ಧರಿಸಿರುವುದೂ ಆದ ಆ ಗಜರಾಜ(ಐರಾವತಗಜ)ನು ಭಕ್ತಿಯಿಂದ ಬಂದಿರುವ ಎಲ್ಲಾ ಆನೆಗಳಿಂದಲೂ ಸೇವೆಮಾಡಲ್ಪಡುವಂತೆ ಅನೇಕ ಮುಖಗಳಿಂದ ಕೂಡಿದುದಾಗಿ ಪ್ರಕಾಶಿಸುತ್ತಿದ್ದಿತು.

**ಅಶೋಕಪಲ್ಲವಾತಾಮ್ರತಾಲುಚ್ಛಾಯಾಛಲೇನ ಯಃ ।**
**ವಹನ್ಮುಹುರಿವಾ[೮]ರುಚ್ಯಾನ್ಪಲ್ಲವಾನ್ಕಬಲೀಕೃತಾನ್ ॥ ೪೨ ॥**

ಆ ಐರಾವತಗಜವು ಅಶೋಕದ ತಳಿರಿನಂತೆ ತಾಮ್ರವರ್ಣವುಳ್ಳ ಕಾಂತಿಯ ನೆಪದಿಂದ ಪದೇಪದೇ ತಿಂದಿರುವ ಮತ್ತು ಪ್ರಕಾಶಮಾನವಾದ ತಳಿರುಗಳನ್ನು ಧರಿಸಿಕೊಂಡಿದೆಯೋ ಎಂಬಂತೆ ಶೋಭಿಸುತ್ತಿದ್ದಿತು.

೧ ಶೋಭಾವಾನ್. ೨ ದೀರ್ಘಾಯುಷ್ಯಃ. ೩ ಕೃಶೋದರ ಇತ್ಯಪಿ ಪಾಠಃ. ೪ ಮಂಗಲಮೂರ್ತಿಃ. ೫ ಸ್ವಭಾವಃ. ೬ ಶೋಭನಜಾತಿಃ, ಜಾತಸ್ತು ಕುಲಜೇ ಬುಧೇ. ೭ ಸಪ್ತವಿಧಮದಾವಿಷ್ಟಃ. ೮ ದೀಪ್ತಿಮತಃ.

**ಮೃದಂಗಮಂದ್ರನಿರ್ಘೋಷೈಃ ಕರ್ಣತಾಲಾಭಿತಾಡನೈಃ ।**
**ಸಾ[೧]ಲಿವೀಣಾರುತೈರ್ಹೃದ್ಯೈರಾರಬ್ಧಾತೋದ್ಯವಿಭ್ರಮಃ ॥ ೪೩ ॥**

ಆ ಐರಾವತಗಜವು ಮನೋಹರವಾದ ಭ್ರಮರಗಳ ಶಬ್ದಗಳಿಂದಲೂ ವೀಣೆಯ ಶಬ್ದಗಳಿಂದಲೂ ಯುಕ್ತವೂ ಮದ್ದಳೆಯ ಶಬ್ದದಂತೆ ಗಂಭೀರವಾದ ಶಬ್ದವನ್ನು ಮಾಡುವುದೂ ಆದ ತಾಳಗಳಂತಿರುವ ಕಿವಿಗಳ ಹೊಡೆತಗಳಿಂದ ವಾದ್ಯದ ವಿಭ್ರಮವನ್ನು ಆರಂಭಿಸಿದಂತೆ ಶೋಭಿಸುತ್ತಿದ್ದಿತು.

**ಕರಂ ಸುದೀರ್ಘನಿಃಶ್ವಾಸಂ ಮದವೇಣೀಂ ಚ ಯೋ ವಹನ್ ।**
**ಸನಿರ್ಝರಸ್ಯ ಸಶಯೋರ್ಬಿಭರ್ತಿ ಸ್ಮ ಗಿರೇಃ ಶ್ರಿಯಮ್ ॥ ೪೪ ॥**

ದೀರ್ಘವಾಗಿ ನಿಟ್ಟುಸಿರನ್ನು ಬಿಡುತ್ತಿರುವ ಸೊಂಡಲನ್ನೂ ಮದಜಲ ಧಾರೆಯನ್ನೂ ಧರಿಸಿರುವ ಆ ಗಜವು ಗಿರಿನದಿಯ ಪ್ರವಾಹದೊಡನೆಯೂ ಹೆಬ್ಬಾವು— ಅಜಗರದೊಡನೆಯೂ ಕೂಡಿರುವ ಪರ್ವತದ ಶೋಭೆಯನ್ನು ಧರಿಸಿದ್ದಿತು.

**ದಂತಾಲಗ್ನೈರ್ಮೃಣಾಲೈರ್ಯೋ ರಾಜತೇ ಸ್ಮಾಯತೈರ್ಭೃಶಮ್ ।**
**[೨]ಪ್ರಾರೋಹೈರಿವ ದಂತಾನಾಂ ಶಶಾಂಕ[೩]ಶಕಲಾಮಲೈಃ ॥ ೪೫ ॥**

ಆ ಗಜವು ಚಂದ್ರನ ಅಂಶಗಳಂತೆ ಶುಭ್ರವಾದ ದಂತಗಳ ಬಿಳಲುಗಳೋ ಎಂಬಂತೆ ಅವುಗಳಲ್ಲಿ ಸಂಬಂಧಿಸಿರುವ ದೀರ್ಘವಾದ ತಾವರೆಯ ದಂಟುಗಳಿಂದ ಅಧಿಕವಾಗಿ ಶೋಭಿಸುತ್ತಿದ್ದಿತು.

**ಪದ್ಮಾಕರ ಇವ ಶ್ರೀಮಾನ್ದಧಾನಃ ಪುಷ್ಕರಶ್ರಿಯಮ್ ।**
**ಕಲ್ಪದ್ರುಮ ಇವ [೪]ಪ್ರಾಂಶು[೫]ರ್ದಾನಾರ್ಥಿಭಿರುಪಾಸಿತಃ ॥ ೪೬ ॥**

ತಾವರೆಗಳ ಶೋಭೆಯನ್ನು ಧರಿಸಿರುವ ಕಮಲಸರೋವರದಂತೆ ಸೊಂಡಲಿನ ಅಗ್ರಭಾಗದ ಶೋಭೆಯನ್ನು ಧರಿಸಿರುವುದೂ ಉನ್ನತವೂ ಆದ ಆ ಗಜವು ದಾನವನ್ನಪೇಕ್ಷಿಸುವವರಿಂದ ಸೇವಿಸಲ್ಪಡುವ ಕಲ್ಪವೃಕ್ಷದಂತೆ, ಮದಜಲವನ್ನಪೇಕ್ಷಿಸುವ ಭ್ರಮರಗಳಿಂದ ಸೇವಿಸಲ್ಪಡುತ್ತಿದ್ದಿತು.

**ರೇಜೇ [೬]ಸಹೈಮಕಕ್ಷ್ಯೋಽಸೌ ಹೇಮವಲ್ಲೀವೃತಾದ್ರಿವತ್ ।**
**ನಕ್ಷತ್ರಮಾಲಯಾ[೭]ಕ್ಷಿಪ್ತಶರದಂಬರವಿಭ್ರಮಃ ॥ ೪೭ ॥**

ಬಂಗಾರಮಯವಾದ ನಡುಕಟ್ಟುಳ್ಳ ಈ ಗಜವು ನಕ್ಷತ್ರಗಳ ಸಾಲಿನಿಂದ ಸುತ್ತಲ್ಪಟ್ಟ ಶರತ್ಕಾಲಸಂಬಂಧವಾದ ಆಕಾಶದ ಸೊಬಗುಳ್ಳುದಾಗಿ ಬಂಗಾರದ ಲತೆಗಳಿಂದ ಸುತ್ತಲ್ಪಟ್ಟ ಪರ್ವತದಂತೆ ಶೋಭಿಸಿತು.

**[೮]ಗ್ರೈವೇಯಮಾಲಯಾ ಕಂಠಂ ಸ ವಾಚಾಲಿತಮುದ್ವಹನ್ ।**
**ಪಕ್ಷಿಮಾಲಾವೃತಸ್ಯಾದ್ರಿನಿತಂಬಸ್ಯ ಶ್ರಿಯಂ ದಧೌ ॥ ೪೮ ॥**

ಕಂಠಾಭರಣದಿಂದಲೂ ಮಾಲಿಕೆಯಿಂದಲೂ ಶಬ್ದಮಾಡುವ ಕಂಠವನ್ನು ಧರಿಸಿರುವ ಆ ಗಜವು ಪಕ್ಷಿಗಳ ಸಾಲಿನಿಂದ ಸುತ್ತಲ್ಪಟ್ಟ ಪರ್ವತದ ತಪ್ಪಲಿನ ಶೋಭೆಯನ್ನು ಧರಿಸಿತು.

**ಘಂಟಾದ್ವಯೇನ ರೇಜೇಽಸೌ ಸೌವರ್ಣೇನ ನಿನಾದಿನಾ ।**
**ಸುರಾಣಾಮವಬೋಧಾಯ [೯]ಜಿನಾರ್ಚಾಮಿವ ಘೋಷಯನ್ ॥ ೪೯ ॥**

ಈ ಗಜವು ದೇವತೆಗಳಿಗೆ ಜಿನಪೂಜೆಯನ್ನು ತಿಳಿಸುವುದಕ್ಕೋಸ್ಕರ ಶಬ್ದಮಾಡುತ್ತಿದೆಯೋ ಎಂಬಂತೆ ಶಬ್ದಮಾಡುತ್ತಿರುವ ಬಂಗಾರದ ಎರಡು ಘಂಟೆಗಳಿಂದ ಶೋಭಿಸುತ್ತಿದ್ದಿತು. ಉಭಯಪಾರ್ಶ್ವದಲ್ಲಿಯೂ ಎರಡು ಘಂಟೆಗಳ ಶಬ್ದವಾಗುತ್ತಿದ್ದಿತೆಂದರ್ಥವು.

೧ ಅಲಿವೀಣಾರವಸಹಿತೈಃ. ೨ ಶಿಖಾಭಿಃ. ೩ ಶಕಲವತ್. ೪ ಉನ್ನತಃ. ೫ ಪಕ್ಷೇ ಭ್ರಮರೈಃ. ೬ ಹೇಮಮಯವರತ್ರಾಸಹಿತಃ. ೭ ಪರಿವೇಷ್ಟಿತಃ. ೮ ಕಂಠಭೂಷಯಾ. ೯ ಜಿನಪೂಜಾಂ.

**ಜಂಬೂದ್ವೀಪವಿಶಾಲೋರುಕಾಯಶ್ರೀಃ ಸ ಸರೋವರಾನ್ ।**
**ಕುಲಾದ್ರೀನಿವ ಬಭ್ರೇಽಸೌ ರದಾನಾಯಾಮಶಾಲಿನಃ ॥ ೫೦ ॥**

ಜಂಬೂದ್ವೀಪದಂತೆ ವಿಸ್ತಾರವಾದ ದೊಡ್ಡ ಶರೀರದ ಶೋಭೆಯುಳ್ಳ ಈ ಐರಾವತಗಜವು ಕುಲಪರ್ವತಗಳನ್ನು ಧರಿಸಿರುವಂತೆ ಸರೋವರಗಳುಳ್ಳ ಉದ್ದವಾದ ಹಲ್ಲುಗಳನ್ನು ಧರಿಸಿದ್ದಿತು.

**[೧]ಶ್ವೈತಿಮ್ನಾ ವಪುಷಃ ಶ್ವೇತದ್ವೀಪಲಕ್ಷ್ಮೀಮುವಾಹ ಸಃ ।**
**ಚಲತ್ಕೈಲಾಸಶೈಲಾಭಃ ಪ್ರಕ್ಷರನ್ಮದನಿರ್ಝರಃ ॥ ೫೧ ॥**

ನಡೆಯುತ್ತಿರುವ ಕೈಲಾಸಪರ್ವತವೋ ಎಂಬಂತಿರುವ ಮತ್ತು ಮದಜಲದ ಪ್ರವಾಹವನ್ನು ಸುರಿಯುತ್ತಿರುವ ಆ ಗಜವು ತನ್ನ ಶರೀರದ ಶುಭ್ರತ್ವದಿಂದ ಶುಭ್ರವಾದ ದ್ವೀಪದ ಶೋಭೆಯನ್ನು ಧರಿಸಿದ್ದಿತು.

**ಇತಿ ವ್ಯಾವರ್ಣಿತಾ[೨]ರೋಹಪರಿಣಾಹ[೩]ವಪುರ್ಗುಣಮ್ ।**
**ಗಜಾನೀಕೇಶ್ವರಶ್ಚಕ್ರೇ ಮಹೈರಾವತದಂತಿನಮ್ ॥ ೫೨ ॥**

ಈಪ್ರಕಾರವಾಗಿ ಹಿಂದೆ ವರ್ಣಿಸಲ್ಪಟ್ಟ ಔನ್ನತ್ಯವೂ ವಿಶಾಲತೆಯೂ ಉಳ್ಳ ಶರೀರ ಗುಣವನ್ನು ಧರಿಸಿರುವ ಐರಾವತಗಜವನ್ನು ಗಜಸೇನಾನಾಯಕನಾದ ದೇವನು ನಿರ್ಮಿಸಿದನು.

**ತಮೈರಾವಣಮಾರೂಢಃ ಸಹಸ್ರಾಕ್ಷೋದ್ಯುತತ್ತರಾಮ್ ।**
**ಪದ್ಮಾಕರ ಇವೋತ್ಫುಲ್ಲಪಂಕಜೋ ಗಿರಿಮಸ್ತಕೇ ॥ ೫೩ ॥**

ಆ ಐರಾವತಗಜವನ್ನೇರಿದ ಸಾವಿರ ಕಣ್ಣುಗಳುಳ್ಳ ದೇವೇಂದ್ರನು ಪರ್ವತದ ಶಿಖರದಲ್ಲಿ ವಿಕಸಿತವಾದ ಕಮಲಗಳುಳ್ಳ ಪದ್ಮಸರೋವರದಂತೆ ಅಧಿಕವಾಗಿ ಪ್ರಕಾಶಿಸಿದನು.

**ದ್ವಾತ್ರಿಂಶದ್ವದನಾನ್ಯಸ್ಯ ಪ್ರತ್ಯಾಸ್ಯಂ ಚ ರದಾಷ್ಟಕಮ್ ।**
**ಸರಃ ಪ್ರತಿರದಂ ತಸ್ಮಿನ್ನಬ್ಜಿನ್ಯೇಕಾ ಸರಃಪ್ರತಿ ॥ ೫೪ ॥**

**ದ್ವಾತ್ರಿಂಶತ್ಪ್ರಸವಾ[೪]ಸ್ತಸ್ಯಾಂ ತಾವತ್ಪ್ರಮಿತಪತ್ರಕಾಃ ।**
**ತೇಷ್ವಾಯತೇಷು ದೇವಾನಾಂ ನರ್ತಕ್ಯಸ್ತತ್ಪ್ರಮಾಃ ಪೃಥಕ್ ॥ ೫೫ ॥**

**ನೃತ್ಯಂತಿ ಸಲಯಂ ಸ್ಮೇರವಕ್ತ್ರಾಬ್ಜಾ ಲಲಿತಭ್ರುವಃ ।**
**[೫]ಪಶ್ಯಚ್ಚಿತ್ತದ್ರುಮೇಷೂಚ್ಚೈ[೬]ರ್ನ್ಯಸ್ಯಂತ್ಯಃ ಪ್ರಮದಾಂಕುರಾನ್ ॥ ೫೬ ॥**

ಈ ಐರಾವತಗಜಕ್ಕೆ ಮೂವತ್ತೆರಡು ಮುಖಗಳೂ ಒಂದೊಂದು ಮುಖದಲ್ಲಿ ಎಂಟೆಂಟು ಹಲ್ಲುಗಳೂ ಒಂದೊಂದು ಹಲ್ಲಿನಲ್ಲಿ ಒಂದೊಂದು ಸರೋವರವೂ ಒಂದೊಂದು ಸರೋವರದಲ್ಲಿ ಒಂದೊಂದು ಕಮಲಲತೆಯೂ ಒಂದೊಂದು ಕಮಲಲತೆಯಲ್ಲಿ ಮೂವತ್ತೆರಡು ಕಮಲಗಳೂ ಒಂದೊಂದು ಕಮಲದಲ್ಲಿ ಮೂವತ್ತೆರಡು ಎಸಳುಗಳೂ ದೀರ್ಘವಾದ ಆ ಒಂದೊಂದು ಎಸಳಿನಲ್ಲಿ ಮಂದಹಾಸಯುಕ್ತವಾದ ಮುಖಕಮಲವುಳ್ಳವರೂ ಮನೋಹರವಾದ ಹುಬ್ಬುಗಳುಳ್ಳವರೂ ಚೆನ್ನಾಗಿ ನೋಡುತ್ತಿರುವವರ ಮನಸ್ಸುಗಳೆಂಬ ವೃಕ್ಷಗಳಲ್ಲಿ ಸಂತೋಷಗಳೆಂಬ ಅಂಕುರಗಳನ್ನುಂಟುಮಾಡುವವರೂ ಆದ ಮೂವತ್ತೆರಡು ಮಂದಿ ದೇವನರ್ತಕಿಯರು ಲಯಕ್ಕನುಸಾರವಾಗಿ ನರ್ತನವನ್ನು ಮಾಡುತ್ತಾರೆ. (ದೇವನು ಗಜರೂಪವನ್ನು ಧರಿಸಿ ಈ ರೀತಿಯಾಗಿ ವಿಗುರ್ವಿಸಿದುದರಿಂದಲೂ ದೇವತೆಗಳಿಗೆ ಅಂತಹ ಶಕ್ತಿಯಿರುವುದರಿಂದಲೂ ಈ ವರ್ಣನೆಯು ಅಸಂಭವವೆಂದು ತಿಳಿಯುವುದಕ್ಕವಕಾಶವಿಲ್ಲವು).

**ತಾಸಾಂ ಸಹಾಸ್ಯಶೃಂಗಾರರಸಭಾವಲಯಾನ್ವಿತಮ್ ।**
**ಪಶ್ಯಂತಃ [೭]ಕೈಶಿಕೀಪ್ರಾಯಂ ನೃತ್ತಂ ಪಿಪ್ರಿಯಿರೇ ಸುರಾಃ ॥ ೫೭ ॥**

೧ ಅತಿಶುಭ್ರತ್ವೇನ. ೨ ಉತ್ಸೇಧವಿಶಾಲಃ. ೩ ಚತುರ್ಗುಣಮಿತ್ಯಪಿ ಪಾಠಃ. ೪ ಅಬ್ಜಿನ್ಯಾಂ. ೫ ಪ್ರೇಕ್ಷಕಾಣಾಂ ಮನೋವೃಕ್ಷೇಷು. ೬ ಪ್ರಕ್ಷಿಪಂತ್ಯಃ. ೭ ಲಜ್ಜಾಸಹಿತಶೃಂಗಾರವಿಶೇಷಾದಿಕಂ.

ಆ ನರ್ತನಸ್ತ್ರೀಯರ ಹಾಸ್ಯಯುಕ್ತವಾದ ಶೃಂಗಾರರಸದಿಂದಲೂ ಭಾವದಿಂದಲೂ ಲಯದಿಂದಲೂ ಕೂಡಿರುವುದೂ ಲಜ್ಜಾಸಹಿತವಾದ ಶೃಂಗಾರವಿಶೇಷ ಮೊದಲಾದುವುಗಳುಳ್ಳುದೂ ಆದ ನರ್ತನವನ್ನು ನೋಡಿ ದೇವತೆಗಳು ಸಂತೋಷಪಟ್ಟರು.

**ಪ್ರಯಾಣೇ ಸುರರಾಜಸ್ಯ ನೇಟುರಪ್ಸರಸಃ ಪುರಃ ।**
**[೧]ರಕ್ತಕಂಠಾಶ್ಚ ಕಿನ್ನರ್ಯೋ [೨]ಜಗುರ್ಜಿನಪತೇರ್ಜಯಮ್ ॥ ೫೮ ॥**

ಪ್ರಯಾಣಕಾಲದಲ್ಲಿ ದೇವೇಂದ್ರನ ಮುಂದೆ ಅಪ್ಸರಸ್ತ್ರೀಯರು ನರ್ತನವನ್ನು ಮಾಡಿದರು. ಅನುರಕ್ತವಾದ ಕಂಠರಾಗವುಳ್ಳ ಕಿನ್ನರಸ್ತ್ರೀಯರು ಜಿನೇಶ್ವರನ ಜಯವನ್ನು ಗಾನಮಾಡಿದರು.

**ತತೋ [೩]ದ್ವಾತ್ರಿಂಶದಿಂದ್ರಾಣಾಂ ಪೃತನಾ ಬಹುಕೇತನಾಃ ।**
**[೪]ಪ್ರಸಸ್ರುರ್ವಿಲಸಚ್ಛತ್ರಚಾಮರಾಃ [೫]ಪ್ರತತಾಮರಾಃ ॥ ೫೯ ॥**

ತರುವಾಯ ಹತ್ತುವಿಧಭವನೇಂದ್ರರ ಎಂಟುವಿಧವ್ಯಂತರೇಂದ್ರರ ಎರಡುವಿಧ ಜ್ಯೋತಿಷ್ಕೇಂದ್ರರ ಮತ್ತು ಹನ್ನೆರಡುವಿಧ ಕಲ್ಪೇಂದ್ರರ ಸೈನ್ಯಗಳು ಅನೇಕ ಧ್ವಜ ಪತಾಕೆಗಳೂ ಪ್ರಕಾಶಮಾನವಾದ ಛತ್ರಚಾಮರಗಳೂ ದೇವತೆಗಳಿಂದ ವ್ಯಾಪ್ತಗಳೂ ಆಗಿ ಹೊರಟುವು.

**ಅಪ್ಸರಃಕುಂಕುಮಾರಕ್ತಕುಚಚಕ್ರಾಹ್ವಯುಗ್ಮಕೇ ।**
**ತದ್ವಕ್ತ್ರಪಂಕಜಚ್ಛನ್ನೇ ಲಸತ್ತನ್ನಯನೋತ್ಪಲೇ ॥ ೬೦ ॥**

ಅಪ್ಸರಸ್ತ್ರೀಯರ ಕುಂಕುಮದಿಂದ ಕೆಂಪಾಗಿರುವ ಕುಚಗಳೆಂಬೆರಡು ಚಕ್ರವಾಕ ಪಕ್ಷಿಗಳುಳ್ಳುದೂ ಆ ಸ್ತ್ರೀಯರ ಮುಖಗಳೆಂಬ ಕಮಲಗಳಿಂದ ವ್ಯಾಪ್ತವೂ ಆ ಸ್ತ್ರೀಯರ ಪ್ರಕಾಶಮಾನವಾದ ಕಣ್ಣುಗಳೆಂಬ ನೈದಿಲೆಹೂಗಳುಳ್ಳುದೂ

**ನಭಃಸರಸಿ ಹಾರಾಂಶುಚ್ಛನ್ನವಾರಿಣಿ ಹಾರಿಣಿ ।**
**ಚಲಂತಶ್ಚಾಮರಾಪೀಡಾ ಹಂಸಾಯಂತೇ ಸ್ಮ ನಾಕಿನಾಮ್ ॥ ೬೧ ॥**

ಕಂಠದಲ್ಲಿರುವ ಹಾರಗಳ ಕಿರಣಗಳೆಂಬ ನೀರಿನಿಂದ ವ್ಯಾಪ್ತವೂ ಮನೋಹರವೂ ಆದ ಆಕಾಶವೆಂಬ ಸರೋವರದಲ್ಲಿ ದೇವತೆಗಳ ಚಲಿಸುತ್ತಿರುವ ಚಾಮರಗಳ ಸಮೂಹಗಳು ಹಂಸಗಳಂತಿದ್ದುವು.

**ಇಂದ್ರನೀಲಮಯಾ[೬]ಹಾರ್ಯರುಚಿಭಿಃ ಕ್ವಚಿದಾತತಮ್ ।**
**[೭]ಸ್ವಾಮಾಭಾಂ ಬಿಭರಾಮಾಸ [೮]ಧೌತಾಸಿನಿಭಮಂಬರಮ್ ॥ ೬೨ ॥**

ಉಜ್ಜಲ್ಪಟ್ಟ ಖಡ್ಗದಂತಿರುವ ಆಕಾಶವು ಕೆಲವುಕಡೆಯಲ್ಲಿ ಇಂದ್ರನೀಲರತ್ನಮಯವಾದ ಆಭರಣಗಳ ಕಾಂತಿಗಳಿಂದ ವ್ಯಾಪ್ತವಾಗಿ ತನ್ನ ಕಾಂತಿಯನ್ನು ಧರಿಸಿದ್ದಿತು.

**ಪದ್ಮರಾಗರುಚಾ ವ್ಯಾಪ್ತಂ ಕ್ವಚಿದ್ವ್ಯೋಮತಲಂ ಬಭೌ ।**
**ಸಾಂಧ್ಯಂ ರಾಗಮಿವಾಬಿಭ್ರದನುರಂಜಿತದಿಙ್ಮುಖಮ್ ॥ ೬೩ ॥**

ಕೆಲವುಕಡೆಯಲ್ಲಿ ಪದ್ಮರಾಗ(ಕೆಂಪು)ರತ್ನದ ಕಾಂತಿಯಿಂದ ವ್ಯಾಪ್ತವಾದ ಆಕಾಶವು ದಿಕ್ಕುಗಳನ್ನು ಕೆಂಪಾಗಿಮಾಡಿದ ಸಂಧ್ಯಾಕಾಲದ ರಕ್ತಿಮೆಯನ್ನು ಧರಿಸಿದಂತೆ ಪ್ರಕಾಶಿಸುತ್ತಿದ್ದಿತು.

**ಕ್ವಚಿನ್ಮರಕತಚ್ಛಾಯಾಸಮಾಕ್ರಾಂತಮಭಾನ್ನಭಃ ।**
**ಸಶೈವಲಮಿವಾಂಭೋಧೇರ್ಜಲಂ ಪರ್ಯಂತಸಂಶ್ರಿತಮ್ ॥ ೬೪ ॥**

೧ ಅನುರಕ್ತಕಂಠರಾಗಾಃ. ೨ ಗಾಯಂತಿ ಸ್ಮ. ೩ ದಶವಿಧಭವನಾಷ್ಟವಿಧವ್ಯಂತರದ್ವಿವಿಧ ಜ್ಯೋತಿಷ್ಕದ್ವಾದಶವಿಧಕಲ್ಪಾಮರೇಂದ್ರಾಣಾಂ. ೪ ಪ್ರತಸ್ಥಿರೇ. ೫ ವಿಸ್ತೃತಸುರಾಃ. ೬ ಆಭರಣರುಚಿಭಿಃ. ೭ ನಿಜಾಂ ಕಾಂತಿಂ. ೮ ಉತ್ತೇಜಿತಖಡ್ಗಸಂಕಾಶಂ.

ಕೆಲವುಕಡೆಯಲ್ಲಿ ಪಚ್ಚೆರತ್ನದ ಕಾಂತಿಯಿಂದ ವ್ಯಾಪ್ತವಾದ ಆಕಾಶವು, ಆವಚಿಯೊಡನೆ ಕೂಡಿ ದಡವನ್ನು ಹೊಂದಿರುವ ಸಮುದ್ರದ ನೀರಿನಂತೆ, ಶೋಭಿಸುತ್ತಿದ್ದಿತು.

**ದೇವಾಭರಣಮುಕ್ತೌಘ[೧]ಶಬಲಂ ಸಹವಿದ್ರುಮಮ್ ।**
**ಭೇಜೇ ಪಯೋಮುಚಾಂ ವರ್ತ್ಮ ವಿನೀಲಂ ಜಲಧೇಃ ಶ್ರಿಯಮ್ ॥**

ದೇವತೆಗಳು ಧರಿಸಿರುವ ಆಭರಣಗಳಿಂದಲೂ ಮುತ್ತುಗಳ ಸಮೂಹದಿಂದಲೂ ನಾನಾವರ್ಣವೂ ಹವಳಗಳುಳ್ಳುದೂ ನೀಲವರ್ಣವೂ ಆದ ಆಕಾಶವು ಸಮುದ್ರದ ಶೋಭೆಯನ್ನು ಹೊಂದಿತು. ಸಮುದ್ರದಂತೆ ಶೋಭಿಸುತ್ತಿದ್ದಿತೆಂದರ್ಥವು.

**ತನ್ವ್ಯಃ ಸುರುಚಿರಾಕಾರಾ ಲಸದಂಶುಕಭೂಷಣಾಃ ।**
**ತದಾಮರಸ್ತ್ರಿಯೋ ರೇಜುಃ ಕಲ್ಪವಲ್ಲ್ಯ ಇವಾಂಬರೇ ॥ ೬೬ ॥**

ಆ ಸಮಯದಲ್ಲಿ ಕೃಶಾಂಗಿಯರೂ ಮನೋಹರವಾದ ಆಕಾರವುಳ್ಳವರೂ ಪ್ರಕಾಶಮಾನವಾದ ವಸ್ತ್ರಾಭರಣಗಳುಳ್ಳವರೂ ಆದ ದೇವಸ್ತ್ರೀಯರು ಆಕಾಶದಲ್ಲಿ ಕಲ್ಪಲತೆಗಳಂತೆ ಶೋಭಿಸುತ್ತಿದ್ದರು.

**ಸ್ಮೇರವಕ್ತ್ರಾಂಬುಜಾ ರೇಜುರ್ನಯನೋತ್ಪಲರಾಜಿತಾಃ ।**
**ಸರಸ್ಯ ಇವ ಲಾವಣ್ಯರಸಾಪೂರ್ಣಾಃ ಸುರಾಂಗನಾಃ ॥ ೬೭ ॥**

ವಿಕಸಿತವಾದ ಮುಖಕಮಲಗಳುಳ್ಳವರೂ ನೇತ್ರಗಳೆಂಬ ನೈದಿಲೆಗಳಿಂದ ಶೋಭಿಸುತ್ತಿರುವವರೂ ಲಾವಣ್ಯವೆಂಬ ರಸದಿಂದ ಪರಿಪೂರ್ಣರೂ ಆದ ದೇವಸ್ತ್ರೀಯರು ಸರೋವರಗಳಂತೆ ಶೋಭಿಸುತ್ತಿದ್ದರು.

**ತಾಸಾಂ ಸ್ಮೇರಾಣಿ ವಕ್ತ್ರಾಣಿ ಪದ್ಮಬುದ್ಧ್ಯಾನುಧಾವತಾಮ್ ।**
**ರೇಜೇ ಮಧುಲಿಹಾಂ ಮಾಲಾ ಧನುರ್ಜ್ಯೇವ ಮನೋಭುವಃ ॥ ೬೮ ॥**

ಆ ದೇವಸ್ತ್ರೀಯರ ನಗುಮುಖಗಳನ್ನು ನೋಡಿ ಕಮಲಗಳೆಂಬ ಬುದ್ಧಿಯಿಂದ ಓಡುತ್ತಿರುವ ಭ್ರಮರಗಳ ಸಾಲು ಮನ್ಮಥನ ಧನುಸ್ಸಿನ ಹಗ್ಗದಂತೆ ಶೋಭಿಸುತ್ತಿದ್ದಿತು.

**ಹಾರಾಶ್ರಿತಸ್ತನೋಪಾಂತಾ ರೇಜುರಪ್ಸರಸಸ್ತದಾ ।**
**ದಧಾನಾ ಇವ ನಿರ್ಮೋಕಸಮಚ್ಛಾಯಂ ಸ್ತನಾಂಶುಕಮ್ ॥ ೬೯ ॥**

ಆಗ ಮುಕ್ತಾಹಾರಗಳಿಂದ ಸಂಬಂಧಿಸಿಕೊಂಡಿರುವ ಕುಚಪ್ರದೇಶಗಳುಳ್ಳ ಅಪ್ಸರಸ್ತ್ರೀಯರು ಸರ್ಪದ ಪೊರೆಗೆ ಸಮಾನ(ತೆಳು)ವಾದ ಕುಪ್ಪಸಗಳನ್ನು ಧರಿಸಿರುವವರಂತೆ ಶೋಭಿಸುತ್ತಿದ್ದರು.

**ಸುರಾನಕಮಹಾಧ್ವಾನಃ ಪೂಜಾವೇಲಾಂ ಪರಾಂ ದಧತ್ ।**
**ಪ್ರಚರದ್ದೇವಕಲ್ಲೋಲೋ ಬಭೌ ದೇವಾಗಮಾಂಬುಧಿಃ ॥ ೭೦ ॥**

ದೇವತೆಗಳ ಭೇರಿಯ ಮಹಾಶಬ್ದವುಳ್ಳುದೂ ಉತ್ಕೃಷ್ಟವಾದ ಪೂಜೆಯ ಕಾಲವನ್ನು ನಿರೀಕ್ಷಿಸುತ್ತಿರುವುದೂ ಚಲಿಸುತ್ತಿರುವ ದೇವತೆಗಳೆಂಬ ಅಲೆಗಳುಳ್ಳುದೂ ಆದ ದೇವತೆಗಳ ಆಗಮನವೆಂಬ ಸಮುದ್ರವು ಶೋಭಿಸುತ್ತಿದ್ದಿತು.

**ಜ್ಯೋತಿರ್ಮಯ ಇವೈತಸ್ಮಿನ್ ಜಾತೇ ಸೃಷ್ಟ್ಯಂತರೇ ಭೃಶಮ್ ।**
**ಜ್ಯೋತಿರ್ಗಣಾ ಹ್ರಿಯೇವಾಸನ್ನಿಚ್ಛಾಯತ್ವಾದಲಕ್ಷಿತಾಃ ॥ ೭೧ ॥**

ಆಕಾಶದಲ್ಲಿ ಪ್ರಕಾಶಮಯವಾದ ಈ ದೇವಾಗಮವೆಂಬ ಸಮುದ್ರವು ಜ್ಯೋತಿರ್ದೇವತೆಗಳ ಬೇರೊಂದು ಸೃಷ್ಟಿಯಂತೆ ಶೋಭಿಸುತ್ತಿರಲು ಜ್ಯೋತಿರ್ದೇವತೆಗಳೆಲ್ಲ ಲಜ್ಜೆಯಿಂದಲೋ ಎಂಬಂತೆ ಕಾಂತಿಹೀನರಾಗಿದ್ದುದರಿಂದ ಕಾಣಿಸಿಕೊಳ್ಳುತ್ತಿರಲಿಲ್ಲ.

೧ ನಾನಾವರ್ಣಂ.

**ತದಾ ದಿವ್ಯಾಂಗನಾರೂಪೈರ್ಹಯಹಸ್ತ್ಯಾದಿವಾಹನೈಃ ।**
**ಉಚ್ಚಾವಚೈರ್ನಭೋವರ್ತ್ಮ ಭೇಜೇ ಚಿತ್ರಪಟಶ್ರಿಯಮ್ ॥ ೭೨ ॥**

ಆಗ ದೇವಸ್ತ್ರೀಯರ ರೂಪಗಳಿಂದಲೂ ಕುದರೆ ಆನೆ ಮೊದಲಾದ ವಾಹನಗಳಿಂದಲೂ ಹಳ್ಳದಿಣ್ಣೆಯಾಗಿರುವ ಆಕಾಶಮಾರ್ಗವು ಚಿತ್ರಪಟದ ಶೋಭೆಯನ್ನು ಹೊಂದಿತು. ಅನೇಕ ತರಹದ ಚಿತ್ರಪಟದಂತೆ ಶೋಭಿಸುತ್ತಿದ್ದಿತೆಂದರ್ಥವು.

**ದೇವಾಂಗದ್ಯುತಿವಿದ್ಯುದ್ಭಿಸ್ತದಾಭರಣರೋಹಿತೈಃ ।**
**ಸುರೇಭನೀಲಜೀಮೂತೈರ್ವ್ಯೋಮಾಧಾತ್ಪ್ರಾವೃಷಃ ಶ್ರಿಯಮ್ ॥ ೭೩ ॥**

ದೇವಸ್ತ್ರೀಯರ ಶರೀರಕಾಂತಿಗಳೆಂಬ ಮಿಂಚುಗಳಿಂದಲೂ ಅವರ ಆಭರಣಗಳ ಕೆಂಪುಕಾಂತಿಗಳಿಂದಲೂ ದೇವಗಜಗಳೆಂಬ ನೀಲಮೇಘಗಳಿಂದಲೂ ಆಕಾಶವು ವರ್ಷಾಕಾಲದ ಶೋಭೆಯನ್ನು ಧರಿಸಿದ್ದಿತು. ವರ್ಷಾಕಾಲದಂತೆ ತೋರುತ್ತಿದ್ದಿತೆಂದು ಭಾವವು.

**ಇ[೧]ತ್ಯಾಪತತ್ಸು ದೇವೇಷು ಸಮಂ ಯಾನವಿಮಾನಕೈಃ ।**
**[೨]ಸಜಾನಿಷು ತದಾ ಸ್ವರ್ಗಶ್ಚಿರಾ[೩]ದುದ್ವಾಸಿತೋ ಬತ ॥ ೭೪ ॥**

ಹೀಗೆ ದೇವತೆಗಳು ತಮ್ಮ ಸ್ತ್ರೀಸಮೇತರಾಗಿ ಕೆಲವರು ಆನೆಮೊದಲಾದ ವಾಹನಾರೂಢರೂ ಕೆಲವರು ವಿಮಾನಾರೂಢರೂ ಆಗಿ ಸ್ವರ್ಗದಿಂದ ಹೊರಟು ಬರುತ್ತಿರಲು ಬಹುಕಾಲದವರೆಗೆ ಸ್ವರ್ಗವು ಶೂನ್ಯವಾಗಿದ್ದಿತು.

**ಸಮಾರುದ್ಧ್ಯ ನಭೋಶೇಷಮಿತ್ಯಾಯಾತೈಃ ಸುರಾಸುರೈಃ ।**
**ಜಗತ್ಪ್ರಾದುರ್ಭವದ್ದಿವ್ಯಸ್ವರ್ಗಾಂತರಮಿವಾರುಚತ್ ॥ ೭೫ ॥**

ಹೀಗೆ ಆಕಾಶವನ್ನೆಲ್ಲ ಆಕ್ರಮಿಸಿಕೊಂಡು ಬರುತ್ತಿರುವ ದೇವತೆಗಳಿಂದ ಲೋಕವು ಪ್ರಾದುರ್ಭವಿಸುತ್ತಿರುವ ಬೇರೊಂದು ಶ್ರೇಷ್ಠವಾದ ಸ್ವರ್ಗವೋ ಎಂಬಂತೆ ಪ್ರಕಾಶಿಸುತ್ತಿದ್ದಿತು.

**ಸುರೈರ್ದೂರಾದಥಾಲೋಕಿ ವಿಭೋರಾಸ್ಥಾನಮಂಡಲಮ್ ।**
**ಸುರಶಿಲ್ಪಿಭಿರಾರಬ್ಧಪರಾರ್ಧ್ಯರಚನಾಶತಮ್ ॥ ೭೬ ॥**

ತರುವಾಯ ದೇವತೆಗಳು ದೇವಶಿಲ್ಪಿಗಳಿಂದ ಮಾಡಲ್ಪಟ್ಟ ಶ್ರೇಷ್ಠವಾದ ಅನೇಕ ರಚನೆಗಳುಳ್ಳ ಸ್ವಾಮಿಯ ಆಸ್ಥಾನಪ್ರದೇಶವನ್ನು ದೂರದಿಂದ ನೋಡಿದರು.

**ದ್ವಿಷಡ್ಯೋಜನವಿಸ್ತಾರಮಭೂದಾಸ್ಥಾನಮೀಶಿತುಃ ।**
**ಹರಿನೀಲಮಹಾರತ್ನಘಟಿತಂ ವಿಲಸತ್ತಲಮ್ ॥ ೭೭ ॥**

ಶ್ರೇಷ್ಠವಾದ ಇಂದ್ರನೀಲರತ್ನಗಳಿಂದ ನಿರ್ಮಿತವೂ ಪ್ರಕಾಶಮಾನವಾದ ನೆಲಗಟ್ಟುಳ್ಳುದೂ ಆದ ಸ್ವಾಮಿಯ ಆಸ್ಥಾನವು ಹನ್ನೆರಡುಯೋಜನ ವಿಸ್ತಾರವಾಗಿದ್ದಿತು.

**ಸುರೇಂದ್ರನೀಲನಿರ್ಮಾಣಂ ಸಮುವೃತ್ತಂ ತದಾ ಬಭೌ ।**
**ತ್ರಿಜಗಚ್ಛ್ರೀಮುಖಾಲೋಕಮಂಗಲಾದರ್ಶವಿಭ್ರಮಮ್ ॥ ೭೮ ॥**

ಇಂದ್ರನೀಲರತ್ನಗಳಿಂದ ನಿರ್ಮಿತವೂ ವರ್ತುಲಾಕಾರವೂ ಆದ ಆ ಸಮವಸರಣ (ಆಸ್ಥಾನ)ವು ತ್ರೈಲೋಕ್ಯಲಕ್ಷ್ಮಿಯ ಮುಖವನ್ನು ನೋಡುವ ಮಂಗಳಕರವಾದ ಕನ್ನಡಿಯಂತೆ ಪ್ರಕಾಶಿಸುತ್ತಿದ್ದಿತು.

**ಆಸ್ಥಾನಮಂಡಲಸ್ಯಾಸ್ಯ ವಿನ್ಯಾಸಂ ಕೋನುವರ್ಣಯೇತ್ ।**
**ಸುತ್ರಾಮಾ [೪]ಸೂತ್ರಧಾರೋಭೂನ್ನಿರ್ಮಾಣೇ ಯಸ್ಯ [೫]ಕರ್ಮಠಃ ॥**

ಮಂಡಲಾಕಾರವಾದ ಈ ಆಸ್ಥಾನ(ಸಮವಸರಣ)ದ ರಚನೆಯನ್ನು ಯಾವನು ವರ್ಣಿಸಬಲ್ಲನು ? ಇದರ ನಿರ್ಮಾಣದಲ್ಲಿ ಕಾರ್ಯಚತುರನಾದ ದೇವೇಂದ್ರನೇ ಸೂತ್ರಧಾರ(ಶಿಲ್ಪಾಚಾರ್ಯ)ನಾಗಿದ್ದನು.

**ತಥಾ[೧]ಪ್ಯನೂದ್ಯತೇ ಕಿಂಚಿದಸ್ಯ ಶೋಭಾ[೨]ಸಮುಚ್ಚಯಃ ।**
**[೩]ಶ್ರುತೇನ ಯೇನ ಸಂಪ್ರೀತಿಂ ಭಜೇದ್ಭವ್ಯಾತ್ಮನಾಂ ಮನಃ ॥ ೮೦ ॥**

ಹಾಗಿದ್ದರೂ ಈ ಆಸ್ಥಾನಮಂಡಪದ ಶೋಭಾಸಮೂಹವನ್ನು ಸ್ವಲ್ಪ ಹೇಳುತ್ತೇನೆ. ಅದನ್ನು ಕೇಳುವುದರಿಂದ ಭವ್ಯಾತ್ಮರ ಮನಸ್ಸಿಗೆ ಆನಂದವುಂಟಾಗುವುದು.

**[೪]ತಸ್ಯ ಪರ್ಯಂತಭೂಭಾಗಮಲಂಚಕ್ರೇ ಸ್ಫುರದ್ದ್ಯುತಿಃ ।**
**ಧೂಲೀಸಾಲ[೫]ಪರಿಕ್ಷೇಪೋ ರತ್ನಪಾಂಸುಭಿರಾಚಿತಃ ॥ ೮೧ ॥**

ರತ್ನಧೂಳಿಗಳಿಂದ ವ್ಯಾಪ್ತವಾಗಿರುವುದೂ ಪ್ರಕಾಶಮಾನವಾದ ಕಾಂತಿಯುಳ್ಳುದೂ ವಲಯಾಕಾರವೂ ಆದ ಧೂಳೀಸಾಲ (ರತ್ನಧೂಳಿಮಯವಾದ ಮೊದಲನೆಯ ಕೋಟೆ)ವು ಆ ಸಮವಸರಣದ ಸಮೀಪಭೂಮಿಯನ್ನಲಂಕರಿಸಿದ್ದಿತು.

**ಧನುರೈಂದ್ರಮಿವೋದ್ಭಾಸಿವಲಯಾಕೃತಿಮುದ್ವಹತ್ ।**
**ಸಿಷೇವೇ ತಾಂ ಮಹೀಂ ವಿಷ್ವಗ್ಧೂಲೀಸಾಲಾ[೬]ಪದೇಶತಃ ॥ ೮೨ ॥**

ಧೂಳೀಸಾಲದ ನೆಪದಿಂದ ವಲಯಾಕಾರವನ್ನು ಧರಿಸಿಕೊಂಡು ಪ್ರಕಾಶಿಸುತ್ತಿರುವ ಇಂದ್ರಧನುಸ್ಸು ಸುತ್ತಲೂ ಆ ಸಮವಸರಣ ಭೂಮಿಯನ್ನು ಸೇವಿಸುತ್ತಿದ್ದಿತೋ ಎಂಬಂತೆ, ತೋರುತ್ತಿದ್ದಿತು.

**ಕಟೀಸೂತ್ರಶ್ರಿಯಂ ತನ್ವನ್ಧೂಲೀಸಾಲ[೭]ಪರಿಚ್ಛದಃ ।**
**[೮]ಪರೀಯಾಯ ಜಿನಾಸ್ಥಾನಭೂಮಿಂ ತಾಂ ವಲಯಾಕೃತಿಃ ॥ ೮೩ ॥**

ವಲಯಾಕಾರವಾಗಿ ಸುತ್ತಿರುವ ಧೂಳೀಸಾಲವು ಡಾಬಿನ ಶೋಭೆಯನ್ನು ಧರಿಸಿ ಜಿನೇಶ್ವರನ ಆ ಸಮವಸರಣಭೂಮಿಯನ್ನು ಸುತ್ತಿಕೊಂಡಿದ್ದಿತು.

**ಕ್ವಚಿದಂಜನಪುಂಜಾಭಃ ಕ್ವಚಿಚ್ಚಾಮೀಕರಚ್ಛವಿಃ ।**
**ಕ್ವಚಿದ್ವಿದ್ರುಮಸಚ್ಛಾಯಃ [೯]ಸೋದ್ಭೃತದ್ರತ್ನಪಾಂಸುಭಿಃ ॥ ೮೪ ॥**

ಸುತ್ತಿಕೊಂಡಿರುವ ಆ ಧೂಳೀಸಾಲವು ಕೆಲವು ಕಡೆಯಲ್ಲಿ ಕಾಡಿಗೆಯ ರಾಶಿಗೆ ಸಮಾನವೂ ಕೆಲವುಕಡೆಯಲ್ಲಿ ಬಂಗಾರದ ಕಾಂತಿಯುಳ್ಳುದೂ ಕೆಲವುಕಡೆಯಲ್ಲಿ ಹವಳದ ಕಾಂತಿಯುಳ್ಳುದೂ ಆಗಿ ಪ್ರಕಾಶಿಸಿತು.

**ಕ್ವಚಿಚ್ಛುಕಚ್ಛದಚ್ಛಾಯೈರ್ಮಣಿಪಾಂಸುಭಿ[೧೦]ರುಚ್ಛಿಕೈಃ ।**
**ಸ ರೇಜೇ [೧೧]ನಲಿನೀಬಾಲಪಲಾಶೈರಿವ [೧೨]ಸಂತತಃ ॥ ೮೫ ॥**

ಚೆನ್ನಾಗಿ ವಿಸ್ತೃತವಾಗಿರುವ ಆ ಧೂಳೀಸಾಲವು, ಕೆಲವುಕಡೆಯಲ್ಲಿ ಗಿಳಿಯ ರೆಕ್ಕೆಗಳ ಕಾಂತಿಯುಳ್ಳ ಮತ್ತು ಮೇಲಕ್ಕೆದ್ದಿರುವ ಕಾಂತಿಯುಳ್ಳ ರತ್ನಧೂಳಿಗಳಿಂದ ತಾವರೆಯ ಕೋಮಲವಾದ ಪತ್ರಗಳಿಂದ ಶೋಭಿಸುವಂತೆ ಶೋಭಿಸುತ್ತಿದ್ದಿತು.

**ಚಂದ್ರಕಾಂತಶಿಲಾಚೂರ್ಣೈಃ ಕ್ವಚಿಜ್ಜ್ಯೋತ್ಸ್ನಾಶ್ರಿಯಂ ದಧತ್ ।**
**ಜನಾನಾಮಕರೋ[೧೩]ಚ್ಚಿತ್ರಮನುರಕ್ತತರಂ ಮನಃ ॥ ೮೬ ॥**

ಕೆಲವುಕಡೆಯಲ್ಲಿ ಚಂದ್ರಕಾಂತಶಿಲೆಯ ಚೂರ್ಣಗಳಿಂದ ಬೆಳದಿಂಗಳಿನ ಶೋಭೆಯನ್ನು ಧರಿಸಿರುವ ಆ ಧೂಳೀಸಾಲವು, ಜನರ ಮನಸ್ಸಿಗೆ ಆಶ್ಚರ್ಯವಾಗುವಂತೆ ಅತ್ಯಂತಾನುರಾಗವನ್ನುಂಟುಮಾಡಿತು.

೧ ಆಗಚ್ಛತ್ಸು ಸತ್ಸು. ೨ ಸ್ತ್ರೀಸಹಿತೇಷು. ೩ ಶೂನ್ಯೀಕೃತಃ. ೪ ಶಿಲ್ಪಾಚಾರ್ಯಃ. ೫ ಕರ್ಮಶೂರಃ.

೧ ಅನುವಕ್ಷ್ಯತೇ. ೨ ಸಂಗ್ರಹಃ. ೩ ಆಕರ್ಣನೇನ. ೪ ಸಮವಸರಣಸ್ಥಲಸ್ಯ. ೫ ವಲಯಃ. ೬ ವ್ಯಾಜಾತ್. ೭ ಪರಿಕರಃ. ೮ ಪರಿವೇಷ್ಟಯತಿ ಸ್ಮ. ೯ ಧೂಲೀಸಾಲಪರಿಕ್ಷೇಪಃ. ೧೦ ಉದ್ಗತಕಾಂತಿಭಿಃ. ೧೧ ಕಮಲಕೋಮಲಪತ್ರೈಃ. ೧೨ ಸಮ್ಯಗ್ವಿಸ್ತೃತಃ. ೧೩ ಆಶ್ಚರ್ಯಂ.

**ಸ್ಫುರನ್ಮರಕತಾಂ[೧]ಭೋಜರಾಗಾಲೋಕ್ಯೈಃ [೨]ಕಲಂಬಿತ್ಯೈಃ ।**
**ಕ್ವಚಿದಿಂದ್ರಧನುರ್ಲೇಖಾಂ ಖಾಂಗಣೇ [೩]ಗುಣಯನ್ನಿವ ॥ ೮೭ ॥**

ಕೆಲವುಕಡೆಯಲ್ಲಿ ಆ ಧೂಳೀಸಾಲವು ಪ್ರಕಾಶಮಾನವಾದ ಪಚ್ಚೆರತ್ನಗಳ ಮತ್ತು ಪದ್ಮರಾಗರತ್ನಗಳ ಮಿಶ್ರವಾದ ಕಾಂತಿಗಳಿಂದ ಆಕಾಶದಲ್ಲಿ ಇಂದ್ರಧನುಸ್ಸಿನ ಪಂಕ್ತಿಯನ್ನು ದ್ವಿಗುಣಮಾಡುವಂತೆ ಶೋಭಿಸುತ್ತಿದ್ದಿತು.

**ಕ್ವಚಿತ್ಪಯೋಜರಾಗೇಂದ್ರನೀಲಾ[೪]ಲೋಕ್ಯೈಃ ಪರಿಷ್ಕೃತಃ ।**
**[೫]ಪರಾಗಸಾತ್ಕೃತೈ[೬]ರ್ಭರ್ತ್ರಾ ಕಾಮಕ್ರೋಧಾಂಶಕೈರಿವ ॥ ೮೮ ॥**

**ಕ್ವಚಿತ್ಕ್ವಚಿತ್ತಜನ್ಮಾಸೌ ಲೀನೋ [೭]ಜಾಲ್ಮೋ ವಿಲೋಕ್ಯತಾಮ್ ।**
**ನಿರ್ದಾಹ್ಯೋ[೮]ಸ್ಮಾಭಿರಿತ್ಯುಚ್ಚೈರ್ಧ್ಯಾನಾರ್ಚಿಷ್ಮಾನಿವೋತ್ಥಿತಃ ॥ ೮೯ ॥**

**[೯]ವಿಭಾವ್ಯತೇ ಸ್ಮ ಯಃ ಪ್ರೋಚ್ಚೈರ್ಜ್ವಲ[೧೦]ನ್ಮಾಕ್ಯೈರಜಶ್ಚಯೈಃ ।**
**ಯಶ್ಚೋಚ್ಚಾವಚರತ್ನಾಂಶುಜಾಲೈ[೧೧]ರ್ಜಟಿಲಯನ್ನಭಃ ॥ ೯೦ ॥**

ಕೆಲವುಕಡೆಯಲ್ಲಿ ಸ್ವಾಮಿಯಿಂದ ಚೂರ್ಣಮಾಡಲ್ಪಟ್ಟ ಕಾಮಕ್ರೋಧಗಳ ಅಂಶ(ಚೂರ್ಣ)ಗಳಂತಿರುವ ತಾವರೆಗಳ ರಕ್ತಿಮೆಗಳಿಂದಲೂ ಇಂದ್ರನೀಲರತ್ನಗಳ ಕಿರಣಗಳಿಂದಲೂ ವ್ಯಾಪ್ತವೂ ಕೆಲವುಕಡೆಯಲ್ಲಿ ''ಈ ನೀಚನಾದ ಮನ್ಮಥನು ಅಡಗಿಕೊಂಡಿದ್ದಾನೆ, ನೋಡಲ್ಪಡಲಿ; ನಾವು (ಧ್ಯಾನಾಗ್ನಿಗಳು) ಅವನನ್ನು ದಹಿಸಬೇಕು'' ಎಂದು ಉನ್ನತವಾಗಿ ಎದ್ದಿರುವ ಧ್ಯಾನಾಗ್ನಿಯಂತಿರುವುದೂ ನಾನಾವಿಧರತ್ನಗಳ ಕಿರಣಸಮೂಹಗಳಿಂದ ಆಕಾಶವನ್ನು ನಿಬಿಡವನ್ನಾಗಿ ಮಾಡಿರುವುದೂ ಆದ ಆ ಧೂಳೀಸಾಲವು ಪ್ರಕಾಶಮಾನವಾದ ಸುವರ್ಣದ ಪುಡಿಗಳ ಸಮೂಹಗಳಿಂದ ಅಧಿಕವಾಗಿ ಪ್ರಕಾಶಿಸುತ್ತಿದ್ದಿತು.

**ಚತಸೃಷ್ವಪಿ ದಿಕ್ಷ್ವಸ್ಯ ಹೇಮಸ್ತಂಭಾಗ್ರಲಂಬಿತಾಃ ।**
**ತೋರಣಾ [೧೨]ಮಕರಾಸ್ಯೋಧ್ಧರತ್ನಮಾಲಾ ವಿರೇಜಿರೇ ॥ ೯೧ ॥**

ಈ ಧೂಳೀಸಾಲದ ನಾಲ್ಕು ದಿಕ್ಕುಗಳಲ್ಲೂ ಬಂಗಾರದ ಸ್ತಂಭಗಳ ಅಗ್ರಭಾಗಗಳಲ್ಲಿ ಜೋಲುತ್ತಿರುವ ತೋರಣಗಳು ಮೊಸಳೆಯ ಆಕಾರವುಳ್ಳ ಮುಖಗಳಲ್ಲಿ ರತ್ನಮಾಲಿಕೆಗಳನ್ನು ಧರಿಸಿದುವುಗಳಾಗಿ ಶೋಭಿಸುತ್ತಿದ್ದುವು.

**ತತೋಂ[೧೩]ತರಂತರಂ ಕಿಂಚಿದ್ಗತ್ವಾ ಹಾಟಕನಿರ್ಮಿತಾಃ ।**
**ರೇಜುರ್ಮಧ್ಯೇಷು ವೀಥೀನಾಂ ಮಾನಸ್ತಂಭಾಃ ಸಮುಚ್ಛ್ರಿತಾಃ ॥ ೯೨ ॥**

ಆ ಧೂಳೀಸಾಲದ ಒಳಭಾಗದಲ್ಲಿ ಸ್ವಲ್ಪದೂರ ಹೋದಮೇಲೆ ಸಮವಸರಣಕ್ಕೆ ಪ್ರವೇಶಮಾಡುವ ಮಾರ್ಗಗಳ ಮಧ್ಯಗಳಲ್ಲಿ ಬಂಗಾರದಿಂದ ನಿರ್ಮಿತವೂ ಉನ್ನತವೂ ಆದ ಮಾನಸ್ತಂಭಗಳು ಪ್ರಕಾಶಿಸುತ್ತಿದ್ದುವು.

**ಚತುರ್ಗೋಪುರಸಂಬದ್ಧಸಾಲತ್ರಿತಯವೇಷ್ಟಿತಾಮ್ ।**
**ಜಗತೀಂ [೧೪]ಜಗತೀನಾಥಸ್ನಪನಾಂಬುಪವಿತ್ರಿತಾಮ್ ॥ ೯೩ ॥**

**ಹೈಮಷೋಡಶಸೋಪಾನಾಂ ಸ್ವಮಧ್ಯಾರ್ಪಿತಪೀಠಿಕಾಮ್ ।**
**[೧೫]ನ್ಯಸ್ತಪುಷ್ಪೋಪಹಾರಾ[೧೬]ರ್ಚಾಮರ್ಚ್ಯಾಂ ನೃಸುರದಾನವೈಃ ॥ ೯೪ ॥**

**ಅಧಿಷ್ಠಿತಾ ವಿರೇಜುಸ್ತೇ ಮಾನಸ್ತಂಭಾ ನಭೋಲಿಹಃ ।**
**ಯೇ ದೂರಾದ್ವೀಕ್ಷಿತಾ ಮಾನಂ ಸ್ತಂಭಯಂತ್ಯಾಶು [೧೭]ದುರ್ದೃಶಾಮ್ ॥**

ನಾಲ್ಕು ದ್ವಾರಗಳಲ್ಲಿ ನಾಲ್ಕು ಗೋಪುರಗಳುಳ್ಳ ಮೂರು ಕೋಟೆಗಳಿಂದ ಸುತ್ತಲ್ಪಟ್ಟಿರುವುದೂ ಮಾನಸ್ತಂಭಗಳ ಬುಡದಲ್ಲಿರುವ ಜಿನಪ್ರತಿಮೆಗಳ ಅಭಿಷೇಕದ ನೀರಿನಿಂದ ಪವಿತ್ರವೂ ಬಂಗಾರದ ಹದಿನಾರು ಮೆಟ್ಟಲುಗಳುಳ್ಳುದೂ ಮಧ್ಯದಲ್ಲಿರಿಸಲ್ಪಟ್ಟ ಪೀಠವುಳ್ಳುದೂ ಸಣ್ಣ ಪುಷ್ಪಮಾಲೆಗಳಿಂದ ರಚಿಸಲ್ಪಟ್ಟ ಪೂಜೆಯುಳ್ಳುದೂ ಮನುಷ್ಯರಿಂದಲೂ ದೇವತೆಗಳಿಂದಲೂ ದಾನವರಿಂದಲೂ ಪೂಜಿಸುವುದಕ್ಕೆ ಯೋಗ್ಯವೂ ಆದ ಜಗತಿ(ಜಗುಲಿ)ಯ ಮೇಲಿರುವ ಉನ್ನತವಾದ ಆ ಮಾನಸ್ತಂಭಗಳು ಅಧಿಕವಾಗಿ ಪ್ರಕಾಶಿಸುತ್ತಿದ್ದುವು. ಆ ಮಾನಸ್ತಂಭಗಳನ್ನು ದೂರದಿಂದ ನೋಡಿದಮಾತ್ರಕ್ಕೇ ಮಿಥ್ಯಾದೃಷ್ಟಿಗಳ ಮಾನ(ಗರ್ವ)ವು ಶೀಘ್ರವಾಗಿ ನಷ್ಟವಾಗುವುದು.

೧ ಪದ್ಮರಾಗಕಾಂತಿಭಿಃ. ೨ ಮಿಶ್ರಿತೈಃ. ೩ ದ್ವಿಗುಣೀಕುರ್ವನ್. ೪ ಕಿರಣೈಃ. ೫ ಚೂರ್ಣೀಕೃತೈಃ. ೬ ಸರ್ವಜ್ಞೇನ. ೭ ನೀಚಃ. ೮ ಧ್ಯಾನಾಗ್ನಿಭಿರಿತಿ ಭಾವಃ. ೯ ಭಾತಿ ಸ್ಮ. ೧೦ ಸೌವರ್ಣೈಃ. ೧೧ ಅರುಣಜಟಾರೂಪಂ ಕುರ್ವನ್. ೧೨ ಮಕರಮುಖಧೃತಾಃ. ೧೩ ಅಭ್ಯಂತರೇ. ೧೪ ಮಾನಸ್ತಂಭಮೂಲಸ್ಥಿತತ್ರಿಜಗತ್ಪತಿಜಿನಪ್ರತಿಮಾನಾಂ. ೧೫ ರಚಿತಃ. ೧೬ ಪೂಜಾಂ. ೧೭ ಮಿಥ್ಯಾದೃಷ್ಟೀನಾಂ.

**ನಭಃಸ್ಪೃಶೋ [೧]ಮಹಾಮಾನಾ ಘಂಟಾಭಿಃ ಪರಿವಾರಿತಾಃ ।**
**ಸಚಾಮರಧ್ವಜಾ ರೇಜುಸ್ತಂಭಾಸ್ತೇ ದಿಗ್ಗಜಾಯಿತಾಃ ॥ ೯೬ ॥**

ಆಕಾಶವನ್ನು ಮುಟ್ಟುತ್ತಿರುವುವೂ ಅಧಿಕವಾದ ಪರಿಮಾಣವುಳ್ಳುವೂ ಘಂಟೆಗಳಿಂದ ಸುತ್ತಲ್ಪಟ್ಟಿರುವುವೂ ಚಾಮರಗಳಿಂದಲೂ ಧ್ವಜಗಳಿಂದಲೂ ಯುಕ್ತವೂ ಆದ ಆ ಮಾನಸ್ತಂಭಗಳು ದಿಗ್ಗಜಗಳಂತೆ ಶೋಭಿಸುತ್ತಿದ್ದುವು.

**ದಿಕ್ಚತುಷ್ಟಯಮಾಶ್ರಿತ್ಯ ರೇಜೇ ಸ್ತಂಭಚತುಷ್ಟಯಮ್ ।**
**[೨]ತ[೩]ತ್ತದ್ವ್ಯಾಜಾದಿವೋದ್ಭೂತಂ ಜಿನಾನಂತಚತುಷ್ಟಯಮ್ ॥ ೯೭ ॥**

ನಾಲ್ಕು ದಿಕ್ಕುಗಳಲ್ಲಿರುವ ನಾಲ್ಕು ಮಾನಸ್ತಂಭಗಳು ಜಿನೇಶ್ವರನ ಅನಂತಜ್ಞಾನ ಅನಂತದರ್ಶನ ಅನಂತವೀರ್ಯ ಅನಂತಸುಖಗಳೆಂಬ ಅನಂತಚತುಷ್ಟಯಗಳು ಆ ಮಾನಸ್ತಂಭಗಳ ನೆಪದಿಂದ ಮೇಲಕ್ಕೆದ್ದಿರುವಂತೆ ಶೋಭಿಸುತ್ತಿದ್ದುವು.

**ಹಿರಣ್ಮಯೀರ್ಜಿನೇಂದ್ರಾರ್ಚ್ಯಾಸ್ತೇಷಾಂ [೪]ಬುಧ್ನಪ್ರತಿಷ್ಠಿತಾಃ ।**
**ದೇವೇಂದ್ರಾಃ ಪೂಜಯಂತಿ ಸ್ಮ ಕ್ಷೀರೋದಾಂಭೋಭಿಷೇಚನೈಃ ॥ ೯೮ ॥**

ಆ ಮಾನಸ್ತಂಭಗಳ ಬುಡದಲ್ಲಿ ಪ್ರತಿಷ್ಠಿತವೂ ಬಂಗಾರಮಯವೂ ಆದ ಜಿನಬಿಂಬಗಳನ್ನು ದೇವೇಂದ್ರರು ಕ್ಷೀರಸಮುದ್ರದ ಜಲಾಭಿಷೇಕಗಳಿಂದ ಪೂಜಿಸಿದರು.

**ನಿತ್ಯಾತೋದ್ಯಮಹಾವಾದ್ಯೈರ್ನಿತ್ಯಸಂಗೀತಮಂಗಲೈಃ ।**
**ನೃತ್ತೈರ್ನಿತ್ಯಪ್ರವೃತ್ತೈಶ್ಚ ಮಾನಸ್ತಂಭಾಃ ಸ್ಮ ಭಾಂತ್ಯಮೀ ॥ ೯೯ ॥**

ಈ ಮಾನಸ್ತಂಭಗಳು ಪ್ರತಿನಿತ್ಯದಲ್ಲೂ ಉಂಟಾಗುವ ಮಹಾವಾದ್ಯಶಬ್ದಗಳಿಂದಲೂ ಮಂಗಲಕರವಾದ ಸಂಗೀತಗಳಿಂದಲೂ ನರ್ತನಗಳಿಂದಲೂ ಪ್ರಕಾಶಿಸುತ್ತಿದ್ದುವು.

**ಪೀಠಿಕಾ ಜಗತೀಮಧ್ಯೇ ತನ್ಮಧ್ಯೇ ಚ ತ್ರಿಮೇಖಲಮ್ ।**
**ಪೀಠಂ ತನ್ಮೂರ್ಧ್ನಿ [೫]ಸದ್ಬುಧ್ನಾ ಮಾನಸ್ತಂಭಾಃ ಪ್ರತಿಷ್ಠಿತಾಃ ॥ ೧೦೦ ॥**

ಹಿಂದೆಹೇಳಿದ ಜಗತಿಯ ಮಧ್ಯದಲ್ಲೊಂದು ದೊಡ್ಡ ಪೀಠವೂ ಅದರ ಮಧ್ಯದಲ್ಲೊಂದು ತ್ರಿಮೇಖಲ(ಮೂರು ಅಂತಸ್ತಿನ)ಪೀಠವೂ ಅದರಮೇಲೆ ಶ್ರೇಷ್ಠವಾದ ಬುಡ(ಮೂಲ)ಗಳುಳ್ಳ ಆ ಮಾನಸ್ತಂಭಗಳೂ ಪ್ರತಿಷ್ಠೆ ಮಾಡಲ್ಪಟ್ಟಿದ್ದುವು.

**ಹಿರಣ್ಮಯಾಂಗಾಃ ಪ್ರೋತ್ತುಂಗಾ ಮೂರ್ಧ್ನಿ ಚ್ಛತ್ರತ್ರಯಾಂಕಿತಾಃ ।**
**ಸುರೇಂದ್ರನಿರ್ಮಿತತ್ವಾಚ್ಚ ಪ್ರಾಪ್ತೇಂದ್ರಧ್ವಜರೂಢಿಕಾಃ ॥ ೧೦೧ ॥**

ಸುವರ್ಣಮಯವೂ ಉನ್ನತವೂ ಶಿಖರದಲ್ಲಿ ಛತ್ರತ್ರಯಗಳುಳ್ಳುವೂ ಆದ ಆ ಮಾನಸ್ತಂಭಗಳು ದೇವೇಂದ್ರನಿಂದ ನಿರ್ಮಿತವಾಗಿರುವುದರಿಂದ ''ಇಂದ್ರಧ್ವಜ''ವೆಂಬ ರೂಢಿಯನ್ನು ಹೊಂದಿವೆ.

**ಮಾನಸ್ತಂಭಾ[೬]ನ್ಮಹಾಮಾನಯೋಗಾತ್ತ್ರೈಲೋಕ್ಯ[೭]ಮಾನನಾತ್ ।**
**ಅನ್ವರ್ಥಸಂಜ್ಞಯಾ ತಜ್ಞೈರ್ಮಾನಸ್ತಂಭಾಃ ಪ್ರಕೀರ್ತಿತಾಃ ॥ ೧೦೨ ॥**

೧ ಮಹಾಪ್ರಮಾಣಾಃ. ೨ ಮಾನಸ್ತಂಭಚತುಷ್ಟಯಂ. ೩ ಮಾನಸ್ತಂಭವ್ಯಾಜಾತ್. ೪ ಮೂಲೇ. ೫ ಸನ್ಮೂಲಾಃ. ೬ ಮಹಾಪ್ರಮಾಣಯೋಗಾತ್. ೭ ಪೂಜನಾತ್.

ಮಾನವನ್ನು ಸ್ತಂಭನ ಮಾಡುವುದರಿಂದಲೂ ಮಹಾಪರಿಮಾಣಯುಕ್ತವಾದ್ದರಿಂದಲೂ ಮೂರುಲೋಕಕ್ಕೂ ಮಾನ್ಯ(ಪೂಜ್ಯ)ವಾಗಿರುವುದರಿಂದಲೂ ತತ್ತ್ವಜ್ಞಾನಿಗಳು ಸಾರ್ಥಕವಾದ ಹೆಸರಿನಿಂದ ''ಮಾನಸ್ತಂಭ'' ಗಳೆಂದು ಹೇಳುತ್ತಾರೆ.

**ಸ್ತಂಭಪರ್ಯಂತಭೂಭಾಗಮಲಂಚಕ್ರುಃ ಸಹೋತ್ಪಲಾಃ ।**
**ಪ್ರಸನ್ನಸಲಿಲಾ ವಾಪ್ಯೋ ಭವ್ಯಾನಾಮಿವ [1]ಶುದ್ಧಯಃ ॥ ೧೦೩ ॥**

ನಿರ್ಮಲವಾದ ಜಲವೂ ನೈದಿಲೆಗಳೂ ಉಳ್ಳ ಮತ್ತು ಭವ್ಯ ಪ್ರಾಣಿಗಳ ವಿಶುದ್ಧಪರಿಣಾಮಗಳಂತಿರುವ ಬಾವಿಗಳು ಆ ಮಾನಸ್ತಂಭಗಳ ಸಮೀಪ ಭೂಪ್ರದೇಶವನ್ನಲಂಕರಿಸಿದ್ದುವು.

**ವಾಪ್ಯಸ್ತಾ ರೇಜಿರೇ ಫುಲ್ಲಕಮಲೋತ್ಪಲಸಂಪದಃ ।**
**ಭಕ್ತ್ಯಾ ಜೈನೀಂ ಶ್ರಿಯಂ ದ್ರಷ್ಟುಂ ಭುವೇವೋ[2]ದ್ಘಾಟಿತಾ ದೃಶಃ ॥**

ಅರಳಿದ ಕಮಲಗಳಿಂದಲೂ ನೈದಿಲೆಗಳಿಂದಲೂ ಶೋಭಿಸುತ್ತಿರುವ ಆ ಬಾವಿಗಳು, ಭಕ್ತಿಯಿಂದ ಜಿನೇಶ್ವರಸಂಬಂಧವಾದ ವೈಭವವನ್ನು ನೋಡುವುದಕ್ಕೋಸ್ಕರ ಕಣ್ಣುಗಳನ್ನು ತೆರೆದಿರುವ ಭೂಮಿಗಳಂತೆ, ಪ್ರಕಾಶಿಸುತ್ತಿದ್ದುವು.

**ನಿಲೀನಾಲಿಕುಲೈರೇಜುರುತ್ಪಲೈ[3]ಸ್ತಾ ವಿಕಸ್ವರೈಃ ।**
**[4]ಮಹೋತ್ಪಲೈಶ್ಚ ಸಂಛನ್ನಾಃ [5]ಸಾಂಜನ್ಯೈರಿವ ಲೋಚನೈಃ ॥ ೧೦೫ ॥**

ಅವಿತುಕೊಂಡಿರುವ ಭ್ರಮರಗಳ ಸಮೂಹವುಳ್ಳ ಅರಳಿದ ನೈದಿಲೆಗಳಿಂದಲೂ ಬಿಳಿದಾವರೆಗಳಿಂದಲೂ ವ್ಯಾಪ್ತವಾದ ಆ ಬಾವಿಗಳು, ಅಂಜನ(ಕಾಡಿಗೆ)ಸಹಿತವಾದ ಕಣ್ಣುಗಳಿಂದ ಪ್ರಕಾಶಿಸುವಂತೆ ಪ್ರಕಾಶಿಸುತ್ತಿದ್ದುವು.

**[6]ದಿಶಂ ಪ್ರತಿ ಚತಸ್ರಸ್ತಾಃ [7]ಸ್ರಸ್ತಾಃ ಕಾಂಚೀರಿವಾಕುಲಾಃ ।**
**ದಧತಿ ಸ್ಮ ಶಕುಂತಾನಾಂ ಸಂತತೀಃ ಸ್ವತಟಾಶ್ರಿತಾಃ ॥ ೧೦೬ ॥**

ಮಾನಸ್ತಂಭದ ಪ್ರತಿದಿಕ್ಕಿನಲ್ಲೂ ಇರುವ ಆ ನಾಲ್ಕು ಬಾವಿಗಳು. ಶಿಥಿಲವಾದ ಡಾಬುಗಳನ್ನು ಧರಿಸಿರುವಂತೆ, ದಡವನ್ನು ಹೊಂದಿರುವ ಪಕ್ಷಿಗಳ ಆಕುಲವಾದ ಸಮೂಹ (ಸಾಲು) ಗಳನ್ನು ಧರಿಸಿದ್ದುವು.

**ಬಭುಸ್ತಾ ಮಣಿಸೋಪಾನಾಃ ಸ್ಫಟಿಕೋಚ್ಚತಟೀಭುವಃ ।**
**[8]ಭುವಃ ಪ್ರಸೃತಲಾವಣ್ಯರಸಾಃ [9]ಕುಲ್ಯಾ ಇವ [10]ಶ್ರುತಾಃ ॥ ೧೦೭ ॥**

ರತ್ನಮಯವಾದ ಸೋಪಾನ(ಮೆಟ್ಟಲು)ಗಳುಳ್ಳುದೂ ಸ್ಫಟಿಕನಿರ್ಮಿತವೂ ಉನ್ನತವೂ ಆದ ದಡಗಳುಳ್ಳುದೂ ಪ್ರಸಿದ್ಧವೂ ಆದ ಆ ಬಾವಿಗಳು ಭೂಮಿಯಿಂದ ಹರಿಯುತ್ತಿರುವ ಲಾವಣ್ಯರಸವುಳ್ಳ ಸಣ್ಣಕೃತ್ರಿಮನದಿಗಳಂತೆ, ಶೋಭಿಸುತ್ತಿದ್ದುವು.

**ದ್ವಿರೇಫಗುಂಜನೈರ್ಮಂಜುಗಾಯಂತ್ಯೋ [11]ವಾರ್ಹತೋ ಗುಣಾನ್ ।**
**ನೃತ್ಯಂತ್ಯ ಇವ ಜೈನೇಶಜಯತೋಷಾನ್ಮಹೋರ್ಮಿಭಿಃ ॥ ೧೦೮ ॥**

**ಕುರ್ವಂತ್ಯೋ ವಾ ಜಿನಸ್ತೋತ್ರಂ ಚಕ್ರವಾಕವಿಕೂಜಿತೈಃ ।**
**ಸಂತೋಷಂ ದರ್ಶಯಂತ್ಯೋ ವಾ ಪ್ರಸನ್ನೋದಕಧಾರಣಾತ್ ॥ ೧೦೯ ॥**

**[12]ನಂದೋತ್ತರಾದಿನಾಮಾನಃ ಸರಸ್ಯಸ್ತಾಸ್ತಟಾಶ್ರಿತೈಃ ।**
**ಪಾದಪ್ರಕ್ಷಾಲನಾಕುಂಡೈರ್ಬಭುಃ [13]ಸಪ್ರಸವಾ ಇವ ॥ ೧೧೦ ॥**

ಭ್ರಮರಗಳ ಶಬ್ದಗಳಿಂದ ಅರ್ಹಂತರ ಗುಣಗಳನ್ನು ಮನೋಹರವಾಗಿ ಗಾನ ಮಾಡುವಂತೆಯೂ, ದೊಡ್ಡ ಅಲೆಗಳಿಂದ ಜಿನೇಶ್ವರನು ಕರ್ಮಗಳನ್ನು ಜಯಿಸಿದ ಸಂತೋಷದಿಂದ ನರ್ತನಮಾಡುವಂತೆಯೂ, ಚಕ್ರವಾಕಪಕ್ಷಿಗಳ ಶಬ್ದಗಳಿಂದ ಜಿನೇಶ್ವರನ ಸ್ತೋತ್ರವನ್ನು ಮಾಡುವಂತೆಯೂ ನಿರ್ಮಲವಾದ ಜಲವನ್ನು ಧರಿಸಿರುವುದರಿಂದ ಸಂತೋಷವನ್ನು ತೋರಿಸುವಂತೆಯೂ ಇರುವ ನಂದೋತ್ತರಾ ಮೊದಲಾದ ಹೆಸರುಳ್ಳ(ಪೂರ್ವದಿಕ್ಕಿನ ಮಾನಸ್ತಂಭದ ನಂದಾ ನಂದೋತ್ತರಾ ನಂದವತೀ ನಂದಘೋಷಾ, ದಕ್ಷಿಣದಿಕ್ಕಿನ ಮಾನಸ್ತಂಭದ ವಿಜಯಾ ವೈಜಯಂತೀ ಜಯಂತೀ ಅಪರಾಜಿತಾ, ಪಶ್ಚಿಮದಿಕ್ಕಿನ ಮಾನಸ್ತಂಭದ ಅಶೋಕಾ ಸುಪ್ರತಿಷ್ಠಾ ಕುಮುದಾ ಪುಂಡರೀಕಾ, ಉತ್ತರದಿಕ್ಕಿನ ಮಾನಸ್ತಂಭದ ಹೃದಯಾನಂದಾ ಮಹಾನಂದಾ ಸುಪ್ರಬುದ್ಧಾ ಪ್ರಭಂಕರೀ) ಆ ಸರೋವರಗಳು ಕಾಲುಗಳನ್ನು ತೊಳೆದುಕೊಳ್ಳುವ ಮತ್ತು ದಡದಲ್ಲಿರುವ ಕುಂಡ(ತೊಟ್ಟಿ)ಗಳಿಂದ ಮಕ್ಕಳೊಡನೆ ಕೂಡಿರುವಂತೆ ಶೋಭಿಸುತ್ತಿದ್ದುವು.

**ಸ್ತೋಕಾಂತರಂ ತತೋತೀತ್ಯ ತಾಂ ಮಹೀಮಂಬುಜೈಶ್ಚಿತಾ ।**
**ಪರಿವವ್ರೇಂತರಾವೀಥೀಂ ವೀಥೀಂ ಚ ಜಲಖಾತಿಕಾ ॥ ೧೧೧ ॥**

ಆ ಮಾನಸ್ತಂಭ ಪ್ರದೇಶವನ್ನು ದಾಟಿ ಸ್ವಲ್ಪದೂರದಲ್ಲಿ ಕಮಲಗಳಿಂದ ವ್ಯಾಪ್ತವಾದ ನೀರಿನ ಕಂದಕವು ಮಧ್ಯದಲ್ಲಿರುವ ಪ್ರತಿಯೊಂದು ಬೀದಿಯನ್ನೂ ಸುತ್ತಿಕೊಂಡಿದ್ದಿತು. ನಾಲ್ಕು ದಿಕ್ಕುಗಳಲ್ಲಿರುವ ನಾಲ್ಕು ಬೀದಿಗಳನ್ನೂ ಆವರಿಸಿಕೊಂಡಿದ್ದಿತೆಂದು ಭಾವವು.

**ಸ್ವಚ್ಛಾಂಬುಸಂಭೃತಾ ರೇಜೇ ಸಾ [1]ಖಾತಾ [2]ಪಾವನೀ ನೃಣಾಮ್ ।**
**ಸುರಾಪಗೇವ [3]ತದ್ರೂಪಾ ವಿಭುಂ ಸೇವಿತುಮಾಶ್ರಿತಾ ॥ ೧೧೨ ॥**

ನಿರ್ಮಲವಾದ ನೀರಿನಿಂದ ತುಂಬಿರುವುದೂ ಜನರನ್ನು ಪವಿತ್ರಮಾಡುವುದೂ ಆದ ಆ ಕಂದಕವು ಸ್ವಾಮಿಯನ್ನು ಸೇವಿಸುವುದಕ್ಕೋಸ್ಕರ ಆ ಕಂದಕದ ರೂಪವನ್ನಾಶ್ರಯಿಸಿರುವ ಗಂಗಾನದಿಯಂತೆ ಶೋಭಿಸುತ್ತಿದ್ದಿತು.

**ಸಂಕ್ರಾಂತಾಶೇಷತಾ[4]ರರ್ಕ್ಷಪ್ರತಿಬಿಂಬಾಂಬರಶ್ರಿಯಮ್ ।**
**ಯಾಧಾತ್ ಸ್ಫಟಿಕ[5]ಸಂದ್ರಾವಶುಚಿಭಿಃ ಸಲಿಲೈರ್ಭೃತಾ ॥ ೧೧೩ ॥**

ಸ್ಫಟಿಕದ ರಸದಂತೆ ನಿರ್ಮಲವಾದ ಜಲಗಳಿಂದ ಭರಿತವಾದ ಆ ಕಂದಕವು ಸಮಸ್ತ ತಾರೆಗಳೂ ನಕ್ಷತ್ರಗಳೂ ಪ್ರತಿಬಿಂಬಿಸಿರುವ ಆಕಾಶದ ಶೋಭೆಯನ್ನು ಧರಿಸಿದ್ದಿತು. ಆಕಾಶದಂತೆ ಕಾಣುತ್ತಿದ್ದಿತೆಂದರ್ಥವು.

**ಸಾಸ್ಮ ರತ್ನತಟೈರ್ಧತ್ತೇ ಪಕ್ಷಿಮಾಲಾಂ ಕಲಸ್ವನಾಮ್ ।**
**ತರಂಗಕರಸಂಧಾರ್ಯಾಂ ರಸನಾಮಿವ ಸದ್ರುಚಿಮ್ ॥ ೧೧೪ ॥**

ಆ ಕಂದಕವು ತೆರೆಮಾಲೆಗಳೆಂಬ ಕೈಗಳಿಂದ ಹಿಡಿದಿರುವ ಪ್ರಕಾಶಮಾನವಾದ ಡಾಬನ್ನು ಧರಿಸಿರುವಂತೆ ರತ್ನಮಯವಾದ ದಡಗಳಿಂದ ಮನೋಹರವಾದ ಶಬ್ದವುಳ್ಳ ಪಕ್ಷಿಗಳ ಸಾಲನ್ನು ಧರಿಸಿದ್ದಿತು. ಕಂದಕದ ಸುತ್ತಲಿದ್ದ ಪಕ್ಷಿಗಳ ಪಂಕ್ತಿಯು ಡಾಬಿನಂತೆ ಶೋಭಿಸುತ್ತಿದ್ದಿತೆಂದಭಿಪ್ರಾಯವು.

**ಯಾದೋದೋರ್ಘಟ್ಟನೋದ್ಭೂತೈಸ್ತರಂಗೈಃ ಪವನಾಹತೈಃ ।**
**ಪ್ರನೃತ್ಯಂತೀವ ಸಾ ರೇಜೇ ತೋಷಾಜ್ಜಿನಜಯೋತ್ಸವೇ ॥ ೧೧೫ ॥**

ಜಲಜಂತುಗಳ ಭುಜಾಘಾತದಿಂದುಂಟಾದ ಮತ್ತು ಗಾಳಿಯಿಂದ ಹೊಡೆಯಲ್ಪಟ್ಟ ತೆರೆಮಾಲೆಗಳಿಂದ ಆ ಕಂದಕವು ಜಿನೇಶ್ವರನ ಜಯೋತ್ಸವದಲ್ಲಿ ಸಂತೋಷದಿಂದ ನರ್ತನಮಾಡುವಂತೆ, ಪ್ರಕಾಶಿಸುತ್ತಿದ್ದಿತು.

**[6]ವೀಚ್ಯಂತರ್ವಲಿತೋದ್ವೃತ್ತಶಫರೀಕುಲಸಂಕುಲಾ।**
**ಸಾ ಪ್ರಾಯೋಭ್ಯಸ್ಯಮಾನೇವ ನಾಕಸ್ತ್ರೀನೇತ್ರವಿಭ್ರಮಾನ್ ॥ ೧೧೬ ॥**

---

೧ ವಿಶುದ್ಧಪರಿಣಾಮಾಃ. ೨ ಉನ್ಮೀಲಿತಾಃ. ೩ ವಾಪ್ಯಃ. ೪ ಸಿತಾಂಭೋಜೈಃ. ೫ ಸಕಜ್ಜಲೈಃ. ೬ ಸಮವಸರಣಸ್ಯ ದಿಶಂ ಪ್ರತಿ, ಏಕೈಕಮಾನಸ್ತಂಭಸ್ಯ ಚತಸ್ರಶ್ಚತಸ್ರೋ ವಾಪ್ಯ ಇತ್ಯರ್ಥಃ. ೭ ಶ್ಲಥಾಃ. ೮ ಭೂತಲಾತ್. ೯ ಕೃತ್ರಿಮಸರಿತಃ. ೧೦ ಪ್ರಸಿದ್ಧಾಃ, ಶ್ರಿತಾ ಇತ್ಯಪಿ ಪಾಠಃ. ೧೧ ಇವ. ೧೨ ಯಥಾಕ್ರಮಂ ಪೂರ್ವಾದಿದಿಗ್ವರ್ತಿಮಾನಸ್ತಂಭಾನಾಂ ಚತಸ್ರೋ ವಾಪ್ಯ ಇಮಾಃ — ನಂದಾ ನಂದೋತ್ತರಾ ನಂದವತೀ ನಂದಘೋಷಾ ವಿಜಯಾ ವೈಜಯಂತೀ ಜಯಂತೀ ಅಪರಾಜಿತಾ ಅಶೋಕಾ ಸುಪ್ರತಿಷ್ಠಾ ಕುಮುದಾ ಪುಂಡರೀಕಾ ಹೃದಯಾ ನಂದಾ ಮಹಾನಂದಾ ಸುಪ್ರಬುದ್ಧಾ ಪ್ರಭಂಕರೀ. ೧೩ ಸಪುತ್ರಾಃ.

೧ ಖಾತಿಕಾ. ೨ ಪವಿತ್ರೀಕುರ್ವತೀ. ೩ ಖಾತಿಕಾರೂಪಾ. ೪ ನಕ್ಷತ್ರಂ. ೫ ದ್ರವಃ. ೬ ವೀಚೀಮಧ್ಯೇ.

ಅಲೆಗಳ ಮಧ್ಯದಲ್ಲಿ ಹೊರಳಾಡಿ ನುಲಿಚಿಕೊಳ್ಳುತ್ತಿರುವ ಮೀನುಗಳ ಸಮೂಹದಿಂದ ವ್ಯಾಪ್ತವಾದ ಆ ಕಂದಕವು, ಸ್ವರ್ಗದ ಸ್ತ್ರೀಯರ ಕಣ್ಣುಗಳ ವಿಲಾಸಗಳನ್ನು ಅಭ್ಯಾಸಮಾಡುತ್ತಿದ್ದಿತೋ ಎಂಬಂತೆ, ಕಾಣುತ್ತಿದ್ದಿತು.

**ನೂನಂ ಸುರಾಂಗನಾನೇತ್ರವಿಲಾಸೈಸ್ತಾಃ ಪರಾಜಿತಾಃ ।**
**[೧]ಶಫರ್ಯೋ ವೀಚಿಮಾಲಾಸು ಹ್ರಿಯೇವಾ[೨]ಂತರ್ದಧುರ್ಮುಹುಃ ॥**

ಆ ಹೆಣ್ಣುಮೀನುಗಳು ದೇವಸ್ತ್ರೀಯರ ಕಣ್ಣುಗಳ ವಿಲಾಸಗಳಿಂದ ಅಪಜಯವನ್ನು ಹೊಂದಿ ನಾಚಿಕೆಯಿಂದಲೋ ಎಂಬಂತೆ ಬಾರಿಬಾರಿಗೂ ತೆರೆಮಾಲೆಗಳಲ್ಲಿ ಮರೆಯಾಗುತ್ತಿದ್ದುವು.

**[೩]ತದಭ್ಯಂತರಭೂಭಾಗಂ [೪]ಪರ್ಯಷ್ಕೃತ ಲತಾವನಮ್ ।**
**ವಲ್ಲೀಗುಲ್ಮದ್ರುಮೋದ್ಭೂತಸರ್ವರ್ತುಕುಸುಮಾಂಚಿತಮ್ ॥ ೧೧೮ ॥**

ಬಳ್ಳಿ ಪೊದರು ವೃಕ್ಷ ಇವುಗಳಿಂದುಂಟಾದ ಸಮಸ್ತ ಋತುಸಂಬಂಧವಾದ ಪುಷ್ಪಗಳಿಂದ ಯುಕ್ತವಾಗಿರುವ ಲತಾವನವು ಆ ಕಂದಕದ ಮಧ್ಯಪ್ರದೇಶವನ್ನಲಂಕರಿಸಿದ್ದಿತು.

**ಪುಷ್ಪವಲ್ಲ್ಯೋ ವಿರಾಜಂತೇ ಯತ್ರ ಪುಷ್ಪಸ್ಮಿತೋಜ್ಜ್ವಲಾಃ ।**
**ಸ್ಮಿತಲೀಲಾಂ ದ್ಯುನಾರೀಣಾಂ [೫]ನಾಟಯಂತ್ಯ ಇವ ಸ್ಫುಟಮ್ ॥ ೧೧೯ ॥**

ಆ ಲತಾವನದಲ್ಲಿ ಪುಷ್ಪಗಳೆಂಬ ಮಂದಹಾಸದಿಂದ ಪ್ರಕಾಶಿಸುತ್ತಿರುವ ಪುಷ್ಪಲತೆಗಳು, ಸ್ವರ್ಗಸ್ತ್ರೀಯರ ಮಂದಹಾಸದ ಲೀಲೆಯನ್ನು ವ್ಯಕ್ತವಾಗಿ ಅಭಿನಯಿಸುತ್ತಿವೆಯೋ ಎಂಬಂತೆ, ಶೋಭಿಸುತ್ತಿದ್ದುವು.

**ಭ್ರಮರೈರ್ಮಂಜುಗುಂಜದ್ಭಿ[೬]ರಾವೃತಾಂತಾ ವಿರೇಜಿರೇ ।**
**ಯತ್ರಾನೀಲಪಟಚ್ಛನ್ನವಿಗ್ರಹಾ ಇವ [೭]ವೀರುಧಃ ॥ ೧೨೦ ॥**

ಆ ಲತಾವನದಲ್ಲಿ ಮನೋಹರವಾಗಿ ಶಬ್ದಮಾಡುತ್ತಿರುವ ಭ್ರಮರಗಳಿಂದ ಸುತ್ತಲೂ ವ್ಯಾಪ್ತವಾದ ಪುಷ್ಪಲತೆಗಳು, ಸಂಪೂರ್ಣವಾಗಿ ಕಪ್ಪಾದ ವಸ್ತ್ರಗಳನ್ನು ಹೊದ್ದಿರುವಂತೆ, ಪ್ರಕಾಶಿಸುತ್ತಿದ್ದುವು.

**ಅಶೋಕಲತಿಕಾ ಯತ್ರ ದಧುರಾತಾಮ್ರಪಲ್ಲವಾನ್ ।**
**ಸ್ಪರ್ಧಮಾನಾ ಇವಾತಾಮ್ರೈರಪ್ಸರಃಕರಪಲ್ಲವೈಃ ॥ ೧೨೧ ॥**

ಆ ಲತಾವನದಲ್ಲಿ ಅಶೋಕಲತೆಗಳು ಅಪ್ಸರಸ್ತ್ರೀಯರ ಕೆಂಪಾದ ತಳಿರಿನಂತಿರುವ ಕೈಗಳೊಡನೆ ಹೋರಾಡುತ್ತವೆಯೋ ಎಂಬಂತೆ ಸ್ವಲ್ಪ ಕೆಂಪಾದ ತಳಿರುಗಳನ್ನು ಧರಿಸಿದ್ದುವು.

**ಯತ್ರ ಮಂದಾನಿಲೋದ್ಧೂತ[೮]ಕಿಂಜಲ್ಕಾಸ್ತರಮಂಬರಮ್ ।**
**ಧತ್ತೇ ಸ್ಮ ಪಟವಾಸಾ[೯]ಭಾಂ ಪಿಂಜರೀಕೃತದಿಙ್ಮುಖಾಮ್ ॥ ೧೨೨ ॥**

ಆ ಲತಾವನದಲ್ಲಿ ಮಂದಮಾರುತದಿಂದ ಕೊಡಹಲ್ಪಟ್ಟ ಕೇಸರ (ಕುಸುಮ) ಗಳಿಂದ ವ್ಯಾಪ್ತವಾದ ಆಕಾಶವು ದಿಕ್ಕುಗಳನ್ನು ಹೊಂಬಣ್ಣವಾಗಿ ಮಾಡಿರುವ ಸುಗಂಧಚೂರ್ಣದ ಶೋಭೆಯನ್ನು ಧರಿಸಿದ್ದಿತು.

**ಪ್ರತಿಪ್ರಸವಮಾಸೀನಮಂಜುಗುಂಜನ್ಮಧುವ್ರತಮ್ ।**
**ವಿಡಂಬಯದಿವಾಭಾತಿ [೧೦]ಯತ್ಸಹಸ್ರಾಕ್ಷವಿಭ್ರಮಮ್ ॥ ೧೨೩ ॥**

ಪ್ರತಿಯೊಂದು ಪುಷ್ಪದಲ್ಲಿಯೂ ಕುಳಿತು ಮನೋಹರವಾಗಿ ಗಾನಮಾಡುವ ಭ್ರಮರಗಳುಳ್ಳ ಆ ಲತಾವನವು ದೇವೇಂದ್ರನ ವಿಲಾಸವನ್ನು ನಟಿಸುವಂತೆ ಪ್ರಕಾಶಿಸುತ್ತಿದ್ದಿತು. ಭ್ರಮರಗಳನ್ನು ನೋಡಿದರೆ ದೇವೇಂದ್ರನ ಸಾವಿರಕಣ್ಣುಗಳಂತೆ ಕಾಣಿಸುತ್ತಿದ್ದುವೆಂದು ಭಾವವು.

೧ ಮತ್ಸ್ಯಸ್ತ್ರಿಯಃ. ೨ ತಿರೋಭೂತಾಃ. ೩ ಖಾತಿಕಾಭ್ಯಂತರಭೂಭಾಗಂ. ೪ ಅಲಂಕರೋತಿ ಸ್ಮ. ೫ ಅಭಿನಯಂತ್ಯಃ. ೬ ಆವೃತಪರ್ಯಂತಾಃ. ೭ ಲತಾಃ. ೮ ಕೇಸರವ್ಯಾಪ್ತಂ. ೯ ಶೋಭಾಂ. ೧೦ ಲತಾವನಂ.

**ಸುಮನೋಮಂಜರೀಪುಂಜಾತ್ಕಿಂಜಲ್ಕಂ ಸಾಂದ್ರಮಾಹರನ್ ।**
**ಯತ್ರ ಗಂಧವಹೋ ಮಂದಂ ವಾತಿ ಸ್ಮಾಂದೋಲಯಂಲ್ಲತಾಃ ॥ ೧೨೪ ॥**

ಆ ಲತಾವನದಲ್ಲಿ ಪುಷ್ಪಗಳ ಗೊಂಚಲುಗಳ ಸಮೂಹದಿಂದ ದಟ್ಟವಾದ ಪುಷ್ಪಧೂಳಿಯನ್ನು ತೆಗೆದುಕೊಳ್ಳುವ ಗಾಳಿಯು ಲತೆಗಳನ್ನು ಅಲ್ಲಾಡಿಸುತ್ತ ಮಂದವಾಗಿ ಬೀಸುತ್ತಿದ್ದಿತು.

**ಯತ್ರ ಕ್ರೀಡಾದ್ರಯೋ ರಮ್ಯಾಃ ಸಶಯ್ಯಾಶ್ಚ ಲತಾಲಯಾಃ ।**
**ಧೃತಯೇ ಸ್ಮ ಸುರಸ್ತ್ರೀಣಾಂ ಕಲ್ಪಂತೇ ಶಿಶಿರಾನಿಲಾಃ ॥ ೧೨೫ ॥**

ಆ ಲತಾವನದಲ್ಲಿ ತಂಗಾಳಿಯುಳ್ಳುದೂ ಹಾಸಿಗೆಯೊಡಗೂಡಿದ ಲತಾಮಂಟಪಗಳುಳ್ಳುದೂ ರಮಣೀಯವೂ ಆದ ಕ್ರೀಡಾಪರ್ವತಗಳು ದೇವಸ್ತ್ರೀಯರಿಗೆ ಸಂತೋಷವನ್ನುಂಟುಮಾಡುವುದಕ್ಕೆ ಸಮರ್ಥವಾಗಿದ್ದುವು. ಕ್ರೀಡಾಪರ್ವತಗಳು ದೇವಸ್ತ್ರೀಯರಿಗೆ ಸಂತೋಷಕರವಾಗಿದ್ದುವೆಂದು ಭಾವವು.

**ವಲ್ಲೀಃ ಕುಸುಮಿತಾ ಯತ್ರ ಸ್ಪೃಶಂತಿ ಸ್ಮ ಮಧುವ್ರತಾಃ ।**
**[೧]ರಜಸ್ವಲಾ ಅಪಿ ಪ್ರಾಯಃ ಕ್ವ ಶೌಚಂ [೨]ಮಧುಪಾಯಿನಾಮ್॥ ೧೨೬ ॥**

ಆ ಲತಾವನದಲ್ಲಿ ಪುಷ್ಪಿತವಾದ ಮತ್ತು ಕುಸುಮಧೂಳಿಗಳುಳ್ಳ ಲತೆಗಳನ್ನು ಭ್ರಮರಗಳು ಸ್ಪರ್ಶಮಾಡುತ್ತಿದ್ದುವು. ಪ್ರಾಯಶಃ ಪುಷ್ಪರಸವನ್ನು ಪಾನಮಾಡುವವರಿಗೆ ಶುದ್ಧತೆಯು ಎಲ್ಲಿಬಂತು ? ರಜಸ್ವಲೆಯಾಗಿದ್ದರೂ ಸ್ಪರ್ಶಮಾಡುವವರಿಗೆ ಮದ್ಯಪಾನಮಾಡುವವರಿಗೆ ಪರಿಶುದ್ಧತೆಯು ಎಲ್ಲಿ ಬಂತು ? ಎಂಬ ಅರ್ಥವೂ ತೋರುವುದು.

**ಲತಾಭವನಮಧ್ಯಸ್ಥಾ [೩]ಹಿಮಾನೀಸ್ಪರ್ಶಶೀತಲಾಃ ।**
**ಚಂದ್ರಕಾಂತಶಿಲಾ ಯತ್ರ [೪]ವಿಶ್ರಾಮಾಯಾಮರೇಶಿನಾಮ್ ॥ ೧೨೭ ॥**

ಆ ವನದಲ್ಲಿ ಹಿಮಗಳ ಸಮೂಹದಂತೆ ಶೀತವಾದ ಸ್ಪರ್ಶವುಳ್ಳ ಚಂದ್ರಕಾಂತಶಿಲೆಗಳು ದೇವತೆಗಳ ವಿಶ್ರಾಂತಿಗೋಸ್ಕರ ಲತಾಮಂಟಪಗಳ ಮಧ್ಯದಲ್ಲಿ ಮಾಡಲ್ಪಟ್ಟಿದ್ದುವು.

**ತತೋಧ್ವಾನಮತೀತ್ಯಾಂತಃ ಕಿಯಂತಮಪಿ [೫]ತಾಂ ಮಹೀಮ್ ।**
**ಪ್ರಾಕಾರಃ ಪ್ರಥಮೋ ವಪ್ರೇ ನಿಷಧಾಭೋ ಹಿರಣ್ಮಯಃ ॥ ೧೨೮ ॥**

ಆ ಲತಾವನದಿಂದ ಒಳಕ್ಕೆ ದೂರಹೋದಮೇಲೆ ನಿಷಧಪರ್ವತಕ್ಕೆ ಸಮಾನವೂ ಸುವರ್ಣಮಯವೂ ಆದ ಮೊದಲನೆಯ ಕೋಟೆಯು ಆ ಭೂಮಿಯನ್ನು ಆವರಿಸಿದ್ದಿತು.

**ರುರುಚೇಸೌ ಮಹಾನ್ಸಾಲಃ ಕ್ಷಿತಿಂ ತಾಂ ಪರಿತಃ ಸ್ಥಿತಃ ।**
**ಯಥಾಸೌ [೬]ಚಕ್ರವಾಲಾದ್ರಿರ್ನೃಲೋಕಾ[೭]ಧ್ಯುಷಿತಾಂ ಭುವಮ್॥ ೧೨೯ ॥**

ಆ ಲತಾವನಭೂಮಿಯ ಸುತ್ತಲಿರುವ ಈ ದೊಡ್ಡಕೋಟೆಯು, ಮನುಷ್ಯಲೋಕಾಧಿಷ್ಠಿತವಾದ ಭೂಮಿಯನ್ನು ಆವರಿಸಿಕೊಂಡಿರುವ ಮಾನುಷೋತ್ತರಪರ್ವತದಂತೆ, ಶೋಭಿಸುತ್ತಿದ್ದಿತು.

**ನೂನಂ ಸಾಲ[೮]ನಿಭೇನ್ಯೈ[೯]ತ್ಯ ಸುರಚಾಪ[೧೦]ಪರಃಶತಮ್ ।**
**ತಾಮಲಂಕುರುತೇ ಸ್ಮ ಕ್ಷ್ಮಾಂ ಪಿಂಜರೀಕೃತಖಾಂಗಣಮ್ ॥ ೧೩೦ ॥**

ಆಕಾಶಪ್ರದೇಶವನ್ನು ಹೊಂಬಣ್ಣವನ್ನಾಗಿ ಮಾಡಿದ ಅನೇಕ ಇಂದ್ರಧನುಸ್ಸುಗಳು, ನಿಜವಾಗಿ ಕೋಟೆಯ ನೆಪದಿಂದ ಆ ಭೂಮಿಯನ್ನು ಹೊಂದಿ, ಅಲಂಕರಿಸಿದ್ದುವು. ಕೋಟೆಯು ಅನೇಕ ಇಂದ್ರಧನುಸ್ಸಿನಂತೆ ಕಾಣುತ್ತಿದ್ದಿತೆಂದು ಭಾವವು.

೧ ಪರಾಗವತೀಃ, ಪಕ್ಷೇ ಋತುಮತೀಃ. ೨ ಕ್ಷೌದ್ರಪಾಯಿನಾಂ ಪಕ್ಷೇ ಮದ್ಯಪಾಯಿನಾಂ. ೩ ಹಿಮಸಂಹತಿಃ. ೪ ವಿಶ್ರಾಮಾಯಾಭವನ್ನಿತ್ಯರ್ಥಃ. ೫ ವಲ್ಲೀವನಭೂಮಿಂ. ೬ ಮಾನುಷೋತ್ತ ಪರ್ವತಃ. ೭ ಅಧಿಷ್ಠಿತಾಂ. ೮ ವ್ಯಾಜೇನ. ೯ ಗತ್ವಾ. ೧೦ ಬಹುಶತಂ.

ಯಸ್ಯೋಪರಿತಲೇ ಲಗ್ನಾ ಸುವ್ಯಕ್ತಾ ಮೌಕ್ತಿಕಾವಲೀ ।
ತಾರಾತತಿರಿಯಂ ಕಿಂಸ್ವಿದಿತ್ಯಾಶಂಕಾಸ್ಪದಂ ನೃಣಾಮ್ ॥ ೧೩೧ ॥

ಆ ಕೋಟೆಯ ಮೇಲ್ಭಾಗದಲ್ಲಿ ಸಂಬಂಧಿಸಿರುವ ಸ್ಫುಟವಾದ ಮುತ್ತಗಳ ಸಾಲು ''ಇದೇನು ನಕ್ಷತ್ರಗಳ ಸಾಲೊ ?'' ಎಂಬುದಾಗಿ ಮನುಷ್ಯರಿಗೆ ಸಂದೇಹವನ್ನುಂಟು ಮಾಡುತ್ತಿದ್ದಿತು.

ಕ್ವಚಿದ್ವಿದ್ರುಮ[೧]ಸಂಘಾತಃ ಪದ್ಮರಾಗಾಂಶುರಂಜಿತಃ ।
ಯಸ್ಮಿನ್ಸಾಂಧ್ಯಘನಚ್ಛಾಯಮಾವಿಷರ್ತುಮಲಂ ತರಾಮ್ ॥ ೧೩೨ ॥

ಆ ಕೋಟೆಯಲ್ಲಿ ಕೆಲವು ಕಡೆಯಲ್ಲಿ ಪದ್ಮರಾಗ (ಕೆಂಪು) ರತ್ನಗಳ ಕಾಂತಿಯಿಂದ ವ್ಯಾಪ್ತವಾದ ಹವಳಗಳ ಸಮೂಹವು ಸಂಧ್ಯಾಕಾಲದಲ್ಲುಂಟಾದ ಮೇಘದ ಕಾಂತಿಯನ್ನು ಸಂಪೂರ್ಣವಾಗಿ ಪ್ರಕಾಶಪಡಿಸುತ್ತಿದ್ದಿತು. ಹವಳಗಳ ಸಮೂಹವು ಸಂಧ್ಯಾಕಾಲದ ಮೇಘದಂತೆ ಶೋಭಿಸುತ್ತಿದ್ದಿತೆಂದು ಭಾವವು.

ಕ್ವಚಿ[೨]ನ್ನವಘನಚ್ಛಾಯಃ ಕ್ವಚಿ[೩]ಚ್ಛಾಡ್ವಲಸಚ್ಛವಿಃ ।
ಕ್ವಚಿಚ್ಚ [೪]ಸುರಗೋಪಾಭೋ ವಿದ್ಯುದಾಪಿಂಜರಃ ಕ್ವಚಿತ್ ॥ ೧೩೩ ॥

ಕ್ವಚಿದ್ವಿಚಿತ್ರರತ್ನಾಂಶುರಚಿತೇಂದ್ರಶರಾಸನಃ ।
ಘನಕಾಲಸ್ಯ ವೈದಗ್ಧೀಂ ಸ ಸಾಲೋಽಲಂ ವ್ಯಡಂಬಯತ್ ॥ ೧೩೪ ॥

ಕೆಲವುಕಡೆಯಲ್ಲಿ ವರ್ಷಾಕಾಲದ ಮೇಘಕಾಂತಿಯೂ ಕೆಲವುಕಡೆಯಲ್ಲಿ ಹುಲ್ಲಿನಂತೆ ಹಸುರಾದ ಕಾಂತಿಯೂ ಕೆಲವುಕಡೆಯಲ್ಲಿ ಇಂದ್ರಗೋಪವೆಂಬ ಕೆಂಪುಕ್ರಿಮಿಗೆ ಸಮಾನವೂ ಕೆಲವುಕಡೆಯಲ್ಲಿ ಮಿಂಚಿನಂತೆ ಸುತ್ತಲೂ ನಾನಾಕಾಂತಿಯೂ ಕೆಲವು ಕಡೆಯಲ್ಲಿ ನಾನಾವಿಧವಾದ ರತ್ನಗಳ ಕಿರಣಗಳಿಂದ ಮಾಡಿದ ಇಂದ್ರಧನುಸ್ಸೂ ಉಳ್ಳ ಆ ಕೋಟೆಯು ವರ್ಷಾಕಾಲದ ರೀತಿಯನ್ನು ತೋರಿಸುತ್ತಿದ್ದಿತು. ಆ ಕೋಟೆಯು ವರ್ಷಾಕಾಲದಂತೆ ಶೋಭಿಸುತ್ತಿದ್ದಿತೆಂದಭಿಪ್ರಾಯವು.

ಕ್ವಚಿದ್ದ್ವಿಪಹರಿವ್ಯಾಘ್ರರೂಪೈರ್ಮಿಥುನವೃತ್ತಿಭಿಃ ।
ನಿಚಿತಃ ಕ್ವಚಿ[೫]ದುದ್ದೇಶೇ ಶುಕೈರ್ಹಂಸೈಶ್ಚ ಬರ್ಹಿಣೈಃ ॥ ೧೩೫ ॥

ವಿಚಿತ್ರರತ್ನನಿರ್ಮಾಣೈರ್ಮನುಷ್ಯಮಿಥುನೈಃ ಕ್ವಚಿತ್ ।
ಕ್ವಚಿಚ್ಚ ಕಲ್ಪವಲ್ಲೀಭಿರ್ಬಹಿರಂತಶ್ಚ ಚಿತ್ರಿತಃ ॥ ೧೩೬ ॥

ಹಸನ್ನಿವೋನ್ಮಿಷದ್ರತ್ನಮಯೂಖನಿವಹೈಃ ಕ್ವಚಿತ್ ।
ಕ್ವಚಿತ್ಸಿಂಹರವಾನ್ಕುರ್ವನ್ನಿವೋತ್ಸರ್ಪತ್ಪ್ರತಿಧ್ವನಿಃ ॥ ೧೩೭ ॥

ದೀಪ್ರಾಕಾರಃ ಸ್ಫುರದ್ರತ್ನರುಚಿರಾರುದ್ಧಖಾಂಗಣಃ ।
ನಿಷಧಾದ್ರಿಪ್ರತಿಸ್ಪರ್ಧೀ ಸ ಸಾಲೋ ವ್ಯರುಚತ್ತರಾಮ್ ॥ ೧೩೮ ॥

ಕೆಲವುಕಡೆಯಲ್ಲಿ ಜತೆಯಾಗಿರುವ ಆನೆ ಸಿಂಹ ಹುಲಿ ಇವುಗಳ ರೂಪಗಳಿಂದಲೂ ಕೆಲವುಕಡೆಯಲ್ಲಿ ಗಿಳಿ ಹಂಸ ನವಿಲು ಇವುಗಳಿಂದ ವ್ಯಾಪ್ತವೂ ಕೆಲವುಕಡೆಯಲ್ಲಿ ನಾನಾಪ್ರಕಾರವಾದ ರತ್ನಗಳಿಂದ ನಿರ್ಮಿತವಾದ ಮನುಷ್ಯಯುಗ್ಮಗಳಿಂದಲೂ ಕೆಲವುಕಡೆಯಲ್ಲಿ ಕಲ್ಪಲತೆಗಳಿಂದಲೂ ಒಳಭಾಗದಲ್ಲಿಯೂ ಹೊರಭಾಗದಲ್ಲಿಯೂ ಚಿತ್ರಿಸಲ್ಪಟ್ಟುದೂ ಕೆಲವುಕಡೆಯಲ್ಲಿ ಪ್ರಕಾಶಮಾನವಾದ ರತ್ನಗಳ ಕಿರಣಸಮೂಹಗಳಿಂದ ನಗುವಂತಿರುವುದೂ ಕೆಲವುಕಡೆಯಲ್ಲಿ ಸಿಂಹನಾದಗಳನ್ನು ಮಾಡುತ್ತಿದೆಯೋ ಎಂಬಂತೆ ಪ್ರತಿಧ್ವನಿಯನ್ನು ಹರಡಿರುವುದೂ ಪ್ರಕಾಶಮಾನವಾದ ಆಕಾರವುಳ್ಳುದೂ ಪ್ರಕಾಶಮಾನವಾದ ರತ್ನಗಳ ಕಾಂತಿಯುಳ್ಳುದೂ ಆಕಾಶಪ್ರದೇಶವನ್ನಾವರಿಸಿರುವುದೂ ನಿಷಧಪರ್ವತದೊಡನೆ ಹೋರಾಡುತ್ತಿರುವುದೂ ಆದ ಆ ಕೋಟೆಯು ವಿಶೇಷವಾಗಿ ಪ್ರಕಾಶಿಸುತ್ತಿದ್ದಿತು. ನಿಷಧಪರ್ವತದಂತೆ ಶೋಭಿಸುತ್ತಿದ್ದಿತೆಂದು ಭಾವವು.

೧ ಸಮೂ ಹಃ. ೨ ಪ್ರಾವೃಣ್ಮೇಘಚ್ಛಾಯಃ. ೩ ಹರಿತಸಚ್ಛವಿಃ. ೪ ಇಂದ್ರಗೋಪಕಾಂತಿಃ, ಇಂದ್ರಗೋಪಃ ಪ್ರಾವೃಟ್ಕಾಲಭವತ್ರಸವಿಶೇಷಃ. ೫ ಪ್ರದೇಶೇ.

ಮಹಾಂತಿ ಗೋಪುರಾಣ್ಯಸ್ಯ ವಿಬಭುರ್ದಿಕ್ಚತುಷ್ಟಯೇ ।
[೧]ರಾಜತಾನಿ [೨]ಖಗೇಂದ್ರಾದ್ರೇಃ ಶೃಂಗಾಣೀವ ಸ್ಪೃಶಂತಿ ಖಮ್ ॥ ೧೩೯ ॥

ಈ ಕೋಟೆಯ ನಾಲ್ಕು ದಿಕ್ಕುಗಳಲ್ಲೂ ದೊಡ್ಡ ಗೋಪುರಗಳು ಆಕಾಶವನ್ನು ಮುಟ್ಟುತ್ತಿರುವ ವಿಜಯಾರ್ಧಪರ್ವತದ ಬೆಳ್ಳಿಯ ಮಯವಾದ ಶಿಖರಗಳಂತೆ ಪ್ರಕಾಶಿಸುತ್ತಿದ್ದುವು.

ಜ್ಯೋತ್ಸ್ನಾಮಯಾನ್ಯಾನಿ ತಾನ್ಯುಚ್ಚೈ[೩]ಸ್ತ್ರಿಭೂಮಾನಿ ಚಕಾಸಿರೇ ।
ಪ್ರಹಾಸಮಿವ ತನ್ವಂತಿ ನಿರ್ಜಿತ್ಯ ತ್ರಿಜಗಚ್ಛ್ರಿಯಮ್ ॥ ೧೪೦ ॥

ಬೆಳದಿಂಗಳಿನಂತೆ ಶೋಭಿಸುತ್ತಿರುವ ಮೂರಂತಸ್ತಿನ ಆ ಗೋಪುರಗಳು ಮೂರುಲೋಕದ ಶೋಭೆಯನ್ನು ಜಯಿಸಿ ನಗುತ್ತಿವೆಯೋ ಎಂಬಂತೆ ಅಧಿಕವಾಗಿ ಶೋಭಿಸುತ್ತಿದ್ದುವು.

ಪದ್ಮರಾಗಮಯೈರುಚ್ಚೈಃ ಶಿಖರೈರ್ವ್ಯೋಮಲಂಘಿಭಿಃ ।
ದಿಶಃ ಪಲ್ಲವಯಂತೀವ ಪ್ರಸರೈಃ ಶೋಣರೋಚಿಷಾಮ್ ॥ ೧೪೧ ॥

ಪದ್ಮರಾಗರತ್ನಗಳಿಂದ ನಿರ್ಮಿತವೂ ಆಕಾಶವನ್ನುಲ್ಲಂಘಿಸುತ್ತಿರುವುದೂ ಉನ್ನತವೂ ರಕ್ತಕಾಂತಿಗಳನ್ನು ಹರಡಿರುವುದೂ ಆದ ಶಿಖರಗಳಿಂದ ಆ ಕೋಟೆಯು, ದಿಕ್ಕುಗಳು ತಳಿರುಗಳನ್ನು ಬಿಟ್ಟಿರುವಂತೆ ಮಾಡಿದೆಯೋ ಎಂಬಂತೆ, ಶೋಭಿಸುತ್ತಿದ್ದಿತು.

ಜಗದ್ಗುರೋರ್ಗುಣಾನ[೪]ತ್ರ ಗಾಯಂತಿ ಸುರಗಾಯನಾಃ ।
ಕೇಚಿಚ್ಛೃಣ್ವಂತಿ ನೃತ್ಯಂತಿ ಕೇಚಿತ್ಸ್ಮಾವಿರ್ಭವತ್ಸ್ಮಿತಾಃ ॥ ೧೪೨ ॥

ಈ ಗೋಪುರಗಳಲ್ಲಿ ಗಾಯನಮಾಡುವ ದೇವತೆಗಳು ಜಗದ್ಗುರುವಾದ ಸ್ವಾಮಿಯ ಗುಣಗಳನ್ನು ಗಾನಮಾಡುತ್ತಿದ್ದರು. ಕೆಲವು ದೇವತೆಗಳು ಗಾನವನ್ನು ಕೇಳುತ್ತಿದ್ದರು. ಮಂದಹಾಸವನ್ನು ಬೀರುತ್ತಿರುವ ಕೆಲವು ದೇವತೆಗಳು ನರ್ತನವನ್ನು ಮಾಡುತ್ತಿದ್ದರು.

ಶತಮಷ್ಟೋತ್ತರಂ ತೇಷು ಮಂಗಲದ್ರವ್ಯಸಂಪದಃ ।
ಭೃಂಗಾರಕಲಶಾಬ್ದಾದ್ಯಾಃ ಪ್ರತ್ಯೇಕಂ ಗೋಪುರೇ [೫]ಷ್ವಭಾನ್ ॥ ೧೪೩ ॥

ಆ ಪ್ರತಿಯೊಂದು ಗೋಪುರಗಳಲ್ಲೂ ಗಿಂಡಿ ಕಲಶ ಕನ್ನಡಿ ಮೊದಲಾದ ನೂರೆಂಟು ಮಂಗಲದ್ರವ್ಯಗಳು ಪ್ರಕಾಶಿಸುತ್ತಿದ್ದುವು.

ರತ್ನಾಭರಣಭಾಭಾರಪರಿಪಿಂಜರಿತಾಂಬರಾಃ ।
ಪ್ರತ್ಯೇಕಂ ತೋರಣಾಸ್ತೇಷು ಶತಸಂಖ್ಯಾ ಬಭಾಸಿರೇ ॥ ೧೪೪ ॥

ಆ ಪ್ರತಿಯೊಂದು ಗೋಪುರಗಳಲ್ಲೂ ರತ್ನಾಭರಣಗಳ ಕಾಂತಿಗಳಿಂದ ಆಕಾಶವನ್ನು ಹೊಂಬಣ್ಣಮಾಡಿರುವ ನೂರು ತೋರಣಗಳು ಪ್ರಕಾಶಿಸುತ್ತಿದ್ದುವು.

ಸ್ವಭಾವಭಾಸ್ವರೇ ಭರ್ತುರ್ದೇಹೇ [೬]ಸ್ವಾನವಕಾಶತಾಮ್ ।
ಮತ್ವೇವಾಭರಣಾನ್ಯಾಸ್ಥು[೭]ರುದ್ಬದ್ಧಾನ್ಯನುತೋರಣಮ್ ॥ ೧೪೫ ॥

ಸ್ವಭಾವದಿಂದ ಪ್ರಕಾಶಮಾನವಾದ ಸ್ವಾಮಿಯ ಶರೀರದಲ್ಲಿ ತಮಗೆ ಅವಕಾಶವಿಲ್ಲವೆಂಬುದನ್ನು ತಿಳಿದೋ ಎಂಬಂತೆ ಆಭರಣಗಳೆಲ್ಲ ಪ್ರತಿಯೊಂದು ತೋರಣದಲ್ಲೂ ಕಟ್ಟಲ್ಪಟ್ಟಿದ್ದುವು.

ನಿಧಯೋ ನವ ಶಂಖಾದ್ಯಾಸ್ತದ್ದ್ವಾರೋಪಾಂತಸೇವಿನಃ ।
ಶಶಂಸುಃ [೮]ಪ್ರಾಭವಂ ಜೈನಂ ಭುವನತ್ರಿತಯಾತಿಗಮ್ ॥ ೧೪೬ ॥

೧ ರಜತಮಯಾನಿ. ೨ ವಿಜಯಾರ್ದ್ಧಗಿರೇಃ. ೩ ತ್ರಿತಲಾನಿ. ೪ ಗೋಪುರೇಷು. ೫ ಭಾಂತಿ ಸ್ಮ. ೬ ಆಭರಣಾನಾಮನವಕಾಶತ್ವಂ. ೭ ರಚಿತಾನಿ. ೮ ಪ್ರಭುತ್ವಂ.

ಆ ಗೋಪುರದ್ವಾರಗಳ ಸಮೀಪದಲ್ಲಿರುವ ಪದ್ಮ ಶಂಖ ಮೊದಲಾದ ಒಂಬತ್ತು ನಿಧಿಗಳು ಮೂರುಲೋಕವನ್ನತಿಕ್ರಮಿಸಿರುವ ಜಿನೇಶ್ವರನ ಸಂಬಂಧವಾದ ಪ್ರಭುತ್ವವನ್ನು ಸೂಚಿಸುತ್ತಿದ್ದುವು.

**ತ್ರಿಜಗತ್ಪ್ರಭುಣಾ ನೂನಂ [೧]ವಿಮೋಹೇನಾ[೨]ವಧೀರಿತಾಃ ।**
**ಬಹಿರ್ದ್ವಾರಂ ಸ್ಥಿತಾ ದೂರಾನ್ನಿಧಯಸ್ತಂ ಸಿಷೇವಿರೇ ॥ ೧೪೭ ॥**

ನಿಜವಾಗಿಯೂ ಮೋಹವಿಲ್ಲದಿರುವ ತ್ರಿಲೋಕಾಧಿಪತಿಯಿಂದ ತಿರಸ್ಕರಿಸಲ್ಪಟ್ಟ ಆ ನವನಿಧಿಗಳು ಹೊರಬಾಗಿಲಲ್ಲಿದ್ದು ದೂರದಿಂದ ಸ್ವಾಮಿಯನ್ನು ಸೇವಿಸುತ್ತಿದ್ದುವು.

**ತೇಷಾಮಂತರ್ಮಹಾವೀಥ್ಯಾ ಉಭಯೋರ್ಭಾಗಯೋರಭೂತ್ ।**
**ನಾಟ್ಯಶಾಲಾದ್ವಯಂ ದಿಕ್ಷು ಪ್ರತ್ಯೇಕಂ ಚತಸೃಷ್ವಪಿ ॥ ೧೪೮ ॥**

ನಾಲ್ಕು ದಿಕ್ಕುಗಳಲ್ಲೂ ಪ್ರತಿಯೊಂದು ಗೋಪುರದ ಮಧ್ಯದಲ್ಲಿ ದೊಡ್ಡ ರಸ್ತೆಯ ಉಭಯಪಾರ್ಶ್ವಗಳಲ್ಲೂ ಎರಡು ನಾಟ್ಯಶಾಲೆಗಳಿದ್ದುವು.

**ತಿಸೃಭಿರ್ಭೂಮಿಭಿರ್ನಾಟ್ಯಮಂಡಪೌ [೩]ದ್ವೌ ವಿರೇಜತುಃ ।**
**[೪]ವಿಮುಕ್ತೇ[೫]ಸ್ತ್ರ್ಯಾತ್ಮಕಂ ಮಾರ್ಗಂ ನೃಣಾಂ ವಕ್ತುಮಿವೋದ್ಯತೌ ॥೧೪೯ ॥**

ಮೂರಂತಸ್ತಿನ ಗೋಪುರಗಳ ಪ್ರತಿಯೊಂದು ಅಂತಸ್ತಿನಲ್ಲಿರುವ ಎರಡೆರಡು ನಾಟ್ಯಶಾಲೆಗಳು ''ಮೋಕ್ಷಮಾರ್ಗವು ಸಮ್ಯಗ್ದರ್ಶನಜ್ಞಾನಚಾರಿತ್ರಸ್ವರೂಪವಾಗಿದೆ''ಯೆಂದು ಮನುಷ್ಯರಿಗೆ ತಿಳಿಸುವುದಕ್ಕೋಸ್ಕರವೋ ಎಂಬಂತೆ ಉನ್ನತವಾಗಿ ಶೋಭಿಸುತ್ತಿದ್ದುವು.

**ಹಿರಣ್ಮಯಮಹಾಸ್ತಂಭೌ ಶುಂಭತ್ಸ್ಫಟಿಕಭಿತ್ತಿಕೌ ।**
**ತೌ ರತ್ನಶಿಖರಾರುದ್ಧನಭೋಭಾಗೌ ವಿರೇಜತುಃ ॥ ೧೫೦ ॥**

ಸುವರ್ಣಮಯವಾದ ದೊಡ್ಡ ಸ್ತಂಭಗಳೂ ಪ್ರಕಾಶಮಾನವಾದ ಸ್ಫಟಿಕರತ್ನದ ಗೋಡೆಯೂ ಉಳ್ಳ ಆ ನಾಟ್ಯಶಾಲೆಗಳು ರತ್ನಮಯವಾದ ಶಿಖರಗಳಿಂದ ಆಕಾಶಪ್ರದೇಶವನ್ನು ವ್ಯಾಪಿಸಿ ಪ್ರಕಾಶಿಸುತ್ತಿದ್ದುವು.

**ನಾಟ್ಯ ಮಂಡಪರಂಗೇಷು ನೃತ್ಯಂತಿ ಸ್ಮಾಮರಸ್ತ್ರಿಯಃ ।**
**[೬]ಶತಹ್ರದಾ ಇವಾಮಗ್ನ ಮೂರ್ತಯಃ ಸ್ವಪ್ರಭಾಹ್ರದೇ ॥ ೧೫೧ ॥**

ಆ ನಾಟ್ಯಮಂಡಪಗಳ ರಂಗಭೂಮಿಗಳಲ್ಲಿ ತಮ್ಮ ಶರೀರಕಾಂತಿಯೆಂಬ ಮಡುವಿನಲ್ಲಿ ಮುಳುಗಿರುವ ದೇಹವುಳ್ಳ ದೇವಸ್ತ್ರೀಯರು ಮಿಂಚುಗಳಂತೆ ನರ್ತನವನ್ನು ಮಾಡುತ್ತಿದ್ದರು.

**ಗಾಯಂತಿ ಜಿನರಾಜಸ್ಯ ವಿಜಯಂ ತಾಃ [೭]ಸ್ಮ ಸಸ್ಮಿತಾಃ ।**
**ತಮೇವಾಭಿನಯಂತ್ಯೋಮೂಃ [೮]ಚಿಕ್ಷಿಪುಃ ಪೌಷ್ಪಮಂಜಲಿಮ್ ॥**

ಆ ದೇವಸ್ತ್ರೀಯರು ಮಂದಹಾಸಯುಕ್ತರಾಗಿ ಜಿನೇಶ್ವರನ ಜಯವನ್ನು ಗಾನ ಮಾಡುತ್ತಿದ್ದರು. ಇವರು ಆ ಜಯದ ಅರ್ಥವನ್ನೇ ಅಭಿನಯಿಸುವವರಾಗಿ ಪುಷ್ಪಾಂಜಲಿಯನ್ನು ಮಾಡುತ್ತಿದ್ದರು.

**ಸಮಂ ವೀಣಾನಿನಾದೇನ ಮೃದಂಗಧ್ವನಿರುಚ್ಚರನ್ ।**
**ವ್ಯತನೋತ್ಪ್ರಾವೃಡಾರಂಭಶಂಕಾಂ [೯]ತತ್ರ ಶಿಖಂಡಿನಾಮ್ ॥ ೧೫೩ ॥**

ಆ ನಾಟ್ಯಶಾಲೆಗಳಲ್ಲಿ ವೀಣೆಯ ಶಬ್ದದೊಡನೆ ಸೇರಿ ಮೇಲ್ಭಾಗದಲ್ಲಿ ಹರಡಿರುವ ಮೃದಂಗಶಬ್ದವು ನವಿಲುಗಳಿಗೆ ವರ್ಷಾಕಾಲಪ್ರಾರಂಭದ ಸಂದೇಹವನ್ನುಂಟುಮಾಡಿದ್ದಿತು.

೧ ವಿಗತಮೋಹೇನ. ೨ ತಿರಸ್ಕೃತಾಃ. ೩ ತೌ ಇತ್ಯಪಿ ಪಾಠಃ. ೪ ಮೋಕ್ಷಸ್ಯ. ೫ ತ್ರೈರೂಪ್ಯಂ ರತ್ನತ್ರಯಮಿತಿ ಯಾವತ್. ೬ ವಿದ್ಯುತಃ. ೭ ಸಸಮ್ಮಿತಾ ಇತ್ಯಪಿ ಪಾಠಃ. ೮ ಕಿರಂತಿ ಸ್ಮ. ೯ ನಾಟಕಶಾಲಾಸು.

**ಶರದಭ್ರನಿಭೇ ತಸ್ಮಿನ್ದ್ವಿತಯೇ ನಾಟ್ಯಶಾಲಯೋಃ ।**
**ವಿದ್ಯುದ್ವಿಲಾಸಮಾತೇನುರ್ನೃತ್ಯಂತ್ಯಃ ಸುರಯೋಷಿತಃ ॥ ೧೫೪ ॥**

ಶರತ್ಕಾಲದ ಮೇಘಕ್ಕೆ ಸಮಾನವಾದ ಆ ಎರಡು ನಾಟ್ಯಶಾಲೆಗಳಲ್ಲಿ ನರ್ತನ ಮಾಡುತ್ತಿರುವ ದೇವಸ್ತ್ರೀಯರು ಮಿಂಚಿನ ಶೋಭೆಯನ್ನುಂಟುಮಾಡುತ್ತಿದ್ದರು. ಮಿಂಚಿನಂತೆ ಶೋಭಿಸುತ್ತಿದ್ದರೆಂದು ಭಾವವು.

**ಕಿನ್ನರಾಣಾಂ ಕಲಕ್ವಾಣೈಃ ಸೋದ್ಗಾನೈ[೧]ರುಪವೀಣಿತೈಃ ।**
**ತತ್ರಾಸಕ್ತಿಂ ಪರಾಂ ಭೇಜುಃ ಪ್ರೇಕ್ಷಿಣಾಂ ಚಿತ್ತವೃತ್ತಯಃ ॥ ೧೫೫ ॥**

ಆ ನಾಟ್ಯಶಾಲೆಗಳಲ್ಲಿ ಕಿನ್ನರದೇವತೆಗಳು ಮನೋಹರವಾದ ಶಬ್ದಗಳುಳ್ಳ ವೀಣಾನಾದಗಳೊಡನೆ ಉಚ್ಚಸ್ವರದಿಂದ ಮಾಡುತ್ತಿರುವ ಗಾನಗಳಲ್ಲಿ ಪ್ರೇಕ್ಷಕರ ಮನೋವೃತ್ತಿಗಳು ಅತ್ಯಂತ ಲೀನವಾಗಿದ್ದುವು.

**ತತೋ ಧೂಮಘಟೌ ದ್ವೌ ದ್ವೌ ವೀಥೀನಾಮುಭಯೋರ್ದಿಶೋಃ ।**
**ಧೂಪಧೂಮ್ಯೈರ್ನ್ಯರುಂಧಾತಾಂ ಪ್ರಸರದ್ಭಿರ್ನಭೋಂಗಣಮ್ ॥ ೧೫೬ ॥**

ಆ ನಾಟ್ಯಶಾಲೆಗಳಿಂದ ಸ್ವಲ್ಪದೂರದಲ್ಲಿ ಮಾರ್ಗಗಳ ಉಭಯ ಪಾರ್ಶ್ವಗಳಲ್ಲಿರುವ ಎರಡೆರಡು ಧೂಪಘಟಗಳು ಮೇಲೆ ವ್ಯಾಪಿಸುತ್ತಿರುವ ಧೂಪದ ಹೊಗೆಗಳಿಂದ ಆಕಾಶಪ್ರದೇಶವನ್ನು ಆವರಿಸಿಕೊಂಡಿದ್ದುವು. ಆಕಾಶದಲ್ಲಿ ಧೂಪದ ಹೊಗೆಯು ವ್ಯಾಪಿಸಿಕೊಂಡಿದ್ದಿತೆಂದು ಭಾವವು.

**ತದ್ಧೂಪಧೂಮಸಂರುದ್ಧಂ ನಭೋ ವೀಕ್ಷ್ಯ [೨]ನಭೋಜುಷಃ ।**
**ಪ್ರಾವೃಟ್ಪಯೋಧರಾಶಂಕಾಮಕಾಲೇಪಿ ವ್ಯತಾನಿಷುಃ ॥ ೧೫೭ ॥**

ಆಕಾಶದಲ್ಲಿದ್ದ ದೇವತೆಗಳೂ ವಿದ್ಯಾಧರರೂ ಆ ಧೂಪದ ಹೊಗೆಗಳಿಂದ ವ್ಯಾಪ್ತವಾದ ಆಕಾಶವನ್ನು ನೋಡಿ ಅಕಾಲದಲ್ಲೂ ವರ್ಷಾಕಾಲದ ಮೇಘವೆಂಬ ಸಂದೇಹಪಡುತ್ತಿದ್ದರು.

**ದಿಶಃ ಸುರಭಯನ್ಧೂಪೋ ಮಂದಾನಿಲವಶೋತ್ಥಿತಃ ।**
**ಸ ರೇಜೇ ಪೃಥಿವೀದೇವ್ಯಾ ಮುಖಾಮೋದ ಇವೋ[೩]ಚ್ಛ್ವಸನ್॥ ೧೫೮ ॥**

ಮಂದಮಾರುತದಿಂದ ಮೇಲಕ್ಕೆದ್ದಿರುವ ಆ ಧೂಪವು ದಿಕ್ಕುಗಳನ್ನು ಸುವಾಸನೆಮಾಡಿ ಭೂದೇವಿಯ ಮುಖದ ಪರಿಮಳವೋ ಎಂಬಂತೆ ಹೊರಟು ಶೋಭಿಸುತ್ತಿದ್ದಿತು.

**ತದಾಮೋದಂ ಸಮಾಘ್ರಾಯ ಶ್ರೇಣಯೋ ಮಧುಲೇಹಿನಾಮ್ ।**
**[೪]ದಿಶಾಂ ಮುಖೇಷು ವಿತತಾ ವಿತೇನುರಲಕಶ್ರಿಯಮ್ ॥ ೧೫೯ ॥**

ಭ್ರಮರಗಳ ಸಾಲುಗಳು ಆ ಪರಿಮಳವನ್ನಾಘ್ರಾಣಮಾಡಿ ದಿಕ್ಕನ್ಯೆಯರ ಮುಖಗಳಲ್ಲಿ ವ್ಯಾಪಿಸಿ ಕುರುಳುಕೂದಲುಗಳ ಶೋಭೆಯನ್ನುಂಟುಮಾಡಿದುವು.

**ಇತೋ ಧೂಪಘಟಾಮೋದಮಿತಶ್ಚ ಸುರಯೋಷಿತಾಮ್ ।**
**ಸುಗಂಧಿಮುಖನಿಃಶ್ವಾಸಮಲಿನೋ ಜಘ್ರುರಾಕುಲಾಃ ॥ ೧೬೦ ॥**

ಈ ಕಡೆಯಲ್ಲಿ ಧೂಪಘಟಗಳ ಪರಿಮಳವನ್ನೂ ಇನ್ನೊಂದು ಕಡೆಯಲ್ಲಿ ದೇವಸ್ತ್ರೀಯರ ಪರಿಮಳವಾದ ಮುಖದ ನಿಃಶ್ವಾಸವನ್ನೂ ಭ್ರಮರಗಳು ಅತ್ಯಂತ ಆಕುಲವಾಗಿ ಆಘ್ರಾಣಮಾಡುತ್ತಿದ್ದುವು.

**ಮಂದ್ರಧ್ವಾನೈರ್ಮೃದಂಗಾನಾಂ [೫]ಸ್ತನಯಿತ್ನುವಿಡಂಬಿಭಿಃ ।**
**ಪತಂತ್ಯಾ ಪುಷ್ಪವೃಷ್ಟ್ಯಾ ಚ ಸದಾತ್ರಾಸೀದ್ಘನಾಗಮಃ ॥ ೧೬೧ ॥**

೧ ವೀಣಯಾ ಉಪನೀತೈಃ. ೨ ದೇವವಿದ್ಯಾಧರಾಃ. ೩ ನಿರ್ಗಚ್ಛನ್. ೪ ದಿಕ್ಕನ್ಯಕಾನಾಂ. ೫ ಮೇಘವಿಡಂಬಿಭಿಃ.

ಮೇಘವನ್ನು ಹೋಲುತ್ತಿರುವ ಮೃದಂಗಗಳ ಮನೋಹರವಾದ ಶಬ್ದಗಳಿಂದಲೂ ಬೀಳುತ್ತಿರುವ ಪುಷ್ಪವೃಷ್ಟಿಯಿಂದಲೂ ಈ ನಾಟ್ಯಶಾಲೆಗಳಲ್ಲಿ ಯಾವಾಗಲೂ ಮೇಘವು ಬರುವಂತೆ ಕಾಣುತ್ತಿದ್ದಿತು.

**ತತ್ರ ವೀಥ್ಯಂತರೇಷ್ವಾಸಂಶ್ಚತಸ್ರೋ ವನವೀಥಯಃ ।**
**ನಂದನಾದ್ಯಾ ವನಶ್ರೇಣ್ಯೋ ವಿಭುಂ ದ್ರಷ್ಟುಮಿವಾಗತಾಃ ॥ ೧೯೨ ॥**

ಆ ಮಾರ್ಗಗಳ ಮಧ್ಯಗಳಲ್ಲಿ ನಾಲ್ಕು ವನವೀಥಿ(ಪಂಕ್ತಿ)ಗಳು ಸ್ವಾಮಿಯನ್ನು ನೋಡುವುದಕ್ಕೋಸ್ಕರ ಬಂದಿರುವ ನಂದನ ಸೌಮನಸ ಮೊದಲಾದ ವನ ಪಂಕ್ತಿಗಳಂತಿದ್ದುವು.

**ಅಶೋಕಸಪ್ತಪರ್ಣಾಹ್ವಚಂಪಕಾಮ್ರಮಹೀರುಹಾಮ್ ।**
**ವನಾನಿ ತಾನ್ಯಧುಸ್ತೋಷಾದಿವೋಚ್ಚೈಃ ಕುಸುಮಸ್ಮಿತಮ್ ॥ ೧೯೩ ॥**

ಅಶೋಕ ಏಳೆಲೆಬಾಳೆ ಸಂಪಗೆ ಮಾವು ಈ ವೃಕ್ಷಗಳ ವನಗಳು ಸಂತೋಷದಿಂದ ಅಧಿಕವಾಗಿ ನಗುತ್ತಿವೆಯೋ ಎಂಬಂತೆ ಪುಷ್ಪಗಳನ್ನು ಧರಿಸಿದ್ದುವು.

**ವನಾನಿ ತರುಭಿಶ್ಚಿತ್ರೈಃ ಫಲಪುಷ್ಪೋಪಶೋಭಿಭಿಃ ।**
**ಜಿನಸ್ಯಾರ್ಘ್ಯಮಿವೋತ್ಕ್ಷಿಪ್ಯ ತಸ್ಥುಸ್ತಾನಿ ಜಗದ್ಗುರೋಃ ॥ ೧೯೪ ॥**

ಆ ವನಗಳು ಜಗದ್ಗುರುವಾದ ಜಿನೇಶ್ವರನಿಗೆ ಫಲಪುಷ್ಪಗಳಿಂದ ಶೋಭಿಸುತ್ತಿರುವ ನಾನಾಪ್ರಕಾರವಾದ ವೃಕ್ಷಗಳಿಂದ ಅರ್ಘ್ಯವನ್ನೆತ್ತಿ ನಿಂತಿವೆಯೋ ಎಂಬಂತಿದ್ದುವು.

**ವನೇಷು ತರವಸ್ತೇಷು ರೇಜಿರೇ ಪವನಾಹತೈಃ ।**
**ಶಾಖಾಕರೈರ್ಮುಹುರ್ನೃತ್ಯಂ ತನ್ವಾನಾ ಇವ ಸಮ್ಮದಾತ್ ॥ ೧೯೫ ॥**

ಆ ವನಗಳಲ್ಲಿ ಗಾಳಿಯಿಂದ ಹೊಡೆಯಲ್ಪಟ್ಟ ಕೊಂಬೆಗಳೆಂಬ ಕೈಗಳಿಂದ ವೃಕ್ಷಗಳು ಸಂತೋಷದಿಂದ ನರ್ತನವನ್ನು ಮಾಡುತ್ತಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**[1]ಸಚ್ಛಾಯಾಃ [2]ಸಫಲಾ[3]ಸ್ತುಂಗಾ ಜನ[4]ನಿರ್ವೃತಿಹೇತವಃ ।**
**ಸುರಾಜಾನ ಇವಾಭೂವಂಸ್ತೇ ದ್ರುಮಾಃ [5]ಸುಖಶೀತಲಾಃ ॥ ೧೯೬ ॥**

ಶ್ರೇಷ್ಠವಾದ ನೆರಳುಳ್ಳುದೂ ಫಲಸಹಿತವೂ ಉನ್ನತವೂ ಜನರ ಸುಖಕ್ಕೆ ಕಾರಣವೂ ಸುಖಕರವೂ ಶೀತಲವೂ ಆದ ಆ ವೃಕ್ಷಗಳು ಕಾಂತಿಯುಕ್ತರೂ ಪುಣ್ಯಫಲಯುಕ್ತರೂ ಶ್ರೇಷ್ಠರೂ ಜನರ ಸುಖಕ್ಕೆ ಕಾರಣರೂ ಸುಖದಿಂದ ತೃಪ್ತರೂ ಆದ ರಾಜರಂತಿದ್ದುವು.

**ಪುಷ್ಪಾಮೋದಸಮಾಹೂತೈರ್ಮಿಲಿತೈರಲಿನಾಂ ಕುಲೈಃ ।**
**ಗಾಯಂತ ಇವ ಗುಂಜದ್ಭಿರ್ಜಿನಂ ರೇಜುರ್ವನದ್ರುಮಾಃ ॥ ೧೯೭ ॥**

ಪುಷ್ಪಗಳ ಪರಿಮಳದಿಂದ ಆಕರ್ಷಿಸಲ್ಪಟ್ಟು ಬಂದು ಸೇರಿರುವುದೂ ಝೇಂಕಾರಶಬ್ದವನ್ನು ಮಾಡುತ್ತಿರುವುದೂ ಆದ ಭ್ರಮರಗಳ ಸಮೂಹದಿಂದ ಆ ವೃಕ್ಷಗಳು, ಜಿನೇಶ್ವರನನ್ನು ಗಾನ(ಸ್ತೋತ್ರ)ಮಾಡುತ್ತವೆಯೋ ಎಂಬಂತೆ, ಶೋಭಿಸುತ್ತಿದ್ದುವು.

**ಕ್ವಚಿದ್ವಿರಲಮುನ್ಮುಕ್ತಕುಸುಮಾಸ್ತೇ ಮಹೀರುಹಾಃ ।**
**ಪುಷ್ಪೋಪಹಾರಮಾತೇನುರಿವ ಭಕ್ತ್ಯಾ ಜಗದ್ಗುರೋಃ ॥ ೧೯೮ ॥**

ಕೆಲವು ಕಡೆಯಲ್ಲಿ ವಿರಳವಾಗಿ ಹೂಗಳನ್ನು ಬಿಟ್ಟಿರುವ ಆ ವೃಕ್ಷಗಳು ಜಗದ್ಗುರುವಾದ ಸ್ವಾಮಿಗೆ ಭಕ್ತಿಯಿಂದ ಪುಷ್ಪಗಳ ಕೈಗಾಣಿಕೆಯನ್ನು ಕೊಡುವಂತಿದ್ದುವು.

೧ ಸುರಾಜಪಕ್ಷೇ ಕಾಂತಿಸಹಿತಾಃ. ೨ ಪುಣ್ಯಫಲಸಹಿತಾಃ. ೩ ಇತರಜನೇಭ್ಯೋಧಿಕಾಃ. ೪ ಸುಖಹೇತವಃ. ೫ ಸುಖಃ ಶೀತಲೋ ಯೇಷಾಂ ತೇ, ಸುರಾಜಪಕ್ಷೇ ಸುಖೇನ ಶೀತಲಾಃ ಶೀತೀಭೂತಾಃ.

**ಕ್ವಚಿ[1]ದ್ವಿರುವತಾಂ [2]ಗಾನೈರಲಿನಾಂ ಮದ[3]ಮಂಜುಭಿಃ ।**
**ಮದನಂ ತರ್ಜಯಂತೀವ ವನಾನ್ಯಾಸನ್ಸಮಂತತಃ ॥ ೧೯೯ ॥**

ಕೆಲವು ಕಡೆಯಲ್ಲಿ ಆ ವನಗಳು ಸುತ್ತಲೂ ಶಬ್ದಮಾಡುತ್ತಿರುವ ಭ್ರಮರಗಳ ಮನೋಹರವಾದ ಗಾನಗಳಿಂದ ಮನ್ಮಥನನ್ನು ತಿರಸ್ಕರಿಸುತ್ತಿವೆಯೋ ಎಂಬಂತಿದ್ದುವು.

**ಪುಂಸ್ಕೋಕಿಲಕಲಕ್ವಾಣೈರಾಹ್ವಯಂತೀವ ಸೇವಿತುಮ್ ।**
**ಜಿನೇಂದ್ರಮಮರಾಧೀಶಾನ್ವನಾನಿ ವಿಬಭುಸ್ತರಾಮ್ ॥ ೨೦೦ ॥**

ಆ ವನಗಳು ಜಿನೇಶ್ವರನನ್ನು ಭಜಿಸುವುದಕ್ಕೋಸ್ಕರ ಪುರುಷಕೋಗಿಲೆಗಳ ಮನೋಹರವಾದ ಶಬ್ದಗಳಿಂದ ದೇವೇಂದ್ರರನ್ನು ಕರೆಯುತ್ತವೆಯೋ ಎಂಬಂತೆ ಅಧಿಕವಾಗಿ ಶೋಭಿಸುತ್ತಿದ್ದುವು.

**ಪುಷ್ಪರೇಣುಭಿರಾಕೀರ್ಣಾ ವನಸ್ಯಾಧಸ್ತಲೇ ಮಹೀ ।**
**ಸುವರ್ಣರಜಸಾ[4]ಸ್ತೀರ್ಣತಲೇವಾಸೀನ್ಮನೋಹರಾ ॥ ೨೦೧ ॥**

ಪುಷ್ಪಧೂಳಿಗಳಿಂದ ವ್ಯಾಪ್ತವಾಗಿರುವ ಆ ವನದ ಕೆಳಭಾಗ ಭೂಮಿಯು, ಬಂಗಾರದ ಧೂಳಿಗಳಿಂದ ವ್ಯಾಪ್ತವಾಗಿರುವ ಪ್ರದೇಶದಂತೆ, ಮನೋಹರವಾಗಿದ್ದಿತು.

**ಇತ್ಯಮೂನಿ ವನಾನ್ಯಾಸನ್ನತಿರಮ್ಯಾಣಿ ಪಾದಪೈಃ ।**
**ಯತ್ರ ಪುಷ್ಪಮಯೀ ವೃಷ್ಟಿರ್ನ[5]ರ್ತುಪರ್ಯಾಯಮೈಕ್ಷತ ॥ ೨೦೨ ॥**

ಈ ಪ್ರಕಾರವಾಗಿ ಈ ವನಗಳು ವೃಕ್ಷಗಳಿಂದ ಬಹಳ ರಮಣೀಯವಾಗಿದ್ದುವು. ಈ ವನಗಳಲ್ಲಿ ಪುಷ್ಪವೃಷ್ಟಿಯು ಋತುಗಳ ಪರಿವರ್ತನೆಯನ್ನು ನೋಡಿರಲಿಲ್ಲ. ಸರ್ವದಾ ಪುಷ್ಪವೃಷ್ಟಿಯಾಗುತ್ತಿದ್ದಿತೆಂದು ಭಾವವು.

**ನ ರಾತ್ರಿರ್ನ ದಿವಾ [6]ತತ್ರ ತರುಭಿರ್ಭಾಸ್ವರೈರ್ಭೃಶಮ್ ।**
**ತರುಶೈತ್ಯಾದಿವಾ[7]ಬಿಭ್ಯ[8]ತ್ಸಂಜಹಾರ ಕರಾನ್ರವಿಃ ॥ ೨೦೩ ॥**

ಆ ವನಗಳಲ್ಲಿ ಅಧಿಕವಾಗಿ ಪ್ರಕಾಶಿಸುತ್ತಿರುವ ವೃಕ್ಷಗಳಿಂದ ರಾತ್ರಿಹಗಲೆಂಬ ಭೇದವಿರಲಿಲ್ಲ. ಸೂರ್ಯನು ವೃಕ್ಷಗಳ ಶೈತ್ಯದಿಂದ ಭಯಪಟ್ಟವನಂತೆ ತನ್ನ ಕಿರಣಗಳನ್ನು ಸಂಕೋಚಪಡಿಸಿದನು.

**[9]ಅಂತರ್ವಣಂ ಕ್ವಚಿದ್ವಾಪ್ಯಸ್ತ್ರಿಕೋಣಚತುರಸ್ರಿಕಾಃ ।**
**[10]ಸ್ನಾತೋತ್ತೀರ್ಣಾಮರಸ್ತ್ರೀಣಾಂ ಸ್ತನಕುಂಕುಮಪಿಂಜರಾಃ ॥ ೨೦೪ ॥**

ಆ ವನಗಳ ಮಧ್ಯದಲ್ಲಿ ಕೆಲವು ಕಡೆಯಲ್ಲಿ ಮೂರು ಮೂಲೆ ನಾಲ್ಕು ಮೂಲೆಗಳುಳ್ಳ ಬಾವಿಗಳು ಸ್ನಾನಮಾಡಿಕೊಂಡು ಹೊರಟುಹೋದ ದೇವಸ್ತ್ರೀಯರ ಕುಚಗಳ ಕುಂಕುಮಗಳಿಂದ ಹೊಂಬಣ್ಣವಾಗಿದ್ದುವು.

**[11]ಪುಷ್ಕರಿಣ್ಯಃ ಕ್ವಚಿಚ್ಚಾಸನ್ಕ್ವಚಿಚ್ಚ ಕೃತಕಾದ್ರಯಃ ।**
**ಕ್ವಚಿದ್ರಮ್ಯಾಣಿ ಹರ್ಮ್ಯಾಣಿ ಕ್ವಚಿದಾಕ್ರೀಡಮಂಡಪಾಃ ॥ ೨೦೫ ॥**

ಕೆಲವು ಕಡೆಯಲ್ಲಿ ಕೊಳಗಳೂ ಕೆಲವು ಕಡೆಯಲ್ಲಿ ರಚಿಸಿದ ಪರ್ವತಗಳೂ ಕೆಲವು ಕಡೆಯಲ್ಲಿ ರಮಣೀಯವಾದ ದೊಡ್ಡಮನೆಗಳೂ ಕೆಲವು ಕಡೆಯಲ್ಲಿ ಕ್ರೀಡಾ ಮಂಡಪಗಳೂ ಇದ್ದುವು.

**ಕ್ವಚಿತ್ಪ್ರೇಕ್ಷಾಗೃಹಾಣ್ಯಾಸಂ[12]ಶ್ಚಿತ್ರಶಾಲಾಃ ಕ್ವಚಿತ್ಕ್ವಚಿತ್ ।**
**ಏಕಶಾಲಾದ್ವಿಶಾಲಾದ್ಯಾ ಮಹಾಪ್ರಾಸಾದಪಙ್ಕ್ತಯಃ ॥ ೨೦೬ ॥**

೧ ಧ್ವನತಾಂ. ೨ ಧ್ವಾನೈರಿತ್ಯಪಿ ಪಾಠಃ. ೩ ಮನೋಹರೈಃ. ೪ ಆಚ್ಛಾದಿತತಲಾ. ೫ ಋತೂನಾಂ ಕ್ರಮವೃತ್ತಿಂ. ೬ ವನೇ. ೭ ಅಸಮಂತಾದ್ಬಿಭ್ಯನ್. ೮ ಸಂಕುಚಿತಾನ್ಚಕಾರ. ೯ ವನಮಧ್ಯೇ. ೧೦ ಸ್ನಾತ್ವಾ ನಿರ್ಗತಾಃ. ೧೧ ದೀರ್ಘಿಕಾಃ. ೧೨ ಚಿತ್ರೋಪಲಕ್ಷಿತಶಾಲಾಃ.

ಕೆಲವು ಕಡೆಯಲ್ಲಿ ವನಶೋಭೆಯನ್ನು ನೋಡುವುದಕ್ಕಾಗಿ ಮಾಡಿದ ಮನೆಗಳೂ ಕೆಲವು ಕಡೆಯಲ್ಲಿ ಚಿತ್ರಗಳುಳ್ಳ ಶಾಲೆಗಳೂ ಕೆಲವು ಕಡೆಯಲ್ಲಿ ಒಂದು ಎರಡು ಮೊದಲಾದ ಅಂತಸ್ತುಗಳುಳ್ಳ ದೊಡ್ಡಮನೆಗಳ ಸಾಲುಗಳೂ ಇದ್ದುವು.

**ಕ್ವಚಿಚ್ಚ [೧]ಶಾದ್ವಲಾ ಭೂಮಿರಿಂದ್ರಗೋಪೈಸ್ತತಾ ಕ್ವಚಿತ್ ।**
**ಸರಾಂಸ್ಯತಿಮನೋಜ್ಞಾನಿ ಸರಿತಶ್ಚ ಸಸೈಕತಾಃ ॥ ೧೭೭ ॥**

ಕೆಲವು ಕಡೆಯಲ್ಲಿ ಭೂಮಿಯು ಹಚ್ಚಗೂ ಕೆಲವು ಕಡೆಯಲ್ಲಿ ಕೆಂಪು ಕ್ರಿಮಿಗಳಿಂದ ವ್ಯಾಪ್ತವೂ ಆಗಿದ್ದಿತು. ಕೆಲವು ಕಡೆಯಲ್ಲಿ ಅತ್ಯಂತ ಮನೋಹರವಾದ ಸರೋವರಗಳೂ ಮರಳುಗಳಿಂದಕೂಡಿದ ನದಿಗಳೂ ಇದ್ದುವು.

**ಹಾರಿ [೨]ಮೇದುರ[೩]ಮುನ್ನಿದ್ರಕುಸುಮಂ[೪]ಸಶ್ರಿ ಕಾಮದವ್ ।**
**ಸುಕಲತ್ರಮಿವಾಸೀತ್ತತ್ಸೇವ್ಯಂ ವನಚತುಷ್ಟಯಮ್ ॥ ೧೭೮ ॥**

ಮನೋಹರವೂ ಪ್ರೀತಿಕರವಾದ ಶೋಭಾಯುಕ್ತವೂ ವಿಕಸಿತವಾದ ಪುಷ್ಪಗಳುಳ್ಳದೂ ಶೋಭಾಯುಕ್ತವೂ ಇಷ್ಟಾರ್ಥವನ್ನು ಕೊಡುವುವೂ ಆದ ಆ ನಾಲ್ಕು ವನಗಳು, ಉತ್ತಮವಾದ ಪತ್ನಿಯಂತೆ, ಸೇವಿಸುವುದಕ್ಕೆ ಯೋಗ್ಯವಾಗಿದ್ದುವು. ಉಪಭೋಗಾರ್ಹವಾಗಿದ್ದುವೆಂದು ಭಾವವು.

**ಅಪಾಸ್ತಾತಪಸಂಬಾಧಂ ವಿಲಸ[೫]ತ್ಪಲ್ಲವಾಂಚಿತವ್ ।**
**[೬]ಪಯೋಧರಸ್ಪೃಗಾಭಾಸಿ ತತ್ಸ್ತ್ರೀಣಾಮುತ್ತರೀಯವತ್ ॥ ೧೭೯ ॥**

ಬಿಸಲಿನ ಬಾಧೆಯನ್ನು ನಿವಾರಿಸಿದುದೂ ಪ್ರಕಾಶಮಾನವಾದ ತಳಿರುಗಳಿಂದ ಯುಕ್ತವೂ ಮೇಘಗಳನ್ನು ಸ್ಪರ್ಶಿಸುವುದೂ ಆದ ಆ ವನಚತುಷ್ಟಯ(ನಾಲ್ಕು)ವು ಬಿಸಲಿನ ಬಾಧೆಯನ್ನು ನಿವಾರಿಸಿದುದೂ ಪ್ರಕಾಶಮಾನವಾದ ಸೆರಗುಳ್ಳದೂ ಕುಚಗಳನ್ನು ಸ್ಪರ್ಶಿಸುವುದೂ ಆದ ಸ್ತ್ರೀಯರ ಮೇಲುವಸ್ತ್ರ(ಮುಸುಕು)ದಂತೆ ಶೋಭಿಸುತ್ತಿದ್ದಿತು.

**ಬಭಾಸೇ ವನಮಾಶೋಕಂ ಶೋಕಾಪನುದಮಂಗಿನಾವ್ ।**
**ರಾಗಂ ವಮದಿವಾತ್ಮೀಯಮಾರಕ್ತೈಃ ಪುಷ್ಪಪಲ್ಲವೈಃ ॥ ೧೮೦ ॥**

ಪ್ರಾಣಿಗಳ ಶೋಕವನ್ನು ನಿವಾರಣಮಾಡುವ ಅಶೋಕವನವು ಸಂಪೂರ್ಣವಾಗಿ ಕೆಂಪಾಗಿರುವ ಪುಷ್ಪಗಳಿಂದಲೂ ತಳಿರುಗಳಿಂದಲೂ ತನ್ನಲ್ಲಿರುವ ಅನುರಾಗವನ್ನು ವಮನಮಾಡುತ್ತಿದೆಯೋ ಎಂಬಂತೆ ಪ್ರಕಾಶಿಸುತ್ತಿದ್ದಿತು.

**ಪರ್ಣಾನಿ ಸಪ್ತ ಬಿಭ್ರಾಣಂ ವನಂ [೭]ಸಾಪ್ತಚ್ಛದಂ ಬಭೌ ।**
**[೮]ಸಪ್ತಸ್ಥಾನಾನಿ [೯]ವಾ ಭರ್ತುರ್ದರ್ಶಯ[೧೦]ತ್ಸತಿಪರ್ವ ಯತ್ ॥ ೧೮೧ ॥**

ಪ್ರತಿಯೊಂದು ಗಂಟಿನಲ್ಲೂ ಏಳು ಎಲೆಗಳನ್ನು ಧರಿಸಿರುವ ಏಳೆಲೆಬಾಳೆಗಳ ವನವು ಸ್ವಾಮಿಯ ಸಜ್ಜಾತಿ ಸದ್ಗೃಹಸ್ಥತ್ವ ಯತಿತ್ವ ದೇವೇಂದ್ರತ್ವ ಚಕ್ರವರ್ತಿತ್ವ ಅರ್ಹಂತತ್ವ ನಿರ್ವಾಣಗಳೆಂಬ ಏಳು ಸ್ಥಾನಗಳನ್ನು ತೋರಿಸುತ್ತಿದೆಯೋ ಎಂಬಂತೆ ಶೋಭಿಸುತ್ತಿದ್ದಿತು.

**ಚಾಂಪಕಂ ವನಮತ್ರಾಭಾತ್ಸುಮನೋಭರಭೂಷಣಮ್ ।**
**ವನಂ ದೀಪಾಂಗವೃಕ್ಷಾಣಾಂ ವಿಭುಂ [೧೧]ಭಕ್ತುಮಿವಾಗತಾವ್॥ ೧೮೨ ॥**

ಈ ಸಮವಸರಣಭೂಮಿಯಲ್ಲಿ ಪುಷ್ಪಗಳ ಭಾರವೇ ಭೂಷಣವಾಗುಳ್ಳ ಚಂಪಕವೃಕ್ಷಗಳ ವನವು ಸ್ವಾಮಿಯನ್ನು ಭಜಿಸುವುದಕ್ಕೋಸ್ಕರ ಬಂದಿರುವ ಜ್ಯೋತಿರಂಗಕಲ್ಪವೃಕ್ಷಗಳ ವನದಂತೆ ಶೋಭಿಸುತ್ತಿದ್ದಿತು.

೧ ಹರಿತಾ. ೨ ಸ್ನಿಗ್ಧಶೋಭಾಸಹಿತಂ. ೩ ವಿಕಸಿತ ಪುಷ್ಪಂ. ೪ ಶೋಭಾಸಹಿತಂ. ೫ ಪಕ್ಷೇ ವಸ್ತ್ರಪರ್ಯಂತಾಂ ಚಿತಂ. ೬ ಮೇಘಃ ಪಕ್ಷೇ ಕುಚಃ. ೭ ಸಪ್ತಚ್ಛದಸಂಬಂಧಿ. ೮ ಸಜ್ಜಾತಿಃ ಸದ್ಗೃಹಸ್ಥತ್ವಂ ಪಾರಿವ್ರಾಜ್ಯಂ ಸುರೇಂದ್ರತಾ । ಸಾಮ್ರಾಜ್ಯಂ ಪರಮಾರ್ಹಂತ್ಯಂ ನಿರ್ವಾಣಂ ಚೇತಿ ಸಪ್ತಧಾ. ೯ ಇವ. ೧೦ ಪ್ರತಿಗ್ರಂಥಿ. ೧೧ ಸೇವಿತುಂ.

**ಕಮ್ರಮಾಮ್ರವನಂ ರೇಜೇ ಕಲಕಂಠೀಕಲಸ್ವನೈಃ ।**
**ಸ್ತುವಾನಮಿವ ಭಕ್ತ್ಯೈನ[೧]ಮೀಶಾನಂ ಪುಣ್ಯಶಾಸನವ್ ॥ ೧೮೩ ॥**

ಮನೋಹರವಾದ ಮಾವಿನ ವೃಕ್ಷಗಳ ವನವು ಹೆಣ್ಣುಕೋಗಿಲೆಗಳ ಮನೋಹರವಾದ ಶಬ್ದಗಳಿಂದ ಪುಣ್ಯಕರವಾದ ಉಪದೇಶವುಳ್ಳ ಸ್ವಾಮಿಯನ್ನು ಭಕ್ತಿಯಿಂದ ಸ್ತೋತ್ರಮಾಡುವಂತೆ ಶೋಭಿಸುತ್ತಿದ್ದಿತು.

**ಅಶೋಕವನಮಧ್ಯೇಭೂದಶೋಕಾನೋಕಹೋ ಮಹಾನ್ ।**
**ಹೈಮಂ ತ್ರಿಮೇಖಲಂ ಪೀಠಂ ಸಮುತ್ತುಂಗಮಧಿಷ್ಠಿತಃ ॥ ೧೮೪ ॥**

ಅಶೋಕವನದ ಮಧ್ಯದಲ್ಲಿ ದೊಡ್ಡದಾದ ಅಶೋಕವೃಕ್ಷವು ಉನ್ನತವಾದ ಮೂರಂತಸ್ತಿನ ಬಂಗಾರದ ಪೀಠದ ಮೇಲೆ ಸ್ಥಾಪಿಸಲ್ಪಟ್ಟಿದ್ದಿತು.

**ಚತುರ್ಗೋಪುರಸಂಬದ್ಧತ್ರಿಸಾಲಪರಿವೇಷ್ಟಿತಃ ।**
**ಛತ್ರಚಾಮರಭೃಂಗಾರಕಲಶಾದ್ಯೈ[೨]ರುಪಸ್ಕೃತಃ ॥ ೧೮೫ ॥**

**ಜಂಬೂದ್ವೀಪಸ್ಥಲೀಮಧ್ಯೇ ಭಾತಿ ಜಂಬೂದ್ರುಮೋ ಯಥಾ ।**
**ತಥಾ ವನಸ್ಥಲೀಮಧ್ಯೇ ಸ ಬಭೌ ಚೈತ್ಯಪಾದಪಃ ॥ ೧೮೬ ॥**

ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಗೋಪುರಗಳಿಂದ ಯುಕ್ತವಾಗಿರುವ ಮೂರು ಕೋಟೆಗಳಿಂದ ಸುತ್ತಲ್ಪಟ್ಟಿರುವುದೂ ಛತ್ರ ಚಾಮರ ಗಿಂಡಿ ಕಲಶ ಮೊದಲಾದ ಮಂಗಲದ್ರವ್ಯಗಳಿಂದಲಂಕೃತವೂ ಆದ ಆ ಅಶೋಕಚೈತ್ಯವೃಕ್ಷವು ಜಂಬೂದ್ವೀಪದ ಮಧ್ಯದಲ್ಲಿ ಜಂಬೂ(ನೇರಳೆ)ವೃಕ್ಷವು ಶೋಭಿಸುವಂತೆ ಅಶೋಕವನಪ್ರದೇಶದ ಮಧ್ಯದಲ್ಲಿ ಶೋಭಿಸುತ್ತಿದ್ದಿತು.

**ಶಾಖಾಗ್ರವ್ಯಾಪ್ತ [೩]ವಿಶ್ವಾಶಃ ಸ ರೇಜೇಶೋಕಪಾದಪಃ ।**
**ಅಶೋಕಮಯಮೇವೇದಂ ಜಗತ್ಕರ್ತುಮಿವೋದ್ಯತಃ ॥ ೧೮೭ ॥**

ಕೊಂಬೆಗಳ ಅಗ್ರಭಾಗಗಳಿಂದ ಸಮಸ್ತ ದಿಕ್ಕುಗಳನ್ನು ವ್ಯಾಪಿಸಿರುವ ಆ ಅಶೋಕವೃಕ್ಷವು ಈ ಲೋಕವನ್ನು ಶೋಕರಹಿತವನ್ನಾಗಿ ಮಾಡುವುದಕ್ಕೋಸ್ಕರ ಪ್ರಯತ್ನಪಟ್ಟಿದೆಯೋ ಎಂಬಂತೆ ಶೋಭಿಸುತ್ತಿದ್ದಿತು.

**ಸುರಭೀಕೃತವಿಶ್ವಾಶೈಃ ಕುಸುಮೈಃ ಸ್ಥಗಿತಾಂಬರಃ ।**
**[೪]ಸಿದ್ಧಾಧ್ವಾನಮಿವಾರುಂಧನ್ರೇಜೇಸೌ ಚೈತ್ಯಪಾದಪಃ ॥ ೧೮೮ ॥**

ಸಮಸ್ತ ದಿಕ್ಕುಗಳಲ್ಲೂ ಪರಿಮಳವನ್ನುಂಟುಮಾಡಿರುವ ಪುಷ್ಪಗಳಿಂದ ಆಕಾಶವನ್ನಾವರಿಸಿರುವ ಈ ಚೈತ್ಯವೃಕ್ಷವು ಮೇಘಮಾರ್ಗವನ್ನು ತಡೆಯುವಂತೆ ಶೋಭಿಸುತ್ತಿದ್ದಿತು.

**[೫]ಗಾರುಡೋಪಲನಿರ್ಮಾಣೈಃ ಪತ್ರೈಶ್ಚಿತ್ರೈಶ್ಚಿತೋಭಿತಃ ।**
**ಪದ್ಮರಾಗಮಯೈಃ ಪುಷ್ಪಸ್ತಬಕೈಃ ಪರಿತೋ ವೃತಃ ॥ ೧೮೯ ॥**

**ಹಿರಣ್ಮಯಮಹೋದಗ್ರಶಾಖೋ ವಜ್ರೀ[೬]ದ್ಧಬುಧ್ನಕಃ ।**
**ಕಲಾಲಿಕುಲಝಂಕಾರೈಸ್ತರ್ಜಯನ್ನಿವ ಮನ್ಮಥಮ್ ॥ ೧೯೦ ॥**

**ಸುರಾಸುರನರೇಂದ್ರಾಂ[೭]ತರಕ್ಷೇಭಾಲಾನವಿಗ್ರಹಃ ।**
**ಸ್ವಪ್ರಭಾಪರಿವೇಷೇಣ ದ್ಯೋತಿತಾಖಿಲದಿಙ್ಮುಖಃ ॥ ೧೯೧ ॥**

**[೮]ರಣದಾಲಂಬಿಘಂಟಾಭಿರ್ಬಧಿರೀಕೃತ[೯]ವಿಶ್ವಭೂಃ ।**
**[೧೦]ಭೂರ್ಭುವಃಸ್ವರ್ಜಯಂ ಭರ್ತುಃ ಪ್ರತೋಷಾದಿವ ಘೋಷಯನ್ ॥**

**ಧ್ವಜಾಂಶುಕ[೧೧]ಪರಾಮೃಷ್ಟನಿರ್ಮೇಘ[೧೨]ಘನಪದ್ಧತಿಃ ।**
**ಜಗಜ್ಜನಾಂಗಸಂಲಗ್ನಮಾಗಃ [೧೩]ಪರಿಮೃಜನ್ನಿವ ॥ ೧೯೩ ॥**

೧ ಪ್ರಭುಂ. ೨ ಅಲಂಕೃತಃ. ೩ ನಿಖಿಲದಿಕ್. ೪ ದೇವಪಥಂ (ಮೇಘಂ). ೫ ಮರಕತಮಣಿಃ. ೬ ದೀಪ್ತಮೂಲಃ. ೭ ಮನಇಂದ್ರಿಯಗಜಬಂಧನಮೂರ್ತಿಃ. ೮ ಧ್ವನತ್. ೯ ವಿಶ್ವಭೂಮಿಃ. ೧೦ ಭೂಲೋಕನಾಗಲೋಕಸ್ವರ್ಗಜಯಂ. ೧೧ ಸಮ್ಮಾರ್ಜಿತಃ. ೧೨ ಮೇಘಮಾರ್ಗಃ. ೧೩ ಸಮ್ಮಾರ್ಜಯನ್.

ಮೂರ್ಧ್ನಾ ಛತ್ರತ್ರಯಂ ಬಿಭ್ರನ್ಮುಕ್ತಾಲಂಬನಭೂಷಿತಮ್ ।
ವಿಭೋಸ್ತ್ರಿಭುವನೈಶ್ವರ್ಯಂ ವಿನಾ ವಾಚೇವ ದರ್ಶಯನ್ ॥ ೧೯೪ ॥

ಸುತ್ತಲೂ ಪಚ್ಚೆರತ್ನಗಳಿಂದ ನಿರ್ಮಿತವೂ ನಾನಾಪ್ರಕಾರವೂ ಆದ ಎಲೆಗಳಿಂದಲೂ ಕೆಂಪುರತ್ನಮಯವಾದ ಪುಷ್ಪಗಳ ಗೊಂಚಲುಗಳಿಂದಲೂ ವ್ಯಾಪ್ತವೂ ಬಂಗಾರ ಮಯವಾದ ಉನ್ನತಶಾಖೆಗಳುಳ್ಳದೂ ವಜ್ರದಿಂದ ಪ್ರಕಾಶಮಾನವಾದ ಬುಡವುಳ್ಳದೂ ಮನೋಹರವಾದ ಶಬ್ದವುಳ್ಳ ಭ್ರಮರಗಳ ಸಮೂಹದ ಝೇಂಕಾರಗಳಿಂದ ಮನ್ಮಥನನ್ನು ತಿರಸ್ಕರಿಸುವಂತಿರುವುದೂ ದೇವತೆಗಳ ಅಸುರಕುಮಾರರ ಮತ್ತು ರಾಜರ ಮನಸ್ಸನ್ನು ಇಂದ್ರಿಯಗಳೆಂಬ ಆನೆಗಳನ್ನು ಬಂಧಿಸುವ ಸ್ತಂಭದ ಆಕಾರವುಳ್ಳದೂ ಸುತ್ತಿಕೊಂಡಿರುವ ತನ್ನ ಪ್ರಭೆಯಿಂದ ಸಮಸ್ತದಿಕ್ಕುಗಳನ್ನು ಪ್ರಕಾಶಪಡಿಸಿರುವುದೂ ತೂಗಿರುವ ಘಂಟೆಗಳ ಶಬ್ದಗಳಿಂದ ಸಮಸ್ತಭೂಮಿಯನ್ನು ಕಿವುಡುಮಾಡಿರುವುದೂ ಸಂತೋಷದಿಂದ ಸ್ವಾಮಿಯ ಭೂಲೋಕ ನಾಗಲೋಕ ಸ್ವರ್ಗಲೋಕಗಳ ಜಯವನ್ನು ಹೇಳುವಂತಿರುವುದೂ ಮೇಘರಹಿತವಾದ ಆಕಾಶಮಾರ್ಗವನ್ನು ಧ್ವಜವಸ್ತ್ರಗಳಿಂದ ಗುಡಿಸುವಂತಿರುವುದೂ ಜಗತ್ತಿನ ಜನರ ಶರೀರಗಳಲ್ಲಿ ಸಂಬಂಧಿಸಿಕೊಂಡಿರುವ ಪಾಪಗಳನ್ನು ಹೋಗಲಾಡಿಸುವಂತಿರುವುದೂ ಆದ ಆ ಚೈತ್ಯವೃಕ್ಷವು ತೂಗುಹಾಕಿರುವ ಮುತ್ತುಗಳಿಂದಲಂಕೃತವಾದ ಛತ್ರತ್ರಯಗಳನ್ನು ಮಸ್ತಕದಿಂದ ಧರಿಸಿದುದಾಗಿ ಸ್ವಾಮಿಯು ಮೂರುಲೋಕಕ್ಕೆ ಅಧಿಪತಿಯಾಗಿರುವುದನ್ನು ವಚನದಿಂದ ಹೇಳದೆ ಆಕಾರದಿಂದ ತೋರಿಸುತ್ತಿದೆಯೋ ಎಂಬಂತಿದ್ದಿತು.

ಭ್ರೇಜಿರೇ [1]ಬುಧ್ನಭಾಗೇಸ್ಯ ಪ್ರತಿಮಾ ದಿಕ್ಚತುಷ್ಟಯೇ ।
ಜಿನೇಶ್ವರಾಣಾಮಿಂದ್ರಾದ್ಯೈಃ ಸಮವಾಪ್ತಾ[2]ಭಿಷೇಚನಾಃ ॥ ೧೯೫ ॥

ಈ ಚೈತ್ಯವೃಕ್ಷದ ಬುಡದಲ್ಲಿ ನಾಲ್ಕುದಿಕ್ಕುಗಳಲ್ಲೂ ದೇವೇಂದ್ರ ಮೊದಲಾದವರಿಂದ ಅಭಿಷೇಕಮಾಡಲ್ಪಟ್ಟ ಜಿನೇಶ್ವರರ ಪ್ರತಿಮೆಗಳು ಪ್ರಕಾಶಿಸುತ್ತಿದ್ದುವು.

ಗಂಧಸ್ರಗ್ಧೂಪದೀಪಾರ್ಘ್ಯೈಃ ಫಲೈರಪಿ ಸಹಾಕ್ಷತೈಃ ।
ತತ್ರ ನಿತ್ಯಾರ್ಚನಂ ದೇವಾ [3]ಜಿನಾರ್ಚಾನಾಂ ವಿತೇನಿರೇ ॥ ೧೯೬ ॥

ಅಲ್ಲಿ ದೇವತೆಗಳು ಯಾವಾಗಲೂ ಗಂಧಾಕ್ಷತಪುಷ್ಪ ದೀಪಧೂಪಫಲಾರ್ಘ್ಯಗಳಿಂದ ಜಿನಬಿಂಬಗಳನ್ನು ಪೂಜಿಸುತ್ತಿದ್ದರು.

ಕ್ಷೀರೋದೋದಕಧೌತಾಂಗೀರಮಲಾಸ್ತಾ ಹಿರಣ್ಮಯೀಃ ।
ಪ್ರಣಿಪತ್ಯಾರ್ಹತಾಮರ್ಚಾಃ [4]ಪ್ರಾನರ್ಚುರ್ನೃಸುರಾಸುರಾಃ ॥ ೧೯೭ ॥

ಮನುಷ್ಯರೂ ದೇವತೆಗಳೂ ಅಸುರಕುಮಾರರೂ ಕ್ಷೀರಸಮುದ್ರದ ಜಲದಿಂದ ತೊಳೆಯಲ್ಪಟ್ಟುದೂ ನಿರ್ಮಲವೂ ಸುವರ್ಣಮಯವೂ ಆದ ಆ ಜಿನೇಶ್ವರ ಪ್ರತಿಮೆಗಳನ್ನು ವಂದಿಸಿ ಪೂಜಿಸುತ್ತಿದ್ದರು.

ಸ್ತುವಂತಿ ಸ್ತುತಿಭಿಃ ಕೇಚಿ[5]ದರ್ಥ್ಯಾಭಿಃ ಪ್ರಣಮಂತಿ ಚ ।
ಸ್ಮೃತ್ವಾವಧಾರ್ಯ ಗಾಯಂತಿ ಕೇಚಿತ್ಸ್ಮ ಸುರಸತ್ತಮಾಃ ॥ ೧೯೮ ॥

ಉತ್ತಮರಾದ ಕೆಲವು ದೇವತೆಗಳು ಅರ್ಥಗರ್ಭಿತವಾದ ಸ್ತುತಿಗಳಿಂದ ಸ್ತೋತ್ರ ಮಾಡುತ್ತಿದ್ದರು. ಕೆಲವರು ನಮಸ್ಕರಿಸುತ್ತಿದ್ದರು. ಕೆಲವರು ಸ್ಮರಿಸಿ ಲಕ್ಷ್ಯವಿಟ್ಟು ಗಾನಮಾಡುತ್ತಿದ್ದರು. ಜಿನೇಶ್ವರನ ಗುಣಗಳನ್ನು ಸ್ಮರಿಸಿ ಗಾನಮಾಡುತ್ತಿದ್ದರೆಂದು ಭಾವವು.

ಯಥಾಶೋಕಸ್ತಥಾನ್ಯೇಪಿ ವಿಜ್ಞೇಯಾಶ್ಚೈತ್ಯಭೂರುಹಾಃ ।
ವನೇ ಸ್ವೇ ಸ್ವೇ ಸಜಾತೀಯಾ ಜಿನಬಿಂಬೇದ್ಧಬುಧ್ನಕಾಃ ॥ ೧೯೯ ॥

ಅಶೋಕವೃಕ್ಷದಂತೆ ಏಳೆಲೆಬಾಳೆ ಮೊದಲಾದ ಚೈತ್ಯವೃಕ್ಷಗಳೂ ತಂತಮ್ಮ ವನದಲ್ಲಿ ಜಿನಬಿಂಬಗಳಿಂದ ಪ್ರಕಾಶಮಾನವಾದ ಮೂಲ(ಬುಡ)ಪ್ರದೇಶವುಳ್ಳುವುಗಳಾಗಿದ್ದುವು.

೧ ಮೂಲಪ್ರದೇಶೇ. ೨ ಅಭಿಷೇಚನೈರಿತ್ಯಪಿ ಪಾಠಃ. ೩ ಜಿನಪ್ರತಿಮಾನಾಂ. ೪ ಅರ್ಚಯಂತಿಸ್ಮ. ೫ ಅರ್ಥಾದನಪೇತಾಭಿಃ.

ಅಶೋಕಃ ಸಪ್ತಪರ್ಣಶ್ಚ ಚಂಪಕಶ್ಚೂತ ಏವ ಚ ।
ಚತ್ವಾರೋಮೀ ವನೇಷ್ವಾಸನ್ನೋತ್ತುಂಗಾಶ್ಚೈತ್ಯಪಾದಪಾಃ ॥ ೨೦೦ ॥

ಆ ನಾಲ್ಕು ವನಗಳಲ್ಲಿ ಅಶೋಕ ಏಳೆಲೆಬಾಳೆ ಚಂಪಕ ಮಾವು ಈ ನಾಲ್ಕು ಉನ್ನತವಾದ ಚೈತ್ಯವೃಕ್ಷಗಳಾಗಿದ್ದುವು.

ಚೈತ್ಯಾಧಿಷ್ಠಿತಬುಧ್ನತ್ವಾದೂಢ[1]ತನ್ನಾಮರೂಢಯಃ ।
ಶಾಖಿನೋಮೀ ವಿಭಾಂತಿ ಸ್ಮ ಸುರೇಂದ್ರೈಃ ಪ್ರಾಪ್ತಪೂಜನಾಃ ॥ ೨೦೧ ॥

ಬುಡದಲ್ಲಿ ಜಿನಬಿಂಬಗಳಿರುವುದರಿಂದ ಚೈತ್ಯವೃಕ್ಷಗಳೆಂದು ರೂಢಿಯನ್ನು ಹೊಂದಿರುವ ಈ ಚೈತ್ಯವೃಕ್ಷಗಳು ದೇವೇಂದ್ರರಿಂದ ಪೂಜಿಸಲ್ಪಟ್ಟುವುಗಳಾಗಿ ಶೋಭಿಸುತ್ತಿದ್ದುವು. (ಜಿನಬಿಂಬಕ್ಕೆ ಚೈತ್ಯವೆಂದು ಹೆಸರು)

[2]ಫಲೈರಲಂಕೃತಾ ದೀಪ್ರಾಃ [3]ಸ್ವಪಾದಾಕ್ರಾಂತಭೂತಲಾಃ ।
[4]ಪಾರ್ಥಿವಾಃ ಸತ್ಯಮೇವೈತೇ [5]ಪಾರ್ಥಿವಾಃ [6]ಪತ್ರಸಂಭೃತಾಃ ॥ ೨೦೨ ॥

ಫಲಗಳಿಂದಲಂಕೃತಗಳೂ ಪ್ರಕಾಶಮಾನಗಳೂ ತಮ್ಮ ಬೇರುಗಳಿಂದ ಭೂತಲವನ್ನಾಕ್ರಮಿಸಿದುವೂ ಪೃಥಿವೀಮಯವೂ ಎಲೆಗಳನ್ನು ಧರಿಸಿರುವುವೂ ಆದ ವೃಕ್ಷಗಳು ನಿಜವಾಗಿಯೂ ಇಷ್ಟಫಲಗಳಿಂದಲಂಕೃತರೂ ಪ್ರಕಾಶಮಾನರೂ ತಮ್ಮ ಕಾಲುಗಳಿಂದ ಭೂಮಿಯನ್ನಾಕ್ರಮಿಸಿರುವವರೂ ವಾಹನಗಳುಳ್ಳವರೂ ಪೃಥಿವೀಪತಿಗಳೂ ಆದ ರಾಜರುಗಳಂತಿದ್ದುವು.

ಪ್ರವ್ಯಂಜಿತಾನುರಾಗಾಃ ಸ್ವೈಃ ಪಲ್ಲವೈಃ ಕುಸುಮೋತ್ಕರೈಃ ।
ಪ್ರಸಾದಂ ದರ್ಶಯಂತೋಂತರ್ವಿಭುಂ ಭೇಜುರಿಮೇ ದ್ರುಮಾಃ ॥

ತಮ್ಮ ಚಿಗುರೆಲೆಗಳಿಂದ ಅನುರಾಗ(ಭಕ್ತಿ)ವನ್ನು ವ್ಯಕ್ತಪಡಿಸುವಂತೆಯೂ ಪುಷ್ಪಸಮೂಹಗಳಿಂದ ಅಂತರಂಗದಲ್ಲಿರುವ ಪ್ರಸನ್ನತೆ(ಸಂತೋಷ)ಯನ್ನು ತೋರಿಸುವಂತೆಯೂ ಇರುವ ಈ ವೃಕ್ಷಗಳು ಸ್ವಾಮಿಯ ಸೇವೆಮಾಡುತ್ತಿದ್ದುವು.

ತರೂಣಾಮೇವ ತಾವಾಂಶ್ಚೇದೀದೃಶೋ ವಿಭವೋದಯಃ ।
ಕಿಮಸ್ತಿ ವಾಚ್ಯಮೀಶಸ್ಯ ವಿಭವೇನಿದ್ಧಶಾತ್ಮನಃ ॥ ೨೦೪ ॥

ವೃಕ್ಷಗಳಿಗೇ ಈ ವಿಧವಾದ ಅಷ್ಟು ವೈಭವವೆಂದಾದ ಮೇಲೆ ಇನ್ನು ಉಪಮಾರಹಿತನಾದ ಜಿನೇಶ್ವರನ ವೈಭವದ ವಿಷಯದಲ್ಲಿ ಹೇಳತಕ್ಕುದೇನಿದೆ ?

ತತೋ ವನಾನಾಂ ಪರ್ಯಂತೇ ಬಭೂವ ವನವೇದಿಕಾ ।
ಚತುರ್ಭಿರ್ಗೋಪುರೈಸ್ತುಂಗೈರಾರುದ್ಧಗಗನಾಂಗಣಾ ॥ ೨೦೫ ॥

ತರುವಾಯ ಆ ಹಿಂದೆ ಹೇಳಿದ ವನಗಳಸಮೀಪದಲ್ಲಿ ವನವೇದಿಕೆ(ಜಗುಲಿ-ಕಟ್ಟೆ)ಯು ಉನ್ನತವಾದ ನಾಲ್ಕುಗೋಪುರಗಳಿಂದ ಆಕಾಶಪ್ರದೇಶವನ್ನಾವರಿಸಿದ್ದಿತು.

ಕಾಂಚೀಯಷ್ಟಿರ್ವನಸ್ಯೇವ ಸಾ ಬಭೌ ವನವೇದಿಕಾ ।
ಚಾಮೀಕರಮಯೀ ರತ್ನೈಃ ಖಚಿತಾಂಗೀ ಸಮಂತತಃ ॥ ೨೦೬ ॥

ಸುತ್ತಲೂ ರತ್ನಖಚಿತವೂ ಸುವರ್ಣಮಯವೂ ಆದ ಆ ವನವೇದಿಕೆಯು, ವನದ ಡಾಬಿನಂತೆ ಶೋಭಿಸುತ್ತಿದ್ದಿತು.

ಸಾ ಬಭೌ ವೇದಿಕೋ[7]ದಗ್ರಾ [8]ಸಚರ್ಯಾ [9]ಸಮಯಾ ವನಮ್ ।
ಭವ್ಯ[10]ಧೀರಿವ ಸಂಶ್ರಿತ್ಯ [11]ಸಚರ್ಯಾ [12]ಸಮಯಾವನಮ್ ॥ ೨೦೭ ॥

೧ ಚೈತ್ಯವೃಕ್ಷನಾಮಪ್ರಸಿದ್ಧಯಃ. ೨ ಪಕ್ಷೇ ಇಷ್ಟಫಲೈಃ. ೩ ಸ್ವಪಾದೈರಾಕ್ರಾಂತಂ ಭೂತಲಂ ಯೈಸ್ತೇ ಪಕ್ಷೇ ಸ್ವಪಾದೇಷ್ವಾಕ್ರಾಂತಂ ಭೂತಲಂ ಯೇಷಾಂತೇ. ೪ ಪೃಥಿವ್ಯಾ ಈಶಾಃ ಪಾರ್ಥಿವಾಃ ಪೃಥಿವೀಮಯಾ ವಾ. ೫ ಪೃಥಿವ್ಯಾಂ ಭವಾಃ ಪಾರ್ಥಿವಾಃ (ವೃಕ್ಷಾಃ). ೬ ಪಕ್ಷೇ ವಾಹನಸಂಭೃತಾಃ ಪತ್ರಂ ವಾಹನಪರ್ಣಯೋಃ. ೭ ಉನ್ನತಾ. ೮ ಸವಪ್ರಾ. ೯ ವನಸ್ಯ ಸಮೀಪಂ. ೧೦ ಬುದ್ಧಿಃ. ೧೧ ಸಚಾರಿತ್ರಾ. ೧೨ ಸಿದ್ಧಾಂತರಕ್ಷಣಂ.

ವನದ ಸಮೀಪದಲ್ಲಿ ಕಂದಕಗಳೊಡನೆ ಯುಕ್ತವಾಗಿರುವ ಈ ಉನ್ನತವಾದ ವನವೇದಿಕೆಯು, ಸಿದ್ಧಾಂತ(ಆಗಮ)ದ ರಕ್ಷಣೆಯನ್ನಾಶ್ರಯಿಸಿ ಚಾರಿತ್ರಸಹಿತವಾಗಿರುವ ಭವ್ಯರ ಬುದ್ಧಿಯಂತೆ ಶೋಭಿಸುತ್ತಿದ್ದಿತು. ವನವೇದಿಕೆಯು ಶಾಸ್ತ್ರೋಕ್ತವಾದ ಚಾರಿತ್ರಸಂಪನ್ನರಾದ ಭವ್ಯರ ಬುದ್ಧಿಯಂತೆ ನಿರ್ಮಲವಾಗಿದ್ದಿತೆಂದು ಭಾವವು.

**[೧]ಸುಗುಪ್ತಾಂಗೀ ಸತೀವಾಸೌ ರುಚಿರಾ [೨]ಸೂತ್ರಪಾ ವನಮ್ ।**
**[೩]ಪರೀಯಾಯ ಶ್ರುತಂ ಜೈನಂ ಸದ್ಧೀರ್ವಾ [೪]ಸೂತ್ರಪಾವನಮ್ ॥**

ಶಾಸ್ತ್ರವನ್ನು ಪಾಲಿಸುವವಳೂ ಸುರಕ್ಷಿತವಾದ ಶರೀರವುಳ್ಳವಳೂ ಆದ ಪತಿವ್ರತಾಸ್ತ್ರೀಯಂತೆ, ಸೂತ್ರಾನುಸಾರವೂ ಮನೋಹರವೂ ಆದ ಈ ವೇದಿಕೆಯು, ಸೂತ್ರದಿಂದ ಪವಿತ್ರ ಮಾಡಲು ಸಮರ್ಥವಾಗಿರುವ ಜೈನಶಾಸ್ತ್ರವನ್ನು ಒಳ್ಳೆಯ ಬುದ್ಧಿಯು ವ್ಯಾಪಿಸುವಂತೆ, ವನವನ್ನು ಆವರಿಸಿಕೊಂಡಿದ್ದಿತು.

**ಘಂಟಾಜಾಲಾನಿ ಲಂಬಾನಿ [೫]ಮುಕ್ತಾಲಂಬನಕಾನಿ ಚ ।**
**ಪುಷ್ಪಸ್ರಜಶ್ಚ ಸಂರೇಜುರಮುಷ್ಯಾಂ ಗೋಪುರಂ ಪ್ರತಿ ॥ ೨೦೯ ॥**

ಈ ವೇದಿಕೆಯ ಪ್ರತಿಯೊಂದು ಗೋಪುರದಲ್ಲೂ ತೂಗುಹಾಕಿರುವ ಘಂಟೆಗಳ ಸಮೂಹಗಳೂ ಮುತ್ತಿನ ಮಾಲೆಗಳೂ ಪುಷ್ಪಮಾಲಿಕೆಗಳೂ ಅಧಿಕವಾಗಿ ಶೋಭಿಸುತ್ತಿದ್ದುವು.

**[೬]ರಾಜತಾನಿ ಬಭುಸ್ತಸ್ಯಾ ಗೋಪುರಾಣ್ಯಷ್ಟಮಂಗಲೈಃ ।**
**ಸಂಗೀತಾತೋದ್ಯನೃತ್ತ್ಯೈಶ್ಚ ರತ್ನಾಭರಣತೋರಣೈಃ ॥ ೨೧೦ ॥**

ಆ ವೇದಿಕೆಯ ಬೆಳ್ಳಿಯುಮಯವಾದ ಗೋಪುರಗಳು ಕಲಶ ತಾಳಮುಂತಾದ ಅಷ್ಟಮಂಗಲದ್ರವ್ಯಗಳಿಂದಲೂ ಸಂಗೀತಗಳಿಂದಲೂ ವಾದ್ಯಗಳಿಂದಲೂ ನೃತ್ಯಗಳಿಂದಲೂ ರತ್ನಾಭರಣಗಳಿಂದ ಮಾಡಿದ ತೋರಣಗಳಿಂದಲೂ ಶೋಭಿಸುತ್ತಿದ್ದುವು.

**ತತಃ ಪರಮಲಂ ಚಕ್ರುರ್ವಿವಿಧಾ ಧ್ವಜಪಙ್ಕ್ತಯಃ ।**
**ಮಹೀಂ ವೀಥ್ಯಂತರಾಲಸ್ಥಾಂ ಹೇಮಸ್ತಂಭಾಗ್ರಲಂಬಿತಾಃ ॥ ೨೧೧ ॥**

ತರುವಾಯ ಸುವರ್ಣಸ್ತಂಭಗಳ ತುದಿಯಲ್ಲಿಕಟ್ಟಿರುವ ನಾನಾವಿಧವಾದ ಧ್ವಜಗಳಸಾಲುಗಳು ಸಮವಸರಣವೀಥಿಗಳ ಮಧ್ಯಭಾಗದಲ್ಲಿರುವ ಭೂಮಿಯನ್ನಲಂಕರಿಸಿದ್ದುವು.

**ಸುಸ್ಥಾಸ್ತೇ ಮಣಿಪೀಠೇಷು ಧ್ವಜಸ್ತಂಭಾಃ ಸ್ಫುರದ್ರುಚಃ ।**
**ವಿರೇಜುರ್ಜಗತಾಂ ಮಾನ್ಯಾಃ ಸುರಾಜಾನ ಇವೋನ್ನತಾಃ ॥ ೨೧೨ ॥**

ಅತ್ಯಂತದೃಢವೂ ಪ್ರಕಾಶಮಾನವಾದ ಕಾಂತಿಯುಳ್ಳವೂ ಉನ್ನತವೂ ಆದ ಆ ಧ್ವಜಸ್ತಂಭಗಳು ಲೋಕಪೂಜ್ಯರಾದ ಒಳ್ಳೆಯ ರಾಜರಂತೆ ರತ್ನಖಚಿತವಾದ ಪೀಠಗಳಲ್ಲಿ ಶೋಭಿಸುತ್ತಿದ್ದುವು.

**ಅಷ್ಟಾಶೀತ್ಯಂಗುಲಾನ್ಯೇಷಾಂ ರುಂದ್ರತ್ವಂ ಪರಿಕೀರ್ತಿತಮ್ ।**
**ಪಂಚವಿಂಶತಿಕೋದಂಡಾನ್ಯಮೀಷಾಮಂತರಂ ವಿದುಃ ॥ ೨೧೩ ॥**

ಈ ಧ್ವಜಸ್ತಂಭಗಳು ಎಂಬತ್ತೆಂಟು ಅಂಗುಲ ವಿಸ್ತಾರ(ಅಗಲ)ವಾದುವುಗಳೆಂದೂ ಒಂದುಸ್ತಂಭದಿಂದ ಇನ್ನೊಂದುಸ್ತಂಭಕ್ಕೆ ಇಪ್ಪತ್ತೈದು ಧನುಸ್ಸುಗಳ ಅಂತರ (ದೂರ) ವೆಂದೂ ಹೇಳಲ್ಪಟ್ಟಿದೆ.

**[೭]ಸಿದ್ಧಾರ್ಥಚೈತ್ಯವೃಕ್ಷಾಶ್ಚ ಪ್ರಾಕಾರವನವೇದಿಕಾಃ ।**
**ಸ್ತೂಪಾಃ ಸತೋರಣಾ ಮಾನಸ್ತಂಭಾಃ ಸ್ತಂಭಾಶ್ಚ [೮]ಕೈತವಾಃ ॥ ೨೧೪ ॥**

೧ ಸುರಕ್ಷಿತಾಂಗೀ. ೨ ಸೂತ್ರಂ ಪಾತೀತಿ ಸೂತ್ರಪಾ, ಪಕ್ಷೇ ಸೂತ್ರಮಾಗಮಂ ಪಾಲಯಂತೀತಿ ಸೂತ್ರಪಾ. ೩ ಪರಿವವ್ರೇ. ೪ ಸೂತ್ರೇಣ ಪವಿತ್ರೀಕರಣಕ್ಷಮಂ. ೫ ಮುಕ್ತಾದಾಮಾನಿ. ೬ ರಜತಮಯಾನಿ. ೭ ಸಿದ್ಧಾರ್ಥವೃಕ್ಷಾ ವಕ್ಷ್ಯಂತೇ ಚೈತ್ಯವೃಕ್ಷಾ ಉಕ್ತಾಃ. ೮ ಕೇತುಸಂಬಂಧಿನಃ.

**ಪ್ರೋಕ್ತಾಸ್ತೀರ್ಥಕೃದುತ್ಸೇಧಾದುತ್ಸೇಧೇನ [೧]ದ್ವಿಷಡ್ಗುಣಾಃ ।**
**ದೈರ್ಘ್ಯಾನುರೂಪಮೇತೇಷಾಂ ರೌಂದ್ರ್ಯಮಾಹುರ್ಮನೀಷಿಣಃ ॥ ೨೧೫ ॥**

ಸಿದ್ಧಾರ್ಥವೃಕ್ಷಗಳೂ ಚೈತ್ಯವೃಕ್ಷಗಳೂ ಕೋಟೆಗಳೂ ವನವೇದಿಕೆಗಳೂ ಸ್ತೂಪಗಳೂ ತೋರಣಸಹಿತವಾದ ಮಾನಸ್ತಂಭಗಳೂ ಧ್ವಜಪತಾಕೆಗಳುಳ್ಳ ಸ್ತಂಭಗಳೂ ವೃಷಭತೀರ್ಥಂಕರರ ಉತ್ಸೇಧ(ಔನ್ನತ್ಯ)ಕ್ಕಿಂತ ಹನ್ನೆರಡರಷ್ಟು (೬೦೦೦) ಧನುಸ್ಸು ಉನ್ನತವಾಗಿದ್ದುವು. ಈ ಸಿದ್ಧಾರ್ಥವೃಕ್ಷ ಮೊದಲಾದುವುಗಳ ವಿಸ್ತಾರವೂ ಔನ್ನತ್ಯಕ್ಕನುಗುಣವಾಗಿದ್ದಿತೆಂದು ವಿದ್ವಾಂಸರು ಹೇಳುತ್ತಾರೆ.

**ವನಾನಾಂ ಸಗೃಹಾಣಾಂ ಚ ಪರ್ವತಾನಾಂ ತಥೈವ ಚ ।**
**ಭವೇದುನ್ನತಿರೇಷೈವ ವರ್ಣಿತಾಗಮಕೋವಿದೈಃ ॥ ೨೧೬ ॥**

ಶಾಸ್ತ್ರಜ್ಞರು ವನಗಳ ಮನೆಗಳ ಮತ್ತು ಕ್ರೀಡಾಪರ್ವತಗಳ ಔನ್ನತ್ಯವನ್ನೂ ಹಿಂದೆ ಹೇಳಿದಷ್ಟೇ (೬೦೦೦) ವರ್ಣಿಸಿದ್ದಾರೆ.

**ಭವೇಯುರ್ಗಿರಯೋ ರುಂದ್ರಾಃ ಸ್ವೋತ್ಸೇಧಾ[೨]ದಷ್ಟಸಂಗುಣಮ್ ।**
**[೩]ಸ್ತೂಪಾನಾಂ ರೌಂದ್ರ್ಯಮುಚ್ಛ್ರಾಯಾ[೪]ತ್ಸಾತಿರೇಕಂ [೫]ವಿದೋ ವಿದುಃ ॥**

ಕ್ರೀಡಾಪರ್ವತಗಳು ತಮ್ಮ ಔನ್ನತ್ಯದ ಎಂಟನೆಯ ಒಂದಂಶ (೭೫೦ ಧನುಸ್ಸು) ವಿಸ್ತಾರವಾಗಿದ್ದುವು. ಹುತ್ತದ ಆಕಾರವುಳ್ಳ ಸ್ತೂಪಗಳು ತಮ್ಮ ಔನ್ನತ್ಯಕ್ಕಿಂತ ಸ್ವಲ್ಪ ಹೆಚ್ಚು ವಿಸ್ತಾರವಾಗಿದ್ದುವೆಂದು ವಿದ್ವಾಂಸರು ಹೇಳುತ್ತಾರೆ.

**ಉಶಂತಿ ವೇದಿಕಾದೀನಾಂ ಸ್ವೋತ್ಸೇಧಸ್ಯ [೬]ಚತುರ್ಥಕಮ್ ।**
**[೭]ಪಾರ್ಥವಂ ಪರಮಜ್ಞಾನಮಹಾಕೂಪಾರಪಾರಗಾಃ ॥ ೨೧೮ ॥**

ಮಹಾಜ್ಞಾನಸಂಪನ್ನರಾದ ಮುನಿಗಳು, ವನವೇದಿಕೆ ಮೊದಲಾದುವುಗಳು ತಮ್ಮ ಔನ್ನತ್ಯದ ನಾಲ್ಕನೆಯ ಒಂದುಭಾಗ (೧೫೦೦) ವಿಸ್ತಾರವಾಗಿದ್ದುವೆಂದು ಹೇಳುತ್ತಾರೆ.

**ಸ್ರಗ್ವಸ್ತ್ರ[೮]ಸಹಸಾನಾಬ್ಜಹಂಸ[೯]ವೀನಮೃಗೇಶಿನಾಮ್ ।**
**ವೃಷಭೇಭೇಂದ್ರಚಕ್ರಾಣಾಂ ಧ್ವಜಾಃ ಸ್ಯುರ್ದಶಭೇದಕಾಃ ॥ ೨೧೯ ॥**

ಧ್ವಜಗಳು ಪುಷ್ಪಮಾಲಿಕೆ ವಸ್ತ್ರ ನವಿಲು ಕಮಲ ಹಂಸ ಗರುಡ ಸಿಂಹ ಎತ್ತು ಆನೆ ಚಕ್ರ ಈ ಹತ್ತು ಭೇದವುಳ್ಳುವಾಗಿದ್ದುವು.

**ಅಷ್ಟೋತ್ತರಶತಂ ಜ್ಞೇಯಾಃ ಪ್ರತ್ಯೇಕಂ [೧೦]ಪಾಲಿಕೇತನಾಃ ।**
**ಏಕೈಕಸ್ಯಾಂ ದಿಶಿ ಪ್ರೋಚ್ಚಾಸ್ತರಂಗಾಸ್ತೋಯಧೇರಿವ ॥ ೨೨೦ ॥**

ಈ ಪ್ರತಿಯೊಂದು ಧ್ವಜಕ್ಕೂ ಪ್ರತಿಯೊಂದು ದಿಕ್ಕಿನಲ್ಲೂ ಉನ್ನತವಾದ ನೂರೆಂಟು ಪರಿವಾರಧ್ವಜಗಳು ಸಾಲಾಗಿ ಸಮುದ್ರದ ಅಲೆಗಳಂತಿದ್ದುವು.

**ಪವನಾಂದೋಲಿತಸ್ತೇಷಾಂ ಕೇತೂನಾಮಂಶುಕೋತ್ಕರಃ ।**
**[೧೧]ವ್ಯಾಜುಹೂಷುರಿವಾ[೧೨]ಭಾಸೀಜ್ಜಿನೇಜ್ಯಾಯೈ ನರಾಮರಾನ್॥ ೨೨೧ ॥**

ಗಾಳಿಯಿಂದ ಅಳ್ಳಾಡಿಸಲ್ಪಟ್ಟ ಆ ಧ್ವಜಗಳ ವಸ್ತ್ರಗಳು ಜಿನೇಶ್ವರನ ಪೂಜೆಗೋಸ್ಕರ ಮನುಷ್ಯರನ್ನೂ ದೇವತೆಗಳನ್ನೂ ಕರೆಯುತ್ತಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**[೧೩]ಸ್ರಗ್ಧ್ವಜೇಷು ಸ್ರಜೋ ದಿವ್ಯಾಃ [೧೪]ಸೌಮನಸ್ಯೋ [೧೫]ಲಲಂಬಿರೇ ।**
**ಭವ್ಯಾನಾಂ [೧೬]ಸೌಮನಸ್ಯಾಯ ಕಲ್ಪಿತಾಸ್ತ್ರಿದಿವಾಧಿಪೈಃ ॥ ೨೨೨ ॥**

೧ ದ್ವಾದಶಗುಣಾ (೬೦೦೦) ಇತ್ಯರ್ಥಃ. ೨ ಸಪ್ತಶತೋತ್ತರಪಂಚಾಶತ್ (೭೫೦). ೩ ವಲ್ಮೀಕಾಕಾರಾಣಾಂ. ೪ ಸಾಧಿಕಂ. ೫ ಸಮ್ಯಗ್ಜ್ಞಾನಿನಃ. ೬ ಚತುರ್ಥಭಾಗಂ. ೭ ಪೃಥುತ್ವಂ. ೮ ಮಯೂರಃ. ೯ ಗರುಡಃ. ೧೦ ಶ್ರೇಣಿಧ್ವಜಾಃ. ೧೧ ವ್ಯಾಹ್ವಾತುಮಿಚ್ಛುರಿವ. ೧೨ ಬಭೌ. ೧೩ ಸ್ರಗಂಕಿತಧ್ವಜೇಷು. ೧೪ ಕುಸುಮೈಃ ಕೃತಾಃ. ೧೫ ಲಂಬಿತಾಃ. ೧೬ ಸುಮನಸ್ಕತ್ವಾಯ.

ಭವ್ಯರಮನಸ್ಸು ಪ್ರಸನ್ನವಾಗುವುದಕ್ಕೋಸ್ಕರ ಸ್ವರ್ಗದ ದೇವತೆಗಳಿಂದ ರಚಿಸಲ್ಪಟ್ಟ ಶ್ರೇಷ್ಠವಾದ ಪುಷ್ಪಮಾಲಿಕೆಗಳು ಧ್ವಜಸ್ತಂಭಗಳಲ್ಲಿ ಜೋಲುತ್ತಿದ್ದುವು.

**[೧]ಶ್ಲಕ್ಷ್ಣಾಂಶುಕಧ್ವಜಾ ರೇಜುಃ ಪವನಾಂದೋಲಿತೋತ್ಥಿತಾಃ ।**
**ವ್ಯೋಮಾಂಬುಧೇರಿವೋದ್ಭೂತಾಸ್ತರಂಗಾಸ್ತುಂಗಮೂರ್ತಯಃ ॥ ೨೨೩ ॥**

ಉನ್ನತವೂ ಮೇಲುಭಾಗದಲ್ಲಿ ಗಾಳಿಯಿಂದ ಚಲಿಸಲ್ಪಡುತ್ತಿರುವುವೂ, ಸೂಕ್ಷ್ಮವಾದ ವಸ್ತ್ರಗಳಿಂದ ಮಾಡಲ್ಪಟ್ಟಿರುವುವೂ ಆದ ಧ್ವಜಗಳು ಆಕಾಶವೆಂಬ ಸಮುದ್ರದಿಂದುಂಟಾದ ಅಲೆಗಳಂತೆ ಶೋಭಿಸುತ್ತಿದ್ದುವು.

**ಬರ್ಹಿಧ್ವಜೇಷು [೨]ಬರ್ಹಾಲಿಂ ಲೀಲಯೋತ್ಕ್ಷಿಪ್ಯ ಬರ್ಹಿಣಃ ।**
**ರೇಜುರ್ಗ್ರಸ್ತಾಂಶುಕಾಃ ಸರ್ಪಬುದ್ಧ್ಯೇವ [೩]ಗ್ರಸ್ತಕೃತ್ತಯಃ ॥ ೨೨೪ ॥**

ನವಿಲುಗಳ ಚಿತ್ರಗಳುಳ್ಳ ಧ್ವಜಗಳಲ್ಲಿ ನವಿಲುಗಳು ಲೀಲೆಯಿಂದ ತಮ್ಮ ಗರಿಗಳ ಸಮೂಹವನ್ನು ಮೇಲಕ್ಕೆತ್ತಿ ಆ ವಸ್ತ್ರವನ್ನು ನುಂಗಿದವುಗಳಾಗಿ, ಸರ್ಪವೆಂಬ ಬುದ್ಧಿಯಿಂದ ಪೊರೆಯನ್ನು ನುಂಗಿದುವುಗಳಂತೆ, ಶೋಭಿಸುತ್ತಿದ್ದುವು.

**ಪದ್ಮಧ್ವಜೇಶು ಪದ್ಮಾನಿ ಸಹಸ್ರದಲ [೪]ಸಂಸ್ತರೈಃ ।**
**ನಭಃಸರಸಿ ಫುಲ್ಲಾನಿ ಸರೋಜಾನೀವ ರೇಜಿರೇ ॥ ೨೨೫ ॥**

ಕಮಲಗಳ ಚಿತ್ರಮಯವಾದ ಧ್ವಜಗಳಲ್ಲಿ ಸಾವಿರ ಎಸಳುಗಳಿಂದ ಯುಕ್ತವಾಗಿರುವ ಕಮಲಗಳು ಆಕಾಶವೆಂಬ ಸರೋವರದಲ್ಲಿ ವಿಕಸಿತವಾದ ಕಮಲಗಳಂತೆ ಶೋಭಿಸುತ್ತಿದ್ದುವು.

**ಅಧಃ[೫]ಪ್ರತಿಮಯಾ ತಾನಿ ಸಂಕ್ರಾಂತಾನಿ ಮಹೀತಲೇ ।**
**ಭ್ರಮರಾನ್ಮೋಹಯಂತಿ ಸ್ಮ ಪದ್ಮಬುದ್ಧ್ಯಾ[೬]ನುಪಾತಿನಃ ॥ ೨೨೬ ॥**

ಕೆಳಭಾಗದಲ್ಲಿ ಸಮವಸರಣಭೂಮಿಯಲ್ಲಿ ಪ್ರತಿಬಿಂಬಿಸಿರುವ ಆ ಕಮಲಗಳು ನಿಜವಾದ ಕಮಲವೆಂಬ ಬುದ್ಧಿಯಿಂದ ಅನುಸರಿಸುತ್ತಿರುವ ಭ್ರಮರಗಳನ್ನು ಭ್ರಮೆಗೊಳಿಸುತ್ತಿದ್ದುವು.

**[೭]ತೇಷಾಂ ತದಾತನೀಂ ಶೋಭಾಂ ದೃಷ್ಟ್ವಾ ನಾನ್ಯತ್ರ ಭಾವಿನೀಮ್ ।**
**ಕಂಜಾನ್ಯುತ್ಸೃಜ್ಯ ಕಾರ್ತ್ಸ್ನ್ಯೇನ ಲಕ್ಷ್ಮೀಸ್ತೇಷು ಪದಂ ದಧೇ ॥ ೨೨೭ ॥**

ಆ ಕಮಲಧ್ವಜಗಳು ಬೇರೆಕಡೆಯಲ್ಲಿಲ್ಲದಿರುವ ಆ ಕಾಲದ ಶೋಭೆಯನ್ನು ನೋಡಿ ಲಕ್ಷ್ಮಿಯು ನೀರಿನಲ್ಲಿ ಹುಟ್ಟುವ ಕಮಲಗಳನ್ನು ಸಂಪೂರ್ಣವಾಗಿ ಪರಿತ್ಯಜಿಸಿ, ಆ ಕಮಲಧ್ವಜಗಳಲ್ಲಿ ವಾಸಮಾಡುತ್ತಿದ್ದಳು.

**ಹಂಸಧ್ವಜೇಷ್ವ[೮]ಭುರ್ಹಂಸಾಶ್ಚಂಚ್ವಾ ಗ್ರಸಿತವಾಸಸಃ ।**
**ನಿಜಾಂ ಪ್ರಸಾರಯಂತೋ ವಾ ದ್ರವ್ಯಲೇಶ್ಯಾಂ [೯]ತದಾತ್ಮನಾ ॥ ೨೨೮ ॥**

ಹಂಸಚಿತ್ರಗಳುಳ್ಳ ಧ್ವಜಗಳಲ್ಲಿ ತಮ್ಮ ಕೊಕ್ಕಿನಿಂದ ವಸ್ತ್ರವನ್ನು ನುಂಗಿರುವ ಹಂಸಪಕ್ಷಿಗಳು ಆ ವಸ್ತ್ರರೂಪದಿಂದ ತಮ್ಮ ದ್ರವ್ಯಲೇಶ್ಯೆ (ಶುಕ್ಲಲೇಶ್ಯೆ) ಯನ್ನು ಹರಡುತ್ತಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ಗರುತ್ಮದ್ಧ್ವಜದಂಡಾಗ್ರಾಣ್ಯಧ್ಯಾಸೀನಾ [೧೦]ವಿನಾಯಕಾಃ ।**
**ರೇಜುಃ ಸ್ವೈಃ ಪಕ್ಷವಿಕ್ಷೇಪೈರ್ಲಿಲಂಘಯಿಷವೋ [೧೧]ನು ಖಮ್ ॥ ೨೨೯ ॥**

ಗರುಡನ ಚಿತ್ರಮಯವಾದ ಧ್ವಜಸ್ತಂಭಗಳ ಅಗ್ರಭಾಗಗಳಲ್ಲಿರುವ ಗರುಡಪಕ್ಷಿಗಳು - ಹರಡಿಕೊಂಡಿರುವ ತಮ್ಮ ರೆಕ್ಕೆಗಳಿಂದ ಆಕಾಶಕ್ಕೆ ಹಾರುವುದಕ್ಕಪೇಕ್ಷಿಸುತ್ತವೋ ಎಂಬಂತೆ ಶೋಭಿಸುತ್ತಿದ್ದುವು.

೧ ಸೂಕ್ಷ್ಮಂ. ೨ ಪಿಂಛಸಮೂಹಂ. ೩ ಗ್ರಸ್ತನಿರ್ಮೋಕಾಃ. ೪ ಸಮೂಹೈಃ. ೫ ಪ್ರತಿಬಿಂಬೇನ. ೬ ಅನುಗಚ್ಛತಃ. ೭ ಪದ್ಮಧ್ವಜಾನಾಂ. ೮ ಬಭುಃ. ೯ ಚಂಚ್ವಾ ಗ್ರಸ್ತವಸ್ತ್ರೇಣ. ೧೦ ವೀನಾಂ ಪಕ್ಷಿಣಾಂ ನಾಯಕಾ ಗರುಡಾಃ. ೧೧ ಇವ.

**ಬಭುರ್ನೀಲಮಣಿಕ್ಷ್ಮಾಸ್ಥಾ ಗರುಡಾಃ [೧]ಪ್ರತಿಮಾಗತಾಃ ।**
**ಸಮಾಕ್ರಷ್ಟುಮಿವಾಹೀಂದ್ರಾನ್ಪ್ರವಿಶಂತೋ ರಸಾತಲಮ್ ॥ ೨೩೦ ॥**

ನೀಲರತ್ನಮಯವಾದ ಸಮವಸರಣಭೂಮಿಯಲ್ಲಿ ಪ್ರತಿಬಿಂಬಿಸಿರುವ ಆ ಗರುಡಪಕ್ಷಿಗಳು ನಾಗೇಂದ್ರರನ್ನೆಳೆಯುವುದಕ್ಕೋಸ್ಕರ ಪಾತಾಳವನ್ನು ಪ್ರವೇಶ ಮಾಡುತ್ತವೋ ಎಂಬಂತೆ ಶೋಭಿಸುತ್ತಿದ್ದುವು.

**ಮೃಗೇಂದ್ರಕೇತನಾಗ್ರೇಷು ಮೃಗೇಂದ್ರಾಃ [೨]ಕ್ರಮದಿತ್ಸಯಾ ।**
**ಕೃತಯತ್ನಾ ವಿರೇಜುಸ್ತೇ ಜೇತುಂ ವಾ ಸುರಸಾಮಜಾನ್ ॥ ೨೩೧ ॥**

ಸಿಂಹಚಿತ್ರಗಳುಳ್ಳ ಧ್ವಜಗಳ ಅಗ್ರಭಾಗಗಳಲ್ಲಿ ಸಿಂಹಗಳು ಹೆಜ್ಜೆಯನ್ನಿಡಬೇಕೆಂಬಿಚ್ಛೆಯಿಂದ ಸುರಲೋಕದ ಆನೆಗಳನ್ನು ಜಯಿಸುವುದಕ್ಕೋಸ್ಕರ ಪ್ರಯತ್ನಮಾಡಿರುವುವುಗಳಂತೆ ಶೋಭಿಸುತ್ತಿದ್ದುವು.

**ಸ್ಥೂಲಮುಕ್ತಾಫಲಾನ್ಯೇಷಾಂ ಮುಖಲಂಬೀನಿ ರೇಜಿರೇ ।**
**ಗಜೇಂದ್ರಕುಂಭಸಂಭೇದಾತ್ಸಂಚಿತಾನಿ ಯಶಾಂಸಿ ವಾ ॥ ೨೩೨ ॥**

ಈ ಸಿಂಹಗಳ ಮುಖಗಳಲ್ಲಿ ಜೋಲುತ್ತಿರುವ ದೊಡ್ಡ ಮುತ್ತುಗಳು ದೊಡ್ಡ ಆನೆಗಳ ಕುಂಭಸ್ಥಳಗಳನ್ನು ಸೀಳಿದುದರಿಂದ ಗಳಿಸಿದ ಯಶಸ್ಸುಗಳಂತೆ ಶೋಭಿಸುತ್ತಿದ್ದುವು.

**ಉಕ್ಷಾಃ ಶೃಂಗಾಗ್ರಸಂಸಕ್ತಲಂಬಮಾನಧ್ವಜಾಂಶುಕಾಃ ।**
**ರೇಜುರ್ವಿಪಕ್ಷ[೩]ಜಿತ್ಯೇವ ಸಂಲಬ್ಧಜಯಕೇತನಾಃ ॥ ೨೩೩ ॥**

ಕೊಂಬುಗಳ ತುದಿಯಲ್ಲಿ ಸಿಕ್ಕಿ ಜೋಲುತ್ತಿರುವ ಧ್ವಜವಸ್ತ್ರಗಳುಳ್ಳ ವೃಷಭಗಳು ಶತ್ರುಗಳಾದ ವೃಷಭಗಳನ್ನು ಜಯಿಸಿದುದರಿಂದ ಪ್ರಾಪ್ತವಾದ ಜಯಧ್ವಜಗಳುಳ್ಳವುಗಳಂತೆ ಶೋಭಿಸುತ್ತಿದ್ದುವು.

**ಉತ್ಪುಷ್ಕರೈಃ ಕರೈರೂಢಧ್ವಜಾ ರೇಜುರ್ಗಜಾಧಿಪಾಃ ।**
**ಗಿರೀಂದ್ರಾ ಇವ ಕೂಟಾಗ್ರನಿಪತತ್ಪೃಥುನಿರ್ಝರಾಃ ॥ ೨೩೪ ॥**

ಮೇಲಕ್ಕೆತ್ತಿರುವ ಸೊಂಡಿಲುಗಳಿಂದ ಧ್ವಜಗಳನ್ನು ಹಿಡಿದಿರುವ ದೊಡ್ಡ ಆನೆಗಳು ಪರ್ವತಶಿಖರಗಳ ತುದಿಯಿಂದ ಬೀಳುತ್ತಿರುವ ವಿಶಾಲವಾದ ಗಿರಿನದಿಗಳುಳ್ಳ ದೊಡ್ಡ ಪರ್ವತಗಳಂತೆ ಶೋಭಿಸುತ್ತಿದ್ದುವು.

**ಚಕ್ರಧ್ವಜಾ [೪]ಸಹಸ್ರಾರೈಶ್ಚಕ್ರೈರುತ್ಸರ್ಪದಂಶುಭಿಃ ।**
**ಬಭುರ್ಭಾನುಮತಾ ಸಾರ್ದ್ಧಂ ಸ್ಪರ್ಧಾಂ ಕರ್ತುಮಿವೋದ್ಯತಾಃ ॥**

ಚಕ್ರದ ಚಿತ್ರಗಳುಳ್ಳ ಧ್ವಜಗಳು ಸಾವಿರಕಾಲು(ಅರ)ಗಳುಳ್ಳವೂ ಪ್ರಕಾಶಮಾನವೂ ಆದ ಚಕ್ರಗಳಿಂದ ಸೂರ್ಯನೊಡನೆ ಹೋರಾಡುವುದಕ್ಕೋಸ್ಕರ ಉದ್ಯುಕ್ತಗಳಾಗಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ನಭಃ ಪರಿಮೃಜಂತೋ ವಾ ಶ್ಲಿಷ್ಯಂತೋ ವಾ ದಿಗಂಗನಾಃ ।**
**ಭುವಮಾಸ್ಫಾಲಯಂತೋ ವಾ [೫]ಸ್ಫೂರ್ಜಂತಿ ಸ್ಮ ಮಹಾಧ್ವಜಾಃ ॥**

ಆ ದೊಡ್ಡ ಚಕ್ರಧ್ವಜಗಳು ಆಕಾಶವನ್ನು ಗುಡಿಸುವಂತೆಯೂ, ದಿಕ್ಕನ್ಯೆಯರನ್ನು ಅಪ್ಪಿಕೊಳ್ಳುವಂತೆಯೂ, ಭೂಮಿಯನ್ನು ಹೊಡೆಯುವಂತೆಯೂ ಪ್ರಕಾಶಿಸುತ್ತಿದ್ದುವು.

**ಇತ್ಯಮೀ ಕೇತವೋ ಮೋಹನಿರ್ಜಯೋಪಾರ್ಜಿತಾ ಬಭುಃ ।**
**ವಿಭೋಸ್ತ್ರಿಭುವನೇಶಿತ್ವಂ ಶಂಸಂತೋಽನನ್ಯಗೋಚರಮ್ ॥ ೨೩೭ ॥**

ಹೀಗೆ ಜಿನೇಶ್ವರನು ಮೋಹವನ್ನು ಜಯಿಸಿದುದರಿಂದ ಪ್ರಾಪ್ತವಾದ ಈ ಧ್ವಜಗಳು ಬೇರೆಯವರಿಗುಂಟಾಗದಿರುವ ಸ್ವಾಮಿಯ ತ್ರಿಲೋಕಾಧಿಪತಿತ್ವವನ್ನು

೧ ಪ್ರತಿಬಿಂಬೇನಾಗತಾಃ. ೨ ಪಾದವಿಕ್ಷೇಪೇಚ್ಛಯಾ. ೩ ಜಯೇನ. ೪ ಸಹಸ್ರಧಾರಾಭಿಃ. ೫ ಭಾಂತಿ ಸ್ಮ.

ಸೂಚಿಸುವುವುಗಳಾಗಿ ಪ್ರಕಾಶಿಸುತ್ತಿದ್ದುವು. ಸ್ವಾಮಿಯು ಮೋಹನೀಯ ಕರ್ಮವನ್ನು ಜಯಿಸಿದುದರಿಂದ ಲೋಕಾತಿಶಯವಾದ ಈ ವಿಭೂತಿಯು ಪ್ರಾಪ್ತವಾಯಿತೆಂದು ಭಾವವು.

**ದಿಶ್ಯೇಕಸ್ಯಾಂ ಧ್ವಜಾಃ ಸರ್ವೇ ಸಹಸ್ರಂ ಸ್ಯಾದಶೀತಿಯುಕ್ ।**
**ಚತಸೃಷ್ವಥ [1]ತೇ ದಿಕ್ಷು ಶೂನ್ಯದ್ವಿತ್ರಿಕಸಾಗರಾಃ ॥ ೨೩೮ ॥**

ಆ ಧ್ವಜಗಳೆಲ್ಲ ಪ್ರತಿಯೊಂದು ದಿಕ್ಕಿನಲ್ಲೂ ಸಾವಿರದೆಂಬತ್ತು (೧೦೮೦) ಸಂಖ್ಯೆಯಾಗಿದ್ದುವು. ನಾಲ್ಕು ದಿಕ್ಕುಗಳಲ್ಲಿ ನಾಲ್ಕುಸಾವಿರದಮುನ್ನೂರಿಪ್ಪತ್ತು (೪೩೨೦) ಧ್ವಜಗಳಿದ್ದುವು.

**[2]ತತೋನಂತರಮೇವಾಂತರ್ಭಾಗೇ ಸಾಲೋ ಮಹಾನಭೂತ್ ।**
**ಶ್ರೀಮಾನರ್ಜುನನಿರ್ಮಾಣೋ ದ್ವಿತೀಯೋ[3]ಽಪ್ಯದ್ವಿತೀಯಕಃ ॥ ೨೩೯ ॥**

ಆ ಧ್ವಜಪಂಕ್ತಿಗಳನ್ನು ದಾಟಿದನಂತರ ಒಳಭಾಗದಲ್ಲಿ ಶೋಭಾಯುಕ್ತವೂ ಬೆಳ್ಳಿಯಿಂದ ನಿರ್ಮಿತವೂ ಆದ ದೊಡ್ಡ ಕೋಟೆಯು ದ್ವಿತೀಯ(ಎರಡನೆಯ) ವಾಗಿದ್ದರೂ ಅದ್ವಿತೀಯ(ಅಸದೃಶ)ವಾಗಿದ್ದಿತು. ಎರಡನೆಯ ಕೋಟೆಯು ಅತ್ಯಂತ ಸುಂದರವಾಗಿದ್ದಿತೆಂದು ಭಾವವು.

**ಪೂರ್ವವದ್ಗೋಪುರಾಣ್ಯಸ್ಯ ರಾಜತಾನಿ ರರಾಜಿರೇ ।**
**ಹಾಸಲಕ್ಷ್ಮೀರ್ಭುವೋ ನೂನಂ ಪುಂಜೀಭೂತಾ ತದಾತ್ಮನಾ ॥ ೨೪೦ ॥**

ಮೊದಲನೆಯ ಕೋಟೆಗಿದ್ದಂತೆ ಈ ಕೋಟೆಗೂ ನಾಲ್ಕು ದಿಕ್ಕುಗಳಲ್ಲೂ ಬೆಳ್ಳಿಯಿಂದ ನಿರ್ಮಿತವಾದ ನಾಲ್ಕು ಗೋಪುರಗಳು ಭೂದೇವಿಯ ನಗೆಯ ಶೋಭೆಯು ಆ ಗೋಪುರಗಳ ರೂಪ(ಆಕಾರ)ದಿಂದ ರಾಶಿಯಾಗಿದೆಯೋ ಎಂಬಂತೆ ಶೋಭಿಸುತ್ತಿದ್ದುವು.

**ತೇಷ್ವಾ[4]ಭರಣವಿನ್ಯಸ್ತತೋರಣೇಷು ಪರಾ ದ್ಯುತಿಃ ।**
**ತೇನೇ ನಿಧಿಭಿರುದ್ಭೂತೈಃ ಕುಬೇರೈಶ್ವರ್ಯಹಾಸಿನೀ ॥ ೨೪೧ ॥**

ಆಭರಣಗಳಿಂದ ನಿರ್ಮಿತವಾದ ತೋರಣಗಳುಳ್ಳ ಆ ಗೋಪುರಗಳಲ್ಲಿರುವ ನಿಧಿಗಳಿಂದುಂಟಾದ ಕಾಂತಿಯು ಕುಬೇರನ ಐಶ್ವರ್ಯವನ್ನು ಪರಿಹಾಸಮಾಡುವುದಾಗಿ ವ್ಯಾಪಿಸಿದ್ದಿತು.

**ಶೇಷೋ ವಿಧಿರಶೇಷೋಽಪಿ ಸಾಲೇನಾದ್ಯೇನ ವರ್ಣಿತಃ ।**
**ಪೌನರುಕ್ತ್ಯಭಯಾನ್ನಾತ್ರ ತತ್ಪ್ರಪಂಚೋ ನಿದರ್ಶಿತಃ ॥ ೨೪೨ ॥**

ಉಳಿದುದೆಲ್ಲವನ್ನೂ ಮೊದಲನೆಯ ಕೋಟೆಯಲ್ಲಿ ವರ್ಣಿಸಿದಂತೆ ತಿಳಿಯಬೇಕು. ಪುನರುಕ್ತಿಯಾಗುವುದೆಂಬ ಭಯದಿಂದ ಅವುಗಳನ್ನೆಲ್ಲ ಇಲ್ಲಿ ತೋರಿಸಲಿಲ್ಲ.

**ಅತ್ರಾಪಿ ಪೂರ್ವವ[5]ದ್ವೇದ್ಯಂ ದ್ವಿತಯಂ ನಾಟ್ಯಶಾಲಯೋಃ ।**
**ತದ್ವದ್ಧೂಪಘಟೀದ್ವಂದ್ವಂ ಮಹಾವೀಥ್ಯುಭಯಾಂತಯೋಃ ॥ ೨೪೩ ॥**

ಮೊದಲಿನಂತೆ ಈ ಗೋಪುರಗಳಲ್ಲೂ ಎರಡೆರಡು ನಾಟ್ಯಶಾಲೆಗಳೂ ಮಾರ್ಗದ ಎರಡು ಪಾರ್ಶ್ವಗಳಲ್ಲೂ ಎರಡೆರಡು ಧೂಪಘಟಗಳೂ ಇದ್ದುವೆಂದು ತಿಳಿಯಬೇಕು.

**ತತೋ ವೀಥ್ಯಂತರೇಷ್ವಸ್ಯಾಂ [6]ಕಕ್ಷ್ಯಾಯಾಂ ಕಲ್ಪಭೂರುಹಾಮ್ ।**
**ನಾನಾರತ್ನಪ್ರಭೋತ್ಸರ್ಪೈರ್ವನಮಾಸೀತ್ಪ್ರಭಾಸ್ವರಮ್ ॥ ೨೪೪ ॥**

ಆ ಮೇಲೆ ಮಾರ್ಗಗಳ ಮಧ್ಯಪ್ರದೇಶಗಳಲ್ಲಿರುವ ತೊಟ್ಟಿಯಲ್ಲಿ ಕಲ್ಪವೃಕ್ಷಗಳ ವನವು ಅನೇಕ ಪ್ರಕಾರವಾದ ರತ್ನಗಳ ಪ್ರಭೆಗಳಿಂದ ವ್ಯಾಪ್ತವಾಗಿ ಪ್ರಕಾಶಿಸುತ್ತಿದ್ದಿತು.

೧ ಧ್ವಜಾಃ. ೨ ಧ್ವಜಪಂಕ್ತೇಃ. ೩ ಅಸದೃಶಃ. ೪ ಆಭರಣಾನಾಂ ವಿನ್ಯಸ್ತಂ ವಿನ್ಯಾಸೋ ಯೇಷಾಂ ತಾನಿ. ೫ ಜ್ಞಾತವ್ಯಂ. ೬ ಕೋಷ್ಠೇ.

ಮಾರ್ಗಗಳ ಮಧ್ಯಮಧ್ಯಗಳಲ್ಲಿ ಕಲ್ಪವೃಕ್ಷಗಳ ಗುಂಪು ರತ್ನಗಳ ಕಾಂತಿಯಿಂದ ಪ್ರಕಾಶಿಸುತ್ತಿದ್ದಿತೆಂದು ಭಾವವು.

**ಕಲ್ಪದ್ರುಮಾಃ ಸಮುತ್ತುಂಗಾಃ ಸಚ್ಛಾಯಾಃ ಫಲಶಾಲಿನಃ ।**
**ನಾನಾಸ್ರಗ್ವಸ್ತ್ರಭೂಷಾಢ್ಯಾ ರಾಜಾಯಂತೇ ಸ್ಮ ಸಂಪದಾ ॥ ೨೪೫ ॥**

ಉನ್ನತವೂ ಶ್ರೇಷ್ಠವಾದ ನೆರಳುಳ್ಳವೂ ಫಲಗಳಿಂದ ಶೋಭಿಸುತ್ತಿರುವುವೂ ಅನೇಕ ಪ್ರಕಾರವಾದ ಮಾಲಾ ವಸ್ತ್ರ ಆಭರಣಗಳಿಂದ ಪರಿಪೂರ್ಣವೂ ಆದ ಕಲ್ಪವೃಕ್ಷಗಳು ಸಂಪತ್ತಿನಿಂದ ರಾಜರಂತೆ ಶೋಭಿಸುತ್ತಿದ್ದುವು.

**ದೇವೋದಕ್ಕುರವೋ ನೂನಮಾಗತಾಃ ಸೇವಿತುಂ ಜಿನಮ್ ।**
**ದಶಪ್ರಭೇದ್ಯೈಃ ಸ್ವೈಃ ಕಲ್ಪತರುಭಿಃ [1]ಶ್ರೇಣಿಸಾತ್ಕೃತೈಃ ॥ ೨೪೬ ॥**

ದೇವಕುರೂತ್ತರಕುರುಗಳು (ಉತ್ತಮಭೋಗಭೂಮಿಗಳು) ಸಾಲಾಗಿ ಮಾಡಲ್ಪಟ್ಟಿರುವುವೂ ಹತ್ತುವಿಧವೂ ಆದ ತಮ್ಮ ಕಲ್ಪವೃಕ್ಷಗಳಿಂದ ಜಿನೇಶ್ವರನನ್ನು ಭಜಿಸುವುದಕ್ಕೋಸ್ಕರ ಬಂದಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ಫಲಾನ್ಯಾಭರಣಾನ್ಯೇಷಾಮಂಶುಕಾನಿ ಚ ಪಲ್ಲವಾಃ ।**
**ಸ್ರಜಃ ಶಾಖಾಗ್ರಲಂಬಿನ್ಯೋ ಮಹಾಪ್ರಾರೋಹಯಷ್ಟಯಃ ॥ ೨೪೭ ॥**

ಈ ಕಲ್ಪವೃಕ್ಷಗಳ ಫಲಗಳು ಆಭರಣಗಳಾಗಿದ್ದುವು. ತಳಿರುಗಳು ವಸ್ತ್ರಗಳಾಗಿದ್ದುವು. ಕೊಂಬೆಗಳ ತುದಿಯಲ್ಲಿ ಜೋಲುತ್ತಿರುವ ದೊಡ್ಡ ಬಿಳಲುಗಳು ಮಾಲಿಕೆಗಳಾಗಿದ್ದುವು.

**ತೇಷಾಮಧಸ್ಥಲಚ್ಛಾಯಾಮಧ್ಯಾಸೀನಾಃ ಸುರೋರಗಾಃ ।**
**ಸ್ವಾವಾಸೇಷು [2]ಧೃತಿಂ ಹಿತ್ವಾ ಚಿರಂ ತತ್ರೈವ ರೇಮಿರೇ ॥ ೨೪೮ ॥**

ಆ ಕಲ್ಪವೃಕ್ಷಗಳ ಕೆಳಭಾಗದಲ್ಲಿ ನೆರಳಿನಲ್ಲಿ ಕುಳಿತಿರುವ ದೇವತೆಗಳೂ ನಾಗದೇವತೆಗಳೂ ತಮ್ಮ ವಾಸಸ್ಥಾನಗಳಲ್ಲಿ ಪ್ರೀತಿಯನ್ನು ತೊರೆದು ಬಹುಕಾಲದವರೆಗೆ ಅಲ್ಲೇ ಕ್ರೀಡಿಸುತ್ತಿದ್ದರು.

**ಜ್ಯೋತಿಷ್ಕಾ ಜ್ಯೋತಿರಂಗೇಷು ದೀಪಾಂಗೇಷು ಚ ಕಲ್ಪಜಾಃ ।**
**ಭಾವನೇಂದ್ರಾಃ ಸ್ರಗಂಗೇಷು ಯಥಾಯೋಗ್ಯಂ [3]ಧೃತಿಂ ದಧುಃ ॥**

ಜ್ಯೋತಿರ್ದೇವತೆಗಳು ಜ್ಯೋತಿರಂಗಕಲ್ಪವೃಕ್ಷಗಳಲ್ಲೂ ಕಲ್ಪವಾಸಿದೇವತೆಗಳು ದೀಪಾಂಗಕಲ್ಪವೃಕ್ಷಗಳಲ್ಲೂ ಭವನವಾಸಿದೇವತೆಗಳು ಸ್ರಗಂಗ(ಮಾಲಿಕಾಂಗ) ಕಲ್ಪವೃಕ್ಷಗಳಲ್ಲೂ ಯಥಾಯೋಗ್ಯವಾಗಿ ಸಂತೋಷವನ್ನು ಹೊಂದಿದ್ದರು.

**ಸ್ರಗ್ವಿ ಸಾಭರಣಂ ಭಾಸ್ವದಂಶುಕಂ [4]ಪಲ್ಲವಾಧರಮ್ ।**
**[5]ಜ್ವಲದ್ದೀಪಂ ವನಂ ಕಾಂತಂ [6]ವಧೂವರಮಿವಾರುಚತ್ ॥ ೨೫೦ ॥**

ಮಾಲಿಕೆಗಳುಳ್ಳದೂ ಆಭರಣಗಳುಳ್ಳದೂ ಪ್ರಕಾಶಮಾನವಾದ ವಸ್ತ್ರಗಳುಳ್ಳದೂ ಸುತ್ತಲೂ ತಳಿರುಗಳನ್ನು ಧರಿಸಿರುವುದೂ ಪ್ರಕಾಶಮಾನವಾದ ದೀಪಾಂಗ ಕಲ್ಪವೃಕ್ಷಗಳುಳ್ಳದೂ ಮನೋಹರವೂ ಆದ ವನವು, ಮಾಲೆಗಳನ್ನು ಧರಿಸಿರುವವರೂ ಆಭರಣಗಳುಳ್ಳವರೂ ಪ್ರಕಾಶಮಾನವಾದ ವಸ್ತ್ರವುಳ್ಳವರೂ ತಳಿರಿನಂತೆ ಕೆಳದುಟಿಯುಳ್ಳವರೂ ಪ್ರಕಾಶಮಾನವಾದ ದೀಪಗಳುಳ್ಳವರೂ ಸುಂದರರೂ ಆದ ವಧೂವರರಂತೆ, ಪ್ರಕಾಶಿಸುತ್ತಿದ್ದಿತು.

**[7]ಅಂತರ್ವಣಮಥಾಭೂವನ್ನಿಹ ಸಿದ್ಧಾರ್ಥಪಾದಪಾಃ ।**
**ಸಿದ್ಧಾರ್ಥಾಧಿಷ್ಠಿತಾ[8]ಧೀದ್ಧಬುಧ್ನಾ [9]ಬ್ರಧ್ನಾ ಇವೋದ್ರುಚಃ ॥ ೨೫೧ ॥**

೧ ಶ್ರೇಣೀಕೃತೈಃ. ೨ ಸಂತೋಷಂ. ೩ ಸಂತೋಷಂ. ೪ ಪಲ್ಲವಾನ್ಯಾಸಮಂತಾದ್ಧರತೀತಿ ಪಕ್ಷೇ ಪಲ್ಲವಮಿವಾಧರಂ ಯಸ್ಯ ತತ್. ೫ ಜ್ವಲದ್ದೀಪಾಂಗಂ. ೬ ವಧೂಶ್ಚ ವರಶ್ಚ ವಧೂವರಂ. ೭ ವನಮಧ್ಯೇ. ೮ ಅಧಿಕದೀಪ್ತಃ. ೯ ಆದಿತ್ಯಾ ಇವ.

ಅನಂತರ ಈ ವನದ ಮಧ್ಯದಲ್ಲಿ ಸಿದ್ಧಪ್ರತಿಮೆಗಳನ್ನು ಸ್ಥಾಪಿಸಿರುವುದರಿಂದ ಬಹಳವಾಗಿ ಪ್ರಕಾಶಿಸುತ್ತಿರುವ ಬುಡವುಳ್ಳ ಸಿದ್ಧಾರ್ಥಗಳೆಂಬ ವೃಕ್ಷಗಳು ಸೂರ್ಯರಂತೆ ಪ್ರಕಾಶಮಾನವಾಗಿದ್ದುವು.

**ಚೈತ್ಯದ್ರುಮೇಷು ಪೂರ್ವೋಕ್ತಾ ವರ್ಣನಾತ್ರಾಪಿ ಯೋಜ್ಯತಾಮ್ ।**
**ಕಿಂತು ಕಲ್ಪದ್ರುಮಾ ಏತೇ ಸಂಕಲ್ಪಿತಫಲಪ್ರದಾಃ ॥ ೨೫೨ ॥**

ಈ ಸಿದ್ಧಾರ್ಥವೃಕ್ಷಗಳಲ್ಲೂ ಹಿಂದೆಹೇಳಿದ ಚೈತ್ಯವೃಕ್ಷಗಳಲ್ಲಿ ಯಾವ ವರ್ಣನೆಯೋ ಅದೇ ವರ್ಣನೆಯೆಂದು ತಿಳಿಯಬೇಕು. ಆದರೆ ಇವುಗಳು ಸಂಕಲ್ಪಿಸಿದ ಫಲಗಳನ್ನು ಕೊಡುವ ಕಲ್ಪವೃಕ್ಷಗಳು.

**ಕ್ವಚಿದ್ವಾಪ್ಯಃ ಕ್ವಚಿನ್ನದ್ಯಃ ಕ್ವಚಿತ್ಸೈಕತಮಂಡಲಮ್ ।**
**ಕ್ವಚಿತ್ಸಭಾಗೃಹಾದೀನಿ ಬಭುರತ್ರ ವನಾಂತರೇ ॥ ೨೫೩ ॥**

ಈ ವನಮಧ್ಯದಲ್ಲಿ ಕೆಲವು ಕಡೆಯಲ್ಲಿ ಬಾವಿಗಳೂ ಕೆಲವು ಕಡೆಯಲ್ಲಿ ನದಿಗಳೂ ಕೆಲವು ಕಡೆಯಲ್ಲಿ ಮರಳುರಾಶಿಯೂ ಕೆಲವು ಕಡೆಯಲ್ಲಿ ಸಭಾಮಂಡಪ ಮೊದಲಾದುವೂ ಶೋಭಿಸುತ್ತಿದ್ದುವು.

**ವನವೀಥೀಮಿಮಾಮಂತರ್ವವ್ರೇಸೌ ವನವೇದಿಕಾ ।**
**[೧]ಕಲಧೌತಮಯೀ ತುಂಗಚತುರ್ಗೋಪುರಸಂಗತಾ ॥ ೨೫೪ ॥**

ಈ ವನಪಂಕ್ತಿಯೊಳಭಾಗದಲ್ಲಿ ಸುವರ್ಣಮಯವೂ ಉನ್ನತವಾದ ನಾಲ್ಕು ಗೋಪುರಗಳಿಂದ ಯುಕ್ತವೂ ಆದ ಈ ವನವೇದಿಕೆಯು ಆವರಿಸಿದ್ದಿತು.

**ತತ್ರ ತೋರಣ[೨]ಮಾಂಗಲ್ಯಸಂಪದಃ ಪೂರ್ವವರ್ಣಿತಾಃ ।**
**ಗೋಪುರಾಣಿ ಚ ಪೂರ್ವೋಕ್ತಮಾನೋನ್ಮಾನಾನ್ಯಮುತ್ರ ಚ ॥ ೨೫೫ ॥**

ಅಲ್ಲಿ ಹಿಂದೆ ವರ್ಣಿಸಿದಂತೆಯೇ ತೋರಣಗಳೂ ಮಂಗಲದ್ರವ್ಯಸಂಪತ್ತುಗಳೂ ಇದ್ದುವು. ಗೋಪುರಗಳೂ ಹಿಂದೆ ಹೇಳಿದ ಪರಿಮಾಣವುಳ್ಳುವಾಗಿದ್ದುವು.

**[೩]ಪ್ರತೋಲೀಂ ತಾಮಥೋಲ್ಲಂಘ್ಯ ಪರತಃ [೪]ಪರಿವೀಥ್ಯ[೫]ಭೂತ್ ।**
**ಪ್ರಾಸಾದಪಙ್ತ್ತಿರ್ವಿವಿಧಾ ನಿರ್ಮಿತಾ ಸುರಶಿಲ್ಪಿಭಿಃ ॥ ೨೫೬ ॥**

ಆ ಗೋಪುರಗಳನ್ನು ದಾಟಿದ ಮೇಲೆ ಮಾರ್ಗದ ಸುತ್ತಲೂ ದೇವಶಿಲ್ಪಿಗಳಿಂದ ನಿರ್ಮಿಸಲ್ಪಟ್ಟ ಅನೇಕಪ್ರಕಾರವಾದ ಮಹಡಿಮನೆಗಳ ಸಾಲು ಶೋಭಿಸುತ್ತಿದ್ದಿತು.

**ಹಿರಣ್ಮಯಮಹಾಸ್ತಂಭಾ ವಜ್ರಾಧಿಷ್ಠಾನಬಂಧನಾಃ ।**
**ಚಂದ್ರಕಾಂತಶಿಲಾಕಾಂತಭಿತ್ತಯೋ ರತ್ನಚಿತ್ರಿತಾಃ ॥ ೨೫೭ ॥**

ಆ ಮನೆಗಳು ಸುವರ್ಣಮಯವಾದ ದೊಡ್ಡ ಸ್ತಂಭಗಳುಳ್ಳುವೂ ವಜ್ರದಿಂದ ಕಟ್ಟಲ್ಪಟ್ಟ ತಳಪಾಯವುಳ್ಳುವೂ ಚಂದ್ರಕಾಂತಶಿಲೆಯಿಂದ ಮನೋಹರವಾದ ಗೋಡೆಗಳುಳ್ಳುವೂ ರತ್ನಗಳಿಂದ ಚಿತ್ರಿಸಲ್ಪಟ್ಟುವೂ ಆಗಿದ್ದುವು.

**ಸಹರ್ಮ್ಯಾ [೬]ದ್ವಿತಲಾಃ ಕೇಚಿತ್ಕೇಚಿಚ್ಚ ತ್ರಿಚತುಸ್ತಲಾಃ ।**
**[೭]ಚಂದ್ರಶಾಲಾಯುಜಃ ಕೇಚಿದ್ವಲಭಿಚ್ಛಂದಶೋಭಿನಃ ॥ ೨೫೮ ॥**

ಕೆಲವು ಎರಡಂತಸ್ತಿನ ದೊಡ್ಡಮನೆಗಳಾಗಿದ್ದುವು. ಕೆಲವು ಮೂರು ನಾಲ್ಕು ಅಂತಸ್ತುಗಳುಳ್ಳ ಮನೆಗಳಾಗಿದ್ದುವು. ಕೆಲವು ಮನೆಗಳು ಚಂದ್ರಶಾಲೆಗಳಿಂದ ಯುಕ್ತವಾಗಿದ್ದುವು. ಕೆಲವು ಮನೆಗಳು ಮುಖಮಂಡಪಗಳಿಂದ ಶೋಭಿಸುತ್ತಿದ್ದುವು.

**ಪ್ರಾಸಾದಾಸ್ತೇ ಸ್ಮ ರಾಜಂತೇ ಸ್ವಪ್ರಭಾಮಗ್ನಮೂರ್ತಯಃ ।**
**ನಭೋಲಿಹಾನಾಃ ಕೂಟಾಗ್ರೈರ್ಜ್ಯೋತ್ಸ್ನಯೇವ ವಿನಿರ್ಮಿತಾಃ ॥ ೨೫೯ ॥**

ತಮ್ಮ ಕಾಂತಿಗಳಲ್ಲಿ ಮುಳುಗಿರುವ ಆಕಾರವುಳ್ಳುವೂ ಶಿಖರಗಳ ಅಗ್ರಭಾಗಗಳಿಂದ ಆಕಾಶವನ್ನು ಮುಟ್ಟುತ್ತಿರುವುವೂ ಆದ ಆ ದೊಡ್ಡ ಮನೆಗಳು ಬೆಳದಿಂಗಳಿಂದ ನಿರ್ಮಿಸಲ್ಪಟ್ಟವುಗಳಂತೆ ಶೋಭಿಸುತ್ತಿದ್ದುವು.

**[೧]ಕೂಟಾಗಾರಸಭಾಗೇಹ[೨]ಪ್ರೇಕ್ಷಾಶಾಲಾಃ ಕ್ವಚಿದ್ಬಭುಃ ।**
**ಸಶಯ್ಯಾಃ [೩]ಸಾಸನಾಸ್ತುಂಗಸೋಪಾನಾಃ [೪]ಶ್ವೇತಿತಾಂಬರಾಃ ॥ ೨೬೦ ॥**

ಕೆಲವು ಕಡೆಯಲ್ಲಿ ಅನೇಕ ಶಿಖರಗಳುಳ್ಳ ಮನೆಗಳೂ ಸಭಾಮಂಡಪಗಳೂ ನಾಟ್ಯಶಾಲೆಗಳೂ ಹಾಸಿಗೆಯುಳ್ಳ ಮಂಡಪಗಳೂ ಪೀಠಗಳುಳ್ಳ ಮಂಡಪಗಳೂ ಆಕಾಶವನ್ನು ಶುಭ್ರಮಾಡಿದ ಉನ್ನತವಾದ ಮೆಟ್ಟಲುಗಳುಳ್ಳ ಮನೆಗಳೂ ಶೋಭಿಸುತ್ತಿದ್ದುವು.

**ತೇಷು ದೇವಾಃ ಸಗಂಧರ್ವಾಃ [೫]ಸಿದ್ಧಾ ವಿದ್ಯಾಧರಾಃ ಸದಾ ।**
**ಪನ್ನಗಾಃ ಕಿನ್ನರೈಃ ಸಾರ್ಧಮರಮಂತ ಕೃತಾದರಾಃ ॥ ೨೬೧ ॥**

ಆ ಮನೆಗಳಲ್ಲಿ ದೇವತೆಗಳೂ ಗಂಧರ್ವರೂ ಸಿದ್ಧದೇವತೆಗಳೂ ವಿದ್ಯಾಧರರೂ ನಾಗದೇವತೆಗಳೂ ಪ್ರೀತಿಯುಳ್ಳವರಾಗಿ ಕಿನ್ನರರೊಡನೆ ಯಾವಾಗಲೂ ಕ್ರೀಡಿಸುತ್ತಿದ್ದರು.

**ಕೇಚಿದ್ಗಾನೇಷು [೬]ವಾದಿತ್ರವಾದನೇ ಕೇಚಿದುದ್ಯತಾಃ ।**
**ಸಂಗೀತನೃತ್ಯಗೋಷ್ಠೀಭಿರ್ವಿಭುಮಾರಾಧಯನ್ನಮೀ ॥ ೨೬೨ ॥**

ಈ ಕೆಲವು ದೇವತೆಗಳು ಗಾನಗಳಲ್ಲೂ ಕೆಲವರು ವಾದ್ಯಗಳನ್ನು ನುಡಿಸುವುದರಲ್ಲೂ ಉದ್ಯುಕ್ತರಾಗಿ ಸಂಗೀತದಿಂದಲೂ ನೃತ್ಯದಿಂದಲೂ ಸ್ವಾಮಿಯನ್ನು ಭಜಿಸಿದರು.

**ವೀಥೀನಾಂ ಮಧ್ಯಭಾಗೇತ್ರ ಸ್ತೂಪಾ ನವ ಸಮುದ್ಯಯುಃ ।**
**ಪದ್ಮರಾಗಮಯೋತ್ತುಂಗವಪುಷಃ ಖಾಗ್ರಲಂಘಿನಃ ॥ ೨೬೩ ॥**

ಈ ಮಾರ್ಗಗಳ ಮಧ್ಯದಲ್ಲಿ ಪದ್ಮರಾಗರತ್ನಮಯವೂ ಉನ್ನತವಾದ ಆಕಾರವುಳ್ಳುವೂ ಆಕಾಶದ ತುದಿಯನ್ನು ವ್ಯಾಪಿಸಿರುವುವೂ ಆದ ಒಂಬತ್ತು ಸ್ತೂಪಗಳಿದ್ದುವು.

**ಜಿನಾನುರಾಗಾ[೭]ಸ್ತಾದ್ರೂಪ್ಯಮಾಪನ್ನಾ ಇವ ತೇ ಬಭುಃ ।**
**ಸಿದ್ಧಾರ್ಹತ್ಪ್ರತಿಬಿಂಬೌಘೈರಭಿತಶ್ಚಿತ್ರಮೂರ್ತಯಃ ॥ ೨೬೪ ॥**

ಸಿದ್ಧಪ್ರತಿಬಿಂಬಗಳ ಸಮೂಹಗಳಿಂದಲೂ ಅರ್ಹತ್ಪ್ರತಿಬಿಂಬಗಳ ಸಮೂಹಗಳಿಂದಲೂ ಸುತ್ತಲೂ ಅನೇಕವಿಧವಾದ ಆಕಾರವುಳ್ಳ ಆ ಸ್ತೂಪಗಳು, ಜನರಲಿನುರಾಗಗಳು ಆ ಸ್ತೂಪಗಳ ಸ್ವರೂಪವನ್ನು ಹೊಂದಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ಸ್ವೋನ್ನತ್ಯಾ ಗಗನಾ[೮]ಭೋಗಂ ರುಂಧಾನಾಃ ಸ್ಮ ವಿಭಾಂತ್ಯಮೀ ।**
**ಸ್ತೂಪಾ ವಿದ್ಯಾಧರಾರಾಧ್ಯಾಃ ಪ್ರಾಪ್ತೇಜ್ಯಾ ಮೇರವೋ ಯಥಾ ॥ ೨೬೫ ॥**

ತಮ್ಮ ಔನ್ನತ್ಯದಿಂದ ವಿಸ್ತಾರವಾದ ಆಕಾಶವನ್ನಾವರಿಸುವುವೂ ವಿದ್ಯಾಧರರಿಗೆ ಪೂಜ್ಯವೂ ಆದ ಈ ಸ್ತೂಪಗಳು ಪೂಜ್ಯತೆಯನ್ನು ಹೊಂದಿರುವ ಮಹಾಮೇರುಪರ್ವತಗಳಂತೆ ಶೋಭಿಸುತ್ತಿದ್ದುವು.

**ಸ್ತೂಪಾಃ ಸಮುಚ್ಛ್ರಿತಾ ರೇಜುರಾರಾಧ್ಯಾಃ [೯]ಸಿದ್ಧಚಾರಣೈಃ ।**
**ತಾದ್ರೂಪ್ಯಮಿವ ಬಿಭ್ರಾಣಾ ನವಕೇವಲಲಬ್ಧಯಃ ॥ ೨೬೬ ॥**

೧ ಸುವರ್ಣಮಯೀ. ೨ ಮಂಗಲಸಂಪದಃ. ೩ ಗೋಪುರಂ. ೪ ವೀಥ್ಯಾಃ ಪರಿತಃ. ೫ ಅಭಾದಿತ್ಯಪಿ ಪಾಠಃ. ೬ ದ್ವಿಭೂಮಿಕಾಃ. ೭ ಶಿರೋಗೃಹಂ.

೧ ಬಹುಶಿಖರಯುತಗೃಹಂ. ೨ ನಾಟ್ಯಶಾಲಾಃ. ೩ ಸಪೀಠಾಃ. ೪ ಧವಲಿತಾಕಾಶಾಃ. ೫ ದೇವಭೇದಾಃ. ೬ ವಾದ್ಯತಾಡನೇ. ೭ ಸ್ತೂಪಸ್ವರೂಪತ್ವಂ. ೮ ವಿಸ್ತಾರಂ. ೯ ಚಾರಣಮುನಿಭಿರ್ದೇವಭೇದೈಶ್ಚ.

ಸಿದ್ಧದೇವತೆಗಳಿಗೂ ಚಾರಣಮುನಿಗಳಿಗೂ ಪೂಜ್ಯವೂ ಉನ್ನತವೂ ಆದ ಈ ಸ್ತೂಪಗಳು ನವಕೇವಲಲಬ್ಧಿಗಳು ಆ ಸ್ತೂಪಗಳ ಸ್ವರೂಪವನ್ನು ಧರಿಸಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ಸ್ತೂಪಾನಾಮಂತರೇಷ್ವೇಷಾಂ ರತ್ನತೋರಣಮಾಲಿಕಾಃ ।**
**ಬಭು[೧]ರಿಂದ್ರಧನುರ್ಮಯ್ಯ ಇವ ಚಿತ್ರಿತಖಾಂಗಣಾಃ ॥ ೨೬೭ ॥**

ಈ ಸ್ತೂಪಗಳ ಮಧ್ಯಪ್ರದೇಶಗಳಲ್ಲಿ ರತ್ನಗಳಿಂದ ನಿರ್ಮಿತವಾದ ತೋರಣ ಮಾಲಿಕೆಗಳು, ಆಕಾಶಪ್ರದೇಶವನ್ನು ಚಿತ್ರಿಸಿರುವ ಇಂದ್ರಧನುಸ್ಸುಗಳಿಂದ ನಿರ್ಮಿತ ವಾಗಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**ಸಚ್ಛತ್ರಾಃ ಸಪತಾಕಾಶ್ಚ ಸರ್ವಮಂಗಲಸಂಭೃತಾಃ ।**
**ರಾಜಾನ ಇವ ರೇಜುಸ್ತೇ ಸ್ತೂಪಾಃ ಕೃತಜನೋತ್ಸವಾಃ ॥ ೨೬೮ ॥**

ಶ್ರೇಷ್ಠವಾದ ಛತ್ರಗಳುಳ್ಳವೂ ಧ್ವಜಪತಾಕೆಗಳುಳ್ಳವೂ ಜನರಿಗುತ್ಸವವನ್ನುಂಟು ಮಾಡುವುವೂ ಆದ ಆ ಸ್ತೂಪಗಳು, ಛತ್ರಗಳೂ ಧ್ವಜಪತಾಕೆಗಳೂ ಮಂಗಲ ದ್ರವ್ಯಗಳೂ ಉಳ್ಳ ರಾಜರಂತೆ ಶೋಭಿಸುತ್ತಿದ್ದುವು.

**ತತ್ರಾಭಿಷಿಚ್ಯ ಜೈನೇಂದ್ರೀರರ್ಚಾಃ [೨]ಕೀರ್ತಿತಪೂಜಿತಾಃ ।**
**ತತಃ ಪ್ರದಕ್ಷಿಣೀಕೃತ್ಯ ಭವ್ಯಾ ಮುದ[೩]ಮಯಾಸಿಷುಃ ॥ ೨೬೯ ॥**

ಆ ಸ್ತೂಪಗಳಲ್ಲಿರುವ ಜಿನಬಿಂಬಗಳಿಗೆ ಭವ್ಯರು ಅಭಿಷೇಕವನ್ನೂ ಸ್ತೋತ್ರವನ್ನೂ ಪೂಜೆಯನ್ನೂ ಮಾಡಿ ಪ್ರದಕ್ಷಿಣೆಬಂದು ಸಂತೋಷವನ್ನು ಹೊಂದುತ್ತಿದ್ದರು.

**ಸ್ತೂಪಹರ್ಮ್ಯಾವಲೀರುದ್ಧಾಂ ಭುವಮುಲ್ಲಂಘ್ಯ ತಾಂ ತತಃ ।**
**ನಭಃಸ್ಫಟಿಕಸಾಲೋಭಾಜ್ಜಾತಂ ಖಮಿವ [೪]ತನ್ಮಯಮ್ ॥ ೨೭೦ ॥**

ಸ್ತೂಪಗಳ ಸಾಲಿನಿಂದಲೂ ದೊಡ್ಡ ಮನೆಗಳ ಸಾಲಿನಿಂದಲೂ ಆವರಿಸ ಲ್ಪಟ್ಟಿರುವ ಆ ಭೂಮಿಯನ್ನು ದಾಟಿದಮೇಲೆ ಆಕಾಶಸ್ಫಟಿಕದಿಂದ ನಿರ್ಮಿತವಾದ ಕೋಟೆಯು, ಆಕಾಶವು ಕೋಟೆಯ ಸ್ವರೂಪವನ್ನು ಹೊಂದಿರುವಂತೆ, ಶೋಭಿ ಸುತ್ತಿದ್ದಿತು.

**[೫]ವಿಶುದ್ಧಪರಿಣಾಮತ್ವಾಜ್ಜಿನಪರ್ಯಂತಸೇವನಾತ್ ।**
**ಭವ್ಯಾತ್ಮೇವ ಬಭೌ ಸಾಲಸ್ತುಂಗ[೬]ಸದ್ವೃತ್ತತಾನ್ವಿತಃ ॥ ೨೭೧ ॥**

ಉನ್ನತವೂ ವರ್ತುಲಾಕಾರವೂ ಆದ ಆ ಕೋಟೆಯು ಪರಿಶುದ್ಧವಾದ ಆಕಾರ ವನ್ನು ಹೊಂದಿರುವುದರಿಂದಲೂ ಜಿನೇಶ್ವರನ ಸಮೀಪಪ್ರದೇಶವನ್ನು ಹೊಂದಿರು ವುದರಿಂದಲೂ ಸದಾಚಾರಸಂಪನ್ನನಾದ ಭವ್ಯಾತ್ಮನಂತೆ ಶೋಭಿಸುತ್ತಿದ್ದಿತು.

**[೭]ಖಗೇಂದ್ರೈರುಪಸೇವ್ಯತ್ವಾತ್ತುಂಗತ್ವಾದಚಲತ್ವತಃ ।**
**ರೂಪ್ಯಾದ್ರಿರಿವ [೮]ತಾದ್ರೂಪ್ಯಮಾಪನ್ನಃ [೯]ಪರ್ಯಗಾದ್ವಿಭುಮ್ ॥ ೨೭೨ ॥**

ದೇವವಿದ್ಯಾಧರರಿಗೆ ಸೇವಾರ್ಹವಾಗಿದ್ದುದರಿಂದಲೂ ಉನ್ನತವಾಗಿದ್ದುದ ರಿಂದಲೂ ಚಲಿಸದಿದ್ದುದರಿಂದಲೂ ವಿಜಯಾರ್ಧಪರ್ವತವು ಆ ಕೋಟೆಯ ರೂಪ ವನ್ನು ಹೊಂದಿದೆಯೋ ಎಂಬಂತೆ; ಸ್ವಾಮಿಯನ್ನು ಪ್ರದಕ್ಷಿಣೆಮಾಡಿ(ಸುತ್ತಿ)ದ್ದಿತು.

**ದಿಕ್ಷು ಸಾಲೋತ್ತಮಸ್ಯಾಸ್ಯ ಗೋಪುರಾಣ್ಯು[೧೦]ದಶಿಶ್ರಿಯನ್ ।**
**ಪದ್ಮರಾಗಮಯಾನ್ಯುಚ್ಚೈರ್ಭವ್ಯರಾಗಮಯಾನಿ [೧೧]ವಾ ॥ ೨೭೩ ॥**

೧ ಇಂದ್ರಚಾಪೈರ್ನಿರ್ವೃತ್ತಾಃ. ೨ ಕೀರ್ತಿತಾಶ್ಚತಾಃ ಪೂಜಿತಾಶ್ಚ. ೩ ಪ್ರಾಪ್ತವಂತಃ. ೪ ಸಾಲಮಯಂ. ೫ ವಿಶುದ್ಧಪರ್ಯಾಯತ್ವಾತ್. ೬ ಸದ್ವಲಯತಾನ್ವಿತಃ. ೭ ದೇವವಿದ್ಯಾಧರೈಃ. ೮ ಸಾಲರೂಪತಾಂ. ೯ ಪ್ರದಕ್ಷಿಣಮಕರೋತ್. ೧೦ ಉದ್ಭಭೂವುಃ. ೧೧ ಇವ.

ಈ ಶ್ರೇಷ್ಠವಾದ ಕೋಟೆಯ ನಾಲ್ಕು ದಿಕ್ಕುಗಳಲ್ಲಿ ಪದ್ಮರಾಗರತ್ನಮಯವೂ ಉನ್ನತವೂ ಆದ ನಾಲ್ಕು ಗೋಪುರಗಳು ಭವ್ಯರ ಅನುರಾಗಸ್ವರೂಪಗಳೋ ಎಂಬಂತೆ ಉದ್ಭವಿಸಿದ್ದುವು.

**ಜ್ಞೇಯಾಃ ಪೂರ್ವವದತ್ರಾಪಿ ಮಂಗಲದ್ರವ್ಯಸಂಪದಃ ।**
**ದ್ವಾರೋಪಾಂತೇ ಚ ನಿಧಯೋ ಜ್ವಲದ್ಗಂಭೀರಮೂರ್ತಯಃ ॥ ೨೭೪ ॥**

ಹಿಂದೆ ಹೇಳಿದಂತೆ ಈ ಗೋಪುರಗಳಲ್ಲೂ ಮಂಗಲದ್ರವ್ಯಸಂಪತ್ತುಗಳೂ ದ್ವಾರ ಗಳ ಸಮೀಪದಲ್ಲಿ ಪ್ರಕಾಶಮಾನವೂ ಗಂಭೀರವಾದ ಆಕಾರವುಳ್ಳವೂ ಆದ ನಿಧಿ ಗಳೂ ಇದ್ದುವೆಂದು ತಿಳಿಯಬೇಕು.

**ಸತಾಲಮಂಗಲಚ್ಛತ್ರಚಾಮರಧ್ವಜದರ್ಪಣಾಃ ।**
**ಸುಪ್ರತಿಷ್ಠಕಭೃಂಗಾರಕಲಶಾಃ ಪ್ರತಿಗೋಪುರಮ್ ॥ ೨೭೫ ॥**

ಪ್ರತಿಯೊಂದು ಗೋಪುರದಲ್ಲೂ ತಾಳ ಮಂಗಲಕರವಾದ ಛತ್ರ ಚಾಮರ ಧ್ವಜ ದರ್ಪಣ ಸುಪ್ರತಿಷ್ಠಕ ಗಿಂಡಿ ಕಲಶ ಈ ಎಂಟು ಮಂಗಲದ್ರವ್ಯಗಳಿದ್ದುವು.

**ಗದಾದಿಪಾಣಯಸ್ತೇಷು ಗೋಪುರೇಷ್ವಭವನ್ಸುರಾಃ ।**
**ಕ್ರಮಾತ್ಸಾಲತ್ರಯೇ [೧]ದ್ವಾಃಸ್ಥಾ [೨]ಭೌಮಭಾವನಕಲ್ಪಜಾಃ ॥ ೨೭೬ ॥**

ಆ ಗೋಪುರಗಳಲ್ಲಿ ದೇವತೆಗಳು ಕೈಯಲ್ಲಿ ಗದೆ ಮೊದಲಾದ ಆಯುಧ ಗಳುಳ್ಳವರಾಗಿದ್ದರು. ಹಿಂದೆ ಹೇಳಿದ ಮೂರು ಕೋಟೆಗಳಲ್ಲಿ ಕ್ರಮವಾಗಿ ವ್ಯಂತರಿ ಕರೂ ಭವನವಾಸಿಗಳೂ ಕಲ್ಪವಾಸಿಗಳೂ ದ್ವಾರಪಾಲಕರಾಗಿದ್ದರು. ಮೊದಲನೆಯ ಕೋಟೆಯಲ್ಲಿ ವ್ಯಂತರಿಕರೂ ಎರಡನೆಯ ಕೋಟೆಯಲ್ಲಿ ಭವನವಾಸಿಗಳೂ ಮೂರನೆಯ ಕೋಟೆಯಲ್ಲಿ ಕಲ್ಪವಾಸಿಗಳೂ ದ್ವಾರಪಾಲಕರಾಗಿದ್ದರೆಂದು ಭಾವವು.

**ತತಃ ಖಸ್ಫಾಟಿಕಾತ್ಸಾಲಾದಾಪೀಠಾಂತಂ ಸಮಾಯತಾಃ ।**
**ಭಿತ್ತಯಃ ಷೋಡಶಾಭೂವನ್ಮಹಾವೀಥ್ಯಂತರಾಶ್ರಿತಾಃ ॥ ೨೭೭ ॥**

ಆಕಾಶದಂತಿರುವ ಸ್ಫಟಿಕಶಿಲೆಯ ಕೋಟೆಯನ್ನು ದಾಟಿದನಂತರ ದೊಡ್ಡ ಮಾರ್ಗಗಳ ಮಧ್ಯಭಾಗಗಳನ್ನು ಹೊಂದಿರುವ ಹದಿನಾರು ಗೋಡೆಗಳು ಪೀಠದ ವರೆಗೆ ದೀರ್ಘವಾಗಿದ್ದುವು.

**ನಭಃ ಸ್ಫಟಿಕನಿರ್ಮಾಣಾಃ ಪ್ರಸರನ್ನಿರ್ಮಲತ್ವಿಷಃ ।**
**ಆದ್ಯಪೀಠತಟಾಲಗ್ನಾ ಜ್ಯೋತ್ಸ್ನಾಯಂತೇ ಸ್ಮ ಭಿತ್ತಯಃ ॥ ೨೭೮ ॥**

ಆಕಾಶಸ್ಫಟಿಕದಿಂದ ನಿರ್ಮಿತವೂ ನಿರ್ಮಲವಾದ ಕಾಂತಿಯನ್ನು ಹರಡು ತ್ತಿರುವುವೂ ಪ್ರಥಮಪೀಠದ ಪ್ರದೇಶವನ್ನು ಸಂಬಂಧಿಸಿರುವುವೂ ಆದ ಆ ಗೋಡೆ ಗಳು ಬೆಳದಿಂಗಳಿನಂತೆ ಶೋಭಿಸುತ್ತಿದ್ದುವು.

**ಶುಚಯೋ ದರ್ಶಿತಾಶೇಷವಸ್ತು[೩]ಬಿಂಬಾ ಮಹೋದಯಾಃ ।**
**ಭಿತ್ತಯಸ್ತಾ ಜಗದ್ಭರ್ತು[೪]ರಧಿವಿದ್ಯಾ ಇವಾಬಭುಃ ॥ ೨೭೯ ॥**

ನಿರ್ಮಲವೂ ಸಮಸ್ತವಸ್ತುಗಳ ಪ್ರತಿಬಿಂಬಗಳನ್ನು ತೋರಿಸುವುವೂ ಅತ್ಯುನ್ನ ತವೂ ಆದ ಆ ಗೋಡೆಗಳು ಲೋಕಾಧಿಪತಿಯ ಜ್ಞಾನಾತಿಶಯಗಳೋ ಎಂಬಂತೆ ಶೋಭಿಸುತ್ತಿದ್ದುವು.

**ತಾಸಾಮುಪರಿ ವಿಸ್ತೀರ್ಣೋ ರತ್ನಸ್ತಂಭೈಃ ಸಮುದ್ಧೃತಃ ।**
**ವಿಯತ್ಸ್ಫಟಿಕನಿರ್ಮಾಣಃ ಸಶ್ರೀಃ ಶ್ರೀಮಂಡಪೋಽಭವತ್ ॥ ೨೮೦ ॥**

೧ ದ್ವಾರಪಾಲಕಾಃ. ೨ ವ್ಯಂತರಭವನವಾಸಿಕಲ್ಪಜಾಃ. ೩ ಪ್ರತಿಬಿಂಬಾಃ. ೪ ಜ್ಞಾನಾತಿಶಯಾಃ, ಬಹುಶ್ರುತಯಃ.

ಆ ಗೋಡೆಗಳ ಮೇಲೆ ವಿಸ್ತಾರವೂ ರತ್ನಸ್ತಂಭಗಳಿಂದ ಧರಿಸಲ್ಪಟ್ಟಿರುವುದೂ ಆಕಾಶಸ್ಫಟಿಕದಿಂದ ನಿರ್ಮಿತವೂ ಶೋಭಾಯುಕ್ತವೂ ಆದ ಲಕ್ಷ್ಮೀಮಂಡಪ ವಿದ್ದಿತು.

**ಸತ್ಯಂ ಶ್ರೀಮಂಡಪಃ ಸೋಯಂ ಯತ್ರಾಸೌ ಪರಮೇಶ್ವರಃ ।**
**ನೃಸುರಾಸುರಸಾನ್ನಿಧ್ಯೇ ಸ್ವೀಚಕ್ರೇ ತ್ರಿಜಗಚ್ಛ್ರಿಯಮ್ ॥ ೨೮೧ ॥**

ಯಾವ ಮಂಡಪದಲ್ಲಿ ಈ ಪರಮೇಶ್ವರನು ಮನುಷ್ಯರ ದೇವತೆಗಳ ಮತ್ತು ಅಸುರಕುಮಾರರ ಸಾನ್ನಿಧ್ಯದಲ್ಲಿ ಮೂರುಲೋಕದ ಲಕ್ಷ್ಮಿ(ಸಂಪತ್ತು)ಯನ್ನು ಸ್ವೀಕರಿಸಿದನೋ ಅಂತಹ ಈ ಮಂಡಪವು ನಿಜವಾಗಿ ಲಕ್ಷ್ಮೀಮಂಡಪವಾಗಿದ್ದಿತು.

**ಯೋ ಬಭಾವಂಬರಸ್ಯಾಂತರ್ಬಿಂಬಿತಾ[೧]ನ್ಯಾಂಬರೋಪಮಃ ।**
**ತ್ರಿಜಗಜ್ಜನತಾ[೨]ಸ್ಥಾನಸಂಗ್ರಹಾವಾಪ್ತ[೩]ವೈಭವಃ ॥ ೨೮೨ ॥**

ಮೂರುಲೋಕದ ಜನಸಮೂಹವಿರುವುದರಿಂದ ವೈಭವವನ್ನು ಹೊಂದಿರುವ ಆ ಲಕ್ಷ್ಮೀಮಂಡಪವು ಆಕಾಶದೊಳಗೆ ಪ್ರತಿಬಿಂಬಿಸಿರುವ ಬೇರೊಂದು ಆಕಾಶಕ್ಕೆ ಸದೃಶವಾಗಿ ಶೋಭಿಸುತ್ತಿದ್ದಿತು. ಆಕಾಶಮಧ್ಯದಲ್ಲಿರುವ ಆ ಲಕ್ಷ್ಮೀಮಂಡಪವು ಆಕಾಶದೊಳಗೆ ಬೇರೊಂದಾಕಾಶವಿದ್ದಂತೆ ತೋರುತ್ತಿದ್ದಿತೆಂದು ಭಾವವು.

**ಯಸ್ಯೋಪರಿತಲೇ ಮುಕ್ತಾ [೪]ಗುಹ್ಯಕೈಃ ಕುಸುಮೋತ್ಕರಾಃ ।**
**ವಿದಧುಸ್ತಾರಕಾಶಂಕಾಮಧೋಭಾಜಾಂ ನೃಣಾಂ ಹೃದಿ ॥ ೨೮೩ ॥**

ಆ ಲಕ್ಷ್ಮೀಮಂಡಪದ ಮೇಲುಭಾಗದಲ್ಲಿ ದೇವತೆಗಳು ಸುರಿದ ಪುಷ್ಪಗಳ ರಾಶಿಗಳು ಕೆಳಭಾಗದಲ್ಲಿರುವ ಮನುಷ್ಯರ ಹೃದಯದಲ್ಲಿ ನಕ್ಷತ್ರಗಳೆಂಬ ಸಂದೇಹ ವನ್ನುಂಟುಮಾಡಿದುವು.

**ಯತ್ರ ಮತ್ತ[೫]ರುವದ್ಭೃಂಗಸಂಸೂಚ್ಯಾಃ ಕುಸುಮಸ್ರಜಃ ।**
**ನಮ್ಲಾನಿಮೀಯುರ್ಜೈನಾಂಘ್ರಿಚ್ಛಾಯಾಶೈತ್ಯಾಶ್ರಯಾದಿವ ॥ ೨೮೪ ॥**

ಆ ಲಕ್ಷ್ಮೀಮಂಡಪದಲ್ಲಿ ಜೋಲುತ್ತಿರುವ ಪುಷ್ಪಮಾಲಿಕೆಗಳು ಮದಿಸಿ ಝೇಂಕಾರಶಬ್ದವನ್ನು ಮಾಡುತ್ತಿರುವ ಭ್ರಮರಗಳಿಂದ ಸೂಚಿಸಲ್ಪಡುತ್ತಿದ್ದುವು. ಲಕ್ಷ್ಮೀಮಂಡಪದ ಶುಭ್ರವಾದ ಕಾಂತಿಯಲ್ಲಿ ಮಗ್ನವಾದ ಪುಷ್ಪಮಾಲಿಕೆಗಳನ್ನು ಶಬ್ದಮಾಡುತ್ತಿರುವ ಭ್ರಮರಗಳಿಂದ ''ಇವು ಪುಷ್ಪಮಾಲಿಕೆಗಳು'' ಎಂದು ತಿಳಿಯ ಬೇಕಾಗಿದ್ದಿತೆಂದು ಭಾವವು. ಆ ಪುಷ್ಪಮಾಲಿಕೆಗಳು, ಜಿನೇಶ್ವರನ ಪಾದಗಳ ನೆರಳಿನ ಶೈತ್ಯದ ಆಶ್ರಯದಿಂದಲೋ ಎಂಬಂತೆ, ಬಾಡಿರಲಿಲ್ಲವು.

**ನೀಲೋತ್ಪಲೋಪಹಾರೇಷು ನಿಲೀನಾ ಭ್ರಮರಾವಲಿಃ ।**
**ವಿರುತೈರಗಮದ್ವ್ಯಕ್ತಿಂ ಯತ್ರ [೬]ಸಾಮ್ಯಾದಲಕ್ಷಿತಾ ॥ ೨೮೫ ॥**

ಕನ್ನೈದಿಲೆಪುಷ್ಪಗಳ ಸಣ್ಣ ಹಾರಗಳಲ್ಲಿ ಲೀನವಾಗಿರುವ ಮತ್ತು ನೀಲವರ್ಣದ ಸಾದೃಶ್ಯದಿಂದ ಕಾಣಿಸಲ್ಪಡದಿರುವ ಭ್ರಮರಗಳ ಸಾಲು ಝೇಂಕಾರಶಬ್ದಗಳಿಂದ ''ಇದು ಭ್ರಮರಗಳ ಸಾಲು'' ಎಂದು ವ್ಯಕ್ತವಾಗುತ್ತಿದ್ದಿತು.

**[೭]ಯೋಜನಪ್ರಮಿತೇ ಯಸ್ಮಿನ್ಸಮ್ಮಮುರ್ನೃಸುರಾಸುರಾಃ ।**
**ಸ್ಥಿತಾಃ ಸುಖಮಸಂಬಾಧಮಹೋ ಮಾಹಾತ್ಮ್ಯಮೀಶಿತುಃ ॥ ೨೮೬ ॥**

ಒಂದು ಯೋಜನಪರಿಮಿತವಾದ ಆ ಲಕ್ಷ್ಮೀಮಂಡಪದಲ್ಲಿ ಮನುಷ್ಯರೂ ಕಲ್ಪವಾಸಿದೇವತೆಗಳೂ ಅಸುರಕುಮಾರರೂ ಬಾಧೆಯಿಲ್ಲದೆ ಸುಖದಿಂದ ಅಡಕ ವಾಗಿದ್ದರು. ಸ್ವಾಮಿಯ ಮಾಹಾತ್ಮ್ಯವು ಆಶ್ಚರ್ಯಕರವಾದುದು. ಅಷ್ಟು ಸಣ್ಣ ಮಂಡಪದಲ್ಲಿ ಅವರೆಲ್ಲರೂ ಅಡಕವಾಗಿದ್ದುದು ಸ್ವಾಮಿಯ ಮಾಹಾತ್ಮ್ಯದಿಂದ ಎಂದು ಭಾವವು.

೧ ಅನ್ಯವ್ಯೋಮಸದೃಶಃ. ೨ ಸ್ಥಿತಿಃ. ೩ ವಿಭುತ್ವಃ. ೪ ದೇವೈಃ. ೫ ಧ್ವನತ್. ೬ ವರ್ಣಸಾದೃಶ್ಯಾತ್. ೭ ಪೀಠಸಹಿತೈಕಯೋಜನಪ್ರಮಾಣೇ.

**ಯಸ್ಮಿ[೧]ನ್ಸ್ಫಟಿಮಣಿಪ್ರಾಂತ[೨]ಮುಪೇತಾ ಹಂಸಸಂತತಿಃ ।**
**[೩]ಗುಣಸಾದೃಶ್ಯಯೋಗೇಪಿ [೪]ವ್ಯಜ್ಯತೇ ಸ್ಮ ವಿಕೂಜಿತೈಃ ॥ ೨೮೭ ॥**

ಆ ಲಕ್ಷ್ಮೀಮಂಡಪದಲ್ಲಿ ಸ್ಫಟಿಕರತ್ನದ ಸಮೀಪವನ್ನು ಹೊಂದಿರುವ ಹಂಸ ಪಕ್ಷಿಗಳ ಸಾಲು ಶುಭ್ರಗುಣದ ಸಾದೃಶ್ಯವಿದ್ದರೂ ಶಬ್ದಗಳಿಂದ (ಹಂಸಗಳೆಂದು) ವ್ಯಕ್ತಮಾಡಲ್ಪಡುತ್ತಿದ್ದಿತು.

**ಯದ್ಭಿತ್ತಯಃ ಸ್ವಸಂಕ್ರಾಂತಜಗತ್ತ್ರಿತಯಬಿಂಬಿಕಾಃ ।**
**ಚಿತ್ರಿತಾ ಇವ ಸಂರೇಜುರ್ಜಗಚ್ಛ್ರೀ[೫]ದರ್ಪಣಶ್ರಿಯಃ ॥ ೨೮೮ ॥**

ತಮ್ಮಲ್ಲಿ ಸಂಬಂಧಿಸಿರುವ ಮೂರು ಲೋಕದ ಪ್ರತಿಬಿಂಬಗಳುಳ್ಳ ಆ ಲಕ್ಷ್ಮೀ ಮಂಡಪದ ಗೋಡೆಗಳು ಜಗಲ್ಲಕ್ಷ್ಮಿಯ ಕನ್ನಡಿಯ ಶೋಭೆಗಳು ಚಿತ್ರಿಸ ಲ್ಪಟ್ಟಿವೆಯೋ ಎಂಬಂತೆ ಶೋಭಿಸುತ್ತಿದ್ದುವು.

**[೬]ಯದುತ್ಸರ್ಪತ್ಪ್ರಭಾಜಾಲಜಲಸ್ನಪಿತಮೂರ್ತಯಃ ।**
**ತೀರ್ಥಾ[೭]ವಗಾಹನಂ ಚಕ್ರುರಿವ ದೇವಾಃ ಸದಾನವಾಃ ॥ ೨೮೯ ॥**

ಆ ಲಕ್ಷ್ಮೀಮಂಡಪದಿಂದ ಪ್ರಸರಿಸುತ್ತಿರುವ ಕಾಂತಿಯ ಸಮೂಹವೆಂಬ ನೀರಿ ನಿಂದ ಸ್ನಾನಮಾಡಿಸಲ್ಪಟ್ಟ ಆಕಾರವುಳ್ಳ ದೇವತೆಗಳೂ ಭವನವಾಸಿದೇವತೆಗಳೂ ತೀರ್ಥದಲ್ಲಿ ಮುಳುಗಿರುವಂತೆ ತೋರುತ್ತಿದ್ದರು.

**[೮]ತದ್ರುದ್ಧಕ್ಷೇತ್ರಮಧ್ಯಸ್ಥಾ ಪ್ರಥಮಾ ಪೀಠಿಕಾ ಬಭೌ ।**
**ವೈಡೂರ್ಯರತ್ನನಿರ್ಮಾಣಾ ಕುಲಾದ್ರಿಶಿಖರಾಯಿತಾ ॥ ೨೯೦ ॥**

ಆ ಲಕ್ಷ್ಮೀಮಂಡಪದಿಂದ ಆವರಿಸಲ್ಪಟ್ಟ ಕ್ಷೇತ್ರದ ಮಧ್ಯದಲ್ಲಿರುವುದೂ ವೈಡೂರ್ಯರತ್ನದಿಂದ ನಿರ್ಮಿತವೂ ಆದ ಮೊದಲನೆಯ ಪೀಠವು ಕುಲಪರ್ವತದ ಶಿಖರದಂತೆ ಶೋಭಿಸುತ್ತಿದ್ದಿತು.

**ತತ್ರ ಷೋಡಶ ಸೋಪಾನಮಾರ್ಗಾಃ ಸ್ಯುಃ [೯]ಷೋಡಶಸ್ತರಾಃ ।**
**ಮಹಾದಿಕ್ಷು ಸಭಾಕೋಷ್ಠಪ್ರವೇಶೇಷು ಚ ವಿಸ್ತೃತಾಃ ॥ ೨೯೧ ॥**

ಆ ಲಕ್ಷ್ಮೀಮಂಡಪದಲ್ಲಿ ಹದಿನಾರು ಮೆಟ್ಟಲುಗಳುಳ್ಳ ಹದಿನಾರು ಸೋಪಾನ (ಮೆಟ್ಟಲು)ಮಾರ್ಗಗಳಿದ್ದುವು. ಅವುಗಳಲ್ಲಿ ನಾಲ್ಕು ಮಾರ್ಗಗಳು ನಾಲ್ಕು ಮಹಾದಿಕ್ಕುಗಳಿಗೆ ಮಾಡಲ್ಪಟ್ಟಿದ್ದುವು. ಉಳಿದ ಹನ್ನೆರಡು ಮಾರ್ಗಗಳು ಹನ್ನೆರಡು ಸಭಾಕೋಷ್ಠಗಳಿಗೆ ಪ್ರವೇಶಮಾರ್ಗಗಳಾಗಿದ್ದುವು.

**ತಾಂ ಪೀಠಿಕಾಮಲಂಚಕ್ರುರಷ್ಟಮಂಗಲಸಂಪದಃ ।**
**ಧರ್ಮಚಕ್ರಾಣಿ ಚೋಢಾನಿ [೧೦]ಪ್ರಾಂಶುಭಿರ್ಯಕ್ಷಮೂರ್ಧಭಿಃ ॥ ೨೯೨ ॥**

ಆ ಪೀಠದಲ್ಲಿ ಎಂಟು ಮಂಗಲದ್ರವ್ಯಗಳು ಅಲಂಕರಿಸಲ್ಪಟ್ಟಿದ್ದುವು. ಯಕ್ಷರು ತಮ್ಮ ಉನ್ನತವಾದ ಮಸ್ತಕಗಳಲ್ಲಿ ಧರ್ಮಚಕ್ರಗಳನ್ನು ಧರಿಸಿದ್ದರು.

**ಸಹಸ್ರಾರಾಣಿ ತಾನ್ಯುದ್ಯದ್ರತ್ನರಶ್ಮೀನಿ ರೇಜಿರೇ ।**
**ಭಾನುಬಿಂಬಾನಿ[೧೧]ವೋದ್ಯಂತಿ ಪೀಠಿಕೋದಯಪರ್ವತಾತ್ ॥ ೨೯೩ ॥**

ಸಾವಿರಕಾಲು(ಅರ)ಗಳೂ ಉದಯಿಸುತ್ತಿರುವ ರತ್ನಗಳ ಕಿರಣಗಳೂ ಉಳ್ಳ ಆ ಧರ್ಮಚಕ್ರಗಳು ಪೀಠವೆಂಬ ಉದಯಪರ್ವತದಿಂದ ಉದಯಿಸಿರುವ ಸೂರ್ಯನ ಪ್ರತಿಬಿಂಬಗಳೋ ಎಂಬಂತೆ ಶೋಭಿಸುತ್ತಿದ್ದುವು.

**ದ್ವಿತೀಯಮಭವತ್ಪೀಠಂ ತಸ್ಯೋಪರಿ ಹಿರಣ್ಮಯಮ್ ।**
**ದಿವಾಕರಕರಸ್ಪರ್ಧಿ ವಪುರುದ್ದ್ಯೋತಿತಾಂಬರಮ್ ॥ ೨೯೪ ॥**

೧ ಸ್ಫಟಿಕಮಣಿಪ್ರಾಂತಂ. ೨ ಪ್ರಾಪ್ತಾ. ೩ ಶುಭ್ರಗುಣಸಾಮ್ಯಯೋಗೇ. ೪ ಪ್ರಕಟೀಕ್ರಿಯತೇ ಸ್ಮ. ೫ ಮುಕುರಶೋಭಾಃ. ೬ ಲಕ್ಷ್ಮೀವರಮಂಡಪಃ. ೭ ಮಜ್ಜನಂ. ೮ ತಲ್ಲಕ್ಷ್ಮೀವರಮಂಡಪಾವರುದ್ಧ ಕ್ಷೇತ್ರಮಧ್ಯೇ ಸ್ಥಿತಾಃ. ೯ ಷೋಡಶಪಾದಾಃ, ಷೋಡಶಾಂತರಾ ಇತ್ಯಪಿ ಪಾಠಃ. ೧೦ ಉನ್ನತೈಃ. ೧೧ ಇವ.

ಆ ಪ್ರಥಮಪೀಠದ ಮೇಲೆ ಸುವರ್ಣಮಯವೂ ಸೂರ್ಯನ ಕಿರಣಗಳೊಡನೆ ಹೋರಾಡುವ ಆಕಾರವುಳ್ಳುದೂ ಆಕಾಶವನ್ನು ಪ್ರಕಾಶಪಡಿಸಿರುವುದೂ ಆದ ಎರಡನೆಯ ಪೀಠವಿದ್ದಿತು.

**ತಸ್ಯೋಪರಿತಲೇ ರೇಜುರ್ದಿಕ್ಷ್ವಷ್ಟಾಸು ಮಹಾಧ್ವಜಾಃ ।**
**ಲೋಕಪಾಲಾ ಇವೋತ್ತುಂಗಾಃ ಸುರೇಶಾಮಭಿಸಮ್ಮತಾಃ ॥ ೨೯೫ ॥**

ಆ ದ್ವಿತೀಯಪೀಠದ ಮೇಲುಭಾಗದಲ್ಲಿ ಎಂಟು ದಿಕ್ಕುಗಳಲ್ಲಿ ಎಂಟು ಮಹಾ ಧ್ವಜಗಳು ದೇವೇಂದ್ರರಿಗೆ ಪ್ರೀತಿಪಾತ್ರರೂ ಶ್ರೇಷ್ಠರೂ ಆದ ಲೋಕಪಾಲರಂತೆ ಶೋಭಿಸುತ್ತಿದ್ದುವು.

**ಚಕ್ರೇಭವೃಷಭಾಂಭೋಜವಸ್ತ್ರಸಿಂಹಗರುತ್ಮತಾಮ್ ।**
**ಮೂಲಸ್ಯ ಚ ಧ್ವಜಾ ರೇಜುಃ ಸಿದ್ಧಾಷ್ಟಗುಣನಿರ್ಮಲಾಃ ॥ ೨೯೬ ॥**

ಚಕ್ರ ಆನೆ ವೃಷಭ ತಾವರೆ ವಸ್ತ್ರ ಸಿಂಹ ಗರುಡ ಮಾಲಾ ಈ ಎಂಟು ಧ್ವಜಗಳು ಸಿದ್ಧರ ಎಂಟು ಗುಣಗಳಂತೆ ನಿರ್ಮಲವಾಗಿ ಶೋಭಿಸುತ್ತಿದ್ದುವು.

**ನೂನಂ ಪಾಪಪರಾಗಸ್ಯ ಸಮ್ಮಾರ್ಜನಮಿವ ಧ್ವಜಾಃ ।**
**ಕುರ್ವಂತಿ ಸ್ಮ ಮರುದ್ಧೂತಸ್ಫುರದಂಶುಕ[1]ಜೃಂಭಿತೈಃ ॥ ೨೯೭ ॥**

ಆ ಧ್ವಜಗಳು ಗಾಳಿಯಿಂದ ಕೊಡಹಲ್ಪಟ್ಟು ಹರಡಿಕೊಂಡಿರುವ ಶುಭ್ರವಾದ ವಸ್ತ್ರಗಳಿಂದ ಪಾಪವೆಂಬ ಧೂಳಿಯನ್ನು ಗುಡಿಸುವಂತಿದ್ದುವು.

**ತಸ್ಯೋಪರಿ ಸ್ಫುರದ್ರತ್ನರೋಚಿರ್ಧ್ವಸ್ತತಮಸ್ತತಿ ।**
**ತೃತೀಯಮಭವತ್ಪೀಠಂ ಸರ್ವರತ್ನಮಯಂ ಪೃಥು ॥ ೨೯೮ ॥**

ಆ ಎರಡನೆಯ ಪೀಠದ ಮೇಲೆ ಪ್ರಕಾಶಮಾನವಾದ ರತ್ನಗಳ ಕಾಂತಿಯುಳ್ಳುದೂ ಕತ್ತಲೆಯ ಸಮೂಹವನ್ನು ನಾಶಮಾಡಿರುವುದೂ ಸಮಸ್ತ ರತ್ನಮಯವೂ ವಿಶಾಲ ವೂ ಆದ ಮೂರನೆಯ ಪೀಠವಿದ್ದಿತು.

**[2]ತ್ರಿಮೇಖಲಮದಃ ಪೀಠಂ ಪರಾರ್ಧ್ಯಮಣಿನಿರ್ಮಿತಮ್ ।**
**ಬಭೌ ಮೇರುರಿವೋಪಾಸ್ತ್ಯೈ ಭರ್ತುಸ್ತಾದ್ರೂಪ್ಯಮಾಶ್ರಿತಃ ॥ ೨೯೯ ॥**

ಶ್ರೇಷ್ಠವಾದ ರತ್ನಗಳಿಂದ ನಿರ್ಮಿತವೂ ಮೂರು ಮೇಖಲೆ(ಅಂತಸ್ತು) ಗಳುಳ್ಳುದೂ ಆದ ಈ ಪೀಠವು ಸ್ವಾಮಿಯ ಸೇವೆಗೋಸ್ಕರ ಆ ಪೀಠದ ರೂಪವನ್ನು ಹೊಂದಿರುವ ಮೇರುಪರ್ವತವೋ ಎಂಬಂತೆ ಶೋಭಿಸುತ್ತಿದ್ದಿತು.

**ಸಚಕ್ರಶ್ಚಕ್ರವರ್ತೀವ ಸಧ್ವಜಃ ಸುರದಂತಿವತ್ ।**
**[3]ಭರ್ಮಮೂರ್ತಿರ್ಮಹಾಮೇರುರಿವ ಪೀಠಾದ್ರಿರುದ್ಬಭೌ ॥ ೩೦೦ ॥**

ಈ ತ್ರಿಮೇಖಲಾಪೀಠವೆಂಬ ಪರ್ವತವು ಮೊದಲನೆಯ ಪೀಠದಲ್ಲಿ ಧರ್ಮ ಚಕ್ರಗಳಿದ್ದುದರಿಂದ ಅದು ಚಕ್ರವರ್ತಿಯಂತೆಯೂ ಎರಡನೆಯ ಪೀಠದಲ್ಲಿ ಧ್ವಜ ಗಳಿದ್ದುದರಿಂದ ಅದು ಐರಾವತಗಜದಂತೆಯೂ, ಮೂರನೆಯಪೀಠವು ಸುವರ್ಣ ಮಯವಾಗಿದ್ದುದರಿಂದ ಅದು ಸುವರ್ಣಾಕಾರವುಳ್ಳ ಮಹಾಮೇರುಪರ್ವತ ದಂತೆಯೂ ಪ್ರಕಾಶಿಸುತ್ತಿದ್ದುವು.

**ಪುಷ್ಪಪ್ರಕರಮಾಘ್ರಾತುಂ ನಿಲೀನಾ ಯತ್ರ ಷಟ್ಪದಾಃ ।**
**ಹೇಮಚ್ಛಾಯಾಸಮಾಕ್ರಾಂತಾಃ [4]ಸೌವರ್ಣಾ ಇವ ರೇಜಿರೇ ॥ ೩೦೧ ॥**

ಆ ಪೀಠದಲ್ಲಿ ಪುಷ್ಪಗಳ ರಾಶಿಯನ್ನು ಮೂಸುವುದಕ್ಕಾಗಿ ಸೇರಿರುವ ಭ್ರಮರ ಗಳು ಸುವರ್ಣಕಾಂತಿಯಿಂದ ವ್ಯಾಪ್ತಗಳಾಗಿ ಸುವರ್ಣಮಯವಾದ ಭ್ರಮರಗಳಂತೆ ಶೋಭಿಸುತ್ತಿದ್ದುವು.

೧ ಜೃಂಭಣೈಃ. ೨ ಮೇಖಲಾತ್ರಯಯುತಂ ತೃತೀಯಂ. ೩ ಸುವರ್ಣಮೂರ್ತಿಃ. ೪ ಸುವರ್ಣ ಮಯಾಃ.

**ಅಧರೀಕೃತನಿಃಶೇಷಭುವನಂ ಭಾಸುರದ್ಯುತಿ ।**
**ಜಿನಸ್ಯೇವ ವಪುರ್ಭಾತಿ [1]ಯತ್ಸ್ಮ ದೇವಾಸುರಾರ್ಚಿತಮ್ ॥ ೩೦೨ ॥**

ಸಮಸ್ತಲೋಕವನ್ನು ಕೀಳುಮಾಡಿ(ಮೀರಿ)ರುವುದೂ ಪ್ರಕಾಶಮಾನವಾದ ಕಾಂತಿಯುಳ್ಳುದೂ ದೇವತೆಗಳಿಂದಲೂ ಅಸುರರಿಂದಲೂ ಪೂಜಿಸಲ್ಪಡುವುದೂ ಆದ ಆ ಪೀಠವು ಜಿನೇಶ್ವರನ ಪರಮೌದಾರಿಕ ದೇಹದಂತೆ ಪ್ರಕಾಶಿಸುತ್ತಿದ್ದಿತು.

**[2]ಜ್ಯೋತಿರ್ಗಣಪರೀತತ್ವಾ[3]ತ್ಸರ್ವೋತ್ತರತಯಾಪಿ ತತ್ ।**
**[4]ನ್ಯಕ್ಚಕಾರ ಶ್ರಿಯಂ ಮೇರೋರ್ಧಾರಣಾಚ್ಚ ಜಗದ್ಗುರೋಃ ॥ ೩೦೩ ॥**

ಆ ಪೀಠವು ತೇಜಸ್ಸಮೂಹದಿಂದ ಸುತ್ತಲ್ಪಟ್ಟಿದ್ದುದರಿಂದಲೂ ಸರ್ವೋತ್ಕೃಷ್ಟ ವಾಗಿದ್ದುದರಿಂದಲೂ ಜಗದ್ಗುರುವನ್ನು ಧರಿಸಿದ್ದುದರಿಂದಲೂ ಜ್ಯೋತಿರ್ದೇವತೆ ಗಳ ಸಮೂಹದಿಂದ ಸುತ್ತಲ್ಪಟ್ಟಿರುವುದೂ ಎಲ್ಲಾ ಕ್ಷೇತ್ರಗಳಿಗೂ ಉತ್ತರದಲ್ಲಿರು ವುದೂ ಜಗದ್ಗುರುವನ್ನು ಧರಿಸಿರುವುದೂ ಆದ ಮಹಾಮೇರುಪರ್ವತದ ಶೋಭೆಯನ್ನು ಕೀಳುಮಾಡಿದ್ದಿತು.

**ಈದೃಕ್ತ್ರಿಮೇಖಲಂ ಪೀಠಮಸ್ಯೋಪರಿ ಜಿನಾಧಿಪಃ ।**
**ತ್ರಿಲೋಕಶಿಖರೇ ಸಿದ್ಧಪರಮೇಷ್ಠೀವ ನಿರ್ಬಭೌ ॥ ೩೦೪ ॥**

ಈಪ್ರಕಾರವಾದ ತ್ರಿಮೇಖಲಾಪೀಠದ ಮೇಲೆ ಜಿನೇಶ್ವರನು ಮೂರುಲೋಕದ ತುದಿಯಲ್ಲಿ ಸಿದ್ಧಪರಮೇಷ್ಠಿಯಂತೆ ಶೋಭಿಸುತ್ತಿದ್ದನು.

**[5]ನಭಃಸ್ಫಟಿಕಸಾಲಸ್ಯ ಮಧ್ಯಂ ಯೋಜನಸಮ್ಮಿತಮ್ ।**
**[6]ವನತ್ರಯಸ್ಯ ರುಂದ್ರತ್ವಂ ಧ್ವಜರುದ್ಧಾವನೇರಪಿ ॥ ೩೦೫ ॥**

**ಪ್ರತ್ಯೇಕಂ ಯೋಜನಂ ಜ್ಞೇಯಂ [7]ಧೂಲೀಸಾಲಾಚ್ಚ ಖಾತಿಕಾ ।**
**ಗತ್ವಾ ಯೋಜನಮೇಕಂ ಸ್ಯಾಜ್ಜಿನದೇಶಿತವಿಸ್ತೃತಿಃ ॥ ೩೦೬ ॥**

ಆಕಾಶಸ್ಫಟಿಕನಿರ್ಮಿತವಾದ ಕೋಟೆಯ ಮಧ್ಯಪ್ರದೇಶವು ಒಂದು ಯೋಜನ ಪರಿಮಾಣವುಳ್ಳುದು. ವಲ್ಲೀವನ ಅಶೋಕವನ ಕಲ್ಪವೃಕ್ಷವನ ಈ ಮೂರರ ಮತ್ತು ಧ್ವಜಸ್ತಂಭಗಳಿಂದ ಆವರಿಸಲ್ಪಟ್ಟ ಭೂಮಿಯ ವಿಸ್ತಾರವು ಒಂದೊಂದು ಯೋಜನವೆಂದು ತಿಳಿಯಬೇಕು. ಧೂಲೀಸಾಲದಿಂದ ಕಂದಕದವರೆಗೂ ಒಂದು ಯೋಜನವಿಸ್ತಾರ(ದೂರ)ವೆಂದು ಜಿನೇಶ್ವರರಿಂದ ಹೇಳಲ್ಪಟ್ಟಿರುವುದು.

**ನಭಃಸ್ಫಟಿಕಸಾಲಾತ್ತು ಸ್ಯಾ[8]ದಾರಾದ್ವನವೇದಿಕಾ ।**
**ಯೋಜನಾರ್ಧಂ ತೃತೀಯಾಚ್ಚ [9]ಸಾಲಾತ್ಪೀಠಂ [10]ತದರ್ಧಗಮ್ ॥**

ಆಕಾಶಸ್ಫಟಿಕದ ಕೋಟೆಯ ಹಿಂಭಾಗದಲ್ಲಿ ಎರಡುಹರದಾರಿದೂರದಲ್ಲಿ ವನ ವೇದಿಕೆಯಿರುವುದು. ಆ ಮೂರನೆಯ ಕೋಟೆ(ಸ್ಫಟಿಕದಕೋಟೆ) ಯಿಂದೊಂದು ಹರದಾರಿದೂರದಲ್ಲಿ ಪ್ರಥಮಪೀಠವಿರುವುದು.

**[11]ಕ್ರೋಶಾರ್ಧಂ [12]ಪೀಠಮೂರ್ಧ್ನಃ ಸ್ಯಾ[13]ದ್ವಿಷ್ಕಂಭೋ ಮೇಖಲೇ ಪರೇ ।**
**ಪ್ರತ್ಯೇಕಂ ಧನುಷಾಂ [14]ರುಂದ್ರೇ ಸ್ಯಾತಾಮರ್ಧಾ[15]ಷ್ಟಮಂ ಶತಮ್ ॥**

ಪೀಠದ ತುದಿಯು ಅರ್ಧಹರದಾರಿವಿಸ್ತಾರವಾಗಿರುವುದು. ಉಳಿದ ಮೇಖಲೆ (ಪೀಠ)ಗಳೆರಡು ಪ್ರತಿಯೊಂದೂ ಏಳುನೂರೈವತ್ತು ಧನುಸ್ಸು ವಿಸ್ತಾರವಾಗಿದ್ದಿತು.

೧ ಪೀಠಂ. ೨ ತೇಜೋರಾಶಿಃ, ಪಕ್ಷೇ ಜ್ಯೋತಿಷ್ಕಸಮೂಹಃ. ೩ ಸರ್ವೋತ್ಕೃಷ್ಟತಯಾ ಪಕ್ಷೇ ಸರ್ವೋತ್ತರದಿಕ್ಸ್ಥಯಾ. ೪ ಅಧಃಕರೋತಿ ಸ್ಮ. ೫ ಆಕಾಶಸ್ಫಟಿಕಸಾಲಸ್ಯ. ೬ ವಲ್ಲೀವನಾಶೋಕವನ ಕಲ್ಪವೃಕ್ಷವನಮಿತಿ ವನತ್ರಯಸ್ಯ. ೭ ಧೂಲೀಸಾಲಾದಾರಭ್ಯ ಖಾತಿಕಾಪರ್ಯಂತಮೇಕಯೋಜನಂ. ೮ ಪಶ್ಚಾದ್ಭಾಗೇ. ೯ ಪುನರಾಕಾಶಸ್ಫಟಿಕಶಾಲಾದಂತಃ. ೧೦ ಕ್ರೋಶಂ ಗತ್ವಾ ಪ್ರಥಮಪೀಠಂ ಭವತೀತಿ ಭಾವಃ. ೧೧ ದಂಡಸಹಸ್ರಂ. ೧೨ ತೃತೀಯಪೀಠಃ. ೧೩ ವಿಶಾಲಃ. ೧೪ ಪ್ರಥಮದ್ವಿತೀಯಪೀಠೇ. ೧೫ ಪಂಚಾಶದಧಿಕಸಪ್ತಶತಚಾಪಪ್ರಮಿತರುಂದ್ರೇ ಸ್ಯಾತಾಂ.

**ಕ್ರೋಶಂ ರುಂದ್ರಾ ಮಹಾವೀಥ್ಯೋ ಭಿತ್ತಯಃ ಸ್ವೋಚ್ಛ್ರಿತೇರ್ಮಿತಾಃ ।**
**ರೌಂದ್ರ್ಯೇಣಾಷ್ಟಮಭಾಗೇನ [೧]ಪ್ರಾಜ್ಞೈರ್ನೀತಾ [೨]ತದುಚ್ಛ್ರಿತಿಃ ॥ ೩೦೯ ॥**

ದೊಡ್ಡ ಮಾರ್ಗಗಳು ಒಂದು ಹರದಾರಿ ವಿಸ್ತಾರವಾಗಿದ್ದುವು. ಗೋಡೆಗಳು ತಮ್ಮ ಔನ್ನತ್ಯದ ಎಂಟನೆಯ ಒಂದುಭಾಗ ವಿಸ್ತಾರವಾಗಿದ್ದುವು. ಆ ಗೋಡೆಗಳ ಉನ್ನತಿಯು ಹಿಂದೆ ನಿರ್ಣಯಿಸಲ್ಪಟ್ಟಿದೆ (ಹೇಳಲ್ಪಟ್ಟಿದೆ).

**ಅಷ್ಟದಂಡೋಚ್ಛ್ರಿತಾ ಜ್ಞೇಯಾ [೩]ಜಗತೀ ಪೀಠಮಾದಿಮಮ್ ।**
**ದ್ವಿತೀಯಂ ಚ [೪]ತದರ್ಧೇನ ಮಿತೋಚ್ಛ್ರಾಯಂ ವಿದುರ್ಬುಧಾಃ ॥**

ಜಗತೀಯೆಂಬ ಮೊದಲನೆಯ ಪೀಠವು ಎಂಟು ಮಾರು ಉನ್ನತವಾಗಿದ್ದಿತೆಂದು ತಿಳಿಯಬೇಕು. ಎರಡನೆಯ ಪೀಠವು ನಾಲ್ಕುಮಾರು ಉನ್ನತವೆಂದು ವಿದ್ವಾಂಸರು ತಿಳಿಯುತ್ತಾರೆ.

**ತಾವದುಚ್ಛ್ರಿತಮಂತ್ಯಂ ಚ ಪೀಠಂ ಸಿಂಹಾಸನೋನ್ನತಿಃ ।**
**ಧನುರೇಕಮಿಹಾಮ್ನಾತಂ ಧರ್ಮಚಕ್ರಸ್ಯ ಚೋಚ್ಛ್ರಿತಿಃ ॥ ೩೧೧ ॥**

ಕೊನೆಯ (ಮೂರನೆಯ) ಪೀಠವೂ ನಾಲ್ಕು ಮಾರು ಉನ್ನತವಾಗಿದ್ದಿತು. ಅದರ ಮೇಲಿರುವ ಸಿಂಹಾಸನವೂ ಪ್ರಥಮಪೀಠದಲ್ಲಿರುವ ಧರ್ಮಚಕ್ರಗಳೂ ಒಂದು ಧನುಸ್ಸು ಪ್ರಮಾಣ ಉನ್ನತವಾಗಿದ್ದುವೆಂದು ಹೇಳಲ್ಪಟ್ಟಿವೆ.

**ಇತ್ಯುಕ್ತೇನ ವಿಭಾಗೇನ ಜಿನಸ್ಯಾಸ್ಥಾಯಿಕಾ ಸ್ಥಿತಾ ।**
**ತನ್ಮಧ್ಯೇ [೫]ತದವಸ್ಥಾನಮಿತಃ ಶೃಣುತ ಮನ್ಮುಖಾತ್ ॥ ೩೧೨ ॥**

ಈ ಹಿಂದೆ ಹೇಳಲ್ಪಟ್ಟ ವಿಭಾಗದಿಂದ ಜಿನೇಶ್ವರನ ಸಮವಸರಣಸಭೆಯು ರಚಿಸಲ್ಪಟ್ಟಿದ್ದಿತು. ಆ ಸಭೆಯ ಮಧ್ಯದಲ್ಲಿ ಜಿನೇಶ್ವರನ ಇರುವಿಕೆಯನ್ನು ಇಲ್ಲಿಂದ ಮುಂದಕ್ಕೆ ನನ್ನ ಮುಖದಿಂದ ಕೇಳಿರಿ.''

**ಇತ್ಯುಚ್ಚೈರ್ಗಣನಾಯಕೇ ನಿಗದತಿ ವ್ಯಕ್ತಂ ಜಿನಾಸ್ಥಾಯಿಕಾಂ**
**ಪ್ರವ್ಯಕ್ತೈರ್ಮಧುರೈರ್ವಚೋಭಿರುಚಿತೈಸ್ತತ್ತ್ವಾರ್ಥಸಂಬೋಧಿಭಿಃ ।**
**[೬]ಬುದ್ಧಾಂತಃಕರಣೋ ವಿಕಾಸಿ ವದನಂ ಬಭ್ರೇ ನೃಪಃ ಶ್ರೇಣಿಕಃ**
**ಪ್ರೀತಃ ಪ್ರಾತರಿವಾಬ್ಜಿನೀವನಚಯಃ ಪ್ರೋನ್ಮೀಲಿತಂ ಪಂಕಜಮ್ ॥**

ಈ ಪ್ರಕಾರವಾಗಿ ಗೌತಮಗಣಧರರು ಗಂಭೀರವೂ ಅತ್ಯಂತಸ್ಫುಟವೂ ಮಧುರವೂ ಉಚಿತವೂ ತತ್ತ್ವಾರ್ಥಗಳನ್ನು ಬೋಧಿಸುವುವೂ ಆದ ವಚನಗಳಿಂದ ಜಿನಸಭೆ(ಸಮವಸರಣ)ಯನ್ನು ವ್ಯಕ್ತವಾಗಿ ವರ್ಣಿಸುತ್ತಿರಲು ಮನಸ್ಸಿಗೆ ವಿಷಯ ಗ್ರಹಣವನ್ನು ಮಾಡಿಕೊಂಡ ಶ್ರೇಣಿಕರಾಜನು ಸಂತುಷ್ಟನಾಗಿ ಪ್ರಾತಃಕಾಲದಲ್ಲಿ ಕಮಲಲತೆಗಳ ಸಮೂಹವು ಅರಳಿದ ಕಮಲವನ್ನು ಧರಿಸುವಂತೆ ಹಸನ್ಮುಖವನ್ನು ಧರಿಸಿದನು.

**[೧]ಸಭ್ಯಾಃ [೨]ಸಭ್ಯತಮಾ[೩]ಮಸಭ್ಯಕುಮತಧ್ವಾಂತಚ್ಛಿದಂ ಭಾರತೀಂ,**
**ಶ್ರುತ್ವಾ ತಾ[೪]ಮಪವಾಙ್ಮಲಾಂ ಗಣಭೃತಃ ಶ್ರೀಗೌತಮಸ್ವಾಮಿನಃ ।**
**ಸಾರ್ಧಂ ಯೋಗಿಭಿ[೫]ರಾಗಮನ್ ಜಿನಪತೌ ಪ್ರೀತಿಂ ಸ್ಫುರಲ್ಲೋಚನಾಃ,**
**ಪ್ರೋತ್ಫುಲ್ಲಾಃ ಕಮಲಾಕರಾ ಇವ ರವೇರಾಸಾದ್ಯ ದೀಪ್ತಿಶ್ರಿಯಮ್ ॥**

ಸಭಾಯೋಗ್ಯರಾದ ಮನುಷ್ಯರು ದೇವತೆಗಳು ಮೊದಲಾದವರೂ ಯೋಗ ಸಂಪನ್ನರಾದ ಮುನಿಗಳೂ ಗಣಧರರಾದ ಗೌತಮಸ್ವಾಮಿಯ ಅತ್ಯಂತಪ್ರಶಸ್ತವೂ ಮಿಥ್ಯಾದೃಷ್ಟಿಗಳ ದುಷ್ಟಮತವೆಂಬ ಕತ್ತಲೆಯನ್ನು ನಾಶಮಾಡುವುದೂ ವಚನ ದೋಷರಹಿತವೂ ಆದ ಆ ವಾಣಿಯನ್ನು ಕೇಳಿ, ಸೂರ್ಯನ ಕಾಂತಿಯ ಶೋಭೆಯನ್ನು ಹೊಂದಿ ವಿಕಸಿತವಾದ ಕಮಲಸರೋವರಗಳಂತೆ, ವಿಕಸಿತವಾದ ಕಣ್ಣುಗಳುಳ್ಳವರಾಗಿ ಜಿನೇಶ್ವರನಲ್ಲಿ ಸಂಪೂರ್ಣವಾಗಿ ಪ್ರೀತಿಯನ್ನು ಹೊಂದಿದರು.

**ಸ ಜಯತಿ ಜಿನನಾಥೋ ಯಸ್ಯ ಕೈವಲ್ಯಪೂಜಾಂ,**
**[೬]ವಿತತನಿಷುರುದಗ್ರಾಮದ್ಭುತಶ್ರೀರ್ಮಹೇಂದ್ರಃ ।**
**ಸಮಮಮರನಿಕಾಯೈರೇತ್ಯ ದೂರಾತ್ಪ್ರಣಮ್ರಃ,**
**ಸಮವಸರಣಭೂಮಿಂ ಪಿಪ್ರಿಯೇ ಪ್ರೇಕ್ಷಮಾಣಃ ॥ ೩೧೪ ॥**

ಯಾವ ಜಿನೇಶ್ವರನ ಶ್ರೇಷ್ಠವಾದ ಕೇವಲಜ್ಞಾನ ಪೂಜೆಯನ್ನು ವಿಸ್ತರಿಸಬೇಕೆಂದಪೇಕ್ಷಿಸಿದವನೂ ಅದ್ಭುತವಾದ ಸಂಪತ್ತುಳ್ಳವನೂ ದೇವತೆಗಳ ಸಮೂಹಗಳೊಡನೆ ಬಂದು ದೂರದಿಂದ ನಮಸ್ಕರಿಸಿದವನೂ ಆದ ದೇವೇಂದ್ರನು ಸಮವಸರಣಭೂಮಿಯನ್ನು ನೋಡಿದವನಾಗಿ ಸಂತೋಷಪಟ್ಟನೋ ಅಂತಹ ಜಿನೇಶ್ವರನು ಜಯಿಸುತ್ತಾನೆ. ಸರ್ವಶ್ರೇಷ್ಠನಾಗಿದ್ದಾನೆಂದು ಭಾವವು.

**ಕಿಮಯ[೭]ಮಮರಸರ್ಗಃ ಕಿಂನು ಜೈನಾನುಭಾವಃ,**
**ಕಿಮುತ ನಿಯತಿರೇಷಾ ಕಿಂಸ್ವಿದೈಂದ್ರಃ ಪ್ರಭಾವಃ ।**
**ಇತಿ ವಿತತವಿತರ್ಕೈಃ ಕೌತುಕಾದ್ವೀಕ್ಷ್ಯಮಾಣಾ,**
**ಜಯತಿ ಸುರಸಮಾಜೈರ್ಭರ್ತುರಾಸ್ಥಾನಭೂಮಿಃ ॥ ೩೧೬ ॥**

“ಇದೇನು ಸ್ವರ್ಗದ ಸೃಷ್ಟಿಯೊ? ಜಿನೇಶ್ವರನ ಮಹಿಮೆಯೊ? ಇದು ಸ್ವಾಭಾವಿಕವೊ? ಅಥವಾ ದೇವೇಂದ್ರನ ಪ್ರಭಾವವೊ?'' ಎಂದು ಅನೇಕವಿಧವಾಗಿ ಊಹಿಸುತ್ತಿರುವ ದೇವತೆಗಳ ಸಮೂಹಗಳಿಂದ ಕುತೂಹಲದಿಂದ ನೋಡಲ್ಪಡುತ್ತಿರುವ ಸ್ವಾಮಿಯ ಸಭಾಸ್ಥಾನಭೂಮಿಯು ಸರ್ವಶ್ರೇಷ್ಠವಾಗಿದೆ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವತ್ಸಮವಸರಣವರ್ಣನಂ ನಾಮ ದ್ವಾವಿಂಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದಲ್ಲಿ
‘‘ಕನ್ನಡಭಾವದೀಪಿಕಾವ್ಯಾಖ್ಯೆಯೊಳ್'' ಭಗವಂತನ ಸಮವಸರಣವರ್ಣನೆಯೆಂಬ
ಇಪ್ಪತ್ತೆರಡನೆಯ ಪರ್ವವು ಸಮಾಪ್ತವಾದುದು.

---

೧ ಸಿದ್ಧಾರ್ಥಚೈತ್ಯವೃಕ್ಷಾದೀನಾಂ ನಿಶ್ಚಿತಾ. ೨ ತದ್ಭಿತ್ತೀನಾಮುನ್ನತಿಃ. ೩ ಪ್ರಥಮಪೀಠರೂಪಾ ಜಗತೀ. ೪ ಚತುರ್ದಂಡೇನ. ೫ ಜಿನಸ್ಯಾವಸ್ಥಾನಂ. ೬ ಪ್ರಬುದ್ಧಾಂತಃಕರಣಃ.

೧ ಸಭಾಯೋಗ್ಯಾಃ. ೨ ಪ್ರಶಸ್ತತಮಾಂ. ೩ ಮಿಥ್ಯಾದೃಶಾಂ. ೪ ಅಪಗತವಚನದೋಷಾಂ. ೫ ಆ ಸಮಂತಾತ್ಪ್ರಾಪ್ತವಂತಃ. ೬ ವಿಸ್ತರಿತುಮಿಚ್ಛುಃ. ೭ ಸ್ವರ್ಗಸೃಷ್ಟಿಃ.

|| ಶ್ರೀ ವೃಷಭಜಿನಾಯ ನಮಃ ||

# ಅಥ ತ್ರಯೋವಿಂಶಂ ಪರ್ವ

**ಅಥ ತ್ರಿಮೇಖಲಸ್ಯಾಸ್ಯ ಮೂರ್ಧ್ನಿ ಪೀಠಸ್ಯ ವಿಸ್ತೃತೇ ।**
**ಸ್ಫುರನ್ಮಣಿವಿಭಾಜಾಲರಚಿತಾಮರಕಾರ್ಮುಕೇ ॥ ೧ ॥**

**ಸುರೇಂದ್ರಕರವಿಕ್ಷಿಪ್ತಪುಷ್ಪಪ್ರಕರಶೋಭಿನಿ ।**
**[೧]ಹಸತೀವ ಘನಾಪಾಯ[೨]ಸ್ಫುರತ್ತಾರಕಮಂಬರಮ್ ॥ ೨ ॥**

**ಚಲಚ್ಚಾಮರಸಂಘಾತಪ್ರತಿಬಿಂಬ[೩]ನಿಭಾಗತೈಃ ।**
**ಹಂಸೈರಿವ ಸರೋಬುದ್ಧ್ಯಾ ಸೇವ್ಯಮಾನ[೪]ತಟೇ ಪೃಥೌ ॥ ೩ ॥**

**ಮಾರ್ತಾಂಡಮಂಡಲಚ್ಛಾಯಾಪ್ರಸ್ಪರ್ಧಿನಿ ಮಹರ್ದ್ಧಿಕೇ ।**
**ಸ್ವರ್ಧುನೀಫೇನನೀಕಾಶೈಃ ಸ್ಫಟಿಕೈರ್ಘಟಿತೇ ಕ್ವಚಿತ್ ॥ ೪ ॥**

**ಪದ್ಮರಾಗಸಮುತ್ಸರ್ಪನ್ಮಯೂಖೈಃ ಕ್ವಚಿ[೫]ದಾಸ್ತೃತೇ ।**
**ಜಿನಪಾದತಲಚ್ಛಾಯಾಶೋಣಿಮ್ನೇವಾನುರಂಜಿತೇ ॥ ೫ ॥**

**ಶುಚೌ ಸ್ನಿಗ್ಧೇ ಮೃದುಸ್ಪರ್ಶೇ ಜಿನಾಂಘ್ರಿಸ್ಪರ್ಶಪಾವನೇ ।**
**ಪರ್ಯಂತರಚಿತಾನೇಕಮಂಗಲದ್ರವ್ಯಸಂಪದಿ ॥ ೬ ॥**

**ತತ್ರ ಗಂಧಕುಟೀಂ [೬]ಪೃಥ್ವೀಂ ತುಂಗ[೭]ಶಾಲೋಪಶೋಭಿನೀಮ್ ।**
**[೮]ರೈರಾ [೯]ಣ್ಣಿವೇಶಯಾಮಾಸ ಸ್ವರ್ವಿಮಾನಾತಿ ಶಾಯಿನೀಮ್ ॥ ೭ ॥**

ತರುವಾಯ ವಿಸ್ತರಿಸಲ್ಪಟ್ಟಿರುವುದೂ ಪ್ರಕಾಶಮಾನವಾದ ರತ್ನಗಳ ಕಾಂತಿಯ ಸಮೂಹದಿಂದ ರಚಿಸಲ್ಪಟ್ಟ ಇಂದ್ರಧನುಸ್ಸಿನಂತಿರುವುದೂ ದೇವೇಂದ್ರನ ಕೈಗಳಿಂದ ಸುರಿಯಲ್ಪಟ್ಟ ಪುಷ್ಪಗಳ ಸಮೂಹದಿಂದ ಶೋಭಿಸುತ್ತಿರುವುದೂ ಮೇಘವಿಲ್ಲದಿರುವುದರಿಂದ ಪ್ರಕಾಶಿಸುತ್ತಿರುವ ನಕ್ಷತ್ರಗಳುಳ್ಳ ಆಕಾಶವನ್ನು ಹಾಸ್ಯಮಾಡುವಂತಿರುವುದೂ, ಚಲಿಸುತ್ತಿರುವ ಚಾಮರಗಳ ಸಮೂಹದ ಪ್ರತಿಬಿಂಬಗಳ ನೆಪದಿಂದ ಬಂದಿರುವ ಹಂಸಪಕ್ಷಿಗಳಿಂದ ಸರೋವರವೆಂಬ ಬುದ್ಧಿಯಿಂದಲೋ ಎಂಬಂತೆ ಸೇವಿಸಲ್ಪಡುವ ಪ್ರದೇಶವುಳ್ಳದೂ, ವಿಸ್ತಾರವೂ, ಸೂರ್ಯಮಂಡಲದ ಕಾಂತಿಯೊಡನೆ ಹೋರಾಡುವುದೂ ಮಹಾತಿಶಯವುಳ್ಳದೂ ಕೆಲವು ಕಡೆಯಲ್ಲಿ ಗಂಗಾನದಿಯ ನೊರೆಗೆ ಸಮಾನವಾದ ಸ್ಫಟಿಕಶಿಲೆಗಳಿಂದ ಕಟ್ಟಲ್ಪಟ್ಟಿರುವುದೂ, ಕೆಲವು ಕಡೆಯಲ್ಲಿ ಪದ್ಮರಾಗರತ್ನಗಳ ವ್ಯಾಪಿಸುತ್ತಿರುವ ಕಿರಣಗಳಿಂದ ವಿಸ್ತರಿಸಲ್ಪಟ್ಟಿರುವುದೂ ಜಿನೇಶ್ವರನ ಪಾದತಲದ ಕಾಂತಿಯ ಕೆಂಪಿನಿಂದ ಲೇಪಿಸಲ್ಪಟ್ಟಂತಿರುವುದೂ, ನಿರ್ಮಲವೂ, ಹೊಳಪೂ, ಮೃದುವಾದ ಸ್ಪರ್ಶವುಳ್ಳದೂ, ಜಿನೇಶ್ವರನ ಪಾದಸ್ಪರ್ಶದಿಂದ ಪವಿತ್ರವೂ ಸಮೀಪದಲ್ಲಿ ರಚಿಸಲ್ಪಟ್ಟ ಅನೇಕ ಮಂಗಲ ದ್ರವ್ಯಸಂಪತ್ತುಗಳುಳ್ಳದೂ, ಆದ ಈ ತ್ರಿಮೇಖಲಾಪೀಠದ ಅಗ್ರಭಾಗದಲ್ಲಿ ವಿಶಾಲವೂ ಉನ್ನತವಾದ ಮಂಡಪದಿಂದ ಶೋಭಿಸುತ್ತಿರುವುದೂ ಸ್ವರ್ಗದ ವಿಮಾನವನ್ನು ಮೀರಿರುವುದೂ ಆದ ಗಂಧಕುಟಿಯನ್ನು ಕುಬೇರನು ರಚಿಸಿದನು.

**ತ್ರಿಮೇಖಲಾಂಕಿತೇ ಪೀಠೇ ಸೈಷಾ ಗಂಧಕುಟೀ ಬಭೌ ।**
**[೧೦]ನಂದನಾದಿವನಶ್ರೇಣೀತ್ರಯಾದ್ವೋಪರಿಚೂಲಿಕಾ ॥ ೮ ॥**

೧ ಹಸತೀತಿ ಹಸನ್ ತಸ್ಮಿನ್. ೨ ಸ್ಫುಟತಾರಕಮಿತ್ಯಪಿ ಪಾಠಃ. ೩ ವ್ಯಾಜಾದಾಗತೈಃ. ೪ ತಲೇ ಇತ್ಯಪಿ ಪಾಠಃ. ೫ ವಿಸ್ತೃತೇ. ೬ ಪೀವರಾಂ. ೭ ಮಂಡಪಃ. ೮ ಧನದಃ. ೯ ರಚಯಾಮಾಸ. ೧೦ ನಂದನಸೌಮನಸಪಾಂಡುಕವನಶ್ರೇಣೀತ್ರಯಾತ್.

ತ್ರಿಮೇಖಲಾಯುಕ್ತವಾದ ಪೀಠದಲ್ಲಿ ಆ ಗಂಧಕುಟಿಯು ನಂದನ ಸೌಮನಸ ಪಾಂಡುಕವನಗಳ ಸಾಲಿನಿಂದ ಮೇಲಿರುವ ಮೇರುವಿನ ಚೂಲಿಕೆಯಂತೆ ಶೋಭಿಸುತ್ತಿದ್ದಿತು.

**ಯಥಾ ಸರ್ವಾರ್ಥಸಿದ್ಧಿರ್ವಾ ಸ್ಥಿತಾ ತ್ರಿದಿವಮೂರ್ಧನಿ ।**
**ತಥಾ ಗಂಧಕುಟೀ ದೀಪ್ರಾ ಪೀಠಸ್ಯಾ[೧]ಧಿತಲಂ ಬಭೌ ॥ ೯ ॥**

ಸ್ವರ್ಗದ ತುದಿಯಲ್ಲಿ ಸರ್ವಾರ್ಥಸಿದ್ಧಿವಿಮಾನವಿರುವಂತೆ ಆ ಪೀಠದ ಮೇಲೆ ಪ್ರಕಾಶಮಾನವಾದ ಗಂಧಕುಟಿಯು ಶೋಭಿಸುತ್ತಿದ್ದಿತು.

**ನಾನಾರತ್ನಪ್ರಭೋತ್ಸರ್ಪೈರ್ಯತ್ಕೂಟೈಸ್ತತಮಂಬರಮ್ ।**
**ಸಚಿತ್ರಮಿವ ಭಾತಿ ಸ್ಮ ಸೇಂದ್ರಚಾಪಮಿವಾಥವಾ ॥ ೧೦ ॥**

ಅನೇಕವಿಧವಾದ ರತ್ನಗಳ ಹರಡುತ್ತಿರುವ ಕಾಂತಿಯುಳ್ಳ ಆ ಗಂಧಕುಟಿಯ ಶಿಖರಗಳಿಂದ ವ್ಯಾಪ್ತವಾದ ಆಕಾಶವು ಚಿತ್ರಸಹಿತವಾಗಿರುವಂತೆಯೂ, ಇಂದ್ರಧನುಸ್ಸಿನೊಡನೆ ಕೂಡಿರುವಂತೆಯೂ, ಶೋಭಿಸುತ್ತಿದ್ದಿತು.

**ಯೋತ್ತುಂಗೈಃ ಶಿಖರೈರ್ಬದ್ಧಜಯಕೇತನಕೋಟಿಭಿಃ ।**
**ಭುಜಶಾಖಾಃ ಪ್ರಸಾರ್ಯೇವ [೨]ನಭೋಗಾ[೩]ನಾಜುಹೂಷತ ॥ ೧೧ ॥**

ಅನೇಕ (ಕೋಟ್ಯವಧಿ) ಧ್ವಜಪತಾಕೆಗಳಿಂದ ಕಟ್ಟಲ್ಪಟ್ಟಿರುವುದೂ ಉನ್ನತವೂ ಆದ ಶಿಖರಗಳಿಂದ ಆ ಗಂಧಕುಟಿಯು ಕೈಗಳನ್ನು ನೀಡಿ ದೇವತೆಗಳನ್ನು ಕರೆಯುವಂತಿದ್ದಿತು.

**ತ್ರಿಭಿಸ್ತಲೈರುಪೇತಾಯಾ ಭುವನತ್ರಿತಯಶ್ರಿಯಃ ।**
**ಪ್ರತಿಮೇವ ಬಭೌ [೪]ವ್ಯೋಮಸರೋಮಧ್ಯೇಂಬುಬಿಂಬಿತಾ ॥ ೧೨ ॥**

ಮೂರಂತಸ್ತುಗಳುಳ್ಳ ಆ ಗಂಧಕುಟಿಯು ಆಕಾಶವೆಂಬ ಸರೋವರದ ನೀರಿನ ಮಧ್ಯದಲ್ಲಿ ಪ್ರತಿಬಿಂಬಿಸಿರುವ ಮೂರುಲೋಕದ ಲಕ್ಷ್ಮಿಯ ಪ್ರತಿಮೆಯಂತೆ, ಶೋಭಿಸುತ್ತಿದ್ದಿತು.

**ಸ್ಥೂಲೈರ್ಮುಕ್ತಾಮಯೈ[೫]ರ್ಜಾಲೈರ್ಲಂಬಮಾನೈಃ ಸಮಂತತಃ ।**
**ಮಹಾಬ್ಧಿಭಿರಿವಾನೀತೈರ್ಯೋಪಾಯನಶತೈರಭಾತ್ ॥ ೧೩ ॥**

ಸುತ್ತಲೂ ಜೋಲಾಡುತ್ತಿರುವ ದೊಡ್ಡ ಮುತ್ತಿನ ಮಾಲಿಕೆಗಳಿಂದ ಆ ಗಂಧಕುಟಿಯು, ದೊಡ್ಡ ಸಮುದ್ರಗಳಿಂದ ತರಲ್ಪಟ್ಟ ಅನೇಕ ಕೈಗಾಣಿಕೆಗಳಿಂದ ಶೋಭಿಸುವಂತೆ, ಶೋಭಿಸುತ್ತಿದ್ದಿತು.

**ಹೈಮೈರ್ಜಾಲೈಃ ಕ್ವಚಿತ್ಸ್ಥೂಲೈರಾಯತ್ತೈರ್ಯಾ ವಿದಿದ್ಯುತೇ ।**
**ಕಲ್ಪಾಂಘ್ರಿಪೋದ್ಭವೈರ್ದೀಪ್ರೈಃ [೬]ಪ್ರಾರೋಹೈರಿವ ಲಂಬಿತೈಃ ॥ ೧೪ ॥**

ಕೆಲವು ಕಡೆಯಲ್ಲಿ ಸ್ಥೂಲವೂ ದೀರ್ಘವೂ ಆದ ಬಂಗಾರದ ಮಾಲೆಗಳಿಂದ ಆ ಗಂಧಕುಟಿಯು ಕಲ್ಪವೃಕ್ಷಗಳಿಂದುಂಟಾದುವೂ ಪ್ರಕಾಶಮಾನವೂ ಜೋಲಾಡುತ್ತಿರುವುವೂ ಆದ ಬಿಳಲುಗಳಿಂದಲೋ ಎಂಬಂತೆ ಪ್ರಕಾಶಿಸುತ್ತಿದ್ದಿತು.

**ರತ್ನಾಭರಣಮಾಲಾಭಿರ್ಲಂಬಿತಾಭಿರಿತೋಮುತಃ ।**
**ಯಾ ಬಭೌ ಸ್ವರ್ಗಲಕ್ಷ್ಮ್ಯೇವ [೭]ಪ್ರಹಿತೋಪಾಯನರ್ದ್ಧಿಭಿಃ ॥ ೧೫ ॥**

೧ ಉಪರಿತಲೇ. ೨ ದೇವಾನ್. ೩ ಆಹ್ವಯತಿ ಸ್ಮ. ೪ ಆಕಾಶಸರೋವರಜಲಮಧ್ಯೇ. ೫ ದಾಮಭಿಃ. ೬ ಶಿಫಾಭಿಃ. ೭ ಪ್ರೇಷಿತಃ.

ಸುತ್ತಲೂ ಜೋಲಾಡುತ್ತಿರುವ ರತ್ನಾಭರಣಗಳ ಮಾಲಿಕೆಗಳಿಂದ ಆ ಗಂಧ ಕುಟಿಯು ಸ್ವರ್ಗಲಕ್ಷ್ಮಿಯಿಂದ ಕಳುಹಿಸಲ್ಪಟ್ಟ ಕೈಗಾಣಿಕೆಗಳಿಂದಲೋ ಎಂಬಂತೆ, ಶೋಭಿಸುತ್ತಿದ್ದಿತು.

**ಸ್ರಗ್ಭಿರಾಕೃಷ್ಟಗಂಧಾಂಧಮಾದ್ಯನ್ಮಧುಪಕೋಟಿಭಿಃ ।**
**ಜಿನೇಂದ್ರಮಿವ [೧]ತುಷ್ಟೂಷುರಭಾದ್ಯಾ ಮುಖರೀಕೃತಾ ॥ ೧೬ ॥**

ಪರಿಮಳಕ್ಕೆ ಮುತ್ತಿಕೊಂಡು ಮಗ್ನವಾಗಿರುವುವೂ ಮದಿಸಿರುವುವೂ ಆದ ಆನೇಕ ಭ್ರಮರಗಳುಳ್ಳ ಪುಷ್ಪಮಾಲಿಕೆಗಳಿಂದ ಶಬ್ದಾಯಮಾನವಾದ ಆ ಗಂಧ ಕುಟಿಯು ಜಿನೇಶ್ವರನನ್ನು ಸ್ತೋತ್ರಮಾಡುವುದಕ್ಕೆ ಇಚ್ಛಿಸುತ್ತಿದೆಯೋ ಎಂಬಂತೆ ಶೋಭಿಸುತ್ತಿದ್ದಿತು.

**ಸ್ತುವತ್ಸುರೇಂದ್ರ[೨]ಸಂದೃಬ್ಧಗದ್ಯಪದ್ಯಸ್ತವಸ್ವನೈಃ ।**
**ಸರಸ್ವತೀವ ಭಾತಿ ಸ್ಮ ಯಾ ವಿಭುಂ ಸ್ತೋತುಮುದ್ಯತಾ ॥ ೧೭ ॥**

ಸ್ತೋತ್ರಮಾಡುತ್ತಿರುವ ದೇವೇಂದ್ರರಿಂದ ರಚಿಸಲ್ಪಟ್ಟ ಗದ್ಯಪದ್ಯಮಯವಾದ ಸ್ತೋತ್ರಗಳ ಶಬ್ದಗಳಿಂದ ಆ ಗಂಧಕುಟಿಯು ಜಿನೇಶ್ವರನನ್ನು ಸ್ತೋತ್ರಮಾಡುವುದಕ್ಕೆ ಪ್ರಯತ್ನಪಟ್ಟಿರುವ ಸರಸ್ವತಿಯಂತೆ ಶೋಭಿಸುತ್ತಿದ್ದಿತು.

**ರತ್ನಾಲೋಕೈರ್ವಿಸರ್ಪದ್ಭಿರ್ಯಾ ವೃತಾಂಗೀ ವ್ಯರಾಜತ ।**
**ಜಿನೇಂದ್ರಾಂಗಪ್ರಭಾಲಕ್ಷ್ಮ್ಯಾ ಘಟಿತೇವ ಮಹಾದ್ಯುತಿಃ ॥ ೧೮ ॥**

ಪಸರಿಸುತ್ತಿರುವ ರತ್ನಕಾಂತಿಗಳಿಂದ ವ್ಯಾಪ್ತವಾಗಿರುವ ಆ ಗಂಧಕುಟಿಯು ಜಿನೇಶ್ವರರ ಶರೀರಕಾಂತಿಯ ಶೋಭೆಯಿಂದ ಸಂಬದ್ಧವಾದ ಮಹಾಪ್ರಭೆಯಂತೆ, ಪ್ರಕಾಶಿಸುತ್ತಿದ್ದಿತು.

**ಯಾ ಪ್ರೋತ್ಸರ್ಪದ್ಭಿರಾಹೂತಮದಾಲಿಕುಲಸಂಕುಲೈಃ ।**
**ಧೂಪೈರ್ದಿಶಾಮಿವಾಯಾಮಂ [೩]ಪ್ರಮಿತ್ಸುಸ್ತತಧೂಮಕೈಃ ॥ ೧೯ ॥**

ಮೇಲಕ್ಕೆ ಪಸರಿಸುತ್ತಿರುವುವೂ ಪರಿಮಳಕ್ಕೆ ಮುತ್ತಿಕೊಂಡು ಮದಿಸಿರುವ ಭ್ರಮರಗಳ ಸಮೂಹಗಳಿಂದ ನಿಬಿಡವೂ ಹೊಗೆಯನ್ನು ಹರಡಿರುವುವೂ ಆದ ಧೂಪಗಳಿಂದ ಆ ಗಂಧಕುಟಿಯು ದಿಕ್ಕುಗಳ ವಿಶಾಲತೆಯನ್ನು ಅಳತೆ ಮಾಡವುದಕ್ಕೆ ಇಚ್ಛಿಸುತ್ತಿದೆಯೋ ಎಂಬಂತೆ, ಶೋಭಿಸುತ್ತಿದ್ದಿತು.

**ಗಂಧೈರ್ಗಂಧಮಯೀವಾಸೀತ್ಸೃಷ್ಟಿಃ ಪುಷ್ಪಮಯೀವ ಚ ।**
**ಪುಷ್ಪೈರ್ಧೂಪಮಯೀವಾಭಾದ್ಧೂಪೈರ್ಯಾ ದಿಗ್ವಿಸರ್ಪಿಭಿಃ ॥ ೨೦ ॥**

ಆ ಗಂಧಕುಟಿಯು ಗಂಧಗಳಿಂದ ಗಂಧಮಯವಾದ ಸೃಷ್ಟಿಯಂತೆಯೂ ಪುಷ್ಪ ಗಳಿಂದ ಪುಷ್ಪಮಯವಾದ ಸೃಷ್ಟಿಯಂತೆಯೂ ದಿಕ್ಕುಗಳಲ್ಲಿ ಪಸರಿಸುತ್ತಿರುವ ಧೂಪಗಳಿಂದ ಧೂಪಮಯವಾದ ಸೃಷ್ಟಿಯಂತೆಯೂ ಶೋಭಿಸುತ್ತಿದ್ದಿತು.

**ಸುಗಂಧಿಧೂಪನಿಃಶ್ವಾಸಾ ಸುಮನೋಮಾಲಭಾರಿಣೀ ।**
**ನಾನಾಭರಣದೀಪ್ತಾಂಗೀ ಯಾ [೪]ವಧೂರಿವ ದಿದ್ಯುತೇ ॥ ೨೧ ॥**

ಪರಿಮಳವುಳ್ಳ ಧೂಪವೆಂಬ ನಿಟ್ಟುಸಿರುಳ್ಳುದೂ ಪುಷ್ಪಗಳ ಮಾಲೆಗಳನ್ನು ಧರಿಸಿರುವುದೂ ಆನೇಕ ವಿಧವಾದ ಆಭರಣಗಳಿಂದ ಪ್ರಕಾಶಮಾನವಾದ ಆಕಾರ ವುಳ್ಳುದೂ ಆದ ಆ ಗಂಧಕುಟಿಯು ಹೊಸದಾಗಿ ವಿವಾಹಿತಳಾದ ಸ್ತ್ರೀಯಂತೆ ಪ್ರಕಾಶಿ ಸುತ್ತಿದ್ದಿತು.

**ಧೂಪಗಂಧೈರ್ಜಿನೇಂದ್ರಾಂಗಸೌಗಂಧ್ಯಬಹಲೀಕೃತೈಃ ।**
**ಸುರಭೀಕೃತ[೫]ವಿಶ್ವಾ[೬]ರ್ಥ್ಯಾಂ ಯಾಧಾದ್ಗಂಧಕುಟೀ[೭]ಶ್ರುತಿಮ್ ॥ ೨೨ ॥**

ಜಿನೇಶ್ವರರ ಶರೀರದ ಪರಿಮಳದಿಂದ ಹೆಚ್ಚಾಗಿ ಮಾಡಲ್ಪಟ್ಟಿರುವ ಧೂಪದ ಗಂಧಗಳಿಂದ ಆ ಗಂಧಕುಟಿಯು ಜಗತ್ತಿನ ಪದಾರ್ಥವನ್ನೆಲ್ಲ ಪರಿಮಳವನ್ನಾಗಿ ಮಾಡಿರುವ ಗಂಧಕುಟಿಯೆಂಬ ಸಂಜ್ಞೆಯನ್ನು ಧರಿಸಿದೆ.

**ಗಂಧಾನಾಮಿವ ಯಾ ಸೂತಿ[೧]ರ್ಭಾಸಾಂ [೨]ಯೇವಾಧಿದೇವತಾ ।**
**ಶೋಭಾನಾಂ [೩]ಪ್ರಸವಕ್ಷ್ಮೇವ ಯಾ ಲಕ್ಷ್ಮೀಮಧಿಕಾಂ ದಧೇ ॥ ೨೩ ॥**

ಪರಿಮಳಗಳ ಉತ್ಪತ್ತಿಯಂತೆಯೂ ಕಾಂತಿಗಳ ಅಧಿದೇವತೆಯಂತೆಯೂ ಶೋಭೆಗಳ ಉತ್ಪತ್ತಿಭೂಮಿಯಂತೆಯೂ ಇರುವ ಆ ಗಂಧಕುಟಿಯು ಅಧಿಕವಾದ ಶೋಭೆಯನ್ನು ಧರಿಸಿದ್ದಿತು.

**ಧನುಷಾಂ ಷಟ್ ಶತೀ ಸೈಷಾ ವಿಸ್ತೀರ್ಣಾ ತಾವದಾಯತಾ ।**
**ವಿಷ್ಕಂಭಾ[೪]ತ್ಸಾಧಿಕೋಚ್ಛ್ರಾಯಾ ಮಾನೋನ್ಮಾನಪ್ರಮಾನ್ವಿತಾ ॥ ೨೪ ॥**

ಆ ಗಂಧಕುಟಿಯು ಆರುನೂರುಧನುಸ್ಸಿನಷ್ಟು ವಿಸ್ತಾರ(ಅಗಲ)ವೂ ಅಷ್ಟೇ ದೀರ್ಘ(ಉದ್ದ)ವೂ ವಿಸ್ತಾರಕ್ಕಿಂತ ಸ್ವಲ್ಪ ಹೆಚ್ಚು ಉನ್ನತವೂ ಆಗಿದ್ದಿತು.

**[೫]ತಸ್ಯಾ ಮಧ್ಯೇ ಸೈಂಹಂ ಪೀಠಂ ನಾನಾರತ್ನವ್ರಾತಾಕೀರ್ಣಮ್ ।**
**ಮೇರೋಃ ಶೃಂಗಂ [೬]ನ್ಯಕ್ಕುರ್ವಾಣಂ ಚಕ್ರೇ ಶಕ್ರಾದೇಶಾ[೭]ದ್ವಿತ್ತೇಟ್ ॥**

(ವಿದ್ಯುನ್ಮಾಲಾಛಂದಃ) ಆ ಗಂಧಕುಟಿಯ ಮಧ್ಯದಲ್ಲಿ ದೇವೇಂದ್ರನ ಅಪ್ಪಣೆ ಯಿಂದ ಕುಬೇರನು ಅನೇಕವಿಧವಾದ ರತ್ನಗಳಿಂದ ವ್ಯಾಪ್ತವೂ ಮೇರುಪರ್ವತದ ಶಿಖರವನ್ನು ಕೀಳುಮಾಡುತ್ತಿರುವುದೂ ಆದ ಸಿಂಹಪೀಠವನ್ನು ಮಾಡಿದನು.

**[೮]ಭಾನುಹ್ರೇಪಿ ಶ್ರೀಮ[೯]ದ್ಧೈಮಂ ತುಂಗಂ ಭಕ್ತ್ಯಾ[೧೦]ಜಿಷ್ಣುಂ [೧೧]ಭಕ್ತುಮ್ ।**
**ಮೇರುಃ ಶೃಂಗಂ [೧೨]ಸ್ವಂ [೧೩]ವಾ ನಿನ್ಯೇ ಪೀಠವ್ಯಾಜಾದ್ದೀಪ್ರಂ ಭಾಸಾ ॥**

ಸೂರ್ಯನನ್ನು ಲಜ್ಜೆಪಡಿಸುವುದೂ ಸುಂದರವೂ ಉನ್ನತವೂ ಆದ ಆ ಸುವರ್ಣಪೀಠವು ಭಕ್ತಿಯಿಂದ ಜಿನೇಶ್ವರನನ್ನು ಭಜಿಸುವುದಕ್ಕೋಸ್ಕರ ಮಹಾ ಮೇರುಪರ್ವತವು ಪೀಠದ ನೆಪದಿಂದ ತನ್ನ ಶಿಖರವನ್ನು ಕಾಂತಿಯಿಂದ ಪ್ರಕಾಶ ಪಡಿಸಿದಂತೆ ಶೋಭಿಸುತ್ತಿದ್ದಿತು.

**ಯತ್ಪಸರ್ಪದಂಶು[೧೪]ದಷ್ಟದಿಙ್ಮುಖಂ ಮಹರ್ದ್ಧಿಭಾಸಿ ।**
**ಚಾರುರತ್ನಸಾರಮೂರ್ತಿ ಭಾಸತೇ ಸ್ಮ ನೇತ್ರಹಾರಿ ॥ ೨೭ ॥**

(ಸಮಾನಿಕಾ) ಪಸರಿಸುತ್ತಿರುವ ಕಾಂತಿಗಳಿಂದ ದಿಕ್ಕುಗಳನ್ನು ಸ್ಪರ್ಶಿಸಿರುವುದೂ ಮಹಾಮಹಿಮೆಗಳಿಂದ ಪ್ರಕಾಶಿಸುತ್ತಿರುವುದೂ ಸುಂದರವಾದ ರತ್ನಗಳಿಂದ ಮಾಡಲ್ಪಟ್ಟ ಶ್ರೇಷ್ಠವಾದ ಆಕಾರವುಳ್ಳುದೂ ಆದ ಆ ಪೀಠವು ನೇತ್ರಾನಂದಕರವಾಗಿ ಶೋಭಿಸುತ್ತಿದ್ದಿತು.

**ಪೃಥು ಪ್ರದೀಪ್ತದೇಹಕಂ ಸ್ಫುರತ್ಪ್ರಭಾ[೧೫]ಪ್ರತಾನಕಮ್ ।**
**ಪರಾರ್ಧ್ಯರತ್ನಭಾಸುರಂ [೧೬]ಸುರಾದ್ರಿಹಾಸಿ ಯದ್ಬಭೌ ॥ ೨೮ ॥**

(ಪ್ರಮಾಣಿಕಾ)ವಿಶಾಲವೂ ಪ್ರಕಾಶಮಾನವೂ ಆದ ಆಕಾರವುಳ್ಳುದೂ ಪ್ರಕಾಶ ಮಾನವಾದ ಕಾಂತಿಸಮೂಹವುಳ್ಳುದೂ ಶ್ರೇಷ್ಠವಾದ ರತ್ನಗಳಿಂದ ಪ್ರಕಾಶಮಾನವೂ ಆದ ಆ ಪೀಠವು ಮಹಾಮೇರುವನ್ನು ಹಾಸ್ಯಮಾಡುವ ಸ್ವಭಾವವುಳ್ಳುದಾಗಿ ಶೋಭಿಸುತ್ತಿದ್ದಿತು.

---

೧ ಸ್ತೋತುಮಿಚ್ಛುಃ. ೨ ರಚಿತಃ. ೩ ಪ್ರಮಾತುಮಿಚ್ಛುಃ. ೪ ನವೋಢಾ. ೫ ಜಗತ್. ೬ ಅರ್ಥಾದನಪೇತಾಂ. ೭ ಸಂಜ್ಞಾಂ.

೧ ಕಾಂತೀನಾಂ. ೨ ಗಂಧಕುಟೀ. ೩ ಉತ್ಪತ್ತಿಭೂಃ. ೪ ಕಿಂಚಿತ್ಸಾಧಿಕೋಚ್ಛ್ರಾಯಾ. ೫ ಗಂಧಕುಟ್ಯಾಃ. ೬ ಅಧಃಕುರ್ವಾಣಂ. ೭ ಧನದಃ. ೮ ಭಾನುಂ ಹ್ರೇಪಯತಿ ಲಜ್ಜಯತೀತಿ. ೯ ಸುವರ್ಣಪೀಠಂ. ೧೦ ಸರ್ವಜ್ಞಂ. ೧೧ ಸೇವಿತುಂ. ೧೨ ಆತ್ಮೀಯಂ. ೧೩ ಇವ. ೧೪ ಸ್ಪೃಷ್ಟಂ. ೧೫ ಸಮೂಹಂ. ೧೬ ಸುರಾದ್ರಿಂ ಮೇರುಂ ಹಸತೀತ್ಯೇವಂ ಶೀಲಂ.

ವಿಷ್ಟರಂ ತದಲಂಚಕ್ರೇ ಭಗವಾನಾದಿತೀರ್ಥಕೃತ್ ।
ಚತುರ್ಭಿರಂಗುಲೈಃ ಸ್ವೇನ ಮಹಿಮ್ನಾಸ್ಪೃಷ್ಟತತ್ತಲಃ ॥ ೨೯ ॥

ಮಹಾತ್ಮರಾದ ಆದಿತೀರ್ಥಂಕರರು ತಮ್ಮ ಮಹಿಮೆಯಿಂದ ನಾಲ್ಕಂಗುಲ ಸೋಂಕದೆ ಆ ಸಿಂಹಪೀಠವನ್ನಲಂಕರಿಸಿದರು. ಆ ಸಿಂಹಪೀಠವನ್ನು ಬಿಟ್ಟು ನಾಲ್ಕಂಗುಲದ ಮೇಲೆ ವಿರಾಜಮಾನರಾದರೆಂದು ಭಾವವು.

ತತ್ರಾಸೀನಂ ತಮಿಂದ್ರಾದ್ಯಾಃ [೧]ಪರಿಚೇರುರ್ಮಹೇಜ್ಯಯಾ ।
ಪುಷ್ಪವೃಷ್ಟಿಂ ಪ್ರವರ್ಷಂತೋ ನಭೋಮಾರ್ಗಾ[೨]ದ್ಘನಾ ಇವ ॥ ೩೦ ॥

ಅಲ್ಲಿ ವಿರಾಜಮಾನರಾಗಿರುವ ಆ ಸ್ವಾಮಿಗೆ ದೇವೇಂದ್ರಮೊದಲಾದವರು ಮೇಘಗಳಂತೆ ಆಕಾಶಮಾರ್ಗದಿಂದ ಪುಷ್ಪವೃಷ್ಟಿಯನ್ನು ಮಾಡುವವರಾಗಿ ಮಹಾ ಪೂಜೆಯಿಂದ ಭಜಿಸಿದರು.

ಅಪಪ್ತತ್ಕೌಸುಮೀ ವೃಷ್ಟಿಃ [೩]ಪ್ರೋರ್ಣುವಾನಾ ನಭೋಂಗಣಮ್ ।
ದೃಷ್ಟಿಮಾಲೇವ ಮತ್ತಾಲಿಮಾಲಾ ವಾಚಾಲಿತಾ ನೃಣಾಮ್ ॥ ೩೧ ॥

ಆಕಾಶಪ್ರದೇಶವನ್ನಾಚ್ಛಾದಿಸುವುದೂ ಮದಿಸಿರುವ ಭ್ರಮರಗಳ ಸಾಲಿನಿಂದ ಶಬ್ದಮಾಡಲ್ಪಟ್ಟಿರುವುದೂ ಆದ ಪುಷ್ಪವೃಷ್ಟಿಯು ಮನುಷ್ಯರ ನೇತ್ರಗಳ ಪಂಕ್ತಿಯಂತೆ ಸ್ವಾಮಿಯ ಮೇಲೆ ಬಿದ್ದಿತು.

[೪]ದ್ವಿಷಡ್ಯೋಜನಭೂಭಾಗ[೫]ಮಾಮುಕ್ತಾ ಸುರವಾರಿದೈಃ ।
ಪುಷ್ಪವೃಷ್ಟಿಃ ಪತಂತೀ ಸಾ ವ್ಯಧಾಚ್ಚಿತ್ರಂ ರಜ[೬]ಸ್ತತಮ್ ॥ ೩೨ ॥

ದೇವತೆಗಳೆಂಬ ಮೇಘಗಳಿಂದ ಹನ್ನೆರಡುಯೋಜನಭೂಮಿಯವರೆಗೆ ಸುತ್ತಲೂ ಸುರಿಯಲ್ಪಟ್ಟು ಬೀಳುತ್ತಿರುವ ಆ ಪುಷ್ಪವೃಷ್ಟಿಯು ವಿಸ್ತಾರವೂ ಅನೇಕ ಪ್ರಕಾರವೂ ಆದ ಧೂಳಿಯನ್ನುಂಟುಮಾಡಿದ್ದಿತು. ವೃಷ್ಟಿಯು ಧೂಳಿಯನ್ನುಂಟು ಮಾಡಿದುದು ಆಶ್ಚರ್ಯವೆಂದು ವಿರೋಧಾಭಾಸವೂ ತೋರುವುದು.

ವೃಷ್ಟಿರಸೌ ಕುಸುಮಾನಾಂ ತುಷ್ಟಿಕರೀ [೭]ಪ್ರಮದಾನಾಮ್ ।
ದೃಷ್ಟಿತತೀರನುಕೃತ್ಯ ಸ್ರಷ್ಟುರಪಪ್ತದುಪಾಂತೇ ॥ ೩೩ ॥

(ಚಿತ್ರಪದಾ) ಸ್ತ್ರೀಯರಿಗೆ ಸಂತೋಷವನ್ನುಂಟುಮಾಡುವ ಈ ಪುಷ್ಪವೃಷ್ಟಿಯು, ನೇತ್ರಗಳ ಪಂಕ್ತಿಯಂತೆ, ಸ್ವಾಮಿಯ ಸಮೀಪದಲ್ಲಿ ಬಿದ್ದಿತು. ನೋಡುವವರ ನೇತ್ರಪಂಕ್ತಿಗಳು ಸ್ವಾಮಿಯ ಸಮೀಪದಲ್ಲಿ ಬೀಳುವಂತೆ ಪುಷ್ಪವೃಷ್ಟಿಯು ಬಿದ್ದಿತೆಂದು ಭಾವವು. "ಪ್ರಮದಾನಾಂ ದೃಷ್ಟಿತತೀ:— ಸ್ತ್ರೀಯರ ನೇತ್ರಪಂಕ್ತಿಗಳನ್ನು" ಎಂದಾದರೂ ಅನ್ವಯಿಸಬಹುದು.

ಷಟ್ಪದವೃಂದವಿಕೀರ್ಣೈಃ ಪುಷ್ಪರಜೋಭಿರುಪೇತಾ ।
ವೃಷ್ಟಿರಮರ್ತ್ಯವಿಸೃಷ್ಟಾ [೮]ಸೌಮನಸೀ ರುರುಚೇಸೌ ॥ ೩೪ ॥

ಭ್ರಮರಗಳ ಸಮೂಹದಿಂದ ಹರಡಲ್ಪಟ್ಟ ಪುಷ್ಪಧೂಳಿಗಳಿಂದ ಯುಕ್ತವೂ ದೇವತೆಗಳಿಂದ ಸುರಿಯಲ್ಪಟ್ಟುದೂ ಆದ ಈ ಪುಷ್ಪವೃಷ್ಟಿಯು ಶೋಭಿಸುತ್ತಿದ್ದಿತು.

ಶೀತಲೈರ್ವಾರಿಭಿರ್ಗಾಂಗೈರಾರ್ದ್ರಿತಾ [೯]ಕೌಸುಮೀ ವೃಷ್ಟಿಃ ।
ಷಟ್ಪದೈರಾಕುಲಾಪಪ್ತತ್ಪತ್ಯುರಗ್ರೇ ತತಾಮೋದಾ ॥ ೩೫ ॥

ಗಂಗಾನದಿಯ ಶೀತಲವಾದ ಜಲಗಳಿಂದ ನೆನೆಯಿಸಲ್ಪಟ್ಟುದೂ ಪರಿಮಳವನ್ನು ಹರಡಿರುವುದೂ ಆದ ಪುಷ್ಪವೃಷ್ಟಿಯು ಭ್ರಮರಗಳಿಂದ ವ್ಯಾಪ್ತವಾಗಿ ಸ್ವಾಮಿಯ ಮುಂಭಾಗದಲ್ಲಿ ಬಿದ್ದಿತು.

೧ ಸೇವಾಂ ಚಕ್ರುರಿತ್ಯರ್ಥಃ. ೨ ಮೇಘಾಃ. ೩ ಆಚ್ಛಾದಯಂತೀ. ೪ ದ್ವಾದಶ ಯೋಜನಪ್ರಮಿತ ಭೂಮಿಂ. ೫ ಆಸಮಂತಾನ್ಮುಕ್ತಾ. ೬ ವಿಸ್ತೃತಂ. ೭ ಸ್ತ್ರೀಣಾಂ. ೮ ಪುಷ್ಪಸಂಬಂಧಿನೀ. ೯ ಕೌಸುಮೇತ್ಯಪಿ ಪಾಠಃ.

ಮರಕತಹರಿತೈಃ ಪತ್ರೈರ್ಮಣಿಮಯಕುಸುಮೈಶ್ಚಿತ್ರೈಃ ।
ಮರುದುಪವಿಧುತಾಃ ಶಾಖಾಶ್ಚಿರಮಧೃತ ಮಹಾಶೋಕಃ ॥ ೩೬ ॥

(ಭುಜಗಶಿಶುಭೃತಾ) ದೊಡ್ಡ ಅಶೋಕವೃಕ್ಷವು ಬಹುಕಾಲಪರ್ಯಂತ ಪಚ್ಚೆಯ ರತ್ನದಂತೆ ಹಸುರಾದ ಎಲೆಗಳಿಂದಲೂ ಅನೇಕಪ್ರಕಾರವೂ ರತ್ನಮಯವೂ ಆದ ಪುಷ್ಪಗಳಿಂದಲೂ ಯುಕ್ತವೂ ಗಾಳಿಯಿಂದ ಕೊಡಹಲ್ಪಟ್ಟುದೂ ಆದ ಶಾಖೆಗಳನ್ನು ಧರಿಸಿದ್ದಿತು.

ಮದಕಲವಿರುತೈರ್ಭೃಂಗೈರಪಿ ಪರಪುಷ್ಟವಿಹಂಗೈಃ ।
ಸ್ತುತಿಮಿವ ಭರ್ತುರಶೋಕೋ ಮುಖರಿತದಿಕ್ಕುರುತೇ ಸ್ಮ ॥ ೩೭ ॥

ಮದದಿಂದ ಮನೋಹರವಾದ ಶಬ್ದವುಳ್ಳ ಭ್ರಮರಗಳಿಂದಲೂ ಕೋಗಿಲೆಗಳಿಂದಲೂ ಶಬ್ದಮಾಡಲ್ಪಟ್ಟ ದಿಕ್ಕುಗಳುಳ್ಳ ಅಶೋಕವೃಕ್ಷವು ಸ್ವಾಮಿಯ ಸ್ತುತಿಯನ್ನು ಮಾಡುವಂತಿದ್ದಿತು.

ವ್ಯಾಯತಶಾಖಾದೋಶ್ಚಲನೈಃ ಸ್ವೈರ್ನೃತ್ತಮಥಾಸೌ ಕರ್ತುಮಿವಾಗ್ರೇ ।
ಪುಷ್ಪಸಮೂಹೈರಂಜಲಿಮಿದ್ಧಂ ಭರ್ತುರಕಾರ್ಷೀದ್ವ್ಯಕ್ತಮಶೋಕಃ ॥

(ರುಕ್ಮವತೀ)ತರುವಾಯ ಈ ಅಶೋಕವೃಕ್ಷವು ತನ್ನ ದೀರ್ಘವಾದ ಕೊಂಬೆಗಳೆಂಬ ಚಲಿಸುತ್ತಿರುವ ಕೈಗಳಿಂದ ಸ್ವಾಮಿಯ ಮುಂಭಾಗದಲ್ಲಿ ವ್ಯಕ್ತವಾಗಿ ನರ್ತನವನ್ನು ಮಾಡುವುದಕ್ಕೋಸ್ಕರ ಪುಷ್ಪಸಮೂಹಗಳಿಂದ ಯುಕ್ತವಾದ ಅಂಜಲಿ (ಪುಷ್ಪಾಂಜಲಿ)ಯನ್ನು ಮಾಡಿದಂತಿದ್ದಿತು.

ರೇಜೇಶೋಕತರುರಸೌ ರುಂಧನ್
ಮಾರ್ಗಂ [೧]ವ್ಯೋಮಚರಮಹೇಶಾನಾಮ್ ।
ತನ್ವನ್ಯೋಜನವಿಸ್ತೃತಾಃ ಶಾಖಾ
ಧುನ್ವನ್ನ್ಯೋಕಮಯಮಮದೋ ಧ್ವಾಂತಮ್ ॥ ೩೯ ॥

(ಪಣವ)ಆಕಾಶದಲ್ಲಿ ಸಂಚರಿಸುವ (ದೇವ) ಪ್ರಭುಗಳ ಮಾರ್ಗವನ್ನು ತಡೆಯುತ್ತಿರುವುದೂ ಒಂದುಯೋಜನವಿಸ್ತಾರವಾದ ಕೊಂಬೆಗಳನ್ನು ಹರಡಿರುವುದೂ ಪ್ರಾಣಿಗಳ ಶೋಕರೂಪವಾದ ಕತ್ತಲೆಯನ್ನು ನಾಶಮಾಡುವುದೂ ಆದ ಈ ಅಶೋಕವೃಕ್ಷವು ಶೋಭಿಸುತ್ತಿದ್ದಿತು.

ಸರ್ವಾ [೨]ಹರಿತೋ ವಿಟಪೈಸ್ತೈಃ
ಸಮ್ಮಾರ್ಷ್ಟುಮಿವೋದ್ಯತಧೀರಸೌ ।
[೩]ವ್ಯಾಪದ್ವಿಕಚೈಃ ಕುಸುಮೋತ್ಕರೈಃ
ಪುಷ್ಪೋ[೪]ಪಹೃತಿಂ ವಿದಧದ್ದ್ರುಮಃ ॥ ೪೦ ॥

ವಿಕಸಿತವಾದ ಪುಷ್ಪಸಮೂಹಗಳಿಂದ ಪುಷ್ಪೋಪಹಾರ(ಪುಷ್ಪಗಳ ಪೂಜೆ)ವನ್ನು ಮಾಡುತ್ತಿರುವ ಈ ಅಶೋಕವೃಕ್ಷವು ವಿಸ್ತಾರವಾದ ಕೊಂಬೆಗಳಿಂದ ಸಮಸ್ತ ದಿಕ್ಕುಗಳನ್ನು ಗುಡಿಸುವುದಕ್ಕೋಸ್ಕರ ಬುದ್ಧಿಪೂರ್ವಕವಾಗಿ ಪ್ರಯತ್ನವನ್ನು ಮಾಡಿದೆಯೋ ಎಂಬಂತೆ ವ್ಯಾಪಿಸಿದ್ದಿತು. ಪುಷ್ಪಾರ್ಚನೆಯನ್ನು ಮಾಡುವುದಕ್ಕೋಸ್ಕರ ಮೊದಲು ಗುಡಿಸುವಂತಿದ್ದಿತೆಂದು ತಾತ್ಪರ್ಯವು.

ವಜ್ರ[೫]ಮೂಲ[೬]ಮಿದ್ಧರತ್ನ[೭]ಬುಧ್ನಂ
[೮]ಸಜ್ಜಪಾಭರತ್ನಚಿತ್ರಸೂನಮ್ ।
ಮತ್ತಕೋಕಿಲಾಲಿಸೇವ್ಯಮೇನಂ
ಚಕ್ರುರಗ್ರ್ಯಮಂಘ್ರಿಪಂ ಸುರೇಶಾಃ ॥ ೪೧ ॥

(ಮಯೂರಶಾಲಿನೀ)ವಜ್ರದ ಬೇರುಗಳುಳ್ಳದೂ, ಪ್ರಕಾಶಮಾನವಾದ ರತ್ನಗಳಿಂದ ಮಾಡಲ್ಪಟ್ಟ ಬುಡವುಳ್ಳದೂ, ಶ್ರೇಷ್ಠವಾದ ದಾಸವಾಳಕ್ಕೆ ಸದೃಶವೂ ಅನೇಕಪ್ರಕಾರ ರತ್ನಮಯವೂ ಆದ ಪುಷ್ಪಗಳುಳ್ಳದೂ ಮದಿಸಿದ ಕೋಗಿಲೆಗಳ

೧ ಗಗನಚರಪ್ರಭೂಣಾಂ. ೨ ದಿಶಃ. ೩ ವ್ಯಾಪ್ನೋತಿ ಸ್ಮ. ೪ ಉಪಹಾರಂ. ೫ ಅಂಘ್ರಿಃ. ೬ ದೀಪ್ತಂ. ೭ ಮೂಲಭಾಗಂ. ೮ ಪ್ರಶಸ್ತಜಪಾಕುಸುಮಸಮಾನರತ್ನಮಯವಿಚಿತ್ರಪ್ರಸೂನಂ.

ವಿಷ್ಟರಂ ತದಲಂಚಕ್ರೇ ಭಗವಾನಾದಿತೀರ್ಥಕೃತ್ ।
ಚತುರ್ಭಿರಂಗುಲೈಃ ಸ್ವೇನ ಮಹಿಮ್ನಾಸ್ಪೃಷ್ಟತತ್ತಲಃ ॥ ೨೯ ॥

ಮಹಾತ್ಮರಾದ ಆದಿತೀರ್ಥಂಕರರು ತಮ್ಮ ಮಹಿಮೆಯಿಂದ ನಾಲ್ಕಂಗುಲ ಸೋಂಕದೆ ಆ ಸಿಂಹಪೀಠವನ್ನಲಂಕರಿಸಿದರು. ಆ ಸಿಂಹಪೀಠವನ್ನು ಬಿಟ್ಟು ನಾಲ್ಕಂಗುಲದ ಮೇಲೆ ವಿರಾಜಮಾನರಾದರೆಂದು ಭಾವವು.

ತತ್ರಾಸೀನಂ ತಮಿಂದ್ರಾದ್ಯಾಃ [೧]ಪರಿಚೇರುರ್ಮಹೇಜ್ಯಯಾ ।
ಪುಷ್ಪವೃಷ್ಟಿಂ ಪ್ರವರ್ಷಂತೋ ನಭೋಮಾರ್ಗಾ[೨]ದ್ಘನಾ ಇವ ॥ ೩೦ ॥

ಅಲ್ಲಿ ವಿರಾಜಮಾನರಾಗಿರುವ ಆ ಸ್ವಾಮಿಗೆ ದೇವೇಂದ್ರಮೊದಲಾದವರು ಮೇಘಗಳಂತೆ ಆಕಾಶಮಾರ್ಗದಿಂದ ಪುಷ್ಪವೃಷ್ಟಿಯನ್ನು ಮಾಡುವವರಾಗಿ ಮಹಾ ಪೂಜೆಯಿಂದ ಭಜಿಸಿದರು.

ಅಪಪ್ತತ್ಕೌಸುಮೀ ವೃಷ್ಟಿಃ [೩]ಪ್ರೋರ್ಣುವಾನಾ ನಭೋಂಗಣಮ್ ।
ದೃಷ್ಟಿಮಾಲೇವ ಮತ್ತಾಲಿಮಾಲಾ ವಾಚಾಲಿತಾ ನೃಣಾಮ್ ॥ ೩೧ ॥

ಆಕಾಶಪ್ರದೇಶವನ್ನಾಚ್ಛಾದಿಸುವುದೂ ಮದಿಸಿರುವ ಭ್ರಮರಗಳ ಸಾಲಿನಿಂದ ಶಬ್ದಮಾಡಲ್ಪಟ್ಟಿರುವುದೂ ಆದ ಪುಷ್ಪವೃಷ್ಟಿಯು ಮನುಷ್ಯರ ನೇತ್ರಗಳ ಪಂಕ್ತಿಯಂತೆ ಸ್ವಾಮಿಯ ಮೇಲೆ ಬಿದ್ದಿತು.

[೪]ದ್ವಿಷಡ್ಯೋಜನಭೂಭಾಗ[೫]ಮಾಮುಕ್ತಾ ಸುರವಾರಿದೈಃ ।
ಪುಷ್ಪವೃಷ್ಟಿಃ ಪತಂತೀ ಸಾ ವ್ಯಧಾಚ್ಚಿತ್ರಂ ರಜ[೬]ಸ್ತತಮ್ ॥ ೩೨ ॥

ದೇವತೆಗಳೆಂಬ ಮೇಘಗಳಿಂದ ಹನ್ನೆರಡುಯೋಜನಭೂಮಿಯವರೆಗೆ ಸುತ್ತಲೂ ಸುರಿಯಲ್ಪಟ್ಟು ಬೀಳುತ್ತಿರುವ ಆ ಪುಷ್ಪವೃಷ್ಟಿಯು ವಿಸ್ತಾರವೂ ಅನೇಕ ಪ್ರಕಾರವೂ ಆದ ಧೂಳಿಯನ್ನುಂಟುಮಾಡಿದ್ದಿತು. ವೃಷ್ಟಿಯು ಧೂಳಿಯನ್ನುಂಟು ಮಾಡಿದುದು ಆಶ್ಚರ್ಯವೆಂದು ವಿರೋಧಾಭಾಸವೂ ತೋರುವುದು.

ವೃಷ್ಟಿರಸೌ ಕುಸುಮಾನಾಂ ತುಷ್ಟಿಕರೀ [೭]ಪ್ರಮದಾನಾಮ್ ।
ದೃಷ್ಟಿತತೀರನುಕೃತ್ಯ ಸ್ರಷ್ಟುರಪಪ್ತದುಪಾಂತೇ ॥ ೩೩ ॥

(ಚಿತ್ರಪದಾ) ಸ್ತ್ರೀಯರಿಗೆ ಸಂತೋಷವನ್ನುಂಟುಮಾಡುವ ಈ ಪುಷ್ಪವೃಷ್ಟಿಯು, ನೇತ್ರಗಳ ಪಂಕ್ತಿಯಂತೆ, ಸ್ವಾಮಿಯ ಸಮೀಪದಲ್ಲಿ ಬಿದ್ದಿತು. ನೋಡುವವರ ನೇತ್ರಪಂಕ್ತಿಗಳು ಸ್ವಾಮಿಯ ಸಮೀಪದಲ್ಲಿ ಬೀಳುವಂತೆ ಪುಷ್ಪವೃಷ್ಟಿಯು ಬಿದ್ದಿತೆಂದು ಭಾವವು. ''ಪ್ರಮದಾನಾಂ ದೃಷ್ಟಿತತೀಃ— ಸ್ತ್ರೀಯರ ನೇತ್ರಪಂಕ್ತಿಗಳನ್ನು'' ಎಂದಾದರೂ ಅನ್ವಯಿಸಬಹುದು.

ಷಟ್ಪದವೃಂದವಿಕೀರ್ಣೈಃ ಪುಷ್ಪರಜೋಭಿರುಪೇತಾ ।
ವೃಷ್ಟಿರಮರ್ತ್ಯವಿಸೃಷ್ಟಾ [೮]ಸೌಮನಸೀ ರುರುಚೇಸೌ ॥ ೩೪ ॥

ಭ್ರಮರಗಳ ಸಮೂಹದಿಂದ ಹರಡಲ್ಪಟ್ಟ ಪುಷ್ಪಧೂಳಿಗಳಿಂದ ಯುಕ್ತವೂ ದೇವತೆಗಳಿಂದ ಸುರಿಯಲ್ಪಟ್ಟುದೂ ಆದ ಈ ಪುಷ್ಪವೃಷ್ಟಿಯು ಶೋಭಿಸುತ್ತಿದ್ದಿತು.

ಶೀತಲೈರ್ವಾರಿಭಿರ್ಗಾಂಗೈರಾರ್ದ್ರಿತಾ [೯]ಕೌಸುಮೀ ವೃಷ್ಟಿಃ ।
ಷಟ್ಪದೈರಾಕುಲಾಪಪ್ತತ್ಪತ್ಯುರಗ್ರೇ ತತಾಮೋದಾ ॥ ೩೫ ॥

ಗಂಗಾನದಿಯ ಶೀತಲವಾದ ಜಲಗಳಿಂದ ನೆನೆಯಿಸಲ್ಪಟ್ಟುದೂ ಪರಿಮಳವನ್ನು ಹರಡಿರುವುದೂ ಆದ ಪುಷ್ಪವೃಷ್ಟಿಯು ಭ್ರಮರಗಳಿಂದ ವ್ಯಾಪ್ತವಾಗಿ ಸ್ವಾಮಿಯ ಮುಂಭಾಗದಲ್ಲಿ ಬಿದ್ದಿತು.

೧ ಸೇವಾಂ ಚಕ್ರುರಿತ್ಯರ್ಥಃ. ೨ ಮೇಘಾಃ. ೩ ಆಚ್ಛಾದಯಂತೀ. ೪ ದ್ವಾದಶ ಯೋಜನಪ್ರಮಿತ ಭೂಮಿಂ. ೫ ಆಸಮಂತಾನ್ಮುಕ್ತಾ. ೬ ವಿಸ್ತೃತಂ. ೭ ಸ್ತ್ರೀಣಾಂ. ೮ ಪುಷ್ಪಸಂಬಂಧಿನೀ. ೯ ಕೌಸುಮೇತ್ಯಪಿ ಪಾಠಃ.

ಮರಕತಹರಿತೈಃ ಪತ್ರೈರ್ಮಣಿಮಯಕುಸುಮೈಶ್ಚಿತ್ರೈಃ ।
ಮರುದುಪವಿಧುತಾಃ ಶಾಖಾಶ್ಚಿರಮಧೃತ ಮಹಾಶೋಕಃ ॥ ೩೬ ॥

(ಭುಜಗಶಿಶುಭೃತಾ) ದೊಡ್ಡ ಅಶೋಕವೃಕ್ಷವು ಬಹುಕಾಲಪರ್ಯಂತ ಪಚ್ಚೆಯ ರತ್ನದಂತೆ ಹಸುರಾದ ಎಲೆಗಳಿಂದಲೂ ಅನೇಕಪ್ರಕಾರವೂ ರತ್ನಮಯವೂ ಆದ ಪುಷ್ಪಗಳಿಂದಲೂ ಯುಕ್ತವೂ ಗಾಳಿಯಿಂದ ಕೊಡಹಲ್ಪಟ್ಟುದೂ ಆದ ಶಾಖೆಗಳನ್ನು ಧರಿಸಿದ್ದಿತು.

ಮದಕಲವಿರುತೈರ್ಭೃಂಗೈರಪಿ ಪರಪುಷ್ಟವಿಹಂಗೈಃ ।
ಸ್ತುತಿಮಿವ ಭರ್ತುರಶೋಕೋ ಮುಖರಿತದಿಕ್ಕುರುತೇ ಸ್ಮ ॥ ೩೭ ॥

ಮದದಿಂದ ಮನೋಹರವಾದ ಶಬ್ದವುಳ್ಳ ಭ್ರಮರಗಳಿಂದಲೂ ಕೋಗಿಲೆಗಳಿಂದಲೂ ಶಬ್ದಮಾಡಲ್ಪಟ್ಟ ದಿಕ್ಕುಗಳುಳ್ಳ ಅಶೋಕವೃಕ್ಷವು ಸ್ವಾಮಿಯ ಸ್ತುತಿಯನ್ನು ಮಾಡುವಂತಿದ್ದಿತು.

ವ್ಯಾಯತಶಾಖಾದೋಶ್ಚಲನೈಃ ಸ್ವೈರ್ನೃತ್ತಮಥಾಸೌ ಕರ್ತುಮಿವಾಗ್ರೇ ।
ಪುಷ್ಪಸಮೂಹೈರಂಜಲಿಮಿದ್ಧಂ ಭರ್ತುರಕಾರ್ಷೀದ್ವ್ಯಕ್ತಮಶೋಕಃ ॥

(ರುಕ್ಮವತೀ)ತರುವಾಯ ಈ ಅಶೋಕವೃಕ್ಷವು ತನ್ನ ದೀರ್ಘವಾದ ಕೊಂಬೆಗಳೆಂಬ ಚಲಿಸುತ್ತಿರುವ ಕೈಗಳಿಂದ ಸ್ವಾಮಿಯ ಮುಂಭಾಗದಲ್ಲಿ ವ್ಯಕ್ತವಾಗಿ ನರ್ತನವನ್ನು ಮಾಡುವುದಕ್ಕೋಸ್ಕರ ಪುಷ್ಪಸಮೂಹಗಳಿಂದ ಯುಕ್ತವಾದ ಅಂಜಲಿ (ಪುಷ್ಪಾಂಜಲಿ)ಯನ್ನು ಮಾಡಿದಂತಿದ್ದಿತು.

ರೇಜೇಶೋಕತರುರಸೌ ರುಂಧನ್
ಮಾರ್ಗಂ [೧]ವ್ಯೋಮಚರಮಹೇಶಾನಾಮ್ ।
ತನ್ವನ್ಯೋಜನವಿಸ್ತೃತಾಃ ಶಾಖಾ
ಧುನ್ವನ್ಯೋಕಮಯಮದೋ ಧ್ವಾಂತಮ್ ॥ ೩೯ ॥

(ಪಣವ)ಆಕಾಶದಲ್ಲಿ ಸಂಚರಿಸುವ (ದೇವ) ಪ್ರಭುಗಳ ಮಾರ್ಗವನ್ನು ತಡೆಯುತ್ತಿರುವುದೂ ಒಂದುಯೋಜನವಿಸ್ತಾರವಾದ ಕೊಂಬೆಗಳನ್ನು ಹರಡಿರುವುದೂ ಪ್ರಾಣಿಗಳ ಶೋಕರೂಪವಾದ ಕತ್ತಲೆಯನ್ನು ನಾಶಮಾಡುವುದೂ ಆದ ಈ ಅಶೋಕವೃಕ್ಷವು ಶೋಭಿಸುತ್ತಿದ್ದಿತು.

ಸರ್ವಾ [೨]ಹರಿತೋ ವಿಟಪೈಸ್ತತೈಃ
ಸಮ್ಮಾರ್ಷ್ಟುಮಿವೋದ್ಯತಧೀರಸೌ ।
[೩]ವ್ಯಾಪದ್ವಿಕಚೈಃ ಕುಸುಮೋತ್ಕರೈಃ
ಪುಷ್ಪೋ[೪]ಪಹೃತಿಂ ವಿದಧದ್ದ್ರುಮಃ ॥ ೪೦ ॥

ವಿಕಸಿತವಾದ ಪುಷ್ಪಸಮೂಹಗಳಿಂದ ಪುಷ್ಪೋಪಹಾರ(ಪುಷ್ಪಗಳ ಪೂಜೆ)ವನ್ನು ಮಾಡುತ್ತಿರುವ ಈ ಅಶೋಕವೃಕ್ಷವು ವಿಸ್ತಾರವಾದ ಕೊಂಬೆಗಳಿಂದ ಸಮಸ್ತ ದಿಕ್ಕುಗಳನ್ನು ಗುಡಿಸುವುದಕ್ಕೋಸ್ಕರ ಬುದ್ಧಿಪೂರ್ವಕವಾಗಿ ಪ್ರಯತ್ನವನ್ನು ಮಾಡಿದೆಯೋ ಎಂಬಂತೆ ವ್ಯಾಪಿಸಿದ್ದಿತು. ಪುಷ್ಪಾರ್ಚನೆಯನ್ನು ಮಾಡುವುದಕ್ಕೋಸ್ಕರ ಮೊದಲು ಗುಡಿಸುವಂತಿದ್ದಿತೆಂದು ತಾತ್ಪರ್ಯವು.

ವಜ್ರ[೫]ಮೂಲ[೬]ಮಿದ್ಧರತ್ನ[೭]ಬುಧ್ನಂ
[೮]ಸಜ್ಜಪಾಭರತ್ನಚಿತ್ರಸೂನಮ್ ।
ಮತ್ತಕೋಕಿಲಾಲಿಸೇವ್ಯಮೇನಂ
ಚಕ್ರುರಗ್ರ್ಯಮಂಘ್ರಿಪಂ ಸುರೇಶಾಃ ॥ ೪೧ ॥

(ಮಯೂರಶಾಲಿನೀ)ವಜ್ರದ ಬೇರುಗಳುಳ್ಳುದೂ, ಪ್ರಕಾಶಮಾನವಾದ ರತ್ನಗಳಿಂದ ಮಾಡಲ್ಪಟ್ಟ ಬುಡವುಳ್ಳುದೂ, ಶ್ರೇಷ್ಠವಾದ ದಾಸವಾಳಕ್ಕೆ ಸದೃಶವೂ ಅನೇಕಪ್ರಕಾರ ರತ್ನಮಯವೂ ಆದ ಪುಷ್ಪಗಳುಳ್ಳುದೂ ಮದಿಸಿದ ಕೋಗಿಲೆಗಳ

೧ ಗಗನಚರಪ್ರಭೂಣಾಂ. ೨ ದಿಶಃ. ೩ ವ್ಯಾಪ್ನೋತಿ ಸ್ಮ. ೪ ಉಪಹಾರಂ. ೫ ಅಂಘ್ರಿಃ. ೬ ದೀಪ್ರಂ. ೭ ಮೂಲಭಾಗಂ. ೮ ಪ್ರಶಸ್ತಜಪಾಕುಸುಮಸಮಾನರತ್ನಮಯವಿಚಿತ್ರಪ್ರಸೂನಂ.

ಸಮೂಹದಿಂದ ಸೇವಿಸಲ್ಪಡುವುದಕ್ಕೆ ಯೋಗ್ಯವೂ ಆದ ಈ ಅಶೋಕವೃಕ್ಷವನ್ನು ದೇವೇಂದ್ರರು ಸ್ವಾಮಿಯ ಮುಂಭಾಗದಲ್ಲಿ ರಚಿಸಿದರು.

**ಛತ್ರಂ ಧವಲಂ ರುಚಿಮತ್ಕಾಂತ್ಯಾ**
**[೧]ಚಾಂದ್ರೀಮಜಯದ್ರುಚಿರಾಂ ಲಕ್ಷ್ಮೀಮ್ ।**
**[೨]ತ್ರೇಧಾ ರುರುಚೇ [೩]ಶಶಭೃನ್ನೂನಂ**
**ಸೇವಾಂ ವಿದಧಜ್ಜಗತಾಂ ಪತ್ಯುಃ ॥ ೪೨ ॥**

(ಜಲಧರಮಾಲಾ) ಶುಭ್ರವಾದ ಛತ್ರವು ಪ್ರಕಾಶಮಾನವಾದ ಕಾಂತಿಯಿಂದ ಚಂದ್ರನ ಸಂಬಂಧಿಯೂ ಮನೋಹರವೂ ಆದ ಶೋಭೆಯನ್ನು ಜಯಿಸಿದ್ದಿತು. ಚಂದ್ರನ ಶೋಭೆಗಿಂತಲೂ ಶ್ರೇಷ್ಠವಾಗಿದ್ದಿತೆಂದು ಭಾವವು. ಆ ಶ್ವೇತಛತ್ರವು, ತ್ರಿಲೋಕಾಧಿಪತಿಯ ಸೇವೆಯನ್ನು ಛತ್ರತ್ರಯರೂಪದಿಂದ ಮಾಡುತ್ತಿರುವ ಚಂದ್ರನಂತೆ ಪ್ರಕಾಶಿಸುತ್ತಿದ್ದಿತು.

**ಛತ್ರಾಕಾರಂ ದಧದಿವ ಚಾಂದ್ರಂ**
**ಬಿಂಬಂ ಶುಭ್ರಂ ಛತ್ರತ್ರಿತಯ[೪]ಮುದೋ [೫]ಬಾಭಾಸತ್ ।**
**ಮುಕ್ತಾಜಾಲೈಃ ಕಿರಣಸಮೂಹೈ[೬]ರ್ವಾ**
**ಸ್ವೈಶ್ಚಕ್ರೇ ಸುತ್ರಾಮವಚನತೋ [೭]ರೈರಾಟ್ ॥ ೪೩ ॥**

ಶ್ವೇತಛತ್ರದ ಆಕಾರವನ್ನು ಧರಿಸಿರುವ ಚಂದ್ರಬಿಂಬದಂತೆ ಶುಭ್ರವೂ ತನ್ನ ಕಿರಣಸಮೂಹಗಳಂತಿರುವ ಮುತ್ತುಗಳ ಸಮೂಹಗಳಿಂದ ಪ್ರಕಾಶಮಾನವೂ ಆದ ಈ ಛತ್ರತ್ರಯವನ್ನು ದೇವೇಂದ್ರನ ವಚನ (ಆಜ್ಞೆ) ದಿಂದ ಕುಬೇರನು ಮಾಡಿದನು.

**ರತ್ನೈರನೇಕೈಃ ಖಚಿತಂ ಪರಾರ್ಧ್ಯೈ-**
**ರುದ್ಯದ್ದಿನೇಶಶ್ರಿಯಮಾಹಸದ್ಭಿಃ ।**
**ಛತ್ರತ್ರಯಂ ತದ್ರುರುಚೇ[೮]ತಿವೀಧ್ರಂ**
**ಚಂದ್ರಾರ್ಕಸಂಪರ್ಕವಿನಿರ್ಮಿತಂ ವಾ ॥ ೪೪ ॥**

(ಇಂದ್ರವಜ್ರಾ) ಉದಯಿಸುತ್ತಿರುವಸೂರ್ಯನ ಶೋಭೆಯನ್ನು ಪರಿಹಾಸ್ಯ ಮಾಡುವುದೂ ಶ್ರೇಷ್ಠವೂ ಆದ ಅನೇಕರತ್ನಗಳಿಂದ ಖಚಿತವೂ ಅತ್ಯಂತ ಶುಭ್ರವೂ ಆದ ಆ ಛತ್ರತ್ರಯವು, ಚಂದ್ರಸೂರ್ಯರ ಸಂಪರ್ಕದಿಂದ ನಿರ್ಮಿತವಾದಂತೆ, ಪ್ರಕಾಶಿಸುತ್ತಿದ್ದಿತು.

**ಸನ್ಮೌಕ್ತಿಕಂ ವಾರ್ಧಿಜಲಾಯಮಾನಂ**
**ಸಶ್ರೀಕಮಿಂದುದ್ಯುತಿಹಾರಿ [೯]ಹಾರಿ ।**
**ಛತ್ರತ್ರಯಂ ತಲ್ಲಸ[೧೦]ದಿಂದ್ರವಜ್ರಂ**
**ದಧ್ರೇ ಪರಾಂ ಕಾಂತಿಮುಪೇತ್ಯ ನಾಥಮ್ ॥ ೪೫ ॥**

ಶ್ರೇಷ್ಠವಾದ ಮುತ್ತುಗಳುಳ್ಳದೂ ಕ್ಷೀರಸಮುದ್ರದ ನೀರಿನಂತಿರುವುದೂ ಶೋಭಾಯುಕ್ತವೂ ಚಂದ್ರನ ಕಿರಣವನ್ನಪಹರಿಸುವುದೂ ಮನೋಹರವೂ ಇಂದ್ರನೀಲರತ್ನಮಯವೂ ಪ್ರಕಾಶಮಾನವೂ ಆದ ಆ ಛತ್ರತ್ರಯವು, ಸ್ವಾಮಿಯ ಸಮೀಪವನ್ನು ಹೊಂದಿ, ಅಧಿಕವಾದ ಕಾಂತಿಯನ್ನು ಧರಿಸಿದ್ದಿತು.

**ಕಿಮೇಷ ಹಾಸಸ್ತನುತೇ ಜಗಚ್ಛ್ರಿಯಾಃ**
**ಕಿಮು ಪ್ರಭೋರುಲ್ಲಸಿತೋ ಯಶೋಗುಣಃ ।**
**ಉತ [೧೧]ಸ್ಮಯೋ ಧರ್ಮನೃಪಸ್ಯ ನಿರ್ಮಲೋ**
**ಜಗತ್ತ್ರಯಾನಂದಕರೋ ನು ಚಂದ್ರಮಾಃ ॥ ೪೬ ॥**

೧ ಚಂದ್ರಸಂಬಂಧಿನೀಂ. ೨ ಛತ್ರತ್ರಯರೂಪೇಣ. ೩ ಚಂದ್ರಃ. ೪ ಇದಂ. ೫ ಭೃಶಂ ವಿರಾಜಮಾನಂ. ೬ ಇವ. ೭ ಧನದಃ. ೮ ನಿತರಾಂ ಧವಲಂ. ೯ ಹೃದಯಹಾರಿ. ೧೦ ಇಂದ್ರನೀಲಂ. ೧೧ ಸ್ಮಿತಂ.

**ಇತಿ ಪ್ರತರ್ಕಂ ಜನತಾಮನಸ್ಸ್ವದೋ**
**ವಿತನ್ವ[೧]ದಿದ್ಧಾತಪವಾರಣತ್ರಯಮ್ ।**
**ಬಭೌ ವಿಭೋರ್ಮೋಹವಿನಿರ್ಜಯಾರ್ಜಿತಂ**
**ಯಶೋಮಯಂ ಬಿಂಬಮಿವ ತ್ರಿಧಾ ಸ್ಥಿತಮ್ ॥ ೪೭ ॥**

(ವಂಶಸ್ಥ)"ಇದೇನು ಜಗತ್ತಿನ ಲಕ್ಷ್ಮಿಯ ನಗೆಯೋ ? ಸ್ವಾಮಿಯ ಪ್ರಕಾಶಮಾನವಾದ ಯಶೋಗುಣವೋ ? ಧರ್ಮವೆಂಬ ರಾಜನ ನಿರ್ಮಲವಾದ ಮಂದಹಾಸವೋ ? ಅಥವಾ ಮೂರುಲೋಕಕ್ಕಾನಂದವನ್ನುಂಟುಮಾಡುವ ಚಂದ್ರನೋ ?" ಈರೀತಿಯಾಗಿ ಜನರ ಮನಸ್ಸುಗಳಲ್ಲಿ ಊಹೆಯನ್ನುಂಟುಮಾಡುವ ಈ ಪ್ರಕಾಶಮಾನವಾದ ಛತ್ರತ್ರಯವು, ಸ್ವಾಮಿಯ ಮೋಹನೀಯಕರ್ಮದ ಜಯದಿಂದ ಸಂಪಾದಿಸಲ್ಪಟ್ಟುದೂ ಮೂರುಪ್ರಕಾರವಾಗಿರುವುದೂ ಯಶೋಮಯವೂ, ಆದ ಬಿಂಬದಂತೆ, ಶೋಭಿಸುತ್ತಿದ್ದಿತು.

**ಪಯಃಪಯೋಧೇರಿವ ವೀಚಿಮಾಲಾ**
**[೨]ಪ್ರಕೀರ್ಣಕಾನಾಂ ಸಮಿತಿಃ ಸಮಂತಾತ್ ।**
**ಜಿನೇಂದ್ರಪರ್ಯಂತನಿಷೇವಿಯಕ್ಷ-**
**ಕರೋತ್ಕರೈರಾವಿರಭೂದ್ವಿಧೂತಾ ॥ ೪೮ ॥**

ಜಿನೇಶ್ವರನ ಸಮೀಪಪ್ರದೇಶವನ್ನು ಹೊಂದಿರುವ ಯಕ್ಷದೇವತೆಗಳ ಕೈಗಳಿಂದ ಬೀಸಲ್ಪಡುವ ಚಾಮರಗಳ ಸಮೂಹವು, ಕ್ಷೀರಸಮುದ್ರದ ತೆರೆಮಾಲೆಯಂತೆ ಸ್ವಾಮಿಯಸುತ್ತಲೂ ಆವಿರ್ಭವಿಸಿದ್ದಿತು.

**ಪೀಯೂಷ[೩]ಶಲ್ಕೈರಿವ ನಿರ್ಮಿತಾಂಗೀ**
**[೪]ಚಾಂದ್ರೈರಿವಾಂಶೈರ್ಘಟಿತಾಮಲಶ್ರೀಃ ।**
**ಜಿನಾಂಘ್ರಿಪರ್ಯಂತಮುಪೇತ್ಯ ಭೇಜೇ**
**ಪ್ರಕೀರ್ಣಕಾಲೀ ಗಿರಿನಿರ್ಝರಾಭಾಮ್ ॥ ೪೯ ॥**

ಅಮೃತದ ಚೂರುಗಳಿಂದ ನಿರ್ಮಿತವಾದ ಆಕಾರವುಳ್ಳಂತೆಯೂ, ಚಂದ್ರನ ಸಂಬಂಧವಾದ ತುಂಡುಗಳಿಂದ ಸೇರಿಸಲ್ಪಟ್ಟ ನಿರ್ಮಲವಾದ ಶೋಭೆಯುಳ್ಳಂತೆಯೂ ಗಿರಿನದಿಗೆ ಸದೃಶವಾಗಿಯೂ ಇರುವ ಚಾಮರಗಳ ಪಂಕ್ತಿಯು ಜಿನೇಶ್ವರನ ಪಾದಸಮೀಪವನ್ನು ಹೊಂದಿ ಶೋಭಿಸುತ್ತಿದ್ದಿತು.

**ಜಿನೇಂದ್ರಮಾಸೇವಿತುಮಾಗತೇಯಂ**
**ದಿವಾಪಗಾ ಸ್ಯಾದಿತಿ ತರ್ಕ್ಯಮಾಣಾ ।**
**ಪಂಕ್ತಿರ್ವಿರೇಜೇ ಶುಚಿಚಾಮರಾಣಾಂ**
**ಯಕ್ಷೈಃ ಸಲೀಲಂ ಪರಿವೀಜಿತಾನಾಮ್ ॥ ೫೦ ॥**

ಯಕ್ಷದೇವತೆಗಳಿಂದ ಲೀಲೆಯಾಗಿ ಬೀಸಲ್ಪಟ್ಟ ಶುಭ್ರವಾದ ಚಾಮರಗಳ ಸಮೂಹವು "ಇದು ಜಿನೇಶ್ವರನನ್ನು ಸೇವಿಸುವುದಕ್ಕೋಸ್ಕರ ಬಂದಿರುವ ದೇವಗಂಗೆಯಾಗಿರಬಹುದು" ಎಂದು ಜನರಿಂದ ಊಹಿಸಲ್ಪಟ್ಟುದಾಗಿ, ಶೋಭಿಸುತ್ತಿದ್ದಿತು.

**ಜೈನೀ ಕಿಮಂಗದ್ಯುತಿ[೫]ರುದ್ಗವಂತೀ**
**ಕಿಮಿಂದು[೬]ಭಾಸಾಂ ತತಿ[೭]ರಾಪತಂತೀ ।**
**ಇತಿ ಸ್ಮ ಶಂಕಾಂ ತನುತೇ ಪತಂತೀ**
**ಸಾ ಚಾಮರಾಲೀ ಶರದಿಂದುಶುಭ್ರಾ ॥ ೫೧ ॥**

ಶರತ್ಕಾಲದ ಚಂದ್ರನಂತೆ ಶುಭ್ರವಾಗಿ ಬೀಳುತ್ತಿರುವ ಆ ಚಾಮರಗಳ ಸಾಲು "ಮೇಲಕ್ಕೆ ಹೋಗುತ್ತಿರುವ ಜಿನೇಶ್ವರನ ಸಂಬಂಧವಾದ ಶರೀರಕಾಂತಿಯೋ ? ಅಥವಾ ಸುತ್ತಲೂ ಬೀಳುತ್ತಿರುವ ಚಂದ್ರನ ಕಿರಣಗಳ ಸಮೂಹವೋ ?" ಎಂದು ಸಂದೇಹವನ್ನುಂಟುಮಾಡಿದ್ದಿತು.

೧ ದೀಪ್ರಃ. ೨ ಚಾಮರಾಣಾಂ. ೩ ಖಂಡೈಃ. ೪ ಚಂದ್ರಸಂಬಂಧಿಭಿಃ. ೫ ಉದ್ಗಚ್ಛಂತೀ. ೬ ಕಾಂತೀನಾಂ. ೭ ಆ ಸಮಂತಾತ್ಪತಂತೀ.

ಮಧುರವೂ ಗಂಭೀರವೂ ಆದ ಶಬ್ದವುಳ್ಳ ಮದ್ದಳೆಗಳೊಡನೆಯೂ ತುಣವವೆಂಬ ವಾದ್ಯವಿಶೇಷಗಳೊಡನೆಯೂ ಯುಕ್ತವಾದ ಕಾಹಳೆ (ತುತೂರಿ) ಶಂಖ ದೊಡ್ಡಭೇರಿ ಇವುಗಳಿಂದ ದಿಕ್ಕುಗಳನ್ನು ಶಬ್ದಮಾಡಿಸುವುದೂ ಆಕಾಶವನ್ನು ಮುಚ್ಚುವುದೂ ಆದ ಶಬ್ದವು ಹೊರಟಿತು.

**ಘನಕೋಣಹತಾಃ ಸುರ[೧]ಪಾಣಿಕೈಃ**
**ಕುಪಿತಾ ಇವ ತೇ ದ್ಯುಸದಾಂ ಪಟಹಾಃ ।**
**ಧ್ವನಿ[೨]ಮುತ್ಸಸೃಜುಃ ಕಿಮಹೋ [೩]ವತರಾಃ**
**[೪]ಪರಿತಾಡಯಥೇತಿ ವಿಸೃಷ್ಟಗಿರಃ ॥ ೬೩ ॥**

ಮದ್ದಳೆ ಬಾರಿಸುವ ದೇವತೆಗಳಿಂದ ದೃಢವಾದ ದಂಡ (ಕೋಲು) ದಿಂದ ಹೊಡೆಯಲ್ಪಟ್ಟ ಆ ದೇವದುಂದುಭಿಗಳು ಕೋಪಿಸಿಕೊಂಡುವುಗಳಂತೆ ''ಎಲೈ ದುಷ್ಟರೆ ! ಏತಕ್ಕೆ ಹೊಡೆಯುತ್ತೀರಿ ?'' ಎಂದು ಹೇಳುವುವುಗಳಂತೆ ಶಬ್ದವನ್ನು ಮಾಡಿದುವು.

**ಧ್ವನಿರಂಬುಮುಚಾಂ ಕಿಮಯಂ ಸ್ಫುರತಿ**
**ಕ್ಷುಭಿತೋಬ್ಧಿರುತ ಸ್ಫುರದೂರ್ಮಿರವಃ ।**
**[೫]ಕೃತತರ್ಕಮಿತಿ ಪ್ರಸರನ್ ಜಯತಾತ್**
**ಸುರತೂರ್ಯರವೋ ಜಿನಭರ್ತುರಸೌ ॥ ೬೪ ॥**

''ಇದೇನು ಮೇಘಗಳ ಶಬ್ದವಾಗುತ್ತಿದೆಯೊ ? ಅಥವಾ ಪ್ರಕಾಶಮಾನವಾದ ಅಲೆಗಳ ಶಬ್ದವುಳ್ಳುದೂ ಅಲ್ಲೋಲಕಲ್ಲೋಲವೂ ಆದ ಸಮುದ್ರವೊ ?'' ಎಂದು ಊಹೆಯನ್ನುಂಟುಮಾಡುವಂತೆ ವ್ಯಾಪಿಸುತ್ತಿರುವ ಜಿನೇಶ್ವರನ ಈ ದೇವವಾದ್ಯಗಳ ಶಬ್ದವು ಜಯಿಸಲಿ. ಸರ್ವೋತ್ಕೃಷ್ಟವಾಗಿರಲೆಂದು ಭಾವವು.

**ಪ್ರಭಯಾ ಪರಿತೋ [೬]ಜಿನದೇಹಭುವಾ**
**ಜಗತೀ ಸಕಲಾ [೭]ಸಮವಾದಿಸೃತೇಃ ।**
**[೮]ರುರುಚೇ ಸಸುರಾಸುರಮರ್ತ್ಯಜನಾ**
**ಕಿಮಿವಾದ್ಭುತಮೀದೃಶಿ ಧಾಮ್ನಿ ವಿಭೋಃ ॥ ೬೫ ॥**

ದೇವತೆಗಳಿಂದಲೂ ಅಸುರಕುಮಾರರಿಂದಲೂ ಮನುಷ್ಯರಿಂದಲೂ ಯುಕ್ತವಾಗಿರುವ ಸಮವಸರಣಭೂಮಿಯೆಲ್ಲ ಜಿನೇಶ್ವರನ ಶರೀರದಿಂದುಂಟಾದ ಪ್ರಭೆಯಿಂದ ಸುತ್ತಲೂ ಪ್ರಕಾಶಿಸುತ್ತಿದ್ದಿತು. ಜಿನೇಶ್ವರನ ಈಪ್ರಕಾರವಾದ ಪ್ರಭೆಯಲ್ಲಿ ಪ್ರಕಾಶಿಸುವುದೇನಾಶ್ಚರ್ಯ ?

**ತರುಣಾರ್ಕರುಚಿಂ [೯]ನು ತಿರೋದಧತೀ**
**ಸುರಕೋಟಿ[೧೦]ಮಹಾಂಸಿ ನು ನಿರ್ಧುನತೀ ।**
**ಜಗದೇಕ[೧೧]ಮಹೋದಯಮಾಸೃಜತಿ**
**ಪ್ರಥತೇ ಸ್ಮ ತದಾ ಜಿನದೇಹರುಚಿಃ ॥ ೬೬ ॥**

ಆಗ ಮಧ್ಯಾಹ್ನಕಾಲದ ಸೂರ್ಯನ ಕಾಂತಿಯನ್ನು ಮರೆಮಾಡುತ್ತದೆಯೋ ? ಅನೇಕ ದೇವತೆಗಳ ತೇಜಸ್ಸುಗಳನ್ನು ದೂರಮಾಡುತ್ತದೆಯೋ ? ಅದ್ವಿತೀಯವಾದ ತೇಜಸ್ಸುಳ್ಳ ಲೋಕವನ್ನು ಸೃಷ್ಟಿಸುತ್ತದೆಯೋ ? ಎಂಬಂತೆ ಜಿನೇಶ್ವರನ ಶರೀರ ಕಾಂತಿಯು ಪ್ರಕಟವಾಗಿದ್ದಿತು.

**ಜಿನದೇಹರುಚಾವಮೃತಾಬ್ಧಿಶುಚೌ**
**ಸುರದಾನವಮರ್ತ್ಯಜನಾ ದದೃಶುಃ ।**
**ಸ್ವಭವಾಂತರಸಪ್ತಕಮಾತ್ತಮುದೋ**
**ಜಗತೋ ಬಹು[೧೨]ಮಂಗಲದರ್ಪಣಕೇ ॥ ೬೭ ॥**

೧ ಪಣವವಾದನಶೀಲೈಃ. ೨ ತ್ಯಕ್ತವಂತಃ. ೩ ವಾಚಾಲಾಃ. ೪ ತಾಡನಂ ಕುರುಥ. ೫ ಕ್ರಿಯಾವಿಶೇಷಣಂ. ೬ ಜಿನದೇಹಜಾತಯಾ. ೭ ಸಮವಸರಣಸ್ಯ. ೮ ರುರುಧೇ ಇತ್ಯಪಿ ಪಾಠಃ. ೯ ವಿತರ್ಕೇ. ೧೦ ತೇಜಾಂಸಿ. ೧೧ ಅದ್ವಿತೀಯತೇಜೋಮಯಂ. ೧೨ ಮಂಗಲದರ್ಪಣಸದೃಶೇ.

ಲೋಕದ ಅನೇಕ ಮಂಗಲಕರವಾದ ಕನ್ನಡಿಗೆ ಸಮಾನವೂ ಅಮೃತದ ಸಮುದ್ರದಂತೆ ನಿರ್ಮಲವೂ ಆದ ಜಿನೇಶ್ವರನ ಶರೀರಕಾಂತಿಯಲ್ಲಿ ದೇವರ್ಕಳೂ ಅಸುರರೂ ಮನುಷ್ಯರೂ ಸಂತೋಷವನ್ನು ಹೊಂದಿದವರಾಗಿ ತಮ್ಮ ಏಳು ಭವಗಳನ್ನು ಕಂಡರು. ಜಿನೇಶ್ವರನ ಶರೀರಕಾಂತಿಯನ್ನು ನೋಡುವವರಿಗೆ ತಮ್ಮ ಪೂರ್ವಾಪರ ಏಳೇಳು ಭವಗಳನ್ನು ತಿಳಿಯುವ ಶಕ್ತಿಯುಂಟಾಗಿದ್ದಿತೆಂದು ಭಾವವು.

**ವಿಧುಮಾಶು ವಿಲೋಕ್ಯ ನು [೧]ವಿಶ್ವಸೃಜೋ**
**ಗತಮಾತಪವಾರಣತಾಂ ತ್ರಿತಯೀಮ್ ।**
**ರವಿ[೨]ರಿದ್ಧವಪುಃ ಸ [೩]ಪುರಾಣಕವಿಂ**
**ಸಮಶಿಶ್ರಿಯ[೪]ದಂಗವಿಭಾನಿಭತಃ ॥ ೬೮ ॥**

ವೃಷಭತೀರ್ಥಂಕರರಿಗೆ ಛತ್ರತ್ರಯಸ್ವರೂಪವನ್ನು ಹೊಂದಿರುವ ಚಂದ್ರನನ್ನು ನೋಡಿ, ಶೀಘ್ರವಾಗಿ ಆ ಸೂರ್ಯನು ಪ್ರಕಾಶಮಾನವಾದ ಆಕಾರವುಳ್ಳವನಾಗಿ ಸ್ವಾಮಿಯ ಶರೀರಕಾಂತಿಯ ನೆಪದಿಂದ ಜಿನೇಶ್ವರನನ್ನು ಹೊಂದಿದನೆಂದು ತೋರುತ್ತದೆ. ಛತ್ರತ್ರಯವು ಚಂದ್ರನಂತೆಯೂ ಸ್ವಾಮಿಯ ಶರೀರಕಾಂತಿಯು ಸೂರ್ಯನಂತೆಯೂ ಇದ್ದುವೆಂದರ್ಥವು.

**ದಿವ್ಯಮಹಾಧ್ವನಿರಸ್ಯ ಮುಖಾಬ್ಜಾ-**
**ನ್ಮೇಘರವಾ[೫]ನುಕೃತಿರ್ನಿರಗಚ್ಛತ್ ।**
**ಭವ್ಯಮನೋಗತಮೋಹತಮೋಘ್ನ-**
**ನ್ನದ್ಯುತದೇಷ ಯಥೈವ ತಮೋರಿಃ ॥ ೬೯ ॥**

ಈ ವೃಷಭತೀರ್ಥಂಕರರ ಮುಖಕಮಲದಿಂದ ಮೇಘಧ್ವನಿಯನ್ನು ಹೋಲುತ್ತಿರುವ ದಿವ್ಯಧ್ವನಿಯು ಹೊರಟಿತು. ಈ ದಿವ್ಯಧ್ವನಿಯು ಭವ್ಯರ ಮನಸ್ಸನ್ನು ಹೊಂದಿರುವ ಅಜ್ಞಾನಾಂಧಕಾರವನ್ನು ನಾಶಮಾಡುವುದಾಗಿ ಕತ್ತಲೆಯನ್ನು ನಾಶಮಾಡುವ ಸೂರ್ಯನಂತೆ ಪ್ರಕಾಶಿಸಿದ್ದಿತು. (ದೋಧಕ)

**[೬]ಏಕತಯೋಪಿ ಚ ಸರ್ವನೃಭಾಷಾಃ**
**ಸೋಂ[೭]ತರನೇಷ್ಟ ಬಹೂಶ್ಚ [೮]ಕುಭಾಷಾಃ ।**
**[೯]ಅಪ್ರತಿಪತ್ತಿಮಪಾಸ್ಯ ಚ ತತ್ತ್ವಂ**
**ಬೋಧಯತಿ ಸ್ಮ ಜಿನಸ್ಯ ಮಹಿಮ್ನಾ ॥ ೭೦ ॥**

ಆ ದಿವ್ಯಧ್ವನಿಯು ಒಂದೇ ಪ್ರಕಾರವಾಗಿದ್ದರೂ ಜಿನೇಶ್ವರನ ಮಹಿಮೆಯಿಂದ ಸಮಸ್ತ ಮನುಷ್ಯರ ಭಾಷೆಗಳನ್ನೂ ಅನೇಕ (ಏಳುನೂರು) ಕ್ಷುಲ್ಲಕಭಾಷೆಗಳನ್ನೂ ಒಳಗೊಂಡು ಪ್ರಾಣಿಗಳ ಅಜ್ಞಾನವನ್ನು ಹೋಗಲಾಡಿಸಿ ಜೀವ ಅಜೀವ ಮೊದಲಾದ ತತ್ತ್ವಗಳನ್ನು ಬೋಧಿಸಿದ್ದಿತು.

**ಏಕತಯೋಪಿ ಯಥೈವ ಜಲೌಘ-**
**ಶ್ಚಿತ್ರರಸೋ ಭವತಿ ದ್ರುಮಭೇದಾತ್ ।**
**ಪಾತ್ರವಿಶೇಷವಶಾಚ್ಚ ತಥಾಯಂ**
**ಸರ್ವವಿದೋ ಧ್ವನಿರಾಪ ಬಹುತ್ವಮ್ ॥ ೭೧ ॥**

ಮಳೆಯ ನೀರು ಒಂದೇ ಪ್ರಕಾರವಾಗಿದ್ದರೂ ಮಾವು ಬೇವು ಮೊದಲಾದ ವೃಕ್ಷಗಳ ಭೇದದಿಂದ ಅನೇಕ ಪ್ರಕಾರವಾದ ರಸವಾಗಿ ಪರಿಣಮಿಸುವಂತೆ ಈ ಸರ್ವಜ್ಞರ ದಿವ್ಯಧ್ವನಿಯು ಪಾತ್ರವಿಶೇಷ (ಧರ್ಮೋಪದೇಶವನ್ನು ಕೇಳುವ ಪ್ರಾಣಿಗಳು) ನಿಮಿತ್ತದಿಂದ ಅನೇಕ ಭೇದವನ್ನು ಹೊಂದಿದ್ದಿತು.

**ಏಕತಯೋಪಿ ಯಥಾ ಸ್ಫಟಿಕಾಶ್ಮಾ**
**ಯದ್ಯ[೧೦]ದುಪಾಹಿತ[೧೧]ಮಸ್ಯ [೧೨]ವಿಭಾಸಮ್ ।**
**ಸ್ವಚ್ಛತಯಾ ಸ್ವಯಮಪ್ಯನುಧತ್ತೇ**
**[೧೩]ವಿಶ್ವಬುಧೋಪಿ ತಥಾ ಧ್ವನಿರುಚ್ಚೈಃ ॥ ೭೨ ॥**

೧ ವೃಷಭಸ್ಯ. ೨ ದೀಪ್ರಂ. ೩ ಜಿನಂ. ೪ ದೇಹಪ್ರಭಾವ್ಯಾಜಾತ್. ೫ ಅನುಕಾರೀ. ೬ ಏಕಪ್ರಕಾರಃ. ೭ ಅಂತರ್ನಯತಿ ಸ್ಮ. ೮ ಸಪ್ತಶತಕ್ಷುಲ್ಲಕಭಾಷಾಃ. ೯ ಅಜ್ಞಾನಂ. ೧೦ ಸಮೀಪಮಾಗತಂ. ೧೧ ಉಪಾಹಿತದ್ರವ್ಯಸ್ಯ. ೧೨ ಕಾಂತಿಂ. ೧೩ ವಿಶ್ವಜ್ಞಾನಿನಃ.

ಸ್ಫಟಿಕಶಿಲೆಯು ಒಂದೇ ಪ್ರಕಾರವಾಗಿದ್ದರೂ ಸ್ವಚ್ಛವಾಗಿರುವುದರಿಂದ ಸಮೀಪದಲ್ಲಿರುವ ಎಲ್ಲಾ ಪದಾರ್ಥಗಳ ಕಾಂತಿಯನ್ನು ತಾನೂ ಹೊಂದುವಂತೆ ಸರ್ವಜ್ಞರ ದಿವ್ಯಧ್ವನಿಯೂ ಅನೇಕರೂಪವನ್ನು ಹೊಂದುತ್ತದೆ.

**ದೇವಕೃತೋ ಧ್ವನಿರಿ[೧]ತ್ಯಸದೇತ-**
**ದ್ದೇವಗುಣಸ್ಯ [೨]ತಥಾ ವಿಹತಿಃ ಸ್ಯಾತ್ ।**
**ಸಾಕ್ಷರ ಏವ ಚ ವರ್ಣಸಮೂಹಾ-**
**ನ್ನೈವ ವಿನಾ[೩]ರ್ಥಗತಿರ್ಜಗತಿ ಸ್ಯಾತ್ ॥ ೭೩ ॥**

ಈ ಧ್ವನಿಯು ದೇವತೆಗಳಿಂದ ಮಾಡಲ್ಪಟ್ಟಿದ್ದಿತೆಂಬುದು ಸುಳ್ಳುಮಾತಾಗಿದೆ. ಹಾಗೆ ಹೇಳಿದರೆ ಸರ್ವಜ್ಞರ ಗುಣಕ್ಕೆ ಹಾನಿಬರುವುದು. ದಿವ್ಯಧ್ವನಿಯು ಅಕ್ಷರ ಸ್ವರೂಪವಾಗಿರಲಿಲ್ಲವೆಂದು ಹೇಳುವುದೂ ತಪ್ಪಾಗಿದೆ. ಅಕ್ಷರಸ್ವರೂಪವೇ ಆಗಿದ್ದಿತು. ಲೋಕದಲ್ಲಿ ಅಕ್ಷರಸಮೂಹವಿಲ್ಲದಿದ್ದರೆ ಪದಾರ್ಥದ ಪರಿಜ್ಞಾನವಾಗುವುದಿಲ್ಲ.

**ಇತ್ಥಂ ಭೂತಾಂ ದೇವರಾಡ್ವಿಶ್ವಭರ್ತು-**
**ರ್ಭಕ್ತ್ಯಾ ದೇವೈಃ ಕಾರಯಾಮಾಸ ಭೂತಿಮ್ ।**
**[೪]ದಿವ್ಯಾಸ್ಥಾನೀಂ [೫]ದೇವರಾಜೋಪಸೇವ್ಯಾ-**
**[೬]ಮಧ್ಯಾಸ್ತೈನಾಂ ಶ್ರೀಪತಿರ್ವಿಶ್ವದೃಶ್ವಾ ॥ ೭೪ ॥**

ಈ ಪ್ರಕಾರವಾದ ವಿಭೂತಿಯನ್ನು ಲೋಕಾಧಿಪತಿಯಾದ ಜಿನೇಶ್ವರರಿಗೆ ಭಕ್ತಿಯಿಂದ ದೇವೇಂದ್ರನು ದೇವತೆಗಳಿಂದ ಮಾಡಿಸಿದನು. ದೇವೇಂದ್ರನಿಂದ ಭಜಿಸಲ್ಪಡುವುದಕ್ಕೆ ಯೋಗ್ಯವಾದ ಈ ಸಮವಸರಣಭೂಮಿಯಲ್ಲಿ ಲಕ್ಷ್ಮೀಪತಿಯಾದ ಸರ್ವಜ್ಞಪ್ರಭುವು ವಿರಾಜಮಾನನಾಗಿದ್ದನು. (ಶಾಲಿನೀ)

**ದೇವಃ ಸಾಕ್ಷಾತ್ಸಕಲಂ ವಸ್ತುತತ್ತ್ವಂ**
**ವಿದ್ವಾನ್ವಿದ್ವಜ್ಜನತಾವಂದಿತಾಂಘ್ರಿಃ ।**
**ಹೈಮಂ ಪೀಠಂ ಹರಿಭಿ[೭]ರ್ವ್ಯಾತ್ತವಕ್ತ್ರೈ-**
**ರೂಢಂ ಭೇಜೇ ಜಗತಾಂ ಬೋಧನಾಯ ॥ ೭೫ ॥**

ಸಮಸ್ತವಸ್ತುಸ್ವರೂಪವನ್ನು ಪ್ರತ್ಯಕ್ಷವಾಗಿ ತಿಳಿಯುವವನೂ ವಿದ್ವಜ್ಜನರ ಸಮೂಹದಿಂದ ವಂದಿಸಲ್ಪಟ್ಟ ಪಾದಗಳುಳ್ಳವನೂ ಆದ ಜಿನೇಶ್ವರನು ಲೋಕಕ್ಕೆ ಬೋಧಿಸುವುದಕ್ಕೋಸ್ಕರ ವಿಸ್ತರಿಸಲ್ಪಟ್ಟ ಮುಖಗಳುಳ್ಳ ಸಿಂಹಗಳಿಂದ ಧರಿಸಲ್ಪಟ್ಟ ಸುವರ್ಣಪೀಠವನ್ನು ಹೊಂದಿದನು. (ವಾತೋರ್ಮಿ)

**ದೃಷ್ಟ್ವಾ ದೇವಾಃ ಸಮವಸೃತಿಮಹೀಂ**
**ಚಕ್ರುರ್ಭಕ್ತ್ಯಾ [೮]ಪರಿಗತಿಮುಚಿತಾಮ್ ।**
**[೯]ತ್ರಿಃಸಂಭ್ರಾಂತಾಃ ಪ್ರಮುದಿತಮನಸೋ**
**ದೇವಂ ದ್ರಷ್ಟುಂ ವಿವಿಶುರಥ ಸಭಾಮ್ ॥ ೭೬ ॥**

**ವ್ಯೋಮಮಾರ್ಗಪರಿರೋಧಿಕೇತನೈಃ**
**[೧೦]ಸಮ್ಮಿಮಾರ್ಜಿಷುಮಿವಾಖಿಲಂ ನಭಃ ।**
**ಧೂಲಿಸಾಲವಲಯೇನ ವೇಷ್ಟಿತಾಂ**
**[೧೧]ಸಂತತಾಮರಧನುರ್ವೃತಾಮಿವ ॥ ೭೭ ॥**

ದೇವತೆಗಳು ಸಮವಸರಣಭೂಮಿಯನ್ನು ನೋಡಿ ಭಕ್ತಿಯಿಂದ ಮೂರು ಪ್ರದಕ್ಷಿಣೆಯನ್ನು ಮಾಡಿದವರಾಗಿ ಯೋಗ್ಯವಾದ ಪೂಜೆಯನ್ನು ಮಾಡಿದರು. ತರುವಾಯ ಸಂತುಷ್ಟವಾದ ಮನಸ್ಸುಳ್ಳವರಾಗಿ ಸ್ವಾಮಿಯನ್ನು ನೋಡುವುದಕ್ಕೋಸ್ಕರ (ಭ್ರಮರವಿಲಸಿತಂ) ಆಕಾಶಮಾರ್ಗವನ್ನಾವರಿಸಿರುವ ಧ್ವಜಗಳಿಂದ ಆಕಾಶವನ್ನೆಲ್ಲ ಗುಡಿಸುವುದಕ್ಕೋಸ್ಕರ ಇಚ್ಛಿಸುವಂತಿರುವುದೂ ಇಂದ್ರಧನುಸ್ಸಿನಿಂದ ಸುತ್ತಲ್ಪಟ್ಟಿದೆಯೋ ಎಂಬಂತೆ ಧೂಳಿಸಾಲ(ಕೋಟೆ)ದಿಂದ ಆವರಿಸಲ್ಪಟ್ಟಿರುವುದೂ ವಿಸ್ತಾರವೂ ಆದ ಸಭೆಯನ್ನು ಪ್ರವೇಶಮಾಡಿದರು. (ರಥೋದ್ಧತಾ)

**[೧]ಸ್ತಂಭಶಬ್ದಪರಮಾನವಾಗ್ಮಿತಾನ್**
**ಯಾ ಸ್ಮ ಧಾರಯತಿ ಖಾಗ್ರಲಂಘಿನಃ ।**
**ಸ್ವರ್ಗಲೋಕಮಿವ ಸೇವಿತುಂ ವಿಭುಂ**
**[೨]ವ್ಯಾಜುಹೂಷುರಮಲಾಗ್ರಕೇತುಭಿಃ ॥ ೭೮ ॥**

ನಿರ್ಮಲವೂ ಉನ್ನತವೂ ಆದ ಧ್ವಜಗಳಿಂದ ಸ್ವರ್ಗಲೋಕವನ್ನು ಜಿನೇಶ್ವರನ ಸೇವೆಗೋಸ್ಕರ ಕರೆಯುವುದಕ್ಕಿಚ್ಛಿಸುತ್ತದೆಯೋ ಎಂಬಂತಿರುವ ಆ ಸಭೆಯು ಆಕಾಶದ ತುದಿಯನ್ನುಲ್ಲಂಘಿಸುತ್ತಿರುವ ಮಾನಸ್ತಂಭಗಳನ್ನು ಧರಿಸಿದ್ದಿತು.

**ಸ್ವಚ್ಛವಾರಿಶಿಶಿರಾಃ ಸರಸೀಶ್ಚ**
**ಯಾ [೩]ಬಿಭರ್ವಿಕಸಿತೋತ್ಪಲನೇತ್ರಾಃ ।**
**ದ್ರಷ್ಟುಮೀಶ[೪]ಮಸುರಾಂತಕಮುಚ್ಚೈ-**
**ರ್ನೇತ್ರಪಂಕ್ತಿಮಿವ ಸಂಘಟಯಂತೀ ॥ ೭೯ ॥**

(ಸ್ವಾಗತ) ಆ ಸಭೆಯು ಮೃತ್ಯುವನ್ನು ಜಯಿಸಿದ ಸ್ವಾಮಿಯನ್ನು ನೋಡುವುದಕ್ಕೋಸ್ಕರ ಶ್ರೇಷ್ಠವಾದ ನೇತ್ರಗಳ ಸಾಲನ್ನು ಹೊಂದಿದೆಯೋ ಎಂಬಂತೆ, ಅರಳಿದ ಕನ್ನೈದಿಲೆಗಳೆಂಬ ನೇತ್ರಗಳುಳ್ಳವೂ ಸ್ವಚ್ಛವಾದ ನೀರಿಂದ ಶೀತಲವೂ ಆದ ಸರೋವರಗಳನ್ನು ಧರಿಸಿದ್ದಿತು.

**ಖಾತಿಕಾಂ ಜಲವಿಹಂಗವಿರಾವೈ-**
**ರುನ್ನತೈಶ್ಚ ವಿತತೋರ್ಮಿಕರೌಘೈಃ ।**
**ಯಾ ದಧೇ ಜಿನಮುಪಾಸಿತುಮಿಂದ್ರಾ-**
**ನಾಜುಹೂಷುರಿವ ನಿರ್ಮಲತೋಯಾಮ್ ॥ ೮೦ ॥**

ನೀರಿನಲ್ಲಿ ಸಂಚರಿಸುವ ಪಕ್ಷಿಗಳ ಶಬ್ದಗಳಿಂದಲೂ, ಉನ್ನತವೂ ವಿಸ್ತಾರವೂ ಆದ ಅಲೆಗಳೆಂಬ ಕೈಗಳ ಸಮೂಹಗಳಿಂದಲೂ ಜಿನೇಶ್ವರನನ್ನು ಭಜಿಸುವುದಕ್ಕೋಸ್ಕರ ದೇವೇಂದ್ರರನ್ನು ಕರೆಯುವುದಕ್ಕಿಚ್ಛಿಸುತ್ತಿದೆಯೋ ಎಂಬಂತಿರುವ ಆ ಸಭೆಯು ನಿರ್ಮಲವಾದ ಜಲವುಳ್ಳ ಕಂದಕವನ್ನು ಧರಿಸಿದ್ದಿತು. ಆ ಸಭೆಯ ಸುತ್ತಲೂ ಕಂದಕವಿದ್ದಿತೆಂದು ಭಾವವು.

**ಬಹುವಿಧವನಲತಿಕಾಕಾಂತಂ**
**ಮದಮಧುಕರವಿರುತಾತೋದ್ಯಮ್ ।**
**ವನಮುಪವಹತಿ ಚ ವಲ್ಲೀನಾಂ**
**ಸ್ಮಿತಮಿವ ಕುಸುಮಚಿತಂ ಯಾ ಸ್ಮ ॥ ೮೧ ॥**

(ಅತಿವೃತಾ) ಆ ಸಭೆಯು ಅನೇಕವಿಧವಾದ ವನಲತೆಗಳಿಂದ ಮನೋಹರವೂ ಮದಿಸಿರುವ ಭ್ರಮರಗಳ ಶಬ್ದಗಳೆಂಬ ವಾದ್ಯವುಳ್ಳುದೂ ಪುಷ್ಪಗಳಿಂದ ವ್ಯಾಪ್ತವೂ ಆದ ಲತಾವನವನ್ನು ಮಂದಹಾಸವನ್ನೋಪಾದಿಯಲ್ಲಿ ಧರಿಸಿದ್ದಿತು.

**ಸಾಲಮಾದ್ಯಮುಚ್ಚಗೋಪುರೋದ್ಗಮಂ**
**ಸಂಬಿಭರ್ತಿ ಭಾಸುರಂ ಸ್ಮ [೫]ಹೈಮನಮ್ ।**
**[೬]ಹೈಮನಾರ್ಕಸೌಮ್ಯದೀಪ್ತಿಮುನ್ನತಿಂ**
**ಭರ್ತುರಕ್ಷರೈ[೭]ರ್ವಿನೈವ ಯಾ ಪ್ರದರ್ಶಿಕಾ ॥ ೮೨ ॥**

(ಪ್ರದರ್ಶಿಕಾ)ಅಕ್ಷರಗಳನ್ನು ಬಿಟ್ಟೇ ಸ್ವಾಮಿಯ ಶ್ರೇಷ್ಠತೆಯನ್ನು ತೋರಿಸುವಂತಿರುವ ಆ ಸಭೆಯು ಹೇಮಂತ ಋತುವಿನಲ್ಲಿರುವ ಸೂರ್ಯನಂತೆ ರಮಣೀಯವಾದ ಕಾಂತಿಯುಳ್ಳುದೂ ಉನ್ನತವಾದ ಗೋಪುರಗಳುಳ್ಳುದೂ ಪ್ರಕಾಶಮಾನವೂ ಸುವರ್ಣನಿರ್ಮಿತವೂ ಆದ ಮೊದಲನೆಯ ಕೋಟೆಯನ್ನು ಧರಿಸಿದ್ದಿತು. ಸ್ವಾಮಿಯ ಶ್ರೇಷ್ಠತೆಯನ್ನು ಉನ್ನತವಾದ ಗೋಪುರಗಳಿಂದ ತೋರಿಸುವಂತಿದ್ದಿತೆಂದು ಭಾವವು.

---

೧ ಅಸತ್ಯಂ. ೨ ತಥಾಸತಿ. ೩ ಅರ್ಥಪರಿಜ್ಞಾನಂ. ೪ ಸಮವಸರಣಭೂಮಿಂ. ೫ ಇಂದ್ರಸೇವನೀಯಾಂ. ೬ ಅಧಿತಿಷ್ಠತಿ ಸ್ಮ. ೭ ವಿಸ್ತೃತಂ. ೮ ಪರಿಚರ್ಯಾಂ. ೯ ತ್ರಿಃಪ್ರದಕ್ಷಿಣಂ ಕೃತವಂತಃ. ೧೦ ಸಮ್ಮಾರ್ಷ್ಟುಮಿಚ್ಛುಂ. ೧೧ ವಿಸ್ತೃತಾಂ.

೧ ಮಾನಸ್ತಂಭಾನಿತ್ಯರ್ಥಃ. ೨ ಆಹ್ವಾತುಮಿಚ್ಛುಃ. ೩ ಬಿಭರ್ತಿಸ್ಮ. ೪ ಅಸೂನ್ ಪ್ರಾಣಾನ್ ರಾತಿ ಆದತ್ತ ಇತ್ಯಸುರಃ. ೫ ಹೇಮನಿರ್ಮಿತಂ. ೬ ಹೇಮಂತಜಾತಾರ್ಕರಮ್ಯಾ. ೭ ವಿನೇವೇತ್ಯಪಿ ಪಾಠಃ.

ಶರದ್ಘನಸಮಶ್ರಿಯೌ ನರ್ತಕೀ-
ತಡಿದ್ವಿಲಸಿತೇ [೧]ನೃತೇಃ [೨]ಶಾಲಿಕೇ ।
ದಧಾತಿ ರುಚಿರೇ ಸ್ಮ [೩]ಯೋ[೪]ಪಾಸಿತುಂ
ಜಿನೇಂದ್ರಮಿವ [೫]ಭಕ್ತಸಂಭಾವಿತಾ ॥ ೮೩ ॥

ಜಿನೇಶ್ವರನನ್ನು ಭಜಿಸುವುದಕ್ಕೋಸ್ಕರ ಭಕ್ತಿಯಿಂದ ಸಂಸ್ಕಾರ ಮಾಡಲ್ಪಟ್ಟಂತಿರುವ ಆ ಸಮವಸರಣ ಸಭೆಯು ಶರತ್ಕಾಲದ ಮೇಘಕ್ಕೆ ಸಮಾನವಾದ ಶೋಭೆಯುಳ್ಳವೂ ನರ್ತನಸ್ತ್ರೀಯರೆಂಬ ಮಿಂಚುಗಳಿಂದ ಪ್ರಕಾಶಮಾನವೂ ಮನೋಹರವೂ ಆದ ಎರಡು ನಾಟ್ಯಶಾಲೆಗಳನ್ನು ಧರಿಸಿದ್ದಿತು.

[೬]ಘಟೀದ್ವಯದ್ವಂದ್ವಮುಪಾತ್ತ [೭]ಧೂಪಕಂ
ಬಭಾರ ಯಾ [೮]ದ್ವಿಸ್ತನಯುಗ್ಮಸನ್ನಿಭಮ್ ।
ಜಿನಸ್ಯ ನುತ್ಯೈ ಶ್ರುತದೇವತಾ ಸ್ವಯಂ
[೯]ತಥಾಸ್ಥಿತೇವ ತ್ರಿಜಗಚ್ಛ್ರಿಯಾ ಸಮಮ್ ॥ ೮೪ ॥

ಜಿನೇಶ್ವರನನ್ನು ಸ್ತುತಿಸುವುದಕ್ಕೋಸ್ಕರ ಮೂರುಲೋಕದ ಶೋಭೆಯೊಡನೆ ಸರಸ್ವತಿಯೇ ಆ ಸಮವಸರಣರೂಪದಿಂದಿರುತ್ತಾಳೋ ಎಂಬಂತಿರುವ ಆ ಸಭೆಯು ಎರಡೆರಡು ಕುಚಗಳ ಯುಗ್ಮಕ್ಕೆ ಸದೃಶವೂ ಧೂಪಗಳುಳ್ಳದೂ ಆದ ಎರಡು ಧೂಪಘಟಗಳ ಯುಗ್ಮವನ್ನು ಧರಿಸಿದ್ದಿತು.

ರಮ್ಯಂ ವನಂ ಭೃಂಗಸಮೂಹಸೇವಿತಂ
ಬಭ್ರೇ [೧೦]ಚತುಃಸಂಖ್ಯಮುಪಾತ್ತಕಾಂತಿಕಮ್ ।
[೧೧]ವಾಸೋ ವಿನೀಲಂ ಪರಿಧಾಯ [೧೨]ತನ್ನಿಭಾ-
ದ್ವರೇಣ್ಯಮಾರಾಧಯಿತುಂ ಸ್ಥಿತೇವ ಯಾ ॥ ೮೫ ॥

ಆ ಸಭೆಯು ಜಿನೇಶ್ವರನನ್ನು ಪೂಜಿಸುವುದಕ್ಕೋಸ್ಕರ ನೀಲವಸ್ತ್ರವನ್ನು ಧರಿಸಿಕೊಂಡು ಆ ವನಗಳ ನೆಪದಿಂದ ನಿಂತಿದೆಯೋ ಎಂಬಂತೆ, ರಮಣೀಯವೂ ಭ್ರಮರಗಳ ಸಮೂಹದಿಂದ ಸೇವಿಸಲ್ಪಡುವುವೂ ಪ್ರಕಾಶಮಾನವೂ ಆದ ನಾಲ್ಕು ವನಗಳನ್ನು ಧರಿಸಿದ್ದಿತು.

ಉಪವನಸರಸೀನಾಂ [೧೩]ಬಾಲಪದ್ಮೈ-
ರ್ದ್ಯುಯುವತಿಮುಖಶೋಭಾಮಾಹಸಂತೀ ।
ಅಧೃತ ಚ ವನವೇಧೀಂ ರತ್ನದೀಪ್ರಾಂ
ಯುವತಿರಿವ ಕಟೀಸ್ಥಾಂ ಮೇಖಲಾಂ ಯಾ ॥ ೮೬ ॥

(ಪುಟ) ಉದ್ಯಾನಗಳಲ್ಲಿರುವ ಸರೋವರಗಳ ಸ್ವಲ್ಪವಿಕಸಿತವಾದ ತಾವರೆಗಳಿಂದ ಯೌವನಸ್ತ್ರೀಯರ ಮುಖದ ಶೋಭೆಯನ್ನು ಪರಿಹಾಸ್ಯಮಾಡುತ್ತಿರುವ ಆ ಸಮವಸರಣಸಭೆಯು, ಯೌವನಸ್ತ್ರೀಯು ಸೊಂಟದಲ್ಲಿಟ್ಟಿರುವ ಡಾಬನ್ನು ಧರಿಸಿರುವಂತೆ, ರತ್ನಗಳಿಂದ ಪ್ರಕಾಶಮಾನವಾದ ವನವೇದಿಕೆಯನ್ನು ಧರಿಸಿದ್ದಿತು.

ಧ್ವಜಾಂಬರತತಾಂಬರೈಃ [೧೪]ಪರಿಗತಾ
[೧೫]ಯಕಾ ಧ್ವಜ[೧೬]ನಿವೇಶನೈ[೧೭]ರ್ದಶತಯೈಃ ।
ಜಿನಸ್ಯ ಮಹಿಮಾನಮಾರಚಯಿತುಂ
ನಭೋಂಗಣಮಿವಾ[೧೮]ವ್ಯಾಜತ್ಯತಿಬಭೌ ॥ ೮೭ ॥

(ಜಲೋದ್ಧತಗತಿ)ಧ್ವಜಪಟಗಳಿಂದ ವ್ಯಾಪ್ತವಾದ ಆಕಾಶವುಳ್ಳ ಹತ್ತು ಪ್ರಕಾರವಾದ ಧ್ವಜಗಳ ರಚನೆಗಳಿಂದ ಸುತ್ತಲ್ಪಟ್ಟ ಆ ಸಭೆಯು ಜಿನೇಶ್ವರನ ಮಹಿಮೆಯನ್ನು ಬರೆಯುವುದಕ್ಕೋಸ್ಕರ ಆಕಾಶಪ್ರದೇಶವನ್ನು ಗುಡಿಸುತ್ತಿದೆಯೋ ಎಂಬಂತೆ ಪ್ರಕಾಶಿಸುತ್ತಿದ್ದಿತು.

೧ ನೃತ್ಯಸ್ಯ. ೨ ನಾಟ್ಯಶಾಲಿಕೇದ್ವೇ. ೩ ಸಮವಸೃತಿಃ. ೪ ಆರಾಧಯಿತುಂ. ೫ ಭಕ್ತಿಸಂಸ್ಕೃತಾ. ೬ ಧೂಪಘಟಯುಗ್ಮಯುಗಲಂ. ೭ ಧೂಮಕಮಿತ್ಯಪಿ ಪಾಠಃ. ೮ ಸ್ತನಯುಗ್ಮದ್ವಯಸನ್ನಿಭಂ. ೯ ಸಮವಸರಣಾಕಾರೇಣ ಸ್ಥಿತೇವ. ೧೦ ಅಶೋಕಸಪ್ತಚ್ಛದಚಂಪಕಚೂತಮಿತಿ. ೧೧ ವಸ್ತ್ರಂ. ೧೨ ವನವ್ಯಾಜಾತ್. ೧೩ ಈಷದ್ವಿಕಚಕಮಲೈಃ. ೧೪ ಪರಿವೃತಾ. ೧೫ ಯಾ. ೧೬ ರಚನಾಭಿಃ ಧ್ವಜಸ್ಥಾನೈರ್ವಾ. ೧೭ ದಶಪ್ರಕಾರೈಃ. ೧೮ ಸಮ್ಮಾರ್ಜನಂ ಕುರ್ವತೀ.

ಖಮಿವ ಸತಾರಂ ಕುಸುಮಾಢ್ಯಂ
ಯಾ ವನಮತಿರಮ್ಯಂ ಸುರಭೂಜಾನಾಮ್ ।
ಸಹ ವನವೇದ್ಯಾ ಪರತಃ [೧]ಸಾಲಾದ್ಯ
ರುಚದಿವೋಢ್ವಾ ಸುಕೃತಾರಾಮಮ್ ॥ ೮೮ ॥

ಆ ಸಭೆಯು ನಕ್ಷತ್ರಯುಕ್ತವಾದ ಆಕಾಶದಂತೆ ಪುಷ್ಪಗಳಿಂದ ಪರಿಪೂರ್ಣವೂ ಅತ್ಯಂತ ರಮಣೀಯವೂ ಆದ ಕಲ್ಪವೃಕ್ಷಗಳ ವನವನ್ನು ಧರಿಸಿಕೊಂಡು ಪುಣ್ಯಗಳ ವನವನ್ನು ಧರಿಸಿರುವಂತೆ ವನವೇದಿಕೆಯೊಡನೆ ಎರಡನೆಯ ಕೋಟೆಯಿಂದ ಬಹಳವಾಗಿ ಶೋಭಿಸುತ್ತಿದ್ದಿತು.

ಅಧೃತ ಚ ಯಾಸ್ಮಾತ್ಪರತೋ ದೀಪ್ರಂ
ಸ್ಫುರದುರುರತ್ನಂ [೨]ಭವನಾಭೋಗಮ್ ।
ಮಣಿಮಯದೇಹಾನ್ನವ ಚ ಸ್ತೂಪಾ[೩]
ನ್ಭುವನವಿಜಿತ್ಯಾಯಿವ ಬದ್ಧೇಚ್ಛಾ ॥ ೮೯ ॥

ಆ ಸಮವಸರಣಭೂಮಿಯು ಕಲ್ಪವೃಕ್ಷಗಳ ವನದನಂತರ (ಆಚೆಗೆ) ಪ್ರಕಾಶಮಾನವಾದ ದೊಡ್ಡರತ್ನಗಳುಳ್ಳದೂ ದೇದೀಪ್ಯಮಾನವೂ ವಿಸ್ತಾರವೂ ಆದ ಮನೆಗಳನ್ನೂ ಲೋಕವನ್ನೂ ಜಯಿಸುವುದಕ್ಕೋಸ್ಕರ ಇಚ್ಛಿಸಿರುವಂತೆ ರತ್ನಮಯವಾದ ಆಕಾರವುಳ್ಳ ಒಂಬತ್ತು ಸ್ತೂಪಗಳನ್ನೂ ಧರಿಸಿದ್ದಿತು.

ಸ್ಫಟಿಕಮಯಂ ಯಾ ರುಚಿರಂ ಸಾಲಂ
ಪ್ರವಿತತಮೂರ್ತೀಃ [೪]ಖಮಣಿಸುಭಿತ್ತೀಃ ।
[೫]ಉಪರಿತಲಂ ಚ ತ್ರಿಜಗದ್ಗ್ರಾಹಿ
ವ್ಯಧೃತ ಪರಾರ್ಧ್ಯಂ [೬]ಸದನಂ ಲಕ್ಷ್ಮ್ಯಾಃ ॥ ೯೦ ॥

ಆ ಸಮವಸರಣಭೂಮಿಯು ಸ್ಫಟಿಕರತ್ನಮಯವೂ ಮನೋಹರವೂ ಆದ ಕೋಟೆಯನ್ನೂ ವಿಶಾಲವಾದ ಆಕಾರವುಳ್ಳ ಆಕಾಶಸ್ಫಟಿಕನಿರ್ಮಿತವಾದ ಗೋಡೆಗಳನ್ನೂ ಆ ಗೋಡೆಗಳ ಮೇಲೆ ಮೂರುಲೋಕವನ್ನು ಪರಿಗ್ರಹಿಸುವುದೂ ಶ್ರೇಷ್ಠವೂ ಆದ ಲಕ್ಷ್ಮೀಮಂಡಪವನ್ನೂ ಧರಿಸಿದ್ದಿತು.

ಸಮಂ [೭]ದೇವವರ್ಯೈಃ ಪರಾರ್ಧ್ಯೈರುಶೋಭಾಂ
ಪ್ರಪಶ್ಯಂ[೮]ಸ್ತಥ್ಯೆನಾಂ ಮಹೀಂ ವಿಸ್ಮಿತಾಕ್ಷಃ ।
ಪ್ರವಿಷ್ಟೋ ಮಹೇಂದ್ರಃ ಪ್ರಣಷ್ಟಪ್ರಮೋಹಂ
ಜಿನಂ ದ್ರಷ್ಟುಕಾಮೋ ಮಹತ್ಯಾ ವಿಭೂತ್ಯಾ ॥ ೯೧ ॥

(ಭುಜಂಗಪ್ರಯಾತ)ಈಶಾನೇಂದ್ರ ಮೊದಲಾದ ಇಂದ್ರರೊಡನೆಯೂ ಮಹದ್ಧಿಕದೇವತೆಗಳೊಡನೆಯೂ ಶ್ರೇಷ್ಠವಾದ ಮಹಾಶೋಭೆಯುಳ್ಳ ಈ ಸಮವಸರಣಭೂಮಿಯನ್ನು ನೋಡಿ ಆಶ್ಚರ್ಯಯುಕ್ತವಾದ ನೇತ್ರಗಳುಳ್ಳ ದೇವೇಂದ್ರನು ಮೋಹವನ್ನು ನಾಶಮಾಡಿದ ಜಿನೇಶ್ವರನನ್ನು ನೋಡಬೇಕೆಂಬ ಇಚ್ಛೆಯುಳ್ಳವನಾಗಿ ಮಹಾ ವೈಭವದಿಂದ ಪ್ರವೇಶಮಾಡಿದನು.

ಅಥಾಪಶ್ಯದುಚ್ಚೈರ್ಜ್ವಲತ್ಪೀಠಮೂರ್ಧ್ನಿ
ಸ್ಥಿತಂ ದೇವದೇವಂ ಚತುರ್ವಕ್ತ್ರಶೋಭಮ್ ।
ಸುರೇಂದ್ರೈರ್ನರೇಂದ್ರೈರ್ಮುನೀಂದ್ರೈಶ್ಚ ವಂದ್ಯಂ
[೯]ಜಗತ್ಸೃಷ್ಟಿಸಂಹಾರಯೋರ್ಹೇತುಮಾದ್ಯಮ್ ॥ ೯೨ ॥

ಶರಚ್ಚಂದ್ರಬಿಂಬಪ್ರತಿಸ್ಪರ್ಧಿ ವಕ್ತ್ರಂ
ಶರಜ್ಜ್ಯೋತ್ಸ್ನಯೇವ ಸ್ವಕಾಂತ್ಯಾತಿಕಾಂತಮ್ ।
ನವೋತ್ಫುಲ್ಲನೀಲಾಬ್ಜಸಂಶೋಭಿ ನೇತ್ರಂ
ಸರಃ ಸಾಬ್ಜನೀಲೋತ್ಪಲಂ ವ್ಯಾಹಸಂತಮ್ ॥ ೯೩ ॥

೧ ದ್ವಿತೀಯಸಾಲಾತ್. ೨ ಪ್ರಾಸಾದವಿಸ್ತಾರಂ, ಭವನಭೂಮಿವಿಸ್ತಾರಂ. ೩ ಭುವನವಿಜಯಾಯ. ೪ ಆಕಾಶಸ್ಫಟಿಕಮಣಿಃ. ೫ ಸ್ಫಟಿಕಭಿತ್ತ್ಯುಪರಿಮಭಾಗೇ. ೬ ಲಕ್ಷ್ಮೀಮಂಡಪಂ. ೭ ಈಶಾನಾದೀಂದ್ರೈರ್ಮಹರ್ದ್ಧಿಕೈಃ. ೮ ಅಥೈನಾಮಿತ್ಯಪಿ ಪಾಠಃ. ೯ ವರ್ಣಾಶ್ರಮಾದಿಕರಣದಂಡನೀತ್ಯಾದಿವಿಧ್ಯೋಃ.

ಜ್ವಲದ್ಭಾಸುರಾಂಗಂ ಸ್ಫುರದ್ಭಾನುಬಿಂಬ
[೧]ಪ್ರತಿದ್ವಂದ್ವಿ ದೇಹಪ್ರಭಾಬ್ಧೌ ನಿಮಗ್ನಮ್ ।
ಸಮುತ್ತುಂಗಕಾಯಂ ಸುರಾರಾಧನೀಯಂ
ಮಹಾಮೇರು[೨]ಕಲ್ಪಂ ಸುಚಾಮೀಕರಾಭಮ್ ॥ ೯೪ ॥

[೩]ವಿಶಾಲೋರುವಕ್ಷಸ್ಸ್ಥಲ[೪]ಸ್ವಾತ್ಮಲಕ್ಷ್ಮ್ಯಾ
[೫]ಜಗದ್ಭರ್ತೃಭೂಯಂ ವಿನೋಕ್ತ್ಯಾ ಬ್ರುವಾಣಮ್ ।
[೬]ನಿರಾಹಾರ್ಯವೇಷಂ ನಿರಸ್ತೋರುಭೂಷಂ
[೭]ನಿರಕ್ಷಾವಬೋಧಂ [೮]ನಿರುದ್ಧಾತ್ಮರೋಧಮ್ ॥ ೯೫ ॥

ಸಹಸ್ರಾಂಶುದೀಪ್ರ [೯]ಪ್ರಭಾಮಧ್ಯಭಾಜಂ
ಚಲಚ್ಚಾಮರೌಘೈಃ ಸುರೈರ್ವೀಜ್ಯಮಾನಮ್ ।
ಧ್ವನದ್ದುಂದುಭಿಧ್ವಾನ[೧೦]ನಿರ್ಘೋಷರಮ್ಯಂ
ಚಲದ್ವೀಚಿವೇಲಂ ಪಯೋಬ್ಧಿಂ ಯಥೈವ ॥ ೯೬ ॥

ಸುರೋನ್ಮುಕ್ತಪುಷ್ಪೈಸ್ತತಪ್ರಾಂತದೇಶಂ
ಮಹಾಶೋಕವೃಕ್ಷಾಶ್ರಿತೋತ್ತುಂಗಮೂರ್ತಿಮ್ ।
ಸ್ವಕಲ್ಪದ್ರುಮೋದ್ಯಾನಮುಕ್ತಪ್ರಸೂನೈ-
ಸ್ತತಾಂತಂ ಸುರಾದ್ರಿಂ ರುಚಾ ಹ್ರೇಪಯಂತಮ್ ॥ ೯೭ ॥

ಪ್ರವಿಸ್ತಾರಿಶುಭ್ರಾತಪತ್ರತ್ರಯೇಣ
ಸ್ಫುರನ್ಮೌಕ್ತಿಕೇನಾಧೃತ [೧೧]ದ್ಯುಸ್ಥಿತೇನ ।
ಸ್ವಮಾಹಾತ್ಮ್ಯಮೈಶ್ವರ್ಯಮುದ್ಯದ್ಯಶಶ್ಚ
ಸ್ಫುಟೀಕರ್ತು[೧೨]ಮೀಶಂ ತಮೀಶಾನಮಾದ್ಯಮ್ ॥ ೯೮ ॥

ಪ್ರವೇಶಮಾಡಿದನಂತರದಲ್ಲಿ ಉನ್ನತವೂ ಪ್ರಕಾಶಮಾನವೂ ಆದ ಪೀಠದ ಮಸ್ತಕದಲ್ಲಿರುವವನೂ ದೇವತೆಗಳಿಗೆಲ್ಲ ದೇವನೂ ನಾಲ್ಕುಮುಖಗಳಿಂದ ಶೋಭಿಸುವವನೂ ದೇವೇಂದ್ರರಿಂದಲೂ ರಾಜರಿಂದಲೂ ಮುನೀಶ್ವರರಿಂದಲೂ ವಂದಿಸಲ್ಪಡುವವನೂ ಜಗತ್ತಿನ ವರ್ಣಾಶ್ರಮದಂಡನೀತಿ ಮೊದಲಾದುವುಗಳ ಸೃಷ್ಟಿಗೂ ಅಜ್ಞಾನದ ನಾಶಕ್ಕೂ ಮೊದಲನೆಯ ಕಾರಣನೂ ಶರತ್ಕಾಲದ ಚಂದ್ರಬಿಂಬವನ್ನು ಮೀರುವ ಮುಖವುಳ್ಳವನೂ ಶರತ್ಕಾಲದ ಬೆಳದಿಂಗಳಂತಿರುವ ತನ್ನ ಕಾಂತಿಯಿಂದ ಬಹಳ ಮನೋಹರನೂ ನವೀನವೂ ವಿಕಸಿತವೂ ಆದ ಕನ್ನೈದಿಲೆಯಂತೆ ಶೋಭಿಸುತ್ತಿರುವ ಕಣ್ಣುಗಳುಳ್ಳವನೂ ಕಮಲಗಳೂ ಕನ್ನೈದಿಲೆಗಳೂ ಉಳ್ಳ ಸರೋವರವನ್ನು ಪರಿಹಾಸ್ಯಮಾಡುವುದೂ ದೇದೀಪ್ಯಮಾನವೂ ಆದ ದೇಹವುಳ್ಳವನೂ ಪ್ರಕಾಶಮಾನವಾದ ಸೂರ್ಯಬಿಂಬವನ್ನು ಮೀರುತ್ತಿರುವ ಶರೀರಕಾಂತಿಯೆಂಬ ಸಮುದ್ರದಲ್ಲಿ ಮುಳುಗಿರುವವನೂ ಅತ್ಯುನ್ನತವಾದ ಶರೀರವುಳ್ಳವನೂ ದೇವತೆಗಳಿಗೆ ಪೂಜಿಸುವುದಕ್ಕೆ ಯೋಗ್ಯನೂ ಮಹಾಮೇರುವಿಗೆ ಸಮಾನನೂ ಶ್ರೇಷ್ಠವಾದ ಬಂಗಾರಕ್ಕೆ ಸದೃಶನೂ ವಿಸ್ತಾರವೂ ಪರಿಪುಷ್ಟವೂ ಆದ ಎದೆಯಲ್ಲಿರುವ ತನ್ನ ಶೋಭೆಯಿಂದ ಲೋಕಾಧಿಪತಿಯಾಗಿರುವುದನ್ನು ವಚನವಿಲ್ಲದೆಯೇ ಹೇಳುತ್ತಿರುವವನೂ ವಸ್ತ್ರಮೊದಲಾದ ಭೂಷಣಗಳಿಲ್ಲದಿರುವ ವೇಷವುಳ್ಳವನೂ (ದಿಗಂಬರನೂ) ಆಭರಣಗಳನ್ನೆಲ್ಲ ದೂರಮಾಡಿರುವವನೂ ಅತೀಂದ್ರಿಯಜ್ಞಾನವುಳ್ಳವನೂ ಜ್ಞಾನಾವರಣ ಮೊದಲಾದ ಕರ್ಮಗಳನ್ನು ತಡೆದಿರುವವನೂ ಸೂರ್ಯನಂತೆ ಪ್ರಕಾಶಮಾನವಾದ ಪ್ರಭಾಮಂಡಲ (ಮಂಡಲಾಕಾರವಾದ ದೇಹಕಾಂತಿ)ದ ಮಧ್ಯದಲ್ಲಿರುವವನೂ ದೇವತೆಗಳಿಂದ ಚಲಿಸಲ್ಪಟ್ಟ ಚಾಮರಗಳ ಸಮೂಹಗಳಿಂದ ಬೀಸಲ್ಪಡುವವನೂ ಧ್ವನಿಮಾಡುತ್ತಿರುವ ಭೇರಿಯ ಶಬ್ದದಂತಿರುವ ದಿವ್ಯಧ್ವನಿಯಿಂದ ರಮಣೀಯನೂ ಚಲಿಸುತ್ತಿರುವ ತೆರೆಮಾಲೆಗಳಿಂದ ಯುಕ್ತವಾದ ದಡವುಳ್ಳ ಕ್ಷೀರಸಮುದ್ರದಂತೆ ಶೋಭಿಸುವವನೂ ದೇವತೆಗಳಿಂದ ಸುರಿಯಲ್ಪಟ್ಟ ಪುಷ್ಪಗಳಿಂದ ವ್ಯಾಪ್ತವಾದ ಸಮೀಪಪ್ರದೇಶವುಳ್ಳವನೂ ದೊಡ್ಡ ಅಶೋಕವೃಕ್ಷದಲ್ಲಿ ಪ್ರತಿಬಿಂಬಿತವಾದ ಉನ್ನತದೇಹಾಕೃತಿಯುಳ್ಳವನೂ ತನ್ನ ಸಮೀಪದಲ್ಲಿರುವ ಕಲ್ಪವೃಕ್ಷಗಳ ಉದ್ಯಾನಗಳಿಂದ ಬೀಳುತ್ತಿರುವ ಪುಷ್ಪಗಳಿಂದ ವ್ಯಾಪ್ತವಾದ ಸಮೀಪ ಪ್ರದೇಶವುಳ್ಳವನೂ ದೇಹಕಾಂತಿಯಿಂದ ಮಹಾಮೇರುಪರ್ವತವನ್ನು ಲಜ್ಜೆಪಡಿಸುವವನೂ(ಮೀರುವವನೂ)ಪ್ರಕಾಶಮಾನವಾದ ಮುತ್ತುಗಳುಳ್ಳುದೂ ಧರಿಸಲ್ಪಡದೆ ಅಂತರಿಕ್ಷದಲ್ಲಿರುವುದೂ ವಿಸ್ತಾರವೂ ಶುಭ್ರವೂ ಆದ ಛತ್ರತ್ರಯದಿಂದ ತನ್ನ ಮಹಿಮೆಯನ್ನೂ ಐಶ್ವರ್ಯವನ್ನೂ ಶ್ರೇಷ್ಠವಾದ ಯಶಸ್ಸನ್ನೂ ವ್ಯಕ್ತಪಡಿಸುವುದಕ್ಕೆ ಸಮರ್ಥನೂ ಮೊದನೆಯವನೂ ಆದ ಆದೀಶ್ವರ(ವೃಷಭತೀರ್ಥಂಕರ) ಸ್ವಾಮಿಯನ್ನು ನೋಡಿದನು. ಸೌಧರ್ಮೇಂದ್ರನು ಸಮವಸರಣವನ್ನು ಪ್ರವೇಶಿಸಿ ವೃಷಭತೀರ್ಥಂಕರರನ್ನು ನೋಡಿದನೆಂದು ಭಾವವು.

೧ ಪ್ರತಿಸ್ಪರ್ದ್ಧಿ. ೨ ಸಮಾನಂ. ೩ ವಿಶಾಲಶಬ್ದೇನ ವಿಸ್ತೀರ್ಣತ್ವಂ, ಉರುಶಬ್ದೇನ ಪುಷ್ಟತ್ವಂ ಚ ಭಣ್ಯತೇ. ೪ ಸ್ವಾತ್ಮಕಾಂತ್ಯಾ ಇತ್ಯಪಿ ಪಾಠಃ. ೫ ಜಗತ್ಪತಿತ್ವಂ. ೬ ವಸ್ತ್ರಾದಿರಹಿತಾಕಾರಂ (ಜಾತರೂಪಧರಂ). ೭ ಅತೀಂದ್ರಿಯಜ್ಞಾನಂ. ೮ ನಿರಸ್ತಜ್ಞಾನಾವರಣಂ. ೯ ಪ್ರಭಾಮಂಡಲಂ. ೧೦ ದಿವ್ಯಧ್ವನಿಃ. ೧೧ ಆಕಾಶಸ್ಥಿತೇನ. ೧೨ ಶಕ್ತಂ.

ಪ್ರದೃಶ್ಯಾಥ ದೂರಾನ್ನತಸ್ವೋತ್ತಮಾಂಗಾಃ
ಸುರೇಂದ್ರಾಃ ಪ್ರಣೇಮುರ್ಮಹೀಸ್ಪೃಷ್ಟಜಾನು ।
ಕಿರೀಟಾಗ್ರಭಾಜಾಂ ಸ್ರಜಾಂ ಮಾಲಿಕಾಭಿ-
ರ್ಜಿನೇಂದ್ರಾಂಘ್ರಿಯುಗ್ಮಂ ಸ್ಫುಟಂ ಪ್ರಾರ್ಚಯಂತಃ ॥ ೯೯ ॥

ಸ್ವಾಮಿಯನ್ನು ನೋಡಿದನಂತರದಲ್ಲಿ ದೂರದಿಂದ ತಮ್ಮ ಮಸ್ತಕಗಳನ್ನು ಬಗ್ಗಿಸಿದ ದೇವೇಂದ್ರರು ಕಿರೀಟಗಳ ತುದಿಯಲ್ಲಿರುವ ಪುಷ್ಪಮಾಲಿಕೆಗಳಿಂದ ಜಿನೇಶ್ವರನ ಪಾದಯುಗಳವನ್ನು ಚೆನ್ನಾಗಿ ಪೂಜಿಸುವವರಾಗಿ ಭೂಮಿಗೆ ಮೊಣಕಾಲುಗಳನ್ನೂರಿ ನಮಸ್ಕಾರಮಾಡಿದರು.

ತದಾರ್ಹತ್ಯನಾಮೇ ಸಮುತ್ಫುಲ್ಲನೇತ್ರಾಃ
ಸುರೇಂದ್ರಾಃ ವಿರೇಜುಃ ಶುಚಿಸ್ಮೇರವಕ್ತ್ರಾಃ ।
ಸಮಂ [೧]ವಾ ಸರೋಭಿಃ ಸಪದ್ಮೋತ್ಪಲೈಃ ಸ್ವೈಃ
ಕುಲಕ್ಷ್ಮಾಧರೇಂದ್ರಾಃ ಸುರಾದ್ರಿಂ ಭಜಂತಃ ॥ ೧೦೦ ॥

ಆಗ ಅರಹಂತರನ್ನು ನಮಸ್ಕರಿಸುವಕಾಲದಲ್ಲಿ ವಿಕಸಿತವಾದ ನೇತ್ರಗಳುಳ್ಳವರೂ ನಿರ್ಮಲವಾದ ಮಂದಹಾಸವುಳ್ಳ ಮುಖಗಳುಳ್ಳವರೂ ಆದ ದೇವೇಂದ್ರರು ಕಮಲಗಳೊಡನೆಯೂ ಕನ್ನೈದಿಲೆಗಳೊಡನೆಯೂ ಯುಕ್ತವಾಗಿರುವ ತಮ್ಮ ಸರೋವರಗಳೊಡನೆ ಮಹಾಮೇರುಪರ್ವತವನ್ನು ಭಜಿಸುತ್ತಿರುವ ದೊಡ್ಡ ಕುಲಪರ್ವತಗಳಂತೆ ಶೋಭಿಸುತ್ತಿದ್ದರು.

ಶಚೀ ಚಾಪ್ಸರೋಶೇಷದೇವೀಸಮೇತಾ
ಜಿನಾಂಘ್ರ್ಯೋಃ ಪ್ರಣಾಮಂ ಚಕಾರಾರ್ಚಯಂತೀ ।
ಸ್ವವಕ್ತ್ರೋರುಪದ್ಮೈಃ ಸ್ವನೇತ್ರೋತ್ಪಲೈಶ್ಚ
ಪ್ರಸನ್ನೈಶ್ಚ [೨]ಭಾವಪ್ರಸೂನೈರನೂನೈಃ ॥ ೧೦೧ ॥

ಸಮಸ್ತವಾದ ಅಪ್ಸರಸ್ತ್ರೀಯರೊಡನೆಯೂ ಇತರ ದೇವಸ್ತ್ರೀಯರೊಡನೆಯೂ ಯುಕ್ತಳಾದ ಶಚೀದೇವಿಯು ತನ್ನ ಮುಖವೆಂಬ ತಾವರೆಗಳಿಂದಲೂ ಕಣ್ಣುಗಳೆಂಬ ಕನ್ನೈದಿಲೆಯ ಪುಷ್ಪಗಳಿಂದಲೂ ಸಂಪೂರ್ಣವೂ ನಿರ್ಮಲವೂ ಆದ ಪರಿಣಾಮಗಳೆಂಬ ಪುಷ್ಪಗಳಿಂದಲೂ ಪೂಜಿಸುವವಳಾಗಿ ಜಿನೇಶ್ವರನ ಪಾದಗಳಿಗೆ ನಮಸ್ಕಾರ ಮಾಡಿದಳು.

ಜಿನಸ್ಯಾಂಘ್ರಿಪದ್ಮೌ ನಖಾಂ[೩]ಶುಪ್ರತಾನೈಃ
ಸುರಾನಾಸ್ಪೃಶಂತೌ ಸಮೇತ್ಯಾಧಿಮೂರ್ಧ್ವಮ್ ।
ಸ್ರಜಾಮ್ಲಾನಮೂರ್ತ್ಯಾ [೪]ಸ್ವಶೇಷಾಂ ಪವಿತ್ರಾಂ
ಶಿರಸ್ಯಾ[೫]ರ್ಪಿಪೇತಾಮಿವಾನುಗ್ರಹೀತುಮ್ ॥ ೧೦೨ ॥

ಉಗುರುಗಳ ಕಿರಣಸಮೂಹಗಳಿಂದ ದೇವತೆಗಳ ಮಸ್ತಕಗಳನ್ನು ಹೊಂದಿ ಅವರನ್ನು ಸ್ಪರ್ಶಿಸುತ್ತಿರುವ ಜಿನೇಶ್ವರನ ಪಾದಕಮಲಗಳು ದೇವತೆಗಳನ್ನು ಅನುಗ್ರಹಿಸುವುದಕ್ಕೋಸ್ಕರ ಬಾಡದಿರುವ ಪುಷ್ಪಮಾಲಿಕೆಯಿಂದ ತಮ್ಮಲ್ಲಿರುವ ಪವಿತ್ರವಾದ ಪ್ರಸಾದ—ಸಿದ್ಧಶೇಷವನ್ನು ಮಸ್ತಕದಲ್ಲಿ ಸಮರ್ಪಿಸಿದುವೋ ಎಂಬಂತಿದ್ದುವು. ಉಗುರುಗಳ ಕಿರಣಸಮೂಹವು ಮಸ್ತಕದಲ್ಲಿ ಪುಷ್ಪಮಾಲಿಕೆಯಂತೆ ಶೋಭಿಸುತ್ತಿದ್ದಿತೆಂದು ಭಾವವು.

೧ ಇವ. ೨ ಪರಿಣಾಮಕುಸುಮೈಃ. ೩ ಅಂಶುಪ್ರಸ್ತಾರೈಃ. ೪ ನಿಜಸಿದ್ಧಶೇಷಾಂ. ೫ ಅರ್ಪಿತವಂತೌ.

**ಜಿನೇಂದ್ರಾಂಘ್ರಿಭಾಸಾ ಪವಿತ್ರೀಕೃತಂ ತೇ**
**[1]ಸ್ವಮೂಹುಃ ಸುರೇಂದ್ರಾಃ ಪ್ರಣಮ್ಯಾತಿಭಕ್ತ್ಯಾ ।**
**ನಖಾಂಶುಪ್ರತಾನಾಂಬುಲಬ್ಧಾಭಿಷೇಕಂ**
**ಸಮುತ್ತುಂಗಮತ್ಯುತ್ತಮಂ ಚೋತ್ತಮಾಂಗಮ್ ॥ ೧೦೩ ॥**

ಆ ದೇವೇಂದ್ರರು ಬಹಳ ಭಕ್ತಿಯಿಂದ ನಮಸ್ಕರಿಸಿ ಜಿನೇಶ್ವರನ ಪಾದಗಳ ಕಾಂತಿಯಿಂದ ಪವಿತ್ರಮಾಡಲ್ಪಟ್ಟುದೂ ಉಗುರುಗಳ ಕಿರಣಸಮೂಹವೆಂಬ ಜಲದಿಂದ ಅಭಿಷೇಕವನ್ನು ಹೊಂದುವುದೂ ಉನ್ನತವೂ ಉತ್ತಮವೂ ಆದ ತಮ್ಮ ಮಸ್ತಕವನ್ನು ಧರಿಸಿದರು. ದೇವೇಂದ್ರರ ಮಸ್ತಕಗಳು ಜಿನೇಶ್ವರನನ್ನು ನಮಸ್ಕರಿಸಿ ಪವಿತ್ರವಾದುವೆಂದು ತಾತ್ಪರ್ಯವು.

**ನಖಾಂಶೂತ್ಕರವ್ಯಾಜಮವ್ಯಾಜಶೋಭಂ**
**[2]ಪುಲೋಮಾತ್ಮಜಾ ಸಾಪ್ಸರಾ ಭಕ್ತಿನಮ್ರಾ ।**
**ಸ್ತನೋಪಾಂತಲಗ್ನಂ [3]ಸಮೂಹೇಂಶುಕಂ ತ-**
**ತ್ಸಹಾಸಾಯಮಾನಂ ಲಸನ್ಮುಕ್ತಿಲಕ್ಷ್ಮ್ಯಾಃ ॥ ೧೦೪ ॥**

ಅಪ್ಸರಸ್ತ್ರೀಯರೊಡನೆ ಸೇರಿ ಭಕ್ತಿಯಿಂದ ನಮ್ರಳಾದ ಶಚೀದೇವಿಯು ಜಿನೇಶ್ವರನ ಉಗುರುಗಳ ಕಿರಣಸಮೂಹದ ನೆಪವುಳ್ಳುದೂ ಸ್ವಭಾವದಿಂದ ಸುಂದರವೂ ಕುಚಗಳ ಸಮೀಪಪ್ರದೇಶದಲ್ಲಿ ಸಂಬಂಧಿಸಿರುವುದೂ ಮೋಕ್ಷಲಕ್ಷ್ಮಿಯ ಪ್ರಕಾಶಮಾನವಾದ ನಗೆಯಂತಿರುವುದೂ ಆದ ಮುಸುಕಿನ ವಸ್ತ್ರವನ್ನು ಧರಿಸಿದ್ದಳು.

**ಪ್ರಣಾಮಕ್ಷಣೇ ತೇ ಸುರೇಂದ್ರಾ ವಿರೇಜುಃ**
**ಸ್ವದೇವೀಸಮೇತಾ ಜ್ವಲದ್ಭೂಷಣಾಂಗಾಃ ।**
**ಮಹಾಕಲ್ಪವೃಕ್ಷಾಃ ಸಮಂ [4]ಕಲ್ಪವಲ್ಲೀ-**
**ಸಮಿತ್ಯೇವ ಭಕ್ತ್ಯಾ ಜಿನಂ ಸೇವಮಾನಾಃ ॥ ೧೦೫ ॥**

ತಮ್ಮ ದೇವೀಸಮೇತರೂ ಶರೀರದಲ್ಲಿ ಪ್ರಕಾಶಮಾನವಾದ ಆಭರಣಗಳುಳ್ಳವರೂ ಆದ ಆ ದೇವೇಂದ್ರರು ನಮಸ್ಕಾರಮಾಡುವಕಾಲದಲ್ಲಿ, ಕಲ್ಪಲತೆಗಳ ಸಮೂಹದೊಡನೆ ಭಕ್ತಿಯಿಂದ ಜಿನೇಶ್ವರನನ್ನು ಸೇವೆಮಾಡುವ ದೊಡ್ಡ ಕಲ್ಪವೃಕ್ಷಗಳಂತೆ, ಶೋಭಿಸುತ್ತಿದ್ದರು.

**ಅಥೋತ್ಥಾಯ ತುಷ್ಟ್ಯಾ ಸುರೇಂದ್ರಾಃ ಸ್ವಹಸ್ತೈ-**
**ರ್ಜಿನಸ್ಯಾಂಘ್ರಿಪೂಜಾಂ ಪ್ರಚಕ್ರುಃ ಪ್ರತೀತಾಃ ।**
**ಸಗಂಧೈಃ ಸಮಾಲ್ಯೈಃ ಸಧೂಪೈಃ ಸದೀಪೈಃ**
**ಸದಿವ್ಯಾಕ್ಷತೈಃ [5]ಪ್ರಾಜ್ಯಪೀಯೂಷಪಿಂಡೈಃ ॥ ೧೦೬ ॥**

ತರುವಾಯ ಪ್ರಸಿದ್ಧರಾದ ದೇವೇಂದ್ರರು ಎದ್ದು ತಮ್ಮ ಹಸ್ತಗಳಿಂದ ಗಂಧ ಪುಷ್ಪಮಾಲಿಕೆ ಧೂಪ ದೀಪ ಶ್ರೇಷ್ಠವಾದ ಅಕ್ಷತೆ ಇವುಗಳಿಂದೊಡಗೂಡಿದ ಅನೇಕ ಅಮೃತಪಿಂಡ(ನೈವೇದ್ಯ)ಗಳಿಂದ ಜಿನೇಶ್ವರನ ಪಾದಪೂಜೆಯನ್ನು ಸಂತೋಷದಿಂದ ಮಾಡಿದರು.

**[6]ಪುರೋರಂಗವಲ್ಯಾ [7]ತತೇ ಭೂಮಿಭಾಗೇ**
**ಸುರೇಂದ್ರೋಪನೀತಾ ಬಭೌ ಸಾ [8]ಸಪರ್ಯಾ ।**
**ಶುಚಿದ್ರವ್ಯಸಂಪತ್ಸಮಸ್ತೇವ ಭರ್ತುಃ**
**[9]ಪದೋಪಾಸ್ತಿಮಿಚ್ಛುಃ ಶ್ರಿತಾ ತಚ್ಛಲೇನ ॥ ೧೦೭ ॥**

ಜಿನೇಶ್ವರನ ಮುಂಭಾಗದಲ್ಲಿ ರಂಗವಲ್ಲಿಯಿಂದ ವಿಸ್ತೃತವಾದ ಭೂಮಿಪ್ರದೇಶದಲ್ಲಿ ದೇವೇಂದ್ರನಿಂದ ಮಾಡಲ್ಪಟ್ಟ ಆ ಪೂಜೆಯು, ಭಗವಂತನ ಪಾದಪೂಜೆಯನ್ನು ಮಾಡಲಿಚ್ಛಿಸುವುದೂ ಪರಿಶುದ್ಧವೂ ಆದ ಸಮಸ್ತದ್ರವ್ಯಗಳ ಸಂಪತ್ತು ಆ ಪೂಜೆಯ ನೆವದಿಂದ ಸ್ವಾಮಿಯ ಮುಂಭಾಗವನ್ನು ಹೊಂದಿದೆಯೋ ಎಂಬಂತೆ, ಶೋಭಿಸುತ್ತಿದ್ದಿತು.

೧ ಆತ್ಮೀಯಂ. ೨ ಪುಲೋಮಸ್ಯ ಪುತ್ರೀ ಶಚೀ. ೩ ವಹತಿ ಸ್ಮ. ೪ ಕಲ್ಪಲತಾಸಮೂಹೇನ. ೫ ಭೂರಿ. ೬ ಜಿನಸ್ಯ ಪುರತಃ. ೭ ವಿಸ್ತೃತೇ. ೮ ಪೂಜಾ. ೯ ಪಾದಪೂಜಾಂ.

**ಶಚೀ ರತ್ನಚೂರ್ಣೈ[1]ರ್ಬಲಿಂ ಭರ್ತುರಗ್ರೇ**
**[2]ತತಾನೋನ್ಮಯೂಖಪ್ರರೋಹೈರ್ವಿಚಿತ್ರಾಮ್ ।**
**ಮೃದುಸ್ನಿಗ್ಧ[3]ಸೂಕ್ಷ್ಮೈರನೇಕಪ್ರಕಾರೈಃ**
**[4]ಸುರೇಂದ್ರಾಯುಧಾನಾಮಿವ ಶ್ಲಕ್ಷ್ಣಚೂರ್ಣೈಃ ॥ ೧೦೮ ॥**

ಜಿನೇಶ್ವರನ ಮುಂಭಾಗದಲ್ಲಿ ಶಚೀದೇವಿಯು ಮೇಲಕ್ಕೇಳುತ್ತಿರುವ ಅಂಕುರಗಳಂತಿರುವ ಕಿರಣಗಳುಳ್ಳುದೂ ಕೋಮಲವೂ ಜಿಗಟೂ ಸೂಕ್ಷ್ಮವೂ ಅನೇಕ ಪ್ರಕಾರವೂ ಇಂದ್ರಧನುಸ್ಸುಗಳ ಪ್ರಕಾಶಮಾನವಾದ ಚೂರ್ಣಗಳಂತಿರುವುದೂ ಆದ ರತ್ನಚೂರ್ಣಗಳಿಂದ ರಂಗವಲ್ಲಿಯನ್ನು ವಿಸ್ತರಿಸಿದಳು.

**ತತೋ ನೀರಧಾರಾಂ ಶುಚಿಂ [5]ಸ್ವಾನುಕಾರಾಂ**
**ಲಸದ್ರತ್ನಭೃಂಗಾರನಾಲಸ್ರುತಾಂ ತಾಮ್ ।**
**ನಿಜಾಂ ಸ್ವಾಂತವೃತ್ತಿಂ ಪ್ರಸನ್ನಾಮಿವಾಚ್ಛಾಂ**
**ಜಿನೋ[6]ಪಾಂಘ್ರಿಸಂಪಾತಯಾಮಾಸ ಭಕ್ತ್ಯಾ ॥ ೧೦೯ ॥**

ತರುವಾಯ ತನ್ನಂತೆ ನಿರ್ಮಲವೂ ಪ್ರಕಾಶಮಾನವಾದ ರತ್ನದ ಗಿಂಡಿಯ ನಾಲದಿಂದ ಸ್ರವಿಸಲ್ಪಟ್ಟುದೂ ಆದ ಆ ಜಲಧಾರೆಯನ್ನು, ಪ್ರಸನ್ನವೂ ನಿರ್ಮಲವೂ ಆದ ತನ್ನ ಮನೋವ್ಯಾಪಾರವನ್ನೋಪಾದಿಯಲ್ಲಿ, ಭಕ್ತಿಯಿಂದ ಜಿನೇಶ್ವರನ ಪಾದ ಸಮೀಪದಲ್ಲಿ ಬಿಟ್ಟಳು.

**[7]ಸ್ವರುದ್ಭೂತಗಂಧೈಃ ಸುಗಂಧೀಕೃತಾಶೈ-**
**ರ್ಭ್ರಮದ್ಭೃಂಗಮಾಲಾಕೃತಾರಾವಹೃದ್ಯೈಃ ।**
**ಜಿನಾಂಘ್ರೀ ಸ್ಮರಂತೀ ವಿಭೋಃ ಪಾದಪೀಠಂ**
**[8]ಸಮಾನರ್ಚಭಕ್ತ್ಯಾ ತದಾ ಶಕ್ರಪತ್ನೀ ॥ ೧೧೦ ॥**

ಆಗ ಜಿನೇಶ್ವರನ ಪಾದಗಳನ್ನು ಸ್ಮರಿಸುತ್ತಿರುವ ಶಚೀದೇವಿಯು ದಿಕ್ಕುಗಳನ್ನು ಸುಗಂಧಪಡಿಸಿರುವುದೂ ಸುತ್ತುತ್ತಿರುವ ಭ್ರಮರಗಳ ಸಮೂಹದಿಂದ ಮಾಡಲ್ಪಟ್ಟ ಶಬ್ದದಿಂದ ಮನೋಹರವೂ ಸ್ವರ್ಗದಲ್ಲುಂಟಾದುದೂ ಆದ ಗಂಧಗಳಿಂದ ಸ್ವಾಮಿಯ ಪಾದಪೀಠವನ್ನು ಭಕ್ತಿಯಿಂದ ಪೂಜಿಸಿದಳು.

**ವ್ಯಧಾನ್ಮೌಕ್ತಿಕೌಘೈರ್ವಿಭೋ[9]ಸ್ತಂಡುಲೇಜ್ಯಾಂ**
**ಸ್ವಚಿತ್ತಪ್ರಸಾದೈರಿವ ಸ್ವಚ್ಛಭಾಭಿಃ ।**
**ತಥಾಮ್ಲಾನಮಂದಾರಮಾಲಾಶತೈಶ್ಚ**
**ಪ್ರಭೋಃ ಪಾದಪೂಜಾಮಕಾರ್ಷೀತ್ಪ್ರಹರ್ಷಾತ್ ॥ ೧೧೧ ॥**

ತನ್ನ ಮನಸ್ಸಿನ ಪ್ರಸನ್ನತೆಗಳಂತಿರುವುವೂ ನಿರ್ಮಲವಾದ ಕಾಂತಿಯುಳ್ಳುವೂ ಆದ ಮುತ್ತುಗಳ ಸಮೂಹಗಳಿಂದ ಸ್ವಾಮಿಗೆ ಅಕ್ಷತಪುಂಜಗಳ ಪೂಜೆಯನ್ನು ಮಾಡಿದಳು. ಹಾಗೆಯೇ ಬಾಡದಿರುವ ಅನೇಕ ಮಂದಾರಪುಷ್ಪಲತೆಗಳಿಂದ ಸ್ವಾಮಿಯ ಪಾದಪೂಜೆಯನ್ನು ಸಂತೋಷದಿಂದ ಮಾಡಿದಳು.

**ತತೋ ರತ್ನದೀಪೈರ್ಜಿನಾಂಗದ್ಯುತೀನಾಂ**
**ಪ್ರಸರ್ಪೇಣ [10]ಮಂದೀಕೃತಾತ್ಮಪ್ರಕಾಶೈಃ ।**
**ಜಿನಾರ್ಕಂ ಶಚೀ ಪ್ರಾರ್ಚಚ[11]ದ್ಭಕ್ತಿನಿಘ್ನಾ**
**ನ ಭಕ್ತಾ ಹಿ ಯುಕ್ತಂ ವಿದಂತ್ಯಪ್ಯಯುಕ್ತಮ್ ॥ ೧೧೨ ॥**

ತರುವಾಯ ಭಕ್ತಿಪರವಶಳಾದ ಶಚೀದೇವಿಯು ಜಿನೇಶ್ವರನ ಶರೀರಕಾಂತಿಗಳ ವ್ಯಾಪಕತೆಯಿಂದ ಕಡಿಮೆ ಮಾಡಲ್ಪಟ್ಟ ತಮ್ಮ ಪ್ರಕಾಶಗಳುಳ್ಳ ರತ್ನದೀಪಗಳಿಂದ ಜಿನೇಶ್ವರನೆಂಬ ಸೂರ್ಯನನ್ನು ಪೂಜಿಸಿದಳು. ಭಕ್ತರು ಯುಕ್ತಾಯುಕ್ತವನ್ನು ತಿಳಿಯುವುದಿಲ್ಲವಷ್ಟೆ ? ಜಿನೇಶ್ವರನ ದೇಹಕಾಂತಿಯಿಂದ ರತ್ನದೀಪದ ಕಾಂತಿಯು ಮಂದವಾಗಿದ್ದಿತೆಂದು ಭಾವವು.

೧ ರಂಗಬಲಿಂ. ೨ ವಿಸ್ತಾರಿತವತೀ. ೩ ಚಿತ್ರೈರಿತ್ಯಪಿ ಪಾಠಃ. ೪ ಶಕ್ರಧನುಷಾಂ. ೫ ಶಚ್ಯನುಕಾರಾಂ. ೬ ಅಂಘ್ರಿಸಮೀಪೇ. ೭ ಸ್ವರ್ಗಜಾತಗಂಧೈಃ. ೮ ಆರ್ಚಯತಿಸ್ಮ. ೯ ಅಕ್ಷತಪುಂಜಪೂಜಾಂ. ೧೦ ಅಲ್ಪೀಕೃತಾಃ. ೧೧ ಭಕ್ತ್ಯಧೀನಾ.

[೧]ದದೇ ಧೂಪಮಿದ್ಧಂ ಚ ಪೀಯೂಷಪಿಂಡಂ
[೨]ಮಹಾಸ್ಥಾಲಸಂಸ್ಥಂ ಜ್ವಲದ್ದೀಪದೀಪ್ರಮ್ ।
[೩]ಸತಾರಂ ಶಶಾಂಕಂ ಸಮಾಶ್ಲಿಷ್ಟರಾಹುಂ
ಜಿನಾಂಘ್ರ್ಯಬ್ಜಯೋರ್ವಾ ಸಮೀಪಂ [೪]ಪ್ರಪನ್ನಮ್ ॥ ೧೧೩ ॥

ನಕ್ಷತ್ರಗಳಿಂದ ಯುಕ್ತನೂ ರಾಹುವಿನಿಂದ ಹಿಡಿಯಲ್ಪಟ್ಟವನೂ ಜಿನೇಶ್ವರನ ಪಾದಕಮಲಗಳ ಸಮೀಪವನ್ನು ಹೊಂದಿದವನೂ ಆದ ಚಂದ್ರನನ್ನೋಪಾದಿಯಲ್ಲಿ ಪ್ರಕಾಶಮಾನವಾದ ಧೂಪವನ್ನೂ ದೊಡ್ಡತಟ್ಟೆಯಲ್ಲಿರುವ ಅಮೃತದುಂಡೆ (ಚರು) ಯನ್ನೂ ಜ್ವಲಿಸುತ್ತಿರುವ ದೀಪವನ್ನೂ ಅರ್ಚಿಸಿದಳು.

ಫಲೈರಪ್ಯನಲ್ಪೈಸ್ತತಾಮೋದಹೃದ್ಯೈ-
ರ್ಧ್ವನದ್ಭೃಂಗಯೂಥೈರುಪಾಸೇವ್ಯಮಾನೈಃ ।
ಜಿನಂ ಗಾತುಕಾಮೈರಿವಾತಿಪ್ರಮೋದಾ-
[೫]ತ್ಫಲಾಯಾರ್ಚಯಾಮಾಸ ಸುತ್ರಾಮಜಾಯಾ ॥ ೧೧೪ ॥

ವಿಸ್ತರಿಸಲ್ಪಟ್ಟ ಪರಿಮಳಗಳಿಂದ ಮನೋಹರವೂ ಸಮೀಪದಲ್ಲಿ ಸೇವೆಮಾಡುತ್ತಿರುವುವೂ ಧ್ವನಿಮಾಡುತ್ತಿರುವುವೂ ಆದ ಭ್ರಮರಗಳ ಸಮೂಹಗಳುಳ್ಳುವೂ, ಆದುದರಿಂದಲೇ ಜಿನೇಶ್ವರನನ್ನು ಸ್ತೋತ್ರಮಾಡುವುದಕ್ಕೋಸ್ಕರ ಇಚ್ಛಿಸುತ್ತವೆಯೋ ಎಂಬಂತಿರುವುವೂ ಆದ ಅನೇಕ ಫಲಗಳಿಂದ ಶಚೀದೇವಿಯು ಮೋಕ್ಷವೆಂಬ ಫಲವನ್ನು ಪಡೆಯುವುದಕ್ಕೋಸ್ಕರ ಸಂತೋಷದಿಂದ ಅರ್ಚಿಸಿದಳು.

ಇತೀತ್ಥಂ ಸ್ವಭಕ್ತ್ಯಾ ಸುರೈರರ್ಚಿತೋಽರ್ಹ-
ನ್ನಿಮೋಭಿಸ್ತು ಕೃತ್ಯಂ ಕೃತಾರ್ಥಸ್ಯ ಭರ್ತುಃ ।
ವಿರಾಗೋ ನ ತುಷ್ಯತ್ಯಪಿ [೬]ದ್ವೇಷ್ಟಿ ವಾಸೌ
ಫಲೈಶ್ಚ ಸ್ವಭಕ್ತಾನಹೋ [೭]ಯೋಯುಜೀತಿ ॥ ೧೧೫ ॥

ಈರೀತಿಯಾಗಿ ದೇವತೆಗಳು ತಮ್ಮ ಭಕ್ತಿಯಿಂದ ಜಿನೇಶ್ವರ (ಅರ್ಹಂತ) ನನ್ನು ಪೂಜಿಸಿದರು. ಆದರೆ ಕೃತಕೃತ್ಯನಾದ ಭಗವಂತನಿಗೆ ಈ ಅರ್ಚನೆಗಳಿಂದೇನಾಗಬೇಕಾಗಿದೆ ? ವೀತರಾಗನು ಸಂತೋಷಪಡುವುದೂ ಇಲ್ಲ. ದ್ವೇಷಮಾಡುವುದೂ ಇಲ್ಲ. ಆದರೆ ಭಕ್ತರಿಗೆ ಫಲಗಳನ್ನುಂಟುಮಾಡುವುದಾಶ್ಚರ್ಯವೆಂದು ಭಾವವು. ರಾಗದ್ವೇಷಗಳಿಗೆ ಕಾರಣವಾದ ಕರ್ಮವು ಭಗವಂತನಲ್ಲಿಲ್ಲದಿರುವುದರಿಂದ ರಾಗದ್ವೇಷರಹಿತನೆಂದೂ ಭಕ್ತರು ತಮ್ಮ ಪರಿಶುದ್ಧಪರಿಣಾಮದಿಂದ ಫಲಗಳನ್ನು ಹೊಂದುತ್ತಾರೆಂದೂ ಮುಖ್ಯಾಭಿಪ್ರಾಯವು.

ಅಥೋಚ್ಚೈಃ ಸುರೇಶಾ ಗಿರಾಮೀಶಿತಾರಂ
ಜಿನಂ ಸ್ತೋತುಕಾಮಾಃ ಪ್ರಹೃಷ್ಟಾಂತರಂಗಾಃ ।
[೮]ವಚಸ್ಸೂನಮಾಲಾಮಿಮಾಂ ಚಿತ್ರ[೯]ವರ್ಣಾಂ
ಸಮುಚ್ಚಿಕ್ಷಿಪುರ್ಭಕ್ತಿಹಸ್ತೈರಿತಿ ಸ್ವೈಃ ॥ ೧೧೬ ॥

ಜಿನೇಶ್ವರನ ಪೂಜೆಯನ್ನು ಮಾಡಿದನಂತರದಲ್ಲಿ ಸಂತುಷ್ಟವಾದ ಮನಸ್ಸುಳ್ಳ ದೇವೇಂದ್ರರು ವಚನಗಳಿಗೆ ಅಧಿಪತಿಯಾದ ಜಿನೇಶ್ವರನನ್ನು ಚೆನ್ನಾಗಿ ಸ್ತೋತ್ರಮಾಡಬೇಕೆಂಬ ಇಚ್ಛೆಯುಳ್ಳವರಾಗಿ ಅನೇಕವಿಧವಾದ ಅಕ್ಷರಗಳುಳ್ಳ ಈ ವಚನಗಳೆಂಬ ಪುಷ್ಪಮಾಲಿಕೆಯನ್ನು ತಮ್ಮ ಭಕ್ತಿಗಳೆಂಬ ಕೈಗಳಿಂದ ಮುಂದೆ ಹೇಳುವ ರೀತಿಯಾಗಿ ಅರ್ಚಿಸಿದರು. ದೇವೇಂದ್ರರು ಭಕ್ತಿಯಿಂದ ಸ್ತೋತ್ರಮಾಡಿದರೆಂದು ಭಾವವು.

೧ ದದಾವಿತ್ಯಪಿ ಪಾಠಃ. ೨ ಮಹಾಭಾಜನಸ್ಥಂ. ೩ ತಾರಕಾಸಾಸಂ. ೪ ಪ್ರಾಪ್ತಂ. ೫ ಮೋಕ್ಷಫಲಾಯ. ೬ ದ್ವೇಷಂ ಕರೋತಿ. ೭ ಭೃಶಂ ಯುನಕ್ತಿ, ಯೋಯುಜೀತೀತ್ಯಪಿ ಪಾಠಃ. ೮ ವಾಕ್ಪುಷ್ಪಮಾಲಾಂ. ೯ ಅಕ್ಷರಾಂ.

ಜಿನನಾಥಸಂಸ್ತವಕೃತಾ ಭವತೋ
ವಯಮುದ್ಯತಾಃ ಸ್ಮ ಗುಣರತ್ನನಿಧೇಃ ।
[೧]ವಿಧಿಯೋಽಪಿ ಮಂದವಚಸೋಽಪಿ ನನು
ತ್ವಯಿ ಭಕ್ತಿರೇವ ಫಲತೀಷ್ಟಫಲಮ್ ॥ ೧೧೭ ॥

(ಪ್ರಮಿತಾಕ್ಷರಾ) ''ಎಲೈ ಜಿನೇಶ್ವರನೇ ! ನಾವು ಬುದ್ಧಿಹೀನರಾಗಿದ್ದರೂ ಚೆನ್ನಾಗಿ ಮಾತುತಿಳಿಯದವರಾಗಿದ್ದರೂ ಗುಣಗಳೆಂಬ ರತ್ನಗಳಿಗೆ ನಿಧಿಯಾಗಿರುವ ತಮ್ಮ ಸ್ತೋತ್ರವನ್ನು ಮಾಡುವುದರಲ್ಲಿ ಪ್ರಯತ್ನಪಟ್ಟಿದ್ದೇವೆ. ನಿನ್ನಲ್ಲಿರುವ ಭಕ್ತಿಯು ಇಷ್ಟವಾದ ಫಲವನ್ನು ಕೊಡುತ್ತದೆ. ಅಪಾರವಾದ ಗುಣಗಳನ್ನು ಸ್ತೋತ್ರಮಾಡುವುದಕ್ಕೆ ಅಸಮರ್ಥರಾಗಿದ್ದರೂ ಭಕ್ತಿಯು ಇಷ್ಟಫಲವನ್ನು ಕೊಡುತ್ತದೆಂದು ಭಾವವು.

[೨]ಮತಿಶಕ್ತಿಸಾರಕೃತ[೩]ವಾಗ್ವಿಭವಾ-
ಸ್ತ್ವಯಿ ಭಕ್ತಿಮೇವ ವಯಮಾತನುಮಃ ।
ಅಮೃತಾಂಬುಧೇರ್ಜಲಮಲಂ ನ ಪುಮಾ-
ನ್ನಿಖಿಲಂ [೪]ಪ್ರಪಾತುಮಿತಿ ಕಿಂ ನ ಪಿಬೇತ್ ॥ ೧೧೮ ॥

ವಚನಸಂಪತ್ತುಗಳನ್ನು ನಮ್ಮ ಬುದ್ಧಿಯ ಶಕ್ತಿಗನುಸಾರವಾಗಿ ಪ್ರಯೋಗಿಸಿರುವ ನಾವು ನಿನ್ನಲ್ಲಿ ಭಕ್ತಿಯನ್ನೇ ವೃದ್ಧಿಪಡಿಸುತ್ತೇವೆ. ಮನುಷ್ಯನು ಅಮೃತಸಮುದ್ರದ ನೀರನ್ನೆಲ್ಲ ಕುಡಿಯುವುದಕ್ಕಸಮರ್ಥನಾಗಿದ್ದಾನೆಂದು ನೀರನ್ನು ಕುಡಿಯುವುದೇ ಇಲ್ಲವೇ ? ನೀರನ್ನೆಲ್ಲ ಕುಡಿಯುವುದಕ್ಕಸಮರ್ಥನಾಗಿದ್ದರೂ ಶಕ್ತ್ಯನುಸಾರವಾಗಿ ಕುಡಿಯುವಂತೆ, ಭಗವಂತನ ಗುಣಗಳನ್ನೆಲ್ಲ ಸ್ತೋತ್ರಮಾಡುವುದಕ್ಕಸಮರ್ಥರಾಗಿದ್ದರೂ ಯಥಾಶಕ್ತಿಯಾಗಿ ಸ್ತೋತ್ರಮಾಡುತ್ತೇವೆಂದು ಭಾವವು.

ಕ್ವ ವಯಂ ಜಡಾಃ ಕ್ವ ಚ ಗುಣಾಂಬುನಿಧಿ-
ಸ್ತವ ದೇವ [೫]ಪಾರರಹಿತಃ ಪರಮಃ ।
ಇತಿ [೬]ಜಾನತೋಽಪಿ ಜಿನ ಸಂಪ್ರತಿ [೭]ನ-
ಸ್ತ್ವಯಿ ಭಕ್ತಿರೇವ ಮುಖರೀಕುರುತೇ ॥ ೧೧೯ ॥

ಎಲೈ ದೇವನೇ ! ಮಂದಬುದ್ಧಿಯುಳ್ಳ ನಾವೆಲ್ಲಿ ? ಅಪಾರವೂ ಶ್ರೇಷ್ಠವೂ ಆದ ನಿನ್ನ ಗುಣಗಳೆಂಬ ಸಮುದ್ರವೆಲ್ಲಿ ? ಎಲೈ ಜಿನೇಶ್ವರನೆ ! ಹೀಗೆ ತಿಳಿಯುವವರಾಗಿದ್ದರೂ ನಮ್ಮನ್ನು ನಿನ್ನಲ್ಲಿರುವ ಭಕ್ತಿಯೇ ಈಗ ಸ್ತೋತ್ರಮಾಡುವಂತೆ ಮಾಡುತ್ತದೆ. ಅಪಾರವಾದ ಗುಣಗಳನ್ನು ಸ್ತೋತ್ರಮಾಡುವುದಕ್ಕಸಮರ್ಥರೆಂದು ತಿಳಿದಿದ್ದರೂ ಭಕ್ತಿಯು ಸ್ತೋತ್ರಮಾಡುವಂತೆ ಪ್ರೇರಿಸುತ್ತದೆಂದರ್ಥವು.

ಗಣಭೃದ್ಭಿರಪ್ಯಗಣಿತಾನನಣೂಂ-
ಸ್ತವ ಸದ್ಗುಣಾನ್ವಯಮಭಿಷ್ಟುಮಹೇ ।
ಕಿಲ ಚಿತ್ರಮೇತದಥವಾ ಪ್ರಭುತಾಂ ತವ
ಸಂಶ್ರಿತಃ ಕಿಮಿವ ನೇಶಿಶಿಷುಃ ॥ ೧೨೦ ॥

ಗಣಧರಪರಮೇಷ್ಠಿಗಳಿಂದಲೂ ಎಣಿಕೆಮಾಡಲ್ಪಡದಿರುವ ನಿನ್ನ ಅಪಾರವಾದ ಸದ್ಗುಣಗಳನ್ನು ನಾವು ಸ್ತೋತ್ರಮಾಡುತ್ತೇವೆ. ಇದು ಆಶ್ಚರ್ಯ ! ಅಥವಾ ನಿನ್ನ ಪ್ರಭುತ್ವವನ್ನಾಶ್ರಯಿಸಿದ ಮನುಷ್ಯನು ಸಮರ್ಥನಾಗುವುದಕ್ಕೆ ಇಚ್ಛಿಸದಿರುವನೆ ? ಸ್ವಾಮಿಯನ್ನಾಶ್ರಯಿಸಿದ ತಾವೂ ಸಮರ್ಥರಾಗುತ್ತೇವೆಂದು ತಾತ್ಪರ್ಯವು.

ತದಿಯು[೮]ಮೀಡಿಡಿಷೂನ್ವಿದಧಾತಿ ನ-
ಸ್ತ್ವಯಿ [೯]ನಿರೂಢತರಾ ಜಿನ ನಿಶ್ಚಲಾ ।
ಪ್ರಸೃತಭಕ್ತಿರಪಾರಗುಣೋದಯಾ-
ಸ್ತುತಿಪಥೇದ್ಯ ತತೋ ವಯಮುದ್ಯತಾಃ ॥ ೧೨೧ ॥

೧ ವಿಗತಮತಯಃ. ೨ ಮತಿಶಕ್ತ್ಯನುಸಾರೇಣ. ೩ ವಚನಸಂಪದಃ. ೪ ಪಾನಂ ಕರ್ತುಂ. ೫ ಅಂತರಹಿತಃ. ೬ ಜಾನಂತೀತಿ ಜಾನಂತಃ ತಾನ್. ೭ ಅಸ್ಮಾನ್. ೮ ಈಡಿತುಮಿಚ್ಛೂನ್. ೯ ಅತ್ಯಂತಪ್ರಸಿದ್ಧಾ.

(ದ್ರುತವಿಲಂಬಿತ) ಎಲೈ ಜಿನೇಶ್ವರನೆ ! ನಿನ್ನಲ್ಲಿ ಸ್ಥಿರವಾಗಿರುವುದೂ ನಿಶ್ಚಂಚಲವೂ ಅಪಾರವಾದ ಗುಣಗಳನ್ನುಂಟುಮಾಡುವುದೂ ವಿಸ್ತಾರವೂ ಆದ ಭಕ್ತಿಯು ನಮ್ಮನ್ನು ಸ್ತೋತ್ರಮಾಡುವುದಕ್ಕೆ ಇಚ್ಛೆಯುಳ್ಳವರನ್ನಾಗಿ ಮಾಡುತ್ತದೆ. ಆದುದ ರಿಂದ ಈಗ ನಾವು ಸ್ತೋತ್ರಮಾರ್ಗದಲ್ಲಿ ಪ್ರಯತ್ನಪಟ್ಟಿದ್ದೇವೆ.

**ತ್ವಮಸಿ ವಿಶ್ವದೃಗೀಶ್ವರವಿಶ್ವಸೃಟ್**
**ತ್ವಮಸಿ ವಿಶ್ವಗುಣಾಂಬುಧಿರಕ್ಷಯಃ ।**
**ತ್ವಮಸಿ ದೇವ ಜಗದ್ಧಿತಶಾಸನಃ**
**ಸ್ತುತಿಮತೋನುಗೃಹಾಣ ಜಿನೇಶ ನಃ** ॥ ೧೨೨ ॥

ಎಲೈ ಜಿನೇಶ್ವರನೆ ! ನೀನು ಸಮಸ್ತವನ್ನು ನೋಡುವವನೂ ಸಮಸ್ತಗುಣಗಳಿಗೆ ಸಮುದ್ರದಂತಿರುವವನೂ ನಾಶರಹಿತನೂ ಲೋಕಕ್ಕೆ ಹಿತಕರವಾದ ಉಪದೇಶ ವುಳ್ಳವನೂ ಆಗಿರುತ್ತಿ. ಆದುದರಿಂದ ಎಲೈ ಜಿನೇಶ್ವರನೆ ! ನಮ್ಮ ಸ್ತೋತ್ರವನ್ನು ದಯೆಯಿಟ್ಟು ಸ್ವೀಕರಿಸು.

**ತವ ಜಿನಾರ್ಕವಿಭಾಂತಿ ಗುಣಾಂಶವಃ**
**ಸಕಲಕರ್ಮಕಲಂಕವಿನಿಃಸೃತಾಃ ।**
**ಘನವಿಯೋಗವಿನಿರ್ಮಲಮೂರ್ತಯೋ**
**ದಿನಮಣೇರಿವ ಭಾಸುರ[1]ಭಾನವಃ** ॥ ೧೨೩ ॥

ಎಲೈ ಜಿನಸೂರ್ಯನೆ ! ಸಮಸ್ತಕರ್ಮಗಳೆಂಬ ಕಲಂಕದಿಂದ ಬಿಡಲ್ಪಟ್ಟ ನಿನ್ನ ಗುಣಗಳೆಂಬ ಕಿರಣಗಳು, ಮೇಘದ ವಿಯೋಗದಿಂದ ನಿರ್ಮಲವಾದ ಆಕೃತಿಯುಳ್ಳ ಸೂರ್ಯನ ಪ್ರಕಾಶಮಾನವಾದ ಕಿರಣಗಳಂತೆ ಪ್ರಕಾಶಿಸುತ್ತವೆ.

**ಗುಣಮಣೀಂಸ್ತ್ವಮನಂತತಯಾನ್ವಿತಾನ್**
**ಜಿನ ಸಮುದ್ವಹಸೇತಿವಿನಿರ್ಮಲಾನ್ ।**
**ಜಲಧಿರಾತ್ಮಗಭೀರಜಲಾಶ್ರಿತಾ-**
**ನಿವ ಮಣೀನಮಲಾನನಣುತ್ವಿಷಃ** ॥ ೧೨೪ ॥

ಎಲೈ ಜಿನೇಶ್ವರನೆ ! ಸಮುದ್ರವು ತನ್ನ ಗಂಭೀರ(ಆಳ)ವಾದ ಜಲವನ್ನಾಶ್ರಯಿಸಿ ರುವುವೂ ನಿರ್ಮಲವೂ ಅಧಿಕವಾದ ಕಾಂತಿಯುಳ್ಳುವೂ ಆದ ರತ್ನಗಳನ್ನು ಧರಿಸು ವಂತೆ, ನೀನು ಅತ್ಯಂತ ನಿರ್ಮಲವೂ ಅನಂತವಾಗಿ ಸೇರಿರುವುವೂ ಆದ ಗುಣಗಳೆಂಬ ರತ್ನಗಳನ್ನು ಧರಿಸಿರುತ್ತಿ. ಜಿನೇಶ್ವರನು ಅನಂತಜ್ಞಾನಮೊದಲಾದ ಅನಂತಗುಣಗಳಿಗೆ ಸ್ವಾಮಿಯಾಗಿದ್ದಾನೆಂದು ಭಾವವು.

**ತ್ವಮಿನ ಸಂಸೃತಿವಲ್ಲರಿಕಾಮಿಮಾ-**
**ಮತಿತತಾಮುರುದುಃಖಫಲಪ್ರದಾಮ್ ।**
**ಜನನಮೃತ್ಯುಜರಾಕುಸುಮಾಚಿತಾಂ**
**[2]ಶಮಕರೈರ್ಭಗವ[3]ನ್ನುದಪೀಪಟಃ** ॥ ೧೨೫ ॥

ಎಲೈ ಪ್ರಭುವೆ ! (ಸೂರ್ಯನೆ !) ಭಗವಂತನೆ ! ನೀನು ಅತ್ಯಂತ ವಿಸ್ತೃತವೂ ಅಧಿಕವಾದ ದುಃಖವೆಂಬ ಫಲವನ್ನು ಕೊಡುವುದೂ ಜನ್ಮಜರಾಮರಣಗಳೆಂಬ ಪುಷ್ಪಗಳಿಂದ ವ್ಯಾಪ್ತವೂ ಆದ ಈ ಸಂಸಾರವೆಂಬ ಲತೆಯನ್ನು ಉಪಶಮ ಭಾವಗಳೆಂಬ ಕೈಗಳಿಂದ ಕಿತ್ತುಹಾಕಿದೆ.

**ಜಿನವರ ಮೋಹಮಹಾಪೃತನೇಶಾ-**
**ನ್ನಬಲತರಾಂ[4]ಶ್ಚತುರಸ್ತು ಕಷಾಯಾನ್ ।**
**[5]ನಿಶಿತತಪೋಮಯತೀವ್ರಮಹಾಸಿ**
**[6]ಪ್ರಹತಿಭಿರಾಶು ತರಾಮಜಯಸ್ತ್ವಮ್** ॥ ೧೨೬ ॥

(ತಾಮರಸ) ಎಲೈ ಜಿನೇಶ್ವರನೆ ! ನೀನು ಮೋಹವೆಂಬ ದೊಡ್ಡಸೈನ್ಯಕ್ಕಧಿಪತಿ ಗಳೂ ಅತ್ಯಂತ ಬಲಶಾಲಿಗಳೂ ಆದ ಕ್ರೋಧಮಾನಮಾಯಾಲೋಭಗಳೆಂಬ ನಾಲ್ಕು ಕಷಾಯಗಳನ್ನು ತೀಕ್ಷ್ಣವಾದ ತಪಸ್ಸೆಂಬ ತೀವ್ರವಾದ ದೊಡ್ಡಖಡ್ಗದ ಪೆಟ್ಟು ಗಳಿಂದ ಶೀಘ್ರವಾಗಿ ಜಯಿಸಿದೆ.

**ಮನಸಿಜಶತ್ರುಮಜಯ್ಯಮಲಕ್ಷ್ಯಂ**
**ವಿರತಿಮಯೀ [1]ಶಿತಹೇತಿತತಿಸ್ತೇ ।**
**[2]ಸಮರಭರೇ ವಿನಿಪಾತಯತಿ ಸ್ಮ**
**ತ್ವಮಸಿ ತತೋ ಭುವನೈಕ[3]ಗರಿಷ್ಠಃ** ॥ ೧೨೭ ॥

(ತೋಟಕ) ನಿನ್ನ ಚಾರಿತ್ರರೂಪವಾದ ತೀಕ್ಷ್ಣಾಯುಧಗಳ ಸಮೂಹವು ಜಯಿಸ ಲಶಕ್ಯನೂ ಕಾಣಲಶಕ್ಯನೂ ಆದ ಮನ್ಮಥನೆಂಬ ಶತ್ರುವನ್ನು ಯುದ್ಧಭೂಮಿಯಲ್ಲಿ ಕೆಡವಿದ್ದಿತು. ಆದುದರಿಂದ ನೀನು ಲೋಕಕ್ಕೆಲ್ಲ ಶ್ರೇಷ್ಠನು.

**ಜಿತಮದನಸ್ಯ ತವೇಶ ಮಹತ್ತ್ವಂ**
**ವಪುರಿದಮೇವ ಹಿ ಶಾಸ್ತಿ ಮನೋಜ್ಞಮ್ ।**
**ನ ವಿಕೃತಿಭಾಗ್ನ ಕಟಾಕ್ಷನಿರೀಕ್ಷಾ**
**ಪರಮವಿಕಾರಮನಾಭರಣೋದ್ಧಮ್** ॥ ೧೨೮ ॥

ಎಲೈ ಪ್ರಭುವೇ ! ಮನೋಹರವೂ ವಿಕಾರವನ್ನು ಹೊಂದದಿರುವುದೂ ಕಡೆ ಗಣ್ಣುನೋಟವಿಲ್ಲದುದೂ ವಿಕಾರವಲ್ಲದುದೂ (ಸುಂದರವೂ) ಆಭರಣವಿಲ್ಲದೆ ಸುಂದರವೂ ಆದ ಈ ನಿನ್ನ ಶರೀರವೇ ಮನ್ಮಥನನ್ನು ಜಯಿಸಿದ ನಿನ್ನ ಮಹಿಮೆ ಯನ್ನು ಚೆನ್ನಾಗಿ ಹೇಳುತ್ತದೆ.

**[4]ಪ್ರವಿಕುರುತೇ ಹೃದಿ ಯಸ್ಯ ಮನೋಜಃ**
**ಸ [5]ವಿಕುರುತೇ ಸ್ಫುಟ[6]ರಾಗಪರಾಗಃ ।**
**ವಿಕೃತಿರನಂಗಜಿತಸ್ತವ ನಾಭೂ-**
**ದ್ವಿಭವಭವಾನ್ಭುವನೈಕಗುರುಸ್ತತ್** ॥ ೧೨೯ ॥

ಎಲೈ ಭವರಹಿತನೆ ! ಮನ್ಮಥನು ಯಾವನ ಹೃದಯದಲ್ಲಿ ವಿಕಾರವನ್ನುಂಟು ಮಾಡುತ್ತಾನೋ ಅವನು ವ್ಯಕ್ತವಾದ ರಾಗ(ಪ್ರೀತಿ)ವೆಂಬ ಧೂಳಿಯುಳ್ಳವನಾಗಿ ವಿಕಾರವನ್ನು ಹೊಂದುತ್ತಾನೆ. ಮನ್ಮಥನನ್ನು ಜಯಿಸಿದ ನಿನಗೆ ವಿಕಾರವುಂಟಾ ಗಲಿಲ್ಲ. ಆದುದರಿಂದ ನೀನು ಲೋಕಕ್ಕೆ ಮುಖ್ಯಗುರುವು. ಲೋಕಶ್ರೇಷ್ಠ ನೆಂದರ್ಥವು.

**ಸ ಕಿಲ ವಿನೃತ್ಯತಿ ಗಾಯತಿ ವಲ್ಗ-**
**[7]ತ್ಯಪಲಪತಿ ಪ್ರಹಸತ್ಯಪಿ ಮೂಢಃ ।**
**ಮದನವಶೋ ಜಿತಮನ್ಮಥ ತೇ ತು**
**ಪ್ರಶಮಸುಖಂ ವಪುರೇವ [8]ನಿರಾಹ** ॥ ೧೩೦ ॥

ಮನ್ಮಥನಿಗೆ ಪರವಶನಾದ ಮೂಢಾತ್ಮನಾದರೊ ಕುಣಿಯುತ್ತಾನೆ, ಗಾನ ಮಾಡುತ್ತಾನೆ, ಅಲೆದಾಡುತ್ತಾನೆ, ಅಪಶಬ್ದವನ್ನು ಮಾತನಾಡುತ್ತಾನೆ, ಘಟ್ಟಿಯಾಗಿ ನಗುತ್ತಾನೆ. ಮನ್ಮಥನನ್ನು ಜಯಿಸಿದ ಜಿನೇಶ್ವರನೆ ! ನಿನ್ನ ಶಾಂತಿಸುಖವನ್ನು ನಿನ್ನ ಶರೀರವೇ ಹೇಳುತ್ತದೆ.

**ವಿರಹಿತಮಾನಮತ್ಸರ ತವೇದಂ**
**ವಪು[9]ರಪರಾಗಮಸ್ತ[10]ಕಲಿಪಂಕಮ್ ।**
**ತವ ಭುವನೇಶ್ವರತ್ವ[11]ಮುಪರಾಗಂ**
**ಪ್ರಕಟಯತಿ ಸ್ಫುಟಂ[12]ನಿಕೃತಿಹೀನಮ್** ॥ ೧೩೧ ॥

(ನವಮಾಲಿನೀ) ಅಹಂಭಾವವೂ ಮಾತ್ಸರ್ಯವೂ ಇಲ್ಲದಿರುವ ಜಿನೇಶ್ವರನೆ ! ನಿನ್ನ ಈ ನಿರ್ಮಲವೂ ಪಾಪವೆಂಬ ಕೆಸರಿಲ್ಲದುದೂ, ರಾಗರಹಿತವೂ, ಕಪಟ ರಹಿತವೂ ಆದ ಶರೀರವು ನಿನ್ನ ಲೋಕಾಧಿಪತ್ಯವನ್ನು ವ್ಯಕ್ತವಾಗಿ ಪ್ರಕಟಿಸುತ್ತದೆ.

೧ ಕಿರಣಾಃ. ೨ ಉಪಶಮಹಸ್ತೈಃ ಪಕ್ಷೇ ಸೂರ್ಯಕಿರಣೈಃ. ೩ ಉತ್ಪಾಟಯಸಿ ಸ್ಮ. ೪ ಚತುಷ್ಕಾನ್. ೫ ತೀಕ್ಷ್ಣ. ೬ ಪ್ರಭೃತಿಭಿರಿತ್ಯಪಿ ಪಾಠಃ.

೧ ನಿಶಿತಾಯುಧಃ. ೨ ಸಂಗ್ರಾಮಭೂಮೌ. ೩ ಅತಿಶಯೇನ ಗುರುಃ. ೪ ವಿಕಾರಂ ಕರೋತಿ. ೫ ವಿಕಾರಂ ಕರೋತಿ. ೬ ರಾಗಧೂಳಿಃ. ೭ ಅಪಲಾಪಂ ಕರೋತಿ. ೮ ನಿತರಾಮಾಹ. ೯ ನ ವಿದ್ಯತೇ ಪರಾಗೋ ಯಸ್ಯ. ೧೦ ಕರ್ಮ. ೧೧ ಅಪಗತರಾಗಂ. ೧೨ ಕಪಟಹೀನಂ.

ತವ ವಪುರಾಮಿಲತ್ಸಕಲಶೋಭಾ-
ಸಮುದಯಮಸ್ತವಸ್ತ್ರಮಪಿ ರಮ್ಯಮ್ ।
ಅತಿರುಚಿರಸ್ಯ ರತ್ನಮಣಿರಾಶೇ
[೧]ರಪವರಣಂ ಕಿಮಿಷ್ಟಮುರುದೀಪ್ತೇಃ ॥ ೧೩೨ ॥

ಎಲ್ಲಾಕಡೆಯಿಂದಲೂ ಬಂದು ಸೇರುತ್ತಿರುವ ಸಮಸ್ತ ಶೋಭೆಗಳ ಸಮೂಹವಾದ ನಿನ್ನ ಶರೀರವು ವಸ್ತ್ರರಹಿತ(ನಗ್ನ)ವಾಗಿದ್ದರೂ ರಮಣೀಯವಾಗಿದೆ. ಅತ್ಯಂತ ಮನೋಹರವೂ ಕಾಂತಿಯುಳ್ಳದೂ ಆದ ಉತ್ಕೃಷ್ಟರತ್ನಗಳ ರಾಶಿಗೆ ಹೊದಿಕೆಯು ಇಷ್ಟವಾದುದೆ ? ಹೊದಿಕೆಯಿಲ್ಲದಿದ್ದರೇ ರತ್ನಗಳ ರಾಶಿಯು ಶೋಭಿಸುವಂತೆ, ವಸ್ತ್ರವಿಲ್ಲದಿದ್ದರೇ ಭಗವಂತನು ಶೋಭಿಸುತ್ತಾನೆಂದು ಭಾವವು.

[೨]ಸ್ವಿದಿರಹಿತಂ ವಿಹೀನಮಲದೋಷಂ
ಸುರಭಿತರಂ ಸುಲಕ್ಷ್ಮಘಟಿತಂ ತೇ ।
[೩]ಕ್ಷತಜವಿಯುಕ್ತ[೪]ಮಸ್ತತಿಮಿರೌಘಂ
ವ್ಯಪಗತಧಾತು ವಜ್ರ[೫]ಘನಸಂಧಿ ॥ ೧೩೩ ॥

ಸಮಚತುರಸ್ರಮಪ್ರಮಿತವೀರ್ಯಂ
ಪ್ರಿಯಹಿತವಾಗ್ನಿಮೇಷಪರಿಹೀನಮ್ ।
ವಪುರಿದಮಚ್ಛದಿವ್ಯಮಣಿದೀಪ್ರಂ
ತ್ವಮಸಿ ತತೋಧಿದೇವಪದಭಾಗೀ ॥ ೧೩೪ ॥

ನಿನ್ನ ಈ ಶರೀರವು ಬೆವರಿಲ್ಲದಿರುವುದೂ ಮಲವೂ ದೋಷವೂ ಇಲ್ಲದುದೂ ಅತ್ಯಂತ ಪರಿಮಳವೂ ಶ್ರೇಷ್ಠವಾದ ಲಕ್ಷಣಗಳಿಂದ ಕೂಡಿದುದೂ ರಕ್ತದಿಂದ ರಹಿತವೂ ಕತ್ತಲೆಯ ಸಮೂಹವನ್ನು ನಾಶಮಾಡಿದುದೂ ಸಪ್ತಧಾತು(ಮಲ) ರಹಿತವೂ ವಜ್ರದಂತೆ ದೃಢವಾದ ಮೂಳೆಗಳ ಸಂಬಂಧವುಳ್ಳದೂ ಸಮಚತುರಸ್ರಸಂಸ್ಥಾನ(ಸಮಾನಾಕೃತಿ)ವುಳ್ಳದೂ ಅಪಾರವಾದ ಶಕ್ತಿಯುಳ್ಳದೂ ಪ್ರಿಯವೂ ಹಿತವೂ ಆದ ವಚನವುಳ್ಳದೂ ರೆಪ್ಪೆಗಳನ್ನು ಹೊಡೆಯದಿರುವುದೂ ನಿರ್ಮಲವೂ ಶ್ರೇಷ್ಠವೂ ಆದ ರತ್ನದಂತೆ ಪ್ರಕಾಶಮಾನವೂ ಆಗಿದೆ. ಆದುದರಿಂದ ನೀನು ದೇವಾಧಿದೇವಪದವಿಯನ್ನು ಹೊಂದಿದವನಾಗಿರುತ್ತಿ.

ಇದಮತಿಮಾನುಷಂ ತವ ಶರೀರಂ
ಸಕಲವಿಕಾರಮೋಹಮದಹೀನಮ್ ।
ಪ್ರಕಟಯತೀಶ ತೇ ಭುವನಲಂಘಿ
[೬]ಪ್ರಭುತಮ ವೈಭವಂ ಕನಕಕಾಂತಿ ॥ ೧೩೫ ॥

ಎಲೈ ಮಹಾಪ್ರಭುವೆ ! ಮನುಷ್ಯರಿಗಿಲ್ಲದಿರುವುದೂ ಸಮಸ್ತವಿಕಾರಮೋಹಮದಗಳಿಲ್ಲದಿರುವುದೂ ಬಂಗಾರದ ಕಾಂತಿಯಂತೆ ಕಾಂತಿಯುಳ್ಳದೂ ಆದ ಈ ನಿನ್ನ ಶರೀರವು ಲೋಕಾತಿಶಯವಾದ ನಿನ್ನ ವೈಭವವನ್ನು ಪ್ರಕಟಪಡಿಸುತ್ತದೆ.

ಸ್ಪೃಶತಿ ನ ಹಿ ಭವಂತ[೭]ಮಾಗಶ್ಚಯಃ
ಕಿಮು [೮]ದಿನಪ[೯]ಮಭಿದ್ರವೇತ್ತಾಮಸಮ್ ।
[೧೦]ವಿತಿಮಿರ ಸ ಭವಾನ್ [೧೧]ಜಗತ್ಸದನೇ
ಜ್ವಲದುರುಮಹಸಾ ಪ್ರದೀಪಾಯತೇ ॥ ೧೩೬ ॥

(ಪ್ರಮುದಿತವದನಾ) ಪಾಪಗಳ ಸಮೂಹವು ತಮ್ಮನ್ನು ಸ್ಪರ್ಶಮಾಡುವುದಿಲ್ಲ. ಇದು ಯುಕ್ತವಾಗಿದೆ—ಕತ್ತಲೆಯು ಸೂರ್ಯನ ಅಭಿಮುಖವನ್ನು ಹೊಂದುವುದೊ ? ಎಲೈ ಅಜ್ಞಾನಾಂಧಕಾರರಹಿತನೆ ! ನೀನು ಅಧಿಕವಾದ ಕಾಂತಿಯಿಂದ ಲೋಕವೆಂಬ ಮನೆಯಲ್ಲಿ ದೀಪದಂತಿರುತ್ತಿ.

೧ ಆಚ್ಛಾದನಂ. ೨ ಸ್ವೇದರಹಿತಂ. ೩ ರುಧಿರರಹಿತಂ. ೪ ನಿರಾಕೃತಾಂಧಕಾರಸಮೂಹಂ. ೫ ನಿಬಿಡಃ. ೬ ಅತಿಶಯೇನ ಪ್ರಭೋ. ೭ ಅಂಹಃಸಮೂಹಃ. ೮ ರವೇರಭಿಮುಖಂ. ೯ ಗಚ್ಛೇತ್. ೧೦ ಭೋ ವಿಗತಾಜ್ಞಾನಾಂಧಕಾರ. ೧೧ ಜಗತ್ಸಾಧನೇ ಇತ್ಯಪಿ ಪಾಠಃ, ಜಗತ್ಸಂಸಿದ್ಧಾವಿತ್ಯರ್ಥಃ.

ರೈಧಾರಾ ತೇ [೧]ದ್ಯುಸಮವತಾರೇಪ-
ಪ್ಯನ್ನಾಕೇಶಾನಾಂ [೨]ಪದವಿಮಶೇಷಾಂ ರುಧ್ವಾ ।
ಸ್ವರ್ಗಾದಾರಾತ್ಕನಕಮಯೀಂ ವಾ ಸೃಷ್ಟಿಂ
ತನ್ವಾನಾಸೌ ಭುವನಕುಟೀರಸ್ಯಾಂತಃ ॥ ೧೩೭ ॥

ನೀನು ಸ್ವರ್ಗದಿಂದವತರಿಸುವಕಾಲದಲ್ಲಿ ಲೋಕವೆಂಬ ಪರ್ಣಶಾಲೆಯ ಮಧ್ಯಭಾಗವನ್ನು ಸುವರ್ಣಮಯವಾದ ಸೃಷ್ಟಿಯನ್ನೋಪಾದಿಯಲ್ಲಿ ಮಾಡುತ್ತಿರುವ ಈ ಕನಕವೃಷ್ಟಿಯು ದೇವತೆಗಳ ಮಾರ್ಗವನ್ನೆಲ್ಲ ತಡೆದು ಸ್ವರ್ಗದ ಸಮೀಪದಿಂದ ಬಿದ್ದಿತು. ಸ್ವಾಮಿಯ ಗರ್ಭಾವತರಣಕಾಲದಲ್ಲಿ ಆಕಾಶದಿಂದ ರತ್ನವೃಷ್ಟಿಯಾಯಿತೆಂದರ್ಥವು.

ರೈಧಾರೈರಾವತಕರದೀರ್ಘಾ ರೇಜೇ ರೇ [೩]ಜೇ-
ತಾರಂ ಭಜತ ಜನಾ ಇತ್ಯೇವಮ್ ।
ಮೂರ್ತೀಭೂತಾ ತವ ಜಿನಲಕ್ಷ್ಮೀರ್ಲೋಕೇ
ಸಂಬೋಧಂ ವಾ ಸಪದಿ ಸಮಾತನ್ವಾನಾ ॥ ೧೩೮ ॥

ಭಗವಂತನೆ ! ಐರಾವತಗಜದ ಸೊಂಡಲಿನಂತೆ ದೀರ್ಘವಾದ ಸುವರ್ಣಧಾರೆಯು "ಎಲೈ ಜನರೆ ! ಜಯಶೀಲನಾದ ಭಗವಂತನನ್ನು ಶೀಘ್ರವಾಗಿ ಭಜಿಸಿರಿ" ಎಂದು ಲೋಕದಲ್ಲಿ ಬೋಧಿಸುವುದೂ ಆಕಾರವನ್ನು ಹೊಂದಿರುವುದೂ ಆದ ನಿನ್ನ ಲಕ್ಷ್ಮಿ(ಸಂಪತ್ತು)ಯೋ ಎಂಬಂತೆ, ಶೋಭಿಸುತ್ತಿದೆ.

ತ್ವತ್ಸಂಭೂತೌ ಸುರಕರಮುಕ್ತಾ ವ್ಯೋಮ್ನಿ
ಪೌಷ್ಪೀ ವೃಷ್ಟಿಃ ಸುರಭಿತರಾ ಸಂರೇಜೇ ।
ಮತ್ತಾಲೀನಾಂ ಕಲರುತಮಾತನ್ವಾನಾ
ನಾಕಸ್ತ್ರೀಣಾಂ ನಯನತತಿರ್ವಾಯಾಂತೀ ॥ ೧೩೯ ॥

ನಿನ್ನ ಜನ್ಮಕಾಲದಲ್ಲಿ ಆಕಾಶದಲ್ಲಿ ದೇವತೆಗಳ ಕೈಗಳಿಂದ ಬಿಡಲ್ಪಟ್ಟುದೂ ಅತ್ಯಂತ ಸುಗಂಧವೂ ಮದಿಸಿದ ಭ್ರಮರಗಳ ಮನೋಹರವಾದ ಶಬ್ದವನ್ನುಂಟುಮಾಡುವುದೂ ಆದ ಪುಷ್ಪವೃಷ್ಟಿಯು, ಸ್ವರ್ಗದ ಸ್ತ್ರೀಯರ ನೇತ್ರಗಳ ಸಮೂಹವು ಬರುತ್ತಿದೆಯೋ ಎಂಬಂತೆ, ಶೋಭಿಸುತ್ತಿದ್ದಿತು.

ಮೇರೋಃ ಶೃಂಗೇ ಸಮಜನಿ ದುಗ್ಧಾಂಭೋಧೇಃ
ಸ್ವಚ್ಛಾಂಭೋಭಿಃ ಕನಕಘಟೈರ್ಗಂಭೀರೈಃ ।
ಮಾಹಾತ್ಮ್ಯಂ ತೇ ಜಗತಿ ವಿತನ್ವ-
ನ್ಸಾವಿ [೪]ಸ್ವರ್ಧೌರೇಯೈರ್ಗುರುರಭಿಷೇಕಃ ಪೂತಃ ॥ ೧೪೦ ॥

ಸ್ವರ್ಗಾಧಿಪತಿಗಳಾದ ದೇವೇಂದ್ರರು ಮಹಾಮೇರುಪರ್ವತದ ಶಿಖರದಲ್ಲಿ ಕ್ಷೀರಸಮುದ್ರದ ಸ್ವಚ್ಛವಾದ ನೀರುಳ್ಳವೂ ಆಳವೂ ಆದ ಬಂಗಾರದ ಕುಂಭಗಳಿಂದ ಮುಂದೆ ಉಂಟಾಗುವ ನಿನ್ನ ಮಹಿಮೆಯನ್ನು ಲೋಕದಲ್ಲಿ ವಿಸ್ತರಿಸುವುದೂ ಪವಿತ್ರವೂ ಆದ ಮಹಾಭಿಷೇಕವನ್ನು ಮಾಡಿದರು.

ತ್ವಾಂ [೫]ನಿಷ್ಕ್ರಾಂತೌ ಮಣಿಮಯಯಾನಾರೂಢಂ
ವೋಢುಂ [೬]ಸಜ್ಜಾ ವಯಮಿತಿ ನೈತಚ್ಚಿತ್ರಮ್ ।
ಆನಿರ್ವಾಣಾನ್ನಿಯತಮಮೀ ಗೀರ್ವಾಣಾಃ
[೭]ಕಿಂಕುರ್ವಾಣಾ ನನು ಜಿನ ಕಲ್ಯಾಣೇ ತೇ ॥ ೧೪೧ ॥

ಎಲೈ ಜಿನೇಶ್ವರನೆ ! ದೀಕ್ಷಾಕಲ್ಯಾಣಕಾಲದಲ್ಲಿ ರತ್ನಮಯವಾದ ಪಾಲಕಿಯನ್ನು ಹತ್ತಿದ ನಿನ್ನನ್ನು ಹೊರುವುದಕ್ಕೋಸ್ಕರ ನಾವು ಸನ್ನದ್ಧರಾದೆವೆಂಬುದಾಶ್ಚರ್ಯವಲ್ಲ. ಏತಕ್ಕೆಂದರೆ–ಈ ದೇವತೆಗಳು ನಿರ್ವಾಣಕಲ್ಯಾಣದವರೆಗೂ ನಿನ್ನ ಪ್ರತಿಯೊಂದು ಕಲ್ಯಾಣದಲ್ಲೂ ನಿಯತವಾಗಿ ಕಿಂಕರರಾಗಿರುತ್ತಾರಲ್ಲ ! ಇವರೇ ಧನ್ಯರೆಂದು ಭಾವವು.

೧ ಸ್ವರ್ಗಾವತರಣೇ. ೨ ಖಾಂಗಣಂ. ೩ ಜಯಶೀಲಂ. ೪ ಸ್ವರ್ಗಲೋಕಮುಖ್ಯೈಃ. ೫ ಪರಿನಿಷ್ಕ್ರಮಣೇ. ೬ ಸನ್ನದ್ಧಾಃ. ೭ ಕಿಂಕರಾಃ.

ತ್ವಂ ಧಾತಾಸಿ ತ್ರಿಭುವನಭರ್ತಾ[೧]ದ್ಯತ್ವೇ
ಕೈವಲ್ಯಾರ್ಕೇ ಸ್ಫುಟಮುದಿತೇಽಸ್ಮಿನ್ದೀಪ್ರೇ ।
ತಸ್ಮಾದ್ದೇವಂ ಜನನಜರಾತಂಕಾರಿಂ ತ್ವಾಂ
[೨]ನಸ್ನಮ್ನೋ ಗುಣನಿಧಿಮಗ್ರ್ಯಂ ಲೋಕೇ ॥ ೧೪೨ ॥

ಎಲೈ ಜಿನೇಶ್ವರನೆ! ಈಗ ಪ್ರಕಾಶಮಾನವಾದ ಈ ಕೇವಲಜ್ಞಾನವೆಂಬ ಸೂರ್ಯನು ಸ್ಫುಟವಾಗಿ ಉದಯಿಸುತ್ತಿರಲು ನೀನು ಬ್ರಹ್ಮನೂ ಮೂರುಲೋಕಕ್ಕೆ ಪ್ರಭುವೂ ಆಗಿರುತ್ತಿ. ಆದುದರಿಂದ ಜನ್ಮಜರಾರೋಗಗಳಿಗೆ ಶತ್ರುವೂ ಗುಣಗಳಿಗೆ ನಿಧಿಯೂ ಲೋಕದಲ್ಲಿ ಶ್ರೇಷ್ಠನೂ ಸ್ವಾಮಿಯೂ ಆದ ನಿನ್ನನ್ನು ಪುನಃಪುನಃ ನಮಸ್ಕಾರಮಾಡುತ್ತೇವೆ.

ತ್ವಂ ಮಿತ್ರಂ ತ್ವಮಸಿ ಗುರುಸ್ತ್ವಮೇವ ಭರ್ತಾ
ತ್ವಂ ಸ್ರಷ್ಟಾ ಭುವನಪಿತಾಮಹಸ್ತ್ವಮೇವ ।
ತ್ವಾಂ ಧ್ಯಾಯನ್ನಮೃತಿಸುಖಂ ಪ್ರಯಾತಿ ಜಂತು-
ಸ್ತ್ರಾಯಸ್ವ ತ್ರಿಜಗದಿದಂ ತ್ವಮದ್ಯ [೩]ಪಾತಾತ್ ॥ ೧೪೩ ॥

ನೀನು ಲೋಕಕ್ಕೆ ಮಿತ್ರನೂ ಗುರುವೂ ರಕ್ಷಕನೂ ಸೃಷ್ಟಿಸುವವನೂ ಪಿತಾಮಹ (ತಾತ-ಹಿರಿಯ)ನೂ ಆಗಿರುತ್ತಿ. ನಿನ್ನನ್ನು ಧ್ಯಾನಮಾಡುವ ಪ್ರಾಣಿಯು ನಾಶರಹಿತವಾದ ಸುಖವನ್ನು ಹೊಂದುತ್ತದೆ. ಈಗ ನೀನು ಈ ಮೂರುಲೋಕವನ್ನು ಸಂಸಾರವೆಂಬ ಸಮುದ್ರಪತನದಿಂದ ರಕ್ಷಿಸು.

ಪರಂ ಪದಂ ಪರಮಸುಖೋದಯಾಸ್ಪದಂ
[೪]ವಿವಿತ್ಸವಶ್ಚಿರಮಿಹ ಯೋಗಿನೋಽಕ್ಷರಮ್ ।
ತ್ವಯೋದಿತಂ ಜಿನ ಪರಮಾಗಮಾಕ್ಷರಂ
[೫]ವಿಚಿನ್ವತೇ ಭವವಿಲಯಾಯ ಸದ್ಧಿಯಃ ॥ ೧೪೪ ॥

(ರುಚಿರಾ) ಜಿನೇಶ್ವರನೆ! ಉತ್ಕೃಷ್ಟವಾದ ಸುಖವು ಆವಿರ್ಭಾವಕ್ಕೆ ಸ್ಥಾನವೂ ಶ್ರೇಷ್ಠವೂ ಆದ ಮೋಕ್ಷಪದವನ್ನು ತಿಳಿಯಲಿಚ್ಛಿಸುವವರೂ ಉತ್ತಮಜ್ಞಾನಿಗಳೂ ಆದ ಯೋಗಿಗಳು ಸಂಸಾರದ ನಾಶಕ್ಕೋಸ್ಕರ ನಿನ್ನಿಂದ ಹೇಳಲ್ಪಟ್ಟುದೂ ನಾಶರಹಿತವೂ ಆದ ಪರಮಾಗಮದ ಅಕ್ಷರವನ್ನು ವಿಚಾರಮಾಡುತ್ತಾರೆ.

ತ್ವಯೋದಿತೇ ಪಥಿ ಜಿನ ಯೇ ವಿತನ್ವತೇ
ಪರಾಂ [೬]ಧೃತಿಂ ಪ್ರಮುದಪರಂಪರಾಯುಜಃ ।
[೭]ತ ಏವ ಸಂಸೃತಿಲತಿಕಾಂ [೮]ಪ್ರತಾಯಿನೀಂ
ದಹಂತ್ಯಲಂ ಸ್ಮೃತಿದಹನಾರ್ಚಿಷಾ ಭೃಶಮ್ ॥ ೧೪೫ ॥

ಜಿನೇಶ್ವರನೆ! ನಿನ್ನಿಂದ ಹೇಳಲ್ಪಟ್ಟ ಮಾರ್ಗದಲ್ಲಿ ಯಾರು ಅತ್ಯಂತಾನಂದವನ್ನು ಹೊಂದಿದವರಾಗಿ ಪರಮಸಂತೋಷವನ್ನು ಹರಡುತ್ತಾರೋ ಅವರೇ ವಿಸ್ತಾರವಾದ ಸಂಸಾರವೆಂಬ ಲತೆಯನ್ನು ನಿನ್ನ ಸ್ಮರಣ(ಧ್ಯಾನ)ವೆಂಬ ಬೆಂಕಿಯ ಜ್ವಾಲೆಯಿಂದ ಚೆನ್ನಾಗಿ ಸಂಪೂರ್ಣವಾಗಿ ಸುಡುತ್ತಾರೆ.

ವಾತೋದ್ಧೂತಾಃ ಕ್ಷೀರಪಯೋಧೇರಿವ ವೀಚೀ-
[೯]ರುತ್ಪ್ರೇಕ್ಷ್ಯಾಮೂಶ್ಚಾಮರಪಂಕ್ತೀರ್ಭವದೀಯಾಃ ।
[೧೦]ಪೀಯೂಷಾಂಶೋ[೧೧]ರ್ದೀಪ್ತಿಸಮೇತೀರಿವ ಶುಭ್ರಾ
ಮೋಮುಚ್ಯಂತೇ ಸಂಸೃತಿಭಾಜೋ ಭವಬಂಧಾತ್ ॥ ೧೪೬ ॥

(ಮತ್ತಮಯೂರ) ಭಗವಂತನೆ! ಗಾಳಿಯಿಂದ ಚಲಿಸಲ್ಪಟ್ಟ ಕ್ಷೀರಸಮುದ್ರದ ತೆರೆಗಳಂತೆಯೂ ಚಂದ್ರನ ಕಿರಣಗಳ ಸಮೂಹಗಳಂತೆಯೂ ಶುಭ್ರವಾಗಿರುವ ಈ ತಮ್ಮ ಚಾಮರಗಳ ಸಾಲುಗಳನ್ನು ನೋಡಿ ಸಂಸಾರವನ್ನು ಹೊಂದಿರುವ ಜೀವಗಳು ಸಂಸಾರಬಂಧನದಿಂದ ಬಿಡಲ್ಪಡುತ್ತಾರೆ.

೧ ಇದಾನೀಂ. ೨ ಭೃಶಂ ಪುನಃಪುನರ್ವಾ ನಮಾಮಃ. ೩ ಸಂಸಾರಾಬ್ಧೌ ಪತನಾತ್. ೪ ವೇತ್ತುಮಿಚ್ಛವಃ. ೫ ವಿಚಾರಯಂತಿ. ೬ ಸಂತೋಷಂ. ೭ ಭವ್ಯಾ ಏವ. ೮ ವಿಸ್ತೃತಾಂ. ೯ ದೃಷ್ಟ್ವಾ. ೧೦ ಚಂದ್ರಸ್ಯ. ೧೧ ದೀಪ್ತಿಸಂತತೀಃ.

ಸೈಂಹಂ ಪೀಠಂ ಸ್ವಾಂ ದ್ಯುತಿಮಿದ್ಧಾ[೧]ಮತಿಭಾನುಂ
ತನ್ವಾನಂ ತದ್ಭಾತಿ ವಿಭೋಸ್ತೇ ಪೃಥು ತುಂಗಮ್ ।
ಮೇರೋಃ ಶೃಂಗಂ ವಾ [೨]ಮಣಿನದ್ಧಂ ಸುರಸೇವ್ಯಂ
[೩]ನ್ಯಕ್ಕುರ್ವಾಣಂ ಲೋಕಮಶೇಷಂ ಸ್ವಮಹಿಮ್ನಾ ॥ ೧೪೭ ॥

ಪ್ರಭುವೆ! ಸೂರ್ಯನನ್ನತಿಕ್ರಮಿಸಿರುವುದೂ ದೇದೀಪ್ಯಮಾನವೂ ಆದ ತನ್ನ ಕಾಂತಿಯನ್ನು ಹರಡುತ್ತಿರುವುದೂ ವಿಸ್ತಾರವೂ ಉನ್ನತವೂ ತನ್ನ ಮಹಿಮೆಯಿಂದ ಲೋಕವನ್ನೆಲ್ಲ ಕೀಳುಮಾಡುತ್ತಿರುವುದೂ ದೇವತೆಗಳಿಂದ ಭಜಿಸಲ್ಪಡುವುದೂ ರತ್ನಖಚಿತವೂ ಆದ ಆ ನಿನ್ನ ಸಿಂಹಾಸನವು ಮಹಾಮೇರುಪರ್ವತದ ಶಿಖರದಂತೆ, ಶೋಭಿಸುತ್ತಿದೆ.

ಮಹಿತೋದಯಸ್ಯ ಶಿವಮಾರ್ಗದೇಶಿನಃ
ಸುರಶಿಲ್ಪಿನಿರ್ಮಿತಮದೋಽರ್ಹತಸ್ತವ ।
[೪]ಪ್ರಥತೇ ಸಿತಾತಪನಿವಾರಣತ್ರಯಂ
ಶರದಿಂದುಬಿಂಬಮಿವ ಕಾಂತಿಮತ್ತಯಾ ॥ ೧೪೮ ॥

(ನಂದಿನೀ) ಪೂಜ್ಯವಾದ ಉದಯವುಳ್ಳವನೂ ಮೋಕ್ಷಮಾರ್ಗವನ್ನು ಉಪದೇಶಿಸುವವನೂ ಅರ್ಹತ್ (ಪೂಜ್ಯ) ಪರಮೇಷ್ಠಿಯೂ ಆದ ನಿನ್ನ ದೇವ ಶಿಲ್ಪಿಗಳಿಂದ ನಿರ್ಮಿತವಾದ ಈ ಶ್ವೇತಚ್ಛತ್ರತ್ರಯವು, ಕಾಂತಿವಿಶಿಷ್ಟವಾಗಿರುವುದರಿಂದ ಶರತ್ಕಾಲದ ಚಂದ್ರಬಿಂಬವೋ ಎಂಬಂತೆ, ಕಾಣಿಸುತ್ತದೆ.

ವೃಕ್ಷೋಽಶೋಕೋ ಮರಕತರುಚಿರಸ್ಕಂಧೋ
ಭಾತಿ ಶ್ರೀಮಾನಯಮತಿರುಚಿರಾಃ ಶಾಖಾಃ ।
ಬಾಹೂಕೃತ್ಯ ಸ್ಫುಟಮಿವ [೫]ನಟಿತಂ ತನ್ವ-
ನ್ವಾತೋದ್ಧೂತಃ ಕಲರುತ[೬]ಮಧುಕೃನ್ಮಾಲಃ ॥ ೧೪೯ ॥

ಪಚ್ಚೆಯರತ್ನದ ಮನೋಹರವಾದ ಮಧ್ಯಭಾಗ(ದಿಮ್ಮಿ)ವುಳ್ಳುದೂ ಮನೋಹರವಾದ ಶಬ್ದವುಳ್ಳ ಭ್ರಮರಗಳ ಸಮೂಹವುಳ್ಳುದೂ ಗಾಳಿಯಿಂದ ಚಲಿಸಲ್ಪಟ್ಟುದೂ ಶೋಭೆಯುಳ್ಳುದೂ ಆದ ಈ ಅಶೋಕವೃಕ್ಷವು, ಅತ್ಯಂತ ಮನೋಹರವಾದ ಕೊಂಬೆಗಳನ್ನು ಬಾಹುಗಳನ್ನಾಗಿ ಮಾಡಿಕೊಂಡು ಸ್ಫುಟವಾಗಿ ನರ್ತನವನ್ನು ಮಾಡುತ್ತಿದೆಯೋ ಎಂಬಂತೆ, ಶೋಭಿಸುತ್ತಿದೆ.

ಪುಷ್ಪಾಕೀರ್ಣೋ ನೃಸುರಮುನಿವರ್ಯೈಃ ಕಾಂತೋ
ಮಂದಂ ಮಂದಂ ಮೃದುತರಪವನಾಧೂತಃ ।
ಸಚ್ಛಾಯೋಽಯಂ ವಿಹತ[೭]ನೃಶುಗಶೋಕೋ[೮]ಗೋ
ಭಾತಿ ಶ್ರೀಮಾಂಸ್ತ್ವಮಿವ ಹಿ ಜಗತಾಂ [೯]ಶ್ರೇಯಃ ॥ ೧೫೦ ॥

ಮನುಷ್ಯರಿಂದಲೂ ದೇವತೆಗಳಿಂದಲೂ ಮುನಿಶ್ರೇಷ್ಠರಿಂದಲೂ ಎರಚಲ್ಪಟ್ಟ ಪುಷ್ಪಗಳಿಂದ ವ್ಯಾಪ್ತವೂ ಮನೋಹರವೂ ಅತ್ಯಂತ ಮಂದವೂ ಕೋಮಲವೂ ಆದ ಗಾಳಿಯಿಂದ ಚಲಿಸಲ್ಪಟ್ಟುದೂ ಶ್ರೇಷ್ಠವಾದ ನೆರಳುಳ್ಳುದೂ ಮನುಷ್ಯರ ಶೋಕವನ್ನು ನಾಶಮಾಡಿರುವುದೂ ಲೋಕಕ್ಕೆ ಆಶ್ರಯಯೋಗ್ಯವೂ ಆದ ಈ ಅಶೋಕವೃಕ್ಷವು, ಸಂಪದ್ಯುಕ್ತನಾದ ನಿನ್ನಂತೆ ಶೋಭಿಸುತ್ತಿದೆ.

ವ್ಯಾಪ್ತಾಕಾಶಾಂ ವೃಷ್ಟಿ[೧೦]ಮಲಿಕಲರುತೋದ್ಗೀತಾಂ
ಪೌಷ್ಪೀಂ ದೇವಾಸ್ತ್ವಾಂ ಪ್ರತಿ ಭುವನಗೃಹಸ್ಯಾಗ್ರಾತ್ ।
ಮುಂಚಂತ್ಯೇತೇ ದುಂದುಭಿಮಧುರರವೈಃ ಸಾರ್ಧಂ ಪ್ರಾವೃಡ್ಜೀ-
ಮೂತಾನ್ [೧೧]ಸ್ತನಿತಮುಖರಿತಾನ್ ಜಿತ್ವಾ ॥ ೧೫೧ ॥

(ಅಸಂಬಾಧಾ) ಗರ್ಜನೆಯಿಂದ ಶಬ್ದವುಳ್ಳವುಗಳನ್ನಾಗಿ ಮಾಡಿದ ವರ್ಷಾಕಾಲದ ಮೇಘಗಳನ್ನು ಭೇರಿಯ ಮಧುರವಾದ ಶಬ್ದಗಳಿಂದ ಜಯಿಸಿ ಈ ದೇವತೆಗಳು ಆಕಾಶವನ್ನು ವ್ಯಾಪಿಸಿರುವುದೂ ಭ್ರಮರಗಳ ಮನೋಹರವಾದ ಶಬ್ದವುಳ್ಳುದೂ ಆದ ಪುಷ್ಪವೃಷ್ಟಿಯನ್ನು ಲೋಕವೆಂಬ ಮನೆಯ ತುದಿಯಿಂದ ನಿನ್ನ ಮೇಲೆ ಸುರಿಯುತ್ತಾರೆ.

೧ ಅತಿಕ್ರಾಂತಭಾನುಂ. ೨ ಮಣಿಬದ್ಧಂ. ೩ ಅಧಃಕುರ್ವಾಣಂ. ೪ ಪ್ರಕಟೀಕರೋತಿ. ೫ ನಟನಂ. ೬ ಭ್ರಮರಪಂಕ್ತಿಃ. ೭ ನರಶೋಕಃ. ೮ ವೃಕ್ಷಃ. ೯ ಶ್ರಯಣೀಯಃ. ೧೦ ಅಲಿಕುಲರುತೋದ್ಗೀತಾಮಿತ್ಯಪಿ ಪಾಠಃ. ೧೧ ಮೇಘರವವಾಚಾಲಿತಾನ್.

[೧]ತ್ವದಮರಪಟಹೈರ್ವಿಶಂಕ್ಯ ಘನಾಗಮಂ
[೨]ಪಟುಜಲದಘಟಾನಿರುದ್ಧನಭೋಂಗಣಮ್ ।
ವಿರಚಿತರುಚಿಮು[೩]ತ್ಕಲಾಪಸುಮಂಥರಾ
ಮದಕಲಮಧುನಾ [೪]ರುವಂತಿ [೫]ಶಿಖಾವಲಾಃ ॥ ೧೫೨ ॥

(ಅಪರಾಜಿತಾ)ನಿನಗೋಸ್ಕರ ಮಾಡಿದ ದೇವದುಂದುಭಿಗಳ ಶಬ್ದಗಳಿಂದ ಅಧಿಕವಾದ ಮೇಘಗಳ ಸಮೂಹದಿಂದಾವರಿಸಲ್ಪಟ್ಟ ಆಕಾಶಪ್ರದೇಶವುಳ್ಳ ಮೇಘವು ಬಂದಿತೆಂದು ಸಂದೇಹಪಟ್ಟು ಮನೋಹರವಾದ ಗರಿಗಳಿಂದ ಮಂದವಾಗಿ ಗಮನಮಾಡುತ್ತಿರುವ ನವಿಲುಗಳು ಈಗ ಮದದಿಂದ ಮನೋಹರವಾಗಿ ಶಬ್ದಮಾಡುತ್ತವೆ.

ತವ ಜಿನ ತತದೇಹರುಚಿಶರವಣೇ
ಚಮರರುಹತತಿಃ ಸಿತವಿಹಗರುಚಿಮ್ ।
ಇಯ[೬]ಮನುತನುತೇ ರುಚಿರತರತನು-
ರ್ಮಣಿಮುಕುಟ[೭]ಸಮಿದ್ಧರುಚಿಸುರಧುತಾ ॥ ೧೫೩ ॥

ಎಲೈ ಜಿನೇಶ್ವರನೆ! ರತ್ನಮಯವಾದ ಕಿರೀಟದ ಅಧಿಕವಾದ ಕಾಂತಿಯಿಂದ ಕೂಡಿದ ದೇವತೆಗಳಿಂದ ಬೀಸಲ್ಪಟ್ಟದ್ದೂ ಅತ್ಯಂತಮನೋಹರವಾದ ಆಕಾರವುಳ್ಳದ್ದೂ ಆದ ಈ ಚಾಮರಗಳ ಸಮೂಹವು ನಿನ್ನ ವಿಸ್ತೃತವಾದ ದೇಹಕಾಂತಿಯೆಂಬ ಕಾಚಿಹುಲ್ಲುಗಳ ಸಮೂಹದಲ್ಲಿ ಶುಭ್ರವಾದ ಪಕ್ಷಿ (ಹಂಸ)ಗಳ ಕಾಂತಿಯನ್ನು ಹೋಲುತ್ತದೆ.

ತ್ವದ್ದಿವ್ಯವಾಗಿಯಮಶೇಷಪದಾರ್ಥಗರ್ಭಾ
ಭಾಷಾಂತರಾಣಿ ಸಕಲಾನಿ ನಿದರ್ಶಯಂತೀ ।
ತತ್ತ್ವಾವಬೋಧಮಚಿರಾತ್ಕುರುತೇ ಬುಧಾನಾಂ
ಸ್ಯಾದ್ವಾದ[೮]ನೀತಿವಿಹತಾನ್ಯಮತಾಂಧಕಾರಾ ॥ ೧೫೪ ॥

(ವಸಂತತಿಲಕಂ)ಸಮಸ್ತಪದಾರ್ಥಗಳನ್ನೊಳಗೊಂಡಿರುವುದೂ ಬೇರೆ ಭಾಷೆಗಳನ್ನೆಲ್ಲ ತೋರಿಸುತ್ತಿರುವುದೂ ಸ್ಯಾದ್ವಾದನಯಗಳಿಂದ ಅನ್ಯಮತಗಳೆಂಬ ಕತ್ತಲೆಯನ್ನು ನಾಶಮಾಡಿರುವುದೂ ಆದ ಈ ನಿನ್ನ ದಿವ್ಯವಾಣಿಯು ವಿದ್ವಾಂಸರಿಗೆ ಶೀಘ್ರವಾಗಿ ತತ್ತ್ವಜ್ಞಾನವನ್ನುಂಟುಮಾಡುತ್ತದೆ.

ಪ್ರಕ್ಷಾಲಯತ್ಯಖಿಲಮೇವ ಮನೋಮಲಂ ನ-
ಸ್ತ್ವದ್ಭಾರತೀಮಯಮಿದಂ ಶುಚಿ ಪುಣ್ಯಮಂಬು ।
ತೀರ್ಥಂ ತದೇವ ಹಿ ವಿನೇಯಜನಾಜವಂಜವಾ-
[೯]ವಾರಸಂತರಣವರ್ತ್ಮ ಭವತ್ಪ್ರಣೀತಮ್ ॥ ೧೫೫ ॥

ನಿರ್ದೋಷವೂ ಪುಣ್ಯಕರವೂ ನಿನ್ನ ವಚನರೂಪವೂ ಆದ ಈ ಜಲವು ನಮ್ಮ ಮನಸ್ಸಿನ ಮಲವನ್ನೆಲ್ಲ ತೊಳೆಯುತ್ತದೆ. ನಿನ್ನಿಂದ ರಚಿಸಲ್ಪಟ್ಟ ಆ ಧರ್ಮತೀರ್ಥವೇ ಭಕ್ತಜನರ ಸಂಸಾರಸಮುದ್ರದ ಆಚೆಯ ದಡವನ್ನು ಹೊಂದಿಸುವ ಮಾರ್ಗವಾಗಿದೆ.

ತ್ವಂ ಸರ್ವಗಃ ಸಕಲವಸ್ತುಗತಾವಬೋಧ-
ಸ್ತ್ವಂ ಸರ್ವವಿತ್ಪ್ರಮಿತವಿಶ್ವಪದಾರ್ಥ[೧೦]ಸಾರ್ಥಃ ।
ತ್ವಂ ಸರ್ವಜಿದ್ವಿಜಿತಮನ್ಮಥಮೋಹಶತ್ರು-
ಸ್ತ್ವಂ ಸರ್ವದೃಂಕ್ನಿಖಿಲಭಾವವಿಶೇಷದರ್ಶೀ ॥ ೧೫೬ ॥

ನೀನು ಜ್ಞಾನಮೂಲಕ ಸರ್ವವ್ಯಾಪಿಯೂ ಸಮಸ್ತ ವಸ್ತುಗಳನ್ನು ತಿಳಿಯುವ ಜ್ಞಾನವುಳ್ಳ ಸರ್ವಜ್ಞನೂ ಸಮಸ್ತಪದಾರ್ಥಗಳ ಸಮೂಹವನ್ನು ತಿಳಿದವನೂ ಮನ್ಮಥನೆಂಬ ಶತ್ರುವನ್ನೂ ಮೋಹವೆಂಬ ಶತ್ರುವನ್ನೂ ಜಯಿಸಿರುವುದರಿಂದ ಸರ್ವರನ್ನು ಜಯಿಸಿದವನೂ ಸಮಸ್ತವಸ್ತುಗಳನ್ನು ನೋಡುವ ಸರ್ವದರ್ಶಿಯೂ ಆಗಿರುತ್ತಿ.

೧ ತ್ವನ್ನಿಮಿತ್ತಕೃತಾಮರಪಟಹೈಃ. ೨ ಬಹು. ೩ ಬರ್ಹಮಂದಗಮನಾಃ. ೪ ಧ್ವನಂತಿ. ೫ ಮಯೂರಾಃ. ೬ ಅನುಕರೋತಿ. ೭ ಸಮಿದ್ಧಕಾಂತಿಯುತಸುರೈರ್ವಿಧೂತಾ. ೮ ನಯ್ಯಃ. ೯ ಅಪಾರ ಇತ್ಯಪಿ ಪಾಠಃ. ೧೦ ಸಮೂಹಃ.

ತ್ವಂ ತೀರ್ಥಕೃತ್ಸಕಲಪಾಪಮಲಾಪಹಾರಿ-
ಸದ್ಧರ್ಮತೀರ್ಥವಿಮಲೀಕರಣೈಕನಿಷ್ಠಃ ।
ತ್ವಂ ಮಂತ್ರಕೃನ್ನಿಖಿಲಪಾಪವಿಷಾಪಹಾರಿ-
ಪುಣ್ಯ[೧]ಶ್ರುತಿಪ್ರವರಮಂತ್ರವಿಧಾನ[೨]ಚಂಚುಃ ॥ ೧೫೭ ॥

ನೀನು ಸಮಸ್ತಪಾಪವೆಂಬ ಮಲವನ್ನು ನಾಶಮಾಡುವ ಸದ್ಧರ್ಮವೆಂಬ ತೀರ್ಥ (ಜಲ)ದಿಂದ ನಿರ್ಮಲಮಾಡುವುದರಲ್ಲಿ ತತ್ಪರನಾಗಿರುವುದರಿಂದ ತೀರ್ಥಕರನಾಗಿರುತ್ತಿ. ಸಮಸ್ತಪಾಪವೆಂಬ ವಿಷವನ್ನು ನಾಶಮಾಡುವ ಪುಣ್ಯಾಗಮದ ಉತ್ತಮ ಮಂತ್ರಗಳನ್ನು ಮಾಡುವುದರಲ್ಲಿ ಪ್ರಸಿದ್ಧನಾಗಿರುವುದರಿಂದ ಮಂತ್ರಕರ್ತನಾಗಿರುತ್ತಿ.

ತ್ವಾಮಾಮನಂತಿ ಮುನಯಃ ಪುರುಷಂ ಪುರಾಣಂ
ತ್ವಾಂ ಪ್ರಾಹುರಚ್ಯುತಮೃಷೀಶ್ವರಮಕ್ಷಯರ್ದ್ಧಿಮ್ ।
ತಸ್ಮಾದ್ಭವಾಂತಕಭವಂತಮಚಿಂತ್ಯಯೋಗಂ
ಯೋಗೀಶ್ವರಂ [೩]ಜಗದುಪಾಸ್ಯ[೪]ಮುಪಾಸ್ಮಹೇ ಸ್ಮ ॥ ೧೫೮ ॥

ಮುನಿಗಳು ನಿನ್ನನ್ನು ಪ್ರಾಚೀನಪುರುಷನನ್ನಾಗಿ ತಿಳಿಯುತ್ತಾರೆ. ನೀನು ನಾಶರಹಿತನೂ ಋಷಿಗಳಿಗೆ ಪ್ರಭುವೂ ಅಕ್ಷಯವಾದ ಮಹಿಮೆಯುಳ್ಳವನೂ ಎಂದು ಹೇಳುತ್ತಾರೆ. ಆದುದರಿಂದ ಎಲೈ ಭವಾಂತಕನೆ! ಅಚಿಂತ್ಯವಾದ ಧ್ಯಾನವುಳ್ಳವನೂ ಯೋಗಿಗಳಿಗೊಡೆಯನೂ ಲೋಕಕ್ಕಾರಾಧಿಸುವುದಕ್ಕೆ ಯೋಗ್ಯನೂ ಆದ ನಿನ್ನನ್ನು ಪೂಜಿಸಿದೆವು.

ತುಭ್ಯಂ ನಮಃ ಸಕಲಘಾತಿಮಲವ್ಯಪಾಯ-
ಸಂಭೂತಕೇವಲಮಯಾಮಲಲೋಚನಾಯ ।
ತುಭ್ಯಂ ನಮೋ ದುರಿತಬಂಧನಶೃಂಖಲಾನಾಂ
[೫]ಛೇತ್ತ್ರೇ ಭವಾರ್ಗಲ[೬]ಭಿದೇ ಜಿನಕುಂಜರಾಯ ॥ ೧೫೯ ॥

ಸಮಸ್ತಘಾತಿಕರ್ಮಗಳೆಂಬ ಮಲದ ನಾಶದಿಂದುಂಟಾದ ಕೇವಲಜ್ಞಾನವೆಂಬ ನಿರ್ಮಲವಾದ ನೇತ್ರವುಳ್ಳ ನಿನಗೆ ನಮಸ್ಕಾರವು. ಪಾಪಬಂಧನಗಳೆಂಬ ಸರಪಣಿಗಳನ್ನು ಭೇದಿಸುವವನೂ ಸಂಸಾರವೆಂಬ ಅಗಣಿಯನ್ನು ಭೇದಿಸುವವನೂ ಜಿನಶ್ರೇಷ್ಠನೂ ಆದ ನಿನಗೆ ನಮಸ್ಕಾರವು.

ತುಭ್ಯಂ ನಮಸ್ತ್ರಿಭುವನೈಕಪಿತಾಮಹಾಯ,
ತುಭ್ಯಂ ನಮಃ ಪರಮನಿರ್ವೃತಿಕಾರಣಾಯ ।
ತುಭ್ಯಂ ನಮೋ[೭]ಧಿಗುರವೇ ಗುರವೇ ಗುಣೌಘೈ-
ಸ್ತುಭ್ಯಂ ನಮೋ ವಿದಿತವಿಶ್ವಜಗತ್ತ್ರಯಾಯ ॥ ೧೬೦ ॥

ಮೂರುಲೋಕಕ್ಕೆ ಮುಖ್ಯನಾದ ಪಿತಾಮಹ (ವೃದ್ಧಪುರುಷ–ಅನುಭವಿ) ನೂ ಮೋಕ್ಷಕ್ಕೆ ಕಾರಣನೂ ಆದ ನಿನಗೆ ನಮಸ್ಕಾರವು. ಅಧಿಕವಾಗಿ ಗುರು(ಶ್ರೇಷ್ಠ)ವಾದ ನಿನಗೆ ನಮಸ್ಕಾರವು. ಗುಣಸಮೂಹಗಳಿಂದ ಗುರು(ಭಾರ–ಪೂರ್ಣ)ವೂ ಮೂರು ಲೋಕವನ್ನು ತಿಳಿದವನೂ ಆದ ನಿನಗೆ ನಮಸ್ಕಾರವು.

ಇತ್ಯುಚ್ಚಕೈಃ ಸ್ತುತಿಮುದಾರಗುಣಾನುರಾಗಾ-
ದಸ್ಮಾಭಿರೀಶ ರಚಿತಾಂ ತ್ವಯಿ ಚಿತ್ರವರ್ಣಾಮ್ ।
ದೇವ ಪ್ರಸೀದ ಪರಮೇಶ್ವರ ಭಕ್ತಿಪೂತಾಂ
ಪಾದಾರ್ಪಿತಾಂ ಸ್ರಜಮಿವಾನುಗೃಹಾಣ ಚಾರ್ವೀಮ್ ॥ ೧೬೧ ॥

ಎಲೈ ಪ್ರಭುವೆ! ದೇವನೆ! ಪರಮೇಶ್ವರನೆ! ಈ ರೀತಿಯಾಗಿ ಉದಾರವಾದ ಗುಣಗಳ ಅನುರಾಗದಿಂದ ನಿನ್ನಲ್ಲಿ ನಮ್ಮಿಂದ ರಚಿಸಲ್ಪಟ್ಟದ್ದೂ ನಾನಾ ವರ್ಣ(ಅಕ್ಷರ)ಗಳುಳ್ಳದ್ದೂ ಭಕ್ತಿಯಿಂದ ಪವಿತ್ರವೂ ಪಾದಗಳಲ್ಲಿ ಅರ್ಪಿತವೂ ಸುಂದರವೂ ಆದ ಸ್ತುತಿಯನ್ನು, ಮಾಲಿಕೆಯನ್ನು ಪರಿಗ್ರಹಿಸುವಂತೆ, ಅನುಗ್ರಹಿಸಿ ಸ್ವೀಕರಿಸು. ಪ್ರಸನ್ನನಾಗು.

೧ ಆಗಮಃ. ೨ ಪ್ರತೀತಃ, ಚುಂಚುರಿತ್ಯಪಿ ಪಾಠಃ. ೩ ಜಗದಾರಾಧ್ಯಂ. ೪ ಆರಾಧಯಾಮಃ ಸ್ಮ. ೫ ಛೇದಕಾಯ. ೬ ಭೇದಕಾಯ. ೭ ಅಧಿಕಗುರವೇ.

ತ್ವಾ[1]ಮೀಡ್ಮಹೇ ಜಿನ ಭವಂತಮನುಸ್ಮರಾಮ-
ಸ್ತ್ವಾಂ ಕುಡ್ಮಲೀಕೃತಕರಾ ವಯಮಾನಮಾಮಃ ।
ತ್ವತ್ಸಂಸ್ತುತಾವುಪಚಿತಂ ಯದಿಹಾದ್ಯ ಪುಣ್ಯಂ
ತೇನಾಸ್ತು ಭಕ್ತಿರಮಲಾ ತ್ವಯಿ ನಃ ಪ್ರಸನ್ನಾ ॥ ೧೬೨ ॥

ಎಲೈ ಜಿನೇಶ್ವರನೆ! ನಾವು ನಿನ್ನನ್ನು ಸ್ತೋತ್ರಮಾಡುತ್ತೇವೆ. ಪುನಃಪುನಃ ಸ್ಮರಿಸುತ್ತೇವೆ. ಕೈಗಳನ್ನು ತಾವರೆಯ ಮೊಗ್ಗಿನಂತೆ ಮಾಡಿ ನಿನ್ನನ್ನು ನಮಸ್ಕರಿಸುತ್ತೇವೆ. ಈಗ ಇಲ್ಲಿ ನಿನ್ನ ಸ್ತೋತ್ರದಿಂದ ಪ್ರಾಪ್ತವಾದ ಪುಣ್ಯದಿಂದ ನಮ್ಮ ನಿರ್ಮಲವೂ ಪ್ರಸನ್ನವೂ ಆದ ಭಕ್ತಿಯು ನಿನ್ನಲ್ಲಿರಲಿ.''

ಇತ್ಥಂ ಸುರಾಸುರನರೋರಗಯಕ್ಷಸಿದ್ಧ-
ಗಂಧರ್ವ[2]ಚಾರಣಗಣೈಸ್ಸಮಮಿದ್ಧಬೋಧಾಃ ।
[3]ದ್ವಾತ್ರಿಂಶ[4]ದಿಂದ್ರವೃಷಭಾ ವೃಷಭಾಯ ತಸ್ಮೈ
ಚಕ್ರುರ್ನಮಃ ಸ್ತುತಿಶತೈರ್ನತಮೌಲಯಸ್ತೇ ॥ ೧೬೩ ॥

ಈ ಪ್ರಕಾರವಾಗಿ ಕಲ್ಪವಾಸಿದೇವತೆಗಳು ಅಸುರದೇವತೆಗಳು ಮನುಷ್ಯರು ನಾಗದೇವತೆಗಳು ಯಕ್ಷರು ಸಿದ್ಧದೇವತೆಗಳು ಗಂಧರ್ವರು ಸ್ತುತಿಪಾಠಕರಾದ ದೇವತೆಗಳು ಇವರುಗಳ ಸಮೂಹಗಳೊಡನೆ ಬುದ್ಧಿಶಾಲಿಗಳಾದ ಆ ಮೂವತ್ತೆರಡು ದೇವೇಂದ್ರರು ಆ ವೃಷಭಸ್ವಾಮಿಗೆ ಅನೇಕ ಸ್ತೋತ್ರಗಳಿಂದ ತಲೆಬಾಗಿ ನಮಸ್ಕಾರ ಮಾಡಿದರು.

ಸ್ತುತ್ವೇತಿ ತಂ ಜಿನ[5]ಮಜಂ ಜಗದೇಕಬಂಧುಂ
ಭಕ್ತ್ಯಾ ನತೋರುಮುಕುಟೈರಮರ್ಯೈಃ ಸಹೇಂದ್ರಾಃ ।
ಧರ್ಮಪ್ರಿಯಾ ಜಿನಪತಿಂ ಪರಿತೋ ಯಥಾಸ್ವ-
ಮಾಸ್ಥಾನಭೂಮಿಮಭಜನ್ ಜಿನಸಮ್ಮುಖಾಸ್ಯಾಃ ॥ ೧೬೪ ॥

ಉತ್ಪತ್ತಿರಹಿತನೂ ಲೋಕಕ್ಕೆ ಮುಖ್ಯಬಂಧುವೂ ಆದ ಆ ಜಿನೇಶ್ವರನನ್ನು ಹಿಂದೆ ಹೇಳಿದ ಪ್ರಕಾರವಾಗಿ ಸ್ತೋತ್ರಮಾಡಿ ಭಕ್ತಿಯಿಂದ ಬಗ್ಗಿದ ದೊಡ್ಡ ಕಿರೀಟಗಳುಳ್ಳ ದೇವತೆಗಳೊಡನೆ ಧರ್ಮದಲ್ಲಿ ಪ್ರೀತಿಯುಳ್ಳ ದೇವೇಂದ್ರರು ಜಿನೇಶ್ವರನ ಸುತ್ತಲೂ ತಮಗೆ ನಿಯತವಾದ ಸ್ಥಾನವನ್ನತಿಕ್ರಮಿಸದೆ ತಮ್ಮ ಮುಖಗಳನ್ನು ಜಿನೇಶ್ವರನ ಕಡೆಗೆ ಮಾಡಿದವರಾಗಿ ಆಸ್ಥಾನಭೂಮಿಯನ್ನು ಹೊಂದಿದರು. ನಿಯಮಿತವಾದ ಸ್ಥಾನದಲ್ಲಿ ಜಿನೇಶ್ವರನಿಗೆ ಸಮ್ಮುಖವಾಗಿ ಕುಳಿತರೆಂದು ಭಾವವು.

ದೇಹೇ ಜಿನಸ್ಯ [6]ಜಯಿನಃ ಕನಕಾವದಾತೇ
ರೇಜುಸ್ತದಾ ಭೃಶಮಮೀ ಸುರದೃಷ್ಟಿಪಾತಾಃ ।
[7]ಕಲ್ಪಾಂಘ್ರಿಪಾಂಗ ಇವ ಮತ್ತಮಧುವ್ರತಾನಾ[8]ಮೋಘಾಃ
ಪ್ರಸೂನಮಧುಪಾನ[9]ಪಿಪಾಸಿತಾನಾಮ್ ॥ ೧೬೫ ॥

ಆಸಮಯದಲ್ಲಿ ಜಯಶೀಲನಾದ ಜಿನೇಶ್ವರನ ಬಂಗಾರದಂತೆ ಶುಭ್ರವಾದ ಪರಮೌದಾರಿಕಶರೀರದಲ್ಲಿ ಈ ದೇವತೆಗಳ ನೇತ್ರಪಾತಗಳು, ಕಲ್ಪವೃಕ್ಷದ ಶರೀರದಲ್ಲಿ ಪುಷ್ಪರಸವನ್ನು ಪಾನಮಾಡಬೇಕೆಂದಿಚ್ಛಿಸಿದ ಮತ್ತು ಮದಿಸಿರುವ ಭ್ರಮರಗಳ ಸಮೂಹಗಳಂತೆ, ಅಧಿಕವಾಗಿ ಪ್ರಕಾಶಿಸಿದುವು.

ಕುಂಜರಕರಾಭಭುಜಮಿಂದುಸಮವಕ್ತ್ರಂ
ಕುಂಚಿತಮಿತಸ್ಥಿತಶಿರೋರುಹಕಲಾಪಮ್ ।
ಮಂದರತಟಾಭಪೃಥುವಕ್ಷಸಮಧೀಶಂ
ತಂ ಜಿನಮವೇಕ್ಷ್ಯ ದಿವಿಜಾಃ ಪ್ರಮದಮೀಯುಃ ॥ ೧೬೬ ॥

(ಇಂದ್ರವದನಾ)ಆನೆಯ ಸೊಂಡಲಿಗೆ ಸಮಾನವಾದ ಭುಜಗಳುಳ್ಳವನೂ ಚಂದ್ರನಿಗೆ ಸಮಾನವಾದ ಮುಖವುಳ್ಳವನೂ ಪರಿಮಿತವಾಗಿರುವ ಕುರುಳುಕೂದಲುಗಳ ಸಮೂಹವುಳ್ಳವನೂ ಮಹಾಮೇರುಪರ್ವತದ ತಪ್ಪಲಿಗೆ ಸಮಾನವೂ ವಿಶಾಲವೂ ಆದ ಎದೆಯುಳ್ಳವನೂ ಪ್ರಭುವೂ ಆದ ಆ ಜಿನೇಶ್ವರನನ್ನು ನೋಡಿ ದೇವತೆಗಳು ಸಂತೋಷವನ್ನು ಹೊಂದಿದರು.

ವಿಕಸಿತಸರಸಿಜದಲನಿಭನಯನಂ
ಕರಿಕರಸುರುಚಿರಭುಜಯುಗಮಮಲಮ್ ।
ಜಿನವಪುರತಿಶಯರುಚಿಯುತಮಮರಾ
ನಿದದೃಶು[1]ರತಿಧೃತಿವಿಮುಕುಲನಯನಾಃ ॥ ೧೬೭ ॥

(ಮಣಿಗಣಕಿರಣಃ)ದೇವತೆಗಳು ಅತ್ಯಂತ ಸಂತೋಷದಿಂದ ವಿಕಸಿತವಾದ ಕಣ್ಣುಗಳುಳ್ಳವರಾಗಿ ಅರಳಿದ ತಾವರೆಯೆಸಳಿಗೆ ಸಮಾನವಾದ ನೇತ್ರಗಳುಳ್ಳದೂ ಆನೆಯ ಸೊಂಡಲಿನಂತೆ ಮನೋಹರವಾದ ಭುಜಯುಗ್ಮವುಳ್ಳದೂ ನಿರ್ಮಲವೂ ಅಧಿಕವಾದ ಕಾಂತಿಯುಕ್ತವೂ ಆದ ಜಿನೇಶ್ವರನ ದೇಹವನ್ನು ನೋಡಿದರು.

ವಿಧುರುಚಿಹರಚಮರರುಹಪರಿಗತಂ
ಮನಸಿಜಶರಶತನಿಪತನವಿಜಯಿ ।
ಜಿನವರವಪುರವಧುತಸಕಲಮಲಂ
[2]ನಿಪಪುರಮೃತಮಿವ ಶುಚಿ ಸುರಮಧುಪಾಃ ॥ ೧೬೮ ॥

ಚಂದ್ರನ ಕಾಂತಿಯನ್ನು ಮೀರುತ್ತಿರುವ ಚಾಮರಗಳಿಂದ ಸುತ್ತಲ್ಪಟ್ಟುದೂ ಮನ್ಮಥನ ಅನೇಕ ಬಾಣಗಳ ಪತನ(ಪೆಟ್ಟು)ವನ್ನು ಜಯಿಸುವುದೂ ಸಮಸ್ತಮಲರಹಿತವೂ ಆದ ಜಿನೇಶ್ವರನ ದೇಹವನ್ನು ದೇವತೆಗಳೆಂಬ ಭ್ರಮರಗಳು, ನಿರ್ಮಲವಾದ ಅಮೃತವನ್ನೋಪಾದಿಯಲ್ಲಿ, ಪಾನಮಾಡಿದರು. ದೇವತೆಗಳು ಆನಂದದಿಂದ ಜಿನೇಶ್ವರನ ರೂಪವನ್ನು ನೋಡಿದರೆಂದು ಭಾವವು.

ಕಮಲದಲವಿಲಸ[3]ದನಿಮಿಷನಯನಂ
[4]ಪ್ರಹಸಿತನಿಭಮುಖಮತಿಶಯಸುರಭಿ ।
ಸುರನರಪರಿವೃಢನಯನಸುಖಕರಂ
[5]ವ್ಯರುಚದಧಿಕರುಚಿ ಜಿನವೃಷಭವಪುಃ ॥ ೧೬೯ ॥

ತಾವರೆಯೆಸಳಿನಂತೆ ವಿಕಸಿತವೂ ರೆಪ್ಪೆಹೊಡೆಯದಿರುವುದೂ ಆದ ನೇತ್ರಗಳುಳ್ಳದೂ ನಗುವಂತಿರುವ ಮುಖವುಳ್ಳದೂ ಅಧಿಕವಾದ ಪರಿಮಳವುಳ್ಳದೂ ದೇವೇಂದ್ರನರೇಂದ್ರರ ನೇತ್ರಗಳಿಗೆ ಸುಖವನ್ನುಂಟುಮಾಡುವುದೂ ಅಧಿಕವಾದ ಕಾಂತಿಯುಳ್ಳದೂ ಆದ ಜಿನೇಶ್ವರನ ಶರೀರವು ಪ್ರಕಾಶಿಸುತ್ತಿದ್ದಿತು.

ಜಿನಮುಖ[6]ಶತದಲಮನಿಮಿಷನಯನ-
ಭ್ರಮರಮತಿಸುರಭಿ ವಿಧುತವಿಧುರುಚಿ ।
ಮನಸಿಜಹಿಮಹತಿವಿರಹಿತ[7]ಮತಿರುಕ್
ಪಪು[8]ರವಿದಿತಧೃತಿ ಸುರಯುವತಿದೃಶಃ ॥ ೧೭೦ ॥

ರೆಪ್ಪೆಹೊಡೆಯದಿರುವ ನೇತ್ರಗಳೆಂಬ ಭ್ರಮರಗಳುಳ್ಳದೂ ಅತ್ಯಂತ ಪರಿಮಳವೂ ಚಂದ್ರನ ಕಾಂತಿಯನ್ನು ಮೀರಿರುವುದೂ ಮನ್ಮಥನೆಂಬ ಹಿಮ(ಮಂಜು)ದ ಬಾಧೆಯಿಲ್ಲದುದೂ ಅಧಿಕವಾದ ಕಾಂತಿಯುಳ್ಳದೂ ಆದ ಜಿನೇಶ್ವರನ ಮುಖವೆಂಬ ಕಮಲವನ್ನು ದೇವಸ್ತ್ರೀಯರ ನೇತ್ರಗಳು ಮೊದಲು ಈ ಪ್ರಕಾರವಾದ ಸಂತೋಷವನ್ನು ಹೊಂದದಿರುವಂತೆ ಪಾನಮಾಡಿದುವು. ಅತ್ಯಾನಂದದಿಂದ ನೋಡಿದುವೆಂದರ್ಥವು.

ವಿಜಿತಕಮಲದಲವಿಲಸದಸದೃಶದೃಶಂ
ಸುರಯುವತಿನಯನಮಧುಕರತತವಪುಷಮ್ ।
ವೃಷಭಮಜರಮಜಮಮರಪತಿಸುಮಹಿತಂ
ನಮತ [9]ಪರಮಮತಮಮಿತರುಚಿಮೃಷಿಪತಿಮ್ ॥ ೧೭೧ ॥

೧ ಸ್ತುಮಃ. ೨ ಸ್ತುತಿಪಾಠಕಾಃ. ೩ ದ್ವಾದಶಕಲ್ಪೇಂದ್ರಾಃ, ದಶವಿಧಭವನೇಂದ್ರಾಃ, ಅಷ್ಟವಿಧವ್ಯಂತರೇಂದ್ರಾಃ, ದ್ವಿವಿಧಜ್ಯೋತಿಷ್ಕೇಂದ್ರಾಃ. ೪ ಇಂದ್ರಶ್ರೇಷ್ಠಾಃ. ೫ ಉತ್ಪತ್ತಿರಹಿತಂ. ೬ ಜಯಶೀಲಸ್ಯ. ೭ ಕಲ್ಪವೃಕ್ಷಶರೀರೇ ಯಥಾ. ೮ ಸಮೂಹಾಃ. ೯ ಪಾತುಮಿಚ್ಛೂನಾಂ.

೧ ಅತಿಸಂತೋಷವಿಕಸಿತನಯನಾಃ. ೨ ಪೀತವಂತಃ. ೩ ನಿಮಿಷರಹಿತನಯನಂ. ೪ ಹಸನಸದೃಶಮುಖಂ. ೫ ಆಭಾತ್. ೬ ಕಮಲಂ. ೭ ಅಧಿಕಕಾಂತಿ. ೮ ಜಿನಮುಖದರ್ಶನಾತ್ಪೂರ್ವ ಮೇವಂವಿಧಸಂತೋಷಪಾನವಿಜ್ಞಾನಾಭಾವ ಇತ್ಯರ್ಥಃ. ೯ ಉತ್ಕೃಷ್ಟಶಾಸನಂ.

ತಾವರೆಯೆಸಳನ್ನು ಜಯಿಸಿರುವುದೂ ಪ್ರಕಾಶಮಾನವೂ ಅಸದೃಶವೂ ಆದ ನೇತ್ರಗಳುಳ್ಳವನೂ ದೇವಸ್ತ್ರೀಯರ ನೇತ್ರಗಳೆಂಬ ಭ್ರಮರಗಳಿಂದ ವ್ಯಾಪ್ತವಾದ ದೇಹವುಳ್ಳವನೂ ಜನ್ಮಜರಾರಹಿತನೂ ದೇವೇಂದ್ರರಿಂದ ಚೆನ್ನಾಗಿ ಪೂಜಿಸಲ್ಪಟ್ಟವನೂ ಶ್ರೇಷ್ಠವಾದ ಆಜ್ಞೆ(ಶಾಸ್ತ್ರೋಪದೇಶ)ಯುಳ್ಳವನೂ ಅಪರಿಮಿತವಾದ ಕಾಂತಿಯುಳ್ಳವನೂ ಋಷಿಗಳಿಗೆ ಪ್ರಭುವೂ ಆದ ವೃಷಭಜಿನೇಶ್ವರನನ್ನು ನಮಸ್ಕರಿಸಿರಿ.

**ಸರಸಿಜನಿಭವಕ್ತ್ರಂ ಪದ್ಮಕಿಂಜಲ್ಕ[೧]ಗೌರಂ**
**ಕಮಲದಲವಿಶಾಲವ್ಯಾಯತಾ[೨]ಸ್ಫಾರನೇತ್ರಮ್ ।**
**ಸರಸಿರುಹಸಮಾನಾಮೋದಮುಚ್ಛಾಯಮುಚ್ಛ-**
**ಸ್ಫಟಿಕಮಣಿವಿಭಾಸಿ ಶ್ರೀಜಿನಸ್ಯಾಂಗಮೀಡೇ ॥ ೧೭೨ ॥**

(ಮಾಲಿನೀ)ಕಮಲಕ್ಕೆ ಸಮಾನವಾದ ಮುಖವುಳ್ಳುದೂ ತಾವರೆಯ ಕುಸುಮದಂತೆ ಹಳದಿಬಣ್ಣವುಳ್ಳುದೂ ತಾವರೆಯೆಸಳಿನಂತೆ ವಿಸ್ತಾರವೂ ದೀರ್ಘವೂ ಸ್ವಲ್ಪತೆರೆಯಲ್ಪಟ್ಟುದೂ ಆದ ಕಣ್ಣುಗಳುಳ್ಳುದೂ ಕಮಲಕ್ಕೆ ಸಮಾನವಾದ ಪರಿಮಳವುಳ್ಳುದೂ ನೆರಳಿಲ್ಲದಿರುವುದೂ ನಿರ್ಮಲವಾದ ಸ್ಫಟಿಕರತ್ನದಂತೆ ಪ್ರಕಾಶಮಾನವೂ ಆದ ಜಿನೇಶ್ವರನ ಶರೀರವನ್ನು ಸ್ತೋತ್ರಮಾಡುತ್ತೇನೆ.

**ನಯನಯುಗಮತಾಮ್ರಂ ವಕ್ತಿ ಕೋಪವ್ಯಪಾಯಂ**
**ಭ್ರುಕುಟಿರಹಿತಮಾಸ್ಯಂ [೩]ಶಾಸ್ತೃತಾಂ ಯಸ್ಯ ಶಾಸ್ತಿ ।**
**ಮದನಜಯಮಪಾಂಗಾಲೋಕನಾಪಾಯಸೌಮ್ಯಂ**
**ಪ್ರಕಟಯತಿ ಯದಂಗಂ ತಂ ಜಿನಂ [೪]ನನ್ನಮೀಮಿ ॥ ೧೭೩ ॥**

ಯಾವ ಜಿನೇಶ್ವರನ ಕೆಂಪಾಗದಿರುವ ಕಣ್ಣುಗಳು ಕೋಪವಿಲ್ಲವೆಂಬುದನ್ನು ಹೇಳುತ್ತವೋ ಹುಬ್ಬುಗಂಟಿಕ್ಕದಿರುವ ಮುಖವು ಶಿಕ್ಷಕತ್ವ(ಹಿತೋಪದೇಶಕತ್ವ)ವನ್ನು ತಿಳಿಸುತ್ತದೋ ಕಡೆ ಕಣ್ಣುನೋಟವಿಲ್ಲದಿರುವುದರಿಂದ ಸೌಮ್ಯವಾಗಿರುವ ಶರೀರವು ಮನ್ಮಥನನ್ನು ಜಯಿಸಿರುವುದನ್ನು ಪ್ರಕಟಪಡಿಸುತ್ತದೋ ಅಂತಹ ಜಿನೇಶ್ವರನನ್ನು ಬಹಳವಾಗಿ ನಮಸ್ಕರಿಸುತ್ತೇನೆ.

**ಗಾತ್ರಮನಂಗಭಂಗಕೃದತಿಸುರಭಿ ರುಚಿರಂ**
**ನೇತ್ರಮತಾಮ್ರಮತ್ಯಮಲತರರುಚಿವಿಸರಮ್ ।**
**ವಕ್ತ್ರಮದಷ್ಟ [೫]ಸದ್ದಶನವಸನಮಿವ ಹಸ-**
**ದ್ಯಸ್ಯ ವಿಭಾತಿ ತಂ ಜಿನ[೬]ಮವನಮತ ಸುಧಿಯಃ ॥ ೧೭೪ ॥**

(ವೃಷಭಜಗವಿಲಸಿತ) ಎಲೈ ವಿದ್ವಾಂಸರೆ! ಯಾರ ಶರೀರವು ಮನ್ಮಥನನ್ನು ನಾಶಮಾಡುವುದೂ ಅತ್ಯಂತ ಪರಿಮಳವೂ ಸುಂದರವೂ ಆಗಿದೆಯೋ, ನೇತ್ರವು ಕೆಂಪಾಗಿಲ್ಲದೆ ಅತ್ಯಂತ ನಿರ್ಮಲವಾದ ಕಾಂತಿಯನ್ನು ಹರಡುವುದಾಗಿದೆಯೋ, ತುಟಿಗಳನ್ನು ಕಚ್ಚದಿರುವ ಮುಖವು ನಗುತ್ತಿದೆಯೋ ಎಂಬಂತೆ ಶೋಭಿಸುತ್ತಿದೆಯೋ ಅಂತಹ ಜಿನೇಶ್ವರನನ್ನು ನಮಸ್ಕರಿಸಿರಿ.

**ಸೌಮ್ಯವಕ್ತ್ರ[೭]ಮಮಲಕಮಲದಲನಿಭದೃಶಂ**
**ಹೇಮಪುಂಜಸದೃಶವಪುಷಮ್ವೃಷಭಮೃಷಿಪಮ್ ।**
**ರಕ್ತಪದ್ಮರುಚಿಭೃದಮಲಮೃದುಪದಯುಗಂ**
**[೮]ಸನ್ನತೋಽಸ್ಮಿ ಪರಮಪುರುಷ[೯]ಮಪರುಷಗಿರಮ್ ॥ ೧೭೫ ॥**

ಸೌಮ್ಯವಾದ ಮುಖವುಳ್ಳವನೂ ಬಿಳಿದಾವರೆಯೆಸಳಿಗೆ ಸಮಾನವಾದ ನೇತ್ರಗಳುಳ್ಳವನೂ ಬಂಗಾರದ ರಾಶಿಗೆ ಸಮಾನವಾದ ಶರೀರವುಳ್ಳವನೂ ಋಷಿಗಳ ರಕ್ಷಕನೂ ಕೆಂದಾವರೆಯ ಕಾಂತಿಯನ್ನು ಹೊಂದಿರುವುವೂ ನಿರ್ಮಲವೂ ಕೋಮಲವೂ ಆದ ಪಾದಗಳುಳ್ಳವನೂ ಪರಮಪುರುಷ(ಪುರುಷಶ್ರೇಷ್ಠ)ನೂ ಮೃದುವಾದ ವಚನವುಳ್ಳವನೂ ಆದ ವೃಷಭಸ್ವಾಮಿಯನ್ನು ಚೆನ್ನಾಗಿ ನಮಸ್ಕರಿಸುತ್ತೇನೆ.

೧ ಪೀತವರ್ಣಂ. ೨ ಈಷದ್ವಿವೃತನೇತ್ರಂ, ಆಸ್ಫಾರೀತ್ಯಪಿ ಪಾಠಃ. ೩ ಶಿಕ್ಷಕತ್ವಂ, ಶಾಂತತಾಮಿತ್ಯಪಿ ಪಾಠಃ. ೪ ಭೃಶಂ ನಮಾಮಿ. ೫ ಪ್ರಶಸ್ತಾಧರಂ. ೬ ನಮಸ್ಕಾರಂ ಕುರುತ. ೭ ಸಿತಪದ್ಮಂ. ೮ ಸಮ್ಯಕ್ಪ್ರಣತೋಽಸ್ಮಿ. ೯ ಕೋಮಲವಾಚಂ.

**ಸ ಜಯತಿ ಯಸ್ಯ ಪಾದಯುಗಲಂ ಜಯತ್ಪಂಕಜಂ**
**ವಿಲಸತಿ [೧]ಪದ್ಮಗರ್ಭಮಧಿಶಯ್ಯ ಸಲ್ಲಕ್ಷಣಮ್ ।**
**ಮನಸಿಜರಾಗಮರ್ದನ[೨]ಸಹಂ ಜಗತ್ಪ್ರೀಣನಂ**
**ಸುರಪತಿಮೌಲಿಶೇಖರಗಲದ್ರಜಃಪಿಂಜರಮ್ ॥ ೧೭೬ ॥**

(ವಾಣೀ) ತಾವರೆಯನ್ನು ಜಯಿಸಿರುವುದೂ ಶುಭಲಕ್ಷಣಗಳುಳ್ಳುದೂ ಮನ್ಮಥನ ಅನುರಾಗವನ್ನು ಮರ್ದನಮಾಡುವುದರಲ್ಲಿ ಸಮರ್ಥವೂ ಲೋಕಕ್ಕೆ ಪ್ರೀತಿಯನ್ನುಂಟುಮಾಡುವುದೂ ದೇವೇಂದ್ರನ ಕಿರೀಟದಲ್ಲಿರುವ ಪುಷ್ಪಮಾಲಿಕೆಯಿಂದ ಸುರಿಯುತ್ತಿರುವ ಧೂಳಿಯಿಂದ ಹಳದಿಬಣ್ಣವುಳ್ಳುವೂ ಆದ ಯಾವ ಜಿನೇಶ್ವರನ ಪಾದಯುಗ್ಮವು ತಾವರೆಯ ಮಧ್ಯದಲ್ಲಿದ್ದು ಪ್ರಕಾಶಿಸುತ್ತಿದೆಯೋ ಅಂತಹ ಜಿನೇಶ್ವರನು ಜಯಶೀಲನಾಗಿದ್ದಾನೆ. ಸರ್ವಶ್ರೇಷ್ಠನಾಗಿದ್ದಾನೆಂದರ್ಥವು.

**ಜಯತಿ ವೃಷಭೋ ಯಸ್ಯೋತ್ತುಂಗಂ ವಿಭಾತಿ ಮಹಾಸನಂ**
**ಹರಿಪರಿಧೃತಂ ರತ್ನಾನದ್ಧಂ ಪರಿಸ್ಫುರ[೩]ದಂಶುಕಮ್ ।**
**ಅಧರಿತಜಗನ್ಮೇರೋರ್ಲೀಲಾಂ ವಿಡಂಬಯದುಚ್ಚಕೈ-**
**ರ್ನತಸುರತಿರೀಟಾಗ್ರ[೪]ಗ್ರಾವದ್ಯುತೀರಿವ ತರ್ಜಯತ್ ॥ ೧೭೭ ॥**

(ಹರಿಣೀ)ಉನ್ನತವೂ ಸಿಂಹದಿಂದ ಧರಿಸಲ್ಪಟ್ಟುದೂ ರತ್ನಖಚಿತವೂ ಪ್ರಕಾಶಮಾನವಾದ ಕಾಂತಿಯುಳ್ಳುದೂ ಲೋಕವನ್ನು ಕೀಳುಮಾಡಿರುವುದೂ ಮೇರುಪರ್ವತದ ಲೀಲೆಯನ್ನು ಜಯಿಸಿರುವುದೂ ಆದ ಯಾರ ದೊಡ್ಡ ಆಸನವು ನಮಸ್ಕರಿಸುತ್ತಿರುವ ದೇವತೆಗಳ ಕಿರೀಟದ ತುದಿಯಲ್ಲಿರುವ ರತ್ನಗಳ ಕಾಂತಿಗಳನ್ನು ಬೆದರಿಸುತ್ತಿದೆಯೋ ಎಂಬಂತೆ ಅಧಿಕವಾಗಿ ಪ್ರಕಾಶಿಸುತ್ತದೆಯೋ ಅಂತಹ ವೃಷಭಜಿನೇಶ್ವರನು ಜಯಶೀಲನಾಗಿದ್ದಾನೆ.

**ಸಮಗ್ರಾಂ [೫]ವೈದಗ್ಧೀಂ[೬]ಸಕಲಶಶಭೃನ್ಮಂಡಲಗತಾಂ**
**ಸಿತಚ್ಛತ್ರಂ ಭಾತಿ ತ್ರಿಭುವನಗುರೋರ್ಯಸ್ಯ ವಿಹಸತ್ ।**
**ಜಯತ್ಯೇಷ ಶ್ರೀಮಾನ್ವೃಷಭಜಿನರಾಣ್ನಿರ್ಜಿತರಿಪು-**
**ರ್ನಮದ್ದೇವೇಂದ್ರೋದ್ಯನ್ಮುಕುಟಮಣಿ[೭]ಘೃಷ್ಟಾಂಘ್ರಿ ಕಮಲಃ ॥ ೧೭೮ ॥**

(ಶಿಖರಿಣೀ) ಸಂಪೂರ್ಣಚಂದ್ರಮಂಡಲವನ್ನು ಹೊಂದಿರುವ ಸೌಂದರ್ಯವನ್ನೆಲ್ಲ ಪರಿಹಾಸ್ಯಮಾಡುತ್ತಿರುವ ಯಾವ ತ್ರಿಜಗದ್ಗುರುವಿನ ಶ್ವೇತಚ್ಛತ್ರವು ಪ್ರಕಾಶಿಸುತ್ತದೆಯೋ ಕರ್ಮಶತ್ರುಗಳನ್ನು ಜಯಿಸಿದವನೂ ನಮಸ್ಕರಿಸುತ್ತಿರುವ ದೇವೇಂದ್ರರ ಮುಕುಟಗಳಲ್ಲಿರುವ ರತ್ನಗಳಿಂದ ಘರ್ಷಿಸಲ್ಪಟ್ಟ ಪಾದಕಮಲವುಳ್ಳವನೂ ಜ್ಞಾನಾದಿಸಂಪತ್ತುಗಳುಳ್ಳವನೂ ಆದ ಈ ವೃಷಭಜಿನೇಶ್ವರನು ಜಯಶೀಲನಾಗಿದ್ದಾನೆ.

**ಜಯತ್ಯಮರನಾಯಕೈರಸಕೃದರ್ಚಿತಾಂಘ್ರಿದ್ವಯಃ**
**ಸುರೋತ್ಕರಕರಾಧುತೈಶ್ಚಮರಜೋತ್ಕರೈರ್ವೀಜಿತಃ ।**
**ಗಿರೀಂದ್ರಶಿಖರೇ ಗಿರೀಂದ್ರ ಇವ ಯೋಽಭಿಷಿಕ್ತಃ ಸುರೈಃ**
**ಪಯೋಬ್ಧಿಶುಚಿವಾರಿಭಿಃ ಶಶಿಕರಾಂಕುರಸ್ಪರ್ಧಿಭಿಃ ॥ ೧೭೯ ॥**

(ಪೃಥ್ವೀ)ಸದಾ ದೇವೇಂದ್ರರಿಂದ ಪೂಜಿಸಲ್ಪಟ್ಟ ಪಾದಕಮಲಗಳುಳ್ಳವನೂ ದೇವತೆಗಳ ಸಮೂಹದ ಕೈಗಳಿಂದ ಬೀಸಲ್ಪಟ್ಟ ಚಾಮರಗಳ ಸಮೂಹಗಳಿಂದ ಬೀಸಲ್ಪಟ್ಟವನೂ ಮಹಾಮೇರುಪರ್ವತದ ಶಿಖರದಲ್ಲಿ ಪರ್ವತರಾಜ(ಮೇರು)ನಂತೆ ದೇವತೆಗಳಿಂದ ಚಂದ್ರನ ಕಿರಣಗಳೆಂಬ ಅಂಕುರಗಳೊಡನೆ ಸ್ಪರ್ಧೆ ಮಾಡುವ ಕ್ಷೀರಸಮುದ್ರದ ನಿರ್ಮಲವಾದ ನೀರುಗಳಿಂದ ಅಭಿಷೇಕಮಾಡಲ್ಪಟ್ಟವನೂ ಆದ ಜಿನೇಶ್ವರನು ಜಯಶೀಲನಾಗಿದ್ದಾನೆ.

**ಯಸ್ಯ ಸಮುಜ್ಜ್ವಲಾ ಗುಣಗಣಾ ಇವ ರುಚಿರತರಾ**
**ಭಾಂತ್ಯಭಿತೋ [೮]ಮಯೂಖನಿವಹಾ ಗುಣಸಲಿಲನಿಧೇಃ ।**
**[೯]ವಿಶ್ವಜನೀನಚಾರುಚರಿತಃ ಸಕಲ[೧೦]ಜಗದಿನಃ**
**ಸೋಽ[೧೧]ವತು ಭವ್ಯಪಂಕಜರವಿರ್ವೃಷಭಜಿನವಿಭುಃ ॥ ೧೮೦ ॥**

೧ ಕಮಲಮಧ್ಯೇ ಸ್ಥಿತ್ವೇತ್ಯರ್ಥಃ. ೨ ಸಮರ್ಥಂ. ೩ ಕಿರಣಂ. ೪ ರತ್ನಂ. ೫ ಸೌಂದರ್ಯಂ. ೬ ಸಂಪೂರ್ಣಚಂದ್ರಬಿಂಬಗತಾಂ. ೭ ಘರ್ಷಿತಂ. ೮ ಪರಮೌದಾರಿಕಶರೀರದೀಪ್ತಯಃ. ೯ ಸಕಲಜನಹಿತಂ. ೧೦ ಜಗತ್ಪತಿಃ. ೧೧ ರಕ್ಷತು.

(ವಂಶಪತ್ರಪತಿತ) ಗುಣಗಳಿಗೆ ಸಮುದ್ರದಂತಿರುವ ಯಾವ ಜಿನೇಶ್ವರನ ಪರಮೌದಾರಿಕಶರೀರದ ಕಾಂತಿಸಮೂಹಗಳು ಉಜ್ಜ್ವಲವೂ ಮನೋಹರವೂ ಆದ ಗುಣಗಳ ಸಮೂಹಗಳಂತೆ ಪ್ರಕಾಶಿಸುತ್ತಿವೆಯೋ ಸಮಸ್ತಜನರಿಗೆ ಹಿತಕರವೂ ಮನೋಹರವೂ ಆದ ಚರಿತ್ರವುಳ್ಳವನೂ ಸಕಲಲೋಕಾಧಿಪತಿಯೂ ಭವ್ಯರೆಂಬ ಕಮಲಗಳಿಗೆ ಸೂರ್ಯನೂ ಆದ ಅಂತಹ ವೃಷಭಜಿನೇಶ್ವರನು ರಕ್ಷಿಸಲಿ.

**ಯಸ್ಯಾಶೋಕಶ್ಚಲಕಿಸಲಯಶ್ಚಿತ್ರಪತ್ರಪ್ರಸೂನೋ**
**ಭಾತಿ ಶ್ರೀಮಾನ್ಮರಕತಮಯಸ್ಕಂಧಬಂಧೋಜ್ಜ್ವಲಾಂಗಃ ।**
**ಸಾಂದ್ರಚ್ಛಾಯಃ ಸಕಲಜನತಾಶೋಕವಿಚ್ಛೇದನೇಚ್ಛಃ ಸೋಽಯಂ**
**ಶ್ರೀಶೋ ಜಯತಿ ವೃಷಭೋ ಭವ್ಯಪದ್ಮಾಕರಾರ್ಕಃ ॥ ೧೮೧ ॥**

(ಚಿತ್ರಲೇಖ) ಚಲಿಸುತ್ತಿರುವ ತಳಿರುಗಳುಳ್ಳದೂ ಅನೇಕವಿಧವಾದ ಎಲೆಗಳೂ ಪುಷ್ಪಗಳೂ ಉಳ್ಳದೂ ಶೋಭಾಯುಕ್ತವೂ ಪಚ್ಚೆಯರತ್ನಮಯವಾದ ಮಧ್ಯ ಭಾಗ(ದಿಮ್ಮಿ)ದಿಂದ ಮನೋಹರವಾದ ಆಕಾರವುಳ್ಳದೂ ದಟ್ಟವಾಧ ನೆರಳು ಳ್ಳದೂ ಆದ ಯಾವ ಸ್ವಾಮಿಯ ಅಶೋಕವೃಕ್ಷವು ಸಮಸ್ತಜನಸಮೂಹದ ಶೋಕ ವನ್ನು ನಾಶಮಾಡುವ ಇಚ್ಛೆಯುಳ್ಳದಾಗಿ ಪ್ರಕಾಶಿಸುತ್ತಿದೆಯೋ ಅಂತಹ ಈ ಲಕ್ಷ್ಮೀ ರಮಣನೂ ಭವ್ಯರೆಂಬ ಕಮಲಸರೋವರಕ್ಕೆ ಸೂರ್ಯನೂ ಆದ ವೃಷಭ ಜಿನೇಶ್ವರನು ಜಯಶೀಲನಾಗಿದ್ದಾನೆ.

**ಜೀಯಾಜ್ಜೈನೇಂದ್ರಃ [೧]ಸುರುಚಿರತನುಃ ಶ್ರೀರಶೋಕಾಂಘ್ರಿಪೋ ಯೋ**
**ವಾತೋದ್ಧೂತೈಃ ಸ್ವೈಃ ಪ್ರಚಲ[೨]ವಿಟಪೈರ್ನಿತ್ಯಪುಷ್ಪೋಪಹಾರಮ್ ।**
**ತನ್ವನ್ವ್ಯಾಪ್ತಾಶಃ ಪರಭೃತರುತಾತೋದ್ಯಸಂಗೀತಹೃದ್ಯೋ**
**ನೃತ್ಯಚ್ಛಾಖಾಗ್ರೈರ್ಜಿನಮಿವ ಭಜನ್ಭಾತಿ ಭಕ್ತ್ಯೇವ ಭವ್ಯಃ ॥ ೧೮೨ ॥**

(ಕುಸುಮಿತಲತಾವೇಲ್ಲಿತಾ) ಗಾಳಿಯಿಂದ ಚಲಿಸುತ್ತಿರುವ ತನ್ನ ಕೊಂಬೆಗಳಿಂದ ಯಾವಾಗಲೂ ಪುಷ್ಪಗಳನ್ನು ಚೆಲ್ಲುತ್ತಿರುವುದೂ ದಿಕ್ಕುಗಳನ್ನು ವ್ಯಾಪಿಸಿರುವುದೂ ಕೋಗಿಲೆಗಳ ಧ್ವನಿಯೆಂಬ ವಾದ್ಯಸಹಿತವಾದ ಸಂಗೀತದಿಂದ ಮನೋಹರವೂ ಆದ ಯಾವ ವೃಕ್ಷವು ಚಲಿಸುತ್ತಿರುವ ಕೊಂಬೆಗಳ ತುದಿಗಳಿಂದ, ಜಿನೇಶ್ವರನನ್ನು ಭಕ್ತಿಯಿಂದ ಭಜಿಸುವ ಭವ್ಯನಂತೆ, ಶೋಭಿಸುತ್ತಿದೆಯೋ ಅಂತಹ ಮನೋಹರ ವಾದ ಆಕಾರವುಳ್ಳದೂ ಶೋಭಾಯುಕ್ತವೂ ಜಿನೇಶ್ವರಸಂಬಂಧಿಯೂ ಆದ ಅಶೋಕವೃಕ್ಷವು ಜಯಶೀಲವಾಗಿರಲಿ.

**ಯಸ್ಯಾಂ ಪುಷ್ಪಪ್ರತತಿಮಮರಾಃ ಪಾತಯಂತಿ ದ್ಯುಮೂರ್ಧ್ನಃ**
**ಪ್ರೀತಾ ನೇತ್ರಪ್ರತತಿಮಿವ ತಾಂ ಲೋಲಮತ್ತಾಲಿಜುಷ್ಟಾಮ್ ।**
**ವಾತೋದ್ಧೂತೈರ್ಧ್ವಜವಿತತಿಭಿರ್ವ್ಯೋಮಸಮ್ಮಾರ್ಜತೀ ವಾ**
**ಭಾತಿ ಶ್ರೇಯಃ ಸಮವಸೃತಿಭೂಃ ಸಾಚಿರಂ ನಸ್ತನೋತು ॥ ೧೮೩ ॥**

(ಮಂದಾಕ್ರಾಂತಾ)ಸಂತುಷ್ಟರಾದ ದೇವತೆಗಳು ಯಾವುದರ ಮೇಲೆ ಆಕಾಶ ದಿಂದ ನೇತ್ರಗಳ ಸಮೂಹದಂತಿರುವುದೂ ಚಂಚಲವಾದ ಮತ್ತು ಮದಿಸಿದ ಭ್ರಮರಗಳಿಂದ ಸೇವಿಸಲ್ಪಟ್ಟದೂ ಆದ ಪುಷ್ಪವೃಷ್ಟಿಯನ್ನು ಮಾಡುತ್ತಾರೋ, ಯಾವುದು ಗಾಳಿಯಿಂದ ಅಳ್ಳಾಡಿಸಲ್ಪಟ್ಟ ಧ್ವಜಪಂಕ್ತಿಗಳಿಂದ ಆಕಾಶವನ್ನು ಗುಡಿಸು ತ್ತಿದೆಯೋ ಎಂಬಂತೆ ಪ್ರಕಾಶಿಸುತ್ತಿದೆಯೋ, ಅಂತಹ ಸಮವಸರಣ ಭೂಮಿಯು ನಮಗೆ ಬಹುಕಾಲದವರೆಗೆ ಶ್ರೇಯಸ್ಸನ್ನುಂಟುಮಾಡಲಿ.

**ಯಸ್ಮಿನ್ಮಗ್ನರುಚಿರ್ವಿಭಾತಿ ನಿತರಾಂ ರತ್ನಪ್ರಭಾಭಾಸ್ವರೇ**
**ಭಾಸ್ವಾನ್ಸಾಲವರೋ ಜಯತ್ಯಮಲಿನೋ ಧೂಲೀಮಯೋಽಸೌ ವಿಭೋಃ ।**
**ಸ್ತಂಭಾಃ [೩]ಕಲ್ಪತರುಪ್ರಭಾಭರುಚಯೋ ಮಾನಾಧಿಕಾಶ್ಚೋ[೪]ದ್ಧ್ವಜಾಃ**
**ಜೀಯಾಸುರ್ಜಿನಭರ್ತುರಸ್ಯ ಗಗನಪ್ರೋಲ್ಲಂಘಿನೋ ಭಾಸ್ವರಾಃ ॥**

೧ ಸರುಚಿರತನುರಿತ್ಯಪಿ ಪಾಠಃ. ೨ ಶಾಖಾಭಿಃ. ೩ ಕಲ್ಪವೃಕ್ಷಪ್ರಭಾಸದೃಶತೇಜಸಃ. ೪ ಊರ್ಧ್ವಗತ ಧ್ವಜಾಃ.

(ಶಾರ್ದೂಲವಿಕ್ರೀಡಿತಂ) ರತ್ನಗಳ ಪ್ರಭೆಗಳಿಂದ ಪ್ರಕಾಶಮಾನವಾದ ಯಾವ ಕೋಟೆಯಲ್ಲಿ ಮುಳುಗಿದ ಕಾಂತಿಯುಳ್ಳ ಸೂರ್ಯನು ಅಧಿಕವಾಗಿ ಪ್ರಕಾಶಿಸು ತ್ತಾನೋ ಅಂತಹ ಈ ರತ್ನಧೂಳಿಮಯವೂ ಸ್ವಚ್ಛವೂ ಆದ ಸ್ವಾಮಿಯ ಧೂಳೀ ಸಾಲವೂ ಜಯಶೀಲವಾಗಿದೆ. ಕಲ್ಪವೃಕ್ಷದ ಕಾಂತಿಗೆ ಸಮಾನವಾದ ತೇಜಸ್ಸುಳ್ಳವೂ ಉನ್ನತವೂ ಮೇಲ್ಭಾಗದಲ್ಲಿ ಧ್ವಜಗಳುಳ್ಳವೂ ಆಕಾಶವನ್ನು ಮೀರುತ್ತಿರುವುವೂ ಪ್ರಕಾಶಮಾನವೂ ಆದ ಈ ಜಿನೇಶ್ವರನ ಮಾನಸ್ತಂಭಗಳು ಜಯಶೀಲವಾಗಿರಲಿ.

**ವಾಪ್ಯೋ ರತ್ನತಟಾಃ ಪ್ರಸನ್ನಸಲಿಲಾ ನೀಲೋತ್ಪಲೈರಾತತಾ**
**ಗಂಧಾಂಧಭ್ರಮರಾರವೈರ್ಮುಖರಿತಾ ಭಾಂತಿ ಸ್ಮ ಯಾಸ್ತಾಃ ಸ್ತುಮಃ ।**
**ತಾಂ ಚಾಪಿ [೧]ಸ್ಫುಟಪುಷ್ಪ[೨]ಹಾಸರುಚಿರಾಂ ಪ್ರೋದ್ಯತ್ಪ್ರವಾಲಾಂಕುರಾಮ್**
**ವಲ್ಲೀನಾಂ ವನವೀಥಿಕಾಂ ತಮಪಿ ಚ ಪ್ರಾಕಾರಮಾದ್ಯಂ ವಿಭೋಃ ॥**

ರತ್ನಮಯವಾದ ದಡಗಳುಳ್ಳವೂ ನಿರ್ಮಲವಾದ ನೀರುಳ್ಳವೂ ಕನ್ನೈದಿಲೆ ಗಳಿಂದ ವ್ಯಾಪ್ತವೂ ಪರಿಮಳದಿಂದ ಮತ್ತವಾಗಿರುವ ಭ್ರಮರಗಳ ಶಬ್ದಗಳಿಂದ ಶಬ್ದಮಾಡಲ್ಪಟ್ಟವೂ ಆದ ಆ ಇಳಿಯುವ ಬಾವಿಗಳನ್ನು ಅರಳಿದ ಪುಷ್ಪಗಳ ವಿಕಾಸದಿಂದ ಮನೋಹರವೂ ಆವಿರ್ಭವಿಸಿರುವ ತಳಿರುಗಳೂ ಅಂಕುರಗಳೂ ಉಳ್ಳದೂ ಆದ ಲತೆಗಳ ಆ ವನವೀಥಿಯನ್ನೂ ಸ್ವಾಮಿಯ ಆ ಮೊದಲನೆಯ ಕೋಟೆಯನ್ನೂ ಸ್ತೋತ್ರಮಾಡುತ್ತೇವೆ.

**ಪ್ರೋದ್ಯದ್ವಿದ್ರುಮಸನ್ನಿಭೈಃ ಕಿಸಲಯೈರಾರಂಜಯದ್ದಿಶೋ**
**ಭಾತ್ಯುಚ್ಚೈಃ ಪವನಾಹತೈಶ್ಚ ವಿಟಪೈರ್ಯನ್ನರ್ತಿತುಂ ವೋದ್ಯತಮ್ ।**
**ರಕ್ತಾ[೩]ಶೋಕವನಾದಿಕಂ ವನಮದಶ್ಚೈತ್ಯದ್ರುಮೈರಂಕಿತಂ**
**ವಂದೇಽಹಂ [೪]ಸಮವಾದಿಕಾಂ ಸೃತಿಮಿಮಾಂ ಜೈನೀಂ [೫]ಚತುಷ್ಟಾಶ್ರಿತಾಮ್ ॥ ೧೮೬ ॥**

ಪ್ರಕಾಶಮಾನವಾದ ಹವಳಕ್ಕೆ ಸಮಾನವಾದ ತಳಿರುಗಳಿಂದ ದಿಕ್ಕುಗಳನ್ನು ರಂಜಿಸು(ಕೆಂಪುಮಾಡು)ವುದೂ ಗಾಳಿಯಿಂದ ಹೊಡೆಯಲ್ಪಟ್ಟ ಕೊಂಬೆಗಳಿಂದ ನರ್ತನಮಾಡುವುದಕ್ಕೋಸ್ಕರ ಪ್ರಯತ್ನಪಟ್ಟಂತಿರುವುದೂ ಚೈತ್ಯವೃಕ್ಷಗಳಿಂದ ಚಿಹ್ನಿ ತವೂ ಆದ ಈ ಕೆಂಪು ಅಶೋಕ ಮೊದಲಾದ ವನಗಳನ್ನೂ ವನಗಳಿಂದ ಸಂತುಷ್ಟ ವಾಗಿ ಆಶ್ರಯಿಸಿರುವ ಈ ಜಿನೇಶ್ವರನ ಸಮವಸರಣವನ್ನೂ ನಾನು ವಂದಿಸುತ್ತೇನೆ.

**ರಕ್ತಾಶೋಕವನಂ ವನಂ ಚ ರುಚಿಮತ್ಸಪ್ತಚ್ಛದಾನಾಮದ**
**ಶ್ಚೂತಾನಾಮಪಿ ನಂದನಂ [೬]ಪರತರಂ ಯಚ್ಚಂಪಕಾನಾಂ ವನಮ್ ।**
**ತಚ್ಚೈತ್ಯದ್ರುಮಮಂಡಿತಂ ಭಗವತೋ ವಂದಾಮಹೇ ವಂದಿತಮ್**
**ದೇವೇಂದ್ರೈರ್ವಿನಯಾನತೇನ ಶಿರಸಾ ಶ್ರೀಜೈನಬಿಂಬಾಂಕಿತಮ್॥೧೮೭ ॥**

ದೇವೇಂದ್ರರಿಂದ ವಂದಿಸಲ್ಪಟ್ಟದೂ ಶ್ರೀ ಜಿನಬಿಂಬಗಳಿಂದ ಯುಕ್ತವೂ ಅಶೋಕಮೊದಲಾದ ಚೈತ್ಯವೃಕ್ಷಗಳಿಂದಲಂಕೃತವೂ ಆದ ಭಗವಂತನ ಕೆಂಪು ಅಶೋಕವೃಕ್ಷಗಳ ವನವನ್ನೂ ಪ್ರಕಾಶಮಾನವಾದ ಏಳಿಲೆಬಾಳೆಗಳ ವನವನ್ನೂ ಮಾವಿನ ವೃಕ್ಷಗಳ ವನವನ್ನೂ ಶ್ರೇಷ್ಠವಾದ ಸಂಪಿಗೆಮರಗಳ ವನವನ್ನೂ ವಿನಯ ದಿಂದ ನಮ್ರವಾದ ಮಸ್ತಕದಿಂದ ವಂದಿಸುತ್ತೇವೆ.

**ಪ್ರಾಕಾರಾತ್ಪರತೋ ವಿಭಾತಿ ರುಚಿರಾ ಹರಿವೃಷಗರುಡೈಃ**
**ಶ್ರೀಮನ್ಮಾಲ್ಯಗಜಾಂಬರೈಶ್ಚ ಶಿಖಿಭಿಃ ಪ್ರಕಟಿತಮಹಿಮಾ ।**
**ಹಂಸೈಶ್ಚಾಪ್ಯುಪಲಕ್ಷಿತಾ ಪ್ರವಿಲಸದ್ಧ್ವಜವಸನತತಿಃ**
**ಯಾತಾಮುಷ್ಯಮರಾರ್ಚಿತಾಮಭಿನುಮಃ ಪವನ[೭]ವಿಲುಲಿತಾಮ್ ॥**

ಕೋಟೆಯ ಮುಂದುಗಡೆಯಲ್ಲಿ ಸಿಂಹ, ವೃಷಭ, ಗರುಡ, ಮಾಲಿಕೆ, ಆನೆ, ವಸ್ತ್ರ, ನವಿಲು, ಹಂಸ, ಚಕ್ರ, ಕಮಲ ಈ ಹತ್ತು ಚಿಹ್ನೆಗಳಿಂದ ಯುಕ್ತವೂ ಮನೋಹರವೂ

೧ ವಿಕಸಿತಂ. ೨ ವಿಕಾಸಃ. ೩ ಅಶೋಕಸಪ್ತಚ್ಛದಾದಿವನಂ. ೪ ಸಮವಸೃತಿಂ. ೫ ವನಚತುಷ್ಟಯೇನ ತೋಷಂ ಕೃತ್ವಾಶ್ರಿತಾಂ. ೬ ಉತ್ಕೃಷ್ಟತರಂ. ೭ ಚಂಚಲಾಂ.

ಮಹಿಮೆಯನ್ನು ಪ್ರಕಟಿಸಿದುದೂ ಪ್ರಕಾಶಮಾನವೂ ಆದ ಯಾವ ಧ್ವಜವಸ್ತ್ರಗಳ ಸಮೂಹವು ಪ್ರಕಾಶಿಸುತ್ತದೋ ಗಾಳಿಯಿಂದ ಚಂಚಲವೂ ದೇವತೆಗಳಿಂದ ಪೂಜಿಸಲ್ಪಟ್ಟುದೂ ಆದ ಅಂತಹ ಧ್ವಜಗಳ ಸಾಲನ್ನೂ ನಮಸ್ಕರಿಸುತ್ತೇವೆ.

**ಯದ್ಧೂರಾದ್ವ್ಯೋಮಮಾರ್ಗಂ ಕಲುಷಯತಿ ದಿಶಾಂ ಪ್ರಾಂತಂ ಸ್ಥಗಯತಿ**
**ಪ್ರೋತ್ಸರ್ಪದ್ಧೂಪಧೂಮೈಃ ಸುರಭಯತಿ ಜಗದ್ವಿಶ್ವಂ ದ್ರುತತರವ್ ।**
**ತನ್ನಃ ಸದ್ಧೂಪಕುಂಭದ್ವಯಮುರುಮನಸಃ ಪ್ರೀತಿಂ ಘಟಯತು**
**ಶ್ರೀಮತ್ತನ್ನಾಟ್ಯಶಾಲಾದ್ವಯಮಪಿ ರುಚಿರಂ ಸಾಲತ್ರಯುಗತವ್‌॥೧೮೯ ॥**

(ಸುವದನಾ) ಬಹುದೂರಪರ್ಯಂತ ಹರಡಿರುವ ಧೂಪದ ಹೊಗೆಗಳಿಂದ ಆಕಾಶಮಾರ್ಗವನ್ನು ಕಪ್ಪುಮಾಡಿರುವುದೂ ದಿಕ್ಕುಗಳ ಪ್ರದೇಶವನ್ನು ಮುಚ್ಚಿರುವುದೂ ಲೋಕವನ್ನೆಲ್ಲ ಶೀಘ್ರವಾಗಿ ಪರಿಮಳವುಳ್ಳುದನ್ನಾಗಿ ಮಾಡಿರುವುದೂ ಆದ ಆ ದೊಡ್ಡ ಎರಡು ಧೂಪಘಟಗಳೂ, ಮೂರುಕೋಟೆಗಳಲ್ಲಿರುವುವೂ ಮನೋಹರವೂ ಶೋಭಾಯುಕ್ತವೂ ಆದ ಆ ಎರಡು ನಾಟ್ಯಶಾಲೆಗಳೂ ನಮ್ಮ ಮನಸ್ಸಿಗೆ ಪ್ರೀತಿಯನ್ನುಂಟುಮಾಡಲಿ.

**ಪುಷ್ಪಪಲ್ಲವೋಜ್ಜ್ವಲೇಷು ಕಲ್ಪಪಾದಪೋರುಕಾನನೇಷು ಹಾರಿಷು**
**ಶ್ರೀಮದಿಂದ್ರವಂದಿತಾಃ ಸ್ವಬುಧ್ನಸುಸ್ಥಿತೇದ್ಧಸಿದ್ಧಬಿಂಬಕಾ ದ್ರುಮಾಃ ।**
**ಸಂತಿ ತಾನಪಿ ಪ್ರಣೌಮ್ಯಹಂ ನಮಾಮಿ ಚ ಸ್ಮರಾಮಿ ಚ ಪ್ರಸನ್ನಧೀಃ**
**ಸ್ತೂಪಪಂಕ್ತಿಮಪ್ಯಮೂಂ ಸಮಗ್ರರತ್ನವಿಗ್ರಹಾಂ ಜಿನೇಂದ್ರಬಿಂಬಿನೀಮ್ ॥ ೧೯೦ ॥**

ಪುಷ್ಪಗಳಿಂದಲೂ ಚಿಗುರೆಲೆಗಳಿಂದಲೂ ಪ್ರಕಾಶಮಾನವೂ ಮನೋಹರವೂ ಆದ ಕಲ್ಪವೃಕ್ಷಗಳ ದೊಡ್ಡ ಅರಣ್ಯಗಳಲ್ಲಿ ಐಶ್ವರ್ಯಸಂಪನ್ನರಾದ ದೇವೇಂದ್ರರಿಂದ ವಂದಿಸಲ್ಪಟ್ಟುವೂ ತಮ್ಮ ಬುಡದಲ್ಲಿರುವ ಪ್ರಕಾಶಮಾನವಾದ ಸಿದ್ಧಪ್ರತಿಮೆಗಳುಳ್ಳುವೂ ಆದ ವೃಕ್ಷಗಳನ್ನೂ ಸಂಪೂರ್ಣ ರತ್ನಮಯವಾದ ಆಕಾರವುಳ್ಳುದೂ ಜಿನೇಶ್ವರಬಿಂಬಗಳುಳ್ಳುದೂ ಆದ ಈ ಸ್ತೂಪಗಳ ಪಂಕ್ತಿಯನ್ನೂ ನಾನು ನಿರ್ಮಲವಾದ ಬುದ್ಧಿ(ಮನಸ್ಸು)ಯುಳ್ಳವನಾಗಿ ಅಡ್ಡಬೀಳುತ್ತೇನೆ. ನಮಸ್ಕರಿಸುತ್ತೇನೆ. ಸ್ಮರಿಸುತ್ತೇನೆ.

**ವೀಥೀಂ ಕಲ್ಪದ್ರುಮಾಣಾಂ [೧]ಸವನಪರಿವೃತಿಂ ತಾಮತೀತ್ಯ ಸ್ಥಿತಾ ಯಾ**
**ಶುಭ್ರಾ ಪ್ರಾಸಾದಪಂಕ್ತಿಃ ಸ್ಫಟಿಕಮಣಿಮಯಃ ಸಾಲವರ್ಯಸ್ತೃತೀಯಃ ।**
**ಭರ್ತುಃ ಶ್ರೀಮಂಡಪಶ್ಚ ತ್ರಿಭುವನಜನತಾಸಂಶ್ರಯಾತ್ತಪ್ರಭಾವಃ**
**ಪೀಠಂ ಚೋದ್ಯ[೨]ತ್ತ್ರಿಭೂಮಂ ಶ್ರಿಯ[೩]ಮನುತನುತಾದ್ಗಂಧಕುಟ್ಯಾಶ್ರಿತಂ ನಃ ॥ ೧೯೧ ॥**

ಸುತ್ತಿಕೊಂಡಿರುವ ವನಸಹಿತವಾದ ಕಲ್ಪವೃಕ್ಷಗಳ ಆ ಸಾಲನ್ನು ದಾಟಿದ ಮೇಲೆ ಶುಭ್ರವಾಗಿರುವ ದೊಡ್ಡ ಮನೆಗಳ ಸಾಲೂ, ಸ್ಫಟಿಕರತ್ನಮಯವಾದ ಮೂರನೆಯ ದೊಡ್ಡ ಕೋಟೆಯೂ, ಮೂರುಲೋಕದ ಜನಸಮೂಹವು ಆಶ್ರಯಿಸಿರುವುದರಿಂದ ಮಹಿಮೆಯನ್ನು ಹೊಂದಿರುವ ಸ್ವಾಮಿಯ ಲಕ್ಷ್ಮೀಮಂಡಪವೂ, ಗಂಧಕುಟಿಯನ್ನಾಶ್ರಯಿಸಿರುವುದೂ ಉನ್ನತವೂ ಆದ ತ್ರಿಮೇಖಲಪೀಠವೂ ನಮಗೆ ಸಂಪತ್ತನ್ನು ಕೊಡಲಿ.

**ಮಾನಸ್ತಂಭಾಃ ಸರಾಂಸಿ ಪ್ರವಿಮಲಜಲಸತ್ಖಾತಿಕಾ ಪುಷ್ಪವಾಟೀ**
**ಪ್ರಾಕಾರೋ ನಾಟ್ಯಶಾಲಾದ್ವಿತಯಮುಪವನಂ ವೇದಿಕಾಂತರ್ಧ್ವಜಾಢ್ಯಾ ।**
**ಸಾಲಃ ಕಲ್ಪದ್ರುಮಾಣಾಂ ಸಪರಿವೃತವನಂ ಸ್ತೂಪಹರ್ಮ್ಯಾವಲೀ ಚ**
**ಪ್ರಾಕಾರಃ ಸ್ಫಾಟಿಕೋಂತರ್ನೃಸುರಮುನಿಸಭಾ ಪೀಠಿಕಾಗ್ರೇ ಸ್ವಯಂಭೂಃ ॥ ೧೯೨ ॥**

೧ ವನಪರಿವೃತಿಸಹಿತಾಂ. ೨ ತ್ರಿಭೂಮಿಕಂ, ತ್ರಿಮೇಖಲಮಿತ್ಯರ್ಥಃ. ೩ ಕರೋತು.

ನಾಲ್ಕುದಿಕ್ಕುಗಳಲ್ಲಿ ನಾಲ್ಕುಮಾನಸ್ತಂಭಗಳು ಅವುಗಳ ಸುತ್ತಲೂ ನಾಲ್ಕು ಸರೋವರಗಳು, ಆಮೇಲೆ ಅತ್ಯಂತನಿರ್ಮಲವಾದ ನೀರುಳ್ಳ ಕಂದಕವು, ಅದರಾಚೆ ಪುಷ್ಪೋದ್ಯಾನವು, ತರುವಾಯ ಮೊದಲನೆಯ ಕೋಟೆಯು ಆಮೇಲೆ ಎರಡೆರಡು ನಾಟ್ಯಶಾಲೆಗಳು, ತರುವಾಯ ಉದ್ಯಾನ, ಅದರನಂತರದಲ್ಲಿ ವನವೇದಿಕೆ, ಆಮೇಲೆ ಧ್ವಜಗಳಿಂದ ಯುಕ್ತವಾದ ಮಾರ್ಗವು, ತರುವಾಯ ಎರಡನೆಯ ಕೋಟೆಯು, ಅದರಾಚೆ ಸುತ್ತಿಕೊಂಡಿರುವ ಕಲ್ಪವೃಕ್ಷಗಳ ವನವು, ಆಮೇಲೆ ಸ್ತೂಪಗಳು, ತರುವಾಯ ದೊಡ್ಡಮನೆಗಳ ಸಾಲು, ಆಮೇಲೆ ಸ್ಫಟಿಕರತ್ನಮಯವಾದ ಮೂರನೆಯ ಕೋಟೆ, ಅದರನಂತರ ಮನುಷ್ಯರ, ದೇವತೆಗಳ ಮತ್ತು ಮುನಿಗಳ ಸಭೆಗಳು, ಆಮೇಲೆ ತ್ರಿಮೇಖಲಪೀಠವು, ಅದರ ಮೇಲೆ ವೃಷಭಸ್ವಾಮಿಯು

**ದೇವೋಽರ್ಹನ್ಪ್ರಾಙ್ಮುಖೋ ವಾ [೧]ನಿಯತಿ[೨]ಮನುಸರನ್ನುತ್ತರಾಶಾಮುಖೋ ವಾ**
**ಯಾಮಧ್ಯಾಸ್ತೇ ಸ್ಮ ಪುಣ್ಯಾಂ ಸಮವಸೃತಿಮಹೀಂ ತಾಂ ಪರೀತ್ಯಾ[೩]ಧ್ಯವಾತ್ಸುಃ ।**
**ಪ್ರಾದಕ್ಷಿಣ್ಯೇನ [೪]ಧೀಂದ್ರಾ [೫]ದ್ಯುಯುವತಿಗಣಿನೀನೃಸ್ತ್ರಿಯ[೬]ಸ್ತ್ರಿಶ್ಚ ದೇವ್ಯೋ**
**ದೇವಾಃ ಸೇಂದ್ರಾಶ್ಚ ಮರ್ತ್ಯಾಃ ಪಶವ ಇತಿ ಗಣಾ ದ್ವಾದಶಾಮೀ ಕ್ರಮೇಣ ॥ ೧೯೩ ॥**

ಆ ಪೀಠದ ಮೇಲೆ ಅರ್ಹತ್ಪರಮೇಷ್ಠಿಯು ಸ್ವಭಾವವನ್ನನುಸರಿಸಿ ಪೂರ್ವಮುಖವಾಗಿ ಅಥವಾ ಉತ್ತರಮುಖವಾಗಿ ಇರುತ್ತಿದ್ದನು. ಪುಣ್ಯಕರವಾದ ಆ ಸಮವಸರಣಭೂಮಿಯ ಸುತ್ತಲೂ ಪ್ರದಕ್ಷಿಣೆಯಿಂದ ೧ ಗಣಧರರು ೨ ಕಲ್ಪವಾಸಿದೇವಸ್ತ್ರೀಯರು ೩ ಆರ್ಜಿಕೆಯರು ಮತ್ತು ಮನುಷ್ಯಸ್ತ್ರೀಯರು ೪ ಭವನವಾಸಿದೇವಸ್ತ್ರೀಯರು ೫ ವ್ಯಂತರದೇವಸ್ತ್ರೀಯರು ೬ ಜ್ಯೋತಿಷ್ಕದೇವಸ್ತ್ರೀಯರು ೭-೧೦ ಇಂದ್ರಸಹಿತರಾದ ನಾಲ್ಕುವಿಧದ ದೇವತೆಗಳು ೧೧ ಮನುಷ್ಯರು ೧೨ ಪಶುಗಳು ಹೀಗೆ ಕ್ರಮದಿಂದ ಈ ಹನ್ನೆರಡು ಸಮೂಹಗಳು ವಾಸಮಾಡಿದ್ದುವು.

**ಯೋಗೀಂದ್ರಾ ರುಂದ್ರಬೋಧಾ ವಿಬುಧಯುವತಯಃ ಸಾರ್ಯಿಕಾ ರಾಜಪತ್ನ್ಯೋ**
**[೭]ಜ್ಯೋತಿರ್ವನ್ಯೇಶಕನ್ಯಾ ಭವನಜವನಿತಾ ಭಾವನಾ ವ್ಯಂತರಾಶ್ಚ ।**
**ಜ್ಯೋತಿಷ್ಕಾಃ ಕಲ್ಪನಾಥಾ ನರವರವೃಷಭಾಸ್ತಿರ್ಯಗೋಘೈಃ ಸಹಾಮೀ**
**ಕೋಷ್ಠೇಷೂಕ್ತೇಷ್ವತಿಷ್ಠನ್ ಜಿನಪತಿಮಭಿತೋ ಭಕ್ತಿಭಾರಾವನಮ್ರಾಃ ॥**

ಹಿಂದೆ ಹೇಳಿದ ಹನ್ನೆರಡು ಕೋಷ್ಠಗಳಲ್ಲಿ ಕ್ರಮವಾಗಿ ಮಹಾಜ್ಞಾನಸಂಪನ್ನರಾದ ಮುನಿಗಳೂ, ಸ್ವರ್ಗಸ್ತ್ರೀಯರೂ, ಆರ್ಜಿಕೆಯರೊಡಗೂಡಿದ ರಾಜಪತ್ನಿಯರೂ, ಜ್ಯೋತಿರ್ದೇವಸ್ತ್ರೀಯರೂ, ವ್ಯಂತರದೇವಸ್ತ್ರೀಯರೂ, ಭವನದೇವಸ್ತ್ರೀಯರೂ, ಭವನ, ವ್ಯಂತರ, ಜ್ಯೋತಿಷ್ಕ, ಕಲ್ಪವಾಸಿದೇವತೆಗಳೂ, ರಾಜರೂ, ತಿರ್ಯಕ್ಪ್ರಾಣಿಗಳೂ ಭಕ್ತಿಯಿಂದ ನಮ್ರರಾಗಿ ಜಿನೇಶ್ವರನ ಮುಂಭಾಗದಲ್ಲಿದ್ದರು.

**[೮]ಪ್ರಾದುಷ್ಯದ್ವಾಙ್ಮಯೂಖೈರ್ವಿಘಟಿತತಿಮಿರೋ ಧೂತಸಂಸಾರರಾತ್ರಿ**
**[೯]ಸ್ತತ್ಸಂಧ್ಯಾಸಂಧಿಕಲ್ಪಾಂ ಮುಹು[೧೦]ರಪಘಟಯನ್ [೧೧]ಕ್ಷೈಣಮೋಹೀಮವಸ್ಥಾಮ್ ।**
**ಸಜ್ಜ್ಞಾನೋದಗ್ರ[೧೨]ಸಾದಿ[೧೩]ಪ್ರತಿನಿಯತನಯೋ[೧೪]ದ್ವೇಗಸಪ್ತಿಪ್ರಯುಕ್ತ-**
**ಸ್ಯಾದ್ವಾದಸ್ಯಂದನಸ್ಥೋ ಭೃಶಮಥ ರುರುಚೇ ಭವ್ಯಬಂಧುರ್ಜಿನಾರ್ಕಃ ॥**

ತರುವಾಯ ಪ್ರಕಟವಾಗುತ್ತಿರುವ ಸ್ಯಾದ್ವಾದವಚನಗಳೆಂಬ ಕಿರಣಗಳಿಂದ ಅಜ್ಞಾನಾಂಧಕಾರವನ್ನು ನಾಶಮಾಡಿದವನೂ ಸಂಸಾರವೆಂಬ ರಾತ್ರಿಯನ್ನು ಹೋಗಲಾಡಿಸಿದವನೂ ಆ ರಾತ್ರಿಯ ಪ್ರಾತಃಸಂಧ್ಯೆಗೆ ಸಮಾನವಾದ ಕ್ಷೀಣಮೋಹಸಂಬಂಧಿ ಅವಸ್ಥೆಯನ್ನು ಪುನಃಪುನಃ ದೂರಮಾಡುವವನೂ, ನಿಯಮಿಸಲ್ಪಟ್ಟಿರುವ

೧ ಸ್ವಭಾವಂ. ೨ ಅನುಗಚ್ಛನ್. ೩ ಅಧಿವಾಸಂ ಕುರ್ವಂತಿ ಸ್ಮ. ೪ ಗಣಧರಾದಿಮುನಯಃ. ೫ ಕಲ್ಪವಾಸಿನ್ಯಃ. ೬ ಭವನತ್ರಯದೇವ್ಯಃ. ೭ ಜ್ಯೋತಿಷ್ಕವ್ಯಂತರದೇವ್ಯಃ. ೮ ಪ್ರಕಟೀಭವತ್ಸ್ಯಾದ್ವಾದವಾಕ್ಕಿರಣೈಃ. ೯ ತದ್ರಾತ್ರಿಸಂಧ್ಯಾಸಂಬಂಧಸದೃಶಾಂ ಪ್ರಾತಃಕಾಲಸಂಧ್ಯಾಮಿತ್ಯರ್ಥಃ. ೧೦ ಅವಿಘಟಯನ್ನಿತ್ಯಪಿ ಪಾಠಃ. ೧೧ ಕ್ಷೀಣಮೋಹಸಂಬಂಧಿನೀಂ. ೧೨ ಸಾರಥಿಃ. ೧೩ ಪ್ರತಿನಿಯಮಿತಃ. ೧೪ ವೇಗವತ್ತುರಗಃ.

ಸಮ್ಯಗ್ಜ್ಞಾನವೆಂಬ ಸಾರಥಿಯುಳ್ಳುದೂ ನಯಗಳೆಂಬ ವೇಗವಾದ ಕುದುರೆಗಳಿಂದ ಪ್ರಯೋಗಿಸಲ್ಪಟ್ಟುದೂ ಆದ ಸ್ಯಾದ್ವಾದವೆಂಬ ರಥದಲ್ಲಿರುವವನೂ ಭವ್ಯರಿಗೆ ಬಂಧುವೂ ಆದ ಜಿನೇಶ್ವರನೆಂಬ ಸೂರ್ಯನು ಅಧಿಕವಾಗಿ ಪ್ರಕಾಶಿಸಿದನು.

**ಇತ್ಯುಚ್ಚೈಃ ಸಂಗೃಹೀತಾಂ ಸಮವಸೃತಿಮಹೀಂ ಧರ್ಮಚಕ್ರಾಧಿಭರ್ತು-**
**ರ್ಭವ್ಯಾತ್ಮಾ ಸಂಸ್ಮರೇದ್ಯಃ ಸ್ತುತಿಮುಖರಮುಖೋ ಭಕ್ತಿನಮ್ರೇಣ**
**ಮೂರ್ಧ್ನಾ ।**
**ಜೈನೀಂ ಲಕ್ಷ್ಮೀಮಚಿಂತ್ಯಾಂ ಸಕಲಗುಣಮಯೀಂ ಪ್ರಾಶ್ನುತೇಸೌ**
**ಮಹರ್ದ್ಧಿವಮ್**
**[1]ಚೂಡಾಭಿರ್ನಾಕಭಾಜಾಂ ಮಣಿಮುಕುಟಜುಷಾಮರ್ಚಿತಾಂ**
**[2]ಸ್ರಗ್ಧರಾಭಿಃ ॥ ೧೯೬ ॥**

ಈಪ್ರಕಾರವಾಗಿ ಸಂಪೂರ್ಣವರ್ಣನೆಗಳಿಂದ ಸಂಗ್ರಹಿಸಲ್ಪಟ್ಟ ಧರ್ಮಚಕ್ರಾಧಿಪತಿಯಾದ ಜಿನೇಶ್ವರನ ಸಮವಸರಣಭೂಮಿಯನ್ನು ಯಾವ ಭವ್ಯಾತ್ಮನು ಮುಖದಿಂದ ಸ್ತೋತ್ರಮಾಡುವವನಾಗಿ ಭಕ್ತಿಯಿಂದ ನಮ್ರವಾದ ಮಸ್ತಕದಿಂದ ಸ್ಮರಣೆ ಮಾಡುತ್ತಾನೋ ಅಂತಹ ಈ ಭವ್ಯಾತ್ಮನು ರತ್ನಖಚಿತವಾದ ಮುಕುಟಗಳನ್ನು ಧರಿಸಿರುವ ದೇವತೆಗಳ ಪುಷ್ಪಮಾಲೆಗಳನ್ನು ಧರಿಸಿರುವ ಮುಕುಟಗಳಿಂದ ಪೂಜಿಸಲ್ಪಟ್ಟುದೂ ಮಹಾಮಹಿಮೆಯುಳ್ಳುದೂ ಸಮಸ್ತ ಗುಣಗಳಿಂದ ಪರಿಪೂರ್ಣವೂ ಅಚಿಂತ್ಯವೂ ಆದ ಜಿನೇಶ್ವರನ ಲಕ್ಷ್ಮಿಯನ್ನನುಭವಿಸುತ್ತಾನೆ. ತೀರ್ಥಕರಪದವಿಯನ್ನು ಹೊಂದುತ್ತಾನೆಂದು ಭಾವವು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭಗವತ್ಸಮವಸೃತಿವಿಭೂತಿವರ್ಣನಂ ನಾಮ ತ್ರಯೋವಿಂಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರುಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ
'ಕನ್ನಡಭಾವದೀಪಿಕಾವ್ಯಾಖ್ಯೆಯೊಳ್' ಭಗವಂತನ ಸಮವಸರಣವಿಭೂತಿ (ವೈಭವ) ವರ್ಣನೆಯೆಂಬ
ಇಪ್ಪತ್ತಮೂರನೆಯ ಪರ್ವವು ಸಮಾಪ್ತವಾದುದು.

---

೧ ಮುಕುಟ್ಯೈಃ. ೨ ಮಾಲಭಾರಿಣೀಭಿಃ.

# ಅಥ ಚತುರ್ವಿಂಶತಿತಮಂ ಪರ್ವ

**ಸ ಜೀಯಾದ್ವೃಷಭೋ [೧]ಮೋಹವಿಷಸುಪ್ತಮಿದಂ ಜಗತ್ ।**
**[೨]ಪಟವಿದ್ಯೇವ ಯದ್ವಿದ್ಯಾ ಸದ್ಯಃ [೩]ಸಮುದತಿಷ್ಠಪತ್ ॥ ೧ ॥**

ಯಾವನ ವಿದ್ಯೆಯು ವಿಷಾಪಹಾರವಿದ್ಯೆಯಂತೆ ಮೋಹವೆಂಬ ವಿಷದಿಂದ ಕೂಡಿ (ಮೂರ್ಛಿತವಾಗಿ)ರುವ ಈ ಜಗತ್ತನ್ನು ಕೂಡಲೆ ಏಳಿಸಿತೋ ಅಂತಹ ವೃಷಭ ಸ್ವಾಮಿಯು ಜಯಶೀಲರಾಗಲಿ.

**ಶ್ರೀಮಾನ್ಭರತರಾಜರ್ಷಿರ್ಬುಬುಧೇ ಯುಗಪತ್ತ್ರಯಮ್ ।**
**ಗುರೋಃ ಕೈವಲ್ಯಸಂಭೂತಿಂ [೪]ಸೂತಿಂ ಚ ಸುತಚಕ್ರಯೋಃ ॥ ೨ ॥**

ಐಶ್ವರ್ಯಸಂಪನ್ನನೂ ಶಮದಮಮೊದಲಾದ ಗುಣಗಳಿಂದ ಋಷಿಯಂತಿದ್ದ ವನೂ ಆದ ಭರತರಾಜರ್ಷಿಯು ವೃಷಭಸ್ವಾಮಿಯ ಕೇವಲಜ್ಞಾನೋತ್ಪತ್ತಿಯನ್ನೂ ತನಗೆ ಪುತ್ರೋತ್ಪತ್ತಿಯಾದುದನ್ನೂ ಆಯುಧಶಾಲೆಯಲ್ಲಿ ಚಕ್ರಾಯುಧದ ಉತ್ಪತ್ತಿ ಯನ್ನೂ ಒಂದೇಕಾಲದಲ್ಲಿ ತಿಳಿದನು. ಈ ಮೂರು ಸಮಾಚಾರಗಳನ್ನು ಒಂದೇ ಕಾಲದಲ್ಲಿ ತಿಳಿದನೆಂದು ಭಾವವು.

**[೫]ಧರ್ಮಸ್ಥಾದ್ಗುರುಕೈವಲ್ಯಂ ಚಕ್ರಮಾಯುಧಪಾಲತಃ ।**
**ಕಾಂಚುಕೀಯಾತ್ಸುತೋತ್ಪತ್ತಿಂ [೬]ವಿದಾಮಾಸ ತದಾ ವಿಭುಃ ॥ ೩ ॥**

ಆಗ ಭರತರಾಜನು ಧರ್ಮಾಧಿಕಾರಿಯಿಂದ ಸ್ವಾಮಿಯ ಕೇವಲಜ್ಞಾನವನ್ನು ಆಯುಧಪಾಲಕನಿಂದ ಚಕ್ರರತ್ನವನ್ನು ಅಂತಃಪುರದ ಸೇವಕನಿಂದ ಪುತ್ರೋತ್ಪತ್ತಿ ಯನ್ನು ತಿಳಿದನು.

**ಪರ್ಯಾಕುಲ ಇವಾಸೀಚ್ಚ ಕ್ಷಣಂ [೭]ತದ್ಯೌಗಪದ್ಯತಃ ।**
**ಕಿಮತ್ರ ಪ್ರಾಗನುಷ್ಠೇಯಂ [೮]ಸಂವಿಧಾನಮಿತಿ ಪ್ರಭುಃ ॥ ೪ ॥**

ಆ ಮೂರು ಒಂದೇಕಾಲದಲ್ಲುಂಟಾದುದರಿಂದ ಭರತರಾಜನು "ಈ ಮೂರ ರಲ್ಲಿ ಮೊದಲು ಯಾವ ಕಾರ್ಯವು ಮಾಡಬೇಕಾದುದು" ಎಂದು ಕ್ಷಣಕಾಲದ ವರೆಗೆ ವ್ಯಾಕುಲನಾದವನಂತಾದನು.

**ತ್ರಿವರ್ಗಫಲಸಂಭೂತಿ[೯]ರಕ್ರಮೋಪನತಾ ಮಮ ।**
**ಪುಣ್ಯತೀರ್ಥಂ ಸುತೋತ್ಪತ್ತಿಶ್ಚಕ್ರರತ್ನಮಿತಿ ತ್ರಯೀ ॥ ೫ ॥**

"ನನಗೆ ಪುಣ್ಯತೀರ್ಥ, ಪುತ್ರೋತ್ಪತ್ತಿ, ಚಕ್ರರತ್ನ ಹೀಗೆ ಧರ್ಮ, ಅರ್ಥ, ಕಾಮ ಗಳೆಂಬ ಮೂರು ಪುರುಷಾರ್ಥಗಳ ಮೂರು ಫಲೋತ್ಪತ್ತಿಯು ಒಂದೇಕಾಲದಲ್ಲಿ ಪ್ರಾಪ್ತವಾಯಿತು.

**ತತ್ರ ಧರ್ಮಫಲಂ [೧೦]ತೀರ್ಥಂ ಪುತ್ರಃ ಸ್ಯಾತ್ಕಾಮಜಂ ಫಲಮ್ ।**
**[೧೧]ಅರ್ಥಾನುಬಂಧಿನೋರ್ಥಸ್ಯ ಫಲಂ ಚಕ್ರಂ ಪ್ರಭಾಸ್ವರಮ್ ॥ ೬ ॥**

ಈಮೂರರಲ್ಲಿ ಕೈವಲ್ಯತೀರ್ಥ(ಕೇವಲಜ್ಞಾನೋತ್ಪತ್ತಿ)ವು ಧರ್ಮ ಪುರುಷಾ ರ್ಥದ ಫಲವಾಗಿದೆ. ಪುತ್ರೋತ್ಪತ್ತಿಯು ಕಾಮಪುರುಷಾರ್ಥದ ಫಲವಾಗಿದೆ. ಪ್ರಕಾಶಮಾನವಾದ ಚಕ್ರರತ್ನವು ಪ್ರಯೋಜನವನ್ನನುಸರಿಸಿರುವ ಅರ್ಥಪುರುಷಾ ರ್ಥದ ಫಲವಾಗಿದೆ.

**ಅಥವಾ ಸರ್ವಮಪ್ಯೇತತ್ಫಲಂ ಧರ್ಮಸ್ಯ [೧೨]ಪುಷ್ಕಲಮ್ ।**
**ಯತೋ ಧರ್ಮತರೋರರ್ಥಃ ಫಲಂ ಕಾಮಸ್ತು ತದ್ರಸಃ ॥ ೭ ॥**

೧ ಅನಿಶ್ಚಯಜ್ಞಾನೋಪೇತಂ. ೨ ವಿಷಹರಣವಿದ್ಯಾ. ೩ ಉತ್ಥಾಪಯತಿ ಸ್ಮ. ೪ ಉತ್ಪತ್ತಿಂ. ೫ ಧರ್ಮಾಧಿಕಾರಿಣಃ ಸಕಾಶಾತ್. ೬ ಬುಬುಧೇ. ೭ ತೇಷಾಮೇಕಕಾಲೀನತ್ವತಃ. ೮ ಸಾಮಗ್ರೀಂ. ೯ ಯುಗಪದಾಗತಾ. ೧೦ ಕೈವಲ್ಯತೀರ್ಥಂ. ೧೧ ಪ್ರಯೋಜನಾನುಬಂಧಿನಃ. ೧೨ ಸಂಪೂರ್ಣಂ.

ಅಥವಾ ಸಂಪೂರ್ಣವಾದ ಇವೆಲ್ಲವೂ ಧರ್ಮದ ಫಲವಾಗಿದೆ. ಏತಕ್ಕೆಂದರೆ:– ಅರ್ಥವು ಧರ್ಮವೆಂಬ ವೃಕ್ಷದ ಫಲವಾಗಿದೆ. ಕಾಮವು ಆ ಫಲ(ಅರ್ಥ)ದ ರಸವಾಗಿದೆ.

**ಕಾರ್ಯೇಷು ಪ್ರಾಗ್ವಿಧೇಯಂ ತದ್ಧರ್ಮ್ಯಂ ಶ್ರೇಯೋನುಬಂಧಿ ಯತ್ ।**
**ಮಹಾಫಲಂ ಚ [೧]ತದ್ದೇವಸೇವಾ [೨]ಪ್ರಾಥಮಕಲ್ಪಿಕೀ ॥ ೮ ॥**

ಆದುದರಿಂದ ಆ ಮೂರು ಕಾರ್ಯಗಳಲ್ಲಿ ಪುಣ್ಯವನ್ನುಂಟುಮಾಡುವುದೂ ದೊಡ್ಡ ಫಲದಾಯಕವೂ ಆದ ಧರ್ಮವು ಮೊದಲು ಮಾಡತಕ್ಕುದಾದುದರಿಂದ ಸ್ವಾಮಿಯ ಸೇವೆ (ಕೇವಲಜ್ಞಾನಪೂಜೆ)ಯು ಮೊದಲು ಮಾಡತಕ್ಕುದಾಗಿದೆ."

**ನಿಶ್ಚಿಚಾಯೇತಿ ರಾಜೇಂದ್ರೋ ಗುರುಪೂಜನಮಾದಿತಃ ।**
**ಅಹೋ ಧರ್ಮಾತ್ಮನಾಂ ಚೇಷ್ಟಾ ಪ್ರಾಯಃ ಪುಣ್ಯಾನುಬಂಧಿನೀ ॥ ೯ ॥**

ಹೀಗೆ ಭರತರಾಜನು ಮೊದಲು ಸ್ವಾಮಿಯ ಪೂಜೆಯನ್ನು ಮಾಡಬೇಕೆಂದು ನಿಶ್ಚಯಿಸಿದನು. ಅಹೋ! ಧರ್ಮಾತ್ಮರ ವ್ಯಾಪಾರವು ಹೆಚ್ಚಾಗಿ ಪುಣ್ಯವನ್ನುಂಟು ಮಾಡುವುದಾಗಿರುತ್ತದೆ.

**[೩]ಸಾನುಜನ್ಮಾ ಸಮೇತೋಂತಃಪುರಪೌರ[೪]ಪುರೋಗಮೈಃ ।**
**ಪ್ರಾಜ್ಯಾಮಿಜ್ಯಾಂ [೫]ಪುರೋಧಾಯ [೬]ಸಜ್ಜೋಭೂದ್ಗಮನಂ ಪ್ರತಿ ॥ ೧೦ ॥**

ಬಾಹುಬಲಿಮೊದಲಾದ ತಮ್ಮಂದಿರೊಡಗೂಡಿದ ಭರತರಾಜನು, ಅಂತಃಪುರ ಸ್ತ್ರೀಯರಿಂದಲೂ ಪಟ್ಟಣದ ಮುಖ್ಯಸ್ಥರಿಂದಲೂ ಸಮೇತನಾಗಿ ಶ್ರೇಷ್ಠವಾದ ಪೂಜಾಸಾಮಗ್ರಿಯನ್ನು ಮುಂದೆಮಾಡಿಕೊಂಡು ಪ್ರಯಾಣಕ್ಕೆ ಸಿದ್ಧನಾದನು.

**ಗುರೌ ಭಕ್ತಿಂ ಪರಾಂ ತನ್ವನ್ಕುರ್ವನ್ಧರ್ಮಪ್ರಭಾವನಾಮ್ ।**
**ಸ ಭೂತ್ಯಾ ಪರಯೋತ್ತಸ್ಥೇ ಭಗವದ್ವಂದನಾವಿಧೌ ॥ ೧೧ ॥**

ಸ್ವಾಮಿಯಲ್ಲಿ ಉತ್ತಮವಾದ ಭಕ್ತಿಯನ್ನು ಮಾಡುವವನೂ ಧರ್ಮಪ್ರಭಾವನೆ ಯನ್ನು ಮಾಡುವವನೂ ಆದ ಆ ಭರತರಾಜನು ಭಗವಂತನನ್ನು ವಂದಿಸುವ ಕಾರ್ಯನಿಮಿತ್ತವಾಗಿ ಬಹಳ ವೈಭವದಿಂದ ಹೊರಟನು.

**ಅಥ ಸೇನಾಂಬುಧೇಃ ಕ್ಷೋಭಮಾತನ್ವನ್ನಬ್ಧಿನಿಃಸ್ವನಃ ।**
**ಆನಂದಪಟಹೋ ಮಂದ್ರಂ ದಧ್ವಾನ ಧ್ವಾನಯನ್ದಿಶಃ ॥ ೧೨ ॥**

ತರುವಾಯ ಸೈನ್ಯವೆಂಬ ಸಮುದ್ರಕ್ಕೆ ಪ್ರೇರಣೆಯನ್ನುಂಟುಮಾಡುವುದೂ ಸಮುದ್ರದಂತೆ ಶಬ್ದವುಳ್ಳುದೂ ಆದ ಆನಂದಭೇರಿಯು ದಿಕ್ಕುಗಳಲ್ಲಿ ಪ್ರತಿಧ್ವನಿ ಯನ್ನುಂಟುಮಾಡುವುದಾಗಿ ಗಂಭೀರವಾಗಿ ಧ್ವನಿಮಾಡಿದ್ದಿತು.

**[೭]ಪ್ರತಸ್ಥೇಥ ಮಹಾಭಾಗೋ ವಂದಾರುರ್ಭರತಾಧಿಪಃ ।**
**ಜಿನಂ ಹಸ್ತ್ಯಶ್ವಪಾದಾತ[೮]ರಥಕಟ್ಯಾವೃತೋಭಿತಃ ॥ ೧೩ ॥**

ತರುವಾಯ ಮಹಾಭಾಗ್ಯಶಾಲಿಯೂ ಜಿನೇಶ್ವರನನ್ನು ವಂದಿಸುವವನೂ ಆದ ಭರತರಾಜನು ಸುತ್ತಲೂ ಆನೆ ಕುದುರೆ ಕಾಲಾಳು ರಥಗಳ ಸಮೂಹ ಇವುಗಳಿಂದ ಆವರಿಸಲ್ಪಟ್ಟವನಾಗಿ ಪ್ರಯಾಣಮಾಡಿದನು.

**ರೇಜೇ ಪ್ರಚಲಿತಾ ಸೇನಾ [೯]ತತಾನಕಪೃಥುಧ್ವನಿಃ ।**
**ವೇಲೇವ ವಾರಿಧೇಃ [೧೦]ಪ್ರೇಂಖದಸಂಖ್ಯಧ್ವಜವೀಚಿಕಾ ॥ ೧೪ ॥**

೧ ತಸ್ಮಾತ್ಕಾರಣಾತ್. ೨ ಪ್ರಥಮಂ ಕರ್ತವ್ಯಾ. ೩ ಬಾಹುಬಲ್ಯಾದಿಭಿರನುಜೈಃ ಸಹಿತಃ. ೪ ಮಹತ್ತರೈಃ. ೫ ಅಗ್ರೇ ಕೃತ್ವಾ. ೬ ಉದ್ಯತೋಭೂತ್. ೭ ಚಚಾಲ. ೮ ರಥಸಮೂಹಃ. ೯ ವಿಸ್ತೃತಃ. ೧೦ ಚಲತ್.

ಚಲಿಸುತ್ತಿರುವುದೂ ವಿಸ್ತಾರವಾದ ಭೇರಿಯ ದೊಡ್ಡ ಶಬ್ದವುಳ್ಳದೂ ಚಲಿಸುತ್ತಿರುವ ಅಸಂಖ್ಯಾತವಾದ ಧ್ವಜಗಳೆಂಬ ತೆರೆಮಾಲೆಗಳುಳ್ಳದೂ ಆದ ಸೈನ್ಯವು ಸಮುದ್ರದ ದಡದಂತೆ, ಶೋಭಿಸುತ್ತಿದ್ದಿತು.

**[1]ತಯಾ ಪರಿವೃತಃ ಪ್ರಾಪ ಸ ಜಿನಾಸ್ಥಾನಮಂಡಲಮ್ ।**
**ಪ್ರಸರ್ಪತ್ಪ್ರಭಯಾ ದಿಕ್ಷು ಜಿತಮಾರ್ತಂಡಮಂಡಲಮ್ ॥ ೧೫ ॥**

ಆ ಸೈನ್ಯದಿಂದ ಸುತ್ತಲ್ಪಟ್ಟ ಭರತರಾಜನು ದಿಕ್ಕುಗಳಲ್ಲಿ ಹರಡುತ್ತಿರುವ ಪ್ರಭೆಯಿಂದ ಸೂರ್ಯಮಂಡಲವನ್ನು ಜಯಿಸಿರುವ ಜಿನೇಶ್ವರನ ಮಂಡಲಾಕಾರವಾದ ಆಸ್ಥಾನವನ್ನು ಸೇರಿದನು. ಸಮವಸರಣವನ್ನು ಸೇರಿದನೆಂದರ್ಥವು.

**ಪರೀತ್ಯ ಪೂಜಯನ್ಮಾನಸ್ತಂಭಾನ್ನೋ[2]ತ್ತ್ಯೈತ್ತತಃ ಪರಮ್ ।**
**[3]ಖಾತಾಂ ಲತಾವನಂ ಸಾಲಂ ವನಾನಾಂ ಚ ಚತುಷ್ಟಯಮ್ ॥ ೧೬ ॥**

**ದ್ವಿತೀಯಂ ಸಾಲ[4]ಮುತ್ಕ್ರಮ್ಯ ಧ್ವಜಾನ್ಕಲ್ಪದ್ರುಮಾವಲಿಮ್ ।**
**ಸ್ತೂಪಾನ್ಪ್ರಾಸಾದಮಾಲಾಂ ಚ ಪಶ್ಯನ್ವಿಸ್ಮಯಮಾಪ ಸಃ ॥ ೧೭ ॥**

ಆ ಭರತರಾಜನು ಮೂರುಪ್ರದಕ್ಷಿಣೆಬಂದು ಮಾನಸ್ತಂಭಗಳನ್ನು ಪೂಜಿಸುವವನಾಗಿ ಮುಂದಕ್ಕೆ ನಡೆದನು. ತರುವಾಯ ಕಂದಕವನ್ನೂ ಲತಾವನವನ್ನೂ ಮೊದಲನೆಯ ಕೋಟೆಯನ್ನೂ ನಾಲ್ಕು ವನಗಳನ್ನೂ ಎರಡನೆಯ ಕೋಟೆಯನ್ನೂ ದಾಟಿ ಧ್ವಜಗಳನ್ನೂ ಕಲ್ಪವೃಕ್ಷಗಳ ಸಾಲನ್ನೂ ಸ್ತೂಪಗಳನ್ನೂ ದೊಡ್ಡ ಮನೆಗಳ ಸಾಲನ್ನೂ ನೋಡಿ ಆಶ್ಚರ್ಯಗೊಂಡನು.

**ತತೋ ದೌವಾರಿಕೈರ್ದೇವೈಃ ಸಂಭ್ರಾಮ್ಯದ್ಭಿಃ ಪ್ರವೇಶಿತಃ ।**
**ಶ್ರೀಮಂಡಪಸ್ಯ [5]ವೈದಗ್ಧೀಂ ಸೋಽಪಶ್ಯತ್ಸ್ವರ್ಗ[6]ಜಿತ್ವರೀಮ್ ॥ ೧೮ ॥**

ತರುವಾಯ ಓಡಾಡುತ್ತಿದ್ದ ದ್ವಾರಪಾಲಕದೇವತೆಗಳಿಂದ ಪ್ರವೇಶಮಾಡಿಸಲ್ಪಟ್ಟ ಆ ಭರತರಾಜನು ಸ್ವರ್ಗವನ್ನು ಜಯಿಸುವ ಸ್ವಭಾವವುಳ್ಳ ಲಕ್ಷ್ಮೀಮಂಡಪದ ಸೌಂದರ್ಯವನ್ನು ನೋಡಿದನು.

**ತತಃ ಪ್ರದಕ್ಷಿಣೀಕುರ್ವನ್ಧರ್ಮಚಕ್ರಚತುಷ್ಟಯಮ್ ।**
**ಲಕ್ಷ್ಮೀವಾನ್ಪೂಜಯಾಮಾಸ ಪ್ರಾಪ್ಯ ಪ್ರಥಮಪೀಠಿಕಾಮ್ ॥ ೧೯ ॥**

ಅನಂತರದಲ್ಲಿ ಐಶ್ವರ್ಯಸಂಪನ್ನನಾದ ಭರತರಾಜನು ಲಕ್ಷ್ಮೀಮಂಡಪಕ್ಕೆ ಪ್ರದಕ್ಷಿಣೆಬಂದು ಮೊದಲನೆಯ ಪೀಠವನ್ನು ತಲುಪಿ ನಾಲ್ಕು ಧರ್ಮಚಕ್ರಗಳನ್ನು ಪೂಜಿಸಿದನು.

**ತತೋ ದ್ವಿತೀಯಪೀಠಸ್ಥಾನ್ವಿಭೋರಷ್ಟೌ ಮಹಾಧ್ವಜಾನ್ ।**
**ಸೋಽರ್ಚಯಾಮಾಸ ಸಂಪ್ರೀತಃ ಪೂತೈರ್ಗಂಧಾದಿವಸ್ತುಭಿಃ ॥ ೨೦ ॥**

ತರುವಾಯ ಆ ಭರತರಾಜನು ಸಂತುಷ್ಟನಾಗಿ ಪವಿತ್ರವಾದ ಜಲಗಂಧ ಮೊದಲಾದ ವಸ್ತುಗಳಿಂದ ಸ್ವಾಮಿಯ ಎರಡನೆಯ ಪೀಠದಲ್ಲಿರುವ ಎಂಟು ಮಹಾಧ್ವಜಗಳನ್ನು ಪೂಜಿಸಿದನು.

**[7]ಮಧ್ಯೇಗಂಧಕುಟೀದ್ಧರ್ದ್ಧಿಂ ಪರಾರ್ಧ್ಯೇ ಹರಿವಿಷ್ಟರೇ ।**
**ಉದಯಾಚಲಮೂರ್ಧಸ್ಥಮಿವಾರ್ಕಂ ಜಿನಮೈಕ್ಷತ ॥ ೨೧ ॥**

ಆಮೇಲೆ ಗಂಧಕುಟಿಯ ಮಧ್ಯದಲ್ಲಿ ಅಮೂಲ್ಯವಾದ ಸಿಂಹಪೀಠದಲ್ಲಿ ಉದಯಪರ್ವತದ ಮಸ್ತಕದಲ್ಲಿರುವ ಸೂರ್ಯನನ್ನೋಪಾದಿಯಲ್ಲಿ ಜಿನೇಶ್ವರನನ್ನು ನೋಡಿದನು.

**ಚಲಚ್ಚಾಮರಸಂಘಾತವೀಜ್ಯಮಾನಮಹಾತನುಮ್ ।**
**ಪ್ರಪತನ್ನಿರ್ಝರಂ ಮೇರುಮಿವ ಚಾಮೀಕರಚ್ಛವಿಮ್ ॥ ೨೨ ॥**

೧ ಸೇನಯಾ. ೨ ಅತಿಕ್ರಾಂತವಾನ್. ೩ ಖಾತಿಕಾಂ. ೪ ಅತಿಕ್ರಮ್ಯ. ೫ ಸೌಂದರ್ಯಂ. ೬ ಜಯಶೀಲಾಂ. ೭ ಗಂಧಕುಟ್ಯಾ ಮಧ್ಯೇ.

**ಮಹಾಶೋಕತರೋರ್ಮೂಲೇ ಛತ್ರತ್ರಿತಯಸಂಶ್ರಿತಮ್ ।**
**[1]ತ್ರಿಧಾಭೂತವಿಧೂದ್ಭಾಸಿಬಲಾಹಕಮಿವಾದ್ರಿಪಮ್ ॥ ೨೩ ॥**

**ಪುಷ್ಪವೃಷ್ಟಿಪ್ರತಾನೇನ ಪರಿತೋ ಭ್ರಾಜಿತಂ ಪ್ರಭುಮ್ ।**
**ಕಲ್ಪದ್ರುಮಪ್ರಗಲಿತಪ್ರಸೂನಮಿವ ಮಂದರಮ್ ॥ ೨೪ ॥**

**ನಭೋವ್ಯಾಪಿಭಿರುದ್ಘೋಷಂ ಸುರದುಂದುಭಿನಿಸ್ವನೈಃ ।**
**ಪ್ರಸರ್ಪದ್ವೇಲಮಂಭೋಧಿಮಿವ ವಾತವಿಘೂರ್ಣಿತಮ್ ॥ ೨೫ ॥**

**ಧೀರಧ್ವಾನಂ ಪ್ರವರ್ಷಂತಂ ಧರ್ಮಾಮೃತಮತರ್ಕಿತಮ್ ।**
**ಆಹ್ಲಾದಿತಜಗತ್ಪ್ರಾಣಂ [2]ಪ್ರಾವೃಷೇಣ್ಯಮಿವಾಂಬುದಮ್ ॥ ೨೬ ॥**

**ಸ್ವದೇಹವಿಸರಜ್ಜ್ಯೋತ್ಸ್ನಾಸಲಿಲಕ್ಷಾಲಿತಾಖಿಲಮ್ ।**
**ಕ್ಷೀರಾಬ್ಧಿಮಧ್ಯ[3]ಸದ್ವೃದ್ಧಮಿವ [4]ಭೂಧ್ರಂ ಹಿರಣ್ಮಯಮ್ ॥ ೨೭ ॥**

**ಸೋ[5]ನ್ವಕ್ಷದಕ್ಷಿಣೀಕೃತ್ಯ ಭಗವಂತಂ ಜಗದ್ಗುರುಮ್ ।**
**[6]ಇಯಾಜ [7]ಯಾಯಜೂಕಾನಾಂ ಜ್ಯಾಯಾ[8]ನ್ಮಾಜ್ಯೇಜ್ಯಯಾ**
**ಪ್ರಭುಮ್ ॥ ೨೮ ॥**

ಹರಿಯುತ್ತಿರುವ ಗಿರಿನದಿಯುಳ್ಳದೂ ಬಂಗಾರದ ಕಾಂತಿಯುಳ್ಳದೂ ಆದ ಮಹಾಮೇರುಪರ್ವತವೋ ಎಂಬಂತೆ, ಚಲಿಸುತ್ತಿರುವ ಚಾಮರಗಳ ಸಮೂಹದಿಂದ ಬೀಸಲ್ಪಡುವ ದೊಡ್ಡ ಶರೀರವುಳ್ಳವನೂ ಬಂಗಾರದಂತೆ ಕಾಂತಿಯುಳ್ಳವನೂ ಮೂರುರೂಪವನ್ನು ಹೊಂದಿರುವ ಚಂದ್ರನಿಂದ ಪ್ರಕಾಶಿಸುತ್ತಿರುವ ಮೇಘಗಳುಳ್ಳ ಮಹಾಮೇರುಪರ್ವತವೋ ಎಂಬಂತೆ ದೊಡ್ಡ ಅಶೋಕವೃಕ್ಷದ ಬುಡದಲ್ಲಿ ಛತ್ರತ್ರಯವನ್ನು ಹೊಂದಿರುವವನೂ, ಕಲ್ಪವೃಕ್ಷಗಳಿಂದುದುರಿದ ಪುಷ್ಪಗಳುಳ್ಳ ಮೇರುಪರ್ವತವೋ ಎಂಬಂತೆ ಪ್ರಭುವಿನ ಸುತ್ತಲೂ ಹರಡಿಕೊಂಡಿರುವ ಪುಷ್ಪವೃಷ್ಟಿಯಿಂದ ಪ್ರಕಾಶಿಸಲ್ಪಟ್ಟವನೂ ಗಾಳಿಯ ಸಂಬಂಧದಿಂದ ಶಬ್ದವನ್ನು ಮಾಡುತ್ತಿರುವುದೂ ಅಲೆಗಳಿಂದ ವ್ಯಾಪ್ತವಾದ ದಡವುಳ್ಳದೂ ಆದ ಸಮುದ್ರವೋ ಎಂಬಂತೆ, ಆಕಾಶವನ್ನು ವ್ಯಾಪಿಸುತ್ತಿರುವ ದೇವದುಂದುಭಿಗಳ ಶಬ್ದಗಳೊಡನೆ ದೊಡ್ಡ ಧ್ವನಿಯುಳ್ಳವನೂ ವರ್ಷಾಕಾಲದ ಮೇಘದಂತೆ, ಗಂಭೀರವಾದ ಶಬ್ದವುಳ್ಳವನೂ ಜನರಿಂದ ಊಹಿಸಲ್ಪಡದಿದ್ದ ಧರ್ಮವೆಂಬ ಅಮೃತವನ್ನು ವರ್ಷಿಸುವವನೂ ಲೋಕದ ಪ್ರಾಣಿಸಮುದಾಯವನ್ನು ಸಂತೋಷಪಡಿಸಿದವನೂ ಕ್ಷೀರಸಮುದ್ರದ ಮಧ್ಯದಲ್ಲಿರುವುದೂ ಸುವರ್ಣಮಯವೂ ಆದ ಪರ್ವತವೋ ಎಂಬಂತೆ, ತನ್ನ ಶರೀರದಿಂದ ಹೊರಡುತ್ತಿರುವ ಕಾಂತಿಯೆಂಬ ನೀರಿನಿಂದ ಸಮಸ್ತಪದಾರ್ಥಗಳನ್ನು ತೊಳೆದಿರುವವನೂ ಭಗವಂತನೂ ಪ್ರಭುವೂ ಲೋಕಕ್ಕೆ ಗುರುವೂ ಆದ ವೃಷಭಸ್ವಾಮಿಯನ್ನು ಪ್ರದಕ್ಷಿಣೆಮಾಡಿ ಪೂಜೆಮಾಡುವವರಲ್ಲಿ ಶ್ರೇಷ್ಠನಾದ ಆ ಭರತರಾಜನು ಅಧಿಕವಾದ ಪೂಜಾಸಾಮಗ್ರಿಯಿಂದ ಅನುಕೂಲನಾಗಿ ಪೂಜಿಸಿದನು.

**ಪೂಜಾಂತೇ ಪ್ರಣಿಪತ್ಯೇಶಂ [9]ಮಹೀನಿಹಿತಜಾನ್ವಸೌ ।**
**ವಚಃಪ್ರಸೂನಮಾಲಾಭಿರಿತ್ಯಾನರ್ಚ ಗಿರಾಂಪತಿಮ್ ॥ ೨೯ ॥**

ಪೂಜೆಯಾದನಂತರದಲ್ಲಿ ಈ ಭರತರಾಜನು ಭೂಮಿಯಲ್ಲಿ ಮೊಣಕಾಲಿಟ್ಟು ಸ್ವಾಮಿಯನ್ನು ವಂದಿಸಿ ಮುಂದೆಹೇಳುವಪ್ರಕಾರವಾಗಿ ವಚನಗಳೆಂಬ ಪುಷ್ಪಮಾಲೆಗಳಿಂದ ವಚನ(ಶಾಸ್ತ್ರ)ಗಳಿಗೆ ಸ್ವಾಮಿಯಾದ ವೃಷಭತೀರ್ಥಂಕರರನ್ನು ಪೂಜಿಸಿದನು.

**ತ್ವಂ [10]ಬ್ರಹ್ಮಾ ಪರಮಜ್ಯೋತಿಸ್ತ್ವಂ ಪ್ರಭೂಷ್ಣುರಜೋ[11]ರಜಾಃ ।**
**ತ್ವಮಾದಿದೇವೋ ದೇವಾನಾಮಧಿದೇವೋ ಮಹೇಶ್ವರಃ ॥ ೩೦ ॥**

೧ ತ್ರೈರೂಪ್ಯೇಣ ಚಂದ್ರೋದ್ಭಾಸಿಮೇಘಂ. ೨ ಪ್ರಾವೃಷಿಭವಂ. ೩ ಸಂಸ್ಥಿತಂ. ೪ ಪರ್ವತಂ. ೫ ಅನುಕೂಲೋ ಭೂತ್ವಾ ಪಶ್ಚಾದ್ವಾ. ೬ ಪೂಜಯಾಮಾಸ. ೭ ಇಜ್ಯಾಶೀಲಾನಾಂ. ೮ ಭೂರಿ ಪೂಜಯಾ. ೯ ಮಹ್ಯಾಂ ನಿಕ್ಷಿಪ್ತಂ ಜಾನು ಯಸ್ಮಿನ್ಕರ್ಮಣಿ. ೧೦ ಗುಣೈರ್ಬೃಂಹತೇ ವರ್ಧತೇ ಇತಿ ಬ್ರಹ್ಮಾ. ೧೧ ಕರ್ಮರಜೋರಹಿತಃ.

''ನೀನು ಗುಣಗಳಿಂದ ವೃದ್ಧಿಹೊಂದುವವನು. ನೀನು ಶ್ರೇಷ್ಠವಾದ ಜ್ಯೋತಿಯು. ನೀನು ಅತ್ಯಂತ ಸಮರ್ಥನು. ನೀನು ಜನ್ಮರಹಿತನು. ನೀನು ಕರ್ಮಧೂಳಿಯಿಲ್ಲದವನು. ನೀನು ಮೊದಲನೆಯ ಸ್ವಾಮಿ(ತೀರ್ಥಂಕರ)ಯು. ನೀನು ಸಮಸ್ತ ದೇವತೆಗಳಿಗೆ ಮುಖ್ಯನಾದ ದೇವನು. ನೀನು ಮಹೇಶ್ವರನು.

**ತ್ವಂ ಸ್ರಷ್ಟಾ ತ್ವಂ ವಿಧಾತಾಸಿ ತ್ವಮೀಶಾನಃ ಪುರುಃ [೧]ಪುಮಾನ್ ।**
**ತ್ವಮಾದಿಪುರುಷೋ ವಿಶ್ವೇಟ್ [೨]ವಿಶ್ವರಾಡ್ವಿಶ್ವತೋಮುಖಃ ॥ ೩೧ ॥**

ನೀನು ಸೃಷ್ಟಿಸುವವನು. ನೀನು ವಿಧಾತೃ(ಉಪದೇಶಮಾಡುವವ)ವು. ನೀನು ಪ್ರಭುವು. ನೀನು ಪುರಾಣಪುರುಷನು. ನೀನು ಪವಿತ್ರಮಾಡುವವನು. ನೀನು ಪ್ರಥಮಪುರುಷನು. ಲೋಕಾಧಿಪತಿಯು. ಲೋಕದಲ್ಲಿ ಶೋಭಿಸುವವನು. ಎಲ್ಲಾ ಕಡೆಯಲ್ಲೂ ಮುಖವುಳ್ಳವನು.

**ವಿಶ್ವವ್ಯಾಪೀ ಜಗದ್ಭರ್ತಾ ವಿಶ್ವದೃ[೩]ಗ್ವಿಶ್ವಭುಗ್ವಿಭುಃ ।**
**ವಿಶ್ವತೋ[೪]ಕ್ಷಿಮಯಂ ಜ್ಯೋತಿರ್ವಿಶ್ವಯೋನಿರ್ವಿಯೋನಿಕಃ ॥ ೩೨ ॥**

ನೀನು ಕೇವಲಜ್ಞಾನಮೂಲಕವಾಗಿ ಲೋಕವನ್ನು ವ್ಯಾಪಿಸುವವನು. ಜಗತ್ತಿಗೆ ಪ್ರಭುವು. ಲೋಕವನ್ನು ನೋಡುವವನು. ಲೋಕವನ್ನು ತಿಳಿಯುವವನು. ವ್ಯಾಪಕನು. ಎಲ್ಲಾ ಕಡೆಯಲ್ಲೂ ಆತ್ಮಸ್ವರೂಪಜ್ಯೋತಿಯುಳ್ಳವನು. ಲೋಕಕ್ಕೆ ಕಾರಣ ಸ್ವರೂಪನು. ಉತ್ಪತ್ತಿಸ್ಥಾನರಹಿತನು.

**[೫]ಹಿರಣ್ಯಗರ್ಭೋ ಭಗವಾನ್ವೃಷಭೋ ವೃಷಭಧ್ವಜಃ ।**
**[೬]ಪರಮೇಷ್ಠೀ ಪರಂ ತತ್ತ್ವಂ ಪರಮಾತ್ಮಾ[೭]ತ್ಮಭೂರಸಿ ॥ ೩೩ ॥**

ನೀನು ಗರ್ಭದಲ್ಲಿರುವಾಗ ಸುವರ್ಣದ ಮಳೆಯನ್ನು ಸುರಿಸಿದವನು. ಐಶ್ವರ್ಯಸಂಪನ್ನನು. ಶ್ರೇಷ್ಠನು. ವೃಷಭಚಿಹ್ನೆಯುಳ್ಳ ಧ್ವಜವುಳ್ಳವನು. ಶ್ರೇಷ್ಠವಾದ ಪದವಿಯಲ್ಲಿರುವವನು. ಉತ್ಕೃಷ್ಟತತ್ತ್ವಸ್ವರೂಪನು. ಪರಮಾತ್ಮನು. ತನ್ನಿಂದ ತಾನೇ ಉದ್ಭವಿಸಿದವನು.

**ತ್ವಮಿನಸ್ತ್ವ[೮]ಮಧಿಜ್ಯೋತಿಸ್ತ್ವಮೀಶಸ್ತ್ವಮಯೋನಿಜಃ ।**
**ಅಜರಸ್ತ್ವಮನಾದಿಸ್ತ್ವಮನಂತಸ್ತ್ವಂ ತ್ವಮಚ್ಯುತಃ ॥ ೩೪ ॥**

ನೀನು ಪ್ರಭುವು. ಅಧಿಕಜ್ಯೋತಿಸ್ವರೂಪನು. ನೀನು ಸ್ವಾಮಿಯು. ನೀನು ಅಯೋನಿಜನು. ಮುಪ್ಪುರಹಿತನು. ಆದಿಯಿಲ್ಲದವನು. ಅಂತವಿಲ್ಲದವನು. ನೀನು ಅಚ್ಯುತ (ಪುನಃ ಸಂಸಾರಕ್ಕೆ ಬೀಳದವ)ನು.

**ತ್ವ[೯]ಮಕ್ಷರಸ್ತ್ವಮಕ್ಷಯ್ಯಸ್ತ್ವಮನಕ್ಷೋಽಸ್ಯನಕ್ಷರಃ ।**
**ವಿಷ್ಣುರ್ಜಿಷ್ಣುರ್ವಿಜಿಷ್ಣುಶ್ಚ ತ್ವಂ ಸ್ವಯಂಭೂಃ ಸ್ವಯಂಪ್ರಭಃ ॥ ೩೫ ॥**

ನೀನು ಅಕ್ಷರ(ನಾಶರಹಿತ)ನು. ನಾಶಕ್ಕೆ ಯೋಗ್ಯನಲ್ಲದವನು. ನೀನು ಇಂದ್ರಿಯ ರಹಿತನು. ಅನಕ್ಷರ(ಅವಾಚ್ಯ)ನು. ವ್ಯಾಪಕನು. ಜಯಶೀಲನು. ವಿಜಯಿಯು. ಸ್ವಯಂಭುವು. ತಾನೇ ಪ್ರಕಾಶಸ್ವರೂಪನು.

**ತ್ವಂ ಶಂಭುಃ ಶಂಭವಃ [೧೦]ಶಂಯುಃ [೧೧]ಶಂವದಃ ಶಂಕರೋ ಹರಃ ।**
**ಹರಿರ್ಮೋಹಾಸುರಾರಿಶ್ಚ ತಮೋರಿರ್ಭವ್ಯಭಾಸ್ಕರಃ ॥ ೩೬ ॥**

ನೀನು ಶಂಭುವು. ಸುಖೋತ್ಪತ್ತಿಯುಳ್ಳವನು. ಸುಖವನ್ನೊದಗಿಸುವವನು. ಸುಖವನ್ನು ಹೇಳುವವನು. ಸುಖವನ್ನು ಮಾಡುವವನು. ಪಾಪವನ್ನು ನಾಶ ಮಾಡುವವನು. ಹರಿ(ಪಾಪನಾಶಕ)ಯು. ಮೋಹವೆಂಬ ರಾಕ್ಷಸನಿಗೆ ಶತ್ರುವು. ಅಜ್ಞಾನಾಂಧಕಾರಕ್ಕೆ ಶತ್ರುವು. ಭವ್ಯಪ್ರಾಣಿಗಳಿಗೆ ಸೂರ್ಯನಂತಿರುವವನು.

೧ ಪುನಾತೀತಿ. ೨ ವಿಶ್ವಸ್ಮಿನ್ರಾಜತ ಇತಿ. ೩ ವಿಶ್ವಂ ಬದ್ಧವಾನ್. ೪ ಆತ್ಮಸ್ವರೂಪಜ್ಯೋತಿಃ. ೫ ಹಿರಣ್ಯಂ ಗರ್ಭೇ ಯಸ್ಯ ಸಃ. ೬ ಪರಮಪದೇ ಸ್ಥಿತಃ. ೭ ಆತ್ಮನಾ ಭವತೀತಿ. ೮ ಅಧಿಕಜ್ಯೋತಿಃ. ೯ ನ ಕ್ಷರತೀತ್ಯಕ್ಷರಃ. ೧೦ ಸುಖಯೋಜಕಃ. ೧೧ ಶಂ ಸುಖಂ ವದತೀತಿ.

**ಪುರಾಣಃ ಕವಿರಾದ್ಯಸ್ತ್ವಂ ಯೋಗೀ ಯೋಗವಿದಾಂವರಃ ।**
**ತ್ವಂ ಶರಣ್ಯೋ ವರೇಣ್ಯೋಗ್ರ್ಯಸ್ತ್ವಂ ಪೂತಃ ಪುಣ್ಯನಾಯಕಃ ॥ ೩೭ ॥**

ನೀನು ಪೂರ್ವಿಕನು. ಮೊದಲನೆಯ ಕವಿ(ಜ್ಞಾನಿ)ಯು. ಯೋಗಿಯು. ಯೋಗ(ಧ್ಯಾನ)ವನ್ನು ತಿಳಿಯುವವರಲ್ಲಿ ಶ್ರೇಷ್ಠನು. ನೀನು ಶರಣಾಗತರಕ್ಷಕನು. ಶ್ರೇಷ್ಠನು. ಅಗ್ರಗಣ್ಯನು. ನೀನು ಪರಿಶುದ್ಧನು. ಪುಣ್ಯಕ್ಕೊಡೆಯನು.

**ತ್ವಂ [೧]ಯೋಗಾತ್ಮಾ ಸಯೋಗಶ್ಚ ಸಿದ್ಧೋ ಬುದ್ಧೋ [೨]ನಿರುದ್ಧವಃ ।**
**ಸೂಕ್ಷ್ಮೋ ನಿರಂಜನಃ [೩]ಕಂಜಸಂಜಾತೋ ಜಿನಕುಂಜರಃ ॥ ೩೮ ॥**

ನೀನು ಧ್ಯಾನಸ್ವರೂಪನು. ಧ್ಯಾನಯುಕ್ತನು. ಸಿದ್ಧ(ಕೃತಕೃತ್ಯ)ನು. ತಿಳುವಳಿಕೆಯುಳ್ಳವನು. ಉತ್ಸವರಹಿತನು ಅಥವಾ ಉತ್ಕೃಷ್ಟಪ್ರಭುರಹಿತನು. ಸೂಕ್ಷ್ಮನು. ಪಾಪರಹಿತನು. ಸಾವಿರ ಎಸಳುಗಳುಳ್ಳ ತಾವರೆಯಲ್ಲಿ ಪ್ರಾದುರ್ಭವಿಸಿದವನು. ಜಿನಶ್ರೇಷ್ಠನು.

**ಛಂದೋವಿಚ್ಛಂದಸಾಂ ಕರ್ತಾ [೪]ವೇದವಿದ್ವದತಾಂವರಃ ।**
**ವಾಚಸ್ಪತಿರಧರ್ಮಾರಿರ್ಧರ್ಮಾದಿರ್ಧರ್ಮನಾಯಕಃ ॥ ೩೯ ॥**

ನೀನು ಛಂದಸ್ಸುಗಳನ್ನು ತಿಳಿಯುವವನು. ಛಂದಸ್ಸುಗಳಿಗೆ ಕರ್ತನು. ಆಚಾರಾದಿ ದ್ವಾದಶಾಂಗವೇದಗಳನ್ನು ತಿಳಿಯುವವನು. ವಕ್ತೃಗಳಲ್ಲಿ ಶ್ರೇಷ್ಠನು. ವಚನಗಳಿಗೆ ಅಧಿಪತಿಯು. ಅಧರ್ಮಕ್ಕೆ ಶತ್ರುವು. ಧರ್ಮಕ್ಕೆ ಮೊದಲನೆಯವನು. ಧರ್ಮಕ್ಕೆ ಪ್ರಭುವು.

**ತ್ವಂ ಜಿನಃ ಕಾಮಜಿಜ್ಜೇತಾ ತ್ವಮರ್ಹ[೫]ನ್ನರಿಹಾ[೬]ರಹಾಃ ।**
**ಧರ್ಮಧ್ವಜೋ ಧರ್ಮಪತಿಃ ಕರ್ಮಾರಾತಿ[೭]ನಿಶುಂಭನಃ ॥ ೪೦ ॥**

ನೀನು ಕರ್ಮಶತ್ರುಗಳನ್ನು ಜಯಿಸುವವನು. ಕಾಮನನ್ನು ಜಯಿಸುವವನು. ಜಯಶೀಲನು. ನೀನು ಪೂಜ್ಯನು. ಕರ್ಮಶತ್ರುಗಳನ್ನು ನಾಶಮಾಡುವವನು. ರಹಸ್ಯ ರಹಿತನು. ಧರ್ಮವೇ ಧ್ವಜವಾಗಿರುವವನು. ಧರ್ಮಕ್ಕೆ ಸ್ವಾಮಿಯು. ಕರ್ಮವೆಂಬ ಶತ್ರುವನ್ನು ಘಾತಮಾಡುವವನು.

**ತ್ವಂ [೮]ಹ ಭವ್ಯಾಬ್ಜಿನೀಬಂಧುಸ್ತ್ವಂ [೯]ಹವಿರ್ಭೋಕ್ತ್ವ[೧೦]ಮಧ್ವರಃ ।**
**ತ್ವಂ [೧೧]ಮಖಾಂಗಂ ಮಖಜ್ಯೇಷ್ಠಸ್ತ್ವಂ [೧೨]ಹೋತಾ ಹವ್ಯಮೇವ ಚ ॥**

ನೀನು ಭವ್ಯರೆಂಬ ಕಮಲಲತೆಗೆ ಸೂರ್ಯನು. ನೀನು ಅಗ್ನಿಸ್ವರೂಪನು. ನೀನು ಯಾಗಸ್ವರೂಪನು. ನೀನು ಪೂಜೆಗೆ ಕಾರಣನು. ಶ್ರೇಷ್ಠವಾದ ಯಾಗಸ್ವರೂಪನು. ನೀನು ಪೂಜಕನು. ಪೂಜಾಯೋಗ್ಯವಾದ ದ್ರವ್ಯವೂ ನೀನೆ.

**ಯಜ್ವಾಜ್ಯಂ ಚ ತ್ವಮಿಜ್ಯಾ ಚ ಪುಣ್ಯೋ ಗಣ್ಯೋ ಗುಣಾಕರಃ ।**
**ತ್ವ[೧೩]ಮಪಾರಿರಪಾರಶ್ಚ ತ್ವಮಮಧ್ಯೋಽಪಿ ಮಧ್ಯಮಃ ॥ ೪೨ ॥**

ನೀನು ಯಜ್ಞಮಾಡುವವನು. ನೀನು ಯಜ್ಞದ್ರವ್ಯವು. ನೀನು ಪೂಜಾಸ್ವರೂಪನು. ನೀನು ಪುಣ್ಯರೂಪನು. ಅಗಣ್ಯನು. ಗುಣಗಳಿಗೆ ಉತ್ಪತ್ತಿಸ್ಥಾನನು. ನೀನು ಶತ್ರುರಹಿತನು. ಅಪಾರನು. ನೀನು ಮಧ್ಯರಹಿತ(ಉತ್ಕೃಷ್ಟ)ನಾಗಿದ್ದರೂ ಮಧ್ಯಮನು. ಮಧ್ಯದಲ್ಲಿ ಕೇವಲಜ್ಞಾನಸ್ವರೂಪವಾದ ಮಾ(ಲಕ್ಷ್ಮೀ)ವುಳ್ಳವನೆಂದು ಭಾವವು.

**ಉತ್ತಮೋ[೧೪]ನುತ್ತರೋ ಜ್ಯೇಷ್ಠೋ [೧೫]ಗರಿಷ್ಠಃ [೧೬]ಸ್ಥೇಷ್ಠ ಏವ ಚ ।**
**ತ್ವ[೧೭]ಮಣೀಯಾ[೧೮]ನ್ಮಹೀಯಾಂಶ್ಚ [೧೯]ಸ್ಥವೀಯಾನ್ಗರಿಮಾಸ್ಪದಮ್ ॥**

೧ ಧ್ಯಾನಸ್ವರೂಪಃ. ೨ ಉತ್ಸವರಹಿತಃ ಉತ್ಕೃಷ್ಟಪ್ರಭುರಹಿತಶ್ಚ. ೩ ಸಹಸ್ರದಲ ಕರ್ಣಿಕೋಪರಿ ಪ್ರಾದುರ್ಭೂತಃ. ೪ ದ್ವಾದಶಾಂಗಾಗಮಜ್ಞಃ. ೫ ಕರ್ಮಶತ್ರೂನ್ ಹಂತೀತಿ. ೬ ರಹಸ್ಯರಹಿತಃ. ೭ ಘಾತಕಃ. ೮ ಪಾದಪೂರಣೇ. ೯ ಹೋತವ್ಯದ್ರವ್ಯಂ. ೧೦ ಯಾಗಃ. ೧೧ ಯಜನಕಾರಣಂ. ೧೨ ಪೂಜಕಃ. ೧೩ ಅಪಗತಾರಿಃ. ೧೪ ನ ವಿದ್ಯತೇ ಉತ್ತರಃ ಶ್ರೇಷ್ಠೋ ಯಸ್ಮಾತ್ಸಃ. ೧೫ ಅತಿಶಯೇನ ಗುರುಃ. ೧೬ ಅತಿಶಯೇನ ಸ್ಥಿರಃ. ೧೭ ಅತಿಶಯೇನಾಣುಃ. ೧೮ ಅತಿಶಯೇನ ಮಹಾನ್. ೧೯ ಅತಿಶಯೇನ ಸ್ಥೂಲಃ.

ನೀನು ಉತ್ತಮನು. ನಿನಗಿಂತ ಉತ್ತಮರಿಲ್ಲದವನು. ಜ್ಯೇಷ್ಠನು. ಅತಿಶಯವಾದ ಗುರುವು. ಅತ್ಯಂತ ಸ್ಥಿರನು. ಅತಿಶಯವಾಗಿ ಅಣುಸ್ವರೂಪನು. ಅತ್ಯಂತ ದೊಡ್ಡ ಸ್ವರೂಪವುಳ್ಳವನು. ಅತ್ಯಂತ ಸ್ಥೂಲನು. ಪೂಜ್ಯತೆಗೆ ಸ್ಥಾನನು.

**ಮಹಾ[೧]ನ್ಮಹೀಯಿತೋ [೨]ಮಹ್ಯೋ ಭೂಷ್ಣುಃ [೩]ಸ್ಥಾಸ್ನುರನಶ್ವರಃ ।**
**[೪]ಜಿತ್ವರೋ[೫]ನಿತ್ವರೋ ನಿತ್ಯಃ ಶಿವಃ ಶಾಂತೋ ಭವಾಂತಕಃ ॥ ೪೪ ॥**

ನೀನು ದೊಡ್ಡವನು. ಕ್ಷಮೆಯಲ್ಲಿ ಭೂಮಿಯಂತಿರುವವನು. ಪೂಜ್ಯನು. ವೃದ್ಧಿಸ್ವಭಾವವುಳ್ಳವನು. ಬಹಳ ಸ್ಥಿರಸ್ವಭಾವವುಳ್ಳವನು. ಶಾಶ್ವತನು. ಜಯಸ್ವಭಾವವುಳ್ಳವನು. ಗಮನಸ್ವಭಾವವಿಲ್ಲದವನು. ನಿತ್ಯನು. ಮಂಗಲಸ್ವರೂಪನು. ಶಾಂತಸ್ವರೂಪನು. ಸಂಸಾರವನ್ನು ನಾಶಮಾಡುವವನು.

**ತ್ವಂ ಹಿ [೬]ಬ್ರಹ್ಮವಿದಾಂ ಧ್ಯೇಯಸ್ತ್ವಂ ಹಿ ಬ್ರಹ್ಮಪದೇಶ್ವರಃ ।**
**ತ್ವಾಂ ನಾಮಮಾಲಯಾ ದೇವಮಿತ್ಯಭಿಷ್ಟುಮಹೇ ವಯಮ್ ॥ ೪೫ ॥**

ನೀನು ಆತ್ಮಜ್ಞಾನಿಗಳಿಗೆ ಧ್ಯಾನಯೋಗ್ಯನು. ನೀನು ಬ್ರಹ್ಮಪದಕ್ಕೊಡೆಯನು. ನಾವು ಸ್ವಾಮಿಯಾದ ನಿನ್ನನ್ನು ಮೇಲೆ ಹೇಳಿದ ಹೆಸರುಗಳೆಂಬ ಮಾಲಿಕೆಯಿಂದ ಸ್ತೋತ್ರಮಾಡುತ್ತೇವೆ.

**ಅಷ್ಟೋತ್ತರಶತಂ ನಾಮ್ನಾಮಿತ್ಯನುಧ್ಯಾಯ ಚೇತಸಾ ।**
**ತ್ವಾಮೀಡೇನೀಡ[೭]ಮೀಡಾನಾಂ ಪ್ರಾತಿಹಾರ್ಯಾಷ್ಟಕಪ್ರಭುಮ್ ॥ ೪೬ ॥**

ಈಪ್ರಕಾರವಾಗಿ ನೂರೆಂಟು ಹೆಸರುಗಳನ್ನು ಮನಸ್ಸಿನಿಂದ ಸ್ಮರಿಸಿ, ಸ್ತುತಿಗಳಿಗೆ ಸ್ಥಾನನೂ ಎಂಟು ಪ್ರಾತಿಹಾರ್ಯಗಳಿಗೆ ಪ್ರಭುವೂ ಆದ ನಿನ್ನನ್ನು ಸ್ತೋತ್ರ ಮಾಡುತ್ತೇನೆ.

**ತವಾಯಂ ಪ್ರಚಲಚ್ಛಾಖಸ್ತುಂಗೋಶೋಕಮಹಾಂಘ್ರಿಪಃ ।**
**ಸ್ವಚ್ಛಾಯಾಸಂಶ್ರಿತಾನ್ಪಾತಿ ತ್ವತ್ತಃ ಶಿಕ್ಷಾಮಿವಾಶ್ರಿತಃ ॥ ೪೭ ॥**

ಚಲಿಸುತ್ತಿರುವ ಕೊಂಬೆಗಳುಳ್ಳದೂ ಉನ್ನತವೂ ಆದ ಈ ನಿನ್ನ ದೊಡ್ಡ ಅಶೋಕವೃಕ್ಷವು, ನಿನ್ನಿಂದ ಉಪದೇಶ(ಶಿಕ್ಷಣ)ವನ್ನು ಹೊಂದಿದೆಯೋ ಎಂಬಂತೆ, ತನ್ನ ನೆರಳನ್ನಾಶ್ರಯಿಸಿದವರನ್ನು ರಕ್ಷಿಸುತ್ತದೆ.

**ತವಾಮೀ ಚಾಮರವ್ರಾತಾ ಯಕ್ಷೈ[೮]ರುತ್ಕ್ಷಿಪ್ಯ ವೀಜಿತಾಃ ।**
**ನಿರ್ಧುನಂತೀವ ನಿರ್ವ್ಯಾಜಮಾಗೋ[೯]ಗೋಮಕ್ಷಿಕಾ ನೃಣಾಮ್ ॥ ೪೮ ॥**

ಯಕ್ಷರಿಂದ ಮೇಲಕ್ಕೆತ್ತಿ ಬೀಸಲ್ಪಟ್ಟ ಈ ನಿನ್ನ ಚಾಮರಗಳ ಸಮೂಹಗಳು ಯಾವ ನೆಪವೂ ಇಲ್ಲದೆ ಮನುಷ್ಯರ ಪಾಪಗಳೆಂಬ ಗೋಮಕ್ಷಿಕ(ಕಾಡುನೊಣ)ಗಳನ್ನು ದೂರಮಾಡುತ್ತವೆಯೋ ಎಂಬಂತಿವೆ.

**ತ್ವಾಮಾಪತಂತಿ ಪರಿತಃ ಸುಮನೋಂಜಲಯೋ ದಿವಃ ।**
**ತುಷ್ಟಯಾ ಸ್ವರ್ಗಲಕ್ಷ್ಮ್ಯೇವ ಮುಕ್ತಾ ಹರ್ಷಾಶ್ರುಬಿಂದವಃ ॥ ೪೯ ॥**

ನಿನ್ನ ಸುತ್ತಲೂ ಸ್ವರ್ಗದಿಂದ ಬೀಳುವ ಪುಷ್ಪಾಂಜಲಿಗಳು, ಸಂತುಷ್ಟಳಾದ ಸ್ವರ್ಗಲಕ್ಷ್ಮಿಯಿಂದ ಬಿಡಲ್ಪಟ್ಟ ಸಂತೋಷದ ಕಣ್ಣೀರುಬಿಂದುಗಳೋ ಎಂಬಂತಿವೆ.

**ಛತ್ರತ್ರಿತಯಮಾಭಾತಿ ಸೂಚ್ಛ್ರಿತಂ ಜಿನ ತಾವಕಮ್ ।**
**ಮುಕ್ತಾಲಂಬನವಿಭ್ರಾಜಿ ಲಕ್ಷ್ಮ್ಯಾಃ ಕ್ರೀಡಾಸ್ಥಲಾಯಿತಮ್ ॥ ೫೦ ॥**

ಜಿನೇಶ್ವರನೆ! ಅತ್ಯುನ್ನತವೂ ಮುತ್ತಗಳು ಜೋಲುತ್ತಿರುವುದರಿಂದ ಮನೋಹರವೂ ಆದ ನಿನ್ನ ಛತ್ರತ್ರಯವು, ಲಕ್ಷ್ಮಿಯ ಕ್ರೀಡಾಸ್ಥಳದಂತೆ, ಪ್ರಕಾಶಿಸುತ್ತಿದೆ.

೧ ಮಹೀವಾಚರಿತಃ. ೨ ಪೂಜ್ಯಃ. ೩ ಸ್ಥಿರತರಃ. ೪ ಜಯಶೀಲಃ. ೫ ಗಮನಶೀಲತಾರಹಿತಃ. ೬ ಆತ್ಮಜ್ಞಾನಿನಾಂ. ೭ ಸ್ತುತೀನಾಂ. ೮ ಉದ್ಧೃತ್ಯ. ೯ ವನಮಕ್ಷಿಕಾಃ.

**ತವ ಹರ್ಯಾಸನಂ ಭಾತಿ ವಿಶ್ವಭರ್ತುರ್[೧]ಭರ್ವದ್ಧರಮ್ ।**
**ಕೃತಯತ್ನೈರಿವೋದ್ವೋಢುಂ [೨]ನ್ಯಗ್ಭೂಯೋ[೩]ಢಂ ಮೃಗಾಧಿಪೈಃ ॥ ೫೧ ॥**

ಲೋಕಾಧಿಪತಿಯಾದ ನಿನ್ನ ಸಿಂಹಾಸನವನ್ನು ನಿನ್ನ ಭಾರವನ್ನು ಹೊರುವುದಕ್ಕೋಸ್ಕರ ಪ್ರಯತ್ನಪಟ್ಟವುಗಳಂತಿರುವ ಸಿಂಹಗಳು ಕೆಳಕ್ಕೆ ಬಗ್ಗಿ ಧರಿಸಿಕೊಂಡಿವೆ.

**ತವ ದೇಹಪ್ರಭೋತ್ಸರ್ಪೈರಿದಮಾಕ್ರಮ್ಯತೇ ಸದಃ ।**
**ಪುಣ್ಯಾಭಿಷೇಕ[೪]ಸಂಭಾರಂ [೫]ಲಂಭಯದ್ಭಿರಿವಾಭಿತಃ ॥ ೫೨ ॥**

ಸುತ್ತಲೂ ಹರಡಿರುವ ನಿನ್ನ ಶರೀರದ ಪ್ರಭೆಗಳು, ಪುಣ್ಯಾಭಿಷೇಕದ ಸಮೂಹವನ್ನು ಹೊಂದಿಸುತ್ತವೆಯೋ ಎಂಬಂತೆ, ಈ ಸಭೆಯನ್ನಾಕ್ರಮಿಸುತ್ತವೆ. ಸ್ವಾಮಿಯ ಶರೀರದ ಪ್ರಭೆಯು ಸಭೆಯ ಮೇಲೆ ಬಿದ್ದಿದೆಯೆಂದು ಭಾವವು.

**ತವ ವಾಕ್ಪ್ರಸರೋ ದಿವ್ಯಃ ಪುನಾತಿ ಜಗತಾಂ ಮನಃ ।**
**ಮೋಹಾಂಧತಮಸಂ ಧುನ್ವನ್ ಸ್ವಜ್ಞಾನಾರ್ಕಾಂಶುಕೋಪಮಃ ॥ ೫೩ ॥**

ತನ್ನ ಜ್ಞಾನವೆಂಬ ಸೂರ್ಯನ ಕಿರಣದಂತಿರುವುದೂ ಹರಡುತ್ತಿರುವುದೂ ಆದ ನಿನ್ನ ದಿವ್ಯಧ್ವನಿಯು ಅಜ್ಞಾನಾಂಧಕಾರವನ್ನು ಹೋಗಲಾಡಿಸಿ ಜಗತ್ತಿನ ಮನಸ್ಸನ್ನು ಪವಿತ್ರಮಾಡುತ್ತದೆ.

**ಪ್ರಾತಿಹಾರ್ಯಾ[೬]ಣ್ಯಹಾರ್ಯಾಣಿ ತವಾಮೂನಿ ಚಕಾಸತಿ ।**
**ಲಕ್ಷ್ಮೀಹಂಸ್ಯಾಃ ಸಮಾಕ್ರೀಡಪುಲಿನಾನಿ ಶುಚೀನಿ ವಾ ॥ ೫೪ ॥**

ಈ ನಿನ್ನ ಸಹಜವಾದ ಪ್ರಾತಿಹಾರ್ಯಗಳು, ಲಕ್ಷ್ಮಿಯೆಂಬ ಸ್ತ್ರೀಹಂಸಪಕ್ಷಿಯ ನಿರ್ಮಲವೂ ಕ್ರೀಡಾರ್ಥವೂ ಆದ ಮರಳುಗಳೋ ಎಂಬಂತೆ, ಪ್ರಕಾಶಿಸುತ್ತಿವೆ.

**ನಮೋ ವಿಶ್ವಾತ್ಮನೇ ತುಭ್ಯಂ ತುಭ್ಯಂ ವಿಶ್ವಸೃಜೇ ನಮಃ ।**
**ಸ್ವಯಂಭುವೇ ನಮಸ್ತುಭ್ಯಂ ಕ್ಷಾಯಿಕೈ[೭]ರ್ಲಬ್ಧಿಪರ್ಯಯೈಃ ॥ ೫೫ ॥**

ಜಗತ್ಸ್ವರೂಪ(ಜ್ಞಾನಮೂಲಕ ಸಕಲವನ್ನು ತಿಳಿಯುವ)ನಾದ ನಿನಗೆ ನಮಸ್ಕಾರವು. ಜಗತ್ಸೃಷ್ಟಿಕರ್ತನಾದ ನಿನಗೆ ನಮಸ್ಕಾರವು. ಸಮ್ಯಕ್ತ್ವ, ಚಾರಿತ್ರ, ಜ್ಞಾನ, ದರ್ಶನ, ದಾನ, ಲಾಭ, ಭೋಗ, ಉಪಭೋಗ, ವೀರ್ಯಗಳೆಂಬ ಒಂಬತ್ತು ಕ್ಷಾಯಿಕಲಬ್ಧಿಪರ್ಯಾಯಗಳಿಂದ ಸ್ವಯಂಭು(ತಾನಾಗಿ ಪ್ರಾದುರ್ಭವಿಸಿದವನು)ವಾದ ನಿನಗೆ ನಮಸ್ಕಾರವು.

**ಜ್ಞಾನದರ್ಶನವೀರ್ಯಾಣಿ [೮]ವಿರತಿಃ [೯]ಶುದ್ಧದರ್ಶನಮ್ ।**
**ದಾನಾದಿಲಬ್ಧಯಶ್ಚೇತಿ [೧೦]ಕ್ಷಾಯಿಕ್ಯಸ್ತವ ಶುದ್ಧಯಃ ॥ ೫೬ ॥**

ಜ್ಞಾನ, ದರ್ಶನ, ವೀರ್ಯ, ಚಾರಿತ್ರ, ಕ್ಷಾಯಿಕಸಮ್ಯಗ್ದರ್ಶನ, ದಾನ ಮೊದಲಾದ ಲಬ್ಧಿಗಳು ಈಪ್ರಕಾರವಾಗಿ ನಿನ್ನ ಕರ್ಮಕ್ಷಯದಲ್ಲುಂಟಾದ ಶುದ್ಧಿಗಳಾಗಿವೆ.

**ಜ್ಞಾನ[೧೧]ಮಪ್ರತಿಘಂ ವಿಶ್ವಂ [೧೨]ಪರ್ಯಚ್ಛೈತ್ಸೀತ್ತವಾ[೧೩]ಕ್ರಮಾತ್ ।**
**ತ್ರಯಂ ಹ್ಯಾವರಣಾದೇತದ್ವ್ಯವಧಿಃ [೧೪]ಕರಣಂ [೧೫]ಕ್ರಮಃ ॥ ೫೭ ॥**

ಜ್ಞಾನಕ್ಕೆ ವ್ಯವಧಾನವೂ ಇಂದ್ರಿಯಗಳ ಅಪೇಕ್ಷೆಯೂ ಕ್ರಮವೂ ಈ ಮೂರೂ ಜ್ಞಾನಾವರಣೀಯಕರ್ಮದ ನಿಮಿತ್ತದಿಂದುಂಟಾಗುತ್ತವೆ. ಈ ಕರ್ಮಸಂಬಂಧವಿಲ್ಲದಿರುವುದರಿಂದ ನಿನ್ನ ಜ್ಞಾನವು ಪ್ರತಿಬಂಧವಿಲ್ಲದುದಾಗಿ ಲೋಕವನ್ನೆಲ್ಲ ಒಂದೇ ಕಾಲದಲ್ಲಿ ತಿಳಿಯಿತು.

**[೧೬]ಚಿತ್ರಂ ಜಗದಿದಂ [೧೭]ಚಿತ್ರಂ ತ್ವಯಾ[೧೮]ಬೋಧಿ ಯದಕ್ರಮಾತ್ ।**
**ಅಕ್ರಮೋಽಪಿ ಕ್ವಚಿಚ್ಛ್ಲಾಘ್ಯಃ ಪ್ರಭುಮಾಶ್ರಿತ್ಯ ಲಕ್ಷ್ಯತೇ ॥ ೫೮ ॥**

೧ ಭವತೋಭಾರಂ. ೨ ಅಧೋ ಭೂತ್ವಾ. ೩ ಧೃತಂ. ೪ ಸಮೂಹಂ. ೫ ಪ್ರಾಪಯದ್ಭಿಃ. ೬ ಸಹಜಾನೀತ್ಯರ್ಥಃ. ೭ ನವಕೇವಲಲಬ್ಧಿಪರ್ಯಾಯೈಃ. ೮ ಚಾರಿತ್ರಂ. ೯ ಕ್ಷಾಯಿಕಸಮ್ಯಕ್ತ್ವಂ. ೧೦ ಕ್ಷಯೇ ಭವಾಃ. ೧೧ ವಿಘ್ನರಹಿತಂ. ೧೨ ಪರಿಚ್ಛಿನತ್ತಿ ಸ್ಮ. ೧೩ ಯುಗಪದೇವ. ೧೪ ಇಂದ್ರಿಯಂ. ೧೫ ಪರಿಪಾಟಿಃ. ೧೬ ನಾನಾಪ್ರಕಾರಂ. ೧೭ ಆಶ್ಚರ್ಯಂ. ೧೮ ಜ್ಞಾತಂ.

ನಾನಾಪ್ರಕಾರವಾದ ಈ ಜಗತ್ತನ್ನು ನೀನು ಅಕ್ರಮದಿಂದ (ಒಂದೇಕಾಲದಲ್ಲಿ) ತಿಳಿದೆ. ಕೆಲವು ಕಡೆಯಲ್ಲಿ ಅಕ್ರಮವೂ ಪ್ರಭುವನ್ನು ಹೊಂದಿ ಶ್ಲಾಘ್ಯವಾಗಿ ತೋರುತ್ತದೆ. ಆಶ್ಚರ್ಯ !

**ಇಂದ್ರಿಯೇಷು ಸಮಗ್ರೇಷು ತವ ಸತ್ಸ್ವಪ್ಯತೀಂದ್ರಿಯಮ್ ।**
**ಜ್ಞಾನಮಾಸೀದಚಿಂತ್ಯಾ ಹಿ ಯೋಗಿನಾಂ ಪ್ರಭುಶಕ್ತಯಃ ॥ ೫೯ ॥**

ನಿನ್ನ ಇಂದ್ರಿಯಗಳು ಸಂಪೂರ್ಣವಾಗಿದ್ದರೂ ನಿನಗೆ ಇಂದ್ರಿಯಗಳನ್ನತಿಕ್ರಮಿಸಿದ ಜ್ಞಾನವುಂಟಾಯಿತು. ಯೋಗಿಗಳ ಪ್ರಭುಶಕ್ತಿಗಳು ಅಚಿಂತ್ಯವಾದುವು. ಯೋಗಿಗಳ ಆತ್ಮಶಕ್ತಿಯು ಕಲ್ಪನಾತೀತವಾದುದೆಂದರ್ಥವು.

**ಯಥಾ ಜ್ಞಾನಂ ತಥೈವಾಭೂತ್ಕ್ಷಾಯಿಕಂ ತವ ದರ್ಶನಮ್ ।**
**[೧]ತಾಭ್ಯಾಂ ಯುಗಪದೇವಾಸೀ[೨]ದುಪಯೋಗಸ್ತವಾದ್ಭುತಮ್ ॥ ೬೦ ॥**

ಕ್ಷಾಯಿಕಜ್ಞಾನವುಂಟಾದಂತೆ ನಿನಗೆ ಕ್ಷಾಯಿಕದರ್ಶನವುಂಟಾಯಿತು. ಆ ಕ್ಷಾಯಿಕ ಜ್ಞಾನದರ್ಶನಗಳಿಂದ ನಿನಗೆ ಒಂದೇಕಾಲದಲ್ಲಿ ಆಶ್ಚರ್ಯಕರವಾದ ತಿಳಿವಳಿಕೆಯುಂಟಾಯಿತು. ಕರ್ಮಬದ್ಧರಾದ ಸಂಸಾರಿಗಳಿಗೆ ದರ್ಶನಜ್ಞಾನಗಳು ಕ್ರಮವಾಗಿ ಉಂಟಾಗುತ್ತವೆ; ಸ್ವಾಮಿಗೆ ಒಂದೇಕಾಲದಲ್ಲುಂಟಾದುವೆಂದು ಭಾವವು.

**ತೇನ ತ್ವಂ ವಿಶ್ವವಿಜ್ಞೇಯವ್ಯಾಪಿಜ್ಞಾನಗುಣಾದ್ಭುತಃ ।**
**ಸರ್ವಜ್ಞಃ ಸರ್ವದರ್ಶೀ ಚ ಯೋಗಿಭಿಃ ಪರಿಗೀಯಸೇ ॥ ೬೧ ॥**

ಆದುದರಿಂದ ತಿಳಿಯುವುದಕ್ಕೆ ಯೋಗ್ಯವಾದ ಸಮಸ್ತಪದಾರ್ಥಗಳಲ್ಲೂ ವ್ಯಾಪಿಸಿರುವ ಜ್ಞಾನಗುಣದಿಂದ ಅದ್ಭುತನಾಗಿರುವ ನಿನ್ನನ್ನು ಯೋಗಿಗಳು ಸರ್ವಜ್ಞನೆಂದೂ ಸರ್ವದರ್ಶಿಯೆಂದೂ ಹೇಳುತ್ತಾರೆ.

**ವಿಶ್ವಂ ವಿಜಾನತೋಽಪೀಶ [೩]ಯತ್ತೇನಾ[೪]ಸ್ತಾಂ ಶ್ರಮಕ್ಲಮೌ ।**
**ಅನಂತವೀರ್ಯತಾಶಕ್ತೇಸ್ತನ್ಮಾಹಾತ್ಮ್ಯಂ ಪರಿಸ್ಫುಟಮ್ ॥ ೬೨ ॥**

ಪ್ರಭುವೆ !ಲೋಕವನ್ನೆಲ್ಲ ತಿಳಿಯುವವನಾದರೂ ನಿನಗೆ ಆಯಾಸವೂ ಖೇದವೂ ಆಗದಿರುವುದರಿಂದ ಅನಂತವೀರ್ಯತ್ವದ ಶಕ್ತಿಯ ಅತಿಶಯವು ವ್ಯಕ್ತವಾಗುತ್ತದೆ.

**ರಾಗಾದಿಚಿತ್ತಕಾಲುಷ್ಯವ್ಯಪಾಯಾದುದಿತಾ ತವ ।**
**[೫]ವಿರತಿಃ ಸುಖಮಾತ್ಮೋತ್ಥಂ ವ್ಯನಕ್ತ್ಯಾತ್ಯಂತಿಕಂ ವಿಭೋ ॥ ೬೩ ॥**

ಸ್ವಾಮಿಯೇ ! ರಾಗದ್ವೇಷಮೊದಲಾದ ಚಿತ್ತಕಲುಷತೆ(ಮನೋವಿಕಾರ)ಯಿಲ್ಲದಿರುವುದರಿಂದುಂಟಾದ ನಿನ್ನ ನಿಃಸ್ಪೃಹತ್ವವು ಆತ್ಮನಲ್ಲುಂಟಾದುದೂ ನಾಶರಹಿತವೂ ಆದ ಸುಖವನ್ನು ವ್ಯಕ್ತಪಡಿಸುತ್ತದೆ.

**[೬]ವಿರತಿಃ ಸುಖಮಿಷ್ಟಂ ಚೇತ್ಸುಖಂ ತ್ವಯ್ಯೇವ ಕೇವಲಮ್ ।**
**ನೋಚೇನ್ನೈವಾಸುಖಂ ನಾಮ ಕಿಂಚಿದತ್ರ ಜಗತ್ತ್ರಯೇ ॥ ೬೪ ॥**

ವಿಷಯಭೋಗಗಳ ನಿವೃತ್ತಿಯು ಸುಖವೆಂದು ಹೇಳುವಪಕ್ಷದಲ್ಲಿ ಅಂತಹ ಸುಖವು ನಿನ್ನಲ್ಲಿ ಮಾತ್ರವಿದೆ. ಅದು ಸುಖವಲ್ಲವೆಂದು ಹೇಳುವಪಕ್ಷದಲ್ಲಿ ಮೂರುಲೋಕದಲ್ಲಿ ಸ್ವಲ್ಪವೂ ದುಃಖವೆಂಬುದಿಲ್ಲ. ವಿಷಯಭೋಗಗಳನ್ನು ಬಿಡದಿರುವುದು ಸುಖವೆಂದಾದರೆ ಮೂರುಲೋಕದಲ್ಲಿ ದುಃಖವೇ ಇಲ್ಲವೆಂದರ್ಥ.

**ಪ್ರಸನ್ನಕಲುಷಂ ತೋಯಂ ಯಥೇಹ ಸ್ವಚ್ಛತಾಂ ವ್ರಜೇತ್ ।**
**ಮಿಥ್ಯಾತ್ವಕರ್ದಮಾಪಾಯಾ[೭]ದ್ದೃಕ್ಶುದ್ಧಿಸ್ತೇ ತಥಾ ಮತಾ ॥ ೬೫ ॥**

ಕೆಸರಿನಿಂದ ಬೇರೆಯಾದ ನೀರು ಸ್ವಚ್ಛತೆಯನ್ನು ಹೊಂದುವಂತೆ, ಮಿಥ್ಯಾತ್ವವೆಂಬ ಕೆಸರು ನಾಶವಾದುದರಿಂದ ನಿನಗೆ ದರ್ಶನಶುದ್ಧಿಯುಂಟಾಯಿತು.

೧ ಜ್ಞಾನದರ್ಶನಾಭ್ಯಾಂ. ೨ ಪರಿಚ್ಛಿತ್ತಿಃ. ೩ ಯಸ್ಮಾತ್ಕಾರಣಾತ್. ೪ ಅಭವತಾಂ. ೫ ನಿಃಸ್ಪೃಹತಾ. ೬ ನಿವೃತ್ತಿಃ. ೭ ದರ್ಶನಶುದ್ಧಿಃ.

**ಸತ್ಸ್ವೋಽಪಿ ಲಬ್ಧಯಃ [೧]ಶೇಷಾಸ್ತ್ವಯಿ ನಾ[೨]ರ್ಥಕ್ರಿಯಾಕೃತಃ ।**
**ಕೃತಕೃತ್ಯೇ [೩]ಬಹಿರ್ದ್ರವ್ಯಸಂಬಂಧೋ ಹಿ ನಿರರ್ಥಕಃ ॥ ೬೬ ॥**

ನಿನ್ನಲ್ಲಿ ಅನಂತವೀರ್ಯತ್ವಮೊದಲಾದ ಬೇರೆ ಕ್ಷಾಯಿಕಲಬ್ಧಿಗಳಿದ್ದರೂ ಕಾರ್ಯಮಾಡುವುವುಗಳಲ್ಲವು. ಶಕ್ತಿಯನ್ನುಪಯೋಗಿಸುವುದು ಮೊದಲಾದ ಬಾಹ್ಯಕ್ರಿಯೆಗಳಿಲ್ಲವೆಂದರ್ಥವು. ಕೃತಕೃತ್ಯನಾದವನಲ್ಲಿ ಪುಷ್ಪವೃಷ್ಟಿಮೊದಲಾದ ಬಾಹ್ಯವಸ್ತುಗಳ ಸಂಬಂಧವು ವ್ಯರ್ಥವಲ್ಲವೆ ? ಕೃತಕೃತ್ಯನಿಗೆ ಬಾಹ್ಯವಸ್ತುಗಳಿಂದ ಪ್ರಯೋಜನವಿಲ್ಲವೆಂದು ಭಾವವು.

**[೪]ಏವಂಪ್ರಾಯಾ ಗುಣಾ ನಾಥ ಭವತೋಽನಂತಧಾ ಮತಾಃ ।**
**ತಾನಹಂ ಲೇಶತೋಽಪೀಶ ನ ಸ್ತೋತುಮಲಮಲ್ಪಧೀಃ ॥ ೬೭ ॥**

ಪ್ರಭುವೆ ! ಇವು ಮೊದಲಾದ ತಮ್ಮ ಗುಣಗಳು ಅನಂತವಾಗಿವೆ. ಅಲ್ಪಬುದ್ಧಿಯುಳ್ಳ ನಾನು ಆ ಗುಣಗಳನ್ನು ಲೇಶವಾದರೂ ಸ್ತೋತ್ರಮಾಡಲು ಸಮರ್ಥನಲ್ಲ.

**ತದಾ[೫]ಸ್ತಾಂ ತೇ ಗುಣಸ್ತೋತ್ರಂ ನಾಮಮಾತ್ರಂ ಚ ಕೀರ್ತಿತಮ್ ।**
**ಪುನಾತಿ ನ[೬]ಸ್ತತೋ ದೇವ ತ್ವ[೭]ನ್ನಾಮೋದ್ದೇಶತಃ ಶ್ರಿತಾಃ ॥ ೬೮ ॥**

ನಿನ್ನ ಆ ಗುಣಸ್ತೋತ್ರಮಾಡುವುದು ಹಾಗಿರಲಿ. ನಿನ್ನ ಹೆಸರುಗಳನ್ನು ಹೇಳಿದರೂ ಅವು ನಮ್ಮನ್ನು ಪವಿತ್ರಮಾಡುತ್ತವೆ. ಆದುದರಿಂದ ಸ್ವಾಮಿಯೆ !ನಾವು ನಿನ್ನ ನಾಮಸಂಕೀರ್ತನದಿಂದಲೇ ನಿನ್ನನ್ನಾಶ್ರಯಿಸಿದ್ದೇವೆ.

**ಹಿರಣ್ಯಗರ್ಭಮಾಹುಸ್ತ್ವಾಂ ಯತೋ ವೃಷ್ಟಿರ್ಹಿರಣ್ಮಯೀ ।**
**ಗರ್ಭಾವತರಣೇ ನಾಥ ಪ್ರಾದುರಾಸೀತ್ತವಾದ್ಭುತಾ ॥ ೬೯ ॥**

ಪ್ರಭುವೆ ! ನೀನು ತಾಯಿಯ ಗರ್ಭದಲ್ಲಿ ಅವತರಿಸುವ ಕಾಲದಲ್ಲಿ ಆಶ್ಚರ್ಯಕರವಾದ ಸುವರ್ಣವೃಷ್ಟಿಯು ಪ್ರಾದುರ್ಭವಿಸಿದುದರಿಂದ ನಿನ್ನನ್ನು ಹಿರಣ್ಯಗರ್ಭನೆಂದು ಹೇಳುತ್ತಾರೆ.

**ವೃಷಭೋಽಸಿ ಸುರೈರ್ವೃಷ್ಟರತ್ನವರ್ಷಃ [೮]ಸ್ವಸಂಭವೇ ।**
**ಜನ್ಮಾ[೯]ಭಿಷಿಕ್ತಯೇ ಮೇರು[೧೦]ಮ್ಯಷ್ಪವಾನೃಷಭೋಽಪ್ಯಸಿ ॥ ೭೦ ॥**

ದೇವತೆಗಳು ತನ್ನ(ನಿನ್ನ)ಉತ್ಪತ್ತಿಕಾಲದಲ್ಲಿ ರತ್ನಗಳನ್ನು ವರ್ಷಿ(ಸುರಿ)ಸಿದುದರಿಂದ ನೀನು ವೃಷಭನಾಗಿರುತ್ತಿ. ಜನ್ಮಾಭಿಷೇಕಕ್ಕೋಸ್ಕರ ಮಹಾಮೇರುಪರ್ವತಕ್ಕೆ ಹೋಗಿರುವುದರಿಂದ ನೀನು ಋಷಭನೂ ಆಗಿರುತ್ತಿ.

**ಅಶೇಷಜ್ಞೇಯಸಂಕ್ರಾಂತಜ್ಞಾನಮೂರ್ತಿರ್ಯತೋ ಭವಾನ್ ।**
**ಅತಃ ಸರ್ವಗತಂ ಪ್ರಾಹುಸ್ತ್ವಾಂ ದೇವ ಪರಮರ್ಷಯಃ ॥ ೭೧ ॥**

ಸ್ವಾಮಿಯೆ ! ನೀನು ತಿಳಿಯುವುದಕ್ಕೆ ಯೋಗ್ಯವಾದ ಪದಾರ್ಥಗಳೆಲ್ಲಲ್ಲ ಸಂಬಂಧಿಸಿರುವ ಜ್ಞಾನಮೂರ್ತಿಯಾಗಿರುವುದರಿಂದ ಪರಮರ್ಷಿಗಳು ನಿನ್ನನ್ನು "ಸರ್ವಗತ" ನೆಂದು ಹೇಳುತ್ತಾರೆ.

**ತ್ವಯೀತ್ಯಾದೀನಿ ನಾಮಾನಿ [೧೧]ಬಿಭ್ರತ್ಯನ್ವರ್ಥತಾಂ ಯತಃ ।**
**ತತೋಽಸಿ ತ್ವಂ ಜಗಜ್ಜ್ಯೇಷ್ಠಃ ಪರಮೇಷ್ಠೀ ಸನಾತನಃ ॥ ೭೨ ॥**

ಹಿಂದೆ ಹೇಳಿದ ಹಿರಣ್ಯಗರ್ಭಮೊದಲಾದ ಹೆಸರುಗಳು ಸಾರ್ಥಕತ್ವ(ಅವಯವಾರ್ಥ)ವನ್ನು ಹೊಂದುವುದರಿಂದ ನೀನು ಲೋಕಕ್ಕೆ ಶ್ರೇಷ್ಠನೂ ಪರಮೇಷ್ಠಿಯೂ ನಿತ್ಯನೂ ಆಗಿರುತ್ತಿ.

**ತ್ವದ್ಭಕ್ತಿಚೋದಿತಾಮೇನಾಂ ಮಾಮಿಕಾಂ ಧಿಯಮಕ್ಷಮಃ ।**
**ಧರ್ತುಂ ಸ್ತುತಿಪಥೇ ತೇದ್ಯ ಪ್ರವೃತ್ತೋಸ್ಮ್ಯೇವ[೧೨]ಮಕ್ಷರ ॥ ೭೩ ॥**

೧ ವೀರ್ಯಾದಯಃ. ೨ ಅರ್ಥಕ್ರಿಯಾಕಾರಿಣ್ಯಃ. ೩ ಪುಷ್ಪವೃಷ್ಟ್ಯಾದಿಬಹಿರ್ದ್ರವ್ಯಸಂಬಂಧಃ. ೪ ಏವಮಾದಯಃ. ೫ ತಿಷ್ಠತು. ೬ ತಸ್ಮಾತ್ಕಾರಣಾತ್. ೭ ನಾಮಸಂಕೀರ್ತನಮಾತ್ರತಃ. ೮ ತವೋತ್ಪತ್ತೌ. ೯ ಅಭಿಷೇಕಾಯ. ೧೦ ಗತವಾನ್. ೧೧ ಧಾರಯಂತೇ. ೧೨ ಅವಿನಶ್ವರ.

ನಾಶರಹಿತನೆ! ನಿನ್ನ ವಿಷಯಕವಾದ ಭಕ್ತಿಯಿಂದ ಪ್ರೇರಿತವಾದ ಈ ನನ್ನ ಬುದ್ಧಿಯನ್ನು ಧರಿಸುವುದಕ್ಕೆ ಅಸಮರ್ಥನಾಗಿ ಈಗ ಹೀಗೆ ಸ್ತೋತ್ರಮಾರ್ಗದಲ್ಲಿ ಪ್ರವೃತ್ತನಾಗಿದ್ದೇನೆ.

**ತ್ವಯೋಪದರ್ಶಿತಂ ಮಾರ್ಗಮುಪಾಸ್ಯ ಶಿವಮೀಪ್ಸತಃ ।**
**ತ್ವಾಂ ದೇವಮಿ[೧]ತ್ಯುಪಾಸೀನಾನ್ಪ್ರಸೀದಾನುಗೃಹಾಣ ನಃ ॥ ೭೪ ॥**

ನಿನ್ನಿಂದ ತೋರಿಸಲ್ಪಟ್ಟ ಮಾರ್ಗವನ್ನು ಉಪಾಸನೆಮಾಡಿ ಮೋಕ್ಷವನ್ನು ಹೊಂದಬೇಕೆಂಬ ಇಚ್ಛೆಯುಳ್ಳವರೂ ಸ್ವಾಮಿಯಾದ ನಿನ್ನನ್ನು ಭಜಿಸುವವರೂ ಆದ ನಮ್ಮನ್ನು ಅನುಗ್ರಹಿಸು. ನಮ್ಮ ಮೇಲೆ ಪ್ರಸನ್ನನಾಗು.

**ಭವಂತಮಿತ್ಯಭಿಷ್ಟುತ್ಯ ವಿಷ್ಟಪಾತಿಗವೈಭವಮ್ ।**
**ತ್ವಯ್ಯೇವ ಭಕ್ತಿಮಕೃಶಾಂ ಪ್ರಾರ್ಥಯೇ ನಾನ್ಯ[೨]ದರ್ಥಯೇ ॥ ೭೫ ॥**

ಲೋಕಾತಿಕ್ರಾಂತವಾದ ವೈಭವವುಳ್ಳ ನಿನ್ನನ್ನು ಹಿಂದೆ ಹೇಳಿದ ಪ್ರಕಾರವಾಗಿ ಸ್ತೋತ್ರಮಾಡಿ ನಿನ್ನಲ್ಲೇ ನನ್ನ ಭಕ್ತಿಯು ಸಂಪೂರ್ಣವಾಗಿರಬೇಕೆಂದು ಪ್ರಾರ್ಥಿಸುತ್ತೇನೆ. ಬೇರೆ ಯಾವುದನ್ನೂ ಪ್ರಾರ್ಥಿಸುವುದಿಲ್ಲ.''

**[೩]ಸ್ತುತ್ವಂತೇ ಸುರಸಂಘಾತೈ[೪]ರೀಕ್ಷಿತೋ ವಿಸ್ಮಿತೇಕ್ಷಣೈಃ ।**
**ಶ್ರೀಮಂಡಪಂ ಪ್ರವಿಶ್ಯಾಸ್ಮಿನ್ನಧ್ಯುವಾಸೋಚಿತಂ ಸದಃ ॥ ೭೬ ॥**

ಸ್ತೋತ್ರವು ಪೂರ್ತಿಯಾದನಂತರದಲ್ಲಿ ಆಶ್ಚರ್ಯಯುಕ್ತವಾದ ಕಣ್ಣುಗಳುಳ್ಳ ದೇವತೆಗಳಿಂದ ನೋಡಲ್ಪಟ್ಟ ಭರತೇಶ್ವರನು ಲಕ್ಷ್ಮೀಮಂಡಪವನ್ನು ಪ್ರವೇಶಮಾಡಿ ತನಗೆ ಯೋಗ್ಯವಾದ ಸಭಾಸ್ಥಾನದಲ್ಲಿ ಕುಳಿತುಕೊಂಡನು. ದೇವತೆಗಳು ಆಶ್ಚರ್ಯದಿಂದ ಭರತೇಶ್ವರನನ್ನು ನೋಡಿದರೆಂದು ಭಾವವು.

**ತತೋ ನಿಭೃತಮಾಸೀನೇ ಪ್ರಬುದ್ಧಕರಕುಡ್ಮಲೇ ।**
**ಸದಃಪದ್ಮಾಕರೇ [೫]ಭರ್ತುಃ [೬]ಪ್ರಬೋಧಮಭಿಲಾಷುಕೇ ॥ ೭೭ ॥**

**ಪ್ರೀತ್ಯಾ ಭರತರಾಜೇನ ವಿನಯಾನತಮೌಲಿನಾ ।**
**ವಿಜ್ಞಾಪನಮಕಾರೀತ್ಥಂ ತತ್ತ್ವ[೭]ಜಿಜ್ಞಾಸುನಾ ಗುರೋಃ ॥ ೭೮ ॥**

ಅನಂತರದಲ್ಲಿ ಕೈಗಳೆಂಬ ಮೊಗ್ಗುಗಳುಳ್ಳದೂ ಸ್ವಾಮಿಯ ಸಾನ್ನಿಧ್ಯದಿಂದ ವಿಕಸನವನ್ನಿಚ್ಛಿಸುವುದೂ ಆದ ಸಭೆಯೆಂಬ ಕಮಲಸರೋವರವು ನಿಶ್ಚಲ (ಸ್ತಬ್ಧ) ವಾಗಿ ಕುಳಿತಿರಲು, ವಿನಯದಿಂದ ನಮ್ರವಾದ ಮಸ್ತಕವುಳ್ಳವನೂ ಸ್ವಾಮಿಯಿಂದ ತತ್ತ್ವಗಳನ್ನು ತಿಳಿಯಬೇಕೆಂಬ ಇಚ್ಛೆಯುಳ್ಳವನೂ ಆದ ಭರತರಾಜನು ಪ್ರೀತಿಯಿಂದ ಮುಂದೆ ಹೇಳುವಪ್ರಕಾರವಾಗಿ ವಿಜ್ಞಾಪನೆ ಮಾಡಿಕೊಂಡನು.

**ಭಗವನ್ಬೋದ್ಧುಮಿಚ್ಛಾಮಿ ಕೀದೃಶಸ್ತತ್ತ್ವವಿಸ್ತರಃ ।**
**ಮಾರ್ಗೋ ಮಾರ್ಗಫಲಂ ಚಾಪಿ ಕೀದೃಕ್ ತತ್ತ್ವವಿದಾಂವರ ॥ ೭೯ ॥**

''ತತ್ತ್ವಜ್ಞಾನಿಗಳಲ್ಲಿ ಶ್ರೇಷ್ಠನಾದ ಭಗವಂತನೆ! ಜೀವಾದಿತತ್ತ್ವಗಳ ವಿಸ್ತಾರವು ಯಾವಪ್ರಕಾರವಾದುದೆಂಬುದನ್ನೂ ಜೈನಮಾರ್ಗ ಮತ್ತು ಅದರ ಫಲವು ಎಂತಹುದೆಂಬುದನ್ನೂ ತಿಳಿಯಲಿಚ್ಛಿಸುತ್ತೇನೆ.''

**ತತ್[೮]ಪ್ರಶ್ನಾವಸಿತಾವಿತ್ಥಂ ಭಗವಾನಾದಿತೀರ್ಥಕೃತ್ ।**
**ತತ್ತ್ವಂ [೯]ಪ್ರಪಂಚಯಾಮಾಸ ಗಂಭೀರತರಯಾ ಗಿರಾ ॥ ೮೦ ॥**

ಆ ಭರತರಾಜನ ಪ್ರಶ್ನೆಯು ಮುಗಿದನಂತರದಲ್ಲಿ ಭಗವಂತರಾದ ಆದಿತೀರ್ಥೇಶ್ವರರು ಅತ್ಯಂತ ಗಂಭೀರವಾದ ವಚನದಿಂದ ಮುಂದೆಹೇಳುವ ಪ್ರಕಾರವಾಗಿ ತತ್ತ್ವವನ್ನು ವಿಸ್ತರಿಸಿದರು. ವಿಸ್ತಾರವಾಗಿ ಹೇಳಿದರೆಂದರ್ಥವು.

೧ ಸೇವಮಾನಾನ್. ೨ ಪ್ರಾರ್ಥಯೇ. ೩ ಸ್ತುತ್ಯವಸಾನೇ. ೪ ಭರತಃ. ೫ ಸಕಾಶಾತ್. ೬ ವಿಕಸನಂ. ೭ ಜ್ಞಾತುಮಿಚ್ಛುನಾ. ೮ ಪ್ರಶ್ನಾವಸಾನೇ. ೯ ವಿಸ್ತಾರಯಾಮಾಸ.

**ಪ್ರವಕ್ತುರಸ್ಯ ವಕ್ತ್ರಾಬ್ಜೇ ವಿಕೃತಿರ್ನೈವ ಕಾಪ್ಯಭೂತ್ ।**
**ದರ್ಪಣೇ ಕಿಮು ಭಾವಾನಾಂ ವಿಕ್ರಿಯಾಸ್ತಿ ಪ್ರಕಾಶನೇ ॥ ೮೧ ॥**

ತತ್ತ್ವಗಳನ್ನುಪದೇಶಿಸುವ ಈ ಸ್ವಾಮಿಯ ಮುಖಕಮಲದಲ್ಲಿ ಯಾವುದೊಂದು ವಿಕಾರವೂ ಉಂಟಾಗಿರಲಿಲ್ಲವು. ಕನ್ನಡಿಯು ಪದಾರ್ಥಗಳನ್ನು ಪ್ರಕಾಶಪಡಿಸುವ ಕಾಲದಲ್ಲಿ ವಿಕಾರವನ್ನು ಹೊಂದುತ್ತದೆಯೆ ? ವಸ್ತುಗಳನ್ನು ಪ್ರಕಾಶಪಡಿಸುವಾಗ ಕನ್ನಡಿಯು ಹೇಗೆ ವಿಕಾರವನ್ನು ಹೊಂದುವುದಿಲ್ಲವೋ ಹಾಗೆ ಸ್ವಾಮಿಯೂ ಜೀವಾದಿತತ್ತ್ವಗಳನ್ನುಪದೇಶಿಸುವಾಗ ಮುಖವಿಕಾರವನ್ನು ಹೊಂದಲಿಲ್ಲವೆಂದು ಭಾವವು.

**ತಾಲ್ವೋಷ್ಠಮಪರಿಸ್ಪಂದಿ ನ ಚ್ಛಾಯಾಂತರಮಾನನೇ ।**
**[೧]ಅಸ್ಪೃಷ್ಟಕರಣಾ ವರ್ಣಾ ಮುಖಾದಸ್ಯ ವಿನಿರ್ಯಯುಃ ॥ ೮೨ ॥**

ದವಡೆಗಳನ್ನೂ ತುಟಿಗಳನ್ನೂ ಅಲ್ಲಾಡಿಸದೆಯೂ ಮುಖದಲ್ಲಿ ವಿಕಾರವನ್ನು ಹೊಂದದೆಯೂ ಈ ಸ್ವಾಮಿಯ ಮುಖದಿಂದ ಇಂದ್ರಿಯಗಳ ಪ್ರಯತ್ನರಹಿತವಾದ ಅಕ್ಷರಗಳು ಹೊರಟುವು. ಅಕ್ಷರೋತ್ಪತ್ತಿಸ್ಥಾನಗಳ ಪ್ರಯತ್ನವಿಲ್ಲದೆ ಸ್ವಾಮಿಯ ಮುಖದಿಂದ ಅಕ್ಷರಗಳು ಹೊರಟುವೆಂದರ್ಥವು.

**ಸ್ಫುರದ್ಗಿರಿಗುಹೋದ್ಭೂತ[೨]ಪ್ರತಿಶ್ರುದ್ಧ್ವನಿಸನ್ನಿಭಃ ।**
**ಪ್ರಸ್ಪಷ್ಟವರ್ಣೋ ನಿರಗಾದ್ಧ್ವನಿಃ ಸ್ವಾಯಂಭುವಾನ್ಮುಖಾತ್ ॥ ೮೩ ॥**

ಸ್ವಯಂಭು(ಆದಿತೀರ್ಥಂಕರ)ವಿನ ಮುಖದಿಂದ ಪ್ರಕಾಶಮಾನವಾದ ಪರ್ವತ (ಮೇರು)ದ ಗುಹೆಯಿಂದ ಹೊರಟ ಪ್ರತಿಧ್ವನಿಗೆ ಸದೃಶವೂ ಸ್ಫುಟವಾದ ಅಕ್ಷರಗಳುಳ್ಳದೂ ಆದ ಧ್ವನಿ (ದಿವ್ಯಧ್ವನಿ)ಯು ಹೊರಟಿತು.

**[೩]ವಿವಕ್ಷಾಮಂತರೇಣಾಸ್ಯ [೪]ವಿವಿಕ್ತಾಸೀತ್ಸರಸ್ವತೀ ।**
**[೫]ಮಹೀಯಸಾಮಚಿಂತ್ಯಾ ಹಿ ಯೋಗಜಾಃ ಶಕ್ತಿಸಂಪದಃ ॥ ೮೪ ॥**

ಈ ಸ್ವಾಮಿಯ ಪವಿತ್ರವಾದ ವಾಣಿಯು ಹೇಳಬೇಕೆಂಬ ಇಚ್ಛೆಯಿಲ್ಲದೆಯೇ ಉಂಟಾಗಿದ್ದಿತು. ಮಹಾತ್ಮರ ಯೋಗದಿಂದುಂಟಾದ ಶಕ್ತಿಸಂಪತ್ತುಗಳು ಅಚಿಂತ್ಯವಾಗಿವೆ. ಮಹಾತ್ಮರ ಯೋಗಶಕ್ತಿಯು ಸಾಮಾನ್ಯಮನುಷ್ಯರ ಶಕ್ತಿಗಿಂತ ವಿಲಕ್ಷಣವಾಗಿದೆಯೆಂದು ಭಾವವು.

**ಆಯುಷ್ಮನ್ ಶೃಣು ತತ್ತ್ವಾರ್ಥಾನ್ವಕ್ಷ್ಯಮಾಣಾನನುಕ್ರಮಾತ್ ।**
**ಜೀವಾದೀನ್ಕಾಲಪರ್ಯಂತಾನ್ಸಪ್ರಭೇದಾನ್ಸಪರ್ಯಯಾನ್ ॥ ೮೫ ॥**

''ಆಯುಷ್ಮಂತನೆ! ಕ್ರಮವಾಗಿ ಮುಂದೆ ಹೇಳಲ್ಪಡುವುವೂ ಜೀವಮೊದಲಾಗಿ ಕಾಲಪರ್ಯಂತವೂ ಭೇದಸಹಿತವೂ ಪರ್ಯಾಯ (ಅವಸ್ಥಾ) ಸಹಿತವೂ ಆದ ತತ್ತ್ವಾರ್ಥಗಳನ್ನು ಕೇಳು:-

**ಜೀವಾದೀನಾಂ ಪದಾರ್ಥಾನಾಂ [೬]ಯಾಥಾತ್ಮ್ಯಂ ತತ್ತ್ವಮಿಷ್ಯತೇ ।**
**ಸಮ್ಯಗ್ಜ್ಞಾನಾಂಗಮೇತದ್ಧಿ ವಿದ್ಧಿ [೭]ಸಿದ್ಧ್ಯಂಗಮಂಗಿನಾಮ್ ॥ ೮೬ ॥**

ಜೀವ ಮೊದಲಾದ ಪದಾರ್ಥಗಳ ನಿಜವಾದ ಸ್ವರೂಪಕ್ಕೆ ತತ್ತ್ವವೆಂದು ಹೆಸರು. ಈ ತತ್ತ್ವವು ಸಮ್ಯಗ್ಜ್ಞಾನಕ್ಕೆ ಕಾರಣವಾಗಿದೆ. ಇದು ಪ್ರಾಣಿಗಳಿಗೆ ಮೋಕ್ಷಕ್ಕೆ ಕಾರಣವೆಂದು ತಿಳಿ.

**ತದೇಕಂ ತತ್ತ್ವಸಾಮಾನ್ಯಾಜ್ಜೀವಾಜೀವಾವಿತಿ ದ್ವಿಧಾ ।**
**ತ್ರಿಧಾ ಮುಕ್ತೇತರಾಜೀವವಿಭಾಗಾತ್ಪರಿಕೀರ್ತ್ಯತೇ ॥ ೮೭ ॥**

ಆ ತತ್ತ್ವವು ಸಾಮಾನ್ಯದಿಂದ ಒಂದುಪ್ರಕಾರವಾಗಿದೆ. ಜೀವ ಅಜೀವವೆಂದು ಎರಡು ಪ್ರಕಾರವಾಗಿದೆ. ಮುಕ್ತಜೀವ, ಸಂಸಾರಿಜೀವ, ಅಜೀವ ಎಂಬ ವಿಭಾಗದಿಂದ ಮೂರುಪ್ರಕಾರವಾಗಿ ಹೇಳಲ್ಪಡುತ್ತದೆ.

೧ ಇಂದ್ರಿಯಪ್ರಯತ್ನರಹಿತಾಃ. ೨ ಪ್ರತಿಧ್ವಾನರವಃ. ೩ ವಕ್ತುಮಿಚ್ಛಯಾ ವಿನಾ. ೪ ಪೂತೇತ್ಯರ್ಥಃ. ೫ ಅತಿಶಯೇನ ಮಹತಾಂ. ೬ ನಿಶ್ಚಯಸ್ವರೂಪಂ. ೭ ಮೋಕ್ಷಕಾರಣಂ.

**ಜೀವೋ ಮುಕ್ತಶ್ಚ ಸಂಸಾರೀ ಸಂಸಾರ್ಯಾತ್ಮಾ ದ್ವಿಧಾ ಮತಃ ।**
**ಭವ್ಯೋಽಭವ್ಯಶ್ಚ [೧]ಸಾಜೀವಾ[೨]ಸ್ತೇ ಚತುರ್ಧಾ ವಿಭಾವಿತಾಃ ॥ ೮೮ ॥**

ಜೀವವು ಮುಕ್ತಜೀವವೆಂದೂ ಸಂಸಾರಿಜೀವವೆಂದೂ ಎರಡುವಿಧವಾಗಿದೆ. ಸಂಸಾರಿಜೀವವು ಭವ್ಯಜೀವವೆಂದೂ ಅಭವ್ಯಜೀವವೆಂದೂ ಪುನಃ ಎರಡು ವಿಧವಾಗಿದೆ. ಮುಕ್ತಜೀವ, ಭವ್ಯಜೀವ, ಅಭವ್ಯಜೀವ, ಅಜೀವ ಹೀಗೆ ತತ್ತ್ವವು ನಾಲ್ಕುವಿಧವಾಗಿದೆ.

**ಮುಕ್ತೇತರಾತ್ಮಕೋ ಜೀವೋ ಮೂರ್ತಾಮೂರ್ತಾತ್ಮಕಃ [೩]ಪರಃ ।**
**ಇತಿ ವಾ ತಸ್ಯ ತತ್ತ್ವಸ್ಯ ಚಾತುರ್ವಿಧ್ಯಂ ವಿನಿಶ್ಚಿತಮ್ ॥ ೮೯ ॥**

ಮುಕ್ತಜೀವ, ಸಂಸಾರಿಜೀವ, ಮೂರ್ತಾಜೀವ, ಅಮೂರ್ತಾಜೀವ ಈರೀತಿ ಯಾದರೂ ತತ್ತ್ವವು ನಾಲ್ಕುಪ್ರಕಾರವಾಗಿ ನಿಶ್ಚಯಿಸಲ್ಪಟ್ಟಿದೆ.

**ಪಂಚಾಸ್ತಿಕಾಯಭೇದೇನ ತತ್ತತ್ತ್ವಂ ಪಂಚಧಾ ಸ್ಮೃತಮ್ ।**
**ತೇ ಜೀವಪುದ್ಗಲಾಕಾಶಧರ್ಮಾಧರ್ಮಾಃ ಸಪರ್ಯಯಾಃ ॥ ೯೦ ॥**

ಆ ತತ್ತ್ವವು ಪಂಚಾಸ್ತಿಕಾಯಭೇದದಿಂದ ಐದುವಿಧವಾಗಿದೆ. ಅವು ಯಾವು ವೆಂದರೆ:-ಪರ್ಯಾಯಸಹಿತಗಳಾದ ಜೀವಾಸ್ತಿಕಾಯ, ಪುದ್ಗಲಾಸ್ತಿಕಾಯ, ಆಕಾಶಾ ಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ.

**[೪]ತ ಏವ ಕಾಲಸಂಯುಕ್ತಾಃ ಷೋಢಾ ತತ್ತ್ವಸ್ಯ ಭೇದಕಾಃ ।**
**ಇತ್ಯನಂತೋ ಭವೇದಸ್ಯ ಪ್ರಸ್ತಾರೋ [೫]ವಿಸ್ತರೈಷಿಣಾಮ್ ॥ ೯೧ ॥**

ಕಾಲಸಹಿತವಾದ ಆ ಪಂಚಾಸ್ತಿಕಾಯಗಳೇ ಷಡ್ದ್ರವ್ಯಗಳೆಂಬ ತತ್ತ್ವದ ಭೇದ ಗಳಾಗಿವೆ. ಹೀಗೆ ಈ ತತ್ತ್ವದ ವಿಸ್ತಾರವನ್ನಿಚ್ಛಿಸುವವರಿಗೆ ತತ್ತ್ವವು ಅನಂತ ಭೇದವುಳ್ಳುದಾಗಿದೆ.

**ಚೇತನಾಲಕ್ಷಣೋ ಜೀವಃ ಸೋಽನಾದಿನಿಧನಸ್ಥಿತಿಃ ।**
**ಜ್ಞಾತಾ ದ್ರಷ್ಟಾ ಚ ಕರ್ತಾ ಚ ಭೋಕ್ತಾ ದೇಹಪ್ರಮಾಣಕಃ ॥ ೯೨ ॥**

ಚೇತನಾ(ಜ್ಞಾನದರ್ಶನ)ಲಕ್ಷಣವುಳ್ಳುದು ಜೀವವು. ಆ ಜೀವವು ಅನಾದಿನಿಧನ ವಾಗಿದೆ. ಆ ಜೀವವು ತಿಳಿಯುವುದೂ ನೋಡುವುದೂ ಪುಣ್ಯಪಾಪಗಳಿಗೆ ಕರ್ತೃವೂ ಸುಖದುಃಖಗಳನ್ನನುಭವಿಸುವುದೂ ಸ್ವೀಕರಿಸಿದ ಶರೀರಪರಿಮಿತವೂ ಆಗಿದೆ.

**ಗುಣವಾನ್ಕರ್ಮನಿರ್ಮುಕ್ತಾವೂರ್ಧ್ವ[೬]ವ್ರಜ್ಯಾಸ್ವಭಾವಕಃ ।**
**[೭]ಪರಿಣಂತೋಽಪಸಂಹಾರವಿಸರ್ಪಾಭ್ಯಾಂ ಪ್ರದೀಪವತ್ ॥ ೯೩ ॥**

ಜೀವವು ಗುಣಗಳುಳ್ಳುದೂ ಜ್ಞಾನಾವರಣಮೊದಲಾದ ಎಂಟು ಕರ್ಮಗಳ ವಿಮೋಚನೆಯಾದೊಡನೆ ಊರ್ಧ್ವಗಮನಸ್ವಭಾವವುಳ್ಳುದೂ, ದೀಪದಂತೆ ಸಂಕೋಚವಿಸ್ತಾರಗಳಿಂದ ಪರಿಣಮಿಸುವುದೂ (ಸಣ್ಣದುದೊಡ್ಡದಾಗುವುದೂ) ಆಗಿದೆ.

**ತಸ್ಯೇಮೇ [೮]ಮಾರ್ಗಣೋಪಾಯಾ ಗತ್ಯಾದಯ ಉದಾಹೃತಾಃ ।**
**ಚತುರ್ದಶಗುಣಸ್ಥಾನೈಃ ಸೋತ್ರ ಮೃಗ್ಯಃ ಸದಾದಿಭಿಃ ॥ ೯೪ ॥**

ಆ ಜೀವವನ್ನು ವಿಚಾರಮಾಡುವ ಉಪಾಯಗಳು ಈ ಗತಿ ಇಂದ್ರಿಯ ಮೊದಲಾದ ಮಾರ್ಗಣೆಗಳೆಂದು ಹೇಳಲ್ಪಟ್ಟಿವೆ. ಮಿಥ್ಯಾದೃಷ್ಟಿ ಸಾಸಾದನ ಮೊದಲಾದ ಗುಣಸ್ಥಾನಗಳಿಂದಲೂ, ಸತ್ ಸಂಖ್ಯಾ ಮೊದಲಾದ ಅನುಯೋಗ (ಪ್ರಶ್ನೆ) ಗಳಿಂದಲೂ ಈ ಜೀವವನ್ನು ಹುಡುಕಬೇಕು.

೧ ಅಜೀವಸಹಿತಾಃ. ೨ ಮುಕ್ತೋ ಭವ್ಯೋಽಭವ್ಯಶ್ಚೇತಿ ತ್ರಯಃ. ೩ ಅಜೀವಃ. ೪ ಪಂಚಾಸ್ತಿಕಾಯಾ ಏವ. ೫ ವಿಸ್ತರಮಿಚ್ಛತಾಂ. ೬ ಗಮನಂ. ೭ ಪರಿಣಮನಶೀಲಃ. ೮ ವಿಚಾರೋಪಾಯಾಃ.

**ಗತೀಂದ್ರಿಯೇ ಚ ಕಾಯಶ್ಚ ಯೋಗವೇದಕಷಾಯಕಾಃ ।**
**ಜ್ಞಾನಸಂಯಮದೃಗ್ಲೇಶ್ಯಾಭವ್ಯಸಮ್ಯಕ್ತ್ವಸಂಜ್ಞಿನಃ ॥ ೯೫ ॥**

**ಸಮಮಾಹಾರಕೇಣ ಸ್ಯುರ್ಮಾರ್ಗಣಾಸ್ಥಾನಕಾನಿ ವೈ ।**
**[೧]ಸೋ[೨]ನ್ವೇಷ್ಯಸ್ತೇಷು ಸತ್ಸಂಖ್ಯಾ[೩]ದ್ಯನುಯೋಗೈ[೪]ರ್ವಿಶೇಷತಃ ॥ ೯೬ ॥**

ಗತಿ, ಇಂದ್ರಿಯ, ಕಾಯ, ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯಾ, ಭವ್ಯ, ಸಮ್ಯಕ್ತ್ವ, ಸಂಜ್ಞಿ, ಆಹಾರ, ಇವು ಹದಿನಾಲ್ಕು ಮಾರ್ಗಣಾಸ್ಥಾನಗಳಾಗಿವೆ. ಈ ಮಾರ್ಗಣಾಸ್ಥಾನಗಳಲ್ಲಿ ಸತ್ ಸಂಖ್ಯಾ ಮೊದಲಾದ ಪ್ರಶ್ನೆಗಳ ಮೂಲಕ ವಿಶೇಷವಾಗಿ ಆ ಜೀವತತ್ತ್ವವನ್ನು ಹುಡುಕಬೇಕು. ಚೆನ್ನಾಗಿ ವಿಚಾರಮಾಡಬೇಕೆಂದು ಭಾವವು.

**[೫]ಸ[೬]ತ್ಸಂಖ್ಯಾ[೭]ಕ್ಷೇತ್ರ[೮]ಸಂಸ್ಪರ್ಶ[೯]ಕಾಲ[೧೦]ಭಾವಾಂ[೧೧]ತರೈರಯಮ್ ।**
**[೧೨]ಬಹುತ್ವಾಲ್ಪತ್ವತಶ್ಚಾತ್ಮಾ ಮೃಗ್ಯಃ ಸ್ಯಾ[೧೩]ತ್ಸ್ಮೃತಿಚಕ್ಷುಷಾಮ್ ॥ ೯೭ ॥**

ಆಗಮವೇ ನೇತ್ರವಾಗುಳ್ಳವರು ಅಸ್ತಿತ್ವವನ್ನು ವಿಚಾರಮಾಡುವುದು ಒಳಭೇದ ಗಳನ್ನು ವಿಚಾರಮಾಡುವುದು ವರ್ತಮಾನಕಾಲದ ವಾಸಸ್ಥಾನವನ್ನು ವಿಚಾರ ಮಾಡುವುದು ಮೂರುಕಾಲದ ವಾಸಸ್ಥಾನವನ್ನು ವಿಚಾರಮಾಡುವುದು ವರ್ತನಾ ಲಕ್ಷಣವುಳ್ಳ ಕಾಲ ಔಪಶಮಿಕ ಕ್ಷಾಯಿಕ ಮೊದಲಾದ ಪರಿಣಾಮಗಳು ವಿರಹ-ಅಂತರಾಲಕಾಲ ಪರಸ್ಪರಾಪೇಕ್ಷೆಯಿಂದ ನ್ಯೂನಾಧಿಕ್ಯ ಇವುಗಳಿಂದ ಈ ಆತ್ಮನನ್ನು ಹುಡುಕಬೇಕು. ವಿಚಾರಮಾಡಬೇಕೆಂದರ್ಥವು.

**ಸ್ಯುರಿಮೇ[೧೪]ಧಿಗಮೋಪಾಯಾ ಜೀವಸ್ಯಾಧಿಗಮಃ ಪುನಃ ।**
**ಪ್ರಮಾಣನಯನಿಕ್ಷೇಪೈ[೧೫]ರವಸೇಯೋ ಮನೀಷಿಭಿಃ ॥ ೯೮ ॥**

ಹಿಂದೆಹೇಳಿದ ಮಾರ್ಗಣಾಸ್ಥಾನ ಗುಣಸ್ಥಾನ ಸತ್ ಸಂಖ್ಯಾ ಮೊದಲಾದ ಅನುಯೋಗ ಇವುಗಳು ಜೀವತತ್ತ್ವದ ತಿಳಿವಳಿಕೆ (ಬೋಧೆ) ಯುಂಟಾಗುವುದಕ್ಕೆ ಉಪಾಯಗಳಾಗಿವೆ. ಬುದ್ಧಿವಂತರು ಜೀವತತ್ತ್ವದ ಯಥಾರ್ಥಜ್ಞಾನವನ್ನು ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದಲೂ ನೈಗಮ ಸಂಗ್ರಹ ಮೊದಲಾದ ನಯ(ಏಕ ದೇಶಗ್ರಾಹಿಜ್ಞಾನ)ಗಳಿಂದಲೂ ನಿಶ್ಚಯಿಸಬೇಕು. ಸಂಪೂರ್ಣವಸ್ತುವನ್ನು ಗ್ರಹಣ ಮಾಡುವ ಸಮ್ಯಗ್ಜ್ಞಾನಕ್ಕೆ ಪ್ರಮಾಣವೆಂದು ಹೆಸರು. ವಸ್ತುವಿನ ಅಂಶವನ್ನು ಗ್ರಹಣ ಮಾಡುವ ಸಮ್ಯಗ್ಜ್ಞಾನಕ್ಕೆ ನಯವೆಂದು ಹೆಸರು.

**[೧೬]ತಸ್ಯೌಪಶಮಿಕೋ ಭಾವಃ ಕ್ಷಾಯಿಕೋ ಮಿಶ್ರ ಏವ ಚ ।**
**[೧೭]ಸ್ವತತ್ತ್ವಮುದಯೋತ್ಥಶ್ಚ ಪಾರಿಣಾಮಿಕ ಇತ್ಯಪಿ ॥ ೯೯ ॥**

ಕರ್ಮಗಳ ಉಪಶಮಾವಸ್ಥೆಯಲ್ಲುಂಟಾಗುವ ಔಪಶಮಿಕಭಾವ (ಪರಿಣಾಮ) ವೂ, ಕರ್ಮಗಳ ಕ್ಷಯಾವಸ್ಥೆಯಲ್ಲುಂಟಾಗುವ ಕ್ಷಾಯಿಕಭಾವ (ಪರಿಣಾಮ) ವೂ, ಕರ್ಮಗಳ ಕೆಲವು ಭಾಗ ಉಪಶಮ ಕೆಲವು ಭಾಗ ಕ್ಷಯ ಈ ಉಭಯಾವಸ್ಥೆ ಯಲ್ಲುಂಟಾಗುವ ಮಿಶ್ರಪರಿಣಾಮವೂ, ಕರ್ಮಗಳ ಉದಯಾವಸ್ಥೆಯಲ್ಲುಂಟಾ ಗುವ ಔದಯಿಕಭಾವವೂ, ಕರ್ಮಗಳ ಅಪೇಕ್ಷೆಯಿಲ್ಲದಿರುವ ಜೀವತ್ವ ಭವ್ಯತ್ವ ಅಭವ್ಯತ್ವಗಳೆಂಬ ಪಾರಿಣಾಮಿಕಭಾವಗಳೂ ಜೀವದ ಸ್ವಭಾವಗಳಾಗಿವೆ.

**ನಿಶ್ಚಿತೋ ಯೋ ಗುಣೈರೇಭಿಃ ಸ ಜೀವ ಇತಿ [೧೮]ಲಕ್ಷ್ಯತಾಮ್ ।**
**ದ್ವೇಧಾ ತಸ್ಯೋಪಯೋಗಃ ಸ್ಯಾಜ್ಜ್ಞಾನದರ್ಶನಭೇದತಃ ॥ ೧೦೦ ॥**

ಈ ಮೇಲೆಹೇಳಿದ ಗುಣಗಳಿಂದ ನಿಶ್ಚಯಿಸಲ್ಪಟ್ಟ ವಸ್ತುವು ಜೀವವೆಂದು ತಿಳಿಯಬೇಕು. ಜ್ಞಾನವೆಂದೂ ದರ್ಶನವೆಂದೂ ಆ ಜೀವದ ಉಪಯೋಗವು ಎರಡು ವಿಧವಾಗಿರುವುದು.

೧ ಜೀವಃ. ೨ ಅನ್ವೇಷ್ಟುಂ ಯೋಗ್ಯಃ. ೩ ಪ್ರಶ್ನೈಃ. ೪ ವಿಶೇಷಿತ ಇತ್ಯಪಿ ಪಾಠಃ. ೫ ಅಸ್ತಿತ್ವನಿರ್ದೇಶಃ. ೬ ಭೇದಗಣನಾ. ೭ ವರ್ತಮಾನಕಾಲವಿಷಯೋ ನಿವಾಸಃ. ೮ ತ್ರಿಕಾಲವಿಷಯೋ ನಿವಾಸಃ. ೯ ವರ್ತನಾಲಕ್ಷಣಃ. ೧೦ ಔಪಶಮಿಕಾದಿಲಕ್ಷಣಃ. ೧೧ ವಿರಹಕಾಲಃ. ೧೨ ಅನ್ಯೋನ್ಯಾಪೇಕ್ಷಯಾ ವಿಶೇಷಪ್ರತಿಪತ್ತಿಃ. ೧೩ ಆಗಮಚಕ್ಷುಷಾಂ. ೧೪ ವಿಜ್ಞಾನೋಪಾಯಾಃ. ೧೫ ನಿಶ್ಚೇಯಃ. ೧೬ ಜೀವಸ್ಯ. ೧೭ ಸ್ವಸ್ವಭಾವಃ. ೧೮ ಜ್ಞಾಯತಾಂ.

**ಜ್ಞಾನಮಷ್ಟತಯಂ ಜ್ಞೇಯಂ ದರ್ಶನಂ ಚ ಚತುಷ್ಟಯಮ್ ।**
**ಸಾಕಾರಂ ಜ್ಞಾನಮುದ್ದಿಷ್ಟಮನಾಕಾರಂ ಚ ದರ್ಶನಮ್ ॥ ೧೦೧ ॥**

ಜ್ಞಾನವು ಎಂಟು ವಿಧವಾಗಿದೆಯೆಂದೂ ದರ್ಶನವು ನಾಲ್ಕು ವಿಧವಾಗಿದೆಯೆಂದೂ ತಿಳಿಯಬೇಕು. ಜ್ಞಾನವು ಆಕಾರಸಹಿತವಾಗಿದೆ. ದರ್ಶನವು ನಿರಾಕಾರವಾಗಿದೆ. ವಸ್ತುವಿನ ಸಾಮಾನ್ಯಾಕಾರವನ್ನು ಗ್ರಹಿಸುವುದು ದರ್ಶನವೆಂದೂ ವಿಶೇಷಾಕಾರವನ್ನು ಗ್ರಹಿಸುವುದು ಜ್ಞಾನವೆಂದೂ ಭಾವವು.

**ಭೇದಗ್ರಹಣಮಾಕಾರಃ [೧]ಪ್ರತಿಕರ್ಮವ್ಯವಸ್ಥಯಾ ।**
**ಸಾಮಾನ್ಯಮಾತ್ರ[೨]ನಿರ್ಭಾಸಾದನಾಕಾರಂ ತು ದರ್ಶನಮ್ ॥ ೧೦೨ ॥**

ಘಟ ಪಟ ಮೊದಲಾದ ನಿಯತವಾದ ವಸ್ತುವ್ಯವಸ್ಥೆಯಿಂದ ಭೇದವನ್ನು ಗ್ರಹಣಮಾಡುವುದಕ್ಕೆ ಆಕಾರವೆಂದು ಹೆಸರು. ಅಸ್ತಿತ್ವವನ್ನು ತಿಳಿಸುವ ಸಾಮಾನ್ಯಾಕಾರವನ್ನು ಮಾತ್ರ ಗ್ರಹಣಮಾಡುವುದರಿಂದ ಅನಾಕಾರವಾದ ದರ್ಶನವುಂಟಾಗುವುದು. ಅಸ್ಪಷ್ಟವಾದ ಜ್ಞಾನಾಕಾರಕ್ಕೆ ದರ್ಶನವೆಂದೂ ಸ್ಪಷ್ಟವಾದ ಜ್ಞಾನಾಕಾರಕ್ಕೆ ಜ್ಞಾನವೆಂದೂ ಹೆಸರೆಂದು ಮುಖ್ಯತಾತ್ಪರ್ಯವು.

**ಜೀವಃ ಪ್ರಾಣೀ ಚ ಜಂತುಶ್ಚ ಕ್ಷೇತ್ರಜ್ಞಃ ಪುರುಷಸ್ತಥಾ ।**
**ಪುಮಾನಾತ್ಮಾಂತರಾತ್ಮಾ ಚ ಜ್ಞೋ ಜ್ಞಾನೀತ್ಯಸ್ಯ ಪರ್ಯಯಾಃ ॥ ೧೦೩ ॥**

ಜೀವ, ಪ್ರಾಣಿ, ಜಂತು, ಕ್ಷೇತ್ರಜ್ಞ, ಪುರುಷ, ಪುಮಾನ್, ಆತ್ಮಾ, ಅಂತರಾತ್ಮಾ, ಜ್ಞ, ಜ್ಞಾನೀ, ಈಪ್ರಕಾರವಾಗಿ ಈ ಜೀವದ ಪರ್ಯಾಯನಾಮಗಳು.

**ಯತೋ ಜೀವತ್ಯಜೀವೀಚ್ಚ ಜೀವಿಷ್ಯತಿ ಚ ಜನ್ಮಸು ।**
**ತತೋ ಜೀವೋಯಮಾಮ್ನಾತಃ [೩]ಸಿದ್ಧಃ [೪]ಸ್ಯಾ[೫]ದ್ಭೂತಪೂರ್ವತಃ ॥**

ಜನ್ಮಗಳಲ್ಲಿ ಹಿಂದೆ ಜೀವಿಸಿದುದರಿಂದಲೂ ವರ್ತಮಾನಕಾಲದಲ್ಲಿ ಜೀವಿಸುತ್ತಿರುವುದರಿಂದಲೂ ಮುಂದೆ ಜೀವಿಸುವುದರಿಂದಲೂ ಜೀವವೆಂದು ಹೇಳಲ್ಪಟ್ಟಿದೆ. ಇಂತಹ ಜೀವನು ಭೂತ (ಪೂರ್ವ) ಕಾಲದಲ್ಲಿ ಜೀವಿಸಿದ್ದುದರಿಂದ ಮುಂದೆ ಸಿದ್ಧನಾಗುವನು.

**ಪ್ರಾಣಾ ದಶಾಸ್ಯ ಸಂತೀತಿ ಪ್ರಾಣೀ ಜಂತುಶ್ಚ ಜನ್ಮಭಾಕ್ ।**
**ಕ್ಷೇತ್ರಂ ಸ್ವರೂಪಮಸ್ಯ ಸ್ಯಾತ್ತಜ್ಜ್ಞಾನಾತ್ಸ [೬]ತಥೋಚ್ಯತೇ ॥ ೧೦೫ ॥**

ಐದು ಇಂದ್ರಿಯಪ್ರಾಣ, ಮನೋವಚನಕಾಯಬಲಪ್ರಾಣ, ಆಯುಷ್ಯಪ್ರಾಣ, ಶ್ವಾಸೋಚ್ಛ್ವಾಸ ಪ್ರಾಣ ಈ ಹತ್ತು ಪ್ರಾಣಗಳಿರುವುದರಿಂದ ಜೀವಕ್ಕೆ ಪ್ರಾಣಿಯೆಂದು ಹೆಸರು. ಜನ್ಮಗಳನ್ನು ಹೊಂದುವುದರಿಂದ ಜಂತುವೆಂದು ಹೆಸರಾಗಿದೆ. ಜೀವಸ್ವರೂಪಕ್ಕೆ ಕ್ಷೇತ್ರವೆಂದು ಹೆಸರು; ಅದನ್ನು ತಿಳಿಯುವುದರಿಂದ ಕ್ಷೇತ್ರಜ್ಞನೆಂದು ಹೇಳಲ್ಪಡುತ್ತದೆ.

**ಪುರುಷಃ [೭]ಪುರುಭೋಗೇಷು ಶಯನಾತ್ಪರಿಭಾಷಿತಃ ।**
**ಪುನಾತ್ಯಾತ್ಮಾನಮಿತಿ ಚ ಪುಮಾನಿತಿ ನಿಗದ್ಯತೇ ॥ ೧೦೬ ॥**

ಅನೇಕಭೋಗಗಳಲ್ಲಿರುವುದರಿಂದ ಪುರುಷನೆಂದು ಹೇಳಲ್ಪಟ್ಟಿದೆ. ಈ ಜೀವವು ತನ್ನನ್ನು ತಾನೇ ಪರಿಶುದ್ಧಮಾಡಿಕೊಳ್ಳುವುದರಿಂದ ಪುಮಾನ್ ಎಂದು ಹೇಳಲ್ಪಡುತ್ತದೆ.

**ಭವೇಷ್ವತತಿ ಸಾತತ್ಯಾ[೮]ದೇತೀತ್ಯಾತ್ಮಾ ನಿರುಚ್ಯತೇ ।**
**ಸೋಂತರಾತ್ಮಾಷ್ಟಕರ್ಮಾಂತರ್ವರ್ತಿತ್ವಾದಭಿಲಪ್ಯತೇ ॥ ೧೦೭ ॥**

ಜೀವವು ಭವಗಳಲ್ಲಿ ಯಾವಾಗಲೂ ಗಮನಮಾಡುವುದರಿಂದ ಆತ್ಮನೆಂದು ಹೇಳಲ್ಪಡುತ್ತದೆ. ಆ ಜೀವವು ಎಂಟು ಕರ್ಮಗಳಿಗೆ ಸಿಕ್ಕಿರುವುದರಿಂದ ಅಂತರಾತ್ಮವೆಂದು ಹೇಳಲ್ಪಡುತ್ತದೆ.

೧ ಪ್ರತಿವಿಷಯನಿಯತ್ಯಾ. ೨ ಗ್ರಹಣಾತ್. ೩ ಸಿದ್ಧಪರಮೇಷ್ಠೀ. ೪ ಭವೇತ್. ೫ ಪೂರ್ವಸ್ಮಿನ್ಕಾಲೇ ಜೀವನಾತ್. ೬ ಕ್ಷೇತ್ರಜ್ಞ ಇತ್ಯುಚ್ಯತೇ. ೭ ಬಹು. ೮ ಗಚ್ಛತಿ.

**ಜ್ಞಃ ಸ್ಯಾಜ್ಜ್ಞಾನಗುಣೋಪೇತೋ ಜ್ಞಾನೀ ಚ ತತ ಏವ ಸಃ ।**
**ಪರ್ಯಾಯಶಬ್ದೈರೇಭಿಸ್ತು [೧]ನಿರ್ಜ್ಞೇಯೋನ್ಯೈಶ್ಚ ತದ್ವಿಧೈಃ ॥ ೧೦೮ ॥**

ಜೀವವು ಜ್ಞಾನಗುಣಯುಕ್ತವಾಗಿರುವುದರಿಂದ ಜ್ಞವೆಂದೂ ಜ್ಞಾನಿಯೆಂದೂ ಹೇಳಲ್ಪಡುತ್ತದೆ. ಈ ಮೇಲೆಹೇಳಿದ ಜೀವತತ್ತ್ವದ ಪರ್ಯಾಯಶಬ್ದಗಳಿಂದಲೂ ಅಂತಹ ಬೇರೆ ಶಬ್ದಗಳಿಂದಲೂ ಜೀವವನ್ನು ತಿಳಿಯಬೇಕು.

**ಶಾಶ್ವತೋಯಂ ಭವೇಜ್ಜೀವಃ ಪರ್ಯಾಯಸ್ತು ಪೃಥಕ್ಪೃಥಕ್ ।**
**ಮೃದ್ದ್ರವ್ಯಸ್ಯೇವ ಪರ್ಯಾಯೈಸ್ತಸ್ಯೋ[೨]ತ್ಪತ್ತಿವಿಪತ್ತಯಃ ॥ ೧೦೯ ॥**

ಶಾಶ್ವತವಾದ ಮಣ್ಣಿಗೆ ಘಟ ಕಪಾಲ ಮೊದಲಾದ ಪರ್ಯಾಯಗಳಿಂದ ಕಥಂಚಿತ್ ಉತ್ಪತ್ತಿವಿನಾಶಗಳಾಗುವಂತೆ, ಈ ಶಾಶ್ವತವಾದ ಜೀವಕ್ಕೆ ಪರ್ಯಾಯಗಳು ಬೇರೆಬೇರೆಯಾಗಿವೆ. ಆ ಪರ್ಯಾಯಗಳ ಅಪೇಕ್ಷೆಯಿಂದ ಜೀವಕ್ಕೂ ಕಥಂಚಿತ್ ಉತ್ಪತ್ತಿವಿನಾಶಗಳಿವೆ.

**[೩]ಅಭೂತ್ವಾಭಾವ [೪]ಉತ್ಪಾದೋ ಭೂತ್ವಾಚಾ[೫]ಭವನಂ ವ್ಯಯಃ ।**
**ಧ್ರೌವ್ಯಂ ತು [೬]ತಾದವಸ್ಥ್ಯಂ ಸ್ಯಾದೇವಮಾತ್ಮಾ ತ್ರಿಲಕ್ಷಣಃ ॥ ೧೧೦ ॥**

ಪೂರ್ವದಲ್ಲಿಲ್ಲದೆ ಮುಂದೆ ಉಂಟಾಗುವುದಕ್ಕೆ ಉತ್ಪತ್ತಿಯೆಂದು ಹೆಸರು. ಇದ್ದು ನಾಶವಾಗುವುದಕ್ಕೆ ವ್ಯಯವೆಂದು ಹೆಸರು. ಉತ್ಪತ್ತಿವ್ಯಯಗಳಲ್ಲಿ ಸ್ಥಿರವಾಗಿರುವುದಕ್ಕೆ ಧ್ರೌವ್ಯವೆಂದು ಹೆಸರು. ಹೀಗೆ ಆತ್ಮನು ಉತ್ಪತ್ತಿ ವ್ಯಯ ಧ್ರೌವ್ಯ ಈ ಮೂರು ಲಕ್ಷಣಗಳುಳ್ಳವನಾಗಿದ್ದಾನೆ.

**ಏವಂ ಧರ್ಮಾಣಮಾತ್ಮಾನಮಜಾನಾನಾಃ ಕುದೃಷ್ಟಯಃ ।**
**ಬಹುಧಾತ್ರ [೭]ವಿಮನ್ವಾನಾ [೮]ವಿವದಂತೇ ಪರಸ್ಪರಮ್ ॥ ೧೧೧ ॥**

ಆತ್ಮನು ಈಪ್ರಕಾರವಾದ ಧರ್ಮವುಳ್ಳವನೆಂದು ತಿಳಿಯದಿರುವ ಮಿಥ್ಯಾದೃಷ್ಟಿಗಳು ವಿಪರೀತವಾಗಿ ತಿಳಿಯುವವರಾಗಿ ಈ ಆತ್ಮವಿಚಾರದಲ್ಲಿ ಪರಸ್ಪರವಾಗಿ ಬಹಳ ಜಗಳವಾಡುತ್ತಾರೆ.

**ನಾಸ್ತ್ಯಾತ್ಮೇತ್ಯಾಹುರೇಕೇನ್ಯೇ ಸೋಸ್ತ್ಯನಿತ್ಯ ಇತಿ ಸ್ಥಿತಾಃ ।**
**ನ ಕರ್ತೇತ್ಯಪರೇ ಕೇಚಿದಭೋಕ್ತೇತಿ ಚ [೯]ದುರ್ದೃಶಃ ॥ ೧೧೨ ॥**

ಕೆಲವರು (ಚಾರ್ವಾಕರು) ಆತ್ಮವಸ್ತುವಿಲ್ಲವೆಂದು ಹೇಳುತ್ತಾರೆ. ಬೇರೆ ಕೆಲವು ಮಿಥ್ಯಾದೃಷ್ಟಿಗಳಾದ ಬೌದ್ಧರು ಆತ್ಮನು ಅನಿತ್ಯ(ಕ್ಷಣಿಕ)ನಾಗಿದ್ದಾನೆಂದು ಹೇಳುತ್ತಾರೆ. ಇನ್ನು ಕೆಲವು ಸಾಂಖ್ಯರು ಆತ್ಮನು ಪುಣ್ಯಪಾಪಗಳನ್ನು ಮಾಡುವ ಕರ್ತನೂ ಅಲ್ಲ; ಸುಖದುಃಖಗಳನ್ನನುಭವಿಸುವವನೂ ಅಲ್ಲವೆಂದು ಹೇಳುತ್ತಾರೆ.

**ಅಸ್ತ್ಯಾತ್ಮಾ ಕಿಂತು ಮೋಕ್ಷೋಸ್ಯ ನಾಸ್ತೀತ್ಯೇಕೇ ವಿಮನ್ವತೇ ।**
**ಮೋಕ್ಷೋಸ್ತಿ ತದುಪಾಯಸ್ತು ನಾಸ್ತೀತೀಚ್ಛಂತಿ ಕೇಚನ ॥ ೧೧೩ ॥**

ಆತ್ಮನಿದ್ದಾನೆ; ಆದರೆ ಆತ್ಮನಿಗೆ ಮೋಕ್ಷವಿಲ್ಲವೆಂದು ಮೀಮಾಂಸಕರು ತಿಳಿಯುತ್ತಾರೆ. ಕೆಲವು ಲೌಕಿಕಮತವಾದಿಗಳು ಆತ್ಮನಿಗೆ ಮೋಕ್ಷವಿದೆ; ಆದರೆ ಮೋಕ್ಷವನ್ನು ಪಡೆಯುವ ಉಪಾಯವಿಲ್ಲವೆಂದು ತಿಳಿಯುತ್ತಾರೆ.

**ಇತ್ಯಾದಿದುರ್ಣಯಾನೇತಾನಪಾಸ್ಯ [೧೦]ಸುನಯಾನ್ವಯಾತ್ ।**
**ಯಥೋಕ್ತಲಕ್ಷಣಂ ಜೀವಂ ತ್ವಮಾಯುಷ್ಮನ್ವಿನಿಶ್ಚಿನು ॥ ೧೧೪ ॥**

ಆಯುಷ್ಮಂತನೆ ! ಇವುಮೊದಲಾದ ದುಷ್ಟನಯ (ನಯಾಭಾಸ-ಮಿಥ್ಯಾಜ್ಞಾನ)ಗಳನ್ನು ದೂರಮಾಡಿ, ಉತ್ತಮವಾದ ನಯ(ಸಮ್ಯಗ್ಜ್ಞಾನ)ಗಳ ಜೋಡನೆಯಿಂದ ಜೀವವು ಹಿಂದೆಹೇಳಿದ ಲಕ್ಷಣವುಳ್ಳುದೆಂದು ನೀನು ನಿಶ್ಚಯವಾಗಿ ತಿಳಿ.

೧ ನಿರ್ಣೇಯ ಇತ್ಯಪಿ ಪಾಠಃ. ೨ ಉತ್ಪತ್ತಿವಿನಾಶಾಃ. ೩ ಪ್ರಾಗಭೂತ್ವಾ ಪಶ್ಚಾದ್ಭಾವಃ. ೪ ಉತ್ಪತ್ತಿಃ. ೫ ನಾಶಃ. ೬ ಉತ್ಪತ್ತಿವ್ಯಯಯೋಃ ಸ್ಥಿತಿಃ. ೭ ವಿಪರೀತೇನ ಜಾನಾನಾಃ. ೮ ವಿವಾದಂ ಕುರ್ವಂತಿ, ವಿಪರೀತಂ ವದಂತೀತಿವಾ. ೯ ಸೌಗತಾಃ. ೧೦ ಸುನಯಾನುಗಮನಾತ್.

ಸಂಸಾರಶ್ಚೈವ ಮೋಕ್ಷಶ್ಚ [೧]ತಸ್ಯಾವಸ್ಥಾದ್ವಯಂ ಮತಮ್ ।
ಸಂಸಾರ[೨]ಶ್ಚತುರಂಗೇಸ್ಮಿನ್ಭವಾವರ್ತೇ ವಿವರ್ತನಮ್ ॥ ೧೧೫ ॥

ಆ ಜೀವಕ್ಕೆ ಸಂಸಾರವೆಂದೂ ಮೋಕ್ಷವೆಂದೂ ಎರಡು ಅವಸ್ಥೆಗಳಿವೆ. ನರಕ ತಿರ್ಯಙ್ಮನುಷ್ಯದೇವ ಈ ನಾಲ್ಕು ಅವಯವಗಳುಳ್ಳ ಭವವೆಂಬ ಸುಳಿಯಲ್ಲಿ ತಿರುಗುವುದು ಸಂಸಾರಾವಸ್ಥೆಯಾಗಿದೆ.

ನಿಃಶೇಷಕರ್ಮನಿರ್ಮೋಕ್ಷೋ ಮೋಕ್ಷೋನಂತಸುಖಾತ್ಮಕಃ ।
ಸಮ್ಯಗ್ವಿಶೇಷಣಜ್ಞಾನದೃಷ್ಟಿಚಾರಿತ್ರಸಾಧನಃ ॥ ೧೧೬ ॥

ಸಂಪೂರ್ಣಕರ್ಮಗಳಿಂದ ಬಿಡುಗಡೆಯಾಗುವುದು ಮೋಕ್ಷಾವಸ್ಥೆಯಾಗಿದೆ. ಈ ಮೋಕ್ಷವು ಅನಂತಸುಖಸ್ವರೂಪವಾಗಿದೆ. ಇದನ್ನು ಹೊಂದುವುದಕ್ಕೆ ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ಇವುಗಳು ಸಾಧನ(ಕಾರಣ)ಗಳಾಗಿವೆ.

ಆಪ್ತಾಗಮಪದಾರ್ಥಾನಾಂ ಶ್ರದ್ಧಾನಂ ಪರಯಾ ಮುದಾ ।
ಸಮ್ಯಗ್ದರ್ಶನಮಾಮ್ನಾತಂ ಪ್ರಥಮಂ ಮುಕ್ತಿಸಾಧನಮ್ ॥ ೧೧೭ ॥

ಯಥಾರ್ಥವಾದ ದೇವರು ಆಗಮ ಜೀವಮೊದಲಾದ ಪದಾರ್ಥ ಇವುಗಳನ್ನು ಹೆಚ್ಚಾದ ಪ್ರೀತಿಯಿಂದ ನಂಬುವುದು ಮೊದಲನೆಯ ಮುಕ್ತಿಸಾಧನವಾದ ಸಮ್ಯಗ್ದರ್ಶನವೆಂದು ಹೇಳಲ್ಪಟ್ಟಿದೆ.

ಜ್ಞಾನಂ ಜೀವಾದಿಭಾವಾನಾಂ ಯಾಥಾತ್ಮ್ಯಸ್ಯ ಪ್ರಕಾಶಕಮ್ ।
ಅಜ್ಞಾನಧ್ವಾಂತಸಂತಾನಪ್ರಕ್ಷಯಾನಂತರೋದ್ಭವಮ್ ॥ ೧೧೮ ॥

ಜೀವಮೊದಲಾದ ಪದಾರ್ಥಗಳ ಯಥಾರ್ಥಸ್ವರೂಪವನ್ನು ಪ್ರಕಾಶಪಡಿಸುವುದು ಸಮ್ಯಗ್ಜ್ಞಾನವಾಗಿದೆ. ಈ ಜ್ಞಾನವು ಅಜ್ಞಾನವೆಂಬ ಕತ್ತಲೆಯ ಪರಂಪರೆಯು ನಾಶವಾದನಂತರದಲ್ಲುಂಟಾಗುತ್ತದೆ.

ಮಾಧ್ಯಸ್ಥಲಕ್ಷಣಂ ಪ್ರಾಹುಶ್ಚಾರಿತ್ರಂ ವಿತೃಷೋ ಮುನೇಃ ।
ಮೋಕ್ಷಕಾಮಸ್ಯ ನಿರ್ಮುಕ್ತಚೇಲಸ್ಯಾಹಿಂಸಕಸ್ಯ ತತ್ ॥ ೧೧೯ ॥

ವಿಷಯಭೋಗಗಳಲ್ಲಿ ಇಚ್ಛೆಯಿಲ್ಲದವನೂ ಮೋಕ್ಷವನ್ನಿಚ್ಛಿಸುವವನೂ ವಸ್ತ್ರವನ್ನು ಪರಿತ್ಯಜಿಸಿದವನೂ ಅಹಿಂಸಾವ್ರತವನ್ನು ಪರಿಪಾಲಿಸುವವನೂ ಆದ ಮುನಿಯ ಮಾಧ್ಯಸ್ಥಭಾವವು ಚಾರಿತ್ರವೆಂದು ಹೇಳುತ್ತಾರೆ. ಅನಾದಿಪರಿಪಾಟಿಯಲ್ಲಿ ಹೇಳಲ್ಪಟ್ಟಿದೆಯೆಂದು ಭಾವವು.

ತ್ರಯಂ [೩]ಸಮುದಿತಂ ಮುಕ್ತೇಃ ಸಾಧನಂ ದರ್ಶನಾದಿಕಮ್ ।
ನೈಕಾಂಗವಿಕಲತ್ವೇಪಿ ತತ್ಸ್ವಕಾರ್ಯಕೃದಿಷ್ಯತೇ ॥ ೧೨೦ ॥

ಸಮ್ಯಗ್ದರ್ಶನಜ್ಞಾನಚಾರಿತ್ರಗಳು ಮೂರು ಸೇರಿ ಮೋಕ್ಷಕ್ಕೆ ಕಾರಣವಾಗುತ್ತವೆ. ಆ ಮೂರರಲ್ಲಿ ಒಂದು ಕಡಿಮೆಯಾದರೆ ಅವು ತಮ್ಮ ಕಾರ್ಯವಾದ ಮೋಕ್ಷೋತ್ಪತ್ತಿಯನ್ನು ಮಾಡುವುದಿಲ್ಲ.

ಸತ್ಯೇವ ದರ್ಶನೇ ಜ್ಞಾನಂ ಚಾರಿತ್ರಂ ಚ ಫಲಪ್ರದಮ್ ।
ಜ್ಞಾನಂ ಚ [೪]ದೃಷ್ಟಿಸಚ್ಚರ್ಯಾಸಾನ್ನಿಧ್ಯೇ ಮುಕ್ತಿಕಾರಣಮ್ ॥ ೧೨೧ ॥

ಸಮ್ಯಗ್ದರ್ಶನವಿದ್ದರೆ ಮಾತ್ರ ಜ್ಞಾನಚಾರಿತ್ರಗಳು ಫಲವನ್ನು ಕೊಡುತ್ತವೆ. ಜ್ಞಾನವೂ ದರ್ಶನಚಾರಿತ್ರಗಳಿದ್ದರೇ ಮುಕ್ತಿಗೆ ಕಾರಣವಾಗುತ್ತದೆ.

ಚಾರಿತ್ರಂ ದರ್ಶನಜ್ಞಾನವಿಕಲಂ ನಾರ್ಥಕೃನ್ಮತಮ್ ।
[೫]ಪ್ರಪಾತಾಯೈವ [೬]ತದ್ಧಿ ಸ್ಯಾದಂಧಸ್ಯೇವ [೭]ವಿವಲ್ಗಿತಮ್ ॥ ೧೨೨ ॥

ದರ್ಶನಜ್ಞಾನರಹಿತವಾದ ಚಾರಿತ್ರವೂ ಪ್ರಯೋಜನಕರವಲ್ಲವು. ಕುರುಡನ ಹಾರುವಿಕೆ(ನೆಗೆತ)ಯು ಹೇಗೆ ಪತನಕ್ಕೆ ಕಾರಣವೋ ಹಾಗೆಯೇ ದರ್ಶನಜ್ಞಾನರಹಿತವಾದ ಚಾರಿತ್ರವು ನರಕಾದಿಗತಿಯಲ್ಲಿ ಪತನಕ್ಕೆ ಕಾರಣವಾಗುವುದು.

೧ ಜೀವಸ್ಯ. ೨ ಚತುರವಯವೇ. ೩ ಸಮುದಾಯೀಕೃತಂ. ೪ ದರ್ಶನಚಾರಿತ್ರಸಾನ್ನಿಧ್ಯೇ. ೫ ನರಕಾದಿಗತೌ ಪತನಾಯೈವ. ೬ ದರ್ಶನವಿಕಲಚಾರಿತ್ರಂ. ೭ ಉತ್ಪತನಂ.

[೧]ತ್ರಿಷ್ವೇಕದ್ವಯವಿಶ್ಲೇಷಾದುದ್ಭೂತಾ ಮಾರ್ಗದುರ್ಣಯಾಃ ।
[೨]ಷೋಢಾ ಭವಂತಿ ಮೂಢಾನಾಂ ತೇಪ್ಯತ್ರ [೩]ವಿನಿಪಾತಿತಾಃ ॥ ೧೨೩ ॥

ಆ ಸಮ್ಯಗ್ದರ್ಶನಜ್ಞಾನಚಾರಿತ್ರಗಳಲ್ಲಿ ಯಾವುದಾದರೊಂದು ಅಥವಾ ಎರಡು ಸಾಧನಗಳು ಕಡಿಮೆಯಾಗುವುದರಿಂದುಂಟಾದ ಅಜ್ಞಾನಿಗಳ ದುರ್ಮಾರ್ಗೋಪದೇಶಗಳು ಆರುವಿಧವಾಗಿವೆ.—ಕೆಲವರು ಜ್ಞಾನಚಾರಿತ್ರಗಳೇ, ಕೆಲವರು ದರ್ಶನಚಾರಿತ್ರಗಳೇ, ಕೆಲವರು ದರ್ಶನಜ್ಞಾನಗಳೇ, ಕೆಲವರು ದರ್ಶನವೇ, ಕೆಲವರು ಜ್ಞಾನವೇ, ಕೆಲವರು ಚಾರಿತ್ರವೇ, ಮೋಕ್ಷಕ್ಕೆ ಕಾರಣವೆಂದು ಹೇಳುತ್ತಾರೆ. ಆ ದುರ್ಣಯಗಳೂ ಇಲ್ಲಿ ನಿರಾಕರಿಸಲ್ಪಟ್ಟುವು.

[೪]ಇತೋ ನಾಧಿಕಮಸ್ತ್ಯನ್ಯನ್ನಾಭೂನ್ನೈವ ಭವಿಷ್ಯತಿ ।
ಇತ್ಯಾಪ್ತಾದಿತ್ರಯೇ ದಾರ್ಢ್ಯಾದ್ದರ್ಶನಸ್ಯ ವಿಶುದ್ಧತಾ ॥ ೧೨೪ ॥

"ಈ ಆಪ್ತಾಗಮಪದಾರ್ಥಕ್ಕಿಂತ ಹೆಚ್ಚಿನದು (ಶ್ರೇಷ್ಠ) ಬೇರೆಯಾವುದೂ ಇಲ್ಲ, ಹಿಂದೆ ಇದ್ದುದೂ ಇಲ್ಲ, ಮುಂದೆ ಇರುವುದೂ ಇಲ್ಲ" ಎಂದು ಆಪ್ತಾಗಮಪದಾರ್ಥಗಳಲ್ಲಿ ದೃಢವಾದ ನಂಬಿಕೆಯನ್ನಿಡುವುದರಿಂದ ದರ್ಶನಕ್ಕೆ ವಿಶುದ್ಧಿಯುಂಟಾಗುವುದು.

ಆಪ್ತೋ ಗುಣೈರ್ಯುತೋ ಧೂತಕಲಂಕೋ ನಿರ್ಮಲಾಶಯಃ ।
ನಿಷ್ಠಿತಾರ್ಥೋ ಭವೇ[೫]ತ್ಸಾರ್ವಸ್ತದಾಭಾಸಾಸ್ತತೋಪರೇ ॥ ೧೨೫ ॥

ಅನಂತಜ್ಞಾನಮೊದಲಾದ ಗುಣಗಳಿಂದ ಕೂಡಿದವನೂ ಕರ್ಮಕಲಂಕವನ್ನು ನಾಶಮಾಡಿದವನೂ ನಿರ್ಮಲವಾದ ಅಭಿಪ್ರಾಯವುಳ್ಳವನೂ ಕೃತಕೃತ್ಯನೂ ಸಮಸ್ತ ಪ್ರಾಣಿಗಳಿಗೆ ಹಿತಕರನೂ ಆದವನು ಆಪ್ತನಾಗುವನು. ಅಂತಹವನಿಗಿಂತ ಬೇರೆಯೆಲ್ಲರೂ ಆಪ್ತನಂತೆ ತೋರುವವರು. ನಿಜವಾದ ಆಪ್ತರಲ್ಲವೆಂದು ಭಾವವು.

ಆಗಮಸ್ತದ್ವಚೋಶೇಷಪುರುಷಾರ್ಥಾನುಶಾಸನಮ್ ।
ನಯಪ್ರಮಾಣಗಂಭೀರಂ ತದಾಭಾಸೋಸತಾಂ ವಚಃ ॥ ೧೨೬ ॥

ಸಮಸ್ತಪುರುಷಾರ್ಥಗಳನ್ನುಪದೇಶಿಸುವುದೂ ನಯಗಳಿಂದಲೂ ಪ್ರಮಾಣಗಳಿಂದಲೂ ಗಂಭೀರವೂ ಆದ ಆ ಆಪ್ತನ ವಚನವು ಆಗಮವಾಗಿದೆ. ಅಸತ್ಪುರುಷರ ವಚನವು ಆಗಮದಂತೆ ತೋರುವುದು. ನಿಜವಾದ ಶಾಸ್ತ್ರವಲ್ಲವೆಂದರ್ಥವು.

ಪದಾರ್ಥಸ್ತು ದ್ವಿಧಾ ಜ್ಞೇಯೋ ಜೀವಾಜೀವವಿಭಾಗತಃ ।
ಯಥೋಕ್ತಲಕ್ಷಣೋ ಜೀವ[೬]ಸ್ತ್ರಿಕೋಟಿಪರಿಣಾಮಭಾಕ್ ॥ ೧೨೭ ॥

ಪದಾರ್ಥವು ಜೀವ ಮತ್ತು ಅಜೀವಭೇದದಿಂದ ಎರಡುವಿಧವಾಗಿದೆಯೆಂದು ತಿಳಿಯಬೇಕು. ಹಿಂದೆಹೇಳಿದ ಲಕ್ಷಣ(ಉಪಯೋಗ)ವುಳ್ಳ ಜೀವವು ಮೂರು ವಿಧವಾದ (ಉತ್ಪತ್ತಿ, ಸ್ಥಿತಿ, ಲಯ) ಪರಿಣಾಮಗಳನ್ನು ಹೊಂದಿರುವುದು.

ಭವ್ಯಾಭವ್ಯೌ ತಥಾ ಮುಕ್ತ ಇತಿ ಜೀವಸ್ತ್ರಿಧೋದಿತಃ ।
ಭವಿಷ್ಯತ್ಸಿದ್ಧಿಕೋ ಭವ್ಯಃ ಸುವರ್ಣೋಪಲಸನ್ನಿಭಃ ॥ ೧೨೮ ॥

ಜೀವವು ಭವ್ಯಜೀವವೆಂದೂ, ಅಭವ್ಯಜೀವವೆಂದೂ, ಮುಕ್ತಜೀವವೆಂದೂ ಮೂರುವಿಧವಾಗಿ ಹೇಳಲ್ಪಟ್ಟಿದೆ. ಬಂಗಾರವಿರುವ ಕಲ್ಲಿನಿಂದ ಬಂಗಾರವನ್ನು ಬೇರೆಮಾಡುವಂತೆ ಮುಂದೆ ಸಿದ್ಧಾವಸ್ಥೆಯನ್ನು ಹೊಂದುವ ಶಕ್ತಿಯುಳ್ಳ ಜೀವಕ್ಕೆ ಭವ್ಯಜೀವವೆಂದು ಹೆಸರು. ಭವ್ಯಜೀವವು ಸುವರ್ಣಪಾಷಾಣಕ್ಕೆ ಸದೃಶವಾದುದೆಂದಭಿಪ್ರಾಯವು.

ಅಭವ್ಯಸ್ತದ್ವಿಪಕ್ಷಃ ಸ್ಯಾ[೭]ದಂಧಪಾಷಾಣಸನ್ನಿಭಃ ।
ಮುಕ್ತಿಕಾರಣಸಾಮಗ್ರೀ ನ ತಸ್ಯಾಸ್ತಿ ಕದಾಚನ ॥ ೧೨೯ ॥

೧ ಸಮ್ಯಗ್ದರ್ಶನಚಾರಿತ್ರೇಷು. ೨ ಕೇಚಿದ್ದರ್ಶನಂ ಮುಕ್ತ್ವಾ, ಅಪರೇ ಜ್ಞಾನಂ ವಿಹಾಯ, ಅಪರೇ ಚಾರಿತ್ರಂ ವಿನಾ, ದ್ವಾಭ್ಯಾಮೇವ ಮೋಕ್ಷಮಿತಿ ವದಂತಿ, ದರ್ಶನಾದೇವ, ಜ್ಞಾನಾದೇವ, ಚಾರಿತ್ರಾದೇವ ಮೋಕ್ಷಮಿತಿ ವದಂತೀತಿ ಷಟ್ ಪ್ರಕಾರಾಃ. ೩ ನಿರಾಕೃತಾಃ. ೪ ಯಥೋಕ್ತಾಪ್ತಾದಿತ್ರಯಾತ್. ೫ ಸರ್ವಹಿತಃ. ೬ ಸ್ಥಿತ್ಯುತ್ಪತ್ತಿಪ್ರಲಯಾಃ. ೭ ವಿಭಕ್ತುಮಶಕ್ಯಕಾಂಚನಾತ್ಮಾ.

ಹಿಂದೆಹೇಳಿದ ಜೀವಕ್ಕಿಂತ ವಿಪರೀತವಾದುದೂ ಬಂಗಾರವಿಲ್ಲದ ಕಲ್ಲಿಗೆ ಸಮಾನವೂ ಆದ ಜೀವವು ಅಭವ್ಯಜೀವವಾಗಿದೆ. ಆ ಅಭವ್ಯಜೀವಕ್ಕೆ ಮೋಕ್ಷ ಕಾರಣಸಾಮಗ್ರಿಯು ಎಂದೂ ದೊರಕುವುದಿಲ್ಲ.

**ಕರ್ಮಬಂಧನನಿರ್ಮುಕ್ತಸ್ತ್ರಿಲೋಕಶಿಖರಾಲಯಃ ।**
**ಸಿದ್ಧೋ ನಿರಂಜನಃ ಪ್ರೋಕ್ತಃ ಪ್ರಾಪ್ತಾನಂತಸುಖೋದಯಃ ॥ ೧೩೦ ॥**

ಕರ್ಮಬಂಧನದಿಂದ ಬಿಡಲ್ಪಟ್ಟವನೂ ಮೂರುಲೋಕದ ತುದಿಯಲ್ಲಿ ವಾಸ ಮಾಡುವವನೂ ಭಾವಕರ್ಮರಹಿತನೂ ಅನಂತವಾದ ಸುಖವನ್ನು ಹೊಂದಿದವನೂ ಆದ ಆತ್ಮ (ಜೀವ) ನು ಸಿದ್ಧಜೀವವೆಂದು ಹೇಳಲ್ಪಟ್ಟಿದೆ.

**ಇತಿ ಜೀವಪದಾರ್ಥಸ್ತೇ ಸಂಕ್ಷೇಪೇಣ ನಿರೂಪಿತಃ ।**
**ಅಜೀವತತ್ತ್ವಮಪ್ಯೇವಮವಧಾರಯ ಧೀಧನ ॥ ೧೩೧ ॥**

ಎಲೈ ಜ್ಞಾನಿಯಾದ ಭರತನೆ! ಈಪ್ರಕಾರವಾಗಿ ನಿನಗೆ ಜೀವಪದಾರ್ಥವು ಸಂಕ್ಷೇಪದಿಂದ ಹೇಳಲ್ಪಟ್ಟಿತು. ಹೀಗೆಯೇ ಅಜೀವತತ್ತ್ವವನ್ನು ಸಾವಧಾನದಿಂದ ಕೇಳು.

**ಅಜೀವಲಕ್ಷಣಂ ತತ್ತ್ವಂ ಪಂಚಧೈವ ಪ್ರಪಂಚ್ಯತೇ ।**
**ಧರ್ಮಾಧರ್ಮಾವಥಾಕಾಶಂ ಕಾಲಃ ಪುದ್ಗಲ ಇತ್ಯಪಿ ॥ ೧೩೨ ॥**

ಅಜೀವಲಕ್ಷಣವುಳ್ಳ ತತ್ತ್ವವು ಧರ್ಮ, ಅಧರ್ಮ, ಆಕಾಶ, ಕಾಲ, ಪುದ್ಗಲಗಳೆಂದು ಐದೇ ವಿಧವಾಗಿ ವಿಸ್ತರಿಸಲ್ಪಡುತ್ತದೆ.

**ಜೀವಪುದ್ಗಲಯೋರ್ಯತ್ಸ್ಯಾ[೧]ದ್ಗತ್ಯುಪಗ್ರಹಕಾರಣಮ್ ।**
**ಧರ್ಮದ್ರವ್ಯಂ ತದುದ್ದಿಷ್ಟಮಧರ್ಮಃ ಸ್ಥಿತ್ಯುಪಗ್ರಹಃ ॥ ೧೩೩ ॥**

ಜೀವಪುದ್ಗಲಗಳ ಗಮನ(ಸಂಚಾರ)ಕ್ಕೆ ಉಪಕಾರ(ಸಹಾಯ)ವನ್ನು ಮಾಡುವುದರಲ್ಲಿ ಕಾರಣವಾದುದು ಧರ್ಮದ್ರವ್ಯವೆಂದು ಹೇಳಲ್ಪಟ್ಟಿದೆ. ಜೀವಪುದ್ಗಲಗಳ ಸ್ಥಿತಿ(ನಿಲ್ಲುವುದು)ಗೆ ಉಪಕಾರಿ(ಸಹಾಯಕ)ಯಾದುದು ಅಧರ್ಮದ್ರವ್ಯವು.

**ಗತಿಸ್ಥಿತಿಮತಾಮೇತೌ ಗತಿಸ್ಥಿತ್ಯೋರುಪಗ್ರಹೇ ।**
**ಧರ್ಮಾಧರ್ಮೌ ಪ್ರವರ್ತೇತೇ ನ ಸ್ವಯಂ ಪ್ರೇರಕೌ ಮತೌ ॥ ೧೩೪ ॥**

ಈ ಧರ್ಮಾಧರ್ಮದ್ರವ್ಯಗಳು ಗತಿಸ್ಥಿತಿಯಲ್ಲಿ ಪರಿಣಮಿಸಿದ ಜೀವಪುದ್ಗಲಗಳ ಗತಿಸ್ಥಿತಿಗಳಿಗೆ ಉಪಕಾರಮಾಡುವುದರಲ್ಲಿ ಪ್ರವರ್ತಿಸುತ್ತವೆ. ಆದರೆ ಜೀವಪುದ್ಗಲಗಳನ್ನು ಗತಿಸ್ಥಿತಿಗಳಲ್ಲಿ ತಾವಾಗಿ ಧರ್ಮಾಧರ್ಮಗಳು ಪ್ರೇರೇಪಿಸುವವುಗಳಲ್ಲ. ಉದಾಸೀನಕಾರಣಗಳೆಂದು ಭಾವವು.

**ಯಥಾ ಮತ್ಸ್ಯಸ್ಯ ಗಮನಂ ವಿನಾ ನೈವಾಂಭಸಾ ಭವೇತ್ ।**
**ನ ಚಾಂಭಃ ಪ್ರೇರಯತ್ಯೇನಂ ತಥಾ ಧರ್ಮೋಽಸ್ತ್ಯನುಗ್ರಹಃ ॥ ೧೩೫ ॥**

ಮೀನಿನ ಗಮನವು ನೀರಿಲ್ಲದಿದ್ದರೆ ಆಗುವುದೇ ಇಲ್ಲ, ಆದರೆ ನೀರು ಈ ಮೀನನ್ನು ಪ್ರೇರೇಪಿಸುವುದಿಲ್ಲ. ಹಾಗೆಯೇ ಧರ್ಮದ್ರವ್ಯವು ಜೀವಪುದ್ಗಲಗಳ ಗಮನಕ್ಕೆ ಸಹಕಾರಿಯಾಗಿದೆ.

**ತರುಚ್ಛಾಯಾ ಯಥಾ ಮರ್ತ್ಯಂ ಸ್ಥಾಪಯತ್ಯರ್ಥಿನಂ ಸ್ವತಃ ।**
**ನತ್ವೇಷಾ ಪ್ರೇರಯತ್ಯೇನಮಥ ಚ ಸ್ಥಿತಿಕಾರಣಮ್ ॥ ೧೩೬ ॥**

ಮರದ ನೆರಳು ನಿಲ್ಲುವುದಕ್ಕೆ ಇಚ್ಛೆಪಟ್ಟ ಮನುಷ್ಯನನ್ನು ನಿಲ್ಲಿಸುತ್ತದೆ. ಈ ನೆರಳು ತಾನಾಗಿ ಈ ಮನುಷ್ಯನನ್ನು ಪ್ರೇರೇಪಿಸುವುದಿಲ್ಲ; ನಿಲ್ಲುವುದಕ್ಕೆ ಕಾರಣವಾಗಿದೆ.

**ತಥೈವಾಧರ್ಮಕಾಯೋಽಪಿ ಜೀವಪುದ್ಗಲಯೋಃ ಸ್ಥಿತಿಮ್ ।**
**ನಿವರ್ತಯತ್ಯುದಾಸೀನೋ ನ ಸ್ವಯಂ ಪ್ರೇರಕಃ ಸ್ಥಿತೇಃ ॥ ೧೩೭ ॥**

ಹಾಗೆಯೇ ಅಧರ್ಮದ್ರವ್ಯವೂ ಉದಾಸೀನಕಾರಣವಾಗಿ ಜೀವಪುದ್ಗಲಗಳ ಸ್ಥಿತಿಯನ್ನು ಮಾಡುತ್ತದೆ; ತಾನಾಗಿ ಸ್ಥಿತಿಗೆ ಪ್ರೇರಕವಲ್ಲವು. ಇಲ್ಲಿ ಧರ್ಮಾಧರ್ಮದ್ರವ್ಯಗಳೆಂದರೆ ಪುಣ್ಯಪಾಪಗಳೆಂದರ್ಥವಲ್ಲ, ಈ ದ್ರವ್ಯಗಳು ಆಕಾಶದಂತೆ ಅಮೂರ್ತಗಳಾಗಿ ಲೋಕವನ್ನು ವ್ಯಾಪಿಸಿಕೊಂಡಿವೆಯೆಂದು ತಿಳಿಯಬೇಕು.

**ಜೀವಾದೀನಾಂ ಪದಾರ್ಥಾನಾಮವಗಾಹನಲಕ್ಷಣಮ್ ।**
**ಯತ್ತದಾಕಾಶಮಸ್ಪರ್ಶಮಮೂರ್ತಂ ವ್ಯಾಪಿ ನಿಷ್ಕ್ರಿಯಮ್ ॥ ೧೩೮ ॥**

ಜೀವಮೊದಲಾದ ಪದಾರ್ಥಗಳಿಗೆ ಅವಕಾಶವನ್ನು ಕೊಡುವುದು ಆಕಾಶ ದ್ರವ್ಯವು, ಈ ದ್ರವ್ಯವು ಸ್ಪರ್ಶ ರಸ ಮೊದಲಾದ ಗುಣಗಳಿಲ್ಲದುದೂ ಅಮೂರ್ತವೂ ವ್ಯಾಪಕವೂ ನಿಷ್ಕ್ರಿಯ(ಕ್ರಿಯಾರಹಿತ)ವೂ ಆಗಿದೆ.

**ವರ್ತನಾಲಕ್ಷಣಃ ಕಾಲೋ ವರ್ತನಾ [೧]ಸ್ವಪರಾಶ್ರಯಾ ।**
**ಯಥಾಸ್ವಂ ಗುಣಪರ್ಯಾಯೈಃ [೨]ಪರಿಣೇತೃತ್ವಯೋಜನಾ ॥ ೧೩೯ ॥**

ಪದಾರ್ಥಗಳನ್ನು ಪರಿವರ್ತನೆಮಾಡಿಸುವುದೇ ಲಕ್ಷಣವಾಗುಳ್ಳುದು ಕಾಲ ದ್ರವ್ಯವು. ಈ ಪರಿವರ್ತನಾಕ್ರಿಯೆಯು ಕಾಲವನ್ನೂ ಇತರಪದಾರ್ಥಗಳನ್ನೂ ಆಶ್ರಯಿಸಿದುದಾಗಿದೆ. ಇದು ಯಥೋಚಿತವಾಗಿ ಗುಣಗಳಿಂದಲೂ ಪರ್ಯಾಯಗಳಿಂದಲೂ ಪರಿಣಮನಸ್ವಭಾವವನ್ನುಂಟುಮಾಡುತ್ತದೆ. ಅವಸ್ಥಾಂತರಪ್ರಾಪ್ತಿ ರೂಪವಾದ ಕ್ರಿಯೆಗೆ ಕಾರಣವಾದುದು ಕಾಲದ್ರವ್ಯವೆಂದು ಭಾವವು.

**ಯಥಾ ಕುಲಾಲಚಕ್ರಸ್ಯ ಭ್ರಮಣೇಧಃಶಿಲಾ ಸ್ವಯಮ್ ।**
**ಧತ್ತೇ ನಿಮಿತ್ತತಾಮೇವಂ ಕಾಲೋಽಪಿ [೩]ಕಲಿತೋ ಬುಧೈಃ ॥ ೧೪೦ ॥**

ಕುಂಬಾರನ ಚಕ್ರದ ಭ್ರಮಣೆಗೆ ಕೆಳಗಿರುವ ಕಲ್ಲು ನಿಮಿತ್ತಕಾರಣವಾಗಿರುವಂತೆ, ಪದಾರ್ಥಗಳ ಪರಿವರ್ತನೆಗೆ ಕಾಲವು ನಿಮಿತ್ತಕಾರಣವಾಗಿದೆಯೆಂದು ಜ್ಞಾನಿಗಳು ತಿಳಿಯುತ್ತಾರೆ.

**ವ್ಯವಹಾರಾತ್ಮಕಾತ್ಕಾಲಾನ್ಮುಖ್ಯಕಾಲವಿನಿರ್ಣಯಃ ।**
**ಮುಖ್ಯೇ ಸತ್ಯೇವ ಗೌಣಸ್ಯ [೪]ಬಾಹ್ಲೀಕಾದೇಃ ಪ್ರತೀತಿತಃ ॥ ೧೪೧ ॥**

ಸಮಯ ಗಳಿಗೆ ಮುಹೂರ್ತ ಮೊದಲಾದ ವ್ಯವಹಾರಕಾಲದ ನಿಮಿತ್ತದಿಂದ ಮುಖ್ಯಕಾಲದ ನಿರ್ಣಯವಾಗುತ್ತದೆ. ಲೋಕದಲ್ಲಿ ಮುಖ್ಯವಸ್ತುವಿದ್ದರೇನೇ ಗೌಣ (ವ್ಯವಹಾರ)ವಸ್ತುವಿನ ಜ್ಞಾನವಾಗುತ್ತದೆ. ಮ್ಲೇಚ್ಛಜನರನ್ನು ತಿಳಿಯುವುದರಿಂದ ಸತ್ಪುರುಷರ ಜ್ಞಾನವಾಗುವಂತೆಯೂ ಹುಡುಗನು ಸಿಂಹನಾಗಿದ್ದಾನೆಯೆಂಬುದರಿಂದ ಮುಖ್ಯವಾದ ಸಿಂಹವಿದೆಯೆಂದು ಗೊತ್ತಾಗುವಂತೆಯೂ ವ್ಯವಹಾರಕಾಲದಿಂದ ಮುಖ್ಯಕಾಲದ ನಿರ್ಣಯವಾಗುವುದು.

**ಸ ಕಾಲೋ ಲೋಕಮಾತ್ರೈಃ ಸ್ವೈರಣುಭಿರ್ನಿಚಿತಃ ಸ್ಥಿತೈಃ ।**
**ಜ್ಞೇಯೋಽನ್ಯೋನ್ಯಮಸಂಕೀರ್ಣೈ ರತ್ನಾನಾಮಿವ ರಾಶಿಭಿಃ ॥ ೧೪೨ ॥**

ಆ ನಿಶ್ಚಯ(ಮುಖ್ಯ)ಕಾಲವು ಲೋಕದಲ್ಲಿರುವ ಪ್ರದೇಶಪರಿಮಿತವಾಗಿರುವುವೂ ರತ್ನಗಳ ರಾಶಿಗಳಂತೆ ಒಂದಕ್ಕೊಂದು ಸೇರದಿರುವುವೂ ಆದ ತನ್ನ ಅಣುಗಳಿಂದ ವ್ಯಾಪ್ತವಾಗಿದೆಯೆಂದು ತಿಳಿಯಬೇಕು. ಲೋಕಾಕಾಶದ ಪ್ರತಿಯೊಂದು ಪ್ರದೇಶದಲ್ಲಿಯೂ ಒಂದೊಂದು ಕಾಲಾಣುವು ರತ್ನದಂತೆ ಬೇರೆಬೇರೆಯಿದೆಯೆಂದು ಭಾವವು.

**[೫]ಪ್ರದೇಶಪ್ರಚಯಾಯೋಗಾದಕಾಯೋಽಯಂ ಪ್ರಕೀರ್ತಿತಃ ।**
**ಶೇಷಾಃ ಪಂಚಾಸ್ತಿಕಾಯಾಃ ಸ್ಯುಃ ಪ್ರದೇಶೋಪಚಿತಾತ್ಮಕಾಃ ॥ ೧೪೩ ॥**

ಈ ಕಾಲದ್ರವ್ಯ (ಅಣು)ಕ್ಕೆ ಅನೇಕ ಪ್ರದೇಶವ್ಯಾಪಕತೆಯಿಲ್ಲದಿರುವುದರಿಂದ ಇದು ಅಕಾಯವೆಂದು ಹೇಳಲ್ಪಟ್ಟಿದೆ. ಅನೇಕಪ್ರದೇಶಗಳನ್ನು ವ್ಯಾಪಿಸಿಕೊಂಡಿರುವ ಜೀವ

೧ ಗತ್ಯುಪಗ್ರಹೇ ಕಾರಣಂ.

೧ ಸ್ವಸ್ಯ ಕಾಲಸ್ಯ ಪರಸ್ಯ ವಸ್ತುನಃ ಆಶ್ರಯೋ ಯಸ್ಯಾಸ್ಸಾ. ೨ ಪರಿಣಮನತ್ವಸ್ಯ ಯೋಜನಂ ಯಸ್ಯಾಸ್ಸಾ ಪರಿಣಂತೃತ್ವಯೋಜನೇತ್ಯಪಿ ಪಾಠಃ. ೩ ಜ್ಞಾತಃ. ೪ ಮ್ಲೇಚ್ಛಜನಾದಿಪ್ರತೀತೇಃ ಸತ್ಪುರುಷನಿರ್ಣಯೋ ಯಥಾ. ೫ ಬಹುಪ್ರದೇಶಾಭಾವಾತ್.

ಮೊದಲಾದ ಉಳಿದ ಐದು ದ್ರವ್ಯಗಳು ಅಸ್ತಿಕಾಯಗಳಾಗಿವೆ. ಕಾಲದ್ರವ್ಯವು ಒಂದೊಂದುಪ್ರದೇಶದಲ್ಲಿ ಒಂದೊಂದೇ ಇರುವುದರಿಂದ ಅಸ್ತಿಕಾಯವಲ್ಲವೆಂದರ್ಥ.

**ಧರ್ಮಾಧರ್ಮವಿಯತ್ಕಾಲಪದಾರ್ಥಾ ಮೂರ್ತಿವರ್ಜಿತಾಃ ।**
**ಮೂರ್ತಿಮತ್ಪುದ್ಗಲದ್ರವ್ಯಂ ತಸ್ಯ ಭೇದಾನಿತಃ ಶೃಣು ॥ ೧೪೪ ॥**

ಧರ್ಮ, ಅಧರ್ಮ, ಆಕಾಶ, ಕಾಲ ಈ ನಾಲ್ಕು ದ್ರವ್ಯಗಳು ಅಮೂರ್ತಗಳಾಗಿವೆ. ಪುದ್ಗಲದ್ರವ್ಯವು ಮೂರ್ತವಾಗಿದೆ. ಇದರ ಭೇದಗಳನ್ನು ಮುಂದೆ ಹೇಳುವ ಪ್ರಕಾರವಾಗಿ ಕೇಳು.

**ವರ್ಣಗಂಧರಸಸ್ಪರ್ಶಯೋಗಿನಃ ಪುದ್ಗಲಾ ಮತಾಃ ।**
**ಪೂರಣಾದ್ಗಲನಾಚ್ಚೈವ ಸಂಪ್ರಾಪ್ತಾನ್ವರ್ಥನಾಮಕಾಃ ॥ ೧೪೫ ॥**

ರೂಪ ರಸ ಗಂಧ ಸ್ಪರ್ಶ ಈ ಗುಣಗಳಿಂದ ಯುಕ್ತವಾದುವು ಪುದ್ಗಲಗಳು. ಈ ಪುದ್ಗಲಗಳು ಪರಸ್ಪರವಾಗಿ ಸೇರಿ ಸ್ಕಂಧವಾಗುವುದರಿಂದಲೂ, ಸ್ಕಂಧದಲ್ಲಿ ಸೇರಿರುವುವು ಬೇರೆಯಾಗುವುದರಿಂದಲೂ ಪುದ್ಗಲಗಳೆಂದು ಸಾರ್ಥಕವಾದ ಹೆಸರನ್ನು ಪಡೆದಿವೆ. (ಪೂರಣಾದ್ಗಲನಾಚ್ಚಪುದ್ಗಲಃ)

**ಸ್ಕಂಧಾಣುಭೇದತೋ ದ್ವೇಧಾ ಪುದ್ಗಲಸ್ಯ ವ್ಯವಸ್ಥಿತಿಃ ।**
**ಸ್ನಿಗ್ಧರೂಕ್ಷಾತ್ಮಕಾಣೂನಾಂ ಸಂಘಾತಃ ಸ್ಕಂಧ ಇಷ್ಯತೇ ॥ ೧೪೬ ॥**

ಪುದ್ಗಲದ್ರವ್ಯವು ಸ್ಕಂಧವೆಂದೂ ಅಣುವೆಂದೂ ಎರಡುವಿಧವಾಗಿದೆ. ಸ್ನಿಗ್ಧರೂಕ್ಷಗುಣಗಳುಳ್ಳ ಪರಮಾಣುಗಳ ಸಮೂಹಕ್ಕೆ ಸ್ಕಂಧವೆಂದು ಹೆಸರು. ಜಿಗಟು ಕಾಠಿಣ್ಯಗುಣಗಳುಳ್ಳ ಪರಮಾಣುಗಳು ಪರಸ್ಪರವಾಗಿ ಸೇರುವುದರಿಂದಾಗುವ ಪಿಂಡಕ್ಕೆ ಸ್ಕಂಧವೆಂದು ಹೆಸರು.

**ದ್ವ್ಯಣುಕಾದಿರ್ಮಹಾಸ್ಕಂಧಪರ್ಯಂತಸ್ತಸ್ಯ ವಿಸ್ತರಃ ।**
**ಛಾಯಾತಪತಮೋಜ್ಯೋತ್ಸ್ನಾಪಯೋದಾದಿಪ್ರಭೇದಭಾಕ್ ॥ ೧೪೭ ॥**

ಎರಡು ಅಣುಗಳಿಂದಾದ ಸ್ಕಂಧಮೊದಲಾಗಿ ಮಹಾಸ್ಕಂಧದವರೆಗೆ ಅದರ ವಿಸ್ತಾರವಿದೆ. ಆ ಸ್ಕಂಧವು ನೆರಳು, ಬಿಸಲು, ಕತ್ತಲೆ, ಬೆಳಂದಿಗಳು, ಮೇಘ ಮೊದಲಾದ ಭೇದಗಳುಳ್ಳದೂ ಆಗಿದೆ.

**ಅಣವಃ [೧]ಕಾರ್ಯಲಿಂಗಾಃ ಸ್ಯು[೨]ರ್ದ್ವಿಸ್ಪರ್ಶಾಃ [೩]ಪರಿಮಂಡಲಾಃ ।**
**ಏಕವರ್ಣರಸಾ ನಿತ್ಯಾಃ ಸ್ಯುರನಿತ್ಯಾಶ್ಚ ಪರ್ಯಯೈಃ ॥ ೧೪೮ ॥**

ಇಂದ್ರಿಯಗಳಿಗೆ ಗೋಚರವಾಗದಿರುವ ಪರಮಾಣುಗಳು ಘಟಪಟ ಮೊದಲಾದ ಕಾರ್ಯಗಳಿಂದ ತಿಳಿಯಲರ್ಹವಾಗಿವೆ. ಅನುಮಾನಪ್ರಮಾಣ (ಜ್ಞಾನ)ಕ್ಕೆ ವಿಷಯವಾಗಿವೆಯೆಂದು ಭಾವವು. ಸ್ನಿಗ್ಧರೂಕ್ಷಗಳೆಂಬೆರಡು ಸ್ಪರ್ಶಗಳುಳ್ಳವೂ ಸೂಕ್ಷ್ಮವೂ ಒಂದೇವಿಧವಾದ(ಬದಲಾಯಿಸದ)ವರ್ಣರಸಗಳುಳ್ಳವೂ ಆದ ಆ ಪರಮಾಣುಗಳು ದ್ರವ್ಯಾಪೇಕ್ಷೆಯಿಂದ ನಿತ್ಯಗಳೂ ಘಟಪಟಮೊದಲಾದ ಪರ್ಯಾಯಾಪೇಕ್ಷೆಯಿಂದ ಅನಿತ್ಯಗಳೂ ಆಗಿವೆ. ಪರ್ಯಾಯಗಳಲ್ಲಿ ವರ್ಣಾದಿಗಳು ಬದಲಾಯಿಸುತ್ತವೆಂದು ಭಾವವು.

**ಸೂಕ್ಷ್ಮಸೂಕ್ಷ್ಮಾಸ್ತಥಾ ಸೂಕ್ಷ್ಮಾಃ ಸೂಕ್ಷ್ಮಸ್ಥೂಲಾತ್ಮಕಾಃ ಪರೇ ।**
**ಸ್ಥೂಲಸೂಕ್ಷ್ಮಾತ್ಮಕಾಃ ಸ್ಥೂಲಾಃ ಸ್ಥೂಲಸ್ಥೂಲಾಶ್ಚ ಪುದ್ಗಲಾಃ ॥ ೧೪೯ ॥**

ಆ ಪುದ್ಗಲಗಳು ಸೂಕ್ಷ್ಮಸೂಕ್ಷ್ಮಗಳೂ, ಸೂಕ್ಷ್ಮಗಳೂ, ಸೂಕ್ಷ್ಮಸ್ಥೂಲಗಳೂ, ಸ್ಥೂಲಸೂಕ್ಷ್ಮಗಳೂ, ಸ್ಥೂಲಗಳೂ, ಸ್ಥೂಲಸ್ಥೂಲಗಳೂ ಎಂದು ಆರುವಿಧವಾಗಿವೆ.

**ಸೂಕ್ಷ್ಮಸೂಕ್ಷ್ಮೋಣುರೇಕಃ ಸ್ಯಾದದೃಶ್ಯೋಸ್ಪೃಶ್ಯ ಏವ ಚ ।**
**ಸೂಕ್ಷ್ಮಾಸ್ತೇ [೪]ಕಾರ್ಮಣಸ್ಕಂಧಾಃ ಪ್ರದೇಶಾ[೫]ನಂತ್ಯಯೋಗತಃ ॥ ೧೫೦ ॥**

೧ ಕಾರ್ಯಾನುಮೇಯಾಃ. ೨ ಸ್ನಿಗ್ಧರೂಕ್ಷದ್ವಯಸ್ಪರ್ಶವಂತಃ. ೩ ಸೂಕ್ಷ್ಮಾಃ. ೪ ಕಾರ್ಮಣಶರೀರಾದಯಃ. ೫ ಅನಂತತ್ವಸ್ಯ ಯೋಗಾತ್.

ದೃಷ್ಟಿಗೋಚರವಾಗದಿರುವುದೂ ಸ್ಪರ್ಶನೇಂದ್ರಿಯವಿಷಯವಲ್ಲದುದೂ ಆದ ಒಂದು ಪರಮಾಣುವು ಸೂಕ್ಷ್ಮಸೂಕ್ಷ್ಮವೆಂಬ ಪುದ್ಗಲವಾಗಿದೆ. ಅತೀಂದ್ರಿಯವಾದ ನಿರವಯವಪರಮಾಣುವು ಸೂಕ್ಷ್ಮಸೂಕ್ಷ್ಮಪುದ್ಗಲವೆಂದರ್ಥವು. ಪುಣ್ಯಪಾಪರೂಪವಾದ ಅನಂತಪರಮಾಣುಗಳ ಸಂಯೋಗದಿಂದಾದ ಕಾರ್ಮಣವೆಂಬ ಸೂಕ್ಷ್ಮಶರೀರಸ್ಕಂಧಗಳು ಸೂಕ್ಷ್ಮಪುದ್ಗಲಗಳಾಗಿವೆ. ಸಂಸಾರಿಜೀವನ ಕರ್ಮರೂಪವಾದ ಈ ಸೂಕ್ಷ್ಮಶರೀರವು ಅನಂತಪರಮಾಣುಗಳ ಸಮೂಹವಾಗಿದ್ದರೂ ಅತೀಂದ್ರಿಯವಾಗಿದೆಯೆಂದು ಭಾವವು.

**ಶಬ್ದಃ ಸ್ಪರ್ಶೋ ರಸೋ ಗಂಧಃ ಸೂಕ್ಷ್ಮಸ್ಥೂಲೋ ನಿಗದ್ಯತೇ ।**
**ಅಚಾಕ್ಷುಷತ್ವೇ ಸತ್ಯೇಷಾಮಿಂದ್ರಿಯ[೧]ಗ್ರಾಹ್ಯತೇಕ್ಷಣಾತ್ ॥ ೧೫೧ ॥**

ಶಬ್ದ ಸ್ಪರ್ಶ ರಸ ಗಂಧ ಇವುಗಳು ಚಕ್ಷುರಿಂದ್ರಿಯಕ್ಕೆ ವಿಷಯವಲ್ಲದಿದ್ದರೂ ಶ್ರೋತ್ರಮೊದಲಾದ ಇಂದ್ರಿಯಗಳಿಗೆ ವಿಷಯವಾಗಿರುವುದು ಕಾಣುವುದರಿಂದ ಆ ಶಬ್ದಮೊದಲಾದುವು ಸೂಕ್ಷ್ಮಸ್ಥೂಲಪುದ್ಗಲಗಳೆಂದು ಹೇಳಲ್ಪಡುತ್ತವೆ.

**ಸ್ಥೂಲಸೂಕ್ಷ್ಮಾಃ ಪುನರ್ಜ್ಞೇಯಾಶ್ಛಾಯಾಜ್ಯೋತ್ಸ್ನಾತಪಾದಯಃ ।**
**ಚಾಕ್ಷುಷತ್ವೇ[೨]ಪ್ಯಸಂಹಾರ್ಯರೂಪತ್ವಾದವಿಘಾತಕಾಃ ॥ ೧೫೨ ॥**

ನೆರಳು ಬೆಳದಿಂಗಳು ಬಿಸಲು ಮೊದಲಾದುವು ಚಕ್ಷುರಿಂದ್ರಿಯಕ್ಕೆ ವಿಷಯಗಳಾಗಿದ್ದರೂ ಅಪಹರಿಸುವುದಕ್ಕಾಗದಿರುವ ಸ್ವರೂಪವುಳ್ಳವುಗಳಾಗಿರುವುದರಿಂದ ಪ್ರತಿಘಾತರಹಿತವಾದ ಸ್ಥೂಲಸೂಕ್ಷ್ಮಪುದ್ಗಲಗಳೆಂದು ತಿಳಿಯಬೇಕು.

**ದ್ರವದ್ರವ್ಯಂ ಜಲಾದಿ ಸ್ಯಾತ್ಸ್ಥೂಲಭೇದನಿದರ್ಶನಮ್ ।**
**ಸ್ಥೂಲಸ್ಥೂಲಃ ಪೃಥಿವ್ಯಾದಿರ್ಭೇದ್ಯಸ್ಕಂಧಃ ಪ್ರಕೀರ್ತಿತಃ ॥ ೧೫೩ ॥**

ನೀರುಮೊದಲಾದ ದ್ರವವಸ್ತುವು ಸ್ಥೂಲಪುದ್ಗಲದ್ರವ್ಯದ ಭೇದಕ್ಕೆ ದೃಷ್ಟಾಂತವಾಗಿದೆ. ಭೇದಿಸುವುದಕ್ಕೆ ಯೋಗ್ಯವಾದ ಸ್ಕಂಧವುಳ್ಳ ಪೃಥಿವೀಮೊದಲಾದ ಪದಾರ್ಥವು ಸ್ಥೂಲಸ್ಥೂಲಪುದ್ಗಲದ್ರವ್ಯವೆಂದು ಹೇಳಲ್ಪಟ್ಟಿದೆ.

**ಇತ್ಯಮೀಷಾಂ ಪದಾರ್ಥಾನಾಂ ಯಾಥಾತ್ಮ್ಯಮವಿಪರ್ಯಯಾತ್ ।**
**ಯಃ ಶ್ರದ್ಧತ್ತೇ ಸ ಭವ್ಯಾತ್ಮಾ ಪರಂಬ್ರಹ್ಮಾಧಿಗಚ್ಛತಿ ॥ ೧೫೪ ॥**

ಈ ಪದಾರ್ಥಗಳ ಯಥಾರ್ಥಸ್ವರೂಪವನ್ನು ವಿಪರೀತವಿಲ್ಲದೆ ನಂಬುವ ಭವ್ಯಾತ್ಮನು ಪರಬ್ರಹ್ಮಸ್ವರೂಪವನ್ನು ಹೊಂದುತ್ತಾನೆ.''

**ತತ್ತ್ವಾರ್ಥಸಂಗ್ರಹಂ ಕೃತ್ಸ್ನಮಿತ್ಯುಕ್ತ್ವಾಸ್ಮೈ ವಿದಾಂವರಃ ।**
**ಕಾನಿಚಿತ್ತತ್ತ್ವಬೀಜಾನಿ ಪುನ[೩]ರುದ್ದೇಶತೋ ಜಗೌ ॥ ೧೫೫ ॥**

ಜ್ಞಾನಿಗಳಲ್ಲಿ ಶ್ರೇಷ್ಠನಾದ ಭಗವಂತನು ಹಿಂದೆಹೇಳಿದ ಪ್ರಕಾರವಾಗಿ ಈ ಭರತನಿಗೆ ತತ್ತ್ವಾರ್ಥಸಂಗ್ರಹವನ್ನೆಲ್ಲ ಹೇಳಿ, ಪುನಃ ಕೆಲವು ತತ್ತ್ವಗಳ ರಹಸ್ಯಗಳನ್ನು ಹೆಸರಿನ ಉಚ್ಚಾರಣಪೂರ್ವಕವಾಗಿ ಹೇಳಿದನು.

**ಪುರುಷಂ ಪುರುಷಾರ್ಥಂ ಚ ಮಾರ್ಗಂ ಮಾರ್ಗಫಲಂ ತಥಾ ।**
**ಬಂಧಂ ಮೋಕ್ಷಂ ತಯೋರ್ಹೇತುಂ ಬದ್ಧಂ ಮುಕ್ತಂ ಚ ಸೋಭ್ಯಧಾತ್ ॥ ೧೫೬ ॥**

ಆ ವೃಷಭಸ್ವಾಮಿಯು ಪುರುಷನನ್ನೂ ಪುರುಷಾರ್ಥವನ್ನೂ ಮೋಕ್ಷ ಮಾರ್ಗವನ್ನೂ ಆ ಮಾರ್ಗದ ಫಲವನ್ನೂ ಕರ್ಮಬಂಧವನ್ನೂ ಮೋಕ್ಷವನ್ನೂ ಬಂಧಮೋಕ್ಷಗಳ ಕಾರಣವನ್ನೂ ಕರ್ಮಬದ್ಧನನ್ನೂ ಮುಕ್ತನನ್ನೂ ಭರತನಿಗೆ ಹೇಳಿದನು.

**ತ್ರಿಜಗ[೪]ತ್ಸಮವಸ್ಥಾನಂ ನರಕ[೫]ಪ್ರಸ್ತರಾನಪಿ ।**
**ದ್ವೀಪಾಬ್ಧಿಹ್ರದಶೈಲಾದೀನಪ್ಯಥಾ[೬]ಸ್ಮಾಯುಪಾದಿಶತ್ ॥ ೧೫೭ ॥**

೧ ಗ್ರಾಹ್ಯತ್ವಸ್ಯ ದರ್ಶನಾತ್. ೨ ಅನಪಹಾರ್ಯಸ್ವರೂಪತ್ವಾತ್. ೩ ನಾಮೋಚ್ಚಾರಣತಃ. ೪ ವಿನ್ಯಾಸಂ. ೫ ಪಟಲಾನ್. ೬ ಅಸ್ಮೈ ಭರತಾಯ.

ತರುವಾಯ ಸ್ವಾಮಿಯು ಮೂರುಲೋಕದ ವಿನ್ಯಾಸ(ಸ್ಥಿತಿ)ವನ್ನೂ ನರಕ ಪಟಲಗಳನ್ನೂ ದ್ವೀಪ ಸಮುದ್ರ ಸರೋವರ ಪರ್ವತ ಮೊದಲಾದುವುಗಳನ್ನೂ ಈ ಭರತನಿಗುಪದೇಶಮಾಡಿದರು.

**ತ್ರಿಷಷ್ಟಿಪಟಲಂ ಸ್ವರ್ಗಂ ದೇವಾಯುರ್ಭೋಗವಿಸ್ತರಮ್ ।**
**[1]ಬ್ರಹ್ಮಸ್ಥಾನಮಪಿ ಶ್ರೀಮಾನ್ಲೋಕನಾಡೀಂ ಚ ಸಂಜಗೌ ॥ ೧೫೮ ॥**

ಅರುವತ್ತುಮೂರು ಪಟಲಗಳುಳ್ಳ ಸ್ವರ್ಗವನ್ನೂ ದೇವತೆಗಳ ಆಯುಷ್ಯವನ್ನೂ ಭೋಗಗಳ ವಿಸ್ತಾರವನ್ನೂ ಮುಕ್ತಿಸ್ಥಾನವನ್ನೂ ಲೋಕನಾಡಿಯನ್ನೂ ಸ್ವಾಮಿಯು ಹೇಳಿದರು.

**ತೀರ್ಥೇಶಾನಾಂ ಪುರಾಣಾನಿ ಚಕ್ರಿಣಾಮರ್ಧಚಕ್ರಿಣಾಮ್ ।**
**ತತ್ಕಲ್ಯಾಣಾನಿ ತದ್ಧೇತೂನಪ್ಯಾಚಖ್ಯೌ ಜಗದ್ಗುರುಃ ॥ ೧೫೯ ॥**

ಜಗದ್ಗುರುವಾದ ಸ್ವಾಮಿಯು ತೀರ್ಥಂಕರರ ಪುರಾಣಗಳನ್ನೂ ಚಕ್ರವರ್ತಿಗಳ ಪುರಾಣಗಳನ್ನೂ ಅರ್ಧಚಕ್ರವರ್ತಿಗಳ ಪುರಾಣಗಳನ್ನೂ ತೀರ್ಥಂಕರರ ಪಂಚ ಕಲ್ಯಾಣಗಳನ್ನೂ ಆ ಕಲ್ಯಾಣಗಳ ಕಾರಣಗಳನ್ನೂ ಹೇಳಿದರು.

**ಗತಿಮಾಗತಿಮುತ್ಪತ್ತಿಂ [2]ಚ್ಯವನಂ ಚ ಶರೀರಿಣಾಮ್ ।**
**[3]ಭುಕ್ತಿವೃದ್ಧಿಂ [4]ಕೃತಂ ಚಾಪಿ ಭಗವಾನ್ವ್ಯಾಜಹಾರ ಸಃ ॥ ೧೬೦ ॥**

ಆ ಭಗವಂತನು ಸಂಸಾರಿಪ್ರಾಣಿಗಳ ಒಂದು ಗತಿಯಿಂದ ಇನ್ನೊಂದು ಗತಿಗೆ ಹೋಗುವಿಕೆಯನ್ನೂ ಬರುವಿಕೆಯನ್ನೂ ಹುಟ್ಟುವಿಕೆಯನ್ನೂ ಮರಣವನ್ನೂ ಸುಖದುಃಖಾನುಭವವನ್ನೂ ಅಭಿವೃದ್ಧಿಯನ್ನೂ ಕಾರ್ಯವನ್ನೂ ಹೇಳಿದನು.

**ಭವದ್ಭವಿಷ್ಯದ್ಭೂತಂ ಚ ಯತ್ಸರ್ವದ್ರವ್ಯಗೋಚರಮ್ ।**
**ತತ್ಸರ್ವಂ ಸರ್ವವಿತ್ಸಾರ್ವೋ ಭರತಂ ಪ್ರತ್ಯಬೂಬುಧತ್ ॥ ೧೬೧ ॥**

ಸರ್ವಜ್ಞನೂ ಸಮಸ್ತಪ್ರಾಣಿಗಳಿಗೆ ಹಿತಕರನೂ ಆದ ಭಗವಂತನು ಸಮಸ್ತ ದ್ರವ್ಯಗಳ ವರ್ತಮಾನ ಭವಿಷ್ಯತ್ ಭೂತಕಾಲಸಂಬಂಧಿಯಾದ ಸ್ವರೂಪವನ್ನೆಲ್ಲ ಭರತನಿಗೆ ಬೋಧಿಸಿದನು.

**ಶ್ರುತ್ವೇತಿ ತತ್ತ್ವಸದ್ಭಾವಂ ಗುರೋಃ ಪರಮಪೂರುಷಾತ್ ।**
**ಪ್ರಹ್ಲಾದಂ ಪರಮಂ ಪ್ರಾಪ ಭರತೋ ಭಕ್ತಿನಿರ್ಭರಃ ॥ ೧೬೨ ॥**

ಪೂಜ್ಯಪುರುಷನಾದ ವೃಷಭಸ್ವಾಮಿಯಿಂದ ಹಿಂದೆ ಹೇಳಿದ ಪ್ರಕಾರವಾಗಿ ತತ್ತ್ವ ಸ್ವರೂಪವನ್ನು ಕೇಳಿ ಭಕ್ತಿಭರಿತನಾದ ಭರತನು ಪರಮಾನಂದಗೊಂಡನು.

**ತತಃ ಸಮ್ಯಕ್ತ್ವಶುದ್ಧಿಂ ಚ ವ್ರತಶುದ್ಧಿಂ ಚ [5]ಪುಷ್ಕಲಾಮ್ ।**
**[6]ನಿಷ್ಕಲಾದ್ಭರತೋ ಭೇಜೇ ಪರಮಾನಂದಮುದ್ವಹನ್ ॥ ೧೬೩ ॥**

ತರುವಾಯ ಪರಮಾನಂದವನ್ನು ಹೊಂದಿದ ಭರತನು ಶರೀರಸಂಬಂಧರಹಿತ ನಾದ ವೃಷಭಸ್ವಾಮಿಯ ದೆಸೆಯಿಂದ ಸಮ್ಯಕ್ತ್ವಶುದ್ಧಿಯನ್ನೂ ಸಂಪೂರ್ಣವಾದ ವ್ರತಶುದ್ಧಿಯನ್ನೂ ಹೊಂದಿದನು.

**ಪ್ರಬುದ್ಧೋ ಮಾನಸೀಂ ಶುದ್ಧಿಂ ಪರಮಾಂ ಪರಮರ್ಷಿತಃ ।**
**ಸಂಪ್ರಾಪ್ಯ ಭರತೋ ರೇಜೇ ಶರದೀವಾಂಬುಜಾಕರಃ ॥ ೧೬೪ ॥**

ಪರಮರ್ಷಿಯಾದ ವೃಷಭಸ್ವಾಮಿಯ ದೆಸೆಯಿಂದ ತತ್ತ್ವಜ್ಞಾನವನ್ನು ಹೊಂದಿದ ಭರತರಾಜನು ಉತ್ಕೃಷ್ಟವಾದ ಮನಃಶುದ್ಧಿಯನ್ನು ಹೊಂದಿ, ಶರತ್ಕಾಲದಲ್ಲಿ ಕಮಲಸರೋವರದಂತೆ ಪ್ರಕಾಶಿಸಿದನು.

೧ ಮುಕ್ತಿಸ್ಥಾನಂ. ೨ ಚ್ಯುತಿಂ. ೩ ಸುಖಾದಿಭುಕ್ತಿಂ. ೪ ಕಾರ್ಯಂ. ೫ ಸಂಪೂರ್ಣಾಂ. ೬ ಶರೀರಬಂಧರಹಿತಾತ್ಪುರೋಃ.

**ಸ ಲೇಭೇ ಗುರುಮಾರಾಧ್ಯ ಸಮ್ಯಗ್ದರ್ಶ[1]ನನಾಯಕಾಮ್ ।**
**ವ್ರತಶೀಲಾವಲೀಂ ಮುಕ್ತೇಃ ಕಂಠಿಕಾಮಿವ ನಿರ್ಮಲಾಮ್ ॥ ೧೬೫ ॥**

ಆ ಭರತನು ಸ್ವಾಮಿಯನ್ನಾರಾಧಿಸಿ ಸಮ್ಯಗ್ದರ್ಶನವು ಮುಖ್ಯವಾಗುಳ್ಳ ವ್ರತ ಶೀಲಗಳ ಸಮೂಹವನ್ನು ಮುಕ್ತಿಲಕ್ಷ್ಮಿಯ ನಿರ್ಮಲವಾದ ಕಂಠಿಯನ್ನೋಪಾದಿ ಯಲ್ಲಿ ಹೊಂದಿದನು.

**ದಿದೀಪೇ ಲಬ್ಧಸಂಸ್ಕಾರೋ ಗುರುತೋ ಭರತೇಶ್ವರಃ ।**
**ಯಥಾ ಮಹಾಕರೋದ್ಭೂತೋ ಮಣಿಃ ಸಂಸ್ಕಾರಯೋಗತಃ ॥ ೧೬೬ ॥**

ದೊಡ್ಡ ಗಣಿಯಿಂದುಂಟಾದ ರತ್ನವು ಸಂಸ್ಕಾರ(ಘರ್ಷಣಾದಿ)ದ ಸಂಬಂಧದಿಂದ ಪ್ರಕಾಶಿಸುವಂತೆ, ಭರತೇಶ್ವರನು ಸ್ವಾಮಿಯಿಂದ ಸಂಸ್ಕಾರವನ್ನು ಹೊಂದಿದವನಾಗಿ ಪ್ರಕಾಶಿಸಿದನು.

**ತ್ರಿದಶಾಸುರಮರ್ತ್ಯಾನಾಂ ಸಾ ಸಭಾ ಸಮುನೀಶ್ವರಾ ।**
**ಪೀತಸದ್ಧರ್ಮಪೀಯೂಷಾ [2]ಪರಾಮಾಪ ಧೃತಿಂ ತದಾ ॥ ೧೬೭ ॥**

ಆಗ ಮುನಿಗಳು, ದೇವತೆಗಳು, ಅಸುರದೇವತೆಗಳು, ಮನುಷ್ಯರು ಇವರುಗಳ ಆ ಸಭೆಯು ಸದ್ಧರ್ಮವೆಂಬ ಅಮೃತವನ್ನು ಪಾನಮಾಡಿ ಅತ್ಯಂತಾನಂದವನ್ನು ಹೊಂದಿದ್ದಿತು.

**ಘನಧ್ವನಿಮಿವ ಶ್ರುತ್ವಾ ವಿಭೋರ್ದಿವ್ಯಧ್ವನಿಂ ತದಾ ।**
**ಚಾತಕಾ ಇವ ಭವ್ಯೌಘಾಃ ಪರಂ ಪ್ರಮದಮಾಯಯುಃ ॥ ೧೬೮ ॥**

ಆಗ ಮೇಘಧ್ವನಿಯನ್ನು ಕೇಳಿ ಚಾತಕಪಕ್ಷಿಗಳು ಆನಂದಪಡುವಂತೆ ಸ್ವಾಮಿಯ ದಿವ್ಯಧ್ವನಿಯನ್ನು ಕೇಳಿ ಭವ್ಯರ ಸಮೂಹಗಳು ಅತ್ಯಾನಂದವನ್ನು ಹೊಂದಿದುವು.

**ದಿವ್ಯಧ್ವನಿಮನುಶ್ರುತ್ಯ ಜಲದಸ್ತನಿತೋಪಮಮ್ ।**
**ಅಶೋಕವಿಟಪಾರೂಢಾಃ ಸಸ್ವನುರ್ದಿವ್ಯಬರ್ಹಿಣಃ ॥ ೧೬೯ ॥**

ಮೇಘಧ್ವನಿಗೆ ಸಮಾನವಾದ ದಿವ್ಯಧ್ವನಿಯನ್ನು ಕೇಳಿ ಅಶೋಕವೃಕ್ಷವನ್ನೇರಿ ರುವ ದೇವತೆಗಳೆಂಬ ನವಿಲುಗಳು ಶಬ್ದಮಾಡಿದುವು.

**ಸಪ್ತಾರ್ಚಿಷಮಿವಾಸಾದ್ಯ ತಂ ತ್ರಾತಾರಂ ಪ್ರಭಾಸ್ವರಮ್ ।**
**ವಿಶುದ್ಧಿಂ ಭವ್ಯರತ್ನಾನಿ ಭೇಜುರ್ದಿವ್ಯ[3]ಪ್ರಭಾ[4]ಸ್ವರಮ್ ॥ ೧೭೦ ॥**

ಜಗದ್ರಕ್ಷಕನೂ ಪ್ರಕಾಶಮಾನನೂ ಆದ ಆ ಸ್ವಾಮಿಯನ್ನು ಅಗ್ನಿಯನ್ನೋಪಾದಿ ಯಲ್ಲಿ ಹೊಂದಿ ಭವ್ಯರೆಂಬ ರತ್ನಗಳು ಸ್ವಾಮಿಯ ಆ ಶ್ರೇಷ್ಠವಾದ ಪ್ರಭೆಗಳಲ್ಲಿ ಅಧಿಕವಾಗಿ ವಿಶುದ್ಧಿಯನ್ನು ಹೊಂದಿದುವು.

**ಯೋಽಸೌ [5]ಪುರಿಮತಾಲೇಶೋ ಭರತಸ್ಯಾನುಜಃ ಕೃತೀ ।**
**ಪ್ರಾಜ್ಞಃ ಶೂರಃ ಶುಚಿರ್ಧೀರೋ ಧೌರೇಯೋ ಮಾನಶಾಲಿನಾಮ್ ॥**

**ಶ್ರೀಮಾನ್ವೃಷಭಸೇನಾಖ್ಯಃ ಪ್ರಜ್ಞಾಪಾರಮಿತೋ ವಶೀ ।**
**ಸ ಸಂಬುಧ್ಯ ಗುರೋಃ ಪಾರ್ಶ್ವೇ [6]ದೀಕ್ಷಿತ್ವಾಭೂದ್ಗಣಾಧಿಪಃ ॥ ೧೭೨ ॥**

ಭರತೇಶ್ವರನ ತಮ್ಮನೂ ಪುಣ್ಯಶಾಲಿಯೂ ಬುದ್ಧಿಶಾಲಿಯೂ ಶೂರನೂ ಪವಿತ್ರನೂ ಧೀರನೂ ಮಾನವಂತರಲ್ಲಿ ಶ್ರೇಷ್ಠನೂ ಐಶ್ವರ್ಯಸಂಪನ್ನನೂ ಶಾಸ್ತ್ರಪಾರಂಗತನೂ ಜಿತೇಂದ್ರಿಯನೂ ಪುರಿಮತಾಲವೆಂಬ ನಗರಕ್ಕೆ ಪ್ರಭುವೂ ಆದ ಆ ವೃಷಭಸೇನನು ಉಪದೇಶವನ್ನು ಕೇಳಿ ಸ್ವಾಮಿಯ ಸಾನ್ನಿಧ್ಯದಲ್ಲಿ ದೀಕ್ಷೆಯನ್ನು ಪಡೆದು ಗಣಧರನಾದನು.

೧ ಬಸಃ. ೨ ಪರಮಾಪೇತ್ಯಪಿ ಪಾಠಃ. ೩ ಕಾಂತಿಷು. ೪ ಅತ್ಯರ್ಥಂ. ೫ ಪುರಿಮತಾಲಪುರೇಶ್ವರಃ. ೬ ವಿರಕ್ತೋ ಭೂತ್ವಾ.

**ಸ ಸಪ್ತರ್ದ್ಧಿಭಿರಿದ್ಧರ್ದ್ಧಿಸ್ತಪೋದೀಪ್ತ್ಯಾವೃತೋಽಭಿತಃ ।**
**ವ್ಯದೀಪಿ ಶರದೀವಾರ್ಕೋ ಧೂತಾಂಧತಮಸೋದಯಃ ॥ ೧೭೩ ॥**

ಏಳು ಋದ್ಧಿ (ಅತಿಶಯ) ಗಳಿಂದ ಪ್ರಕಾಶಮಾನನೂ ತಪಸ್ಸಿನ ಪ್ರಭೆಯಿಂದ ಸುತ್ತಲೂ ವ್ಯಾಪ್ತನೂ ಆದ ಆ ವೃಷಭಸೇನಗಣಧರನು, ಶರತ್ಕಾಲದಲ್ಲಿ ಗಾಢಾಂಧಕಾರದ ಉದಯವನ್ನು ನಾಶಮಾಡಿದ ಸೂರ್ಯನಂತೆ ಪ್ರಕಾಶಿಸಿದನು.

**ಸ ಶ್ರೀಮಾ[೧]ನ್ಕುರುಶಾರ್ದೂಲಃ ಶ್ರೇಯಾನ್ಸೋಮಪ್ರಭೋಽಪಿ ಚ ।**
**ನೃಪಾಶ್ಚಾನ್ಯೇ ತದೋಪಾತ್ತದೀಕ್ಷಾ ಗಣಭೃತೋಽಭವನ್ ॥ ೧೭೪ ॥**

ಆಗ ಸಂಪದ್ಯುಕ್ತನೂ ಕುರುವಂಶಶ್ರೇಷ್ಠನೂ ಆದ ಆ ಶ್ರೇಯಾಂಸರಾಜನೂ ಸೋಮಪ್ರಭರಾಜನೂ ಬೇರೆ ರಾಜರೂ ದೀಕ್ಷೆಯನ್ನು ತೆಗೆದುಕೊಂಡು ಗಣಧರರಾದರು.

**ಭರತಸ್ಯಾನುಜಾ ಬ್ರಾಹ್ಮೀ ದೀಕ್ಷಿತ್ವಾ ಗುರ್ವನುಗ್ರಹಾತ್ ।**
**ಗಣಿನೀಪದ[೨]ಮಾರ್ಯಾಣಾಂ ಸಾ [೩]ಭೇಜೇ ಪೂಜಿತಾಮರೈಃ ॥ ೧೭೫ ॥**

ಭರತನ ತಂಗಿಯಾದ ಆ ಬ್ರಾಹ್ಮಿಯು ವೃಷಭಸ್ವಾಮಿಯ ಅನುಗ್ರಹದಿಂದ ದೀಕ್ಷೆಯನ್ನು ಪಡೆದು ದೇವತೆಗಳಿಂದ ಪೂಜಿಸಲ್ಪಟ್ಟವಳಾಗಿ ಆರ್ಜಿಕೆಯರಿಗೆಲ್ಲ ಮುಖ್ಯವಾದ ಸ್ಥಾನವನ್ನು ಪಡೆದಳು. ಮುಖ್ಯವಾದ ಆರ್ಜಿಕೆಯಾದಳೆಂದರ್ಥ.

**ರರಾಜ ರಾಜಕನ್ಯಾ ಸಾ ರಾಜಹಂಸೀವ ಸುಸ್ವನಾ ।**
**ದೀಕ್ಷಾಶರನ್ನದೀಶೀಲಪುಲಿನಸ್ಥಲಶಾಯಿನೀ ॥ ೧೭೬ ॥**

ದೀಕ್ಷೆಯೆಂಬ ಶರತ್ಕಾಲದ ನದಿಯಲ್ಲಿರುವ ಶೀಲವೆಂಬ ಮರಳಿನ ಸ್ಥಳದಲ್ಲಿ ಮಲಗಿರುವ ಆ ರಾಜಕನ್ಯೆಯು ಮನೋಹರವಾದ ಶಬ್ದವುಳ್ಳ ಸ್ತ್ರೀರಾಜಹಂಸಪಕ್ಷಿಯಂತೆ ಶೋಭಿಸಿದಳು. ದೀಕ್ಷೆಯಿಂದಲೂ ಶೀಲದಿಂದಲೂ ಹೆಚ್ಚಾಗಿ ಶೋಭಿಸಿದಳೆಂದು ಭಾವವು.

**ಸುಂದರೀ ಚಾತ್ತನಿರ್ವೇದಾ ತಾಂ ಬ್ರಾಹ್ಮೀಮನ್ವದೀಕ್ಷತ ।**
**ಅನ್ಯೇ ಚಾನ್ಯಾಶ್ಚ [೪]ಸಂವಿಗ್ನಾ [೫]ಗುರೋಃ ಪ್ರಾವ್ರಾಜಿಷುಸ್ತದಾ ॥ ೧೭೭ ॥**

ಆಗ ವೈರಾಗ್ಯವನ್ನು ಹೊಂದಿದ ಸುಂದರಿಯೂ ಆ ಬ್ರಾಹ್ಮಿಯನ್ನನುಸರಿಸಿ ದೀಕ್ಷೆಯನ್ನು ತೆಗೆದುಕೊಂಡಳು. ವೈರಾಗ್ಯಪರಾಯಣರಾದ ಬೇರೆ ಪುರುಷರೂ ಸ್ತ್ರೀಯರೂ ವೃಷಭಸ್ವಾಮಿಯಿಂದ ದೀಕ್ಷೆಯನ್ನು ಪಡೆದರು.

**[೬]ಶ್ರುತಕೀರ್ತಿರ್ಮಹಾಪ್ರಾಜ್ಞೋ ಗೃಹೀತೋಪಾಸಕವ್ರತಃ ।**
**[೭]ದೇಶಸಂಯಮಿನಾಮಾಸೀದ್ಧೌರೇಯೋ ಗೃಹಮೇಧಿನಾಮ್ ॥ ೧೭೮ ॥**

ಮಹಾಬುದ್ಧಿಶಾಲಿಯಾದ ಶ್ರುತಕೀರ್ತಿಯೆಂಬುವನೊಬ್ಬನು ಶ್ರಾವಕವ್ರತವನ್ನು ಸ್ವೀಕರಿಸಿ ದೇಶವ್ರತಿ (ಅಣುವ್ರತಿ) ಗಳಾದ ಗೃಹಸ್ಥರಲ್ಲಿ ಮುಖ್ಯನಾದನು.

**ಉಪಾತ್ತಾಣುವ್ರತಾ ಧೀರಾ [೮]ಪ್ರಯತಾತ್ಮಾ [೯]ಪ್ರಿಯವ್ರತಾ ।**
**ಸ್ತ್ರೀಣಾಂ ವಿಶುದ್ಧವೃತ್ತೀನಾಂ ಬಭೂವಾಗ್ರೇಸರೀ ಸತೀ ॥ ೧೭೯ ॥**

ಸದಾಚಾರಿಣಿಯೂ ಧೀರಳೂ ಪವಿತ್ರಸ್ವರೂಪಳೂ ಆದ ಪ್ರಿಯವ್ರತೆಯೆಂಬ ಸ್ತ್ರೀಯು ಅಣುವ್ರತವನ್ನು ಸ್ವೀಕರಿಸಿ ಪರಿಶುದ್ಧವಾದ ಆಚರಣೆಯುಳ್ಳ ಸ್ತ್ರೀಯರಲ್ಲಿ ಮುಖ್ಯಳಾದಳು.

**ವಿಭೋಃ ಕೈವಲ್ಯಸಂಪ್ರಾಪ್ತಿಕ್ಷಣ ಏವ ಮಹರ್ದ್ಧಯಃ ।**
**ಯೋಗಿನೋಽನ್ಯೇಽಪಿ ಭೂಯಾಂಸೋ ಬಭೂವುರ್ಭುವನೋತ್ತಮಾಃ ॥**

೧ ಕುರುವಂಶಶ್ರೇಷ್ಠಃ. ೨ ಆರ್ಯಕಾಣಾಂ. ೩ ಲೇಭೇ ಇತ್ಯಪಿ ಪಾಠಃ. ೪ ವೈರಾಗ್ಯಪರಾಯಣಾಃ. ೫ ಗುರೋಃ ಸಕಾಶಾತ್. ೬ ಶ್ರುತಕೀರ್ತಿನಾಮಾ ಕಶ್ಚಿಚ್ಛ್ರಾವಕಃ. ೭ ದೇಶವ್ರತಿನಾಂ. ೮ ಪವಿತ್ರಸ್ವರೂಪಾ. ೯ ಕಾಚಿತ್ಸ್ತ್ರೀ.

ಲೋಕೋತ್ತಮರಾದ ಇನ್ನೂ ಅನೇಕ ಯೋಗಿಗಳು ಸ್ವಾಮಿಯ ಕೇವಲಜ್ಞಾನೋತ್ಪತ್ತಿಕಾಲದಲ್ಲೇ ಮಹಾಋದ್ಧಿ (ಅತಿಶಯ) ಸಂಪನ್ನರಾದರು.

**ಸಂಬುದ್ಧೋಽನಂತವೀರ್ಯಶ್ಚ ಗುರೋಃ [೧]ಸಂಪ್ರಾಪ್ತದೀಕ್ಷಣಃ ।**
**ಸುರೈರವಾಪ್ತಪೂಜರ್ದ್ಧಿ[೨]ರಗ್ರ್ಯೋ [೩]ಮೋಕ್ಷವತಾಮಭೂತ್ ॥ ೧೮೧ ॥**

ಸ್ವಾಮಿಯಿಂದ ದೀಕ್ಷೆಯನ್ನು ಪಡೆದವನೂ ಜ್ಞಾನಿಯೂ ದೇವತೆಗಳಿಂದ ಪೂಜಾತಿಶಯವನ್ನು ಹೊಂದಿದವನೂ ಆದ ಅನಂತವೀರ್ಯನು ಮೋಕ್ಷವನ್ನು ಹೊಂದಲಿಚ್ಛಿಸಿದವರಲ್ಲಿ ಮೊದಲನೆಯವನಾಗಿದ್ದನು. ಆ ಕಾಲದಲ್ಲಿ ಎಲ್ಲರಿಗಿಂತ ಮೊದಲು ಮೋಕ್ಷವನ್ನಿಚ್ಛಿಸುವವನಾಗಿದ್ದನೆಂದು ಭಾವವು.

**ಮರೀಚಿವರ್ಜ್ಯಾಃ ಸರ್ವೇಽಪಿ ತಾಪಸಾಸ್ತಪಸಿ ಸ್ಥಿತಾಃ ।**
**ಭಟ್ಟಾರಕಾಂತೇ ಸಂಬುಧ್ಯ ಮಹಾಪ್ರಾವ್ರಾಜ್ಯ[೪]ಮಾಸ್ಥಿತಾಃ ॥ ೧೮೨ ॥**

ಮರೀಚಿ ಹೊರತು ತಪಸ್ಸಿನಲ್ಲಿರುವ ಎಲ್ಲಾ ತಪಸ್ವಿಗಳೂ ವೃಷಭಸ್ವಾಮಿಯ ಸಮೀಪದಲ್ಲಿ ಜ್ಞಾನವನ್ನು ಪಡೆದು ಮಹಾವ್ರತವನ್ನಾಶ್ರಯಿಸಿದರು.

**ತತೋ ಭರತರಾಜೇಂದ್ರೋ ಗುರುಂ ಸಂಪೂಜ್ಯ ಪುಣ್ಯಧೀಃ ।**
**ಸ್ವಪುರಾಭಿಮುಖೋ [೫]ಜಜ್ಞೇ ಚಕ್ರಪೂಜಾಕೃತತ್ವರಃ ॥ ೧೮೩ ॥**

ತರುವಾಯ ಪುಣ್ಯಶೀಲವಾದ ಬುದ್ಧಿಯುಳ್ಳ ಭರತರಾಜೇಂದ್ರನು ಗುರುವನ್ನು ಪೂಜಿಸಿ ಚಕ್ರರತ್ನದ ಪೂಜೆಯಲ್ಲಿ ತ್ವರೆಮಾಡಿ ತನ್ನ ಪಟ್ಟಣಾಭಿಮುಖನಾದನು.

**ಯುವಾ ಬಾಹುಬಲೀ ಧೀಮಾನನ್ಯೇ ಚ ಭರತಾನುಜಾಃ ।**
**ತ[೬]ಮನ್ವೀಯುಃ ಕೃತಾನಂದಮಭಿವಂದ್ಯ ಜಗದ್ಗುರುಮ್ ॥ ೧೮೪ ॥**

ಯುವಕನೂ ಬುದ್ಧಿಶಾಲಿಯೂ ಆದ ಬಾಹುಬಲಿಯೂ ಭರತನ ಬೇರೆ ತಮ್ಮಂದಿರೂ ಆನಂದವಾಗಿ ಜಗದ್ಗುರುವನ್ನು ವಂದಿಸಿ ಆ ಭರತರಾಜನನ್ನು ಹಿಂಬಾಲಿಸಿ ಹೊರಟರು.

**ಭರತಪತಿಮಥಾವಿರ್ಭೂತದಿವ್ಯಾನುಭಾವ**
**ಪ್ರಸರ[೭]ಮುದಯರಾಗಂ [೮]ಪ್ರತ್ಯುಪಾತ್ತಾಭಿಮುಖ್ಯಮ್ ।**
**ವಿಜಯಿನಮನುಜಗ್ಮುರ್ಭ್ರಾತರಸ್ತಂ [೯]ದಿನಾದೌ**
**ದಿನಪಮಿವ ಮಯೂಖಾ ದಿಙ್ಮುಖಾಕ್ರಾಂತಿಭಾಜಃ ॥ ೧೮೫ ॥**

ತರುವಾಯ ಎಲ್ಲಾಕಡೆಯಲ್ಲೂ ಹರಡಿರುವ ಶ್ರೇಷ್ಠವಾದ ಸಾಮರ್ಥ್ಯವುಳ್ಳವನೂ ಅಭ್ಯುದಯದಲ್ಲಿ ಅನುರಾಗವುಳ್ಳವನೂ ತನ್ನ ನಗರಾಭಿಮುಖನಾಗಿರುವವನೂ ಜಯಶೀಲನೂ ಆದ ಆ ಭರತರಾಜನನ್ನು ಅವನ ಸಹೋದರರು ಪ್ರಾತಃಕಾಲದಲ್ಲಿ ದಿಕ್ಕುಗಳನ್ನೆಲ್ಲ ವ್ಯಾಪಿಸುತ್ತಿರುವ ಕಿರಣಗಳು ಸೂರ್ಯನನ್ನು ಹಿಂಬಾಲಿಸುವಂತೆ ಹಿಂಬಾಲಿಸಿ ಹೊರಟರು.

**[೧೦]ಸ್ವಾಂತರ್ನೀತಸಮಸ್ತವಸ್ತುವಿಸರಾಂ [೧೧]ಪ್ರಾಸ್ತೀರ್ಣವರ್ಣೋಜ್ಜ್ವಲಾಂ**
**[೧೨]ನಿರ್ಣಿಕ್ತಾಂ [೧೩]ನಯಚಕ್ರಸನ್ನಿಧಿಗುರುಂ**
**[೧೪]ಸ್ಫೀತಪ್ರಮೋದಾಹೃತಿಮ್ ।**
**[೧೫]ವಿಶ್ವಾಸ್ಯಾಂ [೧೬]ನಿಖಿಲಾಂಗಭೃತ್ಪರಿಚಿತಾಂ ಜೈನೀಮಿವ [೧೭]ವ್ಯಾಹೃತಿಂ**
**[೧೮]ಪ್ರಾವಿಕ್ಷತ್ತ್ವರಯಾ ಮುದಾ ನಿಧಿಪತಿಃ [೧೯]ಸ್ವಾಮುತ್ಪತಾಕಾಂ**
**ಪುರೀಮ್ ॥ ೧೮೬ ॥**

೧ ಜಾತನಿರ್ವೇದಃ. ೨ ಅಗ್ರೇಸರಃ. ೩ ಮೋಕ್ತುಮಿಚ್ಛಾವತಾಂ. ೪ ಆಶ್ರಿತಾಃ. ೫ ಜಾತಃ. ೬ ಅನುಗಚ್ಛೇಯುಃ. ೭ ಅಭ್ಯುದಯಾನುರಾಗಂ, ಸ್ವೋದಯೇ ರಾಗವಂತಂ ಚ. ೮ ಸ್ವೀಕೃತಾಭಿಮುಖ್ಯಂ. ೯ ದಿನಾಂತೇ ಇತ್ಯಪಿ ಪಾಠಃ. ೧೦ ನಿಜಾಭ್ಯಂತರಮಾನೀತಸಮಸ್ತದ್ರವ್ಯಸಮೂಹಾಂ, ನಿಜಾಭ್ಯಂತರಮಾನೀತಸಮಸ್ತಪದಾರ್ಥಸ್ವರೂಪಸಮೂಹಾಂ. ೧೧ ವಿಸ್ತೀರ್ಣಕ್ಷತ್ರಿಯಾದಿವರ್ಣೋಜ್ಜ್ವಲಾಂ, ವಿಸ್ತೀರ್ಣಾಕ್ಷರೋಜ್ಜ್ವಲಾಂ ಚ. ೧೨ ಶೋಧಕತಾಂ, ಶುದ್ಧಾಂ ಚ. ೧೩ ನಿತ್ಯೋಪಲಕ್ಷಿತಚಕ್ರರತ್ನಸಂಬಂಧೇನ ಗುರುಂ, ನಯಸಮೂಹಸಂಬಂಧೇನ ಗುರುಂ ಚ. ೧೪ ಬಹಲ ಸಂತೋಷಸ್ಯಾಹರಣಂ ಯಸ್ಯಾಃ ಸಕಾಶಾಜ್ಜನಾನಾಂ. ೧೫ ಪರಿತೋ ಗೋಪುರವತೀಂ, ವಿಶ್ವಾಸಯೋಗ್ಯಾಂ ಚ. ೧೬ ಸಕಲಪ್ರಾಣಿಗಣೈಃ ಪರಿಚಿತಾಂ, ದ್ವಾದಶಾಂಗಧಾರಿಭಿಃ ಪರಿಚಿತಾಂ ಚ. ೧೭ ದಿವ್ಯಧ್ವನಿಂ. ೧೮ ಪ್ರವಿಶತಿಸ್ಮ. ೧೯ ಆತ್ಮೀಯಾಂ.

ನವನಿಧಿಗಳಿಗೊಡೆಯನಾದ ಭರತರಾಜನು ತನ್ನಲ್ಲಿ ಅಡಕವಾದ ಸಮಸ್ತ ಪದಾರ್ಥಗಳ ಸಮೂಹವುಳ್ಳುದೂ, ವಿಸ್ತೀರ್ಣವಾದ ಅಕ್ಷರಗಳಿಂದ ಪ್ರಕಾಶ ಮಾನವೂ, ಶುದ್ಧವೂ, ನಯಸಮೂಹದ ಸಂಬಂಧದಿಂದ ಭಾರವೂ ಜನಗಳಿಗೆ ಹೆಚ್ಚಾದ ಸಂತೋಷವನ್ನುಂಟುಮಾಡುವುದೂ ವಿಶ್ವಾಸಯೋಗ್ಯವೂ ದ್ವಾದಶಾಂಗ ಶಾಸ್ತ್ರಜ್ಞರಾದ ಗಣಧರರಿಂದ ಪರಿಚಿತವೂ ಆದ ಜಿನೇಶ್ವರನ ದಿವ್ಯಧ್ವನಿಯನ್ನು ಪ್ರವೇಶಮಾಡುವಂತೆ ತನ್ನಲ್ಲಿ ಅಡಕವಾದ ಸಮಸ್ತದ್ರವ್ಯಗಳ ಸಮೂಹವುಳ್ಳುದೂ ವಿಸ್ತಾರವಾದ ಕ್ಷತ್ರಿಯಮೊದಲಾದ ವರ್ಣಗಳಿಂದ ಶೋಭಿಸುವುದೂ ಪರಿಶುದ್ಧವೂ ಸದಾ ಇರುವ ಚಕ್ರರತ್ನದ ಸಂಬಂಧದಿಂದ ಶ್ರೇಷ್ಠವೂ ಅತ್ಯಂತ ಸಂತೋಷವನ್ನುಂಟು ಮಾಡುವುದೂ ಸುತ್ತಲೂ ಗೋಪುರಗಳುಳ್ಳುದೂ ಸಮಸ್ತ ಪ್ರಾಣಿಸಮೂಹಗಳಿಂದ ಕೂಡಿರುವುದೂ ಮೇಲೆ ಪತಾಕೆಗಳುಳ್ಳುದೂ ಆದ ತನ್ನ ಪಟ್ಟಣವನ್ನು ಅತ್ಯಂತಾ ನಂದದಿಂದ ಪ್ರವೇಶ ಮಾಡಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಭಗವದ್ಧರ್ಮೋಪದೇಶನೋಪವರ್ಣನಂ ನಾಮ ಚತುರ್ವಿಂಶತಿತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರುಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದಲ್ಲಿ "ಕನ್ನಡಭಾವದೀಪಿಕಾವ್ಯಾಖ್ಯೆಯೊಳ್" ಭಗವದ್ಧರ್ಮೋಪದೇಶವರ್ಣನೆಯೆಂಬ ಇಪ್ಪತ್ತನಾಲ್ಕನೆಯ ಪರ್ವವು ಸಮಾಪ್ತವಾದುದು.

---

# ಅಥ ಪಂಚವಿಂಶತಿತಮಂ ಪರ್ವ

ಗತೇ ಭರತರಾಜರ್ಷೌ ದಿವ್ಯಭಾಷೋಪಸಂಹೃತೇಃ ।
ನಿವಾತ[1]ಸ್ತಿಮಿತಂ ವಾರ್ಧಿಮಿವಾನಾವಿಷ್ಕೃತಧ್ವನಿಮ್ ॥ ೧ ॥

ಧರ್ಮಾಂಬುವರ್ಷಸಂಸಿಕ್ತಜಗಜ್ಜನವನದ್ರುಮಮ್ ।
ಪ್ರಾವೃಷೇಣ್ಯಘನಮಿವೋ[2]ದ್ವಾಂತವೃಷ್ಟಿಮುತ್ಸೃಷ್ಟನಿಃಸ್ವನಮ್ ॥ ೨ ॥

ಕಲ್ಪದ್ರುಮಮಿವಾಭೀಷ್ಟಫಲ[3]ವಿಶ್ರಾಣನೋದ್ಯತಮ್ ।
ಸ್ವಪಾದಾಭ್ಯರ್ಣವಿಶ್ರಾಂತತ್ರಿಜಗಜ್ಜನಮೂರ್ಜಿತಮ್ ॥ ೩ ॥

ವಿವಸ್ವಂತಮಿವೋದ್ಭೂತಮೋಹಾಂಧತಮಸೋದಯಮ್ ।
ನವಕೇವಲಲಬ್ಧೀದ್ಧಕರೋತ್ಕರವಿರಾಜಿತಮ್ ॥ ೪ ॥

ಮಹಾಕರಮಿವೋದ್ಭೂತಗುಣರತ್ನೋ[4]ಚ್ಚಯಾಚಿತಮ್ ।
ಭಗವಂತಂ ಜಗತ್ಕಾಂತಮಚಿಂತ್ಯಾನಂತವೈಭವಮ್ ॥ ೫ ॥

ವೃತಂ ಶ್ರಮಣಸಂಘೇನ [5]ಚತುರ್ಧಾ ಭೇದಮೀಯುಷಾ ।
[6]ಚತುರ್ವಿಧವನಾಭೋಗಪರಿಷ್ಕೃತಮಿವಾದ್ರಿಪಮ್ ॥ ೬ ॥

ಪ್ರಾತಿಹಾರ್ಯಾಷ್ಟಕೋಪೇತ[7]ಮಿದ್ಧಕಲ್ಯಾಣಪಂಚಕಮ್ ।
ಚತುಸ್ತ್ರಿಂಶ[8]ದತೀಶೇಷೈರಿದ್ಧರ್ದ್ಧಿಂ ತ್ರಿಜಗತ್ಪ್ರಭುಮ್ ॥ ೭ ॥

ಪ್ರಪಶ್ಯನ್ನಿಕಸನ್ನೇತ್ರಸಹಸ್ರಃ ಪ್ರೀತಮಾನಸಃ ।
ಸೌಧರ್ಮೇಂದ್ರಃ ಸ್ತುತಿಂ ಕರ್ತುಮಥಾರೇಭೇ ಸಮಾಹಿತಃ ॥ ೮ ॥

ಭರತರಾಜರ್ಷಿಯು ಹೊರಟು ಹೋದನಂತರದಲ್ಲಿ ದಿವ್ಯಭಾಷೆಯ ಉಪಸಂಹಾರದಿಂದ (ದಿವ್ಯಧ್ವನಿಯನ್ನು ನಿಲ್ಲಿಸಿದುದರಿಂದ) ಗಾಳಿಯಿಲ್ಲದಿರುವುದರಿಂದ ನಿಶ್ಚಲವಾದ ಸಮುದ್ರದಂತೆ ಶಬ್ದವನ್ನು ಹೊರಡಿಸದಿರುವವನೂ, ಮಳೆಯನ್ನು ಸುರಿಯುತ್ತಿರುವುದೂ ಶಬ್ದವಿಲ್ಲದುದೂ ಆದ ವರ್ಷಾಕಾಲದ ಮೇಘದಂತೆ ಧರ್ಮವೆಂಬ ಜಲದ ವರ್ಷಣೆಯಿಂದ ಸೇಚನೆಮಾಡಲ್ಪಟ್ಟ ಜಗತ್ತಿನ ಜನರೆಂಬ ವನಗಳ ವೃಕ್ಷಗಳುಳ್ಳವನೂ, ಕಲ್ಪವೃಕ್ಷದಂತೆ ಇಚ್ಛಿಸಿದ ಫಲವನ್ನು ಕೊಡುವುದರಲ್ಲಿ ಪ್ರಯತ್ನಶೀಲನೂ, ತನ್ನ ಪಾದಗಳ ಸಮೀಪದಲ್ಲಿ ವಿಶ್ರಮಿಸಿರುವ ಮೂರುಲೋಕದ ಜನಗಳುಳ್ಳವನೂ, ತೇಜಸ್ವಿಯೂ, ಸೂರ್ಯನಂತೆ ಅಜ್ಞಾನವೆಂಬ ಕಗ್ಗತ್ತಲೆಯ ಉದಯವನ್ನು ನಾಶಮಾಡಿದವನೂ ಸಮ್ಯಕ್ತ್ವ ಚಾರಿತ್ರ ಜ್ಞಾನ ದರ್ಶನ ದಾನ ಲಾಭ ಭೋಗ ಉಪಭೋಗ ವೀರ್ಯ ಈ ಒಂಬತ್ತು ಲಬ್ಧಿಗಳೆಂಬ ಪ್ರಕಾಶಮಾನವಾದ ಕಿರಣಗಳ ಸಮೂಹದಿಂದ ಪ್ರಕಾಶಿಸುವವನೂ, ದೊಡ್ಡ ರತ್ನದ ಗಣಿಯಂತೆ ಆವಿರ್ಭವಿಸಿದ ಗುಣಗಳೆಂಬ ರತ್ನಗಳ ಸಮೂಹದಿಂದ ವ್ಯಾಪ್ತನೂ, ಭಗವಂತನೂ, ಲೋಕೈಕಮನೋಹರನೂ, ಅಚಿಂತ್ಯವೂ ಅಗಣಿತವೂ ಆದ ವೈಭವವುಳ್ಳವನೂ, ಭದ್ರಸಾಲ ನಂದನ ಸೌಮನಸ ಪಾಂಡುಕಗಳೆಂಬ ವಿಸ್ತಾರವಾದ ವನಗಳಿಂದ ಸುತ್ತಲ್ಪಟ್ಟ ಮಹಾಮೇರುಪರ್ವತದಂತೆ ಮುನಿ ಋಷಿ ಯತಿ ಅನಗಾರರೆಂಬ ನಾಲ್ಕುವಿಧವಾದ ಶ್ರಮಣರ ಸಮೂಹದಿಂದ ಸುತ್ತಲ್ಪಟ್ಟವನೂ, ಅಶೋಕವೃಕ್ಷ ಸುರಪುಷ್ಪವೃಷ್ಟಿ ದಿವ್ಯಧ್ವನಿ ಚಾಮರ ಆಸನ ಭಾಮಂಡಲ ಭೇರಿ ಛತ್ರಿ ಈ ಎಂಟು ಪ್ರಾತಿಹಾರ್ಯಗಳಿಂದ ಕೂಡಿರುವವನೂ ಪ್ರಕಾಶಮಾನವಾದ ಐದು ಕಲ್ಯಾಣಗಳುಳ್ಳವನೂ ಜನನಾತಿಶಯ ಹತ್ತು, ಘಾತಿಕರ್ಮಕ್ಷಯಕಾಲದಲ್ಲುಂಟಾಗುವ ಅತಿಶಯ ಹತ್ತು, ದೇವತೆಗಳು ಮಾಡುವ ಅತಿಶಯಗಳು ಹದಿನಾಲ್ಕು, ಈ ಮೂವತ್ತನಾಲ್ಕು ಅತಿಶಯಗಳಿಂದ ದೇದೀಪ್ಯಮಾನನೂ ಮೂರುಲೋಕಾಧಿಪತಿಯೂ ಆದ ವೃಷಭಸ್ವಾಮಿಯನ್ನು ನೋಡಿ ವಿಕಸಿತವಾದ ಸಾವಿರಕಣ್ಣುಗಳುಳ್ಳವನೂ ಸಂತುಷ್ಟವಾದ ಮನಸ್ಸುಳ್ಳವನೂ ಆದ ಸೌಧರ್ಮೇಂದ್ರನು ಏಕಾಗ್ರಮನಸ್ಸುಳ್ಳವನಾಗಿ ಮುಂದೆ ಹೇಳುವಂತೆ ಸ್ತೋತ್ರ ಮಾಡುವುದಕ್ಕೆ ಪ್ರಾರಂಭಿಸಿದನು.

ಸ್ತೋಷ್ಯೇ ತ್ವಾಂ ಪರಮಂ ಜ್ಯೋತಿರ್ಗುಣರತ್ನಮಹಾಕರಮ್ ।
ಮತಿಪ್ರಕರ್ಷಹೀನೋಪಿ ಕೇವಲಂ ಭಕ್ತಿಚೋದಿತಃ ॥ ೯ ॥

"ಸ್ವಾಮಿಯೆ! ನಾನು ಉತ್ಕೃಷ್ಟವಾದ ಬುದ್ಧಿಯಿಲ್ಲದವನಾಗಿದ್ದರೂ ಕೇವಲ ಭಕ್ತಿಯಿಂದ ಪ್ರೇರಿತನಾಗಿ ಪರಂಜ್ಯೋತಿಸ್ವರೂಪನೂ ಗುಣಗಳೆಂಬ ರತ್ನಗಳಿಗೆ ದೊಡ್ಡ ಗಣಿಯೂ ಆದ ನಿನ್ನನ್ನು ಸ್ತೋತ್ರಮಾಡುತ್ತೇನೆ.

ತ್ವಾ[1]ಮಭಿಷ್ಟುವತಾಂ ಭಕ್ತ್ಯಾ ವಿಶಿಷ್ಟಾಃ ಫಲಸಂಪದಃ ।
ಸ್ವಯಮಾವಿರ್ಭವಂತೀತಿ ನಿಶ್ಚಿತ್ಯ ತ್ವಾಂ ಜಿನ ಸ್ತುವೇ ॥ ೧೦ ॥

ಜಿನೇಶ್ವರನೆ! ಭಕ್ತಿಯಿಂದ ನಿನ್ನನ್ನು ಸ್ತೋತ್ರಮಾಡುವ ಭವ್ಯಜನರಿಗೆ ವಿಶೇಷವಾದ ಫಲಗಳೂ ಸಂಪತ್ತುಗಳೂ ತಾವಾಗಿ ಆವಿರ್ಭವಿಸುತ್ತವೆಂದು ನಿಶ್ಚಯಿಸಿ ನಿನ್ನನ್ನು ಸ್ತೋತ್ರಮಾಡುತ್ತೇನೆ.

ಸ್ತುತಿಃ ಪುಣ್ಯಗುಣೋತ್ಕೀರ್ತಿಃ ಸ್ತೋತಾ [2]ಭವ್ಯಃ ಪ್ರಸನ್ನಧೀಃ ।
ನಿಷ್ಠಿತಾರ್ಥೋ ಭವಾನ್ ಸ್ತುತ್ಯಃ ಫಲಂ ನೈಶ್ರೇಯಸಂ ಸುಖಮ್ ॥

ಭಗವಂತನೆ! ಪುಣ್ಯಕರವಾದ ನಿನ್ನ ಗುಣಗಳ ಕೀರ್ತನೆಯು ಸ್ತುತಿಯಾಗಿದೆ. ಪ್ರಸನ್ನವಾದ ಬುದ್ಧಿಯುಳ್ಳ ಭವ್ಯನು(ನಾನು) ಸ್ತೋತ್ರಮಾಡುವವನಾಗಿದ್ದಾನೆ. ಕೃತಕೃತ್ಯನಾದ ನೀನು ಸ್ತೋತ್ರಕ್ಕೆ ವಿಷಯನಾಗಿರುತ್ತಿ. ಮೋಕ್ಷಸುಖವು ಸ್ತುತಿಯ ಫಲವಾಗಿದೆ.

ಇ[3]ತ್ಯಾಕಲಯ್ಯ ಮನಸಾ [4]ತುಷ್ಟೂಷುಂ ಮಾಂ ಫಲಾರ್ಥಿನಮ್ ।
ವಿಭೋ ಪ್ರಸನ್ನಯಾ ದೃಷ್ಟ್ಯಾ ತ್ವಂ [5]ಪುನೀಹಿ ಸನಾತನ ॥ ೧೨ ॥

ಈ ಪ್ರಕಾರವಾಗಿ ಮನಸ್ಸಿನಿಂದ ನಿಶ್ಚಯಮಾಡಿ ಸ್ತೋತ್ರಮಾಡುವುದಕ್ಕೆ ಇಚ್ಛಿಸಿದವನೂ ಫಲವನ್ನಪೇಕ್ಷಿಸುವವನೂ ಆದ ನನ್ನನ್ನು ನಿತ್ಯನಾದ ಸ್ವಾಮಿಯೆ! ನೀನು ಪ್ರಸನ್ನವಾದ ದೃಷ್ಟಿಯಿಂದ ಪವಿತ್ರನನ್ನಾಗಿ ಮಾಡು.

ಮಾ[6]ಮುದಾಕುರುತೇ ಭಕ್ತಿಸ್ತ್ವದ್ಗುಣೈಃ ಪರಿಚೋದಿತಾ ।
ತತಃ ಸ್ತುತಿಪಥೇ ತೇಸ್ಮಿನ್ [7]ಲಗ್ನಃ [8]ಸಂವಿಗ್ನಮಾನಸಃ ॥ ೧೩ ॥

ನಿನ್ನ ಗುಣಗಳಿಂದ ಪ್ರೇರಿತವಾದ ಭಕ್ತಿಯು ನನ್ನನ್ನು ಪ್ರೋತ್ಸಾಹಪಡಿಸುವುದರಿಂದ ಧರ್ಮಫಲದಲ್ಲಿ ಅನುರಾಗವುಳ್ಳ ಮನಸ್ಸುಳ್ಳವನಾಗಿ ಈ ನಿನ್ನ ಸ್ತೋತ್ರಮಾರ್ಗ(ರೀತಿ)ದಲ್ಲಿ ಪ್ರವರ್ತಿಸಿರುತ್ತೇನೆ.

ತ್ವಯಿ ಭಕ್ತಿಃ ಕೃತಾಲ್ಪಾಪಿ ಮಹತೀಂ ಫಲಸಂಪದಮ್ ।
[9]ಪಂಫುಲೀತಿ ವಿಭೋ ಕಲ್ಪಕ್ಷ್ಮಾಜಸೇವೇವ ದೇಹಿನಾಮ್ ॥ ೧೪ ॥

ಪ್ರಭುವೆ! ನಿನ್ನಲ್ಲಿ ಸ್ವಲ್ಪಭಕ್ತಿಯನ್ನು ಮಾಡಿದರೂ ಕಲ್ಪವೃಕ್ಷದ ಸೇವೆಯಂತೆ ಪ್ರಾಣಿಗಳಿಗೆ ಹೆಚ್ಚಾದ ಫಲಸಂಪತ್ತನ್ನುಂಟುಮಾಡುತ್ತದೆ.

೧ ನಿಶ್ಚಲಂ. ೨ ಉದ್ವಮಿತವೃಷ್ಟಿಂ. ೩ ದಾನೋದ್ಯತಂ. ೪ ರಾಶಿಃ. ೫ ಮುನಿಋಷಿಯತ್ಯನಗಾರಾ ಇತಿ ಚತುರ್ವಿಧಭೇದಂ. ೬ ಭದ್ರಸಾಲಪಾಂಡುಕಸೌಮನಸ ನಂದನವನಾನೀತಿ ಚತುರ್ವಿಧಂ. ೭ ಸಿದ್ಧಕಲ್ಯಾಣಪಂಚಕಮಿತ್ಯಪಿ ಪಾಠಃ. ೮ ಅತಿಶಯ್ಯೈಃ.

೧ ಭವ್ಯಜನಾನಾಂ. ೨ ಅಹಮಿತ್ಯರ್ಥಃ. ೩ ನಿಶ್ಚಿತ್ಯ. ೪ ಸ್ತೋತುಮಿಚ್ಛುಂ. ೫ ಪವಿತ್ರಂ ಕುರು. ೬ ಪ್ರೋತ್ಸಾಹಯತಿ. ೭ ಪ್ರವೃತ್ತೋಽಸ್ಮಿ. ೮ ಧರ್ಮಫಲಾನುರಾಗಮಾನಸಃ. ೯ ಭೃಶಂ ಫಲತಿ.

**ತವಾರಿಜಯಮಾಚಷ್ಟೇ ವಪು[೧]ರಸ್ಪೃಷ್ಟಕೈತವಮ್।**
**ದೋಷಾವೇಶವಿಕಾರಾ ಹಿ ರಾಗಿಣಾಂ ಭೂಷಣಾದಯಃ ॥ ೧೫ ॥**

ಕಪಟಮೊದಲಾದ ದೋಷಗಳಿಲ್ಲದಿರುವ ಈ ನಿನ್ನ ಶರೀರವು ನೀನು ಕರ್ಮ ಶತ್ರುವನ್ನು ಜಯಿಸಿರುವುದನ್ನು ತಿಳಿಸುತ್ತದೆ. ಆಭರಣಮೊದಲಾದುವು ರಾಗಾದಿ ಕಷಾಯ ಪರಿಣಾಮವುಳ್ಳವರ ದೋಷಾವಿರ್ಭಾವದಿಂದುಂಟಾಗುವ ವಿಕಾರ ಗಳಲ್ಲವೆ ?

**ನಿರ್ಭೂಷಮಪಿ ಕಾಂತಂ ತೇ ವಪುರ್ಭುವನಭೂಷಣಮ್ ।**
**[೨]ದೀಪ್ತಂ ಹಿ ಭೂಷಣಂ ನೈವ ಭೂಷಣಾಂತರಮೀಕ್ಷತೇ ॥ ೧೬ ॥**

ಪ್ರಭುವೆ ! ಮೂರುಲೋಕಕ್ಕೆ ಭೂಷಣವಾದ ನಿನ್ನ ಶರೀರವು ಆಭರಣಗಳಿಲ್ಲ ದಿದ್ದರೂ ಮನೋಹರವಾಗಿದೆ. ಲೋಕದಲ್ಲಿ ದೇದೀಪ್ಯಮಾನವಾದ ಭೂಷಣವು ಬೇರೊಂದು ಭೂಷಣವನ್ನಿಚ್ಛಿಸುವುದೇ ಇಲ್ಲವಷ್ಟೆ ? ಸ್ವಭಾವಸುಂದರವಾದ ವಸ್ತು ವಿಗೆ ಬೇರೆ ಭೂಷಣದ ಆವಶ್ಯಕತೆಯಿಲ್ಲವೆಂದರ್ಥವು.

**ನ ಮೂರ್ಧ್ನಿ ಕಬರೀಬಂಧೋ ನ ಶೇಖರಪರಿಗ್ರಹಃ ।**
**ನ ಕಿರೀಟಾದಿಭಾರಸ್ತೇ ತಥಾಪಿ ರುಚಿರಂ ಶಿರಃ ॥ ೧೭ ॥**

ನಿನ್ನ ಮಸ್ತಕದಲ್ಲಿ ಕೂದಲುಗಳ ಗಂಟೂ(ಹೆರಳೂ) ಇಲ್ಲ. ತುರಾಯಿಯೂ ಇಲ್ಲ. ಕಿರೀಟಭಾರವೂ ಇಲ್ಲ. ಹಾಗಾದರೂ ನಿನ್ನ ಮಸ್ತಕವು ಸುಂದರವಾಗಿದೆ.

**ನ ಮುಖೇ ಭ್ರುಕುಟಿನ್ಯಾಸೋ ನ ದಷ್ಟೋ ದಶನಚ್ಛದಃ ।**
**ನಾಸ್ತ್ರೇ ವ್ಯಾಪಾರಿತೋ ಹಸ್ತಸ್ತಥಾಪಿ ತ್ವಮರೀ[೩]ನಹನ್ ॥ ೧೮ ॥**

ನಿನ್ನ ಮುಖದಲ್ಲಿ ಹುಬ್ಬುಗಂಟಿಕ್ಕಿರುವುದೂ ಕಾಣುವುದಿಲ್ಲ. ತುಟಿಯನ್ನು ಕಚ್ಚಿರುವುದೂ ಇಲ್ಲ. ಅಸ್ತ್ರಶಸ್ತ್ರಗಳಲ್ಲಿ ಕೈಯನ್ನು ತಿರುಗಿಸಿದುದೂ ಇಲ್ಲ. ಹಾಗಾ ದರೂ ನೀನು ಶತ್ರು(ಕರ್ಮ)ಗಳನ್ನು ನಾಶಮಾಡಿದೆ.

**ತ್ವಯಾ ನಾತಾಮ್ರಿತೇ ನೇತ್ರೇ ನೀಲೋತ್ಪಲ[೪]ದಲಾಯಿತೇ ।**
**ಮೋಹಾರಿವಿಜಯೇ ದೇವ ಪ್ರಭುಶಕ್ತಿಸ್ತವಾದ್ಭುತಾ ॥ ೧೯ ॥**

ನೀನು ಕನ್ನೈದಿಲೆಪುಷ್ಪದ ಎಸಳಿನಂತಿರುವ ಕಣ್ಣುಗಳನ್ನು ಕೆಂಪುಮಾಡಲಿಲ್ಲ. ಪ್ರಭುವೆ ! ಮೋಹವೆಂಬ ಶತ್ರುವಿನ ಜಯದಲ್ಲಿ ನಿನ್ನ ಪ್ರಭುಶಕ್ತಿಯು ಅದ್ಭುತ ವಾದುದು.

**[೫]ಅನಪಾಂಗಾವಲೋಕಂ ತೇ ಜಿನೇಂದ್ರ ನಯನದ್ವಯಮ್ ।**
**ಮದನಾರಿಜಯಂ ವಕ್ತಿ ವ್ಯಕ್ತಂ ನಃ ಸೌಮ್ಯವೀಕ್ಷಿತಮ್ ॥ ೨೦ ॥**

ಜಿನೇಶ್ವರನೆ !ಕಡೆಕಣ್ಣುನೋಟವಿಲ್ಲದಿರುವುವೂ ಸೌಮ್ಯವಾದ ನೋಟವುಳ್ಳುವೂ ಆದ ನಿನ್ನ ಎರಡುಕಣ್ಣುಗಳು ಮನ್ಮಥನೆಂಬ ಶತ್ರುವಿನ ಜಯವನ್ನು ನಮಗೆ ವ್ಯಕ್ತವಾಗಿ ಹೇಳುತ್ತವೆ.

**ತ್ವದ್ದೃಶೋರಮಲಾ ದೀಪ್ತಿರಾಸ್ಪೃಶಂತೀ [೬]ಶಿರಸ್ಸು ನಃ ।**
**ಪುನಾತಿ [೭]ಪುಣ್ಯಧಾರೇವ ಜಗತಾಮೇಕಪಾವನೀ ॥ ೨೧ ॥**

ನಮ್ಮ ಮಸ್ತಕಗಳಲ್ಲಿ ಸ್ಪರ್ಶಮಾಡುವ ನಿನ್ನ ಕಣ್ಣುಗಳ ನಿರ್ಮಲವಾದ ಕಾಂತಿಯು, ಜಗತ್ತಿಗೆ ಮುಖ್ಯವಾಗಿ ಪವಿತ್ರವಾದ ಶಾಂತಿಧಾರೆಯಂತೆ ನಮ್ಮನ್ನು ಪವಿತ್ರಮಾಡುತ್ತದೆ.

**ತವೇದಮಾನನಂ ಧತ್ತೇ ಪ್ರಫುಲ್ಲಕಮಲಶ್ರಿಯಮ್ ।**
**ಸ್ವಕಾಂತಿಜ್ಯೋತ್ಸ್ನಯಾ ವಿಶ್ವಮಾಕ್ರಾಮಚ್ಛರದಿಂದುವತ್ ॥ ೨೨ ॥**

೧ ತ್ಯಕ್ತಕೈತವಾದಿಕಂ. ೨ ದೀಪ್ರಮಿತ್ಯಪಿ ಪಾಠಃ. ೩ ಹನ್ನಿ ಸ್ಮ. ೪ ದಲಾಯತೇ ಇತ್ಯಪಿ ಪಾಠಃ. ೫ ಅಕಟಾಕ್ಷವೀಕ್ಷಣಂ. ೬ ಶಿರಃಪುನರಿತ್ಯಪಿ ಪಾಠಃ. ೭ ಶಾಂತಿಧಾರಾ.

ಶರತ್ಕಾಲದ ಚಂದ್ರನಂತೆ ತನ್ನ ಕಾಂತಿಯೆಂಬ ಬೆಳದಿಂಗಳಿಂದ ಜಗತ್ತನ್ನೆಲ್ಲ ಆಕ್ರಮಿಸುತ್ತಿರುವ ಈ ನಿನ್ನ ಮುಖವು ವಿಕಸಿತವಾದ ತಾವರೆಯ ಶೋಭೆಯನ್ನು ಧರಿಸುತ್ತದೆ. ತಾವರೆಯಂತೆ ಶೋಭಿಸುತ್ತದೆಂದರ್ಥವು.

**[೧]ಅನಟ್ಟಹಾಸಹುಂಕಾರಮದಷ್ಟೋಷ್ಠಪುಟಂ ಮುಖಮ್ ।**
**ಜಿನಾಖ್ಯಾತಿ ಸುಮೇದೋಭ್ಯಸ್ತಾವಕೀಂ ವೀತರಾಗತಾಮ್ ॥ ೨೩ ॥**

ಜಿನೇಶ್ವರನೆ !ಅಧಿಕವಾದ ನಗುವೂ ಹುಂಕಾರವೂ ಇಲ್ಲದಿರುವುದೂ ತುಟಿಗಳನ್ನು ಕಚ್ಚದಿರುವುದೂ ಆದ ಮುಖವು ಜ್ಞಾನಿಗಳಿಗೆ ನಿನ್ನ ವೀತರಾಗಭಾವವನ್ನು ವ್ಯಕ್ತಪಡಿಸುತ್ತದೆ.

**ತ್ವನ್ಮುಖಾದುದ್ಯತೀ ದೀಪ್ತಿಃ ಪಾವನೀವ ಸರಸ್ವತೀ ।**
**ವಿಧುನ್ವತೀ ತಮೋ ಭಾತಿ ಜಿನ ಬಾಲಾತಪದ್ಯುತಿಃ ॥ ೨೪ ॥**

ಜಿನೇಶ್ವರನೆ ! ನಿನ್ನ ಮುಖದಿಂದುತ್ಪನ್ನವಾದುದೂ ಜಗತ್ತನ್ನು ಪವಿತ್ರಮಾಡು ವುದೂ ಅಜ್ಞಾನಾಂಧಕಾರವನ್ನು ನಾಶಮಾಡುವುದೂ ಎಳೆಬಿಸಲಿನ ಕಾಂತಿಯುಳ್ಳು ದೂ ಆದ ಕಾಂತಿಯು ನಿನ್ನ ಮುಖದಿಂದುಂಟಾದ ಸರಸ್ವತಿಯಂತೆ ಶೋಭಿಸುತ್ತದೆ.

**ತ್ವನ್ಮುಖಾಂಬುರುಹಾಲಗ್ನಾ ಸುರಾಣಾಂ ನಯನಾವಲಿಃ ।**
**ಭಾತೀಯಮಲಿಮಾಲೇವ [೨]ತದಾಮೋದಾನುಪಾತಿನೀ ॥ ೨೫ ॥**

ನಿನ್ನ ಮುಖಕಮಲದಲ್ಲಿ ಮಗ್ನವಾಗಿರುವ ಈ ದೇವತೆಗಳ ಕಣ್ಣುಗಳ ಸಾಲು, ಆ ಮುಖಕಮಲದ ಪರಿಮಳಕ್ಕೆ ಬರುತ್ತಿರುವ ಭ್ರಮರಗಳ ಸಾಲಿನಂತೆ, ಶೋಭಿ ಸುತ್ತದೆ.

**ಮಕರಂದಮಿವಾಪೀಯ ತ್ವದ್ವಕ್ತ್ರಾಬ್ಜೋದ್ಗತಂ ವಚಃ ।**
**[೩]ಅನಾಶಿತಂಭವಂ ಭವ್ಯಭ್ರಮರಾ ಯಾಂತ್ಯಮೀ ಮುದಮ್ ॥ ೨೬ ॥**

ಎಷ್ಟುಪಾನಮಾಡಿ(ಕೇಳಿ)ದರೂ ತೃಪ್ತಿಯನ್ನುಂಟುಮಾಡದಿರುವುದೂ ನಿನ್ನ ಮುಖಕಮಲದಿಂದ ಹೊರಟುದೂ ಆದ ವಚನವನ್ನು ಅಮೃತದಂತೆ ಪಾನಮಾಡಿ (ಕೇಳಿ) ಈ ಭವ್ಯರೆಂಬ ಭ್ರಮರಗಳು ಸಂತೋಷವನ್ನು ಹೊಂದುತ್ತವೆ.

**ಏಕತೋಽಭಿಮುಖೋಽಪಿ ತ್ವಂ ಲಕ್ಷ್ಯಸೇ ವಿಶ್ವತೋಮುಖಃ ।**
**[೪]ತೇಜೋಗುಣಸ್ಯ ಮಾಹಾತ್ಮ್ಯಮಿದಂ ನೂನಂ ತವಾದ್ಭುತಮ್॥ ೨೭ ॥**

ಭಗವಂತನೆ ! ನೀನು ಒಂದುಕಡೆಗೆ ಮುಖವುಳ್ಳವನಾಗಿದ್ದರೂ ಎಲ್ಲಾ (ನಾಲ್ಕು) ಕಡೆಗಳಲ್ಲೂ ಮುಖವುಳ್ಳವನಾಗಿ ಕಾಣುತ್ತಿ. ನಿಜವಾಗಿಯೂ ಇದು ನಿನ್ನ ತೇಜೋಗುಣದ ಅದ್ಭುತವಾದ ಮಹಿಮೆಯು. ಪರಮೌದಾರಿಕದಿವ್ಯಶರೀರ ಪ್ರಭೆಯ ಮಹಿಮೆಯೆಂದು ಭಾವವು. ತಪೋಗುಣದ ಮಹಿಮೆಯೆಂದೂ ಪಾಠಾಂತರವಿದೆ.

**[೫]ವಿಶ್ವದಿಕ್ಕಂ ವಿಸರ್ಪಂತಿ ತಾವಕಾ [೬]ವಾಗಭೀಷವಃ ।**
**ತಿರಶ್ಚಾಮಪಿ ಹೃದ್ಧ್ವಾಂತಮುದ್ಧುನ್ವಂತೋ ಜಿನಾಂಶುಮನ್ ॥ ೨೮ ॥**

ಜಿನಸೂರ್ಯನೆ ! ತಿರ್ಯಕ್ಪ್ರಾಣಿಗಳ ಹೃದಯದಲ್ಲಿರುವ ಅಜ್ಞಾನಾಂಧಕಾರವನ್ನು ಚೆನ್ನಾಗಿ ನಾಶಮಾಡುವ ನಿನ್ನ ವಚನಗಳೆಂಬ ಕಿರಣಗಳು ಎಲ್ಲಾದಿಕ್ಕುಗಳಲ್ಲೂ ಹರಡುತ್ತವೆ.

**ತವ ವಾಗಮೃತಂ ಪೀತ್ವಾ ವಯಮದ್ಯಾ[೭]ಮರಾಃ ಸ್ಫುಟಮ್ ।**
**ಪೀಯೂಷಮಿದಮಿಷ್ಟಂ [೮]ನೋ ದೇವ ಸರ್ವರುಜಾಹರಮ್ ॥ ೨೯ ॥**

೧ ಅನಾಟ್ಟಾಸೇತ್ಯಪಿ ಪಾಠಃ. ೨ ಮುಖಾಂಬುರುಹಾನುಮೋದಮನುವ್ರಜಂತೀ. ೩ ಅತೃಪ್ತಿಕರಂ. ೪ ತಪೋಗುಣಸ್ಯೇತ್ಯಪಿ ಪಾಠಃ. ೫ ಸರ್ವದಿಕ್ಕು. ೬ ವಚನಕಿರಣಾಃ. ೭ ನಮ್ರಿಯತ ಇತ್ಯಮರಾಃ. ೮ ಅಸ್ಮಾಕಂ.

ದೇವನೆ ! ನಿನ್ನ ವಚನವೆಂಬ ಅಮೃತವನ್ನು ಪಾನಮಾಡಿ ಈಗ ನಾವು ನಿಜವಾಗಿಯೂ ಮರಣವನ್ನು ಹೊಂದದವರಾದೆವು. ಸಮಸ್ತ ರೋಗಗಳನ್ನು ನಾಶಮಾಡುವ ಈ ಅಮೃತವು ನಮಗೆ ಇಷ್ಟವಾಗಿದೆ.

**ಜಿನೇಂದ್ರ ತವ ವಕ್ತ್ರಾಬ್ಜಂ ಪ್ರಕ್ಷರದ್ವಚನಾಮೃತಮ್ ।**
**ಭವ್ಯಾನಾಂ ಪ್ರೀಣನಂ ಭಾತಿ ಧರ್ಮಸ್ಯೇವ [೧]ನಿಧಾನಕಮ್ ॥ ೩೦ ॥**

ಜಿನೇಶ್ವರನೆ !ವಚನವೆಂಬ ಅಮೃತವನ್ನು ಸ್ರವಿಸುವ ನಿನ್ನ ಮುಖವೆಂಬ ಕಮಲವು ಧರ್ಮದ ನಿಧಿಯಂತೆ ಭವ್ಯರಿಗೆ ಸಂತೋಷವನ್ನುಂಟುಮಾಡುವುದಾಗಿ ಶೋಭಿಸುತ್ತದೆ.

**ಮುಖೇಂದುಮಂಡಲಾದ್ದೇವ ತವ ವಾಕ್ಕಿರಣಾ ಇಮೇ ।**
**ವಿನಿರ್ಯಾಂತೋ ಹತಧ್ವಾಂತಾಃ ಸಭಾಮಾಹ್ಲಾದಯಂತ್ಯಲಮ್ ॥ ೩೧ ॥**

ದೇವನೆ ! ನಿನ್ನ ಮುಖವೆಂಬ ಚಂದ್ರಮಂಡಲದಿಂದ ಹೊರಟ ಈ ವಚನಗಳೆಂಬ ಕಿರಣಗಳು ಅಜ್ಞಾನಾಂಧಕಾರವನ್ನು ನಾಶಮಾಡಿ ಸಮವಸರಣಸಭೆಯನ್ನು ಬಹಳವಾಗಿ ಸಂತೋಷಪಡಿಸುತ್ತವೆ.

**ಚಿತ್ರಂ ವಾಚಾಂ ವಿಚಿತ್ರಾಣಾಮಕ್ರಮಃ ಪ್ರಭವಃ ಪ್ರಭೋ ।**
**ಅಥವಾ ತೀರ್ಥಕೃತ್ತ್ವಸ್ಯ ದೇವ ವೈಭವಮೀದೃಶಮ್ ॥ ೩೨ ॥**

ಪ್ರಭುವೆ ! ವಿಚಿತ್ರ(ನಾನಾವಿಧ)ವಾದ ವಚನಗಳ ಕ್ರಮರಹಿತವಾದ ಉತ್ಪತ್ತಿಯು ಆಶ್ಚರ್ಯಕರವಾಗಿದೆ. ಸ್ವಾಮಿಯ ನಾನಾವಿಧವಾದ ವಚನಗಳು ಒಂದೇಕಾಲದಲ್ಲುಂಟಾಗುವುದಾಶ್ಚರ್ಯವೆಂದು ಭಾವವು. ಅಥವಾ ಸ್ವಾಮಿಯೆ ! ತೀರ್ಥಕರತ್ವದ ವೈಭವವು ಈಪ್ರಕಾರವಾದುದು.

**[೨]ಅಸ್ವೇದಮಲಮಾಭಾತಿ ಸುಗಂಧಿಶುಭಲಕ್ಷಣಮ್ ।**
**ಸುಸಂಸ್ಥಾನ[೩]ಮರಕ್ತಾಸೃಗ್ವಪುರ್ವಜ್ರಸ್ಥಿರಂ ತವ ॥ ೩೩ ॥**

ಭಗವಂತನೆ !ಬೆವರಿನ ಮಲವಿಲ್ಲದಿರುವುದೂ ಪರಿಮಳವುಳ್ಳುದೂ ಶುಭಲಕ್ಷಣಗಳುಳ್ಳುದೂ ಶ್ರೇಷ್ಠವಾದ ರಚನಾಕೃತಿಯುಳ್ಳುದೂ ಕೆಂಪುರಕ್ತವಿಲ್ಲದುದೂ ಆದ ನಿನ್ನ ಶರೀರವು ವಜ್ರದಂತೆ ಸ್ಥಿರವಾಗಿ ಶೋಭಿಸುತ್ತದೆ.

**ಸೌರೂಪ್ಯಂ ನಯನಾಹ್ಲಾದಿ ಸೌಭಾಗ್ಯಂ ಚಿತ್ತರಂಜನಮ್ ।**
**ಸುವಾಕ್ತ್ವಂ ಜಗದಾನಂದಿ ತವಾಸಾಧಾರಣಾ ಗುಣಾಃ ॥ ೩೪ ॥**

ನೇತ್ರಗಳಿಗೆ ಸಂತೋಷವನ್ನುಂಟುಮಾಡುವ ನಿನ್ನ ಸೌಂದರ್ಯವೂ ಮನಸ್ಸನ್ನು ಸಂತೋಷಪಡಿಸುವ ವೈಭವವೂ ಜಗತ್ತಿಗೆ ಸಂತೋಷವನ್ನುಂಟುಮಾಡುವ ಉತ್ತಮವಚನವೂ ಬೇರೆಯವರಿಗಿಲ್ಲದಿರುವ ಗುಣಗಳಾಗಿವೆ.

**ಅಮೇಯಮಪಿ ತೇ ವೀರ್ಯಂ ಮಿತಂ ದೇಹೇ ಪ್ರಭಾನ್ವಿತೇ ।**
**ಸ್ವಲ್ಪೇಽಪಿ ದರ್ಪಣೇ ಬಿಂಬಂ [೪]ಮಾತಿ [೫]ಸ್ತಾಂಬೇರಮಂ ನನು ॥ ೩೫ ॥**

ಯಾವುದರಲ್ಲೂ ಅಡಕವಾಗದಿರುವ ನಿನ್ನ ಸಾಮರ್ಥ್ಯವು ಕಾಂತಿಯುಕ್ತವಾದ ನಿನ್ನ ಶರೀರದಲ್ಲಿ ಅಡಕವಾಯಿತು. ಕನ್ನಡಿಯು ಚಿಕ್ಕದಾಗಿದ್ದರೂ ಆನೆಯ ಸಂಬಂಧವಾದ ಪ್ರತಿಬಿಂಬವು ಅಡಕವಾಗುವುದಿಲ್ಲವೆ ?

**[೬]ತ್ವದಾಸ್ಥಾನಸ್ಥಿತೋದ್ದೇಶಂ ಪರಿತಃ ಶತಯೋಜನಮ್ ।**
**ಸುಲಭಾಶನಪಾನಾದಿ ತ್ವನ್ಮಹಿಮ್ನೋಪಜಾಯತೇ ॥ ೩೬ ॥**

ನಿನ್ನ ಸಮವಸರಣದಲ್ಲಿರುವ ಪ್ರದೇಶದ ಸುತ್ತಲೂ ನೂರುಯೋಜನ (ಗಾವುದ)ದ ವರೆಗೆ ನಿನ್ನ ಮಹಿಮೆಯಿಂದ ಸುಲಭವಾಗಿ ಅನ್ನಪಾನಮೊದಲಾದ ವಸ್ತುಗಳುಂಟಾಗುತ್ತಿವೆ.

೧ ನಿಕ್ಷೇಪಃ. ೨ ಸ್ವೇದರಹಿತಂ. ೩ ಗೌರರುಧಿರಂ. ೪ ಪ್ರಮಾತಿ. ೫ ಗಜಸಂಬಂಧಿ. ೬ ಸಮವಸರಣಸ್ಥಿತಪ್ರದೇಶಸ್ಯ ಸಮಂತಾತ್.

**[೧]ಗಗನಾನುಗತಂ ಯಾನಂ ತವಾಸೀದ್ಭುವಮಸ್ಪೃಶತ್ ।**
**ದೈವಾಸುರಂ ಭರಂ ಸೋಢುಮಕ್ಷಮಾ ಧರಣೀತಿ ನು ॥ ೩೭ ॥**

ಭೂಮಿಯು ದೇವತೆಗಳ ಮತ್ತು ಅಸುರಕುಮಾರರ ಭಾರವನ್ನು ಸಹಿಸುವುದಕ್ಕೆ ಅಸಮರ್ಥವಾಗಿದೆಯೋ ಎಂಬಂತೆ ನಿನ್ನ ಸಮವಸರಣಗಮನವು ಭೂಮಿಯನ್ನು ಸ್ಪರ್ಶಿಸದೆ ಆಕಾಶಮಾರ್ಗವನ್ನನುಸರಿಸಿ ಉಂಟಾಯಿತು.

**ಕ್ರೂರೈರಪಿ ಮೃಗೈರ್ಹಿಂಸ್ರೈರ್ಹನ್ಯಂತೇ ಜಾತು ನಾಂಗಿನಃ ।**
**ಸದ್ಧರ್ಮದೇಶನೋದ್ಯುಕ್ತೇ ತ್ವಯಿ ಸಂಜೀವನೌಷಧೇ ॥ ೩೮ ॥**

ಸಂಜೀವನೌಷಧದಂತಿರುವ ನೀನು ಸದ್ಧರ್ಮವನ್ನುಪದೇಶಮಾಡುವುದರಲ್ಲಿ ಪ್ರಯತ್ನಶೀಲನಾಗಿರುತ್ತಿರಲು ಕ್ರೂರವಾದ ಘಾತುಕಮೃಗಗಳು ಕೂಡ ಪ್ರಾಣಿಗಳನ್ನು ಹಿಂಸಿಸುವುದೇ ಇಲ್ಲ.

**ನ ಭುಕ್ತಿಃ ಕ್ಷೀಣಮೋಹಸ್ಯ ತವಾ[೨]ನಂತಸುಖೋದಯಾತ್ ।**
**ಕ್ಷುತ್ಕ್ಲೇಶಬಾಧಿತೋ ಜಂತುಃ ಕವಲಾಹಾರಭುಗ್ಭವೇತ್ ॥ ೩೯ ॥**

ಮೋಹನೀಯಕರ್ಮವನ್ನು ಕ್ಷಯಮಾಡಿರುವ ನಿನಗೆ ಅನಂತಸುಖವು ಆವಿರ್ಭವಿಸಿರುವುದರಿಂದ ಕವಳಭೋಜನವಿಲ್ಲ. ಹಸಿವಿನ ದುಃಖದಿಂದ ಬಾಧಿತವಾದ ಪ್ರಾಣಿಯು ಕವಳಾಹಾರವನ್ನು ಭುಂಜಿಸುವುದು. ಸ್ವಾಮಿಗೆ ಕ್ಷುದ್ಬಾಧೆಯಿಲ್ಲದಿರುವುದರಿಂದ ಕವಳಾಹಾರವಿಲ್ಲವೆಂದು ಭಾವವು.

**[೩]ಅಸದ್ವೇದ್ಯೋದಯಾದ್ಭುಕ್ತಿಂ ತ್ವಯಿ ಯೋ ಯೋಜಯೇದಧೀಃ ।**
**[೪]ಮೋಹಾನಿಲಪ್ರತೀಕಾರೇ ತಸ್ಯಾ[೫]ನ್ವೇಷ್ಯಂ [೬]ಜರದ್ಘೃತಮ್ ॥ ೪೦ ॥**

ಬುದ್ಧಿಹೀನನಾದ ಯಾವನು (ಶ್ವೇತಾಂಬರ) ನಿನ್ನಲ್ಲಿ ಅಸಾತಾವೇದನೀಯಕರ್ಮದ ಉದಯವಿರುವುದರಿಂದ ಕವಳಭೋಜನವನ್ನು ಕಲ್ಪಿಸುವನೋ ಅಂತಹವನ ಅಜ್ಞಾನವೆಂಬ ವಾತರೋಗದ ಪ್ರತೀಕಾರಕ್ಕೋಸ್ಕರ ಹಳೆಯದಾದ ತುಪ್ಪವನ್ನು ಹುಡುಕಬೇಕು. ಆ ಅಜ್ಞಾನವನ್ನು ಖಂಡಿಸುವ ಉಪಾಯವನ್ನು ಹುಡುಕಬೇಕೆಂದರ್ಥವು.

**ಅಸದ್ವೇದ್ಯವಿಷಂ ಘಾತಿವಿಧ್ವಂಸಧ್ವಸ್ತಶಕ್ತಿಕಮ್ ।**
**ತ್ವಯ್ಯಕಿಂಚಿತ್ಕರಂ ಮಂತ್ರಶಕ್ತ್ಯೇವಾ[೭]ಪಬಲಂ ವಿಷಮ್ ॥ ೪೧ ॥**

ಘಾತಿಕರ್ಮಗಳ ನಾಶದಿಂದ ಬಲಹೀನವಾಗಿರುವ ಅಸಾತಾವೇದನೀಯಕರ್ಮವೆಂಬ ವಿಷವು ಮಂತ್ರಶಕ್ತಿಯಿಂದ ಬಲಹೀನವಾದ ವಿಷದಂತೆ ನಿನ್ನಲ್ಲಿ ತನ್ನ ಕಾರ್ಯ (ಬಾಧೆ)ವನ್ನು ಮಾಡಲಾರದು. ಘಾತಿಕರ್ಮಗಳ ಸಹಾಯವಿಲ್ಲದಿದ್ದರೆ ಅಸಾತಾವೇದನೀಯಕರ್ಮವು ಬಾಧೆಯನ್ನುಂಟುಮಾಡಲಾರದೆಂದಭಿಪ್ರಾಯವು.

**ಅಸದ್ವೇದ್ಯೋದಯೋ ಘಾತಿಸಹಕಾರ್ಯಪಾಯತಃ ।**
**ತ್ವಯ್ಯಕಿಂಚಿತ್ಕರೋ ನಾಥ ಸಾಮಗ್ರ್ಯಾ ಹಿ ಫಲೋದಯಃ ॥ ೪೨ ॥**

ಸ್ವಾಮಿಯೆ ! ಸಹಾಯವನ್ನು ಮಾಡುವ ಘಾತಿಕರ್ಮಗಳ ನಾಶದಿಂದ ನಿನ್ನಲ್ಲಿ ಅಸಾತಾವೇದನೀಯಕರ್ಮದ ಉದಯವು ತನ್ನ ಕಾರ್ಯವನ್ನು ಮಾಡುವುದಕ್ಕೆ ಅಸಮರ್ಥವಾಗಿದೆ. ಸಾಮಗ್ರಿಯಿಂದಲ್ಲವೆ ಫಲವುಂಟಾಗುವುದು ?

**ನೇತಯೋ ನೋಪಸರ್ಗಾಶ್ಚ ಪ್ರಭವಂತಿ ತ್ವಯೀಶಿನಿ ।**
**ಜಗತಾಂ [೮]ಪಾಲಕೇ ಹೇಲಾಕ್ಷಾಲಿತಾಂಹಃಕಲಂಕಕೇ ॥ ೪೩ ॥**

ಪಾಪವೆಂಬ ಕಲಂಕವನ್ನು ವಿನೋದದಿಂದ ತೊಳೆದಿರುವವನೂ ಸ್ವಾಮಿಯೂ ಆದ ನೀನು ಲೋಕವನ್ನು ಕಾಪಾಡುತ್ತಿರಲು ಅತಿವೃಷ್ಟಿ ಅನಾವೃಷ್ಟಿ ಮೊದಲಾದ ಮಹಾಭೀತಿಗಳೂ ಉಪಸರ್ಗಗಳೂ ಉಂಟಾಗುವುದಿಲ್ಲ.

೧ ಸಮವಸರಣಗಮನಂ. ೨ ಅತ್ಯಂತಸುಖೋದಯಾದಿತ್ಯಪಿ ಪಾಠಃ. ೩ ಅಸಾತಾವೇದನೀಯೋದಯಾತ್. ೪ ಅಜ್ಞಾನವಾತರೋಗಪ್ರತೀಕಾರೇ. ೫ ಮೃಗ್ಯಂ. ೬ ಚಿರಂತನಾಜ್ಯಂ. ೭ ಅಪಗತಬಲಂ. ೮ ಪಾಲಕೇ ಸತಿ.

ತ್ವ[೧]ಯ್ಯನಂತಮುಖೋತ್ಸರ್ಪತ್ಕೇವಲಾಮಲಲೋಚನೇ ।
ಚಾತುರಾಸ್ಯಮಿದಂ ಯುಕ್ತಂ [೨]ನಷ್ಟಘಾತಿಚತುಷ್ಟಯೇ ॥ ೪೪ ॥

ಅನಂತಮುಖವಾಗಿ ಹರಡುತ್ತಿರುವ ಕೇವಲಜ್ಞಾನವೆಂಬ ನಿರ್ಮಲವಾದ ನೇತ್ರವುಳ್ಳವನೂ ಜ್ಞಾನಾವರಣಮೊದಲಾದ ನಾಲ್ಕುಘಾತಿಕರ್ಮಗಳನ್ನು ನಾಶಮಾಡಿದವನೂ ಆದ ನಿನ್ನಲ್ಲಿ ಈ ನಾಲ್ಕುಮುಖವಾಗಿರುವುದು ಯುಕ್ತವಾಗಿದೆ. ಕೇವಲಜ್ಞಾನವು ಅನಂತವಿಷಯಗಳನ್ನು ವಿಷಯೀಕರಿಸುವುದರಿಂದ ಅನಂತಮುಖವಾಗಿದೆಯೆಂದಭಿಪ್ರಾಯವು.

ಸರ್ವವಿದ್ಯೇಶ್ವರೋ ಯೋಗೀ ಚತುರಾಸ್ಯಸ್ತ್ವಮಕ್ಷರಃ ।
ಸರ್ವತೋ[೩]ಕ್ಷಿಮಯಂ ಜ್ಯೋತಿ[೪]ಸ್ತನ್ವಾನೋ ಭಾ[೫]ಸ್ಯಧೀಶಿತಃ ॥ ೪೫ ॥

ಎಲೈ ಪ್ರಭುವೆ ! ಸಮಸ್ತವಿದ್ಯೆಗಳಿಗೆ ಪ್ರಭುವೂ ಯೋಗಿಯೂ ನಾಲ್ಕುಮುಖಗಳುಳ್ಳವನೂ ನಾಶರಹಿತನೂ ಆದ ನೀನು ಎಲ್ಲಾಕಡೆಯಲ್ಲೂ ಆತ್ಮಸ್ವರೂಪವಾದ ಜ್ಯೋತಿಯನ್ನು ವಿಸ್ತರಿಸುವವನಾಗಿ ಪ್ರಕಾಶಿಸುತ್ತಿ.

ಅಚ್ಛಾಯತ್ವಮನುನ್ಮೇಷನಿಮೇಷತ್ವಂ ಚ ತೇ ವಪುಃ ।
ಧತ್ತೇ ತೇಜೋಮಯಂ ದಿವ್ಯಂ ಪರಮೌದಾರಿಕಾಹ್ವಯಮ್ ॥ ೪೬ ॥

ತೇಜೋಮಯವೂ ಶ್ರೇಷ್ಠವೂ ಪರಮೌದಾರಿಕವೆಂದು ಹೆಸರುಳ್ಳುದೂ ಆದ ನಿನ್ನ ಶರೀರವು ನೆರಳಿಲ್ಲದಿರುವಿಕೆಯನ್ನೂ ರೆಪ್ಪೆಹೊಡೆಯದಿರುವಿಕೆಯನ್ನೂ ಧರಿಸುತ್ತದೆ. ಸ್ವಾಮಿಯ ಶರೀರದ ನೆರಳೂ ಬೀಳುವುದಿಲ್ಲ, ಕಣ್ಣುಗಳು ರೆಪ್ಪೆಹೊಡೆಯುವುದೂ ಇಲ್ಲವೆಂದು ಭಾವವು.

ಬಿಭ್ರಾಣೋಪ್ಯಧ್ಯಧಿಚ್ಛತ್ರ[೬]ಮಚ್ಛಾಯಾಂಗಸ್ತ್ವಮೀಕ್ಷಸೇ ।
ಮಹತಾಂ ಚೇಷ್ಟಿತಂ ಚಿತ್ರಮಥವೌಜಸ್ತವೇದೃಶಮ್ ॥ ೪೭ ॥

ಭಗವಂತನೆ ! ನೀನು ಒಂದರ ಮೇಲೊಂದು ಶ್ವೇತಚ್ಛತ್ರವನ್ನು ಧರಿಸುವವನಾಗಿದ್ದರೂ ಛತ್ರಿಯ ನೆರಳು ಬೀಳದಿರುವ ಶರೀರವುಳ್ಳವನಾಗಿ ಕಾಣುತ್ತಿ. ಮಹಾತ್ಮರ ವ್ಯಾಪಾರವು ಆಶ್ಚರ್ಯಕರವಾಗಿದೆ. ಅಥವಾ ನಿನ್ನ ತೇಜಸ್ಸು ಈ ಪ್ರಕಾರವಾದುದು.

ನಿಮೇಷಾಪಾಯಧೀರಾಕ್ಷಂ ತವ ವಕ್ತ್ರಾಬ್ಜಮೀಕ್ಷಿತುಮ್ ।
[೭]ತ್ವಯೇವ ನಯನಸ್ಪಂಧೋ ನೂನಂ ದೇವೈಶ್ಚ [೮]ಸಂಹೃತಃ ॥ ೪೮ ॥

ರೆಪ್ಪೆಹೊಡೆಯದಿರುವುದರಿಂದ ನಿಶ್ಚಲವಾದ ಕಣ್ಣುಗಳುಳ್ಳ ನಿನ್ನ ಮುಖಕಮಲವನ್ನು ನೋಡುವುದಕ್ಕೋಸ್ಕರ, ನೀನು ನೇತ್ರಪ್ರವಾಹವನ್ನು ಸಂಕೋಚಮಾಡಿರುವಂತೆ, ನಿಶ್ಚಯವಾಗಿಯೂ ದೇವತೆಗಳೂ ಸಂಕೋಚಮಾಡಿದರು. ದೇವತೆಗಳು ತಮ್ಮ ನೇತ್ರಗಳನ್ನು ಸ್ವಾಮಿಯ ಪಾದಗಳಲ್ಲಿರಿಸಿ ನೋಡುತ್ತಿದ್ದರೆಂದು ಭಾವವು.

ನಖಕೇಶಮಿತಾವಸ್ಥಾ ತವಾವಿಷ್ಕುರುತೇ ವಿಭೋ ।
[೯]ರಸಾದಿವಿಲಯಂ ದೇಹೇ ವಿಶುದ್ಧಸ್ಫಟಿಕಾಮಲೇ ॥ ೪೯ ॥

ಪ್ರಭುವೆ ! ಬೆಳೆಯದೆ ಪರಿಮಿತವಾಗಿರುವ ಉಗುರುಗಳೂ ಕೂದಲುಗಳೂ ಉಳ್ಳ ನಿನ್ನ ಅವಸ್ಥೆಯು ಪರಿಶುದ್ಧವಾದ ಸ್ಫಟಿಕದಂತೆ ನಿರ್ಮಲವಾದ ನಿನ್ನ ಶರೀರದಲ್ಲಿ ರಸರಕ್ತಮೊದಲಾದ ಸಪ್ತಧಾತುಗಳಿಲ್ಲವೆಂಬುದನ್ನು ಪ್ರಕಟಪಡಿಸುತ್ತದೆ.

ಇತ್ಯುದಾರೈರ್ಗುಣೈರೇಭಿಸ್ತ್ವಮನನ್ಯತ್ರಭಾವಿಭಿಃ ।
ಸ್ವಯಮೇತ್ಯ ವೃತೋ ನೂನಮದೃಷ್ಟ[೧೦]ಶರಣಾಂತರೈಃ ॥ ೫೦ ॥

೧ ಅನಂತಸುಖೋತ್ಸರ್ಪದಿತ್ಯಪಿ ಪಾಠಃ. ೨ ನೇಷ್ಟಮಿತ್ಯಪಿ ಪಾಠಃ. ೩ ಆತ್ಮಸ್ವರೂಪಂ. ೪ ತವಾತ ಇತ್ಯಪಿ ಪಾಠಃ. ೫ ಭೋ ಅಧೀಶ್ವರ. ೬ ಛಾಯಾರಹಿತಶರೀರೋ ಭೂತ್ವಾ. ೭ ತ್ವಯ್ಯೇವೇತ್ಯಪಿ ಪಾಠಃ. ೮ ತ್ಯಕ್ತಃ. ೯ ರಸರುಧಿರಾದಿಸಪ್ತಧಾತುವಿಲಯಂ. ೧೦ ಶರಣಾಂ ಗೃಹರಕ್ಷಿತ್ರೂಃ.

ಈರೀತಿಯಾಗಿ ನಿರ್ದೋಷವೂ ಬೇರೆಯವರಲ್ಲಿಲ್ಲದಿರುವುವೂ ಆದ ಈ ಹಿಂದೆಹೇಳಿದ ಗುಣಗಳು ಬೇರೆ ರಕ್ಷಕರನ್ನು ಅಥವಾ ಆಶ್ರಯವನ್ನು ಕಾಣದೆ ತಾವಾಗಿ ಬಂದು ನಿನ್ನನ್ನಾವರಿಸಿಕೊಂಡಿವೆಯೋ ಎಂಬಂತಿವೆ.

ಅಪ್ಯಮೀ [೧]ರೂಪಸೌಂದರ್ಯಕಾಂತಿ[೨]ದೀಪ್ತ್ಯಾದಯೋ ಗುಣಾಃ ।
ಸ್ಪೃಹಣೀಯಾಃ ಸುರೇಂದ್ರಾಣಾಂ ತವ ಹೇಯಾಃ ಕಿಲಾದ್ಭುತಮ್॥ ೫೧ ॥

ರೂಪದ ಸುಂದರತೆ ಕಾಂತಿ ತೇಜಸ್ಸು ಮೊದಲಾದ ಈ ಗುಣಗಳು ದೇವೇಂದ್ರರಿಂದ ಇಚ್ಛಿಸಲ್ಪಡುವುವುಗಳಾಗಿದ್ದರೂ ನಿನಗೆ ಹೇಯಗಳಾಗಿವೆಯಲ್ಲವೆ ? ಆಶ್ಚರ್ಯ ! ಸ್ವಾಮಿಯ ನಿಸ್ಪೃಹತೆಯು ಆಶ್ಚರ್ಯಕರವಾದುದೆಂದು ಭಾವವು.

[೩]ಗುಣಿನಂ ತ್ವಾಮುಪಾಸೀನಾ [೪]ನಿರ್ಧೂತಗುಣಬಂಧನಾಃ ।
ತ್ವಯಾ [೫]ಸಾರೂಪ್ಯಮಾಯಾಂತಿ [೬]ಸ್ವಾಮಿಚ್ಛಂದಂ ನು [೭]ಶಿಕ್ಷಿತುಃ ॥

ಗುಣಸಂಪನ್ನನಾದ ನಿನ್ನನ್ನು ಭಜಿಸುವವರು ಕರ್ಮಬಂಧನವನ್ನು ನಾಶಮಾಡಿದವರಾಗಿ ನಿನ್ನೊಡನೆ ಸಾದೃಶ್ಯವನ್ನು ಹೊಂದುತ್ತಾರೆ. ಕರ್ಮನಿರ್ಮುಕ್ತರಾಗಿ ಕೈವಲ್ಯವನ್ನು ಪಡೆಯುತ್ತಾರೆಂದಭಿಪ್ರಾಯವು. ಶಿಷ್ಯನಿಗೆ ಪ್ರಭುವಿನ ಪ್ರತಿನಿಧಿತ್ವವುಂಟಾಗುವುದಲ್ಲವೆ ? ಗುರುವಿನಂತೆ ಶಿಷ್ಯನಾಗುವುದು ಯುಕ್ತವಾಗಿದೆಯೆಂದರ್ಥ.

ಅಯಂ ಮಂದಾನಿಲೋದ್ಧೂತಚಲಚ್ಛಾಖಾಕರೋತ್ಕರೈಃ ।
ಶ್ರೀಮಾನಶೋಕವೃಕ್ಷಸ್ತೇ ನೃತ್ಯತೀವಾತ್ತಸಮ್ಮದಃ ॥ ೫೩ ॥

ಶೋಭಾಯುಕ್ತವಾದ ಈ ನಿನ್ನ ಅಶೋಕವೃಕ್ಷವು ಸಂತೋಷವನ್ನು ಹೊಂದಿದುದಾಗಿ ಮಂದಮಾರುತದಿಂದ ಕೊಡಹಲ್ಪಟ್ಟು ಚಲಿಸುತ್ತಿರುವ ಕೊಂಬೆಗಳೆಂಬ ಎತ್ತಿದ ಕೈಗಳಿಂದ ನರ್ತನವನ್ನು ಮಾಡುತ್ತಿದೆಯೋ ಎಂಬಂತಿದೆ.

ಚಲತ್ಕ್ಷೀರೋದವೀಚೀಭಿಃ ಸ್ಪರ್ಧಾಂ ಕರ್ತುಮಿವಾ[೮]ಭಿತಃ ।
ಚಾಮರೌಘಾಃ ಪತಂತಿ ತ್ವಾಂ [೯]ಮರುದ್ಭಿರ್ಲೀಲಯಾ [೧೦]ಧುತಾಃ॥ ೫೪ ॥

ನಿನ್ನ ಸುತ್ತಲೂ ದೇವತೆಗಳು ವಿನೋದದಿಂದ ಬೀಸುತ್ತಿರುವ ಚಾಮರಗಳ ಸಮೂಹಗಳು ಚಂಚಲವಾದ ಕ್ಷೀರಸಮುದ್ರದ ತೆರೆಮಾಲೆಗಳೊಡನೆ ಸ್ಪರ್ಧೆಯನ್ನು ಮಾಡುವುದಕ್ಕೋಸ್ಕರವೋ ಎಂಬಂತೆ ನಿನ್ನ ಸುತ್ತಲೂ ಬೀಳುತ್ತಿವೆ.

ಮುಕ್ತಾಲಂಬನವಿಭ್ರಾಜಿ ಭ್ರಾಜತೇ ವಿಧುನಿರ್ಮಲಮ್ ।
ಛತ್ರತ್ರಯಂ ತವೋನ್ಮುಕ್ತಪ್ರಾರೋಹಮಿವ ಖಾಂಗಣೇ ॥ ೫೫ ॥

ಮುತ್ತಿನ ಜಾಲರಿಗಳಿಂದ ಶೋಭಿಸುತ್ತಿರುವುದೂ ಚಂದ್ರನಂತೆ ನಿರ್ಮಲವೂ ಆದ ನಿನ್ನ ಛತ್ರತ್ರಯವು ಬಿಳಲುಗಳನ್ನು ಬಿಟ್ಟಿರುವಂತೆ ಆಕಾಶದಲ್ಲಿ ಶೋಭಿಸುತ್ತಿದೆ.

ಸಿಂಹೈರೂಢಂ ವಿಭಾತೀದಂ ತವ ವಿಷ್ಟರಮುಚ್ಚಕೈಃ ।
ರತ್ನಾಂಶುಭಿರ್ಭವತ್ಸ್ಪರ್ಶಾನ್ಮುಕ್ತಹರ್ಷಾಂಕುರೈರಿವ ॥ ೫೬ ॥

ಸಿಂಹಗಳಿಂದ ಧರಿಸಲ್ಪಟ್ಟ ಈ ನಿನ್ನ ಸಿಂಹಪೀಠವು ಮೇಲ್ಭಾಗದಲ್ಲಿ ಹರಡಿಕೊಂಡಿರುವ ರತ್ನಗಳ ಕಿರಣಗಳಿಂದ, ನಿನ್ನ ಸ್ಪರ್ಶದಿಂದ ಸಂತೋಷದ ಮೊಳಕೆಗಳನ್ನು ಬಿಟ್ಟಿರುವಂತೆ, ಶೋಭಿಸುತ್ತಿದೆ.

ಧ್ವನಂತಿ ಮಧುರಧ್ವಾನಾಃ ಸುರದುಂದುಭಿಕೋಟಯಃ ।
ಘೋಷಯಂತ್ಯ ಇವಾಪೂರ್ಯ [೧೧]ರೋದಸೀ ತ್ವಜ್ಜಯೋತ್ಸವಮ್ ॥

ಮಧುರವಾದ ಧ್ವನಿಗಳುಳ್ಳ ಅನೇಕಕೋಟಿದೇವದುಂದುಭಿಗಳು ಆಕಾಶಭೂಮಿಗಳನ್ನು ವ್ಯಾಪಿಸಿ ನಿನ್ನ ಜಯೋತ್ಸವವನ್ನು ಘೋಷಿಸುತ್ತವೋ ಎಂಬಂತೆ,

೧ ರೂಪಸ್ಯ ಸೌಂದರ್ಯಂ ಚಾರುತ್ವಂ. ೨ ತೇಜಃ. ೩ ಗುಣಿನ ಇತ್ಯಪಿ ಪಾಠಃ. ೪ ನಿರಸ್ತಕರ್ಮಬಂಧನಾ ಇತ್ಯರ್ಥಃ. ೫ ಸಮಾನರೂಪತಾಂ. ೬ ಭರ್ತುಃ ಪ್ರತಿನಿಧಿ. ೭ ಶಿಷ್ಯಸ್ಯ. ೮ ಪರಿತಃ. ೯ ದೇವೈಃ. ೧೦ ವೀಜಿತಾಃ, ಧೃತಾ ಇತ್ಯಪಿ ಪಾಠಃ. ೧೧ ದ್ಯಾವಾಪೃಥಿವ್ಯೌ.

ಶಬ್ದಮಾಡುತ್ತವೆ. ದೇವದುಂದುಭಿಗಳ ಶಬ್ದವು ಆಕಾಶದಲ್ಲೂ ಭೂಮಿಯಲ್ಲೂ ವ್ಯಾಪಿಸಿದ್ದಿತೆಂದು ಭಾವವು.

**ತವ ದಿವ್ಯಧ್ವನಿಂ ಧೀರಮನುಕರ್ತುಮಿವೋದ್ಯತಾಃ ।**
**ಧ್ವನಂತಿ ಸುರತೂರ್ಯಾಣಾಂ ಕೋಟಯೋ[1]ರ್ಧತ್ರಯೋದಶ ॥ ೫೮ ॥**

ಹನ್ನೆರಡುವರೆಕೋಟಿದೇವವಾದ್ಯಗಳು, ನಿನ್ನ ಗಂಭೀರವಾದ ದಿವ್ಯಧ್ವನಿಯನ್ನು ಅನುಕರಣಮಾಡುವುದಕ್ಕೋಸ್ಕರ ಪ್ರಯತ್ನಪಟ್ಟಿವೆಯೋ ಎಂಬಂತೆ, ಶಬ್ದಮಾಡುತ್ತವೆ.

**ಸುರೈರಿಯಂ [2]ನಭೋರಂಗಾತ್ಪುಷ್ಪವೃಷ್ಟಿರ್ವಿತನ್ಯತೇ ।**
**ತುಷ್ಟಯಾ ಸ್ವರ್ಗಲಕ್ಷ್ಮ್ಯೇವ ಚೋದಿತೈಃ ಕಲ್ಪಶಾಖಿಭಿಃ ॥ ೫೯ ॥**

ಸಂತುಷ್ಟಳಾದ ಸ್ವರ್ಗಲಕ್ಷ್ಮಿಯಿಂದ ಪ್ರೇರಿತಗಳಾದ ಕಲ್ಪವೃಕ್ಷಗಳೋ ಎಂಬಂತೆ, ದೇವತೆಗಳು ಆಕಾಶವೆಂಬ ರಂಗಸ್ಥಾನದಿಂದ ಈ ಪುಷ್ಪವೃಷ್ಟಿಯನ್ನು ಮಾಡುತ್ತಾರೆ.

**ತವ ದೇಹಪ್ರಭೋತ್ಸರ್ಪಃ ಸಮಾಕ್ರಾಮನ್ನಭೋಭಿತಃ ।**
**ಶಶ್ವತ್ಪ್ರಭಾತಮಾಸ್ಥಾನೀಜನಾನಾಂ ಜನಯತ್ಯಲಮ್ ॥ ೬೦ ॥**

ಆಕಾಶದ ಸುತ್ತಲೂ ವ್ಯಾಪಿಸಿರುವ ನಿನ್ನ ಶರೀರದಕಾಂತಿಯು ಸಮವಸರಣದಲ್ಲಿರುವ ಜನರಿಗೆ ಯಾವಾಗಲೂ ಪ್ರಾತಃಕಾಲವೆಂಬ ಬುದ್ಧಿಯನ್ನುಂಟುಮಾಡುತ್ತದೆ.

**ನಖಾಂಶವಸ್ತವಾತಾಮ್ರಾಃ ಪ್ರಸರಂತಿ ದಿಶಾಸ್ವಮೀ ।**
**ತ್ವದಂಘ್ರಿಕಲ್ಪವೃಕ್ಷಾಗ್ರಾತ್ಪ್ರರೋಹಾ ಇವ ನಿಃಸೃತಾಃ ॥ ೬೧ ॥**

ಬಹಳ ಕೆಂಪಾಗಿರುವ ನಿನ್ನ ಈ ಉಗುರುಗಳ ಕಿರಣಗಳು, ನಿನ್ನ ಕಾಲುಗಳೆಂಬ ಕಲ್ಪವೃಕ್ಷಗಳ ತುದಿಯಿಂದ ಹೊರಟಿರುವ ಅಂಕುರಗಳೋ ಎಂಬಂತೆ, ದಿಕ್ಕುಗಳಲ್ಲಿ ಹರಡಿಕೊಂಡಿರುತ್ತವೆ.

**ಶಿರಸ್ಸು ನಃ ಸ್ಪೃಶಂತ್ಯೇತೆ ಪ್ರಸಾದಸ್ಯೇವ ತೇಂಶಕಾಃ ।**
**ತ್ವತ್ಪಾದನಖಶೀತಾಂಶುಕರಾಃ ಪ್ರಾಹ್ಲಾದಿತಾಖಿಲಾಃ ॥ ೬೨ ॥**

ಎಲ್ಲರನ್ನೂ ಆನಂದಗೊಳಿಸುವ ನಿನ್ನ ಈ ಪಾದದ ಉಗುರೆಂಬ ಚಂದ್ರನ ಕಿರಣಗಳು, ನಿನ್ನ ಪ್ರಸನ್ನತೆಯ ಅಂಶಗಳೋ ಎಂಬಂತೆ, ನಮ್ಮ ಮಸ್ತಕಗಳನ್ನು ಸ್ಪರ್ಶಿಸುತ್ತವೆ. ಮಸ್ತಕಗಳ ಮೇಲೆ ಸ್ವಾಮಿಯ ಪಾದಗಳ ಉಗುರಿನ ಕಾಂತಿಯು ಬಿದ್ದಿರುವುದೆಂದು ಭಾವವು.

**ತ್ವತ್ಪಾದಾಂಬುರುಹಚ್ಛಾಯಾಸರಸೀಮವಗಾಹತೇ ।**
**ದಿವ್ಯಶ್ರೀಕಲಹಂಸೀಯಂ ನಖರೋಚಿರ್ಮೃಣಾಲಿಕಾಮ್ ॥ ೬೩ ॥**

ಸ್ವರ್ಗಲಕ್ಷ್ಮಿಯೆಂಬ ಈ ಸ್ತ್ರೀಕಲಹಂಸಪಕ್ಷಿಯು ಉಗುರಿನ ಕಾಂತಿಯೆಂಬ ತಾವರೆಯ ದಂಟಿನ ನಾರುಳ್ಳ ನಿನ್ನ ಪಾದಕಮಲದ ನೆರಳೆಂಬ ಸರೋವರವನ್ನು ಪ್ರವೇಶಿಸುತ್ತಿದೆ. ಸ್ವರ್ಗದ ಶೋಭೆಗಿಂತಲೂ ಸ್ವಾಮಿಯ ಪಾದದ ಶೋಭೆಯು ಮಿಗಿಲಾದುದೆಂದೂ ಸ್ವರ್ಗಿಕರೆಲ್ಲ ಸ್ವಾಮಿಯ ಪಾದಸೇವಾಸಕ್ತರಾಗಿರುತ್ತಾರೆಂದೂ ಭಾವವು.

**ಮೋಹಾರಿಮರ್ದನಾಲಗ್ನಶೋಣಿತಾರ್ದ್ರಚ್ಛಟಾಮಿವ ।**
**ತಲಚ್ಛಾಯಾಮಿದಂ ಧತ್ತೇ ತ್ವತ್ಪದಾಂಬುರುಹದ್ವಯಮ್ ॥ ೬೪ ॥**

ನಿನ್ನ ಈ ಪಾದಕಮಲಗಳೆರಡು, ಮೋಹವೆಂಬ ಶತ್ರುವನ್ನು ನಾಶಮಾಡುವಾಗ ಸಂಬಂಧಿಸಿದ ರಕ್ತಧಾರೆಯನ್ನೋಪಾದಿಯಲ್ಲಿ, ಅಂಗಾಲಿನ ರಕ್ತಕಾಂತಿಯನ್ನು ಧರಿಸುತ್ತಿವೆ.

**ತ್ವತ್ಪಾದನಖಭಾಭಾರಸರಸೀಪ್ರತಿಬಿಂಬಿತಾಃ ।**
**ಸುರಾಂಗನಾನನಚ್ಛಾಯಾಸ್ತನ್ವತೇ ಪಂಕಜಶ್ರಿಯಮ್ ॥ ೬೫ ॥**

ನಿನ್ನ ಕಾಲಿನ ಉಗುರುಗಳ ಕಾಂತಿಯ ಸಮೂಹವೆಂಬ ಸರೋವರದಲ್ಲಿ ಪ್ರತಿಬಿಂಬಿಸಿರುವ ದೇವಸ್ತ್ರೀಯರ ಮುಖಗಳ ಕಾಂತಿಗಳು ತಾವರೆಗಳಂತೆ ತೋರುತ್ತವೆ.

**ಸ್ವಯಂಭವೇ ನಮಸ್ತುಭ್ಯ[1]ಮುತ್ಪಾದ್ಯಾತ್ಮಾನಮಾತ್ಮನಿ ।**
**ಸ್ವಾತ್ಮನ್ಯೇವ ತಥೋದ್ಭೂತವೃತ್ತಯೇಚಿಂತ್ಯವೃತ್ತಯೇ ॥ ೬೬ ॥**

ತಾನೇ ತನ್ನಲ್ಲಿ ಸ್ವಸ್ವರೂಪವನ್ನುಂಟುಮಾಡಿಕೊಂಡು ಸ್ವಯಂಭುವೆನಿಸಿರುವವನೂ ಆತ್ಮಲೀನತೆಯನ್ನು ಹೊಂದಿರುವವನೂ ಅಚಿಂತ್ಯವ್ಯಾಪಾರವುಳ್ಳವನೂ ಆದ ನಿನಗೆ ನಮಸ್ಕಾರವು.

**ನಮಸ್ತೇ ಜಗತಾಂ ಪತ್ಯೇ ಲಕ್ಷ್ಮೀಭರ್ತ್ರೇ ನಮೋಸ್ತು ತೇ ।**
**ವಿದಾಂವರ ನಮಸ್ತುಭ್ಯಂ ನಮಸ್ತೇ ವದತಾಂವರ ॥ ೬೭ ॥**

ಜ್ಞಾನಿಗಳಲ್ಲಿ ಶ್ರೇಷ್ಠನೂ ವಕ್ತೃಗಳಲ್ಲಿ ಶ್ರೇಷ್ಠನೂ ಆದ ಸ್ವಾಮಿಯೇ! ಸಕಲ ಲೋಕಪ್ರಭುವೂ ಲಕ್ಷ್ಮೀಪತಿಯೂ ಆದ ನಿನಗೆ ನಮಸ್ಕಾರವು.

**[2]ಕಾಮಶತ್ರುಹಣಂ ದೇವಮಾಮನಂತಿ ಮನೀಷಿಣಃ ।**
**ತ್ವಾಮಾನಮತ್ಸುರೋನ್ಮೌಲಿಭಾಮಾಲಾಭ್ಯರ್ಚಿತಕ್ರಮಮ್ ॥ ೬೮ ॥**

ಪ್ರಭುವೇ! ಪ್ರಾಜ್ಞರು, ನಮಸ್ಕರಿಸುವ ದೇವತೆಗಳ ಕಿರೀಟಗಳ ಕಾಂತಿಯ ಮಾಲೆಯಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ನೀನು ಕಾಮ-ಮೋಹವೆಂಬ ಶತ್ರುವನ್ನು ನಾಶಮಾಡಿದ ಸ್ವಾಮಿಯೆಂದು ಹೇಳುತ್ತಾರೆ.

**ಧ್ಯಾನ[3]ದ್ರುಘಣನಿರ್ಭಿನ್ನಘನಘಾತಿಮಹಾತರುಃ ।**
**ಅನಂತಭವಸಂತಾನಜಯಾದಾಸೀದನಂತಜಿತ್ ॥ ೬೯ ॥**

ಸ್ವಾಮಿಯೇ! ಧ್ಯಾನವೆಂಬ ಮುದ್ಗರದಿಂದ ಘಾತಿಕರ್ಮವೆಂಬ ಬಲವಾದ ಮರವನ್ನು ಕತ್ತರಿಸಿದ ತಾವು ಕೊನೆಯಿಲ್ಲದ ಭವಪರಂಪರೆಯನ್ನು ಜಯಿಸಿದುದರಿಂದ ಅನಂತಜಿತ್ ಎಂಬ ಹೆಸರನ್ನು ಪಡೆದಿರುತ್ತೀರಿ.

**ತ್ರೈಲೋಕ್ಯನಿರ್ಜಯಾವಾಪ್ತದುರ್ದರ್ಪಮತಿದುರ್ಜಯಮ್ ।**
**ಮೃತ್ಯುರಾಜಂ ವಿಜಿತ್ಯಾಸೀಜ್ಜಿನ ಮೃತ್ಯುಂಜಯೋ ಭವಾನ್ ॥ ೭೦ ॥**

ಜಿನೇಶ್ವರನೇ! ನೀನು ಮೂರು ಲೋಕವನ್ನು ಜಯಿಸಿದುದರಿಂದುಂಟಾದ ದುರಹಂಕಾರವುಳ್ಳವನೂ ಜಯಿಸುವುದಕ್ಕೆ ಕಷ್ಟಸಾಧ್ಯನೂ ಆದ ಮೃತ್ಯುರಾಜನನ್ನು ಜಯಿಸಿ ಮೃತ್ಯುಂಜಯನೆಂಬ ಹೆಸರುಳ್ಳವನಾದೆ.

**ವಿಧುತಾಶೇಷಸಂಸಾರಬಂಧನೋ ಭವ್ಯಬಾಂಧವಃ ।**
**ತ್ರಿಪುರಾರಿಸ್ತ್ವಮೀಶಾಸಿ ಜನ್ಮಮೃತ್ಯುಜರಾಂತಕೃತ್ ॥ ೭೧ ॥**

ಸಮಸ್ತ ಸಂಸಾರಬಂಧನವನ್ನು ನಾಶಮಾಡಿದವನೂ ಭವ್ಯಪ್ರಾಣಿಗಳ ಬಂಧುವೂ ಜನ್ಮಜರಾಮರಣಗಳನ್ನು ನಾಶಮಾಡಿದ ಸ್ವಾಮಿಯೂ ಆದ ನೀನು ತ್ರಿಪುರಾಂತಕನಾಗಿರುವೆ.

**ತ್ರಿಕಾಲವಿಷಯಾಶೇಷತತ್ತ್ವಭೇದಾತ್ತ್ರಿಧೋತ್ಥಿತಮ್ ।**
**ಕೇವಲಾಖ್ಯಂ ದಧಚ್ಚಕ್ಷುಸ್ತ್ರಿನೇತ್ರೋಸಿ ತ್ವ[4]ಮೀಶಿತಃ ॥ ೭೨ ॥**

ಸ್ವಾಮಿಯೇ! ನೀನು ಭೂತ, ವರ್ತಮಾನ, ಭವಿಷ್ಯತ್‌ಗಳೆಂಬ ತ್ರಿಕಾಲ ಸಂಬಂಧವಾದ ಸಮಸ್ತ ವಿಷಯಗಳನ್ನೂ ತಿಳಿದುದರಿಂದ ವಿಷಯಭೇದದಿಂದ ತ್ರಿವಿಧವಾಗಿ ಉಂಟಾದ ಕೇವಲಜ್ಞಾನವೆಂಬ ಕಣ್ಣನ್ನು ಧರಿಸಿ ತ್ರಿನೇತ್ರನೆನಿಸಿಕೊಂಡಿರುವೆ.

---

೧ ಸಾರ್ಧದ್ವಾದಶ. ೨ ನಭೋರಂಧ್ರಾದಿತ್ಯಪಿ ಪಾಠಃ.

೧ ಸಂಪಾದ್ಯ. ೨ ಕಾಮಾರಿಘ್ನಂ. ೩ ಮುದ್ಗರ. ೪ ಭೋನಾಥ.

**ತ್ವಾ[೧]ಮಂತಕಾಂತಕಂ ಪ್ರಾಹುರ್ಮೋಹಾಂಧಾಸುರಮರ್ದನಾತ್ ।**
**ಅರ್ಧಂ ತೇ ನಾರಯೋ ಯಸ್ಮಾದರ್ಧನಾರೀಶ್ವರೋಸ್ಯತಃ ॥ ೭೩ ॥**

ಪ್ರಭುವೇ! ನೀನು ಮೋಹವೆಂಬ ಅಂಧಾಸುರನನ್ನು ಮರ್ದಿಸಿರುವುದರಿಂದ ನಿನ್ನನ್ನು ಅಂತಕಾಂತಕನೆಂದು ಕರೆಯುತ್ತಾರೆ. ನಿನಗೆ ಅರ್ಧಶತ್ರುಗಳು ಅಂದರೆ ಎಂಟು ಕರ್ಮಗಳಲ್ಲಿ ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತ ರಾಯಗಳೆಂಬ ಘಾತಿಕರ್ಮಶತ್ರುಗಳಿಲ್ಲದಿರುವುದರಿಂದ ನೀನು ಅರ್ಧನಾರೀಶ್ವರ (ಅರ್ಧ + ನ + ಅರಿ + ಈಶ್ವರ)ನಾಗಿರುತ್ತೀಯೆ.

**ಶಿವಃ ಶಿವಪದಾಧ್ಯಾಸಾದ್ದುರಿತಾರಿಹರೋ ಹರಃ ।**
**ಶಂಕರಃ ಕೃತಶಂ ಲೋಕೇ ಶಂಭವಸ್ತ್ವಂ ಭವನ್ಸುಖೇ ॥ ೭೪ ॥**

ಸ್ವಾಮಿಯೇ! ನೀನು ಮಂಗಳಕರವಾದ ಸ್ಥಾನದಲ್ಲಿರುವುದರಿಂದ ಶಿವನೂ ಕರ್ಮಶತ್ರುವನ್ನು ನಾಶಮಾಡಿರುವುದರಿಂದ ಹರನೂ ಲೋಕದಲ್ಲಿ ಸುಖವನ್ನುಂಟು ಮಾಡಿರುವುದರಿಂದ ಶಂಕರನೂ ಸುಖದಲ್ಲಿರುವುದರಿಂದ ಶಂಭವನೂ ಆಗಿರು ತ್ತೀಯೆ.

**ವೃಷಭೋಸಿ ಜಗಜ್ಜ್ಯೇಷ್ಠಃ ಪುರುಃ ಪುರುಗುಣೋದಯೈಃ ।**
**ನಾಭೇಯೋ ನಾಭಿಸಂಭೂತೇರಿಕ್ಷ್ವಾಕುಕುಲನಂದನಃ ॥ ೭೫ ॥**

ನೀನು ಲೋಕದಲ್ಲಿ ಶ್ರೇಷ್ಠನಾಗಿರುವುದರಿಂದ ವೃಷಭನೂ ಉತ್ತಮಗುಣಗಳಿಂದ ಪುರುವೂ (ಪುರುವೆಂಬ ಹೆಸರುಳ್ಳವನೂ) ನಾಭಿರಾಜಮನುವಿನ ಪುತ್ರನಾಗಿರುವುದ ರಿಂದ ನಾಭೇಯನೂ ಇಕ್ಷ್ವಾಕುವಂಶೋದ್ಧಾರಕನೂ ಆಗಿರುತ್ತೀಯೆ.

**ತ್ವಮೇಕಃ [೨]ಪುರುಷಸ್ಕಂಧಸ್ತ್ವಂ ದ್ವೇ ಲೋಕಸ್ಯ ಲೋಚನೆ ।**
**ತ್ವಂ [೩]ತ್ರಿಧಾ ಬುದ್ಧಸನ್ಮಾರ್ಗಸ್ತ್ರಿಜ್ಞಸ್ತ್ರಿಜ್ಞಾನಧಾರಕಃ ॥ ೭೬ ॥**

ನೀನೊಬ್ಬನೆ ಪುರುಷರಲ್ಲಿ ಶ್ರೇಷ್ಠನಾದವನು. ನೀನು ಲೋಕಕ್ಕೆರಡು ಕಣ್ಣುಗಳಂ ತಿರುವವನು. ನೀನು ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳಿಂದ ಮೂರುಪ್ರಕಾರವಾಗಿ ಮೋಕ್ಷಮಾರ್ಗವನ್ನು ತಿಳಿದವನೂ ತ್ರಿಕಾಲವಿಷಯಗಳನ್ನು ತಿಳಿದವನೂ ಮತಿ ಶ್ರುತ ಅವಧಿ ಅಥವಾ ಅವಧಿ ಮನಃಪರ್ಯಯ ಕೇವಲಗಳೆಂಬ ಮೂರು ವಿಧವಾದ ಜ್ಞಾನಗಳುಳ್ಳವನೂ ಆಗಿರುತ್ತೀಯೆ.

**ಚತುಃಶರಣಮಾಂಗಲ್ಯಮೂರ್ತಿಸ್ತ್ವಂ [೪]ಚತುರಸ್ರಧೀಃ ।**
**ಪಂಚಬ್ರಹ್ಮಮಯೋ ದೇವ ಪಾವನಸ್ತ್ವಂ ಪುನೀಹಿ ಮಾಮ್ ॥ ೭೭ ॥**

ಸ್ವಾಮಿಯೇ! ಅರಹಂತ ಸಿದ್ಧ ಸಾಧು ಧರ್ಮಗಳೆಂಬ ನಾಲ್ಕು ಮಂಗಲ ಸ್ವರೂಪನೂ ಸಂಪೂರ್ಣ ಬುದ್ಧಿಯುಳ್ಳವನೂ ಅಥವಾ ಮತಿ ಶ್ರುತ ಅವಧಿ ಮನಃ ಪರ್ಯಯಗಳೆಂಬ ನಾಲ್ಕು ಜ್ಞಾನಗಳುಳ್ಳವನೂ ಅರ್ಹತ್ಸಿದ್ಧಾಚಾರ್ಯೋಪಾ ಧ್ಯಾಯ ಸಾಧುಗಳೆಂಬ ಪಂಚಪರಮೇಷ್ಠಿಸ್ವರೂಪನೂ ಪವಿತ್ರನೂ ಆದ ನೀನು ನನ್ನನ್ನು ಪವಿತ್ರಮಾಡು.

**ಸ್ವರ್ಗಾವತರಣೇ ತುಭ್ಯಂ ಸದ್ಯೋಜಾತಾತ್ಮನೇ ನಮಃ ।**
**ಜನ್ಮಾಭಿಷೇಕ[೫]ವಾಮಾಯ ವಾಮದೇವ ನಮೋಸ್ತು ತೇ ॥ ೭೮ ॥**

ಸುಂದರನಾದ ಸ್ವಾಮಿಯೇ! ನೀನು ಸ್ವರ್ಗದಿಂದ ಅವತರಿಸುವ ಕಾಲದಲ್ಲಿ ಆಗತಾನೆ ಹುಟ್ಟಿದ-ಸದ್ಯೋಜಾತಸ್ವರೂಪನೂ ಜನ್ಮಾಭಿಷೇಕ ಸಮಯದಲ್ಲಿ ಸುಂದ ರನೂ ಆದ ನಿನಗೆ ನಮಸ್ಕಾರವು.

**[೬]ಸನ್ನಿಷ್ಕ್ರಾಂತಾವಘೋರಾಯ ಪರಂ ಪ್ರಶಮಮೀಯುಷೇ ।**
**ಕೇವಲಜ್ಞಾನಸಂಸಿದ್ಧಾವೀಶಾನಾಯ ನಮೋಸ್ತು ತೇ ॥ ೭೯ ॥**

೧ ಅಂಧಕಾಂತಕಮಿತ್ಯಪಿ. ೨ ಧೌರೇಯ ಇತ್ಯರ್ಥಃ. ೩ ರತ್ನತ್ರಯರೂಪೇಣ ಜ್ಞಾತಮೋಕ್ಷಮಾರ್ಗಃ. ೪ ಸಂಪೂರ್ಣಬುದ್ಧಿಃ. ೫ ಮನೋಹರಾಯ. ೬ ಸುನಿಷ್ಕ್ರಾಂತಾವಿತ್ಯಪಿ.

ವೈರಾಗ್ಯದಿಂದ ದೀಕ್ಷೆಗೆ ಹೊರಟುಹೋದ ಕಾಲದಲ್ಲಿ ಅಂದರೆ ಪರಿನಿಷ್ಕ್ರಮಣ ಕಲ್ಯಾಣಕಾಲದಲ್ಲಿ ಶಾಂತಮೂರ್ತಿಯೂ ಪರಮ ಶಾಂತಭಾವವನ್ನು ಹೊಂದಿದ ವನೂ ಕೇವಲಜ್ಞಾನಪ್ರಾಪ್ತಿಯಲ್ಲಿ ಸಮರ್ಥನೂ ಆದ ನಿನಗೆ ನಮಸ್ಕಾರವಿರಲಿ.

**[೧]ಪುರಸ್ತತ್ಪುರುಷತ್ವೇನ ವಿಮುಕ್ತಿಪದಭಾಗಿನೇ ।**
**ನಮಸ್ತತ್ಪುರುಷಾವಸ್ಥಾಂ ಭಾವಿನೀಂ ತೇದ್ಯ ಬಿಭ್ರತೇ ॥ ೮೦ ॥**

ಮುಂದೆ ಶುದ್ಧಾತ್ಮಸ್ವರೂಪದಿಂದ ಮುಕ್ತಿಪದವಿಯನ್ನು ಹೊಂದುವವನೂ ಮುಂದೆ ಉಂಟಾಗುವ ಪರಮಾತ್ಮಾವಸ್ಥೆಯನ್ನು ಇಂದು ಧರಿಸಿರುವವನೂ ಆದ ನಿನಗೆ ನಮಸ್ಕಾರವು.

**ಜ್ಞಾನಾವರಣನಿರ್ಹ್ರಾಸಾ[೨]ನ್ನಮಸ್ತೇನಂತಚಕ್ಷುಷೇ ।**
**ದರ್ಶನಾವರಣೋಚ್ಛೇದಾನ್ನಮಸ್ತೇ ವಿಶ್ವದೃಶ್ವನೇ ॥ ೮೧ ॥**

ಆತ್ಮನ ಜ್ಞಾನಗುಣವನ್ನು ಮರೆಮಾಡುವ ಜ್ಞಾನಾವರಣಕರ್ಮದ ನಾಶದಿಂದ ಅನಂತಚಕ್ಷು-ಅನಂತಜ್ಞಾನಿಯೂ ದರ್ಶನಗುಣವನ್ನು ಮರೆಮಾಡುವ ದರ್ಶನಾ ವರಣಕರ್ಮದ ನಾಶದಿಂದ ವಿಶ್ವದರ್ಶಿಯೂ ಆದ ನಿನಗೆ ನಮಸ್ಕಾರವು.

**ನಮೋ ದರ್ಶನಮೋಹಘ್ನೇ ಕ್ಷಾಯಿಕಾಮಲದೃಷ್ಟಯೇ ।**
**ನಮಶ್ಚಾರಿತ್ರಮೋಹಘ್ನೇ ವಿರಾಗಾಯ ಮಹೌಜಸೇ ॥ ೮೨ ॥**

ದರ್ಶನಮೋಹನೀಯವೆಂಬ ಕರ್ಮವನ್ನು ನಾಶಮಾಡಿ ಕ್ಷಾಯಿಕಸಮ್ಯಕ್ತ್ವವನ್ನು ಪಡೆದವನೂ ಚಾರಿತ್ರಮೋಹನೀಯವೆಂಬ ಕರ್ಮವನ್ನು ನಾಶಮಾಡಿ ಕ್ಷಾಯಿಕ ಚಾರಿತ್ರವನ್ನು ಪಡೆದವನೂ ಮಹಾತೇಜಸ್ವಿಯೂ ಆದ ನಿನಗೆ ನಮಸ್ಕಾರವು.

**ನಮಸ್ತೇನಂತವೀರ್ಯಾಯ ನಮೋನಂತಸುಖಾತ್ಮನೇ ।**
**ನಮಸ್ತೇನಂತಲೋಕಾಯ ಲೋಕಾಲೋಕಾವಲೋಕಿನೇ ॥ ೮೩ ॥**

ಅನಂತಶಕ್ತಿಯುಳ್ಳವನೂ ಅನಂತಸುಖವುಳ್ಳವನೂ ಅನಂತಜ್ಞಾನವುಳ್ಳವನೂ ಲೋಕಾಲೋಕಗಳನ್ನು ನೋಡುವವನೂ ಅಂದರೆ ಅನಂತದರ್ಶನವುಳ್ಳವನೂ ಆದ ನಿನಗೆ ನಮಸ್ಕಾರವು.

**ನಮಸ್ತೇನಂತದಾನಾಯ ನಮಸ್ತೇನಂತ[೩]ಲಬ್ಧಯೇ ।**
**ನಮಸ್ತೇನಂತಭೋಗಾಯ ನಮೋನಂತೋಪಭೋಗ ತೇ ॥ ೮೪ ॥**

ದಾನಾಂತರಾಯವೆಂಬ ಕರ್ಮದ ನಾಶದಿಂದುಂಟಾದ ಅನಂತದಾನಗುಣ ವುಳ್ಳವನೂ ಅನಂತಲಾಭವುಳ್ಳವನೂ ಅನಂತವಾದ ಭೋಗೋಪಭೋಗಗಳುಳ್ಳ ವನೂ ಆದ ನಿನಗೆ ನಮಸ್ಕಾರವು.

**ನಮಃ ಪರಮಯೋಗಾಯ ನಮಸ್ತುಭ್ಯಮಯೋನಯೇ ।**
**ನಮಃ ಪರಮಪೂತಾಯ ನಮಸ್ತೇ ಪರಮರ್ಷಯೇ ॥ ೮೫ ॥**

ಉತ್ಕೃಷ್ಟ ಧ್ಯಾನವುಳ್ಳವನೂ ಉತ್ಪತ್ತಿರಹಿತನೂ (ಸ್ವತಃಸಿದ್ಧನೂ) ಪರಮ ಪವಿತ್ರನೂ ಪರಮರ್ಷಿಯೂ ಆದ ನಿನಗೆ ನಮಸ್ಕಾರವು.

**ನಮಃ [೪]ಪರಮವಿದ್ಯಾಯ ನಮಃ ಪರಮತಚ್ಛಿದೇ ।**
**ನಮಃ ಪರಮತತ್ತ್ವಾಯ ನಮಸ್ತೇ ಪರಮಾತ್ಮನೇ ॥ ೮೬ ॥**

ಶ್ರೇಷ್ಠವಾದ ವಿದ್ಯಾ-ಕೇವಲಜ್ಞಾನವುಳ್ಳವನೂ ಪರಮತವನ್ನು ಅಂದರೆ ಮಿಥ್ಯಾ ಮತವನ್ನು ಖಂಡಿಸುವವನೂ ಉತ್ಕೃಷ್ಟತತ್ತ್ವಸ್ವರೂಪನೂ ಪರಮಾತ್ಮನೂ ಆದ ನಿನಗೆ ನಮಸ್ಕಾರವು.

**ನಮಃ ಪರಮರೂಪಾಯ ನಮಃ ಪರಮತೇಜಸೇ ।**
**ನಮಃ ಪರಮ[೫]ಮಾರ್ಗಾಯ ನಮಸ್ತೇ [೬]ಪರಮೇಷ್ಠಿನೇ ॥ ೮೭ ॥**

೧ ಪುರಸ್ತಾದಿತ್ಯಪಿ, ಅಗ್ರೇ ಇತ್ಯರ್ಥಃ. ೨ ನಿರ್ನಾಶಾತ್. ೩ ಲಾಭಾಯ. ೪ ಕೇವಲಜ್ಞಾನಾಯ. ೫ ರತ್ನತ್ರಯರೂಪಮಾರ್ಗಾಯ. ೬ ಪರಮಪದಸ್ಥಿತಾಯ.

ಲೋಕೋತ್ತರಸೌಂದರ್ಯವುಳ್ಳವನೂ ತೇಜಸ್ವಿಯೂ ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬ ಉತ್ಕೃಷ್ಟಮೋಕ್ಷಮಾರ್ಗಸ್ವರೂಪನೂ ಪರಮಪದವಿಯಲ್ಲಿರುವವನೂ ಆದ ನಿನಗೆ ನಮಸ್ಕಾರವು.

**ಪರಮಂ ಭೇಜುಷೇ ಧಾಮ ಪರಮಜ್ಯೋತಿಷೇ ನಮಃ ।**
**ನಮಃ [೧]ಪಾರೇತಮಃಪ್ರಾಪ್ತಧಾಮ್ನೇ ಪರತರಾತ್ಮನೇ ॥ ೮೮ ॥**

ಮುಕ್ತಿರೂಪವಾದ ಪರಮಪದವಿಯನ್ನು ಹೊಂದುವವನೂ ಉತ್ಕೃಷ್ಟ ಜ್ಯೋತಿಸ್ವರೂಪನೂ ಅಜ್ಞಾನಾಂಧಕಾರವನ್ನು ನಾಶಮಾಡಿ ಆತ್ಮತೇಜಸ್ಸನ್ನು ಹೊಂದಿದವನೂ ಉತ್ಕೃಷ್ಟಾತ್ಮನೂ ಆದ ನಿನಗೆ ನಮಸ್ಕಾರವು.

**ನಮಃ ಕ್ಷೀಣಕಲಂಕಾಯ ಕ್ಷೀಣಬಂಧ ನಮೋಸ್ತು ತೇ ।**
**ನಮಸ್ತೇ ಕ್ಷೀಣಮೋಹಾಯ ಕ್ಷೀಣದೋಷಾಯ ತೇ ನಮಃ ॥ ೮೯ ॥**

ಕರ್ಮಬಂಧನವನ್ನು ನಾಶಮಾಡಿದ ಸ್ವಾಮಿಯೇ ! ಕರ್ಮಕಲಂಕವನ್ನೂ ಮೋಹವನ್ನೂ ದೋಷವನ್ನೂ ದೂರಮಾಡಿದ ನಿನಗೆ ನಮಸ್ಕಾರವು.

**ನಮಃ ಸುಗತಯೇ ತುಭ್ಯಂ ಶೋಭನಾಂ ಗತಿಮೀಯುಷೇ ।**
**ನಮಸ್ತೇತೀಂದ್ರಿಯಜ್ಞಾನಸುಖಾಯಾನಿಂದ್ರಿಯಾತ್ಮನೇ ॥ ೯೦ ॥**

ಶ್ರೇಷ್ಠವಾದ ಮೋಕ್ಷಗತಿಯುಳ್ಳವನೂ ಮಂಗಲಕರವಾದ ಮೋಕ್ಷಗತಿಯನ್ನು ಹೊಂದಿದವನೂ ಅತೀಂದ್ರಿಯವಾದ ಜ್ಞಾನಸುಖಗಳುಳ್ಳವನೂ ಇಂದ್ರಿಯರಹಿತವಾದ ಆತ್ಮನೂ ಆದ ನಿನಗೆ ನಮಸ್ಕಾರವು.

**ಕಾಯಬಂಧನನಿರ್ಮೋಕ್ಷಾದಕಾಯಾಯ ನಮೋಸ್ತು ತೇ ।**
**ನಮಸ್ತುಭ್ಯಮಯೋಗಾಯ ಯೋಗಿನಾಮಧಿಯೋಗಿನೇ ॥ ೯೧ ॥**

ಶರೀರವೆಂಬ ಬಂಧನವು ಬಿಡುಗಡೆಯಾದುದರಿಂದ ಶರೀರರಹಿತನೂ ಮನೋವಾಕ್ಕಾಯವ್ಯಾಪಾರರಹಿತನೂ ಯೋಗಿಗಳಲ್ಲೆಲ್ಲ ಶ್ರೇಷ್ಠಯೋಗಿಯೂ ಆದ ನಿನಗೆ ನಮಸ್ಕಾರವು.

**ಅವೇದಾಯ ನಮಸ್ತುಭ್ಯಮಕಷಾಯಾಯ ತೇ ನಮಃ ।**
**ನಮಃ ಪರಮಯೋಗೀಂದ್ರವಂದಿತಾಂಘ್ರಿದ್ವಯಾಯ ತೇ ॥ ೯೨ ॥**

ಸ್ತ್ರೀಪುಂನಪುಂಸಕವೇದರಹಿತನೂ ಕ್ರೋಧ ಮಾನ ಮಾಯಾ ಲೋಭ ಮೊದಲಾದ ಕಷಾಯರಹಿತನೂ ಪರಮಯೋಗೀಂದ್ರರಿಂದ ವಂದಿಸಲ್ಪಟ್ಟ ಪಾದಯುಗ್ಮವುಳ್ಳವನೂ ಆದ ನಿನಗೆ ನಮಸ್ಕಾರವು.

**ನಮಃ ಪರಮವಿಜ್ಞಾನ ನಮಃ ಪರಮಸಂಯಮ ।**
**ನಮಃ ಪರಮದೃಗ್ದೃಷ್ಟಪರಮಾರ್ಥಾಯ [೨]ತಾಯಿನೇ ॥ ೯೩ ॥**

ಶ್ರೇಷ್ಠವಾದ ಜ್ಞಾನವುಳ್ಳವನೂ ಉತ್ಕೃಷ್ಟವಾದ ಇಂದ್ರಿಯನಿಗ್ರಹ, ಪ್ರಾಣಿದಯಾಭಾವಗಳುಳ್ಳವನೂ ಕೇವಲಜ್ಞಾನದೃಷ್ಟಿಯಿಂದ ಯಥಾರ್ಥಪದಾರ್ಥಗಳನ್ನು ನೋಡಿದವನೂ ಜಗದ್ರಕ್ಷಕನೂ ಆದ ನಿನಗೆ ನಮಸ್ಕಾರವು.

**ನಮಸ್ತುಭ್ಯ[೩]ಮಲೇಶ್ಯಾಯ ಶುದ್ಧಲೇಶ್ಯಾಂಶಕಸ್ಪೃಶೇ ।**
**ನಮೋ ಭವ್ಯೇತರಾವಸ್ಥಾವ್ಯತೀತಾಯ ವಿಮೋಕ್ಷಿಣೇ ॥ ೯೪ ॥**

ಕೃಷ್ಣ, ನೀಲ, ಕಪೋತ, ಪೀತ, ಪದ್ಮಲೇಶ್ಯೆಗಳೆಂಬ ಕಷಾಯಾನುರಂಜಿತ ಮನೋವಾಕ್ಕಾಯಪ್ರವೃತ್ತಿಯಿಲ್ಲದವನೂ ಶರೀರರೂಪವಾದ ದ್ರವ್ಯಶುಕ್ಲಲೇಶ್ಯೆಯುಳ್ಳವನೂ ಭವ್ಯ ಅಭವ್ಯನೆಂಬ ಸಂಕೇತವಿಲ್ಲದವನೂ ಮುಕ್ತಿಪ್ರಾಪ್ತನೂ ಆದ ನಿನಗೆ ನಮಸ್ಕಾರವು.

೧ ತಮಸಃ ಪಾರಂಪ್ರಾಪ್ತತೇಜಸೇ. ೨ ರಕ್ಷಕಾಯ. ೩ ಶುಕ್ಲಲೇಶ್ಯಾಂಮುಕ್ತ್ವಾ ಇತರ ಲೇಶ್ಯಾರಹಿತಾಯ.

**ಸಂಜ್ಞ್ಯಸಂಜ್ಞಿದ್ವಯಾವಸ್ಥಾವ್ಯತಿರಿಕ್ತಾಮಲಾತ್ಮನೇ ।**
**ನಮಸ್ತೇ [೧]ವೀತಸಂಜ್ಞಾಯ ನಮಃ ಕ್ಷಾಯಿಕದೃಷ್ಟಯೇ ॥ ೯೫ ॥**

ಸಂಜ್ಞಿಜೀವ ಅಸಂಜ್ಞಿಜೀವಗಳೆಂಬ ವ್ಯವಸ್ಥಾರಹಿತನಾದ ನಿರ್ಮಲಾತ್ಮನೂ ವಿಶೇಷವಾದ ಜ್ಞಾನವನ್ನು ಹೊಂದಿದವನೂ ಕ್ಷಾಯಿಕಸಮ್ಯಗ್ದೃಷ್ಟಿಯೂ ಆದ ನಿನಗೆ ನಮಸ್ಕಾರವು.

**ಅನಾಹಾರಾಯ ತೃಪ್ತಾಯ ನಮಃ ಪರಮಭಾಜುಷೇ ।**
**ವ್ಯತೀತಾಶೇಷದೋಷಾಯ ಭವಾಬ್ಧೇಃ ಪಾರಮಾಪುಷೇ ॥ ೯೬ ॥**

ಕವಲಾಹಾರರಹಿತನೂ ತೃಪ್ತನೂ ಉತ್ಕೃಷ್ಟ ಶೋಭೆಯುಳ್ಳವನೂ ಸಮಸ್ತ ದೋಷರಹಿತನೂ ಸಂಸಾರವೆಂಬ ಸಮುದ್ರದ ಪಾರವನ್ನು ಹೊಂದಿದವನೂ ಆದ ನಿನಗೆ ನಮಸ್ಕಾರವು.

**ಅಜರಾಯ ನಮಸ್ತುಭ್ಯಂ ನಮಸ್ತೇ [೨]ಸ್ತಾದಜನ್ಮನೇ ।**
**ಅಮೃತ್ಯವೇ ನಮಸ್ತುಭ್ಯಮಚಲಾಯಾ[೩]ಕ್ಷರಾತ್ಮನೇ ॥ ೯೭ ॥**

ಮುಪ್ಪಿಲ್ಲದವನೂ ಜನನಮರಣಗಳಿಲ್ಲದವನೂ ನಿಶ್ಚಲನೂ ನಾಶರಹಿತನೂ ಆದ ನಿನಗೆ ನಮಸ್ಕಾರವು.

**ಅಲಮಾಸ್ತಾಂ ಗುಣಸ್ತೋತ್ರಮನಂತಾಸ್ತಾವಕಾ ಗುಣಾಃ ।**
**ತ್ವಾಂ ನಾಮಸ್ಮೃತಿಮಾತ್ರೇಣ [೪]ಪರ್ಯುಪಾಸಿಸಿಷಾಮಹೇ ॥ ೯೮ ॥**

ಸ್ವಾಮಿಯೇ ! ನಿನ್ನ ಗುಣಗಳ ಸ್ತೋತ್ರವು ಸಾಕು. ನಿನ್ನ ಗುಣಗಳು ಅನಂತವಾಗಿರುತ್ತವೆ. ಆದುದರಿಂದ ನಿನ್ನ ನಾಮಸ್ಮರಣಮಾತ್ರದಿಂದ ನಿನ್ನ ಸೇವೆ–ಉಪಾಸನೆಯನ್ನು ಮಾಡಲಿಚ್ಛಿಸುತ್ತೇವೆ.

**ಪ್ರಸಿದ್ಧಾ[೫]ಷ್ಟಸಹಸ್ರೇದ್ಧಲಕ್ಷಣಂ ತ್ವಾಂ ಗಿರಾಂಪತಿಮ್ ।**
**ನಾಮ್ನಾ[೬]ಮಷ್ಟಸಹಸ್ರೇಣ [೭]ತೋಷ್ಟುಮೋಭೀಷ್ಟಸಿದ್ಧಯೇ ॥ ೯೯ ॥**

ಪ್ರಸಿದ್ಧವಾದ ಸಾವಿರದೆಂಟು ಲಕ್ಷಣಗಳಿಂದ ಶೋಭಿಸುತ್ತಿರುವವನೂ ಆಗಮಕ್ಕೆ ಪ್ರಭುವೂ ಆದ ನಿನ್ನನ್ನು ನಮ್ಮ ಅಭೀಷ್ಟಸಿದ್ಧಿಗೋಸ್ಕರ ಸಾವಿರದೆಂಟು ಹೆಸರುಗಳಿಂದ ಸ್ತೋತ್ರಮಾಡುತ್ತೇವೆ.

**ಶ್ರೀಮಾ[೮]ನ್ಸ್ವಯಂಭೂ[೯]ರ್ವೃಷಭಃ [೧೦]ಶಂಭವಃ [೧೧]ಶಂಭುರಾತ್ಮಭೂಃ ।**
**[೧೨]ಸ್ವಯಂಪ್ರಭಃ ಪ್ರಭುರ್ಭೋಕ್ತಾ ವಿಶ್ವಭೂರಪುನರ್ಭವಃ ॥ ೧೦೦ ॥**

೧ 'ಶ್ರೀಮಾನ್' ಅನಂತಜ್ಞಾನ ಮೊದಲಾದ ಅಂತರಂಗಲಕ್ಷ್ಮಿ(ಸಂಪತ್ತಿ)ಯೂ ಸಮವಸರಣ ಮೊದಲಾದ ಬಹಿರಂಗಲಕ್ಷ್ಮಿಯೂ ಉಳ್ಳವನು ೨ 'ಸ್ವಯಂಭೂಃ' ಪರೋಪದೇಶವಿಲ್ಲದೆ ತನ್ನಿಂದ ತಾನೇ ಸ್ವಸ್ವರೂಪ(ಕೈವಲ್ಯ)ವನ್ನು ಹೊಂದಿರುವವನು. ಮಂಗಲವನ್ನುಂಟುಮಾಡುವವನು. ತನ್ನ ಗುಣಗಳಿಂದ ವೃದ್ಧಿಯನ್ನು ಹೊಂದುವವನು. ನಿವೃತ್ತಿಮಾರ್ಗದಲ್ಲಿರುವವನು. ಕೇವಲಜ್ಞಾನದರ್ಶನಗಳಿಂದ ಲೋಕಾಲೋಕವನ್ನು ವ್ಯಾಪಿಸುವವನು. ಭವ್ಯರಿಗೆ ಸಂಪತ್ತಿಯನ್ನುಂಟುಮಾಡುವವನು. ಜೀವಗಳಿಗೆ ಜೀವನಾಭಿಪ್ರಾಯ(ಮಾರ್ಗ)ವನ್ನುಂಟುಮಾಡುವವನು. ಗುಣಪರ್ಯಾಯಗಳನ್ನು ತಿಳಿಯುವುದಕ್ಕೆ ಸಮರ್ಥನಾದವನು. ಯೋಗಿಗಳಿಗೆ ಪ್ರತ್ಯಕ್ಷರೂಪದಿಂದ ಪ್ರಾದುರ್ಭವಿಸುವವನು. ಊರ್ಧ್ವಗಮನಸ್ವಭಾವದಿಂದ ತ್ರಿಲೋ

೧ ವಿಶೇಷೇಣಪ್ರಾಪ್ತಸದ್ಜ್ಞಾನಾಯ. ೨ ಅಸ್ತು. ೩ ಅವಿನಶ್ವರಾಯ. ೪ ಉಪಾಸನಂ ಕರ್ತುಮಿಚ್ಛಾಮಃ. ೫ ಅಷ್ಟೋತ್ತರಸಹಸ್ರಮಿತ್ಯರ್ಥಃ. ೬ ಅಷ್ಟೋತ್ತರಸಹಸ್ರೇಣ. ೭ ಸ್ತುತಿಂಕುರ್ಮಃ. ೮ ಸ್ವಯಮಾತ್ಮನಾಭವತೀತಿ ॥ ಸತ್ತಾಯಾಂ ಮಂಗಲೇ ವೃದ್ಧೌ ನಿವಾಸೇ ವ್ಯಾಪ್ತಿಸಂಪದೋಃ । ಅಭಿಪ್ರಾಯೇ ಚ ಶಕ್ತೌ ಚ ಪ್ರಾದುರ್ಭಾವೇ ಗತೌಚಭೂಃ ॥ ೯ ವೃಷೇಣ ಧರ್ಮೇಣ ಭಾತೀತಿ । ವೃಷಭೋಯಂ ಜಗಜ್ಜ್ಯೇಷ್ಠೋ ವರ್ಷಿಷ್ಯತಿ ಜಗದ್ಧಿತಮ್ । ಧರ್ಮಾಮೃತಮಿತೀಂದ್ರಾಸ್ತಮಕಾರ್ಷುರ್ವೃಷಭಾಹ್ವಯಮ್ ॥ ವೃಷೋಹಿ ಭಗವಾನ್ ಧರ್ಮಸ್ತೇನ ಯದ್ಭವತಿ ತೀರ್ಥಕೃತ್ । ತತೋಯಂ ವೃಷಭಸ್ವಾಮೀತ್ಯಾಹುಸ್ತ್ವೇನಂ ಪುರಂದರಾಃ ॥ ಸ್ವರ್ಗಾವತರಣೇದೃಷ್ಟಃ ಸ್ವರ್ಗೇಸ್ಯ ವೃಷಭೋ ಯತಃ । ಜನನ್ಯಾತದಯಂ ದೇವೈರಾಹೂತೋ ವೃಷಭಾಖ್ಯಯಾ ॥ ೧೦ ಶಂ ಸುಖಂ ಭವತಿ ಯಸ್ಮಾದಿತಿ ಶಂಭವಃ. ೧೧ ಶಂ ಪರಮಾನಂದಲಕ್ಷಣಂ ಸುಖಂ ಭವತ್ಯಸ್ಮಾದಿತಿ ಶಂಭುಃ. ೧೨ ಸ್ವಯಂಪ್ರಕಾಶಕಃ.

ಕಾಗ್ರಕ್ಕೆ ಹೋಗುವವನು. ೩ 'ವೃಷಭಃ' ಅಹಿಂಸಾರೂಪವಾದ ಅಥವಾ ರತ್ನತ್ರಯ ರೂಪವಾದ ಧರ್ಮದಿಂದ ಶೋಭಿಸುವವನು. ೪ 'ಶಂಭವಃ' ಸುಖವನ್ನುಂಟು ಮಾಡುವವನು. ೫ 'ಶಂಭುಃ' ಪರಮಾನಂದರೂಪವಾದ ಸುಖಕ್ಕೆ ಕಾರಣನು. ೬ 'ಆತ್ಮಭೂಃ' ತನ್ನಿಂದ ತಾನೇ ಪರಮಾತ್ಮ ಸ್ವರೂಪವನ್ನು ಹೊಂದಿರುವವನು. ೭ 'ಸ್ವಯಂಪ್ರಭಃ' ಪರಪದಾರ್ಥಗಳ ಅಪೇಕ್ಷೆಯಿಲ್ಲದೆ ತಾನೇ ಪ್ರಕಾಶಿಸುವವನು. ೮ 'ಪ್ರಭುಃ' ಎಲ್ಲರಿಗೂ ಸಮರ್ಥನಾದ ಸ್ವಾಮಿಯು. ೯ 'ಭೋಕ್ತಾ' ಅನಂತ ಸುಖವನ್ನನುಭವಿಸುವವನು. ೧೦ 'ವಿಶ್ವಭೂಃ' ಕೇವಲಜ್ಞಾನ ಮೂಲಕ ಎಲ್ಲದ ರಲ್ಲೂ ಇರುವವನು. ೧೧ 'ಅಪುನರ್ಭವಃ' ಪುನಃ ಹುಟ್ಟದಿರುವವನು.

**ವಿಶ್ವಾತ್ಮಾ ವಿಶ್ವಲೋಕೇಶೋ ವಿಶ್ವತಶ್ಚಕ್ಷುರಕ್ಷರಃ ।**
**ವಿಶ್ವವಿದ್ವಿಶ್ವವಿದ್ಯೇಶೋ [೧]ವಿಶ್ವಯೋನಿರನಶ್ವರಃ ॥ ೧೦೧ ॥**

೧೨ 'ವಿಶ್ವಾತ್ಮಾ' ಸಮಸ್ತವನ್ನು ತಿಳಿಯುವ ಕೇವಲಜ್ಞಾನ ಸ್ವರೂಪನು. ೧೩ 'ವಿಶ್ವಲೋಕೇಶಃ' ಲೋಕಕ್ಕೆಲ್ಲ ಪ್ರಭುವು. ೧೪ 'ವಿಶ್ವತಶ್ಚಕ್ಷುಃ' ಎಲ್ಲದರಲ್ಲೂ ಕೇವಲದರ್ಶನವೆಂಬ ನೇತ್ರವುಳ್ಳವನು. ೧೫ 'ಅಕ್ಷರಃ' ನಾಶರಹಿತನು. ೧೬ 'ವಿಶ್ವವಿತ್' ಲೋಕವನ್ನೆಲ್ಲ ತಿಳಿಯುವವನು. ೧೭ 'ವಿಶ್ವವಿದ್ಯೇಶಃ' ಕೇವಲಜ್ಞಾನಕ್ಕೆ ಸ್ವಾಮಿಯು. ಸಮಸ್ತವಿದ್ಯೆಗಳಿಗೆ ಪ್ರಭುವು. ಶ್ರುತಕೇವಲಿಗಣಧರಕೇವಲಿಗಳಿಗೆ ಸ್ವಾಮಿಯು. ೧೮ 'ವಿಶ್ವಯೋನಿಃ' ಸಮಸ್ತವಸ್ತುಗಳಿಗೆ ಕಾರಣನು. ೧೯ 'ಅನಶ್ವರಃ' ನಾಶರಹಿತನು.

**ವಿಶ್ವದೃಶ್ವಾ ವಿಭುರ್ಧಾತಾ ವಿಶ್ವೇಶೋ ವಿಶ್ವಲೋಚನಃ ।**
**ವಿಶ್ವವ್ಯಾಪೀ ವಿಧಿರ್ವೇಧಾಃ ಶಾಶ್ವತೋ ವಿಶ್ವತೋಮುಖಃ ॥ ೧೦೨ ॥**

೨೦ 'ವಿಶ್ವದೃಶ್ವಾ' ಜ್ಞಾನಮೂಲಕ ಲೋಕವನ್ನೆಲ್ಲನೋಡಿದವನು. ೨೧ 'ವಿಭುಃ' ಜ್ಞಾನಮೂಲಕ ವ್ಯಾಪಕನು. ೨೨ 'ಧಾತಾ' ಲೋಕೋದ್ಧಾರಕನು. ೨೩ 'ವಿಶ್ವೇಶಃ' ಲೋಕಕ್ಕೆಲ್ಲ ಪ್ರಭುವು. ೨೪ 'ವಿಶ್ವಲೋಚನಃ' ಪ್ರಾಣಿಗಳಿಗೆಲ್ಲ ನೇತ್ರಸಮಾನನು. ೨೫ 'ವಿಶ್ವವ್ಯಾಪೀ' ಕೇವಲಜ್ಞಾನಮೂಲಕ ಲೋಕಾಲೋಕವನ್ನು ವ್ಯಾಪಿಸುವವನು. ಕೇವಲಸಮುದ್ಘಾತವೆಂಬ ಯೋಗದಲ್ಲಿ ಲೋಕವನ್ನು ವ್ಯಾಪಿಸುವವನು. ೨೬ 'ವಿಧಿಃ' ಕೇವಲಜ್ಞಾನಕಿರಣಗಳಿಂದ ಮೋಹಾಂಧಕಾರವನ್ನು ನಾಶಮಾಡುವವನು. ೨೭ 'ವೇಧಾಃ' ಸೃಷ್ಟಿಕರ್ತನು. ೨೮ 'ಶಾಶ್ವತಃ' ನಿತ್ಯನು. ೨೯ 'ವಿಶ್ವತೋಮುಖಃ' ಎಲ್ಲಾಕಡೆಗಳಲ್ಲೂ ತಿಳಿವಳಿಕೆ ಅಥವಾ ನಾಲ್ಕುಕಡೆಗಳಲ್ಲಿ ಮುಖವುಳ್ಳವನು.

**ವಿಶ್ವಕರ್ಮಾ ಜಗಜ್ಜ್ಯೇಷ್ಠೋ ವಿಶ್ವಮೂರ್ತಿ[೨]ರ್ಜಿನೇಶ್ವರಃ ।**
**ವಿಶ್ವದೃಗ್ವಿಶ್ವಭೂತೇಶೋ ವಿಶ್ವಜ್ಯೋತಿರನೀಶ್ವರಃ ॥ ೧೦೩ ॥**

೩೦ 'ವಿಶ್ವಕರ್ಮಾ' ಸಮಸ್ತದೇವತೆಗಳಲ್ಲಿ ಸೇವಾರೂಪವಾದ ಕ್ರಿಯೆಯನ್ನುಂಟುಮಾಡುವವನು ಅಥವಾ ಲೋಕದ ಜನರಿಗೆ ಜೀವನಕರವಾದ ಕಾರ್ಯವನ್ನುಂಟುಮಾಡಿದವನು. ೩೧ 'ಜಗಜ್ಜ್ಯೇಷ್ಠಃ' ಲೋಕಕ್ಕೆ ಶ್ರೇಷ್ಠನು. ೩೨ 'ವಿಶ್ವಮೂರ್ತಿಃ' ಸಮಸ್ತಭುವನದಿಂದಕೂಡಿದ ಶರೀರವುಳ್ಳವನು. ಜಗತ್ತನ್ನು ತಿಳಿಯುವ ಆತ್ಮನುಳ್ಳವನೆಂದರ್ಥವು. ೩೩ 'ಜಿನೇಶ್ವರಃ' ಕರ್ಮವನ್ನು ಜಯಿಸುವ ಜಿನರಿಗೆ ಪ್ರಭುವು. ೩೪ 'ವಿಶ್ವದೃಕ್' ಎಲ್ಲವನ್ನು ನೋಡುವವನು. ೩೫ 'ವಿಶ್ವಭೂತೇಶಃ' ಸಮಸ್ತಪ್ರಾಣಿಗಳಿಗೆ ಪ್ರಭುವು. ೩೬ 'ವಿಶ್ವಜ್ಯೋತಿಃ' ಲೋಕಾಲೋಕದಲ್ಲಿ ಕೇವಲದರ್ಶನವೆಂಬ ಜ್ಯೋತಿಯುಳ್ಳವನು ಅಥವಾ ಸಮಸ್ತಲೋಕಕ್ಕೆ ಲೋಚನನು. ೩೭ 'ಅನೀಶ್ವರಃ' ತನಗೆ ಈಶ್ವರನಿಲ್ಲದವನು. ತಾನೇ ಪ್ರಭುವೆಂದರ್ಥವು.

**ಜಿನೋ ಜಿಷ್ಣುರಮೇಯಾತ್ಮಾ [೩]ವಿಶ್ವರೀಶೋ ಜಗತ್ಪತಿಃ ।**
**[೪]ಅನಂತಜಿದಚಿಂತ್ಯಾತ್ಮಾ ಭವ್ಯಬಂಧುರಬಂಧನಃ ॥ ೧೦೪ ॥**

೩೮ 'ಜಿನಃ' ಕರ್ಮಶತ್ರುವನ್ನು ಜಯಿಸುವವನು. ೩೯ 'ಜಿಷ್ಣುಃ' ಜಯಶೀಲನು. ೪೦ 'ಅಮೇಯಾತ್ಮಾ' ಲೋಕಾಲೋಕವ್ಯಾಪಕವಾದ ಆತ್ಮನುಳ್ಳವನು. ೪೧ 'ವಿಶ್ವರೀಶಃ' ಪೃಥ್ವೀಪತಿಯು. ೪೨ 'ಜಗತ್ಪತಿಃ' ತ್ರಿಲೋಕಾಧಿಪತಿಯು. ೪೩ 'ಅನಂತಜಿತ್' ಸಂಸಾರವನ್ನು ಜಯಿಸಿದವನು. ೪೪ 'ಅಚಿಂತ್ಯಾತ್ಮಾ' ಅಚಿಂತ್ಯ ಸ್ವರೂಪವುಳ್ಳವನು. ೪೫ 'ಭವ್ಯಬಂಧುಃ' ಭವ್ಯಜೀವಗಳಿಗೆ ಉಪಕಾರಿಯು. ೪೬ 'ಅಬಂಧನಃ' ಕರ್ಮಬಂಧನರಹಿತನು.

**ಯುಗಾದಿಪುರುಷೋ ಬ್ರಹ್ಮಾ [೧]ಪಂಚಬ್ರಹ್ಮಮಯಃ [೨]ಶಿವಃ ।**
**[೩]ಪರಃ [೪]ಪರತರಃ ಸೂಕ್ಷ್ಮಃ ಪರಮೇಷ್ಠೀ ಸನಾತನಃ ॥ ೧೦೫ ॥**

೪೭ 'ಯುಗಾದಿಪುರುಷಃ' ಕೃತಯುಗದ ಆದಿಪುರುಷನು. ೪೮ 'ಬ್ರಹ್ಮಾ' ಕೇವಲಜ್ಞಾನಾದಿಗುಣಗಳಿಂದ ವೃದ್ಧಿಹೊಂದುವವನು. ೪೯ 'ಪಂಚಬ್ರಹ್ಮಮಯಃ' ಮತಿಶ್ರುತಾವಧಿಮನಃಪರ್ಯಯಕೇವಲಜ್ಞಾನಗಳಿಂದಾದವನು ಅಥವಾ ಪಂಚ ಪರಮೇಷ್ಠಿಸ್ವರೂಪನು. ೫೦ 'ಶಿವಃ' ಪರಮಾನಂದ-ಸುಖದಲ್ಲಿರುವವನು. ೫೧ 'ಪರಃ' ಪ್ರಾಣಿಗಳನ್ನು ಮೋಕ್ಷಸ್ಥಾನದಲ್ಲಿರಿಸುವವನು. ೫೨ 'ಪರತರಃ' ಧರ್ಮೋಪದೇಶವನ್ನು ಮಾಡುವುದರಿಂದ ಸಿದ್ಧಪರಮೇಷ್ಠಿಗಿಂತಲೂ ಉತ್ಕೃಷ್ಟನು. ೫೩ 'ಸೂಕ್ಷ್ಮಃ' ಇಂದ್ರಿಯಗಳಿಗೆ ಗೋಚರವಾಗದಿರುವವನು. ೫೪ 'ಪರಮೇಷ್ಠೀ' ಇಂದ್ರಾದಿವಂದಿತವಾದ ಸ್ಥಾನದಲ್ಲಿರುವವನು. ೫೫ 'ಸನಾತನಃ' ಯಾವಾಗಲೂ ಇರುವವನು.

**ಸ್ವಯಂಜ್ಯೋತಿರಜೋಜನ್ಮಾ [೫]ಬ್ರಹ್ಮಯೋನಿರಯೋನಿಜಃ ।**
**[೬]ಮೋಹಾರಿರ್ವಿಜಯೀ [೭]ಜೇತಾ ಧರ್ಮಚಕ್ರೀ ದಯಾಧ್ವಜಃ ॥ ೧೦೬ ॥**

೫೬ 'ಸ್ವಯಂಜ್ಯೋತಿಃ' ಸ್ವತಃ ಪ್ರಕಾಶಸ್ವರೂಪನು. ೫೭ 'ಅಜಃ' ಉತ್ಪತ್ತಿ ರಹಿತನು. ೫೮ 'ಅಜನ್ಮಾ' ಗರ್ಭವಾಸದಲ್ಲಿ ಉತ್ಪತ್ತಿರಹಿತನು. ೫೯ 'ಬ್ರಹ್ಮ ಯೋನಿಃ' ತಪಸ್ಸಿಗೆ ಜ್ಞಾನಕ್ಕೆ ಅಥವಾ ಮೋಕ್ಷಕ್ಕೆ ಉತ್ಪತ್ತಿಸ್ಥಾನನು. ೬೦ 'ಅಯೋನಿಜಃ' ಯೋನಿಯಲ್ಲಿ ಹುಟ್ಟದಿರುವವನು. ೬೧ 'ಮೋಹಾರಿಃ' ಮೋಹನೀಯಕರ್ಮಕ್ಕೆ ಶತ್ರುವು. ೬೨ 'ವಿಜಯೀ' ಮೋಕ್ಷನಗರಕ್ಕೆ ಗಮನಮಾಡಿಸುವ ವಿಶಿಷ್ಟಜಯವುಳ್ಳವನು. ೬೩ 'ಜೇತಾ' ಎಲ್ಲರಿಗಿಂತಲೂ ಶ್ರೇಷ್ಠನಾಗಿರುವವನು. ೬೪ 'ಧರ್ಮಚಕ್ರೀ' ಧರ್ಮಚಕ್ರವುಳ್ಳವನು. ೬೫ 'ದಯಾಧ್ವಜಃ' ಪ್ರಾಣಿದಯೆಯು ಪತಾಕೆಯಾಗಿರುವವನು ಅಥವಾ ದಯಾಮಾರ್ಗದಲ್ಲಿ ಯೋಗಿಗಳಿಗೆ ಪ್ರತ್ಯಕ್ಷ ನಾಗುವವನು.

**ಪ್ರಶಾಂತಾರಿರನಂತಾತ್ಮಾ ಯೋಗೀ ಯೋಗೀಶ್ವರಾರ್ಚಿತಃ ।**
**[೮]ಬ್ರಹ್ಮವಿದ್ಬ್ರಹ್ಮತತ್ತ್ವಜ್ಞೋ ಬ್ರಹ್ಮೋದ್ಯಾವಿದ್ಯತೀಶ್ವರಃ ॥ ೧೦೭ ॥**

೬೬ 'ಪ್ರಶಾಂತಾರಿಃ' ಉಪಶಮವನ್ನುಹೊಂದಿದ ಕರ್ಮಶತ್ರುಗಳುಳ್ಳವನು. ೬೭ 'ಅನಂತಾತ್ಮಾ' ಕೇವಲಜ್ಞಾನದಿಂದ ಕೂಡಿದ ಆತ್ಮನುಳ್ಳವನು ಅಥವಾ ನಾಶ ರಹಿತವಾದ ಆತ್ಮನುಳ್ಳವನು. ೬೮ 'ಯೋಗೀ' ಚಿತ್ತವೃತ್ತಿಯನ್ನು ನಿರೋಧಿಸುವವನು. ೬೯ 'ಯೋಗೀಶ್ವರಾರ್ಚಿತಃ' ಯೋಗಿಶ್ರೇಷ್ಠರಾದ ಗಣಧರರು ಮೊದಲಾದವರಿಂದ ಪೂಜಿಸಲ್ಪಟ್ಟವನು. ೭೦ 'ಬ್ರಹ್ಮವಿತ್' ಆತ್ಮಸ್ವರೂಪವನ್ನು ತಿಳಿಯುವವನು. ೭೧ 'ಬ್ರಹ್ಮತತ್ತ್ವಜ್ಞಃ' ಆತ್ಮನ, ಜ್ಞಾನದ, ದಯೆಯ ಅಥವಾ ಕಾಮನಿಗ್ರಹದ ಮರ್ಮವನ್ನು ತಿಳಿಯುವವನು. ೭೨ 'ಬ್ರಹ್ಮೋದ್ಯಾವಿತ್' ಆತ್ಮವಿದ್ಯೆಯನ್ನು ತಿಳಿಯುವವನು. ೭೩ 'ಯತೀಶ್ವರಃ' ಯತಿಗಳಿಗೆ ಸ್ವಾಮಿಯು.

**[೯]ಶುದ್ಧೋ ಬುದ್ಧಃ ಪ್ರಬುದ್ಧಾತ್ಮಾ ಸಿದ್ಧಾರ್ಥಃ ಸಿದ್ಧಶಾಸನಃ ।**
**[೧೦]ಸಿದ್ಧಸಿದ್ಧಾಂತವಿದ್ಧ್ಯೇಯಃ ಸಿದ್ಧಸಾಧ್ಯೋ ಜಗದ್ಧಿತಃ ॥ ೧೦೮ ॥**

೭೪ 'ಶುದ್ಧಃ' ಕರ್ಮರಹಿತನು. ೭೫ 'ಬುದ್ಧಃ' ಕೇವಲಜ್ಞಾನವುಳ್ಳವನು ಅಥವಾ ಧರ್ಮವನ್ನುತಿಳಿಯುವವನು. ೭೬ 'ಪ್ರಬುದ್ಧಾತ್ಮಾ' ಕೇವಲಜ್ಞಾನಸಹಿತವಾದ

೧ ವಿಶ್ವಕಾರಣಂ, ವಿಶ್ವಾಶ್ರಯ ಇತ್ಯರ್ಥಃ. ೨ ಅನೇಕವಿಷಮಭವಗಹನವ್ಯಸನಪ್ರಾಪಣ ಹೇತೂನ್ಕರ್ಮಾರಾತೀನ್ ಜಯತೇ ಕ್ಷಯಂ ನಯತೇ. ೩ ವಿಶ್ವರೀ ಭೂಮಿಸ್ತಸ್ಯಾ ಈಶಃ. ೪ ಸಂಸಾರಜಿತ್.

೧ ಪಂಚಪರಮೇಷ್ಠಿಸ್ವರೂಪಃ. ೨ ಶಿವಂಪರಮಕಲ್ಯಾಣಂ ನಿರ್ವಾಣಂ ಶಾಂತಮಕ್ಷಯಮ್ । ಪ್ರಾಪ್ತಂ ಮುಕ್ತಿಪದಂ ಯೇನ ಸ ಶಿವಃ ಪರಿಕೀರ್ತಿತಃ. ೩ ಪೃಣಾತೀತಿ ಪರಃ. ೪ ಅತೀವ ಪೃಣಾತೀತಿ ಪರತರಃ. ೫ ಆತ್ಮಯೋನಿಃ. ೬ ಮೋಹಾರಿವಿಜಯೀತ್ಯಪಿಪಾಠಃ. ೭ ಜಯಶೀಲಃ. ೮ ಆತ್ಮಸ್ವರೂಪವಿತ್. ೯ ಸಿದ್ಧ ಇತ್ಯಪಿ ಪಾಠಃ. ೧೦ ಸಿದ್ಧ ಇತಿ ಪೃಥಕ್ಪದಮಪಿ.

ಆತ್ಮನುಳ್ಳವನು. ೭೭ 'ಸಿದ್ಧಾರ್ಥಃ' ಪ್ರಾಪ್ತವಾದ ಧರ್ಮಾರ್ಥಕಾಮಮೋಕ್ಷ ಪುರುಷಾರ್ಥಗಳುಳ್ಳವನು ಅಥವಾ ವಿದ್ವಾಂಸರಿಗೆ ಪ್ರಸಿದ್ಧವಾದ ಜೀವಾಜೀವಾಸ್ರವ ಬಂಧಸಂವರನಿರ್ಜರಾಮೋಕ್ಷಗಳಿಗೆ ಕಾರಣವಾದ ರತ್ನತ್ರಯವುಳ್ಳವನು. ೭೮ 'ಸಿದ್ಧಶಾಸನಃ' ಪ್ರಸಿದ್ಧವಾದ ಉಪದೇಶವುಳ್ಳವನು. ೭೯ 'ಸಿದ್ಧಸಿದ್ಧಾಂತವಿತ್' ಲೋಕಾಲೋಕವನ್ನು ಪ್ರತಿಪಾದಿಸುವ ಸಂಪೂರ್ಣದ್ವಾದಶಾಂಗಶಾಸ್ತ್ರವನ್ನು ತಿಳಿಯುವವನು. ೮೦ 'ಧ್ಯೇಯಃ' ಯೋಗಿಗಳಿಂದ ಧ್ಯಾನಿಸಲ್ಪಡುವುದಕ್ಕೆ ಯೋಗ್ಯನು. ೮೧ 'ಸಿದ್ಧಸಾಧ್ಯಃ' ಸಿದ್ಧರೆಂಬ ದೇವತೆಗಳಿಂದ ಸಾಧಿಸಲ್ಪಡುವುದಕ್ಕೆ ಯೋಗ್ಯನಾಗಿರುವವನು. ೮೨ 'ಜಗದ್ಧಿತಃ' ಲೋಕಕ್ಕೆ ಹಿತಕರನು.

**ಸಹಿಷ್ಣುರಚ್ಯುತೋನಂತಃ [೧]ಪ್ರಭವಿಷ್ಣು[೨]ರ್ಭವೋದ್ಭವಃ ।**
**[೩]ಪ್ರಭೂಷ್ಣುರಜರೋ[೪]ಜರ್ಯೋ [೫]ಭ್ರಾಜಿಷ್ಣುರ್ಧೀಶ್ವರೋವ್ಯಯಃ ॥**

೮೩ 'ಸಹಿಷ್ಣುಃ' ಸಹನ ಸ್ವಭಾವವುಳ್ಳವನು. ೮೪ 'ಅಚ್ಯುತಃ' ಆತ್ಮಸ್ವರೂಪದಿಂದ ಚ್ಯುತನಾಗದಿರುವವನು. ೮೫ 'ಅನಂತಃ' ಅಂತರಹಿತನು. ೮೬ 'ಪ್ರಭವಿಷ್ಣುಃ' ಅತಿಶಯವಾಗಿರುವ ಸ್ವಭಾವವುಳ್ಳವನು. ೮೭ 'ಭವೋದ್ಭವಃ' ಸಂಸಾರದಿಂದ ಅಥವಾ ಅನಂತಜ್ಞಾನಾದಿಸ್ವರೂಪದಿಂದ ಉತ್ಪತ್ತಿಯುಳ್ಳವನು. ೮೮ 'ಪ್ರಭೂಷ್ಣುಃ' ಲೋಕಕ್ಕೆ ಪ್ರಭುವು. ೮೯ 'ಅಜರಃ' ಮುಪ್ಪಿಲ್ಲದವನು. ೯೦ 'ಅಜರ್ಯಃ' ಶಿಥಿಲನಾಗದಿರುವವನು. ೯೧ 'ಭ್ರಾಜಿಷ್ಣುಃ' ಪ್ರಕಾಶಸ್ವರೂಪನು. ೯೨ 'ಧೀಶ್ವರಃ' ಬುದ್ಧಿಗೆ ಸ್ವಾಮಿಯಾಗಿರುವವನು. ೯೩ 'ಅವ್ಯಯಃ' ನಾಶರಹಿತನು.

**[೬]ವಿಭಾವಸುರಸಂಭೂಷ್ಣುಃ ಸ್ವಯಂಭೂಷ್ಣುಃ ಪುರಾತನಃ ।**
**ಪರಮಾತ್ಮಾ ಪರಂಜ್ಯೋತಿಸ್ತ್ರಿಜಗತ್ಪರಮೇಶ್ವರಃ ॥ ೧೧೦ ॥**

**೧. ಇತಿ ಶ್ರೀಮದಾದಿಶತಮ್ ।**

೯೪ 'ವಿಭಾವಸುಃ' ತೇಜಸ್ಸಿಗೆ ನಿವಾಸಸ್ಥಾನನು ಅಥವಾ ಕರ್ಮವನ್ನು ಸುಡುವುದಕ್ಕೆ ಅಗ್ನಿಯಂತಿರುವವನು. ೯೫ 'ಅಸಂಭೂಷ್ಣುಃ' ಪುನಃ ಸಂಸಾರದಲ್ಲಿ ಉತ್ಪನ್ನನಾಗದಿರುವವನು. ೯೬ 'ಸ್ವಯಂಭೂಷ್ಣುಃ' ಸ್ವತಃ ಉತ್ಪನ್ನನಾಗುವ ಸ್ವಭಾವವುಳ್ಳವನು. ೯೭ 'ಪುರಾತನಃ' ಪೂರ್ವಿಕನು. ೯೮ 'ಪರಮಾತ್ಮಾ' ಉತ್ಕೃಷ್ಟವಾದ ಆತ್ಮಸ್ವರೂಪವುಳ್ಳವನು. ೯೯ 'ಪರಂಜ್ಯೋತಿಃ' ಉತ್ಕೃಷ್ಟವಾದ ಜ್ಯೋತಿಸ್ವರೂಪನು. ೧೦೦ 'ತ್ರಿಜಗತ್ಪರಮೇಶ್ವರಃ' ಮೂರು ಲೋಕಕ್ಕೆ ಶ್ರೇಷ್ಠನಾದ ಸ್ವಾಮಿಯು.

ಶ್ರೀಮಾನ್ ಮೊದಲಾದ ನೂರು ಹೆಸರುಗಳು ಸಂಪೂರ್ಣವಾದುವು.

**ದಿವ್ಯಭಾಷಾಪತಿರ್ದಿವ್ಯಃ ಪೂತವಾಕ್ಪೂತಶಾಸನಃ ।**
**ಪೂತಾತ್ಮಾ ಪರಮಜ್ಯೋತಿರ್ಧರ್ಮಾಧ್ಯಕ್ಷೋ ದಮೇಶ್ವರಃ ॥ ೧೧೧ ॥**

೧ 'ದಿವ್ಯಭಾಷಾಪತಿಃ' ದಿವ್ಯಧ್ವನಿಗಧಿಪತಿಯು. ೨ 'ದಿವ್ಯಃ' ಅಂತರಿಕ್ಷದಲ್ಲಿ ಶೋಭಿಸುವವನು. ೩ 'ಪೂತವಾಕ್' ಪವಿತ್ರವಾದ ವಚನವುಳ್ಳವನು. ೪ 'ಪೂತಶಾಸನಃ' ಪವಿತ್ರವಾದ ಉಪದೇಶವುಳ್ಳವನು. ೫ 'ಪೂತಾತ್ಮಾ' ಕರ್ಮಮಲರಹಿತವಾದ ಆತ್ಮನು. ೬ 'ಪರಮಜ್ಯೋತಿಃ' ಉತ್ಕೃಷ್ಟವಾದ ಜ್ಯೋತಿಸ್ವರೂಪನು. ೭ 'ಧರ್ಮಾಧ್ಯಕ್ಷಃ' ಧರ್ಮಕ್ಕಧಿಪತಿಯು. ೮ 'ದಮೇಶ್ವರಃ' ಇಂದ್ರಿಯನಿಗ್ರಹವನ್ನು ಮಾಡಿದ ಸ್ವಾಮಿಯು.

**ಶ್ರೀಪತಿರ್ಭಗವಾನರ್ಹ[೭]ನ್ನರಜಾ [೮]ವಿರಜಾಃ ಶುಚಿಃ ।**
**ತೀರ್ಥಕೃತ್ಕೇವಲೀಶಾನಃ ಪೂಜಾರ್ಹಃ ಸ್ನಾತಕೋಮಲಃ ॥ ೧೧೨ ॥**

೯ 'ಶ್ರೀಪತಿಃ' ಅಂತರಂಗ ಬಹಿರಂಗಲಕ್ಷ್ಮಿಗೆ ಸ್ವಾಮಿಯು. ೧೦ 'ಭಗವಾನ್' ಮಹಾಮಹಿಮೆಯುಳ್ಳವನು. ೧೧ 'ಅರ್ಹನ್' ಪರಮಪೂಜ್ಯನು. ೧೨ 'ಅರಜಾಃ' ಜ್ಞಾನಾವರಣಕರ್ಮವೆಂಬ ಧೂಳಿಯಿಲ್ಲದವನು. ೧೩ 'ವಿರಜಾಃ' ದರ್ಶನಾವರಣಕರ್ಮರಹಿತನು. ೧೪ 'ಶುಚಿಃ' ಪರಿಶುದ್ಧನು. ೧೫ 'ತೀರ್ಥಕೃತ್' ಆಗಮವನ್ನುಂಟುಮಾಡುವವನು. ೧೬ 'ಕೇವಲೀ' ಅಸಹಾಯಜ್ಞಾನವುಳ್ಳವನು. ೧೭ 'ಈಶಾನಃ' ಎಲ್ಲರಿಗೂ ಸ್ವಾಮಿಯು. ೧೮ 'ಪೂಜಾರ್ಹಃ' ಪೂಜೆಗೆ ಯೋಗ್ಯನು. ೧೯ 'ಸ್ನಾತಕಃ' ಸಮಸ್ತಘಾತಿಕರ್ಮವನ್ನು ನಾಶಮಾಡುವ ಭಗವಂತನು. ೨೦ 'ಅಮಲಃ' ದೋಷರಹಿತನು.

**ಅನಂತದೀಪ್ತಿರ್ಜ್ಞಾನಾತ್ಮಾ ಸ್ವಯಂಬುದ್ಧಃ ಪ್ರಜಾಪತಿಃ ।**
**ಮುಕ್ತಃ ಶಕ್ತೋ ನಿರಾಬಾಧೋ ನಿಷ್ಕಲೋ ಭುವನೇಶ್ವರಃ ॥ ೧೧೩ ॥**

೨೧ 'ಅನಂತದೀಪ್ತಿಃ' ಅಪರಿಮಿತವಾದ ಕಾಂತಿಯುಳ್ಳವನು. ೨೨ 'ಜ್ಞಾನಾತ್ಮಾ' ಜ್ಞಾನಸ್ವರೂಪಿಯು. ೨೩ 'ಸ್ವಯಂಬುದ್ಧಃ' ಪರೋಪದೇಶವಿಲ್ಲದೆ ಸ್ವತಃ ಮೋಕ್ಷಮಾರ್ಗವನ್ನು ತಿಳಿದವನು. ೨೪ 'ಪ್ರಜಾಪತಿಃ' ಪ್ರಜೆಗಳಿಗೆ ಸ್ವಾಮಿಯು. ೨೫ 'ಮುಕ್ತಃ' ಕರ್ಮಗಳಿಂದ ಬಿಡುಗಡೆಯನ್ನು ಹೊಂದಿದವನು. ೨೬ 'ಶಕ್ತಃ' ಸಮರ್ಥನು. ೨೭ 'ನಿರಾಬಾಧಃ' ಬಾಧೆಯಿಲ್ಲದವನು. ೨೮ 'ನಿಷ್ಕಲಃ' ಶರೀರರಹಿತನು. ೨೯ 'ಭುವನೇಶ್ವರಃ' ಲೋಕಕ್ಕೆ ಸ್ವಾಮಿಯು.

**ನಿರಂಜನೋ ಜಗಜ್ಜ್ಯೋತಿ[೧]ರ್ನಿರುಕ್ತೋಕ್ತಿರನಾಮಯಃ ।**
**ಅಚಲಸ್ಥಿತಿ[೨]ರಕ್ಷೋಭ್ಯಃ [೩]ಕೂಟಸ್ಥಃ [೪]ಸ್ಥಾಣುರಕ್ಷಯಃ ॥ ೧೧೪ ॥**

೩೦ 'ನಿರಂಜನಃ' ಕರ್ಮಕಲಂಕರಹಿತನು. ೩೧ 'ಜಗಜ್ಜ್ಯೋತಿಃ' ಲೋಕಕ್ಕೆ ಸನ್ಮಾರ್ಗೋಪದೇಶಕನಾದುದರಿಂದ ಜ್ಯೋತಿಸ್ವರೂಪನು. ೩೨ 'ನಿರುಕ್ತೋಕ್ತಿಃ' ಪ್ರಾಮಾಣಿಕವಾದ ವಚನವುಳ್ಳವನು. ೩೩ 'ಅನಾಮಯಃ' ರೋಗರಹಿತನು. ೩೪ 'ಅಚಲಸ್ಥಿತಿಃ' ನಿಶ್ಚಂಚಲವಾದ ಸ್ಥಿತಿಯುಳ್ಳವನು. ೩೫ 'ಅಕ್ಷೋಭ್ಯಃ' ಮನಃಕ್ಷೋಭೆಯಿಲ್ಲದೆ ಸ್ಥಿರವಾಗಿರುವವನು. ೩೬ 'ಕೂಟಸ್ಥಃ' ನಿತ್ಯನು. ೩೭ 'ಸ್ಥಾಣುಃ' ಸ್ಥಿರವಾಗಿರುವ ಸ್ವಭಾವವುಳ್ಳವನು. ೩೮ 'ಅಕ್ಷಯಃ' ನಾಶರಹಿತನು.

**ಅಗ್ರಣೀ[೫]ರ್ಗ್ರಾಮಣೀ[೬]ರ್ನೇತಾ [೭]ಪ್ರಣೇತಾ [೮]ನ್ಯಾಯಶಾಸ್ತ್ರಕೃತ್ ।**
**ಶಾಸ್ತಾ ಧರ್ಮಪತಿರ್ಧರ್ಮ್ಯೋ ಧರ್ಮಾತ್ಮಾ ಧರ್ಮತೀರ್ಥಕೃತ್ ॥**

೩೯ 'ಅಗ್ರಣೀಃ' ಲೋಕದಲ್ಲಿ ಸರ್ವಶ್ರೇಷ್ಠನು. ೪೦ 'ಗ್ರಾಮಣೀಃ' ಭವ್ಯಜೀವಗಳ ಸಮೂಹವನ್ನು ಮೋಕ್ಷಮಾರ್ಗದಲ್ಲಿ ತೆಗೆದುಕೊಂಡು ಹೋಗುವವನು. ೪೧ 'ನೇತಾ' ಲೋಕಕ್ಕೆ ಪ್ರಭುವು. ೪೨ 'ಪ್ರಣೇತಾ' ಮೋಕ್ಷಕ್ಕೆ ತೆಗೆದುಕೊಂಡು ಹೋಗುವ ಸ್ವಭಾವವುಳ್ಳವನು. ೪೩ 'ನ್ಯಾಯಶಾಸ್ತ್ರಕೃತ್' ಅನುಮಾನಾಗಮ ಪ್ರಮಾಣಗಳನ್ನು ಮಾಡುವವನು. ೪೪ 'ಶಾಸ್ತಾ' ಹಿತೋಪದೇಶಕನು. ೪೫ 'ಧರ್ಮಪತಿಃ' ರತ್ನತ್ರಯಾದಿ ಧರ್ಮಕ್ಕೆ ಸ್ವಾಮಿಯು. ೪೬ 'ಧರ್ಮ್ಯಃ' ಧರ್ಮದಿಂದ ಚ್ಯುತನಾಗದಿರುವವನು. ೪೭ 'ಧರ್ಮಾತ್ಮಾ' ಧರ್ಮಸ್ವರೂಪಿಯು. ೪೮ 'ಧರ್ಮತೀರ್ಥಕೃತ್' ಧರ್ಮವನ್ನೂ ಆಗಮವನ್ನೂ ಉಂಟುಮಾಡುವವನು.

**ವೃಷಧ್ವಜೋ [೯]ವೃಷಾಧೀಶೋ ವೃಷಕೇತುರ್ವೃಷಾಯುಧಃ ।**
**[೧೦]ವೃಷೋ ವೃಷಪತಿರ್ಭರ್ತಾ [೧೧]ವೃಷಾಭಾಂಕೋ [೧೨]ವೃಷೋದ್ಭವಃ ॥**

೪೯ 'ವೃಷಧ್ವಜಃ' ಧ್ವಜದಲ್ಲಿ ಎತ್ತಿನ ಚಿಹ್ನೆಯುಳ್ಳವನು. ೫೦ 'ವೃಷಾಧೀಶಃ' ಧರ್ಮಕ್ಕೆ ಸ್ವಾಮಿಯು. ೫೧ 'ವೃಷಕೇತುಃ' ಧರ್ಮಕ್ಕೆ ಧ್ವಜದಂತಿರುವವನು. ೫೨ 'ವೃಷಾಯುಧಃ' ಧರ್ಮವೇ ಆಯುಧವಾಗುಳ್ಳವನು. ೫೩ 'ವೃಷಃ' ಧರ್ಮವನ್ನು ವರ್ಷಿಸುವವನು. ೫೪ 'ವೃಷಪತಿಃ' ಧರ್ಮಕ್ಕೆ ನಾಯಕನು. ೫೫ 'ಭರ್ತಾ' ಲೋಕವನ್ನುದ್ಧರಿಸುವವನು. ೫೬ 'ವೃಷಭಾಂಕಃ' ವೃಷಭಲಾಂಛನವುಳ್ಳವನು. ೫೭ 'ವೃಷೋದ್ಭವಃ' ವೃಷಭಾಕಾರದಿಂದ ಗರ್ಭದಲ್ಲಿ ಉದ್ಭವಿಸಿದವನು.

**ಹಿರಣ್ಯನಾಭಿರ್ಭೂತಾತ್ಮಾ ಭೂತಭೃದ್ಭೂತಭಾವನಃ ।**
**ಪ್ರಭವೋ ವಿಭವೋ ಭಾಸ್ವಾನ್ ಭವೋ ಭಾವೋ ಭವಾಂತಕಃ॥ ೧೧೭ ॥**

೧ ಪ್ರಕರ್ಷೇಣ ಭವನಶೀಲಃ. ೨ ಭವಾದುದ್ಭವೋ ಯಸ್ಯ, ಅನಂತಜ್ಞಾನಾದಿಭವನರೂಪೇಣ ಭವತೀತಿ ವಾ. ೩ ಪ್ರಭವತೀತಿ. ೪ ನಜೀರ್ಯತ ಇತಿ. ೫ ಪ್ರಕಾಶನಶೀಲಃ. ೬ ವಿಭಾಸ್ವಿನ್ವಸತೀತಿ, ಅಗ್ನಿರಿತಿ ವಾ. ೭ ಜ್ಞಾನಾವರಣರಹಿತಃ. ೮ ವಿಗತದರ್ಶನಾವರಣಃ.

೧ ಪ್ರಾಮಾಣಿಕವಚನಃ. ೨ ಅಚಲಃ. ೩ ನಿತ್ಯಃ. ೪ ಸ್ಥಾನಶೀಲಃ. ೫ ಗ್ರಾಮಂ ಸಮುದಾಯಂ ನಯತೀತಿ. ೬ ಜಗನ್ನಾಯಕಃ. ೭ ಮೋಕ್ಷನಯನಶೀಲಃ. ೮ ಯುಕ್ತ್ಯಾಗಮಶಾಸ್ತ್ರಕೃತ್. ೯ ಧರ್ಮನಾಯಕಃ. ೧೦ ಧರ್ಮವರ್ಷಣಾದ್ವೃಷಃ. ೧೧ ವೃಷಭಲಾಂಛನಃ. ೧೨ ವೃಷಭಾಕಾರೇಣ ಗರ್ಭೇ ಉದ್ಭವಃ.

೫೮ 'ಹಿರಣ್ಯನಾಭಿಃ' ಬಂಗಾರದಂತೆ ಅವಯವಗಳುಳ್ಳವನು. ೫೯ 'ಭೂತಾತ್ಮಾ' ನಿಜವಾದ ಆತ್ಮಸ್ವರೂಪವುಳ್ಳವನು. ೬೦ 'ಭೂತಭೃತ್' ಪ್ರಾಣಿರಕ್ಷಕನು. ೬೧ 'ಭೂತಭಾವನಃ' ಮಂಗಲವನ್ನುಂಟುಮಾಡುವವನು. ೬೨ 'ಪ್ರಭವಃ' ಶ್ರೇಷ್ಠವಾದ ಜನ್ಮವುಳ್ಳವನು. ೬೩ 'ವಿಭವಃ' ಸಂಸಾರದಿಂದ ಪಾರವನ್ನುಹೊಂದಿದವನು. ೬೪ 'ಭಾಸ್ವಾನ್' ಕಾಂತಿಯುಳ್ಳವನು. ೬೫ 'ಭವಃ' ಇರುವವನು. ೬೬ 'ಭಾವಃ' ಪರಮಾತ್ಮಸ್ವರೂಪವನ್ನು ಭಾವಿಸುವವನು. ೬೭ 'ಭವಾಂತಕಃ' ಜನನಮರಣವನ್ನು ನಾಶಮಾಡಿದವನು.

**[1]ಹಿರಣ್ಯಗರ್ಭಃ [2]ಶ್ರೀಗರ್ಭಃ ಪ್ರಭೂತವಿಭವೋಽಭವಃ ।**
**ಸ್ವಯಂಪ್ರಭಃ ಪ್ರಭೂತಾತ್ಮಾ ಭೂತನಾಥೋ ಜಗತ್ಪತಿಃ ॥ ೧೧೮ ॥**

೬೮ 'ಹಿರಣ್ಯಗರ್ಭಃ' ಗರ್ಭದಲ್ಲಿರುವಾಗ ಸುವರ್ಣವೃಷ್ಟಿಯನ್ನುಂಟುಮಾಡಿದವನು. ೬೯ 'ಶ್ರೀಗರ್ಭಃ' ಗರ್ಭದಲ್ಲಿ ಜ್ಞಾನಾದಿಲಕ್ಷ್ಮಿಯುಳ್ಳವನು. ೭೦ 'ಪ್ರಭೂತವಿಭವಃ' ಅಧಿಕವಾದ ಬಾಹ್ಯಾಭ್ಯಂತರಸಂಪತ್ತುಳ್ಳವನು. ೭೧ 'ಅಭವಃ' ಭವರಹಿತನು. ೭೨ 'ಸ್ವಯಂಪ್ರಭಃ' ಕರ್ಮಕ್ಷಯದಿಂದ ಸ್ವತಃ ಪ್ರಭೆಯುಳ್ಳವನು. ೭೩ 'ಪ್ರಭೂತಾತ್ಮಾ' ಅಪಾರವಾದ ಆತ್ಮಸ್ವರೂಪವುಳ್ಳವನು. ೭೪ 'ಭೂತನಾಥಃ' ಪ್ರಾಣಿಗಳಿಗೆ ಪ್ರಭುವು. ೭೫ 'ಜಗತ್ಪತಿಃ' ಲೋಕಕ್ಕೆ ಸ್ವಾಮಿಯು.

**ಸರ್ವಾದಿಃ ಸರ್ವದೃಕ್ಸಾರ್ವಃ ಸರ್ವಜ್ಞಃ ಸರ್ವದರ್ಶನಃ ।**
**ಸರ್ವಾತ್ಮಾ ಸರ್ವಲೋಕೇಶಃ ಸರ್ವವಿತ್ಸರ್ವಲೋಕಜಿತ್ ॥ ೧೧೯ ॥**

೭೬ 'ಸರ್ವಾದಿಃ' ಸಮಸ್ತಪದಾರ್ಥಗಳಿಗೆ ಮೂಲಕಾರಣನು. ೭೭ 'ಸರ್ವದೃಕ್' ಸಮಸ್ತವನ್ನು ನೋಡುವವನು. ೭೮ 'ಸಾರ್ವಃ' ಸಮಸ್ತಪ್ರಾಣಿಗಳಿಗೆ ಹಿತಕರನು. ೭೯ 'ಸರ್ವಜ್ಞಃ' ಸಮಸ್ತದ್ರವ್ಯಪರ್ಯಾಯಗಳನ್ನು ತಿಳಿಯುವವನು. ೮೦ 'ಸರ್ವದರ್ಶನಃ' ಸಂಪೂರ್ಣವಾದ ದರ್ಶನವುಳ್ಳವನು. ೮೧ 'ಸರ್ವಾತ್ಮಾ' ಸಮಸ್ತ ವಸ್ತುಸ್ವರೂಪಗಳನ್ನು ತಿಳಿಯುವ ಸ್ವಭಾವವುಳ್ಳವನು. ೮೨ 'ಸರ್ವ ಲೋಕೇಶಃ' ಸಮಸ್ತಲೋಕಕ್ಕಧಿಪತಿಯು. ೮೩ 'ಸರ್ವವಿತ್' ಸಮಸ್ತವನ್ನು ತಿಳಿಯುವವನು. ೮೪ 'ಸರ್ವಲೋಕಜಿತ್' ಸರ್ವಲೋಕವನ್ನು ಜಯಿಸಿದವನು (ಮುಕ್ತನು).

**ಸುಗತಿಃ ಸುಶ್ರುತಃ [3]ಸುಶ್ರುತ್ಸುವಾಕ್ಸೂರಿರ್ಬಹುಶ್ರುತಃ ।**
**ವಿಶ್ರುತೋ ವಿಶ್ವತಃ [4]ಪಾದೋ ವಿಶ್ವಶೀರ್ಷಃ [5]ಶುಚಿಶ್ರವಾಃ ॥ ೧೨೦ ॥**

೮೫ 'ಸುಗತಿಃ' ಶ್ರೇಷ್ಠವಾದ ಪಂಚಮಗತಿಯುಳ್ಳವನು. ೮೬ 'ಸುಶ್ರುತಃ' ಶ್ರೇಷ್ಠವಾದ ಶಾಸ್ತ್ರವುಳ್ಳವನು. ೮೭ 'ಸುಶ್ರುತ್' ಚೆನ್ನಾಗಿ ಕೇಳುವವನು. ೮೮ 'ಸುವಾಕ್' ಶ್ರೇಷ್ಠವಾದ ವಚನವುಳ್ಳವನು. ೮೯ 'ಸೂರಿಃ' ಜ್ಞಾನಿಯು. ೯೦ 'ಬಹುಶ್ರುತಃ' ಅಧಿಕವಾದ ಶಾಸ್ತ್ರಜ್ಞಾನವುಳ್ಳವನು. ೯೧ 'ವಿಶ್ರುತಃ' ಪ್ರಸಿದ್ಧನು. ೯೨ 'ವಿಶ್ವತಃಪಾದಃ' ಎಲ್ಲಾಕಡೆಗಳಲ್ಲೂಕಿರಣವುಳ್ಳವನು. ೯೩ 'ವಿಶ್ವಶೀರ್ಷಃ' ಲೋಕಾಗ್ರಭಾಗದಲ್ಲಿರುವವನು. ೯೪ 'ಶುಚಿಶ್ರವಾಃ' ನಿರ್ಮಲವಾದ ಜ್ಞಾನವೂ ಶ್ರವಣೇಂದ್ರಿಯವೂ ಉಳ್ಳವನು.

**[6]ಸಹಸ್ರಶೀರ್ಷಃ [7]ಕ್ಷೇತ್ರಜ್ಞಃ [8]ಸಹಸ್ರಾಕ್ಷಃ [9]ಸಹಸ್ರಪಾತ್ ।**
**[10]ಭೂತಭವ್ಯಭವದ್ಭರ್ತಾ ವಿಶ್ವವಿದ್ಯಾಮಹೇಶ್ವರಃ ॥ ೧೨೧ ॥**

**೨. ಇತಿ ದಿವ್ಯಾದಿಶತವಮ್ ।**

೯೫ 'ಸಹಸ್ರಶೀರ್ಷಃ' ಅನಂತಸುಖಿಯು. ೯೬ 'ಕ್ಷೇತ್ರಜ್ಞಃ' ಆತ್ಮಸ್ವರೂಪವನ್ನು ತಿಳಿದವನು. ೯೭ 'ಸಹಸ್ರಾಕ್ಷಃ' ಅನಂತದರ್ಶನವುಳ್ಳವನು. ೯೮ 'ಸಹಸ್ರಪಾತ್' ಅನಂತಶಕ್ತಿಯುಳ್ಳವನು. ೯೯ 'ಭೂತಭವ್ಯಭವದ್ಭರ್ತಾ' ಭೂತಭವಿಷ್ಯದ್ವರ್ತಮಾನ ಕಾಲಗಳಲ್ಲಿರುವ ಪ್ರಾಣಿಸಮೂಹವನ್ನು ರಕ್ಷಿಸುವವನು. ೧೦೦ 'ವಿಶ್ವವಿದ್ಯಾಮಹೇಶ್ವರಃ' ಸಮಸ್ತ ವಿದ್ಯೆಗಳಿಗೆ ಸ್ವಾಮಿಯು.

೨. ದಿವ್ಯಭಾಷಾಪತಿ ಮೊದಲಾದ ನೂರು ಹೆಸರುಗಳು ಸಂಪೂರ್ಣವಾದುವು.

೧ ಹಿರಣ್ಯಂಗರ್ಭೇಯಸ್ಯ. ೨ ಶ್ರೀದೇವೀಗರ್ಭೇಯಸ್ಯ. ೩ ಸುಷ್ಠು ಶೃಣೋತೀತಿ. ೪ ಕಿರಣಃ. ೫ ಶುಚಿಃಶ್ರವೋ ಜ್ಞಾನಂ ಶ್ರವಣಂ ಚ ಯಸ್ಯ. ೬ ಅನಂತಸುಖೀ. ೭ ಆತ್ಮಜ್ಞಃ. ೮ ಅನಂತದರ್ಶನಃ. ೯ ಅನಂತವೀರ್ಯಃ. ೧೦ ಭೂತಭವಿಷ್ಯದ್ವರ್ತಮಾನಜೀವರಕ್ಷಕಃ.

**[1]ಸ್ಥವಿಷ್ಠಃ [2]ಸ್ಥವಿರೋ ಜ್ಯೇಷ್ಠಃ [3]ಪ್ರಷ್ಠಃ [4]ಪ್ರೇಷ್ಠೋ [5]ವರಿಷ್ಠಧೀಃ ।**
**[6]ಸ್ಥೇಷ್ಠೋ [7]ಗರಿಷ್ಠೋ [8]ಬಂಹಿಷ್ಠಃ ಶ್ರೇಷ್ಠೋ[9]ಣಿಷ್ಠೋ ಗರಿಷ್ಠಗೀಃ ॥**

೧ 'ಸ್ಥವಿಷ್ಠಃ' ಗುಣಗಳಿಂದ ಅತಿಶಯವಾಗಿ ಸ್ಥೂಲನು. ೨ 'ಸ್ಥವಿರಃ' ಜ್ಞಾನವೃದ್ಧನು. ೩ 'ಜ್ಯೇಷ್ಠಃ' ಜಗತ್ತಿಗೆ ಹಿರಿಯನು. ೪ 'ಪ್ರಷ್ಠಃ' ಅಗ್ರಗಾಮಿಯು. ೫ 'ಪ್ರೇಷ್ಠಃ' ಅತಿಶಯವಾಗಿ ಪ್ರಿಯನು. ೬ 'ವರಿಷ್ಠಧೀಃ' ಅತ್ಯಂತ ಶ್ರೇಷ್ಠವಾದ ಬುದ್ಧಿಯುಳ್ಳವನು. ೭ 'ಸ್ಥೇಷ್ಠಃ' ಅತ್ಯಂತಸ್ಥಿರನು. ೮ 'ಗರಿಷ್ಠಃ' ಅಧಿಕವಾಗಿ ಗುರುವು. ೯ 'ಬಂಹಿಷ್ಠಃ' ಗುಣಗಳಿಂದ ಅನೇಕರೂಪನು. ೧೦ 'ಶ್ರೇಷ್ಠಃ' ಪೂಜ್ಯನು. ೧೧ 'ಅಣಿಷ್ಠಃ' ಅತ್ಯಂತ ಅಣುಸ್ವರೂಪನು. ೧೨ 'ಗರಿಷ್ಠಗೀಃ' ಶ್ರೇಷ್ಠವಾದ ವಚನವುಳ್ಳವನು.

**[10]ವಿಶ್ವಬುದ್ಧಿಶ್ವಸೃಡ್ವಿಶ್ವೇಟ್ ವಿಶ್ವಭುಗ್ವಿಶ್ವನಾಯಕಃ ।**
**ವಿಶ್ವಾಶೀರ್ವಿಶ್ವರೂಪಾತ್ಮಾ ವಿಶ್ವಜಿದ್ವಿಜಿತಾಂತಕಃ ॥ ೧೨೩ ॥**

೧೩ 'ವಿಶ್ವಭುತ್' ಜಗದ್ರಕ್ಷಕನು. ೧೪ 'ವಿಶ್ವಸೃಟ್' ಜಗತ್ಸೃಷ್ಟಿಮಾಡುವವನು. ೧೫ 'ವಿಶ್ವೇಟ್' ಲೋಕಾಧಿಪತಿಯು. ೧೬ 'ವಿಶ್ವಭುಕ್' ಲೋಕವನ್ನು ಭೋಗಿಸು(ತಿಳಿ)ವವನು. ೧೭ 'ವಿಶ್ವನಾಯಕಃ' ಜಗತ್ತಿಗೆ ಸ್ವಾಮಿಯು. ೧೮ 'ವಿಶ್ವಾಶೀಃ' ಲೋಕಕ್ಕೆ ಹಿತವನ್ನಿಚ್ಛಿಸುವವನು. ೧೯ 'ವಿಶ್ವರೂಪಾತ್ಮಾ' ಸಮಸ್ತ ವಸ್ತುಸ್ವರೂಪಗಳಲ್ಲಿ ಆತ್ಮನುಳ್ಳವನು (ಜ್ಞಾನಮೂಲಕ ವ್ಯಾಪಕನು). ೨೦ 'ವಿಶ್ವಜಿತ್' ಲೋಕದಲ್ಲಿ ಜಯಶೀಲನು. ೨೧ 'ವಿಜಿತಾಂತಕಃ' ಮೃತ್ಯುವನ್ನು ಜಯಿಸಿದವನು.

**ವಿಭವೋ ವಿಭಯೋ ವೀರೋ ವಿಶೋಕೋ [11]ವಿಜರೋಜರನ್ ।**
**ವಿರಾಗೋ [12]ವಿರತೋಽಸಂಗೋ [13]ವಿವಿಕ್ತೋ ವೀತಮತ್ಸರಃ॥ ೧೨೪ ॥**

೨೨ 'ವಿಭವಃ' ಸಂಸಾರರಹಿತನು. ೨೩ 'ವಿಭಯಃ' ಭಯರಹಿತನು. ೨೪ 'ವೀರಃ' ಶೌರ್ಯಶಾಲಿಯು. ೨೫ 'ವಿಶೋಕಃ' ಶೋಕರಹಿತನು. ೨೬ 'ವಿಜರಃ' ಮುಪ್ಪಿಲ್ಲದವನು. ೨೭ 'ಜರನ್' ಜ್ಞಾನವೃದ್ಧನು. ೨೮ 'ವಿರಾಗಃ' ರಾಗರಹಿತನು. ೨೯ 'ವಿರತಃ' ವಿರಕ್ತನು. ೩೦ 'ಅಸಂಗಃ' ಪರಿಗ್ರಹರಹಿತನು. ೩೧ 'ವಿವಿಕ್ತಃ' ಪವಿತ್ರನು. ೩೨ 'ವೀತಮತ್ಸರಃ' ದ್ವೇಷಭಾವವಿಲ್ಲದವನು.

**[14]ವಿನೇಯಜನತಾಬಂಧುರ್ವಿಲೀನಾಶೇಷಕಲ್ಮಷಃ ।**
**ವಿಯೋಗೋ ಯೋಗವಿದ್ವಿದ್ವಾನ್ವಿಧಾತಾ ಸುವಿಧಿಃ ಸುಧೀಃ ॥ ೧೨೫ ॥**

೩೩ 'ವಿನೇಯಜನತಾಬಂಧುಃ' ಭವ್ಯಜನಸಮೂಹಕ್ಕೆ ಬಂಧುವು. ೩೪ 'ವಿಲೀನಾಶೇಷಕಲ್ಮಷಃ' ಸಂಪೂರ್ಣ ಪಾಪವನ್ನು ನಾಶಮಾಡಿದವನು. ೩೫ 'ವಿಯೋಗಃ' ಮನೋವಚನಕಾಯಕ್ರಿಯಾರಹಿತನು. ೩೬ 'ಯೋಗವಿತ್' ಧ್ಯಾನವನ್ನು ತಿಳಿದವನು. ೩೭ 'ವಿದ್ವಾನ್' ಜ್ಞಾನಿಯು. ೩೮ 'ವಿಧಾತಾ' ಜಗತ್ತಿನ ನಿರ್ಮಾಣಕನು. ೩೯ 'ಸುವಿಧಿಃ' ಶ್ರೇಷ್ಠವಾದ ಅನುಷ್ಠಾನವುಳ್ಳವನು. ೪೦ 'ಸುಧೀಃ' ಶ್ರೇಷ್ಠವಾದ ಬುದ್ಧಿಯುಳ್ಳವನು.

**[15]ಕ್ಷಾಂತಿಭಾ[16]ಕ್ಪೃಥಿವೀಮೂರ್ತಿಃ ಶಾಂತಿಭಾಕ್ಸಲಿಲಾತ್ಮಕಃ ।**
**ವಾಯುಮೂರ್ತಿರಸಂಗಾತ್ಮಾ ವಹ್ನಿಮೂರ್ತಿರಧರ್ಮಧೃಕ್ ॥ ೧೨೬ ॥**

೪೧ 'ಕ್ಷಾಂತಿಭಾಕ್' ಕ್ಷಮೆಯುಳ್ಳವನು. ೪೨ 'ಪೃಥಿವೀಮೂರ್ತಿಃ' ಪೃಥಿವಿಯಂತೆ ಕ್ಷಮಾಮೂರ್ತಿಯು. ೪೩ 'ಶಾಂತಿಭಾಕ್' ಶಾಂತಿಯುಳ್ಳವನು. ೪೪ 'ಸಲಿಲಾತ್ಮಕಃ' ಜಲದಂತೆ ಸ್ವತಃ ನಿರ್ಮಲಸ್ವರೂಪನು. ೪೫ 'ವಾಯುಮೂರ್ತಿಃ' ಗಾಳಿಯಂತೆ ಪರಪದಾರ್ಥಗಳ ಸಂಬಂಧರಹಿತವಾದ ಸ್ವರೂಪವುಳ್ಳವನು. ೪೬ 'ಅಸಂಗಾತ್ಮಾ' ಪರಿಗ್ರಹರಹಿತವಾದ ಸ್ವರೂಪವುಳ್ಳವನು. ೪೭ 'ವಹ್ನಿಮೂರ್ತಿಃ'

೧ ಅತಿಶಯೇನ ಸ್ಥೂಲಃ. ೨ ವೃದ್ಧಃ. ೩ ಅಗ್ರಗಾಮೀ. ೪ ಅತಿಶಯೇನ ಪ್ರಿಯಃ. ೫ ಅತಿಶಯೇನ ವರಬುದ್ಧಿಃ. ೬ ಅತಿಶಯೇನ ಸ್ಥಿರಃ. ೭ ಅತಿಶಯೇನ ಗುರುಃ. ೮ ಅತಿಶಯೇನ ಬಹುಃ. ೯ ಅತಿಶಯೇನಾಣುಃ. ೧೦ ವಿಶ್ವಪಾಲಕಃ. ೧೧ ವೃದ್ಧಃ. ೧೨ ವಿಗತರತಃ. ೧೩ ಪೂತಃ. ೧೪ ಭವ್ಯಜನಸಮೂಹಸ್ಯ ಬಂಧುಃ. ೧೫ ಕ್ಷಮಾಭಾಕ್. ೧೬ ಕ್ಷಮಾಮೂರ್ತಿಃ.

ಅಗ್ನಿಯಂತೆ ಕರ್ಮವನ್ನು ದಹಿಸುವ ಸ್ವರೂಪವುಳ್ಳವನು. ೪೮ 'ಅಧರ್ಮಧಕ್' ಪಾಪವನ್ನು ದಹಿಸುವವನು.

**[೧]ಸುಯಜ್ವಾ [೨]ಯಜಮಾನಾತ್ಮಾ [೩]ಸುತ್ವಾ ಸುತ್ರಾಮಪೂಜಿತಃ ।**
**[೪]ಋತ್ವಿಗ್ಯಜ್ಞಪತಿ[೫]ರ್ಯಾಜ್ಯೋ [೬]ಯಜ್ಞಾಂಗಮಮೃತಂ [೭]ಹವಿಃ ॥**

೪೯ 'ಸುಯಜ್ವಾ' ಶ್ರೇಷ್ಠವಾದ ಯಾಜಕನು. ೫೦ 'ಯಜಮಾನಾತ್ಮಾ' ಪೂಜ್ಯ ಸ್ವರೂಪನು. ೫೧ 'ಸುತ್ವಾ' ಯಜ್ಞಸ್ನಾನವನ್ನು ಹೊಂದಿದವನು. ೫೨ 'ಸುತ್ರಾಮ ಪೂಜಿತಃ' ದೇವೇಂದ್ರನಿಂದ ಪೂಜಿಸಲ್ಪಟ್ಟವನು. ೫೩ 'ಋತ್ವಿಕ್' ಪೂಜಕನು. ೫೪ 'ಯಜ್ಞಪತಿಃ' ಯಜ್ಞಕ್ಕಧಿಪತಿಯು. ೫೫ 'ಯಾಜ್ಯಃ' ಪೂಜಾಯೋಗ್ಯನು. ೫೬ 'ಯಜ್ಞಾಂಗಂ' ಪೂಜೆಗೆ ಕಾರಣಸ್ವರೂಪನು. ೫೭ 'ಅಮೃತಂ' ಮೋಕ್ಷಸ್ವರೂಪನು. ೫೮ 'ಹವಿಃ' ಎಲ್ಲರಿಂದಲೂ ಭಜಿಸಲ್ಪಡುವವನು.

**ವ್ಯೋಮಮೂರ್ತಿರಮೂರ್ತಾತ್ಮಾ ನಿರ್ಲೇಪೋ ನಿರ್ಮಲೋಽಚಲಃ ।**
**ಸೋಮಮೂರ್ತಿಃ ಸುಸೌಮ್ಯಾತ್ಮಾ ಸೂರ್ಯಮೂರ್ತಿರ್ಮಹಾಪ್ರಭಃ ॥**

೫೯ 'ವ್ಯೋಮಮೂರ್ತಿಃ' ಆಕಾಶದಂತೆ ನಿರ್ಲಿಪ್ತವಾದ ಸ್ವರೂಪವುಳ್ಳವನು. ೬೦ 'ಅಮೂರ್ತಾತ್ಮಾ' ಅಮೂರ್ತಸ್ವರೂಪನು. ೬೧ 'ನಿರ್ಲೇಪಃ' ಕರ್ಮ ಸಂಬಂಧವಿಲ್ಲದವನು. ೬೨ 'ನಿರ್ಮಲಃ' ಭಾವಕರ್ಮರಹಿತನು. ೬೩ 'ಅಚಲಃ' ನಿಶ್ಚಲನು. ೬೪ 'ಸೋಮಮೂರ್ತಿಃ' ಚಂದ್ರನಂತೆ ಆಕಾರವುಳ್ಳವನು. ೬೫ 'ಸುಸೌಮ್ಯಾತ್ಮಾ' ಅತ್ಯಂತಸೌಮ್ಯವಾದ ಸ್ವಭಾವವುಳ್ಳವನು. ೬೬ 'ಸೂರ್ಯ ಮೂರ್ತಿಃ' ಸೂರ್ಯನಂತೆ ಕಾಂತಿಯುಳ್ಳಶರೀರವುಳ್ಳವನು. ೬೭ 'ಮಹಾಪ್ರಭಃ' ಹೆಚ್ಚುಪ್ರಭೆಯುಳ್ಳವನು.

**ಮಂತ್ರವಿನ್ಮಂತ್ರಕೃನ್ಮಂತ್ರೀ ಮಂತ್ರಮೂರ್ತಿ[೮]ರನಂತಗಃ ।**
**ಸ್ವತಂತ್ರ[೯]ಸ್ತಂತ್ರಕೃ[೧೦]ತ್ಸ್ವಂತಃ[೧೧]ಕೃತಾಂತಾಂತಃ [೧೨]ಕೃತಾಂತಕೃತ್ ॥ ೧೨೯ ॥**

೬೮ 'ಮಂತ್ರವಿತ್' ಮಂತ್ರವನ್ನು ತಿಳಿಯುವವನು. ೬೯ 'ಮಂತ್ರಕೃತ್' ಮಂತ್ರವನ್ನು–ಶಾಸ್ತ್ರವನ್ನುಮಾಡುವವನು. ೭೦ 'ಮಂತ್ರೀ' ಆತ್ಮವಿಚಾರಮಾಡುವವನು. ೭೧ 'ಮಂತ್ರಮೂರ್ತಿಃ' ಜ್ಞಾನಸ್ವರೂಪನು. ೭೨ 'ಅನಂತಗಃ' ಮೋಕ್ಷವನ್ನು ಹೊಂದಿದವನು. ೭೩ 'ಸ್ವತಂತ್ರಃ' ಕರ್ಮಪರತಂತ್ರತೆಯಿಲ್ಲದವನು. ೭೪ 'ತಂತ್ರಕೃತ್' ಆಗಮವನ್ನುನಿರ್ಮಾಣಮಾಡುವವನು. ೭೫ 'ಸ್ವಂತಃ' ಕರ್ಮವಿನಾಶಾಂತ್ಯದಲ್ಲಿ ಸುಖವುಳ್ಳವನು. ೭೬ 'ಕೃತಾಂತಾಂತಃ' ಮೃತ್ಯುವನ್ನು ನಾಶಮಾಡಿದವನು. ೭೭ 'ಕೃತಾಂತಕೃತ್' ಸಿದ್ಧಾಂತಕರ್ತನು.

**ಕೃತೀ ಕೃತಾರ್ಥಃ ಸತ್ಕೃತ್ಯಃ ಕೃತಕೃತ್ಯಃ ಕೃತಕ್ರತುಃ ।**
**ನಿತ್ಯೋ ಮೃತ್ಯುಂಜಯೋ ಮೃತ್ಯುರಮೃತಾತ್ಮಾ[೧೩]ಮೃತೋದ್ಭವಃ॥೧೩೦ ॥**

೭೮ 'ಕೃತೀ' ಪುಣ್ಯಶಾಲಿ ಅಥವಾ ಕುಶಲನು. ೭೯ 'ಕೃತಾರ್ಥಃ' ಪುರುಷಾರ್ಥಗಳನ್ನುಸಾಧಿಸಿದವನು. ೮೦ 'ಸತ್ಕೃತ್ಯಃ' ಶ್ರೇಷ್ಠವಾದ ಕಾರ್ಯವುಳ್ಳವನು. ೮೧ 'ಕೃತಕೃತ್ಯಃ' ಮಾಡಬೇಕಾದ ಕಾರ್ಯವನ್ನು ಪೂರ್ತಿಮಾಡಿದವನು. ೮೨ 'ಕೃತಕ್ರತುಃ' ಇಂದ್ರಾದಿಗಳಿಂದ ಮಾಡಲ್ಪಟ್ಟ ಪೂಜೆಯುಳ್ಳವನು. ೮೩ 'ನಿತ್ಯಃ' ನಾಶರಹಿತನು. ೮೪ 'ಮೃತ್ಯುಂಜಯಃ' ಮೃತ್ಯುವನ್ನು ಜಯಿಸಿದವನು. ೮೫ 'ಅಮೃತ್ಯುಃ' ಮರಣರಹಿತನು. ೮೬ 'ಅಮೃತಾತ್ಮಾ' ನಾಶರಹಿತವಾದ ಸ್ವರೂಪವುಳ್ಳವನು. ೮೭ 'ಅಮೃತೋದ್ಭವಃ' ನಾಶರಹಿತವಾದ ಉತ್ಪತ್ತಿಯುಳ್ಳವನು.

**[೧೪]ಬ್ರಹ್ಮನಿಷ್ಠಃ ಪರಂಬ್ರಹ್ಮಾ ಬ್ರಹ್ಮಾತ್ಮಾ ಬ್ರಹ್ಮಸಂಭವಃ ।**
**ಮಹಾಬ್ರಹ್ಮಪತಿ [೧೫]ರ್ಬ್ರಹ್ಮೇಡ್ಮಹಾಬ್ರಹ್ಮಪದೇಶ್ವರಃ ॥ ೧೩೧ ॥**

೧ ಶೋಭನಹೋತಾ. ೨ ಪೂಜ್ಯಾತ್ಮಾ. ೩ ಸುನೋತೀತಿ ಸುತ್ವಾ. ೪ ಪೂಜಕಃ. ೫ ಯಷ್ಟುಂಯೋಗ್ಯಃ. ೬ ಯಜನಕಾರಣಂ. ೭ ಸರ್ವೈಃ ಸೇವ್ಯತ್ವಾತ್ ಹವಿಃ. ೮ ಅನಂತಗುರಿತ್ಯಪಿ ಪಾಠಃ. ೯ ಆಗಮಕೃತ್. ೧೦ ಸುಖಾಂತಃ. ೧೧ ಯಮಾಂತಕಃ. ೧೨ ಸಿದ್ಧಾಂತಕರ್ತಾ. ೧೩ ಅವಿನಶ್ವರೋತ್ಪತ್ತಿಃ. ೧೪ ಆತ್ಮನಿಷ್ಠಃ. ೧೫ ಜ್ಞಾನೇಶ್ವರಃ.

೮೮ 'ಬ್ರಹ್ಮನಿಷ್ಠಃ' ಆತ್ಮಸ್ವರೂಪದಲ್ಲಿರುವವನು. ೮೯ 'ಪರಂಬ್ರಹ್ಮಾ' ಶ್ರೇಷ್ಠವಾದ ಜ್ಞಾನವುಳ್ಳವನು. ೯೦ 'ಬ್ರಹ್ಮಾತ್ಮಾ' ಜ್ಞಾನಸ್ವರೂಪನು. ೯೧ 'ಬ್ರಹ್ಮಸಂಭವಃ' ಜ್ಞಾನಕ್ಕೆ ಉತ್ಪತ್ತಿಸ್ಥಾನನು. ೯೨ 'ಬ್ರಹ್ಮಪತಿಃ' ಉತ್ತಮವಾದ ಕೇವಲಜ್ಞಾನಕ್ಕೆ ಸ್ವಾಮಿಯು. ೯೩ 'ಬ್ರಹ್ಮೇಟ್' ಜ್ಞಾನೇಶ್ವರನು. ೯೪ 'ಮಹಾಬ್ರಹ್ಮಪದೇಶ್ವರಃ' ಮೋಕ್ಷಸ್ಥಾನಕ್ಕೆ ಪ್ರಭುವು.

**ಸುಪ್ರಸನ್ನಃ ಪ್ರಸನ್ನಾತ್ಮಾ ಜ್ಞಾನಧರ್ಮದಮಪ್ರಭುಃ ।**
**ಪ್ರಶಮಾತ್ಮಾ ಪ್ರಶಾಂತಾತ್ಮಾ ಪುರಾಣಪುರುಷೋತ್ತಮಃ ॥ ೧೩೨ ॥**

**೩. ಇತಿ ಸ್ಥವಿಷ್ಠಾದಿಶತಮ್ ।**

೯೫ 'ಸುಪ್ರಸನ್ನಃ' ಅತ್ಯಂತಸಂತೋಷವುಳ್ಳವನು. ೯೬ 'ಪ್ರಸನ್ನಾತ್ಮಾ' ನಿರ್ಮಲವಾದ ಸ್ವರೂಪವುಳ್ಳವನು. ೯೭ 'ಜ್ಞಾನಧರ್ಮದಮಪ್ರಭುಃ' ಜ್ಞಾನ ಧರ್ಮದಿಂದ ಇಂದ್ರಿಯ ನಿಗ್ರಹವನ್ನುಮಾಡುವ ಪ್ರಭುವು. ೯೮ 'ಪ್ರಶಮಾತ್ಮಾ' ಶಾಂತಸ್ವರೂಪವುಳ್ಳವನು. ೯೯ 'ಪ್ರಶಾಂತಾತ್ಮಾ' ಕರ್ಮನಾಶದಿಂದ ಶಾಂತವಾದ ಆತ್ಮಸ್ವರೂಪವುಳ್ಳವನು. ೧೦೦ 'ಪುರಾಣಪುರುಷೋತ್ತಮಃ' ಪೂರ್ವಿಕ ಪುರುಷರಲ್ಲೆಲ್ಲಶ್ರೇಷ್ಠನು.

೩. ಸ್ಥವಿಷ್ಠ ಮೊದಲಾದ ನೂರು ಹೆಸರುಗಳು ಸಂಪೂರ್ಣವಾದುವು.

**ಮಹಾಶೋಕಧ್ವಜೋಽಶೋಕಃ [೧]ಕಃ ಸ್ರಷ್ಟಾ ಪದ್ಮವಿಷ್ಟರಃ ।**
**ಪದ್ಮೇಶಃ [೨]ಪದ್ಮಸಂಭೂತಿಃ ಪದ್ಮನಾಭಿ[೩]ರನುತ್ತರಃ ॥ ೧೩೩ ॥**

೧ 'ಮಹಾಶೋಕಧ್ವಜಃ' ದೊಡ್ಡ ಅಶೋಕವೃಕ್ಷವು ಚಿಹ್ನೆಯಾಗಿರುವವನು. ೨ 'ಅಶೋಕಃ' ಶೋಕರಹಿತನು. ೩ 'ಕಃ' ಬ್ರಹ್ಮನು. ೪ 'ಸ್ರಷ್ಟಾ' ಸೃಷ್ಟಿಸುವವನು. ೫ 'ಪದ್ಮವಿಷ್ಟರಃ' ಪದ್ಮಾಸನವುಳ್ಳವನು. ೬ 'ಪದ್ಮೇಶಃ' ಅಂತರಂಗಬಹಿರಂಗ ಲಕ್ಷ್ಮೀಗೊಡೆಯನು. ೭ 'ಪದ್ಮಸಂಭೂತಿಃ' ಶ್ರೀವಿಹಾರಕಾಲದಲ್ಲಿ ಹಿಂಭಾಗದಲ್ಲೂ ಮುಂಭಾಗದಲ್ಲೂ ಏಳೇಳು ಕಮಲಗಳ ಉತ್ಪತ್ತಿಯುಳ್ಳವನು. ೮ 'ಪದ್ಮನಾಭಿಃ' ಕಮಲದಂತೆ ನಾಭಿಯುಳ್ಳವನು. ೯ 'ಅನುತ್ತರಃ' ಸರ್ವಶ್ರೇಷ್ಠನು.

**[೪]ಪದ್ಮಯೋನಿ[೫]ರ್ಜಗದ್ಯೋನಿ[೬]ರಿತ್ಯಃ ಸ್ತುತ್ಯಃ ಸ್ತುತೀಶ್ವರಃ ।**
**ಸ್ತವನಾರ್ಹೋ [೭]ಹೃಷೀಕೇಶೋ [೮]ಜಿತಜೇಯಃ [೯]ಕೃತಕ್ರಿಯಃ ॥ ೧೩೪ ॥**

೧೦ 'ಪದ್ಮಯೋನಿಃ' ಹೃದಯಕಮಲದಲ್ಲಿ ಉದ್ಭವಿಸಿದವನು. ೧೧ 'ಜಗದ್ಯೋನಿಃ' ಲೋಕಕ್ಕೆ ತಂದೆಯಂತೆ ಹಿತಚಿಂತಕನು. ೧೨ 'ಇತ್ಯಃ' ಜ್ಞಾನದಿಂದ ತಿಳಿಯುವುದಕ್ಕೆ ಯೋಗ್ಯನು. ೧೩ 'ಸ್ತುತ್ಯಃ' ಸ್ತೋತ್ರಕ್ಕೆ ಯೋಗ್ಯನು. ೧೪ 'ಸ್ತುತೀಶ್ವರಃ' ಸ್ತುತಿಗೆ ಸ್ವಾಮಿಯು. ೧೫ 'ಸ್ತವನಾರ್ಹಃ' ಸ್ತುತಿಗೆ ಯೋಗ್ಯನು. ೧೬ 'ಹೃಷೀಕೇಶಃ' ಇಂದ್ರಿಯಗಳನ್ನು ವಶಮಾಡಿದವನು. ೧೭ 'ಜಿತಜೇಯಃ' ಜಯಿಸುವುದಕ್ಕೆಯೋಗ್ಯವಾದ ಕಾಮಕ್ರೋಧಾದಿಗಳನ್ನು ಜಯಿಸಿದವನು. ೧೮ 'ಕೃತಕ್ರಿಯಃ' ಕೃತಕೃತ್ಯನು.

**ಗಣಾಧಿಪೋ ಗಣಜ್ಯೇಷ್ಠೋ [೧೦]ಗಣ್ಯಃ ಪುಣ್ಯೋ ಗಣಾಗ್ರಣೀಃ ।**
**ಗುಣಾಕರೋ ಗುಣಾಂಭೋಧಿರ್ಗುಣಜ್ಞೋ ಗುಣನಾಯಕಃ ॥ ೧೩೫ ॥**

೧೯ 'ಗಣಾಧಿಪಃ' ಹನ್ನೆರಡು ಗಣ(ಸಮೂಹ)ಗಳಿಗೆ ಪ್ರಭುವು. ೨೦ 'ಗಣಜ್ಯೇಷ್ಠಃ' ಗಣಗಳಲ್ಲಿ ಶ್ರೇಷ್ಠನು. ೨೧ 'ಗಣ್ಯಃ' ಎಲ್ಲರಿಗೂ ಮುಖ್ಯನು. ೨೨ 'ಪುಣ್ಯಃ' ಪುಣ್ಯಸ್ವರೂಪನು. ೨೩ 'ಗಣಾಗ್ರಣೀಃ' ಗಣಗಳಿಗೆ ಮುಖ್ಯನು. ೨೪ 'ಗುಣಾಕರಃ' ಗುಣಗಳಿಗೆ ಉತ್ಪತ್ತಿಸ್ಥಾನನು. ೨೫ 'ಗುಣಾಂಭೋಧಿಃ' ಗುಣಗಳಿಗೆ ಸಮುದ್ರದಂತಿರುವವನು. ೨೬ 'ಗುಣಜ್ಞಃ' ಗುಣಗಳನ್ನು ತಿಳಿಯುವವನು. ೨೭ 'ಗುಣನಾಯಕಃ' ಗುಣಗಳಿಗೆ ಸ್ವಾಮಿಯು.

೧ ಬ್ರಹ್ಮಾ. ೨ ಪದ್ಮಾನಾಂ ಸಂಭೂತಿರ್ಯಸ್ಮಾತ್ಸಃ, ಸಪ್ತಪುರಃಪೃಷ್ಠತಶ್ಚೇತಿ ಪ್ರಸಿದ್ಧೇಃ. ೩ ನವಿದ್ಯತೇ ಉತ್ತರಃಶ್ರೇಷ್ಠೋ ಯಸ್ಮಾತ್ಸಃ. ೪ ಹೃದಯಕಮಲೋದ್ಭವಃ. ೫ ಜಗತ್ಪಿತಾ. ೬ ಗಮ್ಯಃ. ೭ ವಶೀಕೃತೇಂದ್ರಿಯಃ. ೮ ಜಿತಾಜೇಯಾಯಸ್ಯ. ೯ ಕೃತಕೃತ್ಯಃ. ೧೦ ಸರ್ವೇಷಾಮಗ್ರಣೀಃ.

**[೧]ಗುಣಾದರೀ [೨]ಗುಣೋಚ್ಛೇದೀ [೩]ನಿರ್ಗುಣಃ ಪುಣ್ಯಗೀರ್ಗುಣಃ ।**
**ಶರಣ್ಯಃ ಪುಣ್ಯವಾಕ್ಪೂತೋ ವರೇಣ್ಯಃ ಪುಣ್ಯನಾಯಕಃ ॥ ೧೩೬ ॥**

೨೮ 'ಗುಣಾದರೀ' ಗುಣಗಳಲ್ಲಿ ಪ್ರೀತಿಯುಳ್ಳವನು. ೨೯ 'ಗುಣೋಚ್ಛೇದೀ' ಇಂದ್ರಿಯಗಳನ್ನುನಾಶಮಾಡಿದವನು. ೩೦ 'ನಿರ್ಗುಣಃ' ಆತ್ಮನಿಗಿಂತ ಬೇರೆ ಪ್ರಧಾನವಿಲ್ಲದವನು. ೩೧ 'ಪುಣ್ಯಗೀಃ' ಪುಣ್ಯಕರವಾದ ವಚನವುಳ್ಳವನು. ೩೨ 'ಗುಣಃ' ಅನಂತಜ್ಞಾನಮೊದಲಾದ ಗುಣಸ್ವರೂಪನು. ೩೩ 'ಶರಣ್ಯಃ' ಅನಾಥರಕ್ಷಕನು. ೩೪ 'ಪುಣ್ಯವಾಕ್' ಪುಣ್ಯಕರವಾದ ವಾಣಿಯುಳ್ಳವನು. ೩೫ 'ಪೂತಃ' ಪವಿತ್ರನು. ೩೬ 'ವರೇಣ್ಯಃ' ಶ್ರೇಷ್ಠನು. ೩೭ 'ಪುಣ್ಯನಾಯಕಃ' ಪುಣ್ಯಕ್ಕಧಿಪತಿಯು.

**ಅಗಣ್ಯಃ ಪುಣ್ಯಧೀ[೪]ರ್ಗುಣ್ಯಃ ಪುಣ್ಯಕೃತ್ಪುಣ್ಯಶಾಸನಃ ।**
**ಧರ್ಮಾರಾಮೋ ಗುಣಗ್ರಾಮಃ ಪುಣ್ಯಾಪುಣ್ಯನಿರೋಧಕಃ ॥ ೧೩೭ ॥**

೩೮ 'ಅಗಣ್ಯಃ' ಅಪರಿಮಿತನು. ೩೯ 'ಪುಣ್ಯಧೀಃ' ಪುಣ್ಯಕರವಾದ ಬುದ್ಧಿಯುಳ್ಳವನು. ೪೦ 'ಗುಣ್ಯಃ' ಗುಣಗಳುಳ್ಳವನು. ೪೧ 'ಪುಣ್ಯಕೃತ್' ಪುಣ್ಯವನ್ನುಮಾಡುವವನು. ೪೨ 'ಪುಣ್ಯಶಾಸನಃ' ಪುಣ್ಯಕರವಾದ ಉಪದೇಶ ವುಳ್ಳವನು. ೪೩ 'ಧರ್ಮಾರಾಮಃ' ಧರ್ಮಕ್ಕೆ ಉದ್ಯಾನದಂತಿರುವವನು. ೪೪ 'ಗುಣಗ್ರಾಮಃ' ಗುಣಸಮುದಾಯವುಳ್ಳವನು. ೪೫ 'ಪುಣ್ಯಾಪುಣ್ಯನಿರೋಧಕಃ' ಪುಣ್ಯಪಾಪಗಳು ಬಾರದಂತೆ ತಡೆಯುವವನು.

**ಪಾಪಾಪೇತೋ ವಿಪಾಪಾತ್ಮಾ ವಿಪಾಪ್ಮಾ ವೀತಕಲ್ಮಷಃ ।**
**[೫]ನಿರ್ದ್ವಂದ್ವೋ ನಿರ್ಮದಃ ಶಾಂತೋ ನಿರ್ಮೋಹೋ ನಿರುಪದ್ರವಃ ॥**

೪೬ 'ಪಾಪಾಪೇತಃ' ಪಾಪದಿಂದ ಬಿಡುಗಡೆಯನ್ನು ಹೊಂದಿದವನು. ೪೭ 'ವಿಪಾಪಾತ್ಮಾ' ಪಾಪರಹಿತವಾದಸ್ವರೂಪವುಳ್ಳವನು. ೪೮ 'ವಿಪಾಪ್ಮಾ' ಪಾಪರಹಿತನು. ೪೯ 'ವೀತಕಲ್ಮಷಃ' ಭಾವಕರ್ಮರಹಿತನು. ೫೦ 'ನಿರ್ದ್ವಂದ್ವಃ' ಪರಿಗ್ರಹರಹಿತನು. ೫೧ 'ನಿರ್ಮದಃ' ಅಹಂಕಾರರಹಿತನು. ೫೨ 'ಶಾಂತಃ' ಮನಃಶಾಂತಿಯನ್ನುಹೊಂದಿದವನು. ೫೩ 'ನಿರ್ಮೋಹಃ' ಮೋಹರಹಿತನು. ೫೪ 'ನಿರುಪದ್ರವಃ' ತೊಂದರೆಯಿಲ್ಲದವನು.

**ನಿರ್ನಿಮೇಷೋ ನಿರಾಹಾರೋ ನಿಷ್ಕ್ರಿಯೋ ನಿರುಪಪ್ಲವಃ ।**
**ನಿಷ್ಕಲಂಕೋ ನಿರಸ್ತೈನಾ [೬]ನಿರ್ಧೂತಾಗಾ ನಿರಾಸ್ರವಃ ॥ ೧೩೯ ॥**

೫೫ 'ನಿರ್ನಿಮೇಷಃ' ಕಣ್ಣುಗಳ ರೆಪ್ಪೆಹೊಡೆಯದಿರುವವನು. ೫೬ 'ನಿರಾಹಾರಃ' ಕವಳಾಹಾರವಿಲ್ಲದವನು. ೫೭ 'ನಿಷ್ಕ್ರಿಯಃ' ಕ್ರಿಯಾರಹಿತನು. ೫೮ 'ನಿರುಪಪ್ಲವಃ' ಮನಃಕ್ಷೋಭೆಯಿಲ್ಲದವನು. ೫೯ 'ನಿಷ್ಕಲಂಕಃ' ಪಾಪಕಳಂಕವಿಲ್ಲದವನು. ೬೦ 'ನಿರಸ್ತೈನಾಃ' ಪಾಪವನ್ನು ದೂರಮಾಡಿದವನು. ೬೧ 'ನಿರ್ಧೂತಾಗಾಃ' ಅಪರಾಧವನ್ನು ಹೋಗಲಾಡಿಸಿದವನು (ನಿರ್ದೋಷಿ). ೬೨ 'ನಿರಾಸ್ರವಃ' ಕರ್ಮಗಳ ಆಸ್ರವವಿಲ್ಲದವನು.

**ವಿಶಾಲೋ ವಿಪುಲಜ್ಯೋತಿರತುಲೋಽಚಿಂತ್ಯವೈಭವಃ ।**
**ಸುಸಂವೃತಃ ಸುಗುಪ್ತಾತ್ಮಾ [೭]ಸುಭುತ್ಸುನಯತತ್ತ್ವವಿತ್ ॥ ೧೪೦ ॥**

೬೩ 'ವಿಶಾಲಃ' ವಿಸ್ತಾರವಾದ ಗುಣಗಳುಳ್ಳವನು. ೬೪ 'ವಿಪುಲಜ್ಯೋತಿಃ' ವಿಸ್ತಾರವಾದ ಪ್ರಭೆಯುಳ್ಳವನು. ೬೫ 'ಅತುಲಃ' ಸಾದೃಶ್ಯರಹಿತನು. ೬೬ 'ಅಚಿಂತ್ಯವೈಭವಃ' ಅಚಿಂತ್ಯವಾದ ಐಶ್ವರ್ಯವುಳ್ಳವನು. ೬೭ 'ಸುಸಂವೃತಃ' ಗಣಧರಾದಿಗಳಿಂದ ಚೆನ್ನಾಗಿ ಆವರಿಸಲ್ಪಟ್ಟವನು. ೬೮ 'ಸುಗುಪ್ತಾತ್ಮಾ' ಪಾಪದಿಂದ ರಕ್ಷಿಸಲ್ಪಟ್ಟ ಆತ್ಮಸ್ವರೂಪವುಳ್ಳವನು. ೬೯ 'ಸುಭುತ್' ಚೆನ್ನಾಗಿತಿಳಿಯುವವನು. ೭೦ 'ಸುನಯತತ್ತ್ವವಿತ್' ನೈಗಮಸಂಗ್ರಹ ಮೊದಲಾದ ಉತ್ತಮನಯಗಳ ಮರ್ಮವನ್ನು ತಿಳಿಯುವವನು.

೧ ಗುಣೇಷ್ವಾದರೋಽಸ್ಯಾಸ್ತೀತಿ. ೨ ಇಂದ್ರಿಯಚ್ಛೇದೀ. ೩ ಅಪ್ರಧಾನಃ, ಆತ್ಮನಃ ಸಕಾಶಾದನ್ಯಃ ಪ್ರಧಾನಂ ನ ವಿದ್ಯತೇ ಯಸ್ಯ. ೪ ಗುಣಾಸ್ಸಂತೀತಿ ಗುಣ್ಯಃ. ೫ ನಿಷ್ಪರಿಗ್ರಹಃ. ೬ ನಿರ್ಧೂತಮಾಗೋ ಯೇನ ಸಃ. ೭ ಸುಷ್ಠು ಜ್ಞಾತಾ.

**[೧]ಏಕವಿದ್ಯೋ ಮಹಾವಿದ್ಯೋ [೨]ಮುನಿಃ ಪರಿವೃಢಃ ಪತಿಃ ।**
**ಧೀಶೋ ವಿದ್ಯಾನಿಧಿಃ [೩]ಸಾಕ್ಷೀ ವಿನೇತಾ ವಿಹತಾಂತಕಃ ॥ ೧೪೧ ॥**

೭೧ 'ಏಕವಿದ್ಯಃ' ಕೇವಲಜ್ಞಾನವುಳ್ಳವನು. ೭೨ 'ಮಹಾವಿದ್ಯಃ' ಸರ್ವೋತ್ತಮ ವಾದ ಜ್ಞಾನವುಳ್ಳವನು. ೭೩ 'ಮುನಿಃ' ಪ್ರತ್ಯಕ್ಷಜ್ಞಾನವುಳ್ಳವನು. ೭೪ 'ಪರಿವೃಢಃ' ಎಲ್ಲಾಗುಣಗಳಿಂದಲೂ ವೃದ್ಧಿಹೊಂದುವವನು. ೭೫ 'ಪತಿಃ' ಸ್ವಾಮಿಯು. ೭೬ 'ಧೀಶಃ' ಬುದ್ಧಿಗೆ ಸ್ವಾಮಿಯು. ೭೭ 'ವಿದ್ಯಾನಿಧಿಃ' ಜ್ಞಾನಕ್ಕೆ ನಿಧಿಯು. ೭೮ 'ಸಾಕ್ಷೀ' ಜ್ಞಾನವೇ ಸಾಕ್ಷಿಯಾಗುಳ್ಳವನು, ಪ್ರತ್ಯಕ್ಷಜ್ಞಾನಿಯೆಂದರ್ಥವು. ೭೯ 'ವಿನೇತಾ' ಭವ್ಯರನ್ನು ಮೋಕ್ಷಮಾರ್ಗದಲ್ಲಿ ತೆಗೆದುಕೊಂಡುಹೋಗುವವನು. ೮೦ 'ವಿಹತಾಂತಕಃ' ಮೃತ್ಯುವನ್ನುನಾಶಮಾಡಿದವನು.

**ಪಿತಾ ಪಿತಾಮಹಃ [೪]ಪಾತಾ ಪವಿತ್ರಃ ಪಾವನೋ ಗತಿಃ ।**
**ತ್ರಾತಾ ಭಿಷಗ್ವರೋ ವರ್ಯೋ ವರದಃ ಪರಮಃ ಪುಮಾನ್ ॥ ೧೪೨ ॥**

೮೧ 'ಪಿತಾ' ಪ್ರಾಣಿಗಳ ಹಿತಚಿಂತಕನು. ೮೨ 'ಪಿತಾಮಹಃ' ಸರ್ವಶ್ರೇಷ್ಠನು, ಪೂಜ್ಯನೆಂದರ್ಥವು. ೮೩ 'ಪಾತಾ' ರಕ್ಷಕನು. ೮೪ 'ಪವಿತ್ರಃ' ಪರಿಶುದ್ಧನು. ೮೫ 'ಪಾವನಃ' ಪಾವನನು. ೮೬ 'ಗತಿಃ' ಜ್ಞಾನಿಯು. ೮೭ 'ತ್ರಾತಾ' ರಕ್ಷಕನು. ೮೮ 'ಭಿಷಗ್ವರಃ' ಶ್ರೇಷ್ಠವಾದ ವೈದ್ಯನು. ೮೯ 'ವರ್ಯಃ' ಮುಕ್ತಿಲಕ್ಷ್ಮಿಯಿಂದ ವರಿಸಲ್ಪಡುವವನು. ೯೦ 'ವರದಃ' ಇಷ್ಟಾರ್ಥವನ್ನುಕೊಡುವವನು. ೯೧ 'ಪರಮಃ' ಮಹಾವೈಭವವುಳ್ಳವನು. ೯೨ 'ಪುಮಾನ್' ಪವಿತ್ರಮಾಡುವವನು.

**[೫]ಕವಿಃ [೬]ಪುರಾಣಪುರುಷೋ [೭]ವರ್ಷೀಯಾ[೮]ನೃಷಭಃ ಪುರುಃ ।**
**[೯]ಪ್ರತಿಷ್ಠಾಪ್ರಸವೋ ಹೇತುರ್ಭುವನೈಕಪಿತಾಮಹಃ ॥ ೧೪೩ ॥**

**೪. ಇತಿ ಮಹಾದಿಶತಮ್ ।**

೯೩ 'ಕವಿಃ' ಕಾವ್ಯಕ್ಕೆ ಕರ್ತನು. ೯೪ 'ಪುರಾಣಪುರುಷಃ' ಪೂರ್ವಿಕಪುರುಷನು. ೯೫ 'ವರ್ಷೀಯಾನ್' ವೃದ್ಧನು, ಜ್ಞಾನಿಯೆಂದು ಭಾವವು. ೯೬ 'ಋಷಭಃ' ಜ್ಞಾನಿಯು. ೯೭ 'ಪುರುಃ' ಶ್ರೇಷ್ಠನು. ೯೮ 'ಪ್ರತಿಷ್ಠಾಪ್ರಸವಃ' ಸ್ಥಿರತ್ವಕ್ಕೆ ಉತ್ಪತ್ತಿಸ್ಥಾನನು. ೯೯ 'ಹೇತುಃ' ಜಗತ್ತಿಗೆ ಕಾರಣಸ್ವರೂಪನು. ೧೦೦ 'ಭುವನೈಕಪಿತಾಮಹಃ' ಲೋಕಕ್ಕೆಲ್ಲ ಹಿತಚಿಂತಕನಾದ ಪೂಜ್ಯನು.

೪. ಮಹಾಶೋಕಧ್ವಜ ಮೊದಲಾದ ನೂರು ಹೆಸರುಗಳು ಸಂಪೂರ್ಣವಾದುವು.

**ಶ್ರೀವೃಕ್ಷಲಕ್ಷಣಃ [೧೦]ಶ್ಲಕ್ಷ್ಣೋ [೧೧]ಲಕ್ಷಣ್ಯಃ ಶುಭಲಕ್ಷಣಃ ।**
**ನಿರಕ್ಷಃ ಪುಂಡರೀಕಾಕ್ಷಃ [೧೨]ಪುಷ್ಕಲಃ [೧೩]ಪುಷ್ಕರೇಕ್ಷಣಃ ॥ ೧೪೪ ॥**

೧ 'ಶ್ರೀವೃಕ್ಷಲಕ್ಷಣಃ' ಅಶೋಕವೃಕ್ಷವು ಲಕ್ಷಣವಾಗುಳ್ಳವನು. ೨ 'ಶ್ಲಕ್ಷ್ಣಃ' ಸೂಕ್ಷ್ಮಸ್ವರೂಪನು. ೩ 'ಲಕ್ಷಣ್ಯಃ' ಲಕ್ಷಣವುಳ್ಳವನು. ೪ 'ಶುಭಲಕ್ಷಣಃ' ಶುಭ ಲಕ್ಷಣಗಳುಳ್ಳವನು. ೫ 'ನಿರಕ್ಷಃ' ಇಂದ್ರಿಯಜ್ಞಾನರಹಿತನು. ೬ 'ಪುಂಡರೀಕಾಕ್ಷಃ' ಶ್ವೇತಕಮಲದಂತೆ ಕಣ್ಣುಗಳುಳ್ಳವನು. ೭ 'ಪುಷ್ಕಲಃ' ಮಂಗಲಸ್ವರೂಪನು. ೮ 'ಪುಷ್ಕರೇಕ್ಷಣಃ' ಕಮಲದಂತೆ ಕಣ್ಣುಗಳುಳ್ಳವನು.

**ಸಿದ್ಧಿದಃ ಸಿದ್ಧಸಂಕಲ್ಪಃ ಸಿದ್ಧಾತ್ಮಾ ಸಿದ್ಧಸಾಧನಃ ।**
**[೧೪]ಬುದ್ಧಬೋಧ್ಯೋ ಮಹಾಬೋಧಿರ್ವರ್ಧಮಾನೋ ಮಹರ್ಧಿಕಃ ॥**

೯ 'ಸಿದ್ಧಿದಃ' ಮುಕ್ತಿಯನ್ನು ಕೊಡುವವನು. ೧೦ 'ಸಿದ್ಧಸಂಕಲ್ಪಃ' ಸಫಲವಾದ ಸಂಕಲ್ಪವುಳ್ಳವನು. ೧೧ 'ಸಿದ್ಧಾತ್ಮಾ' ಕರ್ಮಗಳಿಂದ ಬಿಡುಗಡೆಯನ್ನುಹೊಂದಿದ ಸ್ವರೂಪವುಳ್ಳವನು. ೧೨ 'ಸಿದ್ಧಸಾಧನಃ' ಸಫಲವಾದ ಉಪದೇಶವುಳ್ಳವನು. ೧೩ 'ಬುದ್ಧಬೋಧ್ಯಃ' ತಿಳಿಯುವುದಕ್ಕೆ ಯೋಗ್ಯವಾದುವುಗಳನ್ನು ತಿಳಿದವನು. ೧೪ 'ಮಹಾಬೋಧಿಃ' ಉತ್ಕೃಷ್ಟವಾದ ರತ್ನತ್ರಯವುಳ್ಳವನು. ೧೫ 'ವರ್ಧಮಾನಃ'

೧ ಕೇವಲಜ್ಞಾನೀ. ೨ ಪ್ರತ್ಯಕ್ಷಜ್ಞಾನೀ. ೩ ಜ್ಞಾನಸಾಕ್ಷೀ. ೪ ಪಾಲಕಃ. ೫ ಕಾವ್ಯಕರ್ತಾ. ೬ ಪುರಾಭವಃ ಪುರಾಣಃ. ೭ ವೃದ್ಧಃ. ೮ ಜ್ಞಾನೀ. ೯ ಪ್ರತಿಷ್ಠಾಯಾಃ ಸ್ಥೈರ್ಯಸ್ಯ ಪ್ರಸವೋ ಯಸ್ಮಾತ್ಸಃ. ೧೦ ಸೂಕ್ಷ್ಮಃ. ೧೧ ಲಕ್ಷಣವಾನ್. ೧೨ ಶ್ರೇಯಾನ್. ೧೩ ಕಮಲನಯನಃ. ೧೪ ಬುದ್ಧಾನಿ ಬೋಧ್ಯಾನಿ ಯೇನ ಸಃ.

ಜ್ಞಾನಾದಿಗುಣಗಳಿಂದ ವೃದ್ಧಿಹೊಂದುವವನು. ೧೬ 'ಮಹರ್ದ್ಧಿಕಃ' ಮಹಾ ಮಹಿಮೆಯುಳ್ಳವನು.

**[1]ವೇದಾಂಗೋ ವೇದವಿದ್ವೇದ್ಯೋ ಜಾತರೂಪೋ ವಿದಾಂವರಃ ।**
**[2]ವೇದವೇದ್ಯಃ ಸ್ವಸಂವೇದ್ಯೋ ವಿವೇದೋ ವದತಾಂವರಃ ॥ ೧೪೬ ॥**

೧೭ 'ವೇದಾಂಗಃ' ವೇದದಿಂದ ತಿಳಿಯಲ್ಪಡುವವನು. ೧೮ 'ವೇದವಿತ್' ವೇದವನ್ನು ತಿಳಿಯುವವನು. ೧೯ 'ವೇದ್ಯಃ' ತಿಳಿಯುವುದಕ್ಕೆ ಯೋಗ್ಯನು. ೨೦ 'ಜಾತರೂಪಃ' ಜನನಕಾಲದ ರೂಪವಿರುವವನು-ನಗ್ನಸ್ವರೂಪನು. ೨೧ 'ವಿದಾಂವರಃ' ಜ್ಞಾನಿಗಳಲ್ಲಿ ಶ್ರೇಷ್ಠನು. ೨೨ 'ವೇದವೇದ್ಯಃ' ಆಗಮದಿಂದ ತಿಳಿಯುವುದಕ್ಕೆ ಯೋಗ್ಯನು. ೨೩ 'ಸ್ವಸಂವೇದ್ಯಃ' ತನ್ನಿಂದ ತಾನೇ ತಿಳಿಯುವುದಕ್ಕೆ ಯೋಗ್ಯನು. ೨೪ 'ವಿವೇದಃ' ವಿಲಕ್ಷಣವಾದ ಜ್ಞಾನವುಳ್ಳವನು. ೨೫ 'ವದತಾಂವರಃ' ವಕ್ತೃಗಳಲ್ಲಿ ಶ್ರೇಷ್ಠನು.

**ಅನಾದಿನಿಧನೋ ವ್ಯಕ್ತೋ ವ್ಯಕ್ತವಾಗ್ವ್ಯಕ್ತಶಾಸನಃ ।**
**ಯುಗಾದಿಕೃದ್ಯುಗಾಧಾರೋ ಯುಗಾದಿರ್ಜಗದಾದಿಜಃ ॥ ೧೪೭ ॥**

೨೬ 'ಅನಾದಿನಿಧನಃ' ಜನ್ಮಮೃತ್ಯುರಹಿತನು. ೨೭ 'ವ್ಯಕ್ತಃ' ಆತ್ಮಸ್ವರೂಪದಿಂದ ವ್ಯಕ್ತನಾದವನು. ೨೮ 'ವ್ಯಕ್ತವಾಕ್' ಸ್ಫುಟವಾದ ವಚನವುಳ್ಳವನು. ೨೯ 'ವ್ಯಕ್ತಶಾಸನಃ' ವ್ಯಕ್ತವಾದ-ಸಂಶಯರಹಿತವಾದ ಉಪದೇಶವುಳ್ಳವನು. ೩೦ 'ಯುಗಾದಿಕೃತ್' ಯುಗದ ಆದಿಕರ್ತನು. ೩೧ 'ಯುಗಾಧಾರಃ' ಯುಗಗಳಿಗೆ ಆಧಾರನು. ೩೨ 'ಯುಗಾದಿಃ' ಯುಗದ ಆದಿಯಲ್ಲಿರುವವನು. ೩೩ 'ಜಗದಾದಿಜಃ' ಜಗತ್ತಿನಲ್ಲಿ ಮೊಟ್ಟಮೊದಲು ಹುಟ್ಟಿದವನು.

**[3]ಅತೀಂದ್ರೋ [4]ತೀಂದ್ರಿಯೋ ಧೀಂದ್ರೋ [5]ಮಹೇಂದ್ರೋ[6]ತೀಂದ್ರಿಯಾರ್ಥದೃಕ್ ।**
**ಅನಿಂದ್ರಿಯೋಹಮಿಂದ್ರಾರ್ಚ್ಯೋ ಮಹೇಂದ್ರಮಹಿತೋ ಮಹಾನ್ ॥**

೩೪ 'ಅತೀಂದ್ರಃ' ಅತಿಶಯವಾಗಿ ಪರಮೈಶ್ವರ್ಯವನ್ನನುಭವಿಸುವವನು. ೩೫ 'ಅತೀಂದ್ರಿಯಃ' ಇಂದ್ರಿಯಜ್ಞಾನವನ್ನತಿಕ್ರಮಿಸಿದವನು. ೩೬ 'ಧೀಂದ್ರಃ' ಬುದ್ಧಿಗೆ ಪ್ರಭುವು. ೩೭ 'ಮಹೇಂದ್ರಃ' ಪೂಜೆಗೆ ಸ್ವಾಮಿಯು. ೩೮ 'ಅತೀಂದ್ರಿಯಾರ್ಥದೃಕ್' ಅತೀಂದ್ರಿಯಪದಾರ್ಥಗಳನ್ನು ನೋಡುವವನು. ೩೯ 'ಅನಿಂದ್ರಿಯಃ' ಭಾವೇಂದ್ರಿಯರಹಿತನು. ೪೦ 'ಅಹಮಿಂದ್ರಾರ್ಚ್ಯಃ' ಅಹಮಿಂದ್ರ ದೇವತೆಗಳಿಂದ ಪೂಜಿಸಲ್ಪಡುವುದಕ್ಕೆ ಯೋಗ್ಯನು. ೪೧ 'ಮಹೇಂದ್ರಮಹಿತಃ' ದೇವೇಂದ್ರರಿಂದ ಪೂಜಿಸಲ್ಪಟ್ಟವನು. ೪೨ 'ಮಹಾನ್' ಪೂಜ್ಯನು.

**[7]ಉದ್ಭವಃ [8]ಕಾರಣಂ ಕರ್ತಾ ಪಾರಗೋ ಭವತಾರಕಃ ।**
**ಅಗಾಹ್ಯೋ [9]ಗಹನಂ [10]ಗುಹ್ಯಂ ಪರಾರ್ಧ್ಯಃ ಪರಮೇಶ್ವರಃ ॥ ೧೪೯ ॥**

೪೩ 'ಉದ್ಭವಃ' ಸಂಸಾರವನ್ನು ದಾಟಿದವನು. ೪೪ 'ಕಾರಣಂ' ಕಾರಣಪುರುಷನು. ೪೫ 'ಕರ್ತಾ' ಜಗತ್ತಿಗೆ ಕರ್ತನು. ೪೬ 'ಪಾರಗಃ' ಸಂಸಾರವೆಂಬ ಸಮುದ್ರದ ಪಾರವನ್ನುಹೊಂದಿದವನು. ೪೭ 'ಭವತಾರಕಃ' ಭವ್ಯಜೀವಗಳನ್ನು ಸಂಸಾರವೆಂಬ ಸಮುದ್ರದಿಂದ ದಾಟಿಸುವವನು. ೪೮ 'ಅಗಾಹ್ಯಃ' ತಿಳಿಯಲಶಕ್ಯವಾದ ಸ್ವರೂಪವುಳ್ಳವನು. ೪೯ 'ಗಹನಂ' ಗಂಭೀರನು. ೫೦ 'ಗುಹ್ಯಂ' ಗುಪ್ತವಾದ ಸ್ವರೂಪವುಳ್ಳವನು. ೫೧ 'ಪರಾರ್ಧ್ಯಃ' ಸರ್ವಶ್ರೇಷ್ಠನು. ೫೨ 'ಪರಮೇಶ್ವರಃ' ಸರ್ವರಿಗೂ ಸ್ವಾಮಿಯು.

**ಅನಂತರ್ಧಿರಮೇಯರ್ದ್ಧಿರಚಿಂತ್ಯರ್ಧಿಃ ಸಮಗ್ರಧೀಃ ।**
**ಪ್ರಾಗ್ರ್ಯಃ ಪ್ರಾಗ್ರಹರೋಭ್ಯಗ್ರಃ ಪ್ರತ್ಯಗ್ರೋಗ್ರ್ಯೋಗ್ರಿಮೋಗ್ರಜಃ ॥ ೧೫೦ ॥**

೧ ವೇದಜ್ಞಾಪಕಃ, ವೇದೇನಾಂಗ್ಯತೇ ಜ್ಞಾಯತ ಇತಿ ವಾ. ೨ ಆಗಮೇನ ಜ್ಞೇಯಃ. ೩ ಅತಿಶಯೇನೇಂದ್ರಃ. ೪ ಇಂದ್ರಿಯಜ್ಞಾನಮತಿಕ್ರಾಂತಃ. ೫ ಪೂಜಾಧಿಪಃ. ೬ ಅತೀಂದ್ರಿಯಾರ್ಥಕೃದಿತ್ಯಪಿ ಪಾಠಃ. ೭ ಉದ್ಗತಸಂಸಾರಃ. ೮ ಕಾರಣಪುರುಷಃ. ೯ ದುಷ್ಪ್ರವೇಶ್ಯಃ. ೧೦ ರಹಸ್ಯಂ.

೫೩ 'ಅನಂತರ್ದ್ಧಿಃ' ಅನಂತಸಂಪತ್ತುಳ್ಳವನು. ೫೪ 'ಅಮೇಯರ್ದ್ಧಿಃ' ತಿಳಿಯಲಶಕ್ಯವಾದ ಸಂಪತ್ತುಳ್ಳವನು. ೫೫ 'ಅಚಿಂತ್ಯರ್ದ್ಧಿಃ' ಅಚಿಂತ್ಯವಾದ ಸಂಪತ್ತುಳ್ಳವನು. ೫೬ 'ಸಮಗ್ರಧೀಃ' ಪರಿಪೂರ್ಣವಾದ ಬುದ್ಧಿಯುಳ್ಳವನು. ೫೭ 'ಪ್ರಾಗ್ರ್ಯಃ' ಮುಖ್ಯನು. ೫೮ 'ಪ್ರಾಗ್ರಹರಃ' ಶ್ರೇಷ್ಠತ್ವವನ್ನು ಹೊಂದಿದವನು. ೫೯ 'ಅಭ್ಯಗ್ರಃ' ಭವ್ಯರ ಸಮ್ಮುಖದಲ್ಲಿರುವವನು. ೬೦ 'ಪ್ರತ್ಯಗ್ರಃ' ನವೀನವಾದ ಸೂಕ್ಷ್ಮಪರ್ಯಾಯಗಳನ್ನು ಹೊಂದುವವನು. ೬೧ 'ಅಗ್ರ್ಯಃ' ಶ್ರೇಷ್ಠನು. ೬೨ 'ಅಗ್ರಿಮಃ' ಮೊದಲನೆಯವನು. ೬೩ 'ಅಗ್ರಜಃ' ಮೊದಲು ಹುಟ್ಟಿದವನು.

**ಮಹಾತಪಾ ಮಹಾತೇಜಾ ಮಹೋದರ್ಕೋ ಮಹೋದಯಃ ।**
**ಮಹಾಯಶಾ ಮಹಾಧಾಮಾ ಮಹಾಸತ್ತ್ವೋ ಮಹಾಧೃತಿಃ ॥ ೧೫೧ ॥**

೬೪ 'ಮಹಾತಪಾಃ' ಮಹಾತಪಸ್ಸುಳ್ಳವನು. ೬೫ 'ಮಹಾತೇಜಾಃ' ಮಹಾತೇಜಸ್ಸುಳ್ಳವನು. ೬೬ 'ಮಹೋದರ್ಕಃ' ಅಧಿಕವಾದ ಉತ್ತರಫಲವುಳ್ಳವನು. ೬೭ 'ಮಹೋದಯಃ' ಮಹಾಭ್ಯುದಯವುಳ್ಳವನು. ೬೮ 'ಮಹಾಯಶಾಃ' ಅಧಿಕವಾದ ಯಶಸ್ಸುಳ್ಳವನು. ೬೯ 'ಮಹಾಧಾಮಾ' ಅಧಿಕವಾದ ಕಾಂತಿಯುಳ್ಳವನು. ೭೦ 'ಮಹಾಸತ್ತ್ವಃ' ಅಧಿಕವಾದ ಶಕ್ತಿಯುಳ್ಳವನು. ೭೧ 'ಮಹಾಧೃತಿಃ' ಅಧಿಕವಾದ ಧೈರ್ಯವುಳ್ಳವನು.

**ಮಹಾಧೈರ್ಯೋ ಮಹಾವೀರ್ಯೋ ಮಹಾಸಂಪನ್ಮಹಾಬಲಃ ।**
**ಮಹಾಶಕ್ತಿರ್ಮಹಾಜ್ಯೋತಿರ್ಮಹಾಭೂತಿರ್ಮಹಾದ್ಯುತಿಃ ॥ ೧೫೨ ॥**

೭೨ 'ಮಹಾಧೈರ್ಯಃ' ಮಹಾಧೀರತ್ವವುಳ್ಳವನು. ೭೩ 'ಮಹಾವೀರ್ಯಃ' ಹೆಚ್ಚು ಬಲವುಳ್ಳವನು. ೭೪ 'ಮಹಾಸಂಪತ್' ಹೆಚ್ಚಾದ ಸಂಪತ್ತುಳ್ಳವನು. ೭೫ 'ಮಹಾಬಲಃ' ಹೆಚ್ಚು ಸಾಮರ್ಥ್ಯವುಳ್ಳವನು. ೭೬ 'ಮಹಾಶಕ್ತಿಃ' ಹೆಚ್ಚು ಶಕ್ತಿಯುಳ್ಳವನು. ೭೭ 'ಮಹಾಜ್ಯೋತಿಃ' ಅಧಿಕವಾದ ಕಾಂತಿಯುಳ್ಳವನು. ೭೮ 'ಮಹಾಭೂತಿಃ' ಹೆಚ್ಚು ಐಶ್ವರ್ಯವುಳ್ಳವನು. ೭೯ 'ಮಹಾದ್ಯುತಿಃ' ಅಧಿಕವಾದ ಪ್ರಭೆಯುಳ್ಳವನು.

**ಮಹಾಮತಿರ್ಮಹಾನೀತಿರ್ಮಹಾಕ್ಷಾಂತಿರ್ಮಹಾದಯಃ ।**
**ಮಹಾಪ್ರಜ್ಞೋ ಮಹಾನಂದೋ ಮಹಾಭಾಗೋ ಮಹಾಕವಿಃ ॥**

೮೦ 'ಮಹಾಮತಿಃ' ಹೆಚ್ಚು ಬುದ್ಧಿಯುಳ್ಳವನು. ೮೧ 'ಮಹಾನೀತಿಃ' ಮಹಾನೀತಿಯುಳ್ಳವನು. ೮೨ 'ಮಹಾಕ್ಷಾಂತಿಃ' ಶ್ರೇಷ್ಠವಾದ ಕ್ಷಮೆಯುಳ್ಳವನು. ೮೩ 'ಮಹಾದಯಃ' ಉತ್ಕೃಷ್ಟವಾದ ದಯೆಯುಳ್ಳವನು. ೮೪ 'ಮಹಾಪ್ರಜ್ಞಃ' ಅಧಿಕವಾದ ಬುದ್ಧಿಯುಳ್ಳವನು. ೮೫ 'ಮಹಾನಂದಃ' ಅಧಿಕವಾದ ಆನಂದವುಳ್ಳವನು. ೮೬ 'ಮಹಾಭಾಗಃ' ಮಹಾಪುಣ್ಯಶಾಲಿಯು. ೮೭ 'ಮಹಾಕವಿಃ' ದೊಡ್ಡ ಕವಿಯು.

**[1]ಮಹಾಮಹಾ ಮಹಾಕೀರ್ತಿರ್ಮಹಾಕಾಂತಿರ್ಮಹಾವಪುಃ ।**
**ಮಹಾದಾನೋ ಮಹಾಜ್ಞಾನೋ ಮಹಾಯೋಗೋ ಮಹಾಗುಣಃ ॥**

೮೮ 'ಮಹಾಮಹಾಃ' ಮಹಾತೇಜಸ್ಸುಳ್ಳವನು. ೮೯ 'ಮಹಾಕೀರ್ತಿಃ' ಅಧಿಕವಾದ ಕೀರ್ತಿಯುಳ್ಳವನು. ೯೦ 'ಮಹಾಕಾಂತಿಃ' ಅಧಿಕವಾದ ಕಾಂತಿಯುಳ್ಳವನು. ೯೧ 'ಮಹಾವಪುಃ' ದೊಡ್ಡ ಆಕೃತಿಯುಳ್ಳವನು. ೯೨ 'ಮಹಾದಾನಃ' ಹೆಚ್ಚು ಜ್ಞಾನದಾನಮಾಡುವವನು. ೯೩ 'ಮಹಾಜ್ಞಾನಃ' ಹೆಚ್ಚು ಜ್ಞಾನವುಳ್ಳವನು. ೯೪ 'ಮಹಾಯೋಗಃ' ಶ್ರೇಷ್ಠವಾದ ಮನೋವಚನಕಾಯಗಳ ವ್ಯಾಪಾರವುಳ್ಳವನು. ೯೫ 'ಮಹಾಗುಣಃ' ಅಧಿಕವಾದ ಗುಣಗಳುಳ್ಳವನು.

**[2]ಮಹಾಮಹಪತಿಃ ಪ್ರಾಪ್ತ ಮಹಾಕಲ್ಯಾಣಪಂಚಕಃ ।**
**ಮಹಾಪ್ರಭುರ್ಮಹಾಪ್ರಾತಿಹಾರ್ಯಾಧೀಶೋ ಮಹೇಶ್ವರಃ ॥ ೧೫೫ ॥**

**೫. ಇತಿ ಶ್ರೀವೃಕ್ಷಾದಿಶತಮ್ ।**

೧ ಮಹಾತೇಜಾಃ. ೨ ಮಹಾಮಹಾಖ್ಯಪೂಜಾಪತಿಃ.

ತ್ವ[೧]ಯ್ಯನಂತಮುಖೋತ್ಸರ್ಪತ್ಕೇವಲಾಮಲಲೋಚನೇ ।
ಚಾತುರಾಸ್ಯಮಿದಂ ಯುಕ್ತಂ [೨]ನಷ್ಟಘಾತಿಚತುಷ್ಟಯೇ ॥ ೪೪ ॥

ಅನಂತಮುಖವಾಗಿ ಹರಡುತ್ತಿರುವ ಕೇವಲಜ್ಞಾನವೆಂಬ ನಿರ್ಮಲವಾದ ನೇತ್ರವುಳ್ಳವನೂ ಜ್ಞಾನಾವರಣಮೊದಲಾದ ನಾಲ್ಕುಘಾತಿಕರ್ಮಗಳನ್ನು ನಾಶಮಾಡಿದವನೂ ಆದ ನಿನ್ನಲ್ಲಿ ಈ ನಾಲ್ಕುಮುಖವಾಗಿರುವುದು ಯುಕ್ತವಾಗಿದೆ. ಕೇವಲಜ್ಞಾನವು ಅನಂತವಿಷಯಗಳನ್ನು ವಿಷಯೀಕರಿಸುವುದರಿಂದ ಅನಂತಮುಖವಾಗಿದೆಯೆಂದಭಿಪ್ರಾಯವು.

ಸರ್ವವಿದ್ಯೇಶ್ವರೋ ಯೋಗೀ ಚತುರಾಸ್ಯಸ್ತ್ವಮಕ್ಷರಃ ।
ಸರ್ವತೋ[೩]ಕ್ಷಿಮಯಂ ಜ್ಯೋತಿ[೪]ಸ್ತನ್ವಾನೋ ಭಾ[೫]ಸ್ಯಧೀಶಿತಃ ॥ ೪೫ ॥

ಎಲೈ ಪ್ರಭುವೆ! ಸಮಸ್ತವಿದ್ಯೆಗಳಿಗೆ ಪ್ರಭುವೂ ಯೋಗಿಯೂ ನಾಲ್ಕುಮುಖಗಳುಳ್ಳವನೂ ನಾಶರಹಿತನೂ ಆದ ನೀನು ಎಲ್ಲಾಕಡೆಯಲ್ಲೂ ಆತ್ಮಸ್ವರೂಪವಾದ ಜ್ಯೋತಿಯನ್ನು ವಿಸ್ತರಿಸುವವನಾಗಿ ಪ್ರಕಾಶಿಸುತ್ತಿ.

ಅಚ್ಛಾಯತ್ವಮನುನ್ಮೇಷನಿಮೇಷತ್ವಂ ಚ ತೇ ವಪುಃ ।
ಧತ್ತೇ ತೇಜೋಮಯಂ ದಿವ್ಯಂ ಪರಮೌದಾರಿಕಾಹ್ವಯಮ್ ॥ ೪೬ ॥

ತೇಜೋಮಯವೂ ಶ್ರೇಷ್ಠವೂ ಪರಮೌದಾರಿಕವೆಂದು ಹೆಸರುಳ್ಳದೂ ಆದ ನಿನ್ನ ಶರೀರವು ನೆರಳಿಲ್ಲದಿರುವಿಕೆಯನ್ನೂ ರೆಪ್ಪೆಹೊಡೆಯದಿರುವಿಕೆಯನ್ನೂ ಧರಿಸುತ್ತದೆ. ಸ್ವಾಮಿಯ ಶರೀರದ ನೆರಳೂ ಬೀಳುವುದಿಲ್ಲ, ಕಣ್ಣುಗಳು ರೆಪ್ಪೆಹೊಡೆಯುವುದೂ ಇಲ್ಲವೆಂದು ಭಾವವು.

ಬಿಭ್ರಾಣೋಪ್ಯಧ್ಯಧಿಚ್ಛತ್ರ[೬]ಮಚ್ಛಾಯಾಂಗಸ್ತ್ವಮೀಕ್ಷಸೇ ।
ಮಹತಾಂ ಚೇಷ್ಟಿತಂ ಚಿತ್ರಮಥವೌಜಸ್ತವೇದೃಶಮ್ ॥ ೪೭ ॥

ಭಗವಂತನೆ! ನೀನು ಒಂದರ ಮೇಲೊಂದು ಶ್ವೇತಚ್ಛತ್ರವನ್ನು ಧರಿಸುವವನಾಗಿದ್ದರೂ ಛತ್ರಿಯ ನೆರಳು ಬೀಳದಿರುವ ಶರೀರವುಳ್ಳವನಾಗಿ ಕಾಣುತ್ತಿ. ಮಹಾತ್ಮರ ವ್ಯಾಪಾರವು ಆಶ್ಚರ್ಯಕರವಾಗಿದೆ. ಅಥವಾ ನಿನ್ನ ತೇಜಸ್ಸು ಈ ಪ್ರಕಾರವಾದುದು.

ನಿಮೇಷಾಪಾಯಧೀರಾಕ್ಷಂ ತವ ವಕ್ತ್ರಾಬ್ಜಮೀಕ್ಷಿತುಮ್ ।
[೭]ತ್ವಯೇವ ನಯನಸ್ಪಂಧೋ ನೂನಂ ದೇವೈಶ್ಚ [೮]ಸಂಹೃತಃ ॥ ೪೮ ॥

ರೆಪ್ಪೆಹೊಡೆಯದಿರುವುದರಿಂದ ನಿಶ್ಚಲವಾದ ಕಣ್ಣುಗಳುಳ್ಳ ನಿನ್ನ ಮುಖಕಮಲವನ್ನು ನೋಡುವುದಕ್ಕೋಸ್ಕರ, ನೀನು ನೇತ್ರಪ್ರವಾಹವನ್ನು ಸಂಕೋಚಮಾಡಿರುವಂತೆ, ನಿಶ್ಚಯವಾಗಿಯೂ ದೇವತೆಗಳೂ ಸಂಕೋಚಮಾಡಿದರು, ದೇವತೆಗಳು ತಮ್ಮ ನೇತ್ರಗಳನ್ನು ಸ್ವಾಮಿಯ ಪಾದಗಳಲ್ಲಿರಿಸಿ ನೋಡುತ್ತಿದ್ದರೆಂದು ಭಾವವು.

ನಖಕೇಶಮಿತಾವಸ್ಥಾ ತವಾವಿಷ್ಕುರುತೇ ವಿಭೋ ।
[೯]ರಸಾದಿವಿಲಯಂ ದೇಹೇ ವಿಶುದ್ಧಸ್ಪಟಿಕಾಮಲೇ ॥ ೪೯ ॥

ಪ್ರಭುವೆ! ಬೆಳೆಯದೆ ಪರಿಮಿತವಾಗಿರುವ ಉಗುರುಗಳೂ ಕೂದಲುಗಳೂ ಉಳ್ಳ ನಿನ್ನ ಅವಸ್ಥೆಯು ಪರಿಶುದ್ಧವಾದ ಸ್ಪಟಿಕದಂತೆ ನಿರ್ಮಲವಾದ ನಿನ್ನ ಶರೀರದಲ್ಲಿ ರಸರಕ್ತಮೊದಲಾದ ಸಪ್ತಧಾತುಗಳಿಲ್ಲವೆಂಬುದನ್ನು ಪ್ರಕಟಪಡಿಸುತ್ತದೆ.

ಇತ್ಯುದಾರೈರ್ಗುಣೈರೇಭಿಸ್ತ್ವಮನನ್ಯತ್ರಭಾವಿಭಿಃ ।
ಸ್ವಯಮೇತ್ಯ ವೃತೋ ನೂನಮದೃಷ್ಟ[೧೦]ಶರಣಾಂತರೈಃ ॥ ೫೦ ॥

ಈರೀತಿಯಾಗಿ ನಿರ್ದೋಷವೂ ಬೇರೆಯವರಲ್ಲಿಲ್ಲದಿರುವುವೂ ಆದ ಈ ಹಿಂದೆಹೇಳಿದ ಗುಣಗಳು ಬೇರೆ ರಕ್ಷಕರನ್ನು ಅಥವಾ ಆಶ್ರಯವನ್ನು ಕಾಣದೆ ತಾವಾಗಿ ಬಂದು ನಿನ್ನನ್ನಾವರಿಸಿಕೊಂಡಿವೆಯೋ ಎಂಬಂತಿವೆ.

ಅಪ್ಯಮೀ [೧]ರೂಪಸೌಂದರ್ಯಕಾಂತಿ[೨]ದೀಪ್ತ್ಯಾದಯೋ ಗುಣಾಃ ।
ಸ್ಪೃಹಣೀಯಾಃ ಸುರೇಂದ್ರಾಣಾಂ ತವ ಹೇಯಾಃ ಕಿಲಾದ್ಭುತಮ್ ॥ ೫೧ ॥

ರೂಪದ ಸುಂದರತೆ ಕಾಂತಿ ತೇಜಸ್ಸು ಮೊದಲಾದ ಈ ಗುಣಗಳು ದೇವೇಂದ್ರರಿಂದ ಇಚ್ಛಿಸಲ್ಪಡುವುವುಗಳಾಗಿದ್ದರೂ ನಿನಗೆ ಹೇಯಗಳಾಗಿವೆಯಲ್ಲವೆ? ಆಶ್ಚರ್ಯ! ಸ್ವಾಮಿಯ ನಿಸ್ಪೃಹತೆಯು ಆಶ್ಚರ್ಯಕರವಾದುದೆಂದು ಭಾವವು.

[೩]ಗುಣಿನಂ ತ್ವಾಮುಪಾಸೀನಾ [೪]ನಿರ್ಧೂತಗುಣಬಂಧನಾಃ ।
ತ್ವಯಾ [೫]ಸಾರೂಪ್ಯಮಾಯಾಂತಿ [೬]ಸ್ವಾಮಿಚ್ಛಂದಂ ನು [೭]ಶಿಕ್ಷಿತುಃ ॥

ಗುಣಸಂಪನ್ನನಾದ ನಿನ್ನನ್ನು ಭಜಿಸುವವರು ಕರ್ಮಬಂಧನವನ್ನು ನಾಶಮಾಡಿದವರಾಗಿ ನಿನ್ನೊಡನೆ ಸಾದೃಶ್ಯವನ್ನು ಹೊಂದುತ್ತಾರೆ. ಕರ್ಮನಿರ್ಮುಕ್ತರಾಗಿ ಕೈವಲ್ಯವನ್ನು ಪಡೆಯುತ್ತಾರೆಂದಭಿಪ್ರಾಯವು. ಶಿಷ್ಯನಿಗೆ ಪ್ರಭುವಿನ ಪ್ರತಿನಿಧಿತ್ವವುಂಟಾಗುವುದಲ್ಲವೆ? ಗುರುವಿನಂತೆ ಶಿಷ್ಯನಾಗುವುದು ಯುಕ್ತವಾಗಿದೆಯೆಂದರ್ಥ.

ಅಯಂ ಮಂದಾನಿಲೋದ್ಧೂತಚಲಚ್ಛಾಖಾಕರೋತ್ಕರೈಃ ।
ಶ್ರೀಮಾನಶೋಕವೃಕ್ಷಸ್ತೇ ನೃತ್ಯತೀವಾತ್ತಸಮ್ಮದಃ ॥ ೫೩ ॥

ಶೋಭಾಯುಕ್ತವಾದ ಈ ನಿನ್ನ ಅಶೋಕವೃಕ್ಷವು ಸಂತೋಷವನ್ನು ಹೊಂದಿದುದಾಗಿ ಮಂದಮಾರುತದಿಂದ ಕೊಡಹಲ್ಪಟ್ಟು ಚಲಿಸುತ್ತಿರುವ ಕೊಂಬೆಗಳೆಂಬ ಎತ್ತಿದ ಕೈಗಳಿಂದ ನರ್ತನವನ್ನು ಮಾಡುತ್ತಿದೆಯೋ ಎಂಬಂತಿದೆ.

ಚಲತ್ಕ್ಷೀರೋದವೀಚೀಭಿಃ ಸ್ಪರ್ಧಾಂ ಕರ್ತುಮಿವಾ[೮]ಭಿತಃ ।
ಚಾಮರೌಘಾಃ ಪತಂತಿ ತ್ವಾಂ [೯]ಮರುದ್ಭಿರ್ಲೀಲಯಾ [೧೦]ಧುತಾಃ ॥ ೫೪ ॥

ನಿನ್ನ ಸುತ್ತಲೂ ದೇವತೆಗಳು ವಿನೋದದಿಂದ ಬೀಸುತ್ತಿರುವ ಚಾಮರಗಳ ಸಮೂಹಗಳು ಚಂಚಲವಾದ ಕ್ಷೀರಸಮುದ್ರದ ತೆರೆಮಾಲೆಗಳೊಡನೆ ಸ್ಪರ್ಧೆಯನ್ನು ಮಾಡುವುದಕ್ಕೋಸ್ಕರವೋ ಎಂಬಂತೆ ನಿನ್ನ ಸುತ್ತಲೂ ಬೀಳುತ್ತಿವೆ.

ಮುಕ್ತಾಲಂಬನವಿಭ್ರಾಜಿ ಭ್ರಾಜತೇ ವಿಧುನಿರ್ಮಲಮ್ ।
ಛತ್ರತ್ರಯಂ ತವೋನ್ಮುಕ್ತಪ್ರಾರೋಹಮಿವ ಖಾಂಗಣೇ ॥ ೫೫ ॥

ಮುತ್ತಿನ ಜಾಲರಿಗಳಿಂದ ಶೋಭಿಸುತ್ತಿರುವುದೂ ಚಂದ್ರನಂತೆ ನಿರ್ಮಲವೂ ಆದ ನಿನ್ನ ಛತ್ರತ್ರಯವು ಬಿಳಲುಗಳನ್ನು ಬಿಟ್ಟಿರುವಂತೆ ಆಕಾಶದಲ್ಲಿ ಶೋಭಿಸುತ್ತಿದೆ.

ಸಿಂಹೈರೂಢಂ ವಿಭಾತೀದಂ ತವ ವಿಷ್ಟರಮುಚ್ಚಕೈಃ ।
ರತ್ನಾಂಶುಭಿರ್ಭವತ್ಸ್ಪರ್ಶಾನ್ಮುಕ್ತಹರ್ಷಾಂಕುರೈರಿವ ॥ ೫೬ ॥

ಸಿಂಹಗಳಿಂದ ಧರಿಸಲ್ಪಟ್ಟ ಈ ನಿನ್ನ ಸಿಂಹಪೀಠವು ಮೇಲ್ಭಾಗದಲ್ಲಿ ಹರಡಿಕೊಂಡಿರುವ ರತ್ನಗಳ ಕಿರಣಗಳಿಂದ, ನಿನ್ನ ಸ್ಪರ್ಶದಿಂದ ಸಂತೋಷದ ಮೊಳಕೆಗಳನ್ನು ಬಿಟ್ಟಿರುವಂತೆ, ಶೋಭಿಸುತ್ತಿದೆ.

ಧ್ವನಂತಿ ಮಧುರಧ್ವಾನಾಃ ಸುರದುಂದುಭಿಕೋಟಯಃ ।
ಘೋಷಯಂತ್ಯ ಇವಾಪೂರ್ಯ [೧೧]ರೋದಸೀ ತ್ವಜ್ಜಯೋತ್ಸವಮ್ ॥

ಮಧುರವಾದ ಧ್ವನಿಗಳುಳ್ಳ ಅನೇಕಕೋಟಿದೇವದುಂದುಭಿಗಳು ಆಕಾಶಭೂಮಿಗಳನ್ನು ವ್ಯಾಪಿಸಿ ನಿನ್ನ ಜಯೋತ್ಸವವನ್ನು ಘೋಷಿಸುತ್ತವೋ ಎಂಬಂತೆ,

೧ ಅನಂತಸುಖೋತ್ಸರ್ಪದಿತ್ಯಪಿ ಪಾಠಃ. ೨ ನೇಷ್ಟಮಿತ್ಯಪಿ ಪಾಠಃ. ೩ ಆತ್ಮಸ್ವರೂಪಂ. ೪ ತವಾತ ಇತ್ಯಪಿ ಪಾಠಃ. ೫ ಭೋ ಅಧೀಶ್ವರ. ೬ ಛಾಯಾರಹಿತಶರೀರೋ ಭೂತ್ವಾ. ೭ ತ್ವಯ್ಯೇವೇತ್ಯಪಿ ಪಾಠಃ. ೮ ತ್ಯಕ್ತಃ. ೯ ರಸರುಧಿರಾದಿಸಪ್ತಧಾತುವಿಲಯಂ. ೧೦ ಶರಣಂ ಗೃಹರಕ್ಷಿತ್ರೋಃ.

೧ ರೂಪಸ್ಯ ಸೌಂದರ್ಯಂ ಚಾರುತ್ವಂ. ೨ ತೇಜಃ. ೩ ಗುಣಿನ ಇತ್ಯಪಿ ಪಾಠಃ. ೪ ನಿರಸ್ತಕರ್ಮಬಂಧನಾ ಇತ್ಯರ್ಥಃ. ೫ ಸಮಾನರೂಪತಾಂ. ೬ ಭರ್ತುಃ ಪ್ರತಿನಿಧಿ. ೭ ಶಿಷ್ಯಸ್ಯ. ೮ ಪರಿತಃ. ೯ ದೇವೈಃ. ೧೦ ವೀಜಿತಾಃ, ಧೃತಾ ಇತ್ಯಪಿ ಪಾಠಃ. ೧೧ ದ್ಯಾವಾಪೃಥಿವ್ಯೌ.

ಶಬ್ದಮಾಡುತ್ತವೆ. ದೇವದುಂದುಭಿಗಳ ಶಬ್ದವು ಆಕಾಶದಲ್ಲೂ ಭೂಮಿಯಲ್ಲೂ ವ್ಯಾಪಿಸಿದ್ದಿತೆಂದು ಭಾವವು.

**ತವ ದಿವ್ಯಧ್ವನಿಂ ಧೀರಮನುಕರ್ತುಮಿವೋದ್ಯತಾಃ ।**
**ಧ್ವನಂತಿ ಸುರತೂರ್ಯಾಣಾಂ ಕೋಟಯೋ[1]ರ್ಧತ್ರಯೋದಶ ॥ ೫೮ ॥**

ಹನ್ನೆರಡುವರೆಕೋಟಿದೇವವಾದ್ಯಗಳು, ನಿನ್ನ ಗಂಭೀರವಾದ ದಿವ್ಯಧ್ವನಿಯನ್ನು ಅನುಕರಣಮಾಡುವುದಕ್ಕೋಸ್ಕರ ಪ್ರಯತ್ನಪಟ್ಟಿವೆಯೋ ಎಂಬಂತೆ, ಶಬ್ದಮಾಡುತ್ತವೆ.

**ಸುರೈರಿಯಂ [2]ನಭೋರಂಗಾತ್ಪುಷ್ಪೀ ವೃಷ್ಟಿರ್ವಿತನ್ಯತೇ ।**
**ತುಷ್ಟಯಾ ಸ್ವರ್ಗಲಕ್ಷ್ಮ್ಯೇವ ಚೋದಿತೈಃ ಕಲ್ಪಶಾಖಿಭಿಃ ॥ ೫೯ ॥**

ಸಂತುಷ್ಟಳಾದ ಸ್ವರ್ಗಲಕ್ಷ್ಮಿಯಿಂದ ಪ್ರೇರಿತಗಳಾದ ಕಲ್ಪವೃಕ್ಷಗಳೋ ಎಂಬಂತೆ, ದೇವತೆಗಳು ಆಕಾಶವೆಂಬ ರಂಗಸ್ಥಾನದಿಂದ ಈ ಪುಷ್ಪವೃಷ್ಟಿಯನ್ನು ಮಾಡುತ್ತಾರೆ.

**ತವ ದೇಹಪ್ರಭೋತ್ಸರ್ಪಃ ಸಮಾಕ್ರಾಮನ್ನಭೋಭಿತಃ ।**
**ಶಶ್ವತ್ಪ್ರಭಾತಮಾಸ್ಥಾನೀಜನಾನಾಂ ಜನಯತ್ಯಲಮ್ ॥ ೬೦ ॥**

ಆಕಾಶದ ಸುತ್ತಲೂ ವ್ಯಾಪಿಸಿರುವ ನಿನ್ನ ಶರೀರದಕಾಂತಿಯು ಸಮವಸರಣದಲ್ಲಿರುವ ಜನರಿಗೆ ಯಾವಾಗಲೂ ಪ್ರಾತಃಕಾಲವೆಂಬ ಬುದ್ಧಿಯನ್ನುಂಟುಮಾಡುತ್ತದೆ.

**ನಖಾಂಶವಸ್ತವಾತಾಮ್ರಾಃ ಪ್ರಸರಂತಿ ದಿಶಾಸ್ವಮೀ ।**
**ತ್ವದಂಘ್ರಿಕಲ್ಪವೃಕ್ಷಾಗ್ರಾತ್ಪ್ರರೋಹಾ ಇವ ನಿಃಸೃತಾಃ ॥ ೬೧ ॥**

ಬಹಳ ಕೆಂಪಾಗಿರುವ ನಿನ್ನ ಈ ಉಗುರುಗಳ ಕಿರಣಗಳು, ನಿನ್ನ ಕಾಲುಗಳೆಂಬ ಕಲ್ಪವೃಕ್ಷಗಳ ತುದಿಯಿಂದ ಹೊರಟಿರುವ ಅಂಕುರಗಳೋ ಎಂಬಂತೆ, ದಿಕ್ಕುಗಳಲ್ಲಿ ಹರಡಿಕೊಂಡಿರುತ್ತವೆ.

**ಶಿರಸ್ಸು ನಃ ಸ್ಪೃಶಂತ್ಯೇತೆ ಪ್ರಸಾದಸ್ಯೇವ ತೇಂಶಕಾಃ ।**
**ತ್ವತ್ಪಾದನಖಶೀತಾಂಶುಕರಾಃ ಪ್ರಾಹ್ಲಾದಿತಾಖಿಲಾಃ ॥ ೬೨ ॥**

ಎಲ್ಲರನ್ನೂ ಆನಂದಗೊಳಿಸುವ ನಿನ್ನ ಈ ಪಾದದ ಉಗುರೆಂಬ ಚಂದ್ರನ ಕಿರಣಗಳು, ನಿನ್ನ ಪ್ರಸನ್ನತೆಯ ಅಂಶಗಳೋ ಎಂಬಂತೆ, ನಮ್ಮ ಮಸ್ತಕಗಳನ್ನು ಸ್ಪರ್ಶಿಸುತ್ತವೆ. ಮಸ್ತಕಗಳ ಮೇಲೆ ಸ್ವಾಮಿಯ ಪಾದಗಳ ಉಗುರಿನ ಕಾಂತಿಯು ಬಿದ್ದಿರುವುದೆಂದು ಭಾವವು.

**ತ್ವತ್ಪಾದಾಂಬುರುಹಚ್ಛಾಯಾಸರಸೀಮವಗಾಹತೇ ।**
**ದಿವ್ಯಶ್ರೀಕಲಹಂಸೀಯಂ ನಖರೋಚಿರ್ಮೃಣಾಲಿಕಾಮ್ ॥ ೬೩ ॥**

ಸ್ವರ್ಗಲಕ್ಷ್ಮಿಯೆಂಬ ಈ ಸ್ತ್ರೀಕಲಹಂಸಪಕ್ಷಿಯು ಉಗುರಿನ ಕಾಂತಿಯೆಂಬ ತಾವರೆಯ ದಂಟಿನ ನಾರುಳ್ಳ ನಿನ್ನ ಪಾದಕಮಲದ ನೆರಳೆಂಬ ಸರೋವರವನ್ನು ಪ್ರವೇಶಿಸುತ್ತಿದೆ. ಸ್ವರ್ಗದ ಶೋಭೆಗಿಂತಲೂ ಸ್ವಾಮಿಯ ಪಾದದ ಶೋಭೆಯು ಮಿಗಿಲಾದುದೆಂದೂ ಸ್ವರ್ಗಿಕರೆಲ್ಲ ಸ್ವಾಮಿಯ ಪಾದಸೇವಾಸಕ್ತರಾಗಿರುತ್ತಾರೆಂದೂ ಭಾವವು.

**ಮೋಹಾರಿಮರ್ದನಾಲಗ್ನಶೋಣಿತಾರ್ದ್ರಚ್ಛಟಾಮಿವ ।**
**ತಲಚ್ಛಾಯಾಮಿದಂ ಧತ್ತೇ ತ್ವತ್ಪದಾಂಬುರುಹದ್ವಯಮ್ ॥ ೬೪ ॥**

ನಿನ್ನ ಈ ಪಾದಕಮಲಗಳೆರಡು, ಮೋಹವೆಂಬ ಶತ್ರುವನ್ನು ನಾಶಮಾಡುವಾಗ ಸಂಬಂಧಿಸಿದ ರಕ್ತಧಾರೆಯನ್ನೋಪಾದಿಯಲ್ಲಿ, ಅಂಗಾಲಿನ ರಕ್ತಕಾಂತಿಯನ್ನು ಧರಿಸುತ್ತಿವೆ.

೧ ಸಾರ್ಧದ್ವಾದಶ. ೨ ನಭೋರಂಧ್ರಾದಿತ್ಯಪಿ ಪಾಠಃ.

**ತ್ವತ್ಪಾದನಖಭಾಭಾರಸರಸೀಪ್ರತಿಬಿಂಬಿತಾಃ ।**
**ಸುರಾಂಗನಾನನಚ್ಛಾಯಾಸ್ತನ್ವತೇ ಪಂಕಜಶ್ರಿಯಮ್ ॥ ೬೫ ॥**

ನಿನ್ನ ಕಾಲಿನ ಉಗುರುಗಳ ಕಾಂತಿಯ ಸಮೂಹವೆಂಬ ಸರೋವರದಲ್ಲಿ ಪ್ರತಿಬಿಂಬಿಸಿರುವ ದೇವಸ್ತ್ರೀಯರ ಮುಖಗಳ ಕಾಂತಿಗಳು ತಾವರೆಗಳಂತೆ ತೋರುತ್ತವೆ.

**ಸ್ವಯಂಭವೇ ನಮಸ್ತುಭ್ಯ[1]ಮುತ್ಪಾದ್ಯಾತ್ಮಾನಮಾತ್ಮನಿ ।**
**ಸ್ವಾತ್ಮನ್ಯೈವ ತಥೋದ್ಭೂತವೃತ್ತಯೇಚಿಂತ್ಯವೃತ್ತಯೇ ॥ ೬೬ ॥**

ತಾನೇ ತನ್ನಲ್ಲಿ ಸ್ವಸ್ವರೂಪವನ್ನುಂಟುಮಾಡಿಕೊಂಡು ಸ್ವಯಂಭುವೆನಿಸಿರುವವನೂ ಆತ್ಮಲೀನತೆಯನ್ನು ಹೊಂದಿರುವವನೂ ಅಚಿಂತ್ಯವ್ಯಾಪಾರವುಳ್ಳವನೂ ಆದ ನಿನಗೆ ನಮಸ್ಕಾರವು.

**ನಮಸ್ತೇ ಜಗತಾಂ ಪತ್ಯೇ ಲಕ್ಷ್ಮೀಭರ್ತ್ರೇ ನಮೋಸ್ತು ತೇ ।**
**ವಿದಾಂವರ ನಮಸ್ತುಭ್ಯಂ ನಮಸ್ತೇ ವದತಾಂವರ ॥ ೬೭ ॥**

ಜ್ಞಾನಿಗಳಲ್ಲಿ ಶ್ರೇಷ್ಠನೂ ವಕ್ತೃಗಳಲ್ಲಿ ಶ್ರೇಷ್ಠನೂ ಆದ ಸ್ವಾಮಿಯೇ! ಸಕಲ ಲೋಕಪ್ರಭುವೂ ಲಕ್ಷ್ಮೀಪತಿಯೂ ಆದ ನಿನಗೆ ನಮಸ್ಕಾರವು.

**[2]ಕಾಮಶತ್ರುಹಣಂ ದೇವಮಾಮನಂತಿ ಮನೀಷಿಣಃ ।**
**ತ್ವಾಮಾನಮತ್ಸುರೇನ್ಮೌಲಿಭಾಮಾಲಾಭ್ಯರ್ಚಿತಕ್ರಮಮ್ ॥ ೬೮ ॥**

ಪ್ರಭುವೇ! ಪ್ರಾಜ್ಞರು, ನಮಸ್ಕರಿಸುವ ದೇವತೆಗಳ ಕಿರೀಟಗಳ ಕಾಂತಿಯ ಮಾಲೆಯಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ನೀನು ಕಾಮ-ಮೋಹವೆಂಬ ಶತ್ರುವನ್ನು ನಾಶಮಾಡಿದ ಸ್ವಾಮಿಯೆಂದು ಹೇಳುತ್ತಾರೆ.

**ಧ್ಯಾನ[3]ದ್ರುಘಣನಿರ್ಭಿನ್ನಘನಘಾತಿಮಹಾತರುಃ ।**
**ಅನಂತಭವಸಂತಾನಜಯಾದಾಸೀದನಂತಜಿತ್ ॥ ೬೯ ॥**

ಸ್ವಾಮಿಯೇ! ಧ್ಯಾನವೆಂಬ ಮುದ್ಗರದಿಂದ ಘಾತಿಕರ್ಮವೆಂಬ ಬಲವಾದ ಮರವನ್ನು ಕತ್ತರಿಸಿದ ತಾವು ಕೊನೆಯಿಲ್ಲದ ಭವಪರಂಪರೆಯನ್ನು ಜಯಿಸಿದುದರಿಂದ ಅನಂತಜಿತ್ ಎಂಬ ಹೆಸರನ್ನು ಪಡೆದಿರುತ್ತೀರಿ.

**ತ್ರೈಲೋಕ್ಯನಿರ್ಜಯಾವಾಪ್ತದುರ್ದರ್ಪಮತಿದುರ್ಜಯಮ್ ।**
**ಮೃತ್ಯುರಾಜಂ ವಿಜಿತ್ಯಾಸೀಜ್ಜಿನ ಮೃತ್ಯುಂಜಯೋ ಭವಾನ್ ॥ ೭೦ ॥**

ಜಿನೇಶ್ವರನೇ! ನೀನು ಮೂರು ಲೋಕವನ್ನು ಜಯಿಸಿದುದರಿಂದುಂಟಾದ ದುರಹಂಕಾರವುಳ್ಳವನೂ ಜಯಿಸುವುದಕ್ಕೆ ಕಷ್ಟಸಾಧ್ಯನೂ ಆದ ಮೃತ್ಯುರಾಜನನ್ನು ಜಯಿಸಿ ಮೃತ್ಯುಂಜಯನೆಂಬ ಹೆಸರುಳ್ಳವನಾದೆ.

**ವಿಧುತಾಶೇಷಸಂಸಾರಬಂಧನೋ ಭವ್ಯಬಾಂಧವಃ ।**
**ತ್ರಿಪುರಾರಿಸ್ತ್ವಮೀಶಾಸಿ ಜನ್ಮಮೃತ್ಯುಜರಾಂತಕೃತ್ ॥ ೭೧ ॥**

ಸಮಸ್ತ ಸಂಸಾರಬಂಧನವನ್ನು ನಾಶಮಾಡಿದವನೂ ಭವ್ಯಪ್ರಾಣಿಗಳ ಬಂಧುವೂ ಜನ್ಮಜರಾಮರಣಗಳನ್ನು ನಾಶಮಾಡಿದ ಸ್ವಾಮಿಯೂ ಆದ ನೀನು ತ್ರಿಪುರಾಂತಕನಾಗಿರುವೆ.

**ತ್ರಿಕಾಲವಿಷಯಾಶೇಷತತ್ತ್ವಭೇದಾತ್ತ್ರಿಧೋತ್ಥಿತಮ್ ।**
**ಕೇವಲಾಖ್ಯಂ ದಧಚ್ಚಕ್ಷುಸ್ತ್ರಿಣೇತ್ರೋಸಿ ತ್ವ[4]ಮೀಶಿತಃ ॥ ೭೨ ॥**

ಸ್ವಾಮಿಯೇ! ನೀನು ಭೂತ, ವರ್ತಮಾನ, ಭವಿಷ್ಯತ್‌ಗಳೆಂಬ ತ್ರಿಕಾಲ ಸಂಬಂಧವಾದ ಸಮಸ್ತ ವಿಷಯಗಳನ್ನೂ ತಿಳಿದುದರಿಂದ ವಿಷಯಭೇದದಿಂದ ತ್ರಿವಿಧವಾಗಿ ಉಂಟಾದ ಕೇವಲಜ್ಞಾನವೆಂಬ ಕಣ್ಣನ್ನು ಧರಿಸಿ ತ್ರಿಣೇತ್ರನೆನಿಸಿಕೊಂಡಿರುವೆ.

೧ ಸಂಪಾದ್ಯ. ೨ ಕಾಮಾರಿಘ್ನಂ. ೩ ಮುದ್ಗರ. ೪ ಭೋನಾಥ.

ತಿಳಿಯುವುದಕ್ಕೆ ಯೋಗ್ಯನು. ೫೬ 'ಧ್ಯಾನಗಮ್ಯಃ' ಧ್ಯಾನಕ್ಕೆ ವಿಷಯನು. ೫೭ 'ನಿರುತ್ತರಃ' ಸರ್ವಶ್ರೇಷ್ಠನು.

**ಸುಕೃತೀ [೧]ಧಾತುರಿಜ್ಯಾರ್ಹಃ ಸುನಯಶ್ಚತುರಾನನಃ ।**
**ಶ್ರೀನಿವಾಸಶ್ಚತುರ್ವಕ್ತ್ರಶ್ಚತುರಾಸ್ಯಶ್ಚತುರ್ಮುಖಃ ॥ ೧೭೪ ॥**

೫೮ 'ಸುಕೃತೀ' ಪುಣ್ಯವಂತನು. ೫೯ 'ಧಾತುಃ' ದಿವ್ಯಧ್ವನಿಗೆ ಕಾರಣನು. ೬೦ 'ಇಜ್ಯಾರ್ಹಃ' ಪೂಜಾಯೋಗ್ಯನು. ೬೧ 'ಸುನಯಃ' ಶ್ರೇಷ್ಠವಾದ ನಯಗಳುಳ್ಳವನು. ೬೨ 'ಚತುರಾನನಃ' ನಾಲ್ಕುಮುಖಗಳುಳ್ಳವನು. ೬೩ 'ಶ್ರೀನಿವಾಸಃ' ಲಕ್ಷ್ಮೀನಿವಾಸಸ್ಥಾನನು. ೬೪ 'ಚತುರ್ವಕ್ತ್ರಃ'. ೬೫ 'ಚತುರಾಸ್ಯಃ'. ೬೬ 'ಚತುರ್ಮುಖಃ' ನಾಲ್ಕುಮುಖಗಳುಳ್ಳವನು. ನಾಲ್ಕುದಿಕ್ಕುಗಳಿಗೂ ಮುಖವುಳ್ಳವನೆಂದು ಭಾವವು.

**ಸತ್ಯಾತ್ಮಾ ಸತ್ಯವಿಜ್ಞಾನಃ ಸತ್ಯವಾಕ್ಸತ್ಯಶಾಸನಃ ।**
**ಸತ್ಯಾಶೀಃ [೨]ಸತ್ಯಸಂಧಾನಃ ಸತ್ಯಃ ಸತ್ಯಪರಾಯಣಃ ॥ ೧೭೫ ॥**

೬೭ 'ಸತ್ಯಾತ್ಮಾ' ಸತ್ಯಸ್ವರೂಪವುಳ್ಳವನು. ೬೮ 'ಸತ್ಯವಿಜ್ಞಾನಃ' ಸತ್ಯವಾದ ಜ್ಞಾನವುಳ್ಳವನು. ೬೯ 'ಸತ್ಯವಾಕ್' ಸತ್ಯವಚನವುಳ್ಳವನು. ೭೦ 'ಸತ್ಯಶಾಸನಃ' ಸತ್ಯವಾದ ಉಪದೇಶವುಳ್ಳವನು. ೭೧ 'ಸತ್ಯಾಶೀಃ' ಯಥಾರ್ಥವಾದ ಆಶೀರ್ವಾದವುಳ್ಳವನು. ೭೨ 'ಸತ್ಯಸಂಧಾನಃ' ಸತ್ಯಪ್ರತಿಜ್ಞೆಯುಳ್ಳವನು. ೭೩ 'ಸತ್ಯಃ' ಮೋಕ್ಷಫಲಯುಕ್ತನಾದವನು. ೭೪ 'ಸತ್ಯಪರಾಯಣಃ' ಸತ್ಯವನ್ನಾದರಿಸುವವನು.

**[೩]ಸ್ಥೇಯಾನ್[೪]ಸ್ಥವೀಯಾನ್[೫]ನ್ನೇದೀಯಾನ್[೬]ದ್ದವೀಯಾನ್ದೂರದರ್ಶನಃ ।**
**ಅಣೋ[೭]ರಣೀಯಾನನಣುರ್ಗುರುರಾದ್ಯೋ ಗರೀಯಸಾಮ್ ॥ ೧೭೬ ॥**

೭೫ 'ಸ್ಥೇಯಾನ್' ಅತ್ಯಂತಸ್ಥಿರನು. ೭೬ 'ಸ್ಥವೀಯಾನ್' ಅತ್ಯಂತ ಸ್ಥೂಲಸ್ವರೂಪನು. ೭೭ 'ನೇದೀಯಾನ್' ಭವ್ಯರ ಸಮೀಪದಲ್ಲಿರುವವನು. ೭೮ 'ದವೀಯಾನ್' ಅಭವ್ಯರಿಗೆ ದೂರದಲ್ಲಿರುವವನು. ೭೯ 'ದೂರದರ್ಶನಃ' ಬಹುದೂರದವರೆಗೆ ನೋಡುವವನು. ೮೦ 'ಅಣೋರಣೀಯಾನ್' ಪರಮಾಣುಸದೃಶನು. ೮೧ 'ಅನಣುಃ' ಅಣುಸ್ವರೂಪನಲ್ಲದವನು. ೮೨ 'ಗರೀಯಸಾಮಾದ್ಯೋಗುರುಃ' ಭಾರವಸ್ತುಗಳಲ್ಲೆಲ್ಲ ಮೊದಲನೆಯ ಭಾರ ಸ್ವರೂಪನು.

**ಸದಾಯೋಗಃ ಸದಾಭೋಗಃ ಸದಾತೃಪ್ತಃ ಸದಾಶಿವಃ ।**
**ಸದಾಗತಿಃ ಸದಾಸೌಖ್ಯಃ ಸದಾವಿದ್ಯಃ ಸದೋದಯಃ ॥ ೧೭೭ ॥**

೮೩ 'ಸದಾಯೋಗಃ' ಸರ್ವದಾ ಧ್ಯಾನವುಳ್ಳವನು. ೮೪ 'ಸದಾಭೋಗಃ' ಸರ್ವದಾ ಭೋಗ(ಸುಖ)ವುಳ್ಳವನು. ೮೫ 'ಸದಾತೃಪ್ತಃ' ಯಾವಾಗಲೂ ತೃಪ್ತಿಯುಳ್ಳವನು. ೮೬ 'ಸದಾಶಿವಃ' ಯಾವಾಗಲೂ ಮಂಗಳಸ್ವರೂಪನು. ೮೭ 'ಸದಾಗತಿಃ' ಯಾವಾಗಲೂ ಜ್ಞಾನೋಪಯೋಗವುಳ್ಳವನು. ೮೮ 'ಸದಾಸೌಖ್ಯಃ' ಯಾವಾಗಲೂ ಸೌಖ್ಯವುಳ್ಳವನು. ೮೯ 'ಸದಾವಿದ್ಯಃ' ಸರ್ವದಾ ಕೇವಲಜ್ಞಾನವುಳ್ಳವನು. ೯೦ 'ಸದೋದಯಃ' ಸದಾ ಆವಿರ್ಭಾವವುಳ್ಳವನು.

**ಸುಘೋಷಃ ಸುಮುಖಃ ಸೌಮ್ಯಃ ಸುಖದಃ ಸುಹಿತಃ ಸುಹೃತ್ ।**
**ಸುಗುಪ್ತೋ [೮]ಗುಪ್ತಿಭೃ[೯]ದ್ಗೋಪ್ತಾ ಲೋಕಾಧ್ಯಕ್ಷೋ ದಮೀಶ್ವರಃ ॥**

**೭. ಇತಿ ಅಸಂಸ್ಕೃತಾದಿಶತಮ್ ।**

೯೧ 'ಸುಘೋಷಃ' ಉತ್ತಮವಾದ ಧ್ವನಿಯುಳ್ಳವನು. ೯೨ 'ಸುಮುಖಃ' ಸುಂದರವಾದ ಮುಖವುಳ್ಳವನು. ೯೩ 'ಸೌಮ್ಯಃ' ಶಾಂತಸ್ವಭಾವವುಳ್ಳವನು. ೯೪ 'ಸುಖದಃ' ಸುಖವನ್ನು ಕೊಡುವವನು. ೯೫ 'ಸುಹಿತಸ್ಸುಹೃತ್' ಉತ್ತಮವಾದ ಹಿತವನ್ನು ಮಾಡುವ ಸ್ನೇಹಿತನು. ೯೬ 'ಸುಗುಪ್ತಃ' ಅತ್ಯಂತರಹಸ್ಯವಾದ ಸ್ವರೂಪವುಳ್ಳವನು. ೯೭ 'ಗುಪ್ತಿಭೃತ್' ಪ್ರಾಣಿರಕ್ಷಣೆಯನ್ನು ಧರಿಸಿದವನು. ೯೮ 'ಗೋಪ್ತಾ' ರಕ್ಷಕನು. ೯೯ 'ಲೋಕಾಧ್ಯಕ್ಷಃ' ಲೋಕವನ್ನು ಪ್ರತ್ಯಕ್ಷವಾಗಿ ನೋಡುವವನು. ೧೦೦ 'ದಮೀಶ್ವರಃ' ಇಂದ್ರಿಯನಿಗ್ರಹವನ್ನು ಮಾಡಿದವರಲ್ಲಿ ಶ್ರೇಷ್ಠನು.

೭. ಅಸಂಸ್ಕೃತ ಮೊದಲಾದ ನೂರು ಹೆಸರುಗಳು ಸಂಪೂರ್ಣವಾದುವು.

**ಬೃಹನ್ಬೃಹಸ್ಪತಿರ್ವಾಗ್ಮೀ ವಾಚಸ್ಪತಿರುದಾರಧೀಃ ।**
**ಮನೀಷೀ ಧಿಷಣೋ ಧೀಮಾನ್ಶೇಮುಷೀಶೋ ಗಿರಾಂಪತಿಃ ॥ ೧೭೯ ॥**

೧ 'ಬೃಹತ್' ವೃದ್ಧಿಹೊಂದುವವನು. ೨ 'ಬೃಹಸ್ಪತಿಃ' ಜ್ಞಾನಾದಿಗಳಿಂದ ವೃದ್ಧಿಹೊಂದುವವರಿಗೆ ಸ್ವಾಮಿಯು ಅಥವಾ ಸುರಾಚಾರ್ಯನು. ೩ 'ವಾಗ್ಮೀ' ವಾಚಾಳುವು. ೪ 'ವಾಚಸ್ಪತಿಃ' ವಚನಗಳಿಗೆ ಸ್ವಾಮಿಯು. ೫ 'ಉದಾರಧೀಃ' ಉದಾರವಾದ ಬುದ್ಧಿಯುಳ್ಳವನು. ೬ 'ಮನೀಷೀ' ವಿಚಾರಶೀಲನು. ೭ 'ಧಿಷಣಃ' ಬುದ್ಧಿವಂತನು. ೮ 'ಧೀಮಾನ್' ಬುದ್ಧಿಶಾಲಿಯು. ೯ 'ಶೇಮುಷೀಶಃ' ಮೋಹವನ್ನು ನಾಶಮಾಡುವ ಬುದ್ಧಿಗೆ ಸ್ವಾಮಿಯು. ೧೦ 'ಗಿರಾಂಪತಿಃ' ವಚನಗಳಿಗೆ ಪ್ರಭುವು.

**ನೈಕರೂಪೋ ನಯೋತ್ತುಂಗೋ ನೈಕಾತ್ಮಾ ನೈಕಧರ್ಮಕೃತ್ ।**
**[೧]ಅವಿಜ್ಞೇಯೋಽಪ್ರತರ್ಕ್ಯಾತ್ಮಾ ಕೃತಜ್ಞಃ [೨]ಕೃತಲಕ್ಷಣಃ ॥ ೧೮೦ ॥**

೧೧ 'ನೈಕರೂಪಃ' ಅನೇಕರೂಪವುಳ್ಳವನು. ೧೨ 'ನಯೋತ್ತುಂಗಃ' ನಯಗಳಿಂದ ಉತ್ಕೃಷ್ಟನಾದವನು. ೧೩ 'ನೈಕಾತ್ಮಾ' ಅನೇಕಸ್ವರೂಪವುಳ್ಳವನು. ೧೪ 'ನೈಕಧರ್ಮಕೃತ್' ಅನೇಕ ಧರ್ಮಗಳನ್ನುಪದೇಶಮಾಡುವವನು. ೧೫ 'ಅವಿಜ್ಞೇಯಃ' ಬೇರೆ ಕವಿಗಳಿಂದ ತಿಳಿಯಲಶಕ್ಯನು. ೧೬ 'ಅಪ್ರತರ್ಕ್ಯಾತ್ಮಾ' ವಿಚಾರಮಾಡುವುದಕ್ಕಾಗದಿರುವ ಸ್ವರೂಪವುಳ್ಳವನು. ೧೭ 'ಕೃತಜ್ಞಃ' ಮಾಡಿದ ಕಾರ್ಯವನ್ನು ತಿಳಿಯುವವನು. ೧೮ 'ಕೃತಲಕ್ಷಣಃ' ಸಂಪೂರ್ಣ ಲಕ್ಷಣಗಳುಳ್ಳವನು.

**[೩]ಜ್ಞಾನಗರ್ಭೋ ದಯಾಗರ್ಭೋ [೪]ರತ್ನಗರ್ಭಃ ಪ್ರಭಾಸ್ವರಃ ।**
**[೫]ಪದ್ಮಗರ್ಭೋ ಜಗದ್ಗರ್ಭೋ ಹೇಮಗರ್ಭಃ ಸುದರ್ಶನಃ ॥ ೧೮೧ ॥**

೧೯ 'ಜ್ಞಾನಗರ್ಭಃ' ಗರ್ಭದಲ್ಲಿರುವಾಗ ಮತಿಶ್ರುತಾವಧಿಜ್ಞಾನಗಳುಳ್ಳವನು. ೨೦ 'ದಯಾಗರ್ಭಃ' ಗರ್ಭದಲ್ಲಿರುವಾಗ ದಯೆಯುಳ್ಳವನು. ೨೧ 'ರತ್ನಗರ್ಭಃ' ಗರ್ಭದಲ್ಲಿರುವಾಗ ರತ್ನವೃಷ್ಟಿಯನ್ನುಂಟುಮಾಡಿದವನು. ೨೨ 'ಪ್ರಭಾಸ್ವರಃ' ತೇಜಸ್ವಿಯು. ೨೩ 'ಪದ್ಮಗರ್ಭಃ' ಕಮಲದಲ್ಲಿ ಜನಿಸಿದವನು ಅಥವಾ ಆಗರ್ಭಶ್ರೀಮಂತನು. ೨೪ 'ಜಗದ್ಗರ್ಭಃ' ಗರ್ಭದಲ್ಲಿ ಜಗತ್ತುಳ್ಳವನು,-ಲೋಕವನ್ನು ತಿಳಿಯುವವನೆಂದು ಭಾವವು. ೨೫ 'ಹೇಮಗರ್ಭಃ' ಗರ್ಭದಲ್ಲಿರುವಾಗ ಸುವರ್ಣವೃಷ್ಟಿಯನ್ನುಂಟುಮಾಡಿದವನು. ೨೬ 'ಸುದರ್ಶನಃ' ಶ್ರೇಷ್ಠವಾದ ನೋಟವುಳ್ಳವನು ಅಥವಾ ಸಮ್ಯಗ್ದರ್ಶನವುಳ್ಳವನು.

**ಲಕ್ಷ್ಮೀವಾಂಸ್ತ್ರಿದಶಾಧ್ಯಕ್ಷೋ ದೃಢೀಯಾನಿನ ಈಶಿತಾ ।**
**ಮನೋಹರೋ ಮನೋಜ್ಞಾಂಗೋ ಧೀರೋ ಗಂಭೀರಶಾಸನಃ ॥**

೨೭ 'ಲಕ್ಷ್ಮೀವಾನ್' ಅನಂತಜ್ಞಾನ ಮೊದಲಾದ ಸಂಪತ್ತುಳ್ಳವನು. ೨೮ 'ತ್ರಿದಶಾಧ್ಯಕ್ಷಃ' ದೇವತೆಗಳಿಗೆ ಪ್ರತ್ಯಕ್ಷವಾಗಿ ಕಾಣುವವನು ಅಥವಾ ದೇವತೆಗಳಿಗೆ ಸ್ವಾಮಿಯು. ೨೯ 'ದೃಢೀಯಾನ್' ಅತ್ಯಂತ ದೃಢಸ್ವರೂಪನು. ೩೦ 'ಇನಃ' ಜ್ಞಾನಮೂಲಕ ಗಮನಸ್ವಭಾವವುಳ್ಳವನು. ೩೧ 'ಈಶಿತಾ' ಪರಮೈಶ್ವರ್ಯವುಳ್ಳವನು. ೩೨ 'ಮನೋಹರಃ' ಮನೋಹರನು. ೩೩ 'ಮನೋಜ್ಞಾಂಗಃ' ಸುಂದರವಾದ ಶರೀರವುಳ್ಳವನು. ೩೪ 'ಧೀರಃ' ಧೈರ್ಯಶಾಲಿಯು ಅಥವಾ ಸದ್ಬುದ್ಧಿಯನ್ನು ಕೊಡುವವನು. ೩೫ 'ಗಂಭೀರಶಾಸನಃ' ಗಂಭೀರವಾದ ಉಪದೇಶವುಳ್ಳವನು.

೧ ಶಬ್ದಯೋನಿಃ. ೨ ಸತ್ಯಪ್ರತಿಜ್ಞಃ. ೩ ಸ್ಥಿರತರಃ. ೪ ಸ್ಥೂಲತರಃ. ೫ ಸಮೀಪಸ್ಥಃ. ೬ ದೂರಸ್ಥಃ. ೭ ಪರಮಾಣುಸದೃಶಃ. ೮ ರಕ್ಷಾಧೃತ್. ೯ ರಕ್ಷಕಃ.

೧ ಅನ್ಯೈಃ ಕವಿಭಿರಜ್ಞೇಯಃ. ೨ ಸಂಪೂರ್ಣಲಕ್ಷಣಃ. ೩ ಮತಿಶ್ರುತಾವಧಿಜ್ಞಾನಾನಿ ಗರ್ಭೇ ಯಸ್ಯ ಸಃ. ೪ ರತ್ನವೃಷ್ಟಿಗರ್ಭಃ! ೫ ಪದ್ಮೇ ಗರ್ಭೋ ಯಸ್ಯ.

**ಧರ್ಮಯೂಪೋ ದಯಾಯಾಗೋ ಧರ್ಮನೇಮಿರ್ಮುನೀಶ್ವರಃ ।**
**ಧರ್ಮಚಕ್ರಾಯುಧೋ ದೇವಃ ಕರ್ಮಹಾ ಧರ್ಮಘೋಷಣಃ ॥**

೩೬ 'ಧರ್ಮಯೂಪಃ' ಧರ್ಮಕ್ಕೆ ಯಜ್ಞಸ್ತಂಭದಂತಿರುವವನು. ೩೭ 'ದಯಾಯಾಗಃ' ದಯೆಯೆಂಬ ಪೂಜೆಯುಳ್ಳವನು. ೩೮ 'ಧರ್ಮನೇಮಿಃ' ಧರ್ಮವೆಂಬ ಚಕ್ರದ ಕಣ್ಣಿನ ಬಳೆಯಂತಿರುವವನು. ೩೯ 'ಮುನೀಶ್ವರಃ' ಮುನಿಗಳಿಗೆ ಸ್ವಾಮಿಯು. ೪೦ 'ಧರ್ಮಚಕ್ರಾಯುಧಃ' ಧರ್ಮವೆಂಬ ಚಕ್ರಾಯುಧವುಳ್ಳವನು. ೪೧ 'ದೇವಃ' ಆನಂದಸ್ವರೂಪನು. ೪೨ 'ಕರ್ಮಹಾ' ಕರ್ಮವನ್ನು ನಾಶಮಾಡುವವನು. ೪೩ 'ಧರ್ಮಘೋಷಣಃ' ಧರ್ಮವನ್ನು ಪ್ರಸಿದ್ಧಪಡಿಸುವವನು.

**ಅಮೋಘವಾಗಮೋಘಾಜ್ಞೋ ನಿರ್ಮಲೋ ಮೋಘಶಾಸನಃ ।**
**ಸುರೂಪಃ ಸುಭಗಸ್ತ್ಯಾಗೀ ಸಮಯಜ್ಞಃ ಸಮಾಹಿತಃ ॥ ೧೮೪ ॥**

೪೪'ಅಮೋಘವಾಕ್' ಸಾರ್ಥಕವಾದ ವಚನವುಳ್ಳವನು. ೪೫ 'ಅಮೋಘಾಜ್ಞಃ' ಸಾರ್ಥಕವಾದ ಆಜ್ಞೆಯುಳ್ಳವನು. ೪೬ 'ನಿರ್ಮಲಃ' ಕರ್ಮಮಲರಹಿತನು. ೪೭ 'ಅಮೋಘ ಶಾಸನಃ' ಸಾರ್ಥಕವಾದ ಉಪದೇಶವುಳ್ಳವನು. ೪೮ 'ಸುರೂಪಃ' ಸುಂದರವಾದ ರೂಪವುಳ್ಳವನು. ೪೯ 'ಸುಭಗಃ' ಅಧಿಕವಾದ ಮಾಹಾತ್ಮ್ಯವುಳ್ಳವನು. ೫೦ 'ತ್ಯಾಗೀ' ಜ್ಞಾನದಾನವನ್ನು ಮಾಡುವವನು. ೫೧ 'ಸಮಯಜ್ಞಃ' ಕಾಲ ಅಥವಾ ಸಿದ್ಧಾಂತವನ್ನು ತಿಳಿಯುವವನು. ೫೨ 'ಸಮಾಹಿತಃ' ಸಮಾಧಾನವುಳ್ಳವನು.

**ಸುಸ್ಥಿತಃ ಸ್ವಾಸ್ಥ್ಯಭಾ[೧]ಕ್ಸ್ವಸ್ಥೋ ನೀರಜಸ್ಕೋ [೨]ನಿರುದ್ಧವಃ ।**
**ಅಲೇಪೋ ನಿಷ್ಕಲಂಕಾತ್ಮಾ ವೀತರಾಗೋ ಗತಸ್ಪೃಹಃ ॥ ೧೮೫ ॥**

೫೩ 'ಸುಸ್ಥಿತಃ' ಸುಖವಾಗಿರುವವನು. ೫೪ 'ಸ್ವಾಸ್ಥ್ಯಭಾಕ್' ಆತ್ಮಸ್ವರೂಪವನ್ನು ಹೊಂದಿದವನು. ೫೫ 'ಸ್ವಸ್ಥಃ' ಆತ್ಮನಿಷ್ಠನು. ೫೬ 'ನೀರಜಸ್ಕಃ' ಕರ್ಮ ಧೂಳಿಯಿಲ್ಲದವನು. ೫೭ 'ನಿರುದ್ಧವಃ' ತನಗಿಂತ ಶ್ರೇಷ್ಠವಾದ ಸ್ವಾಮಿಯಿಲ್ಲದವನು. ೫೮ 'ಅಲೇಪಃ' ಪಾಪದ ಲೇಪವಿಲ್ಲದವನು. ೫೯ 'ನಿಷ್ಕಲಂಕಾತ್ಮಾ' ದೋಷರಹಿತವಾದ ಸ್ವರೂಪವುಳ್ಳವನು. ೬೦ 'ವೀತರಾಗಃ' ರಾಗರಹಿತನು. ೬೧ 'ಗತಸ್ಪೃಹಃ' ಇಚ್ಛಾರಹಿತನು.

**ವಶ್ಯೇಂದ್ರಿಯೋ ವಿಮುಕ್ತಾತ್ಮಾ ನಿಃಸಪತ್ನೋ ಜಿತೇಂದ್ರಿಯಃ ।**
**ಪ್ರಶಾಂತೋ[೩]ನಂತಧಾಮರ್ಷಿರ್ಮಂಗಲಂ [೪]ಮಲಹಾನಘಃ ॥ ೧೮೬ ॥**

೬೨ 'ವಶ್ಯೇಂದ್ರಿಯಃ' ಇಂದ್ರಿಯಗಳನ್ನು ವಶಪಡಿಸಿದವನು. ೬೩ 'ವಿಮುಕ್ತಾತ್ಮಾ' ಕರ್ಮಗಳಿಂದ ಬಿಡಲ್ಪಟ್ಟ ಆತ್ಮನುಳ್ಳವನು. ೬೪ 'ನಿಃಸಪತ್ನಃ' ಶತ್ರುರಹಿತನು. ೬೫ 'ಜಿತೇಂದ್ರಿಯಃ' ಇಂದ್ರಿಯಗಳನ್ನು ಜಯಿಸಿದವನು. ೬೬ 'ಪ್ರಶಾಂತಃ' ರಾಗದ್ವೇಷ ಮೊದಲಾದ ಪರಿಣಾಮಗಳನ್ನು ಶಾಂತಪಡಿಸಿದವನು. ೬೭ 'ಅನಂತಧಾಮರ್ಷಿಃ' ಅಪಾರವಾದ ತೇಜಸ್ಸುಳ್ಳ ಋಷಿಯು. ೬೮ 'ಮಂಗಲಂ' ಸುಖವನ್ನುಂಟುಮಾಡುವವನು. ೬೯ 'ಮಲಹಾ' ಪಾಪವನ್ನು ನಾಶಮಾಡುವವನು. ೭೦ 'ಅನಘಃ' ಪಾಪರಹಿತನು.

**ಅನೀದೃಗುಪಮಾಭೂತೋ [೫]ದಿಷ್ಟಿ[೬]ರ್ದೈವಮಗೋಚರಃ ।**
**ಅಮೂರ್ತೋ ಮೂರ್ತಿಮಾನೇಕೋ ನೈಕೋ [೭]ನಾನ್ಯೈಕತತ್ತ್ವದೃಕ್ ॥**

೭೧ 'ಅನೀದೃಗುಪಮಾಭೂತಃ' ತನಗೆ ಸಮಾನವಾದ ಉಪಮಾನವಿಲ್ಲದವನು. ೭೨ 'ದಿಷ್ಟಿಃ' ಪ್ರಮಾಣಾನುಸಾರವಾದ ಬುದ್ಧಿಯುಳ್ಳವನು. ೭೩ 'ದೈವಂ' ಸ್ತೋತ್ರಾರ್ಹನು. ೭೪ 'ಅಗೋಚರಃ' ಇಂದ್ರಿಯಗಳಿಗೆ ಗೋಚರನಾಗದಿರುವವನು. ೭೫ 'ಅಮೂರ್ತಃ' ಶರೀರರಹಿತನು. ೭೬ 'ಮೂರ್ತಿಮಾನ್' ಆಕಾರವುಳ್ಳವನು.

೧ ಸುಸ್ಥ ಇತ್ಯಪಿ ಪಾಠಃ. ೨ ಉತ್ಕೃಷ್ಟೋ ಧವ ಉದ್ಧವಃ, ಉದ್ಧವಾನ್ನಿಷ್ಕ್ರಾಂತಃ. ೩ ಅನಂತತೇಜಾಃ. ೪ ಮಲಂ ಪಾಪಂ ಹರತೀತಿ ಮಲಹಾ. ೫ ಪ್ರಮಾಣಾನುಮತಿನೀಮತಿಃ. ೬ ಸ್ತುತ್ಯಂ. ೭ ಅನೇಕೈಕತತ್ತ್ವದರ್ಶೀ.

೭೭ 'ಏಕಃ' ಒಬ್ಬನು. ೭೮ 'ನೈಕಃ' ಗುಣಗಳ ಅಪೇಕ್ಷೆಯಿಂದ ಅನೇಕನು. ೭೯ 'ನಾನ್ಯೈಕತತ್ತ್ವದೃಕ್' ಏಕಾನೇಕ ತತ್ತ್ವಗಳನ್ನು ನೋಡುವವನು.

**[೧]ಅಧ್ಯಾತ್ಮಗಮ್ಯೋ ಗಮ್ಯಾತ್ಮಾ ಯೋಗವಿದ್ಯೋಗಿವಂದಿತಃ ।**
**ಸರ್ವತ್ರಗಃ [೨]ಸದಾಭಾವೀ ತ್ರಿಕಾಲವಿಷಯಾರ್ಥದೃಕ್ ॥ ೧೮೮ ॥**

೮೦ 'ಅಧ್ಯಾತ್ಮಗಮ್ಯಃ' ಧ್ಯಾನಕ್ಕೆ ಗೋಚರನು. ೮೧ 'ಅಗಮ್ಯಾತ್ಮಾ' ಅಗೋಚರವಾದ ಸ್ವರೂಪವುಳ್ಳವನು. ೮೨ 'ಯೋಗವಿತ್' ಧ್ಯಾನವನ್ನು ತಿಳಿಯುವವನು. ೮೩ 'ಯೋಗಿವಂದಿತಃ' ಯೋಗಿಗಳಿಂದ ನಮಸ್ಕರಿಸಲ್ಪಡುವವನು. ೮೪ 'ಸರ್ವತ್ರಗಃ' ಜ್ಞಾನಮೂಲಕ ಸರ್ವವ್ಯಾಪಕನು. ೮೫ 'ಸದಾಭಾವೀ' ಯಾವಾಗಲೂ ಅಭಿಪ್ರಾಯವುಳ್ಳವನು ಅಥವಾ ಯಾವಾಗಲೂ ಇರುವವನು. ೮೬ 'ತ್ರಿಕಾಲ ವಿಷಯಾರ್ಥದೃಕ್' ಮೂರು ಕಾಲಗಳಲ್ಲಿರುವ ಪದಾರ್ಥಗಳನ್ನು ನೋಡುವವನು.

**ಶಂಕರಃ ಶಂವದೋ [೩]ದಾಂತೋ ದಮೀ ಕ್ಷಾಂತಿಪರಾಯಣಃ ।**
**ಅಧಿಪಃ ಪರಮಾನಂದಃ ಪರಾತ್ಮಜ್ಞಃ [೪]ಪರಾಪರಃ ॥ ೧೮೯ ॥**

೮೭ 'ಶಂಕರಃ' ಸುಖವನ್ನುಂಟುಮಾಡುವವನು. ೮೮ 'ಶಂವದಃ' ಸುಖವನ್ನು ಹೇಳುವವನು. ೮೯ 'ದಾಂತಃ' ಇಂದ್ರಿಯನಿಗ್ರಹಮಾಡಿದವನು. ೯೦ 'ದಮೀ' ಇಂದ್ರಿಯನಿಗ್ರಹವುಳ್ಳವನು. ೯೧ 'ಕ್ಷಾಂತಿಪರಾಯಣಃ' ಕ್ಷಮೆಯಲ್ಲಿ ಆಸಕ್ತನು. ೯೨ 'ಅಧಿಪಃ' ಚೆನ್ನಾಗಿ ರಕ್ಷಿಸುವವನು. ೯೩ 'ಪರಮಾನಂದಃ' ಅತ್ಯಂತಾನಂದವುಳ್ಳವನು. ೯೪ 'ಪರಾತ್ಮಜ್ಞಃ' ಶ್ರೇಷ್ಠವಾದ ಆತ್ಮನನ್ನು ಅಥವಾ ಬೇರೆ ಆತ್ಮರನ್ನು ತಿಳಿಯುವವನು. ೯೫ 'ಪರಾಪರಃ' ಸರ್ವಕಾಲದಲ್ಲಿರುವವನು.

**ತ್ರಿಜಗದ್ವಲ್ಲಭೋಭ್ಯರ್ಚಸ್ತ್ರಿಜಗನ್ಮಂಗಲೋದಯಃ ।**
**ತ್ರಿಜಗತ್ಪತಿಪೂಜ್ಯಾಂಘ್ರಿಸ್ತ್ರಿಲೋಕಾಗ್ರಶಿಖಾಮಣಿಃ ॥ ೧೯೦ ॥**

**೮. ಇತಿ ಬೃಹದಾದಿಶತಮ್ ।**

೯೬ 'ತ್ರಿಜಗದ್ವಲ್ಲಭಃ' ಮೂರುಲೋಕಕ್ಕೆ ಪ್ರಿಯನು. ೯೭ 'ಅಭ್ಯರ್ಚ್ಯಃ' ಪೂಜಾಯೋಗ್ಯನು. ೯೮ 'ತ್ರಿಜಗನ್ಮಂಗಲೋದಯಃ' ಮೂರುಲೋಕಕ್ಕೆ ಮಂಗಲವನ್ನುಂಟುಮಾಡುವವನು. ೯೯ 'ತ್ರಿಜಗತ್ಪತಿಪೂಜ್ಯಾಂಘ್ರಿಃ' ತ್ರಿಲೋಕಾಧಿಪತಿಗಳಿಂದ (ಇಂದ್ರಾದಿಗಳಿಂದ) ಪೂಜಿಸಲ್ಪಡುವುದಕ್ಕೆ ಯೋಗ್ಯವಾದ ಪಾದಗಳುಳ್ಳವನು. ೧೦೦ 'ತ್ರಿಲೋಕಾಗ್ರ ಶಿಖಾಮಣಿಃ' ಮೂರುಲೋಕದ ತುದಿಯಲ್ಲಿ–ಮೋಕ್ಷದಲ್ಲಿ ಚೂಡಾಮಣಿಯಂತಿರುವವನು.

೮. ಬೃಹತ್ ಮೊದಲಾದ ನೂರು ಹೆಸರುಗಳು ಸಂಪೂರ್ಣವಾದುವು.

**ತ್ರಿಕಾಲದರ್ಶೀ ಲೋಕೇಶೋ ಲೋಕಧಾತಾ ದೃಢವ್ರತಃ ।**
**ಸರ್ವಲೋಕಾತಿಗಃ ಪೂಜ್ಯಃ ಸರ್ವಲೋಕೈಕ[೫]ಸಾರಥಿಃ ॥ ೧೯೦ ॥**

೧ 'ತ್ರಿಕಾಲದರ್ಶೀ' ಮೂರುಕಾಲಗಳ ವಿಷಯವನ್ನು ಪ್ರತ್ಯಕ್ಷವಾಗಿ ನೋಡುವವನು. ೨ 'ಲೋಕೇಶಃ' ಲೋಕಕ್ಕೆ ಪ್ರಭುವು. ೩ 'ಲೋಕಧಾತಾ' ಸಮಸ್ತ ಪ್ರಾಣಿಗಳ ರಕ್ಷಕನು. ೪ 'ದೃಢವ್ರತಃ' ನಿಶ್ಚಲವಾದ ವ್ರತವುಳ್ಳವನು. ೫ 'ಸರ್ವಲೋಕಾತಿಗಃ' ಸಮಸ್ತ ಪ್ರಾಣಿಸಮೂಹದಲ್ಲಿ ಶ್ರೇಷ್ಠತ್ವವನ್ನು ಹೊಂದಿದವನು. ೬ 'ಪೂಜ್ಯಃ' ಪೂಜಿಸುವುದಕ್ಕೆ ಯೋಗ್ಯನು. ೭ 'ಸರ್ವಲೋಕೈಕಸಾರಥಿಃ' ಲೋಕಕ್ಕೆಲ್ಲ ಮುಖ್ಯನೇತೃವು.

**ಪುರಾಣಪುರುಷಃ ಪೂರ್ವಃ ಕೃತಪೂರ್ವಾಂಗವಿಸ್ತರಃ ।**
**ಆದಿದೇವಃ [೬]ಪುರಾಣಾದ್ಯಃ ಪುರುದೇವೋಧಿದೇವತಾ ॥ ೧೯೧ ॥**

೮ 'ಪುರಾಣಪುರುಷಃ' ಪೂರ್ವಿಕಪುರುಷನು. ೯ 'ಪೂರ್ವಃ' ಮೊದಲನೆಯವನು. ೧೦ 'ಕೃತಪೂರ್ವಾಂಗವಿಸ್ತರಃ' ಹನ್ನೆರಡು ಅಂಗ ಹದಿನಾಲ್ಕು ಪೂರ್ವಶಾಸ್ತ್ರ

೧ ಧ್ಯಾನಗೋಚರಃ. ೨ ಸದಾಭಿಪ್ರಾಯಃ. ೩ ದಮಿತಃ. ೪ ಸಾರ್ವಕಾಲಿಕಃ, ಪರಾತ್ಪರ ಇತ್ಯಪಿ ಪಾಠಃ. ೫ ನೇತಾ. ೬ ಪುರಾಣಾಢ್ಯ ಇತ್ಯಪಿ ಪಾಠಃ.

ಗಳನ್ನು ವಿಸ್ತರಿಸಿದವನು. ೧೧ 'ಆದಿದೇವಃ' ಕೃತಯುಗದ ಮೊದಲನೆಯ ಸ್ವಾಮಿಯು. ೧೨ 'ಪುರಾಣಾದ್ಯಃ' ಪೂರ್ವಿಕರಲ್ಲಿ ಅಥವಾ ಪುರಾಣಕ್ಕೆ ಮೊದಲನೆಯವನು. ೧೩ 'ಪುರುದೇವಃ' ಶ್ರೇಷ್ಠನಾದ ದೇವನು. ೧೪ 'ಅಧಿದೇವತಾ' ಸರ್ವಶ್ರೇಷ್ಠವಾದ ದೇವತೆಯು.

**ಯುಗಮುಖ್ಯೋ ಯುಗಜ್ಯೇಷ್ಠೋ ಯುಗಾದಿಸ್ಥಿತಿದೇಶಕಃ ।**
**[1]ಕಲ್ಯಾಣವರ್ಣಃ [2]ಕಲ್ಯಾಣಃ [3]ಕಲ್ಯಃ ಕಲ್ಯಾಣಲಕ್ಷಣಃ ॥ ೧೯೨ ॥**

೧೫ 'ಯುಗಮುಖ್ಯಃ' ಈ ಅವಸರ್ಪಿಣೀಕಾಲದಲ್ಲಿ ಮುಖ್ಯನು. ೧೬ 'ಯುಗಜ್ಯೇಷ್ಠಃ' ಈ ಅವಸರ್ಪಿಣೀಯುಗದಲ್ಲಿ ಸರ್ವಶ್ರೇಷ್ಠನು. ೧೭ 'ಯುಗಾದಿಸ್ಥಿತಿದೇಶಕಃ' ಕರ್ಮಭೂಮಿಯ ಪ್ರಾರಂಭದಲ್ಲಿ ಜೀವನೋಪಾಯವನ್ನುಪದೇಶ ಮಾಡಿದವನು. ೧೮ 'ಕಲ್ಯಾಣವರ್ಣಃ' ಬಂಗಾರದಂತೆ ದಿವ್ಯದೇಹ ವರ್ಣವುಳ್ಳವನು. ೧೯ 'ಕಲ್ಯಾಣಃ' ಮಂಗಲಸ್ವರೂಪನು. ೨೦ 'ಕಲ್ಯಃ' ಪ್ರಶಸ್ತವಾದ ಸ್ವರೂಪವುಳ್ಳವನು. ೨೧ 'ಕಲ್ಯಾಣಲಕ್ಷಣಃ' ಮಂಗಲಕರವಾದ ಲಕ್ಷಣವುಳ್ಳವನು.

**ಕಲ್ಯಾಣಪ್ರಕೃತಿ[4]ರ್ದೀಪ್ರಃ ಕಲ್ಯಾಣಾತ್ಮಾ ವಿಕಲ್ಮಷಃ ।**
**ವಿಕಲಂಕಃ [5]ಕಲಾತೀತಃ [6]ಕಲಿಲಘ್ನಃ ಕಲಾಧರಃ ॥ ೧೯೩ ॥**

೨೨ 'ಕಲ್ಯಾಣಪ್ರಕೃತಿಃ' ಮಂಗಲಕರವಾದ ಸ್ವಭಾವವುಳ್ಳವನು. ೨೩ 'ದೀಪ್ರಃ' ಪ್ರಕಾಶಮಾನನು. ೨೪ 'ಕಲ್ಯಾಣಾತ್ಮಾ' ಮಂಗಲಕರವಾದ ಸ್ವರೂಪವುಳ್ಳವನು. ೨೫ 'ವಿಕಲ್ಮಷಃ' ಪಾಪವೆಂಬ ಕಲ್ಮಷವಿಲ್ಲದವನು. ೨೬ 'ವಿಕಲಂಕಃ' ಕರ್ಮ ಕಲಂಕರಹಿತನು. ೨೭ 'ಕಲಾತೀತಃ' ಶರೀರಬಂಧನ ರಹಿತನು. ೨೮ 'ಕಲಿಲಘ್ನಃ' ಕರ್ಮಮಲವನ್ನು ನಾಶಮಾಡುವವನು. ೨೯ 'ಕಲಾಧರಃ' ಸಂಪೂರ್ಣ ಜ್ಞಾನಿಯು.

**ದೇವದೇವೋ ಜಗನ್ನಾಥೋ ಜಗದ್ಬಂಧುರ್ಜಗದ್ವಿಭುಃ ।**
**ಜಗದ್ಧಿತೈಷೀ ಲೋಕಜ್ಞಃ ಸರ್ವಗೋ [7]ಜಗದಗ್ರಜಃ ॥ ೧೯೪ ॥**

೩೦ 'ದೇವದೇವಃ' ದೇವತೆಗಳಿಗೆಲ್ಲ ದೇವನು. ೩೧ 'ಜಗನ್ನಾಥಃ' ಲೋಕಕ್ಕೆ ಸ್ವಾಮಿಯು. ೩೨ 'ಜಗದ್ಬಂಧುಃ' ಲೋಕಕ್ಕೆ ಬಂಧುವು. ೩೩ 'ಜಗದ್ವಿಭುಃ' ಜಗತ್ತಿಗೆ ಪ್ರಭುವು. ೩೪ 'ಜಗದ್ಧಿತೈಷೀ' ಲೋಕಕ್ಕೆ ಹಿತವನ್ನಿಚ್ಛಿಸುವವನು. ೩೫ 'ಲೋಕಜ್ಞಃ' ಲೋಕವನ್ನೆಲ್ಲ ತಿಳಿಯುವವನು. ೩೬ 'ಸರ್ವಗಃ' ಸರ್ವವ್ಯಾಪಕನು. ಸರ್ವಜ್ಞನೆಂದರ್ಥವು. ೩೭ 'ಜಗದಗ್ರಜಃ' ಜಗತ್ತಿಗೆ ಮುಖ್ಯನು.

**ಚರಾಚರಗುರು[8]ರ್ಗೋಪ್ಯೋ ಗೂಢಾತ್ಮಾ [9]ಗೂಢಗೋಚರಃ ।**
**ಸದ್ಯೋಜಾತಃ ಪ್ರಕಾಶಾತ್ಮಾ ಜ್ವಲಜ್ಜ್ವಲನಸಪ್ರಭಃ ॥ ೧೯೫ ॥**

೩೮ 'ಚರಾಚರಗುರುಃ' ಚರಾಚರಪ್ರಾಣಿಗಳಿಗೆ ಸ್ವಾಮಿಯು. ೩೯ 'ಗೋಪ್ಯಃ' ಕಾಣಲಶಕ್ಯನು. ೪೦ 'ಗೂಢಾತ್ಮಾ' ಗುಪ್ತವಾದ ಸ್ವರೂಪವುಳ್ಳವನು. ೪೧ 'ಗೂಢಗೋಚರಃ' ಗುಪ್ತವಾದ ಇಂದ್ರಿಯ(ಭಾವಮನ)ವುಳ್ಳವನು. ೪೨ 'ಸದ್ಯೋಜಾತಃ' ಯಾವಾಗಲೂ ಆಗತಾನೇ ಉತ್ಪನ್ನನಾದವನಂತೆ ನವೀನವಾಗಿ ಕಾಣುವವನು. ೪೩ 'ಪ್ರಕಾಶಾತ್ಮಾ' ಪ್ರಕಾಶಸ್ವರೂಪನು. ೪೪ 'ಜ್ವಲಜ್ಜ್ವಲನಸಪ್ರಭಃ' ಉರಿಯುತ್ತಿರುವ ಬೆಂಕಿಯಂತೆ ಪ್ರಕಾಶಮಾನನು.

**ಆದಿತ್ಯವರ್ಣೋ ಭರ್ಮಾಭಃ ಸುಪ್ರಭಃ ಕನಕಪ್ರಭಃ ।**
**ಸುವರ್ಣವರ್ಣೋ ರುಕ್ಮಾಭಃ ಸೂರ್ಯಕೋಟಿಸಮಪ್ರಭಃ ॥ ೧೯೬ ॥**

೪೫ 'ಆದಿತ್ಯವರ್ಣಃ' ಸೂರ್ಯನಂತೆ ವರ್ಣವುಳ್ಳವನು. ೪೬ 'ಭರ್ಮಾಭಃ' ಬಂಗಾರದಂತೆ ಕಾಂತಿಯುಳ್ಳವನು. ೪೭ 'ಸುಪ್ರಭಃ' ಶ್ರೇಷ್ಠವಾದ ಪ್ರಭೆಯುಳ್ಳವನು. ೪೮ 'ಕನಕಪ್ರಭಃ' ಬಂಗಾರದಂತೆ ಪ್ರಭೆಯುಳ್ಳವನು. ೪೯ 'ಸುವರ್ಣವರ್ಣಃ' ಬಂಗಾರದಂತೆ ಶರೀರವರ್ಣವುಳ್ಳವನು. ೫೦ 'ರುಕ್ಮಾಭಃ' ಬಂಗಾರದಂತೆ ಕಾಂತಿಯುಳ್ಳವನು. ೫೧ 'ಸೂರ್ಯಕೋಟಿಸಮಪ್ರಭಃ' ಕೋಟಿಸೂರ್ಯರಂತೆ ಶರೀರಪ್ರಭೆಯುಳ್ಳವನು.

**ತಪನೀಯನಿಭಸ್ತುಂಗೋ ಬಾಲಾರ್ಕಾಭೋಽನಲಪ್ರಭಃ ।**
**[1]ಸಂಧ್ಯಾಭ್ರಬಭ್ರುರ್ಹೇಮಾಭಸ್ತಪ್ತಚಾಮೀಕರಚ್ಛವಿಃ ॥ ೧೯೭ ॥**

೫೨ 'ತಪನೀಯನಿಭಃ' ಬಂಗಾರದಂತೆ ಹಳದಿ ಬಣ್ಣವುಳ್ಳವನು. ೫೩ 'ತುಂಗಃ' ಉನ್ನತವಾದ ಶರೀರಪರಿಮಾಣವುಳ್ಳವನು. ೫೪ 'ಬಾಲಾರ್ಕಾಭಃ' ಬಾಲಸೂರ್ಯನಂತಿರುವವನು. ೫೫ 'ಅನಲಪ್ರಭಃ' ಬೆಂಕಿಯಂತೆ ಪ್ರಭೆಯುಳ್ಳವನು. ೫೬ 'ಸಂಧ್ಯಾಭ್ರಬಭ್ರುಃ' ಸಂಧ್ಯಾ ಕಾಲದ ಮೇಘದಂತೆ ಪಿಂಗಳವರ್ಣವುಳ್ಳವನು. ೫೭ 'ಹೇಮಾಭಃ' ಸುವರ್ಣಕ್ಕೆ ಸಮಾನನು. ೫೮ 'ತಪ್ತಚಾಮೀಕರಚ್ಛವಿಃ' ಪುಟಕ್ಕಿಕ್ಕಿದ ಬಂಗಾರದಂತೆ ಶರೀರಕಾಂತಿಯುಳ್ಳವನು.

**ನಿಷ್ಟಪ್ತಕನಕಚ್ಛಾಯಃ ಕನತ್ಕಾಂಚನಸನ್ನಿಭಃ ।**
**ಹಿರಣ್ಯವರ್ಣಃ ಸ್ವರ್ಣಾಭಃ ಶಾತಕುಂಭನಿಭಪ್ರಭಃ ॥ ೧೯೮ ॥**

**[2]ದ್ಯುಮ್ನಾಭಾ [3]ಜಾತರೂಪಾಭ[4]ಸ್ತಪ್ತಜಾಂಬೂನದದ್ಯುತಿಃ ।**
**ಸುಧೌತಕಲಧೌತಶ್ರೀಃ ಪ್ರದೀಪ್ತೋ ಹಾಟಕದ್ಯುತಿಃ ॥ ೧೯೯ ॥**

೫೯ 'ನಿಷ್ಟಪ್ತಕನಕಚ್ಛಾಯಃ'. ೬೦ 'ಕನತ್ಕಾಂಚನಸನ್ನಿಭಃ'. ೬೧ 'ಹಿರಣ್ಯವರ್ಣಃ'. ೬೨ 'ಸ್ವರ್ಣಾಭಃ'. ೬೩ 'ಶಾತಕುಂಭನಿಭಪ್ರಭಃ'. ೬೪ 'ದ್ಯುಮ್ನಾಭಾಃ'. ೬೫ 'ಜಾತರೂಪಾಭಃ'. ೬೬ 'ತಪ್ತಜಾಂಬೂನದದ್ಯುತಿಃ'. ೬೭ 'ಸುಧೌತಕಲಧೌತಶ್ರೀಃ' ಒಳ್ಳೆಯ ಬಂಗಾರದಂತೆ ಕಾಂತಿಯುಳ್ಳವನು. ೬೮ 'ಪ್ರದೀಪ್ತಃ' ಪ್ರಕಾಶಮಾನನಾದವನು. ೬೯ 'ಹಾಟಕದ್ಯುತಿಃ' ಬಂಗಾರದಂತೆ ಕಾಂತಿಯುಳ್ಳವನು.

**ಶಿಷ್ಟೇಷ್ಟಃ ಪುಷ್ಟಿದಃ ಪುಷ್ಟಃ ಸ್ಪಷ್ಟಃ ಸ್ಪಷ್ಟಾಕ್ಷರಃ ಕ್ಷಮಃ ।**
**ಶತ್ರುಘ್ನೋ[5]ಪ್ರತಿಘೋಽಮೋಘಃ ಪ್ರಶಾಸ್ತಾ ಶಾಸಿತಾ [6]ಸ್ವಭೂಃ॥ ೨೦೦ ॥**

೭೦ 'ಶಿಷ್ಟೇಷ್ಟಃ' ಗಣಧರರು ಮೊದಲಾದವರಿಗೆ ಪ್ರಿಯನು. ೭೧ 'ಪುಷ್ಟಿದಃ' ಜ್ಞಾನಾದಿಗುಣಗಳ ಪುಷ್ಟಿಯನ್ನು ಕೊಡುವವನು. ೭೨ 'ಪುಷ್ಟಃ' ಜ್ಞಾನಾದಿ ಗುಣಗಳಿಂದ ಪೂರ್ಣನು. ೭೩ 'ಸ್ಪಷ್ಟಃ' ಸ್ಪಷ್ಟವಾಗಿ ಕಾಣಿಸಿಕೊಳ್ಳುವವನು. ೭೪ 'ಸ್ಪಷ್ಟಾಕ್ಷರಃ' ಸ್ಪಷ್ಟವಾದ ಅಕ್ಷರಗಳುಳ್ಳವನು. ೭೫ 'ಶತ್ರುಘ್ನಃ' ಕರ್ಮಶತ್ರುವನ್ನು ನಾಶಮಾಡುವವನು. ೭೭ 'ಅಪ್ರತಿಘಃ' ಕೋಪರಹಿತನು. ೭೮ 'ಅಮೋಘಃ' ಕೃತಕೃತ್ಯನು. ೭೯ 'ಪ್ರಶಾಸ್ತಾ' ಧರ್ಮೋಪದೇಶಕನು. ೮೦ 'ಶಾಸಿತಾ' ರಕ್ಷಕನು. ೮೧ 'ಸ್ವಭೂಃ' ತನಗೆತಾನೇ ಉತ್ಪನ್ನನಾದವನು.

**ಶಾಂತಿನಿಷ್ಠೋ ಮುನಿಜ್ಯೇಷ್ಠಃ [7]ಶಿವತಾತಿಃ ಶಿವಪ್ರದಃ ।**
**ಶಾಂತಿದಃ ಶಾಂತಿಕೃಚ್ಛಾಂತಿಃ ಕಾಂತಿಮಾನ್ಕಾಮಿತಪ್ರದಃ ॥ ೨೦೧ ॥**

೮೨ 'ಶಾಂತಿನಿಷ್ಠಃ' ಕ್ರೋಧಾದಿರಹಿತವಾದ ಶಾಂತಸ್ವಭಾವದಲ್ಲಿರುವವನು. ೮೩ 'ಮುನಿಜ್ಯೇಷ್ಠಃ' ಮುನಿಗಳಲ್ಲೆಲ್ಲ ಶ್ರೇಷ್ಠನು. ೮೪ 'ಶಿವತಾತಿಃ' ಸುಖಪರಂಪರೆಯುಳ್ಳವನು. ೮೫ 'ಶಿವಪ್ರದಃ' ಮಂಗಲವನ್ನು ಕೊಡುವವನು. ೮೬ 'ಶಾಂತಿದಃ' ಶಾಂತಿದಾಯಕನು. ೮೭ 'ಶಾಂತಿಕೃತ್' ಶಾಂತಿಯನ್ನುಂಟುಮಾಡುವವನು. ೮೮ 'ಶಾಂತಿಃ' ಕರ್ಮಗಳನ್ನು ಕ್ಷಯಮಾಡಿದವನು. ೮೯ 'ಕಾಂತಿಮಾನ್' ಕಾಂತಿಯುಳ್ಳವನು. ೯೦ 'ಕಾಮಿತಪ್ರದಃ' ಇಷ್ಟಾರ್ಥವನ್ನು ಕೊಡುವವನು.

**[8]ಶ್ರೇಯೋನಿಧಿ[9]ರಧಿಷ್ಠಾನಮಪ್ರತಿಷ್ಠಃ ಪ್ರತಿಷ್ಠಿತಃ ।**
**[10]ಸುಸ್ಥಿತಃ [11]ಸ್ಥಾವರಃ [12]ಸ್ಥಾಸ್ನುಃ [13]ಪ್ರಥೀಯಾನ್ಪ್ರಥಿತಃ ಪೃಥುಃ ॥**

೧ ಸುವರ್ಣವರ್ಣಃ. ೨ ಮಂಗಲಭೂತಃ. ೩ ಪ್ರಶಸ್ತಃ. ೪ ದೀಪ್ತಕಲ್ಯಾಣಾತ್ಮಾ ಇತ್ಯಪಿ ಪಾಠಃ. ೫ ಶರೀರಬಂಧರಹಿತಃ. ೬ ಮಲಘ್ನಃ. ೭ ಜಗದಗ್ರಗ ಇತ್ಯಪಿ ಪಾಠಃ. ೮ ಅಲಕ್ಷ್ಯಃ. ೯ ಗೂಢೇಂದ್ರಿಯಃ.

೧ ಸಂಧ್ಯಾಕಾಲಮೇಘವತ್ಪಿಂಗಲಃ. ೨ ಕನಕಪ್ರಭಃ. ೩ ಸುವರ್ಣರೂಪಾಭಃ. ೪ ದೀಪ್ತಜಾಂಬೂನದದ್ಯುತಿರಿತ್ಯಪಿ ಪಾಠಃ, ಜಾಂಬೂನದಂ ಸುವರ್ಣಂ. ೫ ರೋಷರಹಿತಃ. ೬ ಸ್ವಯಂ ಭೂಃ. ೭ ಸುಖಪರಂಪರಃ. ೮ ಶ್ರಿಯಾಂ ನಿಧಿರಿತ್ಯಪಿ ಪಾಠಃ. ೯ ಜಗದಾಧಾರಃ. ೧೦ ಸುಸ್ಥಿರ ಇತ್ಯಪಿ ಪಾಠಃ. ೧೧ ಸ್ಥೈರ್ಯವಾನ್. ೧೨ ಸ್ಥಿರಃ. ೧೩ ಅತಿಶಯೇನ ಪೃಥುಃ.

### ೯. ಇತಿ ತ್ರಿಕಾಲದರ್ಶ್ಯಾದಿಶತವ್ ।

೯೧ 'ಶ್ರೇಯೋನಿಧಿಃ' ಮಂಗಳಗಳಿಗೆ ನಿಧಿಯು. ೯೨ 'ಅಧಿಷ್ಠಾನಂ' ಜಗತ್ತಿಗಾಧಾರನು. ೯೩ 'ಅಪ್ರತಿಷ್ಠಃ' ತನಗೆತಾನೇ ಈಶ್ವರನಾದವನು. ೯೪ 'ಪ್ರತಿಷ್ಠಿತಃ' ಎಲ್ಲಾ ಕಡೆಯಲ್ಲೂ ಪ್ರತಿಷ್ಠಿತನು, ಪೂಜ್ಯನೆಂದು ಭಾವವು. ೯೫ 'ಸುಸ್ಥಿತಃ'. ೯೬ 'ಸ್ಥಾವರಃ'. ೯೭ 'ಸ್ಥಾಣುಃ' ಸ್ಥಿರವಾಗಿರುವವನು. ೯೮ 'ಪ್ರಥೀಯಾನ್' ಬಹಳ ಸ್ಥೂಲನು. ೯೯ 'ಪ್ರಥಿತಃ' ಪ್ರಸಿದ್ಧನು. ೧೦೦ 'ಪೃಥುಃ' ಸ್ಥೂಲನು.

೯. ತ್ರಿಕಾಲದರ್ಶಿ ಮೊದಲಾದ ನೂರು ಹೆಸರುಗಳು ಸಂಪೂರ್ಣವಾದುವು.

**[೧]ದಿಗ್ವಾಸಾ [೨]ವಾತರಶನೋ ನಿರ್ಗ್ರಂಥೇಶೋ ನಿರಂಬರಃ ।**
**ನಿಷ್ಕಿಂಚನೋ [೩]ನಿರಾಶಂಸೋ ಜ್ಞಾನಚಕ್ಷು[೪]ರಮೋಮುಹಃ ॥ ೨೦೩ ॥**

೧ 'ದಿಗ್ವಾಸಾಃ' ದಿಕ್ಕುಗಳೇ ವಸ್ತ್ರವಾಗಿರುವವನು. ೨ 'ವಾತರಶನಃ' ಗಾಳಿಯೇ ಉಡಿದಾರವಾಗಿರುವವನು. ೩ 'ನಿರ್ಗ್ರಂಥೇಶಃ' ನಿರ್ಗ್ರಂಥಮುನಿಗಳಿಗೆ ಸ್ವಾಮಿಯು. ೪ 'ನಿರಂಬರಃ' ವಸ್ತ್ರರಹಿತನು. ೫ 'ನಿಷ್ಕಿಂಚನಃ' ಸ್ವಲ್ಪವೂ ಪರಿಗ್ರಹವಿಲ್ಲದವನು. ೬ 'ನಿರಾಶಂಸಃ' ಆಶೆಯಿಲ್ಲದವನು. ೭ 'ಜ್ಞಾನಚಕ್ಷುಃ' ಜ್ಞಾನವೇ ನೇತ್ರವಾಗಿರುವವನು. ೮ 'ಅಮೋಮುಹಃ' ಸಂಪೂರ್ಣಮೋಹರಹಿತನು.

**ತೇಜೋರಾಶಿರನಂತೌಜಾ ಜ್ಞಾನಾಬ್ಧಿಃ ಶೀಲಸಾಗರಃ ।**
**ತೇಜೋಮಯೋಮಿತಜ್ಯೋತಿರ್ಜ್ಯೋತಿರ್ಮೂರ್ತಿ[೫]ಸ್ತಮೋಪಹಃ ॥**

೯ 'ತೇಜೋರಾಶಿಃ' ತೇಜಸ್ಸುಗಳ ರಾಶಿಯು. ೧೦ 'ಅನಂತೌಜಾಃ' ಅಪಾರವಾದ ಕಾಂತಿಯುಳ್ಳವನು. ೧೧ 'ಜ್ಞಾನಾಬ್ಧಿಃ' ಜ್ಞಾನಕ್ಕೆ ಸಮುದ್ರದಂತಿರುವವನು. ೧೨ 'ಶೀಲಸಾಗರಃ' ಉತ್ತಮವಾದ ಸ್ವಭಾವಗಳಿಗೆ ಸಮುದ್ರದಂತಿರುವವನು. ೧೩ 'ತೇಜೋಮಯಃ' ತೇಜಸ್ಸ್ವರೂಪನು. ೧೪ 'ಅಮಿತಜ್ಯೋತಿಃ' ಅಪಾರವಾದ ಕಾಂತಿಯುಳ್ಳವನು. ೧೫ 'ಜ್ಯೋತಿರ್ಮೂರ್ತಿಃ' ತೇಜೋಮಯವಾದ ದೇಹವುಳ್ಳವನು. ೧೬ 'ತಮೋಪಹಃ' ಕತ್ತಲೆಯನ್ನು ನಾಶಮಾಡುವ ಸೂರ್ಯನಂತಿರುವವನು.

**ಜಗಚ್ಚೂಡಾಮಣಿ[೬]ರ್ದೀಪ್ತಃ [೭]ಶಂವಾ[೮]ನ್ವಿಘ್ನವಿನಾಯಕಃ ।**
**[೯]ಕಲಿಘ್ನಃ ಕರ್ಮಶತ್ರುಘ್ನೋ ಲೋಕಾಲೋಕಪ್ರಕಾಶಕಃ ॥ ೨೦೫ ॥**

೧೭ 'ಜಗಚ್ಚೂಡಾಮಣಿಃ' ಲೋಕಕ್ಕೆ ಚೂಡಾಮಣಿಯಂತಿರುವವನು. ೧೮ 'ದೀಪ್ತಃ' ತೇಜಸ್ವಿಯು. ೧೯ 'ಶಂವಾನ್' ಸುಖವುಳ್ಳವನು. ೨೦ 'ವಿಘ್ನವಿನಾಯಕಃ' ವಿಘ್ನಗಳನ್ನು ನಾಶಮಾಡುವವನು. ೨೧ 'ಕಲಿಘ್ನಃ' ದೋಷಗಳನ್ನು ನಾಶಮಾಡುವವನು. ೨೨ 'ಕರ್ಮಶತ್ರುಘ್ನಃ' ಕರ್ಮವೆಂಬ ಶತ್ರುವನ್ನು ನಾಶಮಾಡುವವನು. ೨೩ 'ಲೋಕಾಲೋಕಪ್ರಕಾಶಕಃ' ಲೋಕ ಮತ್ತು ಅಲೋಕವನ್ನು ಪ್ರಕಾಶಪಡಿಸುವವನು, ತಿಳಿಯುವವನೆಂದು ಭಾವವು.

**ಅನಿದ್ರಾಲುರತಂದ್ರಾಲು[೧೦]ರ್ಜಾಗರೂಕಃ [೧೧]ಪ್ರಮಾಮಯಃ ।**
**ಲಕ್ಷ್ಮೀಪತಿರ್ಜಗಜ್ಜ್ಯೋತಿರ್ಧರ್ಮರಾಜಃ ಪ್ರಜಾಹಿತಃ ॥ ೨೦೬ ॥**

೨೪ 'ಅನಿದ್ರಾಲುಃ' ನಿದ್ರೆಯಿಲ್ಲದವನು. ೨೫ 'ಅತಂದ್ರಾಲುಃ' ಮೂರ್ಛೆಯನ್ನು ಹೊಂದದಿರುವವನು. ೨೬ 'ಜಾಗರೂಕಃ' ಸ್ವಸ್ವರೂಪಪ್ರಾಪ್ತಿಗೋಸ್ಕರ ಜಾಗರೂಕನಾಗಿರುವವನು. ೨೭ 'ಪ್ರಮಾಮಯಃ' ಜ್ಞಾನಮಯನು. ೨೮ 'ಲಕ್ಷ್ಮೀಪತಿಃ' ಅಂತರಂಗಬಹಿರಂಗಸಂಪತ್ತುಗಳಿಗೆ ಸ್ವಾಮಿಯು. ೨೯ 'ಜಗಜ್ಜ್ಯೋತಿಃ' ಲೋಕವನ್ನು ಪ್ರಕಾಶಪಡಿಸುವ ಜ್ಯೋತಿಯು. ೩೦ 'ಧರ್ಮರಾಜಃ' ಧರ್ಮಕ್ಕೆ ಸ್ವಾಮಿಯು. ೩೧ 'ಪ್ರಜಾಹಿತಃ' ಪ್ರಜೆಗಳಿಗೆ ಹಿತಕರನು.

೧ ದಿಗಂಬರಃ. ೨ ಪವನಕಾಂಚೀಧಾಮಾ. ೩ ನಿರಾಶಃ. ೪ ಭೃಶಂ ನಿರ್ಮೋಹಃ. ೫ ಆದಿತ್ಯಃ. ೬ ದೀಪ್ರ ಇತ್ಯಪಿ ಪಾಠಃ. ೭ ಶಂ ಸುಖಮಸ್ಯಾಸ್ತೀತಿ. ೮ ಅಂತರಾಯವಿನಾಶಕಃ. ೯ ದೋಷಘ್ನಃ. ೧೦ ಜಾಗರಣಶೀಲಃ. ೧೧ ಜ್ಞಾನಮಯಃ.

**ಮುಮುಕ್ಷುರ್ಬಂಧಮೋಕ್ಷಜ್ಞೋ ಜಿತಾಕ್ಷೋ ಜಿತಮನ್ಮಥಃ ।**
**[೧]ಪ್ರಶಾಂತರಸಶೈಲೂಷೋ ಭವ್ಯ[೨]ಪೇಟಕನಾಯಕಃ ॥ ೨೦೭ ॥**

೩೨ 'ಮುಮುಕ್ಷುಃ' ಮುಕ್ತಿಯನ್ನು ಪಡೆಯುವುದಕ್ಕೋಸ್ಕರ ಇಚ್ಛಿಸುವವನು. ೩೩ 'ಬಂಧಮೋಕ್ಷಜ್ಞಃ' ಕರ್ಮಬಂಧ ಮತ್ತು ಮೋಕ್ಷಗಳನ್ನು ತಿಳಿಯುವವನು. ೩೪ 'ಜಿತಾಕ್ಷಃ' ಇಂದ್ರಿಯಗಳನ್ನು ಜಯಿಸಿದವನು. ೩೫ 'ಜಿತಮನ್ಮಥಃ' ಕಾಮನನ್ನು ಜಯಿಸಿದವನು. ೩೬ 'ಪ್ರಶಾಂತರಸಶೈಲೂಷಃ' ಶಾಂತರಸದ ನರ್ತಕನು. ೩೭ 'ಭವ್ಯಪೇಟಕನಾಯಕಃ' ಭವ್ಯರ ಸಮೂಹಕ್ಕೆ ಸ್ವಾಮಿಯು.

**ಮೂಲಕರ್ತಾಖಿಲಜ್ಯೋತಿರ್ಮಲಘ್ನೋ ಮೂಲಕಾರಣವ್ ।**
**ಆಪ್ತೋ ವಾಗೀಶ್ವರಃ ಶ್ರೇಯಾನ್ [೩]ಶ್ರಾಯಸೋಕ್ತಿರ್ನಿರುಕ್ತವಾಕ್ ॥**

೩೮ 'ಮೂಲಕರ್ತಾ' ಜಗತ್ತಿಗೆ ಮುಖ್ಯಕರ್ತನು. ೩೯ 'ಅಖಿಲಜ್ಯೋತಿಃ' ಸಂಪೂರ್ಣತೇಜಃಸ್ವರೂಪನು. ೪೦ 'ಮಲಘ್ನಃ' ಕರ್ಮಮಲವನ್ನು ನಾಶಮಾಡುವವನು. ೪೧ 'ಮೂಲಕಾರಣಂ' ಲೋಕಕ್ಕೆ ಮೂಲಕಾರಣನು. ೪೨ 'ಆಪ್ತಃ' ಸತ್ಯವನ್ನು ಹೇಳುವವನು. ೪೩ 'ವಾಗೀಶ್ವರಃ' ವಚನಕ್ಕೆ ಸ್ವಾಮಿಯು. ೪೪ 'ಶ್ರೇಯಾನ್' ಮಂಗಲಸ್ವರೂಪನು. ೪೫ 'ಶ್ರಾಯಸೋಕ್ತಿಃ' ಪ್ರಶಸ್ತವಾದ ವಚನವುಳ್ಳವನು. ೪೬ 'ನಿರುಕ್ತವಾಕ್' ಸ್ಪಷ್ಟವಾಗಿ ಹೇಳಲ್ಪಟ್ಟ ವಚನವುಳ್ಳವನು.

**ಪ್ರವಕ್ತಾ ವಚಸಾಮೀಶೋ ಮಾರಜಿದ್ವಿಶ್ವಭಾವವಿತ್ ।**
**ಸುತನುಸ್ತನುನಿರ್ಮುಕ್ತಃ ಸುಗತೋ ಹತದುರ್ನಯಃ ॥ ೨೦೯ ॥**

೪೭ 'ಪ್ರವಕ್ತಾ' ಚೆನ್ನಾಗಿ ಮಾತನಾಡುವವನು. ೪೮ 'ವಚಸಾಮೀಶಃ' ವಚನಗಳಿಗೆ ಪ್ರಭುವು. ೪೯ 'ಮಾರಜಿತ್' ಮನ್ಮಥನನ್ನು ಜಯಿಸಿದವನು. ೫೦ 'ವಿಶ್ವಭಾವವಿತ್' ಎಲ್ಲಾಪದಾರ್ಥಗಳ ಸ್ವಭಾವವನ್ನು ತಿಳಿಯುವವನು. ೫೧ 'ಸುತನುಃ' ಶ್ರೇಷ್ಠವಾದ ಶರೀರವುಳ್ಳವನು. ೫೨ 'ತನುನಿರ್ಮುಕ್ತಃ' ಸಾಮಾನ್ಯವಾದ ಶರೀರದಿಂದ ಬಿಡಲ್ಪಟ್ಟವನು. ೫೩ 'ಸುಗತಃ' ಸಂಸಾರದಿಂದ ಸಂಪೂರ್ಣವಾಗಿ ಹೊರಟುಹೋದವನು. ೫೪ 'ಹತದುರ್ನಯಃ' ಮಿಥ್ಯಾನಯಗಳನ್ನು ಖಂಡಿಸಿದವನು.

**ಶ್ರೀಶಃ ಶ್ರೀಶ್ರಿತಪಾದಾಬ್ಜೋ ವೀತಭೀರಭಯಂಕರಃ ।**
**[೪]ಉತ್ಸನ್ನದೋಷೋ ನಿರ್ವಿಘ್ನೋ ನಿಶ್ಚಲೋ ಲೋಕವತ್ಸಲಃ ॥ ೨೧೦ ॥**

೫೫ 'ಶ್ರೀಶಃ' ಲಕ್ಷ್ಮಿಗಧಿಪತಿಯು. ೫೬ 'ಶ್ರೀಶ್ರಿತಪಾದಾಬ್ಜಃ' ಲಕ್ಷ್ಮಿಯಿಂದ ಹೊಂದಲ್ಪಟ್ಟ ಪಾದಕಮಲವುಳ್ಳವನು. ೫೭ 'ವೀತಭೀಃ' ಭಯರಹಿತನು. ೫೮ 'ಅಭಯಂಕರಃ' ಅಭಯವನ್ನುಂಟುಮಾಡುವವನು. ೫೯ 'ಉತ್ಸನ್ನದೋಷಃ' ದೋಷವನ್ನು ದೂರಮಾಡಿದವನು. ೬೦ 'ನಿರ್ವಿಘ್ನಃ' ವಿಘ್ನರಹಿತನು. ೬೧ 'ನಿಶ್ಚಲಃ' ಸ್ಥಿರಸ್ವಭಾವನು. ೬೨ 'ಲೋಕವತ್ಸಲಃ' ಲೋಕಪ್ರಿಯನು.

**ಲೋಕೋತ್ತರೋ ಲೋಕಪತಿರ್ಲೋಕಚಕ್ಷುರಪಾರಧೀಃ ।**
**ಧೀರಧೀರ್ಬುದ್ಧಸನ್ಮಾರ್ಗಃ ಶುದ್ಧಃ ಸೂನೃತಪೂತವಾಕ್ ॥ ೨೧೧ ॥**

೬೩ 'ಲೋಕೋತ್ತರಃ' ಸರ್ವಶ್ರೇಷ್ಠನು. ೬೪ 'ಲೋಕಪತಿಃ' ತ್ರಿಲೋಕಾಧಿಪತಿಯು. ೬೫ 'ಲೋಕಚಕ್ಷುಃ' ಲೋಕಕ್ಕೆ ಜ್ಞಾನವನ್ನುಂಟುಮಾಡುವ ನೇತ್ರದಂತಿರುವವನು. ೬೬ 'ಅಪಾರಧೀಃ' ಅಪಾರವಾದ ಬುದ್ಧಿಯುಳ್ಳವನು. ೬೭ 'ಧೀರಧೀಃ' ಧೈರ್ಯವಾದ ಬುದ್ಧಿಯುಳ್ಳವನು. ೬೮ 'ಬುದ್ಧಸನ್ಮಾರ್ಗಃ' ಸನ್ಮಾರ್ಗವನ್ನು ತಿಳಿದವನು. ೬೯ 'ಶುದ್ಧಃ' ಪರಿಶುದ್ಧನು. ೭೦ 'ಸೂನೃತಪೂತವಾಕ್' ಸತ್ಯವೂ ಪವಿತ್ರವೂ ಆದ ವಚನವುಳ್ಳವನು.

**ಪ್ರಜ್ಞಾಪಾರಮಿತಃ ಪ್ರಾಜ್ಞೋ ಯತಿರ್ನಿಯಮಿತೇಂದ್ರಿಯಃ ।**
**[೫]ಭದಂತೋ [೬]ಭದ್ರಕೃ[೭]ದ್ಭದ್ರಃ ಕಲ್ಪವೃಕ್ಷೋ ವರಪ್ರದಃ ॥ ೨೧೨ ॥**

೧ ಪ್ರಶಾಂತರಸನರ್ತಕಃ. ೨ ಸಮೂಹಃ. ೩ ಪ್ರಶಸ್ತವಾಕ್. ೪ ನಿರಸ್ತದೋಷಃ. ೫ ಪೂಜ್ಯಃ. ೬ ಸುಖಕರಃ. ೭ ಶೋಭನಃ.

೭೧ 'ಪ್ರಜ್ಞಾಪಾರಮಿತಃ' ಬುದ್ಧಿಯ ಪಾರವನ್ನು ಹೊಂದಿದವನು. ೭೨ 'ಪ್ರಾಜ್ಞಃ' ಜ್ಞಾನಿಯು. ೭೩ 'ಯತಿಃ' ಮೋಕ್ಷಪ್ರಾಪ್ತಿಗೆ ಯತ್ನಿಸುವವನು. ೭೪ 'ನಿಯಮಿತೇಂದ್ರಿಯಃ' ಇಂದ್ರಿಯಗಳನ್ನು ನಿಗ್ರಹಿಸಿದವನು. ೭೫ 'ಭದಂತಃ' ಪೂಜ್ಯನು. ೭೬ 'ಭದ್ರಕೃತ್' ಸುಖವನ್ನುಂಟುಮಾಡುವವನು. ೭೭ 'ಭದ್ರಃ' ಮಂಗಲಸ್ವರೂಪನು. ೭೮ 'ಕಲ್ಪವೃಕ್ಷಃ' ಇಷ್ಟಾರ್ಥವನ್ನು ಕೊಡುವ ಕಲ್ಪವೃಕ್ಷವಂತಿರುವವನು. ೭೯ 'ವರಪ್ರದಃ' ವರವನ್ನುಕೊಡುವವನು.

**ಸಮುನ್ಮೂಲಿತಕರ್ಮಾರಿಃ [೧]ಕರ್ಮಕಾಷ್ಠಾಶುಶುಕ್ಷಣಿಃ ।**
**[೨]ಕರ್ಮಣ್ಯಃ [೩]ಕರ್ಮಠಃ [೪]ಪ್ರಾಂಶುರ್ಹೇಯಾದೇಯವಿಚಕ್ಷಣಃ॥ ೨೧೩ ॥**

೮೦ 'ಸಮುನ್ಮೂಲಿತಕರ್ಮಾರಿಃ' ಕರ್ಮಶತ್ರುವನ್ನು ಬುಡಸಹಿತವಾಗಿ ಕಿತ್ತುಹಾಕಿದವನು. ೮೧ 'ಕರ್ಮಕಾಷ್ಠಾಶುಶುಕ್ಷಣಿಃ' ಕರ್ಮವೆಂಬ ಸೌದೆಗೆ ಬೆಂಕಿಯಂತಿರುವವನು. ೮೨ 'ಕರ್ಮಣ್ಯಃ' ಕಾರ್ಯನಿಪುಣನು. ೮೩ 'ಕರ್ಮಠಃ' ಕರ್ಮಶೂರನು. ೮೪ 'ಪ್ರಾಂಶುಃ' ಉನ್ನತನು. ೮೫ 'ಹೇಯಾದೇಯವಿಚಕ್ಷಣಃ' ಹೇಯೋಪಾದೇಯಬೋಧಚತುರನು.

**ಅನಂತಶಕ್ತಿರಚ್ಛೇದ್ಯ[೫]ಸ್ತ್ರಿಪುರಾರಿ[೬]ಸ್ತ್ರಿಲೋಚನಃ ।**
**ತ್ರಿಣೇತ್ರಸ್ತ್ರ್ಯಂಬಕಸ್ತ್ರ್ಯಕ್ಷಃ ಕೇವಲಜ್ಞಾನವೀಕ್ಷಣಃ ॥ ೨೧೪ ॥**

೮೬ 'ಅನಂತಶಕ್ತಿಃ' ಅಂತವಿಲ್ಲದ ಶಕ್ತಿಯುಳ್ಳವನು. ೮೭ 'ಅಚ್ಛೇದ್ಯಃ' ಛೇದಿಸುವುದಕ್ಕೆ ಯೋಗ್ಯನಲ್ಲದವನು. ೮೮ 'ತ್ರಿಪುರಾರಿಃ' ಜನ್ಮಜರಾಮರಣರೂಪವಾದ ತ್ರಿಪುರಹರನು. ೮೯ 'ತ್ರಿಲೋಚನಃ'. ೯೦ 'ತ್ರಿಣೇತ್ರಃ'. ೯೧ 'ತ್ರ್ಯಂಬಕಃ'. ೯೨ 'ತ್ರ್ಯಕ್ಷಃ' ಮೂರುಕಾಲದ ಜ್ಞಾನವುಳ್ಳವನು. ೯೩ 'ಕೇವಲಜ್ಞಾನವೀಕ್ಷಣಃ' ಕೇವಲಜ್ಞಾನವೆಂಬ ಕಣ್ಣುಳ್ಳವನು.

**[೭]ಸಮಂತಭದ್ರಃ ಶಾಂತಾರಿರ್ಧರ್ಮಾಚಾರ್ಯೋ ದಯಾನಿಧಿಃ ।**
**ಸೂಕ್ಷ್ಮದರ್ಶೀ ಜಿತಾನಂಗಃ ಕೃಪಾಲುರ್ಧರ್ಮದೇಶಕಃ ॥ ೨೧೫ ॥**

೯೪ 'ಸಮಂತಭದ್ರಃ' ಎಲ್ಲಾಕಡೆಯಲ್ಲೂ ಮಂಗಲ ಸ್ವರೂಪನು. ೯೫ 'ಶಾಂತಾರಿಃ' ಕರ್ಮಶತ್ರುವನ್ನು ಶಾಂತಪಡಿಸಿದವನು. ೯೬ 'ಧರ್ಮಾಚಾರ್ಯಃ' ಜಿನಧರ್ಮಕ್ಕೆ ಆಚಾರ್ಯನು. ೯೭ 'ದಯಾನಿಧಿಃ' ದಯೆಗೆ ಸಮುದ್ರವಂತಿರುವವನು. ೯೮ 'ಸೂಕ್ಷ್ಮದರ್ಶೀ' ಅತಿಸೂಕ್ಷ್ಮವಿಷಯಗಳನ್ನೂ ನೋಡುವವನು. ೯೯ 'ಜಿತಾನಂಗಃ' ಮನ್ಮಥನನ್ನು ಜಯಿಸಿದವನು. ೧೦೦ 'ಕೃಪಾಲುಃ' ದಯಾಸ್ವಭಾವನು. ೧೦೧ 'ಧರ್ಮದೇಶಕಃ' ಧರ್ಮವನ್ನುಪದೇಶಿಸುವವನು.

**[೮]ಶುಭಂಯುಃ [೯]ಸುಖಸಾದ್ಭೂತಃ ಪುಣ್ಯರಾಶಿರನಾಮಯಃ ।**
**ಧರ್ಮಪಾಲೋ ಜಗತ್ಪಾಲೋ ಧರ್ಮಸಾಮ್ರಾಜ್ಯನಾಯಕಃ ॥ ೨೧೬ ॥**

**೧೦. ಇತಿ ದಿಗ್ವಾಸಾದ್ಯಷ್ಟೋತ್ತರಶತಮ್ ।**

೧೦೨ 'ಶುಭಂಯುಃ' ಮಂಗಲವನ್ನುಂಟುಮಾಡುವವನು. ೧೦೩ 'ಸುಖಸಾದ್ಭೂತಃ' ಸುಖಾಧೀನನು. ೧೦೪ 'ಪುಣ್ಯರಾಶಿಃ' ಪುಣ್ಯದ ರಾಶಿಯು. ೧೦೫ 'ಅನಾಮಯಃ' ರೋಗರಹಿತನು. ೧೦೬ 'ಧರ್ಮಪಾಲಃ' ಧರ್ಮವನ್ನು ರಕ್ಷಿಸುವವನು. ೧೦೭ 'ಜಗತ್ಪಾಲಃ' ಲೋಕವನ್ನು ರಕ್ಷಿಸುವವನು. ೧೦೮ 'ಧರ್ಮಸಾಮ್ರಾಜ್ಯನಾಯಕಃ' ಧರ್ಮವೆಂಬ ಸಾಮ್ರಾಜ್ಯಕ್ಕೆಪ್ರಭುವು.

೧೦. ದಿಗ್ವಾಸ ಮೊದಲಾದ ನೂರೆಂಟು ಹೆಸರುಗಳು ಸಂಪೂರ್ಣವಾದುವು.

**[೧೦]ಧಾಮ್ನಾಂ ಪತೇ ತವಾಮೂನಿ ನಾಮಾನ್ಯಾಗಮಕೋವಿದೈಃ ।**
**[೧೧]ಸಮುಚ್ಚಿತಾನ್ಯನುಧ್ಯಾಯನ್ಪುಮಾ[೧೨]ನ್ಪೂತಸ್ಮೃತಿರ್ಭವೇತ್ ॥ ೨೧೭ ॥**

ತೇಜಸ್ಸುಗಳಿಗೆ ಸ್ವಾಮಿಯಾದ ಪುರುಪರಮೇಶ್ವರನೆ! ಆಗಮಜ್ಞಾನಿಗಳು ಸಂಗ್ರಹಿಸಿರುವ ಈ ನಿನ್ನ ಹೆಸರುಗಳನ್ನು ಪುನಃ ಪುನಃ ಧ್ಯಾನಮಾಡುವ ಮನುಷ್ಯನು ಪವಿತ್ರವಾದ ಜ್ಞಾನವುಳ್ಳವನಾಗುವನು.

**ಗೋಚರೋಽಪಿ ಗಿರಾಮಾಸಾಂ ತ್ವಮವಾಗ್ಗೋಚರೋ ಮತಃ ।**
**ಸ್ತೋತಾ ತಥಾ[೧]ಪ್ಯಸಂದಿಗ್ಧಂ ತ್ವತ್ತೋಽಭೀಷ್ಟಫಲಂ ಭಜೇತ್ ॥ ೨೧೮ ॥**

ಸ್ವಾಮಿಯೇ ! ನೀನು ಈ ಮೇಲೆ ಹೇಳಿದ ವಚನ (ಅಷ್ಟೋತ್ತರಸಹಸ್ರನಾಮ) ಗಳಿಗೆ ವಿಷಯನಾಗಿದ್ದರೂ ನೀನು ವಚನಗಳಿಗೆ ಗೋಚರನಲ್ಲವೆಂದು ಸಮ್ಮತನಾಗಿರುತ್ತೀಯೆ (ಸ್ವಾಮಿಯ ಯಥಾರ್ಥಸ್ವರೂಪವನ್ನು ವಚನದಿಂದ ವರ್ಣಿಸುವುದಶಕ್ಯವೆಂದು ಭಾವವು). ಹಾಗಿದ್ದರೂ ನಿಸ್ಸಂದೇಹವಾಗಿ ನಿನ್ನನ್ನು ಸ್ತೋತ್ರಮಾಡುವವನು ಇಷ್ಟಫಲವನ್ನು ನಿನ್ನಿಂದ ಹೊಂದುವನು.

**ತ್ವಮತೋಽಸಿ ಜಗದ್ಬಂಧುಸ್ತ್ವಮತೋಽಸಿ ಜಗದ್ಭಿಷಕ್ ।**
**ತ್ವಮತೋಽಸಿ ಜಗದ್ಧಾತಾ ತ್ವಮತೋಽಸಿ ಜಗದ್ಧಿತಃ ॥ ೨೧೯ ॥**

ಈ ಕಾರಣದಿಂದ ಜಗತ್ತಿಗೆ ಬಂಧುವೂ ಜಗತ್ತಿಗೆ ವೈದ್ಯನೂ ಜಗತ್ತಿಗೆ ಪೋಷಕನೂ ಹಿತಕರನೂ ನೀನಾಗಿರುತ್ತೀಯೆ.

**ತ್ವಮೇಕಂ ಜಗತಾಂ ಜ್ಯೋತಿಸ್ತ್ವಂ [೨]ದ್ವಿರೂಪೋಪಯೋಗಭಾಕ್ ।**
**ತ್ವಂ ತ್ರಿರೂಪೈಕಮುಕ್ತ್ಯಂಗಃ ಸ್ವೋತ್ಥಾನಂತಚತುಷ್ಟಯಃ ॥ ೨೨೦ ॥**

ನೀನು ಲೋಕಕ್ಕೆ ಮುಖ್ಯವಾದ ಜ್ಯೋತಿಯು; ನೀನು ಜ್ಞಾನದರ್ಶನೋಪಯೋಗಗಳುಳ್ಳವನು; ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಸ್ವರೂಪನಾದ ನೀನು ಮುಕ್ತಿಗೆ ಮುಖ್ಯಕಾರಣನು; ನೀನು ತನ್ನಲ್ಲುಂಟಾದ ಅನಂತಜ್ಞಾನ ದರ್ಶನ ಸುಖ ವೀರ್ಯಗಳೆಂಬ ಅನಂತ ಚತುಷ್ಟಯವುಳ್ಳವನು.

**ತ್ವಂ [೩]ಪಂಚಬ್ರಹ್ಮತತ್ತ್ವಾತ್ಮಾ ಪಂಚಕಲ್ಯಾಣನಾಯಕಃ ।**
**[೪]ಷಡ್ಭೇದಭಾವತತ್ತ್ವಜ್ಞಸ್ತ್ವಂ ಸಪ್ತನಯಸಂಗ್ರಹಃ ॥ ೨೨೧ ॥**

ನೀನು ಪಂಚಪರಮೇಷ್ಠಿಸ್ವರೂಪನೂ ಐದು ಕಲ್ಯಾಣಗಳಿಗೆ ಸ್ವಾಮಿಯೂ ಜೀವ ಪುದ್ಗಲ ಧರ್ಮಾಧರ್ಮಾಕಾಶಕಾಲಗಳೆಂಬ ಷಡ್ದ್ರವ್ಯಸ್ವರೂಪವನ್ನು ತಿಳಿಯುವವನೂ ಆಗಿರುತ್ತೀಯೆ. ನೀನು ನೈಗಮ ಸಂಗ್ರಹ ವ್ಯವಹಾರ ಋಜುಸೂತ್ರ ಶಬ್ದ ಸಮಭಿರೂಢ ಏವಂಭೂತಗಳೆಂಬ ಏಳು ನಯಗಳ ಸಮೂಹರೂಪನಾಗಿರುತ್ತೀಯೆ.

**ದಿವ್ಯಾ[೫]ಷ್ಟಗುಣಮೂರ್ತಿಸ್ತ್ವಂ ನವಕೇವಲಲಬ್ಧಿಕಃ ।**
**[೬]ದಶಾವತಾರನಿರ್ಧಾರ್ಯೋ ಮಾಂ ಪಾಹಿ ಪರಮೇಶ್ವರ ॥ ೨೨೨ ॥**

ಪರಮೇಶ್ವರನೆ ! ನೀನು ಶ್ರೇಷ್ಠವಾದ ಸಮ್ಯಕ್ತ್ವ ಮೊದಲಾದ ಎಂಟುಗುಣಸ್ವರೂಪನೂ ಕ್ಷಾಯಿಕಸಮ್ಯಕ್ತ್ವ ಮೊದಲಾದ ನವಕೇವಲ ಲಬ್ಧಿಗಳುಳ್ಳವನೂ ಮಹಾಬಲ ಮೊದಲಾದ ಹತ್ತು ಅವತಾರಗಳಿಂದ ನಿಶ್ಚಯವಾಗಿ ತಿಳಿಯುವುದಕ್ಕೆ ಯೋಗ್ಯನೂ ಆಗಿರುವೆ. ಸ್ವಾಮಿಯೆ ! ನನ್ನನ್ನು ಕಾಪಾಡು.

**ಯುಷ್ಮನ್ನಾಮಾವಲೀ[೭]ದೃಬ್ಧವಿಲಸತ್ಸ್ತೋತ್ರಮಾಲಯಾ ।**
**ಭವಂತಂ [೮]ವರಿವಸ್ಯಾಮಃ ಪ್ರಸೀದಾನುಗೃಹಾಣ ನಃ ॥ ೨೨೩ ॥**

ನಿಮ್ಮ ಹೆಸರುಗಳ ಸಮೂಹದಿಂದ ರಚಿತವೂ ಪ್ರಕಾಶಮಾನವೂ ಆದ ಸ್ತೋತ್ರವೆಂಬ ಮಾಲಿಕೆಯಿಂದ ತಮ್ಮನ್ನು ಆರಾಧಿಸುತ್ತೇವೆ. ಪ್ರಸನ್ನನಾಗು ! ನಮ್ಮನ್ನನುಗ್ರಹಿಸು !"

---

೧ ಕರ್ಮೇಂಧನವಹ್ನಿಃ. ೨ ಕರ್ಮಣಿ ಸಾಧುಃ. ೩ ಕರ್ಮಶೂರಃ. ೪ ಉನ್ನತಃ. ೫ ಜನ್ಮಜರಾ ಮರಣರೂಪತ್ರಿಪುರಹರಃ. ೬ ತ್ರಿಕಾಲವಿಷಯಾರ್ಥಾವಬೋಧಾತ್ತ್ರಿಲೋಚನಃ. ೭ ಸಮಂತಾನ್ಮಂಗಲಃ. ೮ ಶುಭಂ ಯುನಕ್ತೀತಿ. ೯ ಸುಖಾಧೀನಃ. ೧೦ ತೇಜಸಾಂ. ೧೧ ಸಂಚಿತಾನಿ. ೧೨ ಪವಿತ್ರಜ್ಞಾನೀ.

೧ ಸಂದೇಹರಹಿತಂ ಯಥಾ ತಥಾ. ೨ ಜ್ಞಾನದರ್ಶನೋಪಯೋಗಭಾಕ್. ೩ ಪಂಚಪರಮೇಷ್ಠಿರೂಪಃ. ೪ ಷಡ್ದ್ರವ್ಯಸ್ವರೂಪಃ. ೫ ಸಮ್ಯಕ್ತ್ವಾದ್ಯಷ್ಟಗುಣಮೂರ್ತಿಃ, ಪೃಥಿವ್ಯಾದ್ಯಷ್ಟ ಮೂರ್ತಿರ್ವಾ. ೬ ಮಹಾಬಲಾದಿಪುರುಜಿನಪ ಪರ್ಯಂತಾಃ. ೭ ರಚಿತಾ. ೮ ಆರಾಧಯಾಮಃ.

ಇದಂ ಸ್ತೋತ್ರಮನುಸ್ಮೃತ್ಯ ಪೂತೋ ಭವತಿ ಭಾಕ್ತಿಕಃ ।
ಯಃ ಸಂಪಾಠಂ ಪಠತ್ಯೇನಂ ಸ ಸ್ಯಾತ್ಕಲ್ಯಾಣಭಾಜನಮ್ ॥ ೨೨೪ ॥

ಈ ಸ್ತೋತ್ರವನ್ನು ಮನಸ್ಸಿನಲ್ಲಿ ಸ್ಮರಿಸಿ ಮುಖಪಾಠಮಾಡುವ ಭಕ್ತನು ಪವಿತ್ರನಾಗುತ್ತಾನೆ. ಸಮಸ್ತ ಮಂಗಲಗಳಿಗೆ ಪಾತ್ರನೂ ಆಗುವನು.

ತತಃ ಸದೇದಂ ಪುಣ್ಯಾರ್ಥೀ ಪುಮಾನ್ಪಠತು ಪುಣ್ಯಧೀಃ ।
ಪೌರುಹೂತೀಂ ಶ್ರಿಯಂ ಪ್ರಾಪ್ತುಂ ಪರಮಾಮಭಿಲಾಷುಕಃ ॥ ೨೨೫ ॥

ಆದುದರಿಂದ ಶ್ರೇಷ್ಠವಾದ ಇಂದ್ರಸಂಪತ್ತನ್ನು ಹೊಂದುವುದಕ್ಕೆ ಅಭಿಲಾಷೆಯುಳ್ಳವನೂ ಪುಣ್ಯವನ್ನು ಬಯಸುವವನೂ ಪುಣ್ಯಕರವಾದ ಬುದ್ಧಿಯುಳ್ಳವನೂ ಆದ ಮನುಷ್ಯನು ಯಾವಾಗಲೂ ಈ ಸ್ತೋತ್ರವನ್ನು ಪಠನಮಾಡಲಿ.

ಸ್ತುತ್ವೇತಿ ಮಘವಾ ದೇವಂ ಚರಾಚರಜಗದ್ಗುರುಮ್ ।
ತತಸ್ತೀರ್ಥವಿಹಾರಸ್ಯ [1]ವ್ಯಾಧಾ[2]ತ್ಪ್ರಸ್ತಾವನಾಮಿಮಾಮ್ ॥ ೨೨೬ ॥

ಈ ಪ್ರಕಾರವಾಗಿ ದೇವೇಂದ್ರನು ಚರಾಚರರೂಪವಾದ ಜಗತ್ತಿಗೆ ಗುರುವಾದ ಸ್ವಾಮಿಯನ್ನು ಸ್ತೋತ್ರಮಾಡಿ ಬಳಿಕ ಮುಂದೆ ಹೇಳುವ ತೀರ್ಥವಿಹಾರದ ಪ್ರಸ್ತಾವ(ಸೂಚನ)ವನ್ನು ಮಾಡಿದನು.

ಭಗವನ್ಭವ್ಯಸಸ್ಯಾನಾಂ ಪಾಪಾ[3]ವಗ್ರಹಶೋಷಿಣಾಮ್ ।
ಧರ್ಮಾಮೃತಪ್ರಸೇಕೇನ ತ್ವ[4]ಮೇಧಿ ಶರಣಂ ವಿಭೋ ॥ ೨೨೭ ॥

"ಭಗವಂತನೆ! ಪಾಪವೆಂಬ ಅನಾವೃಷ್ಟಿಯಿಂದ ಒಣಗಿರುವ ಭವ್ಯರೆಂಬ ಪೈರುಗಳಿಗೆ ಧರ್ಮವೆಂಬ ಅಮೃತದ ಸೇಚನೆಯಿಂದ ಪ್ರಭುವೆ! ನೀನು ರಕ್ಷಕನಾಗು.

ಭವ್ಯಸಾರ್ಥಾಧಿಪ ಪ್ರೋದ್ಯದ್ದಯಾಧ್ವಜವಿರಾಜಿತ ।
ಧರ್ಮಚಕ್ರಮಿದಂ ಸಜ್ಜಂ ತ್ವಜ್ಜಯೋದ್ಯೋಗಸಾಧನಮ್ ॥ ೨೨೮ ॥

ಉದಯಿಸುತ್ತಿರುವ ದಯೆಯೆಂಬ ಧ್ವಜದಿಂದ ಶೋಭಿಸುತ್ತಿರುವವನೂ ಭವ್ಯರ ಸಮೂಹಕ್ಕೆ ಪ್ರಭುವೂ ಆದ ಜಿನೇಶ್ವರನೆ! ನಿನ್ನ ಜಗದ್ವಿಜಯಕಾರ್ಯಕ್ಕೆ ಸಾಧಕವಾದ ಈ ಧರ್ಮಚಕ್ರವು ಸಿದ್ಧವಾಗಿದೆ.

ನಿರ್ಧೂಯ ಮೋಹಪೃತನಾಂ ಮುಕ್ತಿಮಾರ್ಗೋಪರೋಧಿನೀಮ್ ।
ತವೋಪದೇಷ್ಟುಂ ಸನ್ಮಾರ್ಗಂ ಕಾಲೋಯಂ ಸಮುಪಸ್ಥಿತಃ ॥ ೨೨೯ ॥

ಮೋಕ್ಷಮಾರ್ಗಕ್ಕೆ ತಡೆಯಾಗಿರುವ ಮೋಹನೀಯಕರ್ಮವೆಂಬ ಸೈನ್ಯವನ್ನು ನಾಶಮಾಡಿ ಸನ್ಮಾರ್ಗವನ್ನುಪದೇಶಮಾಡುವುದಕ್ಕೆ ನಿನಗೆ ಈ ಕಾಲವೊದಗಿದೆ."

ಇತಿ ಪ್ರಬುದ್ಧತತ್ತ್ವಸ್ಯ ಸ್ವಯಂ ಭರ್ತುರ್ಜಿಗೀಷತಃ ।
ಪುನರುಕ್ತತರಾ ವಾಚಃ ಪ್ರಾದುರಾಸನ್ ಶತಕ್ರತೋಃ ॥ ೨೩೦ ॥

ತಾನೇ ಸಮಸ್ತ ತತ್ತ್ವಗಳನ್ನು ತಿಳಿದಿರುವವನೂ ಜಗದ್ವಿಜಯವನ್ನಿಚ್ಛಿಸುವವನೂ ಆದ ಸ್ವಾಮಿಗೆ ದೇವೇಂದ್ರನು ಹೇಳಿದ ಮಾತುಗಳು ಸಂಪೂರ್ಣವಾಗಿ ಪುನರುಕ್ತಗಳಾದುವು. ಸ್ವಾಮಿಯು ತಿಳಿದಿರುವ ವಿಷಯವನ್ನೇ ದೇವೇಂದ್ರನು ಸೂಚಿಸಿದಂತಾದುದೆಂದು ಭಾವವು.

ಅಥ ತ್ರಿಭುವನಕ್ಷೋಭೀ ತೀರ್ಥಕೃತ್ಪುಣ್ಯಸಾರಥಿಃ ।
ಭವ್ಯಾಬ್ಜಾನುಗ್ರಹಂ ಕರ್ತು[5]ಮುತ್ತಸ್ಥೇ ಜಿನಭಾನುಮಾನ್ ॥ ೨೩೧ ॥

ತರುವಾಯ ಮೂರು ಲೋಕಕ್ಕೆ ಕ್ಷೋಭೆಯನ್ನುಂಟುಮಾಡುವವನೂ ತೀರ್ಥಕರಪುಣ್ಯವೆಂಬ ಸಾರಥಿಯುಳ್ಳವನೂ ಆದ ಜಿನೇಶ್ವರನೆಂಬ ಸೂರ್ಯನು ಭವ್ಯರೆಂಬ ಕಮಲಗಳಿಗೆ ಅನುಗ್ರಹವನ್ನು ಮಾಡುವುದಕ್ಕೋಸ್ಕರ ಉದ್ಯುಕ್ತನಾದನು.

೧ ವ್ಯಧಾದಿತ್ಯಪಿ ಪಾಠಃ. ೨ ಅವಸರಂ. ೩ ಅನಾವೃಷ್ಟ್ಯೇತ್ಯರ್ಥಃ. ೪ ಭವ. ೫ ಉದ್ಯುಕ್ತೋಭೂತ್.

ಮೋಕ್ಷಾಧಿರೋಹನಿಃಶ್ರೇಣೀಭೂತಚ್ಛತ್ರತ್ರಯೋ[1]ದ್ಧುರಃ ।
ಯಶಃ ಕ್ಷೀರೋದಫೇನಾಭಸಿತಚಾಮರವೀಜಿತಃ ॥ ೨೩೨ ॥

ಮೋಕ್ಷಕ್ಕೆ ಹತ್ತುವುದಕ್ಕೆ ಏಣಿಯಂತಿರುವ ಛತ್ರತ್ರಯವುಳ್ಳವನೂ ಯಶಸ್ಸೆಂಬ ಕ್ಷೀರಸಮುದ್ರದ ನೊರೆಗೆ ಸಮಾನವಾದ ಶುಭ್ರಚಾಮರಗಳಿಂದ ಬೀಸಲ್ಪಡುವವನೂ

ಧ್ವನನ್ಮಧುರಗಂಭೀರಧೀರದಿವ್ಯಮಹಾಧ್ವನಿಃ ।
ಭಾನುಕೋಟಿಪ್ರತಿಸ್ಪರ್ಧಿಪ್ರಭಾವಲಯಭಾಸ್ವರಃ ॥ ೨೩೩ ॥

ಧ್ವನಿಮಾಡುತ್ತಿರುವ ಮಧುರವೂ ಗಂಭೀರವೂ ಧೀರತರವೂ ಆದ ಮಹಾದಿವ್ಯಧ್ವನಿಯುಳ್ಳವನೂ ಕೋಟಿ ಸೂರ್ಯರಿಗೆ ಮಿಗಿಲಾದ ಪ್ರಭಾಮಂಡಲದಿಂದ ಪ್ರಕಾಶಮಾನನೂ

[2]ಮರುತ್ಪ್ರಹತಗಂಭೀರಧ್ವನದ್ದುಂದುಭಿಃ ಪ್ರಭುಃ ।
ಸುರೋತ್ಕರಕರೋನ್ಮುಕ್ತ ಪುಷ್ಪವರ್ಷಾರ್ಚಿತಕ್ರಮಃ ॥ ೨೩೪ ॥

ದೇವತೆಗಳಿಂದ ಬಾರಿಸಲ್ಪಟ್ಟ ಗಂಭೀರವೂ ಶಬ್ದಮಾಡುತ್ತಿರುವುದೂ ಆದ ಭೇರಿಯುಳ್ಳವನೂ ಪ್ರಭುವೂ ದೇವತೆಗಳ ಗುಂಪಿನ ಕೈಗಳಿಂದ ಬಿಡಲ್ಪಟ್ಟ ಪುಷ್ಪವೃಷ್ಟಿಯಿಂದ ಪೂಜಿಸಲ್ಪಟ್ಟ ಪಾದಗಳುಳ್ಳವನೂ

ಮೇರುಶೃಂಗಸಮುತ್ತುಂಗಸಿಂಹವಿಷ್ಟರನಾಯಕಃ ।
ಸಚ್ಛಾಯಸಫಲಾಶೋಕಪ್ರಕಟೀಕೃತಚೇಷ್ಟಿತಃ ॥ ೨೩೫ ॥

ಮಹಾಮೇರುಪರ್ವತದ ಶಿಖರದಂತೆ ಉನ್ನತವಾದ ಸಿಂಹಾಸನಕ್ಕೆ ಸ್ವಾಮಿಯೂ ನೆರಳಿನಿಂದಲೂ ಫಲಗಳಿಂದಲೂ ಯುಕ್ತವಾಗಿರುವ ಅಶೋಕವೃಕ್ಷದಿಂದ ಪ್ರಕಟಮಾಡಲ್ಪಟ್ಟ ವ್ಯಾಪಾರವುಳ್ಳವನೂ

ಧೂಲೀಸಾಲವೃತಾ[3]ಸ್ಥಾನಜಗತೀಪರಿಮಂಡಲಃ ।
ಮಾನಸ್ತಂಭನಿರುದ್ಧಾನ್ಯಕುದೃಷ್ಟಿಮದವಿಭ್ರಮಃ ॥ ೨೩೬ ॥

ಧೂಲೀಸಾಲದಿಂದ ಸುತ್ತಲ್ಪಟ್ಟ ಸಮವಸರಣಭೂಮಿಯ ಜಗತಿಯಿಂದ ಆವರಿಸಲ್ಪಟ್ಟವನೂ ಮಾನಸ್ತಂಭದಿಂದ ಮಿಥ್ಯಾದೃಷ್ಟಿಗಳ ಮದವಿಲಾಸವನ್ನು ದೂರಮಾಡುವವನೂ

ಸ್ವಚ್ಛಾಂಭಃಖಾತಿಕಾಭ್ಯರ್ಣ[4]ವ್ರತತೀವನವೇಷ್ಟಿತಾಮ್ ।
ಸಭಾಭೂಮಿಮಲಂಕುರ್ವನ್ನಪೂರ್ವವಿಭವೋದಯಾಮ್ ॥ ೨೩೭ ॥

ನಿರ್ಮಲವಾದ ನೀರುಳ್ಳ ಕಂದಕಗಳ ಸಮೀಪದಲ್ಲಿರುವ ಲತಾವನಗಳಿಂದ ಸುತ್ತಲ್ಪಟ್ಟುದೂ ಅಪೂರ್ವವಾದ ವೈಭವವುಳ್ಳುದೂ ಆದ ಸಮವಸರಣ ಸಭಾಭೂಮಿಯನ್ನಲಂಕರಿಸುವವನೂ

ಸಮಗ್ರಗೋಪುರೋದಗ್ರೈಃ ಪ್ರಾಕಾರವಲಯೈಸ್ತ್ರಿಭಿಃ ।
ಪರಾರ್ಧ್ಯರಚನೋಪೇತೈರಾವಿಷ್ಕೃತಮಹೋದಯಃ ॥ ೨೩೮ ॥

ಸಂಪೂರ್ಣವಾದ ಗೋಪುರಗಳಿಂದುನ್ನತವೂ ಶ್ರೇಷ್ಠವಾದ ರಚನಾಯುಕ್ತವೂ ಆದ ಮೂರು ಕೋಟೆಗಳಿಂದ ತನ್ನ ವೈಭವವನ್ನು ಪ್ರಕಾಶಪಡಿಸಿರುವವನೂ

ಅಶೋಕಾದಿವನಶ್ರೇಣೀಕೃತಚ್ಛಾಯಸಭಾವನಿಃ ।
ಪೃಗ್ವಸ್ತ್ರಾದಿಧ್ವಜೋಲ್ಲಾಸಸಮಾಹೂತಜಗಜ್ಜನಃ ॥ ೨೩೯ ॥

೧ ಉತ್ಕಟಃ. ೨ ಸುರತಾಡ್ಯಮಾನಃ. ೩ ಸಮವಸರಣಭೂಮೇಃ. ೪ ಲತಾ.

ಅಶೋಕ ಮೊದಲಾದ ವನಗಳ ಸಾಲಿನಿಂದುಂಟಾದ ನೆರಳುಳ್ಳ ಸಭಾಭೂಮಿಯುಳ್ಳವನೂ ಪುಷ್ಪಮಾಲೆ ವಸ್ತ್ರ ಮೊದಲಾದ ಧ್ವಜಗಳ ಚಲನೆಯಿಂದ ಜಗತ್ತಿನ ಜನರನ್ನು ಕರೆಯುವಂತಿರುವವನೂ

**ಕಲ್ಪದ್ರುಮವನಚ್ಛಾಯಾವಿಶ್ರಾಂತಾಮರಪೂಜಿತಃ ।**
**ಪ್ರಾಸಾದರುದ್ಧಭೂಮಿಷ್ಠಕಿನ್ನರೋದ್ಗೀತಸದ್ಯಶಾಃ ॥ ೨೪೦ ॥**

ಕಲ್ಪವೃಕ್ಷಗಳ ವನದ ನೆರಳಿನಲ್ಲಿ ವಿಶ್ರಮಿಸಿರುವ ದೇವತೆಗಳಿಂದ ಪೂಜಿಸಲ್ಪಟ್ಟವನೂ ಉಪ್ಪರಿಗೆಯ ಮೇಲೆ ಕುಳಿತಿರುವ ಕಿನ್ನರರಿಂದ ಗಾನಮಾಡಲ್ಪಟ್ಟ ಶ್ರೇಷ್ಠವಾದ ಯಶಸ್ಸುಳ್ಳವನೂ

**ಜ್ವಲನ್ಮಹೋದಯಸ್ತೂಪಪ್ರಕಟೀಕೃತವೈಭವಃ ।**
**ನಾಟ್ಯಶಾಲಾದ್ವಯೋದ್ಧರ್ದ್ಧಿಸಂವರ್ಧಿತಜನೋತ್ಸವಃ ॥ ೨೪೧ ॥**

ಪ್ರಕಾಶಮಾನವೂ ಉನ್ನತವೂ ಆದ ಸ್ತೂಪಗಳಿಂದ ತನ್ನ ವೈಭವವನ್ನು ಪ್ರಕಟಪಡಿಸಿರುವವನೂ ಎರಡೆರಡು ನಾಟ್ಯಶಾಲೆಗಳಲ್ಲಿ ಪ್ರಕಾಶಮಾನವಾದ ವೈಭವದಿಂದ ಜನರ ಉತ್ಸವವನ್ನು ವೃದ್ಧಿಪಡಿಸಿದವನೂ

**ಧೂಪಾಮೋದಿತದಿಗ್ಭಾಗಮಹಾಗಂಧಕುಟೀಶ್ವರಃ ।**
**[1]ತ್ರಿವಿಷ್ಟಪಪತಿಪ್ರಾಜ್ಯಪೂಜಾರ್ಹಃ ಪರಮೇಶ್ವರಃ ॥ ೨೪೨ ॥**

ಧೂಪದಿಂದ ಸುಗಂಧಿತವಾದ ದಿಕ್ಕುಗಳುಳ್ಳ ದೊಡ್ಡ ಗಂಧಕುಟಿಗೆ ಸ್ವಾಮಿಯೂ ಇಂದ್ರ ಮೊದಲಾದವರಿಂದ ಮಾಡಲ್ಪಟ್ಟ ಮಹಾಪೂಜೆಗೆ ಯೋಗ್ಯನೂ ಮಹಾ ಮಹಿಮೆಯುಳ್ಳವನೂ

**ತ್ರಿಜಗದ್ವಲ್ಲಭಃ ಶ್ರೀಮಾನ್ಭಗವಾನಾದಿಪೂರುಷಃ ।**
**ಪ್ರಚಕ್ರೇ ವಿಜಯೋದ್ಯೋಗಂ ಧರ್ಮಚಕ್ರಾಧಿನಾಯಕಃ ॥ ೨೪೩ ॥**

ಮೂರು ಲೋಕಕ್ಕೆ ಸ್ವಾಮಿಯೂ ಅಂತರಂಗಬಹಿರಂಗಲಕ್ಷ್ಮಿಯುಳ್ಳವನೂ ಭಗವಂತನೂ ಧರ್ಮಚಕ್ರಕ್ಕೆ ಪ್ರಭುವೂ ಆದ ಆದಿಪುರುಷ(ಆದಿಜಿನೇಶ್ವರ)ನು ವಿಜಯನಿಮಿತ್ತವಾಗಿ ಉದ್ಯೋಗವನ್ನು ಮಾಡಿದನು.

**ತತೋ ಭಗವದುದ್ಯೋಗಸಮಯೇ [2]ಸಮುಪೇಯುಷಿ ।**
**ಪ್ರಚೇಲುಃ ಪ್ರಚಲನ್ಮೌಲಿಕೋಟಯಃ ಸುರಕೋಟಯಃ ॥ ೨೪೪ ॥**

ಭಗವಂತನ ಉದ್ಯೋಗಸಮಯವು ಪ್ರಾಪ್ತವಾದಾಗ ಚಲಿಸುತ್ತಿರುವ ಕಿರೀಟಾಗ್ರ ಭಾಗಗಳುಳ್ಳ ಅನೇಕ ದೇವತೆಗಳು ಹೊರಟರು.

**ತದಾ ಸಂಭ್ರಾಂತನಾಕೀಂದ್ರತಿರೀಟೋಚ್ಚಲಿತಾ ಧ್ರುವಮ್ ।**
**ಜಗನ್ನೀರಾಜಯಾಮಾಸುರ್ಮಣಯೋ ದಿಗ್ಜಯೇ ವಿಭೋಃ ॥ ೨೪೫ ॥**

ಆಗ ಸ್ವಾಮಿಯ ಆ ದಿಗ್ವಿಜಯಕಾಲದಲ್ಲಿ ತ್ವರೆಮಾಡುತ್ತಿದ್ದ ದೇವೇಂದ್ರರ ಕಿರೀಟಗಳಿಂದ ಮೇಲಕ್ಕೆರಚಲ್ಪಟ್ಟ ರತ್ನಗಳು ಜಗತ್ತಿಗೆ ಆರತಿಯನ್ನೆತ್ತುವಂತಿದ್ದುವು.

**[3]ಜಯೇತ್ಯುಚ್ಚೈರ್ಗಿರೋ ದೇವಾಃ [4]ಪ್ರೋರ್ಣುವಾನಾ ನಭೋಂಗಣಮ್ ।**
**ದಿಶಾಂ ಮುಖಾನಿ ತೇಜೋಭಿರ್ದ್ಯೋತಯಂತಃ ಪ್ರತಸ್ಥಿರೇ ॥ ೨೪೬ ॥**

ತಮ್ಮ ಕಾಂತಿಗಳಿಂದ ದಿಕ್ಕುಗಳನ್ನು ಪ್ರಕಾಶಪಡಿಸುತ್ತಿರುವ ದೇವತೆಗಳು ಜಯ ಜಯವೆಂಬ ಗಟ್ಟಿಯಾದ ವಚನಗಳುಳ್ಳವರಾಗಿ ಆಕಾಶಪ್ರದೇಶವನ್ನು ವ್ಯಾಪಿಸಿ ಹೊರಟರು.

**ಜಿನೋದ್ಯೋಗಮಹಾ[5]ವಾತ್ಯಾ ಕ್ಷುಭಿತಾ ದೇವನಾಯಕಾಃ ।**
**ಚತುರ್ನಿಕಾಯಾಶ್ಚತ್ವಾರೋ ಮಹಾಬ್ಧಯ ಇವಾಭವನ್ ॥ ೨೪೭ ॥**

ಜಿನೇಶ್ವರನ ದಿಗ್ವಿಜಯದ ಉದ್ಯೋಗವೆಂಬ ದೊಡ್ಡ ಗಾಳಿಯ ಸಮೂಹದಿಂದ ಕ್ಷೋಭೆಗೊಂಡಿರುವ ಭವನೇಂದ್ರ ವ್ಯಂತರೇಂದ್ರ ಜ್ಯೋತಿಷ್ಕೇಂದ್ರ ಕಲ್ಪೇಂದ್ರರುಗಳು ತಮ್ಮ ಸಮೂಹದೊಡನೆ ನಾಲ್ಕು ದೊಡ್ಡ ಸಮುದ್ರಗಳಂತಿದ್ದರು.

**ಪ್ರತಸ್ಥೇ ಭಗವಾನಿತ್ಥಮನುಯಾತಃ ಸುರಾಸುರೈಃ ।**
**ಅನಿಚ್ಛಾಪೂರ್ವಿಕಾಂ ವೃತ್ತಿ[1]ಮಾಸ್ಕಂದನ್ಭಾನುಮಾನಿವ ॥ ೨೪೮ ॥**

ಈ ಪ್ರಕಾರವಾಗಿ ದೇವತೆಗಳಿಂದಲೂ ಅಸುರದೇವತೆಗಳಿಂದಲೂ ಹಿಂಬಾಲಿಸಲ್ಪಟ್ಟ ಭಗವಂತನು, ಸೂರ್ಯನಂತೆ ಇಚ್ಛಾರಹಿತವಾದ ವ್ಯಾಪಾರ(ವಿಹಾರ)ವನ್ನು ಹೊಂದಿ ಹೊರಟನು. ಇಚ್ಛೆಯಿಲ್ಲದೆ ಗಮನಮಾಡುವುದು ಸೂರ್ಯನ ಸ್ವಭಾವವಾಗಿರುವಂತೆ ಸ್ವಾಮಿಯೂ ಸ್ವಾಭಾವಿಕವಾಗಿ ಶ್ರೀವಿಹಾರಕ್ಕೆ ಹೊರಟರೆಂದು ಭಾವವು.

**ಅರ್ಧಮಾಗಧಿಕಾಕಾರಭಾಷಾ[2]ಪರಿಣತಾಖಿಲಃ ।**
**ತ್ರಿಜಗಜ್ಜನತಾಮೈತ್ರೀಸಂಪಾದಿತಗುಣಾದ್ಭುತಃ ॥ ೨೪೯ ॥**

ತನ್ನ ಅರ್ಧಮಾಗಧೀಭಾಷೆಯಲ್ಲಿ ಪರಿಣಮಿಸಿರುವ ಸಮಸ್ತ ಜೀವಗಳ ಭಾಷೆಯುಳ್ಳವನೂ ಮೂರುಲೋಕದ ಜನಸಮೂಹದ ಪ್ರೇಮದಿಂದ ಸಂಪಾದಿಸಿದ ಅದ್ಭುತವಾದ ಗುಣಗಳುಳ್ಳವನೂ

**ಸ್ವಸನ್ನಿಧಾನಸಂಫುಲ್ಲಫಲಿತಾಂಕುರಿತದ್ರುಮಃ ।**
**ಆದರ್ಶಮಂಡಲಾಕಾರ[3]ಪರಿವರ್ತಿತಭೂತಲಃ ॥ ೨೫೦ ॥**

ತನ್ನ ಸಮೀಪದಲ್ಲಿ ವಿಕಸಿತವೂ ಫಲಭರಿತವೂ ಅಂಕುರಿತವೂ ಆದ ವೃಕ್ಷಗಳುಳ್ಳವನೂ ವರ್ತುಲಾಕಾರವಾದ ಕನ್ನಡಿಯಂತೆ ಪರಿಣಮಿಸಿದ ಭೂಪ್ರದೇಶವುಳ್ಳವನೂ

**ಸುಗಂಧಿಶಿಶಿರಾನುಚ್ಚೈರನುಯಾಯಿಸಮೀರಣಃ ।**
**[4]ಅಕಸ್ಮಾಜ್ಜನತಾನಂದಸಂಪಾದಿಪರಮೋದಯಃ ॥ ೨೫೧ ॥**

ಸುಗಂಧವೂ ಶೀತಲವೂ ಮಂದವೂ ಅನುಸರಿಸಿ ಬೀಸುತ್ತಿರುವುದೂ ಆದ ಗಾಳಿಯುಳ್ಳವನೂ ಕಾರಣವಿಲ್ಲದೆ ಜನಸಮೂಹಕ್ಕೆ ಸಂತೋಷವನ್ನುಂಟುಮಾಡುವ ಪರಮವೈಭವವುಳ್ಳವನೂ

**[5]ಮರುತ್ಕುಮಾರಸಮ್ಮೃಷ್ಟಯೋಜನಾಂತರರಮ್ಯಭೂಃ ।**
**[6]ಸ್ತನಿತಾಮರಸಂಸಿಕ್ತಗಂಧಾಂಬುವಿರಜೋವನಿಃ ॥ ೨೫೨ ॥**

ಒಂದು ಯೋಜನಪರ್ಯಂತ ವಾಯುಕುಮಾರನಿಂದ ಗುಡಿಸಲ್ಪಟ್ಟ ರಮಣೀಯವಾದ ಭೂಮಿಯುಳ್ಳವನೂ ಮೇಘಕುಮಾರನಿಂದ ಸೇಚನೆ ಮಾಡಲ್ಪಟ್ಟ ಗಂಧೋದಕದಿಂದ ಧೂಳಿಯಿಲ್ಲದಿರುವ ಭೂಮಿಯುಳ್ಳವನೂ

**ಮೃದುಸ್ಪರ್ಶಸುಖಾಂಭೋಜವಿನ್ಯಸ್ತಪದಪಂಕಜಃ ।**
**ಶಾಲಿವ್ರೀಹ್ಯಾದಿಸಂಪನ್ನವಸುಧಾಸೂಚಿತಾಗಮಃ ॥ ೨೫೩ ॥**

ಕೋಮಲವಾದ ಸ್ಪರ್ಶವುಳ್ಳುದೂ ಸುಖಕರವೂ ಆದ ಕಮಲಗಳಲ್ಲಿ ಪಾದಕಮಲಗಳನ್ನಿರಿಸಿದವನೂ ಭತ್ತ ಕೆಂಪುಭತ್ತ ಮೊದಲಾದ ಧಾನ್ಯಗಳಿಂದ ಸಮೃದ್ಧವಾದ ಭೂಮಿಯಿಂದ ತನ್ನ ಆಗಮನವನ್ನು ಸೂಚಿಸಿದವನೂ (ಸ್ವಾಮಿಯ ವಿಹಾರಸ್ಥಾನದಲ್ಲಿ ಭತ್ತ ಮೊದಲಾದ ಧಾನ್ಯಗಳು ಸಮೃದ್ಧವಾಗಿದ್ದುವೆಂದರ್ಥವು)

**ಶರತ್ಸರೋವರಸ್ಪರ್ಧಿವ್ಯೋಮೋದಾಹೃತಸನ್ನಿಧಿಃ ।**
**[7]ಕಕುಬಂತರವೈಮಲ್ಯಸಂದರ್ಶಿತಸಮಾಗಮಃ ॥ ೨೫೪ ॥**

೧ ಇಂದ್ರಾದಿಕೃತಾದಭ್ರಪೂಜಾರ್ಹಃ. ೨ ಆಗತೇ ಸತಿ. ೩ ಜಯಜಯೇತ್ಯುಚ್ಚವಚನಾ. ೪ ಆಚ್ಛಾದಯಂತಃ. ೫ ವಾಯುಸಮೂಹೇನ.

೧ ಗಚ್ಛನ್. ೨ ಪರಿಣಮಿತಸರ್ವಜೀವಃ. ೩ ಪರಿಣಮಿತಂ. ೪ ಕಾರಣಮಂತರೇಣ. ೫ ವಾಯುಕುಮಾರಸಮ್ಮಾರ್ಜಿತಃ. ೬ ಮೇಘಕುಮಾರಃ. ೭ ದಿಗಂತರ.

ಶರತ್ಕಾಲದ ಸರೋವರದಂತೆ ನಿರ್ಮಲವಾದ ಆಕಾಶದಿಂದ ತಾನು ಸಮೀಪಕ್ಕೆ ಬಂದುದನ್ನು ಸೂಚಿಸುವವನೂ ದಿಕ್ಕುಗಳ ಮಧ್ಯಗಳಲ್ಲಿರುವ ನೈರ್ಮಲ್ಯದಿಂದ ತನ್ನ ಬರುವಿಕೆಯನ್ನು ಸೂಚಿಸುವವನೂ

**[1]ದ್ಯುಸತ್ಪರಸ್ಪರಾಹ್ವಾನಧ್ವಾನರುದ್ಧ[2]ಹರಿನ್ಮುಖಃ ।**
**ಸಹಸ್ರಾರಸ್ಫುರದ್ಧರ್ಮಚಕ್ರರತ್ನಪುರಃಸರಃ ॥ ೨೫೫ ॥**

ದೇವತೆಗಳು ಪರಸ್ಪರವಾಗಿ ಕರೆಯುವ ಶಬ್ದದಿಂದ ವ್ಯಾಪಿಸಲ್ಪಟ್ಟ ದಿಕ್ಕುಗಳುಳ್ಳವನೂ ಮುಂಭಾಗದಲ್ಲಿ ಸಾವಿರ ಅರಗಳುಳ್ಳುದೂ ಪ್ರಕಾಶಮಾನವೂ ಆದ ಧರ್ಮಚಕ್ರರತ್ನದ ಚಲನೆಯುಳ್ಳವನೂ

**ಪುರಸ್ಕೃತಾ[3]ಷ್ಟಮಾಂಗಲ್ಯಧ್ವಜಮಾಲಾತತಾಂಬರಃ ।**
**ಸುರಾಸುರಾನುಯಾತೋಽಭಾ[4]ದ್ವಿಜಿಹೀರ್ಷುಸ್ತದಾ ವಿಭುಃ ॥ ೨೫೬ ॥**

ಮುಂಭಾಗದಲ್ಲಿರಿಸಿದ ಎಂಟು ಮಂಗಲದ್ರವ್ಯಗಳಿಂದಲೂ ಧ್ವಜಗಳಿಂದಲೂ ಮಾಲಿಕೆಗಳಿಂದಲೂ ವ್ಯಾಪ್ತವಾದ ಆಕಾಶವುಳ್ಳವನೂ ವಿಹರಿಸಬೇಕೆಂಬ ಇಚ್ಛೆಯುಳ್ಳವನೂ ಆದ ಸ್ವಾಮಿಯು ಆಗ ದೇವತೆಗಳಿಂದಲೂ ಅಸುರಕುಮಾರರಿಂದಲೂ ಅನುಸರಿಸಲ್ಪಟ್ಟವನಾಗಿ ಶೋಭಿಸುತ್ತಿದ್ದನು.

**ತದಾ ಮಧುರಗಂಭೀರೋ ಜಜೃಂಭೇ ದುಂದುಭಿಧ್ವನಿಃ ।**
**ನಭಃಸಮಂತಾದಾಪೂರ್ಯ ಕ್ಷುಭ್ಯದಬ್ಧಿಸ್ವನೋಪಮಃ ॥ ೨೫೭ ॥**

ಆಗ ಉಕ್ಕುತ್ತಿರುವ ಸಮುದ್ರದ ಶಬ್ದಕ್ಕೆ ಸಮಾನವೂ ಮಧುರವೂ ಗಂಭೀರವೂ ಆದ ಭೇರಿಯ ಧ್ವನಿಯು ಆಕಾಶದ ಸುತ್ತಲೂ ವ್ಯಾಪಿಸಿ ವೃದ್ಧಿಹೊಂದಿದ್ದಿತು.

**ವವೃಷುಃ ಸುಮನೋವೃಷ್ಟಿಮಾಪೂರಿತನಭೋಂಗಣಮ್ ।**
**ಸುರಾ ಭವ್ಯದ್ವಿರೇಫಾಣಾಂ [5]ಸೌಮನಸ್ಯವಿಧಾಯಿನೀಮ್ ॥ ೨೫೮ ॥**

ದೇವತೆಗಳು ಭವ್ಯರೆಂಬ ಭ್ರಮರಗಳಿಗೆ ಪ್ರಸನ್ನವಾದ ಮನೋವ್ಯಾಪಾರವನ್ನುಂಟುಮಾಡುವ ಪುಷ್ಪವೃಷ್ಟಿಯನ್ನು, ಆಕಾಶಪ್ರದೇಶವೆಲ್ಲ ತುಂಬುವಂತೆ, ಸುರಿದರು.

**ಸಮಂತತಃ ಸ್ಫುರಂತಿಸ್ಮ [6]ಪಾಲಿಕೇತನಕೋಟಯಃ ।**
**ಆಹ್ವಾತುಮಿವ ಭವ್ಯೌಘಾ[7]ನೇತ್ಯೈತೇತಿ [8]ಮರುದ್ಧತಾಃ ॥ ೨೫೯ ॥**

ಗಾಳಿಯಿಂದ ಕಂಪಿತವಾದ ಅನೇಕ ಪರಿವಾರಧ್ವಜಗಳು ಭವ್ಯರ ಸಮೂಹಗಳನ್ನು "ಬನ್ನಿರಿ ಬನ್ನಿರಿ" ಎಂದು ಕರೆಯುವುದಕ್ಕೋಸ್ಕರವೋ ಎಂಬಂತೆ ಸುತ್ತಲೂ ಪ್ರಕಾಶಿಸುತ್ತಿದ್ದುವು.

**ತರ್ಜಯನ್ನಿವ ಕರ್ಮಾರೀ[9]ನೂರ್ಜಸ್ವೀ ರುದ್ಧದಿಙ್ಮುಖಃ ।**
**[10]ಢಂಕಾರ [11]ಏಷ ಢಕ್ಕಾನಾಮಭೂತ್ಪ್ರತಿಪದಂ ವಿಭೋಃ ॥ ೨೬೦ ॥**

ಕರ್ಮಶತ್ರುಗಳನ್ನು ತಿರಸ್ಕರಿಸುತ್ತಿದೆಯೋ ಎಂಬಂತಿರುವುದೂ ದಿಕ್ಕುಗಳನ್ನು ವ್ಯಾಪಿಸಿದುದೂ ಆದ ಢಕ್ಕಾವಾದ್ಯಗಳ ದೊಡ್ಡದಾದ ಢಂಕಾರಶಬ್ದವು ಸ್ವಾಮಿಯ ಪ್ರತಿಯೊಂದು ಹೆಜ್ಜೆಗೂ ಉಂಟಾಯಿತು.

**ನಭೋರಂಗೇ ನಟಂತಿಸ್ಮ ಪ್ರೋಲ್ಲಸದ್ಭ್ರೂಪತಾಕಿಕಾಃ ।**
**ಸುರಾಂಗನಾ [12]ವಿಲಿಂಪತ್ಯಃ ಸ್ವದೇಹಪ್ರಭಯಾ ದಿಶಃ ॥ ೨೬೧ ॥**

ತಮ್ಮ ಶರೀರಕಾಂತಿಯಿಂದ ದಿಕ್ಕುಗಳನ್ನು ಲೇಪಿಸುವವರೂ ಪ್ರಕಾಶಮಾನವಾದ ಹುಬ್ಬುಗಳೆಂಬ ಪತಾಕೆಗಳುಳ್ಳವರೂ ಆದ ದೇವಸ್ತ್ರೀಯರು ಆಕಾಶವೆಂಬ ರಂಗಸ್ಥಾನದಲ್ಲಿ ಕುಣಿಯುತ್ತಿದ್ದರು.

೧ ಅಮರಾಃ. ೨ ದಿಙ್ಮುಖಃ. ೩ ಅಷ್ಟಮಂಗಲಂ. ೪ ವಿಹರ್ತುಮಿಚ್ಛುಃ. ೫ ಪ್ರಸನ್ನ ಮನೋವೃತ್ತಿಂ. ೬ ಪರಿವಾರಧ್ವಜಕೋಟಯಃ. ೭ ಆಗಚ್ಛತಾಗಚ್ಛತೇತಿ. ೮ ವಾಯುಕಂಪಿತಾಃ. ೯ ಮಹಾನ್. ೧೦ ಢಕ್ಕಾರ ಇತ್ಯಪಿ ಪಾಠಃ. ೧೧ ಪದಢಕ್ಕಾನಾಮಿತ್ಯಪಿ ಪಾಠಃ. ೧೨ ವಿಲುಂಪಂತ್ಯ ಇತ್ಯಪಿ ಪಾಠಃ.

**ವಿಬುಧಾಃ ಪೇಠು[1]ರುತ್ಸಾಹಾತ್ಕಿನ್ನರಾ ಮಧುರಂ ಜಗುಃ ।**
**ವೀಣಾವಾದನಮಾತೇನುರ್ಗಂಧರ್ವಾಃ ಸಹ ಖೇಚರೈಃ ॥ ೨೬೨ ॥**

ದೇವತೆಗಳು ಉತ್ಸಾಹದಿಂದ ಜಿನೇಶ್ವರನ ಸ್ತುತಿಪಾಠವನ್ನು ಮಾಡಿದರು. ಕಿನ್ನರರು ಮನೋಹರವಾಗಿ ಗಾನಮಾಡಿದರು. ಗಂಧರ್ವರೂ ವಿದ್ಯಾಧರರೂ ವೀಣೆಯನ್ನು ಬಾರಿಸಿದರು.

**ಪ್ರಭಾಮಯಮಿವಾಶೇಷಂ ಜಗತ್ಕರ್ತುಂ ಸಮುದ್ಯತಾಃ ।**
**ಪ್ರತಸ್ಥಿರೇ ಸುರಾಧೀಶಾ ಜ್ವಲನ್ಮುಕುಟಕೋಟಯಃ ॥ ೨೬೩ ॥**

ಪ್ರಕಾಶಮಾನವಾದ ಕಿರೀಟಾಗ್ರಭಾಗಗಳುಳ್ಳ ದೇವೇಂದ್ರರು, ಲೋಕವನ್ನೆಲ್ಲ ಕಾಂತಿಮಯವನ್ನಾಗಿ ಮಾಡುವುದಕ್ಕೋಸ್ಕರ ಪ್ರಯತ್ನಪಡುತ್ತಿದ್ದಾರೋ ಎಂಬಂತೆ ಹೊರಟರು.

**ದಿಶಃ [2]ಪ್ರಸೇದುರುನ್ಮುಕ್ತಧೂಮಿಕಾಃ ಪ್ರಮುದಾದಿವ ।**
**ಬಭ್ರಾಜೇ ಧೃತವೈಮಲ್ಯ[3]ಮನಭ್ರಂ ವರ್ತ್ಮ ವಾಮುಚಾಮ್ ॥ ೨೬೪ ॥**

ದಿಕ್ಕುಗಳು, ಸಂತೋಷದಿಂದಲೋ ಎಂಬಂತೆ, ಹೊಗೆಯಿಲ್ಲದುವುಗಳಾಗಿ ಪ್ರಸನ್ನ(ನಿರ್ಮಲ)ವಾದುವು. ಮೇಘವಿಲ್ಲದಿರುವ ಆಕಾಶವು ನೈರ್ಮಲ್ಯವನ್ನು ಹೊಂದಿದುದಾಗಿ ಪ್ರಕಾಶಿಸುತ್ತಿದ್ದಿತು.

**ಪರಿನಿಷ್ಪನ್ನಶಾಲ್ಯಾದಿಸಸ್ಯಸಂಪನ್ಮಹೀ ತದಾ ।**
**ಉದ್ಭೂತಹರ್ಷರೋಮಾಂಚಾ ಸ್ವಾಮಿಲಾಭಾದಿವಾಭವತ್ ॥ ೨೬೫ ॥**

ಆಗ ಪರಿಪೂರ್ಣವಾಗಿ ಬೆಳೆದ ಭತ್ತ ಮೊದಲಾದ ಸಸ್ಯಗಳ ಸಂಪತ್ತುಳ್ಳ ಭೂಮಿಯು, ಸ್ವಾಮಿಯ ಲಾಭದಿಂದುಂಟಾದ ಸಂತೋಷದ ರೋಮಾಂಚವುಳ್ಳುದಾಗಿದೆಯೋ ಎಂಬಂತಿದ್ದಿತು.

**[4]ವವುಃ ಸುರಭಯೋ ವಾತಾಃ ಸ್ವರ್ಧುನೀಶೀಕರಸ್ಪೃಶಃ ।**
**ಆಕೀರ್ಣಪಂಕಜರಜಃ[5]ಪಟವಾಸಪಟಾವೃತಾಃ ॥ ೨೬೬ ॥**

ಸುಗಂಧವೂ ಗಂಗಾನದಿಯ ತುಂತುರುಗಳನ್ನು ಸ್ಪರ್ಶಮಾಡುವುವೂ ವ್ಯಾಪ್ತವಾದ ಕಮಲಗಳ ಧೂಳಿಯ ಸುಗಂಧಚೂರ್ಣವೆಂಬ ವಸ್ತ್ರದಿಂದ ಆವರಿಸಲ್ಪಟ್ಟುವೂ ಆದ ಗಾಳಿಗಳು ಬೀಸಿದುವು.

**ಮಹೀ ಸಮತಲಾ ರೇಜೇ [6]ಸಮ್ಮುಖೀನತಲೋಜ್ಜ್ವಲಾ ।**
**ಸುರೈರ್ಗಂಧಾಂಬುಭಿಃ ಸಿಕ್ತಾ [7]ಸ್ನಾತೇವ ವಿರಜಾಃ ಸತೀ ॥ ೨೬೭ ॥**

ಕನ್ನಡಿಯಂತೆ ಪ್ರಕಾಶಮಾನವೂ ಸಮತಲವೂ ದೇವತೆಗಳಿಂದ ಗಂಧೋದಕಗಳಿಂದ ಸೇಚನೆಮಾಡಲ್ಪಟ್ಟುದೂ ಆದ ಭೂಮಿಯು, ಸ್ನಾನಮಾಡಿದ ರಜಸ್ವಲಾಸ್ತ್ರೀಯಂತೆ, ಶೋಭಿಸುತ್ತಿದ್ದಿತು.

**ಅಕಾಲಕುಸುಮೋ[8]ದ್ಭೇದಂ ದರ್ಶಯಂತಿ ಸ್ಮ ಪಾದಪಾಃ ।**
**ಋತುಭಿಃ [9]ಸಮಮಾಗತ್ಯ [10]ಸಂರುದ್ಧಾಃ [11]ಸಾಧ್ವಸಾದಿವ ॥ ೨೬೮ ॥**

ವೃಕ್ಷಗಳು, ಭಯದಿಂದಲೋ ಎಂಬಂತೆ, ಒಂದೇಕಾಲದಲ್ಲಿ ಸಮಸ್ತ ಋತುಗಳೊಡನೆ ಬಂದು ಆವರಿಸಲ್ಪಟ್ಟುವುಗಳಾಗಿ, ಅಕಾಲಪುಷ್ಪೋತ್ಪತ್ತಿಯನ್ನು ತೋರಿಸಿದುವು.

**ಸುಭಿಕ್ಷಂ [12]ಕ್ಷೇಮ[13]ಮಾರೋಗ್ಯಂ [14]ಗವ್ಯೂತೀನಾಂ [15]ಚತುಃಶತೇ ।**
**ಭೇಜೇ ಭೂರ್ಜಿನಮಾಹಾತ್ಮ್ಯಾದಜಾತಪ್ರಾಣಿಹಿಂಸನಾ ॥ ೨೬೯ ॥**

೧ ಉತ್ಸಾಹಾನಿತ್ಯಪಿ ಪಾಠಃ. ೨ ಪ್ರಸನ್ನಾ ಬಭೂವುಃ. ೩ ನಿರ್ಮೇಘಂ. ೪ ಬಭುರಿತ್ಯಪಿ ಪಾಠಃ. ೫ ಸುಗಂಧಚೂರ್ಣಃ. ೬ ದರ್ಪಣತಲೋಜ್ಜ್ವಲಾ. ೭ ಸ್ನಾತಾ ರಜಸ್ವಲಾ ಸತೀವ. ೮ ಉತ್ಪತ್ತಿಂ. ೯ ಯುಗಪತ್. ೧೦ ಆವೃತಾಃ. ೧೧ ಭಯಾತ್. ೧೨ ಕ್ಷಿಣೋತಿ ಕ್ಲೇಶಮಿತಿ. ೧೩ ಅರೋಗಸ್ಯ ಭಾವಃ ಆರೋಗ್ಯಂ. ೧೪ ಕ್ರೋಶಾನಾಂ. ೧೫ ಚತುಃಶತೀತ್ಯಪಿ ಪಾಠಃ.

ಜಿನೇಶ್ವರನ ಮಹಿಮೆಯಿಂದ ನಾಲ್ಕುನೂರು ಹರದಾರಿವರೆಗೆ ಭೂಮಿಯು ಪ್ರಾಣಿಹಿಂಸೆಯಿಲ್ಲದುದಾಗಿ ಸುಭಿಕ್ಷವನ್ನೂ ಕ್ಷೇಮ(ಕ್ಲೇಶನಾಶ)ವನ್ನೂ ರೋಗ ರಾಹಿತ್ಯವನ್ನೂ ಹೊಂದಿದ್ದಿತು.

**ಅಕಸ್ಮಾತ್ಪ್ರಾಣಿನೋ ಭೇಜುಃ ಪ್ರಮದಸ್ಯ ಪರಂಪರಾಮ್ ।**
**ತೇನುಃ [೧]ಪಾರಸ್ಪರೀಂ ಮೈತ್ರೀಂ ಬಂಧುಭೂಯಮಿವಾಶ್ರಿತಾಃ ॥ ೨೭೦ ॥**

ಆಗ ಪ್ರಾಣಿಗಳು ಅಕಸ್ಮಾತ್ತಾಗಿ ಆನಂದಪರಂಪರೆಯನ್ನು ಹೊಂದಿದುವು; ಮತ್ತು ಬಂಧುತ್ವವನ್ನು ಹೊಂದಿದವರಂತೆ ಪರಸ್ಪರವಾಗಿ ಮಿತ್ರಭಾವವನ್ನು ಹೆಚ್ಚಿಸಿ ಕೊಂಡುವು.

**ಮಕರಂದರಜೋವರ್ಷಿ ಪ್ರತ್ಯಗ್ರೋದ್ಭಿನ್ನಕೇಸರಮ್ ।**
**ವಿಚಿತ್ರರತ್ನನಿರ್ಮಾಣಕರ್ಣಿಕಂ ವಿಲಸದ್ದಲಮ್ ॥ ೨೭೧ ॥**

**ಭಗವಚ್ಚರಣನ್ಯಾಸಪ್ರದೇಶೇ[೨]ಧಿನಭಸ್ಥಲಮ್ ।**
**ಮೃದುಸ್ಪರ್ಶಮುದಾರಶ್ರಿ ಪಂಕಜಂ ಹೈಮಮುದ್ಬಭೌ ॥ ೨೭೨ ॥**

ಆಕಾಶದಲ್ಲಿ ಭಗವಂತನು ಪಾದಗಳನ್ನಿಡುವ ಪ್ರದೇಶದಲ್ಲಿ ಪುಷ್ಪರಸವನ್ನೂ ಧೂಳನ್ನೂ ಸುರಿಯುತ್ತಿರುವುದೂ ಹೊಸದಾಗಿ ಬಿಟ್ಟಿರುವ ಕುಸುಮಗಳುಳ್ಳದೂ ಅನೇಕ ಪ್ರಕಾರವಾದ ರತ್ನಗಳಿಂದ ಮಾಡಿದ ಕರ್ಣಿಕೆಯುಳ್ಳದೂ ಪ್ರಕಾಶ ಮಾನವಾದ ಎಸಳುಗಳುಳ್ಳದೂ ಕೋಮಲವಾದ ಸ್ಪರ್ಶವುಳ್ಳದೂ ಅಧಿಕ ಶೋಭೆ ಯುಳ್ಳದೂ ಆದ ಹೊಂದಾವರೆಯು ಅಧಿಕವಾಗಿ ಪ್ರಕಾಶಿಸುತ್ತಿದ್ದಿತು.

**ಪೃಷ್ಠತಶ್ಚ ಪುರಶ್ಚಾಸ್ಯ ಪದ್ಮಾಃ ಸಪ್ತ ವಿಕಾಸಿನಃ ।**
**ಪ್ರಾದುರ್ಬಭೂವುರುದ್ಗಂಧಿಸಾಂದ್ರಕಿಂಜಲ್ಕರೇಣವಃ ॥ ೨೭೩ ॥**

ಅಧಿಕವಾದ ಪರಿಮಳವುಳ್ಳದೂ ನಿಬಿಡವೂ ಆದ ಕುಸುಮಧೂಳಿಗಳುಳ್ಳವೂ ವಿಕಸಿತವೂ ಆದ ಏಳೇಳು ಕಮಲಗಳು ಈ ಸ್ವಾಮಿಯ ಹಿಂಭಾಗದಲ್ಲೂ ಮುಂಭಾಗದಲ್ಲೂ ಪ್ರಾದುರ್ಭವಿಸಿದುವು.

**ತಥಾನ್ಯಾನ್ಯಪಿ [೩]ಪದ್ಮಾನಿ ತತ್ಪರ್ಯಂತೇಷು ರೇಜಿರೇ ।**
**ಲಕ್ಷ್ಮ್ಯಾ[೪]ವಸಥಸೌಧಾನಿ ಸಂಚಾರೀಣೀವ ಖಾಂಗಣೆ ॥ ೨೭೪ ॥**

ಹಾಗೆಯೇ ಆ ಕಮಲಗಳ ಸಮೀಪಪ್ರದೇಶಗಳಲ್ಲಿ ಬೇರೆ ಕಮಲಗಳೂ, ಆಕಾಶದಲ್ಲಿ ಸಂಚರಿಸುವ ಲಕ್ಷ್ಮಿಯು ವಾಸಮಾಡುವ ಉಪ್ಪರಿಗೆ ಮನೆಗಳೋ ಎಂಬಂತೆ, ಪ್ರಕಾಶಿಸಿದುವು.

**ಹೇಮಾಂಭೋಜಮಯಾಂ ಶ್ರೇಣೀಮಲಿಶ್ರೇಣಿಭಿರನ್ವಿತಾಮ್ ।**
**ಸುರಾ [೫]ವ್ಯರಚಯನ್ನೇನಾಂ ಸುರರಾಜನಿದೇಶತಃ ॥ ೨೭೫ ॥**

ದೇವೇಂದ್ರನ ಅಪ್ಪಣೆಯಿಂದ ದೇವತೆಗಳು, ಭ್ರಮರಗಳ ಸಾಲುಗಳಿಂದ ಕೂಡಿರುವುದೂ ಸುವರ್ಣಕಮಲಮಯವೂ ಆದ ಈ ಕಮಲಪಂಕ್ತಿಯನ್ನು ರಚಿಸಿದರು.

**ರೇಜೇ [೬]ರಾಜೀವರಾಜೀ ಸಾ [೭]ಜಿನಪತ್ಪಂಕಜೋನ್ಮುಖೀ ।**
**[೮]ಆದಿತ್ಸುರಿವ [೯]ತತ್ಕಾಂತಿ[೧೦]ಮತಿರೇಕಾದಧಃಸ್ರುತಾಮ್ ॥ ೨೭೬ ॥**

ಜಿನೇಶ್ವರನ ಪಾದಕಮಲಗಳಿಗಭಿಮುಖವಾಗಿರುವ ಆ ಕಮಲಗಳ ಸಾಲು, ಕಾಂತಿಯ ಆಧಿಕ್ಯದಿಂದ ಕೆಳಕ್ಕೆ ಸುರಿಯುತ್ತಿರುವ ಜಿನೇಶ್ವರನ ಪಾದಕಮಲಗಳ ಕಾಂತಿಯನ್ನು ತೆಗೆದುಕೊಳ್ಳುವುದಕ್ಕೋಸ್ಕರ ಇಚ್ಛಿಸುತ್ತಿದೆಯೋ ಎಂಬಂತೆ, ಶೋಭಿ ಸುತ್ತಿದ್ದಿತು.

೧ ಪರಸ್ಪರಮಿತ್ಯಪಿ ಪಾಠಃ. ೨ ಆಕಾಶೆ. ೩ ಏಕಂ ಪ್ರತಿ ಪರಿವಾರಪದ್ಮಾನಿ ಪಂಚದಶ. ೪ ನಿವಾಸಹರ್ಮ್ಯಾಣಿ. ೫ ರಚಯಂತಿ ಸ್ಮ. ೬ ಪಂಚದಶಪದ್ಮಪಂಕ್ತಿಃ. ೭ ಜಿನಪಾದಕಮಲೋನ್ಮುಖೀ. ೮ ಆದಾತುಮಿಚ್ಛುಃ. ೯ ಕಮಲಕಾಂತಿಂ. ೧೦ ಕಾಂತೇರಾಧಿಕ್ಯಾತ್.

**ತತಿರ್ವಿಹಾರಪದ್ಮಾನಾಂ ಜಿನಸ್ಯೋ[೧]ಪಾಂಘ್ರಿ ಸಾ ಬಭೌ ।**
**ನಭಃಸರಸಿ ಸಂಫುಲ್ಲಾ [೨]ತ್ರಿಪಂಚಕಕೃತಪ್ರಮಾ ॥ ೨೭೭ ॥**

ಆಕಾಶವೆಂಬ ಸರೋವರದಲ್ಲಿ ವಿಕಸಿತವಾದ ಆ ಹದಿನೈದು ವಿಹಾರಕಮಲಗಳ ಸಾಲು ಜಿನೇಶ್ವರನ ಪಾದಗಳ ಸಮೀಪದಲ್ಲಿ ಪ್ರಕಾಶಿಸುತ್ತಿದ್ದಿತು.

**ತದಾ ಹೇಮಾಂಬುಜೈರ್ವ್ಯೋಮ ಸಮಂತಾದಾತತಂ ಬಭೌ ।**
**ಸರೋವರಮಿವೋತ್ಫುಲ್ಲಪಂಕಜಂ ಜಿನದಿಗ್ಜಯೇ ॥ ೨೭೮ ॥**

ಆ ಜಿನೇಶ್ವರನ ದಿಗ್ವಿಜಯಕಾಲದಲ್ಲಿ ಸುತ್ತಲೂ ಸುವರ್ಣಕಮಲಗಳಿಂದ ವ್ಯಾಪ್ತವಾದ ಆಕಾಶವು, ವಿಕಸಿತವಾದ ಕಮಲಗಳುಳ್ಳ ಸರೋವರದಂತೆ, ಪ್ರಕಾಶಿ ಸುತ್ತಿದ್ದಿತು.

**ಪ್ರಮೋದಮಯಮಾತನ್ವನ್ನಿತಿ [೩]ವಿಶ್ವಂ ಜಗತ್ಪತಿಃ ।**
**ವಿಜಹಾರ ಮಹೀಂ ಕೃತ್ಸ್ನಾಂ ಪ್ರೀಣಯನ್ಸ್ವವಚೋಮೃತೈಃ ॥ ೨೭೯ ॥**

ಈ ಪ್ರಕಾರವಾಗಿ ಜಗತ್ತನ್ನು ಸಂತೋಷಮಯವನ್ನಾಗಿ ಮಾಡುತ್ತಿರುವ ಲೋಕಾಧಿಪತಿಯು ತನ್ನ ವಚನಗಳೆಂಬ ಅಮೃತಗಳಿಂದ ಆನಂದಪಡಿಸುವವನಾಗಿ ಸಮಸ್ತಪೃಥ್ವಿಯನ್ನು ವಿಹರಿಸಿದನು.

**ಮಿಥ್ಯಾಂಧಕಾರಘಟನಾಂ [೪]ವಿಘಟಯ್ಯ ವಚೋಂಶುಭಿಃ ।**
**ಜಗದುದ್ಯೋತಯಾಮಾಸ ಜಿನಾರ್ಕೋ ಜನತಾರ್ತಿಹೃತ್ ॥ ೨೮೦ ॥**

ಜನಸಮೂಹದ ದುಃಖವನ್ನು ನಾಶಮಾಡುವ ಜಿನೇಶ್ವರನೆಂಬ ಸೂರ್ಯನು ವಚನಗಳೆಂಬ ಕಿರಣಗಳಿಂದ ಮಿಥ್ಯಾತ್ವವೆಂಬ ಕತ್ತಲೆಯ ವ್ಯಾಪಕತೆಯನ್ನು ಹೋಗ ಲಾಡಿಸಿ ಲೋಕವನ್ನು ಪ್ರಕಾಶಪಡಿಸಿದನು.

**[೫]ಯತೋ ವಿಜಹ್ರೇ ಭಗವಾನ್ ಹೇಮಾಬ್ಜನ್ಯಸ್ತಸತ್ಕ್ರಮಃ ।**
**ಧರ್ಮಾಮೃತಾಂಬು[೬]ಸಂವರ್ಷೈ[೭]ಸ್ತತೋ ಭವ್ಯಾ ಧೃತಿಂ ದಧುಃ ॥**

ಸುವರ್ಣಕಮಲಗಳಲ್ಲಿ ತನ್ನ ಹೆಜ್ಜೆಗಳನ್ನಿರಿಸಿದ ಭಗವಂತನು ಧರ್ಮವೆಂಬ ಅಮೃತಜಲದ ವರ್ಷಣೆಗಳಿಂದ ಯಾವ ಪ್ರದೇಶದಲ್ಲಿ ವಿಹರಿಸಿದನೋ ಆ ಪ್ರದೇಶದಲ್ಲಿ ಭವ್ಯರು ಸಂತೋಷವನ್ನು ಹೊಂದಿದರು.

**ಜಿನೇ ಘನ ಇವಾಭ್ಯರ್ಣೇ ಧರ್ಮವರ್ಷಂ ಪ್ರವರ್ಷತಿ ।**
**ಜಗತ್ಸುಖಪ್ರವಾಹೇಣ [೮]ಪುಪ್ಲುವೇ [೯]ಧೃತನಿರ್ವೃತಿ ॥ ೨೮೨ ॥**

ಮೇಘದಂತೆ ಜಿನೇಶ್ವರನು ಸಮೀಪದಲ್ಲಿ ಧರ್ಮವೆಂಬ ಮಳೆಯನ್ನು ಸುರಿ ಯುತ್ತಿರಲು ಸುಖವನ್ನು ಹೊಂದಿದ ಜಗತ್ತು ಸುಖವೆಂಬ ಪ್ರವಾಹದಿಂದ ಮುಳು ಗಿದ್ದಿತು. ಜಗತ್ತು ಸುಖಪರವಶವಾಗಿದ್ದಿತೆಂದು ಭಾವವು.

**ಧರ್ಮವಾರಿ ಜಿನಾಂಭೋದಾತ್ಪಾಯಂಪಾಯಂ ಕೃತಸ್ಪೃಹಾಃ ।**
**ಚಿರಂ ಧೃತತೃಷೋ [೧೦]ದಧ್ರುಸ್ತದಾನೀಂ ಭವ್ಯಚಾತಕಾಃ ॥ ೨೮೩ ॥**

ಬಹುಕಾಲದಿಂದ ಬಾಯಾರಿದ ಭವ್ಯರೆಂಬ ಚಾತಕಪಕ್ಷಿಗಳು ಶ್ರೀವಿಹಾರಕಾಲದಲ್ಲಿ ಜಿನೇಶ್ವರನೆಂಬ ಮೇಘದಿಂದ ಧರ್ಮವೆಂಬ ಜಲವನ್ನು ಆಶೆಯಿಂದ ಕುಡಿ ಕುಡಿದು ಸಂತೋಷವನ್ನು ಹೊಂದಿದುವು.

**ಇತ್ಥಂ ಚರಾಚರಗುರುರ್ಜಗ[೧೧]ದುಜ್ಜಿಹೀರ್ಷನ್**
**ಸಂಸಾರ[೧೨]ಖಂಜನನಿಮಗ್ನಮಭಗ್ನವೃತ್ತಿಃ ।**
**ದೇವಾಸುರೈರನುಗತೋ ವಿಜಹಾರ ಪೃಥ್ವೀಮ್**
**ಹೇಮಾಬ್ಜಗರ್ಭವಿನಿವೇಶಿತಪಾದಪದ್ಮಃ ॥ ೨೮೪ ॥**

೧ ಅಂಘ್ರಿಸಮೀಪೇ. ೨ ಪಂಚದಶ. ೩ ಜಗತ್. ೪ ನಿರ್ಧೂಯ. ೫ ಯಸ್ಮಿನ್. ೬ ಸಂವರ್ಷಮಿತ್ಯಪಿ ಪಾಠಃ. ೭ ತಸ್ಮಿನ್. ೮ ಮಜ್ಜತಿ ಸ್ಮ. ೯ ಧೃತಸುಖಂ. ೧೦ ಧೃತಿಮಾಯಯುಃ. ೧೧ ಉದ್ಧರ್ತುಮಿಚ್ಛನ್. ೧೨ ಗರ್ತೇ.

ನಿರ್ವಿಘ್ನವಾದ ವ್ಯಾಪಾರವುಳ್ಳವನೂ ದೇವತೆಗಳಿಂದಲೂ ಅಸುರಕುಮಾರರಿಂದಲೂ ಹಿಂಬಾಲಿಸಲ್ಪಟ್ಟವನೂ ಸುವರ್ಣಕಮಲಗಳಮೇಲೆ ಪಾದಗಳನ್ನಿರಿಸಿದವನೂ ಚರಾಚರಪ್ರಾಣಿಗಳಿಗೆ ಗುರುವೂ ಆದ ಜಿನೇಶ್ವರನು ಸಂಸಾರವೆಂಬ ಹಳ್ಳದಲ್ಲಿ ಮುಳುಗಿರುವ ಜಗತ್ತನ್ನುದ್ಧರಿಸಬೇಕೆಂಬ ಇಚ್ಛೆಯುಳ್ಳವನಾಗಿ ಹಿಂದೆ ಹೇಳಿದ ಪ್ರಕಾರವಾಗಿ ಪೃಥ್ವಿಯಲ್ಲಿ ವಿಹರಿಸಿದನು.

ತೀವ್ರಾ[1]ಜವಂಜವದವಾನಲದಹ್ಯಮಾನ
ಮಾಹ್ಲಾದಯನ್ಭುವನಕಾನನಮಸ್ತತಾಪಃ ।
ಧರ್ಮಾಮೃತಾಂಬು[2]ಪೃಷತೈಃ ಪರಿಷಿಚ್ಯ ದೇವೋ
ರೇಜೇ [3]ಘನಾಗಮ ಇವೋದಿತ[4]ದಿವ್ಯನಾದಃ ॥ ೨೮೫ ॥

ದುಃಸ್ಸಹವಾದ ಸಂಸಾರವೆಂಬ ಕಾಡ್ಗಿಚ್ಚಿನಿಂದ ಸುಡಲ್ಪಡುತ್ತಿರುವ ಲೋಕವೆಂಬ ಅರಣ್ಯವನ್ನು ಧರ್ಮವೆಂಬ ಅಮೃತಜಲದ ಬಿಂದುಗಳಿಂದ ಸೇಚನೆಮಾಡಿ ಸಂತೋಷಪಡಿಸುತ್ತಿರುವವನೂ ಸಂತಾಪವಿಲ್ಲದವನೂ ದಿವ್ಯಧ್ವನಿಯ ಉದಯವುಳ್ಳವನೂ ಆದ ಸ್ವಾಮಿಯು, ವರ್ಷಾಕಾಲದ ಆಗಮನದಂತೆ, ಶೋಭಿಸಿದನು.

ಕಾಶೀಮವಂತಿ ಕುರುಕೋಸಲಸುಹ್ಮಪುಂಡ್ರಾನ್
ಚೇದ್ಯಂಗವಂಗ[5]ಮಗಧಾನ್ಸಕಲಿಂಗಮದ್ರಾನ್ ।
ಪಂಚಾಲಮಾಲವದಶಾರ್ಣವಿದರ್ಭದೇಶಾನ್
ಸನ್ಮಾರ್ಗದೇಶನಪರೋ ವಿಜಹಾರ ಧೀರಃ ॥ ೨೮೬ ॥

ಧೀರನಾದ ಸ್ವಾಮಿಯು ಸನ್ಮಾರ್ಗೋಪದೇಶದಲ್ಲಿ ತತ್ಪರನಾಗಿ ಕಾಶೀ ಅವಂತಿ ಕುರು ಕೋಸಲ ಸುಹ್ಮ ಪುಂಡ್ರ ಚೇದಿ ಅಂಗ ವಂಗ ಮಗಧ ಕಲಿಂಗ ಮದ್ರ ಪಂಚಾಲ ಮಾಲವ ದಶಾರ್ಣ ವಿದರ್ಭ ಮೊದಲಾದ ದೇಶಗಳಲ್ಲಿ ವಿಹರಿಸಿದನು.

ದೇವಃ [1]ಪ್ರಶಾಂತಚರಿತಃ ಶನಕೈರ್ವಿಹೃತ್ಯ
ದೇಶಾನ್ಬಹೂನಿತಿ ವಿಬೋಧಿತಭವ್ಯಸತ್ತ್ವಃ ।
ಭೇಜೇ ಜಗತ್ತ್ರಯಗುರುರ್ವಿಧು[2]ವೀಧ್ರಮುಚ್ಚೈಃ
ಕೈಲಾಸಮಾತ್ಮಯಶಸೋ[3]ನುಕೃತಿಂ ದಧಾನಮ್ ॥ ೨೮೭ ॥

ಈ ಪ್ರಕಾರವಾಗಿ ಭವ್ಯಪ್ರಾಣಿಗಳಿಗೆ ಧರ್ಮೋಪದೇಶವನ್ನುಮಾಡುವವನೂ ಅತ್ಯಂತಶಾಂತವಾದ ವ್ಯಾಪಾರವುಳ್ಳ ತ್ರಿಲೋಕಾಧಿಪತಿಯೂ ಆದ ಸ್ವಾಮಿಯು ನಿಧಾನವಾಗಿ ಅನೇಕದೇಶಗಳಲ್ಲಿ ವಿಹರಿಸಿ ಚಂದ್ರನಂತೆ ನಿರ್ಮಲವೂ ಉನ್ನತವೂ ತನ್ನ ಯಶಸ್ಸಿನ ಅನುಕರಣವನ್ನು ಧರಿಸಿರುವುದೂ ಆದ ಕೈಲಾಸಪರ್ವತವನ್ನು ಹೊಂದಿದನು.

[4]ತಸ್ಯಾಗ್ರೇ ಸುರನಿರ್ಮಿತೇ ಸುರುಚಿರೇ ಶ್ರೀಮ[5]ತ್ಸಭಾಮಂಡಲೇ
ಪೂರ್ವೋಕ್ತಾಖಿಲ[6]ವರ್ಣನಾಪರಿಗತೇ ಸ್ವರ್ಗಶ್ರಿಯಂ ತನ್ವತಿ ।
ಶ್ರೀಮಾನ್ದ್ವಾದಶಭಿರ್ಗಣೈಃ ಪರಿವೃತೋ ಭಕ್ತ್ಯಾನತೈಃ ಸಾದರೈಃ
[7]ಆಸಾಮಾಸ ವಿಭುರ್ಜಿನಃ ಪ್ರವಿಲಸತ್ಸತ್ಪ್ರಾತಿಹಾರ್ಯಾಷ್ಟಕಃ ॥ ೨೮೮ ॥

ಭಕ್ತಿಯಿಂದ ನಮ್ರವೂ ಪ್ರೀತಿಯುಕ್ತವೂ ಆದ ನಿರ್ಗ್ರಂಥ ಮೊದಲಾದ ಹನ್ನೆರಡು ಗುಂಪುಗಳಿಂದ ಸುತ್ತಲ್ಪಟ್ಟವನೂ ಪ್ರಕಾಶಮಾನವೂ ಶ್ರೇಷ್ಠವೂ ಆದ ಎಂಟು ಪ್ರಾತಿಹಾರ್ಯಗಳುಳ್ಳವನೂ ಅಂತರಂಗ ಬಹಿರಂಗ ಲಕ್ಷ್ಮೀಸಹಿತನೂ ಪ್ರಭುವೂ ಆದ ಸ್ವಾಮಿಯು ಆ ಕೈಲಾಸಪರ್ವತದ ತುದಿಯಲ್ಲಿ ದೇವತೆಗಳಿಂದ ನಿರ್ಮಿತವೂ ಮನೋಹರವೂ ಹಿಂದೆ ಹೇಳಲ್ಪಟ್ಟ ಸಮಸ್ತ ವರ್ಣನಯುಕ್ತವೂ ಸ್ವರ್ಗಸಂಪತ್ತನ್ನು ವಿಸ್ತರಿಸುತ್ತಿರುವುದೂ ಶೋಭಾಯಮಾನವೂ ಆದ ಸಮವಸರಣದಲ್ಲಿದ್ದನು.

ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ
ಭಗವದ್ವಿಹಾರವರ್ಣನಂ ನಾಮ ಪಂಚವಿಂಶತಿತಮಂ ಪರ್ವ ॥

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಭಗವದ್ವಿಹಾರವರ್ಣನವೆಂಬ
ಇಪ್ಪತ್ತೈದನೆಯ ಪರ್ವವು ಸಂಪೂರ್ಣವಾದುದು.

---

೧ ಸಂಸಾರಃ. ೨ ಬಿಂದುಭಿಃ ವೃಷಿತೈರಿತ್ಯಪಿ ಪಾಠಃ. ೩ ವರ್ಷಾಕಾಲಸ್ಯಾಗಮನಮಿವ. ೪ ದಿವ್ಯಧ್ವನಿಃ. ೫ ಮಗಧಾಂಧ್ರಕಲಿಂಗಮದ್ರಾನಿತ್ಯಪಿ ಪಾಠಃ.

೧ ಪ್ರಕರ್ಷೇಣ ಶಾಂತಚರಿತಃ. ೨ ವಿಮಲಂ. ೩ ಅನುಕರಣಂ. ೪ ಕೈಲಾಸಸ್ಯ. ೫ ಸಮವಸರಣೆ. ೬ ವರ್ಣನಯುಕ್ತೆ. ೭ ಆಸ್ತೇ ಸ್ಮ.

# ಅಥ ಷಡ್ತ್ರಿಂಶತಿತಮಂ ಪರ್ವ

**ಅಥ ಚಕ್ರಧರಃ ಪೂಜಾಂ ಚಕ್ರಸ್ಯ ವಿಧಿವದ್ವ್ಯಧಾತ್ ।**
**ಸುತೋತ್ಪತ್ತಿಮಪಿ ಶ್ರೀಮಾನಭ್ಯನಂದದನುಕ್ರಮಾತ್ ॥ ೧ ॥**

ಶ್ರೀ ವೃಷಭಸ್ವಾಮಿಯು ಕೈಲಾಸಪರ್ವತದಲ್ಲಿರುತ್ತಿರಲು ಅನಂತರ ಭಾಗ್ಯಶಾಲಿಯಾದ ಭರತಚಕ್ರವರ್ತಿಯು ವಿಧಿಗನುಸಾರವಾಗಿ ಚಕ್ರರತ್ನದ ಪೂಜೆಯನ್ನು ಮಾಡಿದನು. ಕ್ರಮದಿಂದ ಪುತ್ರೋತ್ಪತ್ತಿಯನ್ನೂ ಆನಂದಿಸಿದನು.

**[೧]ನೋ ದರಿದ್ರೀ ಜನಃ ಕಶ್ಚಿದ್ವಿಭೋಸ್ತಸ್ಮಿನ್ಮಹೋತ್ಸವೇ ।**
**ದಾರಿದ್ರ್ಯ [೨]ಮರ್ಥಿಲಾಭೇ ತು ಜಾತಂ [೩]ವಿಶ್ವಾಶಿತಂಭವೇ ॥ ೨ ॥**

ಭರತರಾಜನ ಆ ಮಹೋತ್ಸವದಲ್ಲಿ ಯಾರೂ ದರಿದ್ರರಿರಲಿಲ್ಲ ; ಯಾಚಕರೆಲ್ಲ ದಾನಮಾನಾದಿಗಳಿಂದ ತೃಪ್ತರಾಗಿದ್ದರೆಂದು ಭಾವವು. ಎಲ್ಲರಿಗೂ ತೃಪ್ತಿಯನ್ನುಂಟುಮಾಡುವ ಆ ಮಹೋತ್ಸವದಲ್ಲಿ ಯಾಚಕರ ಪ್ರಾಪ್ತಿಯಲ್ಲಿ ಮಾತ್ರ ದಾರಿದ್ರ್ಯವಿದ್ದಿತು. ಯಾಚಕರಿರಲಿಲ್ಲವೆಂದರ್ಥವು.

**[೪]ಚತುಷ್ಕೇಷು ಚ [೫]ರಥ್ಯಾಸು ಪುರಸ್ಯಾಂತ[೬]ರ್ಬಹಿಃಪುರಮ್ ।**
**ಪುಂಜೀಕೃತಾನಿ ರತ್ನಾನಿ ತದಾರ್ಥಿಭ್ಯೋ ದದೌ ನೃಪಃ ॥ ೩ ॥**

ಆ ಮಹೋತ್ಸವಕಾಲದಲ್ಲಿ ಭರತರಾಜನು ನಾಲ್ಕು ಮಾರ್ಗಗಳು ಸೇರುವ ಬೀದಿಗಳಲ್ಲಿ ಪಟ್ಟಣದೊಳಗೂ ಹೊರಗೂ ರಾಶಿಮಾಡಿರುವ ರತ್ನಗಳನ್ನು ಯಾಚಕರಿಗೆ ದಾನಮಾಡಿದನು.

**[೭]ಅಭಿಚಾರಕ್ರಿಯೇವಾಸೀಚ್ಚಕ್ರಪೂಜಾಸ್ಯ ವಿದ್ವಿಷಾಮ್ ।**
**ಜಗತಃ ಶಾಂತಿಕರ್ಮೇವ ಜಾತಕರ್ಮಾಪ್ಯಭೂತ್ತದಾ ॥ ೪ ॥**

ಆಗ ಈ ಭರತರಾಜನ ಶತ್ರುಗಳಿಗೆ ಚಕ್ರರತ್ನದ ಪೂಜೆಯು ಮಾರಣಕ್ರಿಯೆಯಂತಾಯಿತು; ಪುತ್ರನ ಜಾತಕರ್ಮ ಮಹೋತ್ಸವವು ಜಗತ್ತಿಗೆ ಶಾಂತಿಕ್ರಿಯೆಯಂತಾಯಿತು.

**ತತೋಽಸ್ಯ ದಿಗ್ಜಯೋದ್ಯೋಗಸಮಯೇ ಶರ[೮]ದಾಪತತ್ ।**
**ಜಯಲಕ್ಷ್ಮೀರಿವಾಮುಷ್ಯ ಪ್ರಸನ್ನಾ [೯]ವಿಮಲಾಂಬರಾ ॥ ೫ ॥**

ಉತ್ಸವವು ಸಮಾಪ್ತವಾದ ಮೇಲೆ ಭರತರಾಜನು ದಿಗ್ವಿಜಯಕ್ಕೆ ಪ್ರಯತ್ನಪಟ್ಟಕಾಲದಲ್ಲಿ, ಪ್ರಸನ್ನಳೂ ನಿರ್ಮಲವಾದ ವಸ್ತ್ರವುಳ್ಳವಳೂ ಆದ ಭರತರಾಜನ ಜಯಲಕ್ಷ್ಮಿಯೋ ಎಂಬಂತೆ, ಪ್ರಸನ್ನವೂ ನಿರ್ಮಲವಾದ ಆಕಾಶವುಳ್ಳದೂ ಆದ ಶರದೃತುವೂ ಪ್ರಾಪ್ತವಾಯಿತು.

**ಅಲಕಾ ಇವ ಸಂರೇಜು[೧೦]ರಸ್ಯಾ ಮಧುಕರವ್ರಜಾಃ ।**
**ಸಪ್ತಚ್ಛದಪ್ರಸೂನೋತ್ಥರಜೋ [೧೧]ರೂಷಿತವಿಗ್ರಹಾಃ ॥ ೬ ॥**

ಏಳೆಲೆ ಬಾಳೆಗಳ ಪುಷ್ಪಗಳಿಂದುಂಟಾದ ಧೂಳಿಯಿಂದ ಮುಚ್ಚಲ್ಪಟ್ಟ ಶರೀರವುಳ್ಳ ಭ್ರಮರಗಳ ಸಮೂಹಗಳು, ಶರದೃತುವೆಂಬ ಲಕ್ಷ್ಮಿಯ ಮುಂಗುರುಳುಗಳಂತೆ, ಶೋಭಿಸಿದುವು.

**ಪ್ರಸನ್ನಮಭವತ್ತೋಯಂ ಸರಸಾಂ ಸರಿತಾಮಪಿ ।**
**ಕವೀನಾಮಿವ ಸತ್ಕಾವ್ಯಂ ಜನತಾಚಿತ್ತರಂಜನಮ್ ॥ ೭ ॥**

೧ ದರಿದ್ರೋ ನಾಭೂತ್. ೨ ಯಾಚಕಜನಪ್ರಾಪ್ತೌ. ೩ ಸಕಲತೃಪ್ತಿಜನಕೇ. ೪ ಚತುಷ್ಪಥಕೃತಮಂಡಪೇಷು. ೫ ವೀಥೀಷು. ೬ ಪುರಾದ್ಬಹಿಃ. ೭ ಮಾರಣಕ್ರಿಯಾ. ೮ ಆಗತಾ. ೯ ನಿರ್ಮಲಾಕಾಶಾ, ನಿರ್ಮಲವಸನಾ ಚ. ೧೦ ಶರಲ್ಲಕ್ಷ್ಮ್ಯಾಃ. ೧೧ ಆಚ್ಛಾದಿತಃ ಭೂಷಿತ ಇತ್ಯಪಿ ಪಾಠಃ.

ಸರೋವರಗಳ ಮತ್ತು ನದಿಗಳ ಜಲವು, ಜನಸಮೂಹದ ಮನಸ್ಸನ್ನು ಸಂತೋಷಪಡಿಸುವ ಕವಿಗಳ ಶ್ರೇಷ್ಠವಾದ ಕಾವ್ಯದಂತೆ, ನಿರ್ಮಲವಾಗಿದ್ದಿತು.

**[೧]ಸಿತಚ್ಛದಾವಲೀ ರೇಜೇ ಸಂಪತಂತೀ ಸಮಂತತಃ ।**
**ಸ್ಥೂಲಮುಕ್ತಾವಲೀ[೨]ನದ್ಧಾ ಕಂಠಿಕೇವ ಶರಚ್ಛ್ರಿಯಃ ॥ ೮ ॥**

ಸುತ್ತಲೂ ಹಾರಾಡುತ್ತಿರುವ ಹಂಸಪಕ್ಷಿಗಳ ಸಮೂಹವು, ದೊಡ್ಡ ಮುತ್ತುಗಳ ಸಮೂಹದಿಂದ ಕಟ್ಟಲ್ಪಟ್ಟ ಶರದೃತುವೆಂಬ ಲಕ್ಷ್ಮಿಯ ಕಂಠಾಭರಣದಂತೆ, ಶೋಭಿಸುತ್ತಿದ್ದಿತು.

**ಸರೋಜಲಮಭೂತ್ಕಾಂತಂ ಸರೋಜರಜಸಾ ತತಮ್ ।**
**ಸುವರ್ಣರಜಸಾಕೀರ್ಣಮಿವ ಕುಟ್ಟಿಮಭೂತಲಮ್ ॥ ೯ ॥**

ಕಮಲಗಳ ಧೂಳಿನಿಂದ ವ್ಯಾಪ್ತವಾದ ಸರೋವರದ ಜಲವು, ಬಂಗಾರದ ಧೂಳಿಯಿಂದ ವ್ಯಾಪ್ತವಾದ ಭೂತಲದಂತೆ, ಮನೋಹರವಾಗಿದ್ದಿತು.

**ಸರಃ ಸರೋಜರಜಸಾ ಪರಿತಃ [೩]ಸ್ಥಗಿತೋದಕಮ್ ।**
**[೪]ಕಾದಂಬಜಾಯಾಃ ಸಂಪ್ರೇಕ್ಷ್ಯ [೫]ಮುಮುಹುಃ ಸ್ಥಲಶಂಕಯಾ ॥ ೧೦ ॥**

ಸುತ್ತಲೂ ಕಮಲಗಳ ಧೂಳಿಯಿಂದ ಆಚ್ಛಾದಿತವಾದ ಜಲವುಳ್ಳ ಸರೋವರವನ್ನು ನೋಡಿ ಸ್ತ್ರೀಕಲಹಂಸಪಕ್ಷಿಗಳು ಸ್ಥಲವೆಂಬ ಸಂಶಯದಿಂದ ಭ್ರಮೆಗೊಂಡುವು.

**ಕಂಜಕಿಂಜಲ್ಕಪುಂಜೇನ ಪಿಂಜರಾ ಷಟ್ಪದಾವಲೀ ।**
**ಸೌವರ್ಣಮಣಿ[೬]ದೃಬ್ಧೇವ ಶರದಃ ಕಂಠಿಕಾ ಬಭೌ ॥ ೧೧ ॥**

ಕಮಲಕುಸುಮಗಳ ಸಮೂಹದಿಂದ ಹಳದಿಬಣ್ಣವಾಗಿರುವ ಭ್ರಮರಗಳ ಸಾಲು, ಸುವರ್ಣಮಣಿಗಳಿಂದ ರಚಿತವಾದ ಶರದೃತುವಿನ ಕಂಠಮಾಲಿಕೆಯಂತೆ, ಶೋಭಿಸುತ್ತಿದ್ದಿತು.

**ಸರೋಜಲಂ [೭]ಸಮಾಸೇದುರ್ಮುಖರಾಃ [೮]ಸಿತಪಕ್ಷಿಣಃ ।**
**[೯]ವದಾನ್ಯಕುಲಮುದ್ಭೂತಸೌಗಂಧ್ಯಮಿವ ವಂದಿನಃ ॥ ೧೨ ॥**

ಸ್ತುತಿಪಾಠಕರು ದಾನಮಾಡುವವರ ಗುಂಪನ್ನು ಸೇರುವಂತೆ, ಶಬ್ದಮಾಡುತ್ತಿರುವ ಹಂಸಪಕ್ಷಿಗಳು ಸುಗಂಧವನ್ನು ಹರಡುತ್ತಿರುವ ಸರೋವರದ ಜಲವನ್ನು ಸೇರಿದುವು.

**ನದೀನಾಂ ಪುಲಿನಾನ್ಯಾಸನ್ ಶುಚೀನಿ ಶರದಾಗಮೇ ।**
**ಹಂಸಾನಾಂ ರಚಿತಾನೀವ ಶಯನಾನಿ ಸಿತಾಂಶುಕೈಃ ॥ ೧೩ ॥**

ಶರದೃತುವು ಬಂದಾಗ ನದಿಗಳ ಮರಳುಗಳು, ಶುಭ್ರವಾದ ವಸ್ತ್ರಗಳಿಂದ ರಚಿಸಿದ ಹಂಸಪಕ್ಷಿಗಳ ಹಾಸಿಗೆಗಳೋ ಎಂಬಂತೆ, ನಿರ್ಮಲವಾಗಿದ್ದುವು.

**ಸರಾಂಸಿ ಸಸರೋಜಾನಿ ಸೋತ್ಪಲಾ[೧೦]ವಪ್ರಭೂಮಯಃ ।**
**ಸಹಂಸ[೧೧]ಸೈಕತಾ ನದ್ಯೋ [೧೨]ಜಹ್ರುಶ್ಚೇತಾಂಸಿ ಕಾಮಿನಾಮ್ ॥ ೧೪ ॥**

೧ ಹಂಸಾವಲಿಃ. ೨ ಬದ್ಧಾ. ೩ ಆಚ್ಛಾದಿತಂ. ೪ ಕಲಹಂಸಸ್ತ್ರಿಯಃ. ೫ ಮೋಹಯಂತಿ ಸ್ಮ. ೬ ರಚಿತಾ. ೭ ಜಗ್ಮುಃ. ೮ ಹಂಸಾಃ. ೯ ತ್ಯಾಗಿಸಮೂಹಂ. ೧೦ ಕೇದಾರಃ. ೧೧ ಪುಲಿನಾಃ. ೧೨ ಅಪಹರಂತಿಸ್ಮ.

ಕಮಲಗಳುಳ್ಳ ಸರೋವರಗಳೂ ಕನ್ನೈದಿಲೆಗಳುಳ್ಳ ಗದ್ದೆಯ ಭೂಮಿಗಳೂ ಹಂಸಪಕ್ಷಿಗಳೊಡಗೂಡಿದ ಮರಳುಗಳುಳ್ಳ ನದಿಗಳೂ ಕಾಮುಕರ ಮನಸ್ಸುಗಳ ನ್ನಪಹರಿಸುತ್ತಿದ್ದುವು.

**ಪ್ರಸನ್ನಸಲಿಲಾ ರೇಜುಃ ಸರಸ್ಯಃ ಸಹಸಾರಸಾಃ ।**
**ಕೂಜಿತೈಃ ಕಲಹಂಸಾನಾಂ ಜಿತನೂಪುರಶಿಂಜಿತೈಃ ॥ ೧೫ ॥**

ನಿರ್ಮಲವಾದ ಜಲವುಳ್ಳುವೂ ಸಾರಸಪಕ್ಷಿಗಳಿಂದ ಯುಕ್ತವೂ ಆದ ಸರೋವರಗಳು, ಕಾಲುಸರಪಣಿಯ ಶಬ್ದವನ್ನು ಜಯಿಸಿದ ಕಲಹಂಸಪಕ್ಷಿಗಳ ಶಬ್ದಗಳಿಂದ ಶೋಭಿಸುತ್ತಿದ್ದುವು.

**ನೀಲೋತ್ಪಲೇಕ್ಷಣಾ ರೇಜೇ ಶರಚ್ಛ್ರೀಃ ಪಂಕಜಾನನಾ ।**
**ವ್ಯಕ್ತಮಾಭಾಷಮಾಣೇವ ಕಲಹಂಸೀಕಲಸ್ವನೈಃ ॥ ೧೬ ॥**

ಕನ್ನೈದಿಲೆಗಳೆಂಬ ನೇತ್ರಗಳುಳ್ಳವಳೂ ಕಮಲವೆಂಬ ಮುಖವುಳ್ಳವಳೂ ಆದ ಶರದೃತುವೆಂಬ ಲಕ್ಷ್ಮಿಯು, ಸ್ತ್ರೀಹಂಸಪಕ್ಷಿಗಳ ಮನೋಹರವಾದ ಶಬ್ದಗಳಿಂದ ಸ್ಫುಟವಾಗಿ ಮಾತನಾಡುತ್ತಾಳೋ ಎಂಬಂತೆ, ಶೋಭಿಸಿದಳು.

**ಪಕ್ವಶಾಲಿಭುವೋ ನಮ್ರಕಣಿಶಾಃ ಪಿಂಜರಶ್ರಿಯಃ ।**
**ಸ್ನಾತಾ [1]ಹರಿದ್ರಯೇವಾಸನ್ ಶರತ್ಕಾಲಪ್ರಿಯಾಗಮೇ ॥ ೧೭ ॥**

ನಮ್ರವಾದ ತೆನೆಗಳುಳ್ಳುವೂ ಹಸಿರುಬಣ್ಣದಿಂದ ಶೋಭಿಸುವುವೂ ಪರಿಪಕ್ವವಾದ ಭತ್ತಗಳುಳ್ಳುವೂ ಆದ ಭೂಮಿಗಳು, ಶರತ್ಕಾಲವೆಂಬ ಪ್ರಿಯನ ಸಮಾಗಮದಲ್ಲಿ ಅರಿಸಿನದಿಂದ ಸ್ನಾನಮಾಡಿದುವುಗಳಂತಿದ್ದುವು.

**[2]ಮಂದಸಾನಾ ಮದಂ ಭೇಜುಃ [3]ಸಹಸಾನಾ ಮದಂ ಜಹುಃ ।**
**ಶರಲ್ಲಕ್ಷ್ಮೀಂ ಸಮಾಲೋಕ್ಯ ಶುದ್ಧ್ಯಶುದ್ಧ್ಯೋರಯಂ [4]ನಿಜಃ ॥ ೧೮ ॥**

ಶರದೃತುವೆಂಬ ಲಕ್ಷ್ಮಿಯನ್ನು ನೋಡಿ ಹಂಸಪಕ್ಷಿಗಳು ಮದವನ್ನು ಹೊಂದಿದುವು; ನವಿಲುಗಳು ಮದವನ್ನು ಬಿಟ್ಟುವು. ಇದು ಶುದ್ಧಿ ಅಶುದ್ಧಿಗಳ ಸ್ವಾಭಾವಿಕವಾದ ಗುಣವಾಗಿದೆ. ಶುಭ್ರವಾದ ಶರದೃತುವನ್ನು ನೋಡಿ ಶುಭ್ರವಾದ ಹಂಸಪಕ್ಷಿಗಳು ಆನಂದವನ್ನು ಹೊಂದಿದುವು; ನೀಲವರ್ಣವುಳ್ಳ ನವಿಲುಗಳು ಆನಂದವನ್ನು ತೊರೆದುವೆಂದು ಭಾವವು.

**ಕಲಹಂಸಾ ಹಸಂತೀವ ವಿರುತೈಃ ಸ್ಮ ಶಿಖಂಡಿನಃ ।**
**ಅಹೋ [5]ಜಲಪ್ರಿಯಾ ಯೂಯಮಿತಿ ನಿರ್ಮಲಮೂರ್ತಯಃ॥ ೧೯ ॥**

ನಿರ್ಮಲವಾದ ಆಕಾರವುಳ್ಳ ಕಲಹಂಸಪಕ್ಷಿಗಳು ನವಿಲುಗಳನ್ನು ಕುರಿತು "ಎಲೈ ನವಿಲುಗಳೆ! ನೀವು ಜಲಪ್ರಿಯರು-ಜಡಪ್ರಿಯರು" ಎಂದು ತಮ್ಮ ಧ್ವನಿಗಳಿಂದ ಪರಿಹಾಸ್ಯಮಾಡುತ್ತವೋ ಎಂಬಂತಿದ್ದುವು. ಜಲಮಯವಾದ ಜಡಮಯವಾದ ವರ್ಷಋತುವನ್ನು ಪ್ರೀತಿಸುವವರೆಂದು ಹಂಸಗಳು ನವಿಲುಗಳನ್ನು ಪರಿಹಾಸ್ಯ ಮಾಡುವಂತಿದ್ದುವೆಂದು ಭಾವವು.

**ಚಿತ್ರವರ್ಣಾ [6]ಘನಾಬದ್ಧರುಚಯೋ ಗಿರಿಸಂಶ್ರಯಾಃ ।**
**ಸಮಂ [7]ಶತಮಖೇಷ್ವಾಸೈರ್ಬರ್ಹಿಣಃ ಸ್ವೋನ್ನತಿಂ ಜಹುಃ ॥ ೨೦ ॥**

ಅನೇಕ ಪ್ರಕಾರವಾದ ಬಣ್ಣವುಳ್ಳುವೂ ಮೇಘದಲ್ಲಿ ಅಭಿಲಾಷೆಯನ್ನು ಮಾಡುವುವೂ ಪರ್ವತವನ್ನಾಶ್ರಯಿಸುವುವೂ ಆದ ನವಿಲುಗಳು ಇಂದ್ರಧನುಸ್ಸುಗಳೊಡನೆ ತಮ್ಮ ಉನ್ನತಿಯನ್ನು ಪರಿತ್ಯಜಿಸಿದುವು. ಶರದೃತುವಿನಲ್ಲಿ ಇಂದ್ರಧನುಸ್ಸುಗಳುಂಟಾಗಲಿಲ್ಲ; ನವಿಲುಗಳು ಕುಗ್ಗಿದುವೆಂದು ಭಾವವು.

೧ ರಜ್ಞಾ ಹರಿದ್ರಯಾ ಚ. ೨ ಹಂಸಾಃ, ಮಂದಮಾನಾ ಇತ್ಯಪಿ ಪಾಠಃ. ೩ ಮಯೂರಾಃ, ಸಹಮಾನಾ ಇತ್ಯಪಿ ಪಾಠಃ. ೪ ಆತ್ಮೀಯಗುಣಃ. ೫ ಡಲಯೋರಭೇದಾಜ್ಜಡಪ್ರಿಯಾ ಇತಿ ಚ. ೬ ಮೇಘಕೃತಾಭಿಲಾಷಃ. ೭ ಇಂದ್ರಚಾಪೈಃ.

**[1]ಬಂಧೂಕೈರಿಂದ್ರಗೋಪಶ್ರೀರಾತೇನೇ ವನರಾಜಿಷು ।**
**ಶರಲ್ಲಕ್ಷ್ಮ್ಯೇವ ನಿಷ್ಠ್ಯೂತೈಸ್ತಾಂಬೂಲರಸಬಿಂದುಭಿಃ ॥ ೨೧ ॥**

ವನಪಂಕ್ತಿಗಳಲ್ಲಿ ಶರದೃತುವೆಂಬ ಲಕ್ಷ್ಮಿಯಿಂದ ಉಗುಳಲ್ಪಟ್ಟ ತಾಂಬೂಲರಸದ ಬಿಂದುಗಳೋ ಎಂಬಂತಿರುವ ಗೋರಟೆಯ ಹೂಗಳಿಂದ ಇಂದ್ರಗೋಪವೆಂಬ ಕೆಂಪುಹುಳುವಿನ ಶೋಭೆಯು ವಿಸ್ತರಿಸಲ್ಪಟ್ಟಿದ್ದಿತು. ವರ್ಷಋತುವಿನಲ್ಲಿ ವನಗಳಲ್ಲಿ ಇಂದ್ರಗೋಪಗಳೆಂಬ ಕ್ರಿಮಿಗಳಿರುವಂತೆ ಶರದೃತುವಿನಲ್ಲಿ ಗೋರಟೆಹೂವುಗಳಿದ್ದುವೆಂದು ಭಾವವು.

**ವಿಕಾಸಂ [2]ಬಂಧುಜೀವೇಷು ಶರದಾವಿರ್ಭವಂತ್ಯಧಾತ್ ।**
**[3]ಸತೀವ ಸುಪ್ರಸನ್ನಾ[4]ಶಾ [5]ವಿಪಂಕಾ [6]ವಿಶದಾಂಬರಾ ॥ ೨೨ ॥**

ಪ್ರಸನ್ನವಾದ ಮನಸ್ಸುಳ್ಳವಳೂ ದೋಷರಹಿತಳೂ ನಿರ್ಮಲವಾದ ವಸ್ತ್ರವುಳ್ಳವಳೂ ಆದ ಪತಿವ್ರತಾಸ್ತ್ರೀಯು ಬಂಧುಗಳಲ್ಲಿ ಸಂತೋಷವನ್ನುಂಟುಮಾಡುವಂತೆ, ನಿರ್ಮಲವಾದ ದಿಕ್ಕುಗಳುಳ್ಳುದೂ ಕೆಸರಿಲ್ಲದುದೂ ನಿರ್ಮಲವಾದ ಆಕಾಶವುಳ್ಳುದೂ ಆದ ಶರದೃತುವು ಆವಿರ್ಭವಿಸಿ ಗೋರಟೆಹೂವುಗಳಲ್ಲಿ ವಿಕಸನವನ್ನುಂಟುಮಾಡಿತು.

**ಹಂಸಸ್ವರಾನಕಾಕಾಶಕಣಿಶೋಜ್ಜ್ವಲಚಾಮರಾ ।**
**ಪುಂಡರೀಕಾತಪತ್ರಾಸೀದ್ದಿಗ್ಜಯೋತ್ಥೇವ ಸಾ ಶರತ್ ॥ ೨೩ ॥**

ಹಂಸಸ್ವರವೆಂಬ ಭೇರಿಯುಳ್ಳುದೂ ಕಾಚಿಹುಲ್ಲಿನ ತೆನೆಗಳೆಂಬ ಪ್ರಕಾಶಮಾನವಾದ ಚಾಮರಗಳುಳ್ಳುದೂ ಬಿಳಿದಾವರೆಯೆಂಬ ಶ್ವೇತಚ್ಛತ್ರಿಯುಳ್ಳುದೂ ಆದ ಆ ಶರದೃತುವು ದಿಗ್ವಿಜಯಕ್ಕೋಸ್ಕರ ಹೊರಟಿದೆಯೋ ಎಂಬಂತಿದ್ದಿತು.

**ದಿಶಾಂ [7]ಪ್ರಸಾಧನಾಯಾಧಾ[8]ದ್ಬಾಣಾಸನಪರಿಚ್ಛದಮ್ ।**
**ಶರತ್ಕಾಲೋ ಜಿಗೀಷೋರ್ಹಿ ಶ್ಲಾಘ್ಯೋ ಬಾಣಾಸನಗ್ರಹಃ ॥ ೨೪ ॥**

ಶರತ್ಕಾಲವು ದಿಕ್ಕುಗಳನ್ನಲಂಕರಿಸುವುದಕ್ಕೋಸ್ಕರ (ಜಯಿಸುವುದಕ್ಕೋಸ್ಕರ) ಮತ್ತಿಮರದಹೂವುಗಳ(ಧನುಸ್ಸಿನ)ಪರಿವಾರವನ್ನು ಧರಿಸಿದ್ದಿತು. ಜಯಿಸಬೇಕೆಂಬ ಇಚ್ಛೆಯುಳ್ಳವನಿಗೆ ಬಾಣಾಸನದ-ಧನುಸ್ಸಿನ ಗ್ರಹಣವು ಶ್ಲಾಘ್ಯವಾಗಿದೆ.

**ಘನಾವಲೀ ಕೃಶಾ ಪಾಂಡುರಾಸೀದಾಶಾ ವಿಮುಂಚತೀ ।**
**ಘನಾಗಮವಿಯೋಗೋತ್ಥಚಿಂತಯೇವಾಕುಲೀಕೃತಾ ॥ ೨೫ ॥**

ದಿಕ್ಕುಗಳನ್ನೆಲ್ಲ ಪರಿತ್ಯಜಿಸುತ್ತಲಿದ್ದ ಮೇಘಗಳ ಸಾಲು, ವರ್ಷಾಕಾಲದ ವಿಯೋಗದಿಂದುಂಟಾದ ಚಿಂತೆಯಿಂದ ವ್ಯಾಕುಲವಾಗಿದೆಯೋ ಎಂಬಂತೆ, ಕೃಶವೂ ಶುಭ್ರವೂ ಆಗಿದ್ದಿತು.

**ನಭಃ ಸತಾರಮಾರೇಜೇ ವಿಹಸತ್ಕುಮುದಾಕರಮ್ ।**
**ಕುಮುದ್ವತೀವನಂ ಚಾಭಾಜ್ಜಯತ್ತಾರಕಿತಂ ನಭಃ ॥ ೨೬ ॥**

ಶರದೃತುವಿನಲ್ಲಿ ನಕ್ಷತ್ರಗಳಿಂದ ಯುಕ್ತವಾದ ಆಕಾಶವು, ವಿಕಸಿತವಾದ ಬಿಳಿದಾವರೆಗಳುಳ್ಳ ಸರೋವರದಂತೆ, ಶೋಭಿಸುತ್ತಿದ್ದಿತು. ಬಿಳಿದಾವರೆಗಳುಳ್ಳ ಸರೋವರವೂ, ನಕ್ಷತ್ರಗಳನ್ನು ಹೊಂದಿರುವ ಆಕಾಶವನ್ನು ಜಯಿಸುವಂತೆ, ಪ್ರಕಾಶಿಸುತ್ತಿದ್ದಿತು.

**ತಾರಕಾಕುಮುದಾಕೀರ್ಣೇ ನಭಃಸರಸಿ ನಿರ್ಮಲೇ ।**
**ಹಂಸಾಯತೇ ಸ್ಮ ಶೀತಾಂಶುರ್ವಿಕ್ಷಿಪ್ತ[9] ಕರಪಕ್ಷತಿಃ ॥ ೨೭ ॥**

೧ ಬಂಧೂಕಕುಸುಮೈಃ. ೨ ಬಂಧೂಕಕುಸುಮೇಷು ಸುಹೃಜ್ಜೀವೇಷು ಚ. ೩ ಪುಣ್ಯಾಂಗನೇವ. ೪ ದಿಕ್, ಮಾನಸಾ ಚ. ೫ ವಿಗತಕರ್ದಮಾ, ದೋಷರಹಿತಾ ಚ. ೬ ನಿರ್ಮಲಾಕಾಶಾ, ನಿರ್ಮಲವಸ್ತ್ರಾ ಚ. ೭ ಅಲಂಕಾರಾಯ ಜಯಾರ್ಥಂ ಚ. ೮ ಸರ್ಜಕಕುಸುಮಪರಿಕರಂ, ಧನುಃಪರಿಕರಂ. ೯ ಕಿರಣಾ ಏವ ಪಕ್ಷತಿಃ ಪಕ್ಷಮೂಲಂ ಯಸ್ಯ ಸಃ.

ನಕ್ಷತ್ರಗಳೆಂಬ ಬಿಳಿದಾವರೆಗಳಿಂದ ವ್ಯಾಪ್ತವೂ ನಿರ್ಮಲವೂ ಆದ ಆಕಾಶವೆಂಬ ಸರೋವರದಲ್ಲಿ, ಕಿರಣಗಳೆಂಬ ರೆಕ್ಕೆಗಳ ಮೂಲವನ್ನು ವಿಸ್ತರಿಸಿರುವ ಚಂದ್ರನು ಹಂಸಪಕ್ಷಿಯಂತೆ ಕಾಣುತ್ತಿದ್ದನು.

**ನಭೋಗೃಹಾಂಗಣೇ ತೇನುಃ ಶ್ರಿಯಂ ಪುಷ್ಪೋಪಹಾರಜಾಮ್ ।**
**ತಾರಕಾ ದಿಗ್ವಧೂಹಾರತಾರಮುಕ್ತಾಫಲತ್ವಿಷಃ ॥ ೨೮ ॥**

ದಿಕ್ಕನ್ಯೆಯರ ಹಾರಗಳಲ್ಲಿರುವ ದೊಡ್ಡಮುತ್ತುಗಳಂತೆ ಕಾಂತಿಯುಳ್ಳ ನಕ್ಷತ್ರಗಳು ಆಕಾಶವೆಂಬ ಮನೆಯ ಅಂಗಣದಲ್ಲಿ ಪುಷ್ಪಗಳನ್ನು ಚೆಲ್ಲುವುದರಿಂದುಂಟಾದ ಶೋಭೆಯನ್ನುಂಟುಮಾಡಿದ್ದುವು. ನಕ್ಷತ್ರಗಳು ಅಂಗಣದಲ್ಲಿ ಪುಷ್ಪಗಳನ್ನು ಚೆಲ್ಲಿರುವಂತೆ ಶೋಭಿಸುತ್ತಿದ್ದುವೆಂದು ಭಾವವು.

**ಬಭುರ್ನಭೋಂಬುಧೌ ತಾರಾಃ ಸ್ಫುರನ್ಮುಕ್ತಾಫಲಾಮಲಾಃ ।**
**[೧]ಕರಕಾ ಇವ ಮೇಘೌಘೈ[೨]ರ್ನಿಹಿತಾ ಹಿಮಶೀತಲಾಃ ॥ ೨೯ ॥**

ಆಕಾಶವೆಂಬ ಸಮುದ್ರದಲ್ಲಿ ಪ್ರಕಾಶಮಾನವಾದ ಮುತ್ತುಗಳಂತೆ ನಿರ್ಮಲವಾದ ನಕ್ಷತ್ರಗಳು, ಮೇಘಗಳ ಸಮೂಹಗಳಿಂದ ಸುರಿಯಲ್ಪಟ್ಟುವೂ ಹಿಮದಂತೆ ಶೀತಲವೂ ಆದ ಆಲಿಕಲ್ಲುಗಳಂತೆ, ಶೋಭಿಸುತ್ತಿದ್ದುವು.

**ಜ್ಯೋತ್ಸ್ನಾ ಸಲಿಲಸಂಭೂತಾ ಇವ ಬುದ್ಬುದಪಙ್ಕ್ತಯಃ ।**
**ತಾರಕಾ ರುಚಿಮಾತೇನುರ್ವಿಪ್ರಕೀರ್ಣಾ ನಭೋಂಗಣೆ ॥ ೩೦ ॥**

ಆಕಾಶವೆಂಬ ಅಂಗಣದಲ್ಲಿ ಹರಡಿರುವ ನಕ್ಷತ್ರಗಳು ಬೆಳದಿಂಗಳೆಂಬ ಜಲದಿಂದುಂಟಾದ ನೀರಗುಳ್ಳೆಗಳ ಸಾಲುಗಳೋ ಎಂಬಂತೆ ಶೋಭಿಸುತ್ತಿದ್ದುವು.

**ತನೂಭೂತ[೩]ಪಯೋವೇಣೀರ್ನದ್ಯಃ ಪರಿಕೃಶಾ ದಧುಃ ।**
**ವಿಯುಕ್ತಾ ಘನಕಾಲೇನ ವಿರಹಿಣ್ಯ ಇವಾಂಗನಾಃ ॥ ೩೧ ॥**

ವರ್ಷಾಕಾಲದ ವಿಯೋಗದಿಂದ ಅತ್ಯಂತ ಕೃಶವಾದ ನದಿಗಳು, ವಿರಹಿಣಿಯರಾದ ಸ್ತ್ರೀಯರಂತೆ ಕಡಿಮೆಯಾದ ಜಲಪ್ರವಾಹಗಳೆಂಬ ಜಡೆಗಳನ್ನು ಧರಿಸಿದ್ದುವು.

**ಅನುದ್ಧತಾ ಗಭೀರತ್ವಂ ಭೇಜುಃ [೪]ಸ್ವಚ್ಛಜಲಾಂಶುಕಾಃ ।**
**ಸರಿತ್ಸ್ತ್ರಿಯೋ ಘನಾಪಾಯದ್ವೈಧವ್ಯಮಿವ ಸಂಶ್ರಿತಾಃ ॥ ೩೨ ॥**

ವರ್ಷಾಕಾಲವೆಂಬ ಪತಿಯ ನಾಶದಿಂದ ವೈಧವ್ಯವನ್ನು ಹೊಂದಿದುವೋ ಎಂಬಂತಿರುವ ನದಿಗಳೆಂಬ ಸ್ತ್ರೀಯರು, ನಿರ್ಮಲವಾದ ಜಲವೆಂಬ ಸೂಕ್ಷ್ಮ ವಸ್ತ್ರಗಳುಳ್ಳವರೂ ಔದ್ಧತ್ಯವಿಲ್ಲದವರೂ ಆಗಿ ಗಂಭೀರಭಾವವನ್ನು ಹೊಂದಿದರು. ನದಿಗಳು ಶಾಂತವಾಗಿದ್ದುವೆಂದರ್ಥವು.

**ದಿಗಂಗನಾ ಘನಾಪಾಯಪ್ರಕಾಶೀಭೂತಮೂರ್ತಯಃ ।**
**[೫]ವ್ಯಾವಹಾಸೀಮಿವಾತೇನುಃ ಪ್ರಸನ್ನಾ [೬]ಹಂಸಮಂಡಲೈಃ ॥ ೩೩ ॥**

ವರ್ಷಋತುವು ಕಳೆದುಹೋದುದರಿಂದ ಸ್ಪಷ್ಟವಾಗಿ ಕಾಣುತ್ತಿರುವ ದೇಹಗಳುಳ್ಳ ದಿಕ್ಕುಗಳೆಂಬ ಸ್ತ್ರೀಯರು ಸಂತುಷ್ಟರಾಗಿ ಹಂಸಪಕ್ಷಿಗಳ ಸಮೂಹಗಳಿಂದ ಪರಸ್ಪರವಾಗಿ ಪರಿಹಾಸ್ಯಮಾಡುವಂತಿದ್ದರು.

**ಕೂಜಿತೈಃ ಕಲಹಂಸಾನಾಂ ನಿರ್ಜಿತಾ ಇವ ತತ್ಯಜುಃ ।**
**[೭]ಕೇಕಾಯಿತಾನಿ ಶಿಖಿನಃ ಸರ್ವಃ ಕಾಲಬಲಾದ್ಬಲೀ ॥ ೩೪ ॥**

ಕಲಹಂಸಪಕ್ಷಿಗಳ ಮಧುರಶಬ್ದಗಳಿಂದ ಜಯಿಸಲ್ಪಟ್ಟುವೋ ಎಂಬಂತೆ ನವಿಲುಗಳು ತಮ್ಮ ಕೇಕಾರವಗಳನ್ನು ಬಿಟ್ಟುವು. ವರ್ಷಾಕಾಲವು ಕಳೆದುದರಿಂದ ನವಿಲುಗಳು ತಮ್ಮ ಶಬ್ದವನ್ನು ಬಿಟ್ಟುವೆಂದು ಭಾವವು. ಎಲ್ಲವೂ ಕಾಲದ ಬಲದಿಂದ ಬಲಿಷ್ಠವಾಗಿರುವುದು. ತಮಗೆ ಯೋಗ್ಯವಾದ ಕಾಲದಲ್ಲಿ ವಸ್ತುಗಳು ಬಲಿಷ್ಠವಾಗಿರುತ್ತವೆಂದರ್ಥವು.

೧ ವರ್ಷೋಪಲಾಃ. ೨ ಪಿಕ್ಷಿಪ್ತಾಃ. ೩ ಪಯಃಪ್ರವಾಹಾ ಇತ್ಯರ್ಥಃ. ೪ ಪಕ್ಷೇ ಶ್ವೇತಸ್ಥೂಲವಸ್ತ್ರಾಃ. ೫ ಪರಸ್ಪರಹಾಸಂ. ೬ ಹಂಸಮಂಡನಾದಿತ್ಯಪಿ ಪಾಠಃ. ೭ ಮಯೂರರುತಾನಿ.

**ಜ್ಯೋತ್ಸ್ನಾದುಕೂಲವಸನಾ ಲಸ[೧]ನ್ನಕ್ಷತ್ರಮಾಲಿಕಾ ।**
**ಬಂಧುಜೀವಾಧರಾ ರೇಜೇ ನಿರ್ಮಲಾ ಶರದಂಗನಾ ॥ ೩೫ ॥**

ಬೆಳದಿಂಗಳೆಂಬ ಪಟ್ಟೆವಸ್ತ್ರವುಳ್ಳವಳೂ ಪ್ರಕಾಶಮಾನವಾದ ನಕ್ಷತ್ರಗಳ ಸಾಲೆಂಬ ಮಾಲಿಕೆಯುಳ್ಳವಳೂ ಗೋರಟೆಹೂಗಳೆಂಬ ತುಟಿಗಳುಳ್ಳವಳೂ ಆದ ಶರದೃತುವೆಂಬ ಸ್ತ್ರೀಯು ನಿರ್ಮಲಳಾಗಿ ಶೋಭಿಸುತ್ತಿದ್ದಳು.

**[೨]ಜ್ಯೋತ್ಸ್ನಾಂ ಕೀರ್ತಿಮಿವಾತನ್ವನ್ವಿಧುರ್ಗಗನಮಂಡಲೇ ।**
**ಶರಲ್ಲಕ್ಷ್ಮೀಂ ಸಮಾಸಾದ್ಯ ಸುರಾಜೇವಾದ್ಯುತತ್ತರಾಮ್ ॥ ೩೬ ॥**

ಬೆಳದಿಂಗಳನ್ನು ಕೀರ್ತಿಯನ್ನೋಪಾದಿಯಲ್ಲಿ ವಿಸ್ತರಿಸುತ್ತಿರುವ ಚಂದ್ರನು ಶರತ್ಕಾಲದ ಶೋಭೆಯನ್ನು ಹೊಂದಿ ಶ್ರೇಷ್ಠನಾದ ರಾಜನಂತೆ ಆಕಾಶದಲ್ಲಿ ಬಹಳವಾಗಿ ಶೋಭಿಸುತ್ತಿದ್ದನು.

**[೩]ಬಂಧುಜೀವೇಷು [೪]ವಿನ್ಯಸ್ತರಾಗಾ [೫]ಬಾಣಕೃತ[೬]ದ್ಯುತಿಃ ।**
**ಹಂಸೀ ಸಖೀವೃತಾ ರೇಜೇ [೭]ನವೋಢೇವ ಶರದ್ವಧೂಃ ॥ ೩೭ ॥**

ಗೋರಟೆಯ ಪುಷ್ಪಗಳಲ್ಲಿ ಅನುರಾಗವನ್ನಿಟ್ಟಿರುವವಳೂ ಕರೀ ಗೋರಟೆಗಿಡಗಳಿಂದ ಮಾಡಲ್ಪಟ್ಟ ವಿಕಾಸವುಳ್ಳವಳೂ ಸ್ತ್ರೀಹಂಸಪಕ್ಷಿಗಳೆಂಬ ಸಖಿಯರಿಂದ ಸುತ್ತಲ್ಪಟ್ಟವಳೂ ಆದ ಶರದೃತುವೆಂಬ ವಧುವು, ಬಾಂಧವರಲ್ಲಿ ಪ್ರೀತಿಯನ್ನಿಟ್ಟಿರುವವಳೂ ಮನ್ಮಥಬಾಣದಿಂದುಂಟಾದ ಕಾಂತಿಯುಳ್ಳವಳೂ ಆದ ನವೀನವಾಗಿ ವಿವಾಹಿತಳಾದ ಸ್ತ್ರೀಯಂತೆ, ಶೋಭಿಸುತ್ತಿದ್ದಳು.

**[೮]ಸ್ವಯಂ ಧೌತಮಭಾದ್ವ್ಯೋಮ ಸ್ವಯಂ ಪ್ರಕ್ಷಾಲಿತಃ ಶಶೀ ।**
**ಸ್ವಯಂ [೯]ಪ್ರಸಾದಿತಾ ನದ್ಯಃ ಸ್ವಯಂ ಸಮ್ಮಾರ್ಜಿತಾ ದಿಶಃ ॥ ೩೮ ॥**

ಆಕಾಶವು ತಾನೇ ಪ್ರಸನ್ನವಾಗಿ ಶೋಭಿಸುತ್ತಿದ್ದಿತು. ಚಂದ್ರನು ತಾನೇ ತೊಳೆಯಲ್ಪಟ್ಟವನಾಗಿ ಶೋಭಿಸುತ್ತಿದ್ದನು. ನದಿಗಳು ತಾವೇ ಪ್ರಸನ್ನವಾಗಿ ಮಾಡಲ್ಪಟ್ಟುವು. ದಿಕ್ಕುಗಳು ತಾವೇ ಗುಡಿಸಲ್ಪಟ್ಟುವು. ನಿರ್ಮಲವಾಗಿ ಮಾಡಲ್ಪಟ್ಟುವೆಂದು ಭಾವವು.

**ಶರಲ್ಲಕ್ಷ್ಮೀಮುಖಾಲೋಕದರ್ಪಣೇ ಶಶಿಮಂಡಲೇ ।**
**ಪ್ರಜಾದೃಶೋ ಧೃತಿಂ ಭೇಜುರಸಂಮೃಷ್ಟಸಮುಜ್ಜ್ವಲೇ ॥ ೩೯ ॥**

ಶರದೃತುವೆಂಬ ಲಕ್ಷ್ಮಿಯ ಮುಖವನ್ನು ನೋಡುವ ಕನ್ನಡಿಯಂತಿರುವುದೂ ಒರಸದೆ ಪ್ರಕಾಶಮಾನವೂ ಆದ ಚಂದ್ರಮಂಡಲದಲ್ಲಿ ಪ್ರಜೆಗಳ ನೇತ್ರಗಳು ಸಂತೋಷವನ್ನು ಹೊಂದಿದುವು. ಪ್ರಜೆಗಳು ಶರದೃತುವಿನಲ್ಲಿ ಚಂದ್ರಮಂಡಲವನ್ನು ನೋಡಿ ಸಂತೋಷಪಟ್ಟರೆಂದು ಭಾವವು.

**ವನರಾಜೀಸ್ತತಾಮೋದಾಃ ಕುಸುಮಾಭರಣೋಜ್ಜ್ವಲಾಃ ।**
**ಮಧುವ್ರತಾ ಭಜಂತಿ ಸ್ಮ ಕೃತಕೋಲಾಹಲಸ್ವನಾಃ ॥ ೪೦ ॥**

ಭ್ರಮರಗಳು ಹರಡುತ್ತಿರುವ ಪರಿಮಳವುಳ್ಳುವೂ ಪುಷ್ಪಾಭರಣಗಳಿಂದ ಪ್ರಕಾಶಮಾನವೂ ಕೋಲಾಹಲಶಬ್ದವನ್ನು ಮಾಡುತ್ತಿರುವುವೂ ಆದ ವನಪಂಕ್ತಿಗಳನ್ನು ಸೇವಿಸಿದುವು.

**[೧೦]ತನ್ವ್ಯೋ ವನಲತಾ ರೇಜುರ್ವಿಕಾಸಿಕುಸುಮಸ್ಮಿತಾಃ ।**
**ಸಾಲಕಾ ಇವ ಗಂಧಾಂಧವಿಲೋಲಾಲಿಕುಲಾಕುಲಾಃ ॥ ೪೧ ॥**

೧ ತಾರಕಾವಲೀ, ಪಕ್ಷೇಹಾರಭೇದಃ. ೨ ಜ್ಯೋತ್ಸ್ನಾಕೀರ್ತಿಮಿತ್ಯಪಿ ಪಾಠಃ. ೩ ಬಂಧೂಕೇಷು, ಪಕ್ಷೇ ಬಾಂಧವೇಷು. ೪ ಕೃತಾಂಗರಾಗಾ. ೫ ರಿಉಂಟೆ ಪಕ್ಷೇಶರಃ. ೬ ವಿಕಾಸಃ, ಪಕ್ಷೇಕಾಂತಿಃ. ೭ ನೂತನ ವಿವಾಹಿತಾ. ೮ ಆತ್ಮನಾ ಪ್ರಸನ್ನಂ. ೯ ಪ್ರಸನ್ನೀಕೃತಾಃ. ೧೦ ಕೃಶಾಃ, ಅಂಗನಾಶ್ಚ.

ಅರಳುತ್ತಿರುವ ಪುಷ್ಪಗಳೆಂಬ ಮಂದಹಾಸವುಳ್ಳವೂ ಕೃಶವೂ ಆದ ವನಲತೆಗಳು ಪರಿಮಳದಿಂದ ಮತ್ತವಾಗಿ ಚಲಿಸುತ್ತಿರುವ ಭ್ರಮರಗಳ ಸಮೂಹದಿಂದ ವ್ಯಾಕುಲಗಳಾಗಿರುವುದರಿಂದ ಮುಂಗುರುಳುಗಳುಳ್ಳವುಗಳಂತೆ ಶೋಭಿಸುತ್ತಿದ್ದುವು.

**ದರ್ಪೋ[೧]ದ್ಧುರಾಃ ಖುರೋತ್ಖಾತಭುವಸ್ತಾಮ್ರೀಕೃತೇಕ್ಷಣಾಃ ।**
**ವೃಷಾಃ ಪ್ರತಿವೃಷಾಲೋಕಕುಪಿತಾಃ ಪ್ರತಿಸಸ್ವನುಃ ॥ ೪೨ ॥**

ಅಧಿಕವಾಗಿ ಮದಿಸಿರುವುವೂ ಕಣ್ಣುಗಳನ್ನು ಕೆಂಪಾಗಿ ಮಾಡಿರುವುವೂ ಆದ ಹೋರಿಗಳು ಪ್ರತಿಕಕ್ಷಿಗಳಾದ ಹೋರಿಗಳನ್ನು ನೋಡಿ ಕೋಪಗೊಂಡು, ಶಬ್ದ ಮಾಡಿದುವು—ಗುಟುರು ಹಾಕಿದುವು.

**[೨]ಅವಾಸ್ಕಿರಂತ ಶೃಂಗಾಗ್ರೈರ್ವೃಷಭಾ ಧೀರನಿಃಸ್ವನಾಃ ।**
**ವನಸ್ಥಲೀಃ ಸ್ಥಲಾಂಭೋಜಮೃಣಾಲಶಕಲಾಚಿತಾಃ ॥ ೪೩ ॥**

ಗಂಭೀರವಾದ ಶಬ್ದಗಳುಳ್ಳ ಹೋರಿಗಳು ನೆಲದಾವರೆಯ ದಂಟುಗಳ ಚೂರುಗಳಿಂದ ವ್ಯಾಪ್ತವಾದ ವನಪ್ರದೇಶಗಳನ್ನು ತಮ್ಮಕೊಂಬುಗಳ ತುದಿಗಳಿಂದ ಕೆದುಕುತ್ತಿದ್ದುವು.

**ವೃಷಾಃ ಕಕುದಸಂಲಗ್ನಮೃದಃ ಕುಮುದಪಾಂಡರಾಃ ।**
**ವ್ಯಕ್ತಾಂಕಸ್ಯ ಮೃಗಾಂಕಸ್ಯ ಲಕ್ಷ್ಮೀಮಬಿಭರುಸ್ತದಾ ॥ ೪೪ ॥**

ಆ ಶರದೃತುವಿನಲ್ಲಿ ಬಿಳಿದಾವರೆಯಂತೆ ಶುಭ್ರವೂ ಹೆರಳುಗಳಲ್ಲಿ ಮಣ್ಣನ್ನು ಅಂಟಿಸಿಕೊಂಡಿರುವುವೂ ಆದ ಹೋರಿಗಳು ಸ್ಪಷ್ಟವಾಗಿ ಕಾಣುತ್ತಿರುವ ಕಲಂಕ ಚಿಹ್ನೆಯುಳ್ಳ ಚಂದ್ರನ ಶೋಭೆಯನ್ನು ಧರಿಸಿದ್ದುವು. ಹೋರಿಗಳು ಚಂದ್ರನಂತೆ ಕಾಣುತ್ತಿದ್ದುವೆಂದರ್ಥವು.

**ಕ್ಷೀರಪ್ಲವಮಯೀಂ ಕೃತ್ಸ್ನಾಮಾತನ್ವಾನಾ ವನಸ್ಥಲೀಮ್ ।**
**[೩]ಪ್ರಸ್ನುವಾನಾ ವನಾಂತೇಷು ಪ್ರಸಸ್ರು[೪]ರ್ಗೋಮತಲ್ಲಿಕಾಃ ॥ ೪೫ ॥**

ವನಪ್ರದೇಶವನ್ನೆಲ್ಲ ಹಾಲಿನ ಪ್ರವಾಹಮಯವನ್ನಾಗಿ ಮಾಡುತ್ತಿರುವುವೂ ತಾವಾಗಿಯೇ ಹಾಲನ್ನು ಸುರಿಯುತ್ತಿರುವುವೂ ಆದ ಪ್ರಶಸ್ತಗೋವುಗಳು ವನಮಧ್ಯಗಳಲ್ಲಿ ಸಂಚರಿಸುತ್ತಿದ್ದುವು.

**[೫]ಕುಂಡೋಘ್ನ್ಯೋಮೃತಪಿಂಡೇನ ಘಟಿತಾ ಇವ ನಿರ್ಮಲಾಃ ।**
**[೬]ಗೋಗೃಷ್ಟಯೋ ವನಾಂತೇಷು ಶರಚ್ಛ್ರಿಯ ಇವಾ[೭]ರುಚನ್ ॥ ೪೬ ॥**

ಮಣ್ಣಿನ ಕುಂಡಗಳಂತೆ ಕೆಚ್ಚಲುಗಳುಳ್ಳವೂ ಅಮೃತಪಿಂಡದಿಂದ ರಚಿಸಲ್ಪಟ್ಟಿವೆಯೋ ಎಂಬಂತೆ ನಿರ್ಮಲವೂ ಒಂದೇ ಸಲ ಈದಿರುವುವೂ ಆದ ಗೋವುಗಳು, ವನಪ್ರದೇಶಗಳಲ್ಲಿ ಶರತ್ಕಾಲದ ಲಕ್ಷ್ಮಿಗಳೋ ಎಂಬಂತೆ ಶೋಭಿಸುತ್ತಿದ್ದುವು.

**[೮]ಹುಂಭಾರವಭೃತೋ ವತ್ಸಾ[೯]ನಾಪಿಪ್ಯ[೧೦]ನ್ಪ್ರಕೃತಸ್ವನಾನ್ ।**
**[೧೧]ಪೀನಾಪೀನಾಃ [೧೨]ಪಯಸ್ವಿನ್ಯಃ ಪಯಃಪೀಯೂಷಮುತ್ಸುಕಾಃ॥ ೪೭ ॥**

ಪರಿಪುಷ್ಟವಾದ ಕೆಚ್ಚಲುಗಳುಳ್ಳವೂ ಹಾಲುಕುಡಿಸುವುದಕ್ಕೆ ಕುತೂಹಲ ಪಡುತ್ತಿರುವುವೂ ಆದ ಗೋವುಗಳು 'ಹುಂಭಾ' ಎಂದು ಶಬ್ದಮಾಡುತ್ತಿರುವುವೂ ಹೆಚ್ಚಾಗಿ ಶಬ್ದಮಾಡುತ್ತಿರುವುವೂ ಆದ ಕರುಗಳಿಗೆ ಅಮೃತದಂತಿರುವ ಹಾಲನ್ನು ಪಾನಮಾಡಿಸಿದುವು.

೧ ಉತ್ಕಟಾಃ. ೨ ಕಿರಂತಿಸ್ಮ. ೩ ಸ್ವಯಮೇವ ಕ್ಷೀರಂ ಕ್ಷರಂತಃ. ೪ ಪ್ರಶಸ್ತಗಾವಃ. ೫ ಪಿಠರಃ ಸ್ಥಾಲ್ಯುಖಾಕುಂಡಮಿತ್ಯಮರಃ. ೬ ಸಕೃತ್ಪ್ರಸೂತಾ ಗಾವಃ. ೭ ಅಭವನ್ನಿತ್ಯಪಿ ಪಾಠಃ. ೮ ಹುಂಭಾ ಇತ್ಯನುಕರಣರವಭೃತಃ. ೯ ಪಾಯಯಂತಿ ಸ್ಮ. ೧೦ ಪ್ರಕರ್ಷೇಣ ಕೃತಸ್ವನಾನ್. ೧೧ ಪ್ರವೃದ್ಧೋಧಸಃ. ೧೨ ಧೇನವಃ.

**[೧]ಕ್ಷೀರಸ್ಯತೋ ನಿಜಾನ್ ವತ್ಸಾನ್ ಹುಂಭಾಗಂಭೀರನಿಃಸ್ವನಾನ್ ।**
**[೨]ಧೇನುಷ್ಯಾಃ ಪಾಯಯಂತಿ ಸ್ಮ ಗೋಪೈರಪಿ ನಿಯಂತ್ರಿತಾಃ ॥ ೪೮ ॥**

ಗೋಪಾಲಕರಿಂದ ಕಟ್ಟಲ್ಪಟ್ಟು ಬಂಧನದಲ್ಲಿದ್ದ ಗೋವುಗಳು ಹಾಲನ್ನಿಚ್ಛಿಸುತ್ತಿರುವುವೂ 'ಹುಂಭಾ' ಎಂಬ ಗಂಭೀರಶಬ್ದವುಳ್ಳವೂ ಆದ ತಮ್ಮ ಕರುಗಳಿಗೆ ಹಾಲನ್ನು ಕುಡಿಸುತ್ತಿದ್ದುವು.

**ಪ್ರಾಕ್ಪ್ರಿಯಾ ಜಲದಾ ಜಾತಾಃ ಶಿಖಿನಾಮಪ್ರಿಯಾಸ್ತದಾ ।**
**ರಿಕ್ತಾ ಜಲಧನಾಪಾಯಾದಹೋ ಕಷ್ಟಾ ದರಿದ್ರತಾ ॥ ೪೯ ॥**

ವರ್ಷಾಕಾಲದಲ್ಲಿ ಮೇಘಗಳು ನವಿಲುಗಳಿಗೆ ಪ್ರಿಯವಾಗಿದ್ದುವು. ಶರದೃತುವಿನಲ್ಲಿ ಜಲವೆಂಬ ಧನವಿಲ್ಲದುದರಿಂದ ರಿಕ್ತ(ದರಿದ್ರ)ಗಳಾಗಿ ಮೇಘಗಳು ನವಿಲುಗಳಿಗೆ ಅಪ್ರಿಯವಾದುವು. ಆಹಾ ! ಬಡತನವು ಕಷ್ಟವು !

**[೩]ವ್ಯಾವಹಾಸೀಮಿವಾತೇನುರ್ಗಿರಯಃ ಪುಷ್ಪಿತೈರ್ದ್ರುಮೈಃ ।**
**[೪]ವ್ಯಾತ್ಯುಕ್ಷೀಮಿವ ತನ್ವಾನಾಃ ಸ್ಫುರನ್ನಿರ್ಝರಶೀಕರೈಃ ॥ ೫೦ ॥**

ಪ್ರಕಾಶಮಾನವಾದ ಗಿರಿನದೀಪ್ರವಾಹಗಳ ತುಂತುರುಗಳಿಂದ ಪರಸ್ಪರವಾಗಿ ನೀರನ್ನೆರಚುತ್ತವೆಯೋ ಎಂಬಂತಿರುವ ಪರ್ವತಗಳು ಹೂ ಬಿಟ್ಟಿರುವ ವೃಕ್ಷಗಳಿಂದ ಪರಸ್ಪರವಾಗಿ ನಗುವಂತಿದ್ದುವು.

**[೫]ಪ್ರವೃದ್ಧವಯಸೋ ರೇಜುಃ ಕಲಮಾ ಭೃಶಮಾನತಾಃ ।**
**[೬]ಪರಿಣಾಮಾ[೭]ತ್ಪ್ರಶುಷ್ಯಂತೋ [೮]ಜರಂತಃ ಪುರುಷಾ ಇವ ॥ ೫೧ ॥**

ಹೆಚ್ಚಾಗಿ ಬಂದು ಸೇರುತ್ತಿರುವ ಪಕ್ಷಿಗಳುಳ್ಳವೂ ಚೆನ್ನಾಗಿ ಬಗ್ಗಿರುವುವೂ ಪಕ್ವವಾಗಿರುವುದರಿಂದ ಒಣಗುತ್ತಿರುವುವೂ ಆದ ಭತ್ತದ ಪೈರುಗಳು, ಹೆಚ್ಚಾದ ವಯಸ್ಸುಳ್ಳವರೂ ಬಹಳ ಬಗ್ಗಿರುವವರೂ ಪರಿಣಾಮದಿಂದ ಶಿಥಿಲವಾಗುವವರೂ ಆದ ವೃದ್ಧಪುರುಷರಂತೆ, ಶೋಭಿಸುತ್ತಿದ್ದುವು.

**ವಿರೇಜು[೯]ರಸನಾಃ ಪುಷ್ಪೈರ್ಮದಾಲಿಪಟಲಾವೃತೈಃ ।**
**ಇಂದ್ರನೀಲಕೃತಾಂ[೧೦]ತರ್ಯೈಃ ಸೌವರ್ಣೈರಿವ ಭೂಷಣೈಃ ॥ ೫೨ ॥**

ಮತ್ತಿಮರಗಳು, ಮಧ್ಯದಲ್ಲಿ ಇಂದ್ರನೀಲರತ್ನಗಳನ್ನು ಕೆತ್ತಿರುವ ಬಂಗಾರದ ಆಭರಣಗಳಿಂದ ಶೋಭಿಸುವಂತೆ, ಮದಿಸಿದ ಭ್ರಮರಗಳ ಸಮೂಹದಿಂದ ಮುತ್ತಲ್ಪಟ್ಟಪುಷ್ಪಗಳಿಂದ ಶೋಭಿಸುತ್ತಿದ್ದುವು.

**ಘನಾವರಣನಿರ್ಮುಕ್ತಾ ದಧುರಾಶಾ ದೃಶಾಂ ಮುದಮ್ ।**
**[೧೧]ನಟಿಕಾ ಇವ [೧೨]ನೇಪಥ್ಯಗೃಹಾದ್ರಂಗಮುಪಾಗತಾಃ ॥ ೫೩ ॥**

ಮೇಘದ ಆವರಣದಿಂದ ಬಿಡಲ್ಪಟ್ಟ ದಿಕ್ಕುಗಳು, ಅಲಂಕಾರಮಾಡಿಕೊಳ್ಳುವ ಮನೆಯಿಂದ ರಂಗಸ್ಥಾನವನ್ನು ಹೊಂದಿದ ನರ್ತಕಿಯರಂತೆ, ಜನರ ಕಣ್ಣುಗಳಿಗೆ ಸಂತೋಷವನ್ನುಂಟುಮಾಡಿದುವು. ದಿಕ್ಕುಗಳೆಲ್ಲ ಶುಭ್ರವಾದುವೆಂದರ್ಥವು.

**ಅದಧುರ್ಘನವೃಂದಾನಿ ಮುಕ್ತಾ[೧೩]ಸಾರಾಣಿ ಭೂಧರಾಃ ।**
**[೧೪]ಸದಶಾನೀವ [೧೫]ವಾಸಾಂಸಿ [೧೬]ನಿಷ್ಪ್ರವಾಣೀನಿ ಸಾನುಭಿಃ ॥ ೫೪ ॥**

ಪರ್ವತಗಳು, ಸೆರಗುಗಳುಳ್ಳ ನವೀನವಸ್ತ್ರಗಳನ್ನು ಧರಿಸುವಂತೆ, ಮಳೆಯನ್ನು ಸುರಿಯುತ್ತಿರುವ ಮೇಘಗಳ ಸಮೂಹಗಳನ್ನು ತಪ್ಪಲುಗಳಲ್ಲಿ ಧರಿಸಿದುವು.

**ಪವನಾ[೧೭]ಧೋರಣಾರೂಢಾ ಭ್ರೇಮು[೧೮]ರ್ಜೀಮೂತದಂತಿನಃ ।**
**ಸಾಂತರ್ಗರ್ಜಾ [೧೯]ನಿಕುಂಜೇಷು ಸಾಸಾರಮದಶೀಕರಾಃ ॥ ೫೫ ॥**

೧ ಆತ್ಮನಃ ಕ್ಷೀರಮಿಚ್ಛನ್. ೨ ಧೇನುಷ್ಯಾ ಬಂಧಕೇ ಸ್ಥಿತೇತ್ಯಮರಃ. ೩ ಪರಸ್ಪರಹಸನಂ. ೪ ಪರಸ್ಪರಜಲಸೇಚನಂ. ೫ ಪ್ರವೃದ್ಧವಯಸಃ ಪ್ರವೃದ್ಧಪಕ್ಷಿಣಶ್ಚ. ೬ ಪರಿಪಕ್ವಾತ್. ೭ ಪ್ರಪುಷ್ಯಂತ ಇತ್ಯಪಿ ಪಾಠಃ. ೮ ವೃದ್ಧಾಃ. ೯ ಸರ್ಜಕವೃಕ್ಷಾಃ. ೧೦ ಮಧ್ಯೈರಿತ್ಯರ್ಥಃ. ೧೧ ನರ್ತಕ್ಯಃ. ೧೨ ಅಲಂಕಾರಗೃಹಾತ್. ೧೩ ವರ್ಷಾಣಿ. ೧೪ ಸ್ತ್ರಿಯಾಂ ಬಹುತ್ವೇ ವಸ್ತ್ರಸ್ಯ ದಶಾಃ ಸ್ಯುರ್ವಸ್ತ್ರಯೋರ್ದ್ವಯೋರಿತ್ಯಮರಃ. ೧೫ ವಸ್ತ್ರಾಣಿ. ೧೬ ನೂತನಾನಿ. ೧೭ ಹಸ್ತಿಪಕಃ. ೧೮ ಮೇಘಃ. ೧೯ ಸಾನುಷು.

ಗಾಳಿಯೆಂಬ ಮಾವಟಿಗನಿಂದ ಹತ್ತಲ್ಪಟ್ಟುವೂ ಒಳಗಿಂದೊಳಗೆ ಗರ್ಜಿಸುತ್ತಿರುವುವೂ ಜಲಬಿಂದುಗಳೆಂಬ ಮದಜಲದ ತುಂತುರುಗಳುಳ್ಳುವೂ ಆದ ಮೇಘಗಳೆಂಬ ಆನೆಗಳು ತಪ್ಪಲುಗಳಲ್ಲಿ ಚಲಿಸುತ್ತಿದ್ದುವು.

**ಶುಕಾವಲೀ ಪ್ರವಾಲಾಭಚಂಚುಸ್ತೇನೇ [೧]ದಿವಿ ಶ್ರಿಯಮ್ ।**
**ಹರಿನ್ಮಣಿಪಿನದ್ಧೇವ ತೋರಣಾಲೀ [೨]ಸಪದ್ಮಭಾ ॥ ೫೬ ॥**

ಹವಳಕ್ಕೆ ಸಮಾನವಾದ ಕೊಕ್ಕುಳ್ಳ ಗಿಣಿಗಳ ಸಮೂಹವು ಪಚ್ಚೆಯ ರತ್ನದಿಂದ ಕಟ್ಟಲ್ಪಟ್ಟುದೂ ಪದ್ಮರಾಗದ ಕಾಂತಿಯುಕ್ತವೂ ಆದ ತೋರಣಗಳ ಸಮೂಹದಂತೆ ಆಕಾಶದಲ್ಲಿ ಶೋಭೆಯನ್ನುಂಟುಮಾಡಿದ್ದಿತು.

**ಚೇತಾಂಸಿ [೩]ತರಣಾಂಗೋಪಜೀವಿನಾಮುದ್ಧತಾತ್ಮನಾಮ್ ।**
**ಪುಂಸಾಂ ಚ್ಯುತಾಧಿಕಾರಾಣಾಮಿವ ದೈನ್ಯಮುಪಾಗಮನ್ ॥ ೫೭ ॥**

ಗರ್ವಿಷ್ಠರೂ ದೋಣಿ ಮೊದಲಾದುವುಗಳನ್ನು ನಡೆಸಿ ಜೀವನಮಾಡುವವರೂ ಆದ ಮನುಷ್ಯರ ಮನಸ್ಸುಗಳು, ಅಧಿಕಾರವು ತಪ್ಪಿಹೋದ ಮನುಷ್ಯರ ಮನಸ್ಸುಗಳಂತೆ, ದೀನಭಾವವನ್ನು ಹೊಂದಿದುವು.

**ಪ್ರತಾಪೀ ಭುವನಸ್ಯೈಕಂ ಚಕ್ಷುರ್ನಿತ್ಯಮಹೋದಯಃ ।**
**ಭಾಸ್ವಾನಾಕ್ರಾಂತತೇಜಸ್ವೀ ಬಭಾಸೇ ಭರತೇಶವತ್ ॥ ೫೮ ॥**

ಪ್ರತಾಪವುಳ್ಳವನೂ ಲೋಕಕ್ಕೆ ಮುಖ್ಯವಾದ ಕಣ್ಣಿನಂತಿರುವವನೂ ಯಾವಾಗಲೂ ವೃದ್ಧಿಹೊಂದುತ್ತಿರುವವನೂ ಆಕ್ರಮಿಸುತ್ತಿರುವ ತೇಜಸ್ಸುಳ್ಳವನೂ ಆದ ಸೂರ್ಯನು ಭರತಚಕ್ರವರ್ತಿಯಂತೆ ಪ್ರಕಾಶಿಸುತ್ತಿದ್ದನು.

**ಇತಿ ಪ್ರಸ್ಪಷ್ಟಚಂದ್ರಾಂಶುಪ್ರಹಾಸೇ ಶರದಾಗಮೇ ।**
**ಚಕ್ರೇ ದಿಗ್ವಿಜಯೋದ್ಯೋಗಂ ಚಕ್ರೀ [೪]ಚಕ್ರಪುರಸ್ಸರಮ್ ॥ ೫೯ ॥**

ಈ ಪ್ರಕಾರವಾಗಿ ಅತ್ಯಂತ ಸ್ಪಷ್ಟವಾದ ಚಂದ್ರಕಿರಣಗಳೆಂಬ ನಗೆಯುಳ್ಳ ಶರತ್ಕಾಲವು ಪ್ರಾಪ್ತವಾಗುತ್ತಿರಲು ಭರತಚಕ್ರವರ್ತಿಯು ಚಕ್ರರತ್ನವನ್ನು ಮುಂದೆಮಾಡಿಕೊಂಡು ದಿಗ್ವಿಜಯದ ಪ್ರಯತ್ನವನ್ನು ಮಾಡಿದನು. ಭರತಚಕ್ರವರ್ತಿಯು ಶರತ್ಕಾಲದ ಪ್ರಾರಂಭದಲ್ಲಿ ದಿಗ್ವಿಜಯಕ್ಕೆ ಹೊರಟನೆಂದು ಭಾವವು.

**ಪ್ರಸ್ಥಾನಭೇರ್ಯೋ ಗಂಭೀರಪ್ರಧ್ವಾನಾಃ ಪ್ರಹತಾಸ್ತದಾ ।**
**ಶ್ರುತಾ ಬರ್ಹಿಭಿರುದ್ಗ್ರೀವೈರ್ಘನಾಡಂಬರಶಂಕಿಭಿಃ ॥ ೬೦ ॥**

ಆಗ ಗಂಭೀರವಾದ ಶಬ್ದಗಳುಳ್ಳ ಪ್ರಯಾಣಸೂಚಕವಾದ ಭೇರಿಗಳು ಹೊಡೆಯಲ್ಪಟ್ಟುವು. ಈ ಭೇರೀಶಬ್ದಗಳನ್ನು ಮೇಘಧ್ವನಿಯೆಂದು ಸಂದೇಹಪಡುತ್ತಿರುವ ನವಿಲುಗಳು ಕುತ್ತಿಗೆಗಳನ್ನೆತ್ತಿಕೊಂಡು ಕೇಳುತ್ತಿದ್ದುವು.

**[೫]ಕೃತ[೬]ಮಂಗಲನೇಪಥ್ಯೋ ಬಭಾರೋರಸ್ಸ್ಥಲಂ ಪ್ರಭುಃ ।**
**ಶರಲ್ಲಕ್ಷ್ಮ್ಯೇವ [೭]ಸಂಭಕ್ತಂ ಸಹಾರಹರಿಚಂದನಮ್ ॥ ೬೧ ॥**

ಮಂಗಲಾಲಂಕಾರದಿಂದ ಅಲಂಕೃತನಾದ ಭರತರಾಜನು ಶರಲ್ಲಕ್ಷ್ಮಿಯಿಂದ ಸೇವಿಸಲ್ಪಟ್ಟಂತಿರುವುದೂ ಹಾರ ಮತ್ತು ಶ್ರೀಗಂಧಯುಕ್ತವೂ ಆದ ಎದೆಯನ್ನು ಧರಿಸಿದ್ದನು.

**ಜ್ಯೋತ್ಸ್ನಾಂಮನ್ಯೇ ದುಕೂಲೇ ಚ ಶುಕ್ಲೇ ಪರಿದಧೌ ನೃಪಃ ।**
**ಶರಚ್ಛ್ರಿಯೋಪನೀತೇ [೮]ವಾ ಮೃದುನೀ ದಿವ್ಯವಾಸಸೀ ॥ ೬೨ ॥**

ಭರತರಾಜನು ಶುಭ್ರವೂ ತಮ್ಮನ್ನು ಬೆಳದಿಂಗಳನ್ನಾಗಿ ತಿಳಿಯುವುವೂ ಶರತ್ಕಾಲಲಕ್ಷ್ಮಿಯಿಂದ ಕೈಗಾಣಿಕೆಯಾಗಿ ಕೊಡಲ್ಪಟ್ಟಿವೆಯೋ ಎಂಬಂತಿರುವುವೂ ಕೋಮಲವೂ ಶ್ರೇಷ್ಠವೂ ಆದ ಎರಡು ಪಟ್ಟೆಯ ವಸ್ತ್ರಗಳನ್ನು ಧರಿಸಿದನು.

**ಆಜಾನುಲಂಬಿನಾ ಬ್ರಹ್ಮಸೂತ್ರೇಣ ವಿಬಭೌ ವಿಭುಃ ।**
**[೧]ಹಿಮಾದ್ರಿರಿವ ಗಂಗಾಂಬುಪ್ರವಾಹೇಣ ತಟಸ್ಪೃಶಾ ॥ ೬೩ ॥**

ಭರತರಾಜನು ಮೊಣಕಾಲುವರೆಗೆ ಜೋಲುತ್ತಿರುವ ಬ್ರಹ್ಮಸೂತ್ರ(ಯಜ್ಞೋಪವೀತ)ದಿಂದ, ದಡಗಳನ್ನು ಸ್ಪರ್ಶಿಸುತ್ತಿರುವ ಗಂಗಾನದಿಯ ಜಲಪ್ರವಾಹದಿಂದ ಹಿಮವತ್ಪರ್ವತದಂತೆ, ಶೋಭಿಸಿದನು.

**[೨]ಕಿರೀಟೋದಗ್ರಮೂರ್ಧಾಸೌ ಕರ್ಣಾಭ್ಯಾಂ ಕುಂಡಲೇ ದಧೌ ।**
**ಚಂದ್ರಾರ್ಕಮಂಡಲೇ ವಕ್ತುಮಿವಾಯಾತೇ ಜಯೋತ್ಸವಮ್ ॥ ೬೪ ॥**

ಕಿರೀಟದಿಂದುನ್ನತವಾಗಿ ತೋರುತ್ತಿರುವ ಮಸ್ತಕವುಳ್ಳ ಈ ಭರತರಾಜನು, ಜಯೋತ್ಸವವನ್ನು ಹೇಳುವುದಕ್ಕೋಸ್ಕರ ಬಂದಿರುವ ಚಂದ್ರಸೂರ್ಯರ ಮಂಡಲಗಳೋ ಎಂಬಂತಿರುವ ಎರಡು ಕರ್ಣಕುಂಡಲಗಳನ್ನು ಕಿವಿಗಳಲ್ಲಿ ಧರಿಸಿದನು. ಕಿವಿಗಳಲ್ಲಿ ಎರಡು ಕರ್ಣಕುಂಡಲಗಳನ್ನು ಧರಿಸಿದನೆಂದು ಭಾವವು.

**ವಕ್ಷಃಸ್ಥಲೇಸ್ಯ ರುರುಚೇ ರುಚಿರಃ ಕೌಸ್ತುಭೋ ಮಣಿಃ ।**
**ಜಯಲಕ್ಷ್ಮೀಸಮುದ್ವಾಹಮಂಗಲಾಶಂಸಿದೀಪವತ್ ॥ ೬೫ ॥**

ಈ ಭರತರಾಜನ ಎದೆಯಲ್ಲಿ ಮನೋಹರವಾದ ಕೌಸ್ತುಭವೆಂಬ ರತ್ನವು, ಜಯಲಕ್ಷ್ಮಿಯ ವಿವಾಹಮಂಗಲವನ್ನು ಸೂಚಿಸುತ್ತಿರುವ ದೀಪವೋ ಎಂಬಂತೆ, ಪ್ರಕಾಶಿಸುತ್ತಿದ್ದಿತು.

**ವಿಧುಬಿಂಬಪ್ರತಿಸ್ಪರ್ಧಿ [೩]ದಧ್ರೇಸ್ಯಾತಪವಾರಣಮ್ ।**
**[೪]ತನ್ನಿಭೇನ್ಯೆಂದವಂ ಬಿಂಬಮಾಗತ್ಯೇವ [೫]ಸಿಷೇವಿಷು ॥ ೬೬ ॥**

ಚಂದ್ರಬಿಂಬದೊಡನೆ ಸ್ಪರ್ಧೆಮಾಡುತ್ತಿರುವುದೂ ಆ ಶ್ವೇತಚ್ಛತ್ರದ ನೆಪದಿಂದ ಬಂದು ಸೇವೆಮಾಡುವುದಕ್ಕೋಸ್ಕರ ಇಚ್ಛೆಪಡುತ್ತಿರುವ ಚಂದ್ರಬಿಂಬವೋ ಎಂಬಂತಿರುವುದೂ ಆದ ಶ್ವೇತಚ್ಛತ್ರವು ಭರತರಾಜನಿಗೆ ಧರಿಸಲ್ಪಟ್ಟಿದ್ದಿತು. ಒಬ್ಬಾನೊಬ್ಬ ಸೇವಕನು ಭರತರಾಜನಿಗೆ ಶ್ವೇತಚ್ಛತ್ರವನ್ನು ಹಿಡಿದನೆಂದು ಭಾವವು.

**ತದಸ್ಯ ರುಚಿಮಾತೇನೇ ಧೃತಮಾತಪವಾರಣಮ್ ।**
**ಚೂಡಾರತ್ನಾಂಶುಭಿ[೬]ರ್ಭಿನ್ನಂ [೭]ಸಾರುಣಾಂಶ್ವಿವ ಪಂಕಜಮ್ ॥ ೬೭ ॥**

ಧರಿಸಲ್ಪಟ್ಟ ಆ ಶ್ವೇತಚ್ಛತ್ರವು ಕಿರೀಟದಲ್ಲಿರುವ ರತ್ನದ ಕಿರಣಗಳೊಡನೆ ಮಿಶ್ರವಾಗಿ ಸೂರ್ಯಕಿರಣಗಳಿಂದ ಯುಕ್ತವಾದ ಕಮಲವೋ ಎಂಬಂತೆ ಈ ಭರತರಾಜನಿಗೆ ಶೋಭೆಯನ್ನುಂಟುಮಾಡಿದ್ದಿತು.

**ಸ್ಪರ್ಧುನೀಶೀಕರಸ್ಪರ್ಧಿ ಚಾಮರಾಣಾಂ ಕದಂಬಕಮ್ ।**
**[೮]ದುಧುವುರ್ವಾರನಾರ್ಯೋಸ್ಯ ದಿಕ್ಕನ್ಯಾ ಇವ [೯]ಸಂಶ್ರಿತಾಃ ॥ ೬೮ ॥**

ದಿಕ್ಕನ್ಯೆಯರಂತೆ ಭರತರಾಜನನ್ನು ಹೊಂದಿರುವ ವಾರಾಂಗನೆಯರು, ಗಂಗಾನದಿಯ ತುಂತುರುಗಳಿಗೆ ಸಮಾನವಾದ ಚಾಮರಗಳ ಸಮೂಹವನ್ನು ಭರತರಾಜನಿಗೆ ಬೀಸಿದರು.

**ತತಃ ಸ್ಥಪತಿರತ್ನೇನ [೧೦]ನಿರ್ಮಮೇ ಸ್ಯಂದನೋ ಮಹಾನ್ ।**
**ಸುವರ್ಣಮಣಿಚಿತ್ರಾ[೧೧]ಂಗೋ ಮೇರು[೧೨]ಕುಂಜಶ್ರಿಯಂ ಹಸನ್ ॥ ೬೯ ॥**

ತರುವಾಯ ಮರಗೆಲಸದವ(ಸ್ಥಪತಿರತ್ನ)ನು ಬಂಗಾರ ಮತ್ತು ರತ್ನಗಳಿಂದ ನಾನಾಪ್ರಕಾರವಾದ ಅವಯವಗಳುಳ್ಳುದೂ ಮಹಾಮೇರುಪರ್ವತದ ತಪ್ಪಲಿನ

೧ ಆಕಾಶೇ. ೨ ಪದ್ಮರಾಗಸಹಿತಭಾ. ೩ ದ್ರೋಣ್ಯಾದ್ಯುಪಜೀವಿನಾಂ. ೪ ಚಕ್ರಪುರಸ್ಸರ ಇತ್ಯಪಿ ಪಾಠಃ. ೫ ಧೃತಮಂಗಲ ಇತ್ಯಪಿ ಪಾಠಃ. ೬ ಮಂಗಲಾಲಂಕಾರಃ. ೭ ಸೇವಿತಂ. ೮ ಇವ.

೧ ಹೇಮಾದ್ರಿರಿತ್ಯಪಿ ಪಾಠಃ. ೨ ಕಿರೀಟ ಇತ್ಯಪಿ ಪಾಠಃ. ೩ ಕೇನಚಿದ್ಧೃತಂ. ೪ ಆತಪವಾರಣವ್ಯಾಜೇನ. ೫ ಸೇವಿತುಮಿಚ್ಛು. ೬ ಮಿಶ್ರಂ. ೭ ಸೂರ್ಯಕಿರಣೈಸ್ಸಹಿತಂ. ೮ ವೀಜಯಂತಿ ಸ್ಮ. ೯ ಸಂಸ್ಥಿತಾ ಇತ್ಯಪಿ ಪಾಠಃ. ೧೦ ರಚ್ಯತೇ ಸ್ಮ. ೧೧ ಅವಯವಃ. ೧೨ ತಟಶ್ರಿಯಂ.

ಶೋಭೆಯನ್ನು ಪರಿಹಾಸ್ಯಮಾಡುತ್ತಿರುವುದೂ ಆದ ದೊಡ್ಡರಥವನ್ನು ನಿರ್ಮಿಸಿದನು.

**ಚಕ್ರರತ್ನಪ್ರತಿಸ್ಪರ್ಧಿಚಕ್ರದ್ವಿತಯಸಂಗತಃ ।**
**[೧]ವಜ್ರಾಕ್ಷಘಟಿತೋ ರೇಜೇ ರಥೋಽಸ್ಯೇವ ಮನೋರಥಃ ॥ ೭೦ ॥**

ಚಕ್ರರತ್ನಕ್ಕೆ ಸಮಾನವಾದ ಎರಡು ಚಕ್ರಗಳುಳ್ಳುದೂ ವಜ್ರಮಯವಾದ ಚಕ್ರದ ಕಣ್ಣುಗಳಿಂದ ಯುಕ್ತವೂ ಆದ ರಥವು ಭರತರಾಜನ ಮನೋರಥದಂತೆ ಶೋಭಿಸುತ್ತಿದ್ದಿತು.

**[೨]ಕಾಮುಗೈ[೩]ರ್ವಾಯುರಂಹೋಭಿಃ ಕುಮುದೋಜ್ಜ್ವಲಕಾಂತಿಭಿಃ ।**
**ಯಶೋ [೪]ವಿತಾನಸಂಕಾಶೈಃ ಸ ರಥೋ[೫]ಽಯೋಜಿ ವಾಜಿಭಿಃ ॥ ೭೧ ॥**

ಭರತರಾಜನ ಇಚ್ಛೆಗನುಸಾರಾವಾಗಿ ಗಮನ ಮಾಡುವುವೂ ಗಾಳಿಯಂತೆ ವೇಗವುಳ್ಳುವೂ ಬಿಳಿದಾವರೆಯಂತೆ ಹೆಚ್ಚಾದ ಕಾಂತಿಯುಳ್ಳುವೂ ವಿಸ್ತಾರವಾದ ಯಶಸ್ಸಿಗೆ ಸಮಾನವೂ ಆದ ಕುದುರೆಗಳಿಂದ ಆ ರಥವು ಸೇರಿಸಲ್ಪಟ್ಟಿದ್ದಿತು. ಮೇಲೆ ಹೇಳಿದ ರಥಕ್ಕೆ ಈ ಕುದುರೆಗಳನ್ನು ಕಟ್ಟಿದ್ದರೆಂದರ್ಥವು.

**ಸತಂ ಸ್ಯಂದನಮಾರುಕ್ಷ[೬]ದ್ಯುಕ್ತಸಾರಥ್ಯಧಿಷ್ಠಿತಮ್ ।**
**ನಿತಂಬದೇಶ[೭]ಮದ್ರೀಶಃ ಸುರರಾಡಿವ [೮]ಚಕ್ರಿರಾಟ್ ॥ ೭೨ ॥**

ಆ ಚಕ್ರವರ್ತಿಯು, ಮಹಾಮೇರುಪರ್ವತದ ತಪ್ಪಲಿನ ಪ್ರದೇಶವನ್ನು ದೇವೇಂದ್ರನು ಹತ್ತುವಂತೆ, ಯುಕ್ತಿಯನ್ನು ತಿಳಿದಿರುವ ಸಾರಥಿಯಿಂದ ಯುಕ್ತವಾದ ಆ ರಥವನ್ನೇರಿದನು.

**ತತಃ [೯]ಪ್ರಾಸ್ಥಾನಿಕೈಃ ಪುಣ್ಯನಿರ್ಘೋಷೈರಭಿನಂದಿತಃ ।**
**ಪ್ರತಸ್ಥೇ ದಿಗ್ಜಯೋದ್ಯುಕ್ತಃ ಕೃತಪ್ರಸ್ಥಾನಮಂಗಲಃ ॥ ೭೩ ॥**

ತರುವಾಯ ಪ್ರಯಾಣಕಾಲದಲ್ಲಿ ಮಾಡಲ್ಪಟ್ಟ ಪುಣ್ಯಘೋಷಣೆಗಳಿಂದ ಸಂತೋಷ ಪಡಿಸಲ್ಪಟ್ಟವನೂ ಪ್ರಯಾಣಕಾಲದಲ್ಲಿ ಮಾಡಲ್ಪಟ್ಟ ಆರತಿ ಮೊದಲಾದ ಮಂಗಲಕಾರ್ಯವುಳ್ಳವನೂ ಆದ ಭರತರಾಜನು ದಿಗ್ವಿಜಯದಲ್ಲಿ ಉದ್ಯುಕ್ತನಾಗಿ ಹೊರಟನು.

**ತದಾ ನಭೋಂಗಣಂ ಕೃತ್ಸ್ನಂ ಜಯಘೋಷೈರರುಧ್ಯತ ।**
**ನೃಪಾಂಗಣಂ ಚ ಸಂರುದ್ಧಮಭವತ್ಸೈನ್ಯನಾಯಕೈಃ ॥ ೭೪ ॥**

ಆಗ ಆಕಾಶಪ್ರದೇಶವೆಲ್ಲ ಜಯಘೋಷಣೆಗಳಿಂದ ವ್ಯಾಪ್ತವಾಯಿತು. ರಾಜಾಂಗಣವು ಸೇನಾಧಿಪತಿಗಳಿಂದ ಆವರಿಸಲ್ಪಟ್ಟಿತು.

**ಮಹಾಮುಕುಟಬದ್ಧಾಸ್ತಂ ಪರಿವವ್ರುಃ ಸಮಂತತಃ ।**
**ದೂರಾತ್ಪ್ರಣತಮೂರ್ಧಾನಃ ಸುರರಾಜಮಿವಾಮರಾಃ ॥ ೭೫ ॥**

ದೇವೇಂದ್ರನನ್ನು ದೇವತೆಗಳು ಆವರಿಸುವಂತೆ, ದೂರದಿಂದ ತಲೆಗಳನ್ನು ಬಾಗಿಸಿದ ಮಹಾಮುಕುಟಬದ್ಧರಾಜರು ಆ ಭರತರಾಜನ ಸುತ್ತಲೂ ಆವರಿಸಿಕೊಂಡರು.

**ಪ್ರಚಚಾಲ ಬಲಂ ವಿಷ್ವಗಾರುದ್ಧಪುರವೀಥಿಕಮ್ ।**
**ಮಹಾ[೧೦]ಯೋಧಮಯೀ ಸೃಷ್ಟಿರಪೂರ್ವೇವಾಭವತ್ತದಾ ॥ ೭೬ ॥**

ಎಲ್ಲಾ ಕಡೆಗಳಲ್ಲಿಯೂ ಪಟ್ಟಣದ ಮಾರ್ಗಗಳನ್ನು ತಡೆದು ಸೈನ್ಯವು ನಡೆಯಿತು. ಆಗ ಮಹಾಯುದ್ಧಭಟಮಯವೂ ಅಪೂರ್ವವೂ ಆದ ಸೃಷ್ಟಿಯಾದಂತಿದ್ದಿತು.

**ಪುರಃ [೧]ಪಾದಾತ[೨]ಮಾಶ್ವೀಯಂ [೩]ರಥಕಟ್ಯಾ ಚ [೪]ಹಾಸ್ತಿಕಮ್ ।**
**ಕ್ರಮಾ[೫]ನ್ನಿರೀಯುರಾವೇಷ್ಟ್ಯ ಸಪತಾಕಂ ರಥಂ ಪ್ರಭೋಃ ॥ ೭೭ ॥**

ಮುಂದುಗಡೆಯಲ್ಲಿ ಕಾಲಾಳುಗಳ ಸಮೂಹವೂ ಕುದುರೆಗಳ ಸಮೂಹವೂ ರಥಗಳ ಸಮೂಹವೂ ಆನೆಗಳ ಸಮೂಹವೂ ಭರತರಾಜನ ಧ್ವಜಪತಾಕೆಗಳೊಡಗೂಡಿದ ರಥವನ್ನಾವರಿಸಿಕೊಂಡು ಹೊರಟುವು.

**[೬]ರಥ್ಯಾ [೭]ರಥ್ಯಾಶ್ವಸಂಘಟ್ಟಾದುತ್ಥಿತೈರ್ಹೇಮರೇಣುಭಿಃ ।**
**ಬಲಕ್ಷೋದಾಕ್ಷಮಾ ವ್ಯೋಮ [೮]ಸಮುತ್ಪೇತುರಿವ ಸ್ವಯಮ್ ॥ ೭೮ ॥**

ಅಂಗಡಿ ಬೀದಿಗಳು ರಥದ ಕುದುರೆಗಳ ಸಂಘರ್ಷಣೆಯಿಂದುಂಟಾದುದೂ ಸುವರ್ಣಮಯವೂ ಆದ ಧೂಳಿಗಳಿಂದ ಸೈನ್ಯದ ಸಂಘರ್ಷಣೆಯನ್ನು ಸಹಿಸದಿರುವುವುಗಳಾಗಿ ಆಕಾಶಕ್ಕೆ ಹಾರಿದುವೋ ಎಂಬಂತಿದ್ದುವು. ಸುವರ್ಣಮಯವಾದ ಧೂಳಿಗಳು ಆಕಾಶದಲ್ಲಿ ಅಂಗಡಿಬೀದಿಗಳಂತೆ ತೋರುತ್ತಿದ್ದುವೆಂದು ಭಾವವು.

**ರೌಕ್ಮೈರಜೋಭಿರಾಕೀರ್ಣಂ ತದಾ ರೇಜೇ ನಭೋ[೯]ಜಿರಮ್ ।**
**[೧೦]ಸ್ಪೃಷ್ಟಂ ಬಾಲಾತಪೇನೇವ ಪಟವಾಸೇನ [೧೧]ಚಾತತಮ್ ॥ ೭೯ ॥**

ಆಗ ಬಂಗಾರದ ಧೂಳಿಗಳಿಂದ ವ್ಯಾಪ್ತವೂ ಗಂಧದ ಪುಡಿಯಿಂದ ವಿಸ್ತರಿಸಲ್ಪಟ್ಟುದೂ ಆದ ಆಕಾಶವೆಂಬ ಅಂಗಣವು, ಎಳೆಯ ಬಿಸಿಲಿನಿಂದ ಸ್ಪರ್ಶಿಸಲ್ಪಟ್ಟಿದೆಯೋ ಎಂಬಂತೆ ಶೋಭಿಸುತ್ತಿದ್ದಿತು.

**ಶನೈಃ ಶನೈರ್ಜನೈರ್ಮುಕ್ತಾ ವಿರೇಜುಃ ಪುರವೀಥಯಃ ।**
**ಕಲ್ಲೋಲೈರಿವ ವೇಲೋತ್ಥೈರ್ಮಹಾಬ್ಧೇಸ್ತೀರಭೂಮಯಃ ॥ ೮೦ ॥**

ಮೆಲ್ಲಮೆಲ್ಲನೆ ಜನರಿಂದ ಬಿಡಲ್ಪಟ್ಟ ಪಟ್ಟಣದ ಮಾರ್ಗಗಳು ದಡದಲ್ಲುಂಟಾದ ತೆರೆಗಳಿಂದ ಬಿಡಲ್ಪಟ್ಟ ದೊಡ್ಡಸಮುದ್ರತೀರದಲ್ಲಿರುವ ಭೂಮಿಗಳಂತೆ, ಶೋಭಿಸುತ್ತಿದ್ದುವು.

**ಪುರಾಂಗನಾಭಿರುನ್ಮುಕ್ತಾಃ ಸುಮನೋಂಜಲಯೋಽಪತನ್ ।**
**ಸೌಧವಾತಾಯನಸ್ಥಾಭಿರ್ದೃಷ್ಟಿಪಾತೈಃ ಸಮಂ ಪ್ರಭೌ ॥ ೮೧ ॥**

ಉಪ್ಪರಿಗೆಯ ಕಿಡಿಕಿಗಳಲ್ಲಿದ್ದ ಪುರಸ್ತ್ರೀಯರಿಂದ ಬಿಡಲ್ಪಟ್ಟ ಪುಷ್ಪಾಂಜಲಿಗಳು, ಅವರ ಕಣ್ಣುಗಳ ನೋಟಗಳೊಡನೆ, ಭರತರಾಜನ ಮೇಲೆ ಬಿದ್ದುವು. ಪುರಸ್ತ್ರೀಯರು ಭರತರಾಜನನ್ನು ನೋಡುತ್ತ ಅವನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿದರೆಂದು ಭಾವವು.

**ಜಯೇಶ ವಿಜಯಿನ್ ವಿಶ್ವಂ ವಿಜಯಸ್ವ ದಿಶೋ ದಶ ।**
**ಪುಣ್ಯಾಶಿಷಾಂ ಶತೈರಿತ್ಥಂ ಪೌರಾಃ ಪ್ರಭು[೧೨]ಮಯೂಯುಜನ್ ॥ ೮೨ ॥**

ಪುರನಿವಾಸಿಗಳು "ಜಯಶೀಲನಾದ ಪ್ರಭುವೆ! ಲೋಕವನ್ನು ಜಯಿಸು! ಹತ್ತುದಿಕ್ಕುಗಳನ್ನು ಜಯಿಸು" ಈ ಪ್ರಕಾರವಾಗಿ ಅನೇಕ ಪುಣ್ಯಾಶೀರ್ವಾದಗಳಿಂದ ಭರತರಾಜನಿಗೆ ಆಶೀರ್ವಾದವನ್ನು ಮಾಡಿದರು.

**ಸಮ್ರಾಟ್ಪಶ್ಯನ್ನಯೋಧ್ಯಾಯಾಃ ಪರಾಂ [೧೩]ಭೂತಿಂ [೧೪]ತದಾತನೀಮ್ ।**
**ಶನೈಃ [೧೫]ಪ್ರತೋಲೀಂ [೧೬]ಸಂಪ್ರಾಪದ್ರತ್ನತೋರಣಭಾಸುರಾಮ್ ॥ ೮೩ ॥**

೧ ವಜ್ರವರೂಥಾಂಗಃ. ೨ ಇಚ್ಛಾನುಕೂಲಚಾರಿಭಿಃ. ೩ ವಾಯುವೇಗವದ್ಭಿಃ. ೪ ವಿಸ್ತಾರಃ. ೫ ಯುಜ್ಯತೇ ಸ್ಮ. ೬ ಯುಕ್ತಿಪರಸಾರಥಿಸಮಾಶ್ರಿತಂ. ೭ ಮೇರೋಃ. ೮ ಚಕ್ರರಾಡಿತ್ಯಪಿ ಪಾಠಃ. ೯ ಪ್ರಸ್ಥಾನೇ ನಿಯುಕ್ತೈಃ. ೧೦ ಭಟಮಯೀ.

೧ ಪದಾತಿಸಮೂಹಃ. ೨ ಅಶ್ವಸಮೂಹಃ. ೩ ರಥಕಡ್ಯೇತ್ಯಪಿ ಪಾಠಃ. ೪ ಗಜಸಮೂಹಃ. ೫ ನಿರ್ಗಚ್ಛಂತಿ ಸ್ಮ. ೬ ವಿಪಣಿವೀಥ್ಯಃ ರಥ್ಯಾಶ್ಚ. ೭ ರಥನಿಯುಕ್ತವಾಜಿನಃ. ೮ ಉತ್ಪತಂತಿ ಸ್ಮ. ೯ ಅಂಗಣಂ. ೧೦ ಸ್ಪಷ್ಟಮಿತ್ಯಪಿ ಪಾಠಃ. ೧೧ ವಾತತಮಿತ್ಯಪಿ ಪಾಠಃ. ೧೨ ಅಪೂಜಯನ್ನಿತ್ಯಪಿ ಪಾಠಃ. ೧೩ ಸಂಪದಂ. ೧೪ ತತ್ಕಾಲಜಾಂ. ೧೫ ಗೋಪುರಂ. ೧೬ ಸಂಪ್ರಾಪೇತ್ಯಪಿ ಪಾಠಃ.

ಭರತರಾಜನು ಪ್ರಯಾಣಕಾಲದಲ್ಲುಂಟಾದ ಆಯೋಧ್ಯೆಯ ಆ ಹೆಚ್ಚಾದ ಸಂಪತ್ತನ್ನು ನೋಡುತ್ತ ಮೆಲ್ಲನೆ ರತ್ನತೋರಣಗಳಿಂದ ಶೋಭಿಸುತ್ತಿರುವ ಪಟ್ಟಣದ ಗೋಪುರವನ್ನು ತಲುಪಿದನು.

[೧]ಪುರೋ ಬಹಿಃ [೨]ಪುರಃ [೩]ಪಶ್ಚಾ[೪]ತ್ಸಮಂ ಚ ವಿಭುನಾಮುನಾ ।
ದದೃಶೇ [೫]ದೃಷ್ಟಿಪರ್ಯಂತಮಸಂಖ್ಯಮಿವ ತದ್ಬಲಮ್ ॥ ೮೪ ॥

ಭರತರಾಜನು ಪಟ್ಟಣದ ಹೊರಗೂ ಪಟ್ಟಣದ ಹಿಂಭಾಗದಲ್ಲೂ ತನ್ನ ಜೊತೆಯಲ್ಲೂ ಇರುವ ಮತ್ತು ಕಣ್ಣಿಗೆ ಕೊನೆಗಾಣದೆ ಅಸಂಖ್ಯಾತವಾಗಿದೆಯೋ ಎಂಬಂತಿರುವ ಆ ಸೈನ್ಯವನ್ನು ನೋಡಿದನು.

ಜಗತಃ ಪ್ರಸವಾಗಾರಾದಿವ ತಸ್ಮಾತ್ಪುರಾದ್ಬಲಮ್ ।
ನಿರಿಯಾಯ [೬]ನಿರುಚ್ಛ್ವಾಸಂ ಶನೈರಾರುದ್ಧಗೋಪುರಮ್ ॥ ೮೫ ॥

ಉಸಿರುಬಿಡಲಾಗದಂತೆ ಗೋಪುರದ ಸುತ್ತಲೂ ಸೇರಿದ ಸೈನ್ಯವು ಜಗತ್ತಿನ ಉತ್ಪತ್ತಿಸ್ಥಾನದಿಂದ ಹೊರಡುವಂತೆ ಆ ಅಯೋಧ್ಯಾನಗರದಿಂದ ಮೆಲ್ಲನೆ ಹೊರಟಿತು.

ಕಿಮಿದಂ ಪ್ರಲಯಕ್ಷೋಭಾತ್ಕ್ಷುಭಿತಂ ವಾರಿಧೇರ್ಜಲಮ್ ।
ಕಿಮುತ [೭]ತ್ರಿಜಗತ್ಸರ್ಗಃ ಪ್ರತ್ಯಗ್ರೋಯಂ ವಿಜೃಂಭತೆ ॥ ೮೬ ॥

ಇತ್ಯಾಶಂಕ್ಯ ನಭೋಭಾಗ್ಭಿಃ ಸುರೈಃ ಸಾಶ್ಚರ್ಯಮೀಕ್ಷಿತಮ್ ।
ಪ್ರಸಸಾರ ಬಲಂ ವಿಷ್ವಕ್ಪುರಾ[೮]ನ್ನಿರ್ಯಾಯ ಚಕ್ರಿಣಃ ॥ ೮೭ ॥

''ಇದೇನು ಪ್ರಳಯಕಾಲದ ಕ್ಷೋಭೆಯಿಂದ ಅಲ್ಲೋಲಕಲ್ಲೋಲವಾದ ಸಮುದ್ರದ ಜಲವೋ ? ಅಥವಾ ನವೀನವಾದ ಮೂರುಲೋಕದ ಸೃಷ್ಟಿಯು ವೃದ್ಧಿ ಹೊಂದುತ್ತಿದೆಯೋ ?'' ಈ ಪ್ರಕಾರವಾಗಿ ಸಂದೇಹಪಟ್ಟು ಆಕಾಶದಲ್ಲಿರುವ ದೇವತೆಗಳಿಂದ ಆಶ್ಚರ್ಯವಾಗಿ ನೋಡಲ್ಪಟ್ಟ ಭರತಚಕ್ರವರ್ತಿಯ ಸೈನ್ಯವು ಪಟ್ಟಣದಿಂದ ಹೊರಟು ಎಲ್ಲಾಕಡೆಯಲ್ಲೂ ಗಮನಮಾಡಿತು.

ತತಃ [೯]ಪ್ರಾಚೀಂ ದಿಶಂ ಜೇತುಂ ಕೃತೋದ್ಯೋಗೋ [೧೦]ವಿಶಾಂಪತಿಃ ।
ಪ್ರಯಯೌ ಪ್ರಾಙ್ಮುಖೋಭೂತ್ವಾ ಚಕ್ರರತ್ನಮನುವ್ರಜನ್ ॥ ೮೮ ॥

ತರುವಾಯ ಪೂರ್ವದಿಕ್ಕನ್ನು ಜಯಿಸುವುದಕ್ಕೋಸ್ಕರ ಪ್ರಯತ್ನವನ್ನುಮಾಡಿದ ಚಕ್ರವರ್ತಿಯು ಪೂರ್ವಾಭಿಮುಖವಾಗಿ ಚಕ್ರರತ್ನವನ್ನನುಸರಿಸಿ ಹೊರಟನು.

ಚಕ್ರಮಸ್ಯ ಜ್ವಲದ್ವ್ಯೋಮ್ನಿ ಪ್ರಯಾತಿ ಸ್ಮ ಪುರೋ ವಿಭೋಃ ।
ಸುರೈಃ [೧೧]ಪರಿವೃತಂ ವಿಷ್ವ[೧೨]ಕ್ಸಾಸ್ವದ್ಬಿಂಬಪ್ರಭಾಸ್ವರಮ್ ॥ ೮೯ ॥

ಆಕಾಶದಲ್ಲಿ ಪ್ರಕಾಶಿಸುತ್ತಿರುವುದೂ ದೇವತೆಗಳಿಂದ ಸುತ್ತಲ್ಪಟ್ಟಿದ್ದೂ ಎಲ್ಲಾ ಕಡೆಯಲ್ಲೂ ಸೂರ್ಯಬಿಂಬದಂತೆ ಪ್ರಕಾಶಮಾನವೂ ಆದ ಚಕ್ರವು ಈ ಭರತರಾಜನ ಮುಂದೆ ಹೊರಟಿತು.

ಚಕ್ರಾನುಯಾಯಿ [೧೩]ತದ್ಭೇಜೇ ನಿಧೀನಾಮೀಶಿತುರ್ಬಲಮ್ ।
ಗುರೋರಿಚ್ಛಾನುವರ್ತಿಷ್ಣು ಮುನೀನಾಮಿವ ಮಂಡಲಮ್ ॥ ೯೦ ॥

ಚಕ್ರವನ್ನನುಸರಿಸಿ ಹೋಗುವ ಆ ನಿಧಿಪತಿಯಾದ ಭರತನ ಸೈನ್ಯವು, ಗುರುವಿನ ಇಚ್ಛೆಯನ್ನನುಸರಿಸುವ ಮುನಿಗಳ ಸಮೂಹದಂತೆ ನಡೆಯಿತು. ಸೈನ್ಯವು ಚಕ್ರರತ್ನವನ್ನನುಸರಿಸಿ ಹೊರಟಿತೆಂದು ಭಾವವು.

೧ ಪುರಸ್ಯ. ೨ ಪುರಸ್ಯ. ೩ ಪಶ್ಚಾತ ಸ್ಥಿತಂ. ೪ ಸ್ವಸಹಿತಂ. ೫ ಅಂತರಹಿತಂ. ೬ ಉಚ್ಛ್ವಾಸಾನ್ನಿಷ್ಕ್ರಾಂತಂ ಯಥಾಭವತಿತಥಾ. ೭ ತ್ರಿಲೋಕಸೃಷ್ಟಿಃ. ೮ ನಿರ್ಗತ್ಯ. ೯ ಪೂರ್ವಾಂ. ೧೦ ಚಕ್ರವರ್ತೀ. ೧೧ ಪರಿಷ್ಕೃತ ಮಿತ್ಯಪಿಪಾಠಃ. ೧೨ ಸೂರ್ಯಬಿಂಬಪ್ರಭಾಸ್ವರಂ. ೧೩ ಭೇಜೇಽತ್ಯಪಿಪಾಠಃ.

ದಂಡರತ್ನಂ ಪುರೋಧಾಯ ಸೇನಾನೀರಗ್ರಣೀರಭೂತ್ ।
[೧]ಸ್ಥಪುಟಾನಿ ಸಮೀಕುರ್ವನ್ ಸ್ಥಲದುರ್ಗಾಣ್ಯಯತ್ನತಃ ॥ ೯೧ ॥

ಸೇನಾಪತಿಯು ದಂಡರತ್ನವನ್ನು ಮುಂದೆಮಾಡಿಕೊಂಡು ಹಳ್ಳದಿಣ್ಣೆಯಾದ ಭೂಮಿಯನ್ನೂ ಬೆಟ್ಟ ಮುಂತಾದ ದುರ್ಗಮಸ್ಥಾನಗಳನ್ನೂ ಸುಲಭವಾಗಿ ಸರಿಮಾಡಿಕೊಂಡು ಮುಂದೆ ಹೊರಟನು.

[೨]ಅಗ್ರಣ್ಯಾ ದಂಡರತ್ನೇನ ಪಥಿ ರಾಜಪಥೀಕೃತೇ ।
ಯಥೇಷ್ಟಂ ಪ್ರಯಯೌ ಸೈನ್ಯಂ ಕ್ವಚಿದಪ್ಯಸ್ಖಲದ್ಗತಿ ॥ ೯೨ ॥

ಮುಂದೆ ಹೋಗುತ್ತಿರುವ ದಂಡರತ್ನವು ಮಾರ್ಗವನ್ನು ರಾಜಮಾರ್ಗವನ್ನಾಗಿ ಮಾಡುತ್ತಿರಲು ಸೈನ್ಯವು ಎಲ್ಲಿಯೂ ಗಮನಕ್ಕೆ ಆತಂಕವಿಲ್ಲದೆ ಯಥೇಚ್ಛವಾಗಿ ಹೋಯಿತು.

ತತೋಧ್ವನಿ ವಿಶಾಮೀಶಃ ಸೋಪಶ್ಯಚ್ಛಾರದೀಂ ಶ್ರಿಯಮ್ ।
ದಿಶಾಂ [೩]ಪ್ರಸಾಧನೀಂ ಕೀರ್ತಿಮಾತ್ಮೀಯಾಮಿವ ನಿರ್ಮಲಾಮ್॥ ೯೩ ॥

ತರುವಾಯ ಭರತರಾಜನು ದಿಕ್ಕುಗಳನ್ನಲಂಕರಿಸುತ್ತಿರುವ ತನ್ನ ನಿರ್ಮಲವಾದ ಕೀರ್ತಿಯನ್ನು ನೋಡುವಂತೆ ಮಾರ್ಗದಲ್ಲಿ ಶರತ್ಕಾಲದ ಲಕ್ಷ್ಮಿ(ಶೋಭೆ)ಯನ್ನು ನೋಡಿದನು.

ಸರಾಂಸಿ ಕಮಲಾಮೋದಮುದ್ವಮಂತಿ ಶರಚ್ಛ್ರಿಯಃ ।
ಮುಖಾಯಿತಾನಿ ಸಂಪ್ರೇಕ್ಷ್ಯ ಸೋಭ್ಯನಂದ[೪]ದಧೀಶಿತಾ ॥ ೯೪ ॥

ಭರತರಾಜನು ಕಮಲಗಳ ಪರಿಮಳವನ್ನು ಹರಡುತ್ತಿರುವುವೂ ಶರತ್ಕಾಲ ಲಕ್ಷ್ಮಿಯಮುಖದಂತಿರುವುವೂ ಆದ ಸರೋವರಗಳನ್ನು ನೋಡಿ ಸಂತೋಷಪಟ್ಟನು.

ಸಹಂಸಾನ್ಸರಸಾಂ ತೀರೇಷ್ವಪಶ್ಯತ್ಕೃತಶಿಂಜನಾನ್ ।
ಮೃಣಾಲ[೫]ಪೀಥಸಂಪುಷ್ಟಾನ್ ಶರದಃ ಪುತ್ರಕಾನಿವ ॥ ೯೫ ॥

ಭರತರಾಜನು ಸರೋವರಗಳ ದಡಗಳಲ್ಲಿ ಧ್ವನಿಮಾಡುತ್ತಿರುವುವೂ ತಾವರೆಯ ನಾಳವೆಂಬ ಹಾಲು ಬೆಣ್ಣೆಗಳಿಂದ ಪುಷ್ಟವಾಗಿರುವುವೂ ಶರತ್ಕಾಲದ ಮಕ್ಕಳೋ ಎಂಬಂತಿರುವುವೂ ಆದ ಹಂಸಪಕ್ಷಿಗಳನ್ನು ನೋಡಿದನು.

ಚಂಚ್ವಾ ಮೃಣಾಲಮುದ್ಧೃತ್ಯ ಹಂಸೋ ಹಂಸ್ಯೈ ಸಮರ್ಪಯನ್ ।
[೬]ರಾಜಹಂಸಸ್ಯ [೭]ಹೃದ್ಯಸ್ಯ ಮಹತೀಂ ಧೃತಿಮಾದಧೇ ॥ ೯೬ ॥

ಕೊಕ್ಕಿನಿಂದ ತಾವರೆಯ ದಂಟನ್ನು ಕಿತ್ತು ಸ್ತ್ರೀಹಂಸಪಕ್ಷಿಗೆ ಕೊಡುತ್ತಿರುವ ಒಂದು ಪುರುಷಹಂಸಪಕ್ಷಿಯು ರಾಜಶ್ರೇಷ್ಠನಾದ ಭರತಚಕ್ರವರ್ತಿಯ ಹೃದಯದಲ್ಲಿ ಹೆಚ್ಚಾದ ಸಂತೋಷವನ್ನುಂಟುಮಾಡಿತು.

[೮]ಸಧ್ರೀಚೀಂ ವೀಚಿಸಂರುದ್ಧಾಮಪಶ್ಯನ್ಸರಿತಃ ಸರಃ ।
ಕೋಕಃ [೯]ಕೋಕೂಯಮಾನೋಸ್ಯ ಮನಸಃ ಪ್ರೀತಿಮಾತನೋತ್ ॥

ಅಲೆಗಳಿಂದ ಮರೆಯಾಗಿರುವ ತನ್ನ ಪ್ರಿಯೆಯನ್ನು ಕಾಣದೆ ಸರೋವರದ ಸುತ್ತಲೂ ಹೆಚ್ಚಾಗಿ ಶಬ್ದ ಮಾಡುತ್ತಿರುವ ಚಕ್ರವಾಕಪಕ್ಷಿಯು ಈ ಭರತರಾಜನ ಮನಸ್ಸಿಗೆ ಪ್ರೀತಿಯನ್ನುಂಟುಮಾಡಿದ್ದಿತು.

೧ ನಿಮ್ನೋನ್ನತಾನಿ. ೨ ಅಗ್ರಗಾಮಿನಾ. ೩ ಅಲಂಕಾರಿಣೀಂ ಪ್ರಸಾದಿನೀಮಿತ್ಯಪಿಪಾಠಃ. ೪ ಭರತಃ. ೫ ಸಪಯೋನವನೀತಮಿತ್ಯರ್ಥಃ. ೬ ರಾಜಶ್ರೇಷ್ಠಸ್ಯ. ೭ ಹೃದಯೇ. ೮ ಪ್ರಿಯಾಂ. ೯ ಭೃಶಂ ಸ್ವರಂಕುರ್ವಾಣಃ.

[೧]ಹಂಸಯೂನಾಬ್ಜಕಿಂಜಲ್ಕರಜಃಪಿಂಜರಿತಾಂ ನಿಜಾಮ್ ।
ವಧೂಂ [೨]ವಿಧೂತಾಂ ಸೋಪಶ್ಯಚ್ಚಕ್ರವಾಕೀವಿಶಂಕಯಾ ॥ ೯೮ ॥

ಒಂದು ತರುಣಹಂಸಪಕ್ಷಿಯು ತಾವರೆಯ ಕುಸುಮಗಳ ಧೂಳಿಯಿಂದ ಹಳದಿ ಬಣ್ಣವಾಗಿಮಾಡಲ್ಪಟ್ಟಿದ್ದ ತನ್ನ ಪತ್ನಿಯನ್ನು ಸ್ತ್ರೀಚಕ್ರವಾಕಪಕ್ಷಿಯೆಂಬ ಸಂಶಯದಿಂದ ಅವಮಾನಮಾಡಿದುದನ್ನು ಭರತರಾಜನು ನೋಡಿದನು.

ತರಂಗೈರ್ಧವಲೀಭೂತವಿಗ್ರಹಾಂ ಕೋಕಕಾಮಿನೀಮ್ ।
ವ್ಯಾಮೋಹಾದನುಧಾವಂತಂ [೩]ಸ ಜರದ್ಧಂಸಮೈಕ್ಷತ ॥ ೯೯ ॥

ಭರತಚಕ್ರವರ್ತಿಯು ಅಲೆಗಳಿಂದ ಶುಭ್ರವಾಗಿ ಮಾಡಲ್ಪಟ್ಟ ಶರೀರವುಳ್ಳ ಸ್ತ್ರೀಚಕ್ರವಾಕಪಕ್ಷಿಯನ್ನು ಮೋಹದಿಂದ ಹಿಂಬಾಲಿಸಿ ಓಡುತ್ತಿರುವ ಒಂದು ವೃದ್ಧ ಹಂಸಪಕ್ಷಿಯನ್ನು ಕಂಡನು. ಅಲೆಗಳ ಸಂಬಂಧದಿಂದ ಶುಭ್ರವಾಗಿರುವ ಚಕ್ರವಾಕಪಕ್ಷಿಯನ್ನು ನೋಡಿ ಸ್ತ್ರೀಹಂಸಪಕ್ಷಿಯೆಂಬ ಭ್ರಾಂತಿಯಿಂದ ಹಿಂಬಾಲಿಸಿ ಓಡುತ್ತಿದ್ದ ವೃದ್ಧಹಂಸಪಕ್ಷಿಯನ್ನು ನೋಡಿದನೆಂದು ಭಾವವು.

ನದೀಪುಲಿನದೇಶೇಷು ಹಂಸಸಾರಸಹಾರಿಷು ।
ಶಯನೇಷ್ವಿವ ತಸ್ಯಾಸೀದ್ಧೃತಿಃ [೪]ಶುಚಿಮಸೀಮಸು ॥ ೧೦೦ ॥

ಹಂಸಪಕ್ಷಿಗಳಿಂದಲೂ ಸಾರಸಪಕ್ಷಿಗಳಿಂದಲೂ ಮನೋಹರವೂ ಅತ್ಯಂತ ನಿರ್ಮಲವೂ ಆದ ನದಿಯ ಮರಳಿನ ಪ್ರದೇಶಗಳಲ್ಲಿ ಆ ಭರತರಾಜನಿಗೆ, ಹಾಸಿಗೆಗಳಲ್ಲಿ ಸಂತೋಷವಾಗುವಂತೆ, ಸಂತೋಷವಾಯಿತು.

ರೋಧೋಲತಾಶಿಖೋತ್ಸೃಷ್ಟಪುಷ್ಪಪ್ರಕರಶೋಭಿನೀಃ ।
ಸರಿತ್ತೀರಭುವೋದರ್ಶ[೫]ಜ್ಜಲೋಚ್ಛ್ವಸತರಂಗಿತಾಃ ॥ ೧೦೧ ॥

ರಾಜನು ದಡಗಳಲ್ಲಿರುವ ಲತೆಗಳ ಅಗ್ರಭಾಗಗಳಿಂದ ಸುರಿಯಲ್ಪಟ್ಟ ಪುಷ್ಪಸಮೂಹದಿಂದ ಶೋಭಾಯಮಾನವೂ ಜಲಪ್ರವಾಹದಿಂದುಂಟಾದ ಅಲೆಗಳುಳ್ಳವೂ ಆದ ನದೀತೀರಪ್ರದೇಶಗಳನ್ನು ನೋಡಿದನು.

ಲತಾಲಯೇಷು ರಮ್ಯೇಷು ರತಿರಸ್ಯ ಪ್ರಪಶ್ಯತಃ ।
ಸ್ವಯಂ ಗಲತ್ಪ್ರಸೂನೌಘರಚಿತಪ್ರಸ್ತರೇಷ್ವಭೂತ್ ॥ ೧೦೨ ॥

ಲತಾಮಂಟಪಗಳನ್ನು ನೋಡುತ್ತಿರುವ ಭರತರಾಜನಿಗೆ ರಮಣೀಯವೂ ತಾನಾಗಿ ಉದುರಿದ ಪುಷ್ಪಸಮೂಹದಿಂದ ಮಾಡಲ್ಪಟ್ಟ ಹಾಸಿಗೆಗಳುಳ್ಳವೂ ಆದ ಲತಾಮಂಟಪಗಳಲ್ಲಿ ಪ್ರೀತಿಯಾಯಿತು.

ಕ್ವಚಿಲ್ಲತಾಗೃಹಾಂತಸ್ಥಚಂದ್ರಕಾಂತಶಿಲಾಶ್ರಿತಾನ್ ।
ಸ್ವಯಶೋಗಾನಸಂಸಕ್ತಾನ್ ಕಿನ್ನರಾನ್ನಭುರೈಕ್ಷತ ॥ ೧೦೩ ॥

ಭರತರಾಜನು ಕೆಲವು ಕಡೆಯಲ್ಲಿ ಲತಾಮಂಟಪದೊಳಗಿರುವ ಚಂದ್ರಕಾಂತ ಶಿಲೆಯನ್ನು ಹೊಂದಿರುವವರೂ ತನ್ನ ಯಶಸ್ಸನ್ನು ಗಾನಮಾಡುವುದರಲ್ಲಿ ಆಸಕ್ತರೂ ಆದ ಕಿನ್ನರದೇವತೆಗಳನ್ನು ನೋಡಿದನು.

ಕ್ವಚಿಲ್ಲತಾಃ ಪ್ರಸೂನೇಷು ವಿಲೀನಮಧುಪಾವಲೀಃ ।
ವಿಲೋಕ್ಯ ಸ್ರಸ್ತಕೇಶೀನಾಂ ಸಸ್ಮಾರ ಪ್ರಿಯಯೋಷಿತಾಮ್ ॥ ೧೦೪ ॥

ಕೆಲವುಕಡೆಯಲ್ಲಿ ಪುಷ್ಪಗಳಲ್ಲಿ ಕುಳಿತಿರುವ ಭ್ರಮರಗಳ ಸಮೂಹವುಳ್ಳ ಲತೆಗಳನ್ನು ನೋಡಿ ಬಿಚ್ಚಿದ ಕೂದಲುಗಳುಳ್ಳ ಪ್ರಿಯಸ್ತ್ರೀಯರನ್ನು ಸ್ಮರಿಸಿದನು.

ಸುಮನೋವರ್ಷಮಾತೇನುಃ ಪ್ರೀತ್ಯೇವಾಸ್ಯಾ[೬]ಧಿಮೂರ್ಧಜಮ್ ।
ಪವನಾಧೂತಶಾಖಾಗ್ರಾಃ ಪ್ರಫುಲ್ಲಾ ಮಾರ್ಗಶಾಖಿನಃ ॥ ೧೦೫ ॥

ಗಾಳಿಯಿಂದ ಅಲ್ಲಾಡುತ್ತಿರುವ ಕೊಂಬೆಗಳ ತುದಿಗಳುಳ್ಳವೂ ವಿಕಸಿತವೂ ಆದ ಮಾರ್ಗದ ಮರಗಳು, ಪ್ರೀತಿಯಿಂದಲೋ ಎಂಬಂತೆ, ಭರತರಾಜನ ಕೂದಲುಗಳಲ್ಲಿ ಪುಷ್ಪವೃಷ್ಟಿಯನ್ನು ಮಾಡಿದುವು. ಭರತರಾಜನ ತಲೆಯಮೇಲೆ ಮಾರ್ಗದಲ್ಲಿರುವ ಸಾಲುಮರಗಳ ಪುಷ್ಪವೃಷ್ಟಿಯಾಗುತ್ತಿದ್ದಿತೆಂದು ಭಾವವು.

[೧]ಸಚ್ಛಾಯಾನ್ಸಫಲಾಂಸ್ತುಂಗಾನ್ಸರ್ವಸಂಭೋಗ್ಯಸಂಪದಃ ।
ಮಾರ್ಗದ್ರುಮಾನ್ ಸಮುದ್ರಾಕ್ಷೀತ್ ಸ ನೃಪಾನನುಕುರ್ವತಃ ॥ ೧೦೬ ॥

ಭರತರಾಜನು ಶ್ರೇಷ್ಠವಾದ ನೆರಳುಳ್ಳವೂ ಫಲಗಳುಳ್ಳವೂ ಉನ್ನತವೂ ಸಂಭೋಗಯೋಗ್ಯವಾದ ಸಮಸ್ತ ಸಂಪತ್ತುಗಳುಳ್ಳವೂ ರಾಜರನ್ನು ಹೋಲುತ್ತಿರುವುವೂ ಆದ ಮಾರ್ಗವೃಕ್ಷಗಳನ್ನು ನೋಡಿದನು.

ಸರಸ್ತೀರಭುವೋಪಶ್ಯತ್ಸರೋಜರಜಸಾ ತತಾಃ ।
ಸುವರ್ಣಕುಟ್ಟಿಮಾಶಂಕಾ[೨]ಮಧ್ವನ್ಯಹೃದಿ ತನ್ವತೀಃ ॥ ೧೦೭ ॥

ಭರತರಾಜನು ಕಮಲಗಳ ಧೂಳಿಯಿಂದ ವ್ಯಾಪ್ತವೂ ಮಾರ್ಗಸ್ಥರ ಹೃದಯದಲ್ಲಿ ಬಂಗಾರದ ನೆಲಗಟ್ಟಿನ ಸಂದೇಹವನ್ನುಂಟುಮಾಡುತ್ತಿರುವುವೂ ಆದ ಸರೋವರಗಳ ತೀರಭೂಮಿಗಳನ್ನು ನೋಡಿದನು.

ಬಲರೇಣುಭಿರಾರುದ್ಧೇ [೩]ದೋಷಾಂಮನ್ಯೇ ನಭಸ್ಯಸೌ ।
ಕರುಣಂ ರುವತೀಂ [೪]ವೀಕ್ಷಾಂಚಕ್ರೇ ಚಕ್ರಾಹ್ವಕಾಮಿನೀಮ್ ॥ ೧೦೮ ॥

ಭರತರಾಜನು ಸೈನ್ಯದಿಂದುಂಟಾದ ಧೂಳುಗಳಿಂದ ವ್ಯಾಪ್ತವೂ ತನ್ನನ್ನು ರಾತ್ರಿಯನ್ನಾಗಿ ತಿಳಿಯುತ್ತಿರುವುದೂ (ರಾತ್ರಿಯಂತಿರುವುದೂ) ಆದ ಆಕಾಶದಲ್ಲಿ ದಯೆಯುಂಟಾಗುವಂತೆ ರೋದನಮಾಡುತ್ತಿರುವ ಸ್ತ್ರೀಚಕ್ರವಾಕಪಕ್ಷಿಯನ್ನು ನೋಡಿದನು. ರಾತ್ರಿಕಾಲದಲ್ಲಿ ಚಕ್ರವಾಕಪಕ್ಷಿಗಳಿಗೆ ಕಣ್ಣುಕಾಣದೆ ದಂಪತಿ ವಿಯೋಗವಾಗುವುದು. ಸೈನ್ಯಧೂಳಿನಿಂದ ವ್ಯಾಪ್ತವಾದ ಆಕಾಶವನ್ನು ಕಂಡು ರಾತ್ರಿಯೆಂದು ಭಾವಿಸಿ ಪತಿವಿಯೋಗದುಃಖದಿಂದ ರೋದನಮಾಡುತ್ತಿದ್ದ ಸ್ತ್ರೀಚಕ್ರವಾಕಪಕ್ಷಿಯನ್ನು ನೋಡಿದನೆಂದು ಭಾವವು.

ಗವಾಂ ಗಣಾನಥಾಪಶ್ಯ[೫]ದ್ಗೋಷ್ಪದಾರಣ್ಯಚಾರಿಣಃ ।
ಕ್ಷೀರಮೇಘಾನಿವಾಜಸ್ರಂ ಕ್ಷರತ್ಕ್ಷೀರ[೬]ಪ್ಲುತಾಂತಿಕಾನ್ ॥ ೧೦೯ ॥

ತರುವಾಯ ಭರತರಾಜನು ಗೋವುಗಳ ಗಮನಕ್ಕೆ ಯೋಗ್ಯವಾದ ಅರಣ್ಯದಲ್ಲಿ ಸಂಚರಿಸುತ್ತಿರುವುವೂ ಯಾವಾಗಲೂ ಸುರಿಯುತ್ತಿರುವ ಹಾಲಿನಿಂದ ಸಮೀಪ ಪ್ರದೇಶವನ್ನು ತೊಳೆಯುತ್ತಿರುವುವೂ ಹಾಲನ್ನು ಸುರಿಯುವ ಮೇಘಗಳೋ ಎಂಬಂತಿರುವುವೂ ಆದ ಗೋವುಗಳ ಗುಂಪುಗಳನ್ನು ನೋಡಿದನು.

[೭]ಸೌರಭೇಯಾನ್ ಸಶೃಂಗಾಗ್ರಸಮುತ್ಖಾತಸ್ಥಲಾಂಬುಜಾನ್ ।
ಮೃಣಾಲಾನಿ ಯಶಾಂಸೀವ ಕಿರತೋಪಶ್ಯದುನ್ಮದಾನ್ ॥ ೧೧೦ ॥

ಕೊಂಬುಗಳ ತುದಿಯಿಂದ ನೆಲದಾವರೆಗಳನ್ನು ಕೀಳುತ್ತಿರುವುವೂ ರಾಜನ ಯಶಸ್ಸುಗಳೋ ಎಂಬಂತಿರುವ ತಾವರೆದಂಟುಗಳನ್ನು ಎಸೆಯುತ್ತಿರುವುವೂ ಹೆಚ್ಚಾಗಿ ಮದಿಸಿರುವುವೂ ಆದ ಎತ್ತುಗಳನ್ನು ನೋಡಿದನು.

[೮]ವಾತ್ಸಕಂ ಕ್ಷೀರಸಂಪೋಷಾದಿವ ನಿರ್ಮಲವಿಗ್ರಹಮ್ ।
ಸೋಪಶ್ಯ[೯]ಚ್ಚಾಪಲಸ್ಯೇವ ಪರಾಂ ಕೋಟಿಂ [೧೦]ಕೃತೋತ್ಪ್ಲುತಮ್ ॥

ಹಾಲಿನಿಂದ ಬೆಳೆದಿರುವುದರಿಂದ ಶುಭ್ರವಾದ ಶರೀರವುಳ್ಳುದಾಗಿದೆಯೋ ಎಂಬಂತಿರುವುದೂ ಚಾಪಲ್ಯದ ಕೊನೆಯನ್ನು ಮುಟ್ಟಿದೆಯೋ ಎಂಬಂತಿರುವುದೂ

---

೧ ತರುಣಹಂಸೇನ. ೨ ಅವಮಾನಿತಾಂ. ೩ ಭರತಚಕ್ರವರ್ತೀ. ೪ ಶುಚಿತ್ವಸ್ಯಾವಧಿಷು. ೫ ಜಲಪ್ರವಾಹಃ. ೬ ಕೇಶೇಷು.

೧ ಸ್ವಚ್ಛಾಯಾನಿತ್ಯಪಿ ಪಾಠಃ. ೨ ಪಥಿಕಾನಾಂ ಹೃದಯೇ. ೩ ಆತ್ಮಾನಂ ದೋಷಾಂ ರಾತ್ರಿಂ ಮನ್ಯತ ಇತಿ ದೋಷಾಂ ಮನ್ಯಸ್ತಸ್ಮಿನ್. ೪ ವೀಕ್ಷ್ಯೇತ್ಯಪಿ ಪಾಠಃ. ೫ ಗೋಗಮ್ಯಂ. ೬ ಕ್ಷಾಲಿತ ಸಮೀಪ ಪ್ರದೇಶಾನ್. ೭ ವೃಷಭಾನ್. ೮ ವತ್ಸಸಮೂಹಂ. ೯ ಚಂಚಲತ್ವಸ್ಯ. ೧೦ ಕೃತ ವಲ್ಗನಧಾವನಾದಿಕಂ.

ಓಡಾಟ ಕುಣಿದಾಟಗಳನ್ನು ಮಾಡುತ್ತಿರುವುದೂ ಆದ ಕರುಗಳ ಸಮೂಹವನ್ನು ಭರತರಾಜನು ನೋಡಿದನು.

**ಸ ಪಕ್ವಕಣಿಶಾನಮ್ರಕಲಮಕ್ಷೇತ್ರಮೈಕ್ಷತ ।**
**ನೌದ್ಧತ್ಯಂ ಫಲಯೋಗೀತಿ ನೃಣಾಂ ವಕ್ತುಮಿವೋದ್ಯತಮ್ ॥ ೧೧೨ ॥**

ಗರ್ವವು ಪ್ರಯೋಜನವನ್ನುಂಟುಮಾಡುವುದಲ್ಲವೆಂದು ಮನುಷ್ಯರಿಗೆ ಹೇಳುವುದಕ್ಕೋಸ್ಕರ ಪ್ರಯತ್ನಪಟ್ಟಿದೆಯೋ ಎಂಬಂತಿರುವುದೂ ಹಣ್ಣಾದ ತೆನೆಗಳಿಂದ ಬಗ್ಗಿರುವುದೂ ಆದ ಭತ್ತದ ಕ್ಷೇತ್ರವನ್ನು ನೋಡಿದನು.

**[೧]ವಪ್ರಾಂತರ್ಭುವಮಾಘ್ರಾತುಮಿವೋತ್ಪಲ[೨]ಮವಾನತಾನ್ ।**
**ಸ [೩]ಕೈದಾರ್ಯೇಷು ಕಲಮಾನ್ ವೀಕ್ಷ್ಯಾನಂದಂ ಪರಂ ಯಯೌ ॥**

ಭರತಚಕ್ರಿಯು ಪೈರುಗಳುಳ್ಳ ಕ್ಷೇತ್ರಗಳ ಸಮೂಹಗಳಲ್ಲಿ ಭತ್ತದ ಪೈರುಳ್ಳ ಕ್ಷೇತ್ರದ ಮಧ್ಯದಲ್ಲಿ ಕನ್ನೈದಿಲೆಯನ್ನು ಮೂಸುವುದಕ್ಕೋಸ್ಕರ ಬಗ್ಗಿವೆಯೋ ಎಂಬಂತಿರುವ ಭತ್ತಗಳನ್ನು ನೋಡಿ ಬಹಳ ಸಂತೋಷಪಟ್ಟನು.

**ಫಲಾನತಾನ್ [೪]ಸ್ತಂಬಕರೀನ್ ಸೋಪಶ್ಯದ್ವಪ್ರಭೂಮಿಷು ।**
**ಸ್ವಜನ್ಮಹೇತೂನ್ಕೇದಾರಾನ್ನಮಸ್ಯತ ಇವಾದರಾತ್ ॥ ೧೧೪ ॥**

ಭರತರಾಜನು ಭತ್ತದ ಪೈರಿನ ಭೂಮಿಗಳಲ್ಲಿ ಫಲಗಳಿಂದ ಬಗ್ಗಿರುವುವೂ ತಮ್ಮ ಉತ್ಪತ್ತಿಗೆ ಕಾರಣವಾದ ಕ್ಷೇತ್ರಗಳನ್ನು ಪ್ರೀತಿಯಿಂದ ನಮಸ್ಕರಿಸುತ್ತವೆಯೋ ಎಂಬಂತಿರುವುವೂ ಆದ ಭತ್ತದ ತೆನೆಗಳನ್ನು ನೋಡಿದನು.

**ಆಪೀತಪಯಸಃ ಪ್ರಾಜ್ಯಕ್ಷೀರಾ ಲೋಕೋಪಕಾರಿಣೀಃ ।**
**ಪಯಸ್ವಿನೀರಿವಾಪಶ್ಯತ್ಪಸೂತಾಃ ಶಾಲಿಸಂಪದಃ ॥ ೧೧೫ ॥**

ಬಾಲ್ಯದಲ್ಲಿ ಹೆಚ್ಚಾಗಿ ಹಾಲನ್ನು ಕುಡಿದಿರುವುವೂ ಹೆಚ್ಚಾಗಿ ಹಾಲುಳ್ಳುವೂ ಲೋಕಕ್ಕೆ ಉಪಕಾರಿಗಳೂ ಕರುಹಾಕಿರುವುವೂ ಆದ ಹಸುಗಳನ್ನು ನೋಡುವಂತೆ, ಸಂಪೂರ್ಣವಾಗಿ ಜಲಪಾನವನ್ನು ಮಾಡಿರುವುವೂ ಶ್ರೇಷ್ಠವಾದ ಹಾಲಿನಂತೆ ಶುಭ್ರವಾಗಿರುವುವೂ ಲೋಕಕ್ಕುಪಕಾರಿಗಳೂ ಸಮೃದ್ಧವೂ ಆದ ಭತ್ತದ ಪೈರುಗಳನ್ನು ನೋಡಿದನು.

**[೫]ಅವತಂಸಿತನೀಲಾಬ್ಜಾಃ ಕಂಜರೇಣುಶ್ರಿತಸ್ತನೀಃ ।**
**ಇಕ್ಷುದಂಡಭೃತೋಪಶ್ಯಚ್ಛಾಲೀಂ[೬]ಶ್ಛೋತ್ಕುರ್ವತೀಃ ಸ್ತ್ರಿಯಃ ॥ ೧೧೬ ॥**

ಕನ್ನೈದಿಲೆ ಹೂಗಳನ್ನು ಮುಡಿದಿರುವವರೂ ಕುಚಗಳಲ್ಲಿ ಸಂಬಂಧಿಸಿರುವ ತಾವರೆಯ ಧೂಳಿಯುಳ್ಳವರೂ ಕಬ್ಬಿನ ಕೋಲುಗಳನ್ನು ಹಿಡಿದಿರುವವರೂ ಭತ್ತದ ಪೈರುಗಳನ್ನು ಬೆಳಿಯಿಸು(ಕಾಯು)ವವರೂ ಆದ ಸ್ತ್ರೀಯರನ್ನು ನೋಡಿದನು.

**ಹಾರಿಗೀತಸ್ವನಾಕೃಷ್ಟೈರ್ವೇಷ್ಟಿತಾ ಹಂಸಮಂಡಲೈಃ ।**
**[೭]ಶಾಲಿಗೋಪ್ಯೋ ದೃಶೋರಸ್ಯ ಮುದಂ ತೇನು[೮]ರ್ವಧೂಟಿಕಾಃ ॥**

ಮನೋಹರವಾದ ಗಾನದ ಶಬ್ದಕ್ಕೆ ಆಸಕ್ತವಾಗಿ ಬಂದಿರುವ ಹಂಸಪಕ್ಷಿಗಳ ಸಮೂಹಗಳಿಂದ ಸುತ್ತಲ್ಪಟ್ಟವರೂ ಭತ್ತದ ಪೈರುಗಳನ್ನು ಕಾಯುವವರೂ ಆದ ಸ್ತ್ರೀಯರು ಭರತರಾಜನ ನೇತ್ರಗಳಿಗೆ ಸಂತೋಷವನ್ನುಂಟುಮಾಡಿದರು.

**[೯]ಕೃತಾಧ್ವಗೋಪರೋಧಾನಿ ಗೀತಾನಿ ದಧತೀಃ ಸತೀಃ ।**
**ನ್ಯಸ್ತಾವತಂಸಾಃ ಕಣಿಶೈಃ ಶಾಲಿಗೋಪೀರ್ದದರ್ಶ ಸಃ ॥ ೧೧೮ ॥**

ಭರತರಾಜನು ಮಾರ್ಗದಲ್ಲಿ ಹೋಗುವ ಜನರ ಕಿವಿಗಳಿಗೆ ತಡೆಯನ್ನು ಮಾಡುವ ಗಾನಗಳನ್ನು ಮಾಡುತ್ತಿರುವವರೂ ಭತ್ತದ ತೆನೆಗಳಿಂದ ಕರ್ಣಾಭರಣಗಳನ್ನು ಮಾಡಿಕೊಂಡಿರುವವರೂ ಸದಾಚಾರಿಣಿಯರೂ ಭತ್ತದ ಪೈರುಗಳನ್ನು ಕಾಯುವವರೂ ಆದ ಸ್ತ್ರೀಯರನ್ನು ನೋಡಿದನು.

೧ ಶಾಲಿಕ್ಷೇತ್ರಮಧ್ಯೇ. ೨ ಇವೇತ್ಯಪಿ ಪಾಠಃ. ೩ ಸಸ್ಯಕ್ಷೇತ್ರಸಮೂಹೇಷು. ೪ ಧಾನ್ಯಂ ವ್ರೀಹಿ ಸ್ತಂಬಕರಿಸ್ತಂಬೋಗುಚ್ಛಸ್ತೃಣಾದಿನ ಇತ್ಯಮರಃ. ೫ ಸ ಇತ್ಯಪಿ ಪಾಠಃ. ೬ ಉತ್ಕರ್ಷಾನ್ಕುರ್ವತೀಃ. ೭ ಪಾಲಿರಕ್ಷಿಣ್ಯಃ. ೮ ಸ್ತ್ರಿಯಃ. ೯ ಕೃತಮಾರ್ಗಜನಶ್ರೋತ್ರೋಪರೋಧೀನಿ.

**ಸುಗಂಧಿಮುಖನಿಃಶ್ವಾಸಾ ಭ್ರಮರೈರಾಕುಲೀಕೃತಾಃ ।**
**ಮನೋಽಸ್ಯ ಜಹ್ರುಃ ಶಾಲೀನಾಂ ಪಾಲಿಕಾಃ [೧]ಕಲಬಾಲಿಕಾಃ ॥ ೧೧೯ ॥**

ಮುಖದಿಂದ ಪರಿಮಳವಾದ ಉಸಿರನ್ನು ಬಿಡುವವರೂ ಭ್ರಮರಗಳಿಂದ ತೊಂದರೆ ಪಡಿಸಲ್ಪಟ್ಟವರೂ ಭತ್ತದ ಪೈರುಗಳನ್ನು ಕಾಯುವವರೂ ಆದ ಕೃಷೀವಲರ ಬಾಲಿಕೆಯರು ಭರತಚಕ್ರವರ್ತಿಯ ಮನಸ್ಸನ್ನಪಹರಿಸಿದರು. ಮುಖದಿಂದ ಹೊರಡುವ ಉಸಿರಿನ ಪರಿಮಳಕ್ಕೆ ಮುತ್ತಿಕೊಂಡು ತೊಂದರೆಯನ್ನುಂಟುಮಾಡುವ ಭ್ರಮರಗಳುಳ್ಳ ಬಾಲಿಕೆಯರು ಮನೋಹರರಾಗಿದ್ದರೆಂದು ಭಾವವು.

**[೨]ಉಪಾಧ್ವಂ [೩]ಪ್ರಕೃತಕ್ಷೇತ್ರಾನ್ ಕ್ಷೇತ್ರಿಣಃ ಪರಿಧಾವತಃ ।**
**[೪]ಬಲೋಪರೋಧ್ಯೆ[೫]ರಾಯಸ್ತಾನೈಕ್ಷತಾಸೌ ಸಕೌತುಕಮ್ ॥ ೧೨೦ ॥**

ಭರತರಾಜನು ಮಾರ್ಗದ ಸಮೀಪದಲ್ಲಿ ಕ್ಷೇತ್ರಗಳನ್ನು ಮಾಡಿರುವವರೂ ಸೈನ್ಯದ ಉಪದ್ರವಗಳಿಂದ ದುಃಖಪಡಿಸಲ್ಪಟ್ಟವರೂ ಅತ್ತಿತ್ತ ಓಡುತ್ತಿರುವವರೂ ಆದ ಹೊಲಗಳ ಯಜಮಾನರನ್ನು ಕುತೂಹಲದಿಂದ ನೋಡಿದನು.

**[೬]ಉಪಶಲ್ಯಭುವೋದ್ರಾಕ್ಷೀ[೭]ನ್ನಿಗಮಾನಭಿತೋ ವಿಭುಃ ।**
**[೮]ಕೇದಾರಲಾವೈರಾಕೀರ್ಣಾಃ ಸ ಭ್ರಾಮ್ಯದ್ಭಿಃ ಕೃಷೀವಲೈಃ ॥ ೧೨೧ ॥**

ಭರತರಾಜನು ಪಟ್ಟಣದಿಂದ ವಿಭಾಗಿಸಲ್ಪಟ್ಟಿರುವ ಗ್ರಾಮಗಳ ಸುತ್ತಲೂ ಇರುವುವೂ ಓಡಾಡುತ್ತಿರುವವರೂ ಗದ್ದೆಗಳನ್ನು ಕೊಯ್ಯುವವರೂ ಆದ ಕೃಷೀವಲರಿಂದ ವ್ಯಾಪ್ತವೂ ಆದ ಗ್ರಾಮಾಂತರಭೂಮಿಗಳನ್ನು ನೋಡಿದನು.

**ಸೋಪಶ್ಯನ್ನಿಗಮೋಪಾಂತೇ [೯]ಪಥಃ [೧೦]ಸಂಶ್ಯಾನಕರ್ದಮಾನ್ ।**
**ಪ್ರವ್ಯಕ್ತಗೋಖುರಕ್ಷೋದಸ್ಥಪುಟಾನತಿಸಂಕಟಾನ್ ॥ ೧೨೨ ॥**

ಭರತರಾಜನು ಪಟ್ಟಣದಿಂದ ವಿಭಕ್ತವಾದ ಗ್ರಾಮಸಮೀಪದಲ್ಲಿ ಸ್ವಲ್ಪ ಹಸಿದಾದ ಕೆಸರುಳ್ಳುವೂ ಗೋವುಗಳ ಗೊರಸಿನ ಹೆಜ್ಜೆಗಳಿಂದ ವ್ಯಕ್ತವಾದ ಹಳ್ಳದಿಣ್ಣೆಗಳುಳ್ಳುವೂ ಬಹಳ ಇಕ್ಕಟ್ಟೂ ಆದ ಮಾರ್ಗಗಳನ್ನು ನೋಡಿದನು.

**ನಿಗಮಾನ್ಪರಿತೋಪಶ್ಯ[೧೧]ದ್ಗ್ರಾಮಮುಖ್ಯಾ[೧೨]ನ್ಮಹಾಬಲಾನ್ ।**
**[೧೩]ಪಯಸ್ವಿನೋ ಜನೈಃ ಸೇವ್ಯಾ[೧೪]ನ್ಮಹಾರಾಮತರೂನಪಿ ॥ ೧೨೩ ॥**

ಭರತರಾಜನು ವಿಭಕ್ತಗ್ರಾಮಗಳ ಸುತ್ತಲೂ ಹಾಲನ್ನು ತಂದುಕೊಡುವವರೂ ಹೆಚ್ಚು ಬಲಶಾಲಿಗಳೂ ಆದ ಗ್ರಾಮಮುಖ್ಯಸ್ಥರನ್ನೂ ಜನರಿಂದ ಸೇವಿಸುವುದಕ್ಕೆ ಯೋಗ್ಯವೂ ಹಾಲುಳ್ಳುವೂ ಆದ ದೊಡ್ಡದಾದ ಉದ್ಯಾನವೃಕ್ಷಗಳನ್ನೂ ನೋಡಿದನು.

**ಗ್ರಾಮಾನ್ಕುಕ್ಕುಟಸಂಪಾತ್ಯಾನ್ಸೋತ್ಯಗಾದ್ವೃತಿಭಿರ್ವೃತಾನ್ ।**
**[೧೫]ಕೋಶಾತಕೀಲತಾಪುಷ್ಪಸ್ಥಗಿತಾಭಿರಿತೋಮುತಃ ॥ ೧೨೪ ॥**

ಭರತರಾಜನು ಸುತ್ತಲೂ ಪಡವಲಕಾಯಿಗಳ ಬಳ್ಳಿಗಳ ಪುಷ್ಪಗಳಿಂದ ಮರೆ ಮಾಡಲ್ಪಟ್ಟ ಬೇಲಿಗಳಿಂದ ಆವರಿಸಲ್ಪಟ್ಟುವೂ ಕೋಳಿ ಹಾರಿ ಕುಳಿತು ಕೊಳ್ಳುವಷ್ಟು ದೂರದಲ್ಲಿರುವುವೂ ಆದ ಗ್ರಾಮಗಳನ್ನು ದಾಟಿಹೋದನು.

**[೧೬]ಕುಟೀಪರಿಸರೇಷ್ವಸ್ಯ ಧೃತಿರಾಸೀತ್ಪಪಶ್ಯತಃ ।**
**ಫಲಪುಷ್ಪಾನತಾವಲ್ಲೀಃ [೧೭]ಪ್ರಸವಾಢ್ಯಾಃ ಸತೀರಪಿ ॥ ೧೨೫ ॥**

೧ ಕರ್ಷಕಬಾಲಿಕಾಃ. ೨ ಮಾರ್ಗಸಮೀಪೇ. ೩ ಪ್ರಕರ್ಷೇಣ ಕೃತಕ್ಷೇತ್ರಾನ್. ೪ ಖಲಕೃತೋಪಸರ್ಗೈಃ. ೫ ಕ್ಲೇಶಿತಾನ್. ೬ ಗ್ರಾಮಾಂತಮುಪಶಲ್ಯಂ ಸ್ಯಾದಿತ್ಯಮರಃ. ೭ ಭಕ್ತಗ್ರಾಮಾಣಾಂ. ೮ ಕೇದಾರಂ ಲುನಾತೀತಿ ಕೇದಾರಲಾವಃ. ೯ ಮಾರ್ಗಾನ್. ೧೦ ಈಷದಾರ್ದ್ರಕರ್ದಮಾನ್. ೧೧ ಗ್ರಾಮಮಹತ್ತರಾನ್. ೧೨ ಮಹಾಫಲಾನಿತ್ಯಪಿ ಪಾಠಃ. ೧೩ ಕ್ಷೀರೋಪಾಯನಾನ್, ಕ್ಷೀರಿಣಶ್ಚ. ೧೪ ಮಹಾಗ್ರಾಮತರೂನಿತ್ಯಪಿ ಪಾಠಃ. ೧೫ ಪಟೋಲಿಕಾ. ೧೬ ಗೃಹಂ. ೧೭ ಪುತ್ರೈರಾಢ್ಯಾಃ.

ಮನೆಗಳ ಸಮೀಪಪ್ರದೇಶಗಳಲ್ಲಿ ಫಲಪುಷ್ಪಗಳಿಂದ ಬಗ್ಗಿರುವ ಲತೆಗಳನ್ನೂ ತುಂಬ ಮಕ್ಕಳುಗಳುಳ್ಳ ಪತಿವ್ರತಾಸ್ತ್ರೀಯರನ್ನೂ ನೋಡಿ ಭರತರಾಜನಿಗೆ ಸಂತೋಷವಾಯಿತು.

**ಯೋಷಿತೋ [1]ನಿಷ್ಕಮಾಲಾಭಿರ್ವಲಯೈಶ್ಚ ವಿಭೂಷಿತಾಃ ।**
**[2]ಪಶ್ಯತೋಽಸ್ಯ ಮನೋಜಹ್ರುರ್ಗ್ರಾಮೀಣಾಃ [3]ಸಂವೃತಾವೃತೀಃ॥ ೧೨೬ ॥**

ಸುವರ್ಣನಾಣ್ಯಗಳ ಮಾಲಿಕೆಗಳಿಂದಲೂ ಕಡಗಗಳಿಂದಲೂ ಅಲಂಕೃತರೂ ಬೇಲಿಗಳಿಂದ ಮರೆಯಾಗಿರುವವರೂ ಗ್ರಾಮಗಳಲ್ಲಿ ಹುಟ್ಟಿದವರೂ ಆದ ಸ್ತ್ರೀಯರು ಅವರನ್ನು ನೋಡುತ್ತಿರುವ ಭರತರಾಜನ ಮನಸ್ಸನ್ನಪಹರಿಸಿದರು. ಮನೋಹರರಾಗಿದ್ದರೆಂದರ್ಥವು.

**[4]ಹೈಯಂಗವೀನಕಲಶೈರ್ದಧ್ನಾಮಪಿ [5]ನಿಹಿತ್ರಕೈಃ ।**
**ಗ್ರಾಮೇಷು ಫಲಭೇದೈಶ್ಚ ತಮದ್ರಾಕ್ಷುರ್ಮಹತ್ತರಾಃ ॥ ೧೨೭ ॥**

ಗ್ರಾಮಗಳಲ್ಲಿದ್ದ ಮುಖ್ಯಸ್ಥರು ತುಪ್ಪದ ಗಡಿಗೆಗಳಿಂದಲೂ ಮೊಸರಿನ ಗಡಿಗೆಗಳಿಂದಲೂ ಭರತರಾಜನನ್ನು ನೋಡಿದರು. ಕೈಗಾಣಿಕೆಗಳನ್ನೊಪ್ಪಿಸಿ ಭರತರಾಜನ ಭೇಟಿಮಾಡಿದರೆಂದರ್ಥವು.

**ತತೋ ವಿದೂರಮುಲ್ಲಂಘ್ಯ ಸೋಧ್ವಾನಂ ಪೃತನಾವೃತಃ ।**
**ಗಂಗಾಮುಪಾಸದ[6]ದ್ವೀರಃ ಪ್ರಯಾಣೈಃ [7]ಕತಿಥೈರಪಿ ॥ ೧೨೮ ॥**

ತರುವಾಯ ಪರಾಕ್ರಮಿಯೂ ಸೈನ್ಯದಿಂದ ಸುತ್ತಲ್ಪಟ್ಟವನೂ ಆದ ಭರತರಾಜನು ಕೆಲವು ಪ್ರಯಾಣಗಳಿಂದ ಬಹುದೂರಮಾರ್ಗವನ್ನು ದಾಟಿ ಗಂಗಾನದಿಯನ್ನು ತಲುಪಿದನು. ಗಂಗಾನದಿಯ ಸಮೀಪಕ್ಕೆ ಹೋದನೆಂದರ್ಥವು.

**ಹಿಮವದ್ವಿಧೃತಾಂ ಪೂಜ್ಯಾಂ ಸತಾ[8]ಮಾಸಿಂಧುಗಾಮಿನೀಮ್ ।**
**ಶುಚಿಪ್ರವಾಹಾ[9]ಮಾಕಲ್ಪವೃತ್ತಿಂ ಕೀರ್ತಿಮಿವಾತ್ಮನಃ ॥ ೧೨೯ ॥**

ಹಿಮವತ್ಪರ್ವತದಿಂದುತ್ಪನ್ನವಾದುದೂ ಸತ್ಪುರುಷರಿಗೆ ಪೂಜ್ಯವೂ ಸಮುದ್ರಕ್ಕೆ ಗಮನಮಾಡುವುದೂ ನಿರ್ಮಲವಾದ ಪ್ರವಾಹವುಳ್ಳುದೂ ತನ್ನ(ಭರತನ) ಕೀರ್ತಿಯಂತೆ ಕಲ್ಪಾಂತಕಾಲದವರೆಗಿರುವುದೂ

**[10]ಶಫರೀಪ್ರೇಕ್ಷಣಾಮುದ್ಯತ್ತರಂಗಭ್ರೂವಿನರ್ತನಾಮ್ ।**
**ವನರಾಜೀಬೃಹಚ್ಛಾಟೀಪರಿಧಾನಾಂ ವಧೂಮಿವ ॥ ೧೩೦ ॥**

ಮೀನುಗಳೆಂಬ ನೇತ್ರಗಳುಳ್ಳುದೂ ಆವಿರ್ಭವಿಸುತ್ತಿರುವ ಅಲೆಗಳೆಂಬ ಕುಣಿಯುವ ಹುಬ್ಬುಗಳುಳ್ಳುದೂ ವನಗಳ ಸಾಲೆಂಬ ದೊಡ್ಡ ಸೀರೆಯನ್ನು ಧರಿಸಿರುವ ವಧುವಿನಂತಿರುವುದೂ

**ವಿಸ್ತೀರ್ಣೈರ್ಜನಸಂಭೋಗ್ಯೈಃ ಕೂಜದ್ಧಂಸಾಲಿಮೇಖಲೈಃ ।**
**ತರಂಗವಸನೈಃ ಕಾಂತಾಂ ಪುಲಿನೈರ್ಜಘನೈರಿವ ॥ ೧೩೧ ॥**

ವಿಸ್ತಾರವೂ ಜನರಿಗೆ ಭೋಗಿಸುವುದಕ್ಕೆ ಯೋಗ್ಯವೂ ಕೂಗುತ್ತಿರುವ ಹಂಸಪಕ್ಷಿಗಳ ಸಾಲೆಂಬ ಡಾಬನ್ನು ಹೊಂದಿರುವುದೂ ಅಲೆಗಳೆಂಬ ವಸ್ತ್ರಗಳುಳ್ಳುದೂ ಕಟೀಪ್ರದೇಶಗಳಂತಿರುವುದೂ ಆದ ಮರಳಿನ ರಾಶಿಗಳಿಂದ ಮನೋಹರವಾದುದೂ

**ಲೋಲೋರ್ಮಿಹಸ್ತನಿರ್ಧೂತಪಕ್ಷಿಮಾಲಾಕಲಸ್ವನೈಃ ।**
**ಕಿಮಪ್ಯಾಲಪಿತುಂ ಯತ್ನಂ ತನ್ವತೀಂ [11]ವಾ ತಟದ್ರುಮೈಃ ॥ ೧೩೨ ॥**

ಚಂಚಲವಾದ ಅಲೆಗಳೆಂಬ ಕೈಗಳಿಂದ ದೂರಮಾಡಲ್ಪಟ್ಟ ಪಕ್ಷಿಗಳ ಸಮೂಹದ ಮನೋಹರವಾದ ಶಬ್ದಗಳಿಂದ ದಡದಲ್ಲಿರುವ ವೃಕ್ಷಗಳೊಡನೆ ಏನನ್ನೋ ಮಾತನಾಡುವುದಕ್ಕೋಸ್ಕರ ಪ್ರಯತ್ನವನ್ನು ಮಾಡುತ್ತಿದೆಯೋ ಎಂಬಂತಿರುವುದೂ

**ಕ್ಷತೀ[1]ರ್ವನ್ಯೇಭದಂತಾನಾಂ ರೋಧೋಜಘನವರ್ತಿನೀಃ ।**
**ರುಂಧತೀಮಬ್ಧಿಭೀತ್ಯೇವ ಲಸದೂರ್ಮಿದುಕೂಲಕೈಃ ॥ ೧೩೩ ॥**

ದಡಗಳೆಂಬ ಜಘನಪ್ರದೇಶ(ನಾಭಿಯ ಕೆಳಭಾಗ)ದಲ್ಲಿ ಕಾಡಾನೆಗಳು ಮಾಡಿರುವ ವ್ರಣಗಳನ್ನು, ಸಮುದ್ರದ ಭೀತಿಯಿಂದಲೋ ಎಂಬಂತೆ, ಪ್ರಕಾಶಮಾನವಾದ ಅಲೆಗಳೆಂಬ ಪಟ್ಟೆವಸ್ತ್ರಗಳಿಂದ ಮರೆಮಾಡುತ್ತಿರುವುದೂ

**ರೋಮರಾಜೀಮಿವಾನೀಲಾಂ ವನರಾಜೀಂ [2]ವಿವೃಣ್ವತೀಮ್ ।**
**[3]ತಿಷ್ಠಮಾನಾಮಿವಾವರ್ತವ್ಯಕ್ತನಾಭಿ[4]ಮುದನ್ವತೇ ॥ ೧೩೪ ॥**

ರೋಮಗಳ ಸಾಲಿನಂತೆ ಚೆನ್ನಾಗಿ ಕಪ್ಪಾಗಿರುವ ವನಗಳ ಸಾಲನ್ನು ತನ್ನಪತಿಯಾದ ಸಮುದ್ರಕ್ಕೆ ತೋರಿಸುತ್ತಿರುವುದೂ ಸುಳಿಯೆಂಬ ಸ್ಫುಟವಾದ ನಾಭಿಯನ್ನು ಮರೆಮಾಡುತ್ತಿದೆಯೋ ಎಂಬಂತಿರುವುದೂ

**ವಿಲೋಲವೀಚಿಸಂಘಟ್ಟಾದುತ್ಥಿತಾಂ ಪತಗಾವಲಿಮ್ ।**
**ಪತಾಕಾಮಿವ ಬಿಭ್ರಾಣಾಂ ಲಬ್ಧಾಂ ಸರ್ವಾಪಗಾಜಯಾತ್ ॥ ೧೩೫ ॥**

ಚಂಚಲವಾದ ಅಲೆಗಳ ಹೊಡೆತದಿಂದ ಮೇಲಕ್ಕೆದ್ದಿರುವ ಪಕ್ಷಿಗಳ ಸಮೂಹವನ್ನು, ಸಮಸ್ತನದಿಗಳನ್ನು ಜಯಿಸಿದುದರಿಂದ ಪ್ರಾಪ್ತವಾದ ಧ್ವಜಪತಾಕೆಯನ್ನೋಪಾದಿಯಲ್ಲಿ ಧರಿಸಿರುವುದೂ

**[5]ಸಮಾಂಸಮೀನಾಂ [6]ಪರ್ಯಾಪ್ತಪಯಸಂ ಧೀರನಿಃಸ್ವನಾಮ್ ।**
**ಜಗತಾಂ ಪಾವನೀಂ ಮಾನ್ಯಾಂ ಹಸಂತೀಂ [7]ಗೋಮತಲ್ಲಿಕಾಮ್ ॥**

ಮಾಂಸಭಕ್ಷಕ ಮೀನುಗಳುಳ್ಳುದೂ ಸಂಪೂರ್ಣವಾದ ಜಲವುಳ್ಳುದೂ ಗಂಭೀರವಾದ ಶಬ್ದವುಳ್ಳುದೂ ಲೋಕಕ್ಕೆ ಪವಿತ್ರವೂ ಪೂಜ್ಯವೂ, ಪ್ರತಿವರ್ಷವೂ ಗರ್ಭವನ್ನುಧರಿಸುವುದೂ ಬೇಕಾದಷ್ಟು ಹಾಲನ್ನು ಕೊಡುವುದೂ ಗಂಭೀರವಾದ ಧ್ವನಿಯುಳ್ಳುದೂ ಜಗತ್ತಿಗೆ ಪವಿತ್ರವೂ ಪೂಜ್ಯವೂ ಆದ ಉತ್ತಮಗೋವನ್ನು ಪರಿಹಾಸ್ಯಮಾಡುತ್ತಿರುವುದೂ

**[8]ಗುರುಪ್ರವಾಹಪ್ರಸೃತಾಂ ತೀರ್ಥಕಾಮೈರುಪಾಸಿತಾಮ್ ।**
**ಗಂಭೀರಶಬ್ದಸಂಭೂತಿಂ ಜೈನೀಂ ಶ್ರುತಿಮಿವಾಮಲಾಮ್ ॥ ೧೩೭ ॥**

ಗುರುಪರಂಪರೆಯಿಂದ ಪ್ರಸಿದ್ಧವೂ ಆಗಮಾಪೇಕ್ಷಿಗಳಿಂದ ಸೇವಿಸಲ್ಪಟ್ಟುದೂ ಗಂಭೀರವಾದ ಶಬ್ದೋತ್ಪತ್ತಿಯುಳ್ಳುದೂ ಆದ ಜೈನಾಗಮದಂತೆ ನಿರ್ಮಲವೂ, ದೊಡ್ಡದಾದ ಪ್ರವಾಹದಿಂದ ವ್ಯಾಪ್ತವೂ ತೀರ್ಥಸ್ನಾನಾಪೇಕ್ಷಿಗಳಿಂದ ಸೇವಿಸಲ್ಪಟ್ಟುದೂ ಗಂಭೀರವಾದ ಶಬ್ದೋತ್ಪತ್ತಿಯುಳ್ಳುದೂ

**[9]ರಾಜಹಂಸೈಃ [10]ಕೃತೋಪಾಸಾಮಲಂಘ್ಯಾಂ [11]ವಿಧೃತಾಯತಿಮ್ ।**
**ಜಯಲಕ್ಷ್ಮೀಮಿವ ಸ್ಫೀತಾಮಾತ್ಮೀಯಾಮಬ್ಧಿಗಾಮಿನೀಮ್ ॥ ೧೩೮ ॥**

ರಾಜಶ್ರೇಷ್ಠರಿಂದ ಸೇವಿಸಲ್ಪಟ್ಟುದೂ ಮೀರಲಶಕ್ಯವೂ ವಿಸ್ತಾರವೂ ಸಮುದ್ರಪರ್ಯಂತ ವ್ಯಾಪ್ತವೂ ಆದ ತನ್ನ(ಭರತನ) ಜಯಲಕ್ಷ್ಮಿಯಂತೆ ವೃದ್ಧಿಹೊಂದಿದುದೂ ರಾಜಹಂಸಪಕ್ಷಿಗಳಿಂದ ಸೇವಿಸಲ್ಪಟ್ಟುದೂ ದಾಟಲಶಕ್ಯವೂ ವಿಸ್ತಾರವುಳ್ಳುದೂ ಸಮುದ್ರಕ್ಕೆ ಹೋಗಿ ಸೇರುವುದೂ

೧ ಸುವರ್ಣಮಾಲಾಭಿಃ. ೨ ಪಶ್ಯಂತ್ಯ ಇತ್ಯಪಿ ಪಾಠಃ. ೩ ಸಂಶ್ರಿತಾವೃತೀರಿತ್ಯಪಿ ಪಾಠಃ. ೪ ಘೃತಕುಂಭೈಃ. ೫ ಘಟೈಃ. ೬ ಧೀರ ಇತ್ಯಪಿ ಪಾಠಃ. ೭ ಕತಿಪಯೈಃ. ೮ ಸಮುದ್ರಗಾಮಿನೀಂ. ೯ ಕಲ್ಪಾಂತವರ್ತಿನೀಂ. ೧೦ ಮೀನನೇತ್ರಾಂ. ೧೧ ಇವ.

೧ ವನೇ ಭದಂತಾನಾಮಿತ್ಯಪಿ ಪಾಠಃ. ೨ ಪ್ರಕಾಶಯಂತೀಂ. ೩ ಆಚ್ಛಾದಯಂತೀಮಿವ. ೪ ಸಮುದ್ರಾಯ. ೫ ಪ್ರತಿವರ್ಷಂಗರ್ಭಂಗೃಹ್ಣತೀಂ, ಮಾಂಸಭಕ್ಷಕಮೀನಸಹಿತಾಂ ಚ. ೬ ಸಂಪೂರ್ಣಂ. ೭ ಧೇನುಮುಖ್ಯಾಂ. ೮ ಗುರುಪರಂಪರಯಾ ಪ್ರಸಿದ್ಧಾಂ, ಮಹಾ ಪ್ರವಾಹೈ ರ್ವ್ಯಾಪ್ತಾಂಚ. ೯ ರಾಜಹಂಸೈಃ, ರಾಜಶ್ರೇಷ್ಠೈಶ್ಚ. ೧೦ ಉಪಾಸನಾಂ. ೧೧ ವಿವೃತಾಯತಿಮಿತ್ಯಪಿ ಪಾಠಃ.

ವಿಲಸ[1]ತ್ಪದ್ಮಸಂಭೂತಾಂ ಜನತಾನಂದದಾಯಿನೀಮ್ ।
ಜಗದ್ಭೋಗ್ಯಾಮಿವಾತ್ಮೀಯಾಂ [2]ಶ್ರಿಯಮಾಯತಿಶಾಲಿನೀಮ್॥ ೧೩೯ ॥

ಪ್ರಕಾಶಮಾನವಾದ ಪದ್ಮವೆಂಬ ನಿಧಿಯಿಂದುಂಟಾದುದೂ ಜನಸಮುದಾಯಕ್ಕೆ ಆನಂದವನ್ನು ಕೊಡುವುದೂ ಜಗತ್ತಿಗೆ ಭೋಗಿಸುವುದಕ್ಕೆ ಯೋಗ್ಯವೂ ಆದ ತನ್ನ (ಭರತನ)ರಾಜ್ಯಸಂಪತ್ತಿನಂತೆ ವಿಶಾಲವೂ ಪ್ರಕಾಶಮಾನವಾದ ಪದ್ಮಸರೋವರ ದಿಂದ ಹುಟ್ಟಿದುದೂ ಜನಸಮುದಾಯಕ್ಕಾನಂದವನ್ನು ಕೊಡುವುದೂ ಜಗತ್ತಿಗೆ ಭೋಗಿಸುವುದಕ್ಕೆ ಯೋಗ್ಯವೂ

ವಿಜಯಾರ್ಧತಟಾ[3]ಕ್ರಾಂತಿಕೃತ[4]ಶ್ಲಾಘ್ಯಾಂ [5]ಸುರಂಹಸಮ್ ।
ಅಭಗ್ನಪ್ರಸರಾಂ ದಿವ್ಯಾಂ ನಿಜಾಮಿವ [6]ಪತಾಕಿನೀಮ್ ॥ ೧೪೦ ॥

ವಿಜಯಾರ್ಧಪರ್ವತದ ತಪ್ಪಲನ್ನಾಕ್ರಮಿಸಿರುವುದರಿಂದ ಶ್ಲಾಘ್ಯವಾದುದೂ ಬಹಳ ವೇಗವುಳ್ಳುದೂ ತಡೆಯಿಲ್ಲದಿರುವ ವ್ಯಾಪಕತೆಯುಳ್ಳುದೂ ಶ್ರೇಷ್ಠವೂ ಆದ ತನ್ನ ಸೈನ್ಯವೋ ಎಂಬಂತಿರುವುದೂ

ವ್ಯಾಲೋಲೋರ್ಮಿಕರಾಸ್ಪೃಷ್ಟೈಃಸ್ವತೀರವನಪಾದಪೈಃ ।
ದಧದ್ಭಿರಂಕುರೋ[7]ದ್ಭೇದಮಾಶ್ರಿತಾಂ ಕಾಮುಕೈರಿವ ॥ ೧೪೧ ॥

ರೋಮಾಂಚವನ್ನು ಧರಿಸಿರುವ ಕಾಮುಕಪುರುಷರಿಂದ ಆಶ್ರಯಿಸಲ್ಪಟ್ಟಿದೆಯೋ ಎಂಬಂತೆ, ಚಂಚಲವಾದ ಅಲೆಗಳೆಂಬ ಕೈಗಳಿಂದ ಸ್ಪರ್ಶಿಸಲ್ಪಟ್ಟ ತನ್ನ ದಡಗಳಲ್ಲಿರುವ ವನಗಳ ವೃಕ್ಷಗಳಿಂದ ಆಶ್ರಯಿಸಲ್ಪಟ್ಟಿರುವುದೂ

[8]ರೋಧೋಲತಾಲಯಾಸೀನಾನ್ ಸ್ವೇಚ್ಛಯಾ ಸುರದಂಪತೀನ್ ।
ಹಸಂತೀಮಿವ ಸದ್ಧ್ವಾನೈಃ [9]ಶೀಕರೋತ್ಥೈ[10]ರ್ವಿಸಾರಿಭಿಃ ॥ ೧೪೨ ॥

ತಮ್ಮ ಇಚ್ಛೆಯಿಂದ ದಡಗಳಲ್ಲಿರುವ ಲತಾಗೃಹಗಳಲ್ಲಿ ಕುಳಿತಿರುವ ದೇವ ದಂಪತಿಗಳನ್ನು ತುಂತುರುಗಳೊಡನೆ ಉತ್ಪನ್ನವಾದುವೂ ವಿಸ್ತರಿಸುತ್ತಿರುವುವೂ ಶ್ರೇಷ್ಠವೂ ಆದ ಶಬ್ದಗಳಿಂದ ಪರಿಹಾಸ್ಯಮಾಡುತ್ತಿದೆಯೋ ಎಂಬಂತಿರುವುದೂ

ಕಿನ್ನರಾಣಾಂ ಕಲಕ್ವಾಣೈಃ ಸಗಾನೈರುಪವೀಣಿತೈಃ ।
[11]ಸೇವ್ಯಪರ್ಯಂತಭೂಭಾಗಲತಾಮಂಡಪಮಂಡನಾಮ್ ॥ ೧೪೩ ॥

ಕಿನ್ನರ ದೇವತೆಗಳ ಮನೋಹರವಾದ ಸ್ವರಗಳಿಂದಲೂ ಗಾನಸಹಿತವಾದ ವೀಣಾ ಶಬ್ದಗಳಿಂದಲೂ ಸಮುದ್ರದ ಸಮೀಪದಲ್ಲಿರುವ ಭೂಮಿಪ್ರದೇಶದ ಲತಾ ಮಂಟಪಗಳೆಂಬ ಅಲಂಕಾರಗಳುಳ್ಳುದೂ

ಹಾರಿಭಿಃ ಕಿನ್ನರೋದ್ಗೀತೈರಾಹೂತಾ ಹರಿಣಾಂಗನಾಃ ।
ದಧತೀಂ [12]ತೀರಕಚ್ಛೇಷು ಪ್ರಸಾರಿತ[13]ಗಲದ್ಗಲಾಃ ॥ ೧೪೪ ॥

ದಡಗಳಲ್ಲಿರುವ ವನಗಳಲ್ಲಿ ಮನೋಹರವಾದ ಕಿನ್ನರದೇವತೆಗಳ ಗಾನಗಳಿಂದ ಕರೆಯಲ್ಪಟ್ಟುವೂ ಸುಖಾತಿಶಯದಿಂದ ಕೆಳಕ್ಕೆ ಬಗ್ಗುತ್ತಿರುವ ನೀಡಿದ ಕುತ್ತಿಗೆ ಗಳುಳ್ಳುವೂ ಆದ ಹೆಣ್ಣುಜಿಂಕೆಗಳನ್ನು ಧರಿಸಿರುವುದೂ

೧ ಪದ್ಮಹ್ರದಜಾತಾಂ, ನಿಧಿವಿಶೇಷಜಾತಾಂ ಚ. ೨ ಸಾಮ್ರಾಜ್ಯಂ. ೩ ಆಕ್ರಮಣಂ. ೪ ಶ್ಲಾಘಾಮಿತ್ಯಪಿ ಪಾಠಃ. ೫ ಸುವೇಗಾಂ. ೬ ಸೇನಾಂ. ೭ ರೋಮಾಂಚಂ. ೮ ತೀರಲತಾಗೃಹಸ್ಥಾನ್. ೯ ಶೀಕರೈಃ ಸಹೋತ್ಥಾ ಉತ್ಪತ್ತಿರ್ಯೇಷಾಂ ತೇ. ೧೦ ಪ್ರಸರದ್ಭಿಃ. ೧೧ ಸಮುದ್ರಸಮೀಪಃ. ೧೨ ತೀರವನೇಷು. ೧೩ ಸುಖಾತಿಶಯೇನಾಧೋಗಲದ್ಗಲೋ ಯಾಸಾಂ ತಾಃ.

ಹೃದ್ಯೈಃ [1]ಸಸಾರಸಾರಾವೈಃ ಪುಲಿನೈರ್ದಿವ್ಯಯೋಷಿತಾಮ್ ।
ನಿತಂಬಾನಿ ಸಕಾಂಚೀನಿ ಹಸಂತೀಮಿವ ವಿಸ್ತೃತೈಃ ॥ ೧೪೫ ॥

ಮನೋಹರವೂ ಸಾರಸಪಕ್ಷಿಗಳ ಶಬ್ದಸಹಿತವೂ ವಿಸ್ತಾರವೂ ಆದ ಮರಳಿನ ರಾಶಿಗಳಿಂದ ದೇವಸ್ತ್ರೀಯರ ಡಾಬುಸಹಿತವಾದ ನಿತಂಬಪ್ರದೇಶ(ಪಿರ್ರೆ)ಗಳನ್ನು ಪರಿಹಾಸ್ಯಮಾಡುತ್ತಿದೆಯೋ ಎಂಬಂತಿರುವುದೂ

ಚತುರ್ದಶಭಿರನ್ವಿತಾಂ ಸಹಸ್ರೈರಬ್ಧಿಯೋಷಿತಾಮ್ ।
[2]ಸಧ್ರೀಚೀನಾಮಿವೋದ್ವೀಚಿಂ ಬಾಹೂನಾಂ [3]ಪರಿರಂಭಣೇ ॥ ೧೪೬ ॥

ಸಮುದ್ರದ ಪದಿನಾಲ್ಕುಸಾವಿರ ಪತ್ನಿ(ನದಿ)ಯರಿಂದ ಕೂಡಿರುವುದೂ ಸಖಿ ಯರ(ನದಿಗಳ)ಭುಜಗಳ ಆಲಿಂಗನೆಗೋಸ್ಕರ ಮೇಲಕ್ಕೆದ್ದಿರುವ ಅಲೆಗಳುಳ್ಳು ದಾಗಿದೆಯೋ ಎಂಬಂತಿರುವುದೂ

ಇತ್ಯಾವಿಷ್ಕೃತಸಂಶೋಭಾಂ [4]ಜಾಹ್ನವೀಮೈಕ್ಷತ ಪ್ರಭುಃ ।
ಹಿಮವದ್ಗಿರಿಣಾಂಭೋಧೇಃ ಪ್ರಹಿತಾಮಿವ ಕಂಠಿಕಾಮ್ ॥ ೧೪೭ ॥

ಈ ಪ್ರಕಾರವಾಗಿ ತನ್ನಶೋಭೆಯನ್ನು ಪ್ರಕಾಶಪಡಿಸಿರುವುದೂ ಹಿಮವತ್ಪರ್ವತ ದಿಂದ ಸಮುದ್ರಕ್ಕೆ ಕಳುಹಲ್ಪಟ್ಟ ಮುತ್ತಿನ ಕಂಠಿಕೆಯಂತಿರುವುದೂ ಆದ ಗಂಗಾನದಿಯನ್ನು ಭರತರಾಜನು ನೋಡಿದನು.

ಶರ[5]ದುಪಹಿತಕಾಂತಿಂ ಪ್ರಾಂತಕಾಂತಾರರಾಜೀ
ವಿರಚಿತಪರಿಧಾನಾಂ [6]ಸೈಕತಾರೋಹರಮ್ಯಾಮ್ ।
ಯುವತಿಮಿವ ಗಭೀರಾವರ್ತನಾಭಿಂ ಪ್ರಪಶ್ಯನ್
ಪ್ರಮದಮತುಲ[7]ಮೂಹೇ ಕ್ಷ್ಮಾಪತಿಃ [8]ಸ್ವಸ್ರವಂತೀಮ್ ॥ ೧೪೮ ॥

ಶರತ್ಕಾಲದಿಂದ ಪ್ರಾಪ್ತವಾದ ಶುಭ್ರಕಾಂತಿಯುಳ್ಳುದೂ ಸಮೀಪದಲ್ಲಿರುವ ಅರಣ್ಯಗಳ ಸಾಲುಗಳಿಂದ ವಸ್ತ್ರವನ್ನು ಧರಿಸಿದಂತಿರುವುದೂ ಮರಳಿನ ರಾಶಿಗಳೆಂಬ ಪಿರ್ರೆಗಳಿಂದ ರಮಣೀಯವೂ ಗಂಭೀರ(ಆಳ)ವಾದ ಸುಳಿಯೆಂಬ ನಾಭಿ ಯುಳ್ಳುದೂ ಆದ ದೇವಗಂಗೆಯನ್ನು, ಯುವತಿಯಾದ ಸ್ತ್ರೀಯನ್ನೋ ಪಾದಿಯಲ್ಲಿ, ನೋಡುತ್ತಿರುವ ಭರತರಾಜನು ಅಧಿಕವಾದ ಸಂತೋಷವನ್ನು ಹೊಂದಿದನು.

ಸರಸಿಜಮಕರಂದೋದ್ಗಂಧಿರಾಧೂತರೋಧೋ
ವನಕಿಸಲಯಮಂದಾಂ[9]ದೋಲನೋದೂಢಮಾಂದ್ಯಃ ।
ಅಸಕೃದಮರಸಿಂಧೋರಾಧುನಾನಸ್ತರಂಗಾನ್
ಅಹೃತನೃಪವಧೂನಾಮಧ್ವಖೇದಂ ಸಮೀರಃ ॥ ೧೪೯ ॥

ಕಮಲಗಳ ಪುಷ್ಪರಸದ ಪರಿಮಳವನ್ನು ಹರಡುವುದೂ ದಡಗಳಲ್ಲಿ ವನಗಳ ತಳಿರುಗಳನ್ನು ಮಂದವಾಗಿ ಅಳ್ಳಾಡಿಸುವುದರಿಂದ ಮಾಂದ್ಯವನ್ನು ಹೊಂದಿರುವು ದೂ ಗಂಗಾನದಿಯ ಅಲೆಗಳನ್ನು ಬಾರಿಬಾರಿಗೆ ಕೊಡಹುತ್ತಿರುವುದೂ ಆದ ಗಾಳಿಯು ಭರತರಾಜನ ಸ್ತ್ರೀಯರ ಮಾರ್ಗಾಯಾಸವನ್ನು ಹೋಗಲಾಡಿಸಿದ್ದಿತು. ಶೈತ್ಯ ಸೌರಭ್ಯ ಮಾಂದ್ಯ ಗುಣಯುಕ್ತವಾದ ಗಾಳಿಯು ರಾಜಸ್ತ್ರೀಯರ ಮಾರ್ಗಾ ಯಾಸವನ್ನು ಹೋಗಲಾಡಿಸಿದ್ದಿತೆಂದು ಭಾವವು.

೧ ಸಾರಸಪಕ್ಷಿಧ್ವನಿಸಹಿತೈಃ. ೨ ಸಖೀನಾಂ. ೩ ಆಲಿಂಗನಾರ್ಥಂ. ೪ ಗಂಗಾಂ. ೫ ಪ್ರಾಪ್ತಾ. ೬ ಪುಲಿನನಿತಂಬರಮ್ಯಾಂ. ೭ ಅಧಾತ್. ೮ ದೇವಗಂಗಾಂ. ೯ ಆಂದೋಲನೇನ ಧೃತಮಾಂದ್ಯಃ.

ತಾಮಾಕ್ರಾಂತ[೧]ಹರಿನ್ಮುಖಾಂ ಕೃತ[೨]ರಜೋಧೂತಿಂ ಜಗತ್ಪಾವನೀ-
ಮಾಸೇವ್ಯಾಂ [೩]ದ್ವಿಜಕುಂಜರೈರವಿರತಂ ಸಂತಾಪವಿಚ್ಛೇದಿನೀಮ್ ।
ಜೈನೀಂ ಕೀರ್ತಿಮಿವಾತತಾಮುಪಮಲಾಂ ಶಶ್ವಜ್ಜನಾನಂದಿನೀಂ
ನಿಧ್ಯಾಯನ್ನಿಬುಧಾಪಗಾಂ ನಿಧಿಪತಿಃ ಪ್ರೀತಿಂ ಪರಾಮಾಸದತ್ ॥ ೧೫೦ ॥

ಭರತರಾಜನು ದಿಙ್ಮುಖಗಳನ್ನಾಕ್ರಮಿಸಿರುವುದೂ ಧೂಳನ್ನು ನಾಶಮಾಡಿರುವುದೂ ಜಗತ್ತನ್ನು ಪವಿತ್ರಮಾಡುವುದೂ ಯಾವಾಗಲೂ ಪಕ್ಷಿಸಮೂಹಗಳಿಂದಲೂ ಶ್ರೇಷ್ಠಬ್ರಾಹ್ಮಣರಿಂದಲೂ ಸೇವಿಸುವುದಕ್ಕೆ ಯೋಗ್ಯವೂ ಸಂತಾಪವನ್ನು ನಾಶಮಾಡುವುದೂ ಜಿನೇಶ್ವರನ ಸಂಬಂಧವಾದ ಕೀರ್ತಿಯಂತೆ ವಿಸ್ತಾರವೂ ನಿರ್ಮಲವೂ ಬಾರಿಬಾರಿಗೆ ಜನರಿಗಾನಂದವನ್ನುಂಟುಮಾಡುವುದೂ ಆದ ಆ ಗಂಗಾನದಿಯನ್ನು ನೋಡುವವನಾಗಿ ಅಧಿಕವಾದ ಪ್ರೀತಿಯನ್ನು ಹೊಂದಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭರತರಾಜದಿಗ್ವಿಜಯೋದ್ಯೋಗವರ್ಣನಂ ನಾಮ ಷಡ್ವಿಂಶತಿತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕಭಾವದೀಪಿಕಾ ವ್ಯಾಖ್ಯೆಯೊಳ್'' ಭರತರಾಜನ ದಿಗ್ವಿಜಯೋದ್ಯೋಗವರ್ಣನವೆಂಬ
ಇಪ್ಪತ್ತಾರನೆಯ ಪರ್ವವು ಸಂಪೂರ್ಣವಾದುದು.

---

೧ ದಿಙ್ಮುಖಾಂ. ೨ ರಜೋನಾಶಂ. ೩ ಪಕ್ಷಿ ಗಣೈಃ, ವಿಪ್ರಾದಿಮುಖ್ಯೈಶ್ಚ.

# ಅಥ ಸಪ್ತವಿಂಶತಿತಮಂ ಪರ್ವ

**ಅಥ ವ್ಯಾಪಾರಯಾಮಾಸ ದೃಶಂ [೧]ತತ್ರ ವಿಶಾಂಪತಿಃ ।**
**ಪ್ರಸನ್ನೈಃ ಸಲಿಲೈಃ ಪಾದ್ಯಂ ವಿತರಂತ್ಯಾಮಿವಾತ್ಮನಃ ॥ ೧ ॥**

ಗಂಗಾನದಿಯ ಸಮೀಪವನ್ನು ಪ್ರವೇಶಮಾಡಿದ ನಂತರದಲ್ಲಿ ಭರತಚಕ್ರವರ್ತಿಯು ನಿರ್ಮಲವಾದ ಜಲಗಳಿಂದ ತನಗೆ ಪಾದೋದಕವನ್ನು ಕೊಡುತ್ತಿದೆಯೋ ಎಂಬಂತಿರುವ ಆ ಗಂಗಾನದಿಯನ್ನು ನೋಡಿದನು.

**ವ್ಯಾಪಾರಿತದೃಶಂ [೨]ತತ್ರ ಪ್ರಭುಮಾಲೋಕ್ಯ ಸಾರಥಿಃ ।**
**ಪ್ರಾಪ್ತಾವಸರಮಿತ್ಯೂಚೇ ವಚಶ್ಚೇತೋನುರಂಜನಮ್ ॥ ೨ ॥**

ಸಾರಥಿಯು ಆ ಗಂಗಾನದಿಯನ್ನು ನೋಡುತ್ತಿದ್ದ ಭರತರಾಜನನ್ನು ನೋಡಿ ಅವಕಾಶವನ್ನು ಹೊಂದಿದುದೂ(ಸಮಯೋಚಿತವೂ)ಮನಸ್ಸಿಗಾನಂದಕರವೂ ಆದ ವಚನವನ್ನು ಮುಂದೆ ಹೇಳುವ ಪ್ರಕಾರವಾಗಿ ಹೇಳಿದನು.

**ಇಯಮಾಹ್ಲಾದಿತಾಶೇಷಭುವನಾ ದೇವ ! ನಿಮ್ನಗಾ ।**
**ರಜೋ ವಿಧುನ್ವತೀ ಭಾತಿ ಭಾರತೀವ [೩]ಸ್ವಯಂಭುವಃ ॥ ೩ ॥**

''ಪ್ರಭುವೆ ! ಲೋಕವನ್ನೆಲ್ಲ ಸಂತೋಷಪಡಿಸಿದುದೂ ಧೂಳನ್ನು ನಾಶಮಾಡುವುದೂ ಆದ ಈ ಗಂಗಾನದಿಯು, ಪಾಪಧೂಳಿಯನ್ನು ನಾಶಮಾಡುವುದೂ ಲೋಕವನ್ನೆಲ್ಲ ಸಂತೋಷಪಡಿಸುವುದೂ ಆದ ವೃಷಭಸ್ವಾಮಿಯ ವಾಣಿಯಂತೆ, ಪ್ರಕಾಶಿಸುತ್ತಿದೆ.

**ಪುನಾತೀಯಂ ಹಿಮಾದ್ರಿಂ ಚ ಸಾಗರಂ ಚ ಮಹಾನದೀ ।**
**[೪]ಪ್ರಸೂತೌ ಚ ಪ್ರವೇಶೇ ಚ ಗಂಭೀರಾ [೫]ನಿರ್ಮಲಾಶಯಾ ॥ ೪ ॥**

ಆಳವೂ ನಿರ್ಮಲವಾದ ಜಲವುಳ್ಳುದೂ ಆದ ಈ ದೊಡ್ಡದಾದ ನದಿಯು ಉತ್ಪತ್ತಿಸ್ಥಾನದಲ್ಲಿ ಹಿಮವತ್ಪರ್ವತವನ್ನೂ ಪ್ರವೇಶಸ್ಥಾನದಲ್ಲಿ ಸಮುದ್ರವನ್ನೂ ಪವಿತ್ರಮಾಡುತ್ತದೆ. ಹುಟ್ಟಿದ ಮತ್ತು ಪ್ರವೇಶಮಾಡಿದ ಉಭಯಕುಲಪವಿತ್ರಳಾದ ಸ್ತ್ರೀಯಂತೆ ಗಂಗಾನದಿಯಿದೆಯೆಂದರ್ಥವು.

**ಇಮಾಂ ವನಗಜಾಃ ಪ್ರಾಪ್ಯ [೬]ನಿರ್ವಾಂತ್ಯೇತೇ [೭]ಮದಚ್ಯುತಾಃ ।**
**ಮುನೀಂದ್ರಾ ಇವ [೮]ಸದ್ವಿದ್ಯಾಂ ಗಂಭೀರಾಂ ತಾಪವಿಚ್ಛಿದಮ್ ॥ ೫ ॥**

ಮದರಹಿತರಾದ ಮುನಿಗಳು ಗಂಭೀರವೂ ತಾಪನಾಶಕವೂ ಆದ ಪರಮಾಗಮವಿದ್ಯೆಯನ್ನು ಹೊಂದಿ ಮುಕ್ತರಾಗುವಂತೆ, ಮದರಹಿತವಾದ ಈ ಕಾಡಾನೆಗಳು ಆಳವೂ ತಾಪನಾಶಕವೂ ಆದ ಈ ಗಂಗಾನದಿಯನ್ನು ಹೊಂದಿ ಸುಖಿಗಳಾಗುತ್ತವೆ.

**ಇತಃ ಪಿಬಂತಿ ವನ್ಯೇಭಾಃ ಪಯೋ[೯]ಸ್ಯಾಃ ಕೃತನಿಃಸ್ವನಾಃ ।**
**ಇತೋಮೀ ಪೂರಯಂತ್ಯೇನಾಂ ಮುಕ್ತಾಸಾರಾಃ ಶರದ್ಘನಾಃ ॥ ೬ ॥**

ಈ ಕಡೆಯಲ್ಲಿ ಧ್ವನಿಮಾಡುತ್ತಿರುವ ಕಾಡಾನೆಗಳು ಈ ಗಂಗಾನದಿಯ ಜಲವನ್ನು ಪಾನಮಾಡುತ್ತವೆ. ಈ ಕಡೆಯಲ್ಲಿ ಜಲವನ್ನು ಸುರಿಯುವ ಈ ಶರತ್ಕಾಲದ ಮೇಘಗಳು ಈ ಗಂಗಾನದಿಯನ್ನು ತುಂಬುತ್ತವೆ.

**ಅಸ್ಯಾಃ ಪ್ರವಾಹಮಂಭೋಧಿರ್ಧತ್ತೇ ಗಾಂಭೀರ್ಯಯೋಗತಃ ।**
**[೧೦]ಅಸೋಢಂ ವಿಜಯಾರ್ಧೇನ ತುಂಗೇನಾಪ್ಯಚಲಾತ್ಮನಾ ॥ ೭ ॥**

ಉನ್ನತವಾಗಿದ್ದರೂ ನಿಶ್ಚಂಚಲವಾದ ಸ್ವರೂಪವುಳ್ಳ ವಿಜಯಾರ್ಧಪರ್ವತದಿಂದ ಸಹಿಸಲಶಕ್ಯವಾದ ಈ ಗಂಗಾನದಿಯ ಪ್ರವಾಹವನ್ನು ಆಳವಾಗಿರುವುದರಿಂದ ಸಮುದ್ರವು ವಹಿಸುತ್ತದೆ.

**ಅಸ್ಯಾಃ ಪಯಃಪ್ರವಾಹೇಣ ನೂನಮಬ್ಧಿರ್ವಿತೃಡ್ಭವೇತ್ ।**
**ಕ್ಷಾರೇಣ ಪಯಸಾ ಸ್ವೇನ ದಹ್ಯಮಾನಾಂತರಾಶಯಃ ॥ ೮ ॥**

ನಿಶ್ಚಯವಾಗಿಯೂ ತನ್ನ ಉಪ್ಪುನೀರಿನಿಂದ ಹೃದಯದಲ್ಲಿ ದಾಹವುಳ್ಳ ಸಮುದ್ರವು ಈ ಗಂಗಾನದಿಯ ಜಲಪ್ರವಾಹದಿಂದ ಬಾಯಾರಿಕೆಯಿಲ್ಲದುದಾಗಿ ಆಗುವುದು.

**ಪದ್ಮಹ್ರದಾದ್ಧಿಮವತಃ ಪ್ರಸನ್ನಾದಿವ [೧]ಮಾನಸಾತ್ ।**
**ಪ್ರಸೂತಾ ಪಪ್ರಥೇ ಪೃಥ್ವ್ಯಾಂ ಶುದ್ಧಜನ್ಮಾ ಹಿ ಪೂಜ್ಯತೇ ॥ ೯ ॥**

ಹಿಮವತ್ಪರ್ವತದ ನಿರ್ಮಲವಾದ ಮನಸ್ಸೋ ಮಾನಸಸರೋವರವೋ ಎಂಬಂತಿರುವ ಪದ್ಮಸರೋವರದಿಂದ ಹುಟ್ಟಿದ ಈ ಗಂಗಾನದಿಯು ಪ್ರಸಿದ್ಧಿಯನ್ನು ಹೊಂದಿದ್ದಿತು. ಶುದ್ಧವಂಶದಲ್ಲಿ ಹುಟ್ಟಿದವನು ಲೋಕದಲ್ಲಿ ಪೂಜಿಸಲ್ಪಡುತ್ತಾನಲ್ಲವೆ ?

**ವ್ಯೋಮಾಪಗಾಮಿಮಾಂ ಪ್ರಾಹು[೨]ರ್ವಿಯತಃ ಪತಿತಾಂ ಕ್ಷಿತೌ ।**
**ಗಂಗಾದೇವೀಗೃಹಂ ವಿಷ್ವಗಾಪ್ಲಾವ್ಯ ಸ್ವಜಲಪ್ಲವೈಃ ॥ ೧೦ ॥**

ತನ್ನ ಜಲಪ್ರವಾಹಗಳಿಂದ ಗಂಗಾದೇವಿಯ ಗೃಹವನ್ನು ಸುತ್ತಲೂ ನೆನೆಯಿಸಿ ಹರಿಯುತ್ತಿರುವ ಈ ಗಂಗಾನದಿಯನ್ನು ಆಕಾಶದಿಂದ ಭೂಮಿಯಲ್ಲಿ ಬಿದ್ದುದನ್ನಾಗಿ ಹೇಳುತ್ತಾರೆ.

**ಬಿಭರ್ತಿ ಹಿಮವಾನೇನಾಂ ಶಶಾಂಕಕರನಿರ್ಮಲಾಮ್ ।**
**ಆಸಿಂಧೋಃ ಪ್ರಸೃತಾಂ ಕೀರ್ತಿಮಿವ ಸ್ವಾಂ ಲೋಕಪಾವನೀಮ್ ॥ ೧೧ ॥**

ಹಿಮವತ್ಪರ್ವತವು, ತನ್ನ ಕೀರ್ತಿಯನ್ನು ಧರಿಸುವಂತೆ, ಲೋಕವನ್ನು ಪವಿತ್ರಮಾಡುವುದೂ ಸಮುದ್ರದವರೆಗೂ ಹರಿದಿರುವುದೂ ಚಂದ್ರನ ಕಿರಣಗಳಂತೆ ನಿರ್ಮಲವೂ ಆದ ಈ ಗಂಗಾನದಿಯನ್ನು ಧರಿಸುತ್ತದೆ.

**ವನರಾಜೀದ್ವಯೇನೇಯಂ ವಿಭಾತಿ ತಟವರ್ತಿನಾ ।**
**[೩]ವಾಸಸೋರಿವ ಯುಗ್ಮೇನ ವಿನೀಲೇನ [೪]ಕೃತಶ್ರಿಯಾ ॥ ೧೨ ॥**

ಈ ಗಂಗಾನದಿಯು, ಕಪ್ಪಾದುದೂ ಶೋಭೆಯುಳ್ಳುದೂ ಆದ ಎರಡು ವಸ್ತ್ರಗಳಿಂದ ಶೋಭಿಸುವಂತೆ, ದಡಗಳಲ್ಲಿರುವ ಎರಡು ವನಗಳ ಸಾಲುಗಳಿಂದ ಶೋಭಿಸುತ್ತದೆ.

**ಸ್ವತಟಾಶ್ರಯಿಣೀಂ ಧತ್ತೇ ಹಂಸಮಾಲಾಂ [೫]ಕಲಸ್ವನಾಮ್ ।**
**ಕಾಂಚೀಮಿವೇ[೬]ಯಮಂಭೋಜರಜಃಪಿಂಜರವಿಗ್ರಹಾಮ್ ॥ ೧೩ ॥**

ಈ ಗಂಗಾನದಿಯು ತನ್ನ ದಡಗಳನ್ನಾಶ್ರಯಿಸಿರುವುದೂ ಮಧುರವಾದ ಶಬ್ದವುಳ್ಳುದೂ ಕಮಲಗಳ ಧೂಳಿಯಿಂದ ಹಳದಿಬಣ್ಣವಾದ ಶರೀರವುಳ್ಳುದೂ ಆದ ಹಂಸಪಕ್ಷಿಗಳ ಮಾಲೆಯನ್ನು, ಡಾಬನ್ನು ಧರಿಸುವಂತೆ, ಧರಿಸಿರುತ್ತದೆ.

---

೧ ಗಂಗಾಯಾಂ. ೨ ಗಂಗಾಯಾಂ. ೩ ವೃಷಭಜಿನೇಶಿನಃ. ೪ ಉತ್ಪತ್ತಿಸ್ಥಾನೇ. ೫ ನಿರ್ಮಲಜಲಾ, ನಿರ್ಮಲಚಿತ್ತಾ ಚ. ೬ ಸುಖಿನೋ ಭವಂತಿ, ಮುಕ್ತಾ ಭವಂತಿ ಚ. ೭ ಭಯಚ್ಯುತಾ ಇತ್ಯಪಿ ಪಾಠಃ. ೮ ಪರಮಾಗಮರೂಪಾಂ. ೯ ಗಂಗಾಯಾಃ. ೧೦ ಸೋಢುಮಶಕ್ಯಂ.

೧ ಮಾನಸಾದಿವ, ಮಾನಸಸರೋವರಾದಿವ ಚ. ೨ ಆಕಾಶಾತ್, ವಿಯತ್ತ ಇತ್ಯಪಿ ಪಾಠಃ. ೩ ವಸ್ತ್ರಯೋಃ. ೪ ಕೃತಶೋಭಯಾ, ಧೃತಶ್ರಿಯೇತ್ಯಪಿ ಪಾಠಃ. ೫ ಕೃತಸ್ವನಾಮಿತ್ಯಪಿ ಪಾಠಃ. ೬ ಗಂಗಾ.

ನದೀಸಖೀರಿಯಂ [೧]ಸ್ವಚ್ಛಾ ಮೃಣಾಲಶಕಲಾಮಲಾಃ ।
ಸಂಬಿಭರ್ತಿ ಸ್ವಸಾತ್ಕೃತ್ಯ ಸಖ್ಯಂ ಶ್ಲಾಘ್ಯಂ ಹಿ [೨]ತಾದೃಶಮ್ ॥ ೧೪ ॥

ನಿರ್ಮಲವಾದ ಈ ಗಂಗಾನದಿಯು ತಾವರೆಯ ದಂಟಿನ ತುಂಡುಗಳಂತೆ ನಿರ್ಮಲವಾದ ನದಿಗಳೆಂಬ ಸಖಿಯರನ್ನು ತನ್ನಲ್ಲಿ ಸೇರಿಸಿಕೊಂಡು ಧರಿಸಿರುತ್ತದೆ. ಅಂತಹ ಮಿತ್ರತ್ವವಲ್ಲವೆ ಶ್ಲಾಘ್ಯವಾದುದು ?

[೩]ರಾಜಹಂಸೈರಿಯಂ ಸೇವ್ಯಾ ಲಕ್ಷ್ಮೀರಿವ ವಿಭಾತಿ ತೇ ।
ತನ್ವತೀ ಜಗತಃ ಪ್ರೀತಿಮಲಂಘ್ಯಮಹಿಮಾ ಪರೈಃ ॥ ೧೫ ॥

ರಾಜಹಂಸಪಕ್ಷಿಗಳಿಂದ ಸೇವಿಸಲ್ಪಡುವುದೂ ಬೇರೆಯವರಿಂದ ಮೀರಲಶಕ್ಯವಾದ ಮಹಿಮೆಯುಳ್ಳದೂ ಜಗತ್ತಿಗೆ ಪ್ರೀತಿಯನ್ನುಂಟುಮಾಡುವುದೂ ಆದ ಈ ಗಂಗಾನದಿಯು, ರಾಜಶ್ರೇಷ್ಠರಿಂದ ಸೇವಿಸಲ್ಪಡುವುದೂ ಬೇರೆಯವರಿಂದ ಮೀರಲಶಕ್ಯವೂ ಜಗತ್ತಿಗೆ ಪ್ರೀತಿಯನ್ನುಂಟುಮಾಡುವುದೂ ಆದ ನಿನ್ನ(ಭರತನ) ರಾಜ್ಯಲಕ್ಷ್ಮಿಯಂತೆ, ಪ್ರಕಾಶಿಸುತ್ತದೆ.

ವನವೇದೀಮಿಯಂ ಧತ್ತೇ ಸಮುತ್ತುಂಗಾಂ ಹಿರಣ್ಮಯೀಮ್ ।
ಆಜ್ಞಾಮಿವ ತವಾಲಂಘ್ಯಾಂ ನಭೋಮಾರ್ಗವಿಲಂಘಿನೀಮ್ ॥ ೧೬ ॥

ಈ ಗಂಗಾನದಿಯು, ಆಕಾಶಮಾರ್ಗವನ್ನು ದಾಟುತ್ತಿರುವುದೂ ಮೀರಲಶಕ್ಯವೂ ಆದ ನಿನ್ನ ಆಜ್ಞೆಯನ್ನು ಧರಿಸಿರುವಂತೆ, ಉನ್ನತವೂ ಸುವರ್ಣಮಯವೂ ಆದ ವನವೇದಿಕೆಯನ್ನು ಧರಿಸಿರುತ್ತದೆ.

ಇತಃ ಪ್ರಸೀದ ದೇವೇಮಾಂ ಶರಲ್ಲಕ್ಷ್ಮೀಂ ವಿಲೋಕಯ ।
ವನರಾಜಿಷು [೪]ಸಂರೂಢಾಂ ಸರಿತ್ಸು ಸರಸೀಷು ಚ ॥ ೧೭ ॥

ಸ್ವಾಮಿಯೇ! ಇತ್ತಕಡೆ ಪ್ರಸನ್ನನಾಗು, ವನಪಂಕ್ತಿಗಳಲ್ಲೂ ನದಿಗಳಲ್ಲೂ ಸರೋವರಗಳಲ್ಲೂ ಪ್ರಸಿದ್ಧವಾಗಿರುವ ಈ ಶರತ್ಕಾಲದ ಶೋಭೆಯನ್ನು ಚೆನ್ನಾಗಿ ನೋಡು.

ಇಮೇ ಸಪ್ತಚ್ಛದಾಃ ಪೌಷ್ಪಂ ವಿಕಿರಂತಿ ರಜೋಽಭಿತಃ ।
ಪಟವಾಸಮಿವಾಮೋದಸಂವಾಸಿತ[೫]ಹರಿನ್ಮುಖಮ್ ॥ ೧೮ ॥

ಈ ಏಳೆಲೆ ಬಾಳೆಗಳೂ ಸುತ್ತಲೂ ಪರಿಮಳದಿಂದ ದಿಕ್ಕುಗಳನ್ನು ಸುಗಂಧವುಳ್ಳವುಗಳನ್ನಾಗಿ ಮಾಡುತ್ತಿರುವ ಪುಷ್ಪಧೂಳಿಯನ್ನು, ಸುಗಂಧಚೂರ್ಣವನ್ನೋ ಪಾದಿಯಲ್ಲಿ , ಎರಚುತ್ತವೆ.

[೬]ಬಾಣೈಃ ಕುಸುಮಬಾಣಸ್ಯ ಬಾಣೈರಿವ ವಿಕಾಸಿಭಿಃ ।
[೭]ಹ್ರಿಯತೇ ಕಾಮಿನಾಂ ಚೇತೋ [೮]ರಮ್ಯಂ [೯]ಹಾರಿ ನ ಕಸ್ಯ ವಾ ॥

ಮನ್ಮಥನ ಬಾಣಗಳೋ ಎಂಬಂತೆ ವಿಕಸಿತವಾದ ಗೋರಂಟೆಹೂಗಳು ಕಾಮುಕರ ಮನಸ್ಸನ್ನಪಹರಿಸಿದುವು. ರಮಣೀಯವಾದ ವಸ್ತುವು ಯಾರ ಮನಸ್ಸನ್ನು ತಾನೆ ಅಪಹರಿಸುವುದಿಲ್ಲ ?

ವಿಕಸಂತಿ ಸರೋಜಾನಿ ಸರಸ್ಸು ಸಮಮುತ್ಪಲೈಃ ।
ವಿಕಾಸಿಲೋಚನಾನೀವ ವದನಾನಿ ಶರಚ್ಛ್ರಿಯಃ ॥ ೨೦ ॥

ಶರತ್ಕಾಲಲಕ್ಷ್ಮಿಯ ನೇತ್ರಗಳೊಡನೆ ಕೂಡಿರುವ ಮುಖಗಳೋ ಎಂಬಂತೆ ಸರೋವರಗಳಲ್ಲಿ ವಿಕಸಿತವಾದ ತಾವರೆಗಳು ಕುಮುದಪುಷ್ಪಗಳೊಡನೆ ಶೋಭಿಸುತ್ತಿದ್ದುವು.

ಪಂಕಜೇಷು [೧೦]ವಿಲೀಯಂತೇ ಭ್ರಮರಾ ಗಂಧಲೋಲುಪಾಃ ।
ಕಾಮಿನೀಮುಖಪದ್ಮೇಷು ಕಾಮುಕಾ ಇವ[೧೧]ಕಾಹಲಾಃ ॥ ೨೧ ॥

೧ ಸ್ವಚ್ಛಮೃಣಾಲಶಕಲಾಮಲಾ ಇತ್ಯಪಿ ಪಾಠಃ. ೨ ತಾದೃಶಾಮಿತ್ಯಪಿ ಪಾಠಃ. ೩ ರಾಜಶ್ರೇಷ್ಠೈಃ. ೪ ಪ್ರಸಿದ್ಧಾಂ. ೫ ದಿಙ್ಮುಖಂ. ೬ ಝಿಂಟೀಭಿಃ. ೭ ಹೃತಂ. ೮ ರಮ್ಯಂವಸ್ತು. ೯ ಮನೋಹಾರಿ. ೧೦ ಆಶ್ಲಿಷ್ಯಂತಿ, ನಿಲೀಯಂತ ಇತ್ಯಪಿ ಪಾಠಃ. ೧೧ ಅಸ್ಫುಟವಚನಾಃ.

ಅಸ್ಫುಟವಾದ ವಚನಗಳುಳ್ಳ ಕಾಮುಕರು ಕಾಮಿನಿಯರ ಮುಖಕಮಲಗಳಲ್ಲಿ ಆಸಕ್ತರಾಗುವಂತೆ, ಪರಿಮಳದಲ್ಲಿ ಆಸಕ್ತಿಯುಳ್ಳ ಭ್ರಮರಗಳು ಕಮಲಗಳಲ್ಲಿ ಆಸಕ್ತವಾಗಿವೆ.

ಮನೋಜಶರಪುಙ್ಖಾಭೈಃ ಪಕ್ಷೈರ್ಮಧುಕರಾ ಇಮೇ ।
ವಿಚರಂತ್ಯಬ್ಜಿನೀಷಂಡೇ ಮಕರಂದರಸೋತ್ಸುಕಾಃ ॥ ೨೨ ॥

ಪುಷ್ಪರಸದಲ್ಲಿ ಆಸಕ್ತವಾದ ಈ ಭ್ರಮರಗಳು ಮನ್ಮಥನ ಬಾಣಗಳಲ್ಲಿರುವ ಗರಿಗಳಿಗೆ ಸಮಾನವಾದ ರೆಕ್ಕೆಗಳೊಡನೆ ಕಮಲಗಳ ಸಮೂಹದಲ್ಲಿ ಸಂಚರಿಸುತ್ತವೆ.

[೧]ರೂಷಿತಾಃ ಕಂಜಕಿಂಜಲ್ಕೈರಾಭಾಂತ್ಯೇತೇ ಮಧುವ್ರತಾಃ ।
[೨]ಸುವರ್ಣಕಪಿಶೈರಂಗೈಃ ಕಾಮಾಗ್ನೇರಿವ [೩]ಮುರ್ಮುರಾಃ ॥ ೨೩ ॥

ತಾವರೆಯ ಕುಸುಮಗಳಿಂದ ವ್ಯಾಪ್ತವಾದ ಈ ಭ್ರಮರಗಳು ಬಂಗಾರದಂತೆ ಹಳದಿ ಬಣ್ಣವುಳ್ಳ ಶರೀರಗಳಿಂದ, ಮದನಾಗ್ನಿಯ ಕಿಡಿಗಳೋ ಎಂಬಂತೆ, ಶೋಭಿಸುತ್ತವೆ.

ಸ್ಥಲೇಷು ಸ್ಥಲಪದ್ಮಿನ್ಯೋ ವಿಕಸಂತ್ಯಶ್ಚಕಾಸತಿ ।
ಶರಚ್ಛ್ರಿಯೋ ಜಿಗೀಷಂತ್ಯಾ [೪]ದೂಷ್ಯಶಾಲಾ ಇವೋತ್ಥಿತಾಃ ॥ ೨೪ ॥

ನೆಲಗಳಲ್ಲಿ ಅರಳಿರುವ ನೆಲದಾವರೆಬಳ್ಳಿಗಳು, ಜಯಿಸಬೇಕೆಂಬಿಚ್ಛೆಯುಳ್ಳ ಶರತ್ಕಾಲಲಕ್ಷ್ಮಿಯ ಉದ್ಭವಿಸಿರುವ ಡೇರಾಗಳೋ ಎಂಬಂತೆ, ಪ್ರಕಾಶಿಸುತ್ತವೆ.

ಸ್ಥಲಾಬ್ಜಶಂಕಿನೀ ಹಂಸೀ ಸರಸ್ಯಬ್ಜರಜಸ್ತತೇ ।
[೫]ಸಂಹೃತ್ಯ ಪಕ್ಷವಿಕ್ಷೇಪಂ ವಿಶಂತೀಯಂ ನಿಮಜ್ಜತಿ ॥ ೨೫ ॥

ತಾವರೆಯ ಧೂಳಿಯಿಂದ ವ್ಯಾಪ್ತವಾದ ಸರೋವರದಲ್ಲಿ , ನೆಲದಾವರೆಯೆಂದು ಸಂದೇಹಪಡುತ್ತಿರುವುದೂ ಹರಡಿರುವ ರೆಕ್ಕೆಗಳನ್ನು ಮುದುರಿಕೊಂಡು ಪ್ರವೇಶಿಸುತ್ತಿರುವುದೂ ಆದ ಈ ಸ್ತ್ರೀಹಂಸಪಕ್ಷಿಯು, ಮುಳುಗುತ್ತಿದೆ.

ಹಂಸೋಽಯಂ ನಿಜಶಾಬಾಯ ಚಂಚ್ವೋದ್ಧೃತ್ಯ ಲಸದ್ಬಿಸಮ್ ।
[೬]ಪೀಥಬುದ್ಧ್ಯಾ ದದಾತ್ಯಸ್ಮೈ ಶಶಾಂಕಕರಕೋಮಲಮ್ ॥ ೨೬ ॥

ಈ ಹಂಸಪಕ್ಷಿಯು ಚಂದ್ರನ ಕಿರಣದಂತೆ ಕೋಮಲವೂ ಶುಭ್ರವೂ ಆದ ತಾವರೆಯ ದಂಟನ್ನು ಕೊಕ್ಕಿನಿಂದ ಕಿತ್ತು ಹಾಲು ಬೆರಕೆಯಾದ ಬೆಣ್ಣೆಯೆಂಬ ಬುದ್ಧಿಯಿಂದ ತನ್ನ ಈ ಮರಿಗೆ ಕೊಡುತ್ತದೆ.

ಕೃತಯತ್ನಾಃ [೭]ಪ್ಲವಂತೇಽಮೀ ರಾಜಹಂಸಾಃ ಸರೋಜಲೇ ।
ಸರೋಜಿನೀರಜಃಕೀರ್ಣೇ ಧೂತಪಕ್ಷಾಃ ಶನೈಃ ಶನೈಃ ॥ ೨೭ ॥

ಕಮಲಧೂಳಿಯಿಂದ ವ್ಯಾಪ್ತವಾದ ಸರೋವರದ ನೀರಿನಲ್ಲಿ ಮೆಲ್ಲಮೆಲ್ಲನೆ ರೆಕ್ಕೆಗಳನ್ನು ಕೊಡಹಿದ ಈ ರಾಜಹಂಸಪಕ್ಷಿಗಳು ಪ್ರಯತ್ನಪಟ್ಟು ಈಜುತ್ತವೆ.

ಚಕ್ರವಾಕೀಂ ಸರಸ್ತೀರೇ ತರಂಗೈಃ [೮]ಸ್ಥಗಿತಾಮಮೂಮ್ ।
[೯]ಅಪಶ್ಯನ್ಕರುಣಂ [೧೦]ರೌತಿ ಚಕ್ರಾಹ್ವಃ ಸಾಶ್ರುಲೋಚನಃ ॥ ೨೮ ॥

ಕಣ್ಣೀರುತುಂಬಿರುವ ನೇತ್ರಗಳುಳ್ಳ ಚಕ್ರವಾಕಪಕ್ಷಿಯು ಸರೋವರದ ದಡದಲ್ಲಿ ಅಲೆಗಳಿಂದ ಮರೆಮಾಡಲ್ಪಟ್ಟ ಈ ಸ್ತ್ರೀಚಕ್ರವಾಕಪಕ್ಷಿಯನ್ನು ಕಾಣದೆ ಕರುಣವುಂಟಾಗುವಂತೆ ಅಳುತ್ತಿದೆ.

ಅಭ್ಯೇತಿ [೧೧]ವರಟಾಶಂಕೀ ಧಾರ್ತರಾಷ್ಟ್ರಃ [೧೨]ಕೃತಸ್ವನಃ ।
ಸರಸ್ತರಂಗಶುಭ್ರಾಂಗೀಂ ಕೋಕಕಾಂತಾಮನಿಚ್ಛತೀಮ್ ॥ ೨೯ ॥

೧ ಆಚ್ಛಾದಿತಾಃ. ೨ ಕನಕ ವತ್ಪಿಂಗಲೈಃ. ೩ ವಿಸ್ಫುಲಿಂಗಾಃ. ೪ ಪಟಕುಟೀ ದೂಷ್ಯಂ ವಸ್ತ್ರೇ ಚ ತದ್ಗೃಹೇ. ೫ ತ್ಯಕ್ತ್ವಾ. ೬ ಸಕ್ಷೀರ ನವನೀತಬುದ್ಧ್ಯಾ. ೭ ತರಂತಿ. ೮ ಆಚ್ಛಾದಿತಾಂ. ೯ ನಾಲೋಕಯನ್. ೧೦ ರೋದಿತಿ. ೧೧ ಹಂಸಕಾಂತೇತಿಶಂಕಾವಾನ್, ಹಂಸಸ್ಯ ಯೋಷಿದ್ವರಟೇತ್ಯಮರಃ. ೧೨ ಕೃತಸ್ವನ ಮಿತ್ಯಪಿ ಪಾಠಃ.

ಶಬ್ದಮಾಡುತ್ತಿರುವುದೂ ಕಪ್ಪಾದ ಕೊಕ್ಕು ಮತ್ತು ಕಾಲುಗಳುಳ್ಳುದೂ ಆದ ಹಂಸಪಕ್ಷಿಯು ಸರೋವರದ ಅಲೆಗಳಿಂದ ಶುಭ್ರವಾದ ಶರೀರವುಳ್ಳುದೂ ಇಚ್ಛಿಸದಿರುವುದೂ ಆದ ಸ್ತ್ರೀಚಕ್ರವಾಕಪಕ್ಷಿಯನ್ನು ತನ್ನ ಪತ್ನಿಯೆಂದು ಸಂದೇಹಪಟ್ಟು ಸಮೀಪಕ್ಕೆ ಹೋಗುತ್ತದೆ.

**ಅನುಗಂಗಾತಟಂ ಭಾತಿ ಸಾಪ್ತಪರ್ಣಮಿದಂ ವನಮ್ ।**
**ಸುಮನೋರೇಣುಭಿರ್ವ್ಯೋಮ್ನಿ ವಿತಾನಶ್ರಿಯಮಾದಧತ್ ॥ ೩೦ ॥**

ಪುಷ್ಪಧೂಳುಗಳಿಂದ ಆಕಾಶದಲ್ಲಿ ಮೇಲ್ಕಟ್ಟಿನ ಶೋಭೆಯನ್ನು ಹೊಂದಿರುವ ಈ ಏಳೆಲೆಬಾಳೆಗಳ ವನವು ಗಂಗಾನದಿಯ ದಡಗಳನ್ನನುಸರಿಸಿ ಶೋಭಿಸುತ್ತದೆ. ಗಂಗಾನದಿಯ ದಡಗಳ ಉದ್ದಕ್ಕೂ ಏಳೆಲೆಬಾಳೆಗಳ ವನವು ಶೋಭಿಸುತ್ತದೆಂದು ಭಾವವು.

**ಮಂದಾಕಿನೀತರಂಗೋತ್ಥಃ ಪವನೋಧ್ವಶ್ರಮಂ ಹರನ್ ।**
**ಶನೈಃ ಸ್ಪೃಶತಿ [೧]ನೋಂಗಾನಿ ರೋಧೋವನವಿಧೂನನಃ ॥ ೩೧ ॥**

ದಡಗಳಲ್ಲಿರುವ ವನಗಳನ್ನು ಅಳ್ಳಾಡಿಸುತ್ತಿರುವುದೂ ಮಾರ್ಗಾಯಾಸವನ್ನು ನಾಶಮಾಡುವುದೂ ಗಂಗಾನದಿಯ ಅಲೆಗಳಿಂದುಂಟಾದುದೂ ಆದ ಗಾಳಿಯು ಮೆಲ್ಲನೆ ನಮ್ಮಶರೀರಗಳನ್ನು ಸ್ಪರ್ಶಮಾಡುತ್ತದೆ.

**[೨]ಆತಿಥ್ಯಮಿವ ನಸ್ತನ್ವನ್ ಹೃತಗಂಗಾಂಬುಶೀಕರಃ ।**
**[೩]ಅಭ್ಯೇತಿ ಪವಮಾನೋಯಂ ವನವೀಥೀರ್ವಿಧೂನಯನ್ ॥ ೩೨ ॥**

ವನಗಳ ಸಾಲುಗಳನ್ನಳ್ಳಾಡಿಸುತ್ತಿರುವ ಈ ಗಾಳಿಯು ಗಂಗಾನದಿಯ ತುಂತುರುಗಳನ್ನು ತೆಗೆದುಕೊಂಡು ಬಂದು ನಮಗೆ ಅತಿಥಿಸತ್ಕಾರವನ್ನು ಮಾಡುತ್ತಿದೆಯೋ ಎಂಬಂತೆ ಇದಿರಾಗಿ ಬರುತ್ತಿದೆ.

**[೪]ಅಗೋಷ್ಪದಮಿದಂ ದೇವ ದೇವೈರಧ್ಯುಷಿತಂ ವನಮ್ ।**
**ಲತಾಲಯೈರ್ವಿಭಾತ್ಯಂತಃ ಕುಸುಮ[೫]ಪ್ರಸ್ತರಾಂಚಿತೈಃ ॥ ೩೩ ॥**

ಪ್ರಭುವೆ! ಪ್ರವೇಶಿಸುವುದಕ್ಕಶಕ್ಯವೂ ದೇವತೆಗಳಿಂದ ವಾಸಮಾಡಲ್ಪಟ್ಟುದೂ ಆದ ಈ ವನವು ಮಧ್ಯದಲ್ಲಿ ಪುಷ್ಪಶಯನಗಳಿಂದ ವ್ಯಾಪ್ತವಾದ ಲತಾಮಂಟಪಗಳಿಂದ ಶೋಭಿಸುತ್ತಿದೆ.

**ಮಂದಾರವನವೀಥೀನಾಂ ಸಾಂದ್ರಚ್ಛಾಯಾಃ ಸಮಾಶ್ರಿತಾಃ ।**
**ಚಂದ್ರಕಾಂತಶಿಲಾಸ್ವೇತೇ ರಂರಮ್ಯಂತೇ [೬]ನಭಃಸದಃ ॥ ೩೪ ॥**

ಮಂದಾರವೃಕ್ಷಗಳ ವನಪಂಕ್ತಿಗಳ ದಟ್ಟವಾದ ನೆರಳುಗಳನ್ನಾಶ್ರಯಿಸಿರುವ ಈ ವಿದ್ಯಾಧರರು ಚಂದ್ರಕಾಂತಶಿಲೆಗಳಲ್ಲಿ ಅಧಿಕವಾಗಿ ಕ್ರೀಡಿಸುತ್ತಾರೆ.

**ಅಹೋ ತಟವನಸ್ಯಾಸ್ಯ ರಾಮಣೀಯಕಮದ್ಭುತಮ್ ।**
**[೭]ಅವಧೂತನಿಜಾವಾಸಾ [೮]ರಿರಂಸ್ಯಂತೇತ್ರ [೯]ಯತ್ಸುರಾಃ ॥ ೩೫ ॥**

ಹಾ! ದೇವತೆಗಳು ತಮ್ಮ ವಾಸಸ್ಥಾನಗಳನ್ನು ತಿರಸ್ಕರಿಸಿ ಇಲ್ಲಿ ಕ್ರೀಡಿಸಬೇಕೆಂದಿಚ್ಛಿಸುವುದರಿಂದ ಈ ಗಂಗಾನದಿಯ ದಡಗಳಲ್ಲಿರುವ ವನದ ಸೌಂದರ್ಯವು ಅದ್ಭುತವಾದುದು.

**ಮನೋಭವ[೧೦]ನಿವೇಶಸ್ಯ ಲಕ್ಷ್ಮೀರತ್ರ ವಿತನ್ಯತೇ ।**
**ಸುರದಂಪತಿಭಿಃ ಸ್ವೈರಮಾರಬ್ಧರತಿವಿಭ್ರಮೈಃ ॥ ೩೬ ॥**

ಇಲ್ಲಿ ಯಥೇಚ್ಛವಾಗಿ ರತಿಕ್ರೀಡೆಗಳನ್ನಾರಂಭಿಸಿದ ದೇವದಂಪತಿಗಳು ಮನ್ಮಥನ ಸೈನ್ಯವಿಳಿದಿರುವ ಸ್ಥಾನದ ಶೋಭೆಗಳನ್ನು ವಿಸ್ತರಿಸುತ್ತಾರೆ. ದೇವದಂಪತಿಗಳು ರತಿವಿಲಾಸಗಳನ್ನು ಮಾಡುತ್ತಿರುವ ಸ್ಥಾನವು ಮನ್ಮಥನ ಸೈನ್ಯವಿಳಿದಿರುವ ಸ್ಥಾನದಂತೆ ಶೋಭಿಸುತ್ತದೆಂದು ಭಾವವು.

**ಇಯಂ ನಿಧುವನಾಸಕ್ತಾಃ ಸುರಸ್ತ್ರೀರತಿಕೋಮಲಾಃ ।**
**ಹಸತೀವ ತರಂಗೋತ್ಥೈಃ ಶೀಕರೈರಮರಾಪಗಾ ॥ ೩೭ ॥**

ಈ ದೇವಗಂಗೆಯು ರತಿಕ್ರೀಡೆಯಲ್ಲಿ ಆಸಕ್ತರೂ ಅತ್ಯಂತ ಸುಕುಮಾರಿಯರೂ ಆದ ದೇವಸ್ತ್ರೀಯರನ್ನು ಅಲೆಗಳಿಂದುಂಟಾದ ಜಲಬಿಂದುಗಳಿಂದ ಪರಿಹಾಸ್ಯ ಮಾಡುತ್ತಿದೆಯೋ ಎಂಬಂತಿದೆ.

**ಇತಃ ಕಿನ್ನರಸಂಗೀತಮಿತಃ ಸಿದ್ಧೋಪವೀಣಿತಮ್ ।**
**ಇತೋ ವಿದ್ಯಾಧರೀನೃತ್ತಮಿತಸ್ತದ್ಗತಿವಿಭ್ರಮಃ ॥ ೩೮ ॥**

ಈ ಕಡೆಯಲ್ಲಿ ಕಿನ್ನರದೇವತೆಗಳ ಸಂಗೀತವಾಗುತ್ತಿದೆ. ಈ ಕಡೆಯಲ್ಲಿ ಸಿದ್ಧದೇವತೆಗಳು ವೀಣೆಯನ್ನು ಬಾರಿಸುತ್ತಿದ್ದಾರೆ. ಈ ಕಡೆಯಲ್ಲಿ ವಿದ್ಯಾಧರಸ್ತ್ರೀಯರ ನರ್ತನವಾಗುತ್ತಿದೆ. ಈ ಕಡೆಯಲ್ಲಿ ಆ ವಿದ್ಯಾಧರಸ್ತ್ರೀಯರ ನಡಿಗೆಯ ವಿಲಾಸವಿದೆ.

**ನೃತ್ತಮಪ್ಸರಸಾಂ ಪಶ್ಯನ್ ಶೃಣ್ವಂಸ್ತದ್ಗೀತನಿಃಸ್ವನಮ್ ।**
**[೧]ವಾಜಿವಕ್ತ್ರೋಯಮುದ್ಗ್ರೀವಃ ಸಮಮಾಸ್ತೇ ಸ್ವಕಾಂತಯಾ ॥ ೩೯ ॥**

ಅಪ್ಸರಸ್ತ್ರೀಯರ ನರ್ತನವನ್ನು ನೋಡುತ್ತಲೂ ಅವರ ಗಾಯನದ ಶಬ್ದವನ್ನು ಕೇಳುತ್ತಲೂ ಇರುವ ಈ ಕುದುರೆಯ ಮುಖದ ಕಿನ್ನರದೇವನು ತನ್ನಪತ್ನಿಯೊಡನೆ ಕುತ್ತಿಗೆಯನ್ನೆತ್ತಿ ಕುಳಿತಿದ್ದಾನೆ.

**ನಿಷ್ಪರ್ಯಾಯಂ ವನೇಮುಷ್ಮಿನ್ನೃತುವರ್ಗೋ ವಿವರ್ಧತೇ ।**
**ಪರಸ್ಪರಮಿವ ದ್ರಷ್ಟುಮುತ್ಸುಕಾಯಿತಮಾನಸಃ ॥ ೪೦ ॥**

ಈ ವನದಲ್ಲಿ ಆರು ಋತುಗಳ ಸಮೂಹವು ಅನ್ಯೋನ್ಯವಾಗಿ ನೋಡುವುದಕ್ಕೋಸ್ಕರ ಕುತೂಹಲವುಳ್ಳ ಮನಸ್ಸುಳ್ಳುದಾಗಿದೆಯೋ ಎಂಬಂತೆ ಕ್ರಮವಿಲ್ಲದೆ ವೃದ್ಧಿಯನ್ನು ಹೊಂದುತ್ತದೆ. ಒಂದೇ ಕಾಲದಲ್ಲಿ ವಸಂತ ಮೊದಲಾದ ಆರು ಋತುಗಳ ವರ್ತನೆಯೂ ಇದೆಯೆಂದು ಭಾವವು.

**ಅಶೋಕತರುರತ್ರಾಯಂ ತನುತೇ ಪುಷ್ಪಮಂಜರೀಮ್ ।**
**ಲಾಕ್ಷಾರಕ್ತೈಃ ಖಗಸ್ತ್ರೀಣಾಂ ಚರಣೈರಭಿತಾಡಿತಃ ॥ ೪೧ ॥**

ಈ ಪ್ರದೇಶಗಳಲ್ಲಿ ಅರಗಿನ ರಸದಿಂದ ಲೇಪಿಸಲ್ಪಟ್ಟ ವಿದ್ಯಾಧರಸ್ತ್ರೀಯರ ಕಾಲುಗಳಿಂದ ಒದೆಯಲ್ಪಟ್ಟ ಈ ಅಶೋಕವೃಕ್ಷವು ಪುಷ್ಪಗಳ ಗೊಂಚಲನ್ನು ಧರಿಸುತ್ತದೆ.

**ಪುಂಸ್ಕೋಕಿಲಕಲಾಲಾಪಮುಖರೀಕೃತದಿಙ್ಮುಖಃ ।**
**ಚೂತೋಯಂ ಮಂಜರೀರ್ಧತ್ತೇ ಮದನಸ್ಯೇವ [೨]ತೀರಿಕಾಃ ॥ ೪೨ ॥**

ಗಂಡುಕೋಗಿಲೆಯ ಮನೋಹರವಾದ ಶಬ್ದದಿಂದ ಹತ್ತುದಿಕ್ಕುಗಳಲ್ಲೂ ಶಬ್ದವನ್ನುಂಟುಮಾಡಿದ ಈ ಮಾವಿನ ವೃಕ್ಷವು, ಮನ್ಮಥನ ಬಾಣಗಳನ್ನೋಪಾದಿಯಲ್ಲಿ, ಪುಷ್ಪಗಳ ಗೊಂಚಲುಗಳನ್ನು ಧರಿಸಿರುತ್ತದೆ.

**ಚಂಪಕಾ [೩]ವಿಕಸಂತೋತ್ರ [೪]ಕುಸುಮರ್ತೌ [೫]ವಿತನ್ವತಿ ।**
**ಪ್ರದೀಪಾನಿವ ಪುಷ್ಪೌಘಾನ್ ದಧತೀಮೇ ಮನೋಭುವಃ ॥ ೪೩ ॥**

ವಸಂತಕಾಲವು ಪ್ರಾಪ್ತವಾಗುತ್ತಿರಲು ಈ ಪ್ರದೇಶಗಳಲ್ಲಿ ವಿಕಸಿತವಾದ ಈ ಚಂಪಕವೃಕ್ಷಗಳು, ಮನ್ಮಥನಿಗೆ ದೀಪಗಳನ್ನು ಧರಿಸುವಂತೆ, ಪುಷ್ಪಸಮೂಹಗಳನ್ನು ಧರಿಸುತ್ತವೆ.

೧ ಅಸ್ಮಾಕಂ. ೨ ಅತಿಥಿತ್ವಂ. ೩ ಅಭಿಮುಖಮಾಗಚ್ಛತಿ. ೪ ಪ್ರಮಾಣರಹಿತಂ, ಪ್ರವೇಷ್ಟುಮಶಕ್ಯಂ ವಾ. ೫ ಶಯನಾಂಚಿತೈಃ, ಪ್ರಸ್ತರಾಚಿತೈರಿತ್ಯಪಿ ಪಾಠಃ. ೬ ವಿದ್ಯಾಧರಾಃ. ೭ ಅವಜ್ಞಾತಾಃ. ೮ ರಂತುಮಿಚ್ಛಂತಿ. ೯ ಯಸ್ಮಾತ್ಕಾರಣಾತ್. ೧೦ ಕಟಕಸ್ಯ.

೧ ತುರಂಗಮುಖಕಿನ್ನರಃ. ೨ ಬಾಣಾನ್. ೩ ವಿಕಸಂತೀತ್ಯಪಿ ಪಾಠಃ. ೪ ವಸಂತಕಾಲೇ. ೫ ವಿಸ್ತೃತೇ ಸತಿ.

**ಸಹಕಾರೇಷ್ವಮೀ ಮತ್ತಾ [೧]ವಿರುವಂತಿ ಮಧುವ್ರತಾಃ ।**
**ವಿಜಿಗೀಷೋರನಂಗಸ್ಯ ಕಾಹಲಾ ಇವ ಪೂರಿತಾಃ ॥ ೪೪ ॥**

ಮದಿಸಿರುವ ಈ ಭ್ರಮರಗಳು, ಲೋಕವನ್ನು ಜಯಿಸಬೇಕೆಂದಿಚ್ಛಿಸುವ ಮನ್ಮಥನ ಊದಲ್ಪಟ್ಟ ತುತೂರಿಗಳೋ ಎಂಬಂತೆ, ಮಾವಿನ ವೃಕ್ಷಗಳಲ್ಲಿ ಶಬ್ದ ಮಾಡುತ್ತವೆ.

**ಕೋಕಿಲಾನಕನಿಃಸ್ವಾನೈರಲಿಜ್ಯಾರವಜೃಂಭಿತೈಃ ।**
**[೨]ಅಭಿಷೇಣಯತೀವಾತ್ರ ಮನೋಭೂರ್ಭುವನತ್ರಯಮ್ ॥ ೪೫ ॥**

ಈ ಪ್ರದೇಶದಲ್ಲಿ ಮನ್ಮಥನು ಕೋಗಿಲೆಗಳೆಂಬ ಭೇರಿಯ ಶಬ್ದಗಳಿಂದಲೂ ಭ್ರಮರಗಳೆಂಬ ಶಿಂಜಿನಿಯ ಶಬ್ದಗಳಿಂದಲೂ ಸೈನ್ಯದೊಡನೆ ಮೂರು ಲೋಕಕ್ಕೆ ಅಭಿಮುಖನಾಗಿ ಹೋಗುತ್ತಿದ್ದಾನೆಯೋ ಎಂಬಂತಿದೆ.

**[೩]ನಿಚುಲಃ ಸಹಕಾರೇಣ ವಿಕಸನ್ನತ್ರ [೪]ಮಾಧವೀಮ್ ।**
**ತನೋತಿ ಲಕ್ಷ್ಮೀಮಕ್ಷೂಣಾಮಹೋ ಪ್ರಾವೃಟ್ ಶ್ರಿಯಾ ಸಮಮ್ ॥**

ಇಲ್ಲಿ ಮಾವಿನ ವೃಕ್ಷದೊಡನೆ ವಿಕಸಿತವಾದ ಗನ್ನೇರಳೆ ಅಥವಾ ಬೇವಿನ ಮರವು ವರ್ಷಾಕಾಲದ ಶೋಭೆಯೊಡನೆ ವಸಂತಕಾಲಸಂಬಂಧಿಯೂ ಸಂಪೂರ್ಣವೂ ಆದ ಶೋಭೆಯನ್ನುಂಟುಮಾಡುತ್ತದೆ. ಆಶ್ಚರ್ಯವು ! ಬೇರೆ ಬೇರೆ ಋತುಗಳಲ್ಲಿ ವಿಕಸಿತವಾಗುವ ವೃಕ್ಷಗಳು ಒಂದೇ ಕಾಲದಲ್ಲಿ ವಿಕಸಿತವಾದುವೆಂದು ಭಾವವು.

**[೫]ಮಾಧವೀಸ್ತಬಕೇಷ್ವತ್ರ [೬]ಮಾಧವೋದ್ಯ ವಿಜೃಂಭತೇ ।**
**ವನಲಕ್ಷ್ಮೀಪ್ರಹಾಸಸ್ಯ ಲೀಲಾಂ ತನ್ವತ್ಸು ವಿಶ್ವತಃ ॥ ೪೭ ॥**

ಈ ಪ್ರದೇಶದಲ್ಲಿ ಸುತ್ತಲೂ ವನಲಕ್ಷ್ಮಿಯ ಹಾಸ್ಯದ ಶೋಭೆಯನ್ನು ವಿಸ್ತರಿಸುತ್ತಿರುವ ಮಾಧವೀಲತೆಗಳ ಗೊಂಚಲುಗಳಲ್ಲಿ ಈಗ ಚೈತ್ರಮಾಸವು ವೃದ್ಧಿ ಹೊಂದುತ್ತದೆ. ವನಲಕ್ಷ್ಮಿಯ ಹಾಸ್ಯದಂತಿರುವ ಮಾಧವೀಲತೆಗಳ ಗೊಂಚಲುಗಳಲ್ಲಿ ಚೈತ್ರಮಾಸವು ವ್ಯಕ್ತವಾಗಿ ತೋರುತ್ತದೆಂದು ಭಾವವು.

**[೭]ವಾಸಂತ್ಯೋ ವಿಕಸಂತ್ಯೇತಾ ವಸಂತರ್ತುಸ್ಮಿತಶ್ರಿಯಮ್ ।**
**ತನ್ವಾನಾಃ ಕುಸುಮಾಮೋದೈರಾಕುಲೀಕೃತಷಟ್ಪದಾಃ ॥ ೪೮ ॥**

ವಸಂತಋತುವಿನ ಮುಗುಳುನಗೆಯ ಶೋಭೆಯನ್ನು ವಿಸ್ತರಿಸುತ್ತಿರುವುವೂ ಪುಷ್ಪಗಳ ಪರಿಮಳಗಳಿಂದ ವ್ಯಾಕುಲವಾಗಿ ಮಾಡಲ್ಪಟ್ಟ ಭ್ರಮರಗಳುಳ್ಳುವೂ ಆದ ಈ ಮಾಧವೀಲತೆಗಳು ಅರಳುತ್ತಿವೆ.

**ಮಲ್ಲಿಕಾ ವಿತತಾಮೋದೈರ್ವಿಲೋಲೀಕೃತಷಟ್ಪದಃ ।**
**ಪಾದಪೇಷು ಪದಂ ಧತ್ತೇ [೮]ಶುಚಿಃ [೯]ಪುಷ್ಪಶುಚಿಸ್ಮಿತಃ ॥ ೪೯ ॥**

ಮಲ್ಲಿಗೆಹೂಗಳ ವಿಸ್ತೃತವಾದ ಪರಿಮಳಗಳಿಂದ ಚಂಚಲವಾಗಿಮಾಡಲ್ಪಟ್ಟ ಭ್ರಮರಗಳುಳ್ಳುದೂ ಪುಷ್ಪಗಳೆಂಬ ನಿರ್ಮಲವಾದ ನಗೆಯುಳ್ಳುದೂ ಆದ ಗ್ರೀಷ್ಮ ಋತುವು ವೃಕ್ಷಗಳಲ್ಲಿ ಸ್ಥಾನವನ್ನು ಹೊಂದುತ್ತದೆ. ವೃಕ್ಷಗಳಲ್ಲಿ ಗ್ರೀಷ್ಮಋತುವಿನ ಚಿಹ್ನೆಗಳು ಕಾಣಲಾರಂಭಿಸಿದುವೆಂದರ್ಥವು.

**ಕದಂಬಾಮೋದಸುರಭಿಃ ಕೇತಕೀಧೂಲಿ[೧೦]ಧೂಸರಃ ।**
**[೧೧]ತಾಪಾತ್ಯಯಾನಿಲೋ ದೇವ ನಿತ್ಯಮತ್ರ ವಿಜೃಂಭತೇ ॥ ೫೦ ॥**

ಪ್ರಭುವೆ ! ಈ ಪ್ರದೇಶದಲ್ಲಿ ಕದಂಬಪುಷ್ಪಗಳ ಪರಿಮಳದಿಂದ ಸುಗಂಧಿತವೂ ಕೇತಕೀಪುಷ್ಪಧೂಳಿಯಿಂದ ಸ್ವಲ್ಪ ಶುಭ್ರವೂ ವರ್ಷಾಕಾಲಸಂಬಂಧಿಯೂ ಆದ ಗಾಳಿಯು ಯಾವಾಗಲೂ ಬೀಸುತ್ತಿದೆ.

೧ ಧ್ವನಂತಿ. ೨ ಸೇನಯಾಭಿಯಾತಿ. ೩ ನಿಚುಲೋಹಿಜ್ಜುಲೋಂಬುಜ ಇತ್ಯಮರಃ. ೪ ವಸಂತಸಂಬಂಧಿನೀಂ. ೫ ಅತಿಮುಕ್ತಃ ಪುಂಡ್ರಕಃ ಸ್ಯಾದ್ವಾಸಂತೀ ಮಾಧವೀ ಲತಾ, ವಾಸಂತೀ ಗುಚ್ಛಕೇಷು. ೬ ಚೈತ್ರಃ. ೭ ಮಾಧವೀಲತಾಃ. ೮ ಗ್ರೀಷ್ಮಃ. ೯ ಪುಷ್ಪಾಣ್ಯೇವ ಶುಚಿಸ್ಮಿತೋ ಯಸ್ಯ ಸಃ. ೧೦ ಈಷತ್ಪಾಂಡುಸ್ತು ಧೂಸರಃ. ೧೧ ವರ್ಷಾಕಾಲವಾಯುಃ.

**ಮಾದ್ಯಂತಿ ಕೋಕಿಲಾಃ ಶಶ್ವತ್ಸಮಮತ್ರ ಶಿಖಂಡಿಭಿಃ ।**
**ಕಲಹಂಸೀಕಲಸ್ವಾನೈಃ [೧]ಸಮ್ಮೂರ್ಛಿತವಿಕೂಜಿತಾಃ ॥ ೫೧ ॥**

ಈ ಪ್ರದೇಶದಲ್ಲಿ ಕೋಗಿಲೆಗಳು ಬಾರಿಬಾರಿಗೆ ನವಿಲುಗಳೊಡನೆ ಸೇರಿಕೊಂಡು ಸ್ತ್ರೀಹಂಸಪಕ್ಷಿಗಳ ಮಧುರವಾದ ಶಬ್ದಗಳೊಡನೆ ತಮ್ಮ ಶಬ್ದಗಳನ್ನು ಮಿಶ್ರ ಮಾಡುವುವುಗಳಾಗಿ ಮದಿಸುತ್ತಿವೆ.

**ಕೂಜಂತಿ ಕೋಕಿಲಾ ಮತ್ತಾಃ [೨]ಕೇಕಾಯಂತೇ ಕಲಾಪಿನಃ ।**
**ಉಭಯಸ್ಯಾಸ್ಯ ವರ್ಗಸ್ಯ ಹಂಸಾಃ ಪ್ರತ್ಯಾಲಪಂತ್ಯಮೀ ॥ ೫೨ ॥**

ಮದಿಸಿರುವ ಕೋಗಿಲೆಗಳು ಅಸ್ಫುಟವಾಗಿ ಧ್ವನಿಮಾಡುತ್ತವೆ. ನವಿಲುಗಳು ತಮ್ಮ ಕೇಕಾಧ್ವನಿಯನ್ನು ಮಾಡುತ್ತವೆ. ಈ ಎರಡು ವಿಧವಾದ ಪಕ್ಷಿಗಳ ಗುಂಪಿನ ಶಬ್ದವನ್ನನುಸರಿಸಿ ಈ ಹಂಸಪಕ್ಷಿಗಳು ಧ್ವನಿಮಾಡುತ್ತವೆ. ವನದಲ್ಲಿ ಒಂದೇ ಕಾಲದಲ್ಲಿ ವಸಂತಋತು, ವರ್ಷಋತು, ಶರದೃತುಗಳು ವ್ಯಕ್ತವಾಗುತ್ತಿವೆಯೆಂದು ಭಾವವು.

**ಇತೋಮೀ ಕಿನ್ನರೀಗೀತ[೩]ಮನುಕೂಜಂತಿ ಷಟ್ಪದಾಃ ।**
**[೪]ಸಿದ್ಧೋಪವೀಣಿತಾನ್ಯೇಷ [೫]ನಿಹ್ನುತೇನ್ಯಭೃತಸ್ವನಃ ॥ ೫೩ ॥**

ಈ ಕಡೆಯಲ್ಲಿ ಈ ಭ್ರಮರಗಳು ಕಿನ್ನರ ದೇವಸ್ತ್ರೀಯರ ಗಾನವನ್ನನುಸರಿಸಿ ಧ್ವನಿ ಮಾಡುತ್ತವೆ. ಈ ಕೋಗಿಲೆಯ ಧ್ವನಿಯು ಸಿದ್ಧದೇವತೆಗಳ ವೀಣಾಶಬ್ದಗಳನ್ನು ತಿರಸ್ಕರಿಸುತ್ತದೆ.

**ಜಿತನೂಪುರಝಂಕಾರಮಿತೋ ಹಂಸವಿಕೂಜಿತಮ್ ।**
**ಇತಶ್ಚ ಖೇಚರೀನೃತ್ಯ[೬]ಮನುನೃತ್ಯಚ್ಛಿಖಾವಲಮ್ ॥ ೫೪ ॥**

ಈ ಕಡೆಯಲ್ಲಿ ಹಂಸಪಕ್ಷಿಗಳ ಧ್ವನಿಯು ಪಾದಕಡಗದ ಝೇಂಕಾರಶಬ್ದವನ್ನು ಜಯಿಸಿದೆ. ಈ ಕಡೆಯಲ್ಲಿ ವಿದ್ಯಾಧರಸ್ತ್ರೀಯರ ನರ್ತನವನ್ನನುಸರಿಸಿ ನವಿಲು ನರ್ತನಮಾಡುತ್ತಿದೆ.

**ಇತಶ್ಚ ಸೈಕತೋತ್ಸಂಗೇ ಸುಪ್ತಾನ್ ಹಂಸಾನ್ ಸಶಾಬಕಾನ್ ।**
**ಪ್ರಾತಃ ಪ್ರಬೋಧಯ[೭]ತ್ಯುಚ್ಚೈಃ ಖೇಚರೀನೂಪುರಾರವಃ ॥ ೫೫ ॥**

ಈಕಡೆಯಲ್ಲಿ ವಿದ್ಯಾಧರಸ್ತ್ರೀಯರ ಪಾದಕಡಗದ ಶಬ್ದವು ಮರಳಿನ ರಾಶಿಯಲ್ಲಿ ತಮ್ಮ ಮರಿಗಳೊಡನೆ ಮಲಗಿರುವ ಹಂಸಪಕ್ಷಿಗಳನ್ನು ಪ್ರಾತಃಕಾಲದಲ್ಲಿ ಚೆನ್ನಾಗಿ ಎಚ್ಚರಗೊಳಿಸುತ್ತದೆ.

**ಇತಶ್ಚ ರಚಿತಾನಲ್ಪಪುಷ್ಪತಲ್ಪಮನೋಹರಾಃ ।**
**ಚಂದ್ರಕಾಂತಶಿಲಾಗರ್ಭಾಃ ಸುರೈರ್ಭೋಗ್ಯಾ ಲತಾಲಯಾಃ ॥ ೫೬ ॥**

ಈ ಕಡೆಯಲ್ಲಿ ಹೆಚ್ಚಾಗಿ ರಚಿಸಿದ ಪುಷ್ಪಶಯನಗಳಿಂದ ಮನೋಹರವೂ ಮಧ್ಯದಲ್ಲಿಚಂದ್ರಕಾಂತಶಿಲೆಗಳುಳ್ಳುವೂ ದೇವತೆಗಳಿಂದ ಭೋಗಿಸುವುದಕ್ಕೆ ಯೋಗ್ಯಗಳೂ ಆದ ಲತಾಮಂಟಪಗಳಿವೆ.

**ಇತೀದಂ ವನಮತ್ಯಂತರಮಣೀಯೈಃ [೮]ಪರಿಚ್ಛದೈಃ ।**
**ಸ್ವರ್ಗೋದ್ಯಾನ[೯]ಗತಾಂ ಪ್ರೀತಿಂ ಜನಯೇ[೧೦]ತ್ಸ್ವಃಸದಾಂ ಸದಾ ॥ ೫೭ ॥**

ಈಪ್ರಕಾರವಾಗಿ ಅತ್ಯಂತ ರಮಣೀಯವಾದ ಸಾಮಗ್ರಿಗಳಿಂದ ಯುಕ್ತವಾದ ಈ ವನವು ಯಾವಾಗಲೂ ದೇವತೆಗಳಿಗೆ ಸ್ವರ್ಗದಲ್ಲಿರುವ ಉದ್ಯಾನದ ಪ್ರೀತಿಯನ್ನುಂಟುಮಾಡುವುದು.

**ಬಹಿಸ್ತಟವನಾದೇತದ್ದೃಶ್ಯತೇ ಕಾನನಂ ಮಹತ್ ।**
**ನಾನಾದ್ರುಮಲತಾಗುಲ್ಮ[೧೧]ವೀರುದ್ಭಿರತಿದುರ್ಗಮಮ್ ॥ ೫೮ ॥**

೧ ಮಿಶ್ರಿತಃ. ೨ ಕೇಕಾಂ ಕುರ್ವಂತಿ. ೩ ಪ್ರತ್ಯುತ್ತರಂ ಕುರ್ವಂತಿ. ೪ ದೇವವಿಶೇಷವೀಣಾರವಾನ್ ೫ ಅಪಲಾಪಂ ಕುರುತೇ. ೬ ಅನುಗತಂ ನೃತ್ಯನ್ ಶಿಖಾವಲೋ ಯಸ್ಯ. ೭ ಉದ್ಯನ್ನಿತ್ಯಪಿ ಪಾಠಃ. ೮ ಪರಿಕರೈಃ. ೯ ಲತಾಪ್ರೀತಿಮಿತ್ಯಪಿ ಪಾಠಃ. ೧೦ ದೇವಾನಾಂ. ೧೧ ಲತಾಭಿಃ.

ಗಂಗಾನದಿಯ ದಡದಲ್ಲಿರುವ ವನದಿಂದ ಹೊರಗಿರುವ ಈ ದೊಡ್ಡ ಅರಣ್ಯವು ಅನೇಕ ಪ್ರಕಾರವಾದ ಬಳ್ಳಿಗಳಿಂದಲೂ ಪೊದರುಗಳಿಂದಲೂ ಲತೆಗಳಿಂದಲೂ ಪ್ರವೇಶಮಾಡುವುದಕ್ಕೆ ಬಹಳ ಕಠಿನವಾಗಿ ಕಾಣಿಸುತ್ತದೆ.

**ದೃಷ್ಟೀನಾಮಪ್ಯಗಮ್ಯೇಸ್ಮಿನ್ ವನೇ ಮೃಗಕದಂಬಕಮ್ ।**
**ನಾನಾಜಾತೀಯಮುದ್ಭ್ರಾಂತಂ ಸೈನ್ಯಕ್ಷೋಭಾತ್ಪ್ರಧಾವತಿ ॥ ೫೯ ॥**

ದೃಷ್ಟಿಗಳಿಗೆ ಅಗೋಚರವಾದ ಈ ವನದಲ್ಲಿ ಅನೇಕಜಾತಿಯ ಮೃಗಗಳ ಸಮೂಹವು ಸೈನ್ಯದ ಗಲಿಬಿಲಿಯಿಂದ ಗಾಬರಿಪಟ್ಟು ಓಡುತ್ತಿದೆ.

**ಇದಮಸ್ಮದ್ಬಲಕ್ಷೋಭಾ[೧]ದುತ್ತ್ರಸ್ತಮೃಗಸಂಕುಲಮ್ ।**
**ವನಮಾಕುಲಿತಪ್ರಾಣಮಿವಾಭಾ[೨]ತ್ಯಂಧಕಾರಿತಮ್ ॥ ೬೦ ॥**

ನಮ್ಮ ಸೈನ್ಯದ ಉಪದ್ರವದಿಂದ ಭಯಪಟ್ಟ ಮೃಗಗಳ ಸಮೂಹವುಳ್ಳುದೂ ಕತ್ತಲೆಯಿಂದ ಆವೃತವಾಗಿರುವುದೂ ಆದ ಈ ವನವು, ಆಕುಲಪಟ್ಟಿರುವ ಪ್ರಾಣಗಳುಳ್ಳುದಾಗಿದೆಯೋ ಎಂಬಂತೆ, ಪ್ರಕಾಶಿಸುತ್ತಿದೆ.

**ಗಜಯೂಥಮಿತಃ [೩]ಕಚ್ಛಾದಂಧಕಾರಮಿವಾಭಿತಃ ।**
**[೪]ವಿಶ್ಲಿಷ್ಟಂ ಬಲಸಂಕ್ಷೋಭಾದಪಸರ್ಪತ್ಯತಿದ್ರುತಮ್ ॥ ೬೧ ॥**

ಈಕಡೆಯಲ್ಲಿ ಸೈನ್ಯದ ಗಲಿಬಿಲಿಯಿಂದ ಚದರಿದುದೂ ಅಂಧಕಾರದಂತೆ ಕಪ್ಪಾದುದೂ ಆದ ಆನೆಗಳ ಹಿಂಡು ಹೆಚ್ಚಾಗಿ ನೀರುಳ್ಳ ಪ್ರದೇಶದಿಂದ ಬಹಳ ಶೀಘ್ರವಾಗಿ ಸುತ್ತಲೂ ತೊಲಗಿಹೋಗುತ್ತಿದೆ.

**ಶನೈಃ ಪ್ರಯಾತಿ [೫]ಸಂಜಿಘ್ರನ್ ದಿಶಃ ಪ್ರೋತ್ಕ್ಷಿಪ್ತಪುಷ್ಕರಃ ।**
**ಸಮಹಾಹಿರಿವಾದ್ರೀಂದ್ರೋ ಭದ್ರೋಽಯಂ ಗಜಯೂಥಪಃ ॥ ೬೨ ॥**

ದೊಡ್ಡ ಸರ್ಪಸಹಿತವಾಗಿರುವ ಮಹಾಮೇರುಪರ್ವತವೋ ಎಂಬಂತಿರುವ ಈ ಶ್ರೇಷ್ಠವಾದ ಸಲಗವು ಸೊಂಡಿಲನ್ನು ಮೇಲಕ್ಕೆತ್ತಿಕೊಂಡು ದಿಕ್ಕುಗಳನ್ನು ಆಘ್ರಾಣ ಮಾಡುವುದಾಗಿ ಮೆಲ್ಲನೆ ಹೋಗುತ್ತಿದೆ.

**[೬]ಮಹಾಹಿರಯಮಾಯಾಮಂ [೭]ಮಿಮಾನ ಇವ ಭೂರುಹಾಮ್ ।**
**ಶ್ವಸ[೮]ನ್ನಾಯಚ್ಛತೇ ಕಚ್ಛಾದೂರ್ಧ್ವೀಕೃತಶರೀರಕಃ ॥ ೬೩ ॥**

ಗಂಗಾನದಿಯ ದಡದಿಂದ ತನ್ನ ಶರೀರವನ್ನು ಉದ್ದವಾಗಿ ಮಾಡಿ ಮರವನ್ನು ಹತ್ತಿರುವ ಈ ದೊಡ್ಡ ಸರ್ಪವು ವೃಕ್ಷಗಳ ಉದ್ದಳತೆಯನ್ನು ಅಳೆಯುತ್ತದೋ ಎಂಬಂತೆ ಉಸಿರುಬಿಡುತ್ತ ಉದ್ದವಾಗುತ್ತಿದೆ.

**[೯]ಶಯುಪೋತಾ [೧೦]ನಿಕುಂಜೇಸ್ಮಿನ್ಪುಂಜೀಭೂತಾ ವಸಂತ್ಯಮೀ ।**
**ವನಸ್ಯೇವಾಂತ್ರಸಂತಾನಾಶ್ಚಮೂಕ್ಷೋಭಾದ್ವಿನಿಃಸೃತಾಃ ॥ ೬೪ ॥**

ಸೈನ್ಯದ ಉಪದ್ರವದಿಂದ ಹೊರಟಿರುವ ವನದ ಕರುಳುಗಳ ಸಮೂಹಗಳೋ ಎಂಬಂತೆ ಸಮೂಹವಾಗಿ ಸೇರಿರುವ ಈ ಹೆಬ್ಬಾವುಗಳ ಮರಿಗಳು ಈ ದೊಡ್ಡ ಪೊದರಿನಲ್ಲಿ ವಾಸಮಾಡುತ್ತವೆ.

**ಅಯ[೧೧]ಮೇಕಚರಃ [೧೨]ಪೋತ್ರಸಮುತ್ಖಾತಾಂತಿಕಸ್ಥಲಃ ।**
**ರುಣದ್ಧಿ ವರ್ತ್ಮ ಸೈನ್ಯಸ್ಯ ವರಾಹಸ್ತೀವ್ರರೋಷಣಃ ॥ ೬೫ ॥**

ಸಮೀಪಪ್ರದೇಶವನ್ನು ಮೂತಿಯಿಂದ ಅಗೆದಿರುವುದೂ ಬಹಳ ಕೋಪವುಳ್ಳುದೂ ಆದ ಈ ಹಂದಿಯು ಸೈನ್ಯದ ಮಾರ್ಗವನ್ನು ತಡೆಯುತ್ತದೆ.

**ಸೈನಿಕೈರಯ[೧೩]ಮಾರುದ್ಧಃ ಪಾಷಾಣಲಕುಟಾದಿಭಿಃ ।**
**ಆಕುಲೀಕುರುತೇ ಸೈನ್ಯಂ [೧೪]ಗಂಡೋ[೧೫]ಗಂಡ ಇವ ಸ್ಫುಟಮ್ ॥ ೬೬ ॥**

ಸೈನಿಕರಿಂದ ಕಲ್ಲು ದೊಣ್ಣೆ ಮೊದಲಾದುವುಗಳಿಂದ ಮುತ್ತಲ್ಪಟ್ಟ ಈ ಗೇಂಡಾಮೃಗ(ಖಡ್ಗಮೃಗ)ವು ಬೆಟ್ಟದಂತೆ ಸೈನ್ಯಕ್ಕೆ ತೊಂದರೆಯನ್ನುಂಟುಮಾಡುತ್ತದೆ.

**ಪ್ರಾಣಾ ಇವ ವನಾದಸ್ಮಾದ್ವಿನಿಷ್ಕ್ರಾಮಂತಿ ಸಂತತಾಃ ।**
**ಸಿಂಹಾ ಬಹು[೧]ದವಜ್ವಾಲಾ ಧುನ್ವಾನಾಃ ಕೇಸರಚ್ಛಟಾಃ ॥ ೬೭ ॥**

ಎಲ್ಲಾಕಡೆಗಳಲ್ಲೂ ವ್ಯಾಪಿಸಿರುವುವೂ ಹೆಚ್ಚಾದ ಕಾಡ್ಗಿಚ್ಚಿನ ಜ್ವಾಲೆಗೆ ಸಮಾನವೂ ಕೆಂಜೆಡೆಗಳನ್ನು ಕೊಡಹುತ್ತಿರುವುವೂ ಆದ ಸಿಂಹಗಳು ಈ ವನದಿಂದ ಪ್ರಾಣಗಳಂತೆ, ಹೊರಟುಹೋಗುತ್ತಿವೆ.

**ಗುಗ್ಗುಲೂನಾಂ ವನಾದೇಷ ಮಹಿಷೋ ಘನಕರ್ಬುರಃ ।**
**ನಿರ್ಯಾತಿ ಮೃತ್ಯುದಂಷ್ಟ್ರಾಭ[೨]ವಿಷಾಣಾಗ್ರಾತಿಭೀಷಣಃ ॥ ೬೮ ॥**

ಮೇಘದಂತೆ ನಾನಾವಿಧವಾದ ಬಣ್ಣವುಳ್ಳುದೂ ಮೃತ್ಯುವಿನ ಕೋರೆಹಲ್ಲಿಗೆ ಸಮಾನವಾದ ಕೊಂಬಿನ ತುದಿಯಿಂದ ಭಯಂಕರವೂ ಆದ ಈ ಕಾಡುಕೋಣವು ಗುಗ್ಗುಳವೃಕ್ಷಗಳ ವನದಿಂದ ಹೊರಡುತ್ತಿದೆ.

**[೩]ಲಲದ್ವಾಲಧಯೋ ಲೋಲಜಿಹ್ವಾ [೪]ವ್ಯಾಲೋಹಿತೇಕ್ಷಣಾಃ ।**
**ವ್ಯಾಲಾ ಬಲಸ್ಯ ಸಂಕ್ಷೋಭಮಮೀ ತನ್ವಂ[೫]ತ್ಯನಾಕುಲಾಃ ॥ ೬೯ ॥**

ಬಾಲಗಳನ್ನಲ್ಲಾಡಿಸುತ್ತಿರುವುವೂ ಚಂಚಲವಾದ ನಾಲಿಗೆಗಳುಳ್ಳುವೂ ಅತ್ಯಂತ ಕೆಂಪಾದ ಕಣ್ಣುಗಳುಳ್ಳುವೂ ಭೀತಿಯಿಲ್ಲದುವೂ ಆದ ಈ ಘಾತುಕಮೃಗಗಳು ಸೈನ್ಯಕ್ಕೆ ತೊಂದರೆಯನ್ನು ಮಾಡುತ್ತವೆ.

**[೬]ಶರಭಃ ಖಂ ಸಮುತ್ಪತ್ಯ ಪತ[೭]ನ್ನುತ್ತಾನಿತೋಽಪಿ ಸನ್ ।**
**ನೈಷ [೮]ದುಃಖಾಸಿಕಾಂ [೯]ವೇದ ಚರಣೈಃ ಪೃಷ್ಠವರ್ತಿಭಿಃ ॥ ೭೦ ॥**

ಎಂಟು ಕಾಲುಗಳುಳ್ಳ ಅಷ್ಟಾಪದವೆಂಬ ಮೃಗವು ಆಕಾಶಕ್ಕೆ ಹಾರಿ ಮೇಲ್ಮುಖ ಮತ್ತು ಕಾಲುಗಳುಳ್ಳುದಾಗಿ ಬಿದ್ದರೂ ಇದು ಬೆನ್ನಿನಲ್ಲಿರುವ ಕಾಲುಗಳಲ್ಲಿ ನಿಂತು ಕಷ್ಟವನ್ನು ತಿಳಿಯುವುದಿಲ್ಲ. ಬೆನ್ನಿನಲ್ಲಿರುವ ಕಾಲುಗಳಿಂದ ನಿಂತಿತೆಂದರ್ಥವು.

**[೧೦]ಚಮರೋಽಯಂ [೧೧]ಚಮೂರೋಧಾ[೧೨]ದ್ವಿದ್ರುತೋ ದ್ರುತಮುತ್ಪತನ್ ।**
**ಕ್ಷೋಭಂ ತನೋತಿ ಸೈನ್ಯಸ್ಯ ದರ್ಪೋ ರೂಪೀವ ದುರ್ಧರಃ ॥ ೭೧ ॥**

ಆಕಾರವನ್ನು ಧರಿಸಿರುವ ಅಹಂಕಾರವೋ ಎಂಬಂತಿರುವುದೂ ಸಹಿಸಲಶಕ್ಯವೂ ಸೈನ್ಯವು ತಡೆಯಾದುದರಿಂದ ಓಡುತ್ತಿರುವುದೂ ಶೀಘ್ರವಾಗಿ ಮೇಲಕ್ಕೆ ಹಾರುತ್ತಿರುವುದೂ ಆದ ಈ ಹುಲಿಯು ಸೈನ್ಯಕ್ಕೆ ತೊಂದರೆಯನ್ನು ಮಾಡುತ್ತದೆ.

**ಶಶಃ [೧೩]ಶಶನ್ನಯಂ ದೇವ ಸೈನಿಕೈ[೧೪]ರನನುದ್ರುತಃ ।**
**ಶರಣಾಯೇವ ಭೀತಾ[೧೫]ತ್ಮಾ [೧೬]ಮಧ್ಯೇ ಸೈನ್ಯಂ ನಿಲೀಯತೇ ॥ ೭೨ ॥**

ಪ್ರಭುವೆ! ಸೈನಿಕರಿಂದ ಹಿಂಬಾಲಿಸಲ್ಪಡದಿರುವುದೂ ಮೇಲಕ್ಕೆ ಹಾರಿಹೋಗುತ್ತಿರುವುದೂ ಆದ ಈ ಮೊಲವು ಭಯಗೊಂಡಿರುವ ಚಿತ್ತವುಳ್ಳುದಾಗಿ, ರಕ್ಷಣೆಗೋಸ್ಕರವೋ ಎಂಬಂತೆ, ಸೈನ್ಯದ ಮಧ್ಯದಲ್ಲಿ ಅವಿತುಕೊಳ್ಳುತ್ತದೆ.

**ಸಾರಂಗೋಽಯಂ ತನುಚ್ಛಾಯಾ[೧೭]ಕಲ್ಮಾಷಿತವನಃ ಶನೈಃ ।**
**ಪ್ರಯಾತಿ ಶೃಂಗಭಾರೇಣ ಶಾಖಿನೇವ [೧೮]ಪ್ರಶುಷ್ಯತಾ ॥ ೭೩ ॥**

೧ ಚಕಿತಃ. ೨ ಸಂಜಾತಾಂಧಕಾರಂ. ೩ ಜಲಬಹುಲಪ್ರದೇಶಾತ್. ೪ ವಿಭಕ್ತಂ. ೫ ಆಘ್ರಾಣಯನ್. ೬ ವೃಕ್ಷಾರೂಢಃ ಸರ್ಪಃ. ೭ ಪ್ರಮಿತಿಂ ಕುರ್ವನ್ನಿವ. ೮ ದೀರ್ಘೀ ಭವತಿ, ಆಗಚ್ಛತ ಇತ್ಯಪಿ ಪಾಠಃ. ೯ ಅಜಗರಶಿಶವಃ. ೧೦ ನಿಕುಂಜೇಷ್ವಿತ್ಯಪಿ ಪಾಠಃ. ೧೧ ಏಕಃ. ೧೨ ಮುಖಾಗ್ರಂ. ೧೩ ವೇಷ್ಟಿತಃ. ೧೪ ಖಡ್ಗಿಮೃಗಃ. ೧೫ ಗಂಡಶೈಲ ಇವ.

೧ ದವಜ್ವಾಲಾತುಲ್ಯಾಃ. ೨ ವಿಷಾಣಾಗ್ರ ಇತ್ಯಪಿ ಪಾಠಃ. ೩ ಚಲತ್. ೪ ಅತ್ಯರುಣೇಕ್ಷಣಾಃ. ೫ ನಿರ್ಭೀತಾಃ. ೬ ಅಷ್ಟಾಪದಃ. ೭ ಊರ್ಧ್ವಮುಖಚರಣೋ ಭೂತ್ವಾ. ೮ ದುಃಖಸ್ಥಿತಿಂ. ೯ ಜಾನಾತಿ. ೧೦ ವ್ಯಾಘ್ರಃ. ೧೧ ಸೇನಾನಿರೋಧಾತ್. ೧೨ ಧಾವಮಾನಃ. ೧೩ ಉತ್ಪ್ಲುತ್ಯ ಗಚ್ಛನ್. ೧೪ ಅನನುಗತಃ. ೧೫ ಚಿತ್ತಃ. ೧೬ ಸೈನ್ಯಮಧ್ಯೇ. ೧೭ ಶಬಲಿತವನಃ. ೧೮ ಶುಷ್ಕೇಣ.

ಶರೀರದ ವರ್ಣದಿಂದ ವನವನ್ನು ಚಿತ್ರವರ್ಣವಾಗಿ ಮಾಡಿದ ಈ ಹುಲ್ಲೆಯು ಒಣಗಿರುವ ಮರದಂತಿರುವ ಕೊಂಬಿನ ಭಾರದಿಂದ ಮೆಲ್ಲನೆ ಹೋಗುತ್ತದೆ.

**[1]ದಕ್ಷಿಣೇರ್ಮತಯಾ ವಿಷ್ವಗಭಿಧಾವಂತ್ಯ [2]ಪೀಕ್ಷಿತಾ ।**
**ಪ್ರಜಾನುಪಾಲನಂ ನ್ಯಾಯ್ಯಂ ತವಾಚಷ್ಟೇ [3]ಮೃಗಪ್ರಜಾ ॥ ೭೪ ॥**

ಸ್ವಾಮಿಯೆ ! ಬಲದ ಭಾಗದಲ್ಲಿ ವ್ರಣಮಾಡಲ್ಪಟ್ಟಿರುವುದರಿಂದ ಸುತ್ತಲೂ ಓಡುತ್ತಿದ್ದರೂ ಸೈನಿಕರಿಂದ ನೋಡಲ್ಪಟ್ಟ ಜಿಂಕೆಗಳ ಸಮೂಹವು ನಿನಗೆ ನ್ಯಾಯವಾದ ಪ್ರಜಾಪರಿಪಾಲನವನ್ನು ಹೇಳುತ್ತಿದೆ. ಪ್ರಜಾಪರಿಪಾಲನವನ್ನು ನ್ಯಾಯವಾಗಿ ಮಾಡಬೇಕೆಂದು ಹೇಳುವಂತಿದೆಯೆಂದು ಭಾವವು.

**ಕಲಾಪೀ ಬರ್ಹಭಾರೇಣ ಮಂದಂಮಂದಂ ವ್ರಜತ್ಯಸೌ ।**
**ಕೇಶಪಾಶಶ್ರಿಯಂ ತನ್ವನ್ವನಲಕ್ಷ್ಮ್ಯಾ [4]ಸ್ತನೂರುಹೈಃ ॥ ೭೫ ॥**

ತನ್ನ ಗರಿಗಳಿಂದ ವನಲಕ್ಷ್ಮಿಯ ಕೂದಲುಗಳ ಸಮೂಹದ ಶೋಭೆಯನ್ನು ವಿಸ್ತರಿಸುತ್ತಿರುವ ಈ ನವಿಲು ತನ್ನ ಗರಿಗಳ ಭಾರದಿಂದ ಮೆಲ್ಲಮೆಲ್ಲನೆ ಹೋಗುತ್ತಿದೆ. ನವಿಲಿನ ಗರಿಗಳು ವನಲಕ್ಷ್ಮಿಯ ಕೂದಲುಗಳ ಸಮೂಹದಂತೆ ಶೋಭಿಸುತ್ತಿದ್ದುವೆಂದು ಭಾವವು.

**ನೇತ್ರಾವಲೀಮಿವಾತನ್ವನ್ವನಭೂಮ್ಯಾಃ ಸಚಂದ್ರಕೈಃ ।**
**ಕಲಾಪಿನಾಮಯಂ ಸಂಘೋ ವಿಭಾತ್ಯಸ್ಮಿನ್ವನಸ್ಥಲೇ ॥ ೭೬ ॥**

ಈ ವನಪ್ರದೇಶದಲ್ಲಿರುವ ನವಿಲುಗಳ ಸಮೂಹವು ಚಂದ್ರಾಕಾರವಾಗಿ ಹರಡಿರುವ ಗರಿಗಳಿಂದ ವನಭೂಮಿಯ ನೇತ್ರಗಳ ಸಾಲನ್ನು ಹರಡುತ್ತದೆಯೋ ಎಂಬಂತೆ ಶೋಭಿಸುತ್ತದೆ.

**[5]ಸಂಕ್ರೀಡತಾಂ ರಥಾಂಗಾನಾಂ ಸ್ವನಮಾಕರ್ಣಯನ್ಮುಹುಃ ।**
**ಹರಿಣಾನಾಮಿದಂ [6]ಯೂಥಂ ನಾಪಸರ್ಪತಿ ವರ್ತ್ಮನಃ ॥ ೭೭ ॥**

ಬಾರಿಬಾರಿಗೆ ಚೀತ್ಕಾರಶಬ್ದವನ್ನು ಮಾಡುತ್ತಿರುವ ರಥಚಕ್ರಗಳ ಶಬ್ದವನ್ನು ಕೇಳುತ್ತಿರುವ ಈ ಜಿಂಕೆಗಳ ಸಮೂಹವು ಮಾರ್ಗದಿಂದ ತೊಲಗುವುದಿಲ್ಲ. ಜಿಂಕೆಗಳ ಗುಂಪು ರಥಚಕ್ರಗಳ ಚೀತ್ಕಾರಶಬ್ದಕ್ಕೆ ಆಸಕ್ತವಾಗಿ ಮಾರ್ಗದಿಂದ ತೊಲಗುವುದಿಲ್ಲವೆಂದು ಭಾವವು.

**ಹರಿಣೀ[7]ಪ್ರೇಕ್ಷಿತೇಷ್ವೇತಾಃ ಪಶ್ಯಂತಿ ಸಕುತೂಹಲಮ್ ।**
**ಸ್ವಾಂ ನೇತ್ರಶೋಭಾಂ ಕಾಮಿನ್ಯೋ ಬರ್ಹಿಬರ್ಹೇಷು ಮೂರ್ಧಜಾನ್॥**

ಈ ಕಾಮುಕಸ್ತ್ರೀಯರು ಹೆಣ್ಣುಜಿಂಕೆಗಳ ನೇತ್ರಗಳಲ್ಲಿ ತಮ್ಮ ನೇತ್ರಗಳ ಶೋಭೆಯನ್ನೂ ನವಿಲುಗಳ ಗರಿಗಳಲ್ಲಿ ತಮ್ಮ ಕೂದಲುಗಳ ಶೋಭೆಯನ್ನೂ ಕುತೂಹಲದಿಂದ ನೋಡುತ್ತಿದ್ದಾರೆ. ಹೆಣ್ಣುಜಿಂಕೆಯ ಕಣ್ಣುಗಳಂತೆ ಸ್ತ್ರೀಯರ ಕಣ್ಣುಗಳೂ ನವಿಲುಗರಿಗಳಂತೆ ತಮ್ಮ ಕೂದಲುಗಳೂ ಇರುವುದನ್ನು ಕುತೂಹಲದಿಂದ ನೋಡುತ್ತಿದ್ದರೆಂದಭಿಪ್ರಾಯವು.

**ಇತ್ಯನಾಕುಲಮೇವೇದಂ ಸೈನ್ಯೈರಪ್ಯಾಕುಲೀಕೃತಮ್ ।**
**ವನಮಾಲಕ್ಷ್ಯತೇ ವಿಷ್ವಗಸಂಬಾಧಮೃಗದ್ವಿಜಮ್ ॥ ೭೯ ॥**

ಈ ರೀತಿಯಾಗಿ ಸೈನ್ಯಗಳಿಂದ ಬಾಧೆಪಡಿಸಲ್ಪಟ್ಟರೂ ವ್ಯಾಕುಲವಿಲ್ಲದಿರುವ ಈ ವನವು ಎಲ್ಲಾಕಡೆಗಳಲ್ಲೂ ಬಾಧಾರಹಿತವಾದ ಮೃಗಗಳೂ ಪಕ್ಷಿಗಳೂ ಉಳ್ಳುದಾಗಿ ಕಾಣುತ್ತದೆ.

**[8]ಜರಠೋಪ್ಯಾತಪೋ ನಾಯಮಿಹಾಸ್ಮಾನ್ ದೇವ ! ಬಾಧತೆ ।**
**ವನೇ ಮಹಾತರುಚ್ಛಾಯಾನೈರಂತರ್ಯಾನುಬಂಧಿನಿ ॥ ೮೦ ॥**

೧ ದಕ್ಷಿಣಭಾಗೇ ಕೃತ ವ್ರಣತಯಾ. ೨ ಸೈನಿಕೈರವಲೋಕಿತಾ. ೩ ಮೃಗಸಮೂಹಃ. ೪ ಬರ್ಹೈಃ. ೫ ಚೀತ್ಕಾರಕುರ್ವತಾಂ. ೬ ವರ್ತ್ಮತ ಇತ್ಯಪಿ ಪಾಠಃ. ೭ ಲೋಚನೇಷು. ೮ ಪ್ರವೃದ್ಧಃ.

ಸ್ವಾಮಿಯೆ !ದಟ್ಟವಾಗಿ ಸೇರಿರುವ ದೊಡ್ಡಮರಗಳ ನೆರಳುಳ್ಳ ಈ ವನದಲ್ಲಿ ಈ ಮಧ್ಯಾಹ್ನದ ಬಿಸಿಲು ಕೂಡ ನಮ್ಮನ್ನು ಬಾಧಿಸುವುದಿಲ್ಲ.

**ಇಮೇ ವನದ್ರುಮಾ ಭಾಂತಿ ಸಾಂದ್ರಚ್ಛಾಯಾ ಮನೋರಮಾಃ ।**
**[1]ತ್ವದ್ಭಕ್ತ್ಯೈ ವನಲಕ್ಷ್ಮ್ಯೇವ ಮಂಡಪಾ ವಿನಿವೇಶಿತಾಃ ॥ ೮೧ ॥**

ದಟ್ಟವಾದ ನೆರಳುಳ್ಳವೂ ಮನೋಹರವೂ ಆದ ಈ ವನವೃಕ್ಷಗಳು, ನಿನ್ನನ್ನು ಭಜಿಸುವುದಕ್ಕೋಸ್ಕರ ವನಲಕ್ಷ್ಮಿಯು ಮಾಡಿರುವ ಮಂಟಪಗಳೋ ಎಂಬಂತೆ ಶೋಭಿಸುತ್ತಿವೆ.

**ಸರಸ್ಯಃ ಸ್ವಚ್ಛಸಲಿಲಾ [2]ವಾರಿತೋಷ್ಣಾಸ್ತಟದ್ರುಮೈಃ ।**
**ಸ್ಥಾಪಿತಾ ವನಲಕ್ಷ್ಮ್ಯೇವ [3]ಪ್ರಪಾ ಭಾಂತಿ ಕ್ಲಮಚ್ಛಿದಃ ॥ ೮೨ ॥**

ದಡದಲ್ಲಿರುವ ವೃಕ್ಷಗಳಿಂದ ತಡೆಯಲ್ಪಟ್ಟ ಉಷ್ಣತ್ವವುಳ್ಳವೂ ನಿರ್ಮಲವಾದ ನೀರುಳ್ಳವೂ ಆದ ಸರೋವರಗಳು, ವನಲಕ್ಷ್ಮಿಯಿಂದ ಸ್ಥಾಪಿಸಲ್ಪಟ್ಟಿರುವುವೂ ಆಯಾಸವನ್ನು ನಾಶಮಾಡುವುವೂ ಆದ ಅರವಟಿಗೆಗಳೋ ಎಂಬಂತೆ, ಶೋಭಿಸುತ್ತವೆ.

**ಬಹು[4]ಬಾಣಾಸನಾಕೀರ್ಣಮಿದಂ [5]ಖಡ್ಗಿಭಿರಾತತಮ್ ।**
**ಸ[6]ಹಾಸ್ತಿಕಮಪರ್ಯಂತಂ ವನಂ ಯುಷ್ಮದ್ಬಲಾಯತೇ ॥ ೮೩ ॥**

ಹೆಚ್ಚಾದ ಗೋರಂಟೆಗಿಡಗಳಿಂದ ವ್ಯಾಪ್ತವೂ ಗೇಂಡಾಮೃಗಗಳಿಂದ ಪರಿಪೂರ್ಣವೂ ಆನೆಗಳ ಸಮೂಹವುಳ್ಳುದೂ ಕೊನೆಗಾಣದಿರುವುದೂ ಆದ ಈ ವನವು, ಅಧಿಕವಾದ ಧನುಸ್ಸುಗಳಿಂದ ವ್ಯಾಪ್ತವೂ ಆಯುಧಪಾಣಿಗಳಿಂದ ಪರಿಪೂರ್ಣವೂ ಆನೆಗಳ ಸಮೂಹವುಳ್ಳುದೂ ಅಪಾರವೂ ಆದ ನಿಮ್ಮಸೈನ್ಯದಂತೆ, ತೋರುತ್ತದೆ ."

**ಇತ್ಥಂ ವನಸ್ಯ ಸಾಮೃದ್ಧ್ಯಂ [7]ನಿರೂಪಯತಿ ಸಾರಥೌ ।**
**ವನಭೂಮಿ[8]ಮತೀಯಾಯ ಸಮ್ರಾ[9]ಡವಿದಿತಾಂತರಾಮ್ ॥ ೮೪ ॥**

ಈ ಪ್ರಕಾರವಾಗಿ ಸಾರಥಿಯು ವನದ ಸಮೃದ್ಧಿಯನ್ನು ಹೇಳುತ್ತಿರಲು ಭರತ ಚಕ್ರವರ್ತಿಯು ಮಾರ್ಗವು ದೂರವಾಗಿರುವುದನ್ನು ತಿಳಿಯದೆ ವನಭೂಮಿಯನ್ನು ದಾಟಿಹೋದನು. ವನಮಾರ್ಗವು ದೂರವಾಗಿದ್ದರೂ ಸಾರಥಿಯ ವನವರ್ಣನೆಯಿಂದ ಅದು ಚಕ್ರವರ್ತಿಗೆ ಗೊತ್ತಾಗಲಿಲ್ಲವೆಂದು ಭಾವವು.

**ತದಾಶ್ವೀಯ[10]ಖುರೋದ್ಘಾತಾದುತ್ಥಿತಾ ವನರೇಣವಃ ।**
**ದಿಶಾಂ ಮುಖೇಷು ಸಂಲಗ್ನಾಸ್ತೇನುರ್ಯವನಿಕಾಶ್ರಿಯಮ್ ॥ ೮೫ ॥**

ಆಗ ಕುದುರೆಗಳ ಗೊರಸಿನ ಪೆಟ್ಟಿನಿಂದುಂಟಾದ ವನಧೂಳುಗಳು ದಿಙ್ಮುಖಗಳಲ್ಲಿ ಸಂಬಂಧಿಸಿದುವುಗಳಾಗಿ ತೆರೆ(ಪರದೆ)ಯ ಶೋಭೆಯನ್ನು ವಿಸ್ತರಿಸಿದುವು.

**[11]ಸಾದಿನಾಂ [12]ವಾರವಾಣಾನಿ ಸ್ಯೂತಾನ್ಯಪಿ ಸಿತಾಂಶುಕೈಃ ।**
**[13]ಕಾಷಾಯಾಣೀವ ಜಾತಾನಿ ತತಾನಿ ವನರೇಣುಭಿಃ ॥ ೮೬ ॥**

ಕುದುರೆ ಸವಾರರ ಕವಚಗಳು ಶುಭ್ರವಾದ ಬಟ್ಟೆಗಳಿಂದ ಹೊಲಿಯಲ್ಪಟ್ಟಿದ್ದರೂ ವನದ ಧೂಳುಗಳಿಂದ ವ್ಯಾಪ್ತಗಳಾಗಿ ಕಷಾಯವರ್ಣದಿಂದ ರಂಗಿಸಲ್ಪಟ್ಟುವುಗಳಂತಾದುವು.

**ವನರೇಣುಭಿರಾಲಗ್ನೈ[14]ರ್ಜಟೀಭೂತಾನಿ ಯೋಷಿತಃ ।**
**ಸ್ತನಾಂಶುಕಾನಿ ಕೃಚ್ಛ್ರೇಣ ದಧುರಧ್ವಶ್ರಮಾಲಸಾಃ ॥ ೮೭ ॥**

೧ ತವ ಭಜನಾಯ. ೨ ನಿವಾರಿತೋಷ್ಣಾಃ. ೩ ಪಾನೀಯಶಾಲಿಕಾಃ. ೪ ಝಿಂಟೀ, ಸರ್ಜಕಃ, ಪಕ್ಷೇಚಾಪಃ. ೫ ಗೆಂಡಮೃಗೈಃ, ಆಯುಧಿಕೈಶ್ಚ. ೬ ಉಭಯತ್ರಾಪಿ ಗಜಸಮೂಹಂ. ೭ ವದತಿ ಸತಿ. ೮ ಅತ್ಯಗಾತ್. ೯ ಅವಿದಿತಾಂತರಮಿತ್ಯಪಿ ಪಾಠಃ. ೧೦ ಖುರಾಘಾತಾದಿತ್ಯಪಿ ಪಾಠಃ. ೧೧ ಅಶ್ವಾರೋಹಕಾಣಾಂ. ೧೨ ಕಂಚುಕಾನಿ. ೧೩ ಕಷಾಯರಂಜಿತಾನಿ. ೧೪ ಸಂಕೀರ್ಣಾನಿ.

ಮಾರ್ಗಾಯಾಸದಿಂದ ಆಲಸ್ಯವುಳ್ಳ ಸ್ತ್ರೀಯರು ಸುತ್ತಲೂ ಸಂಬಂಧಿಸಿರುವ ವನದ ಧೂಳುಗಳಿಂದ ದಟ್ಟವಾಗಿರುವ ಕುಚವಸ್ತ್ರಗಳನ್ನು ಕಷ್ಟದಿಂದ ಧರಿಸಿದ್ದರು.

**ಕುಂಭಸ್ಥಲೇಷು ಸಂಸಕ್ತಾಃ ಕರಿಣಾಮಧ್ವರೇಣವಃ ।**
**ಸಿಂದೂರಶ್ರಿಯಮಾತೇನು[೧]ರ್ಧಾತುಭೂಮಿಸಮುತ್ಥಿತಾಃ ॥ ೮೮ ॥**

ಆನೆಗಳ ಕುಂಭಸ್ಥಳಗಳಲ್ಲಿ ಸಂಬಂಧಿಸಿರುವುವೂ ಕಾವಿಕಲ್ಲಿನ ಭೂಮಿಯಿಂದುಂಟಾದುವೂ ಆದ ಮಾರ್ಗದ ಧೂಳಿಗಳು ಸಿಂದೂರದ ಶೋಭೆಯನ್ನುಂಟುಮಾಡಿದುವು. ಮಾರ್ಗದಧೂಳು ಸಿಂದೂರದಂತೆ ತೋರುತ್ತಿದ್ದಿತೆಂದು ಭಾವವು.

**ತತೋ [೨]ಮಧ್ಯಂದಿನೇಭ್ಯರ್ಣೇ ದಿದೀಪೇ ತೀವ್ರಮಂಶುಮಾನ್ ।**
**ವಿಜಿಗೀಷುರಿವಾರೂಢಪ್ರತಾಪಃ [೩]ಶುದ್ಧಮಂಡಲಃ ॥ ೮೯ ॥**

ತರುವಾಯ ಮಧ್ಯಾಹ್ನಕಾಲವು ಸಮೀಪಿಸುತ್ತಿರಲು ಶುದ್ಧವಾದ ಮಂಡಲವುಳ್ಳವನೂ ವೃದ್ಧಿಹೊಂದಿದ ತಾಪವುಳ್ಳವನೂ ಆದ ಸೂರ್ಯನು, ಶುದ್ಧವಾದ ದೇಶವುಳ್ಳವನೂ ವೃದ್ಧಿಹೊಂದಿದ ಪ್ರತಾಪವುಳ್ಳವನೂ ಜಯಿಸಬೇಕೆಂಬ ಇಚ್ಛೆಯುಳ್ಳವನೂ ಆದ ರಾಜನಂತೆ, ತೀಕ್ಷ್ಣವಾಗಿ ಪ್ರಕಾಶಿಸಿದನು.

**ಸರಸ್ತೀರತರುಚ್ಛಾಯಾಮಾಶ್ರಯಂತಿ ಸ್ಮ [೪]ಪತ್ರಿಣಃ ।**
**ಶರದಾತಪಸಂತಾಪಾತ್ಸಂಕುಚ[೫]ತ್ಪತ್ರಸಂಪದಃ ॥ ೯೦ ॥**

ಶರತ್ಕಾಲದ ಬಿಸಿಲಿನ ಸಂತಾಪದಿಂದ ರೆಕ್ಕೆಗಳನ್ನು ಮುದುರಿಕೊಂಡಿರುವ ಪಕ್ಷಿಗಳು ಸರೋವರದ ದಡದಲ್ಲಿರುವ ವೃಕ್ಷಗಳ ನೆರಳನ್ನಾಶ್ರಯಿಸಿದುವು.

**ಹಂಸಾಃ ಕಲಮಷಂಡೇಷು ಪುಂಜೀಭೂತಾನ್ ಸ್ವಶಾಬಕಾನ್ ।**
**ಪಕ್ಷೈರಾಚ್ಛಾದಯಾಮಾಸುರಸೋಢ [೬]ಜರಠಾತಪಾನ್ ॥ ೯೧ ॥**

ಹಂಸಪಕ್ಷಿಗಳು, ಭತ್ತದ ಪೈರುಗಳ ಗುಂಪುಗಳಲ್ಲಿ ಸಮೂಹವಾಗಿ ಸೇರಿರುವುವೂ ಮಧ್ಯಾಹ್ನದ ಬಿಸಿಲನ್ನು ಸಹಿಸದಿರುವುವೂ ಆದ ತಮ್ಮ ಮರಿಗಳನ್ನು ರೆಕ್ಕೆಗಳಿಂದ ಮರೆಮಾಡಿದುವು.

**ವನ್ಯಾಃ ಸ್ತಂಬೇರಮಾ ಭೇಜುಃ ಸರಸೀರವಗಾಹಿತುಮ್ ।**
**ಮದಸ್ರುತಿಷು [೭]ತಪ್ತಾಸು ಮುಕ್ತಾ ಮಧುಕರವ್ರಜೈಃ ॥ ೯೨ ॥**

ಮದಜಲಪ್ರವಾಹಗಳು ಬಿಸಿಲಿನಿಂದ ಕಾದಿರಲು ಭ್ರಮರಗಳ ಸಮೂಹಗಳಿಂದ ತ್ಯಜಿಸಲ್ಪಟ್ಟ ಕಾಡಾನೆಗಳು ಸರೋವರಗಳನ್ನು ಪ್ರವೇಶಿಸುವುದಕ್ಕೋಸ್ಕರ ಅವನ್ನು ಸೇರಿದುವು.

**[೮]ಶಾಖಾಭಂಗೈಃ ಕೃತಚ್ಛಾಯಾಃ ಪ್ರಯಾಂತೋ ಗಜಯೂಥಪಾಃ ।**
**[೯]ಶಾಖೋದ್ಧಾರಮಿವಾತನ್ವ[೧೦]ನ್ನರಾಂಶೋಃ [೧೧]ಕರಪೀಡಿತಾಃ ॥ ೯೩ ॥**

ಕೊಂಬೆಗಳ ತುಂಡುಗಳಿಂದ ನೆರಳನ್ನು ಮಾಡಿಕೊಂಡು ಹೋಗುತ್ತಿರುವ ಸಲಗಗಳು ಸೂರ್ಯನಕಿರಣಗಳಿಂದ ಪೀಡಿತಗಳಾಗಿ ತಳಿರುಗಳನ್ನು ತೆಗೆದುಕೊಂಡು ರೋದನವನ್ನು ಮಾಡುತ್ತವೋ ಎಂಬಂತಿದ್ದುವು.

**ಯೂಥಂ ವನವರಾಹಾಣಾಮುಪರ್ಯುಪರಿಪುಂಜಿತಮ್ ।**
**ತದಾ ಪ್ರವಿಶ್ಯ [೧೧]ವೇಶಂತಮಧಿಶಿಶ್ಯೇ ಸಕರ್ದಮಮ್ ॥ ೯೪ ॥**

ಆಗ ಮೇಲೆ ಮೇಲೆ ಗುಂಪಾಗಿ ಸೇರಿದ ಕಾಡುಹಂದಿಗಳ ಸಮೂಹವು ಕೆಸರುಳ್ಳ ಸಣ್ಣ ಸರೋವರವನ್ನು ಪ್ರವೇಶಿಸಿ ಮಲಗಿದ್ದಿತು.

**ಮೃಣಾಲೈರಂಗಮಾವೇಷ್ಟ್ಯ ಸ್ಥಿತಾ ಹಂಸಾ ವಿರೇಜಿರೇ ।**
**ಪ್ರವಿಷ್ಟಾಃ ಶರಣಾಯೇವ ಶಶಾಂಕಕರಪಂಜರಮ್ ॥ ೯೫ ॥**

೧ ಗೈರಿಕಯುಕ್ತಭೂಮಿಸಮುತ್ಥಿತಾಃ. ೨ ಮಧ್ಯಾಹ್ನಕಾಲೇ. ೩ ಪಕ್ಷೇ ದೇಶಃ. ೪ ಪಕ್ಷಿಣಃ. ೫ ಪಕ್ಷಸಂಪದಃ. ೬ ನಿಷ್ಠುರಿತಾತಪಾನ್. ೭ ಆತಪೇನ ತಪ್ತಾಸು. ೮ ಶಾಖಾಖಂಡೈಃ. ೯ ಪಲ್ಲವಾನಿಗೃಹೀತ್ವಾ ಕ್ರೋಶಮಾತನ್ವನ್. ೧೦ ರವೇಃ. ೧೧ ಕಿರಣೇನ.

ತಾವರೆದಂಟುಗಳಿಂದ ಶರೀರವನ್ನು ಮುಚ್ಚಿಕೊಂಡಿದ್ದ ಹಂಸಪಕ್ಷಿಗಳು, ರಕ್ಷಣೆಗೋಸ್ಕರ ಚಂದ್ರನ ಕಿರಣಗಳ ಪಂಜರವನ್ನು ಪ್ರವೇಶಮಾಡಿದುವೋ ಎಂಬಂತೆ, ಶೋಭಿಸುತ್ತಿದ್ದುವು.

**ಚಕ್ರವಾಕಯುವಾ ಭೇಜೇ [೧]ಘನಂ ಶೈವಲಮಾತತಮ್ ।**
**ಸರ್ವಾಂಗಲಗ್ನ[೨]ಮುಷ್ಣಾಲುರ್ವಿನೀಲಮಿವ ಕಂಚುಕಮ್ ॥ ೯೬ ॥**

ಉಷ್ಣವನ್ನು ಸಹಿಸದಿರುವ ತರುಣಚಕ್ರವಾಕಪಕ್ಷಿಯು ಸರ್ವಾಂಗದಲ್ಲೂ ಸಂಬಂಧಿಸಿರುವುದೂ ಕಪ್ಪಾದ ಕವಚದಂತಿರುವುದೂ ನಿಬಿಡವೂ ವಿಸ್ತಾರವೂ ಆದ ಆವಟಿಯನ್ನು ಹೊಂದಿದ್ದಿತು.

**ಪುಂಡರೀಕಾತಪತ್ರೇಣ ಕೃತಚ್ಛಾಯೋಬ್ಜಿನೀವನೇ ।**
**ರಾಜಹಂಸಸ್ತದಾ ಭೇಜೇ ಹಂಸೀಭಿಃ ಸಹ ಮಜ್ಜನಮ್ ॥ ೯೭ ॥**

ಆಗ ರಾಜಹಂಸಪಕ್ಷಿಯು ಬಿಳಿದಾವರೆಯೆಂಬ ಛತ್ರಿಯಿಂದ ನೆರಳನ್ನು ಮಾಡಿಕೊಂಡು ತಾವರೆಬಳ್ಳಿಗಳ ವನದಲ್ಲಿ ಸ್ತ್ರೀಹಂಸಪಕ್ಷಿಗಳೊಡನೆ ಸ್ನಾನಮಾಡಿತು.

**ಬಿಸಭಂಗೈಃ ಕೃತಾಹಾರಾ ಮೃಣಾಲೈ[೩]ರವಗುಂಠಿತಾಃ ।**
**ಬಿಸಿನೀಪತ್ರತಲ್ಪೇಷು ಶಿಶ್ಯಿರೇ ಹಂಸಶಾಬಕಾಃ ॥ ೯೮ ॥**

ತಾವರೆದಂಟಿನ ತುಂಡುಗಳನ್ನು ತಿನ್ನುವುವೂ ತಾವರೆದಂಟುಗಳಿಂದ ಮರೆಮಾಡಲ್ಪಟ್ಟುವೂ ಆದ ಹಂಸಪಕ್ಷಿಗಳ ಮರಿಗಳು ತಾವರೆಯೆಲೆಗಳೆಂಬ ಹಾಸಿಗೆಗಳಲ್ಲಿ ಮಲಗಿದುವು.

**ಇತಿ ಶಾರದಿಕೇ ತೀವ್ರಂ ತನ್ವಾನೇ ತಾಪಮಾತಪೇ ।**
**ಪುಲಿನೇಷು ಪ್ರತಪ್ತೇಷು ನ ಹಂಸಾ ಧೃತಿಮಾದಧುಃ ॥ ೯೯ ॥**

ಈ ಪ್ರಕಾರವಾಗಿ ಶರತ್ಕಾಲಸಂಬಂಧವಾದ ಬಿಸಿಲು ತೀಕ್ಷ್ಣವಾದ ಸಂತಾಪವನ್ನುಂಟುಮಾಡುತ್ತಿರಲು ಹಂಸಪಕ್ಷಿಗಳು ಕಾದಿರುವ ಮರಳುಗಳಲ್ಲಿ ಸಂತೋಷವನ್ನು ಹೊಂದಲಿಲ್ಲ.

**ಮಧ್ಯಸ್ಥೋಽಪಿ ತದಾ ತೀವ್ರಂ ತತಾಪ ತರಣಿರ್ಭುವಮ್ ।**
**ನೂನಂ ತೀವ್ರಪ್ರತಾಪಾನಾಂ ಮಾಧ್ಯಸ್ಥ್ಯಮಪಿ ತಾಪಕಮ್ ॥ ೧೦೦ ॥**

ಆಗ ಸೂರ್ಯನು ಆಕಾಶಮಧ್ಯದಲ್ಲಿದ್ದರೂ ಭೂಮಿಯನ್ನು ತೀಕ್ಷ್ಣವಾಗಿ ತಪಿಸಿದನು. ನಿಜವಾಗಿಯೂ ಮಹಾಪ್ರತಾಪಿಗಳ ಮಾಧ್ಯಸ್ಥಭಾವವೂ ತಾಪವನ್ನುಂಟುಮಾಡುವುದಾಗಿರುತ್ತದೆ. ವಾದಿಪ್ರತಿವಾದಿಗಳ ಮಧ್ಯಸ್ಥರು ಪ್ರತಾಪಿಗಳಾಗಿದ್ದರೆ ಅವರು ಸಂತಾಪಕರರೆಂದು ಭಾವವು.

**ಸ್ವೇದಬಿಂದುಭಿರಾಬದ್ಧಜಾಲಕಾನಿ ನೃಪಸ್ತ್ರಿಯಃ ।**
**ವದನಾನ್ಯೂಹುರಬ್ಜಿನ್ಯಃ ಪದ್ಮಾನೀವಾಂಬುಶೀಕರೈಃ ॥ ೧೦೧ ॥**

ತಾವರೆ ಬಳ್ಳಿಗಳು ಜಲಬಿಂದುಗಳಿಂದ ಯುಕ್ತವಾಗಿರುವ ಕಮಲಗಳನ್ನು ಧರಿಸಿರುವಂತೆ, ರಾಜಸ್ತ್ರೀಯರು ಬೆವರಿನ ಬಿಂದುಗಳಿಂದ ಯುಕ್ತವಾದ ಮುಖಗಳನ್ನು ಧರಿಸಿದ್ದರು.

**[೪]ನೃಪವಲ್ಲಭಿಕಾವಕ್ತ್ರಪಂಕಜೇಷ್ವಪುಷಚ್ಛ್ರಿಯಮ್ ।**
**ಘರ್ಮಬಿಂದೂದ್ಗಮೋ ನಿರ್ಯಲ್ಲಾವಣ್ಯರಸಪೂರವತ್ ॥ ೧೦೨ ॥**

ಪಾಣಿಗ್ರಹಣರಹಿತರಾದ ರಾಜಸ್ತ್ರೀಯರ ಮುಖಕಮಲಗಳಲ್ಲಿ ಉಂಟಾದ ಬೆವರಿನ ಬಿಂದುವು, ಪ್ರವಹಿಸುತ್ತಿರುವ ಲಾವಣ್ಯರಸದ ಪ್ರವಾಹದಂತೆ, ಶೋಭೆಯನ್ನುಂಟುಮಾಡಿದ್ದಿತು.

೧ ನಿಬಿಡಂ. ೨ ಉಷ್ಣಮಸಹಮಾನಃ. ೩ ಆಚ್ಛಾದಿತಾಃ. ೪ ಪಾಣಿಗ್ರಹಣರಹಿತನೃಪಸ್ತ್ರಿಯಃ.

ಗಲದ್ಘರ್ಮಾಂಬುಬಿಂದೂನಿ ಮುಖಾನಿ ನೃಪಯೋಷಿತಾಮ್ ।
[೧]ಅವಶ್ಯಾಯತತಾನೀವ ರಾಜೀವಾನಿ ವಿರೇಜಿರೆ ॥ ೧೦೩ ॥

ಸುರಿಯುತ್ತಿರುವ ಬೆವರಿನ ಬಿಂದುಗಳುಳ್ಳ ರಾಜಸ್ತ್ರೀಯರ ಮುಖಗಳು, ಹಿಮದಿಂದ ವ್ಯಾಪ್ತವಾದ ಕಮಲಗಳಂತೆ, ಶೋಭಿಸುತ್ತಿದ್ದುವು.

ನೃಪಾಂಗನಾಮುಖಾಬ್ಜಾನಿ ಘರ್ಮಬಿಂದುಭಿರಾಬಭುಃ ।
ಮುಕ್ತಾಫಲೈರ್ದ್ರವೀಭೂತೈರಿವಾಲಕವಿಭೂಷಣೈಃ ॥ ೧೦೪ ॥

ರಾಜಸ್ತ್ರೀಯರ ಮುಖಕಮಲಗಳು, ನೆನೆದಿರುವುವೂ ಕುರುಳು ಕೂದಲುಗಳಿಗೆ ಅಲಂಕಾರವೂ ಆಗಿರುವ ಮುತ್ತುಗಳಿಂದ ಶೋಭಿಸುವಂತೆ, ಬೆವರಿನ ಬಿಂದುಗಳಿಂದ ಶೋಭಿಸಿದ್ದುವು.

[೨]ರಥವಾಹಾ ರಥಾ[೩]ನೂಹು[೪]ರಾಯಸ್ತಾಃ ಫೇನಿಲೈರ್ಮುಖೈಃ ।
ತೀವ್ರಂ ತಪತಿ ತಿಗ್ಮಾಂಶೌ [೫]ಸಮೇಪಿ ಪ್ರಸ್ಖಲತ್ಖುರಾಃ ॥ ೧೦೫ ॥

ಸೂರ್ಯನು ತೀಕ್ಷ್ಣವಾಗಿ ತಪಿಸುತ್ತಿರಲು ಸಂತಾಪವನ್ನು ಹೊಂದಿರುವುವೂ ನೊರೆಯುಳ್ಳ ಮುಖಗಳಿಂದ ಕೂಡಿದುವೂ ಆದ ರಥದ ಕುದುರೆಗಳು ಸಮವಾಗಿರುವ ಭೂತಲದಲ್ಲೂ ತಪ್ಪಿ ಬೀಳುತ್ತಿರುವ ಗೊರಸುಗಳುಳ್ಳವುಗಳಾಗಿ ರಥಗಳನ್ನು ಧರಿಸಿದುವು.

ಹ್ರಸ್ವವೃತ್ತ ಖುರಾಸ್ತುಂಗಾ[೬]ಸ್ತನುಸ್ನಿಗ್ಧತನೂರುಹಾಃ ।
[೭]ಪೃಥ್ವಾಸನಾ ಮಹಾವಾಹಾಃ ಪ್ರಯಯು[೮]ರ್ವಾಯುರಂಹಸಃ ॥ ೧೦೬ ॥

ಗಿಡ್ಡವೂ ವರ್ತುಲಾಕಾರವೂ ಆದ ಗೊರಸುಗಳುಳ್ಳವೂ ಉನ್ನತವೂ ಸ್ವಲ್ಪ ಹೊಳಪಾದ ಕೂದಲುಗಳುಳ್ಳವೂ ವಿಶಾಲವಾದ ಬೆನ್ನುಳ್ಳವೂ ಆದ ದೊಡ್ಡ ಕುದುರೆಗಳು ಗಾಳಿಯಂತೆ ವೇಗವುಳ್ಳವುಗಳಾಗಿ ಹೋದುವು.

ಮಹಾಜವಜುಷೋ ವಕ್ತ್ರಾದುದ್ವಮಂತಃ [೯]ಖುರಾನಿವ ।
ಮಹೋರಸ್ಕಾಃ ಸ್ಫುರ[೧೦]ತ್ಪ್ರೋಥಾ ದ್ರುತಂ ಜಗ್ಮುರ್ಮಹಾಹಯಾಃ ॥

ಅಧಿಕವಾದ ವೇಗವುಳ್ಳವೂ ಬಾಯಿಂದ ಶುಭ್ರವಾದ ಗೊರಸುಗಳನ್ನು ಕಾರುತ್ತವೋ ಎಂಬಂತೆ ನೊರೆಗಳನ್ನು ಕಾರುತ್ತಿರುವುವೂ ವಿಸ್ತಾರವಾದ ಎದೆಯುಳ್ಳವೂ ಚಲಿಸುತ್ತಿರುವ ಮೂಗುಳ್ಳವೂ ಆದ ದೊಡ್ಡ ಕುದುರೆಗಳು ಶೀಘ್ರವಾಗಿ ಹೋದುವು.

ಸಮುಚ್ಛ್ರಿತಪುರೋಭಾಗಾಃ ಶುದ್ಧಾವರ್ತಾ ಮನೋಜವಾಃ ।
[೧೧]ಅಪರ್ಯಾಪ್ತೇಷು ಮಾರ್ಗೇಷು ದ್ರುತಮೀಯುಸ್ತುರಂಗಮಾಃ ॥

ಮೇಲಕ್ಕೆತ್ತಲ್ಪಟ್ಟ ಮುಂಭಾಗವುಳ್ಳವೂ ಪರಿಶುದ್ಧವಾದ ಸುಳಿಗಳುಳ್ಳವೂ ಮನಸ್ಸಿನ ವೇಗದಂತೆ ವೇಗವುಳ್ಳವೂ ಆದ ಕುದುರೆಗಳು ಸಣ್ಣದಾರಿಗಳಲ್ಲಿ ಶೀಘ್ರವಾಗಿ ಹೋದುವು.

ಮೇಧಾಸತ್ತ್ವಜವೋಪೇತಾ [೧೨]ವಿನೀತಾಶ್ಚಟುಲ[೧೩]ಕ್ರಮಾಃ ।
[೧೪]ಗಲ್ಹಮಾನಾ ಇವ ಸ್ಪಷ್ಟಂ ಮಹೀಮಶ್ವಾ ದ್ರುತಂ ಯಯುಃ ॥

ಬುದ್ಧಿ ಶಕ್ತಿ ವೇಗ ಇವುಗಳಿಂದ ಕೂಡಿರುವುವೂ ಶಿಕ್ಷಣೆಯನ್ನು ಹೊಂದಿರುವುವೂ ಉತ್ತಮವಾದ ನಡಿಗೆಯುಳ್ಳವೂ ಆದ ಕುದುರೆಗಳು, ಭೂಮಿಯನ್ನು ಮುಟ್ಟುವುದಕ್ಕೋಸ್ಕರ ಕುಗ್ಗಿದ ಶರೀರಪರಿಮಾಣವುಳ್ಳವುಗಳಾಗಿವೆಯೋ ಎಂಬಂತೆ, ಶೀಘ್ರ ವಾಗಿ ಹೋದುವು.

೧ ಅವಶ್ಯಾಯಸ್ತುನೀಹಾರಸ್ತುಷಾರಸ್ತುಹಿನಂಹಿಮಂ. ೨ ರಥಾಶ್ವಾಃ. ೩ ಧರಂತಿ ಸ್ಮ. ೪ ಉಪತಪ್ತಾಃ. ೫ ಸಮಾನಭೂತಲೇಪಿ. ೬ ಸ್ವಲ್ಪಂ. ೭ ಪೃಥುಲಪೃಷ್ಠಭಾಗಾಃ. ೮ ವಾಯುವೇಗಾಃ. ೯ ಶ್ವೇತಖುರಾನಿವ ಫೇನಖಂಡಾನ್. ೧೦ ಘೋಣಾಃ. ೧೧ ಅಸಂಪೂರ್ಣೇಷು. ೧೨ ವಿನೀತಾ ಶಿಕ್ಷಿತಾಃ. ೧೩ ಪಾದಾಃ. ೧೪ ಕುತ್ಸಮಾನಾಃ.

ಅಶ್ವೇಭ್ಯೋಪಿ ರಥೇಭ್ಯೋಪಿ ಪತ್ತಯೋ [೧]ವೇಗಿತಂ ಯಯುಃ ।
[೨]ಸೋಪಾನತ್ಕೈಃ ಪದೈಃ ಸ್ಥಾಣುಕಂಟಕೋಪಲಲಂಘಿನಃ ॥ ೧೧೦ ॥

ಪಾದರಕ್ಷೆಗಳುಳ್ಳ ಕಾಲುಗಳಿಂದ ಮೋಟುಮರಗಳನ್ನೂ ಮುಳ್ಳುಗಳನ್ನೂ ಕಲ್ಲುಗಳನ್ನೂ ದಾಟಿಹೋಗುತ್ತಿರುವ ಕಾಲುನಡೆಯ ಸೈನಿಕರು ಕುದುರೆಗಳಿಗಿಂತಲೂ ರಥಗಳಿಗಿಂತಲೂ ವೇಗವಾಗಿ ಹೋದರು.

[೩]ಶಾಕ್ತಿಕಾಃ ಸಹ [೪]ಯಾಷ್ಟೀಕೈಃ [೫]ಪ್ರಾಸಿಕಾ ಧನ್ವಭಿಃ ಸಮಮ್ ।
[೬]ನೈಸ್ತ್ರಿಂಶಿಕಾಶ್ಚ ತೇನ್ಯೋನ್ಯಂ ಸ್ಪರ್ಧಯೇವ ಯಯುರ್ದ್ರುತಮ್ ॥

ಯಷ್ಟಿ(ದಂಡ)ಯೆಂಬ ಆಯುಧವನ್ನು ಧರಿಸಿರುವವರೊಡನೆ ಶಕ್ತಿಯೆಂಬ ಆಯುಧವನ್ನು ಧರಿಸಿರುವವರೂ ಧನುರ್ಧಾರಿಗಳೊಡನೆ ಈಟಿಯೆಂಬ ಆಯುಧವುಳ್ಳವರೂ ಖಡ್ಗಧಾರಿಗಳೂ ಪರಸ್ಪರವಾಗಿ ಈರ್ಷೆಯಿಂದಲೋ ಎಂಬಂತೆ ಶೀಘ್ರವಾಗಿ ಹೋಗುತ್ತಿದ್ದರು.

ಪುರಃ[೭]ಪ್ರಧಾವಿತೈಃ [೮]ಪ್ರೇಂಖದ್ವಾರವಾಣಾಗ್ರಪಲ್ಲವಾಃ ।
ಜಾತಪಕ್ಷಾ ಇವೋ[೯]ಡ್ಡೀಯ ಭಟಾ ಜಗ್ಮುರತಿದ್ರುತಮ್ ॥ ೧೧೨ ॥

ಓಟಗಳಿಂದ ಮುಂಭಾಗದಲ್ಲಿ ಚಲಿಸುತ್ತಿರುವ ಮತ್ತು ತಳಿರುಗಳಂತಿರುವ ಕವಚಗಳುಳ್ಳ ಭಟರು, ರೆಕ್ಕೆಗಳುಂಟಾಗಿರುವವರಂತೆ, ಮೇಲಕ್ಕೆ ನೆಗೆದು ಶೀಘ್ರವಾಗಿ ಹೋಗುತ್ತಿದ್ದರು.

[೧೦]ಪ್ರಯಾತ [೧೧]ಧಾವತಾ[೧೨]ಪೇತ ಮಾರ್ಗಂ ಮಾ ರುಧ್ವಮಗ್ರತಃ ।
ಇತ್ಯುಚ್ಚೈರುಚ್ಚರದ್ಧ್ವಾನಾಃ [೧೩]ಪೌರಸ್ತ್ಯಾನತ್ಯಯುರ್ಭಟಾಃ ॥ ೧೧೩ ॥

"ನಡೆಯಿರಿ. ಓಡಿರಿ. ದಾರಿಯನ್ನು ಬಿಡಿ. ಮುಂಭಾಗದಲ್ಲಿ ಮಾರ್ಗವನ್ನು ತಡೆಯಬೇಡಿರಿ" ಹೀಗೆ ಗಟ್ಟಿಯಾಗಿ ಧ್ವನಿಮಾಡುವ ಭಟರು ಮುಂದೆ ಹೋಗುವವರನ್ನತಿಕ್ರಮಿಸಿ ಹೋದರು.

ಇತೋಪಸರ್ಪತಾ[೧೪]ಶ್ವೀಯಾದಿತೋ ಧಾವತ ಹಾಸ್ತಿಕಾತ್ ।
ಇತೋ ರಥಾ[೧೫]ದಪತ್ರಸ್ತಾ ದೂರಂ ನಶ್ಯತ ನಶ್ಯತ ॥ ೧೧೪ ॥

"ಭಯವಿಲ್ಲದವರೆ ! ಕುದುರೆಗಳ ಗುಂಪಿನಿಂದ ಈ ಕಡೆಗೆ ತೊಲಗಿರಿ. ಆನೆಗಳ ಸಮೂಹದಿಂದ ಈಕಡೆಗೆ ಓಡಿಹೋಗಿರಿ. ರಥದಿಂದ ಈಕಡೆಗೆ ದೂರವಾಗಿ ಕಣ್ಣಿಗೆ ಕಾಣಿಸದಿರಿ ಕಾಣಿಸದಿರಿ." ಕುದುರೆ, ಆನೆ, ರಥ ಇವುಗಳ ಗುಂಪಿನಿಂದ ದೂರ ಹೋಗಿರೆಂದು ಭಾವವು.

ಅಮುಷ್ಮಾಜ್ಜನಸಂಘಟ್ಟಾದುತ್ಥಾಪಯತ [೧೬]ಡಿಂಭಕಾನ್ ।
ಇತೋ [೧೭]ಹಸ್ತ್ಯುರಸಾದಶ್ವಾನಪಸಾರಯತ ದ್ರುತಮ್ ॥ ೧೧೫ ॥

"ಈ ಜನಸಂದಣಿಯಿಂದ ಮಕ್ಕಳನ್ನೇಳಿಸಿರಿ. ಮುಖ್ಯವಾದ ಆನೆಯ ದೆಸೆಯಿಂದ ಶೀಘ್ರವಾಗಿ ಕುದುರೆಗಳನ್ನು ಈಕಡೆಗೆ ಸರಿಸಿರಿ.

ಇತಃ [೧೮]ಪ್ರಸ್ಥಾನಮಾರುಧ್ಯ ಸ್ಥಿತೋಯಂ ಘಾತುಕೋ ಗಜಃ ।
[೧೯]ಮಧ್ಯೇಧ್ವಂ [೨೦]ಪ್ರಾಜಿತುರ್ದೋಷಾ[೨೧]ತ್ಪರ್ಯಸ್ತೋಯಮಿತೋ ರಥಃ ॥ ೧೧೬ ॥

೧ ವೇಗವದ್ಯಥಾಭವತಿ ತಥಾ. ೨ ಸಪಾದತ್ರಾಣೈಃ. ೩ ಶಕ್ತಿಃ ಪ್ರಹರಣಂ ಯೇಷಾಂ ತೇ ಶಾಕ್ತಿಕಾಃ. ೪ ಯಷ್ಟಿಹೇತಿಕೈಃ. ೫ ಕೌಂತಿಕಾಃ. ೬ ಅಸಿಹೇತಿಕಾಃ. ೭ ಪ್ರಧಾವನೈಃ. ೮ ಚಲತ್ಕಂಚುಕಾಗ್ರಪಲ್ಲವಾಃ. ೯ ಉತ್ಪ್ಲುತ್ಯ. ೧೦ ಗಚ್ಛತ. ೧೧ ಪಲಾಯಧ್ವಂ. ೧೨ ಅಪಸರತ. ೧೩ ಪುರೋಗಾಮಿನಃ. ೧೪ ಅಶ್ವಸಮೂಹಾತ್. ೧೫ ಭೋವಿಗತಭಯಾಃ. ೧೬ ಬಾಲಕಾನ್, ಡಿತ್ಥಕಾನಿತ್ಯಪಿ ಪಾಠಃ. ೧೭ ಹಸ್ತಿಮುಖ್ಯಾತ್. ೧೮ ಪ್ರಯಾಣಂ, ಪಂಥಾನಮಿತ್ಯಪಿ ಪಾಠಃ. ೧೯ ಮಾರ್ಗಮಧ್ಯೇ. ೨೦ ಸಾರಥೇಃ. ೨೧ ಉತ್ತಾನಿತಃ.

ಈ ಕಡೆಯಲ್ಲಿ ಘಾತುಕವಾದ ಈ ಆನೆಯು ದಾರಿಯನ್ನು ತಡೆದು ನಿಂತಿದೆ. ಈ ಕಡೆಯಲ್ಲಿ ಸಾರಥಿಯ ಅಜಾಗರೂಕತೆಯಿಂದ ಈ ರಥವು ಮಾರ್ಗದ ಮಧ್ಯದಲ್ಲಿ ಉರುಳಿಬಿದ್ದಿದೆ.

**[೧]ಕ್ರಮೇಲಕೋಽಯ[೨]ಮುತ್ತ್ರಸ್ತಃ [೩]ಪ್ರತೀಪಂ ಪಥಿ ಧಾವತಿ ।**
**ಉತ್ಸೃಷ್ಟಭಾರೋ ಲಂಬೌಷ್ಠೋ ಜನಾನಿವ ವಿಡಂಬಯನ್ ॥ ೧೧೭ ॥**

ಭಾರವನ್ನಿಳಿಸಿರುವುದೂ ದೀರ್ಘವಾದ ತುಟಿಯುಳ್ಳುದೂ ಭೀತಿಗೊಂಡಿರುವುದೂ ಆದ ಈ ಒಂಟೆಯು ಜನರನ್ನು ನಕಲಿ(ಅನುಕರಣ)ಮಾಡುತ್ತದೋ ಎಂಬಂತೆ ಮಾರ್ಗದಲ್ಲಿ ಇದಿರಾಗಿ ಓಡುತ್ತಿದೆ.

**ವಿತ್ರಸ್ತಾದ್ವೇಸರಾದೇನಾಂ ಪತಂತೀ[೪]ಮವರೋಧಿಕಾಮ್ ।**
**ಸಂಧಾರಯ[೫]ನ್ನಪಾತೇಸ್ಮಿ[೬]ನ್ನೌವಿದಲ್ಲಃ ಪತತ್ಯಯಮ್ ॥ ೧೧೮ ॥**

ಭಯಗೊಂಡಿರುವ ಹೇಸರಗತ್ತೆಯ ದೆಸೆಯಿಂದ ಬೀಳುತ್ತಿರುನ ಈ ಅಂತಃಪುರಸ್ತ್ರೀಯನ್ನು ಅಂತುಕೊಂಡಿರುವ ಈ ಅಂತಃಪುರದ ಸೇವಕನು ಈ ತಪ್ಪಲಲ್ಲಿ ಬೀಳುತ್ತಾನೆ.

**[೭]ಯುವೀಯಾನೇಷ ಪಣ್ಯಸ್ತ್ರೀಮುಖಾಲೋಕನವಿಸ್ಮಿತಃ ।**
**…ತಿತೋಽಪ್ಯಶ್ವಸಂಘಟ್ಟೈರ್ನಾತ್ಮಾನಂ [೮]ವೇದ ಶೂನ್ಯಧೀಃ ॥ ೧೧೯ ॥**

ವಾರಾಂಗನೆಯ ಮುಖವನ್ನು ನೋಡುವುದರಿಂದ ಆಶ್ಚರ್ಯಚಕಿತನೂ ಬುದ್ಧಿಯಿಲ್ಲದವನೂ ಆದ ಈ ಯುವಕನು ಕುದುರೆಗಳ ಧಕ್ಕಾಟ(ಸಂಘರ್ಷಣ)ಗಳಿಂದ ಬೀಳಿಸಲ್ಪಟ್ಟವನಾದರೂ ತನ್ನನ್ನು ತಿಳಿಯಲಿಲ್ಲ.

**[೯]ಹರಿದ್ರಾರಂಜಿತಶ್ಮಶ್ರುಃ ಕಜ್ಜಲಾಂಕಿತಲೋಚನಃ ।**
**[೧೦]ಕುಟ್ಟಿನೀ[೧೧]ಮನುಯನ್ನೇಷ [೧೨]ಪ್ರವಯಾಸ್ತರುಣಾಯತೇ ॥ ೧೨೦ ॥**

ನರೆತವನ್ನು ಹೋಗಲಾಡಿಸುವುದಕ್ಕೋಸ್ಕರ ಅರಿಸಿನವನ್ನು ಹಚ್ಚಿರುವವನೂ ಕಣ್ಣುಗಳಿಗೆ ಕಾಡಿಗೆಯನ್ನು ಹಚ್ಚಿಕೊಂಡಿರುವವನೂ ಆದ ಈ ಮುದುಕನು ತಲೆಹಿಡಿಕಿ - ಹೆಂಗಸನ್ನು ಹಿಂಬಾಲಿಸುವವನಾಗಿ ಯುವಕನಂತೆ ಆಚರಿಸುತ್ತಾನೆ.''

**ಇತಿ ಪ್ರಯಾಣಸಂಜಲ್ಪೈರಜ್ಞಾತಾಧ್ವಪರಿಶ್ರಮಾಃ ।**
**ಸೈನಿಕಾಃ [೧೩]ಶಿಬಿರಂ ಪ್ರಾಪ[೧೪]ನ್ಸೇನಾನ್ಯಾ ಪ್ರಾ[೧೫]ಙ್ನಿವೇಶಿತಮ್॥ ೧೨೧ ॥**

ಈ ಪ್ರಕಾರವಾಗಿ ಪ್ರಯಾಣಕಾಲದ ಸಂಭಾಷಣೆಗಳಿಂದ ಮಾರ್ಗಾಯಾಸವನ್ನು ತಿಳಿಯದಿರುವ ಸೈನಿಕರು ಸೇನಾಪತಿಯಿಂದ ಮೊದಲು ರಚಿಸಲ್ಪಟ್ಟ ಸೈನ್ಯವು ನಿಲ್ಲುವ ಸ್ಥಾನವನ್ನು ಸೇರಿದರು.

**ತತೋ[೧೬]ವರೋಧನವಧೂಮುಖಚ್ಛಾಯಾವಿಲಂಘಿನಿ ।**
**[೧೭]ಮಧ್ಯಂದಿನಾತಪೇ ಸಮ್ರಾಟ್ಸಂಪ್ರಾಪ ಶಿಬಿರಾಂತಿಕಮ್ ॥ ೧೨೨ ॥**

ತರುವಾಯ ಮಧ್ಯಾಹ್ನಸೂರ್ಯನು ಅಂತಃಪುರಸ್ತ್ರೀಯರ ಮುಖಕಾಂತಿಯನ್ನು ಕುಂದಿಸುತ್ತಿರಲು ಚಕ್ರವರ್ತಿಯು ಸೈನ್ಯವು ನಿಲ್ಲುವ ಸ್ಥಾನದ ಸಮೀಪವನ್ನು ಸೇರಿದನು. ಮಧ್ಯಾಹ್ನದ ಬಿಸಿಲಿನ ತಾಪದಿಂದ ಸ್ತ್ರೀಯರ ಮುಖವು ಕಂದಿದ ಸಮಯದಲ್ಲಿ ಭರತಚಕ್ರವರ್ತಿಯು ಸೈನ್ಯಸ್ಥಾನದ ಸಮೀಪವನ್ನು ಹೊಂದಿದನೆಂದು ಭಾವವು.

**ಛತ್ರರತ್ನಕೃತಚ್ಛಾಯೋ ದಿವ್ಯಂ ರಥಮಧಿಷ್ಠಿತಃ ।**
**ನ ತದಾತಪಸಂಬಾಧಾಂ [೧೮]ವಿದಾಮಾಸ ವಿಶಾಂಪತಿಃ ॥ ೧೨೩ ॥**

೧ ಉಷ್ಟ್ರಃ. ೨ ಭೀತಿಂಗತಃ. ೩ ಅಭಿಮುಖಂ. ೪ ಅಂತಃಪುರಸ್ತ್ರಿಯಂ. ೫ ಪ್ರಪಾತಸ್ತು ತಟೋ ಭೃಗುಃ. ೬ ಕಂಚುಕೀ. ೭ ಯುವಾ. ೮ ಜಾನಾತಿ ಸ್ಮ. ೯ ಪಲಿತಪ್ರತೀಕಾರಾರ್ಥಂ ಪ್ರಯುಕ್ತೌಷಧವಿಶೇಷರಂಜಿತಶ್ಮಶ್ರುಃ. ೧೦ ಶಂಭಲೀಂ. ೧೧ ಅನುಗಚ್ಛನ್. ೧೨ ವೃದ್ಧಃ. ೧೩ ಕಟಕಂ. ೧೪ ಸೇನಾಪತಿನಾ. ೧೫ ಸ್ಥಾಪಿತಂ. ೧೬ ಅಂತಃಪುರಸ್ತ್ರೀಮುಖಕಾಂತಿವಿನಾಶಿನಿ. ೧೭ ಮಧ್ಯಾಹ್ನ ಸೂರ್ಯೇ, ಮಧ್ಯಂದಿನಾಧಿಪ ಇತ್ಯಪಿ ಪಾಠಃ. ೧೮ ಬಬುಧೇ.

ಛತ್ರರತ್ನದಿಂದ ಮಾಡಲ್ಪಟ್ಟ ನೆರಳುಳ್ಳವನೂ ಶ್ರೇಷ್ಠವಾದ ರಥವನ್ನೇರಿರುವವನೂ ಆದ ಭರತರಾಜನು ಆ ಸಮಯದಲ್ಲಿ ಬಿಸಿಲಿನ ಬಾಧೆಯನ್ನು ತಿಳಿಯಲಿಲ್ಲ.

**[೧]ವರ್ಷೀಯೋಭಿರಥಾಸನ್ನೈರಾರಬ್ಧಸುಖಸಂಕಥಃ ।**
**[೨]ಪ್ರಯಾತಮಪಿ ನಾಧ್ವಾನಂ [೩]ವಿವೇದ ಭರತಾಧಿಪಃ ॥ ೧೨೪ ॥**

ಸಮೀಪದಲ್ಲಿರುವ ಕುಲವೃದ್ಧರೊಡನೆ ಸುಖಸಮಾಚಾರಗಳನ್ನು ಮಾತನಾಡುತ್ತಿರುವ ಭರತಭೂಪಾಲನು ಬಹುದೂರ ಪ್ರಯಾಣಮಾಡಿದ ಮಾರ್ಗವನ್ನು ತಿಳಿಯಲಿಲ್ಲ.

**ನೋ[೪]ದ್ಘಾತಃ ಕೋಽಪ್ಯಭೂದಂಗೇ [೫]ರಥಾಂಗಪರಿವರ್ತನೈಃ ।**
**ರಥವೇಗೇಽಪಿ ನಾಸ್ಯಾಭೂ[೬]ತ್ಕ್ಲೇಶೋ ದಿವ್ಯಾನುಭಾವತಃ ॥ ೧೨೫ ॥**

ಭರತಚಕ್ರವರ್ತಿಯ ದಿವ್ಯಮಹಿಮೆಯಿಂದ ರಥಚಕ್ರಗಳ ಭ್ರಮಣೆಗಳಿಂದ ರಥವು ವೇಗವಾಗಿ ಹೋಗುತ್ತಿದ್ದರೂ ಅವನ ಶರೀರದಲ್ಲಿ ಯಾವ ಶ್ರಮವೂ ಕ್ಲೇಶವೂ ಉಂಟಾಗಲಿಲ್ಲ. ರಥವು ವೇಗವಾಗಿ ಹೋದರೂ ಭರತರಾಜನಿಗೆ ಶ್ರಮವಾಗಲಿಲ್ಲವೆಂದು ಭಾವವು.

**ರಥವೇಗಾನಿಲೋ[೭]ದಸ್ತಂ ವ್ಯಾಯತಂ ತದ್ಧ್ವಜಾಂಶುಕಮ್ ।**
**ಪಶ್ಚಾದಾಗಾಮಿಸೈನ್ಯಾನಾಮಿವ ಮಾರ್ಗ[೮]ಮಸೂತ್ರಯತ್ ॥ ೧೨೬ ॥**

ರಥದ ವೇಗದಿಂದುಂಟಾದ ಗಾಳಿಯಿಂದ ಮೇಲೆ ಹಾರಾಡುತ್ತಿರುವುದೂ ವಿಸ್ತಾರವೂ ಆದ ಆ ರಥದ ಧ್ವಜವಸ್ತ್ರವು ಹಿಂದಿನಿಂದ ಬರುತ್ತಿರುವ ಸೈನ್ಯಗಳಿಗೆ ಮಾರ್ಗವನ್ನು ತೋರಿಸುವಂತೆ ಶೋಭಿಸುತ್ತಿದ್ದಿತು.

**[೯]ರಥೋತ್ಥಿತಗತಿಕ್ಷೋಭಾದುದ್ಭೂತಾಂಗಪರಿಶ್ರಮಾಃ ।**
**ಕಥಂಕಥಮಪಿ ಪ್ರಾಪನ್ರಥಿನೋಽನ್ಯೇ ರಥಂ ಪ್ರಭೋಃ ॥ ೧೨೭ ॥**

ರಥದ ಗಮನದ ಕ್ಷೋಭೆಯಿಂದುಂಟಾದ ಶರೀರಪರಿಶ್ರಮವುಳ್ಳ ಇತರ ರಥಿಕರು ಬಹಳ ಪ್ರಯತ್ನದಿಂದ ಭರತರಾಜನ ರಥವನ್ನು ಸೇರಿದರು. ಬಹಳ ಪ್ರಯಾಸದಿಂದ ಭರತರಾಜನ ರಥದ ಸಮೀಪಕ್ಕೆ ಹೋದರೆಂದು ಭಾವವು.

**ತಮಧ್ವಶೇಷ[೧೦]ಮಧ್ವನ್ಯೈಸ್ತುರಂಗೈ[೧೧]ರತ್ಯವಾಹಯನ್ ।**
**ಸಾದಿನಃ ಪ್ರಭುಣಾ ಸಾರ್ಧಂ ಶಿಬಿರಂ ಪ್ರವಿವಿಕ್ಷವಃ ॥ ೧೨೮ ॥**

ಭರತರಾಜನೊಡನೆ ಸೈನ್ಯಸ್ಥಾನವನ್ನು ಪ್ರವೇಶಮಾಡಬೇಕೆಂದಿಚ್ಛಿಸುವ ಕುದುರೆ ಸವಾರರು ಆ ಉಳಿದಿರುವ ಮಾರ್ಗವನ್ನು ಚೆನ್ನಾಗಿ ದಾರಿನಡೆಯುವ ಕುದುರೆಗಳಿಂದ ಮೀರಿಸಿದರು. ಉಳಿದಿರುವ ಮಾರ್ಗವನ್ನು ದಾಟಿಹೋದರೆಂದರ್ಥವು.

**ದೂರಾದ್ದೂಷ್ಯಕುಟೀಭೇದಾನುತ್ಥಿತಾನ್ಪಭುರೈಕ್ಷತ ।**
**[೧೨]ಸೇನಾನಿವೇಶಮಭಿತಃ ಸೌಧಶೋಭಾಪಹಾಸಿನಃ ॥ ೧೨೯ ॥**

ಭರತರಾಜನು ಸೈನ್ಯರಚನೆಯ ಸುತ್ತಲೂ ಉಪ್ಪರಿಗೆಮನೆಗಳನ್ನು ಪರಿಹಾಸ್ಯಮಾಡುತ್ತಿರುವುವೂ ಉನ್ನತವೂ ಆದ ಅನೇಕ ವಸ್ತ್ರಗೃಹ(ಡೇರಾ)ಗಳನ್ನು ದೂರದಿಂದ ನೋಡಿದನು.

**ರೌಪ್ಯದಂಡೇಷು ವಿನ್ಯಸ್ತಾನ್ವಿಸ್ತೃತಾನ್ಪಟಮಂಡಪಾನ್ ।**
**ಸೋಽಪಶ್ಯಜ್ಜನತಾತಾಪಹಾರಿಣಃ ಸುಜನಾನಿವ ॥ ೧೩೦ ॥**

೧ ಕುಲವೃದ್ಧಾದಿಭಿಃ. ೨ ಅತಿದೂರಂ ಗತಂ. ೩ ಜಾನಾತಿ ಸ್ಮ. ೪ ಶ್ರಮಃ. ೫ ರಥಚಕ್ರಭ್ರಮಣೈಃ. ೬ ಕ್ಲಮ ಇತ್ಯಪಿ ಪಾಠಃ. ೭ ಉದ್ಧೃತಂ. ೮ ಆದರ್ಶಯತ್. ೯ ತಥೋತ್ಥಿತಗತಿಕ್ಷೋಭಾದಿತ್ಯಪಿ ಪಾಠಃ. ೧೦ ಅಧ್ವನಿಸಾಧುಭಿಃ. ೧೧ ಅತಿಕ್ರಮ್ಯ ಪ್ರಾಪಯನ್. ೧೨ ಸೇನಾರಚನಾಯಾಃ ಸಮಂತತಃ.

ಭರತರಾಜನು ಜನಸಮೂಹದ ಸಂತಾಪವನ್ನುನಾಶಮಾಡುವ ಸುಜನರನ್ನು ನೋಡುತ್ತಾನೋ ಎಂಬಂತೆ, ಬೆಳ್ಳಿಯ ದಂಡಗಳಲ್ಲಿರಿಸಲ್ಪಟ್ಟಿರುವುವೂ ವಿಸ್ತಾರವೂ ಆದ ವಸ್ತ್ರಮಂಟಪಗಳನ್ನು ನೋಡಿದನು.

**ಕಿಮೇತಾನಿ ಸ್ಥಲಾಬ್ಜಾನಿ ಹಂಸಯೂಥಾನ್ಯಮೂನಿ ವಾ ।**
**ಇತ್ಯಾಶಂಕ್ಯ [೧]ಸ್ಥಲಾಗ್ರಾಣಿ ದೂರಾದ್ದದೃಶಿರೇ ಜನೈಃ ॥ ೧೩೦ ॥**

ಜನರು "ಇವೇನು ನೆಲದಾವರೆಗಳೋ ? ಅಥವಾ ಹಂಸಪಕ್ಷಿಗಳ ಸಮೂಹ ಗಳೋ ?" ಎಂದು ಸಂದೇಹಪಟ್ಟು ವಸ್ತ್ರಮಂಟಪಗಳ ತುದಿಗಳನ್ನು ನೋಡಿದರು.

**ಸಾಮಂತಾನಾಂ ನಿವೇಶೇಷು ಕಾಯಮಾನಾನಿ [೨]ನೈಕಧಾ ।**
**ನಿವೇಶಿತಾನಿ ವಿನ್ಯಾಸೈ[೩]ರ್ನಿದಧ್ಯೌ ಪ್ರಭುರಗ್ರತಃ ॥ ೧೩೨ ॥**

ಭರತರಾಜನು ಮುಂಭಾಗದಲ್ಲಿ ಸಾಮಂತರಾಜರ ವಾಸಸ್ಥಾನಗಳಲ್ಲಿ ಅನೇಕ ವಿಧವಾದ ರಚನೆಗಳಿಂದ ರಚಿಸಿರುವ ಅನೇಕ ವಸ್ತ್ರಮಂಟಪ(ಚಪ್ಪರ)ಗಳನ್ನು ನೋಡಿದನು.

**ಪರಿತಃ ಕಾಯಮಾನಾನಿ ವೀಕ್ಷ್ಯ ಕಂಟಕಿನೀರ್ವೃತೀಃ ।**
**ನಿಷ್ಕಂಟಕೇ ನಿಜೇ ರಾಜ್ಯೇ ಮೇನೇ ತಾನೇವ ಕಂಟಕಾನ್ ॥ ೧೩೩ ॥**

ಭರತರಾಜನು ವಸ್ತ್ರಮಂಟಪಗಳ ಸುತ್ತಲೂ ಮುಳ್ಳಿನ ಬೇಲಿಗಳನ್ನು ನೋಡಿ ನಿಷ್ಕಂಟಕವಾದ ತನ್ನ ರಾಜ್ಯದಲ್ಲಿ ಆ ಮುಳ್ಳುಗಳನ್ನೇ ಕಂಟಕಗಳನ್ನಾಗಿ ತಿಳಿದನು. ರಾಜ್ಯವು ಶತ್ರುರಹಿತವಾಗಿದ್ದಿತೆಂದು ಭಾವವು.

**ತರುಶಾಖಾಗ್ರಸಂಸಕ್ತ[೪]ಪರ್ಯಾಣಾದಿಪರಿಚ್ಛದಾನ್ ।**
**[೫]ಸ್ಕಂಧಾವಾರಾದ್ಬಹಿಃ ಕಾಂಶ್ಚಿದಾವಾಸಾನ್ಸಭುರೈಕ್ಷತ ॥ ೧೩೪ ॥**

ಭರತರಾಜನು ಸೈನ್ಯಸ್ಥಾನದ ಹೊರಗೆ ಮರಗಳ ಕೊಂಬೆಗಳ ಅಗ್ರಭಾಗಗಳಲ್ಲಿ ತೂಗುಹಾಕಲ್ಪಟ್ಟ ಜೀನುಮೊದಲಾದ ಸಾಮಗ್ರಿಗಳುಳ್ಳ ಕೆಲವು ವಾಸಸ್ಥಾನಗಳನ್ನು ನೋಡಿದನು.

**ಬಹಿರ್ನಿವೇಶಮಿತ್ಯಾದೀನ್ವಿಶೇಷಾನ್ಸ ವಿಲೋಕಯನ್ ।**
**ಪ್ರವೇಶೇ ಶಿಬಿರಸ್ಯಾಸ್ಯ ಮಹಾದ್ವಾರ[೬]ಮಥಾಸದತ್ ॥ ೧೩೫ ॥**

ತರುವಾಯ ಭರತರಾಜನು ಸೈನ್ಯಸ್ಥಾನದ ಬಹಿರ್ಭಾಗದಲ್ಲಿ ಮೇಲೆ ಹೇಳಿದ ವರ್ಣನೆ ಮೊದಲಾದ ಕಾರ್ಯಗಳನ್ನು ನೋಡಿ ಸೈನ್ಯಸ್ಥಾನದ ಪ್ರವೇಶದಲ್ಲಿರುವ ಮಹಾದ್ವಾರವನ್ನು ಸೇರಿದನು.

**ತದತೀತ್ಯ ಸಮಂ ಸೈನ್ಯೈಃ ಸ ಗಚ್ಛನ್ಕಿಂಚಿದಂತರಮ್ ।**
**ಮಹಾಬ್ಧಿಸಮನಿರ್ಘೋಷಮಾಸಸಾದ ವಣಿಕ್ಪಥಮ್ ॥ ೧೩೬ ॥**

ಭರತರಾಜನು ಸೈನ್ಯಗಳೊಡನೆ ಆ ಮಹಾದ್ವಾರವನ್ನತಿಕ್ರಮಿಸಿ ಸ್ವಲ್ಪದೂರ ಹೋಗಿ ದೊಡ್ಡ ಸಮುದ್ರದ ಧ್ವನಿಗೆ ಸಮಾನವಾದ ಧ್ವನಿಯುಳ್ಳ ವರ್ತಕರ ಬೀದಿಯನ್ನು ಸೇರಿದನು.

**ಕೃತೋಪಶೋಭಮಾಬದ್ಧತೋರಣಂ ಚಿತ್ರಕೇತನಮ್ ।**
**ವಣಿಗ್ಭಿ[೭]ರೂಢರತ್ನಾರ್ಘ್ಯಂ ಸ [೮]ಜಗಾಹೇ ವಣಿಕ್ಪಥಮ್ ॥ ೧೩೭ ॥**

ಭರತರಾಜನು ಅಲಂಕರಿಸಲ್ಪಟ್ಟುದೂ ಕಟ್ಟಲ್ಪಟ್ಟ ತೋರಣವುಳ್ಳುದೂ ನಾನಾ ವಿಧವಾದ ಧ್ವಜಗಳುಳ್ಳುದೂ ವರ್ತಕರಿಂದ ಧರಿಸಲ್ಪಟ್ಟ ಶ್ರೇಷ್ಠವಾದ ರತ್ನಗಳುಳ್ಳುದೂ ಆದ ವರ್ತಕರ ಬೀದಿಯನ್ನು ಪ್ರವೇಶಿಸಿದನು.

೧ ಪಟಕುಟ್ಯಗ್ರಾಣಿ. ೨ ನಾನಾಪ್ರಕಾರೇಣ. ೩ ಪ್ರೇಕ್ಷಾಂಚಕ್ರೇ. ೪ ಪಲ್ಯಯನಾದಿಪರಿಕರಾನ್. ೫ ಕಟಕಾದ್ಬಾಹ್ಯೇ. ೬ ಆವಾಸದದಿತ್ಯಪಿ ಪಾಠಃ. ೭ ಧೃತರತ್ನಾರ್ಘ್ಯಂ. ೮ ವಿವೇಶ.

**ಪ್ರತ್ಯಾಪಣಮಸೌ ತತ್ರ ರತ್ನರಾಶೀನ್ನಿಧೀನಿವ ।**
**ಪಶ್ಯನ್ಮೇನೇ ನಿಧೀ[೧]ಯತ್ತಾಂ ಪ್ರಸಿದ್ಧ್ಯೈವ [೨]ತಥಾ ಸ್ಥಿತಾಮ್ ॥ ೧೩೮ ॥**

ಭರತರಾಜನು ಆ ವರ್ತಕರ ಬೀದಿಯಲ್ಲಿ ಪ್ರತಿಯೊಂದು ಅಂಗಡಿಯಲ್ಲೂ ನಿಧಿಗಳಂತಿದ್ದ ರತ್ನರಾಶಿಗಳನ್ನು ನೋಡಿ ನಿಧಿಯ ಸಂಖ್ಯೆಯು ಪ್ರಸಿದ್ಧಿಯಿಂದಲೇ ನವನಿಧಿಯೆಂದಿರುವುದೆಂದು ತಿಳಿದನು. ಪ್ರಸಿದ್ಧಿಯು ನವನಿಧಿಗಳೆಂದಿದ್ದರೂ ನಿಧಿ ಗಳು ಅನೇಕವಾಗಿವೆಯೆಂದು ತಿಳಿದನೆಂದಭಿಪ್ರಾಯವು.

**ಸಮೌಕ್ತಿಕಂ ಸ್ಫುರದ್ರತ್ನಂ ಜನತೋ[೩]ತ್ಕಲಿಕಾಕುಲಮ್ ।**
**ರಥಾ ವಣಿಕ್ಪಥಾಂಭೋಧಿಂ [೪]ಪೋತಾ ಇವ ಲಲಂಘಿರೆ ॥ ೧೩೯ ॥**

ರಥಗಳು, ಮುಕ್ತಾಫಲಗಳುಳ್ಳುದೂ ಪ್ರಕಾಶಮಾನವಾದ ರತ್ನಗಳುಳ್ಳುದೂ ಜನಸಂದಣಿಗಳಿಂದ ವ್ಯಾಕುಲತೆಯುಳ್ಳುದೂ ಆದ ವರ್ತಕರ ಬೀದಿಯೆಂಬ ಸಮುದ್ರವನ್ನು ನಾವೆಗಳಂತೆ, ದಾಟಿದುವು.

**ಚಲದಶ್ವೀಯಕಲ್ಲೋಲೈಃ ಸ್ಫುರನ್ನಿಸ್ತ್ರಿಂಶ[೫]ರೋಹಿತೈಃ ।**
**ರಾಜಮಾರ್ಗೋಂಬುಧೇರ್ಲೀಲಾಂ ಮಹೇಭಮಕರೈರಧಾತ್ ॥ ೧೪೦ ॥**

ರಾಜಮಾರ್ಗವು ಚಲಿಸುತ್ತಿರುವ ಕುದುರೆಗಳೆಂಬ ಅಲೆಗಳಿಂದಲೂ ಪ್ರಕಾಶ ಮಾನವಾದ ಖಡ್ಗಗಳೆಂಬ ಮತ್ಸ್ಯವಿಶೇಷಗಳಿಂದಲೂ ದೊಡ್ಡ ಆನೆಗಳೆಂಬ ಮೊಸಳೆ ಗಳಿಂದಲೂ ಸಮುದ್ರದ ಲೀಲೆಯನ್ನು ಧರಿಸಿದ್ದಿತು. ರಾಜಮಾರ್ಗವು ಸಮುದ್ರ ದಂತೆ ತೋರುತ್ತಿದ್ದಿತ್ತೆಂದು ಭಾವವು.

**ರಾಜನ್ಯಕೇನ ಸಂರುದ್ಧಃ ಸಮಂತಾದಾನೃಪಾಲಯಮ್ ।**
**ತದಾಸೌ ವಿಪಣೀಮಾರ್ಗಃ ಸತ್ಯಂ ರಾಜಪಥೋಭವತ್ ॥ ೧೪೧ ॥**

ಆಗ ಭರತರಾಜನ ಗೃಹದ ಸುತ್ತಲೂ ಸಾಮಂತರಾಜರ ಸಮೂಹದಿಂದ ವ್ಯಾಪ್ತವಾದ ಅಂಗಡಿಬೀದಿಯ ಮಾರ್ಗವು ನಿಜವಾಗಿಯೂ ರಾಜಮಾರ್ಗವಾಗಿ ದ್ದಿತು. ರಾಜರು ಸಂಚರಿಸುವ ಮಾರ್ಗವಾಗಿದ್ದಿತೆಂದು ಭಾವವು.

**ತತಃ ಪರ್ಯಂತವಿನ್ಯಸ್ತ[೬]ರತ್ನಭಾಸುರತೋರಣಮ್ ।**
**[೭]ರಥಕಟ್ಯಾಪರಿಕ್ಷೇಪಕೃತಬಾಹ್ಯಪರಿಚ್ಛದಮ್ ॥ ೧೪೨ ॥**

**ಆರುಧ್ಯಮಾನಮಶ್ವೀಯೈರ್ಹಾಸ್ತಿಕೇನಾತಿದುರ್ಗಮಮ್ ।**
**[೮]ಬಹುನಾಗವನಂ [೯]ಜುಷ್ಟಂ ಕಲಭೈಶ್ಚ ಕರೇಣುಭಿಃ ॥ ೧೪೩ ॥**

**ಛತ್ರಷಂಡಕೃತಚ್ಛಾಯಂ ಮಹೋದ್ಯಾನಮಿವ ಕ್ವಚಿತ್ ।**
**ಕ್ವಚಿ[೧೦]ತ್ಸಾಮಂತಮಂಡಲ್ಯಾ ರಚಿತಾಸ್ಥಾನಮಂಡಲಮ್ ॥ ೧೪೪ ॥**

**ಪ್ರವಿಶದ್ಭಿಶ್ಚ ನಿರ್ಯದ್ಭಿರಪರ್ಯಂತೈರ್ನಿಯೋಗಿಭಿಃ ।**
**ಮಹಾಬ್ಧೇರಿವ ಕಲ್ಲೋಲೈಸ್ತಟಮಾವಿರ್ಭವದ್ಧ್ವನಿ ॥ ೧೪೫ ॥**

**ಜನತೋತ್ಸಾರಣ[೧೧]ವ್ಯಗ್ರಮಹಾದೌವಾರಪಾಲಕಮ್ ।**
**ಕೃತಮಂಗಲನಿರ್ಘೋಷಂ ವಾಗ್ದೇವ್ಯೇವ ಕೃತಾಸ್ಪದಮ್ ॥ ೧೪೬ ॥**

**ಚಿರಾನುಭೂತಮಪ್ಯೇವಮಪೂರ್ವಮಿವ ಶೋಭಯಾ ।**
**ನೃಪೋ ನೃಪಾಂಗಣಂ ಪಶ್ಯ[೧೨]ನ್ನಿಮುಪ್ಯಾಸೀತ್ಸವಿಸ್ಮಯಃ ॥ ೧೪೭ ॥**

ತರುವಾಯ ಸಮೀಪದಲ್ಲಿರಿಸಿರುವ ರತ್ನಗಳಿಂದ ಪ್ರಕಾಶಮಾನವಾದ ತೋರಣ ಗಳುಳ್ಳುದೂ ಬಹಿರ್ಭಾಗದಲ್ಲಿ ಸುತ್ತಲೂ ಇರುವ ರಥಗಳ ಸಮೂಹಗಳಿಂದ ಅಲಂಕರಿಸಲ್ಪಟ್ಟಿರುವುದೂ ಕುದುರೆಗಳ ಸಮೂಹಗಳಿಂದ ತುಂಬಲ್ಪಟ್ಟಿರುವುದೂ

೧ ಪ್ರಮಾಣಂ. ೨ ನವನಿಧಿರೂಪೇಣ ಸ್ಥಿತಾಂ. ೩ ತರಂಗಾಕುಲಂ. ೪ ಭೈತ್ರಾ ಇವ. ೫ ಮತ್ಸ್ಯ ವಿಶೇಷೈಃ. ೬ ರತ್ನಾಭಾಸುರತೋರಣಮಿತ್ಯಪಿ ಪಾಠಃ. ೭ ರಥಸಮೂಹಪರಿವೇಷ್ಟನಕೃತ ಬಾಹ್ಯಪರಿಕರಂ. ೮ ಈಷದಪರಿಸಮಾಪ್ತಂ ನಾಗವನಂ, ನಾಗವನಸದೃಶಮಿತಿ ಯಾವತ್. ೯ ಸೇವಿತಂ. ೧೦ ರಾಜ ಸಮೂಹೇನ. ೧೧ ಆಸಕ್ತಾಃ. ೧೨ ಅಧಿಕಮವಾಚ್ಯಂ ವಾ.

ಆನೆಗಳ ಸಮೂಹದಿಂದ ಬಹಳ ನಿಬಿಡವೂ ಆನೆಯ ಮರಿಗಳಿಂದಲೂ ಹೆಣ್ಣಾನೆಗಳಿಂದಲೂ ಸೇವಿಸಲ್ಪಟ್ಟ ನಾಗವನಕ್ಕೆ ಸಮಾನವೂ ಕೆಲವು ಕಡೆಗಳಲ್ಲಿ ದೊಡ್ಡ ಉದ್ಯಾನವೋ ಎಂಬಂತೆ ಛತ್ರಿಗಳ ಸಮೂಹಗಳಿಂದ ಮಾಡಲ್ಪಟ್ಟ ನೆರಳುಳ್ಳುದೂ ಕೆಲವುಕಡೆಗಳಲ್ಲಿ ಸಾಮಾಂತರಾಜರ ಸಮೂಹದಿಂದ ಮಾಡಲ್ಪಟ್ಟ ಆಸ್ಥಾನಪ್ರವೇಶವುಳ್ಳುದೂ ದೊಡ್ಡ ಸಮುದ್ರದ ಅಲೆಗಳಂತೆ ಪ್ರವೇಶಮಾಡು ವವರೂ ಹೊರಟು ಹೋಗುವವರೂ ಅಪರಿಮಿತರೂ ಆದ ಭೃತ್ಯರಿಂದುಂಟಾದ ಧ್ವನಿಯುಳ್ಳ ಪಾರ್ಶ್ವಗಳುಳ್ಳುದೂ ಜನಸಂದಣಿಯನ್ನು ದೂರಮಾಡುವುದರಲ್ಲಿ ಆಸಕ್ತರಾದ ದೊಡ್ಡ ದ್ವಾರಪಾಲಕರುಳ್ಳುದೂ ಮಂಗಲಧ್ವನಿಮಾಡಲ್ಪಟ್ಟಿರುವುದೂ ಸರಸ್ವತಿಯು ವಾಸಮಾಡುವ ಸ್ಥಾನದಂತಿರುವುದೂ ಬಹುಕಾಲ ಅನುಭವಿಸಿದರೂ ಕುಂದದ ಶೋಭೆಯುಳ್ಳುದೂ ಆದ ರಾಜಾಂಗಣವನ್ನು ನೋಡಿ ಭರತರಾಜನು ಬಹಳ ಆಶ್ಚರ್ಯವುಳ್ಳವನಾದನು.

ನಿಧಯೋ ಯಸ್ಯ ಪರ್ಯಂತೇ ಮಧ್ಯೇ ರತ್ನಾನ್ಯನಂತಶಃ ।
ಮಹತಃ ಶಿಬಿರಸ್ಯಾಸ್ಯ ವಿಶೇಷಂ ಕೋನುವರ್ಣಯೇತ್ ॥ ೧೪೮ ॥

ಸುತ್ತಲೂ ನವನಿಧಿಗಳೂ ಮಧ್ಯದಲ್ಲಿ ಅನಂತವಾದ ರತ್ನಗಳೂ ಇದ್ದ ಈ ಸೈನ್ಯಸ್ಥಾನದ ವಿಶೇಷವನ್ನು ಯಾವನು ವರ್ಣಿಸುವುದಕ್ಕೆ ಶಕ್ತನು ?

ಸ ಶ್ರೀಮಾನಿತಿ ವಿಶ್ವತಃ ಸ್ವಶಿಬಿರಂ ಲಕ್ಷ್ಮ್ಯಾ ನಿವಾಸಾಯಿತಂ
ಪಶ್ಯನ್ನಾತ್ತಧೃತಿರ್ವಿಲಂಘ್ಯ [1]ವಿಶಿಖಾಃ [2]ಸ್ವರ್ಗಾಪಹಾಸಿಶ್ರಿಯಃ ।
ಸಂಭ್ರಾಮ್ಯತ್ಪ್ರತಿಹಾರರುದ್ಧಜನತಾಸಂಬಾಧಮುತ್ಕೇತನಂ ।
ಪ್ರಾವಿಕ್ಷ[3]ತ್ಕೃತಸನ್ನಿವೇಶಮಚಿರಾದಾತ್ಮಾಲಯಂ [4]ಶ್ರೀಪತಿಃ ॥ ೧೪೯ ॥

ಲಕ್ಷ್ಮಿಯ ವಾಸಸ್ಥಾನದಂತಿರುವ ತನ್ನ ವಾಸಸ್ಥಾನವನ್ನು ನೋಡಿ ಸಂತುಷ್ಟನೂ ...ಮಂತನೂ ಆದ ಭರತೇಶ್ವರನು ಸ್ವರ್ಗದ ಶೋಭೆಯನ್ನು ಪರಿಹಾಸ್ಯ ಮಾಡು ತ್ತಿರುವ ಬೀದಿಗಳನ್ನು ದಾಟಿ ಚೆನ್ನಾಗಿ ರಚಿಸಲ್ಪಟ್ಟಿರುವುದೂ ಮೇಲಕ್ಕೆದ್ದಿರುವ ಧ್ವಜ ಗಳುಳ್ಳುದೂ ತಿರುಗಾಡುತ್ತಿರುವ ದ್ವಾರಪಾಲಕರಿಂದ ತಡೆಯಲ್ಪಟ್ಟ ಜನಸಮೂಹದ ತಿಕ್ಕಾಟವುಳ್ಳುದೂ ಆದ ತನ್ನ ವಾಸಗೃಹವನ್ನು ಶೀಘ್ರವಾಗಿ ಪ್ರವೇಶಮಾಡಿದನು.

ತತ್ರಾವಿಷ್ಕೃತಮಂಗಲೇ ಸುರಸರಿದ್ವೀಚೀಭುವಾ ವಾಯುನಾ
[5]ಸಮ್ಮೃಷ್ಟಾಂಗಣವೇದಿಕೇ ವಿಕಿರತಾ ತಾಪಚ್ಛಿದಃ ಶೀಕರಾನ್ ।
ಶಸ್ತೇ [6]ವಾಸ್ತುನಿ ವಿಸ್ತೃತೇ ಸ್ಥಪತಿನಾ ಸದ್ಯಃ ಸಮುತ್ಥಾಪಿತೇ
ಲಕ್ಷ್ಮೀವಾನ್ಸುಖಮಾವಸನ್ನಿಧಿಪತಿಃ [7]ಪ್ರಾಚೀಂ ದಿಶಂ ನಿರ್ಜಯನ್ ॥

ನವನಿಧಿಗಳಿಗಧಿಪತಿಯಾದ ಭರತೇಶ್ವರನು ಪೂರ್ವದಿಕ್ಕನ್ನು ಜಯಿಸಿ ಗಂಗಾ ನದಿಯ ಅಲೆಗಳಿಂದುಂಟಾದುದೂ ಸಂತಾಪವನ್ನು ನಾಶಮಾಡುವ ಜಲಬಿಂದು ಗಳನ್ನೆರಚುತ್ತಿರುವುದೂ ಆದ ಗಾಳಿಯಿಂದ ಗುಡಿಸಲ್ಪಟ್ಟ ಅಂಗಣದ ಜಗತಿ ಯುಳ್ಳುದೂ ಮಂಗಳಮಯವೂ ಪ್ರಶಸ್ತವೂ ವಿಸ್ತಾರವೂ ಮರಗೆಲಸದವನಿಂದ ಆಗಲೇ ನಿರ್ಮಿಸಲ್ಪಟ್ಟುದೂ ಆದ ಮನೆಯಲ್ಲಿ ಸುಖವಾಗಿ ವಾಸಮಾಡಿದನು.

ರಾಜ್ಞಾಮಾವಸಥೇಷು ಶಾಂತಜನತಾಕ್ಷೋಭೇಷು ಪೀತಾಂಭಸಾ
ಮಶ್ವಾನಾಂ ಪಟಮಂಡಪೇಷು ನಿವಹೇ ಸ್ವೈರಂ ತೃಣಗ್ರಾಸಿನಿ ।
ಗಂಗಾತೀರಸರೋವಗಾಹಿನಿ ವನೇಷ್ವಾಲಾನಿತೇ ಹಾಸ್ತಿಕೆ
[1]ಜಿಷ್ಣೋಸ್ತತ್ಕಟಕಂ ಚಿರಾದಿವ ಕೃತಾವಾಸಂ ತದಾ ಲಕ್ಷ್ಯತೇ ॥ ೧೫೧ ॥

ರಾಜರುಗಳ ಬಿಡಾರಗಳು ಜನಸಂದಣಿಯ ಗಲಾಟೆಯಿಲ್ಲದುವುಗಳಾಗುತ್ತಿರಲು, ನೀರನ್ನು ಕುಡಿದಿರುವ ಕುದುರೆಗಳ ಸಮೂಹವು ವಸ್ತ್ರಮಂಟಪಗಳಲ್ಲಿ ಯಥೇಚ್ಛ ವಾಗಿ ಹುಲ್ಲನ್ನು ತಿನ್ನುತ್ತಿರಲು, ವನಗಳಲ್ಲಿ ಕಟ್ಟಿಹಾಕಲ್ಪಟ್ಟ ಆನೆಗಳ ಸಮೂಹವು ಗಂಗಾನದಿಯ ದಡದಲ್ಲಿರುವ ಸರೋವರಗಳನ್ನು ಪ್ರವೇಶಿಸುತ್ತಿರಲು, ಭರತಚಕ್ರ ವರ್ತಿಯ ಆ ಸೈನ್ಯಸ್ಥಾನವು ಬಹುಕಾಲದಿಂದ ಮಾಡಲ್ಪಟ್ಟ ವಾಸಸ್ಥಾನದಂತೆ ಕಾಣುತ್ತಿದ್ದಿತು.

ತತ್ರಾಸೀನಮುಪಾಯನೈಃ ಕುಲಧನೈಃ ಕನ್ಯಾಪ್ರದಾನಾದಿಭಿಃ
[2]ಪ್ರಾಚ್ಯಾಮಂಡಲಭೂಭುಜಃ ಸಮುಚಿತೈರಾರಾಧಯನ್ನಾಧನೈಃ ।
[3]ಸಂರುದ್ಧಾಃ ಪ್ರವಿಹಾಯ ಮಾನಮಪರೇ [4]ಪ್ರಾಣಂಶಿಷುಶ್ಚಕ್ರಿಣಂ
ದೂರಾದಾನತಮೌಲಯೋ ಜಿನಮಿವ [5]ಪ್ರಾಜ್ಯೋದಯಂ ನಾಕಿನಃ
॥ ೧೫೨ ॥

ಪೂರ್ವದಿಕ್ಕಿನಲ್ಲಿರುವ ಮಂಡಲಿಕರಾಜರು ಆ ಬಿಡಾರದಲ್ಲಿ ಕುಳಿತಿರುವ ಭರತ ರಾಜನನ್ನು ತಮ್ಮ ವಂಶಪರಂಪರೆಯಿಂದ ಬಂದ ಉತ್ತಮವಸ್ತುಗಳ ಕೈಗಾಣಿಕೆ ಗಳಿಂದಲೂ ಕನ್ಯಾದಾನ ಮೊದಲಾದುವುಗಳಿಂದಲೂ ಯೋಗ್ಯವಾದ ಬೇರೆ ಪದಾರ್ಥಗಳಿಂದಲೂ ಭಜಿಸಿದರು. ಬೇರೆ ಕೆಲವು ರಾಜರು ಗರ್ವವನ್ನು ಬಿಟ್ಟು, ಅಧಿಕವಾದ ಅಭ್ಯುದಯವುಳ್ಳ ಜಿನೇಶ್ವರನನ್ನು ದೇವತೆಗಳು ನಮಸ್ಕರಿಸುವಂತೆ, ದೂರದಿಂದ ಮಸ್ತಕಗಳನ್ನು ಬಾಗಿಸಿ ಭರತಚಕ್ರಿಯನ್ನಾವರಿಸಿಕೊಂಡು ನಮಸ್ಕಾರ ಮಾಡಿದರು.

ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ
ಭರತರಾಜವಿಜಯಪ್ರಯಾಣವರ್ಣನಂ ನಾಮ ಸಪ್ತವಿಂಶತಿತಮಂ ಪರ್ವ ॥

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
"ಕರ್ಣಾಟಕಭಾವದೀಪಿಕಾ ವ್ಯಾಖ್ಯೆಯೊಳ್"ಭರತರಾಜನ ವಿಜಯಪ್ರಯಾಣವರ್ಣನವೆಂಬ
ಇಪ್ಪತ್ತೇಳನೆಯ ಪರ್ವವು ಸಂಪೂರ್ಣವಾದುದು.

---

೧ ರಥ್ಯಾಃ. ೨ ಸ್ವರ್ಗಾಪಹಾರಿಶ್ರಿಯ ಇತ್ಯಪಿ ಪಾಠಃ. ೩ ವಿಹಿತಸಮ್ಯಗ್ರಚನಂ. ೪ ಭರತೇಶ್ವರಃ. ೫ ಸಮ್ಮಾರ್ಜಿತಾಂಗಣವೇದಿಕೆ. ೬ ಗೃಹೇ. ೭ ಪೂರ್ವಾಂ.

೧ ಚಕ್ರಿಣಃ. ೨ ಪ್ರಾಚಿಭವಾಃ. ೩ ಆವೃತಾಃ. ೪ ನಮಸ್ಕುರ್ವಂತಿ ಸ್ಮ. ೫ ಪ್ರಭೂತಾಭ್ಯುದಯಂ.

# ಅಥಾಷ್ಟಾವಿಂಶತಿತಮಂ ಪರ್ವ

**ಅಥಾನ್ಯೇದ್ಯುರ್ದಿನಾರಂಭೇ ಕೃತಪ್ರಾಭಾತಿಕಕ್ರಿಯಃ ।**
**ಪ್ರಯಾಣಮಕರೋಚ್ಚಕ್ರೀ ಚಕ್ರರತ್ನಾನುಮಾರ್ಗತಃ ॥ ೧ ॥**

ಅನಂತರದಲ್ಲಿ ಭರತಚಕ್ರವರ್ತಿಯು ಮರುದಿನ ಪ್ರಾತಃಕಾಲದಲ್ಲಿ ಪ್ರಾತಃಕಾಲದ ಕ್ರಿಯೆಗಳನ್ನು ಮಾಡಿಕೊಂಡು ಚಕ್ರರತ್ನದ ಮಾರ್ಗವನ್ನನುಸರಿಸಿ ಪ್ರಯಾಣಮಾಡಿದನು.

**ಅಲಂಘ್ಯಂ ಚಕ್ರಮಾಕ್ರಾಂತಪರಚಕ್ರಪರಾಕ್ರಮಮ್ ।**
**ದಂಡಶ್ಚ ದಂಡಿತಾರಾತಿರ್ದ್ವಯಮಸ್ಯ ಪುರೋಽಭವತ್ ॥ ೨ ॥**

ಬೇರೆಯವರಿಂದ ಮೀರಲಶಕ್ಯವೂ ಶತ್ರುಸಮೂಹದ ಪರಾಕ್ರಮವನ್ನಾಕ್ರಮಿಸುವುದೂ ಆದ ಚಕ್ರರತ್ನವೂ ಶತ್ರುಗಳನ್ನು ಶಿಕ್ಷಿಸುವ ದಂಡರತ್ನವೂ ಭರತಚಕ್ರವರ್ತಿಯ ಮುಂಭಾಗದಲ್ಲಿದ್ದುವು.

**ರಕ್ಷ್ಯಂ ದೇವಸಹಸ್ರೇಣ ಚಕ್ರಂ ದಂಡಶ್ಚ ತಾದೃಶಃ ।**
**ಜಯಾಂಗಮಿದಮೇವಾಸ್ಯ ದ್ವಯಂ ಶೇಷಃ ಪರಿಚ್ಛದಃ ॥ ೩ ॥**

ಚಕ್ರರತ್ನವು ಸಾವಿರ ದೇವತೆಗಳಿಂದ ರಕ್ಷಿಸಲ್ಪಡುವುದು. ದಂಡರತ್ನವೂ ಸಾವಿರ ದೇವತೆಗಳಿಂದ ರಕ್ಷಿಸಲ್ಪಡುವುದು. ಇವೆರಡೇ ಭರತಚಕ್ರವರ್ತಿಯ ಜಯಕ್ಕೆ ಸಾಧನಗಳಾಗಿದ್ದುವು. ಉಳಿದ ಸೈನ್ಯವೆಲ್ಲವು ಪರಿವಾರವಾಗಿದ್ದಿತು. ಶೋಭೆಗೋಸ್ಕರವಾಗಿದ್ದಿತೆಂದು ಭಾವವು.

**[೧]ವಿಜಯಾರ್ಧಪ್ರತಿಸ್ಪರ್ಧಿವರ್ಷ್ಮಾಣಂ [೨]ಯಾಗಹಸ್ತಿನಮ್ ।**
**ಪ್ರತಸ್ಥೇ ಪ್ರಭುರಾರುಹ್ಯ ನಾಮ್ನಾ ವಿಜಯಪರ್ವತಮ್ ॥ ೪ ॥**

ಭರತರಾಜನು ವಿಜಯಾರ್ಧಪರ್ವತದೊಡನೆ ಸ್ಪರ್ಧೆಮಾಡುವ ಶರೀರವುಳ್ಳದೂ ವಿಜಯಪರ್ವತವೆಂದು ಹೆಸರುಳ್ಳದೂ ಪೂಜೆಯನ್ನು ಹೊಂದಿದುದೂ ಆದ ಆನೆಯನ್ನು ಹತ್ತಿ ಹೊರಟನು. ವಿಜಯಾರ್ಧಪರ್ವತಕ್ಕೆ ಸಮಾನವಾದ ಗಜರತ್ನವನ್ನು ಪೂಜಿಸಿ ಅದನ್ನು ಹತ್ತಿಕೊಂಡು ಹೊರಟನೆಂದು ಭಾವವು.

**ಪ್ರಾಚೀಂ ದಿಶಮಥೋ ಜೇತುಮಾಪಯೋಧೇಸ್ತಮುದ್ಯತಃ ।**
**[೩]ನೂನಂ ಸ್ತಂಬೇರಮವ್ಯಾಜಾ[೪]ದೂಹೇ [೫]ವಿಜಯಪರ್ವತಃ ॥ ೫ ॥**

ತರುವಾಯ ಸಮುದ್ರದವರೆಗೂ ಪೂರ್ವದಿಕ್ಕನ್ನು ಜಯಿಸುವುದಕ್ಕೋಸ್ಕರ ಸನ್ನದ್ಧನಾದ ಭರತರಾಜನನ್ನು ವಿಜಯಾರ್ಧಪರ್ವತವು ಆನೆಯ ನೆವದಿಂದ ನಿಜವಾಗಿ ಧರಿಸಿದ್ದಿತು. ವಿಜಯಾರ್ಧಪರ್ವತವೇ ಭರತರಾಜನನ್ನು ಧರಿಸಿದಂತಿದ್ದಿತೆಂದು ಭಾವವು.

**[೬]ಸುರೇಭಂ ಶರದಭ್ರಾಭಮಾರೂಢೋ ಜಯಕುಂಜರಮ್ ।**
**ಸ ರೇಜೇ ದೀಪ್ತಮುಕುಟಃ [೭]ಸುರೇಭಂ ಸುರರಾಡಿವ ॥ ೬ ॥**

ಶ್ರೇಷ್ಠವಾದ ಶಬ್ದವುಳ್ಳದೂ ಅಥವಾ ದೇವತಾಸ್ವರೂಪವೂ ಶರತ್ಕಾಲದ ಮೇಘಕ್ಕೆ ಸಮಾನವೂ ಜಯಶೀಲವೂ ಆದ ಆನೆಯನ್ನು ಹತ್ತಿದವನೂ ಪ್ರಕಾಶಮಾನವಾದ ಕಿರೀಟವುಳ್ಳವನೂ ಆದ ಭರತರಾಜನು, ಐರಾವತಗಜವನ್ನು ಹತ್ತಿದ ದೇವೇಂದ್ರನಂತೆ, ಶೋಭಿಸಿದನು.

**ಸಿತಾತಪತ್ರಮಸ್ಯೋಚ್ಚೈರ್ವಿಧೃತಂ ಶ್ರಿಯಮಾದಧೇ ।**
**ಯಶಸಾಂ ಪ್ರಸವಾಗಾರಮಿವ [೧]ತದ್ವ್ಯಾಜಜೃಂಭಿತಮ್ ॥ ೭ ॥**

ಭರತರಾಜನ ಮೇಲೆ ಹಿಡಿಯಲ್ಪಟ್ಟಿರುವ ಶ್ವೇತಚ್ಛತ್ರವು, ಅದರ ನೆವದಿಂದ ವೃದ್ಧಿಹೊಂದಿದುದೂ ಯಶಸ್ಸುಗಳನ್ನುಂಟುಮಾಡುವುದೂ ಆದ ಮನೆಯೋ ಎಂಬಂತೆ, ಶೋಭೆಯನ್ನುಂಟುಮಾಡಿದ್ದಿತು.

**ಲಕ್ಷ್ಮೀಪ್ರಹಾಸವಿಶದಾ ಚಾಮರಾಲೀ ಸಮಂತತಃ ।**
**ವ್ಯಧೂಯತಾಸ್ಯ ವಿಧ್ವಸ್ತತಾಪಾ ಜ್ಯೋತ್ಸ್ನೇವ ಶಾರದೀ ॥ ೮ ॥**

ಲಕ್ಷ್ಮೀದೇವಿಯ ನಗೆಯಂತೆ ಶುಭ್ರವಾದ ಚಾಮರಗಳ ಸಮೂಹವು, ಸಂತಾಪವನ್ನು ನಾಶಮಾಡುವುದೂ ಶರತ್ಕಾಲಸಂಬಂಧಿಯೂ ಆದ ಬೆಳದಿಂಗಳಿನಂತೆ, ಭರತರಾಜನ ಸುತ್ತಲೂ ಬೀಸಲ್ಪಟ್ಟಿತು.

**ಜಯದ್ವಿರದಮಾರೂಢೋ ಜ್ವಲಜ್ಜೈತ್ರಾಸ್ತ್ರಭಾಸುರಃ ।**
**ಜಯಲಕ್ಷ್ಮೀಕಟಾಕ್ಷಾಣಾಮಗಮತ್ಸ [೨]ಶರವ್ಯತಾಮ್ ॥ ೯ ॥**

ಜಯಶೀಲವಾದ ಆನೆಯನ್ನೇರಿದವನೂ ಪ್ರಕಾಶಮಾನವೂ ಜಯಶೀಲವೂ ಆದ ಅಸ್ತ್ರದಿಂದ ಪ್ರಕಾಶಿಸುವವನೂ ಆದ ಭರತರಾಜನು ಜಯಲಕ್ಷ್ಮಿಯ ಕಡೆಗಣ್ಣುನೋಟಗಳಿಗೆ ಗುರಿಯಾದನು.

**ಮಹಾಮುಕುಟಬದ್ಧಾನಾಂ [೩]ಸಹಸ್ರಾಣಿ ಸಮಂತತಃ ।**
**ತಮನುಪ್ರಚಲಂತಿ ಸ್ಮ ಸುರಾಧಿಪಮಿವಾಮರಾಃ ॥ ೧೦ ॥**

ದೇವತೆಗಳು ದೇವೇಂದ್ರನನ್ನು ಹಿಂಬಾಲಿಸಿ ಹೋಗುವಂತೆ, ಅನೇಕ ಮಹಾಮುಕುಟಬದ್ಧರಾಜರು ಸುತ್ತಲೂ ಆ ಭರತಚಕ್ರವರ್ತಿಯನ್ನು ಹಿಂಬಾಲಿಸಿ ಹೋದರು.

**ದೂರಮದ್ಯ ಪ್ರಯಾತವ್ಯಂ ನಿವೇಷ್ಟವ್ಯ[೪]ಮುಪಾರ್ಣವಮ್ ।**
**[೫]ತ್ವರಧ್ವಮಿತಿ ಸೇನಾನ್ಯಃ ಸೈನಿಕಾನುದತಿಷ್ಠಯನ್ ॥ ೧೧ ॥**

"ಈ ದಿವಸ ದೂರ ಹೋಗಬೇಕಾಗಿದೆ. ಸಮುದ್ರದ ಸಮೀಪದಲ್ಲಿ ವಾಸವನ್ನು ಮಾಡಬೇಕಾಗಿದೆ. ವೇಗವಾಗಿ ನಡೆಯಿರಿ" ಹೀಗೆಂದು ಸೇನಾಪತಿಯು ಸೈನಿಕರನ್ನು ಪ್ರೋತ್ಸಾಹಿಸಿದನು.

**ತ್ವರ್ಯತಾಂ ಪ್ರಸ್ಥಿತೋ ದೇವೋ [೬]ದವೀಯಶ್ಚ ಪ್ರಯಾಣಕಮ್ ।**
**ಬಲಾಧಿಕಾರಿಣಾಮಿತ್ಥಂ ವಚೋ ಬಲಮಚುಕ್ಷುಭತ್ ॥ ೧೨ ॥**

"ತ್ವರೆಮಾಡಿ! ಪ್ರಭುವು ಹೊರಟನು!! ಬಹಳದೂರ ಪ್ರಯಾಣಮಾಡಬೇಕಾಗಿದೆ!!!" ಈ ಪ್ರಕಾರವಾದ ಸೇನಾಧಿಪತಿಗಳ ವಚನವು ಸೈನ್ಯವನ್ನು ಚಂಚಲಪಡಿಸಿದ್ದಿತು.

೧ ವಿಜಯಾರ್ಧಗಿರಿಣಾಸ್ಪರ್ಧಮಾನದೇಹಂ. ೨ ಪೂಜೋಪೇತಗಜಂ. ೩ ನಸ್ವಿತ್ಕಪಿಪಾಠಃ. ೪ ಧರತಿಸ್ಮ. ೫ ವಿಜಯಾರ್ಧಗಿರಿಃ. ೬ ಸುಶಬ್ದಂ. ೭ ಐರಾವತಗಜಂ.

೧ ಛತ್ರವ್ಯಾಜೃಂಭಿತಂ. ೨ ಲಕ್ಷ್ಯತಾಂ. ೩ ಅಪರಿಮಿತಾನಿ. ೪ ಅರ್ಣವಸಮೀಪೇ. ೫ ವೇಗಂ ಕುರುಧ್ವಂ. ೬ ದೂರತರಂ.

**ಅದ್ಯಾ[೧]ಸಿಂಧು ಪ್ರಯಾತವ್ಯಂ ಗಂಗಾದ್ವಾರೇ ನಿವೇಶನಮ್ ।**
**[೨]ಸಂಸಾಧ್ಯೋ ಮಾಗಧೋದ್ಯೈವ ವಿಲಂಘ್ಯ ಪಯಸಾಂ ನಿಧಿಮ್ ॥**

" ಈ ದಿವಸ ಸಮುದ್ರದವರೆಗೆ ಹೋಗಬೇಕು. ಗಂಗಾನದಿಯ ದ್ವಾರದಲ್ಲಿ ಈ ದಿನ ಸೈನ್ಯವನ್ನಿರಿಸಬೇಕು. ಈ ದಿವಸವೇ ಸಮುದ್ರವನ್ನು ದಾಟಿ ಮಾಗಧನೆಂಬ ವ್ಯಂತರದೇವನನ್ನು ಸಾಧಿಸ(ಜಯಿಸ)ಬೇಕು.

**ಸಮುದ್ರಮದ್ಯ ಪಶ್ಯಾಮಃ [೩]ಸಮುದ್ರಂಗತ್ತರಂಗಕಮ್ ।**
**[೪]ಸಮುದ್ರಂ ಲಂಘತೇದ್ಯೈವ [೫]ಸಮುದ್ರಂ ಶಾಸನಂ ವಿಭೋಃ ॥ ೧೪ ॥**

ಮೇಲಕ್ಕೇಳುತ್ತಿರುವ ಅಲೆಗಳುಳ್ಳ ಸಮುದ್ರವನ್ನು ಈ ದಿವಸ ನೋಡುತ್ತೇವೆ. ಪ್ರಭುವಿನ ಮುದ್ರಾಸಹಿತವಾದ ಅಪ್ಪಣೆಯು ಈ ದಿವಸವೇ ಸಮುದ್ರವನ್ನು ದಾಟುತ್ತದೆ." ಸಮುದ್ರಮಧ್ಯದಲ್ಲಿರುವ ದ್ವೀಪಗಳಲ್ಲಿ ರಾಜಾಜ್ಞೆಯು ಜಾರಿಗೆ ಬರುವುದೆಂದರ್ಥವು.

**ಅನ್ಯೋನ್ಯಸ್ಯೇತಿ ಸಂಜಲ್ಪೈಃ [೬]ಸಂಪ್ರಾಸ್ಥಿಷತ ಸೈನಿಕಾಃ ।**
**ಪ್ರಯಾಣಭೇರೀಪ್ರಧ್ವಾನಸ್ತದೋದ್ಯನ್ [೭]ದ್ಯಾಮದಿಧ್ವನತ್ ॥ ೧೫ ॥**

ಈ ಪ್ರಕಾರವಾಗಿ ಒಬ್ಬರಿಗೊಬ್ಬರ ಸಂಭಾಷಣೆಗಳೊಡನೆ ಸೈನಿಕರು ಹೋಗುವುದಕ್ಕಾರಂಭಿಸಿದರು. ಮಾತನಾಡುತ್ತ ಹೋದರೆಂದು ಭಾವವು. ಆಗ ಪ್ರಯಾಣಭೇರಿಯ ಶಬ್ದವು ಆಕಾಶದಲ್ಲಿ ಧ್ವನಿಯನ್ನು ಮಾಡಿತು.

**ತತಃ ಪ್ರಚಲಿತಾ ಸೇನಾ ಸಾನುಗಂಗಂ ಧೃತಾಯತಿಃ ।**
**ಮಿಮಾನೇವ ತದಾ[೮]ಯಾಮಂ ಪಪ್ರಥೇ ಪ್ರಥಿತಧ್ವನಿಃ ॥ ೧೬ ॥**

ತರುವಾಯ ಗಂಗಾನದಿಯನ್ನನುಸರಿಸಿ ಉದ್ದಕ್ಕೂ ಹೊರಟಿರುವುದೂ ಪ್ರಸಿದ್ಧವಾದ ಧ್ವನಿಯುಳ್ಳದೂ ಆದ ಸೈನ್ಯವು, ಆ ಗಂಗಾನದಿಯ ವಿಸ್ತಾರವನ್ನಳತೆಮಾಡುವಂತೆ, ವಿಸ್ತರಿಸಿದ್ದಿತು.

**ಸಚಾಮರಾ ಚಲದ್ಧಂಸಾಂ [೯]ಸಬಲಾಕಾಂ [೧೦]ಪತಾಕಿನೀ ।**
**ಅನ್ವಿಯಾಯ ಚಮೂರ್ಗಂಗಾಂ ಸತುರಂಗಾ [೧೧]ತರಂಗಿಣೀಮ್॥ ೧೭ ॥**

ಚಾಮರಗಳೂ ಧ್ವಜಪತಾಕೆಗಳೂ ಕುದುರೆಗಳೂ ಸಹಿತವಾದ ಸೈನ್ಯವು, ಚಲಿಸುತ್ತಿರುವ ಹಂಸಪಕ್ಷಿಗಳೂ ಬೆಳ್ಳಕ್ಕಿಗಳೂ ಅಲೆಗಳೂ ಉಳ್ಳ ಗಂಗಾನದಿಯನ್ನನುಸರಿಸಿ ನಡೆಯಿತು. ಹಂಸಪಕ್ಷಿಗಳಂತೆ ಚಾಮರಗಳೂ ಬೆಳ್ಳಕ್ಕಿಗಳಂತೆ ಧ್ವಜಪತಾಕೆಗಳೂ ಅಲೆಗಳಂತೆ ಕುದುರೆಗಳೂ ಉಳ್ಳ ಸೈನ್ಯವು ಗಂಗಾನದಿಯನ್ನು ಹೋಲುತ್ತಿದ್ದಿತೆಂದು ಭಾವವು.

**ರಾಜಹಂಸೈಃ [೧೨]ಕೃತಾಧ್ಯಾಸಾ ಕ್ವಚಿದಪ್ರಸ್ಖಲದ್ಗತಿಃ ।**
**ಚಮೂರಬ್ಧಿಂ ಪ್ರತಿ [೧೩]ಪ್ರಾಯಾತ್ಸಾ ದ್ವಿತೀಯೇವ ಜಾಹ್ನವೀ ॥ ೧೮ ॥**

ರಾಜಶ್ರೇಷ್ಠರಿಂದ ವಾಸಮಾಡಲ್ಪಟ್ಟುದೂ ಯಾವ ಸ್ಥಳದಲ್ಲೂ ತಡೆಯಿಲ್ಲದ ಗಮನವುಳ್ಳುದೂ ಆದ ಸೈನ್ಯವು, ರಾಜಹಂಸಪಕ್ಷಿಗಳಿಂದ ವಾಸಮಾಡಲ್ಪಟ್ಟುದೂ ಯಾವ ಸ್ಥಳದಲ್ಲೂ ತಡೆಯಿಲ್ಲದೆ ಹರಿಯುತ್ತಿರುವುದೂ ಆದ ಮತ್ತೊಂದು ಗಂಗಾನದಿಯೋ ಎಂಬಂತೆ, ಸಮುದ್ರವನ್ನು ಕುರಿತು ಗಮನಮಾಡಿತು. ಸೈನ್ಯವು ಸಮುದ್ರದ ಕಡೆಗೆ ಪ್ರಯಾಣಮಾಡಿತೆಂದು ಭಾವವು.

೧ ಸಮುದ್ರಪರ್ಯಂತಂ. ೨ ಸಾಧನೀಯಃ, ಸಂಶ್ರಾವ್ಯ ಇತ್ಯಪಿ ಪಾಠಃ. ೩ ಉಚ್ಚೈಶ್ಚಲದ್ವೀಚಿಕಂ. ೪ ಸಮುದ್ರಲಂಘನೇ ಇತ್ಯಪಿ ಪಾಠಃ. ೫ ಮುದ್ರಯಾ ಸಹಿತಂ. ೬ ಗಂತುಮುಪಕ್ರಾಂತವಂತಃ. ೭ ಆಕಾಶಂ. ೮ ವಿಸ್ತೃತಿಂ. ೯ ಬಿಸಕಂಠಿಕಾಸಹಿತಾಂ. ೧೦ ಪತಾಕಾವಲೀ. ೧೧ ತರಂಗವತೀಂ. ೧೨ ಕೃತಸ್ಥಿತಿಃ. ೧೩ ಆಗಚ್ಛತ್.

**[೧]ವಿಪರೀತಾ[೨]ಮತದ್ವೃತ್ತಿ[೩]ರ್ನಿಮ್ನಗಾಮುನ್ನತಸ್ಥಿತಿಃ ।**
**[೪]ತ್ರಿಮಾರ್ಗಗಾಂ [೫]ವ್ಯಜೇಷ್ಟಾಸೌ ಪೃತನಾ ಬಹುಮಾರ್ಗಗಾ ॥ ೧೯ ॥**

ವಿಪರೀತವ್ಯಾಪಾರವಿಲ್ಲದುದೂ ಉನ್ನತವೂ ಅನೇಕಮಾರ್ಗಗಳಲ್ಲಿ ಹೋಗುತ್ತಿರುವುದೂ ಆದ ಈ ಸೈನ್ಯವು, ವಿಪರೀತವ್ಯಾಪಾರವುಳ್ಳುದೂ ಅಂದರೆ ಪಕ್ಷಿಗಳಿಂದ ಸುತ್ತಲ್ಪಟ್ಟುದೂ ನೀಚವಾಗಿರುವುದೂ ಅಂದರೆ ಹಳ್ಳವಾದ ಪ್ರದೇಶದಲ್ಲಿ ಹರಿಯುತ್ತಿರುವುದೂ ಮೂರು ಮಾರ್ಗಗಳಲ್ಲಿ ಹೋಗುತ್ತಿರುವುದೂ ಆದ ಗಂಗಾನದಿಯನ್ನು ಜಯಿಸಿತು.

**ಅನುಗಂಗಾತಟಂ ಯಾಂತೀ ಧ್ವಜಿನೀ ಸಾ ಧ್ವಜಾಂಶುಕೈಃ ।**
**ವನರೇಣುಭಿರಾಕೀರ್ಣಂ ಸಮ್ಮಮಾರ್ಜೇವ ಖಾಂಗಣಮ್ ॥ ೨೦ ॥**

ಗಂಗಾನದಿಯ ದಡವನ್ನನುಸರಿಸಿ ಹೋಗುತ್ತಿರುವ ಆ ಸೈನ್ಯವು ವನದ ಧೂಳುಗಳಿಂದ ವ್ಯಾಪ್ತವಾದ ಆಕಾಶವೆಂಬ ಅಂಗಣವನ್ನು ಧ್ವಜವಸ್ತ್ರಗಳಿಂದ ಗುಡಿಸುವಂತಿದ್ದಿತು.

**ದುರ್ವಿಗಾಹಾ [೬]ಮಹಾಗ್ರಾಹಾಃ ಸೈನ್ಯಾನ್ಯುತ್ತೇರು[೭]ರಂತರೇ ।**
**ಗಂಗಾನುಗಾ [೮]ಧುನೀರ್ಬಹ್ವೀ[೯]ರ್ಬಹುರಾಜಕುಲಸ್ಥಿತೀಃ ॥ ೨೧ ॥**

ಸೈನ್ಯಗಳು ಪ್ರವೇಶಿಸುವುದಕ್ಕೆ ಕಠಿನವೂ ದೊಡ್ಡಮೊಸಳೆಗಳುಳ್ಳವೂ ರಾಜವಂಶಗಳ ಸ್ಥಿತಿಗೆ ಸಮಾನಗಳೂ ಮಧ್ಯದಲ್ಲಿ ಗಂಗಾನದಿಯನ್ನು ಸೇರುತ್ತಿರುವುವೂ ಆದ ಅನೇಕ ನದಿಗಳನ್ನು ದಾಟಿದುವು.

**ಮಾರ್ಗೇ [೧೦]ಬಹುತಿಥಾನ್ ದೇಶಾನ್ಸರಿತಃ ಪರ್ವತಾನಪಿ ।**
**[೧೧]ವನಧಿಂ ವನದುರ್ಗಾಣಿ ಖನೀರಪ್ಯತ್ಯಗಾತ್ಪ್ರಭುಃ ॥ ೨೨ ॥**

ಭರತರಾಜನು ಮಾರ್ಗದಲ್ಲಿ ಅನೇಕ ದೇಶಗಳನ್ನೂ ನದಿಗಳನ್ನೂ ಪರ್ವತಗಳನ್ನೂ ಸರೋವರಗಳನ್ನೂ ವನದುರ್ಗಗಳನ್ನೂ ಗಣಿಗಳನ್ನೂ ದಾಟಿ ಹೋದನು.

**[೧೨]ಅಗೋಪ್ಯದೇಷ್ವರಣ್ಯೇಷು ದೃಶಂ ವ್ಯಾಪಾರಯನ್ವಿಭುಃ ।**
**[೧೩]ಭೂಮಿಚ್ಛಿದ್ರಾಪಿಧಾನಾಯ ಕ್ಷಣಂ ಯತ್ನಮಿವಾತನೋತ್ ॥ ೨೩ ॥**

ಗೋವುಗಳಿಂದ ಪ್ರವೇಶಮಾಡಲಶಕ್ಯವಾದ ವನಗಳನ್ನು ನೋಡುತ್ತಿರುವ ಭರತರಾಜನು ಭೂಮಿಯ ಹಳ್ಳಗಳನ್ನು ಮುಚ್ಚುವುದಕ್ಕೋಸ್ಕರ ಒಂದು ಕ್ಷಣಕಾಲದವರೆಗೆ ಪ್ರಯತ್ನಿಸಿದನೋ ಎಂಬಂತಿದ್ದನು.

**ಪಥಿ ಪ್ರಣೇಮುರಾಗತ್ಯ ಸಂಭ್ರಾಂತಾ ಮಂಡಲಾಧಿಪಾಃ ।**
**[೧೪]ದಂಡೋಪನತವೃತ್ತಸ್ಯ ವಿಷಯೋಯಮಿತಿ ಪ್ರಭುಮ್ ॥ ೨೪ ॥**

ಭಯಪಟ್ಟಿರುವ ಅನೇಕ ಮಂಡಲಿಕರಾಜರು ಮಾರ್ಗದಲ್ಲಿ ಬಂದು "ಇದು ದಂಡರತ್ನದಿಂದ ಅಥವಾ ಶಿಕ್ಷೆಯಿಂದ ಪ್ರಾಪ್ತವಾದ ವ್ಯಾಪಾರವುಳ್ಳ ನಿನ್ನದೇಶವು" ಎಂದು ಭರತರಾಜನಿಗೆ ನಮಸ್ಕರಿಸಿದರು.

**[೧೫]ಸ ಚಕ್ರಂ [೧೬]ಧೇಹಿ ರಾಜೇಂದ್ರ [೧೭]ಸ [೧೮]ಧುರಂ[೧೯]ಪ್ರಾಜ ಸಾರಥೇ ।**
**ಸಂಜಲ್ಪ ಇತಿ ನಾಸ್ಯಾಸೀದಯತ್ನಾವನತದ್ವಿಷಃ ॥ ೨೫ ॥**

ಪ್ರಯತ್ನವಿಲ್ಲದೆ ಶತ್ರುಗಳು ವಶೀಭೂತರಾದುದರಿಂದ ಭರತರಾಜನಿಗೆ "ರಾಜಶ್ರೇಷ್ಠನೆ !ಪ್ರಸಿದ್ಧನಾದ ನೀನು ಚಕ್ರವನ್ನು ಧರಿಸು. ಸಾರಥಿಯೆ !ಪ್ರಸಿದ್ಧನಾದ ನೀನು ರಥದ ಮುಂಭಾಗವನ್ನು ನಡೆಯಿಸು" ಈ ಪ್ರಕಾರವಾದ ಸಂಭಾಷಣೆಯುಂಟಾಗಿರ

೧ ಪಕ್ಷಿಭಿಃ ಪರಿವೃತಾಂ, ಪ್ರತಿಕೂಲಾಮಿತಿ ಧ್ವನಿಃ. ೨ ವಿಪರೀತವೃತ್ತಿರಹಿತಾ. ೩ ನೀಚಪಥಗಾಮಿತಿ ಧ್ವನಿಃ. ೪ ಗಂಗಾಂ. ೫ ಜಿತವತೀ. ೬ ಮಹಾನಕ್ರಾಃ, ಮಹಾಸ್ವೀಕಾರಾಶ್ಚ. ೭ ಉತ್ತರ ಇತ್ಯಪಿ ಪಾಠಃ. ೮ ನದೀಃ. ೯ ರಾಜಕುಲಸ್ಥಿತೇಃ ಸಮಾಃ. ೧೦ ಬಹುಸಂಖ್ಯಾನ್, ಬಹುಸ್ಥಿತಾನಿತ್ಯಪಿ ಪಾಠಃ. ೧೧ ಸರೋವರಂ. ೧೨ ಗೋಭಿರಗಮ್ಯೇಷು. ೧೩ ಭೂಗರ್ತಾಚ್ಛಾದನಾಯ. ೧೪ ದಂಡೇನ ಪ್ರಾಪ್ತಾ ವೃತ್ತಿರ್ಯಸ್ಯ ಸಸ್ತಸ್ಯ. ೧೫ ಪ್ರಸಿದ್ಧಸ್ತ್ವಂ. ೧೬ ಧಾರಯ. ೧೭ ಪ್ರಸಿದ್ಧಸ್ತ್ವಂ. ೧೮ ಯಾನಮುಖಂ. ೧೯ ಪ್ರೇರಯ.

ಲಿಲ್ಲ. ಯುದ್ಧಮಾಡುವ ಸಂದರ್ಭವೇ ಇಲ್ಲದುದರಿಂದ ಮೇಲೆ ಹೇಳಿದಂತೆ ಮಾತನಾಡುವ ಆವಶ್ಯಕತೆಯಿರಲಿಲ್ಲವೆಂದು ಭಾವವು.

**ಪ್ರತಿಯೋದ್ಧುಮಶಕ್ತಾಸ್ತಂ ಪ್ರಧನೇಷು ಜಿಗೀಷವಃ ।**
**[೧]ತತ್ಪದಂ ಪ್ರಣತಿವ್ಯಾಜಾತ್ಸಮೌಲಿಭಿರತಾಡಯನ್ ॥ ೨೬ ॥**

ಪ್ರತಿಯಾಗಿ ಯುದ್ಧಮಾಡುವುದಕ್ಕೆ ಸಾಮರ್ಥ್ಯವಿಲ್ಲದವರೂ ಯುದ್ಧಗಳಲ್ಲಿ ಭರತರಾಜನನ್ನು ಜಯಿಸಬೇಕೆಂಬ ಅಪೇಕ್ಷೆಯುಳ್ಳವರೂ ಆದ ರಾಜರು ನಮಸ್ಕಾರ ಮಾಡುವ ನೆವದಿಂದ ಭರತರಾಜನ ಪಾದಗಳನ್ನು ತಮ್ಮ ಕಿರೀಟಗಳಿಂದ ಹೊಡೆದರು. ಭರತರಾಜನ ಪಾದಕ್ಕೆ ನಮಸ್ಕಾರಮಾಡಿದರೆಂದರ್ಥವು.

**[೨]ವಿಭುತ್ವಮರಿಚಕ್ರೇಷು [೩]ಭೂಪರಾಗಾನುರಂಜನಮ್ ।**
**ಸ್ವಚಕ್ರ ಇವ ಸೋಧತ್ತ ಮಹತಾಂ ಚಿತ್ರಮೀಹಿತಮ್ ॥ ೨೭ ॥**

ಭರತರಾಜನು ತನ್ನದೇಶದಲ್ಲಿ ಪ್ರಭುತ್ವವನ್ನೂ ರಾಜರನ್ನು ಪ್ರೀತಿಯಿಂದ ಸಂತೋಷಪಡಿಸುವಿಕೆಯನ್ನೂ ಧರಿಸಿದ್ದಂತೆ, ಶತ್ರುರಾಜರ ದೇಶಗಳಲ್ಲಿ ವ್ಯಾಪಕತ್ವವನ್ನೂ ಭೂಮಿಯ ಧೂಳಿಯ ಲೇಪವನ್ನೂ ಧರಿಸಿದ್ದನು. ಶತ್ರುರಾಜರನ್ನು ಭೂಮಿಯಲ್ಲಿ ಬಿದ್ದು ನಮಸ್ಕಾರಮಾಡುವಂತೆ ಮಾಡಿದ್ದನೆಂದರ್ಥವು. ಮಹಾತ್ಮರ ವ್ಯಾಪಾರವು ಆಶ್ಚರ್ಯಕರವಾದುದು.

**[೪]ಸಂಧ್ಯಾದಿವಿಷಯೇನಾಸ್ಯ [೫]ಸಮಕಕ್ಷೋ ಹಿ ಪಾರ್ಥಿವಃ ।**
**[೬]ಷಾಡ್ಗುಣ್ಯಮತ ಏವಾಸ್ಮಿಂ[೭]ಶ್ಚರಿತಾರ್ಥಮಭೂತ್ಪ್ರಭೌ ॥ ೨೮ ॥**

ಸಂಧಿ ವಿಗ್ರಹ ಮೊದಲಾದ ವಿಷಯದಲ್ಲಿ ಭರತರಾಜನಿಗೆ ಸಮಾನನಾದ ರಾಜನಿರಲಿಲ್ಲವು. ಈ ಕಾರಣದಿಂದಲೇ ಭರತರಾಜನಲ್ಲಿ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧಭಾವ, ಆಶ್ರಯಗಳೆಂಬ ಆರು ಗುಣಗಳ ಸಮೂಹವು ಕೃತಕೃತ್ಯವಾಗಿದ್ದಿತು. ಸಫಲವಾಗಿದ್ದಿತೆಂದಭಿಪ್ರಾಯವು.

**ಪ್ರತಿರಾಷ್ಟ್ರಮುಪಾನೀತಪ್ರಾಭೃತಾನ್ವಿಷಯಾಧಿಪಾನ್ ।**
**ಸಂಭಾವಯನ್ಪ್ರಸಾದೇನ ಸೋತ್ಯಗಾದ್ವಿಷಯಾನ್ಬಹೂನ್ ॥ ೨೯ ॥**

ಪ್ರತಿಯೊಂದು ದೇಶದಲ್ಲಿಯೂ ಕೈಗಾಣಿಕೆಗಳನ್ನು ತಂದಿದ್ದ ಆಯಾ ದೇಶಗಳ ರಾಜರನ್ನು ಪ್ರಸನ್ನತೆಯಿಂದ ಸತ್ಕಾರಮಾಡುವವನಾಗಿ ಭರತರಾಜನು ಅನೇಕ ದೇಶಗಳನ್ನು ದಾಟಿಹೋದನು.

**ನಾಸ್ತ್ರೇ ವ್ಯಾಪಾರಿತೋ ಹಸ್ತೋ ಮೌರ್ವೀ ಧನುಷಿ ನಾರ್ಪಿತಾ ।**
**ಕೇವಲಂ ಪ್ರಭುಶಕ್ತ್ಯೈವ ಪ್ರಾಚೀದಿಗ್ವಿಜಿತಾಮುನಾ ॥ ೩೦ ॥**

ಭರತರಾಜನು ಅಸ್ತ್ರವನ್ನು ಕೈಯಲ್ಲಿ ಹಿಡಿಯಲಿಲ್ಲ, ಧನುಸ್ಸನ್ನು ಹೆದೆಯೇರಿಸಲಿಲ್ಲ, ಪ್ರಭುಸಾಮರ್ಥ್ಯದಿಂದಲೇ ಪೂರ್ವದಿಕ್ಕನ್ನು ಜಯಿಸಿದನು.

**ಗೋಕುಲಾನಾಮುಪಾಂತೇಷು ಸೋಪಶ್ಯ[೮]ದ್ಯುವವಲ್ಲವಾನ್ ।**
**ವನವಲ್ಲೀಭಿರಾಬದ್ಧ[೯]ಜೂಟಕಾನ್ಗೋಭಿರಕ್ಷಿಣಃ ॥ ೩೧ ॥**

ಭರತರಾಜನು ಗೋವುಗಳ ಹಿಂಡುಗಳ ಸಮೀಪದಲ್ಲಿ ವನದ ಬಳ್ಳಿಗಳಿಂದ ತಲೆಯ ಕೂದಲುಗಳನ್ನು ಕಟ್ಟಿರುವವರೂ ಗೋವುಗಳನ್ನು ಕಾಯುವವರೂ ಯುವಕರೂ ಆದ ಗೊಲ್ಲರನ್ನು ನೋಡಿದನು.

**ಮಂಥಾಕರ್ಷಶ್ರಮೋದ್ಭೂತಸ್ವೇದಬಿಂದುಚಿತಾನನಾಃ ।**
**[೧೦]ಮಥ್ನತೀಃ ಸಕುಚೋತ್ಕಂಪಂ ಸಲೀಲ[೧೧]ತ್ರಿಕನರ್ತನ್ಯೈಃ ॥ ೩೨ ॥**

೧ ಭರತಪಾದಂ. ೨ ಪ್ರಭುತ್ವಂ, ವ್ಯಾಪಿತ್ವಂ ಚ. ೩ ಸ್ವರಾಷ್ಟ್ರಪಕ್ಷೇ ಭೂಪಾನಾಮನುರಾಗರಂಜನಂ, ಅರಿರಾಷ್ಟ್ರಪಕ್ಷೇ ಭುವಃ ಪರಾಗಸ್ಯಾನುರಂಜನಂ. ೪ ಸಂಧಿವಿಗ್ರಹಯಾನಾಸನದ್ವೈಧಾಶ್ರಯಾಣಾಂ ವಿಷಯೇ. ೫ ಸಮಾನಪ್ರತಿಪತ್ತಿಕಃ. ೬ ಸಂಧ್ಯಾದಿಗುಣಸಮೂಹಃ. ೭ ಕೃತಕೃತ್ಯಂ. ೮ ತರುಣಗೋಪಾಲಾನ್. ೯ ಕೇಶಪಾಶಾನ್. ೧೦ ಮಥನಂ ಕುರ್ವತೀಃ. ೧೧ ನಿತಂಬನರ್ತನ್ಯೈಃ.

**ಮಂಥರಜ್ಜು[೧]ಸಮಾಕೃಷ್ಟಿಕ್ಲಾಂತಬಾಹೂಃ ಶ್ಲಥಾಂಶುಕಾಃ ।**
**ಸ್ರಸ್ತಸ್ತನಾಂಶುಕಾಲಕ್ಷ್ಯತ್ರಿವಲೀ[೨]ಭಂಗುರೋದರಾಃ ॥ ೩೩ ॥**

**[೩]ಕ್ವಬ್ಧಾಭಿಘಾತೋಚ್ಚಲಿತಸ್ಥೂಲಗೋರಸಬಿಂದುಭಿಃ ।**
**ವಿರಲೈರಂಗಸಂಲಗ್ನೈಃ ಶೋಭಾಂ ಕಾಮಪಿ ಪುಷ್ಣತೀಃ ॥ ೩೪ ॥**

**ಮಂಥಾರವಾನುಸಾರೇಣ ಕಿಂಚಿದಾರಬ್ಧ[೪]ಮೂರ್ಛನಾಃ ।**
**ವಿಸ್ರಸ್ತಕಬರೀಬಂಧಾಃ ಕಾಮಸ್ಯೇವ ಪತಾಕಿಕಾಃ ॥ ೩೫ ॥**

**[೫]ಗೋಷ್ಠಾಂಗಣೇಷು [೬]ಸಲ್ಲಾಪೈಃ ಸ್ವೈರಮಾರಬ್ಧಮಂಥನಾಃ ।**
**ಪ್ರಭುರ್ಗೋಪವಧೂಃ ಪಶ್ಯನ್ನಿಮಪ್ಯಾಸೀತ್ಸಮುತ್ಸುಕಃ ॥ ೩೬ ॥**

ಮಂಥನದಂಡವನ್ನು ಎಳೆಯುವುದರ ಆಯಾಸದಿಂದುಂಟಾದ ಬೆವರಿನ ಬಿಂದುಗಳಿಂದ ವ್ಯಾಪ್ತವಾದ ಮುಖಗಳುಳ್ಳವರೂ ಲೀಲೆಯುಳ್ಳ ಪಿರ್ರೆ-ಅಂಡುಗಳ ಕುಣಿತಗಳಿಂದ ಕುಚಗಳು ಅಳ್ಳಾಡುವಂತೆ ಮೊಸರನ್ನು ಕಡೆಯುತ್ತಿರುವವರೂ ಮೊಸರು ಕಡೆಯುವ ಹಗ್ಗವನ್ನು ಎಳೆಯುವುದರಿಂದ ಬಳಲಿದ ಭುಜಗಳುಳ್ಳವರೂ ಸಡಿಲಿದ ವಸ್ತ್ರಗಳುಳ್ಳವರೂ ಕುಚವಸ್ತ್ರಗಳು ಜಾರಿಹೋಗಿರುವುದರಿಂದ ಚೆನ್ನಾಗಿ ಕಾಣುತ್ತಿರುವ ತ್ರಿವಲಿಗಳುಳ್ಳವೂ ಮನೋಹರವೂ ಆದ ಹೊಟ್ಟೆಗಳುಳ್ಳವರೂ ವಿರಳವೂ ಶರೀರದಲ್ಲಿ ಸಂಬಂಧಿಸಿರುವುವೂ ಆದ ಮಂಥನದಂಡದ ಹೊಡೆತದಿಂದ ಮೇಲಕ್ಕೆ ಸಿಡಿದ ದೊಡ್ಡದಾದ ಗೋರಸ(ಮಜ್ಜಿಗೆಯ)ಬಿಂದುಗಳಿಂದ ಅತಿಶಯವಾದ ಶೋಭೆಯನ್ನು ಹೊಂದಿರುವವರೂ ಮೊಸರುಕಡೆಯುವ ಶಬ್ದಕ್ಕನುಸಾರವಾಗಿ ಸ್ವಲ್ಪ ರಾಗಾಲಾಪನೆಯನ್ನು ಪ್ರಾರಂಭಿಸಿದವರೂ ಬಿಚ್ಚಿಹೋದ ತಲೆಗೂದಲುಗಳ ಗಂಟುಳ್ಳವರೂ ಮನ್ಮಥನ ಪತಾಕೆಗಳೋ ಎಂಬಂತಿರುವವರೂ ಗೋವುಗಳನ್ನು ಕಟ್ಟುವ ಸ್ಥಾನಗಳ ಅಂಗಣಗಳಲ್ಲಿ ಪರಸ್ಪರ ಸಂಭಾಷಣೆಗಳಿಂದ ಯಥೇಚ್ಛವಾಗಿ ಮೊಸರನ್ನು ಕಡೆಯುವುದಕ್ಕೆ ಪ್ರಾರಂಭಿಸಿದವರೂ ಆದ ಗೋಪಸ್ತ್ರೀಯರನ್ನು ನೋಡುತ್ತಿರುವ ಭರತರಾಜನು ಅತ್ಯಂತ ಕುತೂಹಲವುಳ್ಳವನಾದನು.

**ವನೇ ವನಗಜೈ[೭]ರ್ಜುಷ್ಟೇ ಪ್ರಭುಮೇನಂ ವನೇಚರಾಃ ।**
**ದಂತೈರ್ವನಕರೀಂದ್ರಾಣಾಮುದ್ರಾಕ್ಷುಃ ಸಹ ಮೌಕ್ತಿಕೈಃ ॥ ೩೭ ॥**

ಕಾಡಾನೆಗಳಿಂದ ವಾಸಮಾಡಲ್ಪಟ್ಟ ಅರಣ್ಯದಲ್ಲಿರುವ ಬೇಡರು ದೊಡ್ಡ ಕಾಡಾನೆಗಳ ಹಲ್ಲುಗಳನ್ನೂ ಮುತ್ತುಗಳನ್ನೂ ತಂದುಕೊಟ್ಟು ಭರತರಾಜನನ್ನು ನೋಡಿದರು. ಆನೆಯ ದಂತಗಳನ್ನೂ ಮುತ್ತುಗಳನ್ನೂ ಕೈಗಾಣಿಕೆ ಕೊಟ್ಟು ಭರತರಾಜನ ಭೇಟಿಮಾಡಿದರೆಂದು ಭಾವವು.

**ಶ್ಯಾಮಾಂಗೀರನಭಿವ್ಯಕ್ತರೋಮರಾಜೀಸ್ತನೂದರೀಃ ।**
**ಪರಿಧಾನೀಕೃತಾಲೋಲಪಲ್ಲವವ್ಯಕ್ತ[೮]ಸಂವೃತೀಃ ॥ ೩೮ ॥**

**ಚಮರೀವಾಲಕಾವಿದ್ಧಕಬರೀಬಂಧಬಂಧುರಾಃ ।**
**[೯]ಫಲಿನೀಫಲಸಂದೃಬ್ಧಮಾಲಾರಚಿತಕಂಠಿಕಾಃ ॥ ೩೯ ॥**

**ಕಸ್ತೂರಿಕಾಮೃಗಾಧ್ಯಾಸವಾಸಿತಾಃ ಸುರಭೀರ್ಮೃದಃ ।**
**ಸಂಚಿನ್ವತೀರ್ವನಾಭೋಗೇ ಪ್ರಸಾಧನಜಿಘೃಕ್ಷಯಾ ॥ ೪೦ ॥**

**ಪುಲಿಂದಕನ್ಯಕಾಃ ಸೈನ್ಯಸಮಾಲೋಕನವಿಸ್ಮಿತಾಃ ।**
**[೧೦]ಅವ್ಯಾಜಸುಂದರಾಕಾರಾ ದೂರಾದಾಲೋಕಯತ್ಪ್ರಭುಃ ॥ ೪೧ ॥**

ಕಪ್ಪಾದ ಶರೀರವುಳ್ಳವರೂ ಅವ್ಯಕ್ತವಾದ ರೋಮಗಳ ಸಾಲುಳ್ಳವರೂ ಕೃಶವಾದ ಹೊಟ್ಟೆಯುಳ್ಳವರೂ ಚಂಚಲವಾದ ತಳಿರುಗಳ ಹೊದಿಕೆಯಲ್ಲಿ ತೋರುತ್ತಿರುವ

೧ ಸಮಾಕರ್ಷಣೇ ಗ್ಲಾನಬಾಹೂಃ. ೨ ಮನೋಹರೋದರಾಃ . ೩ ಮದನಃ, ಮಂಥನದಂಡಶ್ಚ. ೪ ಸ್ವರವಿಶ್ರಮಣಾಃ. ೫ ಗೋಸ್ಥಾನಾಂಗಣೇಷು. ೬ ಮಿಥೋಭಾಷಣೈಃ. ೭ ಸೇವಿತೇ. ೮ ಅಭ್ಯಂತರಪ್ರದೇಶಾಃ. ೯ ಗುಂಜಾಫಲರಚಿತಾ. ೧೦ ಅನುಪಾಧಿ.

ಶರೀರವುಳ್ಳವರೂ ಚಮರೀಮೃಗಗಳ ಬಾಲಗಳಿಂದ ಯುಕ್ತವಾಗಿರುವ ಹೆರಳು ಗಂಟುಗಳಿಂದ ಮನೋಹರರಾಗಿರುವವರೂ ಗುರಗಂಜಿಗಳಿಂದ ಪೋಣಿಸಲ್ಪಟ್ಟ ಮಾಲೆಗಳನ್ನು ಕಂಠದಲ್ಲಿ ಧರಿಸಿರುವವರೂ ಕಸ್ತೂರಿಮೃಗಗಳು ಕುಳಿತಿರುವುದರಿಂದ ಸುಗಂಧವಾಗಿ ಮಾಡಲ್ಪಟ್ಟುವೂ ಸುಗಂಧವುಳ್ಳುವೂ ಆದ ಮಣ್ಣಿನ ಆಭರಣಗಳನ್ನು ಮಾಡಿಕೊಳ್ಳುವ ಇಚ್ಛೆಯಿಂದ ಅರಣ್ಯಪ್ರದೇಶದಲ್ಲಿ ಅದನ್ನು ಹುಡುಕುತ್ತಿರುವವರೂ ಸೈನ್ಯವನ್ನು ನೋಡಿ ಆಶ್ಚರ್ಯಪಟ್ಟಿರುವವರೂ ಸ್ವಭಾವದಿಂದ ಸುಂದರವಾದ ಶರೀರಾಕಾರವುಳ್ಳವರೂ ಆದ ಬೇಡರ ಕನ್ನಿಕೆಯರನ್ನು ಭರತರಾಜನು ದೂರದಿಂದ ನೋಡಿದನು.

**ಚಮರೀವಾಲಕಾನ್ಕೇಚಿತ್ಕೇಚಿತ್ಕಸ್ತೂರಿಕಾಂಡಕಾನ್ ।**
**ಪ್ರಭೋರುಪಾಯನೀಕೃತ್ಯ ದದೃಶು[೧]ರ್ಮ್ಲೇಚ್ಛರಾಜಕಾಃ ॥ ೪೨ ॥**

ಬೇಡರುಗಳ ಕೆಲವು ಮಂದಿ ರಾಜರು ಚಮರೀಮೃಗಗಳ ಬಾಲಗಳನ್ನೂ ಕೆಲವು ಮಂದಿ ರಾಜರು ಕಸ್ತೂರಿಯ ಅಂಡಗಳನ್ನೂ ಭರತರಾಜನಿಗೆ ಕೈಗಾಣಿಕೆಗಳನ್ನಾಗಿ ಕೊಟ್ಟು ಅವನ ದರ್ಶನಮಾಡಿದರು.

**ತತ್ರಾಂತಪಾಲದುರ್ಗಾಣಾಂ ಸಹಸ್ರಾಣಿ ಸಹಸ್ರಶಃ ।**
**ಲಬ್ಧಚಕ್ರಧರಾದೇಶಃ ಸೇನಾನೀಃ ಸಮಶಿಶ್ರಿಯತ್ ॥ ೪೩ ॥**

ಆ ಗಂಗಾನದೀತೀರದಲ್ಲಿರುವ ವನದಲ್ಲಿ ಚಕ್ರವರ್ತಿಯ ಅಪ್ಪಣೆಯನ್ನು ಪಡೆದ ಸೇನಾಧಿಪತಿಯು ಲಕ್ಷಪರಿಮಿತವಾದ ಅಂತಪಾಲರೆಂಬ ರಾಜರ ದುರ್ಗಗಳನ್ನು ಹೊಂದಿದನು. ಸ್ವಾಧೀನಪಡಿಸಿಕೊಂಡನೆಂದು ಭಾವವು.

**ಅಪೂರ್ವರತ್ನ[೨]ಸಂದರ್ಭೈಃ [೩]ಕುಪ್ಯಸಾರಧನೈರಪಿ ।**
**ಅಂತಪಾಲಾಃ ಪ್ರಭೋರಾಜ್ಞಾಂ ಸಪ್ರಣಾಮೈರಮಾನಯನ್ ॥ ೪೪ ॥**

ಅಂತಪಾಲರು ಅಪೂರ್ವವಾದ ರತ್ನಗಳ ಸಮೂಹಗಳನ್ನೂ ವಸ್ತ್ರಗಳನ್ನೂ ಶ್ರೇಷ್ಠವಾದ ವಸ್ತುಗಳನ್ನೂ ಕೈಗಾಣಿಕೆಕೊಟ್ಟು ನಮಸ್ಕಾರಪೂರ್ವಕವಾಗಿ ಭರತ ರಾಜನ ಆಜ್ಞೆಯನ್ನು ಗೌರವಿಸಿದರು.

**ತತೋ ವಿದೂರಮುಲ್ಲಂಘ್ಯ ಸೋಧ್ವಾನಂ ಸಹ ಸೇನಯಾ ।**
**ಗಂಗಾದ್ವಾರ[೪]ಮನುಪ್ರಾಪತ್ಸ್ವಮಿವಾಲಂಘ್ಯಮರ್ಣವಮ್ ॥ ೪೫ ॥**

ತರುವಾಯ ಭರತರಾಜನು ಸೈನ್ಯದೊಡನೆ ಬಹುದೂರಮಾರ್ಗವನ್ನು ದಾಟಿ ಗಂಗಾನದಿಯ ದ್ವಾರವನ್ನನುಸರಿಸಿ ತನ್ನಂತೆ ಮೀರಲಶಕ್ಯವಾದ ಸಮುದ್ರವನ್ನು ತಲುಪಿದನು. ದಾಟಲಶಕ್ಯವಾದ ಸಮುದ್ರದ ತೀರಕ್ಕೆ ಹೋದನೆಂದು ಭಾವವು.

**[೫]ಬಹಿಃಸಮುದ್ರ[೬]ಮುದ್ರಿಕ್ತಂ [೭]ದ್ವೈಪ್ಯಂ [೮]ನಿಮ್ನೋಪಗಂ ಜಲಮ್ ।**
**ಸಮುದ್ರಸ್ಯೇವ [೯]ನಿಷ್ಯಂದಮುಚ್ಛೇರಾರಾದ್ವ್ಯಲೋಕಯತ್ ॥ ೪೬ ॥**

ಭರತರಾಜನು ಸಮುದ್ರದ ಬಹಿರ್ಭಾಗದಲ್ಲಿ ಸಮುದ್ರದ ಪ್ರವಾಹವೋ ಎಂಬಂತಿರುವುದೂ ಅತ್ಯಧಿಕವೂ ದ್ವೀಪದಲ್ಲುಂಟಾದುದೂ ಆಳವೂ ಆದ ನೀರನ್ನು ಸಮುದ್ರದಿಂದ ದೂರದಲ್ಲಿ ನೋಡಿದನು. ದೂರದಲ್ಲಿ ಅಗಾಧವಾದ ನೀರನ್ನು ನೋಡಿದನೆಂದರ್ಥವು.

**[೧೦]ವರ್ಷಾರಂಭೋ[೧೧]ಯುಗಾರಂಭೇ ಯೋಭೂತ್ಕಾಲಾ[೧೨]ನುಭಾವತಃ ।**
**ತತಃಪ್ರಭೃತಿ ಸಂವೃದ್ಧಂ ಜಲಂ ದ್ವೀಪಾಂತಮಾವೃಣೋತ್ ॥ ೪೭ ॥**

ಚತುರ್ಥಕಾಲದ ಪ್ರಾರಂಭದಲ್ಲಿ ಆ ಕಾಲದ ಸಾಮರ್ಥ್ಯದಿಂದ ಮಳೆಗಾಲವು ಪ್ರಾರಂಭವಾಗಿದ್ದಿತು. ಅಂದಿನಿಂದ ವೃದ್ಧಿಹೊಂದಿದ ನೀರು ದ್ವೀಪದ ಮಧ್ಯಭಾಗವನ್ನು ಆವರಿಸಿಕೊಂಡಿದ್ದಿತು.

**ಅಲಂಘ್ಯತ್ವಾ[೧]ನ್ಮಹೀಯಸ್ತ್ವಾದ್ದ್ವೀಪಪರ್ಯಂತವೇಷ್ಟನಾತ್ ।**
**ದ್ವೈಪ್ಯಮಂಬು [೨]ಸಮುದ್ರಿಕ್ತಮಗಾದುಪಸಮುದ್ರತಾಮ್ ॥ ೪೮ ॥**

ದಾಟಲಶಕ್ಯವಾಗಿದ್ದುದರಿಂದಲೂ ಬಹಳ ದೊಡ್ಡದಾಗಿದ್ದುದರಿಂದಲೂ ದ್ವೀಪದ ಸಮೀಪಪ್ರದೇಶಗಳನ್ನು ವ್ಯಾಪಿಸಿಕೊಂಡುದುದರಿಂದಲೂ ಬಹಳವಾಗಿ ಹೆಚ್ಚಿದುದೂ ದ್ವೀಪಸಂಬಂಧಿಯೂ ಆದ ನೀರು ಉಪಸಮುದ್ರದ ಭಾವವನ್ನು ಹೊಂದಿದ್ದಿತು. ದ್ವೀಪದ ಮಧ್ಯದಲ್ಲಿ ನಿಂತ ನೀರು ಉಪಸಮುದ್ರವಾಗಿದ್ದಿತೆಂದು ಭಾವವು.

**ಪಶ್ಯನ್ನುಪಸಮುದ್ರಂ ತಂ ಗತ್ವಾ ಸ್ಥಲಪಥೇನ ಸಃ ।**
**ಗಂಗೋಪವನವೇದ್ಯಂತರ್ಭಾಗೇ ಸೈನ್ಯಂ ನ್ಯವೀವಿಶತ್ ॥ ೪೯ ॥**

ಭರತರಾಜನು ಆ ಉಪಸಮುದ್ರವನ್ನು ನೋಡುತ್ತ ಮಾರ್ಗದಿಂದ ಹೋಗಿ ಗಂಗಾನದಿಯ ಸಮೀಪದಲ್ಲಿರುವ ವನವೇದಿಕೆಯ ಮಧ್ಯಭಾಗದಲ್ಲಿ ಸೈನ್ಯವನ್ನು ಪ್ರವೇಶಮಾಡಿಸಿದನು.

**ವೇದಿಕಾತೋರಣದ್ವಾರಮಸ್ತಿ ತತ್ರೋಚ್ಛ್ರಿತಂ ಮಹತ್ ।**
**ಶನೈ[೩]ಸ್ತೇನ ಪ್ರವಿಶ್ಯಾಂತರ್ವಣಂ ಸೈನ್ಯಂ ನ್ಯವಿಕ್ಷತ ॥ ೫೦ ॥**

ಆ ವನವೇದಿಕೆಯ ಮಧ್ಯಭಾಗದಲ್ಲಿ ದೊಡ್ಡದೂ ಉನ್ನತವೂ ಆದ ವೇದಿಕೆಯ ಹೊರಬಾಗಿಲಿದೆ. ಆ ಬಾಗಿಲಿನಿಂದ ಮೆಲ್ಲನೆ ಪ್ರವೇಶಿಸಿ ವನದ ಮಧ್ಯಕ್ಕೆ ಸೈನ್ಯವನ್ನು ಪ್ರವೇಶಮಾಡಿಸಿದನು.

**ತತ್ರ [೪]ವಾಸ್ತುವಶಾದಸ್ಯ ಕಿಂಚಿತ್ಸಂಕುಚಿತಾ ಯತಃ ।**
**ಸ್ಕಂಧಾವಾರನಿವೇಶೋಽಭೂದಲಂಘ್ಯ[೫]ವ್ಯೂಹವಿಸ್ತೃತಿಃ ॥ ೫೧ ॥**

ಆ ಪ್ರದೇಶದಲ್ಲಿ ಭರತರಾಜನ ವಾಸಗೃಹದಂತೆ ಉದ್ದ ಕಡಮೆಯಾದ ಸೈನ್ಯಸ್ಥಾನವು ದಾಟಲಶಕ್ಯವಾದ ವಿಸ್ತಾರವುಳ್ಳುದಾಗಿದ್ದಿತು. ಸೈನ್ಯವು ನಿಲ್ಲುವ ಸ್ಥಾನವು ಭರತರಾಜನ ವಾಸಕ್ಕನುಸಾರವಾಗಿ ಸ್ವಲ್ಪ ಮೊಟಕಾಗಿಯೂ ಬಹಳ ಅಗಲವಾಗಿಯೂ ಇದ್ದಿತೆಂದರ್ಥವು.

**ನಂದನ[೬]ಪ್ರತಿಮೇ ತಸ್ಮಿನ್ವನೇ ರುದ್ಧಾತಪಾಂಘ್ರಿಪೇ ।**
**ಗಂಗಾಶೀತಾನಿಲಸ್ಪರ್ಶೈಸ್ತದ್ಬಲಂ ಸುಖ[೭]ಮಾವಸತ್ ॥ ೫೨ ॥**

ಬಿಸಿಲನ್ನು ತಡೆದಿರುವ ವೃಕ್ಷಗಳುಳ್ಳುದೂ ನಂದನವನಕ್ಕೆ ಸಮಾನವೂ ಆದ ಆ ವನದಲ್ಲಿ ಭರತರಾಜನ ಸೈನ್ಯವು ಗಂಗಾನದಿಯಮೇಲೆ ಬೀಸುತ್ತಿರುವ ಶೀತವಾದ ತಂಗಾಳಿಯ ಸ್ಪರ್ಶಗಳಿಂದ ಸುಖವಾಗಿ ವಾಸಮಾಡಿತು.

**ತಸ್ಮಿನ್ನ್ವಾರುಪಸಾಧ್ಯೇಪಿ [೮]ಕೃತ್ಯೇ ದೇವಂ [೯]ಪ್ರಮಾಣಯನ್ ।**
**ಲವಣಾಬ್ಧಿಜಯೋದ್ಯುಕ್ತಃ ಸೋ[೧೦]ಭ್ಯೈಚ್ಛದ್ದೈವಿಕೀಂ ಕ್ರಿಯಾಮ್ ॥ ೫೩ ॥**

ಲವಣಸಮುದ್ರದಲ್ಲಿರುವವರ ಜಯದಲ್ಲಿ ಪ್ರಯತ್ನಶೀಲನಾದ ಭರತರಾಜನು, ಮಾಗಧನೆಂಬ ವ್ಯಂತರದೇವನನ್ನು ಸಾಧಿಸುವ ಕಾರ್ಯವು ಪ್ರಯತ್ನದಿಂದ ಸಾಧಿಸತಕ್ಕುದಾಗಿದ್ದರೂ ಅದೃಷ್ಟವು ಕಾರಣವೆಂದು ಬಗೆದು ದೇವತೆಗಳನ್ನು ಸತ್ಕರಿಸಲಾರಂಭಿಸಿದನು. ದೇವತೋಪಾಸನೆಯನ್ನು ಮಾಡಲಾರಂಭಿಸಿದನೆಂದು ಭಾವವು.

**[೧೧]ಅಧಿವಾಸಿತಜೈತ್ರಾಸ್ತ್ರಃ ಸ ತ್ರಿರಾತ್ರಮುಪೋಷಿವಾನ್ ।**
**ಮಂತ್ರಾನುಸ್ಮೃತಿಪೂತಾತ್ಮಾ [೧೨]ಶುಚಿತಲ್ಪೋಪಗಃ ಶುಚಿಃ ॥ ೫೪ ॥**

ಮಂತ್ರದಿಂದ ಸಂಸ್ಕಾರಮಾಡಲ್ಪಟ್ಟ ಜಯಶೀಲವಾದ ಅಸ್ತ್ರಗಳುಳ್ಳವನೂ ದರ್ಭಶಯನದಲ್ಲಿರುವವನೂ ಮಂತ್ರಗಳನ್ನು ಬಾರಿಬಾರಿಗೆ ಸ್ಮರಿಸುವುದರಿಂದ

೧ ವ್ಯಾಧರಾಜಕಾಃ. ೨ ಸಮೂಹೈಃ. ೩ ಕಾರ್ಪಾಸಶ್ರೀಖಂಡಾದಿ. ೪ ಸಹಿತಂ. ೫ ಸಮುದ್ರಸ್ಯ ಬಾಹ್ಯೇ. ೬ ಉತ್ಕಟಂ. ೭ ದ್ವೀಪಸಂಬಂಧಿ. ೮ ಅಗಾಧಭಾವಪ್ರಾಪ್ತಂ. ೯ ಪ್ರಸ್ರವಣಂ. ೧೦ ವರ್ಷಾಕಾಲಪ್ರಾರಂಭಃ. ೧೧ ಚತುರ್ಥಕಾಲಪ್ರಾರಂಭೇ. ೧೨ ಸಾಮರ್ಥ್ಯತಃ.

೧ ಅತ್ಯಂತಮಹತ್ತ್ವಾತ್. ೨ ಸಮುತ್ಕಟಂ. ೩ ದ್ವಾರೇಣ. ೪ ಗೃಹಸಾಮರ್ಥ್ಯಾತ್. ೫ ಬಲವಿನ್ಯಾಸವಿಸ್ತಾರಃ. ೬ ಸದೃಶೆ. ೭ ಆವಿಶದಿತ್ಯಪಿ ಪಾಠಃ. ೮ ಮಾಗಧಾಮರಸಾಧನರೂಪಕಾರ್ಯೇ. ೯ ನಿಶ್ಚಿನ್ವನ್. ೧೦ ಅಂಗೀಕೃತವಾನ್. ೧೧ ಮಂತ್ರಸುಸಂಸ್ಕೃತಃ. ೧೨ ದರ್ಭಶಯನಸ್ಥಃ.

ಪವಿತ್ರವಾದ ಆತ್ಮನುಳ್ಳವನೂ ಪರಿಶುದ್ಧನೂ ಆದ ಭರತರಾಜನು ಮೂರುದಿನಗಳ ವರೆಗೆ ಉಪವಾಸವಿದ್ದನು.

**[೧]ಸಾಯಂಪ್ರಾತಿಕನಿಃಶೇಷಕರಣೀಯೇ [೨]ಸವಾಹಿತಃ ।**
**[೩]ಪುರೋಧೋಧಿಷ್ಠಿತಾಂ ಪೂಜಾಂ ಸ ವ್ಯಧಾತ್ಪರಮೇಷ್ಠಿನಾಮ್ ॥ ೫೫ ॥**

ಸಾಯಂಕಾಲದಲ್ಲಿಯೂ ಪ್ರಾತಃಕಾಲದಲ್ಲಿಯೂ ಮಾಡಬೇಕಾದ ಕಾರ್ಯಗಳಲ್ಲಿ ಜಾಗರೂಕನೂ ಜೊತೆಯಲ್ಲಿ ಪುರೋಹಿತನುಳ್ಳವನೂ ಆದ ಭರತರಾಜನು ಅರ್ಹದಾದಿ ಪಂಚಪರಮೇಷ್ಠಿಗಳ ಪೂಜೆಯನ್ನು ಮಾಡಿದನು.

**ಸೇನಾನ್ಯಂ ಬಲರಕ್ಷಾಯೈ ನಿಯೋಜ್ಯ ವಿಧಿವದ್ವಿಭುಃ ।**
**ಪ್ರತಸ್ಥೇ ಧೃತದಿವ್ಯಾಸ್ತ್ರೋ ಜಿಗೀಷುರ್ಲವಣಾಂಬುಧಿಮ್ ॥ ೫೬ ॥**

ಭರತರಾಜನು ಸೇನಾಪತಿಯನ್ನು ಸೈನ್ಯರಕ್ಷಣೆಗೋಸ್ಕರ ನಿಯೋಜಿಸಿ ವಿಧಿಗನು ಸಾರವಾಗಿ ಶ್ರೇಷ್ಠವಾದ ಶಸ್ತ್ರವನ್ನು ಧರಿಸಿದವನಾಗಿಯೂ ಲವಣಸಮುದ್ರವನ್ನು ಜಯಿಸಬೇಕೆಂಬ ಇಚ್ಛೆಯುಳ್ಳವನಾಗಿಯೂ ಹೊರಟನು.

**[೪]ಪ್ರತಿಗೃಹಾಪಸಾರಾದಿಚಿಂತಾಭೂನ್ನಾಸ್ಯ ಚೇತಸಿ ।**
**[೫]ವಿಲಿಲಂಘಯಿಷೋರಬ್ಧಿಮಹೋ ಸ್ಥೈರ್ಯಂ ಮಹಾತ್ಮನಾಮ್ ॥ ೫೭ ॥**

ಸಮುದ್ರವನ್ನು ದಾಟುವುದಕ್ಕೆ ಇಚ್ಛಿಸಿದ ಭರತರಾಜನ ಮನಸ್ಸಿನಲ್ಲಿ ''ಇಂತಹ ಪದಾರ್ಥವನ್ನು ಸ್ವೀಕರಿಸಬೇಕು, ಇಂತಹ ಪದಾರ್ಥವನ್ನು ಬಿಡಬೇಕು'' ಎಂಬ ವಿಚಾರವುಂಟಾಗಿರಲಿಲ್ಲವು. ದ್ರವ್ಯದ ಆಶೆಯಿಂದ ಜಯಿಸಬೇಕೆಂದಿಚ್ಛಿಸಿದುದಲ್ಲ ವೇವಾ ಕೇವಲ ತನ್ನ ಆಧಿಪತ್ಯವನ್ನು ಸ್ಥಾಪಿಸುವುದಕ್ಕೋಸ್ಕರವೆಂದೂ ಭಾವವು. ಮಹಾತ್ಮರ ಸ್ಥಿರಸ್ವಭಾವವು ಆಶ್ಚರ್ಯಕರವಾದುದು.

**ಅಜಿತಂಜಯಮಾರುಕ್ಷದ್ರಥಂ ದಿವ್ಯಾಸ್ತ್ರಸಂಭೃತಮ್ ।**
**ಯೋಜಿತಂ ವಾಜಿಭಿರ್ದಿವ್ಯೈರ್ಜಲಸ್ಥಲವಿಲಂಘಿಭಿಃ ॥ ೫೮ ॥**

ಭರತರಾಜನು ನೀರಿನಲ್ಲಿಯೂ ಭೂಮಿಯಲ್ಲಿಯೂ ನಡೆಯುವ ಶ್ರೇಷ್ಠವಾದ ಕುದುರೆಗಳನ್ನು ಕಟ್ಟಿರುವ ಮತ್ತು ಶ್ರೇಷ್ಠವಾದ ಶಸ್ತ್ರಗಳಿಂದ ತುಂಬಿರುವ ಅಜಿತಂಜಯವೆಂಬ ರಥವನ್ನೇರಿದನು.

**[೬]ಪತ್ರಶ್ಯಾಮರಥಂ ಪ್ರೋಚ್ಚೈಶ್ಚಲಚ್ಚಕ್ರಾಂಕಕೇತನಮ್ ।**
**ತಮೂಹು[೭]ರ್ಜವನಾ ವಾಹಾ [೮]ದಿವ್ಯಸವ್ಯೇಷ್ಠಚೋದಿತಾಃ ॥ ೫೯ ॥**

ಶ್ರೇಷ್ಠನಾದ ಸಾರಥಿಯಿಂದ ಪ್ರೇರೇಪಿಸಲ್ಪಟ್ಟವೂ ವೇಗವುಳ್ಳವೂ ಆದ ಕುದುರೆಗಳು ಉನ್ನತವಾಗಿ ಚಲಿಸುತ್ತಿರುವುದೂ ಚಕ್ರದ ಚಿಹ್ನೆಯುಳ್ಳವೂ ಆದ ಧ್ವಜಪತಾಕೆಗಳುಳ್ಳುದೂ ವಾಹನದ ಕುದುರೆಗಳ ಬಣ್ಣದಿಂದ ಕಪ್ಪಾಗಿ ಮಾಡಲ್ಪಟ್ಟುದೂ ಆದ ಆ ರಥವನ್ನು ಎಳೆದುವು.

**ತತೋಽಸ್ಮೈ ದತ್ತಪುಣ್ಯಾಶೀಃ ಪುರೋಧಾ ಧೃತಮಂಗಲಃ ।**
**ತ್ವಂ ದೇವ ! ವಿಜಯಸ್ವೇತಿ ಸ ಇಮಾ[೯]ಮೃಚಮಾಪಠತ್ ॥ ೬೦ ॥**

ತರುವಾಯ ಭರತರಾಜನಿಗೆ ಪುಣ್ಯಕರವಾದ ಆಶೀರ್ವಾದವನ್ನು ಮಾಡಿದವನೂ ಮಂಗಲವಸ್ತುಗಳನ್ನು ಧರಿಸಿರುವವನೂ ಆದ ಆ ಪುರೋಹಿತನು ''ಸ್ವಾಮಿಯೆ ! ನೀನು ಜಯಶೀಲನಾಗು'' ಎಂದು ಮುಂದೆ ಹೇಳುವ ಮಂತ್ರವನ್ನು ಹೇಳಿದನು.

**ಜಯಂತಿ ವಿಧುತಾ[೧೦]ಶೇಷಬಂಧನಾ [೧೧]ಧರ್ಮನಾಯಕಾಃ ।**
**ತ್ವಂ ಧರ್ಮವಿಜಯೀಭೂತ್ವಾ ತತ್ಪ್ರಸಾದಾಜ್ಜಯಾಖಿಲಮ್ ॥ ೬೧ ॥**

''ಸಮಸ್ತ ಕರ್ಮಬಂಧನವನ್ನು ನಾಶಮಾಡಿದ ತೀರ್ಥಂಕರರು ಸರ್ವೋತ್ಕೃಷ್ಟ ರಾಗಿ ವರ್ತಿಸುತ್ತಾರೆ. ನೀನು ಆ ತೀರ್ಥಂಕರರ ಅನುಗ್ರಹದಿಂದ ಧರ್ಮಪೂರ್ವಕ ವಾದ ಜಯವುಳ್ಳವನಾಗಿ ಜಗತ್ತನ್ನೆಲ್ಲ ಜಯಿಸು.

**ಸಂತ್ಯಬ್ಧಿನಿಲಯಾ ದೇವಾ[೧]ಸ್ತ್ವದ್ಭುಕ್ತ್ಯಂತರ್ನಿವಾಸಿನಃ ।**
**ತಾನ್ವಿಜೇತುಮಯಂ ಕಾಲಸ್ತವೇತ್ಯುಚ್ಚೈ[೨]ರ್ಜುಘೋಷ ಚ ॥ ೬೨ ॥**

ಸಮುದ್ರದಲ್ಲಿರುವ ದೇವತೆಗಳು ನೀನು ಆಳುವ ದೇಶದೊಳಗಿದ್ದಾರೆ. ಅವರನ್ನು ಜಯಿಸುವುದಕ್ಕೆ ''ಇದು ನಿನಗೆ ಕಾಲವಾಗಿದೆ'' ಎಂಬುದಾಗಿ ಪುರೋಹಿತನು ಗಟ್ಟಿಯಾಗಿ ಉಚ್ಚರಿಸಿದನು.

**ತತಃ ಕತಿಪಯೈರೇವ ನಾಯಕೈಃ ಪರಿವಾರಿತಃ ।**
**[೩]ಜಗತೀತಲಮಾರುಕ್ಷದ್ಗಂಗಾದ್ವಾರಸ್ಯ ಚಕ್ರಭೃತ್ ॥ ೬೩ ॥**

ತರುವಾಯ ಚಕ್ರವರ್ತಿಯು ಕೆಲವು ವೀರಪುರುಷರೊಡನೆ ಗಂಗಾನದಿಯ ದ್ವಾರದ ವೇದಿಕೆಯ ಭೂಮಿಯನ್ನು ಹತ್ತಿದನು.

**ನ ಕೇವಲಂ ಸಮುದ್ರಾಂತಃಪ್ರವೇಶದ್ವಾರಮೇವ [೪]ತತ್ ।**
**ಕಾರ್ಯಸಿದ್ಧೇರಪಿ ದ್ವಾರಂ ತದಮಂಸ್ತ [೫]ರಥಾಂಗಧೃತ್ ॥ ೬೪ ॥**

ಚಕ್ರವರ್ತಿಯು ಆ ವೇದಿಕೆಯ ಮೇಲೆ ಹತ್ತುವುದು ಸಮುದ್ರಪ್ರವೇಶಕ್ಕೆ ಕಾರಣವೆಂದೇ ತಿಳಿಯಲಿಲ್ಲವು; ಅದನ್ನು ಕಾರ್ಯ ಸಿದ್ಧಿಗೆ ಕಾರಣವನ್ನಾಗಿಯೂ ತಿಳಿದನು.

**[೬]ಧೃತಮಂಗಲವೇಷಸ್ಯ ತದ್ವೇದ್ಯಾರೋಹಣಂ ವಿಭೋಃ ।**
**ವಿಜಯಶ್ರೀಸಮುದ್ವಾಹವೇದ್ಯಾರೋಹಣವದ್ಬಭೌ ॥ ೬೫ ॥**

ಮಂಗಲಕರವಾದ ಅಲಂಕಾರಗಳನ್ನು ಧರಿಸಿರುವ ಚಕ್ರವರ್ತಿಯ ಆ ವೇದಿಕಾ ರೋಹಣವು, ಜಯಲಕ್ಷ್ಮಿಯ ವಿವಾಹವೇದಿಕಾರೋಹಣದಂತೆ, ಶೋಭಿಸು ತ್ತಿದ್ದಿತು.

**ಮದ್ಗೃಹಾಂಗಣವೇದೀಯಂ ಜಗತೀತಿ ವಿಕಲ್ಪಯನ್ ।**
**ದೃಶಂ ವ್ಯಾಪಾರಯಾಮಾಸ [೭]ಕುಲ್ಯಾಬುದ್ಧ್ಯಾ ಮಹೋದಧೌ ॥ ೬೬ ॥**

ಭರತರಾಜನು ಈ ಜಗತಿಯು ತನ್ನಮನೆಯ ಜಗತಿಯೆಂದು ಭಾವಿಸಿ ದೊಡ್ಡ ಸಮುದ್ರವನ್ನು ಕೃತ್ರಿಮನದಿಯೆಂಬ ಬುದ್ಧಿಯಿಂದ ನೋಡಿದನು.

**ಸ ಪ್ರತಿಜ್ಞಾಮಿವಾರೂಢೋ ಜಗತೀಂ ತಾಂ ಮಹಾಯತೀಮ್ ।**
**ನಿಸ್ತೀರ್ಣಮಿವ [೮]ತದ್ವಾರಂ ಪಾರಾವಾರಮಜೀಗಣತ್ ॥ ೬೭ ॥**

ಭರತರಾಜನು, ಪ್ರತಿಜ್ಞೆಯನ್ನು ಮಾಡಿದವನಂತೆ, ಬಹಳ ದೀರ್ಘವಾದ ಆ ವೇದಿಕೆಯನ್ನು ಹತ್ತಿ ಗಂಗಾದ್ವಾರವನ್ನು ದಾಟಿದಂತೆ ಸಮುದ್ರವನ್ನೂ ದಾಟಿದೆನೆಂದೆ ಣಿಸಿದನು.

**ಮುಹುಃ ಪ್ರಚಲದುದ್ವೇಲಕಲ್ಲೋಲಮನಿಲಾಹತಮ್ ।**
**ವಿಲಂಘನಾಭಯಾದುಚ್ಚೈಃ ಫೂತ್ಕುರ್ವಂತಮಿವಾರ್ಣವೈಃ ॥ ೬೮ ॥**

ಬಾರಿಬಾರಿಗೆ ಚಲಿಸುತ್ತಿರುವುವೂ ದಡದಮೇಲೆ ಬರುತ್ತಿರುವುವೂ ಆದ ಅಲೆಗಳುಳ್ಳುದೂ ಗಾಳಿಯಿಂದ ಹೊಡೆಯಲ್ಪಟ್ಟುದೂ ಚಕ್ರವರ್ತಿಯು ದಾಟುತ್ತಾ ನೆಂಬ ಭಯದಿಂದ ಗಟ್ಟಿಯಾದ ಧ್ವನಿಗಳೊಡನೆ ಬುಸುಗುಟ್ಟುವಂತಿರುವುದೂ

೧ ಅಸ್ತಮಯಪ್ರಭಾತಸಂಬಂಧಿ. ೨ ಸನ್ನದ್ಧಃ. ೩ ಪುರೋಧಸಾಶ್ರಿತಃ. ೪ ಸ್ವೀಕಾರತ್ಯಜನಾದಿ. ೫ ವಿಲಂಘಿತುಮಿಚ್ಛೋಃ. ೬ ವಾಹನವಾಜಿಭಿಃ ಶ್ಯಾಮವರ್ಣೀಕೃತರಥಂ. ೭ ವೇಗಿನಃ. ೮ ದಿವ್ಯಸಾರಥಿ ಪ್ರೇರಿತಾಃ. ೯ ಮಂತ್ರಂ. ೧೦ ಕರ್ಮಬಂಧನಾಃ. ೧೧ ತೀರ್ಥಂಕರಾಃ.

೧ ತ್ವತ್ಪಾಲನಕ್ಷೇತ್ರಾಂತರ್ನಿವಾಸಿನಃ. ೨ ಘೋಷಯಾಮಾಸ. ೩ ವೇದೀಭುವಂ. ೪ ಜಗತೀ ತಲಾ ರೋಹಣಂ. ೫ ರಥಾಂಗಭೃದಿತ್ಯಪಿ ಪಾಠಃ. ೬ ಧೃತಮಂಗಲಾಲಂಕಾರಸ್ಯ. ೭ ಕುಲ್ಯಾಲ್ಪಾಕೃತ್ರಿಮಾ ಸರಿತ್. ೮ ತತ್ಪಾರಮಿತ್ಯಪಿ ಪಾಠಃ.

**ವೀಚಿಬಾಹುಭಿರುನ್ಮುಕ್ತೈಃ ಸರತ್ನೈಃ ಶೀಕರೋತ್ಕರೈಃ ।**
**ಪಾದ್ಯಂ ಸ್ವಸ್ಯೇವ ತನ್ವಾನಂ ಮೌಕ್ತಿಕಾಕ್ಷತಮಿಶ್ರಿತೈಃ ॥ ೬೯ ॥**

ಅಲೆಗಳೆಂಬ ಭುಜಗಳಿಂದ ಮೇಲಕ್ಕೆ ಎಸೆಯಲ್ಪಟ್ಟವೂ ರತ್ನಸಹಿತವೂ ಮುತ್ತುಗಳೆಂಬ ಅಕ್ಷತೆಗಳಿಂದ ಮಿಶ್ರವೂ ಆಗಿರುವ ಜಲಬಿಂದುಗಳ ಸಮೂಹಗಳಿಂದ ತನಗೆ ಪಾದೋದಕವನ್ನು ಕೊಡುತ್ತದೆಯೋ ಎಂಬಂತಿರುವುದೂ

**ಅಸಂಖ್ಯಶಂಖಮಾಕ್ರಾಂತವಿಶ್ವದ್ವೀಪಮಪಾರಕಮ್ ।**
**ಪರೈರಲಂಘ್ಯಮಕ್ಷೋಭ್ಯಂ ಸ್ವಬಲೌಘಾನುಕಾರಿಣಮ್ ॥ ೭೦ ॥**

ಅಸಂಖ್ಯಾತವಾದ ಶಂಖಗಳುಳ್ಳದೂ ಸಮಸ್ತದ್ವೀಪವನ್ನು ಆಕ್ರಮಿಸಿರುವುದೂ ಅಪಾರವೂ ಬೇರೆಯವರಿಂದ ದಾಟಲಶಕ್ಯವೂ ಗಂಭೀರವೂ ತನ್ನ ಸೈನ್ಯಗಳ ಸಮೂಹವನ್ನು ಹೋಲುತ್ತಿರುವುದೂ

**[೧]ಉತ್ಫೇನ[೨]ಜೃಂಭಿಕಾರಂಭೈಃ ಸಾಪಸ್ಮಾರಮಿವೋಲ್ಬಣಮ್ ।**
**ಕೇನಾಪ್ಯಶಕ್ಯಮಾಧರ್ತುಂ ಕ್ವಚಿದ[೩]ಪ್ಯನವಸ್ಥಿತಮ್ ॥ ೭೧ ॥**

ಮೇಲಕ್ಕೇಳುತ್ತಿರುವ ನೊರೆಗಳೆಂಬ ಆಕಳಿಕೆಗಳಿಂದ ಅಪಸ್ಮಾರರೋಗದ ಆಧಿಕ್ಯವುಳ್ಳ ಪುರುಷನೋಪಾದಿಯಲ್ಲಿ ಯಾರಿಂದಲೂ ಧರಿಸಲಶಕ್ಯವೂ ಎಲ್ಲಿಯೂ ಸ್ಥಿರವಾಗಿಲ್ಲದುದೂ

**ಅಕಸ್ಮಾದುಚ್ಚರದ್ಧ್ವಾನ[೪]ಮನಿಮಿತ್ತಚಲಾಚಲಮ್ ।**
**ಅಕಾರಣಕೃತಾವರ್ತ[೫]ಮತಿಸಂಕುಸುಕಸ್ಥಿತಿಮ್ ॥ ೭೨ ॥**

ಅಕಸ್ಮಾತ್ತಾಗಿ ಶಬ್ದಮಾಡುವುದೂ ಕಾರಣವಿಲ್ಲದೆ ಚಂಚಲವೂ ನಿಶ್ಚಂಚಲವೂ ಆದುದೂ ಕಾರಣವಿಲ್ಲದೆ ಸುಳಿಗಳನ್ನುಂಟುಮಾಡುತ್ತಿರುವುದೂ ಬಹಳ ಚಂಚಲವಾಗಿರುವುದೂ

**ಹಸಂತಮಿವ ಫೇನೌಘೈ[೬]ರ್ನಸಂತಮಿವ ವೀಚಿಭಿಃ ।**
**ಚಲಂತಮಿವ ಕಲ್ಲೋಲೈರ್ಮಾದ್ಯಂತಮಿವ [೭]ಘೂರ್ಣಿತೈಃ ॥ ೭೩ ॥**

ನೊರೆಗಳ ಸಮೂಹಗಳಿಂದ ನಗುವಂತಿರುವುದೂ ಅಲೆಗಳಿಂದ ನರ್ತನಮಾಡುವಂತಿರುವುದೂ ದೊಡ್ಡ ಅಲೆಗಳಿಂದ ಚಲಿಸುವಂತಿರುವುದೂ ತಿರುಗುವಿಕೆಗಳಿಂದ ಮದಿಸಿರುವಂತಿರುವುದೂ

**ಸರತ್ನ[೮]ಮುಲ್ಬಣವಿಷಂ ಮುಕ್ತ[೯]ಶೂತ್ಕಾರಭೀಕರಮ್ ।**
**ಸ್ಫುರತ್ತರಂಗನಿರ್ಮೋಕಂ ಸ್ಫುರಂತಮಿವ ಭೋಗಿನಮ್ ॥ ೭೪ ॥**

ರತ್ನಗಳುಳ್ಳದೂ ಅಧಿಕವಾದ ವಿಷವೂ ಜಲವೂ ಉಳ್ಳದೂ 'ಶೂತ್' ಎಂದು ಶಬ್ದವನ್ನು ಮಾಡುವುದರಿಂದ ಭಯಂಕರವೂ ಪ್ರಕಾಶಿಸುತ್ತಿರುವ ಅಲೆಗಳೆಂಬ ಪೊರೆಗಳುಳ್ಳದೂ ಸರ್ಪದಂತೆ ಪ್ರಕಾಶಿಸುತ್ತಿರುವುದೂ

**ಅತ್ಯಂಬುಪಾನಾ[೧೦]ದುದ್ರಿಕ್ತಪ್ರತಿಶ್ಯಾಯಮಿವಾಧಿಕಮ್ ।**
**ಕ್ಷುತಾನೀವ ವಿಕುರ್ವಾಣಂ ಧ್ವನಿತಾನಿ ಸಹಸ್ರಶಃ ॥ ೭೫ ॥**

ಹೆಚ್ಚಾಗಿ ನೀರುಕುಡಿದಿರುವುದರಿಂದ ಬಹಳ ನೆಗಡಿಯಾದ ಮನುಷ್ಯನ ಹೆಚ್ಚಾದ ಸೀನುಗಳಂತೆ ಅನೇಕವಾಗಿ ಶಬ್ದಗಳನ್ನು ಮಾಡುತ್ತಿರುವುದೂ

**[೧೧]ಆದ್ಯೂನಮಸಕೃತ್ಪೀತವಿಶ್ವಸ್ರೋತಸ್ವಿನೀರಸಮ್ ।**
**ರಸಾತಿರೇಕಾದುದ್ಗಾರಂ ತನ್ವಾನಮಿವ ಖಾತ್ಕೃತೈಃ ॥ ೭೬ ॥**

೧ ಉದ್ಗತಡಿಂಡೀರಾಭಿವೃದ್ಧಿಃ, ಪಕ್ಷೇ ಉದ್ಗತಫೇನಃ. ೨ ಜೃಂಭಣಂ. ೩ ಚಂಚಲಂ. ೪ ಅಕಾರಣ ಚಲಾಚಲಂ. ೫ ನಿತರಾಮಸ್ಥಿರಸ್ಥಿತಿಂ. ೬ ನೃತ್ಯಂತಂ. ೭ ಭ್ರಮಣೈಃ. ೮ ಉತ್ಕಟವಿಷಂ, ಉತ್ಕಟಜಲಂ ಚ. ೯ ಸೂತ್ಕಾರಭೀಕರಮಿತ್ಯಪಿ ಪಾಠಃ. ೧೦ ಉತ್ಕಟಪೀನಸಂ. ೧೧ ತೃಪ್ತಿರಹಿತಂ, ಆದ್ಯೂನಃ ಸ್ಯಾದೌದರಿಕ ಇತ್ಯಮರಃ.

ಬಾರಿಬಾರಿಗೆ ಸಮಸ್ತನದಿಗಳ ನೀರನ್ನು ಪಾನಮಾಡಿದುದೂ ತೃಪ್ತಿಯಿಲ್ಲದುದೂ (ಹೊಟ್ಟೆಬಾಕ) ರಸಪಾನವು ಹೆಚ್ಚಾದುದರಿಂದ ಕ್ಯಾಕರಿಸಿ ತೇಗುವಂತಿರುವುದೂ

**ನಿಜಗಂಭೀರಪಾತಾಲಮಹಾಗರ್ತಾಪದೇಶತಃ ।**
**ಅತೃಪ್ಯಂತಮಿವಾಂಭೋಭಿರಾತಾಲುವಿವೃತಾನನಮ್ ॥ ೭೭ ॥**

ಜಲಗಳಿಂದ ತೃಪ್ತಿಯನ್ನು ಹೊಂದದಿರುವಂತೆ ತನ್ನ ಆಳವಾದ ಪಾತಾಳವೆಂಬ ದೊಡ್ಡಹಳ್ಳ(ಹೊಂಡ)ದ ನೆಪದಿಂದ ದವಡೆಗಳವರೆಗೆ ಬಾಯನ್ನು ತೆರೆದಿರುವುದೂ

**ದಿಶಾಂ [೧]ರಾವಣಮಾಕ್ರಾಂತ್ಯಾ [೨]ಚಲಗ್ರಾಹಂ [೩]ವಿಭೀಷಣಮ್ ।**
**ರಕ್ಷಸಾಮಿವ [೪]ಸಂಪಾತ[೫]ಮತಿಕಾಯಂ [೬]ಮಹೋದರಮ್ ॥ ೭೮ ॥**

ರಾವಣನೂ ಅಚಲಗ್ರಾಹನೂ ವಿಭೀಷಣನೂ ಅತಿಕಾಯನೂ ಮಹೋದರನೂ ಉಳ್ಳ ರಾಕ್ಷಸರ ಪರಂಪರೆಯಂತೆ, ದಿಕ್ಕುಗಳನ್ನಾಕ್ರಮಿಸಿ ಶಬ್ದಮಾಡುತ್ತಿರುವುದೂ ಪರ್ವತಗಳನ್ನು ಹಿಡಿದಿರುವುದೂ ಭಯಂಕರವೂ ಅತಿಶಯವಾದ ಆಕಾರವುಳ್ಳದೂ ದೊಡ್ಡಹೊಟ್ಟೆಯುಳ್ಳದೂ

**ವೀಚೀಬಾಹುಭಿ[೭]ರಾಘ್ನಂತಮಜಸ್ರಂ ತಟವೇದಿಕಾಮ್ ।**
**ಸಮರ್ಯಾದತ್ವ[೮]ಮಾಹತ್ಯ [೯]ಶ್ರಾವಯಂತಮಿವಾತ್ಮನಃ ॥ ೭೯ ॥**

ಅಲೆಗಳೆಂಬ ಭುಜಗಳಿಂದ ಯಾವಾಗಲೂ ದಡದ ಜಗತಿಯನ್ನು ಹೊಡೆಯುತ್ತಿರುವುದೂ ತನ್ನ ಎಲ್ಲೆಕಟ್ಟನ್ನು ಹೊಡೆದು ತೋರಿಸಿ ತಿಳಿಸುವಂತಿರುವುದೂ

**ಚಲದ್ಭಿರಚಲೋದಗ್ರೈಃ ಕಲ್ಲೋಲೈರತಿವರ್ತಿನಮ್ ।**
**ಸರಿದ್ಯುವತಿಸಂಭೋಗಾ[೧೦]ದಸಮ್ಮಾಂತಮಿವಾತ್ಮನಿ ॥ ೮೦ ॥**

ಪರ್ವತದಂತೆ ಉನ್ನತವೂ ಚಂಚಲವೂ ಆದ ಅಲೆಗಳಿಂದ ಅತಿಕ್ರಮಿಸುತ್ತಿರುವುದೂ ನದಿಗಳೆಂಬ ಯುವತಿಯರ ಸಂಭೋಗದಿಂದ ತನ್ನಲ್ಲಿ ತಾನು ಅಡಕವಾಗದಂತಿರುವುದೂ (ವೃದ್ಧಿಹೊಂದಿದುದೂ)

**[೧೧]ತರಂಗಿತತನುಂ [೧೨]ವೃದ್ಧಂ [೧೩]ಪೃಥುಕಂ [೧೪]ವ್ಯಕ್ತರಂಗಿತಮ್ ।**
**ಸರತ್ನಮತಿಕಾಂತಾಂಗಂ [೧೫]ಸಗ್ರಾಹಮತಿಭೀಷಣಮ್ ॥ ೮೧ ॥**

ಉತ್ಪನ್ನವಾದ ತೆರೆಗಳುಳ್ಳ ಆಕಾರವುಳ್ಳದೂ ವೃದ್ಧಿಹೊಂದಿದುದೂ ವಿಸ್ತಾರವಾದುದೂ ಸ್ಫುಟವಾದ ಚಲನೆಯುಳ್ಳದೂ ರತ್ನಸಹಿತವೂ ಅತ್ಯಂತ ಮನೋಹರವಾದ ಆಕಾರವುಳ್ಳದೂ ಮೊಸಳೆಗಳುಳ್ಳದೂ ಅತ್ಯಂತ ಭಯಂಕರವೂ

**[೧೬]ಲಾವಣ್ಯೇಪಿ ನ ಸಂಭೋಗ್ಯಂ ಗಾಂಭೀರ್ಯೇ[೧೭]ಪ್ಯನವಸ್ಥಿತಮ್ ।**
**ಮಹತ್ತ್ವೇಪಿ ಕೃತಾಕ್ರೋಶಂ ವ್ಯಕ್ತಮೇವ [೧೮]ಜಲಾಶಯಮ್ ॥ ೮೨ ॥**

ಸರ್ವಾಂಗಗಳಲ್ಲಿಯೂ ಪ್ರಭಾಸ್ವರೂಪವಾಗಿದ್ದರೂ–ಉಪ್ಪಾಗಿದ್ದರೂ' ಕುಡಿಯುವುದಕ್ಕೆ ಯೋಗ್ಯವಲ್ಲದುದೂ ಗಂಭೀರವಾಗಿದ್ದರೂ ಆಳವಾಗಿದ್ದರೂ ಚಂಚಲವಾದುದೂ ದೊಡ್ಡಸ್ಥಿತಿಯಿದ್ದರೂ ಅರಚಿಕೊಳ್ಳುವುದೂ ಶಬ್ದ ಮಾಡುವುದೂ ನಿಜವಾಗಿಯೂ ಜಡಬುದ್ಧಿಯುಳ್ಳದೂ ಮಧ್ಯದಲ್ಲಿ ನೀರುಳ್ಳದೂ

**ನ ಚಾಸ್ಯ ಮದಿರಾಸಂಗೋ ನ ಕೋಪಿ ಮದನಜ್ವರಃ ।**
**ತಥಾ[೧೯]ಪ್ಯುದ್ರಿಕ್ತಕಂದರ್ಪ [೨೦]ಮಾರೂಢಮಧುವಿಕ್ರಿಯಮ್ ॥ ೮೩ ॥**

೧ ಶಬ್ದಂ ಕುರ್ವಂತಂ, ದಶಾಸ್ಯಂಚ. ೨ ಪರ್ವತಸ್ವೀಕಾರವಂತಂ, ಕಂಚಿದ್ರಾಕ್ಷಸಂ ಚ. ೩ ಭಯಂಕರಂ, ರಾವಣಾನುಜಂ ಚ. ೪ ಸಂತಾನಪ್ರಾಪ್ತಿಂ, ನಿಚಯಂ ಚ. ೫ ಅತಿಶಯಮೂರ್ತಿಂ, ಕಂಚಿದ್ರಾಕ್ಷಸಂ ಚ. ೬ ಮಹಾಕುಕ್ಷಿಂ, ಕಂಚಿದ್ರಾಕ್ಷಸಂಚ. ೭ ಆತಾಡಯಂತಂ. ೮ ಸಾಕ್ಷಾತ್ಕೃತ್ಯ. ೯ ಜ್ಞಾಪಯಂತಂ. ೧೦ ಪ್ರವೃದ್ಧಂ. ೧೧ ಸಂಜಾತತರಂಗತನುಂ, ಸಂಜಾತವಲಿತತನುಂ ಚ. ೧೨ ಪ್ರವೃದ್ಧಂ, ಜರಠಂಚ. ೧೩ ಪೃಥುಲಂ, ಶಿಶುಂ. ೧೪ ಚಲನಂ, ಭೂಮೌ ಜಾನುಕರೈಃ ಪ್ರಸರಣಂ ಚ. ೧೫ ಸನಕ್ರಂ. ೧೬ ಲವಣತ್ವೇಪಿ, ಸರ್ವಾಂಗಸಂಗತಪ್ರಭಾಸ್ವರೂಪತ್ವೇಪಿ ಚ. ೧೭ ಅಸ್ಥಿರಸ್ವರೂಪಂ. ೧೮ ಜಡಬುದ್ಧಿಂ. ೧೯ ಉತ್ಕಟಕಾಮಂ, ಉತ್ಕಟಜಲದರ್ಪಂ ಚ. ೨೦ ಪ್ರಸಿದ್ಧವಸಂತವಿಕಾರಂ, ಅಮೃತವಿಕಾರಂ ಚ.

ಮದ್ಯದ ಸಂಬಂಧವೂ ಕಾಮಜ್ವರವೂ ಇಲ್ಲದಿದ್ದರೂ ಅಧಿಕವಾದ ಕಾಮವುಳ್ಳುದೂ ಅಧಿಕವಾದ ನೀರಿನ ಅಹಂಕಾರವುಳ್ಳುದೂ ಪ್ರಸಿದ್ಧವಾದ ವಸಂತ ಕಾಲದಲ್ಲಿ ವಿಕಾರವುಳ್ಳುದೂ ಪ್ರಸಿದ್ಧವಾದ ಅಮೃತದ ವಿಕಾರವುಳ್ಳುದೂ

**[೧]ಅನಾಶಿತಂ ಭವಂ ಪೀತ್ವಾ ಸುಸ್ವಾದುಸರಿತಾಂ ಜಲವಮ್ ।**
**[೨]ಗತಾಗತಾನಿ ಕುರ್ವಂತಂ ಸಂತೋಷಾದಿವ ವೀಚಿಭಿಃ ॥ ೮೪ ॥**

ನೀರನ್ನು ಕುಡಿದು ತೃಪ್ತಿಯನ್ನು ಹೊಂದದಿರುವುದೂ ನದಿಗಳ ರುಚಿಕರವಾದ ನೀರನ್ನು ಕುಡಿದು ಸಂತೋಷದಿಂದ, ಅಲೆಗಳಿಂದ ಗಮನಾಗಮನಗಳನ್ನು ಮಾಡುವಂತಿರುವುದೂ

**ನದೀವಧೂಭಿರಾಸೇವ್ಯಂ ಕೃತರತ್ನಪರಿಗ್ರಹಮ್ ।**
**[೩]ಮಹಾಭೋಗಿಭಿರಾರಾಧ್ಯಂ [೪]ಚಾತುರಂತಮಿವ ಪ್ರಭುಮ್ ॥ ೮೫ ॥**

ನದಿಗಳೆಂಬ ಸ್ತ್ರೀಯರಿಂದ ಸೇವಿಸಲ್ಪಡುವುದೂ ರತ್ನಗಳನ್ನು ಪರಿಗ್ರಹಿಸಿರುವುದೂ ಹೆಚ್ಚು ಭೋಗಪಡುವವರಿಂದ, ದೊಡ್ಡ ಸರ್ಪಗಳಿಂದ ಸೇವಿಸಲ್ಪಡುವುದೂ ಭರತರಾಜನಂತೆ ಪ್ರಸಿದ್ಧವಾದುದೂ

**[೫]ಯಾದೋದೋರ್ಘಾತನಿರ್ಘಾತೈರ್ದೂರೋಚ್ಚಲಿತಶೀಕರೈಃ ।**
**ಸಪತಾಕಮಿವಾಶೇಷ[೬]ಶೇಷಾರ್ಣವವಿನಿರ್ಜಯಾತ್ ॥ ೮೬ ॥**

ಜಲಚರಪ್ರಾಣಿಗಳ ಮುಂಗಾಲುಗಳ ತಾಡನಗಳಿಂದ ದೂರವಾಗಿ ಹಾರುತ್ತಿರುವ ಜಲಬಿಂದುಗಳಿಂದ ತನ್ನನ್ನು ಬಿಟ್ಟು ಉಳಿದ ಸಮುದ್ರಗಳನ್ನೆಲ್ಲ ಜಯಿಸಿರುವುದರಿಂದ ಪ್ರಾಪ್ತವಾದ ಧ್ವಜಪತಾಕೆಯೊಡನೆ ಕೂಡಿರುವಂತಿರುವುದೂ

**ಕುಲಾಚಲಪೃಥುಸ್ತಂಭಜಂಬೂದ್ವೀಪ[೭]ಮಹೌಕಸಃ ।**
**ವಿನೀಲರತ್ನನಿರ್ಮಾಣಮೇಕಂ ಸಾಲಮಿವೋಚ್ಛ್ರಿತಮ್ ॥ ೮೭ ॥**

ಕುಲಪರ್ವತಗಳೆಂಬ ವಿಶಾಲವಾದ ಸ್ತಂಭಗಳುಳ್ಳ ಜಂಬೂದ್ವೀಪವೆಂಬ ದೊಡ್ಡ ಮನೆಯ ನೀಲರತ್ನಗಳಿಂದ ನಿರ್ಮಿಸಲ್ಪಟ್ಟುದೂ ಉನ್ನತವೂ ಆದ ಒಂದು ಕೋಟೆಯಂತಿರುವುದೂ

**ಅನಾದಿ[೮]ಮಸ್ತಪರ್ಯಂತಮಖಿಲಾರ್ಥಾ[೯]ವಗಾಹನಮ್ ।**
**ಗಭೀರಶಬ್ದಸಂದರ್ಭಂ ಶ್ರುತಸ್ಕಂಧಮಿವಾಪರಮ್ ॥ ೮೮ ॥**

ಆದ್ಯಂತವಿಲ್ಲದುದೂ ಸಮಸ್ತಾರ್ಥಗಳನ್ನೊಳಗೊಂಡಿರುವುದೂ ಗಂಭೀರವಾದ ಶಬ್ದರಚನೆಯುಳ್ಳುದೂ ಆದ ಬೇರೊಂದು ಶಾಸ್ತ್ರಸಮೂಹದಂತಿರುವುದೂ

**ನಿತ್ಯಪ್ರವೃತ್ತಶಬ್ದತ್ವಾದ್ದ್ರವ್ಯಾರ್ಥಿಕನಯಾಶ್ರಿತಮ್ ।**
**ವೀಚೀನಾಂ ಕ್ಷಣಭಂಗಿತ್ವಾತ್ಪರ್ಯಾಯನಯಗೋಚರಮ್ ॥ ೮೯ ॥**

ಯಾವಾಗಲೂ ಶಬ್ದವುಂಟಾಗುವುದರಿಂದ ದ್ರವ್ಯಾರ್ಥಿಕವೆಂಬ ನಯವನ್ನಾಶ್ರಯಿಸಿರುವುದೂ ಅಲೆಗಳ ಕ್ಷಣನಶ್ವರತ್ವದಿಂದ ಪರ್ಯಾಯನಯಕ್ಕೆ ವಿಷಯವಾದುದೂ ಅಂದರೆ ದ್ರವ್ಯಾರ್ಥಿಕನಯದಿಂದ ಕಥಂಚಿನ್ನಿತ್ಯವೂ ಪರ್ಯಾಯಾರ್ಥಿಕನಯದಿಂದ ಕಥಂಚಿದನಿತ್ಯವೂ

**ನಿತ್ಯಾನುಬದ್ಧತೃಷ್ಣತ್ವಾಚ್ಛಶ್ವ[೧೦]ಜ್ಜಲಪರಿಗ್ರಹಾತ್ ।**
**[೧೧]ಗುರೂಣಾಂ ಚ ತಿರಸ್ಕಾರಾ[೧೨]ತ್ಕುರಾಜಾನಮಿವಾನ್ವಹಮ್ ॥ ೯೦ ॥**

ಯಾವಾಗಲೂ ಆಶೆಯ ಸಂಬಂಧವಿರುವುದರಿಂದಲೂ ಪುನಃಪುನಃ ಜಡಪುರುಷರನ್ನು ಪರಿಗ್ರಹಿಸುವುದರಿಂದಲೂ ಗುರುಜನರನ್ನು ತಿರಸ್ಕರಿಸುವುದರಿಂದಲೂ ಭಾರವಾಗಿರುವ ಪದಾರ್ಥಗಳನ್ನು ತಿರಸ್ಕರಿಸುವುದರಿಂದಲೂ (ಕೆಳಕ್ಕೆ ತಳ್ಳುವುದರಿಂದಲೂ) ಯಾವಾಗಲೂ ದುಷ್ಟರಾಜನಂತಿರುವುದೂ

**ಸಸತ್ತ್ವಮತಿಗಂಭೀರಂ ಭೋಗಿಭಿರ್ದೃತವೇಲಕಮ್ ।**
**ಸುರಾಜಾನಮಿವಾತ್ಯುಚ್ಚೈ[೧]ರ್ವೃತ್ತಿಂ ಮರ್ಯಾದಯಾ ಧೃತಮ್ ॥ ೯೧ ॥**

ಸತ್ತ್ವಗುಣಸಹಿತನೂ ಅತ್ಯಂತಗಂಭೀರನೂ ಭೋಗಪುರುಷರಿಂದ ನಿರೀಕ್ಷಿಸಲ್ಪಟ್ಟ ಸಮಯವುಳ್ಳವನೂ ಮರ್ಯಾದೆಯಿಂದ ಉತ್ತಮವಾದ ಜೀವನೋಪಾಯವನ್ನುಧರಿಸಿರುವವನೂ ಆದ ಉತ್ತಮರಾಜನಂತೆ, ಜಲಚರಪ್ರಾಣಿಗಳುಳ್ಳುದೂ ಬಹಳ ಆಳವಾಗಿರುವುದೂ ಸರ್ಪಗಳಿಂದ ಹೊಂದಲ್ಪಟ್ಟ ದಡವುಳ್ಳುದೂ ಎಲ್ಲೆಯಿಂದ ಉತ್ಕೃಷ್ಟವಾದ ಇರುವಿಕೆಯನ್ನು ಧರಿಸಿರುವುದೂ

**ಅನೇಕಮಂತರ[೨]ದ್ವೀಪಮಂತರ್ವರ್ತಿನಮಾತ್ಮನಃ ।**
**ದುರ್ಗದೇಶಮಿವಾ[೩]ಹಾರ್ಯಂ ಪಾಲಯಂತ[೪]ಮಲಂಘನೈಃ ॥ ೯೨ ॥**

ತನ್ನಮಧ್ಯದಲ್ಲಿರುವ ಅನೇಕವಾದ ಗೌತಮಾದಿ ಅಂತರದ್ವೀಪವನ್ನು ಆಕ್ರಮಿಸದಿರುವ ಸ್ವಭಾವಗಳಿಂದ, ದುರ್ಗಪ್ರದೇಶದಂತೆ ಸ್ವಾಭಾವಿಕವಾಗಿ ಕಾಪಾಡುತ್ತಿರುವುದೂ

**ಗರ್ಜದ್ಭಿರತಿಗಂಭೀರಂ ನಭೋವ್ಯಾಪಿಭಿರೂರ್ಜಿತೈಃ ।**
**ಆಪೂರ್ಯಮಾಣಮಂಭೋಭಿ[೫]ರ್ಘನೌಘೈಃ ಕಿಂಕರೈರಿವ ॥ ೯೩ ॥**

ಅತ್ಯಂತಗಂಭೀರವಾಗಿ ಧ್ವನಿಮಾಡುತ್ತಿರುವುವೂ ಆಕಾಶವನ್ನು ವ್ಯಾಪಿಸುತ್ತಿರುವುವೂ ಉನ್ನತವೂ ಆದ ಮೇಘಗಳ ಸಮೂಹಗಳಿಂದ, ಸೇವಕರಿಂದ ತುಂಬಲ್ಪಡುವಂತೆ, ಜಲಗಳಿಂದ ತುಂಬಲ್ಪಡುತ್ತಿರುವುದೂ

**[೬]ರಂಗಿತೈ[೭]ಶ್ಚಲಿತೈಃ ಕ್ಷೋಭೈ[೮]ರುತ್ಥಿತೈಶ್ಚ [೯]ವಿವರ್ತನೈಃ ।**
**ಗೃಹಾವಿಷ್ಟಮಿವೋ[೧೦]ಜ್ಜೃಂಭಂ ಸಧ್ವಾನಂ ಚ ಸಘೂರ್ಣಿತಮ್ ॥ ೯೪ ॥**

ಭೂಮಿಯಲ್ಲಿ ಹರಡಿಕೊಳ್ಳುವುದರಿಂದಲೂ ಚಲನೆಗಳಿಂದಲೂ ಅಲ್ಲೋಲಕಲ್ಲೋಲವಾಗುವುದರಿಂದಲೂ ಏಳುವುದರಿಂದಲೂ ಭ್ರಮಣೆಗಳಿಂದಲೂ ಗ್ರಹಹಿಡಿದ ಮನುಷ್ಯನಂತೆ ಶಬ್ದಸಹಿತವೂ ತೂಕಡಿಕೆಯುಳ್ಳುದೂ ಆದ ಹೆಚ್ಚು ಆಕಳಿಕೆ (ಭೋರ್ಗರೆಯುವಿಕೆ)ಯುಳ್ಳುದೂ

**ರತ್ನಾಂಶುಚಿತ್ರಿತತಲಂ ಮುಕ್ತಾಶಬಲಿತಾರ್ಣಸಮ್ ।**
**ಗ್ರಾಹೈರಧ್ಯಾಸಿತಂ ವಿಷ್ವಕ್ಸುಖಾಲೋಕಂ ಚ ಭೀಷಣಮ್ ॥ ೯೫ ॥**

ಎಲ್ಲಾಕಡೆಗಳಲ್ಲಿಯೂ ರತ್ನಗಳ ಕಿರಣಗಳಿಂದ ಅನೇಕ ವರ್ಣವಾಗಿರುವ ತಲವುಳ್ಳುದೂ ಮುತ್ತುಗಳಿಂದ ಚಿತ್ರವಿಚಿತ್ರವಾದ ನೀರುಳ್ಳುದೂ ಮೊಸಳೆಗಳಿಂದ ವಾಸಮಾಡಲ್ಪಟ್ಟುದೂ ಸುಖಕರವಾದ ನೋಟವುಳ್ಳುದೂ ಭಯಂಕರವೂ (ಮುತ್ತುರತ್ನಗಳಿರುವುದರಿಂದ ಸುಖಕರವಾದ ನೋಟವುಳ್ಳುದೂ ಮೊಸಳೆಗಳಿರುವುದರಿಂದ ಭಯಂಕರವೂ ಎಂದು ಭಾವವು)

**[೧೧]ನದೀನಂ ರತ್ನಭೂಯಿಷ್ಠ[೧೨]ಮಪ್ರಾಣಂ [೧೩]ಚಿರಜೀವಿತಮ್ ।**
**[೧೪]ಸಮುದ್ರಮಪಿ [೧೫]ಚೋನ್ಮುದ್ರಂ [೧೬]ಝುಷಕೇತು [೧೭]ಮಮನ್ಮಥಂ ॥**

ದರಿದ್ರನಿಗೆ ಸಮಾನವೂ ನದಿಗಳಿಗೆ ಪತಿಯೂ ಅಧಿಕವಾದ ರತ್ನಗಳುಳ್ಳುದೂ ಪ್ರಾಣವಿಲ್ಲದುದೂ ಜಲವೇ ಪ್ರಾಣವಾಗಿರುವುದೂ ಬಹುಕಾಲವಿರುವುದೂ ಮುದ್ರಾಸಹಿತವಾದುದೂ ಸಮುದ್ರವಾದುದೂ ಮುದ್ರಾರಹಿತವಾದುದೂ

೧ ಅತೃಪ್ತಿಕರಂ. ೨ ಗಮನಾಗಮನಾನಿ. ೩ ಮಹಾಸರ್ಪೈಶ್ಚ. ೪ ಪ್ರಸಿದ್ಧಮಿತ್ಯರ್ಥಃ. ೫ ಯಾದಾಂಸಿ ಜಲಜಂತವಃ. ೬ ಸ್ವಸ್ಮಾತ್. ೭ ಮಹಾಗೃಹಸ್ಯ. ೮ ಪರ್ಯಂತರಹಿತಂ. ೯ ಅವಗಾಹಿನಮಿತ್ಯಪಿ ಪಾಠಃ. ೧೦ ಜಡಸ್ವೀಕಾರಾಚ್ಚ. ೧೧ ಗುರುದ್ರವ್ಯಾಣಾಮಧಃಕರಣಾತ್. ೧೨ ಕುತ್ಸಿತರಾಜಂ.

೧ ವೃತ್ತಿಮಿತ್ಯಪಿ ಪಾಠಃ. ೨ ಗೌತಮಾದಿದ್ವೀಪಂ. ೩ ಸ್ವಾಭಾವಿಕಂ. ೪ ಸ್ವೇನಾನುಕ್ರಮಣೈಃ. ೫ ಮೇಘಸಮೂಹೈಃ. ೬ ಭೂಪ್ರಸರ್ಪಣೈಃ. ೭ ಚಲನೈಃ. ೮ ಉತ್ಥಾನೈಃ. ೯ ಭ್ರಮಣೈಃ. ೧೦ ಉಜ್ಜೃಂಭಣಂ. ೧೧ ಸರಿತ್ಪತಿಂ, ನಿಃಸ್ವಸದೃಶಂಚ । ನಞಾಭಾವೇ ನಿಷಿದ್ಧೇ ಚ ಸ್ವರೂಪಾರ್ಥೇಪ್ಯತಿಕ್ರಮೇ । ಈಷದರ್ಥೇಚಸಾದೃಶ್ಯೇತದ್ವಿರುದ್ಧತದನ್ಯಯೋಃ ॥ ೧೨ ಆಪಃ ಪ್ರಾಣಾಃ ಯಸ್ಯ ಸಸ್ತಂ, ಗತಪ್ರಾಣಂಚ. ೧೩ ಚಿರಕಾಲಸ್ಥಾಯಿನಂ. ೧೪ ಮುದ್ರಾಸಹಿತಂ. ೧೫ ಮುದ್ರಾರಹಿತಂ. ೧೬ ಝುಷಾಂಕಿತಂ. ೧೭ ಮತ್ ಮನೋ ಮಥ್ನಾತೀತಿ ಮನ್ಮಥಃ ನಮನ್ಮಥಃ ಅಮನ್ಮಥಸ್ತಂ, ಮನೋಹರಮಿತ್ಯರ್ಥಃ.

ಮನ್ಮಥನಾಗಿರುವುದೂ ಮನ್ಮಥನಲ್ಲದುದೂ ಅಂದರೆ ಮೀನುಗಳುಳ್ಳದೂ ಮನೋಹರವೂ, (ಈ ಪದ್ಯದಲ್ಲಿ ವಿರೋಧಾಭಾಸಾಲಂಕಾರವಿರುವುದರಿಂದ ಎರಡನೆಯ ಅರ್ಥವು ವಿರೋಧಪರಿಹಾರಕವೆಂದು ತಿಳಿಯಬೇಕು. ಬೇರೆ ಕಡೆಗಳಲ್ಲಿಯೂ ಹೀಗೆಯೇ ತಿಳಿಯಬೇಕು).

**ಅದೃಷ್ಟಪಾರಮಕ್ಷೋಭ್ಯ[೧]ಮಸಂಹಾರ್ಯ[೨]ಮನುತ್ತರಮ್ ।**
**ಸಿದ್ಧಾಲಯಮಿವ [೩]ವ್ಯಕ್ತ[೪]ಮವ್ಯಕ್ತ[೫]ಮಮೃತಾಸ್ಪದಮ್ ॥ ೯೭ ॥**

ಕೊನೆಯಿಲ್ಲದುದೂ ಮನಃಕ್ಲೇಶವಿಲ್ಲದುದೂ ನಾಶವಿಲ್ಲದುದೂ ಸರ್ವಶ್ರೇಷ್ಠವೂ ಶಾಸ್ತ್ರದಿಂದ ವ್ಯಕ್ತವಾದುದೂ ಕಣ್ಣಿಗೆ ಗೋಚರವಾಗದಿರುವುದರಿಂದ ಅವ್ಯಕ್ತವಾದುದೂ ಅಕ್ಷಯಸ್ಥಾನವೂ ಆದ ಸಿದ್ಧಲೋಕದಂತೆ, ಕಾಣದಿರುವ ಪಾರವುಳ್ಳದೂ ಸ್ತಬ್ಧವಾಗಿರುವುದೂ ನಾಶರಹಿತವೂ ಸರ್ವಶ್ರೇಷ್ಠವೂ ವ್ಯಕ್ತಾವ್ಯಕ್ತ ಸ್ವರೂಪವುಳ್ಳದೂ ಜಲಕ್ಕೂ ಅಮೃತಕ್ಕೂ ಸ್ಥಾನವೂ

**ಕ್ವಚಿ[೬]ನ್ಮಹೋಪಲಚ್ಛಾಯಾಧೃತಸಂಧ್ಯಾಭ್ರವಿಭ್ರಮಮ್ ।**
**ಕೃತಾಂಧತಮಸಾರಂಭಂ ಕ್ವಚಿನ್ನೀಲಾಶ್ಮರಶ್ಮಿಭಿಃ ॥ ೯೮ ॥**

ಕೆಲವು ಕಡೆಯಲ್ಲಿ ಪದ್ಮರಾಗರತ್ನದ ಕಾಂತಿಯಿಂದ ಸಂಧ್ಯಾಕಾಲದ ಮೇಘದ ಲೀಲೆಯನ್ನು ಧರಿಸಿರುವುದೂ ಕೆಲವು ಕಡೆಯಲ್ಲಿ ನೀಲರತ್ನದ ಕಾಂತಿಗಳಿಂದ ಗಾಢಾಂಧಕಾರದ ಪ್ರಾರಂಭವನ್ನುಂಟುಮಾಡಿರುವುದೂ

**ಹರಿನ್ಮಣಿಪ್ರಭೋತ್ಸರ್ಪೈಃ ಕ್ವಚಿ[೭]ತ್ಸಂದಿಗ್ಧಶೈವಲಮ್ ।**
**ಕ್ವಚಿಚ್ಚ ಕೌಂಕುಮೀಂ ಕಾಂತಿಂ ತನ್ವಾನಂ ವಿದ್ರುಮಾಂಕುರೈಃ ॥ ೯೯ ॥**

ಕೆಲವು ಕಡೆಯಲ್ಲಿ ಪಚ್ಚೆಯ ರತ್ನಗಳ ಕಾಂತಿಯನ್ನು ಹರಡುವಿಕೆಗಳಿಂದ ಪಾಚಿಯು ಸಂಬಂಧಿಸಿಕೊಂಡಂತಿರುವುದೂ ಕೆಲವು ಕಡೆಯಲ್ಲಿ ಹವಳಗಳ ಅಂಕುರಗಳಿಂದ ಕುಂಕುಮದ ಕಾಂತಿಯನ್ನುಂಟುಮಾಡಿರುವುದೂ

**ಕ್ವಚಿಚ್ಛುಕ್ತಿಪುಟೋದ್ಭೇದಸಮುಚ್ಚಲಿತಮೌಕ್ತಿಕಮ್ ।**
**ತಾರಕಾನಿಕರಾಕೀರ್ಣಂ ಹಸಂತಂ ಜಲಭೃತ್ಪಥಮ್ ॥ ೧೦೦ ॥**

ಕೆಲವು ಕಡೆಯಲ್ಲಿ ಮುತ್ತಿನ ಚಿಪ್ಪುಗಳು ಒಡೆದಿರುವುದರಿಂದ ಮೇಲಕ್ಕೆ ಹಾರಿದ ಮುತ್ತುಗಳುಳ್ಳದಾಗಿ ನಕ್ಷತ್ರಗಳ ಸಮೂಹದಿಂದ ವ್ಯಾಪ್ತವಾದ ಆಕಾಶವನ್ನು ಪರಿಹಾಸ್ಯಮಾಡುತ್ತಿರುವುದೂ

**ವೇಲಾಪರ್ಯಂತ[೮]ಸಮೂರ್ಮ್ಯುತ್ಸರ್ಪರತ್ನಾಂಶುಶೀಕರೈಃ ।**
**ಕ್ವಚಿದಿಂದ್ರಧನುರ್ಲೇಖಾಂ ಲಿಖಂತಮಿವ ಖಾಂಗಣೆ ॥ ೧೦೧ ॥**

ಕೆಲವು ಕಡೆಯಲ್ಲಿ ದಡದ ಸಮೀಪಕ್ಕೆ ಹಾರುತ್ತಿರುವ ಅನೇಕ ವಿಧವಾದ ರತ್ನಗಳ ಕಿರಣಸಹಿತವಾದ ಜಲಬಿಂದುಗಳಿಂದ ಆಕಾಶದಲ್ಲಿ ಇಂದ್ರಧನುಸ್ಸಿನ ರೇಖೆಯನ್ನು ಬರೆಯುವಂತಿರುವುದೂ

**[೯]ರಥಾಂಗಪಾಣಿರಿತ್ಯುಚ್ಚೈಃ ಸಂಭೃತಂ ರತ್ನಕೋಟಿಭಿಃ ।**
**ಮಹಾನಿಧಿಮಿವಾಪೂರ್ವಮಪಶ್ಯನ್ಮಕರಾಕರಮ್ ॥ ೧೦೨ ॥**

ಶ್ರೇಷ್ಠವಾದ ಅನೇಕರತ್ನಗಳಿಂದ ಪರಿಪೂರ್ಣವೂ ಆದ ಸಮುದ್ರವನ್ನು ಭರತ ಚಕ್ರವರ್ತಿಯು, ಅಪೂರ್ವವೂ ದೊಡ್ಡದೂ ಆದ ನಿಧಿಯನ್ನು ನೋಡುವಂತೆ, ನೋಡಿದನು.

**ದೃಷ್ಟ್ವಾಥ ತಂ ಮಹಾಭಾಗಃ [೧೦]ಕೃತಧೀರ್ಧೀರನಿಃಸ್ವನಮ್ ।**
**[೧೧]ದೃಷ್ಟ್ಯೈವಾ[೧೨]ತುಲಯಚ್ಚಕ್ರೀ ಗೋಷ್ಪದಾವಜ್ಞಯಾರ್ಣವಮ್ ॥**

ತರುವಾಯ ಮಹಾಭಾಗ್ಯಶಾಲಿಯೂ ಬಹಳ ಬುದ್ಧಿಶಾಲಿಯೂ ಆದ ಭರತ ಚಕ್ರವರ್ತಿಯು ಗಂಭೀರವಾದ ಶಬ್ದವುಳ್ಳ ಆ ಸಮುದ್ರವನ್ನು ನೋಡಿ ಗೋವಿನ ಹೆಜ್ಜೆಯೆಂಬ ತಿರಸ್ಕಾರಭಾವದಿಂದ ತನ್ನ ನೋಟದಿಂದಲೇ ಅಳತೆಮಾಡಿದನು. ಸಮುದ್ರದ ಪರಿಮಾಣವನ್ನು ಗೊತ್ತುಮಾಡಿಕೊಂಡನೆಂದು ಭಾವವು.

**ತತೋಽಭಿಮತಸಂಸಿದ್ಧ್ಯೈ ಕೃತಸಿದ್ಧನಮಸ್ಕ್ರಿಯಃ ।**
**ರಥಂ ಪ್ರಚೋದಯೇತ್ಯುಚ್ಚೈಃ [೧]ಪ್ರಾಜಿತಾರಮಚೋದಯತ್ ॥ ೧೦೪ ॥**

ಅನಂತರದಲ್ಲಿ ಭರತಚಕ್ರವರ್ತಿಯು ತನ್ನ ಇಷ್ಟಾರ್ಥಸಿದ್ಧಿಗೋಸ್ಕರ ಸಿದ್ಧಪರಮೇಷ್ಠಿಗಳ ನಮಸ್ಕಾರವನ್ನು ಮಾಡಿ ''ರಥವನ್ನು ಚೆನ್ನಾಗಿ ನಡೆಯಿಸು'' ಎಂಬುದಾಗಿ ಸಾರಥಿಯನ್ನು ಪ್ರೇರೇಪಿಸಿದನು.

**[೨]ವಿಮುಕ್ತಪ್ರಗ್ರಹೈರ್ವಾಹ್ಯೈರೂಹ್ಯಮಾನೋ ಮನೋಜವೈಃ ।**
**ಲವಣಾಬ್ಧಾ [೩]ದ್ರುತಂ [೪]ಪ್ರಾಯಾದ್ಯಾನಪಾತ್ರಾಯಿತೋ ರಥಃ ॥ ೧೦೫ ॥**

ಬಿಡಲ್ಪಟ್ಟ ಕಡಿವಾಣಗಳುಳ್ಳವೂ ಮನಸ್ಸಿನಂತೆ ವೇಗವುಳ್ಳವೂ ಆದ ಕುದುರೆಗಳಿಂದ ಧರಿಸಲ್ಪಟ್ಟುದೂ ಹಡಗಿನಂತಿರುವುದೂ ಆದ ರಥವು ಲವಣಸಮುದ್ರ ದಲ್ಲಿ ಶೀಘ್ರವಾಗಿ ಹೋಯಿತು.

**ರಥೋ ಮನೋರಥಾತ್ಪೂರ್ವಂ ರಥಾತ್ಪೂರ್ವಂ ಮನೋರಥಃ ।**
**ಇತಿ ಸಂಭಾವ್ಯವೇಗೋಸೌ ರಥೋ ವಾರ್ಧಿಂ ವ್ಯಗಾಹತ ॥ ೧೦೬ ॥**

'' ಮನೋರಥಕ್ಕಿಂತ ಮೊದಲು ರಥವು, ರಥಕ್ಕಿಂತ ಮೊದಲು ಮನೋರಥವು'' ಎಂದು ಊಹಿಸಲ್ಪಟ್ಟ ವೇಗವುಳ್ಳ ಈ ರಥವು ಸಮುದ್ರವನ್ನು ಪ್ರವೇಶಮಾಡಿತು.

**ಜಲಸ್ತಂಭಃ ಪ್ರಯುಕ್ತೋನು ಜಲಂ ನು ಸ್ಥಲತಾಂ ಗತಮ್ ।**
**ಸ್ಯಂದನಂ ಯದಮೀ ವಾಹಾ ಜಲೇ ನಿನ್ಯುಃ [೫]ಸ್ಥಲಾಸ್ಥಯಾ ॥ ೧೦೭ ॥**

ಕುದುರೆಗಳು ಸ್ಥಲವೆಂಬ ಬುದ್ಧಿಯಿಂದ ನೀರಿನಲ್ಲಿ ರಥವನ್ನೆಳೆದುಕೊಂಡು ಹೋದುದರಿಂದ ಜಲಸ್ತಂಭಮಂತ್ರವು ಪ್ರಯೋಗಿಸಲ್ಪಟ್ಟಿತೋ ? ಅಥವಾ ನೀರು ಸ್ಥಲದ ಸ್ವರೂಪವನ್ನು ಹೊಂದಿತೋ ?

**ತಥೈವ ಚಕ್ರಚೀತ್ಕಾರಸ್ತಥೈವೋಚ್ಚೈಃ [೬]ಪ್ರಧೌರಿತಮ್ ।**
**ಯಥಾ[೭]ಬಹಿರ್ಜಲಂ ಪೂರ್ವಮಹೋ ಪುಣ್ಯಂ [೮]ರಥಾಂಗಿನಃ ॥ ೧೦೮ ॥**

ಮೊದಲು ನೀರಿನ ಹೊರಗೆ ಹೇಗೆ ರಥಚಕ್ರಗಳ ಚೀತ್ಕಾರಶಬ್ದವಾಗುತ್ತಿದ್ದಿತೋ ಹೇಗೆ ಕುದುರೆಗಳ ಗಮನವಿದ್ದಿತೋ ಹಾಗೆಯೇ ಈಗ ನೀರಿನ ಮೇಲೆ ಚಕ್ರಗಳ ಚೀತ್ಕಾರಶಬ್ದವೂ ಕುದುರೆಗಳ ಗಮನವೂ ಆದುವು. ಚಕ್ರವರ್ತಿಯ ಪುಣ್ಯವು ಆಶ್ಚರ್ಯಕರವಾದುದು.

**ಮಹದ್ಭಿರಪಿ ಕಲ್ಲೋಲೈಃ [೯]ಶಿಕ್ಯಮಾನಾಸ್ತುರಂಗಮಾಃ ।**
**ರಥಂ ನಿನ್ಯುರನಾಯಾಸಾ[೧೦]ತ್ವತ್ಯುತ್ಯೈಷಾಂ [೧೧]ಸ [೧೨]ವಿಶ್ರಮಃ ॥ ೧೦೯ ॥**

ದೊಡ್ಡ ಅಲೆಗಳಿಂದ ಸೇಚಿಸಲ್ಪಟ್ಟ ಕುದುರೆಗಳು ಆಯಾಸವಿಲ್ಲದೆ ರಥವನ್ನು ತೆಗೆದುಕೊಂಡು ಹೋದುವು, ಆಶ್ಚರ್ಯ. ಕುದುರೆಗಳಿಗೆ ಅಲೆಗಳ ಸೇಚನವು ಶ್ರಮಪರಿಹಾರಕ್ಕೆ ಕಾರಣವಾಗಿದ್ದಿತು. ಅಲೆಗಳಿಂದ ಕುದುರೆಗಳ ಗಮನಕ್ಕೆ ತೊಂದರೆಯಾಗುವುದಕ್ಕೆ ಬದಲಾಗಿ ಅವು ಶ್ರಮನಿವಾರಕಗಳಾಗಿದ್ದುವೆಂದು ಭಾವವು.

**ರಥಚಕ್ರ[೧೩]ಸಮುತ್ಪೀಡಾ[೧೪]ಜ್ಜಲೋತ್ಪೀಡಃ [೧೫]ಖಮುತ್ಪತನ್ ।**
**ನ್ಯಧಾದ್ಧ್ವಜಾಂಶುಕೇ ಜಾಡ್ಯಂ [೧೬]ಜಲಾನಾಮೀದೃಶೀ ಗತಿಃ ॥ ೧೧೦ ॥**

೧ ಅವಿನಾಶ್ಯಂ. ೨ ನ ವಿದ್ಯತೆ ಉತ್ತರಃ ಶ್ರೇಷ್ಠೋ ಯಸ್ಮಾತ್ತಸ್ತಂ. ೩ ಆಗಮತ್ವಾದ್ವ್ಯಕ್ತಂ. ೪ ಅದೃಷ್ಟತ್ವಾದವ್ಯಕ್ತಂ. ೫ ಜಲಾಸ್ಪದಂ, ಪೀಯೂಷನಿವಾಸಂ ವಾ, ಅಕ್ಷಯಸ್ಥಾನಂ ಚ. ೬ ಪದ್ಮರಾಗಃ. ೭ ಲಿಪ್ತಃ. ೮ ಸಮುತ್ಸರ್ಪನ್ನಾನಾರತ್ನಾಂಶುಯುಕ್ತಶೀಕರೈಃ. ೯ ಭರತಚಕ್ರವರ್ತೀ. ೧೦ ಸಂಪೂರ್ಣಬುದ್ಧಿಃ. ೧೧ ಆಲೋಕನೇನೈವ. ೧೨ ಪ್ರಮಾಣಯತಿ ಸ್ಮ.

೧ ಸಾರಥಿಂ. ೨ ತ್ಯಕ್ತರಜ್ಜುಭಿಃ. ೩ ಧೃತಮಿತ್ಯಪಿ ಪಾಠಃ. ೪ ಅಗಚ್ಛತ್. ೫ ಸ್ಥಲಮಿತಿ ಬುದ್ಧ್ಯಾ. ೬ ವಲ್ಗಿತಂ. ೭ ಜಲಾದ್ಬಹಿಃ. ೮ ಚಕ್ರಿಣಃ. ೯ ಸಿಚ್ಯಮಾನಾಃ. ೧೦ ಅಹೋ. ೧೧ ಸೇಚನವಿಧಿಃ ೧೨ ಶ್ರಮಹರಣಕಾರಣಂ. ೧೩ ಸಮುತ್ಪೀಡನಾತ್. ೧೪ ಜಲಸಮೂಹಃ. ೧೫ ಉಚ್ಛಲನ್ನಿತ್ಯಪಿ ಪಾಠಃ. ೧೬ ಜಡಾನಾಮಿತಿ ಧ್ವನಿಃ.

ರಥದ ಚಕ್ರಗಳ ಹೊಡೆತದಿಂದ ಆಕಾಶಕ್ಕೆ ಮೇಲೆ ಹಾರುತ್ತಿರುವ ನೀರಿನ ಸಮೂಹವು ಧ್ವಜವಸ್ತ್ರದಲ್ಲಿ ಜಡತನ(ಭಾರ)ವನ್ನಿರಿಸಿತು. ಜಲಗಳ ನಡತೆಯು ಈಪ್ರಕಾರವಾದುದು. ಜಡಪುರುಷರ ಗತಿಯು ಈರೀತಿಯಾದುದೆಂದೂ ಸೂಚಿತ ವಾಗುವುದು.

**ನಾಂಗರಾಗಸ್ತುರಂಗಾಣಾಮಾರ್ದ್ರಿತಃ [೧]ಶ್ರಮಘರ್ಮತೈಃ ।**
**[೨]ಕ್ಷಾಲಿತಃ ಖುರವೇಗೋತ್ಥೈಃ ಕೇವಲಂ ಶೀಕರೈರಪಾಮ್ ॥ ೧೧೧ ॥**

ಕುದುರೆಗಳ ಮೈಗೆ ಹಚ್ಚಿರುವ ಅಂಗಲೇಪನವು ಬೆವರುಗಳಿಂದ ನೆನೆಯಿಸ ಲಿಲ್ಲವು. ಗೊರಸುಗಳ ವೇಗದಿಂದುಂಟಾದ ಜಲಬಿಂದುಗಳಿಂದ ಮಾತ್ರ ಅಂಗರಾಗವು ತೊಳೆಯಲ್ಪಟ್ಟಿದ್ದಿತು. ಕುದುರೆಗಳು ಶ್ರಮವಿಲ್ಲದೆ ಹೋದುವೆಂದು ಭಾವವು.

**ಕ್ಷಣಂ ರಥಾಂಗಸಂಘಟ್ಟಾಜ್ಜಲಮಬ್ಧೇರ್ದ್ವಿಧಾಭವತ್ ।**
**[೩]ವ್ಯಭಾವಿ ಭಾವಿನಾಂ ವರ್ತ್ಮ ಚಕ್ರಿಣಾಮಿವ [೪]ಸೂತ್ರಿತಮ್ ॥ ೧೧೨ ॥**

ರಥದ ಚಕ್ರಗಳ ಸಂಘರ್ಷಣೆಯಿಂದ ಒಂದು ಕ್ಷಣಕಾಲಪರ್ಯಂತ ಸಮುದ್ರದ ನೀರು ಎರಡುಭಾಗವಾಗಿದ್ದಿತು. ಇದು ಮುಂದೆ ಹುಟ್ಟುವ ಚಕ್ರವರ್ತಿಗಳಿಗೆ ರಚಿಸ ಲ್ಪಟ್ಟ ಮಾರ್ಗವೋ ಎಂಬಂತೆ ಊಹಿಸಲ್ಪಟ್ಟಿತು.

**ರಥೋಽಸ್ಯಾಭಿಮತಾಂ ಭೂಮಿಂ ಪ್ರಾಪತ್ಸಾರಥಿಚೋದಿತಃ ।**
**ಮನೋರಥೋಽಪಿ ಸಂಸಿದ್ಧಿಂ ಪುಣ್ಯಸಾರಥಿಚೋದಿತಃ ॥ ೧೧೩ ॥**

ಭರತಚಕ್ರವರ್ತಿಯ ಸಾರಥಿಯಿಂದ ಪ್ರೇರಿತವಾದ ರಥವು ಇಷ್ಟವಾದ ಭೂಮಿ ಯನ್ನೂ ಪುಣ್ಯವೆಂಬ ಸಾರಥಿಯಿಂದ ಪ್ರೇರಿತವಾದ ಮನೋರಥವು ಸಿದ್ಧಿಯನ್ನೂ ಹೊಂದಿದುವು.

**ಗತ್ವಾ ಕತಿಪಯಾನ್ಯಬ್ಧೌ ಯೋಜನಾನಿ ರಥಃ ಪ್ರಭೋಃ ।**
**ಸ್ಥಿತೋ[೫]ಽಂತರ್ಜಲಮಾಕ್ರಮ್ಯ ಗ್ರಸ್ತಾಶ್ವ ಇವ ವಾರ್ಧಿನಾ ॥ ೧೧೪ ॥**

ಭರತಚಕ್ರವರ್ತಿಯ ರಥವು ಸಮುದ್ರದಲ್ಲಿ ಕೆಲವು ಯೋಜನಗಳವರೆಗೆ ಹೋಗಿ, ಅಲ್ಲಿ ಸಮುದ್ರವು ಕುದುರೆಗಳನ್ನು ನುಂಗಿದಂತೆ, ರಥವು ನೀರಿನ ಮಧ್ಯದಲ್ಲಿ ನಿಂತಿತು.

**ದ್ವಿಷಡ್ಯೋಜನಮಾಗಾಹ್ಯ ಸ್ಥಿತೇ [೬]ಮಧ್ಯೇಽರ್ಣವಂ ರಥೇ ।**
**ರಥಾಂಗಪಾಣಿ[೭]ರಾರುಷ್ಟೋ ಜಗ್ರಾಹ ಕಿಲ ಕಾರ್ಮುಕಮ್ ॥ ೧೧೫ ॥**

ರಥವು ಹನ್ನೆರಡುಯೋಜನದೂರ ಪ್ರವೇಶಮಾಡಿ ಸಮುದ್ರದ ಮಧ್ಯದಲ್ಲಿ ನಿಂತಿರಲು ಚಕ್ರವರ್ತಿಯು ಸ್ವಲ್ಪ ಕೋಪಗೊಂಡು ಧನುಸ್ಸನ್ನು ಪರಿಗ್ರಹಿಸಿದನು.

**[೮]ಸ್ಫುರಜ್ಜ್ಯಂ ವಜ್ರಕಾಂಡಂ ತದ್ಧನುರಾರೋಪಿತಂ ಯದಾ ।**
**ತದಾ ಜೀವಿತಸಂದೇಹಡೋಲಾರೂಢಮಭೂಜ್ಜಗತ್ ॥ ೧೧೬ ॥**

ಪ್ರಕಾಶಮಾನವಾದ ಹೆದೆಯುಳ್ಳುದೂ ವಜ್ರಮಯವಾದ ಕೋಲುಳ್ಳುದೂ ಆದ ಆ ಧನುಸ್ಸನ್ನು ಹೆದೆಯೇರಿಸಿದಾಗ ಜನರು ತಾವು ಬದುಕುವ ವಿಷಯದಲ್ಲಿ ಸಂಶಯ ವುಳ್ಳವರಾದರು.

**ಸ್ಫುರನ್ಮೌರ್ವೀರವಸ್ತಸ್ಯ ಮುಹುಃ ಪ್ರಧ್ವಾನಯನ್ ದಿಶಃ ।**
**ಪ್ರಕ್ಷೋಭಮನಯದ್ವಾರ್ಧಿಂ ಚಲ[೯]ತ್ತಿಮಿಕುಲಾಕುಲಮ್ ॥ ೧೧೭ ॥**

ಆ ಧನುಸ್ಸಿನ ಹೆದೆಯ ವ್ಯಾಪಿಸುತ್ತಿರುವ ಶಬ್ದವು ಬಾರಿಬಾರಿಗೆ ದಿಕ್ಕುಗಳಲ್ಲಿ ಶಬ್ದವನ್ನುಂಟುಮಾಡಿ ಚಲಿಸುತ್ತಿರುವ ಮೀನುಗಳ ಸಮೂಹದಿಂದ ಚಂಚಲವಾದ ಸಮುದ್ರವನ್ನು ಕ್ಷೋಭೆಗೊಳಿಸಿದ್ದಿತು. ಅಲ್ಲೋಲಕಲ್ಲೋಲವನ್ನಾಗಿ ಮಾಡಿದ್ದಿ ತೆಂದು ಭಾವವು.

೧ ಸ್ವೇದೈಃ. ೨ ಪ್ರಕ್ಷಾಲನೇನ ನಿರ್ಮಲೀಕೃತಃ. ೩ ಜ್ಞಾತಂ. ೪ ರಚಿತಂ. ೫ ಜಲಮಧ್ಯೇ. ೬ ಸಮುದ್ರಮಧ್ಯೇ. ೭ ಕ್ರುದ್ಧಃ. ೮ ಸ್ಫುರಂತೀ ಜ್ಯಾಯಸ್ಯ ತತ್. ೯ ಮತ್ಸ್ಯಸಮೂಹೇನಾಕುಲಂ.

**ಸಂಹಾರ್ಯಃ ಕಿ[೧]ಮಮುಷ್ಯಾಬ್ಧಿರುತ ವಿಶ್ವಮಿದಂ ಜಗತ್ ।**
**ಇತ್ಯಾಶಂಕ್ಯ ಕ್ಷಣಂ ತಸ್ಥೇ ತದಾ ನಭಸಿ ಖೇಚರೈಃ ॥ ೧೧೮ ॥**

ಆಗ ಆಕಾಶದಲ್ಲಿ ವಿದ್ಯಾಧರರು ''ಈ ಭರತರಾಜನಿಗೆ ಸಮುದ್ರವು ಸಂಹಾರ ಯೋಗ್ಯವಾಗಿದೆಯೋ ?ಅಥವಾ ಈ ಸಂಪೂರ್ಣಲೋಕವು ಸಂಹಾರ ಯೋಗ್ಯವಾಗಿ ದೆಯೋ ?'' ಎಂದು ಸಂಶಯಪಟ್ಟು ಆಕಾಶದಲ್ಲಿ ಒಂದು ಕ್ಷಣ ಕಾಲದವರೆಗೆ ಸುಮ್ಮನಿದ್ದರು.

**ವಕ್ರೇಽಪಿ [೨]ಗುಣವತ್ಯಸ್ಮಿನ್ನೃಜುಕರ್ಮಣಿ ಕಾರ್ಮುಕೇ ।**
**[೩]ಅಮೋಘಂ ಸಂದಧೇ ಬಾಣಂ ಶ್ಲಾಘ್ಯಂ [೪]ಸ್ಥಾನಕಮಾಸ್ಥಿತಃ ॥ ೧೧೯ ॥**

ಶ್ಲಾಘ್ಯವಾದ ಸ್ಥಾನ(ಎಡಗಾಲನ್ನು ಮುಂದಿಟ್ಟು ಬಲಗಾಲನ್ನು ಹಿಂದಿಟ್ಟು ಕುಗ್ಗಿ ಕೊಂಡು ನಿಲ್ಲುವ ತರಹ)ದಲ್ಲಿ ನಿಂತಿರುವ ಆ ಭರತರಾಜನು ವಕ್ರವಾಗಿದ್ದರೂ ಗುಣ (ಹಗ್ಗ)ವುಳ್ಳುದೂ ಋಜುವಾದ (ಸರಿಯಾದ) ಕಾರ್ಯವನ್ನು ಮಾಡುವುದೂ ಆದ ಆ ಧನುಸ್ಸಿನಲ್ಲಿ ಅಮೋಘವೆಂಬ ಅಥವಾ ಸಾರ್ಥಕವಾದ ಬಾಣವನ್ನು ಸೇರಿಸಿದನು.

**ಅಹಂ ಹಿ ಭರತೋ ನಾಮ ಚಕ್ರೀ ವೃಷಭನಂದನಃ ।**
**[೫]ಮತ್ತಾದ್ಭವಂತು [೬]ಮದ್ಭುಕ್ತಿವಾಸಿನೋ ವ್ಯಂತರಾಮರಾಃ ॥ ೧೨೦ ॥**

''ನಾನಾದರೋ ವೃಷಭಸ್ವಾಮಿಯ ಪುತ್ರನಾದ ಭರತಚಕ್ರವರ್ತಿಯು. ನನ್ನ ರಾಜ್ಯದಲ್ಲಿ ವಾಸಮಾಡುವ ವ್ಯಂತರದೇವತೆಗಳು ನನಗೆ ಅಧೀನರಾಗಬೇಕು.''

**ಇತಿ ವ್ಯಕ್ತಲಿಪಿನ್ಯಾಸೋ ದೂತಮುಖ್ಯ ಇವ ದ್ರುತಮ್ ।**
**ಸ [೭]ಪತ್ರೀ ಚಕ್ರಿಣಾ ಮುಕ್ತಃ [೮]ಪ್ರಾಙ್ಮುಖೀಮಾಸ್ಥಿತೋ ಗತಿಮ್ ॥**

ಈಪ್ರಕಾರವಾಗಿ ವ್ಯಕ್ತವಾದ ಅಕ್ಷರರಚನೆಯುಳ್ಳುದೂ ಭರತಚಕ್ರವರ್ತಿಯಿಂದ ಬಿಡಲ್ಪಟ್ಟುದೂ ಆದ ಆ ಬಾಣವು, ಮುಖ್ಯನಾದ ದೂತನಂತೆ, ಶೀಘ್ರವಾಗಿ ಪೂರ್ವಾಭಿಮುಖವಾಗಿ ಹೋಯಿತು.

**ಜಿತ[೯]ನಿರ್ಘಾತನಿರ್ಘೋಷಂ ಧ್ವನಿಂ ಕುರ್ವನ್ನಭಸ್ಥಲಾತ್ ।**
**ನ್ಯಪಪ್ತನ್ಮಾಗಧಾವಾಸೇ ತತ್ಸೈನ್ಯಂ ಕ್ಷೋಭಮಾನಯನ್ ॥ ೧೨೨ ॥**

ಸಿಡಿಲಿನ ಶಬ್ದವನ್ನು ಜಯಿಸಿ ಆಕಾಶಪ್ರದೇಶದಲ್ಲಿ ಶಬ್ದವನ್ನು ಮಾಡುತ್ತಿರುವ ಆ ಬಾಣವು ಮಾಗಧನ ಸೈನ್ಯಕ್ಕೆ ಕಳವಳವನ್ನುಂಟುಮಾಡುತ್ತ ಅವನ ವಾಸಸ್ಥಾನದಲ್ಲಿ ಬಿದ್ದಿತು.

**ಕಿಮೇಷ ಕ್ಷುಭಿತೋಽಂಭೋಧಿಃ ಕಲ್ಪಾಂತಪವನಾಹತಃ ।**
**[೧೦]ನಿರ್ಘಾತಃ ಕಿಂಸ್ವಿದುದ್ಧ್ವಾನೋ ಭೂಮಿಕಂಪೋ ನು ಜೃಂಭತೇ ॥**

''ಇದೇನು ಪ್ರಳಯಕಾಲದ ಗಾಳಿಯಿಂದ ಹೊಡೆಯಲ್ಪಟ್ಟುದೂ ಅಲ್ಲೋಲ ಕಲ್ಲೋಲವೂ ಆದ ಸಮುದ್ರವೋ ? ಸಿಡಿಲೋ ? ಅಥವಾ ಬಹಳ ಶಬ್ದವುಳ್ಳ ಭೂಕಂಪವೋ ?''

**ಇ[೧೧]ತ್ಯಾಕುಲಾಕುಲಧಿಯ[೧೨]ಸ್ತನ್ನಿಕಾಯೋಪಗಾಃ ಸುರಾಃ ।**
**ಪರಿವವ್ರುರುಪೇತ್ಯೈನಂ ಸನ್ನದ್ಧಾ ಮಾಗಧಂ ಪ್ರಭುಮ್ ॥ ೧೨೪ ॥**

ಈರೀತಿಯಾಗಿ ಅತ್ಯಂತ ಭಯಭೀತರೂ ಆ ಮಾಗಧನ ಮನೆಯ ಸಮೀಪ ದಲ್ಲಿರುವವರೂ ಆದ ವ್ಯಂತರದೇವತೆಗಳು ಯುದ್ಧಸನ್ನದ್ಧರಾಗಿ ಬಂದು ಅವನನ್ನು ಆವರಿಸಿಕೊಂಡರು.

**ದೇವ ! ದೀಪ್ರಃ ಶರಃ ಕೋಽಪಿ ಪತಿತೋಽಸ್ಮತ್ಸಭಾಂಗಣೇ ।**
**ತೇನಾಯಂ [೧೩]ಪ್ರಕೃತಃ ಕ್ಷೋಭೋ ನಕಿಂಚಿತ್ಕಾರಣಾಂತರಮ್॥ ೧೨೫ ॥**

೧ ಚಕ್ರಿಣಃ. ೨ ಜ್ಯಾವತಿ. ೩ ಅಮೋಘಂ ನಾಮ. ೪ ಪ್ರತ್ಯಾಲೀಢಾದಿಸ್ಥಾನಂ. ೫ ಮದಧೀನಾ ಭವಂತು. ೬ ಮಮ ಕ್ಷೇತ್ರವಾಸಿನ ಇತ್ಯರ್ಥಃ. ೭ ಬಾಣಃ. ೮ ಪೂರ್ವಾಭಿಮುಖೀಂ. ೯ ಅಶನಿಃ. ೧೦ ಅಶನಿಃ. ೧೧ ಅತ್ಯಾಕುಲಬುದ್ಧಯಃ. ೧೨ ತನ್ನಿಲಯಸಮೀಪಗಾಃ. ೧೩ ವಿಹಿತಃ.

"ಸ್ವಾಮಿಯೆ ! ನಮ್ಮ ಸಭಾಂಗಣದಲ್ಲಿ ಯಾವುದೋ ಒಂದು ಪ್ರಕಾಶಮಾನವಾದ ಬಾಣವು ಬಿದ್ದಿತು. ಈ ಗದ್ದಲವನ್ನು ಆ ಬಾಣವು ಮಾಡಿತು. ಬೇರೆ ಯಾವುದೂ ಕಾರಣವಲ್ಲವು.

**ಯೇನಾಯಂ ಪ್ರಹಿತಃ ಪತ್ರೀ ನಾಕಿನಾ ದಾನವೇನ ವಾ ।**
**ತಸ್ಯ ಕರ್ತುಂ ಪ್ರತೀಕಾರಮಿಮೇ ಸಜ್ಜಾ ವಯಂ ಪ್ರಭೋ ! ॥ ೧೨೬ ॥**

ಪ್ರಭುವೇ ! ಯಾವನು ಈ ಬಾಣವನ್ನು ಬಿಟ್ಟನೋ ಅವನು ಸ್ವರ್ಗದ ದೇವನಾಗಿರಲಿ ಅಥವಾ ರಾಕ್ಷಸನಾಗಿರಲಿ, ಅವನಿಗೆ ಪ್ರತೀಕಾರವನ್ನು ಮಾಡುವುದಕ್ಕೆ ನಾವು ಸಿದ್ಧರಾಗಿದ್ದೇವೆ."

**ಇ[1]ತ್ಯಾರಕ್ಷಿಭಟೈಸ್ತೂರ್ಣಮೇತ್ಯ ವಿಜ್ಞಾಪಿತಃ ಪ್ರಭುಃ ।**
**[2]ಅಲಮಾಧ್ವಂ [3]ಭಟಾಲಾಪೈರಿತ್ಯುಚ್ಚೈಃ ಪ್ರತ್ಯುವಾಚ ತಾನ್ ॥ ೧೨೭ ॥**

ಹೀಗೆ ಶೀಘ್ರವಾಗಿ ಬಂದು ಮಾಗಧನ ಅಂಗರಕ್ಷಕರಾದ ಭಟರಿಂದ ವಿಜ್ಞಾಪಿಸಲ್ಪಟ್ಟ ಮಾಗಧಾಧಿಪತಿಯು "ಭಟರ ಪರಾಕ್ರಮದ ಮಾತುಗಳು ಸಾಕು, ಸುಮ್ಮನಿರಿ" ಎಂದು ಅಂಗರಕ್ಷಕಭಟರಿಗೆ ಗಟ್ಟಿಯಾಗಿ ಪ್ರತ್ಯುತ್ತರವನ್ನು ಹೇಳಿದನು.

**ಯೂಯಂ [4]ತ ಏವ ಮದ್ಭೃತ್ಯಾಃ ಸೋಹಮೇವಾಸ್ಮಿ ಮಾಗಧಃ ।**
**ಶ್ರುತಪೂರ್ವಮಿದಂ ಕಿಂ ವಃ ಸೋಢಪೂರ್ವೋ ಮಯೇತ್ಯರಿಃ॥ ೧೨೮ ॥**

"ನೀವು ಮೊದಲಿದ್ದ ನನ್ನ ಭೃತ್ಯರೇ ಆಗಿರುತ್ತೀರಿ. ನಾನು ಮೊದಲಿದ್ದ ಮಾಗಧನೇ ಆಗಿರುತ್ತೇನೆ. ಮೊದಲು ನಾನು ನನ್ನಶತ್ರುವನ್ನು ಕ್ಷಮಿಸಿದ್ದೆನೆಂಬುದನ್ನು ನೀವು ಕೇಳಿದ್ದೀರೋ ?

**ಬಿಭರ್ತಿ ಯಃ ಪುಮಾನ್ಪ್ರಾಣಾ[5]ನ್ಪರಿಭೂತಿಮಲೀಮಸಾನ್ ।**
**ನ ಗುಣೈರ್ಲಿಂಗಮಾತ್ರೇಣ ಪುಮಾನೇಷ ಪ್ರತೀಯತೇ ॥ ೧೨೯ ॥**

ಯಾವ ಪುರುಷನು ಶತ್ರುಗಳ ತಿರಸ್ಕಾರದಿಂದ ನಿಂದ್ಯವಾದ ಪ್ರಾಣಗಳನ್ನು ಧರಿಸಿರುತ್ತಾನೋ ಅವನು ಗುಣಗಳಿಂದ ಪುರುಷನಲ್ಲವು, ಚಿಹ್ನೆಯಿಂದ ಮಾತ್ರ ಪುರುಷನು. ಶತ್ರುಗಳ ತಿರಸ್ಕಾರವನ್ನು ಸಹಿಸಿಕೊಂಡು ಜೀವಿಸಿರತಕ್ಕುದಲ್ಲವೆಂದರ್ಥವು.

**ಸ ಚಿತ್ರಪುರುಷೋ ವಾಸ್ತು [6]ಚಂಚಾ[7]ಪುರುಷ ಏವ ವಾ ।**
**ಯೋ ವಿನಾಪಿ ಗುಣೈಃ [8]ಪೌಂಸ್ನೈರ್ನಾಮ್ನೈವ ಪುರುಷಾಯತೇ॥ ೧೩೦ ॥**

ಯಾವನು ಪುರುಷಗುಣಗಳಿಲ್ಲದೆ ಹೆಸರಿಗೆ ಪುರುಷನಾಗಿರುತ್ತಾನೋ ಅವನು ಚಿತ್ರದಲ್ಲಿ ಬರೆಯಲ್ಪಟ್ಟ ಪುರುಷನೋ ಅಥವಾ ಹುಲ್ಲುಗಳಿಂದ ಮಾಡಲ್ಪಟ್ಟ ಪುರುಷನೋ ಆಗಿರಬೇಕು. ಪೌರುಷವಿರುವವನು ಪರರು ಮಾಡಿದ ತಿರಸ್ಕಾರವನ್ನು ಸಹಿಸಲಾರನೆಂದು ಭಾವವು.

**ಸ ಪುಮಾನ್ಯಃ ಪುನೀತೇ ಸ್ವಂ ಕುಲಂ ಜನ್ಮ ಚ ಪೌರುಷೈಃ ।**
**ಭಟಬ್ರುವೋ ಜನೋ ಯಸ್ತು ತಸ್ಯಾ[9]ಸ್ತ್ವಭವನಿರ್ಭುವಿ ॥ ೧೩೧ ॥**

ಯಾವನು ಪರಾಕ್ರಮಗಳಿಂದ ತನ್ನವಂಶವನ್ನೂ ಜನ್ಮವನ್ನೂ ಪವಿತ್ರಮಾಡುತ್ತಾನೋ ಅವನು ಪುರುಷನೆಂದು ತಿಳಿಯಬೇಕು; ಯಾವನು ಪರಾಕ್ರಮವಿಲ್ಲದೆ ಹೆಸರಿಗೆ ಭಟನೆಂದು ಹೇಳಿಸಿಕೊಳ್ಳವನೋ ಅಂಥವನು ಭೂಮಿಯಲ್ಲಿ ಹುಟ್ಟದಿರಲಿ.

**ವಿಜಿಗೀಷುತಯಾ [10]ದೇವಾ ವಯಂ [11]ನೇಚ್ಛಾವಿಹಾರತಃ ।**
**ತತೋರಿವಿಜಯಾದೇವ ಸಂಪದಸ್ತು ಸದಾಪಿ ನಃ ॥ ೧೩೨ ॥**

ಜಯಿಸಬೇಕೆಂಬ ಇಚ್ಛೆಯಿರುವುದರಿಂದ ನಾವು ದೇವತೆಗಳೆಂದು ಹೇಳಿಸಿಕೊಳ್ಳುವವರಾಗಿದ್ದೇವೆ, ಯಥೇಚ್ಛವಾದ ವಿಹಾರದಿಂದಲ್ಲ. ಆದುದರಿಂದ ಶತ್ರುವಿಜಯದಿಂದಲೇ ನಮ್ಮಸಂಪತ್ತು ಯಾವಾಗಲೂ ಇರಲಿ. ಶತ್ರುವನ್ನು ಜಯಿಸದೆ ಅನುಭವಿಸುವ ಸಂಪತ್ತು ನಿರರ್ಥಕವೆಂದು ಭಾವವು.

**ವಸ್ತುವಾಹನರಾಜ್ಯಾಂಗೈರಾರಾಧಯತಿ ಯಃ ಪರಮ್ ।**
**[1]ಪರಭೋಗೀಣಮೈಶ್ವರ್ಯಂ ತಸ್ಯ ಮನ್ಯೇ ವಿಡಂಬನಮ್ ॥ ೧೩೩ ॥**

ರತ್ನ ಮೊದಲಾದ ವಸ್ತುಗಳಿಂದಲೂ ಆನೆ ಕುದುರೆ ಮೊದಲಾದ ವಾಹನಗಳಿಂದಲೂ ಸೈನ್ಯ ಮೊದಲಾದ ರಾಜ್ಯಾಂಗಗಳಿಂದಲೂ ಯಾವನು ಶತ್ರುವನ್ನು ಭಜಿಸುತ್ತಾನೋ ಅವನ ನಕಲಿಯಾದ ಸಂಪತ್ತು ಅನ್ಯರಿಗೆ ಹಿತಕರವಾದುದೆಂದು ತಿಳಿಯುತ್ತೇನೆ.

**ಶರಶಾಲೀ ಪ್ರಭುಃ ಕೋಪಿ [2]ಮತ್ತೋಯಂ ಧನಮೀಪ್ಸತಿ ।**
**[3]ಧನಾಯತೋಸ್ಯ ದಾಸ್ಯಾಮಿ [4]ನಿಧನಂ [5]ಪ್ರಧನೈಃ ಸಮಮ್ ॥ ೧೩೪ ॥**

ಬಾಣದಿಂದ ಶೋಭಿಸುವ ಯಾವನೋ ಈ ರಾಜನು ನನ್ನಿಂದ ಧನ(ದ್ರವ್ಯ)ವನ್ನು ಪಡೆಯಲಿಚ್ಛಿಸುತ್ತಾನೆ. ನನ್ನಿಂದ ಧನವನ್ನಿಚ್ಛಿಸುವ ಈ ರಾಜನಿಗೆ ಪ್ರಧನ(ಯುದ್ಧ)ಗಳೊಡನೆ ನಿಧನ(ಮರಣ)ವನ್ನು ಕೊಡುವೆನು. ಯುದ್ಧದಲ್ಲಿ ಮರಣವನ್ನೈದಿಸಲ್ಪಡುವನೆಂದು ಭಾವವು.

**ವಿಚೂರ್ಣ್ಯೈನಂ ಶರಂ ತಾವತ್ಕೋಪಾಗ್ನೇಃ ಪ್ರಥಮೇಂಧನಮ್ ।**
**ಕರವಾಣೀದಮೇವಾಸ್ತು [6]ತನುಶಲ್ಕೈ [7]ರುಪೇಂಧನಮ್ ॥ ೧೩೫ ॥**

ಈ ಬಾಣವನ್ನು ಚೂರ್ಣಮಾಡಿ ನನ್ನ ಕ್ರೋಧವೆಂಬ ಬೆಂಕಿಗೆ ಮೊದಲನೆಯ ಕಟ್ಟಿಗೆಯನ್ನಾಗಿ ಮಾಡುವೆನು; ಈ ಬಾಣವೇ ಸಣ್ಣಚೂರುಗಳಿಂದ ಅಥವಾ ಶತ್ರುವಿನ ಶರೀರದ ಚೂರುಗಳಿಂದ ಬೆಂಕಿಯನ್ನುರಿಸುವ ಸಣ್ಣಕಟ್ಟಿಗೆಯಾಗಲಿ."

**[8]ಸಾಕ್ಷೇಪಮಿತಿ [9]ಸಂರಂಭಾದುದೀರ್ಯ ಗಿರಮೂರ್ಜಿತಾಮ್ ।**
**ವ್ಯರಂಸೀದ್ದಶನಜ್ಯೋತ್ಸ್ನಾಂ ಸಂಹರನ್ಮಾಗಧಾಮರಃ ॥ ೧೩೬ ॥**

ಈ ಪ್ರಕಾರವಾಗಿ ಮಾಗಧದೇವನು ಕೋಪದಿಂದ ಗಟ್ಟಿಯಾಗಿ ಮಾತಿನಿಂದ ತಿರಸ್ಕರಿಸಿ ಹಲ್ಲುಗಳ ಕಾಂತಿಯನ್ನು ಮುಚ್ಚಿ ವಿರಾಮವನ್ನು ಹೊಂದಿದನು. ಬಾಯಿಮುಚ್ಚಿ ಸುಮ್ಮನಾದನೆಂದು ಭಾವವು.

**ತತಸ್ತಮೂಚುರಭ್ಯರ್ಣಾಃ ಸುರಾ ದೃಷ್ಟಪರಂಪರಾಃ ।**
**ಪ್ರಭುಂ ಶಮಯಿತುಂ ಕ್ರೋಧಾದ್ವಿದ್ಯಾವೃದ್ಧ್ಯೈ[10]ರ್ವಿಭೋಃ ಸ್ಥಿತಿಃ ॥**

ತರುವಾಯ ಸಮೀಪದಲ್ಲಿರುವವರೂ ಕುಲಪರಂಪರೆಯನ್ನು ನೋಡಿದವರೂ ಆದ ದೇವತೆಗಳು ಮಾಗಧಾಮರನನ್ನು ಕೋಪದಿಂದ ಶಾಂತಪಡಿಸುವುದಕ್ಕೋಸ್ಕರ ಮಾತನಾಡಿದರು. ಇದು ನ್ಯಾಯವಾಗಿದೆ:- ಜ್ಞಾನವೃದ್ಧರಿಂದಲ್ಲವೇ ಪ್ರಭುವಿನ ಸ್ಥಿತಿಯು ? ಜ್ಞಾನವೃದ್ಧರಿಂದ ಪ್ರಭುವಿನ ಸ್ಥಿತಿಯು ಸ್ಥಿರವಾಗುವುದೆಂದರ್ಥವು.

**ಯಥಾರ್ಥಂ ವರ[11]ಮರ್ಥ್ಯಂ ಚ ಮಿತಂ ಚ ಬಹುವಿಸ್ತರಮ್ ।**
**ಅನಾಕುಲಂ ಚ ಗಂಭೀರಂ ನಾ[12]ಧಿಯಾಮೀದೃಶಂ ವಚಃ ॥ ೧೩೮ ॥**

"ಪ್ರಭುವೇ ! ನಿಜವೂ ಶ್ರೇಷ್ಠವೂ ಇಚ್ಛಿಸುವುದಕ್ಕೆ ಯೋಗ್ಯವೂ ಸ್ವಲ್ಪಶಬ್ದವುಳ್ಳುದೂ ಬಹಳ ಅರ್ಥವಿಸ್ತಾರವುಳ್ಳುದೂ ಮನಸ್ಸಿಗೆ ಕ್ಲೇಶವನ್ನುಂಟುಮಾಡದಿರುವುದೂ ಗಂಭೀರಾರ್ಥವುಳ್ಳುದೂ ಆದ ಇಂತಹ ಮಾತು ಬುದ್ಧಿಹೀನರಾದ ನಮಗಿಲ್ಲವು. ಶ್ರೇಷ್ಠವಾದ ಮಾತನ್ನಾಡುವುದಕ್ಕಸಮರ್ಥರೆಂದು ಭಾವವು.

೧ ಅಂಗರಕ್ಷಕಭಟೈಃ. ೨ ತೂಷ್ಣೀಂ ತಿಷ್ಠತ. ೩ ಭಟಪರಾಕ್ರಮಾಲಾಪೈಃ. ೪ ಪೂರ್ವಸ್ಮಿನ್ನಿದ್ಯಮಾನಾ ಏವ. ೫ ಪರಿಭವಃ. ೬ ತೃಣಪುರುಷಃ. ೭ ಕರಿಕಲಭನ್ಯಾಯೇ, ನ ಪುನಃ ಪುರುಷಶಬ್ದಪ್ರಯೋಗಃ. ೮ ಪುರುಷಸಂಬಂಧಿಭಿಃ. ೯ ಅನುತ್ಪತ್ತಿಃ. ಅನಿಪ್ರತ್ಯಯಾಂತಶಬ್ದಃ. ೧೦ ದೀವ್ಯಂತಿ ವಿಜಿಗೀಷಂತೀತಿ ದೇವಾಃ. ೧೧ ನ ಸ್ವೈರವಿಹಾರತಃ.

೧ ಪರಭೋಗೇಭ್ಯೋಹಿತಂ. ೨ ಮತ್ಸಕಾಶಾತ್. ೩ ಧನಮಾತ್ಮನ ಇಚ್ಛತಃ. ೪ ವಿನಾಶಂ. ೫ ಯುದ್ಧೈಃ. ೬ ಅಲ್ಪಶಕಲೈಃ, ಶರೀರಶಕಲೈರ್ವಾ. ೭ ಸಂಧುಕ್ಷಣಂ. ೮ ಸತಿರಸ್ಕಾರಂ. ೯ ಕೋಪಾತ್. ೧೦ ಪ್ರಭೋರಿತ್ಯಪಿ ಪಾಠಃ. ೧೧ ಅಭಿಲಷಣೀಯಂ. ೧೨ ಬುದ್ಧಿಹೀನಾನಾಂ.

**ಸತ್ಯಂ ಪರಿಭವಃ ಸೋಢುಮಶಕ್ಯೋ ಮಾನಶಾಲಿನಾಮ್ ।**
**ಬಲವದ್ಭಿರ್ವಿರೋಧಸ್ತು ಸ್ವಪರಾಭವಕಾರಣಮ್ ॥ ೧೩೯ ॥**

ಮಾನಿಷ್ಠರಿಗೆ ಬೇರೆಯವರು ಮಾಡುವ ತಿರಸ್ಕಾರವು ಸಹಿಸಲಶಕ್ಯವಾದುದು, ನಿಜ; ಆದರೆ ಬಲಿಷ್ಠರೊಡನೆ ವಿರೋಧವು ತನ್ನ ತಿರಸ್ಕಾರಕ್ಕೇ ಕಾರಣವಾಗುತ್ತದೆ.

**ಸತ್ಯಮೇವ ಯಶೋ ರಕ್ಷ್ಯಂ ಪ್ರಾಣೈರಪಿ ಧನೈರಪಿ ।**
**ತತ್ತು ಪ್ರಭುಮನಾಶ್ರಿತ್ಯ ಕಥಂ ಲಭ್ಯೇತ ಧೀಧನೈಃ ॥ ೧೪೦ ॥**

ಪ್ರಾಣಗಳಿಂದಲೂ ದ್ರವ್ಯಗಳಿಂದಲೂ ಯಶಸ್ಸನ್ನು ಕಾಪಾಡಿಕೊಳ್ಳಬೇಕಾದುದು ನಿಜ. ಆದರೆ ಆ ಯಶಸ್ಸನ್ನು ಬುದ್ಧಿವಂತರು ಪ್ರಭುವನ್ನಾಶ್ರಯಿಸದೆ ಹೇಗೆ ಪಡೆಯುವರು ?

**ಅಲಬ್ಧಲಾಭೋ ಲಬ್ಧಾರ್ಥಪರಿರಕ್ಷಣಮಿತ್ಯಪಿ ।**
**ದ್ವಯಮೇತತ್ಸುಖಾಲ್ಲಭ್ಯಂ ಜಿಗೀಷೋರ್ನಾಶ್ರಯಾದ್ವಿನಾ ॥ ೧೪೧ ॥**

ಹೊಂದಲ್ಪಡದಿರುವ ಪದಾರ್ಥದ ಪ್ರಾಪ್ತಿಯೂ ಪಡೆಯಲ್ಪಟ್ಟ ಪದಾರ್ಥದ ರಕ್ಷಣೆಯೂ ಈ ಎರಡೂ ಜಯಿಸಲಿಚ್ಛೆಯುಳ್ಳ ರಾಜನಿಂದ ಹೊರತು ಸುಲಭದಿಂದ ಹೊಂದುವುದಕ್ಕೆ ಯೋಗ್ಯವಲ್ಲವು.

**ಬಲಿನಾಮಪಿ ಸಂತ್ಯೇವ [೧]ಬಲೀಯಾಂಸೋ ಮನಸ್ವಿನಃ ।**
**ಬಲವಾನಹಮಸ್ಮೀತಿ [೨]ನೋತ್ಸೇಕ್ತವ್ಯಮತಃ ಪ್ರಭೋ ! ॥ ೧೪೨ ॥**

ಸ್ವಾಮಿಯೇ ! ಬಲಿಷ್ಠರಲ್ಲಿಯೂ ಅತ್ಯಂತ ಬಲಿಷ್ಠರೂ ಬುದ್ಧಿಶಾಲಿಗಳೂ ಇದ್ದೇ ಇರುತ್ತಾರೆ; ಈ ಕಾರಣದಿಂದ ''ನಾನು ಬಲಿಷ್ಠನಾಗಿದ್ದೇನೆ'' ಎಂದು ಅಹಂಕಾರ ಪಡುವುದು ಸರಿಯಲ್ಲ.

**ನ ಕಿಂಚಿದಪ್ಯನಾಲೋಚ್ಯ ವಿಧೇಯಂ [೩]ಸಿದ್ಧಿಕಾಮ್ಯತಾ ।**
**ತತಃ ಶರಃ ಕುತಸ್ತ್ಯೋಯಂ [೪]ಕಿಮಿಯೋ ವೇತಿ ಮೃಗ್ಯತಾಮ್ ॥**

ಕಾರ್ಯಸಿದ್ಧಿಯನ್ನಿಚ್ಛಿಸುವ ಮನುಷ್ಯನು ಆಲೋಚಿಸದೆ ಯಾವ ಕಾರ್ಯವನ್ನೂ ಮಾಡಬಾರದು. ಆದುದರಿಂದ ಈ ಬಾಣವು ಎಲ್ಲಿಯದು ? ಯಾರ ಸಂಬಂಧವಾದುದು ? ಎಂದು ವಿಚಾರಮಾಡಲ್ಪಡಲಿ.

**ಶ್ರುತಂ ಚ ಬಹುಶೋಸ್ಮಾಭಿ[೫]ರಾಪ್ತೀಯಂ ಪುಷ್ಕಲಂ ವಚಃ ।**
**ಜಿನಾಶ್ಚಕ್ರಧರೈಸ್ಸಾರ್ಧಂ [೬]ವತ್ಸ್ಯಂತೀಹೇತಿ [೭]ಭಾರತೇ ॥ ೧೪೪ ॥**

ಈ ಭರತಕ್ಷೇತ್ರದಲ್ಲಿ ಚಕ್ರವರ್ತಿಗಳೊಡನೆ ತೀರ್ಥಂಕರರು ಹುಟ್ಟುವರೆಂದು ನಾವು ಅನೇಕಾವರ್ತಿ ಆಪ್ತರಿಂದ ಕೇಳಿದ್ದೇವೆ.

**ನೂನಂ ಚಕ್ರಿಣ ಏವಾಯಂ [೮]ಜಯಾಶಂಸೀ ಶರಾಗಮಃ ।**
**ಧೂತಾಂಧತಮಸೋದ್ಯೋತಃ ಸಂಭಾವ್ಯೋನ್ಯತ್ರ ಕಿಂ [೯]ರವೇಃ ॥ ೧೪೫ ॥**

ಜಯವನ್ನು ಸೂಚಿಸುವ ಈ ಬಾಣದ ಬರುವಿಕೆಯು ನಿಶ್ಚಯವಾಗಿಯೂ ಚಕ್ರವರ್ತಿಯ ಸಂಬಂಧವಾದುದೇ. ಸೂರ್ಯನನ್ನು ಬಿಟ್ಟು ಕಗ್ಗತ್ತಲೆಯನ್ನು ಹೋಗಲಾಡಿಸುವ ಪ್ರಕಾಶವು ಬೇರೆಕಡೆಯಲ್ಲಿ ಊಹಿಸಲ್ಪಡುವುದೇ ? ಚಕ್ರವರ್ತಿಯ ಬಾಣಕ್ಕಲ್ಲದೆ ಬೇರೆಯವರ ಬಾಣಕ್ಕೆ ಅಷ್ಟು ತೇಜಸ್ಸು ಬರಲಾರದೆಂದರ್ಥವು.

**ಅಥವಾ ಖಲು ಸಂಶಯ್ಯ ಚಕ್ರಪಾಣೇರಯಂ ಶರಃ ।**
**ವ್ಯನಕ್ತಿ ವ್ಯಕ್ತಮೇವೈನಂ [೧೦]ತನ್ನಾಮಾಕ್ಷರಮಾಲಿಕಾ ॥ ೧೪೬ ॥**

೧ ಅತ್ಯಂತಬಲಿನಃ. ೨ ಗರ್ವೋ ನ ಕರ್ತವ್ಯಃ. ೩ ಸಿದ್ಧಿಮಿಚ್ಛತಾ. ೪ ಕಸ್ಯ ಸಂಬಂಧಿ. ೫ ಆಪ್ತಸಂಬಂಧಿ. ೬ ಭವಿಷ್ಯಂತಿ. ೭ ಭರತಕ್ಷೇತ್ರೇ. ೮ ಜಯಶಂಸೀತ್ಯಪಿ ಪಾಠಃ. ೯ ರವಿಂ ವರ್ಜಯಿತ್ವಾ. ೧೦ ಚಕ್ರಿನಾಮಾಕ್ಷರಮಾಲಿಕಾ.

ಅಥವಾ ಸಂಶಯಪಡಬೇಕಾದುದೇ ಇಲ್ಲ. ಈ ಬಾಣವು ಚಕ್ರವರ್ತಿಯದೇ ಆಗಿದೆ. ಚಕ್ರವರ್ತಿಯ ಹೆಸರಿನ ಅಕ್ಷರಗಳ ಮಾಲೆಯೇ ಸ್ಫುಟವಾಗಿ ಚಕ್ರವರ್ತಿಯನ್ನು ವ್ಯಕ್ತಪಡಿಸುತ್ತದೆ.

**ತದೇನಂ ಶರಮಭ್ಯರ್ಚ್ಯ ಗಂಧಮಾಲ್ಯಾಕ್ಷತಾದಿಭಿಃ ।**
**ಪೂಜ್ಯಾದ್ಯೈವ ವಿಭೋರಾಜ್ಞಾ ಗತ್ವಾಸ್ಮಾಭಿಃ ಶರಾರ್ಪಣಾತ್ ॥ ೧೪೭ ॥**

ಆದುದರಿಂದ ಈ ಬಾಣವನ್ನು ಗಂಧಪುಷ್ಪಮಾಲಿಕೆ ಅಕ್ಷತೆ ಮೊದಲಾದುವುಗಳಿಂದ ಪೂಜಿಸಿ ಈಗಲೇ ನಾವು ಹೋಗಿ ಬಾಣವನ್ನು ಪ್ರಭುವಿಗೆ ಸಮರ್ಪಿಸಿ ಅವನ ಆಜ್ಞೆಯನ್ನು ಮನ್ನಿಸಬೇಕು.

**ಮಾಗಾ ಮಾಗಧ [೧]ವೈಚಿತ್ಯಂ ಕಾರ್ಯಮೇತದ್ವಿನಿಶ್ಚಿನು ।**
**ನ ಯುಕ್ತಂ [೨]ತತ್ಪ್ರತೀಪತ್ವಂ ತವ ತದ್ದೇಶ[೩]ವರ್ತಿನಃ ॥ ೧೪೮ ॥**

ಮಾಗಧನೆ ! ಮನೋವಿಕಾರವನ್ನು ಹೊಂದಬೇಡ. ನಾವು ಹೇಳಿದ ಕಾರ್ಯವು ಮಾಡತಕ್ಕುದೆಂದು ನಿಶ್ಚಯವಾಗಿ ತಿಳಿ. ಆ ಚಕ್ರವರ್ತಿಯ ದೇಶದಲ್ಲಿರುವ ನೀನು ಅವನಿಗೆ ಪ್ರತಿಕೂಲನಾಗಿರುವುದು ಯೋಗ್ಯವಲ್ಲವು.

**ತದಲಂ ದೇವ ಸಂರಭ್ಯ [೪]ತತ್ಪ್ರಾತೀಪ್ಯಂ ನ ಶಾಂತಯೆ ।**
**ಮಹತಃ [೫]ಸರಿದೋಘಸ್ಯ ಕಃ ಪ್ರತೀಪಂ ತರನ್ಸುಖೀ ॥ ೧೪೯ ॥**

ಆದುದರಿಂದ ಪ್ರಭುವೆ ! ಮನಸ್ಸಿನ ವೇಗ(ಆವೇಶ)ವು ಸಾಕು. ಚಕ್ರವರ್ತಿಗೆ ಪ್ರತಿಕೂಲನಾಗುವುದು ಸುಖಕರವಾದುದಲ್ಲವು. ದೊಡ್ಡದಾದ ನದಿಯ ಪ್ರವಾಹಕ್ಕಿದಿರಾಗಿ ದಾಟುವವನು ಯಾರು ಸುಖವನ್ನು ಹೊಂದುತ್ತಾನೆ ?

**ಬಲವಾ[೬]ನನುವರ್ತ್ಯಶ್ಚೇ [೭]ದನುನೇಯೋದ್ಯ ಚಕ್ರಭೃತ್ ।**
**ಮಹತ್ಸು [೮]ವೈತಸೀಂ ವೃತ್ತಿಮಾಮನಂತ್ಯವಿಪತ್ಕರೀಮ್ ॥ ೧೫೦ ॥**

ಬಲಶಾಲಿಯನ್ನು ಅನುಸರಿಸಬೇಕೆಂದು ಹೇಳುವ ಪಕ್ಷದಲ್ಲಿ ಈಗ ಚಕ್ರವರ್ತಿಯನ್ನು ಸತ್ಕರಿಸಬೇಕು. ಜ್ಞಾನಿಗಳು ದೊಡ್ಡವರಲ್ಲಿ ಹಬ್ಬೆಯಗಿಡದ ವ್ಯಾಪಾರ(ಅನುಕೂಲವ್ಯಾಪಾರ)ವು ಸುಖಕರವಾದುದೆಂದು ಹೇಳುತ್ತಾರೆ. ನದಿಯಲ್ಲಿ ಹಬ್ಬೇಗಿಡವು ಪ್ರವಾಹಕ್ಕನುಸಾರವಾಗಿ ಬಗ್ಗುವಂತೆ, ದೊಡ್ಡವರಲ್ಲಿ ನಮ್ರವಾಗಿರುವುದು ಸುಖಕರವಾದುದೆಂದು ಭಾವವು.

**ಇಹಾಮುತ್ರ ಚ ಜಂತೂನಾಮುನ್ನತ್ಯೈ ಪೂಜ್ಯಪೂಜನಮ್ ।**
**ತಾಪಂ [೯]ತತ್ರಾನುಬಧ್ನಾತಿ ಪೂಜ್ಯಪೂಜಾವ್ಯತಿಕ್ರಮಃ ॥ ೧೫೧ ॥**

ಪೂಜ್ಯರನ್ನು ಪೂಜಿಸುವುದು ಪ್ರಾಣಿಗಳಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉನ್ನತಿಗೆ ಕಾರಣವು. ಪೂಜ್ಯರನ್ನು ಪೂಜಿಸದಿರುವುದು ಪ್ರಾಣಿಗಳಿಗೆ ದುಃಖವನ್ನುಂಟುಮಾಡುತ್ತದೆ.''

**ಇತಿ ತದ್ವಚನಾತ್ಕಿಂಚಿತ್ಪ್ರಬುದ್ಧ ಇವ ತತ್ಕ್ಷಣಮ್ ।**
**ಆಜ್ಞಾತಮೇವಮೇತತ್ಸ್ಯಾದಿತ್ಯಸೌ [೧೦]ಪ್ರತ್ಯಪದ್ಯತ ॥ ೧೫೨ ॥**

ಹೀಗೆ ಆ ಜ್ಞಾನವೃದ್ಧರ ಮಾತಿನಿಂದ ಮಾಗಧನು ಆ ಕ್ಷಣದಲ್ಲಿಯೇ ಸ್ವಲ್ಪ ಜಾಗರೂಕನಾದವನಂತೆ ''ತಮ್ಮಿಂದ ಆಜ್ಞಾಪಿಸಲ್ಪಟ್ಟ ಈ ವಿಷಯವು ಹೀಗೇ ಇರಬಹುದು'' ಎಂದು ಸಮ್ಮತಿಸಿದನು.

**ಸಸಂಭ್ರಮ[೧೧]ಮಿವಾಸ್ಯಾಭೂಚ್ಚಿತ್ತಂ ಕಿಂಚಿತ್ಸಸಾಧ್ವಸಮ್ ।**
**ಸಾಶಂಕಮಿವ ಸೋದ್ವೇಗಂ ಪ್ರಬುದ್ಧಮಿವ ಚ ಕ್ಷಣಮ್ ॥ ೧೫೩ ॥**

೧ ಚಿತ್ತವಿಕಾರಂ. ೨ ಚಕ್ರಿಣಃ ಪ್ರತಿಕೂಲತ್ವಂ. ೩ ವಾಸಿನ ಇತ್ಯಪಿ ಪಾಠಃ. ೪ ಚಕ್ರಿಣಃ ಪ್ರತಿಕೂಲತ್ವಂ. ೫ ನದೀಪ್ರವಾಹಸ್ಯ. ೬ ಅನುಕರಣೀಯಶ್ಚೇತ್. ೭ ಸತ್ಕಾರ್ಯಃ. ೮ ವೇತಸ್ಸಂಬಂಧಿನೀಂ, ಅನುಕೂಲತಾಮಿತ್ಯರ್ಥಃ. ೯ ಜಂತುಷು. ೧೦ ಅನುಮೇನೆ. ೧೧ ಅವಧಾರಣೆ.

ಆಗ ಮಾಗಧನ ಮನಸ್ಸು ಸ್ವಲ್ಪ ಆತುರಪಟ್ಟಂತೆಯೂ ಭಯಪಟ್ಟಂತೆಯೂ ಸಂಶಯಗೊಂಡಂತೆಯೂ ಖೇದವುಳ್ಳಂತೆಯೂ ಒಂದು ಕ್ಷಣಕಾಲದಲ್ಲಿ ಎಚ್ಚರಗೊಂಡಂತೆಯೂ ಆಯಿತು.

**ತತಃ [೧]ಪ್ರಸೇದುಷೀ ತಸ್ಯ [೨]ನಚಿರಾದೇವ [೩]ಶೇಮುಷೀ ।**
**ಪೂರ್ವಾಪರಂ ವ್ಯಲೋಕಿಷ್ಟ ಕೋಪಾಪಾಯಾ[೪]ತ್ಪಶೇಮುಷೀ ॥ ೧೫೪ ॥**

ತರುವಾಯ ಸ್ವಲ್ಪಕಾಲದಲ್ಲಿಯೇ ಪ್ರಸನ್ನವೂ ಕೋಪವಿಲ್ಲದುದರಿಂದ ಉಪಶಮವುಳ್ಳುದೂ ಆದ ಆ ಮಾಗಧದೇವನ ಬುದ್ಧಿಯು ಪೂರ್ವಾಪರವಿಷಯವನ್ನು ವಿಚಾರಮಾಡಿತು.

**ಸೋಯಂ ಚಕ್ರಭೃತಾಮಾದ್ಯೋ ಭರತೋಲಂಘ್ಯಶಾಸನಃ ।**
**[೫]ಪ್ರತೀಕ್ಷ್ಯಃ ಸರ್ವಥಾಸ್ಮಾಭಿ[೬]ರನುನೇಯಶ್ಚ ಸಾದರಮ್ ॥ ೧೫೫ ॥**

''ಚಕ್ರವರ್ತಿಗಳಲ್ಲಿ ಮೊದಲನೆಯವನೂ ಮೀರಲಶಕ್ಯವಾದ ಆಜ್ಞೆಯುಳ್ಳವನೂ ಆದ ಭರತನು ಸರ್ವಪ್ರಕಾರದಲ್ಲಿಯೂ ನಮ್ಮಿಂದ ಪೂಜಾಯೋಗ್ಯನೂ ಆದರಪೂರ್ವಕವಾಗಿ ಸತ್ಕರಿಸಲು ಯೋಗ್ಯನೂ ಆಗಿದ್ದಾನೆ.

**ಚಕ್ರಿತ್ವಂ ಚರಮಾಂಗತ್ವಂ ಪುತ್ರತ್ವಂ ಚ ಜಗದ್ಗುರೋಃ ।**
**ಇತ್ಯಸ್ಯ ಪೂಜ್ಯಮೇಕೈಕಂ ಕಿಂಪುನಸ್ತ[೭]ತ್ಸಮುಚ್ಚಿತಮ್ ॥ ೧೫೬ ॥**

ಚಕ್ರವರ್ತಿಯಾಗಿರುವವನೂ ಅಂತ್ಯಶರೀರ(ಮೋಕ್ಷವನ್ನು ಹೊಂದಿಸಲರ್ಹವಾದ ಶರೀರ)ವುಳ್ಳವನೂ ಜಗದ್ಗುರುವಾದ ಆದೀಶ್ವರಸ್ವಾಮಿಯ ಪುತ್ರನಾಗಿರುವವನೂ ಆದ ಈ ಭರತನ ಒಂದೊಂದು ಗುಣವೂ ಪೂಜ್ಯವಾಗಿದೆ. ಹೀಗಿರುವಾಗ ಆ ಗುಣಗಳ ಸಮುದಾಯವು ಪೂಜ್ಯವಾಗಿದೆಯೆಂದು ಹೇಳಬೇಕೇನು ?''

**ಇತಿ ನಿಶ್ಚಿತ್ಯ [೮]ಸಂಭ್ರಾಂತೈರನುಯಾತಃ ಸುರೋತ್ತಮೈಃ ।**
**ಸಹಸಾ ಚಕ್ರಿಣಂ ದ್ರಷ್ಟುಮುಚ್ಚಚಾಲ ಸ ಮಾಗಧಃ ॥ ೧೫೭ ॥**

ಈ ಪ್ರಕಾರವಾಗಿ ನಿಶ್ಚಯಿಸಿ ಮಾಗಧದೇವನು ಆತುರವುಳ್ಳವರೂ ಮುಖ್ಯರೂ ಆದ ದೇವತೆಗಳಿಂದ ಹಿಂಬಾಲಿಸಲ್ಪಟ್ಟವನಾಗಿ ಚಕ್ರವರ್ತಿಯನ್ನು ನೋಡುವುದಕ್ಕೋಸ್ಕರ ಶೀಘ್ರವಾಗಿ ಹೋದನು.

**ಖಮುನ್ಮಣಿತಿರೀಟಾಂಶುರಚಿತೇಂದ್ರಶರಾಸನಮ್ ।**
**ಕ್ಷಣೇನೋಲ್ಲಂಘ್ಯ ಸಂಪ್ರಾಪ[೯]ತ್ತಂ ದೇಶಂ ಯತ್ರ ಚಕ್ರಭೃತ್ ॥ ೧೫೮ ॥**

ಉತ್ತಮವಾದ ರತ್ನಗಳುಳ್ಳ ಕಿರೀಟದ ಕಿರಣಗಳಿಂದ ಆಕಾಶದಲ್ಲಿ ಇಂದ್ರಧನುಸ್ಸಿನಂತೆ ಮಾಡಿ ಒಂದು ಕ್ಷಣಕಾಲದಲ್ಲಿ ಅದನ್ನು ದಾಟಿ ಚಕ್ರವರ್ತಿಯಿರುವ ಪ್ರದೇಶವನ್ನು ಸೇರಿದನು.

**[೧೦]ಪುರೋಧಾಯ ಶರಂ ರತ್ನಪಟಲೇ ಸುನಿವೇಶಿತಮ್ ।**
**ಮಾಗಧಃ ಪ್ರಭು[೧೧]ಮಾನಂಸೀದಾರ್ಯ ಸ್ವೀಕುರು ಮಾಮಿತಿ ॥ ೧೫೯ ॥**

ಮಾಗಧಾಮರನು ರತ್ನದ ಕರಡಿಗೆಯಲ್ಲಿ ಆ ಬಾಣವನ್ನು ಚೆನ್ನಾಗಿರಿಸಿ ಅದನ್ನು ಮುಂದೆ ಮಾಡಿಕೊಂಡು ''ಆರ್ಯನೆ! ನನ್ನನ್ನು ಸ್ವೀಕರಿಸು'' ಎಂದು ಹೇಳಿ ಭರತರಾಜನಿಗೆ ನಮಸ್ಕರಿಸಿದನು.

**ಚಕ್ರೋತ್ಪತ್ತಿಕ್ಷಣೇ ಭದ್ರ ! ಯ[೧೨]ನ್ನಾಯಾಮೋನಭಿಜ್ಞಕಾಃ ।**
**ಮಹಾಂತಮಪರಾಧಂ ನಸ್ತ್ವಂ ಕ್ಷಮಸ್ವಾ[೧೩]ರ್ಥಿತೋ ಮುಹುಃ ॥**

''ಮಂಗಲಸ್ವರೂಪನೆ! ತಿಳುವಳಿಕೆಯಿಲ್ಲದ ನಾವು ಚಕ್ರೋತ್ಪತ್ತಿಯ ಕಾಲದಲ್ಲಿ ಬಾರದಿದ್ದ ನಮ್ಮ ದೊಡ್ಡ ತಪ್ಪನ್ನು ಬಾರಿಬಾರಿಗೆ ನಮ್ಮಿಂದ ಪ್ರಾರ್ಥಿಸಲ್ಪಟ್ಟ ನೀನು ಕ್ಷಮಿಸು.

೧ ಪ್ರಸನ್ನವತೀ. ೨ ಅಲ್ಪಕಾಲೇನೈವ. ೩ ಬುದ್ಧಿಃ. ೪ ಉಪಶಮವತೀ. ೫ ಪೂಜ್ಯಃ ಪ್ರತೀಕ್ಷ್ಯ ಇತ್ಯಮರಃ. ೬ ಸತ್ಕಾರ್ಯಃ. ೭ ಸಮುದಾಯಃ. ೮ ಸಂಭ್ರಮವದ್ಭಿಃ. ೯ ತದ್ದೇಶಮಿತ್ಯಪಿ ಪಾಠಃ ೧೦ ಅಗ್ರೇಕೃತ್ವಾ. ೧೧ ನಮಸ್ಕರೋತಿ ಸ್ಮ. ೧೨ ನಾಗತಾಃ. ೧೩ ಪ್ರಾರ್ಥಿತಃ.

**ಯುಷ್ಮತ್ಪಾದರಜಃಸ್ಪರ್ಶಾದ್ವಾರ್ಧಿರೇವ ನ ಕೇವಲಮ್ ।**
**ಪೂತಾ ವಯಮಪಿ ಶ್ರೀಮಂಸ್ತ್ವತ್ಪದಾಂಬುಜಸೇವಯಾ ॥ ೧೬೧ ॥**

ಐಶ್ವರ್ಯಶಾಲಿಯಾದ ಪ್ರಭುವೆ! ನಿಮ್ಮ ಪಾದಧೂಳಿಯ ಸ್ಪರ್ಶದಿಂದ ಸಮುದ್ರವೇ ಪವಿತ್ರವಾದುದಲ್ಲವು; ನಾವುಕೂಡ ನಿಮ್ಮ ಪಾದಕಮಲದ ಸೇವೆಯಿಂದ ಪವಿತ್ರರಾದೆವು.

**ರತ್ನಾನ್ಯಮೂ[೧]ನ್ಯನರ್ಘಾಣಿ ಸ್ವರ್ಗೇಪ್ಯಸುಲಭಾನಿ ಚ ।**
**ಅಧೋ ನಿಧೀನಾ[೨]ಮಾಧಾತುಂ ಸೋಪಯೋಗಾನಿ ಸಂತು ತೇ ॥**

ಅಮೂಲ್ಯವೂ ಸ್ವರ್ಗದಲ್ಲಿಯೂ ದುರ್ಲಭವೂ ಆದ ಈ ರತ್ನಗಳು ನಿನ್ನ ನವನಿಧಿಗಳ ಕೆಳಗಿನ ಭಾಗದಲ್ಲಿರಿಸುವುದಕ್ಕೆ ನಿನಗೆ ಉಪಯೋಗವುಳ್ಳವುಗಳಾಗಲಿ. ನಿಧಿಗಳನ್ನಿರಿಸುವುದಕ್ಕೆ ಕೆಳಗಿನ ಭಾಗದಲ್ಲಿರಿಸುವ ಕಲ್ಲುಗಳಾಗಲಿಯೆಂದರ್ಥವು.

**ಹಾರೋಯಮತಿರೋಚಿಷ್ಣು [೩]ರವಾರಾಹೈರಶುಕ್ತಿಜೈಃ ।**
**ಅವೇಣುದ್ವಿಪಸಂಭೂತೈರ್ದುರ್ಲಭೋ ಮುಕ್ತಾಫಲೈ[೪]ರ್ದ್ಯುಜೈಃ ॥ ೧೬೩ ॥**

**ತವ ವಕ್ಷಸ್ಥಲಾ[೫]ಶ್ಲೇಷಾದು[೬]ಪೇಯಾ [೭]ದುಪಹಾರತಾಮ್ ।**
**ಸ್ಫುರತೀ ಕುಂಡಲೇ [೮]ಚೇಮೇ ಕರ್ಣಾಸಂಗಾತ್ಪವಿತ್ರತಾಮ್ ॥ ೧೬೪ ॥**

ಹಂದಿಗಳಿಂದುತ್ಪನ್ನವಾಗದಿರುವುವೂ ಮುತ್ತಿನ ಚಿಪ್ಪುಗಳಿಂದುಂಟಾಗದಿರುವುವೂ ಬಿದುರುಗಳಿಂದಲೂ ಆನೆಗಳಿಂದಲೂ ಉತ್ಪನ್ನವಾಗದಿರುವುವೂ ಸ್ವರ್ಗದಲ್ಲುಂಟಾಗಿರುವುವೂ ಆದ ಮುತ್ತುಗಳಿಂದ ಪೋಣಿಸಲ್ಪಟ್ಟುದೂ ಬಹಳ ಕಾಂತಿಯುಳ್ಳುದೂ ಆದ ಈ ಹಾರವು ನಿನ್ನ ಎದೆಯ ಸಂಬಂಧದಿಂದ ಪೂಜ್ಯತೆಯನ್ನು ಹೊಂದಲಿ. ಪ್ರಕಾಶಮಾನವಾದ ಈ ಎರಡು ಕರ್ಣಕುಂಡಲಗಳೂ ನಿನ್ನ ಕಿವಿಗಳ ಸಂಸರ್ಗದಿಂದ ಪವಿತ್ರತೆಯನ್ನು ಹೊಂದಲಿ.''

**ಇತ್ಯಸ್ಮೈ ಕುಂಡಲೇ ದಿವ್ಯೇ ಹಾರಂ ಚ ವಿತತಾರ ಸಃ ।**
**ತ್ರೈಲೋಕ್ಯಸಾರಸಂದೋಹಮಿ[೯]ವೈಕಧ್ಯಮುಪಾಗತಮ್ ॥ ೧೬೫ ॥**

ಈ ಪ್ರಕಾರವಾಗಿ ಮಾಗಧದೇವನು ಮೂರುಲೋಕದಲ್ಲಿರುವ ಸಾರವಾದ ಪದಾರ್ಥಗಳ ಸಮೂಹವು ಒಂದೇವಿಧವನ್ನು ಹೊಂದಿದೆಯೋ ಎಂಬಂತಿರುವ ಹಾರವನ್ನೂ ದಿವ್ಯವಾದ ಕರ್ಣಕುಂಡಲಗಳನ್ನೂ ಭರತರಾಜನಿಗೆ ಕೊಟ್ಟನು.

**ರತ್ನೈಶ್ಚಾಭ್ಯರ್ಚ್ಯ [೧೦]ರತ್ನೇಶಂ ಮಾಗಧಃ ಪ್ರೀತಮಾನಸಃ ।**
**[೧೧]ಪ್ರಭೋರವಾಪ್ತಸತ್ಕಾರಸ್ತನ್ಮತಾತ್ಸ್ವಮಯಾತ್ಪದಮ್ ॥ ೧೬೬ ॥**

ರತ್ನಗಳಿಗೆ ಸ್ವಾಮಿಯಾದ ಭರತಚಕ್ರವರ್ತಿಯನ್ನು ರತ್ನಗಳಿಂದಲೂ ಪೂಜಿಸಿ ಸಂತುಷ್ಟವಾದ ಮನಸ್ಸುಳ್ಳ ಮಾಗಧನು ಪ್ರಭುವಿನಿಂದ ಸತ್ಕಾರವನ್ನು ಹೊಂದಿ ಅವನ ಅಪ್ಪಣೆಯನ್ನು ಪಡೆದು ತನ್ನ ಸ್ಥಾನಕ್ಕೆ ಹೊರಟುಹೋದನು.

**ಅಥ ತತ್ರಸ್ಥ ಏವಾಬ್ಧಿಂ ಸಾಂತರ್ದ್ವೀಪಂ ವಿಲೋಕಯನ್ ।**
**ಪ್ರಭು[೧೨]ರ್ವಿಸಿಸ್ಮಯೇ ಕಿಂಚಿದ್ಬಹ್ವಾಶ್ಚರ್ಯೋ ಹಿ ವಾರಿಧಿಃ ॥ ೧೬೭ ॥**

ತರುವಾಯ ಆ ಸ್ಥಳದಲ್ಲಿ ನಿಂತು ಭರತರಾಜನು ಅಂತರ್ದ್ವೀಪಸಹಿತವಾದ ಸಮುದ್ರವನ್ನು ನೋಡಿ ಸ್ವಲ್ಪ ಆಶ್ಚರ್ಯಪಟ್ಟನು. ಸಮುದ್ರವು ಬಹಳ ಆಶ್ಚರ್ಯಕರವಾದ ವಸ್ತುಗಳುಳ್ಳುದಲ್ಲವೇ ?

**ತತಃ ಕುತೂಹಲಾದ್ವಾರ್ಧಿಂ ಪಶ್ಯಂತಂ [೧೩]ಧೂರ್ಗತಃ ಪತಿಮ್ ।**
**ತಮಿತ್ಯುವಾಚ ದಂತಾಂಶುಸುಮನೋಮಂಜರೀಃ ಕಿರನ್ ॥ ೧೬೮ ॥**

೧ ಅಮೂಲ್ಯಾನಿ. ೨ ನಿಧೀನ್ನಯತ್ನೇನ ಸ್ಥಾಪಯಿತುಮಧಃ ಶಿಲಾಃ ಕರ್ತುಂ ಸಪ್ರಯೋಜನಾನಿ ಭವಂತ್ವಿತಿ ಭಾವಃ. ೩ ಅಸೂಕರಜೈಃ. ೪ ದಿವ್ಯೈಃ. ೫ ಸಂಗಾತ್. ೬ ಉಪಗಚ್ಛತು. ೭ ಪೂಜ್ಯತಾಂ. ೮ ಚಾಮೂ ಇತ್ಯಪಿ ಪಾಠಃ. ೯ ಏಕಪ್ರಕಾರಂ. ೧೦ ಭರತಂ. ೧೧ ಭರತಾತ್. ೧೨ ವಿಸ್ಮಿತವಾನ್ ೧೩ ಸಾರಥಿಃ.

ತರುವಾಯ ಕುತೂಹಲದಿಂದ ಸಮುದ್ರವನ್ನು ನೋಡುತ್ತಿರುವ ಭರತಪ್ರಭುವನ್ನು ಕುರಿತು ಸಾರಥಿಯು ತನ್ನ ಹಲ್ಲುಗಳ ಕಿರಣಗಳೆಂಬ ಪುಷ್ಪಗಳ ಗೊಂಚಲುಗಳನ್ನು ಎರಚುವವನಾಗಿ (ಹಸನ್ಮುಖಿಯಾಗಿ) ಮುಂದೆ ಹೇಳುವ ಪ್ರಕಾರವಾಗಿ ಹೇಳಿದನು.

**ಅಯಂ ಜಲಧಿರುಚ್ಚಲತ್ತರಲವೀಚಿಬಾಹೂದ್ಧೃತ-**
**ಸ್ಫುರನ್ಮಣಿಗಣಾರ್ಚನೋ ಧ್ವನದಸಂಖ್ಯಶಂಖಾಕುಲಃ ।**
**ತವಾ[೧]ರ್ಘಮಿವ ಸಂವಿಧಿತ್ಸುರನುವೇಲಮುಚ್ಚೈ[೨]ರ್ನದನ್**
**ಮರುದ್ಧುತಜಲಾನಕೋ ದಿಶತು ಶಶ್ವ[೩]ದಾನಂದಧುಮ್ ॥ ೧೬೯ ॥**

"ಪ್ರಭುವೆ ! ಮೇಲಕ್ಕೆ ಹಾರುತ್ತಿರುವುವೂ ಚಂಚಲವೂ ಆದ ಅಲೆಗಳೆಂಬ ಭುಜಗಳಿಂದ ಮೇಲಕ್ಕೆತ್ತಲ್ಪಟ್ಟುವೂ ಪ್ರಕಾಶಮಾನವೂ ಆದ ರತ್ನಗಳ ಸಮೂಹದಿಂದ ಪೂಜೆಯುಳ್ಳುದೂ ಧ್ವನಿಮಾಡುತ್ತಿರುವ ಅಸಂಖ್ಯಾತ ಶಂಖಗಳಿಂದ ವ್ಯಾಪ್ತವೂ ನಿನಗೆ ಅರ್ಘ್ಯ(ಪೂಜಾವಿಧಿ)ವನ್ನು ಕೊಡುವುದಕ್ಕೆ ಇಚ್ಛೆಸುತ್ತಿದೆಯೋ ಎಂಬಂತಿರುವುದೂ ದಡದಲ್ಲಿ ಗಟ್ಟಿಯಾಗಿ ಶಬ್ದವನ್ನು ಮಾಡುವುದೂ ಗಾಳಿಯಿಂದ ಕಂಪಿಸಲ್ಪಟ್ಟ ನೀರೆಂಬ ಭೇರಿಯುಳ್ಳುದೂ ಆದ ಈ ಸಮುದ್ರವು ಬಾರಿಬಾರಿಗೂ ನಿನಗೆ ಸಂತೋಷವನ್ನು ಕೊಡಲಿ.

**[೪]ಅಮುಷ್ಯ ಜಲಮುತ್ಪತ[೫]ದ್ಗಗನಮೇತದಾಲಕ್ಷ್ಯತೇ**
**ಶಶಾಂಕಕರಕೋಮಲಚ್ಛವಿಭಿರಾತತಂ ಶೀಕರೈಃ ।**
**ಪ್ರಹಾಸಮಿವ ದಿಗ್ವಧೂಪರಿಚಯಾಯ [೬]ವಿಶ್ವಂ ದಧತ್**
**[೭]ಶಿತಾಂಸದಿವ ಚಾತ್ಮನಃ ಪ್ರತಿದಿಶಂ ಯಶೋ ಭಾಗಶಃ ॥ ೧೭೦ ॥**

ಚಂದ್ರನ ಕಿರಣಗಳಂತೆ ಕೋಮಲವಾದ ಕಾಂತಿಯುಳ್ಳ ಜಲಬಿಂದುಗಳಿಂದ ವ್ಯಾಪ್ತವೂ ದಿಕ್ಕನ್ಯೆಯರ ಪರಿಚಯಕ್ಕೋಸ್ಕರ ಸಂಪೂರ್ಣವಾದ ನಗೆಯನ್ನು ಹೊಂದಿರುವಂತಿರುವುದೂ ತನ್ನ ಯಶಸ್ಸನ್ನು ಪ್ರತಿದಿಕ್ಕಿನಲ್ಲಿಯೂ ಭಾಗವಾಗಿ ಹರಡಬೇಕೆಂಬ ಇಚ್ಛೆಯುಳ್ಳಂತಿರುವುದೂ ಆದ ಈ ಸಮುದ್ರದ ನೀರು ಮೇಲಕ್ಕೆ ಹಾರುತ್ತಿರುವುದು ಕಾಣುತ್ತಿದೆ.

**ಕ್ವಚಿತ್ಸ್ಫುಟಿತಶುಕ್ತಿಮೌಕ್ತಿಕತತಂ ಸತಾರಂ ನಭೋ**
**ಜಯ[೮]ತ್ಕಲಿಮಲೀಮಸಂ ಮಕರಮೀನರಾಶಿಶ್ರಿತಮ್ ।**
**ಕ್ವಚಿತ್ಸಲಿಲಮಸ್ಯ [೯]ಭೋಗಿಕುಲಸಂಕುಲಂ ಸೂನ್ನತಂ**
**[೧೦]ನರೇಂದ್ರಕುಲಮುತ್ತಮಸ್ಥಿತಿಜಿಗೀಷತೀವೋದ್ಭಟಮ್ ॥ ೧೭೧ ॥**

ಕೆಲವುಕಡೆಯಲ್ಲಿ ಒಡೆದುಹೋಗಿರುವ ಮುತ್ತಿನ ಚಿಪ್ಪುಗಳ ಮುತ್ತುಗಳಿಂದ ವ್ಯಾಪ್ತವಾದ ಈ ಸಮುದ್ರದ ನೀರು ನಕ್ಷತ್ರಸಹಿತವಾದ ಆಕಾಶವನ್ನು ಜಯಿಸುತ್ತದೆ; ಕೆಲವುಕಡೆಯಲ್ಲಿ ಮಕರಮೀನರಾಶಿಗಳನ್ನು ಹೊಂದಿದುದಾಗಿ ಕರ್ಕಾಟಕರಾಶಿಯನ್ನು ಜಯಿಸುತ್ತದೆ (ಇದು ವಿರೋಧಾರ್ಥವು), ಮೊಸಳೆ ಮೀನುಗಳ ರಾಶಿಯನ್ನು ಹೊಂದಿದುದಾಗಿ ಭ್ರಮರಗಳಂತೆ ಕಪ್ಪಾಗಿದೆ (ಇದು ಪರಿಹಾರಾರ್ಥವು); ಕೆಲವುಕಡೆಯಲ್ಲಿ ಭೋಗವನ್ನನುಭವಿಸುವ ಜನರ ಮತ್ತು ಸರ್ಪಗಳ ಸಮೂಹದಿಂದ ವ್ಯಾಪ್ತವೂ ಅಧಿಕವೂ ಉತ್ತಮವಾದ ಸ್ಥಿತಿಯುಳ್ಳುದೂ ಒಳ್ಳೆಯ ಭಟರುಳ್ಳುದೂ ಭಯಂಕರವೂ ಆದ ರಾಜರುಗಳ ಸಮೂಹವನ್ನು ಮತ್ತು ಸರ್ಪಗಳನ್ನು ಹಿಡಿಯುವ ಜನರ ಸಮೂಹವನ್ನು ಜಯಿಸುವುದಕ್ಕಿಚ್ಛೆಯುಳ್ಳುದಾಗಿದೆಯೋ ಎಂಬಂತಿದೆ.

**ಇತೋ ವಿಶತಿ ಗಾಂಗಮಂಬು ಶರದಂಬುದಾಚ್ಛಚ್ಛವಿ-**
**ಸ್ರುತಂ ಹಿಮವತೋಮುತಶ್ಚ ಸುರಸಂ ಪಯಃ [೧೧]ಸೈಂಧವಮ್ ।**
**ತಥಾಪಿ ನ ಜಲಾಗಮೇನ ಧೃತಿರಸ್ಯ ಪೋಪೂರ್ಯತೇ**
**ಧ್ರುವಂ ನ ಜಲಸಂಗ್ರಹೈರಿಹ [೧೨]ಜಲಾಶಯೋ [೧೩]ಧ್ರಾಯತಿ ॥ ೧೭೨ ॥**

ಹಿಮವತ್ಪರ್ವತದಿಂದ ಪ್ರವಹಿಸಿದುದೂ ಶರತ್ಕಾಲದ ಮೇಘದಂತೆ ನಿರ್ಮಲವಾದ ಕಾಂತಿಯುಳ್ಳುದೂ ಗಂಗಾನದಿಯ ಸಂಬಂಧಿಯೂ ಆದ ಜಲವು ಈ ಕಡೆಯಲ್ಲಿ ಸಮುದ್ರವನ್ನು ಪ್ರವೇಶಿಸುತ್ತದೆ; ಸಿಂಧುನದಿಯ ಸಂಬಂಧಿಯೂ ರುಚಿಕರವೂ ಆದ ಜಲವು ಈಕಡೆಯಲ್ಲಿ ಸಮುದ್ರವನ್ನು ಸೇರುತ್ತದೆ; ಹಾಗಿದ್ದರೂ ನೀರಿನ ಬರುವಿಕೆಯಿಂದ ಈ ಸಮುದ್ರದ ಸಂತೋಷವು ಸಂಪೂರ್ಣವಾಗಿ ಪೂರ್ತಿಯಾಗುವುದೇ ಇಲ್ಲ. ಲೋಕದಲ್ಲಿ ಜಲಗಳಿಗೆ ಆಧಾರವಾದುದು ಜಲಗಳ ಸಂಗ್ರಹಗಳಿಂದ ನಿಜವಾಗಿಯೂ ತೃಪ್ತಿಯನ್ನು ಹೊಂದುವುದಿಲ್ಲ. ಜಡಬುದ್ಧಿಯುಳ್ಳವನು ಮೂರ್ಖರ ಸಮಾಗಮಗಳಿಂದ ನಿಜವಾಗಿಯೂ ತೃಪ್ತಿಯನ್ನು ಹೊಂದುವುದಿಲ್ಲವೆಂದೂ ಈ ವಾಕ್ಯಕ್ಕೆ ಅರ್ಥವಾಗುವುದು.

**[೧]ವ್ಯಾಪ್ಯೋದರಂ ಚಲಕುಲಾಚಲಸನ್ನಿಕಾಶಾಃ**
**ಪುತ್ರಾ ಇವಾಸ್ಯ [೨]ತಿಮಯಃ [೩]ಪಯಸಾ ಪ್ರಪುಷ್ಟಾಃ ।**
**ಕಲ್ಲೋಲಕಾಶ್ಚ ಪರಿಮಾರಹಿತಾಃ ಸಮಂತಾ-**
**ದನ್ಯೋನ್ಯಘಟ್ಟನಪರಾಃ ಸಮು[೪]ಮಾವಸಂತಿ ॥ ೧೭೩ ॥**

ಚಂಚಲವಾದ ಕುಲಪರ್ವತಗಳಿಗೆ ಸಮಾನವೂ ಹಾಲಿನಿಂದ ಪೋಷಿಸಲ್ಪಟ್ಟ ಈ ಸಮುದ್ರದ ಮಕ್ಕಳೋ ಎಂಬಂತೆ ಜಲದಿಂದ ಪೋಷಿಸಲ್ಪಟ್ಟುವೂ ಆದ ತಿಮಿಗಳೆಂಬ ಮತ್ಸ್ಯಗಳೂ ಅಳತೆಮಾಡಲಾಗದ ಪರಿಮಾಣವುಳ್ಳ ಅಲೆಗಳೂ ಎಲ್ಲಾ ಕಡೆಯಲ್ಲಿಯೂ ಪರಸ್ಪರವಾಗಿ ಡಿಕ್ಕಿಹೊಡೆಯುವಿಕೆಯಲ್ಲಿ ಆಸಕ್ತಗಳಾಗಿ ಸಮುದ್ರದ ಮಧ್ಯದಲ್ಲಿ ಜೊತೆಯಲ್ಲಿ ವಾಸಮಾಡುತ್ತವೆ.

**ಆಪೋ ಧನಂ [೫]ಧೃತರಸಾಃ ಸರಿತೋಸ್ಯ ದಾರಾಃ**
**[೬]ಪುತ್ರಾಯಿತಾ ಜಲಚರಾಃ ಸಿಕತಾಶ್ಚ ರತ್ನಮ್ ।**
**ಇತ್ಥಂ [೭]ವಿಭೂತಿಲವದುರ್ಲಲಿತೋ ವಿಚಿತ್ರಂ**
**ಧತ್ತೇ ಮಹೋದಧಿರಿತಿ ಪ್ರಥಿಮಾನಮೇಷಃ ॥ ೧೭೪ ॥**

ಜಲವು ಈ ಸಮುದ್ರದ ದ್ರವ್ಯವಾಗಿದೆ; ನೀರನ್ನು ಧರಿಸಿರುವ ನದಿಗಳು ಪತ್ನಿಗಳಾಗಿವೆ; ಜಲಚರಪ್ರಾಣಿಗಳು ಮಕ್ಕಳಾಗಿವೆ; ಮರಳುಗಳು ರತ್ನಗಳಾಗಿವೆ; ಈ ಪ್ರಕಾರವಾಗಿ ಸ್ವಲ್ಪ ಸಂಪತ್ತಿನ ದುರಹಂಕಾರವುಳ್ಳ ಈ ಸಮುದ್ರವು "ಮಹೋದಧಿ" ಎಂಬ ಪ್ರಸಿದ್ಧಿಯನ್ನು ಧರಿಸುತ್ತದೆ. ಇದು ಮಹದಾಶ್ಚರ್ಯ ! ಸ್ವಲ್ಪ ಸಂಪತ್ತುಳ್ಳವನು ಮಹಾಸಂಪತ್ತುಳ್ಳವನೆಂದು ಪ್ರಸಿದ್ಧಿಯನ್ನು ಹೊಂದುವುದು ಆಶ್ಚರ್ಯಕರವಾದುದೆಂದು ಭಾವವು.

**ನಿಃಶ್ವಾಸಧೂಮಮಲಿನಾಃ ಫಣಮಂಡ[೮]ಲಾಂತಃ**
**ಸುವ್ಯಕ್ತರತ್ನರುಚಯಃ ಪರಿತೋ ಭ್ರಮಂತಃ ।**
**[೯]ವ್ಯಾಯಚ್ಛಮಾನತನವೋ [೧೦]ರುಷಿತ್ಯೈರಕಸ್ಮಾ**
**[೧೧]ದತ್ರೋ[೧೨]ಲ್ಮುಕಶ್ರಿಯಮಮೀ ದಧತೇ ಫಣೀಂದ್ರಾಃ ॥ ೧೭೫ ॥**

ಉಚ್ಛ್ವಾಸದ ಹೊಗೆಯಿಂದ ಮಲಿನವೂ ವರ್ತುಲಾಕಾರವಾದ ಹೆಡೆಯ ಮಧ್ಯದಲ್ಲಿ ಅತ್ಯಂತಸ್ಫುಟವಾದ ರತ್ನಗಳ ಕಾಂತಿಗಳುಳ್ಳುವೂ ಸುತ್ತಲೂ ಸಂಚರಿಸುತ್ತಿರುವುವೂ ಉದ್ದವಾಗುತ್ತಿರುವ ಶರೀರವುಳ್ಳುವೂ ಆದ ಈ ದೊಡ್ಡದಾದ ಸರ್ಪಗಳು ರೋಷಗಳಿಂದ ಸಮುದ್ರದಲ್ಲಿ ಆಕಸ್ಮಾತ್ತಾಗಿ ಕೊಳ್ಳಿಯ ಶೋಭೆಯನ್ನು ಧರಿಸುತ್ತವೆ. ಕೊಳ್ಳಿಗಳು ತಿರುಗುವಂತೆ ದೊಡ್ಡದಾದ ಸರ್ಪಗಳ ರೋಷದಿಂದ ಅವುಗಳ ಹೆಡೆಗಳು ತಿರುಗುತ್ತಿದ್ದುವೆಂದು ಭಾವವು.

**[೧೩]ಪಾದ್ಯೈರಯಂ ಜಲನಿಧಿಃ [೧೪]ಶಿಶಿರೈರವೀಂದೋ-**
**ರಾಸ್ಪೃಶ್ಯಮಾನಸಲಿಲಃ ಸಹಸಾ ಖಮುದ್ಯನ್ ।**
**ರೋಷಾದಿವೋಚ್ಚಲತಿ ಮುಕ್ತಗಭೀರಭಾಷೋ**
**[೧೫]ವೇಲಾಛಲೇನ ನ ಮಹಾನ್ಸಹತೇ[೧೬]ಭಿಭೂತಿಮ್ ॥ ೧೭೬ ॥**

೧ ಪೂಜಾವಿಧಿಂ. ೨ ಧ್ವನಿಂ ಕುರ್ವನ್. ೩ ಆನಂದಂ. ೪ ಜಲಧೇಃ. ೫ ಗಮನಮಿತ್ಯಪಿ ಪಾಠಃ. ೬ ವಿಷ್ವಗಿತ್ಯಪಿ ಪಾಠಃ. ೭ ವಿಸ್ತಾರಿತುಮಿಚ್ಛತ್. ೮ ಭ್ರಮರವನ್ಮಲೀಮಸಂ, ಕರ್ಕಾಟಕರಾಶಿಂ. ೯ ಸರ್ಪಸಮೂಹಃ, ಭೋಗಿಜನಸಮೂಹಃ, ಉಭಯತ್ರ ಸರ್ಪಸಮೂಹೇನ ವಾ. ೧೦ ಭೂಪಸಮೂಹಂ, ಸರ್ಪಗ್ರಾಹಿಜನಸಮೂಹಂ ಚ. ೧೧ ಸಿಂಧುನದೀಸಂಬಂಧಿ. ೧೨ ಜಲಾಧಾರಃ, ಜಡಬುದ್ಧಿಶ್ಚ. ೧೩ ಧೃತ್ಯತೃಪ್ತೌ.

೧ ಸಮುದ್ರಸ್ಯೋದರಂ. ೨ ಮತ್ಸ್ಯವಿಶೇಷಾಃ. ೩ ಕ್ಷೀರೇಣ ಚ. ೪ ಆವಿಶಂತೀತ್ಯಪಿ ಪಾಠಃ. ೫ ಧೃತಜಲಾಃ. ೬ ಪುತ್ರಾ ಇವಾಚರಿತಾಃ. ೭ ವಿಭೂತಿಲೇಶದುರ್ಗರ್ವಃ. ೮ ಮಧ್ಯೇ. ೯ ದೀರ್ಘೀಭವಚ್ಛರೀರಾಃ. ೧೦ ರೋಷೈಃ. ೧೧ ಜಲಧೌ. ೧೨ ಅಲಾತಶೋಭಾಂ. ೧೩ ಕಿರಣೈಃ, ಚರಣೈರಿತಿ ಧ್ವನಿಃ. ೧೪ ಶೀತೈಃ. ೧೫ ಅಬ್ಧ್ಯಂಬುವಿಕೃತೌ ವೇಲಾ. ೧೬ ಪರಾಭವಂ.

ಚಂದ್ರನ ಶೀತಲವಾದ ಪಾದ(ಕಿರಣ)ಗಳಿಂದ ಸ್ಪರ್ಶಿಸಲ್ಪಟ್ಟ ನೀರುಳ್ಳ ಈ ಸಮುದ್ರವು ಉಕ್ಕಿ ಜಲವಿಕಾರದ ನೆಪದಿಂದ ಗಂಭೀರಧ್ವನಿಯನ್ನು ಬಿಟ್ಟು ಗಟ್ಟಿಯಾಗಿ ಶಬ್ದಮಾಡಿ ಕೋಪದಿಂದಲೋ ಎಂಬಂತೆ ಶೀಘ್ರವಾಗಿ ಆಕಾಶಕ್ಕೆ ಹಾರುತ್ತದೆ. ಕೋಪದಿಂದ ಚಂದ್ರನ ಕಡೆಗೆ ಹಾರುತ್ತದೆಂದರ್ಥವು. ದೊಡ್ಡಮನುಷ್ಯನು ಬೇರೆಯವರು ಮಾಡಿದ ತಿರಸ್ಕಾರವನ್ನು ಸಹಿಸುವುದಿಲ್ಲ. ಈ ಪದ್ಯದಲ್ಲಿ ಪಾದ ಶಬ್ದಕ್ಕೆ ಕಿರಣಗಳೆಂದೂ ಕಾಲುಗಳೆಂದೂ ಅರ್ಥವಾಗುವುದು. ಕಾಲುಗಳಿಂದ ಒದೆಯಲ್ಪಟ್ಟ ದೊಡ್ಡಮನುಷ್ಯನು ಸಹಿಸದಿರುವಂತೆ ಚಂದ್ರನ ಕಿರಣಗಳಿಂದ ಸ್ಪರ್ಶಿಸಲ್ಪಟ್ಟ ಸಮುದ್ರವು ಉಕ್ಕಿತೆಂದಭಿಪ್ರಾಯವು.

**ನಾಕೌಕಸಾಂ [೧]ಧೃತರಸಂ ಸಹಕಾಮಿನೀಭಿ-**
**[೨]ರಾಕ್ರೀಡನಾನಿ ಸಮನೋಹರಕಾನನಾನಿ ।**
**ದ್ವೀಪಸ್ಥಲಾನಿ ರುಚಿರಾಣಿ ಸಹಸ್ರಶೋಽಸ್ಮಿನ್**
**ಸಂ[೩]ತ್ಕಂತರೀಪಮಿವ ದುರ್ಗನಿವೇಶನಾನಿ ॥ ೧೭೭ ॥**

ಈ ಸಮುದ್ರದಲ್ಲಿ ಸ್ವರ್ಗದ ದೇವತೆಗಳು ತಮ್ಮ ಪತ್ನಿಯರೊಡನೆ ಸಂತೋಷವಾಗಿ ಎಲ್ಲಾ ಕಡೆಯಲ್ಲಿಯೂ ಕ್ರೀಡಿಸುವುದಕ್ಕೆ ಅನುಕೂಲವೂ ಮನೋಹರವೂ ಆದ ಅರಣ್ಯಗಳಿವೆ; ಮನೋಹರವಾದ ಅನೇಕ ದ್ವೀಪಗಳಿವೆ. ಸಮುದ್ರಮಧ್ಯದಲ್ಲಿರುವ ದ್ವೀಪದಂತೆ ಪ್ರವೇಶಮಾಡುವುದಕ್ಕೆ ಕಠಿನವಾದ ಸ್ಥಾನಗಳಿವೆ.

**ಅಯು[೪]ಮನಿಭೃತವೇಲೋ ರುದ್ಧ[೫]ರೋಧೋಂತರಾಲೈ-**
**ರನಿಲಬಲವಿಲೋಲೈರ್ಭೂರಿಕಲ್ಲೋಲಜಾಲೈಃ ।**
**ತಟವನಮಭಿಹಂತಿ [೬]ವ್ಯಕ್ತ[೭]ಮಸ್ಮೈ ಪ್ರರುಷ್ಯನ್**
**ಮಮ ಕಿಲ ಬಹಿರಸ್ಮಸ್ನಾಸ್ತಿ [೮]ವೃತ್ತಿ[೯]ರ್ಮುಧೇತಿ ॥ ೧೭೮ ॥**

ಚಂಚಲವಾದ ಅಲೆಗಳುಳ್ಳ ಈ ಸಮುದ್ರವು "ಈ ದಡದಲ್ಲಿರುವ ವನದಿಂದ ಹೊರಕ್ಕೆ ನನ್ನ ವ್ಯಾಪಿಸುವಿಕೆಯಿಲ್ಲವಂತೆ" ಎಂದು ವ್ಯರ್ಥವಾಗಿ ದಡದಲ್ಲಿರುವ ವನದ ಮೇಲೆ ಕೋಪಗೊಂಡು ಗಾಳಿಯೆಂಬ ಸೈನ್ಯದಿಂದ ಚಂಚಲವೂ ಆಕಾಶ ಮಂಡಲವನ್ನು ತಡೆದಿರುವುವೂ ಅಧಿಕವೂ ಆದ ಅಲೆಗಳ ಸಮೂಹದಿಂದ ಸ್ಫುಟವಾಗಿ ದಡದಲ್ಲಿರುವ ವನವನ್ನು ಹೊಡೆಯುತ್ತದೆ.

**[೧೦]ಅವಿಗಣಿತಮಹತ್ವಾ [೧೧]ಯೂಯಮಸ್ಮಾ[೧೨]ನ್ಸ್ವಪಾದೈ-**
**[೧೩]ರಭಿಹಥ ಕಿಮಲಂಘ್ಯಂ ವೋ ವೃಥಾ [೧೪]ತೌಂಗ್ಯಮೇತತ್ ।**
**ವಯಮಿವ ಕಿಮಲಂಘ್ಯಾಃ ಕಿಂ ಗಭೀರಾ ಇತೀತ್ಥಂ**
**[೧೫]ಪರಿವದತಿ [೧೬]ವಿರಾವೈ[೧೭]ರ್ನೂನಮಬ್ಧಿಃ ಕುಲಾದ್ರೀನ್ ॥ ೧೭೯ ॥**

"ಅಪ್ರಸಿದ್ಧವಾದ ದೊಡ್ಡಸ್ತಿಕೆಯುಳ್ಳ ನೀವು ನಿಮ್ಮ ಪಾದ(ಕೊನೆ)ಗಳಿಂದ ನಮ್ಮನ್ನು ಏತಕ್ಕೆ ಹೊಡೆಯುತ್ತೀರಿ ? ಮೀರಲಶಕ್ಯವಾದ ನಿಮ್ಮ ಈ ಔನ್ನತ್ಯವು ವ್ಯರ್ಥವಾದುದು. ನಮ್ಮಂತೆ ನೀವು ದಾಟಲಶಕ್ಯರೋ ? ನಮ್ಮಂತೆ ಗಂಭೀರರೋ ?" ಎಂದು ಸಮುದ್ರವು ಪಕ್ಷಿಗಳ ಶಬ್ದಗಳಿಂದ ಕುಲಪರ್ವತಗಳನ್ನು ನಿಂದಿಸುವಂತಿದೆ.

**ಅತ್ರಾಯಂ ಭುಜಗಶಿಶುರ್ಬಿಲಾಭಿಶಂಕೀ**
**[೧೮]ವ್ಯಾತ್ತಾಸ್ಯಂ ತಿಮಿಮಭಿಧಾವತಿ ಪ್ರಹೃಷ್ಟಃ ।**
**ತಂ ಸೋಽಪಿ ಸ್ವಗಲಬಿಲಾ[೧೯]ವಲಗ್ನಲಗ್ನಂ**
**ಸ್ವಾಂತ್ರಾಸ್ಥಾ[೨೦]ವಿಹಿತದಯೋ ನ [೨೧]ಜೇಗಿಲೀತಿ ॥ ೧೮೦ ॥**

ಈ ಸಮುದ್ರದಲ್ಲಿ ಈ ಸರ್ಪದ ಮರಿಯು ಬಾಯನ್ನು ತೆರೆದಿರುವ ಮತ್ಸ್ಯವನ್ನು ನೋಡಿ ಬಿಲವೆಂದು ಸಂದೇಹಪಟ್ಟು ಸಂತೋಷದಿಂದ ಇದಿರಾಗಿ ಓಡುತ್ತಿದೆ. ಆ ಮೀನೂ ತನ್ನ ಗಂಟಲಿನ ಮಧ್ಯದಲ್ಲಿ ಸಿಕ್ಕಿಕೊಂಡಿರುವ ಆ ಸರ್ಪದ ಮರಿಯನ್ನು ತನ್ನ ಕರುಳೆಂಬ ನಂಬುಗೆಯಿಂದ ಕೃಪೆಯನ್ನು ಮಾಡಿ ಚೆನ್ನಾಗಿ ನುಂಗುವುದಿಲ್ಲ.

**ಏಷ [೧]ಮಹಾಮಣಿರಶ್ಮಿವಿಕೀರ್ಣಂ ತೋಯ[೨]ಮಮುಷ್ಯ ಧೃತಾಮಿಷಶಂಕಃ ।**
**ಮೀನಗಣೋಽನುಸರನ್ಸಹಸಾಸ್ಮಾದ್ವಹ್ನಿಭಿಯಾ ಪುನರಪ್ಯಪಯಾತಿ ॥**

ಪದ್ಮರಾಗರತ್ನಗಳ ಕಾಂತಿಗಳಿಂದ ವ್ಯಾಪ್ತವಾದ ಈ ಸಮುದ್ರದ ನೀರನ್ನು ಮಾಂಸವೆಂದು ಸಂಶಯಗೊಂಡಿರುವ ಈ ಮೀನುಗಳ ಸಮೂಹವು ನೀರನ್ನು ಹಿಂಬಾಲಿಸಿ ಹೋಗಿ ಬೆಂಕಿಯೆಂಬ ಭಯದಿಂದ ಶೀಘ್ರವಾಗಿ ತೊಲಗುತ್ತದೆ.

**ಲೋಲತರಂಗವಿಲೋಲಿತದೃಷ್ಟಿರ್ವೃದ್ಧತರೋ[೩]ಸುಮತಿಃ [೪]ಸುಮತಂನಃ ।**
**ಹೀ ರಥಮೇಷ ತಿಮಿಂಗಿಲಶಂಕೀ ಪಶ್ಯತಿ ಪಶ್ಯ [೫]ತಿಮಿಃ [೬]ಸ್ತಿಮಿತಾಕ್ಷಃ ॥**

ಚಂಚಲವಾದ ಅಲೆಗಳಿಂದ ಚಂಚಲವಾಗಿ ಮಾಡಲ್ಪಟ್ಟ ನೋಟವುಳ್ಳುದೂ ಬಹಳ ಮುದಿಯೂ ಬುದ್ಧಿಯಿಲ್ಲದುದೂ ಆದ ಈ ತಿಮಿಯೆಂಬ ಮೀನು ನಮ್ಮ ರಥವನ್ನು ತಿಮಿಂಗಿಲಮತ್ಸ್ಯವೆಂದು ಸಂಶಯಪಟ್ಟು ನಿಶ್ಚಲವಾದ ಕಣ್ಣುಗಳಿಂದ ನೋಡುತ್ತಿದೆ, ನೋಡು.

**ಇಹಾ[೭]ಮೀ ಭುಜಂಗಾಃ ಸರತ್ನೈಃ ಫಣಾಗ್ರೈಃ**
**ಸಮುತ್ಕ್ಷಿಪ್ಯ [೮]ಭೋಗಾನ್ನಮುದ್ವೀಕ್ಷಮಾಣಾಃ ।**
**ವಿಭಾವ್ಯಂತ [೯]ಏತೇ ತರಂಗೋರುಹಸ್ತೈ-**
**ರ್ಧೃತಾ ದೀಪಿಕೌಘಾ ಮಹಾವಾರ್ಧಿನೇವ ॥ ೧೮೩ ॥**

ಇಲ್ಲಿ ರತ್ನಸಹಿತವಾದ ಹೆಡೆಗಳ ತುದಿಗಳೊಡನೆ ಶರೀರಗಳನ್ನು ಮೇಲಕ್ಕೆತ್ತಿ ಆಕಾಶವನ್ನು ನೋಡುತ್ತಿರುವುವೂ ದೂರದಲ್ಲಿ ಕಾಣುತ್ತಿರುವುವೂ ಆದ ಸರ್ಪಗಳು, ದೊಡ್ಡ ಸಮುದ್ರವು ಅಲೆಗಳೆಂಬ ದೊಡ್ಡಕೈಗಳಿಂದ ಧರಿಸಿರುವ ದೀಪಗಳ ಸಮೂಹಗಳೋ ಎಂಬಂತೆ, ಊಹಿಸಲ್ಪಡುತ್ತವೆ.

**ಭುಜಂಗಪ್ರಯಾತೈರಿದಂ ವಾರಿರಾಶೇರ್ಜಲಂ ಲಕ್ಷ್ಯತೇಽಂತಃ ಸ್ಫುರದ್ರತ್ನಕೋಟಿ ।**
**ಮಹಾನೀಲವೇಶ್ಮೇವ ದೀಪೈರನೇಕೈ[೧೦]ರ್ಜ್ವಲದ್ಭಿಶ್ಚಲದ್ಭಿ[೧೧]ಸ್ತತಧ್ವಾಂತಾನುದ್ಭಿಃ ॥ ೧೮೪ ॥**

ಸರ್ಪಗಳ ಸಂಚಾರಗಳಿಂದ ನೀರಿನೊಳಗೆ ಪ್ರಕಾಶಿಸುತ್ತಿರುವ ಅನೇಕ ರತ್ನಗಳುಳ್ಳ ಸಮುದ್ರದ ಈ ಜಲವು, ಪ್ರಕಾಶಮಾನವೂ ಚಂಚಲವೂ ವ್ಯಾಪಿಸಿರುವ ಕತ್ತಲೆಯನ್ನು ನಾಶಮಾಡುವುವೂ ಆದ ಅನೇಕ ದೀಪಗಳಿಂದ ದೊಡ್ಡದಾದ ನೀಲರತ್ನಖಚಿತವಾದ ಮನೆಯಂತೆ, ಕಾಣುತ್ತದೆ.

**ವಾತಾಘಾತಾ[೧೨]ತ್ಪುಷ್ಕರವಾದ್ಯಧ್ವನಿಮುಚ್ಚೈ-**
**ಸ್ತನ್ವಾನೇಽಬ್ಧೌ ಮಂದ್ರಗಭೀರಂ ಕೃತಲಾಸ್ಯಾಃ ।**
**[೧೩]ದ್ವೀಪೋಪಾಂತೇ ಸಂತತಮಸ್ಮಿನ್ಸುರಕನ್ಯಾಃ**
**ರಂರಮ್ಯಂತೇ ಮತ್ತಮಯೂರೈಃ ಸಮಮೇತಾಃ ॥ ೧೮೫ ॥**

ಸಮುದ್ರವು ಗಾಳಿಯ ಹೊಡೆತದಿಂದ ಅತ್ಯಂತ ಗಂಭೀರವಾದ ಜಲವೆಂಬ ವಾದ್ಯಧ್ವನಿಯನ್ನು ಗಟ್ಟಿಯಾಗಿ ಮಾಡುತ್ತಿರಲು, ಈ ದ್ವೀಪದ ಮಧ್ಯದಲ್ಲಿ ಯಾವಾಗಲೂ ನರ್ತನವನ್ನು ಮಾಡುತ್ತಿರುವ ಈ ದೇವಸ್ತ್ರೀಯರು ಮದಿಸಿರುವ ನವಿಲುಗಳೊಡನೆ ವಿಶೇಷವಾಗಿ ಕ್ರೀಡಿಸುತ್ತಾರೆ.

---

೧ ಧೃತಹರ್ಷಂ ಯಥಾತಥಾ. ೨ ಆ ಸಮಂತಾತ್ಕ್ರೀಡನಂ ಯೇಷು ತಾನಿ. ೩ ಅಂತರದ್ವೀಪಮಿವ. ೪ ಅಸ್ಥಿರಃ. ೫ ಆಕಾಶಮಂಡಲೈಃ. ೬ ನೂನಂ. ೭ ತಟವನಾಯ. ೮ ವ್ಯಾಪಿತ್ವಂ. ೯ ವೃಥಾ. ೧೦ ಅಪ್ರಸಿದ್ಧಮಹತ್ವಾಃ. ೧೧ ಕುಲಾಚಲಾಃ. ೧೨ ಸ್ವಪೂರ್ವಾಪರಕೋಟಿಭಿಃ. ೧೩ ಅಭಿತಾಡಯಥ. ೧೪ ಔನ್ನತ್ಯಂ. ೧೫ ನಿಂದತಿ. ೧೬ ಪಕ್ಷಿಧ್ವನಿಭಿಃ. ೧೭ ಇವ. ೧೮ ವಿವೃತಾನನಂ. ೧೯ ಮಧ್ಯಂ. ೨೦ ಕೃತಕೃಪಃ. ೨೧ ಭೃಶಂ ಗಿಲತಿ.

೧ ಪದ್ಮರಾಗಃ. ೨ ಸಮುದ್ರಸ್ಯ. ೩ ಅಶೋಭನಮತಿಃ. ೪ ಸಾಧುಜ್ಞಾತಂ. ೫ ಮತ್ಸ್ಯಃ. ೬ ಸ್ತಿಮಿತಾವಾರ್ದ್ರನಿಶ್ಚಲೌ. ೭ ದೂರವರ್ತಿನಃ, ಅದಶ್ಯಬ್ದಸ್ಯ ವಿಪ್ರಕೃಷ್ಟಾರ್ಥತ್ವಾತ್. ೮ ಶರೀರಾಣಿ. ೯ ದೃಶ್ಯಮಾನಾಃ. ೧೦ ಪ್ರಜ್ವಲದ್ಭಿಃ. ೧೧ ವ್ಯಾಪ್ತಾಂಧಕಾರವಿನಾಶಕೈಃ. ೧೨ ಜಲಮಿತಿ ವಾದ್ಯಧ್ವನಿಂ, ಚರ್ಮಾನದ್ಧವಾದ್ಯಧ್ವನಿಂ ವಾ. ೧೩ ಅಂತರ್ದ್ವೀಪಮಧ್ಯೇ.

ನೀಲಂ ಶ್ಯಾಮಾಃ ಕೃತರವಮುಚ್ಚೈರ್ಘೃತನಾದಾ
ವಿದ್ಯುದ್ವಂತಃ ಸ್ಫುರಿತಭುಜಂಗೋತ್ಫಣರತ್ನಮ್ ।
ಆಶ್ಲಿಷ್ಯಂತೋ ಜಲದಸಮೂಹಾ ಜಲಮಸ್ಯ
[೧]ವ್ಯಕ್ತಿಂ ನೋಪವ್ರಜಿತುಮಲಂ ತೇ [೨]ಘನಕಾಲೇ ॥ ೧೮೬ ॥

ಕಪ್ಪಾಗಿರುವುವೂ ಗಟ್ಟಿಯಾಗಿ ಶಬ್ದವನ್ನು ಮಾಡುತ್ತಿರುವುವೂ ಮಿಂಚುಳ್ಳುವೂ ಆದ ಮೇಘಗಳ ಸಮೂಹಗಳು, ಕಪ್ಪಾಗಿರುವುದೂ ಶಬ್ದವನ್ನು ಮಾಡುತ್ತಿರುವುದೂ ಪ್ರಕಾಶಮಾನವಾದ ಸರ್ಪದ ಉನ್ನತವಾದ ಹೆಡೆಯ ರತ್ನವುಳ್ಳುದೂ ಆದ ಈ ಸಮುದ್ರದ ನೀರನ್ನು ಮಳೆಗಾಲದಲ್ಲಿ ಸಂಬಂಧಿಸಿರುವುದರಿಂದ ಗುರುತಿಸಲ್ಪಡ ತಕ್ಕುವುಗಳಾಗಿಲ್ಲ. ಸಮುದ್ರದ ನೀರಿನ ಸಾದೃಶ್ಯದಿಂದ ಮೇಘಗಳ ಪರಿಜ್ಞಾನವಾಗುವುದಿಲ್ಲವೆಂದು ಭಾವವು.

ಪಶ್ಯಾಂಭೋಧೇರನುತಟಮೇನಾಂ ವನರಾಜೀಂ
[೩]ರಾಜೀವಾಸ್ಯ ! ಪ್ರಶಮಿತತಾಪಾಂ [೪]ವಿತತಾಪಾಮ್ ।
ವೇಲೋತ್ಸರ್ಪ[೫]ಜ್ಜಲಕಣಿಕಾಭಿಃ ಪರಿಧೌತಾಂ
ನೀಲಾಂ [೬]ಶಾಟೀಮಿವ ಸುಮನೋಭಿಃ ಪ್ರವಿಕೀರ್ಣಾಮ್ ॥ ೧೮೭ ॥

ತಾವರೆಯಂತೆ ಮುಖವುಳ್ಳ ಭರತರಾಜನೆ !ಸಮುದ್ರದ ದಡದಲ್ಲಿ ಸಂತಾಪವನ್ನು ಹೋಗಲಾಡಿಸಿದುದೂ ವಿಸ್ತಾರವಾದ ನೀರುಳ್ಳುದೂ ದಡದಲ್ಲಿ ಮೇಲಕ್ಕೆ ಹಾರುತ್ತಿರುವ ನೀರಿನ ಬಿಂದುಗಳಿಂದ ತೊಳೆಯಲ್ಪಟ್ಟುದೂ ಪುಷ್ಪಗಳಿಂದ ವ್ಯಾಪ್ತವೂ ಕಪ್ಪಾದ ವಸ್ತ್ರದಂತಿರುವುದೂ ಆದ ಈ ವನಪಂಕ್ತಿಯನ್ನು ನೋಡು.

[೭]ಪರಿತಃ ಸರಸೀಃ ಸರಸ್ಯೈಃ ಕಮಲ್ಯೈಃ [೮]ಸುಹಿತಾಃ
ಸುಚಿರಂ ವಿಚರಂತಿ ಮೃಗಾಃ ।
[೯]ಉಪತೀರ[೧೦]ಮಮುಷ್ಯ ನಿಸರ್ಗಸುಖಾಂ
ವಸತಿಂ [೧೧]ನಿರುಪದ್ರುತಿಮೇತ್ಯ ವನೇ ॥ ೧೮೮ ॥

ಈ ಸಮುದ್ರದ ದಡದಲ್ಲಿರುವ ಆರಣ್ಯದಲ್ಲಿ ಸ್ವಭಾವದಿಂದ ಸುಖಕರವೂ ಉಪದ್ರವವಿಲ್ಲದುದೂ ಆದ ವಾಸಸ್ಥಾನವನ್ನು ಹೊಂದಿ ಸರೋವರಗಳ ಸುತ್ತಲೂ ಇರುವ ರಸವತ್ತಾದ ಭತ್ತಗಳಿಂದ ಪೋಷಿಸಲ್ಪಟ್ಟ ಮೃಗಗಳು ಬಹುಕಾಲದವರೆಗೆ ಸಂಚರಿಸುತ್ತವೆ. ಮೃಗಗಳು ಯಥೇಚ್ಛವಾಗಿ ಸಂಚರಿಸುತ್ತವೆಂದರ್ಥವು.

[೧೨]ಅನುತೀರವನಂ ಮೃಗಯೂಥಮಿದಂ
ಕನಕಸ್ಥಲಮುಜ್ಜ್ವಲಿತಂ ರುಚಿಭಿಃ ।
ಪರಿವೀಕ್ಷ್ಯ ದವಾನಲಶಂಕಿ ಭೃಶಂ [೧೩]ಪರಿಧಾವತಿ
[೧೪]ಧಾವತಿ ತೀರಭುವಃ ॥ ೧೮೯ ॥

ಈ ಮೃಗಗಳ ಸಮೂಹವು ದಡದಲ್ಲಿರುವ ವನದಲ್ಲಿ ಕಾಂತಿಗಳಿಂದ ಹೆಚ್ಚಾಗಿ ಪ್ರಕಾಶಮಾನವಾದ ಸುವರ್ಣದ ನೆಲವನ್ನು ನೋಡಿ ಕಾಡ್ಗಿಚ್ಚೆಂಬ ಸಂಶಯವುಳ್ಳುದಾಗಿ ದಡದ ಭೂಮಿಯ ಆವರಣದಲ್ಲಿಯೇ ಹೆಚ್ಚಾಗಿ ಓಡಾಡುತ್ತದೆ. ಮೃಗಸಮೂಹವು ಮುಂದಕ್ಕೆ ಹೋಗದೆ ಸಮುದ್ರದ ದಡದಲ್ಲಿಯೇ ಓಡಾಡುತ್ತಿದೆಯೆಂದು ಭಾವವು.

ಲಾವಣ್ಯಾದಯ[೧೫]ಮಭಿಸಾರಯನ್ಸರಿತಸ್ತ್ರೀ
ರಾಪ್ಸಸ್ತ[೧೬]ಪ್ರತನುಜಲಾಂಶುಕಾಸ್ತರಂಗೈಃ ।
ಆಶ್ಲಿಷ್ಯನ್ಮುಹುರಪಿ ನೋಪಯಾತಿ ತೃಪ್ತಿಂ
ಸಂಭೋಗೈರತಿರಸಿಕೋ ನ ತೃಪ್ಯತೀಹ ॥ ೧೯೦ ॥

ಈ ಸಮುದ್ರವು ಸೌಂದರ್ಯದಿಂದ ಸಡಿಲಿದುದೂ ಸೂಕ್ಷ್ಮವೂ ಆದ ಜಲವೆಂಬ ವಸ್ತ್ರವುಳ್ಳ ನದಿಗಳೆಂಬ ಸ್ತ್ರೀಯರನ್ನು ತೊಲಗಿಸುವುದೂ ಪುನಃ ಅಲೆಗಳಿಂದ ಆಲಿಂಗಿಸುವುದೂ ಆಗಿ ತೃಪ್ತಿಯನ್ನು ಹೊಂದುವುದಿಲ್ಲ. ಈ ಲೋಕದಲ್ಲಿ ಬಹಳ ರಸಿಕನಾದ ಪುರುಷನು ಸ್ತ್ರೀಸಂಭೋಗಗಳಿಂದ ತೃಪ್ತಿಯನ್ನು ಹೊಂದುವುದಿಲ್ಲ. ಸಮುದ್ರವು ನದಿಗಳ ಪ್ರವಾಹದಿಂದ ತೃಪ್ತಿಯನ್ನು ಹೊಂದುವುದಿಲ್ಲವೆಂದಭಿಪ್ರಾಯವು.

[೧]ರೋಧೋಭುವೋಸ್ಯ ತನುಶೀಕರವಾರಿಸಿಕ್ತಾಃ
ಸಮ್ಮಾರ್ಜಿತಾ ವಿರಲಮುಚ್ಚಲಿತೈಸ್ತರಂಗೈಃ ।
ಭಾಂತೀಹ ಸಂತತಲತಾ ವಿಗಲತ್ಪ್ರಸೂನ
ನಿತ್ಯೋಪಹಾರಸುಭಗಾ [೨]ದ್ಯುಸದಾಂ ನಿಷೇವ್ಯಾಃ ॥ ೧೯೧ ॥

ವಿರಳವಾಗಿ ಮೇಲಕ್ಕೆ ಹಾರುತ್ತಿರುವ ಅಲೆಗಳಿಂದುಂಟಾದ ತುಂತುರುಗಳ ನೀರಿನಿಂದ ಸೇಚಿಸಲ್ಪಟ್ಟುವೂ ಯಾವಾಗಲೂ ಲತೆಗಳಿಂದುದುರುತ್ತಿರುವ ಪುಷ್ಪಗಳ ನಿತ್ಯಸತ್ಕಾರ(ಬಹುಮಾನ)ಗಳಿಂದ ಮನೋಹರವೂ ದೇವತೆಗಳಿಗೆ ಭಜಿಸುವುದಕ್ಕೆ ಯೋಗ್ಯವೂ ಆದ ಈ ಸಮುದ್ರದ ದಡದ ಭೂಮಿಗಳು ಇಲ್ಲಿ ಪ್ರಕಾಶಿಸುತ್ತವೆ.

ಸ್ವರ್ಗೋದ್ಯಾನಶ್ರಿಯಮಿವ [೩]ಹಸತ್ಯುತ್ಪ್ರಸೂನೇ ವನೇಸ್ಮಿನ್
ಮಂದಾರಾಣಾಂ [೪]ಸರತಿ ಪವನೇ ಮಂದಮಂದಂ ವನಾಂತಾತ್ ।
[೫]ಮಂದಾಕ್ರಾಂತಾಃ ಸಲಲಿತಪದಂ ಕಿಂಚಿದಾರಬ್ಧಗಾನಾ-
ಶ್ಚಂಕ್ರಮ್ಯಂತೇ [೬]ಖಗಯುವತಯಸ್ತೀರದೇಶೇಷ್ವಮುಷ್ಯ ॥ ೧೯೨ ॥

ಸ್ವರ್ಗದ ಉದ್ಯಾನದ ಶೋಭೆಯನ್ನು ಪರಿಹಾಸ್ಯಮಾಡುತ್ತಿದೆಯೋ ಎಂಬಂತಿರುವುದೂ ಪುಷ್ಪಗಳುಳ್ಳುದೂ ಆದ ಈ ವನದಲ್ಲಿ ಗಾಳಿಯು ವನ ಪ್ರದೇಶದಿಂದ ಮೆಲ್ಲಮೆಲ್ಲನೆ ಬೀಸುತ್ತಿರಲು ಮಂದಗಮನವುಳ್ಳವರೂ ಮನೋಹರವಾದ ಹೆಜ್ಜೆಗಳುಳ್ಳ, ಹೇಗೋ ಹಾಗೆ ಸ್ವಲ್ಪ ಗಾನವನ್ನು ಪ್ರಾರಂಭಿಸಿದವರೂ ಆದ ವಿದ್ಯಾಧರಸ್ತ್ರೀಯರು ಈ ಸಮುದ್ರದ ದಡಗಳಲ್ಲಿ ಸಂಚರಿಸುತ್ತಾರೆ. ಸಮುದ್ರ ತೀರಗಳಲ್ಲಿ ವಿದ್ಯಾಧರಸ್ತ್ರೀಯರು ವಿಹರಿಸುತ್ತಾರೆಂದು ಭಾವವು.

[೭]ಅಪ್ಸವ್ಯಸ್ತಿಮಿರಯ[೮]ಮಾಜಿಘಾಂಸುರಾರಾ-
ದಭ್ಯೇತಿ ದ್ರುತ[೯]ಮಭಿಭಾವುಕೋ[೧೦]ಪ್ಸುಯೋನಿಮ್ ।
ಶೈಲೋಚ್ಚಾನಪಿ ನಿಗಿಲಂಸ್ತಿಮೀನಿತೋನ್ಯೋ
[೧೧]ವ್ಯತ್ಯಾಸ್ತೇ ಸಮಮಮುನಾ ಯುಯುತ್ಸಮಾನಃ ॥ ೧೯೩ ॥

ಜಲದಲ್ಲಿ ಉತ್ಪನ್ನವಾದುದೂ ಆಕ್ರಮಿಸುವ ಸ್ವಭಾವವುಳ್ಳುದೂ ಆದ ಈ ತಿಮಿಯೆಂಬ ಮೀನು ಶಂಖವನ್ನು ಅಥವಾ ಜಲಚರಪ್ರಾಣಿಯನ್ನು ಕೊಲ್ಲಬೇಕೆಂಬ ಇಚ್ಛೆಯುಳ್ಳುದಾಗಿ ಶೀಘ್ರವಾಗಿ ಸಮೀಪದಲ್ಲಿ ಇದಿರಾಗಿ ಬರುತ್ತಿದೆ. ಈ ಕಡೆಯಲ್ಲಿ ಪರ್ವತದಂತೆ ಉನ್ನತಗಳಾಗಿದ್ದರೂ ತಿಮಿಮೀನುಗಳನ್ನು ನುಂಗುತ್ತಿರುವ ಬೇರೊಂದು ಮೀನು ಈ ತಿಮಿಯೆಂಬ ಮೀನಿನೊಡನೆ ಯುದ್ಧಮಾಡಬೇಕೆಂಬ ಇಚ್ಛೆಯುಳ್ಳುದಾಗಿ ವ್ಯತಿರಿಕ್ತವಾಗಿ ಕುಳಿತಿದೆ.

ಜಲಾದಜಗರಸ್ತಿಮಿಂ [೧೨]ಶಯುಮಪಿ ಸ್ಥಲಾ[೧೩]ದಪ್ಸುಜೋ
[೧೪]ವಿಕರ್ಷತಿ [೧೫]ಯುಯುತ್ಸಯಾ[೧೬]ಕೃತದೃಢಗ್ರಹೋ[೧೭]ದುರ್ಗ್ರಹಃ ।
ತಥಾಪಿ ನ ಜಯೋ ಮಿಥೋಸ್ತಿ [೧೮]ಸಮಕಕ್ಷಯೋರೇನಯೋ-
ರ್ಧ್ರುವಂ ನ ಸಮಕಕ್ಷ್ಯಯೋರಿಹ [೧೯]ಜಯೇತರಪ್ರಕ್ರಮಃ ॥ ೧೯೪ ॥

ಹೆಬ್ಬಾವು ನೀರಿನಿಂದ ತಿಮಿಯೆಂಬ ಮೀನನ್ನೂ ಆ ಮೀನು ನೆಲದಿಂದ ಹೆಬ್ಬಾವನ್ನೂ ಯುದ್ಧಮಾಡಬೇಕೆಂಬ ಇಚ್ಛೆಯಿಂದ ಒಂದಕ್ಕೊಂದು ಗಟ್ಟಿಯಾಗಿ ಹಿಡಿದು ಎಳೆದಾಡುತ್ತವೆ. ಹಾಗಾದರೂ ಸಮಾನಬಲವುಳ್ಳ ಇವುಗಳಿಗೆ ಪರಸ್ಪರ ಜಯವುಂಟಾಗಲಿಲ್ಲ. ಇದು ನ್ಯಾಯವಾಗಿದೆ- ಲೋಕದಲ್ಲಿ ಸಮಾನಬಲವುಳ್ಳವರಿಗೆ ನಿಶ್ಚಯವಾಗಿಯೂ ಅಪಜಯವಿಲ್ಲ.

೧ ವ್ಯಕ್ತಮಿತ್ಯಪಿ ಪಾಠಃ. ೨ ವರ್ಷಾಕಾಲೇ. ೩ ಹೇ ಕಮಲಾಸ್ಯ. ೪ ವಿಸ್ತೃತಜಲಾಂ. ೫ ಜಲಲವೈಃ. ೬ ವಸ್ತ್ರಂ. ೭ ಸರೋವರಾಣಾಂ ಸಮಂತತಃ. ೮ ಪೋಷಿತಾಃ. ೯ ತಟೇ. ೧೦ ಸಮುದ್ರಸ್ಯ. ೧೧ ನಿರುಪದ್ರವಾಂ. ೧೨ ತಟವನೇ. ೧೩ ಪರಿಮಂಡಲೇ. ೧೪ ಪಲಾಯತೇ. ೧೫ ಅಭಿಸಾರಿಕಾಃ ಕುರ್ವನ್, ನಿಧುವನಂ ಕುರ್ವನ್ನಿತ್ಯರ್ಥಃ. ೧೬ ಶ್ಲಕ್ಷ್ಣಂ.

೧ ತಟಭೂಮಯಃ. ೨ ದೇವಾನಾಂ. ೩ ಹಸತೀತಿ ಹಸನ್, ತಸ್ಮಿನ್. ೪ ಸರತೀತಿ ಸರಂಸ್ತಸ್ಮಿನ್. ೫ ಮಂದಗಮನಾಃ. ೬ ವಿದ್ಯಾಧರಯುವತಯಃ. ೭ ಅಪ್ಸುಭವಃ. ೮ ಆಹಂತುಮಿಚ್ಛುಃ. ೯ ಅಭಿಭವನಶೀಲಃ. ೧೦ ಶಂಖಂ, ಜಲಚರಂ ವಾ. ೧೧ ವೈಪರೀತ್ಯೇನ ತಿಷ್ಠತಿ. ೧೨ ಅಜಗರಂ. ೧೩ ಮತ್ಸ್ಯಃ. ೧೪ ಆಕರ್ಷತಿ. ೧೫ ಯೋದ್ಧುಮಿಚ್ಛಯಾ. ೧೬ ಪರಸ್ಪರವಿಹಿತದೃಢಗ್ರಹಣಂ ಗ್ರಹಃ ಸ್ವೀಕಾರಃ. ೧೭ ಗ್ರಹೀತುಮಶಕ್ಯಃ. ೧೮ ಸಮಬಲಯೋಃ. ೧೯ ಅಪಜಯಪ್ರಾರಂಭಃ.

[1]ವನಂ [2]ವನಗಜೈರಿದಂ ಜಲನಿಧೇಃ ಸಮಾಸ್ಫಾಲಿತಂ
[3]ವನಂ ವನಗಜೈರಿವ ಸ್ಫುಟವಿಮುಕ್ತ [4]ಸಾಂರಾವಿಣಮ್ ।
ಮೃದಂಗಪರಿವಾದನಶ್ರಿಯಮುಪಾದಧದ್ದಿಕ್ತಟೇ
ತನೋತಿ ತಟಮುಚ್ಚಲತ್ಸಪದಿ ದತ್ತಸಮ್ಮಾರ್ಜನಮ್ ॥ ೧೯೫ ॥

ಕಾಡಾನೆಗಳಿಂದ ಹೊಡೆಯಲ್ಪಟ್ಟ ಅರಣ್ಯದಂತೆ, ವ್ಯಕ್ತವಾಗಿ ಧ್ವನಿಮಾಡುತ್ತಿರುವುದೂ ನೀರಾನೆಗಳಿಂದ ಹೊಡೆಯಲ್ಪಟ್ಟುದೂ ದಿಕ್ಪ್ರದೇಶದಲ್ಲಿ ಮದ್ದಳೆಯ ಶಬ್ದದ ಶೋಭೆಯನ್ನು ಧರಿಸುವುದೂ ಆದ ಸಮುದ್ರದ ಈ ನೀರು ಮೇಲಕ್ಕೆ ಹಾರಿ ಸಮುದ್ರತೀರವನ್ನು ಶೀಘ್ರವಾಗಿ ನಿರ್ಮಲವನ್ನಾಗಿ ಮಾಡುತ್ತದೆ. ನೀರಾನೆಗಳಿಂದ ಹೊಡೆಯಲ್ಪಟ್ಟ ನೀರು ಸಮುದ್ರತೀರಕ್ಕೆ ಹಾರಿ ಅದನ್ನು ತೊಳೆಯುತ್ತದೆಂದು ಭಾವವು.

ತರತ್ತಿಮಿಕಲೇವರಂ ಸ್ಫುಟಿತಶುಕ್ತಿ[5]ಶಲ್ಕಾಚಿತ-
ಸ್ಫುರತ್ಪರುಷನಿಃಸ್ವನಂ ವಿವೃತರಂಧ್ರಪಾತಾಲಕಮ್ ।
ಭಯಾನಕಮಿತೋ ಜಲಂ ಜಲನಿಧೇ[6]ರ್ಲಲತ್ಪನ್ನಗ-
[7]ಪ್ರಮುಕ್ತ ತನುಕೃತ್ತಿಸಂಶಯಿತವೀಚಿಮಾಲಾಕುಲಮ್ ॥ ೧೯೬ ॥

ಈ ಕಡೆಯಲ್ಲಿ ಕುಣಿದಾಡುತ್ತಿರುವ ತಿಮಿಮೀನುಗಳ ಶರೀರವುಳ್ಳುದೂ ಒಡೆದುಹೋಗಿರುವ ಮುತ್ತಿನ ಚಿಪ್ಪುಗಳ ಚೂರುಗಳಿಂದ ವ್ಯಾಪ್ತವೂ ಕಠೋರವಾದ ಶಬ್ದವನ್ನು ಮಾಡುವುದೂ ಪಾತಾಳದ ರಂಧ್ರವನ್ನು ತೆರೆದಿರುವುದೂ ಚಲಿಸುತ್ತಿರುವ ಸರ್ಪಗಳಿಂದ ಬಿಡಲ್ಪಟ್ಟ ಪೊರೆಯೆಂಬ ಸಂದೇಹವನ್ನುಂಟುಮಾಡುವ ಅಲೆಗಳಿಂದ ವ್ಯಾಪ್ತವೂ ಆದ ಸಮುದ್ರದ ನೀರು ಭಯಂಕರವಾಗಿದೆ.

ಇತೋ ಧುತವನೋನಿಲಃ ಶಿಶಿರಶೀಕರಾನಾಕಿರನ್
ಉಪೈತಿ ಶನಕೈಸ್ತಟದ್ರುಮಸುಗಂಧಿ[8]ಪುಷ್ಪಾಹರಃ ।
ಇತಶ್ಚ ಪರುಷೋನಿಲಃ ಸ್ಫುರತಿ ಧೂತಕಲ್ಲೋಲ[9]ಸಾತ್
ಕೃತಸ್ವನಭಯಾನಕಸ್ತಿಮಿಕಲೇವರಾನಾ[10]ಧುನನ್ ॥ ೧೯೭ ॥

ಈ ಕಡೆಯ ದಡಗಳಲ್ಲಿರುವ ವೃಕ್ಷಗಳ ಪರಿಮಳವಾದ ಪುಷ್ಪಗಳನ್ನು ಅಪಹರಿಸುವುದೂ ವನವನ್ನು ಅಲ್ಲಾಡಿಸುವುದೂ ಆದ ಗಾಳಿಯು ತಂಪಾದ ಜಲಬಿಂದುಗಳನ್ನು ಎರಚುತ್ತ ಮೆಲ್ಲನೆ ಬೀಸುತ್ತದೆ. ಈ ಕಡೆಯಲ್ಲಿ ಕಠೋರವಾದ ಗಾಳಿಯು ಚಲಿಸಲ್ಪಟ್ಟ ಅಲೆಗಳಿಗೆ ಸದೃಶವಾದ ಶಬ್ದದಿಂದ ಭಯಂಕರವಾದ ತಿಮಿಮೀನುಗಳ ಶರೀರಗಳನ್ನು ಅಲ್ಲಾಡಿಸುತ್ತ ಶೋಭಿಸುತ್ತಿದೆ.

ಅಸ್ಯೋಪಾಂತಭುವಶ್ಚಕಾಸತಿ ತರಾಂ ವೇಲೋಚ್ಚಲನ್ಮೌಕ್ತಿಕೈ-
ರಾಕೀರ್ಣಾಃ ಕುಸುಮೋಪಹಾರಜನಿತಾಂ ಲಕ್ಷ್ಮೀಂ ದಧಾನಾ ಭೃಶಮ್ ।
ಸೇವಂತೇ ಸಹ ಸುಂದರೀಭಿರಮರಾ ಯಾಃ ಸ್ವರ್ಗಲೋಕಾಂತರಂ
ಮನ್ವಾನಾ ಧೃತಸಮ್ಮದಾಸ್ತಟವನಚ್ಛಾಯಾತರೂನ್ಸಂಶ್ರಿತಾಃ ॥ ೧೯೮ ॥

ದಡದ ಮೇಲಕ್ಕೆ ಹಾರುತ್ತಿರುವ ಮುತ್ತುಗಳಿಂದ ವ್ಯಾಪ್ತವೂ ಪುಷ್ಪಗಳ ಕಾಣಿಕೆಗಳಿಂದುಂಟಾದ ಶೋಭೆಯನ್ನು ಧರಿಸಿರುವುವೂ ಆದ ಈ ಸಮುದ್ರದ ಸಮೀಪಭೂಮಿಗಳು ಬಹಳವಾಗಿ ಪ್ರಕಾಶಿಸುತ್ತವೆ. ಆ ಭೂಮಿಗಳನ್ನು ಬೇರೊಂದು ಸ್ವರ್ಗವೆಂದು ತಿಳಿಯುವವರೂ ಸಂತೋಷವನ್ನು ಹೊಂದಿರುವವರೂ ದಡದಲ್ಲಿರುವ ವನದ ಛಾಯಾವೃಕ್ಷಗಳನ್ನಾಶ್ರಯಿಸಿರುವವರೂ ಆದ ದೇವತೆಗಳು ತಮ್ಮ ಸ್ತ್ರೀಯರೊಡನೆ ಆ ಸಮುದ್ರದ ಸಮೀಪಭೂಮಿಗಳಲ್ಲಿ ಕ್ರೀಡಿಸುತ್ತಾರೆ.

ಏತೇ ತೇ ಮಕರಾದಯೋ ಜಲಚರಾ ಮತ್ಸ್ಯೇವ ಕುಕ್ಷಿ[11]ಂಭರಿಂ
ವಾರಾಂರಾಶಿ[12]ಮನಂತರಾಯಮಧಿಕಂ ಪುತ್ರಾ ಇವಾ[13]ಸ್ಯೌರಸಾಃ ।
[14]ಭಾಗಸ್ಯ ಪ್ರತಿಲಿಪ್ಸಯಾ[15]ನುಜನಕಸ್ಯಾಕ್ರೋಶತೋಪ್ಯಗ್ರತೋ
ಯುಧ್ಯಂತೇ ಮಿಲಿತಾಃ ಪರಸ್ಪರಮಹೋ [16]ಬದ್ಧಕ್ರುಧೋ ಧಿಗ್ಧನಂ ॥

೧ ಜಲಂ. ೨ ಜಲಗರ್ಜೈಃ. ೩ ಕಾನನಂ. ೪ ಧ್ವನಿಂ. ೫ ಶಕಲಾಚಿತಂ. ೬ ಚಲತ್ಸರ್ಪೈಃ. ೭ ನಿರ್ಮೋಕಃ. ೮ ಪುಷ್ಪಾಣ್ಯಪಹರ್ತುಂ ಶೀಲಃ. ೯ ಸದೃಶೀಕೃತಃ. ೧೦ ಧುವನ್ನಿತ್ಯಪಿಪಾಠಃ. ೧೧ ಸ್ವೋದರಪೂರಕಂ. ೧೨ ಅನಂತಧನಂ, ಸಂತತಾಯಂ ವಾ. ೧೩ ಉರಸಿಭವಾಃ. ೧೪ ಭಾಗಂ ಲಬ್ಧುಮಿಚ್ಛಯಾ. ೧೫ ಇವ. ೧೬ ಬದ್ಧಕ್ರೋಧಸ್ಯ ಪುರುಷಸ್ಯ ಧನಂ ಧಿಗಿತಿ ನಾನ್ವಯಃ.

ಈ ಸಮುದ್ರದ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೋ ಎಂಬಂತಿರುವ ಈ ಮೊಸಳೆ ಮೊದಲಾದ ಜಲಚರಪ್ರಾಣಿಗಳು ಅನಂತದ್ರವ್ಯವುಳ್ಳ ಅಥವಾ ಯಾವಾಗಲೂ ಲಾಭವುಳ್ಳ ಸಮುದ್ರವನ್ನು ಬಹಳವಾಗಿ ಹೊಟ್ಟೆಹೊರಕನನ್ನಾಗಿ ತಿಳಿದೋ ಎಂಬಂತೆ ಮತ್ತು ತಮ್ಮ ಭಾಗವನ್ನು ಹೊಂದುವುದಕ್ಕೋಸ್ಕರ ಇಚ್ಛೆಯಿಂದಲೋ ಎಂಬಂತೆ ತಂದೆಯು (ಸಮುದ್ರ) ಬಯ್ಯುತ್ತಿದ್ದರೂ ಮುಂಭಾಗದಲ್ಲಿ ಸೇರಿದುವೂ ಕೋಪಿಸಿದುವೂ ಆಗಿ ಪರಸ್ಪರ ಯುದ್ಧಮಾಡುತ್ತವೆ. ಆಶ್ಚರ್ಯ! ದ್ರವ್ಯಕ್ಕೆ ಧಿಕ್ಕಾರವಿರಲಿ. ಮೊಸಳೆ ಮೊದಲಾದ ಜಲಜಂತುಗಳು ಪರಸ್ಪರವಾಗಿ ಹೋರಾಡುತ್ತವೆಂದು ಭಾವವು.

ಲೋಕಾನಂದಿಭಿ[1]ರಪ್ರಮಾಪರಿಗತೈ [2]ರುಚ್ಚಾವಚೈರ್ಭೋಗಿನಾ-
ಮಾರೂಢೈ[3]ರಧಿಮಸ್ತಕಂ ಶುಚಿತಮೈಃ ಸಂತಾಪವಿಚ್ಛೇದಿಭಿಃ ।
ಪಾತಾಲೈರ್ವಿವೃತಾನನೈರ್ಮುಹುರಪಿ ಪ್ರಾಪ್ತವ್ಯಯೈರಕ್ಷಯೈ-
ರಾಸಂಸಾರಮಮುಷ್ಯ ನಾಸ್ತಿ [4]ವಿಗಮೋ ರತ್ನೈರ್ಜಲೌಘೈರಪಿ ॥ ೨೦೦ ॥

ಲೋಕಕ್ಕೆ ಸಂತೋಷಕರವೂ ಅಳತೆಯಿಲ್ಲದುವೂ ಅನೇಕಪ್ರಕಾರವೂ ಸರ್ಪಗಳ ಮಸ್ತಕದಲ್ಲಿರುವುವೂ ಅತ್ಯಂತ ನಿರ್ಮಲವೂ ಸಂತಾಪವನ್ನು ನಾಶಮಾಡುವುವೂ ಬಾಯನ್ನು ತೆರೆದಿರುವ ಬಡಬಾಗ್ನಿಗಳಿಂದ ಬಾರಿಬಾರಿಗೂ ವ್ಯಯವಾಗುತ್ತಿದ್ದರೂ ನಾಶರಹಿತವೂ ಆದ ರತ್ನಗಳಿಂದಲೂ ಜಲಸಮೂಹಗಳಿಂದಲೂ ಈ ಸಮುದ್ರಕ್ಕೆ ಲೋಕವಿರುವವರೆಗೂ ವಿಯೋಗವಿಲ್ಲವು. ಸಮುದ್ರದಲ್ಲಿ ರತ್ನಗಳೂ ನೀರೂ ಯಾವಾಗಲೂ ಇರುತ್ತವೆಂದಭಿಪ್ರಾಯವು.

[5]ವಜ್ರದ್ರೋಣ್ಯಾ[6]ಮಮುಷ್ಯ ಕ್ವಥದಿವ ಜಠರಂ ವ್ಯಕ್ತಮುದ್ಬುದ್ಬುದಾಂಬು
ಸ್ಫೂರ್ಜತ್ಪಾತಾಲರಂಧ್ರೋಚ್ಛ್ವಸದನಿಲಬಲಾದ್ವಿಷ್ವ[7]ಗಾವರ್ತ್ಯಮಾನಮ್ ।
ಪ್ರಸ್ತೀರ್ಣಾನೇಕರತ್ನಾನ್ಯಪಹರತಿ ಜನೇ ನೂನ[8]ಮುತ್ತಪ್ತಮಂತಃ
ಪ್ರಾಯೋ [9]ರಾಯಾಂ ವಿಯೋಗೋ ಜನಯತಿ ಮಹತೋಪ್ಯುಗ್ರಮಂತರ್ವಿದಾಹಮ್ ॥ ೨೦೧ ॥

ಪ್ರಕಾಶಮಾನವಾದ ಪಾತಾಳಬಿಲದಿಂದ ಮೇಲಕ್ಕೆ ಬೀಸುತ್ತಿರುವ ಗಾಳಿಯ ಸಾಮರ್ಥ್ಯದಿಂದ ಎಲ್ಲಾ ಕಡೆಯಲ್ಲಿಯೂ ಸುತ್ತುತ್ತಿರುವುದೂ ಸ್ಫುಟವಾಗಿ ನೀರುಗುಳ್ಳೆಗಳಿಂದ ಕೂಡಿದ ನೀರುಳ್ಳುದೂ ಆದ ಈ ಸಮುದ್ರದ ಹೊಟ್ಟೆಯು, ಹರಡಿಕೊಂಡಿರುವ ಅನೇಕ ರತ್ನಗಳನ್ನು ಜನರು ಅಪಹರಿಸುತ್ತಿರಲು ಒಳಗೆ ತಪಿಸಿ (ಕಾದು)ದುದಾಗಿ ವಜ್ರಮಯವಾದ ಕಡಾಯಿಯಲ್ಲಿ ಕುದಿಯುತ್ತಿದೆಯೋ ಎಂಬಂತಿದೆ. ನಿಶ್ಚಯವಾಗಿಯೂ ದ್ರವ್ಯಗಳ ವಿಯೋಗವು ಪ್ರಾಯಶಃ ದೊಡ್ಡವರಿಗೂ ಕಠಿನವಾದ ಹೊಟ್ಟೆಯುರಿಯನ್ನುಂಟುಮಾಡುತ್ತದೆ. ಹಣವು ನಷ್ಟವಾದರೆ ದೊಡ್ಡವರಿಗೂ ದುಃಖವುಂಟಾಗುವುದೆಂದು ಭಾವವು.

ಆಯುಷ್ಮನ್ನಿತಿ ಬಹುವಿಸ್ಮಯೋಯಮಬ್ಧಿಃ
ಸದ್ರತ್ನಃ ಸಕಲಜಗಜ್ಜನೋಪಜೀವ್ಯಃ ।
ಗಂಭೀರಪ್ರಕೃತಿರನಲ್ಪಸತ್ತ್ವಯೋಗಃ
ಪ್ರಾಯಸ್ತ್ವಾಮನುಹರತೇ ವಿನಾ [10]ಜಡಿಮ್ನಾ ॥ ೨೦೨ ॥

ಆಯುಷ್ಮಂತನೆ! ಈಪ್ರಕಾರವಾಗಿ ಅನೇಕ ಆಶ್ಚರ್ಯಗಳುಳ್ಳುದೂ ಶ್ರೇಷ್ಠವಾದ ರತ್ನಗಳುಳ್ಳುದೂ ಲೋಕದ ಸಮಸ್ತ ಜನರಿಗೆ ಜೀವನಪ್ರದವೂ ಗಂಭೀರವಾದ ಸ್ವಭಾವವುಳ್ಳುದೂ ಅನೇಕ ಪ್ರಾಣಿಗಳುಳ್ಳುದೂ ಆದ ಈ ಸಮುದ್ರವು ಜಡತ್ವ (ಜಲತ್ವ)ದಿಂದ ಹೊರತು ಬಹಳಮಟ್ಟಿಗೆ ನಿನ್ನನ್ನು ಹೋಲುತ್ತದೆ.''

೧ ಪ್ರಮಾಣರಹಿತೈಃ. ೨ ನಾನಾಪ್ರಕಾರೈಃ. ೩ ಮಸ್ತಕೇ. ೪ ವಿಯೋಗಃ. ೫ ವಜ್ರಮಯಕಟಾಹೇ. ೬ ಸಮುದ್ರಸ್ಯ. ೭ ಆವರ್ತಮಾನಮಿತ್ಯಪಿ ಪಾಠಃ. ೮ ಸಂತಪ್ತಂ. ೯ ಧನಾನಾಂ. ೧೦ ಜಡತ್ವೇನ.

ಇತ್ಥಂ [೧]ನಿಯಂತರಿ ಪರಾಂ ಶ್ರಿಯಮಂಬುರಾಶೇ
ರಾವರ್ಣಯತ್ಯನುಗತೈರ್ವಚನೈರ್ವಿಚಿತ್ರೈಃ ।
[೨]ಪ್ರಾಪ ಪ್ರಮೋದಮಧಿಕಂ [೩]ನ ಚಿರಾಚ್ಚ ಸಮ್ರಾಟ್
ಸೇನಾನಿವೇಶಮಭಿಯಾತುಮನಾ ಬಭೂವ ॥ ೨೦೩ ॥

ಈಪ್ರಕಾರವಾಗಿ ಸಮುದ್ರದ ಅಧಿಕವಾದ ಸಂಪತ್ತನ್ನು ಅನುಸರಿಸಲ್ಪಟ್ಟವೂ ಅನೇಕಪ್ರಕಾರವೂ ಆದ ಮಾತುಗಳಿಂದ ಸಾರಥಿಯು ವರ್ಣಿಸುತ್ತಿರಲು ಭರತ ಚಕ್ರವರ್ತಿಯು ಅಧಿಕವಾದ ಸಂತೋಷವನ್ನು ಹೊಂದಿದನು. ಬಹುಕಾಲದವರೆಗೆ ಸೈನ್ಯವಿರುವ ಸ್ಥಳಕ್ಕೆ ಹೋಗುವ ಮನಸ್ಸುಳ್ಳವನಾಗಲಿಲ್ಲ. ಹೆಚ್ಚುಕಾಲದವರೆಗೆ ಸಮುದ್ರವನ್ನು ನೋಡುತ್ತಿದ್ದನೆಂದರ್ಥವು.

ಅಥ ರಥ[೪]ಪರಿವೃತ್ತ್ಯೈ ಸಾರಥೌ [೫]ಕೃಚ್ಛ್ರ ಕೃಚ್ಛ್ರಾತ್
[೬]ವಿಷಮವಲನಭುಗ್ನಗ್ರೀವಮಶ್ವಾ[೭]ನ್ನುನುತ್ಸೌ ।
ಧುವತಿ ಮರುತಿ ಮಂದಂ ವೀಚಿವೇಗೋಪಶಾಂತೇಃ
ಶಿಬಿರಮಭಿ ನಿಧೀನಾಮೀಶಿತಾ ಸಂಪ್ರತಸ್ಥೇ ॥ ೨೦೪ ॥

ತರುವಾಯ ಸಾರಥಿಯು ರಥವನ್ನು ತಿರುಗಿಸುವುದಕ್ಕೋಸ್ಕರ ವಕ್ರವಾಗಿ ರಥವನ್ನು ಎಳೆಯುತ್ತ ಕುತ್ತಿಗೆಯನ್ನು ತಿರುಗಿಸುವ ಕುದುರೆಗಳನ್ನು ಬಹಳ ಕಷ್ಟದಿಂದ ಪ್ರೇರೇಪಿಸಲಿಚ್ಛೆಯುಳ್ಳವನಾಗಲು, ಅಲೆಗಳ ವೇಗದ ಉಪಶಾಂತಿಯಿಂದ ಗಾಳಿಯು ಮೆಲ್ಲಮೆಲ್ಲನೆ ಬೀಸುತ್ತಿರಲು, ನಿಧಿಗಳ ಸ್ವಾಮಿಯಾದ ಭರತಚಕ್ರವರ್ತಿಯು ತನ್ನ ಬಿಡಾರಕ್ಕೆ ಹೊರಟನು.

ಕಥಮಪಿ ರಥಚಕ್ರಂ [೮]ಸಾರಯಿತ್ವಾಂಬುರುದ್ಧಂ
[೯]ಪ್ರವಹಣಕೃತಕೋಪಾನ್ವಾಜಿನೋ[೧೦]ನು[೧೧]ಪ್ರಸಾಧ್ಯ ।
ರಥಮಧಿಜಲಮಬ್ಧೌ ಚೋದಯಾಮಾಸ ಸೂತೋ
ಜಲಧಿರಪಿ ನೃಪಾ[೧೨]ನುವ್ರಜ್ಯಯೇವೋಚ್ಚಚಾಲ ॥ ೨೦೫ ॥

ಸಾರಥಿಯು ನೀರಿನಿಂದ ತಡೆಯಲ್ಪಟ್ಟ ರಥದ ಚಕ್ರವನ್ನು ಬಹಳ ಪ್ರಯಾಸದಿಂದ ನಡೆಯಿಸಿ ತನ್ನ ಪ್ರೇರಣೆಯಿಂದ ಕುಪಿತವಾಗಿರುವ ಕುದುರೆಗಳನ್ನು ಅನುಕೂಲ ಗಮನದಿಂದ ಅಥವಾ ಹಿಂಭಾಗದಲ್ಲಿ ಸಮಾಧಾನಪಡಿಸಿ ಸಮುದ್ರದ ನೀರಿನಲ್ಲಿ ರಥವನ್ನು ನಡೆಯಿಸಿದನು. ಸಮುದ್ರವು ಕೂಡ ರಾಜನನ್ನು ಹಿಂಬಾಲಿಸುವುದರಿಂದಲೋ ಎಂಬಂತೆ ಚಲಿಸಿದ್ದಿತು. ಸಮುದ್ರದ ನೀರು ರಥವನ್ನನುಸರಿಸಿತೆಂದು ಭಾವವು.

ಅಯಮಯ[೧೩]ಮುದಭಾರೋ ವಾರಿರಾಶೇರ್ವರೂಥಂ
ಸ್ಥಗಯತಿ ರಥವೇಗಾದೇಷ ಭಿನ್ನೋರ್ಮಿರಬ್ಧಿಃ ।
ಇತಿ ಕಿಲ [೧೪]ತಟಸದ್ಭಿಸ್ತರ್ಕ್ಯಮಾಣೋ ರಥೋಽಯಂ
[೧೫]ಜವನತುರಗಕೃಷ್ಟಃ ಪ್ರಾಪ [೧೬]ಪಾರೇ ಸಮುದ್ರಮ್ ॥ ೨೦೬ ॥

''ಸಮುದ್ರದ ಈ ನೀರಿನ ಸಮೂಹವು ರಥಕ್ಕೆ ಹೊದಿಸುವ ಚರ್ಮದ ಒಬರುಕಿಯನ್ನು ಮರೆಮಾಡುತ್ತದೆ; ರಥದ ವೇಗದಿಂದ ಈ ಸಮುದ್ರವು ಒಡೆದು ಹೋದ ಅಲೆಗಳುಳ್ಳುದಾಗಿದೆ'' ಹೀಗೆ ದಡದಲ್ಲಿರುವವರಿಂದ ಊಹಿಸಲ್ಪಟ್ಟುದೂ ವೇಗವುಳ್ಳ ಕುದುರೆಗಳಿಂದ ಎಳೆಯಲ್ಪಟ್ಟುದೂ ಆದ ರಥವು ಸಮುದ್ರತೀರವನ್ನು ಸೇರಿತು.

[೧೭]ತರಂಗಾತ್ಯಸ್ತೋಽಯಂ [೧೮]ಸಮಘಟಿತಸರ್ವಾಂಗಘಟನೋ
ರಥಃ ಕ್ಷೇಮಾತ್ಪ್ರಾಪ್ತೋ [೧೯]ರಥಚರಣಹೇತಿಶ್ಚ [೨೦]ಕುಶಲಮ್ ।
ತುರಂಗಾ ಧೌತಾಂಗಾ ಜಲಧಿಸಲಿಲೈರಕ್ಷತಖುರಾ
ಮಹತ್ಪುಣ್ಯಂ ಜಿಷ್ಣೋರಿತಿ ಕಿಲ ಜಜಲ್ಪು[೨೧]ಸ್ತಟಜುಷಃ ॥ ೨೦೭ ॥

೧ ಸಾರಥೌ. ೨ ಪ್ರಾಪದಿತ್ಯಪಿ ಪಾಠಃ. ೩ ಆಶು. ೪ ಪರಿವರ್ತನಾಯ. ೫ ಅತ್ಯಂತಕಷ್ಟಾತ್. ೬ ವಿಷಮಾಕರ್ಷಣಕುಟಿಲಗ್ರೀವಂ ಯಥಾ ತಥಾ. ೭ ಪ್ರೇರಿತುಮಿಚ್ಛಾವತಿ ಸತಿ. ೮ ಗಮಯಿತ್ವಾ. ೯ ಪ್ರೇರಣಂ. ೧೦ ಅನುಕೂಲಗಮನೇನ, ಪಶ್ಚಾದ್ವಾ. ೧೧ ಪ್ರಸಾದಂ ನೀತ್ವಾ. ೧೨ ಅನುಗಮನೇನ. ೧೩ ಜಲಸಮೂಹಃ. ೧೪ ತೀರಸ್ಥೈಃ. ೧೫ ವೇಗಾಶ್ವಾಕೃಷ್ಟಃ. ೧೬ ಸಮುದ್ರಸ್ಯ ಪಾರಂ. ೧೭ ತರಂಗಾನತ್ಯಸ್ತಸ್ತರಂಗಾತ್ಯಸ್ತ ಇತಿ ದ್ವಿತೀಯಾತತ್ಪುರುಷಃ. ೧೮ ಸಮಾನಂ ಯಥಾ ತಥಾ. ೧೯ ಚಕ್ರಾಯುಧಃ. ೨೦ ಕುಶಲೀತ್ಯಪಿ ಪಾಠಃ. ೨೧ ತೀರಸ್ಥಾಃ.

''ಸಮಾನವಾಗಿರುವ ಹಾಗೆ ಸೇರಿಸಲ್ಪಟ್ಟ ಸಮಸ್ತಾವಯವಗಳ ರಚನೆಯುಳ್ಳುದೂ ಅಲೆಗಳನ್ನು ಚದುರಿಸಿದುದೂ ಆದ ರಥವು ಕ್ಷೇಮದಿಂದ ದಡವನ್ನು ಸೇರಿತು; ಚಕ್ರಾಯುಧವನ್ನು ಧರಿಸಿರುವ ಭರತರಾಜನೂ ಕ್ಷೇಮವಾಗಿ ದಡವನ್ನು ತಲುಪಿದನು; ಸಮುದ್ರದ ಜಲಗಳಿಂದ ತೊಳೆಯಲ್ಪಟ್ಟ ಅವಯವಗಳುಳ್ಳ ಕುದುರೆಗಳು ನಾಶವಾಗದಿರುವ ಗೊರಸುಗಳುಳ್ಳವುಗಳಾಗಿ ದಡವನ್ನು ಸೇರಿದುವು; ಜಯಶೀಲನಾದ ಚಕ್ರವರ್ತಿಯ ಪುಣ್ಯವು ಅತಿಶಯವಾದುದು'' ಈ ಪ್ರಕಾರವಾಗಿ ದಡದಲ್ಲಿರುವವರು ಮಾತನಾಡಿದರಂತೆ.

ನೃಪೈರ್ಗಂಗಾದ್ವಾರೇ [೧]ಪ್ರಣತಮಣಿಮೌಲ್ಯರ್ಪಿತಕರೈ-
ರಥಸ್ತಾತ್ತದ್ವೇದ್ಯಾಃ ಸಜಯಜಯಘೋಷೈ[೨]ರಧಿಕೃತೈಃ ।
[೩]ಬಹಿರ್ದ್ವಾರಂ ಸೈನ್ಯೈರ್ಯುಗಪದಸಕೃದ್ಘೋಷಿತಜಯೈ-
ರ್ವಿಭುರ್ದೃಷ್ಟಃ ಪ್ರಾಪತ್ಸ್ವಶಿಬಿರಬಹಿಸ್ತೋರಣಭುವಮ್ ॥ ೨೦೮ ॥

ಗಂಗಾನದಿಯ ದ್ವಾರದಲ್ಲಿ ನಮ್ರವೂ ರತ್ನಖಚಿತವೂ ಆದ ಕಿರೀಟದಲ್ಲಿ ಕೈಗಳನ್ನಿರಿಸಿರುವ ರಾಜರಿಂದಲೂ ಆ ಗಂಗಾನದಿಯ ಜಗತಿಯ ಕೆಳಭಾಗದಲ್ಲಿ ''ಜಯ ಜಯ'' ವೆಂಬ ಶಬ್ದವನ್ನು ಮಾಡುತ್ತಿರುವ ಅಧಿಕಾರಿಗಳಿಂದಲೂ ಗಂಗಾನದಿಯ ದ್ವಾರದ ಹೊರಭಾಗದಲ್ಲಿ ಎಲ್ಲರೂ ಒಂದೇಸಲ ಅನೇಕಾವರ್ತಿ ಜಯಘೋಷವನ್ನು ಮಾಡುತ್ತಿರುವ ಸೈನಿಕರಿಂದಲೂ ನೋಡಲ್ಪಟ್ಟ ಭರತರಾಜನು ತನ್ನ ಬಿಡಾರದ ಹೊರಬಾಗಿಲಿನ ಪ್ರದೇಶವನ್ನು ಸೇರಿದನು.

ತತೋಽದ್ಘೋಷಿತಮಂಗಲೈರ್ಜಯಜಯೇತ್ಯಾನಂದಿತೋ ವಂದಿಭಿ-
ರ್ಗತ್ವಾಂ[೪]ತಃಶಿಬಿರಂ ನೃಪಾಲಯಮಹಾದ್ವಾರಂ ಸಮಾಸಾದಯನ್ ।
[೫]ಅಂತರ್ವಂಶಿಕಲೋಕವಾರವನಿತಾದತ್ತಾಕ್ಷತಾ[೬]ಶಾಸನಃ
ಪ್ರಾವಿಕ್ಷನ್ನಿಜಕೇತನಂ ನಿಧಿಪತಿರ್ವಾತೋಲ್ಲಸತ್ಕೇತನಮ್ ॥ ೨೦೯ ॥

ಆ ಹೊರಬಾಗಿಲಿನ ಪ್ರದೇಶದಲ್ಲಿ ಮಂಗಲಘೋಷವನ್ನು ಮಾಡುತ್ತಿದ್ದ ಸ್ತುತಿಪಾಠಕರಿಂದ ''ಜಯ ಜಯ'' ವೆಂದು ಸಂತೋಷಪಡಿಸಲ್ಪಟ್ಟವನೂ ಬಿಡಾರದ ಮಧ್ಯದಲ್ಲಿ ಹೋಗಿ ರಾಜಭವನದ ಹೆಬ್ಬಾಗಿಲನ್ನು ಸೇರಿದವನೂ ಅಂತಃಪುರದ ಅಧಿಕಾರಿಗಳಿಂದಲೂ ವಾರಸ್ತ್ರೀಯರಿಂದಲೂ ಕೊಡಲ್ಪಟ್ಟ ಅಕ್ಷತೆಗಳೂ ಆಶೀರ್ವಚನಗಳೂ ಉಳ್ಳವನೂ ಆದ ಭರತಚಕ್ರವರ್ತಿಯು ಗಾಳಿಯಿಂದ ಪ್ರಕಾಶಿಸುತ್ತಿರುವ ಧ್ವಜಪತಾಕೆಗಳುಳ್ಳ ತನ್ನ ಬಿಡಾರವನ್ನು ಪ್ರವೇಶಮಾಡಿದನು.

ದೇವೋಽಯಮಕ್ಷತತನುರ್ವಿಜಿತಾಬ್ಧಿ[೭]ರಾಗಾತ್
ತೇ ಯೂಯಮಾನಯತ ಸಾಕ್ಷತಸಿದ್ಧಶೇಷಾಃ ।
[೮]ಆಶಾಧ್ವ[೯]ಮಾಧ್ವಮಿಹ ಸಮ್ಮುಖಮೇತ್ಯ ತೂರ್ಣ-
ಮಿತ್ಯುತ್ಥಿತಃ ಕಲಕಲಃ ಕಟಕೇ ತದಾಭೂತ್ ॥ ೨೧೦ ॥

''ಈ ಪ್ರಭುವು ಗಾಯವಾಗದಿರುವ ಶರೀರವುಳ್ಳವನೂ ಸಮುದ್ರವನ್ನು ಜಯಿಸಿದವನೂ ಆಗಿ ಬಂದನು; ನೀವುಗಳು ಅಕ್ಷತಸಹಿತವಾದ ಸಿದ್ಧಶೇಷ (ಮಂಗಲವಸ್ತು)ಗಳನ್ನು ತೆಗೆದುಕೊಂಡು ಬನ್ನಿ; ಆಶೀರ್ವಾದ ಮಾಡಿ; ಇಲ್ಲಿ ಶೀಘ್ರವಾಗಿ ಇದಿರಾಗಿ ನಿಂತುಕೊಳ್ಳಿ'' ಈ ಪ್ರಕಾರವಾಗಿ ಭರತರಾಜನು ಬಂದ ಕಾಲದಲ್ಲಿ ಸೈನ್ಯಸ್ಥಾನದಲ್ಲಿ ಕಲಕಲಧ್ವನಿಯುಂಟಾಗಿದ್ದಿತು.

ಜೀವೇತಿ ನಂದತು ಭವಾನಿತಿ [೧೦]ವರ್ಧಿಷೀಷ್ಠಾಃ
ದೇವೇತಿ ನಿರ್ಜಯ ರಿಪೂನಿತಿ [೧೧]ಗಾಂ ಜಯೇತಿ ।
ತ್ವಂ [೧೨]ಸ್ತಾಚ್ಚಿರಾಯುರಿತಿ ಕಾಮಿತ[೧೩]ಮಾಪ್ನುಹೀತಿ
ಪುಣ್ಯಾಶಿಷಾಂ ಶತ[೧೪]ಮಲಂಭಿ ತದಾ ಸ ವೃದ್ಧೈಃ ॥ ೨೧೧ ॥

''ಪ್ರಭುವೆ! ನೀನು ಈ ರೀತಿಯಾಗಿ ಬಾಳು; ಈರೀತಿಯಾಗಿ ಆನಂದಪಡು; ಈ ರೀತಿಯಾಗಿ ವೃದ್ಧಿಹೊಂದು; ಈ ಪ್ರಕಾರವಾಗಿ ಶತ್ರುಗಳನ್ನು ಜಯಿಸು; ಈ

೧ ಪ್ರಣತೀತ್ಯಪಿ ಪಾಠಃ. ೨ ಅಧಿಕಾರಿಭಿಃ. ೩ ದ್ವಾರಸ್ಯ ಬಾಹ್ಯೇ. ೪ ಶಿಬಿರಮಧ್ಯೇ. ೫ ಅಂತಃಪುರಾಧಿಕಾರಿಭಿಃ. ೬ ಆಶೀರ್ವಚನಃ. ೭ ಆಗತಃ. ೮ ಆಶಿಷಂಕುರುಧ್ವಂ. ೯ ತಿಷ್ಠತ. ೧೦ ವರ್ಧಯ. ೧೧ ಭೂಮಿಂ. ೧೨ ಭವ. ೧೩ ಯಾಹಿ. ೧೪ ಪ್ರಾಪ್ತಃ.

ಪ್ರಕಾರವಾಗಿ ಪೃಥಿವಿಯನ್ನು ಜಯಿಸು; ಹೀಗೆ ಚಿರಾಯುಷ್ಯವುಳ್ಳವನಾಗಿರು; ಈ ರೀತಿಯಾಗಿ ಇಷ್ಟಾರ್ಥವನ್ನು ಹೊಂದು'' ಎಂದು ಆ ಭರತರಾಜನು ಪ್ರವೇಶ ಮಾಡಿದಾಗ ವೃದ್ಧರು ಅವನಿಗೆ ಪುಣ್ಯಕರವಾದ ಅನೇಕ ಆಶೀರ್ವಾದಗಳನ್ನು ಮಾಡಿದರು.

**ಜೀಯಾದರೀನಿಹ ಭವಾನಿತಿ ನಿರ್ಜಿತಾರಿ-**
**ರ್ದೇವ[೧]ಪ್ರಶಾಧಿ ವಸುಧಾಮಿತಿ ಸಿದ್ಧರತ್ನಃ ।**
**ತ್ವಂ ಜೀವತಾಚ್ಚಿರಮಿತಿ [೨]ಪ್ರಥಮಂ ಚಿರಾಯು-**
**ರಾಯೋಜಿ ಮಂಗಲಧಿಯಾ ಪುನರುಕ್ತವಾಕ್ಯೈಃ ॥ ೨೧೨ ॥**

''ಸ್ವಾಮಿಯೆ ! ಶತ್ರುಗಳನ್ನು ಜಯಿಸಿದ ನೀನು ಇಲ್ಲಿ ವೈರಿಗಳನ್ನು ಜಯಿಸು; ಸಿದ್ಧವಾದ ರತ್ನಗಳುಳ್ಳವನಾಗಿ ಭೂಮಿಯನ್ನಾಳು; ದೀರ್ಘಾಯುಷ್ಯವುಳ್ಳವನಾಗಿ ಬಹುಕಾಲದವರೆಗೆ ಬದುಕು'' ಈ ರೀತಿಯಾಗಿ ಮಂಗಲಕರವಾದ ಬುದ್ಧಿಯಿಂದ ಹಿಂದೆ ಹೇಳಿದ ವಾಕ್ಯಗಳಿಂದ ಭರತರಾಜನಿಗೆ ಪುನಃ ಆಶೀರ್ವಾದಮಾಡಿದರು.

**ದೇವೋಯಮಂಬುಧಿಮಗಾಧಮಲಂಘ್ಯಪಾರ-**
**ಮುಲ್ಲಂಘ್ಯ ಲಬ್ಧವಿಜಯಃ ಪುನರಪ್ಯ[೩]ಪಾಯಾತ್ ।**
**ಪುಣ್ಯೈಕಸಾರಥಿರಿಹೇತಿ ವಿನಾಂತರಾಯೈಃ**
**ಪುಣ್ಯೇ ಪ್ರಸೇದುಷಿ [೪]ನೃಣಾಂ ಕಿಮಿವಾಸ್ತ್ಯಲಂಘ್ಯಮ್ ॥ ೨೧೩ ॥**

''ಪುಣ್ಯವೇ ಮುಖ್ಯಸಾರಥಿಯಾಗಿರುವ ಈ ಭರತರಾಜನು ಆಳವೂ ದಾಟಲ ಶಕ್ಯವಾದ ದಡವುಳ್ಳುದೂ ಆದ ಸಮುದ್ರವನ್ನು ಈರೀತಿಯಾಗಿ ದಾಟಿ ವಿಘ್ನಗಳಿಲ್ಲದೆ ಜಯವನ್ನು ಹೊಂದಿ ಇಲ್ಲಿಗೆ (ಬಿಡಾರಕ್ಕೆ) ಬಂದನು; ಮನುಷ್ಯರಿಗೆ ಪುಣ್ಯವು ಪ್ರಸನ್ನವಾಗಿರುತ್ತಿರಲು ದಾಟಲಶಕ್ಯವಾದುದು ಯಾವುದಿದೆ ?

**ಪುಣ್ಯಾದಯಂ ಭರತಚಕ್ರಧರೋ ಜಿಗೀಷು-**
**ರುದ್ಭಿನ್ನವೇಲಮನಿಲಾಹತವೀಚಿಮಾಲಮ್ ।**
**ಪ್ರೋಲ್ಲಂಘ್ಯ ವಾರ್ಧಿ[೫]ಮಮರಂ ಸಹಸಾ [೬]ವಿಜಿಗ್ಯೇ**
**ಪುಣ್ಯೇ ಬಲೀಯಸಿ ಕಿಮಸ್ತಿ ಜಗ[೭]ತ್ಯಜಯ್ಯಮ್ ॥ ೨೧೪ ॥**

ಜಯಿಸಲಿಚ್ಛೆಯುಳ್ಳ ಈ ಭರತಚಕ್ರವರ್ತಿಯು ಪುಣ್ಯದಿಂದ, ಸೀಳಿದ ದಡವುಳ್ಳುದೂ ಗಾಳಿಯಿಂದ ಹೊಡೆಯಲ್ಪಟ್ಟ ಅಲೆಗಳುಳ್ಳುದೂ ಆದ ಸಮುದ್ರವನ್ನು ದಾಟಿ, ಮಾಗಧದೇವನನ್ನು ಶೀಘ್ರವಾಗಿ ಜಯಿಸಿದನು; ಪುಣ್ಯವು ಬಲಿಷ್ಠವಾಗಿರುತ್ತಿರಲು ಲೋಕದಲ್ಲಿ ಜಯಿಸುವುದಕ್ಕಶಕ್ಯವಾದುದು ಯಾವುದಿದೆ ?

**ಪುಣ್ಯೋದಯೇನ ಮಕರಾಕರವಾರಿ[೮]ಸೀಮ-**
**ಪೃಥ್ವೀಂ [೯]ಸ್ವಸಾದಕೃತ ಚಕ್ರಧರಃ ಪೃಥುಶ್ರೀಃ ।**
**ದುರ್ಲಂಘ್ಯಮಬ್ಧಿಮವಗಾಹ್ಯ ವಿನೋಪಸರ್ಗೈಃ**
**ಪುಣ್ಯಾತ್ಪರಂ ನ ಖಲು ಸಾಧನಮಿಷ್ಟಸಿದ್ಧ್ಯೈ ॥ ೨೧೫ ॥**

ಬಹಳವಾದ ಸಂಪತ್ತುಳ್ಳ ಚಕ್ರವರ್ತಿಯು ದಾಟುವುದಕ್ಕೆ ಕಷ್ಟವಾದ ಸಮುದ್ರವನ್ನು ವಿಘ್ನಗಳಿಲ್ಲದೆ ಪ್ರವೇಶಿಸಿ ಪುಣ್ಯೋದಯದಿಂದ ಸಮುದ್ರದ ಜಲವೇ ಎಲ್ಲೆಯಾಗಿರುವ ಭೂಮಿಯನ್ನು ಸ್ವಾಧೀನಪಡಿಸಿಕೊಂಡನು; ಇಷ್ಟಾರ್ಥದ ಸಿದ್ಧಿಗೆ ಪುಣ್ಯಕ್ಕಿಂತ ಬೇರೆಯಾದ ಸಾಧನವಿಲ್ಲವಷ್ಟೆ ?

**ಚಕ್ರಾಯುಧೋಯಮರಿಚಕ್ರಭಯಂಕರಶ್ರೀ**
**ರಾಕ್ರಮ್ಯ[೧೦]ಸಿಂಧುಮತಿಭೀಷಣನಕ್ರಚಕ್ರಮ್ ।**
**ಚಕ್ರೇ [೧೧]ವಶೇ ಸುರ[೧೨]ಮವಶ್ಯಮನನ್ಯವಶ್ಯಂ**
**ಪುಣ್ಯಾತ್ಪರಂ ನ ಹಿ ವಶೀಕರಣಂ ಜಗತ್ಯಾಮ್ ॥ ೨೧೬ ॥**

೧ ಶಾಸುಅನುಶಿಷ್ಟೌಲೇಟ್. ೨ ಪ್ರಥಮ ಇತ್ಯಪಿಪಾಠಃ. ೩ ಆಗಾತ್. ೪ ಪ್ರಸನ್ನೇಸತಿ. ೫ ಮಾಗಧಾಮರಂ. ೬ ಜಿತವಾನ್. ೭ ಜೇತುಮಶಕ್ಯಂ. ೮ ಸೀಮಾಮಿತ್ಯಪಿ ಪಾಠಃ. ೯ ಸ್ವಾಧೀನಾಂ ಚಕಾರ. ೧೦ ಸಮುದ್ರಂ. ೧೧ ಸಮೀಪೇ. ೧೨ ಸಪದಿ.

ಶತ್ರುಗಳ ಸಮೂಹಕ್ಕೆ ಭೀತಿಯನ್ನುಂಟುಮಾಡುವ ಈ ಚಕ್ರವರ್ತಿಯು ಅತ್ಯಂತ ಭಯಂಕರವಾದ ಮೊಸಳೆಗಳ ಸಮೂಹವುಳ್ಳ ಸಮುದ್ರವನ್ನಾಕ್ರಮಿಸಿ ಬೇರೆಯವರಿಗೆ ವಶವಾಗುವುದಕ್ಕರ್ಹನಲ್ಲದ ಮಾಗಧಾಮರನನ್ನು ಶೀಘ್ರವಾಗಿ ಸ್ವಾಧೀನ ಮಾಡಿಕೊಂಡನು; ಲೋಕದಲ್ಲಿ ಪುಣ್ಯಕ್ಕಿಂತ ಬೇರೆಯಾದ ವಶೀಕರಣವು ಇಲ್ಲವಷ್ಟೆ ?

**ಪುಣ್ಯಂ ಜಲೇ ಸ್ಥಲಮಿವಾ[೧]ಭ್ಯವಪದ್ಯತೇ ನ್ರೂನ್**
**ಪುಣ್ಯಂ ಸ್ಥಲೇ ಜಲಮಿವಾಶು ನಿಹಂತಿ ತಾಪಮ್ ।**
**ಪುಣ್ಯಂ ಜಲಸ್ಥಲಭಯೇ ಶರಣಂ ತೃತೀಯಂ**
**ಪುಣ್ಯಂ ಕುರುಧ್ವಮತ ಏವ ಜನಾ ಜಿನೋಕ್ತಮ್ ॥ ೨೧೭ ॥**

ನೀರಿನಲ್ಲಿ ಸ್ಥಲವು ಕಾಪಾಡುವಂತೆ ಮನುಷ್ಯರನ್ನು ಪುಣ್ಯವು ಕಾಪಾಡುತ್ತದೆ; ಪುಣ್ಯವು ಸ್ಥಲದಲ್ಲಿ ನೀರಿನಂತೆ ತಾಪವನ್ನು ಶೀಘ್ರವಾಗಿ ನಾಶಮಾಡುತ್ತದೆ; ನೀರಿನಲ್ಲಿಯೂ ಸ್ಥಲದಲ್ಲಿಯೂ ಭಯವುಂಟಾಗುತ್ತಿರಲು ಪುಣ್ಯವು ಮೂರನೆಯದಾದ ರಕ್ಷಕವು; ಈ ಕಾರಣದಿಂದಲೇ ಜನರೇ ! ಜಿನೇಶ್ವರರಿಂದ ಹೇಳಲ್ಪಟ್ಟ ಪುಣ್ಯವನ್ನು ಗಳಿಸಿರಿ.

**ಪುಣ್ಯಂ ಪರಂ ಶರಣಮಾಪದಿ ದುರ್ವಿಲಂಘ್ಯಂ**
**ಪುಣ್ಯಂ [೨]ದರಿದ್ರತಿ ಜನೇ ಧನದಾಯಿ ಪುಣ್ಯಮ್ ।**
**ಪುಣ್ಯಂ ಸುಖಾರ್ಥಿನಿ ಜನೇ ಸುಖದಾಯಿ ರತ್ನಂ**
**ಪುಣ್ಯಂ ಜಿನೋದಿತಮತಃ ಸುಜನಾಶ್ಚಿನುಧ್ವಮ್ ॥ ೨೧೮ ॥**

ಪುಣ್ಯವು ಜಗತ್ತಿನಲ್ಲಿ ಮುಖ್ಯವಾದ ರಕ್ಷಕವು; ಪುಣ್ಯವು ಅತಿಕ್ರಮಿಸುವುದಕ್ಕೆ ಕಷ್ಟಸಾಧ್ಯವಾದುದು; ಪುಣ್ಯವು ಬಡತನವುಳ್ಳ ಜನರಿಗೆ ದ್ರವ್ಯವನ್ನು ಕೊಡತಕ್ಕುದು; ಪುಣ್ಯವು ಸುಖವನ್ನಿಚ್ಛಿಸುವ ಜನರಿಗೆ ಸುಖವನ್ನು ಕೊಡುವ ರತ್ನವು; ಈ ಕಾರಣದಿಂದ ಉತ್ತಮಜನರೇ ! ಜಿನೇಶ್ವರರಿಂದ ಹೇಳಲ್ಪಟ್ಟ ಪುಣ್ಯವನ್ನು ಸಂಪಾದಿಸಿರಿ.

**ಪುಣ್ಯಂ ಜಿನೇಂದ್ರಪರಿಪೂಜನಸಾಧ್ಯಮಾದ್ಯಂ**
**ಪುಣ್ಯಂ ಸುಪಾತ್ರಗತದಾನಸಮುತ್ಥಮನ್ಯತ್ ।**
**ಪುಣ್ಯಂ ವ್ರತಾನುಚರಣಾದುಪವಾಸಯೋಗಾತ್**
**ಪುಣ್ಯಾರ್ಥಿನಾಮಿತಿ ಚತುಷ್ಟಯ[೩]ಮರ್ಜನೀಯಮ್ ॥ ೨೧೯ ॥**

ಜಿನೇಶ್ವರರ ಪೂಜೆಯಿಂದ ಹೊಂದತಕ್ಕುದು ಮೊದಲನೆಯ ಪುಣ್ಯವು; ಸತ್ಪಾತ್ರದಾನದಿಂದುಂಟಾಗುವುದು ಎರಡನೆಯ ಪುಣ್ಯವು; ವ್ರತಾಚರಣೆಯಿಂದಲೂ ಉಪವಾಸಸಂಬಂಧದಿಂದಲೂ ಪುಣ್ಯವುಂಟಾಗುವುದು; ಪುಣ್ಯವನ್ನಿಚ್ಛಿಸುವವರು ಈ ನಾಲ್ಕುಕಾರ್ಯಗಳನ್ನು ಮಾಡಬೇಕು.''

**ಇತ್ಥಂ ಸ್ವಪುಣ್ಯ[೪]ಪರಿಪಾಕಜಮಿಷ್ಟಲಾಭಂ**
**ಸಂಶ್ಲಾಘಯ[೫]ಜ್ಜನತಯಾ ಶ್ರುತಪುಣ್ಯಘೋಷಃ ।**
**ಚಕ್ರೀ ಸಭಾಗೃಹಗತೋ ನೃಪಚಕ್ರಮಧ್ಯೇ**
**ಶಕ್ರೋಪಮಃ ಪೃಥುನೃಪಾಸನ[೬]ಮಧ್ಯವಾತ್ಸೀತ್ ॥ ೨೨೦ ॥**

ಈ ರೀತಿಯಾಗಿ ತನ್ನ ಪುಣ್ಯೋದಯದಿಂದುಂಟಾದ ಇಷ್ಟವಸ್ತುಗಳ ಲಾಭವನ್ನು ಜನತೆಯಿಂದ ಶ್ಲಾಘಿಸಿಕೊಂಡವನೂ ಪುಣ್ಯಕರವಾದ ಶಬ್ದವನ್ನು ಕೇಳಿದವನೂ ಆದ ಚಕ್ರವರ್ತಿಯು ಸಭಾಸ್ಥಾನವನ್ನು ಹೊಂದಿದವನೂ ರಾಜರಸಮೂಹದ ಮಧ್ಯದಲ್ಲಿ ದೇವೇಂದ್ರನಿಗೆ ಸಮಾನನೂ ಆಗಿ ವಿಶಾಲವಾದ ಪೀಠದಲ್ಲಿ ಕುಳಿತನು.

೧ ಪ್ರಾಪ್ನೋತಿ, ರಕ್ಷತೀತ್ಯರ್ಥಃ, ಅಭ್ಯುಪಪದ್ಯತ ಇತ್ಯಪಿ ಪಾಠಃ. ೨ ದರಿದ್ರವತಿ. ೩ ಅರ್ಜನೀಯಮಿತ್ಯಪಿ ಪಾಠಃ. ೪ ಉದಯಜಂ. ೫ ಜನಸಮೂಹೇನ. ೬ ಅಧಿವಸತಿ ಸ್ಮ.

**ಧುತತಟವನೇ ರಕ್ತಾಶೋಕ[1]ಪ್ರವಾಲಪುಟೋದ್ಭಿದಿ**
**ಸ್ಪೃಶತಿ ಪವನೇ ಮಂದಂ ಮಂದಂ ತರಂಗವಿಭೇದಿನಿ ।**
**[2]ಅನುಸುರಸರಿತ್ಸೈನ್ಯೈಃ ಸಾರ್ಧಂ ಪ್ರಭುಃ ಸುಖಮಾವಸ-**
**ಜ್ಜಲನಿಧಿಜಯಶ್ಲಾಘಾ[3]ಶೀರ್ಭಿರ್ಜಿನಾನನುಚಿಂತಯನ್ ॥ ೨೨೧ ॥**

ಗಂಗಾನದಿಯ ದಡದಲ್ಲಿರುವ ವನವನ್ನಳ್ಳಾಡಿಸುತ್ತಿರುವುದೂ ರಕ್ತಾಶೋಕ ವೃಕ್ಷದ ತಳಿರುಗಳನ್ನು ಭೇದಿಸುವುದೂ ಅಲೆಗಳನ್ನು ಭೇದಿಸುವುದೂ ಆದ ಗಾಳಿಯು ಅತ್ಯಂತ ಮಂದವಾಗಿ ಸ್ಪರ್ಶಿಸುತ್ತಿರಲು, ಸಮುದ್ರದ ಜಯವನ್ನು ಶ್ಲಾಘಿಸುತ್ತಿರುವ ಆಶೀರ್ವಾದಗಳುಳ್ಳ ಸೈನಿಕರೊಡನೆ ಭರತಚಕ್ರವರ್ತಿಯು ಜಿನೇಶ್ವರನನ್ನು ಬಾರಿಬಾರಿಗೆ ಚಿಂತಿಸುತ್ತ ಸುಖವಾಗಿದ್ದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಪೂರ್ವಾರ್ಣವದ್ವಾರವಿಜಯವರ್ಣನಂ ನಾಮಾಷ್ಟಾವಿಂಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕಭಾವದೀಪಿಕಾ ವ್ಯಾಖ್ಯೆಯೊಳ್'' ಪೂರ್ವಸಮುದ್ರದ್ವಾರವಿಜಯವರ್ಣನವೆಂಬ
ಇಪ್ಪತ್ತೆಂಟನೆಯ ಪರ್ವವು ಸಂಪೂರ್ಣವಾದುದು.

---

೧ ಪಲ್ಲವಪುಟೋದ್ಭೇದಿನಿ. ೨ ಗಂಗಾತಟೇ. ೩ ಆಶೀರ್ವಾದೈಸ್ಸಹ.

# ಅಥೈಕೋನತ್ರಿಂಶತ್ತಮಂ ಪರ್ವ

**ಅಥ ಚಕ್ರಧರೋ ಜೈನೀಂ ಕೃತ್ವೇಜ್ಯಾಮಿಷ್ಟಸಾಧನೀಮ್ ।**
**ಪ್ರತಸ್ಥೇ ದಕ್ಷಿಣಾಮಾಶಾಂ ಜಿಗೀಷುರನುತೋಯಧಿ ॥ ೧ ॥**

ಅನಂತರದಲ್ಲಿ ಭರತಚಕ್ರವರ್ತಿಯು ಇಷ್ಟಾರ್ಥವನ್ನು ಸಾಧಿಸುವ ಜಿನಪೂಜೆಯನ್ನು ಮಾಡಿ ದಕ್ಷಿಣದಿಕ್ಕನ್ನು ಜಯಿಸಬೇಕೆಂಬ ಇಚ್ಛೆಯುಳ್ಳವನಾಗಿ ಸಮುದ್ರವನ್ನನುಸರಿಸಿ ಹೊರಟನು.

**[೧]ಯತೋಽಸ್ಯ [೨]ಪಟುಢಕ್ಕಾನಾಂ ಧ್ವನಿರಾಮಂದ್ರಮುಚ್ಚರನ್ ।**
**[೩]ಮೂರ್ಛಿತಃ ಕಾಹಲಾರಾವೈರಬ್ಧಿಧ್ವಾನಂ [೪]ತಿರೋದಧೇ ॥ ೨ ॥**

ಹೋಗುತ್ತಿರುವ ಈ ಭರತರಾಜನ ತೀಕ್ಷ್ಣವಾದ ಢವಣೆಗಳ ಶಬ್ದವು ತುತೂರಿಗಳ ಶಬ್ದಗಳೊಡನೆ ಮಿಶ್ರವಾದುದೂ ಗಂಭೀರವಾಗಿ ಶಬ್ದಮಾಡುವುದೂ ಆಗಿ ಸಮುದ್ರದ ಶಬ್ದವನ್ನು ಮರೆಮಾಡಿದ್ದಿತು.

**ಪ್ರಯಾಣಭೇರೀನಿಃಸ್ವಾನಃ [೫]ಸಮ್ಮೂರ್ಛನ್ಗಜಬೃಂಹಿತೈಃ ।**
**ದಿಙ್ಮುಖಾನ್ಯನಯತ್ಕ್ಷೋಭಂ ಹೃದಯಾನಿ ಚ ವಿದ್ವಿಷಾಮ್ ॥ ೩ ॥**

ಆನೆಗಳ ಗರ್ಜನೆಗಳೊಡನೆ ಮಿಶ್ರವಾದ ಪ್ರಯಾಣಭೇರಿಗಳ ಶಬ್ದವು ದಿಕ್ಕುಗಳನ್ನೂ ಶತ್ರುಗಳ ಹೃದಯಗಳನ್ನೂ ಕ್ಷೋಭೆಗೊಳಿಸಿದ್ದಿತು.

**ವಿಬಭುಃ ಪವನೋದ್ಧೂತಾ ಜಿಗೀಷೋರ್ಜಯಕೇತನಾಃ ।**
**ವಾರಿಧೇರಿವ ಕಲ್ಲೋಲಾ[೬]ನುದ್ವೇಲಾ[೭]ನಾಜುಹೂಷವಃ ॥ ೪ ॥**

ಜಯಿಸಬೇಕೆಂಬ ಇಚ್ಛೆಯುಳ್ಳ ಭರತರಾಜನ ಜಯಪತಾಕೆಗಳು ಗಾಳಿಯಿಂದ ಕೊಡಹಲ್ಪಟ್ಟು ಸಮುದ್ರದ ಉಕ್ಕುತ್ತಿರುವ ಅಲೆಗಳೊಡನೆ ಸ್ಪರ್ಧೆಮಾಡುವುದಕ್ಕೆ ಇಚ್ಛೆಯುಳ್ಳವುಗಳಂತೆ ಪ್ರಕಾಶಿಸಿದುವು.

**ಏಕತೋ ಲವಣಾಂಭೋಧಿರನ್ಯತೋಽಪ್ಯುಪಸಾಗರಃ ।**
**ತನ್ಮಧ್ಯೇ [೮]ಯಾನ್ಬಲೌಘೋಽಸ್ಯ ತೃತೀಯೋಽಬ್ಧಿರಿವಾಬಭೌ ॥ ೫ ॥**

ಒಂದುಕಡೆಯಲ್ಲಿ ಲವಣಸಮುದ್ರ, ಇನ್ನೊಂದುಕಡೆಯಲ್ಲಿ ಉಪಸಾಗರ (ಕ್ಷುಲ್ಲಕಸಮುದ್ರ). ಅವುಗಳ ಮಧ್ಯದಲ್ಲಿ ಹೋಗುತ್ತಿರುವ ಭರತರಾಜನ ಸೈನ್ಯಸಮೂಹವು ಮೂರನೆಯ ಸಮುದ್ರವೋ ಎಂಬಂತೆ ಪ್ರಕಾಶಿಸುತ್ತಿದ್ದಿತು.

**ಹಸ್ತ್ಯಶ್ವರಥಪಾದಾತಂ ದೇವಾಶ್ಚ ಸನಭಶ್ಚರಾಃ ।**
**ಷಡಂಗಂ ಬಲಮಸ್ಯೇತಿ ಪಪ್ರಥೇ ವ್ಯಾಪ್ಯ [೯]ರೋದಸೀ ॥ ೬ ॥**

ಆನೆ ಕುದುರೆ ರಥ ಕಾಲಾಳು ವಿದ್ಯಾಧರರು ದೇವತೆಗಳು ಹೀಗೆ ಭರತಚಕ್ರವರ್ತಿಯ ಆರು ಅವಯವಗಳುಳ್ಳ ಸೈನ್ಯವು ಆಕಾಶಭೂಮಿಗಳನ್ನು ವ್ಯಾಪಿಸಿ ಪ್ರಸಿದ್ಧವಾಗಿದ್ದಿತು.

**ಪುರಃ ಪ್ರತಸ್ಥೇ [೧೦]ದಂಡೇನ ಚಕ್ರೇಣ ತದನಂತರಮ್ ।**
**ತಾಭ್ಯಾಂ ವಿಶೋಧಿತೇ ಮಾರ್ಗೇ ತದ್ಬಲಂ ಪ್ರಯಯೌ ಸುಖಮ್ ॥**

ದಂಡರತ್ನವೂ ಆಮೇಲೆ ಚಕ್ರರತ್ನವೂ ಮುಂದೆಹೋದುವು. ಆ ದಂಡರತ್ನದಿಂದಲೂ ಚಕ್ರರತ್ನದಿಂದಲೂ ಪರಿಶೋಧಿಸಲ್ಪಟ್ಟ ಮಾರ್ಗದಲ್ಲಿ ಚಕ್ರವರ್ತಿಯ ಸೈನ್ಯವು ಸುಖವಾಗಿ ಪ್ರಯಾಣಮಾಡಿತು.

೧ ಗಚ್ಛತಃ. ೨ ಪದಢಕ್ಕಾನಾಮಿತ್ಯಪಿ ಪಾಠಃ. ೩ ಮಿಶ್ರಿತಃ. ೪ ಆಚ್ಛಾದಯತಿ ಸ್ಮ. ೫ ಮಿಶ್ರೀಭವನ್. ೬ ಉಜ್ಜೃಂಭಿತಾನ್. ೭ ಸ್ಪರ್ಧಾಂ ಕರ್ತುಮಿಚ್ಛವಃ. ೮ ಗಚ್ಛನ್. ೯ ದ್ಯಾವಾಪೃಥಿವ್ಯೌ. ೧೦ ದಂಡರತ್ನೇನ.

**ತಚ್ಚಕ್ರಮರಿಚಕ್ರಸ್ಯ ಕೇವಲಂ [೧]ಕ್ರಕಚಾಯಿತಮ್ ।**
**ದಂಡೋಽಪಿ [೨]ದಂಡ್ಯಪಕ್ಷಸ್ಯ [೩]ಕಾಲದಂಡ ಇವಾಪರಃ ॥ ೮ ॥**

ಮುಖ್ಯವಾಗಿ ಆ ಚಕ್ರವು ಶತ್ರುಗಳ ಸಮೂಹಕ್ಕೆ ಗರಗಸದಂತೆಯೂ ದಂಡರತ್ನವು ಯಮನ ಬೇರೊಂದು ದಂಡದಂತೆಯೂ ಇದ್ದುವು.

**ಪ್ರಯಯೌ [೪]ನಿಕಷಾಂಭೋಧಿಂ [೫]ಸಮಯಾ ತಟವೇದಿಕಾಮ್ ।**
**ಅನುವೇಲಾವನಂ ಸಮ್ರಾಟ್ ಸೈನ್ಯೈಃ [೬]ಸಂಶ್ರಾವಯನ್ ದಿಶಃ ॥ ೯ ॥**

ಭರತಚಕ್ರವರ್ತಿಯು ಸೈನ್ಯಗಳಿಂದ ದಿಕ್ಕುಗಳನ್ನು ವಶಪಡಿಸುತ್ತ ಸಮುದ್ರದ ಸಮೀಪದಲ್ಲಿರುವ ದಡದ ವೇದಿಕೆಯ ಸಮೀಪದಲ್ಲಿ ಪ್ರಯಾಣಮಾಡಿದನು.

**[೭]ಅನುವಾರ್ಧಿತಟಂ [೮]ಕರ್ಷನ್ನಲಂಘ್ಯಾಂ ಸ್ವಾಮನೀಕಿನೀಮ್ ।**
**ಆಜ್ಞಾಲತಾಂ ನೃಪಾದ್ರೀಣಾಂ ಮೂರ್ಧ್ನಿ ರೋಪಯತಿ ಸ್ಮ ಸಃ ॥ ೧೦ ॥**

ಭರತಚಕ್ರವರ್ತಿಯು ಅತಿಕ್ರಮಿಸಲಶಕ್ಯವಾದ ತನ್ನ ಸೈನ್ಯವನ್ನು ಸಮುದ್ರತೀರದಲ್ಲಿ ನಡೆಯಿಸುತ್ತ ತನ್ನ ಆಜ್ಞೆಯೆಂಬ ಲತೆಯನ್ನು ರಾಜರುಗಳೆಂಬ ಪರ್ವತಗಳ ಮಸ್ತಕದಲ್ಲಿ ನೆಟ್ಟನು. ತನ್ನ ಆಜ್ಞೆಯನ್ನು ಮನ್ನಿಸುವಂತೆ ಮಾಡಿದನೆಂದು ಭಾವವು.

**ಚಲಿತೇ ಚಲಿತಂ ಪೂರ್ವಂ ನಿರ್ಯಾತೇ ನಿಃಸೃತಂ ಪುರಃ ।**
**ಪ್ರಯಾತೇ ಯಾತಮೇವಾ[೯]ಸ್ಮಿನ್ಸೇನಾನೀಭಿರಿವಾರಿಭಿಃ ॥ ೧೧ ॥**

ಭರತರಾಜನು ನಡೆದಾಗ ಶತ್ರುಗಳು, ಸೇನಾಪತಿಗಳಂತೆ, ಮುಂದೆ ನಡೆದರು; ಅವನು ಹೊರಟಾಗ ಮುಂದೆ ಹೊರಟರು; ಪ್ರಯಾಣ ಮಾಡಿದಾಗ ಮುಂದೆ ಪ್ರಯಾಣ ಮಾಡಿದರು.

**ನಿಷ್ಕ್ರಾಂತ ಇತಿ ಸಂಭ್ರಾಂತೈರಾಯಾತ ಇತಿ ಭೀವಶೈಃ ।**
**[೧೦]ಪ್ರಾಪ್ತ ಇತ್ಯ[೧೧]ನವಸ್ಥೈಶ್ಚ ಪ್ರಣೇಮೇ ಸೋಽರಿಭೂಮಿಪೈಃ ॥ ೧೨ ॥**

ಭರತನು ಹೊರಟನೆಂದು ಭ್ರಾಂತಿಗೊಂಡವರೂ ಬಂದನೆಂದು ಭಯಪರವಶರೂ ಸಮೀಪವನ್ನು ಹೊಂದಿದನೆಂದು ಪೂರ್ವಸ್ವಭಾವವನ್ನು ಪರಿತ್ಯಜಿಸಿದವರೂ ಆದ ಶತ್ರುರಾಜರು ಭರತರಾಜನಿಗೆ ನಮಸ್ಕರಿಸಿದರು.

**[೧೨]ಮಹಾಪಗಾರಯಸ್ಯೇವ ತರುರಸ್ಯ ಬಲೀಯಸಃ ।**
**ಯೋ ಯಃ [೧೩]ಪ್ರತೀಪಮಭವತ್ಸ ಸ ನಿರ್ಮೂಲತಾಂ ಯಯೌ ॥**

ದೊಡ್ಡಹೊಳೆಯ ವೇಗಕ್ಕೆ ಪ್ರತಿಕೂಲವಾದ ವೃಕ್ಷವು ನಿರ್ಮೂಲವಾಗಿ ನಾಶವಾಗುವಂತೆ, ಬಲಿಷ್ಠನಾದ ಭರತಚಕ್ರವರ್ತಿಗೆ ಪ್ರತಿಕೂಲಭಾವವನ್ನು ಹೊಂದಿದವರು ನಿರ್ಮೂಲತ್ವ(ನಾಶ)ವನ್ನು ಹೊಂದಿದರು.

**[೧೪]ಪ್ರತೀಪವೃತ್ತಿಮಾದರ್ಶೇ [೧೫]ಛಾಯಾತ್ಮಾನಂ ಚ ನಾತ್ಮನಃ ।**
**ವಿಕ್ರಮೈಕರಸಶ್ಚಕ್ರೀ ಸೋ[೧೬]ಸೋಢ ಕಿಮುತ ದ್ವಿಷಮ್ ॥ ೧೪ ॥**

೧ ಕರಪತ್ರಮಿವಾಚರಿತಂ. ೨ ಶತ್ರುಪಕ್ಷಸ್ಯ. ೩ ಯಮದಂಡಃ. ೪ ಅಂಭೋಧೇಃ ಸಮೀಪೇ. ೫ ತಟವೇದಿಕಾಯಾಃ, ಸಮೀಪೇ. ೬ ಸಾಧಯನ್. ೭ ಸಮುದ್ರತಟೇ. ೮ ಪ್ರಾಪಯನ್. ೯ ಭರತೇ. ೧೦ ಸಮೀಪಂ ಪ್ರಾಪ್ತಃ. ೧೧ ಅವಸ್ಥಾಮತಿಕ್ರಾಂತ್ಯೈಃ, ತ್ಯಕ್ತಪೂರ್ವಸ್ವಭಾವೈರಿತ್ಯರ್ಥಃ. ೧೨ ಮಹಾನದೀವೇಗಸ್ಯ. ೧೩ ಪ್ರತಿಕೂಲಂ. ೧೪ ಪ್ರತಿಕೂಲವೃತ್ತಿಂ. ೧೫ ಛಾಯಾಸ್ವರೂಪಂ. ೧೬ ಸಹತೇ ಸ್ಮ.

ಪರಾಕ್ರಮವೇ ಮುಖ್ಯರಸವಾಗಿರುವ ಭರತಚಕ್ರವರ್ತಿಯು ಕನ್ನಡಿಯಲ್ಲಿ ತನ್ನ ಛಾಯಾಸ್ವರೂಪವನ್ನೂ, ಅದು ಪ್ರತಿಕೂಲವೃತ್ತಿಯೆಂದು, ಸಹಿಸಲಿಲ್ಲ. ಶತ್ರುವಿನ ವಿಷಯವನ್ನು ಹೇಳುವುದೇನು ? ಶತ್ರುವನ್ನು ಸಹಿಸಲೇ ಇಲ್ಲವೆಂದು ಭಾವವು.

**[೧]ಚಮೂರವಶ್ರವಾದೇವ ಕೈಶ್ಚಿದಸ್ಯ ವಿರೋಧಿಭಿಃ ।**
**[೨]ಚಮೂರುವೃತ್ತಮಾರಬ್ಧಮತಿದೂರಂ ಪಲಾಯಿತೈಃ ॥ ೧೫ ॥**

ಭರತನ ಸೈನ್ಯದ ಶಬ್ದವನ್ನು ಕೇಳಿಯೇ ಬಹಳ ದೂರ ಓಡಿಹೋದ ಅವನ ಕೆಲವು ಶತ್ರುಗಳು ಜಿಂಕೆಯ ಆಚರಣೆಯನ್ನಾರಂಭಿಸಿದರು. ಓಡಿಹೋದರೆಂದು ಭಾವವು.

**[೩]ಮಹಾಭೋಗೈರ್ನೃಪೈಃ ಕೈಶ್ಚಿದ್ಭಯಾ[೪]ದುತ್ಸೃಷ್ಟಮಂಡಲೈಃ ।**
**ಭುಜಂಗೈರಿವ ನಿರ್ಮೋಕಸ್ತತ್ಯಜೇಪಿ [೫]ಪರಿಚ್ಛದಃ ॥ ೧೬ ॥**

ದೊಡ್ಡ ಶರೀರವುಳ್ಳುವೂ ಭಯದಿಂದ ವರ್ತುಲಾಕಾರವನ್ನು ಪರಿತ್ಯಜಿಸಿದುವೂ ಆದ ಸರ್ಪಗಳು ಪೊರೆಯನ್ನು ಬಿಡುವಂತೆ, ಬಹಳವಾಗಿ ಭೋಗವನ್ನನುಭವಿಸಿದವರೂ ಭಯದಿಂದ ದೇಶವನ್ನು ಪರಿತ್ಯಜಿಸಿದವರೂ ಆದ ಕೆಲವು ರಾಜರು ತಮ್ಮ ಛತ್ರ ಚಾಮರ ಮೊದಲಾದ ಪರಿಕರವನ್ನೂ ಪರಿತ್ಯಜಿಸಿದರು.

**ಪ್ರದುಷ್ಟಾ[೬]ನ್ಭೋಗಿನಃ ಕಾಂಶ್ಚಿತ್ಪ್ರಭುರುದ್ಧೃತ್ಯ [೭]ಮಂತ್ರತಃ ।**
**ವಲ್ಮೀಕೇಷ್ವಿವ ದುರ್ಗೇಷು [೮]ಕುಲ್ಯಾನನ್ಯಾ[೯]ನತಿಷ್ಠಿಪತ್ ॥ ೧೭ ॥**

ಹಾವಾಡಿಗನು ದುಷ್ಟವಾದ ಸರ್ಪಗಳನ್ನು ಮಂತ್ರದಿಂದ ಎತ್ತಿಹಿಡಿದು ಹುತ್ತಗಳಲ್ಲಿರಿಸುವಂತೆ, ಭರತರಾಜನು ದುಷ್ಟರೂ ಸುಖಪಡುವವರೂ ಸತ್ಕುಲದಲ್ಲಿ ಹುಟ್ಟಿದವರೂ ಆದ ಬೇರೆ ಕೆಲವರನ್ನು ಮಂತ್ರಶಕ್ತಿಯಿಂದ ಕಿತ್ತು ದುರ್ಗಗಳಲ್ಲಿ ಸ್ಥಾಪಿಸಿದನು.

**ಅನನ್ಯಶರಣೈರನ್ಯೈಸ್ತಾಪವಿಚ್ಛೇದಮಿಚ್ಛುಭಿಃ ।**
**ತತ್ಪಾದಪಾದಪಚ್ಛಾಯಾ ನ್ಯಷೇವಿ ಸುಖಶೀತಲಾ ॥ ೧೮ ॥**

ಬೇರೆ ರಕ್ಷಕರಿಲ್ಲದವರೂ ದುಃಖದ ನಾಶವನ್ನಿಚ್ಛಿಸುವವರೂ ಆದ ಬೇರೆ ಕೆಲವರು ಸುಖವೆಂಬ ಶೈತ್ಯಗುಣವುಳ್ಳ ಆ ಭರತಚಕ್ರವರ್ತಿಯ ಪಾದಗಳೆಂಬ ವೃಕ್ಷಗಳ ನೆರಳನ್ನು ಸೇವಿಸಿದರು. ಶರಣಾಗತರಾದರೆಂದಭಿಪ್ರಾಯವು.

**ಕೇಷಾಂಚಿ[೧೦]ತ್ಪತ್ರನಿರ್ಮೋಕ್ಷಂ [೧೧]ಛಾಯಾಪಾಯಂ ಚ ಭೂಭುಜಾಮ್ ।**
**ಪಾದಪಾನಾಮಿವ ಗ್ರೀಷ್ಮಃ [೧೨]ಸಮಭ್ಯರ್ಣಶ್ಚಕಾರ ಸಃ ॥ ೧೯ ॥**

ಗ್ರೀಷ್ಮಋತುವು ವೃಕ್ಷಗಳ ಎಲೆಗಳನ್ನೂ ನೆರಳನ್ನೂ ನಾಶಮಾಡುವಂತೆ, ಸಮೀಪಸ್ಥನಾದ ಭರತಚಕ್ರವರ್ತಿಯು ಕೆಲವು ರಾಜರುಗಳ ವಾಹನಗಳ ನಾಶವನ್ನೂ ತೇಜೋಹಾನಿಯನ್ನೂ ಮಾಡಿದನು.

**[೧೩]ಧ್ವಸ್ತೋಷ್ಮಪ್ರಸರಾ ಗಾಢಮುಚ್ಛ್ವಸಂತೋಂತರಾಕುಲಾಃ ।**
**ಪ್ರಾಪ್ತೇ[೧೪]ಸ್ಮಿನ್ವೈರಿಭೂಪಾಲಾಃ ಪ್ರಾಪು[೧೫]ರ್ಮರ್ತ್ಯಶೇಷತಾಮ್॥ ೨೦ ॥**

ಭರತರಾಜನು ಸಮೀಪಕ್ಕೆ ಬರಲು ತಮ್ಮ ಮಹಿಮೆಯ ಹರಡುವಿಕೆಯು ನಷ್ಟವಾಯಿತೆಂದು ಹೆಚ್ಚಾಗಿ ಉಸಿರುಬಿಡುವವರೂ ಮನಸ್ಸಿನಲ್ಲಿ ವ್ಯಸನವುಳ್ಳವರೂ ಆದ ಶತ್ರುರಾಜರುಗಳು ಮರಣಾವಸ್ಥೆಯನ್ನು ಹೊಂದಿದ ಪುರುಷನಂತಾದರು.

**[೧೬]ವೈರಕಾಮ್ಯತಿ ಯಃ ಸ್ಮಾ[೧೭]ಸ್ಮಿನ್ಪ್ರಾಗೇವ ವಿನನಾಶ ಸಃ ।**
**[೧೮]ವಿದಿಧ್ಯಾಪಯಿಷುರ್ವಹ್ನಿಂ ಶಲಭಃ ಕುಶಲೀ ಕಿಮು ॥ ೨೧ ॥**

೧ ಸೇನಾಧ್ವನಿಸಮಾಕರ್ಣನಾತ್. ೨ ಕಂಭೋಜಾದಿದೇಶಜಹರಿಣವರ್ತನಂ. ೩ ಪಕ್ಷೇ ಮಹಾಕಾಯೈಃ. ೪ ತ್ಯಕ್ತಭೂಭಾಗೈಃ, ತ್ಯಕ್ತವಲಯೈಶ್ಚ. ೫ ಛತ್ರಚಾಮರಾದಿಪರಿಕರೋಪಿ ತ್ಯಕ್ತಃ. ೬ ಪಕ್ಷೇ ಸರ್ಪಾನ್. ೭ ಮಂತ್ರಶಕ್ತಿತಃ. ೮ ಸತ್ಕುಲಜಾನ್. ೯ ಸ್ಥಾಪಯತಿ ಸ್ಮ. ೧೦ ವಾಹನನಿರ್ನಾಶಂ, ಪರ್ಣನಿರ್ನಾಶಂಚ. ೧೧ ತೇಜೋಹಾನಿಂ. ೧೨ ಸಮೀಪಸ್ಥಃ. ೧೩ ನಿರಸ್ತಪ್ರಭಾವಪ್ರಸರಾಃ, ನಿರಸ್ತೋಷ್ಣಪ್ರಸರಾಶ್ಚ. ೧೪ ಭರತೇ. ೧೫ ಮರಣಕಾಲಪ್ರಾಪ್ತಪುರುಷಸಮಾನತಾಂ. ೧೬ ವೈರಮಿಚ್ಛತಿ. ೧೭ ಭರತೇ.. ೧೮ ಕ್ಷಪಯಿತುಮಿಚ್ಛುಃ.

ಯಾವನು ಭರತರಾಜನಲ್ಲಿ ದ್ವೇಷವನ್ನಿಚ್ಛಿಸಿದನೋ ಅವನು ಭರತರಾಜನು ಸಮೀಪಕ್ಕೆ ಬರುವ ಮೊದಲೇ ನಾಶವನ್ನು ಹೊಂದಿದನು. ಬೆಂಕಿಯನ್ನಾರಿಸಬೇಕೆಂದಿಚ್ಛೆಯುಳ್ಳ ಪತಂಗವು ಕ್ಷೇಮವಾಗಿರುವುದೇ ?

**ವಸ್ತುವಾಹನಸರ್ವಸ್ವ[೧]ಮಾಛಿದ್ಯ ಪ್ರಭು[೨]ರಾಹರನ್ ।**
**[೩]ಅರಿತ್ವಮರಿಚಕ್ರೇಷು ವ್ಯಕ್ತಮೇವ ಚಕಾರ ಸಃ ॥ ೨೨ ॥**

ವಸ್ತು ವಾಹನ ಮೊದಲಾದ ಸಮಸ್ತ ಪದಾರ್ಥಗಳನ್ನೂ ಸೆಳೆದು ಸ್ವೀಕರಿಸುವ ಭರತಚಕ್ರವರ್ತಿಯು ಶತ್ರುಗಳ ಸಮೂಹಗಳಲ್ಲಿ ನಿಜವಾಗಿ ದ್ರವ್ಯಾಭಾವವನ್ನುಂಟುಮಾಡಿದನು.

**ಸ್ವಯಮರ್ಪಿತಸರ್ವಸ್ವಾ ನಮಂತಶ್ಚಕ್ರವರ್ತಿನಮ್ ।**
**ಪೂರ್ವಮಪ್ಯರಯಃ ಪಶ್ಚಾ[೪]ದಧಿಕಾರಿತ್ವಮಾಚರನ್ ॥ ೨೩ ॥**

ತಾವಾಗಿ ಸಮಸ್ತ ಪದಾರ್ಥಗಳನ್ನೂ ಸಮರ್ಪಿಸಿದವರು ಭರತರಾಜನಿಗೆ ನಮಸ್ಕಾರಮಾಡಿ ಮೊದಲು ತಾವು ಅರಿ(ಶತ್ರು)ಗಳಾಗಿದ್ದರೂ ಬಳಿಕ ಅಧಿಕ ಅರಿತ್ವವನ್ನು (ಅಧಿಕಾರಿತ್ವವನ್ನು) ಹೊಂದಿದರು. ಭರತರಾಜನು ಶರಣಾಗತರನ್ನು ತನ್ನ ಕಡೆಯ ಅಧಿಕಾರಿಗಳನ್ನಾಗಿ ಮಾಡಿದನೆಂದು ಭಾವವು.

**[೫]ಸಾಧನೈರಮುನಾಕ್ರಾಂತಾ ಯಾ ಧರಾ ಧೃತಸಾಧ್ವಸಾ ।**
**ಸಾಧನೈರೇವ [೬]ತಂ ತೋಷಂ ನೀತ್ವಾಭೂ[೭]ದ್ಧೃತಸಾಧ್ವಸಾ ॥ ೨೪ ॥**

ಯಾವ ಭೂಮಿಯನ್ನು ಭರತಚಕ್ರವರ್ತಿಯು ತನ್ನ ಸೈನ್ಯಗಳಿಂದ ಆಕ್ರಮಿಸಿದನೋ ಭಯವನ್ನು ಹೊಂದಿರುವ ಆ ಭೂಮಿಯು ದ್ರವ್ಯಗಳಿಂದಲೇ ಆ ಭರತರಾಜನನ್ನು ಸಂತೋಷಪಡಿಸಿ ನಿರ್ಭಯವಾಯಿತು.

**[೮]ಕುಲ್ಯಾಃ ಕುಲಧನಾನ್ಯಸ್ಮೈ ದತ್ವಾ ಸ್ವಾಂ ಭುವ[೯]ಮಾರ್ಜಿಜನ್ ।**
**[೧೦]ಕುಲ್ಯಾ ಧನಜಲೌಘಸ್ಯ ಜಿಗೀಷೋಸ್ತೇ ಹಿ ಪಾರ್ಥಿವಾಃ ॥ ೨೫ ॥**

ಸತ್ಕುಲೋತ್ಪನ್ನರಾದ ರಾಜರು ಭರತರಾಜನಿಗೆ ತಮ್ಮ ವಂಶಪರಂಪರೆಯಿಂದ ಬಂದ ರತ್ನ ಮೊದಲಾದ ದ್ರವ್ಯಗಳನ್ನು ಕೊಟ್ಟು ಅವನು ವಶಪಡಿಸಿಕೊಂಡಿದ್ದ ತಮ್ಮ ಭೂಮಿಯನ್ನು ಸಂಪಾದಿಸಿಕೊಂಡರು. ಜಯಿಸಲಿಚ್ಛೆಯುಳ್ಳ ರಾಜನ ದ್ರವ್ಯವೆಂಬ ಜಲನಿಧಿಗೆ ಸಾಮಾನ್ಯರಾಜರುಗಳು ಸಣ್ಣ ಹೊಳೆಗಳಂತಿರುವರಲ್ಲವೆ ? ಬಲಿಷ್ಠನಾದ ರಾಜನಿಗೆ ಸಾಮಾನ್ಯರಾಜರಿಂದ ದ್ರವ್ಯವು ಪ್ರಾಪ್ತವಾಗುವುದೆಂದಭಿಪ್ರಾಯವು.

**ಪ್ರಜಾಃ ಕರಭರಾಕ್ರಾಂತಾ ಯಸ್ಮಿನ್ಸ್ವಾಮಿನಿ [೧೧]ದುಃಖಿತಾಃ ।**
**[೧೨]ತ[೧೩]ಮುದ್ಧೃತ್ಯ ಪದೇ ತಸ್ಯ [೧೪]ಯುಕ್ತದಂಡಂ [೧೫]ನ್ಯಧಾದ್ವಿಭುಃ ॥**

ಯಾವ ರಾಜನ ಕಂದಾಯದ ಭಾರದಿಂದ ಕುಗ್ಗಿದ ಪ್ರಜೆಗಳು ದುಃಖಪಡುತ್ತಿದ್ದರೋ ಅಂತಹ ದುಷ್ಟರಾಜನನ್ನು ಭರತನು ಕಿತ್ತೊಗೆದು ಅವನ ಸ್ಥಾನದಲ್ಲಿ ಯೋಗ್ಯನಾದ ಅಧಿಕಾರಿ-ಪುರುಷನನ್ನು ಸ್ಥಾಪಿಸಿದನು.

**[೧೬]ನಿಜಗ್ರಾಹ ನೃಪಾನ್ [೧೭]ದೃಪ್ತಾ [೧೮]ನನುಜಗ್ರಾಹ ಸತ್ಕ್ರಿಯಾನ್ ।**
**[೧೯]ನ್ಯಾಯ್ಯಃ [೨೦]ಕ್ಷಾತ್ರೋಯಮಿತ್ಯೇವ ಪ್ರಜಾಹಿತವಿಧಿತ್ಸಯಾ ॥ ೨೭ ॥**

ಪ್ರಜೆಗಳಿಗೆ ಹಿತವನ್ನು ಮಾಡಬೇಕೆಂಬ ಇಚ್ಛೆಯಿಂದ ಭರತರಾಜನು ಅಹಂಕಾರಿಗಳಾದ ರಾಜರನ್ನು ನಿಗ್ರಹಿಸಿದನು; ಸತ್ಕಾರ್ಯವುಳ್ಳವರನ್ನನುಗ್ರಹಿಸಿದನು; ಇಂತಹ ಕ್ಷತ್ರಿಯಧರ್ಮವು ನ್ಯಾಯವಾದುದೇ ಆಗಿದೆ.

೧ ಆಕೃಷ್ಯ. ೨ ಸ್ವೀಕುರ್ವನ್. ೩ ನ ವಿದ್ಯತೇ ರಾಃ ಧನಂ ಯೇಷಾಂ ತಾನಿ, ತೇಷಾಂ ಭಾವಃ ಅರಿತ್ವಂ ನಿಃಸ್ವತ್ವಂ. ೪ ಅಧಿಕಶತ್ರುತ್ವಮಿತಿ ಧ್ವನಿಃ. ೫ ಸೈನ್ಯೈಃ. ೬ ಭರತಂ. ೭ ನಿರಸ್ತಭೀತಿಃ. ೮ ಕುಲಜಾಃ. ೯ ಉಪಾರ್ಜಯಂತಿ ಸ್ಮ. ೧೦ ಕುಲ್ಯಾಲ್ಪಾಕೃತಿಮಾಸರಿತ್, ಕುಲ್ಯಾಃ ಕುಲವಧೂಃ ಸರಿತ್ ಇತಿ ಚ. ೧೧ ದುಃಸ್ಥಿತಾ ಇತ್ಯಪಿ. ೧೨ ದುಷ್ಟಸ್ವಾಮಿನಂ. ೧೩ ಉತ್ಪಾಟ್ಯ. ೧೪ ಯೋಗ್ಯದಂಡಕಾರಿಪುರುಷಂ. ೧೫ ಸ್ಥಾಪಯಾಮಾಸ. ೧೬ ನಿಗ್ರಹಂ ಕರೋತಿ ಸ್ಮ. ೧೭ ದರ್ಪಾವಿಷ್ಟಾನ್. ೧೮ ಸ್ವೀಕೃತವಾನ್. ೧೯ ನ್ಯಾಯಾದನಪೇತಃ. ೨೦ ಕ್ಷತ್ರಿಯಧರ್ಮಃ.

**ಯೋಗಕ್ಷೇಮೌ ಜಗತ್ಸ್ಥಿತ್ಯೈ ನ ಪ್ರಜಾಸ್ವೇವ ಕೇವಲಮ್ ।**
**[೧]ಪ್ರಜಾಪಾಲೇಷ್ವಪಿ ಪ್ರಾಯ[೨]ಸ್ತಸ್ಯ ಚಿಂತ್ಯತ್ವಮೀಯತುಃ ॥ ೨೮ ॥**

ಭರತಚಕ್ರವರ್ತಿಯು ಜಗತ್ತಿನ ಸ್ಥಿತಿಗೋಸ್ಕರ ಪ್ರಜೆಗಳ ಯೋಗಕ್ಷೇಮಗಳನ್ನು ಮಾತ್ರ ಚಿಂತಿಸಲಿಲ್ಲ ; ಹೆಚ್ಚಾಗಿ ರಾಜರುಗಳ ಯೋಗಕ್ಷೇಮಗಳನ್ನೂ ಚಿಂತಿಸಿದನು. ಭರತಚಕ್ರವರ್ತಿಯು ತನ್ನ ಅಧೀನರಾಜರುಗಳ ಮತ್ತು ಪ್ರಜೆಗಳ ಯೋಗಕ್ಷೇಮಗಳನ್ನು ವಿಚಾರಮಾಡಿದನೆಂದು ಭಾವವು.

**ಪಾರ್ಥಿವಸ್ಯೈಕರಾಷ್ಟ್ರಸ್ಯ ಮತಾ [೩]ವರ್ಣಾಶ್ರಮಾಃ ಪ್ರಜಾಃ ।**
**ಪಾರ್ಥಿವಾಃ ಸಾರ್ವಭೌಮಸ್ಯ ಪ್ರಜಾ [೪]ಯು[೫]ತ್ತೇನ [೬]ತೇ[೭]ಧೃತಾಃ ॥ ೨೯ ॥**

ಒಂದುದೇಶದ ರಾಜನಿಗೆ ಬ್ರಾಹ್ಮಣ ಮೊದಲಾದ ವರ್ಣಗಳೂ ಬ್ರಹ್ಮಚರ್ಯ ಮೊದಲಾದ ಆಶ್ರಮಗಳೂ ಉಳ್ಳ ಪ್ರಜೆಗಳು ಅಧೀನರಾಗಿರುತ್ತಾರೆ; ಅಂತಹ ರಾಜರುಗಳು ಚಕ್ರವರ್ತಿಗೆ ಪ್ರಜೆಗಳಾಗಿರುವುದರಿಂದ ಅವನು ಆ ರಾಜರನ್ನು ತನ್ನವರನ್ನಾಗಿ ಪರಿಗ್ರಹಿಸಿದನು.

**ಪುಣ್ಯಂ ಸಾಧನಮಸ್ಯೈಕಂ ಚಕ್ರಂ ತಸ್ಯೈವ ಪೋಷಕಮ್ ।**
**ತದ್ದ್ವಯಂ ಸಾಧ್ಯಸಿದ್ಧ್ಯಂಗಂ ಸೇನಾಂಗಾನಿ ವಿಭೂತಯೇ ॥ ೩೦ ॥**

ಭರತರಾಜನಿಗೆ ಪುಣ್ಯವು ಮುಖ್ಯವಾದ ಸಾಧನವಾಗಿದ್ದಿತು; ಚಕ್ರವು ಆ ಪುಣ್ಯಕ್ಕೇ ಸಹಾಯಕವಾಗಿದ್ದಿತು; ಅವೆರಡು ಸಾಧ್ಯಸಿದ್ಧಿಗೆ ಕಾರಣಗಳಾಗಿದ್ದುವು; ಸೈನ್ಯ ಮೊದಲಾದ ಬೇರೆ ಅಂಗಗಳೆಲ್ಲ ಚಕ್ರವರ್ತಿಯ ವೈಭವವನ್ನು ಪ್ರಕಾಶಪಡಿಸುವುವುಗಳಾಗಿದ್ದುವು.

**ಇತಿ ಮಂಡಲಭೂಪಾಲಾನ್ಬಲಾ[೮]ತ್ಪ್ರಾಣಮಯನ್ನಯಮ್ ।**
**[೯]ಮಾನಮೇವಾ[೧೦]ಭನಕ್ತೇಷಾಂ ನ ಸೇವಾಪ್ರಣಯಂ ವಿಭುಃ ॥ ೩೧ ॥**

ಈ ಪ್ರಕಾರವಾಗಿ ಮಂಡಲಾಧಿಪತಿಗಳನ್ನು ಬಲಾತ್ಕಾರದಿಂದ ನಮಸ್ಕಾರ ಮಾಡಿಸುತ್ತಿರುವ ಭರತರಾಜನು ಆ ರಾಜರುಗಳ ಗರ್ವವನ್ನು ಮರ್ದನ ಮಾಡಿದನಲ್ಲದೆ ತನ್ನ ಸೇವೆಮಾಡಬೇಕೆಂಬ ಪ್ರೀತಿಯನ್ನು ನಾಶಮಾಡಲಿಲ್ಲ. ಭರತರಾಜನ ಸೇವೆಯನ್ನು ಮಾಡಬೇಕೆಂದು ಆ ರಾಜರಿಗಿದ್ದ ಪ್ರೇಮವನ್ನು ನಾಶಮಾಡಲಿಲ್ಲವೆಂದು ಭಾವವು.

**ಪ್ರತಿಪ್ರಯಾಣಮಭ್ಯೇತ್ಯ [೧೧]ಪ್ರಾಣಂ ಸಿಷುರಮುಂ ನೃಪಾಃ ।**
**ಪ್ರಾಣರಕ್ಷಾಮಿವಾಸ್ಯಾಜ್ಞಾಂ ವಹಂತಃ ಸ್ವೇಷು ಮೂರ್ಧಸು ॥ ೩೨ ॥**

ರಾಜರುಗಳು ತಮ್ಮ ಪ್ರಾಣರಕ್ಷಣೆಯನ್ನು ಮಾಡುವಂತೆ ಭರತರಾಜನ ಆಜ್ಞೆಯನ್ನು ತಮ್ಮ ಮಸ್ತಕಗಳಲ್ಲಿ ಧರಿಸಿ ಪ್ರತಿಯೊಂದು ಪ್ರಯಾಣದಲ್ಲಿಯೂ ಅವನ ಸಮೀಪಕ್ಕೆ ಬಂದು ಅವನಿಗೆ ನಮಸ್ಕರಿಸಿದರು.

**ಪ್ರಣತಾನನುಜಗ್ರಾಹ ಸಾತಿರೇಕೈಃ ಫಲೈಃ ಪ್ರಭುಃ ।**
**ಕಿಮು ಕಲ್ಪತರೋಃ ಸೇವಾಸ್ತ್ಯಫಲಾಲ್ಪಫಲಾಪಿ ವಾ ॥ ೩೩ ॥**

ಭರತರಾಜನು ನಮಸ್ಕರಿಸಿದವರನ್ನು ಅತಿಶಯವಾದ ದ್ರವ್ಯ ವಸ್ತ್ರ ಮೊದಲಾದ ವಸ್ತುಗಳಿಂದ ಅನುಗ್ರಹಿಸಿದನು. ಕಲ್ಪವೃಕ್ಷದ ಸೇವೆಯು ಫಲರಹಿತವಾಗಿಯೂ ಸ್ವಲ್ಪ ಫಲವುಳ್ಳುದಾಗಿಯೂ ಇರುವುದೇ ?

**[೧೨]ಸಂಪ್ರೇಕ್ಷಿತೈಃ ಸ್ಮಿತೈರ್ಹಾಸ್ಯೈಃ [೧೩]ಸವಿಶ್ರಂಭೈಶ್ಚ [೧೪]ಜಲ್ಪಿತೈಃ ।**
**ಸಮ್ರಾಟ್ [೧೫]ಸಂಭಾವಯಾಮಾಸ ನೃಪಾ[೧೬]ಸ್ಸಂಮಾನನೈರಪಿ ॥ ೩೪ ॥**

ಚಕ್ರವರ್ತಿಯು ರಾಜರನ್ನು ಪ್ರೇಮಪೂರ್ವಕವಾದ ನೋಟಗಳಿಂದಲೂ ಮುಗುಳುನಗೆಗಳಿಂದಲೂ ಹಾಸ್ಯವಚನಗಳಿಂದಲೂ ವಿಶ್ವಾಸಯುಕ್ತವಾದ ಮಾತುಗಳಿಂದಲೂ ವಸ್ತ್ರಾಭರಣ ಮೊದಲಾದ ವಸ್ತುಗಳಿಂದಲೂ ಸತ್ಕರಿಸಿದನು.

**ಸ್ಮಿತೈಃ ಪ್ರಸಾದಂ ಸಂಜಲ್ಪೈ[೧]ರ್ವಿಸ್ರಂಭಂ ಹಸಿತೈರ್ಮುದಮ್ ।**
**ಪ್ರೇಕ್ಷಿತೈರನುರಾಗಂ ಚ ವ್ಯನಕ್ತಿ ಸ್ಮ ನೃಪೇಷು ಸಃ ॥ ೩೫ ॥**

ಭರತಚಕ್ರವರ್ತಿಯು ರಾಜರಲ್ಲಿ ಮುಗುಳುನಗೆಗಳಿಂದ ಅನುಗ್ರಹವನ್ನೂ ಸಂಭಾಷಣೆಗಳಿಂದ ವಿಶ್ವಾಸವನ್ನೂ ನಗೆಗಳಿಂದ ಸಂತೋಷವನ್ನೂ ನೋಟಗಳಿಂದ ಅನುರಾಗವನ್ನೂ ವ್ಯಕ್ತಪಡಿಸಿದನು.

**[೨]ಅತಾಪ್ಸೀತ್ಪ್ರಣತಾನೇಷ [೩]ಸಮತಾಪ್ಸೀದ್ವಿರೋಧಿನಃ ।**
**ಶಮಪ್ರತಾಪೌ ಕ್ಷ್ಮಾಂ ಜೇತುಃ ಪಾರ್ಥಿವಸ್ಯೋಚಿತೌ ಗುಣೌ ॥ ೩೬ ॥**

ಭರತಚಕ್ರವರ್ತಿಯು ನಮಸ್ಕರಿಸಿದವರನ್ನು ತೃಪ್ತಿಪಡಿಸಿದನು. ವಿರೋಧಿಗಳನ್ನು ಸಂತಾಪಗೊಳಿಸಿದನು. ಪೃಥ್ವಿಯನ್ನು ಜಯಿಸುವ ರಾಜನಿಗೆ ಶಾಂತಿಪ್ರತಾಪ ಗುಣಗಳು ಯೋಗ್ಯವಾದುವುಗಳು. ರಾಜನಿಗೆ ಕ್ಷಮಾಗುಣವೂ ಪ್ರತಾಪಗುಣವೂ ಇರತಕ್ಕುವೆಂದು ಭಾವವು.

**ಪ್ರಸನ್ನಯಾ ದೃಶೈವಾ[೪]ಸ್ಯ ಪ್ರಸಾದಃ [೫]ಪ್ರಣತೇ [೬]ರಿಪೌ ।**
**ಭ್ರೂಭಂಗೇಣಾ[೭]ಸ್ಫುಟತ್ಕೋಪಃ ಸತ್ಯಂ [೮]ಬಹುನಟೋ ನೃಪಃ ॥ ೩೭ ॥**

ನಮಸ್ಕರಿಸಿದ ರಾಜನಲ್ಲಿ ಈ ಭರತರಾಜನ ಪ್ರಸನ್ನವಾದ ದೃಷ್ಟಿಯಿಂದಲೇ ಅನುಗ್ರಹವೂ ಶತ್ರುರಾಜನಲ್ಲಿ ಹುಬ್ಬುಗಂಟಿಕ್ಕುವುದರಿಂದ ಕೋಪವೂ ವ್ಯಕ್ತವಾಗಿದ್ದುವು. ನಿಜವಾಗಿಯೂ ರಾಜನು ನಟನಿಗೆ ಸದೃಶನಾದವನು.

**[೯]ಅಂಗಾನ್ಮಣಿಭಿ[೧೦]ರತ್ಯಂಗೈರ್ವಂಗಾಂಸ್ತುಂಗೈರ್ಮತಂಗಜೈಃ ।**
**ತೈಶ್ಚ ತೈಶ್ಚ ಕಲಿಂಗೇಶಾನ್ಸ್ರೋಭ್ಯನಂದ[೧೧]ದುಪಾನತಾನ್ ॥ ೩೮ ॥**

ಭರತಚಕ್ರವರ್ತಿಯು ತನ್ನ ಸಮೀಪವನ್ನು ಹೊಂದಿದ ಅಂಗದೇಶದ ರಾಜರನ್ನು ಅನರ್ಘ್ಯವಾದ ರತ್ನಗಳಿಂದಲೂ ವಂಗದೇಶದ ರಾಜರನ್ನು ಉನ್ನತವಾದ ಆನೆಗಳಿಂದಲೂ ಕಲಿಂಗದೇಶದ ರಾಜರನ್ನು ಅನರ್ಘ್ಯವಾದ ರತ್ನಗಳಿಂದಲೂ ಉನ್ನತವಾದ ಆನೆಗಳಿಂದಲೂ ಸಂತೋಷಪಡಿಸಿದನು. ವಿಧೇಯರಾದ ರಾಜರಿಗೆ ಬಹುಮಾನ ಕೊಟ್ಟು ಸಂತೋಷಪಡಿಸಿದನೆಂದಭಿಪ್ರಾಯವು.

**[೧೨]ಮಾಗಧಾಯಿತಮೇವಾಸ್ಯ ಸ್ಫುಟಂ [೧೩]ಮಾಗಧಿಕೈರ್ನೃಪೈಃ ।**
**ಕೀರ್ತಯದ್ಭಿರ್ಗುಣಾನುಚ್ಚೈಃ ಪ್ರಸಾದಮಭಿಲಾಷುಕೈಃ ॥ ೩೯ ॥**

ಭರತಚಕ್ರವರ್ತಿಯ ಹೆಚ್ಚಾದ ಅನುಗ್ರಹವನ್ನಿಚ್ಛಿಸುವವರೂ ಗುಣಗಳನ್ನು ಹೊಗಳುವವರೂ ಆದ ಮಗಧದೇಶದ ರಾಜರುಗಳು ಸ್ತುತಿಪಾಠಕರಂತೆ-ಭರತರಾಜನನ್ನು ಹೊಗಳಿದರು.

**ಕುರೂನವಂತೀನ್ಪಾಂಚಾಲಾನ್ಕಾಶೀಂಶ್ಚ ಸಹ [೧೪]ಕೋಸಲೈಃ ।**
**ವೈದರ್ಭಾನಪ್ಯನಾಯಾಸಾ[೧೫]ದಾಚಕರ್ಷ ಚಮೂಪತಿಃ ॥ ೪೦ ॥**

ಸೈನ್ಯಾಧಿಪತಿಯು ಅನಾಯಾಸದಿಂದ ಕುರುರಾಜರನ್ನೂ ಅವಂತಿದೇಶದ ರಾಜರನ್ನೂ ಪಾಂಚಾಲದೇಶದ ರಾಜರನ್ನೂ ಕಾಶೀದೇಶದ ರಾಜರನ್ನೂ ಕೋಸಲ ಮತ್ತು ವಿದರ್ಭದೇಶದ ರಾಜರನ್ನೂ ವಶಮಾಡಿದನು. ಸ್ವಾಧೀನಪಡಿಸಿದನೆಂದರ್ಥವು.

೧ ಪಾರ್ಥಿವೇಷು. ೨ ಚಕ್ರಿಣಃ. ೩ ಕ್ಷತ್ರಿಯಾದಿವರ್ಣಾ ಬ್ರಹ್ಮಚರ್ಯಾದ್ಯಾಶ್ರಮಾಶ್ಚ. ೪ ಯಸ್ಮಾತ್ಕಾರಣಾತ್. ೫ ಚಕ್ರಿಣಾ. ೬ ಪಾರ್ಥಿವಾಃ. ೭ ಸ್ವೀಕೃತಾಃ. ೮ ಪ್ರಹ್ವೀಭೂತಾನ್ಕುರ್ವನ್. ೯ ಗರ್ವಮೇವ. ೧೦ ಮರ್ದಯತಿ ಸ್ಮ. ೧೧ ನಮಸ್ಕುರ್ವಂತಿ ಸ್ಮ. ೧೨ ಸ್ನಿಗ್ಧಾಲೋಕನೈಃ. ೧೩ ಸವಿಶ್ವಾಸೈಃ. ೧೪ ವಚನೈಃ. ೧೫ ಸತ್ಕಾರಯಾಮಾಸ. ೧೬ ವಸ್ತ್ರಾಭರಣಾದಿಪೂಜನೈಃ.

೧ ಸ್ನೇಹಂ, ವಿಶ್ರಂಭಮಿತ್ಯಪಿ ಪಾಠಃ. ೨ ತರ್ಪಯಾಮಾಸ. ೩ ಸಂತಾಪಯತಿ ಸ್ಮ. ೪ ಭರತಸ್ಯ. ೫ ನೃಪೇ. ೬ ನೃಪೇ. ೭ ವ್ಯಕ್ತೋ ಬಭೂವ. ೮ ನಟಸದೃಶಃ. ೯ ಅಂಗದೇಶಾಧಿಪಾನ್. ೧೦ ಅನರ್ಘ್ಯೈಃ. ೧೧ ಉಪಾಗತಾನ್. ೧೨ ಸ್ತುತಿಪಾಠಕಾ ಇವಾಚರಿತಂ. ೧೩ ಮಗಧಾಧಿಪೈಃ. ೧೪ ಕೌಸಲ್ಯೈರಿತ್ಯಪಿ ಪಾಠಃ. ೧೫ ಸ್ವೀಕೃತವಾನ್.

[೧]ವ್ರಜನ್ಮದ್ರಾಂಶ್ಚ ಕಚ್ಛಾಂಶ್ಚಚೇದೀನ್ವತ್ಸಾನ್ಸ ಸುಹ್ಮಕಾನ್ ।
[೨]ಪುಂಡ್ರಾನೋಂಡ್ರಾಂಶ್ಚ ಗೌಡಾಂಶ್ಚ [೩]ಮತಮಶ್ರಾವಯದ್ವಿಭೋಃ ॥

ಹೋಗುತ್ತಿರುವ ಸೈನ್ಯಾಧಿಪತಿಯು ಮಂದ್ರ ಕಚ್ಛ ಚೇದಿ ವತ್ಸ ಸುಹ್ಮ ಪುಂಡ್ರ ಓಂಡ್ರ ಗೌಡದೇಶಗಳ ರಾಜರುಗಳನ್ನು ಕುರಿತು ಭರತಚಕ್ರವರ್ತಿಯ ಆಜ್ಞೆಯನ್ನು ತಿಳಿಸಿದನು.

ದಶಾರ್ಣಾನ್ಕಾಮರೂಪಾಂಶ್ಚ ಕಾಶ್ಮೀರಾನಪ್ಯುಶೀನರಾನ್ ।
ಮಧ್ಯಮಾನಪಿ ಭೂಪಾಲಾನ್ನೋಚಿರಾದ್ವಶಮಾನಯತ್ ॥ ೪೨ ॥

ಆ ಸೇನಾಧಿಪತಿಯು ದಶಾರ್ಣ ಕಾಮರೂಪ ಕಾಶ್ಮೀರ ಉಶೀನರದೇಶಗಳ ರಾಜರನ್ನೂ ಶೀಘ್ರವಾಗಿ ಸ್ವಾಧೀನಪಡಿಸಿಕೊಂಡನು.

ದದುರಸ್ಮೈ ನೃಪಾಃ [೪]ಪ್ರಾಚ್ಯಕಲಿಂಗಾಂಗರಜಾನ್ಗಜಾನ್ ।
ಗಿರೀನಿವ ಮಹೋಚ್ಛ್ರಾಯಾ[೫]ನ್ಪಶ್ಚೋತನ್ಮದನಿರ್ಝರಾನ್ ॥ ೪೩ ॥

ರಾಜರುಗಳು ಪರ್ವತಗಳಂತೆ ಬಹಳ ಉನ್ನತವೂ ಸುರಿಯುತ್ತಿರುವ ಮದಜಲದ ಪ್ರವಾಹವುಳ್ಳವೂ ಪೂರ್ವದಿಕ್ಕಿನಲ್ಲಿರುವ ಕಲಿಂಗದೇಶದಲ್ಲಿಯೂ ಅಂಗರದೇಶವಲ್ಲಿಯೂ ಹುಟ್ಟಿದುವೂ ಆದ ಆನೆಗಳನ್ನು ಈ ಭರತರಾಜನಿಗೆ ಕೊಟ್ಟರು.

[೬]ದಶಾರ್ಣಕವನೋದ್ಭೂತಾನಪಿ ಚೇದಿಕ[೭]ಕೂಶಜಾನ್ ।
ದಿಙ್ನಾಗಸ್ಪರ್ಧಿನೋ ನಾಗಾ[೮]ನದುರ್ನಾಗವನಾಧಿಪಾಃ ॥ ೪೪ ॥

ಆನೆಗಳಿರುವ ವನಗಳಿಗೆ ಪ್ರಭುಗಳಾದ ರಾಜರು ದಶಾರ್ಣಕವನದಲ್ಲಿ ಹುಟ್ಟಿದುವೂ ಚೇದಿದೇಶದಲ್ಲಿ ಹುಟ್ಟಿದುವೂ ಕೂಶದೇಶದಲ್ಲಿ ಹುಟ್ಟಿದುವೂ ದಿಗ್ಗಜಗಳಿಗೆ ಸಮಾನಗಳೂ ಆದ ಆನೆಗಳನ್ನು ಕೊಟ್ಟರು.

ವಿಭೋರ್ಬಲಭರಕ್ಷೋಭಮಸಹಂತೀವ ದುಃಸಹಮ್ ।
ಸುಷುವೇನಂತರತ್ನಾನಿ [೯]ಗರ್ಭಿಣೀವ ವಸುಂಧರಾ ॥ ೪೫ ॥

ಸಹಿಸುವುದಕ್ಕೆ ಕಷ್ಟವಾದ ಭರತರಾಜನ ಸೈನ್ಯಭಾರದ ಕ್ಷೋಭೆಯನ್ನು ಸಹಿಸದೆಯೋ ಎಂಬಂತೆ ಪೃಥ್ವಿಯು, ಗರ್ಭದಲ್ಲಿರುವ ಶಿಶುಗಳನ್ನೋಪಾದಿಯಲ್ಲಿ, ಅವನಿಗೆ ಅನಂತವಾದ ರತ್ನಗಳನ್ನು ಕೊಟ್ಟಿತು.

[೧೦]ಆಪಾಂಡರಗಿರಿಪ್ರಸ್ಥಾದಾ ಚ [೧೧]ವೈಭಾರಪರ್ವತಾತ್ ।
ಆಶೈಲಾ[೧೨]ದ್ಗೌರಥಾದಸ್ಯ [೧೩]ವಿಚೇರುರ್ಜಯಕುಂಜರಾಃ ॥ ೪೬ ॥

ಈ ಭರತಚಕ್ರವರ್ತಿಯ ಜಯಶೀಲವಾದ ಆನೆಗಳು ವಿಜಯಾರ್ಧಪರ್ವತದ ತಪ್ಪಲಿನ ಸಮೀಪಪ್ರದೇಶದಿಂದ ವೈಭಾರಪರ್ವತದ ಸಮೀಪಪ್ರದೇಶದವರೆಗೂ ಹಿಮವತ್ಪರ್ವತದಿಂದ ಗೌರಥಪರ್ವತದವರೆಗೂ ಸಂಚರಿಸಿದುವು.

ವಂಗಾಂಗಪುಂಡ್ರಮಗಧಾನ್ಮಾಲವಾನ್ಕಾಶಿಕೌಸಲಾನ್ ।
ಸೇನಾನೀಃ ಪರಿಬಭ್ರಾಮ ಜಿಗೀಷುರ್ಜಯಸಾಧನೈಃ ॥ ೪೭ ॥

ಜಯಿಸಬೇಕೆಂಬ ಇಚ್ಛೆಯುಳ್ಳ ಸೇನಾಪತಿಯು ಜಯದ ಸಾಧನ(ಸಲಕರಣ)ಗಳೊಡನೆ ವಂಗ ಅಂಗ ಪುಂಡ್ರ ಮಗಧ ಮಾಲವ ಕಾಶಿ ಕೋಸಲದೇಶಗಳಲ್ಲಿ ಸಂಚರಿಸಿದನು.

ಕಾಲಿಂದಕಾಲಕೂಟೌ ಚ ಕಿರಾತವಿಷಯಂ ತಥಾ ।
ಮಲ್ಲದೇಶಂ ಚ ಸಂಪ್ರಾಪ[೧೪]ನ್ಮತಾ[೧೫]ದಸ್ಯ ಚಮೂಪತಿಃ ॥ ೪೮ ॥

ಸೈನ್ಯಾಧಿಪತಿಯು ಈ ಭರತಚಕ್ರವರ್ತಿಯ ಆಜ್ಞೆಯಿಂದ ಕಾಳಿಂದ ಕಾಲಕೂಟ ಕಿರಾತ ಮಲ್ಲದೇಶಗಳನ್ನೂ ಹೊಂದಿದನು. ಅಲ್ಲಿ ಸಂಚರಿಸಿದನೆಂದಭಿಪ್ರಾಯವು.

ಧುನೀಂ ಸುಮಾಗಧೀಂ ಗಂಗಾಂ ಗೋಮತೀಂ ಚ ಕಪೀವತೀಮ್ ।
[೧]ರೇವಸ್ಯಾಂ ಚ ನದೀಂ [೨]ತೀರ್ತ್ವಾ ಭ್ರೇಮುರಸ್ಯ ಚಮೂಗಜಾಃ ॥ ೪೯ ॥

ಈ ಭರತರಾಜನ ಸೈನ್ಯದ ಆನೆಗಳು ಸುಮಾಗಧೀನದಿಯನ್ನೂ ಗಂಗಾನದಿಯನ್ನೂ ಗೋಮತೀನದಿಯನ್ನೂ ಕಪೀವತೀನದಿಯನ್ನೂ ರೇವಸ್ಯಾನದಿಯನ್ನೂ ದಾಟಿ ಸಂಚರಿಸಿದುವು.

ಗಂಭೀರಾಮತಿಗಂಭೀರಾಂ ಕಾಲತೋಯಾಂ ಚ ಕೌಶಿಕೀಮ್ ।
ನದೀಂ ಕಾಲಮಹೀಂ ತಾಮ್ರಾಮರುಣಾಂ ನಿಚುರಾಮಪಿ ॥ ೫೦ ॥

ತಂ [೩]ಲೌಹಿತ್ಯಸಮುದ್ರಂ ಚ ಕಂಬುಕಂ ಚ ಮಹತ್ಸರಃ ।
ಚಮೂಮತಂಗಜಾಸ್ತಸ್ಯ ಭೇಜುಃ ಪ್ರಾಚ್ಯವನೋಪಗಾಃ ॥ ೫೧ ॥

ಗಂಭೀರಾನದಿಯನ್ನೂ ಅತಿಗಂಭೀರಾನದಿಯನ್ನೂ ಕಾಲತೋಯಾನದಿಯನ್ನೂ ಕೌಶಿಕೀನದಿಯನ್ನೂ ಕಾಲಮಹೀನದಿಯನ್ನೂ ತಾಮ್ರಾನದಿಯನ್ನೂ ಅರುಣಾನದಿಯನ್ನೂ ನಿಚುರಾನದಿಯನ್ನೂ ದಾಟಿ ಪೂರ್ವದಿಕ್ಕಿನಲ್ಲಿರುವ ವನದ ಸಮೀಪವನ್ನು ಹೊಂದಿದ ಆ ಭರತಚಕ್ರವರ್ತಿಯ ಸೈನ್ಯದ ಆನೆಗಳು ರಕ್ತಸಮುದ್ರವೆಂದು ಹೆಸರುಳ್ಳ ಆ ಸರೋವರವನ್ನೂ ಕಂಬುಕವೆಂಬ ದೊಡ್ಡ ಸರೋವರವನ್ನೂ ತಲುಪಿದುವು.

[೪]ದಕ್ಷಿಣೇನ ನದಂ ಶೋಣ[೫]ಮುತ್ತರೇಣ ಚ ನರ್ಮದಾಮ್ ।
[೬]ಬೀಜಾನದೀಮುಭಯತಃ ಪರಿತೋ [೭]ಮೇಖಲಾನದೀಮ್ ॥ ೫೨ ॥

[೮]ವಿಚೇರುಃ ಸ್ವಖುರೋದ್ಧೂತಧೂಲೀಸಂರುದ್ಧದಿಙ್ಮುಖಾಃ ।
[೯]ಜವಿನೋಸ್ಯ ಸ್ಫುರ[೧೦]ತ್ಪ್ರೋಥಾ ಜಯಸಾಧನವಾಜಿನಃ ॥ ೫೩ ॥

ತಮ್ಮ ಗೊರಸುಗಳಿಂದ ಏಳಿಸಲ್ಪಟ್ಟ ಧೂಳಿಯಿಂದ ದಿಕ್ಕುಗಳನ್ನು ಮರೆಮಾಡಿರುವುವೂ ವೇಗವುಳ್ಳವೂ ಅರಳುತ್ತಿರುವ ಮೂಗುಗಳುಳ್ಳವೂ ಆದ ಈ ಭರತಚಕ್ರವರ್ತಿಯ ಜಯಕ್ಕೆ ಕಾರಣವಾದ ಕುದುರೆಗಳು ಶೋಣವೆಂಬ ಗಂಡುಹೊಳೆಯ ದಕ್ಷಿಣದಿಕ್ಕಿನಲ್ಲಿಯೂ ನರ್ಮದಾನದಿಯ ಉತ್ತರದಿಕ್ಕಿನಲ್ಲಿಯೂ ಬೀಜಾನದಿಯ ಉಭಯಪಾರ್ಶ್ವಗಳಲ್ಲಿಯೂ ಮೇಖಲಾನದಿಯ ಸುತ್ತಲೂ ಸಂಚರಿಸಿದುವು.

[೧೧]ಉದುಂಬರೀಂ ಚ ಪನಸಾಂ ತಮಸಾಂ ಪ್ರಮ್ಲಶಾಮಪಿ ।
[೧೨]ಪಪುರಸ್ಯ ದ್ವಿಪಾಃ ಶುಕ್ತಿಮತೀಂ ಚ ಯಮುನಾಮಪಿ ॥ ೫೪ ॥

ಭರತಚಕ್ರವರ್ತಿಯ ಆನೆಗಳು ಉದುಂಬರನದಿಯನ್ನೂ ಪನಸಾನದಿಯನ್ನೂ ತಮಸಾನದಿಯನ್ನೂ ಪ್ರಮ್ಲಶಾನದಿಯನ್ನೂ ಶುಕ್ತಿಮತೀನದಿಯನ್ನೂ ಯಮುನಾನದಿಯನ್ನೂ ಪಾನಮಾಡಿದುವು. ಆ ನದಿಗಳ ನೀರನ್ನು ಕುಡಿದುವೆಂದೂ ಆ ನದಿಗಳನ್ನು ದಾಟಿಹೋದುವೆಂದೂ ಭಾವವು.

ಚೇದಿಪರ್ವತಮುಲ್ಲಂಘ್ಯ [೧೩]ಚೇದಿರಾಷ್ಟ್ರಂ [೧೪]ವಿಜಿಗ್ಯಿರೇ ।
[೧೫]ಪಂಪಾಸರೋಂಭೋತಿಗಮಾ ವಿಭೋರಸ್ಯ ತುರಂಗಮಾಃ ॥ ೫೫ ॥

ಈ ಭರತಚಕ್ರವರ್ತಿಯ ಪಂಪಾಸರೋವರದ ಜಲವನ್ನು ದಾಟಿದ ಕುದುರೆಗಳು ಚೇದಿಪರ್ವತವನ್ನು ದಾಟಿ ಚೇದಿದೇಶವನ್ನು ಜಯಿಸಿದುವು.

---

೧ ಗಚ್ಛನ್. ೨ ಪುಂಡ್ರಾನೌಢ್ರಾನಿತ್ಯಪಿ ಪಾಠಃ. ೩ ಆಜ್ಞಾಂ. ೪ ಪ್ರಾಗ್ದಿಕ್ಸಂಬಂಧಿಕ ಲಿಂಗದೇಶಾಂಗರದೇಶಜಾನ್. ೫ ಗಲತ್. ೬ ದಾಶಾರ್ಣಕೇತ್ಯಪಿ ಪಾಠಃ. ೭ ರೂಪಜಾನಿತ್ಯಪಿ ಪಾಠಃ. ೮ ದದತಿ ಸ್ಮ. ೯ ಗರ್ಭಸ್ಥಶಿಶೂನಿವ. ೧೦ ವಿಜಯಾರ್ಧತಟಪರ್ಯಂತಾತ್. ೧೧ ವೈಭಾರಪರ್ವತ ಪರ್ಯಂತಾತ್. ೧೨ ಗೋರಥಾದಿತ್ಯಪಿ ಪಾಠಃ. ೧೩ ಚರಂತಿ ಸ್ಮ. ೧೪ ಶಾಸನಾತ್. ೧೫ ಚಕ್ರಿಣಃ.

೧ ರಥಾಸ್ಪಾಮಿತ್ಯಪಿ ಪಾಠಃ. ೨ ಅವತೀರ್ಯ. ೩ ಲೋಹಿತಸ್ಯ ಸಮುದ್ರನಾಮಸರೋವರಂ. ೪ ಶೋಣನದಸ್ಯ ದಕ್ಷಿಣಸ್ಯಾಂ ದಿಶಿ. ೫ ನರ್ಮದಾಯಾ ಉತ್ತರಸ್ಯಾಂ ದಿಶಿ. ೬ ಬೀಜಾನದ್ಯಾ ಉಭಯಸ್ಯಾಂ ದಿಶಿ. ೭ ಮೇಖಲಾಯಾಃ ಸರ್ವಸ್ಯಾಂ ದಿಶಿ. ೮ ಚರಂತಿ ಸ್ಮ. ೯ ವೇಗಿನಃ. ೧೦ ನಾಸಿಕಾಃ. ೧೧ ಔದುಂಬರೀಮಿತ್ಯಪಿ ಪಾಠಃ. ೧೨ ಪಿಬಂತಿ ಸ್ಮ. ೧೩ ಚೇದಿದೇಶಂ. ೧೪ ಜಯಂತಿ ಸ್ಮ. ೧೫ ಪಂಪಾಸರೋಜಲಮತಿಕ್ರಾಂತಾಃ.

ತ[೧]ಮೃಷ್ಯಮೂಕಮಾಕ್ರಮ್ಯ ಕೋಲಾಹಲಗಿರಿಂ ಶ್ರಿತಾಃ ।
ಪ್ರಾಜ್ಯಾಮ್ಮಾಲ್ಯಗಿರಿಮಾಸೇದುರ್ಜಯಿನೋಽಸ್ಯ ಜಯದ್ವಿಪಾಃ ॥ ೫೬ ॥

ಜಯಶೀಲನಾದ ಈ ಭರತಚಕ್ರವರ್ತಿಯ ಜಯಶೀಲವಾದ ಆನೆಗಳು ಆ ಋಷ್ಯ ಮೂಕವೆಂಬ ಪರ್ವತವನ್ನಾಶ್ರಯಿಸಿ ಕೋಲಾಹಲವೆಂಬ ಪರ್ವತವನ್ನು ಪ್ರವೇಶಿಸಿ ಪೂರ್ವದಿಕ್ಕಿನಲ್ಲಿರುವ ಮಾಲ್ಯಗಿರಿಯನ್ನು ತಲುಪಿದುವು.

ನಾಗಪ್ರಿಯಾದ್ರಿಮಾಕ್ರಮ್ಯ ಕುತಪಾವಜ್ಞಯಾ ವಿಭೋಃ ।
ಸೇನಾಚರಾಃ ಸ್ವಸಾಚ್ಚಕ್ರುರ್ಗಜಾಂ[೨]ಶ್ಚೇದಿಕಕೂಶಜಾನ್ ॥ ೫೭ ॥

ಭರತಚಕ್ರವರ್ತಿಯ ಸೈನಿಕರು ನಾಗಪ್ರಿಯವೆಂಬ ಪರ್ವತವನ್ನು ಹೊಸ್ತಿಲೆಂಬ ತಿರಸ್ಕಾರಬುದ್ಧಿಯಿಂದ ಆಕ್ರಮಿಸಿ (ಹೊಸ್ತಿಲನ್ನು ದಾಟುವಂತೆ ದಾಟಿ) ಚೇದಿವನ ದಲ್ಲಿಯೂ ಕುಶವನದಲ್ಲಿಯೂ ಹುಟ್ಟಿದ ಆನೆಗಳನ್ನು ಸ್ವಾಧೀನಮಾಡಿಕೊಂಡರು.

ನದೀಂ ವೃತ್ರವತೀಂ ಕ್ರಾಂತ್ವಾ [೩]ವನ್ಯೇಭಕ್ಷತರೋಧಸಮ್ ।
ಭೇಜುಶ್ಚಿತ್ರವತೀಮಸ್ಯ ಚಮೂವೀರಾಸ್ತುರಂಗಮೈಃ ॥ ೫೮ ॥

ಈ ಭರತಚಕ್ರವರ್ತಿಯ ಸೈನ್ಯದ ಭಟರು ವನಗಜಗಳಿಂದ ತುಳಿಯಲ್ಪಟ್ಟ ದಡ ಗಳುಳ್ಳ ವೃತ್ರವತೀನದಿಯನ್ನು ಕುದುರೆಗಳಿಂದ ದಾಟಿ ಚಿತ್ರವತೀನದಿಯನ್ನು ಸೇರಿದರು.

ರುದ್ಧ್ವಾ ಮಾಲ್ಯವತೀತೀರವನಂ ವನ್ಯೇಭಸಂಕುಲಮ್ ।
ಯಾಮುನಂ ಚ ಪಯಃ ಪೀತ್ವಾ ಜಿಗ್ಯುರಸ್ಯ ದ್ವಿಪಾ ದಿಶಃ ॥ ೫೯ ॥

ಈ ಭರತಚಕ್ರವರ್ತಿಯ ಆನೆಗಳು ವನಗಜಗಳಿಂದ ನಿಬಿಡವಾದ ಮಾಲ್ಯವತೀ ನದಿಯ ದಡದಲ್ಲಿರುವ ವನವನ್ನಾಕ್ರಮಿಸಿ ಯಮುನಾನದಿಯ ಸಂಬಂಧವಾದ ನೀರನ್ನು ಕುಡಿದು ದಿಕ್ಕುಗಳನ್ನು ಜಯಿಸಿದುವು.

ಅನುವೇಣುಮತೀತೀರಂ ಗತ್ವಾಸ್ಯ ಜಯ[೪]ಸಾಧನಮ್ ।
ವತ್ಸಭೂಮಿಂ ಸಮಾಕ್ರಮ್ಯ [೫]ದಶಾರ್ಣಾನಪ್ಯಲಂಘಯತ್ ॥ ೬೦ ॥

ಈ ಚಕ್ರವರ್ತಿಯ ಜಯಶೀಲವಾದ ಸೈನ್ಯವು ವೇಣುಮತೀನದಿಯ ದಡವನ್ನನು ಸರಿಸಿ ಹೋಗಿ ವತ್ಸಭೂಮಿಯನ್ನಾಕ್ರಮಿಸಿ ದಶಾರ್ಣದೇಶಗಳನ್ನೂ ದಾಟಿತು.

ವಿಶಾಲಾಂ [೬]ನಾಲಿಕಾಂ ಸಿಂಧುಂ ಪರಾಂ ನಿಷ್ಕುಂದರೀಮಪಿ ।
ಬಹು[೭]ವಕ್ರಾಂ ಚ ರಮ್ಯಾಂ ಚ ನದೀಂ ಸಿಕತಿನೀಮಪಿ ॥ ೬೧ ॥

[೮]ಊಹಾಂ ಚ ಸಮತೋಯಾಂ ಚ ಕಂಜಾಮಪಿ ಕಪೀವತೀಮ್ ।
[೯]ನಿರ್ವಿಂಧ್ಯಾಂ ಚ [೧೦]ಧುನೀಂ ಜಂಬೂಮತೀಂ ಚ ಸರಿದುತ್ತಮಾಮ್ ॥

ವಸುಮತ್ಯಾಪಗಾಮಬ್ಧಿಗಾಮಿನೀಂ ಶರ್ಕರಾವತೀಮ್ ।
[೧೧]ಸೃಪ್ರಾಂ ಚ ಕೃತಮಾಲಾಂ ಚ ಪರಿಂಜಾಂ ಪನಸಾಮಪಿ ॥ ೬೩ ॥

ನದೀಮವಂತಿಕಾಮಾಂ ಚ ಹಸ್ತಿಪಾನೀಂ ಚ ನಿಮ್ನಗಾಮ್ ।
ಕಾಗಂಧುಮಾಪಗಾಂ ವ್ಯಾಘ್ರೀಂ ಧುನೀಂ ಚರ್ಮಣ್ವತೀಮಪಿ ॥ ೬೪ ॥

ಶತಭೋಗಾಂ ಚ ನಂದಾಂ ಚ ನದೀಂ ಕರಭವೇಗಿನೀಮ್ ।
ಚುಲ್ಲಿತಾಪೀಂ ಚ ರೇವಾಂ ಚ ಸಪ್ತಪಾರಾಂ ಚ ಕೌಶಿಕೀಮ್ ॥ ೬೫ ॥

೧ ಋಶ್ಯಮೂಕಮಿತ್ಯಪಿ ಪಾಠಃ. ೨ ಚೇದಿವನಕೂಶವನಜಾನ್. ೩ ವನಗಜಕ್ಷುಣ್ಣತಟಾಂ. ೪ ಬಲಂ. ೫ ದಶಾರ್ಣಾಮಿತ್ಯಪಿ ಪಾಠಃ. ೬ ನಲಿಕಾಮಿತ್ಯಪಿ ಪಾಠಃ. ೭ ವಕ್ತ್ರಾಮಿತ್ಯಪಿ ಪಾಠಃ. ೮ ಉಹಾಮಿತ್ಯಪಿ ಪಾಠಃ. ೯ ನಿರ್ವಿಂದ್ಯಾಮಿತ್ಯಪಿ ಪಾಠಃ. ೧೦ ನದೀಮಿತ್ಯಪಿ. ೧೧ ಸೃಪಾಮಿತ್ಯಪಿ.

ಸರಿತೋಮೂ[೧]ರಗಾಧಾಪಾ ವಿಷ್ವಗಾರುಧ್ಯ ತದ್ಬಲಮ್ ।
ತುರಂಗಮಖುರೋತ್ಖಾತತೀರಾ ವಿಸ್ತಾರಿಣೀರ್ವ್ಯಧಾತ್ ॥ ೬೬ ॥

ವಿಶಾಲಾ ನಾಲಿಕಾ ಸಿಂಧು ನಿಷ್ಕುಂದರೀ ಬಹುವಕ್ರಾ ರಮ್ಯಾ ಸಿಕತಿನೀ ಊಹಾ ಸಮತೋಯಾ ಕಂಜಾ ಕಪೀವತೀ ನಿರ್ವಿಂಧ್ಯಾ ನದಿಗಳಲ್ಲಿ ಶ್ರೇಷ್ಠವಾದ ಜಂಬೂ ಮತೀ ವಸುಮತೀ ಅಬ್ಧಿಗಾಮಿನೀ ಶರ್ಕರಾವತೀ ಸೃಪ್ರಾ ಕೃತಮಾಲಾ ಪರಿಂಜಾ ಪನಸಾ ಅವಂತಿಕಾಮಾ ಹಸ್ತಿಪಾನೀ ಕಾಗಂಧುವ್ಯಾಘ್ರೀ ಚರ್ಮವತೀ ಶತಭೋಗಾ ನಂದಾ ಕರಭವೇಗಿನೀ ಚುಲ್ಲಿತಾಪೀ ರೇವಾ ಸಪ್ತಪಾರಾ ಕೌಶಿಕೀ ಆಳವಾದ ನೀರುಳ್ಳ ಈ ನದಿಗಳನ್ನು ಆ ಚಕ್ರವರ್ತಿಯ ಸೈನ್ಯವು ಎಲ್ಲಾ ಕಡೆಗಳಲ್ಲಿಯೂ ಆವರಿಸಿಕೊಂಡು, ಕುದುರೆಗಳ ಗೊರಸುಗಳಿಂದ ಅಗೆಯಲ್ಪಟ್ಟ ದಡಗಳುಳ್ಳವುಗಳನ್ನಾಗಿಯೂ ವಿಸ್ತಾರವುಳ್ಳವುಗಳನ್ನಾಗಿಯೂ ಮಾಡಿದ್ದಿತು.

ತೈರಶ್ಚಿಕಂ ಗಿರಿಂ ಕ್ರಾಂತ್ವಾ ರುಧ್ವಾ ವೈಡೂರ್ಯಭೂಧರಮ್ ।
ಭಟಾಃ ಕೂಟಾದ್ರಿಮುಲ್ಲಂಘ್ಯ ಪಾರಿಯಾತ್ರಮಶಿಶ್ರಿಯನ್ ॥ ೬೭ ॥

ಭಟರು ತೈರಶ್ಚಿಕಪರ್ವತವನ್ನು ದಾಟಿ ವೈಡೂರ್ಯಪರ್ವತವನ್ನಾವರಿಸಿಕೊಂಡು ಕೂಟಪರ್ವತವನ್ನು ದಾಟಿ ಪಾರಿಯಾತ್ರಪರ್ವತವನ್ನು ಸೇರಿದರು.

ಗತ್ವಾ ಪುಷ್ಪಗಿರೇಃ [೨]ಪ್ರಸ್ಥಾನ್ಸಾನೂನ್ ಸಿತಗಿರೇರಪಿ ।
ಗದಾಗಿರೇ[೩]ರ್ನಿಕುಂಜೇಷು ಬಲಾನ್ಯಸ್ಯ [೪]ವಿಶಶ್ರಮುಃ ॥ ೬೮ ॥

ಈ ಭರತಚಕ್ರವರ್ತಿಯ ಸೈನ್ಯಗಳು ಪುಷ್ಪಪರ್ವತದ ತಪ್ಪಲುಗಳನ್ನೂ ಸಿತ ಪರ್ವತದ ತಪ್ಪಲುಗಳನ್ನೂ ತಲುಪಿ ಗದಾಪರ್ವತದ ತಪ್ಪಲುಗಳಲ್ಲಿ ವಿಶ್ರಮಿಸಿ ದುವು.

[೫]ವಾತಪೃಷ್ಠದರೀಭಾಗಾ[೬]ನೃಕ್ಷವ[೭]ತ್ಯುಕ್ಷಿಭಿಃ ಸಮಮ್ ।
ತತ್ಸೈನಿಕಾಃ ಶ್ರಯಂತಿ ಸ್ಮ ಕಂಬರಾದ್ರಿತಟಾನ್ಯಪಿ ॥ ೬೯ ॥

ಆ ಭರತರಾಜನ ಸೈನಿಕರು, ಕರಡಿಗಳಂತೆ, ಆ ಗುಹೆಗಳ ಮೂಲಕ ವಾತ ಪೃಷ್ಠಪರ್ವತದ ಗುಹಾಪ್ರದೇಶಗಳನ್ನೂ ಕಂಬರಪರ್ವತದ ತಪ್ಪಲುಗಳನ್ನೂ ಸೇರಿದರು.

ವಾಸವಂತಂ ಮಹಾಶೈಲಂ ವಿಲಂಘ್ಯಾ[೮]ಸುರಧೂಪನೇ ।
ಸ್ಥಿತ್ವಾಸ್ಯ ಸೈನಿಕಾಃ ಪ್ರಾಪ[೯]ನ್ಮದೇಭಾನಂಗರೇಯಿಕಾನ್ ॥ ೭೦ ॥

ಈ ಭರತರಾಜನ ಸೈನಿಕರು ವಾಸವಂತವೆಂಬ ದೊಡ್ಡ ಪರ್ವತವನ್ನು ದಾಟಿ ಅಸುರಧೂಪನಪರ್ವತದಲ್ಲಿದ್ದು ಮದೇಭ ಅನಂಗ ರೇಯಿಕ ಈ ಮೂರು ಪರ್ವತಗಳನ್ನು ಸೇರಿದರು.

[೧೦]ನಿಃಸಪತ್ನಮಿತಿ ಭ್ರೇಮುರಿತಶ್ಚೇತಶ್ಚ ಸೈನಿಕಾಃ ।
ದ್ವಿಪಾನ್ವನವಿಭಾಗೇಷು [೧೧]ಕರ್ಷಂತೋಽಸ್ಯ ನಿಜೈರ್ಗಜೈಃ ॥ ೭೧ ॥

ಭರತರಾಜನ ಸೈನಿಕರು ಅರಣ್ಯಪ್ರದೇಶಗಳಲ್ಲಿ ಆನೆಗಳನ್ನು ತಮ್ಮ ಆನೆಗಳಿಂದ ಹಿಡಿಯುವವರಾಗಿ ಇತ್ತಿತ್ತ ಬಾಧೆಯಿಲ್ಲದಂತೆ ಹೇಗೋ ಹಾಗೆ ಸಂಚರಿಸಿದರು.

ದುಸ್ತರಾಃ ಸುತರಾ ಜಾತಾಃ ಸಂಭುಕ್ತಾಃ ಸರಿತೋ ಬಲೈಃ ।
ಸ್ವಾರೋಹಾಶ್ಚ ದುರಾರೋಹಾ ಗಿರಯಃ ಕ್ಷುಣ್ಣಸಾನವಃ ॥ ೭೨ ॥

ಸೈನ್ಯಗಳಿಂದ ಸ್ವೀಕರಿಸಲ್ಪಟ್ಟುವೂ ದಾಟುವುದಕ್ಕೆ ಕಷ್ಟವೂ ಆದ ನದಿಗಳು ದಾಟುವುದಕ್ಕೆ ಸುಖವಾಗಿ ಆದುವು; ತುಳಿಯಲ್ಪಟ್ಟ ತಪ್ಪಲುಗಳುಳ್ಳುವೂ ಹತ್ತುವು ದಕ್ಕೆ ಕಷ್ಟವೂ ಆದ ಪರ್ವತಗಳು ಸುಖವಾಗಿ ಹತ್ತುವುದಕ್ಕೆ ಯೋಗ್ಯಗಳಾದುವು.

೧ ಅತಲಸ್ಪರ್ಶಜಲಸಮೂಹಾಃ. ೨ ಸಾನೂನ್. ೩ ನಿತಂಬೇಷು. ೪ ವಿಶ್ರಮಂತಿ ಸ್ಮ. ೫ ವಾತಪೃಷ್ಠ ಗಿರಿಕಂಧರಪ್ರದೇಶಾನ್. ೬ ಭಲ್ಲೂಕಾ ಇವ. ೭ ತದ್ದರೀಸ್ಥಿತಗುಹಾಭಿಃ ಸಹ. ೮ ಅಸುರಧೂಪನ ಪರ್ವತೇ. ೯ ಮದೇಭಶ್ಚ ಅನಂಗಶ್ಚ ರೇಯಿಕಶ್ಚ ತಾನ್. ೧೦ ನಿರ್ಬಾಧಂ ಯಥಾ ತಥಾ. ೧೧ ಸ್ವೀಕುರ್ವಂತಃ.

**[೧]ರಾಷ್ಟ್ರಾ[೨]ಣ್ಯವಧಯ[೩]ಸ್ತೇಷಾಂ [೪]ರಾಷ್ಟ್ರೀಯಾಶ್ಚ ಮಹೀಭುಜಃ ।**
**ಫಲಾಯ [೫]ಜಜ್ಞಿರೇ ಭರ್ತುರ್ಯೋಜಿತಾಶ್ಚಾ[೬]ಮುನಾ [೭]ಫಲೈಃ ॥ ೭೩ ॥**

ಆ ಶತ್ರುರಾಜರುಗಳ ನದೀ ವನ ಮೊದಲಾದ ಅವಧಿ(ಎಲ್ಲೆ)ಗಳುಳ್ಳ ದೇಶಗಳೂ ದೇಶಗಳಲ್ಲಿ ಹುಟ್ಟಿದ ರಾಜರುಗಳೂ ಈ ಸೇನಾಪತಿಯಿಂದ ಬಾಣಗಳೊಡನೆ ಸೇರಿಸಲ್ಪಟ್ಟವರಾಗಿ (ಜಯಿಸಲ್ಪಟ್ಟವರಾಗಿ) ಭರತರಾಜನ ಫಲಕ್ಕೋಸ್ಕರ ಆದರು. ಭರತರಾಜನಿಗೆ ಪ್ರಯೋಜನ(ಪೊಗದಿ)ವನ್ನು ಉಂಟುಮಾಡುವವರಾದರೆಂದು ಭಾವವು.

**ನೃಪಾ[೮]ನವಾರಪಾರೀಣಾನ್ [೯]ದ್ವೈಪ್ಯಾನಪ್ಯುಪಸಾಗರೇ।**
**[೧೦]ಬಲೀ ಬಲೈರವಷ್ಟಭ್ಯ ಪ್ರಾಪೋ[೧೧]ಪವನಜಾನ್ಗಜಾನ್ ॥ ೭೪ ॥**

ಸೇನಾಪತಿಯು ಉಪಸಮುದ್ರದ ಎರಡು ದಡಗಳಲ್ಲಿ ಹುಟ್ಟಿದವರೂ ದ್ವೀಪಗಳಲ್ಲಿ ಹುಟ್ಟಿದವರೂ ಆದ ರಾಜರುಗಳನ್ನು ತನ್ನ ಸೈನ್ಯಗಳಿಂದ ಆಕ್ರಮಿಸಿ ವನಸಮೀಪಗಳಲ್ಲಿ ಹುಟ್ಟಿದ ಆನೆಗಳನ್ನು ಸೇರಿದನು.

**ರತ್ನಾನ್ಯಪಿ ವಿಚಿತ್ರಾಣಿ ತೇಭ್ಯೋ ಲಬ್ಧ್ವಾ ಯಥೇಪ್ಸಿತಮ್ ।**
**ತಾನೇವಾಸ್ಥಾಪಯತ್ತತ್ರ ಸಂತುಷ್ಟಃ ಪ್ರಭುರಾಜ್ಞಯಾ ॥ ೭೫ ॥**

ಆ ಶತ್ರುರಾಜರುಗಳಿಂದ ಅನೇಕವಿಧವಾದ ರತ್ನಗಳನ್ನೂ ಇಷ್ಟಾನುಸಾರವಾಗಿ ಪಡೆದು ಸಂತುಷ್ಟನಾದ ಭರತರಾಜನು ತನ್ನ ಆಜ್ಞೆಯಿಂದ ಆ ದೇಶಗಳಲ್ಲಿ ಆಯಾ ರಾಜರನ್ನೇ ಸ್ಥಾಪಿಸಿದನು.

**ಮಹಾಂತಿ ಗಿರಿದುರ್ಗಾಣಿ [೧೨]ನಿಮ್ನದುರ್ಗಾಣಿ ಚ ಪ್ರಭೋಃ ।**
**ಸಿದ್ಧಾನಿ ಬಲರುದ್ಧಾನಿ ಕಿಮಸಾಧ್ಯಂ ಮಹೀಯಸಾಮ್ ॥ ೭೬ ॥**

ಭರತರಾಜನ ಸೈನ್ಯಗಳಿಂದ ಆಕ್ರಮಿಸಲ್ಪಟ್ಟ ದೊಡ್ಡ ಗಿರಿದುರ್ಗಗಳೂ ಸ್ಥಲದುರ್ಗಗಳೂ ವಶವಾದುವು. ದೊಡ್ಡವರಿಗೆ ಅಸಾಧ್ಯವಾದ ಕಾರ್ಯವಾವುದಿರುವುದು ?

**ಇತ್ಥಂ ಸ ಪೃಥಿವೀಮಧ್ಯಾ[೧೩]ನ್ಪೌರಸ್ತ್ಯಾನ್ನಿರ್ಜಯನ್ನೃಪಾನ್ ।**
**ಪ್ರತಸ್ಥೇ ದಕ್ಷಿಣಾಮಾಶಾಂ [೧೪]ದಾಕ್ಷಿಣಾತ್ಯಜಿಗೀಷಯಾ ॥ ೭೭ ॥**

ಆ ಭರತರಾಜನು ಈ ಪ್ರಕಾರವಾಗಿ ಭೂಮಧ್ಯದಲ್ಲಿ ಹುಟ್ಟಿದವರೂ ಪೂರ್ವದಿಕ್ಕಿನಲ್ಲಿ ಹುಟ್ಟಿದವರೂ ಆದ ರಾಜರನ್ನು ಜಯಿಸಿ ದಕ್ಷಿಣ ದಿಕ್ಕಿನಲ್ಲಿ ಹುಟ್ಟಿದ ರಾಜರನ್ನು ಜಯಿಸಬೇಕೆಂಬ ಇಚ್ಛೆಯಿಂದ ದಕ್ಷಿಣದಿಕ್ಕನ್ನು ಕುರಿತು ಹೊರಟನು.

**ಯತೋ ಯತೋ ಬಲಂ ಜಿಷ್ಣೋಃ ಪ್ರಚಲತ್ಯುದ್ಧನಾಯಕಮ್ ।**
**ತತಸ್ತತಃ ಸ್ಮ ಸಾಮಂತಾ ನಮಂತ್ಯಾನಮ್ರಮೌಲಯಃ ॥ ೭೮ ॥**

ಜಯಶೀಲನಾದ ಈ ಭರತಚಕ್ರವರ್ತಿಯ ಶ್ರೇಷ್ಠನಾದ ಸೈನ್ಯಾಧಿಪತಿಯುಳ್ಳ ಸೈನ್ಯವು ಯಾವಯಾವಕಡೆ ನಡೆಯಿತೋ ಆಯಾಕಡೆಯಲ್ಲಿ ಸಾಮಂತ ರಾಜರುಗಳು ತಮ್ಮ ಕಿರೀಟಗಳನ್ನು ಬಗ್ಗಿಸಿದವರಾಗಿ ನಮಸ್ಕರಿಸಿದರು.

**ತ್ರಿಕಲಿಂಗಾಧಿಪಾನೋಢ್ರಾನ್ ಕಚ್ಛಾಂಧ್ರವಿಷಯಾಧಿಪಾನ್ ।**
**ಪ್ರಾಮೂರಾನ್ಕೇರಲಾಂಶ್ಚೋಲಾನ್ಪುನ್ನಾಗಾಂಶ್ಚ ವ್ಯಜೇಷ್ಟ ಸಃ ॥ ೭೯ ॥**

ಆ ಭರತಚಕ್ರವರ್ತಿಯು ತ್ರಿಕಲಿಂಗ ಓಢ್ರ ಕಚ್ಛ ಆಂಧ್ರ ಪ್ರಾಮೂರ ಕೇರಳ ಚೋಲ ಪುನ್ನಾಗ ಈ ದೇಶಗಳ ರಾಜರನ್ನು ಜಯಿಸಿದನು.

**ಕುಡುಂಬಾನೋಲಿಕಾಂಶ್ಚೈವ ಸ ಮಾಹಿಷಕಮೇಕುರಾನ್ ।**
**ಪಾಂಡ್ಯಾನಂತರಪಾಂಡ್ಯಾಂಶ್ಚ [೧೫]ದಂಡೇನ ವಶಮಾನಯತ್ ॥ ೮೦ ॥**

ಭರತಚಕ್ರವರ್ತಿಯು ಕುಡುಂಬ ಓಲಿಕ ಮಾಹಿಷಕ ಮೇಕುರ ಪಾಂಡ್ಯ ಅಂತರಪಾಂಡ್ಯ ಈ ದೇಶಗಳ ರಾಜರನ್ನೂ ತನ್ನ ಸೈನ್ಯದಿಂದ ವಶಮಾಡಿಕೊಂಡನು.

**ನೃಪಾನೇತಾನ್ವಿಜಿತ್ಯಾಶು ಪ್ರಣಮಯ್ಯ ಸ್ವಪಾದಯೋಃ ।**
**[೧]ಹೃತ್ವಾ ತತ್ಸಾರರತ್ನಾನಿ ಪ್ರಭುಃ ಪ್ರಾಪತ್ಪರಾಂ ಮುದಮ್ ॥ ೮೧ ॥**

ಭರತರಾಜನು ಈ ರಾಜರನ್ನು ಶೀಘ್ರವಾಗಿ ಜಯಿಸಿ, ತನ್ನ ಪಾದಗಳಿಗೆ ನಮಸ್ಕಾರಮಾಡಿಸಿಕೊಂಡು, ಅವರಲ್ಲಿರುವ ಶ್ರೇಷ್ಠವಾದ ರತ್ನಗಳನ್ನು ಸ್ವೀಕರಿಸಿ ಬಹಳ ಸಂತೋಷವನ್ನು ಹೊಂದಿದನು.

**ಸೇನಾನೀರಪಿ ಬಭ್ರಾಮ ವಿಭೋರಾಜ್ಞಾಂ ಸಮುದ್ವಹನ್ ।**
**ಗಿರೀನ್ಸಸರಿತೋ ದೇಶಾನ್ಕಾಲಿಂಗಕವನಾಶ್ರಿತಾನ್ ॥ ೮೨ ॥**

ಭರತಚಕ್ರವರ್ತಿಯ ಆಜ್ಞೆಯನ್ನು ಪರಿಪಾಲನೆಮಾಡುವ ಸೇನಾಧಿಪತಿಯೂ ಕಲಿಂಗದೇಶದ ವನಗಳಲ್ಲಿರುವ ಬೆಟ್ಟಗಳನ್ನೂ ನದೀಸಹಿತವಾದ ದೇಶಗಳನ್ನೂ ಸಂಚರಿಸಿದನು.

**ಸ ಸಾಧನೈಃ ಸಮಂ ಭೇಜೇ ತೈಲಾಮಿಕ್ಷುಮತೀಮಪಿ ।**
**ನದೀಂ ನಕ್ರರವಾಂ ವಂಗಾಂ ಶ್ವಸನಾಂ ಚ ಮಹಾನದೀಮ್ ॥ ೮೩ ॥**

ಆ ಸೇನಾಧಿಪತಿಯು ಸೈನ್ಯಗಳೊಡನೆ ತೈಲಾನದಿಯನ್ನೂ ಇಕ್ಷುಮತೀನದಿಯನ್ನೂ ನಕ್ರರವಾನದಿಯನ್ನೂ ವಂಗಾನದಿಯನ್ನೂ ದೊಡ್ಡದಾದ ಶ್ವಸನಾನದಿಯನ್ನೂ ಸೇರಿದನು.

**ಧುನೀಂ ವೈತರಣೀಂ ಮಾಷವತೀಂ ಚ ಸಮಹೇಂದ್ರಕಾಮ್ ।**
**ಸೈನಿಕೈಃ ಸಮಮುತ್ತೀರ್ಯ ಯಯೌ ಶುಷ್ಕನದೀಮಪಿ ॥ ೮೪ ॥**

ಸೇನಾಧಿಪತಿಯು ತನ್ನ ಸೈನಿಕರೊಡನೆ ವೈತರಣೀನದಿಯನ್ನೂ ಮಾಷವತೀನದಿಯನ್ನೂ ಮಹೇಂದ್ರಕಾನದಿಯನ್ನೂ ಶುಷ್ಕನದಿಯನ್ನೂ ದಾಟಿ ಹೋದನು.

**ಸಪ್ತಗೋದಾವರೀಂ ತೀರ್ತ್ವಾ ಪಶ್ಯನ್ಗೋದಾವರೀಂ ಶುಚಿಮ್ ।**
**ಸರೋ ಮಾನಸಮಾಸಾದ್ಯ ಮುಮುದೇ ಶುಚಿಮಾನಸಃ ॥ ೮೫ ॥**

ನಿರ್ಮಲವಾದ ಮನಸ್ಸುಳ್ಳ ಸೇನಾಪತಿಯು ಸಪ್ತಗೋದಾವರೀನದಿಯನ್ನು ದಾಟಿ ನಿರ್ಮಲವಾದ ಗೋದಾವರೀನದಿಯನ್ನು ನೋಡುತ್ತ ಮಾನಸಸರೋವರವನ್ನು ಸೇರಿ ಸಂತೋಷಪಟ್ಟನು.

**[೨]ಸುಪ್ರವೇಗಾಂ ನದೀಂ ತೀರ್ತ್ವಾ [೩]ಕೃಷ್ಣವೇಣ್ಣಾಂ ಚ ನಿಮ್ನಗಾಮ್ ।**
**ಸನ್ನೀರಾಂ ಚ ಪ್ರವೇಣೀಂ ಚ ವ್ಯತೀಯಾಯ ಸಮಂ ಬಲೈಃ ॥ ೮೬ ॥**

ಸೇನಾಧಿಪತಿಯು ಸೈನ್ಯಗಳೊಡನೆ ಸುಪ್ರಯೋಗಾನದಿಯನ್ನು ದಾಟಿ ಕೃಷ್ಣವೇಣ್ಣಾನದಿಯನ್ನೂ ಸನ್ನೀರಾನದಿಯನ್ನೂ ಪ್ರವೇಣೀನದಿಯನ್ನೂ ದಾಟಿ ಹೋದನು.

**ಕುಬ್ಜಾಂ ವೈಯರ್ಾಂ ಚ ಚೂರ್ಣೀಂ ಚ [೪]ವೇಣ್ಣಾಂ ಸೂಕರಿಕಾಮಪಿ ।**
**ಅಂಬೇಣಾಂ ಚ ನದೀಂ ಪಶ್ಯನ್ [೫]ದಾಕ್ಷಿಣಾತ್ಯಾ[೬]ನಶುಶ್ರುವತ್ ॥ ೮೭ ॥**

ಕುಬ್ಜಾನದಿಯನ್ನೂ ವೈಯರ್ಾನದಿಯನ್ನೂ ಚೂರ್ಣೀನದಿಯನ್ನೂ ವೇಣ್ಣಾನದಿಯನ್ನೂ ಸೂಕರಿಕಾನದಿಯನ್ನೂ ಅಂಬೇಣಾನದಿಯನ್ನೂ ನೋಡುತ್ತ ದಕ್ಷಿಣದೇಶದ ರಾಜರಿಗೆ ಹೇಳಿಕಳುಹಿಸಿದನು. ಚಕ್ರವರ್ತಿಯು ದಿಗ್ವಿಜಯಕ್ಕೆ ಬಂದ ಸಮಾಚಾರವನ್ನು ತಿಳಿಸಿದನೆಂದು ಭಾವವು.

**ಮಹೇಂದ್ರಾದ್ರಿಂ ಸಮಾಕ್ರಾಮನ್ವಿಂಧ್ಯೋಪಾಂತಂ ಚ ನಿರ್ಜಯನ್ ।**
**[೭]ನಾಗಪರ್ವತಮಧ್ಯಾಸ್ಯ ಪ್ರಯಯೌ ಮಲಯಾಚಲಮ್ ॥ ೮೮ ॥**

೧ ದೇಶಾಃ. ೨ ನದೀವನಪರ್ವತಾದಯಃ. ೩ ಶತ್ರೂಣಾಂ. ೪ ರಾಷ್ಟ್ರೇಭವಾಃ. ೫ ಜಾಯಂತೇ ಸ್ಮ. ೬ ಸೇನಾನ್ಯಾ. ೭ ಬಾಣೈರಿತ್ಯರ್ಥಃ. ೮ ಉಭಯತೀರೇಭವಾನ್. ೯ ದ್ವೀಪೇಜಾತಾನ್. ೧೦ ಸೇನಾನೀಃ. ೧೧ ವನಸಮೀಪೇ ಉತ್ಪನ್ನಾನ್. ೧೨ ಸ್ಥಲದುರ್ಗಾಣಿ. ೧೩ ಪೂರ್ವದಿಗ್ಭವಾನ್. ೧೪ ದಕ್ಷಿಣದಿಶಿಜಾತಾನಾಂ. ೧೫ ಬಲೇನ.

೧ ಸ್ವೀಕೃತ್ಯ. ೨ ಸುಪ್ರಯೋಗಾಮಿತ್ಯಪಿಪಾಠಃ. ೩ ಕೃಷ್ಣವರ್ಣಾಮಿತ್ಯಪಿ. ೪ ವೇಣಾಮಿತ್ಯಪಿ. ೫ ದಕ್ಷಿಣದೇಶಾಧಿಪಾನ್. ೬ ಶ್ರಾವಯತಿ ಸ್ಮ. ೭ ನಾಗಪರ್ವತೇ ಸ್ಥಿತ್ವಾ.

ಮಹೇಂದ್ರಪರ್ವತವನ್ನಾಕ್ರಮಿಸುವವನೂ ವಿಂಧ್ಯಪರ್ವತದ ಸಮೀಪಪ್ರದೇಶವನ್ನು ಜಯಿಸುವವನೂ ಆಗಿ ನಾಗಪರ್ವತದಲ್ಲಿದ್ದು ಮಲಯಪರ್ವತವನ್ನು ಸೇರಿದನು.

**ಗೋಶೀರ್ಷಂ ದರ್ದುರಾದ್ರಿಂ ಚ ಗಿರಿಂ ಪಾಂಡ್ಯಕವಾಟಕಮ್ ।**
**ಸ ಶೀತಗುಹ[1]ಮಾಸೀದನ್ನಗಂ ಶ್ರೀಕಟನಾಹ್ವಯಮ್ ॥ ೮೯ ॥**

ಆ ಸೇನಾಪತಿಯು ಗೋಶೀರ್ಷಪರ್ವತವನ್ನೂ ದರ್ದುರಪರ್ವತವನ್ನೂ ಪಾಂಡ್ಯಕವಾಟಕಪರ್ವತವನ್ನೂ ಶೀತಗುಹಪರ್ವತವನ್ನೂ ಶ್ರೀಕಟನವೆಂಬ ಪರ್ವತವನ್ನೂ ಸೇರಿದನು.

**ಶ್ರೀಪರ್ವತಂ ಚ ಕಿಷ್ಕಿಂಧಂ ನಿರ್ಜಯಞ್ಜಯಸಾಧನೈಃ ।**
**ತತ್ರ ತತ್ರೋಚಿತೈರ್ಲಾಭೈರವರ್ಧತ ಚಮೂಪತಿಃ ॥ ೯೦ ॥**

ಸೇನಾಧಿಪತಿಯು ತನ್ನ ಜಯಶೀಲವಾದ ಸಾಧನ(ಸೈನ್ಯ)ಗಳಿಂದ ಶ್ರೀಪರ್ವತವನ್ನೂ ಕಿಷ್ಕಿಂಧಪರ್ವತವನ್ನೂ ಜಯಿಸುತ್ತ ಅಲ್ಲಲ್ಲಿ ಯೋಗ್ಯವಾದ ಲಾಭಗಳಿಂದ ವೃದ್ಧಿಹೊಂದಿದನು. ಹೆಚ್ಚು ದ್ರವ್ಯವನ್ನು ಸಂಪಾದಿಸಿದನೆಂದಭಿಪ್ರಾಯವು.

**ಕರ್ಣಾಟಕಾನ್ಸ್ಫುಟಾ[2]ಟೋಪ[3]ವಿಕಟೋದ್ಭಟವೇಷಕಾನ್ ।**
**ಹರಿದ್ರಾಞ್ಜನತಾಂಬೂಲಪ್ರಿಯಾನ್ಪ್ರಾಯೋ ಯಶೋಧನಾನ್ ॥ ೯೧ ॥**

**ಆಂಧ್ರಾ[4]ನ್ರುಂಧ್ರಪ್ರಹಾರೇಷು [5]ಕೃತಲಕ್ಷಾ[6]ನ್ಕದರ್ಯಕಾನ್ ।**
**ಪಾಷಾಣಕಠಿನಾನಂಗೈರ್ನ ಪರಂ ಹೃದಯೈರಪಿ ॥ ೯೨ ॥**

**ಕಾಲಿಂಗಕಾ[7]ನ್ಗಜಪ್ರಾಯಸಾಧನಾನ್ಸತ್ಕಲಾಧನಾನ್ ।**
**ಪ್ರಾಯೇಣ ತಾದೃಶಾನೋಡ್ರಾಞ್ಜಡಾ[8]ನುಡ್ಡಮರಪ್ರಿಯಾನ್ ॥ ೯೩ ॥**

**[9]ಚೋಲಿಕಾ[10]ನಲಿಕಪ್ರಾಯಾನ್ಪ್ರಾಯಶೋ[11]ನೃಜುಚೇಷ್ಟಿತಾನ್ ।**
**ಕೇರಲಾನ್ಸರಲಾಲಾಪಾನ್ಕಲಾಗೋಷ್ಠೀಷು [12]ಚುಂಚುಕಾನ್ ॥ ೯೪ ॥**

**ಪಾಂಡ್ಯಾನ್ಪ್ರಚಂಡದೋರ್ದಂಡಖಂಡಿತಾರಾತಿಮಂಡಲಾನ್ ।**
**ಪ್ರಾಯೋ ಗಜಪ್ರಿಯಾನ್ ಧನ್ವಿಕುಂತಭೂಯಿಷ್ಠಸಾಧನಾನ್ ॥ ೯೫ ॥**

**[13]ದೃಷ್ಟಾಪದಾನಾನನ್ಯಾಂಶ್ಚ ತತ್ರ ತತ್ರ[14]ವ್ಯದುತ್ಥಿತಾನ್ ।**
**ಜಯಸೈನ್ಯೈ [15]ರವಸ್ಕಂದ್ಯ ಸೇನಾನೀರನಯದ್ವಶಮ್ ॥ ೯೬ ॥**

ವ್ಯಕ್ತವಾದ ಗರ್ವದಿಂದ ಮನೋಹರವೂ ಕೊಬ್ಬಿರುವುದೂ ಆದ ವೇಷವುಳ್ಳವರೂ ಅರಿಸಿನ ಅಂಜನ ತಾಂಬೂಲಗಳಲ್ಲಿ ಪ್ರೀತಿಯುಳ್ಳವರೂ ಹೆಚ್ಚಾದ ಕೀರ್ತಿವಂತರೂ ಆದ ಕರ್ಣಾಟಕದೇಶದ ರಾಜರನ್ನೂ ದುಃಖಕರವಾದ ಪೆಟ್ಟುಗಳಲ್ಲಿ ನೆಪವನ್ನು ಮಾಡುವವರೂ(ನಿಪುಣರೂ)ಲೋಭಿಗಳೂ ಮುಖ್ಯವಾಗಿ ಶರೀರಗಳಿಂದಲೇ ಅಲ್ಲದೆ ಹೃದಯಗಳಿಂದಲೂ ಕಲ್ಲಿನಂತೆ ಕಠಿಣರೂ ಆದ ಆಂಧ್ರದೇಶದ ರಾಜರನ್ನೂ ಹೆಚ್ಚು ಆನೆಗಳ ಸೈನ್ಯಗಳುಳ್ಳವರೂ ಉತ್ತಮವಾದ ವಿದ್ಯೆಗಳೆಂಬ ದ್ರವ್ಯವುಳ್ಳವರೂ ಆದ ಕಲಿಂಗದೇಶದ ರಾಜರನ್ನೂ ಹೆಚ್ಚಾಗಿ ಕಲಿಂಗರಾಜರಂತಿರುವವರೂ ಮೂರ್ಖರೂ ಯುದ್ಧಪ್ರಿಯರೂ ಆದ ಓಡ್ರದೇಶದ ರಾಜರನ್ನೂ ಹೆಚ್ಚಾಗಿ ಸುಳ್ಳುಮಾತನಾಡುವವರೂ ಬಹಳವಾಗಿ ಕುಟಿಲವಾದ ವ್ಯಾಪಾರವುಳ್ಳವರೂ ಆದ ದ್ರಾವಿಡ(ತಿಗಳ)ರನ್ನೂ ಸರಳವಾದ ಮಾತುಗಳುಳ್ಳವರೂ ವಿದ್ಯಾವಿಷಯಕವಾದ ಸಂದರ್ಭಗಳಲ್ಲಿ ನಿಪುಣರೂ ಆದ ಕೇರಳದೇಶದ ರಾಜರನ್ನೂ ಉಗ್ರವಾದ ಬಾಹುಗಳಿಂದ ಶತ್ರುಸಮೂಹಗಳನ್ನು ನಾಶಮಾಡಿರುವವರೂ ಹೆಚ್ಚಾಗಿ ಆನೆಗಳಲ್ಲಿ ಪ್ರೀತಿಯುಳ್ಳವರೂ ಅಧಿಕವಾದ ಧನುರ್ಧಾರಿಸೈನಿಕರೂ ಕುಂತಾಯುಧ(ಈಟಿ)ಗಳುಳ್ಳ ಸೈನಿಕರೂ ಉಳ್ಳವರೂ ಆದ ಪಾಂಡ್ಯದೇಶದ ರಾಜರನ್ನೂ ಅಲ್ಲಲ್ಲಿ ವಿರೋಧಿಗಳಾದವರೂ ತಮ್ಮ ಸಾಮರ್ಥ್ಯವನ್ನು ತೋರಿಸಿದವರೂ ಆದ ಬೇರೆ ರಾಜರನ್ನೂ ಸೇನಾಧಿಪತಿಯು ಜಯಶೀಲವಾದ ಸೈನ್ಯಗಳಿಂದ ಆಕ್ರಮಿಸಿ ಸ್ವಾಧೀನಪಡಿಸಿಕೊಂಡನು.

**ತೇ ಚ ಸತ್ಕೃತ್ಯ ಸೇನಾನ್ಯಂ ಪುರಸ್ಕೃತ್ಯ [1]ಸಸಾಧ್ವಸಮ್ ।**
**ಚಕ್ರಿಣಂ ಪ್ರಣಮಂತಿ ಸ್ಮ ದೂರಾ[2]ದೂರೀಕೃತಾಯತಿಮ್ ॥ ೯೭ ॥**

ಆ ರಾಜರೂ ಭಯವಿಶಿಷ್ಟರಾಗಿ ಸೇನಾಪತಿಯನ್ನು ಸತ್ಕರಿಸಿ ಅವನನ್ನು ಮುಂದೆ ಮಾಡಿಕೊಂಡು ಹೋಗಿ ತಮ್ಮ ಸಂಪತ್ತುಗಳನ್ನಂಗೀಕರಿಸಿದ ಭರತಚಕ್ರವರ್ತಿಯನ್ನು ದೂರದಿಂದ ನಮಸ್ಕರಿಸಿದರು.

**[3]ಕರಗ್ರಹೇಣ ಸಂಪೀಡ್ಯ ದಕ್ಷಿಣಾಶಾಂ ವಧೂಮಿವ ।**
**[4]ಪ್ರಸಭಂ ಹೃತತತ್ಸಾರೋ ದಕ್ಷಿಣಾಬ್ಧಿಮಗಾತ್ಪ್ರಭುಃ ॥ ೯೮ ॥**

ಭರತರಾಜನು, ಪಾಣಿಗ್ರಹಣದಿಂದ ವಧುವನ್ನು ಪೀಡಿಸುವಂತೆ, ದಕ್ಷಿಣ ದಿಕ್ಕಿನಲ್ಲಿರುವ ಭೂಮಿಯನ್ನು ಕಂದಾಯದ ಸ್ವೀಕಾರದಿಂದ ಪೀಡಿಸಿ, ಬಲಾತ್ಕಾರದಿಂದ ಆ ದೇಶಗಳಲ್ಲಿರುವ ಸಾರವಸ್ತುಗಳನ್ನಪಹರಿಸಿ ದಕ್ಷಿಣಸಮುದ್ರಕ್ಕೆ ಹೋದನು.

**ಲವಂಗ[5]ಲವಲೀಪ್ರಾಯಮೇಲಾಗುಲ್ಮ[6]ಲತಾಂತಿಕಮ್ ।**
**ವೇಲೋಪಾಂತವನಂ ಪಶ್ಯನ್ಪ್ರಹೃತೀಂ ಧೃತಿಮಾಪ ಸಃ ॥ ೯೯ ॥**

ಭರತರಾಜನು ಹೆಚ್ಚಾದ ಲವಂಗ ಮತ್ತು ಚಂದನಲತೆಗಳುಳ್ಳುದೂ ಸಮೀಪಪ್ರದೇಶದಲ್ಲಿ ಏಲಕ್ಕಿಯ ಪೊದರುಗಳೂ ಲತೆಗಳೂ ಉಳ್ಳುದೂ ಆದ ಸಮುದ್ರತೀರದಲ್ಲಿರುವ ವನವನ್ನು ನೋಡಿ ಬಹಳ ಸಂತೋಷವನ್ನು ಹೊಂದಿದನು.

**ತಮಾಸಿಷೇವಿರೇ ಮಂದಮಾಂದೋಲಿತಸರೋಜಲಾಃ ।**
**ಏಲಾಸುಗಂಧಯಃ ಸೌಮ್ಯಾ ವೇಲಾಂತವನವಾಯವಃ ॥ ೧೦೦ ॥**

ಮೆಲ್ಲನೆ ಸರೋವರದ ನೀರನ್ನಲ್ಲಾಡಿಸಿದುವೂ ಏಲಕ್ಕಿಯ ಪರಿಮಳವುಳ್ಳುವೂ ಪುಷ್ಪಗಳ ಪರಿಮಳವುಳ್ಳುವೂ ಆದ ವನಪ್ರದೇಶದ ಗಾಳಿಗಳು ಆ ಭರತರಾಜನನ್ನು ಸುತ್ತಲೂ ಸೇವಿಸಿದುವು.

**ಮರುದುದ್ಧೂತಶಾಖಾಗ್ರವಿಕೀರ್ಣಸುಮನೋಂಜಲಿಃ ।**
**ನೂನಂ ಪ್ರತ್ಯಗ್ರಹೀದೇನಂ ವನೋದ್ದೇಶೋ ವಿಶಾಂಪತಿಮ್ ॥ ೧೦೧ ॥**

ಗಾಳಿಯಿಂದ ಕೊಡಹಲ್ಪಟ್ಟ ಕೊಂಬೆಗಳ ತುದಿಯಿಂದುದುರಿದ ಪುಷ್ಪಾಂಜಲಿಯುಳ್ಳ ವನಪ್ರದೇಶವು ಭರತರಾಜನನ್ನು ನಿಜವಾಗಿ ಇದಿರುಗೊಂಡಿತು.

**ಪವನಾಧೂತಶಾಖಾಗ್ರೈರ್ವ್ಯಕ್ತಷಟ್ಪದನಿಃಸ್ವನೈಃ ।**
**ವಿಶ್ರಾಂತ್ಯೈ ಸೈನಿಕಾನಸ್ಯ [7]ವ್ಯಾಹರನ್ನಿವ ಪಾದಪಾಃ ॥ ೧೦೨ ॥**

ವೃಕ್ಷಗಳು, ಸ್ಫುಟವಾದ ಭ್ರಮರಗಳ ಶಬ್ದಗಳುಳ್ಳುವೂ ಗಾಳಿಯಿಂದ ಕಂಪಿತವೂ ಆದ ಕೊಂಬೆಗಳ ತುದಿಗಳಿಂದ ಭರತರಾಜನ ಸೈನಿಕರನ್ನು ವಿಶ್ರಮಿಸಿಕೊಳ್ಳುವುದಕ್ಕೆ ಕರೆಯುವಂತಿದ್ದುವು.

**ಅಥ ತಸ್ಮಿನ್ವನಾ[8]ಭೋಗೇ ಸೈನ್ಯಮಾವಸಯದ್ವಿಭುಃ ।**
**ವೈಜಯಂತಮಹಾದ್ವಾರನಿಕಟೇಂಬುನಿಧೇಸ್ತಟೇ ॥ ೧೦೩ ॥**

ಆಮೇಲೆ ಭರತರಾಜನು ಸಮುದ್ರತೀರದಲ್ಲಿ ವೈಜಯಂತವೆಂಬ ಮಹಾದ್ವಾರದ ಸಮೀಪದಲ್ಲಿ ಆ ವಿಸ್ತಾರವಾದ ವನಪ್ರದೇಶವಲ್ಲಿ ಸೈನ್ಯವನ್ನಿರಿಸಿದನು.

---

೧ ಅಗಮತ್. ೨ ಗರ್ವಃ. ೩ ಮನೋಹರಃ. ೪ ದುಃಖಂ. ೫ ಕೃತವ್ಯಾಜಾನ್. ೬ ಕೃಪಣಾನ್. ೭ ಕರಿಬಹಲಸೇನಾನ್. ೮ ಯುದ್ಧಪ್ರಿಯಾನ್. ೯ ದ್ರಾವಿಡಾನ್. ೧೦ ಅನತಪ್ರಚುರಾನ್. ೧೧ ವಕ್ರವರ್ತನಾನ್. ೧೨ ಸಮರ್ಥಾನ್. ೧೩ ದೃಷ್ಟಸಾಮರ್ಥ್ಯಾನ್. ೧೪ ವೈಪರೀತ್ಯೇನೋತ್ಥಿತಾನ್. ೧೫ ಆಕ್ರಮ್ಯ.

೧ ಸಭಯಂ ಯಥಾ ತಥಾ. ೨ ಅಂಗೀಕೃತಸಂಪದಂ. ೩ ಸಿದ್ಧಾಯೇನ, ಪಾಣಿಗ್ರಹಣೇನ ಚ. ೪ ಬಲಾತ್ಕಾರೇಣ. ೫ ಚಂದನಲತಾ. ೬ ತತಾಂತಿಕಮಿತ್ಯಪಿ ಪಾಠಃ. ೭ ಆಹ್ವಯಂತಿ ಸ್ಮೇವ. ೮ ವಿಸ್ತಾರೇ.

**[೧]ಸನ್ನಾಗಂ ಬಹು[೨]ಪುನ್ನಾಗಂ [೩]ಸುಮನೋಭಿರಧಿಷ್ಠಿತಮ್ ।**
**[೪]ಬಹುಪತ್ರರಥಂ ಜಿಷ್ಣೋರ್ಬಲಂ ತದ್ವನಮಾವಸತ್ ॥ ೧೦೪ ॥**

ಶ್ರೇಷ್ಠವಾದ ಆನೆಗಳುಳ್ಳುದೂ ಆನೇಕ ಶ್ರೇಷ್ಠಪುರುಷರುಳ್ಳುದೂ ದೇವತೆಗಳಿಂದ ಯುಕ್ತವೂ ಅನೇಕ ವಾಹನಗಳೂ ರಥಗಳೂ ಉಳ್ಳುದೂ ಆದ ಭರತರಾಜನ ಸೈನ್ಯವು, ಶ್ರೇಷ್ಠವಾದ ಸುರಹೊನ್ನೆಮರಗಳುಳ್ಳುದೂ ಅನೇಕ ಸುರಹೊನ್ನೆಮರಗಳುಳ್ಳುದೂ ಪುಷ್ಪಗಳಿಂದ ಯುಕ್ತವೂ ಅನೇಕ ಪಕ್ಷಿಗಳುಳ್ಳುದೂ ಆದ ಆ ವನದಲ್ಲಿ ವಾಸ ಮಾಡಿದ್ದಿತು.

**[೫]ಸಚ್ಛಾಯಾನ್ಸಫಲಾಂಸ್ತುಂಗಾ[೬]ನ್ಬಹುಪತ್ರಪರಿಚ್ಛದಾನ್ ।**
**ಆಸೇವಂತ ಜನಾಃ ಪ್ರೀತ್ಯಾ [೭]ಪಾರ್ಥಿವಾಂಸ್ತಾಪವಿಚ್ಛಿದಃ ॥ ೧೦೫ ॥**

ಜನರು, ಶ್ರೇಷ್ಠವಾದ ನೆರಳುಳ್ಳುವೂ ಫಲಗಳುಳ್ಳುವೂ ಉನ್ನತವೂ ಅನೇಕ ಎಲೆಗಳಿಂದ ವ್ಯಾಪ್ತವೂ ಸಂತಾಪವನ್ನು ನಾಶಮಾಡುವುವೂ ಆದ ವೃಕ್ಷಗಳನ್ನು, ತೇಜಸ್ವಿಗಳೂ ಪ್ರಯೋಜನವುಳ್ಳವರೂ ಶ್ರೇಷ್ಠರೂ ಅನೇಕವಾಹನಪರಿವಾರವುಳ್ಳವರೂ ಸಂತಾಪವನ್ನು ದೂರಮಾಡುವವರೂ ಆದ ರಾಜರನ್ನು ಪ್ರೀತಿಯಿಂದ ಸೇವಿಸಿದರು.

**ಸಚ್ಛಾಯಾನಪ್ಯಸಂಭಾವ್ಯ ಫಲಾ[೮]ನ್ಪ್ರೋಜ್ಝ್ಯ ಮಹಾದ್ರುಮಾನ್ ।**
**ಸಫಲಾನ್ವಿರಲಚ್ಛಾಯಾನಪ್ಯಹೋ ಶಿಶ್ರಿಯುರ್ಜನಾಃ ॥ ೧೦೬ ॥**

ಜನರು ಫಲಗಳನ್ನು ಬಿಡದಿರುವ ದೊಡ್ಡ ಮರಗಳು ಶ್ರೇಷ್ಠವಾದ ನೆರಳುಳ್ಳುವಾಗಿದ್ದರೂ ಅವುಗಳನ್ನು ಬಿಟ್ಟು ಫಲಗಳುಳ್ಳ ಮರಗಳು ವಿರಳವಾದ ನೆರುಳುಳ್ಳುವಾಗಿದ್ದರೂ ಅವುಗಳನ್ನಾಶ್ರಯಿಸಿದರು. ಆಶ್ಚರ್ಯ !

**[೯]ಆಕಾಲಿಕೀಮನಾದೃತ್ಯ ಬಹಿಶ್ಛಾಯಾಂ ತದಾತನೀಮ್ ।**
**ಭಾವಿನೀಂ ತರುಮೂಲೇಷು ಛಾಯಾಮಾಶಿಶ್ರಿಯುರ್ಜನಾಃ ॥ ೧೦೭ ॥**

ಜನರು ಅಸ್ಥಿರವೂ ಆ ಕಾಲದಲ್ಲುಂಟಾದುದೂ ಆದ ಹೊರಭಾಗದ ನೆರಳನ್ನು ತಿರಸ್ಕರಿಸಿ ವೃಕ್ಷಮೂಲಗಳಲ್ಲಿರುವ ನೆರಳನ್ನಾಶ್ರಯಿಸಿದರು.

**ವನಸ್ಥಲೀಸ್ತರುಚ್ಛಾಯಾನಿರುದ್ಧದ್ಯುಮಣಿತ್ವಿಷಃ ।**
**[೧೦]ಸಜಾನಯಃ ಸರಸ್ತೀರೇಷ್ವಧ್ಯಾಸಿಷತ ಸೈನಿಕಾಃ ॥ ೧೦೮ ॥**

ಪತ್ನೀಸಹಿತರಾದ ಸೈನಿಕರು ಸರೋವರತೀರಗಳಲ್ಲಿ ವೃಕ್ಷಗಳ ನೆರಳಿನಿಂದ ಸೂರ್ಯಕಾಂತಿಯನ್ನು ಮರೆಮಾಡಿರುವ ವನಪ್ರದೇಶಗಳಲ್ಲಿ ವಾಸಮಾಡಿದರು.

**ಸಪ್ರೇಯಸೀಭಿರಾಬದ್ಧಪ್ರಣಯೈರಾಶ್ರಿತಾ ನೃಪೈಃ ।**
**ಕಲ್ಪಪಾದಪಜಾಂ ಲಕ್ಷ್ಮೀಂ ವ್ಯಕ್ತಮೂಹುರ್ವನದ್ರುಮಾಃ ॥ ೧೦೯ ॥**

ಪತ್ನೀಸಹಿತರೂ ಪ್ರೀತಿಸುವವರೂ ಆದ ರಾಜರಿಂದ ಆಶ್ರಯಿಸಲ್ಪಟ್ಟಿರುವ ಅರಣ್ಯವೃಕ್ಷಗಳು ಕಲ್ಪವೃಕ್ಷದಿಂದುಂಟಾದ ಶೋಭೆಯನ್ನು ಸ್ಫುಟವಾಗಿ ಹೇಳಿದುವು. ಹೇಳುವಂತಿದ್ದುವೆಂದು ಭಾವವು.

**ಕಪಯಃ [೧೧]ಕಪಿಕಚ್ಛೂನಾಮುದ್ಧುನಾನಾಃ [೧೨]ಫಲಚ್ಛಟಾಃ ।**
**ಸೈನಿಕಾ[೧೩]ನಾಕುಲಾಂಶ್ಚಕ್ರುರ್ನಿವಿಷ್ಟಾ[೧೪]ನ್ವೀರುಧಾಮಧಃ ॥ ೧೧೦ ॥**

ಹೆಣ್ಣುಕಪಿಗಳ ಮತ್ತು ನಸುಗುನ್ನಿಗಳ ಫಲಗಳುಳ್ಳ ಗೊಂಚಲುಗಳನ್ನು ಅಳ್ಳಾಡಿಸುತ್ತಿರುವ ಕೋತಿಗಳು, ಲತೆಗಳ ಕೆಳಗೆ ಕುಳಿತಿರುವ ಸೈನಿಕರನ್ನು ವ್ಯಾಕುಲಿತರನ್ನಾಗಿ ಮಾಡಿದುವು.

---

೧ ಪ್ರಶಸ್ತಗಜಂ, ಸುನಾಗವೃಕ್ಷಂ ಚ. ೨ ಪುರುಷಶ್ರೇಷ್ಠಂ, ನಾಗಕೇಸರಂ ಚ. ೩ ದೇವೈಃ, ಕುಸುಮೈಶ್ಚ. ೪ ಬಹುವಾಹನಸ್ಯಂದನಂ, ಅನೇಕಪಕ್ಷಿ ಚ. ೫ ತೇಜಸ್ವಿನಶ್ಚ. ೬ ಬಹುವಾಹನಪರಿಕರಾಂಶ್ಚ. ೭ ವೃಕ್ಷಾನ್, ರಾಜ್ಞಶ್ಚ. ೮ ತ್ಯಕ್ತ್ವಾ. ೯ ಅಸ್ಥಿರಾಂ. ೧೦ ಸ್ತ್ರೀಸಹಿತಾಃ. ೧೧ ಮರ್ಕಟೀನಾಂ. ೧೨ ಫಲಮಂಜರೀಃ. ೧೩ ವ್ಯಾಕುಲಿತಾನ್. ೧೪ ಲತಾನಾಂ.

**ಸರಃಪರಿಸರೇ[೧]ಷ್ವಾಸನ್ಭೋರಾಶ್ವೀಯ[೨]ಮಂದುರಾಃ ।**
**ಸುಂದರಾಃ [೩]ಸ್ವೈರಮಾಹಾರ್ಯೈ[೪]ರ್ಬಾಷ್ಪಚ್ಛೇದ್ಯೈಸ್ತೃಣಾಂಕುರೈಃ ॥**

ಯಥೇಚ್ಛವಾಗಿ ಹೊಂದುವುದಕ್ಕೆ ಯೋಗ್ಯವೂ ಕೋಮಲವೂ ಆದ ಹುಲ್ಲುಗಳ ಮೊಳಕೆಗಳಿಂದ ಮನೋಹರವಾದ ಭರತರಾಜನ ಕುದುರೆಗಳ ಶಾಲೆಗಳು ಸರೋವರಗಳ ಸಮೀಪಪ್ರದೇಶಗಳಲ್ಲಿದ್ದುವು.

**ಅವತಾರಿತಪರ್ಯಾಣಮುಖಭಾಂಡಾದ್ಯುಪಸ್ಕರಾಃ ।**
**ಸ್ಫುರತ್ಪ್ರೋಥೈರ್ಮುಖೈರಶ್ವಾಃ ಕ್ಷ್ಮಾಂ ಜಘ್ರು[೫]ರ್ವಿವಿವೃತ್ಸವಃ ॥ ೧೧೨ ॥**

ತೆಗಯಲ್ಪಟ್ಟ ಹಲ್ಲಣ (ಜೀನು) ಕಡಿವಾಣ ಮೊದಲಾದ ಸಾಮಾನುಗಳುಳ್ಳುವೂ ಸ್ವಾಭಿಪ್ರಾಯವನ್ನು ತಿಳಿಸಲಿಚ್ಛಿಸುವುವೂ ಆದ ಕುದುರೆಗಳು ವಿಕಸಿತವಾದ ಮೂಗುಗಳುಳ್ಳ ಮುಖಗಳಿಂದ ಭೂಮಿಯನ್ನು ಮೂಸಿದುವು.

**ಸಾಂದ್ರಪದ್ಮರಜಃಕೀರ್ಣಾಃ ಸರಸಾಮಂತಿಕಸ್ಥಲೇ ।**
**ಮಂದಂ [೬]ದುಧುವುರಂಗಾನಿ ವಾಹಾಃ ಕೃತವಿವರ್ತನಾಃ ॥ ೧೧೩ ॥**

ದಟ್ಟವಾದ ಕಮಲಧೂಳಿಯಿಂದ ವ್ಯಾಪ್ತವೂ ಸರೋವರಗಳ ಸಮೀಪಪ್ರದೇಶದಲ್ಲಿ ಹೊರಳಾಡಿದುವೂ ಆದ ಕುದುರೆಗಳು ಮೈಗಳನ್ನು ಮೆಲ್ಲನೆ ಕೊಡಹಿದುವು.

**ವಿಬಭಾವಂಬರೇ ಕಂಜರಜಃಪುಂಜೋನಿಲೋದ್ಧುತಃ ।**
**ಅಯತ್ನರಚಿತೋಶ್ವಾನಾಮಿವೋಚ್ಚೈಃ ಪಟಮಂಡಪಃ ॥ ೧೧೪ ॥**

ಗಾಳಿಯಿಂದ ಏಳಿಸಲ್ಪಟ್ಟ ತಾವರೆಗಳ ಧೂಳಿಯ ಸಮೂಹವು, ಪ್ರಯತ್ನವಿಲ್ಲದೆ ಮಾಡಲ್ಪಟ್ಟ ಕುದುರೆಗಳ ವಸ್ತ್ರಮಂಡಪದಂತೆ, ಆಕಾಶದಲ್ಲಿ ಉನ್ನತವಾಗಿ ಪ್ರಕಾಶಿಸುತ್ತಿದ್ದಿತು.

**[೭]ರಜಸ್ವಲಾಂ ಮಹೀಂ [೮]ದೃಷ್ಟ್ವಾ ಜುಗುಪ್ಸವ ಇವೋತ್ಥಿತಾಃ ।**
**ದ್ರುತಂ ವಿವಿಶುರಂಭಾಂಸಿ ಸರಸೀನಾಂ ಮಹಾಹಯಾಃ ॥ ೧೧೫ ॥**

ಮುಟ್ಟಾಗಿರುವ,(ಪುಷ್ಪಧೂಳಿಯುಳ್ಳ)ಪೃಥ್ವಿಯನ್ನು ನೋಡಿ ಜಿಗುಪ್ಸೆಪಟ್ಟುವೋ ಎಂಬಂತೆ ಮೇಲಕ್ಕೆದ್ದ ದೊಡ್ಡ ಕುದುರೆಗಳು ಸರೋವರಗಳ ಜಲಗಳನ್ನು ಶೀಘ್ರವಾಗಿ ಪ್ರವೇಶಮಾಡಿದುವು.

**[೯]ವಾರಿ ವಾರಿಜಕಿಂಜಲ್ಕತತಾನ್ಯಶ್ವಾ [೧೦]ವಿಗಾಹಿತಾಃ ।**
**ಧೌತಮಪ್ಯಂಗರಾಗಂ ಸ್ವಂ ಭೇಜುರಂಭೋಜರೇಣುಭಿಃ ॥ ೧೧೬ ॥**

ತಾವರೆಗಳ ಕುಸುರಿಗಳಿಂದ ವ್ಯಾಪ್ತವಾದ ನೀರುಗಳನ್ನು ಪ್ರವೇಶಮಾಡಿರುವ ಕುದುರೆಗಳು ತಮ್ಮ ಮೈಯಲ್ಲಿರುವ ಧೂಳಿಯನ್ನು ತೊಳೆದುಕೊಂಡರೂ ತಾವರೆಗಳ ಪುಷ್ಪಧೂಳಿಗಳಿಂದ ಪುನಃ ಮೈಧೂಳಿಯನ್ನು ಹೊಂದಿದುವು.

**ಸರೋವಗಾಹನಿರ್ಧೂತಶ್ರಮಾಃ ಪೀತಾಂಭಸೋ ಹಯಾಃ ।**
**ಆಮೀಲಿತಾಕ್ಷ[೧೧]ಮಧ್ಯೂಷುರ್ವಿತತಾನ್ಪಟಮಂಡಪಾನ್ ॥ ೧೧೭ ॥**

ಸರೋವರಪ್ರವೇಶದಿಂದ ಆಯಾಸವನ್ನು ಪರಿಹರಿಸಿಕೊಂಡಿರುವುವೂ ನೀರನ್ನು ಕುಡಿದಿರುವುವೂ ಆದ ಕುದುರೆಗಳು ವಿಸ್ತಾರವಾದ ವಸ್ತ್ರಮಂಟಪಗಳಲ್ಲಿ ಚೆನ್ನಾಗಿ ಕಣ್ಣುಗಳನ್ನು ಮುಚ್ಚಿಕೊಂಡು ವಾಸಮಾಡಿದುವು. ಸುಖವಾಗಿ ನಿದ್ರೆಮಾಡಿದುವೆಂದು ಭಾವವು.

---

೧ ಅಭವನ್. ೨ ವಾಜಿಶಾಲಾತುಮಂದುರಾ. ೩ ಸರ್ವತ್ರಪ್ರದೇಶೇಷು ಸುಲಭೈರಿತ್ಯರ್ಥಃ. ೪ ಕೋಮಲೈಃ. ೫ ಪ್ರಕಟಿತುಮಿಚ್ಛವಃ. ೬ ಕಂಪಯಂತಿ ಸ್ಮ. ೭ ಕುಸುಮರಜೋವತೀಂ, ಋತುಮತೀಂ. ೮ ಸ್ಪೃಷ್ಟ್ವಾ ಇತ್ಯಪಿ ಪಾಠಃ. ೯ ಜಲಾನಿ. ೧೦ ಪ್ರವಿಷ್ಟಾಃ. ೧೧ ವಸಂತಿ ಸ್ಮ.

ನಾಲಿಕೇರದ್ರುಮೇಷ್ವಾಸೀದುಚಿತೋ [೧]ವರ್ಷ್ಮಶಾಲಿನಃ ।
ನಿವೇಶೋ [೨]ಹಾಸ್ತಿಕಸ್ಯಾಸ್ಯ ವಿಭೋಸ್ತಾಲೀವನೇಷು ಚ ॥ ೧೧೮ ॥

ಪರಿಮಾಣದಿಂದಲೂ ಶರೀರದಿಂದಲೂ ಮನೋಹರವಾದ ಈ ಭರತರಾಜನ ಆನೆಗಳ ಸಮೂಹಕ್ಕೆ ಮಾಡಿರುವ ವಾಸಸ್ಥಾನವು ತೆಂಗಿನಮರಗಳ ಗುಂಪುಗಳಲ್ಲಿಯೂ ತಾಳೆಯಮರಗಳ ಗುಂಪುಗಳಲ್ಲಿಯೂ ಇದ್ದಿತು.

ಪ್ರಪತನ್ನಾಲಿಕೇರೌಘ[೩]ಸ್ಥಪುಟಾ ವನಭೂಮಯಃ ।
ಹಸ್ತಿನಾಂ ಸ್ಥಾನತಾಮೀಯುಸ್ತೈರೇವ [೪]ಪ್ರಾಂತಸಾರಿತೈಃ ॥ ೧೧೯ ॥

ಬೀಳುತ್ತಿರುವ ತೆಂಗಿನಕಾಯಿಗಳ ಸಮೂಹದಿಂದ ಹಳ್ಳದಿಣ್ಣೆಯಾದ ವನಭೂಮಿಗಳು, ಸಮೀಪಕ್ಕೆಸೆಯಲ್ಪಟ್ಟ ಆ ತೆಂಗಿನಕಾಯಿಗಳಿಂದಲೇ ಆನೆಗಳ ವಾಸಸ್ಥಾನದ ಭಾವವನ್ನು ಹೊಂದಿದುವು. ಬಿದ್ದ ತೆಂಗಿನಕಾಯಿಗಳನ್ನು ಆನೆಗಳು ಪಕ್ಕಕ್ಕೆ ಹಾಕುವುದರಿಂದ ನಿರಾಯಾಸವಾಗಿ ಅವುಗಳಿಗೆ ವಾಸಸ್ಥಾನವಾಗುತ್ತಿದ್ದಿತೆಂದು ಭಾವವು.

ದ್ವಿಪಾ[೫]ನುದನ್ಯತಸ್ತೀವ್ರಂ [೬]ವಮಥುವ್ಯಂಜಿತಶ್ರಮಾನ್ ।
ನಿನ್ಯುರ್ಜಲೋಪಯೋಗಾಯ ಸರಾಂಸ್ಯಭಿ[೭]ನಿಷಾದಿನಃ ॥ ೧೨೦ ॥

ಆನೆ ಮಾವಟಿಗರು ಸೊಂಡಿಲಿನ ತುಂತುರುಗಳಿಂದ ತಮ್ಮ ಶ್ರಮವನ್ನು ತಿಳಿಸಿದುವೂ ಬಹಳವಾಗಿ ಬಾಯಾರಿಕೆಯುಳ್ಳುವೂ ಆದ ಆನೆಗಳನ್ನು ನೀರು ಕುಡಿಸುವುದಕ್ಕೋಸ್ಕರ ಸರೋವರಗಳಿಗೆ ತೆಗೆದುಕೊಂಡು ಹೋದರು.

[೮]ನೀಚೈರ್ಗತೇನ ಸುವ್ಯಕ್ತಮಾರ್ಗಸಂಜನಿತಶ್ರಮಾನ್ ।
ಗಜಾನಾಧೋರಣಾ ನಿನ್ಯುಃ ಸರಸೀ[೯]ರವಗಾಹನೇ ॥ ೧೨೧ ॥

ಮೆಲ್ಲನೆ ನಡೆಯುವುದರಿಂದ ಮಾರ್ಗಾಯಾಸವನ್ನು ಸೂಚಿಸಿದ ಆನೆಗಳನ್ನು ಮಾವಟಿಗರು ಜಲಪ್ರವೇಶಕ್ಕೋಸ್ಕರ ಸರೋವರಗಳಿಗೆ ತೆಗೆದುಕೊಂಡುಹೋದರು.

ಪ್ರವೇಷ್ಟುಮಬ್ಜಿನೀಪತ್ರಚ್ಛನ್ನಂ ನಾಗೋ [೧೦]ನವಗ್ರಹಃ ।
ನೈಚ್ಛ[೧೧]ತ್ಪ್ರಚೋದ್ಯಮಾನೋಪಿ ವಾರಿ [೧೨]ವಾರಿವಿಶಂಕಯಾ ॥ ೧೨೨ ॥

ಹೊಸದಾಗಿ ಹಿಡಿಯಲ್ಪಟ್ಟ ಆನೆಯು ಮಾವಟಿಗನಿಂದ ಪ್ರೇರೇಪಿಸಲ್ಪಟ್ಟರೂ ತಾವರೆಯೆಲೆಗಳಿಂದ ಮರೆಯಾದ ನೀರನ್ನು, ಆನೆಯನ್ನು ಹಿಡಿಯುವ ಹಳ್ಳವೆಂಬ ಸಂಶಯದಿಂದ, ಪ್ರವೇಶಿಸುವುದಕ್ಕಿಚ್ಛೆಸಲಿಲ್ಲ.

ವನಂ ವಿಲೋಕಯನ್ಸ್ವೈರಂ ಕವಲೋಚಿತಪಲ್ಲವಮ್ ।
ಗಜಶ್ಚಿರಗೃಹೀತೋಪಿ [೧೩]ಕಿಮಪ್ಯಾಸೀತ್ಸಮುತ್ಸುಕಃ ॥ ೧೨೩ ॥

ಯಥೇಚ್ಛವಾಗಿ ತಿನ್ನುವುದಕ್ಕೆ ಯೋಗ್ಯವಾದ ತಳಿರುಗಳುಳ್ಳ ವನವನ್ನು ನೋಡುತ್ತಿರುವ ಆನೆಯು ಬಹುಕಾಲದ ಹಿಂದೆ ಹಿಡಿಯಲ್ಪಟ್ಟಿದ್ದರೂ ಬಹಳ ಕುತೂಹಲವುಳ್ಳುದಾಗಿದ್ದಿತು. ಪೂರ್ವಸಂಸ್ಕಾರಸ್ಮರಣೆಯಿಂದ ವನವನ್ನು ಕುತೂಹಲದಿಂದ ನೋಡಿತೆಂದು ಭಾವವು.

ಸ್ವೈರಂ ನ ಪಪುರಂಭಾಂಸಿ ನಾಗೃಹ್ಣನ್ಕವಲಾನಪಿ ।
ಕೇವಲಂ [೧೪]ವನಸಂಭೋಗಸುಖಾನಾಂ ಸಸ್ಮರುರ್ಗಜಾಃ ॥ ೧೨೪ ॥

ಆನೆಗಳು ಯಥೇಚ್ಛವಾಗಿ ನೀರನ್ನು ಕುಡಿಯಲಿಲ್ಲ; ಆಹಾರಗಳನ್ನೂ ತಿನ್ನಲಿಲ್ಲ; ಮುಖ್ಯವಾಗಿ ಹಿಂದೆ ವನದಲ್ಲಿ ಅನುಭವಿಸಿದ ಸುಖಗಳನ್ನು ಸ್ಮರಿಸಿದುವು.

[೧]ಉತ್ಪುಷ್ಕರಾನ್ಸ್ಫುರ[೨]ದ್ರೌಕ್ಮಕಕ್ಷ್ಯಾನ್ನಿನ್ಯುರ್ದ್ವಿಪಾನ್ಸರಃ ।
[೩]ಸಶಯೂನಿವ ನೀಲಾದ್ರೀನ್ಸವಿದ್ಯುತ ಇವಾಂಬುದಾನ್ ॥ ೧೨೫ ॥

ಸೊಂಡಿಲುಗಳನ್ನು ಮೇಲಕ್ಕೆತ್ತಿರುವುವೂ ಸುವರ್ಣಮಯವಾದ ಹೊದಿಕೆಗಳುಳ್ಳುವೂ ಆದ ಆನೆಗಳನ್ನು, ಹೆಬ್ಬಾವುಗಳುಳ್ಳ ನೀಲಪರ್ವತಗಳನ್ನೋಪಾದಿಯಲ್ಲಿಯೂ ಮಿಂಚುಗಳುಳ್ಳ ಮೇಘಗಳನ್ನೋಪಾದಿಯಲ್ಲಿಯೂ ಸರೋವರಕ್ಕೆ ತೆಗೆದುಕೊಂಡು ಹೋದರು.

ವನದ್ವಿಪಮದಾಮೋದವಾಹಿನೇ [೪]ಗಂಧವಾಹಿನೇ ।
ಗಜಃ ಕುಪ್ಯನ್ಜಲೋಪಾಂತಂ ನಿನ್ಯೇ ಕೃಚ್ಛ್ರಾ[೫]ನ್ನಿಷಾದಿನಾ ॥ ೧೨೬ ॥

ಕಾಡಾನೆಯ ಮದಜಲದ ಪರಿಮಳವನ್ನು ತರುತ್ತಿರುವ ಗಾಳಿಗೆ ಕೋಪಿಸಿಕೊಂಡ ಆನೆಯನ್ನು ಮಾವಟಿಗನು ಕಷ್ಟದಿಂದ ನೀರಿನ ಬಳಿಗೆ ತೆಗೆದುಕೊಂಡುಹೋದನು.

ಅಕಸ್ಮಾತ್ಕುಪಿತೋ ದಂತೀ ಶಿರಸ್ತಿರ್ಯಗ್ವಿಧೂನಯನ್ ।
ಅನಂಕುಶವಶಸ್ತೀವ್ರಮಾಧೋರಣಮಖೇದಯತ್ ॥ ೧೨೭ ॥

ಅಕಸ್ಮಾತ್ತಾಗಿ ಕೋಪಿಸಿಕೊಂಡುದೂ ತಲೆಯನ್ನು ಅಡ್ಡವಾಗಿ ಕೊಡಹುತ್ತಿರುವುದೂ ಅಂಕುಶಕ್ಕೆ ವಶವಾಗದಿರುವುದೂ ಆದ ಆನೆಯು ಮಾವಟಿಗನನ್ನು ಬಹಳವಾಗಿ ಖೇದಪಡಿಸಿದ್ದಿತು.

ವನ್ಯಾನೇಕಪಸಂಭೋಗಸಂಕ್ರಾಂತಮದವಾಸನಾಮ್ ।
[೬]ವಿಸೋಢುಂ ಸರಸೀಂ ನೈಚ್ಛನ್ಮದೇಭಃ ಕರಿಣೀಮಿವ ॥ ೧೨೮ ॥

ಮದಿಸಿದ ಆನೆಯು, ಹೆಣ್ಣಾನೆಯನ್ನು ನೋಡಿ ಸಹಿಸುವುದಕ್ಕಿಚ್ಛೆಸದಿರುವಂತೆ, ಕಾಡಾನೆಗಳ ಸಂಭೋಗದಿಂದ ಸಂಬಂಧಿಸಿರುವ ಮದಜಲದ ವಾಸನೆಯುಳ್ಳ ಸರೋವರವನ್ನು ಸಹಿಸುವುದಕ್ಕಿಚ್ಛೆಸಲಿಲ್ಲ.

ಪೀತಂ ವನದ್ವಿಪೈಃ ಪೂರ್ವಮಂಬು ತದ್ದಾನವಾಸಿತಮ್ ।
ದ್ವಿಪಃ ಕರೇಣ [೭]ಸಂಜಿಘ್ರ[೮]ನ್ನಾಪಾದಾಸ್ಫಾಲಯತ್ಪರಮ್ ॥ ೧೨೯ ॥

ಕಾಡಾನೆಗಳು ಮೊದಲು ಕುಡಿದಿರುವ ಮತ್ತು ಆ ಕಾಡಾನೆಗಳ ಮದಜಲದ ವಾಸನೆಯುಳ್ಳ ನೀರನ್ನು ಸೊಂಡಲಿನಿಂದ ಮೂಸಿನೋಡಿದ ಆನೆಯು ಅದನ್ನು ಕುಡಿಯಲಿಲ್ಲ. ಆ ನೀರಿನಮೇಲೆ ಸೊಂಡಲಿನಿಂದ ಬಹಳವಾಗಿ ಹೊಡೆಯಿತು.

ಪೀತಾಂಭಸೋ ಮದಾಸಾರೈರ್ವೃದ್ಧಿಂ ನಿನ್ಯುಃ ಸರೋಜಲಮ್ ।
ಗಜಾ ಮುಧಾ [೯]ಧನಾದಾನಂ ನೂನಂ ವಾಂಛಂತಿ ನೋ[೧೦]ನ್ನತಾಃ ॥

ನೀರನ್ನು ಕುಡಿದಿರುವ ಆನೆಗಳು ಸರೋವರದ ನೀರನ್ನು ತಮ್ಮ ಮದಜಲಗಳಿಂದ ಹೆಚ್ಚಿಸಿದುವು.ದೊಡ್ಡವರು ವ್ಯರ್ಥವಾಗಿ ದ್ರವ್ಯಸ್ವೀಕಾರವನ್ನು ಇಚ್ಛಿಸುವುದಿಲ್ಲ, ನಿಜ.

ಉತ್ಪುಷ್ಕರಂ ಸರೋಮಧ್ಯೇ ನಿಮಗ್ನೋಽಪಿ ಮದದ್ವಿಪಃ ।
[೧೧]ರಂರಣದ್ಭಿಃ ಖಮುತ್ಪತ್ಯ ವ್ಯಜ್ಯತೇ ಸ್ಮ [೧೨]ಮಧುವ್ರತೈಃ ॥ ೧೩೦ ॥

ಸರೋವರದ ಮಧ್ಯದಲ್ಲಿ ಸೊಂಡಲನ್ನು ಮೇಲಕ್ಕೆತ್ತಿಕೊಂಡು ಮದಗಜವು ಮುಳುಗಿದ್ದರೂ ಅದನ್ನು ಆಕಾಶದಲ್ಲಿ ಹಾರಾಡುತ್ತ ಬಹಳ ಶಬ್ದಮಾಡುತ್ತಿರುವ ದುಂಬಿಗಳು ಸೂಚಿಸುತ್ತಿದ್ದುವು.

ಪೀತಾಂಬುರಂಬುದಸ್ಪರ್ಧಿಬೃಂಹಿತೋ ಮದಕುಂಜರಃ ।
[೧೩]ದುಧಾವ [೧೪]ಗಂಡಕಂಡೂಯಾಂ ಚಂಡ[೧೫]ಗಂಡೂಷವಾರಿಭಿಃ ॥

೧ ಪ್ರಮಾಣೇನ, ಶರೀರೇಣ. ೨ ಗಜಸಮೂಹಸ್ಯ. ೩ ನಿಮ್ನೋನ್ನತಾಃ. ೪ ಭೀತ್ಯಾಪರ್ಯಂತಸಾರಿತೈಃ. ೫ ಉದನ್ಯಾತುಪಿಪಾಸಾತ್ಯಟ್. ೬ ವಮಥುಃ ಕರಶೀಕರಃ. ೭ ಹಸ್ತ್ಯಾರೋಹಾಃ. ೮ ಮಂದಗಮನೇನ. ೯ ಪ್ರವೇಶನಾರ್ಥಂ. ೧೦ ನವಸ್ವೀಕಾರಃ. ೧೧ ಪ್ರೇರಿತೋಪಿ. ೧೨ ಗಜಬಂಧನಗರ್ತಶಂಕಯಾ. ೧೩ ಅಧಿಕಂ. ೧೪ ವನಸಂಭೋಗಜಾತಸುಖಾನಿ.

೧ ಉದ್ಗತಹಸ್ತಾಗ್ರಾನ್. ೨ ಸುವರ್ಣಮಯವರತ್ರಾನ್. ೩ ಅಜಗರಸಹಿತಾನ್. ೪ ಅನಿಲಾಯ. ೫ ಹಸ್ತಿಪಕೇನ. ೬ ವಿಗಾಢುಮಿತ್ಯಪಿಪಾಠಃ. ೭ ಆಘ್ರಾಣಯನ್. ೮ ನ ಪಿಬತಿ ಸ್ಮ. ೯ ಧನಸ್ವೀಕಾರಂ. ೧೦ ಮಹಾಂತಃ. ೧೧ ಭೃಶಂ ಗುಂಜದ್ಭಿಃ. ೧೨ ಭ್ರಮರೈಃ. ೧೩ ಅಪನಯತಿ ಸ್ಮ. ೧೪ ಕಪೋಲ ಕಂಡೂಯನಂ. ೧೫ ನಿಷ್ಠೀವನವಾರಿಭಿಃ.

ನೀರನ್ನು ಕುಡಿದು ಮೇಘಕ್ಕೆ ಸಮಾನವಾದ ಗರ್ಜನೆಮಾಡುವ ಮದಗಜವು ಉಗ್ರವಾಗಿ ಬಾಯಿಮುಕ್ಕುಳಿಸಿದ ನೀರಿನಿಂದ ತನ್ನ ಕೆನ್ನೆಯ ನೆವೆಯನ್ನು ಹೋಗಲಾಡಿಸಿದ್ದಿತು.

**ವಿಮುಕ್ತಂ ವ್ಯಕ್ತ[೧]ಶೂತ್ಕಾರಂ ಕರಮುತ್ಕ್ಷಿಪ್ಯ ವಾರಣೈಃ ।**
**ವಾರಿ ಸ್ಫಟಿಕದಂಡಸ್ಯ ಲಕ್ಷ್ಮೀ[೨]ಮೂಹೇ ಖಮುಚ್ಚಲತ್ ॥ ೧೩೩ ॥**

ಆನೆಗಳು ಸ್ಫುಟವಾಗಿ ಶೂತ್ಕಾರವನ್ನು ಮಾಡುತ್ತಿರುವ ಸೊಂಡಲನ್ನು ಮೇಲಕ್ಕೆತ್ತಿ ಸುರಿದ ಮತ್ತು ಆಕಾಶಕ್ಕೆ ಹಾರುತ್ತಿರುವ ನೀರು ಸ್ಫಟಿಕದ ಕೋಲಿನಂತೆ ಶೋಭಿಸಿದ್ದಿತು.

**[೩]ಉದಗಾಹೈರ್ವಿನಿರ್ಧೂತಶ್ರಮಾಃ ಕೇಚಿನ್ಮತಂಗಜಾಃ ।**
**[೪]ಬಿಸಭಂಗೈ[೫]ರಧುಸ್ತೃಪ್ತಿಂ ಹೇಲಯಾ ಕವಲೀಕೃತೈಃ ॥ ೧೩೪ ॥**

ಜಲಪ್ರವೇಶಗಳಿಂದ ಶ್ರಮವನ್ನು ದೂರಮಾಡಿಕೊಂಡಿರುವ ಕೆಲವು ಆನೆಗಳು ಲೀಲೆಯಿಂದ ತಿಂದಿರುವ ತಾವರೆದಂಟುಗಳ ತುಂಡುಗಳಿಂದ ತೃಪ್ತಿಯನ್ನು ಹೊಂದಿದುವು.

**ಮೃಣಾಲೈ[೬]ರಧಿದಂತಾಗ್ರಮರ್ಪಿತೈರ್ವಿಬಭುರ್ಗಜಾಃ ।**
**ಅಜಸ್ರಮಂಬುಸಂಸೇಕಾದ್ರುದ್ಯೈಃ [೭]ಪ್ರಾರೋಹಿತೈರಿವ ॥ ೧೩೫ ॥**

ಆನೆಗಳು ಹಲ್ಲುಗಳ ತುದಿಯಲ್ಲಿಟ್ಟಿರುವ ತಾವರೆದಂಟುಗಳಿಂದ, ಯಾವಾಗಲೂ ಜಲಸೇಚನೆಯಿಂದ ಮೊಳಕೆಯೆದ್ದಿರುವ ಹುಲ್ಲುಗಳಿಂದ ಶೋಭಿಸುವಂತೆ, ಶೋಭಿಸುತ್ತಿದ್ದುವು.

**ಪ್ರಮಾದ್ಯನ್ ದ್ವಿರದಃ ಕಶ್ಚಿನ್ಮೃಣಾಲಂ ಸ್ವಕರೋದ್ಧೃತಮ್ ।**
**ದದಾ[೮]ವಾಲಾನಬುದ್ಧ್ಯೇವ [೯]ನಿಯಂತ್ರೇ ದ್ವಿಗುಣೀಕೃತಮ್ ॥ ೧೩೬ ॥**

ಮದಿಸಿರುವ ಒಂದು ಆನೆಯು ತನ್ನ ಸೊಂಡಲಿನಿಂದ ಎತ್ತಲ್ಪಟ್ಟ ಎರಡು ಭಾಗವಾದ ತಾವರೆಯ ದಂಟನ್ನು ತನ್ನನ್ನು ಕಟ್ಟುವ ಹಗ್ಗವೆಂಬ ಬುದ್ಧಿಯಿಂದಲೇ ಮಾವಟಿಗನಿಗೆ ಕೊಟ್ಟಿತು.

**ಚರಣಾಲಗ್ನಮಾಕರ್ಷನ್ಮೃಣಾಲಂ ಭೀಲುಕೋ ಗಜಃ ।**
**[೧೦]ಬಹಿಃಸರಸ್ತಟಂ [೧೧]ವ್ಯಾಸ್ಥ[೧೨]ದಂದುತಂತುಕಶಂಕಯಾ ॥ ೧೩೭ ॥**

ಕಾಲಿನಲ್ಲಿ ಸಿಕ್ಕಿಕೊಂಡ ತಾವರೆದಂಟನ್ನೆಳೆಯುತ್ತಿರುವುದೂ ಹೆದರಿರುವುದೂ ಆದ ಆನೆಯು ಸರೋವರತೀರದ ಹೊರಭಾಗದಲ್ಲಿ ತನ್ನನ್ನು ಕಟ್ಟುವ ಸರಪಣಿಯೆಂಬ ಸಂದೇಹದಿಂದ ತೊಂದರೆಪಡಿಸಿದ್ದಿತು.

**ಕರೈರುತ್ಕ್ಷಿಪ್ಯ ಪದ್ಮಾನಿ ಸ್ಥಿತಾಃ ಸ್ತಂಬೇರಮಾ ಬಭುಃ ।**
**ದೇವತಾನುಸ್ಮೃತಿಂ ಕಿಂಚಿತ್ಕುರ್ವಂತೋಽರ್ಘ್ಯೈರಿವೋದ್ಧೃತೈಃ ॥ ೧೩೮ ॥**

ಸೊಂಡಲುಗಳಿಂದ ಕಮಲಗಳನ್ನು ಮೇಲಕ್ಕೆಸೆದು ನಿಂತಿರುವ ಆನೆಗಳು, ಮೇಲಕ್ಕೆತ್ತಲ್ಪಟ್ಟ ಅರ್ಘ್ಯಗಳಿಂದ ದೇವತೆಗಳನ್ನು ಸ್ವಲ್ಪ ಸ್ಮರಣೆಮಾಡುವಂತೆ, ಶೋಭಿಸುತ್ತಿದ್ದುವು.

**ಸರಸ್ತರಂಗಧೌತಾಂಗಾ ರೇಜುಸ್ತುಂಗಾ ಮತಂಗಜಾಃ ।**
**ಶೃಂಗಾರಿತಾ ಇವಾಲಗ್ನೈಃ ಸಾಂದ್ರೈರಂಭೋಜರೇಣುಭಿಃ ॥ ೧೩೯ ॥**

ಸರೋವರದ ಅಲೆಗಳಿಂದ ತೊಳೆಯಲ್ಪಟ್ಟ ಮೈಗಳುಳ್ಳ ದೊಡ್ಡ ಆನೆಗಳು, ದಟ್ಟವಾಗಿ ಅಂಟಿಕೊಂಡಿರುವ ತಾವರೆಯ ಧೂಳಿಗಳಿಂದ ಅಲಂಕರಿಸಲ್ಪಟ್ಟಿವೆಯೋ ಎಂಬಂತೆ, ಶೋಭಿಸುತ್ತಿದ್ದುವು.

೧ ಸೂತ್ಕಾರಮಿತ್ಯಪಿ ಪಾಠಃ. ೨ ಧರತಿ ಸ್ಮ. ೩ ಜಲಾವಗಾಹನೈಃ. ೪ ಮೃಣಾಲಖಂಡೈಃ. ೫ ಧೃತವಂತಃ. ೬ ದಂತಾಗ್ರೇ. ೭ ಅಂಕುರಿತೈಃ. ೮ ಬಂಧನರಜ್ಜುಬುದ್ಧ್ಯಾ. ೯ ಆರೋಹಕಾಯ. ೧೦ ಸರಸಸ್ತಟ ಬಾಹ್ಯಪ್ರದೇಶೇ. ೧೧ ವಿಕ್ಷಿಪತಿ ಸ್ಮ. ೧೨ ಅಂದುಕೋನಿಗಲೋಸ್ತ್ರೀ ಸ್ಯಾದಿತ್ಯಮರಃ.

**ಯಯುಃ ಕರಿಭಿರಾರುದ್ಧಂ ಪರಿಹೃತ್ಯ ಸರೋಜಲಮ್ ।**
**ಪತತ್ರಿಣಃ ಸರಸ್ತೀರಂ ತದ್ಯುಕ್ತಮಬಲೀಯಸಾಮ್ ॥ ೧೪೦ ॥**

ಪಕ್ಷಿಗಳು ಆನೆಗಳಿಂದ ವ್ಯಾಪ್ತವಾಗಿರುವ ಸರೋವರದ ನೀರನ್ನು ಬಿಟ್ಟು ಸರೋವರದ ದಡವನ್ನು ಸೇರಿದುವು. ಹಾಗೆ ಮಾಡುವುದು ಬಲಹೀನರಿಗೆ ಯುಕ್ತವಾಗಿದೆ. ಬಲಿಷ್ಠರು ಆಕ್ರಮಿಸಿದ ಸ್ಥಾನವನ್ನು ಪರಿತ್ಯಜಿಸುವುದು ಬಲಹೀನರಿಗೆ ಯುಕ್ತವಾಗಿದೆಯೆಂದು ಭಾವವು.

**ಸರೋವಗಾಹ[೧]ನಿರ್ಣಿಕ್ತಮೂರ್ತಯೋಽಪಿ ಮತಂಗಜಾಃ ।**
**ರಜಃ[೨]ಪ್ರಮಾಥೈರಾತ್ಮಾನಂ ಚಕ್ರುರೇವ ಮಲೀಮಸಮ್ ॥ ೧೪೧ ॥**

ಸರೋವರ ಪ್ರವೇಶದಿಂದ ಶುದ್ಧವಾದ ಮೈಯುಳ್ಳವಾಗಿದ್ದರೂ ಆನೆಗಳು ಧೂಳನ್ನೆಸೆದುಕೊಳ್ಳುವುದರಿಂದ ತಮ್ಮನ್ನು ಪುನಃ ಮಲಿನಮಾಡಿಕೊಂಡುವು.

**ವಯಂ ಜಾತ್ಯೈವ [೩]ಮಾತಂಗಾ ಮದೇನೋದ್ದೀಪಿತಾಃ ಪುನಃ ।**
**ಕುತಸ್ತ್ಯಾ ಶುದ್ಧಿರಸ್ಮಾಕಮಿತ್ಯಾತ್ತಂ [೪]ನು ರಜೋ ಗಜೈಃ ॥ ೧೪೨ ॥**

''ನಾವು ಜಾತಿಯಿಂದಲೇ ಮಾತಂಗರು(ಶ್ವಪಚರು), ಪುನಃ ಮದದಿಂದ ಸೊಕ್ಕಿರುತ್ತೇವೆ. ನಮಗೆ ಪರಿಶುದ್ಧಿಯೆಲ್ಲಿಯದು ?'' ಎಂದು ಆನೆಗಳು ಧೂಳನ್ನು ಸ್ವೀಕರಿಸಿದುವೋ ಎಂಬಂತಿದ್ದುವು.

**ಇತ್ಥಂ ಸರಸ್ಸು ಸುಚಿರಂ ಪ್ರವಿಹೃತ್ಯ ನಾಗಾಃ**
**ಸಂತಾಪ[೫]ಮಂತರುದಿತಂ ಪ್ರಶಮಯ್ಯ ತೋಯೈಃ ।**
**ತೀರದ್ರುಮಾನುಪಯಯುಃ ಕಿಮಪಿ ಪ್ರತೋಷಾತ್**
**ಬಂಧಂ ತು [೬]ತತ್ರ ನಿಯತಂ [೭]ನ ವಿದಾಂಬಭೂವುಃ ॥ ೧೪೩ ॥**

ಈ ರೀತಿಯಾಗಿ ಆನೆಗಳು ಬಹುಕಾಲದವರೆಗೆ ಸರೋವರಗಳಲ್ಲಿ ವಿನೋದಿಸಿ ಹೃದಯದಲ್ಲುಂಟಾದ ಸಂತಾಪವನ್ನು ನೀರಿನಿಂದ ಹೋಗಲಾಡಿಸಿಕೊಂಡು ಬಹಳ ಸಂತೋಷದಿಂದ ಸರೋವರತೀರಗಳಲ್ಲಿರುವ ಮರಗಳ ಸಮೀಪಕ್ಕೆ ಹೋದುವು. ಅಲ್ಲಿ ನಿಜವಾಗಿಯೂ ಬಂಧನವನ್ನು ತಿಳಿಯಲಿಲ್ಲ. ಬಂಧನದಲ್ಲಿರಿಸಿದುದನ್ನೂ ಲಕ್ಷಿಸಲಿಲ್ಲವೆಂದು ಭಾವವು.

**ಹೃತ್ವಾ ಸರೋಂಬು ಕರಿಣೋ ನಿಜದಾನವಾರಿ**
**ಸಂವರ್ಧಿತಂ [೮]ವಿನಿಮಯಾ[೯]ದನೃಣಾಶ್ಚ ಸಂತಃ ।**
**ತದ್ವೀಚಿಹಸ್ತಜನಿತಪ್ರತಿರೋಧಶಂಕಾ-**
**ವ್ಯಾಸಂಗಿನೋ [೧೦]ನು [೧೧]ಸರಸಃ ಪ್ರಸಭಂ ನಿರೀಯುಃ ॥ ೧೪೪ ॥**

ಆನೆಗಳು ತಮ್ಮ ಮದಜಲದಿಂದ ಹೆಚ್ಚಿಸಲ್ಪಟ್ಟ ಸರೋವರದ ನೀರನ್ನು ತೆಗೆದುಕೊಂಡು ಅದಕ್ಕೆ ಬದಲಾಗಿ ಮದಜಲವನ್ನು ಕೊಡುವುದರಿಂದ ಋಣವಿಲ್ಲದುವುಗಳಾಗಿ ಆ ಸರೋವರದ ಅಲೆಗಳೆಂಬ ಕೈಗಳ ತಡೆಯ ಸಂದೇಹ ಯೋಚನೆಯುಳ್ಳವುಗಳಂತೆ, ಸರೋವರದಿಂದ ಬಲಾತ್ಕಾರವಾಗಿ ಹೊರಟು ಹೋದುವು.

**ಆಧೋರಣಾ ಮದಮಷೀಮಲಿನಾನ್ಕರೀಂದ್ರಾನ್**
**[೧೨]ನಿರ್ಣೇಕ್ತುಮಂಬು ಸರಸಾಮವಗಾಹಯಂತಃ ।**
**ಶೇಕುರ್ನ ಕೇವಲ[೧೩]ಮಪಾಮುಪಯೋಗಮಾತ್ರಂ**
**ತೀರಸ್ಥಿತಾ[೧೪]ನನುನಯೈ[೧೫]ಸ್ತ[೧೬]ದಚೀಕರಂತ ॥ ೧೪೫ ॥**

ದಡದಲ್ಲಿರುವುವೂ ಮದಜಲದ ಮಸಿಯಿಂದ ಮಲಿನವಾಗಿರುವುವೂ ಆದ ದೊಡ್ಡ ಆನೆಗಳನ್ನು ಒಳ್ಳೆಯ ಮಾತುಗಳಿಂದ ಸರೋವರಜಲವನ್ನು ಪ್ರವೇಶ

೧ ಶುದ್ಧಾಃ. ೨ ಪ್ರಕ್ಷೇಪೈಃ. ೩ ಶ್ವಪಚಾ ಇತಿ ಧ್ವನಿಃ. ೪ ಇವ. ೫ ಅಭ್ಯಂತರೋದ್ಭೂತಂ. ೬ ತೀರದ್ರುಮೇಷು. ೭ ನ ವಿದಂತಿ ಸ್ಮ. ೮ ನೈಮೇಯಾತ್. ೯ ಋಣರಹಿತಾಃ. ೧೦ ಇವ. ೧೧ ಸರೋವರಾತ್. ೧೨ ಶುದ್ಧಾನ್ಕರ್ತುಂ. ೧೩ ಜಲಸೇವನಾಯ. ೧೪ ಚಾಟುಕಾರೈಃ. ೧೫ ತಸ್ಮಾತ್ಕಾರಣಾತ್. ೧೬ ಕಾರಯಂತಿ ಸ್ಮ.

ಮಾಡಿಸಿದ ಮಾವಟಿಗರು ಅವುಗಳನ್ನು ತೊಳೆಯುವುದಕ್ಕೋಸ್ಕರ ಸಮರ್ಥರಾಗಲಿಲ್ಲ, ಆದುದರಿಂದ ಜಲಪಾನವನ್ನು ಮಾತ್ರ ಮಾಡಿಸಿದರು.

**ಸ್ವೈರಂ ನವಾಂಬುಪರಿಪೀತಮಯತ್ನಲಭ್ಯ-**
**ತೀರದ್ರುಮೇಷು ನ ಕೃತಃ ಕವಲಗ್ರಹೋಪಿ ।**
**ಛಾಯಾಸ್ವಲಂಭಿ ನ ತು ವಿಶ್ರಮಣಂ [೧]ಪ್ರಭಿನ್ನೈಃ**
**ಸ್ತಂಬೇರಮೈರ್ಬತ ! ಮದಃ ಖಲು ನಾತ್ಮನೀನಃ ॥ ೧೪೬ ॥**

ಮದಿಸಿರುವ ಆನೆಗಳು ಯಥೇಚ್ಛವಾಗಿ ನೀರನ್ನು ಕುಡಿಯಲೇಯಿಲ್ಲ, ದಡಗಳಲ್ಲಿರುವ ಮರಗಳಲ್ಲಿ ಪ್ರಯತ್ನವಿಲ್ಲದೆ ಹೊಂದುವುದಕ್ಕೆ ಯೋಗ್ಯವಾದ ಕವಳಗಳನ್ನೂ ಪರಿಗ್ರಹಿಸಲಿಲ್ಲ, ನೆರಳುಗಳಲ್ಲಿ ವಿಶ್ರಾಂತಿಯನ್ನೂ ಪಡೆಯಲಿಲ್ಲ, ಕಷ್ಟ ! ನಿಶ್ಚಯವಾಗಿಯೂ ಮದ(ಅಹಂಕಾರ)ವು ಆತ್ಮಹಿತಕರವಾದುದಲ್ಲ.

**ನಾಧ್ವಾ ದ್ರುತಂ ಗುರುತರೈರಪಿ [೨]ನಾತಿಯಾತೋ**
**ಯುದ್ಧೇಷು ಜಾತು ನ ಕಿಮಪ್ಯಪರಾದ್ಧಮೇಭಿಃ ।**
**ಭಾರಕ್ಷಮಾಶ್ಚ ಕರಿಣಃ [೩]ಸವಿಶೇಷಮೇವ**
**ಬದ್ಧಾಸ್ತಥಾ[೪]ಪ್ಯನಿಭೃತಾ ಇತಿ ಧಿಕ್ಚಲತ್ವಮ್ ॥ ೧೪೭ ॥**

ಹೆಚ್ಚು ಶರೀರಭಾರವುಳ್ಳವುಗಳಾಗಿದ್ದರೂ ಈ ಆನೆಗಳು ಶೀಘ್ರವಾಗಿ ಮಾರ್ಗವನ್ನು ದಾಟಿದುವು, ಯುದ್ಧಗಳಲ್ಲಿ ಎಂದೂ ಸ್ವಲ್ಪವಾದ ತಪ್ಪನ್ನೂ ಮಾಡಲಿಲ್ಲ, ಹೆಚ್ಚಾಗಿ ಭಾರವನ್ನೂ ಹೊರುತ್ತಿದ್ದುವು, ಹಾಗಿದ್ದರೂ ಚಂಚಲವಾದ ಅವುಗಳನ್ನು ಕಟ್ಟಿಹಾಕಿದ್ದರು. ಆದುದರಿಂದ ಚಂಚಲತೆಗೆ ಧಿಕ್ಕಾರವಿರಲಿ! ಆನೆಗಳು ಎಲ್ಲಾ ಕಾರ್ಯಗಳಲ್ಲಿ ಸಮರ್ಥವಾಗಿದ್ದರೂ ಅವುಗಳಲ್ಲಿ ಚಾಂಚಲ್ಯಗುಣವಿದ್ದುದರಿಂದ ಬಂಧನದಲ್ಲಿರಿಸಲ್ಪಟ್ಟಿದ್ದುವೆಂದು ಭಾವವು.

**ಬಧ್ನೀಥ ನಃ ಕಿಮಿತಿ ಹಂತ ವಿನಾಪರಾಧಾತ್**
**ಜಾನೀತ ಭೋಃ ಪ್ರತಿಫಲತ್ಯಚಿರಾದಿದಂ ವಃ ।**
**ಇ[೫]ತ್ಯುಚ್ಚಲತ್ಸೃಣಿ ವಿಧೂಯ ಶಿರಾಂಸಿ ಬಂಧೇ**
**ವೈರಂ ನು [೬]ಯಂತೃಷು ಗಜಾಃ ಸ್ಮ [೭]ವಿಭಾವಯಂತಿ ॥ ೧೪೮ ॥**

"ಎಲೈ ! ನೀವು ನಮ್ಮನ್ನು ತಪ್ಪಿಲ್ಲದೆ ಏತಕ್ಕೆ ಕಟ್ಟಿಹಾಕುತ್ತೀರಿ ? ಇದಕ್ಕೆ ನಿಮಗೆ ಸ್ವಲ್ಪಕಾಲದಲ್ಲೇ ಪ್ರತಿಫಲವು ಸಿಕ್ಕುವುದು, ತಿಳಿಯಿರಿ" ಈ ಪ್ರಕಾರವಾಗಿ ಆನೆಗಳು ಬಂಧನದಲ್ಲಿದ್ದು ಅಂಕುಶವನ್ನು ಮೇಲಕ್ಕೆಸೆಯುವಂತೆ ಮಸ್ತಕಗಳನ್ನು ಕೊಡಹಿ ಮಾವಟಿಗರಲ್ಲಿ ವೈರವನ್ನು ಸೂಚಿಸುವಂತಿದ್ದುವು.

**[೮]ಅಘಾತುಕೋ ದ್ವಿರದನಃ [೯]ಸವಿಶೇಷಮೇವ**
**[೧೦]ಗಾತ್ರಾಪರಾಂತಕರವಾಲಧಿಷು [೧೧]ನ್ಯಯೋಜಿ ।**
**ಬಂಧೇನ ಸಿಂಧುರವರಾ[೧೨]ಸ್ತ್ವಿತರೇ ತಥಾ ನೋ**
**ಗಾಢೀಭವ[೧೩]ತ್ಯವಿರತಾನ್ನ[೧೪]ಪರತ್ರ ಬಂಧಃ ॥ ೧೪೯ ॥**

ಘಾತುಕವಾದ ಆನೆಯು ತನ್ನ ಮುಂಭಾಗದ ಕಣಕಾಲುಗಳು ಹಿಂಭಾಗದ ಕಾಲುಗಳು ಸೊಂಟ ಸೊಂಡಲು ಮೊದಲಾದ ಸ್ಥಾನಗಳಲ್ಲಿ ವಿಶೇಷವಾಗಿ ಬಂಧಿಸಲ್ಪಟ್ಟಿದ್ದಿತು, ಘಾತುಕಗಳಲ್ಲದಿರುವ ಶ್ರೇಷ್ಠವಾದ ಆನೆಗಳನ್ನು ಹಾಗೆ ಬಂಧಿಸಿರಲಿಲ್ಲ. ಅವ್ರತಿಕನಿಗಿಂತ ಬೇರೆಯಾಗಿರುವ ವ್ರತಿಕನಲ್ಲಿ ಬಂಧವು ದೃಢವಾಗುವುದಿಲ್ಲ. ಅಹಿಂಸಾ ಮೊದಲಾದ ವ್ರತಗಳಿಲ್ಲದವನಿಗೆ ಕರ್ಮಬಂಧವಾಗುವಹಾಗೆ ವ್ರತಿಕನಿಗೆ ಬಂಧವಾಗುವುದಿಲ್ಲವೆಂದಭಿಪ್ರಾಯವು.

೧ ಮತ್ತೈಃ. ೨ ನಾನುಯಾತಇತ್ಯಪಿಪಾಠಃ. ೩ ಅಧಿಕಂ. ೪ ಚಂಚಲಾಃ. ೫ ಉಚ್ಚಲದಂಕುಶಂ ಯಥಾತಥಾ. ೬ ಹಸ್ತಿಪಕೇಷು. ೭ ಜ್ಞಾಪಯಂತಿ. ೮ ಹಿಂಸ್ರಕಃ. ೯ ಅಧಿಕಂ. ೧೦ ದ್ವೌಪೂರ್ವಪಶ್ಚಾಜ್ಜಂಘಾದಿದೇಶೌಗಾತ್ರಾಪರೇಕ್ರಮಾತ್. ೧೧ ವ್ಯಯೋಜೀತ್ಯಪಿಪಾಠಃ. ೧೨ ಅಘಾತುಕಾಃ. ೧೩ ಅವ್ರತಿಕಾತ್. ೧೪ ವ್ರತಿಕೆ.

**[೧]ಆಲಾನಿತಾ ವನತರುಷ್ವತಿಮಾತ್ರಮುಚ್ಚೈ**
**ಸ್ಕಂಧೇಷು ಸಿಂಧುರವರಾಶ್ಚ ತಥೋಚ್ಚಕೈ[೨]ರ್ಯತ್ ।**
**ತನ್ನೂನಮಾಶ್ರಯಣಮಿಷ್ಟಮುದಾತ್ತಮೇವ**
**[೩]ಸಂಧಾರಣಾಯ [೪]ಮಹತಾ[೫]ಮಹತಾತ್ಮಸಾರಮ್ ॥ ೧೫೦ ॥**

ಶ್ರೇಷ್ಠವಾದ ಆನೆಗಳೂ ಉನ್ನತವಾದ ಅರಣ್ಯವೃಕ್ಷದ ಮಧ್ಯಭಾಗ(ದಿಮ್ಮಿ)ಗಳಲ್ಲಿ ಬಿಗಿಯಾಗಿ ಕಟ್ಟಿಹಾಕಲ್ಪಟ್ಟಿದ್ದುವು. ಆದುದರಿಂದ ನಿಶ್ಚಯವಾಗಿಯೂ ಮಹಾಪುರುಷರ ಗೌರವಕ್ಕೆ ಹಾನಿಯಿಲ್ಲದ ಶ್ರೇಷ್ಠವಾದ ಆಶ್ರಯಸ್ಥಾನವೇ ಅವರಿರುವುದಕ್ಕಿಷ್ಟವಾದುದು.

**ಇತ್ಥಂ ನಿಯಂತೃಭಿರನೇಕಪವೃಂದಮುಚ್ಚೈ-**
**ರಾಲಾನಿತಂ ತರುಷು [೬]ಸಾಮಿ ನಿಮೀಲಿತಾಕ್ಷಮ್ ।**
**ತಸ್ಥೌ ಸುಖಂ [೭]ವಿಚತುರೇಣ [೮]ಕೃತಾಂಗಹಾರಂ**
**ಲೀಲೋಪಯುಕ್ತಕವಲಂ ಸ್ಫುಟಕರ್ಣತಾಲಮ್ ॥ ೧೫೧ ॥**

ಈ ರೀತಿಯಾಗಿ ಮಾವಟಿಗರಿಂದ ಮರಗಳಲ್ಲಿ ಎತ್ತರವಾಗಿ ಕಟ್ಟಿಹಾಕಲ್ಪಟ್ಟಿರುವುದೂ ಕಾಲು ಸೊಂಡಲು ಮೊದಲಾದ ನಾಲ್ಕು ಅವಯವಗಳ ಸಮೂಹದಿಂದಲೂ ಬಹಳ ಚಾತುರ್ಯದಿಂದಲೂ ಮೈಯನ್ನು ಕುಲುಕಿಸುತ್ತಿರುವುದೂ ಲೀಲೆಯಿಂದ ಆಹಾರವನ್ನು ಮೆಲ್ಲುತ್ತಿರುವುದೂ ವ್ಯಕ್ತವಾದ ತಾಳದಂತಿರುವ ಕಿವಿಗಳುಳ್ಳದೂ ಆದ ಆನೆಗಳ ಗುಂಪು ಕಣ್ಣುಗಳನ್ನು ಅರ್ಧ ಮುಚ್ಚಿಕೊಂಡು ಸುಖವಾಗಿ ನಿಂತಿದ್ದಿತು.

**[೯]ಉತ್ತಾರಿತಾಖಿಲಪರಿಚ್ಛದಲಾಘವೇನ-**
**[೧೦]ಪ್ರವ್ಯಂಜಿತದ್ರುತಗತಿಕ್ರಮಲಕ್ಷ್ಯವೇಗಾಃ ।**
**ಆಪಾತುಮಂಬು ಸರಸಾಂ ಪರಿತಃ ಪ್ರಸಸ್ರು-**
**[೧೧]ರುಚ್ಛೃಂಖಲೈರನುಗತಾಃ ಕಲಭೈಃ ಕರಿಣ್ಯಃ ॥ ೧೫೨ ॥**

ಮೈಮೇಲಿದ್ದ ಸಾಮಾನುಗಳನ್ನಿಳಿಸಿದುದರಿಂದುಂಟಾದ ಲಘುತ್ವದಿಂದ ತಮ್ಮ ಶೀಘ್ರವಾದ ಕಾಲುಗಳ ವೇಗವನ್ನು ವ್ಯಕ್ತಪಡಿಸಿದ ಹೆಣ್ಣಾನೆಗಳು ಯಥೇಚ್ಛವಾಗಿರುವ ಆನೆಮರಿಗಳಿಂದ ಹಿಂಬಾಲಿಸಲ್ಪಟ್ಟವುಗಳಾಗಿ ಸರೋವರಗಳ ನೀರನ್ನು ಕುಡಿಯುವುದಕ್ಕೋಸ್ಕರ ಸುತ್ತಲೂ ಹೋದುವು.

**ಪ್ರಾಕ್ಪೀತಮಂಬು ಸರಸಾಂ [೧೨]ಕೃತ[೧೩]ಮೌಷ್ಟ್ರಕೇಣ**
**[೧೪]ಸ್ವೋದ್ಗಾಲದೂಷಿತ[೧೫]ಮುದಾತ್ತ[೧೬]ತದಂಗಗಂಧಮ್ ।**
**ನಾಪಾತುಮೈಚ್ಛ[೧೭]ದುದಿದನ್ಯಷಿತೋಪಿ [೧೮]ಬರ್ಕಃ**
**ಸರ್ವೋ ಹಿ ವಾಂಛತಿ ಜನೋ ವಿಷಯಂ ಮನೋಜ್ಞಮ್ ॥ ೧೫೩ ॥**

ಒಂಟೆಗಳ ಸಮೂಹದಿಂದ ಮೊದಲು ಕುಡಿಯಲ್ಪಟ್ಟುದೂ ಆ ಒಂಟೆಗಳ ವಮನದಿಂದ ಕೆಡಿಸಲ್ಪಟ್ಟುದೂ ಅವುಗಳ ಶರೀರದ ಬಹಳ ವಾಸನೆಯುಳ್ಳುದೂ ಸಂಪೂರ್ಣವೂ ಆದ ಸರೋವರಗಳ ನೀರನ್ನು ತರುಣಗಜವು ಬಹಳ ಬಾಯಾರಿದುದಾಗಿದ್ದರೂ ಕುಡಿಯುವುದಕ್ಕಿಚ್ಛಿಸಲಿಲ್ಲವು. ಎಲ್ಲಾ ಜನರೂ ಮನೋಹರವಾದ ವಿಷಯವನ್ನಿಚ್ಛಿಸುತ್ತಾರಲ್ಲವೆ ?

**ಪೀತಂ ಪುರಾ [೧೯]ಗಜತಯಾ ಸಲಿಲಂ ಮದಾಂಬು-**
**ಸಂವಾಸಿತಂ ಸರಸಿಜಾಕರಮೇತ್ಯ ತೂರ್ಣಮ್ ।**
**ಪ್ರೀತ್ಯಾ ಪಪುಃ ಕಲಭಕಾಶ್ಚ ಕರೇಣವಶ್ಚ**
**ಸಂಭೋಗಹೇತು[೨೦]ರುದಿತೋ ಹಿ [೨೧]ಸಗಂಧಭಾವಃ ॥ ೧೫೪ ॥**

೧ ಬಂಧನೇನನಿಯೋಜಿತಾಃ. ೨ ಯಸ್ಮಾತ್ಕಾರಣಾತ್. ೩ ಸ್ಥಿತ್ಯರ್ಥಂ. ೪ ಮಹಾಪುರುಷಾಣಾಂ. ೫ ಅವಿನಷ್ಟಗೌರವಂ. ೬ ಆರ್ಧಂ. ೭ ವಿಶದಾಶ್ಚತ್ವಾರೋ ಯಸ್ಯ, ವಿದ್ಯಶ್ಯಾನಿ ಚತ್ವಾರಿ ಯಸ್ಯ ತೇನ, ಅತಿಚಾತುರ್ಯೇಣ. ೮ ಕೃತಾಂಗವಿಕ್ಷೇಪಂ. ೯ ಅವತಾರಿತ. ೧೦ ಪ್ರಕಟಿತ. ೧೧ ಸ್ವಚ್ಛಂದವೃತ್ತಿಭಿಃ. ೧೨ ಸಂಪೂರ್ಣಂ. ೧೩ ಉಷ್ಟ್ರಸಮೂಹೇನ. ೧೪ ನಿಜವಮನದೂಷಿತಂ. ೧೫ ಉಪಾತ್ತ ಇತ್ಯಪಿ ಪಾಠಃ. ೧೬ ಉಷ್ಟ್ರಶರೀರಗಂಧಂ. ೧೭ ಭೃಶಂ ತೃಷಿತೋಽಪಿ. ೧೮ ತರುಣಗಜಃ. ೧೯ ಗಜಸಮೂಹೇನ. ೨೦ ಉಕ್ತಃ. ೨೧ ಪರಿಮಲತ್ವಂ, ಮಿಶ್ರತ್ವಂ ಚ.

ಆನೆಮರಿಗಳೂ ಆನೆಗಳೂ ಶೀಘ್ರವಾಗಿ ಸರೋವರವನ್ನು ಪ್ರವೇಶಿಸಿ ಮೊದಲು ಆನೆಗಳ ಸಮೂಹದಿಂದ ಕುಡಿಯಲ್ಪಟ್ಟುದೂ ಮದಜಲದಿಂದ ಸುವಾಸನೆಯಾಗಿರುವುದೂ ಆದ ನೀರನ್ನು ಪ್ರೀತಿಯಿಂದ ಕುಡಿದುವು. ಪರಿಮಳವಾಗಿರುವಿಕೆಯೂ ಮಿಶ್ರಭಾವವೂ(ಜತೆ ಸೇರುವಿಕೆ)ಭೋಗಕ್ಕೆ ಕಾರಣವೆಂದು ಹೇಳಲ್ಪಟ್ಟಿದೆಯಲ್ಲವೆ ?

**ಪೀತ್ವಾಂಭೋ ವ್ಯಪಗಮಿತಾಂತರಂಗತಾಪಾಃ**
**ಸಂತಾಪಂ ಬಹಿರುದಿತಂ ಸರೋವಗಾಹೈಃ ।**
**ನೀತ್ವಾಂತಂ ಗಜಕಲಭೈಃ ಸಮಂ ಕರಿಣ್ಯಃ**
**ಸಂಭೋಕ್ತುಂ ಸಪದಿ ವನದ್ರುಮಾನ್ಸಿಚೇರುಃ** ॥ ೧೫೫ ॥

ಹೆಣ್ಣಾನೆಗಳು ಶ್ರೇಷ್ಠವಾದ ತಮ್ಮ ಮರಿಗಳೊಡನೆ ನೀರನ್ನು ಕುಡಿದು ಹೃದಯ ಸಂತಾಪವನ್ನು ಹೋಗಲಾಡಿಸಿ ಹೊರಗುಂಟಾದ ಸಂತಾಪವನ್ನು ಸರೋವರಪ್ರವೇಶಗಳಿಂದ ಹೋಗಲಾಡಿಸಿಕೊಂಡು ಆಹಾರಕ್ಕೋಸ್ಕರ ಶೀಘ್ರವಾಗಿ ಅರಣ್ಯವೃಕ್ಷಗಳನ್ನು ಸೇರಿದುವು. ಆಹಾರನಿಮಿತ್ತವಾಗಿ ಅರಣ್ಯಕ್ಕೆ ಹೋದುವೆಂದರ್ಥವು.

**ವಲ್ಲೀನಾಂ ಸಕುಸುಮಪಲ್ಲವಾಗ್ರಭಂಗಾನ್**
**ಗುಲ್ಮೌಘಾನಪಿ [೧]ಸರಸಾಂ [೨]ಕಡಂಗರಾಂಶ್ಚ ।**
**ಸುಸ್ವಾದೂನ್ಮೃದು [೩]ವಿಟಪಾನ್ವನದ್ರುಮಾಣಾಂ**
**ತ[೪]ದ್ಯೂಥಂ ಕವಲಯತಿ ಸ್ಮ [೫]ಧೇನುಕಾನಾಮ್** ॥ ೧೫೬ ॥

ಆ ಹೆಣ್ಣಾನೆಗಳ ಸಮೂಹವು ಲತೆಗಳ ಪುಷ್ಪಸಹಿತವಾದ ತಳಿರುಗಳ ತುದಿಯ ಚೂರುಗಳನ್ನೂ ಸರೋವರಗಳ ಪೊದೆಗಳನ್ನೂ ರುಚಿಕರವಾದ ಹೊಟ್ಟುಗಳನ್ನೂ ಅರಣ್ಯವೃಕ್ಷಗಳ ಕೋಮಲವಾದ ಕೊಂಬೆಗಳನ್ನೂ ತಿಂದಿತು.

**ಕುಂಜೇಷು [೬]ಪ್ರತನುತೃಣಾಂಕುರಾ[೭]ನ್ನವಮೃದ್ನನ್**
**[೮]ವಪ್ರಾಂತಾನಪಿ ರದನೈಃ ಶನೈರ್ವಿನಿಘ್ನನ್ ।**
**ವಲ್ಲ್ಯಗ್ರ[೯] ಗ್ರಸನಚಣಃ [೧೦]ಫಲೇಗ್ರಹಿಃ ಸನ್**
**ವ್ಯಾಲೋಲಃ ಕಲಭಗಣಶ್ಚಿರಂ [೧೧]ವಿಜಹ್ರೇ** ॥ ೧೫೭ ॥

ಪೊದೆಗಳಲ್ಲಿ ಕೋಮಲವಾದ ಹುಲ್ಲಿನ ಮೊಳಕೆಗಳನ್ನು ಮರ್ದಿಸುವುದೂ ಬೆಟ್ಟದ ತಪ್ಪಲುಗಳನ್ನು ಹಲ್ಲುಗಳಿಂದ ಮೆಲ್ಲನೆ ಕೆದುಕುತ್ತಿರುವುದೂ ಲತೆಗಳ ತುದಿಯನ್ನು ತಿನ್ನುವುದರಲ್ಲಿ ಸಮರ್ಥವೂ ಫಲಗಳನ್ನು ತೆಗೆದುಕೊಳ್ಳುವುದೂ ಅಲೆದಾಡುತ್ತಿರುವುದೂ ಆದ ಆನೆಮರಿಗಳ ಸಮೂಹವು ಬಹುಕಾಲದವರೆಗೆ ಕಾಡಿನಲ್ಲಿ ವಿಹರಿಸಿತು.

**ಪ್ರತ್ಯಗ್ರಾಃ ಕಿಸಲಯಿನೀರ್ಗೃಹಾಣ ಶಾಖಾ-**
**[೧೨]ಭಙ್ಧ್ಯುಚ್ಚೈರ್ವನಗಹನಂ ನಿಷೀದ ಕುಂಜೇ ।**
**ಸಂಭೋಗ್ಯಾನುಪಸರ ಸಲ್ಲಕೀವನಾಂತಾ-**
**ನಿತ್ಯೇವಂ [೧೩]ವ್ಯಹೃತ ವನೇ ಕರೇಣುವರ್ಗಃ** ॥ ೧೫೮ ॥

"ಹೊಸದಾದ ತಳಿರುಗಳುಳ್ಳ ಕೊಂಬೆಗಳನ್ನು ಸ್ವೀಕರಿಸು, ಹೆಚ್ಚಾಗಿ ದಟ್ಟವಾಗಿರುವ ಅರಣ್ಯವನ್ನು ಮುರಿದುಬಿಡು, ಪೊದೆಯಲ್ಲಿ ಕುಳಿತಿರು, ತಿನ್ನುವುದಕ್ಕೆ ಯೋಗ್ಯವಾದ ಆನೆಬೇಲದ ವೃಕ್ಷಗಳ ವನಪ್ರದೇಶಗಳನ್ನು ಸೇರು" ಈ ರೀತಿಯಾದ ಸಾಧುಜನರ ಪ್ರಿಯವಚನಗಳಿಂದ ಆನೆಗಳ ಹಿಂಡು ಕಾಡಿನಲ್ಲಿ ವಿಹರಿಸಿತು.

೧ ಸರಸಾನಿತ್ಯಪಿ ಪಾಠಃ. ೨ ಕಡಂಗರೀಶ್ಚೇತ್ಯಪಿ ಪಾಠಃ. ೩ ಶಾಖಾಃ. ೪ ಸಮೂಹಃ. ೫ ಕರಿಣೀನಾಂ, ಸುರಭಿಣಾಂ. ೬ ಕೋಮಲಾಃ. ೭ ಮರ್ದಯನ್. ೮ ಸಾನ್ವಂತಾನ್. ೯ ಭಕ್ಷಣಸಮರ್ಥಃ. ೧೦ ಫಲಾನಿ ಗೃಹ್ಣನ್. ೧೧ ವಿಹರತಿ ಸ್ಮ. ೧೨ ಭಂಗಂ ಕುರು. ೧೩ ವಿಹರತಿ ಸ್ಮ.

**ಸಂಭೋಗ್ಯೈರ್ವನಮಿತಿ ನಿರ್ವಿಶನ್ಯಥೇಷ್ಟಂ**
**ಸ್ವಾತಂತ್ರ್ಯಾನುಹುರಪಿ ಧೂರ್ಗತೈ[೧]ರ್ನಿಷಿದ್ಧಃ ।**
**ಬದ್ಧವ್ಯಃ ಸಹಕಲಭಃ ಕರೇಣುವರ್ಗಃ**
**ಸಂಪ್ರಾಪತ್ಸಮುಚಿತಮಾತ್ಮನೋ ನಿವೇಶಮ್** ॥ ೧೫೯ ॥

ಮುಂಭಾಗದಲ್ಲಿರುವ ಮಾವಟಿಗರಿಂದ ತಡೆಯಲ್ಪಟ್ಟುದೂ ಸ್ವತಂತ್ರತೆಯಿಂದ ಬಾರಿಬಾರಿಗೆ ಯಥೇಚ್ಛವಾಗಿ ಆಹಾರಭೋಗಗಳಿಂದ ವನವನ್ನು ಪ್ರವೇಶಿಸಿದುದೂ ಮರಿಗಳೊಡನಿರುವುದೂ ಆದ ಆನೆಗಳ ಹಿಂಡು ಮಾವಟಿಗರಿಂದ ಕಟ್ಟಲ್ಪಡ ತಕ್ಕುದಾಗಿ ತನ್ನ ವಾಸಸ್ಥಾನವನ್ನು ಸೇರಿತು.

**ವಿತ್ರಸ್ತೈರಪಥ[೨]ಮುಪಾಹೃತಸ್ತುರಂಗೈಃ**
**[೩]ಪರ್ಯಸ್ತೋ ರಥ ಇಹ [೪]ಭಗ್ನಧೂ[೫]ರ್ನಿರಕ್ಷಃ ।**
**ಏತಾಸ್ತಾ ದ್ರುತಮುಪಯಾಂತ್ಯಪೇತ್ಯ ಮಾರ್ಗಾ-**
**ದ್ವಾರಸ್ತ್ರೀವಹನಪರಾಶ್ಚ [೬]ವೇಗಸರ್ಯಃ** ॥ ೧೬೦ ॥

"ಹೆಚ್ಚಾಗಿ ಬೆದರಿದ ಕುದುರೆಗಳಿಂದ ತಪ್ಪುದಾರಿಗೆ ಒಯ್ಯಲ್ಪಟ್ಟ ರಥವು ನೊಗಮುರಿದುದೂ ಅಚ್ಚುಗಳಿಲ್ಲದುದೂ ಆಗಿ ಇಲ್ಲಿ ತಲೆಕೆಳಕಾಗಿ ಬಿದ್ದಿದೆ. ವೇಶ್ಯಾಸ್ತ್ರೀಯರನ್ನು ಹೊರುವುದಕ್ಕೆ ನಿಯಮಿಸಲ್ಪಟ್ಟಿರುವ ಈ ಹೇಸರಗತ್ತೆಗಳೂ ದಾರಿತಪ್ಪಿ ಶೀಘ್ರವಾಗಿ ಹೋಗುತ್ತವೆ.

**[೭]ವಿತ್ರಸ್ತಃ ಕರಭನಿರೀಕ್ಷಣಾದ್ಗಜೋಽಯಂ**
**ಭೀರುತ್ವಂ ಪ್ರಕಟಯತಿ ಪ್ರಧಾವಮಾನಃ ।**
**[೮]ಉತ್ತ್ರಸ್ತಾತ್ಪತತಿ ಚ ವೇಸರಾದಮುಷ್ಮಾ-**
**ದ್ವಿಸ್ರಸ್ತಸ್ತನಜಘನಾಂಶುಕಾ ಪುರಂಧ್ರೀ** ॥ ೧೬೧ ॥

ಒಂಟೆಯನ್ನು ನೋಡಿ ಹೆಚ್ಚಾಗಿ ಬೆದರಿ ಓಡುತ್ತಿರುವ ಈ ಆನೆಯು ತಾನು ಹೆದರಿರುವುದನ್ನು ಸೂಚಿಸುತ್ತದೆ. ಬಹಳವಾಗಿ ಬೆದರಿರುವ ಈ ಹೇಸರಗತ್ತೆಯ ಮೇಲಿಂದ ಮಕ್ಕಳೊಂದಿಗಳಾದ ಸ್ತ್ರೀಯು ಕುಚಗಳಿಂದಲೂ ಕಟಿಪ್ರದೇಶದಿಂದಲೂ ಜಾರಿಹೋದ ಸೂಕ್ಷ್ಮವಸ್ತ್ರವುಳ್ಳವಳಾಗಿ ಬೀಳುತ್ತಾಳೆ."

**ಇತ್ಯುಚ್ಚೈ[೯]ರ್ವ್ಯತಿವದತಾಂ ಪೃಥಗ್ಜನಾನಾಂ**
**ಸಂಜಲ್ಪೈಃ ಕ್ಷುಭಿತಖರೋಷ್ಟ್ರ[೧೦]ಕೌಕ್ಷಕೈಶ್ಚ ।**
**[೧೧]ವ್ಯಾಕ್ರೋಶೈರ್ಜನಿತರವೈಶ್ಚ ಸೈನಿಕಾನಾಂ**
**ಸಂಕ್ಷೋಭಃ ಕ್ಷಣಮಭವಚ್ಚಮೂಷು ರಾಜ್ಞಾಮ್** ॥ ೧೬೨ ॥

ಹೀಗೆ ಗಟ್ಟಿಯಾಗಿ ಮಾತನಾಡುತ್ತಿರುವ ಮೂರ್ಖಜನಗಳ ಸಂಭಾಷಣೆಗಳಿಂದ ಕ್ಷೋಭೆಗೊಂಡಿರುವ ಕತ್ತೆ ಒಂಟೆ ಎತ್ತುಗಳಿಂದಲೂ ಸೈನಿಕರು ಪರಸ್ಪರವಾಗಿ ಕರೆಯುವುದರಿಂದುಂಟಾದ ಶಬ್ದಗಳಿಂದಲೂ ರಾಜರ ಸೈನ್ಯಗಳಲ್ಲಿ ಒಂದು ಕ್ಷಣಕಾಲದವರೆಗೆ ಉದ್ವೇಗವುಂಟಾಗಿದ್ದಿತು.

**ಅವನಿಪತಿಸಮಾಜೇನಾನುಯಾತಸ್ತುರಂಗೈ-**
**ರಕೃಶವಿಭವಯೋಗಾನ್ನಿರ್ಜಯ[೧೨]ನ್ಲೋಕಪಾಲಾನ್ ।**
**ಪ್ರತಿದಿಶಮುಪಶೃಣ್ವ[೧೩]ನ್ನಾಸಿಷಶ್ಚಕ್ರಪಾಣಿಃ**
**ಶಿಬಿರಮವಿಶದುಚ್ಚೈರ್ವಂದಿನಾಂ ಪುಣ್ಯಘೋಷೈಃ** ॥ ೧೬೩ ॥

ಕುದುರೆಸವಾರರಾದ ರಾಜರುಗಳ ಸಮೂಹದಿಂದ ಹಿಂಬಾಲಿಸಲ್ಪಟ್ಟವನೂ ಅಧಿಕವಾದ ಸಂಪತ್ತಿನಿಂದ ರಾಜರುಗಳನ್ನು ಜಯಿಸುವವನೂ ಸ್ತುತಿಪಾಠಕರ ಪುಣ್ಯಕರವಾದ ಘೋಷಣೆಗಳಿಂದ ಪ್ರತಿದಿಕ್ಕಿನಲ್ಲೂ ಆಶೀರ್ವಾದಗಳನ್ನು ಕೇಳುತ್ತಿರುವವನೂ ಆದ ಭರತಚಕ್ರವರ್ತಿಯು ಉನ್ನತವಾದ ಬಿಡದಿಯನ್ನು ಪ್ರವೇಶ ಮಾಡಿದನು.

೧ ನ ಬದ್ಧ ಇತ್ಯಪಿ ಪಾಠಃ. ೨ ನೀತಃ. ೩. ಉತ್ಥಾನಂ ಯಥಾ ಪತಿತಃ. ೪ ಭಗ್ನಯಾನಮುಖಃ. ೫ ನಿರ್ಗತಾವಯವಃ. ೬ ವೇಸರಾಃ, ವೇಶರಾ ಇತಿ ಚ. ೭ ಭಯಂಗತಃ. ೮ ಚಕಿತಾತ್. ೯ ಪರಸ್ಪರಮಾಭಾಷಮಾಣಾನಾಂ. ೧೦ ವೃಷಭೈಃ. ೧೧ ಪರಸ್ಪರಾಹ್ವಾನೈಃ. ೧೨ ಜನಪಾಲಾನ್. ೧೩ ಆಶೀರ್ವಾದಾನ್.

ಅಥ ಸರಸಿಜಿನೀನಾಂ ಗಂಧಮಾದಾಯ ಸಾಂದ್ರಂ
ಧುತತಟವನವೀಥಿರ್ಮಂದ[1]ಮಾವಾನ್ಸಮಂತಾತ್ ।
ಶ್ರಮಮಖಿಲ[2]ಮನೌತ್ಸೀತ್ಕರ್ತುಮಸ್ಯೋಪಚಾರಂ
ಪ್ರಹಿತ ಇವ [3]ಸಗಂಧಃ [4]ಸಿಂಧುನಾ ಗಂಧವಾಹಃ ॥ ೧೬೪ ॥

ತರುವಾಯ ಕಮಲಲತೆಗಳ ನಿಬಿಡವಾದ ಪರಿಮಳವನ್ನು ತೆಗೆದುಕೊಂಡು ಸಮುದ್ರತೀರದಲ್ಲಿರುವ ವನಗಳ ಸಾಲನ್ನಲ್ಲಾಡಿಸಿದುದೂ ಸುತ್ತಲೂ ಮೆಲ್ಲನೆ ಬೀಸಿದುದೂ ಪರಿಮಳವುಳ್ಳುದೂ ಆದ ಗಾಳಿಯು ಭರತರಾಜನನ್ನು ಉಪಚರಿಸುವುದಕ್ಕೋಸ್ಕರ ಸಮುದ್ರದಿಂದ ಕಳುಹಲ್ಪಟ್ಟಿದೆಯೋ ಎಂಬಂತೆ, ಆಯಾಸವನ್ನೆಲ್ಲ ಹೋಗಲಾಡಿಸಿದ್ದಿತು.

ಅವಿದಿತಪರಿಮಾಣೈರನ್ವಿತೋ [5]ರತ್ನಶಂಖೈಃ
ಸ್ಫುರಿತಮಣಿಶಿಖಾಗ್ರೈ[6]ರ್ಭೋಗಿಭಿಃ ಸೇವನೀಯಃ ।
ಸತತ[7]ಮುಪಚಿತಾತ್ಮಾ ರುದ್ಧದಿಕ್ಚಕ್ರವಾಲೋ
ಜಲನಿಧಿ[8]ಮನುಜಹ್ರೇ ತಸ್ಯ ಸೇನಾನಿವೇಶಃ ॥ ೧೬೫ ॥

ಚಕ್ರ ಮೊದಲಾದ ಅಸಂಖ್ಯ ರತ್ನಗಳಿಂದಲೂ ಶಂಖ ಮೊದಲಾದ ನಿಧಿಗಳಿಂದಲೂ ಮುತ್ತು ಮೊದಲಾದ ರತ್ನಗಳಿಂದಲೂ ಶಂಖಗಳಿಂದಲೂ ಕೂಡಿರುವುದೂ ಸರ್ಪಗಳಂತೆ ತಲೆಯಲ್ಲಿ ಪ್ರಕಾಶಮಾನವಾದ ರತ್ನಗಳುಳ್ಳ ಭೋಗಿಪುರುಷರಿಂದ ಸೇವಿಸಲ್ಪಡತಕ್ಕುದೂ ಯಾವಾಗಲೂ ವೃದ್ಧಿಹೊಂದುತ್ತಿರುವ ಸ್ವರೂಪವುಳ್ಳುದೂ ದಿಙ್ಮಂಡಲಗಳನ್ನು ಆವರಿಸಿರುವುದೂ ಆದ ಭರತಚಕ್ರವರ್ತಿಯ ಸೈನ್ಯಸ್ಥಾನವೂ ಸಮುದ್ರದಂತಿದ್ದಿತು.

ತತ್ರಾ[9]ವಾಸಿತಸಾಧನೋ ನಿಧಿಪತಿರ್ಗತ್ವಾ ರಥೇನಾಂಬುಧಿಂ
ಜೈತ್ರಾಸ್ತ್ರಪ್ರತಿತರ್ಜಿತಾಮರಸಭಸ್ತಂ ವ್ಯಂತರಾಧೀಶ್ವರಮ್ ।
ಜಿತ್ವಾ ಮಾಗಧವತ್ಕ್ಷಣಾದ್ವರತನುಂ [10]ತತ್ಸಾಹ್ವಮಂಭೋನಿಧೇಃ
ದ್ವೀಪಂ ಶಶ್ವದಲಂಚಕಾರ ಯಶಸಾ ಕಲ್ಪಾಂತರಸ್ಥಾಯಿನಾ ॥ ೧೬೬ ॥

ಆ ಸಮುದ್ರತೀರದಲ್ಲಿ ಸೈನ್ಯವನ್ನಿರಿಸಿ ಭರತಚಕ್ರವರ್ತಿಯು ರಥದಿಂದ ಸಮುದ್ರವನ್ನು ಪ್ರವೇಶಿಸಿ ಜಯಶೀಲವಾದ ಅಸ್ತ್ರದಿಂದ ವ್ಯಂತರದೇವತೆಗಳ ಸಭೆಯನ್ನು ಬೆದರಿಸಿ, ವ್ಯಂತರಾಧಿಪತಿಯಾದ ವರತನುವನ್ನೂ ಮಾಗಧಾಮರನನ್ನೂ ಜಯಿಸಿದಂತೆ, ಕ್ಷಣಕಾಲದಲ್ಲಿ ಜಯಿಸಿ, ವರತನುವೆಂಬ ಸಮುದ್ರದ ದ್ವೀಪವನ್ನು ವಶಮಾಡಿ ಕಲ್ಪಾಂತರದವರೆಗಿರುವ ಯಶಸ್ಸಿಗೆ ಪಾತ್ರನಾದನು.

ಲೇಭೇ ಭೇದ್ಯ[11]ಮುರಶ್ಛದಂ ವರತನೋರ್ಗ್ರೈವೇಯಕಂ ಚ ಸ್ಫುರ-
ಚ್ಚೂಡಾರತ್ನಮುದಂಶು ದಿವ್ಯಕಟಕಾ[12]ನ್ಸೂತ್ರಂ ಚ ರತ್ನೋಜ್ಜ್ವಲಮ್ ।
ಸದ್ರತ್ನೈರಿತಿ ಪೂಜಿತಃ ಸ [1]ಭಗವಾನ್ ಶ್ರೀವೈಜಯಂತಾರ್ಣವ-
ದ್ವಾರೇಣ ಪ್ರತಿಸನ್ನಿವೃತ್ಯ ಕಟಕಂ ಪ್ರಾವಿಕ್ಷದುತ್ತೋರಣಮ್ ॥ ೧೬೭ ॥

ಪೂಜ್ಯನಾದ ಭರತಚಕ್ರವರ್ತಿಯು ವರತನುವೆಂಬ ವ್ಯಂತರದೇವಾಧಿಪತಿಯಿಂದ ಅಭೇದ್ಯವಾದ ಎದೆಯ ಕವಚವನ್ನೂ ಕಂಠಾಭರಣವನ್ನೂ ಪ್ರಕಾಶಮಾನವಾದ ಚೂಡಾಮಣಿಯನ್ನೂ ಹೆಚ್ಚಾದ ಕಾಂತಿಯುಳ್ಳುವೂ ಶ್ರೇಷ್ಠವೂ ಆದ ಕಡಗಗಳನ್ನೂ ರತ್ನಗಳಿಂದ ಪ್ರಕಾಶಮಾನವಾದ ಕಟೀಸೂತ್ರವನ್ನೂ ಪಡೆದನು. ಹೀಗೆ ಶ್ರೇಷ್ಠವಾದ ರತ್ನಗಳಿಂದ ಪೂಜಿಸಲ್ಪಟ್ಟವನಾಗಿ ಶೋಭೆಯುಳ್ಳ ವೈಜಯಂತವೆಂಬ ಸಮುದ್ರದ್ವಾರದಿಂದ ಹಿಂದಿರುಗಿ ಬಂದು ಉನ್ನತವಾದ ತೋರಣಗಳುಳ್ಳ ಸೈನ್ಯಸ್ಥಾನವನ್ನು ಪ್ರವೇಶಮಾಡಿದನು.

ಸ್ವಚ್ಛಂ ಸ್ವಂ ಹೃದಯಂ ಸ್ಫುಟಂ ಪ್ರಕಟಯನ್ಮುಕ್ತಾಫಲಚ್ಛದ್ಮನಾ
ಸ್ವಂ ಚಾಂತರ್ಗತರಾಗಮಾಶು ಕಥಯನ್ನುದ್ಯತ್ಪ್ರವಾಲಾಂಕುರೈಃ ।
ಸರ್ವಸ್ವಂ ಚ ಸಮರ್ಪಯ[2]ನ್ನುಪನಯ[3]ನ್ನಂತರ್ವಣಂ [4]ದಕ್ಷಿಣೋ
ವಾರಾಂರಾಶಿರಮಾತ್ಯವದ್ವಿಭುಮಸೌ ನಿರ್ವ್ಯಾಜಮಾರಾಧಯತ್ ॥ ೧೬೮ ॥

ನಿಪುಣವಾದ ಬುದ್ಧಿಯುಳ್ಳ ಮಂತ್ರಿಯಂತೆ, ಮುತ್ತುಗಳ ನೆಪದಿಂದ ನಿರ್ಮಲವಾದ ತನ್ನ ಹೃದಯ(ಮಧ್ಯ)ವನ್ನು ವ್ಯಕ್ತವಾಗಿ ಪ್ರಕಟಪಡಿಸುವುದೂ ಉತ್ಪನ್ನವಾದ ಹವಳದ ಅಂಕುರಗಳಿಂದ ತನ್ನ ಹೃದಯದಲ್ಲಿರುವ ಅನುರಾಗವನ್ನು ಶೀಘ್ರವಾಗಿ ಹೇಳುವುದೂ ತನ್ನ ವಸ್ತುಗಳನ್ನೆಲ್ಲ ಸಮರ್ಪಿಸುವುದೂ ನೀರಿನ ಮಧ್ಯಕ್ಕೆ ತಲುಪಿಸುವುದೂ ಆದ ಈ ದಕ್ಷಿಣಸಮುದ್ರವು ನಿಷ್ಕಪಟವಾಗಿ ಭರತರಾಜನನ್ನು ಸತ್ಕರಿಸಿದ್ದಿತು.

[5]ಆಸ್ಥಾನೇ ಜಯದುಂದುಭೀನನುನದನ್ಪ್ರಾಭಾತಿಕೇ ಮಂಗಲೇ
ಗಂಭೀರಧ್ವನಿತೈರ್ಜಯಧ್ವನಿಮಿವ [6]ಪ್ರಸ್ಪಷ್ಟಮುಚ್ಚಾರಯನ್ ।
ಸುವ್ಯಕ್ತಂ ಸ ಜಲಾಶಯೋಽಪ್ಯಜಲಧೀರ್ವಾರಾಂಪತಿಃ [7]ಶ್ರೀಪತಿಂ
[8]ನಿರ್ಭೃತ್ಯಸ್ಥಿತಿ[9]ರನ್ವಿಯಾಯ ಸುಚಿರಂ ಶಕ್ರೋ ಯಥಾದ್ಯಂ ಜಿನಮ್ ॥

ಆದೀಶ್ವರಸ್ವಾಮಿಯ ಸಮವಸರಣದಲ್ಲಿ ಜಯಭೇರಿಗಳನ್ನನುಸರಿಸಿ ಶಬ್ದಮಾಡುವುದೂ ಪ್ರಾತಃಕಾಲಸಂಬಂಧವಾದ ಮಂಗಲಪಾಠಸಮಯದಲ್ಲಿ ಗಂಭೀರವಾದ ಧ್ವನಿಗಳೊಡನೆ ಜಯಧ್ವನಿಯನ್ನುಚ್ಚಾರಮಾಡುತ್ತದೆಯೋ ಎಂಬಂತೆ ಅಸದೃಶವಾಗಿ ಶಬ್ದವನ್ನುಚ್ಚರಿಸುವುದೂ ಚೆನ್ನಾಗಿ ಜಡಬುದ್ಧಿ, ಜಲಮಧ್ಯವಾಗಿದ್ದರೂ ಜಡಹೃದಯ, ಜಲಬುದ್ಧಿಯಿಲ್ಲದುದೂ ವಿಶೇಷವಾಗಿ ಸೇವಕನ ವ್ಯಾಪಾರದಂತೆ ವ್ಯಾಪಾರವುಳ್ಳುದೂ ಆದ ಆ ಸಮುದ್ರವು, ಆದೀಶ್ವರಸ್ವಾಮಿಯನ್ನು ದೇವೇಂದ್ರನು ಹಿಂಬಾಲಿಸಿದಂತೆ, ಭರತರಾಜನನ್ನು ಬಹುಕಾಲದವರೆಗೆ ಹಿಂಬಾಲಿಸಿದ್ದಿತು.

ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ
ದಕ್ಷಿಣಾರ್ಣವದ್ವಾರವಿಜಯವರ್ಣನಂ ನಾಮೈಕೋನತ್ರಿಂಶಂ ಪರ್ವ ॥

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕಭಾವದೀಪಿಕಾ ವ್ಯಾಖ್ಯೆಯೊಳ್'' ದಕ್ಷಿಣಸಮುದ್ರದ್ವಾರವಿಜಯವರ್ಣನವೆಂಬ
ಇಪ್ಪತ್ತೊಂಬತ್ತನೆಯ ಪರ್ವವು ಸಂಪೂರ್ಣವಾದುದು.

---

೧ ಆಗಚ್ಛನ್. ೨ ಅಪನಯತಿ ಸ್ಮ. ೩ ಬಂಧುಃ. ೪ ಸಮುದ್ರೇಣ. ೫ ಚಕ್ರಾದಿರತ್ನೈಃ ಶಂಖಾದಿನಿಧಿಭಿಶ್ಚ, ಪಕ್ಷೇ ಮೌಕ್ತಿಕಾದಿರತ್ನೈಃ ಶಂಖೈಶ್ಚ. ೬ ಭೋಗಶೀಲೈಃ ಸರ್ಪೈಶ್ಚ. ೭ ವರ್ದ್ಧಿತಸ್ವರೂಪಃ. ೮ ಅನುಕರೋತಿ ಸ್ಮ. ೯ ನಿವೇಶಿತಬಲಃ. ೧೦ ವರತನುನಾಮಾನಂ. ೧೧ ಉರಃಕವಚಂ. ೧೨ ಕಟೀಸೂತ್ರಂ.

೧ ಪೂಜ್ಯಃ. ೨ ಪ್ರಾಪಯನ್. ೩ ಅಂತರ್ಜಲಂ, ಉಪವನಮಧ್ಯೇ ಚ. ೪ ಪಟುಬುದ್ಧಿಃ. ೫ ಸಮವಸರಣೇ. ೬ ಅಸದೃಶಂ ಧ್ವನನ್. ೭ ಭರತಂ. ೮ ಭೃತ್ಯವೃತ್ತಿಃ. ೯ ಅನುಕರೋತಿ ಸ್ಮ.

# ಅಥ ತ್ರಿಂಶತ್ತಮಂ ಪರ್ವ

**ಅಥಾ[೧]ಪರಾಂತಂ ನಿರ್ಜೇತು[೨]ಮುದ್ಯತಃ ಪ್ರಭುರುದ್ಯಯೌ ।**
**ದಕ್ಷಿಣಾ[೩]ಪರದಿಗ್ಭಾಗಂ ವಶೀಕುರ್ವನ್ಸ್ವಸಾಧನೈಃ ॥ ೧ ॥**

ತರುವಾಯ ಪಶ್ಚಿಮದಿಕ್ಕಿನ ಎಲ್ಲೆಯನ್ನು ಜಯಿಸುವುದಕ್ಕೋಸ್ಕರ ಅಭ್ಯುದಯ ಶಾಲಿಯಾದ ಭರತರಾಜನು ತನ್ನ ಸೈನ್ಯಗಳಿಂದ ನೈಋತ್ಯದಿಗ್ಭಾಗವನ್ನು ವಶಮಾಡಿ ಕೊಂಡು ಮುಂದಕ್ಕೆ ಹೊರಟನು.

**ಪುರಃ ಪ್ರಯಾತಮಶ್ವೀಯೈ [೪]ರನ್ವಕ್ಷ್ಯಚಲಿತಂ ರಥೈಃ ।**
**ಮಧ್ಯೇ ಹಸ್ತಿಘಟಾ [೫]ಪ್ರಾಯಾತ್ಸರ್ವತ್ರೈವಾತ್ರ ಪತ್ತಯಃ ॥ ೨ ॥**

ಕುದುರೆಸವಾರರು ಮುಂದೆಹೋದರು; ರಥಗಳು ಹಿಂಭಾಗದಲ್ಲಿ ಹೋದುವು; ಮಧ್ಯದಲ್ಲಿ ಆನೆಗಳ ಹಿಂಡು ನಡೆಯಿತು. ಸೈನ್ಯದಲ್ಲಿ ಕಾಲಾಳುಗಳು ಎಲ್ಲಾ ಕಡೆ ಗಳಲ್ಲೂ ನಡೆದುಹೋದರು.

**[೬]ಸದೇವಬಲಮಿತ್ಯಸ್ಯ ಚತುರಂಗಂ ವಿಭೋರ್ಬಲಮ್ ।**
**[೭]ವಿದ್ಯಾಭೃತಾಂ ಬಲೈಃ ಸಾರ್ಧಂ ಷಡ್ಭಿರಂಗೈ[೮]ರ್ವಿಪಪ್ರಥೇ ॥ ೩ ॥**

ಹೀಗೆ ನಾಲ್ಕು ಅಂಗಗಳುಳ್ಳುದೂ ದೇವತೆಗಳ ಸೈನ್ಯಸಹಿತವಾದುದೂ ಆದ ಭರತರಾಜನ ಸೈನ್ಯವು ವಿದ್ಯಾಧರರ ಸೈನ್ಯಗಳೊಡನೆ ಆರು ಅಂಗಗಳುಳ್ಳುದಾಗಿ ಶೋಭಿಸುತ್ತಿದ್ದಿತು.

**ಪ್ರಚಲದ್ಬಲಸಂಕ್ಷೋಭಾ[೯]ದುಚ್ಚಚಾಲ ಕಿಲಾರ್ಣವಃ ।**
**ಮಹತಾಮನುವೃತ್ತಿಂ ನು [೧೦]ಶ್ರಾವಯನ್ನನುಜೀವಿನಾಮ್ ॥ ೪ ॥**

ನಡೆಯುತ್ತಿರುವ ಸೈನ್ಯದ ಕ್ಷೋಭೆಯಿಂದ ಸಮುದ್ರವು ಸೈನ್ಯವನ್ನು ಹಿಂಬಾಲಿಸಿ ದಂತಿದ್ದಿತು. ಮಹಾತ್ಮರ ಅನುಸರಣವನ್ನು ಮಾಡಿ ಜೀವಿಸುವವರಿಗೆ ''ಅನುಸರಣ ವನ್ನು ಮಾಡಿ'' ಯೆಂದು ಹೇಳುವಂತಿದ್ದಿತು.

**ಬಲೈಃ [೧೧]ಪ್ರಸಹ್ಯ [೧೨]ನಿರ್ಭುಗ್ನಾಃ [೧೩]ಪ್ರಹ್ವಂತಿ ಸ್ಮ [೧೪]ಮಹೀಭುಜಃ ।**
**ಸರಿತಃ [೧೫]ಕರ್ದಮಂತಿ ಸ್ಮ ಸ್ಥಲಂತಿ ಸ್ಮ ಮಹಾದ್ರಯಃ ॥ ೫ ॥**

ಸೈನ್ಯಗಳಿಂದ ಬಲಾತ್ಕಾರವಾಗಿ ಜಯಿಸಲ್ಪಟ್ಟ ರಾಜರು ಅಥವಾ ವೃಕ್ಷಗಳು ನಮಸ್ಕಾರವನ್ನು ಮಾಡುವವರಾದರು, ಬಗ್ಗಿದವಾದುವು. ನದಿಗಳು ಕೆಸರಿನಂತಾ ದುವು. ದೊಡ್ಡಪರ್ವತಗಳು ನೆಲಸಮವಾದುವು.

**[೧೬]ಸುರಸಾಃ [೧೭]ಕೃತನಿರ್ವಾಣಾಃ ಸ್ಪೃಹಣೀಯಾ [೧೮]ಬುಭುಕ್ಷುಭಿಃ ।**
**ಮಹದ್ಭಿಃ ಸಮು[೧೯]ಮುದ್ಯೋಗೈಃ [೨೦]ಫಲಂತಿ ಸ್ಮಾಸ್ಯ [೨೧]ಸಿದ್ಧಯಃ॥ ೬ ॥**

ಭರತರಾಜನ ಕಾರ್ಯಸಿದ್ಧಿಗಳು ಶ್ರೇಷ್ಠವಾದ ಅನುರಾಗವುಳ್ಳುವೂ ಸುಖವ ನ್ನುಂಟುಮಾಡುವುವೂ ಅನುಭವಿಸಲಿಚ್ಛಿಸುವವರಿಂದ ಇಚ್ಛಿಸಲ್ಪಡುವುವೂ ಆಗಿ, ಶ್ರೇಷ್ಠವಾದ ರಸಗಳುಳ್ಳುವೂ ಸುಖವನ್ನುಂಟುಮಾಡುವುವೂ ತಿನ್ನಲಿಚ್ಛಿಸುವವರಿಂದ ಇಚ್ಛಿಸಲ್ಪಡುವುವೂ ಆದ, ಫಲಗಳಂತೆ, ಅಧಿಕವಾದ ಉತ್ಸಾಹಗಳೊಡನೆ ಸಿದ್ಧಿಸಿದುವು.

೧ ಅಪರದಿಗವಧಿಂ. ೨ ಅಭ್ಯುದಯವಾನ್. ೩ ನೈರುತ್ಯದಿಗ್ಭಾಗಂ. ೪ ಪಶ್ಚಾತ್. ೫ ಅಗಚ್ಛತ್. ೬ ದೇವಬಲೇನ ಸಹಿತಂ. ೭ ವಿದ್ಯಾಧರಾಣಾಂ. ೮ ಪ್ರಕಾಶತೇ ಸ್ಮ. ೯ ಅನ್ವಗಚ್ಛತ್. ೧೦ ವದನ್. ೧೧ ಬಲಾತ್ಕಾರೇಣ. ೧೨ ನಿರ್ಜಿತಾಃ. ೧೩ ಪ್ರಣತಾ ಇವಾಚರಂತಿ ಸ್ಮ. ೧೪ ವೃಕ್ಷಾವಾ. ೧೫ ಕರ್ದಮ ಇವಾಚರಿತಾಃ. ೧೬ ರಾಗಸಹಿತಾ ರಸಸಹಿತಾಶ್ಚ. ೧೭ ಕೃತಸುಖಾಃ. ೧೮ ಭೋಕ್ತುಮಿಚ್ಛುಭಿಃ. ೧೯ ಉತ್ಸಾಹೈಃ. ೨೦ ಫಲಾನೀವಾಚರಂತಿ ಸ್ಮ. ೨೧ ಕಾರ್ಯಸಿದ್ಧಯಃ.

**ಅಭೇದ್ಯಾ [೧]ದೃಢಸಂಧಾನಾ ವಿಪಕ್ಷಜಯಹೇತವಃ ।**
**[೨]ಶಕ್ತಯೋಸ್ಯ ಸ್ಫುರಂತಿ ಸ್ಮ ಸೇನಾಶ್ಚ ವಿಜಿಗೀಷುಷು ॥ ೭ ॥**

ಜಯಿಸಲಿಚ್ಛಿಸುವವರಲ್ಲಿ ಭೇದಿಸಲಶಕ್ಯವೂ ದೃಢವಾದ ಸಂಬಂಧವುಳ್ಳುವೂ ಶತ್ರು ಗಳ ಜಯಕ್ಕೆ ಕಾರಣವೂ ಆದ ಭರತರಾಜನ ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿ ಗಳೂ ಸೈನ್ಯಗಳೂ ಪ್ರಕಾಶಿಸುತ್ತಿದ್ದುವು.

**[೩]ಫಲೇನ ಯೋಜಿತಾಸ್ತೀಕ್ಷ್ಣಾಃ [೪]ಸಪಕ್ಷಾ ದೂರಗಾಮಿನಃ ।**
**ನಾರಾಚೈಃ ಸಮಮೇತಸ್ಯ [೫]ಯೋಧಾ ಜಗ್ಮುರ್ಜಯಾಂಗತಾಮ್ ॥ ೮ ॥**

ಫಲ(ಪಾರಿತೋಷಿಕ)ದಿಂದ ಸಂಯೋಜಿಸಲ್ಪಟ್ಟವರೂ ಪ್ರತಿಫಲವನ್ನು ಹೊಂದಿ ರುವವರೂ ಸಹಾಯಕರುಳ್ಳವರೂ ಬಹುದೂರಗಮನಮಾಡುವವರೂ ಆದ ಭರತರಾಜನ ಭಟರು ಬಾಣಗಳೊಡನೆ ಇವನ ಜಯಕ್ಕೆ ಸಾಧಕರಾದರು. ಬಾಣ ಗಳೂ ಭಟರೂ ಭರತರಾಜನ ದಿಗ್ವಿಜಯಕ್ಕೆ ಸಾಧಕರಾದರೆಂದು ಭಾವವು.

**ದೂರಮುತ್ಸಾರಿತಾಃ ಸೈನ್ಯೈಃ ಪರಿತ್ಯಕ್ತಪರಿಚ್ಛದಾಃ ।**
**ವಿಪಕ್ಷಾಃ ಸತ್ಯಮೇವಾಸ್ಯ [೬]ವಿಪಕ್ಷತ್ವಮುಪಾಯಯುಃ ॥ ೯ ॥**

ಸೈನ್ಯಗಳಿಂದ ದೂರವಾಗಿ ಓಡಿಸಲ್ಪಟ್ಟವರೂ ತಮ್ಮ ಪರಿವಾರವನ್ನು ಕಳೆದು ಕೊಂಡವರೂ ಆದ ಭರತರಾಜನ ಶತ್ರುಗಳು ನಿಜವಾಗಿಯೂ ಶತ್ರುಭಾವವನ್ನೂ ಸಹಾಯಪುರುಷರಹಿತತ್ವವನ್ನೂ ಹೊಂದಿದರು. ಶತ್ರುಗಳು ಭರತರಾಜನ ಸೈನ್ಯ ಗಳಿಂದ ಸಹಾಯಕರಿಲ್ಲದವರಾದರೆಂದು ಭಾವವು.

**ಆಕ್ರಾಂತ[೭]ಭೂಭೃತೋ ನಿತ್ಯಂ ಭುಂಜಾನಾಃ [೮]ಫಲಸಂಪದಮ್ ।**
**[೯]ಕುಪತಿತ್ವಂ ಯಯುಶ್ಚಿತ್ರಂ ಕೋಪೇಪ್ಯಸ್ಯ ವಿರೋಧಿನಃ ॥ ೧೦ ॥**

ಭರತರಾಜನ ವಿರೋಧಿಗಳು ಕೋಪದಲ್ಲಿಯೂ ರಾಜರುಗಳನ್ನಾಕ್ರಮಿಸಿ ಯಾವಾಗಲೂ ಅಭೀಷ್ಟಫಲಸಂಪತ್ತನ್ನು ಅನುಭವಿಸಿ ಭೂಪತಿತ್ವವನ್ನು ಹೊಂದಿ ದರು. ಆಶ್ಚರ್ಯ ! (ಇದು ವಿರೋಧಾರ್ಥ) ಭರತರಾಜನ ಶತ್ರುಗಳು ಕೋಪ ದಲ್ಲಿಯೂ ಪರ್ವತಗಳನ್ನಾಕ್ರಮಿಸಿ ಯಾವಾಗಲೂ ವನಸ್ಪತಿಫಲ ಸಂಪತ್ತನ್ನನು ಭವಿಸಿ ದುಷ್ಟಪ್ರಭುತ್ವವನ್ನು ಹೊಂದಿದರು(ಇದು ವಿರೋಧ ಪರಿಹಾರ).

**[೧೦]ಸಂಧಿವಿಗ್ರಹಚಿಂತಾಸ್ಯ [೧೧]ಪದವಿದ್ಯಾಸ್ವಭೂತ್ಪರಮ್ ।**
**[೧೨]ಧೂತಯಾತವ್ಯಪಕ್ಷಸ್ಯ ಕ್ವ ಸಂಧಾನಂ ಕ್ವ ವಿಗ್ರಹಃ ॥ ೧೧ ॥**

ಭರತರಾಜನಿಗೆ ಸಂಧಿಯ ಚಿಂತೆಯೂ ವಿಗ್ರಹದ ಚಿಂತೆಯೂ ಮುಖ್ಯವಾಗಿ ವ್ಯಾಕರಣಶಾಸ್ತ್ರಗಳಲ್ಲಿದ್ದಿತು. ಸಂಧಿಯೂ ಯುದ್ಧವೂ ಇರಲಿಲ್ಲವೆಂದರ್ಥವು. ಶತ್ರುಪಕ್ಷವನ್ನು ನಾಶಮಾಡಿದವನಿಗೆ ಸಂಧಿಯೆಲ್ಲಿ ? ಯುದ್ಧವೆಲ್ಲಿ ?

**ಇತ್ಯಜೇತವ್ಯಪಕ್ಷೋಪಿ ಯು[೧೩]ದಯಂ ದಿಗ್ಜಯೋದ್ಯತಃ ।**
**ತನ್ನೂನಂ [೧೪]ಭುಕ್ತಿಮಾತ್ಮೀಯಾಂ [೧೫]ತದ್ವ್ಯಾಜೇನ [೧೬]ಪರೀಯಿವಾನ್ ॥**

೧ ದೃಢಸಂಬಂಧಾಃ. ೨ ಪ್ರಭುಮಂತ್ರೋತ್ಸಾಹರೂಪಾಃ. ೩ ರೀತಿಫಲೇನ, ಅಭೀಪ್ಸಫಲೇನ. ೪ ಪತ್ರಸಹಿತಾಃ ಸಸಹಾಯಾಶ್ಚ. ೫ ಭಟಾಃ. ೬ ಸಹಾಯಪುರುಷರಹಿತತ್ವಂ ಚ. ೭ ರಾಜಾನಃ, ಪರ್ವತಾಶ್ಚ. ೮ ಅಭೀಪ್ಸಫಲಸಂಪದಂ, ವನಸ್ಪತಿಫಲಸಂಪದಂ. ೯ ಭೂಪತಿತ್ವಂ, ಕುತ್ಸಿತಪತಿತ್ವಂ ಚ. ೧೦ ಸಂಧಾನಯುದ್ಧಚಿಂತಾ ಚ. ೧೧ ಶಬ್ದಶಾಸ್ತ್ರೇಷು. ೧೨ ನಿರಸ್ತಶತ್ರುಪಕ್ಷಸ್ಯ. ೧೩ ಭರತಃ. ೧೪ ಪಾಲನಕ್ಷೇತ್ರಂ. ೧೫ ದಿಗ್ವಿಜಯಚ್ಛದ್ಮನಾ. ೧೬ ಪ್ರದಕ್ಷಿಣಂ ಕೃತವಾನ್.

ಭರತರಾಜನು ಹಿಂದೆ ಹೇಳಿದಂತೆ ಜಯಿಸಲಶಕ್ಯವಾದ ಪಕ್ಷವುಳ್ಳವನಾಗಿದ್ದರೂ ದಿಗ್ವಿಜಯದಲ್ಲಿ ಪ್ರಯತ್ನಪರನಾಗಿ ಆ ದಿಗ್ವಿಜಯದ ನೆಪದಿಂದ ತನ್ನ ಪರಿಪಾಲನೆಯ ಕ್ಷೇತ್ರವನ್ನು ಪ್ರದಕ್ಷಿಣೆಮಾಡಿದನು.

**ಆಕ್ರಾಂತಾಃ ಸೈನಿಕೈರಸ್ಯ ವಿಭೋಃ [೧]ಪಾರೇರ್ಣವಂ ಭುವಃ ।**
**ಪೂಗದ್ರುಮಕೃತಚ್ಛಾಯಾ ನಾಲಿಕೇರವನೈಸ್ತತಾಃ ॥ ೧೩ ॥**

ಅಡಿಕೆಯ ಮರಗಳ ನೆರಳುಳ್ಳುವೂ ತೆಂಗಿನಮರಗಳ ತೋಟಗಳಿಂದ ವ್ಯಾಪ್ತವೂ ಸಮುದ್ರಮಧ್ಯದಲ್ಲಿರುವುವೂ ಆದ ಭೂಮಿಗಳನ್ನು ಭರತರಾಜನ ಸೈನಿಕರು ಆಕ್ರಮಿಸಿಕೊಂಡರು.

**[೨]ನಿಪಪೇ ನಾಲಿಕೇರಾಣಾಂ ತರುಣಾನಾಂ [೩]ಸ್ರುತೋ ರಸಃ ।**
**ಸರಸ್ತೀರತರುಚ್ಛಾಯಾವಿಶ್ರಾಂತೈರಸ್ಯ ಸೈನಿಕೈಃ ॥ ೧೪ ॥**

ಸರೋವರದಡದಲ್ಲಿರುವ ಮರಗಳ ನೆರಳಿನಲ್ಲಿ ವಿಶ್ರಮಿಸಿರುವ ಭರತರಾಜನ ಸೈನಿಕರು ಎಳೆಯದಾದ ತೆಂಗಿನಮರಗಳ ಎಳೆನೀರನ್ನು ಪಾನಮಾಡಿದರು.

**ಸ್ಫುರತ್ಪರುಷಸಂಪಾತಪವನಾಧೂನನೋತ್ಥಿತಃ ।**
**ತಾಲೀವನೇಷು ತತ್ಸೈನ್ಯೈಃ ಶುಶ್ರುವೇ [೪]ಮರ್ಮರಧ್ವನಿಃ ॥ ೧೫ ॥**

ತಾಳೆಯಮರಗಳ ವನಗಳಲ್ಲಿ ಪ್ರಕಾಶಮಾನವೂ ಕಠಿನವೂ ಆಗಿ ಬಿದ್ದು ಗಾಳಿ ಬೀಸುವುದರಿಂದ ಮೇಲಕ್ಕೆದ್ದಿರುವ ತರಗೆಲೆಗಳ ಶಬ್ದವನ್ನು ಭರತರಾಜನ ಸೈನಿಕರು ಕೇಳಿದರು.

**ಸಮಂ ತಾಂಬೂಲವಲ್ಲೀಭಿರಪಶ್ಯತ್ಕ್ರಮುಕಾನ್ವಿಭುಃ ।**
**[೫]ಏಕಕಾರ್ಯತ್ವ[೬]ಮಸ್ಮಾಕಮಿತೀವ ಮಿಲಿತಾನ್ಮಿಥಃ ॥ ೧೬ ॥**

ಭರತರಾಜನು ''ನಮ್ಮ ಕೆಲಸವೊಂದೇ'' ಎಂಬಂತೆ ಪರಸ್ಪರವಾಗಿ ಸೇರಿರುವ ಅಡಿಕೆಯಮರಗಳನ್ನು ವೀಳ್ಯದೆಲೆಯ ಹಂಬುಗಳ ಜೊತೆಯಲ್ಲಿ ನೋಡಿದನು. ಅಡಿಕೆಯ ಮರಗಳಿಗೆ ಹಬ್ಬಿರುವ ವೀಳ್ಯದೆಲೆಯ ಹಂಬುಗಳನ್ನು ನೋಡಿದನೆಂದು ಭಾವವು.

**ನೃಪಸ್ತಾಂಬೂಲವಲ್ಲೀನಾ[೭]ಮುಪಘ್ನಾನ್ಕ್ರಮುಕದ್ರುಮಾನ್ ।**
**[೮]ನಿಧ್ಯಾಯನ್ವೇಷ್ಟಿತಾಂಸ್ತಾಭಿರ್ಮುಮುದೇ ದಂಪತೀಯಿತಾನ್ ॥ ೧೭ ॥**

ಭರತರಾಜನು ವೀಳ್ಯದೆಲೆಯ ಬಳ್ಳಿಗಳಿಗೆ ಆಶ್ರಯಗಳೂ ಆ ಬಳ್ಳಿಗಳಿಂದ ಸುತ್ತಲ್ಪಟ್ಟುವೂ ದಂಪತಿಗಳಂತಿರುವುವೂ ಆದ ಅಡಿಕೆಯ ಮರಗಳನ್ನು ನೋಡಿ ಸಂತೋಷಪಟ್ಟನು.

**ಸ್ವಾಧ್ಯಾಯಮಿವ ಕುರ್ವಾಣಾನ್ವನೇಷ್ವವಿರತಸ್ವನಾನ್ ।**
**[೯]ವೀನ್ಮುನೀನಿವ ಸೋಪಶ್ಯ[೧೦]ದ್ಯತ್ರಾಸ್ತಮಿತವಾಸಿನಃ ॥ ೧೮ ॥**

ಭರತರಾಜನು, ಮುನಿಗಳಂತಿರುವುವೂ ಸೂರ್ಯನು ಅಸ್ತಂಗತನಾಗುವ ಸ್ಥಾನದಲ್ಲಿ ವಾಸಮಾಡುವುವೂ ಶಾಸ್ತ್ರಪಾರಾಯಣವನ್ನು ಮಾಡುವಂತೆ ವನಗಳಲ್ಲಿ ಎಡೆಬಿಡದೆ ಧ್ವನಿಮಾಡುತ್ತಿರುವುವೂ ಆದ ಪಕ್ಷಿಗಳನ್ನು ನೋಡಿದನು.

**ಪನಸಾನಿ ಮೃದೂನ್ಯಂತಃ ಕಂಟಕೀನಿ ಬಹಿಸ್ತ್ವಚಿ ।**
**ಸುರಸಾನ್ಯಮೃತಾನೀವ ಜನಾಃ [೧೧]ಪ್ರಾದನ್ಯಥೇಪ್ಸಿತಮ್ ॥ ೧೯ ॥**

ಜನರು ಹೊರಗಿನ ಸಿಪ್ಪೆಯಲ್ಲಿ ಮುಳ್ಳುಗಳುಳ್ಳುವೂ ಒಳಭಾಗದಲ್ಲಿ ದಪ್ಪವೂ ಅಮೃತಗಳಂತೆ ಉತ್ತಮವಾದ ರಸವುಳ್ಳುವೂ ಆದ ಹಲಸಿನಹಣ್ಣುಗಳನ್ನು ಯಥೇಚ್ಛವಾಗಿ ತಿಂದರು.

೧ ಸಮುದ್ರಮಧ್ಯೇ. ೨ ಪಾನಂ ಕ್ರಿಯತೇ ಸ್ಮ. ೩ ನಿಃಸ್ರುತಃ. ೪ ಶುಷ್ಕಪರ್ಣಧ್ವನಿಃ. ೫ ಪರ್ಣಕ್ರಮುಕಯೋರ್ಮೇಲನಾದೇಕಕಾರ್ಯತ್ವಂ. ೬ ಕ್ರಮುಕಪರ್ಣಾನಾಮಿತ್ಯಸ್ಮಾಕಂ. ೭ ಆಶ್ರಯಭೂತಾನ್. ೮ ಪಶ್ಯನ್. ೯ ವಿಹಗಾನ್. ೧೦ ಯತ್ರರವಿರಸ್ತಂಗತಸ್ತತ್ರವಾಸಿನಃ. ೧೧ ಭಕ್ಷಯಂತಿ ಸ್ಮ.

**ನಾಲಿಕೇರರಸಃ ಪಾನಂ ಪನಸಾನ್ಯಶನಂ ಪರಮ್ ।**
**ಮರೀಚಾನ್ಯುಪದಂಶಶ್ಚ [೧]ವನ್ಯಾ ವೃತ್ತಿರಹೋ ಸುಖಮ್ ॥ ೨೦ ॥**

ತೆಂಗಿನಮರದ ಎಳೆನೀರು ಪಾನದ್ರವ್ಯವಾಗಿದ್ದಿತು. ಹಲಸಿನಹಣ್ಣುಗಳು ಮುಖ್ಯವಾದ ಭೋಜನವಾಗಿದ್ದುವು. ಮೆಣಸುಗಳು ಚಟ್ನಿಸಿಗಳಾಗಿದ್ದುವು. ವನವಾಸವು ಸುಖಕರವಾಗಿದ್ದಿತು. ಆಶ್ಚರ್ಯ!

**ಸರಸಾನಿ ಮರೀಚಾನಿ ಕಿಮಪ್ಯಾಸ್ವಾದ್ಯ [೨]ವಿಷ್ಕಿರಾನ್ ।**
**[೩]ರುವತಃ ಪ್ರಭುರದ್ರಾಕ್ಷೀದ್ಗಲದಶ್ರುವಿಲೋಚನಾನ್ ॥ ೨೧ ॥**

ಭರತರಾಜನು, ರಸವತ್ತಾದ ಮೆಣಸುಗಳನ್ನಾಸ್ವಾದಿಸಿ ಶಬ್ದಮಾಡುತ್ತಿರುವುವೂ ಕಣ್ಣೀರನ್ನು ಸುರಿಸುತ್ತಿರುವುವೂ ಆದ ಪಕ್ಷಿಗಳನ್ನು ನೋಡಿದನು.

**[೪]ವಿದಶ್ಯ ಮಂಜರೀಸ್ತೀಕ್ಷ್ಣಾ [೫]ಮರೀಚಾನಾಂ ಸಶಂಕಿತಮ್ ।**
**ಶಿರೋ ವಿಧುನ್ವತೋಪಶ್ಯತ್ಸಭುಸ್ತರುಣಮರ್ಕಟಾನ್ ॥ ೨೨ ॥**

ಭರತರಾಜನು, ಮೆಣಸಿನ ಬಳ್ಳಿಗಳ ಖಾರವಾದ ಗೊಂಚಲುಗಳನ್ನು ಸಂಶಯಪಟ್ಟು ತಿಂದು ತಲೆಗಳನ್ನು ಕೊಡಹುತ್ತಿರುವ ತರುಣವಯಸ್ಸಿನ ಕೋತಿಗಳನ್ನು ನೋಡಿದನು.

**ವನಸ್ಪತೀನ್ಫಲಾನಮ್ರಾನ್ವೀಕ್ಷ್ಯ ಲೋಕೋಪಕಾರಿಣಃ ।**
**ಜಾತಾಃ ಕಲ್ಪದ್ರುಮಾಸ್ತಿತ್ವೇ [೬]ನಿರಾರೇಕಾಸ್ತದಾ ಜನಾಃ ॥ ೨೩ ॥**

ಜನರು, ಲೋಕೋಪಕಾರಿಗಳೂ ಫಲಗಳಿಂದ ಬಗ್ಗಿರುವುವೂ ಆದ ಗಿಡಗಳನ್ನು ನೋಡಿ, ಆಗ ಕಲ್ಪವೃಕ್ಷಗಳ ಇರುವಿಕೆಯಲ್ಲಿ ಸಂದೇಹವಿಲ್ಲದವರಾದರು.

**ಲತಾಯುವತಿಸಂಸಕ್ತಾಃ [೭]ಪ್ರಸವಾಢ್ಯಾ ವನದ್ರುಮಾಃ ।**
**ಕರದಾ ಇವ ತಸ್ಯಾಸನ್ಪ್ರೀಣಯಂತಃ ಫಲೈರ್ಜನಾನ್ ॥ ೨೪ ॥**

ಲತೆಗಳೆಂಬ ಯುವತಿಯರಲ್ಲಿ ಸೇರಿಕೊಂಡಿರುವುವೂ ಪುಷ್ಪಗಳಿಂದ–ಪುತ್ರರಿಂದ ಸಂಪೂರ್ಣವೂ ಜನರನ್ನು ಫಲಗಳಿಂದ ಸಂತೋಷಪಡಿಸುವುವೂ ಆದ ವನವೃಕ್ಷಗಳು ಭರತರಾಜನಿಗೆ ಕಂದಾಯವನ್ನು ಕೊಡುವಂತಿದ್ದುವು.

**ನಾಲಿಕೇರಾಸವೈರ್ಮತ್ತಾಃ ಕಿಂಚಿ[೮]ದಾಘೂರ್ಣಿತೇಕ್ಷಣಾಃ ।**
**ಯಶೋಽಸ್ಯ ಜಗು[೯]ರಾಮಂದ್ರಕುಹರಂ [೧೦]ಸಿಂಹಲಾಂಗನಾಃ ॥ ೨೫ ॥**

ತೆಂಗಿನ ರಸ(ಮದ್ಯ)ಗಳಿಂದ ಮದಿಸಿರುವವರೂ ಸ್ವಲ್ಪ ನಿದ್ರೆಯಿಂದ ಜುಕಾಯಿಸುತ್ತಿರುವ ಕಣ್ಣುಗಳುಳ್ಳವರೂ ಆದ ಸಿಂಹಲದ್ವೀಪದ ಸ್ತ್ರೀಯರು ಭರತರಾಜನ ಯಶಸ್ಸನ್ನು ಗಂಭೀರವಾಗಿ, ಗುಹೆಯಲ್ಲಿ ಪ್ರತಿಫಲಿಸುವಂತೆ, ಗಾನಮಾಡಿದರು.

**[೧೧]ತ್ರಿಕೂಟಮಲಯೋತ್ಸಂಗೇ ಗಿರೌ ಪಾಂಡ್ಯಕವಾಟಕೇ ।**
**ಜಗುರಸ್ಯ ಯಶೋ [೧೨]ಮಂದ್ರಮೂರ್ಛನಾಃ ಕಿನ್ನರಾಂಗನಾಃ ॥ ೨೬ ॥**

ಮಧುರವಾದ ಗಾನವುಳ್ಳ ಕಿನ್ನರಸ್ತ್ರೀಯರು ತ್ರಿಕೂಟಪರ್ವತದ ತಪ್ಪಲಿನಲ್ಲಿಯೂ ಮಲಯಪರ್ವತದ ತಪ್ಪಲಿನಲ್ಲಿಯೂ ಪಾಂಡ್ಯಕವಾಟವೆಂಬ ಪರ್ವತದಲ್ಲಿಯೂ ಭರತರಾಜನ ಯಶಸ್ಸನ್ನು ಗಾನಮಾಡಿದರು.

**ಮಲಯೋಪಾಂತಕಾಂತಾರೇ ಸಹ್ಯಾಚಲವನೇಷು ಚ ।**
**ಯಶೋ ವನೇಚರಸ್ತ್ರೀಭಿ[೧೩]ರುಜ್ಜಗೇಸ್ಯ ಜಯಾರ್ಜಿತಮ್ ॥ ೨೭ ॥**

೧ ವನವಾಸಃ. ೨ ಪಕ್ಷಿಣಃ. ೩ ರವಂ ಕುರ್ವತಃ. ೪ ಭಕ್ಷಯಿತ್ವಾ. ೫ ಮರೀಚವಲ್ಲೀನಾಂ, ಮರೀಚಿನಾಮಿತ್ಯಪಿ ಪಾಠಃ. ೬ ನಿಸ್ಸಂದೇಹಾಃ. ೭ ಪಕ್ಷೇ ಪುತ್ರಾಢ್ಯಾಃ. ೮ ಪ್ರಚಲಾಯಿತೇಕ್ಷಣಾಃ. ೯ ಗಂಭೀರಗಹ್ವರಂ ಯಥಾ ತಥಾ, ಕುಹಯತೇ ವಿಸ್ಮಾಪಯತೇ ಶ್ರವಣಹಾರಿತಯಾ. ೧೦ ಸಿಂಹಲ ದ್ವೀಪಸ್ತ್ರಿಯಃ. ೧೧ ತ್ರಿಕೂಟಗಿರಿ ಮಲಯಾಚಲಸಾನೌ. ೧೨ ಮಧುರಗಾನಾಃ. ೧೩ ಗೀಯತೇ ಸ್ಮ.

ಮಲಯಪರ್ವತದ ಸಮೀಪದಲ್ಲಿರುವ ವನದಲ್ಲಿಯೂ ಸಹ್ಯಪರ್ವತದ ವನಗಳಲ್ಲಿಯೂ ಬೇಡರ ಸ್ತ್ರೀಯರು ಭರತರಾಜನ ದಿಗ್ವಿಜಯದಿಂದುಂಟಾದ ಯಶಸ್ಸನ್ನು ಗಾನಮಾಡಿದರು.

**ಚಂದನೋದ್ಯಾನಮಾಧೂಯ ಮಂದಂ ಗಂಧವಹೋ ವವೌ ।**
**ಮಲಯಾಚಲಕುಂಜೇಭ್ಯೋ ಹರನ್ನಿರ್ಝರಶೀಕರಾನ್ ॥ ೨೮ ॥**

ಗಾಳಿಯು ಮಲಯಪರ್ವತದ ಕಾಡುಗಳಿಂದ ಗಿರಿನದಿಯ ಜಲಬಿಂದುಗಳನ್ನು ತೆಗೆದುಕೊಂಡು ಬಂದು ಚಂದನವೃಕ್ಷಗಳ ವನವನ್ನು ಕೊಡಹಿ ಮೆಲ್ಲನೆ ಬೀಸಿತು.

**ವಿಷ್ವಗ್ವಿಸಾರೀ [೧]ದಾಕ್ಷಿಣ್ಯಂ ಸಮುಜ್ಝನ್ನಪಿ ಸೋಽನಿಲಃ ।**
**ಸಂಭಾವಯನ್ನಿ[೨]ವಾತಿಥ್ಯೈರ್ವಿಭೋಃ ಶ್ರಮ[೩]ಮಪಾಹರತ್ ॥ ೨೯ ॥**

ಎಲ್ಲಾ ಕಡೆಯಲ್ಲಿಯೂ ಬೀಸುತ್ತಿರುವ ಗಾಳಿಯು ದಕ್ಷಿಣದಿಗ್ಭಾಗವನ್ನೂ ಅನುಕೂಲತೆಯನ್ನೂ ಬಿಟ್ಟು ಶ್ರೇಷ್ಠವಾದ ಉಪಚಾರಗಳಿಂದ ಸತ್ಕರಿಸುತ್ತದೋ ಎಂಬಂತೆ ಭರತರಾಜನ ಶ್ರಮವನ್ನು ಪರಿಹರಿಸಿದ್ದಿತು.

**ಏಲಾಲವಂಗ[೪]ಸಂವಾಸಸುರಭಿ[೫]ಶ್ವಸಿತೈರ್ಮುಖೈಃ ।**
**ಸ್ತನೈರಾಪಾಂಡುಭಿಃ ಸಾಂದ್ರಚಂದನದ್ರವಚರ್ಚಿತೈಃ ॥ ೩೦ ॥**

ಯೌವನವತಿಯರಾದ ಕೇರಳದೇಶದ ಸ್ತ್ರೀಯರು ಏಲಕ್ಕಿ ಲವಂಗಗಳ ಸಂಸ್ಕಾರದಿಂದ ಪರಿಮಳವಾದ ಉಚ್ಛ್ವಾಸವುಳ್ಳ ಮುಖಗಳಿಂದಲೂ ದಟ್ಟವಾದ ಗಂಧಲೇಪನವುಳ್ಳವೂ ಸುತ್ತಲೂ ಶುಭ್ರವಾಗಿರುವುವೂ ಆದ ಕುಚಗಳಿಂದಲೂ

**ಸಲೀಲಮೃದುಭಿ[೬]ರ್ಯಾತೈರ್ನಿತಂಬಭರ[೭]ಮಂಥರೈಃ ।**
**ಸ್ಮಿತೈರನಂಗಪುಷ್ಪಾಸ್ತ್ರಸ್ತಬಕೋದ್ಭೇದವಿಭ್ರಮೈಃ ॥ ೩೧ ॥**

ವಿಲಾಸಯುಕ್ತವೂ ಕೋಮಲವೂ ನಿತಂಬ(ಅಂಡು)ಗಳ ಭಾರದಿಂದ ಮಂದವೂ ಆದ ಗಮನಗಳಿಂದಲೂ ಮನ್ಮಥನ ಪುಷ್ಪಬಾಣಗಳನ್ನುಂಟುಮಾಡುವ ಪುಷ್ಪದ ಗೊಂಚಲುಗಳ ವಿಲಾಸವುಳ್ಳ ಮುಗುಳ್ನಗೆಗಳಿಂದಲೂ

**ಕೋಕಿಲಾಲಾಪಮಧುರೈ [೮]ರ್ಜಲ್ಪಿತೈರನತಿಸ್ಫುಟೈಃ ।**
**ಮೃದುಬಾಹುಲತಾಂದೋಲಸುಭಗೈಶ್ಚ ವಿಚೇಷ್ಟಿತೈಃ ॥ ೩೨ ॥**

ಅತ್ಯಂತ ಸ್ಫುಟವೂ ಕೋಗಿಲೆಗಳ ಧ್ವನಿಯಂತೆ ಮನೋಹರವೂ ಆದ ವಚನಗಳಿಂದಲೂ ಕೋಮಲವಾದ ಲತೆಯಂತಿರುವ ಭುಜಗಳೆಂಬ ಉಯ್ಯಾಲೆಯ ಮನೋಹರವಾದ ವ್ಯಾಪಾರಗಳಿಂದಲೂ

**ಲಾಸ್ಯೈಃ ಸ್ಖಲತ್ಪದನ್ಯಾಸೈರ್ಮುಕ್ತಾಪ್ರಾಯೈರ್ವಿಭೂಷಣೈಃ ।**
**ಮದಮಂಜುಭಿರುದ್ಗೀತೈರ್ಜಿತಾಲಿಕುಲಶಿಂಜಿತೈಃ ॥ ೩೩ ॥**

ತಪ್ಪುಹೆಜ್ಜೆಗಳನ್ನಿಡುತ್ತಿರುವ ನರ್ತನಗಳಿಂದಲೂ ಹೆಚ್ಚು ಮುತ್ತುಗಳುಳ್ಳ ಆಭರಣಗಳಿಂದಲೂ ಮದದಿಂದ ಮನೋಹರವೂ ಭ್ರಮರಗಳ ಶಬ್ದವನ್ನು ಜಯಿಸಿರುವುದೂ ಆದ ಉತ್ತಮಗಾನಗಳಿಂದಲೂ

**ತಮಾಲವನವೀಥೀಷು ಸಂಚರಂತ್ಯೋ ಯದೃಚ್ಛಯಾ ।**
**ಮನೋಽಸ್ಯ ಜಹ್ರುರಾರೂಢಯೌವನಾಃ ಕೇರಲಸ್ತ್ರಿಯಃ ॥ ೩೪ ॥**

ಹೊಂಗೇಮರಗಳ ಸಾಲುಗಳಲ್ಲಿ ಯಥೇಚ್ಛೆಯಿಂದ ಸಂಚರಿಸುವವರಾಗಿ ಭರತರಾಜನ ಮನಸ್ಸನ್ನಪಹರಿಸಿದರು.

**ಪ್ರಸಾಧ್ಯ ದಕ್ಷಿಣಾಮಾಶಾಂ ವಿಭು[೯]ಸ್ತ್ರೈರಾಜ್ಯಪಾರ್ಥಿವಾನ್ ।**
**ಸಮಂ ಪ್ರಣಮಯಾಮಾಸ ವಿಜಿತ್ಯ ಜಯಸಾಧನೈಃ ॥ ೩೫ ॥**

೧ ದಕ್ಷಿಣದಿಗ್ಭಾಗಮಾನುಕೂಲ್ಯಂ ಚ. ೨ ಸಾಧುಭಿರುಪಚಾರೈಃ. ೩ ಉಪಾಹರದಿತ್ಯಪಿ ಪಾಠಃ. ೪ ಸಂಸ್ಕಾರಃ. ೫ ಉಚ್ಛ್ವಾಸೈಃ. ೬ ಗಮನೈಃ. ೭ ಮಂದೈಃ. ೮ ವಚನೈಃ. ೯ ಚೋಲಕೇರಲಪಾಂಡ್ಯದೇಶಾಧಿಪಾನ್, ತ್ರೈರಾಜ್ಯಪಾಲಕಾನಿತ್ಯಪಿ ಪಾಠಃ.

ಭರತರಾಜನು ವಿಜಯಸಾಮಗ್ರಿಗಳಿಂದ ದಕ್ಷಿಣದಿಕ್ಕನ್ನು ಸ್ವಾಧೀನಪಡಿಸಿಕೊಂಡು ಚೋಳ ಕೇರಳ ಪಾಂಡ್ಯದೇಶಗಳ ರಾಜರನ್ನು ಒಂದೇಕಾಲದಲ್ಲಿ ಜಯಿಸಿ ನಮಸ್ಕಾರ ಮಾಡಿಸಿಕೊಂಡನು.

**[೧]ಕಾಲಿಂಗಕೈರ್ಗಜೈರಸ್ಯ [೨]ಮಲಯೋಪಾಂತಭೂಧರಾಃ ।**
**ತುಲಯದ್ಭಿರಿವೋನ್ನಾಮಮಾಕ್ರಾಂತಾಃ ಸ್ವೇನ ವರ್ಷ್ಮಣಾ ॥ ೩೬ ॥**

ತಮ್ಮ ಶರೀರದಿಂದ ಎತ್ತರವನ್ನಳತೆಮಾಡುತ್ತವೋ ಎಂಬಂತಿರುವುವೂ ಕಲಿಂಗದೇಶದಲ್ಲಿ ಹುಟ್ಟಿದುವೂ ಆದ ಭರತರಾಜನ ಆನೆಗಳು ಮಲಯದೇಶದ ಸಮೀಪದಲ್ಲಿರುವ ಪರ್ವತಗಳನ್ನು ಆಕ್ರಮಿಸಿದುವು.

**ದಿಶಾಂ ಪ್ರಾಂತೇಷು ವಿಶ್ರಾಂತೈರ್ದಿಗ್ಜಯೇಽಸ್ಯ ಚಮೂಗಜೈಃ ।**
**ದಿಗ್ಗಜತ್ವಂ ಸ್ವಸಾಚ್ಚಕ್ರೇ ಶೋಭಾಯೈ [೩]ತತ್ಕಥಾಂತರಮ್ ॥ ೩೭ ॥**

ಭರತರಾಜನ ದಿಗ್ವಿಜಯವಿಷಯದಲ್ಲಿ ದಿಕ್ಕೋನೆಗಳಲ್ಲಿ ವಿಶ್ರಮಿಸಿರುವ ಸೈನ್ಯದ ಆನೆಗಳು ದಿಗ್ಗಜಗಳ ಭಾವವನ್ನು ಸ್ವಾಧೀನಪಡಿಸಿಕೊಂಡುವು. ದಿಗ್ಗಜಗಳಿವೆಯೆಂಬ ಕಥೆಯು ಶೋಭೆಗೋಸ್ಕರವೇ ಆಗಿದೆ. ಭರತರಾಜನ ಸೈನ್ಯದ ಆನೆಗಳೇ ದಿಗ್ಗಜಗಳಾಗಿದ್ದುವೆಂದೂ ಯಥಾರ್ಥವಾಗಿ ಬೇರೆ ದಿಗ್ಗಜಗಳಿರಲಿಲ್ಲವೆಂದೂ ಅಭಿಪ್ರಾಯವು.

**ತತೋ[೪]ಽಪರಾಂತಮಾರುಹ್ಯ ಸಹ್ಯಾಚಲತಟೋಪಗಃ ।**
**ಪಶ್ಚಿಮಾರ್ಣವವೇದ್ಯಾಂತಪಾಲಕಾನಜಯ[೫]ದ್ವಿಭುಃ ॥ ೩೮ ॥**

ತರುವಾಯ ಪಶ್ಚಿಮದಿಗ್ಭಾಗವನ್ನು ವ್ಯಾಪಿಸಿ ಸಹ್ಯಪರ್ವತದ ತಪ್ಪಲನ್ನು ಸೇರಿದ ಭರತರಾಜನು ಪಶ್ಚಿಮಸಮುದ್ರದ ವೇದಿಕೆಯಿಂದ ಅಂತಪಾಲಕರೆಂಬ ರಾಜರನ್ನು ಜಯಿಸಿದನು.

**ಜಯಸಾಧನಮಸ್ಯಾಬ್ಧೇ[೬]ರಾರಾತ್ತೀರೇ [೭]ವ್ಯಜೃಂಭತ ।**
**ಮಹಾಸಾಧನಮಿತ್ಯುಚ್ಚೈಃ [೮]ಪರಂ ಪಾರ[೯]ಮವಾಪ್ಯಭತ್ ॥ ೩೯ ॥**

ಭರತರಾಜನ ವಿಜಯಸಾಮಗ್ರಿ(ಸೇನೆ)ಯು ಸಮುದ್ರತೀರದ ಸಮೀಪಪ್ರದೇಶದಲ್ಲಿ ಹರಡಿಕೊಂಡಿತು. ಅಧಿಕವಾದ ದೊಡ್ಡಸೇನೆಯು ಸಮುದ್ರದ ಬೇರೊಂದು ದಡವನ್ನು ಸೇರಿತು.

**[೧೦]ಉಪಸಿಂಧುರಿತಿ ವ್ಯಕ್ತಮುಭಯೋಸ್ತೀರಯೋರ್ಬಲಮ್ ।**
**ದೃಷ್ಟ್ವಾಸ್ಯ ಸಾಧ್ವಸಾತ್ಕ್ಷುಭ್ಯನ್ನಿವಾಭೂದಾಕುಲಾಕುಲಃ ॥ ೪೦ ॥**

ಭರತರಾಜನ ಸೈನ್ಯವನ್ನು ಸಮುದ್ರದ ಎರಡು ದಡಗಳಲ್ಲಿಯೂ ನೋಡಿ ಸಮುದ್ರವು ಭಯದಿಂದ ಕ್ಷೋಭೆಗೊಂಡಿತೋ ಎಂಬಂತೆ ಅತ್ಯಂತ ವ್ಯಾಕುಲವಾಗಿದ್ದಿತು. ಹೀಗೆ ಉಪಸಮುದ್ರ(ಕ್ಷುಲ್ಲಕಸಮುದ್ರ)ವು ಸ್ಫುಟವಾಯಿತು.

**ತತಃ ಸ್ಮ ಬಲಸಂಕ್ಷೋಭಾದಿತೋ ವಾರ್ಧಿಃ ಪ್ರಸರ್ಪತಿ ।**
**ಇತಃ ಸ್ಮ ಬಲಸಂಕ್ಷೋಭಾತ್ತತೋಽಬ್ಧಿಃ ಪ್ರತಿಸರ್ಪತಿ ॥ ೪೧ ॥**

ಆಮೇಲೆ ಸೈನ್ಯದ ಕ್ಷೋಭೆಯಿಂದ ಸಮುದ್ರವು ಈಕಡೆಗೆ ಹೋಯಿತು. ತರುವಾಯ ಈಕಡೆಯಿಂದ ಸೈನ್ಯದಕ್ಷೋಭೆಯಿಂದ ಸಮುದ್ರವು ಪ್ರತಿಯಾಗಿ (ಇದಿರು) ಹೋಯಿತು.

**ಹರಿನ್ಮಣಿಪ್ರಭೋತ್ಸರ್ಪೈಸ್ತತಮಬ್ಧೇರ್ಬಭೌ ಜಲಮ್ ।**
**ಚಿರಾ[೧೧]ದ್ವಿವೃತ್ತಮಸ್ಯೇವ ಸಶೈವಲಮಧಸ್ತಲಮ್ ॥ ೪೨ ॥**

೧ ಕಲಿಂಗದೇಶಜಾತೈಃ. ೨ ಮಲಯದೇಶಸಮೀಪಸ್ಥಪರ್ವತಾಃ. ೩ ದಿಗ್ಗಜಾಃ ಸಂತೀತಿ ಕಥಾಭೇದಃ. ೪ ಅಪರದಿಗ್ಭಾಗಂ ವ್ಯಾಪ್ಯ. ೫ ವಿಭುರಿತ್ಯಪಿ ಪಾಠಃ. ೬ ಅರ್ವಾಕ್ತೀರೇ. ೭ ವಿಜೃಂಭಿತಮಿತ್ಯಪಿ ಪಾಠಃ. ೮ ಅಪರತೀರಂ. ೯ ಅಶಿಶ್ರಿಯತ್. ೧೦ ಉಪಸಮುದ್ರಃ. ೧೧ ಪರಿಣತಂ.

ಮೇಲಕ್ಕೆ ಹರಡುತ್ತಿರುವ ಪಚ್ಚೆಯ ರತ್ನಗಳ ಕಾಂತಿಗಳಿಂದ ವ್ಯಾಪ್ತವಾದ ಈ ಸಮುದ್ರದನೀರು, ಆವಟಿಯೊಡಗೂಡಿದ ಕೆಳಭಾಗ(ತಳ)ವು ಬಹುಕಾಲದನಂತರ ಮೇಲಕ್ಕೆ ಬಂದಿತೋ ಎಂಬಂತೆ, ಪ್ರಕಾಶಿಸುತ್ತಿದ್ದಿತು.

**ಪದ್ಮರಾಗಾಂಶುಭಿರ್ಭಿನ್ನಂ ಕ್ವಚನಾಬ್ಧೇರ್ವ್ಯಭಾಜ್ಜಲಮ್ ।**
**ಕ್ಷೋಭಾದಿವಾಸ್ಯ [೧]ಹೃ[೨]ಚ್ಛೀರ್ಣಮುಚ್ಛಲಚ್ಛೋಣಿತಚ್ಛಟಮ್ ॥ ೪೩ ॥**

ಕೆಲವುಕಡೆಯಲ್ಲಿ ಪದ್ಮರಾಗರತ್ನಗಳ ಕಾಂತಿಗಳಿಂದ ಭೇದಿಸಲ್ಪಟ್ಟ ಸಮುದ್ರದ ನೀರು, ಕ್ಷೋಭೆಯಿಂದ ಶೀಳಲ್ಪಟ್ಟು ಮೇಲಕ್ಕೆ ಹಾರುತ್ತಿರುವ ರಕ್ತಧಾರೆಯುಳ್ಳ ಸಮುದ್ರದ ಹೃದಯವೋ ಎಂಬಂತೆ, ಪ್ರಕಾಶಿಸುತ್ತಿದ್ದಿತು.

**[೩]ಸಹ್ಯೋತ್ಸಂಗೇ ಲುಠನ್ನಬ್ಧಿರ್ನೂನಂ ದುಃಖಂ ನ್ಯವೇದಯತ್ ।**
**ಸೋಽಪಿ ಸಂಧಾರಯನ್ನೇನಂ ಬಂಧುಕೃತ್ಯಮಿವಾತನೋತ್ ॥ ೪೪ ॥**

ಸಮುದ್ರವು ಸಹ್ಯಪರ್ವತದ ತಪ್ಪಲಿನಲ್ಲಿ ಹೊರಳಾಡಿ ನಿಜವಾಗಿಯೂ ತನ್ನ ದುಃಖವನ್ನು ಹೇಳಿತು. ಆ ಸಹ್ಯಪರ್ವತವೂ ಈ ಸಮುದ್ರವನ್ನು ಧರಿಸಿಕೊಂಡು ಬಂಧುಗಳು ಮಾಡುವ ಕಾರ್ಯವನ್ನು ಮಾಡಿತೋ ಎಂಬಂತಿದ್ದಿತು. ಸಹ್ಯ ಪರ್ವತವು ಸಮುದ್ರವನ್ನಾಲಿಂಗಿಸಿ ದುಃಖವನ್ನಾಲಿಸುವಂತಿದ್ದಿತೆಂದು ಭಾವವು.

**ಅಸಹ್ಯೈರ್ಬಲಸಂಘಟ್ಟೈಃ ಸಹ್ಯಃ ಸಹ್ಯತಿ ಪೀಡಿತಃ ।**
**[೪]ಶಾಖೋದ್ಧಾರಮಿವ ವ್ಯಕ್ತಮಕರೋದ್ಭುಗ್ನಪಾದಪೈಃ ॥ ೪೫ ॥**

ಸಹಿಸಲಾಗದ ಸೈನ್ಯದ ಹೊಡೆತಗಳಿಂದ ಬಹಳವಾಗಿ ಪೀಡಿಸಲ್ಪಟ್ಟ ಆ ಸಹ್ಯಪರ್ವತವು ಮುರಿದುಹೋದ ವೃಕ್ಷಗಳಿಂದ ಸ್ಫುಟವಾಗಿ ಕೊಂಬೆಗಳನ್ನು ಹಿಡಿದು ಕೂಗಿಕೊಳ್ಳುವಂತಿದ್ದಿತು.

**ಚಲತ್ಸತ್ತ್ವೋ ಗುಹಾರಂಧ್ರೈರ್ವಿಮುಂಚನ್ನಾಕುಲಂ ಸ್ವನಮ್ ।**
**[೫]ಮಹಾಪ್ರಾಣೋದ್ರಿ[೬]ರುತ್ಕ್ರಾಂತಿಮಿಯಾಯೇವ ಬಲಕ್ಷತಃ ॥ ೪೬ ॥**

ಚಲಿಸುತ್ತಿರುವ ಪ್ರಾಣಿಗಳುಳ್ಳುದೂ ಗುಹೆಗಳ ಬಿಲಗಳಿಂದ ವ್ಯಾಕುಲವಾದ ಧ್ವನಿಯನ್ನು ಬಿಡುತ್ತಿರುವುದೂ ದೊಡ್ಡಪ್ರಾಣವಾಯುವುಳ್ಳುದೂ ದೊಡ್ಡ ಹೃದಯ ವಾಯುವುಳ್ಳುದೂ ಸೈನ್ಯದಿಂದ ಬಾಧಿಸಲ್ಪಟ್ಟುದೂ ಆದ ಆ ಸಹ್ಯಪರ್ವತವು ಮರಣ ಹೊಂದಿದಂತಿದ್ದಿತು.

**ಚಲಚ್ಛಾಖೀ ಚಲತ್ಸತ್ತ್ವ[೭]ಶ್ಚಲಚ್ಛಿಥಿಲಮೇಖಲಃ ।**
**ನಾಮ್ನೈವಾಚಲತಾಂ ಭೇಜೇ ಸೋದ್ರಿರೇವಂ [೮]ಚಲಾಚಲಃ ॥ ೪೭ ॥**

ಚಲಿಸುತ್ತಿರುವ ವೃಕ್ಷಗಳುಳ್ಳುದೂ ಚಲಿಸುತ್ತಿರುವ ಪ್ರಾಣಿಗಳುಳ್ಳುದೂ ಚಲಿಸುತ್ತಿರುವುದೂ ಶಿಥಿಲವೂ ಆದ ತಪ್ಪಲುಗಳುಳ್ಳುದೂ ಅತ್ಯಂತ ಚಂಚಲವೂ ಆದ ಆ ಸಹ್ಯಪರ್ವತವು ಹೆಸರಿನಿಂದಲೇ ಅಚಲತ್ವ(ಪರ್ವತತ್ವ)ವನ್ನು ಹೊಂದಿದ್ದಿತು. ಕಾರ್ಯದಿಂದ ಅಚಲವಾಗಿರಲಿಲ್ಲವೆಂದು ಭಾವವು.

**[೯]ಗಜತಾವನಸಂಭೋಗ್ಯೈಸ್ತುರಂಗಕುರಘಟ್ಟನೈಃ ।**
**ಸಹ್ಯೋತ್ಸಂಗಭುವಃ ಕ್ಷುಣ್ಣಾಃ ಸ್ಥಲೀಭಾವಂ ಕ್ಷಣಾದ್ಯಯುಃ ॥ ೪೮ ॥**

ಆನೆಗಳ ಸಮೂಹದಿಂದ ಅನುಭವಿಸಲ್ಪಟ್ಟ ವನಗಳಿಂದಲೂ ಕುದುರೆಗಳ ಗೊರಸುಗಳ ಹೊಡೆತಗಳಿಂದಲೂ ಕೆದಕಲ್ಪಟ್ಟಿರುವ ಸಹ್ಯಪರ್ವತದ ತಪ್ಪಲುಗಳು ಕ್ಷಣಕಾಲದಲ್ಲಿ ನೆಲಮಟ್ಟವಾದುವು.

**ಆಪಶ್ಚಿಮಾರ್ಣವತಟಾದಾಚ ಮಧ್ಯಮಪರ್ವತಾತ್ ।**
**ಆತುಂಗವರಕಾದದ್ರೇಸ್ತುಂಗಗಂಡೋಪ[೧೦]ಲಾಂಕಿತಾತ್ ॥ ೪೯ ॥**

೧ ಹೃದಯಂ. ೨ ವಿಶೀರ್ಣಂ ಸತ್. ೩ ಸಹ್ಯಗಿರಿಸಾನೌ. ೪ ಶಾಖಾಂ ಗೃಹೀತ್ವಾಕ್ರೋಶಂ. ೫ ಮಹಾನ್ಪ್ರಾಣವಾಯುರ್ಯಸ್ಮಿನ್ಸಃ ಪಕ್ಷೇ ಮಹಾಹೃದಯವಾಯುಕಃ. ೬ ಮೃತಿಂ. ೭ ಚಲಂತೀ ಶಿಥಿಲ ಮೇಖಲಾ ಯಸ್ಯ ಸಃ. ೮ ಅತ್ಯಂತಚಂಚಲಃ. ೯ ಗಜಸಮೂಹಸಂಭುಕ್ತವನೈಃ. ೧೦ ಅಂಚಿತಾದಿತ್ಯಪಿ ಪಾಠಃ.

**ತಂ ಕೃಷ್ಣಗಿರಿಮುಲ್ಲಂಘ್ಯ ತಂ ಚ ಶೈಲಂ ಸುಮಂದರಮ್ ।**
**ಮುಕುಂದಂ ಚಾದ್ರಿಮುದ್ವ್ಯಪ್ತಾ ಜಯೇಭಾಸ್ತಸ್ಯ ಬಭ್ರಮುಃ ॥ ೫೦ ॥**

ಮದಿಸಿದುವೂ ಜಯಶೀಲವೂ ಆದ ಆನೆಗಳು ಪಶ್ಚಿಮಸಮುದ್ರತೀರದಿಂದಲೂ ಮಧ್ಯಮಪರ್ವತದಿಂದಲೂ ದೊಡ್ಡ ಬಂಡೆಗಳಿಂದ ಗುರುತಿಸಲ್ಪಟ್ಟಿರುವ ತುಂಗ ವರಕಪರ್ವತದಿಂದಲೂ ಹಿಡಿದು ಆ ಕೃಷ್ಣಗಿರಿಯನ್ನೂ ಸುಮಂದರ ಪರ್ವತವನ್ನೂ ದಾಟಿ ಮುಕುಂದಪರ್ವತದಲ್ಲಿಯೂ ಅಲೆದಾಡಿದುವು.

**ತತ್ರಾ[೧]ಪರಾಂತಕಾ[೨]ನ್ನಾಗಾನ್ [೩]ಹ್ರಸ್ವಗ್ರೀವಾನ್ಪರಾನ್ರದೈಃ ।**
**ಯುಕ್ತಾ[೪]ನ್ಪೀನಾಯತಸ್ನಿಗ್ಧೈಃ ಶ್ಯಾಮಾ[೫]ನ್ಸ್ವಕ್ಷಾನ್ಮೃದುತ್ವಚಃ ॥ ೫೧ ॥**

**[೬]ಮಹೋತ್ಸಂಗಾನುದಗ್ರಾಂಗಾನ್ ರಕ್ತಜಿಹ್ವೋಷ್ಠತಾಲುಕಾನ್ ।**
**ಮಾನಿನೋ ದೀರ್ಘವಾಲೋಷ್ಠಾನ್ಪದ್ಮಗಂಧಮದಚ್ಯುತಃ ॥ ೫೨ ॥**

**ಸಂತುಷ್ಟಾನ್ಸ್ವೇ ವನೇ ಶೂರಾನ್ ದೃಢಪಾದಾನ್ಸುವರ್ಷ್ಮಣಃ ।**
**ಸ ಭೇಜೇ ತದ್ವನಾಧೀಶೈಃ ಸಸಂಭ್ರಮ[೭]ಮುಪಾಹೃತಾನ್ ॥ ೫೩ ॥**

ಭರತರಾಜನು ಪಶ್ಚಿಮದಿಕ್ಕಿನ ಸಮೀಪಪ್ರದೇಶದಲ್ಲಿ ಹುಟ್ಟಿದುವೂ ಮೋಟಕಾಗಿರುವ ಭುಜಗಳಿಂದ ಶ್ರೇಷ್ಠಗಳೂ ಪುಷ್ಟವೂ ದೀರ್ಘವೂ ನುಣುಪೂ ಆದ ಹಲ್ಲುಗಳಿಂದ ಕೂಡಿರುವುವೂ ಕಪ್ಪಾಗಿರುವುವೂ ಶ್ರೇಷ್ಠವಾದ ಕಣ್ಣುಗಳುಳ್ಳುವೂ ಕೋಮಲವಾದ ಶರೀರಚರ್ಮವುಳ್ಳುವೂ ದೊಡ್ಡವಾದ ಬೆನ್ನುಳ್ಳುವೂ ಉತ್ತಮವಾದ ಶರೀರವುಳ್ಳುವೂ ಕೆಂಪಾಗಿರುವ ನಾಲಗೆಯೂ ತುಟಿಯೂ ದವಡೆಯೂ ಉಳ್ಳುವೂ ಮಾನವುಳ್ಳುವೂ ಉದ್ದವಾದ ಬಾಲವೂ ತುಟಿಯೂ ಉಳ್ಳುವೂ ತಾವರೆಯ ಪರಿಮಳದಂತಿರುವ ಮದಜಲವನ್ನು ಸುರಿಯುವುವೂ ತಮ್ಮ ವನದಲ್ಲಿ ಸಂತೋಷವಾಗಿರುವುವೂ ಪರಾಕ್ರಮಿಗಳೂ ದೃಢವಾದ ಪಾದಗಳುಳ್ಳುವೂ ಶ್ರೇಷ್ಠವಾದ ಶರೀರವುಳ್ಳುವೂ ತ್ವರೆಯಾಗಿ ಆ ವನದ ಅಧಿಪತಿಗಳಿಂದ ಕೈಗಾಣಿಕೆಯಾಗಿ ತರಲ್ಪಟ್ಟುವೂ ಆದ ಆನೆಗಳನ್ನು ಸ್ವೀಕರಿಸಿದನು.

**ವನರೋಮಾವಲೀಸ್ತುಂಗತಟಾ[೮]ರೋಹಾ ಬಹೂರ್ನದೀಃ ।**
**ಪೂರ್ವಾಪರಾಬ್ಧಿಗಾಃ ಸೋ[೯]ತ್ಯೈತ್ಸಹ್ಯಾದ್ರೇ[೧೦]ರ್ದುಹಿತ್ರೀರಿವ ॥ ೫೪ ॥**

ಭರತರಾಜನು ಸಹ್ಯಪರ್ವತದ ಪುತ್ರಿಯರಂತಿರುವುವೂ ರೋಮಗಳ ಸಾಲಿನಂತಿರುವ ವನಗಳುಳ್ಳುವೂ ಉನ್ನತವಾದ ದಡಗಳೆಂಬ ಅಂಡುಗಳುಳ್ಳುವೂ ಪೂರ್ವ ಪಶ್ಚಿಮಸಮುದ್ರಗಳನ್ನು ಹೊಂದಿರುವುವೂ ಆದ ಅನೇಕನದಿಗಳನ್ನು ದಾಟಿದನು.

**ಸಂಚರದ್ಭೀಷಣಗ್ರಾಹೈರ್ಭೀಮಾಂ ಭೈಮರಥೀಂ ನದೀಮ್ ।**
**ನಕ್ರಚಕ್ರಕೃತಾವರ್ತೈರ್ದಾರುವೇಣಾಂ ಚ ದಾರುಣಾಮ್ ॥ ೫೫ ॥**

ಸಂಚರಿಸುತ್ತಿರುವುವೂ ಭಯಂಕರವೂ ಆದ ಮೊಸಳೆಗಳಿಂದ ಭಯಂಕರವಾದ ಭೈಮರಥೀನದಿಯನ್ನೂ ಮೊಸಳೆಗಳ ಸಮೂಹದ ಸಂಚಾರಗಳಿಂದ ಭಯಂಕರವಾದ ದಾರುವೇಣಾನದಿಯನ್ನೂ

**[೧೧]ನೀರಾಂ ತೀರಸ್ಥ[೧೨]ವಾನೀರಶಾಖಾಗ್ರ[೧೩]ಸ್ಥಗಿತಾಂಭಸಮ್ ।**
**[೧೪]ಮೂಲಾಂ ಕೂಲಂಕಷೈರೋಘೈರುನ್ಮೂಲಿತತಟದ್ರುಮಾಮ್ ॥ ೫೬ ॥**

ದಡದಲ್ಲಿರುವ ಹಬ್ಬೆಗಿಡದ ಕೊಂಬೆಗಳ ತುದಿಗಳಿಂದ ಮರೆಮಾಡಲ್ಪಟ್ಟಿರುವ ನೀರುಳ್ಳ ನೀರಾನದಿಯನ್ನೂ ದಡವನ್ನು ಮೀರುತ್ತಿರುವ ಪ್ರವಾಹಗಳಿಂದ ದಡದಲ್ಲಿರುವ ಮರಗಳನ್ನು ಕಿತ್ತುಹಾಕುತ್ತಿರುವ ಮೂಲಾನದಿಯನ್ನೂ

೧ ಪಶ್ಚಿಮದಿಕ್ಸಮೀಪಭವಾನ್. ೨ ಗಜಾನ್. ೩ ಕುಬ್ಜಸ್ಕಂಧೋತ್ಕೃಷ್ಟಾನ್. ೪ ಪೀತಾಯತಸ್ನಿಗ್ಧೈರಿತ್ಯಪಿಪಾಠಃ. ೫ ಸುನೇತ್ರಾನ್. ೬ ಬೃಹದುಪರಿಮಭಾಗಾನ್. ೭ ಉಪಾಯನೀಕೃತಾನ್. ೮ ನಿತಂಬಾಃ. ೯ ಅಗಾತ್. ೧೦ ಪುತ್ರೀರಿವ. ೧೧ ನದೀಂ. ೧೨ ವೇತಸಸ್ಯ. ೧೩ ಆಚ್ಛಾದಿತಾಂ. ೧೪ ನದೀಂ.

ಬಾಣಾ[೧]ಮವಿರತಾಬಾಣಾಂ ಕೇತಂಬಾಮಂಬುಸಂಭೃತಾಮ್ ।
[೨]ಕರೀರಿತತಟೋತ್ಸಂಗಾ ಕರೀರೀಂ ಸರಿದುತ್ತಮಾಮ್ ॥ ೫೭ ॥

ಎಡೆಬಿಡದೆ ನೀರಿನ ಶಬ್ದವನ್ನು ಮಾಡುತ್ತಿರುವ ಬಾಣಾನದಿಯನ್ನೂ ಜಲಭರಿತವಾಗಿರುವ ಕೇತಂಬಾನದಿಯನ್ನೂ ಆನೆಗಳಿಂದ ಪ್ರೇರಿತವಾದ ದಡವುಳ್ಳುದೂ ನದಿಗಳಲ್ಲೆಲ್ಲ ಶ್ರೇಷ್ಠವೂ ಆದ ಕರೀರೀನದಿಯನ್ನೂ

ಪ್ರಹರಾಂ ವಿಷಮಗ್ರಾಹೈರ್ದೂಷಿತಾಮಸತೀಮಿವ ।
ಮುರರಾಂ [೩]ಕುರರೈಃ ಸೇವ್ಯಾ[೪]ಮಪಪಂಕಾಂ ಸತೀಮಿವ ॥ ೫೮ ॥

ವ್ಯಭಿಚಾರಿಣೀಸ್ತ್ರೀಯಂತೆ ವಿಷಮವಾದ ಮೊಸಳೆಗಳಿಂದ ದೂಷಿತವಾದ ಪ್ರಹರಾನದಿಯನ್ನೂ ಪತಿವ್ರತಾಸ್ತ್ರೀಯಂತೆ ದೋಷವಿಲ್ಲದಿರುವುದೂ ಕುರಪಕ್ಕಿಗಳಿಂದ ಸೇವಿಸಲ್ಪಡುವುದೂ ಆದ ಮುರರಾನದಿಯನ್ನೂ

ಪಾರಾಂ [೫]ಪಾರೇಜಲಂ ಕೂಜತ್ಕ್ರೌಂಚ[೬]ಕಾದಂಬಸಾರಸಾಮ್ ।
ದಮನಾಂ ಸಮನಿಮ್ನೇಷು ಸಮಾನಾಮಸ್ಖಲದ್ಗತಿಮ್ ॥ ೫೯ ॥

[೭]ಮದಸ್ರುತಿಮಿವಾಬದ್ಧ[೮]ವೇಣಿಕಾಂ [೯]ಸಹ್ಯದಂತಿನಃ ।
ಗೋದಾವರೀಮವಿಚ್ಛಿನ್ನಪ್ರವಾಹಾಮತಿವಿಸ್ತೃತಾಮ್ ॥ ೬೦ ॥

[೧೦]ಕರೀರವಣಸಂರುದ್ಧತಟಪರ್ಯಂತಭೂತಲಾಮ್ ।
ತಾಪೀಮಾತಪಸಂತಾಪಾತ್ಕವೋಷ್ಣಾ ಬಿಭ್ರತೀಮಪಃ ॥ ೬೧ ॥

ರಮ್ಯಾಂ ತೀರತರುಚ್ಛಾಯಾಸಂಸುಪ್ತ ಮೃಗಶಾಬಕಾಮ್ ।
[೧೧]ಖಾತಾಮಿವಾ[೧೨]ಪರಾಂತಸ್ಯ ನದೀಂ ಲಾಂಗಲಖಾತಿಕಾಮ್ ॥ ೬೨ ॥

ಸರಿತೋಮೂಸ್ಸಮಂ ಸೈನ್ಯೈರುತ್ತತಾರ ಚಮೂಪತಿಃ ।
ತತ್ರ ತತ್ರ [೧೩]ಸಮಾಕರ್ಷನ್ಮದಿನೋ ವನಸಾಮಜಾನ್ ॥ ೬೩ ॥

ದಡದಲ್ಲಿರುವ ನೀರಿನಲ್ಲಿ ಕೂಗುತ್ತಿರುವ ಕ್ರೌಂಚಪಕ್ಷಿಗಳೂ ಕಲಹಂಸಪಕ್ಷಿಗಳೂ ಉಳ್ಳ ಪಾರಾನದಿಯನ್ನೂ ಸಮಾನಪ್ರದೇಶಗಳಲ್ಲಿಯೂ ತಗ್ಗುಗಳಲ್ಲಿಯೂ ಒಂದೇ ರೀತಿಯಾಗಿ ಜಾರದೆ ಹರಿಯುತ್ತಿರುವ ದಮನಾನದಿಯನ್ನೂ ಸಹ್ಯಪರ್ವತವೆಂಬ ಆನೆಯ ಮದಜಲದ ಪ್ರವಾಹವೋ ಎಂಬಂತೆ ಹರಿಯುತ್ತಿರುವುದೂ ಅವಿಚ್ಛಿನ್ನವಾದ ಪ್ರವಾಹವುಳ್ಳುದೂ ಬಹಳ ವಿಸ್ತಾರವೂ ಆದ ಗೋದಾವರೀನದಿಯನ್ನೂ ಬಿದಿರುಗಳ ವನದಿಂದ ಆವರಿಸಲ್ಪಟ್ಟ ದಡದ ಸಮೀಪಭೂಪ್ರದೇಶವುಳ್ಳುದೂ ಬಿಸಿಲಿನ ಸಂತಾಪದಿಂದ ಸ್ವಲ್ಪ ಬಿಸಿಯಾಗಿರುವ ನೀರನ್ನು ಹೊಂದಿರುವುದೂ ಆದ ತಾಪೀನದಿಯನ್ನೂ ದಡದಲ್ಲಿರುವ ಮರಗಳ ನೆರಳಿನಲ್ಲಿ ಚೆನ್ನಾಗಿ ಮಲಗಿರುವ ಜಿಂಕೆಯ ಮರಿಗಳುಳ್ಳ ರಮ್ಯಾನದಿಯನ್ನೂ ಪಶ್ಚಿಮದೇಶದ ಕಂದಕವೋ ಎಂಬಂತಿರುವ ಲಾಂಗಲಖಾತಿಕಾನದಿಯನ್ನೂ ಸೇನಾಪತಿಯು ಅಲ್ಲಲ್ಲಿ ಮದಿಸಿರುವ ಕಾಡಾನೆಗಳನ್ನು ಹಿಡಿಯುತ್ತ ಸೈನ್ಯಗಳೊಡನೆ ದಾಟಿದನು.

ಪ್ರಸಾರಿತಸರಿಜ್ಜಿಹ್ವೋ ಯೋಬ್ಧಿಂ ಪಾತುಮಿವೋದ್ಯತಃ ।
ಸಹ್ಯಾಚಲಂ ತಮುಲ್ಲಂಘ್ಯ ವಿಂಧ್ಯಾದ್ರಿಂ ಪ್ರಾಪ ತದ್ಬಲಮ್ ॥ ೬೪ ॥

ನದಿಗಳೆಂಬ ನಾಲಿಗೆಗಳನ್ನು ನೀಡಿ ಸಮುದ್ರವನ್ನು ಪಾನಮಾಡುವುದಕ್ಕೋಸ್ಕರ ಪ್ರಯತ್ನಪಟ್ಟಿದೆಯೋ ಎಂಬಂತಿರುವ ಸಹ್ಯಪರ್ವತವನ್ನು ದಾಟಿ ಭರತರಾಜನ ಸೈನ್ಯವು ವಿಂಧ್ಯಪರ್ವತವನ್ನು ಸೇರಿತು.

೧ ಅಪಾಮಾಣಃ(ಧ್ವನಿಃ)ಅಬಾಣಃ, ಅವಿರತಃ ಅಬಾಣೋ ಯಸ್ಯಾಂ ಸಾ. ೨ ಗಜಪ್ರೇರಿತ. ೩ ಪಕ್ಷಿವಿಶೇಷೈಃ. ೪ ಅಪಗತಕರ್ದಮಾಂ. ೫ ತೀರಜಲೇ. ೬ ಕಲಹಂಸ. ೭ ಮದಸ್ರವಣಾಂ. ೮ ಪ್ರವಾಹಾಂ ಕುಲ್ಯಾಂ ವಾ. ೯ ಸಹ್ಯಾಚಲ ಇತಿ ಗಜಸ್ತಸ್ಯ. ೧೦ ವೇಣುವನಂ. ೧೧ ಖಾತಿಕಾಂ. ೧೨ ಪಶ್ಚಿಮದೇಶಸ್ಯ. ೧೩ ಸ್ವೀಕುರ್ವನ್.

[೧]ಭೂಭೃತಾಂ ಪತಿಮುತ್ತುಂಗಂ [೨]ಪೃಥುವಂಶಂ [೩]ಧೃತಾಯತಿಮ್ ।
ಪರೈರಲಂಘ್ಯಮದ್ರಾಕ್ಷೀದ್ವಿಂಧ್ಯಾದ್ರಿಂ ಸ್ವಮಿವ ಪ್ರಭುಃ ॥ ೬೫ ॥

ರಾಜರಿಗೆ ಪ್ರಭುವೂ ಉತ್ತಮವಂಶೀಯನೂ ದ್ರವ್ಯದ ಲಾಭವನ್ನು ಪಡೆದಿರುವವನೂ ಬೇರೆಯವರಿಂದ ಮೀರಲಶಕ್ಯನೂ ಆದ ಭರತರಾಜನು ಪರ್ವತಗಳಲ್ಲಿ ಉನ್ನತವೂ ದೊಡ್ಡ ಬಿದಿರುಳ್ಳುದೂ ಉದ್ದವಾಗಿರುವುದೂ ದಾಟಲಶಕ್ಯವೂ ಆದ ವಿಂಧ್ಯಪರ್ವತವನ್ನು ನೋಡಿದನು.

ಭಾತಿ ಯಃ ಶಿಖರೈಸ್ತುಂಗೈರ್ದೂರವ್ಯಾಯತನಿರ್ಝರೈಃ ।
ಸಪತಾಕೈರ್ವಿಮಾನೌಘೈರ್ವಿಶ್ರಮಾಯೇವ ಸಂಶ್ರಿತಃ ॥ ೬೬ ॥

ಆ ವಿಂಧ್ಯಪರ್ವತವು ಪತಾಕೆಗಳುಳ್ಳ ವಿಮಾನಗಳ ಸಮೂಹಗಳೊಡನೆ ವಿಶ್ರಮಿಸುವುದಕ್ಕೋಸ್ಕರ ಆಶ್ರಯಿಸಲ್ಪಟ್ಟಿದೆಯೋ ಎಂಬಂತೆ, ಬಹುದೂರ ವಿಸ್ತರಿಸಿರುವ ಗಿರಿನದಿಗಳುಳ್ಳವೂ ಉನ್ನತವೂ ಆದ ಶಿಖರಗಳಿಂದ ಪ್ರಕಾಶಿಸುತ್ತಿದೆ.

ಯಃ ಪೂರ್ವಾಪರಕೋಟಿಭ್ಯಾಂ ವಿಗಾಹ್ಯಾಂಬುನಿಧಿಂ ಸ್ಥಿತಃ ।
[೪]ನೂನಂ ದಾವಭಯಾ[೫]ತ್ಸಖ್ಯ[೬]ಮಮುನಾ [೭]ಪ್ರಚಿಕೀರ್ಷತಿ ॥ ೬೭ ॥

ಆ ವಿಂಧ್ಯಪರ್ವತವು ಪೂರ್ವಾಪರಾಗ್ರಭಾಗಗಳಿಂದ ಸಮುದ್ರವನ್ನು ಪ್ರವೇಶಿಸಿ ವನಾಗ್ನಿಯ ಭಯದಿಂದ ಈ ಸಮುದ್ರದೊಡನೆ ಮಿತ್ರತ್ವವನ್ನು ಮಾಡಲಿಚ್ಛಿಸುತ್ತಿದೆಯೋ ಎಂಬಂತಿದೆ.

ನಯಂತಿ ನಿರ್ಝರಾ ಯಸ್ಯ ಶಶ್ವತ್ಪುಷ್ಟಿಂ ತಟದ್ರುಮಾನ್ ।
ಸ್ವಪಾದಾಶ್ರಯಿಣಃ ಪೋಷ್ಯಾಃ ಪ್ರಭುಣೇತೀವ [೮]ಶಂಸಿತುಮ್ ॥ ೬೮ ॥

ದೊರೆಯು ತನ್ನ ಪಾದಾಶ್ರಿತರನ್ನು ಪೋಷಿಸಬೇಕೆಂದು ಹೇಳುವುದಕ್ಕೋಸ್ಕರವೋ ಎಂಬಂತೆ, ಆ ವಿಂಧ್ಯಪರ್ವತದ ಗಿರಿನದಿಗಳು ದಡದಲ್ಲಿರುವ ಮರಗಳಿಗೆ ಬಾರಿಬಾರಿಗೆ ಪುಷ್ಟಿಯನ್ನುಂಟುಮಾಡುತ್ತವೆ.

[೯]ತಟಸ್ಥಪುಟಪಾಷಾಣಸ್ಖಲಿತೋಚ್ಚಾಲಿತಾಂಭಸಃ ।
ನದೀವಧೂಃ ಕೃತಧ್ವಾನಂ ನಿರ್ಝರೈರ್ಹಸತೀವ ಯಃ ॥ ೬೯ ॥

ಆ ವಿಂಧ್ಯಪರ್ವತವು ದಡದಲ್ಲಿ ಹಳ್ಳದಿಣ್ಣೆಯಾಗಿರುವ ಕಲ್ಲಿನಿಂದ ಜಾರಿ ಮೇಲಕ್ಕೆ ಹಾರುತ್ತಿರುವ ನೀರುಳ್ಳ ನದಿಗಳೆಂಬ ಹೆಂಡರನ್ನು ನೋಡಿ ಗಿರಿನದಿಗಳಿಂದ ಶಬ್ದವನ್ನು ಮಾಡಿ ಪರಿಹಾಸ್ಯಮಾಡುತ್ತಿದೆಯೋ ಎಂಬಂತಿದೆ.

ವನಾಭೋಗಮಪರ್ಯಂತಂ ಯಸ್ಯ ದಗ್ಧುಮಿವಾಕ್ಷಮಃ ।
ಭೃಗುಪಾತಾಯ ದಾವಾಗ್ನಿಃ ಶಿಖರಾಣ್ಯಧಿರೋಹತಿ ॥ ೭೦ ॥

ವನಾಗ್ನಿಯು ಆ ವಿಂಧ್ಯಪರ್ವತದ ಅಪರಿಮಿತವಾದ ಮತ್ತು ವಿಸ್ತಾರವಾದ ವನವನ್ನು ಸುಡುವುದಕ್ಕೆ ಶಕ್ತಿಯಿಲ್ಲದೆ ಪರ್ವತಶಿಖರದಿಂದ ಬೀಳುವುದಕ್ಕೋಸ್ಕರ ಶಿಖರಗಳನ್ನು ಹತ್ತುತ್ತಿದೆಯೋ ಎಂಬಂತಿದೆ.

ಜ್ವಲದ್ದಾವಪರೀತಾನಿ ಯತ್ಕೂಟಾನಿ ವನೇಚರೈಃ ।
ಚಾಮೀಕರಮಯಾನೀವ ಲಕ್ಷ್ಯಂತೇ [೧೦]ಶುಚಿಸನ್ನಿಧೌ ॥ ೭೧ ॥

ಬೇಸಿಗೆಯ ಕಾಲದಲ್ಲಿ ಉರಿಯುತ್ತಿರುವ ವನಾಗ್ನಿಯಿಂದ ವ್ಯಾಪ್ತವಾದ ಆ ವಿಂಧ್ಯಪರ್ವತದ ಶಿಖರಗಳನ್ನು ನೋಡಿ ವನಚರರು ಅವು ಸುವರ್ಣಮಯವಾದುವುಗಳೆಂಬಂತೆ ತಿಳಿಯುತ್ತಾರೆ.

[೧೧]ಸಮಾತಂಗಂ ವನಂ ಯಸ್ಯ [೧೨]ಸಭುಜಂಗಪರಿಗ್ರಹಮ್ ।
[೧೩]ವಿಜಾತಿಕಂಟಕಾಕೀರ್ಣಂ ಕ್ವಚಿದ್ಧತ್ತೇ[೧೪]ತಿಕಷ್ಟತಾಮ್ ॥ ೭೨ ॥

೧ ರಾಜ್ಞಾಂ, ಗಿರೀಣಾಂ ಚ. ೨ ಮಹಾನ್ವಯಂ, ಮಹಾವೇಣುಂ ಚ. ೩ ಧೃತಧನಾಗಮಂ ಧೃತಾಯಾಮಂ ಚ. ೪ ಇವ. ೫ ಮಿತ್ರತ್ವಂ. ೬ ಸಮುದ್ರೇಣ. ೭ ಕರ್ತುಮಿಚ್ಛತಿ. ೮ ವಕ್ತುಂ. ೯ ತಟನಿಮ್ನೋನ್ನತಪಾಷಾಣಃ. ೧೦ ಗ್ರೀಷ್ಮಪ್ರವೇಶೇ. ೧೧ ಸಗಜಂ, ಸಚಾಂಡಾಲಂ ಚ. ೧೨ ಸಸರ್ಪಪರಿಗ್ರಹಂ, ಸವಿಟಪರಿಗ್ರಹಂ ಚ. ೧೩ ಪಕ್ಷಿಜಾತಿಃ ನೀಚಜಾತಿಶ್ಚ. ೧೪ ಅತಿಗಹನತಾಂ.

ಕೆಲವು ಕಡೆಯಲ್ಲಿ ಆನೆಗಳುಳ್ಳುದೂ ಸರ್ಪಗಳನ್ನೊಳಗೊಂಡಿರುವುದೂ ಪಕ್ಷಿ ಜಾತಿಯ ತೊಂದರೆಯುಳ್ಳುದೂ ನೀಚಜಾತಿಯ ಮುಳ್ಳುಗಳಿಂದ ವ್ಯಾಪ್ತವೂ ಆದ ಆ ವಿಂಧ್ಯಾರಣ್ಯವು ಬಹಳ ದುಷ್ಪ್ರವೇಶವಾಗಿದೆ.

**[೧]ಕ್ಷೀಬಕುಂಜರಯೋಗೇಽಪಿ ಕ್ವಚಿ[೨]ದಕ್ಷೀಬಕುಂಜರಮ್ ।**
**[೩]ವಿಪತ್ರಮಪಿ ಸತ್ಪತ್ರಪಲ್ಲವಂ ಭಾತಿ ಯದ್ವನಮ್ ॥ ೭೩ ॥**

ಆ ವಿಂಧ್ಯಾರಣ್ಯವು ಮದಿಸಿದ ಆನೆಗಳ ಸಂಬಂಧವುಳ್ಳುದಾಗಿದ್ದರೂ ಕೆಲವು ಕಡೆಯಲ್ಲಿ ಇಲ್ಲದುದೂ ಎಲೆಗಳಿದ್ದರೂ ಶ್ರೇಷ್ಠವಾದ ಎಲೆಗಳೂ ತಳಿರುಗಳೂ ಉಳ್ಳುದೂ ಆಗಿ ಪ್ರಕಾಶಿಸುತ್ತದೆ. (ಇದು ವಿರೋಧಾರ್ಥ) ಸಮುದ್ರದ ಉಪ್ಪುಳ್ಳುದೂ ಪಕ್ಷಿಗಳ ರೆಕ್ಕೆಗಳುಳ್ಳುದೂ ಶ್ರೇಷ್ಠವಾದ ಎಲೆಗಳೂ ತಳಿರುಗಳೂ ಉಳ್ಳುದೂ ಆಗಿ ಪ್ರಕಾಶಿಸುತ್ತದೆ. (ಇದು ವಿರೋಧಪರಿಹಾರ).

**ಸ್ಫುಟದ್ವೇಣೂದರೋನ್ಮುಕ್ತೈ[೪]ರ್ವ್ಯಸ್ತೈರ್ಮುಕ್ತಾಫಲೈಃ ಕ್ವಚಿತ್ ।**
**ವನಲಕ್ಷ್ಮ್ಯೋ ಹಸಂತೀವ ಸ್ಫುರದ್ದಂತಾಂಶು ಯದ್ವನೇ ॥ ೭೪ ॥**

ಆ ವಿಂಧ್ಯಾರಣ್ಯದಲ್ಲಿ ವನಲಕ್ಷ್ಮಿಯರು ಸ್ಫುಟವಾದ ಹಲ್ಲುಗಳ ಕಾಂತಿಯಂತಿರುವ ಒಡೆದುಹೋದ ಬಿದುರುಗಳ ಮಧ್ಯಭಾಗದಿಂದ ಹೊರಟ ಸ್ಫುಟವಾದ ಮುತ್ತುಗಳಿಂದ ಕೆಲವುಕಡೆಯಲ್ಲಿ ನಗುವಂತಿದ್ದರು.

**ಗುಹಾಮುಖಸ್ಫುರದ್ಧೀರನಿರ್ಝರಪ್ರತಿಶಬ್ದಕೈಃ ।**
**ಗರ್ಜತೀವ ಕೃತಸ್ಪರ್ಧೋ ಮಹಿಮ್ನಾ ಯಃ ಕುಲಾಚಲೈಃ ॥ ೭೫ ॥**

ಆ ವಿಂಧ್ಯಪರ್ವತವು ಗುಹೆಗಳ ದ್ವಾರಗಳಲ್ಲಿ ವ್ಯಕ್ತವೂ ಗಂಭೀರವೂ ಆದ ಗಿರಿನದಿಗಳ ಪ್ರತಿಧ್ವನಿಗಳಿಂದ ತನ್ನ ದೊಡ್ಡಸ್ತಿಕೆಯಿಂದ ಕುಲಪರ್ವತಗಳೊಡನೆ ದ್ವೇಷವನ್ನು ಮಾಡಿ ಗರ್ಜಿಸುತ್ತಿದೆಯೋ ಎಂಬಂತಿದೆ.

**ಸ್ಫುಟನಿಮ್ನೋನ್ನತೋದ್ದೇಶೈಶ್ಚಿತ್ರವರ್ಣೈಶ್ಚ[೫]ಧಾತುಭಿಃ ।**
**ಮೃಗರೂಪೈರತರ್ಕ್ಯೈಶ್ಚ ಚಿತ್ರಾಕಾರಂ ಬಿಭರ್ತಿ ಯಃ ॥ ೭೬ ॥**

ಆ ವಿಂಧ್ಯಪರ್ವತವು ಬಿರಿದುಹೋಗಿರುವ ಹಳ್ಳದಿಣ್ಣೆಯಾದ ಪ್ರದೇಶಗಳಿಂದಲೂ ಅನೇಕ ವರ್ಣಗಳುಳ್ಳ ಗೈರಿಕಾ(ಕಾವಿಕಲ್ಲು)ಮೊದಲಾದ ಧಾತುಗಳಿಂದಲೂ ಊಹಿಸಲಾಗದ ಮೃಗಗಳ ರೂಪಗಳಿಂದಲೂ ಅನೇಕಾಕಾರವನ್ನು ಧರಿಸುತ್ತದೆ.

**ಜ್ವಲಂ[೬]ತ್ಯೌಷಧಯೋ ಯಸ್ಯ ವನಾಂತೇಷು ತಮೀಮುಖೇ ।**
**ದೇವತಾಭಿರಿವೋ[೭]ತ್ಕ್ಷಿಪ್ತಾ ದೀಪಿಕಾಸ್ತಿಮಿರಚ್ಛಿದಃ ॥ ೭೭ ॥**

ಆ ವಿಂಧ್ಯಪರ್ವತದ ವನಪ್ರದೇಶಗಳಲ್ಲಿ ಸಾಯಂಕಾಲದಲ್ಲಿ, ದೇವತೆಗಳಿಂದ ಮೇಲಕ್ಕೆತ್ತಲ್ಪಟ್ಟುವೂ ಕತ್ತಲೆಯನ್ನು ನಾಶಮಾಡುವುವೂ ಆದ ದೀಪಗಳಂತೆ, ಔಷಧಿಯ ಗಿಡಮೂಲಿಕೆಗಳು ಪ್ರಕಾಶಿಸುತ್ತವೆ.

**ಕ್ವಚಿನ್ಮೃಗೇಂದ್ರಭಿನ್ನೇಭಕುಂಭೋಚ್ಚಲಿತಮೌಕ್ತಿಕೈಃ ।**
**ಯದುಪಾಂತಸ್ಥಲಂ ಧತ್ತೇ [೮]ಪ್ರಕೀರ್ಣಕುಸುಮಶ್ರಿಯಮ್ ॥ ೭೮ ॥**

ಆ ವಿಂಧ್ಯಪರ್ವತದ ಸಮೀಪಪ್ರದೇಶವು ಕೆಲವು ಕಡೆಯಲ್ಲಿ ಸಿಂಹಗಳಿಂದ ಸೀಳಲ್ಪಟ್ಟ ಆನೆಗಳ ಕುಂಭಸ್ಥಳಗಳಿಂದ ಮೇಲಕ್ಕೆ ಹಾರುತ್ತಿರುವ ಮುತ್ತುಗಳಿಂದ ಪುಷ್ಪೋಪಹಾರದ ಶೋಭೆಯನ್ನು ಧರಿಸುತ್ತದೆ.

**ಸ ತಮಾಲೋಕಯನ್ ದೂರಾ[೯]ದಾಸಸಾದ ಮಹಾಗಿರಿಮ್ ।**
**ಆಹ್ವಯಂತಮಿವಾ[೧೦]ಸಕ್ತಂ ಮರುದ್ಧೂತೈಸ್ತಟದ್ರುಮೈಃ ॥ ೭೯ ॥**

೧ ಮತ್ತಗಜಯೋಗೇ. ೨ ಸಾಮುದ್ರಲವಣಂ. ೩ ಪಕ್ಷಿಪತ್ರಂ, ವಿಗತಾಶ್ವಂ ವಾ. ೪ ವ್ಯಕ್ತೈರಿತ್ಯಪಿ ಪಾಠಃ. ೫ ಗೈರಿಕಾದಿಭಿಃ. ೬ ಕಾಷ್ಠಜ್ಯೋತೀಂಷಿ. ೭ ಉದ್ಧೃತಾಃ. ೮ ಪುಷ್ಪೋಪಹಾರಶೋಭಾಂ. ೯ ಪ್ರಾಪ್ತವಾನ್. ೧೦ ಅನವರತಂ.

ಭರತರಾಜನು ಆ ದೊಡ್ಡ ಪರ್ವತವನ್ನು ದೂರದಿಂದ ನೋಡಿ ಯಾವಾಗಲೂ ಗಾಳಿಯಿಂದ ಕೊಡಹಲ್ಪಟ್ಟ ದಡದಲ್ಲಿರುವ ವೃಕ್ಷಗಳಿಂದ ಕರೆಯುವಂತಿರುವ ವಿಂಧ್ಯಪರ್ವತವನ್ನು ಸೇರಿದನು.

**ಸ ತದ್ವನಗತಾನ್ ದೂರಾದಪಶ್ಯ[೧]ದ್ಘನಕರ್ಬುರಾನ್ ।**
**[೨]ಸಯೂಥಾ[೩]ನುದ್ಧನುರ್ವಂಶಾನ್ಕಿರಾತಾನ್ಕರಿಣೋಽಪಿ ಚ ॥ ೮೦ ॥**

ಭರತರಾಜನು ಮೇಘದಂತೆ ಕಪ್ಪಾಗಿರುವವರೂ ಬೇಡರ ಸಮೂಹಸಹಿತರೂ ಮೇಲಕ್ಕೆತ್ತಿರುವ ಧನುಸ್ಸಿನ ಬಿದುರುಗಳುಳ್ಳವರೂ ಆದ ಕಿರಾತರನ್ನೂ ಆನೆಗಳ ಸಮೂಹಸಹಿತಗಳೂ ಉನ್ನತವಾದ ಧನುಸ್ಸಿನಂತೆ ಆಕಾರವುಳ್ಳ ಬೆನ್ನೆಲುಬುಗಳುಳ್ಳುವೂ ಆದ ಆನೆಗಳನ್ನೂ ದೂರದಿಂದ ನೋಡಿದನು.

**ಸರಿದ್ವಧೂಸ್ತ[೪]ದುತ್ಸಂಗೇ ವಿವೃತ್ತಶಫರೀಕ್ಷಣಾಃ ।**
**ತದ್ವಲ್ಲಭಾ ಇವಾಪಶ್ಯತ್ಸ್ಫುರ[೫]ದ್ವಿರುತಮನ್ಮನಾಃ ॥ ೮೧ ॥**

ಆ ಪರ್ವತದ ತಪ್ಪಲಿನಲ್ಲಿ ಭರತರಾಜನು ಪಕ್ಷಿಗಳ ಅವ್ಯಕ್ತವಾದ ಮಧುರಶಬ್ದಗಳುಳ್ಳವರೂ ಚಲಿಸುತ್ತಿರುವ ಮೀನುಗಳೆಂಬ ನೇತ್ರಗಳುಳ್ಳವರೂ ಆದ ನದಿಗಳೆಂಬ ಸ್ತ್ರೀಯರನ್ನು, ತನ್ನ ಪತ್ನಿಯರನ್ನು ನೋಡುವಂತೆ, ನೋಡಿದನು. ಭರತರಾಜನು ವಿಂಧ್ಯಪರ್ವತದಲ್ಲಿ ಹರಿಯುವ ನದಿಗಳನ್ನು ನೋಡಿದನೆಂದು ಭಾವವು.

**ಮಧ್ಯೇವಿಂಧ್ಯಮಥೈಕ್ಷಿಷ್ಟ ನರ್ಮದಾಂ ಸರಿದುತ್ತಮಾಮ್ ।**
**ಪ್ರತತಾಮಿವ ತತ್ಕೀರ್ತಿಮಾಸಮುದ್ರ[೬]ಮಪಾರಿಕಾಮ್ ॥ ೮೨ ॥**

**ತರಂಗಿತಪಯೋವೇಗಾಂ ಭುವೋ ವೇಣೀಮಿವಾಯತಾಮ್ ।**
**ಪತಾಕಾಮಿವ ವಿಂಧ್ಯಾದ್ರೇಃ ಶೇಷಾದ್ರಿಜಯಶಂಸಿನೀಮ್ ॥ ೮೩ ॥**

ಅನಂತರದಲ್ಲಿ ಭರತರಾಜನು ವಿಂಧ್ಯಪರ್ವತದ ಮಧ್ಯದಲ್ಲಿ, ಸಮುದ್ರದವರೆಗೆ ವಿಸ್ತರಿಸಿರುವುದೂ ಅಪಾರವೂ ಆದ ಅವನ ಕೀರ್ತಿಯನ್ನು ನೋಡುವಂತೆ, ಸಮುದ್ರದವರೆಗೆ ವಿಸ್ತೃತವೂ ಪಾರರಹಿತವೂ ಅಲೆಗಳುಳ್ಳ ನೀರಿನ ವೇಗವುಳ್ಳುದೂ ಭೂಮಿಯ ಜಟೆಯೋ ಎಂಬಂತೆ ದೀರ್ಘವೂ ಬೇರೆ ಪರ್ವತಗಳನ್ನು ಜಯಿಸಿರುವುದೆಂಬುದನ್ನು ಸೂಚಿಸುತ್ತಿರುವ ವಿಂಧ್ಯಪರ್ವತದ ಧ್ವಜಪತಾಕೆಯೋ ಎಂಬಂತಿರುವುದೂ ಶ್ರೇಷ್ಠವೂ ಆದ ನರ್ಮದಾನದಿಯನ್ನು ನೋಡಿದನು.

**ಸಾ ಧುನೀ ಬಲಸಂಕ್ಷೋಭಾದುಡ್ಡೀನವಿಹಗಾವಲಿಃ ।**
**ವಿಭೋರುಪಾಗಮೇ ಬದ್ಧತೋರಣೇವ ಕ್ಷಣೇ ವ್ಯಭಾತ್ ॥ ೮೪ ॥**

ಸೈನ್ಯದ ಕ್ಷೋಭೆಯಿಂದ ಹಾರಿಹೋಗುತ್ತಿರುವ ಪಕ್ಷಿಗಳ ಸಾಲುಳ್ಳ ಆ ನರ್ಮದಾನದಿಯು, ಭರತರಾಜನ ಆಗಮನನಿಮಿತ್ತವಾಗಿ ಕ್ಷಣಕಾಲದವರೆಗೆ ತೋರಣವುಳ್ಳುದಾಗಿರುವಂತೆ, ಶೋಭಿಸಿತು.

**ನರ್ಮದಾ ಸತ್ಯಮೇವಾಸೀ[೭]ನ್ನರ್ಮದಾ ನೃಪಯೋಷಿತಾಮ್ ।**
**ಯ[೮]ದುಪೋರೂತ್ತರಂತೀಸ್ತಾಃ ಶಫರೀಭಿರಘಟ್ಟಯತ್ ॥ ೮೫ ॥**

ನರ್ಮದಾನದಿಯನ್ನು ದಾಟುತ್ತಿರುವ ರಾಜಸ್ತ್ರೀಯರ ತೊಡೆಯ ಸಮೀಪದಲ್ಲಿ ಆ ನದಿಯು ಹೆಣ್ಣುಮೀನುಗಳಿಂದ ಹೊಡೆಯುತ್ತಿದ್ದು ಆ ಸ್ತ್ರೀಯರಿಗೆ ಕ್ರೀಡೆಯನ್ನುಂಟುಮಾಡುತ್ತಿದ್ದುದರಿಂದ ನರ್ಮದಾ ನದಿಯು ನಿಜವಾಗಿಯೂ ನರ್ಮದಾ– ಕ್ರೀಡೆಯನ್ನುಂಟುಮಾಡುವುದಾಗಿದ್ದಿತು.

**[೯]ತಾಮುತ್ತೀರ್ಯ ಜನಕ್ಷೋಭಾದುತ್ಪತತ್ಪತಗಾವಲಿಮ್ ।**
**ಬಲಂ ವಿಂಧ್ಯೋತ್ತರಪ್ರಸ್ಥಾನಾಕ್ರಾಮ[೧೦]ತ್ಕೃತಪಾಸ್ಥಯಾ ॥ ೮೬ ॥**

೧ ಮೇಘವತ್ಕೃಷ್ಣಾನ್. ೨ ಗಜಸಮೂಹಸಹಿತಾನ್, ವ್ಯಾಧಸಮೂಹಸಹಿತಾಂಶ್ಚ. ೩ ಉದ್ಗತಧನುಷೋ ವೇಣೂನ್, ಉದ್ಗತಧನುರಾಕಾರಪೃಷ್ಠಾಸ್ಥೀಂಶ್ಚ. ೪ ತತ್ಪರ್ವತಸಾನೌ. ೫ ವಿಹಗಧ್ವನಿರೇವಾವ್ಯಕ್ತವಾಚಃ. ೬ ಪಾರರಹಿತಾಂ. ೭ ನರ್ಮ ಕ್ರೀಡಾ ತಾಂ ದದಾತೀತಿ ನರ್ಮದಾ. ೮ ಊರುಸಮೀಪೇ. ೯ ನರ್ಮದಾಂ. ೧೦ ಪಕ್ಷೇ ದೇಹಲೀತಿ ಬುದ್ಧ್ಯಾ.

ಜನರ ಗಲಿಬಿಲಿಯಿಂದ ಹಾರಿಹೋದ ಪಕ್ಷಿಗಳ ಸಮೂಹವುಳ್ಳ ಆ ನರ್ಮದಾ ನದಿಯನ್ನು ದಾಟಿ ಸೈನ್ಯವು ವಿಂಧ್ಯಪರ್ವತದ ಉತ್ತರದಿಕ್ಕಿನ ತಪ್ಪಲುಗಳನ್ನು ಜಗುಲಿಯೆಂಬ ಬುದ್ಧಿಯಿಂದ ಆಕ್ರಮಿಸಿತು.

**[೧]ತಸ್ಯಾ [೨]ದಕ್ಷಿಣತೋಪಶ್ಯದ್ವಿಂಧ್ಯಮುತ್ತರತೋ[೩]ಪ್ಯಸೌ ।**
**ದ್ವಿಧಾ ಕೃತಮಿವಾತ್ಮಾನಮಪರ್ಯಂತಂ ದಿಶೋರ್ದ್ವಯೋಃ ॥ ೮೭ ॥**

ಭರತಚಕ್ರವರ್ತಿಯು ನರ್ಮದಾನದಿಯ ದಕ್ಷಿಣದಿಕ್ಕಿನಲ್ಲಿಯೂ ಉತ್ತರದಿಕ್ಕಿನಲ್ಲಿಯೂ ಆದರಿಂದ ಎರಡು ಭಾಗಮಾಡಲ್ಪಟ್ಟು ಎರಡು ದಿಕ್ಕುಗಳಿಗೆ ಅರ್ಪಿಸಲ್ಪಟ್ಟಂತಿರುವ ವಿಂಧ್ಯಪರ್ವತವನ್ನು ನೋಡಿದನು. ನರ್ಮದಾನದಿಯಿಂದ ಎರಡು ಭಾಗವಾದ ವಿಂಧ್ಯಪರ್ವತವನ್ನು ನೋಡಿದನೆಂದು ಭಾವವು.

**[೪]ಸ್ಕಂಧಾವಾರನಿವೇಶೋಸ್ಯ ನರ್ಮದಾಮಭಿತೋದ್ಯುತತ್ ।**
**[೫]ಪ್ರಥಿಮ್ನಾ ವಿಂಧ್ಯಮಾವೇಷ್ಟ್ಯ ಸ್ಥಿತೋ ವಿಂಧ್ಯ ಇವಾಪರಃ ॥ ೮೮ ॥**

ಭರತರಾಜನ ಸೈನ್ಯವನ್ನು ಬಿಟ್ಟಿರುವ ಸ್ಥಾನವು, ನರ್ಮದಾನದಿಯ ಸುತ್ತಲೂ ದೊಡ್ಡದಾಗಿರುವುದರಿಂದ ವಿಂಧ್ಯಪರ್ವತವನ್ನು ಆವರಿಸಿಕೊಂಡಿರುವ ಬೇರೊಂದು ವಿಂಧ್ಯಪರ್ವತವೋ ಎಂಬಂತೆ, ಶೋಭಿಸಿತು.

**ಗಜೈ [೬]ರ್ಗಂಡೋಪಲೈರಶ್ವೈ [೭]ರಶ್ವವಕ್ತ್ರೈಶ್ಚ [೮]ವಿದ್ರುತೈಃ ।**
**ಸ್ಕಂಧಾವಾರಃ ಸ ವಿಂಧ್ಯಶ್ಚ [೯]ಭಿದಾಂ ನಾವಾಪತುರ್ಮಿಥಃ ॥ ೮೯ ॥**

ಸೈನ್ಯವಿಳಿದಿರುವ ಸ್ಥಳವೂ ಆ ವಿಂಧ್ಯಪರ್ವತವೂ ಆನೆಗಳಿಂದಲೂ ದೊಡ್ಡ ಕಲ್ಲು-ಬಂಡೆಗಳಿಂದಲೂ ಕುದುರೆಗಳಿಂದಲೂ ಭಯದಿಂದ ಓಡಿಹೋದ ಕಿನ್ನರರಿಂದಲೂ ಪರಸ್ಪರವಾಗಿ ಸಾದೃಶ್ಯವನ್ನು ಹೊಂದಿದುವು. ಆನೆಗಳೂ ಕುದುರೆಗಳೂ ಉಳ್ಳ ಸೈನ್ಯಸ್ಥಾನವು ದೊಡ್ಡ ಬಂಡೆಗಳೂ ಕಿನ್ನರರೂ ಉಳ್ಳ ವಿಂಧ್ಯಪರ್ವತದಂತಿದ್ದಿತೆಂದು ಭಾವವು.

**[೧೦]ಬಲೋಪಯುಕ್ತನಿಃಶೇಷಫಲಪಲ್ಲವಪಾದಪಃ ।**
**ಅಪ್ರಸೂನಲತಾವೀರುದ್ವಿಂಧ್ಯೋಽವಂಧ್ಯಸ್ತದಾಭವತ್ ॥ ೯೦ ॥**

ಸೈನ್ಯದಿಂದ ಸೇವಿಸಲ್ಪಟ್ಟ ಸಮಸ್ತ ಫಲಗಳೂ ತಳಿರುಗಳೂ ಉಳ್ಳ ವೃಕ್ಷಗಳುಳ್ಳದೂ ಪುಷ್ಪರಹಿತವಾದ ಲತೆಗಳೂ ಪೊದರುಗಳೂ ಉಳ್ಳುದೂ ಆದ ವಿಂಧ್ಯಪರ್ವತವು ಆ ಸಮಯದಲ್ಲಿ ಅವಂಧ್ಯ(ಸಫಲ)ವಾಗಿದ್ದಿತು.

**ವೈಣವೈಸ್ತಂಡುಲೈರ್ಮುಕ್ತಾಫಲಮಿಶ್ರೈಃ ಕೃತಾರ್ಚನಾಃ ।**
**[೧೧]ಅಧ್ಯೂಷುಃ ಸೈನಿಕಾಃ ಸ್ವೈರಂ ರಮ್ಯಾ ವಿಂಧ್ಯಾಚಲ[೧೨]ಸ್ಥಲೀಃ ॥ ೯೧ ॥**

ಸೈನಿಕರು ಮುಕ್ತಾಫಲಮಿಶ್ರವಾದ ಬಿದಿರಿನ ಅಕ್ಕಿಗಳಿಂದ ಪೂಜಿಸಲ್ಪಟ್ಟವರಾಗಿ ರಮಣೀಯವಾದ ವಿಂಧ್ಯಪರ್ವತದ ಸ್ಥಳಗಳಲ್ಲಿ ಯಥೇಚ್ಛವಾಗಿ ವಾಸಮಾಡಿದರು. ಬಿದಿರುಗಳಿಂದ ಮುತ್ತುಗಳೂ ಬಿದಿರಕ್ಕಿಗಳೂ ಸುರಿಯುತ್ತಿದ್ದುವೆಂದರ್ಥವು.

**ಕೃತಾವಾಸಂ ಚ ತತ್ರೈನಂ ದದೃಶುಸ್ತದ್ವನಾಧಿಪಾಃ ।**
**ವನ್ಯೈರುಪಾಯನೈಃ ಶ್ಲಾಘ್ಯೈ [೧೩]ರಗದೈಶ್ಚ [೧೪]ಮಹೌಷಧೈಃ ॥ ೯೨ ॥**

ಆ ವನಗಳ ಅಧಿಪತಿಗಳು ಶ್ಲಾಘ್ಯವೂ ವನದಲ್ಲಿ ಬೆಳೆದಿರುವುವೂ ಆದ ವಸ್ತುಗಳ ಕೈಗಾಣಿಕೆಗಳಿಂದಲೂ ರೋಗವನ್ನು ನಾಶಮಾಡುವ ಔಷಧಗಳಿಂದಲೂ ಬೇರೆ ಔಷಧವಿಶೇಷಗಳಿಂದಲೂ ಆ ವನದಲ್ಲಿ ವಾಸಮಾಡುತ್ತಿದ್ದ ಭರತರಾಜನನ್ನು ಕಂಡರು. ಆ ವಸ್ತುಗಳನ್ನು ಭರತರಾಜನಿಗೆ ಕೊಟ್ಟು ಅವನನ್ನು ನೋಡಿದರೆಂದು ಭಾವವು.

೧ ನರ್ಮದಾಯಾಃ. ೨ ದಕ್ಷಿಣಸ್ಯಾಂ ದಿಶಿ ಸ್ಥಿತಂ. ೩ ಚಕ್ರೀ. ೪ ಸೇನಾ. ೫ ಪೃಥುತ್ವೇನ. ೬ ಗಂಡಶೈಲೈಃ. ೭ ಕಿನ್ನರೈಃ. ೮ ಪಲಾಯಿತೈಃ ಭೀತೈಃ. ೯ ಭೇದಂ. ೧೦ ಬಲೋಪಸೇವಿತ. ೧೧ ನಿವಸಂತಿ ಸ್ಮ. ೧೨ ಸ್ಥಿತಿರಿತ್ಯಪಿ ಪಾಠಃ. ೧೩ ವ್ಯಾಧಿಘಾತಕೈಃ. ೧೪ ಔಷಧವಿಶೇಷೈಃ.

**[೧]ಉಪಾನಿನ್ಯುಃ ಕರೀಂದ್ರಾಣಾಂ ದಂತಾನಸ್ಮೈ ಸಮೌಕ್ತಿಕಾನ್ ।**
**ಕಿರಾತವರ್ಯಾ [೨]ವರ್ಯಾ ಹಿ ಸ್ವೋಚಿತಾ ಸತ್ಕ್ರಿಯಾ [೩]ಪ್ರಭೌ ॥ ೯೩ ॥**

ಶ್ರೇಷ್ಠರಾದ ಬೇಡರು ಮುತ್ತುಗಳನ್ನೂ ದೊಡ್ಡ ಆನೆಗಳ ದಂತಗಳನ್ನೂ ಭರತರಾಜನಿಗೆ ಕೈಗಾಣಿಕೆಗಳನ್ನಾಗಿ ತಂದೊಪ್ಪಿಸಿದರು. ಪ್ರಭುವಿಗುಚಿತವಾದ ಸತ್ಕಾರವು ಶ್ರೇಷ್ಠವಾದುದಲ್ಲವೇ ? ಆ ಪದಾರ್ಥಗಳು ಪ್ರಭುವಿನ ಸತ್ಕಾರಾರ್ಹಗಳೆಂದು ಭಾವವು.

**ಪಶ್ಚಿಮಾರ್ಧೇನ ವಿಂಧ್ಯಾದ್ರಿಮುಲ್ಲಂಘ್ಯೋತ್ತೀರ್ಯ ನರ್ಮದಾಮ್ ।**
**ವಿಜೇತುಮಪರಾಮಾಶಾಂ ಪ್ರತಸ್ಥೇ ಚಕ್ರಿಣೋ ಬಲಮ್ ॥ ೯೪ ॥**

ಚಕ್ರವರ್ತಿಯ ಸೈನ್ಯವು ಪಶ್ಚಿಮದಿಕ್ಕಿನ ಅರ್ಧಭಾಗದಿಂದ ವಿಂಧ್ಯಪರ್ವತವನ್ನು ಲ್ಲಂಘಿಸಿ ನರ್ಮದಾನದಿಯನ್ನು ದಾಟಿ ಪಶ್ಚಿಮದಿಕ್ಕನ್ನು ಜಯಿಸುವುದಕ್ಕೋಸ್ಕರ ಹೊರಟಿತು.

**ಗತ್ವಾ ಕಿಂಚಿ[೪]ದುದಗ್ಭೂಯಃ [೫]ಪ್ರತೀಚೀಂ ದಿಶಮಾನಶೇ ।**
**ಪ್ರಾಕ್ಪ್ರತಾಪೋಸ್ಯ ದುರ್ವಾರಃ ಸಚಕ್ರಂ ಚರಮಂ ಬಲಮ್ ॥ ೯೫ ॥**

ತಡೆಯುವುದಕ್ಕೆ ಕಷ್ಟವಾದ ಭರತರಾಜನ ಪ್ರತಾಪವು ಮೊದಲು ಸ್ವಲ್ಪ ಉತ್ತರದಿಕ್ಕಿಗೆ ಹೋಗಿ ಪುನಃ ಪಶ್ಚಿಮದಿಕ್ಕನ್ನು ವ್ಯಾಪಿಸಿತು. ಆಮೇಲೆ ಚಕ್ರಸಹಿತವಾದ ಸೈನ್ಯವು ವ್ಯಾಪಿಸಿತು. ಸೈನ್ಯವು ಹೋಗುವುದಕ್ಕಿಂತ ಮೊದಲು ಭರತನ ಪ್ರತಾಪವು ಹಬ್ಬಿತೆಂದು ಭಾವವು.

**ತದಾ ಪ್ರಚಲದಶ್ವೀಯಖುರೋ[೬]ದ್ಧೂತಂ ಮಹೀರಜಃ ।**
**ನ ಕೇವಲಂ ದ್ವಿಷಾಂ ತೇಜೋ ರುರೋಧ ದ್ಯುಮಣೇರಪಿ ॥ ೯೬ ॥**

ಆಗ ಹೋಗುತ್ತಿದ್ದ ಕುದುರೆಗಳ ಗೊರಸುಗಳಿಂದ ಮೇಲಕ್ಕೆ ಹಾರಿಸಲ್ಪಟ್ಟ ಭೂಮಿಯ ಧೂಳಿಯು ಶತ್ರುಗಳ ತೇಜಸ್ಸನ್ನು ತಡೆದುದಲ್ಲದೆ ಸೂರ್ಯನ ತೇಜಸ್ಸನ್ನೂ ತಡೆದಿದ್ದಿತು.

**ಲಾಟಾ ಲಲಾಟಸಂದಷ್ಟಭೂಪೃಷ್ಠಾಶ್ಚಾಟುಭಾಷಿಣಃ ।**
**[೭]ಲಾಲಾಟಿಕಪದಂ ಭೇಜುಃ ಪ್ರಭೋರಾಜ್ಞಾವಶೀಕೃತಾಃ ॥ ೯೭ ॥**

ಪ್ರಭುವಿನ ಆಜ್ಞೆಗೆ ಅಧೀನರಾಗಿ ಮಾಡಲ್ಪಟ್ಟವರೂ ನೆಲಕ್ಕೆ ಹಣೆಯನ್ನು ಮುಟ್ಟಿಸಿದವರೂ ಪ್ರಿಯಭಾಷಿಗಳೂ ಆದ ಲಾಟದೇಶದ ರಾಜರು ವಿಶಿಷ್ಟವಾದ ಭೃತ್ಯತ್ವವನ್ನು ಹೊಂದಿದರು. ಭೃತ್ಯರಾದರೆಂದು ಭಾವವು.

**ಕೇಚಿತ್ಸೌರಾಷ್ಟ್ರಿಕೈರ್ನಾಗೈಃ ಪರೇ [೮]ಪಾಂಚನದೈರ್ಗಜೈಃ ।**
**ತಂ ತದ್ವನಾಧಿಪಾ ವೀಕ್ಷಾಂಚಕ್ರಿರೇ ಚಕ್ರಚಾಲಿತಾಃ ॥ ೯೮ ॥**

ಚಕ್ರದಿಂದ ಎಚ್ಚರಿಸಲ್ಪಟ್ಟ ಆ ವನಾಧಿಪತಿಗಳು ಕೆಲವರು ಸೌರಾಷ್ಟ್ರದೇಶಗಳಲ್ಲುಂಟಾದ ಆನೆಗಳನ್ನೂ ಬೇರೆಯವರು ಪಂಚನದೀದೇಶಗಳಲ್ಲುಂಟಾದ ಆನೆಗಳನ್ನೂ ಕೈಗಾಣಿಕೆಕೊಟ್ಟು ಭರತರಾಜನನ್ನು ಕಂಡರು.

**ಚಕ್ರಸಂದರ್ಶನಾದೇವ ತ್ರಸ್ತಾ [೯]ನಿರ್ಮಂಡಲಗ್ರಹಾಃ ।**
**[೧೦]ಗ್ರಹಾ ಇವ ನೃಪಾಃ ಕೇಚಿಚ್ಚಕ್ರಿಣೋ ವಶಮಾಯಯುಃ ॥ ೯೯ ॥**

ಚಕ್ರಾಯುಧವನ್ನು ನೋಡಿದ ಮಾತ್ರದಿಂದ, ಆದಿತ್ಯಾದಿಗ್ರಹಗಳಂತೆ ಹೆದರಿದವರೂ ದೇಶವನ್ನು ಪರಿತ್ಯಜಿಸಿದವರೂ ಆದ ಕೆಲವು ರಾಜರು ಭರತಚಕ್ರವರ್ತಿಗೆ

೧ ಉಪಾಯನೀಕೃತ್ಯ ನಯಂತಿ ಸ್ಮ. ೨ ಚರ್ಯೇತ್ಯಪಿ ಪಾಠಃ. ೩ ಪ್ರಭೋರಿತ್ಯಪಿ ಪಾಠಃ. ೪ ಉತ್ತರದಿಶಂ. ೫ ಪಶ್ಚಿಮಾಂ. ೬ ಉದ್ಧೂತಮಹೀರಜ ಇತ್ಯಪಿ ಪಾಠಃ. ೭ ವಿಶಿಷ್ಟಭೃತ್ಯತ್ವಂ. ೮ ಪಂಚನದೀಷು ಜಾತೈಃ. ೯ ದೇಶಗ್ರಹಣರಹಿತಾಃ. ೧೦ ಆದಿತ್ಯಾದಿಗ್ರಹಾಃ.

ಅಧೀನರಾದರು. ಚಕ್ರಾಯುಧದಿಂದ ಆದಿತ್ಯಾದಿಗ್ರಹಗಳು ವಶವಾಗುವಂತೆ ಕೆಲವು ರಾಜರು ವಶರಾದರೆಂದು ಭಾವವು.

[೧]ದಿಶ್ಯಾನಿವ ದ್ವಿಪಾನ್ ಕ್ಷ್ಮಾಪಾನ್ಪೃಥುವಂಶಾನ್ಮದೋದ್ಧುರಾನ್ ।
ಪ್ರಚಕ್ರೇ [೨]ಪ್ರಗುಣಾಂಶ್ಚಕ್ರೀ ಬಲಾದಾಕ್ರಮ್ಯ ದಿಕ್ಪತೀನ್ ॥ ೧೦೦ ॥

ಭರತಚಕ್ರವರ್ತಿಯು, ದೊಡ್ಡ ವಂಶಿಕರೂ ಮದೋದ್ಧತರೂ ಆದ ಬೇರೆಬೇರೆ ದಿಕ್ಕುಗಳ ರಾಜರನ್ನು ದಿಗ್ಗಜಗಳನ್ನೋಪಾದಿಯಲ್ಲಿ, ಬಲಾತ್ಕಾರದಿಂದ ಆಕ್ರಮಿಸಿ ವಿಧೇಯರನ್ನಾಗಿ ಮಾಡಿದನು.

ನೃಪಾನ್ಸೌರಾಷ್ಟ್ರಕಾ[೩]ನುಷ್ಟ್ರವಾಮೀಶತಭೃತೋಪದಾನ್ ।
[೪]ಸಭಾಜಯನ್ನಭುರ್ಭೇಜೇ ರಮ್ಯಾ [೫]ರೈವತಕಸ್ಥಲೀಃ ॥ ೧೦೧ ॥

ಭರತರಾಜನು ಒಂಟೆಗಳ ಮತ್ತು ಕುದುರೆಗಳ ಸಮೂಹಗಳನ್ನು ಕೈಗಾಣಿಕೆ ತೆಗೆದುಕೊಂಡು ಬಂದಿರುವ ಸೌರಾಷ್ಟ್ರ ದೇಶದ ರಾಜರನ್ನು ಸಂತೋಷಪಡಿಸಿ ರಮಣೀಯವಾದ ಊರ್ಜಯಂತಗಿರಿಯ ಪ್ರದೇಶಕ್ಕೆ ಹೋದನು.

ಸುರಾಷ್ಟ್ರೇಷೂರ್ಜಯಂತಾದ್ರಿಮದ್ರಿರಾಜಮಿವೋಚ್ಛ್ರಿತಮ್ ।
ಯಯೌ ಪ್ರದಕ್ಷಿಣೀಕೃತ್ಯ [೬]ಭಾವಿತೀರ್ಥಮನುಸ್ಮರನ್ ॥ ೧೦೨ ॥

ಮಹಾಮೇರುಪರ್ವತದಂತೆ ಉನ್ನತವೂ ಸುರಾಷ್ಟ್ರದೇಶದಲ್ಲಿರುವುದೂ ಆದ ಊರ್ಜಯಂತಗಿರಿಯನ್ನು, ಮುಂದಾಗುವ ನೇಮಿತೀರ್ಥಂಕರರನ್ನು ಸ್ಮರಿಸಿ, ಪ್ರದಕ್ಷಿಣೆಮಾಡಿ ಅದನ್ನು ಸೇರಿದನು.

ಕ್ಷೌಮಾಂಶುಕದುಕೂಲೈಶ್ಚ ಚೀನಪಟ್ಟಾಂಬರೈರಪಿ ।
[೭]ಪಟೀಭೇದೈಶ್ಚ ದೇಶೇಶಾ ದದೃಶುಸ್ತಮುಪಾಯನೈಃ ॥ ೧೦೩ ॥

ರಾಜರುಗಳು ಮೃದುವಾದ ಬಟ್ಟೆಗಳನ್ನೂ ಬಿಳೀಬಟ್ಟೆಗಳನ್ನೂ ಚೀನದೇಶ ದಲ್ಲುಂಟಾದ ಪಟ್ಟೆಯವಸ್ತ್ರಗಳನ್ನೂ ನೂತಿರುವ ವಸ್ತ್ರಗಳ ಜತೆಗಳನ್ನೂ ಕೈಗಾಣಿಕೆ ಕೊಟ್ಟು ಭರತರಾಜನನ್ನು ಕಂಡರು.

ಕಾಂಶ್ಚಿತ್ಸಮ್ಮಾನದಾನಾಭ್ಯಾಂ ಕಾಂಶ್ಚಿ[೮]ದ್ವಿಸ್ರಂಭಭಾಷಿತೈಃ ।
ಪ್ರಸನ್ನೈರ್ವೀಕ್ಷಿತೈಃ ಕಾಂಶ್ಚಿದ್ಭೂಪಾನ್ವಿಭುರರಂಜಯತ್ ॥ ೧೦೪ ॥

ಭರತರಾಜನು ಕೆಲವು ರಾಜರನ್ನು ಸನ್ಮಾನಗಳಿಂದಲೂ ದಾನಗಳಿಂದಲೂ ಕೆಲವರನ್ನು ಪ್ರಿಯಭಾಷಣಗಳಿಂದಲೂ ಕೆಲವರನ್ನು ಪ್ರಸನ್ನವಾದ ನೋಟಗಳಿಂದಲೂ ಸಂತೋಷಪಡಿಸಿದನು.

ಗಜ[೯]ಪ್ರವೇಕೈರ್ಜಾತ್ಯಶ್ವೈ ರತ್ನೈರಪಿ [೧೦]ಪೃಥಗ್ವಿಧೈಃ ।
ತಮಾನರ್ಚುರ್ನೃಪಾಸ್ತುಷ್ಟಾಃ ಸ್ವರಾಷ್ಟ್ರೋಪಗತಂ ಪ್ರಭುಮ್ ॥ ೧೦೫ ॥

ಸಂತುಷ್ಟರಾದ ರಾಜರು ತಮ್ಮ ದೇಶಕ್ಕೆ ಬಂದ ಆ ಭರತರಾಜನನ್ನು ಅತ್ಯುತ್ತಮ ವಾದ ಆನೆಗಳಿಂದಲೂ ಜಾತ್ಯಶ್ವಗಳಿಂದಲೂ ನಾನಾವಿಧವಾದ ರತ್ನಗಳಿಂದಲೂ ಪೂಜಿಸಿದರು. ಭರತರಾಜನಿಗೆ ಅನೇಕ ವಸ್ತುಗಳನ್ನು ಕೊಟ್ಟು ಸತ್ಕರಿಸಿದರೆಂದು ಭಾವವು.

ತರಸ್ವಿಭಿ[೧೧]ರ್ವಪುರ್ಮೇಧಾವಯಃಸತ್ತ್ವಗುಣಾನ್ವಿತೈಃ ।
ತುರಂಗಮೈ [೧೨]ಸ್ತುರುಷ್ಕಾದ್ಯೈರ್ವಿಭುಮಾರಾಧಯನ್ಪರೇ ॥ ೧೦೬ ॥

ಬೇರೆ ರಾಜರು ವೇಗದಿಂದ ಹೋಗುವುವೂ ಶುಭವಾದ ಆಕಾರ ಬುದ್ಧಿ ವಯಸ್ಸು ಶಕ್ತಿ ಈ ಗುಣಗಳಿಂದ ಕೂಡಿರುವುವೂ ತುರುಷ್ಕದೇಶದಲ್ಲಿ ಹುಟ್ಟಿದುವೂ ಆದ ಕುದುರೆಗಳನ್ನು ಕೈಗಾಣಿಕೆಕೊಟ್ಟು ಭರತರಾಜನನ್ನು ಸತ್ಕರಿಸಿದರು.

೧ ದಿಶಿಭವಾನ್. ೨ ಪ್ರಣತಾನ್. ೩ ಉಷ್ಟ್ರಾಶ್ವಸಮೂಹಧೃತೋಪಾಯನಾನ್. ೪ ತೋಷಯನ್. ೫ ಊರ್ಜಯಂತಗಿರಿಸ್ಥಲೀಃ. ೬ ನೇಮಿಜಿನೇಂದ್ರಂ. ೭ ಸ್ಯೂತವಸ್ತ್ರದ್ವಯಂ ಪಟೀ. ೮ ಸ್ನೇಹ ಭಾಷಣೈಃ. ೯ ಶ್ರೇಷ್ಠೈಃ, ಪ್ರವೇಕಾನುತ್ತಮೋತ್ತಮಾ ಇತ್ಯಮರಃ. ೧೦ ನಾನಾವಿಧೈಃ. ೧೧ ಶುಭಾಕಾರಃ. ೧೨ ತುರುಷ್ಕದೇಶಜಾದ್ಯೈಃ.

ಕೇಚಿತ್ಕಾಂಭೋಜಬಾಹ್ಲೀಕತೈತಲಾರಟ್ಟಸೈಂಧವೈಃ ।
[೧]ವಾನಾಯುಕೈಃ ಸಗಾಂಧಾರೈ [೨]ರ್ವಾಪೀಯೈರಪಿ ವಾಜಿಭಿಃ ॥ ೧೦೭ ॥

ಕುಲೋಪಕುಲಸಂಭೂತೈರ್ನಾನಾದಿಗ್ದೇಶಚಾರಿಭಿಃ ।
[೩]ಆಜಾನೇಯೈಃ ಸಮುಗ್ರಾಂಗೈಃ ಪ್ರಭುಮೈಕ್ಷಂತ ಪಾರ್ಥಿವಾಃ ॥ ೧೦೮ ॥

ಕೆಲವು ರಾಜರು ಕಾಂಭೋಜ ಬಾಹ್ಲೀಕ ತೈತಲ ಆರಟ್ಟ ಸಿಂಧು ಈ ದೇಶಗಳಲ್ಲಿ ಹುಟ್ಟಿದ ಕುದುರೆಗಳನ್ನೂ ವನಾಯುದೇಶದಲ್ಲಿ ಹುಟ್ಟಿದ ಕುದುರೆಗಳನ್ನೂ ವಾಪಿ ದೇಶದಲ್ಲಿ ಹುಟ್ಟಿದ ಕುದುರೆಗಳನ್ನೂ ಸಜಾತೀಯವಾದ ಕುದುರೆಗಳಿಂದ ಹುಟ್ಟಿದ ಕುದುರೆಗಳನ್ನೂ ಭಿನ್ನಜಾತೀಯವಾದ ಕುದುರೆಗಳಿಂದ ಹುಟ್ಟಿದ ಕುದುರೆಗಳನ್ನೂ ಅನೇಕ ದಿಗ್ದೇಶಗಳಲ್ಲಿ ಸಂಚರಿಸುವುವೂ ಪುಷ್ಟವಾದ ಶರೀರವುಳ್ಳುವೂ ಆದ ಜಾತ್ಯಶ್ವಗಳನ್ನೂ ಕೈಗಾಣಿಕೆಕೊಟ್ಟು ಭರತರಾಜನನ್ನು ನೋಡಿದರು.

ಪ್ರತಿಪ್ರಯಾಣಮಿತ್ಯಸ್ಯ ರತ್ನಲಾಭೋ ನ ಕೇವಲಮ್ ।
ಯಶೋಲಾಭಶ್ಚ [೪]ದುಃಸಾಧ್ಯಾನ್ಬಲಾತ್ಸಾಧಯತೋ ನೃಪಾನ್ ॥ ೧೦೯ ॥

ದುಸ್ಸಾಧ್ಯರಾದ ರಾಜರನ್ನು ಬಲಾತ್ಕಾರದಿಂದ ಸಾಧಿಸುತ್ತಿರುವ ಭರತರಾಜನಿಗೆ ಪ್ರತಿಯೊಂದು ಪ್ರಯಾಣದಲ್ಲಿಯೂ ಹೀಗೆ ಶ್ರೇಷ್ಠವಸ್ತುಗಳ ಲಾಭವಾದುದು ಮಾತ್ರವಲ್ಲದೆ ಯಶಸ್ಸಿನ ಲಾಭವೂ ಆಯಿತು.

ಜಲಸ್ಥಲಪದಾನ್ವಿಷ್ವಗಾರುಧ್ಯ ಜಯಸಾಧನೈಃ ।
[೫]ಪ್ರತ್ಯಂತಪಾಲಭೂಪಾಲಾನಜಯತ್ತಚ್ಚಮೂಪತಿಃ ॥ ೧೧೦ ॥

ಭರತನ ಸೇನಾಪತಿಯು ಜಯವನ್ನುಂಟುಮಾಡುವ ಸಾಧನಗಳಿಂದ ಜಲ ಮಾರ್ಗಗಳನ್ನೂ ಸ್ಥಲಮಾರ್ಗಗಳನ್ನೂ ಸುತ್ತಲೂ ಆವರಿಸಿಕೊಂಡು ದಿಕ್ಕೊನೆಗಳ ರಾಜರನ್ನು ಜಯಿಸಿದನು.

ವಿಲಂಘ್ಯ ವಿವಿಧಾನ್ ದೇಶಾ[೬]ನರಣ್ಯಾನೀಃ ಸರಿದ್ಗಿರೀನ್ ।
ತತ್ರ ತತ್ರ ವಿಭೋರಾಜ್ಞಾಂ ಸೇನಾನೀರಾ[೭]ಶ್ವಶುಶ್ರವತ್ ॥ ೧೧೧ ॥

ಸೇನಾಪತಿಯು ಶೀಘ್ರವಾಗಿ ಅನೇಕ ದೇಶಗಳನ್ನೂ ವನಗಳನ್ನೂ ನದಿಗಳನ್ನೂ ಬೆಟ್ಟಗಳನ್ನೂ ದಾಟಿ ಅಲ್ಲಲ್ಲಿ ಪ್ರಭುವಿನ ಆಜ್ಞೆಯನ್ನು ತಿಳಿಸಿದನು.

ಪ್ರಾಚ್ಯಾನಿವ ಸ ಭೂಪಾಲಾನ್ಪ್ರತೀಚ್ಯಾನಪ್ಯನುಕ್ರಮಾತ್ ।
[೮]ಶ್ರಾವಯನ್ ಹೃತತನ್ಮಾನಧನಃ ಪ್ರಾಪಾಪರಾಂಬುಧಿಮ್ ॥ ೧೧೨ ॥

ಭರತರಾಜನು ಪೂರ್ವದೇಶದ ರಾಜರನ್ನು ತನ್ನ ಆಜ್ಞಾಧೀನರನ್ನಾಗಿ ಮಾಡಿದಂತೆ ಪಶ್ಚಿಮದೇಶದ ರಾಜರಿಗೂ ಕ್ರಮದಿಂದ ತನ್ನ ಆಜ್ಞೆಯನ್ನು ತಿಳಿಸಿ ಅವರ ಅಭಿಮಾನವನ್ನೂ ದ್ರವ್ಯವನ್ನೂ ಅಪಹರಿಸಿ ಪಶ್ಚಿಮಸಮುದ್ರವನ್ನು ತಲುಪಿದನು. ಪಶ್ಚಿಮದೇಶವನ್ನು ಜಯಿಸಿ ಪಶ್ಚಿಮ ಸಮುದ್ರತೀರಕ್ಕೆ ಹೋದನೆಂದರ್ಥವು.

[೯]ವೇಲಾಸರಿತ್ಕರಾನ್ಸ್ವಾರ್ಧೀರತಿದೂರಂ ಪ್ರಸಾರಯನ್ ।
[೧೦]ನೂನಂ ಪ್ರತ್ಯಗ್ರಹೀದೇನಂ ನಾನಾರತ್ನಾರ್ಘಮುದ್ವಹನ್ ॥ ೧೧೩ ॥

೧ ವನಾಯುದೇಶಜಾತೈಃ. ೨ ವಾಪಿದೇಶಭವೈಃ, ವಾಪೇಯ್ಯೈರಿತ್ಯಪಿ ಪಾಠಃ. ೩ ಆಜಾನೇಯಾಃ ಕುಲೀನಾಃ ಸ್ಯುರಿತ್ಯಮರಃ, ಜಾತ್ಯಶ್ವೈಃ. ೪ ದುಸ್ಸಾಧಾನಿತ್ಯಪಿ ಪಾಠಃ. ೫ ದಿಗಂತಪಾಲಾನ್. ೬ ವನಾನಿ. ೭ ಅಶ್ರಾವಯತ್. ೮ ಸ್ವಾಜ್ಞಾಂ ಸ್ವೀಕಾರಯನ್. ೯ ವೇಲಾಸರಿತ ಏವ ಕರಾಸ್ತಾನ್. ೧೦ ಇವ.

ಸಮುದ್ರವು ದಡ ಮತ್ತು ನದಿಗಳೆಂಬ ಕೈಗಳನ್ನು ಬಹುದೂರದವರೆಗೆ ನೀಡಿ ಅನೇಕವಿಧವಾದ ರತ್ನಗಳ ಅರ್ಘ್ಯವನ್ನೆತ್ತಿ ಭರತರಾಜನನ್ನು ಇದಿರುಗೊಳ್ಳು ವಂತಿದ್ದಿತು.

[೧]ಶೂರ್ಪೋನ್ಮೇಯಾನಿ ರತ್ನಾನಿ ವಾರ್ಧೇರಿ[೨]ತ್ಯಪ್ರಶಂಸಿನೀ ।
[೩]ಯಾನಪಾತ್ರಮಹಾಮಾನೈರುನ್ಮೇಯಾ[೪]ನ್ಯತ್ರ [೫]ತಾನಿ[೬]ಯತ್ ॥ ೧೧೪ ॥

ಸಮುದ್ರದ ರತ್ನಗಳು ಮೊರದಿಂದ ಅಳೆಯುವುದಕ್ಕೆ ಯೋಗ್ಯವಾದುವುಗಳೆಂದು ಸಮುದ್ರತೀರವು ಪ್ರಶಂಸಿಸುವುದಾಗಿರಲಿಲ್ಲ. ಏತಕ್ಕೆಂದರೆ ಆ ಸಮುದ್ರತೀರದಲ್ಲಿ ರತ್ನಗಳು ಹಡಗುಗಳೆಂಬ ದೊಡ್ಡ ಬಳ್ಳಗಳಿಂದ ಅಳೆಯುವುದಕ್ಕೆ ಯೋಗ್ಯಗಳಾಗಿ ದ್ದುವು. ಸಮುದ್ರತೀರದಲ್ಲಿ ಹೆಚ್ಚಾಗಿ ರತ್ನಗಳಿದ್ದುವೆಂದು ಭಾವವು.

ನಾಮ್ನೈವ ಲವಣಾಂಭೋಧಿರಿತ್ಯುದನ್ವಾನ್ಲಘೂಕೃತಃ ।
ರತ್ನಾಕರೋಽಯಮಿತ್ಯುಚ್ಚೈ[೭]ರ್ಬಹುಮೇನೇ ತದಾ ನೃಪೈಃ ॥ ೧೧೫ ॥

ಸಮುದ್ರವು ಹೆಸರಿನಿಂದಲೇ ಲವಣಸಮುದ್ರ–ಉಪ್ಪಿನಸಮುದ್ರವೆಂದು ಕೀಳು ಮಾಡಲ್ಪಟ್ಟಿದೆ. ಇದು ರತ್ನಾಕರವೆಂದು ಆಗ ರಾಜರುಗಳಿಂದ ಬಹಳವಾಗಿ ಪ್ರಶಂಸಿ ಸಲ್ಪಟ್ಟಿತು. ಹೆಸರು ಉಪ್ಪಿನಸಮುದ್ರವೆಂದಿದ್ದರೂ ಇದು ರತ್ನಗಳ ಉತ್ಪತ್ತಿಸ್ಥಾನ ವೆಂದು ಆಗ ರಾಜರುಗಳು ಪ್ರಶಂಸೆಮಾಡಿದರೆಂದು ಭಾವವು.

ಪತನ್ಯತ್ರ ಪತಂಗೋಽಪಿ ತೇಜಸಾ ಯಾತಿ ಮಂದತಾಮ್ ।
ದಿದೀಪೇ ತತ್ರ ತೇಜೋಽಸ್ಯ [೮]ಪ್ರತೀಚ್ಯಾಂ ಜಯತೋ ನೃಪಾನ್ ॥

ಯಾವ ದಿಕ್ಕನ್ನು ಹೊಂದಿದ ಸೂರ್ಯನೂ ತೇಜಸ್ಸಿನಿಂದ ಮಂದತ್ವವನ್ನು ಹೊಂದುತ್ತಾನೋ ಆ ಪಶ್ಚಿಮದಿಕ್ಕಿನಲ್ಲಿ ರಾಜರನ್ನು ಜಯಿಸುತ್ತಿರುವ ಈ ಭರತ ರಾಜನ ತೇಜಸ್ಸು ಪ್ರಕಾಶಿಸಿತು.

[೯]ಧಾರಯಂಶ್ಚಕ್ರರತ್ನಸ್ಯ ಪಾರಯಃ [೧೦]ಸಂಗರೋದದೇಃ ।
ದ್ವಿಷಾ[೧೧]ಮುದೇಜಯಂಸ್ತೀವ್ರಂ ಸ ತಿಗ್ಮಾಂಶುರಿವಾದ್ಯುತತ್ ॥ ೧೧೭ ॥

ಆ ಭರತರಾಜನು ಚಕ್ರರತ್ನವನ್ನು ಧರಿಸಿದವನೂ ಪ್ರತಿಜ್ಞೆಯೆಂಬ ಸಮುದ್ರದ ಪಾರವನ್ನು ಹೊಂದಿದವನೂ ಶತ್ರುಗಳನ್ನು ತೀವ್ರವಾಗಿ ನಡುಗಿಸುವವನೂ ಆಗಿ ಸೂರ್ಯನಂತೆ ಪ್ರಕಾಶಿಸಿದನು.

ಅನುವಾರ್ಧಿತಟಂ ಗತ್ವಾ ಸಿಂಧುದ್ವಾರೇ ನ್ಯವೇಶಯತ್ ।
ಸ್ಕಂಧಾವಾರಂ ಸ ಲಕ್ಷ್ಮೀವಾನಕ್ಷೋಭ್ಯಂ ಸ್ವಮಿ[೧೨]ವಾಶಯಮ್॥ ೧೧೮ ॥

ಐಶ್ವರ್ಯವಂತನಾದ ಭರತಸಾರ್ವಭೌಮನು ಸಮುದ್ರತೀರವನ್ನನುಸರಿಸಿ ಹೋಗಿ ಸಿಂಧುನದಿಯ ದ್ವಾರದಲ್ಲಿ, ತನ್ನಮನಸ್ಸನ್ನಿರಿಸುವಂತೆ, ಕ್ಷೋಭೆಗೊಳಿಸ ಲಾಗದ ತನ್ನ ಸೈನ್ಯಸಮೂಹವನ್ನಿರಿಸಿದನು. ಸಿಂಧುನದಿಯ ದ್ವಾರದಲ್ಲಿ ಭರತ ರಾಜನು ತನ್ನ ಬೀಡನ್ನು ಬಿಟ್ಟನೆಂದು ಭಾವವು.

ಸಿಂಧೋಸ್ತಟವನೇ ರಮ್ಯೇ [೧೩]ನ್ಯವಿಕ್ಷಂತಾಸ್ಯ ಸೈನಿಕಾಃ ।
ಚಮೂದ್ವಿರದಸಂಭೋಗ [೧೪]ನಿಕುಬ್ಜೀಭೂತಪಾದಪೇ ॥ ೧೧೯ ॥

ಭರತರಾಜನ ಸೈನಿಕರು ಸೈನ್ಯದ ಆನೆಗಳ ಸಂಭೋಗದಿಂದ ಬಹಳವಾಗಿ ಬಗ್ಗಿದ ಮರಗಳುಳ್ಳುದೂ ರಮಣೀಯವೂ ಆದ ಸಿಂಧುನದೀತೀರದಲ್ಲಿರುವ ವನವನ್ನು ಪ್ರವೇಶಮಾಡಿದರು.

೧ ಪ್ರಸ್ಫೋಟನೇನ ಉನ್ಮಾತುಂ ಯೋಗ್ಯಾನಿ. ೨ ಇಭ್ಯ ಪ್ರಶಂಸಿಭಿರಿತ್ಯಪಿ ಪಾಠಃ, ಪ್ರಶಸ್ತೇತಿ ನ ಪ್ರಶಂಸ್ಯಾವಾರ್ಧೇಃ ವೇಲಾ. ೩ ಯಾನಪಾತ್ರಪ್ರಸ್ಥೈಃ. ೪ ಅಬ್ಧಿವೇಲಾಯಾಂ. ೫ ರತ್ನಾನಿ. ೬ ಕಾರಣಾಯ. ೭ ಪ್ರಶಂಸಿತಃ. ೮ ಪ್ರತೀಚ್ಯಾನಿತ್ಯಪಿ ಪಾಠಃ. ೯ ಚಕ್ರರತ್ನಂ ಧಾರಯನ್. ೧೦ ಪ್ರತಿಜ್ಞಾಂಬುಧೇಃ. ೧೧ ಕಂಪಯನ್. ೧೨ ಹೃದಯಂ. ೧೩ ನಿವಿಶಂತಿ ಸ್ಮ. ೧೪ ನಿತರಾಂ ಪ್ರಸ್ವೀಭೂತಃ.

ತತ್ರಾ[೧]ಧಿವಾಸಿತಾನೋಂಗಃ [೨]ಪುರಶ್ಚರಣಕರ್ಮವಿತ್ ।
ಪುರೋಧಾ [೩]ಧರ್ಮಚಕ್ರೇಶಾನ್ಸಪೂಜ್ಯ ವಿಧಿವತ್ತತಃ ॥ ೧೨೦ ॥

ಸಿದ್ಧಶೇಷಾಕ್ಷತೈಃ ಪುಣ್ಯೈರ್ಗಂಧೋದಕವಿಮಿಶ್ರಿತೈಃ ।
ಅಭ್ಯನಂದ[೪]ತ್ಸುಯಜ್ವಾ ತಂ ಪುಣ್ಯಾಶೀರ್ಭಿಶ್ಚ ಚಕ್ರಿಣಮ್ ॥ ೧೨೧ ॥

ಆ ವನಪ್ರದೇಶದಲ್ಲಿ ಮಂತ್ರಸಹಿತವಾಗಿ ಚಕ್ರರತ್ನವನ್ನು ಪೂಜಿಸಿದವನೂ ಮೊದಲು ಮಾಡಬೇಕಾದ ಕಾರ್ಯವನ್ನು ತಿಳಿದವನೂ ಚೆನ್ನಾಗಿ ಪೂಜಿಸುವವನೂ ಆದ ಪುರೋಹಿತನು ಪಂಚಪರಮೇಷ್ಠಿಗಳನ್ನು ವಿಧಿಗನುಸಾರವಾಗಿ ಪೂಜಿಸಿ ಆಮೇಲೆ ಪುಣ್ಯಕರವೂ ಗಂಧೋದಕಮಿಶ್ರಿತವೂ ಆದ ದೇವರ ಪೂಜೆಯ ಶೇಷಾಕ್ಷತೆ ಗಳಿಂದಲೂ ಪುಣ್ಯಕರವಾದ ಆಶೀರ್ವಾದಗಳಿಂದಲೂ ಚಕ್ರವರ್ತಿಯನ್ನು ಸತ್ಕರಿ ಸಿದನು.

ತತೋಽಸೌ ಧೃತದಿವ್ಯಾಸ್ತ್ರೋ ರಥಮಾರುಹ್ಯ [೫]ಪೂರ್ವವತ್ ।
ಜಗಾಹೇ ಲವಣಾಂಭೋಧಿಂ ಗೋಷ್ಪದಾವಜ್ಞಯಾ ಪ್ರಭುಃ ॥ ೧೨೨ ॥

ತರುವಾಯ ಭರತಚಕ್ರವರ್ತಿಯು ದಿವ್ಯವಾದ ಅಸ್ತ್ರವನ್ನು ಹಿಡಿದುಕೊಂಡು ರಥ ವನ್ನುಹತ್ತಿ, ಮೊದಲು ಮಾಗಧಾಮರನ ಜಯದಲ್ಲಿ ಹೇಗೋ ಹಾಗೆ, ಲವಣ ಸಮುದ್ರವನ್ನು ಗೋವಿನ ಹೆಜ್ಜೆಯೆಂಬ ಬುದ್ಧಿಯಿಂದ ಪ್ರವೇಶಮಾಡಿದನು. ನಿರ್ಲಕ್ಷ್ಯವಾಗಿ ಸಮುದ್ರವನ್ನು ಪ್ರವೇಶಿಸಿದನೆಂದು ಭಾವವು.

[೬]ಪ್ರಭಾಸಮಜಯತ್ತತ್ರ ಪ್ರಭಾಸಂ [೭]ವ್ಯಂತರಾಧಿಪಮ್ ।
ಪ್ರಭಾಸಮೂಹಮರ್ಕಸ್ಯ ಸ್ವಭಾಸಾ ತರ್ಜಯನ್ಪ್ರಭುಃ ॥ ೧೨೩ ॥

ತನ್ನ ತೇಜಸ್ಸಿನಿಂದ ಸೂರ್ಯನ ತೇಜಸ್ಸಿನ ಸಮೂಹವನ್ನು ತಿರಸ್ಕರಿಸುವ ಭರತಸಾರ್ವಭೌಮನು ಆ ಸಮುದ್ರದಲ್ಲಿ ವಿಶೇಷವಾದ ಪ್ರಭೆಯುಳ್ಳ ಪ್ರಭಾಸನೆಂಬ ವ್ಯಂತರಾಧಿಪತಿಯನ್ನು ಜಯಿಸಿದನು.

[೮]ಜಯಶ್ರೀಶಫರೀಜಾಲಂ [೯]ಮುಕ್ತಾಜಾಲಂ ತತೋಽಮರಾತ್ ।
ಲೇಭೇ ಸಾಂತಾನಿಕೀಂ ಮಾಲಾಂ ಹೇಮಮಾಲಾಂ ಚ ಚಕ್ರಭೃತ್ ॥

ಭರತಚಕ್ರವರ್ತಿಯು ಆ ವ್ಯಂತರದೇವತಾಧಿಪತಿಯಾದ ಪ್ರಭಾಸನಿಂದ ಜಯಲಕ್ಷ್ಮಿಯೆಂಬ ಹೆಣ್ಣುಮೀನಿಗೆ ಬಲೆಯಂತಿರುವ ಮುತ್ತಿನ ಹಾರವನ್ನೂ ಕಲ್ಪವೃಕ್ಷದ ಪುಷ್ಪಮಾಲೆಯನ್ನೂ ಸುವರ್ಣಮಾಲೆಯನ್ನೂ ಪಡೆದನು.

ಇತಿ ಪುಣ್ಯೋದಯಾಜ್ಜಿಷ್ಣುರ್ವ್ಯಜೇಷ್ಟಾಮರಸತ್ತಮಾನ್ ।
ತಸ್ಮಾತ್ಪುಣ್ಯಧನಂ ಪ್ರಾಜ್ಞಾಃ ಶಶ್ವದರ್ಜಯತೋ[೧೦]ರ್ಜಿತಮ್ ॥ ೧೨೫ ॥

ಹೀಗೆ ಜಯಶೀಲನಾದ ಭರತಚಕ್ರವರ್ತಿಯು ತನ್ನ ಪುಣ್ಯೋದಯದಿಂದ ಶ್ರೇಷ್ಠರಾದ ದೇವತೆಗಳನ್ನು ಜಯಿಸಿದನು. ಆದುದರಿಂದ ಬುದ್ಧಿಶಾಲಿಗಳೇ! ನೀವುಗಳು ಹೆಚ್ಚಾದ ಪುಣ್ಯವೆಂಬ ದ್ರವ್ಯವನ್ನು ಪುನಃ ಪುನಃ ಗಳಿಸಿರಿ.

[೧೧]ತ್ವಂಗತ್ತುಂಗತುರಂಗಸಾಧನಖುರ[೧೨]ಕ್ಷುಣ್ಣಾನ್ಮಹೀ[೧೩]ಸ್ಥಂಡಿಲಾ-
ದುದ್ಭೂತೈ[೧೪]ರಣರೇಣುಭಿರ್ಜಲನಿಧೇಃ ಕಾಲುಷ್ಯಮಾಪಾದಯನ್ ।
ಸಿಂಧುದ್ವಾರಮುಪೇತ್ಯ ತತ್ರ ವಿಧಿನಾ ಜಿತ್ವಾ ಪ್ರಭಾಸಾಮರಂ
ತಸ್ಮಾತ್ಸಾರಧನಾನ್ಯವಾಪದತುಲಶ್ರೀರಗ್ರಣೀಶ್ಚಕ್ರಿಣಾಮ್ ॥ ೧೨೬ ॥

ಅನುಪಮವಾದ ಸಂಪತ್ತುಳ್ಳವನೂ ಚಕ್ರವರ್ತಿಗಳಲ್ಲಿ ಶ್ರೇಷ್ಠನೂ ಆದ ಭರತರಾಜನು ಚಲಿಸುತ್ತಿರುವುವೂ ಉನ್ನತವೂ ಆದ ಕುದುರೆಗಳನ್ನು ಶಿಕ್ಷಿಸುವಾಗ ಅವುಗಳ ಗೊರಸುಗಳಿಂದ ಚೂರ್ಣವಾದುದೂ ಬೆಣಚುಕಲ್ಲುಗಳುಳ್ಳುದೂ ಆದ

೧ ಸಮಂತ್ರಕಂ ಪೂಜಿತಚಕ್ರರತ್ನಃ. ೨ ಪೂರ್ವಸೇವಾ. ೩ ಪಂಚಪರಮೇಷ್ಠಿನಃ. ೪ ಸುಷ್ಠು ಇಷ್ಟವಾನ್. ೫ ಮಾಗಧವಿಜಯೇ ಯಥಾ. ೬ ಪ್ರಕೃಷ್ಟದೀಪ್ತಿಂ. ೭ ವ್ಯಂತರಪ್ರಭುಮಿತ್ಯಪಿ ಪಾಠಃ. ೮ ಜಯಶ್ರೀರೇವ ಶಫರೀ ಮತ್ಸೀತಸ್ಯಾಜಾಲಂ ಪಾಶಸ್ತಂ. ೯ ಮುಕ್ತಾಹಾರಂ. ೧೦ ಅಧಿಕಮಿತ್ಯಪಿ ಪಾಠಃ. ೧೧ ವಲ್ಗತ್. ೧೨ ಚೂರ್ಣೀಕೃತಾನ್. ೧೩ ಶರ್ಕರಪ್ರಾಯಪ್ರದೇಶಾತ್. ೧೪ ರಥರೇಣುಭಿರಿತ್ಯಪಿ ಪಾಠಃ, ಸಂಗರಪಾಂಸುಭಿಃ.

ಭೂಪ್ರದೇಶದಿಂದುಂಟಾದ ಯುದ್ಧದ ಧೂಳುಗಳಿಂದ ಸಮುದ್ರಕ್ಕೆ ಕಾಲುಷ್ಯವನ್ನುಂಟುಮಾಡಿ ಸಿಂಧುನದಿಯ ದ್ವಾರವನ್ನು ಪ್ರವೇಶಿಸಿ ಅಲ್ಲಿ ವಿಧಿಪ್ರಕಾರವಾಗಿ ಪ್ರಭಾಸದೇವನನ್ನು ಜಯಿಸಿ ಅವನಿಂದ ಸಾರಭೂತವಾದ ದ್ರವ್ಯಗಳನ್ನು ಪಡೆದನು.

**ಲಕ್ಷ್ಮ್ಯಾಂದೋಲಲತಾಮಿವೋರಸಿ ದಧತ್[1]ಸಂತಾನಪುಷ್ಪಸ್ರಜಂ**
**ಮುಕ್ತಾಹೇಮಮಯೇನ [2]ಜಾಲಯುಗಲೇನಾಲಂಕೃತೋಚ್ಚೈಸ್ತನುಃ ।**
**ಲಕ್ಷ್ಮ್ಯಾ[3]ದ್ವಾಹಗೃಹಾದಿವಾ[4]ಪ್ರತಿಭಯೋ ನಿರ್ಯ[5]ನ್ನಿಧೇರಂಭಸಾಂ**
**ಲಕ್ಷ್ಮೀಶೋ ರುರುಚೇ ಭೃಶಂ [6]ನವವರಚ್ಛಾಯಾಂ ಪರಾಮುದ್ವಹನ್ ॥**

ಲಕ್ಷ್ಮಿಯ ಉಯ್ಯಾಲೆಯ ಹಗ್ಗದಂತಿರುವ ಕಲ್ಪವೃಕ್ಷದ ಪುಷ್ಪಮಾಲಿಕೆಯನ್ನು ಎದೆಯಲ್ಲಿ ಧರಿಸಿದವನೂ ಮುಕ್ತಾಮಯವೂ ಸ್ವರ್ಣಮಯವೂ ಆದ ಎರಡು ಮಾಲಿಕೆಗಳಿಂದ ಅಲಂಕರಿಸಲ್ಪಟ್ಟವನೂ ಉನ್ನತವಾದ ಶರೀರವುಳ್ಳವನೂ ಲಕ್ಷ್ಮಿಯ ವಿವಾಹದ ಮನೆಯಿಂದ ಹೊರಡುವಂತೆ ಸಮುದ್ರದಿಂದ ಹೊರಟವನೂ ಭಯರಹಿತನೂ ನೂತನವರನ ಉತ್ಕೃಷ್ಟ ಶೋಭೆಯನ್ನು ಧರಿಸಿದವನೂ ಆದ ಭರತಚಕ್ರವರ್ತಿಯು ಬಹಳವಾಗಿ ಪ್ರಕಾಶಿಸಿದನು.

**[7]ಪ್ರಾಚ್ಯಾ[8]ನಾಜಲಧೇ[9]ರಪಾಚ್ಯನೃಪತೀ[10]ನಾವೈಜಯಂತಾ[11]ಜ್ಜಯನ್**
**ನಿರ್ಜಿತ್ಯಾ[12]ಪರಸಿಂಧುಸೀಮಘಟಿತಾಮಾಶಾಂ ಪ್ರತೀಚೀಮಪಿ ।**
**ದಿಕ್ಪಾಲಾನಿವ ಪಾರ್ಥಿವಾನ್ಪ್ರಣಮಯನ್ನಾಕಂಪಯ[13]ನ್ನಾಕಿನೋ**
**ದಿಕ್ಚಕ್ರಂ ವಿಜಿತಾರಿಚಕ್ರಮಕರೋದಿತ್ಥಂ ಸ ಭೂಭೃತ್ಪ್ರಭುಃ ॥ ೧೨೮ ॥**

ಭರತಸಾರ್ವಭೌಮನು ಪೂರ್ವಸಮುದ್ರಪರ್ಯಂತವಾಗಿ ಪೂರ್ವದೇಶದ ರಾಜರನ್ನೂ ವೈಜಯಂತದ್ವಾರಪರ್ಯಂತವಾಗಿ ದಕ್ಷಿಣದೇಶದ ರಾಜರನ್ನೂ ಜಯಿಸುವವನಾಗಿ ಪಶ್ಚಿಮಸಮುದ್ರದ ಎಲ್ಲೆಯನ್ನು ಮುಟ್ಟಿರುವ ಪಶ್ಚಿಮದಿಕ್ಕನ್ನೂ ಜಯಿಸಿ ದಿಕ್ಪಾಲಕರನ್ನೋಪಾದಿಯಲ್ಲಿ ರಾಜರನ್ನು ನಮಸ್ಕಾರ ಮಾಡಿಸುವವನಾಗಿಯೂ ಸ್ವರ್ಗಿಕರಿಗೆ ಕಂಪನವನ್ನುಂಟುಮಾಡುವವನಾಗಿಯೂ ದಿಙ್ಮಂಡಲವನ್ನು ಈ ರೀತಿಯಾಗಿ ಜಯಿಸಲ್ಪಟ್ಟ ಶತ್ರುಸಮೂಹವುಳ್ಳುದನ್ನಾಗಿಯೂ ಮಾಡಿದನು. ದಿಗ್ದೇಶಗಳಲ್ಲಿರುವ ಶತ್ರುಗಳನ್ನೆಲ್ಲ ಜಯಿಸಿದನೆಂದು ಭಾವವು.

**ಪುಣ್ಯಾಚ್ಚಕ್ರಧರಶ್ರಿಯಂ ವಿಜಯಿನೀಮೈಂದ್ರೀಂ ಚ ದಿವ್ಯಶ್ರಿಯಂ**
**ಪುಣ್ಯಾತ್ತೀರ್ಥಕರಶ್ರಿಯಂ ಚ ಪರಮಾಂ ನೈಶ್ರೇಯಸೀಂ ಚಾಶ್ನುತೇ ।**
**ಪುಣ್ಯಾದಿತ್ಯ[1]ಸುಭೃಚ್ಛ್ರಿಯಾಂ [2]ಚತಸೃಣಾಮಾವಿರ್ಭವೇದ್ಭಾಜನಂ**
**ತಸ್ಮಾತ್ಪುಣ್ಯಮುಪಾರ್ಜಯಂತು [3]ಸುಧಿಯಃ [4]ಪುಣ್ಯಾಜ್ಜಿನೇಂದ್ರಾಗಮಾತ್ ॥ ೧೨೯ ॥**

ಪ್ರಾಣಿಯು ಪುಣ್ಯದಿಂದ ಜಯಶೀಲವಾದ ಚಕ್ರವರ್ತಿಯ ಸಂಪತ್ತನ್ನೂ ದೇವೇಂದ್ರನ ದಿವ್ಯಸಂಪತ್ತನ್ನೂ ಪುಣ್ಯದಿಂದ ತೀರ್ಥಕರಸಂಪತ್ತನ್ನೂ ಶ್ರೇಷ್ಠವಾದ ಮೋಕ್ಷಲಕ್ಷ್ಮಿಯನ್ನೂ ಹೊಂದುತ್ತದೆ. ಪುಣ್ಯದಿಂದ ಈ ಪ್ರಕಾರವಾಗಿ ಚಕ್ರವರ್ತಿ ಸಂಪತ್ತು, ದೇವೇಂದ್ರಸಂಪತ್ತು, ತೀರ್ಥಕರಸಂಪತ್ತು, ಮೋಕ್ಷಸಂಪತ್ತು ಈ ನಾಲ್ಕು ಸಂಪತ್ತುಗಳಿಗೆ ಪ್ರಾಣಿಯು ಪಾತ್ರವಾಗುವುದು. ಆದುದರಿಂದ ಪ್ರಾಜ್ಞರೇ! ಪವಿತ್ರವಾದ ಜಿನಾಗಮದಿಂದ ನೀವುಗಳು ಪುಣ್ಯವನ್ನು ಗಳಿಸಿರಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಪಶ್ಚಿಮಾರ್ಣವದ್ವಾರವಿಜಯವರ್ಣನಂ ನಾಮ ತ್ರಿಂಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕಭಾವದೀಪಿಕಾವ್ಯಾಖ್ಯೆಯೊಳ್''ದಕ್ಷಿಣಸಮುದ್ರದ್ವಾರವಿಜಯವರ್ಣನವೆಂಬ
ಮೂವತ್ತನೆಯ ಪರ್ವವು ಸಂಪೂರ್ಣವಾದುದು.

---

೧ ಕಲ್ಪವೃಕ್ಷಜಹಾರಂ. ೨ ಮಾಲಾಯುಗ್ಮೇನ. ೩ ವಿವಾಹಃ. ೪ ಭಯರಹಿತಃ ೫ ಸಕಾಶಾತ್. ೬ ನೂತನವರಶೋಭಾಂ. ೭ ಪೂರ್ವದೇಶಜಾನ್. ೮ ಪೂರ್ವಸಮುದ್ರ ಪರ್ಯಂತಂ. ೯ ದಕ್ಷಿಣದೇಶಭೂಪಾನ್, ಅವಾಚ್ಯನೃಪತೀನಿತ್ಯಪಿ ಪಾಠಃ. ೧೦ ವೈಜಯಂತದ್ವಾರಪರ್ಯಂತಂ ೧೧ ಅಯಮಿತ್ಯಪಿ ಪಾಠಃ. ೧೨ ಪಶ್ಚಿಮಾರ್ಣವದೇಶಪ್ಯಂತರಾಮರಾನ್. ೧೩ ದೇವಾನ್.

೧ ಜೀವಃ. ೨ ಪೂರ್ವೋಕ್ತಚತುಃಸಂಖ್ಯಾನಾಂ. ೩ ಭೋಃ. ೪ ಪವಿತ್ರಾತ್.

# ಅಥೈಕತ್ರಿಂಶತ್ತಮಂ ಪರ್ವ

**[೧]ಕೌಬೇರೀಮಥ ನಿರ್ಜೇತುಮಾಶಾಮಭ್ಯುದ್ಯತೋ ವಿಭುಃ ।**
**ಪ್ರತಸ್ಥೇ ವಾಜಿಭೂಯಿಷ್ಠೈಃ ಸಾಧನೈಃ [೨]ಸ್ಥಗಯನ್ ದಿಶಃ ॥ ೧ ॥**

ಅನಂತರ ಕುಬೇರದಿಕ್ಕನ್ನು ಜಯಿಸುವುದಕ್ಕೋಸ್ಕರ ಪ್ರಯತ್ನಪರನಾದ ಭರತ ಚಕ್ರವರ್ತಿಯು ಹೆಚ್ಚು ಕುದುರೆಗಳುಳ್ಳ ಸಾಧನಗಳಿಂದ ದಿಕ್ಕುಗಳನ್ನು ಆಚ್ಛಾದಿಸುತ್ತ ಹೊರಟನು.

**[೩]ಧೌರಿತ್ಯೈರ್ಗತಮುತ್ಸಾಹೈಃ ಸತ್ತ್ವಂ ಶಿಕ್ಷಾಂ ಚ ಲಾಘವೈಃ ।**
**ಜಾತಿಂ ವಪುರ್ಗುಣೈಸ್ತಜ್ಜ್ಞಾ ವಾಹಿನಾಂ [೪]ಜಜ್ಞಿರೇ ತದಾ ॥ ೨ ॥**

ಆಗ ಕುದುರೆಯ ಪರೀಕ್ಷಕರು ಆ ಕುದುರೆಗಳ ಸಾಲುನಡಿಗೆಗಳಿಂದ ಅವುಗಳ ಗಮನವನ್ನೂ ಉತ್ಸಾಹಗಳಿಂದ ಶಕ್ತಿಯನ್ನೂ ಲಘುತ್ವಗಳಿಂದ ಶಿಕ್ಷಣವನ್ನೂ ಶರೀರ ಗುಣಗಳಿಂದ ಜಾತಿಯನ್ನೂ ತಿಳಿದರು.

**ಧೌರಿತಂ ಗತಿಚಾತುರ್ಯಮುತ್ಸಾಹಸ್ತು ಪರಾಕ್ರಮಃ ।**
**ಶಿಕ್ಷಾ ವಿನಯಸಂಪತ್ತೀ ರೋಮಚ್ಛಾಯಾ ವಪುರ್ಗುಣಃ ॥ ೩ ॥**

ನಡಿಗೆಯ ಚಾತುರ್ಯಕ್ಕೆ ಧೌರಿತವೆಂದೂ ಪರಾಕ್ರಮಕ್ಕೆ ಉತ್ಸಾಹವೆಂದೂ ವಿನಯಸಂಪತ್ತಿಗೆ ಶಿಕ್ಷೆಯೆಂದೂ ರೋಮಗಳ ಕಾಂತಿಗೆ ಶರೀರಗುಣವೆಂದೂ ಹೆಸರು. ಕುದುರೆಗಳ ಈ ಗುಣಗಳು ಪರೀಕ್ಷಿಸತಕ್ಕುವುಗಳೆಂದು ಭಾವವು.

**[೫]ಪುರೋಭಾಗಾನಿವಾ[೬]ತ್ಯೇತುಂ [೭]ಪಶ್ಚಾದ್ಭಾಗೈಃ ಕೃತೋದ್ಯಮಾಃ ।**
**ಪ್ರಯಯುರ್ದ್ರುತಮಧ್ವಾನ[೮]ಮಧ್ವನೀನಾಸ್ತುರಂಗಮಾಃ ॥ ೪ ॥**

ಶರೀರದ ಮುಂಭಾಗಗಳನ್ನು ಮೀರುವುದಕ್ಕೋಸ್ಕರವೋ ಎಂಬಂತೆ ಹಿಂಭಾಗ ಗಳಿಂದ ಪ್ರಯತ್ನಿಸಿದುವೂ ನಡೆಯುವುದರಲ್ಲಿ ಸಮರ್ಥಗಳೂ ಆದ ಕುದುರೆಗಳು ಶೀಘ್ರವಾಗಿ ದಾರಿಯನ್ನು ನಡೆದುವು.

**ಖುರೋದ್ಧೂತಾನ್ಮಹೀರೇಣೂನ್ಸ್ವಾಂಗಸ್ಪರ್ಶಭಯಾದಿವ ।**
**ಕೇಚಿ[೯]ದ್ವ್ಯತೀಯು[೧೦]ರಧ್ಯಧ್ವಂ ಮಹಾಶ್ವಾಃ ಕೃತವಿಕ್ರಮಾಃ ॥ ೫ ॥**

ತಮ್ಮ ಪರಾಕ್ರಮವನ್ನುಪಯೋಗಿಸಿದ ಕೆಲವು ದೊಡ್ಡ ಕುದುರೆಗಳು ತಮ್ಮ ಗೊರಸುಗಳಿಂದ ಮೇಲೆ ಹಾರಿಸಲ್ಪಟ್ಟ ಭೂಮಿಯ ಧೂಳುಗಳು ತಮ್ಮ ಶರೀರ ವನ್ನು ಸ್ಪರ್ಶಿಸುವುವೆಂಬ ಭಯದಿಂದಲೋ ಎಂಬಂತೆ ಅವುಗಳನ್ನು ಮಾರ್ಗದಲ್ಲಿ ದಾಟಿಹೋದುವು. ಬಹು ವೇಗವಾಗಿ ಹೋದುವೆಂದು ಭಾವವು.

**[೧೧]ಛಾಯಾತ್ಮನಃ ಸಹೋತ್ಥಾನಂ ಕೇಚಿತ್ಸೋಢುಮಿವಾಕ್ಷಮಾಃ ।**
**ಖುರೈ[೧೨]ರಘಟ್ಟಯನ್ವಾಹಾಃ [೧೩]ಸ ತು ಸೌಕ್ಷ್ಮ್ಯಾನ್ನ ಬಾಧಿತಃ ॥ ೬ ॥**

ಕೆಲವು ಕುದುರೆಗಳು ತಮ್ಮೊಡನೆ ಬರುತ್ತಿರುವ ತಮ್ಮ ನೆರಳನ್ನು ಸಹಿಸಲ ಸಮರ್ಥಗಳಾಗಿಯೋ ಎಂಬಂತೆ ಅದನ್ನು ಗೊರಸುಗಳಿಂದ ಒದೆದುವು. ಆ ನೆರಳಾದರೂ ಸೂಕ್ಷ್ಮವಾಗಿದ್ದುದರಿಂದ ಬಾಧಿಸಲ್ಪಡಲಿಲ್ಲವು.

**ಕೇಚಿನ್ನೃತ್ತಮಿವಾತೇನುರ್ಮಹೀರಂಗೇ ತುರಂಗಮಾಃ ।**
**ಕ್ರಮೈ[೧೪]ಶ್ಚಂಕ್ರಮಣಾರಂಭೇ ಕೃತ[೧೫]ಮಡ್ಡುಕವಾದನೈಃ ॥ ೭ ॥**

೧ ಕುಬೇರಸ್ಯ ಸಂಬಂಧಿನೀಂ. ೨ ಆಚ್ಛಾದಯನ್. ೩ ಧಾರಾಭಿಃ ॥ ಆಸ್ಕಂದಿತಂ ಧೌರಿತಕಂ ರೇಚಿತಂ ವಲ್ಗಿತಂ ಪ್ಲುತಂ, ಗತಯೋಮೂಃ ಪಂಚಧಾರಾಃ ॥ ೪ ಬುಬುಧಿರೇ. ೫ ಪೂರ್ವಕಾಯಾನ್. ೬ ಅತಿಗಂತುಂ. ೭ ಅಪರಕಾಯೈಃ. ೮ ಅಧ್ವನಿ ಸಮರ್ಥಾಃ. ೯ ವ್ಯತೀತ್ಯಾಗಚ್ಛನ್. ೧೦ ಮಾರ್ಗೇ. ೧೧ ಛಾಯಾಸ್ವರೂಪಸ್ಯ. ೧೨ ಘ್ನಂತಿ ಸ್ಮ. ೧೩ ಛಾಯಾತ್ಮಾ. ೧೪ ಶೀಘ್ರಗಮನಾರಂಭೇ. ೧೫ ವಾದ್ಯವಿಶೇಷಃ.

ಕೆಲವು ಕುದುರೆಗಳು ಶೀಘ್ರವಾಗಿ ಹೋಗುವ ಆರಂಭದಲ್ಲಿ ಮಾಡಲ್ಪಟ್ಟ ಡಿಂಡಿಮವೆಂಬ ವಾದ್ಯಗಳ ಶಬ್ದಗಳೊಡನೆ ತಮ್ಮ ನಡಿಗೆಗಳಿಂದ ಭೂತಲವೆಂಬ ರಂಗಭೂಮಿಯಲ್ಲಿ ನರ್ತನವನ್ನು ಮಾಡುತ್ತವೋ ಎಂಬಂತಿದ್ದುವು. ವಾದ್ಯದ ಲಯವನ್ನನುಸರಿಸಿ ನಡೆಯುತ್ತಿದ್ದುವೆಂದು ಭಾವವು.

**ಸ್ಥಿರಪ್ರಕೃತಿಸತ್ತ್ವಾನಾಮಶ್ವಾನಾಂ ಚಲತಾಭವತ್ ।**
**ಪ್ರಚಲತ್ಖುರಸಂಕ್ಷುಣ್ಣಭುವಾಂ ಗತಿಷು ಕೇವಲಮ್ ॥ ೮ ॥**

ಸ್ಥಿರಸ್ವಭಾವವುಳ್ಳವೂ ಬಲಶಾಲಿಗಳೂ ವೇಗವಾಗಿ ತಮ್ಮ ನಡೆಯುವಾಗ ಗೊರಸುಗಳಿಂದ ಪುಡಿಮಾಡಲ್ಪಟ್ಟ ಭೂಮಿಯುಳ್ಳವೂ ಆದ ಕುದುರೆಗಳ ನಡಿಗೆ ಗಳಲ್ಲಿ ಮಾತ್ರ ಚಂಚಲತೆಯಿದ್ದಿತು. ಸ್ವಭಾವವು ಚಂಚಲವಾಗಿರಲಿಲ್ಲವೆಂದರ್ಥವು.

**ಕೋಟಯೋಷ್ಟಾದಶಾಸ್ಯ ಸ್ಯುರ್ವಾಜಿನಾಂ [೧]ವಾಯುರಂಹಸಾಮ್ ।**
**[೨]ಆಜಾನೇಯಪ್ರಧಾನಾನಾಂ ಯೋಗ್ಯಾನಾಂ ಚಕ್ರವರ್ತಿನಃ ॥ ೯ ॥**

ಈ ಭರತಚಕ್ರವರ್ತಿಗೆ ಗಾಳಿಯಂತೆ ವೇಗವುಳ್ಳವೂ ಉತ್ತಮಜಾತಿಯ ಕುದುರೆ ಗಳಲ್ಲಿ ಮುಖ್ಯವಾದುವೂ ಯೋಗ್ಯಗಳೂ ಆದ ಹದಿನೆಂಟುಕೋಟಿ ಕುದುರೆ ಗಳಿದ್ದುವು.

**[೩]ರುದ್ಧರೋಧೋವನಾ ಕ್ಷುಣ್ಣತಟಭೂರ್ಹ್ರಾಸಯಂತ್ಯಪಃ ।**
**[೪]ಸಿಂಧೋಃ [೫]ಪ್ರತೀಪತಾಂ ಭೇಜೇ ಪ್ರಯಾಂತೀ ಸಾ [೬]ಪತಾಕಿನೀ ॥**

ದಡದಲ್ಲಿರುವ ವನವನ್ನು ಆವರಿಸಿರುವುದೂ ದಡದ ಭೂಮಿಯನ್ನು ತುಳಿದು ಪುಡಿಮಾಡಿರುವುದೂ ನೀರನ್ನು ಕಡಮೆಮಾಡುವುದೂ ಪ್ರಯಾಣಮಾಡುತ್ತಿರು ವುದೂ ಆದ ಆ ಸೈನ್ಯವು ಸಿಂಧುನದಿಗೆ ಇದಿರಾಳಿತನವನ್ನು ಹೊಂದಿದ್ದಿತು. ಸಿಂಧುನದಿಗೆ ಶತ್ರುವಾದ ನದಿಯಂತಿದ್ದಿತೆಂದು ಭಾವವು.

**ಪ್ರಭೋರಿವಾಗಮಾತ್ತುಷ್ಟಾ ಸಿಂಧುಃ ಸೈನ್ಯಾಧಿನಾಯಕಾನ್ ।**
**ತರಂಗಪವನೈರ್ಮಂದಮಾಸಿಷೇವೇ [೭]ಸುಖಾಹರೈಃ ॥ ೧೧ ॥**

ಸಿಂಧುನದಿಯು ಪ್ರಭುವಿನ ಬರುವಿಕೆಯಿಂದ ಸಂತೋಷವುಳ್ಳುದಾಗಿದೆಯೋ ಎಂಬಂತೆ, ಸುಖಕರವಾದ ಅಲೆಗಳ ಗಾಳಿಗಳಿಂದ ಮೆಲ್ಲನೆ ಸೈನ್ಯಾಧಿಪತಿಗಳ ಸೇವೆ ಯನ್ನು ಮಾಡಿತು.

**ಗಂಗಾವರ್ಣನಯೋಪೇತಾಂ [೮]ಫೇನಾಢ್ಯಾಂ ಸಮ್ಮುಖಾಗತಾಮ್ ।**
**ತಾಂ ಪಶ್ಯನ್ನುತ್ತರಾಮಾಶಾಂ ಜಿತಾಂ ಮೇನೇ ನಿಧೀಶ್ವರಃ ॥ ೧೨ ॥**

ನಿಧಿಗಳಿಗೆ ಒಡೆಯನಾದ ಭರತರಾಜನು ಗಂಗಾನದಿಯ ವರ್ಣನೆಯುಳ್ಳುದೂ ವಿಶೇಷವಾದ ನೊರೆಯುಳ್ಳುದೂ ಇದಿರಾಗಿ ಹರಿಯುತ್ತಿರುವುದೂ ಆದ ಆ ಸಿಂಧು ನದಿಯನ್ನು ನೋಡಿ ಉತ್ತರದಿಕ್ಕನ್ನು ಜಯಿಸಿದಂತೆಯೇ ತಿಳಿದನು. ಉತ್ತರದಿಕ್ಕನ್ನು ಬಹು ಸುಲಭವಾಗಿ ಜಯಿಸಬಹುದೆಂದು ಭಾವಿಸಿದನೆಂದು ಭಾವವು.

**ಅನುಸಿಂಧುತಟಂ ಸೈನ್ಯೈ[೯]ರುದೀಚ್ಯಾನ್ [೧೦]ಶ್ರಾವಯನ್ನೃಪಾನ್ ।**
**ವಿಜಯಾರ್ಧಾಚಲೋಪಾಂತಮಾಸಸಾದ ಶನೈ[೧೧]ರ್ಮನುಃ ॥ ೧೩ ॥**

೧ ಪವನವೇಗಿನಾಂ. ೨ ಜಾತ್ಯಶ್ವಮುಖ್ಯಾನಾಂ. ೩ ರುದ್ಧತಟವನಾ. ೪ ಸಿಂಧುನದ್ಯಾಃ. ೫ ಪ್ರತಿಕೂಲತಾಂ. ೬ ಸೇನಾ. ೭ ಸುಖಸ್ಪೀಕಾರ್ಯೈಃ ಸುಖಕರ್ಯೈರಿತ್ಯರ್ಥಃ. ೮ ಫೇನಾಘಾರ್ಮಿತ್ಯಪಿ ಪಾಠಃ. ೯ ಉತ್ತರದಿಶ್ಯಾನ್. ೧೦ ಸಾಧಯನ್. ೧೧ ಭರತಃ.

ಭರತಚಕ್ರೇಶ್ವರನು ಸಿಂಧುನದೀತೀರವನ್ನನುಸರಿಸಿ ಹೋಗಿ ತನ್ನ ಸೈನ್ಯಗಳಿಂದ ಉತ್ತರದಿಕ್ಕಿನ ರಾಜರುಗಳನ್ನು ಸಾಧಿಸಿಕೊಂಡು ಮೆಲ್ಲನೆ ವಿಜಯಾರ್ಧಪರ್ವತದ ಸಮೀಪವನ್ನು ಸೇರಿದನು.

**ಸ ಗಿರಿರ್ಮಣಿನಿರ್ಮಾಣನವಕೂಟ[೧]ವಿಶಂಕಟಃ ।**
**ದದೃಶೇ ಪ್ರಭುಣಾ ದೂರಾದ್ಧೃತಾರ್ಘ ಇವ[೨]ರಾಜತಃ ॥ ೧೪ ॥**

ಭರತರಾಜನು ರತ್ನಖಚಿತವೂ ವಿಸ್ತಾರವೂ ಆದ ಒಂಬತ್ತು ಶಿಖರಗಳುಳ್ಳುದೂ ಬೆಳ್ಳಿಯ ಮಯವೂ ತನಗೆ ಅರ್ಘ್ಯವನ್ನೆತ್ತಿ ಹಿಡಿದಿದೆಯೋ ಎಂಬಂತಿರುವುದೂ ಆದ ಆ ಪರ್ವತವನ್ನು ದೂರದಿಂದ ನೋಡಿದನು.

**ಸ ಶೈಲಃ ಪವನಾಧೂತಚಲಚ್ಛಾಖಾಗ್ರಬಾಹುಭಿಃ ।**
**ದೂರಾದಭ್ಯಾಗತಂ ಜಿಷ್ಣುಮಾಜುಹಾವೇವ ಪಾದಪೈಃ ॥ ೧೫ ॥**

ಆ ಪರ್ವತವು ಗಾಳಿಯಿಂದ ಕೊಡಹಲ್ಪಟ್ಟು ಅಳ್ಳಾಡುತ್ತಿರುವ ಕೊಂಬೆಗಳೆಂಬ ಭುಜಗಳುಳ್ಳ ಮರಗಳಿಂದ ಜಯಶೀಲನಾಗಿ ಬರುತ್ತಿರುವ ಭರತರಾಜನನ್ನು ದೂರದಿಂದ ಕರೆಯುತ್ತದೆಯೋ ಎಂಬಂತಿದ್ದಿತು.

**ಸೋಽಚಲಃ ಶಿಖರೋಪಾಂತನಿಪತನ್ನಿರ್ಝರಾಂಬುಭಿಃ ।**
**ಪ್ರಭೋರುಪಾಗಮೇ ಪಾದ್ಯಂ [೩]ಸಂವಿಧಿತ್ಸುರಿವಾಚಕಾತ್ ॥ ೧೬ ॥**

ಆ ಪರ್ವತವು ಭರತರಾಜನು ಬಂದಾಗ ಅವನಿಗೆ ಶಿಖರಗಳಿಂದ ಬೀಳುತ್ತಿರುವ ಗಿರಿನದಿಗಳ ನೀರುಗಳಿಂದ ಪಾದೋದಕವನ್ನು ಕೊಡುವುದಕ್ಕೆ ಇಚ್ಛಿಸುತ್ತದೆಯೋ ಎಂಬಂತೆ ಶೋಭಿಸಿದ್ದಿತು.

**ಸ ನಗೋ ನಾಗ[೪]ಪುನ್ನಾಗಪೂಗಾದಿದ್ರುಮ[೫]ಸಂಕಟೈಃ ।**
**ರಮ್ಯೈಸ್ತಟವನೋದ್ದೇಶೈ[೬]ರಾಹ್ವತ್ತ್ವಭುಮಿ[೭]ವಾಸಿತುಮ್ ॥ ೧೭ ॥**

ಆ ಪರ್ವತವು ಹೊನ್ನೆ ಸುರಹೊನ್ನೆ ಅಡಿಕೆ ಮೊದಲಾದ ವೃಕ್ಷಸಮೂಹಗಳಿಂದಲೂ ರಮಣೀಯವಾದ ತಪ್ಪಲುಗಳಲ್ಲಿರುವ ವನಪ್ರದೇಶಗಳಿಂದಲೂ ಭರತರಾಜನನ್ನು ವಾಸಕ್ಕೋಸ್ಕರ ಕರೆಯಿತೋ ಎಂಬಂತಿದ್ದಿತು.

**ರಜೋ [೮]ವಿತಾನಯನ್ಪೌಷ್ಪಂ ಪವನೈಃ ಪರಿತೋ ವನಮ್ ।**
**ಸೋ[೯]ಭ್ಯುತ್ತಿಷ್ಠನ್ನಿವಾಸ್ಮಾಸೀತ್ಕೂಜತ್ಕೋಕಿಲಡಿಂಡಿಮಃ ॥ ೧೮ ॥**

ವನದ ಸುತ್ತಲೂ ಗಾಳಿಗಳಿಂದ ಪುಷ್ಪದಧೂಳಿಯನ್ನು ಹರಡುತ್ತಿರುವುದೂ ಕೂಗುತ್ತಿರುವ ಕೋಗಿಲೆಗಳೆಂಬ ಝಲ್ಲರೀವಾದ್ಯವುಳ್ಳುದೂ ಆದ ಆ ಪರ್ವತವು ಭರತರಾಜನಿಗೆ ಇದಿರಾಗಿ ಎದ್ದು ನಿಂತಿದೆಯೋ ಎಂಬಂತಿದ್ದಿತು.

**ಕಿಮತ್ರ ಬಹುನಾ ಸೋದ್ರಿರ್ವಿಭುಂ ದಿಗ್ವಿಜಯೋದ್ಯತಮ್ ।**
**ಪ್ರತ್ಯೈಚ್ಛದಿವ ಸಂಪ್ರೀತ್ಯಾ ಸತ್ಕಾರಾಂಗ್ಯೈ[೧೦]ರಿತಿ ಸ್ಫುಟೈಃ ॥ ೧೯ ॥**

ಈ ವಿಷಯದಲ್ಲಿ ಹೆಚ್ಚು ಹೇಳುವುದೇನು ? ಆ ಪರ್ವತವು ದಿಗ್ವಿಜಯದಲ್ಲಿ ಉದ್ಯುಕ್ತನಾದ ಭರತರಾಜನನ್ನು ಹಿಂದೆ ಹೇಳಿದ ವ್ಯಕ್ತವಾದ ಸತ್ಕಾರಸಾಮಗ್ರಿಗಳಿಂದ ಪ್ರೀತಿಯಿಂದ ಇದಿರುಗೊಂಡಿತೋ ಎಂಬಂತಿದ್ದಿತು.

**[೧೧]ಪಿನದ್ಧತೋರಣಾಮುಚ್ಚೈರತೀತ್ಯ ವನವೇದಿಕಾಮ್ ।**
**[೧೨]ನಿಯಂತ್ರಿತಂ ಬಲಾಧ್ಯಕ್ಷೈರ್ಜಗಾಹೇಂತರ್ವಣಂ ಬಲಮ್ ॥ ೨೦ ॥**

ಸೇನಾನಾಯಕರಿಂದ ನಡೆಸಲ್ಪಡುತ್ತಿದ್ದ ಆ ಸೈನ್ಯವು ಎತ್ತರವಾಗಿ ಕಟ್ಟಲ್ಪಟ್ಟಿರುವ ತೋರಣಗಳುಳ್ಳ ವನವೇದಿಕೆಯನ್ನು ದಾಟಿ ವನದ ಮಧ್ಯಪ್ರದೇಶಕ್ಕೆ ಪ್ರವೇಶ ಮಾಡಿತು.

**ವನೋಪಾಂತಭುವಃ ಸೈನ್ಯೈರಾರುದ್ಧಾ ರುದ್ಧದಿಙ್ಮುಖೈಃ ।**
**[೧]ಉಡ್ಡೀನವಿಹಗಪ್ರಾಣಾ [೨]ನಿರುಚ್ಛ್ವಾಸಾಸ್ತದಾಭವನ್ ॥ ೨೧ ॥**

ಸಮಸ್ತದಿಕ್ಕುಗಳನ್ನು ಆವರಿಸಿರುವ ಸೈನ್ಯಗಳಿಂದ ವ್ಯಾಪ್ತವೂ ಹಾರಿಹೋಗುತ್ತಿರುವ ಪಕ್ಷಿಗಳೆಂಬ ಪ್ರಾಣಗಳುಳ್ಳುವೂ ಆದ ವನಸಮೀಪಭೂಮಿಗಳು ಆಗ ಸತ್ತುಹೋದುವೋ ಎಂಬಂತಿದ್ದುವು.

**ಅಭೂತಪೂರ್ವಮುದ್ಭೂತಪ್ರತಿಧ್ವಾನಂ ಬಲಧ್ವನಿಮ್ ।**
**ಶ್ರುತ್ವಾ [೩]ಬಲವ[೪]ದುತ್ತ್ರೇಸುಸ್ತಿರ್ಯಂಚೋ ವನಗೋಚರಾಃ ॥ ೨೨ ॥**

ಪೂರ್ವದಲ್ಲಿಲ್ಲದಿದ್ದುದೂ ಪ್ರತಿಧ್ವನಿಯನ್ನುಂಟುಮಾಡುತ್ತಿರುವುದೂ ಆದ ಸೈನ್ಯದ ಶಬ್ದವನ್ನು ಕೇಳಿ ವನದಲ್ಲಿದ್ದ ತಿರ್ಯಂಚ–ಪಶುಪಕ್ಷಿಗಳು ಬಹಳವಾಗಿ ಹೆದರಿದುವು.

**[೫]ವಲಕ್ಷೋ[೬]ಭಾದಿಭೋ ನಿರ್ಯನ್ಬಲಕ್ಷೋಭಾದ್ವನಾಂತರಾತ್ ।**
**[೭]ಸುರೇಭಃ [೮]ಸುವಿಭಕ್ತಾಂಗಃ [೯]ಸುರೇಭ ಇವ ವರ್ಷ್ಮಣಾ ॥ ೨೩ ॥**

ಸೈನ್ಯದ ಕ್ಷೋಭೆಯಿಂದ ವನದಿಂದ ಹೊರಡುತ್ತಿರುವ ಬಿಳಿಯಾನೆಯು, ಒಳ್ಳೆಯ ಧ್ವನಿಯುಳ್ಳುದೂ ಸ್ಫುಟವಾದ ಅವಯವಗಳುಳ್ಳುದೂ ಆದ ಇಂದ್ರನ ಐರಾವತ ಗಜದಂತೆ, ದೇಹದಿಂದ ಶೋಭಿಸುತ್ತಿದ್ದಿತು.

**ಪ್ರಬೋಧಜೃಂಭಣಾದಾಸ್ಯಂ [೧೦]ವ್ಯಾದಧೌ ಕಿಲ ಕೇಸರೀ ।**
**ನಮೇಸ್ತ್ಯಂತರ್ಭಯಂ ಕಿಂಚಿತ್ಪಶ್ಯತೇತೀವ ದರ್ಶಯನ್ ॥ ೨೪ ॥**

"ಒಳಗೆ ನನಗೆ ಸ್ವಲ್ಪವೂ ಭಯವಿಲ್ಲ, ನೋಡಿ" ಎಂದು ತೋರಿಸುತ್ತಿದೆಯೋ ಎಂಬಂತಿರುವ ಸಿಂಹವಾದರೋ ನಿದ್ರೆಯಿಂದೆಚ್ಚತ್ತು ಆಕಳಿಸಿ ಬಾಯನ್ನು ತೆರೆಯಿತು.

**ಶರಭೋ ರಭಸಾದೂರ್ಧ್ವಮುತ್ಪತ್ಯೋತ್ತಾನಿತಃ ಪತನ್ ।**
**ಸುಸ್ಥ ಏವ ಪದೈಃ [೧೧]ಪೃಷ್ಠ್ಯೈರಭೂ[೧೨]ನ್ನಿರ್ಮಾತೃಕೌಶಲಾತ್ ॥ ೨೫ ॥**

ಶರಭವೆಂಬ ಕ್ರೂರಮೃಗವು ವೇಗದಿಂದ ಮೇಲಕ್ಕೆ ಹಾರಿ ಬೆನ್ನುಕೆಳಕ್ಕಾಗಿ-ಮೇಲ್ಮುಖವಾಗಿ ಬಿದ್ದು ನಿರ್ಮಾಣವೆಂಬ ನಾಮಕರ್ಮದ ಅಥವಾ ವಿಧಿಯ ಕೌಶಲ್ಯದಿಂದ ನಿರ್ಮಿತವಾದ ಬೆನ್ನಿನಲ್ಲಿರುವ ನಾಲ್ಕು ಕಾಲುಗಳಿಂದ ಚೆನ್ನಾಗಿ ನಿಂತಿದ್ದಿತು.(ಸಿಂಹಕ್ಕೆ ಶತ್ರುವಾದ ಶರಭವೆಂಬ ಮೃಗಕ್ಕೆ ಅಷ್ಟಾಪದವೆಂದೂ ಹೆಸರಿರುವುದು. ಅದಕ್ಕೆ ಬೆನ್ನಿನಮೇಲೆಯೂ ನಾಲ್ಕು ಕಾಲುಗಳಿರುತ್ತವೆ).

**ವಿಷಾಣೋಲ್ಲಿಖಿತಸ್ಕಂದೋ [೧೩]ರುಷಿತಾತಾಮ್ರೇಕ್ಷಣಃ ।**
**ಖುರೋತ್ಖಾತಾವನಿಃ ಸೈನ್ಯೈರ್ದದೃಶೇ ಮಹಿಷೋ [೧೪]ವಿಭೀಃ ॥ ೨೬ ॥**

ತನ್ನ ಕೊಂಬಿನಿಂದ ಮೋಟುಮರವನ್ನು ತಿವಿಯುತ್ತಿರುವುದೂ ಕೋಪದಿಂದ ಕೆಂಪಾಗಿರುವ ಕಣ್ಣುಗಳುಳ್ಳುದೂ ಗೊರಸಿನಿಂದ ಭೂಮಿಯನ್ನು ಕೆದಕುತ್ತಿರುವುದೂ ಭಯವಿಲ್ಲದುದೂ ಆದ ಕೋಣವನ್ನು ಸೈನಿಕರು ನೋಡಿದರು.

**[೧೫]ಚಮೂರವಶ್ರವೋದ್ಭೂತಸಾಧ್ವಸಾಃ ಕ್ಷುದ್ರಕಾ ಮೃಗಾಃ ।**
**ವಿಜಯಾರ್ಧ[೧೬]ಗುಹೋತ್ಸಂಗಾ[೧೭]ನ್ಯುಗಕ್ಷಯ ಇವಾಶ್ರಯನ್ ॥ ೨೭ ॥**

೧ ವಿಶಾಲಃ. ೨ ರಜತಮಯಃ. ೩ ಸಂವಿಧಾತುಮಿಚ್ಛುಃ. ೪ ಪುನ್ನಾಗಃ ಪೂರ್ಣಪತ್ರಂ ಚ ದೇವಪುಷ್ಪಂ ಸುರಪ್ರಿಯಂ. ೫ ಸಮೂಹೈಃ. ೬ ಆಹ್ವಯತಿ ಸ್ಮ. ೭ ವಸ್ತುಂ. ೮ ವಿಸ್ತಾರಯನ್. ೯ ಅಭಿಮುಖಮುತ್ತಿಷ್ಠನ್. ೧೦ ಉಕ್ತಪ್ರಕಾರೇಣ, ಅತಿಸ್ಫುಟೈರಿತ್ಯಪಿ ಪಾಠಃ. ೧೧ ರಚಿತ, ವಿಭಕ್ತೇತ್ಯಪಿ ಪಾಠಃ. ೧೨ ನಿಯಮಿತಂ.

೧ ಪ್ರಡೀನೋಡ್ಡೀನಸಂಡೀನಾನ್ಯೇತಾಃ ಖಗಗತಿಕ್ರಿಯಾಃ. ೨ ಮೃತಾ ಇವ. ೩ ಅಧಿಕಂ. ೪ ತತ್ರಸುಃ. ೫ ಧವಲಃ. ೬ ರೇಜೇ. ೭ ಶೋಭನಧ್ವನಿಃ. ೮ ಸುವ್ಯಕ್ತಾವಯವಃ. ೯ ದೇವಗಜಃ. ೧೦ ವಿವೃತಮಕರೋತ್. ೧೧ ಪೃಷ್ಠವರ್ತಿಭಿಃ. ೧೨ ನಿರ್ಮಾಣನಾಮಕರ್ಮ, ವಿಧಿರ್ವಾ. ೧೩ ಕೋಪೇನಾರುಣೀಕೃತ. ೧೪ ನಿರ್ಭೀತಃ. ೧೫ ಸೇನಾಧ್ವನ್ಯಾಕರ್ಣನಾಜ್ಜಾತ. ೧೬ ಗುಹಾಮಧ್ಯಾನ್. ೧೭ ಪ್ರಳಯಕಾಲೇ ಯಥಾ.

ಸೈನ್ಯದ ಧ್ವನಿಯನ್ನು ಕೇಳಿದುದರಿಂದುಂಟಾದ ಭೀತಿಯುಳ್ಳ ಕ್ಷುದ್ರಮೃಗಗಳು, ಪ್ರಳಯಕಾಲದಲ್ಲಿ· ಹೊಂದುವಂತೆ, ವಿಜಯಾರ್ಧಪರ್ವತದ ಗುಹೆಗಳ ಮಧ್ಯ ಪ್ರದೇಶಗಳನ್ನು ಹೊಂದಿದುವು.

**[೧]ಅನುದ್ರುತಾ ಮೃಗಾಃ ಶಾಬೈಃ ಪಲಾಯಾಂಚಕ್ರಿರೇಭಿತಃ ।**
**ವಿತ್ರಸ್ತಾ [೨]ವೇಪಮಾನಾಂಗಾಃ ಸಿಕ್ತಾ ಭಯರಸೈರಿವ ॥ ೨೮ ॥**

ಮರಿಗಳಿಂದ ಹಿಂಬಾಲಿಸಲ್ಪಟ್ಟ ಹರಿಣಗಳು ಬೆದರಿ ಭಯರಸಗಳಿಂದ ಸೇಚನೆ ಮಾಡಲ್ಪಟ್ಟುವುಗಳಂತೆ, ನಡುಗುತ್ತಿರುವ ಶರೀರವುಳ್ಳುವಾಗಿ ಸುತ್ತಲೂ ಓಡಿ ಹೋದುವು.

**[೩]ವರಾಹಾರರತಿಂ ಮುಕ್ತ್ವಾ ವರಾಹಾ [೪]ಮುಕ್ತಪಲ್ವಲಾಃ ।**
**[೫]ವಿನೇಶು[೬]ರ್ವಿಸ್ಫುಟದ್ಯೂಥಾಃ ಚಮೂಕ್ಷೋಭಾದಿತೋಮುತಃ ॥ ೨೯ ॥**

ಹಳ್ಳಗಳನ್ನು ಬಿಟ್ಟ ಹಂದಿಗಳು ಉತ್ಕೃಷ್ಟವಾದ ಆಹಾರದ ಪ್ರೀತಿಯನ್ನು ಬಿಟ್ಟು ಸೈನ್ಯದ ಕ್ಷೋಭೆಯಿಂದ ಗುಂಪು ಚದರಿ ಅತ್ತಿತ್ತ ಕಣ್ಣಿಗೆ ಕಾಣದಂತಾದುವು. ಓಡಿ ಹೋಗಿ ಅಗೋಚರವಾದುವೆಂದು ಭಾವವು.

**[೭]ವರಣಾವರಣಾಸ್ತಸ್ಥುಃ ಕರಿಣೋನ್ಯೇ ಭಯದ್ರುತಾಃ ।**
**ಹರಿಣಾ [೮]ಹರಿಣಾರಾತಿಗುಹಾಂತಾನಧಿಶಿಶ್ಯಿರೇ ॥ ೩೦ ॥**

ಕೆಲವು ಕಾಡಾನೆಗಳು ವರಣವೆಂಬ ವೃಕ್ಷವಿಶೇಷದ ಮರೆಯಲ್ಲಿ ನಿಂತುವು. ಬೇರೆ ಕೆಲವು ಭಯದಿಂದ ಓಡಿಹೋದುವು. ಜಿಂಕೆಗಳು ಸಿಂಹದ ಗುಹೆಗಳೊಳಗೆ ಅವಿತು ಕೊಂಡುವು.

**ಇತಿ [೯]ಸತ್ತ್ವಾ ವನಸ್ಯೇವ ಪ್ರಾಣಾಃ ಪ್ರಚಲಿತಾ ಭೃಶಮ್ ।**
**[೧೦]ಪ್ರತ್ಯಾಪತ್ತಿಂ ಚಿರಾ[೧೧]ದೀಯುಃ ಸೈನ್ಯಕ್ಷೋಭೇ [೧೨]ಪ್ರಸೇದುಷಿ ॥**

ಹೀಗೆ ಬಹಳವಾಗಿ ಚಲಿಸಿದುವೂ ವನದ ಪ್ರಾಣಗಳಂತಿರುವುವೂ ಆದ ಪ್ರಾಣಿಗಳು ಸೈನ್ಯದ ಕ್ಷೋಭೆಯು ಶಾಂತವಾದನಂತರ ಬಹು ಸಮಯದಮೇಲೆ ಪೂರ್ವ ಸ್ಥಿತಿಯನ್ನು ಪಡೆದುವು.

**[೧೩]ಪ್ರಯಾಯಾನುವನಂ ಕಿಂಚಿದಂತರಂ ತ[೧೪]ದಮಂಥರಮ್ ।**
**ರೂಪ್ಯಾದ್ರೇರ್ಮಧ್ಯಮಂ ಕೂಟಂ [೧೫]ಸನ್ನಿಕೃಷ್ಯ ಸ್ಥಿತಂ ಬಲಮ್ ॥ ೩೨ ॥**

ಆ ಸೈನ್ಯವು ವನವನ್ನನುಸರಿಸಿ ಶೀಘ್ರವಾಗಿ ಸ್ವಲ್ಪದೂರ ಹೋಗಿ ವಿಜಯಾರ್ಧ ಪರ್ವತದ ಮಧ್ಯದ ಶಿಖರದ ಸಮೀಪಕ್ಕೆ ಹೋಗಿ ನಿಂತಿತು.

**ತತಸ್ತಸ್ಮಿನ್ವನೇ ಮಂದಂ ಮರುತಾಂದೋಲಿತದ್ರುಮೇ ।**
**ನೃಪಾಜ್ಞಯಾ [೧೬]ಬಲಾಧ್ಯಕ್ಷಾಃ ಸ್ಕಂಧಾವಾರಂ ನ್ಯವೇಶಯನ್ ॥ ೩೩ ॥**

ಬಳಿಕ ಮಂದಮಾರುತದಿಂದ ಅಲ್ಲಾಡಿಸಲ್ಪಟ್ಟ ವೃಕ್ಷಗಳುಳ್ಳ ಆ ವನದಲ್ಲಿ ಭರತರಾಜನ ಅಪ್ಪಣೆಯಿಂದ ಸೇನಾಪತಿಗಳು ಸೇನೆಯು ನಿಲ್ಲುವ ಸ್ಥಾನವನ್ನು ನಿರ್ಮಿಸಿದರು.

**ಸ್ವೈರಂ ಜಗೃಹುರಾವಾಸಾನ್ಸೈನಿಕಾಃ [೧೭]ಸಾನುಮತ್ತಟೇ ।**
**ಸ್ವಯಂ ಗಲತ್ಪ್ರಸೂನೌಘ[೧೮]ನಿಘಶಾಖಿಘನೇ ವನೇ ॥ ೩೪ ॥**

ಸೈನಿಕರು ವಿಜಯಾರ್ಧಪರ್ವತದ ತಪ್ಪಲಿನಲ್ಲಿ ತಾನಾಗಿ ಉದುರಿದ ಪುಷ್ಪ ಸಮೂಹವುಳ್ಳ ಉನ್ನತವಾದ ಮರಗಳಿಂದ ದಟ್ಟವಾದ ವನದಲ್ಲಿ ತಮಗಿಷ್ಟವಾದ ಆವಾಸಸ್ಥಾನಗಳನ್ನು ಹೊಂದಿದರು.

೧ ಅನುಗತಾಃ. ೨ ಕಂಪಮಾನಶರೀರಾಃ. ೩ ಉತ್ಕೃಷ್ಟಾಹಾರಪ್ರೀತಿಂ. ೪ ತ್ಯಕ್ತವೇಶಂತಾಃ. ೫ ನಶ್ಯಂತಿಸ್ಮ. ೬ ವಿಪ್ರಕೀರ್ಣವೃಂದಾಃ. ೭ ವೃಕ್ಷವಿಶೇಷಾಚ್ಛಾದನಾಃ ಸಂತಃ. ೮ ಸಿಂಹಃ. ೯ ಜೀವಾಃ. ೧೦ ಪುನಸ್ತತ್ಪ್ರಾಪ್ತಿಂ. ೧೧ ಜಗ್ಮುಃ. ೧೨ ಪ್ರಶಾಂತೇ ಸತಿ. ೧೩ ಗತ್ವಾ. ೧೪ ಶೀಘ್ರಂ. ೧೫ ಸಮೀಪಂ ಕೃತ್ವಾ. ೧೬ ಸೇನಾಪತಯಃ. ೧೭ ಅದ್ರಿಸಾನೌ. ೧೮ ಉತ್ಸೇಧವಿಶಾಲಾಃ.

**ಸರಸ್ತೀರತರೂಪಾಂತಲತಾಮಂಡಪಗೋಚರಾಃ ।**
**ರಮ್ಯಾ ಬಭೂವುರಾವಾಸಾಃ ಸೈನಿಕಾನಾಮಯತ್ನತಃ ॥ ೩೫ ॥**

ಸರೋವರದ ದಡದಲ್ಲಿರುವ ವೃಕ್ಷಗಳ ಸಮೀಪದ ಲತಾಮಂಟಪಗಳುಳ್ಳ ಸೈನಿಕರ ಆವಾಸಸ್ಥಾನಗಳು (ಬಿಡಾರಗಳು) ಪ್ರಯತ್ನವಿಲ್ಲದೆಯೇ ರಮಣೀಯವಾಗಿದ್ದುವು.

**ವನಪ್ರವೇಶ[೧]ಮುನ್ಮಾರ್ಗ್ಗಾಃ ಪ್ರಾಹುರ್ವೈರಾಗ್ಯಕಾರಣಮ್ ।**
**ತತ್ಪ್ರವೇಶೋ [೨]ಯತಸ್ತೇಷಾಮಭವದ್ರಾಗವೃದ್ಧಯೇ ॥ ೩೬ ॥**

ಆ ವನಪ್ರವೇಶವು ಸೈನಿಕರ ರಾಗವೃದ್ಧಿಗೆ ಕಾರಣವಾದುದರಿಂದ ವನಪ್ರವೇಶವು ವೈರಾಗ್ಯಕ್ಕೆ ಕಾರಣವೆಂದು ಅಜ್ಞಾನಿಗಳು ಹೇಳುವ ಮಾತಾಗಿದೆ. ವನವು ಬಹು ಮನೋಹರವಾಗಿದ್ದಿತೆಂದು ಭಾವವು.

**ಅಥ ತತ್ರ ಕೃತಾವಾಸಂ ಜ್ಞಾತ್ವಾ [೩]ಸನಿಯಮಂ ಪ್ರಭುಮ್ ।**
**ಆಗಾನ್ಮಾಗಧವದ್ದ್ರಷ್ಟುಂ ವಿಜಯಾರ್ಧಾಧಿಪಃ ಸುರಃ ॥ ೩೭ ॥**

ಬಳಿಕ ಅಲ್ಲಿ ಭರತರಾಜನು ಪೂಜಾನಿಯಮಸಹಿತನಾಗಿರುವುದನ್ನು ತಿಳಿದು, ಮಾಗಧಾಮರನಂತೆ, ವಿಜಯಾರ್ಧಾಧಿಪತಿಯಾದ ದೇವನು ಭರತನನ್ನು ನೋಡು ವುದಕ್ಕಾಗಿ ಬಂದನು.

**[೪]ತಿರೀಟಶಿಖರೋದಗ್ರೋ ಲಂಬಪ್ರಾಲಂಬನಿರ್ಝರಃ ।**
**[೫]ಸ ಭಾಸ್ವತ್ಕಟಕೋ ರೇಜೇ ರಾಜತಾದ್ರಿರಿವಾಪರಃ ॥ ೩೮ ॥**

ಕಿರೀಟವೆಂಬ ಶಿಖರದಿಂದ ಉನ್ನತನೂ ಜೋಲುತ್ತಿರುವ ಹಾರವೆಂಬ ಪ್ರವಾಹ ವುಳ್ಳವನೂ ಪ್ರಕಾಶಮಾನವಾದ ಕೈಯ ಆಭರಣವೆಂಬ ತಪ್ಪಲುಳ್ಳವನೂ ಆದ ಆ ವಿಜಯಾರ್ಧದೇವನು, ಬೇರೊಂದು ವಿಜಯಾರ್ಧಪರ್ವತವೋ ಎಂಬಂತೆ, ಪ್ರಕಾಶಿ ಸಿದನು.

**ಸಿತಾಂಶುಕಧರಃ ಸ್ರಗ್ವೀ ಹರಿಚಂದನಚರ್ಚಿತಃ ।**
**ಸ ಬಭೌ ಧೃತರತ್ನೌಘೋ ನಿಧಿಃ ಶಂಖ ಇವೋತ್ಥಿತಃ ॥ ೩೯ ॥**

ಶುಭ್ರವಾದ ವಸ್ತ್ರವನ್ನು ಧರಿಸಿದವನೂ ಹಾರವನ್ನು ಧರಿಸಿರುವವನೂ ಚಂದನ ವನ್ನು ಲೇಪಿಸಿಕೊಂಡಿರುವವನೂ ರತ್ನಾಭರಣಗಳನ್ನು ಧರಿಸಿರುವವನೂ ಆದ ಆ ವಿಜಯಾರ್ಧಾಮರನು, ಮೇಲಕ್ಕೆದ್ದಿರುವ ಶಂಖವೆಂಬ ನಿಧಿಯೋ ಎಂಬಂತೆ, ಶೋಭಿಸಿದನು.

**ಸಸಂಭ್ರಮಂ ಚ ಸೋಭ್ಯೇತ್ಯ ಪ್ರಹ್ವತಾಮಗಮತ್ಪ್ರಭೋಃ ।**
**ಸಸತ್ಕಾರಂ ಚ ತಂ ಚಕ್ರೀ ಭದ್ರಾಸನಮಲಂಭಯತ್ ॥ ೪೦ ॥**

ಆ ವಿಜಯಾರ್ಧದೇವನು ವೇಗದಿಂದ ಸಮೀಪಕ್ಕೆ ಬಂದು ಭರತಾಧಿಪನಿಗೆ ನಮಸ್ಕಾರಮಾಡಿದನು. ಚಕ್ರವರ್ತಿಯು ಅವನನ್ನು ಸತ್ಕಾರಪೂರ್ವಕವಾಗಿ ಭದ್ರಾ ಸನದಲ್ಲಿ ಕುಳ್ಳಿರಿಸಿದನು.

**[೬]ಗೋಪಾಯಿತಾಹಮಸ್ಯಾದ್ರೇರ್ಮಧ್ಯಮಂ ಕೂಟಮಾವಸನ್ ।**
**ಸ್ವೈರಚಾರೀ ಚಿರಾದದ್ಯ ತ್ವಯಾಸ್ಮಿ [೭]ಪರವಾನ್ವಿಭೋ ! ॥ ೪೧ ॥**

''ಎಲೈ ಪ್ರಭುವೆ! ಈ ವಿಜಯಾರ್ಧಪರ್ವತದ ಮಧ್ಯದ ಶಿಖರದಲ್ಲಿ ವಾಸಮಾಡುವವನೂ ಈ ಪರ್ವತವನ್ನು ರಕ್ಷಿಸುವವನೂ ಆದ ನಾನು ಬಹುಕಾಲ ದಿಂದ ಸ್ವೇಚ್ಛಾಚಾರಿಯಾಗಿದ್ದು ಈ ದಿವಸ ನಿನ್ನಿಂದ ಸನಾಥನಾಗಿರುತ್ತೇನೆ. ಯಜಮಾನನುಳ್ಳವನಾದೆನೆಂದು ಭಾವವು.

**ವಿದ್ಧಿ ಮಾಂ ವಿಜಯಾರ್ಧಾಖ್ಯಮಮುಂ ಚ ಗಿರಿಮೂರ್ಜಿತಮ್ ।**
**ಅನ್ಯೋನ್ಯಸಂಶ್ರಯಾದಾವಾಮಲಂಘ್ಯಾವಚಲಸ್ಥಿತೀ ॥ ೪೨ ॥**

೧ ಜಡಾಃ. ೨ ಯಸ್ಮಾತ್ಕಾರಣಾತ್. ೩ ಪುರಶ್ಚರಣಪೂಜಾಸಹಿತಂ. ೪ ತಿರೀಟಮೇವ ಶಿಖರಂತೇನ ಉದ್ಗತಃ. ೫ ಸುರಃ. ೬ ರಕ್ಷಿತಾ. ೭ ನಾಥವಾನ್, ಪರವಶ ಇತ್ಯರ್ಥಃ.

ನನ್ನನ್ನೂ ಉನ್ನತವಾದ ಈ ಪರ್ವತವನ್ನೂ ವಿಜಯಾರ್ಧವೆಂಬ ಹೆಸರುಳ್ಳವರನ್ನಾಗಿ ತಿಳಿ. ಈ ಪರ್ವತವೂ ನಾನೂ ಪರಸ್ಪರ ಆಶ್ರಯದಿಂದ ಬೇರೆಯವರಿಂದ ಮೀರಲಶಕ್ಯರೂ ನಿಶ್ಚಂಚಲವಾಗಿರುವವರೂ ಆಗಿದ್ದೇವೆ.

**ದೇವ ! ದಿಗ್ವಿಜಯಸ್ಯಾರ್ಧಂ ವಿಭಜನ್ನೇಷ ಸಾನುಮಾನ್ ।**
**ವಿಜಯಾರ್ಧಶ್ರುತಿಂ ಧತ್ತೇ [೧]ತಾತ್ಸ್ಥ್ಯಾ[೨]ತ್ತದ್ರೂಢಯೋ ವಯಮ್ ॥**

ಪ್ರಭುವೆ ! ದಿಗ್ವಿಜಯದ ಅರ್ಧಭಾಗವನ್ನು ವಿಭಾಗಿಸುವ ಈ ಪರ್ವತವು ವಿಜಯಾರ್ಧವೆಂಬ ಹೆಸರನ್ನು ಪಡೆದಿದೆ. ನಾವು ಆ ಪರ್ವತದಲ್ಲಿರುವುದರಿಂದ ನಮಗೂ ಆ ಹೆಸರು ರೂಢಿಯಾಗಿದೆ.

**ಆಯುಷ್ಮನ್ ! ಯುಷ್ಮದೀಯಾಜ್ಞಾಂ ಮೂರ್ಧ್ನಾ ಸ್ರಜಮಿವೋದ್ವಹನ್ ।**
**[೩]ಪದಾತಿನಿರ್ವಿಶೇಷೋಸ್ಮಿ ವಿಜ್ಞಾಪ್ಯಂ ಕಿಮತಃ ಪರಮ್ ॥ ೪೪ ॥**

ಆಯುಷ್ಮಂತನೆ ! ನಾನು ತಲೆಯಲ್ಲಿ ಪುಷ್ಪಮಾಲೆಯನ್ನು ಧರಿಸುವಂತೆ, ನಿಮ್ಮ ಆಜ್ಞೆಯನ್ನು ಧರಿಸಿ ಕಾಲಾಳಿಗೆ ಸಮಾನನಾಗಿರುತ್ತೇನೆ. ಇದಕ್ಕಿಂತ ಬೇರೆ ನಾನು ವಿಜ್ಞಾಪಿಸತಕ್ಕುದೇನಿದೆ ?"

**ಇತಿ ಬ್ರುವನ್ನಥೋತ್ಥಾಯ [೪]ಶಿವೈಸ್ತೀರ್ಥಾಂಬುಭಿಃ ಪ್ರಭುಂ ।**
**[೫]ಸೋಭ್ಯಷಿಂಚತ್ಸುರೈಃ ಸಾರ್ಧಂ ಸ್ವಂ ನಿಯೋಗಂ ನಿವೇದಯನ್ ॥**

ಈ ಪ್ರಕಾರವಾಗಿ ವಿಜಯಾರ್ಧದೇವನು ಹೇಳಿ ಬಳಿಕ ಎದ್ದು ತನ್ನ ಸೇವೆಯನ್ನು ತಿಳಿಸಿ ದೇವತೆಗಳೊಡನೆ ಮಂಗಲಕರವಾದ ತೀರ್ಥಜಲಗಳಿಂದ ಭರತಚಕ್ರಿಗೆ ಅಭಿಷೇಕಮಾಡಿದನು.

**ತದಾ ಪ್ರಣೇದುರಾಮಂದ್ರಮಾನಕಾಃ ಪಥಿ ವಾರ್ಮುಚಾಮ್ ।**
**ವಿಚೇರುರ್ಮರುತೋ ಮಂದಮಾಧೂತವನವೀಥಯಃ ॥ ೪೬ ॥**

ಆಗ ಆಕಾಶಮಾರ್ಗದಲ್ಲಿ ದೇವದುಂದುಭಿಗಳು ಗಂಭೀರವಾಗಿ ಧ್ವನಿಮಾಡಿದುವು. ಗಾಳಿಗಳು ವನದ ಸಾಲುಮರಗಳನ್ನು ಅಳ್ಳಾಡಿಸುತ್ತ ಮಂದವಾಗಿ ಬೀಸಿದುವು.

**ನನೃತುಃ ಸುರನರ್ತಕ್ಯಃ ಸಲೀಲಾನರ್ತಿತಭ್ರುವಃ ।**
**ಜಗುಶ್ಚ ಮಂಗಲಾನ್ಯಸ್ಯ ಜಯಶಂಸೀನಿ ಕಿನ್ನರಾಃ ॥ ೪೭ ॥**

ಅಪ್ಸರಸ್ತ್ರೀಯರು ಲೀಲೆಯಿಂದ ಹುಬ್ಬುಗಳನ್ನು ಕುಣಿಸುತ್ತ ನರ್ತನಮಾಡಿದರು. ಕಿನ್ನರದೇವತೆಗಳು ಭರತರಾಜನ ಜಯವನ್ನು ಸೂಚಿಸುವ ಮಂಗಳಗಳನ್ನು ಹಾಡಿದರು.

**ಕೃತಾಭಿಷೇಕಮೇನಂ ಚ ಶುಭ್ರನೇಪಥ್ಯಧಾರಿಣಮ್ ।**
**ಯುಯೋಜ ರತ್ನಲಾಭೇನ [೬]ಲಂಭಯ[೭]ನ್ನ ಜಯಾಶಿಷಃ ॥ ೪೮ ॥**

ಅಭಿಷಿಕ್ತನಾಗಿ ಶುಭ್ರವಾದ ಉಡುಪನ್ನು ಧರಿಸಿದ ಭರತೇಶ್ವರನಿಗೆ ವಿಜಯಾರ್ಧಕುಮಾರನು ತಾನು ತಂದಿದ್ದ ರತ್ನಗಳನ್ನು ಕೊಟ್ಟು ವಿಜಯಸೂಚಕವಾದ ಆಶೀರ್ವಾದಗಳನ್ನು ಮಾಡಿದನು.

**ಸ ತಸ್ಮೈ ರತ್ನಭೃಂಗಾರಂ ಸಿತಮಾತಪವಾರಣಮ್ ।**
**[೮]ಪ್ರಕೀರ್ಣಕಯುಗಂ ದಿವ್ಯಂ ದದೌ ಚ ಹರಿವಿಷ್ಟರಮ್ ॥ ೪೯ ॥**

ವಿಜಯಾರ್ಧಕುಮಾರನು ಭರತಚಕ್ರಿಗೆ ರತ್ನದ ಗಿಂಡಿಯನ್ನೂ ಶ್ವೇತಚ್ಛತ್ರವನ್ನೂ ಶ್ರೇಷ್ಠವಾದ ಎರಡು ಚಾಮರಗಳನ್ನೂ ಸಿಂಹಪೀಠವನ್ನೂ ಕೊಟ್ಟನು.

೧ ತಸ್ಮಿನ್ ತಿಷ್ಠತೀತಿ ತತ್ಸ್ಥಸ್ತಸ್ಯ ಭಾವಸ್ತಸ್ಮಾತ್. ೨ ವಿಜಯಾರ್ಧ ಇತಿ ರೂಢಯಃ. ೩ ಪತ್ತಿಸದೃಶಃ. ೪ ಮಂಗಲ್ಯೈಃ. ೫ ವಿಜಯಾರ್ಧಕುಮಾರಃ. ೬ ಪ್ರಾಪಯನ್. ೭ ವಿಜಯಾರ್ಧಕುಮಾರಃ. ೮ ಚಾಮರಯುಗಲಂ.

**ಇತಿ ಪ್ರಸಾದಿತಸ್ತೇನ ವಚೋಭಿಃ ಸಾನುವರ್ತನೈಃ ।**
**ಪ್ರಸಾದತರಲಾಂ ದೃಷ್ಟಿಂ ತತ್ರ [೧]ವ್ಯಾಪಾರಯನ್ ಪ್ರಭುಃ ॥ ೫೦ ॥**

**ವಿಸರ್ಜಿತಶ್ಚ ಸಾನುಜ್ಞಂ ಪ್ರಭುಣಾ ಕೃತಸತ್ಕ್ರಿಯಃ ।**
**ಭೃತ್ಯತ್ವಂ [೨]ಪ್ರತಿಪದ್ಯಾಸ್ಯ ಸ್ವಮೋಕಃ ಪ್ರತ್ಯಗಾತ್ಸುರಃ ॥ ೫೧ ॥**

ಈ ಪ್ರಕಾರವಾಗಿ ವಿಜಯಾರ್ಧದೇವನಿಂದ ವಿನಯೋಕ್ತಿಗಳಿಂದ ಸಂತೋಷಪಡಿಸಲ್ಪಟ್ಟ ಭರತೇಶ್ವರನು ಪ್ರಸನ್ನತೆಯಿಂದ ಚಲಿಸುತ್ತಿರುವ ತನ್ನ ದೃಷ್ಟಿಯಿಂದ ಆ ದೇವನನ್ನು ನೋಡಿ ಸತ್ಕರಿಸಿ ಬೀಳ್ಕೊಟ್ಟನು. ಆ ದೇವನು ಭರತರಾಜನಿಗೆ ತಾನು ಭೃತ್ಯನಾಗಿರುವುದಾಗಿ ಒಪ್ಪಿಕೊಂಡು ತನ್ನ ಮನೆಗೆ ಹೊರಟುಹೋದನು.

**[೩]ವಿಜಯಾರ್ಧೇ ಜಿತೇ ಕೃತ್ಸ್ನಂ ಜಿತಂ ದಕ್ಷಿಣಭಾರತಮ್ ।**
**ಮನ್ವಾನೋ ನಿಧಿರಾಟ್ತತ್ರ ಚಕ್ರರತ್ನಮಪೂಜಯತ್ ॥ ೫೨ ॥**

**ಗಂಧೈಃ ಪುಷ್ಪೈಶ್ಚ ಧೂಪೈಶ್ಚ ದೀಪೈಶ್ಚ ಸ ಜಲಾಕ್ಷತೈಃ ।**
**ಫಲೈಶ್ಚ ಚರುಭಿರ್ದಿವ್ಯೈಶ್ಚಕ್ರೇಜ್ಯಾಂ ನಿರವರ್ತಯತ್ ॥ ೫೩ ॥**

ವಿಜಯಾರ್ಧಕುಮಾರನನ್ನು ಜಯಿಸಿದುದರಿಂದ ದಕ್ಷಿಣಭಾರತವನ್ನೆಲ್ಲ ಜಯಿಸಿದಂತಾಗುವುದೆಂದು ಬಗೆದು ಚಕ್ರೇಶ್ವರನು ಅಲ್ಲಿ ದಿವ್ಯವಾದ ಜಲ ಗಂಧ ಅಕ್ಷತ ಪುಷ್ಪ ಚರು ದೀಪ ಧೂಪ ಫಲಗಳಿಂದ ಚಕ್ರರತ್ನದ ಪೂಜೆಯನ್ನು ಮಾಡಿದನು.

**ವಿಜಯಾರ್ಧಜಯೇಪ್ಯಾಸೀದಮಂದೋಸ್ಯ ಜಯೋದ್ಯಮಃ ।**
**ಉತ್ತರಾರ್ಧಜಯಾ[೪]ಶಂಸಾಂ [೫]ಪ್ರತ್ಯಾಗೂರ್ಣಸ್ಯ ಚಕ್ರಿಣಃ ॥ ೫೪ ॥**

ವಿಜಯಾರ್ಧಕುಮಾರನನ್ನು ಅಂದರೆ ದಕ್ಷಿಣಭಾರತವನ್ನು ಜಯಿಸಿದರೂ ಉತ್ತರಭಾರತವನ್ನು ಜಯಿಸಬೇಕೆಂಬ ಇಚ್ಛೆಯಿಂದ ಪ್ರಯತ್ನಪರನಾದ ಭರತ ಚಕ್ರೇಶ್ವರನ ಜಯದ ಉದ್ಯಮವು ವೇಗವಾಗಿಯೇ ಇದ್ದಿತು.

**ತತಃ [೬]ಪ್ರತೀಪಮಾಗತ್ಯ ರೂಪ್ಯಾದ್ರೇಃ ಪಶ್ಚಿಮಾಂ ಗುಹಾಮ್ ।**
**[೭]ನಿಕಷಾ ವನಮಾರುಧ್ಯ ಬಲೈರೀಶೋ ನ್ಯವಿಕ್ಷತ ॥ ೫೫ ॥**

ಬಳಿಕ ಭರತೇಶ್ವರನು ವಿಜಯಾರ್ಧಪರ್ವತದ ದಕ್ಷಿಣದಿಕ್ಕಿಗೆ ಬಂದು ವನದ ಸಮೀಪದಲ್ಲಿ ತನ್ನ ಸೈನಿಕರೊಡನೆ ಪಶ್ಚಿಮಗುಹೆಯನ್ನಾಕ್ರಮಿಸಿ ಪ್ರವೇಶಿಸಿದನು.

**[೮]ದಕ್ಷಿಣೇನ ತಮದ್ರೀಂದ್ರಂ ಮಧ್ಯೇ [೯]ವೇದಿಕಯೋರ್ದ್ವಯೋಃ ।**
**ಬಲಂ ನಿವಿವಿಶೇ ಭರ್ತುಃ ಸಿಂಧೋಸ್ತಟವನಾದ್ಬಹಿಃ ॥ ೫೬ ॥**

ಭರತೇಶ್ವರನ ಸೈನ್ಯವು ಆ ಪರ್ವತದ ದಕ್ಷಿಣದಿಕ್ಕಿನಲ್ಲಿ ಆ ಪರ್ವತದ ಮತ್ತು ವನದ ವೇದಿಕೆಗಳ ಮಧ್ಯದಲ್ಲಿ ಸಮುದ್ರತೀರದಲ್ಲಿರುವ ವನದಹೊರಗೆ ಇರಿಸಲ್ಪಟ್ಟಿತು.

**ಭೂಯೋ ದ್ರಷ್ಟವ್ಯಮತ್ರಾಸ್ತಿ ಬಹ್ವಾಶ್ಚರ್ಯೇ ಧರಾಧರೇ ।**
**ಇತಿ ತತ್ರ ಚಿರಾವಾಸಂ ಬಹುಮೇನೇ ಕಿಲಾಧಿರಾಟ್ ॥ ೫೭ ॥**

ಬಹು ಆಶ್ಚರ್ಯಕರವಾದ ಈ ಪರ್ವತದಲ್ಲಿ ಇನ್ನೂ ನೋಡತಕ್ಕುದಿದೆಯೆಂದು ಚಕ್ರೇಶ್ವರನು ಅಲ್ಲಿ ಹೆಚ್ಚುಕಾಲವಿರುವುದಕ್ಕೆ ಇಷ್ಟಪಟ್ಟನಂತೆ.

**[೧೦]ಚಿರಾಸನೇಪಿ ತತ್ರಾಸ್ಯ ನಾಸೀತ್ಸ್ವಲ್ಪೋ[೧೧]ಪ್ಯುಪಕ್ಷಯಃ ।**
**ಪ್ರತ್ಯುತಾಪೂರ್ವಲಾಭೇನ ಪ್ರಭು[೧೨]ರಾಪೂರ್ಯತಾಬ್ಧಿವತ್ ॥ ೫೮ ॥**

೧ ವ್ಯಾಪಾರಯದಿತ್ಯಪಿ ಪಾಠಃ. ೨ ಪ್ರತಿಪಾದ್ಯೇತ್ಯಪಿ ಪಾಠಃ. ೩ ವಿಜಯಾರ್ಧಕುಮಾರೇ. ೪ ಇಚ್ಛಾಮುದ್ದಿಶ್ಯ. ೫ ಉದ್ಯತಸ್ಯ. ೬ ಪಶ್ಚಿಮದಿಶಂ. ೭ ವನಸ್ಯ ಸಮೀಪಂ. ೮ ತಸ್ಯಾದ್ರೀಂದ್ರಸ್ಯ ದಕ್ಷಿಣಸ್ಯಾಂದಿಶಿ. ೯ ಪರ್ವತವೇದಿಕಾವನವೇದಿಕಯೋಃ. ೧೦ ಬಹುಕಾಲನಿವಸನೇ ಸತ್ಯಪಿ. ೧೧ ಧನಕ್ಷಯಃ. ೧೨ ವರ್ಧ್ಯತೇ ಸ್ಮ.

ಅಲ್ಲಿ ಬಹುಕಾಲ ವಾಸಮಾಡಿದರೂ ಭರತೇಶ್ವರನಿಗೆ ಸ್ವಲ್ಪವೂ ಧನವ್ಯಯ ವಾಗಲಿಲ್ಲ. ಅದಕ್ಕೆ ಬದಲಾಗಿ ಪ್ರಭುವು ಅಪೂರ್ವ ಪದಾರ್ಥಗಳ ಲಾಭದಿಂದ, ಸಮುದ್ರದಂತೆ, ವೃದ್ಧಿಯನ್ನು ಹೊಂದಿದನು.

**ಕೃತಾವಾಸಂ ಚ ತತ್ರೈನಂ ಶ್ರುತ್ವಾ ದ್ರಷ್ಟುಮುಪಾಗಮನ್ ।**
**ಪಾರ್ಥಿವಾಃ [೧]ಪೃಥಿವೀಮಧ್ಯಾನ್ಮಧ್ಯೇನದ್ಯೋರ್ದ್ವಯೋಃ ಸ್ಥಿತಾಃ ॥ ೫೯ ॥**

ಅಲ್ಲಿ ಭರತೇಶ್ವರನು ವಾಸವಾಗಿರುತ್ತಾನೆಂದು ಕೇಳಿ ಅವನನ್ನು ನೋಡುವುದ ಕ್ಕೋಸ್ಕರ ಗಂಗಾ ಸಿಂಧು ನದಿಗಳ ಮಧ್ಯದಲ್ಲಿರುವ ಭೂಮಧ್ಯದಿಂದ ರಾಜರುಗಳು ಬಂದರು.

**ದೂರಾನತಚಲನ್ಮೌಲಿಸಂದಷ್ಟಕರಕುಡ್ಮಲಾಃ ।**
**ಪ್ರಣಮಂತಃ ಸ್ಫುಟೀಚಕ್ರುಃ ಪ್ರಭೌ ಭಕ್ತಿಂ ಮಹೀಭುಜಃ ॥ ೬೦ ॥**

ದೂರದಿಂದ ಬಾಗಿದ ಮತ್ತು ಚಲಿಸುತ್ತಿರುವ ಕಿರೀಟಗಳಲ್ಲಿ ಕೈಗಳನ್ನು ಜೋಡಿ ಸಿಟ್ಟು ನಮಸ್ಕರಿಸುತ್ತಿರುವ ಆ ರಾಜರುಗಳು ಭರತಚಕ್ರೇಶ್ವರನಲ್ಲಿ ತಮಗಿರುವ ಭಕ್ತಿಯನ್ನು ವ್ಯಕ್ತಪಡಿಸಿದರು.

**ಕುಂಕುಮಾಗರುಕರ್ಪೂರಸುವರ್ಣಮಣಿಮೌಕ್ತಿಕೈಃ ।**
**ರತ್ನೈರನ್ಯೈಶ್ಚ ರತ್ನೇಶಂ ಭಕ್ತ್ಯಾನರ್ಚುರ್ನೃಪಾಃ ಪರಮ್ ॥ ೬೧ ॥**

ಆ ರಾಜರು ರತ್ನಗಳಿಗೆ ಅಧಿಪತಿಯಾದ ಭರತನನ್ನು ಕುಂಕುಮ–ಕೇಸರ ಅಗುರು–ಚಂದನ ಕರ್ಪೂರ ಬಂಗಾರ ರತ್ನ ಮುತ್ತು ಇವುಗಳಿಂದಲೂ ಬೇರೆ ರತ್ನಗಳಿಂದಲೂ ಬಹು ಭಕ್ತಿಯಿಂದ ಪೂಜಿಸಿದರು.

**ವಿಷ್ವಗಾಪೂರ್ಯಮಾಣಸ್ಯ ರೈರಾಶಿಭಿರನಾರತಮ್ ।**
**[೨]ಕೋಶಪ್ರಾವೇಶ್ಯರತ್ನಾನಾಮಿಯತ್ತಾಂ ಕೋಽಸ್ಯ ನಿರ್ಣಯೇತ್ ॥ ೬೨ ॥**

ಎಲ್ಲಾಕಡೆಗಳಿಂದಲೂ ಸರ್ವದಾ ಧನರಾಶಿಗಳಿಂದ ತುಂಬಲ್ಪಡುತ್ತಿರುವ ಈ ಭರತರಾಜನ ಭಂಡಾರಕ್ಕೆ ಸೇರಿಸಲು ಯೋಗ್ಯವಾದ ರತ್ನಗಳ ಪರಿಮಿತಿಯನ್ನು ಯಾವನು ನಿರ್ಣಯಿಸಬಲ್ಲನು ?

**ದೇಶಾಧ್ಯಕ್ಷಾ ಬಲಾಧ್ಯಕ್ಷೈರ್ಬಲಂ [೩]ಸುಕೃತರಕ್ಷಣಮ್ ।**
**[೪]ಯವಸೇಂಧನಸಂಧಾನೈಸ್ತದೋ[೫]ಪಜಗೃಹುಶ್ಚಿರಮ್ ॥ ೬೩ ॥**

ಆಗ ದೇಶಾಧಿಪತಿಗಳು ಸೇನಾಪತಿಗಳಿಂದ ಚೆನ್ನಾಗಿ ರಕ್ಷಿಸಲ್ಪಟ್ಟ ಸೈನ್ಯಕ್ಕೆ ಹುಲ್ಲು ಕಟ್ಟಿಗೆ ಮೊದಲಾದ ಸಾಮಗ್ರಿಗಳನ್ನು ಒದಗಿಸಿಕೊಟ್ಟು ಬಹುಕಾಲದವರೆಗೆ ಉಪಕಾರಮಾಡಿದರು.

**ಉತ್ತರಾರ್ಧಜಯೋದ್ಯೋಗಂ ಪ್ರಭೋಃ ಶ್ರುತ್ವಾ ತದಾಗಮನ್ ।**
**ಪಾರ್ಥಿವಾಃ [೬]ಕುರುರಾಜಾದ್ಯಾಃ ಸಮಗ್ರಬಲವಾಹನಾಃ ॥ ೬೪ ॥**

ಆಗ ಸೋಮಪ್ರಭರಾಜನ ಪುತ್ರನೇ ಮೊದಲಾದ ರಾಜರು ಭರತೇಶ್ವರನ ಉತ್ತರಭರತಖಂಡದ ಜಯದ ಪ್ರಯತ್ನವನ್ನು ಕೇಳಿ ತಮ್ಮ ಸಮಸ್ತ ಸೇನಾ ವಾಹನಸಮೇತರಾಗಿ ಬಂದರು. (ವಿಜಯಾರ್ಧಪರ್ವತದ ದಕ್ಷಿಣಭಾಗದಲ್ಲಿರುವ ಭೂಭಾಗಕ್ಕೆ ದಕ್ಷಿಣಭರತಖಂಡವೆಂದೂ ಆ ಪರ್ವತದ ಉತ್ತರಭಾಗದಲ್ಲಿರುವ ಭೂಭಾಗಕ್ಕೆ ಉತ್ತರಭರತಖಂಡವೆಂದೂ ಹೆಸರು).

**ಆಹೂತಾಃ ಕೇಚಿದಾಜಗ್ಮುಃ ಪ್ರಭುಣಾ ಮಂಡಲಾಧಿಪಾಃ ।**
**ಅನಾಹೂತಾಶ್ಚ ಸಂಭೇಜುರ್ವಿಭುಂ [೭]ಚಾರಭಟಾಃ ಪರೇ ॥ ೬೫ ॥**

೧ ಗಂಗಾಸಿಂಧ್ವೋರ್ಭೂಪ್ರದೇಶಮಧ್ಯಾತ್. ೨ ಭಾಂಡಾಗಾರಪ್ರವೇಶಯೋಗ್ಯ. ೩ ಸುಷ್ಠುಕೃತ, ಸುಕೃತಲಕ್ಷಣಮಿತ್ಯಪಿ ಪಾಠಃ. ೪ ತೃಣಕಾಷ್ಠೋಪದಂಶೈಃ. ೫ ಉಪಕಾರಂ ಚಕ್ರುಃ. ೬ ಸೋಮ ಪ್ರಭಪುತ್ರಾದ್ಯಾಃ. ೭ ವೀರಭಟಾಃ.

ಕೆಲವು ಮಂದಿ ಮಂಡಲೇಶ್ವರ-ರಾಜರು ಭರತೇಶ್ವರನಿಂದ ಕರೆಯಿಸಲ್ಪಟ್ಟವರಾಗಿ ಬಂದರು. ಬೇರೆ ಕೆಲವು ಮಂದಿ ವೀರಭಟರು ಕರೆಯಿಸಲ್ಪಡದೆಯೇ ಪ್ರಭುವನ್ನು ಸೇರಿದರು.

**[೧]ವಿದೇಶಃ ಕಿಲ ಯಾತವ್ಯೋ ಜೇತವ್ಯಾ ಮ್ಲೇಚ್ಛಭೂಮಿಪಾಃ ।**
**ಇತಿ ಸಂಚಿಂತ್ಯ ಸಾಮಂತೈಃ ಪ್ರಾಯಃ [೨]ಸಜ್ಜಂ ಧನುರ್ಬಲಮ್ ॥ ೬೬ ॥**

"ನಾನಾದೇಶಗಳಿಗೆ ಹೋಗಬೇಕಾಗಿದೆ. ಮ್ಲೇಚ್ಛರಾಜರುಗಳನ್ನು ಜಯಿಸಬೇಕಾ ಗಿದೆ" ಈ ಪ್ರಕಾರವಾಗಿ ಯೋಚಿಸಿ ಸಾಮಂತರಾಜರುಗಳು ಧನುರ್ಧಾರಿಗಳಾದ ಸೈನಿಕರನ್ನೆಲ್ಲ ಬರಮಾಡಿದರು.

**ಧನ್ವಿನಃ ಶರನಾರಾಚಸಂಭೃತೇ[೩]ಷುಧಿಬಂಧನೈಃ ।**
**ನ್ಯವೇದಯನ್ನಿವಾತ್ಮಾನ[೪]ಮೃಣದಾಸಮಧೀಶಿನಾಮ್ ॥ ೬೭ ॥**

ಧನುರ್ಧಾರಿಗಳು ಬಾಣಗಳಿಂದಲೂ ತೀಕ್ಷ್ಣಬಾಣಗಳಿಂದಲೂ ತುಂಬಲ್ಪಟ್ಟ ಬತ್ತಳಿಕೆಗಳನ್ನು ಕಟ್ಟಿಕೊಂಡು ತಮ್ಮತಮ್ಮ ಯಜಮಾನರುಗಳಿಗೆ ತಾವು ಸಾಲಮಾಡಿ ಅದನ್ನು ತೀರಿಸುವುದಕ್ಕಾಗಿ ಸೇವಕರಾಗಿರುವುದನ್ನು ತಿಳಿಸುವಂತಿದ್ದರು.

**ಧನುರ್ಧರಾ ಧನುಃ [೫]ಸಜ್ಯ[೬]ಮಾಸ್ಫಾಲ್ಯಾ[೭]ಚಕೃಷುಃ ಪರೇ ।**
**ಚಿಕೀರ್ಷವ ಇವಾರೀಣಾಂ ಜೀವಾಕರ್ಷಂ ಸಹುಂಕೃತಾಃ ॥ ೬೮ ॥**

ಬೇರೆ ಕೆಲವು ಧನುರ್ಧಾರಿಗಳು ಹುಂಕಾರಧ್ವನಿಯನ್ನು ಮಾಡಿ ಶತ್ರುಗಳ ಜೀವವನ್ನು ಎಳೆಯಲಿಚ್ಛಿಸುವವರಂತೆ ಹೆದೆಯೇರಿಸಿದ ಧನುಸ್ಸನ್ನು ಹೊಡೆದು ಎಳೆದರು.

**ಕರವಾಲಾನ್ಕರೇ ಕೃತ್ವಾ ತುಲಯಂತಿ ಸ್ಮ ಕೇಚನ ।**
**ಸ್ವಾಮಿಸತ್ಕಾರಭಾರೇಣ [೮]ನೂನಂ ತಾ[೯]ನ್ನವಮಿಮಿತ್ಸವಃ ॥ ೬೯ ॥**

ಕೆಲವು ಮಂದಿ ಭಟರು ಕೈಯಲ್ಲಿ ಖಡ್ಗಗಳನ್ನು ಹಿಡಿದು ಅವುಗಳನ್ನು, ತಮ್ಮ ಪ್ರಭುಗಳ ಸತ್ಕಾರದ ಭಾರದೊಡನೆ ಹೋಲಿಕೆಯನ್ನು ಅಳೆಯಲಿಚ್ಛಿಸುವವರಂತೆ, ತೂಗಿಹಿಡಿದರು.

**[೧೦]ಸಂವರ್ಮಿತಾ ಭೃಶಂ ರೇಜುರ್ಭಟಾಃ [೧೧]ಪ್ರೋಲ್ಲಾಸಿತಾಸಯಃ ।**
**ನಿರ್ಮೋಕೈರಿವ [೧೨]ವಿಶ್ಲಿಷ್ಟೈ[೧೩]ರ್ಲಲಜ್ಜಿಹ್ವಾ ಮಹಾಹಯಃ ॥ ೭೦ ॥**

ಕವಚಗಳನ್ನು ಧರಿಸಿ ಖಡ್ಗಗಳನ್ನು ಝಳಪಿಸಿದ ಕೆಲವು ಮಂದಿ ಭಟರು, ಸಡಿಲಿದ ಪೊರೆಗಳಿಂದ ಕೂಡಿದುವೂ ಚಲಿಸುತ್ತಿರುವ ನಾಲಿಗೆಯುಳ್ಳುವೂ ಆದ ದೊಡ್ಡ ಹಾವುಗಳಂತೆ, ಅಧಿಕವಾಗಿ ಶೋಭಿಸಿದರು.

**ಸಾಟೋಪಂ [೧೪]ಸ್ಫುಟಿತಾಃ ಕೇಚಿದ್ವಲ್ಗಂತಿ ಸ್ಮಾಭಿತೋ ಭಟಾಃ ।**
**[೧೫]ಅಸ್ಯುದ್ಯತಾಃ ಪುರೋರಾತೀನ್ಪಶ್ಯಂತ ಇವ ಸಮ್ಮುಖಮ್ ॥ ೭೧ ॥**

ಆವೇಶವಾಗಿ ಭುಜಗಳನ್ನು ಹೊಡೆಯುತ್ತಿರುವ ಕೆಲವು ಮಂದಿ ಭಟರು ಮುಂದುಗಡೆಯಲ್ಲಿ ಖಡ್ಗವನ್ನು ಹಿಡಿದು, ಇದಿರಿನಲ್ಲಿ ಶತ್ರುಗಳನ್ನು ನೋಡುವವ ರಂತೆ, ಸುತ್ತಲೂ ಓಡಾಡಿದರು.

**[೧೬]ಅಸ್ತ್ರೈ[೧೭]ರ್ವ್ಯಸ್ತ್ರೈಶ್ಚ[೧೮]ಶಸ್ತ್ರೈಶ್ಚ[೧೯]ಶಿರಸ್ತ್ರೈಃ ಸತನುತ್ರಕೈಃ ।**
**ದಧು [೨೦]ರ್ಜಯನಶಾಲಾನಾಂ ಲೀಲಾಂ [೨೧]ರಥ್ಯಾಃ ಸುಸಂಭೃತಾಃ ॥**

೧ ನಾನಾದೇಶಃ. ೨ ಸನ್ನಿಧೀಕೃತಂ. ೩ ತೂಣೀರಃ. ೪ ಋಣಮಥನೋದಾಸಕರ್ಮಣಾ ನಿರ್ಹರೇತ್ ಇತಿವಾಕ್ಯಮತ್ರೋಪಜೀವ್ಯಂ. ೫ ಜ್ಯಾಸಹಿತಂ. ೬ ಆತಾಡ್ಯ. ೭ ಆಕರ್ಷಯಂತಿ ಸ್ಮ. ೮ ಇವ. ೯ ಸಾದೃಶ್ಯೇನ ಮಾತುಮಿಚ್ಛವಃ. ೧೦ ಧೃತಕವಚಾಃ. ೧೧ ಪ್ರಕರ್ಷೇಣ ಉಲ್ಲಾಸಿತಖಡ್ಗಾಃ. ೧೨ ಶಿಥಿಲೈಃ. ೧೩ ಚಲತ್. ೧೪ ಆಸ್ಫಾಲಿತಭುಜಾಃ ಸ್ಫುಟಿತ ಪುರಾಣಕಿಣಾ ವಾ. ೧೫ ಖಡ್ಗೇ ಉದ್ಯುಕ್ತಾಃ. ೧೬ ದಿವ್ಯಾಯುಧೈಃ. ೧೭ ಲಗುಡಾದ್ಯಾಯುಧೈಃ. ೧೮ ಸಾಮಾನ್ಯಾಯುಧೈಃ. ೧೯ ಶೀರ್ಷಕೈಃ. ೨೦ ಶಸ್ತ್ರಶಾಲಾನಾಂ. ೨೧ ವೀಥ್ಯಃ.

ದಿವ್ಯಾಯುಧಗಳಿಂದಲೂ ದೊಣ್ಣೆ ಮೊದಲಾದ ಆಯುಧಗಳಿಂದಲೂ ಸಾಮಾನ್ಯಾಯುಧಗಳಿಂದಲೂ ತಲೆಯ ಕುಲಾವಿಗಳಿಂದಲೂ ಕವಚಗಳಿಂದಲೂ ಚೆನ್ನಾಗಿ ವ್ಯಾಪ್ತವಾದ ಬೀದಿಗಳು ಶಸ್ತ್ರಶಾಲೆಗಳ ಲೀಲೆಯನ್ನು ಧರಿಸಿದುವು. ಸೈನಿಕರು ಸಂಚರಿಸುವ ಮಾರ್ಗಗಳು ಶಸ್ತ್ರಶಾಲೆಗಳಂತಿದ್ದುವೆಂದು ಭಾವವು.

**ರಥಿನೋ[೧]ರಥಕಟ್ಯಾಸು ಗುರ್ವೀರಾಯುಧಸಂಪದಃ ।**
**ಸಮಾರೋಪ್ಯಾಪಿ ಪತ್ತಿಭ್ಯೋ ಭೇಜುರೇವಾ[೨]ತಿಗೌರವಮ್ ॥ ೭೩ ॥**

ರಥಿಕರು ರಥಸಮೂಹಗಳಲ್ಲಿ ಭಾರವಾದ ಆಯುಧವೆಂಬ ಸಂಪತ್ತುಗಳನ್ನು ಹೇರಿಯೂ ಕಾಲಾಳುಗಳಿಗಿಂತ ಹೆಚ್ಚು ಗೌರವವನ್ನು ಅಂದರೆ ವೇಗವನ್ನು ಹೊಂದಿದರು. ರಥಿಕರು ಕಾಲಾಳುಗಳಿಗಿಂತ ವೇಗವಾಗಿ ಹೋದರೆಂದರ್ಥವು.

**ಹಸ್ತಿನಾಂ ಪದರಕ್ಷಾಯೈ ಸುಭಟಾ ಯೋಜಿತಾ ನೃಪೈಃ ।**
**ರಾಜನ್ಯೈಃ ಸಹ [೩]ಯುಧ್ವಾನಃ ಕೃತಾಶ್ಚಾ[೪]ಭಿನಿಷಾದಿನಃ ॥ ೭೪ ॥**

ರಾಜರುಗಳು ಆನೆಗಳ ಕಾಲುಗಳನ್ನು ರಕ್ಷಿಸುವುದಕ್ಕೋಸ್ಕರ ಒಳ್ಳೆಯ ಭಟರನ್ನು ನೇಮಿಸಿದರು. ರಾಜರುಗಳೊಡನೆ ಯುದ್ಧಮಾಡುವವರನ್ನು ಆನೆಯ ಮಾವಟಿಗರ ಸುತ್ತಲೂ ಇರಿಸಿದರು.

**[೫]ಪ್ರಧೀರಾ [೬]ರಾಜಯುಧ್ವಾನಃ ಕ್ಲೃಪ್ತಾಃ ಪತ್ತಿಷು ನಾಯಕಾಃ ।**
**[೭]ಆಶ್ವೀಯೇ ಚ [೮]ಸಸನ್ನಾಹಾಃ [೯]ಸೋತ್ತರಂಗಾಸ್ತುರಂಗಿಣಃ ॥ ೭೫ ॥**

ಅತ್ಯಂತ ಧೀರರಾದ ರಾಜಭಟರು ಕಾಲಾಳುಗಳಿಗೆ ಅಧಿಕಾರಿಗಳಾಗಿ ನೇಮಿಸಲ್ಪಟ್ಟರು. ಕವಚಗಳನ್ನು ತೊಟ್ಟಿರುವವರೂ ಅಲೆಗಳಂತಿರುವವರೂ ಆದ ಕುದುರೆ ಸವಾರರು ಕುದುರೆಗಳ ಸಮೂಹಕ್ಕೆ ಅಧಿಕಾರಿಗಳಾಗಿ ನೇಮಿಸಲ್ಪಟ್ಟರು.

**ಆರಚಯ್ಯ ಬಲಾನ್ಯೇಕೇ ಸ್ವಾನೀಕ್ಷಾಂಚಕ್ರಿರೇ ನೃಪಾಃ ।**
**[೧೦]ದಂಡಮಂಡಲಭೋಗಾಸಂಹತವ್ಯೂಹೈಃ ಸುಯೋಜಿತೈಃ ॥ ೭೬ ॥**

ಕೆಲವು ರಾಜರು ತಮ್ಮ ಸೈನ್ಯಗಳನ್ನು ಚೆನ್ನಾಗಿ ಸೇರಿಸಲ್ಪಟ್ಟ ಸಾಲಾಗಿರುವ ಸಮೂಹವಾಗಿಯೂ ವರ್ತುಲಾಕಾರವುಳ್ಳ ಸಮೂಹವಾಗಿಯೂ ವಿಸ್ತಾರವಾದ ಆಕಾರವುಳ್ಳ ಸಮೂಹವಾಗಿಯೂ ವಿರಳವಾದ ಆಕಾರವುಳ್ಳ ಸಮೂಹವಾಗಿಯೂ ರಚನೆಮಾಡಿ ನೋಡಿದರು.

**ಚಕ್ರಿಣೋ[೧೧]ವಸರಃ ಕೋಸ್ಯ ಯೋಸ್ಮಾಭಿಃ ಸಾಧ್ಯತೇಲ್ಪಕೈಃ ।**
**ಭಕ್ತಿರೇಷಾ ತು ನಃ ಕಾಲೇ ಪ್ರಭೋರ್ಯ[೧೨]ದನುಸರ್ಪಣಮ್ ॥ ೭೭ ॥**

''ಅಲ್ಪರಾದ ನಾವು ಸಾಧಿಸತಕ್ಕ ಈ ಚಕ್ರೇಶ್ವರನ ಸಮಯವಾವುದು ? ಸಕಾಲದಲ್ಲಿ ಪ್ರಭುವಿನ ಈ ಅನುಸರಣವಾದರೂ ನಮ್ಮ ಭಕ್ತಿಯಾಗಿದೆ. ಭರತರಾಜನಿಗಾಗಿ ತಾವು ಮಾಡಬೇಕಾದ ಕಾರ್ಯವೇ ಒದಗುವುದಿಲ್ಲವೆಂದೂ ಹಿಂಬಾಲಿಸಿಹೋಗುವುದು ತಮ್ಮ ಭಕ್ತಿಯೆಂದೂ ಭಾವವು.

**ಪ್ರಭೋರವಸರಃ [೧೩]ಸಾರ್ಯಃ ಪ್ರಸಾರ್ಯಂ ನೋ ಯಶೋಧನಮ್ ।**
**ವಿರೋಧಿಬಲಮುತ್ಸಾರ್ಯಂ ಸಂಧಾರ್ಯಂ [೧೪]ಪುರುಷವ್ರತಮ್ ॥**

ಪ್ರಭುವಿನ ಅವಕಾಶವನ್ನು ಪಡೆಯಬೇಕು. ನಮ್ಮ ಯಶಸ್ಸೆಂಬ ಧನವನ್ನು ಹರಡಬೇಕು. ಶತ್ರುಗಳ ಸೈನ್ಯವನ್ನು ಓಡಿಸಬೇಕು. ಪೌರುಷವನ್ನು ಹೊಂದಬೇಕು.

**ದ್ರಷ್ಟವ್ಯಾ ವಿವಿಧಾ ದೇಶಾ ಲಬ್ಧವ್ಯಾಶ್ಚ ಜಯಾಶಿಷಃ ।**
**ಇತ್ಯು[೧೫]ದಾಚಕ್ರಿರೇನ್ಯೋನ್ಯಂ ಭಟಾಃ ಶ್ಲಾಘ್ಯೈರುದಾಹೃತೈಃ ॥ ೭೯ ॥**

೧ ರಥಸಮೂಹೇಷು. ೨ ಅತ್ಯರ್ಥಂ ವೇಗಂ ಗತಾ ಇತ್ಯರ್ಥಃ. ೩ ಯುದ್ಧಂ ಕುರ್ವಾಣಾಃ. ೪ ಹಸ್ತ್ಯಾರೋಹಾಣಾಂ ಸಮಂತಾತ್. ೫ ಪ್ರವೀರಾ ಇತ್ಯಪಿ ಪಾಠಃ. ೬ ರಾಜಭಟಾಃ. ೭ ಅಶ್ವಸಮೂಹೇ. ೮ ಸಕವಚಾಃ. ೯ ಊರ್ಮಿಸಮಾನಾಃ. ೧೦ ಶ್ರೇಣ್ಯಾಕಾರ ವೃತ್ತಾಕಾರ ವಿಸ್ತೃತಾಕಾರ ವಿರಲಾಕಾರ ಪ್ರಾಪ್ತ ಸಮೂಹೈಃ. ೧೧ ಸಮಯಃ. ೧೨ ಅನುಸರಣಂ. ೧೩ ಪ್ರಾಪಣೀಯಃ. ೧೪ ಪೌರುಷಂ. ೧೫ ಊಚಿರೇ.

ನಾನಾದೇಶಗಳನ್ನು ನೋಡಬೇಕು. ಜಯಾಶೀರ್ವಾದಗಳನ್ನು ಹೊಂದಬೇಕು.'' ಈ ರೀತಿಯಾಗಿ ಭಟರು ಪರಸ್ಪರವಾಗಿ ಸ್ತುತ್ಯವಾದ ಭಾಷಣಗಳಿಂದ ಮಾತನಾಡುತ್ತಿದ್ದರು.

**ಗಿರಿದುರ್ಗೋಯಮುಲ್ಲಂಘ್ಯೋ ಮಹತ್ಯಃ ಸರಿತೋಂ[೧]ತರಾ ।**
**ಇತ್ಯಪಾಯೇಕ್ಷಿಣಃ ಕೇಚಿ[೨]ದಯಾನಂ ಬಹುಮೇನಿರೇ ॥ ೮೦ ॥**

ದೊಡ್ಡ ಹೊಳೆಗಳ ಮಧ್ಯದಲ್ಲಿರುವ ಈ ಗಿರಿದುರ್ಗವನ್ನು ದಾಟುವುದು ಅಪಾಯಕರವೆಂದು ಕೆಲವು ಮಂದಿ ಭಟರು ವಾಹನವಿಲ್ಲದಿರುವುದು ಅಥವಾ ಹೋಗದಿರುವುದು ಒಳ್ಳೆಯದೆಂದು ತಿಳಿದರು.

**ಇತಿ ನಾನಾವಿಧೈರ್ಭಾವೈಃ ಸಂಜಲ್ಪೈಶ್ಚ [೩]ಲಘೂತ್ಥಿತಾಃ ।**
**ಪ್ರಸ್ಥಿತಾಃ ಸೈನಿಕಾಃ ಪ್ರಾಪ[೪]ನ್ಸೇಶ್ವರಾಃ ಶಿಬಿರಂ ಪ್ರಭೋಃ ॥ ೮೧ ॥**

ಹೀಗೆ ಅನೇಕ ಪ್ರಕಾರವಾದ ಭಾವನೆಗಳಿಂದಲೂ ಸಂಭಾಷಣೆಗಳಿಂದಲೂ ಹೊರಟಿರುವವರೂ ಸ್ವಲ್ಪ ಪರಾಕ್ರಮಿಗಳೂ ಆದ ಸೈನಿಕರು ತಂತಮ್ಮ ಅಧಿಕಾರಿಗಳೊಡನೆ ಭರತೇಶ್ವರನ ಬಿಡಾರವನ್ನು ತಲುಪಿದರು.

**ಪ್ರಚೇಲುಃ ಸರ್ವಸಾಮಗ್ರ್ಯಾ ಭೂಪಾಃ [೫]ಸಂಭೃತಕೋಷ್ಠಿಕಾಃ ।**
**ಪ್ರಭೋಶ್ಚಿರಂ ಜಯೋದ್ಯೋಗ[೬]ಮಾಕಲಯ್ಯಾಹಿಮಾಚಲಮ್ ॥ ೮೨ ॥**

ಹಿಮವತ್ಪರ್ವತದವರೆಗೂ ಭರತೇಶ್ವರನ ದೀರ್ಘಕಾಲದ ದಿಗ್ವಿಜಯ ಪ್ರಯತ್ನವನ್ನು ಸ್ಮರಿಸಿಕೊಂಡು ರಾಜರುಗಳು ಎತ್ತುಗಳಲ್ಲಿ ಅಕ್ಕಿ ಮೊದಲಾದ ಸಾಮಾನುಗಳನ್ನು ಹೇರಿಕೊಂಡು ಸಕಲಸಾಮಗ್ರಿಯೊಡನೆ ನಡೆದರು.

**ಭಟೈ[೭]ರ್ಲಾಕುಟಿಕೈಃ ಕೈಶ್ಚಿದ್ವೃತಾ [೮]ಲಾಲಾಟಿಕೈಃ ಪರೇ ।**
**ನೃಪಾಃ ಪಶ್ಚಾತ್ಕೃತಾನೀಕಾ ವಿಭೋರ್ನಿಕಟಮಾಯಯುಃ ॥ ೮೩ ॥**

ದೊಣ್ಣೆಯೇ ಆಯುಧವಾಗಿರುವ ಕೆಲವು ಮಂದಿ ಭಟರುಗಳಿಂದಲೂ ತಮ್ಮ ಯಜಮಾನರ ಭಾವವನ್ನರಿತು ಕೆಲಸಮಾಡುವವರಿಂದಲೂ ಆವರಿಸಲ್ಪಟ್ಟ ಕೆಲವು ಮಂದಿ ರಾಜರುಗಳು ತಮ್ಮ ಸೈನ್ಯಗಳನ್ನು ಹಿಂದಿರಿಸಿ ತಾವು ಭರತೇಶ್ವರನ ಸಮೀಪವನ್ನು ತಲುಪಿದರು.

**ಸಮಂತಾದಿತಿ ಸಾಮಂತೈರಾಪತದ್ಭಿಃ ಸಸಾಧನೈಃ ।**
**ಸಮಿದ್ಧಸಾಧನಶ್ಚಕ್ರೀ ಸಮೇತ್ಯ [೯]ಜಯಕಾರಿತಃ ॥ ೮೪ ॥**

ಈ ಪ್ರಕಾರವಾಗಿ ನಾಲ್ಕು ಕಡೆಗಳಿಂದಲೂ ತಮ್ಮ ಸಾಮಗ್ರಿಗಳೊಡನೆ ಬಂದು ಸೇರುತ್ತಿರುವ ಸಾಮಂತರಾಜರುಗಳು ಸಮೂಹಸೇರಿ ಸಂಗ್ರಹಿಸಲ್ಪಟ್ಟ ದಿಗ್ವಿಜಯ ಸಾಧನಗಳುಳ್ಳ ಚಕ್ರವರ್ತಿಗೆ ಜಯಜಯಕಾರವನ್ನು ಮಾಡಿದರು.

**[೧೦]ಸಾಮವಾಯಿಕಸಾಮಂತಸಮಾಜೈರಿತಿ ಸರ್ವತಃ ।**
**ಸರಿದೋಘೈರಿವಾಂಭೋಧೇರಪೂರ್ಯತ ವಿಭೋರ್ಬಲಮ್ ॥ ೮೫ ॥**

ಈ ಪ್ರಕಾರವಾಗಿ, ನದಿಗಳ ಸಮೂಹಗಳಿಂದ ಸಮುದ್ರದ ಸಾಮರ್ಥ್ಯವು ಪೂರ್ಣವಾಗುವಂತೆ ಎಲ್ಲಾ ಕಡೆಗಳಿಂದಲೂ ಸೇರಿದ ಸಾಮಂತರಾಜರುಗಳ ಸಮೂಹಗಳಿಂದ ಭರತರಾಜನ ಸೈನ್ಯವು ತುಂಬಲ್ಪಟ್ಟಿತು.

**[೧೧]ಸವನಃ ಸಾವನಿಃ ಸೋದ್ರಿಃ ಪರಿತೋ ರುರುಧೇ ಬಲೈಃ ।**
**ಜಿನಜನ್ಮೋತ್ಸವೇ ಮೇರು[೧೨]ರನೀಕೈರಿವ ನಾಕಿನಾಮ್ ॥ ೮೬ ॥**

೧ ಮಧ್ಯೇ. ೨ ವಾಹನರಹಿತತ್ವಂ, ಅಗಮನಂ ವಾ. ೩ ಅಲ್ಪವಿಕ್ರಮಾಃ. ೪ ನಿಜಸ್ವಾಮಿಸಹಿತಾಃ. ೫ ತಂಡುಲಾದಿಭಾರವಾಹಕಬಲೀಬರ್ದಾಃ. ೬ ಸ್ಮೃತ್ವಾ. ೭ ಲಕುಟಮಾಯುಧಂ ಯೇಷಾಂ ತೈಃ. ೮ ಪ್ರಭೋರ್ಭಾವದರ್ಶಿಭಿಃ ಕಾರ್ಯಕ್ಷಮೈಃ. ೯ ಜಯಕಾರಂನೀತಃ. ೧೦ ಮಿಲಿತ. ೧೧ ವನಸಹಿತಃ. ೧೨ ಸೈನ್ಯೈಃ..

ಜಿನೇಶ್ವರನ ಜನ್ಮಾಭಿಷೇಕೋತ್ಸವದಲ್ಲಿ ದೇವತೆಗಳ ಸೈನ್ಯಗಳಿಂದ ಮಹಾಮೇರು ಪರ್ವತವು ಆವರಿಸಲ್ಪಟ್ಟಿದ್ದಂತೆ, ವನಸಹಿತವಾದ ಆ ಭೂಮಿಯೂ ಆ ಪರ್ವತವೂ ಸುತ್ತಲೂ ಸೈನ್ಯಗಳಿಂದ ಆವರಿಸಲ್ಪಟ್ಟುವು.

**ವಿಜಯಾರ್ಧಾಚಲ[೧]ಪ್ರಸ್ಥಾ ವಿಭೋರಧ್ಯಾಸಿತಾ ಬಲೈಃ ।**
**ಸ್ವರ್ಗಾವಾಸಶ್ರಿಯಂ ತೇನುರ್ವಿಭಕ್ತೈರ್ನೃಪಮಂದಿರೈಃ ॥ ೮೭ ॥**

ಭರತರಾಜನ ಸೈನ್ಯಗಳಿಂದ ವಾಸಮಾಡಲ್ಪಟ್ಟ ವಿಜಯಾರ್ಧಪರ್ವತದ ತಪ್ಪಲುಗಳು, ಅಲ್ಲಲ್ಲಿ ವಿಭಾಗಿಸಲ್ಪಟ್ಟ ರಾಜಭವನಗಳಿಂದ ಸ್ವರ್ಗದ ವಾಸಸ್ಥಾನಗಳ ಶೋಭೆಯನ್ನು ವಿಸ್ತರಿಸಿದುವು. ಪರ್ವತದ ತಪ್ಪಲುಗಳು ಸ್ವರ್ಗದ ವಾಸಸ್ಥಾನಗಳಂತಿದ್ದುವೆಂದು ಭಾವವು.

**[೨]ಪ್ರಕ್ಷ್ವೇಲಿತಬಲಂ ವಿಷ್ವಕ್ಪ್ರಹೇಷಿತತುರಂಗಮಮ್ ।**
**ಪ್ರಬೃಂಹಿತಗಜಂ ಸೈನ್ಯಂ [೩]ಧ್ವನಿಸಾದಕರೋದ್ಗಿರಿಮ್ ॥ ೮೮ ॥**

ಸುತ್ತಲೂ ಸಿಂಹನಾದವನ್ನು ಮಾಡಿದ ಸೈನಿಕರುಳ್ಳುದೂ ಹೇಷಾರವವನ್ನು ಮಾಡಿದ ಕುದುರೆಗಳುಳ್ಳುದೂ ಗರ್ಜನೆಯನ್ನು ಮಾಡಿದ ಆನೆಗಳುಳ್ಳುದೂ ಆದ ಸೈನ್ಯವು ಆ ಪರ್ವತವನ್ನು ಶಬ್ದಮಯವನ್ನಾಗಿ ಮಾಡಿತು.

**ಬಲಧ್ವಾನಂ ಗುಹಾರಂಧ್ರೈಃ [೪]ಪ್ರತಿಶ್ರುದ್ಭೂತಮುದ್ವಹನ್ ।**
**ಸೋದ್ರಿ[೫]ರುದ್ರಿಕ್ತದ್ರೋರ್ಘೋ ಧ್ರುವಂ ಫೂತ್ಕಾರಮಾತನೋತ್॥ ೮೯ ॥**

ಗುಹೆಗಳ ರಂಧ್ರಗಳಿಂದ ಪ್ರತಿಧ್ವನಿಯನ್ನು ಮಾಡುತ್ತಿರುವ ಸೈನ್ಯದ ಶಬ್ದವನ್ನು ಹೊಂದಿರುವ ಆ ವಿಜಯಾರ್ಧಪರ್ವತವು ದೊಡ್ಡದಾದ ಆ ಸೈನ್ಯವನ್ನು ತಡೆದು ನಿಜವಾಗಿ ಫೂತ್ಕಾರ-ಶಬ್ದವನ್ನು ಮಾಡಿದ್ದಿತು. ಫೂತ್ಕಾರಶಬ್ದವನ್ನು ಮಾಡಿದಂತಿದ್ದಿತೆಂದು ಭಾವವು.

**ಅತ್ರಾಂತರೇ ಜ್ವಲನ್ಮೌಲಿಪ್ರಭಾಪಿಂಜರಿತಾಂಬರಃ ।**
**ದದೃಶೇ ಪ್ರಭುಣಾ ವ್ಯೋಮ್ನಿ ಗಿರೇರವತರನ್ಸುರಃ ॥ ೯೦ ॥**

ಆ ಸಮಯದಲ್ಲಿ ಪ್ರಕಾಶಮಾನವಾದ ಕಿರೀಟದ ಪ್ರಭೆಯಿಂದ ಆಕಾಶವನ್ನು ಹೊಂಬಣ್ಣವನ್ನಾಗಿಮಾಡಿ ಆಕಾಶದಲ್ಲಿ ಪರ್ವತದಿಂದ ಇಳಿದು ಬರುತ್ತಿರುವ ಓರ್ವ ದೇವನನ್ನು ಭರತೇಶ್ವರನು ನೋಡಿದನು.

**ಸ ತತೋಽವತರನ್ನದ್ರೇರ್ಬಭೌ [೬]ಸಾನುಚರೋಽಮರಃ ।**
**[೭]ಸವನಃ ಕಲ್ಪಶಾಖೀವ ಲಸದಾಭರಣಾಂಶುಕಃ ॥ ೯೧ ॥**

ಆ ಪರ್ವತದಿಂದ ಇಳಿದು ಬರುತ್ತಿರುವವನೂ ಸೇವಕರುಗಳಿಂದ ಹಿಂಬಾಲಿಸಲ್ಪಟ್ಟವನೂ ಪ್ರಕಾಶಮಾನವಾದ ಆಭರಣಗಳೂ ವಸ್ತ್ರಗಳೂ ಉಳ್ಳವನೂ ಆದ ಆ ದೇವನು, ವನಸಹಿತವೂ ಪ್ರಕಾಶಮಾನವಾದ ಆಭರಣಗಳೂ ವಸ್ತ್ರಗಳೂ ಉಳ್ಳುದೂ ಆದ ಕಲ್ಪವೃಕ್ಷದಂತೆ, ಪ್ರಕಾಶಿಸಿದನು.

**ದಿವ್ಯಃ [೮]ಪ್ರಭಾನ್ವಯಃ ಕೋಽಪಿ [೯]ಸಮೂರ್ಛತಿ ಕಿಮಂಬರೇ ।**
**ತಟಿತ್ಪುಂಜಃ ಕಿ[೧೦]ಮುತ್ಕರ್ಚಿರಿತಿ ದೃಷ್ಟಃ ಕ್ಷಣಂ ಜನೈಃ ॥ ೯೨ ॥**

ಯಾವುದೋ ಪ್ರಭೆಗಳ ಪರಂಪರೆಯು ಆಕಾಶದಲ್ಲಿ ವ್ಯಾಪಿಸುತ್ತಿದೆಯೋ ಅಗ್ನಿಜ್ವಾಲೆಯನ್ನತಿಕ್ರಮಿಸಿದ ಮಿಂಚುಗಳ ರಾಶಿಯೋ ಎಂಬುದಾಗಿ ಆ ದೇವನು ಒಂದು ಕ್ಷಣಕಾಲದವರೆಗೆ ಜನರಿಂದ ನೋಡಲ್ಪಟ್ಟನು.

**ಕಿಮಪ್ಯೇತದಧಿಜ್ಯೋತಿರಿತ್ಯಾದಾವವಿಶೇಷಿತಃ ।**
**ಪಶ್ಚಾದವಯವವ್ಯಕ್ತ್ಯಾ ಪ್ರವ್ಯಕ್ತಪುರುಷಾಕೃತಿಃ ॥ ೯೩ ॥**

೧ ಸಾನವಃ. ೨ ಸಿಂಹನಾದಿತಬಲಂ. ೩ ಶಬ್ದಮಯಮಕರೋತ್. ೪ ಪ್ರತಿಧ್ವನಿಭೂತಂ. ೫ ಉತ್ಕಟಸೇನಾನಿರೋಧಃ. ೬ ಅನುಚರೈಃ ಸಹಿತಃ. ೭ ವನೈಃ ಸಹಿತಃ. ೮ ಪ್ರಭಾಸಂತಾನಃ. ೯ ವ್ಯಾಪ್ನೋತಿ. ೧೦ ಅಗ್ನಿಶಿಖಾಮತಿಕ್ರಾಂತಃ.

**[೧]ಕೃತಮಾಲಶ್ರುತಿರ್ವ್ಯಕ್ತೈಃ ಕೃತಮಾಲಃ ಸ ಚಂಪಕೈಃ ।**
**[೨]ಕೃತಮಾಲ ಇವೋತ್ಫುಲ್ಲೋ [೩]ನಿದದೃಶೇ ಪ್ರಭುಣಾಗ್ರತಃ ॥ ೯೪ ॥**

ಮೊದಲು ಇದಾವುದೋ ಮಹಾತೇಜಸ್ಸೆಂದು ಸಾಮಾನ್ಯರೂಪದಿಂದ ತಿಳಿಯಲ್ಪಟ್ಟವನೂ ಬಳಿಕ ವ್ಯಕ್ತವಾದ ಅವಯವಗಳಿಂದ ತಿಳಿಯಲ್ಪಟ್ಟ ಪುರುಷಾಕಾರವುಳ್ಳವನೂ ಕೃತಮಾಲನೆಂದು ಹೆಸರುಳ್ಳವನೂ ಅರಳಿದ ಸಂಪಿಗೆಯ ಹೂಗಳಿಂದ ಮಾಡಲ್ಪಟ್ಟ ಮಾಲಿಕೆಯುಳ್ಳವನೂ ಆದ ಆ ದೇವನನ್ನು ಭರತರಾಜನು ಮುಂದುಗಡೆಯಲ್ಲಿ, ಅರಳಿದ ಹೂಗಳುಳ್ಳ ಕಕ್ಕೇಗಿಡವನ್ನು ನೋಡುವಂತೆ, ನೋಡಿದನು.

**ಸಪ್ರಣಾಮಂ ಚ ಸಂಪ್ರಾಪ್ತಂ ತಂ ವೀಕ್ಷ್ಯ ಸಹಸಾ ವಿಭುಃ ।**
**ಯಥಾರ್ಹಪ್ರತಿಪತ್ತ್ಯಾಸ್ಮಾಯಾಸನಂ [೪]ಪ್ರತ್ಯಪಾದಯತ್ ॥ ೯೫ ॥**

ಆತುರದಿಂದ ಬಂದು ನಮಸ್ಕಾರಮಾಡಿದ ಆ ಕೃತಮಾಲದೇವನನ್ನು ನೋಡಿ ಭರತರಾಜನು ಯೋಗ್ಯಸತ್ಕಾರವನ್ನು ಮಾಡಿ ಇವನಿಗೆ ಪೀಠವನ್ನು ಕೊಡಿಸಿದನು.

**ಪ್ರಭುಣಾನುಮತಶ್ಚಾಯಂ ಕೃತಾಸನಪರಿಗ್ರಹಃ ।**
**ಕ್ಷಣಂ ವಿಸಿಷ್ಮಿಯೇ ಪಶ್ಯನ್ [೫]ಧಾಮಾ[೬]ಮುಷ್ಯಾ[೭]ತಿಮಾನುಷಮ್ ॥**

ಭರತರಾಜನ ಅನುಮತಿಯನ್ನು ಪಡೆದು ಆಸನವನ್ನು ಪರಿಗ್ರಹಿಸಿದ ಕೃತಮಾಲದೇವನು ಈ ಭರತಚಕ್ರೇಶ್ವರನ ಮನುಷ್ಯಭಾವವನ್ನತಿಕ್ರಮಿಸಿದ ತೇಜಸ್ಸನ್ನು ನೋಡಿ ಒಂದು ಕ್ಷಣಕಾಲದವರೆಗೆ ಆಶ್ಚರ್ಯಪಟ್ಟನು.

**ಸಂಭಾಷಿತಶ್ಚ ಸಮ್ರಾಜಾ ಪೂರ್ವಂ [೮]ಪೂರ್ವಾಭಿಭಾಷಿಣಾ ।**
**ಸುರಃ ಪ್ರಚಕ್ರಮೇ ವಕ್ತುಮಿತಿ ಪ್ರಶ್ರಯವದ್ವಚಃ ॥ ೯೭ ॥**

ಚಕ್ರವರ್ತಿಯು ಕೃತಮಾಲನನ್ನು ಮೊದಲು ಮಾತನಾಡಿಸಿದನು. ಅವನ ಕುಶಲಪ್ರಶ್ನೆಯನ್ನು ಮಾಡಿದನೆಂದರ್ಥವು. ಕೃತಮಾಲದೇವನು ಮುಂದೆ ಹೇಳುವ ರೀತಿಯಾಗಿ ವಿನಯಪರವಾದ ಮಾತನ್ನು ಹೇಳಲು ಪ್ರಾರಂಭಿಸಿದನು.

**ಕ್ವ ವಯಂ ಕ್ಷುದ್ರಕಾ ದೇವಾಃ ಕ್ವ ಭವಾನ್ ದಿವ್ಯಮಾನುಷಃ ।**
**[೯]ಪೌತನ್ಯಮುಚಿತಂ ಮನ್ಯೇ [೧೦]ವಾಚಾಟಯತಿ ನಃ ಸ್ಫುಟಮ್ ॥ ೯೮ ॥**

''ಪ್ರಭುವೆ! ಅಲ್ಪರಾದ ನಾವು ದೇವತೆಗಳೆಲ್ಲಿ? ದಿವ್ಯಮಾನವನಾದ ನೀನೆಲ್ಲಿ? ಉಚಿತವಾದ ಅಲ್ಪದೇವತ್ವವು ಅಥವಾ ಬಾಲಭಾವವು ನಿಜವಾಗಿಯೂ ನಮ್ಮನ್ನು ಮಾತನಾಡುವಂತೆ ಮಾಡುತ್ತದೆಂದು ತಿಳಿಯುತ್ತೇನೆ.

**ಆಯುಷ್ಮನ್ಕುಶಲಂ ಪ್ರಷ್ಟುಂ ಜಿಹ್ರೀಮಃ ಶಾಸಿತಸ್ತವ ।**
**ತ್ವದಾಯತ್ತಾ ಯತಃ ಕೃತ್ಸ್ನಾ ಜಗತಃ ಕುಶಲಕ್ರಿಯಾ ॥ ೯೯ ॥**

ಆಯುಷ್ಮಂತನೆ! ಜಗತ್ತಿನ ಸಕಲ ಕ್ಷೇಮಕಾರ್ಯವು ನಿನಗೆ ಅಧೀನವಾಗಿರುವುದರಿಂದ ನಮ್ಮನ್ನಾಳುವ ಪ್ರಭುವಾದ ನಿನ್ನ ಕುಶಲಪ್ರಶ್ನೆಯನ್ನು ಮಾಡಲು ನಾಚಿಕೆಪಡುತ್ತೇವೆ.

**ಲೋಕಸ್ಯ [೧೧]ಕುಶಲಾಧಾನೇ [೧೨]ನಿರೂಢಂ ಯಸ್ಯ ಕೌಶಲಮ್ ।**
**ಕುಶಲಂ ದಕ್ಷಿಣಸ್ಯಾಸ್ಯ ಬಾಹೋಸ್ತೇ ಕ್ಷ್ಮಾಂ ಜಿಗೀಷತಃ ॥ ೧೦೦ ॥**

ಲೋಕಕ್ಕೆ ಕ್ಷೇಮವನ್ನು ಮಾಡುವುದರಲ್ಲಿ ಯಾವುದರ ಜಾಣ್ಮೆಯು ಪ್ರಸಿದ್ಧವಾಗಿದೆಯೋ ಪೃಥ್ವಿಯನ್ನು ಜಯಿಸಲಿಚ್ಛಿಸುವ ಅಂತಹ ನಿನ್ನ ಈ ಬಲದ ತೋಳಿಗೆ ಕ್ಷೇಮವೇ?

೧ ಕೃತಮಾಲನಾಮಾ. ೨ ಆರಗ್ವಧಃ. ೩ ದೃಶ್ಯಂತೇ ಸ್ಮ. ೪ ಪ್ರಾಪಯತ್. ೫ ತೇಜಃ. ೬ ಚಕ್ರಿಣಃ. ೭ ಮಾನುಷಮತೀತಂ. ೮ ಪೂರ್ವಾರ್ಧಭಾಷಿಣೇತ್ಯಪಿ ಪಾಠಃ, ತತ್ಪಕ್ಷೇ ಸಂಸ್ಕೃತಭಾಷಿಣೇತ್ಯರ್ಥಃ. ೯ ಪೂತನಾಯಾ ಅಪತ್ಯಂ ಪುಮಾನ್ ತಸ್ಯ ಭಾವಃ ಕ್ಷುದ್ರದೇವತ್ವಂ ಬಾಲತ್ವಂ ವೇತ್ಯರ್ಥಃ. ೧೦ ವಾಚಾಲಾನ್ ಕರೋತಿ. ೧೧ ಕ್ಷೇಮಕರಣೇ. ೧೨ ಪ್ರಖ್ಯಾತಂ.

**ದೇವಾನಾಂ ಪ್ರಿಯ ! [೧]ದೇವತ್ವಂ ತವಾಶೇಷಜಗಜ್ಜಯಾತ್ ।**
**ನಾಮ್ನೈವ ತು ವಯಂ ದೇವಾ ಜಾತಿಮಾತ್ರಕೃತೋಕ್ತಯಃ ॥ ೧೦೧ ॥**

ದೇವತೆಗಳಿಗೆ ಪ್ರಿಯನಾದ ಪ್ರಭುವೆ! ಸಮಸ್ತ ಪೃಥ್ವಿಯನ್ನು ಜಯಿಸಿದುದರಿಂದ ನಿನಗೆ ದೇವತ್ವವು(ಪೂಜ್ಯತೆಯು) ಸಲ್ಲುವುದು. ಬರೇ ಜಾತಿಯಿಂದ ದೇವತೆಗಳೆನಿಸಿರುವ ನಾವಾದರೊ ಹೆಸರಿನಿಂದಲೇ ದೇವತೆಗಳು. ದೇವಶಬ್ದದ ಸಾರ್ಥಕ್ಯವು ತಮ್ಮಲ್ಲಿಲ್ಲವೆಂದು ಭಾವವು.

**[೨]ಗೀರ್ವಾಣಾ ವಯಮನ್ಯತ್ರ [೩]ಜಿಗೀಷೋಃ [೪]ಶೀತಶೀಶ್ವರಾಃ ।**
**ತ್ವಯಿ [೫]ಕುಂಠಗಿರೋ ಜಾತಾಃ ಪ್ರಸ್ಖಲದ್ಗರ್ವಗದ್ಗದಾಃ ॥ ೧೦೨ ॥**

ಶೀತದಲ್ಲಿ ಮಲಗುವವರಿಗೆ ಅಂದರೆ ಕೆಲಸಗಳಲ್ಲಿ ಜಡರಾಗಿರುವವರಿಗೆ ಪ್ರಭುಗಳಾಗಿರುವ ನಾವುಗಳು ಜಯಶೀಲನಾದ ನಿನ್ನಲ್ಲಿ ಹೊರತು ಬೇರೆಯವರಲ್ಲಿ ಶಾಪಾನುಗ್ರಹಸಮರ್ಥವಾದ ವಾಗ್ಬಾಣವುಳ್ಳವರು. ನಿನ್ನಲ್ಲಿ ನಮ್ಮ ಹೆಮ್ಮೆಯು ಅಡಗಿದುದರಿಂದ ತೊದಲುತ್ತಿರುವ ಮತ್ತು ಸಂಕೋಚವಾದ ಮಾತುಗಳುಳ್ಳವರಾದೆವು.

**ರಾಜೋಕ್ತಿಸ್ತ್ವಯಿ ರಾಜೇಂದ್ರ ರಾಜತೇನನ್ಯಗಾಮಿನೀ ।**
**ಅಖಂಡಮಂಡಲಾಂ ಕೃತ್ಸ್ನಾಂ ಷಟ್ಖಂಡಾಂಗಾಂ [೬]ನಿಯಚ್ಛತಿ ॥ ೧೦೩ ॥**

ರಾಜಾಧಿರಾಜನೆ! ಬೇರೆಯವರಲ್ಲಿ ಸಾರ್ಥಕ್ಯವನ್ನು ಹೊಂದದಿರುವ 'ರಾಜ' ಎಂಬ ಶಬ್ದವು ಸಮಸ್ತವಾದ ಷಟ್ಖಂಡಭೂಮಂಡಲವನ್ನಾಳುತ್ತಿರುವ ನಿನ್ನಲ್ಲಿ ಶೋಭಿಸುತ್ತದೆ.

**ಚಕ್ರಾತ್ಮನಾ ಜ್ವಲತ್ಯೇಷ ಪ್ರತಾಪಸ್ತವ ದುಃಸಹಃ ।**
**ಪ್ರಥತೇ [೭]ದಂಡನೀತಿಶ್ಚ ದಂಡರತ್ನಚ್ಛಲಾದ್ವಿಭೊ ॥ ೧೦೪ ॥**

ಪ್ರಭುವೆ! ನಿನ್ನ ದುಸ್ಸಹವಾದ ಈ ಪ್ರತಾಪವು ಚಕ್ರರತ್ನದ ರೂಪದಿಂದ ಬೆಳಗುತ್ತಿದೆ. ನಿನ್ನ ರಾಜವಿದ್ಯೆಯಾದರೊ ದಂಡರತ್ನದ ನೆವದಿಂದ ಬೆಳಗುತ್ತಿದೆ.

**[೮]ಈಶಿತವ್ಯಾ ಮಹೀ ಕೃತ್ಸ್ನಾ ಸ್ವತಂತ್ರಸ್ತ್ವಮಸೀಶ್ವರಃ ।**
**[೯]ನಿಧಿ[೧೦]ರತ್ನರ್ದ್ಧಿರೈಶ್ವರ್ಯಂ ಕಃ ಪರಸ್ತ್ವಾದೃಶಃ ಪ್ರಭುಃ ॥ ೧೦೫ ॥**

ಸ್ವತಂತ್ರನಾದ ನೀನು ಪ್ರಭುವಾಗಿರುತ್ತೀಯೆ. ಸಮಸ್ತಪೃಥ್ವಿಯು ನಿನ್ನ ಐಶ್ವರ್ಯವಾಗಲು ಯೋಗ್ಯವಾಗಿದೆ. ಸಹಸ್ರಯಕ್ಷರಕ್ಷಿತವಾದ ಕಾಲ ಮಹಾಕಾಲ ಮೊದಲಾದ ಒಂಬತ್ತು ನಿಧಿಗಳೂ ಚಕ್ರ ಛತ್ರ ಖಡ್ಗ ಮೊದಲಾದ ಹದಿನಾಲ್ಕು ರತ್ನಗಳೂ ಸಂಪತ್ತಾಗಿರುವ ನಿನ್ನಂತಹ ದೊರೆಯು ಬೇರೆ ಯಾವನಿದ್ದಾನೆ?

**ಭ್ರಮತ್ಯೇಕಾಕಿನೀ ಲೋಕಂ ಶಶ್ವತ್ಕೀರ್ತಿ[೧೧]ರನರ್ಗಲಾ ।**
**ಸರಸ್ವತೀ ಚ ವಾಚಾಲಾ ಕಥಂ [೧೨]ತೇ [೧೩]ತೇ [೧೪]ಪ್ರಿಯೇ ಪ್ರಭೋಃ ॥**

ಪ್ರಭುವಾದ ನಿನ್ನ ಎಲ್ಲಿಯೂ ತಡೆಯಿಲ್ಲದ ಕೀರ್ತಿಯೊಂದೇ ಬಾರಿಬಾರಿಗೆ ಲೋಕವನ್ನು ವ್ಯಾಪಿಸುತ್ತಿದೆ. ನಿನ್ನ ಅಸ್ಖಲಿತವಾದ ವಾಣಿಯೂ ಅದ್ವಿತೀಯವಾಗಿ ಲೋಕವನ್ನು ವ್ಯಾಪಿಸುತ್ತಿದೆ. ಆ ಕೀರ್ತಿ ಸರಸ್ವತಿಯರು ಹೇಗೆ ನಿನಗೆ ಪತ್ನಿಯರಾದರು? ಭರತೇಶ್ವರನ ಕೀರ್ತಿಯೂ ಮಾತೂ ಅಸದೃಶವಾದುವೆಂದು ಭಾವವು.

೧ ಪೂಜ್ಯತ್ವಂ. ೨ ಗೀರೇವ ಶಾಪಾನುಗ್ರಹಸಮರ್ಥೋ ಬಾಣೋ ಯೇಷಾಂ ತೇ ದೇವಾಃ. ೩ ತ್ವತ್ತೋನ್ಯತ್ರ. ೪ ಶೀತೇ ಶೇರತ ಇತಿ ಶೀತಶಯಸ್ತೇಷಾಮೀಶ್ವರಾಃ, ಕ್ರಿಯಾಸುಮಂದಾನಾಮೀಶ್ವರಾ ಇತ್ಯರ್ಥಃ. ೫ ಮಂದವಚಸಃ. ೬ ಶಾಸತಿ. ೭ ರಾಜವಿದ್ಯಾ. ೮ ಐಶ್ವರ್ಯವತೀ ಭವಿತುಂ ಯೋಗ್ಯಾ. ೯ ರಕ್ಷಿತಯಕ್ಷಸಹಸ್ರಾಃ ಕಾಲ ಮಹಾಕಾಲ ಪಾಂಡು ಮಾಣವ ಶಂಖಾಃ । ನೈಸರ್ಪ ಪದ್ಮ ಪಿಂಗಲ ನಾನಾರತ್ನಾಶ್ಚನವನಿಧಯಃ ॥ ಋತುಯೋಗ್ಯವಸ್ತುಭಾಜನ ಧಾನ್ಯಾಯುಧ ತೂರ್ಯಹರ್ಮ್ಯವಸ್ತ್ರಾಣಿ । ಆಭರಣರತ್ನ ನಿಕರಾನ್ ಕ್ರಮೇಣ ನಿಧಯಃ ಪ್ರಯಚ್ಛಂತಿ ॥ ೧೦ ಚಕ್ರಂ ಛತ್ರಮಸಿರ್ದಂಡೋ ಮಣಿಶ್ಚರ್ಮಚಕಾಕಿಣೀ । ಗೃಹಸೇನಾಪತೀತಕ್ಷಪುರೋಧೋಶ್ವಗಜಸ್ತ್ರಿಯಃ ॥ ೧೧ ಪ್ರತಿಬಂಧರಹಿತಾ. ೧೨ ತವ. ೧೩ ಕೀರ್ತಿಸರಸ್ವತ್ಯೌ. ೧೪ ಪ್ರಿಯತಮೇ ಬಭೂವತುಃ.

**ಇತಿ ಪ್ರತೀತಮಾಹಾತ್ಮ್ಯಂ ತ್ವಾಂ [೧]ಸಭಾಜಯಿತುಂ ದಿವಃ ।**
**ತ್ವದ್ಬಲಧ್ವಾನಸಂಕ್ಷೋಭಸಾಧ್ವಸಾದ್ವಯಮಾಗತಾಃ ॥ ೧೦೭ ॥**

ಈ ಪ್ರಕಾರವಾಗಿ ಪ್ರಸಿದ್ಧವಾದ ಮಹಿಮೆಯುಳ್ಳ ನಿನ್ನನ್ನು ಪೂಜಿಸುವುದಕ್ಕಾಗಿ ನಿನ್ನ ಸೈನ್ಯದ ಶಬ್ದದ ಕ್ಷೋಭೆ(ಗಲಾಟೆ)ಯಿಂದುಂಟಾದ ಭಯದಿಂದ ನಾವು ಆಕಾಶದಿಂದ ಬಂದೆವು. ವಿಜಯಾರ್ಧಗಿರಿಯ ಶಿಖರದಿಂದ ಇಳಿದುಬಂದೆವೆಂದು ಭಾವವು.

**ಕೂಟಸ್ಥಾ ವಯಮಸ್ಯಾದ್ರೇಃ [೨]ಸ್ವಪದಾದವಿಚಾಲಿನಃ ।**
**[೩]ಭೂಮಿಮೇತಾವತೀಂ ತಾವತ್ತ್ವಯಾ ದೇವಾವತಾರಿತಾಃ ॥ ೧೦೮ ॥**

ಪ್ರಭುವೆ! ಈ ಪರ್ವತದ ಶಿಖರದಲ್ಲಿ ವಾಸವಾಗಿರುವವರೂ ನಮ್ಮ ವಾಸಸ್ಥಾನದಿಂದ ಕದಲದಿರುವವರೂ ಆದ ನಮ್ಮನ್ನು ನೀನಾದರೊ ಇಷ್ಟು ಭೂಮಿವರೆಗೆ ಇಳಿಸಿದೆ.

**[೪]ವಿಪ್ರಕೃಷ್ಟಾಂತರಾವಾಸವಾಸಿನೋ ವ್ಯಂತರಾ ವಯಮ್ ।**
**[೫]ಸಂವಿಧೇಯಾಸ್ತ್ವಯೇದಾನೀಂ ಪ್ರತ್ಯಾಸನ್ನಾಃ ಪದಾತಯಃ ॥ ೧೦೯ ॥**

ದೂರಪ್ರದೇಶದಲ್ಲಿ ವಾಸಮಾಡುವ ವ್ಯಂತರದೇವತೆಗಳಾದ ನಮ್ಮನ್ನು ಈಗ ನೀನು ನಿನ್ನ ಬಳಿಯ ಕಾಲಾಳುಗಳನ್ನಾಗಿ ಮಾಡು.

**ವಿದ್ಧಿ ಮಾಂ ವಿಜಯಾರ್ಧಸ್ಯ ಮರ್ಮಜ್ಞಮಮೃತಾಶಿನಮ್ ।**
**ಕೃತಮಾಲಂ ಗಿರೇರಸ್ಯ ಕೂಟೇಮುಷ್ಮಿನ್ಕೃತಾಲಯಮ್ ॥ ೧೧೦ ॥**

ಈ ಪರ್ವತದ ಈ ಶಿಖರದಲ್ಲಿ ಮನೆಮಾಡಿಕೊಂಡಿರುವ ಕೃತಮಾಲನೆಂದು ಹೆಸರುಳ್ಳ ನಾನು ಈ ವಿಜಯಾರ್ಧಪರ್ವತದ ಮರ್ಮವನ್ನು ತಿಳಿದಿರುವ ದೇವನೆಂದು ತಿಳಿ.

**ಮಯಿ [೬]ಸ್ವಸಾತ್ಕೃತೇ ದೇವ ಸ್ವೀಕೃತೋಯಂ ಮಹಾಚಲಃ ।**
**ಸಗುಹಾಕಾನನಸ್ಯಾಸ್ಯ ಗಿರೇರ್ಗರ್ಭವಿದಸ್ಮ್ಯಹಮ್ ॥ ೧೧೧ ॥**

ಸ್ವಾಮಿಯೇ! ನನ್ನನ್ನು ನೀನು ಸ್ವಾಧೀನಮಾಡಿಕೊಂಡಮೇಲೆ ಈ ದೊಡ್ಡ ಬೆಟ್ಟವನ್ನು ಸ್ವಾಧೀನಮಾಡಿಕೊಂಡಂತೆ ಆಯಿತು. ನಾನು ಗುಹೆ ಮತ್ತು ಆರಣ್ಯ ಸಹಿತವಾದ ಈ ಪರ್ವತದ ಗುಟ್ಟನ್ನು ತಿಳಿದವನಾಗಿರುತ್ತೇನೆ.

**ಗರ್ಭಜ್ಞೋಹಂ ಗಿರೇರಸ್ಮೀತ್ಯತ್ಯಲ್ಪಮಿದಮುಚ್ಯತೇ ।**
**ದ್ವೀಪಾಬ್ಧಿವಲಯೇ ಕೃತ್ಸ್ನೇ ನಾಸ್ಮಾಕಂ ಕೋಪ್ಯಗೋಚರಃ ॥ ೧೧೨ ॥**

ನಾನು ಈ ಬೆಟ್ಟದ ಅಂತರಂಗವನ್ನು ತಿಳಿದವನಾಗಿರುತ್ತೇನೆಂದು ಹೇಳುವ ಈ ಮಾತು ಬಹು ಸ್ವಲ್ಪವಾಗಿದೆ. ವರ್ತುಲಾಕಾರವಾದ ಸಕಲದ್ವೀಪಸಮುದ್ರಗಳಲ್ಲಿ ನಮಗೆ ಯಾವುದೂ ಅಗೋಚರವಾದುದಿಲ್ಲ.

**[೭]ವಟಸ್ಥಾ[೮]ನವಟಸ್ಥಾಂಶ್ಚ ಕೂಟಸ್ಥಾ[೯]ನ್ಕೋಟರೋಟಜಾನ್ ।**
**[೧೦]ಅಕ್ಷಪಾಟಾ[೧೧]ನ್ಕ್ಷಪಾಟಾಂಶ್ಚ ವಿದ್ಧಿ ನಃ [೧೨]ಸಾರ್ವ ಸರ್ವಗಾನ್ ॥**

ಸರ್ವರಿಗೂ ಹಿತಕರನಾದ ಪ್ರಭುವೆ! ನಾವು ವಟವೃಕ್ಷಗಳಲ್ಲಿರುವವರೂ ಪಾತಾಳದಲ್ಲಿರುವವರೂ ಗಿರಿಶಿಖರಗಳಲ್ಲಿರುವವರೂ ಮರದ ಪೊಟರೆಗಳನ್ನು ಮನೆಮಾಡಿಕೊಂಡಿರುವವರೂ ರಾಕ್ಷಸರಿಗಿಂತ ಬೇರೆಯಾಗಿರುವವರೂ ರಾಕ್ಷಸರಾಗಿರುವವರೂ ಎಲ್ಲದರಲ್ಲಿರುವವರೂ ಆಗಿರುತ್ತೇವೆಂದು ತಿಳಿ. (ಇದರಿಂದ ವ್ಯಂತರದೇವತೆಗಳ ವಿವಿಧ ವಾಸಸ್ಥಾನಗಳು ಸೂಚಿತವಾಗುವುವು)."

೧ ಸೇವಿತುಂ. ೨ ಸ್ವಸ್ಥಾನಾತ್. ೩ ಏತಾವದ್ಭೂಮಿಪರ್ಯಂತಂ. ೪ ದೂರಾಂತರನಿವಾಸಿನಃ. ೫ ಸಂವಿಧಾಪಯಿತುಂ ಯೋಗ್ಯಾಃ. ೬ ತ್ವದಧೀನೇ ಕೃತೇ ಸತಿ. ೭ ನ್ಯಗ್ರೋಧಸ್ಥಾನ್. ೮ ಪಾತಾಲಸ್ಥಾನ್. ೯ ಕೋಟರಾಏವ ಉಟಜಾನಿ ಗೃಹಾಣಿ ಯೇಷಾಂ ತೇ ತಾನ್, ವೃಕ್ಷವಿವರಪರ್ಣಶಾಲಾಸುಸ್ಥಿತಾನ್. ೧೦ ರಾಕ್ಷಸೇಭ್ಯಃ ಅನ್ಯಾನ್. ೧೧ ರಾಕ್ಷಸಾನ್. ೧೨ ಸರ್ವಹಿತ.

ಇತಿ ಪ್ರಶಾಂತ[೧]ವೋಜಸ್ವಿ ವಚಃ ಸಂಭಾಷ ಸಾದರವ್ ।
ಸೋಮರೋ [೨]ವಿತತಾರಾಸ್ಮೈ[೩]ಭೂಷಣಾನಿ ಚತುರ್ದಶ ॥ ೧೧೪ ॥

ಈ ಪ್ರಕಾರವಾಗಿ ಅತ್ಯಂತಶಾಂತವೂ ತೇಜೋಯುಕ್ತವೂ ಪ್ರೀತಿಪುರಸ್ಸರವೂ ಆದ ಮಾತನ್ನಾಡಿ ಆ ಕೃತಮಾಲದೇವನು ಭರತೇಶ್ವರನಿಗೆ ತಿಲಕಮೊದಲಾದ ಹದಿನಾಲ್ಕು ರತ್ನಗಳನ್ನು ಕೊಟ್ಟನು.

ತಾನ್ಯನನ್ಯೋಪಲಭ್ಯಾನಿ ಪ್ರಾಪ್ಯ ಚಕ್ರೀ ಪರಾಂ ಮುದಮ್ ।
ಭೇಜೇ [೪]ತತ್ಕೃತಸತ್ಕಾರೈಃ ಸುರಃ ಸೋಽಪ್ಯಾಪ ಸಮ್ಮದಮ್ ॥ ೧೧೫ ॥

ಬೇರೆಯವರು ಹೊಂದಲಾಗದ ಆ ರತ್ನಗಳನ್ನು ಚಕ್ರವರ್ತಿಯು ಪಡೆದು ಬಹಳ ಸಂತೋಷಪಟ್ಟನು. ಆ ದೇವನೂ ಭರತೇಶ್ವರನಿಂದ ಮಾಡಲ್ಪಟ್ಟ ಸತ್ಕಾರಗಳಿಂದ ಸಂತೋಷವನ್ನು ಹೊಂದಿದನು.

ತಂ ರೂಪ್ಯಾದ್ರಿಗುಹಾದ್ವಾರಪ್ರವೇಶೋಪಾಯಶಂಸಿನಮ್ ।
ಪ್ರವಿಸರ್ಜ್ಯ ಸ್ವಸೇನಾನ್ಯಂ ಪ್ರಾಹಿಣೋತ್ಪ್ರಭುರಗ್ರತಃ ॥ ೧೧೬ ॥

ವಿಜಯಾರ್ಧಪರ್ವತದ ಗುಹೆಯ ಬಾಗಿಲನ್ನು ಪ್ರವೇಶಮಾಡುವ ಉಪಾಯ ವನ್ನು ತಿಳಿಸಿದ ಆ ಕೃತಮಾಲನನ್ನು ಬೀಳ್ಕೊಟ್ಟು ಭರತೇಶ್ವರನು ತನ್ನ ಸೇನಾಪತಿ ಯನ್ನು ಮುಂದೆ ಕಳುಹಿದನು.

ತ್ವಮುದ್ಘಾಟ್ಯ ಗುಹಾದ್ವಾರಂ ಯಾವ[೫]ನ್ನಿರ್ವಾತಿ ಸಾ ಗುಹಾ ।
ತಾವತ್ಪಾಶ್ಚಾತ್ಯಖಂಡಸ್ಯ ನಿರ್ಜಯಾಯ ಕುರೂದ್ಯಮಮ್ ॥ ೧೧೭ ॥

''ನೀನು ಗುಹೆಯ ಬಾಗಿಲನ್ನು ತೆರೆದು ಅದರ ಬೆಂಕಿಯು ಆರುವವರೆಗೆ ಪಶ್ಚಿಮದಿಕ್ಕಿನಲ್ಲಿರುವ ಖಂಡವನ್ನು ಜಯಿಸುವುದಕ್ಕೆ ಪ್ರಯತ್ನಿಸು.''

ಇತಿ ಚಕ್ರಧರಾ[೬]ದೇಶಂ ಮೂರ್ಧ್ನಿ ಮಾಲ್ಯಮಿವೋದ್ವಹನ್ ।
ಕೃತಮಾಲಾಮರೋದ್ದಿಷ್ಟಕೃತ್ಸ್ನೋಪಾಯಪ್ರಯೋಗವಿತ್ ॥ ೧೧೮ ॥

ಕೃತೀ ಕತಿಪಯೈರೇಷ ತುರಗೈಃ ಸಪರಿಚ್ಛದೈಃ ।
ಪ್ರತಸ್ಥೇ ವಾಜಿರತ್ನೇನ ದಂಡಪಾಣಿಶ್ಚಮೂಪತಿಃ ॥ ೧೧೯ ॥

ಈ ಪ್ರಕಾರವಾದ ಚಕ್ರವರ್ತಿಯ ಆಜ್ಞೆಯನ್ನು, ಪುಷ್ಪಮಾಲಿಕೆಯನ್ನೋಪಾದಿ ಯಲ್ಲಿ, ತಲೆಯಲ್ಲಿ ಧರಿಸಿದವನೂ ಕೃತಮಾಲದೇವನು ಹೇಳಿದ ಎಲ್ಲಾ ಉಪಾಯ ಗಳ ಪ್ರಯೋಗಗಳನ್ನು ತಿಳಿದವನೂ ಚತುರನೂ ಆದ ಈ ಸೇನಾಪತಿಯು ದಂಡರತ್ನವನ್ನು ಕೈಯಲ್ಲಿ ತೆಗೆದುಕೊಂಡು ಅಶ್ವರತ್ನವನ್ನೇರಿ ಸಾಧನಸಹಿತರಾದ ಕೆಲವು ಮಂದಿ ಕುದುರೆಸವಾರರೊಡನೆ ಹೊರಟನು.

ಕಿಂಚಿಚ್ಚಾಂತರಮುಲ್ಲಂಘ್ಯ ಸ ಸಿಂಧೋರ್ವನವೇದಿಕಾಮ್ ।
[೭]ವಿಗಾಹ್ಯ ವಿಜಯಾರ್ಧಸ್ಯ ಸಂಪ್ರಾಪತ್ತಟವೇದಿಕಾಮ್ ॥ ೧೨೦ ॥

ಆ ಸೇನಾಪತಿಯು ಸ್ವಲ್ಪದೂರಹೋಗಿ ಸಿಂಧುನದಿಯ ವನದ ಜಗುಲಿ-ದಂಡೆಯನ್ನು ಪ್ರವೇಶಿಸಿ ವಿಜಯಾರ್ಧಪರ್ವತದ ತಪ್ಪಲನ್ನು ತಲುಪಿದನು.

ತತ್ಸೋಪಾನೇನ ರೂಪ್ಯಾದ್ರೇರಾರುಹ್ಯ ಜಗತೀತಲಮ್ ।
[೮]ಪ್ರತ್ಯಙ್ಮುಖೋ ಗುಹೋ[೯]ತ್ಸಂಗಮಾಸಸಾದ ಚಮೂಪತಿಃ ॥ ೧೨೧ ॥

ಸೇನಾಪತಿಯು ವಿಜಯಾರ್ಧಪರ್ವತದ ತಪ್ಪಲಿನಲ್ಲಿರುವ ಮೆಟ್ಟಲಿನಿಂದ ಆ ಪರ್ವತದ ಮೇಲಿನ ಜಗುಲಿಗೆ ಹತ್ತಿ ಪಶ್ಚಿಮಾಭಿಮುಖನಾಗಿ ಗುಹೆಯ ಸಮೀಪ ವನ್ನು ತಲುಪಿದನು.

೧ ತೇಜೋನ್ವಿತಂ. ೨ ದದೌ. ೩ ತಿಲಕಾದಿ. ೪ ಚಕ್ರಿಕೃತ. ೫ ಉಪಶಾಂತಿಮೇತಿ. ೬ ಆಜ್ಞಾಂ. ೭ ಪ್ರವಿಶ್ಯ. ೮ ಪಶ್ಚಿಮಾಭಿಮುಖಃ. ೯ ಸಮೀಪಂ.

ಜಯತಾಚ್ಚಕ್ರವರ್ತೀತಿ ಸೋಽಶ್ವರತ್ನ[೧]ಮಧಿಷ್ಠಿತಃ ।
ದಂಡೇನ ತಾಡಯಾಮಾಸ ಗುಹಾದ್ವಾರಂ ಸ್ಫುರದ್ಧ್ವನಿ ॥ ೧೨೨ ॥

ಆ ಸೇನಾಪತಿಯು ಅಶ್ವರತ್ನವನ್ನೇರಿ ''ಚಕ್ರವರ್ತಿಯು ಜಯಶೀಲನಾಗಲಿ'' ಎಂದು ಹೇಳಿ ದಂಡರತ್ನದಿಂದ ಗುಹೆಯ ಬಾಗಿಲನ್ನು, ವಿಶೇಷವಾಗಿ ಧ್ವನಿ ಯಾಗುವಂತೆ, ಹೊಡೆದನು.

ದಂಡರತ್ನಾಭಿಘಾತೇನ ಗುಹಾದ್ವಾರೇ [೨]ನಿರರ್ಗಲೇ ।
ತದ್ಗರ್ಭಾದ್ಬಲವಾನೂಷ್ಮಾ ನಿರ್ಯಯೌ ಕಿಲ ಸಂತತಃ ॥ ೧೨೩ ॥

ದಂಡರತ್ನದ ಹೊಡೆತದಿಂದ ಗುಹೆಯ ಬಾಗಿಲು ತೆರೆಯಲ್ಪಟ್ಟು ಅದರ ಮಧ್ಯದಿಂದ ಅವಿಚ್ಛಿನ್ನವಾಗಿ ವಿಶೇಷವಾದ ಉಷ್ಣವು ಹೊರಟಿತಂತೆ. ಗುಹೆಯಿಂದ ಬೆಂಕಿಯು ಹೆಚ್ಚಾಗಿ ಹೊರಹೊಮ್ಮಿತೆಂದು ಭಾವವು.

ದಧದ್ದಂಡಾಭಿಘಾತೋತ್ಥಂ [೩]ಕ್ರೇಂಕಾರ[೪]ಮರರೀಪುಟಮ್ ।
ಸವೇದನಮಿವಾ[೫]ಸ್ವೇದಿ ನಿರ್ಯತಾಶು ಗುಹೋಷ್ಮಣಾ ॥ ೧೨೪ ॥

ದಂಡರತ್ನದ ಹೊಡೆತದಿಂದುಂಟಾದ ಕ್ರೇಂಕಾರಧ್ವನಿಯುಳ್ಳ ಕವಾಟಯುಗಲವು ಶೀಘ್ರವಾಗಿ ಹೊರಡುತ್ತಿರುವ ಗುಹೆಯ ಉಷ್ಣದಿಂದ ವೇದನೆಯುಳ್ಳುದಾಗಿ ಬೆವರಿತೋ ಎಂಬಂತಿದ್ದಿತು.

ಉದ್ಘಾಟಿತಕವಾಟೇನ ದ್ವಾರೇಣೋಷ್ಮಾಣಮುದ್ವಮನ್ ।
ರರಾಜ ರಾಜತಃ ಶೈಲೋ ಲಬ್ಧೋಚ್ಛ್ವಾಸಶ್ಚಿರಾದಿವ ॥ ೧೨೫ ॥

ತೆರೆಯಲ್ಪಟ್ಟ ಬಾಗಿಲುಗಳುಳ್ಳ ದ್ವಾರದಿಂದ ಉಷ್ಣವನ್ನು ಕಾರುತ್ತಿರುವ ಬೆಳ್ಳಿಯ ಬೆಟ್ಟವು ಬಹುಕಾಲದಮೇಲೆ ಶ್ವಾಸ-ಪ್ರಾಣವನ್ನು ಪಡೆದಂತೆ ಶೋಭಿಸಿತು.

ಕವಾಟಪುಟವಿಶ್ಲೇಷಾದುಚ್ಚಚಾರ ಮಹಾನ್ಧ್ವನಿಃ ।
ದಂಡೇನಾಭಿಹತಸ್ಯಾದ್ರೇರಾಕ್ರೋಶ ಇವ ವಿಸ್ಫುರನ್ ॥ ೧೨೬ ॥

ಎರಡು ಬಾಗಿಲುಗಳ ತೆರೆಯುವಿಕೆಯಿಂದುಂಟಾದ ದೊಡ್ಡಸಪ್ಪಳವು, ದಂಡ ರತ್ನದಿಂದ ಹೊಡೆಯಲ್ಪಟ್ಟ ವಿಜಯಾರ್ಧಪರ್ವತದ ಬಯ್ಯುವಿಕೆಯೋ ಎಂಬಂತೆ, ಶೋಭಿಸುತ್ತ ಹೊರಟಿತು.

ಗುಹೋಷ್ಮಣಾ ಸ [೬]ನಾಶ್ಲೇಷಿ ವಿದೂರ[೭]ಮಪವಾಹಿತಃ ।
ತರಸ್ವಿನಾಶ್ವರತ್ನೇನ ದೇವತಾಭಿಶ್ಚ ರಕ್ಷಿತಃ ॥ ೧೨೭ ॥

ವೇಗವುಳ್ಳ ಅಶ್ವರತ್ನದಿಂದ ಬಹುದೂರ ಒಯ್ಯಲ್ಪಟ್ಟವನೂ ದೇವತೆಗಳಿಂದ ರಕ್ಷಿಸಲ್ಪಟ್ಟವನೂ ಆದ ಆ ಸೇನಾಪತಿಯು ಗುಹೆಯಿಂದ ಹೊರಹೊಮ್ಮಿದ ಉಷ್ಣ-ಜಬೆಯಿಂದ ಸೋಕಲ್ಪಡಲಿಲ್ಲ.

ನಿಪೇತುರಮರಸ್ತ್ರೀಣಾಂ ದೃಕ್ಕ್ಷೇಪೈಃ ಸಮಮಂಬರಾತ್ ।
ಸುಮನಃಪ್ರಕರಾಸ್ತಸ್ಮಿನ್ ಹಾಸಾ ಇವ ಜಯಶ್ರಿಯಃ ॥ ೧೨೮ ॥

ಜಯಲಕ್ಷ್ಮಿಯ ನಗೆಗಳೋ ಎಂಬಂತೆ, ಆಕಾಶದಿಂದ ದೇವಸ್ತ್ರೀಯರ ನೋಟ ಗಳೂ ಪುಷ್ಪರಾಶಿಗಳೂ ಆ ಸೇನಾಪತಿಯ ಮೇಲೆ ಬಿದ್ದುವು.

ತಟವೇದೀಂ ಸಸೋಪಾನಾಂ ರೂಪ್ಯಾದ್ರೇಃ [೮]ಸಮತೀಯಿವಾನ್ ।
ಸೋ[೯]ಭ್ಯೈತ್ಸತೋರಣಾಂ ಸಿಂಧೋಃ ಪಶ್ಚಿಮಾಂ ವನವೇದಿಕಾಮ್ ॥

ಬೆಳ್ಳಿಯ ಬೆಟ್ಟದ ಮೆಟ್ಟಲುಗಳುಳ್ಳ ಜಗುಲಿಯಂತಿರುವ ತಪ್ಪಲನ್ನು ದಾಟಿದ ಆ ಸೇನಾಪತಿಯು ಸಿಂಧುನದಿಯ ಪಶ್ಚಿಮದಿಕ್ಕಿನಲ್ಲಿರುವ ಬಾಗಿಲುಳ್ಳ ವನಪ್ರದೇಶಕ್ಕೆ ಹೋದನು.

೧ ಆರೂಢಃ. ೨ ಅರ್ಗಲರಹಿತೇ. ೩ ಧ್ವನಿವಿಶೇಷಂ. ೪ ಕವಾಟಯುಗಲಂ, ಕವಾಟಮರರಂ ಸಾಮ್ಯೇ ಇತಿ ಕೋಶಃ. ೫ ಸ್ವಿದ್ಯತಿ ಸ್ಮ. ೬ ನಾಲಿಂಗಿತಃ. ೭ ಅಪನೀತಃ. ೮ ಸಮತಿಕ್ರಾಂತವಾನ್. ೯ ಅಗಚ್ಛತ್.

**ವೇದಿಕಾಂ ತಾಮತಿಕ್ರಮ್ಯ [೧]ಸಂಜಗಾಹೇ [೨]ಪರಾಂ ಭುವಮ್ ।**
**ನಾನಾಕರಪುರಗ್ರಾಮಸೀಮಾರಾಮೈರಲಂಕೃತಾಮ್ ॥ ೧೩೦ ॥**

ಸೇನಾಪತಿಯು ಆ ವನಪ್ರದೇಶವನ್ನು ದಾಟಿ ಅನೇಕವಾದ ಗಣಿಗಳಿಂದಲೂ ಪಟ್ಟಣಗಳಿಂದಲೂ ಗ್ರಾಮಗಳಿಂದಲೂ ಎಲ್ಲೆಗಳಲ್ಲಿರುವ ಉದ್ಯಾನಗಳಿಂದಲೂ ಅಲಂಕೃತವಾದ ಪಶ್ಚಿಮದಿಕ್ಕಿನ ಭೂಮಿಯನ್ನು ಪ್ರವೇಶಿಸಿದನು.

**ಪ್ರವಿಷ್ಟಮಾತ್ರ ಏವಾಸ್ಮಿನ್ಪ್ರಜಾಸ್ತ್ರಾಸಮುಪಾಯಯುಃ ।**
**ಸಮಂ [೩]ದಾರಗವ್ಯೈ ರಥ್ಯಾ [೪]ಘಟಂತೇ ಸ್ಮ ಪಲಾಯಿತುಮ್ ॥ ೧೩೧ ॥**

ಸೇನಾಪತಿಯು ಪ್ರವೇಶಮಾಡಿದೊಡನೆಯೇ ಅಲ್ಲಿಯ ಪ್ರಜೆಗಳು ಹೆದರಿದರು. ಗಾಡಿಗಳಲ್ಲಿದ್ದವರು ತಮ್ಮ ಪತ್ನಿಯರೊಡನೆಯೂ ಗೋವುಗಳೊಡನೆಯೂ ಓಡಲು ಉದ್ಯುಕ್ತರಾದರು.

**ಕೇಚಿತ್ಕೃತಧಿಯೋ ಧೀರಾಃ ಸಾರ್ಘಾಃ ಪುಣ್ಯಾಕ್ಷತಾದಿಭಿಃ ।**
**ಪ್ರತ್ಯಗ್ರಹೀಷುರಭ್ಯೇತ್ಯ ಸಬಲಂ ಬಲನಾಯಕಮ್ ॥ ೧೩೨ ॥**

ಕೆಲವುಮಂದಿ ಬುದ್ಧಿಶಾಲಿಗಳಾದ ಧೀರರು ಬೆಲೆಬಾಳುವ ವಸ್ತುಗಳನ್ನು ಹಿಡಿದು ಕೊಂಡು ಸೈನ್ಯಸಮೇತನಾದ ಸೇನಾಪತಿಗೆ ಇದಿರಾಗಿ ಹೋಗಿ ಪುಣ್ಯಕರವಾದ ಅಕ್ಷತ ಮೊದಲಾದ ವಸ್ತುಗಳಿಂದ ಸತ್ಕರಿಸಿದರು.

**ನ ಭೇತವ್ಯಂ ನ ಭೇತವ್ಯ[೫]ಮಾಧ್ವಮಾಧ್ವಂ ಯಥಾಸುಖಮ್ ।**
**ಇ[೬]ತ್ಯಸ್ಯಾ[೭]ಜ್ಞಾಕರಾ ವಿಷ್ವಗ್ಭ್ರೇಮು[೮]ರಾಶ್ವಾಸಿತಪ್ರಜಾಃ ॥ ೧೩೩ ॥**

ಈ ಸೇನಾಪತಿಯ ಭೃತ್ಯರು ''ಹೆದರಬೇಡಿ, ಹೆದರಬೇಡಿ, ಸುಖವಾಗಿರಿ, ಇರಿ'' ಎಂಬುದಾಗಿ ಪ್ರಜೆಗಳಿಗೆ ವಿಶ್ವಾಸವನ್ನುಂಟುಮಾಡುವವರಾಗಿ ಎಲ್ಲಾ ಕಡೆಯಲ್ಲೂ ಓಡಾಡಿದರು.

**ಮ್ಲೇಚ್ಛಖಂಡಮಖಂಡಾಜ್ಞಃ ಪರಿಕ್ರಾಮನ್ಪ್ರದಕ್ಷಿಣಮ್ ।**
**ತತ್ರ ತತ್ರ ವಿಭೋರಾಜ್ಞಾಂ ಮ್ಲೇಚ್ಛರಾಜೈ[೯]ರಜಿಗ್ರಹತ್ ॥ ೧೩೪ ॥**

ತಡೆಯಿಲ್ಲದ ಆಜ್ಞೆಯುಳ್ಳ ಸೇನಾಪತಿಯು ಮ್ಲೇಚ್ಛಖಂಡವನ್ನು ಪ್ರದಕ್ಷಿಣವಾಗಿ ಸುತ್ತಾಡಿ ಅಲ್ಲಲ್ಲಿ ಭರತೇಶ್ವರನ ಆಜ್ಞೆಯನ್ನು ಮ್ಲೇಚ್ಛರಾಜರು ಅಂಗೀಕರಿಸುವಂತೆ ಮಾಡಿದನು.

**ಇದಂ ಚಕ್ರಧರಕ್ಷೇತ್ರಂ ಸ ಚೈಷ [೧೦]ನಿಕಟೇ ಪ್ರಭುಃ ।**
**ತಮಾರಾಧಯಿತುಂ ಯೂಯಂ ತ್ವರಧ್ವಂ ಸಹ ಸಾಧನೈಃ ॥ ೧೩೫ ॥**

**ಭರತಸ್ಯಾಧಿರಾಜಸ್ಯ ಚಕ್ರಿಣೋ ಪ್ರತಿಶಾಸನಮ್ ।**
**ಶಾಸನಂ ಶಿರಸಾ [೧೧]ದಧ್ವಂ ಯೂಯಮಿ[೧೨]ತ್ಯನ್ವಶಾಚ್ಚ ತಾನ್॥ ೧೩೬ ॥**

''ಇದು ಚಕ್ರವರ್ತಿಯ ಕ್ಷೇತ್ರವು. ಪ್ರಸಿದ್ಧನಾದ ಈ ಪ್ರಭುವಾದರೋ ಸಮೀಪದಲ್ಲಿದ್ದಾನೆ. ಅವನನ್ನು ಪೂಜಿಸುವುದಕ್ಕಾಗಿ ನೀವುಗಳು ಸಾಮಗ್ರಿಗಳೊಡನೆ ತ್ವರೆಮಾಡಿ. ನೀವುಗಳು ರಾಜಾಧಿರಾಜನಾದ ಭರತಚಕ್ರವರ್ತಿಯ ತಡೆಯಿಲ್ಲದ ಆಜ್ಞೆಯನ್ನು ಶಿರಸ್ಸಿನಲ್ಲಿ ಧರಿಸಿ'' ಎಂಬುದಾಗಿಯೂ ಅವರಿಗೆ ಅಪ್ಪಣೆಮಾಡಿದನು.

**ಜಾತಾ ವಯಂ ಚಿರಾದದ್ಯ ಸನಾಥಾ ಇ[೧೩]ತ್ಯುದಾಶಿಷಃ ।**
**ಕೇಚಿಚ್ಚಕ್ರಧರಸ್ಯಾಜ್ಞಾ[೧೪]ಮಶಠಾಃ [೧೫]ಪ್ರತ್ಯಪತ್ಸತ ॥ ೧೩೭ ॥**

ನಿಷ್ಕಪಟವಾದ ವ್ಯಾಪಾರವುಳ್ಳ ಕೆಲವು ಮಂದಿಗಳು ''ನಾವು ಬಹುಕಾಲದ ಮೇಲೆ ಈಗ ಸನಾಥರಾದೆವು'' ಎಂದು ಗಟ್ಟಿಯಾಗಿ ಆಶೀರ್ವಾದವಚನಗಳನ್ನು ಹೇಳಿ ಚಕ್ರವರ್ತಿಯ ಆಜ್ಞೆಯನ್ನು ಅಂಗೀಕರಿಸಿದರು.

---

೧ ಪ್ರವಿಶತಿ ಸ್ಮ. ೨ ಪಶ್ಚಿಮಾಂ. ೩ ಕಲತ್ರಧೇನುಭಿಃ. ೪ ಚೇಷ್ಟಂತೇ ಸ್ಮ. ೫ ತಿಷ್ಠತ ತಿಷ್ಠತ. ೬ ಸೇನಾನ್ಯಃ. ೭ ಭೃತ್ಯಾಃ. ೮ ವಿಶ್ವಾಸಿತಪ್ರಜಾಃ. ೯ ಅಗ್ರಾಹಯತ್. ೧೦ ಸಮೀಪೇ ಆಸ್ತೇ. ೧೧ ಧಾರಯತ. ೧೨ ಶಾಸ್ತಿ ಸ್ಮ. ೧೩ ಉದ್ಗತಾಶೀರ್ವಾದವಚನಾಃ. ೧೪ ನಿಷ್ಕಪಟವೃತ್ತಯೋ ಭೂತ್ವಾ. ೧೫ ಅಂಗೀಕಾರಂ ಚಕ್ರುಃ.

**ಸಂಧಿವಿಗ್ರಹಯಾನಾದಿಷಾಡ್ಗುಣ್ಯಕೃತವಿಕ್ರಮಾಃ ।**
**ಬಲಾತ್ಪ್ರಣಮಿತಾಃ ಕೇಚಿದೈಶ್ವರ್ಯಲವದೂಷಿತಾಃ ॥ ೧೩೮ ॥**

ಸಂಧಿ ವಿಗ್ರಹ ಯಾನ ಆಸನ ಸಂಶ್ರಯ ದ್ವೈಧೀಭಾವ ಈ ಆರುಗುಣಗಳಿಂದ ಪರಾಕ್ರಮವನ್ನು ತೋರಿಸುವವರೂ ಅಲ್ಪವಾದ ಐಶ್ವರ್ಯದ ಹೆಮ್ಮೆಯುಳ್ಳವರೂ ಆದ ಕೆಲವರು ಬಲಾತ್ಕಾರದಿಂದ ನಮಸ್ಕಾರಮಾಡಿಸಲ್ಪಟ್ಟರು.

**ಕಾಂಶ್ಚಿದ್ದುರ್ಗಾಶ್ರಿತಾನ್ಮ್ಲೇಚ್ಛಾನವಸ್ಕಂದನಿರೋಧನೈಃ ।**
**ಸೇನಾನೀರ್ವಶಮಾನಿನ್ಯೇ ನಮತ್ಯಜ್ಞೋ[೧]ಧಿಕಂ ಕ್ಷತಃ ॥ ೧೩೯ ॥**

ಸೇನಾಪತಿಯು ದುರ್ಗಗಳನ್ನಾಶ್ರಯಿಸಿದ್ದ ಕೆಲವು ಮಂದಿ ಮ್ಲೇಚ್ಛ ರಾಜರುಗಳನ್ನು ಆಕ್ರಮಿಸಿ ತಡೆದು ವಶಮಾಡಿಕೊಂಡನು. ಅಜ್ಞಾನಿಯು ಹೆಚ್ಚಾಗಿ ಪೀಡಿತನಾದರೆ ಬಗ್ಗುತ್ತಾನೆ.

**ಕೇಚಿದ್ಬಲೈ[೨]ರವಷ್ಟಬ್ಧಾಸ್ತತ್ಪೀಡಾಂ ಸೋಢುಮಕ್ಷಮಾಃ ।**
**ಶಾಸನೇ ಚಕ್ರಿಣಸ್ತಸ್ಥುಃ [೩]ಸ್ನೇಹೋ ನಾಪೀಡಿತಾ[೪]ತ್ತಿಲಾತ್ ॥ ೧೪೦ ॥**

ಸೈನ್ಯಗಳಿಂದ ಆಕ್ರಮಿಸಲ್ಪಟ್ಟ ಕೆಲವುಮಂದಿಗಳು ಆ ಸೈನ್ಯಗಳ ಬಾಧೆಯನ್ನು ಸಹಿಸಲಸಮರ್ಥರಾಗಿ ಚಕ್ರವರ್ತಿಯ ಆಜ್ಞೆಯಲ್ಲಿದ್ದರು. ಚಕ್ರವರ್ತಿಗೆ ಅಧೀನರಾದರೆಂದು ಭಾವವು. ಪೀಡಿಸಲ್ಪಡದಿರುವ ದುಷ್ಟರಿಂದ ಮೈತ್ರಿಯುಂಟಾಗುವುದಿಲ್ಲ. ಉಜ್ಜದಿರುವ ಎಳ್ಳಿನಿಂದ ಎಣ್ಣೆಯು ಬರುವುದೇ ?

**ಇತ್ಯುಪಾಯೈರುಪಾಯಜ್ಞಃ ಸಾಧಯನ್ಮ್ಲೇಚ್ಛಭೂಭುಜಃ ।**
**ತೇಭ್ಯಃ ಕನ್ಯಾದಿರತ್ನಾನಿ ಪ್ರಭೋರ್ಭೋಗ್ಯಾನ್ಯುಪಾಹರತ್ ॥ ೧೪೧ ॥**

ಈ ಪ್ರಕಾರವಾದ ಉಪಾಯಗಳಿಂದ ಉಪಾಯವನ್ನು ಬಲ್ಲವನಾದ ಸೇನಾಪತಿಯು ಮ್ಲೇಚ್ಛರಾಜರುಗಳನ್ನು ಸಾಧಿಸಿ ಅವರಿಂದ ಪ್ರಭುವಿಗೆ ಭೋಗಾರ್ಹವಾದ ಕನ್ಯಾದಿರತ್ನಗಳನ್ನು ತೆಗೆದುಕೊಂಡನು.

**ಧರ್ಮಕರ್ಮಬಹಿರ್ಭೂತಾ ಇತ್ಯಮೀ ಮ್ಲೇಚ್ಛಕಾ ಮತಾಃ ।**
**ಅನ್ಯಥಾ[೫]ನ್ಯೈಃ ಸಮಾಚಾರೈ[೬]ರಾರ್ಯಾವರ್ತೇನ ತೇ ಸಮಾಃ ॥ ೧೪೨ ॥**

ಈ ರಾಜರುಗಳು ಧರ್ಮಕರ್ಮಶೂನ್ಯರಾಗಿರುವುದರಿಂದ ಮ್ಲೇಚ್ಛರೆಂದು ತಿಳಿಯಲ್ಪಡುತ್ತಾರೆ. ಬೇರೆ ವಿವಾಹ ಮೊದಲಾದ ಸಮಾಚಾರಗಳಿಂದ ಅವರು ಆರ್ಯಾಖಂಡದೊಡನೆ ಅಂದರೆ ಆರ್ಯರಿಗೆ ಸಮಾನರಾಗಿದ್ದಾರೆ.

**ಇತಿ ಪ್ರಸಾಧ್ಯ ತಾಂ ಭೂಮಿ[೭]ಮಭೂಮಿಂ ಧರ್ಮಕರ್ಮಣಾಮ್ ।**
**ಮ್ಲೇಚ್ಛರಾಜಬಲೈಃ ಸಾರ್ಧಂ ಸೇನಾನೀರ್ನ್ಯವೃತತ್ಪುನಃ ॥ ೧೪೩ ॥**

ಈ ಪ್ರಕಾರವಾಗಿ ಧರ್ಮಕರ್ಮಗಳಿಗೆ ಸ್ಥಾನವಲ್ಲದ ಆ ಭೂಮಿಯನ್ನು–ಮ್ಲೇಚ್ಛಖಂಡವನ್ನು ಜಯಿಸಿ ಸೇನಾಪತಿಯು ಮ್ಲೇಚ್ಛರಾಜರ ಸೈನ್ಯಗಳೊಡನೆ ಹಿಂದಿರುಗಿದನು.

**ರರಾಜ [೮]ರಾಜರಾಜಸ್ಯ ಸಾಶ್ವರತ್ನಶ್ಚಮೂಪತಿಃ ।**
**ಸಿದ್ಧದಿಗ್ವಿಜಯೋ ಜೈತ್ರಃ ಪ್ರತಾಪ ಇವ ಮೂರ್ತಿಮಾನ್ ॥ ೧೪೪ ॥**

ಅಶ್ವರತ್ನಸಮೇತನೂ ದಿಗ್ವಿಜಯವನ್ನು ಸಾಧಿಸಿದವನೂ ಆದ ಭರತೇಶ್ವರನ ಸೇನಾಪತಿಯು, ಜಯಶೀಲವಾದ ಮತ್ತು ಆಕಾರವನ್ನು ಹೊಂದಿದ ಪ್ರತಾಪವೋ ಎಂಬಂತೆ, ಪ್ರಕಾಶಿಸಿದನು.

**ಸತೋರಣಾಮತಿಕ್ರಮ್ಯ ಸ ಸಿಂಧೋರ್ವನವೇದಿಕಾಮ್ ।**
**[೯]ವಿಗಾಢಶ್ಚ ಸಸೋಪಾನಾಂ ರೂಪ್ಯಾದ್ರೇಸ್ತಟವೇದಿಕಾಮ್ ॥ ೧೪೫ ॥**

---

೧ ಅಧಿಕಂ ಪೀಡಿತೋ ಭೂತ್ವಾ. ೨ ವೇಷ್ಟಿತಾಃ. ೩ ಮೈತ್ರೀಪಕ್ಷೇ ತೈಲಂ. ೪ ದುರ್ಜನಾತ್ ಪಕ್ಷೇ ತಿಲಾತ್. ೫ ವಿವಾಹಾದಿಭಿಃ. ೬ ಆರ್ಯಾಖಂಡೇನ. ೭ ಅಸ್ಥಾನಂ. ೮ ಭರತಸ್ಯ. ೯ ಪ್ರವಿಷ್ಟಃ.

ಸೇನಾಪತಿಯು ಸಿಂಧುನದಿಯ ಹೊರಬಾಗಿಲುಳ್ಳ ವನಪ್ರದೇಶವನ್ನು ದಾಟಿ ವಿಜಯಾರ್ಧಪರ್ವತದ ಮೆಟ್ಟಿಲುಗಳುಳ್ಳ ತಪ್ಪಲನ್ನು ಪ್ರವೇಶಿಸಿದನು.

**ಆರೂಢೋ ಜಗತೀಮದ್ರೇ[೧]ರ್ವ್ಯೂಢೋರಸ್ಕೋ ಮಹಾಭುಜಃ ।**
**ಷಡ್ಭಿರ್ಮಾಸೈಃ ಪ್ರಶಾಂತೋಷ್ಣ ಸೋ[೨]ಧ್ಯವಾತ್ಸೀ[೩]ದ್ಗುಹಾಮುಖಮ್ ॥**

ವಿಶಾಲವಾದ ಎದೆಯುಳ್ಳವನೂ ದೊಡ್ಡ ತೋಳುಗಳುಳ್ಳವನೂ ಆದ ಸೇನಾಪತಿಯು ವಿಜಯಾರ್ಧಗಿರಿಯ ಜಗುಲಿ-ತಪ್ಪಲನ್ನು ಹತ್ತಿ ಆರು ತಿಂಗಳುಗಳಲ್ಲಿ ಉಪಶಾಂತವಾಗುವ ಉಷ್ಣವುಳ್ಳ ಗುಹಾದ್ವಾರದಲ್ಲಿ ವಾಸಮಾಡಿದನು.

**ತತ್ರಾಸೀನಶ್ಚ ಸಂಶೋಧ್ಯ ಬಹ್ವಪಾಯಂ ಗುಹೋದರಮ್ ।**
**ಕೃತರಕ್ಷಾವಿಧಿಃ ಸಮ್ಯ[೪]ಕ್ಪ್ರತ್ಯಯಾಚ್ಛಿಬಿರಂ ಪ್ರಭೋಃ ॥ ೧೪೭ ॥**

ಸೇನಾಪತಿಯು ಆ ಗುಹಾದ್ವಾರದಲ್ಲಿದ್ದು ಅನೇಕ ಅಪಾಯಗಳು-ತೊಂದರೆಗಳುಳ್ಳ ಗುಹಾಮಧ್ಯಭಾಗವನ್ನು ಶೋಧಿಸಿ ಚೆನ್ನಾಗಿ ಕಾಪಾಡಿಕೊಂಡಿರುವಂತೆ ವ್ಯವಸ್ಥೆಮಾಡಿ-ಭೃತ್ಯರನ್ನು ನೇಮಿಸಿ ತಾನು ಭರತರಾಜನ ಬಿಡಾರಕ್ಕೆ ಹೊರಟುಹೋದನು.

**ಅಥ ಸಮ್ಮುಖಮಾಗತ್ಯ [೫]ಸಾನೀಕೈರ್ನೃಪಸತ್ತಮೈಃ ।**
**ಪ್ರತ್ಯಗೃಹ್ಯತ ಸೇನಾನೀಃ ಸ[೬]ಜಯಾನಕನಿಸ್ವನಮ್ ॥ ೧೪೮ ॥**

ಬಳಿಕ ಸೈನ್ಯಸಮೇತರಾದ ರಾಜಶ್ರೇಷ್ಠರುಗಳೊಡನೆ ಸೇನಾಪತಿಯು ಭರತೇಶ್ವರನ ಬಳಿಗೆ ಬರುತ್ತ ಜಯಭೇರಿಯ ಶಬ್ದವಾಗುತ್ತಿರಲು ಭರತೇಶ್ವರನಿಂದ ಬರಮಾಡಿಕೊಳ್ಳಲ್ಪಟ್ಟನು.

**[೭]ವಿಭಕ್ತತೋರಣಾಮುಚ್ಚೈಃ ಪ್ರಚಲತ್ಕೇತುಮಾಲಿಕಾಮ್ ।**
**ಮಹಾವೀಥೀಮತಿಕ್ರಮ್ಯ ಪ್ರಾವಿಕ್ಷತ್ಸ [೮]ನೃಪಾಲಯಮ್ ॥ ೧೪೯ ॥**

ಸೇನಾಪತಿಯು ವ್ಯಕ್ತವಾದ ತೋರಣಗಳುಳ್ಳದೂ ಎತ್ತರವಾಗಿ ಹಾರಾಡುತ್ತಿರುವ ಧ್ವಜಪತಾಕೆಗಳ ಸಾಲುಗಳುಳ್ಳದೂ ಆದ ದೊಡ್ಡಬೀದಿಯನ್ನು ದಾಟಿ ಭರತರಾಜನ ಬಿಡಾರವನ್ನು ಪ್ರವೇಶಿಸಿದನು.

**[೯]ತುರಂಗಮವರಾದ್ದೂರಾತ್ಕೃತಾವತರಣಃ [೧೦]ಕೃತೀ ।**
**ಪ್ರಭೋರ್ನೃಪಾಸನಸ್ಥಸ್ಯ ಪ್ರಾಪದಾಸ್ಥಾನಮಂಡಪಮ್ ॥ ೧೫೦ ॥**

ದೂರದಲ್ಲೇ ಅಶ್ವರತ್ನದಿಂದ ಇಳಿದ ಸೇನಾಪತಿಯು ರಾಜಪೀಠದಲ್ಲಿದ್ದ ಭರತಪ್ರಭುವಿನ ಆಸ್ಥಾನಮಂಡಪವನ್ನು ಪ್ರವೇಶಿಸಿದನು.

**ದೂರಾನತಚಲನ್ಮೌಲಿಸಂದಷ್ಟಕರಕುಡ್ಮಲಃ ।**
**ಪ್ರಣನಾಮ ಪ್ರಭುಂ ಸಭ್ಯೈರ್ವೀಕ್ಷ್ಯಮಾಣಃ ಸವಿಸ್ಮಿತೈಃ ॥ ೧೫೧ ॥**

ದೂರದಿಂದಲೇ ನಮ್ರವೂ ಚಲಿಸುತ್ತಿರುವುದೂ ಆದ ಕಿರೀಟದಲ್ಲಿ ಕೈಗಳನ್ನಿಟ್ಟು ಜೋಡಿಸಿದವನೂ ಆಶ್ಚರ್ಯವನ್ನು ಹೊಂದಿದ ಸಭಿಕರಿಂದ ನೋಡಲ್ಪಟ್ಟವನೂ ಆದ ಆ ಸೇನಾಪತಿಯು ಭರತರಾಜನಿಗೆ ನಮಸ್ಕರಿಸಿದನು.

**ಮುಖರೈ[೧೧]ರ್ಜಯಕಾರೇಣ ಮ್ಲೇಚ್ಛರಾಜೈಃ ಸಸಾಧ್ವಸಮ್ ।**
**ಪ್ರಣೇಮೇ ಪ್ರಭುರಭ್ಯೇತ್ಯ ಲಲಾಟಸ್ಪೃಷ್ಟಭೂತಲೈಃ ॥ ೧೫೨ ॥**

ಜಯಜಯೋಚ್ಚಾರದಿಂದ ಶಬ್ದಮಾಡುವವರೂ ಭೂತಲದಲ್ಲಿ ಹಣೆಯನ್ನಿಟ್ಟಿರುವವರೂ ಆದ ಮ್ಲೇಚ್ಛರಾಜರು ಬಂದು ಭಯದೊಡನೆ ಕೂಡಿರುವಹಾಗೆ ಭರತೇಶ್ವರನಿಗೆ ನಮಸ್ಕಾರಮಾಡಿದರು.

೧ ವಿಶಾಲವಕ್ಷಸ್ಥಲಃ. ೨ ತಸ್ಥೌ. ೩ ಗುಹಾದ್ವಾರೇ. ೪ ಪ್ರತ್ಯಗಾತ್. ೫ ಸಸೈನ್ಯೈಃ. ೬ ಕ್ರಿಯಾವಿಶೇಷಣಂ. ೭ ಪ್ರಕಟೀಭೂತತೋರಣಾಂ. ೮ ಶಿಬಿರಂ. ೯ ಅಶ್ವರತ್ನಾತ್. ೧೦ ಸೇನಾಪತಿಃ. ೧೧ ಜಯಜಯೋಚ್ಚಾರಣೇನ.

**[೧]ತದುಪಾಹೃತರತ್ನಾರ್ಘ್ಯೈ[೨]ರರ್ಘಯ[೩]ನ್ನುಪಢೌಕಿತೈಃ ।**
**[೪]ನಾಮಾದೇಶಂ ಚ [೫]ತಾನಸ್ಮೈ ಪ್ರಭವೇಸೌ ನ್ಯವೇದಯತ್ ॥ ೧೫೩ ॥**

ಆ ಮ್ಲೇಚ್ಛರಾಜರು ತಂದ ಬಹುಮೂಲ್ಯವಾದ ರತ್ನಗಳನ್ನು ಪ್ರಭುವಿನ ಬಳಿಗೆ ತಂದು ಅವುಗಳಿಂದ ಈ ಸೇನಾಪತಿಯು ಪೂಜಿಸಿ ಆ ಮ್ಲೇಚ್ಛರಾಜರ ಹೆಸರುಗಳನ್ನು ಹೇಳುತ್ತ ಅವರನ್ನು ಭರತೇಶ್ವರನಿಗೆ ನಿವೇದಿಸಿದನು. ಪರಿಚಯಮಾಡಿಸಿದನೆಂದರ್ಥವು.

**ಸಪ್ರಸಾದಂ ಚ ಸಮ್ಮಾನ್ಯ ಸತ್ಕೃತಾಸ್ತೇ ಮಹೀಭುಜಃ ।**
**ಪ್ರಭೋರನುಮತಾದ್ಭೂಯಃ [೬]ಸ್ವಮೋಕಃ ಪ್ರತ್ಯಯಾಸಿಷುಃ ॥ ೧೫೪ ॥**

ಅನುಗ್ರಹಪೂರ್ವಕವಾಗಿ ಸನ್ಮಾನಿಸಿ ಸತ್ಕರಿಸಲ್ಪಟ್ಟ ಆ ರಾಜರುಗಳು ಭರತೇಶ್ವರನ ಅನುಮತಿಯಿಂದ ಹಿಂದಿರುಗಿ ತಮ್ಮ ಸ್ಥಾನಕ್ಕೆ ಹೊರಟುಹೋದರು.

**ಇತ್ಥಂ ಪುಣ್ಯೋದಯಾಚ್ಚಕ್ರೀ ಬಲಾ[೭]ತ್ಪ್ರತ್ಯಂತಪಾಲಕಾನ್ ।**
**ವಿಜಿಗ್ಯೇ [೮]ದಂಡಮಾತ್ರೇಣ ಜಯಃ ಪುಣ್ಯಾದೃತೇ ಕುತಃ ॥ ೧೫೫ ॥**

ಈ ಪ್ರಕಾರವಾಗಿ ಭರತಚಕ್ರವರ್ತಿಯು ಬಲಿಷ್ಠವಾದ ತನ್ನ ಪುಣ್ಯದ ಉದಯದಿಂದ ಆ ಮ್ಲೇಚ್ಛರಾಜರುಗಳನ್ನು ಸೈನ್ಯದಿಂದಲೇ ಜಯಿಸಿದನು; ಪುಣ್ಯವಿಲ್ಲದೆ ಜಯವೆಲ್ಲಿಂದ ಬರುವುದು ?

**ಅಥ ನೃಪತಿಸಮಾಜೇನಾರ್ಚಿತಃ ಸಾನುರಾಗಂ**
**ವಿಜಿತಸಕಲದುರ್ಗಃ ಪ್ರಹ್ವಯನ್ಮ್ಲೇಚ್ಛನಾಥಾನ್ ।**
**ಪುನರಪಿ ವಿಜಯಾಯಾಯೋಜಿ ಸೋಗ್ರೇಸರತ್ವೇ**
**[೯]ಜಯ ಇವ ಜಯಚಿಹ್ನೈರ್ಮಾನಿತೋ ರತ್ನಭರ್ತ್ರಾ ॥ ೧೫೬ ॥**

ಬಳಿಕ ರಾಜರುಗಳ ಸಮೂಹದಿಂದ ಪ್ರೀತಿಪೂರ್ವಕವಾಗಿ ಪೂಜಿಸಲ್ಪಟ್ಟವನೂ ಪರರಾಜರ ಸಮಸ್ತದುರ್ಗಗಳನ್ನು ಜಯಿಸಿದವನೂ ಮ್ಲೇಚ್ಛರಾಜರುಗಳನ್ನು ಎರಗಿಸಿಕೊಂಡವನೂ ಭರತೇಶ್ವರನಿಂದ ಜಯನಿಮಿತ್ತವಾಗಿ ವಸ್ತ್ರಾಲಂಕಾರಗಳಿಂದ ಗೌರವಿಸಲ್ಪಟ್ಟವನೂ ಆದ ಸೇನಾಪತಿಯು ದಿಗ್ವಿಜಯಕ್ಕೋಸ್ಕರ ಜಯಕುಮಾರನಂತೆ ಭರತೇಶ್ವರನಿಂದ ಪುನಃ ಪ್ರಮುಖನಾಗಿ ಮಾಡಲ್ಪಟ್ಟನು.

**ಜಯತಿ ಜಿನವರಾಣಾಂ ಶಾಸನಂ ಯತ್ಪ್ರಸಾದಾ-**
**ತ್ಪದಮಿದಮಧಿರಾಜಾಂ ಪ್ರಾಪ್ಯತೇ ಹೇಲಯೈವ ।**
**ಸಮುಚಿತನಿಧಿರತ್ನಪ್ರಾಜ್ಯಭೋಗೋಪಭೋಗ-**
**ಪ್ರಕಟಿತಸುಖಸಾರಂ ಭೂರಿಸಂಪತ್ಪ್ರಸಾರಮ್ ॥ ೧೫೭ ॥**

ಉತ್ಕೃಷ್ಟವಾದ ನಿಧಿಗಳಿಂದಲೂ ರತ್ನಗಳಿಂದಲೂ ಉಂಟಾದ ಶ್ರೇಷ್ಠ ಭೋಗೋಪಭೋಗಗಳಿಂದ ಅಭಿವ್ಯಕ್ತವಾದ ಸುಖದ ಸಾರವುಳ್ಳದೂ ಹೆಚ್ಚಾದ ಸಂಪತ್ತನ್ನುಂಟುಮಾಡುವುದೂ ಆದ ಈ ಚಕ್ರವರ್ತಿಪದವಿಯು ಯಾರ ಅನುಗ್ರಹದಿಂದ ಸುಲಭವಾಗಿ ಹೊಂದಲಾಗುವುದೋ ಅಂತಹ ಜಿನೇಶ್ವರರ ಶಾಸನವು ಜಯಶೀಲವಾಗಿದೆ.

**ಛತ್ರಂ ಚಂದ್ರಕರಾಪಹಾಸಿರುಚಿರಂ ಚಾಮೀಕರಪ್ರೋಜ್ಜ್ವಲ-**
**ದ್ದಂಡಂ ಚಾಮರಯುಗ್ಮಕಂ ಸುರಸರಿಡ್ಡಿಂಡೀರಪಿಂಡಚ್ಛವಿ ।**
**[೧೦]ರುಕ್ಮಾದ್ರೇರಿವ ಸಂವಿಭಕ್ತಮಪರಂ ಕೂಟಂ ಮೃಗೇಂದ್ರಾಸನಂ**
**ಲೇಭೇಸೌ ವಿಜಯಾರ್ಧನಾಥವಿಜಯಾದ್ರತ್ನಾನ್ಯಥಾನ್ಯಾನ್ಯಪಿ ॥ ೧೫೮ ॥**

ಈ ಭರತೇಶ್ವರನು ವಿಜಯಾರ್ಧಾಧಿಪತಿಯನ್ನು ಜಯಿಸಿದುದರಿಂದ ಚಂದ್ರಕಿರಣವನ್ನು ಪರಿಹಾಸ್ಯಮಾಡುವ ಮನೋಹರವಾದ ಶ್ವೇತಚ್ಛತ್ರವನ್ನೂ ಬಂಗಾರದಂತೆ ಪ್ರಕಾಶಮಾನವಾದ ದಂಡವನ್ನೂ ದೇವಗಂಗೆಯ ನೊರೆಗಳ ರಾಶಿಯ ಕಾಂತಿಯುಳ್ಳ ಎರಡು ಚಾಮರಗಳನ್ನೂ ಮೇರುಪರ್ವತದಿಂದ ಬೇರೆಯಾದ ಬೇರೊಂದು ಶಿಖರವೋ ಎಂಬಂತಿರುವ ಸಿಂಹಾಸನವನ್ನೂ ಬೇರೆ ರತ್ನಗಳನ್ನೂ ಹೊಂದಿದನು.

೧ ಮ್ಲೇಚ್ಛರಾಜೇಭ್ಯ ಆಹೃತೈಃ. ೨ ಪೂಜಯನ್. ೩ ಪ್ರಭೋಃ ಸಮೀಪಂ ನೀತೈಃ. ೪ ನಾಮೋದ್ದೇಶಂ. ೫ ಮ್ಲೇಚ್ಛರಾಜಾನ್. ೬ ನಿಜಾವಾಸಂ ಜಗ್ಮುಃ. ೭ ಮ್ಲೇಚ್ಛರಾಜಾನ್. ೮ ಸೈನ್ಯಮಾತ್ರೇಣ. ೯ ಜಯಕುಮಾರ ಇವ. ೧೦ ಮೇರೋಃ.

**ಗೀರ್ವಾಣಃ ಕೃತಮಾಲ ಇತ್ಯಭಿಮತಃ ಸಂಪೂಜ್ಯ ತಂ ಸಾದರಂ**
**[೧]ಪ್ರಾದಾದಾಭರಣಾನಿ ಯಾನಿ ನ ಪುನಸ್ತೇಷಾಮಿಹಾ[೨]ಸ್ತ್ಯನ್ಮಿತಿಃ ।**
**ಸಮ್ರಾಟ್ತೈ[೩]ರಚಕಾದಲಂಕೃತತನುಃ ಕಲ್ಪದ್ರುಮಃ ಪುಷ್ಪಿತೋ**
**ಮೇರೋಃ ಸಾನುಮಿವಾಶ್ರಿತೋ ಮಣಿಮಯಂ ಸೋಧ್ಯಾಸಿತೋ**
**ವಿಷ್ಟರಮ್ ॥ ೧೫೯ ॥**

ಕೃತಮಾಲನೆಂದು ಪ್ರಸಿದ್ಧನಾದ ದೇವನು ಆದರಪೂರ್ವಕವಾಗಿ ಭರತೇಶ್ವರನನ್ನು ಪೂಜಿಸಿ ಈ ಲೋಕದಲ್ಲಿ ಅಸದೃಶವಾದ ಆಭರಣಗಳನ್ನು ಕೊಟ್ಟನು. ಚಕ್ರೇಶ್ವರನು ಆ ಆಭರಣಗಳಿಂದ ಅಲಂಕೃತವಾದ ದೇಹವುಳ್ಳವನಾಗಿ, ಹೂಗಳನ್ನು ಬಿಟ್ಟಿರುವ ಕಲ್ಪವೃಕ್ಷದಂತೆ, ಪ್ರಕಾಶಿಸಿದನು. ಅವನು, ಮೇರುಪರ್ವತದ ತಪ್ಪಲನ್ನು ಆಶ್ರಯಿಸುವಂತೆ, ರತ್ನಮಯವಾದ ಸಿಂಹಾಸನದಲ್ಲಿ ಕುಳಿತನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ವಿಜಯಾರ್ಧಗುಹಾದ್ವಾರೋದ್ಘಾಟನವರ್ಣನಂ ನಾಮೈಕತ್ರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕಭಾವದೀಪಿಕಾವ್ಯಾಖ್ಯೆಯೊಳ್'' ವಿಜಯಾರ್ಧಗುಹಾದ್ವಾರೋದ್ಘಾಟನವೆಂಬ
ಮೂವತ್ತೊಂದನೆಯ ಪರ್ವವು ಸಂಪೂರ್ಣವಾದುದು.

---

೧ ದದೌ. ೨ ಉಪಮಾ. ೩ ಬಭೌ.

# ಅಥ ದ್ವಾತ್ರಿಂಶತ್ತಮಂ ಪರ್ವ

**ಅಥಾನ್ಯೇದ್ಯುರುಪಾರೂಢಸಂಭ್ರಮೈರ್ಬಲನಾಯಕೈಃ ।**
**[೧]ಪ್ರತ್ಯಪಾಲ್ಯತ ಸನ್ನದ್ಧೈಃ ಪ್ರಯಾಣಸಮಯಃ ಪ್ರಭೋಃ ॥ ೧ ॥**

ಅನಂತರದಲ್ಲಿ ಮಾರನೆಯ ದಿವಸ ಆತುರಪಡುತ್ತಿರುವವರೂ ಪ್ರಯಾಣಕ್ಕೆ ಸಿದ್ಧರಾಗಿರುವವರೂ ಆದ ಸೇನಾಪತಿಗಳು ಭರತೇಶ್ವರನ ಪ್ರಯಾಣಸಮಯವನ್ನು ಇದಿರುನೋಡುತ್ತಿದ್ದರು.

**ಗಜತಾಶ್ವೀಯರಥ್ಯಾನಾಂ ಪದಾತೀನಾಂ ಚ [೨]ಸಂಕುಲೈಃ ।**
**ನ ನೃಪಾಜಿರಮೇವಾಸೀದ್ರುದ್ಧಮದ್ರೇರ್ವನಾನ್ಯಪಿ ॥ ೨ ॥**

ಆನೆಗಳ ಸಮೂಹದ, ಕುದುರೆಗಳ ಸಮೂಹದ, ರಥಗಳ ಸಮೂಹದ ಮತ್ತು ಕಾಲಾಳುಗಳ ತಿಕ್ಕಾಟಗಳಿಂದ ರಾಜಾಂಗಣವೇ ಅಲ್ಲದೆ ಪರ್ವತದ ವನಗಳೂ ಆವರಿಸಲ್ಪಟ್ಟುವು.

**ಜಯಕುಂಜರಮಾರೂಢಃ [೩]ಪರೀತೋ ನೃಪಕುಂಜರೈಃ ।**
**ರೇಜೇ [೪]ನಿರ್ಯನ್ನ್ಪಯಾಣಾಯ ಸಮ್ರಾಟ್ ಶಕ್ರ ಇವಾಮರೈಃ ॥ ೩ ॥**

ವಿಜಯಗಜವನ್ನೇರಿ ಶ್ರೇಷ್ಠರಾಜರಿಂದ ಆವೃತನಾಗಿ ಪ್ರಯಾಣಮಾಡಿದ ಭರತ ಚಕ್ರವರ್ತಿಯು, ದೇವತೆಗಳೊಡನೆ ಪ್ರಯಾಣಮಾಡುವ ದೇವೇಂದ್ರನಂತೆ, ಪ್ರಕಾಶಿಸಿದನು.

**ಕಿಂಚಿ[೫]ತ್ಪಶ್ಚಾನ್ಮುಖಂ ಗತ್ವಾ ಸೇನಾನ್ಯಾ ಶೋಧಿತೇ ಪಥಿ ।**
**ಧ್ವಜಿನೀ ಸಂಕುಚಂತ್ಯಾಸೀದೀರ್ಯಾಶುದ್ಧಿಂ ಶ್ರಿತೇವ ಸಾ ॥ ೪ ॥**

ಆ ಸೈನ್ಯವು ಸೇನಾಪತಿಯಿಂದ ಶೋಧಿಸಲ್ಪಟ್ಟ ಮಾರ್ಗದಲ್ಲಿ ಸ್ವಲ್ಪ ಪಶ್ಚಿಮಾಭಿಮುಖವಾಗಿ ಹೋಗಿ, ಈರ್ಯಾಪಥಶುದ್ಧಿಯನ್ನು ಹೊಂದಿತೋ ಎಂಬಂತೆ, ಸಂಕೋಚಪಟ್ಟಿತು. (ಜೀವವಧೆಯಾಗದಂತೆ ಮುಂದೆ ನೋಗದುದ್ದ ದಾರಿಯನ್ನು ನೋಡಿಕೊಂಡು ಹೋಗುವುದಕ್ಕೆ ಈರ್ಯಾಪಥಶುದ್ಧಿಯೆಂದು ಹೆಸರು).

**[೬]ಪ್ರಗುಣಸ್ಥಾನಸೋಪಾನಾಂ ರೂಪ್ಯಾದ್ರೇಃ ಶ್ರೇಣಿಮಶ್ರಮಾತ್ ।**
**ಮುನೇಃ ಶುದ್ಧಿರಿವ ಶ್ರೇಣೀಮಾರೂಢಾ ಸಾ [೭]ಪತಾಕಿನೀ ॥ ೫ ॥**

ಮುನಿಯ ಚಿತ್ತಶುದ್ಧಿಯು ಶ್ರೇಷ್ಠವಾದ ಗುಣಸ್ಥಾನಗಳೆಂಬ ಮೆಟ್ಟಿಲುಗಳುಳ್ಳ ಉಪಶಮ ಅಥವಾ ಕ್ಷಪಕಶ್ರೇಣಿಯನ್ನು ಹತ್ತುವಂತೆ, ಆ ಸೈನ್ಯವು ಸಮವಾದ ಪ್ರದೇಶಗಳೂ ಮೆಟ್ಟಿಲುಗಳೂ ಉಳ್ಳ ವಿಜಯಾರ್ಧಪರ್ವತಪಂಗ್ತಿಯನ್ನು ಶ್ರಮವಿಲ್ಲದೆ ಹತ್ತಿತು.(ಮೋಹನೀಯಕರ್ಮದ ಉದಯ ಉಪಶಮಾದಿ ಅವಸ್ಥೆಗಳಲ್ಲಿ ಉಂಟಾಗುವ ಮನೋಭಾವಗಳಿಗೆ ಗುಣಸ್ಥಾನಗಳೆಂದೂ ಅವುಗಳ ಆರೋಹಣಕ್ಕೆ ಶ್ರೇಣಿಯೆಂದೂ ಹೆಸರು).

**ತಮಿಸ್ರೇತಿ ಗುಹಾ ಯಾ ಸಾ [೮]ಗಿರಿವ್ಯಾಸಸಮಾಯತಿಃ ।**
**ಉಚ್ಛ್ರಿತಾ ಯೋಜನಾನ್ಯಷ್ಟೌ [೯]ತತೋ[೧೦]ರ್ಧಾಧಿಕವಿಸ್ತೃತಿಃ ॥ ೬ ॥**

ಆ ಪರ್ವತದಲ್ಲಿರುವ ತಮಿಸ್ರೆಯೆಂಬ ಗುಹೆಯು ಆ ಪರ್ವತದಷ್ಟು (ಅಡ್ಡಳತೆ ೫೦ ಯೋಜನ) ದೀರ್ಘವಿಸ್ತಾರವುಳ್ಳದೂ ಎಂಟು ಯೋಜನ ಎತ್ತರವುಳ್ಳದೂ ಹನ್ನೆರಡು ಯೋಜನ ವಿಸ್ತಾರ –ಅಗಲವುಳ್ಳದೂ ಆಗಿದೆ.

೧ ಪ್ರತೀಕ್ಷ್ಯತೇ ಸ್ಮ. ೨ ಸಂಮರ್ದೈಃ. ೩ ಪರಿವೃತಃ. ೪ ಗಚ್ಛನ್. ೫ ಪಶ್ಚಿಮಾಭಿಮುಖಂ. ೬ ಋಜು ಸಂಸ್ಥಾನಸೋಪಾನಾಂ, ಪ್ರಕೃಷ್ಟಗುಣಸ್ಥಾನಸೋಪಾನಾಂ ಚ. ೭ ಸೇನಾ. ೮ ಪಂಚಾಶದ್ಯೋಜನಾಯಾಮಾ. ೯ ಅಷ್ಟಯೋಜನೋತ್ಸೇಧಾತ್. ೧೦ ದ್ವಾದಶಯೋಜನವಿಸ್ತಾರಾ.

**ವಾಜ್ರಂ ಕವಾಟಯೋರ್ಯುಗ್ಮಂ ಯಾ ಸ್ವೋಚ್ಛ್ರಾಯಮಿತೋಚ್ಛ್ರಿತಿ ।**
**ದಧೇ [೧]ಪೃಥ[೨]ಕ್ಸ್ವವಿಷ್ಕಂಭಸಾಧಿಕದ್ವ್ಯಂಶವಿಸ್ತೃತಿ ॥ ೭ ॥**

ಆ ಗುಹೆಗೆ ಅದರಷ್ಟು ಎತ್ತರವಾದ (೮ ಯೋಜನ) ಎರಡು ವಜ್ರದ ಬಾಗಿಲುಗಳಿವೆ. ಅವು ಪ್ರತಿಯೊಂದೂ ಗುಹೆಯ ವಿಸ್ತಾರದ ಅರ್ಧಕ್ಕಿಂತ ಸ್ವಲ್ಪ ಹೆಚ್ಚು (ಸಾಧಿಕ ೬ ಯೋಜನ) ವಿಸ್ತಾರವಾಗಿರುತ್ತವೆ.

**ಪರಾರ್ಧ್ಯಮಣಿನಿರ್ಮಾಣರುಚಿಮದ್ದ್ವಾರಬಂಧನಾ ।**
**[೩]ತದಧಸ್ತಲನಿಸ್ಸರ್ಪ[೪]ತ್ಸಿಂಧುಸ್ರೋತೋವಿರಾಜಿತಾ ॥ ೮ ॥**

ಆ ಗುಹೆಯು ಶ್ರೇಷ್ಠವಾದ ರತ್ನಗಳ ನಿರ್ಮಾಣದಿಂದ ಕಾಂತಿಯುಳ್ಳ ದ್ವಾರಬಂಧನವುಳ್ಳದಾಗಿಯೂ ಆ ದ್ವಾರಬಂಧನದ ಕೆಳಗೆ ಹರಿಯುತ್ತಿರುವ ಸಿಂಧುನದೀ ಪ್ರವಾಹದಿಂದ ಶೋಭಿಸುತ್ತಿರುವುದಾಗಿಯೂ ಇದೆ.

**ಅಶಕ್ಯೋದ್ಘಾಟನಾನ್ಯೇಷಾಂ ಮುಕ್ತ್ವಾ ಚಕ್ರಿಚಮೂಪತಿಮ್ ।**
**[೫]ತನ್ನಿರರ್ಗಲಿತತ್ವಾಚ್ಚ ಪ್ರಾಗೇವ [೬]ಕೃತನಿರ್ವೃತಿಃ ॥ ೯ ॥**

ಚಕ್ರವರ್ತಿಯ ಸೇನಾಪತಿಗಲ್ಲದೆ ಬೇರೆಯವರಿಗೆ ಆ ಬಾಗಿಲನ್ನು ತೆರೆಯಲು ಸಾಧ್ಯವಿಲ್ಲ. ಮೊದಲೇ ಸೇನಾಪತಿಯು ಅದನ್ನು ತೆರೆದಿದ್ದುದರಿಂದ ಅದರ ಬೆಂಕಿಯು ಶಾಂತವಾಗಿದ್ದಿತು.

**ಜಗತ್ಸ್ಥಿತಿರಿವಾನಾದ್ಯಾ [೭]ಘಟಿತೇವ ಚ [೮]ಕೇನಚಿತ್ ।**
**ಜೈನೀ [೯]ಶ್ರುತಿರಿವೋಪಾತ್ತಗಾಂಭೀರ್ಯಾ ಮುನಿಭಿರ್ಮತಾ ॥ ೧೦ ॥**

ಲೋಕದ ಇರುವಿಕೆಯು ಅನಾದಿಯಾಗಿರುವಂತೆ ಈ ಗುಹೆಯೂ, ಯಾವನೋ ಪುರುಷನಿಂದ ರಚಿಸಲ್ಪಟ್ಟಿದೆಯೋ ಎಂಬಂತೆ, ಅನಾದಿಯಾಗಿರುವುದು. ಜೈನಾಗಮದಂತೆ ಈ ಗುಹೆಯು ಗಾಂಭೀರ್ಯವುಳ್ಳದೆಂದು ಮುನಿಗಳು ಒಪ್ಪಿದ್ದಾರೆ.

**ವ್ಯಾಯತಾ ಜೀವಿತಾಶೇವ ಮೂರ್ಛೇವ ಚ ತಮೋಮಯೀ ।**
**ಗತೇವೋಲ್ಲಾಘತಾಂ ಕೃಚ್ಛ್ರಾನ್ಮುಕ್ತೋಷ್ಮಾ ಶೋಧಿತೋದರಾ ॥ ೧೧ ॥**

ಆ ಗುಹೆಯು ತಾನು ಬದುಕುವ ಆಶೆಯಿಂದ ಉದ್ದವಾಗಿರುವಂತೆಯೂ ಅಜ್ಞಾನಾಂಧಕಾರಮಯವಾದ ಮೂರ್ಛೆಯುಳ್ಳಂತೆಯೂ ರೋಗವಿಮೋಚನೆಯನ್ನು ಹೊಂದಿದಂತೆಯೂ ಶ್ರಮದಿಂದ ಶಾಂತವಾದ ಉಷ್ಣವುಳ್ಳದಾಗಿಯೂ ಶೋಧಿಸಲ್ಪಟ್ಟ ಹೊಟ್ಟೆ–ಮಧ್ಯಭಾಗವುಳ್ಳದಾಗಿಯೂ ಆಯಿತು.

**[೧೦]ಕುಟೀವ ಚ [೧೧]ಪ್ರಸೂತಾಯಾ ನಿಷಿದ್ಧಾನ್ಯಪ್ರವೇಶನಾ ।**
**ಕೃತರಕ್ಷಾವಿಧಿರ್ದ್ವಾರೇ [೧೨]ಧೃತಮಂಗಲಸಂವಿಧಿಃ ॥ ೧೨ ॥**

ಬೇರೆಯವರ ಪ್ರವೇಶವನ್ನು ತಡೆದಿರುವುದೂ ಬಾಗಿಲಿನಲ್ಲಿ ಕಾವಲುಗಾರರುಳ್ಳುದೂ ದೀಪ ಮೊದಲಾದ ಮಂಗಲವಸ್ತುಗಳುಳ್ಳುದೂ ಆದ ಆ ಗುಹೆಯು, ಬಾಣಂತಿಯ ಮನೆಯೋ ಎಂಬಂತಿದ್ದಿತು.

೧ ಏಕೈಕಕವಾಟಂ. ೨ ದ್ವಾದಶಯೋಜನ ವಿಸ್ತಾರವದ್ಗುಹಾಯಾಃ ಸಾಧಕದ್ವಿತೀಯಾಂಶವಿಸ್ತಾರಂ, ಸಾಧಿಕಷಡ್ಯೋಜನವಿಸ್ತೃತಿರಿತ್ಯರ್ಥಃ. ೩ ದ್ವಾರಬಂಧಾದಧಸ್ಥಲೇ ನಿರ್ಗಚ್ಛತ್. ೪ ಸಿಂಧುನದ್ಯಾಃ ಪ್ರವಾಹೇಣ. ೫ ಚಮೂಪತಿನಾ ಸಮುದ್ಘಾಟಿತಕವಾಟತ್ವಾತ್. ೬ ಕೃತೋಷ್ಮೋಪಶಾಂತಿಃ. ೭ ರಚಿತೇವ. ೮ ಕೇನಚಿತ್ಪುರುಷೇಣ. ೯ ಪರಮಾಗಮ ಇವ. ೧೦ ಗೃಹಮಿವ. ೧೧ ಪ್ರಸೂತವತ್ಯಾಃ. ೧೨ ದೀಪಾದಿಮಂಗಲಸಂವಿಧಿಃ.

**[೧]ತಾಮಾಲೋಕ್ಯ ಬಲಂ ಜಿಷ್ಣೋರ್ದೂರಾದಾಸೀತ್ಸಸಾಧ್ವಸಮ್ ।**
**ತಮಸಾ ಸೂಚಿಭೇದ್ಯೇನ ಕಜ್ಜಲೇನೇವ ಸಂಭೃತಾಮ್ ॥ ೧೩ ॥**

ಕಣ್ಣಿನ ಕಜ್ಜಲ–ಕಾಡಿಗೆಯಿಂದ ಲಿಪ್ತವಾಗಿದೆಯೋ ಎಂಬಂತೆ, ಸೂಜಿಯಿಂದ ಬಿಡಿಸಲ್ಪಡತಕ್ಕುದಾದ ಅಂಧಕಾರದಿಂದ ತುಂಬಲ್ಪಟ್ಟಿರುವ ಆ ಗುಹೆಯನ್ನು ದೂರ ದಿಂದ ನೋಡಿ ಚಕ್ರವರ್ತಿಯ ಸೈನ್ಯವು ಭೀತಿಯುಳ್ಳುದಾಯಿತು.

**ಚಕ್ರಿಣಾಜ್ಞಾಪಿತೋ ಭೂಯಃ ಸೇನಾನೀಃ ಸಪುರೋಹಿತಃ ।**
**ತತ್ತಮೋನಿರ್ಗಮೋಪಾಯೇ ಪ್ರಯತ್ನಮಕರೋತ್ತತಃ ॥ ೧೪ ॥**

ಬಳಿಕ ಚಕ್ರವರ್ತಿಯಿಂದ ಪುನಃ ಆಜ್ಞಾಪಿಸಲ್ಪಟ್ಟ ಸೇನಾಪತಿಯು ಪುರೋಹಿತ ಸಮೇತನಾಗಿ ಆ ಕತ್ತಲೆಯನ್ನು ಹೋಗಲಾಡಿಸುವ ಉಪಾಯದಲ್ಲಿ ಪ್ರಯತ್ನವನ್ನು ಮಾಡಿದನು. ಕತ್ತಲೆಯನ್ನು ಹೋಗಲಾಡಿಸಲು ಪ್ರಯತ್ನಿಸಿದನೆಂದು ಭಾವವು.

**ಕಾಕಿಣೀಮಣಿರತ್ನಾಭ್ಯಾಂ ಪ್ರತಿಯೋಜನಮಾಲಿಖತ್ ।**
**ಗುಹಾಭಿತ್ತಿದ್ವಯೇ ಸೂರ್ಯಾಸೋಮಯೋರ್ಮಂಡಲದ್ವಯಮ್ ॥**

ಗುಹೆಯ ಉಭಯಪಾರ್ಶ್ವದ ಎರಡು ಗೋಡೆಗಳಲ್ಲಿ ಪ್ರತಿಯೊಂದು ಯೋಜನ ದೂರದಲ್ಲಿ ಕಾಕಿಣೀ ಮತ್ತು ಮಣಿಗಳೆಂಬ ಎರಡು ರತ್ನಗಳಿಂದ ಸೂರ್ಯ ಚಂದ್ರರ ಎರಡು ಮಂಡಲಗಳನ್ನು ಬರೆದನು.

**ತತ್ಪ್ರಕಾಶಕೃತೋದ್ಯೋತಂ ಸಜ್ಯೋತ್ಸ್ನಾತಪಸನ್ನಿಧಿ ।**
**ಗುಹಾಮಧ್ಯಮಪಧ್ವಾಂತಂ ವ್ಯಗಾಹತ ತತೋ ಬಲಮ್ ॥ ೧೬ ॥**

ತರುವಾಯ ಆ ಮಂಡಲಗಳ ಬೆಳಕಿನಿಂದ ಬೆಳಗಲ್ಪಟ್ಟುದೂ ಸಮೀಪವಾಗಿ ಬೆಳದಿಂಗಳೂ ಬಿಸಿಲೂ ಉಳ್ಳುದೂ ಕತ್ತಲೆಯನ್ನು ದೂರಮಾಡಿರುವುದೂ ಆದ ಆ ಗುಹೆಯ ಮಧ್ಯಭಾಗವನ್ನು ಸೈನ್ಯವು ಪ್ರವೇಶಿಸಿತು.

**ಚಕ್ರರತ್ನಜ್ವಲದ್ದೀಪೇ [೨]ಸಸೇನಾನ್ಯಾಂ ಪುರಃ ಸ್ಥಿತೇ ।**
**ಬಲಂ ತದನುಮಾರ್ಗೇಣ ಪ್ರವಿಭಜ್ಯ ದ್ವಿಧಾ ಯಯೌ ॥ ೧೭ ॥**

ಸೇನಾಪತಿಸಹಿತವಾದ ಚಕ್ರರತ್ನವೆಂಬ ಪ್ರಕಾಶಮಾನವಾದ ದೀಪವು ಮುಂದು ಗಡೆಯಲ್ಲಿರುತ್ತಿರಲು ಅದರ ದಾರಿಯನ್ನನುಸರಿಸಿ ಸೈನ್ಯವು ಎರಡು ವಿಭಾಗವಾಗಿ ಹೊರಟಿತು.

**[೩]ಪರಿಸಿಂಧುನದೀಸ್ರೋತಃ ಪ್ರಾಕ್ಪಶ್ಚಾಚ್ಚೋಭಯೋಃ ಪಥೋಃ ।**
**ಬಲಂ [೪]ಪ್ರಾಯಾಜ್ಜಲಂ ಸಿಂಧೋರುಪಯುಂಜ್ಯೋಪಯುಜ್ಯ ತತ್ ॥**

ಆ ಸೈನ್ಯವು ಸಿಂಧುನದಿಯ ಪ್ರವಾಹವನ್ನು ಬಿಟ್ಟು ಅದರ ಪೂರ್ವಪಶ್ಚಿಮ ದಿಕ್ಕುಗಳಲ್ಲಿರುವ ಎರಡು ದಾರಿಗಳಲ್ಲಿ ಸಿಂಧುನದಿಯ ನೀರನ್ನು ಉಪಭೋಗಿಸುತ್ತ ನಡೆಯಿತು.

**ಪಥಿ [೫]ದ್ವೈಧೇ ಸ್ಥಿತಾ ತಸ್ಮಿನ್ಸೇನಾಗ್ರಣ್ಯಾ [೬]ನಿಯಂತ್ರಿತಾ ।**
**ಸಾ ಚಮೂಃ [೭]ಸಂಶಯದ್ವೈಧಂ ತದಾ ಪ್ರಾಪ[೮]ದಿಗಾಶ್ರಯಮ್ ॥ ೧೯ ॥**

ಗುಹೆಯ ಆ ಎರಡು ದಾರಿಗಳಲ್ಲಿದ್ದ ಮತ್ತು ಸೇನಾಪತಿಯಿಂದ ನಿಯಮಿಸಲ್ಪಟ್ಟ (ಹತೋಟಿಯಲ್ಲಿರಿಸಲ್ಪಟ್ಟ) ಆ ಸೈನ್ಯವು ಆಗ ಉಪದೇಶಾಶ್ರಯವುಳ್ಳ ಸಂಶಯ ಭೇದವನ್ನು ಹೊಂದಿತು. ಪೂರ್ವಪಶ್ಚಿಮದಿಕ್ಕುಗಳ ಸಂದೇಹನಿವಾರಣೆಗಾಗಿ ಸೇನಾ ಪತಿಯ ಉಪದೇಶವನ್ನು ನಿರೀಕ್ಷಿಸಿತೆಂದು ಭಾವವು.

**ತತಃ ಪ್ರಯಾಣಕೈಃ ಕೈಶ್ಚಿತ್ಪ್ರಭೂತ[೯]ಯವಸೋದಕೈಃ ।**
**[೧೦]ಗುಹಾರ್ಧಸಮ್ಮಿತಾಂ ಭೂಮಿಂ [೧೧]ವ್ಯತೀಯಾಯ ಪತಿರ್ವಿಶಾಮ್ ॥**

೧ ಗುಹಾಂ. ೨ ಸೇನಾಪತಿಸಹಿತೇ. ೩ ಸಿಂಧುನದೀಪ್ರವಾಹಂ ವರ್ಜಯಿತ್ವಾ. ೪ ಆಗಚ್ಛತ್. ೫ ದ್ವಿಪ್ರಕಾರವತಿ. ೬ ನಿಯಮಿತಾ. ೭ ಸಂಶಯಭೇದಂ, ಸಂಶಯವಿನಾಶಂ ವಾ. ೮ ಉಪದೇಶಾಶ್ರಯಂ. ೯ ಯವಸಂತೃಣಮರ್ಜುನಂ. ೧೦ ಅರ್ಧಪ್ರಮಿತಾಂ ಗುಹಾಂ. ೧೧ ಅತ್ಯಗಾತ್.

ಅನಂತರದಲ್ಲಿ ಭರತೇಶ್ವರನು ಹೆಚ್ಚು ಹುಲ್ಲು ನೀರು ಮೊದಲಾದ ಸಾಧನಗಳುಳ್ಳ ಕೆಲವು ಪ್ರಯಾಣಗಳಿಂದ ಗುಹೆಯ ಅರ್ಧಭಾಗ ಭೂಮಿಯನ್ನು ದಾಟಿಹೋದನು.

**[೧]ಯತ್ರೋನ್ಮಗ್ನಜಲಾ ಸಿಂಧು[೨]ರ್ನಿಮಗ್ನಜಲಯಾ ಸಮಮ್ ।**
**[೩]ಪ್ರವಿಷ್ಟಾ ತಿರ್ಯ[೪]ಗುದ್ದೇಶಂ ತಂ ಪ್ರಾಪ ಬಲಮೀಶಿತುಃ ॥ ೨೧ ॥**

ಯಾವ ಪ್ರದೇಶದಲ್ಲಿ ಮೇಲಕ್ಕೇಳುತ್ತಿರುವ ನೀರುಳ್ಳ ಸಿಂಧುನದಿಯು ಮುಳುಗುತ್ತಿರುವ ನೀರುಳ್ಳ ನದಿಯೊಡನೆ ಸೇರಿರುವುದೋ ಅಂತಹ ಅಡ್ಡಲಾದ ಪ್ರದೇಶವನ್ನು ಭರತನ ಸೈನ್ಯವು ತಲುಪಿತು.

**ತಯೋರಾರಾತ್ತಟೇ ಸೈನ್ಯಂ ನಿವೇಶ್ಯ ಭರತೇಶ್ವರಃ ।**
**ವೈಷಮ್ಯಮುಭಯೋರ್ನದ್ಯೋಃ [೫]ಪ್ರೇಕ್ಷಾಂಚಕ್ರೇ ಸಕೌತುಕಮ್ ॥ ೨೨ ॥**

ಭರತೇಶ್ವರನು ಆ ನದಿಗಳ ದಡದ ಬಳಿಯಲ್ಲಿ ಸೈನ್ಯವನ್ನಿರಿಸಿ ಆ ನದಿಗಳ ವೈಷಮ್ಯ –ವ್ಯತ್ಯಾಸವನ್ನು ಕುತೂಹಲದಿಂದ ನೋಡಿದನು.

**[೬]ಏಕಾಧಃಪಾತಯ[೭]ತ್ಯನ್ಯಾ [೮]ದಾರ್ವಾದ್ಯುತ್ಪ್ಲಾವಯತ್ಯರಮ್ ।**
**ಮಿಥೋ ವಿರುದ್ಧಸಾಂಗತ್ಯೇ ಸಂಗತೇ [೯]ತೇ ಕಥಂಚನ ॥ ೨೩ ॥**

ಕೆಳಕ್ಕೆ ಹರಿಯುತ್ತಿರುವ ನದಿಯು ಕಟ್ಟಿಗೆ ಮೊದಲಾದ ಪದಾರ್ಥಗಳನ್ನು ಕೆಳಕ್ಕೆ ತಳ್ಳುತ್ತದೆ. ಮೇಲೆ ಹರಿಯುತ್ತಿರುವ ನದಿಯು ಆ ಪದಾರ್ಥಗಳನ್ನು ಶೀಘ್ರವಾಗಿ ಮೇಲೆ ತೇಲಿಸುತ್ತದೆ. ಪರಸ್ಪರ ವಿರುದ್ಧವ್ಯಾಪಾರವುಳ್ಳ ಆ ನದಿಗಳು ಹೇಗೋ ಸೇರಿರುತ್ತವೆ.

**ನದ್ಯೋರುತ್ತರಣೋಪಾಯಃ ಕೋ ನು ಸ್ಯಾದಿತಿ ತರ್ಕಯನ್ ।**
**ದ್ರುತಮಾಹ್ವಾಯಯಾಮಾಸ ತತ್ರಸ್ಥಃ ಸ್ಥಪತಿಂ ಪತಿಃ ॥ ೨೪ ॥**

ಅಲ್ಲಿರುವ ಭರತಭೂಪಾಲನು ಆ ನದಿಗಳನ್ನು ದಾಟುವ ಉಪಾಯವಾವುದಿರು ವುದೆಂದು ಯೋಚಿಸಿ ಆಗಲೇ ಮರಗೆಲಸದವ(ಬಡಗಿಯವ)ನನ್ನು ಕರೆಸಿದನು.

**[೧೦]ಸ ತನ್ನದೀದ್ವಯಂ ಪಶ್ಯನ್ನುತ್ಪತನ್ನಿಪತಜ್ಜಲಮ್ ।**
**ದೃಷ್ಟ್ಯೈವ [೧೧]ತುಲಯಾಮಾಸ [೧೨]ಜಲಾಂಜಲಿಮಿವ ಕ್ಷಣಮ್ ॥ ೨೫ ॥**

ಆ ಬಡಿಗೆಯವನು ಮೇಲಕ್ಕೇಳುತ್ತಿರುವ ಮತ್ತು ಮುಳುಗುತ್ತಿರುವ ನೀರು ಗಳುಳ್ಳ ಆ ಎರಡು ನದಿಗಳನ್ನು ಕ್ಷಣಕಾಲದವರೆಗೆ ನೋಡಿ, ಬಗಸೆಯಲ್ಲಿರುವ ನೀರಿನ ಆಳತೆಯನ್ನು ತಿಳಿಯುವಂತೆ, ನೋಟದಿಂದಲೇ ನೀರಿನ ಆಳತೆಯನ್ನು ಗೊತ್ತುಮಾಡಿದನು.

**ಉಪ[೧೩]ರ್ಯುಚ್ಛ್ವಾಸಯತ್ಯೇನಾಂ ಮಹಾ[೧೪]ನ್ವಾಯುಃ ಸ್ಫುರನ್ನಧಃ ।**
**ವಾಯುಸ್ತ[೧೫]ದನ್ಯಥಾವೃತ್ತಿರಮುಷ್ಯಾಂ ಚ ವಿಜೃಂಭತೇ ॥ ೨೬ ॥**

ಕೆಳಗಿನಿಂದ ಬೀಸುವ ದೊಡ್ಡಗಾಳಿಯು ಈ ನದಿಯನ್ನು ಮೇಲಕ್ಕೆ ನೂಕುವುದು. ಅದಕ್ಕೆ ವಿಪರೀತವ್ಯಾಪಾರವುಳ್ಳ–ಕೆಳಕ್ಕೆ ಬೀಸುವ ಗಾಳಿಯು ಈ ನದಿಯಲ್ಲಿ ವಿಜೃಂಭಿಸುತ್ತದೆ. ಅಂದರೆ ಈ ನದಿಯನ್ನು ಕೆಳಕ್ಕೆ ತಳ್ಳುವುದು.

**[೧೬]ಉಪನಾಹಾದೃತೇ ಕೋನ್ಯಃ ಪ್ರತೀಕಾರೋನಯೋರಿತಿ ।**
**ಭಿಷಗ್ವರ ಇವಾರೇಭೇ [೧೭]ಸಂಕ್ರಮೋಪಕ್ರಮಂ ಕೃತೀ ॥ ೨೭ ॥**

ನಿಪುಣನಾದ ಆ ಬಡಿಗೆಯವನು ''ಸೇತುಬಂಧನವಲ್ಲದೆ ಈ ನದಿಗಳಿಗೆ ಬೇರೆ ಪ್ರತೀಕಾರವಾವುದು ?'' ಎಂದು, ಶ್ರೇಷ್ಠನಾದ ವೈದ್ಯನಂತೆ, ಸೇತುವೆಯನ್ನು ಕಟ್ಟುವ

೧ ಯಸ್ಮಿನ್ಪ್ರದೇಶೇ. ೨ ನದ್ಯಾ. ೩ ಪೂರ್ವಾಪರಭಿತ್ತಿದ್ವಯ ಕುಂಡಾನ್ನಿರ್ಗತ್ಯ ಸಿಂಧುನದೀಂ ಪ್ರವಿಷ್ಟೇ ತ್ಯರ್ಥಃ. ೪ ಪ್ರದೇಶಂ. ೫ ದದರ್ಶ. ೬ ನಿಮಗ್ನಾ. ೭ ಉನ್ಮಗ್ನಾ. ೮ ಕಾಷ್ಠಾದಿ. ೯ ಉನ್ಮಗ್ನ ನಿಮಗ್ನನದ್ಯೌ. ೧೦ ತಯೋರಾರಾತ್ತಟೇ ಇತ್ಯಪಿ ಪಾಠಃ. ೧೧ ದದರ್ಶೇತ್ಯರ್ಥಃ. ೧೨ ಅಂಜಲಿ ಪ್ರಮಾಣಜಲಮಿವ. ೧೩ ಉತ್ಪಾತಯತಿ. ೧೪ ಅಧೋಗಮನವೃತ್ತಿಃ ಊರ್ಧ್ವಗಾಮೀ. ೧೫ ಅಧೋಗಾಮೀ. ೧೬ ಸೇತುಬಂಧನಾತ್. ೧೭ ಸೇತೂಪಕ್ರಮಂ.

ಕೆಲಸಕ್ಕಾರಂಭಿಸಿದನು. ಶ್ರೇಷ್ಠವೈದ್ಯನು ಯೋಗ್ಯಚಿಕಿತ್ಸೆಯನ್ನು ಮಾಡುವಂತೆ ಬಡಿಗೆಯವನು ನದಿಗಳನ್ನು ದಾಟುವುದಕ್ಕೆ ತಕ್ಕುದಾದ ಸೇತುಬಂಧನೋಪಾಯವನ್ನು ಕಂಡುಹಿಡಿದನೆಂದು ಭಾವವು.

**ಅಮಾನುಷೇಷ್ವರಣ್ಯೇಷು ಯೇ ಕೇಚನ ಮಹಾದ್ರುಮಾಃ ।**
**[೧]ಸ ತಾನಾನಾಯಯಾಮಾಸ ದಿವ್ಯಶಕ್ತ್ಯನುಭಾವತಃ ॥ ೨೮ ॥**

ಆ ಬಡಿಗೆಯವನು ಮನುಷ್ಯಪ್ರವೇಶವಿಲ್ಲದ ಕಾಡುಗಳಲ್ಲಿದ್ದ ದೊಡ್ಡಮರಗಳನ್ನು ತನ್ನ ದಿವ್ಯಶಕ್ತಿಯ ಪ್ರಭಾವದಿಂದ ತರಿಸಿದನು.

**ಸಾರದಾರುಭಿ[೨]ರುತ್ತಂಭ್ಯ ಸ್ತಂಭಾನಂತರ್ಜಲೇ ಸ್ಥಿತಾನ್ ।**
**ಸ್ಥಪತಿಃ ಸ್ಥಾಪಯಾಮಾಸ [೩]ತೇಷಾಮುಪರಿ [೪]ಸಂಕ್ರಮಮ್ ॥ ೨೯ ॥**

ಆ ಮರಗೆಲಸದವನು ಗಟ್ಟಿಯಾದ ಮರಗಳಿಂದ ಕಂಬಗಳನ್ನು ಮಾಡಿ ನೀರಿನೊಳಗೆ ನಿಲ್ಲಿಸಿ ಅವುಗಳಮೇಲೆ ಸೇತುವೆಯನ್ನು ಸ್ಥಾಪಿಸಿದನು.

**[೫]ಬಲವ್ಯಸನಮಾಶಂಕ್ಯ [೬]ಚಿರವೃತ್ತೌ ಸ ಧೀರಧೀಃ ।**
**ಕ್ಷಣಾನ್ನಿಷ್ಪಾದಯಾಮಾಸ ಸಂಕ್ರಮಂ ಪ್ರಭುಶಾಸನಾತ್ ॥ ೩೦ ॥**

ಧೈರ್ಯವಾದ ಬುದ್ಧಿಯುಳ್ಳ ಆ ಬಡಿಗೆಯವನು ಸಾವಕಾಶವಾದರೆ ಸೈನ್ಯಕ್ಕೆ ಬಾಧೆಯಾಗುವುದೆಂದು ಯೋಚಿಸಿ ಪ್ರಭುವಿನ ಅಪ್ಪಣೆಯಮೇರೆಗೆ ಕ್ಷಣಕಾಲದಲ್ಲಿ ಸೇತುವೆಯನ್ನು ನಿರ್ಮಾಣಮಾಡಿದನು.

**ಕೃತಃ ಕಲಕಲಃ ಸೈನ್ಯೈರ್ನಿಷ್ಠಿತೇ ಸೇತುಕರ್ಮಣಿ ।**
**ತದೈವ ಚ ಬಲಂ ಕೃತ್ಸ್ನಮುತ್ತತಾರ [೭]ಪರಂ ತಟಮ್ ॥ ೩೧ ॥**

ಸೇತುವೆಯ ಕೆಲಸವು ಪೂರ್ತಿಯಾಗಲು ಸೈನಿಕರು ಕೋಲಾಹಲ–ಧ್ವನಿ ಯನ್ನು ಮಾಡಿದರು. ಆಗಲೇ ಸೈನ್ಯವೆಲ್ಲವೂ ಆಚೆಯ ದಡಕ್ಕೆ ದಾಟಿತು.

**ನಾಯಕೈಃ ಸಮಮನ್ಯೇದ್ಯುಃ ಪ್ರಭುರ್ಗಜಘಟಾವೃತಃ ।**
**ಮಹಾಪಥೇನ ತೇನೈವ ಜಲದುರ್ಗಂ ವ್ಯಲಂಘಯತ್ ॥ ೩೨ ॥**

ಮಾರನೆದಿವಸ ಭರತೇಶ್ವರನು ಆನೆಗಳ ಸಮೂಹದಿಂದ ಆವರಿಸಲ್ಪಟ್ಟವನಾಗಿ ಸಾಮಂತರಾಜರುಗಳೊಡನೆ ಆ ದೊಡ್ಡ ದಾರಿಯಿಂದಲೇ ಜಲದುರ್ಗವನ್ನು–ನದಿಯನ್ನು ದಾಟಿದನು.

**ತತಃ ಕತಿಪಯೈರೇವ ಪ್ರಯಾಣೈ[೮]ರತಿವಾಹಿತೈಃ ।**
**ಗಿರಿದುರ್ಗಂ ವಿಲಂಘ್ಯೋ[೯]ದಗ್ಗುಹಾದ್ವಾರಮುವಾಸದತ್ ॥ ೩೩ ॥**

ಬಳಿಕ ಕಳೆದುಹೋದ ಕೆಲವು ಪ್ರಯಾಣಗಳಿಂದ ಅಂದರೆ ಕೆಲವು ಪಯಣಗಳು ಕಳೆದನಂತರ ಗಿರಿದುರ್ಗವನ್ನು ದಾಟಿ ಉತ್ತರಗುಹೆಯ ಬಾಗಿಲನ್ನು ಪ್ರವೇಶಿಸಿದನು.

**ನಿರರ್ಗಲೀಕೃತದ್ವಾರಂ [೧೦]ಪೌರಸ್ತ್ಯೈರಿಭಸಾಧನೈಃ ।**
**ವ್ಯತೀತ್ಯ ಪ್ರಭುರಸ್ಯಾದ್ರೇರಧ್ಯುವಾಸ [೧೧]ವನಾವನಿಮ್ ॥ ೩೪ ॥**

ಆನೆಗಳ ಮೇಲೆ ಕುಳಿತು ಮುಂದೆಹೋದ ಸೈನಿಕರಿಂದ ತೆರೆಯಲ್ಪಟ್ಟ ಬಾಗಿಲನ್ನು ದಾಟಿ ಭರತೇಶ್ವರನು ಈ ವಿಜಯಾರ್ಧಗಿರಿಯ ವನಭೂಮಿಯಲ್ಲಿ ವಾಸ ಮಾಡಿದನು.

**ಅಧಿಶಯ್ಯ ಗುಹಾಗರ್ಭಂ ಚಿರಂ ಮಾತುರಿವೋದರಮ್ ।**
**ಲಬ್ಧಂ ಜನ್ಮಾಂತರಂ [೧೨]ಮೇನೇ [೧೩]ನಿಃಸೃತೈಃ ಸೈನಿಕೈರ್ಬಹಿಃ ॥ ೩೫ ॥**

ತಾಯಿಯ ಗರ್ಭದಲ್ಲಿ ವಾಸಮಾಡುವಂತೆ ಆ ಗುಹೆಯ ಮಧ್ಯದಲ್ಲಿ ಬಹುಕಾಲದವರೆಗೆ ವಾಸಮಾಡಿ ಹೊರಕ್ಕೆ ಹೊರಟ ಸೈನಿಕರು ಬೇರೊಂದು ಜನ್ಮವನ್ನು ಪಡೆದೆವೆಂದು ತಿಳಿದರು.

**ಗುಹೇಯ[೧]ಮತಿಗೃಧ್ನ್ಯೇವ [೨]ನಿಗೀರ್ಯ ಜನತಾಮಿಮಾಮ್ ।**
**[೩]ಜರಣಾಶಕ್ತಿತೋ ನೂನ[೪]ಮುಜ್ಜಗಾಲ ಬಹಿಃ ಪುನಃ ॥ ೩೬ ॥**

ಈ ಗುಹೆಯು ಅತಿಕಾಂಕ್ಷೆಯಿಂದ ಈ ಜನಸಮೂಹವನ್ನು ನುಂಗಿ ನಿಜವಾಗಿಯೂ ಜೀರ್ಣಶಕ್ತಿಯಿಲ್ಲದಿರುವುದರಿಂದ ಪುನಃ ಹೊರಕ್ಕೆ ವಮನ ಮಾಡಿತು (ಉತ್ಪ್ರೇಕ್ಷೆ).

**ವ್ಯಜನೈರಿವ ಶಾಖಾಗ್ರೈರ್ವೀಜಯನ್ವನವೀರುಧಾಮ್ ।**
**ಗುಹೋಷ್ಮಣಾ ಚಿರಂ ಖಿನ್ನಾಂ ಚಮೂಮಾಶ್ವಾಸಯನ್ಮರುತ್ ॥ ೩೭ ॥**

ಬೀಸಣಿಗೆಗಳಿಂದ ಬೀಸುವಂತೆ, ವನಲತೆಗಳ ಕೊಂಬೆಗಳ ತುದಿಗಳಿಂದ ಬೀಸುವ ಗಾಳಿಯು ಗುಹೆಯ ಉಷ್ಣದಿಂದ ಬಹುಕಾಲದವರೆಗೆ ಖಿನ್ನವಾದ ಸೈನ್ಯವನ್ನು ಸಮಾಧಾನಪಡಿಸಿತು. ಉಪಚರಿಸಿತೆಂದು ಭಾವವು.

**ತದ್ವನಂ ಪವನಾಧೂತಚಲಚ್ಛಾಖಾಕರೋತ್ಕರೈಃ ।**
**ಪ್ರಭೋರುಪಾಗಮೇ ತೋಷಾನ್ನನರ್ತೇವ [೫]ಧೃತಾರ್ತವಮ್ ॥ ೩೮ ॥**

ಋತುವಿನಲ್ಲುಂಟಾಗುವ ಪುಷ್ಪವೇ ಮೊದಲಾದ ವಸ್ತುಗಳನ್ನು ಧರಿಸಿರುವ ಆ ವನವು ಗಾಳಿಯಿಂದ ಕೊಡಹಲ್ಪಟ್ಟು ಚಲಿಸುತ್ತಿರುವ ಕೊಂಬೆಗಳೆಂಬ ಕೈಗಳ ಸಮೂಹಗಳಿಂದ ಭರತರಾಜನ ಆಗಮನದಲ್ಲಿ ಉಂಟಾದ ಸಂತೋಷದಿಂದ ನರ್ತನಮಾಡಿತೋ ಎಂಬಂತಿದ್ದಿತು.

**ಪೂರ್ವವತ್ಪಶ್ಚಿಮೇ ಖಂಡೇ [೬]ಬಲಾಗ್ರಣ್ಯಾ ಪ್ರಸಾಧಿತೇ ।**
**ವಿಜೇತುಂ ಮಧ್ಯಮಂ ಖಂಡಂ ಸಾಧನೈಃ ಪ್ರಭುರುದ್ಯಯೌ ॥ ೩೯ ॥**

ಪೂರ್ವಭರತಖಂಡದಂತೆ ಪಶ್ಚಿಮಖಂಡವನ್ನೂ ಸೇನಾಪತಿಯು ಜಯಿಸುತ್ತಿರಲು ಭರತೇಶ್ವರನು ಸೈನ್ಯ–ಸಾಮಗ್ರಿಗಳಿಂದ ಮಧ್ಯಮಖಂಡವನ್ನು ಜಯಿಸುವುದಕ್ಕೆ ಉದ್ಯುಕ್ತನಾದನು.

**ನ ಕರೈಃ ಪೀಡಿತೋ ಲೋಕೋ ನ ಭುವಃ ಶೋಷಿತೋ ರಸಃ ।**
**ನಾರ್ಕೇಣೇವ ಜನಸ್ತಪ್ತಃ ಪ್ರಭುಣಾಭ್ಯುದ್ಯತಾ[೭]ಪ್ಯುದಕ್ ॥ ೪೦ ॥**

ಭರತೇಶ್ವರನು ಉತ್ತರದಿಗ್ಭಾಗಕ್ಕೆ ಹೋದರೂ ಅಲ್ಲಿ, ಸೂರ್ಯನು ಕಿರಣಗಳಿಂದ ಲೋಕವನ್ನು ಪೀಡಿಸುವಂತೆಯೂ ಭೂಮಿಯ ಜಲವನ್ನು ಒಣಗಿಸುವಂತೆಯೂ ಜನರಿಗೆ ತಾಪವನ್ನುಂಟುಮಾಡುವಂತೆಯೂ, ಭರತೇಶ್ವರನು ಕಂದಾಯಗಳಿಂದ ಜನರನ್ನು ಪೀಡಿಸಲಿಲ್ಲ, ಭೂಮಿಯ ಸಾರವಸ್ತುವನ್ನು ಅಪಹರಿಸಲಿಲ್ಲ, ಜನರಿಗೆ ದುಃಖವನ್ನು ಕೊಡಲಿಲ್ಲ.

**[೮]ಕೌಬೇರೀಂ ದಿಶಮಾಸ್ಥಾಯ ತಪ[೯]ತ್ಯೇಕಾಂತತಃ ಕರೈಃ ।**
**ಭಾನುರ್ಭರತರಾಜಸ್ತು ಭುವಸ್ತಾಪಮಪಾಕರೋತ್ ॥ ೪೧ ॥**

ಸೂರ್ಯನು ಉತ್ತರದಿಕ್ಕಿನಲ್ಲಿದ್ದು ತನ್ನ ಕಿರಣಗಳಿಂದ ಬಹಳವಾಗಿ ತಪಿಸುತ್ತಾನೆ. ಉತ್ತರಾಯಣದಲ್ಲಿ ಬಿಸಿಲು ಹೆಚ್ಚೆಂದು ಭಾವವು. ಭರತರಾಜನಾದರೋ ಉತ್ತರದಿಕ್ಕಿನಲ್ಲಿದ್ದು ಭೂಮಿಯ(ಜನರ)ದುಃಖವನ್ನು ಹೋಗಲಾಡಿಸಿದನು.

**[೧೦]ಕೃತವ್ಯೂಹಾನಿ ಸೈನ್ಯಾನಿ [೧೧]ಸಂಹತಾನಿ ಪರಸ್ಪರಮ್ ।**
**ನಾತಿಭೂಮಿಂ ಯಯುರ್ಜಿಷ್ಣೋರ್ನ ಸ್ವೈರಂ ಪರಿಬಭ್ರಮುಃ ॥ ೪೨ ॥**

---

೧ ಸ್ಥಪತಿಃ. ೨ ವಿನ್ಯಸ್ಯ. ೩ ಸ್ತಂಭಾನಾಂ. ೪ ಸೇತುಂ. ೫ ಬಲಸ್ಯ ಪೀಡಾ ಭವಿಷ್ಯತೀತಿವಿ ಶಂಕ್ಯ. ೬ ಚಿರಕಾಲೇ. ೭ ಅಪರತೀರಂ. ೮ ಅಪನೀತೈಃ. ೯ ಉತ್ತರಗುಹಾದ್ವಾರಂ. ೧೦ ಪುರೋಗತೈಃ. ೧೧ ವನಭೂಮೌ. ೧೨ ಮನ್ಯತೇ ಸ್ಮ. ೧೩ ನಿರ್ಗತೈಃ.

೧ ಅತಿವಾಂಛಯಾ. ೨ ನಿಗರಣಂ ಕೃತ್ವಾ. ೩ ಜೀರ್ಣಶಕ್ತ್ಯಭಾವಾತ್. ೪ ಉದ್ಗಿರತಿ ಸ್ಮ. ೫ ಋತೌಭವಮಾರ್ತವಂ ಪುಷ್ಪಾದಿ-ಧೃತಮಾರ್ತವಂ ಯೇನ ತತ್. ೬ ಸೇನಾಪತಿನಾ. ೭ ಉತ್ತರದಿಗ್ಭಾಗಃ. ೮ ಉತ್ತರಸ್ಯಾಂ ದಿಶಿ ಸ್ಥಿತ್ವಾ. ೯ ನಿತರಾಂ. ೧೦ ವಿಹಿತರಚನಾನಿ. ೧೧ ಸಂಬದ್ಧಾನಿ.

ಸಾಲಾಗಿ ಸೇರಿಸಲ್ಪಟ್ಟಿದ್ದ ಸೈನ್ಯಗಳು ಪರಸ್ಪರವಾಗಿ ಸೇರಿಕೊಂಡು ಭರತೇಶ್ವರನನ್ನು ಬಿಟ್ಟು ದೂರಪ್ರದೇಶಕ್ಕೆ ಹೋಗಲಿಲ್ಲ; ಸ್ವೇಚ್ಛೆಯಾಗಿ ಓಡಾಡಲೂ ಇಲ್ಲ. ಸೈನ್ಯಗಳು ಹತೋಟಿಯಲ್ಲಿದ್ದುವೆಂದು ಭಾವವು.

**ಪ್ರಸಾಧಿತಾನಿ ದುರ್ಗಾಣಿ ಕೃತಂ ಚಾಶಕ್ಯಸಾಧನಮ್ ।**
**ಪರಚಕ್ರ[೧]ಮವಷ್ಟಬ್ಧಂ ಚಕ್ರಿಣಾ ಜಯಸಾಧನೈಃ ॥ ೪೩ ॥**

ಭರತೇಶ್ವರನು ಸೈನ್ಯ–ಸಾಧನಗಳಿಂದ ಕೋಟೆಗಳನ್ನು ಸ್ವಾಧೀನಪಡಿಸಿಕೊಂಡನು; ಬೇರೆಯವರಿಂದ ಸಾಧಿಸುವುದಕ್ಕೆ ಅಶಕ್ಯವಾದುದನ್ನು ಸಾಧಿಸಿದನು; ಶತ್ರುಸಮೂಹವನ್ನು ಆಕ್ರಮಿಸಿದನು.

**[೨]ಬಲವಾ[೩]ನಭಿಯೋಕ್ತವ್ಯೋ ರಕ್ಷಣೀಯಾಶ್ಚ ಸಂಶ್ರಿತಾಃ ।**
**ಯತಿತವ್ಯಂ [೪]ಕ್ಷಿತಿತ್ರಾಣೇ ಜಿಗೀಷೋರ್ವೃತ್ತಮೀದೃಶಮ್ ॥ ೪೪ ॥**

ಶತ್ರುವನ್ನು ಆಕ್ರಮಿಸಿ ಅವನೊಡನೆ ಯುದ್ಧಮಾಡಬೇಕು. ಆಶ್ರಿತರನ್ನು ರಕ್ಷಿಸಬೇಕು, ಲೋಕವನ್ನು ರಕ್ಷಿಸುವುದಕ್ಕೆ ಪ್ರಯತ್ನಿಸಬೇಕು, ಜಯಿಸಬೇಕೆಂಬ ಇಚ್ಛೆಯುಳ್ಳವನ ವ್ಯಾಪಾರವು ಇಂಥದು.

**ಇತ್ಯಲಂಘ್ಯಬಲಶ್ಚಕ್ರೀ ಚಕ್ರರತ್ನಮನುವ್ರಜನ್ ।**
**[೫]ಕಿಯತೀಮಪಿ ತಾಂ ಭೂಮಿ[೬]ಮವಾಷ್ಟಂಭೀತ್ಸ್ವಸಾಧನೈಃ ॥ ೪೫ ॥**

ಈ ರೀತಿಯಾಗಿ ಶತ್ರುಗಳಿಂದ ಮೀರಲಾಗದ ಸೈನ್ಯವುಳ್ಳ ಭರತಚಕ್ರವರ್ತಿಯು ಚಕ್ರರತ್ನವನ್ನು ಮುಂದೆಮಾಡಿಕೊಂಡುಹೋಗಿ ತನ್ನ ಸೈನ್ಯಗಳಿಂದ ಎಷ್ಟೋ ಭೂಮಿಯನ್ನು ಆಕ್ರಮಿಸಿಕೊಂಡನು.

**ತಾವಚ್ಚ [೭]ಪರಚಕ್ರೇಣ [೮]ಸ್ವಚಕ್ರಸ್ಯ ಪರಾಭವಮ್ ।**
**ಚಿಲಾತಾವರ್ತನಾಮಾನೌ ಪ್ರಭೂ ಶುಶ್ರುವತುಃ ಕಿಲ ॥ ೪೬ ॥**

ಅಷ್ಟರಲ್ಲಿ ಚಿಲಾತ ಆವರ್ತರೆಂಬ ಇಬ್ಬರು ಮ್ಲೇಚ್ಛರಾಜರು ತಮ್ಮ ದೇಶವನ್ನು ಶತ್ರುಸೈನ್ಯವು ಮುತ್ತಿರುವುದೆಂಬ ವಾರ್ತೆಯನ್ನು ಕೇಳಿದರಂತೆ.

**ಅಭೂತಪೂರ್ವಮೇತ[೯]ನ್ನೌ ಪರಚಕ್ರಾ[೧೦]ದುಪಸ್ಥಿತಮ್ ।**
**[೧೧]ವ್ಯಸನಂ ಪ್ರತಿಕರ್ತವ್ಯಮಿತ್ಯಾಸ್ತಾಂ ಸಂಗತೌ [೧೨]ಮಿಥಃ ॥ ೪೭ ॥**

''ನಮಗೆ ಶತ್ರುಸೈನ್ಯದಿಂದುಂಟಾದ ಈ ಉಪದ್ರವವು ಅಭೂತಪೂರ್ವವಾದುದು(ಹೊಸದು). ಇದಕ್ಕೆ ಪ್ರತೀಕಾರವನ್ನು ಮಾಡಬೇಕು'' ಎಂಬುದಾಗಿ ಅವರು ರಹಸ್ಯವಾಗಿ ಸೇರಿದರು. ಆಲೋಚನೆಯನ್ನು ಮಾಡುವುದಕ್ಕೆ ಸೇರಿದರೆಂದು ಭಾವವು.

**ತತೋ ಧನುರ್ಧರಪ್ರಾಯಂ ಸಹಾಶ್ವೀಯಂ ಸಹಾಸ್ತಿಕಮ್ ।**
**ಇತೋಮುತಶ್ಚ [೧೩]ಸಂಜಗ್ಮೇ ತತ್ಸೈನ್ಯಂ ಮ್ಲೇಚ್ಛರಾಜಯೋಃ ॥ ೪೮ ॥**

ತರುವಾಯ ಆ ಮ್ಲೇಚ್ಛರಾಜರ ಹೆಚ್ಚಾಗಿ ಧನುರ್ಧಾರಿಗಳೂ ಕುದುರೆಗಳ ಸಮೂಹವೂ ಆನೆಗಳ ಸಮೂಹವೂ ಉಳ್ಳ ಸೈನ್ಯವು ನಾಲ್ಕುಕಡೆಗಳಿಂದಲೂ ಬಂದು ಸೇರಿತು.

**ಕೃತೋಚ್ಚವಿಗ್ರಹಾರಂಭೌ ಸಂರಂಭಂ ಪ್ರತಿಪದ್ಯ ತೌ ।**
**[೧೪]ವಿಕ್ರಮ್ಯ ಚಕ್ರಿಣಃ ಸೈನ್ಯೈರ್ಭೇಜತುರ್ವಿಜಿಗೀಷುತಾಮ್ ॥ ೪೯ ॥**

ದೊಡ್ಡಕಾಳಗವನ್ನಾರಂಭಿಸಿದ ಆ ಮ್ಲೇಚ್ಛರಾಜರು ಕೋಪಗೊಂಡು ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿ ಚಕ್ರವರ್ತಿಯ ಸೈನ್ಯಗಳನ್ನು ಜಯಿಸಬೇಕೆಂಬ ಇಚ್ಛೆಯುಳ್ಳವರಾದರು.

೧ ವ್ಯಾಪ್ತಂ. ೨ ಶತ್ರುಃ. ೩ ಆಕ್ರಮ್ಯ, ಅಭಿಷೇಣನೀಯಃ. ೪ ಭೂರಕ್ಷಣೇ. ೫ ಮಹತೀಂ. ೬ ವೇಷ್ಟಯತಿ ಸ್ಮ. ೭ ಪರಸೈನ್ಯೇನ. ೮ ಸ್ವದೇಶಸ್ಯ. ೯ ಆವಯೋಃ. ೧೦ ಜಾತಂ. ೧೧ ಉಪದ್ರವಃ. ೧೨ ರಹಸಿ. ೧೩ ಸಂಗತಮಭೂತ್. ೧೪ ಅಧಿಕಾಂ ಶಕ್ತಿಂ ವಿಧಾಯ.

**ತಾವಚ್ಚ ಸುಧಿಯೋ ಧೀರಾಃ ಕೃತಕಾರ್ಯಾಶ್ಚ ಮಂತ್ರಿಣಃ ।**
**ನಿಷಿಧ್ಯ ತೌ ರಣಾರಂಭಾದ್ವಚಃ ಪಥ್ಯಮಿದಂ ಜಗುಃ ॥ ೫೦ ॥**

ಅಷ್ಟರಲ್ಲಿ ಬುದ್ಧಿಶಾಲಿಗಳೂ ಧೀರರೂ ಅನುಭವಿಗಳೂ ಆದ ಮಂತ್ರಿಗಳು ಆ ಮ್ಲೇಚ್ಛರಾಜರ ಕದನಾರಂಭವನ್ನು ತಡೆದು ಹಿತಕರವಾದ ಈ ಮಾತನ್ನು ಹೇಳಿದರು:–

**ನ ಕಿಂಚಿದಪ್ಯನಾಲೋಚ್ಯ ವಿಧೇಯಂ [೧]ಸಿದ್ಧಿಕಾಮ್ಯತಾಮ್ ।**
**ಅನಾಲೋಚಿತಕಾರ್ಯಾಣಾಂ [೨]ದವೀಯಸ್ಯೋರ್ಥಸಿದ್ಧಯಃ ॥ ೫೧ ॥**

''ಇಷ್ಟಾರ್ಥಸಿದ್ಧಿಯನ್ನು ಬಯಸುವವರು ಆಲೋಚಿಸದೆ ಯಾವ ಕೆಲಸವನ್ನೂ ಮಾಡಬಾರದು. ಆಲೋಚಿಸದೆ ಕೆಲಸಮಾಡುವವರಿಗೆ ಇಷ್ಟಾರ್ಥಸಿದ್ಧಿಗಳು ಬಹುದೂರವಾಗಿರುತ್ತವೆ.

**ಕೋಽಯಂ ಪ್ರಭು[೩]ರವಷ್ಟಂಭೀ ಕುತಸ್ತ್ಯೋ ವಾ ಕಿಯದ್ಬಲಃ ।**
**ಬಲವಾನಿತ್ಯನಾಲೋಚ್ಯ [೪]ನಾಭಿಷೇಣ್ಯಃ [೫]ಕಥಂಚನ ॥ ೫೨ ॥**

ಆಕ್ರಮಿಸಿರುವ ಈ ರಾಜನು ಯಾರು? ಎಲ್ಲಿಯವನು? ಎಷ್ಟು ಸೈನ್ಯವುಳ್ಳ ಬಲಶಾಲಿಯು? ಎಂಬುದನ್ನು ಯೋಚಿಸದೆ ಎಷ್ಟುಮಾತ್ರಕ್ಕೂ ಸೈನ್ಯದೊಡನೆ ಮುಂದುವರಿಯಬಾರದು.

**ವಿಜಯಾರ್ಧಾಚಲೋಲ್ಲಂಘೀ ನೈಷ ಸಾಮಾನ್ಯಮಾನುಷಃ ।**
**[೬]ದಿವ್ಯೋ [೭]ದಿವ್ಯಾನುಭಾವೋ ವಾ ಭವೇದೇಷ ನ ಸಂಶಯಃ ॥ ೫೩ ॥**

ವಿಜಯಾರ್ಧಗಿರಿಯನ್ನು ದಾಟಿರುವ ಇವನು ಸಾಮಾನ್ಯಮನುಷ್ಯನಲ್ಲ. ಇವನು ನಿಃಸಂಶಯವಾಗಿ ದೇವನೋ ದಿವ್ಯಸಾಮರ್ಥ್ಯವುಳ್ಳವನೋ ಆಗಿರಬೇಕು.

**ತದಾಸ್ತಾಂ ಸಮರಾರಂಭಃ ಸಂಭಾವ್ಯೋ ದುರ್ಗಸಂಶ್ರಯಃ ।**
**ತದಾಶ್ರಿತೈರನಾಯಾಸಾಜ್ಜೇತುಂ ಶಕ್ಯೋ ರಿಪುರ್ಮಹಾನ್ ॥ ೫೪ ॥**

ಆದುದರಿಂದ ಕದನಾರಂಭವನ್ನು ಬಿಟ್ಟು, ದುರ್ಗವನ್ನಾಶ್ರಯಿಸಿದರೆ ಕಷ್ಟವಿಲ್ಲದೆ ದೊಡ್ಡ ಹಗೆಯನ್ನು ಜಯಿಸಲು ಸಾಧ್ಯವಾಗುವುದು.

**ಸ್ವಭಾವದುರ್ಗಮೇತನ್ನಃ ಕ್ಷೇತ್ರಂ ಕೇನಾಭಿಭೂಯತೇ ।**
**ಹಿಮವದ್ವಿಜಯಾರ್ಧಾದ್ರಿಗಂಗಾಸಿಂಧುತಟಾವಧಿ ॥ ೫೫ ॥**

ಹಿಮವತ್ಪರ್ವತವೂ ವಿಜಯಾರ್ಧಪರ್ವತವೂ ಗಂಗಾಸಿಂಧುನದಿಗಳ ದಡಗಳೂ ಎಲ್ಲೆಗಳಾಗಿರುವ ಈ ನಮ್ಮ ಕ್ಷೇತ್ರವು ಸ್ವಭಾವದಿಂದಲೇ ಕೋಟೆಯುಳ್ಳುದಾಗಿರುವುದರಿಂದ ಇದನ್ನು ಯಾವನು ಆಕ್ರಮಿಸುವನು?

**ಅನ್ಯಚ್ಚ ದೇವತಾಃ ಸಂತಿ ಸತ್ಯಮಸ್ಮತ್ಕುಲೋಚಿತಾಃ ।**
**ನಾಗಾ ಮೇಘಮುಖಾ ನಾಮ ತೇ ನಿರುಂಧಂತು ಶಾತ್ರವಾನ್ ॥ ೫೬ ॥**

ಮತ್ತು ನಮ್ಮ ವಂಶದಲ್ಲಿ ನಿಜವಾಗಿಯೂ ಪೂಜ್ಯರಾಗಿರುವ ಮೇಘಮುಖರೆಂಬ ನಾಗದೇವತೆಗಳಿರುತ್ತಾರೆ. ಅವರು ವೈರಿಗಳನ್ನು ತಡೆಯಲಿ.''

**ಇತಿ ತದ್ವಚನಾಜ್ಜಾತಜಯಾಶಂಸೌ ನರೇಶ್ವರೌ ।**
**ದೇವತಾನುಸ್ಮೃತಿಂ ಸದ್ಯಶ್ಚಕ್ರತುಃ ಕೃತಪೂಜನೌ ॥ ೫೭ ॥**

ಈ ಪ್ರಕಾರವಾದ ಆ ಮಂತ್ರಿಗಳ ಮಾತಿನಿಂದ ತಮಗೆ ಜಯವಾಗುವ ವಿಷಯದಲ್ಲಿ ಸಂದೇಹವುಳ್ಳ ಆ ಚಿಲಾತ ಆವರ್ತರಾಜರು ಆಗಲೇ ಆ ದೇವತೆಗಳನ್ನು ಪೂಜಿಸಿ ಅವುಗಳನ್ನು ಸ್ಮರಿಸಿದರು.

೧ ಸಿದ್ಧ್ಯಭಿಲಾಷಿಣಾಂ. ೨ ದೂರತರಾಃ. ೩ ವ್ಯಾಪೀ. ೪ ಸೇನಯಾನಾಭಿಯಾತವ್ಯಃ. ೫ ಸರ್ವಥಾ. ೬ ದೇವಃ. ೭ ದಿವ್ಯಸಾಮರ್ಥ್ಯಃ.

**ತತಸ್ತೇ ಜಲದಾಕಾರಧಾರಿಣೋ ಘನಗರ್ಜಿತಾಃ ।**
**ಪರಿತೋ ವೃಷ್ಟಿಮಾತೇನುಃ ಸಾನಿಲಾಮನಿಲಾಶನಾಃ ॥ ೫೮ ॥**

ಬಳಿಕ ಆ ನಾಗದೇವತೆಗಳು ಮೇಘದ ಆಕಾರವನ್ನು ಧರಿಸಿ ಮೇಘಗರ್ಜನೆಯನ್ನು ಮಾಡುತ್ತ ಸುತ್ತಲೂ ಗಾಳಿಮಳೆಯನ್ನು ಸುರಿದರು.

**ತಜ್ಜಲಂ [೧]ಜಲದೋದ್ಗೀರ್ಣಂ ಬಲಮಾಪ್ಲಾವ್ಯ [೨]ಜೈಷ್ಣವಮ್ ।**
**ಅಧಸ್ತಿರ್ಯಗಥೋರ್ಧ್ವಂ ಚ ಸಮಂತಾ[೩]ದಭ್ಯುದುದ್ರವತ್ ॥ ೫೯ ॥**

ಮೇಘದಿಂದ ಸುರಿದ ಆ ನೀರು ಭರತರಾಜನ ಸೈನ್ಯವನ್ನು ತೇಲಿಸಿ ಅದರ ಕೆಳಗೂ ಪಕ್ಕದಲ್ಲಿಯೂ ಮೇಲೆಯೂ ಸುತ್ತಲೂ ಆವರಿಸಿತು.

**ನ [೪]ಚೇಲಕ್ನೋಪಮಸ್ಯಾಸೀಚ್ಛಿಬಿರೇ ವೃಷ್ಟಿರೀಶಿತುಃ ।**
**ಬಹಿರೇಕಾರ್ಣವಂ ಕೃತ್ಸ್ನಮಕರೋದ್ವ್ಯಾಪ್ಯ ರೋದಸೀ ॥ ೬೦ ॥**

ಈ ಭರತೇಶ್ವರನ ಬಿಡಾರದಲ್ಲಿ (ಒಳಗಿನಭಾಗದಲ್ಲಿ) ಆ ಮಳೆಯು ವಸ್ತ್ರವನ್ನು ನೆನೆಯಿಸುವಷ್ಟೂ ಆಗಲಿಲ್ಲ. ಹೊರಗೆಲ್ಲ ಆಕಾಶಭೂಮಿಯನ್ನು ವ್ಯಾಪಿಸಿ ಒಂದು ಸಮುದ್ರವನ್ನು ಮಾಡಿತು. ಮಳೆಯ ನೀರು ಸಮುದ್ರದಂತೆ ತೋರುತ್ತಿದ್ದಿತೆಂದು ಭಾವವು.

**ಛತ್ರರತ್ನಮುಪರ್ಯಾಸೀಚ್ಚರ್ಮರತ್ನಮಧೋಭವತ್ ।**
**ತಾಭ್ಯಾಮಾವೇಷ್ಟ್ಯ ತದ್ರುದ್ಧಂ ಬಲಂ ಸ್ಯೂತಮಿವಾಭಿತಃ ॥ ೬೧ ॥**

ಆ ಸೈನ್ಯದ ಮೇಲೆ ಛತ್ರರತ್ನವೂ ಕೆಳಗೆ ಚರ್ಮರತ್ನವೂ ಇದ್ದುವು. ಅವುಗಳಿಂದ ಆವರಿಸಲ್ಪಟ್ಟ ಆ ಸೈನ್ಯವು ಸುತ್ತಲೂ ಹೊಲಿಯಲ್ಪಟ್ಟಂತಿದ್ದಿತು.

**ಮಧ್ಯೇ ರತ್ನದ್ವಯಸ್ಯಾಸ್ಯ ಸ್ಥಿತಮಾಸಪ್ತಮಾದ್ದಿನಾತ್ ।**
**ಜಲಪ್ಲವೇ ಬಲಂ ಭರ್ತುರ್ವ್ಯಕ್ತ[೫]ಮಂಡಾಯಿತಂ ತದಾ ॥ ೬೨ ॥**

ಏಳುದಿನಗಳವರೆಗೆ ಈ ಎರಡು ರತ್ನಗಳ ಮಧ್ಯದಲ್ಲಿದ್ದ ಭರತೇಶ್ವರನ ಸೈನ್ಯವು ಆಗ ಆ ಜಲಪ್ರವಾಹದಲ್ಲಿ ವ್ಯಕ್ತವಾಗಿ ಮೊಟ್ಟೆಯಂತೆ ತೋರುತ್ತಿದ್ದಿತು.

**ಚಕ್ರರತ್ನಕೃತೋದ್ಯೋತೇ ರುದ್ಧದ್ವಾದಶಯೋಜನೇ ।**
**ತ[೬]ತ್ರಾಂಡಕೇ ಸ್ಥಿತಂ ಜಿಷ್ಣೋರ್ನಿರಾಬಾಧಮಭೂದ್ಬಲಮ್ ॥ ೬೩ ॥**

ಚಕ್ರರತ್ನದ ಪ್ರಕಾಶವುಳ್ಳದೂ ಹನ್ನೆರಡುಯೋಜನ ವ್ಯಾಪ್ತವೂ ಆದ ಆ ಪಂಜರದಲ್ಲಿ ಭರತೇಶ್ವರನ ಸೈನ್ಯವು ನಿರ್ಬಾಧವಾಗಿದ್ದಿತು.

**ಪ್ರವಿಭಕ್ತಚತುರ್ದ್ವಾರಂ ಸೇನಾನ್ಯಾಂತಃ ಸುರಕ್ಷಿತಮ್ ।**
**ಬಹಿರ್ಜಯಕುಮಾರೇಣ ರರಕ್ಷೇ ಕಿಲ ತದ್ಬಲಮ್ ॥ ೬೪ ॥**

ವಿಭಾಗಿಸಲ್ಪಟ್ಟ ನಾಲ್ಕು ಬಾಗಿಲುಗಳುಳ್ಳ ಆ ಸೈನ್ಯವು ಒಳಗಡೆಯಲ್ಲಿ ಸೇನಾಪತಿಯಿಂದಲೂ ಹೊರಗಡೆಯಲ್ಲಿ ಜಯಕುಮಾರನಿಂದಲೂ ಚೆನ್ನಾಗಿ ರಕ್ಷಿಸಲ್ಪಟ್ಟಿದ್ದಿತು.

**ತದಾ ಪಟಕುಟೀಭೇದಾಃ [೭]ಕೀಟಿಕಾಶ್ಚ [೮]ವಿಶಂಕಟಾಃ ।**
**ಕೃತಾಃ ಸ್ಥಪತಿರತ್ನೇನ ರಥಾಶ್ಚಾಂಬರಗೋಚರಾಃ ॥ ೬೫ ॥**

ಆಗ ಮರಗೆಲಸದವನು ವಸ್ತ್ರಗೃಹ(ಡೇರಾ)ಗಳನ್ನೂ ವಿಶಾಲವಾದ ಗುಡಿಸಲುಗಳನ್ನೂ ಆಕಾಶದಲ್ಲಿ ಓಡಾಡತಕ್ಕ ರಥಗಳನ್ನೂ ರಚಿಸಿದನು.

**ಬಹಿಃ ಕಲಕಲಂ ಶ್ರುತ್ವಾ ಕಿಮೇತದಿತಿ ಪಾರ್ಥಿವಾಃ ।**
**ಕರಂ ವ್ಯಾಪಾರಯಾಮಾಸುಃ ಕ್ರುದ್ಧಾಃ [೯]ಕೌಕ್ಷೇಯಕಂ ಪ್ರತಿ ॥ ೬೬ ॥**

೧ ಮೇಘೋದ್ವಾಂತಂ. ೨ ಜಿಷ್ಣೋಶ್ಚಕ್ರಿಣಃಸಂಬಂಧಿ. ೩ ಅಭಿಯಾತಿ ಸ್ಮ. ೪ ವಸ್ತ್ರಾರ್ದ್ರೀಕರಣಮಾತ್ರಂ ಯಥಾ ಭವತಿ ತಥಾ. ೫ ಅಂಡಮಿವಾಚರಿತಂ. ೬ ಪಂಜರೇ. ೭ ಕುಟೀರಾಃ. ೮ ವಿಶಾಲಾಃ. ೯ ಖಡ್ಗಂ.

ಹೊರಗಿನ ಕೋಲಾಹಲಧ್ವನಿಯನ್ನು ಕೇಳಿ ರಾಜರುಗಳು "ಇದೇನು ?" ಎಂದು ಕೋಪಗೊಂಡು ಖಡ್ಗಕ್ಕೆ ಕೈನೀಡಿದರು.

**ತತಶ್ಚಕ್ರಧ[೧]ರಾದಿಷ್ಟಾ ಗಣಬದ್ಧಾಮರಾಸ್ತದಾ ।**
**ನಾಗಾ[೨]ನುತ್ಸಾರಯಾಮಾಸು[೩]ರಾರುಷ್ಟಾ ಹುಂಕೃತೈಃ ಕ್ಷಣಾತ್ ॥ ೬೭ ॥**

ಬಳಿಕ ಚಕ್ರವರ್ತಿಯಿಂದ ಆಜ್ಞಾಪಿಸಲ್ಪಟ್ಟ ಗಣಬದ್ಧರೆಂಬ ದೇವತೆಗಳು ಕೋಪಾವಿಷ್ಟರಾಗಿ ಹುಂಕಾರಗಳಿಂದ ಕ್ಷಣಕಾಲದಲ್ಲಿ ಆ ನಾಗದೇವತೆಗಳನ್ನು ಓಡಿಸಿದರು.

**ಬಲವಾ[೪]ನ್ಕುರುರಾಜೋಽಪಿ ಮುಕ್ತಸಿಂಹಪ್ರಗರ್ಜಿತಃ ।**
**ದಿವ್ಯಾಸ್ತ್ರೈರಜಯನ್ನಾಗಾನ್ರಥಂ ದಿವ್ಯಮಧಿಷ್ಠಿತಃ ॥ ೬೮ ॥**

ಬಲಿಷ್ಠನಾದ ಜಯಕುಮಾರನೂ ಸಿಂಹಗರ್ಜನೆಯನ್ನು ಮಾಡಿ ದಿವ್ಯವಾದ ರಥವನ್ನು ಹತ್ತಿ ದಿವ್ಯಾಸ್ತ್ರಗಳಿಂದ ಆ ನಾಗದೇವತೆಗಳನ್ನು ಜಯಿಸಿದನು.

**ತದಾ ರಣಾಂಗಣೇ ವರ್ಷನ್ [೫]ಶರಧಾರಾಮನಾರತಮ್ ।**
**ಸ ರೇಜೇ [೬]ಧೃತಸನ್ನಾಹಃ [೭]ಪ್ರಾವೃಷೇಣ್ಯ ಇವಾಂಬುದಃ ॥ ೬೯ ॥**

ಆಗ ಕವಚವನ್ನು ಧರಿಸಿ ಯುದ್ಧರಂಗದಲ್ಲಿ ಅವಿಚ್ಛಿನ್ನವಾಗಿ ಬಾಣಗಳ ಧಾರೆಯನ್ನು ಸುರಿದ ಆ ಜಯಕುಮಾರನು, ಅವಿಚ್ಛಿನ್ನವಾಗಿ ಜಲಧಾರೆಯನ್ನು ಸುರಿಯುವ ವರ್ಷಾಕಾಲ ಸಂಬಂಧವಾದ ಮೇಘದಂತೆ, ಶೋಭಿಸಿದನು.

**ತನ್ಮುಕ್ತಾ ವಿಶಿಖಾ ದೀಪ್ರಾ ರೇಜಿರೇ ಸಮರಾಜಿರೇ ।**
**ದ್ರಷ್ಟುಂ ತಿರೋಹಿತಾನ್ನಾಗಾನ್ ದೀಪಿಕಾ ಇವ ಬೋಧಿತಾಃ ॥ ೭೦ ॥**

ರಣಾಂಗಣದಲ್ಲಿ ಆ ಜಯಕುಮಾರನಿಂದ ಬಿಡಲ್ಪಟ್ಟ ಪ್ರಕಾಶಮಾನವಾದ ಬಾಣಗಳು, ಅವಿತುಕೊಂಡಿರುವ ಆ ನಾಗದೇವತೆಗಳನ್ನು ನೋಡುವುದಕ್ಕೋಸ್ಕರ ಉರಿಸಲ್ಪಟ್ಟ ದೀಪಗಳೋ ಎಂಬಂತೆ, ಪ್ರಕಾಶಿಸುತ್ತಿದ್ದುವು.

**ತತೋ ನಿವವೃತೇ ಜಿತ್ವಾ ನಾಗಾನ್ಮೇಘಮುಖಾನಸೌ ।**
**ಕುಮಾರೋ ರಣಸಂರಂಭಾ[೮]ತ್ಪ್ರಾಪ್ತಮೇಘಸ್ವರಶ್ರುತಿಃ ॥ ೭೧ ॥**

ಬಳಿಕ ಈ ಜಯಕುಮಾರನು ಮೇಘಮುಖರೆಂಬ ಆ ನಾಗದೇವತೆಗಳನ್ನು ಜಯಿಸಿ "ಮೇಘಸ್ವರನೆಂಬ" ಹೆಸರನ್ನು ಪಡೆದು ಯುದ್ಧದ ಆವೇಶದಿಂದ ಶಾಂತನಾದನು.

**[೯]ಕುರುರಾಜಸ್ತದಾ ಸ್ಫೂರ್ಜತ್ಪರ್ಜನ್ಯಸ್ತನಿತೋರ್ಜಿತೈಃ ।**
**ಗರ್ಜಿತೈರ್ನಿರ್ಜಯನ್ಮೇಘಮುಖಾನ್ ಖ್ಯಾತಸ್ತದಾಖ್ಯಯಾ ॥ ೭೨ ॥**

ಆಗ ಜಯಕುಮಾರನು ವ್ಯಾಪಕವಾದ ಮೇಘಗರ್ಜನೆಯಂತೆ ಗಂಭೀರವಾದ ಗರ್ಜನೆಗಳಿಂದ ಆ ಮೇಘಮುಖರೆಂಬ ನಾಗದೇವತೆಗಳನ್ನು ಜಯಿಸಿ ಆ ಹೆಸರಿನಿಂದ ಪ್ರಸಿದ್ಧನಾದನು.

**ತೋಷಿತೈ[೧೦]ರಪದಾನೇನ ಘೋಷಿತೋಽಸ್ಯ ಜಯೋಽಮರೈಃ ।**
**ದಂಧ್ವನದ್ದುಂದುಭಿಧ್ವಾನಬಧಿರೀಕೃತದಿಙ್ಮುಖೈಃ ॥ ೭೩ ॥**

ಈ ಜಯಕುಮಾರನ ಪರಾಕ್ರಮಕಾರ್ಯದಿಂದ ಸಂತುಷ್ಟರೂ ಭೇರಿಗಳ ಶಬ್ದದಿಂದ ದಿಕ್ಕುಗಳು ಕಿವುಡಾಗುವಂತೆ ಅವುಗಳನ್ನು ಬಾರಿಸಿದವರೂ ಆದ ದೇವತೆಗಳು ಜಯಘೋಷವನ್ನು ಮಾಡಿದರು.

**ತತೋ [೧೧]ದೃಷ್ಟಾಪದಾನೋಽಯಂ [೧೨]ತುಷ್ಟುವೇ ಚಕ್ರಿಣಾ ಮುಹುಃ ।**
**ನಿಯೋಜಿತಶ್ಚ ಸತ್ಕೃತ್ಯ ಧೀರೋ ವೀರಾಗ್ರಣೀಪದೇ ॥ ೭೪ ॥**

೧ ಆಜ್ಞಪ್ತಾಃ. ೨ ಪಲಾಯಿತಾನ್ ಚಕ್ರುಃ. ೩ ಕ್ರುದ್ಧಾಃ. ೪ ಜಯಕುಮಾರಃ. ೫ ಜಲಧಾರಾಂ ಚ. ೬ ಧೃತಕವಚಃ. ೭ ಪ್ರಾವೃಷಿಭವಃ. ೮ ಪ್ರಾಪ್ತಮೇಘಸ್ವರಸಂಜ್ಞಃ. ೯ ಜಯಕುಮಾರಃ. ೧೦ ಪರಾಕ್ರಮೇಣ. ೧೧ ದೃಷ್ಟಪರಾಕ್ರಮಃ. ೧೨ ಸ್ತೂಯತೇ ಸ್ಮ.

ತರುವಾಯ ಜಯಕುಮಾರನ ಪರಾಕ್ರಮವನ್ನು ನೋಡಿ ಚಕ್ರವರ್ತಿಯು ಧೀರನಾದ ಇವನನ್ನು ಬಾರಿಬಾರಿಗೆ ಹೊಗಳಿ ಸತ್ಕರಿಸಿ ವೀರಾಗ್ರೇಸರಪದವಿಯಲ್ಲಿ ನೇಮಕ ಮಾಡಿದನು.

**ಇಂದ್ರಜಾಲ ಇವಾಮುಷ್ಮಿನ್ವ್ಯತಿಕ್ರಾಂತೇ ಹಿ ವಿಪ್ಲವೇ ।**
**[೧]ಪ್ರತ್ಯಾಪತ್ತಿಮಗಾದ್ಭೂಯೋ ಬಲಮಾವಿರ್ಭವಜ್ಜಯಮ್ ॥ ೭೫ ॥**

ಈ ನಾಗದೇವತೆಗಳ ಬಾಧೆಯು, ಇಂದ್ರಜಾಲದಂತೆ, ಕಳೆದುಹೋಗುತ್ತಿರಲು ಜಯವನ್ನು ದೊರಕಿಸಿದ ಆ ಸೈನ್ಯವು ಪುನಃ ಪೂರ್ವಸ್ಥಿತಿಯನ್ನು ಹೊಂದಿತು.

**ವಿಧ್ವಸ್ತೇ ಪನ್ನಗಾನೀಕೇ ವಿಬಲೌ ಮ್ಲೇಚ್ಛನಾಯಕೌ ।**
**ಚಕ್ರಿಣಶ್ಚರಣಾವೇತ್ಯ ಭಯಭ್ರಾಂತೌ ಪ್ರಣೇಮತುಃ ॥ ೭೬ ॥**

ನಾಗದೇವತೆಗಳ ಸೈನ್ಯವು ಧ್ವಂಸವಾದಮೇಲೆ ಬಲಹೀನರಾದ ಆ ಮ್ಲೇಚ್ಛರಾಜರು ಭಯಭ್ರಾಂತರಾಗಿ ಚಕ್ರವರ್ತಿಯ ಚರಣಗಳನ್ನು ಹೊಂದಿ ನಮಸ್ಕರಿಸಿದರು.

**ಧನಂ ಯಶೋಧನಂ ಚಾಸ್ಮೈ [೨]ಕೃತಾಗಃಪರಿಶೋಧನಮ್ ।**
**ದತ್ತ್ವಾ ಪ್ರಸೀದ ದೇವೇತಿ ತೌ ಭೃತ್ಯತ್ವಮುಪೇಯತುಃ ॥ ೭೭ ॥**

ಆ ಮ್ಲೇಚ್ಛರಾಜರು ಭರತೇಶ್ವರನಿಗೆ ತಾವು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತರೂಪವಾದ ದ್ರವ್ಯವನ್ನೂ ಯಶಸ್ಸೆಂಬ ದ್ರವ್ಯವನ್ನೂ ಕೊಟ್ಟು "ಪ್ರಭುವೆ! ಪ್ರಸನ್ನನಾಗು" ಎಂದು ಭೃತ್ಯಭಾವವನ್ನು ಹೊಂದಿದರು.

**ನಿಸ್ಸಪತ್ನಾಂ ಮಹೀಮೇನಾಂ ಕುರ್ವ[೩]ನ್ನಿರ್ವಾಜ್ಞಧೀಶ್ವರಃ ।**
**ಅಹಿಮಾದ್ರಿತಟಾ[೪]ದ್ಭೂಯಃ ಪ್ರಯಾಣಮಕರೋದ್ಬಲೈಃ ॥ ೭೮ ॥**

ಉತ್ಕೃಷ್ಟವಾದ ನಿಧಿಗಳಿಗೆ ಸ್ವಾಮಿಯಾದ ಭರತೇಶ್ವರನು ಈ ಪೃಥ್ವಿಯನ್ನು ಶತ್ರುರಹಿತವನ್ನಾಗಿ ಮಾಡಿ ಆಮೇಲೆ ಸೈನ್ಯಗಳೊಡನೆ ಹಿಮವತ್ಪರ್ವತದ ತಪ್ಪಲಿನವರೆಗೆ ಪ್ರಯಾಣಮಾಡಿದನು.

**[೫]ಸಿಂಧುರೋಧೋಭುವಃ [೬]ಕ್ಷುಂದನ್ಪ್ರಯಾಣೇ ಜವಸಿಂಧುರೈಃ ।**
**[೭]ಸಿಂಧುಪ್ರಪಾತ[೮]ಮಾಸೀದನ್ಸಿಂಧುದೇವ್ಯಾ [೯]ನ್ಯಷೇವಿ ಸಃ ॥ ೭೯ ॥**

ಪ್ರಯಾಣದಲ್ಲಿ ವೇಗವುಳ್ಳ ಆನೆಗಳಿಂದ ಸಿಂಧುನದೀತೀರಭೂಮಿಗಳನ್ನು ಪುಡಿಮಾಡಿ ಆ ಭರತರಾಜನು ಸಿಂಧುನದಿಯು ದುಮುಕುವ ಮಡುವನ್ನು ಹೊಂದಿ ಅಲ್ಲಿ ಸಿಂಧುದೇವಿಯಿಂದ ಭಜಿಸಲ್ಪಟ್ಟನು. ಸಿಂಧುದೇವಿಯು ಆದರಸತ್ಕಾರವನ್ನು ಮಾಡಿದಳೆಂದರ್ಥವು.

**ಜ್ಞಾತ್ವಾ ಸಮಾಗತಂ ಜಿಷ್ಣುಂ ದೇವೀ [೧೦]ಸ್ವಾವಾಸಗೋಚರಮ್ ।**
**[೧೧]ಉಪೇಯಾಯ ಸಮುದ್ಧೃತ್ಯ ರತ್ನಾರ್ಘಂ [೧೨]ಸಪರಿಚ್ಛದಾ ॥ ೮೦ ॥**

ಜಯಶೀಲನಾದ ಭರತೇಶ್ವರನು ತನ್ನ ಭವನದ ಸಮೀಪಕ್ಕೆ ಬಂದುದನ್ನು ತಿಳಿದು ಸಿಂಧುದೇವಿಯು ಬಹುಮೂಲ್ಯವಾದ ರತ್ನಗಳನ್ನು ತೆಗೆದುಕೊಂಡು ಪರಿವಾರಸಮೇತಳಾಗಿ ಅವನ ಬಳಿಗೆ ಹೋದಳು.

**ಪುಣ್ಯೈಃ ಸಿಂಧುಜಲೈರೇನಂ ಹೈಮಕುಂಭಶತೋದ್ಧೃತೈಃ ।**
**ಸಾಭ್ಯಷಿಂಚತ್ಸ್ವಹಸ್ತೇನ ಭದ್ರಾಸನನಿವೇಶಿತಮ್ ॥ ೮೧ ॥**

ಸಿಂಧುದೇವಿಯು ಭರತೇಶ್ವರನನ್ನು ಭದ್ರಾಸನದಲ್ಲಿ ಕುಳ್ಳಿರಿಸಿ ಅವನಿಗೆ ಬಂಗಾರದ ನೂರು ಕಲಶಗಳಲ್ಲಿ ತುಂಬಿದ ಸಿಂಧುನದಿಯ ಪುಣ್ಯಜಲಗಳಿಂದ ಅಭಿಷೇಕವನ್ನು ಮಾಡಿದಳು.

೧ ಪೂರ್ವಸ್ಥಿತಿಂ. ೨ ಕೃತದೋಷಸ್ಯ ಪರಿಶೋಧನಂ ಯಸ್ಮಾತ್ತತ್. ೩ ಉತ್ಕೃಷ್ಟನಿಧೀಶ್ವರಃ. ೪ ಪಶ್ಚಾತ್. ೫ ಸಿಂಧುನದೀತೀರಭೂಮೀಃ. ೬ ಸಂಚೂರ್ಣಯನ್. ೭ ಸಿಂಧುನದೀಪತನಕುಂಡಂ. ೮ ಆಗಚ್ಛನ್. ೯ ಸೇವತೇ ಸ್ಮ. ೧೦ ಗೃಹಸಮೀಪಮಾಗತಂ. ೧೧ ಉಪಾಯಯೌ. ೧೨ ಸಪರಿಕರಾ.

**ಕೃತಮಂಗಲನೇಪಥ್ಯಮಭ್ಯನಂದಜ್ಜಯಾಶಿಷಾ ।**
**ದೇವ ತ್ವದ್ದರ್ಶನಾದದ್ಯ ಪೂತಾಸ್ಮೀತ್ಯವದಚ್ಚ ತಮ್ ॥ ೮೨ ॥**

ಮಂಗಲಾಲಂಕಾರವನ್ನು ಮಾಡಿಕೊಂಡ ಭರತೇಶ್ವರನನ್ನು ಜಯಪ್ರದವಾದ ಆಶೀರ್ವಾದದಿಂದ ಆನಂದಗೊಳಿಸಿ "ಸ್ವಾಮಿಯೇ! ಈ ದಿವಸ ನಿನ್ನ ದರ್ಶನದಿಂದ ಪವಿತ್ರಳಾಗಿದ್ದೇನೆ" ಎಂದು ಹೇಳಿದಳು.

**ತತ್ರ ಭದ್ರಾಸನಂ ದಿವ್ಯಂ ಲಬ್ಧ್ವಾ [೧]ತದುಪಢೌಕಿತಮ್ ।**
**[೨]ಕೃತಾನುವ್ರಜನಾಂ ಕಿಂಚಿತ್ಸಿಂಧುದೇವೀಂ ವ್ಯಸರ್ಜಯತ್ ॥ ೮೩ ॥**

ಅಲ್ಲಿ ಸಿಂಧುದೇವಿಯು ತಂದುಕೊಟ್ಟ ದಿವ್ಯವಾದ ಭದ್ರಾಸನವನ್ನು ಪಡೆದು ಭರತೇಶ್ವರನು ಸ್ವಲ್ಪದೂರ ಹಿಂಬಾಲಿಸಿ ಬರುತ್ತಿರುವ ಆಕೆಯನ್ನು ಬೀಳ್ಕೊಟ್ಟನು.

**ಹಿಮಾಚಲಮನುಪ್ರಾಪ್ತಸ್ತತ್ತಟಾನಿ [೩]ಜಯಂಜಯಮ್ ।**
**ಕೈಶ್ಚಿತ್ಪ್ರಯಾಣಕೈಃ ಪ್ರಾಪ [೪]ಹಿಮವತ್ಕೂಟಸನ್ನಿಧಿಮ್ ॥ ೮೪ ॥**

ಹಿಮವತ್ಪರ್ವತವನ್ನು ಹೊಂದಿದ ಭರತರಾಜನು ಅದರ ತಪ್ಪಲುಗಳಲ್ಲಿರುವವರನ್ನು ಜಯಿಸುತ್ತ ಕೆಲವು ಪ್ರಯಾಣಗಳಿಂದ 'ಹಿಮವತ್' ಎಂಬ ಶಿಖರದ ಸಮೀಪವನ್ನು ಸೇರಿದನು.

**[೫]ಪುರೋಹಿತಸಖಸ್ತತ್ರ ಕೃತೋಪವಸನಕ್ರಿಯಃ ।**
**[೬]ಅಧ್ಯಶೇತ ಶುಚಿಂ ಶಯ್ಯಾಂ ದಿವ್ಯಾಸ್ತ್ರಾ[೭]ಣ್ಯಧಿವಾಸಯನ್ ॥ ೮೫ ॥**

ಅಲ್ಲಿ ಭರತೇಶ್ವರನು ಪುರೋಹಿತನೊಡನೆ ಉಪವಾಸನಿಯಮವನ್ನು ಮಾಡಿ ದಿವ್ಯಾಸ್ತ್ರಗಳನ್ನು ಮಂತ್ರಗಳಿಂದ ಪೂಜಿಸುತ್ತ ಶುಚಿಯಾದ ಹಾಸಿಗೆಯಲ್ಲಿ ಮಲಗಿದನು.

**ವಿಧಿರೇಷ [೮]ನ ಚಾಶಕ್ತಿರಿತಿ ಸಂಭಾವಿತೋ ನೃಪೈಃ ।**
**[೯]ಸಸಜ್ಯಮಕರೋಚ್ಚಾಪಂ ವಜ್ರಕಾಂಡಮಯತ್ನತಃ ॥ ೮೬ ॥**

ಈ ದಿವ್ಯಾಸ್ತ್ರಪೂಜೆಯು ಪರಂಪರೆಯಾಗಿ ಬಂದ ವಿಧಿಯಾಗಿರುವುದಲ್ಲದೆ ಚಕ್ರವರ್ತಿಗೆ ಶಕ್ತಿಯಿಲ್ಲವೆಂದಲ್ಲವೆಂದು ರಾಜರುಗಳಿಂದ ಭಾವಿಸಲ್ಪಟ್ಟ ಭರತರಾಜನು ವಜ್ರದ ಕೋಲುಳ್ಳ ಧನುಸ್ಸನ್ನು ಪ್ರಯತ್ನವಿಲ್ಲದೆ ಹೆದೆಯೇರಿಸಿದನು.

**ತತ್ರಾಮೋಘಂ ಶರಂ ದಿವ್ಯಂ [೧೦]ಸಮಧತ್ತೋರ್ಧ್ವಗಾಮಿನಮ್ ।**
**[೧೧]ವೈಶಾಖಸ್ಥಾನಮಾಸ್ಥಾಯ ಸ್ವನಾಮಾಕ್ಷರಚಿಹ್ನಿತಮ್ ॥ ೮೭ ॥**

ಅಲ್ಲಿ ಭರತೇಶ್ವರನು ಹನ್ನೆರಡು ಅಂಗುಲದೂರವಾಗಿ ತನ್ನ ಕಾಲುಗಳನ್ನಿಟ್ಟು ನಿಂತು ತನ್ನ ಹೆಸರಿನ ಅಕ್ಷರಗಳು ಕೆತ್ತಲ್ಪಟ್ಟಿರುವುದೂ ಸಾರ್ಥಕವೂ ಮೇಲಕ್ಕೆ ಹೋಗುವ ಸ್ವಭಾವವುಳ್ಳುದೂ ಆದ ದಿವ್ಯಬಾಣವನ್ನು ಧನುಸ್ಸಿಗೆ ಸೇರಿಸಿದನು.

**ಮುಕ್ತಸಿಂಹಪ್ರಣಾದೇನ ಯದಾ ಮುಕ್ತಃ ಶರೋ[೧೨]ಮುನಾ ।**
**ತದಾ ಸುರಗಣೈಸ್ತುಷ್ಟೈರ್ಮುಕ್ತೋಸ್ಯ ಕುಸುಮಾಂಜಲಿಃ ॥ ೮೮ ॥**

ಭರತಚಕ್ರಿಯು ಸಿಂಹನಾದವನ್ನು ಮಾಡಿ ಬಾಣವನ್ನು ಬಿಟ್ಟಾಗ ಸಂತುಷ್ಟರಾದ ದೇವತೆಗಳು ಅವನ ಮೇಲೆ ಪುಷ್ಪಾಂಜಲಿಯನ್ನೆರಚಿದರು.

**ಸ ಶರೋ ದೂರಮುತ್ಪತ್ಯ ಕ್ವಚಿದಪ್ಯಸ್ಖಲದ್ಗತಿಃ ।**
**ಸಂಪ್ರಾಪ್ಯ ಹಿಮವತ್ಕೂಟಂ ತದ್ದೇಶ್ಮಾಕಂಪಯತ್ಪತನ್ ॥ ೮೯ ॥**

೧ ತಯಾ ಉಪನೀತಂ. ೨ ವಿಹಿತಾನುಗಮನಾಂ. ೩ ಜಿತ್ವಾಜಿತ್ವಾ, ಜಯನ್ ಜಯನ್ ಇತ್ಯಪಿ ಪಾಠಃ. ೪ ಹಿಮವನ್ನಾಮಕೂಟನಿಕಟಂ. ೫ ಪುರೋಹಿತಃ ಸಖಾ ಯಸ್ಯಾಸೌ. ೬ ಅಧಿಶೇತೇ ಸ್ಮ. ೭ ಮಂತ್ರೈರಭಿಪೂಜಯನ್. ೮ ಶಕ್ತ್ಯಭಾವೋ ನ. ೯ ಮೌರ್ವ್ಯಾ ಸಹಿತಂ. ೧೦ ಸಂಧಾನಮಕರೋತ್. ೧೧ ವೈಶಾಖಸ್ಥಾನೇ ಸ್ಥಿತ್ವಾ, ತದುಕ್ತಂಧನುರ್ವೇದೇ — ವಾಮಪಾದಪ್ರಸಾರೇ ದಕ್ಷಿಣಸಂಕೋಚೇ ಪ್ರತ್ಯಾಲೀಢಂ, ದಕ್ಷಿಣಜಂಘಾಪ್ರಸಾರೇ ವಾಮಸಂಕೋಚೇಚಾಲೀಢಂ ತುಲ್ಯಪಾದಯುಗಂ ಸಮಪದಂ, ವಿತಸ್ತ್ಯಂತರೇಣಸ್ಥಿತೇ ಪಾದದ್ವಯೇ ವಿಶಾಖಃ, ಮಂಡಲಾಕೃತಿಪಾದದ್ವಯಂ ಮಂಡಲಂ. ೧೨ ಚಕ್ರಿಣಾ.

ಎಲ್ಲಿಯೂ ತಡೆಯಿಲ್ಲದ ಗಮನವುಳ್ಳ ಆ ಬಾಣವು ದೂರವಾಗಿ ಮೇಲಕ್ಕೆ ಹಾರಿ ಬೀಳುವಂತಹದಾಗಿ 'ಹಿಮವತ್' ಶಿಖರವನ್ನು ಹೊಂದಿ ಅಲ್ಲಿರುವ ಭವನವನ್ನು (ಹಿಮವತ್ಕುಮಾರನೆಂಬ ದೇವನ ಮನೆಯನ್ನು) ನಡುಗಿಸಿತು.

**ಸ ಮಾಗಧವ[೧]ದಾಧ್ಯಾಯ ಜ್ಞಾತಚಕ್ರಧರಾಗಮಃ ।**
**ಉಚ್ಚಚಾಲ ಚಲನ್ಮೌಲಿ[೨]ಸ್ತನ್ನಿವಾಸೀ ಸುರೋತ್ತಮಃ ॥ ೯೦ ॥**

ಆ ಹಿಮವತ್ಕೂಟದಲ್ಲಿ ವಾಸಮಾಡಿಕೊಂಡಿರುವ ಹಿಮವದ್ದೇವನು ವಿಚಾರ ಮಾಡಿ ಚಕ್ರವರ್ತಿಯ ಆಗಮನವನ್ನು ತಿಳಿದು ಚಲಿಸುತ್ತಿರುವ ಕಿರೀಟವುಳ್ಳವನಾಗಿ ಅವನ ಬಳಿಗೆ, ಮಾಗಧಾಮರನಂತೆ, ಹೊರಟನು.

**ಸಂಪ್ರಾಪ್ತಶ್ಚ ತಮುದ್ದೇಶಂ ಯಮಧ್ಯಾಸ್ತೇ ಸ್ಮ ಚಕ್ರಭೃತ್ ।**
**[೩]ದರೋಪರುದ್ಧಸಂರಂಭೋ ಧನುರ್ಜ್ಯಾಮಸಕೃತ್ಸ್ಪೃಶನ್ ॥ ೯೧ ॥**

ಆವೇಶವನ್ನು ಸ್ವಲ್ಪ ತಡೆದು ಧನುಸ್ಸಿನ ಶಿಂಜಿನಿಯನ್ನು ಬಾರಿಬಾರಿಗೆ ಎಳೆಯುತ್ತ ಭರತಚಕ್ರಧರನು ಯಾವ ಪ್ರದೇಶದಲ್ಲಿದ್ದನೋ ಅಲ್ಲಿಗೆ ಆ ದೇವನು ಬಂದನು.

**ತುಂಗೋಽಯಂ ಹಿಮವಾನದ್ರಿರಲಂಘ್ಯಶ್ಚ [೪]ಪೃಥಗ್ಜನೈಃ ।**
**ಲಂಘಿತೋಽದ್ಯ ತ್ವಯಾ ದೇವ ! ತ್ವದ್ವೃತ್ತ[೫]ಮತಿಮಾನುಷಮ್॥ ೯೨ ॥**

"ಸ್ವಾಮಿಯೇ ! ಎತ್ತರವಾದ ಈ ಹಿಮವತ್ಪರ್ವತಕ್ಕೆ ಸಾಮಾನ್ಯಜನರು ಬರಲಾರರು. ಈ ದಿವಸ ನೀನು ಬಂದೆ. ನಿನ್ನ ವ್ಯಾಪಾರವು ಮನುಷ್ಯ ವ್ಯಾಪಾರವನ್ನು ಮೀರಿದುದು.

**ವಿಪ್ರಕೃಷ್ಟಾಂತರಾಃ ಕ್ವಾಸ್ಮದಾವಾಸಾಃ ಕ್ವ ಭವಚ್ಛರಃ ।**
**ತಥಾಪ್ಯಾಕಂಪಿತಾಸ್ತೇನ ಪತ[೬]ತ್ಯೈಕಪದೇ ವಯಮ್ ॥ ೯೩ ॥**

ಬಹುದೂರದಲ್ಲಿರುವ ನಮ್ಮ ವಾಸಸ್ಥಾನಗಳೆಲ್ಲಿ ? ನಿನ್ನ ಬಾಣವೆಲ್ಲಿ ? ಆದರೂ ಅದು ಬಿದ್ದೊಡನೆಯೇ ನಮ್ಮನ್ನು ನಡುಗಿಸಿತು.

**ತ್ವತ್ಪ್ರತಾಪಃ ಶರವ್ಯಾಜಾದುತ್ಪತನ್ನಗನಾಂಗಣಮ್ ।**
**ಗಣಬದ್ಧಪದೇ ಕರ್ತುಮಸ್ಮಾನಾಹೂತವಾನ್ ಧ್ರುವಮ್ ॥ ೯೪ ॥**

ನಿಜವಾಗಿಯೂ ಬಾಣದ ನೆವದಿಂದ ಆಕಾಶಕ್ಕೆ ನೆಗೆದ ನಿನ್ನ ಪ್ರತಾಪವು ನಮ್ಮನ್ನು ಗಣಬದ್ಧರೆಂಬ ಸೈನಿಕರಾದ ದೇವತೆಗಳ ಸ್ಥಾನದಲ್ಲಿ ನೇಮಿಸಲು ಕರೆದಿರುವುದು (ಉತ್ಪ್ರೇಕ್ಷೆ ).

**ವಿಜಿತಾಬ್ಧಿಃ ಸಮಾಕ್ರಾಂತವಿಜಯಾರ್ಧಗುಹೋದರಃ ।**
**ಹಿಮಾದ್ರಿಶಿಖರೇಷ್ವದ್ಯ ಜೃಂಭತೇ ತೇ [೭]ಜಯೋದ್ಯಮಃ ॥ ೯೫ ॥**

ಸಮುದ್ರವನ್ನು ಜಯಿಸಿ ವಿಜಯಾರ್ಧಗಿರಿಯ ಗುಹೆಯ ಮಧ್ಯಭಾಗವನ್ನು ಆಕ್ರಮಿಸಿದ ನಿನ್ನ ದಿಗ್ವಿಜಯೋದ್ಯೋಗವು ಈ ದಿನ ಹಿಮವತ್ಪರ್ವತದ ಶಿಖರಗಳಲ್ಲಿ ಹೊಳೆಯುತ್ತಿದೆ.

**ಜಯವಾದೋ[೮]ಽನುವಾದೋಽಯಂ ಸಿದ್ಧದಿಗ್ವಿಜಯಸ್ಯ ತೇ ।**
**ಜಯತಾನ್ನಂದತಾಜ್ಜೀಷ್ಣೋ ವರ್ಧಿಷೀಷ್ಟ ಭವಾನಿತಿ ॥ ೯೬ ॥**

ದಿಗ್ವಿಜಯವನ್ನು ಸಾಧಿಸಿದ ನಿನಗೆ "ಜಯಶೀಲನಾದ ಪ್ರಭುವೇ ! ನೀನು ಜಯಿಸು, ಆನಂದಿಸು, ವೃದ್ಧಿಹೊಂದು" ಎಂಬ ಜಯವನ್ನು ಹೇಳುವ ಈ ಮಾತು ಸಾರ್ಥಕವಾದ ಮರುಮಾತಾಗಿರುವುದು. ಈ ಅರ್ಥಗಳು ಆಗಲೇ ಸಾಧ್ಯವಾಗಿರುತ್ತವೆಂದು ಭಾವವು."

**ಸಮುಚ್ಚರಜ್ಜಯಧ್ವಾನಮುಖರಃ ಸ ಸುರೈಃ ಸಮಮ್ ।**
**ಪ್ರಭುಂ [೧]ಸಭಾಜಯಾಮಾಸ ಸೋಪಚಾರಂ ಸುರೋತ್ತಮಃ ॥ ೯೭ ॥**

ಶ್ರೇಷ್ಠನಾದ ಆ ಹಿಮವದ್ದೇವನು ಇತರ ದೇವತೆಗಳೊಡನೆ ಗಟ್ಟಿಯಾಗಿ ಜಯಧ್ವನಿಯನ್ನು ಮಾಡುತ್ತ ಉಪಚಾರಪೂರ್ವಕವಾಗಿ ಭರತೇಶ್ವರನನ್ನು ಪೂಜಿಸಿದನು.

**ಅಭಿಷಿಚ್ಯ ಚ ರಾಜೇಂದ್ರಂ [೨]ರಾಜವದ್ವಿಧಿನಾ ದದೌ ।**
**ಗೋಶೀರ್ಷಚಂದನಂ ಸೋಽಸ್ಮೈ ಸಮ[೩]ವೋಷಧಿಮಾಲಯಾ ॥ ೯೮ ॥**

ಆ ದೇವನು ರಾಜಯೋಗ್ಯವಾದ ವಿಧಿಯಿಂದ ಭರತಚಕ್ರೇಶ್ವರನಿಗೆ ಅಭಿಷೇಕವನ್ನು ಮಾಡಿ ಅವನಿಗೆ ಅರಿಸಿನಬಣ್ಣದ ಚಂದನವನ್ನೂ ವನದ ಪುಷ್ಪಗಳ ಮಾಲೆಯನ್ನೂ ಕೊಟ್ಟನು.

**[೪]ತ್ವದ್ಭುಕ್ತಿವಾಸಿನೋ ದೇವ ದೂರಾನಮಿತಮೌಲಯಃ ।**
**ದೇವಾಸ್ತ್ವಾಮಾನಮಂತ್ಯೇತೇ ತ್ವತ್ಪ್ರಸಾದಾಭಿಕಾಂಕ್ಷಿಣಃ ॥ ೯೯ ॥**

"ಪ್ರಭುವೇ ! ನಿನ್ನ ಪರಿಪಾಲನೆಗೊಳಪಟ್ಟ ದೇಶದಲ್ಲಿ ವಾಸಮಾಡುವವರೂ ದೂರದಲ್ಲಿ ತಮ್ಮ ಕಿರೀಟಗಳನ್ನು ಬಗ್ಗಿಸಿರುವವರೂ ನಿನ್ನ ಅನುಗ್ರಹವನ್ನಿಚ್ಛಿಸುವವರೂ ಆದ ಈ ದೇವತೆಗಳು ನಿನ್ನನ್ನು ವಂದಿಸುತ್ತಾರೆ.

**[೫]ದೇಹಿ ದೇವ ತತೋಽಸ್ಮಾಸು ಪ್ರಸಾದತರಲಾಂ ದೃಶಮ್ ।**
**ಸ್ವಾಮಿಪ್ರಸಾದಲಾಭೋ ಹಿ [೬]ವೃತ್ತಿಲಾಭೋ[೭]ಽನುಜೀವಿನಾಮ್ ॥ ೧೦೦ ॥**

ಆದುದರಿಂದ ಸ್ವಾಮಿಯೇ ! ನಮ್ಮಲ್ಲಿ ಅನುಗ್ರಹದಿಂದ ಹರಿದಾಡುವ ದೃಷ್ಟಿಯನ್ನಿಡು. ಪ್ರಭುವಿನ ಅನುಗ್ರಹಲಾಭವೇ ಸೇವಕರಿಗೆ ಜೀವನ(ವೇತನ)ದ ಲಾಭವಾಗಿರುವುದು.

**[೮]ನಿದೇಶೈರುಚಿತೈರಸ್ಮಾನ್ಸಂಭಾವಯಿತುಮರ್ಹಸಿ ।**
**ವೃತ್ತಿಲಾಭಾದಪಿ ಪ್ರಾಯ[೯]ಸ್ತಲ್ಲಾಭಃ ಕಿಂಕರೈರ್ಮತಃ ॥ ೧೦೧ ॥**

ನೀನು ನಮಗೆ ಉಚಿತವಾದ ಆಜ್ಞೆಗಳಿಂದ ನಮ್ಮನ್ನು ಸತ್ಕರಿಸುವುದಕ್ಕೆ ಯೋಗ್ಯನಾಗಿರುತ್ತೀಯೆ. ಬಲುಮಟ್ಟಿಗೆ ಸೇವಕರಿಗೆ ವೇತನದ ಲಾಭಕ್ಕಿಂತಲೂ ಪ್ರಭುವಿನ ಆಜ್ಞಾಲಾಭವು ಇಷ್ಟವಾಗಿದೆ."

**ಮಾನಯನ್ನಿತಿ [೧೦]ತದ್ವಾಕ್ಯಂ [೧೧]ಸ ತಾನಮರಸತ್ತಮಾನ್ ।**
**ವ್ಯಸರ್ಜಯತ್ಸ್ವಸಾತ್ಕೃತ್ಯ ಯಥಾಸ್ವಂ ಕೃತಮಾನನಾನ್ ॥ ೧೦೨ ॥**

ಈ ಪ್ರಕಾರವಾದ ಆ ದೇವನ ಮಾತನ್ನು ಭರತಚಕ್ರೇಶ್ವರನು ಗೌರವಿಸಿ ಆ ದೇವತೆಗಳನ್ನು ಸ್ವಾಧೀನಪಡಿಸಿಕೊಂಡು ಅವರಿಗೆ ಯೋಗ್ಯತಾನುಸಾರವಾಗಿ ಸತ್ಕಾರವನ್ನು ಮಾಡಿ ಕಳುಹಿಸಿಕೊಟ್ಟನು.

**ಹಿಮವಜ್ಜಯಶಂಸೀನಿ ಮಂಗಲಾನ್ಯಸ್ಯ ಕಿನ್ನರಾಃ ।**
**ಜಗು[೧೨]ಸ್ತತ್ಕುಂಜದೇಶೇಷು ಸ್ವೈರಮಾರಬ್ಧ[೧೩]ಮೂರ್ಛನಾಃ ॥ ೧೦೩ ॥**

ಸ್ವೇಚ್ಛೆಯಾಗಿ ಗಾನವನ್ನಾರಂಭಿಸಿದ ಕಿನ್ನರದೇವತೆಗಳು ಹಿಮಾಲಯದ ಜಯವನ್ನು ಸೂಚಿಸುವ ಭರತರಾಜನ ಮಂಗಲಗಳನ್ನು ಹಿಮವತ್ಪರ್ವತದ ತಪ್ಪಲುಗಳಲ್ಲಿ ಹಾಡಿದರು.

**ಅಸಕೃತ್ಕಿನ್ನರಸ್ತ್ರೀಣಾಮಾಧುನ್ವಾನಾಃ [೧೪]ಸ್ತನಾವೃತೀಃ ।**
**ಸರೋವೀಚಿಭಿದೋ ಮಂದಮಾವವುಸ್ತದ್ವನಾನಿಲಾಃ ॥ ೧೦೪ ॥**

---

೧ ವಿಚಾರ್ಯ. ೨ ಹಿಮವತ್ಕೂಟನಿವಾಸೀ ಹಿಮವಾನ್ನಾಮಾ. ೩ ಈಷತ್ಪೀಡಿತ. ೪ ಸಾಮಾನ್ಯೈಃ. ೫ ಮಾನುಷಮತೀತಂ. ೬ ಯುಗಪತ್– ದಿವ್ಯಂ. ೭ ಜಯೋದ್ಯೋಗಃ. ೮ ಸಾರ್ಥಕಂ ಪುನರ್ವಚನಮನುವಾದಃ.

೧ ಸಂಭಾವಯಾಮಾಸ. ೨ ರಾಜಾರ್ಹವಿಧಾನೇನ. ೩ ವನಪುಷ್ಪಮಾಲಯಾ. ೪ ತವಪಾಲನಕ್ಷೇತ್ರವಾಸಿನಃ. ೫ ಕುರು. ೬ ಆಜೀವಾಜೀವಿಕಾವಾರ್ತಾವೃತ್ತಿರ್ವರ್ತನಜೀವನೇ. ೭ ಸೇವಕಾನಾಂ. ೮ ಶಾಸನೈಃ. ೯ ಆಜ್ಞಾಲಾಭಃ. ೧೦ ತದ್ದೇವವಚನಂ. ೧೧ ಚಕ್ರೀ. ೧೨ ಹಿಮವತ್ಸಾನುಪ್ರದೇಶೇಷು. ೧೩ ಸ್ವರವಿಶ್ರಮಾಃ. ೧೪ ಉರೋಜಾಚ್ಛಾದನವಸ್ತ್ರಾಣಿ.

ಕಿನ್ನರಸ್ತ್ರೀಯರ ಕುಚಗಳ ಮೇಲಿರುವ ವಸ್ತ್ರಗಳನ್ನು ಬಾರಿಬಾರಿಗೆ ಕೊಡಹುತ್ತಿರುವುವೂ ಸರೋವರದ ಅಲೆಗಳನ್ನು ಭೇದಿಸುವುವೂ ಆದ ಆ ಪರ್ವತದ ವನಗಳ ಗಾಳಿಗಳು ಮೆಲ್ಲನೆ ಬೀಸಿದುವು.

**ಸ್ಥಲಾಬ್ಜಿನೀವನಾದ್ವಿಷ್ವಕ್ಕಿರನ್ಕಿಂಜಲ್ಕಜಂ ರಜಃ ।**
**ಹಿಮೋ ಹಿಮಾದ್ರಿಕುಂಜೇಭ್ಯ[೧]ಸ್ತಂ ಸಿಷೇವೇ ಸಮೀರಣಃ ॥ ೧೦೫ ॥**

ನೆಲದಾವರೆಗಳ ಸಮೂಹದಿಂದ, ಪುಷ್ಪಧೂಳಿಯನ್ನು ಸುತ್ತಲೂ ಎರಚುತ್ತಿರುವ ತಂಗಾಳಿಯು ಹಿಮವತ್ಪರ್ವತದ ತಪ್ಪಲುಗಳಲ್ಲಿ ಭರತಚಕ್ರಿಯ ಸೇವೆಯನ್ನು ಮಾಡಿತು. ಭರತೇಶ್ವರನ ಮೇಲೆ ತಂಗಾಳಿಯು ಬೀಸಿತೆಂದರ್ಥವು.

**ಸ್ಥಲಾಂಭೋರುಹಿಣೀವಾಸ್ಯ ಕೀರ್ತಿಃ ಸಾಕಂ ಜಯಶ್ರಿಯಾ ।**
**ಹಿಮಾಚಲನಿಕುಂಜೇಷು ಪಪ್ರಥೇ ದಿಗ್ಜಯಾರ್ಜಿತಾ ॥ ೧೦೬ ॥**

ಈ ಭರತೇಶ್ವರನ ದಿಗ್ವಿಜಯದಿಂದುಂಟಾದ ಕೀರ್ತಿಯು ಜಯಶ್ರೀಯೊಡನೆ, ನೆಲದಾವರೆಯ ಬಳ್ಳಿಯಂತೆ, ಹಿಮವತ್ಪರ್ವತದ ತಪ್ಪಲುಗಳಲ್ಲಿ ಹರಡಿತು.

**ಹಿಮಾಚಲಸ್ಥಲೇಷ್ವಸ್ಯ ಧೃತಿರಾಸೀತ್ಪಪಶ್ಯತಃ ।**
**[೨]ಕೃತೋಪಹಾರಕೃತ್ಯೇಷು ಸ್ಥಲಾಂಭೋಜೈರ್ವಿಕಸ್ವರೈಃ ॥ ೧೦೭ ॥**

ಅರಳಿದ ನೆಲದಾವರೆಗಳಿಂದ ಮಾಡಲ್ಪಟ್ಟ ಪೂಜಾಸಾಮಾಗ್ರಿಗಳುಳ್ಳ ಹಿಮವತ್ಪರ್ವತಪ್ರದೇಶಗಳಲ್ಲಿ ಅವುಗಳನ್ನು ನೋಡುತ್ತಿರುವ ಈ ಭರತೇಶ್ವರನಿಗೆ ಬಹಳ ಸಂತೋಷವುಂಟಾಯಿತು.

**ತಮುಚ್ಚೈರ್ವೃತ್ತಿಮಾಕ್ರಾಂತದಿಕ್ಚಕ್ರಂ [೩]ವಿಧೃತಾಯತಿಮ್ ।**
**ಸ್ವಮಿವಾನಲ್ಪರತ್ನರ್ದ್ಧಿಂ ಹಿಮಾದ್ರಿಂ [೪]ಬಹ್ವಮಂಸ್ತ ಸಃ ॥ ೧೦೮ ॥**

ಭರತೇಶ್ವರನು, ಉದಾರವಾದ ನಡೆಯುಳ್ಳವನೂ ದಿಕ್ಕುಗಳನ್ನೆಲ್ಲ ಆಕ್ರಮಿಸಿದವನೂ ದ್ರವ್ಯದ ಲಾಭವುಳ್ಳವನೂ ಅಧಿಕವಾದ ರತ್ನಗಳೂ ಸಂಪತ್ತೂ ಉಳ್ಳವನೂ ಆದ ತನ್ನಂತೆ, ಉನ್ನತವಾಗಿರುವುದೂ ದಿಕ್ಕುಗಳನ್ನು ಆಕ್ರಮಿಸಿರುವುದೂ ದೀರ್ಘವೂ ಅಧಿಕವಾದ ರತ್ನಗಳೂ ಸಂಪತ್ತೂ ಉಳ್ಳುದೂ ಆದ ಹಿಮವತ್ಪರ್ವತವನ್ನು ಬಹುಮಾನಿಸಿದನು. ಭರತನು ತನಗೆ ಸಮಾನವಾದ ಹಿಮವತ್ಪರ್ವತವನ್ನು ಗೌರವಬುದ್ಧಿಯಿಂದ ನೋಡಿದನೆಂದು ಭಾವವು.

**[೫]ಅತ್ರಾಂತರೇ ಗಿರೀಂದ್ರೇಸ್ಮಿನ್ವ್ಯಾಪಾರಿತದೃಶಂ ಪ್ರಭುಮ್ ।**
**ವಿನೋದಯಿತುಮಿತ್ಯುಚ್ಚೈಃ ಪುರೋಧಾ ಗಿರಿಮಭ್ಯಧಾತ್ ॥ ೧೦೯ ॥**

ಈ ಸಮಯದಲ್ಲಿ ಈ ಹಿಮವತ್ಪರ್ವತವನ್ನು ನೋಡುತ್ತಿರುವ ಭರತೇಶ್ವರನನ್ನು ಸಂತೋಷಪಡಿಸುವುದಕ್ಕೋಸ್ಕರ ಪುರೋಹಿತನು ಮುಂದೆಹೇಳುವಂತೆ ಪ್ರೌಢವಾದ ಮಾತನ್ನಾಡಿದನು.

**ಹಿಮವಾನಯಮುತ್ತುಂಗಃ ಸಂಗತಃ ಸಂತತಂ ಶ್ರಿಯಾ ।**
**[೬]ಕುಲಕ್ಷೋಣೀಭೃತಾಂ [೭]ಧುರ್ಯೋ ಧತ್ತೇ ಯುಷ್ಮದನುಕ್ರಿಯಾಮ್ ॥**

ಪ್ರಭುವೆ! ಉನ್ನತವೂ ಯಾವಾಗಲೂ ಶೋಭೆಯುಳ್ಳುದೂ ಕುಲಪರ್ವತಗಳಲ್ಲಿ ಮುಖ್ಯವೂ ಆದ ಈ ಹಿಮವತ್ಪರ್ವತವು, ಶ್ರೇಷ್ಠನೂ ಯಾವಾಗಲೂ ಸಂಪದ್ಯುಕ್ತನೂ ಕುಲೀನರಾದ ರಾಜರುಗಳಲ್ಲಿ ಮುಖ್ಯನೂ ಆದ ನಿನ್ನನ್ನು ಹೋಲುತ್ತದೆ.

**ಅಹೊ! ಮಹಾನಯಂ ಶೈಲೋ ದುರಾರೋಹೋ [೮]ದುರುತ್ತರಃ ।**
**ಶರಸಂಧಾನಮಾತ್ರೇಣ ಸಿದ್ಧೋ ಯುಷ್ಮನ್ಮಹೋದಯಾತ್ ॥ ೧೧೧ ॥**

೧ ಚಕ್ರಿಣಂ. ೨ ವಿಹಿತಪುಷ್ಪೋಪಹಾರವ್ಯಾಪಾರೇಷು. ೩ ಧೃತಧನಾಗಮಂ ಚ. ೪ ಬಹುಮಾನಮಕರೋತ್. ೫ ಅಸ್ಮಿನ್ನವಸರೇ. ೬ ಕುಲೀನಾನಾಂ ರಾಜ್ಞಾಂ. ೭ ಮುಖ್ಯಃ. ೮ ಅವತರಿತುಂ ದುಃಶಕ್ಯಃ.

ಹತ್ತುವುದಕ್ಕೂ ಇಳಿಯುವುದಕ್ಕೂ ಕಠಿನವಾದ ಈ ದೊಡ್ಡದಾದ ಪರ್ವತವು ನಿಮ್ಮ ಪುಣ್ಯೋದಯದಿಂದ ನೀವು ಧನುಸ್ಸಿಗೆ ಬಾಣವನ್ನು ಸೇರಿಸಿದ ಮಾತ್ರದಿಂದಲೇ ನಿಮಗೆ ಸ್ವಾಧೀನವಾಯಿತು. ಆಶ್ಚರ್ಯ!

**ಚಿತ್ರೈರಲಂಕೃತಾ ರತ್ನೈರಸ್ಯ ಶ್ರೇಣೀ ಹಿರಣ್ಮಯೀ ।**
**ಶತಯೋಜನಮಾತ್ರೋಚ್ಚಾ ಟಂಕಚ್ಛಿನ್ನೇವ ಭಾತ್ಯಸೌ ॥ ೧೧೨ ॥**

ನಾನಾಪ್ರಕಾರವಾದ ರತ್ನಗಳಿಂದ ಅಲಂಕೃತವೂ ಸುವರ್ಣಮಯವೂ ನೂರು ಯೋಜನ ಉನ್ನತವೂ ಆದ ಈ ಪರ್ವತದ ಪಾರ್ಶ್ವವು, ಚೇಣದಿಂದ ಕೆತ್ತಲ್ಪಟ್ಟಿರುವಂತೆ, ಪ್ರಕಾಶಿಸುತ್ತಿದೆ.

**ಸ್ವಪೂರ್ವಾಪರಕೋಟಿಭ್ಯಾಂ ವಿಗಾಹ್ಯ ಲವಣಾರ್ಣವಮ್ ।**
**ಸ್ಥಿತೋಯಂ ಗಿರಿರಾಭಾತಿ ಮಾನದಂಡಾಯಿತೋ ಭುವಃ ॥ ೧೧೩ ॥**

ತನ್ನ ಪೂರ್ವಪಶ್ಚಿಮಭಾಗಗಳಿಂದ ಲವಣಸಮುದ್ರವನ್ನು ಪ್ರವೇಶಿಸಿರುವ ಈ ಪರ್ವತವು, ಭೂಮಿಯನ್ನು ಅಳತೆಮಾಡುವ ಕೋಲಿನಂತೆ, ಶೋಭಿಸುತ್ತದೆ.

**[೧]ದ್ವಿರ್ವಿಸ್ತೃತೋಯಮದ್ರೀಂದ್ರೋ ಭರತಾ[೨]ದ್ಭರತರ್ಷಭ ।**
**ಮೂಲೇ ಚೋಪರಿಭಾಗೇ ಚ ತುಲ್ಯವಿಸ್ತಾರಸಮ್ಮಿತಿಃ ॥ ೧೧೪ ॥**

ಶ್ರೇಷ್ಠನಾದ ಭರತನೆ! ಬುಡದಲ್ಲಿಯೂ ತುದಿಯಲ್ಲಿಯೂ ಸಮಾನವಾದ ವಿಸ್ತಾರಪರಿಮಾಣವುಳ್ಳ ಈ ದೊಡ್ಡಪರ್ವತವು ಭರತಖಂಡಕ್ಕಿಂತ ಎರಡರಷ್ಟು ವಿಸ್ತಾರವಾಗಿದೆ.

**ಅಸ್ಯಾನುಸಾನು ರಮ್ಯೇಯಂ ವನರಾಜೀ ವಿರಾಜತೇ ।**
**ಶಶ್ವದಧ್ಯುಷಿತಾ ಸಿದ್ಧವಿದ್ಯಾಧರಮಹೋರಗೈಃ ॥ ೧೧೫ ॥**

ಸಿದ್ಧರೆಂಬ ದೇವತೆಗಳಿಂದಲೂ ವಿದ್ಯಾಧರರಿಂದಲೂ ಮಹೋರಗರೆಂಬ ವ್ಯಂತರದೇವತೆಗಳಿಂದಲೂ ಆಗಾಗ್ಗೆ ವಾಸಮಾಡಲ್ಪಟ್ಟುದೂ ರಮಣೀಯವೂ ಆದ ವನಗಳ ಸಾಲು ಈ ಪರ್ವತದ ತಪ್ಪಲುಗಳಲ್ಲಿ ಶೋಭಿಸುತ್ತಿದೆ.

**[೩]ತಟಾಭೋಗಾ ವಿಭಾಂತ್ಯಸ್ಯ ಜ್ವಲನ್ಮಣಿವಿಚಿತ್ರಿತಾಃ ।**
**ಚಿತ್ರಿತಾ ಇವ ಸಂಕ್ರಾಂತೈಃ ಸ್ವರ್ವಧೂಪ್ರತಿಬಿಂಬಕೈಃ ॥ ೧೧೬ ॥**

ಪ್ರಕಾಶಮಾನವಾದ ರತ್ನಗಳಿಂದ ಚಿತ್ರಿಸಲ್ಪಟ್ಟ ಈ ಪರ್ವತದ ವಿಸ್ತಾರವಾದ ತಪ್ಪಲುಗಳು, ಒಳಕ್ಕೆ ಪ್ರವೇಶಿಸಿದ ದೇವಸ್ತ್ರೀಯರ ಪ್ರತಿಬಿಂಬಗಳಿಂದ ಚಿತ್ರಿಸಲ್ಪಟ್ಟಿವೆಯೋ ಎಂಬಂತೆ, ಪ್ರಕಾಶಿಸುತ್ತಿವೆ.

**ಪರ್ಯಟಂತಿ ತಟೇಷ್ವಸ್ಯ ಸಪ್ರೇಯಸ್ಯೋ ನಭಶ್ಚರಾಃ ।**
**ಸ್ವೈರಸಂಭೋಗಯೋಗ್ಯೇಷು ಹಾರಿಭಿರ್ಲತಿಕಾಗೃಹೈಃ ॥ ೧೧೭ ॥**

ಮನೋಹರವಾದ ಲತಾಮಂಟಪಗಳಿಂದ ಯಥೇಚ್ಛವಾಗಿ ಕ್ರೀಡಿಸುವುದಕ್ಕೆ ಯೋಗ್ಯಗಳಾದ ಈ ಪರ್ವತದ ತಪ್ಪಲುಗಳಲ್ಲಿ ಖೇಚರರು ತಮ್ಮ ಪತ್ನಿಯರೊಡನೆ ಸಂಚರಿಸುತ್ತಾರೆ.

**[೪]ವಿವಿಕ್ತರಮಣೀಯೇಷು ಸಾನುಷ್ವಸ್ಯ ಧೃತೋತ್ಸವಾಃ ।**
**ನ ಧೃತಿಂ ದಧತೇನ್ಯತ್ರ ಗೀರ್ವಾಣಾಃ ಸಾಪ್ಸರೋಗಣಾಃ ॥ ೧೧೮ ॥**

ಪವಿತ್ರವೂ ರಮಣೀಯವೂ ಆದ ಈ ಪರ್ವತದ ತಪ್ಪಲುಗಳಲ್ಲಿ ಸಂತೋಷಕೂಟಗಳನ್ನು ಮಾಡುವವರೂ ಅಪ್ಸರಸ್ತ್ರೀಸಮೂಹಸಹಿತರೂ ಆದ ದೇವತೆಗಳು ಈ ಪರ್ವತವನ್ನು ಬಿಟ್ಟು ಬೇರೆಕಡೆಯಲ್ಲಿ ಸಂತೋಷವನ್ನು ಹೊಂದುವುದಿಲ್ಲ.

**ಪರ್ಯಂತೇಸ್ಯ ವನೋದ್ದೇಶಾ ವಿಕಾಸಿಕುಸುಮಸ್ಮಿತಾಃ ।**
**ಹಸಂತೀವಾಮರೋದ್ಯಾನಶ್ರಿಯಮಾತ್ಮೀಯಯಾ ಶ್ರಿಯಾ ॥ ೧೧೯ ॥**

೧ ದ್ವಿಗುಣವಿಸ್ತಾರಃ. ೨ ಭರತಮುಖ್ಯ. ೩ ಸಾನುವಿಸ್ತಾರಾಃ. ೪ ಪವಿತ್ರ.

ಈ ಪರ್ವತದ ಸಮೀಪದಲ್ಲಿ ಅರಳಿರುವ ಹೂಗಳೆಂಬ ನಗೆಗಳುಳ್ಳ ವನ ಪ್ರದೇಶಗಳು ತಮ್ಮ ಸಂಬಂಧವಾದ ವೈಭವದಿಂದ-ಶೋಭೆಯಿಂದ ದೇವತೆಗಳ ಉದ್ಯಾನದ ವೈಭವವನ್ನು ಪರಿಹಾಸ್ಯಮಾಡುತ್ತವೆಯೋ ಎಂಬಂತಿದ್ದುವು.

**ಸ್ವೇನ ಮೂರ್ಧ್ನಾ ಬಿಭರ್ತ್ಯೇಷ [1]ಶ್ರಿಯಂ ನಿತ್ಯಾನಪಾಯಿನೀಮ್ ।**
**[2]ಸ್ಮಾರ್ತಾಃ ಸ್ಮರಂತಿ ಯಾಂ ಶಚ್ಯಾಃ ಸೌಭಾಗ್ಯಮದಕರ್ಷಿಣೀಮ್ ॥**

ಈ ಪರ್ವತವು ತನ್ನ ಶಿಖರದಲ್ಲಿ ಯಾವಾಗಲೂ ಅಪಾಯರಹಿತಳಾದ ಶ್ರೀದೇವಿಯನ್ನು ಧರಿಸಿರುತ್ತದೆ. ಆ ಶ್ರೀದೇವಿಯು ಶಚೀದೇವಿಯ ಸಂಪತ್ತಿನ ಗರ್ವವನ್ನು ನಾಶಮಾಡುವವಳೆಂದು ಪುರಾಣಗಳನ್ನೂ ಸ್ಮೃತಿಗಳನ್ನೂ ತಿಳಿದವರು ತಿಳಿಯುತ್ತಾರೆ. ಶಚಿಯ ಸಂಪತ್ತಿಗಿಂತಲೂ ಹೆಚ್ಚು ಸಂಪತ್ತುಳ್ಳವಳೆಂದು ಭಾವವು (ಒಬ್ಬಳು ಶ್ರೀದೇವಿಯು ಕಾಲಾಧೀನಳಾದರೆ ಆ ಸ್ಥಾನಕ್ಕೆ ಮತ್ತೋರ್ವಳು ಬಂದೇಬರುವಳು. ಈ ದೃಷ್ಟಿಯಿಂದ ಶ್ರೀದೇವಿಯು ನಿತ್ಯಳೆಂದು ಭಾವವು).

**ಮೂರ್ಧ್ನಿ ಪದ್ಮಹ್ರದೋಸ್ಯಾಸ್ತಿ [3]ಧೃತಶ್ರೀರ್ಬಹುವರ್ಣನಃ ।**
**ಪ್ರಸನ್ನವಾರಿರುತ್ಫುಲ್ಲಹೇಮಪಂಕಜಮಂಡನಃ ॥ ೧೨೦ ॥**

ಈ ಪರ್ವತದ ಶಿಖರದಲ್ಲಿ ಶ್ರೀದೇವಿಯನ್ನು ಹೊಂದಿರುವುದೂ ಅನೇಕ ವರ್ಣನೀಯ ವಿಷಯಗಳುಳ್ಳುದೂ ನಿರ್ಮಲವಾದ ನೀರುಳ್ಳುದೂ ಅರಳಿದ ಹೊಂದಾವರೆಗಳ ಅಲಂಕಾರವುಳ್ಳುದೂ ಆದ ಪದ್ಮಸರೋವರವಿರುತ್ತದೆ.

**ಹ್ರದಸ್ಯಾಸ್ಯ [4]ಪುರಃಪ್ರತ್ಯಕ್ತೋರಣದ್ವಾರನಿರ್ಗತೇ ।**
**ಗಂಗಾಸಿಂಧೂ ಮಹಾನದ್ಯೌ ಧತ್ತೇಯಂ ಧರಣೀಧರಃ ॥ ೧೨೧ ॥**

ಈ ಸರೋವರದ ಪೂರ್ವಪಶ್ಚಿಮದಿಕ್ಕುಗಳಲ್ಲಿರುವ ತೋರಣ ತೂಬುಗಳ ಬಾಗಿಲುಗಳಿಂದ ಹೊರಟಿರುವ ಗಂಗಾಸಿಂಧು ಮಹಾನದಿಗಳನ್ನು ಈ ಪರ್ವತವು ಧರಿಸಿರುತ್ತದೆ.

**ಸರಿತಂ ರೋಹಿತಾಸ್ಯಾಂ ಚ ದಧಾತ್ಯೇಷ ಶಿಲೋಚ್ಚಯಃ ।**
**[5]ತದುದಕ್ತೋರಣದ್ವಾರಾನ್ನಿಃಸೃತ್ಯೋ[6]ದಙ್ಮುಖೀಂ ಗತಾಮ್ ॥ ೧೨೨ ॥**

ಆ ಪದ್ಮಸರೋವರದ ಉತ್ತರದಿಕ್ಕಿನ ತೋರಣದ ಬಾಗಿಲಿನಿಂದ ಹೊರಟು ಉತ್ತರದಿಙ್ಮುಖವಾಗಿ ಹೋಗಿರುವ ರೋಹಿತಾಸ್ಯಾವೆಂಬ ನದಿಯನ್ನೂ ಈ ಪರ್ವತವು ಧರಿಸಿರುತ್ತದೆ.

**ಮಹಾಪಗಾಭಿರೇ[7]ತಾಭಿರಲಂಘ್ಯಾಭಿರ್ವಿಭಾತ್ಯಯಮ್ ।**
**ತಿಸೃಭಿಃ ಶಕ್ತಿಭಿಃ ಸ್ವಂ [8]ವಾ [9]ಭೂಭೃದ್ಭಾವಂ ವಿಭಾವಯನ್ ॥ ೧೨೩ ॥**

ಈ ಪರ್ವತವು ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿಗಳೆಂಬ ಮೂರು ಶಕ್ತಿಗಳಿಂದ ತನ್ನ ದೊರೆತನವನ್ನು ಪರಿಭಾವಿಸುತ್ತಿದೆಯೋ ಎಂಬಂತೆ, ಇದು ದಾಟಲಶಕ್ಯವಾದ ಈ ಮೂರು ಮಹಾನದಿಗಳಿಂದ ಶೋಭಿಸುತ್ತದೆ.

**ಶಿಖರೈರೇಷ [10]ಕುತ್ಕೀಲಃ ಕೀಲಯನ್ನಿವ ಖಾಂಗಣಮ್ ।**
**[11]ಸಿದ್ಧಾಧ್ವಾನಂ ರುಣದ್ಧೀ[12]ದ್ಧೈಃ ಪರಾರ್ಧ್ಯೈರುದ್ಧದಿಙ್ಮುಖೈಃ॥ ೧೨೪ ॥**

ಈ ಪರ್ವತವು ಪ್ರಕಾಶಮಾನವೂ ಬಹುಮೂಲ್ಯವೂ ದಿಕ್ಕುಗಳನ್ನು ತಡೆದು-ವ್ಯಾಪಿಸಿರುವುವೂ ಆದ ಶಿಖರಗಳಿಂದ ಆಕಾಶಪ್ರದೇಶಕ್ಕೆ ಕೀಲುಗಳನ್ನು ಹೊಡೆದಂತೆ, ಸಿದ್ಧರೆಂಬ ದೇವತೆಗಳ ಸಂಚಾರಮಾರ್ಗವನ್ನು ಆವರಿಸಿಕೊಂಡಿರುತ್ತದೆ.

೧ ಶ್ರೀದೇವೀಂ. ೨ ಪುರಾಣಸ್ಮೃತಿವೇದಿನಃ. ೩ ಧೃತಾ ಶ್ರೀದೇವೀ ಯೇನ ಸಃ. ೪ ಪೂರ್ವ ಪಶ್ಚಿಮದಿಕ್ಸ್ಥತೋರಣ. ೫ ಪದ್ಮಸರೋವರಸ್ಯ ಉತ್ತರದಿಕ್ಸ್ಥತೋರಣ. ೬ ಉತ್ತರದಿಙ್ಮುಖೀಂ. ೭ ತಿಸೃಭಿಃ. ೮ ಇವ. ೯ ರಾಜತ್ವಂ. ೧೦ ಗಿರಿಃ. ೧೧ ದೇವಭೇದಮಾರ್ಗಂ. ೧೨ ದೀಪ್ತೈಃ,

**ಪರಶ್ಯತಮಿಹಾದ್ರೀಂದ್ರೇ ಸಂತ್ಯಾವಾಸಾಃ ಸುಧಾಶಿನಾಮ್ ।**
**ಯೇನಲ್ಪಾಂ [1]ಕಲ್ಪಜಾಂ ಲಕ್ಷ್ಮೀಂ ಹಸಂತೀವ ಸ್ವಸಂಪದಾ ॥ ೧೨೫ ॥**

ಈ ದೊಡ್ಡದಾದ ಪರ್ವತದಲ್ಲಿ, ಅಧಿಕವಾದ ಸ್ವರ್ಗಸಂಪತ್ತನ್ನು ತಮ್ಮ ಸಂಪತ್ತುಗಳಿಂದ ಪರಿಹಾಸ್ಯಮಾಡುತ್ತವೆಯೋ ಎಂಬಂತಿರುವ ದೇವತೆಗಳ ಅನೇಕ ವಾಸಸ್ಥಾನಗಳಿರುತ್ತವೆ.

**ಇತ್ಯನೇಕಗುಣೇಪ್ಯಸ್ಮಿನ್ ದೋಷೋಸ್ತ್ಯೇಕೋ ಮಹಾನ್ಗಿರೌ ।**
**[2]ಯತ್ಬರ್ಯಂತಗತಾನ್ ಧತ್ತೇ ಗುರುರ[3]ಪ್ಯಗುರುದ್ರುಮಾನ್॥ ೧೨೬ ॥**

ಹೀಗೆ ಅನೇಕ ಗುಣಗಳುಳ್ಳುದಾದರೂ ಈ ದೊಡ್ಡದಾದ ಪರ್ವತದಲ್ಲಿ ಒಂದು ದೋಷವಿರುತ್ತದೆ. ಅದಾವುದೆಂದರೆ:- ತಾನು ಗುರುವಾಗಿದ್ದರೂ ಸಮೀಪದಲ್ಲಿರುವ ಅಗುರುವೃಕ್ಷಗಳನ್ನು ಧರಿಸಿರುತ್ತದೆ ಅಂದರೆ ದೊಡ್ಡದಾದ ಪರ್ವತವು ಲಘುವಾದ ಮರಗಳನ್ನು ಹೊಂದಿರುತ್ತದೆಂಬುದು ವಿರೋಧವು. ಅಗುರುವೆಂಬ ಉತ್ತಮವಾದ ಚಂದನವೃಕ್ಷಗಳನ್ನು ಸಮೀಪದಲ್ಲಿ ಧರಿಸಿರುತ್ತದೆಂಬುದು ವಿರೋಧಪರಿಹಾರವು. (ಇದರಿಂದ ದೊಡ್ಡ ಮನುಷ್ಯರು ಅಲ್ಪಮನುಷ್ಯರನ್ನು ಸಮೀಪದಲ್ಲಿರಿಸಿಕೊಂಡಿರುವುದು ತಪ್ಪೆಂದೂ ಸೂಚಿತವಾಗುವುದು).

**ಅಲಂಘ್ಯಮಹಿಮೋದಗ್ರೋ ಗರಿಮಾಕ್ರಾಂತವಿಷ್ಟಪಃ ।**
**ಜಗದ್ಗುರೋಃ [4]ಪುರೋ[5]ರಾಭಾಮಯಂ ಧತ್ತೇ ಧರಾಧರಃ ॥ ೧೨೭ ॥**

ಮೀರಲಶಕ್ಯವಾದ ಮಹಿಮೆಯಿಂದ ಶ್ರೇಷ್ಠವೂ ತನ್ನ ಗುರುತ್ವ(ಭಾರ)ದಿಂದ ಲೋಕವನ್ನು ಆಕ್ರಮಿಸಿರುವುದೂ ಆದ ಈ ಪರ್ವತವು ಜಗದ್ಗುರುವಾದ ವೃಷಭಸ್ವಾಮಿಯ ಸಾದೃಶ್ಯವನ್ನು ಧರಿಸಿರುತ್ತದೆ.''

**ಇತ್ಯಸ್ಯಾದ್ರೇಃ ಪರಾಂ ಶೋಭಾಂ [6]ಶಂಸತ್ಯುಚ್ಚೈಃ ಪುರೋಧಸಿ ।**
**ಪ್ರಶಶಂಸ ತಮದ್ರೀಂದ್ರಂ ಸಂಪ್ರೀತೋ ಭರತಾಧಿಪಃ ॥ ೧೨೮ ॥**

ಈ ರೀತಿಯಾಗಿ ಪುರೋಹಿತನು ಈ ಹಿಮವತ್ಪರ್ವತದ ಉತ್ಕೃಷ್ಟವಾದ ಶೋಭೆಯನ್ನು ಬಹಳವಾಗಿ ಹೊಗಳುತ್ತಿರಲು ಭರತೇಶ್ವರನು ಸಂತುಷ್ಟನಾಗಿ ತಾನೂ ಆ ಪರ್ವತವನ್ನು ಹೊಗಳಿದನು.

**ಸ್ವಭುಕ್ತಿಕ್ಷೇತ್ರಸೀಮಾನಂ ಸೋ[7]ಭಿನಂದ್ಯ ಹಿಮಾಚಲಮ್ ।**
**[8]ಪ್ರತ್ಯಾವೃತತ್ಸ್ವಭುರ್ದ್ರಷ್ಟುಂ ವೃಷಭಾದ್ರಿಂ ಕುತೂಹಲಾತ್ ॥ ೧೨೯ ॥**

ಆ ಭರತೇಶ್ವರನು ತನ್ನ ಪರಿಪಾಲನೆಗೊಳಪಟ್ಟ ಕ್ಷೇತ್ರದ ಎಲ್ಲೆಯಾದ ಹಿಮವತ್ಪರ್ವತವನ್ನು ಹೊಗಳಿ ವೃಷಭಗಿರಿಯನ್ನು ನೋಡುವುದಕ್ಕೋಸ್ಕರ ಕುತೂಹಲದಿಂದ ಹಿಂದಿರುಗಿದನು.

**[9]ಯೋ ಯೋಜನಶತೋಚ್ಛ್ರಾಯೋ ಮೂಲೇ ತಾವಚ್ಚ ವಿಸ್ತೃತಃ ।**
**ತದರ್ಧವಿಸ್ತೃತಿರ್ಮೂರ್ಧ್ನಿ ಭುವೋ [10]ಮೌಲಿರಿವೋದ್ಗತಃ ॥ ೧೩೦ ॥**

ನೂರು ಯೋಜನ ಉನ್ನತವೂ ಬುಡದಲ್ಲಿ ನೂರುಯೋಜನ ವಿಸ್ತಾರವೂ ತುದಿಯಲ್ಲಿ ಐವತ್ತು ಯೋಜನ ವಿಸ್ತಾರವೂ ಆದ ಆ ಪರ್ವತವು, ಭೂಮಿಯ ಕಿರೀಟವೋ ಎಂಬಂತೆ, ಎದ್ದಿದೆ.

**ಯಸ್ಯೋತ್ಸಂಗಭುವೋ ರಮ್ಯಾಃ ಕದಲೀಷಂಡಮಂಡಿತೈಃ ।**
**ಸಂಭೋಗಾಯ ನ ಭೋಗಾನಾಂ [11]ಕಲ್ಪಂತೇ ಸ್ಮ ಲತಾಲಯೈಃ ॥**

೧ ಸ್ವರ್ಗಜಾಂ. ೨ ಯಸ್ಮಾತ್ಕಾರಣಾತ್. ೩ ಕಾಲಾಗುರುತರೂನ್, ಲಘುತರೂನಿತಿ ಧ್ವನಿಃ. ೪ ಶ್ರೀವೃಷಭಸ್ಯ. ೫ ಉಪಮಾಂ. ೬ ಸ್ತುತಿಂ ಕುರ್ವತಿ ಸತಿ. ೭ ಪ್ರಶಸ್ಯ. ೮ ವ್ಯಾಘುಟಿತವಾನ್. ೯ ವೃಷಭಗಿರಿಃ. ೧೦ ಕಿರೀಟಂ. ೧೧ ಸಮರ್ಥಾ ಭವಂತಿ.

ಬಾಳೆಯ ಗಿಡಗಳ ಸಮೂಹಗಳಿಂದ ಅಲಂಕೃತಗಳಾದ ಲತಾಮಂಟಪಗಳಿಂದ ರಮಣೀಯಗಳಾದ ಆ ವೃಷಭಾದ್ರಿಯ ತಪ್ಪಲುಗಳು ದೇವತೆಗಳ ಮತ್ತು ವಿದ್ಯಾಧರರ ಕ್ರೀಡೆಗೆ ಸಮರ್ಥಗಳಾಗಿವೆ. ಯೋಗ್ಯವಾಗಿವೆಯೆಂದರ್ಥವು.

**[೧]ಸನಾಗಮಸನಾಗೈಶ್ಚ ಸಪುನ್ನಾಗೈಃ ಪರಿಷ್ಕೃತಮ್ ।**
**ಯದುಪಾಂತೇ ವನಂ ಸೇವ್ಯಂ ಮುಚ್ಯತೇ ಜಾತು ನಾಮರೈಃ ॥ ೧೩೩ ॥**

ನಾಗಸಂಪಿಗೆ ಮರಗಳುಳ್ಳುದೂ ಹೊನ್ನೆಮರಗಳಿಂದಲೂ ಸುರಹೊನ್ನೆಮರಗಳಿಂದ ಯುಕ್ತವೂ ಆದ ವನವು ಈ ಪರ್ವತದ ಸಮೀಪದಲ್ಲಿ ಉಪಭೋಗ–ಕ್ರೀಡಾ ಯೋಗ್ಯವಾಗಿರುವುದು. ದೇವತೆಗಳು ಎಂದೂ ಇದನ್ನು ಬಿಡುವುದಿಲ್ಲ.

**ಸ್ವತಟಸ್ಫಟಿಕೋತ್ಸರ್ಪತ್ಪ್ರಭಾ[೨]ದಿಗ್ಧಹರಿನ್ಮುಖಮ್ ।**
**ಶರದಭ್ರೈರಿವಾ[೩]ರಬ್ಧವಪುಷಂ ಸನಭೋಜುಷಮ್ ॥ ೧೩೪ ॥**

**ತಂ ಶೈಲಂ ಭುವನಸ್ಯೈಕಂ [೪]ಲಲಾಮೇವ ನಿರೂಪಯನ್ ।**
**[೫]ಕಲಯಾಮಾಸ ಲಕ್ಷ್ಮೀವಾನ್ಸ್ವಯಶಃ[೬]ಪ್ರತಿಮಾನಕಮ್ ॥ ೧೩೫ ॥**

ತನ್ನ ತಪ್ಪಲುಗಳಲ್ಲಿರುವ ಸ್ಫಟಿಕಶಿಲೆಗಳಿಂದ ಹೊರಡುತ್ತಿರುವ ಪ್ರಭೆಯಿಂದ ದಿಕ್ಕುಗಳನ್ನು ವ್ಯಾಪಿಸಿರುವುದೂ ಶರತ್ಕಾಲದ ಮೇಘಗಳಿಂದ ಮಾಡಲ್ಪಟ್ಟ ಆಕಾರವುಳ್ಳುದಾಗಿದೆಯೋ ಎಂಬಂತಿರುವುದೂ ದೇವತೆಗಳ ವಾಸಸ್ಥಾನಗಳುಳ್ಳುದೂ ಲೋಕಕ್ಕೆ ಮುಖ್ಯವಾದ ತಿಲಕದಂತಿರುವುದೂ ಆದ ಆ ಪರ್ವತವನ್ನು ನೋಡಿ ಭರತೇಶ್ವರನು ಅದು ತನ್ನ ಯಶಸ್ಸಿಗೆ ಸದೃಶವಾದುದೆಂದು ತಿಳಿದನು.

**ತ[೭]ಮೇಕಪಾಂಡರಂ ಶೈಲಮಾಕಲ್ಪಾಂತಮನಶ್ವರಮ್ ।**
**ಸ್ವಯಶೋರಾಶಿ[೮]ನೀಕಾಶಂ ಪಶ್ಯನ್ನಭಿನನಂದ ಸಃ ॥ ೧೩೬ ॥**

ಭರತೇಶ್ವರನು ಅತಿ ಶುಭ್ರವೂ ಕಲ್ಪಾಂತಕಾಲದವರೆಗೂ ನಾಶವಾಗದಿರುವುದೂ ತನ್ನ ಯಶಸ್ಸಿನ ರಾಶಿಗೆ ಸಮಾನವೂ ಆದ ಆ ಪರ್ವತವನ್ನು ನೋಡಿ ಸಂತೋಷಪಟ್ಟನು.

**ಸೋಚಲಃ ಪ್ರಭುಮಾಯಾಂತ[೯]ಮಾಯಾಂತಮಖಿಲದ್ವಿಷಾಮ್ ।**
**ಪ್ರತ್ಯಗ್ರಹೀದಿವಾಭ್ಯೇತ್ಯ [೧೦]ವಿಷ್ವಗ್ದ್ರ್ಯಗ್ಭಿರ್ವನಾನಿಲೈಃ ॥ ೧೩೭ ॥**

ಆ ಪರ್ವತವು ಸಮಸ್ತ ಶತ್ರುಗಳ ಪುಣ್ಯವನ್ನೆಲ್ಲ ನಾಶಮಾಡುವವನೂ ತನ್ನ ಬಳಿಗೆ ಬರುತ್ತಿರುವವನೂ ಆದ ಪ್ರಭುವನ್ನು, ಸುತ್ತಲೂ ಬೀಸುವ ವನದ ಗಾಳಿಗಳಿಂದ ಮುಂದೆ ಹೋಗಿ, ಇದಿರ್ಗೊಳ್ಳುವಂತಿದ್ದಿತು.

**ತತ್ತಟೋಪಾಂತವಿಶ್ರಾಂತಖಚರೋರಗಕಿನ್ನರೈಃ ।**
**ಪ್ರೋದ್ಗೀಯಮಾನಮಮಲಂ [೧೧]ಶುಶ್ರುವೇ ಸ್ವಯಶೋ[೧೨]ಮುನಾ ॥**

ಭರತೇಶ್ವರನು ಆ ಪರ್ವತದ ತಪ್ಪಲುಗಳಲ್ಲಿ ವಿಶ್ರಮಿಸಿರುವ ವಿದ್ಯಾಧರರೂ ನಾಗದೇವತೆಗಳೂ ಕಿನ್ನರರೂ ಗಟ್ಟಿಯಾಗಿ ಹಾಡಿದ ತನ್ನ ನಿರ್ಮಲವಾದ ಯಶಸ್ಸನ್ನು ಕೇಳಿದನು. ತನ್ನ ನಿರ್ಮಲ ಯಶೋಗಾನವನ್ನು ಕೇಳಿದನೆಂದರ್ಥವು.

**ಜಯಲಕ್ಷ್ಮೀಮುಖಾಲೋಕಮಂಗಲಾದರ್ಶವಿಭ್ರಮಾಃ ।**
**ತತ್ತಟೀಭಿತ್ತಯೋ ಜಹ್ರುರ್ಮನೋಸ್ಯ ಸ್ಫಟಿಕಾಮಲಾಃ ॥ ೧೩೯ ॥**

ಜಯಲಕ್ಷ್ಮಿಯು ತನ್ನ ಮುಖವನ್ನು ನೋಡಿಕೊಳ್ಳುವ ಮಂಗಲಕರವಾದ ಕನ್ನಡಿಯ ಶೋಭೆಯುಳ್ಳುವೂ ಸ್ಫಟಿಕಶಿಲೆಯಂತೆ ನಿರ್ಮಲವೂ ಆದ ಆ ಪರ್ವತದ ಗೋಡೆಗಳಂತಿರುವ ತಪ್ಪಲುಗಳು ಈ ಭರತೇಶ್ವರನ ಮನಸ್ಸನ್ನು ಅಪಹರಿಸಿದುವು. ತಪ್ಪಲುಗಳು ಮನೋಹರವಾಗಿದ್ದುವೆಂದರ್ಥವು.

**ಅಧಿಮೇಖಲ[೧]ಮಸ್ಯಾಸೀಚ್ಛಿಲಾಭಿತ್ತಿಷು ಚಕ್ರಿಣಃ ।**
**ಸ್ವನಾಮಾಕ್ಷರವಿನ್ಯಾಸೇ [೨]ಧೃತಿ[೩]ರ್ವಿಶ್ವಕ್ಷಮಾಜಿತಃ ॥ ೧೪೦ ॥**

ಸಕಲ ಭೂಮಿಯನ್ನು ಜಯಿಸಿದ ಚಕ್ರವರ್ತಿಗೆ ಈ ಪರ್ವತದ ಮೇಲಿನ ತಪ್ಪಲಿನಲ್ಲಿರುವ ಕಲ್ಲಿನ ಗೋಡೆಗಳಲ್ಲಿ ತನ್ನ ಹೆಸರಿನ ಅಕ್ಷರಗಳನ್ನು ಕೆತ್ತಬೇಕೆಂಬ ಇಚ್ಛೆಯುಂಟಾಯಿತು.

**ಕಾಕಿಣೀರತ್ನಮಾದಾಯ ಯದಾ [೪]ಲಿಲಿಖಿಷತ್ಯಯಮ್ ।**
**ತದಾ [೫]ರಾಜಸಹಸ್ರಾಣಾಂ ನಾಮಾನ್ಯತ್ರೈಕ್ಷತಾಧಿರಾಟ್ ॥ ೧೪೧ ॥**

ಈ ಭರತಚಕ್ರೇಶ್ವರನು ಕಾಕಿಣೀರತ್ನವನ್ನು ತೆಗೆದುಕೊಂಡು ಬರೆಯುವುದಕ್ಕೆ ಇಚ್ಛಿಸಿದಾಗ ಅಲ್ಲಿ ಅಪರಿಮಿತರಾಜರುಗಳ ಹೆಸರುಗಳನ್ನು ನೋಡಿದನು.

**ಅಸಂಖ್ಯಕಲ್ಪಕೋಟೀಷು ಯೇತಿಕ್ರಾಂತಾ ಧರಾಭುಜಃ ।**
**ತೇಷಾಂ ನಾಮಭಿರಾಕೀರ್ಣಂ ತಂ ಪಶ್ಯನ್ಸ ವಿಸಿಷ್ಮಿಯೇ ॥ ೧೪೨ ॥**

ಭರತೇಶ್ವರನು ಅಸಂಖ್ಯಾತಕೋಟಿಕಲ್ಪಕಾಲಗಳಲ್ಲಿ ಎಷ್ಟು ಮಂದಿ ರಾಜರುಗಳು ಕಳೆದುಹೋಗಿದ್ದರೋ ಅವರುಗಳ ಹೆಸರುಗಳಿಂದ ವ್ಯಾಪ್ತವಾದ ಆ ವೃಷಭಾದ್ರಿಯನ್ನು ನೋಡಿ ಆಶ್ಚರ್ಯಪಟ್ಟನು.

**ತತಃ ಕಿಂಚಿತ್ಸ್ಖಲದ್ಗರ್ವೋ [೬]ವಿಲಕ್ಷೀಭೂಯ ಚಕ್ರಿರಾಟ್ ।**
**ಅನನ್ಯಶಾಸನಾಮೇನಾಂ ನ ಮೇನೇ ಭರತಾವನಿಮ್ ॥ ೧೪೩ ॥**

ತರುವಾಯ ಚಕ್ರೇಶ್ವರನ ಗರ್ವವು ಸ್ವಲ್ಪ ನಷ್ಟವಾಗಲು ಅವನು ಆಶ್ಚರ್ಯಪಟ್ಟು ಈ ಭಾರತಭೂಮಿಯು ಬೇರೆಯವರಿಂದ ಆಳಲ್ಪಟ್ಟುದಲ್ಲವೆಂದು ತಿಳಿಯಲಿಲ್ಲ. ಆಳಲ್ಪಟ್ಟುದೆಂದು ತಿಳಿದನೆಂದು ಭಾವವು.

**ಸ್ವಯಂ ಕಸ್ಯಚಿದೇಕಸ್ಯ [೭]ನಿರಸ್ಯನ್ನಾಮಶಾಸನಮ್ ।**
**ಸ ಮೇನೇ ನಿಖಿಲಂ [೮]ಲೋಕಂ ಪ್ರಾಯಃ ಸ್ವಾರ್ಥಪರಾಯಣಮ್ ॥**

ಭರತೇಶ್ವರನು ಯಾವನೋ ಒಬ್ಬನ ಹೆಸರಿನ ಶಾಸನವನ್ನು ತಾನು ಉಜ್ಜಿ–ಕೆಡಿಸಿ ಪ್ರಾಯಶಃ ಲೋಕವೆಲ್ಲವು ಸ್ವಪ್ರಯೋಜನದಲ್ಲಿ ಆಸಕ್ತಿಯುಳ್ಳುದೆಂದು ತಿಳಿದನು.

**ಅಥ ತತ್ರ ಶಿಲಾಪಟ್ಟೇ ಸ್ವಹಸ್ತತಲ[೯]ನಿಸ್ತುಲೇ ।**
**ಪ್ರಶಸ್ತಿಮಿತ್ಯುದಾತ್ತಾರ್ಥಾಂ ವ್ಯಲಿಖತ್ಸ ಯಶೋಧನಃ ॥ ೧೪೫ ॥**

ತರುವಾಯ ಯಶಸ್ಸೇ ಧನವಾಗಿರುವ ಆ ಭರತೇಶ್ವರನು ತನ್ನ ಅಂಗೈಯಂತೆ ಚಪ್ಪಟೆಯಾಗಿರುವ ಕಲ್ಲಿನ ಹಲಗೆಯಲ್ಲಿ ಮುಂದೆ ಹೇಳುವ ಪ್ರಕಾರವಾಗಿ ಗಂಭೀರಾರ್ಥವುಳ್ಳ ಪ್ರಶಸ್ತಿಯನ್ನು ಬರೆದನು.

**ಸ್ವಸ್ತೀಕ್ಷ್ವಾಕುಕುಲವ್ಯೋಮತಲಪ್ರಾಲೇಯದೀಧಿತಿಃ ।**
**[೧೦]ಚಾತುರಂತಮಹೀಭರ್ತಾ ಭರತಃ [೧೧]ಶಾತಮಾತರಃ ॥ ೧೪೬ ॥**

“ಸ್ವಸ್ತಿ–ಮಂಗಲವು. ಇಕ್ಷ್ವಾಕುವಂಶವೆಂಬ ಆಕಾಶಕ್ಕೆ ಚಂದ್ರನೂ ನಾಲ್ಕು ದಿಕ್ಕುಗಳ ಭೂಮಿಗಳಿಗೆ ಒಡೆಯನೂ ಭರತನೆಂದು ಹೆಸರುಳ್ಳವನೂ ನೂರುಮಕ್ಕಳ ತಾಯಿಯ ಮಗನೂ

೧ ನಾಗಕೇಸರಸಹಿತಂ. ೨ ಲಿಪ್ತದಿಙ್ಮುಖಂ. ೩ ಘಟಿತ. ೪ ತಿಲಕಂ. ೫ ಅಮನ್ಯತ. ೬ ಸದೃಶಂ. ೭ ಕೇವಲಂ ಧವಲಂ. ೮ ಸಮಾನಂ. ೯ ಆಸಮಂತಾತ್ ಅಯಃ - ಆಯಸ್ತಸ್ಯ ಅಂತಃ - ಅಂತಕಃ, ಸಮಂತಾತ್ಪುಣ್ಯನಾಶಕಮಿತ್ಯರ್ಥಃ. ೧೦ ಸಮಂತಾತ್ಪ್ರಸಾರಿಭಿಃ. ೧೧ ಶ್ರೂಯತೇ ಸ್ಮ. ೧೨ ಚಕ್ರಿಣಾ.

೧ ಹಿಮವದ್ಗಿರೇಃ. ೨ ಸಂತೋಷಃ. ೩ ಸಕಲಮಹೀಜಯಿನಃ. ೪ ಲಿಖಿತುಮಿಚ್ಛತಿ. ೫ ಅಪರಿಮಿತ ರಾಜಾನಾಂ. ೬ ವಿಸ್ಮಯಾನ್ವಿತೋ ಭೂತ್ವಾ. ೭ ಘರ್ಷಯನ್. ೮ ಜನಂ. ೯ ವರ್ತುಲೇ, ಸಮತಲೇ ಇತ್ಯರ್ಥಃ. ೧೦ ಚತುರ್ದಿಕ್ಪ್ರಭವಾ. ೧೧ ಶತಸ್ಯ ಮಾತಾ ಶತಮಾತಾ, ತಸ್ಯಾ ಅಪತ್ಯಂಪುಮಾನ್.

**ಶ್ರೀಮಾನಾನಮ್ರನಿಃಶೇಷಖಚರಾಮರಭೂಚರಃ ।**
**[೧]ಪ್ರಾಜಾಪತ್ಯೋ ಮನುರ್ಮಾನ್ಯಃ ಶೂರಃ ಶುಚಿರುದಾರಧೀಃ ॥ ೧೪೭ ॥**

ಐಶ್ವರ್ಯವಂತನೂ ಸಮಸ್ತ ವಿದ್ಯಾಧರರನ್ನೂ ದೇವತೆಗಳನ್ನೂ ಮನುಷ್ಯರನ್ನೂ ಎರಗಿಸಿಕೊಳ್ಳುವವನೂ ಪ್ರಜಾಧಿಪತಿಯಾದ ವೃಷಭಸ್ವಾಮಿಯ ಪುತ್ರನೂ ಮನನ ಶೀಲನೂ ಮಾನನೀಯನೂ ಶೂರನೂ ಪವಿತ್ರನೂ ಉದಾರವಾದ ಬುದ್ಧಿಯುಳ್ಳವನೂ

**ಚರಮಾಂಗಧರೋ ಧೀರೋ [೨]ಧೌರೇಯಶ್ಚಕ್ರಧಾರಿಣಾಮ್ ।**
**ಪರಿಕ್ರಾಂತಂ ಧರಾಚಕ್ರಂ ಜಿಷ್ಣುನಾ ಯೇನ ದಿಗ್ಜಯೇ ॥ ೧೪೮ ॥**

ಅಂತಿಮಶರೀರಧಾರಿಯೂ ಧೀರನೂ ಚಕ್ರವರ್ತಿಗಳಲ್ಲಿ ಮುಖ್ಯನೂ ದಿಗ್ವಿಜಯ ಕಾಲದಲ್ಲಿ ಜಯಶೀಲನಾಗಿ ಭೂಮಂಡಲವನ್ನು ಸಂಚರಿಸಿದವನೂ

**ಯಸ್ಯಾಷ್ಟಾದಶಕೋಟ್ಯೋಶ್ವಾ ಜಲಸ್ಥಲವಿಲಂಘಿನಃ ।**
**ಲಕ್ಷಾಶ್ಚತುರಶೀತಿಶ್ಚ ಮದೇಭಾ ಜಯಸಾಧನೇ ॥ ೧೪೯ ॥**

ನೀರಿನಲ್ಲಿಯೂ ನೆಲದಲ್ಲಿಯೂ ಹಾರಬಲ್ಲ ಹದಿನೆಂಟುಕೋಟಿ ಕುದುರೆಗಳುಳ್ಳವನೂ ಜಯಸಾಧನದಲ್ಲಿ ಉಪಯೋಗವಾಗುವ ಇಪ್ಪತ್ತನಾಲ್ಕುಲಕ್ಷ ಮದಗಜಗಳುಳ್ಳವನೂ

**ಯಸ್ಯ ದಿಗ್ವಿಜಯೇ ವಿಷ್ವಗ್ಬಲರೇಣುಭಿರುತ್ಥಿತೈಃ ।**
**ಸದಿಙ್ಮುಖಂ ಖಮಾರುದ್ಧಂ ಕಪೋತಗಲಕರ್ಬುರೈಃ ॥ ೧೫೦ ॥**

ಯಾವನ ದಿಗ್ವಿಜಯದಲ್ಲಿ ಎಲ್ಲಾಕಡೆಗಳಲ್ಲಿಯೂ ಎದ್ದಿರುವ ಮತ್ತು ಪಾರಿವಾಳದ ಕೊರಳಿನಂತೆ ಚಿತ್ರವಾದ ಬಣ್ಣವುಳ್ಳ ಸೈನ್ಯಧೂಳುಗಳಿಂದ ದಿಕ್ಕುಗಳು ಸಮೇತವಾದ ಆಕಾಶವು ವ್ಯಾಪ್ತವಾಗಿರುವುದೋ

**ಪ್ರಸಾಧಿತದಿಶೋ ಯಸ್ಯ ಯಶಃ ಶಶಿಕಲಾಮಲಮ್ ।**
**ಸುರೈರಸಕೃದುದ್ಗೀತಂ [೩]ಕುಲಕ್ಷ್ಮೋಣೀಧ್ರಕುಕ್ಷಿಷು ॥ ೧೫೧ ॥**

ದಿಕ್ಕುಗಳನ್ನು ಜಯಿಸಿದ ಯಾವನ ಚಂದ್ರಕಿರಣದಂತೆ ನಿರ್ಮಲವಾದ ಕೀರ್ತಿಯನ್ನು ದೇವತೆಗಳು ಕುಲಪರ್ವತಪ್ರದೇಶಗಳಲ್ಲಿ ಪುನಃಪುನಃ ಹಾಡಿದರೋ

**ದಿಗ್ಜಯೇ ಯಸ್ಯ ಸೈನ್ಯಾನಿ ವಿಶ್ರಾಂತಾನ್ಯಧಿದಿಕ್ತಟಮ್ ।**
**[೪]ಚಕ್ರಾನುಭ್ರಾಂತಿತಾಂತಾನಿ ಕ್ರಾಂತ್ವಾ ಹೈಮವತೀಸ್ತಟೀಃ ॥ ೧೫೨ ॥**

ದಿಗ್ವಿಜಯದಲ್ಲಿ ಚಕ್ರರತ್ನವನ್ನು ಹಿಂಬಾಲಿಸಿ ನಡೆದು ದಣಿದ ಯಾವನ ಸೈನ್ಯಗಳು ಹಿಮವತ್ಪರ್ವತದ ತಪ್ಪಲುಗಳನ್ನು ದಾಟಿ ದಿಕ್ಕುಗಳ ಕೊನೆಗಳಲ್ಲಿ ವಿಶ್ರಾಂತಿಯನ್ನು ಹೊಂದಿದುವೋ

**ನಪ್ತಾ ಶ್ರೀನಾಭಿರಾಜಸ್ಯ ಪುತ್ರಃ ಶ್ರೀವೃಷಭೇಶಿನಃ ।**
**ಷಟ್ಖಂಡಮಂಡಿತಾಮೇನಾಂ ಯಃ ಸ್ಮ ಶಾಸ್ತ್ಯಖಿಲಾಂ ಮಹೀಮ್ ॥**

ಶ್ರೀ ನಾಭಿರಾಜಮನುವಿನ ಮೊಮ್ಮಗನೂ ಶ್ರೀವೃಷಭಸ್ವಾಮಿಯ ಮಗನೂ ಆದ ಯಾವನು ಷಟ್ಖಂಡಗಳಿಂದ ಕೂಡಿದ ಈ ಸಮಸ್ತಭೂಮಂಡಲವನ್ನು ಆಳಿದನೋ

**ಮತ್ವಾಸೌ [೫]ಗತ್ವರೀಂ ಲಕ್ಷ್ಮೀಂ [೬]ಜಿತ್ವರಃ ಸರ್ವಭೂಭೃತಾಮ್ ।**
**ಜಗ[೭]ದ್ವಿಸೃತ್ವರೀಂ ಕೀರ್ತಿಮತಿಷ್ಠಿಪದಿಹಾಚಲೇ ॥ ೧೫೪ ॥**

ಸಮಸ್ತರಾಜರುಗಳನ್ನು ಜಯಿಸುವ ಈ ಭರತೇಶ್ವರನು ಐಶ್ವರ್ಯವು ಅಸ್ಥಿರವಾದುದೆಂದು ತಿಳಿದು ಲೋಕದಲ್ಲಿ ವ್ಯಾಪಿಸುವ ಸ್ವಭಾವವುಳ್ಳ ಕೀರ್ತಿಯನ್ನು ಈ ಪರ್ವತದಲ್ಲಿ ಸ್ಥಾಪಿಸಿದನು.''

೧ ಪ್ರಜಾಪತೇಃ ಪುರೋರಪತ್ಯಂ ಪುಮಾನ್. ೨ ಮುಖ್ಯಃ. ೩ ಕುಲಗಿರಿಪ್ರದೇಶೇಷು. ೪ ಚಕ್ರಾನುಗಮನೇನ. ೫ ಗಮನಶೀಲಾಂ. ೬ ಜಯಶೀಲಃ. ೭ ವಿಸರಣಶೀಲಾಂ.

**ಇತಿ ಪ್ರಶಸ್ತಿಮಾತ್ಮೀಯಾಂ ವಿಲಿಖನ್ನ್ಯಯಮಕ್ಷರೈಃ ।**
**ಪ್ರಸೂನಪ್ರಕರೈರ್ಮುಕ್ತೈರ್ನೃಪೋ [೧]ವಚಕಿರೇಮರೈಃ ॥ ೧೫೫ ॥**

ಈ ಪ್ರಕಾರವಾಗಿ ಭರತೇಶ್ವರನು ತನ್ನ ಪ್ರಶಸ್ತಿಯನ್ನು ಅಕ್ಷರಗಳಿಂದ ಕೆತ್ತಿ–ಬರೆದನು. ಆಗ ದೇವತೆಗಳು ಸುರಿದ ಹೂವುಗಳ ಸಮೂಹಗಳಿಂದ ಭರತರಾಜನು ವ್ಯಾಪ್ತನಾದನು.

**ತದೋಚ್ಚೈರುಚ್ಚರದ್ಧ್ವಾನಾ ಮಂದ್ರದುಂದುಭಯೋಧ್ವನನ್ ।**
**ದಿವಿ ದೇವಾ ಜಯೇತ್ಯಾಶೀಃ ಶತಾನ್ಯುಚ್ಚೈರಘೋಷಯನ್ ॥ ೧೫೬ ॥**

ಆಗ ಆಕಾಶದಲ್ಲಿ ಗಂಭೀರವಾಗಿ ಧ್ವನಿಮಾಡುತ್ತಿರುವ ಭೇರಿಗಳು ಗಟ್ಟಿಯಾಗಿ ಶಬ್ದಮಾಡಿದುವು. ದೇವತೆಗಳು ''ಜಯ'' ಎಂಬ ಅನೇಕ ಆಶೀರ್ವಾದಗಳನ್ನು ಗಟ್ಟಿಯಾಗಿ ಉದ್ಘೋಷಿಸಿದರು.

**ಸ್ವರ್ಧುನೀಶೀಕರಾಸಾರವಾಹಿನೋ ಗಂಧವಾಹಿನಃ ।**
**ಮಂದಂ ವಿಚೇರುರಾಧೂತಸಾಂದ್ರ[೨]ಮಂದಾರನಂದನಾಃ ॥ ೧೫೭ ॥**

ಗಂಗಾನದಿಯ ಜಲಬಿಂದುಸಮೂಹವನ್ನು ತರುತ್ತಿರುವುವೂ ನಂದನವನದ ದಟ್ಟವಾದ ಕಲ್ಪವೃಕ್ಷಗಳನ್ನು ಕೊಡಹುತ್ತಿರುವುವೂ ಆದ ಗಾಳಿಗಳು ಮೆಲ್ಲನೆ ಬೀಸಿದುವು. ಶೈತ್ಯ ಸೌರಭ್ಯ ಮಾಂದ್ಯಗುಣಯುಕ್ತವಾದ ಗಾಳಿಗಳು ಬೀಸಿದುವೆಂದರ್ಥವು.

**ನ ಕೇವಲಂ [೩]ಶಿಲಾಭಿತ್ತಾವಸ್ಯ ನಾಮಾಕ್ಷರಾವಲೀ ।**
**ಲಿಖಿತಾನೇನ ಚಾಂದ್ರೇಪಿ ಬಿಂಬೇ [೪]ತಲ್ಲಾಂಛನಚ್ಛಲಾತ್ ॥ ೧೫೮ ॥**

''ಈ ಭರತೇಶ್ವರನು ತನ್ನ ಹೆಸರಿನ ಅಕ್ಷರಗಳ ಸಾಲನ್ನು ವೃಷಭಾದ್ರಿಯ ಗೋಡೆಯಲ್ಲೇ ಅಲ್ಲದೆ ಚಂದ್ರಲಾಂಛನದ ನೆವದಿಂದ ಚಂದ್ರಬಿಂಬದಲ್ಲಿಯೂ ಬರೆದನು.

**[೫]ಲಿಖಿತಂ ಸಾಕ್ಷಿಣೋ ಭುಕ್ತಿರಿತ್ಯಸ್ತೀ[೬]ಹಾಪಿ ಶಾಸನೇ ।**
**ಲಿಖಿತಂ ಸೋಚಲೋ ಭುಕ್ತಿರ್ದಿಗ್ಜಯಃ ಸಾಕ್ಷಿಣೋಮರಾಃ ॥ ೧೫೯ ॥**

ಶಾಸನವನ್ನು ಬರೆಯುವುದಕ್ಕೆ ಸಾಮಾನ್ಯವಾಗಿ ಪತ್ರವೂ ಸಾಕ್ಷಿಗಳೂ ಅನುಭೋಗವೂ ಬೇಕಾಗುತ್ತವೆ. ಅವು ಮೂರೂ ಈ ಭರತನ ಶಾಸನದಲ್ಲಿಯೂ ಇರುತ್ತವೆ–ವೃಷಭಗಿರಿಯು ಪತ್ರವಾಗಿದೆ. ದಿಗ್ವಿಜಯವು ಅನುಭೋಗವಾಗಿದೆ. ದೇವತೆಗಳು ಸಾಕ್ಷಿಗಳಾಗಿದ್ದಾರೆ.

**ಅಹೋ ಮಹಾನುಭಾವೋಯಂ ಚಕ್ರೀ ದಿಕ್ಚಕ್ರನಿರ್ಜಯೇ ।**
**ಯೇನಾಕ್ರಾಂತಂ ಮಹೀಚಕ್ರ[೭]ಮಾನಕ್ರವಸತಿತ್ರಿಕಾತ್ ॥ ೧೬೦ ॥**

ದಿಗ್ವಿಜಯದಲ್ಲಿ ಪೂರ್ವ ದಕ್ಷಿಣ ಪಶ್ಚಿಮಸಮುದ್ರಪರ್ಯಂತವಾದ ಭೂಮಂಡಲವನ್ನು ಆಕ್ರಮಿಸಿದ ಈ ಚಕ್ರವರ್ತಿಯು ಮಹಾಮಹಿಮೆಯುಳ್ಳವನು. ಆಶ್ಚರ್ಯ !

**ಖಚರಾದ್ರಿರಲಂಘ್ಯೋಪಿ ಹೇಲಯಾ ಲಂಘಿತೋಮುನಾ ।**
**ಕೀರ್ತಿಃ ಸ್ಥಲಾಬ್ಜಿನೀವಾಸ್ಯ ರೂಢಾ ಹೈಮಾಚಲಸ್ಥಲೇ ॥ ೧೬೧ ॥**

ಸಾಮಾನ್ಯಮನುಷ್ಯರಿಂದ ದಾಟಲಶಕ್ಯವಾದ ವಿಜಯಾರ್ಧಪರ್ವತವನ್ನೂ ಈ ಭರತೇಶ್ವರನು ಲೀಲೆಯಾಗಿ ದಾಟಿದನು. ಇವನ ಕೀರ್ತಿಯು, ನೆಲದಾವರೆಯಂತೆ, ಹಿಮವತ್ಪರ್ವತಸ್ಥಲದಲ್ಲಿ ಅಂಕುರಿತವಾಯಿತು.''

**ಇತಿ [೮]ದೃಷ್ಟಾಪದಾನಂ ತಂ ತುಷ್ಟುವುರ್ನಾಕಿನಾಯಕಾಃ ।**
**ದಿಷ್ಟ್ಯಾ ಸ್ಮ ವರ್ಧಯಂತ್ಯೇನಂ ಸಾಂಗನಾಶ್ಚ ನಭಶ್ಚರಾಃ ॥ ೧೬೨ ॥**

೧ ಆಕೀರ್ಣಃ. ೨ ಕಲ್ಪವೃಕ್ಷ. ೩ ವೃಷಭಗಿರಿಭಿತ್ತೌ. ೪ ಚಂದ್ರಲಾಂಛನವ್ಯಾಜಾತ್. ೫ ಪತ್ರಂ. ೬ ಭರತಶಾಸನೇಪಿ. ೭ ಪೂರ್ವದಕ್ಷಿಣಪಶ್ಚಿಮಸಮುದ್ರಪರ್ಯಂತಂ. ೮ ದೃಷ್ಟಸಾಮರ್ಥ್ಯಂ.

ಭರತೇಶ್ವರನ ಸಾಮರ್ಥ್ಯವನ್ನು ನೋಡಿದ ದೇವೇಂದ್ರರು ಈ ರೀತಿಯಾಗಿ ಅವನನ್ನು ಸ್ತುತಿಸಿದರು. ಪತ್ನೀಸಹಿತರಾದ ಖೇಚರರು ಭರತೇಶ್ವರನಿಗೆ ಭಾಗ್ಯವನ್ನು ಪ್ರಾರ್ಥಿಸಿದರು.

**ಭೂಯಃ ಪ್ರೋತ್ಸಾಹಿತೋ ದೇವೈರ್ಜಯೋದ್ಯೋಗ[1]ಮನೂನಯನ್ ।**
**ಗಂಗಾ[2]ಪಾತ[3]ಮಭೀಯಾಯ ವ್ಯಾಹೂತ ಇವ ತತ್ಸ್ವನೈಃ ॥ ೧೬೩ ॥**

ಮರಳಿ ದೇವತೆಗಳಿಂದ ಪ್ರೋತ್ಸಾಹಿಸಲ್ಪಟ್ಟ ಭರತೇಶ್ವರನು ದಿಗ್ವಿಜಯ ಕಾರ್ಯವನ್ನು ಪೂರ್ತಿಗೊಳಿಸುವವನಾಗಿ, ಗಂಗಾನದೀಪತನದ ಶಬ್ದಗಳಿಂದ ಕರೆಯಲ್ಪಟ್ಟವನಂತೆ, ಆ ನದಿಯು ದುಮುಕುವ ಕುಂಡಕ್ಕೆ ಇದಿರಾಗಿ ಹೋದನು.

**ಗಲದ್ಗಂಗಾಂಬುನಿಷ್ಠ್ಯೂತಾಃ ಶೀಕರಾ ಮದಶೀಕರೈಃ ।**
**[4]ಸಮ್ಮುಮೂರ್ಛುರ್ನೃಪೇಭಾನಾಂ [5]ವ್ಯಾತ್ಯುಕ್ಷೀಂ ವಾ [6]ತಿತಾಂಸವಃ ॥**

ಮೇಲಿಂದ ಬೀಳುತ್ತಿರುವ ಗಂಗಾನದಿಯ ನೀರಿನ ಹನಿಗಳು ದೊರೆಗಳ ಆನೆಗಳ ಮದಜಲದ ಹನಿಗಳೊಡನೆ ಪರಸ್ಪರ ಜಲಸೇಚನೆಯನ್ನು ವಿಸ್ತರಿಸುತ್ತವೋ ಎಂಬಂತೆ ಹರಡಿಕೊಂಡುವು.

**ಪತದ್ಗಂಗಾಜಲಾವರ್ತಪರಿವರ್ಧಿತಕೌತುಕಃ ।**
**ಪ್ರತ್ಯಾಗ್ರಾಹಿ ಸ ತತ್ಪಾತೇ ಗಂಗಾದೇವ್ಯಾ ಧೃತಾರ್ಘಯಾ ॥ ೧೬೫ ॥**

ಕೆಳಕ್ಕೆ ಬೀಳುತ್ತಿರುವ ಗಂಗಾನದಿಯ ನೀರಿನ ಸುಳಿಗಳನ್ನು ನೋಡಿ ಹೆಚ್ಚಾದ ಕುತೂಹಲವುಳ್ಳವನಾದ ಭರತೇಶ್ವರನನ್ನು, ಗಂಗಾದೇವಿಯು ಅರ್ಘ್ಯವನ್ನು ತೆಗೆದುಕೊಂಡು ಬಂದು, ಇದಿರ್ಗೊಂಡಳು.

**ಸಿಂಹಾಸನೇ ನಿವೇಶ್ಯೈನಂ ಪ್ರಾಙ್ಮುಖಂ ಸುಖಶೀತಲೈಃ ।**
**ಸಾಭ್ಯಷಿಂಚಜ್ಜಲೈರ್ಗಾಂಗೈಃ ಶಶಾಂಕಕರಹಾಸಿಭಿಃ ॥ ೧೬೬ ॥**

ಆ ಗಂಗಾದೇವಿಯು ಭರತೇಶ್ವರನನ್ನು ಪೂರ್ವಾಭಿಮುಖವಾಗಿ ಸಿಂಹಾಸನದಲ್ಲಿ ಕುಳ್ಳಿರಿಸಿ ಚಂದ್ರನ ಕಿರಣಗಳನ್ನು ಪರಿಹಾಸ್ಯಮಾಡುವುವೂ ಸುಖಕರವೂ ಶೀತಲವೂ ಆದ ಗಂಗಾನದೀಜಲಗಳಿಂದ ಅಭಿಷೇಕಮಾಡಿದಳು.

**ಕೃತಮಂಗಲಸಂಗೀತನಾಂದೀತೂರ್ಯರವಾಕುಲಮ್ ।**
**ನಿರ್ವರ್ತ್ಯ ಮಜ್ಜನಂ ಜಿಷ್ಣುರ್ಭೇಜೇ [7]ಮಂಡನಮಪ್ಯತಃ ॥ ೧೬೭ ॥**

ಜಯಶೀಲನಾದ ಭರತೇಶ್ವರನು ಮಂಗಲಗಾನ ಮಂಗಲಪದ್ಯಪಠನ ಮಂಗಲ ವಾದ್ಯಧ್ವನಿಗಳಿಂದ ಯುಕ್ತವಾದ ಸ್ನಾನಕಾರ್ಯವನ್ನು ಮುಗಿಸಿ ಗಂಗಾದೇವಿಯಿಂದ ಅಲಂಕಾರವನ್ನೂ ಹೊಂದಿದನು.

**ಅಥಾಸ್ಮೈ [8]ವ್ಯತರತ್ಸಾಂಶುರತ್ನಾಂಶುಸ್ಥಗಿತಾಂಬರಮ್ ।**
**ಸೇಂದ್ರಚಾಪಮಿವಾದ್ರೀಂದ್ರಶಿಖರಂ ಹರಿವಿಷ್ಟರಮ್ ॥ ೧೬೮ ॥**

ಆಮೇಲೆ ಗಂಗಾದೇವಿಯು ಈ ಭರತೇಶ್ವರನಿಗೆ ಶ್ರೇಷ್ಠವಾದ ರತ್ನಗಳ ಕಿರಣಗಳಿಂದ ವ್ಯಾಪ್ತವಾದ ಆಕಾಶವುಳ್ಳುದೂ ಇಂದ್ರಧನುಸ್ಸಿನೊಡನೆ ಕೂಡಿದ ಪರ್ವತ ಶಿಖರವೋ ಎಂಬಂತಿರುವುದೂ ಆದ ಸಿಂಹಾಸನವನ್ನು ಕೊಟ್ಟಳು.

**ಚಿರಂ ವರ್ಧಸ್ವ ವರ್ಧಿಷ್ಣೋ ಜೀವತಾನ್ನಂದತಾದ್ಭವಾನ್ ।**
**ಇತ್ಯನಂತರಮಾಶಾಸ್ಯ ತಿರೋಭೂತ್ಸಾ ವಿಸರ್ಜಿತಾ ॥ ೧೬೯ ॥**

ಅನಂತರದಲ್ಲಿ ಗಂಗಾದೇವಿಯು "ವೃದ್ಧಿಯನ್ನು ಹೊಂದುವ ಪ್ರಭುವೆ! ನೀನು ಬಹುಕಾಲದವರೆಗೆ ವೃದ್ಧಿಹೊಂದು; ಚಿರಕಾಲದವರೆಗೆ ಜೀವಿಸು; ದೀರ್ಘಕಾಲ ಪರ್ಯಂತ ಆನಂದವನ್ನು ಹೊಂದು" ಎಂಬುದಾಗಿ ಆಶೀರ್ವದಿಸಿ ಭರತೇಶ್ವರನಿಂದ ಬೀಳ್ಕೊಂಡು ಮರೆಯಾದಳು.

೧ ಅನೂನಂ ಕುರ್ವನ್. ೨ ಕುಂಡಂ. ೩ ಅಭಿಮುಖಮಗಚ್ಛತ್. ೪ ಪ್ರಸರಂತಿ ಸ್ಮ. ೫ ಪರಸ್ಪರಜಲಸೇಚನಂ. ೬ ವಿಸ್ತಾರಿತುಮಿಚ್ಛವಃ. ೭ ಅಲಂಕಾರಂ. ೮ ದದೌ.

**ಅನುಗಂಗಾತಟಂ ಸೈನ್ಯೈರಾವ್ರಜ[1]ನ್ವಿಷಯಾಧಿಪೈಃ ।**
**ನೃಷೇವಿ ಪವಮಾನೈಶ್ಚ ಗಂಗಾಂಬುಕಣವಾಹಿಭಿಃ ॥ ೧೭೦ ॥**

ತನ್ನ ಸೈನ್ಯಗಳೊಡನೆ ಗಂಗಾನದೀತೀರವನ್ನನುಸರಿಸಿ ಹೋಗುತ್ತಿರುವ ಭರತೇಶ್ವರನು ಆಯಾ ದೇಶಗಳ ರಾಜರುಗಳಿಂದಲೂ ಗಂಗಾನದಿಯ ಜಲಬಿಂದುಗಳೊಡನೆ ಬೀಸುತ್ತಿರುವ ಗಾಳಿಗಳಿಂದಲೂ ಸೇವಿಸಲ್ಪಟ್ಟನು. ದೇಶಾಧಿಪರೂ ಗಾಳಿಗಳೂ ಭರತರಾಜನ ಸೇವೆಯನ್ನು ಮಾಡಿದರೆಂದು ಭಾವವು.

**ಗಂಗಾತಟವನೋಪಾಂತನಿವೇಶೇಷು ವಿಶಾಂಪತಿಮ್ ।**
**[2]ಸುಖಯಾಮಾಸು[3]ರನ್ವೀಪಮಾಯಾತಾ ವನಮಾರುತಾಃ ॥ ೧೭೧ ॥**

ಗಂಗಾನದಿಯ ದಡದಲ್ಲಿರುವ ವನಗಳ ಸಮೀಪಪ್ರದೇಶಗಳಲ್ಲಿ ಅನುಕೂಲವಾಗಿ ಬೀಸುತ್ತಿದ್ದ ವನದ ಗಾಳಿಗಳು ಭರತರಾಜನಿಗೆ ಸುಖವನ್ನುಂಟುಮಾಡಿದುವು.

**ವನೇ ವನೇಚರಸ್ತ್ರೀಣಾ[4]ಮುದಸ್ಯನ್ನಲಕಾವಲೀಃ ।**
**ಮುಹುಃ ಸ್ಖಲನ್ಕಲಾಪೇಷು ನೃತ್ಯದ್ವನಶಿಖಂಡಿನಾಮ್ ॥ ೧೭೨ ॥**

**ವಿಲೋಲಿತಾಲಿರಾಧುನ್ವನ್ನುತ್ಫುಲ್ಲಾ ವನವಲ್ಲರೀಃ ।**
**ಗಿರಿನಿರ್ಝರಸಂಶ್ಲೇಷಶಿಶಿರೋ ಮರುದಾವವೌ ॥ ೧೭೩ ॥**

ವನದಲ್ಲಿ ಬೇಡರ ಹೆಂಗಸರ ತಲೆಗೂದಲುಗಳ ರಾಶಿಗಳನ್ನು ಅಲ್ಲಾಡಿಸುವುದೂ ನರ್ತನಮಾಡುವ ಕಾಡಿನ ನವಿಲುಗಳ ಗರಿಗಳಲ್ಲಿ ಬಾರಿಬಾರಿಗೆ ಹಾಯ್ದುಹೋಗುತ್ತಿರುವುದೂ ಭ್ರಮರಗಳನ್ನು ಚದುರಿಸಿದುದೂ ಅರಳಿದ ಕಾಡುಬಳ್ಳಿಗಳನ್ನು ಕುಲುಕುವುದೂ ಗಿರಿ ನದೀಪ್ರವಾಹಸಂಬಂಧದಿಂದ ಶೀತವೂ ಆದ ಗಾಳಿಯು ಬೀಸಿತು.

**ಪ್ರತಿಪ್ರಯಾಣಮಾನಮ್ರಾ ನೃಪಾಸ್ತದ್ದೇಶವಾಸಿನಃ ।**
**ಪ್ರಭುಮಾರಾಧಯಾಂಚಕ್ರುರಾಕ್ರಾಂತಾ ಜಯಸಾಧನೈಃ ॥ ೧೭೪ ॥**

ಭರತರಾಜನ ಪ್ರತಿಯೊಂದು ಪ್ರಯಾಣದಲ್ಲಿ ಅವನ ದಿಗ್ವಿಜಯಸಾಧನ–ಸೈನ್ಯಗಳಿಂದ ಆಕ್ರಮಿಸಲ್ಪಟ್ಟು ನಮ್ರರಾದ ಆ ದೇಶವಾಸಿಗಳಾದ ರಾಜರುಗಳು ಬಂದು ಪ್ರಭುವನ್ನು ಪೂಜಿಸಿದರು.

**ಕೃತ್ಸ್ನಾಮಿತಿ ಪ್ರಸಾಧ್ಯೈನಾಮುತ್ತರಾಂ ಭರತಾವನಿಮ್ ।**
**[5]ಪ್ರತ್ಯಾಸೀದದಥೋ ಜಿಷ್ಣುರ್ವಿಜಯಾರ್ಧಾಚಲಸ್ಥಲೀಃ ॥ ೧೭೫ ॥**

ಈ ರೀತಿಯಾಗಿ ಈ ಉತ್ತರ ಭೂಮಿಯನ್ನೆಲ್ಲ ಸಾಧಿಸಿ ಜಯಶೀಲನಾದ ಭರತೇಶ್ವರನು ಬಳಿಕ ವಿಜಯಾರ್ಧಪರ್ವತಪ್ರದೇಶಗಳಿಗೆ ಹಿಂದಿರುಗಿ ಬಂದನು.

**ತತ್ರಾವಾಸಿತಸೈನ್ಯಂ ಚ ಸೇನಾನ್ಯಂ ವಿಭುರಾದಿಶತ್ ।**
**[6]ಅಪಾವೃತಗುಹಾದ್ವಾರಃ [7]ಪ್ರಾಚ್ಯಖಂಡಂ ಜಯೇ[8]ತ್ಯರಮ್ ॥ ೧೭೬ ॥**

ಅಲ್ಲಿ ಸೈನ್ಯವನ್ನಿರಿಸಿಕೊಂಡಿದ್ದ ತನ್ನ ಸೇನಾಪತಿಗೆ ಭರತನಾಯಕನು ಗುಹೆಯ ಬಾಗಿಲನ್ನು ತೆರೆದು ಶೀಘ್ರವಾಗಿ ಪೂರ್ವಖಂಡವನ್ನು ಜಯಿಸೆಂದು ಅಪ್ಪಣೆ ಮಾಡಿದನು.

**ಯಾವದಭ್ಯೇತಿ ಸೇನಾನೀರ್ಮ್ಲೇಚ್ಛರಾಜಜಯೋದ್ಯಮಾತ್ ।**
**ತಾವತ್ಪ್ರಭೋಃ ಕಿಲಾತೀಯುರ್ಮಾಸಾಃ ಷಟ್ಸುಖ[9]ಮಂಗಿನಃ ॥ ೧೭೭ ॥**

ಆ ಪೂರ್ವಖಂಡದಲ್ಲಿ ಮ್ಲೇಚ್ಛರಾಜರನ್ನು ಜಯಿಸುವ ಕೆಲಸವನ್ನು ಪೂರ್ತಿ ಮಾಡಿಕೊಂಡು ಸೇನಾಪತಿಯು ಹಿಂದಿರುಗಿ ಬರುವಾಗ ಷಡಂಗಸಮೇತನಾಗಿದ್ದ ಭರತಪ್ರಭುವಿಗೆ ಅಲ್ಲಿ ಸುಖವಾಗಿ ಆರು ತಿಂಗಳುಗಳು ಕಳೆದುವಂತೆ.

೧ ದೇಶಾಧಿಪೈಃ. ೨ ಸುಖಂ ನಿನ್ಯುಃ. ೩ ಅನುಕೂಲತಾಂ. ೪ ಚಾಲಯನ್. ೫ ಪ್ರತ್ಯಾಗಚ್ಛತ್. ೬ ಉದ್ಘಾಟಿತ. ೭ ಪೂರ್ವಖಂಡಂ. ೮ ಶೀಘ್ರಂ. ೯ ಷಡಂಗವತಃ, ಸಂಗಿನ ಇತ್ಯಪಿ ಪಾಠಃ.

**ದಕ್ಷಿಣೋತ್ತರಯೋಃ ಶ್ರೇಣ್ಯೋರ್ನಿವಸಂತೋಂಬರೇಚರಾಃ ।**
**ವಿದ್ಯಾಧರಾಧಿಪೈಃ ಸಾರ್ಧಂ ಪ್ರಭುಂ ದ್ರಷ್ಟುಮಿಹಾಯಯುಃ ॥ ೧೭೮ ॥**

ವಿಜಯಾರ್ಧಪರ್ವತದ ದಕ್ಷಿಣೋತ್ತರಶ್ರೇಣಿಗಳಲ್ಲಿ ವಾಸವಾಗಿರುವ ಖೇಚರ–ವಿದ್ಯಾಧರರು ತಮ್ಮ ರಾಜರುಗಳೊಡನೆ ಭರತೇಶ್ವರನಲ್ಲಿಗೆ ಅವನನ್ನು ನೋಡುವುದಕ್ಕೋಸ್ಕರ ಬಂದರು.

**ವಿದ್ಯಾಧರಧರಾಧೀಶೈರಾರಾದಾನಮ್ರಮೌಲಿಭಿಃ ।**
**ನಖಾಂಶುಮಾಲಿಕಾವ್ಯಾಜಾದಾಜ್ಞಾಸ್ಯ ಶಿರಸಾ ಧೃತಾ ॥ ೧೭೯ ॥**

ದೂರದಿಂದ ತಲೆಯನ್ನು ಬಗ್ಗಿಸಿದ ಆ ವಿದ್ಯಾಧರರಾಜರುಗಳು ಈ ಭರತೇಶ್ವರನ ಕಾಲುಗುರುಗಳ ಕಿರಣಸಮೂಹವನ್ನು ತಲೆಯಲ್ಲಿ ಧರಿಸುವ ನೆವದಿಂದ ಇವನ ಅಪ್ಪಣೆಯನ್ನು ಧರಿಸಿದರು. ಅಧೀನರಾದರೆಂದರ್ಥವು.

**ನಮಿಶ್ಚ ವಿನಮಿಶ್ಚೈನಂ ವಿದ್ಯಾಧರಧರಾಧಿಪೌ ।**
**ಸ್ವಸಾರಧನಸಾಮಗ್ರ್ಯಾ ವಿಭುಂ ದ್ರಷ್ಟುಮುಪೇಯತುಃ ॥ ೧೮೦ ॥**

ವಿದ್ಯಾಧರಾಧಿಪತಿಗಳಾದ ನಮಿಯೂ ವಿನಮಿಯೂ ತಮ್ಮ ಉತ್ತಮವಾದ ಪದಾರ್ಥಗಳೊಡನೆ ಈ ಭರತೇಶ್ವರನನ್ನು ನೋಡುವುದಕ್ಕೋಸ್ಕರ ಬಂದರು.

**ವಿದ್ಯಾಧರಧರಾಸಾರಧನೋಪಾಯನಸಂಪದಾ ।**
**ತದುಪಾನೀತಯಾನನ್ಯಲಭ್ಯಯಾಸೀದ್ವಿಭೋರ್ಧೃತಿಃ ॥ ೧೮೧ ॥**

ಆ ನಮಿವಿನಮಿ ರಾಜರುಗಳಿಂದ ತರಲ್ಪಟ್ಟುದೂ ಬೇರೆಯವರಿಂದ ಪಡೆಯಲಶಕ್ಯವೂ ಆದ ವಿದ್ಯಾಧರಲೋಕದ ಉತ್ತಮವಸ್ತುಗಳ ಕೈಗಾಣಿಕೆಯಿಂದ ಭರತೇಶ್ವರನಿಗೆ ಸಂತೋಷವಾಯಿತು.

**[೧]ತದುಪಾಹೃತರತ್ನೌಘೈಃ ಕನ್ಯಾರತ್ನಪುರಃಸರೈಃ ।**
**ಸರಿದೋಘೈರಿವೋದನ್ವಾನಾಪೂರ್ಯತ ತದಾ ಪ್ರಭುಃ ॥ ೧೮೨ ॥**

ನದೀಸಮೂಹಗಳಿಂದ ಸಮುದ್ರವು ತುಂಬಲ್ಪಡುವಂತೆ ಆ ವಿದ್ಯಾಧರರಿಂದ ಕೈಗಾಣಿಕೆಯಾಗಿ ತರಲ್ಪಟ್ಟ ಕನ್ಯಾರತ್ನ ಮೊದಲಾದ ರತ್ನಸಮೂಹಗಳಿಂದ ಆಗ ಭರತೇಶ್ವರನು ಪೂರ್ಣನಾದನು.

**[೨]ಸ್ವಸಾರಂ ಚ ನಮೇರ್ಧನ್ಯಾಂ ಸುಭದ್ರಾಂ ನಾಮ ಕನ್ಯಕಾಮ್ ।**
**[೩]ಉದುವಾಹ ಸ ಲಕ್ಷ್ಮೀವಾನ್ಕಲ್ಯಾಣೈಃ ಖಚರೋಚಿತೈಃ ॥ ೧೮೩ ॥**

ಶ್ರೀಮಂತನಾದ ಆ ಭರತೇಶ್ವರನು ನಮಿರಾಜನ ಸಹೋದರಿಯೂ ಧನ್ಯಳೂ ಆದ ಸುಭದ್ರೆಯೆಂಬ ಕನ್ಯಾರತ್ನವನ್ನು ವಿದ್ಯಾಧರರಿಗೆ ಯೋಗ್ಯವಾದ ಮಂಗಲವಿಧಿಗಳಿಂದ ವಿವಾಹಮಾಡಿಕೊಂಡನು.

**ತಾಂ [೪]ಮನೋಜರಸಸ್ಯೇವ [೫]ಸೂತಿಂ ಸಂಪ್ರಾಪ್ಯ ಚಕ್ರಭೃತ್ ।**
**ಸ್ವಂ ಮೇನೇ ಸಫಲಂ ಜನ್ಮ ಪರಮಾನಂದನಿರ್ಭರಃ ॥ ೧೮೪ ॥**

ಕಾಮರಸದ ಸೃಷ್ಟಿಯೋ ಎಂಬಂತಿರುವ ಆ ಸುಭದ್ರೆಯನ್ನು ಪಡೆದು ಪರಮಾನಂದಪರಿಪೂರ್ಣನಾದ ಚಕ್ರಧರನು ತನ್ನ ಜನ್ಮವು ಸಫಲವಾಯಿತೆಂದು ತಿಳಿದನು.

**ತಾವನ್ನಿರ್ಜಿತನಿಃಶೇಷಮ್ಲೇಚ್ಛರಾಜಬಲೋ ಬಲೈಃ ।**
**ಜಯಲಕ್ಷ್ಮೀಂ ಪುರಸ್ಕೃತ್ಯ ಸೇನಾನೀಃ ಪ್ರಭುಮೈಕ್ಷತ ॥ ೧೮೫ ॥**

ಅಷ್ಟರಲ್ಲಿ ಸೇನೆಗಳಿಂದ ಸಮಸ್ತ ಮ್ಲೇಚ್ಛರಾಜರುಗಳ ಸೇನೆಗಳನ್ನು ಜಯಿಸಿದ ಸೇನಾಪತಿಯು ವಿಜಯಲಕ್ಷ್ಮಿಯನ್ನು ಮುಂದೆ ಮಾಡಿಕೊಂಡು ಬಂದು ಭರತಪ್ರಭುವನ್ನು ಕಂಡನು. ಜಯಶಾಲಿಯಾಗಿ ಬಂದು ಪ್ರಭುವನ್ನು ನೋಡಿದನೆಂದು ಭಾವವು.

**ಕೃತಕಾರ್ಯಂ ಚ ಸತ್ಕೃತ್ಯ ತಂ ತಾಂಶ್ಚ ಮ್ಲೇಚ್ಛನಾಯಕಾನ್ ।**
**ವಿಸರ್ಜ್ಯ ಸಮ್ರಾಟ್ಸಜ್ಜೋಭೂತ್ಪ್ರತ್ಯಾಯಾತು[೧]ಮವಾಙ್ಮಹೀಮ್॥ ೧೮೬ ॥**

ಮಾಡತಕ್ಕ ಕೆಲಸವನ್ನು ಮಾಡಿದ ಆ ಸೇನಾಪತಿಯನ್ನೂ ಆ ಮ್ಲೇಚ್ಛರಾಜರುಗಳನ್ನೂ ಸತ್ಕರಿಸಿ ಬೀಳ್ಕೊಟ್ಟು ಸಾರ್ವಭೌಮನು ದಕ್ಷಿಣಭೂಮಿಗೆ ಹೋಗಲು ಸನ್ನದ್ಧನಾದನು.

**ಜಯಪ್ರಯಾಣಶಂಸಿನ್ಯಸ್ತದಾ ಭೇರ್ಯಃ ಪ್ರದಧ್ವನುಃ ।**
**ವಿಷ್ವಗ್ಬಲಾರ್ಣವೇ ಕ್ಷೋಭಮಾತನ್ವಾನಾ ಮಹೀಭೃತಾಮ್ ॥ ೧೮೭ ॥**

ಆಗ ಸಾಮಂತರಾಜರುಗಳಿಗೆ ಕ್ಷೋಭೆ–ಗಲಿಬಿಲಿಯನ್ನುಂಟುಮಾಡುವುವೂ ದಿಗ್ವಿಜಯದ ಪ್ರಯಾಣವನ್ನು ಸೂಚಿಸುವುವೂ ಆದ ಭೇರಿಗಳು ಸೈನ್ಯವೆಂಬ ಸಮುದ್ರದಲ್ಲಿ ಎಲ್ಲಾ ಕಡೆಯಲ್ಲಿಯೂ ಧ್ವನಿಮಾಡಿದುವು.

**ತಾಂ [೨]ಕಂಟಕಪ್ರಪಾತಾಖ್ಯಾಂ ಪ್ರಾಗೇವೋ[೩]ದ್ಘಾಟಿತಾಂ ಗುಹಾಮ್ ।**
**ಪ್ರವಿವೇಶ ಬಲಂ ಜಿಷ್ಣೋಶ್ಚಕ್ರರತ್ನಪುರೋಗಮಮ್ ॥ ೧೮೮ ॥**

ಮೊದಲೇ ತೆರೆಯಲ್ಪಟ್ಟ ಬಾಗಿಲುಗಳುಳ್ಳ ಕಂಟಕಪ್ರಪಾತವೆಂಬ ಆ ಗುಹೆಯನ್ನು ಜಯಶೀಲನಾದ ಭರತೇಶ್ವರನ ಸೈನ್ಯವು ಚಕ್ರರತ್ನವನ್ನು ಮುಂದೆಮಾಡಿಕೊಂಡು ಪ್ರವೇಶಿಸಿತು.

**ಗಂಗಾಪಗೋಭಯಪ್ರಾಂತಮಹಾವೀಥೀದ್ವಯೇನ ಸಾ ।**
**ವ್ಯತೀಯಾಯ ಗುಹಾಂ ಸೇನಾ ಕೃತದ್ವಾರಾಂ [೪]ಚಮೂಭೃತಾ ॥ ೧೮೯ ॥**

ಆ ಸೇನೆಯು ಸೇನಾಪತಿಯಿಂದ ಬಾಗಿಲು ತೆರೆಯಲ್ಪಟ್ಟ ಆ ಗುಹೆಯನ್ನು ಗಂಗಾನದಿಯ ಎರಡು ದಡಗಳಲ್ಲಿಯ ದೊಡ್ಡದಾರಿಗಳಿಂದ ದಾಟಿಹೋಯಿತು.

**ಮುಚ್ಯಮಾನಾ ಗುಹಾ ಸೈನ್ಯೈಶ್ಚಿರಮುಚ್ಛ್ವಸಿತೇವ ಸಾ ।**
**ಚಮೂರಪಿ ಗುಹಾರೋಧಾನ್ನಿಃಸೃತ್ಯೋಜ್ಜೀವಿತೇವ ಸಾ ॥ ೧೯೦ ॥**

ಸೈನ್ಯಗಳಿಂದ ಬಿಡಲ್ಪಟ್ಟ ಆ ಗುಹೆಯು ಹೆಚ್ಚುಹೊತ್ತು ಉಸಿರುಬಿಡುವಂತಿದ್ದಿತು. ಆ ಸೈನ್ಯವೂ ಗುಹೆಯ ಬಂಧನದಿಂದ ಪಾರಾಗಿ ಬದುಕಿಬಂದಂತಿದ್ದಿತು.

**ನಾಟ್ಯಮಾಲಾಮರಸ್ತತ್ರ ರತ್ನಾರ್ಘ್ಯೈರ್ವಿಭುಮರ್ಘಯನ್ ।**
**ಪ್ರತ್ಯಗೃಹ್ಣಾದ್ಗುಹಾದ್ವಾರಿ ಪೂರ್ಣಕುಂಭಾದಿಮಂಗಲೈಃ ॥ ೧೯೧ ॥**

ಅಲ್ಲಿ ನಾಟ್ಯಮಾಲನೆಂಬ ದೇವನು ಬಹುಮೂಲ್ಯವಾದ ರತ್ನಗಳಿಂದ ಭರತರಾಜನನ್ನು ಪೂಜಿಸಿ ಗುಹೆಯ ಬಾಗಿಲಿನಲ್ಲಿ ಪೂರ್ಣಕುಂಭ ಮೊದಲಾದ ಮಂಗಲವಸ್ತುಗಳಿಂದ ಅವನನ್ನು ಇದಿರ್ಗೊಂಡನು.

**[೫]ಕೃತೋಪಚ್ಛಂದನಂ ಚಾಮುಂ ನಾಟ್ಯಮಾಲಂ [೬]ಸುರರ್ಷಭಮ್ ।**
**ವ್ಯಸರ್ಜಯದ್ಯಥೋದ್ದೇಶಂ ಸತ್ಕೃತ್ಯ ಭರತರ್ಷಭಃ ॥ ೧೯೨ ॥**

ಭರತರಾಜಶ್ರೇಷ್ಠನು ತನ್ನನ್ನು ವಿನಯೋಕ್ತಿಗಳಿಂದ ಸಮಾಧಾನಪಡಿಸಿದವನೂ ದೇವಶ್ರೇಷ್ಠನೂ ಆದ ಈ ನಾಟ್ಯಮಾಲನನ್ನು ಸತ್ಕರಿಸಿ ಅವನನ್ನು ಅವನ ದೇಶಕ್ಕೆ ಬೀಳ್ಕೊಟ್ಟನು.

**ಕೃತೋದಯ[೭]ಮಿನಂ [೮]ಧ್ವಾಂತಾತ್ಸರಿತೋ ಗಗನೇಚರಾಃ ।**
**ಪರಿಚೇರುರ್ನಭೋಮಾರ್ಗಮಾರುಧ್ಯ ಧೃತಸಾಯಕಾಃ ॥ ೧೯೩ ॥**

೧ ವಿದ್ಯಾಧರೈರುಪಾಯನೀಕೃತ. ೨ ಭಗಿನೀಂ. ೩ ಪರಿಣೀತವಾನ್. ೪ ಕಾಮರಸಸ್ಯ. ೫ ಸೃಷ್ಟಿಂ.

೧ ದಕ್ಷಿಣಭೂಮಿಂ. ೨ ಕಾಂಡಕಪ್ರಪಾತಾಖ್ಯಾಮಿತ್ಯಪಿ ಪಾಠಃ. ೩ ಉದ್ಘಾಟಿತಕವಾಟಾಂ. ೪ ಸೇನಾನ್ಯಾ. ೫ ಕೃತಸಾಂತ್ವನಂ. ೬ ಸುರಶ್ರೇಷ್ಠಂ. ೭ ಭರತಂ, ಪಕ್ಷೇರವಿಂ. ೮ ಕಾಲಗುಹಾಧ್ವಾಂತಾತ್.

ಕೈಯಲ್ಲಿ ಬಾಣಗಳನ್ನು ಧರಿಸಿದ ಖೇಚರರು ಆಕಾಶಮಾರ್ಗವನ್ನು ತಡೆದು, ಕತ್ತಲೆಯನ್ನು ನಾಶಮಾಡಿ ಉದಯಿಸಿದ ಸೂರ್ಯನಂತೆ, ಕಾಲಗುಹೆಯ ಕತ್ತಲೆಯನ್ನು ನಾಶಮಾಡಿ ಹೊರಟ ಭರತೇಶ್ವರನನ್ನು ಭಜಿಸಿದರು.

**ನಮಿವಿನಮಿ[1]ಪುರೋಗೈರನ್ವಿತಃ ಖೇಚರೇಂದ್ರೈಃ**
**ಖಚರಗಿರಿಗುಹಾಂತರ್ಧ್ವಾಂತಮುತ್ಸಾರ್ಯ ದೂರಮ್ ।**
**ರವಿರಿವ ಕಿರಣೌಘೈರ್ದ್ಯೋತಯನ್ [2]ದಿಗ್ವಿಭಾಗಾ-**
**ನ್ನಿಧಿಪತಿ[3]ರುದಿಯಾಯ ಪ್ರೀಣಯನ್ ಜೀವಲೋಕಮ್ ॥ ೧೯೪ ॥**

ನಮಿವಿನಮಿಪುರಸ್ಸರರಾದ ವಿದ್ಯಾಧರರಾಜರಿಂದ ಯುಕ್ತನೂ ವಿಜಯಾರ್ಧ ಪರ್ವತದ ಗುಹೆಯೊಳಗಿನ ಕತ್ತಲೆಯನ್ನು ದೂರಮಾಡಿ, ಸೂರ್ಯನಂತೆ, ಕಿರಣ ಸಮೂಹಗಳಿಂದ ದಿಕ್ಪ್ರದೇಶಗಳನ್ನು ಪ್ರಕಾಶಪಡಿಸುವವನೂ ಜೀವ ಲೋಕವನ್ನು ಸಂತೋಷಪಡಿಸುವವನೂ ಆದ ನಿಧಿಪತಿ-ಭರತೇಶ್ವರನು ಉದಯಿಸಿದನು. ಗುಹೆಯಿಂದ ಹೊರಕ್ಕೆ ಬಂದನೆಂದು ಭಾವವು

**ಸರಸಕಿಸಲಯಾಂತಃಸ್ಪಂದಮಂದೇ ಸುರಸ್ತ್ರೀ-**
**ಸ್ತನತಟಪರಿಲಗ್ನಕ್ಷೌಮಸಂಕ್ರಾಂತ[4]ವಾಸೇ ।**
**[5]ಸರತಿ ಮರುತಿ ಮಂದಂ ಕಂದರೇ[6]ಷ್ವದ್ರಿಭರ್ತು-**
**ರ್ನಿಧಿಪತಿಶಿಬಿರಾಣಾಂ ಪ್ರಾದುರಾಸ[7]ನ್ನಿವೇಶಾಃ ॥ ೧೯೫ ॥**

ರಸವತ್ತಾದ ತಳಿರುಗಳ ಮಧ್ಯಭಾಗದ ಚಲನೆಯಿಂದ ಮಂದವೂ ದೇವಸ್ತ್ರೀಯರ ಕುಚಪ್ರದೇಶಗಳಲ್ಲಿ ಸಂಬಂಧಿಸಿರುವ ನವಿರಾದ ಬಟ್ಟೆಗಳಲ್ಲಿ ಅಂಟಿದ ಪರಿಮಳವುಳ್ಳದೂ ಆದ ಗಾಳಿಯು ವಿಜಯಾರ್ಧಗಿರಿಯ ಗುಹೆಗಳಲ್ಲಿ ಮಂದವಾಗಿ ಬೀಸುತ್ತಿರಲು ಭರತೇಶ್ವರನ ಬಿಡಾರಗಳ ರಚನೆಗಳಾದುವು.

**ಕಿಸಲಯಪುಟಭೇದೀ ದೇವದಾರುದ್ರುಮಾಣಾ-**
**ಮಸಕೃದಮರಸಿಂಧೋಃ ಶೀಕರಾನ್ವ್ಯಾಧುನಾನಃ ।**
**ಶ್ರಮಸಲಿಲ[8]ಮಮುಷ್ಣಾ[9]ದುಷ್ಣಸಂಭೂಷ್ಣುಜಿಷ್ಣೋಃ**
**ಖಚರಗಿರಿತಟಾಂತಾ[10]ನ್ನಿಷ್ಪತನ್ಮಾತರಿಶ್ವಾ ॥ ೧೯೬ ॥**

ದೇವದಾರುವೃಕ್ಷಗಳ ತಳಿರುಗಳನ್ನು ಅರಳಿಸುತ್ತಿರುವುದೂ ದೇವಗಂಗೆಯ ತುಂತುರುಗಳನ್ನು ಬಾರಿಬಾರಿಗೆ ಹರಡುತ್ತಿರುವುದೂ ವಿಜಯಾರ್ಧಪರ್ವತದ ತಪ್ಪಲಿನ ಕೊನೆಯಿಂದ ಬರುತ್ತಿರುವುದೂ ಆದ ಗಾಳಿಯು ಜಯಶೀಲನಾದ ಭರತೇಶ್ವರನಿಗೆ ಉಷ್ಣದಿಂದುಂಟಾದ ಬೆವರನ್ನು ನಾಶಮಾಡಿತು.

**ಸಪದಿ ವಿಜಯಸೈನ್ಯೈರ್ನಿರ್ಜಿತಮ್ಲೇಚ್ಛಖಂಡಃ**
**ಸಮುಪಹೃತಜಯಶ್ರೀಶ್ಚಕ್ರಿಣಾ[1]ದಿಷ್ಟಮಾತ್ರಾತ್ ।**
**ಜಿನಮಿವ ಜಯಲಕ್ಷ್ಮೀಸನ್ನಿಧಾನಂ ನಿಧೀನಾಂ**
**[2]ಪರಿವೃಢ[3]ಮುಪತಸ್ಥೌ ನಮ್ರಮೌಲಿಶ್ಚಮೂಭೃತ್ ॥ ೧೯೭ ॥**

ಚಕ್ರವರ್ತಿಯ ಆಜ್ಞೆಯಾದೊಡನೆಯೇ ಜಯಶೀಲವಾದ ಸೈನ್ಯಗಳಿಂದ ಶೀಘ್ರವಾಗಿ ಮ್ಲೇಚ್ಛಖಂಡಗಳನ್ನು ಜಯಿಸಿದವನೂ ಬಲಾತ್ಕಾರದಿಂದ ಜಯಶ್ರೀಯನ್ನು ತಂದವನೂ ನಮ್ರವಾದ ಮಸ್ತಕವುಳ್ಳವನೂ ಆದ ಸೇನಾಪತಿಯು, ಜಯಲಕ್ಷ್ಮಿಗೆ ವಾಸಸ್ಥಾನನಾದ ಜಿನೇಶ್ವರನನ್ನು ಹೊಂದುವಂತೆ, ನಿಧಿಗಳಿಗೆ ಪತಿಯಾದ ಭರತೇಶ್ವರನನ್ನು ಹೊಂದಿದನು.

**ಜಿತ್ವಾ ಮ್ಲೇಚ್ಛನೃಪೌ ವಿಜಿತ್ಯ ಚ ಸುರಂ [4]ಪ್ರಾಲೇಯಶೈಲೇಶಿನಂ**
**[5]ದೇವ್ಯೌ ಚ ಪ್ರಣಮಯ್ಯ ದಿವ್ಯಮುಭಯಂ ಸ್ವೀಕೃತ್ಯ ತತ್ರಾಸನಮ್ ।**
**ಹೇಲಾನಿರ್ಜಿತಖೇಚರಾದ್ರಿರಧಿರಾ[6]ಟ್ಸ್ವತ್ಯಂತಪಾಲಾನ್ ಜಯನ್**
**ಸೇನಾನ್ಯಾ ವಿಜಯೀ ವ್ಯಜೇಷ್ಟ ನಿಖಿಲಾಂ ಷಟ್ಖಂಡಭೂಷಾಂ ಭುವಮ್॥**

ಚಿಲಾತ ಆವರ್ತರೆಂಬ ಇಬ್ಬರು ಮ್ಲೇಚ್ಛರಾಜರನ್ನೂ ಹಿಮವತ್ಪರ್ವತಾಧಿಪತಿಯಾದ ಹಿಮವದ್ದೇವನನ್ನೂ ಜಯಿಸಿ ಗಂಗಾದೇವೀಸಿಂಧುದೇವಿಯರಿಂದ ನಮಸ್ಕಾರಮಾಡಿಸಿಕೊಂಡು ಅಲ್ಲಿ ಅವರಿಂದ ದಿವ್ಯವಾದ ಎರಡು ಆಸನಗಳನ್ನು ಸ್ವೀಕರಿಸಿ ಲೀಲೆಯಾಗಿ ವಿಜಯಾರ್ಧಪರ್ವತವನ್ನು ಜಯಿಸಿದವನೂ ಸೇನಾಪತಿಯ ಮೂಲಕ ಮ್ಲೇಚ್ಛರಾಜರುಗಳನ್ನು ಜಯಿಸಿದವನೂ ಜಯಶೀಲನೂ ಆದ ಭರತ ಸಾರ್ವಭೌಮನು ಷಟ್ಖಂಡಮಂಡಿತವಾದ ಸಮಸ್ತಭೂಮಿಯನ್ನು ಜಯಿಸಿದನು.

**ಪುಣ್ಯಾದಿತ್ಯಯ[7]ಮಾಹಿಮಾಹ್ವಯಗಿರೇರಾತೋಯಧೇಃ [8]ಪ್ರಾಕ್ತನಾ**
**[9]ದಾಚಾಪಾಚ್ಯಪಯೋನಿಧೇರ್ಜಲನಿಧೇರಾ ಚ ಪ್ರತೀಚ್ಯಾದಿತಃ ।**
**ಚಕ್ರೇ ಕ್ಷ್ಮಾಮರಿಚಕ್ರ[10]ಭೀಕರಕರಶ್ಚಕ್ರೇಣ ಚಕ್ರೀ ವಶೇ**
**ತಸ್ಮಾತ್ಪುಣ್ಯಮುಪಾರ್ಜಯಂತು ಸುಧಿಯೋ ಜೈನೇ ಮತೇ ಸುಸ್ಥಿತಾಃ ॥**

ಈ ಪ್ರಕಾರವಾಗಿ ಶತ್ರುಸಮೂಹಕ್ಕೆ ಭಯಂಕರನಾದ ಈ ಭರತಚಕ್ರೇಶ್ವರನು ಪುಣ್ಯದಿಂದ ಹಿಮವತ್ಪರ್ವತಪರ್ಯಂತವೂ ಪೂರ್ವದಕ್ಷಿಣಪಶ್ಚಿಮಸಮುದ್ರ ಪರ್ಯಂತವೂ ಆದ ಭೂಮಿಯನ್ನು ಚಕ್ರದಿಂದ ವಶಪಡಿಸಿಕೊಂಡನು. ಆದುದರಿಂದ ಸುಬುದ್ಧಿಯುಳ್ಳವರು ಜೈನಮತದಲ್ಲಿ ಸ್ಥಿರವಾಗಿದ್ದು ಪುಣ್ಯವನ್ನು ಗಳಿಸಿಕೊಳ್ಳಲಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭರತೋತ್ತರಾರ್ಧವಿಜಯವರ್ಣನಂ ನಾಮ ದ್ವಾತ್ರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
"ಕರ್ಣಾಟಕಭಾವದೀಪಿಕಾ ವ್ಯಾಖ್ಯೆಯೋಳ್" ಭರತೋತ್ತರಾರ್ಧವಿಜಯವರ್ಣನವೆಂಬ
ಮೂವತ್ತೆರಡನೆಯ ಪರ್ವವು ಸಂಪೂರ್ಣವಾದುದು.

---

೧ ಪುರಸ್ಸರೈಃ. ೨ ದಿಕ್ಪ್ರದೇಶಾನ್. ೩ ಉದೇತಿ ಸ್ಮ. ೪ ಸುಗಂಧೇ. ೫ ವಾತಿ ಸತಿ. ೬ ವಿಜಯಾರ್ಧಗಿರೇಃ. ೭ ರಚನಾಃ. ೮ ಅನಾಶಯತ್. ೯ ಉಷ್ಣಸಂಜಾತಂ. ೧೦ ಆಗಚ್ಛನ್.

೧ ಆದೇಶಮಾತ್ರಾತ್. ೨ ನಾಥಂ. ೩ ಪ್ರಾಪ್ತವಾನ್. ೪ ಹಿಮವದ್ಗಿರಿಪತಿಂ. ೫ ಗಂಗಾದೇವೀ ಸಿಂಧುದೇವ್ಯೌ. ೬ ಮ್ಲೇಚ್ಛರಾಜಾನ್. ೭ ಹಿಮಾದ್ರಿಪರ್ಯಂತಂ. ೮ ಪೂರ್ವಾತ್. ೯ ದಕ್ಷಿಣ ಸಮುದ್ರಾತ್. ೧೦ ಭಯಂಕರಕರಃ.

॥ ಶ್ರೀ ವೃಷಭಜಿನಾಯ ನಮಃ ॥

# ಅಥ ತ್ರಯಸ್ತ್ರಿಂಶತ್ತಮಂ ಪರ್ವ

**ಶ್ರೀಮಾನಾನಮಿತಾಶೇಷನೃಪವಿದ್ಯಾಧರಾಮರಃ ।**
**ಸಿದ್ಧದಿಗ್ವಿಜಯಶ್ಚಕ್ರೀ ನ್ಯವೃತತ್ಸ್ವಾಂ ಪುರೀಂ ಪ್ರತಿ ॥ ೧ ॥**

ಸಮಸ್ತರಾಜರಿಂದಲೂ ವಿದ್ಯಾಧರರಿಂದಲೂ ದೇವತೆಗಳಿಂದಲೂ ನಮಸ್ಕಾರ ಮಾಡಿಸಿಕೊಂಡವನೂ ಶ್ರೀಮಂತನೂ ದಿಗ್ವಿಜಯವನ್ನು ಸಾಧಿಸಿದವನೂ ಆದ ಭರತ ಚಕ್ರವರ್ತಿಯು ತನ್ನ ಪಟ್ಟಣಕ್ಕೆ ಹಿಂದಿರುಗಿದನು.

**ನವಾಸ್ಯ ನಿಧಯಃ ಸಿದ್ಧಾ ರತ್ನಾನ್ಯಪಿ ಚತುರ್ದಶ ।**
**ಸಿದ್ಧವಿದ್ಯಾಧರೈಃ ಸಾರ್ಧಂ [೧]ಷಟ್ಖಂಡಧರಣೀಭುಜಃ ॥ ೨ ॥**

ಈ ಭರತೇಶ್ವರನಿಗೆ ಒಂಬತ್ತು ನಿಧಿಗಳೂ ಹದಿನಾಲ್ಕು ರತ್ನಗಳೂ ಸಿದ್ಧರೆಂಬ ದೇವತೆಗಳೂ ವಿದ್ಯಾಧರರೂ ಆರು ಖಂಡಗಳ ರಾಜರುಗಳೂ ವಶೀಭೂತರಾದರು.

**ಜಿತ್ವಾ ಮಹೀಮಿಮಾಂ ಕೃತ್ಸ್ನಾಂ ಲವಣಾಂಭೋಧಿಮೇಖಲಾಮ್ ।**
**ಪ್ರಯಾಣಮಕರೋಚ್ಚಕ್ರೀ ಸಾಕೇತನಗರಂ ಪ್ರತಿ ॥ ೩ ॥**

ಚಕ್ರವರ್ತಿಯು ಲವಣಸಮುದ್ರದಿಂದ ಸುತ್ತಲ್ಪಟ್ಟ ಈ ಸಮಸ್ತಭೂಮಿಯನ್ನು ಜಯಿಸಿ ಅಯೋಧ್ಯಾನಗರಕ್ಕೆ ಪ್ರಯಾಣವನ್ನು ಮಾಡಿದನು.

**ಪ್ರಕೀರ್ಣಕಲಸದ್ವೀಚಿರುಲ್ಲಸಚ್ಛತ್ರಬುದ್ಬುದಾ ।**
**ನಿರ್ಯಯೌ ವಿಜಯಾರ್ಧಾದ್ರಿತಟಾದ್ಗಂಗೇವ ಸಾ ಚಮೂಃ ॥ ೪ ॥**

ಚಾಮರಗಳೆಂಬ ಪ್ರಕಾಶಮಾನವಾದ ಅಲೆಗಳುಳ್ಳುದೂ ಪ್ರಕಾಶಮಾನವಾದ-ಶ್ವೇತಚ್ಛತ್ರಗಳೆಂಬ ನೀರುಗುಳ್ಳೆಗಳುಳ್ಳುದೂ ಆದ ಆ ಸೇನೆಯು ವಿಜಯಾರ್ಧ ಪರ್ವತದ ತಪ್ಪಲಿನಿಂದ ಗಂಗಾನದಿಯಂತೆ, ಹೊರಟಿತು.

**ಕರಿಣೀನೌಭಿರಶ್ವೀಯಕಲ್ಲೋಲೈರ್ಜನತೋರ್ಮಿಭಿಃ ।**
**ದಿಶೋ ರುಂಧನ್ಬಲಾಂಭೋಧಿಃ ಪ್ರಸಸರ್ಪ ಸ್ಫುರದ್ಧ್ವನಿಃ ॥ ೫ ॥**

ಹೆಣ್ಣಾನೆಗಳೆಂಬ ನಾವೆಗಳಿಂದಲೂ ಕುದುರೆಗಳ ಸಮೂಹಗಳೆಂಬ ದೊಡ್ಡ ಅಲೆಗಳಿಂದಲೂ ಜನಸಮೂಹಗಳೆಂಬ ತೆರೆಗಳಿಂದಲೂ ದಿಕ್ಕುಗಳನ್ನು ವ್ಯಾಪಿಸುವುದೂ ಹೆಚ್ಚಾಗಿ ಶಬ್ದಮಾಡುತ್ತಿರುವುದೂ ಆದ ಸೈನ್ಯವೆಂಬ ಸಮುದ್ರವು ಹರಡಿಕೊಂಡಿತು.

**ಚಲತಾಂ ರಥಚಕ್ರಾಣಾಂ ಚೀತ್ಕಾರೈರ್ಹಯಹೇಷಿತೈಃ ।**
**ಬೃಂಹಿತೈಶ್ಚ ಗಜೇಂದ್ರಾಣಾಂ [೨]ಶಬ್ದಾದ್ವೈತಂ ತದಾಭವತ್ ॥ ೬ ॥**

ನಡೆಯುತ್ತಿರುವ ರಥಚಕ್ರಗಳ ಚೀತ್ಕಾರಶಬ್ದಗಳಿಂದಲೂ ಕುದುರೆಗಳ ಹೇಷಾಧ್ವನಿಗಳಿಂದಲೂ ದೊಡ್ಡ ಆನೆಗಳ ಗರ್ಜನೆಗಳಿಂದಲೂ ಆಗ ಜಗತ್ತು ಶಬ್ದಾದ್ವೈತಮಯವಾಯಿತು. ಜಗತ್ತೆಲ್ಲ ಶಬ್ದವೇ ಆದಂತೆ ತೋರುತ್ತಿದ್ದಿತೆಂದು ಭಾವವು.

**ಭೇರ್ಯಃ ಪ್ರಸ್ಥಾನಶಂಸಿನ್ಯೋ ನೇದುರಾಮಂದ್ರನಿಸ್ವನಾಃ ।**
**ಅಕಾಲ[೩]ಸ್ತನಿತಾಶಂಕಾಮಾತನ್ವಾನಾಃ ಶಿಖಂಡಿನಾಮ್ ॥ ೭ ॥**

ಪ್ರಯಾಣವನ್ನು ಸೂಚಿಸುವುವೂ ಗಂಭೀರವಾಗಿ ಧ್ವನಿಮಾಡುವುವೂ ನವಿಲುಗಳಿಗೆ ಅಕಾಲದಲ್ಲಿ ಮೇಘಧ್ವನಿಯ ಸಂದೇಹವನ್ನುಂಟುಮಾಡುವುವೂ ಆದ ಭೇರಿಗಳು ಶಬ್ದಮಾಡಿದುವು.

೧ ಷಟ್ಖಂಡಮಹೀಪಾಲಾಃ. ೨ ಜಗತ್ ಶಬ್ದಾದ್ವೈತಮಯಮಭೂತ್. ೩ ಮೇಘಧ್ವನಿಶಂಕಾಂ.

**ತದಾಭೂದ್ರುದ್ಧಮಶ್ವೀಯಂ ಹಾಸ್ತಿಕೇನ ಪ್ರಸರ್ಪತಾ ।**
**ನ್ಯರೋಧಿ ಪತ್ತಿವೃಂದಂ ಚ ಪ್ರಯಾಂತ್ಯಾ ರಥಕಟ್ಯಯಾ ॥ ೮ ॥**

ಆಗ ಹರಡುತ್ತಿರುವ ಆನೆಗಳ ಸಮೂಹವು ಕುದುರೆಗಳ ಸಮೂಹವನ್ನು ಆವರಿಸಿತು. ಹೋಗುತ್ತಿರುವ ರಥಸಮೂಹವು ಕಾಲಾಳುಗಳ ಸಮೂಹವನ್ನು ತಡೆಯಿತು.

**ಪಾದಾತಕೃತಸಂಬಾಧಾ[೧]ತ್ಪಥಃ ಪರ್ಯಂತಪಾತಿನಃ ।**
**ಹಯಾ ಗಜಾ ವರೂಥಾಶ್ಚ ಭೇಜುಸ್ತಿರ್ಯಕ್ಪ್ರಚೋದಿತಾಃ ॥ ೯ ॥**

ಕಾಲಾಳುಗಳಿಂದ ಮಾಡಲ್ಪಟ್ಟ ನುಗ್ಗಾಟದಿಂದ ಪಕ್ಕಕ್ಕೆ ಹೋದ ಕುದುರೆಗಳೂ ಆನೆಗಳೂ ರಥಗಳೂ ಸಮೀಪದಲ್ಲಿರುವ ದಾರಿಗಳನ್ನು ಸೇರಿದುವು. ಸಮೀಪದಲ್ಲಿರುವ ಬೇರೆ ದಾರಿಗಳಿಂದ ಹೋದುವೆಂದರ್ಥವು.

**ಪರ್ವತೋದಗ್ರಮಾರೂಢೋ ಗಜಂ ವಿಜಯಪರ್ವತಮ್ ।**
**ಪ್ರತಸ್ಥೇ ವಿಲಸನ್ಮೌಲಿಶ್ಚಕ್ರೀ ಶಕ್ರಸಮದ್ಯುತಿಃ ॥ ೧೦ ॥**

ಪ್ರಕಾಶಮಾನವಾದ ಕಿರೀಟವುಳ್ಳವನೂ ದೇವೇಂದ್ರನಿಗೆ ಸಮಾನವಾದ ಕಾಂತಿಯುಳ್ಳವನೂ ಆದ ಚಕ್ರವರ್ತಿಯು ಪರ್ವತದಂತೆ ಉನ್ನತವಾದ ವಿಜಯಪರ್ವತವೆಂಬ ಆನೆಯನ್ನು ಹತ್ತಿ ಹೊರಟನು.

**ಅನುಗಂಗಾತಟಂ ದೇಶಾನ್ವಿಲಂಘ್ಯ ಸಸರಿದ್ಗಿರೀನ್ ।**
**ಕೈಲಾಸಶೈಲಸಾನ್ನಿಧ್ಯಂ ಪ್ರಾಪ ತಚ್ಚಕ್ರಿಣೋ ಬಲಮ್ ॥ ೧೧ ॥**

ಚಕ್ರವರ್ತಿಯ ಆ ಸೈನ್ಯವು ಗಂಗಾನದೀತೀರದಲ್ಲಿ ನದೀಪರ್ವತಸಹಿತವಾದ ದೇಶಗಳನ್ನು ದಾಟಿ ಕೈಲಾಸಪರ್ವತದ ಸಮೀಪವನ್ನು ಸೇರಿತು.

**ಕೈಲಾಸಾಚಲಮಭ್ಯರ್ಣಮಥಾಲೋಕ್ಯ [೨]ರಥಾಂಗಭೃತ್ ।**
**ನಿವೇಶ್ಯ ನಿಕಟೇ ಸೈನ್ಯಂ ಪ್ರಯಯೌ ಜಿನಮರ್ಚಿತುಮ್ ॥ ೧೨ ॥**

ಅನಂತರದಲ್ಲಿ ಚಕ್ರಧರನು ಸಮೀಪದಲ್ಲಿರುವ ಕೈಲಾಸಪರ್ವತವನ್ನು ನೋಡಿ ಒಂದು ಪಕ್ಕದಲ್ಲಿ ಸೈನ್ಯವನ್ನಿರಿಸಿ ತಾನು ಜಿನೇಶ್ವರನನ್ನು ಪೂಜಿಸುವುದಕ್ಕೋಸ್ಕರ ಹೊರಟುಹೋದನು.

**ಪ್ರಯಾಂತಮನುಜಗ್ಮುಸ್ತಂ ಭರತೇಶಂ ಮಹಾದ್ಯುತಿಮ್ ।**
**ರೋಚಿಷ್ಣುಮೌಲಯಃ ಕ್ಷ್ಮಾಪಾಃ ಸೌಧರ್ಮೇಂದ್ರಮಿವಾಮರಾಃ ॥ ೧೩ ॥**

ಪ್ರಯಾಣಮಾಡುತ್ತಿರುವವನೂ ಮಹಾಕಾಂತಿಯುಳ್ಳವನೂ ಆದ ಆ ಭರತೇಶ್ವರನನ್ನು ಪ್ರಕಾಶಮಾನವಾದ ಕಿರೀಟಗಳುಳ್ಳ ರಾಜರುಗಳು, ಸೌಧರ್ಮೇಂದ್ರನನ್ನು ದೇವತೆಗಳು ಹಿಂಬಾಲಿಸುವಂತೆ, ಹಿಂಬಾಲಿಸಿ ಹೋದರು.

**ಅಚಿರಾಚ್ಚ [೩]ತಮಾಸಾದ್ಯ ಶರದಂಬುದಸಚ್ಛವಿಮ್ ।**
**ಜಿನಸ್ಯೇವ ಯಶೋರಾಶಿಮಭ್ಯನಂದದ್ವಿಶಾಂಪತಿಃ ॥ ೧೪ ॥**

ಭರತೇಶ್ವರನು ಜಿನೇಶ್ವರನ ಯಶಸ್ಸಿನ ರಾಶಿಯಂತಿರುವುದೂ ಶರತ್ಕಾಲದ ಮೇಘಕ್ಕೆ ಸಮಾನವೂ ಆದ ಆ ಕೈಲಾಸಪರ್ವತವನ್ನು ಶೀಘ್ರವಾಗಿ ತಲುಪಿ ಸಂತೋಷಪಟ್ಟನು.

೧ ಮಾರ್ಗಾನ್. ೨ ಚಕ್ರೀ. ೩ ಕೈಲಾಸಪರ್ವತಂ.

**ನಿಪತನ್ನಿರ್ಝರಾರಾವೈರಾಹ್ವಯಂತಮಿವಾಮರಾನ್ ।**
**ತ್ರಿಜಗದ್ಗುರುಮೇತ್ಯಾರಾತ್ಸೇವಧ್ವಮಿತಿ ಸಾದರಮ್ ॥ ೧೫ ॥**

"ತ್ರಿಲೋಕಾಧಿಪತಿಯಾದ ಸ್ವಾಮಿಯನ್ನು ಹೊಂದಿ ಸಮೀಪದಲ್ಲಿ ಭಕ್ತಿಪೂರ್ವಕವಾಗಿ ಭಜಿಸಿರಿ" ಎಂದು ಗಿರಿನದೀಪತನದ ಶಬ್ದಗಳಿಂದ ದೇವತೆಗಳನ್ನು ಕರೆಯುವಂತಿರುವುದೂ

**ಮರುದಾಂದೋಲಿತೋದಗ್ರಶಾಖಾಗ್ರೈಸ್ತಟಪಾದಪೈಃ ।**
**ಪ್ರತೋಷಾದಿವ ನೃತ್ಯಂತಂ ವಿಕಾಸಿಕುಸುಮಸ್ಮಿತೈಃ ॥ ೧೬ ॥**

ಗಾಳಿಯಿಂದ ತೂಗಲ್ಪಟ್ಟ ಉನ್ನತವಾದ ಕೊಂಬೆಗಳ ತುದಿಗಳುಳ್ಳ ತಪ್ಪಲಿನ ಮರಗಳಿಂದಲೂ ಅರಳಿದ ಹೂಗಳೆಂಬ ಮುಗುಳ್ನಗೆಗಳಿಂದಲೂ ಸಂತೋಷದಿಂದ ಕುಣಿಯುವಂತಿರುವುದೂ

**ತಟನಿರ್ಝರಸಂಪಾತೈರ್ದಾತುಂ ಪಾದ್ಯಮಿವೋದ್ಯತಮ್ ।**
**[೧]ವಂದಾರೋರ್ಭವ್ಯವೃಂದಸ್ಯ ವಿಷ್ವ[೨]ಗಾಸ್ಕಂದತೋ ಜಿನಮ್ ॥ ೧೭ ॥**

ಜಿನೇಶ್ವರನನ್ನು ವಂದಿಸುವ ಸ್ವಭಾವವುಳ್ಳುದೂ ಎಲ್ಲಾ ಕಡೆಗಳಿಂದಲೂ ಬರುತ್ತಿರುವುದೂ ಆದ ಭವ್ಯಜೀವಸಮೂಹಕ್ಕೆ ತಪ್ಪಲುಗಳಲ್ಲಿ ಹರಿಯುತ್ತಿರುವ ಗಿರಿನದಿಗಳಿಂದ ಪಾದೋದಕವನ್ನು ಕೊಡುವುದಕ್ಕೋಸ್ಕರ ಪ್ರಯತ್ನಪಡುವಂತಿರುವುದೂ

**ಶಿಖರೋ[೩]ಲ್ಲಿಖಿತಾಂಭೋದಪಟಲೋ[೪]ದ್ಗೀರ್ಣವಾರಿಭಿಃ ।**
**ದಾವಭೀತ್ಯೇವ ಸಿಂಚಂತಂ ಸ್ವಪರ್ಯಂತಲತಾವನಮ್ ॥ ೧೮ ॥**

ಕಾಡ್ಗಿಚ್ಚಿನ ಭಯದಿಂದ ತನ್ನ ಸಮೀಪಪ್ರದೇಶದ ಲತಾವನವನ್ನು ಶಿಖರಗಳಿಂದ ಸೀಳಲ್ಪಟ್ಟ ಮೇಘಸಮೂಹದಿಂದ ಹೊರಟ ನೀರುಗಳಿಂದ ಸೇಚನೆಮಾಡುವಂತಿರುವುದೂ

**[೫]ಶುಚಿಗ್ರಾವವಿನಿರ್ಮಾಣೈಃ ಶಿಖರೈಃ ಸ್ಥಗಿತಾಂಬರೈಃ ।**
**ಗತಿಪ್ರಸರಮರ್ಕಸ್ಯ ನ್ಯಕ್ಕುರ್ವಾಣಮಿವೋಚ್ಛ್ರಿತೈಃ ॥ ೧೯ ॥**

ಸ್ಪಟಿಕಶಿಲೆಗಳಿಂದ ನಿರ್ಮಿತಗಳೂ ಆಕಾಶಪ್ರದೇಶವನ್ನು ಮರೆಮಾಡುವುವೂ ಉನ್ನತಗಳೂ ಆದ ಶಿಖರಗಳಿಂದ ಸೂರ್ಯನ ಸಂಚಾರವನ್ನು ತಿರಸ್ಕರಿಸುವಂತಿರುವುದೂ

**ಕ್ವಚಿತ್ಕಿನ್ನರಸಂಭೋಗ್ಯೈಃ ಕ್ವಚಿತ್ಪನ್ನಗಸೇವಿತೈಃ ।**
**ಕ್ವಚಿಚ್ಚ [೬]ಖಚರಾಕ್ರೀಡೈರ್ವರ್ತನೈರಾವಿಷ್ಕೃತಶ್ರಿಯಮ್ ॥ ೨೦ ॥**

ಕೆಲವು ಕಡೆಯಲ್ಲಿ ಕಿನ್ನರದೇವತೆಗಳಿಂದ ಭೋಗಿಸುವುದಕ್ಕೆ ಯೋಗ್ಯಗಳೂ ಕೆಲವು ಕಡೆಯಲ್ಲಿ ನಾಗದೇವತೆಗಳಿಂದ ಸೇವಿಸಲ್ಪಟ್ಟುವೂ ಕೆಲವು ಕಡೆಯಲ್ಲಿ ವಿದ್ಯಾಧರರ ಸರ್ವತ್ರ ಕ್ರೀಡೆಗಳುಳ್ಳುವೂ ಆದ ವನಗಳಿಂದ ತನ್ನ ಸಂಪತ್ತನ್ನು ಪ್ರಕಟಪಡಿಸುವುದೂ

**ಕ್ವಚಿದ್ವಿರಲ[೭]ನೀಲಾಂಶುಮಿಲಿತೈಃ ಸ್ಪಟಿಕೋಪಲೈಃ ।**
**ಶಶಾಂಕಮಂಡಲಾಶಂಕಾಮಾತನ್ವಂತಂ ನಭೋಜುಷಾಮ್ ॥ ೨೧ ॥**

ಕೆಲವು ಕಡೆಯಲ್ಲಿ ವಿರಳವಾದ ನೀಲರತ್ನಗಳ ಕಾಂತಿಗಳಲ್ಲಿ ಸೇರಿರುವ ಸ್ಪಟಿಕಶಿಲೆಗಳಿಂದ ಖೇಚರರಿಗೆ ಚಂದ್ರಮಂಡಲದ ಸಂದೇಹವನ್ನುಂಟುಮಾಡುವುದೂ

**ಹರಿನ್ಮಣಿಪ್ರಭಾಜಾಲೈರ್ಭಾಜಾಲೈಶ್ಚ [೮]ಮಹಾಶ್ಮನಾಮ್ ।**
**ಕ್ವಚಿದಿಂದ್ರಧನುರ್ಲೇಖಾಮಾಲಿಖಂತಂ ನಭೋಂಗಣೇ ॥ ೨೨ ॥**

ಕೆಲವು ಕಡೆಯಲ್ಲಿ ಪಚ್ಚೆಯ ರತ್ನದ ಕಾಂತಿಸಮೂಹಗಳಿಂದಲೂ ಪದ್ಮರಾಗ (ಕೆಂಪು)ರತ್ನಗಳ ಕಾಂತಿಸಮೂಹಗಳಿಂದಲೂ ಆಕಾಶಾಂಗಣದಲ್ಲಿ ಇಂದ್ರಧನುಸ್ಸಿನ ರೇಖೆಯನ್ನು ಬರೆಯುವಂತಿರುವುದೂ

**ಪದ್ಮರಾಗಾಂಶು[೧]ನಿರ್ಭಿನ್ನೈಃ ಸ್ಪಟಿಕೋಪಲರಶ್ಮಿಭಿಃ ।**
**[೨]ಆರಕ್ತಶ್ವೇತವಪ್ರಾಂತಂ [೩]ಕಿಲಾಸಿನಮಿವ ಕ್ವಚಿತ್ ॥ ೨೩ ॥**

ಕೆಲವು ಕಡೆಯಲ್ಲಿ ಪದ್ಮರಾಗರತ್ನದ ಕಾಂತಿಗಳೊಡನೆ ಸೇರಿರುವ ಸ್ಪಟಿಕಶಿಲೆಯ ಕಾಂತಿಗಳಿಂದ ಸುತ್ತಲೂ ಕೆಂಪು ಬಿಳುಪಾದ ದಿಣ್ಣೆಗಳುಳ್ಳುದಾಗಿ ಚಿಬ್ಬುಗಳುಳ್ಳವನಂತಿರುವುದೂ

**ಕ್ವಚಿ[೪]ದ್ವಿಶ್ಲಿಷ್ಟಶೈಲೇಯಪಟಲೈರ್ಬಹು[೫]ದದ್ರುಣೈಃ ।**
**ಮೃಗೇಂದ್ರನಖರೋಲ್ಲೇಖಸಹೈರ್ಗಂಡೋಪಲೈಸ್ತತಮ್ ॥ ೨೪ ॥**

ಕೆಲವು ಕಡೆಯಲ್ಲಿ ಶಿಥಿಲವಾದ ಕಲ್ಲುಹೂವುಗಳ ಸಮೂಹಗಳಿಂದ ಮಹಾಕುಷ್ಠರೋಗವುಳ್ಳವನಂತಿರುವುವೂ ಸಿಂಹಗಳ ಉಗುರುಗಳ ಉಜ್ಜಾಟಗಳನ್ನು ಸಹಿಸುವುವೂ ಆದ ದೊಡ್ಡ ದೊಡ್ಡ ಬಂಡೆಗಳಿಂದ ವ್ಯಾಪ್ತವೂ

**ಕ್ವಚಿ[೬]ದ್ಗುಹಾಂತರಾಗುಂಜನ್ಮೃಗೇಂದ್ರ ಪ್ರತಿನಾದಿನೀಃ ।**
**ತಟೀರ್ದಧಾನಮುದ್ಬದ್ಧಮದೈಃ ಪರಿಹೃತಾ ಗಜೈಃ ॥ ೨೫ ॥**

ಕೆಲವು ಕಡೆಯಲ್ಲಿ ಗುಹೆಯ ಮಧ್ಯದಲ್ಲಿ ಧ್ವನಿಮಾಡುತ್ತಿರುವ ಸಿಂಹಗಳ ಪ್ರತಿಧ್ವನಿಗಳುಳ್ಳುವೂ ಹೆಚ್ಚಾಗಿ ಮದಿಸಿದ ಆನೆಗಳಿಂದ ತ್ಯಜಿಸಲ್ಪಟ್ಟುವೂ ಆದ ತಪ್ಪಲುಗಳನ್ನು ಧರಿಸಿರುವುದೂ

**ಕ್ವಚಿ[೭]ತ್ಸಿತೋಪಲೋತ್ಸಂಗಚಾರಿಣೀರಮರಾಂಗನಾಃ ।**
**ಬಿಭ್ರಾಣಂ ಶರದಭ್ರಾಂತರ್ವರ್ತಿನೀರಿವ ವಿದ್ಯುತಃ ॥ ೨೬ ॥**

ಕೆಲವು ಕಡೆಯಲ್ಲಿ, ಶರತ್ಕಾಲದ ಮೇಘಗಳ ಮಧ್ಯದಲ್ಲಿರುವ ಮಿಂಚುಗಳನ್ನು ಧರಿಸಿದೆಯೋ ಎಂಬಂತೆ, ಸ್ಪಟಿಕಶಿಲೆಯ ಮಧ್ಯದಲ್ಲಿ ಸಂಚರಿಸುವ ದೇವಸ್ತ್ರೀಯರನ್ನು ಧರಿಸಿರುವುದೂ

**ತಮಿತ್ಯದ್ಭುತಯಾ ಲಕ್ಷ್ಮ್ಯಾ ಪರೀತಂ ಭೂಭೃತಾಂ ಪತಿಮ್ ।**
**ಸ್ವಮಿವಾಲಂಘ್ಯಮಾಲೋಕ್ಯ ಚಕ್ರಪಾಣಿರಗಾನ್ಮುದಮ್ ॥ ೨೭ ॥**

ಈ ಪ್ರಕಾರವಾಗಿ ಆಶ್ಚರ್ಯಕರವಾದ ಸಂಪತ್ತಿನಿಂದ ವ್ಯಾಪ್ತವೂ ಪರ್ವತಗಳಿಗೆ ಅಧಿಪತಿಯೂ ರಾಜಾಧಿರಾಜನಾದ ತನ್ನಂತೆ ಮೀರಲಶಕ್ಯವೂ ಆದ ಆ ಪರ್ವತವನ್ನು ನೋಡಿ ಚಕ್ರವರ್ತಿಯು ಸಂತೋಷವನ್ನು ಪಡೆದನು.

**ಗಿರೇರಧಸ್ತಲೇ ದೂರಾದ್ವಾಹನಾದಿಪರಿಚ್ಛದಮ್ ।**
**ವಿಹಾಯ ಪಾದಚಾರೇಣ ಯಯೌ ಕಿಲ ಸ ಧರ್ಮಧೀಃ ॥ ೨೮ ॥**

ಧರ್ಮಬುದ್ಧಿಯುಳ್ಳ ಆ ಭರತೇಶ್ವರನು ಕೈಲಾಸಪರ್ವತದ ಕೆಳಗಡೆಯಲ್ಲಿ ದೂರದಲ್ಲಿ ವಾಹನ ಮೊದಲಾದ ಪರಿವಾರವನ್ನು ಬಿಟ್ಟು ಕಾಲುನಡಿಗೆಯಿಂದ ಹೋದನಂತೆ.

**ಪದ್ಭ್ಯಾಮಾರೋಹತೋ[೮]ಸ್ಯಾದ್ರಿಂ ನಾಸೀತ್ಖೇದೋ ಮನಾಗಪಿ ।**
**ಹಿತಾರ್ಥಿನಾಂ ಹಿ ಖೇದಾಯ ನಾ[೯]ತ್ಮನೀನಃ ಕ್ರಿಯಾವಿಧಿಃ ॥ ೨೯ ॥**

ಕಾಲುಗಳಿಂದ ಪರ್ವತವನ್ನು ಹತ್ತಿದ ಈ ಭರತೇಶ್ವರನಿಗೆ ಸ್ವಲ್ಪವೂ ಕಷ್ಟವಾಗಲಿಲ್ಲ. ಹಿತವನ್ನಿಚ್ಛಿಸುವವರಿಗೆ ಆತ್ಮಹಿತವಾದ ಕ್ರಿಯಾನಿಯಮವು ನಿಜವಾಗಿಯೂ ಖೇದಕ್ಕೆ ಕಾರಣವಾಗುವುದಿಲ್ಲ.

---

೧ ವಂದನಶೀಲಸ್ಯ. ೨ ಆಗಚ್ಛತಃ, ಆಸ್ಕಂದಿನ ಇತ್ಯಪಿ ಪಾಠಃ. ೩ ವಿದಾರಿತ. ೪ ಉದ್ಗತ. ೫ ಸ್ಪಟಿಕಪಾಷಾಣ. ೬ ಖಚರಾಣಾಮಾಸಮಂತಾತ್ಕ್ರೀಡಾ ಯೇಷು ತಾನಿ. ೭ ನೀಲರತ್ನಾಂಶು. ೮ ಪದ್ಮರಾಗಾಣಾಂ.

೧ ಮಿಲಿತೈಃ. ೨ ಆಪಾಟಲಸಾನ್ವಂತಂ. ೩ ಸಿಧ್ಮಲಂ. ೪ ಶಿಥಿಲಶಿಲಾಪುಷ್ಪಸಮೂಹೈಃ. ೫ ದದ್ರುರೋಗಿಸದೃಶೈಃ. ೬ ಗುಹಾಮಧ್ಯಧ್ವನನ್ಮೃಗೇಂದ್ರಪ್ರತಿಧ್ವನಿವತೀಃ. ೭ ಸ್ಪಟಿಕಶಿಲಾಮಧ್ಯ. ೮ ಭರತಸ್ಯ. ೯ ಆತ್ಮಹಿತಃ.

**ಆರುರೋಹ ಸ ತಂ ಶೈಲಂ ಸುರಶಿಲ್ಪಿವಿನಿರ್ಮಿತೈಃ ।**
**ವಿವಿಕ್ತೈರ್ಮಣಿಸೋಪಾನೈಃ ಸ್ವರ್ಗಸ್ಯೇವಾ[೧]ಧಿರೋಹಣೈಃ ॥ ೩೦ ॥**

ಆ ಭರತೇಶ್ವರನು ಸ್ವರ್ಗಕ್ಕೆ ಏಣಿ–ನಿಚ್ಚಣಿಗೆಯಂತಿರುವುವೂ ದೇವಶಿಲ್ಪಿಯಿಂದ ನಿರ್ಮಿತಗಳೂ ಪವಿತ್ರಗಳೂ ಆದ ರತ್ನದ ಮೆಟ್ಟಲುಗಳಿಂದ ಆ ಕೈಲಾಸಪರ್ವತವನ್ನು ಹತ್ತಿದನು.

**[೨]ಅಧಿತ್ಯಕಾಸು ಸೋಸ್ಯಾದ್ರೇಃ [೩]ಪ್ರಚ್ಛಾಯವನರಾಜಿಷು ।**
**[೪]ಲಂಭಿತೋತಿಥಿಸತ್ಕಾರಮಿವ ಶೀತೈರ್ವನಾನಿಲೈಃ ॥ ೩೧ ॥**

ಈ ಪರ್ವತದ ಹೆಚ್ಚುಗಾಳಿಯುಳ್ಳ ವನಗಳ ಸಾಲುಗಳುಳ್ಳ ಮೇಲಿನ ಭೂಮಿಗಳಲ್ಲಿ ವನದ ತಂಗಾಳಿಗಳಿಂದ ಭರತೇಶ್ವರನು ಅತಿಥಿಸತ್ಕಾರಮಾಡಲ್ಪಟ್ಟನೋ ಎಂಬಂತಿದ್ದನು.

**ಕ್ವಚಿದುತ್ಫುಲ್ಲಮಂದಾರವಣವೀಥೀವಿಹಾರಿಣೀಃ ।**
**[೫]ವಿವಿಕ್ತಸುಮನೋಭೂಷಾಃ ಸೋಪಶ್ಯದ್ವನದೇವತಾಃ ॥ ೩೨ ॥**

ಕೆಲವುಕಡೆಯಲ್ಲಿ ಭರತರಾಜನು ಅರಳಿದ ಮಂದಾರವೃಕ್ಷಗಳ ವನಪಂಕ್ತಿಗಳಲ್ಲಿ ವಿಹರಿಸುವವರೂ ಬೇರೆಬೇರೆ ಹೂವುಗಳ ಭೂಷಣಗಳುಳ್ಳವರೂ ಆದ ವನದೇವತೆಗಳನ್ನು ನೋಡಿದನು.

**ಕ್ವಚಿದ್ವನಾಂತಸಂಸುಪ್ತನಿಜ[೬]ಶಾಬಾನುಶಾಯಿನೀಃ ।**
**ಮೃಗೀರಪಶ್ಯ[೭]ದಾರಬ್ಧಮೃದುರೋಮಂಥ[೮]ಮಂಥರಾಃ ॥ ೩೩ ॥**

ಕೆಲವುಕಡೆಯಲ್ಲಿ ಭರತರಾಜನು ವನದೊಳಗೆ ಮಲಗಿದ್ದ ತಮ್ಮ ಮರಿಗಳ ಬಳಿಯಲ್ಲಿ ಮಲಗಿರುವುವೂ ಮೆಲ್ಲನೆ ಪ್ರಾರಂಭಿಸಿದ ಮೆಲುಕಿನಿಂದ ಮನೋಹರಗಳೂ ಆದ ಹೆಣ್ಣುಜಿಂಕೆಗಳನ್ನು ನೋಡಿದನು.

**ಕ್ವಚಿನ್ನಿಕುಂಜಸಂಸುಪ್ತಾ[೯]ನ್ಬೃಹತಃ [೧೦]ಶಯುಪೋತಕಾನ್ ।**
**[೧೧]ಪುರೀತನ್ನಿಕರಾನದ್ರೇರಿವಾಪಶ್ಯತ್ಸ ಪುಂಜಿತಾನ್ ॥ ೩೪ ॥**

ಕೆಲವುಕಡೆಯಲ್ಲಿ ಭರತರಾಜನು ಪೊದೆಗಳಲ್ಲಿ ಗುಂಪಾಗಿ ಮಲಗಿರುವುವೂ ಪರ್ವತದ ಕರುಳುಗಳ ಸಮೂಹಗಳೋ ಎಂಬಂತಿರುವುವೂ ಆದ ದೊಡ್ಡ ಹೆಬ್ಬಾವುಗಳ ಮರಿಗಳನ್ನು ನೋಡಿದನು.

**ಕ್ವಚಿದ್ಗಜಮದಾಮೋದವಾಸಿತಾನ್ಗಂಡಶೈಲಕಾನ್ ।**
**[೧೨]ದದೃಶೇ ಹರಿರಾರೋಷಾದುಲ್ಲಿಖನ್ನಖರಾಂಕುರೈಃ ॥ ೩೫ ॥**

ಕೆಲವುಕಡೆಯಲ್ಲಿ ಭರತಚಕ್ರಿಯು ಆನೆಗಳ ಮದಜಲದ ಪರಿಮಳದಿಂದ ಕೂಡಿರುವ ಕಲ್ಲುಬಂಡೆಗಳನ್ನು ಬಹುಕೋಪದಿಂದ ಉಗುರುಗಳಿಂದ ಪರಚುತ್ತಿರುವ ಸಿಂಹವನ್ನು ಕಂಡನು.

**ಕ್ವಚಿದಂತರಮಾರುಹ್ಯ ಪಶ್ಯನ್ನದ್ರೇಃ ಪರಾಂ ಶ್ರಿಯಮ್ ।**
**ಪ್ರಾಪ್ತಾವಸರಮಿತ್ಯೂಚೇ ವಚನಂ [೧೩]ಸ [೧೪]ಪುರೋಧಸಾ ॥ ೩೬ ॥**

ಕೆಲವುದೂರದವರೆಗೆ ಬೆಟ್ಟವನ್ನು ಹತ್ತಿ ಅದರ ಉತ್ಕೃಷ್ಟವಾದ ಶೋಭೆಯನ್ನು ನೋಡುತ್ತಿರುವ ಭರತೇಶ್ವರನಿಗೆ ಪುರೋಹಿತನು ಮುಂದೆ ಹೇಳುವ ಪ್ರಕಾರವಾಗಿ ಸಮಯೋಚಿತವಾದ ಮಾತನ್ನು ಹೇಳಿದನು.

**ಪಶ್ಯ ದೇವಗಿರೇರಸ್ಯ ಪ್ರದೇಶಾನ್ಬಹುವಿಸ್ಮಯಾನ್ ।**
**ರಮಂತೇ ತ್ರಿದಶಾ ಯತ್ರ ಸ್ವರ್ಗಾವಾಸೇಷ್ಯನಾದರಾಃ ॥ ೩೭ ॥**

೧ ನಿಶ್ರೇಣಿಭಿಃ. ೨ ಉರ್ಧ್ವಭೂಮಿಷು. ೩ ಪ್ರಕೃಷ್ಟಚ್ಛಾಯ. ೪ ಪ್ರಾಪಿತಃ. ೫ ವಿಭಿನ್ನ. ೬ ಶಾಬಸಮೀಪಶಾಯಿನೀಃ. ೭ ಉಪಕ್ರಾಂತ. ೮ ಮನೋಹರಾಃ. ೯ ಮಹತಃ. ೧೦ ಅಜಗರಶಿಶೂನ್. ೧೧ ಅಂತ್ರಸಮೂಹಾನ್. ೧೨ ದೃಶ್ಯತೇ ಸ್ಮ. ೧೩ ಭರತಃ. ೧೪ ಪುರೋಹಿತೇನ.

''ಸ್ವಾಮಿಯೇ ! ಈ ಪರ್ವತದ ಬಹು ವಿಸ್ಮಯಕರವಾದ ಪ್ರದೇಶಗಳನ್ನು ನೋಡು. ಇಲ್ಲಿ ದೇವತೆಗಳು ಸ್ವರ್ಗವಾಸದಲ್ಲಿಯೂ ಪ್ರೀತಿಯಿಲ್ಲದವರಾಗಿ ಕ್ರೀಡಿಸುತ್ತಾರೆ.

**[೧]ಪರ್ಯಾಪ್ತಮೇತದೇವಾ[೨]ಸ್ಯ ಪ್ರಾಭವಂ ಭುವನಾತಿಗಮ್ ।**
**ದೇವೋ ಯ[೩]ದೇನಮಧ್ಯಾಸ್ತೇ ಚರಾಚರಗುರುಃ ಪುರುಃ ॥ ೩೮ ॥**

ಚರಾಚರಗುರುವಾದ ವೃಷಭಸ್ವಾಮಿಯು ಈ ಪರ್ವತದಲ್ಲಿ ವಿರಾಜಮಾನರಾಗಿರುವುದರಿಂದ ಇದರ ಲೋಕಾತಿಕ್ರಾಂತವಾದ ಈ ಪ್ರಭುತ್ವವೇ ಸಂಪೂರ್ಣವಾಗಿದೆ. ಸ್ವಾಮಿಯು ವಿರಾಜಮಾನರಾಗಿರುವುದೇ ಈ ಪರ್ವತದ ಅಧಿಕ ಮಹತ್ತ್ವದ್ಯೋತಕವೆಂದು ಭಾವವು.

**ಮಹಾದ್ರಿರಯಮುತ್ಸಂಗಸಂಗಿನೀಃ ಸರಿದಂಗನಾಃ ।**
**ಶಶ್ವದ್ಬಿಭರ್ತಿ ಕಾಮೀವ ಗಲನ್ನೀಲಜಲಾಂಶುಕಾಃ ॥ ೩೯ ॥**

ಈ ದೊಡ್ಡ ಬೆಟ್ಟವು ತಪ್ಪಲುಗಳಲ್ಲಿ ಸಂಬಂಧಿಸಿರುವುವೂ ಜಾರುತ್ತಿರುವ ನೀಲವರ್ಣದ ನೀರುಗಳೆಂಬ ವಸ್ತ್ರಗಳುಳ್ಳುವೂ ಆದ ನದಿಗಳೆಂಬ ಸ್ತ್ರೀಯರನ್ನು ಕಾಮುಕನಂತೆ, ಬಾರಿಬಾರಿಗೆ ಧರಿಸಿರುತ್ತದೆ. ಯಾವಾಗಲೂ ನದಿಗಳು ಹರಿಯುತ್ತವೆಂದು ಭಾವವು.

**ಕ್ರೀಡಾಹೇತೋ[೪]ರಹಿಂಸ್ರೋಪಿ ಮೃಗೇಂದ್ರೋ ಗಿರಿಕಂದರಾತ್ ।**
**[೫]ಮಹಾಹಿಮಯಮಾಕರ್ಷನ್ ಧೈರ್ಯಾನ್ಮುಂಚ[೬]ತ್ಯಪಾರಯನ್ ॥ ೪೦ ॥**

ಘಾತುಕವಲ್ಲದಿದ್ದರೂ ಈ ಸಿಂಹವು ಆಟಕ್ಕೋಸ್ಕರ ಪರ್ವತದ ಗುಹೆಯಿಂದ ಹೆಬ್ಬಾವನ್ನೆಳೆದು ಅದು ಉದ್ದವಾಗಿರುವುದರಿಂದ ಎಳೆಯಲಾರದೆ ಬಿಡುತ್ತದೆ.

**ಸರ್ವ[೭]ದ್ವಂದ್ವಸಹಾ[೮]ನ್ಸಾರ್ವಾನ್ ಜನತಾತಾಪಹಾರಿಣಃ ।**
**ಮುನೀನಿವ ವನಾಭೋಗಾ[೯]ನೇಷ ಧತ್ತೇಧಿಮೇಖಲಮ್ ॥ ೪೧ ॥**

ಈ ಪರ್ವತವು ತಪ್ಪಲುಗಳಲ್ಲಿ, ಸಮಸ್ತ ದುಃಖವನ್ನು ಸಹಿಸುವವರೂ ಸರ್ವರಿಗೂ ಹಿತಕರರೂ ಜನಸಮೂಹದ ತಾಪವನ್ನು ನಾಶಮಾಡುವವರೂ ಆದ ಮುನಿಗಳನ್ನು ಧರಿಸುವಂತೆ, ಸಮಸ್ತಪ್ರಾಣಿಯುಗಲಗಳನ್ನು ಧರಿಸುವುವೂ ಸರ್ವಪ್ರಾಣಿಹಿತಕರಗಳೂ ಜನಸಮೂಹದ ತಾಪವನ್ನು ನಾಶಮಾಡುವುವೂ ಆದ ಅರಣ್ಯಪ್ರದೇಶಗಳನ್ನು ಧರಿಸಿರುತ್ತದೆ.

**ಹರೀನ್ನಖರನಿರ್ಭಿನ್ನಮದದ್ವಿರದಮಸ್ತಕಾನ್ ।**
**ನಿರ್ಝರೈಃ ಪಾಪಭೀತ್ಯೇವ ತರ್ಜಯ[೧೦]ತ್ಯೇಷ [೧೧]ಸಾರವೈಃ ॥ ೪೨ ॥**

ಈ ಪರ್ವತವು ಉಗುರುಗಳಿಂದ ಮದಗಜಗಳ ಮಸ್ತಕಗಳನ್ನು ಸೀಳುವ ಸಿಂಹಗಳನ್ನು ಪಾಪಭೀತಿಯಿಂದಲೋ ಎಂಬಂತೆ, ಧ್ವನಿಸಹಿತವಾದ ಗಿರಿನದೀ ಪ್ರವಾಹಗಳಿಂದ ತಿರಸ್ಕರಿಸುತ್ತದೆ.

**ಧತ್ತೇ[೧೨]ಸಾನುಚರಾನ್ಭದ್ರಾ[೧೩]ನುಚ್ಚೈರ್ವಂಶಾ[೧೪]ನ್ಸ್ವವಗ್ರಹಾನ್ ।**
**ವನದ್ವಿಪಾನಯಂ ಶೈಲೋ ಭವಾನಿವ [೧೫]ಮಹೀಭುಜಃ ॥ ೪೩ ॥**

ನೀನು ಸೇವಕರೊಡನೆ ಕೂಡಿರುವವರೂ ಭದ್ರಸ್ವಭಾವದವರೂ ಶ್ರೇಷ್ಠ ವಂಶಿಕರೂ ಒಳ್ಳೆಯ ಹಣೆಗಳುಳ್ಳವರೂ ಆದ ರಾಜರುಗಳನ್ನು ಪೋಷಿಸುವಂತೆ, ಈ ಪರ್ವತವು ತಪ್ಪಲುಗಳಲ್ಲಿ ಸಂಚರಿಸುವುವೂ ಶುಭಲಕ್ಷಣಗಳುಳ್ಳುವೂ ಎತ್ತರವಾದ ಬೆನ್ನುಮೂಳೆಗಳುಳ್ಳುವೂ ಚೆನ್ನಾಗಿ ಸ್ವಾತಂತ್ರ್ಯವಿಲ್ಲದುವೂ ಆದ ವನಗಜಗಳನ್ನು ಪೋಷಿಸುತ್ತದೆ.

೧ ಸಂಪೂರ್ಣಂ. ೨ ಗಿರೇಃ. ೩ ಗಿರೌ. ೪ ಅಘಾತುಕೋಪಿ. ೫ ಅಜಗರಂ. ೬ ಅಸಮರ್ಥಯನ್. ೭ ಪ್ರಾಣಿಯುಗಲಂ, ಪಕ್ಷೇದುಃಖಂ. ೮ ಸರ್ವಹಿತಾನ್. ೯ ಗಿರಿಃ. ೧೦ ಗಿರಿಃ. ೧೧ ಧ್ವನಿಸಹಿತೈಃ. ೧೨ ಸಾನುಷು ಚರಂತೀತಿ ಸಾನುಚರಾಸ್ತಾನ್, ಪಕ್ಷೇ ಅನುಚರೈಃ ಸಹಿತಾನ್. ೧೩ ಉನ್ನತಪೃಷ್ಠಾಸ್ಥೀನ್, ಪಕ್ಷೇ ಇಕ್ಷ್ವಾಕ್ವಾದಿವಂಶಾನ್. ೧೪ ಶೋಭನಲಲಾಟಾನ್, ಪಕ್ಷೇ ಸುಷ್ಠು ಸ್ವತಂತ್ರತಾನಿಷೇಧಾನ್. ೧೫ ಭೂಪತೀನ್.

**ಧ್ವನತೋ [೧]ಘನಸಂಘಾತಾ[೨]ನ್ಯರಭಾ ರಭಸಾದಮೀ ।**
**ದ್ವಿರದಾಶಂಕಯೋ[೩]ತ್ಪತ್ಯ ಪತಂತೋ ಯಾಂತಿ [೪]ಶೋಚ್ಯತಾಮ್ ॥**

ಈ ಅಷ್ಟಾಪದ ಮೃಗಗಳು ಗರ್ಜಿಸುತ್ತಿರುವ ಮೇಘಸಮೂಹಗಳನ್ನು ನೋಡಿ ಆನೆಗಳೆಂಬ ಸಂದೇಹದಿಂದ ಮೇಲಕ್ಕೆ ಹಾರಿಬಿದ್ದು ದುಃಖವನ್ನು ಹೊಂದುತ್ತವೆ.

**[೫]ಕಪೋಲಕಾಷಸಂರುಗ್ಣತ್ವಚೋ ಮದಜ[೬]ಲಾವಿಲಾಃ ।**
**ದ್ವಿಪಾನಾಂ ವನಸಂಭೋಗಂ ಸೂಚಯಂತೀ[೭]ಹ ಶಾಖಿನಃ ॥ ೪೫ ॥**

ಕೆನ್ನೆಗಳ ಉಜ್ಜಾಟದಿಂದ ಸೀಳಿದ ತೊಗಟೆಗಳುಳ್ಳವೂ ಮದಜಲದಿಂದ ನೆನೆದಿರುವುವೂ ಆದ ಮರಗಳು ಈ ಪರ್ವತದಲ್ಲಿ ಆನೆಗಳ ವನಸಂಭೋಗವನ್ನು ಅಂದರೆ ಅನುಭೋಗವನ್ನು ಸೂಚಿಸುತ್ತವೆ.

**[೮]ಶಾಖಾಮೃಗಾ ಮೃಗೇಂದ್ರಾಣಾಂ ಗರ್ಜಿತೈ[೯]ರಿಹ ತರ್ಜಿತಾಃ ।**
**ಪುಂಜೀಭೂತಾ ನಿಕುಂಜೇಷು ಪಶ್ಯ ತಿಷ್ಠಂತಿ ಸಾಧ್ವಸಾತ್ ॥ ೪೬ ॥**

ಈ ಪರ್ವತದಲ್ಲಿ ಸಿಂಹಗಳ ಗರ್ಜನೆಗಳಿಂದ ತಿರಸ್ಕರಿಸಲ್ಪಟ್ಟ ಮಂಗಗಳು ಭಯದಿಂದ ಪೊದರುಗಳಲ್ಲಿ ಗುಂಪುಸೇರಿರುತ್ತವೆ. ನೋಡು.

**ಮುನೀಂದ್ರಪಾಠನಿರ್ಘೋಷೈರಿತೋ ರಮ್ಯಮಿದಂ ವನಮ್ ।**
**ತೃಣಾಗ್ರಕವಲಗ್ರಾಸಿಕುರಂಗಕುಲಸಂಕುಲಮ್ ॥ ೪೭ ॥**

ಈ ಕಡೆಯಲ್ಲಿ ಹುಲ್ಲುಗಳ ತುದಿಯನ್ನು ತಿನ್ನುವ ಜಿಂಕೆಗಳ ಸಮೂಹದಿಂದ ವ್ಯಾಪ್ತವಾದ ಈ ವನವು ಮುನೀಶ್ವರರ ಶಾಸ್ತ್ರಾಧ್ಯಯನದ ಶಬ್ದಗಳಿಂದ ರಮಣೀಯವಾಗಿದೆ.

**ಇತಶ್ಚ ಹರಿಣಾರಾತಿಕಠೋರಾರವಭೀಷಣಮ್ ।**
**ವಿಮುಕ್ತಕವಲಚ್ಛೇದಪ್ರಪಲಾಯಿತಕುಂಜರಮ್ ॥ ೪೮ ॥**

ಈ ಕಡೆಯಲ್ಲಿ ಸಿಂಹದ ಕಠೋರಶಬ್ದದಿಂದ ಭಯಂಕರವಾದ ಅರಣ್ಯವು ಕಳವಳವನ್ನು ಬಿಟ್ಟು ಓಡಿಹೋದ ಆನೆಗಳುಳ್ಳದಾಗಿದೆ. ಸಿಂಹಗರ್ಜನೆಗೆ ಬೆದರಿ ಆನೆಗಳು ಮೇವನ್ನು ಬಿಟ್ಟು ಓಡಿಹೋದುವೆಂದು ಭಾವವು.

**[೧೦]ಜರಜ್ಜರಂತಶೃಂಗಾಗ್ರಕ್ಷತವಲ್ಮೀಕರೋಧಸಃ ।**
**ಇತೋ ರಮ್ಯಾ ವನೋದ್ದೇಶಾ ವರಾಹೋತ್ಖಾತ[೧೧]ಪಲ್ವಲಾಃ ॥ ೪೯ ॥**

ಈಕಡೆಯಲ್ಲಿ ಮುದಿಯಾದ ಕೋಣಗಳ ಕೊಂಬುಗಳ ತುದಿಗಳಿಂದ ಕೆದಕಲ್ಪಟ್ಟ ಹುತ್ತಗಳುಳ್ಳ ತಪ್ಪಲುಗಳುಳ್ಳದೂ ಹಂದಿಗಳಿಂದ ಕೆದಕಲ್ಪಟ್ಟ ಅಲ್ಪಸರೋವರಗಳುಳ್ಳದೂ ಆದ ವನಪ್ರದೇಶಗಳು ರಮಣೀಯಗಳಾಗಿರುತ್ತವೆ.

**ಮೃಗೈಃ ಪ್ರವಿಷ್ಟವೇಶಂತ್ಯೈ[೧೨]ರ್ವಂಶಸ್ತಂಭೋಪಗೈರ್ಗಜೈಃ ।**
**ಸೂಚ್ಯತೇ [೧೩]ಹರಿಣಾಕ್ರಾಂತಂ ವನಮೇತದ್ಭಯಾನಕಮ್ ॥ ೫೦ ॥**

ಹಳ್ಳಗಳಿಗೆ ಪ್ರವೇಶಿಸಿದ ಜಿಂಕೆಗಳಿಂದಲೂ ಬಿದಿರುಗಳ ಹಿಂಡಲುಗಳ ಸಮೀಪದಲ್ಲಿರುವ ಆನೆಗಳಿಂದಲೂ ಭಯಂಕರವಾದ ಈ ಅರಣ್ಯವು ಸಿಂಹದಿಂದ ಆಕ್ರಮಿಸಲ್ಪಟ್ಟಿರುವುದೆಂದು ಸೂಚಿಸುತ್ತದೆ.

**ವನಪ್ರವೇಶಿಭಿರ್ನಿತ್ಯಂ ನಿತ್ಯಂ ಸ್ಥಂಡಿಲಶಾಯಿಭಿಃ ।**
**ನ ಮುಚ್ಯತೇಯಮದ್ರೀಂದ್ರೋ ಮೃಗೈರ್ಮುನಿಗಣೈರಪಿ ॥ ೫೧ ॥**

ಯಾವಾಗಲೂ ವನವನ್ನು ಪ್ರವೇಶಿಸುವವರೂ ನೆಲದಲ್ಲಿ ಮಲಗುವವರೂ ಆದ ಮುನಿಗಳು ಈ ಪರ್ವತವನ್ನು ಬಿಡದಿರುವಂತೆ, ಯಾವಾಗಲೂ ವನವನ್ನು ಪ್ರವೇಶಿಸುವುವೂ ನೆಲದಲ್ಲಿ ಮಲಗುವುವೂ ಆದ ಜಿಂಕೆಗಳು ಈ ಪರ್ವತವನ್ನು ಬಿಡುವುದಿಲ್ಲ.

**ಇತಿ ಪ್ರಶಾಂತೋ ರೌದ್ರಶ್ಚ ಸದೈವಾಯಂ ಧರಾಧರಃ ।**
**ಸನ್ನಿಧಾನಾಜ್ಜಿನೇಂದ್ರಸ್ಯ ಶಾಂತ ಏವಾಧುನಾ ಪುನಃ ॥ ೫೨ ॥**

ಈ ಪ್ರಕಾರವಾಗಿ ಯಾವಾಗಲೂ ಬಹಳ ಶಾಂತವೂ ಭಯಂಕರವೂ ಆಗಿರುವ ಈ ಪರ್ವತವು ಜಿನೇಶ್ವರನ ಸಾನ್ನಿಧ್ಯದಿಂದ ಈಗ ಪುನಃ ಶಾಂತವಾಗಿಯೇ ಇರುತ್ತದೆ.

**ಗಜೈಃ ಪಶ್ಯ ಮೃಗೇಂದ್ರಾಣಾಂ [೧]ಸಂವಾಸಮಿಹ ಕಾನನೇ ।**
**ನಖರಕ್ಷತಮಾರ್ಗೇಷು ಸ್ವೈರಮಾಸ್ಪೃಶತಾಮಿಭಾನ್ ॥ ೫೩ ॥**

ಈ ಅರಣ್ಯದಲ್ಲಿ ಉಗುರುಗಳಿಂದ ಗುರುತಾಗಿರುವ ದಾರಿಗಳಲ್ಲಿ ಯಥೇಚ್ಛವಾಗಿ ಆನೆಗಳನ್ನು ಸ್ಪರ್ಶಿಸುತ್ತಿರುವ ಸಿಂಹಗಳಿಗೆ ಆನೆಗಳೊಡನೆ ಸಹವಾಸವನ್ನು ನೋಡು. ಸಿಂಹಗಳು ಆನೆಗಳೊಡನೆ ಸಹವಾಸದಲ್ಲಿರುವುದನ್ನು ನೋಡೆಂದು ಭಾವವು.

**ಚಾರಣಾಧ್ಯುಷಿತಾನೇತೇ [೨]ಗುಹೋತ್ಸಂಗಾ[೩]ನಶಂಕಿತಾಃ ।**
**ವಿಶಂತ್ಯನುಗತಾಃ ಶಾಬೈಃ [೪]ಪಾಕಸತ್ತ್ವೈಃ ಸಮಂ [೫]ಮೃಗಾಃ ॥ ೫೪ ॥**

ತಮ್ಮ ಮರಿಗಳಿಂದ ಹಿಂಬಾಲಿಸಲ್ಪಟ್ಟ ಈ ಜಿಂಕೆಯೇ ಮೊದಲಾದ ಮೃಗಗಳು ಚಾರಣಮುನಿಗಳು ವಾಸಮಾಡಿರುವ ಗುಹೆಯ ಮಧ್ಯಭಾಗಗಳನ್ನು ಸಿಂಹ ಶಾರ್ದೂಲ ಮೊದಲಾದ ಕ್ರೂರಮೃಗಗಳೊಡನೆ ನಿರ್ಭಯವಾಗಿ ಪ್ರವೇಶಿಸುತ್ತವೆ.

**ಅಹೋ ಪರಮಮಾಶ್ಚರ್ಯಂ ತಿರಶ್ಚಾಮಪಿ ಯದ್ಗಣೈಃ ।**
**[೬]ಅನುಯಾತಂ ಮೃಗೇಂದ್ರಾಣಾಮಜ್ಞಾತಭಯಸಂಪದಾಮ್ ॥ ೫೫ ॥**

ತಿರ್ಯಕ್ಪ್ರಾಣಿಗಳ ಮತ್ತು ಭಯವನ್ನು ತಿಳಿಯದ ಸಿಂಹಗಳ ಸಮೂಹಗಳಿಂದಲೂ ಹಿಂಬಾಲಿಸಲ್ಪಡುವುದೆಂಬುದು ಪರಮಾಶ್ಚರ್ಯವಾಗಿದೆ.

**ಸೋ[೭]ಯಮಷ್ಟಾಪದೈ[೮]ರ್ಜುಷ್ಟೋ ಮೃಗೈರನ್ವರ್ಥನಾಮಭಿಃ ।**
**ಪುನರಷ್ಟಾಪದಖ್ಯಾತಿಂ [೯]ಪುರ್ಯೈತಿ [೧೦]ತ್ವದುಪಕ್ರಮಮ್ ॥ ೫೬ ॥**

ಸಾರ್ಥಕವಾದ ಹೆಸರುಳ್ಳ ಅಷ್ಟಾಪದಗಳೆಂಬ ಮೃಗಗಳಿಂದ ಸೇವಿಸಲ್ಪಟ್ಟ ಈ ಪರ್ವತವು ನಿನ್ನಿಂದ ಮೊದಲು ಉಪಕ್ರಮಿಸಲ್ಪಟ್ಟು–ಹತ್ತಲ್ಪಟ್ಟು ಮುಂದೆ ಪುನಃ ಅಷ್ಟಾಪದವೆಂಬ ಪ್ರಸಿದ್ಧಿಯನ್ನು ಹೊಂದುವುದು.

**ಸ್ಫುರನ್ಮಣಿತಟೋಪಾಂತಂ ತಾರಕಾಚಕ್ರ[೧೧]ಮಾಪತತ್ ।**
**ನ ಯಾತಿ ವ್ಯಕ್ತಿಮಸ್ಯಾದ್ರೇ [೧೨]ಸ್ತದ್ರೋಚಿಶ್ಛನ್ನಮಂಡಲಮ್ ॥ ೫೭ ॥**

ಈ ಪರ್ವತದ ರತ್ನಗಳ ಪ್ರಭೆಯಿಂದ ವ್ಯಾಪ್ತವಾದ ಆಕಾಶಮಂಡಲವುಳ್ಳದೂ ಪ್ರಕಾಶಮಾನವಾದ ರತ್ನಖಚಿತವೂ ಆದ ತಪ್ಪಲಿನ ಸಮೀಪಕ್ಕೆ ಬರುತ್ತಿರುವ ನಕ್ಷತ್ರಗಳ ಸಮೂಹವು ಅಭಿವ್ಯಕ್ತಿಯನ್ನು ಹೊಂದುವುದಿಲ್ಲ. ಎತ್ತರವಾದ ಬೆಟ್ಟದ ತಪ್ಪಲಿನಲ್ಲಿ ರತ್ನಜ್ಯೋತಿಯಿಂದ ತಿರಸ್ಕೃತವಾದ ನಕ್ಷತ್ರಸಮೂಹವು ಕಾಣಿಸುವುದಿಲ್ಲವೆಂದು ಭಾವವು.

**[೧೩]ಜ್ವಲತ್ಯೌಷಧಿಜಾಲೇಪಿ ನಿಶಿ ನಾಭ್ಯೇತಿ ಕಿನ್ನರಃ ।**
**ತಮೋವಿಶಂಕಯಾಸ್ಯಾದ್ರೇರಿಂದ್ರನೀಲಮಯೀಸ್ತಟೀಃ ॥ ೫೮ ॥**

ರಾತ್ರಿಯಲ್ಲಿ ಔಷಧಿಲತೆಗಳ ಸಮೂಹವು ಪ್ರಕಾಶಿಸುತ್ತಿದ್ದರೂ ಕಿನ್ನರದೇವನು ಕತ್ತಲೆಯ ಸಂದೇಹದಿಂದ ಈ ಪರ್ವತದ ಇಂದ್ರನೀಲಮಯವಾದ ತಪ್ಪಲುಗಳನ್ನು ಪಡೆಯುವುದಿಲ್ಲ.

---

೧ ಮೇಘಸಮೂಹಾನ್. ೨ ಅಷ್ಟಾಪದಮೃಗಾಃ. ೩ ಉತ್ಪ್ಲುತ್ಯ. ೪ ದುಃಖಿತಾಂ. ೫ ಗಂಡಸ್ಥಲನಿಘರ್ಷಣಸಂಭಗ್ನ. ೬ ಆರ್ದ್ರಾಃ. ೭ ಗಿರೌ. ೮ ಮರ್ಕಟಾಃ. ೯ ಇವೇತ್ಯಪಿ ಪಾಠಃ. ೧೦ ವೃದ್ಧಮಹಿಷ. ೧೧ ಅಲ್ಪಸರೋವರಾಃ. ೧೨ ವೇಣುಕುಂಜಸಮೀಪಗೈಃ. ೧೩ ಸಿಂಹೇನಾಕ್ರಾಂತಂ.

೧ ಸಹವಾಸಂ. ೨ ಗುಹಾಮಧ್ಯಾನ್. ೩ ನಿರ್ಭಯಾಃ. ೪ ಸಿಂಹಶಾರ್ದೂಲಾದಿ ಕ್ರೂರಮೃಗೈಃ. ೫ ಹರಿಣಾದಯಃ. ೬ ಅನುಗತಮಿತಿ ಯತ್ತದಹೋ. ೭ ಗಿರಿಃ. ೮ ಸೇವಿತಃ. ೯ ಭವಿಶ್ಯತ್ಕಾಲೇ ಗಮಿಷ್ಯತಿ. ೧೦ ತ್ವಯಾ ಪ್ರಥಮೋಪಕ್ರಮಂ ಯಥಾ ಭವತಿ ತಥಾ. ೧೧ ಆಗಚ್ಛತ್. ೧೨ ರತ್ನಜ್ಯೋತಿಶ್ಛನ್ನಾಕಾಶಮಂಡಲಂ. ೧೩ ಜ್ವಲತಿ ಸತ್ಯಪಿ.

**ಹರಿನ್ಮಣಿತಟೋತ್ಸರ್ಪನ್ಮಯೂಖಾನತ್ರ ಭೂಧರೇ ।**
**ತೃಣಾಂಕುರಧಿಯೋಪೇತ್ಯ ಮೃಗಾ ಯಾಂತಿ [೧]ವಿಲಕ್ಷತಾಮ್ ॥ ೫೯ ॥**

ಈ ಪರ್ವತದಲ್ಲಿ ಜಿಂಕೆಗಳು ಪಚ್ಚೆಯ ರತ್ನದ ತಪ್ಪಲುಗಳಿಂದ ಹರಡುತ್ತಿರುವ ಕಿರಣಗಳನ್ನು ಹುಲ್ಲಿನ ಮೊಳಕೆಗಳೆಂಬ ಬುದ್ಧಿಯಿಂದ ಅವುಗಳ ಸಮೀಪಕ್ಕೆ ಹೋಗಿ ಆಶ್ಚರ್ಯಭಾವವನ್ನು ಹೊಂದುತ್ತವೆ.

**[೨]ಸರೋಜರಾಗರತ್ನಾಂಶು[೩]ಚ್ಛುರಿತಾ ವನರಾಜಯಃ ।**
**ತತಾಃ ಸಂಧ್ಯಾತಪೇನೇವ [೪]ಪುಷ್ಣಂತೀಹ ಪರಾಂ ಶ್ರಿಯಮ್ ॥ ೬೦ ॥**

ಈ ಪರ್ವತದಲ್ಲಿ ಪದ್ಮರಾಗರತ್ನದ ಕಾಂತಿಯಿಂದ ವ್ಯಾಪ್ತವಾದ ವನಗಳ ಸಾಲುಗಳು, ಸಂಧ್ಯಾಕಾಲದ ಬಿಸಿಲಿನಿಂದ ವ್ಯಾಪ್ತವಾದುವುಗಳಂತೆ, ಉತ್ಕೃಷ್ಟವಾದ ಶೋಭೆಯನ್ನು ಹೆಚ್ಚಿಸುತ್ತವೆ.

**ಸೂರ್ಯಾಂಶುಭಿಃ [೫]ಪರಾಮೃಷ್ಟಾಃ ಸೂರ್ಯಕಾಂತಾ ಜ್ವಲಂತ್ಯಮೀ ।**
**ಪ್ರಾಯಸ್ತೇಜಸ್ವಿಸಂಪರ್ಕಸ್ತೇಜಃ ಪುಷ್ಣಾತಿ ತಾದೃಶಮ್ ॥ ೬೧ ॥**

ಸೂರ್ಯಕಿರಣಗಳಿಂದ ವ್ಯಾಪ್ತವಾದ ಈ ಸೂರ್ಯಕಾಂತಶಿಲೆಗಳು ಪ್ರಕಾಶಿಸುತ್ತವೆ. ತೇಜಸ್ವಿಯಾದ ವಸ್ತುವಿನ ಸಂಪರ್ಕವು ಸಾಮಾನ್ಯವಾಗಿ ಅಂತಹ ತೇಜಸ್ಸನ್ನೇ ಹೆಚ್ಚಿಸುತ್ತದೆ.

**ಇಹೇಂದುಕರಸಂಸ್ಪರ್ಶಾತ್ಕ್ಷರಂತೋ[೬]ಪ್ಯನುಕ್ಷಪಮ್ ।**
**ಚಂದ್ರಕಾಂತಾ [೭]ನ ಹೀಯಂತೇ ವಿಚಿತ್ರಾ ಪುದ್ಗಲಸ್ಥಿತಿಃ ॥ ೬೨ ॥**

ಇಲ್ಲಿ ಪ್ರತಿರಾತ್ರಿಯಲ್ಲಿಯೂ ಚಂದ್ರಕಿರಣಗಳ ಸ್ಪರ್ಶದಿಂದ ಸ್ರವಿಸುತ್ತಿರುವ ಚಂದ್ರಕಾಂತಶಿಲೆಗಳು ಕಡಮೆಯಾಗುವುದಿಲ್ಲ ಅಂದರೆ ಕೃಶವಾಗುವುದಿಲ್ಲ. ಪುದ್ಗಲ ದ್ರವ್ಯದ ಸ್ಥಿತಿಯು ವಿಚಿತ್ರವಾದುದು.

**ಸುರಾಣಾಮಭಿಗಮ್ಯತ್ವಾ[೮]ತ್ಸಿಂಹಾಸನಪರಿಗ್ರಹಾತ್ ।**
**ಮಹತ್ತ್ವಾದಚಲತ್ವಾಚ್ಚ ಗಿರಿರೇಷ ಜಿನಾಯತೇ ॥ ೬೩ ॥**

ಈ ಪರ್ವತವು ದೇವತೆಗಳಿಗೆ ಹೊಂದುವುದಕ್ಕೆ ಯೋಗ್ಯವಾಗಿರುವುದರಿಂದಲೂ ಸಿಂಹಗಳನ್ನೂ ಹೊನ್ನೆಯ ಮರಗಳನ್ನೂ ಹೊಂದಿರುವುದರಿಂದಲೂ ದೊಡ್ಡದಾಗಿರುವುದರಿಂದಲೂ ಅಚಲ(ಪರ್ವತ)ವಾಗಿರುವುದರಿಂದಲೂ ದೇವತೆಗಳಿಗೆ ಹೊಂದುವುದಕ್ಕೆ ಅರ್ಹನೂ ಸಿಂಹಪೀಠವನ್ನು ಹೊಂದಿರುವವನೂ ಮಹಾತ್ಮನೂ ಅಚಲ(ಸ್ಥಿರ)ನೂ ಆದ ಜಿನೇಶ್ವರನಂತಿರುತ್ತದೆ.

**ಶುದ್ಧಸ್ಫಟಿಕಸಂಕಾಶನಿರ್ಮಲೋದಾರವಿಗ್ರಹಃ ।**
**ಶುದ್ಧಾತ್ಮೇವ ಶಿವಾಯಾಸ್ತು ತವಾಯಮಚಲಾಧಿಪಃ ॥ ೬೪ ॥**

ಶುದ್ಧವಾದ ಸ್ಫಟಿಕಕ್ಕೆ ಸಮಾನವೂ ನಿರ್ಮಲವೂ ವಿಶಾಲವೂ ಆದ ಆಕಾರವುಳ್ಳ ಈ ದೊಡ್ಡ ಬೆಟ್ಟವು ನಿನಗೆ, ಶುದ್ಧಾತ್ಮನಂತೆ, ಮಂಗಳಕ್ಕೋಸ್ಕರ ಇರಲಿ. ಮಂಗಳವನ್ನುಂಟುಮಾಡುವುದಾಗಿರಲೆಂದು ಭಾವವು.''

**ಇತಿ ಶಂಸತಿ ತಸ್ಯಾದ್ರೇಃ ಪರಾಂ ಶೋಭಾಂ ಪುರೋಧಸಿ ।**
**[೯]ಶಂಸಾದ್ಭೂತ ಇವಾನಂದಂ ಪರಂ ಪ್ರಾಪ[೧೦]ತ್ಪರಂತಪಃ ॥ ೬೫ ॥**

ಈ ಪ್ರಕಾರವಾಗಿ ಪುರೋಹಿತನು ಆ ಪರ್ವತದ ಉತ್ಕೃಷ್ಟವಾದ ಶೋಭೆಯನ್ನು ಹೊಗಳುತ್ತಿರಲು ಭರತಚಕ್ರೇಶ್ವರನು, ಸುಖಪರವಶನಾದಂತೆ, ಬಹುಸಂತೋಷವನ್ನು ಹೊಂದಿದನು.

೧ ವಿಸ್ಮಯವತ್ತಾಂ. ೨ ಪದ್ಮರಾಗರತ್ನ. ೩ ಮಿಶ್ರಿತಾಃ. ೪ ವರ್ಧಯಂತಿ. ೫ ವ್ಯಾಪ್ತಾಃ. ೬ ರಾತ್ರೌ ರಾತ್ರೌ. ೭ ಕೃಶಾ ನ ಭವಂತಿ. ೮ ಪಕ್ಷೇ ಆಸನವೃಕ್ಷಾಣಾಂ ಸ್ವೀಕಾರಾತ್. ೯ ಸುಖಾಯತ್ತಃ. ೧೦ ಪರಂ ಶತ್ರುಂ ತಾಪಯತೀತಿ ಪರಂತಪಶ್ಚಕ್ರೀ.

**ಕಿಂಚಿಚ್ಚಾಂತರಮುಲ್ಲಂಘ್ಯ ಪ್ರಸನ್ನೇ[೧]ನಾಂತರಾತ್ಮನಾ ।**
**[೨]ಪ್ರತ್ಯಾಸನ್ನಂ [೩]ಜಿನಾಸ್ಥಾನಂ ವಿದಾಮಾಸ ವಿದಾಂವರಃ ॥ ೬೬ ॥**

ಪ್ರಾಜ್ಞಾಗ್ರೇಸರನಾದ ಭರತೇಶ್ವರನು ಪ್ರಸನ್ನವಾದ ಮನಸ್ಸಿನಿಂದ ಸ್ವಲ್ಪದೂರ ಹೋಗಿ ಸಮವಸರಣ(ಜಿನೇಶ್ವರನಿರುವ ಮಂಟಪ)ವು ಸಮೀಪದಲ್ಲಿರುವುದೆಂದು ತಿಳಿದನು.

**ನಿಷ್ಪತತ್ಪುಷ್ಪವರ್ಷೇಣ ದುಂದುಭೀನಾಂ ಚ ನಿಃಸ್ವನೈಃ ।**
**ವಿದಾಂಬಭೂವ ಲೋಕೇಶಮಭ್ಯಾಸಕೃತಸನ್ನಿಧಿಮ್ ॥ ೬೭ ॥**

ಭರತೇಶ್ವರನು ಉದುರುತ್ತಿರುವ ಪುಷ್ಪವೃಷ್ಟಿಯಿಂದಲೂ ಭೇರಿಗಳ ಶಬ್ದಗಳಿಂದಲೂ ಲೋಕಾಧಿಪತಿ–ವೃಷಭಸ್ವಾಮಿಯು ಸಮೀಪದಲ್ಲಿ ವಿರಾಜಮಾನರಾಗಿದ್ದಾರೆಂದು ತಿಳಿದನು.

**ಮಂದಾರಕುಸುಮೋದ್ಗಂಧಿರಾಂದೋಲಿತಲತಾವನಃ ।**
**ಪವನಸ್ತ[೪]ಮಭೀಯಾಯ ಪ್ರತ್ಯುದ್ಯನ್ನಿವ ಪಾವನಃ ॥ ೬೮ ॥**

ಮಂದಾರಪುಷ್ಪಗಳ ಪರಿಮಳವುಳ್ಳುದೂ ಲತಾವನಗಳನ್ನು ಅಳ್ಳಾಡಿಸುವುದೂ ಪವಿತ್ರವೂ ಇದಿರಾಗಿ ಎದ್ದು ನಿಂತಿರುವಂತಿರುವುದೂ ಆದ ಗಾಳಿಯು ಭರತೇಶ್ವರನಿಗೆ ಇದಿರಾಗಿ ಹೋಯಿತು. ಬೀಸಿತೆಂದರ್ಥವು.

**ಸುಮನೋವೃಷ್ಟಿರಾಪಪ್ತದಾಪೂರಿತನಭೋಂಗಣಾ ।**
**ವಿರಜೀಕೃತಭೂಲೋಕೈಃ ಸಮಂ ಶೀತೈರಪಾಂ ಕಣೈಃ ॥ ೬೯ ॥**

ಆಕಾಶಪ್ರದೇಶವನ್ನು ವ್ಯಾಪಿಸಿದ ಪುಷ್ಪವೃಷ್ಟಿಯು ಭೂಲೋಕದ ಧೂಳನ್ನು ಹೋಗಲಾಡಿಸಿದ ತಂಪಾದ ಜಲಬಿಂದುಗಳೊಡನೆ ಬಿದ್ದಿತು.

**ಶುಶ್ರುವೇ ಧ್ವನಿರಾಮಂದ್ರೋ ದುಂದುಭೀನಾಂ ನಭೋಂಗಣೇ ।**
**ಶ್ರುತಃ ಕೇಕಿಭಿ[೫]ರುದ್ಗ್ರೀವೈರ್ಘನಸ್ತನಿತಶಂಕಿಭಿಃ ॥ ೭೦ ॥**

ಮೇಘಗರ್ಜನೆಯ ಸಂಶಯವುಳ್ಳುವೂ ಕೊರಳನ್ನು ಎತ್ತಿರುವುವೂ ಆದ ನವಿಲುಗಳಿಂದ ಕೇಳಲ್ಪಟ್ಟುದೂ ಬಹುಗಂಭೀರವೂ ಆದ ಭೇರಿಗಳ ಶಬ್ದವು ಆಕಾಶಪ್ರದೇಶದಲ್ಲಿ ಕೇಳಿಸಿತು. ಭರತರಾಜನು ಆಕಾಶದಲ್ಲಿ ಭೇರಿಗಳ ಗಂಭೀರಧ್ವನಿಯನ್ನು ಕೇಳಿದನೆಂದು ಭಾವವು.

**ಗುಲ್ಫದಘ್ನಪ್ರಸೂನೌಘಸಮ್ಮರ್ದಮೃದುನಾ ಪಥಾ ।**
**ತಮಧ್ವಶೇಷಮಶ್ರಾಂತಃ ಪ್ರಯಾಯೌ ಸ ನೃಪಾಗ್ರಣೀಃ ॥ ೭೧ ॥**

ರಾಜಾಧಿರಾಜನಾದ ಆ ಭರತೇಶ್ವರನು ಕಾಲಿನ ಗೆಣ್ಣುಗಳವರೆಗೆ ದಟ್ಟವಾಗಿ ಬಿದ್ದಿರುವ ಪುಷ್ಪಗಳಿಂದ ಮೃದುವಾದ ಮಾರ್ಗದಿಂದ ಬಳಲಿಕೆಯಿಲ್ಲದವನಾಗಿ ಆ ಉಳಿದ ಮಾರ್ಗವನ್ನು ಪ್ರಯಾಣಮಾಡಿದನು.

**ತತೋಧಿರುಹ್ಯ ತಂ ಶೈಲಮಪಶ್ಯತ್ಸೋಸ್ಯ ಮೂರ್ಧನಿ ।**
**ಪ್ರಾಗುಕ್ತವರ್ಣನೋಪೇತಂ ಜೈನಮಾಸ್ಥಾನಮಂಡಲಮ್ ॥ ೭೨ ॥**

ಬಳಿಕ ಭರತೇಶ್ವರನು ಆ ಬೆಟ್ಟವನ್ನು ಹತ್ತಿ ಅದರ ಶಿಖರದಲ್ಲಿ ಹಿಂದೆ ಹೇಳಿದ ವರ್ಣನೆಗಳುಳ್ಳ ಜಿನೇಶ್ವರನ ಸಂಬಂಧವಾದ ಆಸ್ಥಾನಮಂಡಪವನ್ನು–ಸಮವಸರಣವನ್ನು ನೋಡಿದನು.

**[೬]ಸಮೇತ್ಯಾ[೭]ವಸರೋಪೇಕ್ಷಾಸ್ತಿಷ್ಠಂತ್ಯಸ್ಮಿನ್ಸುರಾಸುರಾಃ ।**
**ಇತಿ [೮]ತಜ್ಞೈರ್ನಿರುಕ್ತಂ ತತ್ಸರಣಂ ಸಮವಾದಿಕಮ್ ॥ ೭೩ ॥**

ದೇವತೆಗಳೂ ಅಸುರರೂ ಬಂದು ಈ ಮಂಡಪದಲ್ಲಿ ಸ್ವಾಮಿಯ ಅವಸರ–ಅವಕಾಶವನ್ನು ನೋಡುತ್ತಿರುವುದರಿಂದ ನಿರುಕ್ತಿಯನ್ನು ತಿಳಿದವರು ಅದಕ್ಕೆ

೧ ಮನಸಾ. ೨ ಸಮೀಪವಿಹಿತಸ್ಥಿತಿಂ. ೩ ಸಮವಸರಣಂ. ೪ ಅಭಿಮುಖಂ ಜಗಾಮ. ೫ ಉದ್ಗತಕಂಠೈಃ. ೬ ಸಮಾಗತ್ಯ. ೭ ಪ್ರಭೋರವಸರಮಾಲೋಕಯಂತಃ. ೮ ನಿರುಕ್ತಿಜ್ಞೈಃ.

ಸಮ್+ಅವ ಪೂರ್ವಕವಾದ ಸರಣವೆಂದು ಹೇಳುತ್ತಾರೆ. ವ್ಯಾಕರಣ ಶಾಸ್ತ್ರಜ್ಞರು ಆ ಮಂಟಪಕ್ಕೆ ಸಮವಸರಣವೆಂದು ಹೇಳುತ್ತಾರೆಂದರ್ಥವು.

**[1]ಆಖಂಡಲಧನುರ್ಲೇಖಾಮಖಂಡಪರಿಮಂಡಲಾಮ್ ।**
**ಜನಯಂತಂ ನಿಜೋದ್ಯೋತೈರ್ಧೂಲೀಸಾಲಮಥಾಸದತ್ ॥ ೭೪ ॥**

ತರುವಾಯ ಭರತಚಕ್ರಧರನು ತನ್ನ ಪ್ರಕಾಶಗಳಿಂದ ಸಂಪೂರ್ಣಮಂಡಲಾಕಾರವಾದ ಇಂದ್ರಧನುಸ್ಸಿನ ರೇಖೆಯನ್ನುಂಟುಮಾಡುತ್ತಿರುವ ಧೂಲೀಸಾಲವೆಂಬ ಪ್ರಾಕಾರವನ್ನು ಸೇರಿದನು.

**ಹೈಮಸ್ತಂಭಾಗ್ರವಿನ್ಯಸ್ತರತ್ನತೋರಣಭಾಸುರಮ್ ।**
**ಧೂಲೀಸಾಲಮತೀತ್ಯಾಸೌ ಮಾನಸ್ತಂಭಮಪೂಜಯತ್ ॥ ೭೫ ॥**

ಈ ಭರತೇಶ್ವರನು ಬಂಗಾರದ ಕಂಬಗಳ ಮೇಲಿರಿಸಿದ ರತ್ನತೋರಣಗಳಿಂದ ಪ್ರಕಾಶಮಾನವಾದ ಆ ಧೂಲೀಸಾಲನ್ನು ದಾಟಿ ಮಾನಸ್ತಂಭವನ್ನು ಪೂಜಿಸಿದನು.

**ಮಾನಸ್ತಂಭಸ್ಯ ಪರ್ಯಂತೇ ಸರಸೀಃ ಸಸರೋರುಹಾಃ ।**
**ಜೈನೀರಿವ ಶ್ರುತೀಃ ಸ್ವಚ್ಛ[2]ಶೀತಲಾಪೋ ದದರ್ಶ ಸಃ ॥ ೭೬ ॥**

ಭರತೇಶ್ವರನು ಆ ಮಾನಸ್ತಂಭದ ಸಮೀಪದಲ್ಲಿ ಸ್ವಚ್ಛವೂ ಶೀತಲವೂ ಆದ ನೀರುಳ್ಳವೂ ಕಮಲಗಳುಳ್ಳವೂ ನಿರ್ದೋಷವಾದ ಜೈನಶಾಸ್ತ್ರಗಳಂತಿರುವುವೂ ಆದ ಸರೋವರಗಳನ್ನು ಕಂಡನು.

**ಧೂಲೀಸಾಲ[3]ಪರಿಕ್ಷೇಪಸ್ಯಾಂತರ್ಭಾಗೇ ಸಮಂತತಃ ।**
**ವೀಥ್ಯಂತರೇಷು ಸೋಪಶ್ಯ[4]ದ್ದೇವಾವಾಸೋಚಿತಾ ಭುವಃ ॥ ೭೭ ॥**

ಭರತರಾಜನು ಆ ಧೂಲೀಸಾಲದ ಸುತ್ತಿನ ಒಳಗಿನ ಭಾಗದಲ್ಲಿ ಸುತ್ತಲೂ ಬೀದಿಗಳ ಮಧ್ಯಗಳಲ್ಲಿ ದೇವರ ವಾಸಕ್ಕೆ ಉಚಿತವಾದ ಭೂಮಿಗಳನ್ನು–ದೇವಪ್ರಾಸಾದ ಭೂಮಿಗಳನ್ನು ನೋಡಿದನು.

**ಅತೀತ್ಯ [5]ಪರತಃ ಕಿಂಚಿದ್ದದರ್ಶ ಜಲಖಾತಿಕಾಮ್ ।**
**ಸುಪ್ರಸನ್ನಾಮಗಾಧಾಂ ಚ ಮನೋವೃತ್ತಿಂ ಸತಾಮಿವ ॥ ೭೮ ॥**

ಭರತೇಶ್ವರನು ಸ್ವಲ್ಪ ಮುಂದೆದಾಟಿ, ಸತ್ಪುರುಷರ ಪ್ರಸನ್ನವೂ ಗಂಭೀರವೂ ಆದ ಮನೋವೃತ್ತಿಯಂತೆ ನಿರ್ಮಲವೂ ಆಳವೂ ಆದ ನೀರಿನ ಕಂದಕವನ್ನು ನೋಡಿದನು.

**ವಲ್ಲೀವನಂ ತತೋದ್ರಾಕ್ಷೀನ್ನಾನಾಪುಷ್ಪಲತಾತತಮ್ ।**
**ಪುಷ್ಪಾಸವರಸಾಮತ್ತಭ್ರಮದ್ಭ್ರಮರಸಂಕುಲಮ್ ॥ ೭೯ ॥**

ಬಳಿಕ ಭರತರಾಜನು ಅನೇಕಪ್ರಕಾರವಾದ ಪುಷ್ಪಗಳುಳ್ಳ ಲತೆಗಳಿಂದ ವ್ಯಾಪ್ತವೂ ಪುಷ್ಪರಸವನ್ನು ಕುಡಿದು ಮದಿಸಿ ಓಡಾಡುತ್ತಿರುವ ಭ್ರಮರ ಸಮೂಹವುಳ್ಳದೂ ಆದ ಬಳ್ಳಿಗಳ ವನವನ್ನು ಕಂಡನು.

**ತತಃ ಕಿಂಚಿತ್ಪುರೋಗಚ್ಛನ್ಸಾಲಮಾದ್ಯಂ ವ್ಯಲೋಕತ ।**
**ನಿಷಧಾದ್ರಿತಟಸ್ಪರ್ಧಿವಪುಷಂ ರತ್ನಭಾಜುಷಮ್ ॥ ೮೦ ॥**

ತರುವಾಯ ಸ್ವಲ್ಪ ಮುಂದೆ ಹೋಗಿ ನಿಷಧಪರ್ವತದ ತಪ್ಪಲಿಗೆ ಸದೃಶವಾದ ಆಕಾರವುಳ್ಳದೂ ರತ್ನಗಳ ಪ್ರಭೆಯನ್ನು ಹೊಂದಿರುವುದೂ ಆದ ಮೊದಲನೆಯ ಪ್ರಾಕಾರವನ್ನು ನೋಡಿದನು.

**ಸುರದೌವಾರಿಕಾರಕ್ಷ್ಯ [6]ತತ್ಪತೋಲೀತಲಾಶ್ರಿತಾನ್ ।**
**ಸೋಪಶ್ಯನ್ಮಂಗಲದ್ರವ್ಯಭೇದಾಂಸ್ತತ್ರಾಷ್ಟಧಾ ಸ್ಥಿತಾನ್ ॥ ೮೧ ॥**

ಆ ಪ್ರಾಕಾರದಲ್ಲಿ ಭರತೇಶ್ವರನು ದ್ವಾರಪಾಲಕರಾದ ದೇವತೆಗಳಿಂದ ಕಾಪಾಡಲ್ಪಡತಕ್ಕುವೂ ಆ ಪ್ರಾಕಾರದ ಬಾಗಿಲಿನ ಮೇಲಿರುವುವೂ ಎಂಟು ಪ್ರಕಾರವಾಗಿರುವುವೂ ಆದ ಮಂಗಲದ್ರವ್ಯಗಳನ್ನು ಕಂಡನು. ಪ್ರಾಕಾರದ ಬಾಗಿಲಿನ ಮೇಲೆ ಗಿಂಡಿ ತಾಳ ಕಲಶ ಧ್ವಜ ಸುಪ್ರತಿಷ್ಠಾ ಶ್ವೇತಚ್ಛತ್ರ ದರ್ಪಣ ಚಾಮರಗಳೆಂಬ ಅಷ್ಟಮಂಗಲದ್ರವ್ಯಗಳನ್ನು ನೋಡಿದನೆಂದರ್ಥವು.

**ತತೋಂತಃ ಪ್ರವಿಶನ್ವೀಕ್ಷ್ಯ ದ್ವಿತಯಂ ನಾಟ್ಯಶಾಲಯೋಃ ।**
**ಪ್ರೀತಿಂ ಪ್ರಾಪ ಪರಾಂ ಚಕ್ರೀ ಶಕ್ರಸ್ತ್ರೀನರ್ತನೋಚಿತಮ್ ॥ ೮೨ ॥**

ಆಮೇಲೆ ಚಕ್ರವರ್ತಿಯು ಒಳಕ್ಕೆ ಪ್ರವೇಶಿಸಿ ದೇವೇಂದ್ರನ ರಾಣಿಯ ನರ್ತನಕ್ಕೆ ಯೋಗ್ಯವಾದ ಎರಡು ನಾಟ್ಯಶಾಲೆಗಳನ್ನು ನೋಡಿ ಬಹು ಸಂತೋಷವನ್ನು ಪಡೆದನು.

**ಸ ಧೂಪಘಟಯೋರ್ಯುಗ್ಮಂ ತತ್ರ ವೀಥ್ಯುಭಯಾಂತಯೋಃ ।**
**ಸುಗಂಧೀಂಧನಸಂದೋಹೋದ್ಗಂಧಿಧೂಪಂ ವ್ಯಲೋಕಯತ್ ॥ ೮೩ ॥**

ಅಲ್ಲಿ ಭರತೇಶ್ವರನು ಮಾರ್ಗದ ಎರಡು ಕಡೆಗಳಲ್ಲಿ ಸುವಾಸನೆಯುಳ್ಳ ಸೌದೆಯ ರಾಶಿಯಿಂದ ಏಳುತ್ತಿರುವ ಪರಿಮಳವಾದ ಧೂಪವುಳ್ಳ ಎರಡು ಧೂಪಘಟಗಳನ್ನು ನೋಡಿದನು.

**ಕಕ್ಷ್ಯಾಂತರೇ ದ್ವಿತೀಯೇಸ್ಮಿನ್ನಸೌ ವನಚತುಷ್ಟಯಮ್ ।**
**[1]ನಿದಧ್ಯೌ ವಿಗಲತ್ಪುಷ್ಪೈಃ [2]ಕೃತಾರ್ಘಮಿವ ಶಾಖಿಭಿಃ ॥ ೮೪ ॥**

ಭರತಚಕ್ರಿಯು ಈ ಎರಡನೆಯ ಪ್ರಾಕಾರದ ಮಧ್ಯದಲ್ಲಿ ಉದುರುತ್ತಿರುವ ಪುಷ್ಪಗಳುಳ್ಳ ವೃಕ್ಷಗಳಿಂದ ಮಾಡಲ್ಪಟ್ಟ ಅರ್ಘ್ಯದಂತಿರುವ ನಾಲ್ಕು ವನಗಳನ್ನು ನೋಡಿದನು.

**ಪ್ರಫುಲ್ಲವನಮಾಶೋಕಂ ಸಾಪ್ತಪರ್ಣಂ ಚ ಚಾಂಪಕಮ್ ।**
**[3]ಆಮ್ರೇಡಿತಂ ಚ ಸಂಪ್ರೇಕ್ಷ್ಯ ಸೋಭೂ[4]ದಾಮ್ರೇಡಿತೋತ್ಸವಃ ॥ ೮೫ ॥**

ವಿಕಸಿತವಾದ ಅಶೋಕವನವನ್ನೂ ಏಳೆಲೆ ಬಾಳೆಯ ವನವನ್ನೂ ಸಂಪಗೆಯ ವನವನ್ನೂ ಆಮ್ರವೆಂದು ಹೊಗಳಲ್ಪಟ್ಟ ಮಾವಿನ ವನವನ್ನೂ ನೋಡಿ ಭರತೇಶ್ವರನು ದ್ವಿಗುಣ ತ್ರಿಗುಣವಾದ ಸಂತೋಷವುಳ್ಳವನಾದನು.

**ತತ್ರ ಚೈತ್ಯದ್ರುಮಾಂಸ್ತುಂಗಾನ್ ಜಿನಬಿಂಬೈರಧಿಷ್ಠಿತಾನ್ ।**
**ಪೂಜಯಾಮಾಸ ಲಕ್ಷ್ಮೀವಾನ್ಪೂಜಿತಾನ್ನೃಸುರೇಶಿನಾಮ್ ॥ ೮೬ ॥**

ಅಲ್ಲಿ ಚಕ್ರೇಶ್ವರನು ಉನ್ನತವೂ ಜಿನಬಿಂಬಗಳನ್ನು ಧರಿಸಿರುವುವೂ ರಾಜರಿಗೂ ದೇವೇಂದ್ರರಿಗೂ ಪೂಜ್ಯಗಳೂ ಆದ ಚೈತ್ಯವೃಕ್ಷಗಳನ್ನು ಪೂಜಿಸಿದನು. (ಜಿನಬಿಂಬಗಳು ವಿರಾಜಮಾನವಾಗಿರುವ ವೃಕ್ಷಕ್ಕೆ ಚೈತ್ಯವೃಕ್ಷವೆಂದು ಹೆಸರು).

**ತತ್ರ ಕಿನ್ನರನಾರೀಣಾಂ ಗೀತೈರಾಮಂದ್ರಮೂರ್ಛನೈಃ ।**
**ಲೇಭೇ ಪರಾಂ ಧೃತಿಂ ಚಕ್ರೀ ಗಾಯಂತೀನಾಂ ಜಿನೋತ್ಸವಮ್॥ ೮೭ ॥**

ಅಲ್ಲಿ ಜಿನೇಶ್ವರನ ಉತ್ಸವವನ್ನು ಗಾನಮಾಡುತ್ತಿರುವ ಕಿನ್ನರಸ್ತ್ರೀಯರ ಗಂಭೀರವಾದ ಲಯವುಳ್ಳ ಗಾಯನಗಳಿಂದ ಭರತೇಶ್ವರನು ಬಹು ಸಂತೋಷವನ್ನು ಹೊಂದಿದನು.

**ಸುಗಂಧಿಪವನಾಮೋದನಿಶ್ವಾಸಾ ಕುಸುಮಸ್ಮಿತಾ ।**
**[5]ವನಶ್ರೀಃ ಕೋಕಿಲಾಲಾಪೈಃ ಸಂಜಜಲ್ಪೇವ ಚಕ್ರಿಣಾ ॥ ೮೮ ॥**

೧ ಇಂದ್ರಧನುರ್ಲೇಖಾಂ. ೨ ಶೈತ್ಯಜಲಾಃ. ೩ ವಲಯಸ್ಯ. ೪ ದೇವಪ್ರಾಸಾದಭೂಮೀಃ, ಪ್ರಾಸಾದಚೈತ್ಯಭೂಮೀಃ. ೫ ಅಗ್ರೇ. ೬ ಸಾಲದ್ವಾರಾಗ್ರಮಾಶ್ರಿತಾನ್.

೧ ದದರ್ಶ. ೨ ವಿಹಿತಪೂಜಾವಿಧಿಂ. ೩ ಆಮ್ರಮಿತಿಸ್ತುತಂ. ೪ ದ್ವಿತ್ರಿಗುಣಿತಾನಂದಃ. ೫ ವನಲಕ್ಷ್ಮೀಃ.

ಸುಗಂಧವಾದ ಗಾಳಿಯೆಂಬ ಪರಿಮಳವಾದ ನಿಶ್ವಾಸವುಳ್ಳವಳೂ ಪುಷ್ಪಗಳೆಂಬ ಮುಗುಳ್ನಗೆಯುಳ್ಳವಳೂ ಆದ ವನಲಕ್ಷ್ಮಿಯು ಕೋಗಿಲೆಗಳ ಆಲಾಪಗಳಿಂದ ಚಕ್ರೇಶ್ವರನೊಡನೆ ಮಾತನಾಡುತ್ತಾಳೋ ಎಂಬಂತಿದ್ದಳು.

**ಭೃಂಗೀಸಂಗೀತ[೧]ಸಮ್ಮೂರ್ಛಿತ್ಕೋಕಿಲಾನಕನಿಸ್ವನೈಃ ।**
**ಅನಂಗವಿಜಯಂ [೨]ಜಿಷ್ಣೋರ್ವನಾನೀವೋದಘೋಷಯನ್ ॥ ೮೯ ॥**

ವನಗಳು ವೃಷಭಸ್ವಾಮಿಯ ಮನ್ಮಥಜಯವನ್ನು ಸ್ತ್ರೀಭ್ರಮರಗಳ ಸಂಗೀತ ಗಳೊಡನೆ ಮಿಶ್ರವಾದ ಕೋಗಿಲೆಗಳೆಂಬ ಭೇರಿಗಳ ಶಬ್ದಗಳಿಂದ ಗಟ್ಟಿಯಾಗಿ ಹೇಳು ತ್ತವೋ ಎಂಬಂತಿದ್ದುವು.

**ತ್ರಿಜಗಜ್ಜನತಾಜಸ್ರಪ್ರವೇಶರಭಸೋತ್ಥಿತಮ್ ।**
**ತತ್ರಾಶೃಣೋನ್ಮಹಾಘೋಷಮಪಾಂ ಘೋಷಮಿವೋದಧೇಃ ॥ ೯೦ ॥**

ಅಲ್ಲಿ ಭರತೇಶ್ವರನು, ಸಮುದ್ರದ ನೀರಿನ ಶಬ್ದವನ್ನೋಪಾದಿಯಲ್ಲಿ ಮೂರು ಲೋಕದ ಜನಸಮೂಹವು ಯಾವಾಗಲೂ ಪ್ರವೇಶಮಾಡುವ ವೇಗದಿಂದುಂಟಾದ ಮಹಾಧ್ವನಿಯನ್ನು ಕೇಳಿದನು.

**ವನವೇದೀಮಥಾಪಶ್ಯದ್ವನರುದ್ಧಾವನೇಃ ಪರಮ್ ।**
**ವನರಾಜೀ[೩]ವಿಲಾಸಿನ್ಯಾಃ ಕಾಂಚೀಮಿವ [೪]ಕನನ್ಮಣಿಮ್ ॥ ೯೧ ॥**

ಆಮೇಲೆ ಭರತೇಶ್ವರನು ವನದಿಂದ ವ್ಯಾಪ್ತವಾದ ಭೂಮಿಯ ಆಚೆಕಡೆಯಲ್ಲಿ ವನಪಂಕ್ತಿಯೆಂಬ ಸ್ತ್ರೀಯ ಪ್ರಕಾಶಮಾನವಾದ ರತ್ನಗಳುಳ್ಳ ಡಾಬಿನಂತಿರುವ ವನವೇದಿಕೆಯನ್ನು ಕಂಡನು.

**[೫]ತದ್ಗೋಪುರಾವನೀಂ ಕ್ರಾಂತ್ವಾ ಧ್ವಜರುದ್ಧಾವನಿಂ ಸುರಾನ್ ।**
**[೬]ಆಜುಹೂಷುಮಿವಾಪಶ್ಯನ್ಮರುದ್ಧೂತೈರ್ಧ್ವಜಾಂಶುಕೈಃ ॥ ೯೨ ॥**

ಆ ವೇದಿಕೆಯ ಗೋಪುರದ ಭೂಮಿಯನ್ನು ದಾಟಿ ಭರತೇಶ್ವರನು ಗಾಳಿಯಿಂದ ಕೊಡಹಲ್ಪಟ್ಟ ಧ್ವಜವಸ್ತ್ರಗಳಿಂದ ದೇವತೆಗಳನ್ನು ಕರೆಯುವುದಕ್ಕಿಚ್ಛಿಸುತ್ತದೆಯೋ ಎಂಬಂತಿರುವ ಧ್ವಜಗಳಿಂದ ವ್ಯಾಪ್ತವಾದ ಭೂಮಿಯನ್ನು ನೋಡಿದನು.

**ಸಾವನಿಃ [೭]ಸಾವನೀವೋದ್ಯದ್ಧ್ವಜಮಾಲಾತತಾಂಬರಾ ।**
**ಸಚಕ್ರಾ ಸಗಜಾ ರೇಜೇ ಜಿನರಾಜಜಯೋರ್ಜಿತಾ ॥ ೯೩ ॥**

ಆಕಾಶವನ್ನು ಎತ್ತರವಾದ ಧ್ವಜಗಳ ಸಾಲಿನಿಂದ ವ್ಯಾಪಿಸಿರುವುದೂ ಚಕ್ರದ ಮತ್ತು ಆನೆಯ ಚಿಹ್ನೆಯುಳ್ಳುದೂ ಜಿನೇಶ್ವರನ ವಿಜಯದಿಂದ ಉತ್ಪನ್ನವಾದುದೂ ಆದ ಆ ಧ್ವಜವ್ಯಾಪ್ತಭೂಮಿಯು, ಯಜ್ಞಸಂಬಂಧಿಯಾದ ಭೂಮಿಯಂತೆ, ಪ್ರಕಾಶಿಸಿದ್ದಿತು.

**ಕೇತವೋ ಹರಿವಸ್ತ್ರಾಬ್ಜ[೮]ಬರ್ಹಿಣೇಭಗರುತ್ಮತಾಮ್ ।**
**[೯]ಸ್ರಗುಕ್ಷಹಂಸಚಕ್ರಾಣಾಂ ದಶಧೋಕ್ತಾ ಜಿನೇಶಿನಾಮ್ ॥ ೯೪ ॥**

ಜಿನೇಶ್ವರರಿಗೆ ಸಿಂಹ ವಸ್ತ್ರ ಕಮಲ ನವಿಲು ಆನೆ ಗರುಡ ಪುಷ್ಪಮಾಲೆ ಎತ್ತು ಹಂಸ ಚಕ್ರ ಇವುಗಳ ಚಿಹ್ನೆಗಳುಳ್ಳ ಧ್ವಜಗಳು ಹತ್ತುಪ್ರಕಾರವಾಗಿ ಹೇಳಲ್ಪಟ್ಟಿವೆ.

**ತಾ[೧೦]ನೇಕಶಃ ಶತಂ ಚಾಷ್ಟೌ ಧ್ವಜಾನ್ಪ್ರತಿದಿಶಂ ಸ್ಥಿತಾನ್ ।**
**[೧೧]ವರಿವಸ್ಯನ್ನಗಾಚ್ಚಕ್ರೀ ಸ ತದ್ರುದ್ಧಾವನೇಃ ಪರಮ್ ॥ ೯೫ ॥**

ಆ ಚಕ್ರೇಶ್ವರನು ಪ್ರತಿಯೊಂದು ದಿಕ್ಕಿನಲ್ಲಿರುವ ಒಂದೊಂದು ಜಾತಿಯ ನೂರೆಂಟು ಧ್ವಜಗಳನ್ನು ಪೂಜಿಸುವವನಾಗಿ ಆ ಧ್ವಜಗಳಿಂದ ವ್ಯಾಪ್ತವಾದ ಭೂಮಿಯ ಆಚೆಗೆ ಹೋದನು.

೧ ಸಂಮಿಶ್ರೀಭವತ್. ೨ ತೀರ್ಥಂಕರಸ್ಯ. ೩ ಸ್ತ್ರಿಯಾಃ. ೪ ಸ್ಫುರದ್ರತ್ನಾಂ. ೫ ವನವೇದಿ ಗೋಪುರ ಭೂಮಿಂ. ೬ ಆಹ್ವಾತುಮಿಚ್ಛುಂ. ೭ ಯಜ್ಞಸಂಬಂಧಿನೀವ. ೮ ಅತ್ರಬರ್ಹಿಣ ಇತ್ಯಕಾರಾಂತೋಽಯಂ ಶಬ್ದಃ. ೯ ಮಾಲಾವೃಷಭಃ. ೧೦ ಏಕೈಕಸ್ಮಿನ್. ೧೧ ಪೂಜಯನ್.

**ದ್ವಿತೀಯಮಾರ್ಜುನಂ ಸಾಲಂ ಸಗೋಪುರಚತುಷ್ಟಯಮ್ ।**
**ವ್ಯತೀತ್ಯ ಪರತೋಽಪಶ್ಯನ್ನಾಟ್ಯಶಾಲಾದಿ ಪೂರ್ವವತ್ ॥ ೯೬ ॥**

ಭರತರಾಜನು ನಾಲ್ಕು ಗೋಪುರಗಳುಳ್ಳ ಆ ಎರಡನೆಯದಾದ ಬೆಳ್ಳಿಯ ಪ್ರಾಕಾರವನ್ನು ದಾಟಿ ಆಚೆಕಡೆಯಲ್ಲಿ ಮೊದಲಿನಂತೆ ನಾಟ್ಯಶಾಲೆ ಮೊದಲಾದು ದನ್ನು ನೋಡಿದನು.

**ತತ್ರ ಪಶ್ಯನ್ಸುರಸ್ತ್ರೀಣಾಂ ನೃತ್ಯಂ ಗೀತಂ [೧]ನಿಶಾಮಯನ್ ।**
**ಧೂಪಾಮೋದಂ ಚ [೨]ಸಂಜಿಘ್ರನ್ಸ[೩]ಪ್ರೀತಾಕ್ಷೋಭವದ್ವಿಭುಃ ॥ ೯೭ ॥**

ಅಲ್ಲಿ ಭರತೇಶ್ವರನು ದೇವಸ್ತ್ರೀಯರ ನೃತ್ಯವನ್ನು ನೋಡಿ ಗಾನವನ್ನು ಕೇಳಿ ಧೂಪದ ಪರಿಮಳವನ್ನು ಆಘ್ರಾಣಿಸಿ ಸಂತುಷ್ಟವಾದ ಇಂದ್ರಿಯಗಳುಳ್ಳವನಾದನು.

**[೪]ಕಕ್ಷ್ಯಾಂತರೇ ತತಸ್ತಸ್ಮಿನ್ಕಲ್ಪವೃಕ್ಷವನಾವಲಿಮ್ ।**
**ಸ್ರಗ್ವಸ್ತ್ರಾಭರಣಾದೀಷ್ಟಫಲದಾಂ ಸ ನಿರೂಪಯನ್ ॥ ೯೮ ॥**

**ಸಿದ್ಧಾರ್ಥಪಾದಪಾಂಸ್ತತ್ರ ಸಿದ್ಧಬಿಂಬೈರಧಿಷ್ಠಿತಾನ್ ।**
**ಪರೀತ್ಯ ಪ್ರಣಮನ್ನಾರ್ಚೀದರ್ಚಿತಾನ್ನಾಕಿನಾಯಕೈಃ ॥ ೯೯ ॥**

ಬಳಿಕ ಭರತೇಶ್ವರನು ಆ ಪ್ರಾಕಾರದ ಮಧ್ಯದಲ್ಲಿ ಪುಷ್ಪಮಾಲಿಕೆ ವಸ್ತ್ರ ಆಭರಣ ಮೊದಲಾದ ಇಷ್ಟಫಲಗಳನ್ನು ಕೊಡುವ ಕಲ್ಪವೃಕ್ಷಗಳ ವನದ ಸಮೂಹವನ್ನು ನೋಡುವವನಾಗಿ ಆ ಕಲ್ಪವೃಕ್ಷವನದಲ್ಲಿ ಸಿದ್ಧಪ್ರತಿಮೆಗಳನ್ನು ಧರಿಸಿರುವುವೂ ದೇವೇಂದ್ರರಿಂದ ಪೂಜಿಸಲ್ಪಟ್ಟುವೂ ಆದ ಸಿದ್ಧಾರ್ಥವೃಕ್ಷಗಳನ್ನು ಬಲಗೊಂಡು ನಮಸ್ಕರಿಸಿ ಪೂಜಿಸಿದನು.

**ವನವೇದೀಂ ತತೋಽತೀತ್ಯ ಚತುರ್ಗೋಪುರಮಂಡನಾಮ್ ।**
**ಪ್ರಾಸಾದರುದ್ಧಾಮವನೀಂ ಸ್ತೂಪಾಂಶ್ಚ ಪ್ರಭುರೈಕ್ಷತ ॥ ೧೦೦ ॥**

ತರುವಾಯ ದೊರೆಯು ನಾಲ್ಕು ಗೋಪುರಗಳು ಅಲಂಕಾರವಾಗಿರುವ ವನ ವೇದಿಕೆಯನ್ನು ದಾಟಿ ಪ್ರಾಸಾದಗಳಿಂದ ವ್ಯಾಪ್ತವಾದ ಭೂಮಿಯನ್ನೂ ಸ್ತೂಪ ಗಳನ್ನೂ ನೋಡಿದನು.

**ಪ್ರಾಸಾದಾ ವಿವಿಧಾ[೫]ಸ್ತತ್ರ ಸುರಾವಾಸಾಯ ಕಲ್ಪಿತಾಃ ।**
**[೬]ತ್ರಿಚತುಷ್ಪಂಚಭೂಮ್ಯಾದ್ಯಾ [೭]ನಾನಾಚ್ಛಂದ್ಯೈರಲಂಕೃತಾಃ ॥ ೧೦೧ ॥**

**ಸ್ತೂಪಾಶ್ಚ ರತ್ನನಿರ್ಮಾಣಾಃ ಸಾಂತರಾ ರತ್ನತೋರಣೈಃ ।**
**ಸಮಂತಾಜ್ಜಿನಬಿಂಬೈಸ್ತೇ ನಿಚಿತಾಂಗಾಶ್ಚಕಾಸಿರೇ ॥ ೧೦೨ ॥**

ಆ ಪ್ರಾಸಾದಭೂಮಿಯಲ್ಲಿ ದೇವತೆಗಳ ವಾಸಕ್ಕೋಸ್ಕರ ನಿರ್ಮಿಸಲ್ಪಟ್ಟುವೂ ಮೂರು ನಾಲ್ಕು ಐದು ಅಂತಸ್ತುಗಳು ಮೊದಲಾಗಿರುವುವೂ ಸ್ವಸ್ತಿಕ ಸರ್ವತೋ ಭದ್ರ ನಂದ್ಯಾವರ್ತ ರುಚಕವರ್ಧಮಾನ ಮೊದಲಾದ ರಚನಾ ವಿಶೇಷಗಳಿಂದ ಅಲಂಕೃತಗಳೂ ನಾನಾವಿಧಗಳೂ ಆದ ಪ್ರಾಸಾದಗಳೂ, ರತ್ನನಿರ್ಮಿತಗಳೂ ಮಧ್ಯದಲ್ಲಿ ರತ್ನ ತೋರಣಗಳಿಂದ ವಿಭಾಗಿಸಲ್ಪಟ್ಟುವೂ ಸುತ್ತಲೂ ಜಿನಬಿಂಬಗಳಿಂದ ವ್ಯಾಪ್ತಗಳೂ ಆದ ಸ್ತೂಪಗಳೂ ಪ್ರಕಾಶಿಸುತ್ತಿದ್ದುವು.

**[೮]ತಾನ್ಪಶ್ಯನ್ನರ್ಚಯಂಸ್ತಾಂಶ್ಚ [೯]ತಾಂಶ್ಚ ತಾಂಶ್ಚ ಸ [೧೦]ಕೀರ್ತಯನ್ ।**
**ತಾಂ ಚ [೧೧]ಕಕ್ಷ್ಯಾಂ ವ್ಯತೀಯಾಯ ವಿಸ್ಮಯಂ ಪರಮೀಯಿವಾನ್ ॥**

ಭರತೇಶ್ವರನು ಆ ಪ್ರಾಸಾದಗಳನ್ನೂ ಸ್ತೂಪಗಳನ್ನೂ ನೋಡಿ ಅವುಗಳನ್ನು ಪೂಜಿಸಿ ಸ್ತುತಿಸಿ ಬಳಿಕ ಆ ಪ್ರಾಕಾರವನ್ನು ದಾಟಿ ಬಹು ಆಶ್ಚರ್ಯವನ್ನು ಹೊಂದಿ ದನು.

೧ ಶೃಣ್ವನ್. ೨ ಆಘ್ರಾಣಯನ್. ೩ ಪ್ರೀತೇಂದ್ರಿಯಃ. ೪ ವಲಯಾಂತರೇ. ೫ ಪ್ರಾಸಾದ ಭೂಮೌ. ೬ ತ್ರಿಚತುಃಪಂಚನಿಲಯಭೂಮ್ಯಾದಯಃ. ೭ ಸ್ವಸ್ತಿಕಸರ್ವತೋಭದ್ರ ನಂದ್ಯಾವರ್ತ ರುಚಕ ವರ್ಧಮಾನಾದಿ ನಾನಾರಚನಾವಿಶೇಷೈಃ. ೮ ಪ್ರಾಸಾದಾನ್. ೯ ಜಿನಸ್ತೂಪಾನ್. ೧೦ ಸ್ತುವನ್. ೧೧ ವಲಯಂ.

ನಭಃಸ್ಫಟಿಕನಿರ್ಮಾಣಂ ಪ್ರಾಕಾರವಲಯಂ ತತಃ ।
[1]ಪ್ರತ್ಯಾಸತ್ತೇರ್ಜಿನಸ್ಯೇವ ಲಬ್ಧಶುದ್ಧಿಂ ದದರ್ಶ ಸಃ ॥ ೧೦೪ ॥

ತರುವಾಯ ಭರತಚಕ್ರಿಯು ಆಕಾಶಸ್ಫಟಿಕಶಿಲೆಯಿಂದ ನಿರ್ಮಿತವೂ ಜಿನೇಶ್ವರನ ಸಾನ್ನಿಧ್ಯದಿಂದ ಶುದ್ಧಿಯನ್ನು ಹೊಂದಿದಂತಿರುವುದೂ ವರ್ತುಲಾಕಾರವೂ ಆದ ಪ್ರಾಕಾರವನ್ನು ನೋಡಿದನು.

ತತ್ರ [2]ಕಲ್ಪೋಪಗೈ[3]ರ್ದಿವ್ಯೈರ್ಮಹಾದ್ವಾರಪಾಲಕೈಃ ।
ಸಾದರಂ ಸೋಽಭ್ಯನುಜ್ಞಾತಃ ಪ್ರವಿವೇಶ ಸಭಾಂ ವಿಭೋಃ ॥ ೧೦೫ ॥

ಅಲ್ಲಿ ಭರತರಾಜನು ಕಲ್ಪ–ಸ್ವರ್ಗದಲ್ಲಿ ಜನಿಸಿದವರೂ ಮಹಾದ್ವಾರಪಾಲಕರೂ ಆದ ದೇವತೆಗಳಿಂದ ಆದರಪೂರ್ವಕವಾಗಿ ಸಮ್ಮತಿಸಲ್ಪಟ್ಟವನಾಗಿ ವೃಷಭಸ್ವಾಮಿಯ ಸಮವಸರಣಸಭೆಯನ್ನು ಪ್ರವೇಶಿಸಿದನು.

ಸಮಂತಾದ್ಯೋಜನಾಯಾಮವಿಷ್ಕಂಭಪರಿಮಂಡಲಮ್ ।
ಶ್ರೀಮಂಡಪಂ ಜಗದ್ವಿಶ್ವಮುಪಶ್ಯನ್ಮಾಂತಮಾತ್ಮನಿ ॥ ೧೦೬ ॥

ಅಲ್ಲಿ ಭರತೇಶ್ವರನು ಸುತ್ತಲೂ ಒಂದುಯೋಜನ ದೀರ್ಘವೂ ಅಷ್ಟೇ ವಿಸ್ತಾರವೂ ವರ್ತುಲಾಕಾರವೂ ತನ್ನಲ್ಲಿ ಸಮಸ್ತ ಜಗತ್ತನ್ನು ಅಡಕಮಾಡಿ ಕೊಂಡಂತಿರುವುದೂ ಆದ ಲಕ್ಷ್ಮೀಮಂಡಪವನ್ನು ನೋಡಿದನು.

ತತ್ರಾಪಶ್ಯನ್ಮುನೀನಿದ್ಧಬೋಧಾನ್ ದೇವೀಶ್ಚ ಕಲ್ಪಜಾಃ ।
ಸಾರ್ಯಿಕಾ ನೃಪಕಾಂತಾಶ್ಚ ಜ್ಯೋತಿರ್ವನ್ಯೋರಗಾಮರೀಃ ॥ ೧೦೭ ॥

ಭಾವನವ್ಯಂತರಜ್ಯೋತಿಃ ಕಲ್ಪೇಂದ್ರಾನ್ಪಾರ್ಥಿವಾನ್ಮೃಗಾನ್ ।
ಭಗವತ್ಪಾದಸಂಪ್ರೇಕ್ಷಾಪ್ರೀತಿಪ್ರೋತ್ಫುಲ್ಲಲೋಚನಾನ್ ॥ ೧೦೮ ॥

ಅದರಲ್ಲಿ ಭರತಸಾರ್ವಭೌಮನು ಮಹಾಜ್ಞಾನಿಗಳಾದ ಮುನಿಗಳನ್ನೂ ಸ್ವರ್ಗದ ದೇವಸ್ತ್ರೀಯರನ್ನೂ ಆರ್ಜಿಕೆಯರೊಡನಿರುವ ರಾಜಸ್ತ್ರೀಯರನ್ನೂ ಜ್ಯೋತಿರ್ದೇವ ಸ್ತ್ರೀಯರನ್ನೂ ವ್ಯಂತರದೇವಸ್ತ್ರೀಯರನ್ನೂ ಭವನವಾಸಿದೇವಸ್ತ್ರೀಯರನ್ನೂ ಜಿನೇ ಶ್ವರನ ಪಾದಗಳನ್ನು ನೋಡುವುದರಿಂದುಂಟಾದ ಪ್ರೀತಿಯಿಂದ ಅರಳಿದ ಕಣ್ಣು ಗಳುಳ್ಳ ಭವನವಾಸಿದೇವತೆಗಳನ್ನೂ ವ್ಯಂತರದೇವತೆಗಳನ್ನೂ ಜ್ಯೋತಿರ್ದೇವತೆ ಗಳನ್ನೂ ಸ್ವರ್ಗದ ದೇವತೆಗಳನ್ನೂ ರಾಜರುಗಳನ್ನೂ ಮೃಗಗಳನ್ನೂ ನೋಡಿದನು.

[4]ಗಣಾನಿತಿ ಕ್ರಮಾನ್ಪಶ್ಯ[5]ನ್ಪರೀಯಾಯ [6]ಪರಂತಪಃ ।
ತ್ರಿಮೇಖಲಸ್ಯ ಪೀಠಸ್ಯ ಪ್ರಥಮಾಂ ಮೇಖಲಾಂ ಶ್ರಿತಃ ॥ ೧೦೯ ॥

ಈ ಪ್ರಕಾರವಾಗಿ ಭರತರಾಜನು ಯಥಾಕ್ರಮವಾದ ಹನ್ನೆರಡು ಸಮೂಹಗಳನ್ನು ನೋಡುತ್ತ ಮೂರು ಪ್ರದಕ್ಷಿಣೆಮಾಡಿ ಮೂರು ಜಗತಿಗಳುಳ್ಳ ಪೀಠದ ಮೊದಲ ನೆಯ ಜಗತಿಯನ್ನು ಸೇರಿದನು.

ತತ್ರಾನರ್ಚ ಮುದಾ ಚಕ್ರೀ ಧರ್ಮಚಕ್ರಚತುಷ್ಟಯಮ್ ।
ಯಕ್ಷೇಂದ್ರೈರ್ವಿಧೃತಂ ಮೂರ್ಧ್ನಾ ಬ್ರಧ್ನಬಿಂಬಾನುಕಾರಿ ಯತ್ ॥

ಅಲ್ಲಿ ಚಕ್ರವರ್ತಿಯು ಯಕ್ಷೇಂದ್ರರ ಮಸ್ತಕದಿಂದ ಧರಿಸಲ್ಪಟ್ಟಿರುವುವೂ ಸೂರ್ಯಬಿಂಬಕ್ಕೆ ಸಮಾನಗಳೂ ಆದ ನಾಲ್ಕು ಧರ್ಮಚಕ್ರಗಳನ್ನು ಸಂತೋಷದಿಂದ ಪೂಜಿಸಿದನು.

ದ್ವಿತೀಯಮೇಖಲಾಯಾಂ ಚ [7]ಪ್ರಾಂಚದಷ್ಟೌ ಮಹಾಧ್ವಜಾನ್ ।
ಚಕ್ರೇ ಭೋಕ್ಷಾಬ್ಜಪಂಚಾಸ್ಯ ಸ್ರಗ್ವಸ್ತ್ರಗರುಡಾಂಕಿತಾನ್ ॥ ೧೧೧ ॥

೧ ಸಾಮೀಪ್ಯಾತ್. ೨ ಕಲ್ಪಜೈಃ. ೩ ದೇವೈಃ. ೪ ದ್ವಾದಶಗಣಾನ್. ೫ ತ್ರಿಃಪ್ರದಕ್ಷಿಣಂ ಕೃತವಾನ್. ೬ ಭರತಃ. ೭ ಅಪೂಜಯತೇ.

ಎರಡನೆಯ ಜಗತಿಯಲ್ಲಿ ಚಕ್ರ ಆನೆ ಎತ್ತು ಕಮಲ ಸಿಂಹ ಪುಷ್ಪಮಾಲಿಕೆ ವಸ್ತ್ರ ಗರುಡ ಇವುಗಳನ್ನು ಗುರುತಿಸಿರುವ ಎಂಟು ಮಹಾಧ್ವಜಗಳನ್ನು ಪೂಜಿಸಿದನು.

ಮೇಖಲಾಯಾಂ ತೃತೀಯಸ್ಯಾಮಥೈಕ್ಷಿಷ್ಟ ಜಗದ್ಗುರುಮ್ ।
ವೃಷಭಂ ಸ ಕೃತೀ ಯಸ್ಯಾಂ ಶ್ರೀಮದ್ಗಂಧಕುಟೀ ಸ್ಥಿತಾ ॥ ೧೧೨ ॥

ಆಮೇಲೆ ಪುಣ್ಯಶಾಲಿಯಾದ ಆ ಭರತರಾಜನು ವೈಭವಯುಕ್ತವಾದ ಗಂಧ ಕುಟಿಯೆಂಬ ಮಂಡಪವಿರುವ ಮೂರನೆಯ ಜಗತಿಯಲ್ಲಿ ಜಗದ್ಗುರುವಾದ ವೃಷಭ ಸ್ವಾಮಿಯನ್ನು ನೋಡಿದನು.

[1]ತದ್ಗರ್ಭೇ ರತ್ನಸಂದರ್ಭರುಚಿರೇ ಹರಿವಿಷ್ಟರೇ ।
ಮೇರುಶೃಂಗ ಇವೋತ್ತುಂಗೇ [2]ಸುನಿವಿಷ್ಟಮಹಾತನುಮ್ ॥ ೧೧೩ ॥

ಆ ಗಂಧಕುಟಿಯ ಮಧ್ಯದಲ್ಲಿ ರತ್ನನಿರ್ಮಾಣದಿಂದ ಮನೋಹರವೂ ಮೇರು ಪರ್ವತದ ಶಿಖರದಂತೆ ಉನ್ನತವೂ ಆದ ಸಿಂಹಪೀಠದಲ್ಲಿ ಪಲ್ಯಂಕಾಸನದಲ್ಲಿರುವ ಶರೀರವುಳ್ಳವನೂ

ಛತ್ರತ್ರಯಕೃತಚ್ಛಾಯಮಪ್ಯಚ್ಛಾಯಮಘಚ್ಛಿದಮ್ ।
ಸ್ವ[3]ತೇಜೋಮಂಡಲಾಕ್ರಾಂತನೃಸುರಾಸುರ[4]ಮಂಡಲಮ್ ॥ ೧೧೪ ॥

ಮುಕ್ಕೊಡೆಯಿಂದ ಮಾಡಲ್ಪಟ್ಟ ನೆರಳುಳ್ಳವನಾದರೂ ತನ್ನ ಶರೀರಪ್ರಭಾಧಿಕ್ಯ ದಿಂದ ನೆರಳಿಲ್ಲದವನೂ ಪಾಪವನ್ನು ನಾಶಮಾಡುವವನೂ ತನ್ನ ಪ್ರಭೆಯ ಸಮೂಹದಿಂದ ಮನುಷ್ಯ ದೇವ ಅಸುರರ ಸಮೂಹವನ್ನು ಆಕ್ರಮಿಸಿರುವವನೂ

ಅಶೋಕಶಾಖಿಚಿಹ್ನೇನ ವ್ಯಂಜಯಂತಮಿಹಾಂಜಸಾ ।
ಸ್ವಪಾದಾಶ್ರಯಿಣಾಂ [5]ಶೋಕನಿರಾಸೇ ಶಕ್ತಿಮಾತ್ಮನಃ ॥ ೧೧೫ ॥

ಇಲ್ಲಿ ಅಶೋಕವೃಕ್ಷದ ಚಿಹ್ನೆಯಿಂದ ತನ್ನ ಪಾದಗಳನ್ನು ಹೊಂದಿದವರ ಶೋಕ ವನ್ನು ಹೋಗಲಾಡಿಸುವುದರಲ್ಲಿ ತನ್ನ ಸಾಮರ್ಥ್ಯವನ್ನು ಚೆನ್ನಾಗಿ ವ್ಯಕ್ತಪಡಿಸು ವವನೂ

ಚಲತ್ಪ್ರಕೀರ್ಣಕಾಕೀರ್ಣಪರ್ಯಂತಂ ಕಾಂತವಿಗ್ರಹಮ್ ।
ರುಕ್ಮಾದ್ರಿಮಿವ [6]ವಪ್ರಾಂತಪತನ್ನಿರ್ಝರಸಂಕುಲಮ್ ॥ ೧೧೬ ॥

ತಪ್ಪಲಿನಲ್ಲಿ ಬೀಳುತ್ತಿರುವ ಗಿರಿನದಿಗಳಿಂದ ವ್ಯಾಪ್ತವಾದ ಮೇರುಪರ್ವತದಂತೆ ಚಲಿಸುತ್ತಿರುವ ಚಾಮರಗಳಿಂದ ವ್ಯಾಪ್ತವಾದ ಸಮೀಪಪ್ರದೇಶವುಳ್ಳವನೂ ಮನೋಹರವಾದ ದೇಹವುಳ್ಳವನೂ

ತೇಜಸಾಂ [7]ಚಕ್ರವಾಲೇನ ಸ್ಫುರತಾ ಪರಿತೋ ವೃತಮ್ ।
ಪರಿವೇಷವೃತಸ್ಯಾರ್ಕಮಂಡಲಸ್ಯಾನುಕಾರಕಮ್ ॥ ೧೧೭ ॥

ತೇಜಸ್ಸುಗಳ ಪ್ರಕಾಶಮಾನವಾದ ರಾಶಿಯಿಂದ ಸುತ್ತಲೂ ಆವರಿಸಲ್ಪಟ್ಟ ಪರಿಧಿಯಿಂದ ಸುತ್ತಲ್ಪಟ್ಟ ಸೂರ್ಯಮಂಡಲದ ಹೋಲಿಕೆಯುಳ್ಳವನೂ

[8]ವಿಯದ್ದುಂದುಭಿಭಿರ್ಮಂದ್ರಘೋಷೈರುದ್ಘೋಷಿತೋದಯಮ್ ।
ಸುಮನೋವರ್ಷಿಭಿ[9]ರ್ದಿವ್ಯಜೀಮೂತೈರೂರ್ಜಿತಶ್ರಿಯಮ್ ॥ ೧೧೮ ॥

ಗಂಭೀರವಾದ ಶಬ್ದವುಳ್ಳ ಮತ್ತು ಆಕಾಶದಲ್ಲಿ ಧ್ವನಿಮಾಡುತ್ತಿರುವ ಭೇರಿಗಳಿಂದ ಚೆನ್ನಾಗಿ ಸೂಚಿಸಲ್ಪಟ್ಟ ಆವಿರ್ಭಾವವುಳ್ಳವನೂ ಪುಷ್ಪಗಳನ್ನು ಸುರಿಯುತ್ತಿರುವ ದೇವತೆಗಳೆಂಬ ವೃದ್ಧಿಹೊಂದಿದ ವೈಭವವುಳ್ಳವನೂ

೧ ಇತಃ ಪರಮೇಕಾದಶಭಿಃ ಕುಲಕಂ. ೨ ಪಲ್ಯಂಕಾಸನಸ್ಥಶರೀರಂ. ೩ ಪ್ರಭಾವಲಯ. ೪ ಸಮೂಹಂ. ೫ ಶೋಕವಿಚ್ಛೇದೇ. ೬ ಸಾನುಪ್ರಾಂತ. ೭ ಸಮೂಹೇನ. ೮ ಆಕಾಶೇ ಧ್ವನದ್ದುಂದುಭಿಭಿಃ. ೯ ದೇವಮೇಘೈಃ.

ಸ್ಫುರದ್ಗಭೀರನಿರ್ಘೋಷಪ್ರೀಣಿತತ್ರಿಜಗತ್ಸಭವಮ್ ।
[೧]ಪ್ರಾವೃಷೇಣ್ಯಂ [೨]ಪಯೋವಾಹಮಿವ ಧರ್ಮಾಂಬುವರ್ಷಿಣಮ್ ॥

ಉಜ್ಜ್ವಲವೂ ಗಂಭೀರವೂ ಆದ ಧ್ವನಿಯಿಂದ ಮೂರುಲೋಕದ ಪ್ರಾಣಿಗಳ ಸಮೂಹವನ್ನು ಸಂತೋಷಪಡಿಸಿದವನೂ ವರ್ಷಾಕಾಲದ ಮೇಘದಂತೆ ಧರ್ಮವೆಂಬ ಜಲವನ್ನು ಸುರಿಯುವವನೂ

ನಾನಾಭಾಷಾತ್ಮಿಕಾಂ ದಿವ್ಯಭಾಷಾಮೇಕಾತ್ಮಿಕಾಮಪಿ ।
ಪ್ರಥಯಂತಮಯತ್ನೇನ ಹೃದ್ಧ್ವಾಂತಂ ನುದತೀಂ ನೃಣಾಮ್ ॥ ೧೨೦ ॥

ಮನುಷ್ಯರ ಹೃದಯದ ಅಜ್ಞಾನಾಂಧಕಾರವನ್ನು ಹೋಗಲಾಡಿಸುವುದೂ ಏಕ ಪ್ರಕಾರವಾಗಿದ್ದರೂ ನಾನಾಭಾಷಾಸ್ವರೂಪವಾಗಿರುವುದೂ ಆದ ದಿವ್ಯಭಾಷೆಯನ್ನು ಪ್ರಯತ್ನವಿಲ್ಲದೆ ಉಚ್ಚರಿಸುವವನೂ

ಅಮೇಯವೀರ್ಯ[೩]ಮಾಹಾರ್ಯವಿರಹೇಪ್ಯತಿಸುಂದರಮ್ ।
ಸುವಾಗ್ವಿಭವಮುತ್ಸರ್ಪತ್ಸೌರಭಂ ಶುಭಲಕ್ಷಣಮ್ ॥ ೧೨೧ ॥

ಅನಂತಶಕ್ತಿಯುಳ್ಳವನೂ ಆಭರಣಗಳಿಲ್ಲದಿದ್ದರೂ ಬಹು ಸುಂದರನೂ ಶ್ರೇಷ್ಠವಾದ ವಾಕ್ಸಂಪತ್ತಿಯುಳ್ಳವನೂ ಹರಡುತ್ತಿರುವ ದೇಹಸೌಗಂಧ್ಯವುಳ್ಳವನೂ ಶುಭ ಲಕ್ಷಣಗಳುಳ್ಳವನೂ

ಅಸ್ವೇದಮಲಮಚ್ಛಾಯಮಪಕ್ಷ್ಮಸ್ಪಂದಬಂಧುರಮ್ ।
[೪]ಸುಸಂಸ್ಥಾನಮಭೇದ್ಯಂ ಚ ದಧಾನಂ ವಪುರೂರ್ಜಿತಮ್ ॥ ೧೨೨ ॥

ಬೆವರೂ ಮಲವೂ ಇಲ್ಲದವನೂ ತನ್ನ ನೆರಳು ಬೀಳದವನೂ ಕಣ್ಣಿನ ರೆಪ್ಪೆ ಹೊಡೆಯದಿರುವುದರಿಂದ ಮನೋಹರನೂ ಸಮಚತುರಸ್ರಸಂಸ್ಥಾನವೆಂಬ ಉತ್ತಮ ಶರೀರರಚನೆಯುಳ್ಳವನೂ ಅಭೇದ್ಯವೂ ಉನ್ನತವೂ ಆದ ಶರೀರವನ್ನು ಧರಿಸಿರುವವನೂ

[೫]ಇತ್ಯಪ್ರತರ್ಕ್ಯಮಾಹಾತ್ಮ್ಯಂ ದೂರಾದಾಲೋಕಯನ್ ಜಿನಮ್ ।
ಪ್ರಹ್ವೋಭೂತ್ಸ ಮಹೀಸ್ಪೃಷ್ಟಜಾನುರಾನಂದನಿರ್ಭರಃ ॥ ೧೨೩ ॥

ಈ ಪ್ರಕಾರವಾಗಿ ಊಹಿಸಲಾಗದ ಮಹಿಮೆಯುಳ್ಳವನೂ ಆದ ವೃಷಭ ಜಿನೇಶ್ವರನನ್ನು ದೂರದಿಂದ ನೋಡಿ ಆನಂದಭರಿತನಾದ ಭರತೇಶ್ವರನು ಭೂಮಿಗೆ ಮೊಣಕಾಲನ್ನೂರಿ ನಮಸ್ಕಾರಮಾಡಿದನು.

ದೂರಾನತಚಲನ್ಮೌಲಿರಾಲೋಲಮಣಿಕುಂಡಲಃ ।
ಸ ರೇಜೇ ಪ್ರಣಮನ್ಭಕ್ತ್ಯಾ ಜಿನಂ ರತ್ನೈರಿವಾ[೬]ರ್ಘಯನ್ ॥ ೧೨೪ ॥

ದೂರದಿಂದ ಬಗ್ಗಿದುದೂ ಚಲಿಸುತ್ತಿರುವುದೂ ಆದ ಕಿರೀಟವುಳ್ಳವನೂ ಚಲಿಸುತ್ತಿರುವ ರತ್ನಕುಂಡಲಗಳುಳ್ಳವನೂ ಭಕ್ತಿಯಿಂದ ನಮಸ್ಕರಿಸುವವನೂ ಆದ ಭರತೇಶ್ವರನು, ರತ್ನಗಳಿಂದ ಜಿನೇಶ್ವರನನ್ನು ಪೂಜಿಸುತ್ತಾನೋ ಎಂಬಂತೆ, ಪ್ರಕಾಶಿಸಿದನು.

ತತೋ ವಿಧಿವದಾನರ್ಚ ಜಲಗಂಧಸ್ರಗಕ್ಷತೈಃ ।
ಚರುಪ್ರದೀಪಧೂಪೈಶ್ಚ ಸಫಲೈಃ ಸ ಫಲೇಪ್ಸಯಾ ॥ ೧೨೫ ॥

ತರುವಾಯ ಭರತರಾಜನು ಫಲದ ಇಚ್ಛೆಯಿಂದ ಜಲ ಗಂಧ ಪುಷ್ಪಮಾಲೆ ಅಕ್ಷತೆ ಚರು ದೀಪ ಧೂಪಗಳಿಂದ ವಿಧಿಪ್ರಕಾರವಾಗಿ ಪೂಜಿಸಿದನು.

ಕೃತಪೂಜಾವಿಧಿರ್ಭೂಯಃ ಪ್ರಣಮ್ಯ ಪರಮೇಷ್ಠಿನಮ್ ।
ಸ್ತೋತುಂ ಸ್ತುತಿಭಿರಿತ್ಯುಚ್ಚೈರಾರೇಭೇ ಭರತಾಧಿಪಃ ॥ ೧೨೬ ॥

೧ ಪ್ರಾವೃಷಿಭವಂ. ೨ ಮೇಘಂ. ೩ ಆಭರಣಾದ್ಯಭಾವೇಪಿ. ೪ ಸಮಚತುರಸ್ರಸಂಸ್ಥಾನಂ. ೫ ಇತಿ ಪ್ರತರ್ಕ್ಯಮಾಹಾತ್ಮ್ಯಮಿತ್ಯಪಿ ಪಾಠಃ. ೬ ಪೂಜಯನ್.

ಭರತೇಶ್ವರನು ಪೂಜಾವಿಧಿಯನ್ನು ಪೂರ್ತಿಮಾಡಿ ಅರ್ಹತ್ಪರಮೇಷ್ಠಿಯನ್ನು ಪುನಃ ನಮಸ್ಕರಿಸಿ ಮುಂದೆ ಹೇಳುವ ಪ್ರಕಾರವಾಗಿ ಶ್ರೇಷ್ಠವಾದ ಸ್ತೋತ್ರಗಳಿಂದ ಸ್ತುತಿಸುವುದಕ್ಕೆ ಪ್ರಾರಂಭಿಸಿದನು.

ತ್ವಾಂ ಸ್ತೋಷ್ಯೇ ಪರಮಾತ್ಮಾನಮಪಾರಗುಣಮಚ್ಯುತಮ್ ।
ಚೋದಿತೋಹಂ ಬಲಾದ್ಭಕ್ತ್ಯಾ ಶಕ್ತ್ಯಾ ಮಂದೋಪ್ಯಮಂದಯಾ ॥

''ಸ್ವಾಮಿಯೆ ! ಅಲ್ಪಶಕ್ತಿಯುಳ್ಳವನಾದರೂ ಅಧಿಕವಾದ ಭಕ್ತಿಯಿಂದ ಬಲಾತ್ಕಾರವಾಗಿ ಪ್ರೇರಿಸಲ್ಪಟ್ಟ ನಾನು ಘಾತಿಕರ್ಮನಾಶದಿಂದ ಶ್ರೇಷ್ಠವಾದ ಆತ್ಮನೂ ಅನಂತಗುಣಗಳುಳ್ಳವನೂ ನಾಶರಹಿತನೂ ಆದ ನಿನ್ನನ್ನು ಸ್ತೋತ್ರಮಾಡುತ್ತೇನೆ.

ಕ್ವ ತೇ ಗುಣಾ ಗಣೇಂದ್ರಾಣಾಮಪ್ಯಗಣ್ಯಾಃ ಕ್ವ ಮಾದೃಶಃ ।
ತಥಾಪಿ ಪ್ರಯತೇ ಸ್ತೋತುಂ ಭಕ್ತ್ಯಾ ತ್ವದ್ಗುಣನಿಘ್ನಯಾ ॥ ೧೨೮ ॥

ಗಣಧರ–ಮುನಿಶ್ರೇಷ್ಠರಿಗೂ ಎಣಿಕೆಗೆ ಬಾರದ ನಿನ್ನ ಆ ಗುಣಗಳೆಲ್ಲಿ ? ನನ್ನಂತಹವನೆಲ್ಲಿ ? ಆದರೂ ನಿನ್ನ ಗುಣಗಳಿಗೆ ಪರವಶವಾದ ಭಕ್ತಿಯಿಂದ ಸ್ತುತಿಸುವುದಕ್ಕೆ ಪ್ರಯತ್ನಿಸುತ್ತೇನೆ.

ಫಲಾಯ ತ್ವದ್ಗತಾ ಭಕ್ತಿರನಲ್ಪಾಯ ಪ್ರಕಲ್ಪತೇ ।
ಸ್ವಾಮಿಸಂಪತ್ಪ್ರಪುಷ್ಣಾತಿ ನನು ಸಂಪತ್ಪರಂಪರಾಮ್ ॥ ೧೨೯ ॥

ನಿನ್ನ ವಿಷಯಕವಾದ ಭಕ್ತಿಯು ಅಧಿಕವಾದ ಫಲವನ್ನು ಕೊಡಲು ಸಮರ್ಥವಾಗಿರುತ್ತದೆ. ಸ್ವಾಮಿಯಾದ ನಿನ್ನ ಕೇವಲಜ್ಞಾನಾದಿ ಸಂಪತ್ತಿಯು ನಮ್ಮ ಐಶ್ವರ್ಯಪರಂಪರೆಯನ್ನು ಹೆಚ್ಚಿಸುವುದಲ್ಲವೇ ?

ಘಾತಿಕರ್ಮಮಲಾಪಾಯಾತ್ತ್ವಾದುರಾಸನ್ಗುಣಾಸ್ತವ ।
ಘನಾವರಣನಿರ್ಮುಕ್ತಮೂರ್ತೇರ್ಭಾನೋರ್ಯಥಾಂಶವಃ ॥ ೧೩೦ ॥

ಮೇಘದ ಆವರಣದಿಂದ ಬಿಡಲ್ಪಟ್ಟ ಆಕಾರವುಳ್ಳ ಸೂರ್ಯನ ಕಿರಣಗಳಂತೆ ಘಾತಿಕರ್ಮವೆಂಬ ಮಲದ ನಾಶದಿಂದ ನಿನ್ನ ಅನಂತಜ್ಞಾನದರ್ಶನಾದಿಗುಣಗಳು ಪ್ರಾದುರ್ಭವಿಸಿದುವು.

ಯಥಾರ್ಥದರ್ಶನಜ್ಞಾನಸುಖವೀರ್ಯಾದಿಲಬ್ಧಯಃ ।
ಕ್ಷಾಯಿಕ್ಯಸ್ತವ [೧]ನಿರ್ಜಾತಾ ಘಾತಿಕರ್ಮವಿನಿರ್ಜಯಾತ್ ॥ ೧೩೧ ॥

ಜ್ಞಾನಾವರಣ ದರ್ಶನಾವರಣ ಮೋಹನೀಯ ಅಂತರಾಯಗಳೆಂಬ ನಾಲ್ಕು ಘಾತಿಕರ್ಮಗಳ ಜಯದಿಂದ ನಿಜವಾದ ಜ್ಞಾನ ದರ್ಶನ ಸುಖ ವೀರ್ಯ–ಶಕ್ತಿ ಮೊದಲಾದ ಅಂದರೆ ಸಮ್ಯಕ್ತ್ವ ಚಾರಿತ್ರ ಜ್ಞಾನ ದರ್ಶನ ದಾನ ಲಾಭ ಭೋಗ ಉಪಭೋಗವೀರ್ಯಗಳೆಂಬ ಒಂಬತ್ತು ಕ್ಷಾಯಿಕಲಬ್ಧಿ–ಗುಣವಿಶೇಷಗಳು ನಿಶ್ಚಯ ರೂಪದಿಂದ ಆವಿರ್ಭವಿಸಿದುವು.

ಕೇವಲಾಖ್ಯಂ ಪರಂ ಜ್ಯೋತಿಸ್ತವ ದೇವ ಯದೋ[೨]ದಗಾತ್ ।
ತದಾಲೋಕಮಲೋಕಂ ಚ ತ್ವ[೩]ಮಬುದ್ಧಾ ವಿನಾ[೪]ವಧೇಃ ॥ ೧೩೨ ॥

ಪ್ರಭುವೆ ! ನಿನಗೆ ಕೇವಲಜ್ಞಾನವೆಂಬ ಉತ್ಕೃಷ್ಟಜ್ಯೋತಿಯು ಉದಯಿಸಿದಾಗ ನೀನು ಲೋಕವನ್ನೂ ಅಲೋಕವನ್ನೂ ಎಲ್ಲೆಕಟ್ಟಿಲ್ಲದೆ ತಿಳಿದೆ.

[೫]ಸಾರ್ವಜ್ಞ್ಯಂ ತವ ವಕ್ತೀಶ ವಚಃಶುದ್ಧಿ[೬]ರಶೇಷಗಾ ।
ನ ಹಿ ವಾಗ್ವಿಭವೋ ಮಂದಧಿಯಾಮಸ್ತೀಹ [೭]ಪುಷ್ಕಲಃ ॥ ೧೩೩ ॥

ಸ್ವಾಮಿಯೆ ! ಸಮಸ್ತವಿಷಯಗಳನ್ನು ತಿಳಿಯುವ ನಿನ್ನ ವಾಕ್ಶುದ್ಧಿಯು ನಿನ್ನಲ್ಲಿ ಸರ್ವಜ್ಞತ್ವವನ್ನು ತಿಳಿಸುತ್ತದೆ. ಈ ಲೋಕದಲ್ಲಿ ಮಂದಬುದ್ಧಿಯುಳ್ಳವರಿಗೆ ಸಂಪೂರ್ಣವಾದ ವಾಗ್ವಿಭವವು ಇರುವುದೇ ಇಲ್ಲ.

೧ ನಿಶ್ಚಯೇನ ಜಾತಾಃ. ೨ ಉದೇತಿ ಸ್ಮ. ೩ ಜಾನಾಸಿ ಸ್ಮ. ೪ ಮರ್ಯಾದಾಯಾಃ. ೫ ಸರ್ವಜ್ಞತ್ವಂ. ೬ ಸರ್ವಗಾ. ೭ ಸಂಪೂರ್ಣಃ.

**ವಕ್ತೃಪ್ರಾಮಾಣ್ಯತೋ ದೇವ ವಚಃಪ್ರಾಮಾಣ್ಯಮಿಷ್ಯತೇ ।**
**ನ ಹ್ಯಶುದ್ಧತರಾದ್ವಕ್ತುಃ ಪ್ರಭವಂತ್ಯುಜ್ಜ್ವಲಾ ಗಿರಃ ॥ ೧೩೪ ॥**

ಪ್ರಭುವೆ! ವಕ್ತೃವಿನ ಪ್ರಾಮಾಣಿಕತೆಯಿಂದ ವಚನಕ್ಕೆ ಪ್ರಾಮಾಣಿಕತೆಯು ಅಂಗೀಕರಿಸಲ್ಪಡುತ್ತದೆ. ದೋಷಿಯಾದ ವಕ್ತೃವಿನಿಂದ ನಿರ್ದೋಷವಾದ ಮಾತುಗಳು ಹೊರಡುವುದೇ ಇಲ್ಲ.

**ಸಪ್ತಭಂಗ್ಯಾತ್ಮಿಕೇಯಂ ತೇ ಭಾರತೀ ವಿಶ್ವಗೋಚರಾ ।**
**[1]ಆಪ್ತಪ್ರತೀತಿಮಮಲಾಂ ತ್ವಯ್ಯುದ್ಭಾವಯಿತುಂ ಕ್ಷಮಾ ॥ ೧೩೫ ॥**

ಸಮಸ್ತವಿಷಯಗಳನ್ನುತಿಳಿಯುವ ಸಪ್ತಭಂಗಿರೂಪವಾದ ನಿನ್ನ ಈ ವಾಣಿಯು ನಿನ್ನಲ್ಲಿ ನಿರ್ದೋಷವಾದ ಆಪ್ತನಿಶ್ಚಯವನ್ನು ಅಂದರೆ ನಿಶ್ಚಯವಾಗಿ ಆಪ್ತತ್ವವಿರುವುದೆಂಬುದನ್ನು ಸೂಚಿಸುವುದಕ್ಕೆ ಸಮರ್ಥವಾಗಿದೆ.

**ಸ್ಯಾದಸ್ತ್ಯೇವ ಹಿ ನಾಸ್ತ್ಯೇವ ಸ್ಯಾದವಕ್ತವ್ಯಮಿತ್ಯಪಿ ।**
**ಸ್ಯಾದಸ್ತಿ ನಾಸ್ತ್ಯವಕ್ತವ್ಯಮಿತಿ ತೇ ಸಾರ್ವ ! ಭಾರತೀ ॥ ೧೩೬ ॥**

ಸಮಸ್ತಪ್ರಾಣಿಗಳಿಗೆ ಹಿತಕರನಾದ ಸ್ವಾಮಿಯೆ ! 'ವಸ್ತುವು ಸ್ಯಾದಸ್ತಿ–ಸ್ವದ್ರವ್ಯ ಸ್ವಕ್ಷೇತ್ರ ಸ್ವಕಾಲ ಸ್ವಭಾವಾಪೇಕ್ಷೆಯಿಂದ ಉಂಟು. ಸ್ಯಾನ್ನಾಸ್ತಿ–ಪರದ್ರವ್ಯ ಪರಕ್ಷೇತ್ರ ಪರಕಾಲ ಪರಭಾವಾಪೇಕ್ಷೆಯಿಂದ ಇಲ್ಲ. ಸ್ಯಾದಸ್ತಿನಾಸ್ತಿಸ್ವದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂದ ಉಂಟು, ಪರದ್ರವ್ಯಾದಿ ಚತುಷ್ಟಯಾಪೇಕ್ಷೆಯಿಂದ ಇಲ್ಲ. ಸ್ಯಾದವಕ್ತವ್ಯಂ–ವಸ್ತುವಿನಲ್ಲಿರುವ ಅಸ್ತಿತ್ವನಾಸ್ತಿತ್ವಧರ್ಮಗಳನ್ನು ಒಂದೇ ಕಾಲದಲ್ಲಿ–ಒಟ್ಟಿಗೆ ಹೇಳುವುದಕ್ಕಾಗದಿರುವುದರಿಂದ ಈ ದೃಷ್ಟಿಯಿಂದ ವಸ್ತುವು ಅವಾಚ್ಯವಾಗಿದೆ. ಸ್ಯಾದಸ್ತ್ಯವಕ್ತವ್ಯಂ–ವಸ್ತುವು ಸ್ವಚತುಷ್ಟಯಾಪೇಕ್ಷೆಯಿಂದ ಉಂಟು, ಏಕಕಾಲದಲ್ಲಿ ಉಭಯಧರ್ಮಾಪೇಕ್ಷೆಯಿಂದ ಅವಕ್ತವ್ಯವಾಗಿದೆ. ಸ್ಯಾನ್ನಾಸ್ತ್ಯವಕ್ತವ್ಯಂ–ವಸ್ತುವು ಪರಚತುಷ್ಟಯಾಪೇಕ್ಷೆಯಿಂದ ಇಲ್ಲ, ಏಕಕಾಲದಲ್ಲಿ ಉಭಯಧರ್ಮಾಪೇಕ್ಷೆಯಿಂದ ಅವಕ್ತವ್ಯವಾಗಿದೆ. ಸ್ಯಾದಸ್ತಿನಾಸ್ತ್ಯವಕ್ತವ್ಯಂ–ವಸ್ತುವು ಸ್ವಚತುಷ್ಟಯಾಪೇಕ್ಷೆಯಿಂದ ಉಂಟು, ಪರಚತುಷ್ಟಯಾಪೇಕ್ಷೆಯಿಂದ ಇಲ್ಲ, ಏಕಕಾಲದಲ್ಲಿ ಉಭಯಧರ್ಮಾಪೇಕ್ಷೆಯಿಂದ ಅವಾಚ್ಯವಾಗಿದೆ' ಈ ಪ್ರಕಾರವಾಗಿದೆ ನಿನ್ನವಾಣಿ.

**ವಿರುದ್ಧಾ[2]ಬದ್ಧವಾಗ್ಜಾಲರುದ್ಧವ್ಯಾಮುಗ್ಧಬುದ್ಧಿಷು ।**
**ಅಶ್ರದ್ಧೇಯಮನಾಪ್ತೇಷು ಸಾರ್ವಜ್ಞ್ಯಂ ತ್ವಯಿ [3]ತಿಷ್ಠತೇ ॥ ೧೩೭ ॥**

ವಿರುದ್ಧವೂ ಅನರ್ಥವೂ ಆದ ವಾಗ್ಜಾಲದಿಂದ ವ್ಯಾಪ್ತವೂ ವಿವೇಕಶೂನ್ಯವೂ ಆದ ಬುದ್ಧಿಯುಳ್ಳ ಅನಾಪ್ತರಲ್ಲಿ ನಂಬಲಾಗದ ಸರ್ವಜ್ಞತ್ವವು ನಿನ್ನಲ್ಲಿ ಯಥಾರ್ಥವಾಗಿರುವುದು.

**ರವಿಃ ಪಯೋಧರೋ[4]ತ್ಸಂಗಸುಪ್ತರಶ್ಮಿರ್ವಿಕಾಸಿಭಿಃ ।**
**ಸೂಚ್ಯತೇಬ್ಜೈರ್ಯಥಾ ತದ್ವದುದ್ಧ್ಯೈರ್ವಾಗ್ವಿಭವೈರ್ಭವಾನ್ ॥ ೧೩೮ ॥**

ಮೇಘದ ಮಧ್ಯದಲ್ಲಿ ಸೇರಿರುವ ಕಿರಣಗಳುಳ್ಳ ಸೂರ್ಯನು ಅರಳುವ ತಾವರೆಗಳಿಂದ ಸೂಚಿಸಲ್ಪಡುವಂತೆ ನೀನು ಶ್ರೇಷ್ಠವಾದ ವಚನವೈಭವಗಳಿಂದ ಆಪ್ತನೆಂದು ಸೂಚಿಸಲ್ಪಡುತ್ತಿರುವೆ.

**ಯಥಾಂಧತಮಸೇ ದೂರಾತ್ತರ್ಕ್ಯತೇ ವಿರುತೈಃ ಶಿಖೀ ।**
**ತಥಾ ತ್ವಮಪಿ ಸುವ್ಯಕ್ತೈಃ ಸೂಕ್ತೈರಾಪ್ತೋಕ್ತಿಮರ್ಹಸಿ ॥ ೧೩೯ ॥**

ಗಾಢಾಂಧಕಾರದಲ್ಲಿರುವ ನವಿಲು ಅದರ ಕೇಕಾಧ್ವನಿಗಳಿಂದ ದೂರದಿಂದ ನವಿಲೆಂದು ಊಹಿಸಲ್ಪಡುವಂತೆ ನೀನೂ ಸ್ಫುಟವಾದ ಸತ್ಯವಚನಗಳಿಂದ ಆಪ್ತನೆಂಬ ವಚನಕ್ಕೆ ತಕ್ಕವನಾಗಿರುತ್ತೀಯೆ.

೧ ಆಪ್ತನಿಶ್ಚಿತಿಂ. ೨ ಅನರ್ಥಕ. ೩ ಪ್ರಮಾಣೀಕೃತ್ಯ ತಿಷ್ಠತಿ. ೪ ಮಧ್ಯೇ.

**ಆಸ್ತಾಮಾಧ್ಯಾತ್ಮಿಕೀಯಂ ತೇ ಜ್ಞಾನಸಂಪನ್ಮಹೋದಯಾ ।**
**ಬಹಿರ್ವಿಭೂತಿರೇವೈಷಾ ಶಾಸ್ತಿ ನಃ [1]ಶಾಸ್ತೃತಾಂ ತ್ವಯಿ ॥ ೧೪೦ ॥**

ಬಹಳ ವೃದ್ಧಿಯನ್ನು ಹೊಂದಿರುವ ಅಧ್ಯಾತ್ಮಸಂಬಂಧವಾದ ಈ ನಿನ್ನ ಜ್ಞಾನಸಂಪತ್ತಿಯ ಮಾತಿರಲಿ. ಈ ಬಾಹ್ಯಸಂಪತ್ತೇ ನಮಗೆ ನಿನ್ನಲ್ಲಿರುವ ಶಿಕ್ಷಕತ್ವ–ಉಪದೇಶಕತ್ವವನ್ನು ತಿಳಿಸುತ್ತದೆ.

**ಪರಾರ್ಧ್ಯಮಾಸನಂ ಸೈಂಹಂ ಕಲ್ಪಿತಂ ಸುರಶಿಲ್ಪಿಭಿಃ ।**
**[2]ರಕ್ತರುಕ್ಸ್ಫುರಿತಂ ಭಾತಿ [3]ಭಾವತ್ಕಂ ಮೇರುಶೃಂಗವತ್ ॥ ೧೪೧ ॥**

ಬಹುಮೂಲ್ಯವೂ ದೇವಶಿಲ್ಪಿಗಳಿಂದ ಮಾಡಲ್ಪಟ್ಟುದೂ ಕೆಂಪಾದ ಕಾಂತಿಯಿಂದ ಮಿಶ್ರವೂ ಆದ ನಿನ್ನ ಸಿಂಹಪೀಠವು, ಮೇರುಪರ್ವತದ ಶಿಖರದಂತೆ ಪ್ರಕಾಶಿಸುತ್ತದೆ.

**ಸುರೈ[4]ರುಚ್ಛ್ರಿತಮೇತತ್ತೇ ಛತ್ರಾಣಾಂ ತ್ರಯಮೂರ್ಜಿತಮ್ ।**
**[5]ತ್ರಿಜಗತ್ಪ್ರಾಭವೇ ಚಿಹ್ನಂ ನ ಪ್ರತೀಮಃ ಕಥಂ ವಯಮ್ ॥ ೧೪೨ ॥**

ದೇವತೆಗಳಿಂದ ಎತ್ತಿಹಿಡಿಯಲ್ಪಟ್ಟಿರುವುದೂ ಉನ್ನತವೂ ಆದ ಈ ನಿನ್ನ ಮುಕ್ಕೊಡೆಯು ನಿನ್ನ ಮೂರುಲೋಕದ ಆಧಿಪತ್ಯಕ್ಕೆ ಗುರುತೆಂಬುದನ್ನು ನಾವು ಹೇಗೆ ನಂಬದಿರುವೆವು ? ನಂಬುತ್ತೇವೆಂದು ಭಾವವು.

**ಚಾಮರಾಣಿ ತವಾಮೂನಿ ವೀಜ್ಯಮಾನಾನಿ ಚಾಮರೈಃ ।**
**ಶಂಸಂತ್ಯನನ್ಯಸಾಮಾನ್ಯಮೈಶ್ವರ್ಯಂ ಭುವನಾತಿಗಮ್ ॥ ೧೪೩ ॥**

ದೇವತೆಗಳಿಂದ ಬೀಸಲ್ಪಡುತ್ತಿರುವ ನಿನ್ನ ಈ ಚಾಮರಗಳು ಬೇರೆಯವರಿಗೆ ಸಾಮಾನ್ಯವಲ್ಲದ ಲೋಕಾತಿಶಯಸಂಪತ್ತನ್ನು ತಿಳಿಸುತ್ತವೆ.

**ಪರಿತಸ್ತ್ವತ್ಸಭಾ ದೇವ ವರ್ಷಂತ್ಯೇತೇ ಸುರಾಂಬುದಾಃ ।**
**ಸುಮನೋವರ್ಷಮುದ್ಗಂಧಿ ವ್ಯಾಹೂತಮಧುಪವ್ರಜಮ್ ॥ ೧೪೪ ॥**

ಸ್ವಾಮಿಯೆ ! ನಿನ್ನ ಸಮವಸರಣ ಸಭೆಯ ಸುತ್ತಲೂ ಈ ದೇವತೆಗಳೆಂಬ ಮೇಘಗಳು ವಿಶೇಷವಾದ ಪರಿಮಳಕ್ಕೆ ಮುತ್ತಿದ ಭ್ರಮರಗಳ ಸಮೂಹವುಳ್ಳ ಪುಷ್ಪವೃಷ್ಟಿಯನ್ನು ಸುರಿಯುತ್ತವೆ.

**ಸುರದುಂದುಭಯೋ ಮಂದ್ರಂ ಧ್ವನಂತ್ಯೇತೇ ನಭೋಂಗಣೇ ।**
**ಸುರಕಿಂಕರಹಸ್ತಾಗ್ರತಾಡಿತಾಸ್ತ್ವಜ್ಜಯೋತ್ಸವೇ ॥ ೧೪೫ ॥**

ನಿನ್ನ ವಿಜಯೋತ್ಸವದಲ್ಲಿ ಭೃತ್ಯರಾದ ದೇವತೆಗಳ ತುದಿಗೈಗಳಿಂದ ಹೊಡೆಯಲ್ಪಟ್ಟ ಈ ದೇವದುಂದುಭಿಗಳು ಆಕಾಶಪ್ರದೇಶದಲ್ಲಿ ಗಂಭೀರವಾಗಿ ಧ್ವನಿಮಾಡುತ್ತವೆ.

**ಸುರೈರಾಸೇವಿತೋಪಾಂತೋ ಜನತಾಶೋಕತಾಪನುತ್ ।**
**ಪ್ರಾಯಸ್ತ್ವಾಮಯ[6]ಮನ್ವೇತಿ ತವಾಶೋಕಮಹೀರುಹಃ ॥ ೧೪೬ ॥**

ದೇವತೆಗಳಿಂದ ಸಮೀಪದಲ್ಲಿ ಸೇವಿಸಲ್ಪಡುತ್ತಿರುವುದೂ ಜನಸಮೂಹದ ಶೋಕಸಂತಾಪಗಳನ್ನು ನಾಶಮಾಡುವುದೂ ಆದ ನಿನ್ನ ಈ ಅಶೋಕವೃಕ್ಷವು ಬಹಳ ಮಟ್ಟಿಗೆ ನಿನ್ನನ್ನು ಹೋಲುತ್ತದೆ.

**ತ್ವದ್ದೇಹದೀಪ್ತಯೋ ದೀಪ್ರಾಃ ಪ್ರಸರಂತ್ಯಭಿತಃ ಸಭಾಮ್ ।**
**ಧೃತಬಾಲಾತಪಚ್ಛಾಯಾಸ್ತನ್ವಾನಾ ನಯನೋತ್ಸವಮ್ ॥ ೧೪೭ ॥**

ಎಳೆಯ ಬಿಸಿಲಿನ ಕಾಂತಿಯುಳ್ಳವೂ ಪ್ರಕಾಶಮಾನವೂ ಆದ ನಿನ್ನ ಶರೀರಕಾಂತಿಗಳು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತ ಸಮವಸರಣಸಭೆಯ ಸುತ್ತಲೂ ಪಸರಿಸುತ್ತವೆ.

೧ ಶಿಕ್ಷಕತ್ವಂ. ೨ ರಕ್ತಕಾಂತಿಮಿಶ್ರಿತಂ. ೩ ಭವತ್ಸಂಬಂಧಿ. ೪ ಉದ್ಧೃತಂ. ೫ ತ್ರೈಲೋಕ್ಯಪ್ರಭುತ್ವೇ. ೬ ಅನುಕರೋತಿ.

**ದಿವ್ಯಭಾಷಾ ತವಾಶೇಷಭಾಷಾಭೇದಾನುಕಾರಿಣೀ ।**
**ನಿರಸ್ಯತಿ ಮನೋಧ್ವಾಂತಮವಾಚಾಮಪಿ ದೇಹಿನಾಮ್** ॥ ೧೪೮ ॥

ಸಮಸ್ತ ಭಾಷಾಭೇದಗಳನ್ನು ಅನುಕರಿಸುವ ಅಂದರೆ ಆಯಾ ಭಾಷಾರೂಪವಾಗಿ ಪರಿಣಮಿಸುವ ನಿನ್ನ ದಿವ್ಯಭಾಷೆಯು ಮಾತನಾಡಲಾರದ ತಿರ್ಯಕ್ಪ್ರಾಣಿಗಳ ಮನಸ್ಸಿನ ಅಜ್ಞಾನಾಂಧಕರವನ್ನೂ ಹೋಗಲಾಡಿಸುತ್ತದೆ.

**ಪ್ರಾತಿಹಾರ್ಯಮಯೀ ಭೂತಿರಿಯಮಷ್ಟತಯೀ ಪ್ರಭೋ ।**
**ಮಹಿಮಾನಂ ತವಾಚಷ್ಟೇ ವಿಸ್ಪಷ್ಟಂ ವಿಷ್ಟಪಾತಿಗಮ್** ॥ ೧೪೯ ॥

ಸ್ವಾಮಿಯೆ ! ಅಶೋಕವೃಕ್ಷ ಸುರಪುಷ್ಪವೃಷ್ಟಿ ದಿವ್ಯಧ್ವನಿ ಚಾಮರ ಸಿಂಹಪೀಠ ಭಾಮಂಡಲ ದುಂದುಭಿ ಶ್ವೇತಚ್ಛತ್ರಗಳೆಂಬ ಈ ಎಂಟು ಪ್ರಾತಿಹಾರ್ಯರೂಪವಾದ ಸಂಪತ್ತಿಯು ನಿನ್ನ ಲೋಕಾತಿಶಯವಾದ ಮಹಿಮೆಯನ್ನು ಸ್ಫುಟವಾಗಿ ಹೇಳುತ್ತದೆ.

**ತ್ರಿಮೇಖಲಸ್ಯ ಪೀಠಸ್ಯ ಮೇರೋರಿವ ಗರೀಯಸಃ ।**
**ಚೂಲಿಕೇವ ವಿಭಾತ್ಯುಚ್ಚೈಃ ಸೇವ್ಯಾ ಗಂಧಕುಟೀ ತವ** ॥ ೧೫೦ ॥

ಭಜಿಸುವುದಕ್ಕೆ ಯೋಗ್ಯವಾದ ನಿನ್ನ ತ್ರಿಮೇಖಲಪೀಠದ ಗಂಧಕುಟಿಯು, ದೊಡ್ಡದಾದ ಮೇರುಪರ್ವತದ ಉನ್ನತವಾದ ಚೂಲಿಕೆಯಂತೆ, ಪ್ರಕಾಶಿಸುತ್ತದೆ.

**ವಂದಾರೂಣಾಂ ಮುನೀಂದ್ರಾಣಾಂ ಸ್ತೋತ್ರಪ್ರತಿರವೈರ್ಮುಹುಃ ।**
**ಸ್ತೋತುಕಾಮೇವ ಭಕ್ತ್ಯಾ ತ್ವಾ ಸೈಷಾ ಭಾತ್ಯತಿಸಮ್ಮದಾತ್** ॥ ೧೫೧ ॥

ನಮಸ್ಕರಿಸುವ ಮುನೀಶ್ವರರ ಸ್ತೋತ್ರಗಳ ಪ್ರತಿಧ್ವನಿಗಳಿಂದ ಈ ಗಂಧಕುಟಿಯು ಬಹುಸಂತೋಷದಿಂದ ಬಾರಿಬಾರಿಗೆ ನಿನ್ನನ್ನು ಭಕ್ತಿಯಿಂದ ಸ್ತೋತ್ರಮಾಡುವುದಕ್ಕೆ ಇಚ್ಛೆಯುಳ್ಳದಾಗಿದೆಯೋ ಎಂಬಂತೆ ಪ್ರಕಾಶಿಸುತ್ತದೆ.

**ಪರಾರ್ಧ್ಯರತ್ನನಿರ್ಮಾಣಾಮೇನಾಮತ್ಯಂತಭಾಸ್ವರಾಮ್ ।**
**ತ್ವಾಮಧ್ಯಾಸೀನಮಾನಮ್ರಾ ನಾಕಭಾಜೋ ಭಜಂತ್ಯಮೀ** ॥ ೧೫೨ ॥

ಬಹುಮೂಲ್ಯವಾದ ರತ್ನಗಳಿಂದ ನಿರ್ಮಿತವೂ ಅತ್ಯಂತ ಪ್ರಕಾಶಮಾನವೂ ಆದ ಈ ಗಂಧಕುಟಿಯಲ್ಲಿ ವಿರಾಜಮಾನನಾಗಿರುವ ನಿನ್ನನ್ನು ನಮ್ರರಾದ ಈ ಸ್ವರ್ಗಿಕ ದೇವತೆಗಳು ಭಜಿಸುತ್ತಾರೆ.

**ಸಶಿಖಾಮಣಯೋಮೀಷಾಂ ನಮ್ರಾಣಾಂ ಭಾಂತಿ ಮೌಲಯಃ ।**
**ಸದೀಪಾ ಇವ ರತ್ನೌಘಾಃ ಸ್ಥಾಪಿತಾಸ್ತ್ವತ್ಪದಾಂತಿಕೇ** ॥ ೧೫೩ ॥

ನಮ್ರರಾದ ಈ ದೇವತೆಗಳ ಚೂಡಾರತ್ನಗಳುಳ್ಳ ಕಿರೀಟಗಳು, ನಿನ್ನ ಪಾದಗಳ ಬಳಿಯಲ್ಲಿ ಸ್ಥಾಪಿಸಲ್ಪಟ್ಟ ದೀಪಸಹಿತವಾದ ರತ್ನರಾಶಿಗಳೋ ಎಂಬಂತೆ, ಪ್ರಕಾಶಿಸುತ್ತವೆ.

**ನತಾನಾಂ ಸುರಕೋಟೀನಾಂ ಚಕಾಸತ್ಯಧಿಮಸ್ತಕಮ್ ।**
**ಪ್ರಸಾದಾಂಶಾ ಇವಾಲಗ್ನಾ ಯುಷ್ಮತ್ಪಾದನಖಾಂಶವಃ** ॥ ೧೫೪ ॥

ನಮಸ್ಕರಿಸುತ್ತಿರುವ ಅಸಂಖ್ಯದೇವತೆಗಳ ಮಸ್ತಕಗಳಲ್ಲಿ ಸಂಬಂಧಿಸಿರುವ ನಿನ್ನ ಪಾದದ ಉಗುರುಗಳ ಕಿರಣಗಳು, ನಿನ್ನ ಅನುಗ್ರಹದ ಅಂಶಗಳೋ ಎಂಬಂತೆ, ಪ್ರಕಾಶಿಸುತ್ತವೆ.

**ನಖದರ್ಪಣಸಂಕ್ರಾಂತಬಿಂಬಾನ್ಯಮರಯೋಷಿತಾಮ್ ।**
**ದಧತ್ಯಮೂನಿ ವಕ್ತ್ರಾಣಿ [1]ತ್ವದುಪಾಂಘ್ರ್ಯಂಬುಜಶ್ರಿಯಮ್** ॥ ೧೫೫ ॥

ನಿನ್ನ ಪಾದಗಳ ಉಗುರುಗಳೆಂಬ ಕನ್ನಡಿಗಳಲ್ಲಿ ಸಂಬಂಧಿಸಿರುವ ಪ್ರತಿಬಿಂಬಗಳುಳ್ಳ ದೇವಸ್ತ್ರೀಯರ ಈ ಮುಖಗಳು ನಿನ್ನ ಪಾದಗಳ ಸಮೀಪದಲ್ಲಿ ಕಮಲಗಳ ಶೋಭೆಯನ್ನು ಧರಿಸುತ್ತವೆ. ಮುಖಗಳು ಕಮಲಗಳಂತೆ ತೋರುತ್ತವೆಂದು ಭಾವವು.

೧ ತವಪಾದಸಮೀಪೇ.

**ವಕ್ತ್ರೇಷ್ವಮರನಾರೀಣಾಂ ಸಂಧತ್ತೇ ಕುಂಕುಮಶ್ರಿಯಮ್ ।**
**ಯುಷ್ಮತ್ಪಾದತಲ[1]ಚ್ಛಾಯಾ ಪ್ರಸರಂತೀ [2]ಜಪಾರುಣಾ** ॥ ೧೫೬ ॥

ದಾಸವಾಳದ ಹೂವಿನಂತೆ ಕೆಂಪಾಗಿರುವುದೂ ಪಸರಿಸುತ್ತಿರುವುದೂ ಆದ ನಿಮ್ಮ ಅಂಗಾಲುಗಳ ಕಾಂತಿಯು ದೇವಸ್ತ್ರೀಯರ ಮುಖಗಳಲ್ಲಿ ಕುಂಕುಮದ ಶೋಭೆಯನ್ನು ಧರಿಸುತ್ತದೆ.

**ಗಣಾಧ್ಯುಷಿತಭೂಭಾಗಮಧ್ಯವರ್ತೀ ತ್ರಿಮೇಖಲಃ ।**
**ಪೀಠಾದ್ರಿರಯಮಾಭಾತಿ ತವಾವಿಷ್ಕೃತಮಂಗಲಃ** ॥ ೧೫೭ ॥

ಮುನಿಸಮೂಹದಿಂದ ವಾಸಮಾಡಲ್ಪಟ್ಟ ಭೂಭಾಗದ ಮಧ್ಯದಲ್ಲಿರುವುದೂ ಮೂರು ಅಂತಸ್ತುಗಳುಳ್ಳದೂ ಆದ ನಿನ್ನ ಈ ಪೀಠವೆಂಬ ಬೆಟ್ಟವು ಲೋಕಕ್ಕೆ ಮಂಗಲಗಳನ್ನು ಪ್ರಕಟಪಡಿಸುತ್ತ ಪ್ರಕಾಶಿಸುತ್ತದೆ.

**ಪ್ರಥಮೋಸ್ಯ ಪರಿಕ್ಷೇಪೋ ಧರ್ಮಚಕ್ರೈರಲಂಕೃತಃ ।**
**ದ್ವಿತೀಯೋಪಿ ತವಾಮೀಭಿರ್ದಿಕ್ಷ್ವಷ್ಟಾಸು ಮಹಾಧ್ವಜೈಃ** ॥ ೧೫೮ ॥

ನಿನ್ನ ಈ ಪೀಠದ ಮೊದಲನೆಯ ಮೇಖಲೆ–ಕಟ್ಟೆಯು ಧರ್ಮಚಕ್ರಗಳಿಂದಲೂ ಎರಡನೆಯ ಕಟ್ಟೆಯು ಎಂಟು ದಿಕ್ಕುಗಳಲ್ಲಿ ಈ ಮಹಾಧ್ವಜಗಳಿಂದಲೂ ಅಲಂಕೃತವಾಗಿದೆ.

**ಶ್ರೀಮಂಡಪನಿವೇಶಸ್ತೇ ಯೋಜನಪ್ರಮಿತೋಪ್ಯಯಮ್ ।**
**ತ್ರಿಜಗಜ್ಜನತಾಜಸ್ರಪ್ರಾವೇಶೋ[3]ಪಗ್ರಹಕ್ಷಮಃ** ॥ ೧೫೯ ॥

ನಿನ್ನ ಈ ಲಕ್ಷ್ಮೀಮಂಡಪಪ್ರದೇಶವು ಒಂದು ಯೋಜನಪರಿಮಿತವಾದುದಾದರೂ ಯಾವಾಗಲೂ ಪ್ರವೇಶಿಸುವ ಮೂರುಲೋಕದ ಜನಸಮೂಹಕ್ಕೆ ಉಪಕಾರಮಾಡಲು ಸಮರ್ಥವಾಗಿದೆ.

**ಧೂಲೀಸಾಲಪರಿಕ್ಷೇಪೋ ಮಾನಸ್ತಂಭಾಃ ಸರಾಂಸಿ ಚ ।**
**ಖಾತಿಕಾ ಸಲಿಲಾಪೂರ್ಣಾ ವಲ್ಲೀವನಪರಿಚ್ಛದಃ** ॥ ೧೬೦ ॥

ಧೂಲೀಸಾಲವೆಂಬ ಪ್ರಾಕಾರವೂ ಮಾನಸ್ತಂಭಗಳೂ ಸರೋವರಗಳೂ ನೀರು ತುಂಬಿರುವ ಕಂದಕವೂ ಲತೆಗಳ ವನಗಳೂ

**ಸಾಲತ್ರಿತಯಮುತ್ತುಂಗಚತುರ್ಗೋಪುರಮಂಡಿತಮ್ ।**
**ಮಂಗಲದ್ರವ್ಯಸಂದೋಹೋ ನಿಧಯಸ್ತೋರಣಾನಿ ಚ** ॥ ೧೬೧ ॥

ಉನ್ನತವಾದ ನಾಲ್ಕು ಗೋಪುರಗಳಿಂದ ಅಲಂಕೃತವಾದ ಮೂರು ಪ್ರಾಕಾರಗಳೂ ಮಂಗಲದ್ರವ್ಯಗಳ ಸಮೂಹವೂ ನಿಧಿಗಳೂ ತೋರಣಗಳೂ

**ನಾಟ್ಯಶಾಲಾದ್ವಯಂ ದೀಪ್ರಂ ಲಸದ್ಧೂಪಘಟೀದ್ವಯಮ್ ।**
**ವನರಾಜಿಪರಿಕ್ಷೇಪಶ್ಚೈತ್ಯದ್ರುಮೈ[4]ಪರಿಷ್ಕೃತಃ** ॥ ೧೬೨ ॥

ಪ್ರಕಾಶಮಾನವಾದ ಎರಡು ನಾಟ್ಯಶಾಲೆಗಳೂ ದೇದೀಪ್ಯಮಾನವಾದ ಎರಡು ಧೂಪಘಟಗಳೂ ಚೈತ್ಯವೃಕ್ಷಗಳಿಂದ ಅಲಂಕೃತವಾದ ವನಗಳ ಸಾಲುಗಳ ಸುತ್ತಿಕೊಂಡಿರುವಿಕೆಯೂ

**ವನವೇದೀದ್ವಯಂ ಪ್ರೋಚ್ಚೈರ್ಧ್ವಜಮಾಲಾತತಾವನಿಃ ।**
**ಕಲ್ಪದ್ರುಮವನಾಭೋಗಃ ಸ್ತೂಪಹರ್ಮ್ಯಾವಲೀತ್ಯಪಿ** ॥ ೧೬೩ ॥

ಎರಡು ವನವೇದಿಕೆಗಳೂ ಉನ್ನತವಾದ ಧ್ವಜಮಾಲೆಗಳಿಂದ ವ್ಯಾಪ್ತವಾದ ಭೂಮಿಯೂ ಕಲ್ಪವೃಕ್ಷಗಳ ವನದ ವಿಸ್ತಾರವೂ ಸ್ತೂಪಗಳ ಮತ್ತು ಪ್ರಾಸಾದಗಳ ಸಮೂಹವೂ

೧ ಕಾಂತಿಃ. ೨ ಜಪಾಕುಸುಮವದರುಣಾ. ೩ ಉಪಕಾರದಕ್ಷಃ. ೪ ಅಲಂಕೃತಃ.

[೧]ಸದೋವನಿರಿಯಂ ದೇವ ನೃಸುರಾಸುರಪಾವನೀ ।
ತ್ರಿಜಗತ್ಸಾರಸಂದೋಹ ಇವೈಕತ್ರ ನಿವೇಶಿತಃ ॥ ೧೬೪ ॥

ಸ್ವಾಮಿಯೆ ! ಮನುಷ್ಯರನ್ನೂ ದೇವತೆಗಳನ್ನೂ ಅಸುರರನ್ನೂ ಪವಿತ್ರಮಾಡುವ ಈ ಸಮವಸರಣಭೂಮಿಯೂ ಒಂದುಕಡೆಯಲ್ಲಿ ಇರಿಸಲ್ಪಟ್ಟಂತಿರುವ ಮೂರು ಲೋಕದ ಸಾರವಸ್ತುಗಳ ಸಮೂಹವೂ

ಬಹಿರ್ವಿಭೂತಿರಿತ್ಯುಚ್ಚೈರಾವಿಷ್ಕೃತಮಹೋದಯಾ ।
ಲಕ್ಷ್ಮೀಮಾಧ್ಯಾತ್ಮಿಕೀಂ ವ್ಯಕ್ತಂ ವ್ಯನಕ್ತಿ ಜಿನ ತಾವಕೀಮ್ ॥ ೧೬೫ ॥

ಈ ಪ್ರಕಾರವಾಗಿ ನಿನ್ನ ಉತ್ಕೃಷ್ಟತೆಯನ್ನು ಪ್ರಕಟಪಡಿಸಿರುವ ಅಧಿಕವಾದ ಈ ಬಾಹ್ಯಸಂಪತ್ತಿಯು ಜಿನೇಶ್ವರನೆ ! ನಿನ್ನ ಸಂಬಂಧವಾದ ಆಧ್ಯಾತ್ಮಿಕಸಂಪತ್ತಿಯನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಮೇಲೆ ಹೇಳಿದ ಬಾಹ್ಯಸಂಪತ್ತಿಯು ಅಂತರಂಗ ಸಂಪತ್ತಿಯನ್ನು ವ್ಯಕ್ತಪಡಿಸುತ್ತದೆಂದು ಭಾವವು.

ಸಭಾಪರಿಚ್ಛದಃ ಸೋಽಯಂ ಸುರೈಸ್ತವ ವಿನಿರ್ಮಿತಃ ।
ವೈರಾಗ್ಯಾತಿಶಯಂ ನಾಥ [೨]ನೋಪಹಂತ್ಯ[೩]ಪ್ರತರ್ಕಿತಃ ॥ ೧೬೬ ॥

ಸ್ವಾಮಿಯೆ ! ನಿನಗೆ ದೇವತೆಗಳಿಂದ ಮಾಡಲ್ಪಟ್ಟ ಊಹೆಗೆ ನಿಲುಕದ ಈ ಸಮವಸರಣ-ಸಭಾಪರಿಗ್ರಹವು ನಿನ್ನ ವೈರಾಗ್ಯಾತಿಶಯವನ್ನು ನಾಶಮಾಡುವುದಿಲ್ಲ. ಅನುಪಮವಾದ ಸಭಾಪರಿಗ್ರಹವಿದ್ದರೂ ಸ್ವಾಮಿಗೆ ಅದರಲ್ಲಿ ಆಶೆಯಿಲ್ಲದಿರುವುದರಿಂದ ಅದು ಸ್ವಾಮಿಯ ವಿರಾಗಭಾವವನ್ನು ನಾಶಮಾಡುವುದಿಲ್ಲವೆಂದು ಭಾವವು.

ಇತ್ಯತ್ಯದ್ಭುತಮಾಹಾತ್ಮ್ಯಸ್ತ್ರಿಜಗದ್ವಲ್ಲಭೋ ಭವಾನ್ ।
ಸ್ತುತ್ಯೋ[೪]ಪತಿಷ್ಠಮಾನಂ ಮಾಂ [೫]ಪುನೀತಾತ್ಪೂತಶಾಸನ ॥ ೧೬೭ ॥

ಪವಿತ್ರವಾದ ಶಾಸನ–ಶಾಸ್ತ್ರಾಜ್ಞೆಯುಳ್ಳ ಸ್ವಾಮಿಯೆ ! ಮೇಲೆ ಹೇಳಿದ ಪ್ರಕಾರವಾಗಿ ಅತ್ಯಾಶ್ಚರ್ಯಕರವಾದ ಮಹಿಮೆಯುಳ್ಳವನೂ ಮೂರುಲೋಕಕ್ಕೆ ಪ್ರಭುವೂ ಸ್ತುತಿಸುವುದಕ್ಕೆ ಯೋಗ್ಯನೂ ಆದ ನೀನು ನಿನ್ನನ್ನು ಪೂಜಿಸುತ್ತಿರುವ ನನ್ನನ್ನು ಪವಿತ್ರನನ್ನಾಗಿ ಮಾಡು.

ಅಲಂ ಸ್ತುತಿಪ್ರಪಂಚೇನ ತವಾಚಿಂತ್ಯತಮಾ ಗುಣಾಃ ।
ಜಯೇಶಾನ ನಮಸ್ತುಭ್ಯಮಿತಿ ಸಂಕ್ಷೇಪತಃ ಸ್ತುವೇ ॥ ೧೬೮ ॥

ನಿನ್ನ ವಿಸ್ತಾರವಾದ ಸ್ತುತಿಯು ಸಾಕು. ನಿನ್ನ ಗುಣಗಳು ಅಚಿಂತ್ಯವಾಗಿರುತ್ತವೆ. ಅಪಾರವಾದ ಗುಣಗಳನ್ನು ಚಿಂತಿಸುವುದಕ್ಕಾಗುವುದಿಲ್ಲವೆಂದು ಭಾವವು. "ಪ್ರಭುವೆ ! ಜಯಶೀಲನಾಗು. ನಿನಗೆ ನಮಸ್ಕಾರವು" ಈ ಪ್ರಕಾರವಾಗಿ ಸಂಕ್ಷೇಪದಿಂದ ನಿನ್ನನ್ನು ಸ್ತೋತ್ರಮಾಡುತ್ತೇನೆ.

ಜಯೇಶ ಜಯ ನಿರ್ದಗ್ಧಕರ್ಮೇಂಧನ ಜಯಾ[೬]ಜರ ।
ಜಯ ಲೋಕಗುರೋ ಸಾರ್ವ ಜಯತಾಜ್ಜಯ [೭]ಜಿತ್ವರ ॥ ೧೬೯ ॥

ಪ್ರಭುವೆ ! ಜಯಿಸು. ಕರ್ಮವೆಂಬ ಕಟ್ಟಿಗೆಯನ್ನು ಸುಟ್ಟವನೆ ! ಜಯಿಸು. ಮುಪ್ಪಿಲ್ಲದವನೆ ! ಜಯಿಸು. ಲೋಕಗುರುವೆ ! ಜಯಿಸು. ಸರ್ವಪ್ರಾಣಿಗಳಿಗೆ ಹಿತಕರನೆ ! ಜಯಿಸು. ಜಯಶೀಲನೆ ! ಜಯಿಸು.

ಜಯ ಲಕ್ಷ್ಮೀಪತೇ ಜಿಷ್ಣೋ ಜಯಾನಂತಗುಣೋಜ್ಜ್ವಲ ।
ಜಯ ವಿಶ್ವಜಗದ್ಬಂಧೋ ಜಯ ವಿಶ್ವಜಗದ್ಧಿತ ॥ ೧೭೦ ॥

ಜಯಶೀಲನಾದ ಲಕ್ಷ್ಮೀಪತಿಯೆ ! ಜಯಿಸು. ಅನಂತಗುಣಗಳಿಂದ ಪ್ರಕಾಶಿಸುವವನೆ ! ಜಯಿಸು. ಸಮಸ್ತ ಜಗತ್ತಿನ ಬಂಧುವೆ ! ಜಯಿಸು. ಸಮಸ್ತಲೋಕಕ್ಕೆ ಹಿತಕರನೆ ! ಜಯಿಸು.

ಜಯಾಖಿಲಜಗದ್ವೇದಿನ್ ಜಯಾಖಿಲಸುಖೋದಯ ।
ಜಯಾಖಿಲಜಗಜ್ಜ್ಯೇಷ್ಠ ಜಯಾಖಿಲಜಗದ್ಗುರೋ ॥ ೧೭೧ ॥

ಸಕಲಲೋಕವನ್ನು ತಿಳಿಯುವವನೆ ! ಜಯಿಸು. ಸಮಸ್ತ ಸುಖಗಳ ಉತ್ಪತ್ತಿಯುಳ್ಳವನೆ ! ಜಯಿಸು. ಸಂಪೂರ್ಣಲೋಕಕ್ಕೆ ಹಿರಿಯನೆ ! ಜಯಿಸು. ಸರ್ವಲೋಕಕ್ಕೆ ಗುರುವೆ ! ಜಯಿಸು.

ಜಯ ನಿರ್ಜಿತಮೋಹಾರೇ ಜಯ ತರ್ಜಿತಮನ್ಮಥ ।
ಜಯ ಜನ್ಮಜರಾತಂಕವಿಜಯಿನ್ವಿಜಿತಾಂತಕ ॥ ೧೭೨ ॥

ಮೋಹವೆಂಬ ಶತ್ರುವನ್ನು ಜಯಿಸಿದವನೆ ! ಜಯಶೀಲನಾಗು. ಕಾಮನನ್ನು ತಿರಸ್ಕರಿಸಿದವನೆ ! ಜಯಿಸು. ಜನ್ಮ ಜರಾ ರೋಗ ಮೃತ್ಯುಗಳನ್ನು ಜಯಿಸಿದವನೆ ! ಜಯಶೀಲನಾಗು.

ಜಯ ನಿರ್ಮದ ನಿರ್ಮಾಯ ಜಯ ನಿರ್ಮೋಹ ನಿರ್ಮಮ ।
ಜಯ ನಿರ್ಮಲ [೧]ನಿರ್ದ್ವಂದ್ವ ಜಯ [೨]ನಿಷ್ಕಲ [೩]ಪುಷ್ಕಲ ॥ ೧೭೩ ॥

ಮದ ಮಾಯೆಗಳಿಲ್ಲದವನೆ ! ಜಯಶೀಲನಾಗು. ಮೋಹ ಮಮಕಾರಗಳಿಲ್ಲದವನೆ ! ಜಯಶೀಲನಾಗು. ನಿರ್ಮಲನೆ ! ಪರಿಗ್ರಹರಹಿತನೆ ! ಜಯಿಸು. ಶರೀರಬಂಧನರಹಿತನೆ ! ಸಂಪೂರ್ಣನೆ ! ಜಯಶೀಲನಾಗು.

ಜಯ ಪ್ರಬುದ್ಧಸನ್ಮಾರ್ಗ ಜಯ ದುರ್ಮಾರ್ಗರೋಧನ ।
ಜಯ ಕರ್ಮಾರಿ[೪]ಮರ್ಮಾವಿದ್ಧರ್ಮಚಕ್ರಜಯೋದ್ಧುರ ॥ ೧೭೪ ॥

ಸನ್ಮಾರ್ಗವನ್ನು ತಿಳಿದವನೆ ! ಜಯಶೀಲನಾಗು. ದುರ್ಮಾರ್ಗವನ್ನು ನಿರೋಧಿಸುವವನೆ ! ಜಯಶೀಲನಾಗು. ಕರ್ಮವೆಂಬ ಶತ್ರುವಿನ ಮರ್ಮವನ್ನು ಹೊಡೆಯುವವನೆ ! ಧರ್ಮಚಕ್ರದ ಜಯದಿಂದ ಸಮರ್ಥನಾಗಿರುವವನೆ ! ಜಯಶೀಲನಾಗು.

ಜಯಾಧ್ವರಪತೇ ಯಜ್ವನ್ ಜಯ ಪೂಜ್ಯ ಮಹೋದಯ ।
ಜಯೋದ್ಧುರ [೫]ಜಯಾಚಿಂತ್ಯ ಸದ್ಧರ್ಮರಥಸಾರಥೇ ॥ ೧೭೫ ॥

ಯಜ್ಞೇಶ್ವರನೆ ! ಯಾಗಶೀಲನೆ ! ಜಯಿಸು. ಪೂಜ್ಯನೆ ! ಉತ್ಕೃಷ್ಟವಾದ ಆವಿರ್ಭಾವವುಳ್ಳವನೆ ! ಜಯಶೀಲನಾಗು. ಜಯದಲ್ಲಿ ಪ್ರೌಢನೆ ! ಅಚಿಂತ್ಯನೆ ! ಸದ್ಧರ್ಮವೆಂಬ ರಥದ ಸಾರಥಿಯೆ ! ಜಯಶೀಲನಾಗು.

ಜಯ ನಿಸ್ತೀರ್ಣಸಂಸಾರಪಾರಾವಾರ ಗುಣಾಕರ ।
ಜಯ ನಿಃಶೇಷನಿಷ್ಪೀತವಿದ್ಯಾರತ್ನಾಕರ ಪ್ರಭೋ ॥ ೧೭೬ ॥

ಸಂಸಾರವೆಂಬ ಸಮುದ್ರದ ದಡವನ್ನು ದಾಟಿದವನೆ ! ಗುಣಗಳ ಗಣಿಯೆ ! ಜಯಿಸು. ವಿದ್ಯೆಯೆಂಬ ಸಮುದ್ರವನ್ನು ಸಂಪೂರ್ಣವಾಗಿ ಪಾನಮಾಡಿದವನೆ ! ಸ್ವಾಮಿಯೆ ! ಜಯಶೀಲನಾಗು.

ನಮಸ್ತೇ ಪರಮಾನಂತಸುಖರೂಪಾಯ [೬]ತಾಯಿನೇ ।
ನಮಸ್ತೇ ಪರಮಾನಂದಮಯಾಯ ಪರಮಾತ್ಮನೇ ॥ ೧೭೭ ॥

ಶ್ರೇಷ್ಠವಾದ ಅನಂತಸುಖಸ್ವರೂಪನೂ ರಕ್ಷಕನೂ ಆದ ನಿನಗೆ ನಮಸ್ಕಾರವು. ಪರಮಾನಂದಸ್ವರೂಪನೂ ಪರಮಾತ್ಮನೂ ಆದ ನಿನಗೆ ನಮಸ್ಕಾರವು.

ನಮಸ್ತೇ ಭುವನೋದ್ಭಾಸಿ[೭]ಜ್ಞಾನಭಾಭಾರಭಾಸಿನೇ ।
ನಮಸ್ತೇ ನಯನಾನಂದಿಪರಮೌದಾರಿಕತ್ವಿಷೇ ॥ ೧೭೮ ॥

ಲೋಕವನ್ನು ಬೆಳಗುವ ಜ್ಞಾನ ಕಿರಣಗಳ ಸಮೂಹದಿಂದ ಪ್ರಕಾಶಿಸುವ ನಿನಗೆ ನಮಸ್ಕಾರವು. ನೇತ್ರಾನಂದಕರವಾದ ಪರಮೌದಾರಿಕವೆಂಬ ದಿವ್ಯಶರೀರದ ಪ್ರಭೆಯುಳ್ಳ ನಿನಗೆ ನಮಸ್ಕಾರವು.

೧ ಸಮವಸರಣಭೂಮಿಃ. ೨ ನ ವಿನಾಶಯತಿ. ೩ ಊಹಾತೀತಃ. ೪ ಅರ್ಚಯಂತಂ. ೫ ಪವಿತ್ರಂ ಕುರು. ೬ ಜರಾರಹಿತ. ೭ ಜಯಶೀಲ.

೧ ನಿಷ್ಪರಿಗ್ರಹ. ೨ ಶರೀರಬಂಧನರಹಿತ. ೩ ಸಂಪೂರ್ಣ. ೪ ಮರ್ಮವಿಧ್ಯತಿ ತಾಡಯತೀತಿ ಮರ್ಮಾವಿತ್. ೫ ದಯಾಚಿಹ್ನ ಇತ್ಯಪಿ ಪಾಠಃ. ೬ ಪಾಲಕಾಯ. ೭ ಜ್ಞಾನಕಿರಣಸಮೂಹಪ್ರಕಾಶಿನೇ.

**ನಮಸ್ತೇ ಮಸ್ತಕನ್ಯಸ್ತಸ್ವಹಸ್ತಾಂಜಲಿಕುಡ್ಮಲೈಃ ।**
**ಸ್ತುತಾಯ ತ್ರಿದಶಾಧೀಶೈಃ ಸ್ವರ್ಗಾವತರಣೋತ್ಸವೇ ॥ ೧೭೯ ॥**

ನೀನು ಸ್ವರ್ಗದಿಂದ ಅವತರಿಸುವ ಕಾಲದಲ್ಲುಂಟಾದ ಉತ್ಸವದಲ್ಲಿ ತಮ್ಮ ಕೈಗಳನ್ನು ಜೋಡಿಸಿ ಮಸ್ತಕದಲ್ಲಿರಿಸಿದ ದೇವೇಂದ್ರರುಗಳಿಂದ ಸ್ತುತಿಸಲ್ಪಟ್ಟ ನಿನಗೆ ನಮಸ್ಕಾರವು.

**ನಮಸ್ತೇ ಪ್ರಚಲನ್ಮೌಲಿಘಟಿತಾಂಜಲಿಬಂಧನೈಃ ।**
**[1]ನೂತಾಯ ಮೇರುಶೈಲಾಗ್ರಸ್ನಾತಾಯ ಸುರಸತ್ತಮೈಃ ॥ ೧೮೦ ॥**

ಕೈಗಳನ್ನು ಜೋಡಿಸಿ ಚಲಿಸುತ್ತಿರುವ ತಮ್ಮ ಕಿರೀಟಗಳಲ್ಲಿರಿಸಿದ ಉತ್ತಮ ದೇವತೆಗಳಿಂದ ಸ್ತುತಿಸಲ್ಪಟ್ಟವನೂ ಮೇರುಪರ್ವತದ ತುದಿಯಲ್ಲಿ ಜನ್ಮಾಭಿಷೇಕವನ್ನು ಹೊಂದಿದವನೂ ಆದ ನಿನಗೆ ನಮಸ್ಕಾರವು.

**ನಮಸ್ತೇ ಮುಕುಟೋಪಾಗ್ರಲಗ್ನಹಸ್ತಪುಟೋ[2]ದ್ಭಟೈಃ ।**
**ಲೌಕಾಂತಿಕೈ[3]ರಧೀಷ್ಟಾಯ ಪರಿನಿಷ್ಕ್ರಮಣೋತ್ಸವೇ ॥ ೧೮೧ ॥**

ಪರಿನಿಷ್ಕ್ರಮಣ (ದೀಕ್ಷೆಗೆ ಹೊರಡುವ) ಉತ್ಸವದಲ್ಲಿ ತಮ್ಮ ಕಿರೀಟಗಳ ತುದಿಯಲ್ಲಿ ಕೈಗಳನ್ನು ಜೋಡಿಸಿಟ್ಟು ಓಡಾಡಿದ ಲೌಕಾಂತಿಕದೇವತೆಗಳಿಂದ ಹೆಚ್ಚಾಗಿ ಪ್ರಾರ್ಥಿಸಲ್ಪಟ್ಟ ನಿನಗೆ ನಮಸ್ಕಾರವು. (ಬ್ರಹ್ಮಕಲ್ಪವೆಂಬ ಐದನೆಯ ಸ್ವರ್ಗಲೋಕದ ಅಂತ್ಯದಲ್ಲಿ ವಾಸಮಾಡುವ ದೇವರ್ಷಿಗಳಿಗೆ ಲೌಕಾಂತಿಕದೇವತೆಗಳೆಂದು ಹೆಸರು).

**ನಮಸ್ತೇ ಸ್ವಕಿರೀಟಾಗ್ರರತ್ನಗ್ರಾವಾಂತಚುಂಬಿಭಿಃ ।**
**ಕರಾಬ್ಜಮುಕುಲೈಃ [4]ಪ್ರಾಪ್ತಕೇವಲೇಜ್ಯಾಯ ನಾಕಿನಾಮ್ ॥ ೧೮೨ ॥**

ದೇವತೆಗಳ ಕಿರೀಟಗಳ ತುದಿಯಲ್ಲಿರುವ ರತ್ನದ ಕಲ್ಲುಗಳಲ್ಲಿ ಸಂಬಂಧಿಸಿದ ಕೈಗಳೆಂಬ ಕಮಲಗಳ ಮೊಗ್ಗುಗಳಿಂದ ಕೇವಲಜ್ಞಾನಪೂಜೆಯನ್ನು ಹೊಂದಿದ ನಿನಗೆ ನಮಸ್ಕಾರವು.

**ನಮಸ್ತೇ ಪರಿನಿರ್ವಾಣಕಲ್ಯಾಣೇಪಿ [5]ಪ್ರವತ್ಸ್ಯತಿ ।**
**ಪೂಜನೀಯಾಯ ವಹ್ನೀಂದ್ರೈರ್ಜ್ವಲನ್ಮುಕುಟಕೋಟಿಭಿಃ ॥ ೧೮೩ ॥**

ಮುಂದಾಗುವ ಪರಿನಿರ್ವಾಣಕಲ್ಯಾಣೋತ್ಸವದಲ್ಲಿಯೂ ಜ್ವಲಿಸುತ್ತಿರುವ ಕಿರೀಟಾಗ್ರಭಾಗಗಳುಳ್ಳ ಅಗ್ನೀಂದ್ರರಿಂದ ಪೂಜಿಸಲ್ಪಡುವುದಕ್ಕೆ ಯೋಗ್ಯನಾದ ನಿನಗೆ ನಮಸ್ಕಾರವು.

**ನಮಸ್ತೇ ಪ್ರಾಪ್ತಕಲ್ಯಾಣಮಹೇಜ್ಯಾಯ ಮಹೌಜಸೇ ।**
**[6]ಪ್ರಾಜ್ಯತ್ರೈಲೋಕ್ಯರಾಜ್ಯಾಯ ಜ್ಯಾಯಸೇ [7]ಜ್ಯಾಯಸಾಮಪಿ ॥ ೧೮೪ ॥**

ಗರ್ಭಾವತರಣ ಮೊದಲಾದ ಕಲ್ಯಾಣಮಹಾಪೂಜೆಗಳನ್ನು ಹೊಂದಿದವನೂ ಮಹಾಕಾಂತಿಯುಳ್ಳವನೂ ಶ್ರೇಷ್ಠವಾದ ತ್ರಿಲೋಕರಾಜ್ಯವುಳ್ಳವನೂ ಶ್ರೇಷ್ಠರಲ್ಲಿಯೂ ಶ್ರೇಷ್ಠನೂ ಆದ ನಿನಗೆ ನಮಸ್ಕಾರವು.

**ನಮಸ್ತೇ ನತನಾಕೀಂದ್ರಚೂಡಾರತ್ನಾರ್ಚಿತಾಂಘ್ರಯೇ ।**
**ನಮಸ್ತೇ ದುರ್ಜಯಾರಾತಿನಿರ್ಜಯೋಪಾರ್ಜಿತಶ್ರಿಯೇ ॥ ೧೮೫ ॥**

ನಮ್ರರಾದ ದೇವೇಂದ್ರರ ಕಿರೀಟಗಳ ರತ್ನಗಳಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ನಿನಗೆ ನಮಸ್ಕಾರವು. ಕಷ್ಟದಿಂದ ಜಯಿಸತಕ್ಕ ಕರ್ಮವೆಂಬ ಶತ್ರುವಿನ ವಿಜಯದಿಂದ ಸಂಪಾದಿಸಿದ ಸಂಪತ್ತಿಯುಳ್ಳ ನಿನಗೆ ನಮಸ್ಕಾರವು.

**ನಮೋಸ್ತು ತುಭ್ಯಮಿದ್ಧರ್ದ್ಧೇ ಸಪರ್ಯಾಮರ್ಹತೇ ಪರಾಮ್ ।**
**ರಹೋ [8]ರಜೋರಿಘಾತಾಚ್ಚ ಪ್ರಾಪ್ತ[9]ತನ್ನಾಮರೂಢಯೇ ॥ ೧೮೬ ॥**

ವೃದ್ಧಿಯನ್ನು ಹೊಂದಿರುವ ಸಂಪತ್ತಿಯುಳ್ಳವನೂ ಉತ್ಕೃಷ್ಟವಾದ ಪೂಜೆಗೆ ಯೋಗ್ಯನೂ ರಹಸ್ಯವಾಗಿ ಜ್ಞಾನಾವರಣ ದರ್ಶನಾವರಣ ಮೋಹನೀಯ ಅಂತರಾಯ ಕರ್ಮಗಳೆಂಬ ಅರಿ–ಶತ್ರುಗಳನ್ನು ನಾಶಮಾಡಿದುದರಿಂದ 'ಅರ್ಹನ್' ಎಂದು ರೂಢಿಯಾದ ಹೆಸರನ್ನು ಪಡೆದವನೂ ಆದ ನಿನಗೆ ನಮಸ್ಕಾರವಿರಲಿ.

**ಜಿತಾಂತಕ ನಮಸ್ತುಭ್ಯಂ ಜಿತಮೋಹ ನಮೋಸ್ತು ತೇ ।**
**ಜಿತಾನಂಗ ನಮಸ್ತೇ [1]ಸ್ತಾದ್ವಿರಾಗಾಯ ಸ್ವಯಂಭವೇ ॥ ೧೮೭ ॥**

ಮೃತ್ಯುವನ್ನು ಜಯಿಸಿದ ನಿನಗೆ ನಮಸ್ಕಾರವು. ಮೋಹವನ್ನು ಜಯಿಸಿದ ನಿನಗೆ ನಮಸ್ಕಾರವಿರಲಿ. ಮನ್ಮಥನನ್ನು ಜಯಿಸಿದವನೂ ರಾಗವಿಲ್ಲದವನೂ ಸ್ವಯಂಭುವೂ ಆದ ನಿನಗೆ ನಮಸ್ಕಾರವಿರಲಿ.

**ತ್ವಾಂ [2]ನಮಸ್ಯನ್ ಜನೈರ್ನಮ್ರೈರ್ನಮ್ಯತೇ ಸುಕೃತೀ ಪುಮಾನ್ ।**
**ಗಾಂ ಜಯೇಜ್ಜಿತಜೇತವ್ಯ ತ್ವಜ್ಜಯೋದ್ಘೋಷಣಾತ್ಕೃತೀ ॥ ೧೮೮ ॥**

ನಿನ್ನನ್ನು ನಮಸ್ಕರಿಸುವ ಪುಣ್ಯಶಾಲಿಯಾದ ಮನುಷ್ಯನು ನಮ್ರರಾದ ಜನರಿಂದ ನಮಸ್ಕರಿಸಲ್ಪಡುತ್ತಾನೆ. ಜಯಿಸಬೇಕಾಗಿರುವ ಕರ್ಮಶತ್ರುಗಳನ್ನು ಜಯಿಸಿದ ಸ್ವಾಮಿಯೆ ! ನಿನ್ನ ಜಯದ ಘೋಷಣೆಯಿಂದ ಪುಣ್ಯಶೀಲನಾದ ಮನುಷ್ಯನು ಪೃಥ್ವಿಯನ್ನು ಜಯಿಸುವನು.

**ತ್ವನ್ನುತೇಃ ಪೂತವಾಗಸ್ಮಿ ತ್ವತ್ಸ್ಮೃತೇಃ ಪೂತಮಾನಸಃ ।**
**ತ್ವನ್ನತೇಃ ಪೂತದೇಹೋಸ್ಮಿ ಧನ್ಯೋಸ್ಮ್ಯದ್ಯ ತ್ವದೀಕ್ಷಣಾತ್ ॥ ೧೮೯ ॥**

ನಿನ್ನ ಸ್ತೋತ್ರದಿಂದ ಪವಿತ್ರವಾದ ವಚನವುಳ್ಳವನಾಗಿರುತ್ತೇನೆ. ನಿನ್ನ ಸ್ಮರಣದಿಂದ ಪವಿತ್ರವಾದ ಮನಸ್ಸುಳ್ಳವನಾಗಿರುತ್ತೇನೆ. ನಿನ್ನ ದರ್ಶನದಿಂದ ಈ ದಿವಸ ಧನ್ಯನಾಗಿದ್ದೇನೆ.

**ಅಹಮದ್ಯ ಕೃತಾರ್ಥೋಸ್ಮಿ ಜನ್ಮಾದ್ಯ ಸಫಲಂ ಮಮ ।**
**[3]ಸುನಿರ್ವೃತೇ ದೃಶೌ ಮೇದ್ಯ ಸುಪ್ರಸನ್ನಂ ಮನೋದ್ಯ ಮೇ ॥ ೧೯೦ ॥**

ಈ ದಿವಸ ನಾನು ಕೃತಾರ್ಥನಾಗಿದ್ದೇನೆ. ಈ ದಿವಸ ನನ್ನ ಜನ್ಮವು ಸಫಲವಾಯಿತು. ಈ ದಿವಸ ನನ್ನ ಕಣ್ಣುಗಳು ಅತ್ಯಂತ ಸುಖವುಳ್ಳವಾದುವು. ಈ ದಿವಸ ನನ್ನ ಮನಸ್ಸು ಚೆನ್ನಾಗಿ ಪ್ರಸನ್ನವಾಗಿರುತ್ತದೆ.

**ತ್ವತ್ತೀರ್ಥಸರಸಿ ಸ್ವಚ್ಛೇ ಪುಣ್ಯತೋಯೈಃ ಸುಸಂಭೃತೇ ।**
**ಸುಸ್ನಾತೋಹಂ ಚಿರಾದದ್ಯ ಪೂತೋಸ್ಮಿ [4]ಸುಖನಿರ್ವೃತಃ ॥ ೧೯೧ ॥**

ಪುಣ್ಯಗಳೆಂಬ ಜಲಗಳಿಂದ ಚೆನ್ನಾಗಿ ತುಂಬಲ್ಪಟ್ಟಿರುವ ಸ್ವಚ್ಛವಾದ ನಿನ್ನ ತೀರ್ಥವೆಂಬ ಸರೋವರದಲ್ಲಿ ಬಹುಕಾಲ ಸ್ನಾನಮಾಡಿದ ನಾನು ಈ ದಿವಸ ಸುಖದಿಂದ ತೃಪ್ತಿಯನ್ನು ಹೊಂದಿದವನೂ ಪವಿತ್ರನೂ ಆಗಿರುತ್ತೇನೆ.

**ತ್ವತ್ಪಾದನಖಭಾಜಾಲಸಲಿಲೈರಸ್ತಕಲ್ಮಷೈಃ ।**
**ಅಧಿಮಸ್ತಕಮಾಲಗ್ನೈರಭಿಷಿಕ್ತ ಇವಾಸ್ಮ್ಯಹಮ್ ॥ ೧೯೨ ॥**

ಕಲ್ಮಷವಿಲ್ಲದುವೂ ಮಸ್ತಕವಲ್ಲಿ ಸಂಬಂಧಿಸಿರುವುವೂ ಆದ ನಿನ್ನ ಪಾದಗಳ ಉಗುರುಗಳ ಕಿರಣಸಮೂಹಗಳೆಂಬ ಜಲಗಳಿಂದ ನಾನು ಅಭಿಷೇಕಮಾಡಲ್ಪಟ್ಟವನಂತಿರುತ್ತೇನೆ.

**ಏಕತಃ [5]ಸಾರ್ವಭೌಮಶ್ರೀರಿಯಮಪ್ರತಿಶಾಸನಾ ।**
**ಏಕತಶ್ಚ ಭವತ್ಪಾದಸೇವಾ ಲೋಕೈಕಪಾವನೀ ॥ ೧೯೩ ॥**

ನನಗೆ ಒಂದು ಕಡೆಯಲ್ಲಿ ವಿರೋಧಾಜ್ಞೆಯಿಲ್ಲದ–ಅಪ್ರತಿಹತವಾದ ಈ ಚಕ್ರವರ್ತಿಸಂಪತ್ತಿಯೂ ಇನ್ನೊಂದುಕಡೆಯಲ್ಲಿ ಲೋಕವನ್ನು ಮುಖ್ಯವಾಗಿ ಪವಿತ್ರಮಾಡುವ ತಮ್ಮ ಪಾದಗಳ ಸೇವೆಯೂ ಇರುತ್ತವೆ. ಪ್ರಾಪ್ತವಾಗಿರುತ್ತವೆಂದು ಭಾವವು.

---

೧ ಸ್ತುತಾಯ. ೨ ಭ್ರಮದ್ಭಿಃ ಸಮರ್ಥೈರ್ವಾ. ೩ ಅಧಿಕಮಿಷ್ಟಾಯ, ಸವಿನಯಪ್ರಾರ್ಥಿತಾಯೇತಿ ಭಾವಃ. ೪ ಲಬ್ಧಕೇವಲಜ್ಞಾನಪೂಜಾಯ. ೫ ಭಾವಿನಿ. ೬ ಪ್ರಾಪ್ತ ಇತ್ಯಪಿ ಪಾಠಃ. ೭ ಶ್ರೇಷ್ಠಾನಾಂ. ೮ ಜ್ಞಾನಾವರಣ ದರ್ಶನಾವರಣ ಮೋಹನೀಯಾಂತರಾಯಘಾತಾತ್. ೯ ಅರ್ಹನ್ನಿತಿ ನಾಮ.

೧ ಅಸ್ತು. ೨ ನಮಸ್ಕುರ್ವನ್. ೩ ಅತ್ಯಂತಸುಖವತ್ಯೌ. ೪ ಸುಖತೃಪ್ತಃ. ೫ ಚಕ್ರವರ್ತಿಲಕ್ಷ್ಮೀರ್ಮಮ ತಿಷ್ಠತಿ.

**ಯ[1]ದ್ದಿಗ್ಭ್ರಾಂತಿವಿಮೂಢೇನ [2]ಮಹದೇನೋ ಮಯಾರ್ಜಿತಮ್ ।**
**ತತ್ತ್ವತ್ಸಂದರ್ಶನಾ[3]ಲ್ಲೀನಂ ತಮೋ ನೈಶಂ ರವೇರ್ಯಥಾ ॥ ೧೯೪ ॥**

ದಿಗ್ವಿಜಯಭ್ರಮಣದಿಂದ ಮೂಢನಾದ ನಾನು ಯಾವ ಮಹತ್ಪಾಪವನ್ನು ಸಂಪಾದಿಸಿದೆನೋ ಅದು, ಸೂರ್ಯನ ಸಂದರ್ಶನದಿಂದ ರಾತ್ರಿಯ ಕತ್ತಲೆಯು ನಷ್ಟವಾಗುವಂತೆ, ನಿನ್ನ ಸಂದರ್ಶನದಿಂದ ನಷ್ಟವಾಯಿತು.

**ತ್ವತ್ಪದಸ್ಮೃತಿಮಾತ್ರೇಣ ಪುಮಾನೇತಿ ಪವಿತ್ರತಾಮ್ ।**
**ಕಿಮುತ ತ್ವದ್ಗುಣಸ್ತುತ್ಯಾ ಭಕ್ತ್ಯೈವಂ ಸುಪ್ರಯುಕ್ತಯಾ ॥ ೧೯೫ ॥**

ನಿನ್ನ ಪಾದಗಳ ಸ್ಮರಣಮಾತ್ರದಿಂದ ಮನುಷ್ಯನು ಪವಿತ್ರತೆಯನ್ನು ಹೊಂದುತ್ತಾನೆ. ಹೀಗಿರುವಾಗ ನಿನ್ನಲ್ಲಿ ಚೆನ್ನಾಗಿ ಮಾಡಿದ ಭಕ್ತಿಯಿಂದಲೂ ನಿನ್ನ ಗುಣಸ್ತೋತ್ರದಿಂದಲೂ ಹೇಳುವುದೇನು ? ಪವಿತ್ರತೆಯನ್ನು ಹೊಂದಿಯೇ ಹೊಂದುತ್ತಾನೆಂದು ಭಾವವು.

**ಭಗವಂಸ್ತ್ವತ್ಪದಸ್ತೋತ್ರಾದ್ಯನ್ಮಯಾ ಪುಣ್ಯಮಾರ್ಜಿತಮ್ ।**
**ತೇನಾಸ್ತು ತ್ವತ್ಪದಾಂಭೋಜೇ ಪರಾ ಭಕ್ತಿಃ ಸದಾಪಿ ಮೇ ॥ ೧೯೬ ॥**

ಸ್ವಾಮಿಯೆ ! ನಿನ್ನ ಪಾದಗಳ ಸ್ತೋತ್ರದಿಂದ ನಾನು ಸಂಪಾದಿಸಿದ ಪುಣ್ಯದಿಂದ ನನಗೆ ಯಾವಾಗಲೂ ನಿನ್ನ ಪಾದಕಮಲದಲ್ಲಿ ಶ್ರೇಷ್ಠವಾದ ಭಕ್ತಿಯು ಇರಲಿ.''

**ಇತ್ಥಂ ಚರಾಚರಗುರುಂ ಪುರುಮಾದಿದೇವಂ**
**ಸ್ತುತ್ವಾಧಿರಾ[4]ಡ್ಧರಣಿಪೈಃ ಸಮಮಿದ್ಧಬೋಧಃ ।**
**ಆನಂದಬಾಷ್ಪಲವಸಿಕ್ತಪುರಃಪ್ರದೇಶೋ**
**ಭಕ್ತ್ಯಾ ನನಾಮ ಕರಕುಡ್ಮಲಲಗ್ನಮೌಲಿಃ ॥ ೧೯೭ ॥**

ಈ ಪ್ರಕಾರವಾಗಿ ಚರಾಚರಗುರುವೂ ಪುರುಪರಮೇಶ್ವರನೂ ಆದ ಆದೀಶ್ವರಸ್ವಾಮಿಯನ್ನು ಸ್ತುತಿಸಿ ವೃದ್ಧಿಹೊಂದಿದ ಜ್ಞಾನವುಳ್ಳವನೂ ಆನಂದದ ಕಣ್ಣೀರಿನ ಹನಿಗಳಿಂದ ಮುಂಭಾಗವನ್ನು ತೋಯಿಸಿದವನೂ ಕೈಗಳನ್ನು ಜೋಡಿಸಿ ತನ್ನ ಕಿರೀಟದಲ್ಲಿರಿಸಿದವನೂ ಆದ ಭರತಚಕ್ರವರ್ತಿಯು ಮುಕುಟಬದ್ಧರಾದ ರಾಜರುಗಳೊಡನೆ ಭಕ್ತಿಯಿಂದ ನಮಸ್ಕಾರಮಾಡಿದನು.

**ಶ್ರುತ್ವಾ ಪುರಾಣಪುರುಷಾಚ್ಚ ಪುರಾಣಧರ್ಮಂ**
**ಕರ್ಮಾರಿಚಕ್ರಜಯಲಬ್ಧವಿಶುದ್ಧಬೋಧಾತ್ ।**
**ಸಂಪ್ರೀತಿಮಾಪ ಪರಮಾಂ ಭರತಾಧಿರಾಜಃ**
**ಪ್ರಾಯೋ ಧೃತಿಃ ಕೃತಧಿಯಾಂ ಸ್ವಹಿತಪ್ರವೃತ್ತೌ ॥ ೧೯೮ ॥**

ಕರ್ಮಗಳೆಂಬ ಶತ್ರುಗಳ ಸಮೂಹದ ಜಯದಿಂದ ಪ್ರಾಪ್ತವಾದ ಪರಿಶುದ್ಧಜ್ಞಾನವುಳ್ಳ ಪುರಾಣಪುರುಷನಾದ ವೃಷಭಸ್ವಾಮಿಯಿಂದ ಸನಾತನವಾದ ಧರ್ಮವನ್ನು ಕೇಳಿ ಭರತಚಕ್ರೇಶ್ವರನು ಪರಮಾನಂದವನ್ನು ಹೊಂದಿದನು. ವಿವೇಕಿಗಳಿಗೆ ಸಾಮಾನ್ಯವಾಗಿ ತಮ್ಮ ಹಿತಪ್ರವರ್ತನೆಯಲ್ಲಿ ಸಂತೋಷವುಂಟಾಗುವುದು.

**ಆಪೃಚ್ಛ್ಯ ಚ ಸ್ವಗುರುಮಾದಿಗುರುಂ ನಿಧೀಶೋ**
**ವ್ಯಾಲೋಲಮೌಲಿತಟತಾಡಿತಪಾದಪೀಠಃ ।**
**ಭೂಯೋನುಗಮ್ಯ ಚ ಮುನೀನ್ಪ್ರಣತೇನ ಮೂರ್ಧ್ನಾ**
**ಸ್ವಾವಾಸಭೂಮಿಮಭಿಗಂತುಮನಾ ಬಭೂವ ॥ ೧೯೯ ॥**

ಚಲಿಸುತ್ತಿರುವ ಕಿರೀಟಪ್ರದೇಶವನ್ನು ಸ್ವಾಮಿಯ ಪಾದಪೀಠಕ್ಕೆ ಮುಟ್ಟಿಸುತ್ತಿರುವ ನಿಧಿಪತಿಯಾದ ಭರತೇಶ್ವರನು ತನ್ನ ತಂದೆಯಾದ ಆದೀಶ್ವರಸ್ವಾಮಿಯನ್ನು ಕೇಳಿಕೊಂಡು ಪುನಃ ನಮ್ರವಾದ ಮಸ್ತಕದಿಂದ ವೃಷಭಸೇನ ಗಣಧರರು ಮೊದಲಾದ ಮುನಿಗಳನ್ನು ಹೊಂದಿ–ಬೀಳ್ಕೊಂಡು ತನ್ನ ವಾಸಸ್ಥಾನಕ್ಕೆ ಹೋಗುವ ಮನಸ್ಸುಳ್ಳವನಾದನು.

**ಭಕ್ತ್ಯಾರ್ಪಿತಾಂ ಸ್ರಜಮಿವಾ[1]ಧಿಪದಂ ಜಿನಸ್ಯ**
**ಸ್ವಾಂ ದೃಷ್ಟಿಮನ್ವಿತಲಸ[2]ತ್ಸುಮನೋವಿಕಾಸಾಮ್ ।**
**[3]ಶೇಷಾಸ್ಥಯೇವ ಚ ಪುನರ್ವಿನಿವೃತ್ಯ ಕೃಛ್ರಾತ್**
**ಚಕ್ರಾಧಿಪೋ ಜಿನಸಭಾಭವನಾತ್ಪ್ರತಸ್ಥೇ ॥ ೨೦೦ ॥**

ಭರತಚಕ್ರೇಶ್ವರನು ಜಿನೇಶ್ವರನ ಪಾದಮೂಲದಲ್ಲಿ, ಭಕ್ತಿಯಿಂದ ಅರ್ಪಿತವೂ ಒಂದಕ್ಕೊಂದು ಸೇರಿರುವ ಅರಳಿದ ಪುಷ್ಪಗಳಿಂದ ಶೋಭಿಸುವುದೂ ಆದ ಪುಷ್ಪಮಾಲಿಕೆಯನ್ನೋಪಾದಿಯಲ್ಲಿ, ಆಸಕ್ತವಾದ ನಿರ್ಮಲಮನಸ್ಸಿನಿಂದ ಪ್ರಫುಲ್ಲಿತವಾದ ತನ್ನ ದೃಷ್ಟಿಯನ್ನು, ಸಿದ್ಧಶೇಷೆಯ ಇಚ್ಛೆಯಿಂದಲೋ ಎಂಬಂತೆ, ಪುನಃ ಹಿಂದಿರುಗಿಸಿ ಪ್ರಯಾಸದಿಂದ ಸಮವಸರಣಸಭೆಯಿಂದ ಹೊರಟನು. ಸ್ವಾಮಿಯ ಪ್ರಸಾದವನ್ನು ಹೊಂದಬೇಕೆಂಬ ಇಚ್ಛೆಯಿಂದಲೋ ಎಂಬಂತೆ ತಿರುಗಿ ತಿರುಗಿ ಸ್ವಾಮಿಯ ಪಾದಮೂಲವನ್ನು ನೋಡುತ್ತ ಸಮವಸರಣದಿಂದ ಹೊರಟನೆಂದು ಭಾವವು.

**ಆಲೋಕಯನ್ ಜಿನಸಭಾವನಿಭೂತಿಮಿದ್ಧಾಂ**
**ವಿಸ್ಫಾರಿತೇಕ್ಷಣಯುಗೋ ಯುಗದೀರ್ಘಬಾಹುಃ ।**
**ಪೃಥ್ವೀಶ್ವರೈರನುಗತಃ ಪ್ರಣತೋತ್ತಮಾಂಗೈಃ**
**ಪ್ರತ್ಯಾಸದತ್ಸ್ವಸದನಂ ಮನುವಂಶಕೇತುಃ ॥ ೨೦೧ ॥**

ಜಿನೇಶ್ವರನ ಸಮವಸರಣಸಭೆಯ ಅತಿಶಯವಾದ ಸಂಪತ್ತಿಯನ್ನು ನೋಡುವವನೂ ಕಣ್ಣುಗಳನ್ನು ಅರಳಿಸಿದವನೂ ನೊಗದಂತೆ ಉದ್ದವಾದ ತೋಳುಗಳುಳ್ಳವನೂ ತಲೆಬಾಗಿಸಿ ನಮಸ್ಕರಿಸುತ್ತಿರುವ ರಾಜರುಗಳಿಂದ ಹಿಂಬಾಲಿಸಲ್ಪಟ್ಟವನೂ ಮನುವಂಶಶ್ರೇಷ್ಠನೂ ಆದ ಭರತೇಶ್ವರನು ತನ್ನ ಭವನಕ್ಕೆ ಹಿಂದಿರುಗಿದನು.

**ಪುಣ್ಯೋದಯಾನ್ನಿಧಿಪತಿರ್ವಿಜಿತಾಖಿಲಾಶ-**
**[4]ಸ್ಸನ್ನಿರ್ಜಿತೌ ಗಮಿತಷಷ್ಟಿ[5]ಸಮಾಸಹಸ್ರಃ ।**
**ಪ್ರೀತ್ಯಾಭಿವಂದ್ಯ ಜಿನಮಾಪ ಪರಂ ಪ್ರಮೋದಂ**
**[6]ತತ್ಪುಣ್ಯಸಂಗ್ರಹವಿಧೌ ಸುಧಿಯೋ [7]ಯತಧ್ವಮ್ ॥ ೨೦೨ ॥**

ಪುಣ್ಯೋದಯದಿಂದ ಸಮಸ್ತದಿಕ್ಕುಗಳನ್ನು ಜಯಿಸಿದವನೂ ಆ ಸಕಲದಿಗ್ವಿಜಯದಲ್ಲಿ ಅರುವತ್ತು ಸಾವಿರ ವರುಷಗಳನ್ನು ಕಳೆದವನೂ ಆದ ನಿಧಿಪತಿ–ಭರತಸಾರ್ವಭೌಮನು ಪ್ರೀತಿಯಿಂದ ಜಿನೇಶ್ವರನನ್ನು ವಂದಿಸಿ ಅಧಿಕ ಸಂತೋಷವನ್ನು ಹೊಂದಿದನು. ಆದುದರಿಂದ ಬುದ್ಧಿಶಾಲಿಗಳೆ ! ಪುಣ್ಯವನ್ನು ಸಂಗ್ರಹಿಸುವ ವಿಧಾನದಲ್ಲಿ ಪ್ರಯತ್ನವನ್ನು ಮಾಡಿರಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭರತರಾಜಕೈಲಾಸಾಭಿಗಮನವರ್ಣನಂ ನಾಮ ತ್ರಯಸ್ತ್ರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕಭಾವದೀಪಿಕಾ ವ್ಯಾಖ್ಯೆಯೊಳ್''ಭರತರಾಜಕೈಲಾಸಾಭಿಗಮನವರ್ಣನವೆಂಬ
ಮೂವತ್ತಮೂರನೆಯ ಪರ್ವವು ಸಂಪೂರ್ಣವಾದುದು.

---

೧ ದಿಗ್ವಿಜಯಭ್ರಮಣಮೂಢೇನ. ೨ ಮಹತ್ಪಾಪಂ. ೩ ನಷ್ಟಂ. ೪ ಮುಕುಟಬದ್ಧೈಃ.

೧ ಪಾದಮೂಲೇ. ೨ ಶೋಭನಮನೋವಿಕಾಸಾಂ, ಸುಪುಷ್ಪವಿಕಾಸಾಂ ಚ. ೩ ಸಿದ್ಧಶೇಷಾಸ್ಥಯಾ. ೪ ನಿಖಿಲದಿಗ್ವಿಜಯ. ೫ ಸಂವತ್ಸರ. ೬ ತಸ್ಮಾತ್ಕಾರಣಾತ್. ೭ ಪ್ರಯತ್ನಂ ಕುರುಧ್ವಂ.

# ಅಥ ಚತುಸ್ತ್ರಿಂಶತ್ತಮಂ ಪರ್ವ

**ಅಥಾ[೧]ವರುಹ್ಯ ಕೈಲಾಸಾ[೨]ದದ್ರೀಂದ್ರಾದಿವ [೩]ದೇವರಾಟ್ ।**
**ಚಕ್ರೀ ಪ್ರಯಾಣಮಕರೋ[೪]ದ್ವಿನೀತಾಭಿಮುಖಂ ಕೃತೀ ॥ ೧ ॥**

ಸಮವಸರಣದಿಂದ ಹೊರಟನಂತರ ಪುಣ್ಯಶಾಲಿಯಾದ ಭರತಚಕ್ರೇಶ್ವರನು, ಮೇರುಪರ್ವತದಿಂದ ದೇವೇಂದ್ರನು ಇಳಿಯುವಂತೆ, ಕೈಲಾಸಪರ್ವತದಿಂದ ಇಳಿದು ಅಯೋಧ್ಯೆಯಕಡೆಗೆ ಪ್ರಯಾಣಮಾಡಿದನು.

**ಸೈನ್ಯೈರನುಗತೋ ರೇಜೇ [೫]ಪ್ರಯಾಂಶ್ಚಕ್ರೀ ನಿಜಾಲಯಮ್ ।**
**ಗಂಗೌಘ ಇವ ದುರ್ವಾರಃ ಸರಿದೋಘೈರಪಾಂಪತಿಮ್ ॥ ೨ ॥**

ಸೈನ್ಯಗಳಿಂದ ಹಿಂಬಾಲಿಸಲ್ಪಟ್ಟು ತನ್ನ ಅರಮನೆಗೆ ಹೋಗುತ್ತಿರುವ ಚಕ್ರವರ್ತಿಯು, ನದೀಪ್ರವಾಹಗಳಿಂದ ಹಿಂಬಾಲಿಸಲ್ಪಟ್ಟು ಸಮುದ್ರಕ್ಕೆ ಹೋಗುತ್ತಿರುವುದೂ ತಡೆಯುವುದಕ್ಕೆ ಕಷ್ಟವೂ ಆದ ಗಂಗಾನದಿಯ ಪ್ರವಾಹದಂತೆ, ಶೋಭಿಸಿದನು.

**ತತಃ ಕತಿಪಯೈರೇವ ಪ್ರಯಾಣೈಶ್ಚಕ್ರಿಣೋ ಬಲಮ್ ।**
**ಅಯೋಧ್ಯಾಂ ಪ್ರಾಪದಾಬದ್ಧತೋರಣಾಂ ಚಿತ್ರಕೇತನಾಮ್ ॥ ೩ ॥**

ತರುವಾಯ ಚಕ್ರವರ್ತಿಯ ಸೈನ್ಯವು ನಾನಾಪ್ರಕಾರವಾದ ಧ್ವಜಗಳುಳ್ಳದೂ ಕಟ್ಟಿಲ್ಪಟ್ಟಿರುವ ತೋರಣಗಳುಳ್ಳದೂ ಆದ ಅಯೋಧ್ಯಾನಗರವನ್ನು ಕೆಲವು ಪ್ರಯಾಣಗಳಿಂದಲೇ ಸೇರಿತು.

**ಚಂದನದ್ರವಸಂಸಿಕ್ತ[೬]ಸುಸಂಮೃಷ್ಟಮಹೀತಲಾ ।**
**ಪುರೀ ಸ್ನಾತಾನುಲಿಪ್ತೇವ ಸಾ ರೇಜೇ ಪತ್ಯುರಾಗಮೇ ॥ ೪ ॥**

ಭರತೇಶ್ವರನು ಬರುವ ಕಾಲದಲ್ಲಿ ಗಂಧೋದಕವನ್ನು ಸೇಚನೆಮಾಡಿ ಚೆನ್ನಾಗಿ ಸಾರಿಸಲ್ಪಟ್ಟ ಭೂಮಿಪ್ರದೇಶವುಳ್ಳ ಆ ನಗರವು, ಮೊದಲು ಸ್ನಾನಮಾಡಿ ಬಳಿಕ ಲೇಪಿಸಿಕೊಂಡಂತೆ, ಪ್ರಕಾಶಿಸುತ್ತಿದ್ದಿತು.

**ನಾತಿದೂರೇ ನಿವಿಷ್ಟಸ್ಯ ಪ್ರವೇಶಸಮಯೇ ವಿಭೋಃ ।**
**ಚಕ್ರಮಸ್ತಾರಿಚಕ್ರಂ ತ[೭]ನ್ನಾಕ್ರಂಸ್ತ ಪುರಗೋಪುರೇ ॥ ೫ ॥**

ಅಯೋಧ್ಯಾನಗರದ ಸಮೀಪದಲ್ಲಿ ಬೀಡುಬಿಟ್ಟಿದ್ದ ಭರತೇಶ್ವರನ ಪ್ರವೇಶ ಸಮಯದಲ್ಲಿ ಶತ್ರುಗಳನ್ನು ನಾಶಮಾಡಿರುವ ಆ ಚಕ್ರವು ಗೋಪುರದ್ವಾರದಲ್ಲಿ ಪ್ರವೇಶಮಾಡಲಿಲ್ಲ.

**ಸಾ ಪುರೀ ಗೋಪುರೋಪಾಂತಸ್ಥಿತಚಕ್ರಾಂಶುರಂಜಿತಾ ।**
**ಧೃತಸಂಧ್ಯಾತಪೇವಾಸೀತ್ಕುಂಕುಮಾಪಿಂಜರಚ್ಛವಿಃ ॥ ೬ ॥**

ಗೋಪುರದ ಸಮೀಪದಲ್ಲಿರುವ ಚಕ್ರದ ಕಿರಣಗಳಿಂದ ವ್ಯಾಪ್ತವೂ ಕುಂಕುಮದಂತೆ ಹರಿದಳದ ಕಾಂತಿಯುಳ್ಳದೂ ಆದ ಆ ಅಯೋಧ್ಯಾನಗರವು ಸಂಧ್ಯಾ ಕಾಲದ ಬಿಸಿಲನ್ನು ಧರಿಸಿರುವಂತಿದ್ದಿತು.

**ಸತ್ಯಂ ಭರತರಾಜೋಽಯಂ [೮]ಧೌರೇಯಶ್ಚಕ್ರಿಣಾಮಿತಿ ।**
**ಧೃತದಿವ್ಯೇವ ಸಾ ಜಜ್ಞೇ ಜ್ವಲಚ್ಚಕ್ರಾ [೯]ಪುರಃ ಪುರೀ ॥ ೭ ॥**

ಮುಂದುಗಡೆಯಲ್ಲಿ ಜ್ವಲಿಸುತ್ತಿರುವ ಚಕ್ರರತ್ನವುಳ್ಳ ಆ ನಗರವು ''ನಿಜವಾಗಿ ಈ ಭರತೇಶ್ವರನು ಚಕ್ರವರ್ತಿಗಳಲ್ಲಿ ಮುಖ್ಯನು'' ಎಂಬುದಾಗಿ ದಿವ್ಯತೇಜಸ್ಸನ್ನು ಧರಿಸಿರುತ್ತದೆಯೋ ಎಂಬಂತೆ ಪ್ರಾದುರ್ಭವಿಸಿತು.

೧ ಅವತೀರ್ಯ. ೨ ಮೇರೋಃ. ೩ ದೇವೇಂದ್ರಃ. ೪ ಅಯೋಧ್ಯಾಭಿಮುಖಂ. ೫ ಗಚ್ಛನ್. ೬ ಸುಷ್ಠುಸಮ್ಮಾರ್ಜಿತ. ೭ ಪ್ರವೇಶಂ ನಾಕರೋತ್. ೮ ಮುಖ್ಯಃ. ೯ ಅಗ್ರಭಾಗೇ.

**ತತಃ [೧]ಕತಿಪಯೇ ದೇವಾಶ್ಚಕ್ರರತ್ನಾಭಿರಕ್ಷಿಣಃ ।**
**ಸ್ಥಿತ[೨]ಮೇಕಪದೇ ಚಕ್ರಂ ವೀಕ್ಷ್ಯ ವಿಸ್ಮಯಮಾಗತಾಃ ॥ ೮ ॥**

ತರುವಾಯ ಚಕ್ರರತ್ನವನ್ನು ಕಾಪಾಡುವವರಾದ ಕೆಲವು ಮಂದಿ ದೇವತೆಗಳು ಶೀಘ್ರವಾಗಿ ನಿಂತುಹೋದ ಚಕ್ರವನ್ನು ನೋಡಿ ಆಶ್ಚರ್ಯಗೊಂಡರು.

**ಸುರಾ [೩]ಜಾತರುಷಃ ಕೇಚಿತ್ಕಿಂ ಕಿಮಿತ್ಯುಚ್ಚರದ್ಗಿರಃ ।**
**[೪]ಅಲಾತಚಕ್ರವದ್ಭ್ರೇಮುಃ ಕರವಾಲಾರ್ಪಿತೈಃ ಕರೈಃ ॥ ೯ ॥**

ಕೋಪವುಂಟಾದ ಕೆಲವು ದೇವತೆಗಳು ''ಏನು ಏನು'' ಎಂದು ಮಾತನಾಡುತ್ತ ಕೈಗಳಲ್ಲಿ ಖಡ್ಗಗಳನ್ನು ಹಿಡಿದುಕೊಂಡು, ದುಂಡಾದ ಕೊಳ್ಳಿಯಂತೆ, ಓಡಾಡಿದರು.

**ಕಿ[೫]ಮಂಬರಮಣೇರ್ಬಿಂಬಮಂಬರಾ[೬]ತ್ಪರಿಲಂಬತೇ ।**
**ಪ್ರತಿಸೂರ್ಯಃ ಕಿಮುದ್ಭೂತ ಇತ್ಯನ್ಯೇ [೭]ಮುಮುಹುರ್ಮುಹುಃ ॥**

ಬೇರೆ ಕೆಲವರು ''ಆಕಾಶದಿಂದ ಸೂರ್ಯನ ಬಿಂಬವು ಜೋಲುತ್ತಿದೆಯೋ ಏನು ? ಅಥವಾ ಮತ್ತೋರ್ವ ಸೂರ್ಯನು ಉದಯಿಸಿದನೇನು ?'' ಎಂಬುದಾಗಿ ಬಾರಿಬಾರಿಗೆ ಭ್ರಮೆಗೊಂಡರು.

**ಕಸ್ಯಾ[೮]ಪ್ಯಕಾಲಚಕ್ರೇಣ [೯]ಪತಿತವ್ಯಂ ವಿರೋಧಿನಃ ।**
**ಕ್ರೂರೇಣೇವ ಗ್ರಹೇಣಾದ್ಯ ಯತಶ್ಚಕ್ರೇಣ ವಕ್ರಿತಮ್ ॥ ೧೧ ॥**

''ಈ ದಿವಸ ಕ್ರೂರವಾದ ಗ್ರಹದಂತೆ ಚಕ್ರವು ವಕ್ರವಾಗಿರುವುದರಿಂದ ಯಾವನೋ ಶತ್ರುವು ಅಪಮೃತ್ಯುವಿನಿಂದ ಸಾಯಬೇಕಾಗಿರುವುದು.

**ಅಥವಾದ್ಯಾಪಿ ಜೇತವ್ಯಃ ಪಕ್ಷಃ ಕೋಽಪ್ಯಸ್ತಿ ಚಕ್ರಿಣಃ ।**
**ಚಕ್ರಸ್ಖಲನತಃ ಕೈಶ್ಚಿದಿತ್ಥಂ ತಜ್ಜ್ಞೈರ್ವಿತರ್ಕಿತಮ್ ॥ ೧೨ ॥**

ಅಥವಾ ಚಕ್ರವು ನಿಂತುಹೋದುದರಿಂದ ಚಕ್ರವರ್ತಿಗೆ ಈಗಲೂ ಯಾವುದಾದರೂ ಜಯಿಸತಕ್ಕ ಪಕ್ಷ(ಶತ್ರು)ವಿರುವುದೋ ? '' ಈ ಪ್ರಕಾರವಾಗಿ ಚಕ್ರದ ಮಹಿಮೆಯನ್ನು ತಿಳಿದು ಕೆಲವರು ಊಹಿಸಿದರು.

**ಸೇನಾನೀಪ್ರಮುಖಾಸ್ತಾವ[೧೦]ತ್ಪ್ರಭವೇ [೧೧]ತನ್ನ್ಯವೇದಯನ್ ।**
**ತದ್ವಾರ್ತಾಕರ್ಣನಾಚ್ಚಕ್ರೀ ಕಿಮಪ್ಯಾಸೀತ್ಸವಿಸ್ಮಯಃ ॥ ೧೩ ॥**

ಸೇನಾಪತಿ ಮೊದಲಾದವರಾದರೋ ಚಕ್ರವು ನಿಂತುಹೋದುದನ್ನು ಭರತೇಶ್ವರನಿಗೆ ತಿಳಿಸಿದರು. ಆ ಸಮಾಚಾರವನ್ನು ಕೇಳಿದುದರಿಂದ ಚಕ್ರವರ್ತಿಯು ಏನೋ ಆಶ್ಚರ್ಯವುಳ್ಳವನಾದನು.

**ಅಚಿಂತಯಚ್ಚ ಕಿಂನಾಮ ಚಕ್ರಮಪ್ರತಿಶಾಸನೇ ।**
**ಮಯಿ ಸ್ಥಿತೇ [೧೨]ಸ್ಖಲತ್ಯದ್ಯ ಕ್ವಚಿದಪ್ಯಸ್ಖಲದ್ಗತಿ ॥ ೧೪ ॥**

೧ ಕೇಚನ. ೨ ಯುಗಪತ್, ಸಪದಿ ವಾ. ೩ ಉತ್ಪನ್ನಕ್ರೋಧಾಃ. ೪ ದಗ್ಧೇಂಧನವಲಯವತ್. ೫ ರವೇಃ. ೬ ಆಗಚ್ಛತಿ ಕಿಂ. ೭ ಮುಹ್ಯಂತಿ ಸ್ಮ. ೮ ಅಪಮೃತ್ಯುನಾ. ೯ ಗಂತವ್ಯಂ, ಮರ್ತವ್ಯಂ. ೧೦ ಚಕ್ರವರ್ತಿನೇ. ೧೧ ಚಕ್ರವಕ್ರತ್ವಂ. ೧೨ ವಕ್ರೀಭವತಿ.

''ಪ್ರತಿವಚನವಿಲ್ಲದಿರುವ–ಶತ್ರುರಹಿತನಾದ ನಾನಿರುವಾಗ ಎಲ್ಲಿಯೂ ತಡೆಯಿಲ್ಲದ ಗಮನವುಳ್ಳ ಚಕ್ರಾಯುಧವು ಈಗ ಏತಕ್ಕಾಗಿ ವಕ್ರವಾಗಿರುತ್ತದೆ'' ಎಂದು ಯೋಚಿಸಿದನು.

**[೧]ಸಂಪ್ರಧಾರ್ಯಮಿದಂ ತಾವದಿತ್ಯಾಹೂಯ ಪುರೋಧಸಮ್ ।**
**ಧೀರೋ ಧೀರತರಾಂ ವಾಚಮಿತ್ಯುಚ್ಚೈರಾಜಗೌ [೨]ಮನುಃ ॥ ೧೫ ॥**

''ಈ ವಿಷಯವಾದರೋ ವಿಚಾರಿಸತಕ್ಕುದಾಗಿದೆ'' ಯೆಂದು ಧೀರನಾದ ಚಕ್ರವರ್ತಿಯು ಪುರೋಹಿತನನ್ನು ಕರೆದು ಮುಂದೆ ಹೇಳುವ ಪ್ರಕಾರವಾಗಿ ಬಲು ದಿಟ್ಟತನದ ಮಾತನಾಡಿದನು.

**ವದತೋಽಸ್ಯ ಮುಖಾಂಭೋಜಾ[೩]ದ್ವ್ಯಕ್ತಾಕೂತಾ ಸರಸ್ವತೀ ।**
**ನಿರ್ಯಯೌ ಸದಲಂಕಾರಾ [೪]ಶಂಫಲೀವ ಜಯಶ್ರಿಯಃ ॥ ೧೬ ॥**

ಮಾತನಾಡುತ್ತಿರುವ ಈ ಭರತೇಶ್ವರನ ಮುಖಕಮಲದಿಂದ ವ್ಯಕ್ತವಾದ ಅಭಿಪ್ರಾಯವುಳ್ಳ ವಾಣಿಯು, ಜಯಲಕ್ಷ್ಮಿಯ ಶ್ರೇಷ್ಠವಾದ ಅಲಂಕಾರವುಳ್ಳ ದೂತಿಯೋ ಎಂಬಂತೆ, ಹೊರಟಿತು.

**ಚಕ್ರಮಾಕ್ರಾಂತದಿಕ್ಚಕ್ರಮರಿಚಕ್ರಭಯಂಕರಮ್ ।**
**ಕಸ್ಮಾನ್ನಾಸ್ಮತ್ಪುರದ್ವಾರಿ [೫]ಕ್ರಮತೇ ನ್ಯಕ್ಕೃತಾರ್ಕರುಕ್ ॥ ೧೭ ॥**

ದಿಙ್ಮಂಡಲವನ್ನಾಕ್ರಮಿಸಿದುದೂ ಶತ್ರುಸಮೂಹಕ್ಕೆ ಭಯಂಕರವೂ ಸೂರ್ಯಕಿರಣವನ್ನು ತಿರಸ್ಕರಿಸುವುದೂ ಆದ ಚಕ್ರವು ಪುರದ್ವಾರದಲ್ಲಿ ಯಾವ ಕಾರಣದಿಂದ ಹೋಗುವುದಿಲ್ಲ ?

**ವಿಶ್ವದಿಗ್ವಿಜಯೇ ಪೂರ್ವದಕ್ಷಿಣಾಪರವಾರ್ಧಿಷು ।**
**ಯದಾಸೀದಸ್ಖಲದ್ವೃತ್ತಿ ರೂಪಾದ್ರೇಶ್ಚ ಗುಹಾದ್ವಯೇ ॥ ೧೮ ॥**

**ಚಕ್ರಂ ತದಧುನಾ ಕಸ್ಮಾತ್ಸ್ಖಲತ್ಯಸ್ಮದ್ಗೃಹಾಂಗಣೇ ।**
**ಪ್ರಾಯೋಽಸ್ಮಾಭಿರ್ವಿರುದ್ಧೇನ ಭವಿತವ್ಯಂ ಜಿಗೀಷುಣಾ ॥ ೧೯ ॥**

ಸಮಸ್ತ ದಿಗ್ವಿಜಯದಲ್ಲಿ ಪೂರ್ವದಕ್ಷಿಣಪಶ್ಚಿಮಸಮುದ್ರಗಳಲ್ಲಿಯೂ ವಿಜಯಾರ್ಧಪರ್ವತದ ಎರಡು ಗುಹೆಗಳಲ್ಲಿಯೂ ಯಾವುದು ತಡೆಯಿಲ್ಲದ ವ್ಯಾಪಾರವುಳ್ಳುದಾಗಿದ್ದಿತೋ ಆ ಚಕ್ರವು ಈಗ ನಮ್ಮ ಮನೆಯ ಅಂಗಣದಲ್ಲಿ ಯಾವಕಾರಣದಿಂದ ವ್ಯತ್ಯಾಸವಾಗಿರುತ್ತದೆ ? ಬಹುಶಃ ನಮ್ಮೊಡನೆ ವಿರೋಧಿಯಾಗಿರುವವನು ನಮ್ಮನ್ನು ಜಯಿಸಬೇಕೆಂಬ ಇಚ್ಛೆಯುಳ್ಳವನಾಗಿರಬಹುದು.

**ಕಿಮಸಾಧ್ಯೋ ದ್ವಿಷನ್ಕಶ್ಚಿದಸ್ತ್ಯಸ್ಮ[೬]ದ್ಭುಕ್ತಿಗೋಚರೇ ।**
**[೭]ಸನಾಭಿಃ ಕೋಽಪಿ ಕಿಂ ವಾಸ್ಮಾನ್ ದ್ವೇಷ್ಟಿ [೮]ದುಷ್ಟಾಂತರಾಶಯಃ ॥ ೨೦ ॥**

ನಮ್ಮ ಪರಿಪಾಲನೆಗೊಳಪಟ್ಟ ಕ್ಷೇತ್ರದಲ್ಲಿ ಅಸಾಧ್ಯನಾದ ಯಾವನಾದರೂ ಶತ್ರುವು ಇರುವನೇ ? ಅಥವಾ ದುಷ್ಟಮನಸ್ಸುಳ್ಳ ಯಾವನಾದರೂ ಜ್ಞಾತಿಯು ನಮ್ಮನ್ನು ದ್ವೇಷಿಸುತ್ತಾನೆಯೇ ?

**ಯಃ ಕೋಽಪ್ಯಕಾರಣದ್ವೇಷೀ ಖಲೋಽಸ್ಮಾನ್ನಾಭಿನಂದತಿ ।**
**ಪ್ರಾಯಃ ಸ್ಖಲಂತಿ ಚೇತಾಂಸಿ ಮಹತ್ಸ್ವಪಿ ದುರಾತ್ಮನಾಮ್ ॥ ೨೧ ॥**

೧ ವಿಚಾರ್ಯಂ. ೨ ಚಕ್ರೀ. ೩ ವ್ಯಕ್ತಾಭಿಪ್ರಾಯಾ. ೪ ದೂತೀ. ೫ ಗಚ್ಛತಿ. ೬ ಭುಕ್ತಿಕ್ಷೇತ್ರೇ. ೭ ಸಪಿಂಡಾಸ್ತು ಸನಾಭಯಃ. ೮ ದುಷ್ಟಮನಾಃ.

ಯಾವನೋ ನಿಷ್ಕಾರಣವಾಗಿ ದ್ವೇಷಿಸುವ ದುಷ್ಟನು ನಮ್ಮನ್ನು ಅಭಿನಂದಿಸುವುದಿಲ್ಲ. ಸಾಮಾನ್ಯವಾಗಿ ದುರಾತ್ಮರ ಮನಸ್ಸುಗಳು ದೊಡ್ಡವರಲ್ಲಿಯೂ ವ್ಯತ್ಯಸ್ತವಾಗಿರುತ್ತವೆ.

**[೧]ವಿಮತ್ಸರಾಣಿ ಚೇತಾಂಸಿ ಮಹತಾಂ ಪರವೃದ್ಧಿಷು ।**
**ಮತ್ಸರೀಣಿ ತು ತಾನ್ಯೇವ ಕ್ಷುದ್ರಾಣಾಮನ್ಯವೃದ್ಧಿಷು ॥ ೨೨ ॥**

ಮಹಾಪುರುಷರ ಮನಸ್ಸುಗಳು ಬೇರೆಯವರ ವೃದ್ಧಿಗಳಲ್ಲಿ ಮತ್ಸರವಿಲ್ಲದುವಾಗಿರುತ್ತವೆ. ಅಲ್ಪಮನುಷ್ಯರ ಆ ಮನಸ್ಸುಗಳೇ ಬೇರೆಯವರ ವೃದ್ಧಿಗಳಲ್ಲಿ ಮತ್ಸರವುಳ್ಳುವಾಗಿರುತ್ತವೆ. ಮಹಾಪುರುಷರು ಬೇರೆಯವರ ಅಭಿವೃದ್ಧಿಯನ್ನು ನೋಡಿ ಮಾತ್ಸರ್ಯಪಡುವುದಿಲ್ಲವೆಂದೂ ಅಲ್ಪರು ಮಾತ್ಸರ್ಯಪಡುತ್ತಾರೆಂದೂ ಭಾವವು.

**ಅಥವಾ ದುರ್ಮದಾವಿಷ್ಟಃ ಕಶ್ಚಿದಪ್ರಣತೋಽಸ್ತಿ ಮೇ ।**
**[೨]ಸ್ವವರ್ಗ್ಯಸ್ತನ್ಮದೋಚ್ಛಿತ್ತ್ಯೈ ನೂನಂ ಚಕ್ರೇಣ ವಕ್ರಿತಮ್ ॥ ೨೩ ॥**

ಅಥವಾ ದುರಹಂಕಾರವುಳ್ಳ ಯಾವನೋ ನಮ್ಮ ಗುಂಪಿನವನು ನನಗೆ ನಮ್ರನಾಗದಿರುತ್ತಾನೆ. ನಿಶ್ಚಯವಾಗಿ ಅವನ ಅಹಂಕಾರವನ್ನು ದೂರಮಾಡುವುದಕ್ಕೋಸ್ಕರ ಚಕ್ರವು ವಕ್ರವಾಗಿರುವುದು.

**[೩]ಖಲೋಪೇಕ್ಷ್ಯ [೪]ಲಘೀಯಾನಪ್ಯುಚ್ಛೇದ್ಯೋ [೫]ಲಘು ತಾದೃಶಃ ।**
**ಕ್ಷುದ್ರೋ ರೇಣುರಿವಾಕ್ಷಿಸ್ಥೋ [೬]ರುಜತ್ಯರಿರುಪೇಕ್ಷಿತಃ ॥ ೨೪ ॥**

ಅತ್ಯಲ್ಪಮನುಷ್ಯನಾದರೂ ಅವನನ್ನು ಉಪೇಕ್ಷೆಮಾಡಿ ಬಿಡಬಾರದು. ಅಂತಹ ಅಲ್ಪಮನುಷ್ಯನನ್ನು ನಿರ್ಮೂಲಮಾಡಬೇಕು. ಕಣ್ಣಿನಲ್ಲಿರುವ ಚಿಕ್ಕದಾದ ಧೂಳಿನಂತೆ ಉಪೇಕ್ಷೆಮಾಡಲ್ಪಟ್ಟ ಶತ್ರುವು ಪೀಡೆಯನ್ನುಂಟುಮಾಡುತ್ತಾನೆ.

**ಬಲಾದುದ್ಧರಣೀಯೋ ಹಿ [೭]ಕ್ಷೋದೀಯಾನಪಿ ಕಂಟಕಃ ।**
**[೮]ಅನುದ್ಧೃತಃ ಪದಸ್ಥೋಽಸೌ ಭವೇತ್ಪೀಡಾಕರೋ ಭೃಶಮ್ ॥ ೨೫ ॥**

ಕಾಲಿನಲ್ಲಿರುವ ಮುಳ್ಳು ಬಲು ಸಣ್ಣದಾದರೂ ಅದನ್ನು ಬಲಾತ್ಕಾರವಾಗಿ ಕೀಳಬೇಕು. ಕೀಳದಿರುವ ಈ ಮುಳ್ಳು ಬಹಳ ಬಾಧೆಯನ್ನುಂಟುಮಾಡುವುದು.

**ಚಕ್ರಂ ನಾಮ ಪರಂ ದೈವಂ ರತ್ನಾನಾಮಿದಮುಗ್ರಿಮಮ್ ।**
**ಗತಿಸ್ಖಲನಮೇತಸ್ಯ ನ ವಿನಾ ಕಾರಣಾದ್ಭವೇತ್ ॥ ೨೬ ॥**

ರತ್ನಗಳಲ್ಲಿ ಮೊದಲನೆಯದಾದ ಈ ಚಕ್ರವಾದರೋ ಪರಮದೈವವಾಗಿರುವುದು. ಕಾರಣವಿಲ್ಲದೆ ಇದರ ಗಮನಕ್ಕೆ ತಡೆಯಾಗಲಾರದು.

**ತತೋ ನಾಲ್ಪಮಿದಂ ಕಾರ್ಯಂ ಯಚ್ಚಕ್ರೇಣಾ[೯]ರ್ಯ ಸೂಚಿತಮ್ ।**
**[೧೦]ಸೂಚಿತೇ ಖಲು [೧೧]ರಾಜ್ಯಾಂಗೇ ವಿಕೃತಿರ್ನಾಲ್ಪಕಾರಣಾತ್ ॥ ೨೭ ॥**

ಆದುದರಿಂದ ಪೂಜ್ಯನೇ ! ಚಕ್ರದಿಂದ ಸೂಚಿಸಲ್ಪಟ್ಟ ಈ ಕಾರ್ಯವು ಅಲ್ಪವಲ್ಲ. ಚೆನ್ನಾಗಿ ಉಚಿತವಾಗಿರುವ ರಾಜ್ಯಾಂಗ–ಚಕ್ರದಲ್ಲಿ ಸ್ವಲ್ಪಕಾರಣದಿಂದ ಎಂದೂ ವಿಕಾರವುಂಟಾಗದು.

**ತದತ್ರ ಕಾರಣಂ ಚಿಂತ್ಯಂ ತ್ವಯಾ ಧೀಮನ್ನಿದಂತಯಾ ।**
**ಅನಿರೂಪಿತಕಾರ್ಯಾಣಾಂ ನೇಹ ನಾಮುತ್ರ ಸಿದ್ಧಯಃ ॥ ೨೮ ॥**

ಆದುದರಿಂದ ಎಲೈ ಬುದ್ಧಿಶಾಲಿಯೆ ! ನೀನು ಈ ವಿಷಯದಲ್ಲಿ ಕಾರಣವು ಇದೇ ಸರಿಯೆಂದು ಯೋಚಿಸಬೇಕು. ಕಾರ್ಯವನ್ನು ನಿಶ್ಚಯಮಾಡದಿರುವವರಿಗೆ–

೧ ವಿಗತಮತ್ಸರಾಣಿ. ೨ ಆತ್ಮವರ್ಗೀ ಭವಃ. ೩ ಉಪೇಕ್ಷಣೀಯೋ ನ ಭವತಿ. ೪ ಅತಿಶಯೇನ ಲಘುಃ. ೫ ಶೀಘ್ರಂ. ೬ ಪೀಡಾಂ ಕರೋತಿ. ೭ ಕ್ಷುದ್ರತರಃ. ೮ ಅನುತ್ಪಾಟಿತಃ. ೯ ಪೂಜ್ಯ. ೧೦ ಸುಷ್ಠು ಚಿತೇ. ೧೧ ಚಕ್ರೇ.

ಮುಂದಾಲೋಚನೆಯಿಲ್ಲದೆ ಕೆಲಸಕ್ಕೆ ತೊಡಗುವವರಿಗೆ ಇಹದಲ್ಲಿಯೂ ಪರದಲ್ಲಿಯೂ ಕಾರ್ಯಸಿದ್ಧಿಗಳಾಗುವುದಿಲ್ಲ.

**ತ್ವಯೀದಂ ಕಾರ್ಯವಿಜ್ಞಾನಂ [೧]ತಿಷ್ಠತೇ ದಿವ್ಯಚಕ್ಷುಷಿ ।**
**ತಮಸಾಂ ಭೇದನೇ ಕೋನ್ಯಃ ಪ್ರಭವೇದಂಶುಮಾಲಿನಃ ॥ ೨೯ ॥**

ದಿವ್ಯಜ್ಞಾನವೆಂಬ ನೇತ್ರವುಳ್ಳ ನಿನ್ನಲ್ಲಿ ಈ ಕಾರ್ಯವಿಜ್ಞಾನವು ನಿಶ್ಚಿತವಾಗಿರುತ್ತದೆ. ಕತ್ತಲೆಗಳನ್ನು ನಾಶಮಾಡುವುದರಲ್ಲಿ ಸೂರ್ಯನಿಗಿಂತ ಬೇರೆ ಯಾವನು ಸಮರ್ಥನಾಗುವನು ?"

**ನಿವೇದ್ಯ ಕಾರ್ಯಮಿತ್ಯಸ್ಮೈ [೨]ದೈವಜ್ಞಾಯ ಮಿತಾಕ್ಷರೈಃ ।**
**ವಿರರಾಮ ಪ್ರಭುಃ ಪ್ರಾಯಃ ಪ್ರಭವೋ ಮಿತಭಾಷಿಣಃ ॥ ೩೦ ॥**

ಈ ಪ್ರಕಾರವಾಗಿ ಭರತೇಶ್ವರನು ನಿಮಿತ್ತಜ್ಞಾನಿಯಾದ ಈ ಪುರೋಹಿತನಿಗೆ ಮಿತವಾದ ಅಕ್ಷರಗಳಿಂದ ಕಾರ್ಯವನ್ನು ತಿಳುಹಿ ವಿರಾಮವನ್ನು ಹೊಂದಿದನು. ಸಾಮಾನ್ಯವಾಗಿ ಪ್ರಭುಗಳು ಮಿತಭಾಷಿಗಳಾಗಿರುತ್ತಾರೆ.

**ತತಃ ಪ್ರಸನ್ನಗಂಭೀರಪದಾಲಂಕಾರಕೋಮಲಾಮ್ ।**
**ಭಾರತೀಂ ಭರತೇಶಸ್ಯ [೩]ಪ್ರಬೋಧಾಯೇತಿ ಸೋಽಬ್ರವೀತ್ ॥ ೩೧ ॥**

ಬಳಿಕ ಆ ಪುರೋಹಿತನು ಭರತೇಶ್ವರನಿಗೆ ಚೆನ್ನಾಗಿ ತಿಳುವಳಿಕೆಯನ್ನುಂಟು ಮಾಡುವುದಕ್ಕೋಸ್ಕರ ಪ್ರಸನ್ನವೂ ಗಂಭೀರವೂ ಆದ ಪದಗಳಿಂದಲೂ ಅಲಂಕಾರಗಳಿಂದಲೂ ಮನೋಹರವಾದ ವಾಣಿಯನ್ನು ನುಡಿದನು.

**ಅಸ್ತಿ ಮಾಧುರ್ಯಮ[೪]ಸ್ತ್ಯೋಜಸ್ತದಸ್ತಿ ಪದಸೌಷ್ಠವಮ್ ।**
**ಅಸ್ತ್ಯರ್ಥಾನುಗಮೋನ್ಯತ್ಕಿಂ ಯನ್ನಾಸ್ತಿ [೫]ತ್ವದ್ವಚೋಮಯೇ ॥ ೩೨ ॥**

"ಸ್ವಾಮಿಯೆ ! ನಿನ್ನ ವಚನಪ್ರಪಂಚದಲ್ಲಿ ಇಲ್ಲದಿರುವ ಮಾಧುರ್ಯವೂ ಓಜೋಗುಣವೂ ಪದಗಳ ಲಾಲಿತ್ಯವೂ ಅರ್ಥಬೋಧೆಯೂ ಇರುತ್ತವೆಯೆ ? ಈ ಎಲ್ಲಾ ಗುಣಗಳೂ ಭರತರಾಜನ ವಚನರಾಶಿಯಲ್ಲಿ ಸೇರಿರುತ್ತವೆಂದು ಭಾವವು.

**ಶಾಸ್ತ್ರಜ್ಞಾ ವಯಮೇಕಾಂತಾನ್ನಾಭಿಜ್ಞಾಃ ಕಾರ್ಯಯುಕ್ತಿಷು ।**
**ಶಾಸ್ತ್ರಪ್ರಯೋಗವಿತ್ಕೋನ್ಯಸ್ತ್ವತ್ಸಮೋ ರಾಜನೀತಿಷು ॥ ೩೩ ॥**

ನಾವು ಶಾಸ್ತ್ರಗಳನ್ನು ತಿಳಿದವರೆಂಬುದೊಂದಲ್ಲದೆ ಕಾರ್ಯಯುಕ್ತಿಗಳಲ್ಲಿ ತಿಳುವಳಿಕೆಯುಳ್ಳವರಲ್ಲ. ರಾಜನೀತಿಗಳಲ್ಲಿ ಶಾಸ್ತ್ರವನ್ನೂ ಪ್ರಯೋಗವನ್ನೂ ತಿಳಿದವನು ಬೇರೆ ಯಾವನು ನಿನಗೆ ಸಮಾನನಿದ್ದಾನೆ ?

**ತ್ವಮಾದಿರಾಜೋ ರಾಜರ್ಷಿ[೬]ಸ್ತ್ವದ್ವಿದ್ಯಾ [೭]ತ್ವದುಪಕ್ರಮಮ್ ।**
**[೮]ತದ್ವಿದಸ್ತತ್ಪ್ರಯುಂಜಾನಾ ನ ಜಿಹ್ರೀಮಃ ಕಥಂ ವಯಮ್ ॥ ೩೪ ॥**

ನೀನು ಮೊದಲನೆಯ ರಾಜನೂ ರಾಜರ್ಷಿಯೂ ಆಗಿರುತ್ತೀಯೆ. ರಾಜವಿದ್ಯೆಯು ನಿನ್ನಿಂದ ಮೊದಲು ಪ್ರಾರಂಭವಾಯಿತು. ಶಾಸ್ತ್ರಪ್ರಯೋಗಗಳನ್ನೂ ರಾಜನೀತಿಯನ್ನೂ ತಿಳಿದಿರುವ ನಿನಗೆ ಆ ಶಾಸ್ತ್ರಪ್ರಯೋಗ ರಾಜನೀತಿಗಳನ್ನು ಪ್ರಯೋಗಿಸುವ–ಉಪದೇಶಿಸುವ ನಾವು ಹೇಗೆ ನಾಚಿಕೆಪಡುವುದಿಲ್ಲ ? ನಾಚಿಕೆಪಡುತ್ತೇವೆಂದರ್ಥವು.

**ತಥಾಪಿ ತ್ವತ್ಕೃತೋಸ್ಮಾಸು ಸತ್ಕಾರೋನನ್ಯಗೋಚರಃ ।**
**ತನೋತಿ ಗೌರವಂ ಲೋಕೇ ತತಃ [೯]ಸ್ಮೋ ವಕ್ತುಮುದ್ಯತಾಃ ॥ ೩೫ ॥**

ಹಾಗಾದರೂ ನೀನು ನಮಗೆ ಮಾಡಿದ ಬೇರೆಯವರಿಗೆ ದೊರೆಯದ ಸತ್ಕಾರವು ಲೋಕದಲ್ಲಿ ಗೌರವವನ್ನು ವಿಸ್ತರಿಸುತ್ತದೆ. ಆದುದರಿಂದ ಮಾತನಾಡುವುದಕ್ಕೆ ಉದ್ಯುಕ್ತರಾಗಿದ್ದೇವೆ.

೧ ನಿಶ್ಚಿತಂ ಭವತಿ. ೨ ನಿಮಿತ್ತಜ್ಞಪುರೋಹಿತಾಯ. ೩ ಪ್ರಬೋಧನಾಯ. ೪ ಓಜೋಗುಣಃ. ೫ ತವ ವಚನಪ್ರಪಂಚೇ. ೬ ರಾಜವಿದ್ಯಾ. ೭ ತ್ವಯಾ ಪೂರ್ವಂ ಪ್ರವರ್ತಿತಂಕಾರ್ಯವಿಜ್ಞಾನಂ. ೮ ಶಾಸ್ತ್ರಪ್ರಯೋಗರಾಜನೀತಿದ್ವಯವಿದಸ್ತವ. ೯ ಭವಾಮಃ.

**[೧]ಇತ್ಯನುಶ್ರುತಮಸ್ಮಾಭಿರ್ದೇವ [೨]ದೈವಜ್ಞಸಾಧನಮ್ ।**
**ನಾಸ್ತಿ ಚಕ್ರಸ್ಯ ವಿಶ್ರಾಂತಿಃ [೩]ಸಾವಶೇಷೇ ದಿಶಾಂ ಜಯೇ ॥ ೩೬ ॥**

ಪ್ರಭುವೆ ! ದಿಗ್ವಿಜಯವು ಅವಶಿಷ್ಟವಾಗಿದ್ದರೆ ಚಕ್ರಕ್ಕೆ ವಿಶ್ರಾಂತಿಯಿಲ್ಲವೆಂದು ನಿಮಿತ್ತಶಾಸ್ತ್ರವು ಹೇಳುವುದನ್ನು ನಾವು ಕೇಳಿದ್ದೇವೆ. ದಿಗ್ವಿಜಯವು ಪೂರ್ತಿಯಾಗದಿದ್ದರೆ ಚಕ್ರವು ಸುಮ್ಮನಿರುವುದಿಲ್ಲವೆಂದು ಭಾವವು.

**ಜ್ವಲದರ್ಚಿಃ ಕರಾಲಂ [೪]ವೋ [೫]ಜೈತ್ರಮಸ್ತ್ರಮಿದಂ [೬]ತತಃ ।**
**ಸಂಸ್ತಂಭಿತಮಿವಾತರ್ಕ್ಯಂ ಪುರದ್ವಾರಿ ವಿಲಂಬತೇ ॥ ೩೭ ॥**

ದಿಗ್ವಿಜಯವು ಉಳಿದಿರುವುದರಿಂದ ಉರಿಯುತ್ತಿರುವ ಜ್ವಾಲೆಯುಳ್ಳದೂ ಭಯಂಕರವೂ ಜಯಶೀಲವೂ ಆದ ಈ ನಿಮ್ಮ ಅಸ್ತ್ರವು ಊಹೆಗೆ ನಿಲುಕದಿರುವುದಾಗಿ ತಡೆದಿರಿಸಲ್ಪಟ್ಟಂತೆ ಪುರದ್ವಾರದಲ್ಲಿ ಸಾವಕಾಶಮಾಡುತ್ತದೆ.

**ಅರಿರ್ಮಿತ್ರಮರೇರ್ಮಿತ್ರಂ ಮಿತ್ರಮಿತ್ರಮಿತಿ ಸ್ಮೃತಿಃ ।**
**[೭]ಶ್ರುತಿಮಾತ್ರೇ ಸ್ಥಿತಾ ದೇವ ಪ್ರಜಾಸ್ತ್ವಯ್ಯನುಶಾಸತಿ ॥ ೩೮ ॥**

ಸ್ವಾಮಿಯೆ ! ನೀನು ಪ್ರಜೆಗಳನ್ನು ಪರಿಪಾಲಿಸುತ್ತಿರಲು ಶತ್ರು, ಮಿತ್ರ, ಶತ್ರುವಿನ ಮಿತ್ರ, ಮಿತ್ರನ ಮಿತ್ರ ಎಂಬ ಶಬ್ದವು ಶಾಸ್ತ್ರದಲ್ಲಿ ಮಾತ್ರ ಹೇಳಲ್ಪಟ್ಟಿದೆ. ಭರತೇಶ್ವರನಿಗೆ ಸಮಾನರಾದ ರಾಜರೇ ಇಲ್ಲದಿರುವುದರಿಂದ ಅವನಿಗೆ ಲೋಕದಲ್ಲಿ ಶತ್ರುಮಿತ್ರರಿಲ್ಲವೆಂದು ಭಾವವು.

**ತಥಾಪ್ಯಸ್ತ್ಯೇವ ಜೇತವ್ಯಪಕ್ಷಃ ಕೋಪಿ ತವಾಧುನಾ ।**
**ಯೋಂತರ್ಗೃಹೇ [೮]ಕೃತೋತ್ಥಾನಃ ಕ್ರೂರೋ ರೋಗ ಇವೋದರೇ ॥**

ಹಾಗಿದ್ದರೂ ಹೊಟ್ಟೆಯಲ್ಲಿ ಭಯಂಕರವಾದ ರೋಗದಹಾಗೆ, ಈಗ ನಿನಗೆ ಮನೆಯೊಳಗೆ ಶಕ್ತಿಯನ್ನು ತೋರಿಸುವ ಯಾವುದೋ ಜಯಿಸತಕ್ಕುದಾದ ಪಕ್ಷವು ಇದ್ದೇ ಇರುವುದು. ಮನೆಯೊಳಗೆ ಅಂತಃಶತ್ರುವಿರುತ್ತಾನೆಂದು ಭಾವವು.

**ಬಹಿರ್ಮಂಡಲಮೇವಾಸೀ[೯]ತ್ವರಿಕ್ರಾಂತಮಿದಂ ತ್ವಯಾ ।**
**ಅಂತರ್ಮಂಡಲಸಂಶುದ್ಧಿರ್ನಾದ್ಯಾಪಿ ಜಾಯತೇ ॥ ೪೦ ॥**

ಪ್ರಭುವೆ ! ನೀನು ಈ ಬಾಹ್ಯಮಂಡಲವನ್ನೇ ಆಕ್ರಮಿಸಿದೆ. ಇದುವರೆಗೂ ಅಂತರ್ಮಂಡಲದ ಪರಿಶುದ್ಧಿಯು ಸ್ವಲ್ಪವೂ ಆಗಿರುವುದಿಲ್ಲ. ಇದುವರೆಗೆ ಹೊರಗಿನ ಶತ್ರುಗಳನ್ನು ಜಯಿಸಿರುವುದಲ್ಲದೆ ಒಳಗಿನ ಶತ್ರುಗಳನ್ನು ಜಯಿಸಿಲ್ಲವೆಂದು ಭಾವವು.

**ಜಿತಜೇತವ್ಯಪಕ್ಷಸ್ಯ ನ ನಮ್ರಾ ಭ್ರಾತರಸ್ತವ ।**
**[೧೦]ವೃತ್ತಿತಾಶ್ಚ ಸಜಾತೀಯಾ ವಿಘಾತಾಯ ನನು ಪ್ರಭೋ ॥ ೪೧ ॥**

ಪ್ರಭುವೇ ! ಜಯಿಸಬೇಕಾಗಿದ್ದ ಶತ್ರುಪಕ್ಷವನ್ನು ಜಯಿಸಿರುವ ನಿನಗೆ ನಿನ್ನ ಸಹೋದರರು ನಮ್ರರಾಗಿಲ್ಲ. ವಿರುದ್ಧಾಚರಣವುಳ್ಳ ಸಮಾನಜಾತೀಯರು ನಾಶವನ್ನುಂಟುಮಾಡುವುದಕ್ಕೆ ಸಮರ್ಥರಾಗುತ್ತಾರಲ್ಲವೆ ?

**ಸ್ವಪಕ್ಷೈರೇವ ತೇಜಸ್ವೀ ಮಹಾನ[೧೧]ಪ್ಯುಪರುಧ್ಯತೇ ।**
**ಪ್ರತ್ಯರ್ಕ[೧೨]ಮರ್ಕಕಾಂತೇನ [೧೩]ಜ್ವಲತೇದಮುದಾಹೃತಮ್ ॥ ೪೨ ॥**

ತೇಜಸ್ವಿಯು ಮಹಾಪುರುಷನಾಗಿದ್ದರೂ ತನ್ನವರಿಂದಲೇ ಬಾಧಿಸಲ್ಪಡುತ್ತಾನೆ. ಸೂರ್ಯನಿಗೆ ಇದಿರಾಗಿ ಪ್ರಜ್ವಲಿಸುವ ಸೂರ್ಯಕಾಂತಶಿಲೆಯಿಂದ ಸೂರ್ಯನು ಬಾಧಿಸಲ್ಪಡುತ್ತಾನೆ. ಇದು ಉದಾಹರಣೆಯಾಗಿರುವುದು. ಸೂರ್ಯಕಾಂತಶಿಲೆಯ ಸಂಪರ್ಕದಿಂದ ಸೂರ್ಯಕಿರಣಗಳು ಹೆಚ್ಚಾಗಿ ತಪಿಸುತ್ತವೆಂದು ಭಾವವು.

೧ ಏವಮಾಕರ್ಣಿತಂ. ೨ ನಿಮಿತ್ತಶಾಸ್ತ್ರಂ. ೩ ಅವಶೇಷೇ ಸತಿ. ೪ ಯುಷ್ಮಾಕಂ. ೫ ಜಯಶೀಲಂ. ೬ ಸಾವಶೇಷತ್ವಾತ್. ೭ ಶಾಸ್ತ್ರೇ ಉಕ್ತಮಿತ್ಯರ್ಥಃ. ೮ ಕೃತಸಾಮರ್ಥ್ಯಃ. ೯ ಆಕ್ರಾಂತಂ. ೧೦ ವಿರುದ್ಧಾಚರಣಾಃ. ೧೧ ಬಾಧ್ಯತೇ. ೧೨ ಸೂರ್ಯಕಾಂತೋಪಲೇನ. ೧೩ ಪ್ರಜ್ವಲತಾ.

**ಸ ಬಭಾರ ಭುಜಸ್ತಂಭಪರ್ಯಂತಪರಿಲಂಬಿನೀಮ್ ।**
**ಲಕ್ಷ್ಮೀದೇವ್ಯಾ ಇವಾಂದೋಲವಲ್ಲರೀಂ ಹಾರವಲ್ಲರೀಮ್ ॥ ೧೯೪ ॥**

ಆ ಭರತನು ತನ್ನ ಭುಜಗಳೆಂಬ ಸ್ತಂಭಗಳ ಪಾರ್ಶ್ವಗಳಲ್ಲಿ ಜೋಲುತ್ತಿರುವುದೂ ಲಕ್ಷ್ಮೀದೇವಿಯ ಉಯ್ಯಾಲೆಯೆಂಬ ಲತೆಯಂತಿರುವುದೂ ಆದ ಹಾರವೆಂಬ ಲತೆಯನ್ನು ಧರಿಸಿದನು.

**ಜಯಶ್ರೀರ್ಭುಜಯೋರಸ್ಯ [1]ಬಬಂಧ ಪ್ರೇಮನಿಘ್ನತಾಮ್ ।**
**ಕೇಯೂರಕೋಟಿಸಂಘಟ್ಟಕಿಣೀಭೂತಾಂಸಪೀಠಯೋಃ ॥ ೧೯೫ ॥**

ಜಯಲಕ್ಷ್ಮಿಯು ಬಾಹುಪುರಿಯ ಅಗ್ರಭಾಗದ ಸಂಘರ್ಷಣೆಯಿಂದ ಒಣಗಿದ ವ್ರಣವುಳ್ಳ ಭುಜಶಿರಸ್ಸುಗಳೆಂಬ ಪೀಠಗಳುಳ್ಳ ಈ ಭರತನ ಭುಜಗಳಲ್ಲಿ ಅತ್ಯಂತ ಪ್ರೀತಿಯನ್ನು ಮಾಡಿದಳು.

**ಬಾಹುದಂಡೇಽಸ್ಯ ಭೂಲೋಕಮಾನದಂಡ ಇವಾಯತೇ ।**
**ಕುಲಶೈಲಾ[2]ಸ್ಥಯಾ ನೂನಂ ತೇನೇ ಲಕ್ಷ್ಮ್ಯಾಃ ಪರಾಂ ಧೃತಿಮ್ ॥ ೧೯೬ ॥**

ಭೂಲೋಕವನ್ನು ಅಳತೆಮಾಡುವ ದಂಡ(ಕೋಲು)ದಂತೆ ದೀರ್ಘವಾದ ಈ ಭರತನ ಬಾಹುದಂಡದಲ್ಲಿ ಲಕ್ಷ್ಮಿಯು ನಿಜವಾಗಿಯೂ ಕುಲಪರ್ವತವೆಂಬ ಬುದ್ಧಿಯಿಂದ ಬಹಳ ಸಂತೋಷಪಟ್ಟಳು.

**ಶಂಖಚಕ್ರಗದಾಕೂರ್ಮಝಷಾದಿಶುಭಲಕ್ಷಣೈಃ ।**
**ರೇಜೇ ಹಸ್ತತಲಂ ತಸ್ಯ ನಭಸ್ಥಲಮಿವೋಡುಭಿಃ ॥ ೧೯೭ ॥**

ನಕ್ಷತ್ರಗಳಿಂದ ಆಕಾಶವು ಶೋಭಿಸುವಂತೆ, ಆ ಭರತನ ಹಸ್ತವು ಶಂಖ ಚಕ್ರ ಗದೆ ಆಮೆ ಮೀನು ಮೊದಲಾದ ಶುಭಲಕ್ಷಣಗಳಿಂದ ಶೋಭಿಸಿತು.

**ಅಂಸಾವಲಂಬಿನಾ [3]ಬ್ರಹ್ಮಸೂತ್ರೇಣಾಸೌ ದಧೇ ಶ್ರಿಯಮ್ ।**
**ಹಿಮಾದ್ರಿರಿವ ಗಾಂಗೇನ ಸ್ರೋತಸೋತ್ಸಂಗಸಂಗಿನಾ ॥ ೧೯೮ ॥**

ಪರ್ವತದ ತಪ್ಪಲನ್ನು ಹೊಂದಿರುವ ಗಂಗಾನದಿಯ ಪ್ರವಾಹದಿಂದ ಹಿಮವತ್ಪರ್ವತವು ಶೋಭಿಸುವಂತೆ, ಈ ಭರತನು ಭುಜಶಿರಸ್ಸಿನಲ್ಲಿ ಜೋಲುತ್ತಿರುವ ಯಜ್ಞೋಪವೀತದಿಂದ ಶೋಭಿಸಿದನು.

**ಹಸನ್ನಿವಾ[4]ಧರಂ ಕಾಯಮೂರ್ಧ್ವಕಾಯೋಽಸ್ಯ ದಿದ್ಯುತೇ ।**
**ಕಟಕಾಂಗದಕೇಯೂರಹಾರಾದ್ಯೈಃ ಸ್ವೈರ್ವಿಭೂಷಣೈಃ ॥ ೧೯೯ ॥**

ಈ ಭರತನ ಮೇಲಿನ ಶರೀರವು ಕೆಳಗಿನ ಶರೀರವನ್ನು ನೋಡಿ ನಗುತ್ತಿದೆಯೋ ಎಂಬಂತೆ, ಕಡಗ ನಾಗಮುರಿ ಬಾಹುಪುರಿ ಮೊದಲಾದ ತನ್ನ ಆಭರಣಗಳಿಂದ ಪ್ರಕಾಶಿಸಿತು.

**ವರ್ಣಿತೇ ಪೂರ್ವಕಾಯೇಽಸ್ಯ ಕಾಯೋ ವ್ಯಾವರ್ಣಿತೋಽಧರಃ ।**
**ಯಥೋಪರಿ ತಥಾಧಶ್ಚ ನನು ಶ್ರೀಃ ಕಲ್ಪಪಾದಪೇ ॥ ೨೦೦ ॥**

ಹಿಂದೆ ವರ್ಣಿಸಲ್ಪಟ್ಟ ಅವನ ಮೇಲಿನ ಶರೀರದಲ್ಲಿ ಕೆಳಗಿನ ಶರೀರವೂ ವರ್ಣಿಸಲ್ಪಟ್ಟಂತಾಯಿತು. ಮೇಲಿನ ಶರೀರದಂತೆಯೇ ಕೆಳಗಿನ ಶರೀರವೂ ಮನೋಹರವಾಗಿದ್ದಿತೆಂದು ಭಾವವು. ಕಲ್ಪವೃಕ್ಷದಲ್ಲಿ ಮೇಲಿನಂತೆ ಕೆಳಗೂ (ಬುಡದಲ್ಲಿಯೂ) ಶೋಭೆಯಿರುತ್ತದಲ್ಲವೇ ?

**[5]ಪುನರುಕ್ತಂ ತಥಾಪ್ಯಸ್ಯ ಕ್ರಿಯತೇ ವರ್ಣನಾದರಃ ।**
**ಪಙ್ಕ್ತಿಭೇದೇ ಮಹಾನ್ ದೋಷಃ ಸ್ಯಾದಿ[6]ತ್ಯುದ್ದೇಶಮಾತ್ರತಃ ॥ ೨೦೧ ॥**

ಕೆಳಗಿನ ಶರೀರದ ವರ್ಣನೆಯನ್ನು ಮಾಡಿದರೆ ಪುನರುಕ್ತದೋಷವಾಗುತ್ತದೆ. ಆದರೂ ಈ ಕೆಳಗಿನ ಶರೀರದ ವರ್ಣನೆಯನ್ನು ಮಾಡಬೇಕೆಂಬ ಪ್ರೀತಿಯಿಂದ ವರ್ಣನೆಯನ್ನು ಮಾಡುತ್ತೇನೆ. ಪಂಕ್ತಿಭೇದವನ್ನು ಮಾಡಿದರೆ ಮಹಾದೋಷವಾಗುತ್ತದೆಂಬುದರಿಂದ ನಾಮಮಾತ್ರದಿಂದ ವರ್ಣಿಸುತ್ತೇನೆ.

**ಲಾವಣ್ಯರಸ[1] ನಿಷ್ಯಂದವಾಹಿನೀಂ ನಾಭಿಕೂಪಿಕಾಮ್ ।**
**ಸ ಬಭಾರಾ[2]ಪತತ್ಕಾಮಗಂಧೇಭಸ್ಯೇವ [3]ಪದ್ಧತಿಮ್ ॥ ೨೦೨ ॥**

ಆ ಭರತನು ಲಾವಣ್ಯವೆಂಬ ರಸದ ಪ್ರವಾಹವನ್ನು ಧರಿಸಿರುವುದೂ ಬರುತ್ತಿರುವ ಮನ್ಮಥನೆಂಬ ಮದಗಜದ ಹೆಜ್ಜೆಯಂತಿರುವುದೂ ಆದ ನಾಭಿಯೆಂಬ ಬಾವಿಯನ್ನು ಧರಿಸಿದನು.

**ಸ [4]ಶಾರರಸನೋ[5]ಲ್ಲಾಸಿದುಕೂಲಂ ಜಘನಂ ದಧೌ ।**
**ಸೇಂದ್ರಚಾಪಶರ[6]ನ್ಮೇಘಂ ನಿತಂಬಮಿವ ಮಂದರಃ ॥ ೨೦೩ ॥**

ಮಹಾಮೇರುಪರ್ವತವು ಇಂದ್ರಧನುಸ್ಸಿನೊಡನೆಯೂ ಶರತ್ಕಾಲದ ಮೇಘದೊಡನೆಯೂ ಕೂಡಿರುವ ತಪ್ಪಲುಪ್ರದೇಶವನ್ನು ಧರಿಸಿರುವಂತೆ, ಆ ಭರತನು ನಾನಾವರ್ಣವುಳ್ಳ ಕಟೀಸೂತ್ರ(ಉಡುದಾರ)ದಿಂದ ಪ್ರಕಾಶಮಾನವಾದ ಪಟ್ಟೆವಸ್ತ್ರದೊಡಗೂಡಿದ ಕಟಿಪ್ರದೇಶವನ್ನು ಧರಿಸಿದನು.

**ಪೀವರೌ ಸ ಬಭಾರೋರೂ [7]ಯುಕ್ತಾಯಾಮೌ ಕನದ್ದ್ಯುತೀ ।**
**ಮನೋಭುವೇವ ವಿನ್ಯಸ್ತೌ ಸ್ತಂಭೌ ಸ್ವೇ ವಾಸವೇಶ್ಮನಿ ॥ ೨೦೪ ॥**

ಆ ಭರತನು ಯೋಗ್ಯವಾದ ವಿಸ್ತಾರವೂ ಪ್ರಕಾಶಮಾನವಾದ ಕಾಂತಿಯುಳ್ಳದೂ ಪುಷ್ಟವೂ ಆದ ಎರಡು ತೊಡೆಗಳನ್ನು ಧರಿಸಿದ್ದನು. ಆ ತೊಡೆಗಳು ಮನ್ಮಥನಿಂದ ತನ್ನ ಮನೆಯಲ್ಲಿ ಸ್ಥಾಪಿಸಲ್ಪಟ್ಟ ಕಂಭಗಳಂತಿದ್ದುವು.

**ಜಂಘೇ ಸುರುಚಿರಾಕಾರೇ ಚಾರುಕಾಂತೀ ದಧೇಽಧಿರಾಟ್ ।**
**[8]ಉದ್ವರ್ತ್ಯ [9]ಕಣಯೇನೇವ ಘಟಿತೇ [10]ಚಿತ್ತಜನ್ಮನಾ ॥ ೨೦೫ ॥**

ಭರತರಾಜನು ಮನೋಹರವಾದ ಆಕಾರವೂ ಸುಂದರವಾದ ಕಾಂತಿಯೂ ಉಳ್ಳ ಎರಡು ಕಣಕಾಲುಗಳನ್ನು ಧರಿಸಿದ್ದನು. ಮನ್ಮಥನು ಆ ಕಣಕಾಲುಗಳನ್ನು ಕಣಯವೆಂಬ ಆಯುಧದಿಂದ ಸರಿಪಡಿಸಿ (ಕಡೆದು) ಸೇರಿಸಿದ್ದಾನೆಯೋ ಎಂಬಂತೆ, ಅವು ಶೋಭಿಸಿದುವು.

**ತತ್ಪದಾಂಬುಜಯೋರ್ಯುಗ್ಮಮಧ್ಯುವಾಸಾನಪಾಯಿನೀ ।**
**ಲಕ್ಷ್ಮೀರ್ಭೃಂಗಾಂಗನೇವಾವಿರ್ಭವದಂಗುಲಿಪತ್ರಕಮ್ ॥ ೨೦೬ ॥**

ಆವಿರ್ಭವಿಸುತ್ತಿರುವ ಬೆರಳುಗಳೆಂಬ ಎಸಳುಗಳುಳ್ಳ ಆ ಭರತನ ಪಾದಗಳೆಂಬ ಕಮಲಗಳ ಯುಗಳದಲ್ಲಿ, ಹೆಣ್ಣುಭ್ರಮರದಂತೆ, ನಾಶರಹಿತಳಾದ ಲಕ್ಷ್ಮಿಯು ವಾಸ ಮಾಡಿದಳು.

**ತತ್ಕ್ರಮೌ ರೇಜತುಃ ಕಾಂತ್ಯಾ ಲಕ್ಷ್ಮೀಂ ಜಿತ್ವಾಂ[11]ಬುಜನ್ಮನಃ ।**
**ಪ್ರಹಾಸಮಿವ ತನ್ವಾನೌ ನಖೋದ್ಯೋತೈ[12]ರ್ವಿಸಾರಿಭಿಃ ॥ ೨೦೭ ॥**

ಆ ಭರತನ ಪಾದಗಳು ತಮ್ಮ ಕಾಂತಿಯಿಂದ ಕಮಲದ ಲಕ್ಷ್ಮಿ(ಶೋಭೆ)ಯನ್ನು ಜಯಿಸಿ, ಕಾಂತಿಯನ್ನು ಹರಡುತ್ತಿರುವ ಉಗುರುಗಳಿಂದ ನಗುತ್ತಿವೆಯೋ ಎಂಬಂತೆ, ಶೋಭಿಸುತ್ತಿದ್ದುವು.

**ಚಕ್ರಚ್ಛತ್ರಾಸಿದಂಡಾದಿರತ್ನಾನ್ಯಸ್ಯ ಪದಾಬ್ಜಯೋಃ ।**
**ಲಗ್ನಾನಿ ಲಕ್ಷಣವ್ಯಾಜಾತ್ಪೂರ್ವಸೇವಾಮಿವ ವ್ಯಧುಃ ॥ ೨೦೮ ॥**

ಈ ಭರತನ ಪಾದಕಮಲಗಳಲ್ಲಿ ಸಂಬಂಧಿಸಿರುವ ಚಕ್ರ ಛತ್ರ ಖಡ್ಗ ದಂಡ ಮೊದಲಾದ ರತ್ನಗಳು ಲಕ್ಷಣಗಳೆಂಬ ನೆಪದಿಂದ ಚಕ್ರವರ್ತಿಯಾಗುವುದಕ್ಕಿಂತ ಪೂರ್ವದಲ್ಲಿಯೇ ಸೇವೆಯನ್ನು ಮಾಡುತ್ತಿವೆಯೋ ಎಂಬಂತೆ ತೋರುತ್ತಿದ್ದುವು.

೧ ಅಕರೋದಿತ್ಯರ್ಥಃ. ೨ ಬುದ್ಧ್ಯಾ. ೩ ಯಜ್ಞೋಪವೀತೇನ. ೪ ಅಧಃಕಾಯಂ. ೫ ಉಕ್ತೇ ಸತಿ ಪುನರುಕ್ತಂ ಭವತಿ. ೬ ನಾಮಸಂಕೀರ್ತನಮುದ್ದೇಶಃ.

೧ ಪ್ರವಾಹಧಾರಿಣೀಂ. ೨ ಆಗಚ್ಛತ್ಕಾಮಗಜಸ್ಯ. ೩ ಪದಹತಿಂ. ೪ ನಾನಾವರ್ಣಾ. ೫ ಉದ್ಭಾಸಿ. ೬ ಮೇಘನಿತಂಬಮಿತ್ಯಪಿ ಪಾಠಃ. ೭ ಯೋಗ್ಯಾಯಾಮೌ. ೮ ಉತ್ತೇಜಿತಂ ಕೃತ್ವಾ. ೯ ಆಯುಧ ವಿಶೇಷೇಣ. ೧೦ ಕಾಮೇನ. ೧೧ ಪದ್ಮಸ್ಯ. ೧೨ ಪ್ರಸಾರಿಭಿಃ.

ಈ ಪ್ರಕಾರವಾಗಿ ಶಾಸ್ತ್ರಜ್ಞನೂ ಶ್ರೇಷ್ಠವಾದ ಬುದ್ಧಿಶಕ್ತಿಯುಳ್ಳವನೂ ಆದ ಪುರೋಹಿತನು ಹೇಳುತ್ತಿರಲು ಆ ಕಾರ್ಯವನ್ನು ಅಂದರೆ ಅನುಜರ ಬಳಿಗೆ ದೂತರನ್ನು ಕಳುಹುವ ಕಾರ್ಯವನ್ನು ಸಮ್ಮತಿಸಿಯೂ ಚಕ್ರವರ್ತಿಯು ಆ ಕ್ಷಣದಲ್ಲಿ ಕೋಪಗೊಂಡನು.

**[೧]ಆರುಷ್ಟಕಲುಷಾಂ ದೃಷ್ಟಿಂ ಕ್ಷಿಪನ್ದಿಕ್ಷ್ವಿವ ದಿಗ್ಬಲಿಮ್ ।**
**ಸಧೂಮಾಮಿವ ಕೋಪಾಗ್ನೇಃ ಶಿಖಾಂ ಭ್ರುಕುಟಿಮುತ್ಕ್ಷಿಪನ್ ॥ ೫೮ ॥**

**[೨]ಭ್ರಾತೃಭಾಂಡಕೃತಾಮರ್ಷವಿಷವೇಗಮಿವೋದ್ವಮನ್ ।**
**ವಾಕ್ಫಲೇನೋ[೩]ಚ್ಚಲನ್ರೋಷಾದ್ಬಭಾಷೇ ಪರುಷಾ ಗಿರಃ ॥ ೫೯ ॥**

ಭರತೇಶ್ವರನು ದಿಕ್ಕುಗಳಲ್ಲಿ ದಿಗ್ಬಲಿಯನ್ನು ಎರಚುತ್ತಾನೋ ಎಂಬಂತೆ ಕೋಪದಿಂದ ಕಲಕಿದ ಕಣ್ಣನ್ನು ದಿಕ್ಕುಗಳಲ್ಲಿ ಪಸರಿಸುವವನೂ ಕೋಪವೆಂಬ ಬೆಂಕಿಯ ಹೊಗೆಯುಳ್ಳ ಜ್ವಾಲೆಯನ್ನೋಪಾದಿಯಲ್ಲಿ ಹುಬ್ಬನ್ನು ಮೇಲಕ್ಕೆ ಹಾರಿಸುವವನೂ ಸಾಮಾನ್ಯರಾದ ಸಹೋದರರಲ್ಲಿ ಮಾಡಲ್ಪಟ್ಟ ಕೋಪವೆಂಬ ವಿಷದ ವೇಗವನ್ನು ಕಾಪಾಡುತ್ತಾನೋ ಎಂಬಂತೆ ಮಾತಿನ ನೆವದಿಂದ ಮೇಲಕ್ಕೆ ನೆಗೆಯುವವನೂ ಆಗಿ ಕೋಪದಿಂದ ಕಠಿನವಾದ ಮಾತುಗಳನ್ನಾಡಿದನು.

**ಕಿಂ ಕಿ[೪]ಮಾತ್ಥ ದುರಾತ್ಮಾನೋ ಭ್ರಾತರಃ ಪ್ರಣತಾ ನ ಮಾಮ್ ।**
**ಪಶ್ಯ ಮದ್ದಂಡಚಂಡೋಲ್ಕಾಪಾತಾತ್ತಾನ್ [೫]ಶಲ್ಕಸಾತ್ಕೃತಾನ್ ॥ ೬೦ ॥**

"ಏನು ಏನು ಹೇಳುತ್ತೀಯೆ ? ದುರಾತ್ಮರಾದ ಸಹೋದರರು ನನಗೆ ನಮ್ರರಾಗುವುದಿಲ್ಲವೋ ? ನನ್ನ ದಂಡವೆಂಬ ಭಯಂಕರವಾದ ಸಿಡಿಲಿನ ಹೊಡೆತದಿಂದ ಚೂರುಮಾಡಲ್ಪಟ್ಟ ಅವರನ್ನು ನೋಡು.

**ಅದೃಷ್ಟಮಶ್ರುತಂ ಕ್ವತ್ಯಮಿದಂ ವೈರಮಕಾರಣಮ್ ।**
**ಅವಧ್ಯಾಃ ಕಿಲ [೬]ಕುಲ್ಯತ್ವಾದಿತಿ ತೇಷಾಂ [೭]ಮನೀಷಿತಮ್ ॥ ೬೧ ॥**

ನೋಡಲ್ಪಡದೆಯೂ ಕೇಳಲ್ಪಡದೆಯೂ ಇರುವ ಈ ಕಾರಣವಿಲ್ಲದ ವೈರವು ಎಲ್ಲಿಯದು ? ನನ್ನ ವಂಶದಲ್ಲಿ ಜನಿಸಿದವರೆಂಬುದರಿಂದ ಅವರಿಗೆ ತಾವು ಕೊಲ್ಲಲ್ಪಡತಕ್ಕವರಲ್ಲವೆಂಬ ಅಭಿಪ್ರಾಯವಿರಬಹುದು.

**ಯೌವನೋನ್ಮಾದಜಸ್ತೇಷಾಂ [೮]ಭಟವಾದೋಽಸ್ತಿ [೯]ದುರ್ದಮಃ ।**
**ಜ್ವಲಚ್ಚಕ್ರಾಭಿತಾಪೇನ ಸ್ವೇದಸ್ತಸ್ಯ ಪ್ರತಿಕ್ರಿಯಾ ॥ ೬೨ ॥**

ಅವರಿಗೆ ಯೌವನೋನ್ಮತ್ತತೆಯಿಂದುಂಟಾದುದೂ ಕಷ್ಟದಿಂದ ನಿವಾರಿಸತಕ್ಕುದೂ ಆದ ತಾವು ಭಟರೆಂಬ ಗರ್ವವು ಇರುತ್ತದೆ. ಪ್ರಜ್ವಲಿಸುತ್ತಿರುವ ಚಕ್ರದ ಸಂತಾಪದಿಂದ ಬೆವರುವುದು ಆ ಗರ್ವಕ್ಕೆ ಪ್ರತೀಕಾರವಾಗಿರುವುದು.

**ಅಕರಾಂ ಭೋಕ್ತುಮಿಚ್ಛಂತಿ ಗುರುದತ್ತಿ[೧೦]ಮಿಮಾಂ [೧೧]ತಕೇ ।**
**[೧೨]ತತ್ಕಿಂ [೧೩]ಭಟಾವಲೇಪೇನ ಭುಕ್ತಿಂ ತೇ [೧೪]ಶ್ರಾವಯಂತು ಮೇ ॥**

ದುಷ್ಟರಾದ ಅವರು ತಂದೆಯು ನನಗೆ ಕೊಟ್ಟಿರುವ ಈ ಭೂಮಿಯನ್ನು ಕಂದಾಯವಿಲ್ಲದೆ ಭೋಗಿಸುವುದಕ್ಕೆ ಇಚ್ಛಿಸುತ್ತಾರೆಯೋ ? ಹಾಗಾದರೆ ಭಟರೆಂಬ ಗರ್ವದಿಂದ ಅವರು ನನ್ನ ಭೂಮಿಯನ್ನು ಸಾಧಿಸಲಿ. ಹೋರಾಡಿ ತೆಗೆದುಕೊಳ್ಳಲೆಂದು ಭಾವವು.

**[೧೫]ಪ್ರತಿಶಯ್ಯಾನಿಪಾತೇನ ಭುಕ್ತಿಂ ತೇ ಸಾಧಯಂತು ವಾ ।**
**[೧೬]ಶಿತಾಸ್ತ್ರಕಂಟಕೋತ್ಸಂಗಪಾತಿತಾಂಗಾ ರಣಾಂಗಣೇ ॥ ೬೪ ॥**

೧ ರೋಷೇಣ ಆವಿಲಾಂ . ೨ ಭ್ರಾತೃಸಾಮಾನ್ಯ. ೩ ಉತ್ಪತನ್. ೪ ವದಸಿ. ೫ ಖಂಡ. ೬ ಕುಲೇ ಭವಾಃ ಕುಲ್ಯಾಃ, ತೇಷಾಂ ಭಾವಃ ಕುಲ್ಯತ್ವಂ ತಸ್ಮಾತ್. ೭ ವಾಂಛಿತಂ. ೮ ವಯಂ ಭಟಾ ಇತಿ ಗರ್ವಃ. ೯ ದುರ್ನಿವಾರಃ. ೧೦ ಭೂಮಿಂ. ೧೧ ಕುತ್ಸಿತಾಸ್ತೇ. ೧೨ ತರ್ಹಿ. ೧೩ ಭಟಗರ್ವೇಣ. ೧೪ ಸಾಧಯಂತು. ೧೫ ಪೂರ್ವಶಯ್ಯಾಯಾಃ ಪ್ರತಿಶಯ್ಯಾ ತಸ್ಯಾಂ ನಿಪಾತೇನಮರಣಪ್ರಾಪ್ತ್ಯಾ. ೧೬ ಶಿತಾಸ್ತ್ರೇಣ ಕಂಟಕಶಯನಮಧ್ಯೇ.

ಅಥವಾ ರಣಾಂಗಣದಲ್ಲಿ ಅವರು ತೀಕ್ಷ್ಣವಾದ ಅಸ್ತ್ರದಿಂದ ಮುಳ್ಳಿನ ಹಾಸಿಗೆಯ ಮಧ್ಯದಲ್ಲಿ ಬೀಳಿಸಲ್ಪಟ್ಟ ಶರೀರವುಳ್ಳವರಾಗಿ ಬೇರೆ ಹಾಸಿಗೆಯಲ್ಲಿ ಬೀಳುವುದರಿಂದ ಅಂದರೆ ಮರಣಪ್ರಾಪ್ತಿಯಿಂದ ಭೂಮಿಯನ್ನು ಸಾಧಿಸಲಿ.

**ಕ್ವ ವಯಂ [೧]ಜಿತಜೇತವ್ಯಾ [೨]ಭೋಕ್ತವ್ಯೇ ಸಂಗತಾಃ ಕ್ವ ತೇ ।**
**ತಥಾಪಿ [೩]ಸಂವಿಭಾಗೋಽಸ್ತು ತೇಷಾಂ ಮದನುವರ್ತನೇ ॥ ೬೫ ॥**

ಷಟ್ಖಂಡಭೂಮಂಡಲವನ್ನು ಜಯಿಸಿರುವ ನಾವೆಲ್ಲಿ ? ನಮ್ಮ ರಾಜ್ಯದಲ್ಲಿ ಸೇರಿಕೊಂಡಿರುವ ಅವರೆಲ್ಲಿ ? ಹಾಗಾದರೂ ನನ್ನನ್ನು ಅನುಸರಿಸಿದಲ್ಲಿ ಅವರಿಗೆ ಚೆನ್ನಾಗಿ ಕ್ಷೇತ್ರಗಳ ಭಾಗವು ಇರಲಿ. ಪಾಲನ್ನು ತೆಗೆದುಕೊಳ್ಳಲೆಂದು ಭಾವವು.

**ನ ಭೋಕ್ತು[೪]ಮನ್ಯಥಾಕಾರಂ ಮಹೀಂ ತೇಭ್ಯೋ ದದಾಮ್ಯಹಮ್ ।**
**[೫]ಕಥಂಕಾರಮಿದಂ ಚಕ್ರಂ ವಿಶ್ರಮಂ ಯಾ[೬]ತ್ವತಜ್ಜಯೇ ॥ ೬೬ ॥**

ಬೇರೆಯಾದ ರೀತಿಯಿಂದ ಅವರಿಗೆ ನಾನು ಭೂಮಿಯನ್ನನುಭವಿಸುವುದಕ್ಕೆ ಕೊಡುವುದಿಲ್ಲ. ಅವರನ್ನು ಜಯಿಸದೆ ಈ ಚಕ್ರವು ಹೇಗೆ ವಿಶ್ರಾಂತಿಯನ್ನು ಹೊಂದುವುದು ?

**ಇದಂ ಮಹ[೭]ದನಾಖ್ಯೇಯಂ ಯತ್ಪ್ರಾಜ್ಞೋ ಬಂಧುವತ್ಸಲಃ ।**
**ನ [೮]ಬಾಹುಬಲಿಸಾಹ್ವೋಽಪಿ ಭಜತೇ ವಿಕೃತಿಂ ಕೃತೀ ॥ ೬೭ ॥**

ವಿವೇಕಿಯೂ ಬಂಧುಗಳಲ್ಲಿ ಪ್ರೀತಿಯುಳ್ಳವನೂ ಚತುರನೂ ಆದ ಆ ಬಾಹುಬಲಿಯೆಂಬವನೂ ವಿಕಾರವನ್ನು ಹೊಂದುತ್ತಾನೆಂಬುದಿದು ಬಹು ನಿಂದ್ಯವಾದ ಮಾತಾಗಿದೆ.

**[೯]ಅಬಾಹುಬಲಿನಾನೇನ [೧೦]ರಾಜಕೇನ [೧೧]ನತೇನ ಕಿಮ್ ।**
**ನಗರೇಣ [೧೨]ಗರೇಣೇವ ಭುಕ್ತೇನಾ[೧೩]ಪೌದನೇನ ಕಿಮ್ ॥ ೬೮ ॥**

ಬಾಹುಬಲಿಕುಮಾರನಿಲ್ಲದುದೂ ನಮ್ರವೂ ಆದ ಸಹೋದರ ಸಮೂಹದಿಂದೇನು ಪ್ರಯೋಜನ ? ಪೌದನಪುರರಹಿತವೂ, ವಿಷದಂತೆ, ಅನುಭವಿಸಲ್ಪಟ್ಟುದೂ ಆದ ಆ ನಗರದಿಂದೇನು ಪ್ರಯೋಜನ ? ಬಾಹುಬಲಿಯು ನಮ್ರನಾಗುವುದೂ ಪೌದನಪುರವನ್ನು ಸ್ವಾಧೀನಮಾಡಿಕೊಂಡು ಅದನ್ನು ಅನುಭವಿಸುವುದೂ ಮುಖ್ಯವೆಂದು ಭಾವವು.

**ಕಿಂ [೧೪]ಕಿಂಕರೈಃ [೧೫]ಕರಾಲಾಸ್ತ್ರಪ್ರತಿನಿರ್ಜಿತಶಾತ್ರವೈಃ ।**
**ಅನಾಜ್ಞಾವಶಗೇ [೧೬]ತಸ್ಮಿನ್ಮಮ ವಿಕ್ರಮಶಾಲಿನಿ ॥ ೬೯ ॥**

ಪರಾಕ್ರಮಶಾಲಿಯಾದ ಆ ಬಾಹುಬಲಿಯು ಆಜ್ಞಾಧೀನನಾಗದಿದ್ದರೆ ನನಗೆ ತೀಕ್ಷ್ಣವಾದ ಅಸ್ತ್ರಗಳಿಂದ ಶತ್ರುಗಳನ್ನು ಜಯಿಸಿದ ಭಟರಿಂದೇನುಪ್ರಯೋಜನ ?

**ಕಿಂ ವಾಸುರಭಟೈರೇಭಿ[೧೭]ರುದ್ಭಟಾರಭಟೀರಸೈಃ ।**
**ಮಯ್ಯೇವಮಸಮಾಂ ಸ್ಪರ್ಧಾಂ ತಸ್ಮಿ[೧೮]ನ್ಕುರ್ವತಿ ಗರ್ವಿತೇ ॥ ೭೦ ॥**

ಗರ್ವಿಷ್ಠನಾದ ಆ ಬಾಹುಬಲಿಕುಮಾರನು ಈ ರೀತಿಯಾಗಿ ನನ್ನೊಡನೆ ಅಸಾಧಾರಣವಾದ ಹೋರಾಟವನ್ನು ಮಾಡುತ್ತಿರಲು ಅತ್ಯಂತಭಯಂಕರವಾದ ವೀರರಸವುಳ್ಳ ಈ ಅಸುರಭಟರುಗಳಿಂದಾದರೂ ನನಗೆ ಪ್ರಯೋಜನವೇನು ?"

**ಇತಿ ಜಲ್ಪತಿ [೧೯]ಸಂರಂಭಾಚ್ಚಕ್ರಪಾಣಾ[೨೦]ವುಪಕ್ರಮಮ್ ।**
**ತಸ್ಯೋಪಚಕ್ರಮೇ ವಕ್ತುಂ ಪುನರಿತ್ಥಂ ಪುರೋಹಿತಃ ॥ ೭೧ ॥**

೧ ಜಿತಷಟ್ಖಂಡಭುವಃ. ೨ ಭುಕ್ತಿಕ್ಷೇತ್ರೇ. ೩ ಸಮ್ಯಕ್ ಕ್ಷೇತ್ರಾದಿವಿಭಾಗಃ. ೪ ಅನ್ಯಥಾಕಾರೇಣ. ೫ ಕಥಂ. ೬ ತೇಷಾಂ ಜಯಾಭಾವೇ. ೭ ಮಹದವಾಚ್ಯಂ. ೮ ಬಾಹುಬಲಿನಾಮಾ. ೯ ಬಾಹುಬಲಿಕುಮಾರರಹಿತೇನ. ೧೦ ಭ್ರಾತೃವರ್ಗೇಣ. ೧೧ ಪ್ರಣತೇನ. ೧೨ ವಿಷೇಣ. ೧೩ ಪೌದನ ಪುರರಹಿತೇನ. ೧೪ ಭಟೈಃ. ೧೫ ನಿಶಿತಾಸ್ತ್ರ. ೧೬ ಬಾಹುಬಲಿನಿ. ೧೭ ಅಧಿಕಭಯಾನಕರಸೈಃ. ೧೮ ಕುರ್ವತಿ ಸತಿ. ೧೯ ಕ್ರೋಧಾತ್. ೨೦ ಯುದ್ಧಾರಂಭಂ.

ಈ ಪ್ರಕಾರವಾಗಿ ಚಕ್ರೇಶ್ವರನು ಕೋಪದಿಂದ ಯುದ್ಧಾರಂಭವನ್ನು ಕುರಿತು ಮಾತನಾಡುತ್ತಿರಲು ಅವನಿಗೆ ಮುಂದೆ ಹೇಳುವ ರೀತಿಯಾಗಿ ಪುರೋಹಿತನು ಹೇಳಲುಪಕ್ರಮಿಸಿದನು.

**[೧]ಜಿತಜೇತವ್ಯತಾಂ ದೇವ ಘೋಷಯನ್ನಪಿ ಕಿಂ ಮುಧಾ ।**
**ಜಿತೋಽಸಿ ಕ್ರೋಧವೇಗೇನ ಪ್ರಾಗ್ಜಯ್ಯೋ ವಶಿನಾಂ ಹಿ ಸಃ ॥ ೭೨ ॥**

"ಸ್ವಾಮಿಯೆ ! ವ್ಯರ್ಥವಾಗಿ ಷಟ್ಖಂಡಗಳ ಜಯವನ್ನು ಉದ್ಘೋಷಿಸಿದರೂ ಫಲವೇನು ? ಕೋಪದ ವೇಗವು ನಿನ್ನನ್ನು ಜಯಿಸಿರುತ್ತದೆ. ಜಿತೇಂದ್ರಿಯರು ಮೊದಲು ಆ ಕೋಪವನ್ನು ಜಯಿಸಬೇಕಲ್ಲವೆ ?

**ಬಾಲಾ[೨]ಸ್ತೇ [೩]ಬಾಲಭಾವೇನ ವಿಲಸಂ[೪]ತ್ಯಪಥೇಪ್ಯಲಮ್ ।**
**ದೇವೇ ಜಿತಾರಿಷಡ್ವರ್ಗೇ ನ [೫]ತಮಃ ಸ್ಥಾತುಮರ್ಹತಿ ॥ ೭೩ ॥**

ಬಾಲಕರಾದ ಆ ಅನಂತವಿಜಯ ಮೊದಲಾದವರು ಬಾಲಭಾವದಿಂದ ದುರ್ಮಾರ್ಗದಲ್ಲಿ ವಿಶೇಷವಾಗಿ ಕ್ರೀಡಿಸಿದರೂ ಅರಿಷಡ್ವರ್ಗವನ್ನು ಜಯಿಸಿದ ಪ್ರಭುವಿನಲ್ಲಿ ಅಜ್ಞಾನವು ಇರತಕ್ಕುದಲ್ಲ.

**ಕ್ರೋಧಾಂಧತಮಸೇ ಮಗ್ನಂ ಯೋ ನಾತ್ಮಾನಂ ಸಮುದ್ಧರೇತ್ ।**
**ಸ [೬]ಕೃತ್ಯಸಂಶಯದ್ವೈಧಾನ್ನೋತ್ತರೀತುಮಲಂ ತರಾಮ್ ॥ ೭೪ ॥**

ಕೋಪವೆಂಬ ಕಗ್ಗತ್ತಲೆಯಲ್ಲಿ ಮುಳುಗಿರುವ ತನ್ನನ್ನು ಎತ್ತಲಾರದವನು ಕಾರ್ಯ ಅಕಾರ್ಯವೆಂಬ ದ್ವಿವಿಧಸಂಶಯದಿಂದ ಪಾರಾಗಲು ಸಮರ್ಥನಾಗಲಾರನು.

**ಕಿಂ ತರಾಂ ಸ ವಿಜಾನಾತಿ ಕಾರ್ಯಾಕಾರ್ಯಮನಾತ್ಮವಿತ್ ।**
**ಯಃ ಸ್ವಾಂತಪ್ರಭವಾನ್ ಜೇತುಮರೀನ್ನ ಪ್ರಭವೇತ್ಪ್ರಭುಃ ॥ ೭೫ ॥**

ಯಾವ ಪ್ರಭುವು ತನ್ನ ಮನಸ್ಸಿನಲ್ಲಿ ಹುಟ್ಟಿದ ಕೋಪ ಮೊದಲಾದ ಶತ್ರುಗಳನ್ನು ಜಯಿಸಲಾರನೋ ತನ್ನನ್ನು ತಾನು ತಿಳಿಯದ ಅಂತಹವನು ಕಾರ್ಯಾಕಾರ್ಯಗಳನ್ನು ಚೆನ್ನಾಗಿ ತಿಳಿಯುವನೇ ? ತಿಳಿಯಲಾರನೆಂದು ಭಾವವು.

**[೭]ತದ್ದೇವ ವಿರಮಾಮುಷ್ಮಾತ್ಸಂರಂಭಾದಪಕಾರಿಣಃ ।**
**ಜಿತಾತ್ಮಾನೋ ಜಯಂತಿ ಕ್ಷ್ಮಾಂ ಕ್ಷಮಯಾ ಹಿ ಜಿಗೀಷವಃ ॥ ೭೬ ॥**

ಆದುದರಿಂದ ಪ್ರಭುವೆ ! ಅಪಕಾರಿಯಾದ ಈ ಕೋಪದಿಂದ ವಿರಾಮವನ್ನು ಹೊಂದು. ಜಯಿಸಲಿಚ್ಛೆಯುಳ್ಳ ಆತ್ಮಸಂಯಮಿಗಳು–ಜಿತೇಂದ್ರಿಯರು ಕ್ಷಮೆಯಿಂದಲ್ಲವೆ ಪೃಥ್ವಿಯನ್ನು ಜಯಿಸುತ್ತಾರೆ ?

**ವಿಜಿತೇಂದ್ರಿಯವರ್ಗಾಣಾಂ ಸುಶ್ರುತಶ್ರುತಸಂಪದಾಮ್ ।**
**[೮]ಪರಲೋಕಂ ಜಿಗೀಷೂಣಾಂ ಕ್ಷಮಾ ಸಾಧನಮುತ್ತಮಮ್ ॥ ೭೭ ॥**

ಇಂದ್ರಿಯಸಮೂಹಗಳನ್ನು ಜಯಿಸಿದವರೂ ಚೆನ್ನಾಗಿ ಕೇಳಲ್ಪಟ್ಟ ಶಾಸ್ತ್ರವೆಂಬ ಸಂಪತ್ತಿಯುಳ್ಳವರೂ ಅಂದರೆ ಚೆನ್ನಾಗಿ ಶಾಸ್ತ್ರವನ್ನು ಕೇಳಿದವರೂ ಶತ್ರುಲೋಕವನ್ನು, ಪರಲೋಕವನ್ನು ಜಯಿಸಬೇಕೆಂಬ ಇಚ್ಛೆಯುಳ್ಳವರೂ ಆದ ಮನುಷ್ಯರಿಗೆ ಕ್ಷಮೆಯು ಉತ್ತಮವಾದ ಸಾಧನವಾಗಿರುವುದು.

**ಲೇಖಸಾಧ್ಯೇ ಚ ಕಾರ್ಯೇಽಸ್ಮಿನ್ವಿಫಲೋಽತಿಪರಿಶ್ರಮಃ ।**
**ತೃಣಾಂಕುರೇ ನಖಚ್ಛೇದ್ಯೇ ಕಃ [೯]ಪರಶ್ವಧಮುದ್ಧರೇತ್ ॥ ೭೮ ॥**

ಒಂದು ಲೇಖನದಿಂದ ಸಾಧಿಸತಕ್ಕ ಈ ಕೆಲಸಕ್ಕೆ ಅಧಿಕಶ್ರಮವು ವ್ಯರ್ಥವಾಗಿದೆ. ಉಗುರಿನಿಂದ ಜಿಗುಟತಕ್ಕ ಹುಲ್ಲಿನ ಮೊಳಕೆಗೆ ಯಾವನು ಕೊಡಲಿಯನ್ನೆತ್ತುವನು ?

**ತತ[೧]ಸ್ತಿತಿಕ್ಷಮಾಣೇನ ಸಾಧ್ಯೋ ಭ್ರಾತೃಗಣಸ್ತ್ವಯಾ ।**
**[೨]ಸೋಪಚಾರಂ ಪ್ರಯುಕ್ತೇನ ವಚೋಹರಗಣೇನ ಸಃ ॥ ೭೯ ॥**

ಆದುದರಿಂದ ನೀನು ಸಹನವುಳ್ಳವನಾಗಿ ಉಪಾಯವನ್ನು ಪ್ರಯೋಗಿಸಬಲ್ಲವರಾದ ಭೃತ್ಯರ ಮೂಲಕ ಆ ಸಹೋದರಸಮೂಹವನ್ನು ವಶಪಡಿಸಿಕೊಳ್ಳಬೇಕು.

**ಅದ್ಯೈವ ಚ ಪ್ರಹೇತವ್ಯಾಃ ಸಮಂ ಲೇಖೈ[೩]ರ್ವಚೋಹರಾಃ ।**
**ಗತ್ವಾ ಬ್ರೂಯುಶ್ಚ ತಾ[೪]ನೇತ ಚಕ್ರಿಣಂ ಭಜತಾಗ್ರಜಮ್ ॥ ೮೦ ॥**

ಈ ದಿವಸವೇ ಲೇಖನಗಳೊಡನೆ ಭೃತ್ಯರನ್ನು ಕಳುಹಬೇಕು. ಅವರು ಹೋಗಿ 'ಬನ್ನಿರಿ, ಅಣ್ಣನಾದ ಚಕ್ರವರ್ತಿಯನ್ನು ಭಜಿಸಿರಿ' ಎಂದು ಹೇಳಬೇಕು.

**ಕಲ್ಪಾನೋಕಹಸೇವೇವ ತತ್ಸೇವಾಭೀಷ್ಟದಾಯಿನೀ ।**
**[೫]ಗುರುಕಲ್ಪೋಽಗ್ರಜಶ್ಚಕ್ರೀ ಸ [೬]ಮಾನ್ಯಃ ಸರ್ವಥಾಪಿ ವಃ ॥ ೮೧ ॥**

'ಚಕ್ರವರ್ತಿಯ ಸೇವೆಯು, ಕಲ್ಪವೃಕ್ಷದ ಸೇವೆಯಂತೆ, ಇಷ್ಟಾರ್ಥವನ್ನು ಕೊಡುವುದು. ಅಣ್ಣನಾದ ಚಕ್ರವರ್ತಿಯು ಗುರುವಿಗೆ ಸಮಾನನು. ಸರ್ವಪ್ರಕಾರದಿಂದಲೂ ಅವನು ನಿಮ್ಮಗಳಿಗೆ ಪೂಜ್ಯನು.

**ವಿದೂರಸ್ಥೈರ್ನ ಯುಷ್ಮಾಭಿರೈಶ್ವರ್ಯಂ ತಸ್ಯ ರಾಜತೇ ।**
**ತಾರಾಗಣೈರನಾಸನ್ನೈರಿವ ಬಿಂಬಂ ನಿಶಾಪತೇಃ ॥ ೮೨ ॥**

ದೂರದಲ್ಲಿರುವ ನಕ್ಷತ್ರಸಮೂಹಗಳಿಂದ ಚಂದ್ರನ ಬಿಂಬವು ಹೇಗೆ ಶೋಭಿಸುವುದಿಲ್ಲವೋ ಹಾಗೆ ದೂರದಲ್ಲಿರುವ ನಿಮ್ಮಗಳಿಂದ ಅವನ ಸಂಪತ್ತಿಯು ಶೋಭಿಸುವುದಿಲ್ಲ.

**ಸಾಮ್ರಾಜ್ಯಂ ನಾಸ್ಯ ತೋಷಾಯ ಯದ್ಭವದ್ಭಿರ್ವಿನಾ ಭವೇತ್ ।**
**ಸಹ ಭೋಗ್ಯಂ ಹಿ ಬಂಧೂನಾಮಾಧಿರಾಜ್ಯಂ ಸತಾಂ ಮುದೇ ॥ ೮೩ ॥**

ನೀವುಗಳಿಲ್ಲದಿರುವ ಸಾಮ್ರಾಜ್ಯವು ಇವನಿಗೆ ಸಂತೋಷವನ್ನುಂಟುಮಾಡಲು ಸಮರ್ಥವಾಗಿಲ್ಲ. ಬಂಧುಗಳ ಜತೆಯಲ್ಲಿ ಭೋಗಿಸತಕ್ಕ ಸಾಮ್ರಾಜ್ಯವೇ ಸತ್ಪುರುಷರಿಗೆ ಸಂತೋಷವನ್ನುಂಟುಮಾಡಲು ಸಮರ್ಥವಾಗುವುದು.

**ಇದಂ [೭]ವಾಚಿಕಮನ್ಯತ್ತು ಲೇಖಾರ್ಥಾದವಧಾರ್ಯತಾಮ್ ।**
**ಇತಿ ಸೋಪಾಯನೈರ್ಲೇಖೈಃ [೮]ಪ್ರತ್ಯಾಯ್ಯಾಸ್ತೇ ಮನಸ್ವಿನಃ ॥ ೮೪ ॥**

ಇದು ಬಾಯಿಯ ಮಾತು. ಬೇರೆ ಸಮಾಚಾರವಾದರೋ ಲೇಖ–ಪತ್ರದ ಅರ್ಥದಿಂದ ತಿಳಿಯಲ್ಪಡಲಿ' ಈ ಪ್ರಕಾರವಾಗಿ ಕೈಗಾಣಿಕೆಗಳೊಡಗೂಡಿದ ಲೇಖನಗಳಿಂದ ಆ ವಿಚಾರಶೀಲರಾದ ಸಹೋದರರಿಗೆ ವಿಶ್ವಾಸವನ್ನು ಹುಟ್ಟಿಸಬೇಕು.

**ಯಶಸ್ಯಮಿದಮೇವಾರ್ಯ ಕಾರ್ಯಂ [೯]ಶ್ರೇಯಸ್ಯಮೇವ ಚ ।**
**ಚಿಂತ್ಯಮುತ್ತರಕಾರ್ಯಂ ಚ [೧೦]ಸಾಮ್ನಾ ತೇಷ್ವವಶೇಷು ವೈ ॥ ೮೫ ॥**

ಪೂಜ್ಯನೆ ! ಈ ಮೇಲೆಹೇಳಿದ ಕಾರ್ಯವೇ ಯಶಸ್ಸನ್ನುಂಟುಮಾಡುವುದೂ ಶ್ರೇಯಸ್ಕರವೂ ಆಗಿರುವುದು. ವಶರಾಗದಿರುವ ಅವರ ವಿಷಯದಲ್ಲಿ ಸಾಮೋಪಾಯದಿಂದ ಮುಂದೆ ಮಾಡತಕ್ಕ ಕಾರ್ಯವು ಚೆನ್ನಾಗಿ ಯೋಚಿಸಲ್ಪಡತಕ್ಕುದಾಗಿದೆ.

**ಬಿಭ್ಯತಾ ಜನ[೧೧]ನಿರ್ವಾದಾದನುಷ್ಠೇಯಮಿದಂ ತ್ವಯಾ ।**
**[೧೨]ಸ್ಥಾಯಿಕಂ ಹಿ ಯಶೋ ಲೋಕೇ [೧೩]ಗತ್ವರ್ಯೋ ನನು ಸಂಪದಃ ॥**

೧ ಜಿತಷಟ್ಖಂಡತಾಂ. ೨ ಅನಂತವಿಜಯಾದಯೋ ಭ್ರಾತರಃ. ೩ ಬಾಲತ್ವೇನ. ೪ ದುರ್ಮಾರ್ಗೆ. ೫ ಅಜ್ಞಾನಂ. ೬ ಕಾರ್ಯಸಂದೇಹದ್ವೈವಿಧ್ಯಾತ್. ೭ ತಸ್ಮಾತ್ಕಾರಣಾತ್. ೮ ಶತ್ರುಲೋಕಂ ಉತ್ತರಲೋಕಂ ಚ. ೯ ಪರಶುಂ.

೧ ಸಹಮಾನೇನ. ೨ ಸೋಪಾಯಂ. ೩ ಭೃತ್ಯಾಃ. ೪ ಆಗಚ್ಛತ. ೫ ಗುರುಸಮಃ. ೬ ಪೂಜ್ಯಃ. ೭ ಮುಖವಾರ್ತಾ. ೮ ವಿಶ್ವಾಸ್ಯಾಃ. ೯ ಶ್ರೇಯಸ್ಕರಂ. ೧೦ ಸಾಮೋಪಾಯೇನ. ೧೧ ಅಪವಾದಾತ್. ೧೨ ಸ್ಥಿರತರಂ. ೧೩ ಗಮನಶೀಲಾಃ.

ಲೋಕಾಪವಾದಕ್ಕೆ ಹೆದರುವ ನೀನು ಈ ಕಾರ್ಯವನ್ನು ಮಾಡಬೇಕು. ಲೋಕದಲ್ಲಿ ಯಶಸ್ಸೇ ಸ್ಥಿರವಾಗಿರತಕ್ಕುದು. ಸಂಪತ್ತಿಗಳಾದರೋ ಗಮನಸ್ವಭಾವವುಳ್ಳುವು.''

**ಇತಿ ತದ್ವಚನಾಚ್ಚಕ್ರೀ ವೃತ್ತಿ[1]ಮಾರಭಟೀಂ ಜಹೌ ।**
**ಅನುವರ್ತನಸಾಧ್ಯಾ ಹಿ ಮಹತಾಂ ಚಿತ್ತವೃತ್ತಯಃ ॥ ೮೭ ॥**

ಈ ಪ್ರಕಾರವಾದ ಪುರೋಹಿತನ ಮಾತಿನಿಂದ ಚಕ್ರವರ್ತಿಯು ಭಯಂಕರವಾದ ವ್ಯಾಪಾರವನ್ನು ಬಿಟ್ಟನು. ಕೋಪವಿಕಾರವನ್ನು ಬಿಟ್ಟನೆಂದರ್ಥವು. ಮಹಾಪುರುಷರ ಮನೋವ್ಯಾಪಾರಗಳು ಅನುಸರಿಸುವುದರಿಂದ ಸಾಧಿಸತಕ್ಕುವುಗಳಲ್ಲವೆ ? ಅನುಸರಿಸಿ ವಶಮಾಡಿಕೊಳ್ಳತಕ್ಕುವೆಂದು ಭಾವವು.

**ಆಸ್ತಾಂ ಭುಜಬಲೀ ತಾವದ್ಯತ್ನಸಾಧ್ಯೋ ಮಹಾಬಲಃ ।**
**ಶೇಷೈರೇವ ಪರೀಕ್ಷಿಷ್ಯೇ ಭ್ರಾತೃಭಿ[2]ಸ್ತದ್ವಿಜಿಹ್ಮತಾಮ್ ॥ ೮೮ ॥**

''ಪ್ರಯತ್ನದಿಂದ ಸಾಧಿಸಲ್ಪಡತಕ್ಕವನೂ ಮಹಾಬಲಿಷ್ಠನೂ ಆದ ಬಾಹುಬಲಿಯಾದರೋ ಇರಲಿ. ಉಳಿದ ಸಹೋದರರಿಂದಲೇ ಬಾಹುಬಲಿಯ ಕುಟಿಲತೆಯನ್ನು ಪರೀಕ್ಷಿಸುವೆನು.''

**ಇತಿ ನಿರ್ಧಾರ್ಯ ಕಾರ್ಯಜ್ಞಾನ್ಕಾರ್ಯಯುಕ್ತೌ ವಿವಿಕ್ತಧೀಃ ।**
**ಪ್ರಾಹಿಣೋತ್ಸ [3]ನಿಸೃಷ್ಟಾರ್ಥಾನ್ ದೂತಾನನುಜಸನ್ನಿಧಿಮ್ ॥ ೮೯ ॥**

ಈ ಪ್ರಕಾರವಾಗಿ ನಿಶ್ಚಯಿಸಿ ಕಾರ್ಯದಯುಕ್ತಿಯಲ್ಲಿ ಪವಿತ್ರವಾದ ಬುದ್ಧಿಯುಳ್ಳ ಭರತೇಶ್ವರನು ಅನೇಕಾವರ್ತಿ ಕಾರ್ಯವನ್ನು ಸಫಲಗೊಳಿಸಿರುವವರೂ ಕಾರ್ಯದ ಅನುಭವವುಳ್ಳವರೂ ಆದ ದೂತರನ್ನು ಸಹೋದರರ ಬಳಿಗೆ ಕಳುಹಿಸಿದನು.

**ಗತ್ವಾ ಚ ತೇ ಯಥೋದ್ದೇಶಂ ದೃಷ್ಟ್ವಾ ತಾಂಸ್ತಾನ್ಯಥೋಚಿತಮ್ ।**
**[4]ಜಗುಃ [5]ಸಂದೇಶಮೀಶಸ್ಯ ತೇಭ್ಯೋ ದೂತಾ ಯಥಾಸ್ಥಿತಮ್ ॥ ೯೦ ॥**

ಆ ದೂತರು ಆಯಾ ಪ್ರದೇಶಕ್ಕೆ ಹೋಗಿ ಉಚಿತರೀತಿಯಿಂದ ಅವರವರನ್ನು (ಒಬ್ಬೊಬ್ಬರನ್ನು) ಕಂಡು ಭರತೇಶ್ವರನ ನಿರೂಪವನ್ನು ಇದ್ದಹಾಗೆಯೇ ಅವರಿಗೆ ತಿಳುಹಿದರು.

**ಅಥ [6]ತೇ ಸಹ ಸಂಭೂಯ ಕೃತಕಾರ್ಯನಿವೇದನಾನ್ ।**
**ದೂತಾನಿತ್ಯೂಚುರಾರೂಢಪ್ರಭುತ್ವಮದಕರ್ಕಶಾಃ ॥ ೯೧ ॥**

ಅನಂತರದಲ್ಲಿ ಪ್ರಾಪ್ತವಾದ ಪ್ರಭುತ್ವಗರ್ವದಿಂದ ಕಠೋರರಾದ ಆ ರಾಜಕುಮಾರರು ಒಂದು ಕಡೆಯಲ್ಲಿ ಸೇರಿ ಕಾರ್ಯವನ್ನು ತಿಳಿಸಿದ ಭರತನ ಭೃತ್ಯರನ್ನು ಕುರಿತು ಮುಂದೆ ಹೇಳುವ ರೀತಿಯಾಗಿ ನುಡಿದರು.

**ಯದುಕ್ತಮಾದಿರಾಜೇನ ತತ್ಸತ್ಯಂ [7]ನೋಭಿಸಮ್ಮತಮ್ ।**
**ಗುರೋರಸನ್ನಿಧೌ ಪೂಜ್ಯೋ ಜ್ಯಾಯಾನ್ ಭ್ರಾತಾನುಜೈರಿತಿ ॥ ೯೨ ॥**

''ತಂದೆಯು ಇಲ್ಲದ ಕಾಲದಲ್ಲಿ ಸಹೋದರರಿಗೆ ಅಣ್ಣನು ಪೂಜ್ಯನೆಂದು ಮಹಾರಾಜನು(ಭರತನು) ಹೇಳಿದ ಮಾತು ಸತ್ಯವಾದುದು. ಅದು ನಮಗೆ ಇಷ್ಟವೂ ಆಗಿದೆ.

**ಪ್ರತ್ಯಕ್ಷೋ ಗುರುರಸ್ಮಾಕಂ [8]ಪ್ರತಪತ್ಯೇಷ ವಿಶ್ವದೃಕ್ ।**
**ಸ ನಃ ಪ್ರಮಾಣಮೈಶ್ವರ್ಯಂ ತದ್ವಿತೀರ್ಣಮಿದಂ ಹಿ ನಃ ॥ ೯೩ ॥**

ಆದರೆ ಸರ್ವಜ್ಞನಾದ ನಮ್ಮ ಈ ತಂದೆಯು ಪ್ರತ್ಯಕ್ಷನಾಗಿ ವಿರಾಜಿಸುತ್ತಿದ್ದಾನೆ. ಅವನು ನಮಗೆ ಮಾನ್ಯ–ಸಾಕ್ಷಿಯಾಗಿದ್ದಾನೆ. ನಮ್ಮ ಈ ಐಶ್ವರ್ಯವು ಅವನಿಂದ ಕೊಡಲ್ಪಟ್ಟುದಾಗಿರುತ್ತದೆ.

೧ ಭಯಂಕರಾಂ. ೨ ಬಾಹುಬಲಿನಃ ಕುಟಿಲತಾಂ. ೩ ಅಸಕೃತ್ಸಂಪಾದಿತಪ್ರಯೋಜನಾನ್. ೪ ಊಚುಃ. ೫ ವಾಚಿಕಂ. ೬ ಕುಮಾರಾಃ. ೭ ಅಸ್ಮಾಕಂ. ೮ ಪ್ರಕಾಶತೇ.

**ತದತ್ರ ಗುರುಪಾದಾಜ್ಞಾ[1]ತಂತ್ರಾ ನ [2]ಸ್ವೈರಿಣೋ ವಯಮ್ ।**
**ನ ದೇಯಂ ಭರತೇಶೇನ ನಾದೇಯಮಿಹ ಕಿಂಚನ ॥ ೯೪ ॥**

ಆದುದರಿಂದ ನಾವು ಈ ವಿಷಯದಲ್ಲಿ ತಂದೆಯ ಚರಣದ ಆಜ್ಞಾಧೀನರಾಗಿರುತ್ತೇವೆ. ಸ್ವೇಚ್ಛಾಚಾರಿಗಳಾಗಿರುವುದಿಲ್ಲ. ಭರತೇಶ್ವರನು ನಮಗೇನೂ ಕೊಡತಕ್ಕುದೂ ಇಲ್ಲ. ನಮ್ಮಿಂದ ತೆಗೆದುಕೊಳ್ಳತಕ್ಕುದೂ ಇಲ್ಲ.

**ಯತ್ತು ನಃ ಸಂವಿಭಾಗಾರ್ಥಮಿದಮಾಮಂತ್ರಣಂ ಕೃತಮ್ ।**
**ಚಕ್ರಿಣಾ ತೇನ ಸುಪ್ರೀತಾ [3]ದ್ರಾಣಾಶ್ಚ ವಯ[4]ಮಾಗಲಾತ್ ॥ ೯೫ ॥**

ಚಕ್ರವರ್ತಿಯಾಗಿರುವ ಭರತರಾಜನು ವಿಭಾಗಕ್ಕೋಸ್ಕರ ನಮ್ಮನ್ನು ಕರೆಯುವುದಕ್ಕೆ ಕಳುಹಿಸಿರುವುದರಿಂದ ನಾವು ಬಹುಸಂತುಷ್ಟರಾಗಿದ್ದೇವೆ. ಕಂಠದವರೆಗೆ ತೃಪ್ತಿಯುಳ್ಳವರೂ ಆಗಿದ್ದೇವೆ.''

**ಇತಿ ಸತ್ಕೃತ್ಯ ತಾನ್ ದೂತಾನ್ ಸನ್ಮಾನೈಃ ಪ್ರಭುವತ್ಪ್ರಭೌ ।**
**[5]ವಿಹಿತೋಪಾಯನಾಃ ಸದ್ಯಃ ಪ್ರತಿಲೇಖೈರ್ವ್ಯಸರ್ಜಯನ್ ॥ ೯೬ ॥**

ಈ ಪ್ರಕಾರವಾಗಿ ನುಡಿದು ಆ ಭೃತ್ಯರನ್ನು ಸನ್ಮಾನಗಳಿಂದ ಸತ್ಕರಿಸಿ ಭರತೇಶ್ವರನು ಕಳುಹಿಸಿದಂತೆ ತಾವೂ ಕೈಗಾಣಿಕೆಗಳನ್ನು ಕೊಟ್ಟು ಉತ್ತರಲೇಖನಗಳೊಡನೆ ಆಗಲೇ ಅವರನ್ನು ಪ್ರಭುವಿನ ಬಳಿಗೆ ಕಳುಹಿಸಿದರು.

**[6]ದೂತಸಾತ್ಕೃತಸನ್ಮಾನಾಃ [7]ಪ್ರಭುಸಾತ್ಕೃತವಾಚಿಕಾಃ ।**
**[8]ಗುರುಸಾತ್ಕೃತ್ಯ [9]ತತ್ಕಾರ್ಯಂ ಪ್ರಾಪುಸ್ತೇ ಗುರುಸನ್ನಿಧಿಮ್ ॥ ೯೭ ॥**

ಭರತನ ಭೃತ್ಯರನ್ನು ಸತ್ಕರಿಸಿದವರೂ ಭರತನಿಗೆ ಲೇಖನಗಳನ್ನು ಕಳುಹಿಸಿದವರೂ ಆದ ಆ ರಾಜಕುಮಾರರು ಭರತನು ಮಾಡಿದ ಕಾರ್ಯವನ್ನು ತಂದೆಯಾದ ವೃಷಭಸ್ವಾಮಿಗೆ ನಿವೇದಿಸಬೇಕೆಂದು ಆ ತಂದೆಯ ಬಳಿಗೆ ಹೋದರು.

**ಗತ್ವಾ ಚ ಗುರುಮದ್ರಾಕ್ಷುರ್ಮಿತೋಚಿತಪರಿಚ್ಛದಾಃ ।**
**ಮಹಾಗಿರಿಮಿವೋ[10]ತ್ತುಂಗಂ [11]ಕೈಲಾಸಶಿಖರಾಲಯಮ್ ॥ ೯೮ ॥**

ಮಿತವೂ ಉಚಿತವೂ ಆದ ಪರಿವಾರಗಳುಳ್ಳ ಆ ರಾಜಕುಮಾರರು ಹೋಗಿ ಮಹಾಮೇರುವಿನಂತೆ ಉನ್ನತನೂ ಕೈಲಾಸಪರ್ವತಶಿಖರದಲ್ಲಿ ವಾಸವಾಗಿರುವವನೂ ಆದ ವೃಷಭಸ್ವಾಮಿಯನ್ನು ಕಂಡರು.

**ಪ್ರಣಿಪತ್ಯ ವಿಧಾನೇನ ಪ್ರಪೂಜ್ಯ ಚ ಯಥಾವಿಧಿ ।**
**ವ್ಯಜಿಜ್ಞಪನ್ನಿದಂ ವಾಕ್ಯಂ ಕುಮಾರಾ ಮಾರವಿದ್ವಿಷಮ್ ॥ ೯೯ ॥**

ರಾಜಕುಮಾರರು ಮನ್ಮಥವಿರೋಧಿಯಾದ ವೃಷಭಸ್ವಾಮಿಯನ್ನು ವಿಧಿಪ್ರಕಾರವಾಗಿ ವಂದಿಸಿ ಮತ್ತು ಪೂಜಿಸಿ ಈ ಮುಂದೆ ಹೇಳುವ ವಾಕ್ಯವನ್ನು ವಿಜ್ಞಾಪಿಸಿದರು.

**ತ್ವತ್ತಃ [12]ಸ್ಮೋ ಲಬ್ಧಜನ್ಮಾನಸ್ತ್ವತ್ತಃ ಪ್ರಾಪ್ತಾಃ ಪರಾಂ ಶ್ರಿಯಮ್ ।**
**ತ್ವತ್ಪ್ರಸಾದೈಷಿಣೋ ದೇವ ತ್ವತ್ತೋ ನಾನ್ಯ[13]ಮುಪಾಸ್ಮಹೇ ॥ ೧೦೦ ॥**

''ಸ್ವಾಮಿಯೇ ! ನಾವು ನಿನ್ನಿಂದ ಜನ್ಮವನ್ನು ಪಡೆದವರೂ ನಿನ್ನಿಂದ ಉತ್ಕೃಷ್ಟವಾದ ಸಂಪತ್ತಿಯನ್ನು ಪಡೆದವರೂ ಆಗಿರುತ್ತೇವೆ. ನಿನ್ನ ಅನುಗ್ರಹವನ್ನಿಚ್ಛಿಸುವ ನಾವು ನಿನಗಿಂತ ಬೇರೆಯಾಗಿರುವ ಮನುಷ್ಯನನ್ನು ಆರಾಧಿಸುವುದಿಲ್ಲ.

**ಗುರುಪ್ರಸಾದ ಇತ್ಯುಚ್ಚೈರ್ಜನೋ ವಾಕ್ತ್ಯೇಷ ಕೇವಲಮ್ ।**
**ವಯಂ ತು ತದ್ರಸಾಭಿಜ್ಞಾಸ್ತ್ವತ್ಪ್ರಸಾದಾರ್ಜಿತಶ್ರಿಯಃ ॥ ೧೦೧ ॥**

೧ ಪ್ರಧಾನಾಃ. ೨ ಸ್ವೇಚ್ಛಾಚಾರಿಣಃ. ೩ ತೃಪ್ತಾಃ. ೪ ಕಂಠಪರ್ಯಂತಂ. ೫ ಕೃತಪ್ರಾಭೃತಾಃ. ೬ ದೂತಾನಾಮಾಯತ್ತೀಕೃತ. ೭ ಭರತಾಯತ್ತೀಕೃತ. ೮ ಗುರ್ವಧೀನಂ ಕೃತ್ವಾ. ೯ ಭರತಕೃತಕಾರ್ಯಂ. ೧೦ ಶ್ರೇಷ್ಠಂ. ೧೧ ಕೈಲಾಸಶಿಖರಂ ಆಲಯೋ ಯಸ್ಯ ತಂ. ೧೨ ಭವಾಮಃ. ೧೩ ಆರಾಧಯಾಮಃ.

'ತಂದೆಯ ಪ್ರಸಾದ' ಎಂದು ಜನರು ಸುಮ್ಮನೆ ಉಚ್ಚಸ್ವರದಿಂದ ಹೇಳುತ್ತಾರೆ. ನಿನ್ನ ಅನುಗ್ರಹದಿಂದ ಸಂಪತ್ತಿಯನ್ನು ದೊರಕಿಸಿದ ನಾವಾದರೋ ತಂದೆಯ ಅನುಗ್ರಹದ ತಿರುಳನ್ನು ತಿಳಿದವರಾಗಿದ್ದೇವೆ.

**ತ್ವತ್ಪ್ರಣಾಮಾನುರಕ್ತಾನಾಂ ತ್ವತ್ಪ್ರಸಾದಾಭಿಕಾಂಕ್ಷಿಣಾಮ್ ।**
**ತ್ವದ್ವಚಃಕಿಂಕರಾಣಾಂ ನೋ [೧]ಯದ್ವಾ ತದ್ವಾಸ್ತು ನಾಪರಮ್ ॥ ೧೦೨ ॥**

ನಿನ್ನನ್ನು ವಂದಿಸುವುದರಲ್ಲಿ ಅನುರಾಗವುಳ್ಳವರೂ ನಿನ್ನ ಅನುಗ್ರಹವನ್ನು ಬಯಸುವವರೂ ನಿನ್ನ ಮಾತಿನ ಸೇವಕರೂ ಆದ ನಮಗೆ ಯಾವುದಿರುತ್ತದೋ ಅದೇ ಇರಲಿ. ಬೇರೆ ವಸ್ತುವು ಬೇಕಾಗಿಲ್ಲ. ಬೇರೆಯವರನ್ನು ಆಶ್ರಯಿಸುವುದಿಲ್ಲ ವೆಂದು ಭಾವವು.

**ಇತಿ [೨]ಸ್ಥಿತೇ ಪ್ರಣಾಮಾರ್ಥಂ ಭರತೋಽಸ್ಮಾನ್ [೩]ಜುಹೂಷತಿ ।**
**ತನ್ನಾತ್ರ ಕಾರಣಂ ವಿದ್ಮಃ ಕಿಂ ಮದಃ ಕಿಮು ಮತ್ಸರಃ ॥ ೧೦೩ ॥**

ಹೀಗಿರುತ್ತಿರಲು ಭರತನು ನಮಸ್ಕರಿಸಿಕೊಳ್ಳುವುದಕ್ಕಾಗಿ ನಮ್ಮನ್ನು ಕರೆಯ ಲಿಚ್ಛಿಸುತ್ತಾನೆ. ಇದರ ಕಾರಣವು ಗರ್ವವೋ ? ಮತ್ಸರವೋ ? ಎಂಬುದನ್ನು ನಾವು ತಿಳಿಯೆವು.

**ಯುಷ್ಮತ್ಪ್ರಣಮನಾಭ್ಯಾಸರಸ[೪]ದುರ್ಲಲಿತಂ ಶಿರಃ ।**
**ನಾನ್ಯಪ್ರಣಮನೇ ದೇವ ಧೃತಿಂ ಬಧ್ನಾತಿ ಜಾತು ನಃ ॥ ೧೦೪ ॥**

ಸ್ವಾಮಿಯೆ ! ನಿಮ್ಮನ್ನು ನಮಸ್ಕರಿಸುವ ಅಭ್ಯಾಸದಿಂದ ಗರ್ವಿಷ್ಠವಾದ ನಮ್ಮ ಮಸ್ತಕವು ಬೇರೆಯವರನ್ನು ನಮಸ್ಕರಿಸುವುದಕ್ಕೆ ಎಂದೂ ಪ್ರೀತಿಪಡುವುದಿಲ್ಲ.

**ಕಿಮಂಭೋಜರಜಃಪುಂಜಪಿಂಜರಂ ವಾರಿ ಮಾನಸೇ ।**
**ನಿಷೇವ್ಯ ರಾಜಹಂಸೋಽಯಂ ರಮತೇಽನ್ಯಸರೋಜಲೇ ॥ ೧೦೫ ॥**

ಈ ರಾಜಹಂಸವು ಮಾನಸಸರೋವರದಲ್ಲಿ ಕಮಲದ ಧೂಳಿಯ ರಾಶಿಯಿಂದ ಹೊಂಬಣ್ಣವಾದ ನೀರನ್ನು ಸೇವಿಸಿ ಬೇರೆ ಕೆರೆಯ ನೀರಿನಲ್ಲಿ ಕ್ರೀಡಿಸುತ್ತದೆಯೇ ?

**ಕಿ[೫]ಮಪ್ಸರಃಶಿರೋಜಾತಸುಮನೋಗಂಧಲಾಲಿತಃ ।**
**[೬]ತುಂಬೀವನಾಂತ[೭]ಮಭ್ಯೇತಿ ಪ್ರಾಣಾಂತೇಽಪಿ ಮಧುವ್ರತಃ ॥ ೧೦೬ ॥**

ದೇವಸ್ತ್ರೀಯರ ಕೇಶಮಧ್ಯದ ಪುಷ್ಪಗಳ ಪರಿಮಳದಿಂದ ಪೋಷಿತವಾದ ಭ್ರಮರವು ಪ್ರಾಣಾಂತದಲ್ಲಿಯೂ ಸೋರೆಯ ವನಮಧ್ಯವನ್ನು ಸೇರುವುದೇ ?

**ಮುಕ್ತಾಫಲಾಚ್ಛ[೮]ಮಾಪಾಯ ಗಗನಾಂಬು ನವಾಂಬುದಾತ್ ।**
**ಶುಷ್ಯತ್ಸರೋಽಂಬು ಕಿಂ ವಾಂಛೇ[೯]ದುದನ್ಯನ್ನಪಿ ಚಾತಕಃ ॥ ೧೦೭ ॥**

ಚಾತಕವು ನೂತನವಾದ ಮೇಘದಿಂದ ಮುಕ್ತಾಫಲದಂತೆ ನಿರ್ಮಲವಾದ ಆಕಾಶ ದಿಂದ ಬೀಳುವ ನೀರನ್ನು ಕುಡಿದು ಒಣಗುತ್ತಿರುವ ಕೆರೆಯ ನೀರನ್ನು ಬಾಯಾರಿ ದರೂ ಇಚ್ಛಿಸೀತೇ ?

**ಇತಿ ಯುಷ್ಮತ್ಪದಾ[೧೦]ಬ್ಜನ್ಮರಜೋರಂಜಿತಮಸ್ತಕಾಃ ।**
**[೧೧]ಪ್ರಣಂತು[೧೨]ಮಸದಾಪ್ತಾನಾಮಿಹಾಮುತ್ರ ಚ [೧೩]ನೇಶ್ಮಹೇ ॥ ೧೦೮ ॥**

ಈ ರೀತಿಯಾಗಿ ನಿಮ್ಮ ಪಾದಕಮಲಗಳ ಧೂಳಿಯಿಂದ ವ್ಯಾಪ್ತವಾದ ಮಸ್ತಕ ವುಳ್ಳ ನಾವುಗಳು ಆಪ್ತರಲ್ಲದವರಿಗೆ ನಮಸ್ಕಾರಮಾಡಲು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಮರ್ಥರಾಗುವುದಿಲ್ಲ.

**ಪರಪ್ರಣಾಮವಿಮುಖೀಂ ಭಯಸಂಗವಿವರ್ಜಿತಾಮ್ ।**
**ವೀರದೀಕ್ಷಾಂ ವಯಂ ಧರ್ತುಂ ಭವತ್ಪಾರ್ಶ್ವಮುಪಾಗತಾಃ ॥ ೧೦೯ ॥**

೧ ಯತ್ಕಿಂಚಿದ್ಭವತಿ ತದಸ್ತು. ೨ ಸ್ಥಿತೇ ಸತಿ. ೩ ಆಹ್ವಾತುಮಿಚ್ಛತಿ. ೪ ಗರ್ವಿತಂ. ೫ ದೇವಸ್ತ್ರೀಣಾಂ ಕೇಶಮಧ್ಯಪುಷ್ಪಗಂಧಲಾಲಿತಃ. ೬ ಅಲಾಬುವನಮಧ್ಯಂ. ೭ ಅಭಿಗಚ್ಛತಿ. ೮ ಪೀತ್ವಾ. ೯ ಪಿಪಾಸನ್ನಪಿ. ೧೦ ಕಮಲಂ. ೧೧ ನಮಸ್ಕರ್ತುಂ. ೧೨ ಅನಾಪ್ತಾನಾಂ. ೧೩ ಸಮರ್ಥಾ ನ ಭವಾಮಃ.

ನಾವು ಬೇರೆಯವರ ನಮಸ್ಕಾರದಿಂದ ವಿಮುಖವೂ ಭಯವೂ ಪರಿಗ್ರಹವೂ ಇಲ್ಲದುದೂ ಆದ ವೀರದೀಕ್ಷೆಯನ್ನು ಧರಿಸುವುದಕ್ಕಾಗಿ ತಮ್ಮ ಸನ್ನಿಧಿಗೆ ಬಂದಿ ರುತ್ತೇವೆ.

**ತದ್ದೇವ ಕಥಯಾಸ್ಮಾಕಂ ಹಿತಂ ಪಥ್ಯಂ ಚ ವರ್ತ್ಮ ಯತ್ ।**
**ಯೇನೇಹಾಮುತ್ರ ಚ [೧]ಸ್ಯಾಮ ತ್ವದ್ಭಕ್ತಿದೃಢವಾಸನಾಃ ॥ ೧೧೦ ॥**

ಆದುದರಿಂದ ಸ್ವಾಮಿಯೆ ! ಯಾವ ಮಾರ್ಗದಿಂದ ನಾವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ನಿನ್ನ ಭಕ್ತಿಯ ದೃಢಸಂಸ್ಕಾರವುಳ್ಳವರಾಗಿ ಆಗುವೆವೋ ಅಂತಹ ಹಿತಕರವೂ ಸುಖಕರವೂ ಆದ ಮಾರ್ಗವನ್ನು ನಮಗೆ ಹೇಳು.

**ಪರಪ್ರಣಾಮಸಂಜಾತಮಾನಭಂಗಭಯಾ[೨]ತಿಗಾಮ್ ।**
**ಪದವೀಂ [೩]ತಾವಕೀಂ ದೇವ [೪]ಭವೇಮಹಿ ಭವೇ ಭವೇ ॥ ೧೧೧ ॥**

ಸ್ವಾಮಿಯೆ ! ಬೇರೆಯವರನ್ನು ನಮಸ್ಕರಿಸುವುದರಿಂದುಂಟಾಗುವ ಮಾನ ಹಾನಿಯ ಭಯವನ್ನು ಮೀರಿರುವುದೂ ನಿನ್ನ ಸಂಬಂಧಿಯೂ ಆದ ಪದವಿಯನ್ನು ನಾವು ಪ್ರತಿಯೊಂದು ಭವದಲ್ಲಿಯೂ ಪಡೆಯಬೇಕು.

**ಮಾನಖಂಡನಸಂಭೂತ[೫]ಪರಿಭೂತಿಭಯಾತಿಗಾಃ ।**
**ಯೋಗಿನಃ ಸುಖಮೇಧಂತೇ ವನೇಷು ಹರಿಭಿಃ ಸಮಮ್ ॥ ೧೧೨ ॥**

ಮಾನಭಂಗದಿಂದುಂಟಾದ ತಿರಸ್ಕಾರ–ಅಪಮಾನದ ಭಯರಹಿತರಾದ ಯೋಗಿ ಗಳು ಅರಣ್ಯಗಳಲ್ಲಿ ಸಿಂಹಗಳೊಡನೆ ಸುಖವಾಗಿ ಬೆಳೆಯುತ್ತಾರೆ.''

**ಬ್ರುವಾಣಾನಿತಿ ಸೋಪೇಕ್ಷಂ ಸ್ಥಾಪಯನ್ ಪಥಿ ಶಾಶ್ವತೇ ।**
**ಭಗವಾನಿತಿ ತಾನುಚ್ಚೈರನ್ವಶಾ[೬]ದನುಶಾಸಿತಾ ॥ ೧೧೩ ॥**

ಈ ಪ್ರಕಾರವಾಗಿ ಉದಾಸೀನ-ವಿರಕ್ತಿಭಾವನೆಯಿಂದ ಮಾತನಾಡುತ್ತಿರುವ ಆ ರಾಜಕುಮಾರರನ್ನು ಶಾಶ್ವತವಾದ ಮಾರ್ಗದಲ್ಲಿ ಸ್ಥಾಪಿಸುವವನೂ ಉಪದೇಶಕನೂ ಆದ ಭಗವಾನ್ ವೃಷಭಸ್ವಾಮಿಯು ಅವರಿಗೆ ಮುಂದೆ ಹೇಳುವ ರೀತಿಯಾಗಿ ಚೆನ್ನಾಗಿ ಉಪದೇಶಿಸಿದನು.

**[೭]ಮಹಾಮಾನಾ [೮]ವಪುಷ್ಮಂತೋ ವಯಃಸತ್ತ್ವಗುಣಾನ್ವಿತಾಃ ।**
**ಕಥಮನ್ಯಸ್ಯ [೯]ಸಂವಾಹ್ಯಾ ಯೂಯಂ ಭದ್ರಾ ದ್ವಿಪಾ ಇವ ॥ ೧೧೪ ॥**

''ದೊಡ್ಡದಾದ ದೇಹಪ್ರಮಾಣವುಳ್ಳವೂ ತೇಜಸ್ವಿಗಳೂ ವಯಸ್ಸು ಶಕ್ತಿ ಈ ಗುಣಗಳಿಂದ ಕೂಡಿದುವೂ ಆದ ಭದ್ರಹಸ್ತಿಗಳು ರಾಜನಿಗಲ್ಲದೆ ಬೇರೆಯವರಿಗೆ ಹತ್ತುವುದಕ್ಕೆ ಹೇಗೆ ಯೋಗ್ಯಗಳಲ್ಲವೋ ಹಾಗೆ ಮಹಾಭಿಮಾನಿಗಳೂ ತೇಜಸ್ವಿಗಳೂ ವಯಸ್ಸತ್ತ್ವಗುಣಯುಕ್ತರೂ ಆದ ನೀವುಗಳು ಬೇರೆಯವರಿಗೆ ಹೇಗೆ ಅಧೀನ ರಾಗುವಿರಿ ?

**[೧೦]ಭಂಗಿನಾ ಕಿಮು ರಾಜ್ಯೇನ ಜೀವಿತೇನ ಚಲೇನ ಕಿಮ್ ।**
**ಕಿಂಚ ಭೋ ಯೌವನೋನ್ಮಾದ್ಯೈರೈಶ್ವರ್ಯಲವದೂಷಿತೈಃ ॥ ೧೧೫ ॥**

ಎಲೈ ಕುಮಾರರೆ ! ನಶ್ವರವಾದ ರಾಜ್ಯದಿಂದೇನು ಪ್ರಯೋಜನ ? ಚಂಚಲವಾದ ಬಾಳುವೆಯಿಂದೇನು ಪ್ರಯೋಜನ ? ಐಶ್ವರ್ಯಲೇಶದಿಂದ ದೂಷಿತವಾದ ಯೌವನಮದೋನ್ಮತ್ತತೆಯಿಂದೇನು ಪ್ರಯೋಜನ ?

**ಕಿಂ ಬಲೈರ್ಬಲಿನಾಂ [೧೧]ಗಮ್ಯೈಃ ಕಿಂ [೧೨]ಹಾರ್ಯೈರ್ವಸ್ತುವಾಹನೈಃ ।**
**ತೃಷ್ಣಾಗ್ನಿಬೋಧನೈರೇಭಿಃ ಕಿಂ ಧನೈರಿಂಧನೈರಿವ ॥ ೧೧೬ ॥**

ಬೇರೆಯವರಿಂದ ಆಕ್ರಮಿಸಲ್ಪಡತಕ್ಕ ಸೈನ್ಯಗಳಿಂದೇನು ಪ್ರಯೋಜನ ? ಬೇರೆ ಯವರಿಂದ ಅಪಹರಿಸಲ್ಪಡತಕ್ಕ ವಸ್ತುವಾಹನಗಳಿಂದೇನು ಪ್ರಯೋಜನ ? ಬೆಂಕಿ

೧ ಭವೇಮ. ೨ ಅತಿಕ್ರಾಂತಾಂ. ೩ ತವ ಸಂಬಂಧಿನೀಂ. ೪ ಪ್ರಾಪ್ನುಮಃ, ಭೂಪ್ರಾಪ್ತಾವಾತ್ಮನೇಪದಿ. ೫ ಪರಿಭವಃ. ೬ ಉಪದೇಶಕಃ. ೭ ಮಹಾಭಿಮಾನಿನಃ, ಪ್ರಮಾಣಾಶ್ಚ. ೮ ತೇಜಸ್ವಿನಃ. ೯ ಆರೋಪ್ಯಾಃ. ೧೦ ವಿನಶ್ವರೇಣ. ೧೧ ಆಕ್ರಮಣೀಯೈಃ. ೧೨ ಹರ್ತುಂ ಯೋಗ್ಯೈಃ.

ಯಿಂದ ಕಟ್ಟಿಗೆಯಂತೆ ಲೋಭರೂಪವಾದ ಬೆಂಕಿಯಿಂದ ವೃದ್ಧಿಯನ್ನು ಹೊಂದುವ ಈ ಧನಸಂಪತ್ತಿಗಳಿಂದೇನು ಪ್ರಯೋಜನ ?

**ಭುಕ್ತ್ವಾಪಿ ಸುಚಿರಂ ಕಾಲಂ ಯೈರ್ನ ತೃಪ್ತಿಃ [೧]ಕ್ಲಮಃ ಪರಮ್ ।**
**ವಿಷಯೈಸ್ತೈರಲಂ ಭುಕ್ತೈರ್ವಿಷಮಿಶ್ರೈರಿವಾಶನೈಃ ॥ ೧೧೭ ॥**

ಬಹುಕಾಲದವರೆಗೆ ಭೋಗಿಸಿದರೂ ಯಾವ ಪದಾರ್ಥಗಳಿಂದ ತೃಪ್ತಿಯಿಲ್ಲವೋ ಅದಕ್ಕೆ ಬದಲಾಗಿ ಗ್ಲಾನಿಯೇ ಉಂಟಾಗುವುದೋ ವಿಷಮಿಶ್ರವಾದ ಭೋಜನಗಳಂತೆ ಭೋಗಿಸಲ್ಪಟ್ಟ ಅಂತಹ ವಿಷಯಗಳು ಸಾಕು. ದುಃಖಮಿಶ್ರವಾದ ವಿಷಯಭೋಗ ಗಳನ್ನನುಭವಿಸುವುದು ಸಾಕೆಂದು ಭಾವವು.

**ಕಿಂಚ ಭೋ ವಿಷಯಾಸ್ವಾದಃ ಕೋಽಪ್ಯನಾಸ್ವಾದಿತೋಽಸ್ತಿ ವಃ ।**
**ಸ ಏವ ಪುನರಾಸ್ವಾದಃ ಕಿಂ ತೇನಾಸ್ತ್ಯಾ[೨]ಶಿತಂಭವಃ ॥ ೧೧೮ ॥**

ಅದೂ ಅಲ್ಲದೆ ನೀವುಗಳು ಮೊದಲು ಅನುಭವಿಸದಿರುವ ವಿಷಯಾಸ್ವಾದನ– ಅಭಿರುಚಿಯು ಯಾವುದಾದರೂ ಇರುವುದೋ ? ಪುನಃ ಅದೇ ರುಚಿಯಿಂದ ಮೇಲೆ ಅದರಿಂದೇನು ತೃಪ್ತಿಯುಂಟೇ ?

**[೩]ಯತ್ರ ಶಸ್ತ್ರಾಣಿ ಮಿತ್ರಾಣಿ ಶತ್ರವಃ ಪುತ್ರಬಾಂಧವಾಃ ।**
**ಕಲತ್ರಂ [೪]ಸರ್ವಭೋಗಿಣಂ ಧರಾ ರಾಜ್ಯಂ ಧಿಗೀದೃಶಮ್ ॥ ೧೧೯ ॥**

ಯಾವ ರಾಜ್ಯದಲ್ಲಿ ಶಸ್ತ್ರಗಳೇ ಮಿತ್ರರೂ ಪುತ್ರಬಾಂಧವರೇ ಶತ್ರುಗಳೂ ಪೃಥ್ವಿಯೇ ಸರ್ವರಿಗೂ ಭೋಗಯೋಗ್ಯವಾದ ಪತ್ನಿಯೂ ಆಗಿರುವುವೋ ಇಂತಹ ರಾಜ್ಯಕ್ಕೆ ಧಿಕ್ಕಾರವಿರಲಿ.

**ಭುನಕ್ತು [೫]ನೃಪಶಾರ್ದೂಲೋ ಭರತೋ ಭಾರತಾವನಿಮ್ ।**
**ಯಾವತ್ಪುಣ್ಯೋದಯಸ್ತಾವತ್ತತ್ರಾಲಂ ವೋ[೬]ತಿತಿಕ್ಷಯಾ ॥ ೧೨೦ ॥**

ರಾಜಶ್ರೇಷ್ಠನಾದ ಭರತನು ಭಾರತಭೂಮಿಯನ್ನು ಪುಣ್ಯದ ಉದಯವಿರುವ ವರೆಗೂ ಅನುಭವಿಸಲಿ. ಆ ವಿಷಯದಲ್ಲಿ ನಿಮ್ಮಗಳಿಗೆ ಅಸಮಾಧಾನವು ಬೇಡ.

**[೭]ತೇನಾಪಿ ತ್ಯಾಜ್ಯಮೇವೇದಂ ರಾಜ್ಯಂ [೮]ಭಂಗಿ [೯]ಯದಾ ತದಾ ।**
**ಹೇತೋರಶಾಶ್ವತಸ್ಯಾಸ್ಯ ಯುಧ್ಯಧ್ವೇ ಬತ ಕಿಂ ಮುಧಾ ॥ ೧೨೧ ॥**

ನಶ್ವರವಾದ ಈ ರಾಜ್ಯವು ಆ ಭರತನಿಂದಲೂ ಯಾವಾಗಲಾದರೂ ತ್ಯಜಿಸಲ್ಪಡ ತಕ್ಕುದಾಗಿಯೇ ಇರುವುದು. ನಾಶಶೀಲವಾದ ಈ ರಾಜ್ಯದ ನಿಮಿತ್ತದಿಂದ ವ್ಯರ್ಥ ವಾಗಿ ಏತಕ್ಕೆ ಜಗಳವಾಡುತ್ತೀರಿ ? ಕಷ್ಟ !

**ತದಲಂ ಸ್ಪರ್ಧಯಾ [೧೦]ದಧ್ವಂ ಯೂಯಂ ಧರ್ಮಮಹಾತರೋಃ ।**
**ದಯಾಕುಸುಮಮಮ್ಲಾನಿ ಯತ್ತನ್ಮುಕ್ತಿಫಲಪ್ರದಮ್ ॥ ೧೨೨ ॥**

ಆದುದರಿಂದ ಈ ಹೋರಾಟವು ಸಾಕು. ನೀವುಗಳು ಮುಕ್ತಿಯೆಂಬ ಫಲವನ್ನು ಕೊಡುವ ಧರ್ಮವೆಂಬ ದೊಡ್ಡಮರದ ಕಂದದಿರುವ ದಯೆಯೆಂಬ ಹೂವನ್ನು ಸ್ವೀಕರಿಸಿರಿ.

**ಪರಾರಾಧನದೈನ್ಯೋನಂ ಪರೈರಾರಾಧ್ಯಮೇವ ಯತ್ ।**
**ತದ್ವೋ ಮಹಾಭಿಮಾನಾನಾಂ ತಪೋ ಮಾನಾಭಿರಕ್ಷಣಮ್ ॥ ೧೨೩ ॥**

ಯಾವ ತಪಸ್ಸು ಬೇರೆಯವರ ಸೇವೆಮಾಡುವ ದೀನಭಾವವಿಲ್ಲದುದೂ ಬೇರೆಯವರಿಂದಲೇ ಸೇವೆಮಾಡಲ್ಪಡತಕ್ಕುದೂ ಆಗಿರುವುದೋ ಅಂತಹ ತಪಸ್ಸು ಮಹಾಭಿಮಾನಿಗಳಾದ ನಿಮ್ಮಗಳ ಮಾನವನ್ನು ರಕ್ಷಿಸತಕ್ಕುದಾಗಿದೆ.

**ದೀಕ್ಷಾ ರಕ್ಷಾ ಗುಣಾ ಭೃತ್ಯಾ ದಯೇಯಂ ಪ್ರಾಣವಲ್ಲಭಾ ।**
**ಇತಿ [೧೧]ಜ್ಯಾಯಸ್ತಪೋರಾಜ್ಯಮಿದಂ ಶ್ಲಾಘ್ಯಪರಿಚ್ಛದಮ್ ॥ ೧೨೪ ॥**

ದೀಕ್ಷೆಯು ರಕ್ಷಕವೂ ಗುಣಗಳು ಸೇವಕರೂ ಈ ದಯೆಯು ಪ್ರಾಣಪ್ರಿಯಳೂ ಆಗಿರುವ ಮತ್ತು ಹೀಗೆ ಶ್ಲಾಘ್ಯವಾದ ಪರಿವಾರವುಳ್ಳ ಈ ತಪಸ್ಸೆಂಬ ರಾಜ್ಯವು ದೊಡ್ಡದಾಗಿರುತ್ತದೆ. ಲೌಕಿಕರಾಜ್ಯಕ್ಕಿಂತಲೂ ಈ ಪಾರಲೌಕಿಕರಾಜ್ಯವು ಶ್ರೇಷ್ಠವಾದು ದೆಂದು ಭಾವವು.''

೧ ಗ್ಲಾನಿಃ. ೨ ತೃಪ್ತಿಃ. ೩ ರಾಜ್ಯೇ. ೪ ಸರ್ವೇಷಾಂ ಭೋಗೇಭ್ಯೋ ಹಿತಂ. ೫ ರಾಜಶ್ರೇಷ್ಠಃ. ೬ ಅಕ್ಷಮಯಾ. ೭ ಭರತೇನಾಪಿ. ೮ ವಿನಶ್ವರಂ. ೯ ವೈರಾಗ್ಯಕಾಲೇ. ೧೦ ಸ್ವೀಕುರುತ. ೧೧ ಶ್ರೇಷ್ಠಂ.

**ಇತ್ಯಾಕರ್ಣ್ಯ ವಿಭೋರ್ವಾಕ್ಯಂ ಪರಂ ನಿರ್ವೇಗಮಾಗತಾಃ ।**
**ಮಹಾಪ್ರಾವ್ರಾಜ್ಯ[೧]ಮಾಸ್ಥಾಯ ನಿಷ್ಕ್ರಾಂತಾಸ್ತೇ ಗೃಹಾದ್ವನಮ್ ॥೧೨೫ ॥**

ವೃಷಭಸ್ವಾಮಿಯ ಈ ಪ್ರಕಾರವಾದ ವಾಕ್ಯವನ್ನು ಕೇಳಿ ಉತ್ತಮ ವೈರಾಗ್ಯವನ್ನು ಹೊಂದಿದ ಆ ರಾಜಕುಮಾರರು ಮಹಾಪ್ರಯಾಣರೂಪವಾದ (ಪುನಃ ಹಿಂದಿರು ಗದ) ದೀಕ್ಷೆಯನ್ನು ಹೊಂದಿ ಮನೆಯಿಂದ ವನಕ್ಕೆ ಹೊರಟುಹೋದರು.

**ನಿರ್ದಿಷ್ಟಾಂ ಗುರುಣಾ ಸಾಕ್ಷಾದ್ದೀಕ್ಷಾಂ ನವವಧೂಮಿವ ।**
**ನವಾ ಇವ ವರಾಃ ಪ್ರಾಪ್ಯ ರೇಜುಸ್ತೇ ಯುವಪಾರ್ಥಿವಾಃ ॥ ೧೨೬ ॥**

ಆ ಯುವರಾಜಕುಮಾರರು ಸಾಕ್ಷಾತ್ ಪಿತೃವಾದ ವೃಷಭಸ್ವಾಮಿಯು ತೋರಿಸಿದ ದೀಕ್ಷೆಯನ್ನು ಹೊಂದಿ, ನೂತನ ವರರು ನೂತನ ವಧುವನ್ನುಪಡೆದು ಶೋಭಿಸುವಂತೆ, ಶೋಭಿಸಿದರು.

**ಯಾ ಕಚಗ್ರಹಪೂರ್ವೇಣ [೨]ಪ್ರಣಯೇನಾ[೩]ತಿಭೂಮಿಗಾ ।**
**ತಯಾ [೪]ಪಾಣಿಗೃಹೀತ್ಯೇವ ದೀಕ್ಷಯಾ ತೇ [೫]ಧೃತಿಂ ದಧುಃ ॥ ೧೨೭ ॥**

ಕೇಶಗ್ರಹಣಪೂರ್ವಕವಾದ ಸ್ನೇಹದಿಂದ ಮೇರೆ ಮೀರಿದ ಪತ್ನಿಯಿಂದ ಸಂತೋಷವನ್ನು ಹೊಂದುವಂತೆ, ಆ ರಾಜಕುಮಾರರು ಕೇಶಗ್ರಹಣ(ಉತ್ಪಾಟನ) ಪೂರ್ವಕವಾದ ಉತ್ಕೃಷ್ಟವಿಧಿಯಿಂದ ಮೇರೆ ಮೀರಿದ ಆ ದೀಕ್ಷೆಯಿಂದ ಸಂತೋಷ ವನ್ನು ಹೊಂದಿದರು.

**ತಪಸ್ತೀವ್ರಮಥಾಸಾದ್ಯ ತೇ ಚಕಾಸುರ್ನೃಪರ್ಷಯಃ ।**
**ಸ್ವತೇಜೋರುದ್ಧ[೬]ವಿಶ್ವಾಶಾ ಗ್ರೀಷ್ಮಮರ್ಕಾಂಶವೋ ಯಥಾ ॥ ೧೨೮ ॥**

ಬಳಿಕ ತಮ್ಮ ತೇಜಸ್ಸಿನಿಂದ ಸಕಲದಿಕ್ಕುಗಳನ್ನು ವ್ಯಾಪಿಸಿರುವ ಸೂರ್ಯ ಕಿರಣಗಳು ಗ್ರೀಷ್ಮಋತುವನ್ನು ಹೊಂದಿ ಪ್ರಕಾಶಿಸುವಂತೆ, ಆ ರಾಜರ್ಷಿಗಳು ಕಠಿನ ವಾದ ತಪಸ್ಸನ್ನು ಹೊಂದಿ ಪ್ರಕಾಶಿಸಿದರು.

**ತೇತಿತೀವ್ರೈಸ್ತಪೋಯೋಗೈಸ್ತನೂಭೂತಾಂ ತನುಂ ದಧುಃ ।**
**ತಪೋಲಕ್ಷ್ಮ್ಯಾ[೭]ಸಮುತ್ಕೀರ್ಣಾಮಿವ ದೀಪ್ತಾಂ ತಪೋಗುಣೈಃ ॥೧೨೯ ॥**

ಆ ರಾಜರ್ಷಿಗಳು, ತಪೋಲಕ್ಷ್ಮಿಯಿಂದ ಶಾಣೆಹಿಡಿಯಲ್ಪಟ್ಟದೆಯೋ ಎಂಬಂತೆ ತಪೋಗುಣಗಳಿಂದ ಪ್ರಕಾಶಮಾನವೂ ಕಠಿನವಾದ ತಪೋಯೋಗಗಳಿಂದ ಕೃಶವೂ ಆದ ಶರೀರವನ್ನು ಧರಿಸಿದರು. ತಪಸ್ಸಿನಿಂದ ಶರೀರವು ಕೃಶವಾಯಿತೆಂದು ಭಾವವು.

**ಸ್ಥಿತಾಃ ಸಾಮಾಯಿಕೇ [೮]ವೃತ್ತೇ [೯]ಜಿನಕಲ್ಪವಿಶೇಷಿತೇ ।**
**ತೇ ತೇಪಿರೇ ತಪಸ್ತೀವ್ರಂ ಜ್ಞಾನಶುದ್ಧ್ಯುಪಬೃಂಹಿತಮ್ ॥ ೧೩೦ ॥**

ಆ ರಾಜರ್ಷಿಗಳು ಜಿನರಿಂದ ಆಚರಿಸಲ್ಪಟ್ಟ ಚಾರಿತ್ರದಿಂದ ಹೆಚ್ಚಿಸಲ್ಪಟ್ಟ ಸಾಮಾಯಿಕವೆಂಬ ಚಾರಿತ್ರದಲ್ಲಿದ್ದು ಅಂದರೆ ಸಾಮಾಯಿಕ ಚಾರಿತ್ರವನ್ನಾಚರಿಸುತ್ತ ಜ್ಞಾನದ ಶುದ್ಧಿಯಿಂದ ವೃದ್ಧಿಹೊಂದಿಸಲ್ಪಟ್ಟ ಕಠಿನ ತಪಸ್ಸನ್ನು ಮಾಡಿದರು.

**ವೈರಾಗ್ಯಸ್ಯ ಪರಾಂ ಕೋಟಿಮಾರೂಢಾಸ್ತೇ ಯುವೇಶ್ವರಾಃ ।**
**ಸ್ವಸಾಚ್ಚಕ್ರುಸ್ತಪೋಲಕ್ಷ್ಮೀಂ ರಾಜ್ಯಲಕ್ಷ್ಮ್ಯಾಮನುತ್ಸುಕಾಃ ॥ ೧೩೧ ॥**

ರಾಜ್ಯಲಕ್ಷ್ಮಿಯಲ್ಲಿ ಆಸಕ್ತಿಯಿಲ್ಲದ ಆ ಯುವರಾಜರುಗಳು ವೈರಾಗ್ಯದ ಕೊನೆ ಯನ್ನು ಹತ್ತಿ ತಪೋಲಕ್ಷ್ಮಿಯನ್ನು ಸ್ವಾಧೀನಪಡಿಸಿಕೊಂಡರು.

೧ ಆಶ್ರಿತ್ಯ. ೨ ಪ್ರಕೃಷ್ಟನಯೇನ, ಸ್ನೇಹೇನ ಚ. ೩ ಸೀಮಾತಿಕ್ರಾಂತಾ. ೪ ಪತ್ನ್ಯಾ. ೫ ಸಂತೋಷಂ. ೬ ಸಕಲದಿಶಃ. ೭ ಶಾಣೋಲ್ಲೀಢಾಂ. ೮ ಚಾರಿತ್ರೇ. ೯ ಜಿನೈಃ ಕಲ್ಪಿತಂ ಆಚರಿತಂ ಚಾರಿತ್ರಂ ಜಿನಕಲ್ಪಂ.

**ತಪೋಲಕ್ಷ್ಮ್ಯಾ [೧]ಪರಿಷ್ವಕ್ತಾ ಮುಕ್ತಿಲಕ್ಷ್ಮ್ಯಾಂ ಕೃತಸ್ಪೃಹಾಃ ।**
**ಜ್ಞಾನಸಂಪತ್ತ್ಯಸಕ್ತಾಸ್ತೇ ರಾಜ್ಯಲಕ್ಷ್ಮೀಂ ವಿಸಸ್ಮರುಃ ॥ ೧೩೨ ॥**

ತಪೋಲಕ್ಷ್ಮಿಯಿಂದ ಆಲಿಂಗಿಸಲ್ಪಟ್ಟವರೂ ಮುಕ್ತಿಲಕ್ಷ್ಮಿಯಲ್ಲಿ ಇಚ್ಛೆಯುಳ್ಳವರೂ ಜ್ಞಾನಸಂಪತ್ತಿನಲ್ಲಿ ಆಸಕ್ತರೂ ಆದ ಆ ರಾಜರ್ಷಿಗಳು ರಾಜ್ಯಲಕ್ಷ್ಮಿಯನ್ನು ಮರೆತುಬಿಟ್ಟರು.

**ದ್ವಾದಶಾಂಗಂ ಶ್ರುತಸ್ಕಂದಮಧೀತ್ಯೈತೇ ಮಹಾಧಿಯಃ ।**
**ತಪೋಭಾವನಯಾತ್ಮಾನಮಲಂಚಕ್ರುಃ ಪ್ರಕೃಷ್ಟಯಾ ॥ ೧೩೩ ॥**

ಮಹಾಬುದ್ಧಿಶಾಲಿಗಳಾದ ಈ ರಾಜರ್ಷಿಗಳು ಮುಂದೆ ಹೇಳಲ್ಪಡುವ ಆಚಾರಾಂಗಾದಿ ದ್ವಾದಶಾಂಗ ಶ್ರುತಸ್ಕಂಧ–ಶಾಸ್ತ್ರಸಮೂಹವನ್ನು ಅಧ್ಯಯನ ಮಾಡಿ ಉತ್ಕೃಷ್ಟವಾದ ತಪೋಭಾವನೆಯಿಂದ ಆತ್ಮನನ್ನು ಅಲಂಕರಿಸಿದರು.

**ಸ್ವಾಧ್ಯಾಯೇನ ಮನೋರೋಧಸ್ತತೋಕ್ಷಾಣಾಂ ವಿನಿರ್ಜಯಃ ।**
**ಇತ್ಯಾ[೨]ಕಲಯ್ಯ ತೇ ಧೀರಾಃ ಸ್ವಾಧ್ಯಾಯೇ ಧಿಯಮಾದಧುಃ ॥ ೧೩೪ ॥**

ಧೀರರಾದ ಆ ರಾಜರ್ಷಿಗಳು ಶಾಸ್ತ್ರಾಧ್ಯಯನದಿಂದ ಮನೋನಿಗ್ರಹವೂ ಅದರಿಂದ ಇಂದ್ರಿಯಗಳ ವಿಜಯವೂ ಆಗುವುದೆಂದು ವಿಚಾರಮಾಡಿ ಶಾಸ್ತ್ರಾಧ್ಯಯನದಲ್ಲಿ ಮನಸ್ಸನ್ನಿಟ್ಟರು.

**ಆಚಾರಾಂಗೇಣ ನಿಃಶೇಷಂ [೩]ಸಾಧ್ವಾಚಾರ[೪]ಮವೇದಿಷುಃ ।**
**[೫]ಚರ್ಯಾಶುದ್ಧಿ[೬]ಮತೋ ಭೇಜು[೭]ರತಿಕ್ರಮವಿವರ್ಜಿತಾಮ್ ॥ ೧೩೫ ॥**

ಅವರು ದ್ವಾದಶಾಂಗವೇದಗಳಲ್ಲಿ ಮೊದಲನೆಯದಾದ ಆಚಾರಾಂಗವೇದದಿಂದ ಸಮಸ್ತವಾದ ಯತ್ಯಾಚಾರವನ್ನು ತಿಳಿದರು. ಆ ಯತ್ಯಾಚಾರದ ಪರಿಜ್ಞಾನದಿಂದ ಅತಿಚಾರರಹಿತವಾದ ಶುದ್ಧಚಾರಿತ್ರವನ್ನು–ಆಚಾರವನ್ನು ಹೊಂದಿದರು.

**ಜ್ಞಾತ್ವಾ [೮]ಸೂತ್ರಕೃತಂ ಸೂಕ್ತಂ ನಿಖಿಲಂ ಸೂತ್ರತೋರ್ಥತಃ ।**
**ಧರ್ಮಕ್ರಿಯಾಸಮಾಧಾನೇ ತೇ ದಧುಃ ಸೂತ್ರಧಾರತಾಮ್ ॥ ೧೩೬ ॥**

ಆ ರಾಜರ್ಷಿಗಳು ಸೂತ್ರರೂಪವಾದ ಶಬ್ದಗಳಿಂದಲೂ ಜ್ಞಾನವಿನಯಾದಿ ಅರ್ಥದಿಂದಲೂ ಯಥಾರ್ಥವಾದ ಸಂಪೂರ್ಣಸೂತ್ರಕೃತವೆಂಬ ಎರಡನೆಯ ಅಂಗ ವೇದವನ್ನು ತಿಳಿದು ಧಾರ್ಮಿಕಕ್ರಿಯೆಗಳನ್ನು ಬೋಧಿಸುವುದರಲ್ಲಿ ಸೂತ್ರಧಾರತ್ವವನ್ನು ವಹಿಸಿದರು. ಆಚಾರ್ಯಪುರುಷರಾದರೆಂದು ಭಾವವು.

**[೯]ಸ್ಥಾನಾಧ್ಯಯನ[೧೦]ಮಧ್ಯಾಯಶತೈರ್ಗಂಭೀರಮಬ್ಧಿವತ್ ।**
**ವಿಗಾಹ್ಯ ತತ್ತ್ವರತ್ನಾನಾಂ [೧೧]ಜಹ್ರುಸ್ತೇ ಭೇದಮಂಜಸಾ ॥ ೧೩೭ ॥**

ಆ ರಾಜರ್ಷಿಗಳು, ಸಮುದ್ರದಂತೆ, ಅನೇಕಪದಸಮೂಹಗಳಿಂದ ಗಂಭೀರವಾದ ಸ್ಥಾನಾಂಗವೆಂಬ ಮೂರನೆಯ ಅಂಗವೇದವನ್ನು ಪ್ರವೇಶಿಸಿ–ಅಧ್ಯಯನಮಾಡಿ ತತ್ತ್ವಗಳೆಂಬ ರತ್ನಗಳ ಭೇದವನ್ನು ಚೆನ್ನಾಗಿ ಗ್ರಹಣಮಾಡಿದರು.

**ಸಮವಾಯಾಖ್ಯಮಂಗಂ ತೇ ಸಮಧೀತ್ಯ ಸುಮೇಧಸಃ ।**
**ದ್ರವ್ಯಾದಿವಿಷಯಂ ಸಮ್ಯಕ್ ಸಮವಾಯಮಭುತ್ಸತ ॥ ೧೩೮ ॥**

ಒಳ್ಳೆಯ ಬುದ್ಧಿಶಾಲಿಗಳಾದ ಆ ರಾಜರ್ಷಿಗಳು ಸಮವಾಯವೆಂಬ ನಾಲ್ಕನೆಯ ಅಂಗವೇದವನ್ನು ಅಧ್ಯಯನಮಾಡಿ ಜೀವಾಜೀವಾದಿ ದ್ರವ್ಯವಿಷಯ ಸಮುದಾಯವನ್ನು ಚೆನ್ನಾಗಿ ತಿಳಿದರು.

**ಸ್ವಭ್ಯಸ್ತಾತ್ಪಂಚಮಾದಂಗಾದ್ವ್ಯಾಖ್ಯಾಪ್ರಜ್ಞಪ್ತಿಸಂಜ್ಞಿತಾತ್ ।**
**ಸಾಧ್ವ[೧೨]ವಾದೀಧರನ್ ಧೀರಾಃ ಪ್ರಶ್ನಾರ್ಥಾನ್ ವಿವಿಧಾನಮೀ ॥**

೧ ಆಲಿಂಗಿತಾಃ. ೨ ವಿಚಾರ್ಯ. ೩ ಯತ್ಯಾಚಾರಂ. ೪ ಜ್ಞಾತವಂತಃ. ೫ ಚರಿತ್ರಶುದ್ಧಿಂ. ೬ ಆಚಾರಾಂಗಪರಿಜ್ಞಾನಾತ್. ೭ ಅತಿಚಾರ. ೮ ಸೂತ್ರಕೃತಾಂಗಂ. ೯ ಸ್ಥಾನಾಂಗಂ. ೧೦ ಪದಸಮೂಹೈಃ. ೧೧ ಸ್ವೀಕುರ್ವಂತಿ ಸ್ಮ. ೧೨ ಅವಧಾರಯಂತಿ ಸ್ಮ.

ಧೀರರಾದ ಈ ರಾಜರ್ಷಿಗಳು ಚೆನ್ನಾಗಿ ಅಭ್ಯಾಸಮಾಡಲ್ಪಟ್ಟ ವ್ಯಾಖ್ಯಾಪ್ರಜ್ಞಪ್ತಿಯೆಂಬ ಐದನೆಯ ಅಂಗವೇದದಿಂದ ನಾನಾವಿಧವಾದ ಪ್ರಶ್ನಾರ್ಥಗಳನ್ನು ಚೆನ್ನಾಗಿ ತಿಳಿದುಕೊಂಡರು.

**ಜ್ಞಾತೃಧರ್ಮಕಥಾಂ ಸಮ್ಯಕ್ ಬುಧ್ವಾ [೧]ಬೋಧ್ಯೂನಬೋಧಯನ್ ।**
**ಧರ್ಮ್ಯಾಂ ಕಥಾಮಸಮ್ಮೋಹಾತ್ತೇ ಯಥೋಕ್ತಂ [೨]ಮಹರ್ಷಿಣಾ ॥**

ಆ ರಾಜರ್ಷಿಗಳು ಜ್ಞಾತೃಧರ್ಮಕಥೆಯೆಂಬ ಆರನೆಯ ಅಂಗವೇದವನ್ನು ಚೆನ್ನಾಗಿ ತಿಳಿದು ತಪ್ಪಿಲ್ಲದೆ ವೃಷಭಸ್ವಾಮಿಯಿಂದ ಉಪದೇಶಿಸಲ್ಪಟ್ಟಂತೆಯೇ ಧರ್ಮಸಂಬಂಧವಾದ ಕಥೆಯನ್ನು ತಿಳಿಯಬೇಕೆಂಬ ಇಚ್ಛೆಯುಳ್ಳವರಿಗೆ ಅದನ್ನು ಬೋಧಿಸಿದರು.

**ತೇಧೀತ್ಯೋಪಾಸಕಾಧ್ಯಾಯಮಂಗಂ ಸಪ್ತಮಮೂರ್ಜಿತಮ್ ।**
**ನಿಖಿಲಂ ಶ್ರಾವಕಾಚಾರಂ ಶ್ರೋತೃಭ್ಯಃ ಸಮುಪಾದಿಶನ್ ॥ ೧೪೧ ॥**

ಆ ರಾಜರ್ಷಿಗಳು ಶ್ರೇಷ್ಠವಾದ ಉಪಾಸಕಾಧ್ಯಾಯವೆಂಬ ಏಳನೆಯ ಅಂಗ ವೇದವನ್ನು ಅಧ್ಯಯನಮಾಡಿ ಶ್ರೋತೃಗಳಿಗೆ ಸಮಸ್ತ ಶ್ರಾವಕ–ಗೃಹಸ್ಥರ ಆಚಾರವನ್ನು ಉಪದೇಶಿಸಿದರು.

**ತಥಾಂತಕೃದ್ದಶಾದಂಗಾನ್ಮುನೀ[೩]ನಂತಕೃತೋ [೪]ದಶ ।**
**[೫]ತೀರ್ಥಂ ಪ್ರತಿವಿದಾಮಾಸುಃ ಸೋಢಾಸಹ್ಯೋಪಸರ್ಗಕಾನ್ ॥ ೧೪೨ ॥**

ಹಾಗೆಯೇ ಅಂತಕೃದ್ದಶವೆಂಬ ಎಂಟನೆಯ ಅಂಗವೇದದಿಂದ ಪ್ರತಿಯೊಬ್ಬ ತೀರ್ಥಂಕರರ ಕಾಲದಲ್ಲಿ ಸಹಿಸಲಶಕ್ಯವಾದ ಉಪಸರ್ಗಗಳನ್ನು ಸಹಿಸಿದವರೂ ಸಂಸಾರಬಂಧನವನ್ನು ದೂರಮಾಡಿದವರೂ ಆದ ಹತ್ತುವಿಧವಾದ ಮುನಿಗಳನ್ನು (ಅವರ ವಿಷಯಗಳನ್ನು) ತಿಳಿದರು.

**[೬]ಅನುತ್ತರವಿಮಾನೋಪಪಾದಿಕಾನ್ ದಶ ತಾದೃಶಾನ್ ।**
**[೭]ಶಮಿನೋ ನವಮಾದಂಗಾದ್ವಿದಾಂಚಕ್ರುರ್ವಿದಾಂವರಾಃ ॥ ೧೪೩ ॥**

ಜ್ಞಾನಿಗಳಲ್ಲಿ ಶ್ರೇಷ್ಠರಾದ ಆ ರಾಜರ್ಷಿಗಳು ಅನುತ್ತರೌಪಪಾದಿಕದಶವೆಂಬ ಒಂಬತ್ತನೆಯ ಅಂಗವೇದದಿಂದ ವಿಜಯ ವೈಜಯಂತ ಜಯಂತ ಅಪರಾಜಿತ ಸರ್ವಾರ್ಥಸಿದ್ಧಿಗಳೆಂಬ ಐದು ಅನುತ್ತರಸ್ವರ್ಗವಿಮಾನಗಳಲ್ಲಿ ಜನಿಸಿ ಬಂದವರೂ ಉಪಶಮಶ್ರೇಣಿಯನ್ನು ಹತ್ತುವವರೂ ಆದ ಹಿಂದೆ ಹೇಳಿದಂತಹ ಹತ್ತು ವಿಧವಾದ ಮುನಿಗಳನ್ನು–ಅವರ ವಿಷಯಗಳನ್ನು ತಿಳಿದರು.

**ಪ್ರಶ್ನವ್ಯಾಕರಣಾತ್ಪ್ರಶ್ನಮುಪಾದಾಯ ಶರೀರಿಣಾಮ್ ।**
**ಸುಖದುಃಖಾದಿಸಂಪ್ರಾಪ್ತಿಂ ವ್ಯಾಚಕ್ರುಸ್ತೇ ಸಮಾಹಿತಾಃ ॥ ೧೪೪ ॥**

ಸಮಾಧಾನಮನಸ್ಸಿನವರಾದ ಆ ರಾಜರ್ಷಿಗಳು ಪ್ರಶ್ನವ್ಯಾಕರಣವೆಂಬ ಹತ್ತನೆಯ ಅಂಗವೇದದಿಂದ ಪ್ರಾಣಿಗಳ ಪ್ರಶ್ನೆಯನ್ನು ಗ್ರಹಣಮಾಡಿಕೊಂಡು ಅವುಗಳ ಸುಖ ದುಃಖ ಮೊದಲಾದುವುಗಳ ಪ್ರಾಪ್ತಿಯನ್ನು ಸ್ಪಷ್ಟವಾಗಿ ವಿವರಿಸಿದರು.

**ವಿಪಾಕಸೂತ್ರಾ[೮]ನ್ನಿರ್ಜ್ಞಾತಸದಸತ್ಕರ್ಮ[೯]ಪಕ್ತಯಃ ।**
**[೧೦]ಬದ್ಧಕಕ್ಷ್ಯಾಸ್ತದುಚ್ಛಿತ್ತೌ ತಪಶ್ಚಕ್ರುರತಂದ್ರಿತಾಃ ॥ ೧೪೫ ॥**

ಆ ರಾಜರ್ಷಿಗಳು ವಿಪಾಕಸೂತ್ರವೆಂಬ ಹನ್ನೊಂದನೆಯ ಅಂಗವೇದಜ್ಞಾನದಿಂದ ಪುಣ್ಯಪಾಪಕರ್ಮಗಳ ಪರಿಣತಿಯನ್ನು ತಿಳಿದವರೂ ಆ ಪುಣ್ಯಪಾಪಕರ್ಮಗಳ ನಾಶದಲ್ಲಿ ಪ್ರತಿಜ್ಞೆಯನ್ನು ಮಾಡಿದವರೂ ಆಲಸ್ಯರಹಿತರೂ ಆಗಿ ತಪಸ್ಸನ್ನು ಮಾಡಿದರು.

೧ ಬೋದ್ಧುಮಿಚ್ಛತಃ. ೨ ಆದಿಬ್ರಹ್ಮಣಾ. ೩ ಸಂಸಾರವಿನಾಶಕಾರಿಣಃ. ೪ ದಶಪ್ರಕಾರಾನ್. ೫ ತೀರ್ಥಂಕರಪ್ರವರ್ತನಾಕಾಲಮುದ್ದಿಶ್ಯ. ೬ ಪಂಚಾಣುತ್ತರವಿಮಾನಗಾನ್. ೭ ಉಪಶಮಶ್ರೇಣ್ಯಾರೂಢಾನ್. ೮ ಸಮ್ಯಕ್ ಜ್ಞಾತ. ೯ ಪರಿಣತಿ. ೧೦ ಕೃತಪ್ರತಿಜ್ಞಾಃ.

**ದೃಷ್ಟಿವಾದೇನ ನಿರ್ಜ್ಞಾತ[೧]ದೃಷ್ಟಿಭೇದಾ ಜಿನಾಗಮೇ ।**
**ತೇ ತೇನುಃ ಪರಮಾಂ ಭಕ್ತಿಂ ಪರಂ ಸಂವೇಗಮಾಶ್ರಿತಾಃ ॥ ೧೪೬ ॥**

ದೃಷ್ಟಿವಾದವೆಂಬ ಹನ್ನೆರಡನೆಯ ಅಂಗವೇದಜ್ಞಾನದಿಂದ ಸಮ್ಯಗ್ದರ್ಶನದ ಭೇದಗಳನ್ನು ಚೆನ್ನಾಗಿ ತಿಳಿದವರೂ ಧರ್ಮದಲ್ಲಿಯೂ ಧರ್ಮಫಲದಲ್ಲಿಯೂ ಪ್ರೀತಿರೂಪವಾದ ಉತ್ಕೃಷ್ಟ ಸಂವೇಗವನ್ನು ಹೊಂದಿದವರೂ ಆದ ಆ ರಾಜರ್ಷಿಗಳು ಜಿನಾಗಮದಲ್ಲಿ ಉತ್ಕೃಷ್ಟವಾದ ಭಕ್ತಿಯನ್ನು ಮಾಡಿದರು.

**ತದಂತರ್ಗತನಿಃಶೇಷಶ್ರುತತತ್ತ್ವಾವಧಾರಿಣಃ ।**
**ಚತುರ್ದಶಮಹಾವಿದ್ಯಾಸ್ಥಾನಾನ್ಯಧ್ಯೈಷತ ಕ್ರಮಾತ್ ॥ ೧೪೭ ॥**

ದ್ವಾದಶಾಂಗವೇದಗಳೊಳಗಿನ ಸಮಸ್ತ ಶಾಸ್ತ್ರರಹಸ್ಯವನ್ನು ತಿಳಿದ ಆ ರಾಜರ್ಷಿಗಳು ಕ್ರಮದಿಂದ ಉತ್ಪಾದಪೂರ್ವ ಆಗ್ರಾಯಣೀಪೂರ್ವ ವೀರ್ಯಾನುವಾದ ಅಸ್ತಿನಾಸ್ತಿಪ್ರವಾದ ಜ್ಞಾನಪ್ರವಾದ ಸತ್ಯಪ್ರವಾದ ಆತ್ಮಪ್ರವಾದ ಕರ್ಮಪ್ರವಾದ ಪ್ರತ್ಯಾಖ್ಯಾನಪೂರ್ವ ವಿದ್ಯಾನುವಾದ ಕಲ್ಯಾಣವಾದ ಪ್ರಾಣವಾದ ಕ್ರಿಯಾವಿಶಾಲ ತ್ರಿಲೋಕಬಿಂದುಸಾರಗಳೆಂಬ ಹದಿನಾಲ್ಕು ಮಹಾವಿದ್ಯೆಗಳನ್ನು ಅಧ್ಯಯನಮಾಡಿದರು.

**ತತೋಮೀ ಶ್ರುತನಿಃಶೇಷಶ್ರುತಾರ್ಥಾಃ ಶ್ರುತಚಕ್ಷುಷಃ ।**
**ಶ್ರುತಾರ್ಥಭಾವನೋತ್ಕರ್ಷಾ ದಧುಃ ಶುದ್ಧಿಂ ತಪೋವಿಧೌ ॥ ೧೪೮ ॥**

ಬಳಿಕ ಸಮಸ್ತ ಶಾಸ್ತ್ರಾರ್ಥಗಳನ್ನು ಶ್ರವಣಮಾಡಿದವರೂ ಶಾಸ್ತ್ರಗಳೆಂಬ ನೇತ್ರಗಳುಳ್ಳವರೂ ಆದ ಈ ರಾಜರ್ಷಿಗಳು ಶಾಸ್ತ್ರಾರ್ಥಗಳ ಭಾವನೆಯ ಆಧಿಕ್ಯದಿಂದ ತಪೋವಿಧಿಯಲ್ಲಿ ಶುದ್ಧಿಯನ್ನು ಹೊಂದಿದರು. ನಿರ್ದೋಷವಾದ ತಪಸ್ಸನ್ನು ಹೊಂದಿದರೆಂದು ಭಾವವು.

**ವಾಗ್ದೇವ್ಯಾ ಸಮಮಾಲಾಪೋ ಮಯಾ ಮೌನಮನಾರತಮ್ ।**
**ಇತೀರ್ಷ್ಯಂತೀವ ಸಂತಾಪಂ ವ್ಯಧತ್ತೈಷು ತಪಃಕ್ರಿಯಾ ॥ ೧೪೯ ॥**

''ವಾಗ್ದೇವಿಯೊಡನೆ ಸಂಭಾಷಣ, ನನ್ನೊಡನೆ(ತಪಃಕ್ರಿಯೆಯೊಡನೆ) ಯಾವಾಗಲೂ ಮೌನ'' ಎಂಬುದಾಗಿ ಹೊಟ್ಟೆಗಿಚ್ಚುಮಾಡುತ್ತದೆಯೋ ಎಂಬಂತೆ ತಪಸ್ಸಿನ ಕಾರ್ಯವು ಈ ರಾಜರ್ಷಿಗಳಲ್ಲಿ ಕೋಪವನ್ನು ಮಾಡಿತು. ಮೌನವಿಧಿಯಿಂದ ಕಠಿನತಪಸ್ಸನ್ನಾಚರಿಸಿದರೆಂದು ಭಾವವು.

**ತನುತಾಪಮಸಹ್ಯಂ ತೇ ಸಹಮಾನಾ ಮನಸ್ವಿನಃ ।**
**ಬಾಹ್ಯಮಾಧ್ಯಾತ್ಮಿಕಂ ಚೋಗ್ರಂ ತಪಃ ಸುಚಿರಮಾಚರನ್ ॥ ೧೫೦ ॥**

ಅಸಹ್ಯವಾದ ಶರೀರಸಂತಾಪವನ್ನು ಸಹಿಸುವವರೂ ಧೀರರೂ ಆದ ಆ ರಾಜರ್ಷಿಗಳು ಉಪವಾಸ ಮೊದಲಾದ ಕಠಿನ ಬಾಹ್ಯತಪಸ್ಸನ್ನೂ ಪ್ರಾಯಶ್ಚಿತ್ತ ಮೊದಲಾದ ಕಠಿನ ಅಭ್ಯಂತರ ತಪಸ್ಸನ್ನೂ ಬಹುಕಾಲದವರೆಗೆ ಆಚರಿಸಿದರು.

**ಗ್ರೀಷ್ಮೇರ್ಕಕರಸಂತಾಪಂ ಸಹಮಾನಾಃ ಸುದುಃಸಹಮ್ ।**
**ತೇ ಭೇಜು[೨]ರಾತಪಸ್ಥಾನಮಾರೂಢಗಿರಿಮಸ್ತಕಾಃ ॥ ೧೫೧ ॥**

ಗ್ರೀಷ್ಮಋತುವಿನಲ್ಲಿ ಅತ್ಯಂತದುಃಸಹವಾದ ಸೂರ್ಯಕಿರಣಗಳ ಸಂತಾಪವನ್ನು ಸಹಿಸುವವರೂ ಪರ್ವತಶಿಖರವನ್ನು ಹತ್ತಿದವರೂ ಆದ ಆ ರಾಜರ್ಷಿಗಳು ಬಿಸಿಲಿನಲ್ಲಿ ನಿಂತು ಧ್ಯಾನಮಾಡುವುದೆಂಬ ಸೂರ್ಯಪ್ರತಿಮಾಯೋಗ ತಪಸ್ಸನ್ನು ಹೊಂದಿದರು.

**ಶಿಲಾತಲೇಷು ತಪ್ತೇಷು ನಿವೇಶಿತಪದದ್ವಯಾಃ ।**
**ಪ್ರಲಂಬಿತಭುಜಾಸ್ತಸ್ಥು[೩]ರ್ಗಿರ್ಯಗ್ರಗ್ರಾವಗೋಚರೇ ॥ ೧೫೨ ॥**

೧ ದರ್ಶನಭೇದಾಃ. ೨ ಆತಪಯೋಗಂ, ಸೂರ್ಯಪ್ರತಿಮಾಯೋಗಂ. ೩ ಪರ್ವತ ಶಿಖರ ಪಾಷಾಣ ಪ್ರದೇಶೇ.

ಪರ್ವತಶಿಖರದಲ್ಲಿಯ ಶಿಲಾಪ್ರದೇಶದಲ್ಲಿ ಕಾದಿರುವ ಕಲ್ಲುಗಳಲ್ಲಿ ಎರಡು ಕಾಲುಗಳನ್ನಿಟ್ಟು ಕೈಗಳನ್ನು ಜೋಲುಬಿಟ್ಟು ತಪಸ್ಸಿಗೆ ನಿಂತರು.

**ತಪ್ತಪಾಂಸುಚಿತಾ ಭೂಮಿರ್ದಾವದಗ್ಧಾ ವನಸ್ಥಲೀ ।**
**ಯಾತಾ ಜಲಾಶಯಾಃ ಶೋಷಂ ದಿಶೋ ಧೂಮಾಂಧಕಾರಿತಾಃ ॥**

ಭೂಮಿಯು ಬಿಸಿಲಿನಿಂದ ಕಾದಿರುವ ಧೂಳಿನಿಂದ ವ್ಯಾಪ್ತವಾಗಿದೆ. ಅರಣ್ಯಪ್ರದೇಶವು ಕಾಡ್ಗಿಚ್ಚಿನಿಂದ ಸುಟ್ಟುಹೋಗಿದೆ. ಕೆರೆಗಳು ಬತ್ತಿಹೋಗಿವೆ. ದಿಕ್ಕುಗಳು ಹೊಗೆಯಿಂದ ಕತ್ತಲೆಯಾಗಿ ಮಾಡಲ್ಪಟ್ಟಿವೆ.

**ಇತ್ಯತ್ಯುಗ್ರತರೇ ಗ್ರೀಷ್ಮೇ [೧]ಸಂಪ್ಲುಷ್ಟಗಿರಿಕಾನನೇ ।**
**ತಸ್ಥುರಾತಪಯೋಗೇನ ತೇ ಸೋಢ[೨]ಜರಠಾತಪಾಃ ॥ ೧೫೪ ॥**

ಈ ರೀತಿಯಾಗಿ ಅತ್ಯಂತ ಭಯಂಕರವೂ ಪರ್ವತಗಳನ್ನೂ ಅರಣ್ಯಗಳನ್ನೂ ದಹಿಸಿರುವುದೂ ಆದ ಬೇಸಿಗೆಯಲ್ಲಿ ತೀವ್ರವಾದ ಬಿಸಿಲನ್ನು ಸಹಿಸಿದ ಆ ರಾಜರ್ಷಿಗಳು ಸೂರ್ಯಪ್ರತಿಮಾಯೋಗದಲ್ಲಿ ನಿಂತರು.

**ಮೇಘಾಂಧಕಾರಿತಾಶೇಷದಿಕ್ಚಕ್ರೇ ಜಲದಾಗಮೇ ।**
**ಯೋಗಿನೋ ಗಮಯಂತಿ ಸ್ಮ ತರುಮೂಲೇಷು ಶರ್ವರೀಃ ॥ ೧೫೫ ॥**

ಮೇಘದಿಂದ ಸಮಸ್ತದಿಕ್ಕುಗಳನ್ನೂ ಕತ್ತಲೆಯಾಗಿ ಮಾಡಿರುವ ವರ್ಷಋತುವಿನಲ್ಲಿ ಆ ಯೋಗಿಗಳು ಮರದ ಬುಡಗಳಲ್ಲಿ ರಾತ್ರಿಗಳನ್ನು ಕಳೆದರು. ವರ್ಷಋತುವಿನ ರಾತ್ರಿಗಳಲ್ಲಿ ಮರದ ಬುಡಗಳಲ್ಲಿ ನಿಂತು ತಪಸ್ಸನ್ನು ಮಾಡಿದರೆಂದು ಭಾವವು.

**ಮುಸಲಸ್ಥೂಲಧಾರಾಭಿರ್ವರ್ಷತ್ಸು [೩]ಜಲವಾಹಿಷು ।**
**[೪]ನಿಶಾ[೫] ಮನ್ಯೈಷು[೬]ರವ್ಯಥ್ಯಾ [೭]ವಾರ್ಷಿಕೀಂ ತೇ ಮಹರ್ಷಯಃ॥ ೧೫೬ ॥**

ಆ ಮಹರ್ಷಿಗಳು ಒನಕೆಯಂತೆ ದಪ್ಪವಾದ ಧಾರೆಗಳಿಂದ ಮೇಘಗಳು ಮಳೆಯನ್ನು ಸುರಿಯುತ್ತಿರಲು ನಿಶ್ಚಲರೂ ನಿರ್ಭಯರೂ ಆಗಿ ವರ್ಷಋತು ಸಂಬಂಧವಾದ ರಾತ್ರಿಯನ್ನು ಕಳೆದರು.

**ಧ್ಯಾನಗರ್ಭಗೃಹಾಂತಸ್ಥಾ [೮]ಧೃತಿಪ್ರಾವಾರಸಂವೃತಾಃ ।**
**ಸಹಂತೇ ಸ್ಮ ಮಹಾಸತ್ತ್ವಾಸ್ತೇ [೯]ಘನಾಘನದುರ್ದಿನಮ್ ॥ ೧೫೭ ॥**

ಧ್ಯಾನವೆಂಬ ಗರ್ಭಗೃಹದ ಮಧ್ಯದಲ್ಲಿರುವವರೂ ಧೈರ್ಯವೆಂಬ ಕಂಬಳಿಯನ್ನು ಹೊದೆದಿರುವವರೂ ಮಹಾಸತ್ತ್ವಗುಣಸಂಪನ್ನರೂ ಆದ ಆ ರಾಜರ್ಷಿಗಳು ಮೇಘವ್ಯಾಪ್ತವಾದ ದುರ್ದಿನವನ್ನು ಸಹಿಸಿದರು.

**ತೇ [೧೦]ಹಿಮಾನೀಪರಿಕ್ಲಿಷ್ಟಾಂ ತನುಯಷ್ಟಿಂ ಹಿಮಾಗಮೇ ।**
**ದಧು[೧೧]ರಭ್ರಾವಕಾಶೇಷು ಶಯಾನಾ ಮೌನಮಾಸ್ಥಿತಾಃ ॥ ೧೫೮ ॥**

ಹೇಮಂತಋತುವಿನಲ್ಲಿ ಮರ ಬಳ್ಳಿ ಪೊದರು ಗುಹೆ ಮೊದಲಾದುವುಗಳಿಲ್ಲದುವೂ ಪ್ರಬಲವಾದ ಗಾಳಿಯುಳ್ಳುವೂ ಆದ ಪ್ರದೇಶಗಳಲ್ಲಿ ಮಲಗುವವರೂ ಮೌನವಾಗಿರುವವರೂ ಆದ ಆ ರಾಜರ್ಷಿಗಳು ಹಿಮದ ರಾಶಿಯಿಂದ ಬಾಧಿಸಲ್ಪಟ್ಟ ಶರೀರವನ್ನು ಧರಿಸಿದರು. ಹಿಮದ ರಾಶಿಯಿಂದ ಬಾಧಿತವಾದ ಶರೀರವುಳ್ಳವರಾದರೆಂದು ಭಾವವು.

**[೧೨]ಅನಗ್ನಮುಷಿತಾ ಏವ ನಗ್ನಾಸ್ತೇನಗ್ನಿಸೇವಿನಃ ।**
**[೧೩]ಧೃತಿಸಂವರ್ಮಿತೈರಂಗೈಃ [೧೪]ಸೇಹಿರೇ ಹಿಮಮಾರುತಾನ್ ॥ ೧೫೯ ॥**

೧ ಸಂದಗ್ಧ. ೨ ಪ್ರವೃದ್ಧಾತಪಾಃ, ತೀವ್ರಾತಪಾ ಇತ್ಯರ್ಥಃ. ೩ ಮೇಘೇಷು. ೪ ರಾತ್ರಿಂ. ೫ ನಯಂತಿ ಸ್ಮ. ೬ ನಿಶ್ಚಲಾ ನಿರ್ಭಯಾಶ್ಚ. ೭ ವರ್ಷಾಕಾಲಸಂಬಂಧಿನೀಂ. ೮ ಧೈರ್ಯಕಂಬಲ ಪರಿವೇಷ್ಟಿತಾಃ. ೯ ಮೇಘ. ೧೦ ಹಿಮಸಂಹತಿಃ. ೧೧ ತರುಲತಾಗುಲ್ಮ ಗುಹಾದಿರಹಿತಪ್ರಬಲವಾಯು ಸಹಿತ ಪ್ರದೇಶೇಷು. ೧೨ ಅನಗ್ನಂ ಯಥಾ ಭವತಿ ತಥಾ, ಸಾವರಣಮಿವೇತ್ಯರ್ಥಃ. ೧೩ ಧೈರ್ಯಕವಚಿತೈಃ. ೧೪ ಸಹಂತೇ ಸ್ಮ.

ಬೆತ್ತಲೆಯಾಗಿಲ್ಲದಿರುವಂತೆ ವಾಸಮಾಡುವವರಾಗಿಯೇ ಬೆತ್ತಲೆಯಾಗಿರುವವರೂ ಬೆಂಕಿಯನ್ನು ಉಪಯೋಗಿಸದಿರುವವರೂ ಆದ ಆ ರಾಜರ್ಷಿಗಳು ಧೈರ್ಯವೆಂಬ ಕವಚವು ತೊಡಿಸಲ್ಪಟ್ಟ ಶರೀರಗಳಿಂದ ಹಿಮವನ್ನೂ ಗಾಳಿಯನ್ನೂ ಸಹಿಸಿದರು.

**[1]ಹೈಮನೀಷು ತ್ರಿಯಾಮಾಸು ಸ್ಥಗಿತಾಸ್ತೇ ಹಿಮೋಚ್ಚಯೈಃ ।**
**ಪ್ರಾವಾರಿತೈರಿವಾಂಗೈಃ ಸ್ವೈರ್ಧೀರಾಃ ಸ್ವೈರಮಶೇರತ ॥ ೧೬೦ ॥**

ಹೇಮಂತಋತುಸಂಬಂಧವಾದ ರಾತ್ರಿಗಳಲ್ಲಿ ಹಿಮದ ರಾಶಿಗಳಿಂದ ವ್ಯಾಪ್ತರೂ ಧೀರರೂ ಆದ ಆ ರಾಜರ್ಷಿಗಳು, ಹೊದಿಸಲ್ಪಟ್ಟಿವೆಯೋ ಎಂಬಂತಿರುವ ತಮ್ಮ ಶರೀರಗಳಿಂದ ಸ್ವೇಚ್ಛೆಯಾಗಿ ಮಲಗಿದರು.

**ತ್ರಿಕಾಲವಿಷಯಂ ಯೋಗ[2]ಮಾಸ್ಥಾಯೈವಂ ದುರುದ್ವಹಮ್ ।**
**ಸುಚಿರಂ ಧಾರಯಂತಿ ಸ್ಮ ಧೀರಾಸ್ತೇ ಧೃತಿಯೋಗತಃ ॥ ೧೬೧ ॥**

ಧೀರರಾದ ಆ ರಾಜರ್ಷಿಗಳು ಧೈರ್ಯದಿಂದ ಮೇಲೆ ಹೇಳಿದಂತೆ ಧರಿಸುವುದಕ್ಕೆ ಕಷ್ಟವೂ ಗ್ರೀಷ್ಮಋತು ವರ್ಷಋತು ಹೇಮಂತಋತು ಈ ತ್ರಿಕಾಲಸಂಬಂಧಿಯೂ ಆದ ಯೋಗವನ್ನು ಪ್ರತಿಜ್ಞೆಮಾಡಿ ಬಹುಕಾಲದವರೆಗೆ ಧರಿಸಿದರು.

**ದಧಾನಾಸ್ತೇ ತಪಸ್ತಾಪಮಂತರ್ದೀಪ್ತಂ ದುರಾಸದಮ್ ।**
**ರೇಜುಸ್ತರಂಗಿತೈರಂಗೈಃ ಪ್ರಾಯೋ[3]ನುಕೃತವಾರ್ಧಯಃ ॥ ೧೬೨ ॥**

ಹೊಂದುವುದಕ್ಕೆ ಕಠಿನವೂ ಒಳಗೆ ದೇದೀಪ್ಯಮಾನವೂ ಆದ ತಪಸ್ಸಿನ ತಾಪವನ್ನು ಧರಿಸಿದ ಆ ರಾಜರ್ಷಿಗಳು ಬಹಳಮಟ್ಟಿಗೆ ಸಮುದ್ರದ ಹೋಲಿಕೆಯುಳ್ಳವರಾಗಿ ತಪಸ್ಸಿನ ತೇಜಸ್ಸಿನಿಂದ ಅಲೆಗಳುಂಟಾದಂತಿರುವ ಶರೀರಗಳಿಂದ ಪ್ರಕಾಶಿಸುತ್ತಿದ್ದರು.

**ತೇ ಸ್ವಭುಕ್ತೋಜ್ಝಿತಂ ಭೂಯೋ ನೈಚ್ಛನ್ಭೋಗಪರಿಚ್ಛದಮ್ ।**
**ನಿರ್ಭುಕ್ತಮಾಲ್ಯನಿಸ್ಸಾರಂ ಮನ್ಯಮಾನಾ ಮನೀಷಿಣಃ ॥ ೧೬೩ ॥**

ಬುದ್ಧಿಶಾಲಿಗಳಾದ ಆ ರಾಜರ್ಷಿಗಳು ತಾವು ಅನುಭವಿಸಿ ಬಿಟ್ಟ ಭೋಗ ಸಾಮಗ್ರಿಯನ್ನು, ಮುಡಿದು ಬಿಸುಟ ಹೂವಿನ ಮಾಲೆಯಂತೆ, ನಿಸ್ಸಾರವನ್ನಾಗಿ ತಿಳಿಯುವವರಾಗಿ ಪುನಃ ಅದನ್ನು ಬಯಸಲಿಲ್ಲ.

**ಫೇನೋರ್ಮಿಹಿಮಸಂಧ್ಯಾಭ್ರಚಲಂ ಜೀವಿತಮಂಗಿನಾಮ್ ।**
**ಮನ್ವಾನಾ ದೃಢಮಾಸಕ್ತಿಂ ಭೇಜುಸ್ತೇ ಪಥಿ ಶಾಶ್ವತೇ ॥ ೧೬೪ ॥**

ಪ್ರಾಣಿಗಳ ಬಾಳುವಿಕೆಯು ನೊರೆಯಂತೆಯೂ ಅಲೆಯಂತೆಯೂ ಮಂಜಿನಂತೆಯೂ ಸಂಧ್ಯಾಕಾಲದ ಮೇಘದಂತೆಯೂ ಚಂಚಲವಾದುದೆಂದು ತಿಳಿಯುವವರಾದ ಆ ರಾಜರ್ಷಿಗಳು ಶಾಶ್ವತವಾದ ಮುಕ್ತಿಮಾರ್ಗದಲ್ಲಿ ದೃಢವಾದ ಆಸಕ್ತಿಯನ್ನು ಹೊಂದಿದರು.

**ಸಂಸಾರಾವಾಸನಿರ್ವಿಣ್ಣಾ ಗೃಹಾವಾಸಾದ್ವಿನಿರ್ಗತಾಃ ।**
**ಜೈನೇ ಮಾರ್ಗೇ ವಿಮುಕ್ತ್ಯಂಗೇ ತೇ ಪರಾಂ ಧೃತಿಮಾದಧುಃ ॥ ೧೬೫ ॥**

ಸಂಸಾರದ ವಾಸದಲ್ಲಿ ವಿರಕ್ತಿಯುಳ್ಳವರೂ ಮನೆಯ ವಾಸದಿಂದ ಹೊರಟವರೂ ಆದ ಆ ರಾಜರ್ಷಿಗಳು ಮುಕ್ತಿಗೆ ಸಾಧನವಾದ ಜೈನಮಾರ್ಗದಲ್ಲಿ ಉತ್ಕೃಷ್ಟವಾದ ಪ್ರೀತಿಯನ್ನಿಟ್ಟರು.

**[4]ಇತೋನ್ಯ[5]ದುತ್ತರಂ ನಾಸ್ತೀತ್ಯಾರೂಢದೃಢಭಾವನಾಃ ।**
**ತೇಮೀ ಮನೋವಚಃಕಾಯೈಃ ಶ್ರದ್ಧಧುರ್ಗುರುಶಾಸನಮ್ ॥ ೧೬೬ ॥**

೧ ಹೇಮಂತಸಂಬಂಧಿನೀಷು. ೨ ಪ್ರತಿಜ್ಞಾಂ ಕೃತ್ವಾ. ೩ ಅನುಕೃತಸಮುದ್ರಾಃ. ೪ ಗುರುಶಾಸನಾತ್. ೫ ಅಧಿಕಂ.

ಈ ಗುರುವಿನ–ವೃಷಭಸ್ವಾಮಿಯ ಉಪದೇಶಕ್ಕಿಂತ ಬೇರೆ ಹೆಚ್ಚಿನದು ಇಲ್ಲವೆಂದು ದೃಢವಾದ ಭಾವನೆಯುಳ್ಳವರಾದ ಈ ಪ್ರಸಿದ್ಧ ರಾಜರ್ಷಿಗಳು ಮನೋವಾಕ್ಕಾಯಗಳಿಂದ ವೃಷಭಸ್ವಾಮಿಯ ಆಜ್ಞೆಯನ್ನು ನಂಬಿದರು.

**ತೇನುರಕ್ತಾ ಜಿನಪ್ರೋಕ್ತೇ ಸೂಕ್ತೇ ಧರ್ಮೇ ಸನಾತನೇ ।**
**ಉತ್ತಿಷ್ಠತೇ ಸ್ಮ ಮುಕ್ತ್ಯರ್ಥಂ [1]ಬದ್ಧಕಕ್ಷ್ಯಾ ಮುಮುಕ್ಷವಃ ॥ ೧೬೭ ॥**

ಜಿನೇಶ್ವರನಿಂದ ಹೇಳಲ್ಪಟ್ಟುದೂ ಯಥಾರ್ಥವೂ ಸನಾತನವೂ ಆದ ಧರ್ಮದಲ್ಲಿ ಅನುರಾಗವುಳ್ಳವರಾದ ಆ ರಾಜರ್ಷಿಗಳು ಮೋಕ್ಷವನ್ನು ಹೊಂದಬೇಕೆಂಬ ಇಚ್ಛೆಯುಳ್ಳವರೂ ಮುಕ್ತಿಗೋಸ್ಕರ ಪ್ರತಿಜ್ಞೆಯನ್ನು ಮಾಡಿರುವವರೂ ಆಗಿ ಉತ್ಸಾಹದಿಂದ ಸನ್ನದ್ಧರಾದರು.

**[2]ಸಂವೇಗಜನಿತಶ್ರದ್ಧಾಃ ಶುದ್ಧೇ ವರ್ತ್ಮನ್ಯನುತ್ತರೇ ।**
**ದುರಾಪಾಂ ಭಾವಯಾಮಾಸುಸ್ತೇ ಮಹಾವ್ರತಭಾವನಾಮ್ ॥ ೧೬೮ ॥**

ಸರ್ವೋತ್ಕೃಷ್ಟವೂ ಶುದ್ಧವೂ ಆದ ಜೈನಮಾರ್ಗದಲ್ಲಿ ಧರ್ಮದಲ್ಲಿಯೂ ಧರ್ಮಫಲದಲ್ಲಿಯೂ ಉತ್ಕೃಷ್ಟವಾದ ಪ್ರೀತಿಯಿಂದುಂಟಾದ ನಂಬಿಕೆಯುಳ್ಳ ಆ ರಾಜರ್ಷಿಗಳು ದುರ್ಲಭವಾದ ಅಹಿಂಸಾದಿ ಮಹಾವ್ರತಗಳ ಭಾವನೆಯನ್ನು ಭಾವಿಸಿದರು.

**ಅಹಿಂಸಾಂ ಸತ್ಯಮಸ್ತೇಯಂ ಬ್ರಹ್ಮಚರ್ಯಂ [3]ವಿಮುಕ್ತತಾಮ್ ।**
**ರಾತ್ರ್ಯಭೋಜನಷಷ್ಠಾನಿ ವ್ರತಾನ್ಯೇತಾನ್ಯಭಾವಯನ್ ॥ ೧೬೯ ॥**

ಅಹಿಂಸಾ ಸತ್ಯ ಅಚೌರ್ಯ ಬ್ರಹ್ಮಚರ್ಯ ಅಪರಿಗ್ರಹ ರಾತ್ರಿಭೋಜನತ್ಯಾಗ ಈ ಆರು ವ್ರತಗಳನ್ನು ಭಾವಿಸಿದರು. ಈ ವ್ರತಗಳ ಮಹತ್ತ್ವವನ್ನು ಭಾವಿಸಿದರೆಂದು ಭಾವವು.

**ಯಾವಜ್ಜೀವಂ ವ್ರತೇಷ್ವೇಷು ತೇ ದೃಢೀಕೃತ[4]ಸಂಗರಾಃ ।**
**[5]ತ್ರಿವಿಧೇನ [6]ಪ್ರತಿಕ್ರಾಂತದೋಷಾಃ ಶುದ್ಧಿಂ ಪರಾಂ ದಧುಃ ॥ ೧೭೦ ॥**

ಮರಣಪರ್ಯಂತವೂ ಈ ವ್ರತಗಳಲ್ಲಿ ದೃಢಪ್ರತಿಜ್ಞೆಯನ್ನು ಮಾಡಿದವರೂ ಮನೋವಾಕ್ಕಾಯಗಳಿಂದ ತಮ್ಮ ದೋಷಗಳ ಪ್ರತಿಕ್ರಮಣ–ಪ್ರತಿಕ್ರಿಯೆಯನ್ನು ಮಾಡಿದವರೂ ಆದ ಆ ರಾಜರ್ಷಿಗಳು ಉತ್ಕೃಷ್ಟವಾದ ಆತ್ಮಶುದ್ಧಿಯನ್ನು ಹೊಂದಿದರು.

**ಸರ್ವಾರಂಭವಿನಿರ್ಮುಕ್ತಾ ನಿರ್ಮಲಾ ನಿಷ್ಪರಿಗ್ರಹಾಃ ।**
**ಮಾರ್ಗಮಾರಾಧಯನ್ ಜೈನಂ ವ್ಯುತ್ಸೃಷ್ಟತನುಯಷ್ಟಯಃ ॥ ೧೭೧ ॥**

ಸಮಸ್ತವಾದ ಆರಂಭಗಳನ್ನು ಬಿಟ್ಟವರೂ ನಿರ್ಮಲರೂ ವಸ್ತುವಾಹನಾದಿ ಪರಿಗ್ರಹಗಳಿಲ್ಲದವರೂ ಶರೀರಮಮಕಾರವನ್ನು ತ್ಯಜಿಸಿದವರೂ ಆದ ಆ ರಾಜರ್ಷಿಗಳು ಜಿನನಿಂದ ಉಪದೇಶಿಸಲ್ಪಟ್ಟ ಮಾರ್ಗವನ್ನು ಆರಾಧಿಸಿದರು.

**ಸರ್ವೋಪಧಿವಿನಿರ್ಮುಕ್ತಾ [7]ಯುಕ್ತಾ ಧರ್ಮೇಜಿನೋದಿತೇ ।**
**ನೈಚ್ಛನ್ವಾಲಾಗ್ರಮಾತ್ರಂ ಚ [8]ದ್ವಿಧಾಮ್ನಾತಂ ಪರಿಗ್ರಹಮ್ ॥ ೧೭೨ ॥**

ಸಮಸ್ತವಾದ ಉಪಾಧಿ–ಪರಿಗ್ರಹಗಳನ್ನು ತೊರೆದವರೂ ಜಿನೇಶ್ವರರಿಂದ ಹೇಳಲ್ಪಟ್ಟ ಧರ್ಮದಲ್ಲಿ ಆಸಕ್ತರೂ ಆದ ಆ ರಾಜರ್ಷಿಗಳು ಬಾಹ್ಯಾಭ್ಯಂತರ ರೂಪವಾದ ದ್ವಿವಿಧಪರಿಗ್ರಹವನ್ನು ಕೂದಲಿನ ಕೊನೆಯಷ್ಟೂ ಇಚ್ಛಿಸಲಿಲ್ಲವು.

**[9]ನಿರ್ಮೋಘಾಸ್ತೇ ಸ್ವದೇಹೇಪಿ ಧರ್ಮವರ್ತ್ಮನಿ ಸುಸ್ಥಿತಾಃ ।**
**ಸಂತೋಷಭಾವನಾಪಾಸ್ತತೃಷ್ಣಾಃ ಸಂತೋ [10]ವಿಜಹ್ರಿರೇ ॥ ೧೭೩ ॥**

೧ ಕೃತಪ್ರತಿಜ್ಞಾಃ. ೨ ಸಂವೇಗಃ ಪರಮಾ ಪ್ರೀತಿರ್ಧರ್ಮೇ ಧರ್ಮಫಲೇಷು ಚ. ೩ ನಿಷ್ಪರಿಗ್ರಹತಾಂ. ೪ ಪ್ರತಿಜ್ಞಾಃ. ೫ ಮನೋವಾಕ್ಕಾಯೇನ. ೬ ಪ್ರತಿಕ್ರಮಣರೂಪೇಣ. ೭ ಸಮಾಹಿತಾ ಸನ್ನದ್ಧಾಃ. ೮ ಬಾಹ್ಯಾಭ್ಯಂತರರೂಪೇಣ ದ್ವಿಧಾ ಪ್ರೋಕ್ತಂ. ೯ ನಿರ್ಮೋಹಾಃ. ೧೦ ವಿಹರಂತಿ ಸ್ಮ.

ತಮ್ಮ ಶರೀರದಲ್ಲಿಯೂ ಮೋಹವಿಲ್ಲದವರೂ ಧರ್ಮಮಾರ್ಗದಲ್ಲಿ ಸರಿಯಾಗಿರುವವರೂ ಸಂತೋಷಭಾವನೆಯಿಂದ ಆಸೆಯನ್ನು ದೂರಮಾಡಿದವರೂ ಸತ್ಪುರುಷರೂ ಆದ ಆ ರಾಜರ್ಷಿಗಳು ವಿಹರಿಸಿದರು.

**ವಸಂತಿ ಸ್ಮಾ[೧]ನಿಕೇತಾಸ್ತೇ ಯತ್ರಾಸ್ತಂ [೨]ಭಾನುಮಾ[೩]ನಿತಃ ।**
**ತತ್ರೈಕತ್ರ [೪]ಕ್ವಚಿದ್ದೇಶೇ ನೈಃಸಂಗ್ಯಂ ಪರ[೫]ಮಾಸ್ಥಿತಾಃ ॥ ೧೭೪ ॥**

ಉತ್ಕೃಷ್ಟವಾದ ನಿಷ್ಪರಿಗ್ರಹವನ್ನು ಹೊಂದಿದವರೂ ಗೃಹತ್ಯಾಗಿಗಳೂ ಆದ ಆ ರಾಜರ್ಷಿಗಳು ಸೂರ್ಯನು ಅಸ್ತಂಗತನಾದ ಎಲ್ಲಿಯೋ ಒಂದು ಸ್ಥಳದಲ್ಲಿ ವಾಸಮಾಡಿದರು. ಸೂರ್ಯಾಸ್ತಮಾನಕಾಲದಲ್ಲಿ ಯಾವ ಸ್ಥಳದಲ್ಲಿದ್ದರೋ ಪುನಃ ಸೂರ್ಯೋದಯವಾಗುವವರೆಗೂ ಅದೇ ಸ್ಥಳದಲ್ಲಿ ವಾಸಮಾಡಿದರೆಂದು ಭಾವವು.

**[೬]ವಿವಿಕ್ತೈಕಾಂತಸೇವಿತ್ವಾದ್ಗ್ರಾಮೇಷ್ವೇ[೭]ಕಾಹವಾಸಿನಃ ।**
**ಪುರೇಷ್ವಪಿ ನ ಪಂಚಾಹಾತ್ಪರಂ ತೇ[೮]ಸ್ಥುರ್ನೃಪರ್ಷಯಃ ॥ ೧೭೫ ॥**

ಆ ರಾಜರ್ಷಿಗಳು ಪವಿತ್ರವಾದ ಏಕಾಂತಸ್ಥಾನದಲ್ಲಿ ವಾಸಮಾಡುವವರಾಗಿರುವುದರಿಂದ ಗ್ರಾಮಗಳಲ್ಲಿ ಒಂದುದಿವಸ ವಾಸಮಾಡುವವರಾಗಿ ಪಟ್ಟಣಗಳಲ್ಲಿ ಐದುದಿವಸಕ್ಕಿಂತ ಹೆಚ್ಚು ಇರಲಿಲ್ಲ.

**ಶೂನ್ಯಾಗಾರಶ್ಮಶಾನಾದಿ[೯]ವಿವಿಕ್ತಾಲಯಗೋಚರಾಃ ।**
**ತೇ ವೀರವಸತಿಂ ಭೇಜುರುಜ್ಝಿತಾಃ ಸಪ್ತಭಿರ್ಭಯೈಃ ॥ ೧೭೬ ॥**

ಜನರಹಿತವಾದ ಮನೆ ಸ್ಮಶಾನ ಮೊದಲಾದ ಏಕಾಂತಸ್ಥಾನಗಳಲ್ಲಿರುವವರೂ ಇಹಲೋಕಭಯ ಪರಲೋಕಭಯ ಮರಣಭಯ ಮೊದಲಾದ ಏಳುಭಯಗಳಿಲ್ಲದವರೂ ಆದ ಆ ರಾಜರ್ಷಿಗಳು ಭಯಂಕರವಾದ ವಾಸಸ್ಥಾನವನ್ನು ತಲುಪಿದರು. ವೀರಪುರುಷರು ವಾಸಮಾಡುವುದಕ್ಕೆ ತಕ್ಕುದಾದ ನಿವಾಸವನ್ನು ತಲುಪಿದರೆಂದು ಭಾವವು.

**ತೇಭ್ಯನಂದನ್ಮಹಾಸತ್ತ್ವಾಃ ಪಾಕಸತ್ತ್ವೈರಧಿಷ್ಠಿತಾಃ ।**
**ಗಿರ್ಯಗ್ರಕಂದರಾರಣ್ಯವಸತೀಃ ಪ್ರತಿವಾಸರಮ್ ॥ ೧೭೭ ॥**

ಮಹಾಧೀರರಾದ ಆ ರಾಜರ್ಷಿಗಳು ಕ್ರೂರಮೃಗಗಳಿಂದ ವಾಸಮಾಡಲ್ಪಟ್ಟ ಪರ್ವತಶಿಖರ ಗುಹೆ ಕಾಡು ಈ ವಾಸಸ್ಥಾನಗಳನ್ನು ಪ್ರತಿದಿವಸವೂ ಇಷ್ಟಪಟ್ಟರು. ಆ ವಾಸಸ್ಥಾನಗಳಲ್ಲಿ ವಾಸಮಾಡುವುದು ಅವರಿಗೆ ಸಂತೋಷಕರವಾಗಿದ್ದಿತೆಂದು ಭಾವವು.

**ಸಿಂಹರ್ಕ್ಷವೃಕಶಾರ್ದೂಲತರಕ್ಷ್ವಾದಿನಿಷೇವಿತೇ ।**
**ವನಾಂತೇ ತೇ ವಸಂತಿ ಸ್ಮ [೧೦]ತದಾರಸಿತಭೀಷಣೇ ॥ ೧೭೮ ॥**

ಆ ರಾಜರ್ಷಿಗಳು ಸಿಂಹ ಕರಡಿ ತೋಳ ಶಾರ್ದೂಲ ಕಿರುಬ–ಹುಲಿ ಮೊದಲಾದ ಕ್ರೂರಮೃಗಗಳಿಂದ ವಾಸಮಾಡಲ್ಪಟ್ಟುದೂ ಸಿಂಹಗಳ ಗರ್ಜನೆಗಳಿಂದ ಭಯಂಕರವೂ ಆದ ಅರಣ್ಯಮಧ್ಯದಲ್ಲಿ ವಾಸಮಾಡಿದರು.

**ಸ್ಫುರತ್ಪರುಷಶಾರ್ದೂಲಗರ್ಜಿತಪ್ರತಿನಿಸ್ವನೈಃ ।**
**[೧೧]ಆಗುಂಜದ್ಗಿರಿವಪ್ರಾಂತೇ ತೇ ಸ್ಮ ತಿಷ್ಠಂತ್ಯಸಾಧ್ವಸಾಃ ॥ ೧೭೯ ॥**

ಆ ರಾಜರ್ಷಿಗಳು ಸುತ್ತಲೂ ವ್ಯಾಪಿಸುತ್ತಿರುವುದೂ ಕಠೋರವೂ ಆದ ಶಾರ್ದೂಲಗರ್ಜನೆಯ ಪ್ರತಿಧ್ವನಿಗಳಿಂದ ಶಬ್ದಮಾಡುತ್ತಿರುವ ಪರ್ವತದ ತಪ್ಪಲಿನ ಮಧ್ಯದಲ್ಲಿ ಭಯವಿಲ್ಲದವರಾಗಿ ವಾಸವಾಗಿದ್ದರು.

೧ ಅನಗಾರಾಃ. ೨ ಆದಿತ್ಯಃ. ೩ ಪ್ರಾಪ್ತಃ. ೪ ಕ್ವಚಿದನಿಯತಪ್ರದೇಶೇ. ೫ ಆಶ್ರಿತಾಃ. ೬ ವಿಜನ ಪ್ರದೇಶೇಷು ಸ್ಥಾತುಂ ಪ್ರಿಯತ್ವಾದಿತಿ ಭಾವಃ. ೭ ಏಕದಿವಸವಾಸಿನಃ. ೮ ನಿವಸಂತಿ ಸ್ಮ. ೯ ಏಕಾಂತ ಪ್ರದೇಶೋ ಗೋಚರಂ ವಿಷಯೋ ಯೇಷಾಂ ತೇ. ೧೦ ಸಿಂಹಾನಾಮಾರಾವೈರ್ಭೀಷಣೇ. ೧೧ ಧ್ವನತ್ಪರ್ವತಸಾನುಮಧ್ಯೇ.

**[೧]ಕಂಠೀರವಕಿಶೋರಾಣಾಂ ಕಠೋರೈಃ ಕಂಠನಿಸ್ವನೈಃ ।**
**[೨]ಪ್ರೋನ್ನಾದಿನಿ ವನೇ ತೇ ಸ್ಮ ನಿವಸಂತ್ಯಸ್ತಭೀತಯಃ ॥ ೧೮೦ ॥**

ಆ ರಾಜರ್ಷಿಗಳು ಸಿಂಹದ ಮರಿಗಳ ಕಠೋರವಾದ ಕಂಠಧ್ವನಿಗಳಿಂದ ಪ್ರತಿಶಬ್ದವನ್ನು ಮಾಡುತ್ತಿರುವ ಅರಣ್ಯದಲ್ಲಿ ಭಯವಿಲ್ಲದವರಾಗಿ ವಾಸಮಾಡಿದರು.

**ನೃತ್ಯತ್ಕಬಂಧ[೩]ಪರ್ಯಂತಸಂಚರಡ್ಡಾಕಿನೀಗಣಾಃ ।**
**[೪]ಪ್ರಬದ್ಧಕೌಶಿಕಧ್ವಾನನಿರುದ್ಧೋಪಾಂತಕಾನನಾಃ ॥ ೧೮೧ ॥**

**[೫]ಶಿವಾನಾ[೬]ಮಶಿವೈರ್ಧ್ವಾನೈರಾರುದ್ಧಾಖಿಲದಿಙ್ಮುಖಾಃ ।**
**ಮಹಾಪಿತೃವನೋದ್ದೇಶಾ ನಿಶಾ[೭]ಸ್ವೇಭಿಃ [೮]ಸಿಷೇವಿರೇ ॥ ೧೮೨ ॥**

ಕುಣಿಯುತ್ತಿರುವ ಮುಂಡಗಳ ಸಮೀಪದಲ್ಲಿ ಸಂಚರಿಸುವ ಡಾಕಿನಿಗಳ ಸಮೂಹವುಳ್ಳವೂ ಗೂಬೆಗಳು ಮಾಡಿದ ಶಬ್ದದಿಂದ ವ್ಯಾಪ್ತವಾದ ಸಮೀಪದ ಅರಣ್ಯಗಳುಳ್ಳವೂ ನರಿಗಳ ಅಮಂಗಲಶಬ್ದಗಳಿಂದ ವ್ಯಾಪ್ತವಾದ ಸಮಸ್ತದಿಕ್ಕುಗಳುಳ್ಳವೂ ಆದ ದೊಡ್ಡ ಸುಡುಗಾಡುಗಳನ್ನು ರಾತ್ರಿಗಳಲ್ಲಿ ಈ ರಾಜರ್ಷಿಗಳು ಸೇವಿಸಿದರು. ರಾತ್ರಿವೇಳೆಯಲ್ಲಿ ಸ್ಮಶಾನಪ್ರದೇಶಗಳಲ್ಲಿ ವಾಸಮಾಡಿದರೆಂದು ಭಾವವು.

**ಸಿಂಹಾ ಇವ [೯]ನೃಸಿಂಹಾಸ್ತೇ ತಸ್ಥುರ್ಗಿರಿಗುಹಾಶ್ರಯಾಃ ।**
**ಜಿನೋಕ್ತ್ಯನುಗತೈಃ ಸ್ವಾಂತೈರನುದ್ವಿಗ್ನೈಃ ಸಮಾಹಿತಾಃ ॥ ೧೮೩ ॥**

ಬೇಸರಿಕೆಯಿಲ್ಲದಿರುವುವೂ ಜಿನವಚನವನ್ನು ಅನುಸರಿಸುವುವೂ ಆದ ಮನಸ್ಸುಗಳಿಂದ ಯುಕ್ತರಾಗಿರುವ ಆ ಪುರುಷಶ್ರೇಷ್ಠರು, ಸಿಂಹಗಳಂತೆ, ಗಿರಿಗುಹೆಗಳ ಆಶ್ರಯಗಳುಳ್ಳವರಾಗಿದ್ದರು.

**[೧೦]ಪಾಕಸತ್ತ್ವತತಾಕೀರ್ಣಾಂ ವನಭೂಮಿಂ [೧೧]ಭಯಾನಕಾಮ್ ।**
**ತೇ[೧೨]ಧ್ಯವಾತ್ಸು[೧೩]ಸ್ತಮಿಸ್ರಾಸು ನಿಶಾಸು ಧ್ಯಾನ[೧೪]ಮಾಸ್ಥಿತಾಃ ॥ ೧೮೪ ॥**

ಕತ್ತಲೆಯುಳ್ಳ ರಾತ್ರಿಗಳಲ್ಲಿ ಧ್ಯಾನವನ್ನಾಶ್ರಯಿಸಿದ ಆ ರಾಜರ್ಷಿಗಳು ಅನೇಕ ಕ್ರೂರಮೃಗಗಳಿಂದ ವ್ಯಾಪ್ತವೂ ಭಯಂಕರವೂ ಆದ ಅರಣ್ಯಪ್ರದೇಶದಲ್ಲಿ ವಾಸಮಾಡಿದರು.

**ನ್ಯಷೇವಂತ ವನೋದ್ದೇಶಾನ್ನಿಷೇವ್ಯಾನ್ವನದಂತಿಭಿಃ ।**
**ತೇ ತದ್ದಂತಾಗ್ರನಿರ್ಭಿನ್ನತರು[೧೫]ಸ್ಥಪುಟಿತಾಂತರಾನ್ ॥ ೧೮೫ ॥**

ಆ ರಾಜರ್ಷಿಗಳು ಕಾಡಾನೆಗಳಿಂದ ವಾಸಮಾಡಲ್ಪಟ್ಟುವೂ ಅವುಗಳ ದಂತಗಳ ತುದಿಯಿಂದ ಕೆದಕಲ್ಪಟ್ಟು ಹಳ್ಳದಿಣ್ಣೆಯಾಗಿರುವ ಮಧ್ಯಪ್ರದೇಶಗಳುಳ್ಳವೂ ಆದ ಅರಣ್ಯಪ್ರದೇಶಗಳನ್ನು ತಲುಪಿದರು.

**ವನೇಷು ವನಮಾತಂಗಬೃಂಹಿತಪ್ರತಿನಾದಿನೀಃ ।**
**ದರೀಸ್ತೇ[೧೬]ಧ್ಯೂಷುರಾರುಷ್ಟೈರಾಕ್ರಾಂತಾಃ [೧೭]ಕರಿಶತ್ರುಭಿಃ ॥ ೧೮೬ ॥**

ಆ ರಾಜರ್ಷಿಗಳು ವನಗಳಲ್ಲಿ ಕಾಡಾನೆಗಳ ಗರ್ಜನೆಗಳ ಪ್ರತಿಧ್ವನಿಗಳುಳ್ಳವೂ ಕೋಪಗೊಂಡಿರುವ ಸಿಂಹಗಳಿಂದ ವ್ಯಾಪ್ತಗಳೂ ಆದ ಗುಹೆಗಳಲ್ಲಿ ವಾಸಮಾಡಿದರು.

**ಸ್ವಾಧ್ಯಾಯ[೧೮]ಯೋಗಸಂಸಕ್ತಾಃ ನ ಸ್ವಪಂತಿ ಸ್ಮ ರಾತ್ರಿಷು ।**
**ಸೂತ್ರಾರ್ಥಭಾವನೋದ್ಯುಕ್ತಾ [೧೯]ಜಾಗರೂಕಾಃ ಸದಾಪ್ಯಮೀ ॥ ೧೮೭ ॥**

೧ ಸಿಂಹಶಾಬಾನಾಂ. ೨ ಧ್ವನಿಂ ಕುರ್ವತಿ. ೩ ಸಮೀಪ. ೪ ಕೃತಘೂಕನಿನಾದವ್ಯಾಪ್ತ. ೫ ಜಂಬುಕಾನಾಂ. ೬ ಅಮಂಗಲೈಃ. ೭ ತಪೋಧನೈಃ. ೮ ಸೇವ್ಯಂತೇ ಸ್ಮ. ೯ ಪುರುಷಶ್ರೇಷ್ಠಾಃ. ೧೦ ಕ್ರೂರಮೃಗ. ೧೧ ಭಯಂಕರಾಂ. ೧೨ ನಿವಸಂತಿ ಸ್ಮ. ೧೩ ಅಂಧಕಾರವತೀಷು. ೧೪ ಆಶ್ರಿತಾಃ. ೧೫ ನಿಮ್ನೋನ್ನತಮಧ್ಯಾನ್. ೧೬ ಅಧಿವಸಂತಿ ಸ್ಮ. ೧೭ ಸಿಂಹೈಃ. ೧೮ ಧ್ಯಾನ. ೧೯ ಜಾಗರಣಶೀಲಾಃ.

ಶಾಸ್ತ್ರಾಧ್ಯಯನದಲ್ಲಿಯೂ ಧ್ಯಾನದಲ್ಲಿಯೂ ಆಸಕ್ತರೂ ಸೂತ್ರಾರ್ಥಗಳ ಭಾವನೆಯಲ್ಲಿ ಪ್ರಯತ್ನಪರರೂ ಆದ ಈ ರಾಜರ್ಷಿಗಳು ಯಾವಾಗಲೂ ಎಚ್ಚರವುಳ್ಳವರಾಗಿ ರಾತ್ರಿಗಳಲ್ಲಿ ಮಲಗಲಿಲ್ಲ. ರಾತ್ರಿಯಲ್ಲಿ ನಿದ್ರೆಮಾಡದೆ ಧ್ಯಾನಾಧ್ಯಯನಗಳಲ್ಲಿ ಆಸಕ್ತರಾಗಿದ್ದರೆಂದು ಭಾವವು.

**ಪಲ್ಯಂಕೇನ ನಿಷಣ್ಣಾಸ್ತೇ ವೀರಾಸನಜುಷೋಥವಾ ।**
**ಶಯಾನಾ ವೈಕಪಾರ್ಶ್ವೇನ ಶರ್ವರೀ[1]ರತ್ಯವಾಹಯನ್ ॥ ೧೮೮ ॥**

ಪಲ್ಯಂಕಾಸನದಿಂದ ಕುಳಿತಿರುವವರೂ ಅಥವಾ ವೀರಾಸನವನ್ನು ಹೊಂದಿರುವವರೂ ಅಥವಾ ಒಂದು ಮಗ್ಗಲಿನಿಂದ ಮಲಗಿರುವವರೂ ಆದ ಆ ರಾಜರ್ಷಿಗಳು ರಾತ್ರಿಗಳನ್ನು ಕಳೆದರು.

**ತ್ಯಕ್ತೋಪಾಧಿಭರಾ ಧೀರಾ ವ್ಯುತ್ಸೃಷ್ಟಾಂಗಾ ನಿರಂಬರಾಃ ।**
**ನೈಷ್ಕಿಂಚನ್ಯವಿಶುದ್ಧಾಸ್ತೇ ಮುಕ್ತಿಮಾರ್ಗಮಮಾರ್ಗಯನ್ ॥ ೧೮೯ ॥**

ವಸ್ತುವಾಹನಾದಿ ಉಪಾಧಿ–ಪರಿಗ್ರಹಭಾರವನ್ನು ತ್ಯಜಿಸಿದವರೂ ಧೈರ್ಯಶಾಲಿಗಳೂ ಶರೀರಮಮಕಾರವನ್ನು ಬಿಟ್ಟವರೂ ವಸ್ತ್ರರಹಿತರೂ ಯಾವ ಪರಿಗ್ರಹವೂ ಇಲ್ಲದಿರುವಿಕೆಯಿಂದ ಪರಿಶುದ್ಧರೂ ಆದ ಆ ರಾಜರ್ಷಿಗಳು ಮೋಕ್ಷಮಾರ್ಗವನ್ನು ಹುಡುಕುತ್ತಿದ್ದರು.

**ನಿರ್ವ್ಯಪೇಕ್ಷಾ ನಿರಾಕಾಂಕ್ಷಾ [2]ವಾಯುವೀಥ್ಯನುಗಾಮಿನಃ ।**
**ವ್ಯಹರನ್ವಸುಧಾಮೇನಾಂ ಸಗ್ರಾಮನಗರಾಕರಾಮ್ ॥ ೧೯೦ ॥**

ಅಪೇಕ್ಷೆಯಿಲ್ಲದವರೂ ಆಶೆಯಿಲ್ಲದವರೂ ಆಕಾಶವನ್ನು ಹೋಲುವವರೂ (ಪರಿಗ್ರಹರಹಿತರೂ) ಆದ ಆ ರಾಜರ್ಷಿಗಳು ಗ್ರಾಮ ನಗರ ಗಣಿ ಇವುಗಳುಳ್ಳ ಈ ಭೂಮಿಯನ್ನು ವಿಹರಿಸಿದರು.

**ವಿಹರಂತೋ ಮಹೀಂ ಕೃತ್ಸ್ನಾಂ ತೇ ಕಸ್ಯಾ[3]ಪ್ಯನಭಿದ್ರುಹಃ ।**
**ಮಾತೃಕಲ್ಪಾ ದಯಾಲುತ್ವಾತ್ಪುತ್ರಕಲ್ಪೇಷು ದೇಹಿಷು ॥ ೧೯೧ ॥**

ಸ್ತಭೂಮಿಯನ್ನು ವಿಹರಿಸಿದ ಆ ರಾಜರ್ಷಿಗಳು ಮಕ್ಕಳಿಗೆ ಸಮಾನಗಳಾದ ಳಲ್ಲಿ ದಯೆಯುಳ್ಳವರಾಗಿದ್ದುದರಿಂದ ತಾಯಿಗೆ ಸಮಾನರಾಗಿಯೂ ಯೂ ಬಾಧೆಯನ್ನುಂಟುಮಾಡದಿರುವವರಾಗಿಯೂ ಇದ್ದರು.

**ಜೀವಾಜೀವವಿಭಾಗಜ್ಞಾ ಜ್ಞಾನೋದ್ದ್ಯೋತಸ್ಫುರ[4]ದ್ದೃಶಃ ।**
**ಸಾವದ್ಯಂ ಪರಿಜಹ್ರುಸ್ತೇ [5]ಪ್ರಾಸುಕಾವಸಥಾಶನಾಃ ॥ ೧೯೨ ॥**

ಜೀವ ಅಜೀವ ವಿಭಾಗವನ್ನು ತಿಳಿದವರೂ ಜ್ಞಾನೋಪಯೋಗದಿಂದ ಪ್ರಕಾಶಮಾನವಾದ ಸಮ್ಯಗ್ದರ್ಶನವುಳ್ಳವರೂ ನಿರ್ದೋಷವಾದ ವಾಸಸ್ಥಾನವೂ ಆಹಾರವೂ ಉಳ್ಳವರೂ ಆದ ಆ ರಾಜರ್ಷಿಗಳು ದೋಷವನ್ನು ಪರಿಹರಿಸಿದರು. ಹಿಂಸಾದಿಪಾಪಕಾರ್ಯವನ್ನು ಪರಿತ್ಯಜಿಸಿದರೆಂದು ಭಾವವು.

**ಸ್ಯಾದ್ಯತ್ಕಿಂಚಿಚ್ಚ ಸಾವದ್ಯಂ ತತ್ಸರ್ವಂ ತ್ರಿವಿಧೇನ ತೇ ।**
**ರತ್ನತ್ರಿತಯಶುದ್ಧ್ಯರ್ಥಂ ಯಾವಜ್ಜೀವಮವರ್ಜಯನ್ ॥ ೧೯೩ ॥**

ಯಾವುದಾದರೂ ಸ್ವಲ್ಪ ದೋಷವಿದ್ದರೆ ಅದೆಲ್ಲವನ್ನೂ ಆ ರಾಜರ್ಷಿಗಳು ಸಮ್ಯಗ್ದರ್ಶನ ಜ್ಞಾನ ಚಾರಿತ್ರ ರೂಪವಾದ ರತ್ನತ್ರಯದ ಶುದ್ಧಿಗೋಸ್ಕರ ಮನೋವಾಕ್ಕಾಯಗಳಿಂದ ಮರಣಪರ್ಯಂತವೂ ಪರಿತ್ಯಜಿಸಿದರು.

**ತ್ರಸಾನ್ ಹರಿತಕಾಯಾಂಶ್ಚ ಪೃಥಿವ್ಯಪ್ಪವನಾನಲಾನ್ ।**
**ಜೀವಕಾಯಾನಪಾಯೇಭ್ಯ[6]ಸ್ತೇ ಸ್ಮ ರಕ್ಷಂತಿ ಯತ್ನತಃ ॥ ೧೯೪ ॥**

೧ ನಯಂತಿ ಸ್ಮ. ೨ ಗಗನಮನುಕುರ್ವಾಣಾಃ. ೩ ಅಘಾತುಕಾಃ. ೪ ಸಮ್ಯಕ್ತ್ವ. ೫ ನಿರವದ್ಯಾವಾಸಾಹಾರಾಃ. ೬ ಅಪಸಾರ್ಯ.

ಆ ರಾಜರ್ಷಿಗಳು ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯ ಪಂಚೇಂದ್ರಿಯಗಳೆಂಬ ತ್ರಸಕಾಯಿಕಜೀವಗಳನ್ನೂ ಸ್ಥಾವರಕಾಯಿಕಜೀವಗಳನ್ನೂ ಪೃಥಿವೀಕಾಯಿಕ ಜಲಕಾಯಿಕ ವಾಯುಕಾಯಿಕ ಅಗ್ನಿಕಾಯಿಕ ಜೀವಗಳನ್ನೂ ಅಪಾಯಗಳಿಂದ ಪ್ರಯತ್ನಪೂರ್ವಕವಾಗಿ ಕಾಪಾಡಿದರು.

**ಅದೀನಮನಸಃ ಶಾಂತಾಃ ಪರಮೋಪೇಕ್ಷಯಾನ್ವಿತಾಃ ।**
**ಮುಕ್ತಶಾಠ್ಯಾಸ್ತ್ರಿಭಿರ್ಗುಪ್ತಾಃ ಕಾಮಭೋಗೇ[1]ಷ್ವವಿಸ್ಮಿತಾಃ ॥ ೧೯೫ ॥**

**ಜಿನಾಜ್ಞಾನುಗತಾಃ ಶಶ್ವತ್ಸಂಸಾರೋದ್ವಿಗ್ನಮಾನಸಾಃ ।**
**ಗರ್ಭ[2]ವಾಸಜರಾಮೃತ್ಯುಪರಿವರ್ತನಭೀರವಃ ॥ ೧೯೬ ॥**

**ಶ್ರುತಜ್ಞಾನದೃಶೋ ದೃಷ್ಟಪರಮಾರ್ಥಾ ವಿಚಕ್ಷಣಾಃ ।**
**ಜ್ಞಾನದೀಪಿಕಯಾ ಸಾಕ್ಷಾಚ್ಚಕ್ರುಸ್ತೇ ಪದಮಕ್ಷರಮ್ ॥ ೧೯೭ ॥**

ದೀನವಾದ ಮನಸ್ಸಿಲ್ಲದವರೂ ಶಾಂತಸ್ವಭಾವದವರೂ ಕಾಮಭೋಗಗಳಲ್ಲಿ ಉತ್ಕೃಷ್ಟವಾದ ಉದಾಸೀನಭಾವವುಳ್ಳವರೂ ವಸ್ತ್ರವನ್ನು ಪರಿತ್ಯಜಿಸಿದವರೂ ದುರ್ವ್ಯಾಪಾರದಿಂದ ಮನೋವಾಕ್ಕಾಯಗಳನ್ನು ರಕ್ಷಿಸಿದವರೂ ಕಾಮಭೋಗಗಳಲ್ಲಿ ಪ್ರೀತಿಯಿಲ್ಲದವರೂ ಜಿನೇಶ್ವರನ ಆಜ್ಞೆಯನ್ನು ಅನುಸರಿಸುವವರೂ ಬಾರಿಬಾರಿಗೆ ಸಂಸಾರದಲ್ಲಿ ಬೇಸರಿಕೆಯನ್ನು ಹೊಂದಿದ ಮನಸ್ಸುಳ್ಳವರೂ ಗರ್ಭದಲ್ಲಿ ಜನಿಸುವಿಕೆ ಮುಪ್ಪು ಸಾವು ಇವುಗಳ ಪರಿಭ್ರಮಣದಿಂದ ಭಯಭೀತರೂ ಶಾಸ್ತ್ರಜ್ಞಾನವೆಂಬ ಕಣ್ಣುಳ್ಳವರೂ ಅದರಿಂದ ಯಥಾರ್ಥವಿಷಯಗಳನ್ನು ನೋಡಿದವರೂ ವಿಚಾರಶೀಲರೂ ಆದ ಆ ರಾಜರ್ಷಿಗಳು ಜ್ಞಾನವೆಂಬ ದೀಪದಿಂದ ನಾಶರಹಿತವಾದ ಸ್ಥಾನವನ್ನು–ಆತ್ಮಸ್ವರೂಪವನ್ನು ಪ್ರತ್ಯಕ್ಷವಾಗಿ ಕಂಡರು.

**ತೇ ಚಿರಂ ಭಾವಯಂತಿ ಸ್ಮ ಸನ್ಮಾರ್ಗಂ ಮುಕ್ತಿಸಾಧನಮ್ ।**
**ಪರದತ್ತವಿಶುದ್ಧಾನ್ನಭೋಜಿನಃ [3]ಪಾಣ್ಯಮತ್ರಕಾಃ ॥ ೧೯೮ ॥**

ಬೇರೆಯವರು ಕೊಟ್ಟ ನಿರ್ದೋಷವಾದ ಅನ್ನವನ್ನು ಭುಂಜಿಸುವವರೂ ಹಸ್ತವೇ ಪಾತ್ರವಾಗಿರುವವರೂ ಆದ ಆ ರಾಜರ್ಷಿಗಳು ಮೋಕ್ಷಕ್ಕೆ ಸಾಧನವಾದ ಸನ್ಮಾರ್ಗವನ್ನು ಬಹುಕಾಲದವರೆಗೆ ಭಾವಿಸಿದರು.

**[4]ಶಂಕಿತಾ[5]ಭಿಹೃತೋ[6]ದ್ದಿಷ್ಟ[7]ಕ್ರಯಕ್ರೀತಾದಿಲಕ್ಷಣಮ್ ।**
**[8]ಸೂತ್ರೇ [9]ನಿಷಿದ್ಧಮಾಹಾರಂ ನೈಚ್ಛನ್ಪ್ರಾಣಾತ್ಯಯೇಪಿ ತೇ ॥ ೧೯೯ ॥**

ಆ ರಾಜರ್ಷಿಗಳು ಇಂತಹ ಪದಾರ್ಥವನ್ನು ತಿನ್ನಬಹುದೆಂದು ಶಾಸ್ತ್ರದಲ್ಲಿ ಹೇಳಿದೆಯೋ ಇಲ್ಲವೋ ಎಂಬ ಸಂದೇಹವುಳ್ಳ, ದಪ್ಪಕ್ಕಿಯ ಅನ್ನವೇ ಮೊದಲಾದುದನ್ನು ನೆರೆಮನೆಯಲ್ಲಿ ಕೊಟ್ಟು ತಂದಿರುವ ಸಣ್ಣಕ್ಕಿಯ ಅನ್ನವೇ ಮೊದಲಾದ ಪದಾರ್ಥಗಳುಳ್ಳ, ತನಗೋಸ್ಕರ ಮಾಡಲ್ಪಟ್ಟಿರುವ ಮತ್ತು ಬೆಲೆಗೆ ತರಲ್ಪಟ್ಟಿರುವ ಇವೇ ಮೊದಲಾದ ಲಕ್ಷಣಗಳುಳ್ಳುದೂ ಪರಮಾಗಮದಲ್ಲಿ ನಿಷೇಧಿಸಲ್ಪಟ್ಟುದೂ ಆದ ಆಹಾರವನ್ನು ಪ್ರಾಣನಾಶದಲ್ಲಿಯೂ (ಪ್ರಾಣಗಳು ಹೋದರೂ) ಇಚ್ಛಿಸಲಿಲ್ಲವು.

**ಭಿಕ್ಷಾಂ ನಿಯತವೇಲಾಯಾಂ ಗೃಹಪಙ್ಕ್ತ್ಯನತಿಕ್ರಮಾತ್ ।**
**ಶುದ್ಧಾ[10]ಮಾದಧಿರೇ ಧೀರಾಃ [11]ಮುನಿವೃತ್ತೌ ಸಮಾಹಿತಾಃ ॥ ೨೦೦ ॥**

ಧೈರ್ಯಶಾಲಿಗಳೂ ಯತ್ಯಾಚಾರದಲ್ಲಿ ದತ್ತಚಿತ್ತರೂ ಆದ ಆ ರಾಜರ್ಷಿಗಳು ಕ್ಲೃಪ್ತವಾದ ಕಾಲದಲ್ಲಿ ಮನೆಗಳ ಸಾಲನ್ನು ಮೀರದೆ–ಕ್ರಮವಾಗಿ ಹೋಗಿ ಶುದ್ಧವಾದ ಭಿಕ್ಷಾಹಾರವನ್ನು ಸ್ವೀಕರಿಸಿದರು.

೧ ಅಪ್ರೀತಾಃ. ೨ ಜನ್ಮ. ೩ ಪಾಣಿಪಾತ್ರಕಾಃ. ೪ ಇದಂ ವಸ್ತು ಭೋಜ್ಯತ್ವೇನೋಕ್ತಂ ನ ವೇತಿ ವಾ ಸಂದಿಗ್ಧಂ. ೫ ಸ್ಥೂಲತಂಡುಲಾಶನಾದಿಕಂ ದತ್ವಾ ಸ್ವೀಕೃತಮೋದನಾದಿಕಂ. ೬ ಆತ್ಮಾನಮುದ್ದಿಶ್ಯ ಕೃತಂ. ೭ ಪಣಾದಿಕಂ ದತ್ವಾ ಸ್ವೀಕೃತಂ. ೮ ಪರಮಾಗಮೇ. ೯ ನಿಷೇಧಿತಂ. ೧೦ ಸ್ವೀಚಕ್ರುಃ. ೧೧ ಯತ್ಯಾಚಾರೇ.

**ಶೀತಮುಷ್ಣಂ ವಿರೂಕ್ಷಂ ಚ ಸ್ನಿಗ್ಧಂ ಸಲವಣಂ [೧]ನ ವಾ ।**
**ತನುಸ್ಥಿತ್ಯರ್ಥಮಾಹಾರ[೨]ಮಾಜಹ್ರುಸ್ತೇ ಗತಸ್ಪೃಹಾಃ ॥ ೨೦೧ ॥**

ಆಶೆಯಿಲ್ಲದವರಾದ ಆ ರಾಜರ್ಷಿಗಳು ದೇಹವಿರುವುದಕ್ಕೋಸ್ಕರ ಶೀತವೂ ಉಷ್ಣವೂ ಒರಟೂ ಜಿಗಟೂ ಉಪ್ಪುಕೂಡಿರುವುದೂ ಉಪ್ಪಿಲ್ಲದಿರುವುದೂ ಆದ ಆಹಾರವನ್ನು ತೆಗೆದುಕೊಂಡರು. ಅದೇ ಬೇಕು ಇದೇ ಬೇಕೆಂಬ ಆಶೆಯಿಲ್ಲದೆ ಸಿಕ್ಕಿದ ನಿರ್ದೋಷಾಹಾರವನ್ನು ಸ್ವೀಕರಿಸಿದರೆಂದು ಭಾವವು.

**ಅಕ್ಷಮ್ರಕ್ಷಣಮಾತ್ರಂ ತೇ [೩]ಪ್ರಾಣಧೃತ್ಯೈ [೪]ವಿಷಘ್ಷಣುಃ ।**
**[೫]ಧರ್ಮಾರ್ಥಮೇವ ಚ ಪ್ರಾಣಾನ್ ಧಾರಯಂತಿ ಸ್ಮ ಕೇವಲಮ್ ॥**

ಆ ರಾಜರ್ಷಿಗಳು ಪ್ರಾಣಧಾರಣೆಗೋಸ್ಕರ ಬಂಡಿಗೆ ಹೆರೆಯನ್ನಿಕ್ಕುವಷ್ಟು ಆಹಾರವನ್ನು ಭುಂಜಿಸಿದರು. ಮುಖ್ಯವಾಗಿ ಅವರು ಧರ್ಮನಿಮಿತ್ತವಾಗಿಯೇ ಪ್ರಾಣಗಳನ್ನು ಧರಿಸಿದ್ದರು. ಬದುಕಬೇಕೆಂಬ ಆಶೆಯಿಂದಲ್ಲವೆಂದು ಭಾವವು.

**ನ ತುಷ್ಯಂತಿ ಸ್ಮ ತೇ [೬]ಲಬ್ಧೌ ವ್ಯಷೀದನ್ನಾಪ್ಯಲಬ್ಧಿತಃ ।**
**ಮನ್ಯಮಾನಾಸ್ತಪೋಲಾಭಮಧಿಕಂ ಧುತಕಲ್ಮಷಾಃ ॥ ೨೦೩ ॥**

ದೋಷವನ್ನು ದೂರಮಾಡಿದವರೂ ಹೆಚ್ಚು ತಪಸ್ಸಿನ ಲಾಭವಾದುದೆಂದು ತಿಳಿಯುವವರೂ ಆದ ಆ ರಾಜರ್ಷಿಗಳು ಆಹಾರವು ದೊರಕಿತೆಂದು ಸಂತೋಷಪಡಲಿಲ್ಲ; ದೊರಕಲಿಲ್ಲವೆಂದು ಖೇದಪಡಲೂ ಇಲ್ಲ. ಆಹಾರಲಾಭಾಲಾಭಗಳಲ್ಲಿ ನಿರ್ವಿಕಾರರಾಗಿದ್ದರೆಂದು ಭಾವವು.

**ಸ್ತುತಿಂ ನಿಂದಾಂ ಸುಖಂ ದುಃಖಂ ತಥಾ [೭]ಮಾನಂ[೮]ವಿಮಾನನಾಮ್ ।**
**ಸಮಭಾವೇನ ತೇಪಶ್ಯನ್ ಸರ್ವತ್ರ ಸಮದರ್ಶಿನಃ ॥ ೨೦೪ ॥**

ಸಕಲವಿಷಯಗಳನ್ನೂ ಸಮಾನವಾಗಿ ನೋಡುವ ಆ ರಾಜರ್ಷಿಗಳು ಸ್ತುತಿಯನ್ನೂ ನಿಂದೆಯನ್ನೂ ಸುಖವನ್ನೂ ದುಃಖವನ್ನೂ ಮಾನವನ್ನೂ ಅವಮಾನವನ್ನೂ ಸಮಾನಭಾವನೆಯಿಂದ ನೋಡಿದರು. ಹರ್ಷವಿಷಾದಗಳನ್ನು ಹೊಂದಲಿಲ್ಲವೆಂದು ಭಾವವು.

**[೯]ವಾಚಂ ಯಮತ್ವ[೧೦]ಮಾಸ್ಥಾಯ ಚರಂತೋ [೧೧]ಗೋಚರಾರ್ಥಿನಃ ।**
**ನಿರ್ಯಾಂತಿ ಸ್ಮಾಪ್ಯಲಾಭೇನ ನಾಭಂಜ[೧೨]ನ್ಮೌನಸಂಗರಮ್ ॥ ೨೦೫ ॥**

ಮೌನಭಾವವನ್ನು ಪ್ರತಿಜ್ಞೆಮಾಡಿಕೊಂಡು ಸಂಚರಿಸುವವರೂ ಭಿಕ್ಷಾರ್ಥಿಗಳೂ ಆದ ಆ ರಾಜರ್ಷಿಗಳು ಭಿಕ್ಷೆಯ ಅಪ್ರಾಪ್ತಿಯಿಂದ ಅಂದರೆ ಭಿಕ್ಷಾಹಾರವು ದೊರೆಯದಿದ್ದರೆ ಹೊರಟುಹೋಗುತ್ತಿದ್ದರಲ್ಲದೆ ಮೌನಪ್ರತಿಜ್ಞೆಯನ್ನು ಭಂಗಮಾಡುತ್ತಿರಲಿಲ್ಲ.

**ಮಹೋಪವಾಸಗ್ಲಾನಾಂಗಾ ಯತಂತೇ ಸ್ಮ ತನುಸ್ಥಿತೌ ।**
**ತತ್ರಾಪ್ಯಶುದ್ಧಮಾಹಾರಂ [೧೩]ನೈಶಿಷುರ್ಮನಸಾಪ್ಯಮೀ ॥ ೨೦೬ ॥**

ಮಹೋಪವಾಸದಿಂದ ಬಳಲಿದ ಶರೀರವುಳ್ಳ ಈ ರಾಜರ್ಷಿಗಳು ಶರೀರವಿರುವುದಕ್ಕಾಗಿ ಯತ್ನಿಸಿದರು. ಆ ಯತ್ನದಲ್ಲಿಯೂ ಅಶುದ್ಧವಾದ ಆಹಾರವನ್ನು ಮನಸ್ಸಿನಿಂದಲೂ ಇಚ್ಛಿಸಲಿಲ್ಲ.

**[೧೪]ಗೋಚರಾಗ್ರಗತಾ ಯೋಗ್ಯಂ ಭುಕ್ತ್ವಾನ್ನ[೧೫]ಮವಿಲಂಬಿತಮ್ ।**
**[೧೬]ಪ್ರತ್ಯಾಖ್ಯಾಯ ಪುನರ್ಧೀರಾ ನಿರ್ಯಯುಸ್ತೇ ತಪೋವನಮ್ ॥**

ಭಿಕ್ಷಾವೃತ್ತಿಯಲ್ಲಿ ಮುಖ್ಯರೂ ಧೈರ್ಯಶಾಲಿಗಳೂ ಆದ ಆ ರಾಜರ್ಷಿಗಳು ಯೋಗ್ಯವಾದ ಆಹಾರವನ್ನು ಶೀಘ್ರವಾಗಿ ಭುಂಜಿಸಿ ಪುನಃ ಪ್ರತ್ಯಾಖ್ಯಾನವನ್ನು–ಉಪವಾಸನಿಯುಮವನ್ನು ಕೈಕೊಂಡು ತಪೋವನಕ್ಕೆ ಹೊರಟುಹೋದರು.

೧ ಲವಣರಹಿತಂ ವಾ. ೨ ಆದದುಃ. ೩ ಪ್ರಾಣಧಾರಣಾರ್ಥಂ. ೪ ಭುಂಜತೇ ಸ್ಮ. ೫ ಧರ್ಮನಿಮಿತ್ತಂ. ೬ ಲಾಭೇ ಸತಿ. ೭ ಪೂಜಾಂ. ೮ ಅವಜ್ಞಾಂ. ೯ ಮೌನಿತ್ವಂ. ೧೦ ಪ್ರತಿಜ್ಞಾಂ ಕೃತ್ವಾ. ೧೧ ಭಿಕ್ಷಾರ್ಥಿನಃ. ೧೨ ಮೌನಪ್ರತಿಜ್ಞಾಂ. ೧೩ ಇಚ್ಛಾಂ ನ ಚಕ್ರುಃ. ೧೪ ಭಿಕ್ಷಾಯಾಂ ಮುಖ್ಯತ್ವಂ ಗತಾಃ. ೧೫ ಶೀಘ್ರಂ. ೧೬ ಪ್ರತ್ಯಾಖ್ಯಾನಂ ಗೃಹೀತ್ವಾ.

**ತಪಸ್ತಾಪತನೂಭೂತತನವೋಪಿ ಮುನೀಶ್ವರಾಃ ।**
**[೧]ಅನುಬಂಧಾತ್ತಪೋಯೋಗಾನ್ನ ಚೇಲು[೨]ರ್ದೃಢಸಂಗರಾಃ ॥ ೨೦೮ ॥**

ದೃಢಪ್ರತಿಜ್ಞೆಯುಳ್ಳ ಆ ಮುನೀಶ್ವರರು ತಪಸ್ಸಿನ ತಾಪದಿಂದ ಕೃಶವಾದ ದೇಹವುಳ್ಳವರಾದರೂ ಅವಿಚ್ಛಿನ್ನವಾದ ಅನುಸರಣವುಳ್ಳ ಅಂದರೆ ಪರಂಪರೆಯಾಗಿ ಬಂದಿರುವ ಶಿಷ್ಟಾಚಾರದ ಅನುಸರಣವುಳ್ಳ ತಪೋಯೋಗದಿಂದ ಚಂಚಲರಾಗಲಿಲ್ಲ.

**ತೀವ್ರಂ [೩]ತಪಸ್ಯತಾಂ ತೇಷಾಂ ಗಾತ್ರೇಷು [೪]ಶ್ಲಥತಾಭವತ್ ।**
**ಪ್ರತಿಜ್ಞಾ ಯಾ ತು ಸದ್ಧ್ಯಾನಸಿದ್ಧಾವಶಿಥಿಲೈವ ಸಾ ॥ ೨೦೯ ॥**

ಕಠಿನವಾದ ತಪಸ್ಸುಮಾಡುತ್ತಿರುವ ಆ ರಾಜರ್ಷಿಗಳ ಶರೀರಗಳಲ್ಲಿ ಕೃಶತ್ವವುಂಟಾಯಿತಲ್ಲದೆ ಶ್ರೇಷ್ಠವಾದ ಧ್ಯಾನದ ಸಿದ್ಧಿಯಲ್ಲಿ ಯಾವ ಪ್ರತಿಜ್ಞೆಯು ಮಾಡಲ್ಪಟ್ಟಿದ್ದಿತೋ ಅದು ಶಿಥಿಲವಾಗಲೇ ಇಲ್ಲ.

**ನಾಭೂತ್ಪರೀಷಹೈರ್ಭಂಗಸ್ತೇಷಾಂ ಚಿರ[೫]ಮುಪೋಷುಷಾಮ್ ।**
**ಗತಾಃ ಪರೀಷಹಾ ಏವ ಭಂಗಂ ತಾನ್ ಜೇತುಮಕ್ಷಮಾಃ ॥ ೨೧೦ ॥**

ಬಹುಕಾಲದವರೆಗೆ ಉಪವಾಸವನ್ನು ಮಾಡಿರುವ ಆ ರಾಜರ್ಷಿಗಳಿಗೆ ಕ್ಷುಧಾ ತೃಷಾ ಶೀತ ಉಷ್ಣ ಮೊದಲಾದ ಪರೀಷಹ–ಬಾಧೆಗಳಿಂದ ಭಂಗವುಂಟಾಗಲಿಲ್ಲ. ಆ ರಾಜರ್ಷಿಗಳನ್ನು ಜಯಿಸಲು ಅಸಮರ್ಥಗಳಾದ ಆ ಪರೀಷಹಗಳೇ ಭಂಗವನ್ನು ಹೊಂದಿದುವು.

**[೬]ತಪಸ್ತನೂನಪಾತ್ತಾಪಾದಭೂತ್ತೇಷಾಂ ಪರಾ ದ್ಯುತಿಃ ।**
**ನಿಷ್ಟಪ್ತಸ್ಯ ಸುವರ್ಣಸ್ಯ ದೀಪ್ತಿರ್ನ[೭]ನ್ವತಿರೇಕಿಣೀ ॥ ೨೧೧ ॥**

ಆ ರಾಜರ್ಷಿಗಳಿಗೆ ತಪಸ್ಸೆಂಬ ಬೆಂಕಿಯಿಂದುಂಟಾದ ಸಂತಾಪದಿಂದ ಉತ್ಕೃಷ್ಟವಾದ ತೇಜಸ್ಸುಂಟಾಯಿತು. ಚೆನ್ನಾಗಿ ಕಾಯಿಸಲ್ಪಟ್ಟ ಬಂಗಾರದ ಕಾಂತಿಯು ಹೆಚ್ಚಾಗುತ್ತದಲ್ಲವೇ ?

**ತಪೋಗ್ನಿತಪ್ತದೀಪ್ತಾಂಗಾಸ್ತೇಂತಃಶುದ್ಧಿಂ ಪರಾಂ ದಧುಃ ।**
**ತಪ್ತಾಯಾಂ ತನುಮೂಷಾಯಾಂ ಶುದ್ಧ್ಯತ್ಯಾತ್ಮಾ ಹಿ ಹೇಮವತ್ ॥**

ತಪಸ್ಸೆಂಬ ಬೆಂಕಿಯಿಂದ ದಹಿಸಲ್ಪಟ್ಟು ಪ್ರಕಾಶಮಾನವಾದ ಶರೀರವುಳ್ಳ ಆ ರಾಜರ್ಷಿಗಳು ಉತ್ಕೃಷ್ಟವಾದ ಅಂತಃಶುದ್ಧಿ–ಆತ್ಮಶುದ್ಧಿಯನ್ನು ಹೊಂದಿದರು. ಶರೀರವೆಂಬ ಮೂಸೆ–ಕೋವೆಯು ಕಾಯಿಸಲ್ಪಡುತ್ತಿರಲು, ಬಂಗಾರದಂತೆ, ಆತ್ಮನು ಶುದ್ಧನಾಗುತ್ತಾನಲ್ಲವೇ ?

**ತ್ವಗಸ್ಥಿಮಾತ್ರದೇಹಾಸ್ತೇ ಧ್ಯಾನಶುದ್ಧಿಮಧುಸ್ತರಾಮ್ ।**
**ಸರ್ವಂ ಹಿ ಪರಿಕರ್ಮೇದಂ ಬಾಹ್ಯಮಧ್ಯಾತ್ಮಶುದ್ಧಯೇ ॥ ೨೧೩ ॥**

ಬರೇ ತೊಗಲು ಮೂಳೆ–ಎಲುಬು ಉಳಿದಿರುವ ಶರೀರವುಳ್ಳ ಆ ರಾಜರ್ಷಿಗಳು ಧ್ಯಾನದ ಶುದ್ಧಿಯನ್ನು ವಿಶೇಷವಾಗಿ ಹೊಂದಿದರು. ಎಲ್ಲಾ ಈ ಹೊರಗಿನ ಸಾಮಗ್ರಿಯು ಅಧ್ಯಾತ್ಮಶುದ್ಧಿಗೋಸ್ಕರವಲ್ಲವೇ ? ಬಾಹ್ಯಸಾಮಗ್ರಿಯು ಆತ್ಮಶುದ್ಧಿಗೆ ಕಾರಣವಾಗುವುದೆಂದು ಭಾವವು.

**ಯೋಗಜಾಃ ಶುದ್ಧಯಸ್ತೇಷಾಮಣಿಮಾದಿಗುಣರ್ದ್ಧಯಃ ।**
**ಪ್ರಾದುರಾಸನ್ನಿಶುದ್ಧಂ ಹಿ ತಪಃ ಸೂತೇ ಮಹತ್ಫಲಮ್ ॥ ೨೧೪ ॥**

ಆ ರಾಜರ್ಷಿಗಳ ತಪೋಯೋಗದಿಂದುಂಟಾದ ಶುದ್ಧಿಗಳೂ ಅಣಿಮಾ ಮಹಿಮಾ ಮೊದಲಾದ ಗುಣಗಳೂ ಪ್ರಾದುರ್ಭವಿಸಿದುವು. ವಿಶುದ್ಧವಾದ ತಪಸ್ಸು ಮಹತ್ಫಲವನ್ನುಂಟುಮಾಡುತ್ತದಲ್ಲವೇ ?

**ತಪೋಮಯಃ [೮]ಪ್ರಣೀತೋಗ್ನಿಃ ಕರ್ಮಾಣ್ಯಾಹುತಯೋಭವನ್ ।**
**ವಿಧಿಜ್ಞಾ[೯]ಸ್ತೇ ಸುಯಜ್ವಾನೋ ಮಂತ್ರಂ ಸ್ವಾಯಂಭುವಂ ಮಾಃ ॥**

೧ ಅವಿಚ್ಛಿನ್ನಾತ್ ಅನುವರ್ತನಾತ್. ೨ ದೃಢಪ್ರತಿಜ್ಞಾಃ. ೩ ತಪಸ್ಕುರ್ವತಾಂ. ೪ ಕೃಶತ್ವಂ. ೫ ಉಪವಾಸಂ ಕುರ್ವತಾಂ. ೬ ತಪೋಗ್ನಿಜನಿತ ಸಂತಾಪಾತ್. ೭ ಅತಿಶಯವತೀ ಭವತಿ ಹಿ. ೮ ಉಪಸಂಸ್ಕೃತಃ. ೯ ತಪೋಧನಾಃ.

ತಪೋಮಯವಾದ ಬೆಂಕಿಯು ಸಂಸ್ಕಾರಮಾಡಲ್ಪಟ್ಟಿತು (ಉರಿಸಲ್ಪಟ್ಟಿತು) ಮೋಹನೀಯಾದಿಕರ್ಮಗಳು ಆಹುತಿಗಳಾದುವು. ವಿಧಿಯನ್ನು ತಿಳಿದ ಆ ರಾಜರ್ಷಿಗಳು ಅಧ್ವರ್ಯುಗಳಾದರು. ಸ್ವಯಂಭುವಾದ ವೃಷಭಸ್ವಾಮಿಯ ವಚನವು ಮಂತ್ರವ ಯಿತು.

**[೧]ಮಹಾಧ್ವರಪತಿರ್ದೇವೋ ವೃಷಭೋ [೨]ದಕ್ಷಿಣಾ ದಯಾ ।**
**ಫಲಂ ಕಾಮಿತಸಂಸಿದ್ಧಿರಪವರ್ಗಃ [೩]ಕ್ರಿಯಾವಧಿಃ ॥ ೨೧೬ ॥**

ವೃಷಭಸ್ವಾಮಿಯು ಈ ಮಹಾಯಜ್ಞಕ್ಕೆ ಅಧಿಪತಿಯು. ದಯೆಯು ಯಜ್ಞಾಂತ್ಯದಲ್ಲಿ ಯಾಜಕರಿಗೆ ಕೊಡಲ್ಪಡುವ ದಕ್ಷಿಣೆಯು. ಇಷ್ಟಾರ್ಥಸಿದ್ಧಿಯು ತಪೋಯಜ್ಞದ ಫಲವಾಗಿದ್ದಿತು. ಕ್ರಿಯೆಯ ಸಮಾಪ್ತಿಯು ಮೋಕ್ಷವು. ತಪಃಕ್ರಿಯೆಯ ಪೂರ್ತಿಯೇ ಮುಕ್ತಿಯೆಂದು ಭಾವವು.

**ಇತೀಮಾ[೪]ಮಾರ್ಷಭೀ[೫]ಮಿಷ್ಟಿಮಭಿಸಂಧಾಯ ತೇಂಜಸಾ ।**
**[೬]ಪ್ರಾವೀವೃತ[೭]ನ್ನನೂಚಾನಾಸ್ತಪೋಯಜ್ಞಮನುತ್ತರಮ್ ॥ ೨೧೭ ॥**

ಸಂಪೂರ್ಣಶಾಸ್ತ್ರವನ್ನು ಅಧ್ಯಯನಮಾಡಿರುವ ಆ ರಾಜರ್ಷಿಗಳು ಮೇಲೆ ಹೇಳಿದ ಪ್ರಕಾರವಾಗಿ ಈ ಋಷಿಸಂಬಂಧಿಯಾದ ಯಜ್ಞವನ್ನು ಸಂಕಲ್ಪಿಸಿ ಶೀಘ್ರವಾಗಿ ಶ್ರೇಷ್ಠವಾದ ತಪೋಯಜ್ಞವನ್ನು ಮಾಡಿದರು. ಉತ್ಕೃಷ್ಟತಪಸ್ಸನ್ನು ಮಾಡಿದರೆಂಬ ಭಾವವು.

**ಇತ್ಯಮೂಮನಗಾರಾಣಾಂ ಪರಾಂ [೮]ಸಂಗೀರ್ಯ ಭಾವನಾಮ್ ।**
**ತೇ ತಥಾ ನಿರ್ವಹಂತಿ ಸ್ಮ ನಿಸರ್ಗೋ[೯]ಯಂ ಮಹೀಯಸಾಮ್ ॥**

ಈ ಪ್ರಕಾರವಾಗಿ ಮುನಿಗಳ ಈ ಉತ್ಕೃಷ್ಟಭಾವನೆಯನ್ನು ಪ್ರತಿಜ್ಞೆಮಾಡಿ ಆ ರಾಜರ್ಷಿಗಳು ತಮ್ಮ ಪ್ರತಿಜ್ಞೆಯಂತೆಯೇ ನಿರ್ವಹಿಸಿದರು. ದೊಡ್ಡವರಿಗೆ ಪ್ರಕೃತ ಕಾರ್ಯವನ್ನು ನಿರ್ವಹಿಸುವಿಕೆಯು ಸ್ವಾಭಾವಿಕವಾದುದು.

**ಕಿಮತ್ರ ಬಹುನಾ ಧರ್ಮಕ್ರಿಯಾ ಯಾವ[೧೦]ತ್ಯವಿಪ್ಲುತಾ ।**
**ತಾಂ ಕೃತ್ಸ್ನಾಂ ತೇ ಸ್ವಸಾಚ್ಚಕ್ರು[೧೧]ಸ್ತ್ಯಕ್ತರಾಜನ್ಯವಿಕ್ರಿಯಾಃ ॥ ೨೧೯ ॥**

ಈ ವಿಷಯದಲ್ಲಿ ಹೆಚ್ಚು ಹೇಳುವುದೇನು ? ಎಷ್ಟು ನಿರ್ಬಾಧಿತವಾದ ಧರ್ಮಕ್ರಿಯೆಯುಂಟೋ ಅದೆಲ್ಲವನ್ನೂ ರಾಜರುಗಳಿಗುಂಟಾಗುವ ವಿಕಾರವಿಲ್ಲದವರಾದ ಆ ರಾಜರ್ಷಿಗಳು ತಮ್ಮ ವಶಮಾಡಿಕೊಂಡರು.

**ಇತ್ಥಂ ಪುರಾಣಪುರುಷಾದಧಿಗಮ್ಯ [೧೨]ಬೋಧಿಂ**
**ತತ್ತೀರ್ಥಮಾನಸಸರಃಪ್ರಿಯರಾಜಹಂಸಾಃ ।**
**ಯೇ ರಾಜ್ಯಭೂತಿ[೧೩]ಮವಧೂಯ [೧೪]ವಿಧೂತಮೋಹಾಃ**
**ಪ್ರಾವ್ರಾಜಿಷುರ್ಭರತರಾಜ[೧೫]ಮನಂತುಕಾಮಾಃ ॥ ೨೨೦ ॥**

**ತೇ [೧೬]ಪೌರವಾ ಮುನಿವರಾಃ ಪುರುಧೈರ್ಯಸಾರಾ**
**ಧೀರಾ[೧೭]ನಗಾರಚರಿತೇಷು ಕೃತಾವಧಾನಾಃ ।**
**ಯೋಗೀಶ್ವರಾನುಗತಮಾರ್ಗ[೧]ಮನುಪ್ರಪನ್ನಾಃ**
**[೨]ಶಂ [೩]ನೋ ದಿಶಂತ್ವಖಿಲ[೪]ಲೋಕಹಿತೈಕತಾನಾಃ ॥ ೨೨೧ ॥**

ಭರತರಾಜನಿಗೆ ನಮಸ್ಕಾರಮಾಡಲಿಚ್ಛಿಸದ ಯಾವ ರಾಜಕುಮಾರರು ಮೇಲೆ ಹೇಳಿದಪ್ರಕಾರವಾಗಿ ಪುರಾಣಪುರುಷನಾದ ವೃಷಭಸ್ವಾಮಿಯಿಂದ ವಿಶಿಷ್ಟವಾದ ಜ್ಞಾನವನ್ನು ಹೊಂದಿ ರಾಜ್ಯಸಂಪತ್ತಿಯನ್ನು ತ್ಯಜಿಸಿ ಮೋಹವನ್ನು ದೂರಮಾಡಿದವರಾಗಿ ಸನ್ಯಾಸಿಗಳಾದರೋ ವೃಷಭಸ್ವಾಮಿಯ ಪ್ರವಚನರೂಪವಾದ ಮಾನಸ ಸರೋವರಕ್ಕೆ ರಾಜಹಂಸಗಳಂತಿರುವವರೂ ಪುರುಪರಮೇಶ್ವರರ ಪುತ್ರರೂ ಉತ್ಕೃಷ್ಟವಾದ ಧೈರ್ಯವೇ ಪ್ರಧಾನವಾಗಿರುವವರೂ ಧೀರರಾದ ಮುನಿಗಳ ಆಚರಣೆಗಳಲ್ಲಿ ಜಾಗರೂಕರಾಗಿರುವವರೂ ಮುನಿಶ್ರೇಷ್ಠರಿಂದ ಅನುಸರಿಸಲ್ಪಟ್ಟ ಮಾರ್ಗವನ್ನು ಲಕ್ಷ್ಯವನ್ನಾಗಿಟ್ಟುಕೊಂಡಿರುವವರೂ ಸಮಸ್ತಜನರ ಹಿತದಲ್ಲಿ ಆಸಕ್ತರೂ ಆದ ಆ ಮುನಿಶ್ರೇಷ್ಠರೂ ನಮಗೆ ಸುಖವನ್ನುಕೊಡಲಿ.

**ನತ್ವಾ ವಿಶ್ವಸೃಜಂ ಚರಾಚರಗುರುಂ ದೇವಂ [೫]ದಿವೀಶಾರ್ಚಿತಂ**
**ನಾನ್ಯಸ್ಯ ಪ್ರಣತಿಂ ವ್ರಜಾಮ ಇತಿ ಯೇ ದೀಕ್ಷಾಂ ಪರಾಂ ಸಂಶ್ರಿತಾಃ ।**
**ತೇ ನಃ ಸಂತು ತಪೋವಿಭೂತಿಮುಚಿತಾಂ ಸ್ವೀಕೃತ್ಯ ಮುಕ್ತಿಶ್ರಿಯಾಮ್**
**ಬದ್ಧೇಚ್ಛಾ ವೃಷಭಾತ್ಮಜಾ[೬]ಜಿನಜುಷಾಮಗ್ರೇಸರಾಃ ಶ್ರೇಯಸೇ ॥ ೨೨೨ ॥**

ಸಮಸ್ತಲೋಕವನ್ನು ಸೃಷ್ಟಿಸಿದವನೂ ಅಂದರೆ ಕೃತಯುಗದ ಪ್ರಾರಂಭದಲ್ಲಿ ಸಮಸ್ತಜನರಿಗೆ ಜೀವನೋಪಾಯವನ್ನು ತೋರಿಸಿದವನೂ ಚರಾಚರ ಪ್ರಾಣಿಗಳಿಗೆ ಗುರುವೂ ದೇವೇಂದ್ರನಿಂದ ಪೂಜಿತನೂ ಆದ ವೃಷಭಸ್ವಾಮಿಯನ್ನು ನಮಸ್ಕರಿಸಿ ಬೇರೆಯವರಿಗೆ ನಮಸ್ಕಾರಮಾಡುವುದಿಲ್ಲವೆಂದು ಯಾರು ಉತ್ಕೃಷ್ಟವಾದ ದೀಕ್ಷೆಯನ್ನು ಹೊಂದಿದರೋ ಉಚಿತವಾದ ತಪಸ್ಸಂಪತ್ತಿಯನ್ನು ಸ್ವೀಕರಿಸಿ ಮೋಕ್ಷಲಕ್ಷ್ಮಿಯಲ್ಲಿ ಇಚ್ಛೆಯುಳ್ಳವರೂ ವೃಷಭತೀರ್ಥಂಕರರ ಪುತ್ರರೂ ಜಿನೇಶ್ವರನನ್ನು ಭಜಿಸಿದವರಲ್ಲಿ ಮೊದಲನೆಯವರೂ ಆದ ಆ ರಾಜರ್ಷಿಗಳು ನಮ್ಮ ಶ್ರೆಯಸ್ಸಿಗೋಸ್ಕರ ಇರಲಿ.

**ಸ ಶ್ರೀಮಾನ್ಭರತೇಶ್ವರಃ [೭]ಪ್ರಣಿಧಿಭಿರ್ಯಾನ್ನಹ್ವತಾಂ ನಾನಯ-**
**ತ್ಸಂಭೋಕ್ತುಂ ನಿಖಿಲಾಂ ವಿಭಜ್ಯ ವಸುಧಾಂ ಸಾರ್ಧಂ ಚ**
**ಯೈ[೮]ರ್ನಾಶಕತ್ ।**
**ನಿರ್ವಾಣಾಯ ಪಿತೃೂಷಭಂ ಜಿನವೃಷಂ ಯೇ [೯]ಶಿಶ್ರಿಯುಃ ಶ್ರೇಯಸೇ**
**ತೇ ನೋ ಮಾನಧನಾ ಹರಂತು ದುರಿತಂ ನಿರ್ದಗ್ಧಕರ್ಮೇಂಧನಾಃ ॥**

ಆ ಶ್ರೀಮಂತನಾದ ಭರತೇಶ್ವರನು ಯಾರನ್ನು ಭೃತ್ಯರಿಂದ ನಮ್ರತೆಯನ್ನು ಹೊಂದಿಸಲಿಲ್ಲವೋ ಯಾರೊಡನೆ ಸಮಸ್ತ ಪೃಥ್ವಿಯನ್ನು ವಿಭಾಗಿಸಿ ಅನುಭವಿಸಲು ಸಮರ್ಥನಾಗಲಿಲ್ಲವೋ ಯಾರು ಮುಕ್ತಿಗೋಸ್ಕರ ಜಿನಶ್ರೇಷ್ಠನೂ ತಂದೆಯೂ ಆದ ವೃಷಭಸ್ವಾಮಿಯನ್ನು ಆಶ್ರಯಿಸಿದರೋ ಮಾನವೇ ಧನವಾಗಿರುವವರೂ ಕರ್ಮವೆಂಬ ಕಟ್ಟಿಗೆಯನ್ನು ಸುಟ್ಟವರೂ ಆದ ಆ ರಾಜರ್ಷಿಗಳು ನಮ್ಮ ಶ್ರೇಯಸ್ಸಿಗೋಸ್ಕರ ನಮ್ಮ ಪಾಪವನ್ನು ನಾಶಮಾಡಲಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭರತರಾಜಾನುಜದೀಕ್ಷಾವರ್ಣನಂ ನಾಮ ಚತುಸ್ತ್ರಿಂಶಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕಭಾವದೀಪಿಕಾವ್ಯಾಖ್ಯೆಯೋಳ್'' ಭರತರಾಜನ ಅನುಜರ ದೀಕ್ಷಾವರ್ಣನವೆಂಬ
ಮೂವತ್ತನಾಲ್ಕನೆಯ ಪರ್ವವು ಸಂಪೂರ್ಣವಾದುದು.

---

೧ ಮಹಾಯಜ್ಞಪತಿಃ. ೨ ಹೋಮಾಂತೇ ಯಾಜಕಾದೀನಾಂ ದೇಯದ್ರವ್ಯಂ. ೩ ಕ್ರಿಯಾವಸಾನಃ. ೪ ಋಷಿಸಂಬಂಧಿನೀಂ. ೫ ಯಜನಂ. ೬ ಚಕ್ರುಃ. ೭ ಪ್ರವಚನೇ ಸಾಂಗೇ ಅಧೀತಿನಃ. ೮ ಪ್ರತಿಜ್ಞಾಂ ಕೃತ್ವಾ. ೯ ಪ್ರಕೃತಕಾರ್ಯನಿರ್ವಹಣಂ. ೧೦ ಅಬಾಧಿತಾ. ೧೧ ತ್ಯಕ್ತರಾಜಸಮೂಹವಿಕಾರಾಃ. ೧೨ ವಿಶಿಷ್ಟಜ್ಞಾನಂ. ೧೩ ತ್ಯಕ್ತ್ವಾ. ೧೪ ತ್ಯಕ್ತರಾಜಸಮೂಹ ಮೋಹಾಃ. ೧೫ ನಮಸ್ಕಾರಂ ನ ಕರ್ತುಕಾಮಾಃ. ೧೬ ಪುರೋರಪತ್ಯಾನಿ ಪುಮಾಂಸಃ. ೧೭ ಯತ್ಯಾಚಾರೇಷು

೧ ಲಕ್ಷೀಕೃತ್ಯ. ೨ ಸುಖಂ. ೩ ಅಸ್ಮಾಕಂ. ೪ ಜನಹಿತೇ ಅನನ್ಯವೃತ್ತಯಃ. ೫ ಇಂದ್ರ. ೬ ಜಿನಂ ಸೇವಂತ ಇತಿ ಜಿನಜುಷಸ್ತೇಷಾಂ. ೭ ಚರೈಃ. ೮ ಸಮರ್ಥೋ ನಾಭೂತ್. ೯ ಆಶ್ರಯಂತಿ ಸ್ಮ.

|| ಶ್ರೀ ವೃಷಭಜಿನಾಯ ನಮಃ ||

# ಅಥ ಪಂಚತ್ರಿಂಶತ್ತಮಂ ಪರ್ವ

**ಅಥ ಚಕ್ರಧರಸ್ಯಾಸೀತ್ಕಿಂಚಿಚ್ಚಿಂತಾಕುಲಂ ಮನಃ ।**
**[೧]ದೋರ್ಬಲಿ[೨]ನ್ಯನುನೇತವ್ಯೇ ಯೂನಿ ದೋರ್ದರ್ಪಶಾಲಿನಿ ॥ ೧ ॥**

ಅನಂತರದಲ್ಲಿ ಯೌವನಸ್ಥನೂ ಬಾಹುಬಲದ ಗರ್ವದಿಂದ ಶೋಭಿಸುವವನೂ ಆದ ಬಾಹುಬಲಿಕುಮಾರನನ್ನು ವಶಪಡಿಸಿಕೊಳ್ಳಬೇಕಾಗಿರಲು ಚಕ್ರವರ್ತಿಯ ಮನಸ್ಸು ಸ್ವಲ್ಪ ಚಿಂತೆಯಿಂದ ವ್ಯಾಕುಲವಾಯಿತು.

**ಅಹೋ ಭ್ರಾತೃಗಣೋಸ್ಮಾಕಂ [೩]ನಾಭಿನಂದತಿ [೪]ನಂದಥುಮ್ ।**
**ಸನಾಭಿತ್ವಾದವಧ್ಯತ್ವಂ ಮನ್ಯಮಾನೋ[೫]ಯಮಾತ್ಮನಃ ॥ ೨ ॥**

ಆಗ ಭರತೇಶ್ವರನು ಇಂತೆಂದನು:– "ಈ ಸಹೋದರರ ಸಮೂಹವು ತಾನು ಜ್ಞಾತಿಯಾಗಿರುವುದರಿಂದ ವಧೆಮಾಡಲ್ಪಡತಕ್ಕುದಲ್ಲವೆಂದು ತಿಳಿದು ನಮ್ಮ ಆನಂದವನ್ನು ಹೆಚ್ಚಿಸುವುದಿಲ್ಲ. ಆಶ್ಚರ್ಯ !

**[೬]ಅವಧ್ಯಂ ಶತಮಿ[೭]ತ್ಯಾಸ್ಥಾ ನೂನಂ ಭ್ರಾತೃಶತಸ್ಯ ಮೇ ।**
**ಯತಃ ಪ್ರಣಾಮವಿಮುಖಂ [೮]ಗತವನ್ನಃ [೯]ಪ್ರತೀಪತಾಮ್ ॥ ೩ ॥**

ನನಗೆ ನಮಸ್ಕಾರಮಾಡುವುದಕ್ಕೆ ಮನಸ್ಸಿಲ್ಲದೆ ಪ್ರತಿಕೂಲತ್ವವನ್ನು ಹೊಂದಿರುವುದರಿಂದ ಈ ನೂರುಮಂದಿ ಸಹೋದರರು ನೂರುಮಂದಿ ಸಹೋದರರುಳ್ಳ ನನಗೆ ತಾವು ವಧ್ಯರಲ್ಲವೆಂದು ನಿಜವಾಗಿಯೂ ತಿಳಿದಿರುತ್ತಾರೆ. ಒಬ್ಬ ಮನುಷ್ಯನು ಬಹುಜನರನ್ನು ವಧೆಮಾಡಲಾಗುವುದಿಲ್ಲವೆಂದು ತಿಳಿದರೆಂದು ಭಾವವು.

**ನ ತಥಾಸ್ಮಾದೃಶಾಂ ಖೇದೋ ಭವತ್ಯಪ್ರಣತೇ ದ್ವಿಷಿ ।**
**ದುರ್ಗರ್ವಿತೇ ಯಥಾ ಜ್ಞಾತಿವರ್ಗೇಂತರ್ಗೇಹವರ್ತಿನಿ ॥ ೪ ॥**

ದುರಹಂಕಾರವುಳ್ಳವರೂ ಮನೆಯೊಳಗಿರುವವರೂ ಆದ ಜ್ಞಾತಿಗಳಲ್ಲಿ ಹೇಗೆ ಖೇದವುಂಟಾಗುವುದೋ ಹಾಗೆ ನಮಸ್ಕಾರಮಾಡದಿರುವ ಶತ್ರುವಿನಲ್ಲಿ ನಮ್ಮಂಥವರಿಗೆ ಖೇದವಾಗುವುದಿಲ್ಲ.

**ಮುಖೈರನಿಷ್ಟವಾಗ್ವಹ್ನಿದೀಪಿತೈರಭಿಧೂಮಿತಾಃ ।**
**ದಹಂತ್ಯಲಾತವಚ್ಚ [೧೦]ಸ್ವಾಃ ಪ್ರಾತಿಕೂಲ್ಯಾನಿಲೇರಿತಾಃ ॥ ೫ ॥**

ಬೆಂಕಿಯ ಕೊಳ್ಳಿಯಂತೆ ಅನಿಷ್ಟವಾದ ವಚನವೆಂಬ ಬೆಂಕಿಯುಳ್ಳ ಮುಖಗಳಿಂದ ಹೊಗೆಯಾಡಿಸಲ್ಪಟ್ಟವರೂ ವಿರುದ್ಧಾಚರಣವೆಂಬ ಗಾಳಿಯಿಂದ ಪ್ರೇರಿತರೂ ಆದ ಬಾಂಧವರು ದಹಿಸುತ್ತಾರೆ. ಖೇದವನ್ನುಂಟುಮಾಡುತ್ತಾರೆಂದು ಭಾವವು.

**[೧೧]ಪ್ರತೀಪವೃತ್ತಯಃ ಕಾಮಂ ಸಂತು ಮೇನ್ಯೇ ಕುಮಾರಕಾಃ ।**
**ಬಾಲ್ಯಾತ್ಪ್ರಭೃತಿ ಯೇಸ್ಮಾಭಿಃ ಸ್ವಾತಂತ್ರ್ಯೇಣೋಪಲಾಲಿತಾಃ ॥ ೬ ॥**

**ಯುವಾ ತು ದೋರ್ಬಲೀ ಪ್ರಾಜ್ಞಃ ಕ್ರಮಜ್ಞಃ [೧೨]ಪ್ರಶ್ರಯೀ ಪಟುಃ ।**
**ಕಥಂ ನಾಮ ಗತೋಸ್ಮಾಸು [೧೩]ವಿಕ್ರಿಯಾಂ ಸುಜನೋಪಿ ಸನ್ ॥ ೭ ॥**

ಚಿಕ್ಕಂದಿನಿಂದ ಮೊದಲುಗೊಂಡು ನಮ್ಮಿಂದ ಸ್ವೇಚ್ಛೆಯಾಗಿ ಆಟವಾಡಿಸಲ್ಪಟ್ಟ ಬೇರೆ ಕುಮಾರರು ನನಗೆ ಪ್ರತಿಕೂಲಾಚರಣೆಯುಳ್ಳವರಾಗಿ ಬೇಕಾದಹಾಗಿರಲಿ. ಯೌವನಸ್ಥನೂ ಬುದ್ಧಿಶಾಲಿಯೂ ಕ್ರಮವನ್ನು ತಿಳಿದವನೂ ವಿನಯಪರನೂ ನಿಪುಣನೂ ಆದ ಬಾಹುಬಲಿಯು ಸತ್ಪುರುಷನಾಗಿದ್ದರೂ ಹೇಗೆ ನಮ್ಮಲ್ಲಿ ವಿಕಾರವನ್ನು ಹೊಂದಿದನು ?

---

೧ ಬಾಹುಬಲಿಕುಮಾರೇ. ೨ ವಶೀಕರ್ತುಂ ಯೋಗ್ಯೇ ಸತಿ. ೩ ನಾಭಿವರ್ಧಯತಿ. ೪ ಆನಂದಂ. ೫ ದೃಶ್ಯಮಾನಃ. ೬ ಬಹುಜನ ಏಕಪುರುಷೇಣಾವಧ್ಯ ಇತಿ. ೭ ಬುದ್ಧಿಃ. ೮ ಗತಂ. ೯ ಪ್ರತಿಕೂಲತ್ವಂ. ೧೦ ಬಾಂಧವಾಃ. ೧೧ ಪ್ರತಿಕೂಲವರ್ತನಾಃ. ೧೨ ವಿನಯವಾನ್. ೧೩ ವಿಕಾರಂ.

**ಕಥಂ ಚ ಸೋ[೧]ನುನೇತವ್ಯೋ ಬಲೀ ಮಾನಧನೋಧುನಾ ।**
**ಜಯಾಂಗಂ [೨]ಯಸ್ಯ ದೋರ್ದರ್ಪಃ ಶ್ಲಾಘ್ಯತೇ ರಣಮೂರ್ಧನಿ ॥ ೮ ॥**

ಬಲಿಷ್ಠನೂ ಮಾನವೇ ಧನವಾಗಿರುವವನೂ ಆದ ಆ ಬಾಹುಬಲಿಕುಮಾರನನ್ನು ಈಗ ಹೇಗೆ ವಶಮಾಡಿಕೊಳ್ಳುವುದು ? ಅವನ ಬಾಹುಬಲವು ರಣಾಗ್ರದಲ್ಲಿ ಜಯಕ್ಕೆ ಸಾಧನವೆಂದು ಹೊಗಳಲ್ಪಡುತ್ತದೆ. ಬಾಹುಬಲಿಯು ಅನುಪಮ ಬಾಹುಬಲಶಾಲಿಯೆಂದು ಭಾವವು.

**ಸೋಯಂ ಭುಜಬಲೀ ಬಾಹುಬಲಶಾಲೀ ಮದೋದ್ಧತಃ ।**
**ಮಹಾನಿವ ಗಜೋ ಮಾದ್ಯನ್ ದುರ್ಗ್ರಹೋನುನಯೈರ್ವಿನಾ ॥ ೯ ॥**

ಬಾಹುಬಲದಿಂದ ಶೋಭಿಸುವವನೂ ಮದೋದ್ಧತನೂ ಪ್ರಸಿದ್ಧನೂ ಆದ ಈ ಭುಜಬಲಿಯನ್ನು, ಮದಿಸಿದ ದೊಡ್ಡ ಆನೆಯಂತೆ, ನಮ್ರತೆಗಳಿಂದಲ್ಲದೆ ಹಿಡಿಯುವುದು ಕಷ್ಟ.

**ನ ಸ ಸಾಮಾನ್ಯಸಂದೇಶೈಃ ಪ್ರಹ್ವೀಭವತಿ ದುರ್ಮದೀ ।**
**ಗ್ರಹೋ ದುಷ್ಟ ಇವಾ[೩]ವಿಷ್ಟೋ ಮಂತ್ರವಿದ್ಯಾ[೪]ಚಣೈರ್ವಿನಾ ॥ ೧೦ ॥**

ಪ್ರವೇಶಿಸಿರುವ ದುಷ್ಟಗ್ರಹವು ಮಂತ್ರವಿದ್ಯಾನಿಪುಣರಿಂದಲ್ಲದೆ ಹೇಗೆ ಬಗ್ಗುವುದಿಲ್ಲವೋ ಹಾಗೆ ದುರಹಂಕಾರಿಯಾದ ಆ ಬಾಹುಬಲಿಕುಮಾರನು ಸಾಮಾನ್ಯವಾದ ಸಂದೇಶಗಳಿಂದ(ಹೇಳಿಕಳುಹುವ ಮಾತುಗಳಿಂದ) ಬಗ್ಗುವುದಿಲ್ಲ.

**ಶೇಷಕ್ಷತ್ರಿಯಯೂನಾಂ ಚ ತಸ್ಯ ಚಾಸ್ತ್ಯಂ[೫]ತರಂ ಮಹತ್ ।**
**[೬]ಮೃಗಸಾಮಾನ್ಯ[೭]ಮಾನಾಯ್ಯೈರ್ಧರ್ತುಂ ಕಿಂ ಶಕ್ಯತೇ ಹರಿಃ ॥ ೧೧ ॥**

ಉಳಿದ–ಬೇರೆ ಕ್ಷತ್ರಿಯಯುವಕರಿಗೂ ಆ ಬಾಹುಬಲಿಕುಮಾರನಿಗೂ ದೊಡ್ಡದಾದ ಭೇದವಿದೆ. ಸಿಂಹವು ಕ್ಷುದ್ರಮೃಗಗಳಿಗೆ ಸಮಾನವೆಂದು ತಿಳಿದು ಬಲೆಗಳಿಂದ ಹಿಡಿಯುವುದಕ್ಕೆ ಶಕ್ಯವೇ ?

**ಸೋಭೇದ್ಯೋ ನೀತಿಚುಂಚುತ್ವಾದ್ದಂಡಸಾಧ್ಯೋ ನ ವಿಕ್ರಮೀ ।**
**ನೈಷ ಸಾಮಪ್ರಯೋಗಸ್ಯ ವಿಷಯೋ ವಿಕೃತಾಶಯಃ ॥ ೧೨ ॥**

ಆ ಬಾಹುಬಲಿಕುಮಾರನು ನೀತಿನಿಪುಣನಾಗಿರುವುದರಿಂದ ಭೇದಿಸಲಶಕ್ಯನಾಗಿರುತ್ತಾನೆ. ಭೇದೋಪಾಯಕ್ಕೆ ಸಿಕ್ಕುವವನಲ್ಲವೆಂದು ಭಾವವು. ಪರಾಕ್ರಮಿಯು ದಂಡೋಪಾಯದಿಂದ ಸಾಧ್ಯನೂ ಅಲ್ಲ. ವಕ್ರಸ್ವಭಾವದವನಾದ ಇವನು ಸಾಮೋಪಾಯಕ್ಕೂ ವಿಷಯನಲ್ಲವು (ಸಿಕ್ಕುವವನಲ್ಲ ).

**ಜ್ವಲತ್ಯೇವ ಸ ತೇಜಸ್ವೀ ಸ್ನೇಹೇನೋಪಕೃತೋಪಿ ಸನ್ ।**
**ಘೃತಾಹುತಿಪ್ರಸೇಕೇನ ಯಥೇದ್ಧಾರ್ಚಿ[೮]ರ್ಮಖಾನಲಃ ॥ ೧೩ ॥**

ಯಾಗದ ಬೆಂಕಿಯು ತುಪ್ಪದ ಆಹುತಿಯ ಸೇಚನೆಯಿಂದ ಹೇಗೆ ಪ್ರಜ್ವಲಿತವಾದ ಜ್ವಾಲೆಯುಳ್ಳುದಾಗುವುದೋ ಹಾಗೆ ತೇಜಸ್ವಿಯಾದ ಆ ಬಾಹುಬಲಿಕುಮಾರನು ಪ್ರೀತಿಯಿಂದ ಉಪಕಾರಮಾಡಲ್ಪಟ್ಟವನಾದರೂ ಕೋಪಿಸಿಕೊಳ್ಳುತ್ತಾನೆ.

**ಸ್ವಭಾವಪರುಷೇ ಚಾಸ್ಮಿನ್ ಪ್ರಯುಕ್ತಂ ಸಾಮ [೯]ನಾರ್ಥಕೃತ್ ।**
**ವಪುಷಿ ದ್ವಿರದಸ್ಯೇವ ಯೋಜಿತಂ [೧೦]ತ್ವಚ್ಯಮೌಷಧಮ್ ॥ ೧೪ ॥**

---

೧ ಸ್ವೀಕಾರ್ಯಃ. ೨ ಬಾಹುಬಲಿನಃ. ೩ ಪ್ರವಿಷ್ಟಃ. ೪ ಪ್ರತೀತ್ಯೈಃ. ೫ ಭೇದಃ. ೬ ಮೃಗಸಮಾನತಾಂ ಕೃತ್ವಾ. ೭ ಜಾಲೈಃ. ೮ ಯಜ್ಞಾಗ್ನಿಃ. ೯ ಕಾರ್ಯಕಾರಿ ಚ. ೧೦ ತ್ವಚೇಹಿತಂ.

ಆನೆಯ ಶರೀರದಲ್ಲಿ ಪ್ರಯೋಗಿಸಲ್ಪಟ್ಟಿದೂ ಚರ್ಮಕ್ಕೆ ಹಿತಕರವೂ ಆದ ಔಷಧವು ಹೇಗೆ ಪ್ರಯೋಜನಕರವಾಗುವುದಿಲ್ಲವೋ ಹಾಗೆ ಸ್ವಭಾವದಿಂದಲೇ ಕಠೋರನಾದ ಈ ಬಾಹುಬಲಿಕುಮಾರನಲ್ಲಿ ಪ್ರಯೋಗಿಸಲ್ಪಟ್ಟ ಸಾಮೋಪಾಯವು ಪ್ರಯೋಜನಕರವಲ್ಲ. ವ್ಯರ್ಥವೆಂದು ಭಾವವು.

**ಪ್ರಾಯೋ [೧]ವ್ಯಾಖ್ಯಾತ ಏವಾಸ್ಯ ಭಾವಃ ಶೇಷೈಃ ಕುಮಾರಕೈಃ ।**
**[೨]ಮದಾಜ್ಞಾವಿಮುಖೈಸ್ತ್ಯಕ್ತರಾಜ್ಯಭೋಗೈ[೩]ರ್ವನೋನ್ಮುಖೈಃ ॥ ೧೫ ॥**

ಈ ಬಾಹುಬಲಿಕುಮಾರನ ಅಭಿಪ್ರಾಯವು ನನ್ನ ಆಜ್ಞಾವಿಮುಖರೂ ರಾಜ್ಯ ಭೋಗಗಳನ್ನು ತ್ಯಜಿಸಿದವರೂ ತಪೋವನಕ್ಕೆ ಅಭಿಮುಖರೂ ಆದ ಉಳಿದ ಕುಮಾರರಿಂದಲೇ ಬಹಳ ಮಟ್ಟಿಗೆ ತಿಳಿದೇ ಇರುತ್ತದೆ.

**ಭೂಯೋಽಪ್ಯನುನಯೈರಸ್ಯ ಪರೀಕ್ಷಿಷ್ಯಾಮಹೇ [೪]ಮತಮ್ ।**
**ತಥಾಪ್ಯಪ್ರಣತೇ ತಸ್ಮಿ[೫]ನ್ವಿಧೇಯಂ ಚಿಂತ್ಯಮುತ್ತರಮ್ ॥ ೧೬ ॥**

ಆದರೂ ಮತ್ತೆ ಇವನ ಅಭಿಪ್ರಾಯವನ್ನು ಅನುಸರಣೆಗಳಿಂದ ಪರೀಕ್ಷಿಸುವೆವು. ಹಾಗಾದರೂ ಅವನು ನಮಸ್ಕಾರಮಾಡದಿದ್ದರೆ ಮುಂದೆ ಮಾಡಬೇಕಾದ ಕಾರ್ಯವು ಯೋಚಿಸತಕ್ಕುದಾಗಿದೆ.

**ಜ್ಞಾತಿವ್ಯಾಜನಿಗೂಢಾಂ[೬]ತರ್ವಿಕ್ರಿಯೋ ನಿಷ್ಪ್ರತಿಕ್ರಿಯಃ ।**
**ಸೋಽಂತರ್ಗೃಹೋತ್ಥಿತೋ ವಹ್ನಿರಿವಾಶೇಷಂ ದಹೇ[೭]ತ್ಕುಲಮ್ ॥ ೧೭ ॥**

ಜ್ಞಾತಿಯೆಂಬ ನೆವದಿಂದ ಮನಸ್ಸಿನಲ್ಲಿ ಅಡಗಿರುವ ವಿಕಾರವು ಪ್ರತಿಕಾರವಿಲ್ಲ ದುದಾಗಿ, ಮನೆಯೊಳಗುಂಟಾದ ಬೆಂಕಿಯು ಮನೆಯನ್ನೆಲ್ಲ ಸುಟ್ಟುಬಿಡುವಂತೆ, ವಂಶವನ್ನೆಲ್ಲ ಸುಟ್ಟುಬಿಡುವುದು.

**[೮]ಅಂತಃಪ್ರಕೃತಿಜಃ ಕೋಪೋ ವಿಘಾತಾಯ ಪ್ರಭೋರ್ಮತಃ ।**
**ತರುಶಾಖಾಗ್ರಸಂಘಟ್ಟಜನ್ಮಾ ವಹ್ನಿರ್ಯಥಾ ಗಿರೇಃ ॥ ೧೮ ॥**

ಮರಗಳ ಕೊಂಬೆಗಳ ತುದಿಯ ಉಜ್ಜಾಟದಿಂದುಂಟಾದ ಬೆಂಕಿಯು ಪರ್ವತದ ವಿನಾಶಕ್ಕೆ ಕಾರಣವಾಗುವಂತೆ ಬಂಧುವರ್ಗದಲ್ಲಿ ಉಂಟಾದ ಕೋಪವು ಪ್ರಭು–ಯಜಮಾನನ ವಿನಾಶಕ್ಕೆ ಕಾರಣವಾಗುವುದೆಂದು ತಿಳಿಯಲ್ಪಟ್ಟಿದೆ.

**ತದಾಶು [೯]ಪ್ರತಿಕರ್ತವ್ಯಃ ಸ ಬಲೀ ವಕ್ರತಾಂ ಶ್ರಿತಃ ।**
**ಕ್ರೂರೇ ಗ್ರಹ ಇವಾಮುಷ್ಮಿನ್ ಪ್ರಶಾಂತೇ ಶಾಂತಿರೇವ ನಃ ॥ ೧೯ ॥**

ಆದುದರಿಂದ ಕುಟಿಲತ್ವವನ್ನು ಹೊಂದಿರುವ ಬಲಿಷ್ಠನಾದ ಆ ಬಾಹುಬಲಿ ಕುಮಾರನು ಶೀಘ್ರವಾಗಿ ವಿನಯದಿಂದ ಸ್ವಾಧೀನಪಡಿಸಿಕೊಳ್ಳಲ್ಪಡತಕ್ಕವನಾಗಿ ದ್ದಾನೆ. ಕ್ರೂರವಾದ ಗ್ರಹದಂತೆ ಇವನು ಶಾಂತನಾದರೆ ನಮಗೆ ಶಾಂತಿಯೇ ಉಂಟಾಗುವುದು.''

**ಇತಿ ನಿಶ್ಚಿತ್ಯ ಕಾರ್ಯಜ್ಞಂ ದೂತಂ ಮಂತ್ರವಿಶಾರದಮ್ ।**
**ತತ್ಪಾಂತಂ ಪ್ರಾಹಿಣೋಚ್ಚಕ್ರೀ [೧೦]ನಿಸೃಷ್ಟಾರ್ಥತಯಾನ್ವಿತಮ್ ॥ ೨೦ ॥**

ಈ ಪ್ರಕಾರವಾಗಿ ನಿಶ್ಚಯಿಸಿ ಚಕ್ರೇಶ್ವರನು ಕಾರ್ಯವನ್ನು ತಿಳಿದವನೂ ಅನೇಕಾ ವರ್ತಿ ಕಾರ್ಯಸಂಪಾದನೆಯ ಪ್ರಯೋಜನವನ್ನುಂಟುಮಾಡಿರುವವನೂ ಮಂತ್ರಾ ಲೋಚನೆಯಲ್ಲಿ ನಿಪುಣನೂ ಆದ ದೂತನನ್ನು(ದಕ್ಷಿಣಾಂಕನನ್ನು) ಬಾಹುಬಲಿ ಕುಮಾರನ ಬಳಿಗೆ ಕಳುಹಿಸಿಕೊಟ್ಟನು.

**ಉಚಿತಂ [೧೧]ಯುಗ್ಯಮಾರೂಢೋ ವಯಸಾ ನಾತಿಕರ್ಕಶಃ ।**
**ಅನುದ್ಧತೇನ ವೇಷೇಣ ಪ್ರತಸ್ಥೇ ಸ ತದಂತಿಕಮ್ ॥ ೨೧ ॥**

ಉಚಿತವಾದ ವಾಹನವನ್ನೇರಿದವನೂ ವಯಸ್ಸಿನಿಂದ ಅತಿ ಕಠಿನನಲ್ಲದವನೂ–ಮಧ್ಯವಯಸ್ಕನೂ ಆದ ಆ ದೂತನು ನಮ್ರವಾದ ವೇಷದಿಂದ ಬಾಹುಬಲಿ ಕುಮಾರನ ಬಳಿಗೆ ಹೊರಟನು.

**[೧]ಆತ್ಮನೇವ ದ್ವಿತೀಯೇನ ಸ್ನಿಗ್ಧೇನಾನುಗತೋ ದ್ರುತಮ್ ।**
**ನಿಜಾ[೨]ನುಜೀವಿಲೋಕೇನ ಹಸ್ತ[೩]ಶಂಬಲವಾಹಿನಾ ॥ ೨೨ ॥**

ಆ ದೂತನು ತನಗೆ ಸಮಾನನೂ ಸ್ನೇಹಿತನೂ ಕೈಯಲ್ಲಿ ಬುತ್ತಿಯನ್ನು ಹಿಡಿದಿರುವವನೂ ಆದ ತನ್ನ ಹಿಂಬಾಲಕನಿಂದ ಶೀಘ್ರವಾಗಿ ಹಿಂಬಾಲಿಸಲ್ಪಟ್ಟನು.

**ಸೋಽ[೪]ನ್ವೀಪಂ ವಕ್ತಿ ಚೇದೇವಮಹಂ ಬ್ರೂಯಾ[೫]ಮಕತ್ಥನಃ ।**
**[೬]ವಿಗೃಹ್ಯ ಯದಿ ಸಂಬ್ರೂಯಾ[೭]ದ್ವಿರಹಂ [೮]ವಿಗ್ರಹೇ [೯]ಘಟೇ ॥ ೨೩ ॥**

''ಬಾಹುಬಲಿಕುಮಾರನು ಅನುಕೂಲವಾಗಿ ಮಾತನಾಡಿದರೆ ನಾನು ಹೊಗಳದೆ ಹೀಗೆ–ಅನುಕೂಲವಾಗಿ ಮಾತನಾಡುವೆನು. ಜಗಳವನ್ನುಮಾಡಿ ಮಾತನಾಡಿದರೆ ಕಲಹಕ್ಕೆ ಎಡೆಯಿಲ್ಲದಂತೆ ಮಾಡುತ್ತೇನೆ.

**ಸಂಧಿಂ ಚ [೧೦]ಪಣಬಂಧಂ ಚ ಕುರ್ಯಾತ್ಸೋತ್ತರಮೇವ ನಃ ।**
**[೧೧]ವಿಕ್ರಮ್ಯ ಕ್ಷಿಪ್ರ[೧೨]ಮೇಷ್ಯಾಮಿ ವಿಜಿಗೀಷಾ[೧೩]ವಸಂಗತೇ ॥ ೨೪ ॥**

ಸಂಧಿಯನ್ನೂ ನಾಣ್ಯಗಳ ಗಂಟು– ಕೈಗಾಣಿಕೆಯನ್ನೂ ನಮಗೆ ಆ ಬಾಹುಬಲಿ ಕುಮಾರನು ಉತ್ತರಕ್ಷಣದಲ್ಲೇ ಮಾಡುವನು. ಅವನು ಜಯಿಸಲಿಚ್ಛೆಯುಳ್ಳವನಾಗಿ ಸಂಧಿಗೆ ಒಡಂಬಡದಿದ್ದರೆ ಪರಾಕ್ರಮವನ್ನು ಮಾಡಿ–ಜಗಳವಾಡಿ ಶೀಘ್ರವಾಗಿ ಬರುವುದಕ್ಕಿಚ್ಛಿಸುತ್ತೇನೆ''.

**ಗಣಯನ್ನಿತಿ ಸಂಪತ್ತಿವಿಪತ್ತೀ ಸ್ವಾನ್ಯಪಕ್ಷಯೋಃ ।**
**ಸ್ವಯಂ ನಿಗೂಢಮಂತ್ರತ್ವಾದನಿರ್ಭೇದ್ಯೋಽನ್ಯಮಂತ್ರಿಭಿಃ ॥ ೨೫ ॥**

**ಮಂತ್ರಭೇದಭಯಾದ್ಗೂಢಂ [೧೪]ಸ್ವಪನ್ನೇಕಃ ಪ್ರಯಾಣಕೇ ।**
**[೧೫]ಯುದ್ಧಾಪಸಾರಭೂಮೀಶ್ಚ ಸ ಪಶ್ಯನ್ ದೂರಮತ್ಯಗಾತ್ ॥ ೨೬ ॥**

ಈ ಪ್ರಕಾರವಾಗಿ ತನ್ನಪಕ್ಷದ ಉನ್ನತಿಯನ್ನೂ ಪರಪಕ್ಷದ ಅವನತಿಯನ್ನೂ ಎಣಿಸುವವನೂ ತಾನು ಮಂತ್ರಾಲೋಚನೆಯನ್ನು ಗುಟ್ಟಾಗಿರಿಸುವುದರಿಂದ ಬೇರೆ ಮಂತ್ರಿಗಳಿಂದ ಅಭೇದ್ಯನೂ ಅಂದರೆ ಇತರ ಮಂತ್ರಿಗಳಿಗೆ ರಹಸ್ಯವನ್ನು ಹೇಳದಿರು ವವನೂ ರಹಸ್ಯವು ಹೊರಬೀಳುವುದೆಂಬ ಭಯದಿಂದ ಪ್ರಯಾಣದಲ್ಲಿ ಒಬ್ಬನೇ ಮರೆಯಾಗಿ ಮಲಗುವವನೂ ಯುದ್ಧಗಳನ್ನು ನಿವಾರಿಸಿದ ಭೂಮಿಗಳನ್ನು ನೋಡುವವನೂ ಆದ ಆ ದೂತನು ಬಹುದೂರ ಪ್ರಯಾಣಮಾಡಿದನು.

**ಕ್ರಮೇಣ ದೇಶಾನ್[೧೬]ಸಿಂಧೂಶ್ಚ [೧೭]ದೇಶಸಂಧೀಂಶ್ಚ ಸೋ[೧೮]ತಿಯನ್ ।**
**ಪ್ರಾಪತ್ಸಂಖ್ಯಾತರಾತ್ರ್ಯೈಸ್ತತ್ಪುರಂ ಪೌದನಸಾಹ್ವಯಮ್ ॥ ೨೭ ॥**

ದೇಶಗಳನ್ನೂ ನದಿಗಳನ್ನೂ ದೇಶಗಳ ಎಲ್ಲೆಗಳನ್ನೂ ಕ್ರಮದಿಂದ ದಾಟಿ ಹೋಗು ತ್ತಿರುವ ಆ ದೂತನು ಕೆಲವು ರಾತ್ರಿಗಳಿಂದ (ದಿನಗಳಲ್ಲಿ ) ಬಾಹುಬಲಿಕುಮಾರನ ಪೌದನವೆಂದು ಹೆಸರುಳ್ಳ ಪಟ್ಟಣವನ್ನು ತಲುಪಿದನು.

**ಬಹಿಃ ಪುರಮಥಾಸಾದ್ಯ ರಮ್ಯಾಃ ಸಸ್ಯವತೀರ್ಭುವಃ ।**
**ಪಕ್ವಶಾಲಿವನೋದ್ದೇಶಾನ್ ಸ ಪಶ್ಯನ್ನಾಪ [೧೯]ನಂದಥುಮ್ ॥ ೨೮ ॥**

ಬಳಿಕ ಪಟ್ಟಣದ ಹೊರಗಿನ ಪ್ರದೇಶವನ್ನು ತಲುಪಿ ರಮಣೀಯವೂ ಪೈರು ಗಳುಳ್ಳವೂ ಆದ ಭೂಮಿಗಳನ್ನೂ ಹಣ್ಣಾದ ಭತ್ತದ ಪೈರುಗಳ ಸಮೂಹಗಳುಳ್ಳ ಪ್ರದೇಶಗಳನ್ನೂ ನೋಡುತ್ತ ಆ ದೂತನು ಆನಂದವನ್ನು ಹೊಂದಿದನು.

೧ ಜ್ಞಾತ ಏವ. ೨ ಮಮ ಶಾಸನ. ೩ ತಪೋವನೋನ್ಮುಖೈಃ. ೪ ಅಭಿಪ್ರಾಯಂ. ೫ ಕಾರ್ಯಂ. ೬ ಅಂತರ್ಗೂಢವಿಕಾರಃ. ೭ ಗೃಹಂ ಗೋತ್ರಂ ಚ. ೮ ಸ್ವವರ್ಗೇ ಜಾತಃ. ೯ ವಿನಯೇನ ಸ್ವೀಕಾರ್ಯಃ. ೧೦ ಅಸಕೃತ್ಸಂಪಾದಿತಪ್ರಯೋಜನತಯಾ. ೧೧ ವಾಹನಂ.

೧ ಆತ್ಮಸದೃಶೇನ. ೨ ಅನುಚರಜನೇನ. ೩ ಪಾಥೇಯವಾಹಿನಾ. ೪ ಅನುಕೂಲಂ. ೫ ಅಶ್ಲಾಘಮಾನಃ. ೬ ಕಲಹಂ ಕೃತ್ವಾ. ೭ ಅಭಾವಂ. ೮ ಕದನೇ. ೯ ಕರೋಮಿ. ೧೦ ನಿಷ್ಕಗ್ರಂಥಿಂ. ೧೧ ವಿಕ್ರಮಂ ಕೃತ್ವಾ. ೧೨ ಆಗಂತುಮಿಚ್ಛಾಮಿ. ೧೩ ಸಂಧಿಂ ನ ಗತೇ ಸತಿ. ೧೪ ಶಯಾನಃ. ೧೫ ಯುದ್ಧಾಪಸರಣಭೂಮೀಃ. ೧೬ ನದೀಃ. ೧೭ ದೇಶಸೀಮ್ನಃ. ೧೮ ಅತೀತ್ಯ ಗಚ್ಛನ್. ೧೯ ಆನಂದಂ.

**ಪಶ್ಯನ್ [೧]ಸ್ತಂಬಕರೀಸ್ತಂಬಾನ್ ಪ್ರಭೂತಫಲಶಾಲಿನಃ ।**
**ಕೃತರಕ್ಷಾನ್ ಜನೈರ್ಯತ್ನಾತ್ಸ ಮೇನೇ [೨]ಸ್ವಾರ್ಥಿನಂ ಜನಮ್ ॥ ೨೯ ॥**

ವಿಶೇಷವಾದ ಫಲಗಳಿಂದ ಶೋಭಿಸುವುವೂ ಜನರ ಪ್ರಯತ್ನದಿಂದ ಕಾಪಾಡಲ್ಪಟ್ಟುವೂ ಆದ ಭತ್ತದ ತೆನೆಗಳನ್ನು ನೋಡುತ್ತಿರುವ ಆ ದೂತನು ಜನರು ಸ್ವಪ್ರಯೋಜನವನ್ನು ಬಯಸುವರೆಂದು ತಿಳಿದನು. ಭತ್ತದ ತೆನೆಗಳನ್ನು ಕಾಯುವ ಜನರನ್ನು ನೋಡಿ ಜನರು ಸ್ವಪ್ರಯೋಜನಾರ್ಥಿಗಳೆಂದು ತಿಳಿದನೆಂದಭಿಪ್ರಾಯವು.

**ಸ [೩]ಕುಡುಂಬಿಭಿ[೪]ರುದ್ಧಾತ್ರೈರ್ನೃತ್ಯದ್ಭಿರಭಿನಂದಿತಾನ್ ।**
**ಕೇದಾರ[೫]ಲಾವ[೬]ಸಂಘರ್ಷತೂರ್ಯಘೋಷಾನ್ [೭]ನ್ಯಶಾಮಯತ್ ॥**

ಆ ದೂತನು ನರ್ತನಮಾಡುತ್ತಿರುವವರೂ ಕುಡುಗೋಲುಗಳನ್ನು ಎತ್ತಿ ಹಿಡಿದಿರುವವರೂ ಆದ ಕೃಷೀವಲರಿಂದ ಮಾಡಲ್ಪಟ್ಟುವೂ ಗದ್ದೆಯ ಪೈರುಗಳ ಕೊಯ್ಲಿಕೆಯ ತಿಕ್ಕಾಟದಲ್ಲಿ ಉಂಟಾದುವೂ ಆದ ತಮ್ಮಟೆಯ ಶಬ್ದಗಳನ್ನು ಕೇಳಿದನು.

**ಕ್ವಚಿಚ್ಚುಕಮುಖಾಕೃಷ್ಟ [೮]ಕಣಾಃ ಕಣಿಶಮಂಜರೀಃ ।**
**ಶಾಲಿ[೯]ವಪ್ರೇಷು ಸೋಽಪಶ್ಯದ್ವಿಟೈರ್ಭುಕ್ತಾ ಇವ ಸ್ತ್ರಿಯಃ ॥ ೩೧ ॥**

ಆ ದೂತನು ಭತ್ತದ ಗದ್ದೆಗಳಲ್ಲಿ ಕೆಲವು ಕಡೆಯಲ್ಲಿ ಗಿಣಿಗಳ ಮುಖಗಳಿಂದ ಎಳೆಯಲ್ಪಟ್ಟ ಧಾನ್ಯದ ಕಾಳುಗಳುಳ್ಳ ತೆನೆಗಳನ್ನು, ವಿಟಪುರುಷರಿಂದ ಅನುಭವಿಸಲ್ಪಟ್ಟ ಸ್ತ್ರೀಯರನ್ನು ನೋಡುವಂತೆ, ನೋಡಿದನು.

**ಸುಗಂಧಿಕಲಮಾಮೋದ[೧೦]ಸಂವಾದಿ[೧೧]ಶ್ವಸಿತಾನಿಲೈಃ ।**
**ವಾಸಯಂತೀರ್ದಿಶಃ ಶಾಲಿಕಣಿಶೈರವತಂಸಿತಾಃ ॥ ೩೨ ॥**

**ಪೀನಸ್ತನತಟೋತ್ಸಂಗಗಲದ್ಘರ್ಮಾಂಬುಬಿಂದುಭಿಃ ।**
**ಮುಕ್ತಾಲಂಕಾರಜಾಂ ಲಕ್ಷ್ಮೀಂ ಘಟಯಂತೀರ್ನಿಜೋರಸಿ ॥ ೩೩ ॥**

**ಸರಸಾಬ್ಜರಜಃಕೀರ್ಣಸೀಮಂತರುಚಿರೈಃ ಕಚೈಃ ।**
**[೧೨]ಚೂಡಾಮಾಬಧ್ನತೀಃ ಸ್ವೈರಂ ಗ್ರಂಥಿತೋತ್ಪಲದಾಮಕೈಃ ॥ ೩೪ ॥**

**ದಧತೀರಾತಪಕ್ಲಾಂತಮುಖಪರ್ಯಂತಸಂಗಿನೀಃ ।**
**ಲಾವಣ್ಯಸ್ಯೇವ ಕಣಿಕಾಃ ಶ್ರಮಘರ್ಮಾಂಬು[೧೩]ವಿಪ್ರುಷಃ ॥ ೩೫ ॥**

**ಶುಕಾನ್ ಶುಕಚ್ಛದಚ್ಛಾಯೈರುಚಿರಾಂಗೀಃ ಸ್ತನಾಂಶುಕೈಃ ।**
**ಚೋತ್ಕುರ್ವತೀಃ ಕಲಕ್ವಾಣಂ ಸೋಽಪಶ್ಯಚ್ಛಾಲಿಗೋಪಿಕಾಃ ॥ ೩೬ ॥**

ಸುಗಂಧವಾದ ಭತ್ತದ ಪರಿಮಳಕ್ಕೆ ಸಮಾನವಾದ ಉಚ್ಛ್ವಾಸದ ಗಾಳಿಗಳಿಂದ ದಿಕ್ಕುಗಳನ್ನು ಪರಿಮಳವುಳ್ಳುವುಗಳನ್ನಾಗಿ ಮಾಡುವವರೂ ಭತ್ತದ ತೆನೆಗಳನ್ನು ಮುಡಿದಿರುವವರೂ ಪುಷ್ಟವಾದ ಕುಚಗಳ ಮಧ್ಯದಿಂದ ಸುರಿಯುತ್ತಿರುವ ಬೆವರಿನ ಹನಿಗಳಿಂದ ತಮ್ಮ ಎದೆಯಲ್ಲಿ ಮುತ್ತಿನ ಅಲಂಕಾರದಿಂದುಂಟಾದ ಶೋಭೆಯನ್ನು ರಚಿಸುವವರೂ ರಸವತ್ತಾದ ತಾವರೆಯ ಧೂಳಿಯಿಂದ ವ್ಯಾಪ್ತವಾದ ಬೈತಲೆಗಳಿಂದ ಮನೋಹರವೂ ಕಟ್ಟಲ್ಪಟ್ಟಿರುವ ನೈದಿಲೆಹೂವುಗಳ ಮಾಲೆಗಳುಳ್ಳುವೂ ಆದ ತಲೆಗೂದಲುಗಳಿಂದ ಜುಟ್ಟನ್ನು ಯಥೇಚ್ಛವಾಗಿ ಕಟ್ಟುವವರೂ ಬಿಸಿಲಿನಿಂದ ಬಳಲಿದ ಮುಖದ ಸಮೀಪದಲ್ಲಿ ಸಂಬಂಧಿಸಿಕೊಂಡಿರುವುವೂ ಲಾವಣ್ಯದ ಅಂಶಗಳೋ ಎಂಬಂತಿರುವುವೂ ಆದ ಬೆವರಿನ ಹನಿಗಳನ್ನು ಧರಿಸಿರುವವರೂ ಗಿಣಿಯ ರೆಕ್ಕೆಯಂತೆ ಕಾಂತಿಯುಳ್ಳ ಕುಚವಸ್ತ್ರಗಳಿಂದ ಮನೋಹರವಾದ ಶರೀರವುಳ್ಳವರೂ ಮಧುರವಾದ ಶಬ್ದಗಳನ್ನು ಮಾಡಿ ಗಿಣಿಗಳನ್ನು ನಿವಾರಿಸುವವರೂ ಆದ ಭತ್ತದ ಪೈರನ್ನು ಕಾಯುವ ಸ್ತ್ರೀಯರನ್ನು ಆ ದೂತನು ನೋಡಿದನು.

೧ ವ್ರೀಹಿಗುಚ್ಛಾನ್. ೨ ಧನಾರ್ಥಿನಂ, ಸ್ವಕೀಯಪ್ರಯೋಜನವಂತಂ. ೩ ಕೃಷೀವಲೈಃ. ೪ ಉದ್ಗತಲವಿತ್ರೈಃ. ೫ ಛೇದನ. ೬ ಮರ್ದನ. ೭ ಆಶೃಣೋತ್. ೮ ಧಾನ್ಯಾಂಶಾಃ. ೯ ಕೇದಾರೇಷು. ೧೦ ಪರಿಸ್ಪರ್ಧಿ. ೧೧ ಉಚ್ಛ್ವಾಸ. ೧೨ ಶಿಖಾಂ. ೧೩ ಬಿಂದೂನ್.

**ಭ್ರಮದ್ಯಂತ್ರಕುಟೀಯಂತ್ರಚೀತ್ಕಾರೈ[೧]ರಿಕ್ಷುವಾಟಕಾನ್ ।**
**ಫೂತ್ಕುರ್ವತ ಇವಾದ್ರಾಕ್ಷೀದತಿಪೀಡಾಭಯೇನ ಸಃ ॥ ೩೭ ॥**

ಆ ದೂತನು ತಮಗೆ ಅತ್ಯಂತ ಬಾಧೆಯಾಗುವುದೆಂಬ ಭಯದಿಂದ ತಿರುಗುತ್ತಿರುವ ಯಂತ್ರಗಳ ಚೀತ್ಕಾರಶಬ್ದಗಳಿಂದ ಫೂತ್ಕಾರಶಬ್ದವನ್ನು ಮಾಡುತ್ತವೆಯೋ ಎಂಬಂತಿರುವ ಕಬ್ಬಿನ ಯಂತ್ರಾಲಯಗಳನ್ನು ನೋಡಿದನು.

**[೨]ಉಪಕ್ಷೇತ್ರಂ ಚ ಗೋ[೩]ಧೇನೂ[೪]ರ್ಮಹೋಧೋಭಾರಮಂಥರಾಃ ।**
**[೫]ವಾತ್ಸಕೇನೋತ್ಸುಕಾಃ [೬]ಸ್ತನ್ಯಂ ಕ್ಷರಂತೀ[೭]ರ್ನಿಚಚಾಯ ಸಃ ॥ ೩೮ ॥**

ಆ ದೂತನು ಗದ್ದೆಗಳ ಸಮೀಪದಲ್ಲಿ ದೊಡ್ಡ ಕೆಚ್ಚಲಿನ ಭಾರದಿಂದ ಸಾವಕಾಶವಾಗಿ ನಡೆಯುವುವೂ ಕರುಗಳ ಸಮೂಹದಲ್ಲಿ ಕುತೂಹಲವುಳ್ಳುವೂ ಹಾಲನ್ನು ಸ್ರವಿಸುತ್ತಿರುವುವೂ ಆದ ಹೊಸದಾಗಿ ಕರುಹಾಕಿರುವ ಗೋವುಗಳನ್ನು ನೋಡಿದನು.

**ಇತಿ ರಮ್ಯಾನ್ಪುರಸ್ಯಾಸ್ಯ ಸೀಮಾಂತಾನ್ಸ ವಿಲೋಕಯನ್ ।**
**ಮೇನೇ ಕೃತಾರ್ಥಮಾತ್ಮಾನಂ ಲಬ್ಧತದ್ದರ್ಶನೋತ್ಸವಮ್ ॥ ೩೯ ॥**

ಈ ಪ್ರಕಾರವಾಗಿ ಈ ಪೌದನಪುರದ ರಮಣೀಯವಾದ ಎಲ್ಲೆಕಟ್ಟುಗಳನ್ನು ನೋಡುತ್ತಿರುವ ಆ ದೂತನು ಆ ಪುರದ ದರ್ಶನೋತ್ಸವವನ್ನು ಪಡೆದ ತನ್ನನ್ನು ಕೃತಾರ್ಥನನ್ನಾಗಿ ತಿಳಿದನು.

**[೮]ಉಪಶಲ್ಯಭುವಃ ಕುಲ್ಯಾಪ್ರಣಾಲೀಪ್ರಸೃತೋದಕಾಃ ।**
**ಶಾಲೀಕ್ಷುಜೀರಕಕ್ಷೇತ್ರೈರ್ವೃತಾ[೯]ಸ್ತಸ್ಯ ಮನೋಹರನ್ ॥ ೪೦ ॥**

ಕಾಲುವೆಗಳ ತೂಬುಗಳಿಂದ ಹರಡಿರುವ ನೀರುಳ್ಳುವೂ ಭತ್ತ ಕಬ್ಬು ಜೀರಿಗೆ ಇವು ಬೆಳೆದಿರುವ ಕ್ಷೇತ್ರಗಳಿಂದ ವ್ಯಾಪ್ತಗಳೂ ಆದ ಗ್ರಾಮಗಳ ಸಮೀಪಭೂಮಿಗಳು ಆ ದೂತನ ಮನಸ್ಸನ್ನಪಹರಿಸಿದುವು. ಮನೋಹರಗಳಾಗಿದ್ದುವೆಂದು ಭಾವವು.

**ವಾಪೀಕೂಪತಟಾಕೈಶ್ಚ ಸಾರಾಮೈರಂಬುಜಾಕರೈಃ ।**
**ಪುರಸ್ಯಾಸ್ಯ ಬಹಿರ್ದೇಶಾಸ್ತೇನಾದೃಶ್ಯಂತ ಹಾರಿಣಃ ॥ ೪೧ ॥**

ಇಳಿಯುವ ಬಾವಿಗಳಿಂದಲೂ ಬಾವಿಗಳಿಂದಲೂ ಕೆರೆಗಳಿಂದಲೂ ಉದ್ಯಾನಗಳಲ್ಲಿರುವ ಕಮಲಸರೋವರಗಳಿಂದಲೂ ಮನೋಹರವಾದ ಈ ಪಟ್ಟಣದ ಬಹಿಃಪ್ರದೇಶಗಳನ್ನು ಆ ದೂತನು ನೋಡಿದನು.

**ಪುರಗೋಪುರಮುಲ್ಲಂಘ್ಯ ಸ [೧೦]ನಿಚಾಯನ್ವಣಿಕ್ಪಥಾನ್ ।**
**ತತ್ರ [೧೧]ಪೂಗೀಕೃತಾನ್ಮೇನೇ ರತ್ನರಾಶೀನ್ನಿಧೀನಿವ ॥ ೪೨ ॥**

ನಗರದ ಗೋಪುರವನ್ನು ದಾಟಿ ವರ್ತಕರ ಬೀದಿಗಳನ್ನು ನೋಡುತ್ತಿರುವ ಆ ದೂತನು ಅಲ್ಲಿ ರಾಶಿಮಾಡಲ್ಪಟ್ಟಿರುವ ರತ್ನರಾಶಿಗಳನ್ನು ನಿಧಿಗಳನ್ನೋಪಾದಿಯಲ್ಲಿ ತಿಳಿದನು.

**[೧೨]ನೃಪೋಪಾಯನವಾಜೀಭಲಾಲಾಮದಜಲಾ[೧೩]ವಿಲಮ್ ।**
**ಕೃತಚ್ಛಟಮಿವಾಲೋಕ್ಯ ಸೋಽಭ್ಯನಂದನ್ನೃಪಾಂಗಣಮ್ ॥ ೪೩ ॥**

ಆ ದೂತನು ಬೇರೆ ದೊರೆಗಳಿಂದ ಕೈಗಾಣಿಕೆಯಾಗಿ ಬಂದಿರುವ ಕುದುರೆಗಳ ಜೊಲ್ಲಿನಿಂದಲೂ ಆನೆಗಳ ಮದಜಲದಿಂದಲೂ ಕೆಸರುಮಾಡಲ್ಪಟ್ಟಿರುವುದೂ ನೀರು ಚಿಮುಕಿಸಲ್ಪಟ್ಟಂತಿರುವುದೂ ಆದ ರಾಜಾಂಗಣವನ್ನು ನೋಡಿ ಸಂತೋಷಪಟ್ಟನು.

೧ ಇಕ್ಷುಯಂತ್ರಾಲಯಾನ್. ೨ ಕ್ಷೇತ್ರಸಮೀಪೇ. ೩ ನವಸೂತಿಕಾಃ. ೪ ಮಹಾಪೀನಭಾರಮಂದಗಮನಾಃ. ೫ ವಾತ್ಸಕೇ, ಸಪ್ತಮ್ಯರ್ಥೇ ತೃತೀಯಾ. ೬ ಕ್ಷೀರಂ. ೭ ದದರ್ಶ, ಚಾಯೃಪೂಜಾನಿಶಾಮನಯೋಃ. ೮ ಗ್ರಾಮಾಂತಭೂಮಯಃ. ೯ ದೂತಸ್ಯ. ೧೦ ಪಶ್ಯನ್. ೧೧ ಪುಂಜೀಕೃತಾನ್. ೧೨ ಪರನೃಪೈಃ ಪ್ರಾಭೃತೀಕೃತ. ೧೩ ಕರ್ದಮಿತಂ.

**ಸ ನಿವೇದಿತವೃತ್ತಾಂತಂ ಮಹಾದ್ವಾರಪಾಲಕೈಃ ।**
**ನೃಪಂ ನೃಪಾಸನಾಸೀನ[೧]ಮುಪಾಸೀದದ್ವಚೋಹರಃ ॥ ೪೪ ॥**

ಆ ದೂತನು ಮಹಾದ್ವಾರಪಾಲಕರಿಂದ ತಿಳಿಸಲ್ಪಟ್ಟ ಸಮಾಚಾರವುಳ್ಳವನೂ ರಾಜಪೀಠದಲ್ಲಿ ಕುಳಿತಿರುವವನೂ ಆದ ದೊರೆಯನ್ನು ಕಂಡನು. ದೂತನು ಬಾಹುಬಲಿರಾಜನ ಬಳಿಗೆ ಹೋದನೆಂದು ಭಾವವು.

**ಪೃಥುವಕ್ಷಸ್ತಟಂ ತುಂಗಮುಕುಟೋದಗ್ರಶೃಂಗಕಮ್ ।**
**ಜಯಲಕ್ಷ್ಮೀವಿಲಾಸಿನ್ಯಾಃ ಕ್ರೀಡಾಶೈಲಮಿವೈಕಕಮ್ ॥ ೪೫ ॥**

ವಿಶಾಲವಾದ ಎದೆಯುಳ್ಳವನೂ ಉನ್ನತವಾದ ಕಿರೀಟವೆಂಬ ಉನ್ನತವಾದ ಶಿಖರವುಳ್ಳವನೂ ಜಯಲಕ್ಷ್ಮಿಯೆಂಬ ವಿಲಾಸವತೀಸ್ತ್ರೀಯ ಮುಖ್ಯವಾದ ಕ್ರೀಡಾ ಪರ್ವತವೋ ಎಂಬಂತಿರುವವನೂ

**ಲಲಾಟಪಟ್ಟಮಾರೂಢಪಟ್ಟಬಂಧಂ ಸುವಿಸ್ತೃತಮ್ ।**
**ಜಯಶ್ರಿಯ ಇವೋದ್ವಾಹಪಟ್ಟಂ ದಧತಮುಚ್ಚಕೈಃ ॥ ೪೬ ॥**

ಜಯಲಕ್ಷ್ಮಿಯ ವಿವಾಹದ ಪಟ್ಟವೋ ಎಂಬಂತಿರುವುದೂ ಪಟ್ಟಬಂಧವನ್ನು ಧರಿಸಿರುವುದೂ ವಿಶಾಲವೂ ಉನ್ನತವೂ ಆದ ಹಣೆಯನ್ನು ಧರಿಸಿರುವವನೂ

**ದಧಾನಂ ತುಲಿತಾಶೇಷರಾಜನ್ಯಕಯಶೋಧನಮ್ ।**
**ತುಲಾದಂಡಮಿವೋದೂಢಭೂಭಾರಂ ಭುಜದಂಡಕಮ್ ॥ ೪೭ ॥**

ತಕ್ಕಡಿಯ ಕೋಲಿನಂತಿರುವುದೂ ಸಮಸ್ತ ರಾಜರುಗಳ ಸಮೂಹದ ಯಶಸ್ಸೆಂಬ ಧನವನ್ನು ತೂಗಿರುವುದೂ ಭೂಭಾರವನ್ನು ಧರಿಸಿರುವುದೂ ಆದ ಭುಜದಂಡವನ್ನು ಧರಿಸಿರುವವನೂ

**ಮುಖೇನ ಪಂಕಜಚ್ಛಾಯಾಂ ನೇತ್ರಾಭ್ಯಾಮುತ್ಪಲಶ್ರಿಯಮ್ ।**
**ದಧಾನಮಪ್ಯನಾಸನ್ನ[೨]ವಿಜಾತಿ[೩]ಮಜಲಾಶಯಮ್ ॥ ೪೮ ॥**

ಮುಖದಲ್ಲಿ ತಾವರೆಯ ಕಾಂತಿಯನ್ನೂ ಕಣ್ಣುಗಳಲ್ಲಿ ನೈದಿಲೆಯ ಶೋಭೆಯನ್ನೂ ಧರಿಸಿರುವವನಾದರೂ ಸಮೀಪದಲ್ಲಿ ಪಕ್ಷಿಜಾತಿ, ಹೀನಜಾತಿಯಿಲ್ಲದಿರುವ ಜಲಾಶಯ– ಮಂದಬುದ್ಧಿಯಿಲ್ಲದಿರುವವನೂ

**ಬಿಭ್ರಾಣಮತಿವಿಸ್ತೀರ್ಣಂ ಮನೋ ವಕ್ಷಶ್ಚ ಯದ್ದ್ವಯಮ್ ।**
**[೪]ವಾಗ್ದೇವೀಕಮಲಾವತ್ಯೋರ್ಗತಂ ನಿತ್ಯಾವಕಾಶತಾಮ್ ॥ ೪೯ ॥**

ವಾಗ್ದೇವಿಗೂ ಲಕ್ಷ್ಮೀದೇವಿಗೂ ನಿತ್ಯಾವಕಾಶವನ್ನು ಹೊಂದಿರುವುದೂ ಅತ್ಯಂತ ವಿಸ್ತಾರವೂ ಆದ ಮನಸ್ಸನ್ನೂ ಎದೆಯನ್ನೂ ಎರಡನ್ನೂ ಧರಿಸಿರುವವನೂ (ವಾಗ್ದೇವಿಗೆ ಮನಸ್ಸನ್ನೂ ಲಕ್ಷ್ಮೀದೇವಿಗೆ ಎದೆಯನ್ನೂ ಧರಿಸಿರುವವನೂ)

**[೫]ರಕ್ಷಾವೃತ್ತಿಪರಿಕ್ಷೇಪಂ [೬]ಗುಣಗ್ರಾಮಂ ಮಹಾಫಲಮ್ ।**
**ನಿವೇಶಯಂತಮಾತ್ಮಾಂಗೇ ಮನಸ್ಸು ಚ [೭]ಮಹೀಯಸಾಮ್ ॥ ೫೦ ॥**

ರಕ್ಷಣೆಯೆಂಬ ಬೇಲಿಯ ಆವರಣವುಳ್ಳವನೂ ಮಹಾಪ್ರಯೋಜನಗಳನ್ನುಂಟುಮಾಡುವ ಗುಣಗಳ ಸಮೂಹವನ್ನು ತನ್ನ ಶರೀರದಲ್ಲಿಯೂ ಮಹಾತ್ಮರುಗಳ ಮನಸ್ಸುಗಳಲ್ಲಿಯೂ ಇರಿಸುವವನೂ(ಮಹಾತ್ಮರುಗಳು ಇವನ ಗುಣ ಸಮೂಹವನ್ನು ಸ್ಮರಿಸುತ್ತಾರೆಂದರ್ಥವು)

**ಸ್ಫುರದಾಭರಣೋದ್ಯೋತ[೮]ಚ್ಛದ್ಮನಾ ನಿಖಿಲಾ ದಿಶಃ ।**
**ಪ್ರತಾಪಜ್ವಲನೇನೇವ ಲಿಂಪಂತಮಲಘೀಯಸಾ ॥ ೫೧ ॥**

೧ ಉಪಾಗಮತ್. ೨ ಅನಾಸನ್ನಹೀನಜಾತಿಂ, ಪಕ್ಷಿಜಾತಿಂ ಚ. ೩ ಅಮಂದಬುದ್ಧಿಂ. ೪ ಸರಸ್ವತೀಲಕ್ಷ್ಮ್ಯೋಃ. ೫ ರಕ್ಷೈವವೃತಿಪರಿಕ್ಷೇಪೋ ಯಸ್ಯ ತಂ, ರಕ್ಷಾರ್ಥಂ ವೃತಿಪರಿಕ್ಷೇಪೋ ಯಸ್ಯ ತಂ. ೬ ಗುಣಸಮೂಹಂ, ನಿಗಮಮಿತಿ ಧ್ವನಿಃ. ೭ ಮಹಿಯಾಂಸಃ ಅಸ್ಯ ಗುಣಗ್ರಾಮಂ ಸ್ಮರಂತೀತ್ಯರ್ಥಃ. ೮ ವ್ಯಾಜೇನ.

ಪ್ರಕಾಶಿಸುವ ಆಭರಣಗಳ ಬೆಳಕಿನ ನೆವದಿಂದ, ಹೆಚ್ಚಾದ ಪ್ರತಾಪವೆಂಬ ಬೆಂಕಿಯಿಂದ ಸಮಸ್ತ ದಿಕ್ಕುಗಳನ್ನು ಲೇಪಿಸುತ್ತಾನೋ ಎಂಬಂತಿರುವವನೂ

**ಮುಖೇನ [೧]ಚಂದ್ರಕಾಂತೇನ [೨]ಪದ್ಮರಾಗೇಣ ಚಾರುಣಾ ।**
**ಚರಣೇನ ವಿರಾಜಂತಂ [೩]ವಜ್ರಸಾರೇಣ ವರ್ಷ್ಮಣಾ ॥ ೫೨ ॥**

ಚಂದ್ರನಂತೆ ಮನೋಹರವಾದ ಮುಖದಿಂದಲೂ ಕಮಲದಂತೆ ಕೆಂಪಾಗಿರುವುದೂ ಸುಂದರವೂ ಆದ ಕಾಲಿನಿಂದಲೂ ವಜ್ರದಂತೆ ಗಟ್ಟಿಯಾದ ಶರೀರದಿಂದಲೂ ಶೋಭಿಸುವವನೂ

**ಹರಿನ್ಮಣಿಮಯಸ್ತಂಭಮಿವೈಕಂ ಹರಿತತ್ವಿಷಮ್ ।**
**ಲೋಕಾ[೪]ವಿಷ್ಟಂಭಮಾಧಾತುಂ ಸೃಷ್ಟ[೫]ಮಾದ್ಯೇನ ವೇಧಸಾ ॥ ೫೩ ॥**

ಲೋಕಕ್ಕೆ ಆಧಾರವನ್ನು (ಒದೆಯನ್ನು) ಕೊಡುವುದಕ್ಕೋಸ್ಕರ ಆದಿಬ್ರಹ್ಮನಿಂದ ಸೃಷ್ಟಿಸಲ್ಪಟ್ಟ ಒಂದು ಪಚ್ಚೆಯ ಕಲ್ಲಿನ ಕಂಬವೋ ಎಂಬಂತೆ ಹಸುರಾದ ಕಾಂತಿಯಳ್ಳವನೂ

**[೬]ಸರ್ವಾಂಗಸಂಗತಂ ತೇಜೋ ದಧಾನಂ [೭]ಕ್ಷಾತ್ರಮೂರ್ಜಿತಮ್ ।**
**[೮]ನೂನಂ ತೇಜೋಮಯೈರೇವ ಘಟಿತಂ ಪರಮಾಣುಭಿಃ ॥ ೫೪ ॥**

ತೇಜೋಮಯವಾದ ಪರಮಾಣುಗಳಿಂದಲೇ ಮಾಡಲ್ಪಟ್ಟಿದೆಯೋ ಎಂಬಂತಿರುವುದೂ ಶ್ರೇಷ್ಠವೂ ಸರ್ವಾಂಗಗಳಲ್ಲಿಯೂ ವ್ಯಾಪಿಸಿರುವುದೂ ಕ್ಷತ್ರಿಯ ಸಂಬಂಧಿಯೂ ಆದ ತೇಜಸ್ಸನ್ನು ಧರಿಸಿರುವವನೂ

**[೯]ತಮಿತ್ಥಾಲೋಕಯನ್ ದೂರಾ[೧೦]ದ್ಧಾಮ್ನಾಂ ಪುಂಜಮಿವೋಚ್ಚಕೈಃ ।**
**ಚಚಾಲ [೧೧]ಪ್ರಣಿಧಿಃ ಕಿಂಚಿ[೧೨]ತ್ಪ್ರಣಿಧಾನಾ[೧೩]ನ್ನಿಧೀಶಿತುಃ ॥ ೫೫ ॥**

ಮೇಲಕ್ಕೆದ್ದಿರುವ ಜ್ವಾಲೆಯುಳ್ಳ ತೇಜಸ್ಸುಗಳ ರಾಶಿಯೋ ಎಂಬಂತಿರುವವನೂ ಆದ ಆ ಬಾಹುಬಲಿಸ್ವಾಮಿಯನ್ನು ದೂರದಿಂದ ಈ ರೀತಿಯಾಗಿ ನೋಡುತ್ತಿರುವ ಭರತಚಕ್ರಿಯ ದೂತನು ಗುಣದೋಷವಿಚಾರಸ್ಮರಣದಿಂದ ಸ್ವಲ್ಪ ಚಲಿಸಿದನು. ಆತನಿಗೆ ಸ್ವಲ್ಪ ಗುಣದೋಷವಿಚಾರಸ್ಮರಣೆಯುಂಟಾಯಿತೆಂದು ಭಾವವು.

**ಪ್ರಣಮಂಶ್ಚರಣಾವೇತ್ಯ ದಧದ್ದೂರಾನತಂ ಶಿರಃ ।**
**ಸಸತ್ಕಾರಂ ಕುಮಾರೇಣ ನಾತಿದೂರೇ [೧೪]ನ್ಯವೇಶಿ [೧೫]ಸಃ ॥ ೫೬ ॥**

ದೂರದಿಂದ ನಮ್ರವಾದ ಮಸ್ತಕವನ್ನು ಧರಿಸಿದವನಾಗಿ ಬಂದು ಕಾಲುಗಳಿಗೆ ನಮಸ್ಕಾರಮಾಡುತ್ತಿರುವ ಆ ದೂತನನ್ನು ಬಾಹುಬಲಿಕುಮಾರನು ಸತ್ಕರಿಸಿ ಸಮೀಪದಲ್ಲಿ ಕುಳ್ಳಿರಿಸಿದನು.

**ತಂ [೧೬]ಶಾಸನಹರಂ ಜಿಷ್ಣೋರ್ನಿವಿಷ್ಟಮುಚಿತಾಸನೇ ।**
**ಕುಮಾರೋ ನಿಜಗಾದೇತಿ ಸ್ಮಿತಾಂಶೂನ್ವಿಷ್ವಗಾಕಿರನ್ ॥ ೫೭ ॥**

ಬಾಹುಬಲಿಕುಮಾರನು ಉಚಿತವಾದ ಆಸನದಲ್ಲಿ ಕುಳಿತಿರುವ ಭರತೇಶ್ವರನ ಆ ದೂತನನ್ನು ಕುರಿತು ಮುಗುಳ್ನಗೆಯ ಕಿರಣಗಳನ್ನು ಸುತ್ತಲೂ ಎರಚುವವನಾಗಿ ಮುಂದೆ ಹೇಳುವಂತೆ ಮಾತನಾಡಿದನು.

**[೧೭]ಚಿರಾಚ್ಚಕ್ರಧರಸ್ಯಾದ್ಯ ವಯಂ [೧೮]ಚಿಂತ್ಯತ್ವಮಾಗತಾಃ ।**
**ಭದ್ರ [೧೯]ಭದ್ರಂ ಜಗದ್ಭರ್ತುರ್ಬಹುಚಿಂತ್ಯಸ್ಯ ಚಕ್ರಿಣಃ ॥ ೫೮ ॥**

೧ ಚಂದ್ರಕಾಂತಶಿಲಾಯಾ ಇತಿ ಧ್ವನಿಃ. ೨ ಪದ್ಮವದರುಣೇನ, ಪದ್ಮರಾಗರತ್ನೇನೇತಿ ಧ್ವನಿಃ. ೩ ವಜ್ರವತ್ಸ್ಥಿರಾವಯವೇನ, ವಜ್ರಾಂತಃಸಾರೇಣೇತಿ ಧ್ವನಿಃ. ೪ ಆಧಾರಂ. ೫ ಆದಿಬ್ರಹ್ಮಣಾ. ೬ ಸಪ್ತಾಂಗ ಅಥವಾ ಸರ್ವಶರೀರ. ೭ ಕ್ಷತ್ರಿಯಸಂಬಂಧಿ. ೮ ಇವ. ೯ ಬಾಹುಬಲಿಸ್ವಾಮಿನಂ. ೧೦ ತೇಜಸಾಂ. ೧೧ ಚರಃ. ೧೨ ಗುಣದೋಷವಿಚಾರಾನುಸ್ಮರಣಾತ್. ೧೩ ಚಕ್ರಿಣಃ. ೧೪ ಉಪವೇಶಿತಃ. ೧೫ ಚಕ್ರಿಣೋ ದೂತೋ ದಕ್ಷಿಣಾಂಕಮಂತ್ರೀ. ೧೬ ದೂತಂ. ೧೭ ಚಿರಕಾಲಸ್ಯ. ೧೮ ಚಿಂತಿತುಂಯೋಗ್ಯಾಶ್ಚಿಂತ್ಯಾ ಸ್ತೇಷಾಂ ಭಾವಶ್ಚಿಂತ್ಯತ್ವಂ. ೧೯ ಕುಶಲಂ ಕಿಂ.

''ಅಯ್ಯಾ! ನಾವು ಬಹುಕಾಲದ ಮೇಲೆ ಈಗ ಚಕ್ರವರ್ತಿಯ ಸ್ಮರಣೆಗೆ ಯೋಗ್ಯರಾದೆವು. ಲೋಕಪಾಲಕನೂ ಚಿಂತಿಸುವುದಕ್ಕೆ ಯೋಗ್ಯವಾದ ಅನೇಕ ವಿಷಯಗಳುಳ್ಳವನೂ ಆದ ಚಕ್ರವರ್ತಿಯು ಕ್ಷೇಮವೆ?

**ವಿಶ್ವಕ್ಷತ್ರಜಯೋದ್ಯೋಗಮದ್ಯಾಪಿ ನ [೧]ಸಮಾಪಯನ್ ।**
**ಸ [೨]ಕಚ್ಚಿದ್ಭೂಭುಜಾಂ ಭರ್ತುಃ ಕುಶಲೀ ದಕ್ಷಿಣೋಭುಜಃ ॥ ೫೯ ॥**

ಈಗಲೂ ಸಮಸ್ತ ಕ್ಷತ್ರಿಯರನ್ನು ಜಯಿಸುವ ಕೆಲಸವನ್ನು ಪೂರ್ತಿಮಾಡದಿರುವ, ರಾಜರುಗಳ ಪಾಲಕನಾದ ಭರತೇಶ್ವರನ, ಆ ಪ್ರಸಿದ್ಧವಾದ ಬಲದ ತೋಳು ಕ್ಷೇಮವಾಗಿರುವುದೇ?

**ಶ್ರುತಾ ವಿಶ್ವಾ ದಿಶಃ ಸಿದ್ಧಾ ಜಿತಾಶ್ಚ ನಿಖಿಲಾ ನೃಪಾಃ ।**
**ಕರ್ತವ್ಯಶೇಷ[೩]ಮಸ್ಮಾದ್ಯ ಕಿಮಸ್ತಿ ವದ ನಾಸ್ತಿ ವಾ ॥ ೬೦ ॥**

ಸಮಸ್ತ ದಿಕ್ಕುಗಳು ಸ್ವಾಧೀನವಾದುವೆಂದೂ ಸಮಸ್ತರಾಜರುಗಳು ಜಯಿಸಲ್ಪಟ್ಟರೆಂದೂ ಕೇಳಿದೆವು. ಮಾಡತಕ್ಕ ಕೆಲಸವು ಈ ಚಕ್ರವರ್ತಿಗೆ ಈಗ ಉಳಿದಿದೆಯೋ? ಇಲ್ಲವೋ? ಹೇಳು.''

**ಇತಿ ಪ್ರಶಾಂತಮೋಜಸ್ವಿ ವಚಃ ಸಾರಂ ಮಿತಾಕ್ಷರಮ್ ।**
**ವದನ್ ಕುಮಾರೋ ದೂತಸ್ಯ [೪]ವಚನಾವಸರಂ [೫]ವ್ಯಧಾತ್ ॥ ೬೧ ॥**

ಈಪ್ರಕಾರವಾಗಿ ಅತ್ಯಂತ ಶಾಂತವೂ ಗರ್ವಯುಕ್ತವೂ ಸಾರಗರ್ಭಿತವೂ ಮಿತವಾದ ಅಕ್ಷರಗಳುಳ್ಳುದೂ ಆದ ವಚನವನ್ನು ಹೇಳುತ್ತಿರುವ ಬಾಹುಬಲಿ ಕುಮಾರನು ದೂತನ ಮಾತಿಗೆ ಎಡೆಗೊಟ್ಟನು. ದೂತನು ಮಾತನಾಡುವುದಕ್ಕೆ ಅವಕಾಶವನ್ನು ಕೊಟ್ಟನೆಂದು ಭಾವವು.

**ಅಥೋಪಚಕ್ರಮೇ ವಕ್ತುಂ [೬]ವಚೋಹಾರಿ ವಚೋಹರಃ ।**
**[೭]ವಾಗರ್ಥಾವಿವ [೮]ಸಂಪಿಂಡ್ಯ ದರ್ಶಯನ್ದಶ[೯]ನಾಂಶುಕೈಃ ॥ ೬೨ ॥**

ಅನಂತರದಲ್ಲಿ ಆ ದೂತನು ಹಲ್ಲುಗಳ ಕಾಂತಿಗಳಿಂದ ಶಬ್ದಾರ್ಥಗಳನ್ನು ಮುದ್ದೆಮಾಡಿ ತೋರಿಸುತ್ತಾನೋ ಎಂಬಂತೆ ಮನೋಹರವಾದ ವಚನವನ್ನು ಹೇಳುವುದಕ್ಕೆ ಪ್ರಾರಂಭಿಸಿದನು.

**ತ್ವದ್ವಚಃ[೧೦]ಸಂಮುಖೀನೇಸ್ಮಿನ್ ಕಾರ್ಯಂ ಸುವ್ಯಕ್ತಮೀಕ್ಷ್ಯತೇ ।**
**[೧೧]ಅಸಂಸ್ಕೃತೋಽಪಿ ಯತ್ರಾರ್ಥಂ [೧೨]ಪ್ರತ್ಯಕ್ಷಯತಿ [೧೩]ಮಾದೃಶಃ ॥ ೬೩ ॥**

''ಸ್ವಾಮಿಯೆ! ಈ ನಿನ್ನ ವಚನವೆಂಬ ಕನ್ನಡಿಯಲ್ಲಿ ಮುಂದೆ ಮಾಡತಕ್ಕ ಕೆಲಸವು ಬಹುಸ್ಫುಟವಾಗಿ ಕಾಣುತ್ತದೆ. ಈ ಕನ್ನಡಿಯಲ್ಲಿ ಸಂಸ್ಕಾರವಿಲ್ಲದ–ಮೂರ್ಖನಾದರೂ ನನ್ನಂತಹವನು ವಿಷಯವನ್ನು ಪ್ರತ್ಯಕ್ಷವಾಗಿ ನೋಡುವನು.

**ವಯಂ ವಚೋಹರಾ ನಾಮ ಪ್ರಭೋಃ ಶಾಸನಹಾರಿಣಃ ।**
**ಗುಣದೋಷವಿಚಾರೇಷು ಮಂದಾ[೧೪]ಸ್ವಚ್ಛಂದವರ್ತಿನಃ ॥ ೬೪ ॥**

ದೂತರಾದ ನಾವಾದರೋ ಪ್ರಭುವಿನ ಆಜ್ಞಾಪಾಲಕರಾದುದರಿಂದ ಗುಣದೋಷವಿಚಾರಗಳಲ್ಲಿ ಮೂಢರೂ ಪ್ರಭುವಿನ ವಶವರ್ತಿಗಳೂ ಆಗಿದ್ದೇವೆ.

**ತತಶ್ಚಕ್ರಧರೇಣಾರ್ಯ ಯ[೧೫]ದಾದಿಷ್ಟಂ ಪ್ರಿಯೋಚಿತಮ್ ।**
**[೧೬]ಪ್ರಯೋಕ್ತೃಗೌರವಾದೇವ ತದ್ಗ್ರಾಹ್ಯಂ ಸಾಧ್ವಸಾಧು ವಾ ॥ ೬೫ ॥**

ಆದುದರಿಂದ ಪೂಜ್ಯನೆ! ಚಕ್ರವರ್ತಿಯಿಂದ ಪ್ರಿಯವೂ ಉಚಿತವೂ ಆದ ಯಾವ ವಿಷಯವು ಉಪದೇಶಿಸಲ್ಪಟ್ಟಿರುವುದೋ ಅದು ಒಳ್ಳೆಯದೋ ಕೆಟ್ಟುದೋ ಅದನ್ನು ಪ್ರಯೋಗಿಸಿದವನ (ಭರತಚಕ್ರವರ್ತಿಯ) ಗೌರವದಿಂದಲೇ ಪರಿಗ್ರಹಿಸಲ್ಪಡತಕ್ಕುದಾಗಿದೆ.

**ಗುರೋರ್ವಚನಮಾದೇಯ[೧]ಮವಿಕಲ್ಪ್ಯೇತಿ ಯಾ [೨]ಶ್ರುತಿಃ ।**
**ತತ್ಪ್ರಾಮಾಣ್ಯಾದಮುಷ್ಯಾಜ್ಞಾ ಸಂವಿಧೇಯಾ ತ್ವಯಾಧುನಾ ॥ ೬೬ ॥**

ಹಿರಿಯರ ಮಾತನ್ನು ಭೇದವೆಣಿಸದೆ ಗ್ರಹಣಮಾಡಬೇಕೆಂದು ಯಾವ ಶಾಸ್ತ್ರವಿರುವುದೋ ಅದರ ಆಧಾರದಿಂದ ಈ ಭರತೇಶ್ವರನ ಆಜ್ಞೆಯನ್ನು ಈಗ ನೀನು ಗ್ರಹಣಮಾಡಬೇಕು. ಭರತಾಜ್ಞೆಗೆ ವಿಧೇಯನಾಗಬೇಕೆಂದರ್ಥವು.

**[೩]ಐಕ್ಷ್ವಾಕಃ ಪ್ರಥಮೋ ರಾಜ್ಞಾಂ ಭರತೋ ಭವದಗ್ರಜಃ ।**
**ಪರಿಕ್ರಾಂತಾ ಮಹೀ ಕೃತ್ಸ್ನಾ ಯೇನ ನಾಮಯತಾಮರಾನ್ ॥ ೬೭ ॥**

ಇಕ್ಷ್ವಾಕುವಂಶೋತ್ಪನ್ನನೂ ರಾಜರುಗಳಲ್ಲಿ ಮೊದಲನೆಯವನೂ ತಮ್ಮ ಅಣ್ಣನೂ ಆದ ಭರತನು ದೇವತೆಗಳನ್ನು ನಮ್ರರನ್ನಾಗಿ ಮಾಡಿದನು. ಸಮಸ್ತ ಪೃಥ್ವಿಯನ್ನು ಸಂಚರಿಸಿದನು.

**ಗಂಗಾದ್ವಾರಂ ಸಮುಲ್ಲಂಘ್ಯ ಯೋ ರಥೇನಾ[೪]ಪ್ರತಿಷ್ಕಶಃ ।**
**ಚಲ[೫]ದಾವಿದ್ಧಕಲ್ಲೋಲಮಕರೋನ್ಮಕರಾಕರಮ್ ॥ ೬೮ ॥**

ಅಸಹಾಯನಾದ ಯಾವನು ರಥದಿಂದ ಗಂಗಾನದೀದ್ವಾರವನ್ನು ದಾಟಿ ಸಮುದ್ರವನ್ನು ಚಲಿಸುತ್ತಿರುವ ಮತ್ತು ತಿರುಗುತ್ತಿರುವ ಅಲೆಗಳುಳ್ಳುದನ್ನಾಗಿ ಮಾಡಿದನೋ (ಸಮುದ್ರವನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡಿದನೆಂದು ಭಾವವು)

**ಶರವ್ಯಾಜಪ್ರತಾಪಾಗ್ನಿರ್ಜ್ವಲನ್ಯಸ್ಯ ಜಲೇಂಬುಧೇಃ ।**
**ಪಪೌ ನ ಕೇವಲಂ ವಾರ್ಧಿಂ ಮಾನಂ ಚ ತ್ರಿದಿವೌಕಸಾಮ್ ॥ ೬೯ ॥**

ಯಾವನ ಬಾಣದ ನೆವದಿಂದ ಪ್ರತಾಪವೆಂಬ ಬೆಂಕಿಯು ಸಮುದ್ರದ ನೀರಿನಲ್ಲಿ ಜ್ವಲಿಸುತ್ತ ಸಮುದ್ರವನ್ನು ಮಾತ್ರ ಕುಡಿದುದಲ್ಲದೆ ದೇವತೆಗಳ ಮಾನ–ಗರ್ವವನ್ನೂ ನಾಶಮಾಡಿದುದೋ

**ಮಾ ನಾಮ ಪ್ರಣತಿಂ ಯಸ್ಯ [೬]ವ್ರಾಜಿಷು[೭]ರ್ದ್ಯುಸದಃ ಕಥಮ್ ।**
**ಆಕೃಷ್ಟಾಃ ಶರಪಾಶೇನ [೮]ಪ್ರಾಧ್ವಂಕೃತ್ಯ ಜಲೇ ಬಲಾತ್ ॥ ೭೦ ॥**

ನೀರಿನಲ್ಲಿ ಬಾಣವೆಂಬ ಪಾಶದಿಂದ ಬಂಧಿಸಿ ಬಲಾತ್ಕಾರದಿಂದ ಎಳೆಯಲ್ಪಟ್ಟ ದೇವತೆಗಳು ಯಾವನಿಗೆ ಹೇಗೆತಾನೆ ನಮಸ್ಕಾರವನ್ನು ಮಾಡಲಿಲ್ಲ? (ನಮಸ್ಕಾರ ಮಾಡಿದರೆಂದರ್ಥವು)

**[೯]ಶರವ್ಯಮಕರೋದ್ಯಸ್ಯ ಶರಪಾತೋ ಮಹಾಂಬುಧೌ ।**
**ಪ್ರಸಭಂ ಮಾಗಧಾವಾಸಂ ಕ್ರಾಂತ್ವಾ ದ್ವಾದಶಯೋಜನಮ್ ॥ ೭೧ ॥**

ಯಾವನ ಬಾಣದ ಬೀಳುವಿಕೆಯು ಮಹಾಸಾಗರದಲ್ಲಿ ಬಲಾತ್ಕಾರವಾಗಿ ಹನ್ನೆರಡು ಯೋಜನಗಳನ್ನು ದಾಟಿ ಮಾಗಧಾಮರನ ವಾಸಸ್ಥಾನವನ್ನು ಲಕ್ಷ್ಯವನ್ನಾಗಿ ಮಾಡಿತೋ (ಮಾಗಧಾವಾಸಕ್ಕೆ ಗುರಿಯಿಟ್ಟಿತೋ)

**ವಿಜಯಾರ್ಧಾಚಲೇ ಯಸ್ಯ ವಿಜಯೋ ಘೋಷಿತೋಮರೈಃ ।**
**ಜಯತೋ ವಿಜಯಾರ್ಧೇಶಂ ಶರೇಣಾಮೋಘಪಾತಿನಾ ॥ ೭೨ ॥**

ಸಫಲವಾದ ಬೀಳುವಿಕೆಯುಳ್ಳ ಬಾಣದಿಂದ ವಿಜಯಾರ್ಧಾಧಿಪತಿಯಾದ ದೇವನನ್ನು ಜಯಿಸಿದ ಯಾವನ ವಿಜಯವು ವಿಜಯಾರ್ಧಪರ್ವತದಲ್ಲಿ ದೇವತೆಗಳಿಂದ ಹೊಗಳಲ್ಪಟ್ಟಿದ್ದಿತೋ

೧ ಸಂಪೂರ್ಣಂ ಕುರ್ವನ್. ೨ ಕಿಂ. ೩ ಚಕ್ರಿಣಃ. ೪ ವಚನಸ್ಯ ಸಮಯಂ. ೫ ಕೃತವಾನ್. ೬ ಮನೋಜ್ಞಂ. ೭ ಶಬ್ದಾರ್ಥೌ. ೮ ಪಿಂಡೀಕೃತ್ಯ. ೯ ಕಾಂತಿಭಿಃ, ವಸ್ತ್ರೈರಿತಿ ಧ್ವನಿಃ. ೧೦ ದರ್ಪಣೇ. ೧೧ ಸಂಸ್ಕಾರರಹಿತಃ, ವ್ಯುತ್ಪನ್ನಃ ಪ್ರಹತಃ ಕ್ಷುಣ್ಣಃ ಸಂಸ್ಕೃತಶ್ಚ ಸಮಾರ್ಥಕಃ. ೧೨ ಪ್ರತ್ಯಕ್ಷಂ ಕರೋತಿ. ೧೩ ಮದ್ವಿಧಃ. ೧೪ ಚಕ್ರಿವಶವರ್ತಿನಃ. ೧೫ ಉಪದೇಶಿತಂ. ೧೬ ಭರತಚಕ್ರಿಣಃ ಗೌರವಾದೇವ.

೧ ಭೇದಮಕೃತ್ವಾ. ೨ ನೀತಿಃ. ೩ ಇಕ್ಷ್ವಾಕೋಃ ಸಂಜಾತಃ. ೪ ಅಸಹಾಯ. ೫ ಪರಸ್ಪರತಾಡಿತಃ. ೬ ಅಗುಃ. ೭ ದೇವಾಃ. ೮ ಬಂಧನಂ ಕೃತ್ವಾ. ೯ ಲಕ್ಷ್ಯಂ.

**ಕೃತಮಾಲಾದಯೋ ದೇವಾ ಗತಾ ಯಸ್ಯ [೧]ವಿಧೇಯತಾಮ್ ।**
**[೨]ಕೃತಮಸ್ಯೋಭಯಶ್ರೇಣೀ ನ ಭೋಗಜಯವರ್ಣನೈಃ ॥ ೭೩ ॥**

ಕೃತಮಾಲನೇ ಮೊದಲಾದ ದೇವತೆಗಳು ಯಾರಿಗೆ ವಿಧೇಯತ್ವವನ್ನು ಹೊಂದಿದರೋ ಯಾವ ಇವನ ದಕ್ಷಿಣೋತ್ತರ ಶ್ರೇಣಿಗಳ ವಿದ್ಯಾಧರರನ್ನು ಜಯಿಸಿದ ವರ್ಣನೆಗಳಿಂದ ಸಾಕಾಗಿರುವುದೋ (ಆ ವಿದ್ಯಾಧರವಿಜಯವರ್ಣನೆಗಳೇ ಇವನ ಮಹತ್ತ್ವವನ್ನು ವ್ಯಕ್ತಪಡಿಸಲು ಸಾಕಾಗಿವೆಯೆಂದು ಭಾವವು.)

**ಗುಹಾಮುಖ[೩]ಮಪಧ್ವಾಂತಂ ವ್ಯತೀತ್ಯ ಜಯಸಾಧನೈಃ ।**
**ಉತ್ತರಾಂ ವಿಜಯಾರ್ಧಾದ್ರೇರ್ಯೋ ವ್ಯಗಾಹತ ತಾಂ ಮಹೀಮ್ ॥**

ಯಾವನು ಜಯಸಾಮಗ್ರಿಗಳಿಂದ ಗುಹೆಯ ಬಾಗಿಲನ್ನು ಕತ್ತಲೆಯಿಲ್ಲದುದನ್ನಾಗಿ ಮಾಡಿ ದಾಟಿ ವಿಜಯಾರ್ಧಪರ್ವತದ ಉತ್ತರದಿಕ್ಕಿನಲ್ಲಿರುವ ಆ ಭೂಮಿಯನ್ನು ಪ್ರವೇಶಮಾಡಿದನೋ

**ಮ್ಲೇಚ್ಛಾನನಿಚ್ಛತೋಽಪ್ಯಾಜ್ಞಾಂ [೪]ಪ್ರಚ್ಛಾದ್ಯ ಜಯಸಾಧನೈಃ ।**
**ಸೇನಾನ್ಯಾ ಯೋ ಜಯನ್ನಾಪ ಬಲಾ[೫]ದಾಚ್ಛಿದ್ಯ ತದ್ಧನಮ್ ॥ ೭೫ ॥**

ಯಾವನು ತನ್ನ ಆಜ್ಞೆಯನ್ನು ಇಚ್ಛಿಸದವರಾಗಿದ್ದ ಮ್ಲೇಚ್ಛರಾಜರನ್ನೂ ತನ್ನ ಸೇನಾಪತಿಯಿಂದ ಜಯಸಾಮಗ್ರಿಗಳಿಂದ ಆವರಿಸಿಕೊಂಡು ಜಯಿಸಿ ಬಲಾತ್ಕಾರದಿಂದ ಅವರ ದ್ರವ್ಯವನ್ನು ಸೆಳೆದು ಪಡೆದನೋ

**ಕೃತೋಽಭಿಷೇಕೋ ಯಸ್ಯಾರಾದಭ್ಯೇತ್ಯ ಸುರಸತ್ತಮೈಃ ।**
**ಯಸ್ಯಾಚಲೇಂದ್ರಕೂಟೇಷು ಸ್ಥಲಪದ್ಮಾಯಿತಂ ಯಶಃ ॥ ೭೬ ॥**

ಶ್ರೇಷ್ಠರಾದ ದೇವತೆಗಳು ಸಮೀಪಕ್ಕೆ ಬಂದು ಯಾರಿಗೆ ಅಭಿಷೇಕವನ್ನು ಮಾಡಿದರೋ ಯಾವನ ಕೀರ್ತಿಯು ದೊಡ್ಡಬೆಟ್ಟಗಳ ಶಿಖರಗಳಲ್ಲಿ ನೆಲದಾವರೆಯಂತಾಯಿತೋ

**ರತ್ನಾರ್ಘ್ಯೈಃ [೬]ಪರ್ಯುಪಾಸಾತಾಂ ಯಂ [೭]ಸ್ವರ್ಧುನ್ಯಧಿದೇವತೇ ।**
**ವೃಷಭಾದ್ರಿತಟೇ ಯೇನ ಟಂಕೋತ್ಕೀರ್ಣಂ ಕೃತಂ ಯಶಃ ॥ ೭೭ ॥**

ಗಂಗಾಸಿಂಧುದೇವಿಯರು ಯಾವನನ್ನು ರತ್ನಾರ್ಘ್ಯಗಳಿಂದ ಪೂಜಿಸಿದರೋ ಯಾವನಿಂದ ಕೀರ್ತಿಯು ವೃಷಭಾದ್ರಿಪರ್ವತದ ತಪ್ಪಲಿನಲ್ಲಿ ಚೇಣದಿಂದ ಕೆತ್ತಲ್ಪಟ್ಟಿತೋ

**ಘಟದಾಸೀಕೃತಾ ಲಕ್ಷ್ಮೀಃ ಸುರಾಃ ಕಿಂಕರತಾಂ ಗತಾಃ ।**
**ಯಸ್ಯ ಸ್ವಾಧೀನರತ್ನಸ್ಯ ನಿಧಯಃ ಸುವತೇ ಧನಮ್ ॥ ೭೮ ॥**

ಸ್ವಾಧೀನವಾದ ರತ್ನಗಳುಳ್ಳ ಯಾವನಿಗೆ ಲಕ್ಷ್ಮಿಯು ಗಡಿಗೆಯಲ್ಲಿ ನೀರನ್ನು ಹೊರುವ ದಾಸಿಯಾಗಿ ಮಾಡಲ್ಪಟ್ಟಳೋ ದೇವತೆಗಳು ಭೃತ್ಯತ್ವವನ್ನು ಹೊಂದಿದರೋ ನಿಧಿಗಳು ದ್ರವ್ಯವನ್ನು ಕೊಡುತ್ತವೋ

**ಸ ಯಸ್ಯ ಜಯಸೈನ್ಯಾನಿ ನಿರ್ಜಿತ್ಯ ನಿಖಿಲಾ ದಿಶಃ ।**
**ಭ್ರಮಂತಿ ಸ್ಮಾಖಿಲಾಂಭೋಧಿತಟಾಂತವನಭೂಮಿಷು ॥ ೭೯ ॥**

**ತ್ವಾಮಾಯುಷ್ಮನ್ ಜಗನ್ಮಾನ್ಯೋ [೮]ಮಾನಯನ್ಕುಶಲಾಶಿಷಾ ।**
**ಸಮಾದಿಶತಿ ಚಕ್ರಾಂಕಾಂ ಪ್ರಥಯನ್ನಧಿರಾಜತಾಮ್ ॥ ೮೦ ॥**

ಯಾವನ ಜಯಶೀಲವಾದ ಸೈನ್ಯಗಳು ಸಮಸ್ತದಿಕ್ಕುಗಳನ್ನು ಜಯಿಸಿ ಸಮಸ್ತವಾದ ಸಮುದ್ರತೀರದಲ್ಲಿರುವ ವನಭೂಮಿಗಳಲ್ಲಿ ಸಂಚರಿಸಿದುವೋ ಅಂತಹ ಜಗನ್ಮಾನ್ಯನಾದ ಭರತಸಾರ್ವಭೌಮನು ಎಲೈ ಆಯುಷ್ಮಂತನೆ! ನಿನ್ನನ್ನು ಕುಶಲಪೂರ್ವಕವಾದ ಆಶೀರ್ವಾದದಿಂದ ಸತ್ಕರಿಸುವವನಾಗಿಯೂ ಚಕ್ರರತ್ನವು

೧ ವಿನಯಗ್ರಾಹಿತಾಂ. ೨ ಪರ್ಯಾಪ್ತಂ. ೩ ಅಪಗತಾಂಧಕಾರಂ ಕೃತ್ವಾ. ೪ ಸಂವೇಷ್ಟ್ಯ. ೫ ಬಲಾದಾಕೃಷ್ಯ. ೬ ಅಪೂಜಯತಾಂ. ೭ ಗಂಗಾಸಿಂಧುದೇವ್ಯೌ. ೮ ಪೂಜಯನ್.

ಗುರುತಾಗಿರುವ ತನ್ನ ಚಕ್ರವರ್ತಿತ್ವವನ್ನು ಪ್ರಸಿದ್ಧಪಡಿಸುವವನಾಗಿಯೂ ನಿನಗೆ ಆಜ್ಞಾಪಿಸುತ್ತಾನೆ:–

**ಮದೀಯಂ ರಾಜ್ಯಮಾಕ್ರಾಂತನಿಖಿಲದ್ವೀಪಸಾಗರಮ್ ।**
**ರಾಜತೇಽಸ್ಮತ್ಪ್ರಿಯಭ್ರಾತ್ರಾ ನ ಬಾಹುಬಲಿನಾ ವಿನಾ ॥ ೮೧ ॥**

'ಸಮಸ್ತದ್ವೀಪಗಳನ್ನೂ ಸಮುದ್ರಗಳನ್ನೂ ಆಕ್ರಮಿಸಿರುವ ನನ್ನ ಸಂಬಂಧವಾದ ರಾಜ್ಯವು ನಮ್ಮ ಪ್ರಿಯಸಹೋದರನಾದ ಬಾಹುಬಲಿಯಿಲ್ಲದೆ ಶೋಭಿಸುವುದಿಲ್ಲ.

**ತಾಃ ಸಂಪದಸ್ತದೈಶ್ವರ್ಯಂ ತೇ ಭೋಗಾಃ ಸ ಪರಿಚ್ಛದಃ ।**
**ಯೇ ಸಮಂ ಬಂಧುಭಿರ್ಭುಕ್ತಾಃ ಸಂವಿಭಕ್ತಸುಖೋದಯೈಃ ॥ ೮೨ ॥**

ಸುಖಾಭ್ಯುದಯಗಳನ್ನು ವಿಭಾಗಿಸಿಕೊಂಡಿರುವ ಬಂಧುಗಳೊಡನೆ ಯಾವುವು ಅನುಭವಿಸಲ್ಪಡುತ್ತವೋ ಅವುಗಳೇ ನಿಜವಾದ ಸಂಪತ್ತುಗಳು; ಅದೇ ನಿಜವಾದ ಐಶ್ವರ್ಯವು; ಅವುಗಳೇ ನಿಜವಾದ ಭೋಗಗಳು; ಅದೇ ನಿಜವಾದ ಪರಿವಾರವು'

**ಅನ್ಯಚ್ಚ ನಮಿತಾಶೇಷನೃಸುರಾಸುರಖೇಚರಮ್ ।**
**ನಾಧಿರಾಜ್ಯಂ ವಿಭಾ[೧]ತ್ಯಸ್ಯ ಪ್ರಣಾಮವಿಮುಖೇ ತ್ವಯಿ ॥ ೮೩ ॥**

ಮತ್ತೂ ನೀನು ನಮಸ್ಕರಿಸುವುದಕ್ಕೆ ವಿಮುಖನಾದರೆ ಸಮಸ್ತಮನುಷ್ಯರನ್ನೂ ದೇವತೆಗಳನ್ನೂ ಅಸುರರನ್ನೂ ಖೇಚರರನ್ನೂ ವಿಧೇಯರನ್ನಾಗಿ ಮಾಡಿದ ಈ ಭರತೇಶ್ವರನ ಚಕ್ರವರ್ತಿತ್ವವು ಶೋಭಿಸುವುದಿಲ್ಲ.

**ನ ದುನೋತಿ ಮನಸ್ತೀವ್ರಂ ರಿಪುರಪ್ರಣತಸ್ತಥಾ ।**
**ಬಂಧುರಪ್ರಣಮನ್ಗರ್ವಾದ್ದುರ್ವಿದಗ್ಧೋ ಯಥಾ ಪ್ರಭುಮ್ ॥ ೮೪ ॥**

ದೊರೆಯನ್ನು ಗರ್ವದಿಂದ ನಮಸ್ಕರಿಸದಿರುವ ದುರಹಂಕಾರಿಯಾದ ಬಂಧುವು ಹೇಗೆ ಮನಸ್ಸನ್ನು ನೋಯಿಸುತ್ತಾನೋ ಹಾಗೆ ನಮಸ್ಕರಿಸದಿರುವ ಶತ್ರುವು ತೀವ್ರವಾಗಿ ಮನಸ್ಸನ್ನು ನೋಯಿಸುವುದಿಲ್ಲ.

**ತದುಪೇತ್ಯ ಪ್ರಣಾಮೇನ ಪೂಜ್ಯತಾಂ ಪ್ರಭುರಕ್ಷಮೀ ।**
**ಪ್ರಭುಪ್ರಣತಿರೇವೇಷ್ಟಾ ಪ್ರಸೂತಿರ್ನನು ಸಂಪದಾಮ್ ॥ ೮೫ ॥**

ಆದುದರಿಂದ ಅವನ ಬಳಿಗೆ ಹೋಗಿ ಕ್ಷಮೆಯಿಲ್ಲದಿರುವ ಆ ಪ್ರಭುವನ್ನು ನಮಸ್ಕಾರದಿಂದ ಪೂಜಿಸು. ತಪ್ಪನ್ನು ಕ್ಷಮಿಸದಿರುವ ಭರತನನ್ನು ನಮಸ್ಕರಿಸಿ ಸತ್ಕರಿಸೆಂದು ಭಾವವು. ದೊರೆಯ ನಮಸ್ಕಾರವೇ ಸಂಪತ್ತುಗಳಿಗೆ ಅಭೀಷ್ಟವಾದ ಜನ್ಮಸ್ಥಾನವು.

**[೨]ಅವಂಧ್ಯಶಾಸನಸ್ಯಾಸ್ಯ ಶಾಸನಂ ಯೋ [೩]ವಿಮನ್ಯತೇ ।**
**[೪]ಶಾಸನಂ ದ್ವಿಷತಾಂ ತೇಷಾಂ ಚಕ್ರ[೫]ಮಪ್ರತಿಶಾಸನಮ್ ॥ ೮೬ ॥**

ಸಫಲವಾದ ಆಜ್ಞೆಯುಳ್ಳ ಈ ಭರತರಾಜನ ಆಜ್ಞೆಯನ್ನು ಯಾರು ತಿರಸ್ಕರಿಸುತ್ತಾರೋ ಆ ಶತ್ರುಗಳಿಗೆ ಪ್ರತಿಕೂಲಾಜ್ಞೆಯಿಲ್ಲದ ಚಕ್ರವು ದಂಡಿಸುವುದಾಗಿದೆ.

**ಪ್ರಚಂಡ[೬]ದಂಡನಿರ್ಘಾತನಿಪಾತಪರಿಖಂಡಿತಾನ್ ।**
**[೭]ತದಾಜ್ಞಾಖಂಡನವ್ಯಗ್ರಾನ್ ಪಶ್ಯೇಮಾನ್ಮಂಡಲಾಧಿಪಾನ್ ॥ ೮೭ ॥**

ಭಯಂಕರವಾದ ದಂಡರತ್ನವೆಂಬ ಸಿಡಿಲಿನ ಪತನದಿಂದ ಖಂಡಿಸಲ್ಪಟ್ಟವರೂ ಚಕ್ರವರ್ತಿಯ ಆಜ್ಞೆಯ ಖಂಡನದಲ್ಲಿ ಆಸಕ್ತರೂ ಆದ ಈ ಮಂಡಲೇಶ್ವರ–ಮ್ಲೇಚ್ಛರಾಜರುಗಳನ್ನು ನೋಡು.

**ತದೇತ್ಯ ದ್ರುತಮಾಯುಷ್ಮನ್ಪೂರಯಾಸ್ಯ ಮನೋರಥಮ್ ।**
**ಯುವಯೋರಸ್ತು ಸಾಂಗತ್ಯಾತ್ಸಂಗತಂ ನಿಖಿಲಂ ಜಗತ್ ॥ ೮೮ ॥**

೧ ಚಕ್ರಿಣಃ. ೨ ಸಫಲಾಜ್ಞಸ್ಯ. ೩ ಅವಜ್ಞಾಂಕುರ್ವಂತಿ. ೪ ಶಿಕ್ಷಿತಂ. ೫ ಪ್ರತಿಶಾಸನರಹಿತಂ. ೬ ದಂಡರತ್ನಾಶನಿ. ೭ ಚಕ್ರಧರಾಜ್ಞಾ.

ಆಯುಷ್ಮಂತನೆ! ಆದುದರಿಂದ ಶೀಘ್ರವಾಗಿ ಬಂದು ಈ ಭರತೇಶ್ವರನ ಇಷ್ಟಾರ್ಥವನ್ನು ಪೂರ್ತಿಮಾಡು. ನಿಮ್ಮಿಬ್ಬರ ಸೇರುವಿಕೆಯಿಂದ ಸಮಸ್ತ ಲೋಕವು ಸೇರಿದುದಾಗಿ ಆಗಲಿ.''

**ಇತಿ ತದ್ವಚನಸ್ಯಾಂತೇ ಕೃತಮಂದಸ್ಮಿತೋ ಯುವಾ ।**
**ಧೀರಂ ವಚೋ ಗಭೀರಾರ್ಥಮಾಚಚಕ್ಷೇ ವಿಚಕ್ಷಣಃ ॥ ೮೯ ॥**

ಈ ಪ್ರಕಾರವಾಗಿ ಆ ದೂತನು ಮಾತನಾಡಿದಮೇಲೆ ಮುಗುಳ್ನಗೆಯುಳ್ಳವನೂ ವಿವೇಕಿಯೂ ಯುವಕನೂ ಆದ ಬಾಹುಬಲಿಕುಮಾರನು ಗಂಭೀರವಾದ ಅರ್ಥವುಳ್ಳ ಧೀರವಾಣಿಯನ್ನು ನುಡಿದನು.

**ಸಾಧೂಕ್ತಂ ಸಾಧುವೃತ್ತತ್ವಂ ತ್ವಯಾ ಘಟಯತಾ ಪ್ರಭೋಃ ।**
**[೧]ವಾಚಸ್ಪತ್ಯಂ ತದೇವೇಷ್ಟಂ ಪೋಷಕಂ ಸ್ವಮತಸ್ಯ [೨]ಯತ್ ॥ ೯೦ ॥**

''ಎಲೈ ದೂತನೆ! ಪ್ರಭುವಿಗೆ ಸದಾಚಾರವನ್ನು ಸಂಯೋಜನಮಾಡುವವನಾದ ನಿನ್ನಿಂದ ಚೆನ್ನಾಗಿ ಹೇಳಲ್ಪಟ್ಟಿತು. ಯಾವ ನುಡಿಯು ತನ್ನ ಅಭಿಪ್ರಾಯವನ್ನು ಪುಷ್ಟೀಕರಿಸುವುದಾಗಿದೆಯೋ ಆ ನುಡಿಯ ಜಾಣ್ಮೆಯೇ ಇಷ್ಟವಾದುದು.

**[೩]ಸಾಮ ದರ್ಶಯತಾ ಸಾಮ ಭೇದದಂಡೌ ವಿಶೇಷತಃ ।**
**ಪ್ರಯುಂಜಾನೇನ [೪]ಸಾಧ್ಯೇರ್ಥೇ [೫]ಸ್ವಾತಂತ್ರ್ಯಂ ದರ್ಶಿತಂ ತ್ವಯಾ ॥**

ಸಾಮೋಪಾಯವನ್ನು ಸ್ವಲ್ಪವಾಗಿ ತೋರಿಸುವವನೂ ಭೇದೋಪಾಯ ದಂಡೋಪಾಯಗಳನ್ನು ಹೆಚ್ಚಾಗಿ ತೋರಿಸುವವನೂ ಆದ ನೀನು ಸಾಧಿಸತಕ್ಕ ಪ್ರಯೋಜನದಲ್ಲಿ (ಬೇರೆಯವರನ್ನು ವಿಧೇಯರನ್ನಾಗಿ ಮಾಡುವ ಕೆಲಸದಲ್ಲಿ) ಸ್ವಾತಂತ್ರ್ಯವನ್ನು ತೋರಿಸಿದೆ.

**ಸ್ವತಂತ್ರಸ್ಯ ಪ್ರಭೋಃ ಸತ್ಯಂ ಸ ತ್ವ[೬]ಮಂತಶ್ಚರಶ್ಚರಃ ।**
**ಅನ್ಯಥಾ ಕಥಮೇವಾಸ್ಯ [೭]ವ್ಯನಕ್ಷ್ಯಂತರ್ಗತಂ [೮]ಗತಮ್ ॥ ೯೨ ॥**

ಪ್ರಸಿದ್ಧನಾದ ನೀನು ಸ್ವತಂತ್ರನಾದ ಪ್ರಭುವಿನ ಹೃದಯದಲ್ಲಿರುವ ದೂತನು, ನಿಜ. ಹಾಗಲ್ಲದಿದ್ದರೆ ಈ ಪ್ರಭುವಿನ ಹೃದಯದಲ್ಲಿರುವ ಅಭಿಪ್ರಾಯವನ್ನು ಹೇಗೆ ವ್ಯಕ್ತಮಾಡುವೆ?

**[೯]ನಿಸೃಷ್ಟಾರ್ಥತಯಾಸ್ಮಾಸು [೧೦]ನಿರ್ದಿಷ್ಟಸ್ತ್ವಂ ನಿಧೀಶಿನಾ ।**
**ವಿಶಿಷ್ಟೋಽಪಿ ನ ವೈಶಿಷ್ಟ್ಯಂ ಪರಮರ್ಮಸ್ಪೃಗೀದೃಶಮ್ ॥ ೯೩ ॥**

ನೀನು ಅನೇಕಾವರ್ತಿ ಕಾರ್ಯವನ್ನು ಮಾಡಿ ಪ್ರಯೋಜನವನ್ನುಂಟುಮಾಡಿರುವುದರಿಂದ ನಿಧೀಶ್ವರನಾದ ಭರತೇಶ್ವರನಿಂದ ನಮ್ಮಲ್ಲಿ ನಿಯುಕ್ತನಾದ ನೀನು ಅಸಾಧಾರಣನಾಗಿರುತ್ತೀಯೆ. ಆದರೆ ಬೇರೆಯವರ ಮರ್ಮವನ್ನು ಭೇದಿಸುವ ಇಂತಹ ಹೆಚ್ಚುಗಾರಿಕೆಯು ತಕ್ಕುದಲ್ಲವು.

**ಅಯಂ ಖಲು ಖಲಾಚಾರೋ ಯ[೧೧]ದ್ಬಲಾತ್ಕಾರದರ್ಶನಮ್ ।**
**ಸ್ವಗುಣೋತ್ಕೀರ್ತನಂ ದೋಷೋದ್ಭಾವನಂ ಚ ಪರೇಷು ಯತ್ ॥**

ಸಾಮರ್ಥ್ಯವನ್ನು ತೋರಿಸುವಿಕೆಯೂ ತನ್ನ ಗುಣಗಳ ಹೊಗಳಿಕೆಯೂ ಬೇರೆಯವರಲ್ಲಿ ದೋಷಗಳನ್ನು ತೋರಿಸುವಿಕೆಯೂ ಇವು ದುಷ್ಟರ ಆಚರಣೆಗಳಲ್ಲವೆ?

**ವಿವೃಣೋತಿ ಖಲೋನ್ಯೇಷಾಂ ದೋಷಾನ್ ಸ್ವಾಂಶ್ಚ ಗುಣಾನ್ಸ್ವಯಮ್ ।**
**ಸಂವೃಣೋತಿ ಚ ದೋಷಾನ್ ಸ್ವಾನ್ ಪರಕೀಯಾನ್ಗುಣಾನಪಿ ॥ ೯೫ ॥**

ದುಷ್ಟನು ಬೇರೆಯವರ ದೋಷಗಳನ್ನೂ ತನ್ನ ಗುಣಗಳನ್ನೂ ತಾನು ವಿವರಿಸುತ್ತಾನೆ. ತನ್ನ ದೋಷಗಳನ್ನೂ ಬೇರೆಯವರ ಗುಣಗಳನ್ನೂ ಮುಚ್ಚುತ್ತಾನೆ.

**ಅನಿರಾಕೃತಸಂತಾಪಾಂ [೧]ಸುಮನೋಭಿಃ ಸಮುಜ್ಝಿತಾಮ್ ।**
**ಫಲಹೀನಾಂ ಶ್ರಯತ್ಯಜ್ಞಃ [೨]ಖಲತಾಂ [೩]ಖಲತಾಮಿವ ॥ ೯೬ ॥**

ಅಜ್ಞಾನಿಯು ಆಕಾಶಲತೆಯನ್ನೋಪಾದಿಯಲ್ಲಿ ಸಂತಾಪವನ್ನು ಹೋಗಲಾಡಿಸದಿರುವುದೂ ಒಳ್ಳೆಯ ಮನಸ್ಸುಗಳಿಂದ ಮತ್ತು ಪುಷ್ಪಗಳಿಂದ ಬಿಡಲ್ಪಟ್ಟುದೂ ಪ್ರಯೋಜನ ಮತ್ತು ಫಲವಿಲ್ಲದುದೂ ಆದ ದುರ್ಜನತ್ವವನ್ನು ಆಶ್ರಯಿಸುತ್ತಾನೆ.

**[೪]ಸತಾಮಸಮ್ಮತಾಂ ವಿಷ್ವಗಾಚಿತಾಂ ವಿರಸೈಃ ಫಲೈಃ ।**
**ಮನ್ಯೇ ದುಃಖಲತಾಮೇನಾಂ ಖಲತಾಂ ಲೋಕತಾಪಿನೀಮ್ ॥ ೯೭ ॥**

ಸತ್ಪುರುಷರಿಗೆ ಸಮ್ಮತವಲ್ಲದುದೂ ರಸವಿಲ್ಲದ ಫಲಗಳಿಂದ ಸುತ್ತಲೂ ವ್ಯಾಪ್ತವೂ ಲೋಕಕ್ಕೆ ತಾಪವನ್ನುಂಟುಮಾಡುವುದೂ ಆದ ಈ ದುರ್ಜನತ್ವವನ್ನು ದುಃಖದ ಲತೆಯನ್ನಾಗಿ ತಿಳಿಯುತ್ತೇನೆ.

**[೫]ಸೋಪಪ್ರದಾನಂ ಸಾಮಾದೌ ಪ್ರಯುಕ್ತಮಪಿ ಬಾಧ್ಯತೇ ।**
**ಪರಾಭ್ಯಾಂ ಭೇದದಂಡಾಭ್ಯಾಂ [೬]ನ್ಯಾಯ್ಯೇ [೭]ವಿಪ್ರತಿಷೇಧಿನಿ ॥ ೯೮ ॥**

ಪ್ರಥಮದಲ್ಲಿ ದಾನೋಪಾಯಸಹಿತವಾದ ಸಾಮೋಪಾಯವು ಪ್ರಯೋಗಿಸಲ್ಪಟ್ಟರೂ ನ್ಯಾಯವುಳ್ಳ ಮನುಷ್ಯನು ವಿಕಾರವನ್ನು ಹೊಂದಿದರೆ ಇತರ ಭೇದ ದಂಡೋಪಾಯಗಳಿಂದ ಬಾಧಿಸಲ್ಪಡುತ್ತಾನೆ. ಮೊದಲು ಸಾಮದಾನೋಪಾಯಗಳನ್ನು ಪ್ರಯೋಗಿಸಿದರೂ ಶತ್ರುವು ಭೇದ ದಂಡೋಪಾಯಗಳನ್ನವಲಂಬಿಸಿದರೆ ಅಂತಹ ಭೇದ ದಂಡೋಪಾಯಗಳಿಂದಲೇ ಅವನು ಬಾಧಿಸಲ್ಪಡುತ್ತಾನೆಂದು ಭಾವವು.

**[೮]ಯಥಾವಿಷಯಮೇ[೯]ವೈಷಾಮುಪಾಯಾನಾಂ ನಿಯೋಜನಮ್ ।**
**ಸಿದ್ಧ್ಯಂಗಂ [೧೦]ತದ್ವಿಪರ್ಯಾಸಃ ಫಲಿಷ್ಯತಿ ಪರಾಭವಮ್ ॥ ೯೯ ॥**

ವಿಷಯಗಳನ್ನನುಸರಿಸಿ ಈ ಉಪಾಯಗಳ ಪ್ರಯೋಗವು ಕಾರ್ಯಸಿದ್ಧಿಗೆ ಸಾಧನವಾಗುವುದು. ಅವಿಷಯಗಳಲ್ಲಿ ಈ ಉಪಾಯಗಳ ಪ್ರಯೋಗವು ತಿರಸ್ಕಾರವನ್ನುಂಟುಮಾಡುವುದು. ಶತ್ರುವಿನ ಬಲಾಬಲವನ್ನು ನೋಡಿ ಉಪಾಯಗಳನ್ನು ಪ್ರಯೋಗಿಸಬೇಕೆಂದರ್ಥವು.

**ನೈಕಾಂತಶಮನಂ ಸಾಮ ಸಮಾಮ್ನಾತಂ [೧೧]ಸಹೋಷ್ಮಣಿ ।**
**[೧೨]ಸ್ನಿಗ್ಧೇಪಿ ಹಿ ಜನೇ ತಪ್ತೇ ಸರ್ಪಿಷೀವಾಂಬುಸೇಚನಮ್ ॥ ೧೦೦ ॥**

ಜಿಡ್ಡಾಗಿದ್ದರೂ ಕಾಯಿಸಲ್ಪಟ್ಟ ತುಪ್ಪದಲ್ಲಿ ನೀರಿನ ಸೇಚನೆಯಂತೆ, ಬಂಧುವಾದರೂ ಪ್ರತಾಪಶಾಲಿಯಾದ ಮನುಷ್ಯನು ರೇಗಿಸಲ್ಪಟ್ಟರೆ ಸಾಮೋಪಾಯವು ಶಮನವನ್ನೇ ಮಾಡುತ್ತದೆಂದು ಹೇಳಲ್ಪಟ್ಟಿಲ್ಲ. ಪ್ರತಾಪಶಾಲಿಯಾದ ಬಂಧುವು ರೇಗಿಸಲ್ಪಟ್ಟರೆ ಸಾಮೋಪಾಯವು ಕಾರ್ಯಕಾರಿಯಲ್ಲವೆಂದು ಭಾವವು.

**[೧೩]ಉಪಪ್ರದಾನಮಪ್ಯೇವಂ [೧೪]ಪ್ರಾಯಂ ಮನ್ಯೇ ಮಹೋಜಸಿ ।**
**[೧೫]ಸಮಿತ್ಸಹಸ್ರದಾನೇಪಿ ದೀಪ್ತಸ್ಯಾಗ್ನೇಃ ಕುತಃ ಶಮಃ ॥ ೧೦೧ ॥**

ಮಹಾತೇಜಸ್ವಿಯಾದ ಪುರುಷನಲ್ಲಿ ದಾನೋಪಾಯವನ್ನೂ ಈ ಸಾಮೋಪಾಯಕ್ಕೆ ಸಮಾನವನ್ನಾಗಿಯೇ ತಿಳಿಯುತ್ತೇನೆ. ಉರಿಸಲ್ಪಟ್ಟ ಬೆಂಕಿಗೆ ಕಟ್ಟಿಗೆಯ ರಾಶಿಯನ್ನಿತ್ತರೂ ಉಪಶಾಂತಿಯೆಲ್ಲಿ ಬರುವುದು?

---

೧ ವಕ್ತೃತ್ವಂ, ವಚನನೈಪುಣ್ಯಂ ಇಷ್ಟಂಹಿ. ೨ ವಚಃ. ೩ ಅಲ್ಪಂ. ೪ ಪರಪ್ರಸ್ವೀಕರಣಾದಿಪ್ರಯೋಜನೆ. ೫ ತ್ವದಧೀನಂ. ೬ ಹೃದಯೇವರ್ತಮಾನಃ. ೭ ವ್ಯಕ್ತಂಕರೋಷಿ. ೮ ಬುದ್ಧಿಂ ಅಭಿಪ್ರಾಯಂ. ೯ ಅಸಕೃತ್ಸಂಪಾದಿತಪ್ರಯೋಜನತಯಾ. ೧೦ ನಿಯುಕ್ತಃ. ೧೧ ಸಾಮರ್ಥ್ಯಪ್ರಕಾಶನಂ.

೧ ಶೋಭನಚಿತ್ತೈಃ, ಪುಷ್ಪೈಶ್ಚ. ೨ ದುರ್ಜನತ್ವಂ. ೩ ಆಕಾಶಲತಾಂ. ೪ ಸಜ್ಜನಾನಾಂ. ೫ ದಾನಸಹಿತಂ. ೬ ನ್ಯಾಯಾನ್ವಿತೇ ಪುರುಷೇ. ೭ ಭೇದದಂಡಾಭ್ಯಾಂ ವಿಕಾರಂ ಗತೇ ಸತಿ. ೮ ಸಾಮಭೇದಾದಿಯೋಗ್ಯಪುರುಷಮನತಿಕ್ರಮ್ಯ. ೯ ಸಾಮದಾನಭೇದದಂಡಾನಾಂ. ೧೦ ಅವಿಷಯನಿಯೋಜನಂ. ೧೧ ಸಪ್ರತಾಪೇ. ೧೨ ಬಂಧುಜನೇ. ೧೩ ದಾನೋಪಾಯಂ. ೧೪ ಏತತ್ಸದೃಶಂ. ೧೫ ಇಂಧನಸಮೂಹ.

**ಲೋಹಸ್ಯೈವೋಪತಪ್ತಸ್ಯ ಮೃದುತಾ ನ ಮನಸ್ವಿನಃ ।**
**ದಂಡೋಪ್ಯನುನಯಗ್ರಾಹ್ಯೋ [೧]ಸಾಮಜೇ ನ [೨]ಮೃಗದ್ವಿಷಿ ॥ ೧೦೨ ॥**

ಕಾಯಿಸಲ್ಪಟ್ಟ ಕಬ್ಬಿಣಕ್ಕೆ ಮೃದುತ್ವವು ಬರುವುದಲ್ಲದೆ ಅಭಿಮಾನಿಯಾದ ಮನುಷ್ಯನಿಗೆ ದಂಡೋಪಾಯದಿಂದಲೂ ಮೃದುತ್ವವು ಬರುವುದಿಲ್ಲವು. ದಂಡವೂ (ದೊಣ್ಣೆ) ಸ್ನೇಹವನ್ನು ತೋರಿಸುವಿಕೆಯಿಂದ ಹಿಡಿಯುವುದಕ್ಕೆ ಯೋಗ್ಯವಾದ ಆನೆಯಲ್ಲಿ ಉಪಯೋಗವಾಗುವುದಲ್ಲದೆ ಸಿಂಹದಲ್ಲಿ ಉಪಯೋಗವಾಗುವುದಿಲ್ಲವು.

**ತತೋ [೩]ವ್ಯತ್ಯಾಸಯನ್ನೇನಾನುಪಾಯಾನನುಪಾಯವಿತ್ ।**
**ಸ್ವಯಂ ಪ್ರಯೋಗ[೪]ವೈಗುಣ್ಯಾತ್ [೫]ಸೀದತ್ಯೇವ ನ ಮಾದೃಶಃ ॥ ೧೦೩ ॥**

ಆದುದರಿಂದ ಉಪಾಯಗಳನ್ನು ತಿಳಿಯದಿರುವವನು ತಾನು ಪ್ರಯೋಗ ವ್ಯತ್ಯಾಸದಿಂದ ಈ ಸಾಮಾದ್ಯುಪಾಯಗಳನ್ನು ವ್ಯತ್ಯಾಸದಿಂದ ಪ್ರಯೋಗಿಸುವವನಾಗಿ ನಾಶವಾಗುತ್ತಾನೆ. ನನ್ನಂತಹವನು ನಾಶವಾಗುವುದಿಲ್ಲ.

**ಸಾಮ್ನಾಪಿ ದುಷ್ಕರಂ ಸಾಧ್ಯಾ ವಯಮಿ[೬]ತ್ಯುಪಸಂಹೃತೇ ।**
**[೭]ತತ್ರೋ[೮]ತ್ಸೇಕಂ ಪ್ರಯುಂಜಾನೋ ವ್ಯಕ್ತಂ ಮುಗ್ಧಾಯತೇ ಭವಾನ್ ॥**

ನಮ್ಮನ್ನು ಸಾಮೋಪಾಯದಿಂದಲೂ ಸಾಧಿಸುವುದು ಕಷ್ಟ. ಹೀಗೆ ನಾವು ಸುಮ್ಮನಿರುತ್ತಿರಲು ನಮ್ಮಲ್ಲಿ ಗರ್ವವನ್ನು ಪ್ರಯೋಗಿಸುವ ನೀನು ನಿಜವಾಗಿ ಮೂರ್ಖನಂತೆ ಆಚರಿಸುತ್ತೀಯೆ.

**ವಯಸಾಧಿಕ ಇತ್ಯೇವ ನ ಶ್ಲಾಘ್ಯೋ ಭರತಾಧಿಪಃ ।**
**ಜರನ್ನಪಿ ಗಜಃ [೯]ಕಕ್ಷ್ಯಾಂ [೧೦]ಗಾಹತೇ ಕಿಂ ಹರೇಃ ಶಿಶೋಃ ॥ ೧೦೪ ॥**

ಭರತೇಶ್ವರನು ವಯಸ್ಸಿನಿಂದ ದೊಡ್ಡವನಾದಮಾತ್ರಕ್ಕೆ ಹೊಗಳಿಕೆಗೆ ಯೋಗ್ಯನಲ್ಲವು. ಆನೆಯು ಮುದಿಯಾದರೂ ಸಿಂಹದ ಮರಿಯ ಸಾದೃಶ್ಯವನ್ನು ಹೊಂದುವುದೇ ?

**[೧೧]ಪ್ರಣಯಃ [೧೨]ಪ್ರಶ್ರಯಶ್ಚೇತಿ ಸಂಗತೇಷು ಸನಾಭಿಷು ।**
**ತೇಷ್ವೇವಾಸಂಗತೇಷ್ವಂಗ [೧೩]ತದ್ದ್ವಯಸ್ಯ ಹತಾ ಗತಿಃ ॥ ೧೦೫ ॥**

ಎಲೈ ದೂತನೇ ! ಒಬ್ಬರಿಗೊಬ್ಬರು ಕಲೆತಿರುವ (ಅನ್ಯೋನ್ಯವಾಗಿರುವ) ಜ್ಞಾತಿಗಳಲ್ಲಿ ಸ್ನೇಹವೂ ವಿನಯವೂ ಉಂಟಾಗುವುವಲ್ಲದೆ ಹಾಗೆ ಸೇರದಿರುವ ಆ ಜ್ಞಾತಿಗಳಲ್ಲಿಯೂ ಸ್ನೇಹ ವಿನಯಗಳೆರಡರ ಗತಿಯೂ ನಷ್ಟವಾಗುವುದು.

**ಜ್ಯೇಷ್ಠಃ ಪ್ರಣಮ್ಯ ಇತ್ಯೇತತ್ಕಾಮಮಸ್ತ್ವನ್ಯದಾ ಸದಾ ।**
**ಮೂರ್ಧ್ನ್ಯಾರೋಪಿತಖಡ್ಗಸ್ಯ ಕಃ ಪ್ರಣಾಮ ಇತಿ ಕ್ರಮಃ ॥ ೧೦೬ ॥**

ಹಿರಿಯನು ನಮಸ್ಕರಿಸಲ್ಪಡತಕ್ಕವನೆಂಬುದಿದು ಬೇರೆ ಯಾವಾಗಲಾದರೂ ಧಾರಾಳವಾಗಿರಲಿ. ತಲೆಯ ಮೇಲೆ ಕತ್ತಿಯನ್ನೇರಿಸಿದವನಿಗೆ ನಮಸ್ಕಾರವೆಂಬುದಾವುದು ಕ್ರಮ ?

**ದೂತ [೧೪]ನೋ [೧೫]ದೂಯತೇ ಚಿತ್ತ[೧೬]ಮನ್ಯೋತ್ಸೇಕಾನುವರ್ಣನೈಃ ।**
**ತೇಜಸ್ವೀ ಭಾನುರೇವೈಕಃ ಕಿಮನ್ಯೋಪ್ಯ[೧೭]ಸ್ತ್ಯತಃ ಪರಮ್ ॥ ೧೦೭ ॥**

ಎಲೈ ದೂತನೆ ! ಬೇರೆಯವರ ಸಾಹಸವರ್ಣನಗಳಿಂದ ನಮ್ಮ ಮನಸ್ಸು ದುಃಖಪಡುತ್ತದೆ. ಸೂರ್ಯನೊಬ್ಬನೇ ತೇಜಸ್ವಿಯಾಗಿರುವವನು. ಈ ಸೂರ್ಯನಿಗಿಂತ ಬೇರೆಯಾಗಿರುವವನೂ ತೇಜಸ್ವಿಯಾಗಿರುವವನುಂಟೇ ? ತಾನು ಅಸಮ ಪರಾಕ್ರಮಿಯೆಂದು ಭಾವವು.

೧ ಗಜೇ. ೨ ಸಿಂಹೇ. ೩ ವಿಪರೀತತ್ವೇನ ಯೋಜಯನ್. ೪ ವೈಪರೀತ್ಯಾತ್. ೫ ನಶ್ಯತ್ಯೇವ. ೬ ವಿರತಿಂ ಗತೇ ಸತಿ. ೭ ತೂಷ್ಣೀಂಸ್ಥಿತೇ ಪುರುಷೇ. ೮ ಗರ್ವಂ. ೯ ಸಾಹಸಂ ತುಲ್ಯತಾಂ ವಾ. ೧೦ ಪ್ರಾಪ್ನೋತಿ. ೧೧ ಸ್ನೇಹಃ. ೧೨ ವಿನಯಃ. ೧೩ ಪ್ರಣಯಪ್ರಶ್ರಯದ್ವಯಸ್ಯ. ೧೪ ಅಸ್ಮಾಕಂ. ೧೫ ದೂಙ್ ಪರಿತಾಪೇ. ೧೬ ಅನ್ಯೇಷಾಂ ಸಾಹಸವರ್ಣನೈಃ. ೧೭ ಭಾನೋಃ ಸಕಾಶಾತ್.

**ರಾಜೋಕ್ತಿರ್ಮಯಿ ತಸ್ಮಿಂಶ್ಚ ಸಂವಿಭಕ್ತಾ [೧]ದಿವೇಧಸಾ ।**
**ರಾಜರಾಜಃ ಸ ಇತ್ಯದ್ಯ ಸ್ಫೋಟೋ ಗಂಡಸ್ಯ [೨]ಮೂರ್ಧ್ನಿಕಃ ॥ ೧೦೮ ॥**

ರಾಜನೆಂಬ ನುಡಿಯು ನನ್ನಲ್ಲಿಯೂ ಆ ಭರತನಲ್ಲಿಯೂ ಆದಿಬ್ರಹ್ಮ– ವೃಷಭಸ್ವಾಮಿಯಿಂದಲೇ ವಿಭಾಗಿಸಲ್ಪಟ್ಟಿರುತ್ತದೆ. ಇಬ್ಬರೂ ರಾಜರೆಂದು ಭಾವವು. ಈಗ ಆ ಭರತನು ರಾಜಾಧಿರಾಜನೆಂಬುದು ಗಂಡಮಾಲೆಯ ಮೇಲಿನ ಬೊಕ್ಕೆಯಂತಾಗಿದೆ.

**ಕಾಮಂ ಸ [೩]ರಾಜರಾಜೋಸ್ತು ರತ್ನೈರ್ಯಾತೋತಿಗೃಧ್ನುತಾಮ್ ।**
**ವಯಂ ರಾಜಾನ ಇತ್ಯೇವ [೪]ಸೌರಾಜ್ಯೇ [೫]ಸ್ವೇ ವ್ಯವಸ್ಥಿತಾಃ ॥ ೧೦೯ ॥**

ರತ್ನಗಳಿಂದ ಅತ್ಯಾಶೆಯನ್ನು ಹೊಂದಿರುವ ಆ ಭರತನು ಧಾರಾಳವಾಗಿ ರಾಜಾಧಿರಾಜನಾಗಿರಲಿ. ನಮ್ಮ ಶ್ರೇಷ್ಠರಾಜವ್ಯಾಪಾರದಲ್ಲಿರುವ ನಾವು ರಾಜರಾಗಿಯೇ ಇರುತ್ತೇವೆ.

**ಬಾಲಾನಿವ [೬]ಚ್ಛಲಾದಸ್ಮಾನಾಹೂಯ [೭]ಪ್ರಣಮಯ್ಯ ಚ ।**
**[೮]ಪಿಂಡೀಖಂಡ ಇವಾಭಾತಿ ಮಹೀಖಂಡ[೯]ಸ್ತದರ್ಪಿತಃ ॥ ೧೧೦ ॥**

ಬಾಲಕರನ್ನೋಪಾದಿಯಲ್ಲಿ ನಮ್ಮನ್ನು ನೆವದಿಂದ ಕರೆಯಿಸಿ ನಮಸ್ಕಾರ ಮಾಡಿಸಿಕೊಂಡು ಅವನಿಂದ ನನಗೆ ಕೊಡಲ್ಪಡುವ ಭೂಮಿಯ ಭಾಗವು ಎಳ್ಳಿನ ಹಿಂಡಿಯ ತುಂಡಿನಂತೆ ತೋರುವುದು.

**ಸ್ವದೋರ್ದ್ರುಮಫಲಂ ಶ್ಲಾಘ್ಯಂ ಯತ್ಕಿಂಚಿಚ್ಚ ಮನಸ್ವಿನಾಮ್ ।**
**ನ [೧೦]ಚಾತುರಂತಮ[೧೧]ಪ್ಯೈಶ್ಯಂ ಪರಭ್ರೂಲತಿಕಾಫಲಮ್ ॥ ೧೧೧ ॥**

ಅಭಿಮಾನಶಾಲಿಗಳಿಗೆ ತಮ್ಮ ಭುಜವೆಂಬ ಮರದ ಫಲವು ಸ್ವಲ್ಪವಾಗಿದ್ದರೂ ಅದು ಶ್ಲಾಘ್ಯವಾಗಿರುತ್ತದೆ. ಬೇರೆಯವರ ಹುಬ್ಬೆಂಬ ಬಳ್ಳಿಯ ಫಲವುಳ್ಳುದೂ ನಾಲ್ಕುದಿಕ್ಕುಗಳಲ್ಲಿ ವ್ಯಾಪಿಸಿರುವುದೂ ಆದ ಪ್ರಭುತ್ವವು ಶ್ಲಾಘ್ಯವಾದುದಲ್ಲ. ಪರಾಧೀನತೆಯಿಂದುಂಟಾಗುವ ಪ್ರಭುತ್ವವು ಶ್ಲಾಘ್ಯವಲ್ಲವೆಂದು ಭಾವವು.

**ಪರಾಜ್ಞೋಪಹತಾಂ ಲಕ್ಷ್ಮೀಂ ಯೋ ವಾಂಛೇತ್ಪಾರ್ಥಿವೋಪಿ ಸನ್ ।**
**ಸೋ[೧೨]ಪಾರ್ಥಯತಿ ತಾ[೧೩]ಮುಕ್ತಿಂ ಸರ್ಪೋಕ್ತಿಮಿವ [೧೪]ಡುಂಡುಭಃ ॥**

ಯಾವನು ತಾನು ರಾಜನಾಗಿದ್ದರೂ ಬೇರೆಯವರ ಆಜ್ಞೆಯಿಂದ ಮಲಿನವಾದ ಸಂಪತ್ತಿಯನ್ನು ಇಚ್ಛಿಸುತ್ತಾನೋ ಅವನು ನೀರೊಳ್ಳೆಯು ಸರ್ಪದ ಹೆಸರನ್ನು ಅರ್ಥಶೂನ್ಯವನ್ನಾಗಿ ಮಾಡುವಂತೆ, ರಾಜನೆಂಬ ಹೆಸರನ್ನು ಅರ್ಥವಿಲ್ಲದುದನ್ನಾಗಿ ಮಾಡುತ್ತಾನೆ.

**ಪರಾವಮಾನಮಲಿನಾಂ [೧೫]ಭೂತಿಂ ಧತ್ತೇ ನೃಪೋಪಿ ಯಃ ।**
**[೧೬]ನೃಪಶೋಸ್ತಸ್ಯ ನನ್ವೇಷ ಭಾರೋ ರಾಜ್ಯಪರಿಚ್ಛದಃ ॥ ೧೧೩ ॥**

ಯಾವನು ತಾನು ದೊರೆಯಾಗಿದ್ದರೂ ಬೇರೆಯವರ ಅವಮಾನದಿಂದ ಮಲಿನವಾದ ಸಂಪತ್ತಿಯನ್ನು ಧರಿಸಿರುತ್ತಾನೋ ಅಂತಹ ಮನುಷ್ಯಪಶುವಿಗೆ ಈ ರಾಜ್ಯಪರಿವಾರವು ಹೊರೆಯಲ್ಲವೆ ?

**ಮಾನಭಂಗಾರ್ಜಿತೈರ್ಭೋಗೈರ್ಯಃ ಪ್ರಾಣಾನ್ ಧರ್ತುಮೀಹತೇ ।**
**ತಸ್ಯ ಭಗ್ನರದಸ್ಯೇ[೧೭]ವ ದ್ವಿರದಸ್ಯ ಕುತೋ [೧೮]ಭಿದಾ ॥ ೧೧೪ ॥**

ಯಾವನು ಮಾನಹಾನಿಯಿಂದ ಸಂಪಾದಿಸಲ್ಪಟ್ಟ ಭೋಗಗಳಿಂದ ತನ್ನ ಪ್ರಾಣಗಳನ್ನು ಧರಿಸಿರಲಿಚ್ಛಿಸುತ್ತಾನೋ ಅವನಿಗೂ ಹಲ್ಲುಮುರಿದ ಆನೆಗೂ ಭೇದವು ಯಾವುದರಿಂದ ?

೧ ಆದಿಬ್ರಹ್ಮಣಾ. ೨ ಉಪರಿ. ೩ ಕುಬೇರಇತಿಧ್ವನಿಃ. ೪ ಸುರಾಜವ್ಯಾಪಾರೇ. ೫ ಅಸ್ಮದೀಯೇ. ೬ ವ್ಯಾಜಾತ್. ೭ ನಮಸ್ಕಾರಂ ಕಾರಯಿತ್ವಾ. ೮ ಪಿಣ್ಯಾಕಶಕಲಃ. ೯ ಭರತೇನ ದತ್ತಃ. ೧೦ ಚತ್ವಾರೋ ದಿಗಂತಾ ಯಸ್ಯ ತತ್. ೧೧ ಪ್ರಭುತ್ವಂ. ೧೨ ಅಪಗತಾರ್ಥಂ ಕರೋತಿ. ೧೩ ಪಾರ್ಥಿವಾಖ್ಯಾಂ. ೧೪ ರಾಜಿಲಃ. ೧೫ ಸಂಪದಂ. ೧೬ ಮನುಷ್ಯಪಶೋಃ. ೧೭ ಅಪಿ. ೧೮ ಭೇದಃ.

**[೧]ಛತ್ರಭಂಗಾದ್ವಿನಾಪ್ಯಸ್ಯ [೨]ಛಾಯಾಭಂಗೋಭಿಲಕ್ಷ್ಯತೇ ।**
**ಯೋ ಮಾನಭಂಗಭಾರೇಣ ಬಿಭರ್ತ್ಯವನತಂ ಶಿರಃ ॥ ೧೧೬ ॥**

ಯಾವನು ಮಾನಹಾನಿಯ ಭಾರದಿಂದ ಬಗ್ಗಿದ ತಲೆಯನ್ನುಧರಿಸಿರುತ್ತಾನೋ ಅಂತಹವನಿಗೆ ಛತ್ರಿಯು ನಾಶವಾಗದಿದ್ದರೂ ನೆರಳಿನ ನಾಶವು ಕಾಣಲ್ಪಡುತ್ತದೆ. ದೊರೆತನವಿದ್ದರೂ ತೇಜೋಹೀನನಾಗಿರುತ್ತಾನೆಂದು ಭಾವವು.

**ಮುನಯೋಪಿ [೩]ಸಮಾನಾಶ್ಚೇತ್ತ್ಯಕ್ತಭೋಗಪರಿಚ್ಛದಾಃ ।**
**ಕೋ ನಾಮ ರಾಜ್ಯಭೋಗಾರ್ಥೀ ಪುಮಾನುಜ್ಝೇ[೪]ತ್ಸಮಾನತಾಮ್ ॥**

ಭೋಗಪರಿವಾರಗಳನ್ನು ತ್ಯಜಿಸಿದ ಮುನಿಗಳು ಕೂಡ ಮಾನಸಹಿತರಾಗಿರುತ್ತಾರೆಂದಮೇಲೆ ರಾಜ್ಯಭೋಗಗಳನ್ನು ಬಯಸುವ ಯಾವ ಮನುಷ್ಯನು ತಾನೆ ಅಭಿಮಾನವನ್ನು ಬಿಡುವನು ?

**ವರಂ ವನಾಧಿವಾಸೋಪಿ ವರಂ ಪ್ರಾಣವಿಸರ್ಜನಮ್ ।**
**ಕುಲಾಭಿಮಾನಿನಃ ಪುಂಸೋ ನ ಪರಾಜ್ಞಾ[೫]ವಿಧೇಯತಾ ॥ ೧೧೮ ॥**

ಕುಲಾಭಿಮಾನವುಳ್ಳ ಪುರುಷನಿಗೆ ವನವಾಸವಾದರೂ ಶ್ರೇಷ್ಠವು, ಮತ್ತು ಪ್ರಾಣತ್ಯಾಗವಾದರೂ ಶ್ರೇಷ್ಠವು. ಆದರೆ ಬೇರೆಯವರ ಆಜ್ಞೆಗೆ ವಿಧೇಯನಾಗಿರುವಿಕೆಯು ಶ್ರೇಷ್ಠವಲ್ಲ.

**ಮಾನಮೇವಾಭಿರಕ್ಷಂತು ಧೀರಾಃ ಪ್ರಾಣೈಃ ಪ್ರಣಶ್ವರೈಃ ।**
**ನನ್ವಲಂಕುರುತೇ ವಿಶ್ವಂ ಶಶ್ವನ್ಮಾನಾರ್ಜಿತಂ ಯಶಃ ॥ ೧೧೯ ॥**

ಧೀರರು ನಾಶವಾಗತಕ್ಕ ಪ್ರಾಣಗಳಿಂದ ಮಾನವನ್ನೇ ಕಾಪಾಡಲಿ. ಮಾನದಿಂದ ಸಂಪಾದಿಸಲ್ಪಟ್ಟ ಯಶಸ್ಸು ಲೋಕವನ್ನು ಪುನಃಪುನಃ ಅಲಂಕರಿಸುವುದಲ್ಲವೇ ?

**ಚಾರ ಚಕ್ರಧರಸ್ಯಾಯಂ ತ್ವಯಾ[೬]ತ್ಯುಕ್ತಃ ಪರಾಕ್ರಮಃ ।**
**ಕುತೋ ಯತೋ[೭]ರ್ಥವಾದೋಯಂ ಸ್ತುತಿನಿಂದಾಪರಾಯಣಃ ॥**

ಎಲೈ ದೂತನೆ ? ನೀನು ಚಕ್ರವರ್ತಿಯ ಈ ಪರಾಕ್ರಮವನ್ನು ಅತಿಕ್ರಮಿಸಿ–ಮೇರೆ ಮೀರಿ ವರ್ಣಿಸಿದೆ. ಸ್ತುತಿನಿಂದಾಪರವಾದ ಈ ಸತ್ಯವಾದವು ಅಥವಾ ಇಲ್ಲದುದನ್ನು ಆರೋಪಿಸುವಿಕೆಯೂ ಎಂದೂ ನಂಬತಕ್ಕುದಲ್ಲ.

**ವಚೋಭಿಃ ಪೋಷಯಂತ್ಯೇವ ಪಂಡಿತಾಃ [೮]ಪರಿಫಲ್ಗ್ವಪಿ ।**
**[೯]ಪ್ರಕ್ರಾಂತಾಯಾಂ ಸ್ತುತಾವಿಷ್ಟಃ ಸಿಂಹೋ [೧೦]ಗ್ರಾಮಮೃಗೋ ನನು ॥**

ವಿದ್ವಾಂಸರು ಅಸಾರವಸ್ತುವನ್ನೂ ಮಾತುಗಳಿಂದ ಪುಷ್ಟೀಕರಿಸುತ್ತಾರೆ. ಸ್ತುತಿಯು ಪ್ರಾರಂಭಿಸಲ್ಪಟ್ಟರೆ ನಾಯಿಯು ಸಿಂಹವಾಗಿ ಅಭೀಷ್ಟವಾಗುವುದಿಲ್ಲವೇ ? ಹೊಗಳಿಕೆಗೆ ಹೊರಟರೆ ನಾಯಿಯನ್ನು ಸಿಂಹವನ್ನಾಗಿ ಹೊಗಳುವಷ್ಟು ಮೇರೆ ಮೀರುವುದೆಂದರ್ಥವು.

**ಇದಂ ವಾಚನಿಕಂ ಕೃತ್ಸ್ನಂ ತ್ವದುಕ್ತಂ ಪ್ರತಿಭಾತಿ ನಃ ।**
**ಕ್ವಾಸ್ಯ ದಿಗ್ವಿಜಯಾರಂಭಃ ಕ್ವ ಧನೋಞ್ಛನಚುಂಚುತಾ ॥ ೧೨೨ ॥**

ನೀನು ಹೇಳಿದ ಇದೆಲ್ಲವೂ ನನಗೆ ಅರ್ಥವಿಲ್ಲದ ಮಾತಾಗಿ ತೋರುತ್ತದೆ:– ಈ ಭರತನ ದಿಗ್ವಿಜಯದ ಆರಂಭವೆಲ್ಲಿ ? ಧನವನ್ನು ಆಯ್ದುಕೊಳ್ಳುವ ಚತುರತೆಯೆಲ್ಲಿ ?ದೂತನ ಮಾತಿಗೂ ಭರತನ ನಡೆವಳಿಕೆಗೂ ಸಂಬಂಧವಿಲ್ಲವೆಂದು ಭಾವವು.

**ದಧ[೧೧]ಚ್ಚಾಕ್ರಚರೀಂ ವೃತ್ತಿಂ [೧೨]ಬಲಿಂ ಭಿಕ್ಷಾಮಿವಾಹರನ್ ।**
**ದೀನತಾಯಾಃ [೧೩]ಪರಾಂ ಕೋಟಿಂ ಪ್ರಭುರಾರೋಪಿತಸ್ತ್ವಯಾ ॥**

ಚಕ್ರದೊಡನೆ ಸಂಚರಿಸುವ ವೃತ್ತಿ– ಜೀವನೋಪಾಯವನ್ನು ಹೊಂದಿ, ಭಿಕ್ಷೆಯನ್ನೋಪಾದಿಯಲ್ಲಿ, ಕಂದಾಯವನ್ನು ತೆಗೆದುಕೊಳ್ಳುವ ಪ್ರಭುವನ್ನು ನೀನು ದೈನ್ಯದ ತುತ್ತತುದಿಗೆ ಏರಿಸಿದೆ.

**ಸತ್ಯಂ ದಿಗ್ವಿಜಯೇ ಚಕ್ರೀ ಜಿತವಾನಮರಾನಿತಿ ।**
**[೧]ಪ್ರತ್ಯೇಯಮಿದ[೨]ಮೇತತ್ತು ಚಿಂತ್ಯ[೩]ಮತ್ರ ನನು ತ್ವಯಾ ॥ ೧೨೪ ॥**

ಚಕ್ರವರ್ತಿಯು ದಿಗ್ವಿಜಯದಲ್ಲಿ ದೇವತೆಗಳನ್ನು ಜಯಿಸಿದನೆಂಬುದನ್ನು ನಿಜವಾಗಿ ನೀನು ಆಣೆಯಿಟ್ಟು ನಂಬಿಸಬೇಕಾಗಿದೆ. ಸಮುದ್ರಜಲಸ್ತಂಭನರೂಪವಾದ ಮಾಯೆಯಲ್ಲಿ ಈ ಮುಂದೆ ಹೇಳುವ ವಿಷಯವಾದರೋ ಯೋಚಿಸತಕ್ಕುದಾಗಿದೆ. ನಂಬತಕ್ಕುದಲ್ಲವೆಂದು ಭಾವವು.

**ಸ ಕಿಂ ನ ದರ್ಭಶಯ್ಯಾಯಾಂ ಸುಪ್ತೋ ನೋಪೋಷಿತೋಥವಾ ।**
**ಪ್ರವೃತ್ತೋ [೪]ಜಲಮಾಯಾಯಾಂ ಶರಪಾತಂ ಸಮಾಚರನ್ ॥ ೧೨೫ ॥**

**ಕೃತಚಕ್ರಪರಿಭ್ರಾಂತಿ[೫]ರ್ದಂಡೇನಾಯತಿಶಾಲಿನಾ ।**
**ಘಟಯನ್ [೬]ಪಾರ್ಥಿವಾನೇಷ ಸ ಕುಲಾಲಾಯತೇ ಬತ ॥ ೧೨೬ ॥**

ಆ ಭರತೇಶ್ವರನು ದರ್ಭಶಯ್ಯೆಯಲ್ಲಿ ಮಲಗಲಿಲ್ಲವೇ ? ಅಥವಾ ಉಪವಾಸವನ್ನು ಮಾಡಲಿಲ್ಲವೇ ? ಜಲಸ್ತಂಭನದ ಮಾಯೆಯಲ್ಲಿ ತೊಡಗಿದವನೂ ಬಾಣಪ್ರಯೋಗವನ್ನು ಮಾಡುವವನೂ ವಿಸ್ತಾರವಾದ ದಂಡದಿಂದ ಅಥವಾ ಸೈನ್ಯದಿಂದ ಚಕ್ರವನ್ನು ತಿರುಗಿಸುವವನೂ ರಾಜರುಗಳನ್ನು(ಮಡಿಕೆಗಳನ್ನೂ) ಸೇರಿಸುವವನೂ ಆದ ಈ ಭರತನು ಕುಂಬಾರನಂತೆ ಆಚರಿಸುತ್ತಾನೆ. ಖೇದ !

**ಆಗಃ[೭]ಪರಾಗಮಾತನ್ವನ್ನ್ವಯಮೇಷ ಕಲಂಕಿತಃ ।**
**ಚಿರಂ ಕಲಂಕಯತ್ಯೇವ ಕುಲಂ [೮]ಕುಲಧೃತಾಮಪಿ ॥ ೧೨೭ ॥**

ದೋಷಿಯಾದ ಈ ಭರತನು ತಾನು ಅಪರಾಧವೆಂಬ ಧೂಳನ್ನುಮಾಡಿ ಮನುಗಳ ವಂಶವನ್ನೂ ಬಹುಕಾಲದವರೆಗೆ ಕಲಂಕವುಳ್ಳುದನ್ನಾಗಿಯೇ ಮಾಡುತ್ತಾನೆ.

**ನೃಪಾನಾಕರ್ಷತೋ ದೂರಾನ್ಮಂತ್ರೈ[೯]ಸ್ತಂತ್ರೈಶ್ಚ ಯೋಜಿತೈಃ ।**
**ಶ್ಲಾಘ್ಯತೇ ಕಿಯದೇತಸ್ಯ ಪೌರುಷಂ ಲಜ್ಜಯಾ ವಿನಾ ॥ ೧೨೮ ॥**

ಉಪಯೋಗಿಸಲ್ಪಟ್ಟ ಮಂತ್ರಗಳಿಂದಲೂ ತಂತ್ರ–ಸೈನ್ಯಗಳಿಂದಲೂ ದೂರದಿಂದ ದೊರೆಗಳನ್ನು ಆಕರ್ಷಿಸುತ್ತಿರುವ ಈ ಭರತನ ಪೌರುಷವನ್ನು ನಾಚಿಕೆಯಿಲ್ಲದೆ ಎಷ್ಟು ಹೊಗಳುತ್ತೀಯೆ ?

**ದುನೋತಿ ನೋ ಭೃಶಂ ದೂತ ಶ್ಲಾಘ್ಯತೇಸ್ಯ ಯ[೧೦]ದಾಹವಃ ।**
**ಜಲಾಯಿತಂ ಜಲೇ ಯಸ್ಯ ಬಲಂ ಮ್ಲೇಚ್ಛಬಲೈಸ್ತದಾ ॥ ೧೨೯ ॥**

ಎಲೈ ದೂತನೆ ! ಯಾವನ ಸೈನ್ಯವು ಜಲಸ್ತಂಭನ ಮಾಯೆಯನ್ನು ಮಾಡುವಾಗ ಮ್ಲೇಚ್ಛಸೈನ್ಯಗಳಿಂದ ನೀರಿನಲ್ಲಿ ಜಲಮಯವಾಗಿ ಮಾಡಲ್ಪಟ್ಟಿತೋ ಅಂತಹ ಈ ಭರತನ ಯುದ್ಧವನ್ನು ಹೊಗಳುವುದೆಂಬುದು ನಮಗೆ ಬಹು ಖೇದವನ್ನುಂಟುಮಾಡುತ್ತದೆ.

**ಯಶೋಧನಮಸಂಹಾರ್ಯಂ ಕ್ಷತ್ರಪುತ್ರೇಣ ರಕ್ಷ್ಯತಾಮ್ ।**
**[೧೧]ನಿಖನಂತೋ ನಿಧೀನ್ ಭೂಮೌ ಬಹವೋ [೧೨]ನಿಧನಂ ಗತಾಃ ॥**

ಕ್ಷತ್ರಿಯಪುತ್ರನು ನಾಶಮಾಡಲ್ಪಡಲಾಗದ ಯಶಸ್ಸೆಂಬ ಧನವನ್ನು ರಕ್ಷಿಸಬೇಕು. ಭೂಮಿಯಲ್ಲಿ ನಿಧಿಗಳನ್ನು ಹೂಳಿಟ್ಟ ಬಹಳ ಜನರು ನಿಧನವನ್ನು ಹೊಂದಿದರು.

೧ ಛತ್ರಭಂಗಸ್ತು ವೈಧವ್ಯೇ ಸ್ವಾತಂತ್ರ್ಯೇ ಚ ನೃಪಾತ್ಯಯೇ. ೨ ತೇಜೋಹಾನಿಃ. ೩ ಮಾನಸಹಿತಾಃ. ೪ ಸಾಭಿಮಾನತಾಂ. ೫ ಅಧೀನತಾ. ೬ ಅತಿಕ್ರಮ್ಯ ಉಕ್ತಃ. ೭ ಸತ್ಯವಾದಃ, ಅಥವಾ ಅಸದಾರೋಪಣಮರ್ಥವಾದಃ. ೮ ಅಸಾರವಸ್ತ್ವಪಿ. ೯ ಪ್ರಾರಂಭಿತಾಯಾಂ ಸತ್ಯಾಂ. ೧೦ ಸಾರಮೇಯಃ. ೧೧ ಚಕ್ರೇಣ ಚರತೀತಿ ಚಕ್ರಚರಸ್ತಸ್ಯ ಸಂಬಂಧಿನೀಂ. ೧೨ ಕರಂ. ೧೩ ಪರಮಪ್ರಕರ್ಷಂ.

೧ ಶಪಥಂ ಕೃತ್ವಾ ವಿಶ್ವಾಸ್ಯಂ. ೨ ವಕ್ಷ್ಯಮಾಣಂ. ೩ ಸಮುದ್ರಜಲಸ್ತಂಭನರೂಪಮಾಯಾಯಾಂ. ೪ ಜಲನಿಧೇರ್ಜಲಸ್ತಂಭಸ್ಯ ಮಾಯಾಯಾಂ. ೫ ದಂಡರತ್ನೇನ, ಸೈನ್ಯೇನ ವಾ. ೬ ನೃಪಾನ್, ಮೃಣ್ಮಯಘಟಾಂಶ್ಚ. ೭ ಧೂಲಿಂ. ೮ ಮನೂನಾಂ. ೯ ಸೈನ್ಯೈಃ. ೧೦ ಸಂಗ್ರಾಮಃ. ೧೧ ನಿಕ್ಷಿಪಂತಃ. ೧೨ ವಿನಾಶಂ.

**ರತ್ನೈಃ ಕಿಮಸ್ತಿ ವಾ ಕೃತ್ಯಂ ಯಾ[೧]ನ್ಯರತ್ನಿಮಿತಾಂ ಭುವಮ್ ।**
**ನ [೨]ಯಾಂತಿ [೩]ಯತ್ಕೃತೇ ಯಾಂತಿ ಕೇವಲಂ ನಿಧನಂ ನೃಪಾಃ॥ ೧೩೧ ॥**

ಯಾವ ರತ್ನಗಳು ಒಂದು ಮೊಳದಷ್ಟು ಭೂಮಿಯನ್ನೂ ಹೊಂದುವುದಿಲ್ಲವೋ ಅಂದರೆ ಸತ್ತು ಬೇರೆಗತಿಗೆ ಹೋಗುವವನೊಡನೆ ಒಂದು ಮೊಳದಷ್ಟು ದೂರವೂ ಹೋಗುವುದಿಲ್ಲವೋ ಯಾವ ರತ್ನಗಳಿಗೋಸ್ಕರ ರಾಜರುಗಳು ಮುಖ್ಯವಾಗಿ ನಿಧನವನ್ನು ಹೊಂದುತ್ತಾರೋ ಅಂತಹ ರತ್ನಗಳಿಂದ ಕೆಲಸವಿದೆಯೇ ? ಆ ರತ್ನಗಳಿಂದ ಪ್ರಯೋಜನವಿಲ್ಲವೆಂದು ಭಾವವು.

**ತುಲಾಪುರುಷ ಏವಾಯಂ ಯೋ ನಾಮ ನಿಖಿಲೈರ್ನೃಪೈಃ ।**
**ತುಲಿತೋ ರತ್ನಪುಂಜೇನ ಬತ [೪]ಮೈಶ್ವರ್ಯಮೀದೃಶಮ್ ॥ ೧೩೨ ॥**

ಯಾವನನ್ನು ಸಮಸ್ತ ರಾಜರುಗಳು ರತ್ನರಾಶಿಯಿಂದ ತೂಗಿದರೋ ಅಂತಹ ಈ ಭರತನು ತುಲಾಭಾರದ ಪುರುಷನೇ ಆಗಿದ್ದಾನೆ. ರಾಜರು ಭರತನಿಗೆ ರತ್ನರಾಶಿಯನ್ನರ್ಪಿಸಿ ಇವನ ಯೋಗ್ಯತೆಯನ್ನು ಪರೀಕ್ಷಿಸಿದರೆಂದು ಭಾವವು. ಇಂತಹ ಐಶ್ವರ್ಯವು ಇರಬಾರದು. ಖೇದ !

**ಧ್ರುವಂ ಸ ಗುರುಣಾ ದತ್ತಾ [೫]ಮಾಚೇಚ್ಛೇತ್ಸತಿ ನೋ ಭುವಮ್ ।**
**[೬]ಪ್ರತ್ಯಾಖ್ಯೇಯತ್ವಮುತ್ಸೃಜ್ಯ [೭]ಗೃಧ್ನೋರಸ್ಯ ಕಿಮೌಷಧಮ್ ॥ ೧೩೩ ॥**

ಆ ಭರತನು ತಂದೆಯಿಂದ ಕೊಡಲ್ಪಟ್ಟ ನಮ್ಮ ಭೂಮಿಯನ್ನು ನಿಶ್ಚಯವಾಗಿ ನಾಶಮಾಡಲಿಚ್ಛಿಸುತ್ತಾನೆ. ಲೋಭಿಯಾದ ಇವನಿಗೆ ತಿರಸ್ಕಾರಭಾವವನ್ನು ಬಿಟ್ಟು ಔಷಧವಾವುದು ?

**ದೂತ ತಾತವಿತೀರ್ಣಾಂ ನೋ ಮಹೀಮೇನಾಂ ಕುಲೋಚಿತಾಮ್ ।**
**[೮]ಭ್ರಾತೃಜಾಯಾಮಿ[೯]ವಾದಿತ್ಸೋರ್ನಾಸ್ಯ ಲಜ್ಜಾ ಭವತ್ಪತೇಃ ॥ ೧೩೪ ॥**

ದೂತನೆ ! ತಂದೆಯಿಂದ ಕೊಡಲ್ಪಟ್ಟುದೂ ಮನೆತನಕ್ಕೆ ಉಚಿತವೂ ತಮ್ಮನ ಹೆಂಡತಿಯಂತಿರುವುದೂ ಆದ ಈ ನಮ್ಮ ಭೂಮಿಯನ್ನು ತೆಗೆದುಕೊಳ್ಳಲಿಚ್ಛಿಸುವ ಈ ನಿನ್ನ ಯಜಮಾನನಿಗೆ ನಾಚಿಕೆಯಿಲ್ಲ.

**ದೇಯಮನ್ಯತ್ಸ್ವತಂತ್ರೇಣ ಯಥಾಕಾಮಂ ಜಿಗೀಷುಣಾ ।**
**ಮುಕ್ತ್ವಾ ಕುಲಕಲತ್ರಂ ಚ ಕ್ಷ್ಮಾತಲಂ ಚ ಭುಜಾರ್ಜಿತಮ್ ॥ ೧೩೫ ॥**

ಸ್ವತಂತ್ರನೂ ಜಯಿಸಲಿಚ್ಛೆಯುಳ್ಳವನೂ ಆದ ಪುರುಷನಿಂದ ಕುಲವಧುವನ್ನೂ ಬಾಹುಬಲದಿಂದ ಸಂಪಾದಿಸಲ್ಪಟ್ಟ ಭೂತಲವನ್ನೂ ಬಿಟ್ಟು, ಬೇರೆಯಾದ ವಸ್ತುವು ಧಾರಾಳವಾಗಿ ಕೊಡಲ್ಪಡತಕ್ಕುದಾಗಿದೆ.

**ಭೂಯಸ್ತದಲ[೧೦]ಮಾಲಪ್ಯ ಸ ವಾ ಭುಂಕ್ತೇ ಮಹೀತಲಮ್ ।**
**ಚಿರಮೇಕಾತಪತ್ರಾಂಕಮಹಂ ವಾ ಭುಜವಿಕ್ರಮೀ ॥ ೧೩೬ ॥**

ಆದುದರಿಂದ ಪುನಃ ಮಾತನಾಡುವುದು ಸಾಕು. ಆ ಭರತನಾದರೂ ಏಕಚ್ಛತ್ರಾಂಕಿತವಾದ ಭೂತಲವನ್ನು ಬಹುಕಾಲದವರೆಗೆ ಅನುಭವಿಸುತ್ತಾನೆ. ಬಾಹುಪರಾಕ್ರಮವುಳ್ಳ ನಾನಾದರೂ ಅನುಭವಿಸುತ್ತೇನೆ.

**[೧೧]ಕೃತಂ ವೃಥಾಭಟಾಲಾಪೈರರ್ಥಸಿದ್ಧಿಬಹಿಷ್ಕೃತೈಃ ।**
**ಸಂಗ್ರಾಮನಿಕಷೇ ವ್ಯಕ್ತಿಃ ಪೌರುಷಸ್ಯ ಮಮಾಸ್ಯ ಚ ॥ ೧೩೭ ॥**

ಪ್ರಯೋಜನವಿಲ್ಲದ ವ್ಯರ್ಥವಾದ ವೀರಭಾಷಣಗಳು ಸಾಕು. ನನ್ನ ಮತ್ತು ಈ ಭರತನ ಪೌರುಷದ ಪ್ರಕಟನವು ಯುದ್ಧವೆಂಬ ಒರೆಗಲ್ಲಿನಲ್ಲಾಗುವುದು.

**ತತಃ ಸಮರಸಂಘಟ್ಟೇ ಯದ್ವಾ ತದ್ವಾಸ್ತು [೧೨]ನೌ ದ್ವಯೋಃ ।**
**[೧೩]ನೀರೇಕಮಿದಮೇಕಂ ನೋ ವಚೋ [೧೪]ಹರ ವಚೋಹರ॥ ೧೩೮ ॥**

೧ ಹಸ್ತಪ್ರಮಿತಾಂ. ೨ ಗತ್ಯಂತರಗಮನೇನ ಸಹಯಾಂತಿ. ೩ ರತ್ನಾರ್ಥಂ. ೪ ಮಾ ಭೂತ್. ೫ ಆಸಮಂತಾತ್ ಛೇತ್ತುಮಿಚ್ಛತಿ. ೬ ನಿರಾಕರಣೀಯತ್ವಂ. ೭ ಲುಬ್ಧಸ್ಯ. ೮ ಅನುಜಕಲತ್ರಂ. ೯ ಆದಾತುಮಿಚ್ಛೋಃ. ೧೦ ಉಕ್ತ್ವಾ. ೧೧ ಪರ್ಯಾಪ್ತಂ. ೧೨ ಆವಯೋಃ. ೧೩ ನಿಃಶಂಕಂ. ೧೪ ಗೃಹಾಣ.

ಆದುದರಿಂದ ಎಲೈ ದೂತನೆ ! ನಮ್ಮಿಬ್ಬರ ಯುದ್ಧದ ಹೋರಾಟದಲ್ಲಿ ಏನಾಗುವುದೋ ಅದಾಗಲಿ. ನಮ್ಮ ನಿಸ್ಸಂದೇಹವಾದ ಈ ಒಂದು ಮಾತನ್ನು ಪರಿಗ್ರಹಿಸು.''

**ಇತ್ಯಾವಿಷ್ಕೃತಮಾನೇನ ಕುಮಾರೇಣ ವಚೋಹರಃ ।**
**ದ್ರುತಂ ವಿಸರ್ಜಿತೋಗಚ್ಛತ್ಪತಿಂ [೧]ಸನ್ನಾಹಯೇತ್ಯರಮ್ ॥ ೧೩೯ ॥**

ಈ ಪ್ರಕಾರವಾಗಿ ಸ್ವಾಭಿಮಾನವನ್ನು ಪ್ರಕಟಪಡಿಸಿದ ಬಾಹುಬಲಿಕುಮಾರನಿಂದ ''ಎಲೈ ದೂತನೆ ! ದೊರೆಯನ್ನು ಶೀಘ್ರವಾಗಿ ಯುದ್ಧಸನ್ನದ್ಧನನ್ನಾಗಿ ಮಾಡು'' ಎಂದು ಬಿಡಲ್ಪಟ್ಟ ಆ ದೂತನು ಶೀಘ್ರವಾಗಿ ಹೊರಟುಹೋದನು.

**ತದಾ ಮುಕುಟಸಂಘಟ್ಟಾದುಚ್ಚಲ[೨]ನ್ಮಣಿಕೋಟಿಭಿಃ ।**
**ಕೃತೋಲ್ಮುಕಶತಕ್ಷೇಪೈರಿವೋತ್ತಸ್ಥೇ ಮಹೀಶಿಭಿಃ ॥ ೧೪೦ ॥**

ಆಗ ಕಿರೀಟಗಳ ಸಂಘರ್ಷಣದಿಂದ ಮೇಲಕ್ಕೆ ಹಾರುತ್ತಿರುವ ರತ್ನಸಮೂಹಗಳುಳ್ಳವರಾದ ಸಾಮಂತರಾಜರುಗಳು, ಬೆಂಕಿಯ ಅನೇಕವಾದ ಕೊಳ್ಳಿಗಳನ್ನು ಎರಚುತ್ತಾರೋ ಎಂಬಂತೆ, ಯುದ್ಧಸನ್ನದ್ಧರಾಗಿ ಮುಂದೆ ಬಂದರು.

**ಕ್ಷಣಂ ಸಮರಸಂಘಟ್ಟಪಿಶುನೋ ಭಟ[೩]ಸಂಕಟೈಃ ।**
**ಶ್ರೂಯತೇ ಸ್ಮ ಭಟಾಲಾಪೋ ಜಲೇ ಬಾಹುಬಲೀಶಿತುಃ ॥ ೧೪೧ ॥**

ಬಾಹುಬಲಿಸ್ವಾಮಿಯ ಸೈನ್ಯದಲ್ಲಿ ಭಟರ ಗುಂಪುಗಳಿಂದ ಯುದ್ಧದ ಹೋರಾಟವನ್ನು ಸೂಚಿಸುವ ವೀರಭಾಷಣವು ಕೆಲವು ಹೊತ್ತಿನವರೆಗೆ ಕೇಳಿಸಿತು.

**ಚಿರಾತ್ಸಮರಸಮ್ಮರ್ದಃ ಸ್ವಾಮಿನೋಯಮಭೂದಿಹ ।**
**ಕಿಂ ವಯಂ ಸ್ವಾಮಿಸತ್ಕಾರಾದನೃಣೀಭವಿತುಂ ಕ್ಷಮಾಃ ॥ ೧೪೨ ॥**

''ಪ್ರಭುವಿಗೆ ಈಗ ಈ ಯುದ್ಧದ ಹೋರಾಟವು ಬಹುದಿನಗಳನಂತರ ಉಂಟಾಯಿತು. ನಾವು ಸ್ವಾಮಿಯ ಸತ್ಕಾರದಿಂದ ಋಣಮುಕ್ತರಾಗಲು ಸಮರ್ಥರಾಗಿರುವೆವೋ ?

**ಪೋಷಯಂತಿ ಮಹೀಪಾಲಾ ಭೃತ್ಯಾನವಸರಂ ಪ್ರತಿ ।**
**ನ ಚೇದವಸರಃ [೪]ಸಾರ್ಯಃ ಕಿಮೇಭಿಸ್ತೃಣಮಾನುಷೈಃ ॥ ೧೪೩ ॥**

ದೊರೆಗಳು ಸಮಯಸಂದರ್ಭಕ್ಕೋಸ್ಕರ ಭೃತ್ಯರನ್ನು ಕಾಪಾಡಿಕೊಂಡಿರುತ್ತಾರೆ. ಅಂತಹ ಸಮಯಕ್ಕೊದಗದಿದ್ದರೆ ಈ ಹುಲ್ಲಿನ ಮನುಷ್ಯರಿಂದ ಪ್ರಯೋಜನವೇನು ?

**ಕಲೇವರಮಿದಂ ತ್ಯಾಜ್ಯಮರ್ಜನೀಯಂ ಯಶೋಧನಮ್ ।**
**ಜಯಶ್ರೀರ್ವಿಜಯೇ ಲಭ್ಯಾ [೫]ನಾಲ್ಪೋದರ್ಕೋ ರಣೋತ್ಸವಃ ॥**

ಈ ದೇಹವು ತ್ಯಜಿಸತಕ್ಕುದಾಗಿದೆ. ಯಶಸ್ಸೆಂಬ ಧನವು ಸಂಪಾದಿಸತಕ್ಕುದಾಗಿದೆ. ವಿಜಯದಲ್ಲಿ ಜಯಲಕ್ಷ್ಮಿಯು ಹೊಂದತಕ್ಕವಳಾಗಿದ್ದಾಳೆ. ಯುದ್ಧವೆಂಬ ಉತ್ಸವವು ಸ್ವಲ್ಪವಾದ ಉತ್ತರಫಲವುಳ್ಳುದಲ್ಲ.

**ಮಂದಾತಪ[೬]ಶರಚ್ಛಾಯೇ [೭]ಪ್ರತ್ಯಂಗೈರ್ವ್ರಣಜರ್ಜರೈಃ ।**
**ಲಪ್ಸ್ಯಾಮಹೇ ಕದಾ ನಾಮ ವಿಶ್ರಮಂ ರಣಮಂಡಪೇ ॥ ೧೪೫ ॥**

ಬಾಣಗಳ ನೆರಳಿನಿಂದ ಮಂದವಾದ ಬಿಸಿಲುಳ್ಳ ಯುದ್ಧಮಂಡಪದಲ್ಲಿ ಗಾಯಗಳಿಂದ ಜರ್ಜರಿತವಾದ ಪ್ರತಿಯೊಂದು ಅವಯವಗಳಿಂದ ಕೂಡಿದವರಾಗಿ ಯಾವಾಗ ವಿಶ್ರಾಂತಿಯನ್ನು ಹೊಂದುವೆವು ?

**[೮]ಪ್ರತ್ಯನೀಕಕೃತಾನೀಕವ್ಯೂಹಂ ನಿರ್ಭಿದ್ಯ [೯]ಸಾಯಕೈಃ ।**
**ಶರಶಯ್ಯಾಮಸಂಬಾಧ[೧೦]ಮಧ್ಯಾಶಿಷ್ಯೇ ಕದಾನ್ವಹಮ್ ॥ ೧೪೬ ॥**

೧ ಭೋ ದೂತ ಸನ್ನದ್ಧಂ ಕುರು. ೨ ರತ್ನಸಮೂಹೈಃ. ೩ ಸಮೂಹೈಃ. ೪ ಗಮ್ಯಃ. ೫ ಅಲ್ಪೋತ್ತರಂ ಫಲಂ ನ. ೬ ಬಾಣಃ. ೭ ಉಪಲಕ್ಷಿತಾಃ. ೮ ಶತ್ರುಕೃತಸೇನಾರಚನಾಂ. ೯ ಬಾಣೈಃ. ೧೦ ಶೀಙ್ ಸ್ಥಾನಾದೇರಾಧಾರೇ ಕರ್ಮ ಇತಿ.

ನಾನು ಶತ್ರುವಿನಿಂದ ಮಾಡಲ್ಪಟ್ಟ ಸೇನಾರಚನೆಯನ್ನು ಬಾಣಗಳಿಂದ ಭೇದಿಸಿ ಬಾಧೆಯಿಲ್ಲದಿರುವಂತೆ ಶರಶಯ್ಯೆಯಲ್ಲಿ ಯಾವಾಗ ಮಲಗುವೆನೋ ?

**ಕರ್ಣತಾಲಾನಿಲಾ[೧]ಧೂತಿವಿಧೂತಸಮರಶ್ರಮಃ ।**
**ಗಜಸ್ಕಂಧೇ [೨]ನಿಷೀದಾಮಿ ಕದಾಹಂ ಕ್ಷಣಮೂರ್ಛಿತಃ ॥ ೧೪೭ ॥**

ತಾಳದಂತಿರುವ ಆನೆಯ ಕಿವಿಯ ಗಾಳಿಯ ಬೀಸುವಿಕೆಯಿಂದ ಹೋಗಲಾಡಿಸಿದ ಯುದ್ಧಶ್ರಮವುಳ್ಳವನೂ ಕ್ಷಣಕಾಲದವರೆಗೆ ಮೂರ್ಛೆಯನ್ನು ಹೊಂದಿದವನೂ ಆದ ನಾನು ಆನೆಯ ಹೆಗಲಿನಲ್ಲಿ ಯಾವಾಗ ಕುಳಿತುಕೊಳ್ಳುವೆನು ?

**ದಂತಿದಂತಾರ್ಗಲಪ್ರೋತೋ[೩]ದ್ಗಲದಸೃಃ ಸ್ಖಲದ್ವಚಾಃ ।**
**ಜಯಲಕ್ಷ್ಮೀಕಟಾಕ್ಷಾಣಾಂ ಕದಾಹಂ ಲಕ್ಷ್ಯತಾಂ ಭಜೇ ॥ ೧೪೮ ॥**

ಆನೆಯ ದಂತವೆಂಬ ಅಗಣಿಯ ಹೊಡೆತದಿಂದ ಹೊರಡುತ್ತಿರುವ ರಕ್ತವುಳ್ಳವನೂ ತೊದಲುಮಾತುಳ್ಳವನೂ ಆದ ನಾನು ಜಯಲಕ್ಷ್ಮಿಯ ಕಟಾಕ್ಷಗಳಿಗೆ ಯಾವಾಗ ಪಾತ್ರನಾಗುವೆನು ?

**ಗಜದಂತಾಂತರಾಲಂಬಿಸ್ವಾಂತ್ರಮಾಲಾವರತ್ರಯಾ ।**
**ಕರ್ಹಿ ಡೋಲಾಮಿವಾರೋಪ್ಯ [೪]ತುಲಯಾಮಿ ಜಯಶ್ರಿಯಮ್ ॥**

ಆನೆಯ ಹಲ್ಲುಗಳ ಮಧ್ಯದಲ್ಲಿ ಜೋಲುತ್ತಿರುವ ನನ್ನ ಕರುಳುಗಳ ಮಾಲೆಯೆಂಬ ತೊಗಲಿನ ಮಿಣಿಯಿಂದ ಉಯ್ಯಾಲೆಯನ್ನೋಪಾದಿಯಲ್ಲಿ ಹತ್ತಿಸಿ ಜಯಲಕ್ಷ್ಮಿಯನ್ನು ಯಾವಾಗ ತೂಗುವೆನು ?"

**ಬ್ರುವಾಣೈರಿತಿ ಸಂಗ್ರಾಮರಸಿಕೈರುದ್ಭಟೈರ್ಭಟೈಃ ।**
**ಶಸ್ತ್ರಾಣಿ ಸಶಿರಸ್ತ್ರಾಣಿ ಸಜ್ಜಾನ್ಯಾಸನ್ ಬಲೇಬಲೇ ॥ ೧೫೦ ॥**

ಈ ಪ್ರಕಾರವಾಗಿ ಮಾತನಾಡುತ್ತಿರುವವರೂ ಯುದ್ಧರಸಿಕರೂ ಧೀರರೂ ಆದ ವೀರರಿಂದ ಕುಲಾವಿಗಳೊಡಗೂಡಿದ ಶಸ್ತ್ರಗಳನ್ನು ಪ್ರತಿಯೊಂದು ಸೈನ್ಯದಲ್ಲಿಯೂ ಸಿದ್ಧಗೊಳಿಸಲಾಯಿತು.

**ತತಃ ಕೃತಭಯಂ ಭೂಯೋ ಭಟಭ್ರುಕುಟಿತರ್ಜಿತೈಃ ।**
**ಪಲಾಯಿತಮಿವ ಕ್ವಾಪಿ [೫]ಪರಿಚ್ಛಿತ್ತಿಮಗಾ[೬]ದಹಃ ॥ ೧೫೧ ॥**

ಅನಂತರದಲ್ಲಿ ಪುನಃ ವೀರಭಟರ ಹುಬ್ಬುಗಳ ಬೆದರಿಸುವಿಕೆಗಳಿಂದ ಭಯವುಂಟುಮಾಡಿದ ದಿವಸವನ್ನು ಓಡಿಸಲಾಯಿತೋ ಎಂಬಂತೆ ಎಲ್ಲಿಯೋ ನಾಶವನ್ನು ಹೊಂದಿತು. ಹಗಲು ಕಳೆಯಿತೆಂದರ್ಥವು.

**ಅಥೋ ರುಷ್ಯದ್ಭಟಾನೀಕನೇತ್ರಚ್ಛಾಯಾರ್ಪಿತಾಂ ರುಚಮ್ ।**
**ದಧಾನ ಇವ ತಿಗ್ಮಾಂಶುರಾಸೀದಾರಕ್ತಮಂಡಲಃ ॥ ೧೫೨ ॥**

ಅನಂತರದಲ್ಲಿ ಸೂರ್ಯನು ಕೋಪಿಸಿರುವ ವೀರಸೈನಿಕರ ಕಣ್ಣುಗಳಲ್ಲಿ ಸೇರಿರುವ ಕಾಂತಿಯನ್ನು ಧರಿಸಿರುತ್ತಾನೋ ಎಂಬಂತೆ ಸುತ್ತಲೂ ಕೆಂಪಾದ ಮಂಡಲವುಳ್ಳವನಾದನು.

**ಕ್ಷಣಮಸ್ತಾಚಲ[೭]ಪ್ರಸ್ಥಕಾನನಕ್ಷ್ಮಾಜಪಲ್ಲವೈಃ ।**
**ಸದೃಗಾಲೋಹಿತಚ್ಛಾಯೋ ದದೃಶೇ[೮]ರ್ಕಾಂಶುಸಂಸ್ತರಃ ॥ ೧೫೩ ॥**

ಕ್ಷಣಕಾಲದವರೆಗೆ ಅಸ್ತಪರ್ವತದ ತಪ್ಪಲಿನಲ್ಲಿರುವ ಅರಣ್ಯವೃಕ್ಷಗಳ ತಳಿರುಗಳೊಡನೆ ಸಮಾನವೂ ಸುತ್ತಲೂ ಕೆಂಪಾದ ಕಾಂತಿಯುಳ್ಳುದೂ ಆದ ಸೂರ್ಯಕಿರಣಸಮೂಹವು ಕಾಣಿಸಿತು. ಸೂರ್ಯಕಿರಣಗಳು ಕೆಂಪಾಗಿ ಕಾಣಿಸಿಕೊಂಡುವೆಂದು ಭಾವವು.

೧ ಅವಧೂನನ. ೨ ಉಪವಿಶಾಮಿ. ೩ ನಿರ್ಯದ್ರಕ್ತಃ. ೪ ಕರ್ಹಿಸಂಯೋಗಾದ್ಭವಿಷ್ಯತಿಲಟ್. ೫ ನಾಶಂ. ೬ ದಿವಸಃ. ೭ ಸಾನು. ೮ ರವಿಕಿರಣಸಮೂಹಃ.

**ಕರೈರ್ಗಿರ್ಯಗ್ರಸಂಲಗ್ನೈರ್ಭಾನುರಾಲಕ್ಷ್ಯತ ಕ್ಷಣಮ್ ।**
**ಪಾತಭೀತ್ಯಾ [೧]ಕರಾಲಾಗ್ರೈಃ ಕರಾಲಂಬಮಿವಾಶ್ರಯನ್ ॥ ೧೫೪ ॥**

ಸೂರ್ಯನು ವಿಕಾರವಾದ ಅಗ್ರಭಾಗವುಳ್ಳುವೂ ಪರ್ವತದ ತುದಿಯಲ್ಲಿ ಸಂಬಂಧಿಸಿರುವುವೂ ಆದ ಕಿರಣಗಳಿಂದ ಸ್ವಲ್ಪಕಾಲದವರೆಗೆ, ಬೀಳುವಿಕೆಯ ಭಯದಿಂದ ಹಸ್ತಲಾಘವವನ್ನು ಹೊಂದಿರುವವನಂತೆ, ಕಾಣಿಸಿಕೊಂಡನು.

**ಪತಂತಂ [೨]ವಾರುಣೀಸಂಗಾ[೩]ತ್ಪರಿಲುಪ್ತವಿಭಾವಸುಮ್ ।**
**[೪]ನಾಲಂಬತ ಬತಾಸ್ತಾದ್ರಿರ್ಭಾನುಂ ಬಿಭ್ಯದಿ[೫]ವೈನಸಃ ॥ ೧೫೫ ॥**

ವರುಣದಿಕ್ಕಿನ ಸಂಬಂಧದಿಂದ ಬೀಳುತ್ತಿರುವವನೂ ಕಾಂತಿಯೆಂಬ ಧನವನ್ನು ಕಳೆದುಕೊಂಡವನೂ ಆದ ಸೂರ್ಯನನ್ನು ಅಸ್ತಪರ್ವತವು, ಪಾಪದಿಂದ ಹೆದರುತ್ತದೆಯೋ ಎಂಬಂತೆ, ಹಿಡಿದುಕೊಳ್ಳಲಿಲ್ಲ. (ಮದ್ಯಪಾನವನ್ನು ಮಾಡಿ ಬೀಳುತ್ತಿರುವವನೂ ಕಾಂತಿಯನ್ನೂ ದ್ರವ್ಯವನ್ನೂ ಕಳೆದುಕೊಂಡವನೂ ಆದ ಮನುಷ್ಯನನ್ನು ಹಿಡಿಯಲು ಪಾಪದಿಂದ ಅಂಜುವಂತೆ ಎಂಬುದು ಇಲ್ಲಿ ಧ್ವನಿತವಾಗುವುದು).

**ಗತೋ ನು ದಿನಮನ್ವೇಷ್ಟುಂ ಪ್ರವಿಷ್ಟೋ ನು ರಸಾತಲಮ್ ।**
**ತಿರೋಹಿತೋ ನು ಶೃಂಗಾಗ್ರೈರಸ್ತಾದ್ರೇರ್ನ್ಯಕ್ಷಿ ಭಾನುಮಾನ್ ॥ ೧೫೬ ॥**

ಸೂರ್ಯನು ದಿವಸವನ್ನು ಹುಡುಕುವುದಕ್ಕೋಸ್ಕರ ಹೋದನೋ ? ಪಾತಾಳವನ್ನು ಪ್ರವೇಶಿಸಿದನೋ ? ಅಸ್ತಪರ್ವತದ ಶಿಖರಗಳ ತುದಿಗಳಿಂದ ಮರೆಯಾದನೋ ? ಅವನು ಕಾಣಲಿಲ್ಲ.

**ವಿಘಟಯ್ಯ ತಮೋ [೬]ನೈಶಂ [೭]ಕರೈರಾಕ್ರಮ್ಯ [೮]ಭೂಭೃತಃ ।**
**[೯]ದಿನಾವಸಾನೇ [೧೦]ಪರ್ಯಾಸ್ಥದಹೋ ರವಿ[೧೧]ರನಂಶುಕಃ ॥ ೧೫೭ ॥**

ಕಿರಣಗಳಿಂದ ರಾತ್ರಿಯ ಸಂಬಂಧಿಯಾದ ಕತ್ತಲೆಯನ್ನು ದೂರಮಾಡಿ ಪರ್ವತಗಳನ್ನು ಆಕ್ರಮಿಸಿ ಸಾಯಂಕಾಲದಲ್ಲಿ ಕಾಂತಿರಹಿತನಾದ ಸೂರ್ಯನು ಬಿದ್ದು ಹೋದನು. ಆಶ್ಚರ್ಯ !

**[೧೨]ತಿರ್ಯಙ್ಮಂಡಲಗತ್ಯೈವ ಶಶ್ವದ್ಭಾನುರಯಂ ಭ್ರಮನ್ ।**
**[೧೩]ವಿಪ್ರಕರ್ಷಾಜ್ಜನೈರ್ಮೂರ್ಖೈ[೧೪]ರಗ್ರಾಹೀವ ಪತನ್ನದಃ ॥ ೧೫೮ ॥**

ಮೇರುಪ್ರದಕ್ಷಿಣರೂಪವಾದ ಅಡ್ಡಲಾದ ಸಂಚಾರದಿಂದಲೇ ಯಾವಾಗಲೂ ತಿರುಗುತ್ತಿರುವ ಈ ಸೂರ್ಯನನ್ನು ದೂರವಾಗಿರುವುದರಿಂದ ಕೆಳಕ್ಕೆ ಬೀಳುತ್ತಾನೋ ಎಂಬಂತೆ ಮೂರ್ಖಜನರು ತಿಳಿದರು.

**[೧೫]ವ್ಯಸನೇಸ್ಮಿನ್ ದಿನೇಶಸ್ಯ ಶುಚೇವ ಪರಿಪೀಡಿತಾಃ ।**
**ವಿಚ್ಛಾಯಾನಿ ಮುಖಾ[೧೬]ನ್ಯೂಹುಸ್ತಮೋರುದ್ಧಾ ದಿಗಂಗನಾಃ ॥ ೧೫೯ ॥**

ಸೂರ್ಯನ ಈ ವಿಪತ್ತಿನಲ್ಲಿ ಕತ್ತಲೆಯಿಂದ ವ್ಯಾಪ್ತರಾದ ದಿಗಂಗನೆಯರು, ಶೋಕದಿಂದ ಪೀಡಿತರಾದವರಂತೆ, ಕಾಂತಿರಹಿತವಾದ ಮುಖಗಳನ್ನು ಧರಿಸಿದರು.

**ಪದ್ಮಿನ್ಯೋ ಮ್ಲಾನಪದ್ಮಾಸ್ಯಾ ದ್ವಿರೇಫಕರುಣಾರುತೈಃ ।**
**ಶೋಚಂತ್ಯ ಇವ ದುಃಖಾರ್ತಾ ವಿಯೋಗಾದಹಿಮತ್ವಿಷಃ ॥ ೧೬೦ ॥**

ಸೂರ್ಯನ ವಿಯೋಗದಿಂದ ದುಃಖಪೀಡಿತಗಳೂ ಬಾಡಿದ ತಾವರೆಗಳೆಂಬ ಮುಖಗಳುಳ್ಳುವೂ ಆದ ತಾವರೆಯ ಬಳ್ಳಿಗಳು ಭ್ರಮರಗಳ ಕರುಣಾಯುಕ್ತವಾದ ಧ್ವನಿಗಳಿಂದ ದುಃಖಪಡುತ್ತವೆಯೋ ಎಂಬಂತಿದ್ದುವು.

೧ ಕರಾಲೋ ದಂತುರೇ ತುಂಗೇ ವಿಶಾಲೇ ವಿಕೃತೇಪಿ ಚ. ೨ ವರುಣಸಂಬಂಧಿದಿಕ್ಸಂಗಾತ್, ಮದ್ಯಸಂಗಾದಿತಿ ಧ್ವನಿಃ. ೩ ಕಾಂತಿರೇವ ಧನಂ ಯಸ್ಯ ಪಕ್ಷೇ ವಿಭಾ ಚ ವಸು ಚ ವಿಭಾವಸುನೀ, ಪರಿಲುಪ್ತೇ ವಿಭಾವಸುನೀ ಯಸ್ಯ ಸ ತಂ. ೪ ನ ಧರತಿ ಸ್ಮ. ೫ ಪಾಪಾತ್. ೬ ನಿಶಾಸಂಬಂಧಿ. ೭ ಕಿರಣೈಃ, ಬಲಿಭಿರಿತಿ ಧ್ವನಿಃ. ೮ ಪರ್ವತಾನ್, ನೃಪಾಂಶ್ಚ. ೯ ಪಕ್ಷೇ ಭಾಗ್ಯಾವಸಾನೇ. ೧೦ ಪತಿತವಾನ್. ೧೧ ಕಾಂತಿರಹಿತಃ, ವಸ್ತ್ರರಹಿತ ಇತಿ ಧ್ವನಿಃ. ೧೨ ಮೇರುಪ್ರದಕ್ಷಿಣರೂಪತಿರ್ಯಗ್ಬಿಂಬಗಮನೇನ. ೧೩ ದೂರತ್ವಾದ್ಧೇತೋಃ. ೧೪ ಗೃಹೀತ ಇತ್ಯರ್ಥಃ. ೧೫ ವಿಪದಿ. ೧೬ ಧರಂತಿಸ್ಮ.

**ಸಂಧ್ಯಾತಪತತಾನ್ಯಾಸನ್ವನಾ[೧]ನ್ಯಸ್ತಮಹೀಭೃತಃ ।**
**ಪರೀತಾನೀವ ದಾವಾಗ್ನಿಶಿಖಯಾ[೨]ತಿಕರಾಲಯಾ ॥ ೧೬೧ ॥**

ಸಂಧ್ಯಾಕಾಲದ ಬಿಸಿಲಿನಿಂದ ವ್ಯಾಪ್ತಗಳಾದ ಅಸ್ತಪರ್ವತದ ವನಗಳು ಅತ್ಯಂತ ವಿಶಾಲವಾದ ಕಾಡ್ಗಿಚ್ಚಿನ ಜ್ವಾಲೆಯಿಂದ ವ್ಯಾಪ್ತವಾಗಿವೆಯೋ ಎಂಬಂತಿದ್ದುವು.

**ಅನುರಕ್ತಾಪಿ ಸಂಧ್ಯೇಯಂ ಪರಿತ್ಯಕ್ತಾ ವಿವಸ್ವತಾ ।**
**ಪ್ರವಿಷ್ಟೇವಾಗ್ನಿಮಾರಕ್ತಚ್ಛವಿರಾಲಕ್ಷ್ಯತಾಂಬರೇ ॥ ೧೬೨ ॥**

ಅನುರಾಗವುಳ್ಳದಾಗಿದ್ದರೂ ಸೂರ್ಯನಿಂದ ಬಿಡಲ್ಪಟ್ಟಿರುವ ಈ ಸಂಧ್ಯೆಯು, ಬೆಂಕಿಯನ್ನು ಪ್ರವೇಶಮಾಡಿತೋ ಎಂಬಂತೆ, ಸುತ್ತಲೂ ಕೆಂಪಾದ ಕಾಂತಿಯುಳ್ಳದಾಗಿ ಆಕಾಶದಲ್ಲಿ ಕಾಣಿಸುತ್ತದೆ.

**ಶನೈರಾಕಾಶವಾರಾಶಿವಿದ್ರುಮೋದ್ಯಾನರಾಜಿವತ್ ।**
**ರುರುಚೇ ದಿಶಿ ವಾರುಣ್ಯಾಂ ಸಂಧ್ಯಾ ಸಿಂದೂರಸಚ್ಛವಿಃ ॥ ೧೬೩ ॥**

ಸಿಂದೂರಕ್ಕೆ ಸದೃಶವಾದ ಸಾಯಂಸಂಧ್ಯೆಯು ವರುಣಸಂಬಂಧಿಯಾದ ದಿಕ್ಕಿನಲ್ಲಿ ಮೆಲ್ಲನೆ ಆಕಾಶವೆಂಬ ಸಮುದ್ರದ ಹವಳದ ಉದ್ಯಾನದ ಸಾಲಿನಂತೆ, ಪ್ರಕಾಶಿಸಿತು.

**ಚಕ್ರವಾಕೀಮನಸ್ತಾಪ[೩]ದೀಪನೋ [೪]ನು ಹುತಾಶನಃ ।**
**ಪಪ್ರಥೇ ಪಶ್ಚಿಮಾಶಾಂತೇ ಸಂಧ್ಯಾರಾಗೋ ಜಪಾರುಣಃ ॥ ೧೬೪ ॥**

ಸ್ತ್ರೀಚಕ್ರವಾಕಪಕ್ಷಿಯ ಮನಸ್ಸಿನ ತಾಪವನ್ನು ಹೆಚ್ಚಿಸುವ ಬೆಂಕಿಯೋ ಎಂಬಂತಿರುವುದೂ ಪಶ್ಚಿಮದಿಕ್ಕಿನ ಕೊನೆಯಲ್ಲಿ ದಾಸವಾಳದ ಹೂವಿನಂತೆ ಕೆಂಪಾಗಿರುವುದೂ ಆದ ಸಂಜೆಗೆಂಪು ಹರಡಿಕೊಂಡಿತು.

**ಸಾಂಧ್ಯೋ ರಾಗಃ ಸ್ಫುರನ್ ದಿಕ್ಷು ಕ್ಷಣಮೈಕ್ಷಿ ಪ್ರಿಯಾಗಮೇ ।**
**ಮಾನಿನೀನಾಂ ಮನೋರಾಗಃ ಕೃತ್ಸ್ನೋ [೫]ಮೂರ್ಛನ್ನಿವೈಕತಃ ॥ ೧೬೫ ॥**

ದಿಕ್ಕುಗಳಲ್ಲಿ ಹೊಳೆಯುವ ಸಂಜೆಗೆಂಪು, ಪ್ರಿಯಕಾಂತನ ಆಗಮನದಲ್ಲಿ ಒಂದು ಕಡೆಯಲ್ಲಿ ಹರಡಿಕೊಂಡಿರುವ ಸಮಸ್ತಸ್ತ್ರೀಯರ ಮನಸ್ಸಿನ ಅನುರಾಗವೋ ಎಂಬಂತೆ, ಸ್ವಲ್ಪಕಾಲದವರೆಗೆ ನೋಡಲ್ಪಟ್ಟಿತು.

**ಧೃತರಕ್ತಾಂಶುಕಾಂ ಸಂಧ್ಯಾಮನುಯಾಂತೀಂ ದಿನಾಧಿಪಮ್ ।**
**ಬಹುಮೇನೇ ಸತೀಂ ಲೋಕಃ ಕೃತಾ[೬]ನುಮರಣಾಮಿವ ॥ ೧೬೬ ॥**

ಕೆಂಪುಬಟ್ಟೆಯನ್ನು ಧರಿಸಿರುವುದೂ ದಿನಾಧಿಪತಿಯಾದ ಸೂರ್ಯನನ್ನು ಹಿಂಬಾಲಿಸಿಹೋಗುವುದೂ ಆದ ಸಂಧ್ಯೆಯನ್ನು, ಲೋಕವು, ಪತಿಯ ಚಿತಿಯಲ್ಲಿ ಬಿದ್ದು ಸಾಯುವ–ಸಹಗಮನವನ್ನು ಮಾಡುವ ಪತಿವ್ರತಾಸ್ತ್ರೀಯನ್ನೋಪಾದಿಯಲ್ಲಿ ಬಹುಮಾನಿಸಿತು.

**ಚಕ್ರವಾಕೀಂ ಧೃತೋತ್ಕಂಠಾಮನುಯಾಂತೀಂ ಕೃತಸ್ವನಾಮ್ ।**
**ವಿಜಹಾವೇವ ಚಕ್ರಾಹ್ವೋ [೭]ನಿಯತಿಂ ಕೋನುಲಂಘಯೇತ್ ॥ ೧೬೭ ॥**

ಚಕ್ರವಾಕಪಕ್ಷಿಯು ಕುತೂಹಲವುಳ್ಳದೂ ಹಿಂಬಾಲಿಸಿ ಬರುತ್ತಿರುವುದೂ ಶಬ್ದವನ್ನು ಮಾಡುತ್ತಿರುವುದೂ ಆದ ಸ್ತ್ರೀಚಕ್ರವಾಕಪಕ್ಷಿಯನ್ನು ಬಿಟ್ಟೇಬಿಟ್ಟಿತು. ವಿಧಿಯನ್ನು ಯಾವನು ಮೀರುವನು ? ರಾತ್ರಿಕಾಲದಲ್ಲಿ ಚಕ್ರವಾಕಪಕ್ಷಿಗಳಿಗೆ ಕಣ್ಣುಕಾಣದಿರುವುದರಿಂದ ದಾಂಪತ್ಯವಿಯೋಗವಾಗುವುದೆಂದು ಭಾವವು.

**ರವೇಃ ಕಿಮಪರಾಧೋ[೮]ಯಂ ಕಾಲಸ್ಯ ನಿಯತಿಃ ಕಿಮು ।**
**ರಥಾಂಗಮಿಥುನಾನ್ಯಾಸನ್ವಿಯುಕ್ತಾನಿ ಯತೋ ಮಿಥಃ ॥ ೧೬೮ ॥**

ಯಾವುದರಿಂದ ಚಕ್ರವಾಕಪಕ್ಷಿದಂಪತಿಗಳು ಒಂದಕ್ಕೊಂದು ಅಗಲಿದುವೋ ಈ ಅಗಲಿಕೆಯು ಸೂರ್ಯನ ತಪ್ಪೋ ? ಕಾಲದ ನಿಯಮವೋ ?

೧ ಅಸ್ತಾಚಲಸ್ಯ. ೨ ಅತಿವಿಶಾಲಯಾ. ೩ ಉದ್ದೀಪನಕಾರಿ. ೪ ಇವ. ೫ ಪ್ರಸರ್ಪನ್. ೬ ಸಹಮರಣಾಂ, ಅಗ್ನಿಪ್ರವೇಶಂ ಕುರ್ವತೀಮಿತ್ಯರ್ಥಃ. ೭ ವಿಧಿಂ. ೮ ವಿಯೋಗಃ.

**ಘನಂ ತಮೋ ವಿನಾರ್ಕೇಣ [೧]ವ್ಯಾನಶೇ ನಿಖಿಲಾ ದಿಶಃ ।**
**ವಿನಾ ತೇಜಸ್ವಿನಾ ಪ್ರಾಯಸ್ತಮೋ ರುಂಧೇ ನು ಸಂತತಮ್ ॥ ೧೬೯ ॥**

ನಿಬಿಡವಾದ ಕತ್ತಲೆಯು ಸೂರ್ಯನಿಲ್ಲದೆ ದಿಕ್ಕುಗಳನ್ನೆಲ್ಲ ವ್ಯಾಪಿಸಿತು. ಅಂಧಕಾರವು ತೇಜಸ್ವಿಯಾದ ವಸ್ತುವಿಲ್ಲದಿದ್ದರೆ ಯಾವಾಗಲೂ ವ್ಯಾಪಿಸುತ್ತದಲ್ಲವೇ ?

**[೨]ತಮೋವಕುಂಠಿತಾ ರೇಜೇ ರಜನೀ ತಾರಕಾತತಾ ।**
**ವಿನೀಲವಸನಾ ಭಾಸ್ವನ್ಮೌಕ್ತಿಕೇವಾ[೩]ಭಿಸಾರಿಕಾ ॥ ೧೭೦ ॥**

ಕತ್ತಲೆಯಿಂದ ಮರೆಮಾಡಲ್ಪಟ್ಟುದೂ ನಕ್ಷತ್ರಗಳಿಂದ ವ್ಯಾಪ್ತವೂ ಆದ ರಾತ್ರಿಯು, ಕಪ್ಪಾದ ವಸ್ತ್ರವುಳ್ಳವಳೂ ಪ್ರಕಾಶಮಾನವಾದ ಮುತ್ತುಗಳುಳ್ಳವಳೂ ಆದ ವ್ಯಭಿಚಾರಿಣೀಸ್ತ್ರೀಯಂತೆ, ಶೋಭಿಸುತ್ತಿದ್ದಿತು.

**ತತಾಂಧತಮಸೇ ಲೋಕೇ ಜನೈರುನ್ಮೀಲಿತೇಕ್ಷಣೈಃ ।**
**ನಾದೃಶ್ಯತ ಪುರಃ ಕಿಂಚಿನ್ಮಿಥ್ಯಾತ್ವೇನೇವ ದೂಷಿತೈಃ ॥ ೧೭೧ ॥**

ಲೋಕವು ಗಾಢಾಂಧಕಾರದಿಂದ ವ್ಯಾಪ್ತವಾಗಿರಲು ಕಣ್ಣುಗಳನ್ನು ತೆರೆದಿರುವ ಜನರು, ಮಿಥ್ಯಾತ್ವದಿಂದ ದೂಷಿತರಾದವರಂತೆ, ಮುಂದುಗಡೆಯಲ್ಲಿ ಏನನ್ನೂ ನೋಡಲಿಲ್ಲ. ಕತ್ತಲೆಯಲ್ಲಿ ಏನನ್ನೂ ನೋಡಲಾರದವರಾದರೆಂದು ಭಾವವು.

**[೪]ಪ್ರಸಹ್ಯ ತಮಸಾ ರುದ್ಧೋ ಲೋಕೋಂತರ್ವ್ಯಾಕುಲೀಭವನ್ ।**
**[೫]ದೃಷ್ಟಿವೈಫಲ್ಯದೃಷ್ಟೇರ್ನು ಬಹುಮೇನೇ [೬]ಶಯಾಲುತಾಮ್ ॥ ೧೭೨ ॥**

ಹಠಾತ್ತಾಗಿ ಕತ್ತಲೆಯಿಂದ ವ್ಯಾಪ್ತವೂ ಅಂತರಂಗದಲ್ಲಿ ವ್ಯಾಕುಲಪಟ್ಟಿರುವುದೂ ಆದ ಜನವು ಕಣ್ಣುಗಳ ನಿಷ್ಪ್ರಯೋಜನತ್ವವನ್ನು ನೋಡಿಯೋ ಎಂಬಂತೆ ಮಲಗುವುದನ್ನು ಒಳ್ಳೆಯದನ್ನಾಗಿ ತಿಳಿಯಿತು. ಜನರು ಮಲಗುವುದಕ್ಕೆ ಇಚ್ಛಿಸಿದರೆಂದು ಭಾವವು.

**ದೀಪಿಕಾ ರಚಿತಾ ರೇಜುಃ ಪ್ರತಿವೇಶ್ಮ ಸ್ಫುರತ್ತ್ವಿಷಃ ।**
**[೭]ಘನಾವತಮಸೋದ್ಭೇದೇ [೮]ಪ್ರಕ್ಲಪ್ತಾ ಇವ [೯]ಸೂಚಿಕಾಃ ॥ ೧೭೩ ॥**

ದಟ್ಟವಾದ ಕತ್ತಲೆಯನ್ನು ದೂರಮಾಡುವುದಕ್ಕಾಗಿ ಮಾಡಲ್ಪಟ್ಟ ವೈಡೂರ್ಯರತ್ನದ ಸೂಜಿಗಳೋ ಎಂಬಂತಿರುವುವೂ ಪ್ರಕಾಶಮಾನವಾದ ಕಾಂತಿಯುಳ್ಳವೂ ಪ್ರತಿಯೊಂದು ಮನೆಯಲ್ಲೂ ಹಚ್ಚಿಸಲ್ಪಟ್ಟುವೂ ಆದ ದೀಪಗಳು ಪ್ರಕಾಶಿಸಿದುವು.

**ತಮೋ ವಿಧೂಯ ದೂರೇಣ ಜಗದಾನಂದಿಭಿಃ ಕರೈಃ ।**
**ಉದಿಯಾಯ ಶಶೀ ಲೋಕಂ ಕ್ಷೀರೇಣ ಕ್ಷಾಲಯನ್ನಿವ ॥ ೧೭೪ ॥**

ಚಂದ್ರನು ಲೋಕವನ್ನು ಹಾಲಿನಿಂದ ತೊಳೆಯುತ್ತಾನೋ ಎಂಬಂತೆ ಜಗತ್ತಿಗೆ ಆನಂದವನ್ನುಂಟುಮಾಡುವ ಕಿರಣಗಳಿಂದ ದೂರದಿಂದಲೇ ಕತ್ತಲೆಯನ್ನು ದೂರ ಮಾಡಿ ಉದಯಿಸಿದನು.

**ಅಖಂಡಮನುರಾಗೇಣ ನಿಜಂ ಮಂಡಲಮುದ್ವಹನ್ ।**
**ಸುರಾಜೇವ ಕೃತಾನಂದಮುದಗಾದ್ವಿಧುರುತ್ಕರಃ ॥ ೧೭೫ ॥**

ಕೆಂಪುಬಣ್ಣದಿಂದ ತನ್ನ ಪೂರ್ಣಮಂಡಲವನ್ನು ಧರಿಸಿರುವವನೂ ಮೇಲಕ್ಕೆ ಹರಡುತ್ತಿರುವ ಕಿರಣಗಳುಳ್ಳವನೂ ಆದ ಚಂದ್ರನು, ಅನುರಾಗದಿಂದ ತನ್ನ ದೇಶವನ್ನೆಲ್ಲ ಪೋಷಿಸುವವನೂ ಕಂದಾಯವನ್ನು ಕಡಮೆಮಾಡಿರುವವನೂ ಆದ ಶ್ರೇಷ್ಠರಾಜನಂತೆ, ಆನಂದವನ್ನುಂಟುಮಾಡುತ್ತ ಉದಯಿಸಿದನು.

**ದೃಷ್ಟ್ವೇವಾಕೃಷ್ಟಹರಿಣಂ [೧೦]ಹರಿಂ [೧೧]ಹರಿಣಲಾಂಛನಮ್ ।**
**ತಿಮಿರೌಘಃ ಪ್ರದುದ್ರಾವ ಕರಿಯೂಥಸದೃಙ್ಮಹಾನ್ ॥ ೧೭೬ ॥**

೧ ವ್ಯಾಪ್ನೋತಿ. ೨ ತಮಸಾ ಆಚ್ಛಾದಿತಾ. ೩ ಕುಲಟಾ. ೪ ಹಠಾತ್. ೫ ನೇತ್ರವಿಫಲತ್ವದರ್ಶನಾತ್. ೬ ಶಯನಶೀಲತಾಂ. ೭ ನಿಬಿಡಾಂಧಕಾರಭೇದನೇ. ೮ ಕೃತಾಃ. ೯ ವೈಡೂರ್ಯಸೂಚಿಕಾಃ. ೧೦ ಸಿಂಹಂ. ೧೧ ಚಂದ್ರಂ.

ಆನೆಗಳ ಸಮೂಹಕ್ಕೆ ಸಮಾನವೂ ದೊಡ್ಡದೂ ಆದ ಕತ್ತಲೆಯ ಸಮೂಹವು, ಜಿಂಕೆಯನ್ನು ಎಳೆಯುತ್ತಿರುವ ಸಿಂಹವನ್ನು ನೋಡಿ ಓಡುವಂತೆ, ಚಂದ್ರನನ್ನು ನೋಡಿ ಓಡಿತು. ಆನೆಗಳ ಹಿಂಡು ಸಿಂಹವನ್ನು ನೋಡಿ ಓಡುವಂತೆ ಕತ್ತಲೆಯ ಸಮೂಹವು ಚಂದ್ರನನ್ನು ನೋಡಿ ಓಡಿತೆಂದು ಭಾವವು.

**ತತತಾರಾವಲೀ ರೇಜೇ ಜ್ಯೋತ್ಸ್ನಾಪೂರಃ ಸುಧಾಚ್ಛವಿಃ ।**
**ಸಬುದ್ಬುದ ಇವಾ[1]ಕಾಶಸಿಂಧೋರೋಘಃ ಪರಿಸ್ಖಲನ್ ॥ ೧೭೭ ॥**

ವಿಸ್ತಾರವಾದ ನಕ್ಷತ್ರಗಳ ಸಮೂಹವುಳ್ಳುದೂ ಅಮೃತದ ಕಾಂತಿಯುಳ್ಳುದೂ ಆದ ಬೆಳದಿಂಗಳು, ಸುತ್ತಲೂ ಹರಡುತ್ತಿರುವುದೂ ನೀರುಗುಳ್ಳೆಗಳುಳ್ಳುದೂ ಆದ ಗಂಗಾನದೀಪ್ರವಾಹವೋ ಎಂಬಂತೆ, ಪ್ರಕಾಶಿಸಿದ್ದಿತು.

**ಹಂಸಪೋತ ಇವಾ[2]ನ್ವಿಲ್ಚನ್ ಶಶೀ ತಿಮಿರಶೈವಲಮ್ ।**
**ತಾರಾಸಹಚರೀಕ್ರಾಂತಂ [3]ವಿಜಗಾಹೇ ನಭಃಸರಃ ॥ ೧೭೮ ॥**

ಚಂದ್ರನು, ಹಂಸದ ಮರಿಯಂತೆ, ಕತ್ತಲೆಯೆಂಬ ಆವಟಿಯನ್ನು ನುಂಗುವವನಾಗಿ ತಾರೆ(ನಕ್ಷತ್ರ)ಯೆಂಬ ಪತ್ನಿಯಿಂದ ಆಕ್ರಮಿಸಲ್ಪಟ್ಟ ಆಕಾಶವೆಂಬ ಸರೋವರವನ್ನು ಪ್ರವೇಶಿಸಿದನು.

**ತಮೋ ನಿಃಶೇಷಮುದ್ಧೂಯ ಜಗ[4]ದಾಪ್ಲಾವಯನ್ಕರೈಃ ।**
**ಪ್ರಾಲೇಯಾಂಶುಸ್ತದಾ ವಿಶ್ವಂ ಸುಧಾಮಯಮಿವಾತನೋತ್ ॥ ೧೭೯ ॥**

ಕಿರಣಗಳಿಂದ ಕತ್ತಲೆಯನ್ನೆಲ್ಲ ಹೋಗಲಾಡಿಸಿ ಲೋಕವನ್ನು ಬೆಳಗುತ್ತಿರುವ ಚಂದ್ರನು ಆಗ ಲೋಕವನ್ನು ಅಮೃತಮಯವನ್ನಾಗಿ ಮಾಡಿದನೋ ಎಂಬಂತಿದ್ದನು.

**ತಮೋ ದೂರಂ ವಿಧೂಯಾಪಿ ವಿಧುರಾಸೀತ್ಕಲಂಕವಾನ್ ।**
**ನಿಸರ್ಗಜಂ ತಮೋ ನೂನಂ ಮಹತಾಪಿ ಸುದುಸ್ತ್ಯಜಮ್ ॥ ೧೮೦ ॥**

ಚಂದ್ರನು ಕತ್ತಲೆಯನ್ನು ದೂರವಾಗಿ ಹೋಗಲಾಡಿಸಿಯೂ ಕಲಂಕವುಳ್ಳವನಾಗಿಯೇ ಇದ್ದನು. ಸ್ವಾಭಾವಿಕವಾದ ಅಂಧಕಾರ(ಅಜ್ಞಾನ)ವು ನಿಜವಾಗಿಯೂ ಮಹಾಪುರುಷರಿಗೂ ಬಿಡಲು ಬಹು ಕಷ್ಟಸಾಧ್ಯ.

**ಭಿಷಜೇವ ಕರೈಃ ಸ್ಪೃಷ್ಟಾ ದಿಶಸ್ತಿಮಿರಭೇದಿಭಿಃ ।**
**ಶನೈರ್ದೃಶ ಇವಾಲೋಕಮಾತೇನುಃ [5]ಶಿಶಿರತ್ವಿಷಾ ॥ ೧೮೧ ॥**

ವೈದ್ಯನಿಂದ ಹೇಗೋ ಹಾಗೆ ಚಂದ್ರನಿಂದ ಕತ್ತಲೆಯನ್ನು ನಾಶಮಾಡುವ ಕಿರಣಗಳಿಂದ ಸ್ಪರ್ಶಿಸಲ್ಪಟ್ಟ ದಿಕ್ಕುಗಳು ಮೆಲ್ಲನೆ ಕಣ್ಣುಗಳನ್ನು ಬಿಟ್ಟಂತೆ ಬೆಳಕನ್ನುಂಟು ಮಾಡಿದುವು. ವೈದ್ಯನು ರೋಗಿಯನ್ನು ಕೈಗಳಿಂದ ಮುಟ್ಟಿನೋಡಿ ರೋಗವನ್ನು ದೂರಮಾಡಿ ಕಣ್ಣನ್ನು ತೆರೆಯಿಸುವಂತೆ ಚಂದ್ರನು ಕಿರಣಗಳಿಂದ ಕತ್ತಲೆಯನ್ನು ದೂರಮಾಡಿ ದಿಕ್ಕುಗಳನ್ನು ಬೆಳಗಿದನೆಂದು ಭಾವವು.

**ಇತಿ ಪ್ರದೋಷಸಮಯೇ ಜಾತೇ ಪ್ರಸ್ಪಷ್ಟತಾರಕೇ ।**
**ಸೌಧೋ[6]ತ್ಸಂಗಭುವೋ ಭೇಜುಃ ಪುರಂಧ್ರ್ಯಃ ಸಹ ಕಾಮಿಭಿಃ ॥ ೧೮೨ ॥**

ಈ ಪ್ರಕಾರವಾಗಿ ರಾತ್ರಿಯ ಮುಖವು–ಪ್ರಾರಂಭವು ಸ್ಫುಟವಾದ ನಕ್ಷತ್ರಗಳುಳ್ಳುದಾಗಿರಲು ಸ್ತ್ರೀಯರು ಕಾಮುಕಪುರುಷರೊಡನೆ ಉಪ್ಪರಿಗೆಯ ಪ್ರದೇಶಗಳನ್ನು ಸೇರಿದರು.

**ಚಂದನದ್ರವಸಿಕ್ತಾಂಗ್ಯಃ [7]ಸ್ರಗ್ವಿಣ್ಯಃ ಸಾವತಂಸಕಾಃ ।**
**ಲಸದಾಭರಣಾ ರೇಜುಸ್ತನ್ವ್ಯಃ ಕಲ್ಪಲತಾ ಇವ ॥ ೧೮೩ ॥**

ಚಂದನದ ದ್ರವವನ್ನು ಮೈಗೆ ಹಚ್ಚಿಕೊಂಡಿರುವವರೂ ಮಾಲೆಗಳನ್ನು ಧರಿಸಿರುವವರೂ ಶಿರೋಭೂಷಣಗಳನ್ನೂ ಕರ್ಣಾಭರಣಗಳನ್ನೂ ಧರಿಸಿರುವವರೂ ಪ್ರಕಾಶಮಾನವಾದ ಆಭರಣಗಳುಳ್ಳವರೂ ಆದ ತರುಣಿಯರು ಕಲ್ಪಲತೆಗಳಂತೆ ಶೋಭಿಸಿದರು.

**ಇಂದುಪಾದೈಃ ಸಮುತ್ಕರ್ಷಮಗಾನ್ಮಕರಕೇತನಃ ।**
**ತದೋದನ್ವಾನಿವೋದ್ವೇಲೋ ಮನೋವೃತ್ತಿಷು ಕಾಮಿನಾಮ್ ॥**

ಆಗ ದಡಮೀರಿದ ಸಮುದ್ರದಂತೆ ಕಾಮನು ಚಂದ್ರಕಿರಣಗಳಿಂದ ಕಾಮುಕರ ಮನೋವ್ಯಾಪಾರಗಳಲ್ಲಿ ಅಭಿವೃದ್ಧಿಯನ್ನು ಹೊಂದಿದನು.

**[1]ರಮಣಾ ರಮಣೀಯಾಶ್ಚ ಚಂದ್ರಪಾದಾಃ ಸಚಂದನಾಃ ।**
**ಮದಶ್ಚ ಮದನಾರಂಭಮಾತನ್ವನ್ನರಮಣೀಜನೇ ॥ ೧೮೫ ॥**

ಮನೋಹರವಾದ ಪ್ರಾಣಕಾಂತರೂ ಚಂದನಸಹಿತವಾದ ಚಂದ್ರಕಿರಣಗಳೂ ಮದವೂ ಸ್ತ್ರೀಜನದಲ್ಲಿ ಮನ್ಮಥನ ಆರಂಭವನ್ನು–ಕಾಮೋದ್ದೀಪನವನ್ನುಂಟು ಮಾಡಿದುವು.

**ಶಶಾಂಕಕರಜೈತ್ರಾಸ್ತ್ರೈಸ್ತರ್ಜಯನ್ನಿಖಿಲಂ ಜಗತ್ ।**
**ನೃಪವಲ್ಲಭಿಕಾವಾಸಾನ್ಮನೋಭೂ[2]ರಭ್ಯಷೇಣಯತ್ ॥ ೧೮೬ ॥**

ಕಾಮನು ಚಂದ್ರಕಿರಣಗಳೆಂಬ ಜಯಶೀಲವಾದ ಅಸ್ತ್ರಗಳಿಂದ ಸಮಸ್ತಲೋಕವನ್ನು ತಿರಸ್ಕರಿಸಿ ರಾಜಸ್ತ್ರೀಯರ ವಾಸಸ್ಥಾನಗಳ ಕಡೆಗೆ ಸೈನ್ಯದೊಡನೆ ಹೋದನು.

**ನಾಸ್ವಾದಿ ಮದಿರಾ ಸ್ವೈರಂ ನ ಜಘ್ರೇ ನ ಕರೇರ್ಪಿತಾ ।**
**ಕೇವಲಂ ಮದನಾವೇಶಾತ್ತರುಣ್ಯೋ ಭೇಜು[3]ರುತ್ಕತಾಮ್ ॥ ೧೮೭ ॥**

ಮದ್ಯವನ್ನು ಯಥೇಚ್ಛವಾಗಿ ಸೇವಿಸಲಿಲ್ಲ. ಅದನ್ನು ಮೂಸಲಿಲ್ಲ, ಕೈಯಲ್ಲಿಯೂ ಹಿಡಿಯಲಿಲ್ಲ. ಕಾಮೋದ್ರೇಕವೊಂದರಿಂದಲೇ ತರುಣಿಯರು ಕುತೂಹಲವನ್ನು ಹೊಂದಿದರು.

**ಉತ್ಸಂಗಸಂಗಿನೀ ಭರ್ತುಃ ಕಾಚಿನ್ಮದ[4]ವಿಘೂರ್ಣಿತಾ ।**
**ಕಾಮಿನೀ ಮೋಹನಾಸ್ತ್ರೇಣ ಬತಾನಂಗೇನ ತರ್ಜಿತಾ ॥ ೧೮೮ ॥**

ಗಂಡನ ತೊಡೆಯಮೇಲಿರುವವಳೂ ಮದದಿಂದ ಭ್ರಮೆಯನ್ನು ಹೊಂದಿರುವವಳೂ ಆದ ಓರ್ವ ಕಾಮಿನಿಯು ಕಾಮನಿಂದ ಮೋಹನಾಸ್ತ್ರದಿಂದ ತಿರಸ್ಕೃತಳಾದಳು. ಆಶ್ಚರ್ಯ ! ಕಾಮನ ಮೋಹನಾಸ್ತ್ರಕ್ಕೆ ಗುರಿಯಾದಳೆಂದರ್ಥ.

**ಸಖೀವಚನಮುಲ್ಲಂಘ್ಯ ಭಂಕ್ತ್ವಾ ಮಾನಂ [5]ನಿರರ್ಗಲಾ ।**
**ಪ್ರಯಾಂತೀ ರಮಣಾವಾಸಂ ಕಾಪ್ಯನಂಗೇನ [6]ಧೀರಿತಾ ॥ ೧೮೯ ॥**

ಸಖಿಯ ಮಾತನ್ನು ಮೀರಿ ಮಾನವನ್ನು ಹಾಳುಮಾಡಿ–ಬಿಟ್ಟು ತಡೆಯಿಲ್ಲದವಳೂ ರಮಣನ ವಾಸಸ್ಥಾನಕ್ಕೆ ಹೋಗುವವಳೂ ಆದ ಓರ್ವ ಸ್ತ್ರೀಯು ಮನ್ಮಥನಿಂದ ಧೈರ್ಯವುಳ್ಳವಳಾಗಿ ಮಾಡಲ್ಪಟ್ಟಳು. ಕಾಮಾತುರತೆಯು ಮಾನವನ್ನು ಬಿಟ್ಟು ರಮಣನ ವಾಸಕ್ಕೆ ತಾನಾಗಿ ಹೋಗುವಂತೆ ಧೈರ್ಯವನ್ನುಂಟುಮಾಡಿತೆಂದು ಭಾವವು.

**ಶಂಫಲೀವಚನಾ[7]ದ್ದೂನಾ ಕಾಚಿತ್ಪರ್ಯಶ್ರುಲೋಚನಾ ।**
**ಚಕ್ರಾಹ್ವೇವ ಭೃಶಂ ತೇಪೇ [8]ನಾಯಾತಿ ಪ್ರಾಣವಲ್ಲಭೇ ॥ ೧೯೦ ॥**

೧ ಗಂಗಾಯಾಃ ಪ್ರವಾಹಃ. ೨ ಗಿಲನ್. ೩ ವಿವೇಶ. ೪ ಪ್ರಕ್ಷಾಲಯನ್. ೫ ಚಂದ್ರೇಣ. ೬ ಉಪರಿಮಪ್ರದೇಶಾನ್. ೭ ಮೂಲಭಾರಿಣ್ಯಃ.

೧ ಪ್ರಿಯತಮಾಃ. ೨ ಸೇನಯಾ ಅಭಿಯಾತಿ ಸ್ಮ. ೩ ಉತ್ಕಂಠಿತಾಂ. ೪ ಭ್ರಮಿತಾ. ೫ ಪ್ರತಿಬಂಧರಹಿತಾ. ೬ ಧೈರ್ಯವತೀ ಕೃತಾ. ೭ ಸಂತಪ್ತಾ. ೮ ನಾಗಚ್ಛತಿ ಸತಿ.

ಪ್ರಾಣಕಾಂತನು ಬಾರದಿರಲು ಸೇವಕಳ ಮಾತಿನಿಂದ ಕಣ್ಣೀರನ್ನು ಸುರಿಸುತ್ತಿರುವವಳೂ ದುಃಖಿತಳೂ ಆದ ಓರ್ವ ಸ್ತ್ರೀಯು, ಚಕ್ರವಾಕಪಕ್ಷಿಯಂತೆ, ಬಹಳವಾಗಿ ಸಂತಾಪಪಟ್ಟಳು.

**[೧]ಶೂನ್ಯಗಾನಸ್ವನೈಃ ಸ್ತ್ರೀಣಾಮಳಿಜ್ಯಾಕಲ[೨]ಝುಂಕೃತೈಃ ।**
**ಪೂರ್ವರಂಗಮಿವಾನಂಗೋ ರಚಯಾಮಾಸ ಕಾಮಿನಾಮ್ ॥ ೧೯೧ ॥**

ಸ್ತ್ರೀಯರ ಮನಸ್ಸಿಗೆ ವ್ಯಾಮೋಹಕರವಾದ ಗಾನವಿಶೇಷಗಳಿಂದಲೂ ಭ್ರಮರವೆಂಬ ಶಿಂಜಿನಿಯ (ಧನುಸ್ಸಿನ ಹೆದೆಯ) ಮಧುರಧ್ವನಿವಿಶೇಷಗಳಿಂದಲೂ ಕಾಮನು ಕಾಮುಕರಿಗೆ ಪೂರ್ವರಂಗವನ್ನೋಪಾದಿಯಲ್ಲಿ ರಚಿಸಿದನು.

**[೩]ಗೋತ್ರಸ್ಖಲನಸಂವೃದ್ಧಮನ್ಯುಮನ್ಯಾ[೪]ಮನನ್ಯಜಃ ।**
**[೫]ನೋಪೈಕ್ಷಿಷ್ಟ ಪ್ರಿಯೋತ್ಸಂಗಮನಯ[೬]ನ್ನವಸಂಗತಾಮ್ ॥ ೧೯೨ ॥**

ಗಂಡನು ತಪ್ಪು ಹೆಸರನ್ನು ಹೇಳಿದುದರಿಂದ ವೃದ್ಧಿಹೊಂದಿದ ಕೋಪವುಳ್ಳವಳಾದ ಬೇರೊಬ್ಬಳು ಹೊಸದಾಗಿ ವಿವಾಹಿತಳಾದ ಸ್ತ್ರೀಯನ್ನು ಕಾಮನು ಉಪೇಕ್ಷಿಸಲಿಲ್ಲ. ಆಕೆಯನ್ನು ಗಂಡನ ತೊಡೆಯನ್ನು ಹೊಂದಿಸಿದನು. ಕೋಪವನ್ನು ಬಿಟ್ಟು ಗಂಡನ ತೊಡೆಯನ್ನೇರುವಂತೆ ಮಾಡಿದನೆಂದರ್ಥವು.

**ನೇಂದುಪಾದೈರ್ಧೃತಿಂ ಲೇಭೇ ನೋಶೀರೈರ್ನ ಜಲಾರ್ದ್ರಯಾ ।**
**[೭]ಖಂಡಿತಾ ಮಾನಿನೀ ಕಾಚಿದಂತಸ್ತಾಪೇ ಬಲೀಯಸಿ ॥ ೧೯೩ ॥**

ಮನಸ್ಸಿನ ಸಂತಾಪವು ಹೆಚ್ಚಾಗಿರುತ್ತಿರಲು ಪತಿವಿಯೋಗವನ್ನು ಹೊಂದಿದ್ದ ಓರ್ವ ಸ್ತ್ರೀಯು ಚಂದ್ರನ ಕಿರಣಗಳಿಂದ ಸಂತೋಷವನ್ನು ಪಡೆಯಲಿಲ್ಲ. ಲಾವಂಚಗಳಿಂದಲೂ ಸಂತೋಷವನ್ನು ಪಡೆಯಲಿಲ್ಲ. ನೀರಿನಿಂದ ನೆನೆದ ಮುಡಿವಾಳದ ಬೀಸಣಿಗೆಯಿಂದಲೂ ಸಂತೋಷವನ್ನು ಪಡೆಯಲಿಲ್ಲ. ಈ ಕಾಮೋದ್ದೀಪನ ಸಾಮಗ್ರಿಗಳಿಂದ ವಿರಹತಾಪವು ಶಾಂತವಾಗಲಿಲ್ಲವೆಂದು ಭಾವವು.

**ಕಾಚಿದುತ್ತಾಪಿಭಿರ್ಬಾಣೈಸ್ತಾಪಿತಾಪಿ ಮನೋಭುವಾ ।**
**ನಿತಂಬಿನೀ ಪ್ರತೀಕಾರಂ ನೈಚ್ಛದ್ಧೈರ್ಯಾವಲಂಬಿನೀ ॥ ೧೯೪ ॥**

ಕಾಮನಿಂದ ಸಂತಾಪಗೊಳಿಸುವ ಬಾಣಗಳಿಂದ ತಾಪಗೊಳಿಸಲ್ಪಟ್ಟವಳಾದರೂ ಓರ್ವ ಸ್ತ್ರೀಯು ಧೈರ್ಯವನ್ನವಲಂಬಿಸಿದವಳಾಗಿ ಪ್ರತೀಕಾರವನ್ನಿಚ್ಛಿಸಲಿಲ್ಲ.

**ಅನುರಕ್ತತಯಾ ದೂರಂ ನೀತಯಾ ಪ್ರಣಯೋಚಿತಾಮ್ ।**
**[೮]ಭೂಮಿಂ ಯೂನಾನ್ಯಯಾಸೋಢಃ [೯]ಸಂದೇಶಃ ಪರುಷಾಕ್ಷರಃ ॥**

ಅನುರಾಗವಿರುವುದರಿಂದ ಪ್ರೀತಿಗೆ ಯೋಗ್ಯವಾದ ಸ್ಥಾನಕ್ಕೆ ದೂರವಾಗಿ ಯುವಕನೋರ್ವನು ಕರೆದುಕೊಂಡು ಹೋದ ಬೇರೊಬ್ಬ ಸ್ತ್ರೀಯು ಅವನ ಕಠೋರಾಕ್ಷರಗಳುಳ್ಳ ಆಜ್ಞೆಯನ್ನು ಸಹಿಸಿದಳು.

**[೧೦]ಆಲಿ ತ[೧೧]ನ್ನಾಲಿಕಂ ಬ್ರೂಹಿ ಗತಃ ಕಿಂ ನು [೧೨]ವಿಲಕ್ಷತಾಮ್ ।**
**ಪ್ರಿಯಾನಾಮಾಕ್ಷರೈಃ [೧೩]ಕ್ಷೀಣೈ[೧೪]ರ್ಮೋಹಾನ್ಮಯ್ಯವತಾರಿತೈಃ ॥ ೧೯೬ ॥**

"ಸಖಿಯೆ ! ಆ ಸುಳ್ಳನ್ನು ಹೇಳಬೇಡ. ಸವತಿಯಲ್ಲಿರುವ ಮೋಹದ ದೆಸೆಯಿಂದ ನನ್ನಲ್ಲಿ ಉಪಯೋಗಿಸಲ್ಪಟ್ಟ ತುಚ್ಛವಾದ ಪ್ರಾಣಕಾಂತೆಯ (ತನ್ನ) ಹೆಸರಿನ ಅಕ್ಷರಗಳಿಂದ ಆಶ್ಚರ್ಯಯುಕ್ತತ್ವವನ್ನು ಹೊಂದಿದನೇನು ?

**ಯಯಾ ತವ ಹೃತಂ ಚೇತಸ್ತಯಾ [೧೫]ಲಜ್ಜಾಪ್ಯಹಾರಿ ಕಿಮ್ ।**
**[೧೬]ಯೇನ [೧೭]ನಿಸ್ತ್ರಪ [೧೮]ಭೂಯೋಪಿ ಪ್ರಣಯೋ[೧೯]ಸ್ಮಾಸು ತನ್ಯತೆ ॥**

ಎಲೈ ನಾಚಿಕೆಯಿಲ್ಲದವನೆ ! ನಿನ್ನ ಮನಸ್ಸು ಯಾವಳಿಂದ ಅಪಹರಿಸಲ್ಪಟ್ಟಿತೋ ಅವಳಿಂದ ನಾಚಿಕೆಯೂ ಅಪಹರಿಸಲ್ಪಟ್ಟಿತೇನು ? ನಾಚಿಕೆಯಿಲ್ಲದಿರುವುದರಿಂದಲೇ ನೀನು ನಮ್ಮಲ್ಲಿ ಪುನಃ ಪುನಃ ಪ್ರೀತಿಯನ್ನು ತೋರಿಸುತ್ತಿರುವೆ.

**ಸೈವಾ[೧]ನುವರ್ತನೀಯಾ [೨]ತೇ ಸುಭಗಂಮನ್ಯ ಮಾನಿನೀ ।**
**ಅಸ್ಥಾನೇ ಯೋಜಿತಾ ಪ್ರೀತಿರ್ಜಾಯತೇ[೩]ನುಶಯಾಯ [೪]ತೇ ॥ ೧೯೮ ॥**

ತನ್ನನ್ನು ಉತ್ತಮಸಂಪತ್ತಿಯುಳ್ಳವನನ್ನಾಗಿ ತಿಳಿಯುವವನೆ ! ಮಾನಿಷ್ಠಳಾದ ಅವಳೇ ನಿನ್ನಿಂದ ಅನುಸರಿಸಲ್ಪಡುವುದಕ್ಕೆ ಯೋಗ್ಯಳು. ನಮ್ಮಂಥಹ ಅಯೋಗ್ಯ ಸ್ಥಾನದಲ್ಲಿ ಇರಿಸಲ್ಪಟ್ಟ ಪ್ರೀತಿಯು ನಿನಗೆ ಪಶ್ಚಾತ್ತಾಪಕ್ಕೆ ಕಾರಣವಾಗುವುದು."

**ಇತಿ ಪ್ರಾಣಪ್ರಿಯಾಂ ಕಾಂಚಿ[೫]ತ್ಸಂದಿಶಂತೀಂ ಸಖೀಜನೇ ।**
**ಯುವಾ ಸಾದರಮಭ್ಯೇತ್ಯ ನಾ[೬]ನುನಿನ್ಯೇ ನ ಮಾನಿನೀಮ್ ॥ ೧೯೯ ॥**

ಈ ಪ್ರಕಾರವಾಗಿ ತನ್ನ ಸಖೀಜನದಲ್ಲಿ ಮಾತನ್ನು ಹೇಳಿಕಳುಹುತ್ತಿರುವ ಒಬ್ಬಾಳೊಬ್ಬ ಮಾನಿಷ್ಠಳಾದ ಪ್ರಾಣಕಾಂತೆಯನ್ನು ಯುವಕನೋರ್ವನು ಪ್ರೀತಿಪೂರ್ವಕವಾಗಿ ಸಮೀಪಕ್ಕೆ ಹೋಗಿ ಅನುಸರಣಮಾಡಲಿಲ್ಲವೆನ್ನುವುದಿಲ್ಲ. ದೈನ್ಯವನ್ನು ತೋರಿಸಿದನೆಂದು ಭಾವವು.

**ಚಂದ್ರಪಾದಾಸ್ತಪಂತೀವ ಚಂದನಂ ದಹತೀವ ಮಾಮ್ ।**
**[೭]ಸಂಧುಕ್ಷ್ಯತ ಇವಾಮೀಭಿಃ ಕಾಮಾಗ್ನಿರ್ವ್ಯಜನಾನಿಲೈಃ ॥ ೨೦೦ ॥**

"ನನ್ನನ್ನು ಚಂದ್ರನ ಕಿರಣಗಳು ಸಂತಾಪಗೊಳಿಸುವಂತಿರುತ್ತವೆ. ಶ್ರೀಗಂಧವು ದಹಿಸುವಂತಿರುತ್ತದೆ. ಈ ಬೀಸಣಿಗೆಯ ಗಾಳಿಗಳಿಂದ ಕಾಮಾಗ್ನಿಯು ಉರಿಸಲ್ಪಟ್ಟಂತಿರುತ್ತದೆ.

**ತಮಾನಯಾ[೮]ನುನೀಯೇಹ [೧೦]ನಯ ಮಾಂ ವಾ [೧೧]ತದಂತಿಕಮ್ ।**
**ತ್ವದಧೀನಾ ಮಮ ಪ್ರಾಣಾಃ ಪ್ರಾಣೇಶೇ [೧೨]ಬಹುವಲ್ಲಭೇ ॥ ೨೦೧ ॥**

ಅವನನ್ನು ದೈನ್ಯವಚನವನ್ನು ಹೇಳಿ ಇಲ್ಲಿಗೆ ಕರೆದುಕೊಂಡು ಬಾ. ನನ್ನನ್ನಾದರೂ ಅವನ ಬಳಿಗೆ ಕರೆದುಕೊಂಡು ಹೋಗು. ಪ್ರಾಣಪತಿಯು ಬಹುಜನ ಸ್ತ್ರೀಯರುಳ್ಳವನಾಗಿರಲು ನನ್ನ ಪ್ರಾಣಗಳು ನಿನಗೆ ಅಧೀನಗಳಾಗಿರುತ್ತವೆ. ಮೇಲೆ ಹೇಳಿದ ಎರಡು ರೀತಿಗಳಲ್ಲಿ ಯಾವುದನ್ನಾದರೂ ಮಾಡಿ ಪ್ರಾಣಗಳನ್ನು ಕಾಪಾಡುವುದು ಸಖಿಯರ ಕರ್ತವ್ಯವೆಂದು ಭಾವವು."

**ಇತ್ಯನಂಗಾತುರಾ ಕಾಚಿತ್ಸಂದಿಶಂತೀ ಸಖೀಂ [೧೩]ಮಿಥಃ ।**
**[೧೪]ಭುಜೋಪರೋಧಮಾಶ್ಲೇಷಿ [೧೫]ಪತ್ಯಾ [೧೬]ಪ್ರತ್ಯಗ್ರಖಂಡಿತಾ ॥ ೨೦೨ ॥**

ಈ ಪ್ರಕಾರವಾಗಿ ಕಾಮಾತುರಳೂ ಗೆಳತಿಯನ್ನು ಕುರಿತು ರಹಸ್ಯವಾಗಿ ಪತಿಗೆ ಹೇಳಿಕಳುಹುವವಳೂ ಮೊದಲನೆಯದಾಗಿ ವಿಯೋಗವನ್ನು ಹೊಂದಿರುವವಳೂ ಆದ ಒಬ್ಬಾಳೊಬ್ಬ ಸ್ತ್ರೀಯನ್ನು ಆಕೆಯ ಪತಿಯು ಬಿಗಿದಪ್ಪಿದನು.

**ರಾಜ್ಯೇ ಮನೋಭವಸ್ಯಾ[೧೭]ಸ್ಮಿನ್ ಸ್ವೈರಂ ರಂರಮ್ಯತಾಮಿತಿ ।**
**ಕಾಮಿನೀಕಲಕಾಂಚೀಭಿ[೧೮]ರುದಘೋಷೀವ ಘೋಷಣಾ ॥ ೨೦೩ ॥**

"ಈ ಕಟೀಪ್ರದೇಶರೂಪವಾದ ಕಾಮನ ರಾಜ್ಯದಲ್ಲಿ ಯಥೇಚ್ಛವಾಗಿ ರಮಿಸಲ್ಪಡಲಿ" ಎಂಬುದಾಗಿ ಕಾಮಿನಿಯರ ಮಧುರವಾದ ಗೆಜ್ಜೆಯ ಡಾಬುಗಳಿಂದ ಘೋಷಣೆಯು ಪ್ರಕಟಿಸಲ್ಪಟ್ಟಂತಿದ್ದಿತು.

---

೧ ಚಿತ್ತವ್ಯಾಮೋಹಹೇತು ಗೀತವಿಶೇಷೈಃ. ೨ ಧ್ವನಿವಿಶೇಷೈಃ. ೩ ನಾಮಸ್ಖಲನಪ್ರವೃದ್ಧಕೋಪಾಂ. ೪ ಕಾಮಃ. ೫ ಉಪೇಕ್ಷಾಂ ನಾಕರೋತ್. ೬ ನವವಧೂಮಿತ್ಯರ್ಥಃ. ೭ ವಿಯುಕ್ತಾ. ೮ ಪದಂ. ೯ ವಾಚಿಕಂ. ೧೦ ಭೋ ಸಖಿ. ೧೧ ಅನೃತಂ ನ ಬ್ರೂಹಿ. ೧೨ ವಿಸ್ಮಯಾನ್ವಿತತ್ವಂ. ೧೩ ದೀನೈಃ, ತುಚ್ಛೈರಿತ್ಯರ್ಥಃ. ೧೪ ಸಪತ್ನೀಮೋಹಾತ್. ೧೫ ತವ ಲಜ್ಜಾಪಿ ಅಪಹಾರಿ ಕಿಂ. ೧೬ ಕಥಮಿತ್ಯರ್ಥಃ. ೧೭ ನಿರ್ಲಜ್ಜ. ೧೮ ಪುನಃಪುನಃ. ೧೯ ಸಖೀಷು.

೧ ಅನುವರ್ತಿತುಂ ಯೋಗ್ಯಾ. ೨ ತ್ವಯೇತ್ಯರ್ಥಃ. ೩ ಪಶ್ಚಾತ್ತಾಪಾಯ. ೪ ತವ. ೫ ಸಂಜಲ್ಪತೀಂ, ವಚನಂ ಪ್ರೇಷಯಂತೀಂ. ೬ ಅನುನಯಂ ನಾಕರೋದಿತಿ ನ. ೭ ಜಾಜ್ವಲ್ಯಮಾನ ಇವಾಭೂತ್. ೮ ದೈನ್ಯವಚನಮುಕ್ತ್ವಾ. ೯ ಮತ್ಸಮೀಪೇ. ೧೦ ಪ್ರಾಪಯ. ೧೧ ಪ್ರಿಯತಮಾಂತಿಕಂ. ೧೨ ಬಹುಸ್ತ್ರೀಕೇ ಸತಿ. ೧೩ ರಹಸಿ. ೧೪ ಭುಜಾಭ್ಯಾಮುಪರುಧ್ಯ. ೧೫ ವಲ್ಲಭೇನ. ೧೬ ನವವಿಯುಕ್ತಾ. ೧೭ ಕಟೀರೂಪೇ. ೧೮ ಪ್ರಕಟೀಕೃತಾ.

**ಕರ್ಣೋತ್ಪಲ[೧]ವಿಲೀನಾಲಿಕುಲಕೋಲಾಹಲಸ್ವನೈಃ ।**
**[೨]ಉಪಜೇಪೇ ಕಿಮು ಸ್ತ್ರೀಣಾಂ [೩]ಕರ್ಣಜಾಹೇ ಮನೋಭುವಾ ॥**

ಕಾಮನು ಸ್ತ್ರೀಯರ ಕಿವಿಯ ಬುಡದಲ್ಲಿ ಕಿವಿಯ ಮೇಲಿರಿಸಿರುವ ನೈದಿಲೆಯ ಹೂವಿನಲ್ಲಿ ಆಸಕ್ತವಾದ ದುಂಬಿಗಳ ಗುಂಪಿನ ಕಲಕಲಧ್ವನಿಗಳಿಂದ ಮಾತನಾಡಿದನೇನು ?

**ಸ್ತನಾಂಗರಾಗಸಮ್ಮರ್ದೀ [೪]ಪರಿರಂಭೋತಿನಿರ್ದಯಃ ।**
**ವವೃಧೇ [೫]ಕಾಮಿವೃಂದೇಷು ರಭಸಶ್ಚ ಕಚಗ್ರಹಃ ॥ ೨೦೫ ॥**

ಕಾಮಿನಿಯರ ಮತ್ತು ಕಾಮುಕರ ಗುಂಪುಗಳಲ್ಲಿ ಕುಚಗಳ ಅಂಗಲೇಪನವನ್ನು ಉಜ್ಜುವುದೂ ನಿರ್ದಯವೂ ಆದ ಆಲಿಂಗನವೂ ಬಿಗಿಯಾದ ಕೇಶಗ್ರಹಣವೂ ವೃದ್ಧಿಹೊಂದಿದುವು.

**ಆರಕ್ತಕಲುಷಾ ದೃಷ್ಟಿರ್ಮುಖ[೬]ಮಾಪಾಟಲಾಧರಮ್ ।**
**ರತಾಂತೇ ಕಾಮಿನಾಮಾಸೀತ್ಸೀತ್ಕೃತಂ ಚಾಸಕೃತ್ಕೃತಮ್ ॥ ೨೦೬ ॥**

ಕಾಮುಕರಿಗೆ ರತಿಕ್ರೀಡೆಯ ಕೊನೆಯಲ್ಲಿ ಕಣ್ಣು ಸುತ್ತಲೂ ಕೆಂಪಾಗಿ ಕಲಕಿತು. ಮುಖವು ಸ್ವಲ್ಪ ಕೆಂಪಾದ ಕೆಳದುಟಿಯುಳ್ಳದಾಯಿತು. ಬಾರಿಬಾರಿಗೆ ಸೀತ್ಕಾರ ಶಬ್ದವು ಮಾಡಲ್ಪಟ್ಟಿತು. ರತಿಕ್ರೀಡೆಯ ಆಯಾಸದಿಂದ ಫೂತ್ಕಾರವನ್ನು ಮಾಡಿದರೆಂದು ಭಾವವು.

**ಪುಷ್ಪಸಮ್ಮರ್ದಸುರಭೀರಾಸ್ರಸ್ತಜಘನಾಂಶುಕಾಃ ।**
**ಸಂಭೋಗಾವಸಿತಾ ಶಯ್ಯಾ ಮಿಥುನಾನ್ಯಧ್ಯಶೇರತ ॥ ೨೦೭ ॥**

ಸಂಭೋಗದ ಕೊನೆಯಲ್ಲಿ ಸ್ತ್ರೀಪುರುಷರು ಹೂವುಗಳ ಹಿಸುಕಾಟದಿಂದ ಪರಿಮಳವುಳ್ಳುವೂ ಸಡಿಲಿದ ಜಘನಪ್ರದೇಶದ (ಕುಂಡಿಯ) ವಸ್ತ್ರಗಳುಳ್ಳುವೂ ಆದ ಹಾಸಿಗೆಗಳಲ್ಲಿ ಮಲಗಿದರು.

**ಕೈಶ್ಚಿದ್ವೀರಭಟೈರ್ಭಾವಿರಣಾರಂಭಕೃತೋತ್ಸವೈಃ ।**
**ಪ್ರಿಯೋಪರೋಧಾನ್ಮಂದೇಚ್ಛೈರಪ್ಯಾಸೇವಿ ರತೋತ್ಸವಃ ॥ ೨೦೮ ॥**

ಮುಂದಾಗುವ ಯುದ್ಧಾರಂಭದಿಂದ ಮಾಡಲ್ಪಟ್ಟ ಉತ್ಸವವುಳ್ಳ ಅಂದರೆ ಮುಂದಾಗುವ ಯುದ್ಧದಲ್ಲಿ ಉತ್ಸಾಹವುಳ್ಳವರಾದ ಕೆಲವು ಮಂದಿ ವೀರಭಟರು ಕಡಮೆಯಾದ ಇಚ್ಛೆಯುಳ್ಳವರಾದರೂ ಹೆಂಡತಿಯರ ನಿರ್ಬಂಧದ ದೆಸೆಯಿಂದ ರತೋತ್ಸವ–ರತಿಕ್ರೀಡೆಯನ್ನು ಮಾಡಿದರು.

**ಕೇಚಿತ್ಕೀರ್ತ್ಯಂಗನಾಸಂಗಸುಖಸಂಗಕೃತಸ್ಪೃಹಾಃ ।**
**ಪ್ರಿಯಾಂಗನಾಪರಿಷ್ವಂಗಮಂಗೀಚಕ್ರುರ್ನ ಮಾನಿನಃ ॥ ೨೦೯ ॥**

ಕೀರ್ತಿಯೆಂಬ ಸ್ತ್ರೀಯ ಸಂಗದಿಂದುಂಟಾಗುವ ಸುಖದ ಸಂಬಂಧದಲ್ಲಿ ಅಭಿಲಾಷೆಯುಳ್ಳವರಾದ ಕೆಲವರು ಮಾನಿಷ್ಠರು ಪ್ರಿಯಕಾಂತೆಯ ಆಲಿಂಗನವನ್ನು ಅಂಗೀಕರಿಸಲಿಲ್ಲ. ಕೀರ್ತಿಕಾಮಿಗಳಾದ ಕೆಲವರು ರತಿಕ್ರೀಡೆಯನ್ನು ಮಾಡಲಿಲ್ಲವೆಂದರ್ಥ.

**ನಿರ್ಜಿತಾರಿಭಟೈರ್ಭೋಗ್ಯಾಃ ಪ್ರಿಯಾ ಮಾಸ್ಮಾಭಿರನ್ಯಥಾ ।**
**ಇತಿ ಜೈತ್ರಭಟಾಃ ಕೇಚಿನ್ನ ಭೇಜುಃ ಶಯನಾನ್ಯಪಿ ॥ ೨೧೦ ॥**

''ಶತ್ರುಭಟರನ್ನು ಜಯಿಸಿದ ನಮ್ಮಿಂದ ಪ್ರಿಯಪತ್ನಿಯರು ಅನುಭವಿಸಲ್ಪಡತಕ್ಕವರು. ಶತ್ರುಭಟರನ್ನು ಜಯಿಸದಿದ್ದರೆ ಅನುಭವಿಸಲ್ಪಡತಕ್ಕವರಲ್ಲ'' ಎಂಬುದಾಗಿ ಕೆಲವರು ಜಯಶೀಲರಾದ ಭಟರು ಶಯನಗಳನ್ನೂ ಹೊಂದಲಿಲ್ಲ. ಹಾಸಿಗೆಗಳಲ್ಲಿ ಮಲಗಲಿಲ್ಲವೆಂದರ್ಥವು.

೧ ಆಸಕ್ತ. ೨ ಬಭಾಷೇ. ೩ ಕರ್ಣಮೂಲೇ. ೪ ಆಲಿಂಗನಂ. ೫ ಕಾಮಿನ್ಯಶ್ಚ ಕಾಮಿನಶ್ಚ ಕಾಮಿನಸ್ತೇಷಾಂ ವೃಂದೇಷು. ೬ ಈಷದರುಣ.

**ಶರತಲ್ಪಗತಾನಲ್ಪಸುಖಸಂಕಲ್ಪತಃ ಪರೇ ।**
**ನಾಭ್ಯನಂದನ್ಪ್ರಿಯಾತಲ್ಪಮನಲ್ಪೇಚ್ಛಾ ಭಟೋತ್ತಮಾಃ ॥ ೨೧೧ ॥**

ಬೇರೆ ಕೆಲವರು ಅಧಿಕ ಇಚ್ಛೆಯುಳ್ಳವರಾದ ಉತ್ತಮ ಭಟರು ಶರಶಯನದಲ್ಲಿ ಅಧಿಕಸುಖವುಂಟಾಗುವುದೆಂಬ ಸಂಕಲ್ಪದಿಂದ ಪ್ರಿಯಕಾಂತೆಯ ಶಯನವನ್ನು ಇಚ್ಛಿಸಲಿಲ್ಲ.

**[೧]ಸ್ವಕಾಮಿನೀಭಿರಾರಬ್ಧವೀರಾಲಾಪೈರ್ಭಟೈಃ ಪರೈಃ ।**
**ವಿಭಾವರೀ [೨]ವಿಭಾತಾಪಿ ಸಾ ನಾ[೩]ಜ್ಞೇತಿ ರಣೋನ್ಮುಖೈಃ ॥ ೨೧೨ ॥**

ತಮ್ಮ ಸ್ತ್ರೀಯರೊಡನೆ ವೀರಭಾಷಣಗಳನ್ನಾರಂಭಿಸಿದವರೂ ಯುದ್ಧಾಭಿಮುಖರೂ ಆದ ಬೇರೆ ಭಟರಿಂದ ಆ ರಾತ್ರಿಯು ಪ್ರಭಾತವಾದರೂ ತಿಳಿಯಲ್ಪಡಲಿಲ್ಲವು. ರಾತ್ರಿಯು ಕಳೆದುದನ್ನು ತಿಳಿಯಲಿಲ್ಲವೆಂದು ಭಾವವು.

**ಕೇಚಿದ್ರಣರಸಾಸಕ್ತಮನಸೋಪಿ ಪುರಃ ಸ್ಥಿತಮ್ ।**
**ಕಾಂತಾಸಂಗರಸಂ ಸ್ವೈರಂ ಭೇಜುಃ [೪]ಸಮರಸಾ ಭಟಾಃ ॥ ೨೧೩ ॥**

ಯುದ್ಧರಸ(ವೀರರಸ)ದಲ್ಲಿ ಆಸಕ್ತವಾದ ಮನಸ್ಸುಳ್ಳವರಾದರೂ ಪತಿಪತ್ನೀ ಸಮಾನಪ್ರೀತಿಯುಳ್ಳವರಾದ ಕೆಲವರು ಭಟರು ಮುಂದುಗಡೆಯಲ್ಲಿರುವ ಪತ್ನಿಯ ಸಮಾಗಮದ ಪ್ರೀತಿಯನ್ನು ಯಥೇಚ್ಛವಾಗಿ ಪಡೆದರು. ಕೆಲವರು ಯುದ್ಧಪ್ರೀತಿಯೂ ಪತ್ನೀಸಂಭೋಗಪ್ರೀತಿಯೂ ಉಳ್ಳವರಾದರೆಂದು ಭಾವವು.

**[೫]ಪ್ರಹಾರಕರ್ಕಶೋ ದಷ್ಟದಶನಚ್ಛದನಿಷ್ಠುರಃ ।**
**ರತಾರಂಭೋ ರಣಾರಂಭನಿರ್ವಿಶೇಷೋ ನ್ಯಷೇವಿ ತೈಃ ॥ ೨೧೪ ॥**

ಖಡ್ಗಗಳ ಹೊಡೆತದಿಂದ ಕಠೋರವೂ ತುಟಿಗಳ ಕಚ್ಚುವಿಕೆಯಿಂದ ಕಠಿನವೂ ಆದ ಯುದ್ಧದ ಆರಂಭಕ್ಕೆ ಸಮಾನವೂ ಉಗುರುಗಳ ಹೊಡೆತದಿಂದ ಕಠೋರವೂ ತುಟಿಗಳ ಕಚ್ಚುವಿಕೆಯಿಂದ ಕಠಿನವೂ ಆದ ರತಿಕ್ರೀಡೆಯ ಆರಂಭವು ಆ ಭಟರಿಂದ ಮಾಡಲ್ಪಟ್ಟಿತು.

**ರತಾನುವರ್ತನೈರ್ಗಾಢಪರಿರಂಭೈ[೬]ರ್ಮುಖಾರ್ಪಣೈಃ ।**
**ಮನಾಂಸಿ ಕಾಮಿನಾಂ ಜಹ್ರುಃ ಕಾಮಿನ್ಯಸ್ತಾಃ ಸ್ಮರಾತುರಾಃ ॥ ೨೧೫ ॥**

ಕಾಮಾತುರರಾದ ಆ ಕಾಮಿನಿಯರು ರತಿಕ್ರೀಡೆಯನ್ನನುಸರಿಸಿದ ಗಾಢಾಲಿಂಗನಗಳಿಂದಲೂ ಚುಂಬನಗಳಿಂದಲೂ ಕಾಮುಕರ ಮನಸ್ಸುಗಳನ್ನು ಅಪಹರಿಸಿದರು.

**ದೃಗರ್ಧವೀಕ್ಷಿತೈಃ ಸಾಂತರ್ಹಾಸೈ[೭]ರ್ಮನ್ಮನಜಲ್ಪಿತೈಃ ।**
**[೮]ಅಕಾಂಡರುಷಿತೈಶ್ಚಂಡೈ[೯]ರ್ವಿವೃತ್ತೈ[೧೦]ರಸಮಭ್ರುಭಿಃ ॥ ೨೧೬ ॥**

**ತಾಸಾ[೧೧]ಮಕೃತಕಸ್ನೇಹಗರ್ಭೈಃ ಕೃತಕಕೈತವೈಃ ।**
**ರಸಿಕೋಭೂದ್ರತಾರಂಭಃ ಸಂಭೋಗಾಂತೇಷು ಕಾಮಿನಾಮ್ ॥ ೨೧೭ ॥**

ರತಿಕ್ರೀಡೆಯ ಆರಂಭವು ಕಾಮುಕರಿಗೆ ಸಂಭೋಗದ ಕೊನೆಯಲ್ಲಿ ಆ ಸ್ತ್ರೀಯರ ಸಹಜ ಪ್ರೇಮಗರ್ಭಿತವಾದ ಕೃತ್ರಿಮಕಪಟಗಳಿಂದಲೂ ಕಡೆಗಣ್ಣುನೋಟಗಳಿಂದಲೂ ಹಾಸ್ಯಗರ್ಭಿತವಾದ ಅವ್ಯಕ್ತಭಾಷಣಗಳಿಂದಲೂ ಅವ್ಯಕ್ತವಾದ ಕೋಪಗಳಿಂದಲೂ ಭಯಂಕರವಾಗಿ ತೆರೆಯಲ್ಪಟ್ಟ ವಿಷಮವಾದ ಹುಬ್ಬುಗಳಿಂದಲೂ ರಸಿಕವಾಗಿದ್ದಿತು. ರತಿಕ್ರೀಡೆಯ ಆರಂಭವು ಬಹುಪ್ರಿಯಕರವಾಗಿ ತೋರಿತೆಂದು ಭಾವವು.

**ತೇಷಾಂ ನಿಧುವನಾರಂಭಮತಿಭೂಮಿಗತಂ ತದಾ ।**
**ಸಂದ್ರಷ್ಟುಮಸಹಂತೀವ [೧೨]ಪರ್ಯವರ್ತತ ಸಾ ನಿಶಾ ॥ ೨೧೮ ॥**

೧ ಸ್ವಸ್ತ್ರೀಭಿಃ ಸಹ. ೨ ಪ್ರಭಾತಾಪಿ. ೩ ನ ಜ್ಞಾತಾ. ೪ ಸಮಾನರಸಾಃ. ೫ ನಖಪ್ರಹಾರ, ಪಕ್ಷೇ ಖಡ್ಗಪ್ರಹಾರ. ೬ ಚುಂಬನೈಃ. ೭ ಅವ್ಯಕ್ತಭಾಷಣೈಃ. ೮ ಅವ್ಯಕ್ತ. ೯ ಪ್ರಕಾಶೈಃ. ೧೦ ವಿಷಮ. ೧೧ ಸಹಜ. ೧೨ ಪ್ರಲಯಂ ಗತಾ.

ಆಗ ಆ ಕಾಮುಕರ ಮೇರೆಮೀರಿದ ಸುರತಕ್ರೀಡೆಯ ಆರಂಭವನ್ನು ನೋಡು ವುದಕ್ಕೆ ಸಹನವಿಲ್ಲದುದಾಗಿಯೋ ಎಂಬಂತೆ ಆ ರಾತ್ರಿಯು ನಷ್ಟವಾಯಿತು. ರಾತ್ರಿಯು ಕಳೆಯಿತೆಂದರ್ಥವು.

**ಅಲಂಬತ ಚಿರಂ ರಂತ್ವಾ ದಂಪತೀ ತಾಮ್ಯಥೋ ಯುವಾಮ್ ।**
**ಲಂಬಿತೇಂದುಮುಖೀ ತಸ್ಥಾವಿತೀವಾಪರದಿಗ್ವಧೂಃ ॥ ೨೧೯ ॥**

''ದಂಪತಿಗಳೇ ! ನೀವಿಬ್ಬರು ಬಹುಕಾಲದವರೆಗೆ ರಮಿಸಿದುದು ಸಾಕು. ಬಳಲಿರುತ್ತೀರಿ, ಅಯ್ಯೋ !'' ಹೀಗೆ ಹೇಳುತ್ತಾಳೋ ಎಂಬಂತೆ ಪಶ್ಚಿಮ ದಿಕ್ಕೆಂಬ ಸ್ತ್ರೀಯು ಜೋಲುಬಿದ್ದಿರುವ ಚಂದ್ರನೆಂಬ ಮುಖವುಳ್ಳವಳಾಗಿ ನಿಂತಿದ್ದಳು.

**[೧]ವಿಘಟಯ್ಯ ರಥಾಂಗಾನಾಂ ಮಿಥುನಾನಿ ಮಿಥೋಂಶುಮಾನ್ ।**
**ತಾಪೇನ [೨]ತತ್ಕೃತೇನೇವ [೩]ಪರಿತೋಭ್ಯುದಿಯಾಯ ಸಃ ॥ ೨೨೦ ॥**

ಆ ಪ್ರಸಿದ್ಧನಾದ ಸೂರ್ಯನು ಚಕ್ರವಾಕಪಕ್ಷಿಗಳ ದಂಪತಿಯುಗ್ಮಗಳನ್ನು ಪರಸ್ಪರವಾಗಿ ಅಗಲಿಸಿ ಅವುಗಳ ಅಗಲಿಕೆಯಿಂದುಂಟಾದ ಸಂತಾಪದಿಂದ ವ್ಯಾಪ್ತನಾಗಿ ದ್ದಾನೋ ಎಂಬಂತೆ ಉದಯಿಸಿದನು.

**ತಾವದಾಸೀದ್ದಿನಾರಂಭೋ ಗತಂ ನೈಶಂ ತಮೋ ಲಯಮ್ ।**
**ಸಹಸ್ರಾಂಶುರ್ದಿಶಂ ಪ್ರಾಚೀಂ [೪]ಪರಿರೇಭೇ ಕರೋತ್ಕರೈಃ ॥ ೨೨೧ ॥**

ಅಷ್ಟರಲ್ಲಿ ದಿನದ ಆರಂಭವಾಯಿತು. ರಾತ್ರಿಯ ಸಂಬಂಧವಾದ ಕತ್ತಲೆಯು ನಾಶವನ್ನು ಹೊಂದಿತು. ಸೂರ್ಯನು ಕಿರಣಸಮೂಹಗಳಿಂದ ಪೂರ್ವದಿಕ್ಕನ್ನು ಆಲಿಂಗಿಸಿದನು.

**ಕಿರಣೈಸ್ತರುಣೈರೇವ ತಮಃ ಶಾರ್ವರ[೫]ಮುದ್ಧೃತಮ್ ।**
**[೬]ತರಣೇಃ ಕರಣೀಯಂ ತು ದಿನಶ್ರೀ[೭]ಪರಿರಂಭಣಮ್ ॥ ೨೨೨ ॥**

ತರುಣವಾದ–ತೀಕ್ಷ್ಣವಲ್ಲದ ಕಿರಣಗಳಿಂದಲೇ ರಾತ್ರಿಯ ಸಂಬಂಧವಾದ ಕತ್ತಲೆಯು ನಾಶಮಾಡಲ್ಪಟ್ಟಿತು. ಸೂರ್ಯನಿಗಾದರೋ ದಿನಶ್ರೀಯ ಆಲಿಂಗನವು ಮಾಡತಕ್ಕ ಕೆಲಸವಾಗಿದ್ದಿತು.

**ಕೋಕಕಾಂತಾನುರಾಗೇಣ ಸಮಂ ಪದ್ಮಾಕರೇ ಶ್ರಿಯಮ್ ।**
**ಪುಷ್ಣನ್ನುಷ್ಣಾಂಶು[೮]ರುದ್ಯಚ್ಛ[೯]ನ್ನಮುಷ್ಣಾತ್ಕೌಮುದೀಂ ಶ್ರಿಯಮ್ ॥**

ಮೇಲಕ್ಕೆ ಹೋಗುತ್ತಿರುವ ಸೂರ್ಯನು ಚಕ್ರವಾಕಪಕ್ಷಿಗಳ ಅನುರಾಗದೊಡನೆ ಕಮಲಸರೋವರದಲ್ಲಿ ಶೋಭೆಯನ್ನು ಹೆಚ್ಚಿಸುವವನಾಗಿ ಕುಮುದಪುಷ್ಪ ಸಂಬಂಧವಾದ ಶೋಭೆಯನ್ನು ಅಪಹರಿಸಿದನು.

**ತಮಃಕವಾಟ[೧೦]ಮುದ್ಘಾಟ್ಯ ದಿಙ್ಮುಖಾನಿ ಪ್ರಕಾಶಯನ್ ।**
**ಜಗ[೧೧]ದುದ್ಘಾಟಿತಾಕ್ಷಂ ವಾ ವ್ಯಧಾದುಷ್ಣಕರಃ ಕರೈಃ ॥ ೨೨೪ ॥**

ಸೂರ್ಯನು ಕಿರಣಗಳಿಂದ ಕತ್ತಲೆಯೆಂಬ ಬಾಗಿಲನ್ನು ತೆರೆದು ದಿಙ್ಮುಖಗಳನ್ನು ಪ್ರಕಾಶಪಡಿಸಿ ಲೋಕವನ್ನು ತೆರೆಯಲ್ಪಟ್ಟ ನೇತ್ರವುಳ್ಳುದನ್ನಾಗಿ ಮಾಡಿದನು. ಲೋಕದ ಕಣ್ಣನ್ನು ತೆರೆಯಿಸಿದನೆಂದರ್ಥವು.

**[೧೨]ಪ್ರಾತಸ್ತರಾಮುಥೋತ್ಥಾಯ [೧೩]ಪದ್ಮಾಕರಪರಿಗ್ರಹಮ್ ।**
**ತನ್ವನ್ ಭಾನುಃ ಪ್ರತಾಪೇನ ಜಿಗೀಷೋರ್ವೃತ್ತ [೧೪]ಮನ್ವಗಾತ್ ॥**

ಅನಂತರದಲ್ಲಿ ಬಹು ಪ್ರಾತಃಕಾಲದಲ್ಲಿ ಎದ್ದು ಪದ್ಮಸರೋವರದ ಪರಿ ಗ್ರಹಣವನ್ನು ಮಾಡುವ ಸೂರ್ಯನು ತನ್ನ ಪ್ರತಾಪದಿಂದ ಜಯಿಸಲಿಚ್ಛಿಸುವವನ ನಡೆವಳಿಕೆಯನ್ನು ಅನುಸರಿಸಿದನು.

೧ ವಿಯೋಗಂಕೃತ್ವಾ. ೨ ವಿಘಟನಕೃತೇನ. ೩ ವ್ಯಾಪ್ತಃ. ೪ ಆಲಿಂಗನಂಚಕಾರ. ೫ ಅಪಹೃತಂ. ೬ ರವೇಃ. ೭ ಆಲಿಂಗನಂ. ೮ ಉದ್ಗಚ್ಛನ್. ೯ ಹರತಿ ಸ್ಮ. ೧೦ ವಿದಾರಯಿತ್ವಾ. ೧೧ ವಿವೃತನೇತ್ರಂ. ೧೨ ಅತಿಶಯಪ್ರಾತಃಕಾಲೇ. ೧೩ ಕಮಲಾಕರ. ೧೪ ಅನುಕರೋತಿ ಸ್ಮ.

**ಸುಕಂಠಾಃ ಪೇಠುರಿತ್ಯುಚ್ಚೈಃ [೧]ಪ್ರಭೋಃ [೨]ಪ್ರಾಬೋಧಿಕಾಸ್ತದಾ ।**
**ಸ್ವಯಂ ಪ್ರಬುದ್ಧಮ[೩]ಪ್ಯೇನಂ [೪]ಪ್ರಬೋಧೇನ [೫]ಯುಯುಕ್ಷವಃ ॥**

ಆಗ ಒಳ್ಳೆಯ ಕಂಠವುಳ್ಳವರೂ ಬಾಹುಬಲಿಸ್ವಾಮಿಯನ್ನು ಎಚ್ಚರಿಸುವ ಕೆಲಸ ದಲ್ಲಿ ಗೊತ್ತುಮಾಡಲ್ಪಟ್ಟಿದ್ದವರೂ ಆದ ಆ ಸ್ವಾಮಿಯ ಭೃತ್ಯರು ತಾನೇ ಎಚ್ಚರ ಗೊಂಡಿದ್ದರೂ ಈ ಬಾಹುಬಲಿಸ್ವಾಮಿಯನ್ನು ಎಚ್ಚರಿಕೆಯಿಂದ ಕೂಡಿದವನನ್ನಾಗಿ ಮಾಡಲಿಚ್ಛೆಯುಳ್ಳವರಾಗಿ ಮುಂದೆಹೇಳುವಂತೆ ಗಟ್ಟಿಯಾಗಿ ಪಠಿಸಿದರು.

**[೬]ಅಶಿಶಿರಕರೋ ಲೋಕಾನಂದೀ ಜನೈರಭಿನಂದಿತೋ**
**[೭]ಬಹುಮತಕರಸ್ತೇಜಸ್ತನ್ವನ್ನಿತೋಯಮುದೇಷ್ಯತಿ ।**
**ನೃವರ ಜಗತಾಮುದ್ಯೋತಾಯ ತ್ವಮ[೮]ಪ್ಯುದಯೋಚಿತಂ**
**ವಿಧಿ[೯]ಮನುಸರನ್ ಶಯ್ಯೋತ್ಸಂಗಂ ಜಹೀಹಿ ಮುದೇ ಶ್ರಿಯಃ ॥**

''ಎಲೈ ನರೋತ್ತಮನೆ ! ಇತ್ತಕಡೆಯಲ್ಲಿ ಲೋಕಕ್ಕೆ ಆನಂದವನ್ನುಂಟುಮಾಡು ವವನೂ ಜನರಿಂದ ಹೊಗಳಲ್ಪಟ್ಟವನೂ ಹೆಚ್ಚಾಗಿ ಬಲಿತಿರುವ ಕಿರಣಗಳುಳ್ಳವನೂ ತೇಜಸ್ಸನ್ನು ವಿಸ್ತರಿಸುವವನೂ ಆದ ಈ ಸೂರ್ಯನು ಲೋಕವನ್ನು ಬೆಳಗುವುದಕ್ಕೋಸ್ಕರ ಉದಯಿಸುತ್ತಿರುವನು. ನೀನೂ ಪ್ರಾತಃಕಾಲೋಚಿತವಾದ ವಿಧಿಯನ್ನು ಅನುಸರಿಸುವವನಾಗಿ ಲಕ್ಷ್ಮಿಯ ಸಂತೋಷಕ್ಕೋಸ್ಕರ ಹಾಸಿಗೆಯ ಮಧ್ಯಭಾಗವನ್ನು ಬಿಡು. (ಪ್ರಾತಃಕಾಲದಲ್ಲಿ ಸೋಮಾರಿತನವನ್ನು ಬಿಟ್ಟು ಹಾಸಿಗೆ ಯಿಂದ ಏಳುವುದು ಭಾಗ್ಯಲಕ್ಷ್ಮೀಸಮಾಗಮ ಸೂಚಕವೆಂದು ಇದರಿಂದ ಸೂಚಿತ ವಾಗುವುದು).

**[೧೦]ಕತರಕತಮೋ ನಾಕ್ರಾಂತಾ[೧೧]ಸ್ತೇ ಬಲೈರ್ಬಲಶಾಲಿನೋ**
**ಭುಜಬಲಮಿದಂ ಲೋಕಃ ಪ್ರಾಯೋ ನ ವೇತ್ತಿ ತವಾ[೧೨]ಲ್ಪಕಃ ।**
**ಭರತಪತಿನಾ ಸಾರ್ಧಂ ಯುದ್ಧೇ ಜಯಾಯ ಕೃತೋದ್ಯಮೋ**
**ನೃವರ ಭವಾನ್ [೧೩]ಭೂಯಾದ್ಭರ್ತಾ ನೃವೀರ ಜಯಶ್ರಿಯಃ ॥ ೨೨೮ ॥**

ಮನುಷ್ಯರಲ್ಲಿ ವೀರನಾದ ಎಲೈ ಮನುಷ್ಯಶ್ರೇಷ್ಠನೆ ! ಬಲಶಾಲಿಯಾದ ನಿನಗೆ ಯಾರು ಯಾರು ಆಕ್ರಮಿಸಲಿಲ್ಲ ? ನಿನ್ನ ಈ ಬಾಹುಬಲವನ್ನು ತಿಳಿವಳಿಕೆಯಿಲ್ಲದ ಜನವು ಪ್ರಾಯಶಃ ತಿಳಿಯುವುದಿಲ್ಲ. ಭರತೇಶ್ವರನೊಡನೆ ಯುದ್ಧದಲ್ಲಿ ಜಯ ಕ್ಕೋಸ್ಕರ ಪ್ರಯತ್ನಿಸಿದ ತಾವು ಜಯಶ್ರೀಗೆ ಪತಿಯಾಗಬೇಕು.

**ರವಿರವಿರಳಾನಶ್ರುವ್ರಾತಾನಿವಾ[೧೪]ಶ್ರಮಶಾಖಿನಾಂ**
**[೧೫]ತುಹಿನಕಣಿಕಾವ್ರಾತಾನಾಶು ಪ್ರಮೃಜ್ಯ ಕರೋತ್ಕರೈಃ ।**
**ಅಯಮುದಯತಿ ಪ್ರಾಪ್ತಾನಂದ್ಯೈರಿತೋಂಬುಜಿನೀವನೈ-**
**ರುದಯಸಮಯೇ [೧೬]ಪ್ರತ್ಯುದ್ಯಾತೋ ಧೃತಾರ್ಘಮಿವಾಂಬುಜೈಃ ॥**

ಇತ್ತಕಡೆಯಲ್ಲಿ ಈ ಸೂರ್ಯನು ಉದಯಗಿರಿಯ ಆಶ್ರಮವೃಕ್ಷಗಳ ದಟ್ಟವಾದ ಕಣ್ಣೀರಿನ ಸಮೂಹಗಳನ್ನೋಪಾದಿಯಲ್ಲಿ ಹಿಮದ ಕಣಗಳನ್ನು ಕಿರಣಸಮೂಹ ಗಳಿಂದ ಶೀಘ್ರವಾಗಿ ತೊಡೆದು ಉದಯಕಾಲದಲ್ಲಿ ಆನಂದವನ್ನು ಹೊಂದಿದ ತಾವರೆಯ ಬಳ್ಳಿಗಳ ಸಮೂಹಗಳಿಂದ ಕಮಲಗಳಿಂದ ಅರ್ಘ್ಯವೆತ್ತಲ್ಪಟ್ಟು ಇದಿ ರ್ಗೊಳ್ಳಲ್ಪಟ್ಟನೋ ಎಂಬಂತಿದ್ದನು.

**ಅಯಮನುಸರನ್ ಕೋಕಃ ಕಾಂತಾಂ ತಟಾಂತರಶಾಯಿನೀ-**
**ಮವಿರಲಗಲದ್ಬಾಷ್ಪವ್ಯಾಜಾದಿವೋತ್ಸೃಜತೀಂ ಶುಚಮ್ ।**
**ವಿಶತಿ ಬಿಸಿನೀಪತ್ರಚ್ಛನ್ನಾಂ ಸರೋಜಸರಸ್ತಟೀಂ**
**ಸರಸಿಜರಜಃಕೀರ್ಣೌ ಪಕ್ಷೌ ವಿಧೂಯ ಶನೈಃಶನೈಃ ॥ ೨೩೦ ॥**

ಚಕ್ರವಾಕಪಕ್ಷಿಯು ಬೇರೊಂದು ದಡದಲ್ಲಿ ಮಲಗಿರುವುದೂ ದಟ್ಟವಾಗಿ ಸುರಿಯುತ್ತಿರುವ ಕಣ್ಣೀರಿನ ನೆವದಿಂದ ಶೋಕವನ್ನು ಬಿಡುತ್ತಿದೆಯೋ

೧ ಭುಜಬಲಿಸ್ವಾಮಿನಃ. ೨ ಪ್ರಬೋಧೇ ನಿಯುಕ್ತಾಃ. ೩ ಭುಜಬಲಿಸ್ವಾಮಿನಂ. ೪ ಪ್ರಬೋಧನೇನ. ೫ ಯೋಕ್ತುಮಿಚ್ಛವಃ. ೬ ರವಿಃ. ೭ ಅಧಿಕಪುಷ್ಟಕಿರಣಃ. ೮ ಪ್ರಾಭಾತಿಕಂ. ೯ ಅನುಗಚ್ಛನ್. ೧೦ ಕೇಕೇ. ೧೧ ತವ. ೧೨ ಅಜ್ಞಃ. ೧೩ ವಲ್ಲಭೋ ಭವ. ೧೪ ಉದಯಗಿರ್ಯಾಶ್ರಮಶಾಖಿನಾಂ. ೧೫ ಹಿಮಕಣಾನ್. ೧೬ ಪ್ರತಿಗೃಹೀತಃ.

ಎಂಬಂತಿರುವುದೂ ಪತ್ನಿಯನ್ನು ಹಿಂಬಾಲಿಸುವುದಾಗಿ ಕಮಲಧೂಳಿಯಿಂದ ವ್ಯಾಪ್ತವಾದ ರೆಕ್ಕೆಗಳನ್ನು ಮೆಲ್ಲಮೆಲ್ಲನೆ ಕೊಡಹಿ ತಾವರೆಬಳ್ಳಿಯ ಎಲೆಗಳಿಂದ ವ್ಯಾಪ್ತವಾದ ಕಮಲಸರೋವರದ ದಡವನ್ನು ಪ್ರವೇಶಿಸುತ್ತದೆ.

**ಜರಠಬಿಸಿನೀಕಂದಚ್ಛಾಯಾಮುಷಸ್ತರಲಾಸ್ತ್ವಿಷ**
**ಸ್ತುಹಿನಕಿರಣೋ ದಿಕ್ಪರ್ಯಂತಾದಯಂ [೧]ಪ್ರತಿಸಂಹರನ್ ।**
**[೨]ಅನುಕುಮುದಿನೀಷಂಡಂ ತನ್ವನ್ಕರಾನಮೃತಶ್ಚ್ಯುತೋ**
**ದೃಢಯತಿ ಪರಿಷ್ವಂಗಾಸಂಗಂ ವಿಯೋಗಭಯಾದಿವ ॥ ೨೩೦ ॥**

ಹಣ್ಣಾದ ತಾವರೆಬಳ್ಳಿಯ ಗೆಡ್ಡೆಯ ಕಾಂತಿಯನ್ನಪಹರಿಸುವುವೂ (ಕಾಂತಿಯುಳ್ಳುವೂ) ಚಂಚಲವೂ ಆದ ಕಾಂತಿಗಳನ್ನು ದಿಕ್ಕುಗಳ ಕೊನೆಗಳಿಂದ ಸಂಕೋಚ ಮಾಡಿಕೊಳ್ಳುವವನೂ ಕುಮುದಲತೆಗಳ ಸಮೂಹವನ್ನು ಕುರಿತು ಅಮೃತವನ್ನು ಸೇಚನೆಮಾಡುವ ಕಿರಣಗಳನ್ನು ಪಸರಿಸುವವನೂ ಆದ ಈ ಚಂದ್ರನು ವಿಯೋಗದ ಭಯದಿಂದ ಆಲಿಂಗನೆಯ ಸಂಬಂಧವನ್ನು ದೃಢಪಡಿಸುತ್ತಾನೋ ಎಂಬಂತಿದ್ದನು. ವಿಯೋಗಭಯದಿಂದ ಕುಮುದಲತೆಗಳನ್ನು ಬಿಗಿದಪ್ಪಿಕೊಳ್ಳುವಂತಿದ್ದನೆಂದು ಭಾವವು.

**ತಿಮಿರಕರಿಣಾಂ ಯೂಥಂ ಭಿತ್ವಾ ತ[೩]ದಸೃಪರಿಪ್ಲುತಾ-**
**ಮಿವ ತನುಮಯಂ ಬಿಭ್ರಚ್ಛೋಣಾಂ ನಿಶಾಕರಕೇಸರೀ ।**
**ವನಮಿವ ನಭಃ ಕ್ರಾಂತ್ವಾಸ್ತಾದ್ರೇರ್ಗುಹಾಗಹನಾನ್ಯತಃ**
**ಶ್ರಯತಿ ನಿಯತಂ ನಿದ್ರಾಸಂಗಾ[೪]ದ್ವಿಜಿಹ್ಮಿತತಾರಕಃ ॥ ೨೩೧ ॥**

ಈ ಚಂದ್ರನೆಂಬ ಸಿಂಹವು ಕತ್ತಲೆಗಳೆಂಬ ಆನೆಗಳ ಸಮೂಹವನ್ನು ಸೀಳಿ ಅದರ ರಕ್ತದಿಂದ ಪ್ರಕ್ಷಾಲಿತವಾಗಿದೆಯೋ ಎಂಬಂತಿರುವ ಕೆಂಪಾದ ಶರೀರವನ್ನು ಧರಿಸಿರುವುದಾಗಿಯೂ ವನವನ್ನೋಪಾದಿಯಲ್ಲಿ ಆಕಾಶವನ್ನು ದಾಟಿ ನಿದ್ರೆಯ ಸಂಬಂಧದಿಂದ ಕಣ್ಣುಗುಡ್ಡೆಗಳನ್ನು, ನಕ್ಷತ್ರಗಳನ್ನು ವಕ್ರವಾಗಿ ಮಾಡುವುದಾಗಿಯೂ ಈ ಅಸ್ತ ಪರ್ವತದ ಗುಹೆಗಳುಳ್ಳ ವನಗಳನ್ನು ನಿಶ್ಚಯವಾಗಿಯೂ ಆಶ್ರಯಿಸುತ್ತದೆ. ಚಂದ್ರನು ಅಸ್ತಂಗತನಾಗುತ್ತಿದ್ದಾನೆಂದು ಭಾವವು.

**ಸರತಿ ಸರಸೀತೀರಂ ಹಂಸಃ ಸಸಾರಸಕೂಜಿತಂ**
**ಝಟಿತಿ [೫]ಘಟತೇ ಕೋಕದ್ವಂದ್ವಂ [೬]ವಿಶಾಪಮಿವಾಧುನಾ ।**
**[೭]ಪತತಿ [೮]ಪತತಾಂ ವೃಂದಂ ವಿಷ್ವಗ್ದ್ರುಮೇಷು [೯]ಕೃತಾರುತಂ**
**ಗತಮಿವ ಜಗ[೧೦]ತ್ಪ್ರತ್ಯಾಪತ್ತಿಂ [೧೧]ಸಮುದ್ಯತಿ [೧೨]ಭಾಸ್ವತಿ ॥ ೨೩೨ ॥**

ಸೂರ್ಯನು ಉದಯಿಸುತ್ತಿರಲು ಹಂಸಪಕ್ಷಿಯು ಸಾರಸ ಪಕ್ಷಿಗಳ ಕೂಗಿನೊಡನೆ ಕೂಡಿರುವ ಸರೋವರದ ದಡವನ್ನು ಹೊಂದುತ್ತದೆ. ಚಕ್ರವಾಕಪಕ್ಷಿಗಳ ಯುಗ್ಮವು, ಶಾಪವಿಮೋಚನೆಯನ್ನು ಹೊಂದಿತೋ ಎಂಬಂತೆ, ಈಗ ಶೀಘ್ರವಾಗಿ ಒಂದಕ್ಕೊಂದು ಸೇರುತ್ತದೆ. ಪಕ್ಷಿಗಳ ಸಮೂಹವು ಸುತ್ತಲೂ ಶಬ್ದವನ್ನು ಮಾಡುತ್ತ ಮರಗಳಲ್ಲಿ ಬೀಳುತ್ತದೆ. ಲೋಕವು ಪೂರ್ವಸ್ಥಿತಿಯನ್ನು ಹೊಂದಿತೋ ಎಂಬಂತಿರುತ್ತದೆ.

**[೧೩]ಉದಯಶಿಖರಿಗ್ರಾವಶ್ರೇಣೀಸರೋರುಹರಾಗಿಣೀ**
**ಗಗನಜಲಧೇರಾತನ್ವಾನಾ ಪ್ರವಾಲವನಶ್ರಿಯಮ್ ।**
**ದಿಗಿಭವದನೇ ಸಿಂದೂರಶ್ರೀರಲಕ್ತಕಪಾಟಲಾ**
**ಪ್ರಸರತಿ ತರಾಂ ಸಂಧ್ಯಾದೀಪ್ತಿರ್ದಿಗಾನನ[೧೪]ಮಂಡಿನೀ ॥ ೨೩೩ ॥**

ಉದಯಪರ್ವತದ ಕಲ್ಲುಗಳ ಸಾಲುಗಳಲ್ಲಿರುವ ನೆಲದಾವರೆಗಳ ಕೆಂಪು ಬಣ್ಣವುಳ್ಳುದೂ ಆಕಾಶವೆಂಬ ಸಮುದ್ರದ ಹವಳದ ವನದ ಶೋಭೆಯನ್ನು ವಿಸ್ತರಿಸುವುದೂ ದಿಗ್ಗಜಗಳ ಮುಖದಲ್ಲಿ ಸಿಂದೂರದ ಶೋಭೆಯುಳ್ಳುದೂ ಅಲತಿಗೆಯಂತೆ ಕೆಂಪಾಗಿರುವುದೂ ದಿಙ್ಮುಖಗಳನ್ನು ಅಲಂಕರಿಸುವುದೂ ಆದ ಸಂಧ್ಯಾಸಮಯದ ಕಾಂತಿಯು ಹೆಚ್ಚಾಗಿ ಹರಡುತ್ತಿದೆ.

**ಕಮಲ[೧]ಮಲಿನೀ ನಾಲಂ [೨]ವೇಷ್ಟುಂ ಬತ ಪ್ರವಿಕಸ್ವರಂ**
**ಗತಮರುಣತಾಂ ಬಾಲಾರ್ಕಸ್ಯ ಪ್ರಸಾರಿಭಿರಂಶುಭಿಃ ।**
**[೩]ಪರಿಗತಮಿವ ಪ್ರಾದುಷ್ಯದ್ಭಿಃ ಕೃಶಾನುರನಲಾರ್ಚಿಷಾಂ**
**[೪]ನಿಯತವಿಪದಂ ಧಿ[೫]ಗ್ಮೌಢ್ಯಮೂಢಿಂ ವಿವೇಕಪರಾಙ್ಮುಖೀಮ್ ॥ ೨೩೪ ॥**

ಹೆಣ್ಣುದುಂಬಿಯು ಚೆನ್ನಾಗಿ ಅರಳುತ್ತಿರುವುದೂ ಬಾಲಸೂರ್ಯನ ಪಸರಿಸುತ್ತಿರುವ ಕಿರಣಗಳಿಂದ ಕೆಂಪು ಬಣ್ಣವನ್ನು ಹೊಂದಿರುವುದೂ ಬೆಂಕಿಯ ಜ್ವಾಲೆಗಳ ಹೊರಹೊಮ್ಮುತ್ತಿರುವ ಕಿಡಿಗಳಿಂದ ವ್ಯಾಪ್ತವಾಗಿದೆಯೋ ಎಂಬಂತಿರುವುದೂ ಆದ ತಾವರೆಯನ್ನು ಪ್ರವೇಶಿಸುವುದಕ್ಕೋಸ್ಕರ ಸಮರ್ಥವಾಗಲಿಲ್ಲ. ಅಯ್ಯೋ ಕಷ್ಟ ! ನಿಶ್ಚಿತವಾದ ವಿಪತ್ತಿಯುಳ್ಳುದೂ ವಿವೇಕಶೂನ್ಯವೂ ಆದ ಮೂಢತನವನ್ನು ಸುಡು !

**ಉಪವನತರೂನಾಧುನ್ವಾನಾ ವಿಲೋಲಿತಷಟ್ಪದಾಃ**
**ಕೃತಪರಿಚಯಾ ವೀಚೀಚಕ್ರೈಃ ಸರಸ್ಸು ಸರೋರುಹಾಮ್ ।**
**[೬]ರತಿಪರಿಮಲಾನಾಕರ್ಷಂತಃ ಸರೋಜರಜೋ[೭]ಜಡಾಃ**
**ಪ್ರತಿದಿಶಮಮೀ ಮಂದಂ ವಾಂತಿ [೮]ಪ್ರಗೇತನಮಾರುತಾಃ ॥ ೨೩೫ ॥**

ಉದ್ಯಾನದ ಮರಗಳನ್ನು ಕುಲುಕುತ್ತಿರುವುವೂ ದುಂಬಿಗಳು ಹಾರಾಡುವಂತೆ ಮಾಡಿರುವುವೂ ಕಮಲಸರೋವರಗಳಲ್ಲಿ ಅಲೆಗಳ ಸಮೂಹಗಳಿಂದ ಮಾಡಲ್ಪಟ್ಟ ಪರಿಚಯವುಳ್ಳುವೂ ರತಿಕ್ರೀಡೆಯ ಸಮಯದಲ್ಲಿ ದಂಪತಿಗಳು ಅನುಭವಿಸಿದ ಕಸ್ತೂರಿ ಕರ್ಪೂರ ಮೊದಲಾದುವುಗಳ ಪರಿಮಳಗಳನ್ನು ತರುತ್ತಿರುವುವೂ ಕಮಲಧೂಳಿಯಿಂದ ಜಡ–ಭಾರವಾಗಿರುವುವೂ ಆದ ಈ ಪ್ರಾತಃಕಾಲದ ಗಾಳಿಗಳು ಪ್ರತಿಯೊಂದು ದಿಕ್ಕಿನಲ್ಲಿಯೂ ಮಂದವಾಗಿ ಬೀಸುತ್ತಿವೆ.

**ನೃಪವರ [೯]ಜಿನಭರ್ತುರ್ಮಂಗಲೈ[೧೦]ರೇಭಿರಿಷ್ಟೈಃ**
**ಪ್ರಕಟಿತಜಯಘೋಷೈಸ್ತ್ವಂ ವಿಬುಧ್ಯಸ್ವ ಭೂಯಃ ।**
**ಭವತಿ ನಿಖಿಲವಿಘ್ನಪ್ರಪ್ರಶಾಂತಿರ್ಯತಸ್ತೇ**
**ರಣಶಿರಸಿ ಜಯಶ್ರೀಕಾಮಿನೀಕಾಮುಕಸ್ಯ ॥ ೨೩೬ ॥**

ಎಲೈ ರಾಜಶ್ರೇಷ್ಠನೆ ! ನೀನು ಪುನಃ ಜಯಘೋಷಗಳನ್ನು ಪ್ರಕಟಿಸಿರುವುವೂ ಇಷ್ಟವೂ ಆದ ಜಿನೇಶ್ವರನ ಈ ಮಂಗಲಗಳಿಂದ ಎಚ್ಚರಗೊಳ್ಳುವವನಾಗು. ಇದರಿಂದ ರಣಾಗ್ರದಲ್ಲಿ ಜಯಲಕ್ಷ್ಮಿಯೆಂಬ ಕಾಮಿನಿಯಲ್ಲಿ ಇಚ್ಛೆಯುಳ್ಳವನಾದ ನಿನಗೆ ಸಮಸ್ತವಿಘ್ನಗಳ ಶಾಂತಿಯು ಆಗುವುದು.

**ಜಯತಿ ದಿವಿಜನಾಥೈಃ ಪ್ರಾಪ್ತಪೂಜರ್ದ್ಧಿರರ್ಹನ್**
**ಧುತದುರಿತಪರಾಗೋ [೧೧]ವೀತರಾಗೋಪರಾಗಃ ।**
**ಕೃತನತಿ[೧೨]ಶತಯಜ್ವಪ್ರಜ್ವಲನ್ಮೌಲಿರತ್ನ-**
**[೧೩]ಚ್ಛುರಿತರುಚಿರರೋಚಿರ್ಮಂಜರೀಪಿಂಜರಾಂಘ್ರಿಃ ॥ ೨೩೭ ॥**

ದೇವೇಂದ್ರರಿಂದ ಪೂಜಾವೈಭವವನ್ನು ಹೊಂದಿದವನೂ ಪಾಪವೆಂಬ ಧೂಳನ್ನು ಕೊಡಹಿದವನೂ ರಾಗದ್ವೇಷಗಳಿಲ್ಲದವನೂ ನಮಸ್ಕಾರವನ್ನು ಮಾಡಿದ ದೇವೇಂದ್ರನ ಪ್ರಕಾಶಮಾನವಾದ ಕಿರೀಟದ ರತ್ನಗಳಿಂದ ವ್ಯಾಪ್ತವೂ ಮನೋಹರವೂ ಆದ ಕಿರಣಗಳ ಗೊಂಚಲಿನಿಂದ ಹೊಂಬಣ್ಣವಾದ ಕಾಲುಗಳುಳ್ಳವನೂ ಆದ ಅರ್ಹತ್ಪರಮೇಶ್ವರನು ಜಯಶೀಲನಾಗಿರುತ್ತಾನೆ.

**ಜಯತಿ ಜಯವಿಲಾಸಃ ಸೂಚ್ಯತೇ ಯಸ್ಯ ಪೌಷ್ಪೈ-**
**ರಲಿಕುಲರುತಗರ್ಭೈರ್ಗರ್ವಿತಾನಂಗಮುಕ್ತೈಃ ।**
**[೧೪]ಅನುಪದಯುಗಮಸ್ತ್ರೈರ್ಭಂಗಶೋಕಾದಿವಾವಿ**
**ಷ್ಕೃತಕರುಣನಿನಾದೈಃ ಸೋಽಯಮಾದ್ಯೋ ಜಿನೇಂದ್ರಃ ॥ ೨೩೯ ॥**

೧ ಸಂಕೋಚಯನ್. ೨ ಕುಮುದಿನೀವನಂ ಪ್ರತಿ. ೩ ರಕ್ತಪ್ರಕ್ಷಾಲಿತಾಂ. ೪ ವಕ್ರಿತತಾರಕಃ. ೫ ಕರೋತಿ. ೬ ವಿಗತಶಾಪಂ. ೭ ಆಶ್ರಯತಿ. ೮ ಪಕ್ಷಿಣಾಂ. ೯ ಕೃತಸಮಂತಾದಾಕ್ರೋಶಮಿತ್ಯರ್ಥಃ. ೧೦ ಪೂರ್ವಸ್ಥಿತಿಂ. ೧೧ ಉದಯತಿ ಸತಿ. ೧೨ ಆದಿತ್ಯೇ. ೧೩ ಉದಯಾಚಲಗ್ರಾವಶ್ರೇಣೀಷು ಸ್ಥಲಕಮಲವತೀ. ೧೪ ಮಂಡಯತೀತಿ.

೧ ಭ್ರಮರೀ. ೨ ಪ್ರವೇಶಾಯ. ೩ ವ್ಯಾಪ್ತಂ. ೪ ನಿಶ್ಚಿತವಿಪತ್ತಿಂ. ೫ ಮೂಢತಾಂ. ೬ ಸುರತಸಮಯೇ ದಂಪತ್ಯನುಭುಕ್ತಕಸ್ತೂರಿಕರ್ಪೂರಾದಿಪರಿಮಲಾನ್. ೭ ಮಂದಾಃ. ೮ ಪ್ರಾತಃಕಾಲೇಭವವಾಯವಃ. ೯ ಆದಿಜಿನೇಂದ್ರಸ್ಯ. ೧೦ ವಕ್ಷ್ಯಮಾಣೈಃ. ೧೧ ವೀತರಾಗದ್ವೇಷಃ. ೧೨ ಇಂದ್ರ. ೧೩ ವ್ಯಾಪ್ತ. ೧೪ ಪದಯುಗಸಮೀಪೇ.

ದುಂಬಿಗಳ ಸಮೂಹದ ಶಬ್ದವನ್ನೊಳಗೊಂಡಿರುವುವೂ ಗರ್ವಿಷ್ಠನಾದ ಕಾಮನಿಂದ ಬಿಡಲ್ಪಟ್ಟುವೂ ಅಪಜಯದ ಶೋಕದಿಂದ ಪಾದಯುಗ್ಮದ ಸಮೀಪದಲ್ಲಿ ಕರುಣಧ್ವನಿಯನ್ನು ಪ್ರಕಟಿಸುತ್ತವೆಯೋ ಎಂಬಂತಿರುವುವೂ ಆದ ಪುಷ್ಪಬಾಣಗಳಿಂದ ಯಾವನ ಜಯಶೀಲವಾದ ವಿಲಾಸವು ಸೂಚಿಸಲ್ಪಡುತ್ತದೆಯೋ ಅಂತಹ ಈ ಆದಿಜಿನೇಶ್ವರನು ಜಯಶೀಲನಾಗಿದ್ದಾನೆ.

**ಜಯತಿ ಜಿತಮನೋಭೂ[೧]ರ್ಭೂರಿಧಾಮಾ ಸ್ವಯಂಭೂ-**
**ರ್ಜಿನಪತಿರಪರಾಗಃ ಕ್ಷಾಲಿತಾಗಃಪರಾಗಃ ।**
**ಸುರಮುಕುಟ[೨]ವಿಟಂಕೋದೂಢಪಾದಾಂಬುಜಶ್ರೀ-**
**[೩]ರ್ಜಗದಜಗದಗಾರಪ್ರಾಂತವಿಶ್ರಾಂತಬೋಧಃ ॥ ೨೪೦ ॥**

ಮನ್ಮಥನನ್ನು ಜಯಿಸಿದವನೂ ಹೆಚ್ಚಾದ ತೇಜಸ್ಸುಳ್ಳವನೂ ತನ್ನಿಂದ ತಾನೇ ಪರಮಾತ್ಮಸ್ವರೂಪವನ್ನು ಹೊಂದಿದವನೂ ರಾಗವಿಲ್ಲದವನೂ ಪಾಪವೆಂಬ ಧೂಳನ್ನು ತೊಳೆದವನೂ ದೇವತೆಗಳ ಕಿರೀಟಗಳೆಂಬ ಕಪೋತ(ಬಿಸಿಲುಮಾಳಿಗೆ)ದಲ್ಲಿ ಧರಿಸಲ್ಪಟ್ಟಿರುವ ಪಾದಕಮಲದ ಶೋಭೆಯುಳ್ಳವನೂ ಲೋಕಾಲೋಕವೆಂಬ ಮನೆಯ ಕೊನೆಯಲ್ಲಿ ವಿಶ್ರಾಂತವಾದ ಅಂದರೆ ಲೋಕಾಲೋಕವನ್ನು ತಿಳಿಯುವ ಜ್ಞಾನವುಳ್ಳವನೂ ಆದ ಜಿನೇಶ್ವರನು ಜಯಶೀಲನಾಗಿರುತ್ತಾನೆ.

**ಜಯತಿ ಮದನಬಾಣೈರಕ್ಷತಾತ್ಮಾಪಿ ಯೋ[೪]ಧಾ-**
**ತ್ತ್ರಿಭುವನಜಯಲಕ್ಷ್ಮೀಕಾಮಿನೀಂ ವಕ್ಷಸಿ ಸ್ವೇ ।**
**ಸ್ವಯಮವೃತ ಚ ಮುಕ್ತಿಪ್ರೇಯಸೀ ಯಂ [೫]ವಿರೂಪಾ-**
**ಪ್ಯ[೬]ನವಮಸುಖತಾತಿಂ ತನ್ವತೀ ಸೋಽಯಮರ್ಹನ್ ॥ ೨೪೧ ॥**

ಯಾವನು ಕಾಮಬಾಣಗಳಿಂದ ತಾನು ಗಾಯವಡೆಯದಿರುವವನಾದರೂ ತನ್ನ ಎದೆಯಲ್ಲಿ ಮೂರುಲೋಕದ ಜಯಲಕ್ಷ್ಮಿಯೆಂಬ ಕಾಮಿನಿಯನ್ನು ಧರಿಸಿದನೋ ಅಮೂರ್ತಳಾಗಿದ್ದರೂ ಉತ್ತಮಸುಖಪರಂಪರೆಯನ್ನುಂಟುಮಾಡುವವಳಾದ ಮುಕ್ತಿಕಾಂತೆಯು ಯಾವನನ್ನು ತಾನಾಗಿ ವರಿಸಿದಳೋ ಆ ಪ್ರಸಿದ್ಧವಾದ ಈ ಅರ್ಹತ್ಪರಮೇಶ್ವರನು ಜಯಶೀಲನಾಗಿದ್ದಾನೆ.

**ಜಯತಿ ಸಮರಭೇರೀಭೈರವಾರಾವಭೀಮಂ**
**ಬಲಮರಚಿ ನ ಕೂಜಚ್ಚಂಡ[೭]ಕೋದಂಡಕಾಂಡಮ್ ।**
**ಭ್ರುಕುಟಿಕುಟಿಲಮಾಸ್ಯಂ ಯೇನ ನಾಕಾರಿ ವೋಚ್ಚೈ-**
**ರ್ಮನಸಿಜರಿಪುಘಾತೇ ಸೋಽಯಮಾದ್ಯೋ ಜಿನೇಶಃ ॥ ೨೪೨ ॥**

ಯಾವನಿಂದ ಕಾಮನೆಂಬ ವೈರಿಯ ನಾಶದಲ್ಲಿ ರಣಭೇರಿಯ ಭಯಂಕರವಾದ ಧ್ವನಿಯಿಂದ ಭಯಂಕರವೂ ಉಗ್ರವಾಗಿ ಧ್ವನಿಮಾಡುತ್ತಿರುವುದೂ ಆದ ಧನುರ್ದಂಡವುಳ್ಳ ಸೈನ್ಯವು ರಚಿಸಲ್ಪಡಲಿಲ್ಲವೋ ಶ್ರೇಷ್ಠವಾದ ಮುಖವೂ ಹುಬ್ಬುಗಂಟುಳ್ಳುದಾಗಿ ಮಾಡಲ್ಪಡಲಿಲ್ಲವೋ ಆ ಪ್ರಸಿದ್ಧನಾದ ಈ ಆದಿಜಿನೇಶ್ವರನು ಜಯಶೀಲನಾಗಿದ್ದಾನೆ.

**ಸ ಜಯತಿ ಜಿನರಾಜೋ [೮]ದುರ್ವಿಭಾವಪ್ರಭಾವಃ**
**ಪ್ರಭುರಭಿಭವಿತುಂ ಯಂ [೯]ನಾಶಕನ್ಮಾರವೀರಃ ।**
**ದಿವಿಜವಿಜಯ[೧೦]ದೂರಾರೂಢಗರ್ವೋಽಪಿ ಗರ್ವಂ**
**ನ ಹೃದಿ ಹೃದಿಶಯೋಧಾ[೧೧]ದ್ಯತ್ರ [೧೨]ಕುಂಠಾಸ್ತ್ರವೀರ್ಯಃ ॥ ೨೪೩ ॥**

ಸ್ವರ್ಗಿಕ–ದೇವತೆಗಳ ಜಯದಲ್ಲಿ ಹೆಚ್ಚಾಗಿ ತಲೆಯೇರಿದ ಗರ್ವವುಳ್ಳವನಾದರೂ ಕಾಮನೆಂಬ ವೀರನು ಯಾವನನ್ನು ತಿರಸ್ಕರಿಸುವುದಕ್ಕೆ ಶಕ್ತನಾಗಲಿಲ್ಲವೋ ಯಾವನಲ್ಲಿ ಕುಂಠಿತವಾದ ಅಸ್ತ್ರದ ಶಕ್ತಿಯುಳ್ಳ ಮನಸಿಜನು ಹೃದಯದಲ್ಲಿ ಗರ್ವವನ್ನು ಧರಿಸಲಿಲ್ಲವೋ ಊಹಿಸುವುದಕ್ಕೆ ಕಠಿನವಾದ ಮಹಿಮೆಯುಳ್ಳ ಪ್ರಭುವಾದ ಅಂತಹ ಜಿನೇಶ್ವರನು ಜಯಶೀಲನಾಗಿದ್ದಾನೆ.

೧ ಬಹಲತೇಜಾಃ. ೨ ವಲಭಿ. ೩ ಲೋಕಾಲೋಕ. ೪ ಧರತಿ ಸ್ಮ. ೫ ಅಮೂರ್ತಾ ಕುರೂಪಾಪೀತಿ ಧ್ವನಿಃ. ೬ ಉತ್ತಮಸುಖವಿಸ್ತರಂ. ೭ ಧನುಃ. ೮ ಅಚಿಂತ್ಯ. ೯ ಸಮರ್ಥೋ ನಾಭೂತ್. ೧೦ ಅತ್ಯರ್ಥಂ. ೧೧ ಶ್ರೀ ವೃಷಭಜಿನರಾಜೇ. ೧೨ ಮಂದ.

**ಜಯತಿ ತರುರಶೋಕೋ ದುಂದುಭಿಃ ಪುಷ್ಪವರ್ಷಂ**
**ಚಮರರುಹಸಮೇತಂ ವಿಷ್ಟರಂ ಸೈಂಹ[೧]ಮುದ್ಧಮ್ ।**
**[೨]ವಚನಮಸಮಮುಚ್ಚೈರಾತಪತ್ರಂ ಚ [೩]ತೇಜ-**
**ಸ್ತ್ರಿಭುವನಜಯಚಿಹ್ನಂ ಯಸ್ಯ [೪]ಸಾರ್ವೋ ಜಿನೋಽಸೌ ॥ ೨೪೪ ॥**

ಅಶೋಕವೃಕ್ಷವೂ ದೇವದುಂದುಂಭಿಯೂ ಪುಷ್ಪವೃಷ್ಟಿಯೂ ಚಾಮರಸಹಿತವೂ ಶ್ರೇಷ್ಠವೂ ಆದ ಸಿಂಹಪೀಠವೂ ಅಸದೃಶವಾದ ದಿವ್ಯಧ್ವನಿಯೂ ಉನ್ನತವಾದ ಬೆಳ್ಗೊಡೆಯೂ ಭಾಮಂಡಲವೂ ಯಾವನ ತ್ರಿಲೋಕವಿಜಯದ ಗುರುತುಗಳಾಗಿವೆಯೋ ಅಂತಹ ಈ ಸಮಸ್ತಪ್ರಾಣಿಗಳಿಗೆ ಹಿತಕರನಾದ ಜಿನೇಶ್ವರನು ಜಯಶೀಲನಾಗಿದ್ದಾನೆ.

**ಜಯತಿ ಜನನತಾಪಚ್ಛೇದಿ ಯಸ್ಯ ಕ್ರಮಾಬ್ಜಂ**
**ವಿಪುಲಫಲದಮಾರಾನ್ನಮ್ರನಾಕೀಂದ್ರಭೃಂಗಮ್ ।**
**ಸಮುಪನತಜನಾನಾಂ ಪ್ರೀಣನಂ ಕಲ್ಪವೃಕ್ಷ-**
**ಸ್ಥಿತಿಮಕೃತ ಮಹಿಮ್ನಾ ಸೋಽವತಾತ್ತೀರ್ಥಕೃದ್ವಃ ॥ ೨೪೫ ॥**

ಜನ್ಮಸಂತಾಪವನ್ನು ನಾಶಮಾಡುವುದೂ ವಿಶೇಷವಾದ ಫಲವನ್ನು ಕೊಡುವುದೂ ಸಮೀಪದಲ್ಲಿ ನಮಸ್ಕರಿಸಿದ ದೇವೇಂದ್ರರೆಂಬ ದುಂಬಿಗಳುಳ್ಳುದೂ ಆದ ಯಾವನ ಪಾದಕಮಲವು ಜಯಶೀಲವಾಗಿದೆಯೋ ಮತ್ತು ಸಮೀಪಕ್ಕೆ ಬಂದ ಜನರಿಗೆ ಸಂತೋಷವನ್ನುಂಟುಮಾಡುವುದಾಗಿ ಕಲ್ಪವೃಕ್ಷದ ಸ್ಥಿತಿಯನ್ನು ಮಾಡಿತೋ ಅಂತಹ ವೃಷಭತೀರ್ಥಂಕರನು ತನ್ನ ಮಹಿಮೆಯಿಂದ ನಿಮ್ಮನ್ನು ರಕ್ಷಿಸಲಿ.

**ನೃವರ ಭರತರಾಜೋಽಪ್ಯೂರ್ಜಿತಸ್ಯಾಸ್ಯ ಯುಷ್ಮ-**
**ದ್ಭುಜಪರಿಘಯುಗಸ್ಯ ಪ್ರಾಪ್ನುಯಾನ್ನೈವ [೫]ಕಕ್ಷ್ಯಾಮ್ ।**
**ಭುಜಬಲಮಿದಮಾಸ್ತಾಂ ದೃಷ್ಟಿಮಾತ್ರೇಽಪಿ ಕಸ್ತೇ**
**ರಣನಿಕಷಗತಸ್ಯ ಸ್ಥಾತುಮೀಶಃ ಕ್ಷಿತೀಶಃ ॥ ೨೪೬ ॥**

ಎಲೈ ಮನುಷ್ಯಶ್ರೇಷ್ಠನೆ! ಭರತರಾಜನು ಕೂಡ ಉನ್ನತವಾದ ಈ ನಿಮ್ಮ ಬಾಹುವೆಂಬ ಅಗಳಿಯ ಸಮಾನತೆಯನ್ನು ಹೊಂದಲೇ ಇಲ್ಲ. ನಿಮ್ಮ ಈ ಬಾಹುಬಲವು ಹಾಗಿರಲಿ. ಯುದ್ಧವೆಂಬ ಒರೆಗಲ್ಲನ್ನು ಹೊಂದಿದ ನಿನ್ನ ದೃಷ್ಟಿಮಾತ್ರದಲ್ಲಿಯೂ ನಿಲ್ಲಲು ಸಮರ್ಥನಾದ ರಾಜನು ಯಾವನಿದ್ದಾನೆ? ಬಾಹುಬಲಿಕುಮಾರನು ದೃಷ್ಟಿಸಿ ನೋಡಿದರೆ ಅದನ್ನು ತಡೆದುಕೊಳ್ಳಲು ಸಮರ್ಥನಾದ ರಾಜನೂ ಇಲ್ಲವೆಂದರ್ಥ.

**ತದಲ[೬]ಮಧಿಪ ಕಾಲಕ್ಷೇಪಯೋಗೇಣ ನಿದ್ರಾಂ**
**ಜಹಿಹಿ ಮಹತಿ ಕೃತ್ಯೇ [೭]ಜಾಗರೂಕಸ್ತ್ವ[೮]ಮೇಧಿ ।**
**ಸಪದಿ ಚ ಜಯಲಕ್ಷ್ಮೀಂ ಪ್ರಾಪ್ಯ ಭೂಯೋಽಪಿ ದೇವಂ**
**ಜಿನ[೯]ಮವನಮ ಭಕ್ತ್ಯಾ [೧೦]ಶಾಸಿತಾರಂ ಜಯಾಯ ॥ ೨೪೭ ॥**

ಎಲೈಭುಜಬಲಿಸ್ವಾಮಿಯೆ! ಆದುದರಿಂದ ಕಾಲವನ್ನು ಕಳೆಯುವುದರಿಂದ ಸಾಕು. ನಿದ್ರೆಯನ್ನು ಬಿಡು. ನೀನು ದೊಡ್ಡಕೆಲಸದಲ್ಲಿ ಜಾಗರೂಕನಾಗಿರು. ಶೀಘ್ರವಾಗಿ ಜಯಶ್ರೀಯನ್ನು ಹೊಂದಿ ಜಯಕ್ಕೋಸ್ಕರ ಉಪದೇಶಕನಾದ ಜಿನದೇವನನ್ನು ಮತ್ತೊಮ್ಮೆ ಭಕ್ತಿಯಿಂದ ನಮಸ್ಕರಿಸು.

**ಇತಿ ಸಮುಚಿತಮುಚ್ಚೈ[೧೧]ರುಚ್ಚಾವಚೈರ್ಜಯಮಂಗಲ್ಯೈಃ**
**ಸುಘಟಿತಪದೈರ್ಭೂಯೋಽಮೀಭಿರ್ಜಯಾಯ ವಿಬೋಧಿತಃ ।**
**ಶಯನಮಮುಚನ್ನಿದ್ರಾಪಾಯಾತ್ಸ ಪಾರ್ಥಿವಕುಂಜರಃ**
**ಸುರಗಜ ಇವೋತ್ಸಂಗಂ ಗಂಗಾಪ್ರತೀರಭುವಃ ಶನೈಃ ॥ ೨೪೮ ॥**

ಈ ಪ್ರಕಾರವಾಗಿ ಉಚಿತವೂ ಶ್ರೇಷ್ಠವೂ ನಾನಾಪ್ರಕಾರವೂ ಚೆನ್ನಾಗಿ ಹೊಂದಿಸಲ್ಪಟ್ಟ ಪದಗಳುಳ್ಳುವೂ ಆದ ಈ ಜಯಮಂಗಲಗಳಿಂದ ಪುನಃ ಜಯನಿಮಿತ್ತವಾಗಿ

೧ ಪ್ರಶಸ್ತಂ. ೨ ದಿವ್ಯಧ್ವನಿಃ. ೩ ಪ್ರಭಾಮಂಡಲಂ. ೪ ಸರ್ವಹಿತಃ. ೫ ಸಮಾನತಾಂ. ೬ ಭೋ ಭುಜಬಲಿಸ್ವಾಮಿನ್. ೭ ಜಾಗರಣಶೀಲಃ. ೮ ಭವ. ೯ ನಮಸ್ಕುರು. ೧೦ ಶಿಕ್ಷಕಂ. ೧೧ ನಾನಾಪ್ರಕಾರೈಃ.

ಎಚ್ಚರಿಸಲ್ಪಟ್ಟವನಾದ ಆ ರಾಜಶ್ರೇಷ್ಠನು, ಐರಾವತಗಜವು ಗಂಗಾನದೀತೀರ ಭೂಮಿಯ ಮಧ್ಯಪ್ರದೇಶವನ್ನು ಬಿಡುವಂತೆ, ನಿದ್ರೆಯಿಂದೆಚ್ಚತ್ತು ಮೆಲ್ಲನೆ ಹಾಸಿಗೆಯನ್ನು ಬಿಟ್ಟನು.

**ಜಯಕರಿಘಟಾಬಂಧೈ ರುಂಧನ್ ದಿಶೋ ಮದವಿಹ್ವಲೈ-**
**ರ್ಬಲಪರಿವೃಢೈರಾರೂಢಶ್ರೀರುದೂಢಪರಾಕ್ರಮಃ ।**
**ನೃಪಕತಿಪಯೈರಾರಾದೇತ್ಯ ಪ್ರಣಮ್ಯ ದಿದೃಕ್ಷಿತೋ-**
**ಭುಜಬಲಿಯುವಾ ಭೇಜೇ ಸೈನ್ಯೈರ್ಭುವಂ ಸಮರೋಚಿತಾಮ್ ॥**

ಮದೋನ್ಮತ್ತಗಳೂ ಜಯಶೀಲಗಳೂ ಆದ ಆನೆಗಳ ಸಮೂಹಗಳಿಂದ ದಿಕ್ಕುಗಳನ್ನು ವ್ಯಾಪಿಸುವವನೂ ಸೇನಾನಾಯಕರಿಂದ ಹೆಚ್ಚಿಸಲ್ಪಟ್ಟ ಶೋಭೆಯುಳ್ಳವನೂ ಅಧಿಕವಾದ ಪರಾಕ್ರಮವುಳ್ಳವನೂ ಕೆಲವು ರಾಜರುಗಳಿಂದ ಸಮೀಪಕ್ಕೆ ಬಂದು ನಮಸ್ಕರಿಸಿ ನೋಡಲ್ಪಟ್ಟವನೂ ಯುವಕನೂ ಆದ ಬಾಹುಬಲಿಕುಮಾರನು ಸೈನ್ಯಗಳೊಡನೆ ಯುದ್ಧೋಚಿತವಾದ ಭೂಮಿಯನ್ನು ಹೊಂದಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಬಾಹುಬಲಿಕುಮಾರರಣೋದ್ಯೋಗವರ್ಣನಂ ನಾಮ ಪಂಚತ್ರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕಭಾವದೀಪಿಕಾ ವ್ಯಾಖ್ಯೆಯೊಳ್'' ಬಾಹುಬಲಿಕುಮಾರನ ಯುದ್ಧೋದ್ಯೋಗವರ್ಣನವೆಂಬ ಮೂವತ್ತೈದನೆಯ ಪರ್ವವು ಸಂಪೂರ್ಣವಾದುದು.

---

# ಅಥ ಷಟ್ತ್ರಿಂಶತ್ತಮಂ ಪರ್ವ

**ಅಥ ದೂತವಚಶ್ಚಂಡಮರುದಾಘಾತಘೂರ್ಣಿತಃ ।**
**ಪ್ರಚಚಾಲ ಬಲಾಂಭೋಧಿ[೧]ರ್ಜಿಷ್ಣೋರಾರುಧ್ಯ [೨]ರೋದಸೀ ॥ ೧ ॥**

ಅನಂತರದಲ್ಲಿ ದೂತನ ವಚನವೆಂಬ ಬಿರುಗಾಳಿಯ ಹೊಡೆತದಿಂದ ತೂಗಡಿಸಲ್ಪಟ್ಟ ಭರತನ ಸೈನ್ಯವೆಂಬ ಸಮುದ್ರವು ಆಕಾಶಭೂಮಿಗಳನ್ನು ವ್ಯಾಪಿಸಿ ನಡೆಯಿತು.

**[೩]ಸಾಂಗ್ರಾಮಿಕ್ಯೋ ಮಹಾಭೇರ್ಯಸ್ತದಾ ಧೀರಂ ಪ್ರದಧ್ವನುಃ ।**
**ಯದ್ಧ್ವಾನೈಃ ಸಾಧ್ವಸಂ ಭೇಜುಃ [೪]ಖಡ್ಗವ್ಯಗ್ರಾ [೫]ನಭಶ್ಚರಾಃ ॥ ೨ ॥**

ಆಗ ಯುದ್ಧನಿಮಿತ್ತವಾದ ದೊಡ್ಡದಾದ ಭೇರಿಗಳು ಗಂಭೀರವಾಗಿ ಶಬ್ದ ಮಾಡಿದುವು. ಆ ಶಬ್ದಗಳಿಂದ ಯುದ್ಧಸ್ವೀಕಾರವಾಯಿತೆಂದು ವ್ಯಾಕುಲಚಿತ್ತರಾದ ದೇವತೆಗಳೂ ವಿದ್ಯಾಧರರೂ ಭಯವನ್ನು ಹೊಂದಿದರು.

**ಬಲಾನಿ [೬]ಪ್ರವಿಭಕ್ತಾನಿ ನಿಧೀಶಸ್ಯ ವಿನಿರ್ಯಯುಃ ।**
**ಪುರಃ ಪಾದಾತಮಶ್ವೀಯ[೭]ಮಾರಾದಾರಾಚ್ಚ ಹಾಸ್ತಿಕಮ್ ॥ ೩ ॥**

ಭರತೇಶ್ವರನ ವಿಭಾಗಿಸಲ್ಪಟ್ಟ ಸೈನ್ಯಗಳು, ಮುಂದುಗಡೆಯಲ್ಲಿ ಕಾಲಾಳುಗಳ ಬಲವೂ ಅದರ ಸಮೀಪದಲ್ಲಿ ಕುದುರೆಗಳ ಸಮೂಹವೂ ಅದರ ಸಮೀಪದಲ್ಲಿ ಆನೆಗಳ ಸಮೂಹವೂ ಹೊರಟುವು.

**[೮]ರಥಕಡ್ಯಾಪರಿಕ್ಷೇಪೋ ಬಲಸ್ಯೋ[೯]ಭಯಪಕ್ಷಯೋಃ ।**
**ಅಗ್ರತಃ ಪೃಷ್ಠತಶ್ಚಾಸೀ[೧೦]ದೂರ್ಧ್ವಂ ಚ ಖಚರಾಮರಾಃ ॥ ೪ ॥**

ರಥಸಮೂಹಗಳ ಆವರಣವು ಸೈನ್ಯದ ಉಭಯಪಾರ್ಶ್ವಗಳಲ್ಲಿಯೂ ಮುಂದುಗಡೆಯಲ್ಲಿಯೂ ಹಿಂದುಗಡೆಯಲ್ಲಿಯೂ ಹೊರಟುವು. ವಿದ್ಯಾಧರರೂ ದೇವತೆಗಳೂ ಮೇಲೆ–ಆಕಾಶದಲ್ಲಿ ಹೊರಟರು.

**ಷಡಂಗಬಲಸಾಮಗ್ರ್ಯಾ ಸಂಪನ್ನಃ ಪಾರ್ಥಿವೈ [೧೧]ರಮಾ ।**
**ಪ್ರತಸ್ಥೇ ಭರತಾಧೀಶೋ ನಿಜಾನುಜಜಿಗೀಷಯಾ ॥ ೫ ॥**

ಷಡಂಗಸೈನ್ಯಸಂಪತ್ತಿನಿಂದ ಕೂಡಿದ ಭರತೇಶ್ವರನು ತನ್ನ ತಮ್ಮನನ್ನು ಜಯಿಸಬೇಕೆಂಬ ಇಚ್ಛೆಯಿಂದ ರಾಜರುಗಳೊಡನೆ ಹೊರಟನು.

**ಮಹಾನ್ಗಜ[೧೨]ಘಟಾಬಂಧೋ ರೇಜೇ ಸಜಯಕೇತನಃ ।**
**ಗಿರೀಣಾಮಿವ [೧೩]ಸಂಘಾತಃ ಸಂಚಾರೀ ಸಹ[೧೪]ಶಾಖಿಭಿಃ ॥ ೬ ॥**

ದೊಡ್ಡದಾದ ಆನೆಗಳ ಸಮೂಹವು ಜಯಪತಾಕೆಗಳೊಡನೆ ಕೂಡಿದುದಾಗಿ ಮರಗಳೊಡನೆ ಸಂಚರಿಸುವ ಪರ್ವತಗಳ ಸಮೂಹವೋ ಎಂಬಂತೆ, ಶೋಭಿಸಿತು.

**[೧೫]ಶ್ಚ್ಯೋತನ್ಮದಜಲಾ[೧೬]ಸಾರಸಿಕ್ತಭೂಭಿರ್ಮದದ್ವಿಪೈಃ ।**
**ಪ್ರತಸ್ಥೇ ರುದ್ಧದಿಕ್ಚಕ್ರೈಃ ಶೈಲೈರಿವ ಸನಿರ್ಝರೈಃ ॥ ೭ ॥**

ಗಿರಿನದೀಪ್ರವಾಹಗಳೊಡನೆ ಕೂಡಿರುವ ಪರ್ವತಗಳೋಪಾದಿಯಲ್ಲಿರುವುವೂ ದಿಕ್ಕುಗಳನ್ನು ವ್ಯಾಪಿಸಿರುವುವೂ ಸುರಿಯುತ್ತಿರುವ ಮದಜಲದ ಧಾರೆಗಳಿಂದ ಸೇಚನೆಮಾಡಲ್ಪಟ್ಟ ಭೂಮಿಗಳುಳ್ಳುವೂ ಆದ ಮದಗಜಗಳೊಡನೆ ಭರತೇಶ್ವರನು ಹೊರಟನು.

೧ ಭರತಸ್ಯ. ೨ ದ್ಯಾವಾಪೃಥಿವ್ಯೌ. ೩ ಯುದ್ಧಹೇತವಃ. ೪ ಯುದ್ಧಸ್ವೀಕಾರವ್ಯಾಕುಲಾಃ. ೫ ದೇವವಿದ್ಯಾಧರಾಃ. ೬ ಪ್ರವಿಭಾಜಿತಾನಿ. ೭ ಸಮೀಪೇ. ೮ ಪರಿವೃತಿಃ. ೯ ಉಭಯಪಾರ್ಶ್ವಯೋಃ. ೧೦ ಆಕಾಶೇ. ೧೧ ಸಹ. ೧೨ ಸಮೂಹಃ. ೧೩ ಸಮೂಹಃ. ೧೪ ವೃಕ್ಷೈಃ. ೧೫ ಸ್ರವತ್. ೧೬ ವೇಗವದ್ವರ್ಷ.

**ಜಯಸ್ತಂಬೇರಮಾ ರೇಜುಸ್ತುಂಗಾಃ [೧]ಶೃಂಗಾರಿತಾಂಗಕಾಃ ।**
**ಸಾಂದ್ರಸಂಧ್ಯಾತಪಾಕ್ರಾಂತಾಶ್ಚಲಂತ ಇವ ಭೂಧರಾಃ ॥ ೮ ॥**

ಎತ್ತರವೂ ಸಿಂದೂರದಿಂದ ಶೃಂಗರಿಸಲ್ಪಟ್ಟ ದೇಹವುಳ್ಳುವೂ ಜಯಶಾಲಿಗಳೂ ಆದ ಆನೆಗಳು, ದಟ್ಟವಾದ ಸಂಜೆಯ ಬಿಸಿಲಿನಿಂದ ವ್ಯಾಪ್ತವೂ ಚಲಿಸುತ್ತಿರುವುವೂ ಆದ ಬೆಟ್ಟಗಳೋ ಎಂಬಂತೆ, ಶೋಭಿಸಿದುವು.

**ಚಮೂಮತಂಗಜಾ ರೇಜುಃ [೨]ಸಜ್ಜಾಃ ಸಜಯಕೇತನಾಃ ।**
**ಕುಲಶೈಲಾ ಇವಾಯಾತಾಃ ಪ್ರಭೋಃ [೩]ಸ್ವಬಲದರ್ಶನೇ ॥ ೯ ॥**

ಪ್ರಭುವಿನ ಸನ್ನದ್ಧಗಳಾದ ಸೇನೆಯ ಆನೆಗಳು, ತಮ್ಮ ಬಲವನ್ನು ನೋಡುವುದಕ್ಕೋಸ್ಕರ ಬಂದಿರುವುವೂ ಜಯಧ್ವಜಗಳೊಡನೆ ಕೂಡಿರುವುವೂ ಆದ ಕುಲಪರ್ವತಗಳೋ ಎಂಬಂತೆ, ಶೋಭಿಸಿದುವು.

**ಗಜಸ್ಕಂಧಗತಾ ರೇಜು[೪]ರ್ದೂರ್ಗತಾ ವಿಧೃತಾಂಕುಶಾಃ ।**
**ಪ್ರದೀಪ್ತೋ[೫]ದ್ಭಟನೇಪಥ್ಯಾ ದರ್ಪಾಃ [೬]ಸಂಪಿಂಡಿತಾ ಇವ ॥ ೧೦ ॥**

ಮುದ್ದೆಮಾಡಲ್ಪಟ್ಟಿರುವ ಅಹಂಕಾರಗಳೋ ಎಂಬಂತಿರುವವರೂ ಪ್ರಕಾಶಮಾನವಾದ ವೀರರಸಾಲಂಕಾರವುಳ್ಳವರೂ ಅಂಕುಶಗಳನ್ನು ಹಿಡಿದಿರುವವರೂ ಆದ ಮಾವಟಿಗರು ಆನೆಗಳ ಭುಜಗಳನ್ನೇರಿದವರಾಗಿ ಶೋಭಿಸಿದರು.

**[೭]ಕೌಕ್ಷೇಯಕೈ[೮]ರ್ನಿಶಾತೋಗ್ರಧಾರಾಗ್ರೈಃ [೯]ಸಾದಿನೋ ಬಭುಃ ।**
**ಮೂರ್ತೀಭೂಯ ಭುಜೋಪಾಗ್ರಲಗ್ನೈ[೧೦]ರ್ವಾ ಸ್ವೈಃ ಪರಾಕ್ರಮೈಃ ॥**

ಮಾವಟಿಗರು ಆಕಾರವಾಗಿ ಭುಜಗಳ ತುದಿಯಲ್ಲಿ ಸಂಬಂಧಿಸಿರುವ ತಮ್ಮ ಪರಾಕ್ರಮಗಳಿಂದಲೋಪಾದಿಯಲ್ಲಿ ಮಸೆಯಲ್ಪಟ್ಟ ಹರಿತವಾದ ಧಾರೆಯ ತುದಿಗಳುಳ್ಳ ಖಡ್ಗಗಳಿಂದ ಶೋಭಿಸಿದರು.

**ಧನ್ವಿನಃ ಶರನಾರಾಚಸಂಧೃತೇಷುಧಯೋ ಬಭುಃ ।**
**ವನಕ್ಷ್ಮಾಜಾ ಮಹಾಶಾಖಾಃ ಕೋಟರಸ್ಥೈರಿವಾಹಿಭಿಃ ॥ ೧೨ ॥**

ದೊಡ್ಡ ಕೊಂಬೆಗಳುಳ್ಳ ವನವೃಕ್ಷಗಳು ಪೊಟರೆಗಳಲ್ಲಿರುವ ಸರ್ಪಗಳಿಂದ ಶೋಭಿಸುವಂತೆ ಬಾಣಗಳೂ ವಿಶೇಷಬಾಣಗಳೂ ತುಂಬಿರುವ ಬತ್ತಳಿಕೆಗಳುಳ್ಳ ಧನುರ್ಧಾರಿಗಳು ಶೋಭಿಸಿದರು.

**ರಥಿನೋ ರಥಕಡ್ಯಾಸು ಸಂಭೃತೋಚಿತ[೧೧]ಹೇತಯಃ ।**
**[೧೨]ಸಂಗ್ರಾಮವಾರ್ಧಿತರಣೇ ಪ್ರಸ್ಥಿತಾ ನಾವಿಕಾ ಇವ ॥ ೧೩ ॥**

ರಥಗಳ ಸಮೂಹಗಳಲ್ಲಿ ಖಡ್ಗವೇ ಮೊದಲಾದ ಉಚಿತವಾದ ಆಯುಧಗಳನ್ನು ತುಂಬಿರುವ ರಥಿಕರು, ಯುದ್ಧವೆಂಬ ಸಮುದ್ರವನ್ನು ದಾಟುವುದಕ್ಕಾಗಿ ಹೊರಟ ನಾವಿಕರೋ ಎಂಬಂತೆ, ಹೊರಟರು.

**ಭಟಾ [೧೩]ಹಸ್ತ್ಯುರಸಂ ಭೇಜುಃ ಸಶಿರಸ್ತ್ರ[೧೪]ತನುತ್ರಕಾಃ ।**
**ಸಮುತ್ಖಾತನಿಶಾತಾಸಿಪಾಣಯಃ [೧೫]ಪದರಕ್ಷಣೇ ॥ ೧೪ ॥**

೧ ಸಿಂದೂರೇಣ ಶೃಂಗಾರಿತಾಂಗಕಾಃ. ೨ ಸನ್ನದ್ಧಾಃ, ಧುರಂಧರಾ ಇತ್ಯರ್ಥಃ. ೩ ನಿಜಬಲದರ್ಶನಾರ್ಥಂ. ೪ ಹಸ್ತಿಪಕಾಃ. ೫ ವೀರರಸಾಲಂಕಾರಾಃ. ೬ ಪಿಂಡೀಕೃತಾ ಇವ. ೭ ಖಡ್ಗೈಃ. ೮ ನಿಶಿತ. ೯ ಅಶ್ವಾರೋಹಾಃ. ೧೦ ಇವ. ೧೧ ಖಡ್ಗಾದ್ಯಾಯುಧಾಃ. ೧೨ ಯುದ್ಧಾಬ್ಧಿಪ್ರೋತ್ತರಣಾರ್ಥಂ. ೧೩ ಹಸ್ತಿಮುಖ್ಯಂ. ೧೪ ಕವಚ. ೧೫ ಗಜಪಾದರಕ್ಷಣಾರ್ಥಂ.

ತಲೆಗಳಲ್ಲಿ ಕುಲಾವಿಗಳನ್ನೂ ಶರೀರಗಳಲ್ಲಿ ಕವಚಗಳನ್ನೂ ಧರಿಸಿರುವವರೂ ಹರಿತವಾದ ಖಡ್ಗಗಳನ್ನು ಕೈಗಳಲ್ಲಿ ಮೇಲಕ್ಕೆ ಎತ್ತಿ ಹಿಡಿದಿರುವವರೂ ಆದ ಭಟರು ಆನೆಗಳ ಕಾಲುಗಳನ್ನು ರಕ್ಷಿಸುವುದಕ್ಕಾಗಿ ಮುಖ್ಯವಾದ (ಮುಂಗಡೆಯಲ್ಲಿರುವ) ಆನೆಯನ್ನು ಸೇರಿದರು.

**[1]ಪುಸ್ಫುರುಃ ಸ್ಫುರದಸ್ತ್ರೌಘಾ ಭಟಾಃ [2]ಸಂದಂಶಿತಾಃ ಪರೇ ।**
**[3]ಔತ್ಪಾತಿಕಾ ಇವಾನೀಲಾಃ ಸೋಲ್ಕಾ ಮೇಘಾಃ ಸಮುತ್ಥಿತಾಃ ॥ ೧೫ ॥**

ಹೊಳೆಯುತ್ತಿರುವ ಅಸ್ತ್ರಗಳ ಸಮೂಹಗಳುಳ್ಳವರೂ ಕವಚಗಳನ್ನು ತೊಟ್ಟಿರುವವರೂ ಆದ ಬೇರೆ ಕೆಲವು ಮಂದಿ ವೀರಭಟರು, ಉತ್ಪಾತಕ್ಕೆ ಕಾರಣಗಳೂ ನೀಲವರ್ಣವುಳ್ಳವೂ ನಕ್ಷತ್ರಪತನಗಳುಳ್ಳವೂ ಮೇಲೆ ಹಬ್ಬಿರುವುವೂ ಆದ ಮೇಘಗಳೋ ಎಂಬಂತೆ ಹೊಳೆಯುತ್ತಿದ್ದರು.

**ಕರವಾಲಂ ಕರಾಲಾಗ್ರಂ ಕರೇ ಕೃತ್ವಾ ಭಟೋಽಪರಃ ।**
**ಪಶ್ಯನ್ಮುಖರಸಂ ತಸ್ಮಿನ್ ಸ್ವಶೌರ್ಯಂ [4]ಪರಿಜಜ್ಞಿವಾನ್ ॥ ೧೬ ॥**

ಬೇರೊಬ್ಬ ವೀರಭಟನು ಹರಿತವಾದ ಧಾರೆಯುಳ್ಳ ಖಡ್ಗವನ್ನು ಕೈಯಲ್ಲಿ ಹಿಡಿದು ಅದರಲ್ಲಿ ತನ್ನ ಮುಖದ ವೀರರಸವನ್ನು ನೋಡಿ ತನ್ನ ಪರಾಕ್ರಮವನ್ನು ತಿಳಿದುಕೊಂಡನು.

**ಕರಾಗ್ರವಿಧೃತಂ ಖಡ್ಗಂ ತುಲಯನ್ಕೋಽಪ್ಯಭಾದ್ಭಟಃ ।**
**[5]ಪ್ರಮಿಮಿತ್ಸುರಿವಾ[6]ನೇನ ಸ್ವಾಮಿಸತ್ಕಾರಗೌರವಮ್ ॥ ೧೭ ॥**

ಯಾವನೋ ಒಬ್ಬ ಭಟನು ತುದಿಗೈಯಲ್ಲಿ ಧರಿಸಿದ ಖಡ್ಗವನ್ನು ತೂಗುವವನಾಗಿ ತನಗೆ ಯಜಮಾನನು ಮಾಡಿದ ಸತ್ಕಾರದ ಭಾರವನ್ನು ಈ ಖಡ್ಗದೊಡನೆ ಅಳತೆಮಾಡಲಿಚ್ಛಿಸುತ್ತಾನೋ ಎಂಬಂತೆ ಶೋಭಿಸಿದನು.

**ಮಹಾಮುಕುಟಬದ್ಧಾನಾಂ [7]ಸಾಧನಾನಿ ಪ್ರತಸ್ಥಿರೇ ।**
**ಪಾದಾತಹಾಸ್ತಿಕಾಶ್ವೀಯರಥಕಡ್ಯಾ[8]ಪರಿಚ್ಛದೈಃ ॥ ೧೮ ॥**

ಮಹಾಮುಕುಟಬದ್ಧರಾದ ರಾಜರುಗಳ ಸೈನ್ಯಗಳು ಕಾಲಾಳುಗಳು ಆನೆಗಳ ಸಮೂಹ ಕುದುರೆಗಳಸಮೂಹ ರಥಗಳಸಮೂಹ ಈ ಸಾಮಗ್ರಿಗಳೊಡನೆ ಹೊರಟುವು.

**ಬಭುರ್ಮುಕುಟಬದ್ಧಾಸ್ತೇ ರತ್ನಾಂಶೂದಗ್ರಮೌಲಯಃ ।**
**ಸಲೀಲಾ ಲೋಕಪಾಲಾನಾ[9]ಮಂಶಾ ಭುವಮಿವಾಗತಾಃ ॥ ೧೯ ॥**

ರತ್ನಕಿರಣಗಳಿಂದ ಉನ್ನತವಾದ ಕಿರೀಟಗಳುಳ್ಳವರೂ ಲೀಲೆಯಿಂದಿರುವವರೂ ಆದ ಆ ಮುಕುಟಬದ್ಧರಾದ ರಾಜರುಗಳು, ಭೂಮಿಗೆ ಬಂದಿರುವ ಲೋಕಪಾಲಕರುಗಳ ಅಂಶಗಳೋ ಎಂಬಂತೆ, ಶೋಭಿಸುತ್ತಿದ್ದರು.

**ಪರಿವೇಷ್ಟ್ಯ [10]ನಿರಾಯಂತ ಪಾರ್ಥಿವಾಃ ಪೃಥಿವೀಶ್ವರಮ್ ।**
**ದೂರಾತ್ಸ್ವಬಲಸಾಮಗ್ರೀಂ ದರ್ಶಯಂತೋ ಯಥಾಯಥಮ್ ॥ ೨೦ ॥**

ರಾಜರುಗಳು ದೂರದಿಂದ ತಮ್ಮ ಸೈನ್ಯಸಾಮಗ್ರಿಯನ್ನು ಇದ್ದಹಾಗೆಯೇ ದೊರೆಗೆ ತೋರಿಸುವವರಾಗಿ ಆ ಭರತೇಶ್ವರನನ್ನು ಆವರಿಸಿಕೊಂಡು ಹೊರಟರು.

**[11]ಪ್ರತ್ಯಗ್ರಸಮರಾರಂಭಸಂಶ್ರವೋದ್ಭ್ರಾಂತಚೇತಸಃ ।**
**[12]ಭಟೀರಾಶ್ವಾಸಯಾಮಾಸುರ್ಭಟಾಃ [13]ಪ್ರತ್ಯಾಯ್ಯ[14]ಧೀರಿತ್ಯೈಃ ॥ ೨೧ ॥**

೧ ಸ್ಫುರಂತಿ ಸ್ಮ. ೨ ಕವಚಿತಾಃ. ೩ ಉತ್ಪಾತಹೇತವಃ. ೪ ಬುಬುಧೇ. ೫ ಪ್ರಮಾತುಮಿಚ್ಛುಃ. ೬ ಖಡ್ಗೇನಸಹ. ೭ ಬಲಾನಿ. ೮ ಪರಿಕರೈಃ. ೯ ಕೇಚಿಲ್ಲೋಕಪಾಲಾ ಇತ್ಯರ್ಥಃ. ೧೦ ನಿರ್ಯಯುಃ. ೧೧ ನೂತನಸಮರಾರಂಭಸಂಶ್ರವಣಾತ್ ಉದ್ಭ್ರಾಂತಂ ಚೇತೋ ಯಾಸಾಂ ತಾಃ. ೧೨ ಭಟಯೋಷಿತಃ. ೧೩ ವಿಶ್ವಾಸ್ಯ. ೧೪ ಧೀರವಚನೈಃ.

ವೀರಭಟರು ನೂತನವಾದ ಯುದ್ಧಾರಂಭವನ್ನು ಕೇಳಿ ಮನಸ್ಸಿನಲ್ಲಿ ಭೀತರಾದ ತಮ್ಮ–ಭಟಸ್ತ್ರೀಯರನ್ನು ನಂಬಿಸಿ ಧೈರ್ಯವಚನಗಳಿಂದ ಸಮಾಧಾನಪಡಿಸಿದರು.

**ಭೂರೇಣವಸ್ತದಾಶ್ವೀಯಖುರೋದ್ಧೂತಾಃ [1]ಖಲಂಘಿನಃ ।**
**ಕ್ಷಣವಿಘ್ನಿತ[2]ಸಂಪ್ರೇಕ್ಷಾಃ ಪ್ರಚಕ್ರುರಮರಾಂಗನಾಃ ॥ ೨೨ ॥**

ಆಗ ಕುದುರೆಗಳ ಸಮೂಹದ ಗೊರಸುಗಳಿಂದ ಹಾರಿಸಲ್ಪಟ್ಟುವೂ ಆಕಾಶಕ್ಕೆ ಹಾರುತ್ತಿರುವುವೂ ಆದ ಭೂಮಿಯ ಧೂಳುಗಳು ದೇವಸ್ತ್ರೀಯರನ್ನು ಒಂದು ಕ್ಷಣಕಾಲದವರೆಗೆ ವಿಘ್ನಮಾಡಲ್ಪಟ್ಟ ನೋಟವುಳ್ಳವರನ್ನಾಗಿ ಮಾಡಿದುವು. ದೇವಸ್ತ್ರೀಯರ ನೋಟಕ್ಕೆ ಒಂದು ಕ್ಷಣಕಾಲದವರೆಗೆ ಧೂಳಿಯಿಂದ ತಡೆಯಾಗಿದ್ದಿತೆಂದು ಭಾವವು.

**[3]ರಜಃಸಂತಮಸೇ ರುದ್ಧದಿಕ್ಚಕ್ರೇ ವ್ಯೋಮ[4]ಲಂಘಿನಿ ।**
**[5]ಚಕ್ರೋದ್ಯೋತೋ ನೃಣಾಂ [6]ಚಕ್ರೇ ದೃಶಃ ಸ್ವವಿಷಯೋನ್ಮುಖೀಃ ॥**

ದಿಕ್ಕುಗಳನ್ನು ಮರೆಮಾಡಿರುವ ಧೂಳಿನಿಂದಾದ ಕತ್ತಲೆಯು ಆಕಾಶವನ್ನು ವ್ಯಾಪಿಸಿರಲು ಚಕ್ರದ ಪ್ರಕಾಶವು ಮನುಷ್ಯರ ಕಣ್ಣುಗಳನ್ನು ತಮ್ಮ ವಿಷಯದ ಕಡೆಗೆ ಅಭಿಮುಖಗಳನ್ನಾಗಿ ಮಾಡಿತು. ಚಕ್ರದ ಬೆಳಕಿನಿಂದ ಜನರ ಕಣ್ಣುಗಳು ವಿಷಯಗ್ರಹಣಮಾಡಿದುವೆಂದು ಭಾವವು.

**[7]ಸಮುದ್ಭಟರಸಪ್ರಾಯೈರ್ಭಟಾಲಾಪೈರ್ಮಹೀಶ್ವರಾಃ ।**
**ಪ್ರಯಾಣಕೇ ಧೃತಿಂ ಪ್ರಾಪುರ್ಜನಜಲ್ಪೈರಪೀ[8]ದೃಶೈಃ ॥ ೨೪ ॥**

ದೊರೆಗಳು ಪ್ರಯಾಣದಲ್ಲಿ ವೀರರಸಭರಿತವಾದ ಭಟರ ಮಾತುಗಳಿಂದಲೂ ಮುಂದೆ ಹೇಳುವ ಪ್ರಕಾರವಾದ ಜನರ ಮಾತುಗಳಿಂದಲೂ ಸಂತೋಷವನ್ನು ಹೊಂದಿದರು.

**ರಣಭೂಮಿಂ [9]ಪ್ರಸಾಧ್ಯಾರಾತ್ ಸ್ಥಿತೋ ಬಾಹುಬಲೀ ನೃಪಃ ।**
**ಅಯಂ ಚ ನೃಪಶಾರ್ದೂಲಃ ಪ್ರಸ್ಥಿತೋ [10]ನಿರ್ನಿಯಂತ್ರಣಃ ॥ ೨೫ ॥**

''ಬಾಹುಬಲಿರಾಜನು ಯುದ್ಧಭೂಮಿಯನ್ನು ಸಿದ್ಧಗೊಳಿಸಿ ಸಮೀಪದಲ್ಲಿ ನಿಂತಿರುತ್ತಾನೆ. ನಿರಂಕುಶನಾದ ಈ ಭರತರಾಜಶ್ರೇಷ್ಠನು ಹೊರಟನು.

**ನ ವಿದ್ಮಃ ಕಿಂ ನು ಖಲ್ವತ್ರ ಸ್ಯಾದ್ಭ್ರಾತ್ರೋರನಯೋರಿತಿ ।**
**ಪ್ರಾಯೋ ನ ಶಾಂತಯೇ ಯುದ್ಧಮೇನಯೋ[11]ರನುಜೀವಿನಾಮ್ ॥**

ಈ ಸಹೋದರರಿಗೆ ಈ ಯುದ್ಧದಲ್ಲಿ ಏನಾಗುವುದೆಂದು ತಿಳಿಯೆವು. ಇವರ ಯುದ್ಧವು ಭಟರುಗಳಿಗೆ ಬಹಳಮಟ್ಟಿಗೆ ಶಾಂತಿಯನ್ನು ಮಾಡುವುದಾಗಿಲ್ಲ.

**[12]ವಿರೂಪಕಮಿದಂ ಯುದ್ಧಮಾರಬ್ಧಂ ಭರತೇಶಿನಾ ।**
**ಐಶ್ವರ್ಯಮದದುರ್ವಾರಾಃ [13]ಸ್ವೈರಿಣಃ [14]ಪ್ರಭವೋ[15]ಥವಾ ॥ ೨೭ ॥**

ಭರತೇಶ್ವರನು ಅನುಚಿತವಾದ ಈ ಯುದ್ಧವನ್ನಾರಂಭಿಸಿದನು. ಹೇಗೆಂದರೆ– ಐಶ್ವರ್ಯಮದದಿಂದ ತಡೆಯಲಾಗದ ದೊರೆಗಳು ಸ್ವೇಚ್ಛಾಚಾರಿಗಳಾಗಿರುತ್ತಾರೆ.

**ಇಮೇ ಮುಕುಟಬದ್ಧಾಃ ಕಿಂ ನೈ[16]ನೌ ವಾರಯಿತುಂ ಕ್ಷಮಾಃ ।**
**ಯೇಮೀ ಸಮಗ್ರಸಾಮಗ್ರ್ಯಾ [17]ಸಂಗ್ರಾಮಯಿತುಮಾಗತಾಃ ॥ ೨೮ ॥**

ಸಂಪೂರ್ಣಸಾಮಗ್ರಿಯೊಡನೆ ಯುದ್ಧಮಾಡಿಸಲು ಬಂದಿರುವವರಾದ ಈ ಮುಕುಟಬದ್ಧರಾದ ರಾಜರುಗಳು ಈ ಭರತ ಬಾಹುಬಲಿಗಳನ್ನು ತಡೆಯಲು ಸಮರ್ಥರಾಗುವುದಿಲ್ಲವೇನು ?

೧ ಆಕಾಶಗಾಮಿನಃ. ೨ ಆಲೋಕನಾಃ. ೩ ರಜೋಂಧಕಾರೇ. ೪ ವ್ಯಾಪ್ತೇ ಸತಿ. ೫ ಚಕ್ರಪ್ರಕಾಶಃ. ೬ ಚಕಾರ. ೭ ವೀರರಸ. ೮ ವಕ್ಷ್ಯಮಾಣೈಃ. ೯ ಅಲಂಕೃತ್ವಾ. ೧೦ ನಿರಂಕುಶಃ. ೧೧ ಭಟಾನಾಂ. ೧೨ ಕಷ್ಟಂ, ಅನುಚಿತಮಿತ್ಯರ್ಥಃ. ೧೩ ಸ್ವೇಚ್ಛಾಚಾರಿಣಃ. ೧೪ ರಾಜಾನಃ. ೧೫ ತಥಾಹಿ. ೧೬ ಭರತ ಬಾಹುಬಲಿನೌ. ೧೭ ಯುದ್ಧಂ ಕಾರಯಿತುಂ.

**ಅಹೋ ಮಹಾನುಭಾವೋಽಯಂ ಕುಮಾರೋ ಭುಜವಿಕ್ರಮೀ ।**
**ಕ್ರುದ್ಧೇ ಚಕ್ರಧರೇಪ್ಯೇವಂ ಯೋ ಯೋದ್ಧುಂ ಸಮ್ಮುಖಂ ಸ್ಥಿತಃ ॥ ೨೯ ॥**

ಚಕ್ರೇಶ್ವರನು ಹೀಗೆ ಕೋಪಗೊಂಡಿದ್ದರೂ ಯಾವ ಬಾಹುಬಲಿಕುಮಾರನು ಯುದ್ಧಮಾಡುವುದಕ್ಕೋಸ್ಕರ ಅಭಿಮುಖನಾಗಿ ನಿಂತಿರುವನೋ ಅಂತಹ ಬಾಹುಬಲಪರಾಕ್ರಮಿಯಾದ ಈ ಕುಮಾರನು ಮಹಾಮಹಿಮೆಯುಳ್ಳವನಾಗಿದ್ದಾನೆ. ಆಶ್ಚರ್ಯ !

**ಅಥವಾ [೧]ತಂತ್ರಭೂಯಸ್ತ್ವಂ ನ ಜಯಾಂಗಂ [೨]ಮನಸ್ವಿನಃ ।**
**ನನು ಸಿಂಹೋ ಜಯತ್ಯೇಕಃ [೩]ಸಂಹತಾನಪಿ ದಂತಿನಃ ॥ ೩೦ ॥**

ಅಥವಾ ಮಹಾಪುರುಷನಿಗೆ ಬಹಳವಾದ ಸೈನ್ಯವು ಜಯಕ್ಕೆ ಸಾಧನವಾಗುವುದಿಲ್ಲ. ಹೆಚ್ಚು ಪಡೆಯಿದ್ದರೂ ಮಹಾಪುರುಷನನ್ನು ಜಯಿಸಲಾಗುವುದಿಲ್ಲವೆಂದು ಭಾವವು. ಒಂದು ಸಿಂಹವು ಗುಂಪುಸೇರಿರುವ ಆನೆಗಳನ್ನೂ ಜಯಿಸುತ್ತದಲ್ಲವೆ ?

**ಅಯಂ ಚ ಚಕ್ರಭೃದ್ದೇವೋ ನೇಷ್ಟಃ ಸಾಮಾನ್ಯಮಾನುಷಃ ।**
**ಯೋಽಭಿರಕ್ಷ್ಯಃ [೪]ಸಹಸ್ರೇಣ ಪ್ರಣಮ್ರಾಣಾಂ [೫]ಸುಧಾಭುಜಾಮ್ ॥ ೩೧ ॥**

ನಮ್ರರಾದ ಹದಿನಾರು ಸಾಸಿರ ದೇವತೆಗಳಿಂದ ರಕ್ಷಿಸಲ್ಪಡುವ ಈ ಚಕ್ರೇಶ್ವರನು ಸಾಮಾನ್ಯಮನುಷ್ಯನಾಗಿ ತಿಳಿಯಲ್ಪಡುವುದಿಲ್ಲ. ಹದಿನಾರುಸಾವಿರ ಅಂಗರಕ್ಷಕ ದೇವತೆಗಳುಳ್ಳ ಚಕ್ರೇಶ್ವರನು ಸಾಮಾನ್ಯಮನುಷ್ಯನಲ್ಲವೆಂದು ಭಾವವು.

**ತನ್ಮಾಭೂದನಯೋರ್ಯುದ್ಧಂ ಜನಸಂಕ್ಷಯಕಾರಣಮ್ ।**
**ಕುರ್ವಂತು ದೇವತಾಃ ಶಾಂತಿಂ ಯದಿ ಸನ್ನಿಹಿತಾ ಇಮಾಃ ॥ ೩೨ ॥**

ಆದುದರಿಂದ ಜನರ ನಾಶಕ್ಕೆ ಕಾರಣವಾದ ಈ ಭರತ ಬಾಹುಬಲಿಕುಮಾರರ ಯುದ್ಧವು ಆಗಬಾರದು. ದೇವತೆಗಳು ಸಮೀಪದಲ್ಲಿದ್ದರೆ ಇವರು ಶಾಂತಿಯನ್ನು ಮಾಡಲಿ.

**ಇತಿ ಮಾಧ್ಯಸ್ಥ್ಯವೃತ್ತ್ಯೈ[೬]ಕೇ ಜನಾಃ ಶ್ಲಾಘ್ಯಂ ವಚೋ ಜಗುಃ ।**
**ಪಕ್ಷಪಾತಾಹತಾಃ ಕೇಚಿತ್ಸ್ವಪಕ್ಷೋತ್ಕರ್ಷಮುಜ್ಜಗುಃ ॥ ೩೩ ॥**

ಬೇರೆ ಕೆಲವು ಜನರು ಈ ಪ್ರಕಾರವಾಗಿ ಮಾಧ್ಯಸ್ಥಭಾವದಿಂದ ಶ್ಲಾಘ್ಯವಾದ ವಚನವನ್ನು ಹೇಳಿದರು. ಪಕ್ಷಪಾತದಿಂದ ಕೂಡಿದ ಕೆಲವರು ತಂತಮ್ಮ ಪಕ್ಷದ ಹೊಗಳಿಕೆಯನ್ನು ಮಾತನಾಡಿದರು.

**[೭]ಏವಂ ಪ್ರಾಯೈರ್ಜನಾಲಾಪೈರ್ಮಹೀನಾಥಾ ವಿನೋದಿತಾಃ ।**
**ದ್ರುತಂ ಪ್ರಾಪುಸ್ತಮುದ್ದೇಶಂ ಯತ್ರ ವೀರಾಗ್ರಣೀ[೮]ರಸೌ ॥ ೩೪ ॥**

ಇವೇ ಮೊದಲಾದ ಜನರ ಮಾತುಗಳಿಂದ ವಿನೋದಗೊಳಿಸಲ್ಪಟ್ಟ ರಾಜರುಗಳು ವೀರಾಗ್ರೇಸರನಾದ ಈ ಬಾಹುಬಲಿಕುಮಾರನಿರುವ ಪ್ರದೇಶವನ್ನು ಶೀಘ್ರವಾಗಿ ತಲುಪಿದರು.

**ದೋರ್ದರ್ಪಂ [೯]ವಿಗಣಯ್ಯಾ[೧೦]ಸ್ಯ ದುರ್ವಿಲಂಘ್ಯಮರಾತಿಭಿಃ ।**
**[೧೧]ತ್ರೇಸುಃ [೧೨]ಪ್ರತಿಭಟಾಃ ಪ್ರಾಯ[೧೩]ಸ್ತಸ್ಮಿ[೧೪]ನ್ನಾಸನ್ನಸನ್ನಿಧೌ ॥ ೩೫ ॥**

ಬಾಹುಬಲಿಕುಮಾರನು ಬಹಳ ಸಮೀಪಸ್ಥನಾಗುತ್ತಿರಲು ಶತ್ರುಭಟರು ವೈರಿಗಳಿಂದ ಮೀರಲು ಕಷ್ಟವಾದ ಈ ಬಾಹುಬಲಿಯ ಭುಜಗಳ ದರ್ಪವನ್ನು ವಿಚಾರಮಾಡಿ ಬಹಳಮಟ್ಟಿಗೆ ಹೆದರಿದರು.

**ಇತ್ಯಭ್ಯರ್ಣೇ ಬಲೇ [೧೫]ಜಿಷ್ಣೋರ್ಬಲಂ ಭುಜಬಲೀಶಿನಃ ।**
**ಜಲಮಬ್ಧೇರಿವಾ[೧೬]ಕ್ಷುಭ್ಯದ್ಧೀರಧ್ವಾನಂ ನಿರುದ್ಧದಿಕ್ ॥ ೩೬ ॥**

೧ ಸೇನಾಬಾಹುಲ್ಯಂ. ೨ ಮಹಾಪುರುಷಸ್ಯ. ೩ ಸಂಯುಕ್ತಾನ್. ೪ ಷೋಡಶಸಹಸ್ರೇಣ. ೫ ದೇವಾನಾಂ. ೬ ಅನ್ಯೇ. ೭ ಏವಮಾದ್ಯೈಃ. ೮ ಭುಜಬಲೀ. ೯ ವಿಚಾರ್ಯ. ೧೦ ಭುಜಬಲಿನಃ. ೧೧ ಅಬಿಭ್ಯನ್. ೧೨ ಅರಿಭಟಾಃ. ೧೩ ಬಾಹುಬಲಿನಿ. ೧೪ ಅತ್ಯಾಸನ್ನೇ ಸತಿ. ೧೫ ಭರತಸ್ಯ. ೧೬ ಕ್ಷುಭ್ಯತಿ ಸ್ಮ.

ಈ ಪ್ರಕಾರವಾಗಿ ಭರತೇಶ್ವರನ ಸೈನ್ಯವು ಸಮೀಪಕ್ಕೆ ಬರುತ್ತಿರಲು ಬಾಹುಬಲಿರಾಜನ ಸೈನ್ಯವು, ಸಮುದ್ರದ ನೀರಿನಂತೆ, ದಿಕ್ಕುಗಳನ್ನು ವ್ಯಾಪಿಸಿದ ಗಂಭೀರವಾದ ಶಬ್ದವುಳ್ಳದಾಗಿ ಕ್ಷೋಭೆಗೊಂಡಿತು. ಉತ್ಸಾಹಗೊಂಡಿತೆಂದು ಭಾವವು.

**ಅಥೋಭಯಬಲೇ ಧೀರಾಃ ಸನ್ನದ್ಧಗಜವಾಜಯಃ ।**
**ಬಲಾನ್ಯಾರಚಯಾಮಾಸುರನ್ಯೋನ್ಯಂ [೧]ಪ್ರಯುಯುತ್ಸಯಾ ॥ ೩೭ ॥**

ಬಳಿಕ ಎರಡು ಪಡೆಗಳಲ್ಲಿಯೂ ಧೀರರಾದ ವೀರರು ಆನೆಕುದುರೆಗಳನ್ನು ಸಜ್ಜುಗೊಳಿಸಿ ಒಬ್ಬರಿಗೊಬ್ಬರು ವಿಶೇಷವಾಗಿ ಯುದ್ಧಮಾಡಬೇಕೆಂಬ ಇಚ್ಛೆಯಿಂದ ಸೈನ್ಯಗಳನ್ನು ರಚಿಸಿದರು.

**ತಾವಚ್ಚ ಮಂತ್ರಿಣೋ ಮುಖ್ಯಾಃ [೨]ಸಂಪ್ರಧಾರ್ಯೈವಮವದನ್ನಿತಿ ।**
**ಶಾಂತಯೇ ನಾನಯೋರ್ಯುದ್ಧಂ ಗ್ರಹಯೋಃ ಕ್ರೂರಯೋರಿವ ॥**

ಅಷ್ಟರಲ್ಲೇ ಮುಖ್ಯಮಂತ್ರಿಗಳು ವಿಚಾರಮಾಡಿ, ಎರಡು ಕ್ರೂರಗ್ರಹಗಳಂತೆ, ಈ ಭರತ ಬಾಹುಬಲಿರಾಜರುಗಳ ಯುದ್ಧವು ಶಾಂತಿಗೆ ಕಾರಣವಾಗುವುದಿಲ್ಲವೆಂದು ಹೇಳಿದರು.

**ಚರಮಾಂಗಧರಾವೇತೌ ನೈನಯೋಃ ಕಾಚನ ಕ್ಷತಿಃ ।**
**ಕ್ಷಯೋ [೩]ಜನಸ್ಯ ಪಕ್ಷಸ್ಯ [೪]ವ್ಯಾಜೇನಾನೇನ ಜೃಂಭಿತಃ ॥ ೩೯ ॥**

"ಈ ಭರತ ಬಾಹುಬಲಿರಾಜರುಗಳು ಚರಮದೇಹಧಾರಿಗಳಾಗಿರುತ್ತಾರೆ. ಇವರಿಗೆ ಯಾವ ಹಾನಿಯೂ ಇಲ್ಲ. ಈ ನೆವದಿಂದ ಇವರ ಕಡೆಯ ಜನಕ್ಕೆ ಹಾನಿಯೊದಗುವುದು."

**ಇತಿ ನಿಶ್ಚಿತ್ಯ ಮಂತ್ರಜ್ಞಾ ಭೀತ್ವಾ ಭೂಯೋ ಜನಕ್ಷಯಾತ್ ।**
**ತಯೋರನುಮತಿಂ ಲಬ್ಧ್ವಾ ಧರ್ಮ್ಯಂ ರಣಮಘೋಷಯನ್ ॥ ೪೦ ॥**

ಈ ಪ್ರಕಾರವಾಗಿ ಮಂತ್ರಿಗಳು ನಿಶ್ಚಯಿಸಿ ಪುನಃ ಜನಹಾನಿಯ ದೆಸೆಯಿಂದ ಹೆದರಿ ಆ ಭರತ ಬಾಹುಬಲಿರಾಜರುಗಳ ಅನುಮತಿಯನ್ನು ಪಡೆದು ಧರ್ಮಯುದ್ಧವನ್ನು ಸಾರಿದರು.

**ಅಕಾರಣರಣೇನಾಲಂ ಜನಸಂಹಾರಕಾರಿಣಾ ।**
**ಮಹಾ[೫]ನೇವಮಧರ್ಮಶ್ಚ ಗರೀಯಾಂಶ್ಚ [೬]ಯಶೋವಧಃ ॥ ೪೧ ॥**

"ಜನರ ನಾಶಕ್ಕೆ ಕಾರಣವಾದ ನಿಷ್ಕಾರಣಯುದ್ಧವು ಸಾಕು. ಯುದ್ಧವಾದರೆ ದೊಡ್ಡದಾದ ಅಧರ್ಮವೂ ಮಹಾಯಶಸ್ಸಿಗೆ ಹಾನಿಯೂ ಉಂಟಾಗುವುವು.

**[೭]ಬಲೋತ್ಕರ್ಷಪರೀಕ್ಷೇಯಮನ್ಯಥಾ[೮]ಪ್ಯುಪಪದ್ಯತೇ ।**
**ತದಸ್ತು ಯುವಯೋರೇವ ಮಿಥೋ ಯುದ್ಧಂ ತ್ರಿಧಾತ್ಮಕಮ್ ॥ ೪೨ ॥**

ಈ (ಭರತ ಬಾಹುಬಲಿರಾಜರುಗಳ) ಅಧಿಕಶಕ್ತಿಯ ಪರೀಕ್ಷೆಯು ಬೇರೆ ರೀತಿಯಾಗಿಯೂ ನಡೆಯುವುದು. ಆದುದರಿಂದ ನಿಮ್ಮಿಬ್ಬರಿಗೇ ಪರಸ್ಪರವಾಗಿ ಮೂರುವಿಧವಾದ ಯುದ್ಧವು ಆಗಲಿ.

**[೯]ಭ್ರೂಭಂಗೇಣ ವಿನಾ ಭಂಗಃ ಸೋಢವ್ಯೋ [೧೦]ಯುವಯೋರಿಹ ।**
**ವಿಜಯಶ್ಚ [೧೧]ವಿನೋತ್ಸೇಕಾದ್ಧರ್ಮೋ ಹ್ಯೇಷ ಸನಾಭಿಷು ॥ ೪೩ ॥**

ಈ ಯುದ್ಧದಲ್ಲಿ ಎಲೈ ರಾಜರುಗಳೇ ? ನಿಮ್ಮಿಬ್ಬರಲ್ಲಿ ಕೋಪದಿಂದ ಕಣ್ಣಿನ ಹುಬ್ಬುಗಳ ಭಂಗವಾಗದೆ ಅಂದರೆ ಹುಬ್ಬುಗಂಟಿಕ್ಕದೆ ಅಪಜಯವೂ ಗರ್ವವುಂಟಾಗದೆ ಜಯವೂ ಸಹಿಸತಕ್ಕುವಾಗಿರುತ್ತವೆ. ಅಪಜಯವಾದರೆ ಕೋಪಿಸಿ

೧ ಪ್ರಕರ್ಷೇಣಯೋದ್ಧುಮಿಚ್ಛಯಾ. ೨ ವಿಚಾರ್ಯ. ೩ ಉಭಯಸಹಾಯಸ್ಯ. ೪ ಯುದ್ಧವ್ಯಾಜೇನ. ೫ ಯುದ್ಧೇಸತಿ. ೬ ಕೀರ್ತಿನಾಶಃ. ೭ ಭರತಭುಜಬಲಿನೋಃ ಶಕ್ತ್ಯುತ್ಕರ್ಷಪರೀಕ್ಷಾ. ೮ ಘಟತೇ. ೯ ಕ್ರೋಧಾಭಾವೇನೇತ್ಯರ್ಥಃ. ೧೦ ಭೋ ಸ್ವಾಮಿನೌ ಯುವಯೋಃ. ೧೧ ಗರ್ವಾಭಾವಾದಿತ್ಯರ್ಥಃ.

ಕೊಳ್ಳಬಾರದೆಂದೂ ಜಯವಾದರೆ ಗರ್ವಪಡಬಾರದೆಂದೂ ಭಾವವು. ಜ್ಞಾತಿಗಳಲ್ಲಿ ಇದು ಧರ್ಮವಾಗಿದೆ.

**ಇತ್ಯುಕ್ತೌ ಪಾರ್ಥಿವೈಃ ಸರ್ವೈಃ [೧]ಸೋಪರೋಧೈಶ್ಚ ಮಂತ್ರಿಭಿಃ ।**
**ತೌ ಕೃಛ್ರಾ[೨]ತ್ಪ್ರತ್ಯಪತ್ಸಾತಾಂ ತಾದೃಶಂ ಯುದ್ಧಮುದ್ಧತೌ ॥ ೪೪ ॥**

ಈ ಪ್ರಕಾರವಾಗಿ ಸಮಸ್ತರಾಜರುಗಳಿಂದಲೂ ದೀನವಚನಗಳುಳ್ಳ ಉಭಯ ಪಕ್ಷದ ಮಂತ್ರಿಗಳಿಂದಲೂ ಹೇಳಲ್ಪಟ್ಟವರೂ ಗರ್ವಿಷ್ಠರೂ ಆದ ಆ ಭರತ ಬಾಹುಬಲಿರಾಜರುಗಳು ಪ್ರಯಾಸದಿಂದ ಅಂತಹ ಯುದ್ಧವನ್ನು ಒಪ್ಪಿಕೊಂಡರು.

**ಜಲದೃಷ್ಟಿ[೩]ನಿಯುದ್ಧೇಷು ಯೋ[೪]ನಯೋರ್ಜಯಮಾಪ್ಸ್ಯತಿ ।**
**ಸ ಜಯಶ್ರೀವಿಲಾಸಿನ್ಯಾಃ ಪತಿರಸ್ತು ಸ್ವಯಂವೃತಃ ॥ ೪೫ ॥**

''ಇವರಿಬ್ಬರಲ್ಲಿ ಯಾವನು ಜಲಯುದ್ಧ ದೃಷ್ಟಿಯುದ್ಧ ಬಾಹುಯುದ್ಧಗಳಲ್ಲಿ ಜಯವನ್ನು ಹೊಂದುವನೋ ಅವನು ಜಯಲಕ್ಷ್ಮಿಯೆಂಬ ವಿಲಾಸವತೀಸ್ತ್ರೀಗೆ ಸ್ವಯಂವರಿಸಲ್ಪಟ್ಟ ಪತಿಯಾಗಿರಲಿ.''

**ಇತ್ಯುದ್ಘೋಷ್ಯ ಕೃತಾನಂದಮಾನಂದಿನ್ಯಾ ಗಭೀರಯಾ ।**
**ಭೇರ್ಯಾ ಚಮೂಪ್ರಧಾನಾನಾಂ [೫]ವ್ಯಧುರೇಕತ್ರ ಸನ್ನಿಧಿಮ್ ॥ ೪೬ ॥**

ಈ ಪ್ರಕಾರವಾಗಿ ಗಂಭೀರವಾದ ಆನಂದಭೇರಿಯಿಂದ ಸಂತೋಷವನ್ನು ಸಾರಿ ಒಂದುಕಡೆಯಲ್ಲಿ ಸೈನ್ಯಾಧಿಪತಿಗಳ ಸೇರುವಿಕೆಯನ್ನು ಮಾಡಿದರು. ಸೈನ್ಯಾಧಿಪತಿಗಳನ್ನು ಒಂದುಕಡೆಯಲ್ಲಿ ಗುಂಪುಸೇರಿಸಿದರೆಂದರ್ಥವು.

**ನೃಪಾ ಭರತಗೃಹ್ಯಾ ಯೇ ತಾನೇಕತ್ರ ನ್ಯವೇಶಯನ್ ।**
**ಯೇ ಬಾಹುಬಲಿಗೃಹ್ಯಾಶ್ಚ ಪಾರ್ಥಿವಾಸ್ತಾನತೋನ್ಯತಃ ॥ ೪೭ ॥**

ಒಂದುಕಡೆಯಲ್ಲಿ ಭರತರಾಜನ ಪಕ್ಷದ ರಾಜರುಗಳನ್ನೂ ಇನ್ನೊಂದುಕಡೆಯಲ್ಲಿ ಬಾಹುಬಲಿರಾಜನ ಪಕ್ಷದ ರಾಜರುಗಳನ್ನೂ ಇರಿಸಿದರು.

**ಮಧ್ಯೇ ಮಹೀಭೃತಾಂ ತೇಷಾಂ ರೇಜತುಸ್ತೌ ನೃಪೌ ಸ್ಥಿತೌ ।**
**ಗತೌ ನಿಷಧನೀಲಾದ್ರೀ [೬]ಕುತಶ್ಚಿದಿವ [೭]ಸನ್ನಿಧಿಮ್ ॥ ೪೮ ॥**

ಆ ರಾಜರುಗಳ ಮಧ್ಯದಲ್ಲಿರುವ ಆ ಭರತಬಾಹುಬಲಿರಾಜರುಗಳು, ಯಾವುದೋ ಕಾರಣದಿಂದ ಸೇರಿರುವ ನಿಷಧ ನೀಲಪರ್ವತಗಳೋ ಎಂಬಂತೆ, ಶೋಭಿಸಿದರು.

**ತಯೋರ್ಭುಜಬಲೀ ರೇಜೇ [೮]ಗಾರುಡಗ್ರಾವಸಚ್ಛವಿಃ ।**
**ಜಂಬೂದ್ರುಮ ಇವೋತ್ತುಂಗಃ ಸಭೃಂಗಃ [೯]ಶಿತಿಮೂರ್ಧಜಃ ॥ ೪೯ ॥**

ಅವರಿಬ್ಬರಲ್ಲಿ ಗರುಡೋದ್ಗಾರಮಣಿಯ ಕಾಂತಿಯುಳ್ಳವನೂ ನೀಲವರ್ಣದ ಕೂದಲುಗಳುಳ್ಳವನೂ ಆದ ಬಾಹುಬಲಿಕುಮಾರನು, ಉನ್ನತವೂ ದುಂಬಿಗಳುಳ್ಳದೂ ಆದ ನೇರಳೆಯ ಮರವೋ ಎಂಬಂತೆ, ಶೋಭಿಸಿದನು.

**ರರಾಜ ರಾಜರಾಜೋಪಿ ಕಿರೀಟೋದಗ್ರವಿಗ್ರಹಃ ।**
**ಸಚೂಲಿಕ ಇವಾದ್ರೀಂದ್ರಸ್ತಪ್ತಚಾಮೀಕರಚ್ಛವಿಃ ॥ ೫೦ ॥**

ಕಿರೀಟದಿಂದ ಉನ್ನತವಾಗಿರುವ ದೇಹವುಳ್ಳವನೂ ಕಾಯಿಸಲ್ಪಟ್ಟ ಬಂಗಾರದಂತೆ ಕಾಂತಿಯುಳ್ಳವನೂ ಆದ ಭರತಚಕ್ರೇಶ್ವರನೂ, ಚೂಲಿಕೆಯೊಡನೆ ಕೂಡಿರುವ ಮಹಾಮೇರುಪರ್ವತವೋ ಎಂಬಂತೆ, ಶೋಭಿಸಿದನು.

**ದಧದ್ಧೀರತರಾಂ ದೃಷ್ಟಿಂ ನಿರ್ನಿಮೇಷಾ[೧೦]ಮನುದ್ಧಟಾಮ್ ।**
**ದೃಷ್ಟಿಯುದ್ಧೇ ಜಯಂ ಪ್ರಾಪ [೧೧]ಪ್ರಸಭಂ ಭುಜವಿಕ್ರಮೀ ॥ ೫೧ ॥**

೧ ಸಾನುವರ್ತನ್ಯೈಃ. ೨ ಬಹುಮೇನಾತೇ. ೩ ಬಾಹುಯುದ್ಧೇಷು. ೪ ಭರತಭುಜಬಲಿನೋರ್ಮಧ್ಯೇ. ೫ ಚಕ್ರುಃ. ೬ ಕಾರಣಾತ್. ೭ ಸಮ್ಮೇಲನಂ. ೮ ಗರುಡೋದ್ಗಾರರತ್ನಕಾಂತಿಃ. ೯ ನೀಲಕೇಶಃ. ೧೦ ಶಾಂತಾಂ. ೧೧ ಶೀಘ್ರಂ.

ರೆಪ್ಪೆಹೊಡೆಯದಿರುವುದೂ ಶಾಂತವೂ ಅತ್ಯಂತ ಗಂಭೀರವೂ ಆದ ದೃಷ್ಟಿಯನ್ನು ಹೊಂದಿರುವ ಭುಜಬಲಿಸ್ವಾಮಿಯು ದೃಷ್ಟಿಯುದ್ಧದಲ್ಲಿ ಶೀಘ್ರವಾಗಿ ಜಯವನ್ನು ಪಡೆದನು.

**ವಿನಿವಾರ್ಯ ಕೃತಕ್ಷೋಭಮನಿವಾರ್ಯಬಲಾರ್ಣವಮ್ ।**
**ಮರ್ಯಾದಯಾ [೧]ಯವೀಯಾಂಸಂ ಜಯೇನಾಯೋಜಯನ್ನೃಪಾಃ ॥**

ಆಗ ರಾಜರುಗಳು ಕ್ಷೋಭೆ–ಗದ್ದಲವನ್ನು ಮಾಡಿದುದೂ ತಡೆಯಲಶಕ್ಯವೂ ಆದ ಸೈನ್ಯವೆಂಬ ಸಮುದ್ರವನ್ನು ತಡೆದು ಮರ್ಯಾದೆಯಿಂದ ತಮ್ಮನನ್ನು ಜಯದೊಡನೆ ಸೇರಿಸಿದರು. ಬಾಹುಬಲಿಕುಮಾರನಿಗೆ ಜಯವನ್ನು ನಿರ್ಣಯಿಸಿದರೆಂದು ಭಾವವು.

**ಸರಸೀಜಲ[೨]ಮಾಗಾಢೌ ಜಲಯುದ್ಧಮದೋದ್ಧತೌ ।**
**ದಿಗ್ಗಜಾವಿವ ತೌ ದೀರ್ಘೈ[೩]ರ್ವ್ಯಾತ್ಯುಕ್ಷಾಮಾಸತುರ್ಭುಜೈಃ ॥ ೫೩ ॥**

ಜಲಯುದ್ಧದಲ್ಲಿ ಗರ್ವಿಷ್ಠರೂ ಸರೋವರದ ಜಲವನ್ನು ಪ್ರವೇಶಿಸಿದವರೂ ಆದ ಆ ಭರತಬಾಹುಬಲಿರಾಜರುಗಳು, ದಿಗ್ಗಜಗಳಂತೆ, ಉದ್ದವಾದ ತೋಳುಗಳಿಂದ ಪರಸ್ಪರ ಜಲಸೇಚನೆಯನ್ನು ಮಾಡಿಕೊಂಡರು.

**[೪]ಅಧಿವಕ್ಷಸ್ತಟಂ ಜಿಷ್ಣೋರೇಜು[೫]ರಚ್ಛಾ ಜಲಚ್ಛಟಾಃ ।**
**[೬]ಶೈಲಭರ್ತುರಿವೋತ್ಸಂಗಸಂಗಿನ್ಯಃ [೭]ಸ್ರುತಯೋಂಭಸಾಮ್ ॥ ೫೪ ॥**

ಸ್ವಚ್ಛವಾದ ಜಲಬಿಂದುಸಮೂಹಗಳು ಭರತೇಶ್ವರನ ಎದೆಯ ಮೇಲೆ, ಮಹಾಮೇರುಪರ್ವತದ ತಪ್ಪಲನ್ನು ಹೊಂದಿರುವ ಜಲಪ್ರವಾಹಗಳಂತೆ ಶೋಭಿಸಿದವು.

**ಜಲೌಘೋ ಭರತೇಶೇನ ಮುಕ್ತೋ ದೋರ್ಬಲಶಾಲಿನಃ ।**
**[೮]ಪ್ರಾಂಶೋರಪ್ರಾಪ್ಯ [೯]ದೂರೇಣ ಮುಖಮಾರಾತ್ಸಮಾಪತತ್ ॥ ೫೫ ॥**

ಭರತೇಶ್ವರನಿಂದ ಬಿಡಲ್ಪಟ್ಟ ನೀರಿನ ಸಮೂಹವು ಉನ್ನತವಾದ ಬಾಹುಬಲಿಯ ಮುಖವು ದೂರವಾಗಿದ್ದುದರಿಂದ ಅದನ್ನು ಹೊಂದದೆ ಸಮೀಪದಲ್ಲಿ ಬಿದ್ದಿತು. ಬಾಹುಬಲಿಕುಮಾರನು ಎರಚಿದ ನೀರು ಭರತೇಶ್ವರನ ಎದೆಯ ಮೇಲೆ ಬಿದ್ದಿತೆಂದೂ ಭರತೇಶ್ವರನು ಎರಚಿದ ನೀರು ಬಾಹುಬಲಿಸ್ವಾಮಿಯ ಮುಖದ ಕೆಳಕ್ಕೆ ಬಿದ್ದಿತೆಂದೂ ಭಾವವು.

**ಭರತೇಶಃ ಕಿಲಾ[೧೦]ತ್ರಾಪಿ ನ ಯದಾಪ ಜಯಂ ತದಾ ।**
**ಬಲೈರ್ಭುಜಬಲೀಶಸ್ಯ ಭೂಯೋಪ್ಯುದ್ಘೋಷಿತೋ ಜಯಃ ॥ ೫೬ ॥**

ಭರತೇಶ್ವರನು ಈ ಜಲಯುದ್ಧದಲ್ಲಿಯೂ ಯಾವಾಗ ಜಯವನ್ನು ಹೊಂದಲಿಲ್ಲವೋ ಆಗ ಬಾಹುಬಲಿಸ್ವಾಮಿಯ ಸೈನಿಕರು ಪುನಃ ಜಯವನ್ನು ಸಾರಿದರಂತೆ.

**[೧೧]ನಿಯುದ್ಧಮಥ [೧೨]ಸಂಗೀರ್ಯ ನೃಸಿಂಹೌ ಸಿಂಹವಿಕ್ರಮೌ ।**
**ಧೀರಾವಾವಿಷ್ಕೃತಸ್ಪರ್ಧೌ ತೌ ರಂಗ[೧೩]ಮವತೇರತುಃ ॥ ೫೭ ॥**

ಅನಂತರದಲ್ಲಿ ಮನುಷ್ಯಶ್ರೇಷ್ಠರೂ ಸಿಂಹಪರಾಕ್ರಮಿಗಳೂ ಧೀರರೂ ಸ್ಪರ್ಧೆಯನ್ನು ತೋರಿಸಿದವರೂ ಆದ ಆ ಭರತಬಾಹುಬಲಿರಾಜರುಗಳು ಬಾಹುಯುದ್ಧವನ್ನು ಪ್ರತಿಜ್ಞೆಮಾಡಿ ರಂಗಕ್ಕಿಳಿದರು.

**[೧೪]ವಲ್ಗಿತಾಸ್ಫೋಟಿತೈಶ್ಚಿತ್ರೈಃ [೧೫]ಕರಣೈ[೧೬]ರ್ಬಂಧಪೀಡಿತೈಃ ।**
**ದೋರ್ದರ್ಪಶಾಲಿನೋರಾಸೀದ್ಬಾಹುಯುದ್ಧಂ ತಯೋರ್ಮಹತ್ ॥**

೧ ಅನುಜಂ. ೨ ಪ್ರವಿಷ್ಟೌ. ೩ ಪರಸ್ಪರ ಜಲಸೇಚನಂ, ವ್ಯಾತ್ಯುಕ್ಷಾಮಾಪತುರಿತ್ಯಪಿ ಪಾಠಃ. ೪ ವಕ್ಷಸ್ತಟಾದೂರ್ಧ್ವಂ. ೫ ಸ್ವಚ್ಛಾಃ. ೬ ಮೇರೋಃ. ೭ ಪ್ರವಾಹಾಃ. ೮ ಉನ್ನತಸ್ಯ. ೯ ದೂರತ್ವಾತ್. ೧೦ ಜಲಯುದ್ಧೇಪಿ. ೧೧ ಬಾಹುಯುದ್ಧಂ. ೧೨ ಪ್ರತಿಜ್ಞಾಂ ಕೃತ್ವಾ. ೧೩ ಪ್ರವಿಷ್ಟೌ. ೧೪ ವಲ್ಗನ ಭುಜಾಸ್ಫಾಲನೈಃ. ೧೫ ಪಾದಚಾರಿಭಿಃ. ೧೬ ಬಾಹುಬಂಧ.

ಬಾಹುಬಲದ ಗರ್ವದಿಂದ ಶೋಭಿಸುವವರಾದ ಆ ಭರತಬಾಹುಬಲಿ ರಾಜರುಗಳಿಗೆ ಮೈಕುಲುಕುವಿಕೆಗಳಿಂದಲೂ ಭುಜಗಳನ್ನು ತಟ್ಟುವಿಕೆಗಳಿಂದಲೂ ನಾನಾ ಪ್ರಕಾರವಾದ ಪಾದಚಲನೆಗಳಿಂದಲೂ ಬಾಹುಬಂಧನಗಳ ಪೀಡನೆಗಳಿಂದಲೂ ದೊಡ್ಡದಾದ ಬಾಹುಯುದ್ಧವಾಯಿತು.

**ಜ್ವಲನ್ಮುಕುಟ[೧]ಭಾಚಕ್ರೋ ಹೇಲಯೋದ್ಭ್ರಾಮಿತೋ[೨]ಮುನಾ ।**
**ಲೀಲಾಮಲಾತಚಕ್ರಸ್ಯ ಚಕ್ರೀ ಭೇಜೇ ಕ್ಷಣಂ ಭ್ರಮುನ್ ॥ ೫೯ ॥**

ಈ ಬಾಹುಬಲಿಕುಮಾರನಿಂದ ಲೀಲೆಯಿಂದ ಎತ್ತಿ ತಿರುಗಿಸಲ್ಪಟ್ಟವನೂ ಪ್ರಕಾಶಿಸುತ್ತಿರುವ ಕಿರೀಟದ ಕಾಂತಿಸಮೂಹವುಳ್ಳವನೂ ಕ್ಷಣಕಾಲದವರೆಗೆ ಚಲನೆಯುಳ್ಳವನೂ ಆದ ಭರತಚಕ್ರವರ್ತಿಯು ಬೆಂಕಿಕೊಳ್ಳಿಯ ಲೀಲೆಯನ್ನು ಹೊಂದಿದನು. ಬಾಹುಬಲಿಕುಮಾರನು ನಿರಾಯಾಸವಾಗಿ ಭರತನನ್ನು ಎತ್ತಿ ತಿರುಗಿಸಿದಾಗ ಕಿರೀಟದ ರತ್ನ ಕಾಂತಿಯಿಂದ ಭರತನು ಬೆಂಕಿಯ ಕೊಳ್ಳಿಯಂತೆ ತೋರುತ್ತಿದ್ದನೆಂದು ಭಾವವು.

**[೩]ಯವೀಯಾನ್ನೃಪಶಾರ್ದೂಲಂ ಜ್ಯಾಯಾಂಸಂ ಜಿತಭಾರತಮ್ ।**
**ಜಿತ್ವಾಪಿ ನಾನಯದ್ಭೂಮಿಂ ಪ್ರಭುರಿತ್ಯೇವ ಗೌರವಾತ್ ॥ ೬೦ ॥**

ತಮ್ಮನಾದ ಬಾಹುಬಲಿಸ್ವಾಮಿಯು ಭರತಖಂಡವನ್ನು ಜಯಿಸಿದವನೂ ರಾಜಶ್ರೇಷ್ಠನೂ ಹಿರಿಯನೂ ಅದ ಭರತೇಶ್ವರನನ್ನು ಜಯಿಸಿದರೂ ರಾಜನೆಂಬ ಗೌರವದಿಂದಲೇ ಭೂಮಿಯನ್ನು ಹೊಂದಿಸಲಿಲ್ಲ. ಎತ್ತಿ ತಿರುಗಿಸಿದನಲ್ಲದೆ ಭರತನನ್ನು ಭೂಮಿಗೆ ಕೆಡಹಲಿಲ್ಲವೆಂದು ಭಾವವು.

**[೪]ಭುಜೋಪರೋಧಮುದ್ಧೃತ್ಯ ಸ ತಂ ಧತ್ತೇ ಸ್ಮ ದೋರ್ಬಲೀ ।**
**ಹೇಮಾದ್ರಿಮಿವ ನೀಲಾದ್ರಿರ್ಮಹಾಕಟಕಭಾಸ್ವರಮ್ ॥ ೬೧ ॥**

ನೀಲಪರ್ವತವು ದೊಡ್ಡ ತಪ್ಪಲಿನಿಂದ ಶೋಭಿಸುವ ಪೊಂಬೆಟ್ಟವನ್ನು ಧರಿಸಿದೆಯೋ ಎಂಬಂತೆ ಆ ಬಾಹುಬಲಿಕುಮಾರನು ದೊಡ್ಡದಾದ ಕೈಗಡಗದಿಂದ ಶೋಭಿಸುವ ಭರತೇಶ್ವರನನ್ನು ಅವನ ತೋಳುಗಳಿಗೆ ಬಾಧೆಯಾಗುವ ಹಾಗೆ ಎತ್ತಿ ಹಿಡಿದನು.

**ತದಾ ಕಲಕಲಶ್ಚಕ್ರೇ [೫]ಪಕ್ಷ್ಯೈರ್ಭುಜಬಲೀಶಿನಃ ।**
**ನೃಪೈರ್ಭರತ[೬]ಗೃಹ್ಯೈಶ್ಚ ಲಜ್ಜಯಾನಮಿತಂ ಶಿರಃ ॥ ೬೨ ॥**

ಆಗ ಬಾಹುಬಲಿಸ್ವಾಮಿಯ ಪಕ್ಷದ ಸೈನಿಕರು ಕೋಲಾಹಲವನ್ನು ಮಾಡಿದರು. ಭರತೇಶ್ವರನ ಪಕ್ಷದ ರಾಜರುಗಳು ಲಜ್ಜೆಯಿಂದ ತಲೆಯನ್ನು ಬಾಗಿಸಿದರು.

**ಸಮಕ್ಷಮೀಕ್ಷಮಾಣೇಷು ಪಾರ್ಥಿವೇಷೂಭಯೇಷ್ವಪಿ ।**
**ಪರಾಂ [೭]ವಿಮಾನನಾಂ ಪ್ರಾಪ್ಯ ಯಯೌ ಚಕ್ರೀ [೮]ವಿಲಕ್ಷತಾಮ್ ॥ ೬೩ ॥**

ಎರಡೂಕಡೆಯ ರಾಜರುಗಳೂ ಕಣ್ಣಮುಂದೆ ನೋಡುತ್ತಿರಲು ಭರತಚಕ್ರವರ್ತಿಯು ಬಹಳವಾದ ಅವಮಾನವನ್ನು ಹೊಂದಿ ಆಶ್ಚರ್ಯದಿಂದ ಕೂಡಿದವನಾದನು.

**ಬದ್ಧಭ್ರುಕುಟಿರುದ್ಭ್ರಾಂತರುಧಿರಾರುಣಲೋಚನಃ ।**
**ಕ್ಷಣಂ [೯]ದುರೀಕ್ಷತಾಂ ಭೇಜೇ ಚಕ್ರೀ ಪ್ರಜ್ವಲಿತಃ ಕ್ರುಧಾ ॥ ೬೪ ॥**

ಹುಬ್ಬು ಗಂಟಿಕ್ಕಿದವನೂ ರಕ್ತದಂತೆ ಕೆಂಪಾದ ಕಣ್ಣುಗಳನ್ನು ತಿರುಗಿಸುವವನೂ ಕೋಪದಿಂದ ಪ್ರಜ್ವಲಿಸುತ್ತಿರುವವನೂ ಆದ ಭರತಚಕ್ರವರ್ತಿಯು ಒಂದು ಕ್ಷಣಕಾಲದವರೆಗೆ ಕ್ರೋಧಾವೇಶವನ್ನು ಹೊಂದಿದನು. ಭಯಂಕರರೂಪವನ್ನು ಹೊಂದಿದನೆಂದು ಭಾವವು.

---

೧ ಕಾಂತಿಸಮೂಹಃ. ೨ ಬಾಹುಬಲಿನಾ. ೩ ಅನುಜಃ. ೪ ಬಾಹುಪೀಡನಂ ಯಥಾ ಭವತಿ ತಥಾ. ೫ ಪಕ್ಷಬಲೈಃ. ೬ ಪಕ್ಷ್ಯೈಃ. ೭ ಪರಿಭವಂ. ೮ ವಿಸ್ಮಯಾನ್ವಿತತ್ವಂ. ೯ ಕ್ರೋಧಾವೇಶತಾಂ.

**ಕ್ರೋಧಾಂಧೇನ ತದಾ [೧]ದಧ್ಯೇ ಕರ್ತುರ್[೨]ಮಸ್ಯ ಪರಾಜಯಮ್ ।**
**ಚಕ್ರ[೩]ಮುತ್ಕೃತ್ತನಿಃಶೇಷದ್ವಿಷಚ್ಚಕ್ರಂ ನಿಧೀಶಿನಾ ॥ ೬೫ ॥**

ಆಗ ಕ್ರೋಧಾಂಧನಾದ ನಿಧಿಪತಿ ಭರತಚಕ್ರೇಶ್ವರನು ಬಾಹುಬಲಿಸ್ವಾಮಿಗೆ ಅಪಜಯವನ್ನು ಮಾಡುವುದಕ್ಕೋಸ್ಕರ ಸಮಸ್ತ ಶತ್ರುಸಮೂಹವನ್ನು ನಾಶಮಾಡಿರುವ ಚಕ್ರವನ್ನು ಸ್ಮರಿಸಿದನು.

**[೪]ಆಧ್ಯಾತಮಾತ್ರಮೇತ್ಯಾ[೫]ರಾ[೬]ದದಃ ಕೃತ್ವಾ ಪ್ರದಕ್ಷಿಣಮ್ ।**
**ಅವಧ್ಯಸ್ಯಾ[೭]ಸ್ಯ [೮]ಪರ್ಯಾಸಂ ತಸ್ಥೌ [೯]ಮಂದೀಕೃತಾತಪಮ್ ॥ ೬೬ ॥**

ಸ್ಮರಿಸಲ್ಪಟ್ಟಾಗಲೇ ಈ ಚಕ್ರವು ಸಮೀಪದಲ್ಲಿ ಬಂದು ಭರತನ ಪ್ರದಕ್ಷಿಣೆಯನ್ನು ಮಾಡಿ ವಧೆಮಾಡಲ್ಪಡತಕ್ಕವನಲ್ಲದ ಈ ಬಾಹುಬಲಿಸ್ವಾಮಿಯ ಸಮೀಪದಲ್ಲಿ ತನ್ನ ಕಿರಣಗಳಿಂದ ಸೂರ್ಯಕಿರಣಗಳನ್ನು ತಿರಸ್ಕರಿಸಿದುದಾಗಿ ನಿಂತಿತು.

**[೧೦]ಕೃತಂ ಕೃತಂ ಬತಾನೇನ ಸಾಹಸೇನೇತಿ ಧಿಕ್ಕೃತಃ ।**
**ತದಾ [೧೧]ಮಹತ್ತಮೈಶ್ಚಕ್ರೀ ಜಗಾಮಾ[೧೨]ನುಶಯಂ ಪರಮ್ ॥ ೬೭ ॥**

ಆಗ ಮಹಾಪುರುಷರಿಂದ ''ಈ ಸಾಹಸವು ಸಾಕು ಸಾಕು. ಕಷ್ಟ!'' ಎಂದು ಧಿಕ್ಕರಿಸಲ್ಪಟ್ಟ ಭರತಚಕ್ರೇಶ್ವರನು ಬಹಳ ಪಶ್ಚಾತ್ತಾಪವನ್ನು ಹೊಂದಿದನು.

**ಕೃತಾ[೧೩]ಪದಾನ ಇತ್ಯುಚ್ಚೈಃ ಕರೇಣ ತುಲಯನ್ನೃಪಮ್ ।**
**ಸೋವತಾರ್ಯಾಂ[೧೪]ಸತೋ ಧೀರೋ ನಿಕೃಷ್ಟಾಂ [೧೫]ಭೂಮಿ[೧೬]ಮಾಪಿಪತ್ ॥ ೬೮ ॥**

ಧೀರನಾದ ಆ ಬಾಹುಬಲಿಸ್ವಾಮಿಯು ಹೆಚ್ಚಾಗಿ ಸಾಹಸಕಾರ್ಯವನ್ನು ಮಾಡಿದವನಾಗಿ ಭುಜಶಿಖರದಿಂದ ಇಳಿಸಿ ಕೈಯಿಂದ ಭರತರಾಜನನ್ನು ತೂಗಿ ನಿಕೃಷ್ಟಾವಸ್ಥೆಯನ್ನು ಹೊಂದಿಸಿದನು.

**ಸತ್ಕೃತಃ ಸಜಯಾ[೧೭]ಶಂಸಮಭ್ಯೇತ್ಯ ನೃಪಸತ್ತಮೈಃ ।**
**ಮೇನೇ ಸೋತ್ಕರ್ಷಮಾತ್ಮಾನಂ ತದಾ ಭುಜಬಲೀ ಪ್ರಭುಃ ॥ ೬೯ ॥**

ಆಗ ರಾಜಶ್ರೇಷ್ಠರು ಸಮೀಪಕ್ಕೆ ಬಂದು ಅವರಿಂದ ಜಯದ ಹೊಗಳಿಕೆಯೊಡನೆ ಸತ್ಕರಿಸಲ್ಪಟ್ಟ ಬಾಹುಬಲಿಸ್ವಾಮಿಯು ತನ್ನನ್ನು ಉತ್ಕೃಷ್ಟನನ್ನಾಗಿ ತಿಳಿದನು.

**ಅಚಿಂತಯಚ್ಚ ಕಿಂ ನಾಮ ಕೃತೇ ರಾಜ್ಯಸ್ಯ ಭಂಗಿನಃ ।**
**ಲಜ್ಜಾಕರೋ ವಿಧಿರ್ಭ್ರಾತ್ರಾ ಜ್ಯೇಷ್ಠೇನಾಯಮನುಷ್ಠಿತಃ ॥ ೭೦ ॥**

''ನಾಶಶೀಲವಾದ ರಾಜ್ಯಕ್ಕೋಸ್ಕರ ಅಣ್ಣನಿಂದ ಲಜ್ಜಾಕರವಾದ ಈ ಕೆಲಸವು ಏನೆಂದು ಮಾಡಲ್ಪಟ್ಟಿತು'' ಎಂದು ಯೋಚಿಸಿದನು.

**[೧೮]ವಿಪಾಕಕಟು ಸಾಮ್ರಾಜ್ಯಂ ಕ್ಷಣಧ್ವಂಸಿ ಧಿಗಸ್ತ್ವಿದಮ್ ।**
**[೧೯]ದುಸ್ತ್ಯಜಂ ತ್ಯಜದಪ್ಯೇತದಂಗಿಭಿರ್ದುಷ್ಕಲತ್ರವತ್ ॥ ೭೧ ॥**

''ಈ ಸಾಮ್ರಾಜ್ಯವು ಪರಿಣಾಮದಲ್ಲಿ–ಕೊನೆಯಲ್ಲಿ ಖಾರವಾಗಿಯೂ ಕ್ಷಣಕಾಲದಲ್ಲಿ ನಾಶವಾಗುತಕ್ಕುದಾಗಿಯೂ ಬಿಟ್ಟರೂ ಇದು ದುಷ್ಟಪತ್ನಿಯಂತೆ ಶರೀರಧಾರಿಗಳಿಂದ ಬಿಡುವುದಕ್ಕೆ ಕಷ್ಟಸಾಧ್ಯವಾಗಿಯೂ ಇದೆ. ಇದಕ್ಕೆ ಧಿಕ್ಕಾರವಿರಲಿ.

**ಅಹೋ ವಿಷಯಸೌಖ್ಯಾನಾಂ [೨೦]ವೈರೂಪ್ಯಮಪಕಾರಿತಾ ।**
**[೨೧]ಭಂಗುರತ್ವಮರುಚ್ಯತ್ವಂ [೨೨]ಸಕ್ತೈರ್ನಾನ್ವಿಷ್ಯತೇ ಜನೈಃ ॥ ೭೨ ॥**

---

೧ ಸ್ಮರ್ಯತೇ ಸ್ಮ. ೨ ಅನುಜಸ್ಯ. ೩ ಉಚ್ಛಿನ್ನ. ೪ ಸ್ಮೃತ. ೫ ಸಮೀಪೇ. ೬ ಏತಚ್ಚಕ್ರಂ. ೭ ಭುಜಬಲಿಸ್ವಾಮಿನಃ. ೮ ಸಮೀಪೇ. ೯ ಸ್ವಕಿರಣೈರ್ಮಂದೀಕೃತರವಿಕಿರಣಂ. ೧೦ ಅಲಮಲಂ. ೧೧ ಅತ್ಯಂತಮಹದ್ಭಿಃ. ೧೨ ಪಶ್ಚಾತ್ತಾಪಂ. ೧೩ ಕೃತಪರಾಕ್ರಮಃ. ೧೪ ಭುಜಶಿಖರಾತ್. ೧೫ ಅವಸ್ಥಾಂ. ೧೬ ಅನಯತ್. ೧೭ ಸ್ತುತಿ. ೧೮ ಪರಿಣಮನ. ೧೯ ತ್ಯಕ್ತಮಪಿ ದುಸ್ತ್ಯಜಂ ಭವತಿ. ೨೦ ಕುತ್ಸಿತತ್ವಂ. ೨೧ ವಿನಶ್ವರತ್ವಂ. ೨೨ ಆಸಕ್ತೈಃ.

೨೭-೩೦ ಭರತ-ಬಾಹುಬಲಿ ಯುದ್ಧಪ್ರಸಂಗ-ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧ, ಚಕ್ರಪ್ರಯೋಗ **ಮಹಾಪುರಾಣ**



ಆಸಕ್ತರಾದ ಜನರು ವಿಷಯಸುಖಗಳ ನಿಕೃಷ್ಟತ್ವವನ್ನೂ ಅಪಕಾರತ್ವವನ್ನೂ ನಾಶಶೀಲತ್ವವನ್ನೂ ವಿರಸತ್ವವನ್ನೂ ಹುಡುಕುವುದಿಲ್ಲ–ವಿಚಾರಮಾಡುವುದಿಲ್ಲ. ಆಶ್ಚರ್ಯ !

**ಕೋ ನಾಮ ಮತಿಮಾನೀಪ್ಸೇದ್ವಿಷಯಾನ್ವಿಷದಾರುಣಾನ್ ।**
**ಯೇಷಾಂ ವಶಗತೋ ಜಂತುರ್ಯಾತ್ಯನರ್ಥಪರಂಪರಾಮ್ ॥ ೭೩ ॥**

ಬುದ್ಧಿಶಾಲಿಯಾದ ಯಾವನು ತಾನೆ ವಿಷದಂತೆ ಭಯಂಕರವಾದ ವಿಷಯಗಳನ್ನು ಇಚ್ಛಿಸುವನು ? ಆ ವಿಷಯಗಳ ವಶವನ್ನು ಹೊಂದಿದ ಪ್ರಾಣಿಯು ಅನರ್ಥ ಪರಂಪರೆಯನ್ನು ಹೊಂದುವುದು.

**ವರಂ ವಿಷಂ ಯದೇಕಸ್ಮಿನ್ಭವೇ ಹಂತಿ ನ ಹಂತಿ ವಾ ।**
**ವಿಷಯಾಸ್ತು ಪುನರ್ಘ್ನಂತಿ ಹಂತ ಜಂತೂನನಂತಶಃ ॥ ೭೪ ॥**

ವಿಷವು ಒಂದು ಭವದಲ್ಲಿ ಕೊಲ್ಲುತ್ತದೆ ಅಥವಾ ಕೊಲ್ಲುವುದಿಲ್ಲ; ಅದು ಶ್ರೇಷ್ಠವು. ವಿಷಯಗಳಾದರೋ ಪ್ರಾಣಿಗಳನ್ನು ಅನಂತಾವರ್ತಿ ಕೊಲ್ಲುತ್ತವೆ. ಕಷ್ಟ !

**[೧]ಆಪಾತಮಾತ್ರರಮ್ಯಾಣಾಂ ವಿಪಾಕೇ ಕಟುಕಾತ್ಮನಾಮ್ ।**
**ವಿಷಯಾಣಾಂ [೨]ಕೃತೇ [೩]ನಾಜ್ಞೋ ಯಾತ್ಯನರ್ಥಾ[೪]ನಪಾರ್ಥಕಮ್ ॥**

ತಿಳಿವಳಿಕೆಯಿಲ್ಲದ ಮನುಷ್ಯನು ಅನುಭವಿಸುವಾಗ ಮಾತ್ರ ರಮಣೀಯವೂ ಪರಿಣಾಮದಲ್ಲಿ ಖಾರ–ದುಃಖಸ್ವರೂಪಗಳೂ ಆದ ವಿಷಯಗಳ ನಿಮಿತ್ತವಾಗಿ ವ್ಯರ್ಥವಾಗಿ ಅನರ್ಥಗಳನ್ನು ಹೊಂದುತ್ತಾನೆ.

**ಅತ್ಯಂತರಸಿಕಾನಾದೌ ಪರ್ಯಂತೇ ಪ್ರಾಣಹಾರಿಣಃ ।**
**[೫]ಕಿಂಪಾಕಪಾಕವಿಷಮಾನ್ವಿಷಯಾನ್ಕಃ ಕೃತೀ ಭಜೇತ್ ॥ ೭೬ ॥**

ಪ್ರಥಮದಲ್ಲಿ ಅತ್ಯಂತ ರುಚಿಕರಗಳೂ ಕೊನೆಯಲ್ಲಿ ಪ್ರಾಣಾಪಹಾರಿಗಳೂ ಕಾಂಜೀರವೆಂಬ ಹಣ್ಣಾದ ವಿಷಫಲಕ್ಕೆ ಸಮಾನಗಳೂ ಆದ ವಿಷಯಗಳನ್ನು ವಿವೇಕಿಯಾದ ಯಾವ ಮನುಷ್ಯನು ಸೇವಿಸುವನು ? ಯಾರೂ ಸೇವಿಸುವುದಿಲ್ಲವೆಂದು ಭಾವವು.

**ಶಸ್ತ್ರಪ್ರಹಾರದೀಪ್ತಾಗ್ನಿ[೬]ವಜ್ರಾಶನಿಮಹೋರಗಾಃ ।**
**ನ ತಥೋ[೭]ದ್ವೇಜಕಾಃ ಪುಂಸಾಂ ಯಥಾಮೀ ವಿಷಯದ್ವಿಷಃ ॥ ೭೭ ॥**

ಈ ವಿಷಯಗಳೆಂಬ ಶತ್ರುಗಳು ಹೇಗೆ ಭಯಂಕರಗಳೋ ಹಾಗೆ ಮನುಷ್ಯರಿಗೆ ಶಸ್ತ್ರದ ಪೆಟ್ಟೂ ಉರಿಸಲ್ಪಟ್ಟ ಬೆಂಕಿಯೂ ವಜ್ರರೂಪವಾದ ಸಿಡಿಲೂ ದೊಡ್ಡದಾದ ಸರ್ಪವೂ ಭಯಂಕರಗಳಲ್ಲ.

**ಮಹಾಬ್ಧಿರೌದ್ರಸಂಗ್ರಾಮಭೀಮಾರಣ್ಯಸರಿದ್ಗಿರೀನ್ ।**
**ಭೋಗಾರ್ಥಿನೋ ಭಜಂತ್ಯಜ್ಞಾ ಧನಲಾಭಧನಾ[೮]ಯಯಾ ॥ ೭೮ ॥**

ಭೋಗಾರ್ಥಿಗಳಾದ ಅಜ್ಞಾನಿಗಳು ದ್ರವ್ಯಲಾಭದ ಮತ್ತು ದ್ರವ್ಯದ ಇಚ್ಛೆಯಿಂದ ದೊಡ್ಡದಾದ ಸಮುದ್ರ ಭಯಂಕರವಾದ ಯುದ್ಧ ಭಯಂಕರವಾದ ಅರಣ್ಯ ನದಿ ಪರ್ವತ ಇವುಗಳನ್ನು ಹೊಂದುತ್ತಾರೆ. ದ್ರವ್ಯದ ಆಶೆಯಿಂದ ಸಮುದ್ರಯಾನಾದಿಗಳನ್ನು ಮಾಡುತ್ತಾರೆಂದು ಭಾವವು.

**ದೀರ್ಘದೋರ್ಘಾತ[೯]ನಿರ್ಘಾತನಿರ್ಘೋಷವಿಷಮೀಕೃತೇ ।**
**[೧೦]ಯಾದಸಾಂ [೧೧]ಯಾದಸಾಂಪತ್ಯೌ ಚರಂತಿ ವಿಷಯಾರ್ಥಿನಃ ॥ ೭೯ ॥**

ವಿಷಯಲೋಲುಪರು ಜಲಜಂತುಗಳ ಉದ್ದವಾದ ಭುಜಗಳ ಹೊಡೆತವೆಂಬ ಸಿಡಿಲಿನ ಭಯಂಕರವಾದ ಶಬ್ದದಿಂದ ಆಲ್ಲೋಲಕಲ್ಲೋಲವಾದ ಸಮುದ್ರದಲ್ಲಿ ಸಂಚರಿಸುತ್ತಾರೆ.

೧ ಅನುಭವನಮಾತ್ರ. ೨ ನಿಮಿತ್ತಂ. ೩ ಪುಮಾನ್. ೪ ಮುಧಾ. ೫ ಕಾಂಜೀರಪಕ್ವಫಲ. ೬ ವಜ್ರರೂಪಾಶನಿ. ೭ ಭಯಂಕರಾಃ. ೮ ಇಚ್ಛಯಾ. ೯ ಅಶನಿ. ೧೦ ಜಲಜಂತೂನಾಂ. ೧೧ ಸಮುದ್ರೇ.

**ಸಮಾಪತಚ್ಛರವ್ರಾತನಿರುದ್ಧಗಗನಾಂಗಣಮ್ ।**
**ರಣಾಂಗಣಂ ವಿಶಂತ್ಯ[೧]ಸ್ತಭಿಯೋ ಭೋಗ್ಯೈ[೨]ರ್ವಿಲೋಭಿತಾಃ ॥ ೮೦ ॥**

ಭೋಗವಸ್ತುಗಳಿಂದ ವಂಚಿತರಾದವರು ಭೀತಿಯಿಲ್ಲದವರಾಗಿ ಸುತ್ತಲೂ ಬೀಳುತ್ತಿರುವ ಬಾಣಗಳ ಸಮೂಹದಿಂದ ವ್ಯಾಪ್ತವಾದ ಆಕಾಶಪ್ರದೇಶವುಳ್ಳ ರಣಾಂಗಣವನ್ನು ಪ್ರವೇಶಮಾಡುತ್ತಾರೆ.

**ಚರಂತಿ [೩]ವನಮಾನುಷ್ಯಾ ಯತ್ರ ಸತ್ರಾಸಲೋಚನಾಃ ।**
**ತಾಂ ಪರ್ಯಟಂತ್ಯರಣ್ಯಾನೀಂ ಭೋಗಾಶೋಪಹತಾ ಜಡಾಃ ॥ ೮೧ ॥**

ಬೇಡರು ಭಯಚಕಿತವಾದ ಕಣ್ಣುಗಳುಳ್ಳವರಾಗಿ ಎಲ್ಲಿ ಸಂಚರಿಸುತ್ತಾರೋ ಅಂತಹ ಮಹಾರಣ್ಯದಲ್ಲಿ ಭೋಗದ ಆಶೆಯಿಂದ ಪೀಡಿತರಾದ ಅಜ್ಞಾನಿಗಳು ಅಲೆದಾಡುತ್ತಾರೆ.

**ಸರಿತೋ ವಿಷಮಾವರ್ತಭೀಷಣಾ ಗ್ರಾಹಸಂಕುಲಾಃ ।**
**[೪]ತಿತೀರ್ಷಂತಿ ಬತಾ[೫]ವಿಷ್ಟಾ ವಿಷಮೈರ್ವಿಷಯಗ್ರಹೈಃ ॥ ೮೨ ॥**

ವಿಷಮವಾದ ವಿಷಯಗಳೆಂಬ ಗ್ರಹಗಳಿಂದ ಆವಿಷ್ಟರಾದವರು–ಪಿಶಾಚಗ್ರಸ್ತರು ವಿಷಮವಾದ ಸುಳಿಗಳಿಂದ ಭಯಂಕರವೂ ಮೊಸಳೆಗಳಿಂದ ವ್ಯಾಪ್ತವೂ ಆದ ನದಿಗಳನ್ನು ದಾಟಲಿಚ್ಛಿಸುತ್ತಾರೆ. ಕಷ್ಟ !

**ಆರೋಹಂತಿ ದುರಾರೋಹಾನ್ ಗಿರೀನಪಭಿಯೋಂಗಿನಃ ।**
**ರಸಾಯನರಸಜ್ಞಾನ[೬]ಬಿಲವಾದವಿಮೋಹಿತಾಃ ॥ ೮೩ ॥**

ನರೆಗೂದಲನ್ನು ಹೋಗಲಾಡಿಸುವ ಔಷಧ ಸ್ತಂಭನ ಸಿದ್ಧರಸ ಇವುಗಳ ಜ್ಞಾನದಿಂದ ಮೂಢರಾದ ಜನರು ಭಯವಿಲ್ಲದವರಾಗಿ ಕಷ್ಟದಿಂದ ಹತ್ತಲ್ಪಡತಕ್ಕ ಪರ್ವತಗಳನ್ನು ಹತ್ತುತ್ತಾರೆ.

**ಅನಿಷ್ಟವನಿತೇವೇಯಮಾಲಿಂಗತಿ ಬಲಾಜ್ಜರಾ ।**
**ಕುರ್ವತೀ ಪಲಿತವ್ಯಾಜಾ[೭]ದ್ರಭಸೇನ ಕಚಗ್ರಹಮ್ ॥ ೮೪ ॥**

ನರೆಗೂದಲಿನ ನೆಪದಿಂದ ವೇಗದಿಂದ ಜುಟ್ಟನ್ನು ಹಿಡಿಯುವ ಈ ಮುಪ್ಪು, ಅನಿಷ್ಟಸ್ತ್ರೀಯಂತೆ, ಬಲಾತ್ಕಾರದಿಂದ ಆಲಿಂಗಿಸುತ್ತದೆ.

**[೮]ಭೋಗ್ಯೇಷ್ವನುತ್ಸುಕಃ ಪ್ರಾಯೋ ನ ಚ ವೇದ ಹಿತಾಹಿತಮ್ ।**
**[೯]ಭುಕ್ತಸ್ಯ [೧೦]ಜರಸಾ ಜಂತೋರ್ಮೃತಸ್ಯ ಚ ಕಿ[೧೧]ಮಂತರಮ್ ॥ ೮೫ ॥**

ಭೋಗಿಸುವುದಕ್ಕೆ ಯೋಗ್ಯವಾದ ವಸ್ತುಗಳಲ್ಲಿ ಕುತೂಹಲವಿಲ್ಲದ ವೃದ್ಧನು ಬಹಳಮಟ್ಟಿಗೆ ಹಿತಾಹಿತವನ್ನು ತಿಳಿಯುವುದಿಲ್ಲ. ಮುಪ್ಪಿನಿಂದ ಕೂಡಿದ ಪ್ರಾಣಿಗೂ ಮೃತವಾದ ಪ್ರಾಣಿಗೂ ಭೇದವಾವುದು ?

**[೧೨]ಪ್ರಸಹ್ಯ ಪಾತಯನ್ ಭೂಮೌ ಗಾತ್ರೇಷು ಕೃತ[೧೩]ವೇಪಥುಃ ।**
**ಜರಾ [೧೪]ಪಾತೋ ನೃಣಾಂ ಕಷ್ಟೋ ಜ್ವರಃ ಶೀತ ಇವೋದ್ಭವನ್ ॥**

ಬಲಾತ್ಕಾರದಿಂದ ಭೂಮಿಯಲ್ಲಿ ಕೆಡಹುವುದೂ ಶರೀರಗಳಲ್ಲಿ ಕಂಪನವನ್ನುಂಟುಮಾಡುವುದೂ ಆದ ಮುಪ್ಪಿನ ಪ್ರಾಪ್ತಿಯು ಮನುಷ್ಯರಿಗೆ, ಉದ್ಭವಿಸಿರುವ ಶೀತಜ್ವರದಂತೆ ಕಷ್ಟಕರವಾದುದು.

**ಅಂಗ[೧೫]ಸಾದಂ ಮತಿ[೧೬]ಭ್ರೇಷಂ ವಾಚಾಮಸ್ಫುಟತಾಮಪಿ ।**
**ಜರಾ [೧೭]ಸುರಾ ಚ [೧೮]ನಿರ್ವಿಷ್ಟಾ ಘಟಯತ್ಯಾಶು ದೇಹಿನಾಮ್॥ ೮೭ ॥**

೧ ನಿರಸ್ತಭೀತಯಃ. ೨ ವಂಚಿತಾಃ. ೩ ವನೇಚರಾಃ. ೪ ತರಿತುಮಿಚ್ಛಂತಿ. ೫ ಗ್ರಸ್ತಾ ಇತ್ಯರ್ಥಃ. ೬ ವಲಿಪಲಿತಸ್ತಂಭೌಷಧಸಿದ್ಧರಸಜ್ಞಾನಾಜ್ಞಾತಬಿಲವಾದಾನ್ಮೋಹಿತಾಃ. ೭ ವೇಗೇನ. ೮ ಭೋಕ್ತುಂ ಯೋಗ್ಯವಸ್ತುಷು. ೯ ಸೇವಿತಸ್ಯ. ೧೦ ಜರಯಾ. ೧೧ ಭೇದಃ. ೧೨ ಬಲಾತ್ಕಾರೇಣ. ೧೩ ಕಂಪನಃ. ೧೪ ಪ್ರಾಪ್ತಿಃ. ೧೫ ಶ್ರಮಂ. ೧೬ ಭ್ರಂಶಂ. ೧೭ ಮದ್ಯಂ. ೧೮ ಸೇವಿತಾ.

ಅನುಭವಿಸಲ್ಪಟ್ಟ ಮುಪ್ಪೂ ಮದ್ಯವೂ ಪ್ರಾಣಿಗಳಿಗೆ ದೇಹಶ್ರಮವನ್ನೂ ಬುದ್ಧಿ ಭ್ರಮಣೆಯನ್ನೂ ತೊದಲ್ನುಡಿಯನ್ನೂ ಶೀಘ್ರವಾಗಿ ಒದಗಿಸುತ್ತವೆ.

**ಕಾಲ[೧]ವ್ಯಾಲಗಜೇನೇದಮಾಯುರಾಲಾನಕಂ ಬಲಾತ್ ।**
**[೨]ಚಾಲ್ಯತೇ ಯ[೩]ದ್ಬಲಾಧಾನಂ [೪]ಜೀವಿತಾಲಂಬನೇ ನೃಣಾಮ್ ॥ ೮೮ ॥**

ಮನುಷ್ಯರಿಗೆ ಪ್ರಾಣಧಾರಣೆಯಲ್ಲಿ ಯಾವುದು ಆಶ್ರಯವೋ ಅಂತಹ ಈ ಆಯುಷ್ಯವೆಂಬ ಕಂಬವು, ಮೃತ್ಯುವೆಂಬ ಕ್ರೂರವಾದ ಆನೆಯಿಂದ ಬಲಾತ್ಕಾರವಾಗಿ ಬೀಳಿಸಲ್ಪಡುತ್ತದೆ.

**ಶರೀರಬಲಮೇತಚ್ಚ ಗಜಕರ್ಣವದಸ್ಥಿರಮ್ ।**
**ರೋಗಾ[೫]ಖೂಪಹತಂ ಚೇದಂ [೬]ಜರದ್ದೇಹಕುಟೀರಕಮ್ ॥ ೮೯ ॥**

ಈ ದೇಹಶಕ್ತಿಯಾದರೋ ಆನೆಯ ಕಿವಿಯಂತೆ ಅಸ್ಥಿರವಾದುದು. ಈ ಶಿಥಿಲ ವಾಗುತ್ತಿರುವ ಶರೀರವೆಂಬ ಗುಡಿಸಿಲು ರೋಗವೆಂಬ ಇಲಿಯಿಂದ ಬಾಧಿಸಲ್ಪಟ್ಟಿ ರುವುದು.

**ಇತ್ಯಶಾಶ್ವತಮಪ್ಯೇತದ್ರಾಜ್ಯಾದಿ ಭರತೇಶ್ವರಃ ।**
**ಶಾಶ್ವತಂ ಮನ್ಯತೇ ಕಷ್ಟಂ ಮೋಹೋಪಹತಚೇತನಃ ॥ ೯೦ ॥**

ಈ ಪ್ರಕಾರವಾಗಿ ಅನಿತ್ಯವಾಗಿದ್ದರೂ ರಾಜ್ಯವೇ ಮೊದಲಾದುದನ್ನು ಮೋಹ ದಿಂದ ಪೀಡಿತವಾದ ಚೈತನ್ಯಶಕ್ತಿಯುಳ್ಳ ಭರತೇಶ್ವರನು ನಿತ್ಯವನ್ನಾಗಿ ತಿಳಿಯುತ್ತಾನೆ. ಕಷ್ಟ !''

**ಚಿರ[೭]ಮಾಕಲಯನ್ನೇವಮಗ್ರಜಸ್ಯಾ[೮]ನುದಾತ್ತತಾಮ್ ।**
**ವ್ಯಾಜಹಾರೈನಮುದ್ದಿಶ್ಯ ಗಿರಃ ಪ್ರಪರುಷಾಕ್ಷರಾಃ ॥ ೯೧ ॥**

ಈ ಪ್ರಕಾರವಾಗಿ ಬಹುಕಾಲದವರೆಗೆ ವಿಚಾರಮಾಡುವವನಾಗಿ ಅಣ್ಣನ ನಿಕೃಷ್ಟ ತ್ವವನ್ನು ಉದ್ದೇಶಿಸಿ ಈ ಭರತೇಶ್ವರನನ್ನು ಕುರಿತು ಕಠೋರವಾದ ಅಕ್ಷರಗಳುಳ್ಳ ಮಾತುಗಳನ್ನು ಹೇಳಿದನು.

**ಶೃಣು ಭೋ ! ನೃಪಶಾರ್ದೂಲ ಕ್ಷಣಂ [೯]ವೈಲಕ್ಷ್ಯಮುತ್ಸೃಜ ।**
**[೧೦]ಮುಹ್ಯತೇದಂ ತ್ವಯಾ[೧೧]ಲಂಬಿ [೧೨]ದುರೀಹಮತಿಸಾಹಸಮ್॥ ೯೨ ॥**

''ಎಲೈ ರಾಜಶ್ರೇಷ್ಠನೇ ! ಕೇಳು. ಒಂದು ಕ್ಷಣಕಾಲದವರೆಗೆ ಆಶ್ಚರ್ಯದಿಂದ ಕೂಡಿರುವಿಕೆಯನ್ನು ಬಿಡು. ಭ್ರಮೆಗೊಂಡಿರುವವನಾದ ನಿನ್ನಿಂದ ದುಶ್ಚೇಷ್ಟೆಯುಳ್ಳ ಈ ಅತ್ಯಂತ ಸಾಹಸವು ಆಶ್ರಯಿಸಲ್ಪಟ್ಟಿತು–ನೀನು ದುಸ್ಸಾಹಸವನ್ನು ಮಾಡಿದೆ.

**ಅಭೇದ್ಯೇ ಮಮ ದೇಹಾದ್ರೌ ತ್ವಯಾ ಚಕ್ರಂ ನಿಯೋಜಿತಮ್ ।**
**ವಿದ್ಧ್ಯ[೧೩]ಕಿಂಚಿತ್ಕರಂ ವಾಜ್ರೇ ಶೈಲೇ ವಜ್ರಮಿವಾಪತತ್ ॥ ೯೩ ॥**

ವಜ್ರಮಯವಾದ ಪರ್ವತದಲ್ಲಿ ಬೀಳುತ್ತಿರುವ ವಜ್ರದೋಪಾದಿಯಲ್ಲಿ ಭೇದಿಸಲಶಕ್ಯವಾದ ನನ್ನ ಶರೀರವೆಂಬ ಪರ್ವತದಲ್ಲಿ ನಿನ್ನಿಂದ ಪ್ರಯೋಗಿಸಲ್ಪಟ್ಟ ಚಕ್ರವು ಏನೂ ಮಾಡಲಾರದೆಂದು ತಿಳಿ.

**ಅನ್ಯಚ್ಚ [೧೪]ಭ್ರಾತೃಭಾಂಡಾನಿ ಭಂಕ್ತ್ವಾ ರಾಜ್ಯಂ ಯದೀಪ್ಸಿತಮ್ ।**
**ತ್ವಯಾ ಧರ್ಮೋ ಯಶಶ್ಚೈವ [೧೫]ತೇನ [೧೬]ಪೇಶಲಮಾರ್ಜಿತಮ್ ॥**

ಮತ್ತೂ ನಿನ್ನಿಂದ ಯಾವ ಕಾರಣದಿಂದ ಸಾಮಾನ್ಯಸಹೋದರರನ್ನು ಭೇದಿಸಿ–ನಾಶಮಾಡಿ ರಾಜ್ಯವು ಅಪೇಕ್ಷಿಸಲ್ಪಟ್ಟಿತೋ ಆ ರಾಜ್ಯಾಭಿಲಾಷೆಯ ಕಾರಣದಿಂದ ಪ್ರಶಸ್ತವಾದ ಧರ್ಮವೂ ಕೀರ್ತಿಯೂ ಸಂಪಾದಿಸಲ್ಪಟ್ಟುವು. (ಒಳ್ಳೆಯ

೧ ಕ್ರೂರಗಜ. ೨ ಪಾತ್ಯತೇ. ೩ ಆಶ್ರಯಣಂ ಸಹಾಯೋ ವಾ. ೪ ಪ್ರಾಣಧಾರಣೇ. ೫ ಮೂಷಿಕ. ೬ ಜೀರ್ಣ. ೭ ವಿಚಾರಯನ್ನೇವ. ೮ ನಿಕೃಷ್ಟತಾಂ. ೯ ವಿಸ್ಮಯಾನ್ವಿತತ್ವಂ ಲಜ್ಜಾತ್ವಂ ವಾ. ೧೦ ಮುಹ್ಯತೀತಿಮುಹ್ಯನ್ತೇನ. ೧೧ ಆಶ್ರಿತಂ. ೧೨ ದುಶ್ಚೇಷ್ಟಿತಂ. ೧೩ ಕಿಮಪಿ ಕರ್ತುಮಸಮರ್ಥಮಿತ್ಯರ್ಥಃ. ೧೪ ಭ್ರಾತೃಸಾಮಾನ್ಯಾನಿ. ೧೫ ರಾಜ್ಯಾಭಿಲಾಷಕಾರಣೇನ. ೧೬ ಪ್ರಶಸ್ತಂ.

ಧರ್ಮವನ್ನೂ ಕೀರ್ತಿಯನ್ನೂ ಸಂಪಾದಿಸಿದೆಯೆಂದು ಸ್ತುತಿನಿಂದೆಯು ತೋರು ತ್ತದೆ).

**ಚಕ್ರಭೃದ್ಭರತಃ [೧]ಸ್ರಷ್ಟುಃ ಸೂನುರಾದ್ಯಸ್ಯ ಯೋಗ್ರಣೀಃ ।**
**ಕುಲಸ್ಯೋ[೨]ದ್ಧಾರಕಃ ಸೋಭೂದಿತೀ[೩]ಡಾಸ್ಥಾಪಿ ಚ ತ್ವಯಾ ॥ ೯೫ ॥**

'ಆದಿಬ್ರಹ್ಮನ ಜ್ಯೇಷ್ಠಪುತ್ರನೂ ಚಕ್ರವರ್ತಿಯೂ ಆದ ಭರತನು ಕುಲೋದ್ಧಾ ರಕನಾದನು' ಎಂಬ ಸ್ತುತಿಯೂ ನಿನ್ನಿಂದ ಸ್ಥಾಪಿಸಲ್ಪಟ್ಟಿತು.

**ಜಿತಾಂ ಚ ಭವತೈವಾದ್ಯ ಯತ್ಪಾಪೋಪಹತಾಮಿಮಾಮ್ ।**
**ಮನ್ಯಸೇ[೪]ನನ್ಯಭೋಗೀನಾಂ ನೃಪಶ್ರಿಯಮನಶ್ವರೀಮ್ ॥ ೯೬ ॥**

ರಾಜನೆ ! ನೀನು ಸಂಪತ್ತಿಯನ್ನು ನಶ್ವರವಲ್ಲದುದನ್ನಾಗಿಯೂ ಬೇರೆಯವರ ಭೋಗಕ್ಕೆ ಯೋಗ್ಯವಲ್ಲದುದನ್ನಾಗಿಯೂ ತಿಳಿಯುತ್ತೀಯೆ. ಈ ದಿವಸ ಪಾಪದಿಂದ ಕೂಡಿದ ಈ ಸಂಪತ್ತಿಯನ್ನು ನಿನ್ನಿಂದಲೇ ಜಯಿಸಲ್ಪಟ್ಟುದುದನ್ನಾಗಿಯೂ ತಿಳಿಯು ತ್ತೀಯೆ.

**ಪ್ರೇಯಸೀಯಂ ತವೈವಾಸ್ತು ರಾಜ್ಯಶ್ರೀರ್ಯಾ ತ್ವಯಾ[೫]ದೃತಾ ।**
**ನೋಚಿತೈಷಾ ಮಮಾಯುಷನ್ನ [೬]ಬಂಧೋ ನು ಸತಾಂ ಮುದೇ ॥**

ಆಯುಷ್ಮಂತನೆ ! ನಿನ್ನಿಂದ ಯಾವ ರಾಜ್ಯಲಕ್ಷ್ಮಿಯು ಆದರಿಸಲ್ಪಟ್ಟಳೋ ಇವಳು ನಿನಗೇ ಪ್ರಿಯಳಾಗಿರಲಿ. ನನಗೆ ಇವಳು ಯೋಗ್ಯಳಲ್ಲ. ಪಾಪಬಂಧದ ಕಾರಣವನ್ನು ಪರಿಗ್ರಹಿಸುವಿಕೆಯಾದರೋ ಸತ್ಪುರುಷರ ಸಂತೋಷಕ್ಕೆ ಕಾರಣವಾಗುವುದಿಲ್ಲ.

**ದೂಷಿತಾಂ [೭]ಕಂಟಕೈರೇನಾಂ ಫಲಿತಾಮಪಿ ತೇ ಶ್ರಿಯಮ್ ।**
**ಕರೇಣಾಪಿ ಸ್ಪೃಶೇದ್ಧೀಮಾನ್ ಲತಾಂ ಕಂಟಕಿನೀಂ ಚ ಕಃ ॥ ೯೮ ॥**

ಶತ್ರುಗಳಿಂದ ದೂಷಿತವಾದ ಈ ನಿನ್ನ ಸಂಪತ್ತಿಯು ಪ್ರಯೋಜನವುಳ್ಳು ದಾದರೂ ಇದನ್ನು ಬುದ್ಧಿಶಾಲಿಯಾದ ಯಾವನು, ಮುಳ್ಳುಗಳುಳ್ಳ ಬಳ್ಳಿಯನ್ನೋಪಾದಿಯಲ್ಲಿ , ಕೈಯಿಂದಲಾದರೂ ಮುಟ್ಟುವನು ?

**ವಿಷಕಂಟಕಜಾಲೀವ ತ್ಯಾಜ್ಯೈಷಾ ಸರ್ವಥಾಪಿ ನಃ ।**
**ನಿಷ್ಕಂಟಕಾಂ ತಪೋಲಕ್ಷ್ಮೀಂ ಸ್ವಾಧೀನಾಂ ಕರ್ತುಮಿಚ್ಛತಾಮ್ ॥ ೯೯ ॥**

ನಿಷ್ಕಂಟಕಳಾದ ತಪೋಲಕ್ಷ್ಮಿಯನ್ನು ಸ್ವಾಧೀನಮಾಡಲಿಚ್ಛಿಸುವ ನಮಗೆ ವಿಷದ ಮುಳ್ಳುಗಳುಳ್ಳ ಮೆಳೆ–ಪೊದರಿನಂತಿರುವ ಈ ರಾಜ್ಯಸಂಪತ್ತಿಯು ಸಂಪೂರ್ಣ ವಾಗಿಯೂ ತ್ಯಜಿಸುವುದಕ್ಕೆ ಯೋಗ್ಯವಾಗಿದೆ.

**[೮]ಮೃಷ್ಯತಾಂ ಚ ತದಸ್ಮಾಭಿಃ ಕೃತಮಾಗೋ ಯದೀದೃಶಮ್ ।**
**ಪ್ರಚ್ಯುತೋ ವಿನಯಾತ್ಸೋಹಂ [೯]ಸ್ವಂ [೧೦]ಚಾಪಲ[೧೧]ಮದೀದೃಶಮ್ ॥**

ನಮ್ಮಿಂದ ಇಂತಹ ಯಾವ ಅಪರಾಧವು ಮಾಡಲಾಗಿದೆಯೋ ಅದನ್ನು ಕ್ಷಮಿಸಬೇಕು. ಆ ಪ್ರಸಿದ್ಧನಾದ ನಾನು ವಿನಯದಿಂದ ಚ್ಯುತನಾದೆನು. ನನ್ನ ಚಪಲತ್ವ ವನ್ನು ತೋರಿಸಿದೆನು. ರಾಜ್ಯಸಂಪತ್ತನ್ನು ತ್ಯಜಿಸುವ ತಪ್ಪನ್ನೂ ಅವಿನಯವನ್ನೂ ಚಪಲತ್ವವನ್ನು ತೋರಿಸಿದುದನ್ನೂ ಕ್ಷಮಿಸಬೇಕೆಂದು ಭಾವವು.''

**ಇತ್ಯುಚ್ಚರನ್ ಗಿರಾ[೧೨]ಮೋಘೋ ಮುಖಾದ್ಬಾಹುಬಲೀಶಿತುಃ ।**
**ಧ್ವನಿ[೧೩]ರಬ್ದಾದಿವಾಪಪ್ತ[೧೪]ಜ್ಜಿಷ್ಣೋರಾಹ್ಲಾದಯನ್ಮನಃ ॥ ೧೦೧ ॥**

ಈ ಪ್ರಕಾರವಾಗಿ ಬಾಹುಬಲಿಸ್ವಾಮಿಯ ಮುಖದಿಂದ ಹೊರಟ ವಚನಗಳ ಸಮೂಹವು, ಮೇಘದಿಂದ ಹೊರಟ ಧ್ವನಿಯಂತೆ, ಜಯಶೀಲನಾದ ಭರತೇಶ್ವರನ

೧ ಆದಿಬ್ರಹ್ಮಣಃ. ೨ ಉತ್ಕರ್ಷೇಣ ಆಹಾರಕ ಇತಿ ಧ್ವನಿಃ, ಕುಲಾಪಹಾರಕ ಇತ್ಯರ್ಥಃ. ೩ ಸ್ತುತಿಃ. ೪ ಅನನ್ಯಭೋಗೋಚಿತಾಂ. ೫ ಆದರಣೀಕೃತಾ. ೬ ಬಂಧಕಾರಣಪರಿಗ್ರಹಃ. ೭ ಶತ್ರುಭಿಃ. ೮ ಕ್ಷಮ್ಯತಾಂ. ೯ ಮದೀಯಂ. ೧೦ ಚಪಲತ್ವಂ. ೧೧ ದರ್ಶಯಾಮಿ ಸ್ಮ. ೧೨ ಪ್ರವಾಹಃ. ೧೩ ಮೇಘಾತ್. ೧೪ ಭರತಸ್ಯ.

ಮನಸ್ಸನ್ನು ಸಂತೋಷಪಡಿಸುವುದಾಗಿ ಬಿದ್ದಿತು. ವಚನಪರಂಪರೆಯು ಹೊರಟಿತೆಂದು ಭಾವವು.

**ಹಾ ದುಷ್ಟಂ ಕೃತಮಿತ್ಯುಚ್ಚೈರಾತ್ಮಾನಂ ಸ ವಿಗರ್ಹಯನ್ ।**
**[೧]ಅನ್ವವಾತಪ್ತ ಪಾಪೇನ ಕರ್ಮಣಾ ಸ್ವೇನ ಚಕ್ರರಾಟ್ ॥ ೧೦೨ ॥**

"ಅಯ್ಯೋ! ನಿಂದ್ಯಕಾರ್ಯವನ್ನು ಮಾಡಿದೆನು" ಎಂಬುದಾಗಿ ತನ್ನನ್ನು ನಿಂದಿಸಿಕೊಳ್ಳುವವನಾದ ಆ ಚಕ್ರೇಶ್ವರನು ತನ್ನ ಪಾಪಕರ್ಮದಿಂದ ಪಶ್ಚಾತ್ತಾಪವನ್ನು ಮಾಡಿದನು. ತಾನು ಮಾಡಿದ ದುಷ್ಕಾರ್ಯಕ್ಕಾಗಿ ಪಶ್ಚಾತ್ತಾಪಪಟ್ಟನೆಂದರ್ಥವು.

**ಪ್ರಯುಕ್ತಾನುನಯಂ ಭೂಯೋ ಮನುಮಂತ್ಯಂ [೨]ಸ ಧೀರಯನ್ ।**
**ನ್ಯವೃತನ್ನ ಸ್ವ[೩]ಸಂಕಲ್ಪಾದಹೋ ಸ್ಥೈರ್ಯಂ [೪]ಮನಸ್ವಿನಾಮ್ ॥ ೧೦೩ ॥**

ಪುನಃ ದೀನವಚನವನ್ನು ಪ್ರಯೋಗಿಸಿದ ಕೊನೆಯ ಮನುವಾದ ಭರತನನ್ನು ತಿರಸ್ಕರಿಸುವ ಬಾಹುಬಲಿಸ್ವಾಮಿಯು ತನ್ನ ವೈರಾಗ್ಯಸಂಕಲ್ಪದಿಂದ ವಿಮುಖನಾಗಲಿಲ್ಲ. ಮಹಾಪುರುಷರ ಸ್ಥಿರಭಾವವು ಆಶ್ಚರ್ಯಕರವಾದುದು.

**ಮಹಾಬಲಿನಿ ನಿಕ್ಷಿಪ್ತರಾಜರ್ದ್ಧಿಃ [೫]ಸ ಸ್ವನಂದನೇ ।**
**ದೀಕ್ಷಾಮುಪಾದದೇ ಜೈನೀಂ [೬]ಗುರೋರಾರಾಧಯನ್ಪದಮ್ ॥ ೧೦೪ ॥**

ಮಹಾಬಲಿಯೆಂಬ ತನ್ನ ಪುತ್ರನಲ್ಲಿ ರಾಜಸಂಪತ್ತಿಯನ್ನಿರಿಸಿದ ಆ ಬಾಹುಬಲಿಸ್ವಾಮಿಯು ಆದೀಶ್ವರಸ್ವಾಮಿಯ ಪಾದವನ್ನು ಆರಾಧಿಸುವವನಾಗಿ ಜಿನೇಶ್ವರನ ಸಂಬಂಧಿಯಾದ ದೀಕ್ಷೆಯನ್ನು ತೆಗೆದುಕೊಂಡನು. ಆದೀಶ್ವರಸ್ವಾಮಿಯ ಬಳಿಯಲ್ಲಿ ಜಿನದೀಕ್ಷೆಯನ್ನು ಸ್ವೀಕರಿಸಿದನೆಂದು ಭಾವವು.

**ದೀಕ್ಷಾವಲ್ಲ್ಯಾ [೭]ಪರಿಷ್ವಕ್ತಸ್ತ್ಯಕ್ತಾಶೇಷಪರಿಚ್ಛದಃ ।**
**ಸ ರೇಜೇ [೮]ಸಲತಃ [೯]ಪತ್ರಮೋಕ್ಷಕ್ಷಾಮ ಇವದ್ರುಮಃ ॥ ೧೦೫ ॥**

ಸಮಸ್ತ ಪರಿಗ್ರಹಗಳನ್ನು ತ್ಯಜಿಸಿದವನೂ ದೀಕ್ಷೆಯೆಂಬ ಬಳ್ಳಿಯಿಂದ ಆಲಿಂಗಿಸಲ್ಪಟ್ಟವನೂ ಆದ ಆ ಬಾಹುಬಲಿಸ್ವಾಮಿಯು ಬಳ್ಳಿಯೊಡನೆ ಕೂಡಿರುವುದೂ ಎಲೆಗಳನ್ನು ಬಿಡುವುದರಿಂದ ಕೃಶವೂ ಆದ ವೃಕ್ಷದಂತೆ, ಶೋಭಿಸಿದನು.

**ಗುರೋರನುಮತೋ[೧೦]ಧೀತೀ ದಧದೇಕವಿಹಾರಿತಾಮ್ ।**
**ಪ್ರತಿಮಾಯೋಗ[೧೧]ಮಾವರ್ಷಮಾತಸ್ಥೇ ಕಿಲ [೧೨]ಸಂವೃತಃ ॥ ೧೦೬ ॥**

ಗುರುವಿನ ಆಜ್ಞೆಯನ್ನನುಸರಿಸಿ ಶಾಸ್ತ್ರಾಧ್ಯಯನವನ್ನು ಮಾಡಿದವನೂ ಏಕವಿಹಾರಿತ್ವವನ್ನು (ಒಬ್ಬನೇ ಸಂಚಾರಮಾಡುವಿಕೆಯನ್ನು) ಧರಿಸಿದವನೂ ಗುಪ್ತವಾಗಿ–ಏಕಾಕಿಯಾಗಿರುವವನೂ ಅಥವಾ ಜಿತೇಂದ್ರಿಯನೂ ಆದ ಬಾಹುಬಲಿಸ್ವಾಮಿಯು ಒಂದು ವರ್ಷದವರೆಗೆ ಪ್ರತಿಮಾಯೋಗದಲ್ಲಿದ್ದನಂತೆ. ಒಂದೇಸ್ಥಳದಲ್ಲಿ ನಿಂತು ತಪಸ್ಸನ್ನು ಮಾಡಿದನೆಂದರ್ಥವು.

**ಸ [೧೩]ಶಂಸಿತವ್ರತೋ[೧೪]ನಾಶ್ವಾನ್ವನವಲ್ಲೀತತಾಂತಿಕಃ ।**
**ವಲ್ಮೀಕರಂಧ್ರನಿಃಸರ್ಪತ್ಸರ್ಪೈರಾಸೀದ್ಭಯಾನಕಃ ॥ ೧೦೭ ॥**

ಹೊಗಳಲ್ಪಟ್ಟ ವ್ರತವುಳ್ಳವನೂ ಉಪವಾಸವುಳ್ಳವನೂ ವನಲತೆಗಳಿಂದ ವ್ಯಾಪ್ತವಾದ ಸಮೀಪಪ್ರದೇಶವುಳ್ಳವನೂ ಆದ ಆ ಭುಜಬಲಿಸ್ವಾಮಿಯು ಹುತ್ತಗಳ ರಂಧ್ರಗಳಿಂದ ಹೊರಡುತ್ತಿರುವ ಸರ್ಪಗಳಿಂದ ಭಯಂಕರನಾಗಿದ್ದನು.

**ಶ್ವಸದಾವಿರ್ಭವ[೧೫]ದ್ಭೋಗಭುಜಂಗಶಿಶುಜೃಂಭಿತೈಃ ।**
**ವಿಷಾಂಕುರೈರಿವೋಪಾಂಘ್ರಿ ಸ ರೇಜೇ ವೇಷ್ಟಿತೋಭಿತಃ ॥ ೧೦೮ ॥**

ಪಾದಸಮೀಪದಲ್ಲಿ ವಿಷದ ಮೊಳಕೆಗಳಿಂದಲೋಪಾದಿಯಲ್ಲಿರುವುವೂ ಉಸಿರಾಡಿಸುತ್ತಿರುವುವೂ ಹೆಡೆಗಳನ್ನು ಬಿಡಿಸುತ್ತಿರುವುವೂ ಆದ ಹಾವಿನ ಮರಿಗಳ ಚೇಷ್ಟೆಗಳಿಂದ ಸುತ್ತಲೂ ವ್ಯಾಪ್ತನಾದ ಆ ಬಾಹುಬಲಿಸ್ವಾಮಿಯು ಶೋಭಿಸಿದನು. ಒಂದು ವರ್ಷಕಾಲ ಯೋಗಾರೂಢನಾಗಿರಲು ಬಳ್ಳಿಗಳೂ ಹುತ್ತಗಳೂ ಆವರಿಸಿದುವೆಂದು ಭಾವವು.

೧ ಪಶ್ಚಾತ್ತಾಪಮಕರೋತ್. ೨ ಭುಜಬಲೀ. ೩ ನಿಜವೈರಾಗ್ಯಾತ್. ೪ ಮಹತಾಂ. ೫ ಭುಜಬಲಿಸ್ವಾಮೀ. ೬ ಪುರುಪರಮೇಶ್ವರಸ್ಯ. ೭ ಆಲಿಂಗಿತಃ. ೮ ಲತಯಾಸಹಿತಃ. ೯ ಪರ್ಣಮೋಚನಕೃಶಃ. ೧೦ ಅಧೀತವಾನ್. ೧೧ ವರ್ಷಾವಧಿಂ. ೧೨ ನಿಭೃತಃ. ೧೩ ಸ್ತುತ. ೧೪ ಉಪವಾಸೀ. ೧೫ ಫಣಾ.

**ದಧಾನಃ ಸ್ಕಂಧಪರ್ಯಂತಲಂಬಿನೀಃ ಕೇಶವಲ್ಲರೀಃ ।**
**ಸೋ[೧]ನ್ವಗಾದೂಢಕೃಷ್ಣಾಹಿಮಂಡಲಂ [೨]ಹರಿಚಂದನಮ್ ॥ ೧೦೯ ॥**

ಭುಜಶಿರಸ್ಸುಗಳವರೆಗೆ ಜೋಲುತ್ತಿರುವ ಕೂದಲುಗಳೆಂಬ ಗೊಂಚಲುಗಳನ್ನು ಧರಿಸಿರುವ ಆ ಬಾಹುಬಲಿಸ್ವಾಮಿಯು ಕೃಷ್ಣಸರ್ಪಗಳ ಸಮೂಹವನ್ನು ಧರಿಸಿರುವ ಚಂದನವೃಕ್ಷವನ್ನು ಹೋಲುತ್ತಿದ್ದನು.

**[೩]ಮಾಧವೀಲತಯಾ ಗಾಢ[೪]ಮುಪಗೂಢಃ ಪ್ರಫುಲ್ಲಯಾ ।**
**ಶಾಖಾಬಾಹುಭಿರಾವೇಷ್ಟ್ಯ [೫]ಸಧ್ರೀಚ್ಯೇವ [೬]ಸಹಾಸಯಾ ॥ ೧೧೦ ॥**

ಬಾಹುಬಲಿಸ್ವಾಮಿಯು ಅರಳಿರುವ ಇರುವಂತಿಗೆಯ ಬಳ್ಳಿಯಿಂದ ಕೊಂಬೆಗಳೆಂಬ ತೋಳುಗಳಿಂದ ಸುತ್ತಿಕೊಂಡು, ನಗುತ್ತಿರುವ ಸಖಿಯಿಂದಲೋಪಾದಿಯಲ್ಲಿ, ದೃಢವಾಗಿ ಆಲಿಂಗಿಸಲ್ಪಟ್ಟನು.

**ವಿದ್ಯಾಧರೀಕರಾ[೭]ಲೂನಪಲ್ಲವಾ ಸಾ ಕಿಲಾಶುಷತ್ ।**
**ಪಾದಯೋಃ ಕಾಮಿನೀವಾಸ್ಯ [೮]ಸಾಮಿ ನಮ್ರಾ[೯]ನುನೇಷ್ಯತೀ ॥ ೧೧೧ ॥**

ಈ ಬಾಹುಬಲಿಸ್ವಾಮಿಯ ಪಾದಗಳಿಗೆ ಸ್ವಲ್ಪ ನಮ್ರಳಾಗಿ ದೈನ್ಯವನ್ನು ತೋರಿಸುವ ಕಾಮಿನಿಯಂತೆ ಆ ಇರುವಂತಿಗೆಯ ಬಳ್ಳಿಯು ವಿದ್ಯಾಧರಸ್ತ್ರೀಯರ ಕೈಗಳಿಂದ ಕತ್ತರಿಸಲ್ಪಟ್ಟ ತಳಿರುಗಳುಳ್ಳುದಾಗಿ ಸ್ವಲ್ಪ ಕಂದಿತಂತೆ.

**ರೇಜೇ ಸ [೧೦]ತದವಸ್ಥೋಽಪಿ ತಪೋ ದುಶ್ಚರಮಾಚರನ್ ।**
**ಕಾಮೀವ ಮುಕ್ತಿಕಾಮಿನ್ಯಾಂ ಸ್ಪೃಹಯಾಲುಃ ಕೃಶೀಭವನ್ ॥ ೧೧೨ ॥**

ಯೋಗಾವಸ್ಥೆಯಲ್ಲಿದ್ದರೂ, ಕಾಮುಕನಂತೆ, ಮುಕ್ತಿಯೆಂಬ ಕಾಮಿನಿಯಲ್ಲಿ ಅಭಿಲಾಷೆಯುಳ್ಳವನೂ ಕೃಶವಾಗುತ್ತಿರುವವನೂ ಕಠಿನತಪಸ್ಸನ್ನು ಮಾಡುತ್ತಿರುವವನೂ ಆದ ಆ ಬಾಹುಬಲಿಸ್ವಾಮಿಯು ಶೋಭಿಸುತ್ತಿದ್ದನು.

**ತಪ[೧೧]ಸ್ತನೂನಪಾತ್ತಾಪಸಂತಪ್ತಸ್ಯಾಸ್ಯ ಕೇವಲಮ್ ।**
**ಶರೀರಮಶುಷನ್ನೋ[೧೨]ರ್ಧ್ವಶೋಷಂ ಕರ್ಮಾ[೧೩]ಪ್ಯಶರ್ಮದಮ್ ॥**

ತಪಸ್ಸೆಂಬ ಬೆಂಕಿಯ ತಾಪದಿಂದ ತಪಿಸಿದ ಈ ಬಾಹುಬಲಿಸ್ವಾಮಿಯ ಬರೇ ಊರ್ಧ್ವಶರೀರವು ಒಣಗಲಿಲ್ಲ. ದುಃಖವನ್ನುಂಟುಮಾಡುವ ಕರ್ಮವೂ ಒಣಗಿತು. ಶರೀರವು ಕೃಶವಾದಹಾಗೆಲ್ಲ ಕರ್ಮವೂ ನಾಶವಾಯಿತೆಂದು ಭಾವವು.

**ತೀವ್ರಂ ತಪಸ್ಯತೋಽಪ್ಯಸ್ಯ ನಾಸೀತ್ಕಶ್ಚಿ[೧೪]ದುಪಪ್ಲವಃ ।**
**ಅಚಿಂತ್ಯಂ ಮಹತಾಂ ಧೈರ್ಯಂ ಯೇನ ನಾಯಾಂತಿ ವಿಕ್ರಿಯಾಮ್ ॥**

ಕಠಿನವಾಗಿ ತಪಸ್ಸನ್ನು ಮಾಡುವವನಾದರೂ ಈ ಬಾಹುಬಲಿಸ್ವಾಮಿಗೆ ಯಾವ ಉಪದ್ರವವೂ ಆಗಲಿಲ್ಲ. ಮಹಾಪುರುಷರ ಧೈರ್ಯವು ಅಚಿಂತ್ಯವಾದುದು. ಆದರಿಂದ ಅವರು ವಿಕಾರವನ್ನು ಹೊಂದುವುದಿಲ್ಲ.

**[೧೫]ಸರ್ವಂಸಹಃ [೧೬] ಕ್ಷಮಾಭಾರಂ ಪ್ರಶಾಂತಃ ಶೀತಲಂ ಜಲಮ್ ।**
**ನಿಃಸಂಗಃ ಪವನಂ [೧೭]ದೀಪ್ತಃ ಸ ಜಿಗಾಯ ಹುತಾಶನಮ್ ॥ ೧೧೫ ॥**

ಸಮಸ್ತ ಪರೀಷಹಗಳನ್ನೂ ಉಪಸರ್ಗಗಳನ್ನೂ ಸಹಿಸುವವನಾದ ಆ ಬಾಹುಬಲಿಸ್ವಾಮಿಯು ಭೂಮಿಯ ಭಾರ–ಗೌರವವನ್ನು ಜಯಿಸಿದನು; ಶಾಂತನಾಗಿ ಶೀತಲವಾದ ನೀರನ್ನು ಜಯಿಸಿದನು; ಪರಿಗ್ರಹಸಂಬಂಧವಿಲ್ಲದವನಾಗಿ ಗಾಳಿಯನ್ನು

೧ ಅನುಕರೋತಿ ಸ್ಮ. ೨ ಚಂದನವೃಕ್ಷಂ. ೩ ವಾಸಂತ್ಯಾ. ೪ ಆಲಿಂಗಿತಃ. ೫ ಸಖ್ಯಾ. ೬ ಹಾಸಸಹಿತಯಾ. ೭ ಛೇದಿತ. ೮ ಈಷತ್. ೯ ಅನುನಯಂ ಕುರ್ವತೀ. ೧೦ ಯೋಗಾವಸ್ಥಃ. ೧೧ ಅಗ್ನಿ. ೧೨ ಊರ್ಧ್ವಶರೀರಮಿತ್ಯರ್ಥಃ. ೧೩ ದುಃಖದಂ. ೧೪ ಉಪದ್ರವಃ. ೧೫ ಸಕಲಪರೀಷಹೋಪಸರ್ಗಸಹಮಾನಃ. ೧೬ ಭೂಗೌರವಮಿತ್ಯರ್ಥಃ. ೧೭ ತಪೋವಿಶೇಷೇಣ ಪ್ರದೀಪ್ತಃ.

ಜಯಿಸಿದನು; ತಪೋವಿಶೇಷದಿಂದ ಪ್ರಜ್ವಲಿಸುವವನಾಗಿ ಬೆಂಕಿಯನ್ನು ಜಯಿಸಿದನು. ಭೂಮಿ ನೀರು ಗಾಳಿ ಬೆಂಕಿಗಳಲ್ಲಿರುವ ಸಹನಶೀಲತ್ವ ಶಾಂತತ್ವ ನಿಸ್ಸಂಗತ್ವ ದೀಪ್ತತ್ವ ಗುಣಗಳಿಂದ ಆ ಪದಾರ್ಥಗಳನ್ನು ಮೀರಿಸಿದನೆಂದು ಭಾವವು.

**ಕ್ಷುಧಂ ಪಿಪಾಸಾಂ ಶೀತೋಷ್ಣಂ ಸದಂಶಮಶಕದ್ವಯಮ್ ।**
**ಮಾರ್ಗಾಚ್ಯವನಸಂಸಿದ್ಧ್ಯೈ [೧]ದ್ವಂದ್ವಾನಿ ಸಹತೇ ಸ್ಮ ಸಃ ॥ ೧೧೬ ॥**

ಆ ಬಾಹುಬಲಿಸ್ವಾಮಿಯು ಮುನಿಮಾರ್ಗದಿಂದ ತಪ್ಪದಿರುವುದರ ಸಿದ್ಧಿಗೋಸ್ಕರ ಹಸಿವು ಬಾಯಾರಿಕೆ ಶೀತ ಉಷ್ಣ ಸೊಳ್ಳೆ ಮೊದಲಾದ ಜಂತುಗಳ ಕಚ್ಚುವಿಕೆ ಈ ಪರೀಷಹ–ಬಾಧೆಗಳನ್ನು ಸಹಿಸಿದನು.

**ಸ [೨]ನಾಗ್ನ್ಯಂ ಪರಮಂ ಬಿಭ್ರನ್ನಾಭೇದೀಂದ್ರಿಯಧೂರ್ತಕೈಃ ।**
**ಬ್ರಹ್ಮಚರ್ಯಸ್ಯ [೩]ಸಾ [೪]ಗುಪ್ತಿರ್ನಾಗ್ನ್ಯಂ ನಾಮ ಪರಂ ತಪಃ ॥ ೧೧೭ ॥**

ಉತ್ಕೃಷ್ಟವಾದ ನಗ್ನತ್ವವನ್ನು ಧರಿಸಿದವನಾದ ಆ ಬಾಹುಬಲಿಸ್ವಾಮಿಯನ್ನು ಇಂದ್ರಿಯಗಳೆಂಬ ಧೂರ್ತರು ಭೇದಿಸಲಿಲ್ಲ. ಬ್ರಹ್ಮಚರ್ಯವ್ರತದ ಪ್ರಸಿದ್ಧವಾದ ರಕ್ಷಣೆಯೇ ನಗ್ನತ್ವವೆಂಬ ಶ್ರೇಷ್ಠವಾದ ತಪಸ್ಸಾಗಿರುವುದು. ಬ್ರಹ್ಮಚರ್ಯದ ರಕ್ಷಣೆಯೇ ನಿಜವಾದ ನಗ್ನತ್ವವೆಂಬ ಶ್ರೇಷ್ಠತಪಸ್ಸೆಂದು ಭಾವವು.

**[೫]ರತಿಂ ಚಾ[೬]ರತಿಮಪ್ಯೇಷ ದ್ವಿತಯಂ ಸ್ಮ [೭]ತಿತಿಕ್ಷತೇ ।**
**ನ ರತ್ಯರತಿಬಾಧಾ ಹಿ [೮]ವಿಷಯಾನಭಿಷಂಗಿಣಃ ॥ ೧೧೮ ॥**

ಈ ಬಾಹುಬಲಿಸ್ವಾಮಿಯು ರಾಗದ್ವೇಷಗಳೆರಡನ್ನೂ ಸಹಿಸಿದನು (ರಾಗದ್ವೇಷಗಳಿಂದುಂಟಾಗುವ ಮನೋವಿಕಾರಕ್ಕೆ ಎಡೆಗೊಡಲಿಲ್ಲವೆಂದರ್ಥವು). ವಿಷಯವಾಂಛೆಯಿಲ್ಲದವನಿಗೆ ದ್ವೇಷದಿಂದುಂಟಾಗುವ ಬಾಧೆಯು ಇಲ್ಲವಷ್ಟೆ ?

**ನಾಸ್ಯಾಸೀತ್ ಸ್ತ್ರೀಕೃತಾ ಬಾಧಾ ಭೋಗ[೯]ನಿರ್ವೇದಮಾಪುಷಃ ।**
**ಶರೀರಮಶುಚಿ [೧೦]ಸ್ತ್ರೈಣಂ ಪಶ್ಯತಶ್ಚರ್ಮಪುತ್ರಿಕಾಮ್ ॥ ೧೧೯ ॥**

ಭೋಗವಸ್ತುಗಳಲ್ಲಿ ವೈರಾಗ್ಯವನ್ನು ಹೊಂದಿದವನೂ ಸ್ತ್ರೀಸಂಬಂಧಿಯಾದ ಶರೀರವನ್ನು ಅಶುಚಿಯಾದ ಚರ್ಮದ ಬೊಂಬೆಯನ್ನಾಗಿ ನೋಡುತ್ತಿರುವವನೂ ಆದ ಈ ಬಾಹುಬಲಿಸ್ವಾಮಿಗೆ ಸ್ತ್ರೀಯರಿಂದ ಮಾಡಲ್ಪಟ್ಟ ಬಾಧೆಯು ಇರಲಿಲ್ಲ.

**[೧೧]ಸ್ಥಿತಶ್ಚರ್ಯಾಂ [೧೨]ನಿಷದ್ಯಾಂ ಚ ಶಯ್ಯಾಂ ಚಾಸೋಢ ಹೇಲಯಾ ।**
**ಮನಸಾನಭಿಸಂಧಿತ್ಸ[೧೩]ನ್ನುಪಾನಚ್ಛಯನಾಸನಮ್ ॥ ೧೨೦ ॥**

ಪಾದರಕ್ಷೆ– ಹಾವುಗೆಯನ್ನೂ ಹಾಸಿಗೆಯನ್ನೂ ಪೀಠವನ್ನೂ ಮನಸ್ಸಿನಿಂದ ನೆನೆಯದಿರುವವನೂ ಕಾಯೋತ್ಸರ್ಗದಲ್ಲಿರುವವನೂ ಆದ ಬಾಹುಬಲಿಸ್ವಾಮಿಯು ಸಂಚಾರದ ಬಾಧೆಯನ್ನೂ ಕುಳಿತುಕೊಳ್ಳುವಾಗ ಉಂಟಾಗುವ ಬಾಧೆಯನ್ನೂ ಮಲಗುವಾಗ ಉಂಟಾಗುವ ಬಾಧೆಯನ್ನೂ ಲೀಲೆಯಿಂದ ಸಹಿಸಿದನು.

**ಸ ಸೇಹೇ ವಧ[೧೪]ಮಾಕ್ರೋಶಂ ಪರಮಾರ್ಥವಿದಾಂವರಃ ।**
**ಶರೀರಕೇ ಸ್ವಯಂ ತ್ಯಾಜ್ಯೇ ನಿಃಸ್ಪೃಹೋ[೧೫]ನಭಿನಂದಥುಃ ॥ ೧೨೧ ॥**

ತಾನಾಗಿ ತ್ಯಜಿಸುವುದಕ್ಕೆ ಯೋಗ್ಯವಾದ ಶರೀರದಲ್ಲಿ ಇಚ್ಛೆಯಿಲ್ಲದವನೂ ಅದರಲ್ಲಿ ಆನಂದವಿಲ್ಲದವನೂ ಪರಮಾರ್ಥವಿಷಯಗಳನ್ನು ತಿಳಿದವರಲ್ಲಿ ಶ್ರೇಷ್ಠನೂ ಆದ ಆ ಬಾಹುಬಲಿಸ್ವಾಮಿಯು ಇತರರು ತನಗೆ ಮಾಡುವ ವಧೆಯನ್ನೂ ತಿರಸ್ಕಾರವನ್ನೂ ಸಹಿಸಿದನು.

**[೧೬]ಯಾಚಿತ್ರಿಮೇಣ ನಾಸ್ಯೇಷ್ಟಾ [೧೭]ವಿಷ್ವಾಣೇನ ತನುಸ್ಥಿತಿಃ ।**
**[೧೮]ತೇನ [೧೯]ವಾಚಂಯಮೋ ಭೂತ್ವಾ ಯಾಚ್ಞಾಬಾಧಾಮಸೋಢ ಸಃ ॥**

೧ ಪರೀಷಹಾನ್. ೨ ನಗ್ನತ್ವಂ. ೩ ಪ್ರಸಿದ್ಧಾ. ೪ ರಕ್ಷಾ. ೫ ರಾಗಂ. ೬ ದ್ವೇಷಂ. ೭ ಸಹತೇ ಸ್ಮ, ತ್ಯಜತಿಸ್ಮ. ೮ ವಿಷಯವಾಂಛಾರಹಿತಸ್ಯ. ೯ ನಿರ್ವೇಗಂ ಗತಸ್ಯ. ೧೦ ಸ್ತ್ರೀಸಂಬಂಧಿ. ೧೧ ಕಾಯೋತ್ಸರ್ಗೇ ಸ್ಥಿತಃ. ೧೨ ಉಪವೇಶನಂ. ೧೩ ಪಾದರಕ್ಷಾ. ೧೪ ತಿರಸ್ಕಾರಂ. ೧೫ ಆನಂದರಹಿತಃ. ೧೬ ಯಾಚನಯಾ ನಿರ್ವೃತ್ತೇನ. ೧೭ ಭೋಜನೇನ. ೧೮ ಕಾರಣೇನ. ೧೯ ಮೌನೀಭೂತ್ವಾ.

ಈ ಬಾಹುಬಲಿಸ್ವಾಮಿಗೆ ಯಾಚನೆಯಿಂದುಂಟಾಗುವ ಭೋಜನದಿಂದ ಶರೀರ ರಕ್ಷಣೆಯು ಇಷ್ಟವಾಗಲಿಲ್ಲ. ಆ ಕಾರಣದಿಂದ ಅವನು ಮೌನವ್ರತವುಳ್ಳವನಾಗಿದ್ದು ಯಾಚನೆಯ ಬಾಧೆಯನ್ನು ಸಹಿಸಿದನು.

**[೧]ಜಲ್ಲಂ [೨]ಮಲಂ ತೃಣಸ್ಪರ್ಶಂ ಸೋಸೋಢೋ[೩]ಢೋತ್ತಮಕ್ಷಮಃ ।**
**ವ್ಯುತ್ಸೃಷ್ಟತನುಸಂಸ್ಕಾರೋ [೪]ನಿರ್ವಿಶೇಷಸುಖಾಸುಖಃ ॥ ೧೨೩ ॥**

ಉತ್ತಮಕ್ಷಮೆಯನ್ನು ಧರಿಸಿದವನೂ ಶರೀರಸಂಸ್ಕಾರವನ್ನು ಪರಿತ್ಯಜಿಸಿದವನೂ ಸುಖವನ್ನೂ ದುಃಖವನ್ನೂ ಸಮಾನವಾಗಿ ತಿಳಿಯುವವನೂ ಆದ ಆ ಬಾಹುಬಲಿಸ್ವಾಮಿಯು ಸರ್ವಾಂಗದಲ್ಲಿ ಉಂಟಾಗುವ ಕೊಳೆ–ಬೆವರಿನ ಬಾಧೆಯನ್ನೂ ಮಲಬಾಧೆಯನ್ನೂ ಹುಲ್ಲುಕಡ್ಡಿ ಚುಚ್ಚುವಿಕೆಯ ಬಾಧೆಯನ್ನೂ ಸಹಿಸಿದನು.

**ರೋಗಸ್ಯಾ[೫]ಯತನಂ ದೇಹ[೬]ಮಾಧ್ಯಾಯನ್ ಧೀರಧೀರಸೌ ।**
**ವಿವಿಧಾತಂಕಜಾಂ ಬಾಧಾಂ ಸಹತೇ ಸ್ಮ ಸುದುಃಸಹಾಮ್ ॥ ೧೨೪ ॥**

ಶರೀರವನ್ನು ರೋಗದ ಮನೆಯನ್ನಾಗಿ ಸ್ಮರಿಸುವವನೂ ಗಂಭೀರವಾದ ಬುದ್ಧಿಯುಳ್ಳವನೂ ಆದ ಈ ಬಾಹುಬಲಿಸ್ವಾಮಿಯು ಸಹಿಸುವುದಕ್ಕೆ ಅತ್ಯಂತ ಕಠಿನವೂ ನಾನಾಪ್ರಕಾರವಾದ ವ್ಯಾಧಿಗಳಿಂದುಂಟಾದುದೂ ಆದ ಬಾಧೆಯನ್ನು ಸಹಿಸಿದನು.

**ಪ್ರಜ್ಞಾಪರೀಷಹಂ ಪ್ರಾಜ್ಞೋ ಜ್ಞಾನಜಂ ಗರ್ವಮುತ್ಸೃಜನ್ ।**
**[೭]ಆಸರ್ವಜ್ಞಂ [೮]ತದುತ್ಕರ್ಷಾತ್ಸ [೯]ಸಸಾಹ ಸಸಾಹಸಃ ॥ ೧೨೫ ॥**

ಜ್ಞಾನದಿಂದುಂಟಾದ (ಜ್ಞಾನಿಯೆಂಬ) ಅಹಂಕಾರವನ್ನು ತ್ಯಜಿಸಿದವನೂ ಬುದ್ಧಿಶಾಲಿಯೂ ಆದ ಆ ಬಾಹುಬಲಿಸ್ವಾಮಿಯು ಆ ಜ್ಞಾನದ ಆಧಿಕ್ಯದಿಂದ ಸರ್ವಜ್ಞತ್ವವು(ಕೇವಲಜ್ಞಾನವು)ಪ್ರಾಪ್ತವಾಗುವವರೆಗೂ ಪ್ರಜ್ಞಾಪರೀಷಹ–ಬಾಧೆಯನ್ನು ಸಾಹಸ–ಪ್ರಯತ್ನವುಳ್ಳವನಾಗಿ ಸಹಿಸಿದನು.

**ಸ ಸತ್ಕಾರಪುರಸ್ಕಾರೇ ನಾಸೀಜ್ಜಾತು ಸಮುತ್ಸುಕಃ ।**
**[೧೦]ಪುರಸ್ಕೃತೋ ಮುದಂ ನಾಗಾತ್ಸತ್ಕೃತೋ ನ ಸ್ಮ ತುಷ್ಯತಿ ॥ ೧೨೬ ॥**

ಆ ಬಾಹುಬಲಿಸ್ವಾಮಿಯು ಸತ್ಕಾರ ಪುರಸ್ಕಾರಗಳಲ್ಲಿ ಎಂದೂ ಕುತೂಹಲವುಳ್ಳವನಾಗಲಿಲ್ಲ. ಹೊಗಳಲ್ಪಟ್ಟವನಾಗಿ ಸಂತೋಷವನ್ನು ಹೊಂದಲಿಲ್ಲ. ಸತ್ಕರಿಸಲ್ಪಟ್ಟವನಾಗಿ ಸಂತೋಷವನ್ನು ಹೊಂದಲಿಲ್ಲ.

**ಪರೀಷಹಮಲಾಭಂ ಚ ಸಂತುಷ್ಟೋ ಜಯತಿ ಸ್ಮ ಸಃ ।**
**ಅಜ್ಞಾನಾದರ್ಶನೋದ್ಭೂತಾ ಬಾಧಾಸೀನ್ನಾಸ್ಯ ಯೋಗಿನಃ ॥ ೧೨೭ ॥**

ಸಂತೋಷವುಳ್ಳವನಾದ ಆ ಬಾಹುಬಲಿಸ್ವಾಮಿಯು ಆಹಾರವೇ ಮೊದಲಾದುದರ ಅಪ್ರಾಪ್ತಿರೂಪವಾದ ಪರೀಷಹವನ್ನೂ ಜಯಿಸಿದನು. ಯೋಗಾರೂಢನಾದ ಈ ಬಾಹುಬಲಿಸ್ವಾಮಿಗೆ ಅರಿಯದಿರುವುದರಿಂದ ಮತ್ತು ಕಾಣದಿರುವುದರಿಂದುಂಟಾದ ಅಂದರೆ ಹೆಚ್ಚಾದ ಜ್ಞಾನವುಂಟಾಗಲಿಲ್ಲವೆಂಬ ಮತ್ತು ತನ್ನಲ್ಲಿ ತಪಸ್ಸಿನ ಮಹಿಮೆಯು ಕಾಣಿಸಲಿಲ್ಲವೆಂಬ ಬಾಧೆಯು ಆಗಲಿಲ್ಲ.

**ಪರೀಷಹಜಯಾದಸ್ಯ ವಿಪುಲಾ ನಿರ್ಜರಾಭವತ್ ।**
**ಕರ್ಮಣಾಂ ನಿರ್ಜರೋಪಾಯಃ ಪರೀಷಹಜಯಃ ಪರಃ ॥ ೧೨೮ ॥**

ಈ ಬಾಹುಬಲಿಸ್ವಾಮಿಗೆ ಮೇಲೆ ಹೇಳಿದ ಕ್ಷುಧಾ ತೃಷಾ ಮೊದಲಾದ (೨೨) ಪರೀಷಹಗಳ ಜಯದಿಂದ ಹೆಚ್ಚಾದ ಕರ್ಮನಿರ್ಜರೆಯು ಅಂದರೆ ಕರ್ಮಗಳ ನಾಶವು ಆಯಿತು. ಉತ್ಕೃಷ್ಟವಾದ ಪರೀಷಹಜಯವು ಕರ್ಮಗಳ ನಿರ್ಜರೆಯ ಉಪಾಯವಾಗಿರುತ್ತದೆ.

೧ ಸರ್ವಾಂಗಜಂ. ೨ ಶರೀರೈಕವರ್ತಿ. ೩ ಧೃತ. ೪ ಸಮಾನಸುಖದುಃಖಃ. ೫ ಗೃಹಂ. ೬ ಸ್ಮೃತ್ವಾ. ೭ ಕೇವಲಜ್ಞಾನಪರ್ಯಂತಂ. ೮ ಜ್ಞಾನೋತ್ಕರ್ಷಾತ್. ೯ ಸಹತಿ ಸ್ಮ. ೧೦ ಸಂಸ್ತುತಃ.

**ಕ್ರೋಧಂ [೧]ತಿತಿಕ್ಷಯಾ ಮಾನ[೨]ಮುತ್ಸೇಕಪರಿವರ್ಜನೈಃ ।**
**ಮಾಯಾಮೃಜುತಯಾ ಲೋಭಂ ಸಂತೋಷೇಣ ಜಿಗಾಯ ಸಃ ॥**

ಆ ಬಾಹುಬಲಿಸ್ವಾಮಿಯು ಕ್ಷಮೆಯಿಂದ ಕೋಪವನ್ನೂ ಅಹಂಕಾರತ್ಯಾಗದಿಂದ ಗರ್ವವನ್ನೂ ಸರಳಭಾವದಿಂದ ಮಾಯೆಯನ್ನೂ ಸಂತೋಷ–ತೃಪ್ತಿಯಿಂದ ಲೋಭವನ್ನೂ ಜಯಿಸಿದನು.

**ಪಂಚೇಂದ್ರಿಯಾಣ್ಯನಾಯಾಸಾತ್ ಸೋಜಯಜ್ಜಿತಮನ್ಮಥಃ ।**
**ವಿಷಯೇಂಧನದೀಪ್ತಸ್ಯ ಕಾಮಾಗ್ನೇಃ ಶಮನಂ ತಪಃ ॥ ೧೩೦ ॥**

ಕಾಮನನ್ನು ಜಯಿಸಿದ ಆ ಬಾಹುಬಲಿಸ್ವಾಮಿಯು ಅನಾಯಾಸದಿಂದ ಐದು ಇಂದ್ರಿಯಗಳನ್ನು ಜಯಿಸಿದನು. ತಪಸ್ಸು ಇಂದ್ರಿಯವಿಷಯಗಳೆಂಬ ಕಟ್ಟಿಗೆಯಿಂದ ಉರಿಸಲ್ಪಟ್ಟ ಕಾಮವೆಂಬ ಬೆಂಕಿಗೆ ಶಾಂತಿಯನ್ನುಂಟುಮಾಡುವುದಾಗಿದೆ. ತಪಸ್ಸು ವಿಷಯೇಚ್ಛೆಯನ್ನು ಶಾಂತಮಾಡತಕ್ಕುದಾಗಿರುತ್ತದೆಂದು ಭಾವವು.

**ಆಹಾರಭಯಸಂಜ್ಞೇ ಚ ಸ [೩]ಮೈಥುನಪರಿಗ್ರಹೇ ।**
**ಅನಂಗವಿಜಯಾದೇತಾಃ ಸಂಜ್ಞಾಃ ಕ್ಷಪಯತಿ ಸ್ಮ ಸಃ ॥ ೧೩೧ ॥**

ಆ ಬಾಹುಬಲಿಸ್ವಾಮಿಯು ಕಾಮವಿಜಯದಿಂದ ಮೈಥುನಸಂಜ್ಞಾಪರಿಗ್ರಹ ಸಂಜ್ಞೆಗಳು ಸಹಿತವಾದ ಆಹಾರಸಂಜ್ಞಾ ಭಯಸಂಜ್ಞೆಗಳು ಈ ನಾಲ್ಕು ಸಂಜ್ಞೆಗಳನ್ನೂ ನಾಶಮಾಡಿದನು. ಭೋಗೇಚ್ಛೆಯನ್ನು ಜಯಿಸಿ ಆಹಾರ ಭಯ ಮೈಥುನ ಪರಿಗ್ರಹ ಸಂಜ್ಞೆಗಳನ್ನು ನಾಶಮಾಡಿದನೆಂದು ಭಾವವು.

**ಇತ್ಯಂತರಂಗಶತ್ರೂಣಾಂ ಸ ಭಂಜನ್ [೪]ಪ್ರಸರಂ ಮುಹುಃ ।**
**ಜಯತಿ ಸ್ಮಾತ್ಮನಾತ್ಮಾನಮಾತ್ಮವಿ[೫]ದ್ವಿದಿತಾಖಿಲಃ ॥ ೧೩೨ ॥**

ಈ ಪ್ರಕಾರವಾಗಿ ಅಂತರಂಗ ಶತ್ರುಗಳ ಸಮೂಹವನ್ನು ಬಾರಿಬಾರಿಗೆ ಮುರಿಯುವವನೂ ಆತ್ಮಜ್ಞಾನಿಯೂ ಸಕಲಪದಾರ್ಥಗಳನ್ನು ತಿಳಿದವನೂ ಆದ ಆ ಬಾಹುಬಲಿ ಸ್ವಾಮಿಯು ತನ್ನಿಂದ ತನ್ನನ್ನು ಜಯಿಸಿದನು. ತಾನು ತನ್ನ ಮನಸ್ಸನ್ನು ಜಯಿಸಿದನೆಂದು ಭಾವವು.

**[೬]ವ್ರತಂ ಚ ಸಮಿತೀಃ ಸರ್ವಾಃ ಸಮ್ಯಗಿಂ[೭]ದ್ರಿಯರೋಧನಮ್ ।**
**ಅಚೇಲತಾಂ ಚ ಕೇಶಾನಾಂ ಪ್ರತಿಲುಂಚನ[೮]ಸಂಗರಮ್ ॥ ೧೩೩ ॥**

**ಆವಶ್ಯಕೇಷ್ವಸಂಬಾಧಾಮಸ್ನಾನಂ ಕ್ಷಿತಿಶಾಯಿತಾಮ್ ।**
**ಅದಂತಧಾವನಂ ಸ್ಥಿತ್ವಾ ಭುಕ್ತಿಂ [೯]ಭುಕ್ತಂ ಚ ನಾಸಕೃತ್ ॥ ೧೩೪ ॥**

**ಪ್ರಾಹುರ್ಮೂಲಗುಣಾನೇತಾಂಸ್ತಥೋ[೧೦]ತ್ತರಗುಣಾಃ ಪರೇ ।**
**ತೇಷಾಮಾರಾಧನೇ ಯತ್ನಂ ಸೋ[೧೧]ತನಿಷ್ಟಾ[೧೨]ತನುರ್ಮುನಿಃ॥ ೧೩೫ ॥**

ಅಹಿಂಸಾ ಸತ್ಯ ಅಚೌರ್ಯ ಬ್ರಹ್ಮಚರ್ಯ ಅಪರಿಗ್ರಹಗಳೆಂಬ ಐದು ಮಹಾವ್ರತಗಳನ್ನೂ ಈರ್ಯಾಸಮಿತಿ ಭಾಷಾಸಮಿತಿ ಏಷಣಸಮಿತಿ ಆದಾನ ನಿಕ್ಷೇಪಣ ಸಮಿತಿ ವ್ಯುತ್ಸರ್ಗಸಮಿತಿಗಳೆಂಬ ಐದು ಸಮಿತಿಗಳನ್ನೂ ಚೆನ್ನಾಗಿ ಪಂಚೇಂದ್ರಿಯ ನಿರೋಧವನ್ನೂ ವಸ್ತ್ರವಿಲ್ಲದಿರುವಿಕೆಯನ್ನೂ ತಲೆಗೂದಲುಗಳನ್ನು ಸ್ವಹಸ್ತದಿಂದ ಕಿತ್ತುಕೊಳ್ಳುವ ಪ್ರತಿಜ್ಞೆಯನ್ನೂ ಸಾಮ್ಯಭಾವ ಸ್ತವನ ವಂದನಾ ಪ್ರತಿಕ್ರಮಣ ಪ್ರತ್ಯಾಖ್ಯಾನ ಕಾಯೋತ್ಸರ್ಗಗಳೆಂಬ ಆರು ಆವಶ್ಯಕಕ್ರಿಯೆಗಳಲ್ಲಿ ಬಾಧೆಯಿಲ್ಲದಿರುವಿಕೆಯನ್ನೂ ಸ್ನಾನವಿಲ್ಲದಿರುವಿಕೆಯನ್ನೂ ಭೂಮಿಯಲ್ಲಿ ಮಲಗುವಿಕೆಯನ್ನೂ ದಂತಧಾವನವನ್ನು ಮಾಡದಿರುವಿಕೆಯನ್ನೂ ನಿಂತುಕೊಂಡು ಭೋಜನಮಾಡುವಿಕೆಯನ್ನೂ ಏಕಭೋಜನವನ್ನೂ ಈ ಇಪ್ಪತ್ತೆಂಟು ನಿಯಮಗಳನ್ನು ಮೂಲಗುಣಗಳನ್ನಾಗಿ ಹೇಳುತ್ತಾರೆ. ಹಾಗೆ ಬೇರೆ ಉತ್ತರಗುಣಗಳಿರುತ್ತವೆ. (ಹನ್ನೆರಡು ತಪಸ್ಸು, ಆರು ಆವಶ್ಯಕಕ್ರಿಯೆಗಳು, ಐದು ಆಚಾರಗಳು, ಹತ್ತು ಧರ್ಮಗಳು, ಮೂರು ಗುಪ್ತಿಗಳು ಇವು ಮೂವತ್ತಾರು ಉತ್ತರಗುಣಗಳು) ಆ ಮೂಲೋತ್ತರಗುಣಗಳ ಆರಾಧನೆಯಲ್ಲಿ ಆ ಬಾಹುಬಲಿಮಹಾಮುನಿಯು ಯತ್ನವನ್ನು ಮಾಡಿದನು.

**[೧]ಏತೇ[೨]ಷ್ವಹಾಪಯನ್ಕಿಂಚಿದ್ವ್ರತಶುದ್ಧಿಂ ಪರಾಂ ಶ್ರಿತಃ ।**
**ಸೋದೀಪಿ ಕಿರಣೈರ್ಭಾಸ್ವಾನಿವ ದೀಪ್ರೈಸ್ತಪೋಂಶುಭಿಃ ॥ ೧೩೬ ॥**

ಈ ಗುಣಗಳಲ್ಲಿ ಸ್ವಲ್ಪವೂ ಹಾನಿಯನ್ನು ಮಾಡದೆ ಉತ್ಕೃಷ್ಟವಾದ ವ್ರತ ಶುದ್ಧಿಯನ್ನು ಹೊಂದಿದವನಾದ ಆ ಬಾಹುಬಲಿಸ್ವಾಮಿಯು, ಸೂರ್ಯನು ಕಿರಣಗಳಿಂದ ಪ್ರಕಾಶಿಸುವಂತೆ, ದೇದೀಪ್ಯಮಾನವಾದ ತಪಃಕಿರಣಗಳಿಂದ ಪ್ರಕಾಶಿಸಿದನು.

**[೩]ಗಾರವೈಸ್ತ್ರಿಭಿರುನ್ಮುಕ್ತಃ ಪರಾಂ [೪]ನಿಃಶಲ್ಯತಾಂ ಗತಃ ।**
**[೫]ಧರ್ಮೈರ್ದಶಭಿರಾರೂಢದಾರ್ಢ್ಯೋಭೂನ್ಮುಕ್ತಿವರ್ತ್ಮನಿ ॥ ೧೩೭ ॥**

ಋದ್ಧಿಗಾರವ ರಸಗಾರವ ಸಾತ(ಸುಖ)ಗಾರವಗಳೆಂಬ ಮೂರು ಪ್ರಕಾರವಾದ ಗಾರವಗಳಿಂದ ಬಿಡಲ್ಪಟ್ಟವನೂ ಉತ್ಕೃಷ್ಟವಾದ ಮಾಯಾ ಮಿಥ್ಯಾ ನಿದಾನ (ಉತ್ತರಭವಭೋಗೇಚ್ಛಾ )ಗಳೆಂಬ ಮೂರು ಶಲ್ಯಗಳಿಲ್ಲದಿರುವಿಕೆಯನ್ನು ಹೊಂದಿದವನೂ ಉತ್ತಮ ಕ್ಷಮಾ ಮಾರ್ದವ ಆರ್ಜವ ಶೌಚ ಸತ್ಯ ಸಂಯಮ ತಪಃ ತ್ಯಾಗ ಆಕಿಂಚನ್ಯ ಬ್ರಹ್ಮಚರ್ಯಗಳೆಂಬ ದಶಧರ್ಮಗಳಿಂದ ಮೋಕ್ಷಮಾರ್ಗದಲ್ಲಿ ದೃಢತೆಯನ್ನು ಹೊಂದಿದವನೂ ಆದನು. (ಗಾರವವೆಂದರೆ ಅನುಭವಾಭಿಲಾಷೆಯೆಂದರ್ಥವು)

**ಗುಪ್ತಿತ್ರಯಮಯೀಂ [೬]ಗುಪ್ತಿಂ ಶ್ರಿತೋ ಜ್ಞಾನಾಸಿಭಾಸುರಃ ।**
**[೭]ಸಂವರ್ಮಿತಃ ಸಮಿತಿಭಿಃ ಸ ಭೇಜೇ ವಿಜಿಗೀಷುತಾಮ್ ॥ ೧೩೮ ॥**

ಮನೋವಾಕ್ಕಾಯವ್ಯಾಪಾರ ಗುಪ್ತಿರೂಪವಾದ ರಕ್ಷಣೆಯನ್ನಾಶ್ರಯಿಸಿದವನೂ ಜ್ಞಾನವೆಂಬ ಖಡ್ಗದಿಂದ ಪ್ರಕಾಶಿಸುವವನೂ ಈರ್ಯಾಸಮಿತಿ ಭಾಷಾಸಮಿತಿ ಏಷಣಸಮಿತಿ ಆದಾನ ನಿಕ್ಷೇಪಣಸಮಿತಿ ವ್ಯುತ್ಸರ್ಗಸಮಿತಿಗಳೆಂಬ ಕವಚವುಳ್ಳವನಾಗಿ ಮಾಡಲ್ಪಟ್ಟವನೂ ಆದ ಆ ಬಾಹುಬಲಿಸ್ವಾಮಿಯು ಜಯಿಸಬೇಕೆಂಬ ಇಚ್ಛೆಯ ಭಾವವನ್ನು ಹೊಂದಿದನು. ಕರ್ಮಶತ್ರುವನ್ನು ಜಯಿಸಬೇಕೆಂಬ ಇಚ್ಛೆಯುಳ್ಳವನಾದನೆಂದು ಭಾವವು.

**ಕಷಾಯತಸ್ಕರೈರ್ನಾಸ್ಯ ಹೃತಂ ರತ್ನತ್ರಯಂ ಧನಮ್ ।**
**ಸತತಂ ಜಾಗರೂಕಸ್ಯ ಭೂಯೋ ಭೂಯೋಪ್ರಮಾದ್ಯತಃ ॥ ೧೩೯ ॥**

ಯಾವಾಗಲೂ ಎಚ್ಚರಿಕೆಯಿಂದಿರುವವನೂ ಪುನಃ ಪುನಃ ಪ್ರಮಾದಗಳನ್ನು ಮಾಡದಿರುವವನೂ ಆದ ಈ ಬಾಹುಬಲಿಸ್ವಾಮಿಯ ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬ ರತ್ನತ್ರಯರೂಪವಾದ ಧನವನ್ನು ಕ್ರೋಧ ಮಾನ ಮಾಯಾ ಲೋಭಾದಿ ಕಷಾಯಗಳೆಂಬ ಕಳ್ಳರು ಅಪಹರಿಸಲಿಲ್ಲ.

**[೮]ವಾಚಂಯಮಸ್ಯ ತಸ್ಯಾಸೀನ್ನ ಜಾತು ವಿಕಥಾದರಃ ।**
**ನಾಭಿದ್ಯತೇಂದ್ರಿಯೈರಸ್ಯ ಮನೋದುರ್ಗಂ [೯]ಸುಸಂವೃತಮ್ ॥ ೧೪೦ ॥**

ಮೌನವ್ರತವುಳ್ಳವನಾದ ಆ ಬಾಹುಬಲಿಸ್ವಾಮಿಗೆ ಸ್ತ್ರೀಕಥೆ ಭೋಜನಕಥೆ ರಾಜಕಥೆ ಚೋರಕಥೆಗಳೆಂಬ ನಾಲ್ಕು ದುಷ್ಕಥೆಗಳಲ್ಲಿ ಪ್ರೀತಿಯು ಎಂದೂ ಉಂಟಾಗಲಿಲ್ಲ. ಈ ಬಾಹುಬಲಿಸ್ವಾಮಿಯ ಬಹು ದೃಢವಾದ ಮನಸ್ಸೆಂಬ ದುರ್ಗವನ್ನು ಇಂದ್ರಿಯಗಳು ಭೇದಿಸಲಿಲ್ಲ.

**ಮನೋಗಾರೇ ಮಹತ್ಯಸ್ಯ ಬೋಧಿತಾ ಜ್ಞಾನದೀಪಿಕಾ ।**
**ವ್ಯದೀಪಿ [೧೦]ತತ ಏವಾಸನ್ವಿಶ್ವೇರ್ಥಾ [೧೧]ಧ್ಯೇಯತಾಪದೇ ॥ ೧೪೧ ॥**

೧ ಕ್ಷಮಯಾ. ೨ ಗರ್ವ. ೩ ಮೈಥುನಪರಿಗ್ರಹಸಂಜ್ಞೇ. ೪ ಸಮೂಹಂ. ೫ ಜ್ಞಾತಸಕಲಪದಾರ್ಥಃ. ೬ ಮಹಾವ್ರತಪಂಚಕಂ. ೭ ಪಂಚೇಂದ್ರಿಯರೋಧನಂ. ೮ ಪ್ರತಿಜ್ಞಾಂ. ೯ ಏಕಭುಕ್ತಮಿತ್ಯರ್ಥಃ. ೧೦ ಬಾರಹತವಬಾಹಾಸಾಪಂಚಾಚಾರಾತಹೇವದಸಧಮ್ಮಾ ಗುತ್ತಿತ್ತಯಸಂಜುತ್ತಾಛತ್ತೀಸಗುಣಾ ಮುಣೇಯವ್ವಾ. ೧೧ ಅಕರೋತ್. ೧೨ ಮಹಾನ್.

೧ ಪ್ರೋಕ್ತಗುಣೇಷು. ೨ ಹಾನಿಮಕುರ್ವನ್. ೩ ಋದ್ಧಿಗಾರವ ರಸಗಾರವ ಸಾತಗಾರವೈಃ. ೪ ಮಿಥ್ಯಾ ಮಾಯಾದಿಕಂ. ೫ ಉತ್ತಮಕ್ಷಮಾದಿಭಿಃ. ೬ ರಕ್ಷಾಂ. ೭ ಕವಚಿತಃ. ೮ ಮೌನವ್ರತಿನಃ. ೯ ಸುನಿಶ್ಚಲಂ. ೧೦ ಜ್ಞಾನದೀಪಿಕಾಯಾಃ ಸಕಾಶಾತ್. ೧೧ ಧ್ಯೇಯತ್ವಪದೇ.

ಈ ಬಾಹುಬಲಿಸ್ವಾಮಿಯ ದೊಡ್ಡದಾದ ಮನಸ್ಸೆಂಬ ಮನೆಯಲ್ಲಿ ಉರಿಸಲ್ಪಟ್ಟ ಜ್ಞಾನವೆಂಬ ದೀಪವು ಪ್ರಕಾಶಿಸಿತು. ಅದರಿಂದಲೇ ಸಮಸ್ತ ಪದಾರ್ಥಗಳು ಚಿಂತಿಸುವುದಕ್ಕೆ ಯೋಗ್ಯವಾದ ಸ್ಥಾನದಲ್ಲಿದ್ದುವು. ಸಮಸ್ತ ಪದಾರ್ಥಗಳು ಜ್ಞಾನಕ್ಕೆ ವಿಷಯವಾದುವೆಂದರ್ಥವು.

**ಮತಿಶ್ರುತಾಭ್ಯಾಂ ನಿಃಶೇಷಮರ್ಥತತ್ತ್ವಂ [೧]ವಿಚಿನ್ವತಃ ।**
**ಕರಾಮಲಕವದ್ವಿಶ್ವಂ ತಸ್ಯ ವಿಸ್ಪಷ್ಟತಾಮಗಾತ್ ॥ ೧೪೨ ॥**

ಮತಿಜ್ಞಾನ ಶ್ರುತಜ್ಞಾನಗಳಿಂದ ಸಮಸ್ತ ಪದಾರ್ಥಗಳ ಸ್ವರೂಪವನ್ನು ಚಿಂತಿಸುವವನಾದ ಆ ಬಾಹುಬಲಿಸ್ವಾಮಿಗೆ ಸಮಸ್ತ ವಸ್ತುಸಮೂಹವು ಕೈಯಲ್ಲಿರುವ ನೆಲ್ಲಿಕಾಯಿಯಂತೆ ಬಹು ಸ್ಪಷ್ಟತ್ವವನ್ನು ಹೊಂದಿತು. ಸಮಸ್ತ ವಸ್ತುಗಳೂ ಮತಿಶ್ರುತಜ್ಞಾನಗಳಿಗೆ ಪರೋಕ್ಷರೂಪದಿಂದ ಸ್ಪಷ್ಟವಾಗಿ ಗೋಚರವಾದುವೆಂದು ಭಾವವು.

**ಪರೀಷಹಜಯೈರ್ದೀಪ್ತೋ ವಿಜಿತೇಂದ್ರಿಯಶಾತ್ರವಃ ।**
**ಕಷಾಯಶತ್ರೂನುಚ್ಛಿದ್ಯ ಸ ತಪೋರಾಜ್ಯಮನ್ವಭೂತ್ ॥ ೧೪೩ ॥**

ಕ್ಷುಧಾ ತೃಷಾದಿ ಪರೀಷಹಜಯಗಳಿಂದ ಪ್ರಕಾಶಮಾನನೂ ಇಂದ್ರಿಯಗಳೆಂಬ ಶತ್ರುಗಳನ್ನು ಜಯಿಸಿದವನೂ ಆದ ಆ ಬಾಹುಬಲಿಸ್ವಾಮಿಯು ಕ್ರೋಧಾದಿ ಕಷಾಯಗಳೆಂಬ ಶತ್ರುಗಳನ್ನು ನಾಶಮಾಡಿ ತಪಸ್ಸೆಂಬ ರಾಜ್ಯವನ್ನನುಭವಿಸಿದನು.

**ಯೋಗಜಾಶ್ಚರ್ದ್ಧಯಸ್ತಸ್ಯ ಪ್ರಾದುರಾಸಂಸ್ತಪೋಬಲಾತ್ ।**
**ಯತೋಸ್ಯಾವಿರಭೂಚ್ಛಕ್ತಿಸ್ತ್ರೈಲೋಕ್ಯಕ್ಷೋಭಣಂ ಪ್ರತಿ ॥ ೧೪೪ ॥**

ಆ ಬಾಹುಬಲಿಸ್ವಾಮಿಗೆ ತಪಸ್ಸಿನ ಸಾಮರ್ಥ್ಯದಿಂದ ಯೋಗದಿಂದುಂಟಾದ ಮಹಿಮೆಗಳು ಪ್ರಾದುರ್ಭವಿಸಿದುವು. ಅದರಿಂದ ಈ ಬಾಹುಬಲಿಸ್ವಾಮಿಗೆ ಮೂರು ಲೋಕದ ಕ್ಷೋಭೆ(ಗಲಿಬಿಲಿ)ಯನ್ನು ಕುರಿತು ಅಂದರೆ ಮೂರು ಲೋಕದಲ್ಲಿ ಕ್ಷೋಭೆಯನ್ನುಂಟುಮಾಡುವ ಶಕ್ತಿಯು ಆವಿರ್ಭವಿಸಿತು.

**ಚತುರ್ಭೇದೇಪಿ ಬೋಧೇಸ್ಯ ಸಮುತ್ಕರ್ಷಸ್ತದೋ[೨]ದಭೂತ್ ।**
**[೩]ತತ್ತದಾವರಣೀಯಾನಾಂ ಕ್ಷಯೋಪಶಮಜೃಂಭಿತಃ ॥ ೧೪೫ ॥**

ಆಗ ಈ ಬಾಹುಬಲಿಸ್ವಾಮಿಗೆ ಮತಿ ಶ್ರುತ ಅವಧಿ ಮನಃಪರ್ಯಯಗಳೆಂಬ ನಾಲ್ಕುವಿಧವಾದ ಜ್ಞಾನದಲ್ಲಿಯೂ ಆಯಾ ಜ್ಞಾನಕ್ಕೆ ಪ್ರತಿಬಂಧಕವಾದ–ಮತಿಜ್ಞಾನಾವರಣೀಯ ಶ್ರುತಜ್ಞಾನಾವರಣೀಯ ಅವಧಿಜ್ಞಾನಾವರಣೀಯ ಮನಃಪರ್ಯಯಜ್ಞಾನಾವರಣೀಯ ಕರ್ಮಗಳ ಕ್ಷಯೋಪಶಮಭಾವದಿಂದುಂಟಾದ ಅತಿಶಯವು ಉದಯಿಸಿತು.

**ಮತಿಜ್ಞಾನಸಮುತ್ಕರ್ಷಾತ್ಕೋಷ್ಠಬುದ್ಧ್ಯಾದಯೋಭವನ್ ।**
**ಶ್ರುತಜ್ಞಾನೇ ಚ [೪]ವಿಶ್ವಾಂಗಪೂರ್ವವಿತ್ತ್ವಾದಿವಿಸ್ತರಃ ॥ ೧೪೬ ॥**

ಮತಿಜ್ಞಾನದ ಉತ್ಕೃಷ್ಟತೆಯಿಂದ ಕೋಷ್ಠಬುದ್ಧಿಯೇ ಮೊದಲಾದ ಅತಿಶಯ ಬುದ್ಧಿಗಳುಂಟಾದುವು. ಶ್ರುತಜ್ಞಾನದಲ್ಲಿ ದ್ವಾದಶಾಂಗ ಚತುರ್ದಶಪೂರ್ವಗಳ ವಿಸ್ತಾರವಾದ ಅರಿವು ಮೊದಲಾದುವುಗಳುಂಟಾದುವು. (ಭಂಡಾರದಲ್ಲಿ ತುಂಬಿರುವ ಪದಾರ್ಥಗಳಂತೆ ಉಪಯೋಗಕ್ಕೆ ಬರುವ ಬುದ್ಧಿಗೆ ಕೋಷ್ಠಬುದ್ಧಿಯೆಂದು ಹೆಸರು).

**ಪರಮಾವಧಿಮುಲ್ಲಂಘ್ಯ ಸ ಸರ್ವಾವಧಿಮಾಸದತ್ ।**
**ಮನಃಪರ್ಯಯಬೋಧೇ ಚ ಸಂಪ್ರಾಪ[೫]ದ್ವಿಪುಲಾಂ ಮತಿಮ್ ॥**

ಆ ಬಾಹುಬಲಿಸ್ವಾಮಿಯು ಅವಧಿಜ್ಞಾನದ ಮೂರು ಭೇದಗಳಲ್ಲಿ ಒಂದನೆಯ ಭೇದವಾದ ದೇಶಾವಧಿಜ್ಞಾನದಿಂದ ಪರಮಾವಧಿಯೆಂಬ ಎರಡನೆಯ ಜ್ಞಾನವನ್ನು ಹೊಂದಿ ಅದನ್ನು ದಾಟಿ ಸರ್ವಾವಧಿಯೆಂಬ ಮೂರನೆಯ ಜ್ಞಾನವನ್ನು ಹೊಂದಿದನು. ಮನಃಪರ್ಯಯಜ್ಞಾನದಲ್ಲಿಯೂ ಋಜುಮತಿಯನ್ನು ಬಿಟ್ಟು ವಿಪುಲಮತಿಯನ್ನು ಹೊಂದಿದನು. (ದ್ರವ್ಯ ಕ್ಷೇತ್ರ ಕಾಲ ಭಾವಗಳ ಮೇರೆಯಿಂದುಂಟಾಗುವ ಜ್ಞಾನಕ್ಕೆ ಅವಧಿಜ್ಞಾನವೆಂದೂ ಪರರ ಮನೋಗತವಿಷಯವನ್ನು ತಿಳಿಯತಕ್ಕ ಜ್ಞಾನಕ್ಕೆ ಮನಃಪರ್ಯಯಜ್ಞಾನವೆಂದೂ ಹೆಸರು).

**ಜ್ಞಾನಶುದ್ಧ್ಯಾ ತಪಃಶುದ್ಧಿರಸ್ಯಾಸೀ[೧]ದತಿರೇಕಿಣೀ ।**
**ಜ್ಞಾನಂ ಹಿ ತಪಸೋ ಮೂಲಂ ಯದ್ವನ್ಮೂಲಂ ಮಹಾತರೋಃ ॥**

ಈ ಬಾಹುಬಲಿಸ್ವಾಮಿಗೆ ಜ್ಞಾನದ ಶುದ್ಧಿಯಿಂದ ತಪಸ್ಸಿನ ಶುದ್ಧಿಯು ಅತಿಶಯವುಳ್ಳುದಾಗಿ ಆಯಿತು. ದೊಡ್ಡದಾದ ಮರಕ್ಕೆ ಬೇರು ಹೇಗೋ ಹಾಗೆ ತಪಸ್ಸಿಗೆ ಜ್ಞಾನವು ಮೂಲಕಾರಣವಲ್ಲವೆ ?

**ತಪಸೋಗ್ರೇಣ ಚೋಗ್ರೋಗ್ರತಪಸಾ ಚಾತಿ[೨]ಕರ್ಶಿತಃ ।**
**ಸ ದೀಪ್ತ ತಪಸಾತ್ಯಂತಂ ದಿದೀಪೇ [೩]ದೀಪ್ತಿಮಾನಿವ ॥ ೧೪೯ ॥**

ಶ್ರೇಷ್ಠವಾದ ತಪಸ್ಸಿನಿಂದಲೂ ಕಠಿನವಾದ ತಪಸ್ಸಿನಿಂದಲೂ ಬಹಳವಾಗಿ ಕೃಶಮಾಡಲ್ಪಟ್ಟವನಾದ ಆ ಬಾಹುಬಲಿಸ್ವಾಮಿಯು, ಸೂರ್ಯನಂತೆ, ದೀಪ್ತವಾದ ತಪಸ್ಸಿನಿಂದ ಅಧಿಕವಾಗಿ ಪ್ರಕಾಶಿಸಿದನು.

**ಸೋತಪ್ಯತ ತಪಸ್ತಪ್ತಂ ತಪೋ ಘೋರಂ ಮಹಚ್ಚ ಯತ್ ।**
**ತಥೋ[೪]ತ್ತರಾಣ್ಯಪಿ ಪ್ರಾಪ್ತಸಮುತ್ಕರ್ಷಾಣ್ಯನುಕ್ರಮಾತ್ ॥ ೧೫೦ ॥**

ಆ ಬಾಹುಬಲಿಸ್ವಾಮಿಯು ತಪ್ತತಪಸ್ಸನ್ನೂ ಮಹಾಘೋರತಪಸ್ಸನ್ನೂ ಹಾಗೆಯೇ ಉತ್ಕೃಷ್ಟವಾದ ಉತ್ತರತಪಸ್ಸುಗಳನ್ನೂ (ದ್ವಾದಶವಿಧ ಬಾಹ್ಯಾಭ್ಯಂತರ ತಪಸ್ಸುಗಳನ್ನೂ) ಅನುಕ್ರಮದಿಂದ ಮಾಡಿದನು. ಉತ್ತರೋತ್ತರ ಕಠಿನತಪಸ್ಸನ್ನು ಮಾಡಿದನೆಂದು ಭಾವವು.

**ತಪೋಭಿರಕೃಶ್ಯೈರೇಭಿಃ ಸ ಬಭೌ ಮುನಿಸತ್ತಮಃ ।**
**[೫]ಘನೋಪರೋಧನಿರ್ಮುಕ್ತಃ ಕರ್ಯೈರಿವ [೬]ಗಭಸ್ತಿಮಾನ್ ॥ ೧೫೧ ॥**

ಮೇಘದ ಆವರಣದಿಂದ ಬಿಡಲ್ಪಟ್ಟ ಸೂರ್ಯನು ಕಿರಣಗಳಿಂದ ಪ್ರಕಾಶಿಸುವಂತೆ ಆ ಬಾಹುಬಲಿಮುನಿಶ್ರೇಷ್ಠನು ಶ್ರೇಷ್ಠವಾದ ಈ ತಪಸ್ಸುಗಳಿಂದ ಪ್ರಕಾಶಿಸಿದನು.

**ವಿಕ್ರಿಯಾ[೭]ಷ್ಟತಯೀ ಚಿತ್ರಂ ಪ್ರಾದುರಾಸೀತ್ತಪೋಬಲಾತ್ ।**
**[೮]ವಿಕ್ರಿಯಾಂ ನಿಖಿಲಾಂ ಹಿತ್ವಾ ತೀವ್ರಮಸ್ಯ [೯]ತಪಸ್ಯತಃ ॥ ೧೫೨ ॥**

ಸಮಸ್ತ ವಿಕಾರವನ್ನು ಬಿಟ್ಟು ಕಠಿನವಾಗಿ ತಪಸ್ಸನ್ನು ಮಾಡುತ್ತಿರುವ ಈ ಬಾಹುಬಲಿಸ್ವಾಮಿಗೆ ತಪಸ್ಸಾಮರ್ಥ್ಯದಿಂದ ಎಂಟುವಿಧವಾದ ವಿಕಾರವು ಪ್ರಾದುರ್ಭವಿಸಿತು. ಆಶ್ಚರ್ಯ ! ಮುಂದೆ ಹೇಳಲ್ಪಡುವ ಎಂಟು ತಪೋಮಹಿಮೆಗಳುಂಟಾದುವೆಂದು ಭಾವವು.

**ಪ್ರಾಪ್ತೌಷಧರ್ದ್ಧೇರಸ್ಯಾಸೀತ್ಸನ್ನಿಧಿರ್ಜಗತೇ ಹಿತಃ ।**
**[೧೦]ಆಮರ್ಶ[೧೧]ಕ್ಷ್ವೇಲ[೧೨]ಜಲ್ಲಾದ್ಯೈಃ ಪ್ರಾಣಿನಾಮುಪಕಾರಿಣಃ ॥ ೧೫೩ ॥**

ಅಪಕ್ವಾಹಾರದ ಛರ್ದಿ, ಉಗುಳುವಿಕೆ, ಬೆವರಿನಿಂದುಂಟಾದ ಮಲ ಇವೇ ಮೊದಲಾದ ತಪೋಮಹಿಮೆಗಳಿಂದ ಪ್ರಾಣಿಗಳಿಗೆ ಉಪಕಾರಿಯೂ ಔಷಧರ್ದ್ಧಿ–ಮಹಿಮೆಯನ್ನು ಹೊಂದಿದವನೂ ಆದ ಈ ಬಾಹುಬಲಿಸ್ವಾಮಿಯ ಸಾನ್ನಿಧ್ಯವು ಲೋಕಕ್ಕೆ ಹಿತಕರವಾಗಿ ಆಯಿತು.

**[೧೩]ಅನಾಶುಷೋಸ್ಯ ತಸ್ಯಾಸೀದ್ರ[೧೪]ಸರ್ದ್ಧಿಃ ಶಕ್ತಿಮಾತ್ರತಃ ।**
**ತಪೋಬಲಸಮುದ್ಭೂತಾ [೧೫]ಬಲರ್ದ್ಧಿರಪಿ ಪಪ್ರಥೇ ॥ ೧೫೪ ॥**

೧ ಚಿಂತಯತಃ. ೨ ಉದೇತಿ ಸ್ಮ. ೩ ಮತಿಶ್ರುತಾವಧಿಮನಃಪರ್ಯಯಾವರಣೀಯಾನಾಂ. ೪ ದ್ವಾದಶಾಂಗಚತುರ್ದಶಪೂರ್ವವೇದಿತ್ವತನ್ನಿರೂಪಣಾದಿವಿಸ್ತರಃ. ೫ ವಿಪುಲಮತಿಮನಃಪರ್ಯಯಜ್ಞಾನಂ.

೧ ಅತಿಶಯವತೀ. ೨ ಕೃಶೀಕೃತಃ. ೩ ರವಿರಿವ. ೪ ದ್ವಾದಶತಪಾಂಸಿ. ೫ ಮೇಘಾವರಣ. ೬ ತರಣಿಃ. ೭ ಅಷ್ಟಪ್ರಕಾರಾ. ೮ ವಿಕಾರಂ. ೯ ತಪಃಕುರ್ವತಃ. ೧೦ ಅಪಕ್ವ, ಛರ್ದಿ. ೧೧ ನಿಷ್ಠೀವನ. ೧೨ ಸ್ವೇದೋತ್ಥಮಲಾದ್ಯೈಃ. ೧೩ ಅನಶನವ್ರತಿನಃ. ೧೪ ಅಮೃತಸ್ರಾವಾದಿಃ. ೧೫ ಮನೋಬಲಾದಿಃ.

ಉಪವಾಸವ್ರತವುಳ್ಳವನಾದ ಈ ಬಾಹುಬಲಿಸ್ವಾಮಿಗೆ ಆ ತಪಸ್ಸಿನ ಶಕ್ತಿಯಿಂದಲೇ ಅಮೃತವನ್ನು ಸ್ರವಿಸುವಿಕೆಯೇ ಮೊದಲಾದ ಋದ್ಧಿಯುಂಟಾಯಿತು. ತಪಸ್ಸಾಮರ್ಥ್ಯದಿಂದುಂಟಾದ ಮನೋಬಲ ವಾಗ್ಬಲ ಕಾಯಬಲ ಋದ್ಧಿಗಳೂ ಪ್ರಕಟವಾದುವು. ತಪಸ್ಸಾಮರ್ಥ್ಯದಿಂದ ಆತ್ಮದಲ್ಲಿ ಆಯಾ ಶಕ್ತಿಗಳುಂಟಾದುವೆಂದು ಭಾವವು.

**ಅಕ್ಷೀಣಾ[1]ವಸಥಃ ಸೋಭೂತ್ತಥಾಕ್ಷೀಣಮಹಾಶನಃ ।**
**ಸೂತೇ ಹಿ ಫಲ[2]ಮಕ್ಷೀಣಂ ತಪೋ[3]ಽನ್ಯೂಣಮುಪಾಸಿತಮ್ ॥ ೧೫೫ ॥**

ಆ ಬಾಹುಬಲಿಸ್ವಾಮಿಯು ಅಕ್ಷೀಣಾಲಯ ಋದ್ಧಿಯುಳ್ಳವನಾಗಿಯೂ ಹಾಗೆಯೇ ಅಕ್ಷೀಣ ಮಹಾಭೋಜನ ಋದ್ಧಿಯುಳ್ಳವನಾಗಿಯೂ ಆದನು. ಆಚರಿಸಲ್ಪಟ್ಟ ಮಹಾತಪಸ್ಸು ಮಹತ್ಫಲವನ್ನುಂಟುಮಾಡುತ್ತದಲ್ಲವೆ ? (ಮುನಿಯು ಯಾವಮನೆಯಲ್ಲಿ ಭೋಜನಮಾಡುತ್ತಾನೋ ಆ ಮನೆಯಲ್ಲಿ ಭೋಜನ ಸಾಮಗ್ರಿಯು ಕಡಿಮೆಯಾಗದಿರುವುದಕ್ಕೆ ಅಕ್ಷೀಣಮಹಾಭೋಜನ ಋದ್ಧಿಯೆಂದು ಹೆಸರು)

**[4]ನಿರ್ದ್ವಂದ್ವವೃತ್ತಿ[5]ರಧ್ಯಾತ್ಮಮಿತಿ ನಿರ್ಜಿತ್ಯ ಜಿತ್ವರಃ ।**
**ಧ್ಯಾನಾಭ್ಯಾಸೇ ಮನಶ್ಚಕ್ರೇ ಯೋಗೀ ಯೋಗವಿದಾಂವರಃ ॥ ೧೫೬ ॥**

ಆತ್ಮನನ್ನು ಉದ್ದೇಶಿಸಿ ಪರಿಗ್ರಹರಹಿತನೂ ಮೇಲೆ ಹೇಳಿದ ಪ್ರಕಾರವಾಗಿ ಜಯಶೀಲನೂ ಧ್ಯಾನಸ್ವರೂಪವನ್ನು ತಿಳಿದವರಲ್ಲಿ ಶ್ರೇಷ್ಠನೂ ಯೋಗಿಯೂ ಆದ ಬಾಹುಬಲಿಸ್ವಾಮಿಯು ಮನಸ್ಸನ್ನು ಜಯಿಸಿ ಅದನ್ನು ಧ್ಯಾನಾಭ್ಯಾಸದಲ್ಲಿ ಮಾಡಿದನು. ಮನಸ್ಸನ್ನು ಧ್ಯಾನಾಭ್ಯಾಸದಲ್ಲಿ ಸ್ಥಿರಗೊಳಿಸಿದನೆಂದು ಭಾವವು.

**ಕ್ಷಮಾಮಥೋತ್ತಮಾಂ ಭೇಜೇ ಪರಂ ಮಾರ್ದವಮಾರ್ಜವಮ್ ।**
**ಸತ್ಯಂ ಶೌಚಂ ತಪಸ್ತ್ಯಾಗಮಾಕಿಂಚನ್ಯಂ ಚ ಸಂಯಮಮ್ ॥ ೧೫೭ ॥**

**ಬ್ರಹ್ಮಚರ್ಯಂ ಚ ಧರ್ಮ್ಯಸ್ಯ ಧ್ಯಾನಸ್ಯೈತಾ ಹಿ ಭಾವನಾಃ ।**
**[6]ಯೋಗಸಿದ್ಧಾ ಪರಾಂ[7]ಸಿದ್ಧಿಮಾಮನಂತೀಹ ಯೋಗಿನಃ ॥ ೧೫೮ ॥**

ಅನಂತರದಲ್ಲಿ ಉತ್ತಮ ಕ್ಷಮಾ ಉತ್ತಮ ಮಾರ್ದವ(ನಿರಹಂಕಾರ) ಉತ್ತಮ ಆರ್ಜವ(ಸರಳತೆ) ಉತ್ತಮ ಸತ್ಯ ಉತ್ತಮ ಶೌಚ(ನಿರ್ಲೋಭತ್ವ) ಉತ್ತಮ ತಪಸ್ಸು ಉತ್ತಮ ತ್ಯಾಗ ಉತ್ತಮ ಆಕಿಂಚನ್ಯ(ಪರಿಗ್ರಹವೇನೂ ಇಲ್ಲದಿರುವಿಕೆ) ಉತ್ತಮ ಸಂಯಮ(ಇಂದ್ರಿಯನಿಗ್ರಹ) ಉತ್ತಮ ಬ್ರಹ್ಮಚರ್ಯ ಈ ದಶ ಧರ್ಮಗಳನ್ನು ಧರಿಸಿದನು. ಇವುಗಳು ಧರ್ಮಧ್ಯಾನದ ಭಾವನೆಗಳಾಗಿರುತ್ತವೆ. ಈ ಲೋಕದಲ್ಲಿ ಯೋಗಿಗಳು ಧ್ಯಾನದ ಸಿದ್ಧಿಯಾದರೆ ಉತ್ಕೃಷ್ಟವಾದ ಸಿದ್ಧಿಯನ್ನು ಅಂದರೆ ಮುಕ್ತಿಯನ್ನು ತಿಳಿಯುತ್ತಾರೆ.

**ಅನಿತ್ಯಾಶರಣಸಂಸಾರೈಕತ್ವಾನ್ಯತ್ವಾನ್ಯಶೌಚತಾಮ್ ।**
**ನಿರ್ಜರಾಸ್ರವ[8]ಸಂರೋಧಲೋಕಸ್ಥಿತ್ಯನುಚಿಂತನಮ್ ॥ ೧೫೯ ॥**

**ಧರ್ಮ[9]ಸ್ವಾಖ್ಯಾಂ ತತೋ ಬೋಧಿದುರ್ಲಭತ್ವಂ ಚ [10]ಲಕ್ಷಯನ್ ।**
**ಸೋನುಪ್ರೇಕ್ಷಾವಿಧಿಂ [11]ದಧ್ಯೌ ವಿಶುದ್ಧಂ ದ್ವಾದಶಾತ್ಮಕಮ್ ॥ ೧೬೦ ॥**

ಅನಿತ್ಯ ಅಶರಣ ಸಂಸಾರ ಏಕತ್ವ ಅನ್ಯತ್ವ ಅಶುಚಿತ್ವ ನಿರ್ಜರಾ ಆಸ್ರವ ಸಂವರ ಲೋಕಸ್ಥಿತಿ ಧರ್ಮಸ್ವಾಖ್ಯಾತತ್ವ ಭೋಧಿದುರ್ಲಭತ್ವಗಳನ್ನು ತಿಳಿಯುವವನಾದ ಆ ಬಾಹುಬಲಿಸ್ವಾಮಿಯು ಪರಿಶುದ್ಧವಾದ ದ್ವಾದಶಾನುಪ್ರೇಕ್ಷಾವಿಧಿಯನ್ನು ಧ್ಯಾನ ಮಾಡಿದನು. ಶರೀರಭೋಗಾದಿಗಳು ನಿತ್ಯವಲ್ಲವೆಂದು ಚಿಂತಿಸುವುದಕ್ಕೆ ಅನಿತ್ಯಾನುಪ್ರೇಕ್ಷೆಯೆಂದೂ ಸಂಸಾರದಲ್ಲಿ ಧರ್ಮವಲ್ಲದೆ ಮತ್ತಾರೂ ರಕ್ಷಕರಿಲ್ಲವೆಂದು ಚಿಂತಿಸುವುದಕ್ಕೆ ಅಶರಣಾನುಪ್ರೇಕ್ಷೆಯೆಂದೂ ಸಂಸಾರಸ್ವರೂಪವನ್ನು ಚಿಂತಿಸುವುದಕ್ಕೆ ಸಂಸಾರಾನು ಪ್ರೇಕ್ಷೆಯೆಂದೂ ತಾನು ಒಬ್ಬನಲ್ಲದೆ ತನ್ನೊಡನೆ ಬರತಕ್ಕವರಾರೂ ಇಲ್ಲವೆಂದು ಚಿಂತಿಸುವುದಕ್ಕೆ ಏಕತ್ವಾನುಪ್ರೇಕ್ಷೆಯೆಂದೂ ಆತ್ಮಸ್ವರೂಪವಲ್ಲದೆ ಉಳಿದುದೆಲ್ಲವೂ ಬೇರೆಯೆಂದು ಚಿಂತಿಸುವುದಕ್ಕೆ ಅನ್ಯತ್ವಾನುಪ್ರೇಕ್ಷೆಯೆಂದೂ ದೇಹದ ರಕ್ತಮಾಂಸಾದಿ ಅಶುಚಿತ್ವವನ್ನು ಚಿಂತಿಸುವುದಕ್ಕೆ ಅಶುಚಿತ್ವಾನುಪ್ರೇಕ್ಷೆಯೆಂದೂ ಏಕದೇಶಕರ್ಮಕ್ಷಯವನ್ನು ಚಿಂತಿಸುವುದಕ್ಕೆ ನಿರ್ಜರಾನುಪ್ರೇಕ್ಷೆಯೆಂದೂ ಕರ್ಮವು ಆತ್ಮನಲ್ಲಿ ಬಂದು ಸೇರುವಿಕೆಯನ್ನು ಚಿಂತಿಸುವುದಕ್ಕೆ ಆಸ್ರವಾನುಪ್ರೇಕ್ಷೆಯೆಂದೂ ಕರ್ಮಗಳ ಬರುವಿಕೆಯ ತಡೆಯನ್ನು ಚಿಂತಿಸುವುದಕ್ಕೆ ಸಂವರಾನುಪ್ರೇಕ್ಷೆಯೆಂದೂ ಲೋಕಸ್ಥಿತಿಯನ್ನು ಚಿಂತಿಸುವುದಕ್ಕೆ ಲೋಕಾನುಪ್ರೇಕ್ಷೆಯೆಂದೂ ಧರ್ಮದ ಶ್ರೇಷ್ಠಕಥನವನ್ನು ಚಿಂತಿಸುವುದಕ್ಕೆ ಧರ್ಮಸ್ವಾಖ್ಯಾತತ್ವಾನುಪ್ರೇಕ್ಷೆಯೆಂದೂ ಉತ್ತಮಜ್ಞಾನಪ್ರಾಪ್ತಿಯಾಗುವುದು ದುರ್ಲಭವೆಂದು ಚಿಂತಿಸುವುದಕ್ಕೆ ಬೋಧಿ ದುರ್ಲಭಾನುಪ್ರೇಕ್ಷೆಯೆಂದೂ ಹೆಸರು.

೧ ಆಲಯಃ. ೨ ಮಹತ್. ೩ ಅನ್ಯೂನಂ. ೪ ನಿಷ್ಪರಿಗ್ರಹವಾನ್. ೫ ಆತ್ಮಾನಮಧಿಕೃತ್ಯ. ೬ ಧ್ಯಾನನಿಷ್ಪನ್ನೇ ಸತಿ. ೭ ಮುಕ್ತಿಂ. ೮ ಸಂವರ. ೯ ಸುಷ್ಠು ಆಖ್ಯಾಂ. ೧೦ ಜಾನನ್. ೧೧ ಧ್ಯಾಯತಿ ಸ್ಮ.

**[1]ಆಜ್ಞಾಪಾಯೌ ವಿಪಾಕಂ ಚ ಸಂಸ್ಥಾನಂ ಚಾನುಚಿಂತಯನ್ ।**
**ಸದ್ಧ್ಯಾನಮಭಜದ್ಧರ್ಮ್ಯಂ ಕರ್ಮಾಂಶಾ[2]ನ್ಪರಿಶಾತಯನ್ ॥ ೧೬೧ ॥**

ಸರ್ವಜ್ಞಪ್ರಣೀತಾಗಮವಿಚಾರರೂಪವಾದ ಆಜ್ಞಾವಿಚಯಧರ್ಮಧ್ಯಾನವನ್ನೂ ಸನ್ಮಾರ್ಗಾಪಾಯಚಿಂತನರೂಪವಾದ ಅಪಾಯವಿಚಯ ಧರ್ಮಧ್ಯಾನವನ್ನೂ ಜ್ಞಾನಾವರಣಾದಿ ಕರ್ಮಫಲಾನುಭವವಿಚಾರರೂಪವಾದ ವಿಪಾಕವಿಚಯಧರ್ಮ ಧ್ಯಾನವನ್ನೂ ಲೋಕಾಕಾರಸ್ವಭಾವವಿಚಾರರೂಪವಾದ ಸಂಸ್ಥಾನವಿಚಯಧರ್ಮ ಧ್ಯಾನವನ್ನೂ ಪುನಃ ಪುನಃ ಚಿಂತಿಸುವವನೂ ಕರ್ಮದ ಅಂಶಗಳನ್ನು ಕೃಶಮಾಡುವವನೂ ಆದ ಬಾಹುಬಲಿಸ್ವಾಮಿಯು ಶ್ರೇಷ್ಠವಾದ ಧರ್ಮಧ್ಯಾನವನ್ನು ಅನುಷ್ಠಿಸಿದನು.

**ದೀಪಿಕಾಯಾಮಿವಾಮುಷ್ಯಾಂ ಧ್ಯಾನದೀಪ್ತೌ [3]ನಿರೀಕ್ಷಿತಾಃ ।**
**ಕ್ಷಣಂ [4]ವಿಶೀರ್ಣಾಃ ಕರ್ಮಾಂಶಾಃ ಕಜ್ಜಲಾಂಶಾ ಇವಾಭಿತಃ ॥ ೧೬೨ ॥**

ದೀಪದಲ್ಲಿ ಕಾಣಲ್ಪಟ್ಟ ಕಾಡಿಗೆ–ಕಪ್ಪಿನ ಅಂಶಗಳಂತೆ ಈ ಧ್ಯಾನವೆಂಬ ಪ್ರಕಾಶದಲ್ಲಿ ಕಾಣಲ್ಪಟ್ಟ ಕರ್ಮದ ಅಂಶಗಳು ಸುತ್ತಲೂ ಕ್ಷಣಕಾಲದಲ್ಲಿ ಹೊರಟು ಹೋದುವು. ದೀಪದಿಂದ ಕಾಡಿಗೆಯು ಹೊರಟು ಹೋಗುವಂತೆ ಧ್ಯಾನದಿಂದ ಕರ್ಮದ ಅಂಶಗಳು ಹೊರಟುಹೋದುವೆಂದು ಭಾವವು.

**ತದ್ದೇಹದೀಪ್ತಿಪ್ರಸರೋ ದಿಙ್ಮುಖೇಷು ಪರಿಸ್ಫುರನ್ ।**
**[5]ತದ್ವನಂ [6]ಗಾರುಡಗ್ರಾವಚ್ಛಾಯಾತತಮಿವಾತನೋತ್ ॥ ೧೬೩ ॥**

ಆ ಬಾಹುಬಲಿಸ್ವಾಮಿಯ ದೇಹಕಾಂತಿಯ ಸಮೂಹವು ದಿಕ್ಕುಗಳಲ್ಲಿ ಪ್ರಕಾಶಿಸುವುದಾಗಿ ಆ ಬಾಹುಬಲಿಸ್ವಾಮಿಯ ತಪೋವನವನ್ನು ಗರುಡೋದ್ಗಾರಮಣಿಯ ಕಾಂತಿಯಿಂದ ವ್ಯಾಪ್ತವಾಗಿರುವಂತೆ ಮಾಡಿತು.

**ತತ್ಪದೋಪಾಂತವಿಶ್ರಾಂತಾ [7]ವಿಸ್ರಬ್ಧಾ ಮೃಗಜಾತಯಃ ।**
**ಬಬಾಧಿರೇ ಮೃಗೈರ್ನಾನ್ಯೈಃ ಕ್ರೂರೈರಕ್ರೂರತಾಂ ಶ್ರಿತೈಃ ॥ ೧೬೪ ॥**

ಆ ಬಾಹುಬಲಿಸ್ವಾಮಿಯ ಪಾದಸಮೀಪದಲ್ಲಿ ವಿಶ್ರಾಂತಿಯನ್ನು ಹೊಂದಿರುವುವೂ ನಿಶ್ಚಲವಾಗಿರುವುವೂ ಆದ ಮೃಗಜಾತಿಗಳು ಶಾಂತಭಾವವನ್ನು ಹೊಂದಿರುವ ಬೇರೆ ಕ್ರೂರಮೃಗಗಳಿಂದ ಬಾಧಿಸಲ್ಪಡಲಿಲ್ಲ.

**ವಿರೋಧಿನೋಪ್ಯಮೀ ಮುಕ್ತವಿರೋಧಂ ಸ್ವೈರ[8]ಮಾಸಿತಾಃ ।**
**ತಸ್ಯೋಪಾಂಘ್ರೀಭಸಿಂಹಾದ್ಯಾಃ ಶಶಂಸುರ್ವೈಭವಂ ಮುನೇಃ ॥ ೧೬೫ ॥**

ಪರಸ್ಪರ ವಿರೋಧವುಳ್ಳವುಗಳಾಗಿದ್ದರೂ ಈ ಆನೆ ಸಿಂಹ ಮೊದಲಾದ ಪ್ರಾಣಿಗಳು ಆ ಬಾಹುಬಲಿಸ್ವಾಮಿಯ ಪಾದಸಮೀಪದಲ್ಲಿ ವಿರೋಧವನ್ನು ಬಿಟ್ಟು ಸ್ವೇಚ್ಛೆಯಾಗಿರುವುವುಗಳಾಗಿ ಬಾಹುಬಲಿಮುನಿಯ ವೈಭವವನ್ನು ಪ್ರಶಂಸಿಸಿದುವು. ಬಾಹುಬಲಿಮುನಿಯ ತಪೋವೈಭವವನ್ನು ಪ್ರಕಟಿಸುತ್ತಿದ್ದುವೆಂದು ಭಾವವು.

೧ ಆಜ್ಞಾವಿಚಯಾಪಾಯವಿಚಯೌ. ೨ ಕೃಶೀಕುರ್ವನ್. ೩ ತೇನ ನಿರೀಕ್ಷ್ಯಂತೇ ಸ್ಮ. ೪ ನಿರ್ಗತಾಃ. ೫ ಭುಜಬಲಿಸ್ವಾಮಿತಪೋವನಂ. ೬ ಗಾರುಡರತ್ನಕಾಂತ್ಯಾವ್ಯಾಪ್ತಂ. ೭ ನಿಶ್ಚಲಾಃ. ೮ ಸ್ಥಿತಾಃ.

[೧]ಜರಜ್ಜಂಬುಕಮಾಘ್ರಾಯ ಮಸ್ತಕೇ ವ್ಯಾಘ್ರ್ಯ[೨]ಧೇನುಕಾ ।
ಸ್ವಶಾಬ[೩]ನಿರ್ವಿಶೇಷಂ ತಮಾಪೀಪ್ಯತ್ಸ್ತನ್ಯಮಾತ್ಮನಃ ॥ ೧೬೬ ॥

ಹೊಸದಾಗಿ ಮರಿಯನ್ನು ಹಾಕಿದ ಹುಲಿಯು ಮುದಿಯಾದ ನರಿಯನ್ನು ತಲೆಯಲ್ಲಿ ಮೂಸಿನೋಡಿ ತನ್ನ ಮರಿಗೆ ಸಮಾನವಾಗಿ ಆ ನರಿಗೆ ಮೊಲೆಹಾಲನ್ನು ಕುಡಿಸಿತು.

ಕರಿಣೋ ಹರಿಣಾರಾತೀನನ್ವೀಯುಃ ಸಹಯೂಥಪೈಃ ।
ಸ್ತನಪಾನೋತ್ಸುಕಾ ಭೇಜುಃ ಕರಿಣೀಃ ಸಿಂಹಪೋತಕಾಃ ॥ ೧೬೭ ॥

ಆನೆಗಳು ಸಲಗಗಳೊಡನೆ ಸಿಂಹಗಳನ್ನು ಹಿಂಬಾಲಿಸಿ ಹೋದುವು. ಸ್ತನಪಾನದಲ್ಲಿ ಕುತೂಹಲವುಳ್ಳ ಸಿಂಹದ ಮರಿಗಳು ಹೆಣ್ಣಾನೆಗಳನ್ನು ಹೊಂದಿದುವು.

ಕಲಭಾನ್ [೪]ಕಲಭಾಂಕಾರಮುಖರಾನ್ನಖರೈಃ ಖರೈಃ ।
ಕಂಠೀರವಃ ಸ್ಪೃಶನ್ ಕಂಠೇ [೫]ನಾಭ್ಯನಂದಿ ನ ಯೂಥಪೈಃ ॥ ೧೬೮ ॥

ಸಿಂಹವು ಮನೋಹರವಾದ ಧ್ವನಿವಿಶೇಷವನ್ನು ಮಾಡುತ್ತಿರುವ (ಭಾಂ ಎಂದು ಅರಚುತ್ತಿರುವ) ಆನೆಯ ಮರಿಗಳನ್ನು ತೀಕ್ಷ್ಣವಾದ ಉಗುರುಗಳಿಂದ ಕೊರಳಿನಲ್ಲಿ ಸ್ಪರ್ಶಿಸಿ ಸಲಗಗಳೊಡನೆ ಸಂತೋಷಪಡಲಿಲ್ಲವೆನ್ನುವುದಿಲ್ಲ. ಸಂತೋಷಪಟ್ಟಿತೆಂದು ಭಾವವು.

ಕರಿಣ್ಯೋ ಬಿಸಿನೀಪತ್ರಪುಟೈಃ ಪಾನೀಯಮಾನಯನ್ ।
ತದ್ಯೋಗಪೀಠಪರ್ಯಂತಭುವಃ ಸಮ್ಮಾರ್ಜನೇಚ್ಛಯಾ ॥ ೧೬೯ ॥

ಹೆಣ್ಣಾನೆಗಳು ಆ ಬಾಹುಬಲಿಸ್ವಾಮಿಯ ಯೋಗಾಸನದ ಸಮೀಪಭೂಮಿಗಳನ್ನು ಸಾರಿಸಬೇಕೆಂಬ ಇಚ್ಛೆಯಿಂದ ತಾವರೆಯ ಎಲೆಗಳ ದೊನ್ನೆಗಳಿಂದ ನೀರನ್ನು ತಂದುವು.

[೬]ಪುಷ್ಕರೈಃ [೭]ಪುಷ್ಕರೋದಸ್ತೈರ್ನ್ಯಸ್ತೈ[೮]ರಧಿಪದದ್ವಯಮ್ ।
ಸ್ತಂಬೇರಮಾ ಮುನಿಂ ಭೇಜುರಹೋ ಶಮಕರಂ ತಪಃ ॥ ೧೭೦ ॥

ಆನೆಗಳು ಸೊಂಡಿಲಿನ ತುದಿಯಿಂದ ಎತ್ತಲ್ಪಟ್ಟುವೂ ಎರಡು ಪಾದಗಳಲ್ಲಿ ಇರಿಸಲ್ಪಟ್ಟುವೂ ಆದ ತಾವರೆಗಳೊಡನೆ ಬಾಹುಬಲಿಮುನಿಯನ್ನು ಹೊಂದಿದುವು. ಆನೆಗಳು ತಾವರೆಗಳನ್ನು ತಂದು ಮುನಿಪಾದಗಳಿಗೆ ಅರ್ಚಿಸಿದುವೆಂದು ಭಾವವು. ತಪಸ್ಸು ಶಾಂತತೆಯನ್ನುಂಟುಮಾಡತಕ್ಕುದಾಗಿರುತ್ತದೆ. ಆಶ್ಚರ್ಯ !

ಉಪಾಂಘ್ರಿ [೯]ಭೋಗಿನಾಂ ಭೋಗೈರ್ವಿನೀಲೈರ್ವ್ಯರುಚನ್ಮುನಿಃ ।
ವಿನ್ಯಸ್ತೈ[೧೦]ರರ್ಚನಾಯೇವ ನೀಲೈರುತ್ಪಲದಾಮಕೈಃ ॥ ೧೭೧ ॥

ಬಾಹುಬಲಿಮುನಿಯು ಪಾದಸಮೀಪದಲ್ಲಿ ಪೂಜೆಗೋಸ್ಕರ ಇರಿಸಲ್ಪಟ್ಟಿರುವ ನೀಲೋತ್ಪಲಪುಷ್ಪಮಾಲಿಕೆಗಳೋ ಎಂಬಂತಿರುವ ಕಪ್ಪಾದ ಸರ್ಪಗಳ ಹೆಡೆಗಳಿಂದ ಪ್ರಕಾಶಿಸಿದನು.

ಫಣಮಾತ್ರೋದ್ಗತಾ [೧೧]ರಂಧ್ರಾತ್ಫಣಿನಃ [೧೨]ಶಿತಯೋದ್ಯುತನ್ ।
ಕೃತಾಃ ಕುವಲಯೈರರ್ಘಾ ಮುನೇರಿವ ಪದಾಂತಿಕೇ ॥ ೧೭೨ ॥

ಬಾಹುಬಲಿಮುನಿಯ ಪಾದಸಮೀಪದಲ್ಲಿ ನೀಲೋತ್ಪಲಪುಷ್ಪಗಳಿಂದ ಮಾಡಲ್ಪಟ್ಟ ಅರ್ಘ್ಯಗಳೋ ಎಂಬಂತಿರುವುವೂ ಹುತ್ತದ ಬಿಲದಿಂದ ಹೆಡೆಯನ್ನು ಮಾತ್ರ ಮೇಲಕ್ಕೆತ್ತಿರುವುವೂ ಆದ ಕೃಷ್ಣಸರ್ಪಗಳು ಪ್ರಕಾಶಿಸಿದುವು.

ರೇಜುರ್ವನಲತಾ ನಮ್ರೈಃ ಶಾಖಾಗ್ರೈಃ ಕುಸುಮೋಜ್ಜ್ವಲೈಃ ।
ಮುನಿಂ ಭಜಂತ್ಯೋ ಭಕ್ತ್ಯೇವ ಪುಷ್ಪಾರ್ಘ್ಯೈರ್ನತಿಪೂರ್ವಕಮ್ ॥

೧ ವೃದ್ಧ. ೨ ನವಸೂತಿಕಾ. ೩ ಸಮಾನಂ. ೪ ಮನೋಜ್ಞಧ್ವನಿವಿಶೇಷವಾಚಾಲಾನ್. ೫ ಅಭ್ಯನಂದೀದಿತ್ಯರ್ಥಃ. ೬ ಕಮಲೈಃ. ೭ ಕರಾಗ್ರೋದ್ಧೃತೈಃ. ೮ ಪದಯುಗೆ. ೯ ಸರ್ಪಾಣಾಂ ಶರೀರೈಃ. ೧೦ ಪೂಜಾಯ್ಕೆ. ೧೧ ವಲ್ಮೀಕಬಿಲಾತ್. ೧೨ ಕೃಷ್ಣಾಃ.

ಕಾಡಿನ ಬಳ್ಳಿಗಳು ಪುಷ್ಪಗಳಿಂದ ಪ್ರಕಾಶಮಾನವೂ ಬಗ್ಗಿರುವುವೂ ಆದ ಕೊಂಬೆಗಳ ತುದಿಗಳಿಂದ ಮುನಿಯನ್ನು ಭಕ್ತಿಯಿಂದ ನಮಸ್ಕಾರಪೂರ್ವಕವಾಗಿ ಪುಷ್ಪಾರ್ಘ್ಯಗಳಿಂದ ಭಜಿಸುತ್ತವೋ ಎಂಬಂತೆ ಶೋಭಿಸಿದುವು.

ಶಶ್ವದ್ವಿಕಾಸಿಕುಸುಮೈಃ ಶಾಖಾಗ್ರೈರನಿಲಾಹತೈಃ ।
ಬಭುರ್ವನದ್ರುಮಾಸ್ತೋಷಾ[೧]ನ್ನಿನೃತ್ಸವ ಇವಾಸಕೃತ್ ॥ ೧೭೪ ॥

ಕಾಡಿನ ಮರಗಳು ಸಂತೋಷದಿಂದ ಅನೇಕಾವರ್ತಿ ನರ್ತನಮಾಡಲಿಚ್ಛೆಯುಳ್ಳುವಾಗಿರುತ್ತವೆಯೋ ಎಂಬಂತೆ ಗಾಳಿಯಿಂದ ಹೊಡೆಯಲ್ಪಟ್ಟುವೂ ಬಾರಿಬಾರಿಗೆ ಅರಳುತ್ತಿರುವ ಹೂವುಗಳುಳ್ಳುವೂ ಆದ ಕೊಂಬೆಗಳ ತುದಿಗಳಿಂದ ಪ್ರಕಾಶಿಸಿದುವು.

ಕಲೈರಲಿರುತೋದ್ಗಾನೈಃ ಫಣಿನೋ ನನೃತುಃ ಕಿಲ ।
ಉತ್ಫಣಾಃ ಫಣರತ್ನಾಂಶುದೀಪ್ರೈ[೨]ರ್ಭೋಗೈರ್ವಿವರ್ತಿತೈಃ ॥ ೧೭೫ ॥

ಹೆಡೆಗಳನ್ನೆತ್ತಿರುವ ಸರ್ಪಗಳು ಅವ್ಯಕ್ತಮಧುರವಾದ ದುಂಬಿಗಳ ಧ್ವನಿಯೆಂಬ ಗಾನಗಳೊಡನೆ ಹೆಡೆಗಳಲ್ಲಿರುವ ರತ್ನಗಳ ಕಿರಣಗಳಿಂದ ಪ್ರಕಾಶಮಾನವೂ ಚಲಿಸಲ್ಪಟ್ಟುವೂ ಆದ ಶರೀರಗಳಿಂದ ನರ್ತನಮಾಡಿದುವಂತೆ.

ಪುಂಸ್ಕೋಕಿಲಕಲಾಲಾಪಡಿಂಡಿಮಾನುಗತೈ[೩]ರ್ಲಯೈಃ ।
[೪]ಚಕ್ಷುಶ್ಶ್ರವಸ್ಸು ಪಶ್ಯತ್ಸು [೫]ತದ್ವಿಷೋ [೬]ನಟಿಷುರ್ಮುಹುಃ ॥ ೧೭೬ ॥

ಸರ್ಪಗಳು ನೋಡುತ್ತಿರಲು ನವಿಲುಗಳು ಗಂಡುಕೋಗಿಲೆಗಳ ಅವ್ಯಕ್ತ ಮಧುರವಾದ ಧ್ವನಿಯೆಂಬ ಢಕ್ಕಾವಾದ್ಯವನ್ನನುಸರಿಸಿದ ತಾಳಲಯಗಳಿಂದ ಬಾರಿಬಾರಿಗೆ ನರ್ತನಮಾಡಿದುವು. ಕೋಗಿಲೆಗಳ ಆಲಾಪವನ್ನನುಸರಿಸಿ ಕುಣಿಯುವ ನವಿಲುಗಳನ್ನು ಸರ್ಪಗಳು ನೋಡುತ್ತಿದ್ದುವೆಂದು ಭಾವವು.

ಮಹಿಮ್ನಾ [೭]ಶಮಿನಃ ಶಾಂತಮಿತ್ಯಭೂತ್ತಚ್ಚ ಕಾನನಮ್ ।
ಧತ್ತೇ ಹಿ ಮಹತಾಂ [೮]ಯೋಗಃ ಶಮಮ[೯]ಪ್ಯಶಮಾತ್ಮಸು ॥ ೧೭೭ ॥

ಬಾಹುಬಲಿಮುನಿಯ ಮಹಿಮೆಯಿಂದ ಆ ಅರಣ್ಯವೂ ಮೇಲೆ ಹೇಳಿದಂತೆ ಶಾಂತವಾಗಿದ್ದಿತು. ಮಹಾಪುರುಷರ ಸಂಯೋಗವು ಕ್ರೂರಾತ್ಮಗಳಲ್ಲಿಯೂ ಶಾಂತತೆಯನ್ನುಂಟುಮಾಡುತ್ತದಲ್ಲವೆ ?

ಶಾಂತಸ್ವನೈರ್ನದಂತಿ ಸ್ಮ ವನಾಂತೇಽಸ್ಮಿನ್ ಶಕುಂತಯಃ ।
ಘೋಷಯಂತ ಇವಾ[೧೦]ತಾಂತಂ ಶಾಂತಮೇತತ್ತಪೋವನಮ್ ॥

ಪಕ್ಷಿಗಳು ಈ ವನಪ್ರದೇಶದಲ್ಲಿ ಈ ತಪೋವನವು ಶಾಂತವೂ ಪ್ರಸನ್ನವೂ ಆಗಿದೆಯೆಂದು ಘೋಷಿಸುತ್ತವೋ ಎಂಬಂತೆ ಶಾಂತವಾದ ಶಬ್ದಗಳಿಂದ ಧ್ವನಿಮಾಡಿದುವು.

ತಪೋಽನುಭಾವಾದಸ್ಯೈವಂ ಪ್ರಶಾಂತೇಽಸ್ಮಿನ್ವನಾಶ್ರಮೇ ।
[೧೧]ವಿನಿಪಾತಃ ಕುತೋಽಪ್ಯಾಸೀತ್ಕಸ್ಯಾಪಿ ನ ಕಥಂಚನ ॥ ೧೭೯ ॥

ಈ ಬಾಹುಬಲಿಮುನಿಯ ತಪೋಮಹಿಮೆಯಿಂದ ಈ ಪ್ರಕಾರವಾಗಿ ಶಾಂತವಾದ ಈ ವನಾಶ್ರಮದಲ್ಲಿ ಯಾರಿಗೂ ಯಾವುದರಿಂದಲೂ ಯಾವ ಪ್ರಕಾರವಾಗಿಯೂ ಬಾಧೆಯುಂಟಾಗಲಿಲ್ಲ.

[೧೨]ಮಹಸಾಸ್ಯ ತಪೋಯೋಗಜೃಂಭಿತೇನ ಮಹೀಯಸಾ ।
ಬಭೂವುರ್ಹೃತಹೃದ್ಧ್ವಾಂತಾಸ್ತಿರ್ಯಂಚೋಽ[೧೩]ಪ್ಯನಭಿದ್ರುಹಃ ॥ ೧೮೦ ॥

೧ ನರ್ತಿತುಮಿಚ್ಛವಃ. ೨ ಶರೀರೈಃ. ೩ ತಾಲನಿಬದ್ಧೈಃ. ೪ ಸರ್ಪೇಷು. ೫ ಮಯೂರಾಃ. ೬ ನಟಂತಿಸ್ಮ. ೭ ಬಾಹುಬಲಿಮುನೇಃ. ೮ ಸಂಯೋಗಃ. ೯ ಕ್ರೂರಾತ್ಮಸು. ೧೦ ಪ್ರಸನ್ನಂ. ೧೧ ಬಾಧಾ. ೧೨ ತೇಜಸಾ. ೧೩ ಅಹಿಂಸ್ರಕಾಃ.

ಈ ಬಾಹುಬಲಿಮುನಿಯ ತಪೋಯೋಗದಿಂದುಂಟಾದ ಮಹಾತೇಜಸ್ಸಿನಿಂದ ಹೃದಯದಲ್ಲಿ ಅಂಧಕಾರ–ಅಜ್ಞಾನವಿಲ್ಲದುವುಗಳಾದ ತಿರ್ಯಕ್ಪ್ರಾಣಿಗಳೂ ಹಿಂಸಾ ಭಾವವಿಲ್ಲದುವುಗಳಾದುವು.

**[೧]ಗತಿಸ್ಖಲನತೋ ಜ್ಞಾತ್ವಾ ಯೋಗಸ್ಥಂ ತಂ ಮುನೀಶ್ವರಮ್ ।**
**ಅಸಕೃತ್ಪೂಜಯಾಮಾಸುರವತೀರ್ಯ [೨]ನಭಶ್ಚರಾಃ ॥ ೧೮೧ ॥**

ಆಕಾಶದಲ್ಲಿ ಸಂಚಾರ ಮಾಡುವವರಾದ ದೇವತೆಗಳೂ ವಿದ್ಯಾಧರರೂ ತಮ್ಮ ವಿಮಾನಗಳು ಕೀಲಿಸಿದುದರಿಂದ(ನಿಂತುದರಿಂದ) ಯೋಗಾರೂಢನಾಗಿರುವ ಆ ಬಾಹುಬಲಿಮುನಿಯನ್ನು ತಿಳಿದು ಇಳಿದು ಬಂದು ಅನೇಕಾವರ್ತಿ ಪೂಜಿಸಿದರು.

**ಮಹಿಮ್ನಾಸ್ಯ ತಪೋವೀರ್ಯಜನಿತೇನಾಲಘೀಯಸಾ ।**
**ಮುಹುರಾಸನಕಂಪೋಭೂನ್ನತಮೂರ್ಧ್ನಾಂ [೩]ಸುಧಾಶಿನಾಮ್॥ ೧೮೨ ॥**

ಈ ಬಾಹುಬಲಿಮುನಿಯ ತಪಶ್ಶಕ್ತಿಯಿಂದುಂಟಾದ ಮಹಾಮಹಿಮೆಯಿಂದ ನಮ್ರವಾದ ಮಸ್ತಕಗಳುಳ್ಳ ದೇವೇಂದ್ರರ ಆಸನಗಳು ಬಾರಿಬಾರಿಗೆ ಕಂಪಿಸಿದುವು.

**ವಿದ್ಯಾಧರ್ಯಃ ಕದಾಚಿಚ್ಚ ಕ್ರೀಡಾಹೇತೋರುಪಾಗತಾಃ ।**
**ವಲ್ಲೀ[೪]ರುದ್ವೇಷ್ಟಯಾಮಾಸುರ್ಮುನೇಃ ಸರ್ವಾಂಗಸಂಗಿನೀಃ ॥ ೧೮೩ ॥**

ಯಾವಾಗಲಾದರೂ ಕ್ರೀಡಾನಿಮಿತ್ತದಿಂದ ಬಂದ ವಿದ್ಯಾಧರಸ್ತ್ರೀಯರು ಬಾಹು ಬಲಿಮುನಿಗೆ ಸರ್ವಾಂಗಗಳಲ್ಲಿ ಸಂಬಂಧಿಸಿದ ಬಳ್ಳಿಗಳನ್ನು ಬಿಡಿಸಿದರು.

**ಇತ್ಯುಪಾರೂಢಸದ್ಧ್ಯಾನಬಲೋ[೫]ದ್ಭೂತತಪೋಬಲಃ ।**
**ಸ ಲೇಶ್ಯಾಶುದ್ಧಿ[೬]ಮಾಸ್ಕಂದನ್ ಶುಕ್ಲಧ್ಯಾನೋನ್ಮುಖೋಭವತ್॥ ೧೮೪ ॥**

ಈ ಪ್ರಕಾರವಾಗಿ ಅವಲಂಬಿಸಿದ ಶ್ರೇಷ್ಠವಾದ ಧ್ಯಾನದ ಬಲದಿಂದ ಪ್ರಕಟವಾದ ತಪಸ್ಸಾಮರ್ಥ್ಯವುಳ್ಳವನಾದ ಆ ಬಾಹುಬಲಿಮುನಿಯು ಲೇಶ್ಯೆಯೆಂಬ ಪರಿ ಣಾಮದ ಶುದ್ಧಿಯನ್ನು ಅಂದರೆ ಶುದ್ಧಭಾವವನ್ನು ಹೊಂದಿದವನಾಗಿ ಶುಕ್ಲಧ್ಯಾನ ವೆಂಬ ನಿರ್ವಿಕಲ್ಪಪರಮಸಮಾಧಿಗೆ ಅಭಿಮುಖನಾದನು.

**ವತ್ಸರಾನಶನಸ್ಯಾಂತೇ ಭರತೇಶೇನ ಪೂಜಿತಃ ।**
**ಸ ಭೇಜೇ ಪರಮಂ ಜ್ಯೋತಿಃ ಕೇವಲಾಖ್ಯಂ ಯದಕ್ಷರಮ್ ॥ ೧೮೫ ॥**

ಒಂದು ವರ್ಷಕಾಲಾವಧಿಯ ಉಪವಾಸದ ಕೊನೆಯಲ್ಲಿ ಭರತೇಶ್ವರನಿಂದ ಪೂಜಿಸಲ್ಪಟ್ಟ ಆ ಬಾಹುಬಲಿಮುನಿಯು ನಾಶರಹಿತವಾದ ಕೇವಲಜ್ಞಾನವೆಂಬ ಪರಮಜ್ಯೋತಿಯನ್ನು ಪಡೆದನು.

**ಸಂಕ್ಲಿಷ್ಟೋ ಭರತಾಧೀಶಃ ಸೋಽಸ್ಮತ್ತ ಇತಿ ಯತ್ಕಿಲ ।**
**ಹೃದ್ಯ[೭]ಸ್ಯ [೮]ಹಾರ್ದಂ [೯]ತೇನಾಸೀ[೧೦]ತ್ತತ್ಪೂಜಾಪೇಕ್ಷಿ [೧೧]ಕೇವಲಮ್ ॥**

''ಆ ಭರತೇಶ್ವರನು ನಮ್ಮ ದೆಸೆಯಿಂದ ಬಹುಕ್ಲೇಶವುಳ್ಳವನಾದನು'' ಈ ಪ್ರಕಾರವಾಗಿ ಯಾವ ಸ್ನೇಹವು ಈ ಬಾಹುಬಲಿಸ್ವಾಮಿಯ ಹೃದಯದಲ್ಲಿದ್ದಿತೋ ಅದರಿಂದ ಕೇವಲಜ್ಞಾನವು ಆ ಭರತೇಶ್ವರನ ಪೂಜೆಯ ಅಪೇಕ್ಷೆಯುಳ್ಳುದಾಗಿದ್ದಿತು. ಬಾಹುಬಲಿಸ್ವಾಮಿಗೆ ಭರತೇಶ್ವರನಲ್ಲಿರುವ ಪ್ರೇಮದಿಂದ ಅವನು ಪೂಜಿಸುವವರೆಗೆ ಸ್ವಾಮಿಗೆ ಕೇವಲಜ್ಞಾನೋತ್ಪತ್ತಿಯಾಗಲಿಲ್ಲವೆಂದು ಭಾವವು.

**ಕೇವಲಾರ್ಕೋದಯಾತ್ಪ್ರಾಕ್ಚ ಪಶ್ಚಾಚ್ಚ ವಿಧಿವದ್ವ್ಯಧಾತ್ ।**
**ಸಪರ್ಯಾಂ ಭರತಾಧೀಶೋ ಯೋಗಿನೋಽಸ್ಯ ಪ್ರಸನ್ನಧೀಃ ॥ ೧೮೭ ॥**

ಪ್ರಸನ್ನವಾದ ಬುದ್ಧಿಯುಳ್ಳ ಭರತೇಶ್ವರನು ಕೇವಲಜ್ಞಾನವೆಂಬ ಸೂರ್ಯನ ಉದಯಕ್ಕಿಂತ ಮೊದಲೂ ಅನಂತರದಲ್ಲಿಯೂ ಈ ಬಾಹುಬಲಿಯೋಗಿಯ ಪೂಜೆಯನ್ನು ವಿಧಿಪ್ರಕಾರವಾಗಿ ಮಾಡಿದನು.

೧ ಕೀಲಿತಸ್ವವಿಮಾನತಃ. ೨ ದೇವವಿದ್ಯಾಧರಾಃ. ೩ ಇಂದ್ರಾಣಾಂ. ೪ ಮೋಚಯಾಮಾಸುಃ. ೫ ಪ್ರಕಟೀಭೂತ. ೬ ಗಚ್ಛನ್. ೭ ಭುಜಬಲಿಸ್ವಾಮಿನಃ. ೮ ಸ್ನೇಹಃ. ೯ ಹಾರ್ದೇನ. ೧೦ ಭರತ ಪೂಜಾಪೇಕ್ಷೀ. ೧೧ ಕೇವಲಜ್ಞಾನಂ.

**[೧]ಸ್ವಾಗಃಪ್ರಮಾರ್ಜನಾರ್ಥೇಜ್ಯಾ [೨]ಪ್ರಾಕ್ತನೀ ಭರತೇಶಿನಃ ।**
**[೩]ಪಾಶ್ಚಾತ್ಯಾ[೪]ತ್ಯಾಯತಾಪೀಜ್ಯಾ [೫]ಕೇವಲೋತ್ಪತ್ತಿಮನ್ವಭೂತ್ ॥ ೧೮೮ ॥**

ಭರತೇಶ್ವರನ ಮೊದಲನೆಯ ಪೂಜೆಯು ತನ್ನ ತಪ್ಪನ್ನು ಹೋಗಲಾಡಿಸು ವುದಕ್ಕೋಸ್ಕರವಾಗಿದ್ದಿತು. ಅನಂತರದಲ್ಲಿ ಮಾಡಲ್ಪಟ್ಟ ಅತ್ಯಧಿಕವಾದ ಪೂಜೆ ಯಾದರೋ ಕೇವಲಜ್ಞಾನೋತ್ಪತ್ತಿನಿಮಿತ್ತವಾಗಿದ್ದಿತು.

**ಯಾ ಕೃತಾ ಭರತೇಶೇನ ಮಹೇಜ್ಯಾ ಸ್ವಾನುಜನ್ಮನಃ ।**
**ಪ್ರಾಪ್ತಕೇವಲಬೋಧಸ್ಯ ಕೋ ಹಿ ತದ್ವರ್ಣನೇ ಕ್ಷಮಃ ॥ ೧೮೯ ॥**

ಕೇವಲಜ್ಞಾನವನ್ನು ಪಡೆದ ತನ್ನ ತಮ್ಮನಿಗೆ ಭರತೇಶ್ವರನಿಂದ ಯಾವ ಪೂಜೆಯು ಮಾಡಲ್ಪಟ್ಟಿತೋ ಆ ಪೂಜೆಯ ವರ್ಣನೆಯಲ್ಲಿ ಯಾವನು ಸಮರ್ಥನು ? ಭರತೇಶ್ವರನು ಮಾಡಿದ ಕೇವಲಜ್ಞಾನ ಪೂಜೆಯನ್ನು ವರ್ಣಿಸುವುದಕ್ಕೆ ಯಾರೂ ಸಮರ್ಥರಲ್ಲವೆಂದು ಭಾವವು.

**[೬]ಸ್ವಾಜನ್ಯಾನುಗಮೋಽಸ್ತ್ವೇಕೋ ಧರ್ಮರಾಗಸ್ತಥಾಪರಃ ।**
**ಜನ್ಮಾಂತರಾನುಬಂಧಶ್ಚ ಪ್ರೇಮಬಂಧೋತಿನಿರ್ಭರಃ ॥ ೧೯೦ ॥**

**ಇತ್ಯೇ[೭]ಕಶೋ[೮]ಪ್ಯಮೀ ಭಕ್ತಿಪ್ರಕರ್ಷಸ್ಯ ಪ್ರಯೋಜಕಾಃ ।**
**[೯]ತೇಷಾಂ ತು ಸರ್ವಸಾಮಗ್ರೀ ಕಾಂ ನ ಪುಷ್ಣಾತಿ ಸತ್ಕ್ರಿಯಾಮ್ ॥**

ಒಂದು ಸ್ವಜನಭಾವದ ಸಂಬಂಧವಿರುತ್ತದೆ. ಹಾಗೆ ಬೇರೊಂದು ಧರ್ಮಪ್ರೀತಿ ಯಿರುತ್ತದೆ. ಜನ್ಮಾಂತರದಿಂದ ಬಂದ ಬಾಂಧವ್ಯವಿರುತ್ತದೆ. ಸಂಪೂರ್ಣವಾದ ಪ್ರೇಮಬಂಧನವಿರುತ್ತದೆ. ಇವು ಈ ಪ್ರಕಾರವಾಗಿ ಒಂದೊಂದೂ ಅತಿಶಯವಾದ ಭಕ್ತಿಯನ್ನು ಉಂಟುಮಾಡತಕ್ಕುವಾಗಿರುತ್ತವೆ. ಸಹೋತ್ಪತ್ತಿ ಧರ್ಮಾನುರಾಗ ಜನ್ಮಾಂತರ ಸಂಬಂಧ ಆ ಮೂರರ ಸಮೂದಾಯವು ಯಾವ ಸತ್ಕಾರವನ್ನು ತಾನೆ ಪುಷ್ಟೀಕರಿಸುವುದಿಲ್ಲ ?

**[೧೦]ಸಾಮಾತ್ಯಃ [೧೧]ಸಮಹೀಪಾಲಃ ಸಾಂತಃಪುರಪುರೋಹಿತಃ ।**
**ತಂ ಬಾಹುಬಲಿಯೋಗೀಂದ್ರಂ ಪ್ರಣನಾಮಾ[೧೨]ಧಿರಾಟ್ ಮುದಾ ॥**

ಮಂತ್ರಿಗಳೊಡನೆಯೂ ಸಾಮಂತರಾಜರುಗಳೊಡನೆಯೂ ಅಂತಃಪುರಸ್ತ್ರೀಜನ ರೊಡನೆಯೂ ಪುರೋಹಿತನೊಡನೆಯೂ ಕೂಡಿಕೊಂಡು ಭರತಚಕ್ರವರ್ತಿಯು ಸಂತೋಷದಿಂದ ಆ ಬಾಹುಬಲಿಯೋಗೀಂದ್ರನನ್ನು ನಮಸ್ಕರಿಸಿದನು.

**ಕಿಮತ್ರ [೧೩]ಬಹುನಾ ರತ್ನೈಃ ಕೃತೋಽರ್ಘಃ ಸ್ವರ್ಣದೀಜಲಮ್ ।**
**ಪಾದ್ಯಂ ರತ್ನಾರ್ಚಿಷೋ ದೀಪಾಸ್ತಂಡುಲೇಜ್ಯಾ ಚ ಮೌಕ್ತಿಕೈಃ ॥ ೧೯೩ ॥**

**[೧೪]ಹವಿಃ ಪೀಯೂಷಪಿಂಡೇನ ಧೂಪೋ [೧೫]ದೇವದ್ರುಮಾಂಶಕೈಃ ।**
**ಪುಷ್ಪಾರ್ಚಾ ಪಾರಿಜಾತಾದಿ[೧೬]ಸುರಾಗಸುಮನಶ್ಚಯೈಃ ॥ ೧೯೪ ॥**

**ಸರತ್ನಾ ನಿಧಯಃ ಸರ್ವೇ ಫಲಸ್ಥಾನೇ ನಿಯೋಜಿತಾಃ ।**
**ಪೂಜಾಂ ರತ್ನಮಯೀಮಿತ್ಥಂ ರತ್ನೇಶೋ ನಿರವರ್ತಯತ್ ॥ ೧೯೫ ॥**

ಪೂಜಾವಿಷಯದಲ್ಲಿ ಹೆಚ್ಚು ಹೇಳುವುದರಿಂದೇನು ? ರತ್ನಗಳಿಂದ ಅರ್ಘ್ಯವು ಮಾಡಲ್ಪಟ್ಟಿತು. ಗಂಗಾನದಿಯ ನೀರು ಪಾದ್ಯವಾಗಿದ್ದಿತು. ರತ್ನಗಳ ಜ್ವಾಲೆಗಳು ದೀಪಗಳಾಗಿದ್ದುವು. ಮುತ್ತುಗಳಿಂದ ಅಕ್ಕಿಗಳ ಪೂಜೆಯಾಗಿದ್ದಿತು. ಅಮೃತ ಪಿಂಡದಿಂದ ಚರುವೂ ಚಂದನವೃಕ್ಷದ ಚೂರ್ಣಗಳಿಂದ ಧೂಪವೂ ಪಾರಿಜಾತವೇ ಮೊದಲಾದ ಕಲ್ಪವೃಕ್ಷಗಳ ಪುಷ್ಪಸಮೂಹಗಳಿಂದ ಪುಷ್ಪಾರ್ಚನೆಯೂ ಮಾಡ ಲ್ಪಟ್ಟುವು. ರತ್ನಸಹಿತವಾದ ಎಲ್ಲಾ ನಿಧಿಗಳು ಫಲದ ಸ್ಥಾನದಲ್ಲಿ

೧ ನಿಜಾಪರಾಧನಿರ್ಹರಣಾರ್ಥಾ. ೨ ಪ್ರಾಗ್ಭವಾ. ೩ ಪಶ್ಚಾದ್ಭವಾ. ೪ ಅತ್ಯಧಿಕಾ. ೫ ಕೇವಲ ಜ್ಞಾನೋತ್ಪತ್ತಿಮುದ್ದಿಶ್ಯಾಸೀತ್. ೬ ಸ್ವಜನಸ್ಯ ಭಾವಃ ಸ್ವಾಜನ್ಯಂ ತಸ್ಯಾನುಗಮಃ ಸಂಬಂಧಃ. ೭ ಏಕೈಕಂ. ೮ ಸಹೋತ್ಪತ್ತ್ಯಾದಯಸ್ತ್ರಯಃ. ೯ ಸಹೋತ್ಪತ್ತ್ಯಾದೀನಾಂ ತ್ರಯಾಣಾಂ. ೧೦ ಮಂತ್ರಿಸಹಿತಃ. ೧೧ ಮಹೀಪಾಲೈಃ ಸಹಿತಃ. ೧೨ ಚಕ್ರವರ್ತೀ. ೧೩ ಉಕ್ತೇನ ಕಿಂ. ೧೪ ಚರುಃ. ೧೫ ಹರಿಚಂದನಶಕಲೈಃ. ೧೬ ಕಲ್ಪವೃಕ್ಷಪುಷ್ಪಸಮೂಹೈಃ.

ಉಪಯೋಗಿಸಲ್ಪಟ್ಟುವು. ರತ್ನಗಳಿಗೆ ಅಧಿಪತಿಯಾದ ಭರತೇಶ್ವರನು ಈ ಪ್ರಕಾರವಾಗಿ ರತ್ನಮಯವಾದ ಪೂಜೆಯನ್ನು ನೆರವೇರಿಸಿದನು.

**ಸುರಾಶ್ಚಾಸನಕಂಪೇನ ಜ್ಞಾತತತ್ಕೇವಲೋದಯಾಃ ।**
**ಚಕ್ರುರಸ್ಯ ಪರಾಮಿಜ್ಯಾಂ [೧]ಶತಾಧ್ವರಪುರಸ್ಸರಾಃ ॥ ೧೯೬ ॥**

ದೇವೇಂದ್ರನೇ ಮೊದಲಾದ ದೇವತೆಗಳೂ ತಮ್ಮ ಆಸನಗಳ ಕಂಪನದಿಂದ ಆ ಬಾಹುಬಲಿಸ್ವಾಮಿಯ ಕೇವಲಜ್ಞಾನೋತ್ಪತ್ತಿಯನ್ನು ತಿಳಿದವರಾಗಿ ಈ ಬಾಹುಬಲಿಸ್ವಾಮಿಯ ಉತ್ಕೃಷ್ಟವಾದ ಪೂಜೆಯನ್ನು ಮಾಡಿದರು.

**ವವುರ್ಮಂದಂ ಸ್ವರುದ್ಯಾನತರುಧೂನನಚುಂಚವಃ ।**
**ತದಾ ಸುಗಂಧಯೋ ವಾತಾಃ ಸ್ವರ್ಧುನೀಶೀಕರಾಹರಾಃ ॥ ೧೯೭ ॥**

ಆಗ ಸ್ವರ್ಗದ ಉದ್ಯಾನದ ವೃಕ್ಷಗಳನ್ನು ಕಂಪಿಸುವುದರಲ್ಲಿ ಸಮರ್ಥಗಳೂ ಸುಗಂಧಗಳೂ ಗಂಗಾನದಿಯ ಜಲಕಣಗಳನ್ನು ತರುತ್ತಿರುವುವೂ ಆದ ಗಾಳಿಗಳು ಮಂದವಾಗಿ ಬೀಸಿದುವು.

**ಮಂದ್ರಂ ಪಯೋಮುಚಾಂ ಮಾರ್ಗೇ ದಧ್ವನುಶ್ಚ ಸುರಾನಕಾಃ ।**
**ಪುಷ್ಪೋತ್ಕರೋ [೨]ದಿವೋಪಪ್ತತ್ಕಲ್ಪಾನೋಕಹಸಂಭವಃ ॥ ೧೯೮ ॥**

ದೇವದುಂದುಭಿಗಳು ಆಕಾಶಮಾರ್ಗದಲ್ಲಿ ಗಂಭೀರವಾಗಿ ಮೊಳಗಿದುವು. ಕಲ್ಪವೃಕ್ಷಗಳಿಂದುಂಟಾದ ಪುಷ್ಪಸಮೂಹವು ಆಕಾಶದಿಂದ ಬಿದ್ದಿತು.

**ರತ್ನಾತಪತ್ರಮಸ್ಯೋಚ್ಚೈರ್ನಿರ್ಮಿತಂ ಸುರಶಿಲ್ಪಿಭಿಃ ।**
**ಪರಾರ್ಧ್ಯಮಣಿನಿರ್ಮಾಣಮಭಾದ್ದಿವ್ಯಂ ಚ ವಿಷ್ಟರಮ್ ॥ ೧೯೯ ॥**

ದೇವಶಿಲ್ಪಿಗಳಿಂದ ಚೆನ್ನಾಗಿ ನಿರ್ಮಿಸಲ್ಪಟ್ಟ ಈ ಬಾಹುಬಲಿಸ್ವಾಮಿಯ ರತ್ನಮಯವಾದ ಬಿಸಿಲ್ಗೊಡೆಯೂ ಹೆಚ್ಚು ಬೆಲೆ ಬಾಳುವ ರತ್ನಗಳಿಂದ ಮಾಡಲ್ಪಟ್ಟ ದಿವ್ಯಪೀಠವೂ ಪ್ರಕಾಶಿಸಿದುವು.

**[೩]ಸ್ವಯಂ ವ್ಯಧೂಯತಾಸ್ಯೋಚ್ಚೈಃ [೪]ಪ್ರಾಂತಯೋಶ್ಚಾಮರೋತ್ಕರಃ ।**
**[೫]ಸಭಾವನಿಶ್ಚ ತದ್ಯೋಗ್ಯಾ [೬]ಪಪ್ರಥೇ ಪ್ರಥಿತೋದಯಾ ॥ ೨೦೦ ॥**

ಈ ಬಾಹುಬಲಿಸ್ವಾಮಿಯ ಉಭಯಪಾರ್ಶ್ವಗಳಲ್ಲಿ ಉನ್ನತವಾದ ಚಾಮರಗಳ ಸಮೂಹವು ದೇವೇಂದ್ರನಿಂದ ಬೀಸಲ್ಪಟ್ಟಿತು. ಪ್ರಸಿದ್ಧವಾದ ಸಂಪತ್ತಿಯುಳ್ಳದೂ ಆ ಬಾಹುಬಲಿಕೇವಲಿಗೆ ಯೋಗ್ಯವೂ ಆದ ಸಭಾಭೂಮಿ–ಗಂಧಕುಟಿಯೂ ಪ್ರಕಟವಾಯಿತು.

**ಸುರೈರಿತ್ಯರ್ಚಿತಃ ಪ್ರಾಪ್ತಕೇವಲರ್ದ್ಧಿಃ ಸ ಯೋಗಿರಾಟ್ ।**
**ವ್ಯದ್ಯುತನ್ಮುನಿಭಿ[೭]ರ್ಜುಷ್ಟಃ ಶಶೀವೋಡುಭಿರಾಶ್ರಿತಃ ॥ ೨೦೧ ॥**

ದೇವತೆಗಳಿಂದ ಈ ಪ್ರಕಾರವಾಗಿ ಪೂಜಿಸಲ್ಪಟ್ಟವನೂ ಕೇವಲಜ್ಞಾನ ಸಂಪತ್ತಿಯನ್ನು ಪಡೆದವನೂ ಮುನಿಗಳಿಂದ ಸೇವಿಸಲ್ಪಟ್ಟವನೂ ಆದ ಆ ಬಾಹುಬಲಿ ಯೋಗೀಶ್ವರನು, ನಕ್ಷತ್ರಗಳಿಂದ ಆಶ್ರಯಿಸಲ್ಪಟ್ಟ ಚಂದ್ರನಂತೆ, ವಿಶೇಷವಾಗಿ ಪ್ರಕಾಶಿಸಿದನು.

**ಘಾತಿಕರ್ಮಕ್ಷಯೋದ್ಭೂತಾಮುದ್ವಹನ್ಪರಮೇಷ್ಠಿತಾಮ್ ।**
**ವಿಜಹಾರ ಮಹೀಂ ಕೃತ್ಸ್ನಾಂ ಸೋ[೮]ಧಿಗಮ್ಯಃ ಸುಧಾಶಿನಾಮ್॥ ೨೦೨ ॥**

ಅನಂತಜ್ಞಾನ ಅನಂತದರ್ಶನ ಅನಂತಸುಖ ಅನಂತಶಕ್ತಿಗಳೆಂಬ ಆತ್ಮಗುಣಗಳನ್ನು ಘಾತಮಾಡುವುವುಗಳಾದ ಜ್ಞಾನಾವರಣ ದರ್ಶನಾವರಣ ಮೋಹನೀಯ ಅಂತರಾಯಗಳೆಂಬ ನಾಲ್ಕು ಘಾತಿಕರ್ಮಗಳ ನಾಶದಿಂದುಂಟಾದ ಪರಮೇಷ್ಠಿತ್ವವನ್ನು ಧರಿಸಿದವನೂ ದೇವತೆಗಳಿಗೆ ಆರಾಧ್ಯನೂ ಆದ ಆ ಬಾಹುಬಲೀಕೇವಲಿಯು

೧ ದೇವೇಂದ್ರಪುರೋಗಮಾಃ. ೨ ಆಕಾಶಾತ್. ೩ ಇಂದ್ರೇಣ. ೪ ಉಭಯಪಾರ್ಶ್ವಯೋಃ. ೫ ಗಂಧಕುಟೀ. ೬ ವ್ಯನಕ್ತಿ ಸ್ಮ. ೭ ಸೇವಿತಃ. ೮ ಆರಾಧ್ಯಃ.

ಸಮಸ್ತಭೂಮಿಯನ್ನು ವಿಹರಿಸಿದನು. ಧರ್ಮೋಪದೇಶನಿಮಿತ್ತವಾಗಿ ಭೂಮಿಯನ್ನೆಲ್ಲ ವಿಹರಿಸಿದನೆಂದು ಭಾವವು.

**ಇತ್ಥಂ ಸ ವಿಶ್ವವಿದ್ವಿಶ್ವಂ ಪ್ರೀಣಯನ್ ಸ್ವವಚೋಮೃತೈಃ ।**
**ಕೈಲಾಸಮಚಲಂ ಪ್ರಾಪತ್ಪೂತಂ ಸನ್ನಿಧಿನಾ ಗುರೋಃ ॥ ೨೦೩ ॥**

ಈ ಪ್ರಕಾರವಾಗಿ ಸರ್ವಜ್ಞನಾದ ಆ ಬಾಹುಬಲಿಪರಮೇಷ್ಠಿಯು ಲೋಕವನ್ನು ತನ್ನ ವಚನಾಮೃತಗಳಿಂದ ತಣಿಸುವವನಾಗಿ ಶ್ರೀ ವೃಷಭಸ್ವಾಮಿಯ ಸನ್ನಿಧಿಯಿಂದ ಪವಿತ್ರವಾದ ಕೈಲಾಸಪರ್ವತವನ್ನು ಹೊಂದಿದನು.

**ಸಕಲನೃಪಸಮಾಜೇ ದೃಷ್ಟಿಮಲ್ಲಾಂಬುಯುದ್ಧೈ-**
**ರ್ವಿಜಿತಭರತಕೀರ್ತಿರ್ಯಃ ಪ್ರವವ್ರಾಜ ಮುಕ್ತ್ಯೈ ।**
**ತೃಣಮಿವ ವಿಗಣಯ್ಯ ಪ್ರಾಜ್ಯಸಾಮ್ರಾಜ್ಯಭಾರಂ**
**ಚರಮತನುಧರಾಣಾಮಗ್ರಣೀಃ ಸೋವತಾದ್ವಃ ॥ ೨೦೪ ॥**

ಯಾವನು ಸಮಸ್ತ ರಾಜರುಗಳ ಸಮೂಹದಲ್ಲಿ ದೃಷ್ಟಿಯುದ್ಧ ಮಲ್ಲಯುದ್ಧ ಜಲಯುದ್ಧಗಳಿಂದ ಭರತೇಶ್ವರನ ಕೀರ್ತಿಯನ್ನು ಜಯಿಸಿದವನಾಗಿ ಶ್ರೇಷ್ಠವಾದ ಸಾಮ್ರಾಜ್ಯಭಾರವನ್ನು ತೃಣವನ್ನೋಪಾದಿಯಲ್ಲಿ ಪರಿಗಣಿಸಿ ಮೋಕ್ಷಕ್ಕೋಸ್ಕರ ದೀಕ್ಷೆಯನ್ನು ಪಡೆದನೋ ಅಂತಿಮಶರೀರಧಾರಿಗಳಲ್ಲಿ (ಈ ಕೃತಯುಗದಲ್ಲಿ ತದ್ಭವಮೋಕ್ಷಗಾಮಿಗಳಲ್ಲಿ) ಮೊದಲನೆಯವನಾದ ಆ ಬಾಹುಬಲಿಸ್ವಾಮಿಯು ನಿಮ್ಮನ್ನು ರಕ್ಷಿಸಲಿ.

**ಭರತವಿಜಯಲಕ್ಷ್ಮೀ[೧]ರ್ಜಾಜ್ವಲಚ್ಚಕ್ರಮೂರ್ತ್ಯಾ**
**[೨]ಯು[೩]ಮಿನ[೪]ಮಭಿಸರಂತೀ ಕ್ಷತ್ರಿಯಾಣಾಂ [೫]ಸಮಕ್ಷಮ್ ।**
**ಚಿರತರ[೬]ಮವಧೂತಾ[೭]ಪತ್ರಪಾಪಾತ್ರಮಾಸೀ-**
**ದಧಿಗತಗುರುಮಾರ್ಗಃ ಸೋವತಾದ್ದೋರ್ಬಲೀ ನಃ ॥ ೨೦೫ ॥**

ಕ್ಷತ್ರಿಯರ ಇದಿರಿನಲ್ಲಿ ವಿಶೇಷವಾಗಿ ಪ್ರಕಾಶಿಸುವ ಚಕ್ರಾಕೃತಿಯಿಂದ ಯಾವ ಬಾಹುಬಲಿಸ್ವಾಮಿಯ ಇದಿರಿಗೆ ಬರುತ್ತಿರುವವಳಾದ ಭರತೇಶ್ವರನ ವಿಜಯಲಕ್ಷ್ಮಿಯು ಬಾಹುಬಲಿಸ್ವಾಮಿಯಿಂದ ಎಂದೆಂದಿಗೂ ತಿರಸ್ಕೃತಳೂ ಲಜ್ಜಾಭಾಜನಳೂ ಆದಳೋ ತಂದೆಯ–ವೃಷಭಸ್ವಾಮಿಯ ಮಾರ್ಗವನ್ನು– ಮುನಿಭಾವವನ್ನು ಹೊಂದಿದವನಾದ ಆ ಬಾಹುಬಲಿಸ್ವಾಮಿಯು ನಮ್ಮನ್ನು ಕಾಪಾಡಲಿ.

**ಸ ಜಯತಿ ಜಯಲಕ್ಷ್ಮೀ[೮]ಸಂಗಮಾಶಾ[೯]ಮವಂಧ್ಯಾಂ**
**ವಿದಧದಧಿಕಧಾಮಾ ಸನ್ನಿಧೌ ಪಾರ್ಥಿವಾನಾಮ್ ।**
**ಸಕಲಜಗದಗಾರವ್ಯಾಪ್ತಕೀರ್ತಿ[೧೦]ಸ್ತಪಸ್ಯಾ-**
**ಮಭಜತ ಯಶಸೇ ಯಃ ಸೂನುರಾದ್ಯಸ್ಯ ಧಾತುಃ ॥ ೨೦೬ ॥**

ವಿಶೇಷವಾದ ತೇಜಸ್ಸುಳ್ಳವನೂ ರಾಜರುಗಳ ಸನ್ನಿಧಿಯಲ್ಲಿ ಜಯಲಕ್ಷ್ಮಿಯ ಸಂಗದ ಇಚ್ಛೆಯನ್ನು ಸಫಲವನ್ನಾಗಿ ಮಾಡಿದವನೂ ಸಮಸ್ತಲೋಕವೆಂಬ ಮನೆಯಲ್ಲಿ ವ್ಯಾಪ್ತವಾದ ಕೀರ್ತಿಯುಳ್ಳವನೂ ಆದಿಬ್ರಹ್ಮರಾದ ವೃಷಭಸ್ವಾಮಿಯ ಪುತ್ರನೂ ಆದ ಯಾವನು ಕೀರ್ತಿಗೋಸ್ಕರ ತಪಸ್ಸನ್ನು ಹೊಂದಿದನೋ ಆ ಬಾಹುಬಲಿಸ್ವಾಮಿಯು ಜಯಶೀಲನಾಗಿದ್ದಾನೆ.

**ಜಯತಿ ಭುಜಬಲೀಶೋ ಬಾಹುವೀರ್ಯಂ ಸ ಯಸ್ಯ**
**[೧೧]ಪ್ರಥಿತಮಭವದಗ್ರೇ ಕ್ಷತ್ರಿಯಾಣಾಂ ನಿಯುದ್ಧೇ ।**
**ಭರತನೃಪತಿನಾ[೧೨]ಮಾ ಯಸ್ಯ ನಾಮಾಕ್ಷರಾಣಿ**
**ಸ್ಮೃತಿ ಪ ಥ[೧೩]ಮುಪಯಾಂತಿ ಪ್ರಾಣಿವೃಂದಂ ಪುನಂತಿ ॥ ೨೦೭ ॥**

೧ ಭೃಶಂ ಜ್ವಲತ್. ೨ ಯಸ್ಯ. ೩ ಭುಜಬಲಿಸ್ವಾಮಿನಃ. ೪ ಅಭಿಮುಖಮಾಗಚ್ಛಂತೀ. ೫ ಸಾಕ್ಷಾತ್. ೬ ಭುಜಬಲಿಸ್ವಾಮಿನಾ ಅವಧೀರಿತಾ. ೭ ಲಜ್ಜಾಭಾಜನಂ. ೮ ಸಂಗಮಾಂಛಾಂ. ೯ ಸಫಲಾಂ. ೧೦ ತಪಃ. ೧೧ ಪ್ರಸಿದ್ಧಂ. ೧೨ ಸಹ. ೧೩ ಉಪಗತಾನಿ ಭೂತ್ವಾ.

೩೮-೪೩ ಭ. ಬಾಹುಬಲಿ ಮೂರ್ತಿಯ ಮಹಾಮಸ್ತಕಾಭಿಷೇಕ–ಕಳಸ, ಜಲ, ಕ್ಷೀರ, ಚಂದನ, ಗಂಧ, ಪುಷ್ಪವೃಷ್ಟಿ 













ಜಗದ್ವಿಖ್ಯಾತ ಭ. ಬಾಹುಬಲಿಸ್ವಾಮಿ, ಶ್ರವಣಬೆಳಗೊಳ





ಸೌಜನ್ಯ : ಶ್ರೀ ಎ. ಡಿ. ಶಹಾ ಅವರು, ಬೆಂಗಳೂರು

೩೮-೪೩ ಭ. ಬಾಹುಬಲಿ ಮೂರ್ತಿಯ ಮಹಾಮಸ್ತಕಾಭಿಷೇಕ-ಕಳಸ, ಜಲ, ಕ್ಷೀರ, ಚಂದನ, ಗಂಧ, ಪುಷ್ಪವೃಷ್ಟಿ















ಭರತರಾಜನೊಡನೆ ಬಾಹುಯುದ್ಧದಲ್ಲಿ ಯಾವನ ಭುಜಬಲವು ಕ್ಷತ್ರಿಯರ ಅಗ್ರಭಾಗದಲ್ಲಿ ಪ್ರಸಿದ್ಧವಾಯಿತೋ ನೆನಪಿಗೆ ಬಂದುವುಗಳಾದ(ಸ್ಮರಿಸಲ್ಪಟ್ಟ) ಯಾವನ ಹೆಸರಿನ ಅಕ್ಷರಗಳು ಪ್ರಾಣಿ ಸಮೂಹವನ್ನು ಪವಿತ್ರಮಾಡುತ್ತವೋ ಅಂತಹ ಬಾಹುಬಲಿಸ್ವಾಮಿಯು ಜಯಶೀಲನಾಗಿದ್ದಾನೆ.

**ಜಯತಿ ಭುಜಗವಕ್ತ್ರೋ[೧]ದ್ವಾಂತನಿರ್ಯ[೨]ದ್ಗರಾಗ್ನಿಃ**
**ಪ್ರಶಮಮುಸಕೃದಾಪತ್ಪ್ರಾಪ್ಯ ಪಾದೌ ಯದೀಯೌ ।**
**ಸಕಲಭುವನಮಾನ್ಯಃ ಖೇಚರಸ್ತ್ರೀಕರಾಗ್ರೋ-**
**[೩]ದ್ಗ್ರಥಿತವಿತತವೀರುದ್ವೇಷ್ಟಿತೋ ದೋರ್ಬಲೀಶಃ ॥ ೨೦೯ ॥**

ಸರ್ಪದ ಬಾಯಿಂದ ಉಗಿಯಲ್ಪಟ್ಟು ಹೊರಡುತ್ತಿರುವ ವಿಷವೆಂಬ ಬೆಂಕಿಯು ಯಾವನ ಸಂಬಂಧಿಯಾದ ಪಾದಗಳನ್ನು ಬಾರಿಬಾರಿಗೆ ಹೊಂದಿ ಉಪಶಮವನ್ನು ಹೊಂದಿದುದೋ ಸಮಸ್ತಲೋಕಕ್ಕೆ ಮಾನ್ಯನೂ ವಿದ್ಯಾಧರಸ್ತ್ರೀಯರ ಕೈಗಳ ತುದಿಯಿಂದ ಕತ್ತರಿಸಲ್ಪಟ್ಟುವೂ ವಿಸ್ತಾರವೂ ಆದ ಬಳ್ಳಿಗಳಿಂದ ಸುತ್ತಲ್ಪಟ್ಟವನೂ ಆದ ಅಂತಹ ಬಾಹುಬಲಿಸ್ವಾಮಿಯು ಜಯಶೀಲನಾಗಿದ್ದಾನೆ.

**ಜಯತಿ ಭರತರಾಜಪ್ರಾಂಶುಮೌಲ್ಯಗ್ರರತ್ನೋ**
**ಪಲ[೪]ಲುಲಿತನಖೇಂದುಃ ಸ್ರಷ್ಟುರಾದ್ಯಸ್ಯ ಸೂನುಃ ।**
**ಭುಜಗಕುಲ[೫]ಕುಲಾಯ್ಯೈ[೬]ರಾಕುಲೈರಾಕುಲತ್ವಂ**
**ಧೃತಿಬಲಕಲಿತೋ ಯೋ ಯೋಗಭೃನ್ನೈವ [೭]ಭೇಜೇ ॥ ೨೦೮ ॥**

ಯಾವನು ವ್ಯಾಕುಲವಾದ ಸರ್ಪಗಳ ಸಮೂಹದ ಹುತ್ತಗಳಿಂದ ಮನೋವ್ಯಾಕುಲತೆಯನ್ನು ಹೊಂದಲೇ ಇಲ್ಲವೋ ಭರತರಾಜನ ಉನ್ನತವಾದ ಕಿರೀಟದ ತುದಿಯಲ್ಲಿರುವ ರತ್ನದ ಕಲ್ಲುಗಳಿಂದ ಹೊರಳಾಡಲ್ಪಟ್ಟ ಪಾದದ ಉಗುರೆಂಬ ಚಂದ್ರನುಳ್ಳವನೂ ಆದಿಬ್ರಹ್ಮರಾದ ವೃಷಭಸ್ವಾಮಿಯ ಪುತ್ರನೂ ಧೈರ್ಯ ಶಕ್ತಿಯುಕ್ತನೂ ಯೋಗಧಾರಣವನ್ನು ಮಾಡಿದವನೂ ಆದ ಅಂತಹ ಬಾಹುಬಲಿ ಸ್ವಾಮಿಯು ಜಯಶೀಲನಾಗಿರುತ್ತಾನೆ.

**[೮]ಶಿತಿಭಿರಲಿಕುಲಾಭೈ[೯]ರಾಭುಜಂ ಲಂಬಮಾನೈಃ**
**[೧೦]ಪಿಹಿತಭುಜವಿಟಂಕೋ ಮೂರ್ಧಜೈ[೧೧]ರ್ವೇಲ್ಲಿತಾಗ್ರೈಃ ।**
**[೧೨]ಜಲಧರಪರಿರೋಧಶ್ಯಾಮಮೂರ್ಧೇವ [೧೩]ಭೂಧ್ರಃ**
**ಶ್ರಿಯಮುಪುಷದನೂನಾಂ ದೋರ್ಬಲೀ ಯಃ ಸ ನೋಽವ್ಯಾತ್॥ ೨೧೦ ॥**

ಕಪ್ಪಾಗಿರುವುವೂ ದುಂಬಿಗಳ ಸಮೂಹಕ್ಕೆ ಸಮಾನಗಳೂ ಭುಜಗಳವರೆಗೆ ಜೋಲುತ್ತಿರುವುವೂ ವಕ್ರವಾದ(ಸುಳಿಯಂತಿರುವ)ತುದಿಯುಳ್ಳುವೂ ಆದ ಕೂದಲುಗಳಿಂದ ಮುಚ್ಚಲ್ಪಟ್ಟ ಬಾಹುವೆಂಬ ಬಿಸಿಲುಮಾಳಿಗೆಯುಳ್ಳವನಾದ ಯಾವನು ಮೇಘದ ಆವರಣದಿಂದ ಕಪ್ಪಾದ ಶಿಖರವುಳ್ಳ ಪರ್ವತದೋಪಾದಿಯಲ್ಲಿ ಅತಿಶಯವಾದ ಶೋಭೆಯನ್ನು ಹೆಚ್ಚಿಸಿದನೋ ಅಂತಹ ಬಾಹುಬಲಿಸ್ವಾಮಿಯು ನಮ್ಮನ್ನು ಕಾಪಾಡಲಿ.

**ಸ ಜಯತಿ ಹಿಮಕಾಲೇ ಯೋ [೧]ಹಿಮಾನೀಪರೀತಂ**
**ವಪುರಚಲ ಇವೋಚ್ಚೈರ್ಬಿಭ್ರದಾವಿರ್ಬಭೂವ ।**
**ನವಘನಸಲಿಲೌಘೈರ್ಯಶ್ಚ ಧೌತೋ[೨]ಬ್ದಕಾಲೇ**
**[೩]ಖರಘೃಣಿಕಿರಣಾನಪ್ಯುಷಃಕಾಲೇ [೪]ಸಿಷೇಹೇ ॥ ೨೧೧ ॥**

ಯಾವನು ಹಿಮಕಾಲದಲ್ಲಿ ಪರ್ವತದಂತೆ ಹಿಮಸಮೂಹದಿಂದ ವ್ಯಾಪ್ತವೂ ಉನ್ನತವೂ ಆದ ಶರೀರವನ್ನು ಧರಿಸಿದವನಾಗಿ ಆವಿರ್ಭವಿಸಿದನೋ ಯಾವನು ವರ್ಷಾಕಾಲದಲ್ಲಿ ನೂತನವಾದ ಮೇಘದ ಜಲಪ್ರವಾಹಗಳಿಂದ ತೊಳೆಯಲ್ಪಟ್ಟನೋ ಉಷ್ಣಕಾಲದಲ್ಲಿ ಸೂರ್ಯಕಿರಣಗಳನ್ನೂ ಸಹಿಸಿದನೋ ಅಂತಹ ಬಾಹುಬಲಿಸ್ವಾಮಿಯು ಜಯಶೀಲನಾಗಿದ್ದಾನೆ.

**ಜಗತಿ [೫]ಜಯಿನಮೇನಂ ಯೋಗಿನಂ ಯೋಗಿವರ್ಯೈ-**
**ರಧಿಗತಮಹಿಮಾನಂ ಮಾನಿತಂ ಮಾನನೀಯೈಃ ।**
**ಸ್ಮರತಿ ಹೃದಿ [೬]ನಿತಾಂತಂ ಯಃ ಸ [೭]ಶಾಂತಾಂತರಾತ್ಮಾ**
**ಭಜತಿ ವಿಜಯಲಕ್ಷ್ಮೀಮಾಶು ಜೈನೀಮಜಯ್ಯಾಮ್ ॥ ೨೧೨ ॥**

ಉಪಶಾಂತವಾದ ಮನಸ್ಸುಳ್ಳವನಾದ ಯಾವ ಮನುಷ್ಯನು ಯೋಗಿಶ್ರೇಷ್ಠರಿಂದ ಆರಾಧಿಸಲ್ಪಟ್ಟ ಮಹಿಮೆಯುಳ್ಳವನೂ ಮಾನನೀಯರಾದ ಪುರುಷರಿಂದ ಪೂಜಿಸಲ್ಪಟ್ಟವನೂ ಲೋಕದಲ್ಲಿ ಜಯಶೀಲನೂ ಆದ ಈ ಬಾಹುಬಲಿಯೋಗಿಯನ್ನು ಹೃದಯದಲ್ಲಿ ಬಹಳವಾಗಿ ಸ್ಮರಿಸುತ್ತಾನೋ ಆ ಮನುಷ್ಯನು ಬೇರೆಯವರಿಂದ ಜಯಿಸಲಶಕ್ಯವೂ ಜಿನೇಶ್ವರನ ಸಂಬಂಧಿಯೂ ಆದ ವಿಜಯಸಂಪತ್ತನ್ನು ಶೀಘ್ರವಾಗಿ ಹೊಂದುತ್ತಾನೆ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭುಜಬಲಿ-ಜಲಮಲ್ಲದೃಷ್ಟಿಯುದ್ಧವಿಜಯ-ದೀಕ್ಷಾಕೇವಲೋತ್ಪತ್ತಿವರ್ಣನಂ ನಾಮ ಷಟ್ತ್ರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್''ಭುಜಬಲಿಯ ಜಲಯುದ್ಧ ಮಲ್ಲಯುದ್ಧ ದೃಷ್ಟಿಯುದ್ಧವಿಜಯ ದೀಕ್ಷಾಗ್ರಹಣ ಕೇವಲಜ್ಞಾನೋತ್ಪತ್ತಿ ವರ್ಣನವೆಂಬ ಮೂವತ್ತಾರನೆಯ ಪರ್ವವು ಸಂಪೂರ್ಣವಾದುದು.

---

೧ ನಿಷ್ಠೀವನಾತ್. ೨ ವಿಷಾಗ್ನಿಃ. ೩ ಛೇದಿತ. ೪ ಲುಠತ್ಪಾದನಖೇಂದುಃ. ೫ ವಲ್ಮೀಕೈಃ, ಕುಲಾಯಸ್ಥಾಃ ಕುಲಾಯಾಃ, ತಾತ್ಸ್ಥ್ಯಾತ್ತದ್ವ್ಯಪದೇಶಃ. ೬ ವ್ಯಾಪ್ತೈಃ. ೭ ಆಗಾತ್. ೮ ಕೃಷ್ಣೈಃ. ೯ ಭುಜಪರ್ಯಂತಂ. ೧೦ ಆಚ್ಛಾದಿತಭುಜವಲಭಿಃ. ೧೧ ವಕ್ರ. ೧೨ ಮೇಘಾವರಣೇನ ಶ್ಯಾಮಶಿಖರಃ. ೧೩ ಪರ್ವತಃ.

೧ ಹಿಮಸಂಹತಿವೇಷ್ಟಿತಂ. ೨ ಪ್ರಾವೃಟ್ಕಾಲೇ. ೩ ಸೂರ್ಯ. ೪ ಸಹತಿ ಸ್ಮ. ೫ ಜಯಶೀಲಂ. ೬ ಆತ್ಯಂತಂ. ೭ ಉಪಶಾಂತಚಿತ್ತಃ.

# ಅಥ ಸಪ್ತತ್ರಿಂಶತ್ತಮಂ ಪರ್ವ

**ಅಥ ನಿರ್ವರ್ತಿತಾಶೇಷದಿಗ್ವಿಜಯೋ ಭರತೇಶ್ವರಃ ।**
**ಪುರಂ ಸಾಕೇತ[1]ಮುತ್ಕೇತು ಪ್ರಾವಿಕ್ಷತ್ಪರಯಾ ಶ್ರಿಯಾ ॥ ೧ ॥**

ಅನಂತರದಲ್ಲಿ ಸಮಸ್ತದಿಗ್ವಿಜಯವನ್ನು ಪೂರೈಸಿದ ಭರತೇಶ್ವರನು ಮೇಲೆ ಚಲಿಸುತ್ತಿರುವ ಧ್ವಜಗಳುಳ್ಳ ಅಯೋಧ್ಯಾನಗರವನ್ನು ಅಧಿಕವಾದ ಸಂಪತ್ತಿಯೊಡನೆ ಪ್ರವೇಶಿಸಿದನು.

**ತತ್ರಾ[2]ಸ್ಯ ನೃಪಶಾರ್ದೂಲೈರಭಿಷೇಕಃ ಕೃತೋ ಮುದಾ ।**
**[3]ಚಾತುರಂತಜಯಶ್ರೀಸ್ತೇ [4]ಪ್ರಥತಾಂ ಭುವನೇಷ್ವಿತಿ ॥ ೨ ॥**

ಆ ಅಯೋಧ್ಯಾನಗರದಲ್ಲಿ "ಚತುರ್ದಿಕ್ಕುಗಳಲ್ಲುಂಟಾದ ನಿನ್ನ ಜಯಲಕ್ಷ್ಮಿಯು ಲೋಕಗಳಲ್ಲಿ ವಿಸ್ತರಿಸಲಿ" ಎಂದು ಈ ಭರತೇಶ್ವರನಿಗೆ ರಾಜಶ್ರೇಷ್ಠರುಗಳು ಸಂತೋಷದಿಂದ ಅಭಿಷೇಕವನ್ನು ಮಾಡಿದರು.

**ತಮಭ್ಯಷಿಂಚನ್ಪೌರಾಶ್ಚ ಸಾಂತಃಪುರಪುರೋಧಸಃ ।**
**ಚಿರಾಯುಃ ಪೃಥಿವೀರಾಜ್ಯಂ [5]ಕ್ರಿಯಾದ್ದೇವ ಭವಾನಿತಿ ॥ ೩ ॥**

"ಎಲೈ ಸ್ವಾಮಿಯೆ ! ನೀನು ದೀರ್ಘಾಯುಷ್ಯವುಳ್ಳವನಾಗಿ ಲೋಕದಲ್ಲಿ ರಾಜ್ಯ ಭಾರವನ್ನು ಮಾಡು" ಎಂಬುದಾಗಿ ಅಂತಃಪುರದವರೊಡನೆಯೂ ಪುರೋಹಿತ ರೊಡನೆಯೂ ಕೂಡಿದ ಪುರನಿವಾಸಿಗಳೂ ಭರತೇಶ್ವರನಿಗೆ ಅಭಿಷೇಕವನ್ನು ಮಾಡಿದರು.

**ರಾಜ್ಯಾಭಿಷೇಚನೇ ಭರ್ತುರ್ಯೋ ವಿಧಿರ್ವೃಷಭೇಶಿನಃ ।**
**ಸ ಸರ್ವೋಽತ್ರಾಪಿ ತೀರ್ಥಾಂಬು[6]ಸಂಭಾರಾದಿಃ ಕೃತೋ ನೃಪೈಃ ॥ ೪ ॥**

ಪ್ರಭುವಾದ ವೃಷಭಸ್ವಾಮಿಯ ರಾಜ್ಯಾಭಿಷೇಕದಲ್ಲಿ ಯಾವ ವಿಧಿಯು ಮಾಡಲ್ಪಟ್ಟಿದ್ದಿತೋ ತೀರ್ಥಜಲಸಮೂಹವೇ ಮೊದಲಾದ ಆ ವಿಧಿಯೆಲ್ಲವೂ ಈ ಭರತೇಶ್ವರನಲ್ಲಿ ರಾಜರುಗಳಿಂದ ಮಾಡಲ್ಪಟ್ಟಿತು.

**[7]ತಥಾಭಿಷಿಕ್ತಸ್ತೇನೈವ ವಿಧಿನಾಲಂಕೃತೋಽಧಿರಾಟ್ ।**
**ತಥೈವ ಜಯಘೋಷಾದಿಃ ಪ್ರಯುಕ್ತಃ ಸಾಮರೈರ್ನೃಪೈಃ ॥ ೫ ॥**

ವೃಷಭಸ್ವಾಮಿಗೆ ಅಲಂಕಾರಮಾಡಿದ ವಿಧಿಯಿಂದಲೇ ಅಲಂಕರಿಸಲ್ಪಟ್ಟ ಭರತ ಚಕ್ರೇಶ್ವರನು ವೃಷಭಸ್ವಾಮಿಯಂತೆ ಅಭಿಷಿಕ್ತನಾದನು. ಹಾಗೆಯೇ ದೇವತೆಗಳೊಡನೆ ಕೂಡಿರುವ ರಾಜರುಗಳು ಜಯಘೋಷಾದಿಗಳನ್ನು ಮಾಡಿದರು.

**ತಥೈವ ಸತ್ಕೃತಾ ವಿಶ್ವೇ ಪಾರ್ಥಿವಾಃ [8]ಸಸನಾಭಯಃ ।**
**ತಥೈವ ತರ್ಪಿತೋ ಲೋಕಃ ಪರಯಾ ದಾನಸಂಪದಾ ॥ ೬ ॥**

ಬಂಧುಸಹಿತರಾದ ಸಮಸ್ತರಾಜರುಗಳು ವೃಷಭಸ್ವಾಮಿಯ ಪಟ್ಟಾಭಿಷೇಕ ಕಾಲದಲ್ಲಿ ಸತ್ಕರಿಸಲ್ಪಟ್ಟಿದ್ದಂತೆ ಸತ್ಕರಿಸಲ್ಪಟ್ಟರು. ಜನರು ಅಧಿಕವಾದ ದಾನಸಂಪತ್ತಿ ಯಿಂದ ವೃಷಭಸ್ವಾಮಿಯ ಪಟ್ಟಾಭಿಷೇಕದಲ್ಲಿ ಹೇಗೋ ಹಾಗೆ ಸಂತೋಷ ಪಡಿಸಲ್ಪಟ್ಟರು.

**ತಥಾಧ್ವನನ್ಮಹಾಘೋಷಾ [9]ನಾಂದೀಘೋಷಾ ಮಹಾನಕಾಃ ।**
**ಪ್ರಕ್ಷುಭ್ಯದಬ್ಧಿನಿರ್ಘೋಷೋ ಯೇಷಾಂ ಘೋಷೈರಧಃಕೃತಃ ॥ ೭ ॥**

ಅಲ್ಲೋಲಕಲ್ಲೋಲವಾದ ಸಮುದ್ರದ ಘೋಷವು ಯಾವುಗಳ ಘೋಷಗಳಿಂದ ಕೀಳಾಗಿ ಮಾಡಲ್ಪಟ್ಟಿತೋ ಅಂತಹ ಮಹಾಘೋಷಗಳೂ ಪ್ರಥಮಮಂಗಲ ಘೋಷಗಳೂ ಮಹಾಭೇರಿಗಳೂ ವೃಷಭಸ್ವಾಮಿಯ ಪಟ್ಟಾಭಿಷೇಕಕಾಲದಲ್ಲಿ ಹೇಗೋ ಹಾಗೆ ಧ್ವನಿಮಾಡಿದುವು.

**ಆನಂದಿನ್ಯೋ ಮಹಾಭೇರ್ಯಸ್ತಥೈವಾಭಿಹತಾ ಮುಹುಃ ।**
**ಸಂಗೀತವಿಧಿರಾರಬ್ಧಸ್ತಥಾ ಪ್ರಮದಮಂಡಪೇ ॥ ೮ ॥**

ಆನಂದಮಹಾಭೇರಿಗಳು ವೃಷಭಸ್ವಾಮಿಯ ಪಟ್ಟಾಭಿಷೇಕಕಾಲದಲ್ಲಿ ಹೇಗೋ ಹಾಗೆ ಬಾರಿಬಾರಿಗೆ ಹೊಡೆಯಲ್ಪಟ್ಟುವು. ಸಂಗೀತವಿಧಾನವು ಆನಂದಮಂಡಪದಲ್ಲಿ ವೃಷಭಸ್ವಾಮಿಯ ಪಟ್ಟಾಭಿಷೇಕಕಾಲದಲ್ಲಿ ಹೇಗೋ ಹಾಗೆ ಆರಂಭಿಸಲ್ಪಟ್ಟಿತು.

**[1]ಮೂರ್ಧಾಭಿಷಿಕ್ತೈಃ ಪ್ರಾಪ್ತಾಭಿಷೇಕಸ್ಯಾಸ್ಯಾಜನಿ ದ್ಯುತಿಃ ।**
**ಮೇರಾವಿವಾಭಿಷಿಕ್ತಸ್ಯ ನಾಕೇಂದ್ರೈರಾದಿವೇಧಸಃ ॥ ೯ ॥**

ಮಹಾಮೇರುಪರ್ವತದಲ್ಲಿ ದೇವೇಂದ್ರರಿಂದ ಅಭಿಷೇಕಮಾಡಲ್ಪಟ್ಟವನಾದ ಆದಿಬ್ರಹ್ಮನಿಗೆ ಕಾಂತಿಯುಂಟಾದಂತೆ ರಾಜರುಗಳಿಂದ ಅಭಿಷೇಕವನ್ನು ಹೊಂದಿದ ಈ ಭರತೇಶ್ವರನಿಗೆ ಕಾಂತಿಯುಂಟಾಯಿತು.

**ಗಂಗಾಸಿಂಧೂ ಸರಿದ್ದೇವ್ಯೌ ಸಾಕ್ಷತೈಸ್ತೀರ್ಥವಾರಿಭಿಃ ।**
**[2]ಅಭ್ಯಕ್ಷಿಷ್ಟಾಂ ತಮಭ್ಯೇತ್ಯ ರತ್ನಭೃಂಗಾರಸಂಭೃತೈಃ ॥ ೧೦ ॥**

ಗಂಗಾಸಿಂಧುನದೀದೇವಿಯರು ಆ ಭರತೇಶ್ವರನನ್ನು ಹೊಂದಿ ರತ್ನದ ಗಿಂಡಿ ಗಳಲ್ಲಿ ತುಂಬಲ್ಪಟ್ಟುವೂ ಅಕ್ಷತಸಹಿತವೂ ಆದ ತೀರ್ಥಜಲಗಳಿಂದ ಅಭಿಷೇಕ ಮಾಡಿದರು.

**ಕೃತಾಭಿಷೇಕಮೇನಂ ಚ ನೃಪಾಸನಮಧಿಷ್ಠಿತಮ್ ।**
**[3]ಗಣಬದ್ಧಾಮರಾ [4]ಭೇಜುಃ ಪ್ರಣಮ್ರೈರ್ಮಣಿಮೌಲಿಭಿಃ ॥ ೧೧ ॥**

ಅಭಿಷೇಕಮಾಡಲ್ಪಟ್ಟವನೂ ಸಿಂಹಾಸನದಲ್ಲಿ ಕುಳಿತಿರುವವನೂ ಆದ ಈ ಭರತೇಶ್ವರನನ್ನು ಅಂಗರಕ್ಷಕರಾದ ದೇವತೆಗಳು ನಮ್ರವಾದ ರತ್ನಕಿರೀಟಗಳಿಂದ ಸೇವೆಯನ್ನು ಮಾಡಿದರು. ತಲೆಬಾಗಿಸಿ–ನಮ್ರರಾಗಿ ಸೇವೆಯನ್ನು ಮಾಡಿದರೆಂದು ಭಾವವು.

**ಹಿಮವದ್ವಿಜಯಾರ್ಧೇಶೌ ಮಾಗಧಾದ್ಯಾಶ್ಚ ದೇವತಾಃ ।**
**ಖೇಚರಾಶ್ಚೋಭಯಶ್ರೇಣ್ಯೋಸ್ತಂ [5]ನೇಮುರ್ನಮ್ರಮೌಲಯಃ ॥ ೧೨ ॥**

ಹಿಮವದ್ದೇವನೂ ವಿಜಯಾರ್ಧದೇವನೂ ಮಾಗಧನೇ ಮೊದಲಾದ ದೇವತೆ ಗಳೂ ವಿಜಯಾರ್ಧಪರ್ವತದ ದಕ್ಷಿಣೋತ್ತರಶ್ರೇಣಿಗಳ ಖೇಚರರೂ ನಮ್ರವಾದ ಕಿರೀಟಗಳುಳ್ಳವರಾಗಿ ಆ ಭರತೇಶ್ವರನನ್ನು ನಮಸ್ಕರಿಸಿದರು.

**ಸೋಽಭಿಷಿಕ್ತೋಽಪಿ ನೋ[6]ತ್ಸಿಕ್ತೋ ಬಭೂವ ನೃಪಸತ್ತಮೈಃ ।**
**ಮಹತಾಂ ಹಿ ಮನೋವೃತ್ತಿರ್ನೋತ್ಸೇ[7]ಕಪರಿರಂಭಿಣೀ ॥ ೧೩ ॥**

ರಾಜಶ್ರೇಷ್ಠರುಗಳಿಂದ ಅಭಿಷೇಕಮಾಡಲ್ಪಟ್ಟವನಾದರೂ ಆ ಭರತೇಶ್ವರನು ಅಹಂಕಾರವುಳ್ಳವನಾಗಿ ಆಗಲಿಲ್ಲ. ಮಹಾಪುರುಷರ ಮನೋವ್ಯಾಪಾರವಾದರೋ

೧ ಉಚ್ಚಲದ್ಧ್ವಜಂ. ೨ ಚಕ್ರಿಣಃ. ೩ ಚತುರ್ದಿಕ್ಷುಭವಾ ಜಯಲಕ್ಷ್ಮೀಃ. ೪ ತನೋತು. ೫ ಕುರು. ೬ ಸಮೂಹ. ೭ ಯಥಾ ಶ್ರೀವೃಷಭೋಽಭಿಷಿಕ್ತಸ್ತಥಾ ಭರತೋಽಭಿಷಿಕ್ತಃ, ಏವಮುತ್ತರತ್ರಾಪಿ ಯೋಜ್ಯಃ. ೮ ಬಂಧುಸಹಿತಾಃ. ೯ ಪ್ರಥಮಮಂಗಲ.

೧ ಕ್ಷತ್ರಿಯೈಃ. ೨ ಅಭಿಷೇಕಂ ಚಕ್ರತುಃ. ೩ ಅಂಗರಕ್ಷಕದೇವಾಃ. ೪ ಸೇವಾಂಚಕ್ರುಃ. ೫ ನಮಂತಿ ಸ್ಮ. ೬ ಅಹಂಕಾರವಾನ್. ೭ ಗರ್ವಾಲಿಂಗಿನಿ.

ಗರ್ವವನ್ನಾಲಿಂಗಿಸುವುದಾಗಿರುವುದಿಲ್ಲ. ಅಹಂಕಾರದ ಸಂಬಂಧವುಳ್ಳುದಾಗಿರುವುದಿಲ್ಲವೆಂದು ಭಾವವು.

**ಚಾಮರೈರ್ವೀಜ್ಯಮಾನೋಪಿ ನ [1]ನಿರ್ವೃತಿಮಗಾದ್ವಿಭುಃ ।**
**ಭ್ರಾತೃಷ್ವಸಂವಿಭಕ್ತಾ ಶ್ರೀರಿತಿ [2]ಹಾನುಶಯಾನುಗಃ ॥ ೧೪ ॥**

ಚಾಮರಗಳಿಂದ ಬೀಸಲ್ಪಟ್ಟವನಾದರೂ ಭರತೇಶ್ವರನು "ಸಂಪತ್ತಿಯು ಸಹೋದರರಲ್ಲಿ ವಿಭಾಗಿಸಲ್ಪಡಲಿಲ್ಲ, ಅಕ್ಕಟಾ!" ಎಂದು ಪಶ್ಚಾತ್ತಾಪವನ್ನು ಹೊಂದಿದವನಾಗಿ ಸುಖವನ್ನು ಹೊಂದಲಿಲ್ಲ.

**ದೋರ್ಬಲಿಭ್ರಾತೃಸಂಘರ್ಷಾನ್ನಾಸ್ಯ ತೇಜೋ [3]ನಿಕರ್ಷಿತವ್ ।**
**[4]ಪ್ರತ್ಯುತೋ[5]ತ್ಕರ್ಷಿ ಹೇಮ್ನೋ ವಾ ಘೃಷ್ಟಸ್ಯ ನಿಕಷೋಪಲೇ ॥ ೧೫ ॥**

ತಮ್ಮನಾದ ಬಾಹುಬಲಿಸ್ವಾಮಿಯ ಯುದ್ಧಸಂಘರ್ಷಣೆಯಿಂದ ಈ ಭರತೇಶ್ವರನ ತೇಜಸ್ಸು ಕಡಿಮೆಯಾಗಲಿಲ್ಲ. ಮತ್ತೇನೆಂದರೆ–ಒರೆಗಲ್ಲಿನಲ್ಲಿ ಒರೆಯಲ್ಪಟ್ಟ ಬಂಗಾರದ ಕಾಂತಿಯಂತೆ ಭರತೇಶ್ವರನ ತೇಜಸ್ಸು ಹೆಚ್ಚಾಯಿತು.

**ನಿಷ್ಕಂಟಕಮಿತಿ ಪ್ರಾಪ್ಯ ಸಾಮ್ರಾಜ್ಯಂ ಭರತಾಧಿಪಃ ।**
**ಬಭೌ ಭಾಸ್ವಾನಿವೋ[6]ದ್ರಿಕ್ತಪ್ರತಾಪಃ [7]ಶುದ್ಧಮಂಡಲಃ ॥ ೧೬ ॥**

ಉತ್ಕಟವಾದ ಪ್ರತಾಪವುಳ್ಳವನೂ ಶುದ್ಧವಾದ ದೇಶವುಳ್ಳವನೂ ಆದ ಭರತೇಶ್ವರನು ಶತ್ರುರಹಿತವಾದ ಸಾಮ್ರಾಜ್ಯವನ್ನು ಮೇಲೆ ಹೇಳಿದ ಪ್ರಕಾರವಾಗಿ ಹೊಂದಿ, ಉತ್ಕಟವಾದ ತಾಪವುಳ್ಳವನೂ ಶುದ್ಧವಾದ ಬಿಂಬವುಳ್ಳವನೂ ಆದ ಸೂರ್ಯನಂತೆ, ಪ್ರಕಾಶಿಸಿದನು.

**ಕ್ಷೇಮ್ಯೈ[8]ಕತಾನತಾಂ ಭೇಜುಃ ಪ್ರಜಾಸ್ತಸ್ಮಿನ್ಸುರಾಜನಿ ।**
**[9]ಯೋಗಕ್ಷೇಮೌ ವಿತನ್ವಾನೇ ಮನ್ವಾನಾಃ ಸ್ವಾಂ ಸನಾಥತಾಮ್ ॥ ೧೭ ॥**

ಆ ಶ್ರೇಷ್ಠರಾಜನು ಪ್ರಜೆಗಳ ದೊರಕಿಸಲ್ಪಡದಿರುವ ಪದಾರ್ಥಗಳ ಲಾಭರೂಪವಾದ ಯೋಗವನ್ನೂ ಹೊಂದಲ್ಪಟ್ಟಿರುವ ಪದಾರ್ಥಗಳ ರಕ್ಷಣರೂಪವಾದ ಕ್ಷೇಮವನ್ನೂ ಮಾಡುತ್ತಿರಲು ತಮ್ಮ ಸನಾಥತ್ವವನ್ನು (ಯಜಮಾನನುಳ್ಳವರಾಗಿರುವಿಕೆಯನ್ನು) ತಿಳಿಯುವವರಾದ ಪ್ರಜೆಗಳು ಕ್ಷೇಮವನ್ನೇ ಅನುಭವಿಸಿದರು.

**ಯಥಾಸ್ವಂ [10]ಸಂವಿಭಜ್ಯಾಮೀ ಸಂಭುಕ್ತಾ ನಿಧಯೋ[11]ಮುನಾ ।**
**ಸಂಭೋಗಃ ಸಂವಿಭಾಗಶ್ಚ ಫಲಮರ್ಥಾರ್ಜನೇ ದ್ವಯಮ್ ॥ ೧೮ ॥**

ಭರತೇಶ್ವರನಿಂದ ಈ ನಿಧಿಗಳು ಯಥೋಚಿತವಾಗಿ ಬಂಧುಗಳಿಗೆ ವಿಭಾಗಿಸಲ್ಪಟ್ಟು ಅನುಭವಿಸಲ್ಪಟ್ಟುವು. ಅನುಭೋಗವೂ ವಿಭಾಗವೂ ಎರಡು ದ್ರವ್ಯಸಂಪಾದನೆಯಲ್ಲಿ ಫಲಗಳಾಗಿರುತ್ತವೆ. ದ್ರವ್ಯವನ್ನು ಸಂಪಾದಿಸಿ ತಾನು ಅದನ್ನು ಅನುಭವಿಸುವುದೂ ಬಂಧುಗಳಿಗೆ ಯಥೋಚಿತವಾಗಿ ವಿಭಾಗಿಸುವುದೂ ಅದಕ್ಕೆ ಫಲಗಳೆಂದೂ ಅವುಗಳಿಲ್ಲದಿದ್ದರೆ ನಿಷ್ಫಲಗಳೆಂದೂ ಭಾವವು.

**ರತ್ನಾನ್ಯಪಿ ಯಥಾಕಾಮಂ [12]ನಿರ್ವಿಷ್ಟಾನಿ ನಿಧೀಶಿನಾ ।**
**ರತ್ನಾನಿ ನನು ತಾನ್ಯೇವ ಯಾನಿ ಯಾಂತ್ಯುಪಯೋಗಿತಾಮ್ ॥ ೧೯ ॥**

ನಿಧಿಪತಿಯಾದ ಭರತೇಶ್ವರನಿಂದ ರತ್ನಗಳೂ ಯಥೇಚ್ಛವಾಗಿ ಅನುಭೋಗಿಸಲ್ಪಟ್ಟುವು. ಯಾವ ರತ್ನಗಳು ಉಪಯೋಗಿತ್ವವನ್ನು ಹೊಂದುತ್ತವೋ ಅಂದರೆ ಉಪಯೋಗಕ್ಕೆ ಬರುತ್ತವೋ ಅವುಗಳೇ ನಿಜವಾದ ರತ್ನಗಳಲ್ಲವೇ? ಉಪಯೋಗಕ್ಕೆ ಬಾರದಿರುವುವು ರತ್ನಗಳಾದರೂ ಪ್ರಯೋಜನಕರಗಳಲ್ಲವೆಂದು ಭಾವವು.

೧ ಸುಖಂ. ೨ ಹೇತಿಪಶ್ಚಾತ್ತಾಪಾನುಗಃ. ೩ ನಿಕೃಷ್ಟಂ. ೪ ಪುನಃ ಕಿಂ. ೫ ಉತ್ಕರ್ಷಿತಮಭವತ್. ೬ ಉತ್ಕಟ. ೭ ಶುದ್ಧಬಿಂಬಃ. ೮ ಏಕತಾನೋನನ್ಯವೃತ್ತಿಃ. ೯ ಅಲಬ್ಧಲಾಭೋಯೋಗಃ, ಲಬ್ಧಪರಿರಕ್ಷಣಂ ಕ್ಷೇಮಃ. ೧೦ ಬಂಧೂನಾಂ ವಿಭಾಗೀಕೃತ್ಯ. ೧೧ ಭರತೇಶಿನಾ. ೧೨ ಅನುಭುಕ್ತಾನಿ.

**ಮನುಶ್ಚಕ್ರಭೃತಾಮಾದ್ಯಃ ಷಟ್ಖಂಡಭರತಾಧಿಪಃ ।**
**ರಾಜರಾಜೋಧಿರಾಟ್ಸಮ್ರಾಡಿತ್ಯಸ್ಯೋದ್ಘೋಷಿತಂ ಯಶಃ ॥ ೨೦ ॥**

ಈ ಭರತೇಶ್ವರನ ಕೀರ್ತಿಯು "ಮನುವು ಚಕ್ರವರ್ತಿಗಳಲ್ಲಿ ಮೊದಲನೆಯವನು ಷಟ್ಖಂಡಭರತಕ್ಕೆ ಪ್ರಭುವು ರಾಜರುಗಳಿಗೆ ರಾಜನು ಅಧಿಪತಿಯು ಚಕ್ರವರ್ತಿಯು" ಈ ಪ್ರಕಾರವಾಗಿ ಉದ್ಘೋಷಿಸಲ್ಪಟ್ಟಿತು.

**ನಂದನೋ ವೃಷಭೇಶಸ್ಯ ಭರತಃ ಶಾತಮಾತುರಃ ।**
**ಇತ್ಯಸ್ಯ ರೋದಸೀ ವ್ಯಾಪ [1]ಶುಭ್ರಾ ಕೀರ್ತಿರನಶ್ವರೀ ॥ ೨೧ ॥**

ಶ್ರೀ ವೃಷಭಸ್ವಾಮಿಯ ಪುತ್ರನಾದ ಭರತೇಶ್ವರನು ನೂರುಮಂದಿ ಮಕ್ಕಳುಗಳ ತಾಯಿಯ ಮಗನು. ಈ ಪ್ರಕಾರವಾಗಿ ಈ ಭರತೇಶ್ವರನ ಶುಭ್ರವೂ ನಶ್ವರವಲ್ಲದುದೂ ಆದ ಕೀರ್ತಿಯು ಆಕಾಶಭೂಮಿಗಳನ್ನು ವ್ಯಾಪಿಸಿತು.

**ಕೀದೃಕ್ಪರಿಚ್ಛದಸ್ತಸ್ಯ ವಿಭವಶ್ಚಕ್ರವರ್ತಿನಃ ।**
**ಇತಿ [2]ಪ್ರಶ್ನವಶಾದಸ್ಯ ವಿಭವೋದ್ದೇಶಕೀರ್ತನಮ್[3] ॥ ೨೨ ॥**

"ಆ ಭರತಚಕ್ರವರ್ತಿಯ ಐಶ್ವರ್ಯವೂ ಪರಿವಾರವೂ ಎಂತಹದು?" ಈ ಪ್ರಕಾರವಾದ ಶ್ರೇಣಿಕಮಂಡಲೇಶ್ವರನ ಪ್ರಶ್ನೆಯ ನಿಮಿತ್ತದಿಂದ ಅವನ ಸಂಪತ್ತಿಯ ಹೆಸರಿನ ವರ್ಣನೆಯು ಮಾಡಲ್ಪಡುತ್ತದೆ.

**ಗಲನ್ಮದಜಲಾಸ್ತಸ್ಯ ಗಜಾಃ ಸುರಗಜೋಪಮಾಃ ।**
**ಲಕ್ಷಾಶ್ಚತುರಶೀತಿಸ್ತೇ [4]ರದ್ಯೈ[5]ರ್ಬಂಧ್ಯೈಃ [6]ಸುಕಲ್ಪಿತೈಃ ॥ ೨೩ ॥**

ಆ ಭರತೇಶ್ವರನಿಗೆ ಮದಜಲವನ್ನು ಸುರಿಯುತ್ತಿರುವುವೂ ಐರಾವತಗಜಕ್ಕೆ ಸಮಾನಗಳೂ ಉತ್ತಮವೇಷ ಆಕಾರಗಳಿಂದಲೂ ಕಟ್ಟುಗಳಿಂದಲೂ ಹಲ್ಲುಗಳಿಂದಲೂ ಕೂಡಿರುವುವೂ ಪ್ರಸಿದ್ಧವೂ ಆದ ಎಂಬತ್ತನಾಲ್ಕುಲಕ್ಷ ಆನೆಗಳಿದ್ದುವು.

**ದಿವ್ಯರತ್ನವಿನಿರ್ಮಾಣಾ ರಥಾ[7]ಸ್ತಾವಂತ ಏವ ಹಿ ।**
**[8]ಮನೋವಾಯುಜವಾಃ ಸೂರ್ಯರಥಪ್ರಸ್ಪರ್ಧಿರಂಹಸಃ ॥ ೨೪ ॥**

ಶ್ರೇಷ್ಠವಾದ ರತ್ನಗಳಿಂದ ನಿರ್ಮಿತಗಳೂ ಮನಸ್ಸಿನಂತೆಯೂ ಗಾಳಿಯಂತೆಯೂ ವೇಗವುಳ್ಳುವೂ ಸೂರ್ಯನ ರಥದೊಡನೆ ಹೋರಾಡುವ ವೇಗವುಳ್ಳುವೂ ಆದ ಅಷ್ಟೇ (೮೪ ಲಕ್ಷ) ರಥಗಳಿದ್ದುವು.

**ಕೋಟಯೋಷ್ಟಾದಶಾಶ್ವಾನಾಂ ಭೂಜಲಾಂಬರಚಾರಿಣಾಮ್ ।**
**ಯತ್ಖುರಾಗ್ರಾಣಿ ಧೌತಾನಿ ಪೂತೈ[9]ಸ್ತ್ರಿಪಥಗಾಜಲೈಃ ॥ ೨೫ ॥**

ಪವಿತ್ರವಾದ ಗಂಗಾನದಿಯ ನೀರುಗಳಿಂದ ಯಾವುವುಗಳ ಗೊರಸುಗಳ ತುದಿಗಳು ತೊಳೆಯಲ್ಪಟ್ಟುವೋ ಭೂಮಿಯಲ್ಲಿಯೂ ನೀರಿನಲ್ಲಿಯೂ ಆಕಾಶದಲ್ಲಿಯೂ ನಡೆಯಬಲ್ಲ ಅಂತಹ ಹದಿನೆಂಟು ಕೋಟಿ ಕುದುರೆಗಳಿದ್ದುವು.

**ಚತುರ್ಭಿರಧಿಕಾಶೀತಿಃ ಕೋಟಯೋಸ್ಯ ಪದಾತಯಃ ।**
**ಯೇಷಾಂ [10]ಸುಭಟಸಮ್ಮರ್ದನಿರೂಢಂ [11]ಪುರುಷವ್ರತಮ್ ॥ ೨೬ ॥**

ಈ ಭರತೇಶ್ವರನಿಗೆ ಶ್ರೇಷ್ಠರಾದ ಭಟರೊಡನೆ ಹೋರಾಡುವುದರಲ್ಲಿ ಪ್ರಸಿದ್ಧವಾದ ಶೌರ್ಯವುಳ್ಳವರಾದ ಎಂಬತ್ತನಾಲ್ಕು ಕೋಟಿ ಕಾಲಾಳುಗಳಾದ ಸೈನಿಕರಿದ್ದರು.

**ವಜ್ರಾಸ್ಥಿಬಂಧನಂ ವಾಜ್ರೈರ್ವಲಯೈರ್ವೇಷ್ಟಿತಂ ವಪುಃ ।**
**ವಜ್ರನಾರಾಚ[12]ನಿರ್ಭಿನ್ನಮಭೇದ್ಯಮಭವತ್ಪ್ರಭೋಃ ॥ ೨೭ ॥**

೧ ಶುದ್ಧಾ ಇತ್ಯಪಿ ಪಾಠಃ. ೨ ಶ್ರೇಣಿಕಪ್ರಶ್ನವಶಾತ್. ೩ ಕ್ರಿಯತೇ. ೪ ದಂತೈರುಪಲಕ್ಷಿತಾಃ. ೫ ಕರಣ್ಯೈಃ, ಪದಚಾರ್ಯೈರಿತ್ಯರ್ಥಃ. ೬ ಸುವೇಷೈಃ. ೭ ಚತುರಶೀತಿಲಕ್ಷಾ ಏವ. ೮ ಮನೋವಾಯುವದ್ವೇಗಾಃ. ೯ ಗಂಗಾಜಲೈಃ. ೧೦ ಸುಭಟೈಸ್ಸಹ ಸಮ್ಮರ್ದೇ ಪ್ರಸಿದ್ಧಂ. ೧೧ ಶೌರ್ಯಂ. ೧೨ ಕೀಲಿತಂ.

ಭರತೇಶ್ವರನ ಶರೀರವು ವಜ್ರಮಯವಾದ ಮೂಳೆಯ ಕಟ್ಟುಗಳುಳ್ಳುದೂ ವಜ್ರಮಯವಾದ ವೇಷ್ಟನಗಳಿಂದ ಸುತ್ತಲ್ಪಟ್ಟುದೂ ವಜ್ರಮಯವಾದ ಕೀಲುಗಳಿಂದ ಕೀಲಿಸಲ್ಪಟ್ಟುದೂ ಅಭೇದ್ಯವೂ ಆಗಿದ್ದಿತು:

**ಸಮಸುಪ್ರವಿಭಕ್ತಾಂಗಂ [೧]ಚತುರಸ್ರಂ [೨]ಸುಸಂಹತಿ ।**
**ವಪುಃ ಸುಂದರಮಸ್ಯಾಸೀತ್ಸಂಸ್ಥಾನೇನಾದಿನಾ ವಿಭೋಃ ॥ ೨೮ ॥**

ಹೆಚ್ಚುಕಡಿಮೆಯಿಲ್ಲದೆ–ಸಮಾನವಾಗಿ ವಿಭಾಗವನ್ನು ಹೊಂದಿದ ಅವಯವಗಳ್ಳುಳ್ಳುದೂ ಮನೋಹರವೂ ಶ್ರೇಷ್ಠವಾದ ಕಟ್ಟುಗಳುಳ್ಳುದೂ ಆದ ಈ ಭರತೇಶ್ವರನ ಶರೀರವು ಮೊದಲನೆಯದಾದ ಸಮಚತುರಸ್ರವೆಂಬ ಆಕೃತಿಯಿಂದ ಸುಂದರವಾಗಿದ್ದಿತು.

**ನಿಷ್ಟಪ್ತಕನಕಚ್ಛಾಯಂ [೩]ಸಚ್ಚತುಃಷಷ್ಟಿಲಕ್ಷಣಮ್ ।**
**ರುರುಚೇ ವ್ಯಂಜನೈಸ್ತಸ್ಯ ನಿಸರ್ಗಸುಭಗಂ ವಪುಃ ॥ ೨೯ ॥**

ಕಾಯಿಸಿದ ಬಂಗಾರದಂತೆ ಕಾಂತಿಯುಳ್ಳುದೂ ನೇಗಿಲು ವಜ್ರಾಯುಧ ಮೊದಲಾದ ಅರುವತ್ತನಾಲ್ಕು ಮಹಾಲಕ್ಷಣಗಳುಳ್ಳುದೂ ಸ್ವಭಾವದಿಂದ ಸುಂದರವೂ ಆದ ಆ ಭರತೇಶ್ವರನ ಶರೀರವು ಅಲಂಕಾರೋಪಕರಣಗಳಿಂದ ಪ್ರಕಾಶಿಸಿದ್ದಿತು.

**ಶಾರೀರಂ ಯಚ್ಚ ಯಾವಚ್ಚ ಬಲಂ ಷಟ್ಖಂಡಭೂಭುಜಾಮ್ ।**
**ತತೋಧಿಕತರಂ ತಸ್ಯ ಬಲಮಾಸೀದ್ಬಲೀಯಸಃ ॥ ೩೦ ॥**

ಆರು ಖಂಡಗಳ ರಾಜರುಗಳ ಶರೀರಸಂಬಂಧವಾದ ಎಷ್ಟೊಂದು ಬಲವಿರುವುದೋ ಅದಕ್ಕಿಂತ ಹೆಚ್ಚಾಗಿ ಬಲಶಾಲಿಯಾದ ಆ ಭರತೇಶ್ವರನ ಶರೀರಬಲವಿದ್ದಿತು.

**ಶಾಸನಂ ತಸ್ಯ ಚಕ್ರಾಂಕಮಾಸಿಂಧೋರನಿವಾರಿತಮ್ ।**
**ಶಿರೋಭಿರೂಢಮಾರೂಢವಿಕ್ರಮೈಃ ಪೃಥಿವೀಶ್ವರೈಃ ॥ ೩೧ ॥**

ಸಮುದ್ರದವರೆಗೆ ತಡೆಯಿಲ್ಲದುದೂ ಚಕ್ರವೇ ಗುರುತಾಗಿರುವುದೂ ಆದ ಆ ಭರತೇಶ್ವರನ ಆಜ್ಞೆಯನ್ನು ಪರಾಕ್ರಮಶಾಲಿಗಳಾದ ರಾಜರುಗಳು ತಮ್ಮ ಮಸ್ತಕಗಳಿಂದ ಧರಿಸಿದರು.

**ದ್ವಾತ್ರಿಂಶನ್ಮೌಲಿಬದ್ಧಾನಾಂ ಸಹಸ್ರಾಣಿ [೪]ಮಹೀಕ್ಷಿತಾಮ್ ।**
**ಕುಲಾಚಲೈರಿವಾದ್ರೀಂದ್ರಃ ಸ ರೇಜೇ ಯೈಃ ಪರಿಷ್ಕೃತಃ ॥ ೩೨ ॥**

ಮೂವತ್ತೆರಡು ಸಹಸ್ರ ಮುಕುಟಬದ್ಧರಾದ ರಾಜರುಗಳಿಂದ ಆವರಿಸಲ್ಪಟ್ಟವನಾದ ಆ ಭರತೇಶ್ವರನು, ಕುಲಪರ್ವತಗಳಿಂದ ಆವರಿಸಲ್ಪಟ್ಟ ಮಹಾಮೇರು ಪರ್ವತದಂತೆ, ಶೋಭಿಸಿದನು.

**ತಾವಂತ್ಯೇವ ಸಹಸ್ರಾಣಿ ದೇಶಾನಾಂ ಸುನಿವೇಶಿನಾಮ್ ।**
**ಯೈರಲಂಕೃತಮಾಭಾತಿ ಚಕ್ರಭೃತ್ಕ್ಷೇತ್ರಮಾಯತಮ್ ॥ ೩೩ ॥**

ಶ್ರೇಷ್ಠವಾದ ಗ್ರಾಮವೇ ಮೊದಲಾದುವುಗಳುಳ್ಳ ಅಷ್ಟು–ಮೂವತ್ತೆರಡು ಸಹಸ್ರ ದೇಶಗಳಿಂದ ಅಲಂಕೃತವೂ ವಿಸ್ತಾರವೂ ಆದ ಚಕ್ರವರ್ತಿಯ ಕ್ಷೇತ್ರವು ಶೋಭಿಸುತ್ತದೆ.

**ಕುಲಾ[೫]ಭಿಜಾತ್ಯಸಂಪನ್ನಾ ದೇವ್ಯ[೬]ಸ್ತಾವತ್ಪ್ರಮಾಃ ಸ್ಮೃತಾಃ ।**
**ರೂಪಲಾವಣ್ಯಕಾಂತೀನಾಂ ಯಾಃ ಶುದ್ಧಾಕರಭೂಮಯಃ ॥ ೩೪ ॥**

ರೂಪ ಲಾವಣ್ಯ ಕಾಂತಿಗಳಿಗೆ ಶುದ್ಧವಾದ ಗಣಿಗಳಂತಿರುವವರೂ ಉತ್ತಮವಾದ ಕುಲ ಮತ್ತು ಜಾತಿ(ತಂದೆತಾಯಿಗಳ ಪರಂಪರೆ)ಗಳುಳ್ಳವರೂ ಆದ ದೇವಿಯರು–ರಾಣಿಯರು ಅಷ್ಟು–ಮೂವತ್ತೆರಡು ಸಹಸ್ರಪರಿಮಿತರಾಗಿದ್ದರು.

೧ ಮನೋಜ್ಞಂ. ೨ ಸುಸಂಬಂಧಂ. ೩ ಹಲಕುಲಿಶಾದಿಚತುಷ್ಷಷ್ಟಿಮಹಾಲಕ್ಷಣಂ. ೪ ಭೂಭುಜಾಂ. ೫ ಆಭಿಜಾತಸ್ಯ ಭಾವಃ ಆಭಿಜಾತ್ಯಂ. ೬ ದ್ವಾತ್ರಿಂಶತ್ಸಹಸ್ರಾಣಿ.

**ಮ್ಲೇಚ್ಛರಾಜಾದಿಭಿರ್ದತ್ತಾ[೧]ಸ್ತಾವತ್ಯೋ ನೃಪವಲ್ಲಭಾಃ ।**
**[೨]ಅಪ್ಸರಃಸಂಕಥಾಃ ಕ್ಷೋಣೀಂ ಯಕಾಭಿರವತಾರಿತಾಃ ॥ ೩೫ ॥**

ಅಪ್ಸರಸ್ತ್ರೀಯರಿದ್ದಾರೆಂಬ ವಾರ್ತೆಗಳನ್ನು ಭೂಮಿಯಲ್ಲಿ ಪ್ರಚಾರಕ್ಕೆ ತಂದವರೂ ಮ್ಲೇಚ್ಛರಾಜರುಗಳಿಂದ ಕೊಡಲ್ಪಟ್ಟವರೂ ಆದ ಅಷ್ಟು–ಮೂವತ್ತೆರಡು ಸಹಸ್ರ ಪತ್ನಿಯರಿದ್ದರು. ಅಪ್ಸರಸ್ತ್ರೀಯರಿಗೆ ಸಮಾನರಾದ ಮೂವತ್ತೆರಡು ಸಹಸ್ರ ಮ್ಲೇಚ್ಛರಾಜಕನ್ಯೆಯರು ಭರತೇಶ್ವರನಿಗೆ ಪತ್ನಿಯರಾಗಿದ್ದರೆಂದು ಭಾವವು.

**[೩]ಅವರುದ್ಧಾಶ್ಚ [೪]ತಾವತ್ಯಸ್ತನ್ವ್ಯಃ ಕೋಮಲವಿಗ್ರಹಾಃ ।**
**ಮದನೋದ್ದೀಪನೈರ್ಯಾಸಾಂ ದೃಷ್ಟಿಬಾಣೈರ್ಜಿತಂ ಜಗತ್ ॥ ೩೬ ॥**

ಯಾವ ಸ್ತ್ರೀಯರ ಕಾಮೋದ್ದೀಪಕವಾದ ದೃಷ್ಟಿಬಾಣಗಳಿಂದ ಲೋಕವು ಜಯಿಸಲ್ಪಟ್ಟಿತೋ ಅಂತಹ ಕೋಮಲವಾದ ದೇಹವುಳ್ಳವರಾದ ಸುಂದರಿಯರೂ ಅಂತಃಪುರದ ವಿದ್ಯಾಧರಸ್ತ್ರೀಯರೂ ಅಷ್ಟು–ಮೂವತ್ತೆರಡುಸಾವಿರ ಮಂದಿಗಳಿದ್ದರು.

**ನಖಾಂಶುಕುಸುಮೋ[೫]ದ್ಭೇದೈರಾರಕ್ತೈಃ ಪಾಣಿಪಲ್ಲವೈಃ ।**
**[೬]ತಾಸ್ತನ್ವ್ಯೋ ಭುಜಶಾಖಾಭಿರ್ಭೇಜುಃ ಕಲ್ಪಲತಾಶ್ರಿಯಮ್ ॥ ೩೭ ॥**

ಆ ತೊಂಬತ್ತಾರು ಸಹಸ್ರ ಸ್ತ್ರೀಯರು ಉಗುರುಗಳ ಕಿರಣಗಳೆಂಬ ಹೂವಿನ ಮೊಗ್ಗುಗಳಿಂದಲೂ ಚೆನ್ನಾಗಿ ಕೆಂಪಾದ ಕೈಗಳೆಂಬ ತಳಿರುಗಳಿಂದಲೂ ತೋಳುಗಳೆಂಬ ಕೊಂಬೆಗಳಿಂದರೂ ಕಲ್ಪಲತೆಯ ಶೋಭೆಯನ್ನು ಹೊಂದಿದರು.

**ಸ್ತನಾಬ್ಜ[೭]ಕುಡ್ಮಲೈರಾಸ್ಯಪಂಕಜೈಶ್ಚ ವಿಕಾಸಿಭಿಃ ।**
**ಅಬ್ಜಿನ್ಯ ಇವ ತಾ ರೇಜುರ್ಮದನಾವಾಸಭೂಮಿಕಾಃ ॥ ೩೮ ॥**

ಮನ್ಮಥನ ಆವಾಸಭೂಮಿಗಳಂತಿರುವವರಾದ ಆ ಸ್ತ್ರೀಯರು ಕುಚಗಳೆಂಬ ತಾವರೆಯ ಮೊಗ್ಗುಗಳಿಂದಲೂ ವಿಕಸಿತವಾದ ಮುಖಗಳೆಂಬ ಕಮಲಗಳಿಂದಲೂ, ತಾವರೆಯ ಬಳ್ಳಿಗಳೋ ಎಂಬಂತೆ ಪ್ರಕಾಶಿಸಿದರು.

**ಮನ್ಯೇ ಪಾತ್ರಾಣಿ ಗಾತ್ರಾಣಿ ತಾಸಾಂ ಕಾಮಗ್ರಹೋ[೮]ಚ್ಛ್ರಿತೌ ।**
**ಯದಾವೇಶವಶಾ[೯]ದೇಷ [೧೦]ದಶಾಂ ಪ್ರಾಪ್ನೋತಿವರ್ತಿನೀಮ್ ॥ ೩೯ ॥**

ಯಾವ ಕಾಮನೆಂಬ ಗ್ರಹದ ಆವೇಶವಶದಿಂದ ಈ ಭರತಚಕ್ರಿಯು ಮೇರೆ ಮೀರಿದ ಅವಸ್ಥೆಯನ್ನು– ಅತ್ಯಂತ ವಿಷಯಾಸಕ್ತಿಯನ್ನು ಹೊಂದಿದನೋ ಅಂತಹ ಕಾಮನೆಂಬ ಗ್ರಹದ ಉದ್ರೇಕದಲ್ಲಿ ಆ ಸ್ತ್ರೀಯರ ಶರೀರಗಳು ಕಾರಣಗಳೆಂದು ತಿಳಿಯುತ್ತೇನೆ.

**ಶಂಕೇ ನಿಶಾನಪಾಷಾಣಾನ್ನಖಾನಾಸಾಂ ಮನೋಭುವಃ ।**
**ಯತ್ರೋ[೧೧]ಪಾರೂಢತೈಕ್ಷ್ಣ್ಯೈಃ ಸ್ವೈರವಿಧ್ಯತ್ಕಾಮಿನಃ ಶರೈಃ ॥ ೪೦ ॥**

ಯಾವ ಉಗುರುಗಳಲ್ಲಿ ತೀಕ್ಷ್ಣತೆಯನ್ನು ಹೊಂದಿದ ತನ್ನ ಬಾಣಗಳಿಂದ ಕಾಮನು ಕಾಮುಕರನ್ನು ಹೊಡೆದನೋ ಅಂತಹ ಆ ಸ್ತ್ರೀಯರ ಉಗುರುಗಳನ್ನು ಕಾಮನ ಸಾಣೆಯ ಕಲ್ಲುಗಳನ್ನಾಗಿ ತಿಳಿಯುತ್ತೇನೆ.

**ಸತ್ಯಂ ಮಹೇಷುಧೀ ಜಂಘೇ ತಾಸಾಂ ಮದನಧನ್ವಿನಃ ।**
**ಕಾಮಸ್ಯಾರೋಹನಿಃಶ್ರೇಣೀ[೧೨]ಸ್ಥಾನೀಯಾವೂರುದಂಡಕೌ ॥ ೪೧ ॥**

ಆ ಸ್ತ್ರೀಯರ ಕಣಕಾಲುಗಳು ಮನ್ಮಥನೆಂಬ ಧನುರ್ಧಾರಿಗೆ ನಿಜವಾಗಿ ದೊಡ್ಡದಾದ ಬತ್ತಳಿಕೆಗಳಾಗಿದ್ದುವು. ತೊಡೆಗಳು ಮನ್ಮಥನಿಗೆ ಹತ್ತುವುದಕ್ಕೆ ಮಾಡಿದ ನಿಚ್ಚಣಿಗೆ–ಏಣಿಗಳಿಂತಿದ್ದುವು.

೧ ದ್ವಾತ್ರಿಂಶತ್ಸಹಸ್ರಾಣಿ. ೨ ದೇವಸ್ತ್ರೀಣಾಂ ವಾರ್ತಾಃ. ೩ ಅಂತಃಪುರಸಂಜ್ಞಾವಿದ್ಯಾಧರ ಪುತ್ರ್ಯಃ. ೪ ದ್ವಾತ್ರಿಂಶತ್ಸಹಸ್ರಾಣಿ. ೫ ಕುಡ್ಮಲೈಃ. ೬ ಷಣ್ಣವತಿಸಹಸ್ರಪ್ರಮಾಃ. ೭ ಮುಕುಲೈಃ. ೮ ಉದ್ರೇಕೇ. ೯ ಚಕ್ರೀ. ೧೦ ಅವಸ್ಥಾಂ. ೧೧ ಪ್ರಾಪ್ತ. ೧೨ ಸದೃಶೌ.

**ಕಟೀ [೧]ಕುಟೀ ಮನೋಜಸ್ಯ ಕಾಂಚೀಸಾಲಕೃತಾವೃತಿಃ ।**
**ನಾಭಿರಾಸಾಂ ಗಭೀರೈಕಾ ಕೂಪಿಕಾ ಚಿತ್ತಜನ್ಮನಃ ॥ ೪೨ ॥**

ಈ ಸ್ತ್ರೀಯರ ಡಾಬೆಂಬ ಕೋಟೆಯಿಂದ ಮಾಡಲ್ಪಟ್ಟ ಆವರಣವುಳ್ಳ ಕಟೀ ಪ್ರದೇಶವು ಮನ್ಮಥನ ಮನೆಯಾಗಿದ್ದಿತು. ಆಳವಾದ ನಾಭಿಯು ಕಾಮನಿಗೆ ಒಂದು ಬಾವಿಯಾಗಿದ್ದಿತು.

**ಮನೋಭುವೋತಿವೃದ್ಧಸ್ಯ ಮನ್ಯೇ [೨]ವಷ್ಟಂಭಯಷ್ಟಿಕಾ ।**
**ರೋಮರಾಜಿಃ ಸ್ತನೌ ತಾಸಾಂ ಕಾಮರತ್ನಕರಂಡಕೌ ॥ ೪೩ ॥**

ಆ ಸ್ತ್ರೀಯರ ರೋಮಗಳ ಸಾಲು ಬಹಳ ಮುದುಕನಾದ ಕಾಮನಿಗೆ ಆಧಾರವಾದ ಕೋಲಾಗಿದ್ದಿತೆಂದು ತಿಳಿಯುತ್ತೇನೆ. ಕುಚಗಳು ಮನ್ಮಥನ ರತ್ನದ ಕರಡಿಗೆಗಳಾಗಿದ್ದುವು.

**ಕಾಮಪಾಶಾಯಿತೌ ಬಾಹೂ ಶಿರೀಷೋದ್ಗಮಕೋಮಲೌ ।**
**ಕಾಮಸ್ಯೋ[೩]ಚ್ಛ್ವಸಿತಂ ಕಂಠಃ ಸುಕಂಠೀನಾಂ ಮನೋಹರಃ ॥ ೪೪ ॥**

ಶ್ರೇಷ್ಠವಾದ ಕಂಠವುಳ್ಳವರಾದ ಆ ಸ್ತ್ರೀಯರ ಬಾಗೆಯ ಹೂವಿನ ಮೊಗ್ಗುಗಳಂತೆ ಕೋಮಲವಾದ ತೋಳುಗಳು ಮನ್ಮಥನ ಪಾಶಗಳಂತಿದ್ದುವು. ಮನೋಹರವಾದ ಕಂಠವು ಮನ್ಮಥನ ಪ್ರಾಣವಾಗಿದ್ದಿತು.

**ಮುಖಂ ರತಿಸುಖಾಗಾರ[೪]ಪ್ರಮುಖಂ [೫]ಮುಖಬಂಧನಮ್ ।**
**ವೈರಾಗ್ಯರಸಸಂಗಸ್ಯ ತಾಸಾಂ ಚ ರದನಚ್ಛದಃ ॥ ೪೫ ॥**

ಆ ಸ್ತ್ರೀಯರ ಮುಖವು ರತಿಸುಖದ ಮನೆಯ ಶ್ರೇಷ್ಠವಾದ ಬಾಗಿಲಾಗಿದ್ದಿತು. ಅವರ ತುಟಿಯು ವೈರಾಗ್ಯವೆಂಬ ರಸದ ಅಂದರೆ ಸಂತೋಷಸಂಬಂಧದ ಬಾಯಿಕಟ್ಟಾಗಿದ್ದಿತು.

**ದೃಗ್ವಿಲಾಸಾಃ ಶರಾಸ್ತಾಸಾಂ ಕರ್ಣಾಂತೌ ಲಕ್ಷ್ಯತಾಂ ಗತೌ ।**
**ಭ್ರೂವಲ್ಲರೀ ಧನುರ್ಯಷ್ಟಿರ್ಜಿಗೀಷೋಃ ಪುಷ್ಪಧನ್ವನಃ ॥ ೪೬ ॥**

ಜಯಿಸಲಿಚ್ಛೆಯುಳ್ಳವನಾದ ಕಾಮನಿಗೆ ಆ ಸ್ತ್ರೀಯರ ನೇತ್ರವಿಲಾಸಗಳು ಬಾಣಗಳಾಗಿದ್ದುವು. ಗೊಂಚಲಿನಂತಿರುವ ಹುಬ್ಬು ಧನುಸ್ಸಾಗಿದ್ದಿತು. ಕಿವಿಗಳು ಲಕ್ಷ್ಯ-ಗುರಿಗಳಾಗಿದ್ದರು.

**ಲಲಾಟಾಭೋಗಮೇತಾಸಾಂ ಮನ್ಯೇ ಬಾಹ್ಯಾಲಿಕಾಸ್ಥಲಮ್ ।**
**ಅನಂಗನೃಪತೇ[೬]ರಿಷ್ಟಭೋಗಕಂದುಕಚಾರಿಣಃ ॥ ೪೭ ॥**

ಈ ಸ್ತ್ರೀಯರ ವಿಸ್ತಾರವಾದ ಹಣೆಯನ್ನು ಇಷ್ಟಭೋಗಗಳೆಂಬ ಚೆಂಡುಗಳನ್ನಾಡುವ ಕಾಮನೆಂಬ ರಾಜನ ಹೊರಗಿನ ಆಟವನ್ನಾಡುವ ಭೂಮಿಯನ್ನಾಗಿ ತಿಳಿಯುತ್ತೇನೆ.

**ಅಲಕಾಃ ಕಾಮಕೃಷ್ಣಾಹೇಃ ಶಿಶವಃ ಪರಿಪುಂಜಿತಾಃ ।**
**ಕುಂಚಿತಾಃ ಕೇಶವಲ್ಲರ್ಯೋ ಮದನಸ್ಯೇವ [೭]ವಾಗುರಾಃ ॥ ೪೮ ॥**

ಆ ಸ್ತ್ರೀಯರ ಕುರುಳುಕೂದಲುಗಳು ಕಾಮನೆಂಬ ಕೃಷ್ಣಸರ್ಪದ ಗುಂಪು ಸೇರಿರುವ ಮರಿಗಳಂತಿದ್ದುವು. ಸುರುಳಿಸುತ್ತಿರುವ ಕೂದಲುಗಳ ಸಮೂಹಗಳು ಮನ್ಮಥನ ಬಲೆಗಳಂತಿದ್ದುವು.

**ಇತ್ಯನಂಗಮಯೀಂ ಸೃಷ್ಟಿಂ ತನ್ವಾನಾಃ ಸ್ವಾಂಗಸಂಗಿನೀಮ್ ।**
**ಮನೋ[೮]ಸ್ಯ ಜಗೃಹುಃ [೯]ಕಾಂತಾಃ ಕಾಂತೈಃ ಸ್ವೈಃ ಕಾಮಚೇಷ್ಟಿತೈಃ ॥ ೪೯ ॥**

ಈ ಪ್ರಕಾರವಾಗಿ ಮನ್ಮಥಮಯವೂ ತಮ್ಮ ಶರೀರಸಂಬಂಧಿಯೂ ಆದ ಸೃಷ್ಟಿಯನ್ನು ವಿಸ್ತರಿಸುವವರಾದ ಆ ಸ್ತ್ರೀಯರು ಮನೋಹರವಾದ ತಮ್ಮ ಕಾಮಚೇಷ್ಟೆಗಳಿಂದ ಈ ಭರತೇಶ್ವರನ ಮನಸ್ಸನ್ನು ಅಪಹರಿಸಿದರು. ಮನೋಹರರಾಗಿದ್ದರೆಂದು ಭಾವವು.

**ತಾಸಾಂ ಮೃದುಕರಸ್ಪರ್ಶೈಃ ಪ್ರೇಮಸ್ನಿಗ್ಧೈಶ್ಚ ವೀಕ್ಷಿತೈಃ ।**
**ಮಹತೀ ಧೃತಿ[೧]ರಸ್ಯಾಸೀಜ್ಜಲ್ಪಿತೈರಪಿ [೨]ಮನ್ಮನೈಃ ॥ ೫೦ ॥**

ಆ ಸ್ತ್ರೀಯರ ಮೃದುವಾದ ಹಸ್ತಗಳ ಸ್ಪರ್ಶಗಳಿಂದಲೂ ಪ್ರೇಮವೆಂಬ ಜಿಡ್ಡುಳ್ಳ ನೋಟಗಳಿಂದಲೂ ಅವ್ಯಕ್ತವಾದ ಮಾತುಗಳಿಂದಲೂ ಈ ಭರತೇಶ್ವರನಿಗೆ ಬಹಳ ಸಂತೋಷವಾಯಿತು.

**ಸ್ಮಿತೇಷ್ವಾಸಾಂ ದರೋ[೩]ದ್ಭಿನ್ನೋ ಹಸಿತೇಷು ವಿಕಸ್ವರಃ ।**
**ಫಲಿತಃ [೪]ಪರಿರಂಭೇಷು ರಸಿಕೋಭೂದ್ರತದ್ರುಮಃ ॥ ೫೧ ॥**

ಈ ಸ್ತ್ರೀಯರ ಸುರತವೆಂಬ ವೃಕ್ಷವು ಮುಗುಳ್ನಗೆಗಳಲ್ಲಿ ಸ್ವಲ್ಪ ಅಂಕುರಿಸಿದುದಾಗಿಯೂ ನಗೆಗಳಲ್ಲಿ ಅರಳಿದುದಾಗಿಯೂ ಆಲಿಂಗನಗಳಲ್ಲಿ ಫಲಿಸಿದುದಾಗಿಯೂ ರಸವತ್ತಾಗಿಯೂ ಆಯಿತು.

**ಭ್ರೂಕ್ಷೇಪಯಂತ್ರಪಾಷಾಣೈರ್ದೃಕ್ಕ್ಷೇಪಕ್ಷೇಪಣೀಕೃತೈಃ ।**
**[೫]ಬಹುದುರ್ಗರಣಸ್ತಾಸಾಂ ಸ್ಮರೋಭೂತ್ಸಕಚಗ್ರಹಃ ॥ ೫೨ ॥**

ಆ ಸ್ತ್ರೀಯರ ದೃಷ್ಟಿ ವಿಕ್ಷೇಪಗಳಿಂದ ಹೊಡೆಯಲ್ಪಟ್ಟ ಹುಬ್ಬುಗಳ ಹೊಡೆತಗಳೆಂಬ ಕವಣೆಕಲ್ಲುಗಳಿಂದ ದುರ್ಗದಲ್ಲಿ ಯುದ್ಧಮಾಡುವವನಂತಿರುವ ಮನ್ಮಥನು ಜುಟ್ಟನ್ನು ಹಿಡಿಯುವವನಾದನು. ಕಾಮುಕರು ಕಾಮಪರವಶರಾಗುತ್ತಿದ್ದರೆಂದು ಭಾವವು.

**ಖರಃ ಪ್ರಣಯಗರ್ಭೇಷು ಕೋಪೇಷ್ವನುನಯೇ ಮೃದುಃ ।**
**ಸ್ತಬ್ಧೋ ವ್ಯಲೀಕಮಾನೇಷು ಮುಗ್ಧಃ ಪ್ರಣಯಕೈತವೇ ॥ ೫೩ ॥**

ಪ್ರೇಮಗರ್ಭಿತವಾದ ಕೋಪಗಳಲ್ಲಿ ತೀಕ್ಷ್ಣನೂ ದೀನವಚನದಲ್ಲಿ ಕೋಮಲನೂ ಯಥಾರ್ಥವಲ್ಲದ ಗರ್ವಗಳಲ್ಲಿ ಉದಾಸೀನನೂ ಪ್ರೀತಿಯುಕ್ತವಾದ ಕಪಟದಲ್ಲಿ ವಿಚಾರಶೂನ್ಯನೂ

**ನಿರ್ದಯಃ ಪರಿರಂಭೇಷು [೬]ಸಾನುಜ್ಞಾನೋ [೭]ಮುಖಾರ್ಪಣೇ ।**
**[೮]ಪ್ರತಿಪತ್ತಿಷು ಸಮ್ಮೂಢಃ ಪಟುಃ [೯]ಕರಣಚೇಷ್ಟಿತೇ ॥ ೫೪ ॥**

ಆಲಿಂಗನಗಳಲ್ಲಿ ದಯಾರಹಿತನೂ ಚುಂಬನದಲ್ಲಿ ತಿಳಿವಳಿಕೆಯುಳ್ಳವನೂ ವಿನಯಗಳಲ್ಲಿ ವಿಚಾರರಹಿತನೂ ನಖಕ್ಷತವೇ ಮೊದಲಾದ ಇಂದ್ರಿಯವ್ಯಾಪಾರದಲ್ಲಿ ಚತುರನೂ

**ಸಂಕಲ್ಪೇಷ್ವಾಹಿತೋತ್ಕರ್ಷೋ ಮಂದಃ ಪ್ರತ್ಯಗ್ರಸಂಗಮೇ ।**
**ಪ್ರಾರಂಭೇ ರಸಿಕೋ ದೀಪ್ತಃ ಪ್ರಾಂತೇ [೧೦]ಕರುಣಕಾತರಃ ॥ ೫೫ ॥**

ಕ್ರೀಡಾಸಂಕಲ್ಪಗಳಲ್ಲಿ ವೃದ್ಧಿಯನ್ನು ಹೊಂದುವವನೂ ನೂತನಸಮಾಗಮದಲ್ಲಿ ಉದಾಸೀನನೂ ಪ್ರಾರಂಭದಲ್ಲಿ ರಸಿಕನೂ ಕಡೆಯಲ್ಲಿ ಉದ್ದೀಪಿತವಾದ ಕರುಣರಸಾತುರವುಳ್ಳವನೂ

**ಇತ್ಯು[೧೧]ಚ್ಚಾವಚತಾಂ ಭೇಜೇ ತಾಸಾಂ ದೀಪ್ತಃ ಸ ಮನ್ಮಥಃ ।**
**ಪ್ರಾಯೋಭಿನ್ನರಸಃ ಕಾಮಃ ಕಾಮಿನಾಂ ಹೃದಯಂಗಮಃ ॥ ೫೬ ॥**

ಪ್ರಕಾಶಮಾನನೂ ಆದ ಆ ಮದನನು ಆ ಸ್ತ್ರೀಯರ ವಿಷಯದಲ್ಲಿ ಮೇಲೆ ಹೇಳಿದಂತೆ ನಾನಾಪ್ರಕಾರವನ್ನು ಹೊಂದಿದನು. ಕಾಮುಕರಿಗೆ ಮನೋಹರವಾದ ಮನ್ಮಥನು ಬಹಳಮಟ್ಟಿಗೆ ಬೇರೆಬೇರೆ ಅಭಿರುಚಿಯುಳ್ಳವನಾಗಿರುತ್ತಾನೆ. ಕಾಮುಕರು ಬೇರೆಬೇರೆ ಅಭಿರುಚಿಯುಳ್ಳವರಾಗಿರುತ್ತಾರೆಂದು ಭಾವವು.

---

೧ ಗೃಹಂ. ೨ ಆಧಾರ. ೩ ಜೀವಿತಂ. ೪ ಪ್ರಕೃಷ್ಟದ್ವಾರಮಿತ್ಯರ್ಥಃ. ೫ ಪೀನಾಹೋಮುಖಬಂಧನಂ. ೬ ಇಷ್ಟಭೋಗಾ ಏವ ಕಂದುಕಾಃ. ೭ ವಾಗುರಾಮೃಗಬಂಧನೀ. ೮ ಭರತಸ್ಯ. ೯ ಸ್ತ್ರಿಯಃ.

೧ ಭರತಸ್ಯ. ೨ ಅವ್ಯಕ್ತೈಃ. ೩ ಅಂಕುರಿತಃ. ೪ ಆಲಿಂಗನೇಷು. ೫ ದುರ್ಗಯುದ್ಧಸದೃಶಃ. ೬ ಜ್ಞಾನಸಹಿತಃ. ೭ ಚುಂಬನೇ. ೮ ವಿನಯೇಷು. ೯ ನಖಕ್ಷತಾದೀಂದ್ರಿಯವ್ಯಾಪಾರೇ. ೧೦ ಕರುಣರಸಾತುರಃ. ೧೧ ನಾನಾಪ್ರಕಾರತಾಂ.

**ಪ್ರಕಾಮಮಧುರಾನಿತ್ಥಂ [೧]ಕಾಮಾ[೨]ನ್ಕಾಮಾತಿರೇಕಿಣಃ ।**
**ಸ ತಾಭಿ[೩]ರ್ನಿರ್ವಿಶನ್ ರೇಮೇ [೪]ವಪುಷ್ಮಾನಿವ ಮನ್ಮಥಃ ॥ ೫೭ ॥**

ಆ ಭರತೇಶ್ವರನು ಮೇಲೆ ಹೇಳಿದ ಪ್ರಕಾರವಾಗಿ ಅತ್ಯಂತಪ್ರಿಯವೂ ಮನೋರಥವನ್ನು ಹೆಚ್ಚಿಸುವುವೂ ಆದ ಭೋಗವಸ್ತುಗಳನ್ನು ಆ ಸ್ತ್ರೀಯರೊಡನೆ ಅನುಭವಿಸುವವನಾಗಿ, ಆಕಾರವನ್ನು ಹೊಂದಿರುವ ಮನ್ಮಥನೋ ಎಂಬಂತೆ, ಕ್ರೀಡಿಸಿದನು.

**ತಾಶ್ಚ ತಚ್ಚಿತ್ತಹಾರಿಣ್ಯಸ್ತರುಣ್ಯಃ ಪ್ರಣಯೋದ್ಧುರಾಃ ।**
**ಬಭೂವುಃ ಪ್ರಾಪ್ತಸಾಮ್ರಾಜ್ಯಾ ಇವ ರತ್ಯುತ್ಸವೇ [೫]ಶ್ರಿಯಃ ॥ ೫೮ ॥**

ಆ ಭರತೇಶ್ವರನ ಚಿತ್ತವನ್ನು ಅಪಹರಿಸುವವರೂ ಅತಿಶಯವಾದ ಪ್ರೇಮವುಳ್ಳವರೂ ಆದ ಆ ತರುಣಿಯರು ರತಿಕ್ರೀಡೋತ್ಸವದಲ್ಲಿ ಲಕ್ಷ್ಮಿಯ ಸಾಮ್ರಾಜ್ಯವನ್ನು ಹೊಂದಿದವರಂತಿದ್ದರು.

**[೬]ನಾಟಕಾನಾಂ ಸಹಸ್ರಾಣಿ ದ್ವಾತ್ರಿಂಶತ್ಪ್ರಮಿತಾನಿ ವೈ ।**
**ಸಾತೋದ್ಯಾನಿ [೭]ಸಗೇಯಾನಿ ಯಾನಿ ರಮ್ಯಾಣಿ [೮]ಭೂಮಿಭಿಃ ॥ ೫೯ ॥**

ವಾದ್ಯಸಹಿತಗಳೂ ಗಾನಸಹಿತಗಳೂ ಆದ ಮೂವತ್ತೆರಡು ಸಹಸ್ರ ನಾಟಕಶಾಲೆಗಳು ವೇಷಗಳಿಂದ ರಮಣೀಯವಾಗಿದ್ದುವು.

**ದ್ವಾಸಪ್ತತಿಸಹಸ್ರಾಣಿ [೯]ಪುರಾಮಿಂದ್ರಪುರಶ್ರಿಯಾಮ್ ।**
**ಸ್ವರ್ಗಲೋಕ ಇವಾಭಾತಿ ನೃಲೋಕೋ ಯೈರಲಂಕೃತಃ ॥ ೬೦ ॥**

ಇಂದ್ರನ ನಗರದ ಶೋಭೆಯುಳ್ಳ ಎಪ್ಪತ್ತೆರಡು ಸಹಸ್ರ ನಗರಗಳಿಂದ ಅಲಂಕೃತವಾದ ಮನುಷ್ಯಲೋಕವು, ಸ್ವರ್ಗಲೋಕದಂತೆ, ಶೋಭಿಸುತ್ತಿದೆ.

**ಗ್ರಾಮಕೋಟ್ಯಶ್ಚ ವಿಜ್ಞೇಯಾ ವಿಭೋಃ ಷಣ್ಣವತಿಪ್ರಮಾಃ ।**
**ನಂದನೋದ್ದೇಶ[೧೦]ಜಿತ್ವರ್ಯೋ ಯಾಸಾಮಾರಾಮಭೂಮಯಃ ॥**

ಭರತೇಶ್ವರನಿಗೆ ತೊಂಬತ್ತಾರುಕೋಟಿ ಗ್ರಾಮಗಳಿದ್ದುವು. ಆ ಗ್ರಾಮಗಳ ಉದ್ಯಾನ ಭೂಮಿಗಳು ನಂದನವನಪ್ರದೇಶಗಳನ್ನು ಜಯಿಸತಕ್ಕುವಾಗಿದ್ದುವು.

**ದ್ರೋಣಾಮುಖಸಹಸ್ರಾಣಿ [೧೧]ನವತಿರ್ನವ ಚೈವ ಹಿ ।**
**ಧನಧಾನ್ಯಸಮೃದ್ಧೀನಾಮಧಿಷ್ಠಾನಾನಿ ಯಾನಿ ವೈ ॥ ೬೨ ॥**

ಧನಧಾನ್ಯಗಳ ಸಮೃದ್ಧಿಗೆ ಮುಖ್ಯಸ್ಥಾನಗಳಾದ ತೊಂಬತ್ತೊಂಬತ್ತು ಸಹಸ್ರ ದ್ರೋಣಾಮುಖಗಳಿದ್ದುವು. (ನಾಲ್ಕುಕಡೆಯಲ್ಲಿಯೂ ನದಿಯಿಂದ ಸುತ್ತಲ್ಪಟ್ಟ ಗ್ರಾಮಕ್ಕೆ ದ್ರೋಣಾಮುಖವೆಂದು ಹೆಸರು).

**ಪತ್ತನಾನಾಂ ಸಹಸ್ರಾಣಿ ಚತ್ವಾರಿಂಶತ್ತಥಾಷ್ಟ ಚ ।**
**ರತ್ನಾಕರಾ ಇವಾಭಾಂತಿ ಯೇಷಾ[೧೨]ಮುದ್ಧಾ ವಣಿಕ್ಪಥಾಃ ॥ ೬೩ ॥**

ಪ್ರಶಸ್ತವಾದ ವರ್ತಕರ ಬೀದಿಗಳುಳ್ಳ ನಲ್ವತ್ತೆಂಟುಸಹಸ್ರ ಪಟ್ಟಣಗಳು, ಸಮುದ್ರದಂತೆ, ಪ್ರಕಾಶಿಸುತ್ತವೆ.

**ಷೋಡಶೈವ ಸಹಸ್ರಾಣಿ ಖೇಟಾನಾಂ ಪರಿಮಾ ಮತಾ ।**
**ಪ್ರಾಕಾರಗೋಪುರಾಟ್ಟಾಲಖಾತವಪ್ರಾದಿಶೋಭಿನಾಮ್ ॥ ೬೪ ॥**

ಕೋಟೆಗಳಿಂದಲೂ ಗೋಪುರಗಳಿಂದಲೂ ಉಪ್ಪರಿಗೆಗಳಿಂದಲೂ ಕಂದಕಗಳಿಂದಲೂ ಅಗಳು ಮೊದಲಾದುವುಗಳಿಂದಲೂ ಶೋಭಿಸುವ ಹದಿನಾರು ಸಹಸ್ರ ಖೇಟಗಳಿದ್ದುವು. (ಒಂದು ಕಡೆಯಲ್ಲಿ ನದಿಯಿಂದಲೂ ಇನ್ನೊಂದು ಕಡೆಯಲ್ಲಿ ಪರ್ವತದಿಂದಲೂ ವ್ಯಾಪ್ತವಾದ ಗ್ರಾಮಕ್ಕೆ ಖೇಟವೆಂದು ಹೆಸರು).

೧ ಸ್ರಗ್ವನಿತಾದಿಭೋಗಾನ್. ೨ ಮನೋರಥವೃದ್ಧಿಕಾರಿಣಃ. ೩ ಅನುಭವನ್. ೪ ಮೂರ್ತಿಮಾನ್. ೫ ಲಕ್ಷ್ಮ್ಯಃ. ೬ ನಾಟಕಶಾಲಾನಾಂ. ೭ ಗಾನಸಹಿತಾನಿ. ೮ ವೇಷೈಃ. ೯ ಪುರಾಣಾಂ. ೧೦ ಜಯಶೀಲಾಃ. ೧೧ ನವಾಧಿಕನವತಿಃ. ೧೨ ಪ್ರಶಸ್ತಾ.

**ಭವೇಯುರಂತರದ್ವೀಪಾಃ ಷಟ್ಪಂಚಾಶತ್ಪ್ರಮಾ ಮಿತಾಃ ।**
**ಕುಮಾನುಷಜನಾಕೀರ್ಣಾ ಯೇರ್ಣವಸ್ಯ [೧]ಖಿಲಾಯಿತಾಃ ॥ ೬೫ ॥**

ಸಮುದ್ರದ ಅಪ್ರತಿಹತ–ನಿರ್ಬಾಧಿತವಾದ ಸ್ಥಾನಗಳಂತಿರುವುವೂ ದುಷ್ಟ ಮನುಷ್ಯರಿಂದ ವ್ಯಾಪ್ತಗಳೂ ಆದ ಐವತ್ತಾರು ಅಂತರದ್ವೀಪಗಳಿದ್ದುವು.

**[೨]ಸಂವಾಹನಸಹಸ್ರಾಣಿ ಸಂಖ್ಯಾತಾನಿ ಚತುರ್ದಶ ।**
**ವಹಂತಿ ಯಾನಿ ಲೋಕಸ್ಯ ಯೋಗಕ್ಷೇಮ[೩]ವಿಧಾವಿಧಿಮ್ ॥ ೬೬ ॥**

ಲೋಕದ ಯೋಗಕ್ಷೇಮವಿಧಾನದ ರೀತಿಯನ್ನು ಧರಿಸಿರುವ ಹದಿನಾಲ್ಕು ಸಹಸ್ರ ಭಾರವನ್ನು ಹೊರುವ ಪ್ರಾಣಿಗಳಿದ್ದುವು.

**[೪]ಸ್ಥಾಲೀನಾಂ ಕೋಟಿರೇಕೋಕ್ತಾ [೫]ರಂಧನೇ ಯಾ ನಿಯೋಜಿತಾ ।**
**[೬]ಪಕ್ತ್ರೀ [೭]ಸ್ಥಾಲೀಬಿಲೀಯಾನಾಂ ತಂಡುಲಾನಾಂ ಮಹಾನಸೇ ॥ ೬೭ ॥**

ಅಡಿಗೆಯ ಮನೆಯಲ್ಲಿ ಬೇಯಿಸುವುದಕ್ಕೆ ಯೋಗ್ಯವಾದ ಅಕ್ಕಿಯನ್ನು ಬೇಯಿಸುವುವೂ ಅಡಿಗೆಗೆ ಉಪಯೋಗಿಸಲ್ಪಟ್ಟಿರುವುವೂ ಆದ ಒಂದು ಕೋಟಿ ಪಾತ್ರೆಗಳಿದ್ದುವು.

**[೮]ಕೋಟೀಶತಸಹಸ್ರಂ ಸ್ಯಾದ್ಧಲಾನಾಂ [೯]ಕುಡಿಬೈಃ ಸಮಮ್ ।**
**[೧೦]ಕರ್ಮಾಂತಕರ್ಷಣೇ ಯಸ್ಯ ವಿನಿಯೋಗೋ ನಿರಂತರಃ ॥ ೬೮ ॥**

ಧಾನ್ಯಗಳನ್ನು ತೆಗೆದನಂತರ ಉಳುವ ಕೆಲಸದಲ್ಲಿ ಯಾವಾಗಲೂ ಉಪಯೋಗಿಸಲ್ಪಡುವುವೂ ಉಳುವ ಕುಡಿನಗಳೊಡನೆ ಕೂಡಿರುವುವೂ ಆದ ಒಂದು ಲಕ್ಷಕೋಟಿ ನೇಗಿಲುಗಳಿದ್ದುವು.

**ತಿಸ್ರೋಸ್ಯ ವ್ರಜಕೋಟ್ಯಃ ಸ್ಯುರ್ಗೋಕುಲೈಃ ಶಶ್ವದಾಕುಲಾಃ ।**
**ಯತ್ರ ಮಂಥರವಾಕ್ಯಷ್ಟಾಸ್ತಿಷ್ಠಂತಿ ಸಾಧ್ವಗಾಃ ಕ್ಷಣಮ್ ॥ ೬೯ ॥**

ಈ ಭರತೇಶ್ವರನ ಗೋವುಗಳ ಸಮೂಹಗಳಿಂದ ಯಾವಾಗಲೂ ವ್ಯಾಕುಲ (ಗಲಿಬಿಲಿ)ವಾದ ಮೂರುಕೋಟಿ ಗೋವುಗಳ ಕೊಟ್ಟಿಗೆಗಳಿದ್ದುವು. ಆ ಕೊಟ್ಟಿಗೆಗಳ ಬಳಿಯಲ್ಲಿ ಮೊಸರನ್ನು ಕಡೆಯುವ ಶಬ್ದದಿಂದ ಆಕರ್ಷಿಸಲ್ಪಟ್ಟ ಪ್ರಯಾಣಿಕರು ಒಂದು ಕ್ಷಣಕಾಲದವರೆಗೆ ನಿಲ್ಲುತ್ತಿದ್ದರು.

**[೧೧]ಕುಕ್ಷಿವಾಸಶತಾನ್ಯಸ್ಯ ಸಪ್ತೈವೋಕ್ತಾನಿ ಕೋವಿದೈಃ ।**
**[೧೨]ಪ್ರತ್ಯಂತವಾಸಿನೋ ಯತ್ರ [೧೩]ನ್ಯವಾತ್ಸುಃ ಕೃತಸಂಶಯಾಃ ॥ ೭೦ ॥**

ವಿದ್ವಾಂಸರು ಈ ಭರತೇಶ್ವರನಿಗೆ ರತ್ನಗಳ ಏಳುನೂರು ಕ್ರಯವಿಕ್ರಯದ–ವ್ಯಾಪಾರದ ಸ್ಥಾನಗಳಿದ್ದುವೆಂದು ಹೇಳಿದ್ದಾರೆ. ಆ ಸ್ಥಾನಗಳಲ್ಲಿ ಮ್ಲೇಚ್ಛರು ಮನೆಮಾಡಿಕೊಂಡು ವಾಸಮಾಡುತ್ತಿದ್ದರು.

**ದುರ್ಗಾಟವೀಸಹಸ್ರಾಣಿ ತಸ್ಯಾಷ್ಟಾವಿಂಶತಿರ್ಮತಾ ।**
**ವನ[೧೪]ಧನ್ವಾನನಿಮ್ನಾದ್ರಿವಿಭಾಗೈರ್ಯಾ ವಿಭಾಗಿತಾ ॥ ೭೧ ॥**

ಅರಣ್ಯಗಳು ನೀರಿಲ್ಲದ ಭೂಮಿಗಳು ತಗ್ಗಾದ ಬೆಟ್ಟಗಳು ಇವುಗಳ ವಿಭಾಗಗಳಿಂದ ವಿಭಾಗಿಸಲ್ಪಟ್ಟ ಇಪ್ಪತ್ತೆಂಟುಸಹಸ್ರ ವನದುರ್ಗಗಳಿದ್ದುವು.

**ಮ್ಲೇಚ್ಛರಾಜಸಹಸ್ರಾಣಿ ತಸ್ಯಾಷ್ಟಾದಶ ಸಂಖ್ಯಯಾ ।**
**ರತ್ನಾನಾ[೧೫]ಮುದ್ಭವಕ್ಷೇತ್ರಂ ಯೈಃ ಸಮಂತಾ[೧೬]ದಧಿಷ್ಠಿತಮ್ ॥ ೭೨ ॥**

ಸುತ್ತಲೂ ರತ್ನಗಳ ಗಣಿಗಳನ್ನು ರಕ್ಷಿಸುವವರಾದ ಹದಿನೆಂಟುಸಹಸ್ರ ಮ್ಲೇಚ್ಛ ರಾಜರುಗಳಿದ್ದರು.

೧ ಅಪ್ರತಿಹತಸ್ಥಾನಾಯಿತಾಃ. ೨ ಸಂವಾಹಾನಾಂ ಸಹಸ್ರಾಣೀತ್ಯಪಿ ಪಾಠಃ. ೩ ವಿಧಾನಪ್ರಕಾರಂ. ೪ ಭಾಜನಾನಾಂ. ೫ ಪಚನೇ. ೬ ಪಾಕಕರೀ. ೭ ಸ್ಥಾಲೀಬಿಲಮರ್ಹಂತೀತಿ ಸ್ಥಾಲೀಬಿಲೀಯಾಸ್ತೇಷಾಂ ಪಚನಾರ್ಹಾಣಾಮಿತ್ಯರ್ಥಃ. ೮ ಕೋಟೀನಾಂ ಲಕ್ಷಂ. ೯ ಕುಲಿಯೈರಿತ್ಯಪಿ ಪಾಠಃ. ೧೦ ಆಸನ್ನಫಲ ವಿಷಯಕ್ಷೇತ್ರಕರ್ಷಣೇ. ೧೧ ರತ್ನಾನಾಂ ಕ್ರಯವಿಕ್ರಯಸ್ಥಾನಾನಿ. ೧೨ ಮ್ಲೇಚ್ಛಾಃ. ೧೩ ನಿವಸಂತಿ ಸ್ಮ. ೧೪ ಸಮಾನೌ ಮರುಧನ್ವಾನೌ. ೧೫ ಕುಕ್ಷಿವಾಸಃ. ೧೬ ರಕ್ಷಿತಂ.

**ಕಾಲಾಖ್ಯಶ್ಚ ಮಹಾಕಾಲೋ ನೈಸರ್ಪಃ ಪಾಂಡುಕಾಹ್ವಯಃ ।**
**ಪದ್ಮಮಾಣವ[೧]ಪಿಂಗಾ[೨]ಬ್ಜಸರ್ವರತ್ನಪದಾದಿಕಾಃ ॥ ೭೩ ॥**

**ನಿಧಯೋ ನವ ತಸ್ಯಾಸ[೩]ನ್ಪ್ರತೀತೈರಿತಿ ನಾಮಭಿಃ ।**
**ಯೈರಯಂ ಗೃಹ[೪]ವಾರ್ತಾಯಾಂ ನಿಶ್ಚಿಂತೋಽಭೂನ್ನಿಧೀಶ್ವರಃ ॥ ೭೪ ॥**

ಆ ಭರತೇಶ್ವರನಿಗೆ ಕಾಲ, ಮಹಾಕಾಲ, ನೈಸರ್ಪ, ಪಾಂಡುಕ, ಪದ್ಮ , ಮಾಣವ, ಪಿಂಗಲ, ಶಂಖ, ಸರ್ವರತ್ನಗಳೆಂಬ ಪ್ರಸಿದ್ಧವಾದ ಹೆಸರುಗಳಿಂದ ಒಂಬತ್ತು ನಿಧಿಗಳಿದ್ದುವು. ಆ ನಿಧಿಗಳಿಂದ ನಿಧೀಶ್ವರನಾದ ಈ ಭರತೇಶ್ವರನು ಮನೆಯ ವಾರ್ತೆಯಲ್ಲಿ ನಿಶ್ಚಿಂತನಾಗಿದ್ದನು.

**ನಿಧಿಃ ಪುಣ್ಯನಿಧೇರಸ್ಯ ಕಾಲಾಖ್ಯಃ ಪ್ರಥಮೋ ಮತಃ ।**
**ಯತೋ ಲೌಕಿಕಶಬ್ದಾದಿವಾರ್ತಾನಾಂ ಪ್ರಭವೋಽನ್ವಹಮ್ ॥ ೭೫ ॥**

ಪುಣ್ಯನಿಧಿಯಾದ ಈ ಭರತೇಶ್ವರನ ಮೊದಲನೆಯ ನಿಧಿಯು ಕಾಲವೆಂದು ಹೇಳಲ್ಪಟ್ಟಿದೆ. ಆ ನಿಧಿಯಿಂದ ಯಾವಾಗಲೂ ಲೋಕಸಂಬಂಧವಾದ ವೀಣಾಧ್ವನಿ ಮೊದಲಾದುವುಗಳ ಉತ್ಪತ್ತಿಯಾಗುತ್ತಿರುವುದು.

**ಇಂದ್ರಿಯಾ[೫]ರ್ಥಾ ಮನೋಜ್ಞಾ ಯೇ ವೀಣಾವಂಶಾನಕಾದಯಃ ।**
**ತಾನ್ಪ್ರಸೂತೇ ಯಥಾಕಾಲಂ ನಿಧಿರೇಷ ವಿಶೇಷತಃ ॥ ೭೬ ॥**

ಈ ಕಾಲನಿಧಿಯು ವಿಶೇಷವಾಗಿ ಕಾಲಕಾಲಕ್ಕೆ ಮನೋಹರವಾದ ವೀಣೆ ಕೊಳಲು ಮೊದಲಾದ ಇಂದ್ರಿಯವಿಷಯಗಳನ್ನುಂಟುಮಾಡುತ್ತದೆ.

**ಅಸಿಮಷ್ಯಾದಿಷಟ್ಕರ್ಮಸಾಧನದ್ರವ್ಯಸಂಪದಃ ।**
**ಯತಃ ಶಶ್ವತ್ಪ್ರಸೂಯಂತೇ ಮಹಾಕಾಲೋ ನಿಧಿಃ ಸ ವೈ ॥ ೭೭ ॥**

ಮಹಾಕಾಲವೆಂಬ ನಿಧಿಯು ಅಸಿ ಮಷಿ ಕೃಷಿ ವಾಣಿಜ್ಯ ವಿದ್ಯಾ ಶಿಲ್ಪಗಳೆಂಬ ಷಟ್ಕರ್ಮಗಳಿಗೆ ಸಾಧಕವಾದ ವಸ್ತುಗಳನ್ನು ಬಾರಿಬಾರಿಗೆ ಒದಗಿಸಿಕೊಡುವುದು.

**ಶಯ್ಯಾಸನಾಲಯಾದೀನಾಂ ನೈಸರ್ಪಾತ್ಪ್ರಭವೋ ನಿಧೇಃ ।**
**ಪಾಂಡುಕಾದ್ಧಾನ್ಯಸಂಭೂತಿಃ ಷಡ್ರಸೋತ್ಪತ್ತಿರಪ್ಯತಃ ॥ ೭೮ ॥**

ನೈಸರ್ಪವೆಂಬ ನಿಧಿಯಿಂದ ಹಾಸಿಗೆ ಮಣೆ(ಆಸನ) ಮನೆ ಮೊದಲಾದ ಪದಾರ್ಥಗಳ ಉತ್ಪತ್ತಿಯಾಗುತ್ತದೆ. ಪಾಂಡುಕವೆಂಬ ನಿಧಿಯಿಂದ ಧಾನ್ಯಗಳ ಉತ್ಪತ್ತಿಯೂ ತಿಕ್ತ ಕಟು ಕಷಾಯ ಆಮ್ಲ ಮಧುರ ಲವಣಗಳೆಂಬ ಷಡ್ರಸಗಳ ಉತ್ಪತ್ತಿಯೂ ಆಗುತ್ತದೆ.

**ಪಟ್ಟಾಂಶುಕದುಕೂಲಾದಿವಸ್ತ್ರಾಣಾಂ ಪ್ರಭವೋ ಯತಃ ।**
**ಸ ಪದ್ಮಾಖ್ಯೋ ನಿಧಿಃ [೬]ಪದ್ಮಗರ್ಭಾ[೭]ವಿರ್ಭಾವತೋದ್ಯುತತ್ ॥ ೭೯ ॥**

ಸಂಪತ್ತಿಯ ಆವಿರ್ಭಾವವುಳ್ಳುದಾದ ಪದ್ಮವೆಂಬ ನಿಧಿಯು ಪಟ್ಟೆ ಮೃದುವಸ್ತ್ರ ಮೊದಲಾದ ವಸ್ತ್ರಗಳನ್ನುಂಟುಮಾಡುವುದಾಗಿ ಸಂಪತ್ತಿಯ ಪ್ರಕಟನೆಯಿಂದ ಪ್ರಕಾಶಿಸುತ್ತಿದ್ದಿತು.

**ದಿವ್ಯಾಭರಣಭೇದಾನಾಮುದ್ಭವಃ ಪಿಂಗಲಾನ್ನಿಧೇಃ ।**
**ಮಾಣವಾನ್ನೀತಿಶಾಸ್ತ್ರಾಣಾಂ ಶಾಸ್ತ್ರಾಣಾಂ ಚ ಸಮುದ್ಭವಃ ॥ ೮೦ ॥**

ಪಿಂಗಲವೆಂಬ ನಿಧಿಯಿಂದ ದಿವ್ಯವಾದ ಆಭರಣಭೇದಗಳ ಉತ್ಪತ್ತಿಯಾಗುವುದು. ಮಾಣವವೆಂಬ ನಿಧಿಯಿಂದ ನೀತಿಶಾಸ್ತ್ರಗಳ ಮತ್ತು ತರ್ಕ ವ್ಯಾಕರಣಾದಿ ಶಾಸ್ತ್ರಗಳ ಉತ್ಪತ್ತಿಯಾಗುತ್ತಿದ್ದಿತು.

**ಶಂಖಾತ್ಪ್ರದಕ್ಷಿಣಾವರ್ತಾ[೮]ತ್ಸೌವರ್ಣೀಂ ಸೃಷ್ಟಿ[೯]ಮುತ್ಸೃಜನ್ ।**
**ಸ ಶಂಖನಿಧಿ[೧೦]ರುತ್ಪ್ರೇಂಖದ್ರುಕ್ಮರೋಚಿರ್ಜಿತಾರ್ಕರುಕ್ ॥ ೮೧ ॥**

ಪ್ರದಕ್ಷಿಣೆಯಾದ ಸುಳಿಯಿರುವ ಶಂಖದಿಂದ ಸುವರ್ಣಮಯವಾದ ಸೃಷ್ಟಿಯನ್ನು ಮಾಡುವ ಆ ಶಂಖನಿಧಿಯು ಮೇಲಕ್ಕೆ ಪಸರಿಸುತ್ತಿರುವ ಬಂಗಾರದ ಕಾಂತಿಯುಳ್ಳುದಾಗಿಯೂ ಸೂರ್ಯಕಾಂತಿಯನ್ನು ಜಯಿಸಿದುದಾಗಿಯೂ ಇದ್ದಿತು.

**ಸರ್ವರತ್ನಾನ್ಮಹಾನೀಲನೀಲಸ್ಥೂಲೋಪಲಾದಯಃ ।**
**[೧]ಪ್ರಾದುಷ್ಯಂತಿ ಮಣಿಚ್ಛಾಯಾರಚಿತೇಂದ್ರಾಯುಧತ್ವಿಷಃ ॥ ೮೨ ॥**

ಇಂದ್ರನೀಲರತ್ನ ನೀಲರತ್ನ ಮೊದಲಾದುವು ರತ್ನಗಳ ಕಾಂತಿಯಿಂದ ಮಾಡಲ್ಪಟ್ಟ ಇಂದ್ರಧನುಸ್ಸಿನ ಕಾಂತಿಯುಳ್ಳುದಾದ ಸರ್ವರತ್ನವೆಂಬ ನಿಧಿಯಿಂದ ಪ್ರಕಟವಾಗುತ್ತವೆ.

**ರತ್ನಾನಿ ದ್ವಿತಯಾನ್ಯಸ್ಯ ಜೀವಾಜೀವವಿಭಾಗತಃ ।**
**[೨]ಕ್ಷ್ಮಾತ್ರಾಣೈಶ್ವರ್ಯಸಂಭೋಗಸಾಧನಾನಿ ಚತುರ್ದಶ ॥ ೮೩ ॥**

**ಚಕ್ರಾತಪತ್ರದಂಡಾಸಿಮಣಯಶ್ಚರ್ಮ ಕಾಕಿಣೀ ।**
**[೩]ಚಮೂಗೃಹಪತೀಭಾಶ್ವಯೋಷಿತ್ತಕ್ಷಪುರೋಧಸಃ ॥ ೮೪ ॥**

ಈ ಭರತೇಶ್ವರನಿಗೆ ಜೀವ ಅಜೀವ ಭೇದದಿಂದ ಎರಡು ಪ್ರಕಾರಗಳೂ ಭೂಮಿಪಾಲನ ಐಶ್ವರ್ಯ ಸಂಭೋಗಗಳಿಗೆ ಸಾಧನಗಳಾದ ಚಕ್ರ ಛತ್ರ ದಂಡ ಅಸಿ(ಖಡ್ಗ) ಮಣಿ ಚರ್ಮ ಕಾಕಿಣಿ ಸೇನಾಪತಿ ಗೃಹಪತಿ ಗಜ ಅಶ್ವ ಸ್ತ್ರೀ ತಕ್ಷ(ಬಡಿಗಿ-ಶಿಲ್ಪಿ) ಪುರೋಹಿತರೆಂದು ಹದಿನಾಲ್ಕು ಪ್ರಕಾರಗಳೂ ಆದ ರತ್ನಗಳಿರುತ್ತವೆ. ಭರತೇಶ್ವರನಿಗೆ ಚಕ್ರವೇ ಮೊದಲಾದ ಏಳು ಅಜೀವರತ್ನಗಳೂ ಸೇನಾಪತಿಯೇ ಮೊದಲಾದ ಏಳು ಜೀವರತ್ನಗಳೂ ಇರುತ್ತವೆಂದು ಭಾವವು.

**ಚಕ್ರದಂಡಾಸಿರತ್ನಾನಿ ಸಚ್ಛತ್ರಾಣ್ಯಾಯುಧಾಲಯಾತ್ ।**
**ಜಾತಾನಿ ಮಣಿಚರ್ಮಭ್ಯಾಂ ಕಾಕಿಣೀ [೪]ಶ್ರೀಗೃಹೋದರೇ ॥ ೮೫ ॥**

ಛತ್ರರತ್ನಸಹಿತಗಳಾದ ಚಕ್ರ ದಂಡ ಅಸಿರತ್ನಗಳು ಆಯುಧಶಾಲೆಯಿಂದ ಉದ್ಭವಿಸಿದುವು. ಕಾಕಿಣೀರತ್ನವು ಮಣಿರತ್ನ ಚರ್ಮರತ್ನಗಳೊಡನೆ ಭಾಂಡಾಗಾರದಲ್ಲಿ ಉದ್ಭವಿಸಿದುದು.

**ಸ್ತ್ರೀರತ್ನಗಜವಾಜೀನಾಂ ಪ್ರಭವೋ ರೂಪ್ಯಶೈಲತಃ ।**
**ರತ್ನಾನ್ಯನ್ಯಾನಿ ಸಾಕೇತಾಜ್ಜಜ್ಞಿರೇ ನಿಧಿಭಿಃ ಸಮಮ್ ॥ ೮೬ ॥**

ಸ್ತ್ರೀರತ್ನ ಗಜರತ್ನ ಅಶ್ವರತ್ನಗಳ ಉತ್ಪತ್ತಿಯು ಬೆಳ್ಳಿಯ ಬೆಟ್ಟ-ವಿಜಯಾರ್ಧ ಪರ್ವತದಿಂದಾದುದು. ಇತರ ರತ್ನಗಳೂ ನಿಧಿಗಳೂ ಅಯೋಧ್ಯಾನಗರದಲ್ಲಿ ಉದ್ಭವಿಸಿದುವು.

**ನಿಧೀನಾಂ ಸಹರತ್ನಾನಾಂ ಗುಣಾನ್ ಕೋ ನಾಮ ವರ್ಣಯೇತ್ ।**
**[೫]ಯೈ[೬]ರಾವರ್ಜಿತ[೭]ಮೂರ್ಜಸ್ವಿ ಹೃದಯಂ ಚಕ್ರವರ್ತಿನಃ ॥ ೮೭ ॥**

ಯಾವ ನಿಧಿಗಳಿಂದ ಚಕ್ರವರ್ತಿಯ ಉದಾತ್ತವಾದ ಹೃದಯವು ವಶಮಾಡಲ್ಪಟ್ಟಿತೋ ಅಂತಹ ರತ್ನಸಹಿತಗಳಾದ ನಿಧಿಗಳ ಗುಣಗಳನ್ನು ಯಾವನು ತಾನೇ ವರ್ಣಿಸುವನು ? ನಿಧಿಗಳ ಗುಣಗಳು ವರ್ಣನಾತೀತಗಳಾಗಿದ್ದುವೆಂದು ಭಾವವು.

**ಭೇಜೇ ಷಡೃತುಜಾನಿಷ್ಟಾನ್ಭೋಗಾನ್ಪಂಚೇಂದ್ರಿಯೋಚಿತಾನ್ ।**
**ಸ್ತ್ರೀರತ್ನ[೮]ಸಾರಥಿಸ್ತದ್ಧಿ [೯]ನಿಧಾನಂ ಸುಖಸಂಪದಾಮ್ ॥ ೮೮ ॥**

ಸ್ತ್ರೀರತ್ನವೇ ಸಹಾಯಕವಾಗಿರುವ ಭರತೇಶ್ವರನು ಪಂಚೇದ್ರಿಯಗಳಿಗೆ ಉಚಿತಗಳೂ ಷಡೃತುಗಳಲ್ಲಿ ಉಂಟಾಗುವುವೂ ಆದ ಇಷ್ಟಭೋಗಗಳನ್ನು ಸೇವಿಸಿದನು. ಆ ಸ್ತ್ರೀರತ್ನವು ಸುಖಸಂಪತ್ತಿಗಳಿಗೆ ಮೂಲಕಾರಣವಲ್ಲವೇ ?

೧ ಪಿಂಗಲ. ೨ ಶಂಖ. ೩ ಪ್ರಸಿದ್ಧೈಃ. ೪ ವ್ಯಾಪಾರೇ. ೫ ವಿಷಯಾಃ. ೬ ಆವಿರ್ಭಾವಿತಲಕ್ಷ್ಮೀಕಃ. ೭ ಲಕ್ಷ್ಮೀಪ್ರಕಟನಾತ್. ೮ ಕಾಂಚನಮಯೀಂ. ೯ ಜನಯನ್. ೧೦ ಉಚ್ಚಲತ್.

೧ ಪ್ರಾದುಷ್ಷಂತೀತ್ಯಪಿ ಪಾಠಃ. ೨ ಪೃಥ್ವೀರಕ್ಷಾ. ೩ ಸೇನಾಪತಿ. ೪ ಭಾಂಡಾಗಾರೇ. ೫ ನಿಧಿಭಿಃ. ೬ ವಶೀಕೃತಂ. ೭ ಉದಾತ್ತಂ. ೮ ಸಹಾಯಃ. ೯ ಸ್ಥಾನಂ.

**ಕಾಂತಾರತ್ನಮಭೂದಸ್ಯ ಸುಭದ್ರೇ[೧]ತ್ಯನುಪದ್ರುತಮ್ ।**
**[೨]ಭದ್ರಿಕಾ ಸಾ [೩]ಪ್ರಕೃತ್ಯೈವ ಜಾತ್ಯಾ ವಿದ್ಯಾಧರಾನ್ವಯಾ ॥ ೮೯ ॥**

ಈ ಭರತೇಶ್ವರನಿಗೆ ರೋಗಾದಿ ಪೀಡೆಗಳಿಲ್ಲದ ಸುಭದ್ರೆಯೆಂಬ ಸ್ತ್ರೀ ರತ್ನವಿದ್ದಿತು. ಆ ಸುಭದ್ರೆಯು ಸ್ವಭಾವದಿಂದಲೇ ಮಂಗಲಮೂರ್ತಿಯೂ ಜಾತಿಯಿಂದ ವಿದ್ಯಾಧರವಂಶೀಯಳೂ ಆಗಿದ್ದಳು.

**ಶಿರೀಷಸುಕುಮಾರಾಂಗೀ ಚಂಪಕಚ್ಛದಸಚ್ಛವಿಃ ।**
**ವಕುಲಾಮೋದನಿಃಶ್ವಾಸಾ ಪಾಟಲಾ[೪]ಪಾಟಲಾಧರಾ ॥ ೯೦ ॥**

**ಪ್ರಬುದ್ಧಪದ್ಮಸೌಮ್ಯಾಸ್ಯಾ ನೀಲೋತ್ಪಲದಲೇಕ್ಷಣಾ ।**
**ಸುಭ್ರೂರಲಿಕುಲಾನೀಲಮೃದುಕುಂಚಿತಮೂರ್ಧಜಾ ॥ ೯೧ ॥**

**ತನೂದರೀ ವರಾರೋಹಾ [೫]ವಾಮೋರೂರ್ನಿಬಿಡಸ್ತನೀ ।**
**ಮೃದುಬಾಹೂಲತಾ ಸಾಭೂನ್ಮದನಾಗ್ನೇರಿವಾ[೬]ರಣಿಃ ॥ ೯೨ ॥**

ಬಾಗೆಯ ಹೂವಿನಂತೆ ಕೋಮಲವಾದ ಶರೀರವುಳ್ಳವಳೂ ಸಂಪಿಗೆಯ ಎಸಳಿನಂತೆ ಕಾಂತಿಯುಳ್ಳವಳೂ ಬಕುಳದ ಹೂವಿನಂತೆ ಪರಿಮಳವುಳ್ಳ ಉಸಿರುಳ್ಳವಳೂ ಪಾದರಿಯ ಹೂವಿನಂತೆ ಸ್ವಲ್ಪವಾಗಿ ಕೆಂಪಾದ ಕೆಳದುಟಿಯುಳ್ಳವಳೂ ಅರಳಿದ ತಾವರೆಯಂತೆ ಸೌಮ್ಯವಾದ ಮುಖವುಳ್ಳವಳೂ ಕನ್ನೈದಿಲೆಯ ಎಸಳಿನಂತೆ ಕಣ್ಣುಗಳುಳ್ಳವಳೂ ಶ್ರೇಷ್ಠವಾದ ಹುಬ್ಬುಗಳುಳ್ಳವಳೂ ದುಂಬಿಗಳ ಸಮೂಹದಂತೆ ಕಪ್ಪಾದುದೂ ಕೋಮಲವೂ ಸುರುಳಿಸುತ್ತಿರುವುದೂ ಆದ ತಲೆಗೂದಲುಗಳುಳ್ಳವಳೂ ಕೃಶವಾದ ಹೊಟ್ಟೆಯುಳ್ಳವಳೂ ಉತ್ತಮವಾದ ನಿತಂಬಪ್ರದೇಶವುಳ್ಳವಳೂ ಮನೋಹರವಾದ ತೊಡೆಗಳುಳ್ಳವಳೂ ದಟ್ಟವಾದ ಕುಚಗಳುಳ್ಳವಳೂ ಕೋಮಲವಾದ ಲತೆಯಂತಿರುವ ತೋಳುಗಳುಳ್ಳವಳೂ ಆದ ಆ ಸುಭದ್ರಾದೇವಿಯು ಕಾಮನೆಂಬ ಬೆಂಕಿಗೆ ಅಗ್ನಿ ಮಥನಕಾಷ್ಠದಂತಿದ್ದಳು.

**ತತ್ಕ್ರಮೌ ನೂಪುರಾಮಂಜುಗುಂಜಿತೈರ್ಮುಖರೀಕೃತೌ ।**
**ಮದನದ್ವಿರದಸ್ಯೇವ ತೇನತುರ್ಜಯಡಿಂಡಿಮಮ್ ॥ ೯೩ ॥**

ಪಾದಕಡಗಗಳ ಮನೋಹರವಾದ ಧ್ವನಿಗಳಿಂದ ಶಬ್ದಾಯಮಾನಗಳಾದ ಆ ಸುಭದ್ರೆಯ ಪಾದಗಳು ಕಾಮನೆಂಬ ಆನೆಗೆ ಜಯಭೇರಿಯನ್ನು ರಚಿಸುತ್ತವೆಯೋ ಎಂಬಂತಿದ್ದುವು. ಪಾದಗಳು ಕಾಮನ ಜಯಭೇರಿಗಳಂತಿದ್ದುವೆಂದು ಭಾವವು.

**ನಿಃಶ್ರೇಣೀಕೃತ್ಯ [೭]ತಜ್ಜಂಘೇ ಸದೂರುದ್ವಾರಬಂಧನಾಮ್ ।**
**ವಾಸಗೇಹಾಸ್ಥಯಾನಂಗಸ್ತ[೮]ಚ್ಛ್ರೋಣೀಂ ನೂನಮಾಸದತ್ ॥ ೯೪ ॥**

ಕಾಮನು ಆ ಸುಭದ್ರೆಯ ಕಣಕಾಲುಗಳನ್ನು ನಿಚ್ಚಣಿಗೆಗಳನ್ನಾಗಿ ಮಾಡಿ ಶ್ರೇಷ್ಠವಾದ ತೊಡೆಗಳೆಂಬ ಬಾಗಿಲುಗಳುಳ್ಳ ಆಕೆಯ ಕಟೀಪ್ರದೇಶವನ್ನು ವಾಸಗೃಹವೆಂಬ ಆಸಕ್ತಿಯಿಂದ ಹೊಂದಿದನು. ನಿಶ್ಚಯ.

**ನಿಃಸೃತ್ಯ ನಾಭಿವಲ್ಮೀಕಾತ್ಕಾಮಕೃಷ್ಣಭುಜಂಗಮಃ ।**
**ರೋಮಾವಲೀಛಲೇನಾಸ್ಯಾ [೯]ಯಯೌ ಕುಚಕರಂಡಕೌ ॥ ೯೫ ॥**

ಕಾಮನೆಂಬ ಕೃಷ್ಣಸರ್ಪವು ನಾಭಿಯೆಂಬ ಹುತ್ತದಿಂದ ಹೊರಟು ರೋಮಗಳ ಸಾಲೆಂಬ ನೆವದಿಂದ ಈ ಸುಭದ್ರೆಯ ಕುಚಗಳೆಂಬ ಕರಡಿಗೆಗಳನ್ನು ಹೊಂದಿತು.

**ನಿರ್ಮೋಕಮಿವ ಕಾಮಾಹೇರ್ದಧಾನೋ[೧೦]ದ್ಧಂ ಸ್ತನಾಂಶುಕಮ್ ।**
**ಭುಜಗೀಮಿವ ತ[೧೧]ದ್ಧೃತ್ಯೈ ಸ್ಯೈ[೧೨]ಕಾಮೇಕಾವಲೀಮಧಾತ್ ॥ ೯೬ ॥**

೧ ರೋಗಾದಿಭಿರಪೀಡಿತಂ. ೨ ಮಂಗಲಮೂರ್ತಿಃ. ೩ ಸ್ವಭಾವೇನ. ೪ ಈಷದರುಣ. ೫ ಮನೋಹರ. ೬ ಅಗ್ನಿಮಥನಕಾಷ್ಠಂ. ೭ ಸುಭದ್ರಾಚರಣೌ. ೮ ಕಟೀಂ. ೯ ವಿಶತಿ ಸ್ಮ. ೧೦ ಪ್ರಶಸ್ತಂ. ೧೧ ಸಂತೋಷಾಯ. ೧೨ ಮುಖ್ಯಾಂ.

ಕಾಮನೆಂಬ ಸರ್ಪದ ಪೊರೆಯಂತಿರುವುದೂ ಪ್ರಶಸ್ತವೂ ಆದ ಕುಚವಸ್ತ್ರವನ್ನು ಧರಿಸಿದವಳಾದ ಆ ಸುಭದ್ರೆಯು ಆ ಸರ್ಪದ ಸಂತೋಷಕ್ಕೋಸ್ಕರ ಸ್ತ್ರೀಸರ್ಪವನ್ನೋಪಾದಿಯಲ್ಲಿ ಮುಖ್ಯವಾದ ಒಂದೆಳೆಯ ಹಾರವನ್ನು ಧರಿಸಿದಳು.

**ಬಭ್ರೇ ಹಾರಲತಾಂ ಕಂಠಲಗ್ನಾಂ ಸಾ ನಾಭಿಲಂಬಿನೀಮ್ ।**
**[೧]ಮಂತ್ರರಕ್ಷಾಮಿವಾನಂಗಗ್ರಥಿತಾಂ [೨]ಕಾಮದೀಪಿನೀಮ್ ॥ ೯೭ ॥**

ಆ ಸುಭದ್ರೆಯು ನಾಭಿಯವರೆಗೆ ಜೋಲುತ್ತಿರುವುದೂ ಕಂಠದಲ್ಲಿ ಸಂಬಂಧಿಸಿರುವುದೂ ಆದ ಲತೆಯಂತಿರುವ ಹಾರವನ್ನು, ಕಾಮನಿಂದ ಕಟ್ಟಲ್ಪಟ್ಟುದೂ ಕಾಮೋದ್ದೀಪಕವೂ ಆದ ಮಣಿಮಂತ್ರರೂಪವಾದ ರಕ್ಷೆಯನ್ನೋಪಾದಿಯಲ್ಲಿ, ಧರಿಸಿದಳು.

**ಹಾರಾಕ್ರಾಂತಸ್ತನಾಭೋಗಾ ಸಾ ಸ್ಮ ಧತ್ತೇ ಪರಾಂ ಶ್ರಿಯಮ್ ।**
**[೩]ಸೀತೇವ ಯಮಕಾದ್ರಿಸ್ಪೃಕ್ಪ್ರವಾಹಾ ಸರಿದುತ್ತಮಾ ॥ ೯೮ ॥**

ಹಾರದಿಂದ ವ್ಯಾಪ್ತವಾದ ಕುಚಗಳ ವಿಸ್ತಾರವಾದ ಮಧ್ಯಪ್ರದೇಶವುಳ್ಳ ಆ ಸುಭದ್ರಾದೇವಿಯು, ಎರಡು ಬೆಟ್ಟಗಳನ್ನು ಸ್ಪರ್ಶಿಸಿರುವ ಪ್ರವಾಹವುಳ್ಳುದೂ ನದಿಗಳಲ್ಲಿ ಶ್ರೇಷ್ಠವೂ ಆದ ಸೀತಾನದಿಯಂತೆ, ಅಧಿಕವಾದ ಶೋಭೆಯನ್ನು ಧರಿಸಿದಳು.

**ಬಾಹೂ ತಸ್ಯಾ ಜಿತಾನಂಗಪಾಶೌ ಲಕ್ಷ್ಮೀ[೪]ಮುದೂಹತುಃ ।**
**ಕಾಮಕಲ್ಪದ್ರುಮಸ್ಯೇವ ಪ್ರಾರೋಹೌ ದೀಪ್ರಭೂಷಣೌ ॥ ೯೯ ॥**

ಆ ಸುಭದ್ರಾದೇವಿಯ ಕಾಮಪಾಶವನ್ನು ಜಯಿಸಿದ ಭುಜಗಳು, ಕಾಮನೆಂಬ ಕಲ್ಪವೃಕ್ಷದ ಪ್ರಕಾಶಮಾನವಾದ ಆಭರಣಗಳುಳ್ಳ ಬಿಳಲುಗಳಂತೆ, ಶೋಭೆಯನ್ನು ಧರಿಸಿದುವು.

**ರೇಜೇ ಕರತಲಂ ತಸ್ಯಾಃ ಸೂಕ್ಷ್ಮರೇಖಾಭಿರಾತತಮ್ ।**
**ಜಯರೇಖಾ ಇವಾಬಿಭ್ರದನ್ಯಸ್ತ್ರೀನಿರ್ಜಯಾರ್ಜಿತಾ ॥ ೧೦೦ ॥**

ಆ ಸುಭದ್ರಾದೇವಿಯ ಸೂಕ್ಷ್ಮರೇಖೆಗಳಿಂದ ವ್ಯಾಪ್ತವಾದ ಅಂಗೈಯು, ಬೇರೆ ಸ್ತ್ರೀಯರನ್ನು ಜಯಿಸಿದುದರಿಂದ ಸಂಪಾದಿಸಲ್ಪಟ್ಟ ಜಯರೇಖೆಗಳನ್ನು ಧರಿಸಿದೆಯೋ ಎಂಬಂತೆ ಪ್ರಕಾಶಿಸುತ್ತಿದ್ದಿತು.

**ಮುಖಮುದ್ಭ್ರೂತನೂದರ್ಯಾಸ್ತರಲಾಪಾಂಗಮಾಬಭೌ ।**
**ಸ ಶರಂ [೫]ಸಮಹೇಷ್ವಾಸಂ [೬]ಜಯಾಗಾರಮಿವಾ[೭]ತನೋಃ ॥ ೧೦೧ ॥**

ಕೃಶವಾದ ಹೊಟ್ಟೆಯುಳ್ಳವಳಾದ ಆ ಸುಭದ್ರಾದೇವಿಯ ಚಂಚಲವಾದ ಕಡೆಗಣ್ಣುಳ್ಳುದೂ ಮೇಲಕ್ಕೆದ್ದಿರುವ ಹುಬ್ಬುಗಳುಳ್ಳುದೂ ಆದ ಮುಖವು, ಮನ್ಮಥನ ಬಾಣಸಹಿತವೂ ಮಹಾಧನುಸ್ಸಹಿತವೂ ಆದ ಶಸ್ತ್ರಶಾಲೆಯೋ ಎಂಬಂತೆ, ಪ್ರಕಾಶಿಸುತ್ತಿದ್ದಿತು.

**ವಕ್ತ್ರಮಸ್ಯಾಃ ಶಶಾಂಕಸ್ಯ ಕಾಂತಿಂ ಜಿತ್ವಾ ಸ್ವಶೋಭಯಾ ।**
**ದಧೇ [೮]ನು ಭ್ರೂಪತಾಕಾಂಕಂ ಕರ್ಣಾಭ್ಯಾಂ [೯]ಜಯಪತ್ರಕಮ್॥ ೧೦೨ ॥**

ಈ ಸುಭದ್ರಾದೇವಿಯ ಪತಾಕೆಯಂತಿರುವ ಹುಬ್ಬುಗಳ ಗುರುತುಳ್ಳ ಮುಖವು ತನ್ನ ಶೋಭೆಯಿಂದ ಚಂದ್ರನ ಕಾಂತಿಯನ್ನು ಜಯಿಸಿ ಕಿವಿಗಳಿಂದ ಜಯಪ್ರದವನ್ನು ಧರಿಸಿತೋ ಎಂಬಂತಿದ್ದಿತು. ಕಿವಿಗಳಲ್ಲಿ ಓಲೆಗಳನ್ನು ಧರಿಸಿದ್ದಳೆಂದು ಭಾವವು.

**[೧೦]ಹೇಮಪತ್ರಾಂಕಿತೌ ತಸ್ಯಾಃ ಕರ್ಣೌ [೧೧]ಲೀಲಾಮವಾಪತುಃ ।**
**ಸ್ವರ್ವಧೂನಿರ್ಜಯಾಯೇವ ಕೃತಪತ್ರಾವಲಂಬನೌ ॥ ೧೦೩ ॥**

೧ ವಿದ್ಯಾಮಣ್ಯಾದಿರೂಪಾಂ. ೨ ಕಾಮೋದ್ದೀಪಿನೀಂ. ೩ ಸೀತಾನದೀ. ೪ ದಧಾತೇ ಸ್ಮ. ೫ ಮಹಾಚಾಪಸಹಿತಂ. ೬ ಶಸ್ತ್ರಶಾಲಾ. ೭ ಕಾಮಸ್ಯ. ೮ ಇವ. ೯ ತಾಟಂಕಯುಗಲಂ. ೧೦ ಕರ್ಣಪತ್ರಾಭ್ಯಾಂ. ೧೧ ಶೋಭಾಂ.

ಆ ಸುಭದ್ರಾದೇವಿಯ ಓಲೆಗಳಿಂದ ಗುರುತಾದ ಕಿವಿಗಳು, ಸ್ವರ್ಗಸ್ತ್ರೀಯರ ಜಯಕ್ಕೋಸ್ಕರ ಪತ್ರಗಳನ್ನು ಹಿಡಿದಿರುತ್ತವೋ ಎಂಬಂತೆ, ಶೋಭೆಯನ್ನು ಹೊಂದಿದುವು.

**ಕಪೋಲಾವುಜ್ಜ್ವಲೌ ತಸ್ಯಾ ದಧತುರ್ದರ್ಪಣಶ್ರಿಯಮ್ ।**
**ದ್ರಷ್ಟುಕಾಮಸ್ಯ ಕಾಮಸ್ಯ [೧]ಸ್ವಾ [೨]ದಶಾ ದಶಧಾ ಸ್ಥಿತಾಃ ॥ ೧೦೪ ॥**

ಸುಭದ್ರಾದೇವಿಯ ಪ್ರಕಾಶಮಾನವಾದ ಕೆನ್ನೆಗಳು ಹತ್ತುಪ್ರಕಾರವಾಗಿರುವ ತನ್ನ ಅವಸ್ಥೆಗಳನ್ನು ನೋಡಲಿಚ್ಛಿಸುವ ಮನ್ಮಥನಿಗೆ ಕನ್ನಡಿಯ ಶೋಭೆಯನ್ನು ಧರಿಸಿದುವು. ಕೆನ್ನೆಗಳು ಕನ್ನಡಿಯಂತಿದ್ದುವೆಂದು ಭಾವವು.

**[೩]ಮಧ್ಯೇ ಚಕ್ಷುರಧೀರಾಕ್ಷ್ಯಾ ನಾಸಿಕಾಭಾ[೪]ನ್ಮುಖೋನ್ಮುಖೀ ।**
**ತದಾಮೋದಮಿವಾಘ್ರಾತುಂ ಕೃತಯತ್ನಾ ಕುತೂಹಲಾತ್ ॥ ೧೦೫ ॥**

ಚಂಚಲವಾದ ಕಣ್ಣುಗಳುಳ್ಳ ಸುಭದ್ರಾದೇವಿಯ ಕಣ್ಣುಗಳ ಮಧ್ಯದಲ್ಲಿ ಮುಖಕ್ಕೆ ಇದಿರಾಗಿರುವ ಮೂಗು ಆ ಮುಖದ ಪರಿಮಳವನ್ನು ಕುತೂಹಲದಿಂದ ಮೂಸುವುದಕ್ಕಾಗಿ ಪ್ರಯತ್ನಮಾಡಿತೋ ಎಂಬಂತೆ, ಪ್ರಕಾಶಿಸಿತು.

**ಕೃತ್ವಾ [೫]ಶ್ರೋತೃಪದೇ ಕರ್ಣೌ ತನ್ನೇತ್ರೇ ವಿಭ್ರಮೈರ್ಮಿಥಃ ।**
**ಕೃತಸ್ಪರ್ಧೇ ಇವಾಭಾತಾಂ ಪುಷ್ಪಬಾಣೇ ಸಭಾಪತೌ ॥ ೧೦೬ ॥**

ಮನ್ಮಥನು ಸಭಾಪತಿಯಾಗಿರುತ್ತಿರಲು ಆ ಸುಭದ್ರಾದೇವಿಯ ಕಣ್ಣುಗಳು ಕಿವಿಗಳನ್ನು ಶ್ರೋತೃಜನರ ಸ್ಥಾನದಲ್ಲಿರಿಸಿ ತಾವು ವಿನೋದಚೇಷ್ಟೆಗಳಿಂದ ಪರಸ್ಪರವಾಗಿ ಹೋರಾಟವನ್ನು ಮಾಡಿದುವೋ ಎಂಬಂತೆ ಪ್ರಕಾಶಿಸಿದುವು.

**ಅಭೂತ್ಕಾಂತಿಶ್ಚಕೋರಾಕ್ಷ್ಯಾ ಲಲಾಟೇ ಲುಲಿತಾಲಕೇ ।**
**ಹೈಮಪಟ್ಟಾಂತಸಂಲಗ್ನ[೬]ನೀಲೋಪಲವಿಡಂಬಿನೀ ॥ ೧೦೭ ॥**

ಚಕೋರಪಕ್ಷಿಯಂತೆ ಕಣ್ಣುಗಳುಳ್ಳ ಸುಭದ್ರಾದೇವಿಯ ಚಲಿಸುತ್ತಿರುವ ಕುರುಳು ಕೂದಲುಗಳುಳ್ಳ ಹಣೆಯಲ್ಲಿ ಬಂಗಾರದ ಪಟ್ಟದ ಕೊನೆಯಲ್ಲಿ ಸಂಬಂಧಿಸಿರುವ ನೀಲರತ್ನವನ್ನು ಅನುಕರಿಸುತ್ತಿರುವ ಕಾಂತಿಯು ಇದ್ದಿತು.

**ತಸ್ಯಾ ವಿನೀಲ[೭]ಮಾಸ್ರಸ್ತಕಬರೀಬಂಧಬಂಧುರಮ್ ।**
**ಕೇಶಪಾಶಮನಂಗಸ್ಯ ಮನ್ಯೇ ಪಾಶಂ ಪ್ರಸಾರಿತಮ್ ॥ ೧೦೮ ॥**

ಆ ಸುಭದ್ರಾದೇವಿಯ ಕಪ್ಪಾದುದೂ ಜಾರಿದ ಕೇಶಬಂಧನದಿಂದ ಮನೋಹರವೂ ಆದ ಕೂದಲುಗಳ ರಾಶಿಯನ್ನು ಕಾಮನ ಹರಡಿರುವ ಪಾಶವನ್ನಾಗಿ ತಿಳಿಯುತ್ತೇನೆ. ಕೇಶಪಾಶವು ಕಾಮಪಾಶದಂತಿದ್ದಿತೆಂದು ಭಾವವು.

**ಇತ್ಯಸ್ಯಾ ರೂಪಮುದ್ಭೂತಸೌಷ್ಠವಂ ತ್ರಿಜಗಜ್ಜಯೀ ।**
**ಮತ್ವಾನಂಗಸ್ತದಂಗೇಷು [೮]ಸನ್ನಿಧಾನಂ ವ್ಯಧಾದ್ಧ್ರುವಮ್ ॥ ೧೦೯ ॥**

ಕಾಮನು ಈ ಪ್ರಕಾರವಾಗಿ ಈ ಸುಭದ್ರಾದೇವಿಯ ಸೌಷ್ಠವಉಂಟಾಗಿರುವ ರೂಪವನ್ನು ತ್ರಿಜಗತ್ತನ್ನು ಜಯಿಸತಕ್ಕುದನ್ನಾಗಿ ತಿಳಿದು ಆಕೆಯ ಅಂಗಗಳಲ್ಲಿ ಆವಾಸವನ್ನು ಮಾಡಿದನು. ನಿಶ್ಚಯ.

**ತದ್ರೂಪಾಲೋಕನೋಚ್ಚಕ್ಷುಸ್ತದ್ಗಾತ್ರಸ್ಪರ್ಶನೋತ್ಸುಕಃ ।**
**ತನ್ಮುಖಾಮೋದಮಾಜಿಘ್ರನ್ [೯]ರಸಯಂಶ್ಚಾಸಕೃನ್ಮುಖಮ್ ॥ ೧೧೦ ॥**

**ತ[೧೦]ದ್ಗೇಯಕಲನಿಕ್ವಾಣಶ್ರುತಿಸಂಸಕ್ತಕರ್ಣಕಃ ।**
**ತದ್ಗಾತ್ರವಿಪುಲಾರಾಮೇ ಸ ರೇಮೇ [೧೧]ಸುಖನಿರ್ವೃತಃ ॥ ೧೧೧ ॥**

ಆ ಸುಭದ್ರಾದೇವಿಯ ರೂಪವನ್ನು ನೋಡುವುದಕ್ಕಾಗಿ ಕಣ್ಣುಗಳನ್ನೆತ್ತಿದವನೂ ಆಕೆಯ ಶರೀರಸ್ಪರ್ಶನದಲ್ಲಿ ಕುತೂಹಲವುಳ್ಳವನೂ ಆಕೆಯ ಮುಖದ ಪರಿಮಳವನ್ನು ಮೂಸುವವನೂ ಮುಖವನ್ನು ಬಾರಿ ಬಾರಿಗೆ ಚುಂಬಿಸುವವನೂ ಆ ಸುಭದ್ರಾದೇವಿಯ ಗಾನದ ಮಧುರಧ್ವನಿಯನ್ನು ಶ್ರವಣಮಾಡುವುದರಲ್ಲಿ ಆಸಕ್ತವಾದ ಕಿವಿಗಳುಳ್ಳವನೂ ಸುಖದಿಂದ ತೃಪ್ತಿಯನ್ನು ಹೊಂದಿದವನೂ ಆದ ಕಾಮನು ಆ ಸುಭದ್ರಾದೇವಿಯ ಶರೀರವೆಂಬ ವಿಸ್ತಾರವಾದ ಉದ್ಯಾನದಲ್ಲಿ ಕ್ರೀಡಿಸಿದನು.

**ಪಂಚ ಬಾಣಾನನಂಗಸ್ಯ ವದಂತ್ಯೇ[೧]ತಾ[೨]ನಕುಂಠಿತಾನ್ ।**
**[೩]ಪುಷ್ಪೇಷು ಸಂಕಥಾ ಲೋಕೇ ಪ್ರಸಿದ್ಧ್ಯೈವ ಗತಾ ಪ್ರಥಾಮ್ ॥**

ಪರಿಪೂರ್ಣವಾದ ಈ ರೂಪಾದಿಗಳನ್ನು ಮನ್ಮಥನ ಪಂಚಬಾಣಗಳನ್ನಾಗಿ ಹೇಳುತ್ತಾರೆ. ಲೋಕದಲ್ಲಿ ಪುಷ್ಪಬಾಣಗಳ ಮಾತು ಪ್ರಸಿದ್ಧಿಯಿಂದಲೇ ರೂಢಿಯನ್ನು ಹೊಂದಿದೆ. ಪುಷ್ಪಬಾಣಗಳೆಂಬುವು ಕೇವಲ ರೂಢಿಯೆಂದೂ ವಸ್ತುತಃ ಈ ರೂಪಾದಿಗಳೇ ಕಾಮಬಾಣಗಳೆಂದೂ ಭಾವವು.

**ಧನುರ್ಲತಾಂ ಮನೋಜಸ್ಯ ಪ್ರಾಹುಃ ಪುಷ್ಪಮಯೀಂ ಜಡಾಃ ।**
**ಸುಕುಮಾರತರಂ [೪]ಸ್ತ್ರೈಣಂ ವಪುರೇವಾತನೋರ್ಧನುಃ ॥ ೧೧೩ ॥**

ಮೂಢರು ಮನ್ಮಥನಿಗೆ ಪುಷ್ಪಮಯವಾದ ಧನುಸ್ಸೆಂಬ ಲತೆಯನ್ನು ಹೇಳುತ್ತಾರೆ. ಕಾಮನಿಗೆ ಅತ್ಯಂತ ಕೋಮಲವೂ ಸ್ತ್ರೀಸಂಬಂಧಿಯೂ ಆದ ಶರೀರವೇ ಧನುಸ್ಸಾಗಿರುತ್ತದೆ.

**ಪಂಚ ಬಾಣಾನನಂಗಸ್ಯ [೫]ನಿಯಚ್ಛಂತಿ ಕುತೋ ಜಡಾಃ ।**
**ಯದೇವ ಕಾಮಿನಾಂ ಹಾರಿ ತದಸ್ತ್ರಂ ಕಾಮದೀಪನಮ್ ॥ ೧೧೪ ॥**

ಮೂರ್ಖರು ಕಾಮನಿಗೆ ಐದು ಬಾಣಗಳೆಂದು ಯಾವ ಕಾರಣದಿಂದ ಗೊತ್ತು ಮಾಡುತ್ತಾರೆ ? ಕಾಮುಕರಿಗೆ ಯಾವ ವಸ್ತುವು ಮನೋಹರವಾಗಿರುವುದೋ ಅದೇ ಕಾಮೋದ್ದೀಪಕವಾದ ಅಸ್ತ್ರ.

**ಸ್ಮಿತಮಾಲೋಕಿತಂ ಹಾಸೋ ಜಲ್ಪಿತಂ [೬]ಮದಮನ್ಮನಮ್ ।**
**[೭]ಕಾಮಾಂಗ[೮]ಮಿಯದೇವಾನ್ಯ[೯]ತ್ಕೈತವಂ [೧೦]ತಸ್ಯ ಪೋಷಕಮ್ ॥**

ಮುಗುಳ್ನಗೆಯೂ ನೋಟವೂ ನಗೆಯೂ ಭಾಷಣವೂ ಮದದಿಂದ ಅವ್ಯಕ್ತಭಾಷಣವೂ ಇಷ್ಟೇ ಕಾಮೋದ್ದೀಪಕಗಳಾದ ಸಾಧನಗಳು. ಬೇರೆ ಯಥಾರ್ಥವಲ್ಲದ ಸಾಧನವು ಕಾಮನಿಗೆ ಪೋಷಕಗಳಾಗಿರುತ್ತವೆ.

**ಆರೂಢಯೌವನೋಷ್ಮಾಣೌ ಸ್ತನಾವಸ್ಯಾ [೧೧]ಹಿಮಾಗಮೇ ।**
**ರೋಮಾಂಚಂ[೧೨]ಹೃಷಿತ[೧೩]ಮಸ್ಯಾಂಗೇ ಶಿಶಿರೋತ್ಥಂ [೧೪]ವಿನಿನ್ಯತುಃ ॥**

ಹೇಮಂತಋತುವಿನಲ್ಲಿ ಈ ಸುಭದ್ರಾದೇವಿಯ ಯೌವನಾವಿರ್ಭಾವದ ಉಷ್ಣತೆಯುಳ್ಳ ಕುಚಗಳು ಈ ಭರತೇಶ್ವರನ ಶರೀರದಲ್ಲಿ ಶೈತ್ಯದಿಂದುಟಾದ ರೋಮಾಂಚನವನ್ನು ಹೋಗಲಾಡಿಸಿದುವು.

**ಹಿಮಾನಿಲೈಃ ಕುಚೋತ್ಕಂಪ[೧೫]ಮಾಹಿತಂ ಸಾ ಹೃತಕ್ಲಮೈಃ ।**
**[೧೬]ಪ್ರೇಯಸ್ಕರತಲಸ್ಪರ್ಶೈ[೧೭]ರಪನಿನ್ಯೇಂಕಶಾಯಿನೀ ॥ ೧೧೭ ॥**

ತೊಡೆಯಲ್ಲಿ ಮಲಗಿರುವ ಆ ಸುಭದ್ರಾದೇವಿಯು ತಂಗಾಳಿಗಳಿಂದ ಮಾಡಲ್ಪಟ್ಟ ಕುಚಗಳ ಕಂಪನವನ್ನು ಶ್ರಮವನ್ನು ಹೋಗಲಾಡಿಸಿದ ಪತಿಯ ಅಂಗೈಯ ಸ್ಪರ್ಶಗಳಿಂದ ಹೋಗಲಾಡಿಸಿದಳು.

**ಸಾಶೋಕಕಲಿಕಾಂ ಚೂತಮಂಜರೀಂ ಕರ್ಣಸಂಗಿನೀಮ್ ।**
**ದಧತೀ ಚಂಪಕ[೧೮]ಪ್ರೋತ್ಯೈಃ ಕೇಶಾಂತೈಃ ಸಾರುಚ[೧೯]ನ್ಮಧೌ ॥ ೧೧೮ ॥**

೧ ಆತ್ಮೀಯಾಃ. ೨ ಅವಸ್ಥಾಃ. ೩ ಚಕ್ಷುಷೋರ್ಮಧ್ಯೇ. ೪ ಮುಖಸ್ಯಾಭಿಮುಖೀ. ೫ ಶ್ರೋತೃಜನಸ್ಥಾನೇ. ೬ ನೀಲರತ್ನ. ೭ ಗಲಿತ. ೮ ಆವಾಸಂ. ೯ ಚುಂಬಯನ್. ೧೦ ಗಾನ. ೧೧ ಸುಖತೃಪ್ತಃ.

೧ ರೂಪಾದೀನ್. ೨ ಅಮಂದಾನ್. ೩ ಪುಷ್ಪಬಾಣಸಂಕಥಾ. ೪ ಸ್ತ್ರೀಸಂಬಂಧಿ. ೫ ನಿಯಮಯಂತಿ. ೬ ಮದೇನ ಅವ್ಯಕ್ತಭಾಷಣಂ. ೭ ಕಾಮೋದ್ದೀಪನಾಂಗಂ. ೮ ಏತಾವದೇವ. ೯ ಅಪರಮಾರ್ಥಂ. ೧೦ ಕಾಮಸ್ಯ. ೧೧ ಹೇಮಂತರ್ತೌ. ೧೨ ರೋಮಾಂಚಂ. ೧೩ ಭರತಸ್ಯ. ೧೪ ನಾಶಂ ಚಕ್ರತುಃ. ೧೫ ಕೃತಂ. ೧೬ ಪ್ರಿಯತಮಹಸ್ತತಲ. ೧೭ ಅಪಹರತಿ ಸ್ಮ. ೧೮ ರಚಿತೈಃ. ೧೯ ವಸಂತೇ.

ವಸಂತಋತುವಿನಲ್ಲಿ ಕಿವಿಯಲ್ಲಿ ಸಂಬಂಧಿಸಿರುವ ಅಶೋಕದಮೊಗ್ಗನ್ನೂ ಮಾವಿನ ಗೊಂಚಲನ್ನೂ ಧರಿಸಿದವಳಾದ ಆ ಸುಭದ್ರಾದೇವಿಯು ಸಂಪಿಗೆಯ ಹೂವುಗಳಿಂದ ರಚಿಸಲ್ಪಟ್ಟ ತಲೆಗೂದಲುಗಳಿಂದ ಪ್ರಕಾಶಿಸಿದಳು.

**[೧]ಮಧೌ [೨]ಮಧುಮದಾರಕ್ತಲೋಚನಾಮಾಸ್ಖಲದ್ಗತಿಮ್ ।**
**ಬಹುಮೇನೇ [೩]ಪ್ರಿಯಃ ಕಾಂತಾಂ ಮೂರ್ತಾಮಿವ ಮಧುಶ್ರಿಯಂ ॥**

ವಸಂತಋತುವಿನಲ್ಲಿ ಭರತೇಶ್ವರನು ಪುಷ್ಪರಸದಿಂದ ಕೆಂಪಾದ ಕಣ್ಣುಗಳುಳ್ಳವಳೂ ಜಾರುತ್ತಿರುವ ನಡಿಗೆಯುಳ್ಳವಳೂ ಆದ ಪತ್ನಿಯನ್ನು ಆಕಾರವನ್ನು ಧರಿಸಿದ ವಸಂತಲಕ್ಷ್ಮಿಯನ್ನೋಪಾದಿಯಲ್ಲಿ, ಗೌರವಿಸಿದನು.

**ಕಲೈರಲಿಕುಲಕ್ವಾಣೈಃ ಸಾನ್ಯಪುಷ್ಪವಿಕೂಜಿತೈಃ ।**
**ಮಧುರಂ ಮಧು[೪]ರಭ್ಯಷ್ಟೌತ್ [೫]ತುಷ್ಟ್ಯೇವಾಮುಂ ವಿಶಾಂಪತಿಮ್ ॥**

ದುಂಬಿಯು ಕೋಗಿಲೆಗಳ ಧ್ವನಿಗಳೊಡನೆ ಕೂಡಿರುವ ಅವ್ಯಕ್ತಮಧುರವಾದ ದುಂಬಿಗಳ ಸಮೂಹದ ಶಬ್ದಗಳಿಂದ ಈ ಭರತೇಶ್ವರನನ್ನು ಸಂತೋಷದಿಂದಲೇ ಮಧುರವಾಗಿ ಸ್ತೋತ್ರಮಾಡುತ್ತಿದ್ದಿತು.

**[೬]ಕಲಕಂಠೀಕಲಕ್ವಾಣ[೭]ಮೂರ್ಛಿತೈರಲಿಝಂಕೃತೈಃ ।**
**[೮]ವ್ಯಜ್ಯತೇ ಸ್ಮ [೯]ಸ್ಮರಾಕಾಂಡಾವಸ್ಕಂದೋ ಡಿಂಡಿಮಾಯಿತೈಃ ॥ ೧೨೧ ॥**

ಜೇಗಟೆಯ ಧ್ವನಿಯಂತೆ ಮಾಡಲ್ಪಟ್ಟ ಹೆಣ್ಣುಕೋಗಿಲೆಯ ಗಂಭೀರಧ್ವನಿಯೊಡನೆ ಬೆರತಿರುವ ದುಂಬಿಗಳ ಝೇಂಕಾರಗಳಿಂದ ಮನ್ಮಥನ ಅಕಾಲದ ಆಕ್ರಮಣವು ಪ್ರಕಟಿಸಲ್ಪಟ್ಟಿದ್ದಿತು.

**ಪುಷ್ಪಚೂತವನೋದ್ಗಂಧಿರುತ್ಫುಲ್ಲಕಮಲಾಕರಃ ।**
**ಪಪ್ರಥೇ [೧೦]ಸುರಭಿರ್ಮಾಸಃ ಸುರಭೀಕೃತದಿಙ್ಮುಖಃ ॥ ೧೨೨ ॥**

ಹೂವನ್ನು ಬಿಟ್ಟಿರುವ ಮಾವಿನ ಮರಗಳ ವನದಿಂದುಂಟಾದ ಪರಿಮಳವುಳ್ಳದೂ ಅರಳಿದ ತಾವರೆಗಳುಳ್ಳ ಕೆರೆಗಳುಳ್ಳದೂ ಸುಗಂಧವಾದ ದಿಕ್ಕುಗಳುಳ್ಳದೂ ಆದ ವಸಂತ–ಚೈತ್ರಮಾಸವು ಕಾಣಿಸಿಕೊಂಡಿತು.

**ಹೃತಾಲಿಕುಲಝಂಕಾರಃ ಸಂಚರನ್ಮಲಯಾನಿಲಃ ।**
**ಅನಂಗನೃಪತೇರಾಸೀದ್ಘೋಷಯನ್ನಿವ [೧೧]ಶಾಸನಮ್ ॥ ೧೨೩ ॥**

ದುಂಬಿಗಳ ಗಂಭೀರಧ್ವನಿಯನ್ನು ತರುತ್ತಿರುವುದೂ ಮಲಯಪರ್ವತದಿಂದ ಬೀಸುತ್ತಿರುವುದೂ ಆದ ಗಾಳಿಯು ಮನ್ಮಥನೆಂಬ ರಾಜನ ಆಜ್ಞೆಯನ್ನು ಘೋಷಣಮಾಡುತ್ತದೋ ಎಂಬಂತಿದ್ದಿತು.

**ಸಂಧ್ಯಾರುಣಾಂ ಕಲಾಮಿಂದೋರ್ಮೇನೇ ಲೋಕೋ [೧೨]ಜಗದ್ಗ್ರಸಃ ।**
**ಕರಾಲಾಮಿವ ರಕ್ತಾ[೧೩]ಕ್ತಾಂ ದಂಷ್ಟ್ರಾಂ [೧೪]ಮದನರಕ್ಷಸಃ ॥ ೧೨೪ ॥**

ಲೋಕವು ಸಂಜೆಗೆಂಪುಳ್ಳ ಚಂದ್ರನ ಕಲೆಯನ್ನು, ಜಗತ್ತನ್ನು ಭಕ್ಷಣಮಾಡುವವನಾದ ಕಾಮನೆಂಬ ರಾಕ್ಷಸನ ಭಯಂಕರವೂ ರಕ್ತದಿಂದ ಲೇಪಿಸಲ್ಪಟ್ಟುದೂ ಆದ ಕೋರೆಹಲ್ಲನ್ನೋಪಾದಿಯಲ್ಲಿ ತಿಳಿಯಿತು. ಜನರು ಚಂದ್ರನ ಕಲೆಯನ್ನು ಕಾಮನ ಕೋರೆಹಲ್ಲನ್ನೋಪಾದಿಯಲ್ಲಿ ತಿಳಿದರೆಂದು ಭಾವವು.

**ಉನ್ಮತ್ತಕೋಕಿಲೇ ಕಾಲೇ [೧೫]ತಸ್ಮಿನ್ನುನ್ಮದಷಟ್ಪದೇ ।**
**ನಾನುನ್ಮತ್ತೋ ಜನಃ ಕೋಪಿ ಮುಕ್ತ್ವಾ[೧೬]ನಂಗದ್ರುಹೋ ಮುನೀನ್ ॥**

ಮದಿಸಿರುವ ಕೋಗಿಲೆಗಳೂ ದುಂಬಿಗಳೂ ಉಳ್ಳ ಆ ವಸಂತಋತುವಿನಲ್ಲಿ, ಮನ್ಮಥನನ್ನು ವಧಿಸುವ ಮುನಿಗಳನ್ನು ಬಿಟ್ಟು, ಯಾವ ಜನರೂ ಮದಿಸದಿರಲಿಲ್ಲ. ಮುನಿಗಳ ವಿನಾ ಬೇರೆ ಎಲ್ಲರೂ ಕಾಮಪರವಶರಾಗಿದ್ದರೆಂದು ಭಾವವು.

೧ ವಸಂತೇ. ೨ ಪುಷ್ಪರಸ. ೩ ಭರತಃ. ೪ ಸ್ತೌತಿ ಸ್ಮ. ೫ ತೋಷೇಣೈವ. ೬ ಕೋಕಿಲಸ್ತ್ರೀ. ೭ ಮಿಶ್ರಿತೈಃ. ೮ ಪ್ರಕಟೀಕ್ರಿಯತೇ ಸ್ಮ. ೯ ಕಾಮಾಕಾಲಧಾಟಿಃ. ೧೦ ವಸಂತಃ. ೧೧ ಆಜ್ಞಾಂ. ೧೨ ಜಗದ್ಭಕ್ಷಯತಃ. ೧೩ ಲಿಪ್ತಾಂ. ೧೪ ಕಾಮರಾಕ್ಷಸಸ್ಯ. ೧೫ ವಸಂತೇ. ೧೬ ಕಾಮಘಾತಕಾನ್.

**[೧]ಸಾಯೋದಗಾಹನಿರ್ಣಿಕ್ತೈರಂಗೈಸ್ತುಹಿನಶೀತಲೈಃ ।**
**ಗ್ರೀಷ್ಮೇ ಮದನತಾಪಾರ್ತಂ [೨]ಸಾಸ್ಯಾಂಗಂ ನಿರವಾಪಯತ್ ॥ ೧೨೬ ॥**

ಆ ಸುಭದ್ರಾದೇವಿಯು ಗ್ರೀಷ್ಮಋತುವಿನಲ್ಲಿ ಕಾಮಸಂತಾಪದಿಂದ ಪೀಡಿತವಾದ ಈ ಭರತೇಶ್ವರನ ಶರೀರವನ್ನು ಸಂಧ್ಯಾಕಾಲದಲ್ಲಿ ಜಲಪ್ರವೇಶದಿಂದ ಶುದ್ಧವೂ ಹಿಮದಂತೆ ಶೀತಲವೂ ಆದ ಅವಯವಗಳಿಂದ ಉಷ್ಣಶಮನಮಾಡಿದಳು.

**ಚಂದನದ್ರವಸಂಸಿಕ್ತಸಿಂದುರಾಂಗಲತಾಂ ಪ್ರಿಯಾಮ್ ।**
**ಪರಿರಭ್ಯ ದೃಢಂ ದೋರ್ಭ್ಯಾಂ ಸ ಲೇಭೇ [೩]ಗಾತ್ರನಿರ್ವೃತಿಮ್ ॥**

ಆ ಭರತೇಶ್ವರನು ಶ್ರೀಗಂಧದ ದ್ರವದಿಂದ ಸೇಚನೆಮಾಡಲ್ಪಟ್ಟ ಸುಂದರವಾದ ದೇಹವೆಂಬ ಲತೆಯುಳ್ಳವಳಾದ ಪ್ರಾಣಕಾಂತೆಯನ್ನು ಭುಜಗಳಿಂದ ದೃಢವಾಗಿ ಆಲಿಂಗಿಸಿ ಶರೀರಸುಖವನ್ನು ಹೊಂದಿದನು.

**ಮದನಜ್ವರತಾಪಾರ್ತಾಂ ತೀವ್ರಗ್ರೀಷ್ಮೋಷ್ಮ[೪]ನಿಃಸಹಾಮ್ ।**
**[೫]ಸ ತಾಂ ನಿರ್ವಾಪಯಾಮಾಸ ಸ್ವಾಂಗಸ್ಪರ್ಶಸುಖಾಂಬುಭಿಃ ॥ ೧೨೮ ॥**

ಆ ಭರತಚಕ್ರಿಯು ಕಾಮಜ್ವರದ ತಾಪದಿಂದ ಪೀಡಿತಳೂ ತೀವ್ರವಾದ ಬೇಸಗೆಯ ಉಷ್ಣವನ್ನು ಸಹಿಸದವಳೂ ಆದ ಆ ಸುಭದ್ರಾದೇವಿಯನ್ನು ತನ್ನ ಶರೀರಸ್ಪರ್ಶದಿಂದುಂಟಾದ ಸುಖವೆಂಬ ಜಲಗಳಿಂದ ಶಾಂತಪಡಿಸಿದನು.

**ಉತ್ಫುಲ್ಲಮಲ್ಲಿಕಾಮೋದವಾಹಿಭಿ[೬]ರ್ಗಂಧವಾಹಿಭಿಃ ।**
**ಸ [೭]ಸಾಯಂಪ್ರಾತಿಕೈರ್ಭೇಜೇ ಧೃತಿಂ ರತಿ[೮]ಸುಖಾಹರೈಃ ॥ ೧೨೯ ॥**

ಆ ಭರತೇಶ್ವರನು ಸಾಯಂಕಾಲ ಪ್ರಾತಃಕಾಲಗಳಲ್ಲುಂಟಾಗಿರುವುವೂ ಅರಳಿದ ಮಲ್ಲಿಗೆಯ ಪರಿಮಳವನ್ನು ತರುತ್ತಿರುವುವೂ ರತಿಕ್ರೀಡೆಯ ಕಾಲದಲ್ಲಿ ಸುಖವನ್ನುಂಟುಮಾಡುವುವೂ ಆದ ಗಾಳಿಗಳಿಂದ ಸಂತೋಷವನ್ನು ಹೊಂದಿದನು.

**ಉತ್ಫುಲ್ಲಪಾಟಲೋದ್ಗಂಧಿಮಲ್ಲಿಕಾಮಾಲ[೯]ಭಾರಿಣೀಮ್ ।**
**[೧೦]ಉಪಗೂಹ್ಯ ಪ್ರಿಯಾಂ ಪ್ರೇಮ್ಣಾ ನೈದಾಘೀಂ ಸೋನಯನ್ನಿಶಾಮ್ ॥**

ಆ ಭರತೇಶ್ವರನು ಅರಳಿರುವ ಪಾದರೀಹೂವಿನಿಂದುಂಟಾದ ಪರಿಮಳವುಳ್ಳ ಮಲ್ಲಿಗೆಯ ಹೂವಿನ ಮಾಲೆಯನ್ನು ಧರಿಸಿರುವ ಪ್ರಾಣಕಾಂತೆಯನ್ನು ಪ್ರೇಮದಿಂದ ಆಲಿಂಗಿಸಿ ಬೇಸಗೆಯ ಸಂಬಂಧವಾದ ರಾತ್ರಿಯನ್ನು ಕಳೆದನು.

**ಸಾ [೧೧]ಘನಸ್ತನಿತವ್ಯಾಜಾತ್ತರ್ಜಿತೇವ ಮನೋಭುವಾ ।**
**[೧೨]ಭುಜೋಪಪೀಡಮಾಶ್ಲಿಷ್ಯ ಶಿಶ್ಯೇ ಪತ್ಯಾತಪಾತ್ಯಯೇ ॥ ೧೩೧ ॥**

ವರ್ಷಾಕಾಲದಲ್ಲಿ ಆ ಸುಭದ್ರಾದೇವಿಯು ಮೇಘಗರ್ಜನೆಯ ನೆವದಿಂದ ಕಾಮನಿಂದ ತಿರಸ್ಕರಿಸಲ್ಪಟ್ಟವಳಂತೆ ಭುಜಗಳಿಂದ ಪೀಡಿಸಿ ಆಲಿಂಗಿಸಿ ಪತಿಯೊಡನೆ ಮಲಗಿಕೊಂಡಳು.

**ನವಾಂಬುಕಲುಷಾಃ ಪೂರಾ ಧ್ವನಿರುನ್ಮದಕೇಕಿನಾಮ್ ।**
**ಕದಂಬಾಮೋದಿನೋ ವಾತಾಃ ಕಾಮಿನಾಂ [೧೩]ಧೃತಯೇಭವನ್ ॥**

ಹೊಸದಾದ ನೀರಿನಿಂದ ಕಲಂಕಿತವಾದ ಪ್ರವಾಹಗಳೂ ಮದಿಸಿರುವ ನವಿಲುಗಳ ಧ್ವನಿಯೂ ಕದಂಬವೆಂಬ ಈಚಲುಮರಗಳ ಪರಿಮಳಗಳುಳ್ಳ ಗಾಳಿಗಳೂ ಕಾಮುಕರ ಸಂತೋಷಕ್ಕೋಸ್ಕರ ಆಗಿದ್ದುವು.

**ಆರೂಢಕಾಲಿಕಾಂ ಪಶ್ಯನ್ [೧೪]ಬಲಾಕಾಮಾಲಭಾರಿಣೀಮ್ ।**
**[೧೫]ಘನಾಲಿಂ ಪಥಿಕಃ ಸಾ[೧೬]ಶ್ರುರ್ದಿಶೋ ಮೇನೇಂಧಕಾರಿತಾಃ ॥ ೧೩೩ ॥**

೧ ಸಂಧ್ಯಾಕಾಲಜಲಪ್ರವೇಶಶುದ್ಧೈಃ. ೨ ಸುಭದ್ರಾ. ೩ ಶರೀರಸುಖಂ. ೪ ಅಸಹಮಾನಾಂ. ೫ ಭರತಚಕ್ರೀ. ೬ ಪವನೈಃ. ೭ ಸಂಧ್ಯಾಕಾಲಪ್ರಭಾತಕಾಲಭವೈಃ. ೮ ಸುಖಕರೈಃ. ೯ ಬಿಭ್ರತೀಂ. ೧೦ ಆಲಿಂಗ್ಯ. ೧೧ ಮೇಘಗರ್ಜನ. ೧೨ ಭುಜಾಭ್ಯಾಂ ಪೀಡಯಿತ್ವಾ. ೧೩ ಸಂತೋಷಾಯ. ೧೪ ಬಲಾಕಪಕ್ಷಿಪಂಕ್ತಿಬಿಭ್ರತೀಂ. ೧೫ ಮೇಘಪಂಕ್ತಿಂ. ೧೬ ಅಶ್ರುಸಹಿತಃ.

ಕಪ್ಪು ಬಣ್ಣಉಂಟಾಗಿರುವುದೂ ಬೆಳ್ಳಕ್ಕಿಗಳ ಸಾಲುಗಳನ್ನು ಧರಿಸಿರುವುದೂ ಆದ ಮೇಘಪಂಕ್ತಿಯನ್ನು ನೋಡುವವನಾದ ಪ್ರಯಾಣಿಕನು ಕಣ್ಣೀರುಳ್ಳವನಾಗಿ ದಿಕ್ಕುಗಳನ್ನು ಕತ್ತಲೆಯಾಗಿರುವುವುಗಳನ್ನಾಗಿ ತಿಳಿದನು. ಕಾಮೋದ್ದೀಪಕ ಸಾಮಗ್ರಿಯನ್ನು ನೋಡಿ ವಿರಹದುಃಖವುಳ್ಳವನಾದನೆಂದು ಭಾವವು.

**ಧಾರಾರಜ್ಜುಭಿರಾನದ್ಧಾ ವಾಗುರೇವ ಪ್ರಸಾರಿತಾ ।**
**ರೋಧಾಯ [೧]ಪಥಿಕೈಣಾನಾಂ ಲುಬ್ಧಕೇನೇವ ಹೃದ್ಭುವಾ ॥ ೧೩೪ ॥**

ನೀರಿನ ಧಾರೆಯು, ಬೇಡರವನಿಂದಲೋಪಾದಿಯಲ್ಲಿ, ಕಾಮನಿಂದ ಪ್ರಯಾಣಿಕರೆಂಬ ಜಿಂಕೆಗಳನ್ನು ಕಟ್ಟುವುದಕ್ಕೋಸ್ಕರ ಹರಡಲ್ಪಟ್ಟುದೂ ಹಗ್ಗಗಳಿಂದ ಕಟ್ಟಲ್ಪಟ್ಟುದೂ ಆದ ಬಲೆಯೋ ಎಂಬಂತಿದ್ದಿತು.

**ಕೃತಾವಧಿಃ ಪ್ರಿಯೋ ನಾಗಾದಾಗಾಚ್ಚ ಜಲದಾಗಮಃ ।**
**ಇತ್ಯುದೀಕ್ಷ್ಯ ಘನಾ[೨]ನಂತಸ್ತೇಪೇ [೩]ಪ್ರೋಷಿತಭರ್ತೃಕಾ ॥ ೧೩೫ ॥**

''ಬರುವ ಅವಧಿಯನ್ನು ಹೇಳಿ ಹೋಗಿದ್ದ ಪ್ರಾಣಕಾಂತನು ಬರಲಿಲ್ಲ–ವರ್ಷಾಕಾಲವಾದರೋ ಬಂದಿತು'' ಈ ಪ್ರಕಾರವಾಗಿ ಪತಿವಿಯೋಗವನ್ನು ಹೊಂದಿದ್ದ ಓರ್ವ ಹೆಂಗಸು ಮೇಘಗಳನ್ನು ನೋಡಿ ಅಂತರಂಗದಲ್ಲಿ ಸಂತಾಪವನ್ನು ಹೊಂದಿದಳು.

**ವಿಭಿಂದನ್ಕೇತಕೀ[೪]ಸೂಚೀಸ್ತತ್ಪಾಂಸೂನಾಕಿರನ್ಮರುತ್ ।**
**ಪಾಂಥಾನಾಂ ದೃಷ್ಟಿರೋಧಾಯ ಧೂಲಿಕ್ಷೇಪಮಿವಾತನೋತ್॥ ೧೩೬ ॥**

ಕೇದಗೆಯ ಹೂವುಗಳ ತುದಿಗಳನ್ನು ಮುರಿಯುವುದೂ ಆ ಹೂವುಗಳ ಧೂಳುಗಳನ್ನು ಎರಚುವುದೂ ಆದ ಗಾಳಿಯು ಪಥಿಕರ ಕಣ್ಣುಗಳನ್ನು ತಡೆಯುವುದಕ್ಕೋಸ್ಕರ ಧೂಳನ್ನೆರಚಿತೋ ಎಂಬಂತಿದ್ದಿತು.

**ಇತ್ಯ[೫]ಭ್ಯರ್ಣತಮೇ ತಸ್ಮಿನ್ಕಾಲೇ ಜಲದಮಾಲಿನಿ ।**
**ಸ ವಾಸಭವನೇ ರಮ್ಯೇ ಪ್ರಿಯಾಮರಮಯನ್ಮುಹುಃ ॥ ೧೩೭ ॥**

ಆ ವರ್ಷಾಕಾಲವು ಈ ರೀತಿಯಾಗಿ ಸಮೀಪಿಸುತ್ತಿರಲು ಆ ಭರತೇಶ್ವರನು ರಮಣೀಯವಾದ ವಾಸದ ಮನೆಯಲ್ಲಿ ಪ್ರಾಣಕಾಂತೆಯನ್ನು ಬಾರಿಬಾರಿಗೆ ರಮಿಸಿದನು.

**[೬]ಆಕೃಷ್ಟನಿಚುಲಾಮೋದಂ ತದ್ವಕ್ತ್ರಾಮೋದಮಾಹರನ್ ।**
**ತಸ್ಯಾಃ ಸ್ತನತಟೋತ್ಸಂಗೇ ಸೋನೈಷೀ[೭]ದ್ವಾರ್ಷಿಕೀಂ ನಿಶಾಮ್॥ ೧೩೮ ॥**

ಆ ಭರತೇಶ್ವರನು ಕಮಲದ ಪರಿಮಳವನ್ನು ಸ್ವೀಕರಿಸಿರುವ ಆ ಸುಭದ್ರಾದೇವಿಯ ಮುಖದ ಪರಿಮಳವನ್ನು ತೆಗೆದುಕೊಳ್ಳುವವನಾಗಿ ಆಕೆಯ ಕುಚಪ್ರದೇಶದಲ್ಲಿ ವರ್ಷಾಕಾಲಸಂಬಂಧವಾದ ರಾತ್ರಿಯನ್ನು ಕಳೆದನು.

**ಸ ರೇಮೇ ಶರದಾರಂಭೇ ವಿಹರನ್ಕಾಂತಯಾ ಸಮಮ್ ।**
**ವನೇಷ್ವಭಿನವೋದ್ಭಿನ್ನಸಪ್ತಚ್ಛದಸುಗಂಧಿಷು ॥ ೧೩೯ ॥**

ಆ ಭರತೇಶ್ವರನು ಶರತ್ಕಾಲದ ಪ್ರಾರಂಭದಲ್ಲಿ ಹೊಸದಾಗಿ ಚಿಗುರಿದ ಏಳೆಲೆ ಬಾಳೆಗಳ ಪರಿಮಳಗಳುಳ್ಳ ವನಗಳಲ್ಲಿ ಪತ್ನಿಯೊಡನೆ ವಿಹರಿಸುವವನಾಗಿ ಕ್ರೀಡಿಸಿದನು.

**ಸ ಕಾಂತಾಂ ರಮಯಾಮಾಸ ಹಾರಜ್ಯೋತ್ಸ್ನಾಂಚಿತಸ್ತನೀಮ್ ।**
**ಶಾರದೀಂ ನಿರ್ವಿಶನ್ ಜ್ಯೋತ್ಸ್ನಾಂ ಸೌಧೋತ್ಸಂಗೇಷು ಹಾರಿಷು ॥**

೧ ಪಾಂಥಮೃಗಾಣಾಂ. ೨ ಅಂತರಂಗೇ. ೩ ಪುರುಷವಿಯುಕ್ತಾ. ೪ ಅಗ್ರಾನ್. ೫ ಸಮೀಪೇ ಸತಿ. ೬ ಸ್ವೀಕೃತ. ೭ ವರ್ಷಾಕಾಲಸಂಬಂಧಿನೀಂ.

ಆ ಭರತೇಶ್ವರನು ಮನೋಹರಗಳಾದ ಉಪ್ಪರಿಗೆಗಳಲ್ಲಿ ಶರತ್ಕಾಲ ಸಂಬಂಧವಾದ ಬೆಳದಿಂಗಳನ್ನು ಪ್ರವೇಶಿಸಿ ಹಾರವೆಂಬ ಬೆಳದಿಂಗಳಿನಿಂದ ಕೂಡಿದ ಕುಚಗಳುಳ್ಳವಳಾದ ಪತ್ನಿಯನ್ನು ರಮಿಸಿದನು.

**ಸೋತ್ಪಲಾಂ [೧]ಕುಬ್ಜಕೈ[೨]ರ್ದೃಬ್ಧಾಂ ಮಾಲಾಂ ಚೂಡಾಂತಲಂಬಿನೀಮ್ ।**
**ಬಾಲಾ ಪತ್ಯುರುರಸ್ಸಂಗಾನ್ಮೇನೇ [೩]ಬಹುರತಿಶ್ರಿಯಮ್ ॥ ೧೪೧ ॥**

ಬಾಲೆಯೋರ್ವಳು ಪತಿಯ ಎದೆಯ ಸಂಬಂಧದಿಂದ ಮಸ್ತಕದವರೆಗೆ ಜೋಲುತ್ತಿರುವುದೂ ಕನ್ನೈದಿಲೆಯೊಡನೆ ಸೇರಿರುವುದೂ ಸೇವಂತಿಗೆ ಹೂವುಗಳಿಂದ ಮಾಡಲ್ಪಟ್ಟುದೂ ಆದ ಪುಷ್ಪಮಾಲೆಯನ್ನು ಸುರತಸಂಪತ್ತಿಗೆ ಸಮಾನವನ್ನಾಗಿ ತಿಳಿದಳು.

**ಇತಿ ಸೋತ್ಕರ್ಷಮೇವಾಸ್ಯಾಂ ಪ್ರಥಯ[೪]ನ್ಪ್ರೇಮನಿಘ್ನತಾಮ್ ।**
**ಸ ರೇಮೇ [೫]ರತಿಸಾದ್ಭೂತೋ ಭೋಗಾಂಗೈರ್ದಶಧೋದಿತೈಃ ॥ ೧೪೨ ॥**

ಈ ಪ್ರಕಾರವಾಗಿ ಈ ಸುಭದ್ರಾದೇವಿಯಲ್ಲಿ ಪ್ರೇಮಾಧೀನತೆಯನ್ನು ಹೆಚ್ಚಾಗಿ ಪ್ರಕಟಪಡಿಸುವವನೂ ರತಿಸುಖಾಧೀನನೂ ಆದ ಆ ಭರತೇಶ್ವರನು ಹತ್ತು ಪ್ರಕಾರವಾಗಿ ಹೇಳಲ್ಪಟ್ಟ ಭೋಗಸಾಧನಗಳಿಂದ ಕ್ರೀಡಿಸಿದನು.

**ಸರತ್ನಾ ನಿಧಯೋ ದಿವ್ಯಾಃ ಪುರಂ ಶಯ್ಯಾಸನೇ ಚಮೂಃ ।**
**ನಾಟ್ಯಂ [೬]ಸಭಾಜನಂ ಭೋಜ್ಯಂ ವಾಹನಂ ಚೇತಿ ತಾನಿ ವೈ ॥ ೧೪೩ ॥**

ರತ್ನಸಹಿತಗಳೂ ಶ್ರೇಷ್ಠಗಳೂ ಆದ ನಿಧಿಗಳು ನಗರ ಹಾಸಿಗೆ ಪೀಠ ಸೈನ್ಯ ನಾಟ್ಯ ಪಾತ್ರಸಹಿತವಾದ ಭೋಜ್ಯವಸ್ತು ವಾಹನಗಳೆಂದು ಆ ಭೋಗಸಾಧನಗಳು ಹತ್ತು.

**ದಶಾಂಗಮಿತಿ ಭೋಗಾಂಗಂ ನಿರ್ವಿಶ[೭]ನ್ಸ್ವಾಶ್ರಿತಂಭವಮ್ ।**
**ಸ ಚಿರಂ ಪಾಲಯಾಮಾಸ ಭುವ[೮]ಮೇಕೋಷ್ಣವಾರಣಾಮ್ ॥ ೧೪೪ ॥**

ಈ ಪ್ರಕಾರವಾಗಿ ತನಗೆ ತೃಪ್ತಿಯನ್ನುಂಟುಮಾಡುವ ಹತ್ತು ವಿಧವಾದ ಭೋಗಾಂಗವನ್ನು ಅನುಭವಿಸುವವನಾದ ಆ ಭರತೇಶ್ವರನು ಏಕಚ್ಛತ್ರಾಂಕಿತವಾದ ಭೂಮಿಯನ್ನು ಬಹುಕಾಲದವರೆಗೆ ಪಾಲಿಸಿದನು.

**ಷೋಡಶಾಸ್ಯ ಸಹಸ್ರಾಣಿ ಗಣಬದ್ಧಾಮರಾಃ ಪ್ರಭೋಃ ।**
**ಯೇ [೯]ಯುಕ್ತಾ ಧೃತನಿಸ್ತ್ರಿಂಶಾ ನಿಧಿರತ್ನಾತ್ಮರಕ್ಷಣೇ ॥ ೧೪೫ ॥**

ಈ ಭರತೇಶ್ವರನಿಗೆ ಹದಿನಾರು ಸಹಸ್ರ ಗಣಬದ್ಧದೇವತೆಗಳಿದ್ದರು. ಆ ದೇವತೆಗಳು ಕತ್ತಿಗಳನ್ನು ಧರಿಸಿದವರಾಗಿ ನಿಧಿಗಳ ಮತ್ತು ರತ್ನಗಳ ರಕ್ಷಣೆಯಲ್ಲಿಯೂ ಭರತನ ಆತ್ಮರಕ್ಷಣೆಯಲ್ಲಿಯೂ ಗೊತ್ತುಮಾಡಲ್ಪಟ್ಟಿದ್ದರು.

**ಕ್ಷಿತಿಸಾರ ಇತಿ ಖ್ಯಾತಃ ಪ್ರಾಕಾರೋಸ್ಯ ಗೃಹಾವೃತಿಃ ।**
**ಗೋಪುರಂ ಸರ್ವತೋಭದ್ರಂ ಪ್ರೋಲ್ಲಸದ್ರತ್ನತೋರಣಮ್ ॥ ೧೪೬ ॥**

ಈ ಭರತೇಶ್ವರನ ವಾಸಭವನದ ಆವರಣ–ಬೇಲಿಯು ಕ್ಷಿತಿಸಾರವೆಂದು ಪ್ರಸಿದ್ಧವಾದ ಕೋಟೆಯಾಗಿದ್ದಿತು. ದೇದೀಪ್ಯಮಾನವಾದ ರತ್ನಗಳ ತೋರಣವುಳ್ಳ ಸರ್ವತೋಭದ್ರವೆಂಬ ಗೋಪುರವಿದ್ದಿತು.

**ನಂದ್ಯಾವರ್ತೋ ನಿವೇಶೋಸ್ಯ ಶಿಬಿರಸ್ಯಾಲಘೀಯಸಃ ।**
**ಪ್ರಾಸಾದೋ ವೈಜಯಂತಾಖ್ಯೋ ಯಃ ಸರ್ವರ್ತುಸುಖಾವಹಃ ॥**

ಈ ಭರತೇಶ್ವರನ ದೊಡ್ಡದಾದ ಬೀಡಿಗೆ–ಸೇನಾನಿವೇಶಕ್ಕೆ ನಂದ್ಯಾವರ್ತವೆಂಬ ಸ್ಥಾನವೂ ಸಮಸ್ತ ಋತುಗಳಲ್ಲಿಯೂ ಸುಖವನ್ನುಂಟುಮಾಡುವ ವೈಜಯಂತವೆಂಬ ಅರಮನೆಯೂ ಇದ್ದುವು.

೧ ಕುಬ್ಜಕಾಭದ್ರತರಣೀಬೃಹತ್ಪತ್ರಾತಿಕೀ ಸದಾ. ೨ ರಚಿತಾಂ. ೩ ರತಿಶ್ರೀಸಮಾನಾಂ. ೪ ಸ್ನೇಹಾಧೀನತಾಂ. ೫ ರತ್ಯಧೀನಃ. ೬ ಭಾಜನಸಹಿತಂ. ೭ ಸ್ವಸ್ಯ ತೃಪ್ತಿಜನಕಂ. ೮ ಏಕಚ್ಛತ್ರಾಂ. ೯ ನಿಯುಕ್ತಾಃ.

**[೧]ದಿಕ್ಸ್ವಸ್ತಿಕಾ ಸಭಾಭೂಮಿಃ ಪರಾರ್ಧ್ಯಮಣಿಕುಟ್ಟಿಮಾ ।**
**ತಸ್ಯ ಚಂಕ್ರಮಣೇ ಯಷ್ಟಿಃ [೨]ಸುವಿಧಿರ್ಮಣಿನಿರ್ಮಿತಾ ॥ ೧೪೮ ॥**

ಹೆಚ್ಚು ಬೆಲೆಬಾಳುವ ರತ್ನಗಳ ನೆಲಗಟ್ಟುಳ್ಳ ಸಭಾಭೂಮಿಯು ದಿಕ್ಸ್ವಸ್ತಿಕೆಯೆಂಬ ಹೆಸರುಳ್ಳುದಾಗಿದ್ದಿತು. ಆ ಭರತೇಶ್ವರನಿಗೆ ರತ್ನನಿರ್ಮಿತವಾದ ಸುವಿಧಿಯೆಂಬ ಸಂಚಾರದಲ್ಲಿ ಹಿಡಿದುಕೊಳ್ಳುವ ಕೋಲಿದ್ದಿತು.

**ಗಿರಿಕೂಟಕಮಿತ್ಯಾಸೀತ್ಸೌಧಂ [೩]ದಿಗವಲೋಕನೇ ।**
**ವರ್ಧಮಾನಕಮಿತ್ಯನ್ಯ[೪]ತ್ಪ್ರೇಕ್ಷಾಗೃಹಮಭೂದ್ವಿಭೋಃ ॥ ೧೪೯ ॥**

ಭರತೇಶ್ವರನಿಗೆ ದಿಕ್ಕುಗಳನ್ನು ನೋಡುವುದಕ್ಕೋಸ್ಕರ ಗಿರಿಕೂಟವೆಂಬ ಉಪ್ಪರಿಗೆಯು ಇದ್ದಿತು. ವರ್ಧಮಾನಕವೆಂಬ ನರ್ತನವನ್ನು ನೋಡುವ ಬೇರೊಂದು ಮನೆಯಿದ್ದಿತು.

**[೫]ಘರ್ಮಾಂತೋಽಸ್ಯ ಮಹಾನಾಸೀದ್ಧಾರಾಗೃಹಸಮಾಹ್ವಯಃ ।**
**ಗೃಹಕೂಟಕಮಿತ್ಯುಚ್ಚೈರ್ವರ್ಷಾವಾಸಃ ಪ್ರಭೋರಭೂತ್ ॥ ೧೫೦ ॥**

ಈ ಭರತೇಶ್ವರನಿಗೆ ದೊಡ್ಡದಾದ ಘರ್ಮಾಂತವೆಂದು ಹೆಸರುಳ್ಳುದೂ ಧಾರಾಗೃಹವೆಂದು ಕರೆಯಲ್ಪಡುವುದೂ ಆದ ಸ್ನಾನದ ಮನೆಯಿದ್ದಿತು. ಭರತೇಶ್ವರನಿಗೆ ಎತ್ತರವಾದ ಗೃಹಕೂಟವೆಂಬ ವರ್ಷಾಕಾಲದಲ್ಲಿ ವಾಸಮಾಡತಕ್ಕ ಮನೆಯಿದ್ದಿತು.

**ಪುಷ್ಕರಾವತ್ಯಭಿಖ್ಯಂ ಚ [೬]ಹರ್ಮ್ಯಮಸ್ಯ [೭]ಸುಧಾಸಿತಮ್ ।**
**ಕುಬೇರಕಾಂತಮಿತ್ಯಾಸೀದ್ಭಾಂಡಾಗಾರಂ ಯದಕ್ಷಯಮ್ ॥ ೧೫೧ ॥**

ಈ ಭರತೇಶ್ವರನಿಗೆ ಸುಣ್ಣದಿಂದ ಬೆಳ್ಳಗೆ ಮಾಡಲ್ಪಟ್ಟಿರುವ ಪುಷ್ಕರಾವತಿಯೆಂಬ ಹೆಸರುಳ್ಳ ಶಯನಗೃಹವಿದ್ದಿತು. ಅಕ್ಷಯವಾದ ಕುಬೇರಕಾಂತವೆಂಬ ಭಾಂಡಾಗಾರವಿದ್ದಿತು.

**ವಸುಧಾರಕಮಿತ್ಯಾಸೀತ್ಕೋಷ್ಠಾಗಾರಂ ಮಹಾವ್ಯಯಮ್ ।**
**ಜೀಮೂತನಾಮಧೇಯಂ ಚ ಮಜ್ಜನಾಗಾರಮೂರ್ಜಿತಮ್ ॥ ೧೫೨ ॥**

ಯಾವಾಗಲೂ ವ್ಯಯವಾಗದಿರುವ ವಸುಧಾರಕವೆಂಬ ಉಗ್ರಾಣವಿದ್ದಿತು. ಜೀಮೂತವೆಂಬ ದೊಡ್ಡದಾದ ಸ್ನಾನಗೃಹವಿದ್ದಿತು.

**[೮]ರತ್ನಮಾಲಾತಿ[೯]ರೋಚಿಷ್ಣುರ್ಬಭೂವಾಸ್ಯಾವತಂಸಿಕಾ ।**
**ದೇವರಮ್ಯೇತಿ ರಮ್ಯಾ ಸಾ ಮತಾ [೧೦]ದೂಷ್ಯಕುಟೀ ಪೃಥುಃ ॥ ೧೫೩ ॥**

ಈ ಭರತೇಶ್ವರನಿಗೆ ಬಹಳವಾಗಿ ಶೋಭಿಸುವ ರತ್ನಮಾಲೆಯೆಂಬ ಶಿರೋಭೂಷಣವಿದ್ದಿತು. ಪ್ರಸಿದ್ಧವೂ ರಮಣೀಯವೂ ವಿಶಾಲವೂ ಆದ ದೇವರಮ್ಯವೆಂಬ ವಸ್ತ್ರದ ಮನೆ(ಡೇರಾ) ಇದ್ದಿತು.

**ಸಿಂಹವಾಹಿನ್ಯಭೂಚ್ಛಯ್ಯಾ ಸಿಂಹೈರೂಢಾ ಭಯಾನಕೈಃ ।**
**ಸಿಂಹಾಸನಮಥಾಸ್ಯೋಚ್ಚೈರ್ಗುಣೈರ್ನಾಮ್ನಾಪ್ಯನುತ್ತರಮ್ ॥ ೧೫೪ ॥**

ಭಯಂಕರಗಳಾದ ಸಿಂಹಗಳಿಂದ ಧರಿಸಲ್ಪಟ್ಟ ಸಿಂಹವಾಹಿನಿಯೆಂಬ ಹಾಸಿಗೆಯಿದ್ದಿತು ಮತ್ತು ಈ ಭರತೇಶ್ವರನಿಗೆ ಗುಣಗಳಿಂದಲೂ ಹೆಸರಿನಿಂದಲೂ ಅಸಾಧಾರಣವೂ ಉನ್ನತವೂ ಆದ ಅನುತ್ತರವೆಂಬ ಸಿಂಹಾಸನವಿದ್ದಿತು.

**ಚಾಮರಾ[೧೧]ಣ್ಯುಪಮಾಮಾನಂ ವ್ಯತೀತ್ಯಾನುಪಮಾ[೧೨]ನ್ಯಭಾನ್ ।**
**ವಿಜಯಾರ್ಧಕುಮಾರೇಣ ವಿತೀರ್ಣಾನಿ ನಿಧೀಶಿನೇ ॥ ೧೫೫ ॥**

೧ ದಿಕ್ಸ್ವಸ್ತಿಕಾಖ್ಯಾ. ೨ ಸುವಿಧಿನಾಮಾ. ೩ ದಿಶಾವಲೋಕನಾರ್ಥಂ. ೪ ನೃತ್ತದರ್ಶನಗೃಹಂ. ೫ ಘರ್ಮಾಂತಸಂಜ್ಞಃ. ೬ ಶಯನಸದನಂ. ೭ ಸುಧಾಧವಲಿತಂ. ೮ ನಾಮ. ೯ ಶೋಭಮಾನಾ. ೧೦ ಪಟಕುಟೀ. ೧೧ ಉಪಮಾಪ್ರಮಾಣಂ. ೧೨ ಭಾಂತಿ ಸ್ಮ.

ನಿಧಿಪತಿಯಾದ ಭರತೇಶ್ವರನಿಗೆ ವಿಜಯಾರ್ಧಕುಮಾರನಿಂದ ಕೊಡಲ್ಪಟ್ಟಿರುವುವೂ ಉಪಮಾಪ್ರಮಾಣವನ್ನು ಮೀರಿ ಅಸದೃಶವಾಗಿರುವುವೂ ಆದ ಚಾಮರಗಳು ಪ್ರಕಾಶಿಸುತ್ತಿದ್ದುವು.

**ಭಾಸ್ವ[೧]ತ್ಸೂರ್ಯಪ್ರಭಂ ತಸ್ಯ ಬಭೂವಾತಪವಾರಣಮ್ ।**
**ಪರಾರ್ಧ್ಯರತ್ನನಿರ್ಮಾಣಂ ಜಿತಸೂರ್ಯಶತಪ್ರಭಮ್ ॥ ೧೫೬ ॥**

ಆ ಭರತೇಶ್ವರನಿಗೆ ಹೆಚ್ಚು ಬೆಲೆ ಬಾಳುವ ರತ್ನಗಳಿಂದ ಮಾಡಲ್ಪಟ್ಟುದೂ ನೂರು ಸೂರ್ಯರ ಪ್ರಭೆಯನ್ನು ಜಯಿಸಿರುವುದೂ ಪ್ರಕಾಶಮಾನವಾದ ಸೂರ್ಯಪ್ರಭವೆಂಬ ಹೆಸರುಳ್ಳುದೂ ಆದ ಛತ್ರವಿದ್ದಿತು.

**ನಾಮ್ನಾ ವಿದ್ಯುತ್ಪ್ರಭೇ ಚಾಸ್ಯ ರುಚಿರೇ ಮಣಿಕುಂಡಲೇ ।**
**ಜಿತ್ವಾ ಯೇ [೨]ವೈದ್ಯುತೀಂ ದೀಪ್ತಿಂ ರುರುಚಾತೇ ಸ್ಫುರತ್ತ್ವಿಷೀ॥ ೧೫೭ ॥**

ಈ ಭರತೇಶ್ವರನ ವಿದ್ಯುತ್ಪ್ರಭೆಗಳೆಂದು ಹೆಸರುಗಳುಳ್ಳುವೂ ಮನೋಹರಗಳೂ ಆದ ಎರಡು ರತ್ನಕುಂಡಲಗಳು ಮಿಂಚಿನ ಕಾಂತಿಯನ್ನು ಜಯಿಸಿ ಪ್ರಕಾಶಮಾನವಾದ ಕಾಂತಿಯುಳ್ಳುವುಗಳಾಗಿ ಪ್ರಕಾಶಿಸಿದುವು.

**ರತ್ನಾಂಶುಜಟಿಲಾಸ್ತಸ್ಯ ಪಾದುಕಾ [೩]ವಿಷಮೋಚಿಕಾಃ ।**
**ಪರೇಷಾಂ ಪದಸಂಸ್ಪರ್ಶಾನ್ಮುಂಚಂತ್ಯೋ ವಿಷಮುಲ್ಬಣಮ್ ॥ ೧೫೮ ॥**

ಭರತೇಶ್ವರನಿಗೆ ಬೇರೆಯವರ ಪಾದಸ್ಪರ್ಶದಿಂದ ಹೆಚ್ಚಾದ ವಿಷವನ್ನು ಬಿಡುತ್ತಿರುವುವೂ ರತ್ನಗಳ ಕಿರಣಗಳಿಂದ ನಿಬಿಡೀಕೃತವಾಗಿರುವುವೂ ಆದ ವಿಷಮೋಚಿಕೆಗಳೆಂಬ ಪಾದುಕೆಗಳಿದ್ದುವು.

**ಅಭೇದ್ಯಾಖ್ಯಮಭೂತ್ತಸ್ಯ [೪]ತನುತ್ರಾಣಂ ಪ್ರಭಾಸ್ವರಮ್ ।**
**ದ್ವಿಷತಾಂ ಶರನಾರಾಚೈರ್ಯದಭೇದ್ಯಂ ಮಹಾಹವೇ ॥ ೧೫೯ ॥**

ಆ ಭರತೇಶ್ವರನಿಗೆ ದೊಡ್ಡದಾದ ಯುದ್ಧದಲ್ಲಿ ಶತ್ರುಗಳ ಬಾಣಗಳಿಂದ ಅಭೇದ್ಯವೂ ಪ್ರಕಾಶಮಾನವೂ ಆದ ಅಭೇದ್ಯವೆಂಬ ಕವಚವಿದ್ದಿತು.

**ರಥೋಽಜಿತಂಜಯೋ ನಾಮ್ನಾ ಜಯಲಕ್ಷ್ಮೀಭರೋದ್ವಹಃ ।**
**ಯತ್ರ ಶಸ್ತ್ರಾಣಿ ಜೈತ್ರಾಣಿ ದಿವ್ಯಾನ್ಯಾಸನ್ನನೇಕಶಃ ॥ ೧೬೦ ॥**

ಭರತೇಶ್ವರನಿಗೆ ಜಯಲಕ್ಷ್ಮಿಯ ಭಾರವನ್ನು ವಹಿಸತಕ್ಕುದಾದ ಅಜಿತಂಜಯವೆಂಬ ರಥವಿದ್ದಿತು. ಆ ರಥದಲ್ಲಿ ಜಯಶೀಲಗಳಾದ ದಿವ್ಯಶಸ್ತ್ರಗಳು ಅನೇಕವಾಗಿದ್ದುವು.

**[೫]ಚಂಡಾಕಾಂಡಾಶನಿಪ್ರಖ್ಯಜ್ಯಾಘಾತಾಕಂಪಿತಾಖಿಲಮ್ ।**
**ಜಿತದೈತ್ಯಾಮರಂ ತಸ್ಯ ವಜ್ರಕಾಂಡಮಭೂದ್ಧನುಃ ॥ ೧೬೧ ॥**

ಆ ಭರತೇಶ್ವರನಿಗೆ ಪ್ರಚಂಡವಾದ ಅಕಾಲ ವಜ್ರಾಯುಧಕ್ಕೆ(ಸಿಡಿಲಿಗೆ) ಸಮಾನವಾದ ಸಿಂಜಿನಿಯ ಪೆಟ್ಟಿನಿಂದ ಸುತ್ತಲೂ ನಡುಗಿಸಲ್ಪಟ್ಟ ಜಗತ್ತುಳ್ಳುದೂ ಅಸುರ ದೇವತೆಗಳನ್ನು ಜಯಿಸಿದುದೂ ಆದ ವಜ್ರಕಾಂಡವೆಂಬ ಧನುಸ್ಸಿದ್ದಿತು.

**ಅಮೋಘ[೬]ಪಾತಾಸ್ತಸ್ಯಾಸನ್ನಮೋಘಾಖ್ಯಾ ಮಹೇಷವಃ ।**
**ಯೈರಸಾಧ್ಯಜಯೇ ಚಕ್ರೀ ಕೃತಶ್ಲಾಘೋ ರಣಾಂಗಣೇ ॥ ೧೬೨ ॥**

ಆ ಭರತೇಶ್ವರನಿಗೆ ಸಾರ್ಥಕವಾದ ಪೆಟ್ಟುಗಳುಳ್ಳ ಅಮೋಘಗಳೆಂಬ ಮಹಾಬಾಣಗಳಿದ್ದುವು. ಅಸಾಧ್ಯವಾದ ಜಯವುಳ್ಳ ರಣಾಂಗಣದಲ್ಲಿ ಚಕ್ರೇಶ್ವರನು ಆ ಬಾಣಗಳಿಂದ ಹೊಗಳಲ್ಪಟ್ಟವನಾದನು. ಜಯಶೀಲನಾದನೆಂದು ಭಾವವು.

**ಪ್ರಚಂಡಾ ವಜ್ರತುಂಡಾಖ್ಯಾ ಶಕ್ತಿರಸ್ಯಾರಿಖಂಡಿನೀ ।**
**ಬಭೂವ ವಜ್ರನಿರ್ಮಾಣಾ ಶ್ಲಾಘ್ಯಾ [೭]ವಜ್ರಜಯೇಽಪಿ ಯಾ ॥ ೧೬೩ ॥**

೧ ನಾಮ. ೨ ವಿದ್ಯುತಃ ಸಂಬಂಧಿನೀಂ. ೩ ವಿಷಮೋಚಿಕಾಖ್ಯಾಃ. ೪ ಕವಚಂ. ೫ ಪ್ರಚಂಡಾಕಾಲದಂಭೋಲಿಸಮಾನಾ. ೬ ಘಾತಾಃ. ೭ ಇಂದ್ರಾಯುಧಜಯೇ.

ಈ ಭರತೇಶ್ವರನಿಗೆ ಶತ್ರುಗಳನ್ನು ಭೇದಿಸುವುದೂ ವಜ್ರದಿಂದ ನಿರ್ಮಿತವೂ ಇಂದ್ರಾಯುಧದ ಜಯದಲ್ಲಿಯೂ ಶ್ಲಾಘ್ಯವೂ ಭಯಂಕರವೂ ಆದ ವಜ್ರತುಂಡ ವೆಂದು ಹೆಸರುಳ್ಳ ಶಕ್ತ್ಯಾಯುಧವಿದ್ದಿತು.

**ಕುಂತಃ ಸಿಂಹಾಟಕೋ ನಾಮ ಯಃ ಸಿಂಹನಖರಾಂಕುರೈಃ ।**
**ಸ್ಪರ್ಧತೇ ಸ್ಮ ನಿಶಾತಾಗ್ರೋ [೧]ಮಣಿದಂಡಾಗ್ರಮಂಡನಃ ॥ ೧೭೪ ॥**

ಭರತಚಕ್ರಿಗೆ ಹರಿತವಾದ ಮೊನೆಯುಳ್ಳದೂ ರತ್ನಮಯವಾದ ದಂಡದ ತುದಿಯು ಅಲಂಕಾರವಾಗಿರುವುದೂ ಆದ ಸಿಂಹಾಟಕವೆಂಬ ಈಟಿಯು ಸಿಂಹದ ಉಗುರುಗಳೊಡನೆ ಹೋರಾಡುತ್ತಿದ್ದಿತು. ಸಿಂಹದ ಉಗುರುಗಳಿಗೆ ಸಮಾನ ವಾಗಿದ್ದಿತೆಂದು ಭಾವವು.

**ತಸ್ಯಾ[೨]ಸಿಪುತ್ರಿಕಾ ದೀಪ್ರಾ ರತ್ನಾನದ್ಧಸ್ಫುರತ್[೩]ತ್ಸರುಃ ।**
**ಲೋಹವಾಹಿನ್ಯಭೂನ್ನಾಮ್ನಾ ಜಯಶ್ರೀದರ್ಪಣಾಯಿತಾ ॥ ೧೭೫ ॥**

ಆ ಭರತೇಶ್ವರನಿಗೆ ಜಯಲಕ್ಷ್ಮಿಯ ಕನ್ನಡಿಯಂತಿರುವುದೂ ರತ್ನಖಚಿತವೂ ಪ್ರಕಾಶಮಾನವೂ ಆದ ಹಿಡಿಯುಳ್ಳದೂ ಪ್ರಕಾಶಮಾನವೂ ಆದ ಲೋಹವಾಹಿನಿ ಯೆಂಬ ಚೂರಿಯಿದ್ದಿತು.

**[೪]ಕಣಯೋಸ್ಯ ಮನೋವೇಗೋ ಜಯಶ್ರೀಪ್ರಣಯಾವಹಃ ।**
**ದ್ವಿಷತ್ಕುಲ[೫]ಕುಲಕ್ಷ್ಮಾಭೃದಲನೇ ಯೋಶನೀಯಿತಃ ॥ ೧೭೬ ॥**

ಈ ಭರತೇಶ್ವರನಿಗೆ ಶತ್ರುಸಮೂಹವೆಂಬ ಕುಲಪರ್ವತವನ್ನು ಸೀಳುವುದರಲ್ಲಿ ವಜ್ರಾಯುಧದಂತಿರುವುದೂ ಮನಸ್ಸಿನಂತೆ ವೇಗ(ಹರಿತ)ವುಳ್ಳದೂ ಜಯಲಕ್ಷ್ಮಿಗೆ ಪ್ರೀತಿಯನ್ನುಂಟುಮಾಡುವುದೂ ಆದ ಮುಷ್ಟ್ಯಾಯುಧವಿದ್ದಿತು.

**ಸೌನಂದಕಾಖ್ಯಮಸ್ಯಾಭೂದಸಿರತ್ನಂ ಸ್ಫುರದ್ದ್ಯುತಿ ।**
**ಯಸ್ಮಿನ್ಕರತಲಾರೂಢೇ[೬]ದೋಲಾರೂಢಮಿವಾ[೭]ಖಿಲಮ್ ॥ ೧೭೭ ॥**

ಈ ಭರತೇಶ್ವರನಿಗೆ ಯಾವ ಖಡ್ಗವನ್ನು ಕೈಯಲ್ಲಿ ಹಿಡಿದರೆ ಲೋಕವು ಉಯ್ಯಾಲೆಯನ್ನು ಹತ್ತಿದಂತೆ ಕಂಪಿಸುವುದೋ ಅಂತಹ ಪ್ರಕಾಶಮಾನವಾದ ಕಾಂತಿಯುಳ್ಳ ಸೌನಂದಕವೆಂಬ ಖಡ್ಗರತ್ನವಿದ್ದಿತು.

**ಪ್ರಾಹುರ್ಭೂತಮುಖಂ ಖೇಟಂ ವಿಭೋರ್ಭೂತಮುಖಾಂಕಿತಮ್ ।**
**ಸ್ಫುರತಾ[೮]ಜೀಮುಖೇ ಯೇನ ದ್ವಿಷಾಂ ಮೃತ್ಯುಮುಖಾಯಿತಮ್ ॥**

ಪ್ರಕಾಶಮಾನವಾದ ರಣಾಗ್ರದಲ್ಲಿ ಶತ್ರುಗಳಿಗೆ ಯಮನ ಮುಖದಂತಾಚರಿಸಿ ದುದೂ ಭೂತಗಳ ಮುಖಗಳಿಂದ ಗುರುತಿಸಲ್ಪಟ್ಟುದೂ ಆದ ಪ್ರಭುವಿನ ಗುರಾಣಿಗೆ ಭೂತಮುಖವೆಂದು ಹೇಳುತ್ತಾರೆ.

**ಚಕ್ರರತ್ನಮಭೂಜ್ಜಿಷ್ಣೋರ್ದಿಕ್ಚಕ್ರಾಕ್ರಮಣಕ್ಷಮಮ್ ।**
**ನಾಮ್ನಾ ಸುದರ್ಶನಂ ದೀಪ್ರಂ ಯ[೯]ದ್ದುರ್ದರ್ಶಮರಾತಿಭಿಃ ॥ ೧೭೯ ॥**

ಜಯಶೀಲನಾದ ಭರತೇಶ್ವರನಿಗೆ ದಿಙ್ಮಂಡಲವನ್ನು ಆಕ್ರಮಿಸುವುದರಲ್ಲಿ ಸಮರ್ಥವೂ ಪ್ರಕಾಶಮಾನವೂ ಶತ್ರುಗಳಿಂದ ನೋಡಲಶಕ್ಯವೂ ಆದ ಸುದರ್ಶನ ವೆಂಬ ಚಕ್ರವಿದ್ದಿತು.

**ಪ್ರಚಂಡಶ್ಚಂಡವೇಗಾಖ್ಯೋ [೧೦]ದಂಡೋಭೂಚ್ಚಕ್ರಿಣಃ ಪೃಥುಃ ।**
**ಸ ಯಸ್ಯ ವಿನಿಯೋಗೋಭೂದ್ಬಿಲಕಂಟಕಶೋಧನೇ ॥ ೧೮೦ ॥**

ಭರತಚಕ್ರೇಶ್ವರನಿಗೆ ಬಿಲಗಳನ್ನೂ ಮುಳ್ಳುಗಳನ್ನೂ ಶೋಧಿಸುವುದರಲ್ಲಿ ಉಪಯೋಗಕರವೂ ಭಯಂಕರವೂ ದೊಡ್ಡದೂ ಆದ ಚಂಡವೇಗವೆಂಬ ದಂಡರತ್ನವಿದ್ದಿತು.

೧ ರತ್ನಮಯದಂಡಾಗ್ರಂ ಮಂಡನಮಲಂಕಾರೋ ಯಸ್ಯ. ೨ ಛುರಿಕಾ. ೩ ಮುಷ್ಟಿಃ. ೪ ಮುಷ್ಟಿಃ. ೫ ಕುಲಪರ್ವತಃ. ೬ ಪ್ರಾಪ್ತಾಂದೋಲಮಿವ. ೭ ಜಗತ್. ೮ ಸಂಗ್ರಾಮಮುಖೇ. ೯ ದ್ರಷ್ಟುಮಶಕ್ಯಂ. ೧೦ ದಂಡರತ್ನಂ.

**ನಾಮ್ನಾ ವಜ್ರಮಯಂ ದಿವ್ಯಂ ಚರ್ಮರತ್ನಮಭೂದ್ವಿಭೋಃ ।**
**ತದ್ಬಲಂ ಯದ್ಬಲಾಧಾನಾ[೧]ನ್ನಿಸ್ತೀರ್ಣಂ [೨]ಜಲವಿಪ್ಲವಾತ್ ॥ ೧೮೧ ॥**

ಭರತೇಶ್ವರನಿಗೆ ದಿವ್ಯವೂ ವಜ್ರಮಯವೆಂದು ಹೆಸರುಳ್ಳದೂ ಆದ ಚರ್ಮ ರತ್ನವಿದ್ದಿತು. ಅದರ ಶಕ್ತಿಯ ಅವಲಂಬನದಿಂದ ಭರತೇಶ್ವರನ ಸೈನ್ಯವು ಜಲಪ್ರವಾಹ ವನ್ನು ದಾಟಿತು.

**ಮಣಿಶ್ಚೂಡಾಮಣಿರ್ನಾಮ ಚಿಂತಾರತ್ನಮನುತ್ತರಮ್ ।**
**ಜಗಚ್ಚೂಡಾಮಣೇರಸ್ಯ ಚಿತ್ತಂ ಯೇನಾನುರಂಜಿತಮ್ ॥ ೧೮೨ ॥**

ಲೋಕೋತ್ತರನಾದ ಈ ಭರತೇಶ್ವರನ ಮನಸ್ಸನ್ನು ಸಂತೋಷಪಡಿಸುವುದೂ ಚೂಡಾಮಣಿಯೆಂದು ಹೆಸರುಳ್ಳದೂ ಸರ್ವೋತ್ಕೃಷ್ಟವೂ ಆದ ಚಿಂತಾಮಣಿ ಯೆಂಬ ರತ್ನವಿದ್ದಿತು.

**ಸಾ [೩]ಚಿಂತಾಜನನೀತ್ಯಸ್ಯ ಕಾಕಿಣೀ ಭಾಸ್ವರಾಭವತ್ ।**
**ಯಾ ರೂಪ್ಯಾದ್ರಿಗುಹಾಧ್ವಾಂತವಿನಿರ್ಭೇದೈಕದೀಪಿಕಾ ॥ ೧೮೩ ॥**

ಈ ಭರತೇಶ್ವರನಿಗೆ ವಿಜಯಾರ್ಧಪರ್ವತದ ಗುಹೆಗಳ ಕತ್ತಲೆಯನ್ನು ಹೋಗ ಲಾಡಿಸುವುದರಲ್ಲಿ ಮುಖ್ಯವಾದ ದೀಪವಾದುದೂ ಪ್ರಕಾಶಮಾನವೂ ಆದ ಚಿಂತಾ ಜನನಿಯೆಂಬ ಕಾಕಿಣೀರತ್ನವಿದ್ದಿತು.

**ಚಮೂಪತಿರಯೋಧ್ಯಾಖ್ಯೋ ನೃರತ್ನಮಭವತ್ಪ್ರಭೋಃ ।**
**ಸಮರೇ[೪]ರಿಜಯಾದ್ಯಸ್ಯ [೫]ರೋದಸೀ ವ್ಯಾನಶೇ ಯಶಃ ॥ ೧೮೪ ॥**

ಯುದ್ಧದಲ್ಲಿ ಶತ್ರುಗಳನ್ನು ಜಯಿಸಿದುದರಿಂದ ಯಾವನ ಕೀರ್ತಿಯು ಭೂಮ್ಯಾಕಾಶಗಳನ್ನು ವ್ಯಾಪಿಸಿದ್ದಿತೋ ಅಂತಹ ಅಯೋಧ್ಯನೆಂದು ಹೆಸರುಳ್ಳ ನರರತ್ನವು ಭರತೇಶ್ವರನಿಗೆ ಸೈನ್ಯಾಧಿಪತಿಯಾಗಿದ್ದನು.

**ಬುದ್ಧಿಸಾಗರನಾಮಾಸ್ಯ ಪುರೋಧಾಃ ಪುರುಧೀರಭೂತ್ ।**
**ಧರ್ಮ್ಯಾ ಕ್ರಿಯಾ ಯದಾಯತ್ತಾ [೬]ಪ್ರತೀಕಾರೋಪಿ [೭]ದೈವಿಕೇ॥ ೧೮೫ ॥**

ಈ ಭರತೇಶ್ವರನಿಗೆ ಶ್ರೇಷ್ಠವಾದ ಬುದ್ಧಿಯುಳ್ಳವನಾದ ಬುದ್ಧಿಸಾಗರನೆಂಬ ಪುರೋಹಿತನಿದ್ದನು. ಧಾರ್ಮಿಕಕ್ರಿಯೆಯೂ ಉತ್ಪಾತವು ಬಂದಾಗ ಶಾಂತಿಕ್ರಿಯೆ ಯೂ ಆ ಪುರೋಹಿತನ ಅಧೀನವಾಗಿದ್ದುವು. ಧಾರ್ಮಿಕಕ್ರಿಯೆಯೂ ಶಾಂತಿಕ್ರಿಯೆ ಯೂ ಆ ಪುರೋಹಿತನ ಕೆಲಸಗಳಾಗಿದ್ದುವೆಂದು ಭಾವವು.

**ಸುಧೀ[೮]ರ್ಗೃಹಪತಿರ್ನಾಮ್ನಾ ಕಾಮವೃಷ್ಟಿರಭೀಷ್ಟದಃ ।**
**ವ್ಯಯೋ[೯]ಪವ್ಯಯಚಿಂತಾಯಾಂ ನಿಯುಕ್ತೋ ಯೋ ಧನೇಶಿನಃ ॥**

ಧನಪತಿಯಾದ ಭರತಚಕ್ರೇಶ್ವರನಿಗೆ ವ್ಯಯ ಮತ್ತು ಆಯದ ವಿಚಾರದಲ್ಲಿ ನೇಮಿಸಲ್ಪಟ್ಟಿದ್ದವನೂ ಬುದ್ಧಿಶಾಲಿಯೂ ಇಷ್ಟಾರ್ಥವನ್ನು ಕೊಡುವವನೂ ಆದ ಕಾಮವೃಷ್ಟಿಯೆಂದು ಹೆಸರುಳ್ಳ ರಾಜಶ್ರೇಷ್ಠಿಯಿದ್ದನು.

**ರತ್ನಂ ಸ್ಥಪತಿರಪ್ಯಸ್ಯ [೧೦]ವಾಸ್ತುವಿದ್ಯಾಪದಾತ್ತಧೀಃ ।**
**ನಾಮ್ನಾ ಭದ್ರಮುಖೋನೇಕಪ್ರಾಸಾದಘಟನೇ ಪಟುಃ ॥ ೧೮೭ ॥**

ಈ ಭರತೇಶ್ವರನಿಗೆ ವಾಸ್ತುವಿದ್ಯಾಸ್ಥಾನದಲ್ಲಿ ಬುದ್ಧಿಯುಳ್ಳವನೂ ಅನೇಕವಾದ ಅರಮನೆಗಳ ರಚನೆಯಲ್ಲಿ ಚತುರನೂ ಭದ್ರಮುಖನೆಂದು ಹೆಸರುಳ್ಳವನೂ ಆದ ಸ್ಥಪತಿರತ್ನ (ಬಡಿಗಿ) ಇದ್ದನು.

**ಶೈಲೋದಗ್ರೋ ಮಹಾನಸ್ಯ [೧೧]ಯಾಗಹಸ್ತೀ ಕ್ಷರನ್ಮದಃ ।**
**ಭದ್ರೋ ಗಿರಿಚರಃ ಶುಭ್ರೋ ನಾಮ್ನಾ ವಿಜಯಪರ್ವತಃ ॥ ೧೮೮ ॥**

೧ ನಿಸ್ತರಣಮಕರೋತ್. ೨ ಚಲಿತಾವರ್ತಕೃತಜಲಪ್ರವಾಹಾತ್. ೩ ಚಿಂತಾಜನನ್ಯಾಖ್ಯಾ. ೪ ವಿಜಯಾದಿತ್ಯಪಿ ಪಾಠಃ. ೫ ಭೂಮ್ಯಾಕಾಶೇ. ೬ ಶಾಂತಿಃ. ೭ ಉತ್ಪಾತೇ. ೮ ರಾಜಶ್ರೇಷ್ಠೀ. ೯ ಆಯ. ೧೦ ವಾಸ್ತುವಿದ್ಯಾಸ್ಥಾನೇ ಸ್ವೀಕೃತಬುದ್ಧಿಃ. ೧೧ ಪೂಜ್ಯ.

ಈ ಭರತೇಶ್ವರನಿಗೆ ಬೆಟ್ಟದಂತೆ ಉನ್ನತವೂ ದೊಡ್ಡದೂ ಮದಜಲವನ್ನು ಸುರಿಯುವುದೂ ಮಂಗಲಸ್ವರೂಪವೂ ಪರ್ವತಗಳಲ್ಲಿ ಸಂಚರಿಸುವುದೂ ಶುಭ್ರವೂ ವಿಜಯಪರ್ವತವೆಂದು ಹೆಸರುಳ್ಳುದೂ ಆದ ಭದ್ರಗಜವಿದ್ದಿತು.

**ಪವನಸ್ಯ ಜಯನ್ವೇಗಂ ಹಯೋಽಸ್ಯ ಪವನಂಜಯಃ ।**
**ವಿಜಯಾರ್ಧಗುಹೋತ್ಸಂಗಂ ಹೇಲಯಾ ಯೋ ವ್ಯಲಂಘಯತ್ ॥**

ಈ ಭರತೇಶ್ವರನಿಗೆ ವಿಜಯಾರ್ಧಪರ್ವತದ ಗುಹೆಗಳ ಮಧ್ಯಭಾಗವನ್ನು ಲೀಲೆಯಿಂದ ದಾಟಿದುದೂ ಗಾಳಿಯ ವೇಗವನ್ನು ಜಯಿಸಿರುವುದೂ ಆದ ಪವನಂಜಯವೆಂಬ ಕುದುರೆಯಿದ್ದಿತು.

**ಪ್ರಾಗುಕ್ತವರ್ಣನಂ ಚಾಸ್ಯ ಸ್ತ್ರೀರತ್ನಂ ರೂಢನಾಮಕಮ್ ।**
**[೧]ಸ್ವಭಾವಮಧುರಂ ಹೃದ್ಯಂ ರಸಾಯನಮಿವಾಪರಮ್ ॥ ೧೮೦ ॥**

ಈ ಭರತಚಕ್ರೇಶ್ವರನಿಗೆ ಮೊದಲು ಹೇಳಲ್ಪಟ್ಟ ವರ್ಣನೆಯುಳ್ಳುದೂ ಸುಭದ್ರೆಯೆಂದು ರೂಢವಾದ ಹೆಸರುಳ್ಳುದೂ ವಿಲಕ್ಷಣವಾದ ರಸಾಯನದಂತೆ ಸ್ವಭಾವದಿಂದ–ಅಲಂಕಾರಪೇಕ್ಷೆಯಿಲ್ಲದೆ ಮಧುರವೂ–ಸುಖಸಾಧನವೂ ಮನೋಹರವೂ ಆದ ಸ್ತ್ರೀರತ್ನವಿದ್ದಿತು.

**ರತ್ನಾನ್ಯೇತಾನಿ ದಿವ್ಯಾನಿ ಬಭೂವುಶ್ಚಕ್ರವರ್ತಿನಃ ।**
**ದೇವತಾಕೃತರಕ್ಷಾಣಿ ಯಾನ್ಯಲಂಘ್ಯಾನಿ ವಿದ್ವಿಷಾಮ್ ॥ ೧೮೧ ॥**

ಭರತಚಕ್ರೇಶ್ವರಿನಿಗೆ ದೇವತೆಗಳಿಂದ ರಕ್ಷಿಸಲ್ಪಟ್ಟುವೂ ಶತ್ರುಗಳಿಗೆ ಮೀರಲಶಕ್ಯಗಳೂ ಆದ ಈ ದಿವ್ಯರತ್ನಗಳಿದ್ದುವು. ಮೇಲೆ ಹೇಳಲ್ಪಟ್ಟ ರತ್ನಗಳಿದ್ದುವೆಂದು ಭಾವವು.

**ಆನಂದಿನ್ಯೋಽಬ್ಧಿನಿರ್ಘೋಷಾ ಭೇರ್ಯೋಽಸ್ಯ ದ್ವಾದಶಾಭವನ್ ।**
**ದ್ವಿಷಡ್ಯೋಜನಮಾಪೂರ್ಯ ಸ್ವೈರ್ಧ್ವಾನೈರ್ಯಾಃ ಪ್ರದಧ್ವನುಃ ॥ ೧೮೨ ॥**

ಈ ಭರತೇಶ್ವರನಿಗೆ ಸಮುದ್ರದಂತೆ ಧ್ವನಿಯುಳ್ಳುವೂ ಆನಂದಿಗಳೆಂದು ಹೆಸರುಳ್ಳುವೂ ಆದ ಹನ್ನೆರಡು ಭೇರಿಗಳಿದ್ದುವು. ಆ ಭೇರಿಗಳು ತಮ್ಮ ಶಬ್ದಗಳಿಂದ ಹನ್ನೆರಡು ಯೋಜನದೂರದವರೆಗೆ ವ್ಯಾಪಿಸಿ ಧ್ವನಿಮಾಡುತ್ತಿದ್ದುವು.

**ಆಸನ್ವಿಜಯಘೋಷಾಖ್ಯಾಃ ಪಟಹಾ ದ್ವಾದಶಾಪರೇ ।**
**ಗೃಹಕೇಕಿಭಿರುದ್ಗ್ರೀವೈಃ ಸಾನಂದಂ ಶ್ರುತನಿಃಸ್ವನಾಃ ॥ ೧೮೩ ॥**

ಕುತ್ತಿಗೆಗಳನ್ನು ಮೇಲಕ್ಕೆತ್ತಿದುವುಗಳಾದ ಮನೆಯ ನವಿಲುಗಳಿಂದ ಆನಂದವಾಗಿ ಕೇಳಲ್ಪಟ್ಟ ಶಬ್ದಗಳುಳ್ಳುವೂ ವಿಜಯಘೋಷಗಳೆಂದು ಹೆಸರುಗಳುಳ್ಳುವೂ ಆದ ಬೇರೆ ಹನ್ನೆರಡು ಭೇರಿಗಳಿದ್ದುವು.

**ಗಂಭೀರಾವರ್ತನಾಮಾನಃ ಶಂಖಾ ಗಂಭೀರನಿಃಸ್ವನಾಃ ।**
**ಚತುರ್ವಿಂಶತಿರಸ್ಯಾಸನ್ [೨]ಶುಭಾಃ ಪುಣ್ಯಾಬ್ಧಿಸಂಭವಾಃ ॥ ೧೮೪ ॥**

ಈ ಭರತೇಶ್ವರನಿಗೆ ಪುಣ್ಯಕರವಾದ ಸಮುದ್ರದಲ್ಲುದ್ಭವಿಸಿದುವೂ ಶುಭ್ರಗಳೂ ಗಂಭೀರವಾದ ಶಬ್ದಗಳುಳ್ಳುವೂ ಗಂಭಿರಾವರ್ತಗಳೆಂದು ಹೆಸರುಗಳುಳ್ಳುವೂ ಆದ ಇಪ್ಪತ್ತನಾಲ್ಕು ಶಂಖಗಳಿದ್ದುವು.

**ಕಟಕಾ ರತ್ನನಿರ್ಮಾಣಾ ವಿಭೋರ್ವೀರಾಂಗದಾಹ್ವಯಾಃ ।**
**ರೇಜುಃ ಪ್ರಕೋಷ್ಠಮಾವೇಷ್ಟ್ಯ ತಡಿದ್ವಲಯವಿಭ್ರಮಾಃ ॥ ೧೮೫ ॥**

ಭರತೇಶ್ವರನ ಮಿಂಚಿನ ಕಂಕಣದ ಶೋಭೆಯುಳ್ಳುವೂ ರತ್ನನಿರ್ಮಿತಗಳೂ ವೀರಾಂಗದಗಳೆಂದು ಹೆಸರುಳ್ಳುವೂ ಆದ ಕೈಗಡಗಗಳು ಮುಂಗೈಯನ್ನು ಆವರಿಸಿಕೊಂಡು ಶೋಭಿಸಿದುವು.

೧ ಅಲಂಕಾರನಿರಪೇಕ್ಷಯಾ ಸುಖಸಾಧನಮಿತ್ಯರ್ಥಃ. ೨ ಶುಭ್ರಾಃ.

**ಪತಾಕಾಕೋಟಯೋಽಸ್ಯಾಷ್ಟಚತ್ವಾರಿಂಶತ್ಪ್ರಮಾ ಮತಾಃ ।**
**ಮರು[೧]ತ್ಪ್ರೇಂಖೋಲಿಕೋತ್ಪ್ರೇಂಖದಂಶುಕೋ[೨]ನ್ಮೃಷ್ಟಖಾಂಗಣಾಃ ॥**

ಈ ಭರತೇಶ್ವರನಿಗೆ ಗಾಳಿಯ ಬೀಸುವಿಕೆಯಿಂದ ಮೇಲಕ್ಕೆ ಹಾರುತ್ತಿರುವ ಬಟ್ಟೆಗಳಿಂದ ಆಕಾಶಪ್ರದೇಶವನ್ನು ಸಾರಿಸುತ್ತಿರುವುವುಗಳಾದ ನಲ್ವತ್ತೆಂಟುಕೋಟಿ ಧ್ವಜಪತಾಕೆಗಳಿದ್ದುವು.

**ಮಹಾಕಲ್ಯಾಣಕಂ ನಾಮ ದಿವ್ಯಾ[೩]ಶನಮಭೂದ್ವಿಭೋಃ ।**
**ಕಲ್ಯಾಣಾಂಗಸ್ಯ ಯೇನಾಸ್ಯ ತೃಪ್ತಿಪುಷ್ಟೀ ಬಲಾನ್ವಿತೇ ॥ ೧೮೭ ॥**

ಮಂಗಲಕರವಾದ ಶರೀರವುಳ್ಳವನಾದ ಈ ಭರತಪ್ರಭುವಿಗೆ ತೃಪ್ತಿಯನ್ನೂ ಪುಷ್ಟಿಯನ್ನೂ ಶಕ್ತಿಯನ್ನೂ ಉಂಟುಮಾಡತಕ್ಕುದಾದ ಮಹಾಕಲ್ಯಾಣಕವೆಂಬ ದಿವ್ಯಾಹಾರವಿದ್ದಿತು.

**ಭಕ್ಷ್ಯಾಶ್ಚಾಮೃತಗರ್ಭಾಖ್ಯಾ ರುಚ್ಯಾಸ್ವಾದಾಃ ಸುಗಂಧಯಃ ।**
**ನಾನ್ಯೇ [೪]ಜರಯಿತುಂ ಶಕ್ತಾ ಯಾ[೫]ನ್ಗರಿಷ್ಠರಸೋತ್ಕಟಾನ್ ॥ ೧೮೮ ॥**

ತಿನ್ನುವುದಕ್ಕೆ ರುಚಿಯಾಗಿರುವುವೂ ಪರಿಮಳವುಳ್ಳುವೂ ಅಮೃತಗರ್ಭಗಳೆಂದು ಹೆಸರುಗಳುಳ್ಳುವೂ ಆದ ಭಕ್ಷ್ಯಗಳಿದ್ದುವು. ಬಹುಗರಿಷ್ಠವಾದ ರಸಗಳಿಂದ ತೀವ್ರವಾದ ಆ ಭಕ್ಷ್ಯಗಳನ್ನು, ಚಕ್ರವರ್ತಿಯಲ್ಲದೆ, ಬೇರೆಯವರು ಜೀರ್ಣಿಸಿಕೊಳ್ಳಲು ಸಮರ್ಥರಲ್ಲ.

**[೬]ಸ್ವಾದ್ಯಂ ಚಾಮೃತಗರ್ಭಾಖ್ಯಂ ಹೃದ್ಯಾಸ್ವಾದಂ ಸುಸಂಸ್ಕೃತಮ್ ।**
**ರಸಾಯನರಸಂ ದಿವ್ಯಂ ಪಾನಕಂ ಚಾಮೃತಾಹ್ವಯಮ್ ॥ ೧೮೯ ॥**

ಕುಡಿಯುವುದಕ್ಕೆ ರುಚಿಯಾಗಿರುವುದೂ ಚೆನ್ನಾಗಿ ಸಿದ್ಧಪಡಿಸಲ್ಪಟ್ಟುದೂ ಅಮೃತಗರ್ಭವೆಂದು ಹೆಸರುಳ್ಳುದೂ ಆದ ತಾಂಬೂಲಾದಿ ಸ್ವಾದ್ಯಪದಾರ್ಥವೂ ರಸಾಯನದಂತೆ ರಸವುಳ್ಳುದೂ ಶ್ರೇಷ್ಠವೂ ಅಮೃತವೆಂದು ಹೆಸರುಳ್ಳುದೂ ಆದ ಪಾನಕವೂ ಇದ್ದುವು.

**ಪುಣ್ಯಕಲ್ಪತರೋರಾಸನ್ಫಲಾನ್ಯೇತಾನಿ ಚಕ್ರಿಣಃ ।**
**ಯಾನ್ಯನನ್ಯೋಪಭೋಗ್ಯಾನಿ ಭೋಗಾಂಗಾನ್ಯತುಲಾನಿ ವೈ ॥ ೧೯೦ ॥**

ಬೇರೆಯವರಿಂದ ಭೋಗಿಸಲ್ಪಡತಕ್ಕುವಲ್ಲದುವೂ ಅನುಪಮಗಳೂ ಆದ ಈ ಭೋಗಸಾಧನಗಳು ಚಕ್ರವರ್ತಿಯ ಪುಣ್ಯವೆಂಬ ಕಲ್ಪವೃಕ್ಷದ ಫಲಗಳಾಗಿದ್ದುವು.

**ಪುಣ್ಯಾದ್ವಿನಾ ಕುತಸ್ತಾದೃಗ್ರೂಪಸಂಪದನೀದೃಶೀ ।**
**ಪುಣ್ಯಾದ್ವಿನಾ ಕುತಸ್ತಾದೃಗಭೇದ್ಯಂ ಗಾತ್ರಬಂಧನಮ್ ॥ ೧೯೧ ॥**

ಪುಣ್ಯವಿಲ್ಲದೆ ಅಂತಹ ಅಸದೃಶವಾದ ರೂಪಸಂಪತ್ತಿಯು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ಅಭೇದ್ಯವಾದ ಶರೀರದ ಕಟ್ಟು ಎಲ್ಲಿ ಬಂದಿತು ?

**ಪುಣ್ಯಾದ್ವಿನಾ ಕುತಸ್ತಾದೃಙ್ನಿಧಿರತ್ನರ್ದ್ಧಿರೂರ್ಜಿತಾ ।**
**ಪುಣ್ಯಾದ್ವಿನಾ ಕುತಸ್ತಾದೃಗಿಭಾಶ್ವಾದಿಪರಿಚ್ಛದಃ ॥ ೧೯೨ ॥**

ಪುಣ್ಯವಿಲ್ಲದೆ ಅಂತಹ ಶ್ರೇಷ್ಠವಾದ ನಿಧಿಗಳ ಮತ್ತು ರತ್ನಗಳ ವಿಭವವು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ಆನೆ ಕುದುರೆ ಮೊದಲಾದ ಪರಿವಾರವು ಎಲ್ಲಿ ಬಂದಿತು ?

**ಪುಣ್ಯಾದ್ವಿನಾ ಕುತಸ್ತಾದೃಗಂತಃಪುರಮಹೋದಯಃ ।**
**ಪುಣ್ಯಾದ್ವಿನಾ ಕುತಸ್ತಾದೃಗ್ದಶಾಂಗೋ ಭೋಗಸಂಭವಃ ॥ ೧೯೩ ॥**

ಪುಣ್ಯವಿಲ್ಲದೆ ಅಂತಹ ರಾಣಿವಾಸದ ಅಭ್ಯುದಯವು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ದಶವಿಧ ಭೋಗಸಂಪತ್ತಿಯು ಎಲ್ಲಿ ಬಂದಿತು ?

೧ ಚಲನೇನೋಚ್ಚಲತ್. ೨ ಸಮ್ಮಾರ್ಜಿತ. ೩ ಆಹಾರಃ. ೪ ಜೀರ್ಣಯಿತುಂ. ೫ ಅತಿಗುರು. ೬ ತಾಂಬೂಲಾದಿ.

**ಪುಣ್ಯಾದ್ವಿನಾ ಕುತಸ್ತಾದೃಗಾಜ್ಞಾ ದ್ವೀಪಾಬ್ಧಿಲಂಘಿನೀ ।**
**ಪುಣ್ಯಾದ್ವಿನಾ ಕುತಸ್ತಾದೃಗ್ಜಯಶ್ರೀರ್ಜಿತ್ವರೀ ದಿಶಾವ್ ॥ ೧೯೪ ॥**

ಪುಣ್ಯವಿಲ್ಲದೆ ಅಂತಹ ದ್ವೀಪಸಮುದ್ರಗಳನ್ನು ದಾಟಿದ ಆಜ್ಞೆಯು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ದಿಕ್ಕುಗಳನ್ನು ಜಯಿಸುವುದಾದ ಜಯಲಕ್ಷ್ಮಿಯು ಎಲ್ಲಿ ಬಂದಳು ?

**ಪುಣ್ಯಾದ್ವಿನಾ ಕುತಸ್ತಾದೃಕ್ಪ್ರತಾಪಃ ಪ್ರಣತಾಮರಃ ।**
**ಪುಣ್ಯಾದ್ವಿನಾ ಕುತಸ್ತಾದೃಗುದ್ಯೋಗೋ ಲಂಘಿತಾರ್ಣವಃ ॥ ೧೯೫ ॥**

ಪುಣ್ಯವಿಲ್ಲದೆ ದೇವತೆಗಳಿಂದ ನಮಸ್ಕಾರಮಾಡಿಸಿಕೊಂಡಿರುವ ಅಂತಹ ಪ್ರತಾಪವು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ಸಮುದ್ರವನ್ನು ದಾಟಿರುವ ಉದ್ಯೋಗವು ಎಲ್ಲಿಬಂದಿತು ?

**ಪುಣ್ಯಾದ್ವಿನಾ ಕುತಸ್ತಾದೃಗ್ಪ್ರಾಭವಂ ತ್ರಿಜಗಜ್ಜಯೀ ।**
**ಪುಣ್ಯಾದ್ವಿನಾ ಕುತಸ್ತಾದೃ[೧]ಙ್ನಗರಾಜಜಯೋತ್ಸವಃ ॥ ೧೯೬ ॥**

ಪುಣ್ಯವಿಲ್ಲದೆ ಅಂತಹ ಮೂರುಲೋಕವನ್ನು ಜಯಿಸಿರುವ ಪ್ರಭುತ್ವವು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ಹಿಮವತ್ಪರ್ವತದ ಜಯದ ಉತ್ಸವವು ಎಲ್ಲಿ ಬಂದಿತು ?

**ಪುಣ್ಯಾದ್ವಿನಾ ಕುತಸ್ತಾದೃಕ್ಸತ್ಕಾರ[೨]ಸ್ತತ್ಕೃತೋಧಿಕಃ ।**
**ಪುಣ್ಯಾದ್ವಿನಾ ಕುತಸ್ತಾದೃ[೩]ಕ್ಸರಿದ್ದೇವ್ಯಭಿಷೇಚನವ್ ॥ ೧೯೭ ॥**

ಪುಣ್ಯವಿಲ್ಲದೆ ಅಂತಹ ಹಿಮವತ್ಪರ್ವತದಲ್ಲಿಯ ದೇವನಿಂದ ಮಾಡಲ್ಪಟ್ಟ ವಿಶೇಷವಾದ ಸತ್ಕಾರವು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ಗಂಗಾದೇವೀ ಸಿಂಧುದೇವಿಯರಿಂದ ಮಾಡಲ್ಪಟ್ಟ ಅಭಿಷೇಕವು ಎಲ್ಲಿ ಬಂದಿತು ?

**ಪುಣ್ಯಾದ್ವಿನಾ ಕುತಸ್ತಾದೃಕ್ಖಚರಾಚಲನಿರ್ಜಯಃ ।**
**ಪುಣ್ಯಾದ್ವಿನಾ ಕುತಸ್ತಾದೃಗ್ರತ್ನಲಾಭೋನ್ಯದುರ್ಲಭಃ ॥ ೧೯೮ ॥**

ಪುಣ್ಯವಿಲ್ಲದೆ ಅಂತಹ ವಿಜಯಾರ್ಧಪರ್ವತದ ಜಯವು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಬೇರೆಯವರಿಗೆ ದುರ್ಲಭವಾದ ಅಂತಹ ರತ್ನಗಳ ಲಾಭವು ಎಲ್ಲಿ ಬಂದಿತು ?

**ಪುಣ್ಯಾದ್ವಿನಾ ಕುತಸ್ತಾದೃ[೪]ಗಾಯತಿರ್ಭರತೇಖಿಲೇ ।**
**ಪುಣ್ಯಾದ್ವಿನಾ ಕುತಸ್ತಾದೃಕ್ಕೀರ್ತಿರ್ದಿಕ್ತಟಲಂಘಿನೀ ॥ ೧೯೯ ॥**

ಪುಣ್ಯವಿಲ್ಲದೆ ಸಂಪೂರ್ಣ ಭರತಖಂಡದಲ್ಲಿ ಅಂತಹ ಧನಲಾಭವು ಎಲ್ಲಿ ಬಂದಿತು ? ಪುಣ್ಯವಿಲ್ಲದೆ ಅಂತಹ ದಿಕ್ಪ್ರದೇಶಗಳನ್ನು ದಾಟಿರುವ ಕೀರ್ತಿಯು ಎಲ್ಲಿ ಬಂದಿತು ?

**ತತಃ ಪುಣ್ಯೋದಯೋದ್ಭೂತಾಂ ಮತ್ವಾ ಚಕ್ರಭೃತಃ ಶ್ರಿಯಮ್ ।**
**ಚಿನುಧ್ವಂ ಭೋ ಬುಧಾಃ ಪುಣ್ಯಂ ಯ[೫]ತ್ಪುಣ್ಯಂ ಸುಖಸಂಪದಾಮ್ ॥**

ಆದುದರಿಂದ ಎಲೈ ವಿದ್ವಾಂಸರೆ ! ಚಕ್ರವರ್ತಿಯ ಸಂಪತ್ತಿಯು ಪುಣ್ಯೋದಯ ದಿಂದುಟಾದುದೆಂದು ತಿಳಿದು ಸುಖ ಸಂಪತ್ತಿಗಳಿಗೆ ಮೂಲ್ಯವಾದ ಪುಣ್ಯವನ್ನು ಗಳಿಸಿರಿ.

**ಇತ್ಯಾವಿಷ್ಕೃತಸಂಪದೋ ವಿಜಯಿನಸ್ತಸ್ಯಾಖಿಲಕ್ಷ್ಮಾಭೃತಾಂ**
**[೬]ಸ್ಫೀತಾಮಪ್ರತಿಶಾಸನಾಂ ಪ್ರಥಯತಃ ಷಟ್ಖಂಡರಾಜ್ಯಶ್ರಿಯಮ್ ।**
**ಕಾಲೋನಲ್ಪತರೋಪ್ಯಗಾತ್ಕ್ಷಣ ಇವ ಪ್ರಾಕ್ಪುಣ್ಯಕರ್ಮೋದಯಾ-**
**ದುದ್ಭೂತೈಃ ಪ್ರಮದಾವಹೈಃ ಷಡೃತುಜೈರ್ಭೋಗೈರತಿಸ್ವಾದುಭಿಃ ॥**

೧ ಹಿಮವತ್ಪರ್ವತ. ೨ ಹಿಮವತ್ಪರ್ವತಸ್ಥಸುರಕೃತಃ. ೩ ಗಂಗಾದೇವೀ ಸಿಂಧುದೇವೀ. ೪ ಧನಾಗಮಃ. ೫ ಮೂಲ್ಯಂ. ೬ ಮಹತೀಂ.

ಈ ಪ್ರಕಾರವಾಗಿ ತನ್ನ ಸಂಪತ್ತಿಯನ್ನು ಪ್ರಕಟಪಡಿಸಿದವನೂ ಸಮಸ್ತರಾಜರು ಗಳನ್ನು ಜಯಿಸಿರುವವನೂ ಅಧಿಕವೂ ತಡೆಯಿಲ್ಲದ ಆಜ್ಞೆಯುಳ್ಳುದೂ ಆದ ಷಟ್ಖಂಡರಾಜ್ಯಸಂಪತ್ತಿಯನ್ನು ಪ್ರಸಿದ್ಧಪಡಿಸುವವನೂ ಆದ ಆ ಭರತೇಶ್ವರನಿಗೆ ಕಾಲವು ಬಹಳವಾಗಿದ್ದರೂ ಪೂರ್ವಜನ್ಮದ ಪುಣ್ಯಕರ್ಮೋದಯದಿಂದುಂಟಾಗಿರು ವುವೂ ಸಂತೋಷವನ್ನುಂಟುಮಾಡುವುವೂ ಆರು ಋತುಗಳಿಂದುಂಟಾಗಿರುವುವೂ ಬಹು ಸ್ವಾದಿಷ್ಟಗಳೂ ಆದ ಭೋಗಗಳಿಂದ ಕ್ಷಣದಂತೆ ಕಳೆಯಿತು.

**ನಾನಾರತ್ನ[೧]ನಿಧಾನದೇಶವಿಲಸತ್ಸಂಪತ್ತಿಗುರ್ವೀಮಿಮಾಂ**
**ಸಾಮ್ರಾಜ್ಯಶ್ರಿಯ[೨]ಮೇಕಭೋಗನಿಯತಾಂ ಕೃತ್ವಾಖಿಲಾಂ ಪಾಲಯನ್ ।**
**ಯೋಭೂನ್ನೈವ ಕಿಲಾಕುಲಃ ಕುಲವಧೂಮೇಕಾಮಿವಾಂಕಸ್ಥಿತಾಂ**
**ಸೋಯಂ ಚಕ್ರಧರೋ[೩]ಭುನಕ್ಪುವಮಮೂಮೇಕಾತಪತ್ರಾಂ ಚಿರಂ ॥**

ಯಾವನು ತೊಡೆಯಲ್ಲಿರುವ ಓರ್ವ ಕುಲವಧುವನ್ನೋಪಾದಿಯಲ್ಲಿ ವಿವಿಧ ರತ್ನಗಳಿಂದಲೂ ನಿಧಿಗಳಿಂದಲೂ ದೇಶಗಳಿಂದಲೂ ಹೆಚ್ಚುತ್ತಿರುವ ಸಂಪತ್ತಿ ಯಿಂದಲೂ ಅಧಿಕವಾದ ಸಮಸ್ತ ಸಾಮ್ರಾಜ್ಯ ಸಂಪತ್ತಿಯನ್ನು ತನಗೊಬ್ಬನಿಗೇ ನಿಯತವಾದ ಭೋಗವುಳ್ಳುದನ್ನಾಗಿ ಮಾಡಿ ಪರಿಪಾಲಿಸುವವನಾಗಿ ಮನೋವ್ಯಾಕು ಲತೆಯುಳ್ಳವನಾಗಿ ಆಗಲೇ ಇಲ್ಲವೋ ಅಂತಹ ಈ ಚಕ್ರಧರನು ಏಕಚ್ಛತ್ರವುಳ್ಳ ಈ ಭೂಮಿಯನ್ನು ಬಹುಕಾಲದವರೆಗೆ ಪರಿಪಾಲಿಸಿದನು.

**[೪]ಯನ್ನಾಮ್ನಾ ಭರತಾವನಿತ್ವಮಗಮತ್ [೫]ಷಟ್ಖಂಡಭೂಷಾ ಮಹೀ**
**ಯೇನಾ[೬]ಸೇತುಹಿಮಾದ್ರಿ ರಕ್ಷಿತಮಿದಂ ಕ್ಷೇತ್ರಂ ಕೃತಾರಿಕ್ಷಯಮ್ ।**
**ಯಸ್ಯಾ[೭]ವಿರ್ನಿಧಿರತ್ನಸಂಪ[೮]ದುಚಿತಾ ಲಕ್ಷ್ಮೀರುರಃಶಾಯಿನೀ**
**ಸ ಶ್ರೀಮಾನ್ಭರತೇಶ್ವರೋ [೯]ನಿಧಿಭುಜಾಮಗ್ರೇಸರೋಭೂತ್ಪ್ರಭುಃ ॥**

ಆರು ಖಂಡಗಳೆಂಬ ಅಲಂಕಾರವುಳ್ಳ ಭೂಮಿಯು ಯಾವನ ಹೆಸರಿನಿಂದ ಭರತಭೂಮಿತ್ವವನ್ನು ಹೊಂದಿತೋ ಯಾವನಿಂದ ದಕ್ಷಿಣಸಮುದ್ರದಿಂದ ಹಿಮ ವತ್ಪರ್ವತದವರೆಗೆ ಈ ಕ್ಷೇತ್ರವು ನಾಶಮಾಡಲ್ಪಟ್ಟ ಶತ್ರುಗಳುಳ್ಳುದಾಗಿ ಕಾಪಾಡ ಲ್ಪಟ್ಟಿತೋ ಪ್ರಸಿದ್ಧವಾದ ನಿಧಿಗಳೂ ರತ್ನಗಳೂ ಉಳ್ಳ ಸಂಪತ್ತಿಯುಳ್ಳವಳೂ ಯುಕ್ತಳೂ ಆದ ಲಕ್ಷ್ಮಿಯು ಯಾವನ ಹೃದಯದಲ್ಲಿ ಮಲಗಿರುತ್ತಳೋ ಅಂತಹ ಐಶ್ವರ್ಯವಂತನಾದ ಭರತೇಶ್ವರಪ್ರಭುವು ಚಕ್ರವರ್ತಿಗಳಿಗೆ ಮೊದಲನೆಯವ ನಾಗಿದ್ದನು.

**ಯಃ ಸ್ತುತ್ಯೋ ಜಗತಾಂ ತ್ರಯಸ್ಯ ನ ಪುನಃ ಸ್ತೋತಾ ಸ್ವಯಂ ಕಸ್ಯಚಿ-**
**ದ್ಧ್ಯೇಯೋ ಯೋಗಿಜನಸ್ಯ ಯಶ್ಚ ನ ತರಾಂ ಧ್ಯಾತಾ ಸ್ವಯಂ ಕಸ್ಯ ಚಿತ್ ।**
**ಯೊ [೧೦]ನಂತ್ರೂನಪಿ ನೇತುಮುನ್ನತಿಮಲಂ ನಂತವ್ಯಪಕ್ಷೇ ಸ್ಥಿತಃ**
**ಸ ಶ್ರೀಮಾಂಜ್ಜಯತಾಜ್ಜಗತ್ತ್ರಯಗುರುರ್ದೇವಃ ಪುರುಃ ಪಾವನಃ ॥**

ಯಾವನು ಮೂರುಲೋಕಗಳಿಗೆ ಸ್ತುತ್ಯನೋ ತಾನಾದರೋ ಯಾವನೊಬ್ಬನ ಸ್ತೋತ್ರವನ್ನು ಮಾಡುವವನಲ್ಲವೋ ಯಾವನು ಯೋಗಿಜನಕ್ಕೆ ಧ್ಯಾನಯೋಗ್ಯ ನೋ ತಾನು ಯಾವನೊಬ್ಬನ ಧ್ಯಾನವನ್ನು ಮಾಡುವವನೇ ಅಲ್ಲವೋ ನಮಸ್ಕರಿಸು ವುದಕ್ಕೆ ಯೋಗ್ಯವಾದ ಪಕ್ಷದಲ್ಲಿರುವ ಯಾವನು ನಮಸ್ಕರಿಸುವವರನ್ನೂ ಉನ್ನತಿಯನ್ನು ಹೊಂದಿಸುವುದಕ್ಕೆ ಸಮರ್ಥನೋ ಅಂತಹ ಶ್ರೀಮಂತನೂ ಮೂರುಲೋಕಕ್ಕೆ ಗುರುವೂ ಪವಿತ್ರನೂ ಆದ ಪುರುದೇವನು ಜಯಿಸಲಿ.

೧ ನಿಧಿ. ೨ ಆತ್ಮನಃ ಏಕಸ್ಯೈವ ಭೋಗನಿಯತಾಂ. ೩ ಪಾಲಯತಿ ಸ್ಮ. ೪ ಚಕ್ರನಾಮ್ನಾ. ೫ ಷಟ್ಖಂಡಾಲಂಕಾರಾ. ೬ ದಕ್ಷಿಣಸಮುದ್ರಾತ್ಪ್ರಾರಭ್ಯ ಹಿಮವದ್ಗಿರಿಪರ್ಯಂತಂ. ೭ ಪ್ರಸಿದ್ಧನಿಧಿ, ಪ್ರಕಾಶೇ ಪ್ರಾದುರಾವಿಃ ಸ್ಯಾತ್. ೮ ಯುಕ್ತಾ. ೯ ಚಕ್ರಿಣಾಂ. ೧೦ ನಮನಶೀಲಾನ್.

**ಯಂ ನತ್ವಾ ಪುನರಾನಮಂತಿ ನ ಪರಂ ಸ್ತುತ್ವಾ ಚ ಯಂ ನಾಪರಂ**
**ಭವ್ಯಾಃ ಸಂಸ್ತುವತೇ ಶ್ರಯಂತಿ ನ ಪರಂ ಯಂ ಸಂಶ್ರಿತಾಃ ಶ್ರೇಯಸೇ ।**
**ಯಂ ಸತ್ಕೃತ್ಯಕೃತಾದರಂ ಕೃತಧಿಯಃ ಸತ್ಕುರ್ವತೇ ನಾಪರಂ**
**ಸ ಶ್ರೀಮಾನ್ವೃಷಭೋ ಜಿನೋ [1]ಭವಭಯಾನ್ನ[2]ಸ್ತ್ರಾಯತಾತ್ತೀರ್ಥಕೃತ್ ॥೨೦೫ ॥**

ಭವ್ಯಾತ್ಮರು ಯಾವನನ್ನು ನಮಸ್ಕರಿಸಿ ಪುನಃ ಬೇರೆಯವನನ್ನು ನಮಸ್ಕರಿಸುವುದಿಲ್ಲವೋ ಯಾವನನ್ನು ಸ್ತುತಿಸಿ ಬೇರೆಯವನನ್ನು ಸ್ತುತಿಸುವುದಿಲ್ಲವೋ ಶ್ರೇಯಸ್ಸಿಗೋಸ್ಕರ ಯಾವನನ್ನು ಆಶ್ರಯಿಸಿದವರಾಗಿ ಬೇರೆಯವನನ್ನು ಆಶ್ರಯಿಸುವುದಿಲ್ಲವೋ ಬುದ್ಧಿಶಾಲಿಗಳು ಆದರವನ್ನು ಮಾಡಿದ ಯಾವನನ್ನು ಸತ್ಕರಿಸಿ ಬೇರೆಯವನನ್ನು ಸತ್ಕರಿಸುವುದಿಲ್ಲವೋ ಅಂತಹ ಶ್ರೀಮಂತನೂ ತೀರ್ಥಕರನೂ ಆದ ವೃಷಭಜಿನೇಶ್ವರನು ನಮ್ಮನ್ನು ಭವ ಭಯದಿಂದ ಕಾಪಾಡಲಿ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭರತೇಶ್ವರಾಭ್ಯುದಯವರ್ಣನಂ ನಾಮ ಸಪ್ತತ್ರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
"ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್" ಭರತೇಶ್ವರಾಭ್ಯುದಯವರ್ಣನವೆಂಬ
ಮೂವತ್ತೇಳನೆಯ ಪರ್ವವು ಸಂಪೂರ್ಣವಾದುದು.

---

೧ ಸಂಸಾರಭೀತೇರಪಸಾರ್ಯ. ೨ ತ್ರಾಯತಾಮಿತ್ಯಪಿ ಪಾಠಃ.

# ಅಥಾಷ್ಟತ್ರಿಂಶತ್ತಮಂ ಪರ್ವ

**ಜಯಂತ್ಯಖಿಲ[೧]ವಾಙ್ಮಾರ್ಗಗಾಮಿನ್ಯಃ ಸೂಕ್ತಯೋಽರ್ಹತಾಮ್ ।**
**ಧೂತಾಂಧತಮಸಾ ದೀಪ್ರಾ ಯಾಸ್ತ್ವಿಷೋಂಽಶುಮತಾಮಿವ ॥ ೧ ॥**

ಸೂರ್ಯಕಿರಣಗಳಂತೆ ಗಾಢವಾದ ಅಜ್ಞಾನಾಂಧಕಾರವನ್ನು ಹೋಗಲಾಡಿಸಿರುವುವೂ ದೇದೀಪ್ಯಮಾನಗಳೂ ಸರ್ವಭಾಷಾಸ್ವರೂಪಗಳೂ ಆದ ಅರ್ಹತ್ಪರಮೇಶ್ವರರ ಉತ್ತಮವಚನಗಳು ಜಯಶೀಲವಾಗಿರುತ್ತವೆ.

**ಸ ಜೀಯಾದ್ವೃಷಭೋ ಮೋಹವಿಷಸುಪ್ತಮಿದಂ ಜಗತ್ ।**
**[೨]ಪಟವಿದ್ಯೇವ ಯದ್ವಿದ್ಯಾ ಸದ್ಯಃ [೩]ಸಮುದತಿಷ್ಠಪತ್ ॥ ೨ ॥**

ಯಾವನ ವಿದ್ಯೆಯು(ಕೇವಲಜ್ಞಾನವು) ಗಾರುಡವಿದ್ಯೆಯಂತೆ, ಮೋಹ (ಅಜ್ಞಾನ)ವೆಂಬ ವಿಷದಿಂದ ನಿದ್ರಿಸುತ್ತಿದ್ದ ಈ ಲೋಕವನ್ನು ಶೀಘ್ರವಾಗಿ ಎಚ್ಚರಗೊಳಿಸಿತೋ ಅಂತಹ ವೃಷಭಸ್ವಾಮಿಯು ಜಯಶೀಲನಾಗಿರಲಿ.

**ತಂ ನತ್ವಾ ಪರಮಂ ಜ್ಯೋತಿರ್ವೃಷಭಂ [೪]ವೀರಮನ್ವತಃ ।**
**ದ್ವಿಜನ್ಮನಾಮಥೋತ್ಪತ್ತಿಂ ವಕ್ಷ್ಯೇ ಶ್ರೇಣಿಕ ಭೋಃ ಶೃಣು ॥ ೩ ॥**

ಪರಮಜ್ಯೋತಿಸ್ವರೂಪನಾದ ಆ ವೃಷಭಸ್ವಾಮಿಯನ್ನೂ ಆಮೇಲೆ ವರ್ಧಮಾನಸ್ವಾಮಿಯನ್ನೂ ನಮಸ್ಕರಿಸಿ ಬಳಿಕ ಬ್ರಾಹ್ಮಣರ ಉತ್ಪತ್ತಿಯನ್ನು ಹೇಳುವೆನು. ಎಲೈ ಶ್ರೇಣಿಕನೆ ! ಕೇಳು (ಗೌತಮಗಣಧರರು ಹೇಳುವ ಮಾತಿದು).

**ಭರತೋ ಭಾರತಂ [೫]ವರ್ಷಂ ನಿರ್ಜಿತ್ಯ ಸಹ ಪಾರ್ಥಿವೈಃ ।**
**ಷಷ್ಟ್ಯಾ ವರ್ಷಸಹಸ್ರೈಸ್ತು ದಿಶಾಂ ನಿವವೃತೇ ಜಯಾತ್ ॥ ೪ ॥**

ಭರತೇಶ್ವರನು ರಾಜರುಗಳೊಡನೆ ಭರತಕ್ಷೇತ್ರವನ್ನು ಜಯಿಸಿ ದಿಗ್ವಿಜಯದಿಂದ ಅರುವತ್ತುಸಾವಿರ ವರುಷಗಳನಂತರ ಹಿಂದಿರುಗಿದನು.

**ಕೃತಕೃತ್ಯಸ್ಯ ತಸ್ಯಾಂತಶ್ಚಿಂತೇಯಮುದಪದ್ಯತ ।**
**ಪರಾರ್ಥೇ ಸಂಪದಾಸ್ಮಾಕೀ [೬]ಸೋಪಯೋಗಾ ಕಥಂ ಭವೇತ್ ॥ ೫ ॥**

ಕೃತಕೃತ್ಯನಾದ ಆ ಭರತೇಶ್ವರನ ಮನಸ್ಸಿನಲ್ಲಿ ''ನಮ್ಮ ಐಶ್ವರ್ಯವು ಪರಪ್ರಯೋಜನಕ್ಕೋಸ್ಕರ ಉಪಯೋಗಕರವಾದುದು'' ಈ ಪ್ರಕಾರವಾದ ಯೋಚನೆಯುಂಟಾಯಿತು.

**ಮಹಾಮಹಮಹಂ ಕೃತ್ವಾ ಜಿನೇಂದ್ರಸ್ಯ ಮಹೋದಯಮ್ ।**
**ಪ್ರೀಣಯಾನಿ ಜಗದ್ವಿಶ್ವಂ ವಿಷ್ವ[೭]ಗ್ವಿಶ್ರಾಣಯನ್ ಧನಮ್ ॥ ೬ ॥**

''ನಾನು ಜಿನೇಶ್ವರನ ಮಹಾಮಹಿಮೆಯುಳ್ಳ ಮಹಾಪೂಜೆಯನ್ನು ಮಾಡಿ ಎಲ್ಲಾಕಡೆಯಲ್ಲಿ ದ್ರವ್ಯವನ್ನು ದಾನಮಾಡಿ ಲೋಕವನ್ನೆಲ್ಲ ಸಂತೋಷಪಡಿಸುತ್ತೇನೆ.

**ನಾನಗಾರಾ ವಸೂ[೮]ನ್ಯಸ್ಮತ್ಪ್ರತಿಗೃಹ್ಣಂತಿ ನಿಃಸ್ಪೃಹಾಃ ।**
**ಸಾಗಾರಃ [೯]ಕತಮಃ ಪೂಜ್ಯೋ ಧನಧಾನ್ಯಸಮೃದ್ಧಿಭಿಃ ॥ ೭ ॥**

ನಿಸ್ಪೃಹರಾದ ಯತಿಗಳು ನಮ್ಮಿಂದ ದ್ರವ್ಯಗಳನ್ನು ಸ್ವೀಕರಿಸುವುದಿಲ್ಲ. ಧನಧಾನ್ಯಸಮೃದ್ಧಿಗಳಿಂದ ಕೂಡಿದ ಯಾವ ಗೃಹಸ್ಥನು ಪೂಜಿಸುವುದಕ್ಕೆ ಯೋಗ್ಯನು ?

೧ ಸರ್ವಭಾಷಾತ್ಮಿಕಾ. ೨ ಗಾರುಡವಿದ್ಯಾ. ೩ ಉತ್ಥಾಪಯಾಮಾಸ. ೪ ವರ್ಧಮಾನಸ್ವಾಮಿನಂ. ೫ ಕ್ಷೇತ್ರಂ. ೬ ಸೋಪಕಾರಾ. ೭ ವಿತರನ್. ೮ ಅಸ್ಮತ್ತಃ. ೯ ಕಃ.

**ಯೇಽಣುವ್ರತಧರಾ ಧೀರಾ [೧]ಧೌರೇಯಾ ಗೃಹಮೇಧಿನಾಮ್ ।**
**ತರ್ಪಣೀಯಾ ಹಿ ತೇಽಸ್ಮಾಭಿರೀಪ್ಸಿತೈರ್ವಸುವಾಹನೈಃ ॥ ೮ ॥**

ಯಾರು ಅಹಿಂಸಾ ಮೊದಲಾದ ಅಣುವ್ರತಧಾರಿಗಳೂ ವಿವೇಕಿಗಳೂ ಗೃಹಸ್ಥರಲ್ಲಿ ಮುಖ್ಯರು ಆಗಿರುತ್ತಾರೋ ಅಂತಹವರೇ ನಮ್ಮಿಂದ ಇಷ್ಟವಾದ ಧನಗಳಿಂದಲೂ ವಾಹನಗಳಿಂದಲೂ ಸಂತೋಷಪಡಿಸಲ್ಪಡತಕ್ಕವರು.''

**ಇತಿ ನಿಶ್ಚಿತ್ಯ ರಾಜೇಂದ್ರಃ ಸತ್ಕರ್ತುಮುಚಿತಾನಿಮಾನ್ ।**
**[೨]ಪರೀಚಿಕ್ಷಿಷು[೩]ರಾಹ್ವಾಸ್ತ ತದಾ ಸರ್ವಾನ್ಮಹೀಭುಜಃ ॥ ೯ ॥**

**ಸದಾಚಾರೈರ್ನಿಜೈರಿಷ್ಟೈ[೪]ರನುಜೀವಿಭಿರನ್ವಿತಾಃ ।**
**ಅದ್ಯಾ[೫]ಸ್ಮದುತ್ಸವೇ ಯೂಯಮಾಯಾತೇತಿ ಪೃಥಕ್ಪೃಥಕ್ ॥ ೧೦ ॥**

ಈ ಪ್ರಕಾರವಾಗಿ ನಿಶ್ಚಯಿಸಿ ಆಗ ಭರತೇಶ್ವರನು ಪರೀಕ್ಷಿಸಬೇಕೆಂಬ ಇಚ್ಛೆಯುಳ್ಳವನಾಗಿ ಸತ್ಕರಿಸುವುದಕ್ಕೋಸ್ಕರ ಯೋಗ್ಯರಾದ ಈ ಸಮಸ್ತರಾಜರುಗಳನ್ನು ''ಈ ದಿವಸದಲ್ಲಿ ನಮ್ಮ ಉತ್ಸವಕ್ಕೋಸ್ಕರ ನೀವುಗಳು ಶ್ರೇಷ್ಠವಾದ ಆಚರಣೆಯುಳ್ಳ ನಿಮ್ಮ ಇಷ್ಟಭೃತ್ಯರೊಡನೆ ಕೂಡಿಕೊಂಡು ಬೇರೆಬೇರೆಯಾಗಿ ಬನ್ನಿರಿ'' ಎಂಬುದಾಗಿ ಕರೆಯಿಸಿದನು.

**ಹರಿತೈರಂಕುರೈಃ ಪುಷ್ಪೈಃ ಫಲೈ[೬]ಶ್ಚಾಸ್ತೀರ್ಣಮಂಗಣಮ್ ।**
**ಸಮ್ರಾಡಚೀಕರತ್ತೇಷಾಂ ಪರೀಕ್ಷಾಯೈ ಸ್ವವೇಶ್ಮನಿ ॥ ೧೧ ॥**

ಚಕ್ರವರ್ತಿಯು ಆ ರಾಜರುಗಳ ಪರೀಕ್ಷೆಗೋಸ್ಕರ ತನ್ನ ಮನೆಯಲ್ಲಿ ಅಂಗಣವನ್ನು ಹಸುರಾದ ಅಂಕುರಗಳಿಂದಲೂ ಪುಷ್ಪಗಳಿಂದಲೂ ಫಲಗಳಿಂದಲೂ ವ್ಯಾಪ್ತವಾದುದನ್ನಾಗಿ ಮಾಡಿಸಿದನು.

**[೭]ತೇಷ್ವವ್ರತಾ ವಿನಾ [೮]ಸಂಗಾತ್ಪ್ರಾವಿಕ್ಷನ್ನೃಪಮಂದಿರಮ್ ।**
**[೯]ತಾನೇ[೧೦]ಕತಃ ಸಮುತ್ಸಾರ್ಯ ಶೇಷಾನಾಹ್ವಾಯಯತ್ಪ್ರಭುಃ ॥ ೧೨ ॥**

ಆ ಬಂದ ಜನರಲ್ಲಿ ವ್ರತ–ನಿಯಮವಿಲ್ಲದವರು ವಿಚಾರವಿಲ್ಲದೆ ಅರಮನೆಯನ್ನು ಪ್ರವೇಶಿಸಿದರು. ಅವರನ್ನು ಭರತೇಶ್ವರನು ಒಂದು ಕಡೆಯಲ್ಲಿರಿಸಿ ಉಳಿದವರನ್ನು ಕರೆಯಿಸಿದನು.

**ತೇ ತು ಸ್ವವ್ರತಶುದ್ಧ್ಯರ್ಥ[೧೧]ಮೀಹಮಾನಾ ಮಹಾನ್ವಯಾಃ ।**
**[೧೨]ನೇಷುಃ ಪ್ರವೇಶನಂ ತಾವದ್ಯಾವದಾರ್ದ್ರಾಂಕುರಾಃ ಪಥಿ ॥ ೧೩ ॥**

ತಮ್ಮ ವ್ರತಶುದ್ಧಿಗೋಸ್ಕರ ಉದ್ಯೋಗಶೀಲರೂ ಮಹಾವಂಶಿಕರೂ ಆದ ಆ ಉಳಿದ ರಾಜರುಗಳಾದರೋ ದಾರಿಯಲ್ಲಿ ಹಸುರಾದ ಅಂಕುರಗಳಿರುವವರೆಗೂ ಪ್ರವೇಶವನ್ನು ಮಾಡುವುದಕ್ಕಿಚ್ಛಿಸಲಿಲ್ಲವು.

**ಸಧಾನ್ಯೈರ್ಹರಿತೈಃ ಕೀರ್ಣಮನಾಕ್ರಮ್ಯ ನೃಪಾಂಗಣಮ್ ।**
**[೧೩]ನಿಶ್ಚಕ್ರಮುಃ ಕೃಪಾಲುತ್ವಾತ್ಕೇಚಿತ್ಸಾವದ್ಯಭೀರವಃ ॥ ೧೪ ॥**

ಪಾಪಭೀತಿಯುಳ್ಳವರಾದ ಕೆಲವರು ಧಾನ್ಯಸಹಿತವಾದ ಹಸುರುಗಳಿಂದ ವ್ಯಾಪ್ತವಾದ ರಾಜಾಂಗಣವನ್ನು ದಯೆಯುಳ್ಳವರಾಗಿದ್ದುದರಿಂದ ಆಕ್ರಮಿಸದೆ ಹೊರಟುಹೋದರು.

೧ ಮುಖ್ಯಾಃ. ೨ ಪರೀಕ್ಷಿತುಮಿಚ್ಛುಃ. ೩ ಆಹ್ವಾನಂ ಕಾರಯಾಮಾಸ. ೪ ಭೃತ್ಯೈಃ. ೫ ಅಸ್ಮದುತ್ಸವಾರ್ಥಂ. ೬ ಆಚ್ಛಾದಿತಂ. ೭ ಆಯಾತಜನೇಷು. ೮ ವಿಚಾರಾತ್. ೯ ಪ್ರವಿಷ್ಟಾನ್. ೧೦ ಏಕತ್ರಸ್ಥಾಪಯಿತ್ವಾ. ೧೧ ಚೇಷ್ಟಮಾನಾಃ. ೧೨ ನೇಚ್ಛಂತಿ ಸ್ಮ. ೧೩ ನಿರ್ಗತಾಃ.

**ಕೃತಾ[೧]ನುಬಂಧನಾ ಭೂಯಶ್ಚಕ್ರಿಣಃ ಕಿಲ ತೇಂತಿಕಮ್ ।**
**ಪ್ರಾಸುಕೇನ ಪಥಾನ್ಯೇನ ಭೇಜುಃ ಕ್ರಾಂತ್ವಾ ನೃಪಾಂಗಣಮ್ ॥ ೧೫ ॥**

ಮತ್ತೆ ನಿರ್ಬಂಧಪಡಿಸಲ್ಪಟ್ಟವರಾದ ಆ ರಾಜರುಗಳು ಬೇರೆ ಪ್ರಾಸುಕ–ನಿರ್ಜಂತುಕವಾದ ದಾರಿಯಿಂದ ರಾಜಾಂಗಣವನ್ನು ದಾಟಿ ಚಕ್ರವರ್ತಿಯ ಸಮೀಪವನ್ನು ಸೇರಿದರಂತೆ.

**ಪ್ರಾಕ್ಕೇನ ಹೇತುನಾ ಯೂಯಂ ನಾಯಾತಾಃ ಪುನರಾಗತಾಃ ।**
**ಕೇನ ಬ್ರೂತೇತಿ ಪೃಷ್ಟಾಸ್ತೇ [೨]ಪ್ರತ್ಯಭಾಷಂತ ಚಕ್ರಿಣಮ್ ॥ ೧೬ ॥**

''ನೀವುಗಳು ಮೊದಲು ಯಾವ ಕಾರಣದಿಂದ ಬರಲಿಲ್ಲ? ಮತ್ತೆ ಯಾವ ಕಾರಣದಿಂದ ಬಂದಿರಿ? ಹೇಳಿ'' ಈ ಪ್ರಕಾರವಾಗಿ ಕೇಳಲಾಗಿ ಆ ರಾಜರುಗಳು ಚಕ್ರವರ್ತಿಗೆ ಉತ್ತರವನ್ನು ಹೇಳಿದರು.

**[೩]ಪ್ರವಾಲಪತ್ರಪುಷ್ಪಾದ್ಯೈಃ [೪]ಪರ್ವಣಿ [೫]ವ್ಯಪರೋಪಣಮ್ ।**
**ನ [೬]ಕಲ್ಪತೇದ್ಯ ತಜ್ಜಾನಾಂ ಜಂತೂನಾಂ [೭]ನೋ[೮]ನಭಿದ್ರುಹಾಮ್ ॥**

''ಈ ದಿನ ಪರ್ವತಿಥಿಯಲ್ಲಿ ಅಂಕುರಾದಿಗಳಲ್ಲಿ ಜನಿಸಿರುವುವೂ ನಮಗೆ ಹಿಂಸೆಯನ್ನು ಮಾಡದಿರುವುವೂ ಆದ ಜಂತುಗಳ ಅಂಕುರ ಪತ್ರ ಪುಷ್ಪಾದಿಗಳಿಂದ ಹಿಂಸೆಯನ್ನು ಮಾಡಲಾಗುವುದಿಲ್ಲ.

**ಸಂತ್ಯೇವಾನಂತಶೋ ಜೀವಾ ಹರಿತೇಷ್ವಂಕುರಾದಿಷು ।**
**ನಿಗೋತಾ ಇತಿ [೯]ಸಾರ್ವಜ್ಞಂ ದೇವಾಸ್ಮಾಭಿಃ ಶ್ರುತಂ ವಚಃ ॥ ೧೮ ॥**

ಪ್ರಭುವೆ! ಹಸುರಾದ ಅಂಕುರಾದಿಗಳಲ್ಲಿ ನಿಗೋತಗಳೆಂಬ ಬಹು ಸೂಕ್ಷ್ಮ ಜೀವಗಳು ಅನಂತವಾಗಿ ಇದ್ದೇ ಇರುತ್ತವೆಂಬ ಸರ್ವಜ್ಞರ ವಚನವನ್ನು ನಾವು ಕೇಳಿದ್ದೇವೆ.

**ತಸ್ಮಾನ್ನಾಸ್ಮಾಭಿರಾಕ್ರಾಂತ[೧೦]ಮದ್ಯತ್ವೇ ತ್ವದ್ಗೃಹಾಂಗಣಮ್ ।**
**ಕೃತೋಪಹಾರ[೧೧]ಮಾರ್ದ್ರಾರ್ದ್ರೈಃ ಫಲಪುಷ್ಪಾಂಕುರಾದಿಭಿಃ ॥ ೧೯ ॥**

ಆದುದರಿಂದ ಈಗ ಬಹಳವಾಗಿ ಹಸಿದಾಗಿರುವ ಫಲ ಪುಷ್ಪ ಅಂಕುರಾದಿಗಳಿಂದ ಅಲಂಕರಿಸಲ್ಪಟ್ಟಿರುವ ನಿನ್ನ ಮನೆಯ ಅಂಗಣವನ್ನು ನಾವು ದಾಟಲಿಲ್ಲ.

**ಇತಿ ತದ್ವಚನಾತ್ಸರ್ವಾನ್ಸೋಭಿನಂದ್ಯ ದೃಢವ್ರತಾನ್ ।**
**ಪೂಜಯಾಮಾಸ ಲಕ್ಷ್ಮೀವಾನ್ [೧೨]ದಾನಮಾನಾದಿಸತ್ಕೃತೈಃ ॥ ೨೦ ॥**

ಶ್ರೀಮಂತನಾದ ಆ ಭರತೇಶ್ವರನು ಈ ಪ್ರಕಾರವಾದ ಅವರ ಮಾತಿನಿಂದ ದೃಢವ್ರತವುಳ್ಳವರಾದ ಅವರೆಲ್ಲರನ್ನು ಅಭಿನಂದಿಸಿ ವಸ್ತ್ರಾದಿದಾನಗಳಿಂದಲೂ ಸದ್ವಚನಾದಿ ಪೂಜಾಸತ್ಕಾರಗಳಿಂದಲೂ ಅವರನ್ನು ಪೂಜಿಸಿದನು.

**ತೇಷಾಂ ಕೃತಾನಿ ಚಿಹ್ನಾನಿ ಸೂತ್ರೈಃ ಪದ್ಮಾಹ್ವಯಾನ್ನಿಧೇಃ ।**
**[೧೩]ಉಪಾತ್ತೈರ್ಬ್ರಹ್ಮಸೂತ್ರಾಹ್ವೈರೇಕಾದ್ಯೇಕಾದಶಾಂತಕೈಃ ॥ ೨೧ ॥**

ಪದ್ಮವೆಂದು ಹೆಸರುಳ್ಳ ನಿಧಿಯಿಂದ ತೆಗೆಯಲ್ಪಟ್ಟುವೂ ಬ್ರಹ್ಮಸೂತ್ರವೆಂದು ಹೆಸರುಳ್ಳುವೂ ಒಂದು ಮೊದಲಾಗಿ ಹನ್ನೊಂದು ಕೊನೆಯಾಗಿರುವುವೂ ಆದ ದಾರಗಳಿಂದ ಆ ವ್ರತಿಕರಿಗೆ ಗುರುತುಗಳು ಮಾಡಲ್ಪಟ್ಟುವು.

**[೧೪]ಗುಣಭೂಮಿಕೃತಾದ್ಭೇದಾ[೧೫]ತ್ಕ್ಲೃಪ್ತ ಯಜ್ಞೋಪವೀತಿನಾಮ್ ।**
**ಸತ್ಕಾರಃ ಕ್ರಿಯತೇ ಸ್ಮೈಷಾಮವ್ರತಾಶ್ಚ ಬಹಿಷ್ಕೃತಾಃ ॥ ೨೨ ॥**

ದರ್ಶನಿಕ, ವ್ರತಿಕ, ಸಾಮಾಯಿಕ, ಪ್ರೋಷಧೋಪವಾಸಿ, ಸಚಿತ್ತವಿರತ, ರಾತ್ರಿಭುಕ್ತಿವಿರತ, ಬ್ರಹ್ಮಚಾರಿ, ಆರಂಭವಿರತ, ಪರಿಗ್ರಹವಿರತ, ಅನುಮತಿವಿರತ, ಉದ್ದಿಷ್ಟವಿರತಗಳೆಂಬ ಹನ್ನೊಂದು ಗೃಹಸ್ಥ– ಶ್ರಾವಕರ ನೆಲೆಗಳಿಂದ ಮಾಡಲ್ಪಟ್ಟ ಭೇದದಿಂದ ಯಜ್ಞೋಪವಿತವನ್ನು ಧಾರಣಮಾಡಿಸಲ್ಪಟ್ಟವರಾದ ಈ ವ್ರತಿಕರಿಗೆ ಸತ್ಕಾರವು ಮಾಡಲ್ಪಟ್ಟಿತು. ವ್ರತವಿಲ್ಲದವರು ಹೊರಕ್ಕೆ ಕಳುಹಲ್ಪಟ್ಟರು.

**ಅಥ ತೇ ಕೃತಸನ್ಮಾನಾಶ್ಚಕ್ರಿಣಾ ವ್ರತಧಾರಣೇ ।**
**ಭಜಂತಿ ಸ್ಮ ಪರಂ ದಾರ್ಢ್ಯಂ [೧]ಲೋಕಶ್ಚೈ[೨]ನಾನಪೂಜಯತ್ ॥ ೨೩ ॥**

ಬಳಿಕ ಚಕ್ರವರ್ತಿಯಿಂದ ಸತ್ಕರಿಸಲಾದ ಆ ವ್ರತಿಕರು ವ್ರತಧಾರಣೆಯಲ್ಲಿ ಬಹು ದೃಢತೆಯನ್ನು ಹೊಂದಿದರು. ಜನರು ಇವರನ್ನು ಪೂಜಿಸಿದರು.

**ಇಜ್ಯಾಂ ವಾರ್ತಾಂ ಚ ದತ್ತಿಂ ಚ ಸ್ವಾಧ್ಯಾಯಂ ಸಂಯಮಂ ತಪಃ ।**
**ಶ್ರುತೋ[೩]ಪಾಸಕಸೂತ್ರತ್ವಾ[೪]ತ್ಸ [೫]ತೇಭ್ಯಃ ಸಮುಪಾದಿಶತ್ ॥ ೨೪ ॥**

ಆ ಭರತೇಶ್ವರನು ಶ್ರಾವಕಾಚಾರಸೂತ್ರವನ್ನು ಶ್ರವಣಮಾಡಿದುದರಿಂದ ಆ ದ್ವಿಜರಿಗೆ ಮುಂದೆ ವರ್ಣಿಸಲ್ಪಡುವ ಇಜ್ಯಾ ವಾರ್ತಾ ದತ್ತಿ ಸ್ವಾಧ್ಯಾಯ ಸಂಯಮ ತಪಸ್ಸು ಇವುಗಳನ್ನು ಉಪದೇಶಿಸಿದನು.

**ಕುಲಧರ್ಮೋಯಮಿತ್ಯೇಷಾಮರ್ಹತ್ಪೂಜಾದಿವರ್ಣನಮ್ ।**
**ತದಾ ಭರತರಾಜರ್ಷಿರನ್ವವೋಚದನುಕ್ರಮಾತ್ ॥ ೨೫ ॥**

ಆಗ ಭರತರಾಜರ್ಷಿಯು ಈ ದ್ವಿಜರಿಗೆ ''ಇದು ಕುಲಧರ್ಮವು'' ಎಂಬುದಾಗಿ ಅರ್ಹತ್ಪೂಜಾದಿಗಳ ವರ್ಣನೆಯನ್ನು ಯಥಾಕ್ರಮವಾಗಿ ಉಪದೇಶಮಾಡಿದನು.

**ಪ್ರೋಕ್ತಾ ಪೂಜಾರ್ಹತಾಮಿಜ್ಯಾ ಸಾ ಚತುರ್ಧಾ [೬]ಸದಾರ್ಚನಮ್ ।**
**ಚತುರ್ಮುಖಮಹಃ ಕಲ್ಪದ್ರುಮಶ್ಚಾಷ್ಟಾಹ್ನಿಕೋಪಿ ಚ ॥ ೨೬ ॥**

ಅರ್ಹತ್ಪರಮೇಶ್ವರರ ಪೂಜೆಯು 'ಇಜ್ಯಾ' ಎಂದು ಹೇಳಲ್ಪಟ್ಟಿರುವುದು. ಆ ಇಜ್ಯೆಯು ನಿತ್ಯಮಹವೆಂದೂ ಚತುರ್ಮುಖಮಹವೆಂದೂ ಕಲ್ಪದ್ರುಮಮಹವೆಂದೂ ಅಷ್ಟಾಹ್ನಿಕಮಹವೆಂದೂ ನಾಲ್ಕುವಿಧವಾಗಿರುತ್ತದೆ.

**[೭]ತತ್ರ ನಿತ್ಯಮಹೋ ನಾಮ ಶಶ್ವಜ್ಜಿನಗೃಹಂ ಪ್ರತಿ ।**
**ಸ್ವಗೃಹಾನ್ನೀಯಮಾನಾರ್ಚಾ ಗಂಧಪುಷ್ಪಾಕ್ಷತಾದಿಕಾ ॥ ೨೭ ॥**

ಆ ನಾಲ್ಕು ಪೂಜೆಗಳಲ್ಲಿ ಬಾರಿಬಾರಿಗೂ ಜಿನಮಂದಿರವನ್ನು ಕುರಿತು ತನ್ನ ಮನೆಯಿಂದ ಒಯ್ಯಲ್ಪಟ್ಟ ಗಂಧ ಪುಷ್ಪ ಮೊದಲಾದುವುಗಳುಳ್ಳ ಪೂಜೆಯು ನಿತ್ಯಮಹವೆಂದು ಹೆಸರುಳ್ಳುದು.

**ಚೈತ್ಯಚೈತ್ಯಾಲಯಾದೀನಾಂ ಭಕ್ತ್ಯಾ ನಿರ್ಮಾಪಣಂ ಚ ಯತ್ ।**
**ಶಾಸನೀಕೃತ್ಯ ದಾನಂ ಚ ಗ್ರಾಮಾದೀನಾಂ ಸದಾರ್ಚನಮ್ ॥ ೨೮ ॥**

ಭಕ್ತಿಯಿಂದ ಜಿನಬಿಂಬ ಜಿನಾಲಯ ಮೊದಲಾದುವುಗಳ ನಿರ್ಮಾಪಣವೂ ಶಾಸನವನ್ನು ಬರೆದು ಗ್ರಾಮಾದಿಗಳ ದಾನವೂ ನಿತ್ಯಮಹವಾಗಿರುತ್ತದೆ.

**ಯಾ ಚ ಪೂಜಾ [೮]ಜಿನೇಂದ್ರಾಣಾಂ ನಿತ್ಯದಾನಾನುಷಂಗಿಣೀ ।**
**ಸ ಚ ನಿತ್ಯಮಹೋ ಜ್ಞೇಯೋ ಯಥಾಶಕ್ತ್ಯು[೯]ಪಕಲ್ಪಿತಃ ॥ ೨೯ ॥**

ಜಿನೇಶ್ವರರ ಯಾವ ಪೂಜೆಯು ನಿತ್ಯದಾನದ ಸಂಬಂಧವುಳ್ಳುದಾಗಿರುವುದೋ ಯಥಾಶಕ್ತಿಯಾಗಿ ಮಾಡಲ್ಪಟ್ಟ ಅದೂ ನಿತ್ಯಮಹವೆಂದು ತಿಳಿಯತಕ್ಕುದು.

**ಮಹಾಮುಕುಟಬದ್ಧೈಸ್ತು ಕ್ರಿಯಮಾಣೋ ಮಹಾಮಹಃ ।**
**ಚತುರ್ಮುಖಃ ಸ ವಿಜ್ಞೇಯಃ ಸರ್ವತೋಭದ್ರ ಇತ್ಯಪಿ ॥ ೩೦ ॥**

೧ ನಿರ್ಬಂಧಾಃ. ೨ ಪ್ರತ್ಯೂಚುಃ. ೩ ಅಂಕುರ. ೪ ಪರ್ವತಿಥೌ. ೫ ಹಿಂಸನಂ. ೬ ನ ಘಟತೇ. ೭ ಅಸ್ಮಾಕಂ. ೮ ಅಹಿಂಸಕಾನಾಂ. ೯ ಸರ್ವಜ್ಞಸ್ಯೇದಂ. ೧೦ ಇದಾನೀಂ. ೧೧ ನಿತರಾಮಾರ್ದ್ರೈಃ. ೧೨ ವಸ್ತ್ರಾದಿದಾನ ಸದ್ವಚನಾದಿ ಪೂಜಾಸತ್ಕಾರೈಃ. ೧೩ ಸ್ವೀಕೃತೈಃ. ೧೪ ದರ್ಶನಿಕಾದಿಗುಣನಿಲಯ ವಿಹಿತಾತ್. ೧೫ ಕೃತ.

೧ ಜನಃ. ೨ ವ್ರತಿಕಾನ್. ೩ ಉಪಾಸಕಾಧ್ಯಯನಾತ್. ೪ ಭರತಃ. ೫ ದ್ವಿಜನ್ಮಭ್ಯಃ. ೬ ನಿತ್ಯಮಹಃ. ೭ ಚತುರ್ವಿಧೇಷು. ೮ ಮುನೀಂದ್ರಾಣಾಮಿತ್ಯಪಿ ಪಾಠಃ. ೯ ಉಪಬೃಂಹಿತ ಇತ್ಯಪಿ ಪಾಠಃ.

ಮಹಾಮುಕುಟಬದ್ಧರಾದ ರಾಜರುಗಳಿಂದ ಮಾಡಲಾಗುವ ಮಹಾಪೂಜೆಯು ಚತುರ್ಮುಖಮಹವೆಂದೂ ಸರ್ವತೋಭದ್ರಮಹವೆಂದೂ ತಿಳಿಯತಕ್ಕುದಾಗಿರುತ್ತದೆ.

**ದತ್ವಾ [೧]ಕಿಮಿಚ್ಛಕಂ ದಾನಂ ಸಮ್ರಾಡ್ಭಿರ್ಯಃ ಪ್ರವರ್ತ್ಯತೇ ।**
**ಕಲ್ಪದ್ರುಮಮಹಃ ಸೋಯಂ ಜಗದಾಶಾಪ್ರಪೂರಣಃ ॥ ೩೧ ॥**

ಚಕ್ರವರ್ತಿಗಳಿಂದ, ನಿಮಗೇನು ಇಷ್ಟವೆಂದು ಕೇಳಿ ಅವರು ಇಚ್ಛಿಸಿದುದನ್ನು ದಾನಮಾಡುವುದೆಂಬ ಕಿಮಿಚ್ಛಕದಾನವನ್ನು ಕೊಟ್ಟು ಯಾವ ಪೂಜೆಯು ನೆರವೇರಿಸಲ್ಪಡುತ್ತದೋ ಜಗತ್ತಿನ ಆಶೆಯನ್ನು ಪರಿಪೂರ್ಣಮಾಡುವುದಾದ ಈ ಪೂಜೆಯು ಕಲ್ಪದ್ರುಮಮಹವೆನಿಸುವುದು.

**ಅಷ್ಟಾಹ್ನಿಕೋ ಮಹಃ [೨]ಸಾರ್ವಜನಿಕೋ [೩]ರೂಢ ಏವ ಸಃ ।**
**ಮಹಾನೈಂದ್ರಧ್ವಜೋ[೪]ನ್ಯಸ್ತು ಸುರರಾಜೈಃ ಕೃತೋ ಮಹಃ ॥ ೩೨ ॥**

ಸರ್ವಜನರಲ್ಲಿ ಪ್ರಚಾರವಾಗಿರುವ ಅಷ್ಟಾಹ್ನಿಕಮಹವು ಪ್ರಸಿದ್ಧವೇ ಆಗಿರುತ್ತದೆ. ದೇವೇಂದ್ರರಿಂದ ಮಾಡಲ್ಪಟ್ಟ ಬೇರೆಯಾದ ಮಹಾಮಹವಾದರೋ ಐಂದ್ರಧ್ವಜವೆನಿಸುವುದು.

**ಬಲಿಸ್ನಪನಮಿತ್ಯನ್ಯತ್ತ್ರಿಸಂಧ್ಯಾಸೇವಯಾ ಸಮಮ್ ।**
**ಉಕ್ತೇಷ್ವೇವ ವಿಕಲ್ಪೇಷು ಜ್ಞೇಯಮನ್ಯಚ್ಚ ತಾದೃಶಮ್ ॥ ೩೩ ॥**

ತ್ರಿಸಂಧ್ಯಾಸೇವೆಯೊಡನೆ ಬಲಿ ಸ್ನಪನವೆಂಬ ಬೇರೆ ಅರ್ಚನವೂ ಅಂತಹ ಬೇರೆ ಅರ್ಚನವೂ ಮೇಲೆ ಹೇಳಿರುವ ಭೇದಗಳಲ್ಲೇ ಸೇರಿರುವುವೆಂದು ತಿಳಿಯಬೇಕು.

**ಏವಂವಿಧವಿಧಾನೇನ ಯಾ [೫]ಮಹೇಜ್ಯಾ ಜಿನೇಶಿನಾಮ್ ।**
**ವಿಧಿಜ್ಞಾಸ್ತಾಮುಶಂತೀಜ್ಯಾಂ ವೃತ್ತಿಂ [೬]ಪ್ರಾಥಮಕಲ್ಪಿಕೀಮ್ ॥ ೩೪ ॥**

ಈ ಪ್ರಕಾರವಾದ ವಿಧಾನದಿಂದ ಜಿನೇಶ್ವರರ ಯಾವ ಮಹಾಪೂಜೆಯು ಮಾಡಲಾಗುವುದೋ ಷಟ್ಕರ್ಮಗಳಲ್ಲಿ ಮೊದಲು ಹೇಳಲ್ಪಟ್ಟಿರುವ ಆ ವ್ಯಾಪಾರವನ್ನು ವಿಧಿಗಳನ್ನು ತಿಳಿದವರು ಇಜ್ಯಾ–ಪೂಜೆಯನ್ನಾಗಿ ಹೇಳುತ್ತಾರೆ.

**ವಾರ್ತಾ ವಿಶುದ್ಧವೃತ್ತ್ಯಾ ಸ್ಯಾತ್ಕೃಷ್ಯಾದೀನಾ[೭]ಮನುಷ್ಠಿತಿಃ ।**
**ಚತುರ್ಧಾ ವರ್ಣಿತಾ ದತ್ತಿರ್ದಯಾಪಾತ್ರಸಮಾನ್ವಯೈಃ ॥ ೩೫ ॥**

ವಿಶುದ್ಧವಾದ ನಡೆವಳಿಕೆಯಿಂದ ಕೃಷಿ ಮೊದಲಾದ ಜೀವನೋಪಾಯಗಳ ಅನುಷ್ಠಾನವು 'ವಾರ್ತಾ' ಎಂಬುದಾಗಿರುವುದು. ದಯಾ ಪಾತ್ರ ಸಮ ಅನ್ವಯಗಳಿಂದ ದತ್ತಿ(ದಾನ)ಯು ನಾಲ್ಕುವಿಧವಾಗಿ ವರ್ಣಿಸಲ್ಪಟ್ಟಿದೆ.

**ಸಾನುಕಂಪಮನುಗ್ರಾಹ್ಯೇ ಪ್ರಾಣಿವೃಂದೇಭಯಪ್ರದಾ ।**
**ತ್ರಿಶುದ್ಧ್ಯನುಗತಾ ಸೇಯಂ ದಯಾದತ್ತಿರ್ಮತಾ ಬುಧೈಃ ॥ ೩೬ ॥**

ಅನುಗ್ರಹಿಸುವುದಕ್ಕೆ ಯೋಗ್ಯವಾದ ಪ್ರಾಣಿಸಮುದಾಯದಲ್ಲಿ ದಯೆಯೊಡನೆ ಕೂಡಿರುವ ಹಾಗೆ ಅಭಯದಾನವನ್ನು ಮಾಡುವುದೂ ಮನೋವಾಕ್ಕಾಯ ಶುದ್ಧಿಯುಳ್ಳುದೂ ಆದ ಈ ವ್ಯಾಪಾರವು ವಿದ್ವಾಂಸರಿಂದ ದಯಾದತ್ತಿಯೆಂದು ತಿಳಿಯಲ್ಪಟ್ಟಿದೆ.

**ಮಹಾತಪೋಧನಾಯಾ[೮]ರ್ಚಾಪ್ರತಿಗ್ರಹಪುರಸ್ಸರಮ್ ।**
**ಪ್ರದಾನಮಶನಾದೀನಾಂ ಪಾತ್ರದಾನಂ ತದಿಷ್ಯತೇ ॥ ೩೭ ॥**

ಮಹಾತಪಸ್ವಿಗೆ ಪೂಜೆ ಇದಿರ್ಗೊಳ್ಳುವಿಕೆ ಇವುಗಳೇ ಮೊದಲಾಗಿರುವ ಭೋಜನಾದಿಗಳ ದಾನವು ಪಾತ್ರದಾನವೆಂದು ಅಂಗೀಕರಿಸಲ್ಪಡುತ್ತದೆ.

೧ ಭವತಃ ಕಿಮಿಷ್ಟಮಿತಿ ಪ್ರಶ್ನಪೂರ್ವಕಂ ತದಭಿವಾಂಛಿತಸ್ಯ ದಾನಂ. ೨ ಸರ್ವಜನೇಷು ಭವಃ. ೩ ಪ್ರಸಿದ್ಧಃ. ೪ ಚತುರ್ವಿಧಾದನ್ಯ. ೫ ಮಹಾಪೂಜಾ. ೬ ಷಟ್ಕರ್ಮಸು ಪ್ರಥಮೋಕ್ತಾಮಿತ್ಯರ್ಥಃ. ೭ ಅನುಷ್ಠಾನಂ. ೮ ಪೂಜಾಸ್ಥಾನವಿಧಿಪೂರ್ವಕಂ.

**ಸಮಾನಾಯಾತ್ಮನಾನ್ಯಸ್ಮೈ ಕ್ರಿಯಾಮಂತ್ರವ್ರತಾದಿಭಿಃ ।**
**[೧]ನಿಸ್ತಾರಕೋತ್ತಮಾಯೇಹ ಭೂಹೇಮಾದ್ಯ[೨]ತಿಸರ್ಜನಮ್ ॥ ೩೮ ॥**

**ಸಮಾನದತ್ತಿರೇಷಾ ಸ್ಯಾತ್ಪಾತ್ರೇ [೩]ಮಧ್ಯಮತಾಮಿತೇ ।**
**ಸಮಾನ[೪]ಪ್ರತಿಪತ್ತ್ಯೈವ ಪ್ರವೃತ್ತಾ ಶ್ರದ್ಧಯಾನ್ವಿತಾ ॥ ೩೯ ॥**

ಆಚರಣ ಮಂತ್ರ ವ್ರತ ಮೊದಲಾದುವುಗಳಿಂದ ತನಗೆ ಸಮಾನನೂ ಸಂಸಾರ ಸಮುದ್ರವನ್ನು ದಾಟಿಸುವವನೂ ಉತ್ತಮನೂ ಆದ ಬೇರೆಯವನಿಗೆ ಭೂಮಿ ಬಂಗಾರ ಮೊದಲಾದ ವಸ್ತುಗಳ ದಾನವು, ಮಧ್ಯಮಪಾತ್ರದಲ್ಲಿ ಸಮಾನನೆಂಬ ವಿನಯಬುದ್ಧಿಯಿಂದಲೇ ಉಂಟಾದುದೂ ಶ್ರದ್ಧೆಯಿಂದ ಕೂಡಿದುದೂ ಆದ ಈ ದತ್ತಿಯು ಸಮಾನದತ್ತಿಯೆನಿಸುವುದು.

**ಆತ್ಮಾನ್ವಯಪ್ರತಿಷ್ಠಾರ್ಥಂ ಸೂನವೇ ಯದಶೇಷತಃ ।**
**ಸಮಂ [೫]ಸಮಯವಿತ್ತಾಭ್ಯಾಂ [೬]ಸ್ವವರ್ಗಸ್ಯಾತಿಸರ್ಜನಮ್ ॥ ೪೦ ॥**

**ಸೈಷಾ ಸಕಲದತ್ತಿಃ ಸ್ಯಾತ್ಸ್ವಾ[೭]ಧ್ಯಾಯಃ ಶ್ರುತಭಾವನಾ ।**
**ತಪೋನಶನವೃತ್ತ್ಯಾದಿ ಸಂಯಮೋ ವ್ರತಧಾರಣಮ್ ॥ ೪೧ ॥**

ತನ್ನ ವಂಶದ ಚಿರಕಾಲಸ್ಥಿತಿಗೋಸ್ಕರ ತನ್ನ ಮಗನಿಗೆ ಸದ್ಧರ್ಮದೊಡನೆಯೂ ಸಂಪತ್ತಿಯೊಡನೆಯೂ ಸರ್ವಸ್ವವನ್ನೂ ತನ್ನ ಕುಟುಂಬವರ್ಗಕ್ಕೋಸ್ಕರ ದಾನ ಮಾಡುವುದು ಯಾವುದುಂಟೋ ಅದು ಸಕಲದತ್ತಿಯಾಗಿರುವುದು. ತನ್ನ ಕುಟುಂಬವರ್ಗದ ಪೋಷಣೆಗಾಗಿ ಸರ್ವಸ್ವವನ್ನೂ ಮಗನಿಗೆ ಕೊಡುವುದಕ್ಕೆ ಅನ್ವಯ ದತ್ತಿಯೆಂದು ಹೆಸರೆಂದು ಭಾವವು. ಶಾಸ್ತ್ರವಿಷಯಗಳ ಚಿಂತನೆಯೂ ಸ್ವಾಧ್ಯಾಯವಾಗಿರುವುದು. ಉಪವಾಸ ಮೊದಲಾದ ನಿಯಮವು ತಪಸ್ಸಾಗಿರುವುದು. ಅಹಿಂಸಾದಿ ವ್ರತಗಳನ್ನು ಧರಿಸುವಿಕೆಯು ಸಂಯಮವಾಗಿರುವುದು.

**ವಿಶುದ್ಧಾ ವೃತ್ತಿರೇಷೈಷಾಂ ಷಟ್ತಯೀಷ್ಟಾ ದ್ವಿಜನ್ಮನಾಮ್ ।**
**ಯೋತಿಕ್ರಮೇದಿಮಾಂ ಸೋಜ್ಞೋ ನಾಮ್ನೈವ ನ ಗುಣೈರ್ದ್ವಿಜಃ ॥**

ಈ ದ್ವಿಜರ ಪರಿಶುದ್ಧವಾದ ಈ ನಡೆವಳಿಕೆಯು ಆರು ವಿಧವಾಗಿ ಅಭೀಷ್ಟವಾಗಿರುತ್ತದೆ. ಈ ವೃತ್ತಿಯನ್ನು ಯಾವನು ಮೀರುವನೋ ಅಂತಹ ಅಜ್ಞಾನಿಯು ಹೆಸರಿನಿಂದಲೇ ದ್ವಿಜನು. ಗುಣಗಳಿಂದ ದ್ವಿಜನಲ್ಲ.

**ತಪಃ ಶ್ರುತಂ ಚ ಜಾತಿಶ್ಚ ತ್ರಯಂ ಬ್ರಾಹ್ಮಣ್ಯಕಾರಣಮ್ ।**
**ತಪಃಶ್ರುತಾಭ್ಯಾಂ ಯೋ ಹೀನೋ ಜಾತಿಬ್ರಾಹ್ಮಣ ಏವ ಸಃ ॥ ೪೩ ॥**

ತಪಸ್ಸು ಶಾಸ್ತ್ರ ಜಾತಿ ಇವು ಮೂರು ಬ್ರಾಹ್ಮಣ್ಯಕ್ಕೆ ಕಾರಣಗಳು. ತಪಸ್ಸಿನಿಂದಲೂ ಶಾಸ್ತ್ರದಿಂದಲೂ ರಹಿತನಾದವನು ಕೇವಲ ಜಾತಿಬ್ರಾಹ್ಮಣನೆನಿಸುವನು.

**ಅಪಾಪೋಪಹತಾ ವೃತ್ತಿಃ ಸ್ಯಾದೇಷಾಂ ಜಾತಿರುತ್ತಮಾ ।**
**ದತ್ತೀಜ್ಯಾ[೮]ಧೀತಿಮುಖ್ಯತ್ವಾದ್ವ್ರತಶುದ್ಧ್ಯಾ ಸುಸಂಸ್ಕೃತಾ ॥ ೪೪ ॥**

ಈ ದ್ವಿಜರ ಪಾಪರಹಿತವೂ ವ್ರತಶುದ್ಧಿಯಿಂದ ವಿಶಿಷ್ಟವೂ ಆದ ಸಂಸ್ಕಾರವು ವೃತ್ತಿಯಾಗಿರುವುದು. ದಾನ ಪೂಜಾ ಅಧ್ಯಯನ ಇವುಗಳ ಪ್ರಾಮುಖ್ಯದಿಂದ ಶ್ರೇಷ್ಠವಾದುದು ಜಾತಿಯು.

**ಮನುಷ್ಯಜಾತಿರೇಕೈವ [೯]ಜಾತಿನಾಮೋದಯೋದ್ಭವಾ ।**
**[೧೦]ವೃತ್ತಿಭೇದಾಹಿತಾದ್ಭೇದಾ[೧೧]ಚ್ಚಾತುರ್ವಿಧ್ಯಮಿಹಾಶ್ನುತೇ ॥ ೪೫ ॥**

ಜಾತಿಯೆಂಬ ನಾಮಕರ್ಮದ ಉದಯದಿಂದುಂಟಾದ ಮನುಷ್ಯಜಾತಿಯು ಒಂದೇ ಆಗಿರುತ್ತದೆ. ತಮ್ಮ ಕಸುಬುಗಳ ಭೇದದಿಂದಾದ ಭೇದದಿಂದ ಆ

೧ ಸಂಸಾರಸಾಗರೋತ್ತಾರಕಾಯ. ೨ ದಾನಂ. ೩ ಮಧ್ಯಮತ್ವಂ ಗತೇ. ೪ ವಿನಯೇನ. ೫ ಸದ್ಧರ್ಮಧನಾಭ್ಯಾಂ. ೬ ಸ್ವಕುಟುಂಬವರ್ಗಸ್ಯ ಸೂನೋರಭಾವೇ ದಾಯಾದಸ್ಯ. ೭ ಅಧ್ಯಯನ. ೮ ನಾಮಕರ್ಮ. ೯ ಸ್ವಕೀಯವರ್ತನವಿಶೇಷಕೃತಾತ್. ೧೦ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರತ್ವ.

ಮನುಷ್ಯಜಾತಿಯು ಇಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ರೂಪದಿಂದ ನಾಲ್ಕು ಭೇದವನ್ನು ಹೊಂದುತ್ತದೆ.

**ಬ್ರಾಹ್ಮಣಾ ವ್ರತಸಂಸ್ಕಾರಾತ್ಕ್ಷತ್ರಿಯಾಃ ಶಸ್ತ್ರಧಾರಣಾತ್ ।**
**ವಣಿಜೋರ್ಥಾರ್ಜನಾನ್ನ್ಯಾಯಾತ್ ಶೂದ್ರಾ [1]ನ್ಯಗ್ವೃತ್ತಿಸಂಶ್ರಯಾತ್ ॥**

ವ್ರತದ ಮತ್ತು ಸಂಸ್ಕಾರದ ದೆಸೆಯಿಂದ ಬ್ರಾಹ್ಮಣರೆನಿಸುವರು. ಶಸ್ತ್ರಗಳನ್ನು ಧರಿಸುವುದರ ದೆಸೆಯಿಂದ ಕ್ಷತ್ರಿಯರೆನಿಸುವರು. ನ್ಯಾಯವಾದ ದ್ರವ್ಯಾರ್ಜನೆಯ ದೆಸೆಯಿಂದ ವೈಶ್ಯರೆನಿಸುವರು. ನೀಚವೃತ್ತಿಯನ್ನು ಆಶ್ರಯಿಸುವುದರ ದೆಸೆಯಿಂದ ಶೂದ್ರರೆನಿಸುವರು.

**ತಪಃಶ್ರುತಾಭ್ಯಾಮೇವಾ[2]ತೋ [3]ಜಾತಿಸಂಸ್ಕಾರ ಇಷ್ಯತೇ ।**
**ಅಸಂಸ್ಕೃತಸ್ತು ಯಸ್ತಾಭ್ಯಾಂ ಜಾತಿಮಾತ್ರೇಣ ಸ ದ್ವಿಜಃ ॥ ೪೭ ॥**

ಈ ಕಾರಣದಿಂದ ತಪಸ್ಸು ಮತ್ತು ಶಾಸ್ತ್ರ ಇವುಗಳಿಂದಲೇ ವಿಶಿಷ್ಟಜಾತಿಸಂಸ್ಕಾರವು ಅಪೇಕ್ಷಿಸಲ್ಪಡುತ್ತದೆ. ಯಾವನು ಆ ತಪಃ ಶತ್ರುಗಳಿಂದ ಸಂಸ್ಕಾರವನ್ನು ಹೊಂದಿಲ್ಲವೋ ಅವನು ಜಾತಿಮಾತ್ರದಿಂದ ದ್ವಿಜನೆನಿಸುವನು.

**ದ್ವಿರ್ಜಾತೋ ಹಿ ದ್ವಿಜನ್ಮೇಷ್ಟಃ ಕ್ರಿಯಾತೋ ಗರ್ಭತಶ್ಚ ಯಃ ।**
**ಕ್ರಿಯಾಮಂತ್ರವಿಹೀನಸ್ತು ಕೇವಲಂ ನಾಮಧಾರಕಃ ॥ ೪೮ ॥**

ಯಾವನು ಕ್ರಿಯಾ–ಸಂಸ್ಕಾರದಿಂದಲೂ ಗರ್ಭದಿಂದಲೂ ಎರಡು ಜನ್ಮಗಳುಳ್ಳವನೋ ಅವನು ದ್ವಿಜನೆಂದು ಅಂಗೀಕೃತನಾಗಿರುವನು. ಕ್ರಿಯಾಮಂತ್ರಹೀನನಾದವನಾದರೋ ಬರೇ ಹೆಸರನ್ನು ಧರಿಸಿದವನಾಗಿರುತ್ತಾನೆ.

**ತದೇಷಾಂ ಜಾತಿಸಂಸ್ಕಾರಂ ದೃಢಯನ್ನಿತಿ ಸೋಧಿರಾಟ್ ।**
**ಸಂಪ್ರೋವಾಚ ದ್ವಿಜನ್ಮಭ್ಯಃ ಕ್ರಿಯಾಭೇದಾನಶೇಷತಃ ॥ ೪೯ ॥**

ಆದುದರಿಂದ ಈ ಮುಂದೆ ಹೇಳುವ ಪ್ರಕಾರವಾಗಿ ಈ ದ್ವಿಜರ ಜಾತಿ ಸಂಸ್ಕಾರವನ್ನು ದೃಢಪಡಿಸುವವನಾದ ಆ ಚಕ್ರೇಶ್ವರನು ದ್ವಿಜರಿಗೆ ವಿಶೇಷರೀತಿಯಿಂದ ಕ್ರಿಯಾಭೇದಗಳನ್ನು ಹೇಳಿದನು.

**ತಾಶ್ಚ ಕ್ರಿಯಾಸ್ತ್ರಿಧಾಮ್ನಾತಾಃ ಶ್ರಾವಕಾಧ್ಯಾಯಸಂಗ್ರಹೇ ।**
**ಸದ್ದೃಷ್ಟಿಭಿರನುಷ್ಠೇಯಾ ಮಹೋದರ್ಕಾಃ ಶುಭಾವಹಾಃ ॥ ೫೦ ॥**

ಆ ಕ್ರಿಯೆಗಳೂ ಶ್ರಾವಕಾಚಾರವೇದದಲ್ಲಿ ಮೂರುವಿಧವಾಗಿ ಹೇಳಲ್ಪಟ್ಟಿರುತ್ತವೆ. ಅವುಗಳು ಸಮ್ಯಗ್ದೃಷ್ಟಿಗಳಿಂದ ಅನುಷ್ಠಿಸಲ್ಪಡತಕ್ಕುವುಗಳೂ ದೊಡ್ಡದಾದ ಉತ್ತರ ಫಲಗಳುಳ್ಳುವೂ ಶುಭವನ್ನುಂಟುಮಾಡುವುವುಗಳೂ ಆಗಿರುತ್ತವೆ.

**ಗರ್ಭಾನ್ವಯಕ್ರಿಯಾಶ್ಚೈವ ತಥಾ ದೀಕ್ಷಾನ್ವಯಕ್ರಿಯಾಃ ।**
**ಕರ್ತ್ರನ್ವಯಕ್ರಿಯಾಶ್ಚೇತಿ ತಾಸ್ತ್ರಿಧೈವಂ ಬುಧೈರ್ಮತಾಃ ॥ ೫೧ ॥**

ಗರ್ಭಾನ್ವಯಕ್ರಿಯೆಗಳು ಹಾಗೆಯೇ ದೀಕ್ಷಾನ್ವಯಕ್ರಿಯೆಗಳು ಕರ್ತ್ರನ್ವಯಕ್ರಿಯೆಗಳು ಎಂಬುದಾಗಿ ಹೀಗೆ ವಿದ್ವಾಂಸರಿಂದ ಮೂರುವಿಧವಾಗಿ ಅಂಗೀಕೃತವಾಗಿರುತ್ತವೆ.

**ಆಧಾನಾದ್ಯಾಸ್ತ್ರಿಪಂಚಾಶತ್ ಜ್ಞೇಯಾ ಗರ್ಭಾನ್ವಯಕ್ರಿಯಾಃ ।**
**ಚತ್ವಾರಿಂಶದಥಾಷ್ಟೌ ಚ ಸ್ಮೃತಾ ದೀಕ್ಷಾನ್ವಯಕ್ರಿಯಾಃ ॥ ೫೨ ॥**

**ಕರ್ತ್ರನ್ವಯಕ್ರಿಯಾಶ್ಚೈವ ಸಪ್ತ ತಜ್ಜ್ಞೈಃ [4]ಸಮುಚ್ಚಿತಾಃ ।**
**ತಾಸಾಂ ಯಥಾಕ್ರಮಂ ನಾಮನಿರ್ದೇಶೋಯಮನೂದ್ಯತೇ ॥ ೫೩ ॥**

ಗರ್ಭಾಧಾನ ಮೊದಲಾದ ಗರ್ಭಾನ್ವಯಕ್ರಿಯೆಗಳು ಐವತ್ತಮೂರೆಂದು ತಿಳಿಯತಕ್ಕುವು. ಬಳಿಕ ದೀಕ್ಷಾನ್ವಯಕ್ರಿಯೆಗಳು ನಲ್ವತ್ತೆಂಟೆಂಬುದಾಗಿ ಸ್ಮರಿಸಲ್ಪಟ್ಟಿರುತ್ತವೆ.

೧ ನೀಚವೃತ್ತಿ. ೨ ಕಾರಣಾತ್. ೩ ವಿಶಿಷ್ಟಜಾತಿಸಂಸ್ಕಾರಃ. ೪ ಸಂಕ್ಷೇಪೇಣ ಕೃತಾಃ.

ಕರ್ತ್ರನ್ವಯಕ್ರಿಯೆಗಳು ಆ ಕ್ರಿಯೆಗಳನ್ನು ತಿಳಿದ ವಿದ್ವಾಂಸರಿಂದ ಏಳುವಿಧವಾಗಿ ಸಂಕ್ಷೇಪದಿಂದ ಹೇಳಲ್ಪಟ್ಟಿರುತ್ತವೆ. ಆ ಕ್ರಿಯೆಗಳ ಈ ನಾಮನಿರ್ದೇಶವು ಯಥಾಕ್ರಮವಾಗಿ ಈ ಕೆಳಗೆ ಹೇಳಲ್ಪಡುತ್ತದೆ.

**[1]ಅಂಗಾನಾಂ [2]ಸಪ್ತಮಾದಂಗಾದ್ದುಸ್ತರಾದರ್ಣವಾದಪಿ ।**
**ಶ್ಲೋಕೈರಷ್ಟಾಭಿರುನ್ನೇಷ್ಯೇ ಪ್ರಾಪ್ತಂ ಜ್ಞಾನಲವಂ [3]ಮಯಾ ॥ ೫೪ ॥**

ಆಚಾರಾಂಗಾದಿ ದ್ವಾದಶಾಂಗಗಳಲ್ಲಿ ಸಮುದ್ರಕ್ಕಿಂತಲೂ ದುಸ್ತರವಾದ ಏಳನೆಯದಾದ ಉಪಾಸಕಾಧ್ಯಯನಾಂಗದಿಂದ ನನ್ನಿಂದ (ಗೌತಮಗಣಧರರಿಂದ) ದೊರಕಿಸಲ್ಪಟ್ಟ ಜ್ಞಾನಲೇಶವನ್ನು ಎಂಟು ಶ್ಲೋಕಗಳಿಂದ ಉದ್ದೇಶವನ್ನು (ನಾಮಸಂಕೀರ್ತನವನ್ನು) ಮಾಡುವೆನು.

**ಆಧಾನಂ ಪ್ರೀತಿಸುಪ್ರೀತೀ ಧೃತಿರ್ಮೋದಃ ಪ್ರಿಯೋದ್ಭವಃ ।**
**ನಾಮಕರ್ಮ ಬಹಿರ್ಯಾನಂ ನಿಷದ್ಯಾ ಪ್ರಾಶನಂ ತಥಾ ॥ ೫೫ ॥**

**ವ್ಯುಷ್ಟಿಶ್ಚ ಕೇಶವಾಪಶ್ಚ ಲಿಪಿಸಂಖ್ಯಾನಸಂಗ್ರಹಃ ।**
**ಉಪನೀತಿರ್ವ್ರತಚರ್ಯಾ ವ್ರತಾವತರಣಂ ತಥಾ ॥ ೫೬ ॥**

**ವಿವಾಹೋ ವರ್ಣಲಾಭಶ್ಚ ಕುಲಚರ್ಯಾ ಗೃಹೀಶಿತಾ ।**
**ಪ್ರಶಾಂತಿಶ್ಚ ಗೃಹತ್ಯಾಗೋ ದೀಕ್ಷಾದ್ಯಂ ಜಿನರೂಪತಾ ॥ ೫೭ ॥**

**ಮೌನಾಧ್ಯಯನವೃತ್ತತ್ವಂ ತೀರ್ಥಕೃತ್ತ್ವಸ್ಯ ಭಾವನಾ ।**
**ಗುರುಸ್ಥಾನಾಭ್ಯುಪಗಮೋ ಗಣೋಪಗ್ರಹಣಂ ತಥಾ ॥ ೫೮ ॥**

**ಸ್ವಗುರುಸ್ಥಾನಸಂಕ್ರಾಂತಿರ್ನಿಸ್ಸಂಗತ್ವಾತ್ಮಭಾವನಾ ।**
**ಯೋಗನಿರ್ವಾಣಸಂಪ್ರಾಪ್ತಿರ್ಯೋಗನಿರ್ವಾಣಸಾಧನಮ್ ॥ ೫೯ ॥**

**ಇಂದ್ರೋಪಪಾದಾಭಿಷೇಕೌ ವಿಧಿದಾನಂ ಸುಖೋದಯಃ ।**
**ಇಂದ್ರತ್ಯಾಗಾವತಾರೌ ಚ ಹಿರಣ್ಯೋತ್ಕೃಷ್ಟಜನ್ಮತಾ ॥ ೬೦ ॥**

**ಮಂದರೇಂದ್ರಾಭಿಷೇಕಶ್ಚ ಗುರುಪೂಜೋಪಲಂಭನಮ್ ।**
**ಯೌವರಾಜ್ಯಂ ಸ್ವರಾಜ್ಯಂ ಚ ಚಕ್ರಲಾಭೋ ದಿಶಾಂ ಜಯಃ ॥ ೬೧ ॥**

**ಚಕ್ರಾಭಿಷೇಕಸಾಮ್ರಾಜ್ಯೇ ನಿಷ್ಕ್ರಾಂತಿರ್ಯೋಗಸಮ್ಮಹಃ ।**
**ಆರ್ಹಂತ್ಯಂ ತದ್ವಿಹಾರಶ್ಚ ಯೋಗತ್ಯಾಗೋಗ್ರನಿರ್ವೃತಿಃ ॥ ೬೨ ॥**

೧ ಆಧಾನ ೨ ಪ್ರೀತಿ ೩ ಸುಪ್ರೀತಿ ೪ ಧೃತಿ ೫ ಮೋದ ೬ ಪ್ರಿಯೋದ್ಭವ ೭ ನಾಮಕರ್ಮ ೮ ಬಹಿರ್ಯಾನ ೯ ನಿಷದ್ಯಾ ೧೦ ಪ್ರಾಶನ ೧೧ ವ್ಯುಷ್ಟಿ ೧೨ ಕೇಶವಾಪ ೧೩ ಲಿಪಿಸಂಖ್ಯಾನಸಂಗ್ರಹ ೧೪ ಉಪನೀತಿ ೧೫ ವ್ರತಚರ್ಯಾ ೧೬ ವ್ರತಾವತರಣ ೧೭ ವಿವಾಹ ೧೮ ವರ್ಣಲಾಭ ೧೯ ಕುಲಚರ್ಯಾ ೨೦ ಗೃಹೀಶಿತಾ ೨೧ ಪ್ರಶಾಂತಿ ೨೨ ಗೃಹತ್ಯಾಗ ೨೩ ದೀಕ್ಷಾ ೨೪ ಜಿನರೂಪತಾ ೨೫ ಮೌನಾಧ್ಯಯನವೃತ್ತತ್ವ ೨೬ ತೀರ್ಥಕೃತ್ತ್ವಭಾವನಾ ೨೭ ಗುರುಸ್ಥಾನಾಭ್ಯುಪಗಮ ೨೮ ಗಣೋಪಗ್ರಹಣ ೨೯ ಸ್ವಗುರುಸ್ಥಾನಸಂಕ್ರಾಂತಿ ೩೦ ನಿಸ್ಸಂಗತ್ವಾತ್ಮಭಾವನಾ ೩೧ ಯೋಗನಿರ್ವಾಣಸಂಪ್ರಾಪ್ತಿ ೩೨ ಯೋಗನಿರ್ವಾಣಸಾಧನ ೩೩ ಇಂದ್ರೋಪಪಾದ ೩೪ ಅಭಿಷೇಕ ೩೫ ವಿಧಿದಾನ ೩೬ ಸುಖೋದಯ ೩೭ ಇಂದ್ರತ್ಯಾಗ ೩೮ ಅವತಾರ ೩೯ ಹಿರಣ್ಯೋತ್ಕೃಷ್ಟಜನ್ಮತಾ ೪೦ ಮಂದರೇಂದ್ರಾಭಿಷೇಕ ೪೧ ಗುರುಪೂಜೋಪಲಂಭನ ೪೨ ಯೌವರಾಜ್ಯ ೪೩ ಸ್ವರಾಜ್ಯ ೪೪ ಚಕ್ರಲಾಭ ೪೫ ದಿಗ್ಜಯ ೪೬ ಚಕ್ರಾಭಿಷೇಕ ೪೭ ಸಾಮ್ರಾಜ್ಯ ೪೮ ನಿಷ್ಕ್ರಾಂತಿ ೪೯ ಯೋಗಸಮ್ಮಹ ೫೦ ಆರ್ಹಂತ್ಯ ೫೧ ತದ್ವಿಹಾರ ೫೨ ಯೋಗತ್ಯಾಗ ೫೩ ಅಗ್ರನಿರ್ವೃತಿ.

೧ ದ್ವಾದಶಾಂಗಾನಾಂ ಮಧ್ಯೇ. ೨ ಉಪಾಸಕಾಧ್ಯಯನಾತ್. ೩ ಗೌತಮೇನ.

**ತ್ರಯಃ ಪಂಚಾಶದೇತಾ ಹಿ ಮತಾ ಗರ್ಭಾನ್ವಯಕ್ರಿಯಾಃ ।**
**ಗರ್ಭಾಧಾನಾದಿನಿರ್ವಾಣಪರ್ಯಂತಾಃ ಪರಮಾಗಮೇ ॥ ೬೩ ॥**

ಪರಮಾಗಮದಲ್ಲಿ ಗರ್ಭಾಧಾನ ಮೊದಲಾಗಿ ನಿರ್ವಾಣವು ಕೊನೆಯಾಗಿರುವ ಈ ಐವತ್ತಮೂರು ಗರ್ಭಾನ್ವಯಕ್ರಿಯೆಗಳು ಹೇಳಲ್ಪಟ್ಟಿರುತ್ತವೆ.

**ಅವತಾರೋ ವೃತ್ತಲಾಭಃ ಸ್ಥಾನಲಾಭೋ ಗಣಗ್ರಹಃ ।**
**ಪೂಜಾರಾಧ್ಯಪುಣ್ಯಯಜ್ಞೌ ದೃಢಚರ್ಯೋಪಯೋಗಿತಾ ॥ ೬೪ ॥**

**ಇತ್ಯುದ್ದಿಷ್ಟಾಭಿರಷ್ಟಾಭಿ[೧]ರುಪನೀತ್ಯಾದಯಃ ಕ್ರಿಯಾಃ ।**
**ಚತ್ವಾರಿಂಶತ್ಪಮಾಯುಕ್ತಾಸ್ತಾಃ ಸ್ಯುರ್ದೀಕ್ಷಾನ್ವಯಕ್ರಿಯಾಃ ॥ ೬೫ ॥**

೧ ಅವತಾರ ೨ ವೃತ್ತಲಾಭ ೩ ಸ್ಥಾನಲಾಭ ೪ ಗಣಗ್ರಹ ೫ ಪೂಜಾರಾಧ್ಯ ೬ ಪುಣ್ಯಯಜ್ಞ ೭ ದೃಢಚರ್ಯಾ ೮ ಉಪಯೋಗಿತಾ ಈ ರೀತಿಯಾಗಿ ಹೇಳಲ್ಪಟ್ಟ ಎಂಟು ಕ್ರಿಯೆಗಳೊಡನೆ ನಲ್ವತ್ತು ಸಂಖ್ಯೆಯುಳ್ಳ ಆ ಉಪನೀತಿ ಮೊದಲಾದ ಕ್ರಿಯೆಗಳು ದೀಕ್ಷಾನ್ವಯಕ್ರಿಯೆಗಳಾಗುವುವು. ಅವತಾರ ಮೊದಲಾದ ಈ ಎಂಟು ಕ್ರಿಯೆಗಳೂ ಗರ್ಭಾನ್ವಯಕ್ರಿಯೆಗಳಲ್ಲಿ ಹೇಳಲ್ಪಟ್ಟ ಹದಿನಾಲ್ಕನೆಯದಾದ ಉಪನೀತಿಕ್ರಿಯೆ ಮೊದಲಾಗಿ ನಲ್ವತ್ತು ಕ್ರಿಯೆಗಳೂ ಸೇರಿ ಈ ನಲ್ವತ್ತೆಂಟು ಕ್ರಿಯೆಗಳು ದೀಕ್ಷಾನ್ವಯಕ್ರಿಯೆಗಳೆನಿಸುವುವೆಂದು ಭಾವವು.

**ತಾಸ್ತು ಕರ್ತ್ರನ್ವಯಾ ಜ್ಞೇಯಾ ಯಾಃ ಪ್ರಾಪ್ಯಾಃ ಪುಣ್ಯಕರ್ತೃಭಿಃ ।**
**ಫಲರೂಪತಯಾ [೨]ವೃತ್ತಾಃ ಸನ್ಮಾರ್ಗಾರಾಧನಸ್ಯ ವೈ ॥ ೬೬ ॥**

ಯಾವ ಕ್ರಿಯೆಗಳು ಸನ್ಮಾರ್ಗದ ಆಚರಣೆಗೆ ಫಲರೂಪವಾಗಿ ಆಗುತ್ತವೋ ಅಂತಹ ಕರ್ತ್ರನ್ವಯಕ್ರಿಯೆಗಳಾದರೋ ಪುಣ್ಯಶೀಲರಿಂದ ಪಡೆಯಬಹುದೆಂದು ತಿಳಿಯತಕ್ಕುವು.

**ಸಜ್ಜಾತಿಃ ಸದ್ಗೃಹಿತ್ವಂ ಚ ಪಾರಿವ್ರಾಜ್ಯಂ ಸುರೇಂದ್ರತಾ ।**
**ಸಾಮ್ರಾಜ್ಯಂ ಪರಮಾರ್ಹಂತ್ಯಂ ಪರಂ ನಿರ್ವಾಣಮಿತ್ಯಪಿ ॥ ೬೭ ॥**

**ಸ್ಥಾನಾನ್ಯೇತಾನಿ ಸಪ್ತ ಸ್ಯುಃ ಪರಮಾಣಿ ಜಗತ್ತ್ರಯೇ ।**
**ಅರ್ಹದ್ವಾಗಮೃತಾಸ್ವಾದಾತ್ಪ್ರತಿಲಭ್ಯಾನಿ ದೇಹಿನಾಮ್ ॥ ೬೮ ॥**

ಸಜ್ಜಾತಿ ಸದ್ಗೃಹಿತ್ವ ಪಾರಿವ್ರಾಜ್ಯ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಮನಿರ್ವಾಣಗಳೆಂಬ ಈ ಏಳು ಸ್ಥಾನಗಳು ಪ್ರಾಣಿಗಳಿಗೆ ಅರ್ಹತ್ಪರಮೇಶ್ವರರ ವಚನವೆಂಬ ಅಮೃತದ ಆಸ್ವಾದನದಿಂದ ಹೊಂದತಕ್ಕುವುಗಳೂ ಮೂರು ಲೋಕದಲ್ಲಿ ಶ್ರೇಷ್ಠಗಳೂ ಆಗಿರುವುವು.

**ಕ್ರಿಯಾ[೩]ಕಲ್ಪೋಽಯಮಾಮ್ನಾತೋ ಬಹುಭೇದೋ ಮಹರ್ಷಿಭಿಃ ।**
**ಸಂಕ್ಷೇಪತಸ್ತು [೪]ತಲ್ಲಕ್ಷ್ಮ ವಕ್ಷ್ಯೇ [೫]ಸಂಚಕ್ಷ್ಯ ವಿಸ್ತರಮ್ ॥ ೬೯ ॥**

ಈ ಕ್ರಿಯೆಗಳ ಕ್ರಮವು ಮಹರ್ಷಿಗಳಿಂದ ಅನೇಕ ಭೇದಗಳುಳ್ಳದಾಗಿ ಹೇಳಲ್ಪಟ್ಟಿದೆ. ಆ ಕ್ರಿಯೆಗಳ ಲಕ್ಷಣವನ್ನು ವಿಸ್ತರಿಸದೆ ಸಂಕ್ಷೇಪದಿಂದ ಹೇಳುವೆನು.

**ಆಧಾನಂ ನಾಮ [೬]ಗರ್ಭಾದೌ ಸಂಸ್ಕಾರೋ ಮಂತ್ರಪೂರ್ವಕಃ ।**
**ಪತ್ನೀ[೭]ಮೃತುಮತೀಂ ಸ್ನಾತಾಂ ಪುರಸ್ಕೃತ್ಯಾರ್ಹದಿಜ್ಯಯಾ ॥ ೭೦ ॥**

ಗರ್ಭದ ಆದಿಯಲ್ಲಿ ಅಂದರೆ ಪತ್ನೀಸಂಸರ್ಗದ ಮೊತ್ತಮೊದಲಲ್ಲಿ ಋತುಮತಿಯೂ ಸ್ನಾನಮಾಡಿದವಳೂ ಆದ ಪತ್ನಿಯನ್ನು ಅರ್ಹತ್ಪರಮೇಶ್ವರರ ಪೂಜಾಪೂರ್ವಕವಾಗಿ ಪುರಸ್ಕರಿಸಿ ಮಂತ್ರಪೂರ್ವಕವಾದ ಸಂಸ್ಕಾರವು ಯಾವುದುಂಟೋ ಅದು ಗರ್ಭಾಧಾನವೆಂಬ ಹೆಸರುಳ್ಳದಾಗಿರುತ್ತದೆ.

೧ ಗರ್ಭಾನ್ವಯಕ್ರಿಯಾಸು ಆದೌ ತ್ರಯೋದಶಕ್ರಿಯಾಃ ಮುಕ್ತ್ವಾ ಶೇಷಾ ಉಪನೀತ್ಯಾದಯಃ. ೨ ಪ್ರವರ್ತಿತಾಃ. ೩ ಕ್ರಮಃ. ೪ ಕ್ರಿಯಾಲಕ್ಷಣಂ. ೫ ವರ್ಜಯಿತ್ವಾ. ೬ ಗರ್ಭಸ್ಯ ಆದೌ. ೭ ಋತುಸ್ತು ದ್ವಾದಶನಿಶಾಶ್ಚಾದ್ಯಾಸ್ತಿಸ್ರೋತ್ರ ನಿಂದಿತಾಃ.

**[೧]ತತ್ರಾರ್ಚನಾವಿಧೌ ಚಕ್ರತ್ರಯಂ ಛತ್ರತ್ರಯಾನ್ವಿತಮ್ ।**
**[೨]ಜಿನಾರ್ಚಾಮಭಿತಃ ಸ್ಥಾಪ್ಯಂ ಸಮಂ ಪುಣ್ಯಾಗ್ನಿಭಿಸ್ತ್ರಿಭಿಃ ॥ ೭೧ ॥**

ಆಧಾನಕ್ರಿಯೆಯಲ್ಲಿ ಪೂಜಾವಿಧಾನದಲ್ಲಿ ಛತ್ರತ್ರಯಸಹಿತವಾದ ಚಕ್ರತ್ರಯವನ್ನು ಮೂರು ವಿಧವಾದ ಪುಣ್ಯಾಗ್ನಿಗಳೊಡನೆ ಜಿನಬಿಂಬದ ಸುತ್ತಲೂ ಸ್ಥಾಪಿಸಬೇಕು.

**ತ್ರಯೋಽಗ್ನಯೋಽರ್ಹದ್ಗಣಭೃಚ್ಛೇಷಕೇವಲಿನಿರ್ವೃತೌ ।**
**ಯೇ ಹುತಾಸ್ತೇ [೩]ಪ್ರಣೇತವ್ಯಾಃ [೪]ಸಿದ್ಧಾರ್ಚಾವೇದ್ಯುಪಾಶ್ರಯಾಃ ॥ ೭೨ ॥**

ಯಾವ ಅಗ್ನಿಗಳು ಅರ್ಹತ್ಪರಮೇಶ್ವರರ ಗಣಧರರ ಮತ್ತು ಇತರ ಕೇವಲಿಗಳ ನಿರ್ವಾಣಕಾಲದಲ್ಲಿ ಹೋಮಮಾಡಲ್ಪಟ್ಟುವೋ ಸಿದ್ಧಪ್ರತಿಮೆಗಳುಳ್ಳ ವೇದಿಯ ಸಮೀಪದಲ್ಲಿರುವುವುಗಳಾದ ಆ ಮೂರು ಅಗ್ನಿಗಳನ್ನು ಸಂಸ್ಕಾರಮಾಡಬೇಕು–ಹೊತ್ತಿಸಬೇಕು.

**[೫]ತೇಷ್ವರ್ಹದಿಜ್ಯಾಶೇಷಾಂಶೈರಾಹುತಿರ್ಮಂತ್ರಪೂರ್ವಿಕಾ ।**
**ವಿಧೇಯಾ ಶುಚಿಭಿರ್ದ್ರವ್ಯೈಃ ಪುಂಸ್ಪುತ್ರೋತ್ಪತ್ತಿಕಾಮ್ಯಯಾ ॥ ೭೩ ॥**

ಅರ್ಹತ್ಪರಮೇಶ್ವರರ ಪೂಜೆಯಾಗಿ ಉಳಿದ ಶುಚಿಯಾದ ಪೂಜಾದ್ರವ್ಯಗಳಿಂದ ಗಂಡುಮಗನು ಜನಿಸಬೇಕೆಂಬ ಇಚ್ಛೆಯಿಂದ ಮಂತ್ರಪೂರ್ವಕವಾದ ಆಹುತಿಯನ್ನು ಆ ಅಗ್ನಿಗಳಲ್ಲಿ ಮಾಡಬೇಕು.

**[೬]ತನ್ಮಂತ್ರಾಸ್ತು ಯಥಾಮ್ನಾಯಂ ವಕ್ಷ್ಯಂತೇ[೭]ನ್ಯತ್ರ ಪರ್ವಣಿ ।**
**ಸಪ್ತಧಾ ಪೀಠಿಕಾಜಾತಿಮಂತ್ರಾದಿ[೮]ಪ್ರವಿಭಾಗತಃ ॥ ೭೪ ॥**

ಪೀಠಿಕಾಮಂತ್ರ ಜಾತಿಮಂತ್ರ ಮೊದಲಾದ ಭೇದದಿಂದ ಏಳುಪ್ರಕಾರವಾದ ಆ ಮಂತ್ರಗಳಾದರೋ ನಲ್ವತ್ತನೆಯ ಪರ್ವದಲ್ಲಿ ಆಗಮಾನುಸಾರವಾಗಿ ಹೇಳಲ್ಪಡುವುವು.

**[೯]ವಿನಿಯೋಗಸ್ತು ಸರ್ವಾಸು ಕ್ರಿಯಾ[೧೦]ಸ್ವೇಷಾಂ ಮತೋ ಜಿನೈಃ ।**
**ಅವ್ಯಾಮೋಹಾದತಸ್ತಜ್ಞೈಃ ಪ್ರಯೋಜ್ಯಾ[೧೧]ಸ್ತ ಉಪಾಸಕೈಃ ॥ ೭೫ ॥**

ಸಮಸ್ತಕ್ರಿಯೆಗಳಲ್ಲಿಯೂ ಈ ಮಂತ್ರಗಳ ಪ್ರಯೋಗವು ಜಿನೇಶ್ವರರಿಂದ ಹೇಳಲ್ಪಟ್ಟಿದೆ. ಆದುದರಿಂದ ಆ ಮಂತ್ರಗಳನ್ನು ತಿಳಿದ ಶ್ರಾವಕರು ಅವುಗಳನ್ನು ಪ್ರಮಾದವಿಲ್ಲದೆ ಪ್ರಯೋಗಿಸಬೇಕು.

**ಗರ್ಭಾಧಾನಕ್ರಿಯಾಮೇನಾಂ ಪ್ರಯುಜ್ಯಾದೌ ಯಥಾವಿಧಿ ।**
**ಸಂತಾನಾರ್ಥಂ ವಿನಾ ರಾಗಾದ್ದಂಪತೀಭ್ಯಾಂ [೧೨]ವ್ಯವೇಯತಾಮ್ ॥**

ಮೊದಲು ವಿಧಿಪ್ರಕಾರವಾಗಿ ಈ ಗರ್ಭಾಧಾನಕ್ರಿಯೆಯನ್ನು ಪ್ರಯೋಗಿಸಿ ಅನುರಾಗವಿಲ್ಲದೆ ಸಂತಾನಕ್ಕೋಸ್ಕರ ದಂಪತಿಗಳು ಮೈಥುನವನ್ನು ಮಾಡಬೇಕು.

**ಗರ್ಭಾಧಾನಾತ್ಪರಂ ಮಾಸೇ ತೃತೀಯೇ ಸಂಪ್ರವರ್ತತೇ ।**
**ಪ್ರೀತಿರ್ನಾಮ ಕ್ರಿಯಾ [೧೩]ಪ್ರೀತ್ಯೈರ್ಯಾನುಷ್ಠೇಯಾ ದ್ವಿಜನ್ಮಭಿಃ ॥ ೭೭ ॥**

೧ ಇತಿ ಗರ್ಭಾಧಾನಕ್ರಿಯಾ ॥ ಗರ್ಭಾಧಾನವಾದನಂತರ ಮೂರನೆಯ ತಿಂಗಳಲ್ಲಿ ಪ್ರೀತಿಯುಳ್ಳವರಾದ ದ್ವಿಜರು ಮಾಡತಕ್ಕುದಾದ ಪ್ರೀತಿಯೆಂಬ ಕ್ರಿಯೆಯು ನಡೆಯುತ್ತದೆ.

**ತತ್ರಾಪಿ [೧೪]ಪೂರ್ವವನ್ಮಂತ್ರಪೂರ್ವಾ ಪೂಜಾ ಜಿನೇಶಿನಾಮ್ ।**
**ದ್ವಾರಿ ತೋರಣವಿನ್ಯಾಸಃ ಪೂರ್ಣಕುಂಭೌ ಚ ಸಮ್ಮತೌ ॥ ೭೮ ॥**

೧ ಆಧಾನಕ್ರಿಯಾಯಾಂ. ೨ ಜಿನಬಿಂಬಸ್ಯಾಭಿತಃ. ೩ ಸಂಸ್ಕಾರ್ಯಾಃ. ೪ ಸಿದ್ಧಪ್ರತಿಮಾಶ್ರಿತವೇದೀಸಮೀಪಾಶ್ರಿತಾಃ. ೫ ಅಗ್ನಿಷು. ೬ ಆಹುತ್ಯಾದಿ ಮಂತ್ರಾಃ. ೭ ಚತ್ವಾರಿಂಶತ್ತಮೇ. ೮ ಭೇದತಃ. ೯ ಪ್ರಯೋಗಃ. ೧೦ ಮಂತ್ರಾಣಾಂ. ೧೧ ಮಂತ್ರಾಃ. ೧೨ ಅಭಿಗಮ್ಯತಾಂ. ೧೩ ಪ್ರೀತ್ಯೈ ಇತ್ಯಪಿ ಪಾಠಾಂತರಂ. ೧೪ ಪೂರ್ವವಿಧಿವತ್ ಅಗ್ನಿತ್ರಯಾದಿಸಹಿತಾ.

ಆ ಪ್ರೀತಿಕ್ರಿಯೆಯಲ್ಲಿಯೂ ಮೊದಲಿನಂತೆ ಮಂತ್ರಪೂರ್ವಕವಾದ ಜಿನೇಶ್ವರರ ಪೂಜೆಯೂ ಬಾಗಿಲಿನಲ್ಲಿ ತೋರಣರಚನೆಯೂ ಪೂರ್ಣಕುಂಭಗಳೆರಡರ ಸ್ಥಾಪನೆಯೂ ಮಾಡತಕ್ಕುವುಗಳಾಗಿರುತ್ತವೆ.

**ತದಾದಿ ಪ್ರತ್ಯಹಂ ಭೇರೀಶಬ್ದೋ ಘಂಟಾಧ್ವನಾನ್ವಿತಃ ।**
**ಯಥಾವಿಭವಮೇವೈತೈಃ ಪ್ರಯೋಜ್ಯೋ ಗೃಹಮೇಧಿಭಿಃ ॥ ೭೯ ॥**

ಪ್ರೀತಿಕ್ರಿಯೆಯಾದಂದಿನಿಂದ ಪ್ರತಿದಿವಸದಲ್ಲಿಯೂ ಘಂಟೆಯ ಶಬ್ದದೊಡನೆ ಭೇರೀಶಬ್ದವನ್ನು ಈ ಗೃಹಸ್ಥರು ತಮ್ಮ ಸಂಪತ್ತಿಗನುಸಾರವಾಗಿ ಪ್ರಯೋಗಿಸಬೇಕು. ಪ್ರತಿದಿನವೂ ಭೇರೀನಾದವನ್ನು ಮಾಡಿಸಬೇಕೆಂದು ಭಾವವು.

**ಆಧಾನಾತ್ಪಂಚಮೇ ಮಾಸಿ ಕ್ರಿಯಾ ಸುಪ್ರೀತಿರಿಷ್ಯತೇ ।**
**ಯಾ ಸುಪ್ರೀತ್ಯೈಃ ಪ್ರಯೋಕ್ತವ್ಯಾ ಪರಮೋಪಾಸಕವ್ರತೈಃ ॥ ೮೦ ॥**

೨ ಇತಿ ಪ್ರೀತಿಕ್ರಿಯಾ ॥ ಗರ್ಭಾಧಾನಾನಂತರದಲ್ಲಿ ಐದನೆಯ ತಿಂಗಳಲ್ಲಿ ಸುಪ್ರೀತಿಯೆಂಬ ಕ್ರಿಯೆಯು ಮಾಡಲ್ಪಡುತ್ತದೆ. ಆ ಕ್ರಿಯೆಯನ್ನು ಬಹುಪ್ರೀತಿಯುಳ್ಳವರಾದ ಉತ್ಕೃಷ್ಟ ಶ್ರಾವಕವ್ರತವುಳ್ಳವರು ಪ್ರಯೋಗಿಸಬೇಕು.

**ತತ್ರಾಪ್ಯುಕ್ತೋ ವಿಧಿಃ ಪೂರ್ವಃ ಸರ್ವೋಽರ್ಹದ್ಬಿಂಬಸನ್ನಿಧೌ ।**
**ಕಾರ್ಯೋ ಮಂತ್ರವಿಧಾನಜ್ಞೈಃ ಸಾಕ್ಷೀಕೃತ್ಯಾ[೧]ಗ್ನಿದೇವತಾಃ ॥ ೮೧ ॥**

ಆ ಸುಪ್ರೀತಿಕ್ರಿಯೆಯಲ್ಲಿಯೂ ಅರ್ಹತ್ಪರಮೇಶ್ವರಬಿಂಬದ ಸನ್ನಿಧಿಯಲ್ಲಿ ಮೊದಲು ಹೇಳಲ್ಪಟ್ಟ ವಿಧಿಯೆಲ್ಲವೂ ಅಗ್ನಿದೇವತೆಗಳನ್ನು(ಅಗ್ನಿತ್ರಯವನ್ನು) ಸಾಕ್ಷಿಮಾಡಿ ಮಂತ್ರವಿಧಾನಗಳನ್ನು ತಿಳಿದವರಿಂದ ಮಾಡಲ್ಪಡತಕ್ಕುದಾಗಿರುತ್ತದೆ.

**ಧೃತಿಸ್ತು ಸಪ್ತಮೇ ಮಾಸೇ ಕಾರ್ಯಾ [೨]ತದ್ವತ್ಕೃತಾದರೈಃ ।**
**ಗೃಹಮೇಧಿಭಿರವ್ಯಗ್ರಮನೋಭಿರ್ಗರ್ಭವೃದ್ಧಯೇ ॥ ೮೨ ॥**

೩ ಇತಿ ಸುಪ್ರೀತಿಕ್ರಿಯಾ ॥ ಗರ್ಭಾಧಾನಾನಂತರದಲ್ಲಿ ಏಳನೆಯ ತಿಂಗಳಲ್ಲಿ ಧೃತಿಯೆಂಬ ಕ್ರಿಯೆಯನ್ನು ಪ್ರೀತಿಯುಳ್ಳವರೂ ಶಾಂತವಾದ ಮನಸ್ಸುಳ್ಳವರೂ ಆದ ಗೃಹಸ್ಥರು ಗರ್ಭದ ವೃದ್ಧಿಗೋಸ್ಕರ ಮೊದಲಿನ ವಿಧಿಯಂತೆಯೇ ಮಾಡಬೇಕು.

**ನವಮೇ ಮಾಸ್ಯತೋಽಭ್ಯರ್ಣೇ ಮೋದೋ ನಾಮ ಕ್ರಿಯಾವಿಧಿಃ ।**
**ತದ್ವದೇವಾದೃತೈಃ ಕಾರ್ಯೋ ಗರ್ಭಪುಷ್ಟ್ಯೈ ದ್ವಿಜೋತ್ತಮೈಃ ॥ ೮೩ ॥**

೪ ಇತಿ ಧೃತಿಕ್ರಿಯಾ ॥ ಗರ್ಭಾಧಾನಕ್ರಿಯೆಯಾದ ಮೇಲೆ ಒಂಬತ್ತನೆಯ ತಿಂಗಳು ಸಮೀಪಿಸುತ್ತಿರಲು ಮೊದಲಿನಂತೆಯೇ ಆಸಕ್ತಿಯುಳ್ಳವರಾದ ದ್ವಿಜೋತ್ತಮರು ಗರ್ಭಪುಷ್ಟಿಗೋಸ್ಕರ ಮೋದವೆಂಬ ಕ್ರಿಯೆಯನ್ನು ಮಾಡಬೇಕು.

**[೩]ತತ್ರೇಷ್ಟೋ [೪]ಗಾತ್ರಿಕಾಬಂಧೋ [೫]ಮಾಂಗಲ್ಯಂ ಚ [೬]ಪ್ರಸಾಧನಮ್ ।**
**[೭]ರಕ್ಷಾಸೂತ್ರವಿಧಾನಂ ಚ ಗರ್ಭಿಣ್ಯಾ ದ್ವಿಜಸತ್ತಮೈಃ ॥ ೮೪ ॥**

ಆ ಮೋದಕ್ರಿಯೆಯಲ್ಲಿ ಉತ್ತಮದ್ವಿಜರು ಗರ್ಭಿಣಿಯ ಅವಯವಗಳಲ್ಲಿ ಮಂತ್ರಪೂರ್ವಕವಾಗಿ ಬೀಜಾಕ್ಷರಗಳ ಸ್ಥಾಪನೆಯನ್ನೂ ಮಂಗಳಕರವಾದ ಅಲಂಕಾರವನ್ನೂ ಗರ್ಭರಕ್ಷಾನಿಮಿತ್ತವಾಗಿ ಕಂಕಣಸೂತ್ರಬಂಧನಕ್ರಿಯೆಯನ್ನೂ ಮಾಡಬೇಕು.

**ಪ್ರಿಯೋದ್ಭವಃ ಪ್ರಸೂತಾಯಾಂ ಜಾತಕರ್ಮವಿಧಿಃ ಸ್ಮೃತಃ ।**
**[೮]ಜಿನಜಾತಕಮಾಧ್ಯಾಯ ಪ್ರವರ್ತ್ಯೋ ಯೋ [೯]ಯಥಾವಿಧಿ ॥ ೮೫ ॥**

೫ ಇತಿ ಮೋದಕ್ರಿಯಾ ॥ ಪ್ರಸವವಾದ ಮೇಲೆ ಮಾಡತಕ್ಕ ಜಾತಕರ್ಮವಿಧಿಯು ಪ್ರಿಯೋದ್ಭವವೆಂದು ತಿಳಿಯಲ್ಪಟ್ಟಿದೆ. ಆ ಕ್ರಿಯೆಯನ್ನು ಇಂದ್ರನು ಮಾಡಿದ ಜಿನೇಶ್ವರನ ಜಾತಕರ್ಮವಿಧಿಯನ್ನು ಸ್ಮರಿಸಿ ಮೊದಲಿನಂತೆ ನಡೆಯಿಸಬೇಕು.

**ಅವಾಂತರವಿಶೇಷೋತ್ರ ಕ್ರಿಯಾಮಂತ್ರಾದಿಲಕ್ಷಣಃ ।**
**[೧]ಭೂಯಾನ್ಸಮಸ್ತ್ಯ[೨]ಸೌ ಜ್ಞೇಯೋ ಮೂಲೋಪಾಸಕಸೂತ್ರತಃ ॥ ೮೬ ॥**

ಈ ಜಾತಕರ್ಮವಿಧಿಯಲ್ಲಿ ಕ್ರಿಯೆಗಳೂ ಮಂತ್ರ ಮೊದಲಾದುವುಗಳೂ ಲಕ್ಷಣಗಳಾಗಿರುವ ದೊಡ್ಡದಾದ ಅವಾಂತರವಿಶೇಷವಿರುತ್ತದೆ. ಇದನ್ನು ಮೂಲಾಚಾರವೆಂಬ ಉಪಾಸಕಸೂತ್ರದಿಂದ ತಿಳಿಯಬೇಕು.

**ದ್ವಾದಶಾಹಾತ್ಪರಂ ನಾಮಕರ್ಮ ಜನ್ಮದಿನಾನ್ಮತಮ್ ।**
**ಅನುಕೂಲೇ ಸುತಸ್ಯಾಸ್ಯ ಪಿತ್ರೋರಪಿ ಶುಭಾವಹೇ ॥ ೮೭ ॥**

೬ ಇತಿ ಪ್ರಿಯೋದ್ಭವಕ್ರಿಯಾ ॥ ಮಗುವು ಹುಟ್ಟಿದ ದಿವಸದಿಂದ ಹನ್ನೆರಡು ದಿವಸಗಳನಂತರ ಈ ಮಗನಿಗೂ ತಂದೆತಾಯಿಗಳಿಗೂ ಮಂಗಲಕರವೂ ಅನುಕೂಲವೂ ಆದ ದಿನದಲ್ಲಿ ನಾಮಕರ್ಮವಿಧಿಯು ಹೇಳಲ್ಪಟ್ಟಿದೆ.

**ಯಥಾವಿಭವಮತ್ರೇಷ್ಟಂ ದೇವರ್ಷಿದ್ವಿಜಪೂಜನಮ್ ।**
**ಶಸ್ತಂ ಚ ನಾಮಧೇಯಂ ತತ್ಸ್ಥಾಪ್ಯಮನ್ವಯವೃದ್ಧಿಕೃತ್ ॥ ೮೮ ॥**

ಈ ನಾಮಕರ್ಮದಲ್ಲಿ ತನ್ನ ಸಂಪತ್ತಿಗನುಸಾರವಾಗಿ ದೇವಪೂಜೆಯನ್ನೂ ಋಷಿಪೂಜೆಯನ್ನೂ ದ್ವಿಜಪೂಜೆಯನ್ನೂ ಮಾಡಿ ವಂಶವೃದ್ಧಿಕರವೂ ಪ್ರಶಸ್ತವೂ ಆದ ಹೆಸರನ್ನಿಡಬೇಕು.

**ಅಷ್ಟೋತ್ತರಸಹಸ್ರಾ[೩]ದ್ವಾ ಜಿನನಾಮಕದಂಬಕಾತ್ ।**
**[೪]ಘಟಪತ್ರವಿಧಾನೇನ ಗ್ರಾಹ್ಯ[೫]ಮನ್ಯತಮಂ ಶುಭಮ್ ॥ ೮೯ ॥**

ಅಥವಾ ಜಿನಪೂಜಾವಿಧಿಪೂರ್ವಕವಾಗಿ ಇಷ್ಟವಾದ ಹೆಸರುಗಳನ್ನು ಪತ್ರದಲ್ಲಿ ಬರೆದು ಘಟದಲ್ಲಿರಿಸಿ ಕನ್ಯೆಯಿಂದ ತೆಗೆಯಿಸುವ ಕ್ರಮದಿಂದ ಸಾಸಿರದೆಂಟು ಜಿನನಾಮಗಳ ಸಮೂಹದಿಂದ ಮಂಗಲಕರವಾದ ಯಾವುದಾದರೊಂದು ಹೆಸರನ್ನು ತೆಗೆದುಕೊಂಡು ಅದನ್ನಿಡಬೇಕು.

**ಬಹಿರ್ಯಾನಂ ತತೋ ದ್ವಿತ್ರೈರ್ಮಾಸೈಸ್ತ್ರಿಚತುರೈ[೬]ರುತ ।**
**ಯಥಾನುಕೂಲಮಿಷ್ಟೇಽಹ್ನಿ ಕಾರ್ಯಂ ತೂರ್ಯಾದಿಮಂಗಲೈಃ ॥ ೯೦ ॥**

೭ ಇತಿ ನಾಮಕರ್ಮಕ್ರಿಯಾ ॥ ಅನಂತರದಲ್ಲಿ ಇಷ್ಟವಾದ ದಿನದಲ್ಲಿ ಎರಡನೆಯ ಮೂರನೆಯ ಅಥವಾ ನಾಲ್ಕನೆಯ ತಿಂಗಳಲ್ಲಿ ತನ್ನ ಅನುಕೂಲತೆಗನುಸಾರವಾಗಿ ಮಂಗಳವಾದ್ಯಗಳೊಡನೆ ಬಹಿರ್ಯಾನಕ್ರಿಯೆಯನ್ನು ಅಂದರೆ ಮನೆಯಿಂದ ಹೊರಕ್ಕೆ ಮಗುವನ್ನು ತೆಗೆದುಕೊಂಡು ಹೋಗುವ ಕ್ರಿಯೆಯನ್ನು ಮಾಡಬೇಕು.

**ತತಃ ಪ್ರಭೃತ್ಯಭೀಷ್ಟಂ ಹಿ ಶಿಶೋಃ ಪ್ರಸವವೇಶ್ಮನಃ ।**
**ಬಹಿಃಪ್ರಣಯನಂ ಮಾತ್ರಾ ಧಾತ್ರ್ಯುತ್ಸಂಗಗತಸ್ಯ ವಾ ॥ ೯೧ ॥**

ಅದು ಮೊದಲುಗೊಂಡು ತಾಯಿಯೊಡನೆ ಅಥವಾ ದಾದಿಯ ತೊಡೆಯಲ್ಲಿರುವ ಮಗುವಿಗೆ ಹೆರಿಗೆಯ ಮನೆಯಿಂದ ಹೊರಕ್ಕೆ ಒಯ್ಯುವಿಕೆಯು ಅಭೀಷ್ಟವಾಗಿರುತ್ತದೆ. ಅವರೆಗೆ ಹೊರಕ್ಕೆ ಒಯ್ಯಬಾರದೆಂದು ಭಾವವು.

**ತತ್ರ ಬಂಧುಜನಾದರ್ಥಲಾಭೋ ಯಃ [೭]ಪಾರಿತೋಷಿಕಃ ।**
**ಸ ತಸ್ಯೋತ್ತರಕಾಲೇ[೮]ಽರ್ಪ್ಯೋ ಧನಂ ಪಿತ್ರ್ಯಂ ಯದಾಪ್ಸ್ಯತಿ ॥ ೯೨ ॥**

ಹೊರಗಡೆಯಲ್ಲಿ ಬಂಧುಜನರಿಂದ ಪ್ರಾಪ್ತವಾದ ಮುಯ್ಯಿಯ ಹಣವನ್ನು ಸಂಗ್ರಹಿಸಿಟ್ಟು ಅದನ್ನು ಅವನು ತನ್ನ ತಂದೆಯ ಸಂಬಂಧವಾದ ದ್ರವ್ಯವನ್ನು ಹೊಂದುವ ಕಾಲದಲ್ಲಿ ಅವನಿಗೆ ಕೊಡಬೇಕು.

೧ ಅಗ್ನಿತ್ರಯಂ. ೨ ಪೂರ್ವವಿಧಿವತ್. ೩ ಮೋದಕ್ರಿಯಾಯಾಂ. ೪ ಗಾತ್ರೇಷು ಬೀಜಾಕ್ಷರಾಣಾಂ ಮಂತ್ರಪೂರ್ವಕನ್ಯಾಸಃ. ೫ ಶೋಭನಂ. ೬ ಅಲಂಕಾರಃ. ೭ ರಕ್ಷಾರ್ಥಂ ಕಂಕಣಸೂತ್ರಬಂಧನವಿಧಾನಂ. ೮ ಜಿನಜಾತಕರ್ಮ ಧ್ಯಾತ್ವಾ. ೯ ಪೂರ್ವವತ್.

೧ ಮಹಾನ್. ೨ ಜಾತಕರ್ಮವಿಧಿಃ. ೩ ಅಥವಾ. ೪ ಜಿನಪೂಜಾವಿಧಿಪುರಸ್ಸರಂ ವಾಂಛಿತಂ ನಾಮ ಪತ್ರೇ ಲಿಖಿತ್ವಾ ಘಟೇ ಸ್ಥಾಪ್ಯ ಕನ್ಯಯಾ ಗ್ರಾಹ್ಯಂ. ೫ ಕಿಂಚನ ನಾಮ. ೬ ಅಥವಾ. ೭ ಪರಿತೋಷೇ ಭವಃ. ೮ ದಾತವ್ಯಃ.

**ತತಃಪರಂ [೧]ನಿಷದ್ಯಾಸ್ಯ ಕ್ರಿಯಾ ಬಾಲಸ್ಯ ಕಲ್ಪ್ಯತೇ ।**
**ತದ್ಯೋಗ್ಯೇ [೨]ತಲ್ಪ [೩]ಆಸ್ತೀರ್ಣೇ ಕೃತಮಂಗಲಸನ್ನಿಧೌ ॥ ೯೩ ॥**

೮ ಇತಿ ಬಹಿರ್ಯಾನಕ್ರಿಯಾ ॥ ಆಮೇಲೆ ಈ ಬಾಲಕನಿಗೆ ಪಕ್ಕದಲ್ಲಿ ಮಾಡಲ್ಪಟ್ಟ ಮಂಗಲಕ್ರಿಯೆಯುಳ್ಳದೂ ವಿಶಾಲವೂ ಆ ಬಾಲಕನಿಗೆ ಯೋಗ್ಯವೂ ಆದ ಹಾಸಿಗೆಯಲ್ಲಿ ನಿಷದ್ಯಾ(ಕುಳ್ಳಿರಿಸುವ)ಕ್ರಿಯೆಯು ಮಾಡಲ್ಪಡುತ್ತದೆ. ಹಾಸಿಗೆಯ ಪಕ್ಕದಲ್ಲಿ ಮಂಗಲಕ್ರಿಯೆಯನ್ನು ಮಾಡಿ ಬಾಲಕನನ್ನು ಕುಳ್ಳಿರಿಸಬೇಕೆಂದು ಭಾವವು.

**ಸಿದ್ಧಾರ್ಚನಾದಿಕಃ ಸರ್ವೋ ವಿಧಿಃ ಪೂರ್ವವ[೪]ದತ್ರ ಚ ।**
**ಯತೋ ದಿವ್ಯಾಸನಾರ್ಹತ್ವಮಸ್ಯ ಸ್ಯಾದುತ್ತರೋತ್ತರಮ್ ॥ ೯೪ ॥**

ಈ ನಿಷದ್ಯಾಕ್ರಿಯೆಯಲ್ಲಿಯೂ ಸಿದ್ಧಪೂಜೆ ಮೊದಲಾದ ಎಲ್ಲಾ ವಿಧಿಯೂ ಮೊದಲಿನಂತೆಯೇ ಮಾಡಲ್ಪಡತಕ್ಕುದಾಗಿದೆ. ಆದರಿಂದ ಈ ಬಾಲಕನಿಗೆ ಮುಂದೆ–ಉತ್ತರೋತ್ತರವಾಗಿ ದಿವ್ಯವಾದ ಆಸನದಲ್ಲಿ ಕುಳಿತುಕೊಳ್ಳುವುದಕ್ಕೆ ಯೋಗ್ಯತೆಯುಂಟಾಗುವುದು.

**ಗತೇ ಮಾಸೇ [೫]ಪೃಥಕ್ತ್ವೇ ಚ [೬]ಜನ್ಮಾದ್ಯಸ್ಯ ಯಥಾಕ್ರಮಮ್ ।**
**ಅನ್ನಪ್ರಾಶನಮಾಮ್ನಾತಂ ಪೂಜಾವಿಧಿಪುರಸ್ಸರಮ್ ॥ ೯೫ ॥**

೯ ಇತಿ ನಿಷದ್ಯಾಕ್ರಿಯಾ ॥ ಹುಟ್ಟಿದ ದಿನದಿಂದ ಏಳೆಂಟು ತಿಂಗಳು ಕಳೆದಮೇಲೆ ಈ ಬಾಲಕನಿಗೆ ಯಥಾಕ್ರಮವಾಗಿ ಪೂಜಾವಿಧಿಪೂರ್ವಕವಾಗಿ ಅನ್ನಪ್ರಾಶನವಿಧಿಯು ಹೇಳಲ್ಪಟ್ಟಿರುತ್ತದೆ. ಅನ್ನಪ್ರಾಶನವಿಧಿಯು ಮಾಡತಕ್ಕುದೆಂದು ಭಾವವು.

**ತತೋಽಸ್ಯ [೭]ಹಾಯನೇ ಪೂರ್ಣೇ ವ್ಯುಷ್ಟಿರ್ನಾಮ ಕ್ರಿಯಾ ಮತಾ ।**
**ವರ್ಷವರ್ಧನಪರ್ಯಾಯಶಬ್ದವಾಚ್ಯಾ [೮]ಯಥಾಶ್ರುತಮ್ ॥ ೯೬ ॥**

೧೦ ಇತಿ ಅನ್ನಪ್ರಾಶನಕ್ರಿಯಾ ॥ ಅನಂತರದಲ್ಲಿ ಈ ಬಾಲಕನಿಗೆ ಒಂದು ವರ್ಷವು ಪೂರ್ತಿಯಾದ ಮೇಲೆ ಶಾಸ್ತ್ರದಲ್ಲಿ ಹೇಳಿದಂತೆ ವರ್ಷವರ್ಧನವೆಂಬ ಪರ್ಯಾಯ ಶಬ್ದದಿಂದ ಹೇಳಲ್ಪಡತಕ್ಕ ವ್ಯುಷ್ಟಿಯೆಂಬ ಕ್ರಿಯೆಯು ಹೇಳಲ್ಪಟ್ಟಿರುತ್ತದೆ. ಶಾಸ್ತ್ರಸಮ್ಮತವಾಗಿರುತ್ತದೆಂದು ಭಾವವು.

**ಅತ್ರಾಪಿ ಪೂರ್ವವದ್ದಾನಂ ಜೈನೀ ಪೂಜಾ ಚ ಪೂರ್ವವತ್ ।**
**ಇಷ್ಟಬಂಧುಸಮಾಹ್ವಾನಂ [೯]ಸಮಾಶಾದಿಶ್ಚ ಲಕ್ಷ್ಯತಾಮ್ ॥ ೯೭ ॥**

ಈ ಕ್ರಿಯೆಯಲ್ಲಿಯೂ ಮೊದಲಿನಂತೆ ದಾನವೂ ಜಿನೇಶ್ವರ ಸಂಬಂಧವಾದ ಪೂಜೆಯೂ ಇಷ್ಟಬಂಧುಗಳನ್ನು ಕರೆಯುವಿಕೆಯೂ ಸಹಭೋಜನಾದಿಗಳೂ ಮಾಡಲ್ಪಡತಕ್ಕುವಾಗಿರುತ್ತವೆ.

**ಕೇಶವಾಪಸ್ತು ಕೇಶಾನಾಂ ಶುಭೇಹ್ನಿ [೧೦]ವ್ಯಪರೋಪಣಮ್ ।**
**ಕ್ಷೌರೇಣ ಕರ್ಮಣಾ ದೇವಗುರುಪೂಜಾಪುರಸ್ಸರಮ್ ॥ ೯೮ ॥**

೧೧ ಇತಿ ವ್ಯುಷ್ಟಿಕ್ರಿಯಾ ॥ ಶುಭದಿನದಲ್ಲಿ ದೇವಪೂಜಾ ಗುರುಪೂಜಾ ಪೂರ್ವಕವಾಗಿ ಕ್ಷೌರಕ್ರಿಯೆಯಿಂದ ತಲೆಗೂದಲನ್ನು ತೆಗೆಯುವುದಕ್ಕೆ ಕೇಶವಾಪ ಕ್ರಿಯೆಯೆಂದು ಹೆಸರು.

**ಗಂಧೋದಕಾರ್ದ್ರಿತಾನ್ಕೃತ್ವಾ ಕೇಶಾನ್ ಶೇಷಾಕ್ಷತೋಚಿತಾನ್ ।**
**ಮೌಂಡ್ಯಮಸ್ಯ ವಿಧೇಯಂ ಸ್ಯಾ[೧೧]ತ್ಸಚೂಲಂ ಸ್ವಾನ್ವಯೋಚಿತಮ್ ॥**

ತಲೆಗೂದಲುಗಳನ್ನು ಗಂಧೋದಕದಿಂದ ಒದ್ದೆಯಾದುವುಗಳನ್ನಾಗಿಯೂ ಪೂಜೆಯಾಗಿ ಉಳಿದ ಅಕ್ಷತೆಗಳಿಂದ ಕೂಡಿದುವುಗಳನ್ನಾಗಿಯೂ ಮಾಡಿ ಈ ಬಾಲಕನಿಗೆ ತನ್ನ ವಂಶೋಚಿತವಾಗಿ ಶಿಖೆಯನ್ನು ಬಿಟ್ಟು ಮುಂಡನವನ್ನು ಮಾಡಬೇಕು.

---

೧ ಉಪವೇಶನಕ್ರಿಯಾ. ೨ ಶಯ್ಯಾಯಾಂ. ೩ ವಿಸ್ತೃತೇ. ೪ ನಿಷದ್ಯಾಕ್ರಿಯಾಯಾಂ. ೫ ತ್ರಯಾಣಾಂ ಮಾಸಾನಾಮುಪರಿ ನವಾನಾಮಧಃ, ಪ್ರಾಪ್ತೇಷ್ಟಮಾಸೇ. ೬ ಜನ್ಮದಿನಾರಭ್ಯ. ೭ ಸಂವತ್ಸರೇ. ೮ ಶಾಸ್ತ್ರಾನುಸಾರೇಣ. ೯ ಸಹಭೋಜನಾದಿಃ. ೧೦ ಅಪನಯನಂ. ೧೧ ಸಶಿಖಾ.

**[೧]ಸ್ನಪನೋದಕಧೌತಾಂಗಮನುಲಿಪ್ತಂ [೨]ಸಭೂಷಣಮ್ ।**
**ಪ್ರಣಮಯ್ಯ ಮುನೀನ್ಪಶ್ಚಾದ್ಯೋಜಯೇ[೩]ದ್ಬಂಧುತಾಶಿಷಾ ॥ ೧೦೦ ॥**

ಸ್ನಾನಜಲದಿಂದ ತೊಳೆಯಲ್ಪಟ್ಟ ಶರೀರವುಳ್ಳವನೂ ಗಂಧಲೇಪನ ಮಾಡಲ್ಪಟ್ಟವನೂ ಅಲಂಕಾರಯುಕ್ತನೂ ಆದ ಬಾಲಕನನ್ನು ಮುನಿಗಳಿಗೆ ನಮಸ್ಕಾರಮಾಡಿಸಿ ಆಮೇಲೆ ಬಂಧುಸಮೂಹದಿಂದ ಆಶೀರ್ವಾದವನ್ನು ಹೊಂದಿದವನನ್ನಾಗಿ ಮಾಡಬೇಕು.

**ಚೌಲಾಖ್ಯಯಾ ಪ್ರತೀತೇಯಂ ಕೃತಪುಣ್ಯಾಹಮಂಗಲಾ ।**
**ಕ್ರಿಯಾಸ್ಯಾ[೪]ಮಾದೃತೋ ಲೋಕೋ ಯತತೇ ಪರಯಾ ಮುದಾ ॥**

ಮಂಗಲಕರವಾಗಿ ಮಾಡಲ್ಪಟ್ಟ ಪುಣ್ಯಾಹವಾಚನೆಯುಳ್ಳ ಈ ಕ್ರಿಯೆಯು ಚೌಲವೆಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ಜನರು ಈ ಕ್ರಿಯೆಯಲ್ಲಿ ಪ್ರೀತಿಯುಳ್ಳವರಾಗಿ ಬಹು ಸಂತೋಷದಿಂದ ಇದನ್ನು ಆಚರಿಸುವುದಕ್ಕೆ ಪ್ರಯತ್ನಿಸುತ್ತಾರೆ.

**ತತೋಽಸ್ಯ ಪಂಚಮೇ ವರ್ಷೇ [೫]ಪ್ರಥಮಾಕ್ಷರದರ್ಶನೇ ।**
**ಜ್ಞೇಯಃ ಕ್ರಿಯಾವಿಧಿರ್ನಾಮ್ನಾ ಲಿಪಿಸಂಖ್ಯಾನಸಂಗ್ರಹಃ ॥ ೧೦೨ ॥**

೧೨ ಇತಿ ಕೇಶವಾಪಕ್ರಿಯಾ ॥ ಆಮೇಲೆ ಐದನೆಯ ವರ್ಷದಲ್ಲಿ ಈ ಬಾಲಕನಿಗೆ ''ಓಂ ನಮಃ'' ಇತ್ಯಾದಿ ಪ್ರಥಮಾಕ್ಷರದರ್ಶನದಲ್ಲಿ ಅಂದರೆ ಮೊತ್ತಮೊದಲು ಅಕ್ಷರಗಳನ್ನು ತೋರಿಸಿಕೊಡುವ ಕಾಲದಲ್ಲಿ ಲಿಪಿಸಂಖ್ಯಾನಸಂಗ್ರಹವೆಂಬ ಕ್ರಿಯಾವಿಧಿಯು ತಿಳಿಯಲ್ಪಟ್ಟಿರುವುದು. ಐದನೆಯ ವರ್ಷದಲ್ಲಿ ಅಕ್ಷರಾಭ್ಯಾಸವನ್ನು ಮಾಡಿಸಬೇಕೆಂದೂ ಆ ಕ್ರಿಯೆಗೆ ಲಿಪಿಸಂಖ್ಯಾನಸಂಗ್ರಹವೆಂದು ಹೆಸರೆಂದೂ ಭಾವವು.

**ಯಥಾವಿಭವಮತ್ರಾಪಿ ಜ್ಞೇಯಃ ಪೂಜಾಪರಿಚ್ಛದಃ ।**
**ಉಪಾಧ್ಯಾಯ[೬]ಪದೇ ಚಾಸ್ಯ ಮತೋ[೭]ಧೀತೀ ಗೃಹವ್ರತೀ ॥ ೧೦೩ ॥**

ಈ ಕ್ರಿಯೆಯಲ್ಲಿಯೂ ಪೂಜಾಕ್ರಮವನ್ನು ತನ್ನ ಆರ್ಥಿಕಶಕ್ತ್ಯನುಸಾರವಾಗಿ ಮಾಡಬೇಕು. ಈ ಬಾಲಕನಿಗೆ ಶಾಸ್ತ್ರಾಧ್ಯಯನವನ್ನು ಮಾಡಿರುವವನೂ ಅಹಿಂಸಾದಿ ಅಣುವ್ರತಧಾರಿಯೂ ಆದ ವಿದ್ವಾಂಸನನ್ನು ಉಪಾಧ್ಯಾಯನನ್ನಾಗಿ ನೇಮಿಸಬೇಕು.

**ಕ್ರಿಯೋಪನೀತಿರ್ನಾಮಾಸ್ಯ ವರ್ಷೇ [೮]ಗರ್ಭಾಷ್ಟಮೇ ಮತಾ ।**
**ಯತ್ರಾಪನೀತಕೇಶಸ್ಯ ಮೌಂಜೀ ಸವ್ರತಬಂಧನಾ ॥ ೧೦೪ ॥**

೧೩ ಇತಿ ಲಿಪಿಸಂಖ್ಯಾನಸಂಗ್ರಹಕ್ರಿಯಾ ॥ ಈ ಬಾಲಕನಿಗೆ ಎಂಟನೆಯ ವರ್ಷದಲ್ಲಿ ಉಪನೀತಿಯೆಂಬ ಕ್ರಿಯೆಯನ್ನು ಮಾಡಬೇಕು. ಈ ಕ್ರಿಯೆಯಲ್ಲಿ ಬಾಲಕನಿಗೆ ಕ್ಷೌರವನ್ನು ಮಾಡಿಸಿ ವ್ರತೋಪದೇಶವನ್ನು ಮಾಡಿ ಮೌಂಜಿಯನ್ನು ಕಟ್ಟಬೇಕು.

**ಕೃತಾರ್ಹತ್ಪೂಜನಸ್ಯಾಸ್ಯ ಮೌಂಜೀಬಂಧೋ ಜಿನಾಲಯೇ ।**
**ಗುರುಸಾಕ್ಷಿ ವಿಧಾತವ್ಯೋ ವ್ರತಾರ್ಪಣಪುರಸ್ಸರಮ್ ॥ ೧೦೫ ॥**

ಅರ್ಹತ್ಪರಮೇಶ್ವರನ ಪೂಜೆಯನ್ನು ಮಾಡಿದ ಈ ಬಾಲಕನಿಗೆ ಜಿನಮಂದಿರದಲ್ಲಿ ಮೊದಲು ವ್ರತಗಳನ್ನು ಕೊಟ್ಟು ಗುರುಸಾಕ್ಷಿಯಾಗಿ ಅಂದರೆ ಗುರುಗಳ ಸಮಕ್ಷದಲ್ಲಿ ಮೌಂಜೀಬಂಧನವನ್ನು ಮಾಡಬೇಕು.

**ಶಿಖೀ ಸಿತಾಂಶುಕಃ [೯]ಸಾಂತರ್ವಾಸಾ [೧೦]ನಿರ್ವೇಷವಿಕ್ರಿಯಃ ।**
**ವ್ರತಚಿಹ್ನಂ ದಧ[೧೧]ತ್ಸೂತ್ರಂ ತಥೋಕ್ತೋ ಬ್ರಹ್ಮಚಾರ್ಯಸೌ ॥ ೧೦೬ ॥**

---

೧ ಜಿನಾಭಿಷೇಕ. ೨ ಅಲಂಕಾರಯುಕ್ತಶಿಶುಂ. ೩ ಬಂಧುಸಮೂಹಕೃತಾಶೀರ್ವಾದವಚನೇನ. ೪ ಪ್ರೀತಃ. ೫ ಓಂನಮಃ. ೬ ಸ್ಥಾನೇ. ೭ ಅಧೀತಶಾಸ್ತ್ರಃ ಅಣುವ್ರತೀಚ ಅಸ್ಯ ಕುಮಾರಸ್ಯ ಉಪಾಧ್ಯಾಯೋ ಭವೇದಿತ್ಯರ್ಥಃ. ೮ ಗರ್ಭಾದಷ್ಟಮ. ೯ ಅಂತರ್ವಸ್ತ್ರೇಣ ಸಹಿತಃ. ೧೦ ವೇಷವಿಕಾರರಹಿತಃ. ೧೧ ಯಜ್ಞಸೂತ್ರಂ.

ಜುಟ್ಟುಳ್ಳವನೂ ಶುಭ್ರವಾದ ವಸ್ತ್ರವುಳ್ಳವನೂ ಒಳಗಿನ–ಉಡುವ ಬಟ್ಟೆಯುಳ್ಳವನೂ ವೇಷವೂ ವಿಕಾರವೂ ಇಲ್ಲದವನೂ ವ್ರತದ ಗುರುತಾದ ಯಜ್ಞಸೂತ್ರವನ್ನು ಧರಿಸಿರುವವನೂ ಆದ ಈ ಬಾಲಕನು ಬ್ರಹ್ಮಚಾರಿಯೆಂದು ಹೇಳಲ್ಪಟ್ಟಿರುವನು.

**[೧]ಚರಣೋಚಿತಮನ್ಯಚ್ಚ ನಾಮಧೇಯಂ ತದಸ್ಯ ವೈ ।**
**ವೃತ್ತಿಶ್ಚ ಭಿಕ್ಷಯಾ[೨]ನ್ಯತ್ರ ರಾಜನ್ಯಾದುದ್ಧವೈಭವಾತ್ ॥ ೧೦೭ ॥**

ಬ್ರಹ್ಮಚಾರಿಯೆಂಬ ಹೆಸರು ಈ ಬಾಲಕನ ವ್ರತಾಚರಣೆಗೆ ಯೋಗ್ಯವಾದ ಬೇರೆ ಹೆಸರಾಗಿರುತ್ತದೆ. ಹೆಚ್ಚಾದ ಸಂಪತ್ತಿಯುಳ್ಳ ರಾಜಪುತ್ರನನ್ನು ಬಿಟ್ಟು ಇತರ ಬಾಲಕ–ಬ್ರಹ್ಮಚಾರಿಗಳು ಭಿಕ್ಷೆಯಿಂದ ಜೀವಿಸಬೇಕು.

**ಸೋಂತಃಪುರೇ ಚರೇ[೩]ತ್ಪಾತ್ರ್ಯಾಂ ನಿಯೋಗ ಇತಿ ಕೇವಲಮ್ ।**
**ತ[೪]ದಗ್ರ್ಯಂ [೫]ದೇವಸಾತ್ಕೃತ್ಯಂ ತತೋ[೬]ನ್ನಂ ಯೋಗ್ಯ[೭]ಮಾಹರೇತ್ ॥**

ಆ ರಾಜಪುತ್ರನಾದ ಬಾಲಕನು ಮುಖ್ಯವಾಗಿ ಭಿಕ್ಷಾವೃತ್ತಿಯು ಶಾಸ್ತ್ರಾಜ್ಞೆಯೆಂದು ತಿಳಿದು ಅಂತಃಪುರದಲ್ಲಿ ಪಾತ್ರೆಯಲ್ಲಿ ಭಿಕ್ಷೆಯನ್ನು ಕೇಳಬೇಕು. ಆ ಭಿಕ್ಷಾನ್ನವನ್ನು ದೇವರಿಗೆ ಚರುವನ್ನಾಗಿ ಸಮರ್ಪಿಸಿ ಅನಂತರದಲ್ಲಿ ಯೋಗ್ಯವಾದ ಅನ್ನವನ್ನು ಭುಂಜಿಸಬೇಕು.

**ವ್ರತಚರ್ಯಾಮಥೋ ವಕ್ಷ್ಯೇ ಕ್ರಿಯಾಮಸ್ಯೋಪಬಿಭ್ರತಃ ।**
**ಕಟ್ಯೂರೂರಃಶಿರೋಲಿಂಗ[೮]ಮನೂಚಾನವ್ರತೋಚಿತಮ್ ॥ ೧೦೯ ॥**

೧೪ ಇತಿ ಉಪನೀತಿಕ್ರಿಯಾ ॥ ಬ್ರಹ್ಮಚರ್ಯವ್ರತಕ್ಕೆ ಯೋಗ್ಯವಾದ ಉಡಿದಾರ ಉಡುವ ಬಟ್ಟೆ ಜನಿವಾರ ಜುಟ್ಟು ಈ ಗುರುತುಗಳನ್ನು ಧರಿಸಿರುವ ಈ ಬಾಲಕನಿಗೆ ಮುಂದೆ ವ್ರತಚರ್ಯೆಯೆಂಬ ಕ್ರಿಯೆಯನ್ನು ಹೇಳುವೆನು.

**ಕಟೀಲಿಂಗಂ ಭವೇದಸ್ಯ ಮೌಂಜೀ ಬದ್ಧಾ ತ್ರಿಭಿರ್ಗುಣೈಃ ।**
**ರತ್ನತ್ರಿತಯಶು[೯]ದ್ಧ್ಯಂಗಂ ತದ್ಧಿ ಚಿಹ್ನಂ ದ್ವಿಜನ್ಮನಾಮ್ ॥ ೧೧೦ ॥**

ಈ ಬಾಲಕನಿಗೆ ಮೂರುದಾರಗಳಿಂದ ಕಟ್ಟಲ್ಪಟ್ಟ ಮೌಂಜಿಯು ಕಟೀಲಿಂಗವಾಗಿರುವುದು. ದ್ವಿಜರಿಗೆ ಆ ಕಟೀಲಿಂಗವು ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬ ರತ್ನತ್ರಯದ ಶುದ್ಧಿಗೆ ಜ್ಞಾಪಕಕಾರಣವಾಗಿರುವುದು.

**ತಸ್ಯೇಷ್ಟಮೂರುಲಿಂಗಂ ಚ ಸುಧೌತಂ [೧೦]ಸಿತಶಾಟಕಮ್ ।**
**ಆರ್ಹತಾನಾಂ ಕುಲಂ ಪೂತಂ ವಿಶಾಲಂ ಚೇತಿ ಸೂಚನೇ ॥ ೧೧೧ ॥**

ಆರ್ಹತರ– ಜೈನರ ಕುಲವು ಪವಿತ್ರವೂ ವಿಶಾಲವೂ ಆದುದೆಂದು ಸೂಚಿಸುವುದಕ್ಕೆ ಚೆನ್ನಾಗಿ ತೊಳೆಯಲ್ಪಟ್ಟ ಬಿಳೀ ಬಟ್ಟೆಯು ಆ ಬಾಲಕನಿಗೆ ಊರುಲಿಂಗವು (ತೊಡೆಯ ಚಿಹ್ನೆ) ಅಭಿಮತವಾಗಿರುತ್ತದೆ.

**ಉರೋಲಿಂಗಮಥಾಸ್ಯ ಸ್ಯಾದ್ಗ್ರಥಿತಂ ಸಪ್ತಭಿರ್ಗುಣೈಃ ।**
**ಯಜ್ಞೋಪವೀತಕಂ ಸಪ್ತಪರಮಸ್ಥಾನಸೂಚಕಮ್ ॥ ೧೧೨ ॥**

ಆಮೇಲೆ ಏಳು ಎಳೆಗಳಿಂದ ಹೊಸೆಯಲ್ಪಟ್ಟುದೂ ಸಜ್ಜಾತಿ ಸದ್ಗೃಹಸ್ಥತ್ವ ಪಾರಿವ್ರಾಜ್ಯ ಸುರೇಂದ್ರತ್ವ ಸಾಮ್ರಾಜ್ಯ ಆರ್ಹಂತ್ಯ ನಿರ್ವಾಣಗಳೆಂಬ ಸಪ್ತಪರಮಸ್ಥಾನ ಸೂಚಕವೂ ಆದ ಯಜ್ಞೋಪವೀತವು ಈ ಬಾಲಕನಿಗೆ ಉರೋಲಿಂಗವಾಗಿ (ಎದೆಯ ಚಿಹ್ನೆಯಾಗಿ) ಆಗುವುದು.

**ಶಿರೋಲಿಂಗಂ ಚ ತಸ್ಯೇಷ್ಟಂ ಪರಂ ಮೌಂಡ್ಯ[೧೧]ಮನಾವಿಲಮ್ ।**
**ಮೌಂಡ್ಯಂ ಮನೋವಚಃಕಾಯಗತಮಸ್ಯೋ[೧೨]ಪಬೃಂಹಯತ್ ॥**

೧ ವರ್ತನಾಯೋಗ್ಯಂ. ೨ ರಾಜಪುತ್ರಂ ವಿವರ್ಜ್ಯ. ೩ ಪಾತ್ರೇ ಭಿಕ್ಷಾಂ ಪ್ರಾರ್ಥಯೇತ್. ೪ ಭಿಕ್ಷಾನ್ನಂ. ೫ ದೇವಸ್ಯ ಚರುಂ ಸಮರ್ಪ್ಯ. ೬ ಪೂಜಾಶೇಷಾನ್ನಂ. ೭ ಭುಂಜೀತ. ೮ ಬ್ರಹ್ಮಚರ್ಯವ್ರತ. ೯ ಜ್ಞಾಪಕಂ ಕಾರಣಂ. ೧೦ ಧವಲವಸ್ತ್ರಂ. ೧೧ ಉಷ್ಣೀಷಾದಿರಹಿತಂ. ೧೨ ವರ್ಧಯತ್.

ಈ ಬಾಲಕನ ಮನೋವಾಕ್ಕಾಯಗಳಲ್ಲಿರುವ ಮುಂಡನವನ್ನು(ವಿಷಯ ಭೋಗವಿರಕ್ತಿಯನ್ನು) ವೃದ್ಧಿಪಡಿಸುವುದೂ ಟೋಪಿ ಮೊದಲಾದುದಿಲ್ಲದುದೂ ಶ್ರೇಷ್ಠವೂ ಆದ ಮುಂಡನವು ಆ ಬಾಲಕನಿಗೆ ಶಿರೋಲಿಂಗವಾಗಿ ಅಭಿಮತವಾಗಿರುತ್ತದೆ.

**[೧]ಏವಂಪ್ರಾಯೇಣ ಲಿಂಗೇನ ವಿಶುದ್ಧಂ ಧಾರಯೇದ್ವ್ರತಮ್ ।**
**[೨]ಸ್ಥೂಲಹಿಂಸಾವಿರತ್ಯಾದಿ ಬ್ರಹ್ಮಚರ್ಯೋಪಬೃಂಹಿತಮ್ ॥ ೧೧೪ ॥**

ಈ ಪ್ರಕಾರವಾದ ಚಿಹ್ನೆಯಿಂದ ಪರಿಶುದ್ಧವೂ ಬ್ರಹ್ಮಚರ್ಯದಿಂದ ವೃದ್ಧಿ ಹೊಂದಿಸಲ್ಪಟ್ಟುದೂ ಹಿಂಸಾ ಅಸತ್ಯ ಮೊದಲಾದ ಐದು ಸ್ಥೂಲಪಾಪಕಾರ್ಯಗಳ ತ್ಯಾಗರೂಪವೂ ಆದ ವ್ರತವನ್ನು ಆ ಬಾಲಕನು ಧರಿಸಬೇಕು.

**ದಂತಕಾಷ್ಠಗ್ರಹೋ ನಾಸ್ಯ ನ ತಾಂಬೂಲಂ ನ ಚಾಂಜನಮ್ ।**
**ನ ಹರಿದ್ರಾದಿಭಿಃ ಸ್ನಾನಂ ಶುದ್ಧಸ್ನಾನಂ ದಿನಂಪ್ರತಿ ॥ ೧೧೫ ॥**

ಈ ಬಾಲಕನು ಕಡ್ಡಿಯಿಂದ ಹಲ್ಲುಗಳನ್ನು ಉಜ್ಜಬಾರದು. ತಾಂಬೂಲವನ್ನು ಸೇವಿಸಬಾರದು. ಕಣ್ಣಿಗೆ ಅಂಜನವನ್ನು ಹಚ್ಚಿಕೊಳ್ಳಬಾರದು. ಅರಿಸಿನ ಮೊದಲಾದುವುಗಳನ್ನು ಹಚ್ಚಿಕೊಂಡು ಸ್ನಾನವನ್ನು ಮಾಡಬಾರದು. ಪ್ರತಿದಿನವೂ ಶುದ್ಧ ಸ್ನಾನವನ್ನು ಮಾಡಬೇಕು.

**ನ ಖಟ್ವಾಶಯನಂ ತಸ್ಯ ನಾನ್ಯಾಂಗಪರಿಘಟ್ಟನಮ್ ।**
**ಭೂಮೌ ಕೇವಲಮೇಕಾಕೀ ಶಯೀತ ವ್ರತಶುದ್ಧಯೇ ॥ ೧೧೬ ॥**

ಆ ಬಾಲಕನು ಮಂಚದಲ್ಲಿ ಮಲಗಬಾರದು. ಬೇರೆಯವರಿಂದ ಮೈಯನ್ನು ಉಜ್ಜಿಸಿಕೊಳ್ಳಬಾರದು. ವ್ರತಶುದ್ಧಿಗೋಸ್ಕರ ಬರೇನೆಲದಲ್ಲಿ ಒಬ್ಬನೇ ಮಲಗಬೇಕು.

**ಯಾವದ್ವಿದ್ಯಾಸಮಾಪ್ತಿಃ ಸ್ಯಾತ್ತಾವದಸ್ಯೇದೃಶಂ ವ್ರತಮ್ ।**
**ತತೋಪ್ಯೂರ್ಧ್ವಂ ವ್ರತಂ ತತ್ಸ್ಯಾದ್ಯನ್ಮೂಲಂ ಗೃಹಮೇಧಿನಾಮ್ ॥**

ವಿದ್ಯಾಭ್ಯಾಸವು ಪೂರ್ತಿಯಾಗುವವರೆಗೆ ಈ ಬ್ರಹ್ಮಚಾರಿಯಾದ ಬಾಲಕನಿಗೆ ಈ ಮೇಲೆ ಹೇಳಿದ ವ್ರತವು ಇರಬೇಕು. ಆಮೇಲೆಯೂ ಗೃಹಸ್ಥರ ಮೂಲವ್ರತವನ್ನು ಪಾಲಿಸಬೇಕು.

**ಸೂತ್ರ[೩]ಮೌಪಾಸಕಂ ಚಾಸ್ಯ ಸ್ಯಾದಧ್ಯೇಯಂ ಗುರೋರ್ಮುಖಾತ್ ।**
**ವಿನಯೇನ ತತೋನ್ಯಚ್ಚ ಶಾಸ್ತ್ರಮಧ್ಯಾತ್ಮಗೋಚರಮ್ ॥ ೧೧೮ ॥**

ಈ ಬಾಲಕನು ಗುರುಮುಖದಿಂದ ಶ್ರಾವಕಾಚಾರಸೂತ್ರವನ್ನೂ ಆಮೇಲೆ ಬೇರೆ ಅಧ್ಯಾತ್ಮವಿಷಯಕವಾದ ಶಾಸ್ತ್ರವನ್ನೂ ವಿನಯದಿಂದ ಅಧ್ಯಯನಮಾಡಬೇಕು.

**ಶಬ್ದವಿದ್ಯಾರ್ಥಶಾಸ್ತ್ರಾ[೪]ದಿ ಚಾಧ್ಯೇಯಂ ನಾಸ್ಯ ದುಷ್ಯತಿ ।**
**ಸ್ವಸಂಸ್ಕಾರಪ್ರಬೋಧಾಯ [೫]ವೈಯಾತ್ಯಾಖ್ಯಾತಯೇಪಿ ಚ ॥ ೧೧೯ ॥**

ಈ ಬಾಲಕನಿಗೆ ತನ್ನ ಸಂಸ್ಕಾರಗಳು ಜಾಗ್ರತವಾಗುವುದಕ್ಕೋಸ್ಕರವೂ ಧೃಷ್ಟತನವನ್ನು ಪ್ರಕಾಶಪಡಿಸದಿರುವುದಕ್ಕೋಸ್ಕರವೂ ವ್ಯಾಕರಣಶಾಸ್ತ್ರ ನೀತಿಶಾಸ್ತ್ರ ಮೊದಲಾದ ಶಾಸ್ತ್ರಗಳ ಅಧ್ಯಯನವೂ ದೋಷವಲ್ಲ.

**ಜ್ಯೋತಿರ್ಜ್ಞಾನಮಥೋ [೬]ಛಂದೋಜ್ಞಾನಂ ಜ್ಞಾನಂ ಚ ಶಾಕುನಮ್ ।**
**[೭]ಸಂಖ್ಯಾಜ್ಞಾನಮಿತೀದಂ ಚ ತೇನಾಧ್ಯೇಯಂ ವಿಶೇಷತಃ ॥ ೧೨೦ ॥**

ಆ ಬಾಲಕನು ಜ್ಯೋತಿಶ್ಶಾಸ್ತ್ರವನ್ನೂ ಛಂದಶ್ಶಾಸ್ತ್ರವನ್ನೂ ಶಕುನಶಾಸ್ತ್ರವನ್ನೂ ಗಣಿತಶಾಸ್ತ್ರವನ್ನೂ ವಿಶೇಷವಾಗಿ ಅಧ್ಯಯನಮಾಡಬೇಕು.

೧ ಏವಂಪ್ರಕಾರೇಣ. ೨ ಸ್ಥೂಲಹಿಂಸಾತ್ಯಾಗಾದಿಪಂಚಕಂ. ೩ ಆಚಾರಶಾಸ್ತ್ರಾದಿ. ೪ ನೀತಿಶಾಸ್ತ್ರಂ. ೫ ಧಾಷ್ಟ್ರ್ಯ. ೬ ಛಂದಃಶಾಸ್ತ್ರಂ. ೭ ಗಣಿತಶಾಸ್ತ್ರಂ.

**ತತೋಽಸ್ಯಾಧೀತವಿದ್ಯಸ್ಯ ವ್ರತವೃತ್ತ್ಯ[೧]ವತಾರಣಮ್ ।**
**ವಿಶೇಷವಿಷಯಂ ತಚ್ಚ ಸ್ಥಿತಸ್ಯೌ[೨]ತ್ಸರ್ಗಿಕೇ ವ್ರತೇ ॥ ೧೨೧ ॥**

೧೫ ಇತಿ ವ್ರತಚರ್ಯಾಕ್ರಿಯಾ ॥ ಆಮೇಲೆ ವಿದ್ಯಾಧ್ಯಯನವನ್ನು ಮಾಡಿದವನೂ ಸಾಧಾರಣವಾದ ವ್ರತದಲ್ಲಿರುವವನೂ ಆದ ಈ ಬಾಲಕನಿಗೆ ವ್ರತತ್ಯಾಗ ಕ್ರಿಯೆಯನ್ನು ಮಾಡಿಸಬೇಕು. ವಿದ್ಯಾಭ್ಯಾಸವು ಪೂರ್ತಿಯಾಗುವವರೆಗೆ ಮಾಡಿರುವ ವ್ರತನಿಯಮಗಳನ್ನು ಬಿಡಿಸಬೇಕೆಂದು ಭಾವವು. ಆ ವ್ರತಾವತರಣವಾದರೋ ಮುಂದೆ ಹೇಳುವ ವಿಶೇಷನಿಯಮವುಳ್ಳುದಾಗಿದೆ.

**ಮಧುಮಾಂಸಪರಿತ್ಯಾಗಃ ಪಂಚೋದುಂಬರವರ್ಜನಮ್ ।**
**ಹಿಂಸಾದಿವಿರತಿಶ್ಚಾಸ್ಯ ವ್ರತಂ ಸ್ಯಾತ್ಸಾರ್ವಕಾಲಿಕಮ್ ॥ ೧೨೨ ॥**

ಮದ್ಯ ಮಧು ಮಾಂಸಗಳ ಪರಿತ್ಯಾಗವೂ ಅತ್ತಿ ಆಲ ಗೋಣಿ ಮೊದಲಾದ ಐದು ವಿಧವಾದ ಉದುಂಬರ ಫಲಗಳ ತ್ಯಾಗವೂ ಹಿಂಸಾದಿ ಪಾಪಕಾರ್ಯಗಳ ತ್ಯಾಗವೂ ಈ ಬಾಲಕನಿಗೆ ಸರ್ವಕಾಲದಲ್ಲಿರಬೇಕಾದ ವ್ರತವಾಗಿರುತ್ತದೆ.

**ವ್ರತಾವತರಣಂ ಚೇದಂ ಗುರುಸಾಕ್ಷಿ ಕೃತಾರ್ಚನಮ್ ।**
**ವತ್ಸರಾದ್ದ್ವಾದಶಾದೂರ್ಧ್ವಮಥವಾ ಷೋಡಶಾತ್ಪರಮ್ ॥ ೧೨೩ ॥**

ಈ ವ್ರತಾವತರಣವೂ ಹನ್ನೆರಡು ವರುಷಗಳ ಮೇಲೆ ಅಥವಾ ಹದಿನಾರು ವರುಷಗಳನಂತರ ಗುರುಸಾಕ್ಷಿಕವಾಗಿ ಪೂಜೆಯನ್ನು ಮಾಡಿ ಮಾಡತಕ್ಕುದಾಗಿದೆ.

**ಕೃತದ್ವಿಜಾರ್ಚನಸ್ಯಾಸ್ಯ ವ್ರತಾವತರಣೋಚಿತಮ್ ।**
**ವಸ್ತ್ರಾಭರಣಮಾಲ್ಯಾದಿಗ್ರಹಣಂ ಗುರ್ವನುಜ್ಞಯಾ ॥ ೧೨೪ ॥**

ಬ್ರಾಹ್ಮಣಪೂಜೆಯನ್ನು ಮಾಡಿದ ಈ ಬಾಲಕ–ಬ್ರಹ್ಮಚಾರಿಗೆ ಗುರುವಿನ ಅನುಮತಿಯಿಂದ ವ್ರತಾವತರಣಕ್ಕೆ ಉಚಿತವಾದ ವಸ್ತ್ರ ಆಭರಣ ಮಾಲಿಕೆ ಮೊದಲಾದುವುಗಳನ್ನು ಧಾರಣಮಾಡಿಸಬೇಕು.

**ಶಸ್ತ್ರೋಪಜೀವಿವರ್ಗ್ಯಶ್ಚೇದ್ಧಾರಯೇಚ್ಛಸ್ತ್ರಮಪ್ಯದಃ ।**
**ಸ್ವವೃತ್ತಿಪರಿರಕ್ಷಾರ್ಥಂ ಶೋಭಾರ್ಥಂ ಚಾಸ್ಯ ತದ್ಗ್ರಹಃ ॥ ೧೨೫ ॥**

ಶಸ್ತ್ರದಿಂದ ಜೀವಿಸುವ ಕ್ಷತ್ರಿಯಬಾಲಕನಾದರೆ ಈ ಶಸ್ತ್ರವನ್ನೂ ಧರಿಸಬೇಕು. ತನ್ನ ಕಸುಬನ್ನು ರಕ್ಷಣಮಾಡುವುದಕ್ಕೋಸ್ಕರವೂ ಶೋಭೆಗೋಸ್ಕರವೂ ಈ ಬಾಲಕನಿಗೆ ಶಸ್ತ್ರಗ್ರಹಣವಾಗಿರುತ್ತದೆ.

**[೩]ಭೋಗಬ್ರಹ್ಮವ್ರತಾದೇವಮವತೀರ್ಣೋ ಭವೇತ್ತದಾ ।**
**[೪]ಕಾಮಬ್ರಹ್ಮವ್ರತಂ ತ್ವಸ್ಯ ತಾವದ್ಯಾವತ್ಕ್ರಿಯೋ[೫]ತ್ತರಾ ॥ ೧೨೬ ॥**

ಆಗ ಬಾಲಕನು ಬ್ರಹ್ಮಚರ್ಯವ್ರತದಿಂದ ಮೇಲೆ ಹೇಳಿದಂತೆ ಬಿಡಲ್ಪಟ್ಟವನಾಗಿ ಆಗುವನು. ಆದರೆ ಈ ಬಾಲಕನಿಗೆ ಮುಂದೆ ಹೇಳುವ ವಿವಾಹಕ್ರಿಯೆಯಾಗುವವರೆಗೂ ಮದ್ಯಮಾಂಸಮಧುತ್ಯಾಗಾದಿ ಅಷ್ಟಮೂಲವ್ರತವು ಧರಿಸಲ್ಪಡತಕ್ಕುದಾಗಿದೆ.

**ತತೋಽಸ್ಯ [೬]ಗುರ್ವನುಜ್ಞಾನಾದಿಷ್ಟಾ ವೈವಾಹಿಕೀ ಕ್ರಿಯಾ ।**
**[೭]ವೈವಾಹಿಕೇ ಕುಲೇ ಕನ್ಯಾಮುಚಿತಾಂ ಪರಿಣೇಷ್ಯತಃ ॥ ೧೨೭ ॥**

೧೬ ಇತಿ ವ್ರತಾವತರಣಕ್ರಿಯಾ ॥ ಅನಂತರ ವಿವಾಹಯೋಗ್ಯವಾದ ವಂಶದಲ್ಲಿ ಯೋಗ್ಯವಾದ ಕನ್ಯೆಯನ್ನು ವಿವಾಹಮಾಡಿಕೊಳ್ಳುವವನಾದ ಈ ಬಾಲಕನಿಗೆ ಗುರುವಿನ ಅನುಜ್ಞೆಯಿಂದ ವಿವಾಹಕ್ರಿಯೆಯು ಅಭೀಷ್ಟವಾಗಿರುತ್ತದೆ.

**ಸಿದ್ಧಾರ್ಚನವಿಧಿಂ ಸಮ್ಯಕ್ ನಿರ್ವರ್ತ್ಯ ದ್ವಿಜಸತ್ತಮಾಃ ।**
**ಕೃತಾಗ್ನಿತ್ರಯಸಂಪೂಜಾಃ ಕುರ್ಯುಸ್ತತ್ಸಾಕ್ಷಿಕಾಂ ಕ್ರಿಯಾಮ್ ॥ ೧೨೮ ॥**

ಸಿದ್ಧಪೂಜಾವಿಧಿಯನ್ನು ಚೆನ್ನಾಗಿ ಪೂರಯಿಸಿ ಅಗ್ನಿತ್ರಯಪೂಜೆಯನ್ನು ಮಾಡಿದವರಾದ ದ್ವಿಜೋತ್ತಮರು ಅಗ್ನಿಸಾಕ್ಷಿಕವಾದ ಕ್ರಿಯೆಯನ್ನು ಮಾಡಬೇಕು.

**[೧]ಪುಣ್ಯಾಶ್ರಮೇ ಕ್ವಚಿತ್ಸಿದ್ಧಪ್ರತಿಮಾಭಿಮುಖಂ ತಯೋಃ ।**
**ದಂಪತ್ಯೋಃ ಪರಯಾ ಭೂತ್ಯಾ ಕಾರ್ಯಃ ಪಾಣಿಗ್ರಹೋತ್ಸವಃ ॥**

ಎಲ್ಲಿಯಾದರು ಪವಿತ್ರಸ್ಥಾನದಲ್ಲಿ ಸಿದ್ಧಪ್ರತಿಮೆಯ ಇದಿರಿನಲ್ಲಿ ಆ ದಂಪತಿಗಳ ಪಾಣಿಗ್ರಹಣೋತ್ಸವವು ಬಹು ವೈಭವದಿಂದ ಮಾಡತಕ್ಕುದಾಗಿದೆ.

**ವೇದ್ಯಾಂ ಪ್ರಣೀತಮಗ್ನೀನಾಂ ತ್ರಯಂ ದ್ವಯಮಥೈಕಕಮ್ ।**
**ತತಃ ಪ್ರದಕ್ಷಿಣೀಕೃತ್ಯ ಪ್ರಶಯ್ಯಾವಿನಿವೇಶನಮ್ ॥ ೧೩೦ ॥**

ಚೆನ್ನಾಗಿ ಪೂಜಾಸಂಸ್ಕಾರ ಮಾಡಲ್ಪಟ್ಟ ಮೂರು ಬೆಂಕಿಗಳನ್ನಾಗಲಿ ಎರಡನ್ನಾಗಲಿ ಒಂದನ್ನಾಗಲಿ ಪ್ರದಕ್ಷಿಣೆಮಾಡಿ ಆಮೇಲೆ ವಧೂವರರು ವಿವಾಹವೇದಿಕೆಯಲ್ಲಿರುವ ಹಸೆಯಲ್ಲಿ ಕುಳಿತುಕೊಳ್ಳಬೇಕು.

**ಪಾಣಿಗ್ರಹಣ[೨]ದೀಕ್ಷಾಯಾಂ ನಿಯುಕ್ತಂ ತದ್ವಧೂವರಮ್ ।**
**ಆಸಪ್ತಾಹಂ ಚರೇದ್ಬ್ರಹ್ಮವ್ರತಂ ದೇವಾಗ್ನಿಸಾಕ್ಷಿಕಮ್ ॥ ೧೩೧ ॥**

ಏಳು ದಿನಗಳವರೆಗೆ ಪಾಣಿಗ್ರಹಣಕ್ರಿಯೆಯಲ್ಲಿ ತೊಡಗಿರುವ ಆ ವಧೂವರರು ದೇವಸಾಕ್ಷಿ ಅಗ್ನಿಸಾಕ್ಷಿಯಾಗಿ ಬ್ರಹ್ಮಚರ್ಯವ್ರತವನ್ನು ಆಚರಿಸಬೇಕು.

**ಕ್ರಾಂತ್ವಾ [೩]ಸಸ್ಯೋಚಿತಾಂ ಭೂಮಿಂ ತೀರ್ಥಭೂಮೀರ್ವಿಹೃತ್ಯ ಚ ।**
**ಸ್ವಗೃಹಂ ಪ್ರವಿಶೇದ್ಭೂತ್ಯಾ ಪರಯಾ ತದ್ವಧೂವರಮ್ ॥ ೧೩೨ ॥**

ಆ ವಧೂವರರು ಸಸ್ಯಯೋಗ್ಯವಾದ ಭೂಮಿಯನ್ನು ದಾಟಿ ಹೋಗಿ ತೀರ್ಥಸ್ಥಾನಗಳಲ್ಲಿ ವಿಹರಿಸಿ ಬಹುವೈಭವದಿಂದ ತಮ್ಮ ಮನೆಯನ್ನು ಪ್ರವೇಶಿಸಬೇಕು.

**ವಿಮುಕ್ತಕಂಕಣಂ ಪಶ್ಚಾತ್ಸ್ವಗೃಹೇ ಶಯನೀಯಕಮ್ ।**
**ಅಧಿಶಯ್ಯ ಯಥಾಕಾಲಂ ಭೋಗಾಂಗೈರುಪಲಾಲಿತಮ್ ॥ ೧೩೩ ॥**

**ಸಂತಾನಾರ್ಥ[೪]ಮೃತಾವೇವ ಕಾಮಸೇವಾಂ ಮಿಥೋ ಭಜೇತ್ ।**
**[೫]ಶಕ್ತಿ ಕಾಲವ್ಯಪೇಕ್ಷೋಽಯಂ [೬]ಕ್ರಮೋ[೭]ಶಕ್ತೇಷ್ವತೋಽನ್ಯಥಾ ॥ ೧೩೪ ॥**

ಅನಂತರದಲ್ಲಿ ಕಂಕಣವನ್ನು ಬಿಚ್ಚಿ ಆ ವಧೂವರರು ತಮ್ಮ ಮನೆಯಲ್ಲಿ ಯೋಗ್ಯಕಾಲದಲ್ಲಿ ಭೋಗಸಾಧನಗಳಿಂದ ಯುಕ್ತವಾದ ಹಾಸಿಗೆಯಲ್ಲಿ ಮಲಗಿ ಸಂತಾನೋತ್ಪತ್ತಿನಿಮಿತ್ತವಾಗಿ ರಜಸ್ವಲೆಯಾದ ಚತುರ್ಥಸ್ನಾನದ ದಿವಸದಲ್ಲಿ ಮಾತ್ರ ಪರಸ್ಪರವಾಗಿ ಕಾಮಸೇವನೆಯನ್ನು ಮಾಡಬೇಕು. ಈ ಕಾಮಸೇವನಕ್ರಮವು ಪುರುಷಶಕ್ತಿಯನ್ನೂ ಋತುಕಾಲವನ್ನೂ ಅನುಸರಿಸಿರುವುದು. ಋತುಕಾಲವನ್ನು ಸಹಿಸುವುದಕ್ಕೆ ಶಕ್ತಿಯಿಲ್ಲದವರಲ್ಲಿ ಈ ಕ್ರಮವಿಲ್ಲ. ಇತರ ಕಾಲದಲ್ಲಿಯೂ ಕಾಮಸೇವನೆಯನ್ನು ಮಾಡುತ್ತಾರೆಂದು ಭಾವವು.

**ಏವಂ ಕೃತವಿವಾಹಸ್ಯ ಗಾರ್ಹಸ್ಥ್ಯಮನುತಿಷ್ಠತಃ ।**
**ಸ್ವಧರ್ಮಾನತಿವೃತ್ತ್ಯರ್ಥಂ ವರ್ಣಲಾಭಮಥೋ ಬ್ರುವೇ ॥ ೧೩೫ ॥**

೧೭ ಇತಿ ವಿವಾಹ ಕ್ರಿಯಾ ॥ ಅನಂತರದಲ್ಲಿ ಈ ಪ್ರಕಾರವಾಗಿ ವಿವಾಹವನ್ನು ಮಾಡಿಕೊಂಡವನೂ ಗೃಹಸ್ಥಧರ್ಮವನ್ನು ಪಾಲಿಸುವವನೂ ಆದ ಪುತ್ರನಿಗೆ ತನ್ನ ಧರ್ಮವನ್ನು ಮೀರದಿರುವುದಕ್ಕೋಸ್ಕರ ವರ್ಣಲಾಭವನ್ನು ಹೇಳುತ್ತೇನೆ.

**ಊಢಭಾರ್ಯೋಽಪ್ಯಯಂ ತಾವದಸ್ವತಂತ್ರೋ [೮]ಗುರೋರ್ಗೃಹೇ ।**
**ತತಃ ಸ್ವಾತಂತ್ರ್ಯಸಿದ್ಧ್ಯರ್ಥಂ ವರ್ಣಲಾಭೋಽಸ್ಯ ವರ್ಣಿತಃ ॥ ೧೩೬ ॥**

೧ ತ್ಯಜನಂ. ೨ ಸಾಧಾರಣೇ. ೩ ಬ್ರಹ್ಮಚರ್ಯಾತ್. ೪ ಅಷ್ಟಮೂಲವ್ರತಂ. ೫ ವಕ್ಷ್ಯಮಾಣಾ ವೈವಾಹಿಕಾ. ೬ ಗುರೋರನುಮತಾತ್. ೭ ವಿವಾಹೋಚಿತೇ.

೧ ಪವಿತ್ರಸ್ಥಾನೇ. ೨ ಕ್ರಿಯಾಯಾಂ. ೩ ಸಸ್ಯಾರ್ಹಾಂ. ೪ ಚತುರ್ಥಸ್ನಾನೇ. ೫ ಪುರುಷಶಕ್ತಿ. ೬ ಸಂತಾನಾರ್ಥಂ ಋತುಕಾಲೇ ಕಾಮಸೇವಾಕ್ರಮಃ. ೭ ಋತುಕಾಲಂ ಸಹಿತುಮಶಕ್ತೇಷು. ೮ ಪಿತುಃ.

ವಿವಾಹಿತನಾದರೂ ಈ ಬಾಲಕನು ತಂದೆಯ ಮನೆಯಲ್ಲಿ ಸ್ವತಂತ್ರನಲ್ಲ. ಆದುದರಿಂದ ಇವನಿಗೆ ಸ್ವತಂತ್ರತೆಯ ಸಿದ್ಧಿಗೋಸ್ಕರ ವರ್ಣಲಾಭವು ವರ್ಣಿಸಲ್ಪಟ್ಟಿದೆ.

**ಗುರೋರನುಜ್ಞಯಾ ಲಬ್ಧಧನಧಾನ್ಯಾದಿಸಂಪದಃ ।**
**ಪೃಥಕ್ಕೃತಾಲಯಸ್ಯಾಸ್ಯ ವೃತ್ತಿ[1]ರ್ವರ್ಣಾಪ್ತಿರಿಷ್ಯತೇ ॥ ೧೩೭ ॥**

ತಂದೆಯ ಒಪ್ಪಿಗೆಯಿಂದ ಧನಧಾನ್ಯಾದಿಸಂಪತ್ತಿಯನ್ನು ಪಡೆದವನೂ ಬೇರೆ ಮನೆಯನ್ನು ಮಾಡಿಕೊಂಡಿರುವವನೂ ಆದ ಈ ಬಾಲಕನ ಇರುವಿಕೆಯು ವರ್ಣಲಾಭವೆಂದು ಅಂಗೀಕೃತವಾಗಿರುತ್ತದೆ. ಪುತ್ರನು ಬೇರೆ ಮನೆಮಾಡಿಕೊಂಡಿರುವುದಕ್ಕೆ ವರ್ಣಲಾಭವೆಂದು ಹೆಸರೆಂದು ಭಾವವು.

**ತದಾಪಿ ಪೂರ್ವವತ್ಸಿದ್ಧಪ್ರತಿಮಾರ್ಚನ[2]ಮಗ್ರತಃ ।**
**ಕೃತ್ವಾಸ್ಯೋಪಾಸಕಾನ್ಮುಖ್ಯಾನ್ಸಾಕ್ಷೀಕೃತ್ಯಾರ್ಪಯೇದ್ಧನಮ್ ॥ ೧೩೮ ॥**

ಆ ವರ್ಣಲಾಭಕಾಲದಲ್ಲಿಯೂ ಮೊದಲು ಸಿದ್ಧಪ್ರತಿಮೆಯ ಪೂಜೆಯನ್ನು ಮೊದಲಿನಂತೆ ಮಾಡಿ ಪ್ರಮುಖರಾದ ಶ್ರಾವಕರನ್ನು ಸಾಕ್ಷಿಗಳನ್ನಾಗಿ ಮಾಡಿ ಈ ವಿವಾಹಿತಪುತ್ರನಿಗೆ ದ್ರವ್ಯವನ್ನು ಕೊಡಬೇಕು.

**ಧನಮೇತದುಪಾದಾಯ ಸ್ಥಿತ್ವಾಸ್ಮಿನ್ಸ್ವಗೃಹೇ ಪೃಥಕ್ ।**
**ಗೃಹಿಧರ್ಮಸ್ತ್ವಯಾ ಧಾರ್ಯಃ ಕೃತ್ಸ್ನೋ ದಾನಾದಿಲಕ್ಷಣಃ ॥ ೧೩೯ ॥**

“ಎಲೈ ಮಗನೆ !ನೀನು ಈ ದ್ರವ್ಯವನ್ನು ತೆಗೆದುಕೊಂಡು ತನ್ನ ಮನೆಯಲ್ಲಿ ಬೇರೆ ಇದ್ದು ಸಮಸ್ತವಾದ ದಾನವೇ ಮೊದಲಾದ ಲಕ್ಷಣವುಳ್ಳ ಗೃಹಸ್ಥಧರ್ಮವನ್ನು ಧರಿಸಬೇಕು.

**ಯಥಾಸ್ಮತ್ಪಿತೃದತ್ತೇನ ಧನೇನಾಸ್ಮಾಭಿರಾರ್ಜಿತಮ್ ।**
**ಯಶೋ ಧರ್ಮಶ್ಚ ತದ್ವತ್ತ್ವಂ ಯಶೋಧರ್ಮಾವುಪಾರ್ಜಯ ॥**

ನಮ್ಮ ತಂದೆಯಿಂದ ಕೊಡಲ್ಪಟ್ಟ ದ್ರವ್ಯದಿಂದ ಹೇಗೆ ನಾವು ಯಶಸ್ಸನ್ನೂ ಧರ್ಮವನ್ನೂ ಸಂಪಾದಿಸಿದೆವೋ ಹಾಗೆ ನೀನು ಯಶಸ್ಸನ್ನೂ ಧರ್ಮವನ್ನೂ ಸಂಪಾದಿಸು.”

**ಇತ್ಯೇವ[3]ಮನುಶಿಷ್ಯೈನಂ ವರ್ಣಲಾಭೇ ನಿಯೋಜಯೇತ್ ।**
**ಸದಾರಃ ಸೋಪಿ ತದ್ಧರ್ಮಂ ತಥಾನುಷ್ಠಾತುಮರ್ಹತಿ ॥ ೧೪೧ ॥**

ಈ ಪ್ರಕಾರವಾಗಿ ಈ ಪುತ್ರನಿಗೆ ಬುದ್ಧಿವಾದವನ್ನು ಹೇಳಿ ವರ್ಣಲಾಭದಲ್ಲಿ ಸೇರಿಸಬೇಕು. ಪತ್ನೀಸಹಿತನಾದ ಆ ಪುತ್ರನೂ ತಂದೆಯ ಧರ್ಮವನ್ನು ತಂದೆಯಂತೆ ಆಚರಿಸುವುದಕ್ಕೆ ಯೋಗ್ಯನಾಗುತ್ತಾನೆ.

**ಲಬ್ಧವರ್ಣಸ್ಯ ತಸ್ಯೇತಿ ಕುಲಚರ್ಯಾನುಕೀರ್ತ್ಯತೇ ।**
**ಸಾ ತ್ವಿಜ್ಯಾದತ್ತಿವಾರ್ತಾದಿಲಕ್ಷಣಾ ಪ್ರಾಕ್ಪ್ರಪಂಚಿತಾ ॥ ೧೪೨ ॥**

೧೮ ಇತಿ ವರ್ಣಲಾಭಕ್ರಿಯಾ ॥ ವರ್ಣಲಾಭವನ್ನು ಹೊಂದಿದ ಆ ಪುತ್ರನಿಗೆ ಮುಂದೆ ಹೇಳುವ ಪ್ರಕಾರವಾಗಿ ಕುಲಚರ್ಯೆಯು ಹೇಳಲ್ಪಡುತ್ತದೆ. ಪೂಜಾ ದಾನ ವಾರ್ತಾ ಮೊದಲಾದ ಲಕ್ಷಣಗಳುಳ್ಳ ಆ ಕುಲಚರ್ಯೆಯಾದರೋ ಮೊದಲು ವಿಸ್ತರಿಸಲ್ಪಟ್ಟಿದೆ– ಹೇಳಲ್ಪಟ್ಟಿದೆ.

**ವಿಶುದ್ಧಾ ವೃತ್ತಿರಸ್ಯಾ[4]ರ್ಯಷಟ್ಕರ್ಮಾನುಪ್ರವರ್ತನಮ್ ।**
**ಗೃಹಿಣಃ ಕುಲಚರ್ಯೇಷ್ಟಾ ಕುಲಧರ್ಮೋಪ್ಯಸೌ ಮತಃ ॥ ೧೪೩ ॥**

ಈ ಪುತ್ರನಿಗೆ ಯೋಗ್ಯವಾದ ಪೂಜಾ ದಾನ ಮೊದಲಾದ ಷಟ್ಕರ್ಮಗಳ ಪರಿಪಾಲನವುಳ್ಳ ವಿಶುದ್ಧವಾದ ನಡೆವಳಿಕೆಯು ಕುಲಚರ್ಯೆಯೆಂದೂ ಇದು ಗೃಹಸ್ಥನ ಕುಲಧರ್ಮವೆಂದೂ ಹೇಳಲ್ಪಟ್ಟಿರುತ್ತದೆ.

**ಕುಲಚರ್ಯಾಮನುಪ್ರಾಪ್ತೋ ಧರ್ಮೇ ದಾರ್ಢ್ಯಮಥೋದ್ವಹನ್ ।**
**ಗೃಹಸ್ಥಾಚಾರ್ಯ[1]ಭಾವೇನ ಸಂಶ್ರಯೇತ್ಸ [2]ಗೃಹೀಶಿತಾಮ್ ॥ ೧೪೪ ॥**

೧೯ ಇತಿ ಕುಲಚರ್ಯಾಕ್ರಿಯಾ ॥ ಅನಂತರದಲ್ಲಿ ಕುಲಚರ್ಯೆಯನ್ನು ಹೊಂದಿದವನೂ ಧರ್ಮದಲ್ಲಿ ದೃಢತೆಯನ್ನು ಧರಿಸಿದವನೂ ಆದ ಆ ಪುತ್ರನು ಗೃಹಸ್ಥಾಚಾರ್ಯರೂಪದಿಂದ ಗೃಹಸ್ಥಾಚಾರ್ಯಭಾವವನ್ನು ಹೊಂದಬೇಕು. ಗೃಹಸ್ಥಾಚಾರ್ಯನಾಗಬೇಕೆಂದು ಭಾವವು.

**ತತೋ ವರ್ಣೋತ್ತಮತ್ವೇನ ಸ್ಥಾಪಯೇತ್ಸ್ವಾಂ ಗೃಹೀಶಿತಾಮ್ ।**
**[3]ಶ್ರುತವೃತ್ತಿ [4]ಕ್ರಿಯಾಮಂತ್ರವಿವಾಹೈಃ ಸೋತ್ತರಕ್ರಿಯೈಃ ॥ ೧೪೫ ॥**

ಬಳಿಕ ತಾನು ವರ್ಣಗಳಲ್ಲಿ ಶ್ರೇಷ್ಠವರ್ಣದವನಾಗಿರುವುದರಿಂದ ತನ್ನ ಗೃಹಸ್ಥಾಚಾರ್ಯಭಾವವನ್ನು ಮುಂದೆ ಹೇಳಲ್ಪಡುವ ಕ್ರಿಯೆಗಳಿಂದಲೂ ಹಿಂದೆ ಹೇಳಲ್ಪಟ್ಟ ಪೂಜಾ ದಾನಾದಿ ಕ್ರಿಯೆಗಳಿಂದಲೂ ಗರ್ಭಾಧಾನಾದಿ ಕ್ರಿಯೆಗಳಿಂದಲೂ ಮಂತ್ರ ಪಾಠಗಳಿಂದಲೂ ವಿವಾಹಕ್ರಿಯೆಗಳಿಂದಲೂ ಸ್ಥಾಪಿಸಬೇಕು. ಈ ಕ್ರಿಯೆಗಳನ್ನು ಮಾಡಿಸಬೇಕೆಂದು ಭಾವವು.

**ಅನನ್ಯಸದೃಶೈರೇಭಿಃ ಶ್ರುತವೃತ್ತಿಕ್ರಿಯಾದಿಭಿಃ ।**
**ಸ್ವಮುನ್ನತಿಂ ನಯನ್ನೇಷ ತದಾರ್ಹತಿ ಗೃಹೀಶಿತಾಮ್ ॥ ೧೪೬ ॥**

ಅಸದೃಶವಾದ ಈ ಪೂಜಾ ದಾನಾದಿ ಕ್ರಿಯೆಗಳಿಂದಲೂ ಗರ್ಭಾಧಾನಾದಿ ಕ್ರಿಯೆಗಳಿಂದಲೂ ತನ್ನ ಉನ್ನತಿಯನ್ನು ಹೊಂದಿಸುವವನಾದ ಈ ಗೃಹಸ್ಥಾಚಾರ್ಯನು ಆಗ ಗೃಹಸ್ಥಾಚಾರ್ಯಭಾವಕ್ಕೆ ಯೋಗ್ಯನಾಗುತ್ತಾನೆ.

**ವರ್ಣೋತ್ತಮೋ ಮಹೀದೇವಃ ಸುಶ್ರುತೋ ದ್ವಿಜಸತ್ತಮಃ ।**
**ನಿಸ್ತಾರಕೋ [5]ಗ್ರಾಮಯತಿರ್ಮಾನಾರ್ಹಶ್ಚೇತಿ ಮಾನಿತಃ ॥ ೧೪೭ ॥**

ಈ ಗೃಹಸ್ಥಾಚಾರ್ಯನು “ವರ್ಣಗಳಲ್ಲಿ ಶ್ರೇಷ್ಠನು, ಭೂಮಿಯ ದೇವನು, ಉತ್ತಮ ಶಾಸ್ತ್ರಜ್ಞನು, ದ್ವಿಜೋತ್ತಮನು, ಭವಸಾಗರವನ್ನು ದಾಟಿಸುವವನು, ಗ್ರಾಮದ ಯತಿಯು, ಮಾನಕ್ಕೆ ಯೋಗ್ಯನು” ಎಂಬುದಾಗಿ ಗೌರವಿಸಲ್ಪಡುತ್ತಾನೆ.

**[6]ಸೋನುರೂಪಂ ತತೋ ಲಬ್ಧ್ವಾ ಸೂನುಮಾತ್ಮಭರಕ್ಷಮಮ್ ।**
**ತತ್ರಾರೋಪಿತಗಾರ್ಹಸ್ಥ್ಯಃ ಸುಪ್ರಶಾಂತಿಮತಃ ಶ್ರಯೇತ್ ॥ ೧೪೮ ॥**

೨೦ ಇತಿ ಗೃಹೀಶಿತಾಕ್ರಿಯಾ ॥ ಅನಂತರದಲ್ಲಿ ಅನುರೂಪನೂ ತನ್ನ ಆಡಳಿತದ ಭಾರವನ್ನು ವಹಿಸುವುದಕ್ಕೆ ಸಮರ್ಥನೂ ಆದ ಪುತ್ರನನ್ನು ಪಡೆದು ಅವನಲ್ಲಿ ಗೃಹಸ್ಥಧರ್ಮವನ್ನು ಆರೋಪಿಸಿದವನಾದ ಆ ಗೃಹಸ್ಥಾಚಾರ್ಯನು ಈ ಮನೆಯ ಕಾರ್ಯದಿಂದ ಸಂಪೂರ್ಣವಾಗಿ ಶಾಂತಿಯನ್ನು ಹೊಂದಬೇಕು. ಗೃಹಪರಿಗ್ರಹವನ್ನು ಸಂಪೂರ್ಣವಾಗಿ ತ್ಯಜಿಸಬೇಕೆಂದು ಭಾವವು.

**ವಿಷಯೇ[7]ಷ್ವನಭಿಷ್ವಂಗೋ ನಿತ್ಯಸ್ವಾಧ್ಯಾಯಶೀಲತಾ ।**
**[8]ನಾನಾವಿಧೋಪವಾಸೈಶ್ಚ ವೃತ್ತಿರಿಷ್ಟಾ ಪ್ರಶಾಂತತಾ ॥ ೧೪೯ ॥**

ಭೋಗೋಪಭೋಗವಿಷಯಗಳಲ್ಲಿ ನಿಸ್ಪೃಹತ್ವವೂ ನಿತ್ಯವೂ ಶಾಸ್ತ್ರಾಧ್ಯಯನವನ್ನು ಮಾಡುವ ಸ್ವಭಾವವೂ ಜಿನಗುಣಸಂಪತ್ತಿ ಮೊದಲಾದ ನಾನಾವಿಧೋಪವಾಸಗಳಿಂದ ಇರುವಿಕೆಯೂ ಪ್ರಶಾಂತಿ–ಸಂಪೂರ್ಣಶಾಂತಿಯೆಂದು ಹೇಳಲ್ಪಟ್ಟಿರುತ್ತದೆ.

೧ ವರ್ಣಲಾಭಃ. ೨ ಆದೌ. ೩ ಉದ್ದಿಶ್ಯ. ೪ ಯೋಗ್ಯ.

೧ ಸ್ವರೂಪೇಣ. ೨ ಗೃಹಸ್ಥಾಚಾರ್ಯತಾಂ. ೩ ಇಜ್ಯಾದಿ. ೪ ಗರ್ಭಾಧಾನಾದಿ. ೫ ಗ್ರಾಮಪತಿರಿತ್ಯಪಿ ಪಾಠಃ. ೬ ಪಿತಾ. ೭ ನಿಸ್ಪೃಹಃ. ೮ ಜಿನಗುಣಸಂಪತ್ತ್ಯಾದಿಭಿಃ.

**ತತಃ ಕೃತಾರ್ಥಮಾತ್ಮಾನಂ ಮನ್ಯಮಾನೋ ಗೃಹಾಶ್ರಮೇ ।**
**ಯದೋದ್ಯತೋ ಗೃಹತ್ಯಾಗೇ ತದಾಸ್ಯೈಷ ಕ್ರಿಯಾವಿಧಿಃ ॥ ೧೫೦ ॥**

೨೧ ಇತಿ ಪ್ರಶಾಂತಿಕ್ರಿಯಾ ॥ ಆಮೇಲೆ ಗೃಹಸ್ಥಾಶ್ರಮದಲ್ಲಿ ತನ್ನನ್ನು ಕೃತಾರ್ಥನನ್ನಾಗಿ ತಿಳಿಯುವವನಾಗಿ ಮನೆಯನ್ನು ಬಿಡುವುದಕ್ಕೆ ಪ್ರಯತ್ನಪರನಾದಾಗ ಈ ಮುಂದೆ ಹೇಳುವ ಕ್ರಿಯಾವಿಧಿಯು ಆಚರಿಸತಕ್ಕುದಾಗಿದೆ.

**ಸಿದ್ಧಾರ್ಚನಾಂ ಪುರಸ್ಕೃತ್ಯ ಸರ್ವಾನಾಹೂಯ ಸಮ್ಮತಾನ್ ।**
**ತತ್ಸಾಕ್ಷಿ ಸೂನವೇ ಸರ್ವಂ ನಿವೇದ್ಯಾತೋ ಗೃಹಂ ತ್ಯಜೇತ್ ॥ ೧೫೧ ॥**

ತನಗೆ ಬೇಕಾದವರನ್ನೆಲ್ಲ ಕರೆದು ಮೊದಲು ಸಿದ್ಧಪೂಜೆಯನ್ನು ಮಾಡಿ ಆ ಸಭಿಕರನ್ನು ಸಾಕ್ಷಿಯಿಟ್ಟು ಎಲ್ಲವನ್ನೂ ಮಗನಿಗೆ ಅರ್ಪಿಸಿ ಆಮೇಲೆ ಮನೆಯನ್ನು ಬಿಡಬೇಕು.

**ಕುಲಕ್ರಮಸ್ತ್ವಯಾ [೧]ತಾತ ಸಂಪಾಲ್ಯೋಽಸ್ಮತ್ಪರೋಕ್ಷತಃ ।**
**ತ್ರಿಧಾ ಕೃತಂ ಚ [೨]ನೋ ದ್ರವ್ಯಂ ತ್ವಯೇತ್ಥಂ ವಿನಿಯೋಜ್ಯತಾಮ್ ॥**

“ಎಲೈ ಮಗನೆ! ನಮ್ಮ ಪರೋಕ್ಷದಲ್ಲಿ ನೀನು ಕುಲಕ್ರಮವನ್ನು ಪರಿಪಾಲಿಸಬೇಕು. ನಮ್ಮ ದ್ರವ್ಯವನ್ನು ಮೂರು ಭಾಗಮಾಡಿ ನೀನು ಮುಂದೆ ಹೇಳುವಂತೆ ವಿನಿಯೋಗಿಸಬೇಕು.

**ಏಕೋಂಽಶೋ ಧರ್ಮಕಾರ್ಯೇ ನೋ ದ್ವಿತೀಯಃ ಸ್ವಗೃಹವ್ಯಯೇ ।**
**ತೃತೀಯಃ ಸಂವಿಭಾಗಾಯ ಭವೇತ್ತ್ವ[೩]ತ್ಸಹಜನ್ಮನಾಮ್ ॥ ೧೫೩ ॥**

ನಮ್ಮ ಧರ್ಮಕಾರ್ಯದಲ್ಲಿ ಒಂದು ಭಾಗವನ್ನೂ ಮನೆಯ ವೆಚ್ಚದಲ್ಲಿ ಎರಡನೆಯ ಭಾಗವನ್ನೂ ನಿನ್ನ ಸಹೋದರರಿಗೆ ವಿಭಾಗಿಸಿಕೊಡುವುದಕ್ಕಾಗಿ ಮೂರನೆಯ ಭಾಗವನ್ನೂ ಉಪಯೋಗಿಸಬೇಕು.

**ಪುತ್ರ್ಯಶ್ಚ ಸಂವಿಭಾಗಾರ್ಹಾಃ ಸಮಂ ಪುತ್ರೈಃ ಸಮಾಂಶಕೈಃ ।**
**ತ್ವಂ ತು ಭೂತ್ವಾ ಕುಲಜ್ಯೇಷ್ಠಃ ಸಂತತಿಂ ನೋಽನುಪಾಲಯ ॥ ೧೫೪ ॥**

ಸಮಾನವಾದ ಭಾಗವುಳ್ಳವರಾದ ಪುತ್ರರೊಡನೆ ಪುತ್ರಿಯರೂ ಭಾಗಕ್ಕೆ ಅರ್ಹರಾಗಿರುತ್ತಾರೆ. ನೀನಾದರೋ ವಂಶದಲ್ಲಿ ಹಿರಿಯನಾಗಿದ್ದು ನಮ್ಮ ಕುಲವನ್ನು ಪರಿಪಾಲಿಸು.

**ಶ್ರುತವೃತ್ತಿಕ್ರಿಯಾಮಂತ್ರವಿಧಿಜ್ಞಸ್ತ್ವಮತಂದ್ರಿತಃ ।**
**ಪ್ರಪಾಲಯ [೪]ಕುಲಾಮ್ನಾಯಂ ಗುರೂನ್ ದೇವಾಂಶ್ಚ ಪೂಜಯನ್ ॥**

ನೀನು ಪೂಜಾದಾನಾದಿ ಕ್ರಿಯೆಗಳನ್ನೂ ಗರ್ಭಾಧಾನಾದಿ ಕ್ರಿಯೆಗಳನ್ನೂ ಮಂತ್ರಗಳನ್ನೂ ವಿಧಿಗಳನ್ನೂ ತಿಳಿದವನಾಗಿಯೂ ಜಾಗರೂಕನಾಗಿಯೂ ಗುರುಗಳನ್ನೂ ದೇವರುಗಳನ್ನೂ ಪೂಜಿಸುವವನಾಗಿಯೂ ಕುಲಪರಂಪರೆಯನ್ನು ಪರಿಪಾಲಿಸು.”

**ಇತ್ಯೇವಮನುಶಿಷ್ಯ ಸ್ವಂ ಜ್ಯೇಷ್ಠಂ ಸೂನುಮನಾಕುಲಃ ।**
**ತತೋ ದೀಕ್ಷಾಮುಪಾದಾತುಂ ದ್ವಿಜಃ ಸ್ವಂ ಗೃಹಮುತ್ಸೃಜೇತ್ ॥**

ಈ ಪ್ರಕಾರವಾಗಿ ತನ್ನ ಹಿರಿಯಮಗನನ್ನು ಕುರಿತು ಉಪದೇಶಿಸಿ ನಿಶ್ಚಿಂತನಾದ ದ್ವಿಜನು ಆಮೇಲೆ ದೀಕ್ಷೆಯನ್ನು ತೆಗೆದುಕೊಳ್ಳುವುದಕ್ಕೋಸ್ಕರ ತನ್ನ ಮನೆಯನ್ನು ಬಿಡಬೇಕು.

**[೫]ತ್ಯಕ್ತರಾಗಸ್ಯ ಸದ್ದೃಷ್ಟೇಃ ಪ್ರಶಾಂತಸ್ಯ ಗೃಹೀಶಿನಃ ।**
**ಪ್ರಾ[೬]ಗ್ದೀಕ್ಷೋಪಯಿಕಾತ್ಕಾಲಾ[೭]ದೇಕಶಾಟಕಧಾರಿಣಃ ॥ ೧೫೭ ॥**

೧ ಭೋ ಪುತ್ರ. ೨ ಅಸ್ಮಾಕಂ. ೩ ಸೋದರಾಣಾಂ. ೪ ಕುಲಪರಂಪರಾಂ. ೫ ತ್ಯಕ್ತಾಗಾರಸ್ಯೇತ್ಯಪಿ ಪಾಠಃ. ೬ ದೀಕ್ಷೋಪಾಯಸ್ಯ ಪುರಸ್ತಾತ್. ೭ ಏಕಧವಲವಸ್ತ್ರ.

**ಯ[೧]ತ್ಪುರಶ್ಚರಣಂ ದೀಕ್ಷಾಗ್ರಹಣಂ ಪ್ರತಿ ಧಾರ್ಯತೇ ।**
**ದೀಕ್ಷಾದ್ಯಂ ನಾಮ ತಜ್ಜ್ಞೇಯಂ [೨]ಕ್ರಿಯಾಜಾತಂ ದ್ವಿಜನ್ಮನಃ ॥ ೧೫೮ ॥**

೨೨ ಇತಿ ಗೃಹತ್ಯಾಗಕ್ರಿಯಾ ॥ ಅನುರಾಗವನ್ನು ಬಿಟ್ಟವನೂ ಸಮ್ಯಗ್ದೃಷ್ಟಿಯೂ ಬಹು ಶಾಂತನೂ ಗೃಹಸ್ಥರಲ್ಲಿ ಶ್ರೇಷ್ಠನೂ ಒಂದು ಬಿಳೀ ಬಟ್ಟೆಯನ್ನು ಧರಿಸಿದವನೂ ಆದ ದ್ವಿಜೋತ್ತಮನ ದೀಕ್ಷಾಗ್ರಹಣಕಾಲಕ್ಕಿಂತ ಮೊದಲು ಆ ದೀಕ್ಷಾಗ್ರಹಣಕ್ಕೋಸ್ಕರ ಯಾವ ಆಚರಣವು ಧರಿಸಲ್ಪಡುವುದೋ ಅದು ಆ ದ್ವಿಜನ ದೀಕ್ಷಾದ್ಯವೆಂಬ ಕ್ರಿಯಾಸಮೂಹವೆಂದು ತಿಳಿಯತಕ್ಕುದಾಗಿದೆ. ದೀಕ್ಷೆಯನ್ನು ತೆಗೆದುಕೊಳ್ಳುವುದಕ್ಕಿಂತ ಮೊದಲು ಖಂಡವಸ್ತ್ರಧಾರಿಯಾಗಿ ಅದರ ಅಭ್ಯಾಸವನ್ನು ಮಾಡುವ ಕ್ರಮಕ್ಕೆ ದೀಕ್ಷಾದ್ಯವೆಂದು ಹೆಸರೆಂದರ್ಥವು.

**ತ್ಯಕ್ತಚೇಲಾದಿಸಂಗಸ್ಯ ಜೈನೀಂ ದೀಕ್ಷಾ[೩]ಮುಪೇಯುಷಃ ।**
**ಧಾರಣಂ ಜಾತರೂಪಸ್ಯ ಯತ್ತತ್ಸ್ಯಾಜ್ಜಿನರೂಪತಾ ॥ ೧೫೯ ॥**

೨೩ ಇತಿ ದೀಕ್ಷಾದ್ಯಕ್ರಿಯಾ ॥ ವಸ್ತ್ರವೇ ಮೊದಲಾದ ಪರಿಗ್ರಹಗಳನ್ನು ತ್ಯಜಿಸಿದವನೂ ಜಿನದೀಕ್ಷೆಯನ್ನು ಹೊಂದಿದವನೂ ಆದ ದ್ವಿಜೋತ್ತಮನ ಜಾತರೂಪಧಾರಣವು ಜಿನರೂಪತಾವಾಗುವುದು. ದಿಗಂಬರಯತಿಯಾಗುವುದಕ್ಕೆ ‘ಜಿನರೂಪತಾ’ ವೆಂದು ಹೆಸರೆಂದರ್ಥವು.

**[೪]ಅಶಕ್ಯಧಾರಣಂ ಚೇದಂ ಜಂತೂನಾಂ ಕಾತರಾತ್ಮನಾಮ್ ।**
**ಜೈನಂ ನಿಸ್ಸಂಗತಾಮುಖ್ಯಂ ರೂಪಂ ಧೀರೈರ್ನಿಷೇವ್ಯತೇ ॥ ೧೬೦ ॥**

ಭೀತಿಯುಳ್ಳವರಾದ ಪ್ರಾಣಿಗಳಿಗೆ ಧರಿಸುವುದಕ್ಕೆ ಶಕ್ಯವಲ್ಲದುದೂ ಪರಿಗ್ರಹವಿಲ್ಲದಿರುವಿಕೆಯೇ ಮುಖ್ಯಲಕ್ಷಣವಾಗಿರುವುದೂ ಆದ ಈ ಜಿನರೂಪವನ್ನು ಧೀರರು ಪರಿಗ್ರಹಿಸುತ್ತಾರೆ.

**ಕೃತದೀಕ್ಷೋಪವಾಸಸ್ಯ ಪ್ರವೃತ್ತೇ ಪಾರಣಾವಿಧೌ ।**
**ಮೌನಾಧ್ಯಯನವೃತ್ತತ್ವಮಿಷ್ಟ[೫]ಮಾ ಶ್ರುತನಿಷ್ಠಿತೇಃ ॥ ೧೬೧ ॥**

೨೪ ಇತಿ ಜಿನರೂಪತಾಕ್ರಿಯಾ ॥ ದೀಕ್ಷೆಯನ್ನು ತೆಗೆದುಕೊಂಡು ಉಪವಾಸವನ್ನು ಮಾಡಿದ ಈ ದ್ವಿಜೋತ್ತಮನಿಗೆ ಪಾರಣೆಯ ವಿಧಿಯು ನಡೆದಮೇಲೆ ಶಾಸ್ತ್ರಾಧ್ಯಯನವು ಪೂರ್ತಿಯಾಗುವವರೆಗೆ ಮೌನದಿಂದ ಅಧ್ಯಯನವನ್ನು ಮಾಡುತ್ತಿರುವುದು ವಿಧಾಯಕವಾಗಿರುತ್ತದೆ.

**[೬]ವಾಚಂಯಮೋ ವಿನೀತಾತ್ಮಾ ವಿಶುದ್ಧಕರಣತ್ರಯಃ ।**
**ಸೋಽಧೀಯೀತ ಶ್ರುತಂ ಕೃತ್ಸ್ನಮಾ ಮೂಲಾದ್ಗುರುಸನ್ನಿಧೌ ॥ ೧೬೨ ॥**

ಮೌನವ್ರತವುಳ್ಳವನೂ ವಿನಯಪರವಾದ ಆತ್ಮನುಳ್ಳವನೂ ಪರಿಶುದ್ಧವಾದ ಮನೋವಾಕ್ಕಾಯಗಳುಳ್ಳವನೂ ಆದ ಆ ಯತಿಯು ಗುರುಸನ್ನಿಧಿಯಲ್ಲಿ ಮೊದಲಿನಿಂದ ಸಮಸ್ತಶಾಸ್ತ್ರವನ್ನು ಅಧ್ಯಯನಮಾಡಬೇಕು.

**ಶ್ರುತಂ ಹಿ ವಿಧಿನಾನೇನ ಭವ್ಯಾತ್ಮಭಿರುಪಾಸಿತಮ್ ।**
**ಯೋಗ್ಯತಾ[೭]ಮಿಹ ಪುಷ್ಣಾತಿ ಪರತ್ರಾಪಿ ಪ್ರಸೀದತಿ ॥ ೧೬೩ ॥**

ಈ ಕ್ರಮದಿಂದ ಭವ್ಯಾತ್ಮರಿಂದ ಉಪಾಸನೆಮಾಡಲ್ಪಟ್ಟ ಶಾಸ್ತ್ರವಾದರೋ ಈ ಜನ್ಮದಲ್ಲಿ ಯೋಗ್ಯತೆಯನ್ನು ಹೆಚ್ಚಿಸುವುದು. ಪರಜನ್ಮದಲ್ಲಿ ಸುಖವನ್ನುಂಟು ಮಾಡುವುದು.

**ತತೋಽಧೀತಾಖಿಲಾಚಾರಶಾಸ್ತ್ರಾದಿಶ್ರುತವಿಸ್ತರಃ ।**
**ವಿಶುದ್ಧಾಚರಣೋಽಭ್ಯಸ್ಯೇತ್ತೀರ್ಥಕೃತ್ತ್ವಸ್ಯ ಭಾವನಾಮ್ ॥ ೧೬೪ ॥**

೨೫ ಇತಿ ಮೌನಾಧ್ಯಯನವೃತ್ತಿಕ್ರಿಯಾ ॥ ಅನಂತರದಲ್ಲಿ ವಿಶಾಲವಾದ ಸಮಸ್ತ ಆಚಾರಶಾಸ್ತ್ರ ಮೊದಲಾದ ಶಾಸ್ತ್ರಗಳನ್ನು ಅಧ್ಯಯನಮಾಡಿದವನೂ ಪರಿಶುದ್ಧವಾದ

೧ ಪಂಚಾಚಾರಾದಿಗುಣಪರಾಯಣಗುರ್ವನ್ವೇಷಣಾದಿಪೂರ್ವಾಚರಣಂ. ೨ ಕ್ರಿಯಾಸಮೂಹಃ. ೩ ಗತಸ್ಯ. ೪ ಕರ್ತುಮಶಕ್ಯಂ. ೫ ಶ್ರುತಸಮಾಪ್ತಿಪರ್ಯಂತಂ. ೬ ಮೌನೀ. ೭ ಜನ್ಮನಿ.

ಆಚರಣವುಳ್ಳವನೂ ಆದ ಆ ಯತಿಯು ತೀರ್ಥಕರತ್ವದ ಭಾವನೆಯನ್ನು ಅಭ್ಯಾಸಮಾಡಬೇಕು.

**ಸಾ ತು ಷೋಡಶಧಾಮ್ನಾತಾ ಮಹಾಭ್ಯುದಯಸಾಧಿನೀ ।**
**ಸಮ್ಯಗ್ದರ್ಶನಶುದ್ಧ್ಯಾದಿಲಕ್ಷಣಾ ಪ್ರಾಕ್ಪ್ರಪಂಚಿತಾ ॥ ೧೬೫ ॥**

ಮಹಾಭ್ಯುದಯವನ್ನುಂಟುಮಾಡುವುದೂ ಸಮ್ಯಗ್ದರ್ಶನಶುದ್ಧಿ ಮೊದಲಾದ ಲಕ್ಷಣಗಳುಳ್ಳುದೂ ಮೊದಲು ವಿಸ್ತಾರವಾಗಿ ವರ್ಣಿಸಲ್ಪಟ್ಟಿರುವುದೂ ಆದ ಆ ತೀರ್ಥಕೃತ್ವಭಾವನೆಯಾದರೋ ಹದಿನಾರು ಭೇದಗಳುಳ್ಳುದಾಗಿ ಹೇಳಲ್ಪಟ್ಟಿರುತ್ತದೆ.

**ತತೋಽಸ್ಯ ವಿದಿತಾಶೇಷವೇದ್ಯಸ್ಯ ವಿಜಿತಾತ್ಮನಃ ।**
**ಗುರುಸ್ಥಾನಾಭ್ಯುಪಗಮಃ ಸಮ್ಮತೋ ಗುರ್ವನುಗ್ರಹಾತ್ ॥ ೧೬೬ ॥**

೨೬ ಇತಿ ತೀರ್ಥಕೃತ್ವಭಾವನಾಕ್ರಿಯಾ ॥ ಅನಂತರದಲ್ಲಿ ತಿಳಿಯುವುದಕ್ಕೆ ಯೋಗ್ಯವಾದ ಸಮಸ್ತವಿಷಯಗಳನ್ನು ತಿಳಿದವನೂ ಮನೋನಿಗ್ರಹವನ್ನು ಮಾಡಿರುವವನೂ ಆದ ಈ ಯತಿಗೆ ಗುರುವಿನ ಅನುಗ್ರಹದಿಂದ ಗುರುಸ್ಥಾನಾಂಗೀಕಾರವು ಶಾಸ್ತ್ರಸಮ್ಮತವಾಗಿರುತ್ತದೆ.

**[1]ಜ್ಞಾನವಿಜ್ಞಾನಸಂಪನ್ನಃ ಸ್ವಗುರೋರಭಿಸಮ್ಮತಃ ।**
**ವಿನೀತೋ ಧರ್ಮಶೀಲಶ್ಚ ಯಃ ಸೋಽರ್ಹತಿ ಗುರೋಃ ಪದಮ್ ॥**

ಯಾವನು ಶಾಸ್ತ್ರಪರಿಜ್ಞಾನ ಕಲಾಪರಿಜ್ಞಾನ ಸಂಪನ್ನನೂ ತನ್ನ ಗುರುವಿನ ಅನುಮತಿಯನ್ನು ಪಡೆದವನೂ ವಿನಯಪರನೂ ಧರ್ಮಶೀಲನೂ ಆಗಿರುತ್ತಾನೋ ಅವನು ಗುರುವಿನ ಸ್ಥಾನಕ್ಕೆ ಯೋಗ್ಯನಾಗುತ್ತಾನೆ.

**ತತಃ [2]ಸುವಿಹಿತಸ್ಯಾಸ್ಯ ಯುಕ್ತಸ್ಯ ಗಣಪೋಷಣೇ ।**
**ಗಣೋಪಗ್ರಹಣಂ ನಾಮ ಕ್ರಿಯಾಮ್ನಾತಾ ಮಹರ್ಷಿಭಿಃ ॥ ೧೬೮ ॥**

ಅನಂತರದಲ್ಲಿ ಸದಾಚಾರವುಳ್ಳವನೂ ಶಿಷ್ಯಸಮೂಹದ ಪೋಷಣೆಯಲ್ಲಿ ಸಮರ್ಥನೂ ಆದ ಈ ಮುನಿಗೆ ಮಹರ್ಷಿಗಳಿಂದ ಗಣೋಪಗ್ರಹಣವೆಂಬ ಕ್ರಿಯೆಯು ಹೇಳಲ್ಪಟ್ಟಿರುತ್ತದೆ.

**ಶ್ರಾವಕಾನಾರ್ಯಕಾಸಂಘಂ ಶ್ರಾವಿಕಾಃ ಸಂಯತಾನಪಿ ।**
**ಸನ್ಮಾರ್ಗೇ ವರ್ತಯನ್ನೇಷ ಗಣಪೋಷಣಮಾಚರೇತ್ ॥ ೧೬೯ ॥**

ಶ್ರಾವಕರನ್ನೂ ಆರ್ಯಿಕೆಯರ ಸಮೂಹವನ್ನೂ ಶ್ರಾವಿಕೆಯರನ್ನೂ ಋಷಿಗಳನ್ನೂ ಸನ್ಮಾರ್ಗದಲ್ಲಿ ನಡೆಯಿಸುವವನಾದ ಈ ಮುನಿಯು ಸಂಘರಕ್ಷಣೆಯನ್ನು ಮಾಡಬೇಕು.

**ಶ್ರುತಾರ್ಥಿಭ್ಯಃ ಶ್ರುತಂ ದದ್ಯಾದ್ದೀಕ್ಷಾರ್ಥಿಭ್ಯಶ್ಚ ದೀಕ್ಷಣಮ್ ।**
**ಧರ್ಮಾರ್ಥಿಭ್ಯೋಽಪಿ ಸದ್ಧರ್ಮಂ ಸ ಶಶ್ವತ್ಪ್ರತಿಪಾದಯೇತ್ ॥ ೧೭೦ ॥**

ಆ ಮುನಿಯು ಶಾಸ್ತ್ರವನ್ನು ಇಚ್ಛಿಸುವವರಿಗೆ ಶಾಸ್ತ್ರವನ್ನೂ ದೀಕ್ಷೆಯನ್ನು ಇಚ್ಛಿಸುವವರಿಗೆ ದೀಕ್ಷೆಯನ್ನೂಕೊಡಬೇಕು. ಧರ್ಮವನ್ನು ಇಚ್ಛಿಸುವವರಿಗೆ ಸದ್ಧರ್ಮವನ್ನೂ ಬಾರಿಬಾರಿಗೆ ವಿವರಿಸಿಹೇಳಬೇಕು.

**ಸದ್ವೃತ್ತಾನ್ ಧಾರಯನ್ಸೂರಿರಸದ್ವೃತ್ತಾನ್ನಿವಾರಯನ್ ।**
**ಶೋಧಯಂಶ್ಚ ಕೃತಾ[3]ದಾಗೋಮಲಾತ್ಸ [4]ಬಿಭೃಯಾದ್ಗಣಮ್ ॥**

ಆ ವಿದ್ವಾಂಸನಾದ ಮುನಿಯು ಸದಾಚಾರಿಗಳನ್ನು ಪೋಷಿಸುವವನಾಗಿಯೂ ದುರಾಚಾರಿಗಳನ್ನು ನಿವಾರಿಸುವವನಾಗಿಯೂ ಅತಿಚಾರವನ್ನು ಮಾಡಿದರೆ ಆ ದೋಷವನ್ನು ಶುದ್ಧಿಮಾಡುವವನಾಗಿಯೂ ಸಂಘವನ್ನು ಪೋಷಿಸಬೇಕು.

೧ ಶಾಸ್ತ್ರಪರಿಜ್ಞಾನ ಕಲಾಪರಿಜ್ಞಾನ. ೨ ಸದಾಚಾರಸ್ಯ. ೩ ಅತಿಚಾರಾತ್. ೪ ಪೋಷಯೇತ್.

**ಗಣಪೋಷಣಮಿತ್ಯಾವಿಷ್ಕುರ್ವನ್ನಾಚಾರ್ಯಸತ್ತಮಃ ।**
**ತತೋಽಯಂ ಸ್ವಗುರುಸ್ಥಾನಸಂಕ್ರಾಂತೌ ಯತ್ನವಾನ್ಭವೇತ್ ॥ ೧೭೨ ॥**

೨೭ ಇತಿ ಗಣೋಪಗ್ರಹಣಕ್ರಿಯಾ ॥ ಮೇಲೆಹೇಳಿದಂತೆ ಸಂಘಪೋಷಣವನ್ನು ಮಾಡುವವನಾದ ಈ ಆಚಾರ್ಯೋತ್ತಮನು ಆಮೇಲೆ ತನ್ನ ಗುರುವಿನ ಸ್ಥಾನವನ್ನು ಹೊಂದುವ ವಿಷಯದಲ್ಲಿ ಯತ್ನಿಸಬೇಕು.

**ಅಧೀತತತ್ತ್ವಂ ತದ್ವಿದ್ಭ್ಯೈರಾದೃತಂ ಮುನಿಸತ್ತಮೈಃ ।**
**ಯೋಗ್ಯಂ ಶಿಷ್ಯಂ ಸಮಾಹೂಯ ತಸ್ಮೈ ಸ್ವಂ ಭರಮರ್ಪಯೇತ್ ॥**

ತತ್ತ್ವಗಳನ್ನು ಅಧ್ಯಯನಮಾಡಿದವನೂ ತತ್ತ್ವಜ್ಞಾನಿಗಳಾದ ಮುನಿಶ್ರೇಷ್ಠರಿಂದ ಪ್ರೀತಿಸಲ್ಪಟ್ಟವನೂ ಯೋಗ್ಯನೂ ಆದ ಶಿಷ್ಯನನ್ನು ಕರೆದು ಅವನಿಗೆ ತನ್ನ ಸಂಘಪೋಷಣೆಯ ಭಾರವನ್ನು ಕೊಡಬೇಕು.

**ಗುರೋರನುಮತಾತ್ಸೋಽಪಿ ಗುರುಸ್ಥಾನಮಧಿಷ್ಠಿತಃ ।**
**ಗುರುವೃತ್ತ್ಯಾ ಸ್ವಯಂ ತಿಷ್ಠನ್ವರ್ತಯೇದಖಿಲಂ ಗಣಮ್ ॥ ೧೭೪ ॥**

ಗುರುವಿನ ಅನುಮತಿಯಿಂದ ಗುರುವಿನ ಸ್ಥಾನವನ್ನು ಹೊಂದಿದವನಾದ ಆ ಶಿಷ್ಯನೂ ತಾನು ಗುರುವಿನ ಆಚರಣೆಯಲ್ಲಿದ್ದು ಸಂಘವನ್ನೆಲ್ಲ ನಡೆಸಬೇಕು.

**ತತ್ರಾರೋಪ್ಯ ಭರಂ ಕೃತ್ಸ್ನಂ ಕಾಲೇ ಕಸ್ಮಿಂಶ್ಚಿದವ್ಯಥಃ ।**
**ಕುರ್ಯಾದೇಕವಿಹಾರೀ ಸನ್ ನಿಃಸಂಗತ್ವಾತ್ಮಭಾವನಾಮ್ ॥ ೧೭೫ ॥**

೨೮ ಇತಿ ಸ್ವಗುರುಸ್ಥಾನಸಂಕ್ರಾಂತಿಕ್ರಿಯಾ ॥ ಒಂದಾನೊಂದು ಕಾಲದಲ್ಲಿ ಆ ಶಿಷ್ಯನಲ್ಲಿ ತನ್ನ ಸಂಘಪೋಷಣೆಯ ಭಾರವನ್ನೆಲ್ಲ ಇಟ್ಟು ನಿಶ್ಚಿಂತನಾಗಿಯೂ ಒಬ್ಬನೇ ವಿಹರಿಸುವವನಾಗಿಯೂ ನಿಷ್ಪರಿಗ್ರಹತ್ವಭಾವನೆಯನ್ನೂ ಆತ್ಮಭಾವನೆಯನ್ನೂ ಮಾಡಬೇಕು.

**ನಿಸ್ಸಂಗವೃತ್ತಿರೇಕಾಕೀ ವಿಹರನ್ಸ ಮಹಾತಪಾಃ ।**
**ಚಿಕೀರ್ಷುರಾತ್ಮಸಂಸ್ಕಾರಂ ನಾನ್ಯಂ ಸಂಸ್ಕರ್ತುಮರ್ಹತಿ ॥ ೧೭೬ ॥**

ಪರಿಗ್ರಹರಹಿತವಾದ ನಡೆಯುಳ್ಳವನೂ ಒಬ್ಬನೇ ವಿಹರಿಸುವವನೂ ಮಹಾತಪಸ್ವಿಯೂ ಆದ ಆ ಮುನಿಯು ತನ್ನ–ಆತ್ಮಸಂಸ್ಕಾರವನ್ನು ಮಾಡಬೇಕೆಂಬ ಇಚ್ಛೆಯುಳ್ಳವನಾಗಿ ಬೇರೆಯವರನ್ನು ಸಂಸ್ಕರಿಸುವುದಕ್ಕೆ ಅರ್ಹನಾಗುವುದಿಲ್ಲ. ಕರ್ಮದಿಂದ ಆತ್ಮನನ್ನು ಶುದ್ಧಿಮಾಡುವುದಕ್ಕೆ ಉದ್ಯುಕ್ತನಾದ ಮುನಿಯು ಬೇರೆಯವರನ್ನು ಶುದ್ಧಿಮಾಡುವುದಕ್ಕೆ ಹೋಗಲು ಸಾಧ್ಯವಿಲ್ಲವೆಂದು ಭಾವವು.

**ಅಪಿ ರಾಗಂ ಸಮುತ್ಸೃಜ್ಯ ಶಿಷ್ಯಪ್ರವಚನಾದಿಷು ।**
**ನಿರ್ಮಮತ್ವೈಕತಾನಃ ಸಂಶ್ಚ[1]ರ್ಯಾಶುದ್ಧಿಂ ತದಾಶ್ರಯೇತ್ ॥ ೧೭೭ ॥**

ಶಿಷ್ಯರಿಗೆ ಉಪದೇಶವನ್ನು ಮಾಡುವುದೇ ಮೊದಲಾದ ಕಾರ್ಯಗಳಲ್ಲಿಯೂ ಪ್ರೀತಿಯನ್ನು ತೊರೆದು ನಿರ್ಮಮತ್ವದಲ್ಲೇ ಆಸಕ್ತನಾಗಿ ಆಗ ಚಾರಿತ್ರಶುದ್ಧಿಯನ್ನು ಹೊಂದಬೇಕು.

**ಕೃತ್ವೈವಮಾತ್ಮಸಂಸ್ಕಾರಂ ತತಃ ಸಲ್ಲೇಖನೋದ್ಯತಃ ।**
**ಕೃತಾತ್ಮಶುದ್ಧಿರಧ್ಯಾತ್ಮಂ ಯೋಗನಿರ್ವಾಣಮಾಪ್ನುಯಾತ್ ॥ ೧೭೮ ॥**

೨೯ ಇತಿ ನಿಸ್ಸಂಗತ್ವಾತ್ಮಭಾವನಾಕ್ರಿಯಾ ॥ ಈ ರೀತಿಯಾಗಿ ಆತ್ಮಸಂಸ್ಕಾರವನ್ನು ಮಾಡಿ ಬಳಿಕ ರಾಗದ್ವೇಷಾದಿಕಷಾಯಭಾವಗಳನ್ನು ಕೃಶಮಾಡುವುದೆಂಬ ಸಲ್ಲೇಖನದಲ್ಲಿ ಪ್ರಯತ್ನಪರನೂ ಆತ್ಮನಲ್ಲಿ ಲೀನವಾಗಿ ಆತ್ಮಶುದ್ಧಿಯನ್ನು ಮಾಡಿದವನೂ ಆಗಿ ಧ್ಯಾನಪ್ರಾಪ್ತಿಯ ಯತ್ನವನ್ನು ಹೊಂದಬೇಕು.

೧ ಚರಿತ್ರಶುದ್ಧಿಂ.

**ಯೋಗೋ ಧ್ಯಾನಂ [1]ತದರ್ಥೋ ಯೋ ಯತ್ನಃ ಸಂವೇಗಪೂರ್ವಕಃ ।**
**ತಮಾಹುರ್ಯೋಗನಿರ್ವಾಣಸಂಪ್ರಾಪ್ತಿಂ ಪರಮಂ ತಪಃ ॥ ೧೭೯ ॥**

ಯೋಗವೆಂದು ಧ್ಯಾನಕ್ಕೆ ಹೆಸರು. ಆ ಧ್ಯಾನವೇ ಪ್ರಯೋಜನವಾಗಿ ಉಳ್ಳುದೂ ಧರ್ಮದಲ್ಲಿಯೂ ಧರ್ಮಫಲದಲ್ಲಿಯೂ ಪ್ರೀತಿರೂಪವಾದ ಸಂವೇಗಪೂರ್ವಕವೂ ಆದ ಯಾವ ಯತ್ನವುಂಟೋ ಅಂತಹ ಉತ್ಕೃಷ್ಟತಪಸ್ಸು ಯೋಗನಿರ್ವಾಣ ಸಂಪ್ರಾಪ್ತಿಯೆಂದು ಹೇಳುತ್ತಾರೆ.

**ಕೃತ್ವಾ [2]ಪರಿಕರಂ ಯೋಗ್ಯಂ ತನುಶೋಧನಪೂರ್ವಕಮ್ ।**
**ಶರೀರಂ ಕರ್ಶಯೇದ್ದೋಷೈಃ ಸಮಂ ರಾಗಾದಿಭಿಸ್ತದಾ ॥ ೧೮೦ ॥**

ಶರೀರಶೋಧನಪೂರ್ವಕವಾಗಿ ಯೋಗ್ಯವಾದ ಸಲಕರಣವನ್ನು ಸಿದ್ಧಮಾಡಿ ಕೊಂಡು ಆಗ ರಾಗಾದಿದೋಷಗಳೊಡನೆ ಶರೀರವನ್ನು ಕೃಶಮಾಡಬೇಕು.

**ತದೇತದ್ಯೋಗನಿರ್ವಾಣಂ ಸನ್ಯಾಸೇ ಪೂರ್ವಭಾವನಾ ।**
**ಜೀವಿತಾಶಾಂ ಮೃತೀಚ್ಛಾಂ ಚ ಹಿತ್ವಾ ಭಾವ್ಯಾ[3]ತ್ಮಲಬ್ಧಯೇ ॥ ೧೮೧ ॥**

**ರಾಗದ್ವೇಷೌ ಸಮುತ್ಸೃಜ್ಯ ಶ್ರೇಯೋವಾಪ್ತೌ ಚ ಸಂಶಯಮ್ ।**
**ಅನಾತ್ಮೀಯೇಷು ಚಾತ್ಮೀಯಸಂಕಲ್ಪಾದ್ವಿರಮೇತ್ತದಾ ॥ ೧೮೨ ॥**

ಈ ಯೋಗನಿರ್ವಾಣವು ಸನ್ಯಾಸದಲ್ಲಿ ಮಾಡತಕ್ಕ ಪ್ರಥಮಭಾವನೆಯಾಗಿರು ವುದು. ಮುಂದಾಗುವ ಮುಕ್ತಿಗೋಸ್ಕರ ಇಚ್ಛೆಯನ್ನೂ ಬದುಕುವ ಇಚ್ಛೆಯನ್ನೂ ಮರಣದ ಇಚ್ಛೆಯನ್ನೂ ಬಿಟ್ಟು ಆಗ ರಾಗದ್ವೇಷಗಳನ್ನೂ ಶ್ರೇಯಃಪ್ರಾಪ್ತಿಯಲ್ಲಿ ಸಂಶಯವನ್ನೂ ಬಿಟ್ಟು ಅನಾತ್ಮವಸ್ತುಗಳಲ್ಲಿ ಆತ್ಮೀಯ ವಸ್ತುಗಳೆಂಬ ಸಂಕಲ್ಪದಿಂದ ವಿರಾಮವನ್ನು ಹೊಂದಬೇಕು.

**ನಾಹಂ [4]ದೇಹೋ ಮನೋ ನಾಸ್ಮಿ ನ ವಾಣೀ ನ ಚ ಕಾರಣಮ್ ।**
**[5]ತತ್ತ್ರಯಸ್ಯೇ[6]ತ್ಯನುದ್ವಿಗ್ನೋ ಭಜೇದನ್ಯತ್ವಭಾವನಾಮ್ ॥ ೧೮೩ ॥**

"ನಾನು ಶರೀರವೂ ಅಲ್ಲ. ಮನಸ್ಸೂ ಅಲ್ಲ. ವಚನವೂ ಅಲ್ಲ. ಆ ಮನೋವಾಕ್ಕಾಯಗಳಿಗೆ ಕಾರಣನೂ ಅಲ್ಲ" ಈ ಪ್ರಕಾರವಾಗಿ ನಿಶ್ಚಿಂತನಾಗಿ ಅನ್ಯತ್ವಭಾವನೆಯನ್ನು ಭಜಿಸಬೇಕು.

**ಅಹಮೇಕೋ ನ ಮೇ ಕಶ್ಚಿನ್ನೈವಾಹಮಪಿ ಕಸ್ಯಚಿತ್ ।**
**ಇತ್ಯದೀನಮನಾಃ ಸಮ್ಯಗೇಕತ್ವಮಪಿ ಭಾವಯೇತ್ ॥ ೧೮೪ ॥**

"ನಾನು ಒಬ್ಬನು. ನನಗೆ ಯಾರು ಇಲ್ಲ. ನಾನೂ ಯಾರಿಗೂ ಇಲ್ಲ" ಈ ಪ್ರಕಾರವಾಗಿ ದೀನವಾದ ಮನಸ್ಸಿಲ್ಲದವನಾಗಿ ಏಕತ್ವವನ್ನೂ ಚೆನ್ನಾಗಿ ಭಾವಿಸಬೇಕು.

**ಮತಿ[7]ಮಾಧಾಯ ಲೋಕಾಗ್ರೇ ನಿತ್ಯಾನಂದಸುಖಾಸ್ಪದೇ ।**
**ಭಾವಯೇದ್ಯೋಗನಿರ್ವಾಣಂ ಸ ಯೋಗೀ ಯೋಗಸಿದ್ಧಯೇ ॥ ೧೮೫ ॥**

ಆ ಯೋಗಿಯು ಧ್ಯಾನದ ಸಿದ್ಧಿಗೋಸ್ಕರ ನಿತ್ಯಾನಂದರೂಪವಾದ ಸುಖಕ್ಕೆ ಸ್ಥಾನವಾದ ಲೋಕದ ತುದಿಯಲ್ಲಿ ಮನಸ್ಸನ್ನಿಟ್ಟು ಯೋಗನಿರ್ವಾಣವನ್ನು ಭಾವಿಸಬೇಕು.

**ತತೋ ನಿಶ್ಶೇಷ[8]ಮಾಹಾರಂ ಶರೀರಂ ಚ ಸಮುತ್ಸೃಜನ್ ।**
**ಯೋಗೀಂದ್ರೋ ಯೋಗನಿರ್ವಾಣಸಾಧನಾಯೋದ್ಯತೋ ಭವೇತ್ ॥**

೩೦ ಇತಿ ಯೋಗನಿರ್ವಾಣಸಂಪ್ರಾಪ್ತಿಕ್ರಿಯಾ ॥ ಅನಂತರದಲ್ಲಿ ಆ ಯೋಗೀಂದ್ರನು ಅನ್ನ, ಪಾನ, ಖಾದ್ಯ, ಲೇಹ್ಯಗಳೆಂಬ ಚತುರ್ವಿಧಾಹಾರವನ್ನೂ ಶರೀರವನ್ನೂ ಬಿಟ್ಟು ಯೋಗನಿರ್ವಾಣವನ್ನು ಸಾಧಿಸುವುದಕ್ಕೆ ಪ್ರಯತ್ನಪರ ನಾಗಬೇಕು.

೧ ತತ್ ಧ್ಯಾನಂ ಅರ್ಥಃ ಪ್ರಯೋಜನಂ ಯಸ್ಯ. ೨ ಆಚಾರ್ಯಾದಿಪರಿಕರಂ. ೩ ಮುಕ್ತಯೇ. ೪ ದೇಹಸ್ವರೂಪಃ. ೫ ದೇಹಮನೋವಾಕ್ತ್ರಯಸ್ಯ. ೬ ನಿಶ್ಚಿಂತಃ. ೭ ಸ್ಥಾಪ್ಯ. ೮ ಚತುರ್ವಿಧಾಹಾರಂ.

**[1]ಉತ್ತಮಾರ್ಥೇ [2]ಕೃತಾಸ್ಥಾನಃ ಸನ್ಯಸ್ತತನುರುದ್ಧಧೀಃ ।**
**ಧ್ಯಾಯನ್ಮನೋವಚಃಕಾಯಾನ್ [3]ಹಿರುಗ್ಭೂತಾತ್ಮಕಾನ್ಸ್ವತಃ ॥ ೧೮೭ ॥**

**[4]ಪ್ರಣಿಧಾಯ ಮನೋವೃತ್ತಿಂ [5]ಪದೇಷು ಪರಮೇಷ್ಠಿನಾಮ್ ।**
**ಜೀವಿತಾಂತೇ ಸ್ವಸಾತ್ಕುರ್ಯಾದ್ಯೋಗನಿರ್ವಾಣಸಾಧನಮ್ ॥ ೧೮೮ ॥**

ಸನ್ಯಾಸದಲ್ಲಿ ಪ್ರೀತಿಯನ್ನು ಮಾಡಿರುವವನೂ ಶರೀರವನ್ನು ಕೃಶಮಾಡಿರು ವವನೂ ಶ್ರೇಷ್ಠವಾದ ಬುದ್ಧಿಯುಳ್ಳವನೂ ಮನೋವಾಕ್ಕಾಯಗಳನ್ನು ತನ್ನಿಂದ– ಆತ್ಮನಿಂದ ಬೇರೆಯಾದ ಸ್ವರೂಪವುಳ್ಳವುಗಳನ್ನಾಗಿ ಧ್ಯಾನಿಸುವವನೂ ಆಗಿ ಪಂಚ ಪರಮೇಷ್ಠಿಗಳ ಪದಗಳಲ್ಲಿ ಮನೋವ್ಯಾಪಾರವನ್ನು ಸ್ಥಿರಪಡಿಸಿ ಅವಸಾನಕಾಲದಲ್ಲಿ ಯೋಗನಿರ್ವಾಣಸಾಧನವನ್ನು ಸ್ವಾಧೀನಮಾಡಿಕೊಳ್ಳಬೇಕು.

**ಯೋಗಃ ಸಮಾಧಿರ್ನಿರ್ವಾಣಂ ತತ್ಕೃತಾ [6]ಚಿತ್ತನಿರ್ವೃತಿಃ ।**
**[7]ತೇನೇಷ್ಟಸಾಧನಂ ಯತ್ತದ್ಯೋಗನಿರ್ವಾಣಸಾಧನಮ್ ॥ ೧೮೯ ॥**

ಯೋಗವೆಂದು ಧ್ಯಾನಕ್ಕೆ ಹೆಸರು. ಅದರಿಂದುಂಟಾದ ಯಾವುದೊಂದು ಇಷ್ಟ ಸಾಧನವುಂಟೋ ಅದಕ್ಕೆ ಯೋಗನಿರ್ವಾಣಸಾಧನವೆಂದು ಹೆಸರು.

**ತಥಾ ಯೋಗಂ ಸಮಾಧಾಯ ಕೃತಪ್ರಾಣವಿಸರ್ಜನಃ ।**
**ಇಂದ್ರೋಪಪಾದಮಾಪ್ನೋತಿ ಗತೇ ಪುಣ್ಯೇ [8]ಪುರೋಗತಾಮ್ ॥**

೩೧ ಇತಿ ಯೋಗನಿರ್ವಾಣಸಾಧನಾಕ್ರಿಯಾ ॥ ಆ ಪ್ರಕಾರವಾಗಿ ಧ್ಯಾನಮಗ್ನನಾಗಿ ಪ್ರಾಣವನ್ನು ಬಿಟ್ಟ ಯೋಗಿಯು ತನ್ನ ಪುಣ್ಯವು ಮುಂದೆ ಹೋಗುತ್ತಿರಲು ತಾನು ಇಂದ್ರ ಪದವಿಯನ್ನು ಹೊಂದುತ್ತಾನೆ. ಪುಣ್ಯದಿಂದ ದೇವೇಂದ್ರನಾಗಿ ಹುಟ್ಟುತ್ತಾ ನೆಂದು ಭಾವವು.

**ಇಂದ್ರಾಃ ಸ್ಯುಸ್ತ್ರಿದಶಾಧೀಶಾಸ್ತೇಷೂತ್ಪಾದಸ್ತಪೋಬಲಾತ್ ।**
**ಯಃ ಸ ಇಂದ್ರೋಪಪಾದಃ ಸ್ಯಾತ್ಕ್ರಿಯಾರ್ಹನ್ಮಾರ್ಗ[9]ಮೇಧಿನಾಮ್ ॥**

ದೇವತೆಗಳಿಗೆ ಅಧಿಪತಿಗಳಾಗಿರುವವರು ಇಂದ್ರರೆನಿಸುವರು. ತಪೋಬಲದಿಂದ ಆ ಇಂದ್ರರಲ್ಲಿ ಹುಟ್ಟುವಿಕೆಯು ಯಾವುದುಂಟೋ ಅದು ಆರ್ಹತಮಾರ್ಗವನ್ನು ಹೊಂದಿರುವವರ ಇಂದ್ರೋಪಪಾದ ಕ್ರಿಯೆಯಾಗುವುದು.

**ತತೋಽಸೌ ದಿವ್ಯಶಯ್ಯಾಯಾಂ ಕ್ಷಣಾದಾಪೂರ್ಣಯೌವನಃ ।**
**ಪರಮಾನಂದಸಾದ್ಭೂತೋ ದೀಪ್ತೋ ದಿವ್ಯೇನ ತೇಜಸಾ ॥ ೧೯೨ ॥**

**ಅಣಿಮಾದಿಭಿರಷ್ಟಾಭಿರ್ಯುತೋ ಸಾಧಾರಣೈರ್ಗುಣೈಃ ।**
**ಸಹಜಾಂಬರದಿವ್ಯಸ್ರಗ್ಮಣಿಭೂಷಣಭೂಷಿತಃ ॥ ೧೯೩ ॥**

**ದಿವ್ಯಾನುಭಾವಸಂಭೂತಂ ಪ್ರಾಭವಂ ಪರಮುದ್ವಹನ್ ।**
**ಬೋಬುಧ್ಯತೇ ತದಾತ್ಮೀಯಮೈಂದ್ರಂ ದಿವ್ಯಾವಧಿತ್ವಿಷಾ ॥ ೧೯೪ ॥**

ಅನಂತರದಲ್ಲಿ ಈ ಆತ್ಮನು ದಿವ್ಯವಾದ ಹಾಸಿಗೆಯಲ್ಲಿ ಕ್ಷಣಕಾಲದಿಂದ ಪೂರ್ಣಯೌವನವನ್ನು ಹೊಂದಿದವನೂ ಪರಮಾನಂದಪರವಶನೂ ದಿವ್ಯತೇಜಸ್ಸಿ ನಿಂದ ಪ್ರಕಾಶಮಾನನೂ ಎಂಟು ಪ್ರಕಾರವಾದ ಅಣಿಮಾಮಹಿಮಾದಿ ಅಸಾಧಾರಣ ಗುಣಗಳಿಂದ ಯುಕ್ತನೂ ಹುಟ್ಟುವಾಗ ಜತೆಯಲ್ಲಿದ್ದ ವಸ್ತ್ರದಿಂದಲೂ ದಿವ್ಯವಾದ ಪುಷ್ಪಮಾಲಿಕೆಯಿಂದಲೂ ರತ್ನಾಭರಣಗಳಿಂದಲೂ ಅಲಂಕೃತನೂ ದಿವ್ಯವಾದ ಮಹಿಮೆಯಿಂದುಂಟಾದುದೂ ಉತ್ಕೃಷ್ಟವೂ ಆದ ಪ್ರಭುತ್ವವನ್ನು ಹೊಂದಿದವನೂ ಆಗಿ ಆಗ ದಿವ್ಯವಾದ ಅವಧಿಜ್ಞಾನವೆಂಬ ತೇಜಸ್ಸಿನಿಂದ ತನ್ನ ಇಂದ್ರಪದವಿಯನ್ನು ತಿಳಿಯುತ್ತಾನೆ. ತಾನು ಇಂದ್ರನಾಗಿ ಜನಿಸಿರುತ್ತೇನೆಂದು ತಿಳಿಯುತ್ತಾನೆಂದು ಭಾವವು.

೧ ಸನ್ಯಾಸೇ. ೨ ಕೃತಾದರಃ. ೩ ಪೃಥಕ್, ಹಿರುಜ್ಞಾನಾ ಚ ವರ್ಜನೇ. ೪ ಏಕಾಗ್ರಂ ಕೃತ್ವಾ. ೫ ಪಂಚಪದೇಷು. ೬ ಚಿತ್ತಾಹ್ಲಾದಃ. ೭ ಧ್ಯಾನಾಹ್ಲಾದಚಿತ್ತೇನ. ೮ ಅಗ್ರೇಸರತ್ವಂ. ೯ ಸೇವಿನಾಂ.

[೧]ಪರ್ಯಾಪ್ತಮಾತ್ರ ಏವಾ[೨]ಯಂ ಪ್ರಾಪ್ತಜನ್ಮಾವಬೋಧನಃ ।
ಪುನರಿಂದ್ರಾಭಿಷೇಕೇಣ ಯೋಜ್ಯತೇಮರಸತ್ತಮೈಃ ॥ ೧೯೫ ॥

೩೨ ಇತಿ ಇಂದ್ರೋಪಪಾದಕ್ರಿಯಾ ॥ ಆಹಾರ ಶರೀರ ಇಂದ್ರಿಯ ಉಚ್ಛ್ವಾಸನಿಃಶ್ವಾಸ ಭಾಷಾ ಮನಸ್ಸುಗಳೆಂಬ ಆರು ಪರ್ಯಾಪ್ತಿಗಳು ಪೂರ್ಣವಾದೊಡನೆಯೇ ತನ್ನ ಉತ್ಪತ್ತಿಯನ್ನು ತಿಳಿದವನಾದ ಈ ಇಂದ್ರನನ್ನು ಪುನಃ ಶ್ರೇಷ್ಠರಾದ ದೇವತೆಗಳು ಇಂದ್ರಪಟ್ಟಾಭಿಷೇಕದಿಂದ ಇಂದ್ರಪದವಿಗೆ ನೇಮಿಸುತ್ತಾರೆ.

ದಿವ್ಯಸಂಗೀತವಾದಿತ್ರ[೩]ಮಂಗಲೋದ್ಗೀತಿನಿಃಸ್ವನೈಃ ।
ವಿಚಿತ್ರೈಶ್ಚಾಪ್ಸರೋನೃತ್ತೈರ್ನಿರ್ವರ್ತ್ಯತೇಂದ್ರಾಭಿಷೇಚನಃ ॥ ೧೯೬ ॥

ತಿರೀಟಮುದ್ವಹನ್ ದೀಪ್ರಂ ಸ್ವಃಸಾಮ್ರಾಜ್ಯೈಕಲಾಂಛನಮ್ ।
ಸುರಕೋಟಿಭಿರಾರೂಢಪ್ರಮದೈರ್ಜಯಕಾರಿತಃ ॥ ೧೯೭ ॥

ಸ್ರಗ್ವೀ ಸದಂಶುಕೋ ದೀಪ್ರೈರ್ಭೂಷಿತೋ ದಿವ್ಯಭೂಷಣೈಃ ।
ಐಂದ್ರಂ ವಿಷ್ಟರಮಾರೂಢೋ ಮಹಾನೇಷ ಮಹೀಯತೇ ॥ ೧೯೮ ॥

ದಿವ್ಯವಾದ ಸಂಗೀತದಿಂದಲೂ ವಾದ್ಯದಿಂದಲೂ ಜಯ ಜೀವ ಮೊದಲಾದ ಮಂಗಲಗಾನಶಬ್ದಗಳಿಂದಲೂ ವಿಚಿತ್ರವಾದ ಅಪ್ಸರಸ್ತ್ರೀಯರ ನೃತ್ಯಗಳಿಂದಲೂ ಇಂದ್ರಾಭಿಷೇಕಮಾಡಲ್ಪಟ್ಟವನೂ ಸ್ವರ್ಗದ ಸಾಮ್ರಾಜ್ಯಕ್ಕೆ ಮುಖ್ಯವಾದ ಗುರುತಾದುದೂ ಪ್ರಕಾಶಮಾನವೂ ಆದ ಕಿರೀಟವನ್ನು ಧರಿಸಿರುವವನೂ ಸಂತೋಷವನ್ನು ಹೊಂದಿದವರಾದ ಅನೇಕ ಕೋಟಿ ದೇವತೆಗಳಿಂದ ಜಯಜಯಕಾರಮಾಡಲ್ಪಟ್ಟವನೂ ಪುಷ್ಪಮಾಲಿಕೆಯುಳ್ಳವನೂ ಶ್ರೇಷ್ಠವಾದ ವಸ್ತ್ರವುಳ್ಳವನೂ ಪ್ರಕಾಶಮಾನವಾದ ದಿವ್ಯಾಭರಣಗಳಿಂದ ಅಲಂಕೃತನೂ ಇಂದ್ರಸಂಬಂಧವಾದ ಪೀಠವನ್ನು ಹತ್ತಿದವನೂ ಅಧಿಪತಿಯೂ ಆದ ಈ ಇಂದ್ರನು ಪೂಜಿಸಲ್ಪಡುತ್ತಾನೆ. ದೇವತೆಗಳಿಂದ ಪೂಜಿಸಲ್ಪಡುತ್ತಾನೆಂದು ಭಾವವು.

ತತೋಯಮಾನತಾನೇತಾನ್ಸತ್ಕೃತ್ಯ ಸುರಸತ್ತಮಾನ್ ।
ಪದೇಷು ಸ್ಥಾಪಯನ್ಸ್ವೇಷು ವಿಧಿದಾನೇ ಪ್ರವರ್ತತೇ ॥ ೧೯೯ ॥

ಅನಂತರದಲ್ಲಿ ನಮಸ್ಕಾರಮಾಡಿದ ಈ ಶ್ರೇಷ್ಠರಾದ ದೇವತೆಗಳನ್ನು ಸತ್ಕರಿಸಿ ಅವರವರ ಸ್ಥಾನಗಳಲ್ಲಿ ಸ್ಥಾಪಿಸುವವನಾದ ಈ ದೇವೇಂದ್ರನು ವಿಧಿಪೂರ್ವಕವಾದ ದಾನದಲ್ಲಿ ತೊಡಗಿದನು.

[೪]ಸ್ವವಿಮಾನರ್ದ್ಧಿದಾನೇನ ಪ್ರೀಣಿತೈರ್ವಿಬುಧೈರ್ವೃತಃ ।
ಸೋನುಭುಙ್ತೇ ಚಿರಂ ಕಾಲಂ ಸುಕೃತೀ ಸುಖ[೫]ಮಾಮರಮ್ ॥

ತಂತಮ್ಮ ವಿಮಾನಗಳ ಮತ್ತು ಸಂಪತ್ತಿಯ ದಾನದಿಂದ ಸಂತೋಷಪಡಿಸಲ್ಪಟ್ಟ ದೇವತೆಗಳಿಂದ ಸುತ್ತಲ್ಪಟ್ಟವನಾದ ಆ ಪುಣ್ಯಶಾಲಿಯು ಬಹುಕಾಲದವರೆಗೆ ದೇವಸಂಬಂಧಿಯಾದ ಸುಖವನ್ನು ಅನುಭವಿಸುತ್ತಾನೆ.

ತದೇತದ್ವಿಧಿದಾನೇಂದ್ರಸುಖೋದಯವಿಕಲ್ಪಿತಮ್ ।
ಕ್ರಿಯಾದ್ವಯಂ ಸಮಾಮ್ನಾತಂ ಸ್ವರ್ಲೋಕಪ್ರಭವೋಚಿತಮ್ ॥ ೨೦೧ ॥

ಸ್ವರ್ಗಲೋಕದಲ್ಲಿ ಜನಿಸುವುದಕ್ಕೆ ಯೋಗ್ಯವೂ ವಿಧಿದಾನ ಇಂದ್ರಸುಖೋದಯಗಳೆಂಬ ಭೇದಗಳುಳ್ಳವೂ ಆದ ಈ ಎರಡು ಕ್ರಿಯೆಗಳು ಹೇಳಲ್ಪಟ್ಟುವು.

ಪ್ರೋಕ್ತಾಸ್ತ್ವಿಂದ್ರೋಪಪಾದಾಭಿಷೇಕದಾನಸುಖೋದಯಾಃ ।
ಇಂದ್ರತ್ಯಾಗಾಖ್ಯಮಧುನಾ ಸಂಪ್ರವಕ್ಷ್ಯೇ ಕ್ರಿಯಾಂತರಮ್ ॥ ೨೦೨ ॥

೩೩ ಇತಿ ವಿಧಿದಾನ ಸುಖೋದಯಕ್ರಿಯಾ ॥ ಇಂದ್ರೋಪಪಾದ ಇಂದ್ರಾಭಿಷೇಕ ವಿಧಿದಾನ ಸುಖೋದಯ ಕ್ರಿಯೆಗಳು ಹೇಳಲ್ಪಟ್ಟುವು. ಈಗ ಇಂದ್ರತ್ಯಾಗವೆಂಬ ಬೇರೊಂದು ಕ್ರಿಯೆಯನ್ನು ಹೇಳುವೆನು.

೧ ಷಟ್ಪರ್ಯಾಪ್ತಮಾತ್ರ ಏವ. ೨ ಇಂದ್ರಃ. ೩ ಜಯಜೀವೇತ್ಯಾದಿಮಂಗಲಗಾನಶಬ್ದೈಃ. ೪ ನಿಜವಿಮಾನೈಶ್ವರ್ಯವಿತರಣೇನ. ೫ ಅಮರಸಂಬಂಧಿ.

ಕಿಂಚಿನ್ಮಾತ್ರಾವಶಿಷ್ಟಾಯಾಂ ಸ್ವಸ್ಯಾಮಾಯುಃಸ್ಥಿತೌ ಸುರೇಟ್ ।
ಬುಧ್ವಾ ಸ್ವರ್ಗಾವತಾರಂ ಸ್ವಂ ಸೋನುಶಾಸ್ತ್ಯಮರಾನಿತಿ ॥ ೨೦೩ ॥

ತನ್ನ ಆಯುಷ್ಯಸ್ಥಿತಿಯು ಸ್ವಲ್ಪಮಾತ್ರ ಉಳಿದಾಗ ಆ ದೇವೇಂದ್ರನು ತಾನು ಸ್ವರ್ಗದಿಂದ ಭೂಮಿಗೆ ಅವತರಿಸುವುದನ್ನು ತಿಳಿದು ದೇವತೆಗಳನ್ನು ಕುರಿತು ಈ ಕೆಳಗೆ ಹೇಳುವ ಪ್ರಕಾರವಾಗಿ ಆಜ್ಞಾಪಿಸುತ್ತಾನೆ.

ಭೋ ಭೋಃ ಸುಧಾಶನಾ ಯೂಯಮಸ್ಮಾಭಿಃ ಪಾಲಿತಾಶ್ಚಿರಮ್ ।
ಕೇಚಿ[೧]ತ್ಪಿತ್ರೀಯಿತಾಃ ಕೇಚಿತ್ಪುತ್ರಪ್ರೀತ್ಯೋಪಲಾಲಿತಾಃ ॥ ೨೦೪ ॥

"ಎಲೈ ಎಲೈ ದೇವತೆಗಳಿರಾ! ನೀವುಗಳು ಕೆಲವರು ತಂದೆಯಂತೆ ನಡೆದುಕೊಂಡವರಾಗಿ ನಮ್ಮಿಂದ ಬಹುಕಾಲದವರೆಗೆ ರಕ್ಷಿಸಲ್ಪಟ್ಟಿರಿ. ಕೆಲವರು ಪುತ್ರಪ್ರೇಮದಿಂದ ಪ್ರೀತಿಸಲ್ಪಟ್ಟಿರಿ.

ಪುರೋಧೋಮಂತ್ರ್ಯಮಾತ್ಯಾನಾಂ ಪದೇ ಕೇಚಿನ್ನಿಯೋಜಿತಾಃ ।
ವಯಸ್ಯಪೀಠಮರ್ದೀಯಸ್ಥಾನೇ ದೃಷ್ಟಾಶ್ಚ ಕೇಚನ ॥ ೨೦೫ ॥

ಕೆಲವರು ಪುರೋಹಿತ ಮಂತ್ರಿ ಪ್ರಧಾನರುಗಳ ಸ್ಥಾನದಲ್ಲಿ ನೇಮಿಸಲ್ಪಟ್ಟರು. ಕೆಲವರು ಮಿತ್ರಸ್ಥಾನದಲ್ಲಿಯೂ ಕೆಲವರು ಪೀಠಮರ್ದ(ಪರಿಚಾರಕ) ಸ್ಥಾನದಲ್ಲಿಯೂ ನೋಡಲ್ಪಟ್ಟರು. ನೇಮಿಸಲ್ಪಟ್ಟರೆಂದು ಭಾವವು.

ಸ್ವಪ್ರಾಣನಿರ್ವಿಶೇಷಂ ಚ ಕೇಚಿ[೨]ತ್ತ್ರಾಣಾಯ ಸಮ್ಮತಾಃ ।
ಕೇಚಿ[೩]ನ್ಮಾನ್ಯಪದೇ ದೃಷ್ಟಾಃ [೪]ಪಾಲಕಾಃ ಸ್ವರ್ನಿವಾಸಿನಾಮ್ ॥ ೨೦೬ ॥

ಕೆಲವು ದೇವತೆಗಳು ತಮ್ಮ ಪ್ರಾಣಗಳಿಗೆ ಸಮಾನವಾಗಿ ಅಂಗರಕ್ಷಣೆಗೋಸ್ಕರ ಗೊತ್ತುಮಾಡಲ್ಪಟ್ಟರು. ಕೆಲವು ದೇವತೆಗಳು ಸ್ವರ್ಗವಾಸಿಗಳ ಪೂಜ್ಯಸ್ಥಾನದಲ್ಲಿ ಲೋಕಪಾಲಕರಾಗಿ ನೇಮಿಸಲ್ಪಟ್ಟರು.

ಕೇಚಿ[೫]ಚ್ಚಮೂಚರಸ್ಥಾನೇ ಕೇಚಿಚ್ಚ [೬]ಸ್ವಜನಾಸ್ಥಯಾ ।
[೭]ಪ್ರಜಾಸಾಮಾನ್ಯಮನ್ಯೇ ಚ ಕೇಚಿಚ್ಚಾನುಚರಾಃ ಪೃಥಕ್ ॥ ೨೦೭ ॥

ಕೆಲವು ದೇವತೆಗಳು ಸೇನಾಪತಿಸ್ಥಾನದಲ್ಲಿಯೂ ಕೆಲವು ದೇವತೆಗಳು ಕಿಲ್ಬಿಷಿಕರೆಂಬ ಪ್ರಜಾಸಾಮಾನ್ಯರಾಗಿಯೂ ಕೆಲವು ದೇವತೆಗಳು ಬೇರೆ ಪರಿಚಾರಕರಾಗಿಯೂ ನೇಮಿಸಲ್ಪಟ್ಟರು.

ಕೇಚಿತ್ಪರಿಜನಸ್ಥಾನೇ ಕೇಚಿಚ್ಚಾಂತಃಪುರೇಚರಾಃ ।
ಕಾಶ್ಚಿದ್ವಲ್ಲಭಿಕಾ ದೇವ್ಯೋ ಮಹಾದೇವ್ಯಶ್ಚ ಕಾಶ್ಚನ ॥ ೨೦೮ ॥

ಕೆಲವು ದೇವತೆಗಳು ಪರಿವಾರಜನರ ಸ್ಥಾನದಲ್ಲಿಯೂ ಕೆಲವು ದೇವತೆಗಳು ಅಂತಃಪುರದಲ್ಲಿ ಸಂಚರಿಸುವವರಾಗಿಯೂ ಕೆಲವು ದೇವಿಯರು ಪ್ರಿಯ ಪತ್ನಿಯರಾಗಿಯೂ ಕೆಲವು ದೇವಿಯರು ಮಹಾದೇವಿಯರಾಗಿಯೂ ನೇಮಿಸಲ್ಪಟ್ಟರು.

ಇತ್ಯಸಾಧಾರಣಾ ಪ್ರೀತಿರ್ಮಯಾ ಯುಷ್ಮಾಸು ದರ್ಶಿತಾ ।
ಸ್ವಾಮಿಭಕ್ತಿಶ್ಚ ಯುಷ್ಮಾಭಿರ್ಮಯ್ಯಸಾಧಾರಣೀ ಧೃತಾ ॥ ೨೦೯ ॥

ಈ ಪ್ರಕಾರವಾಗಿ ನಾನು ನಿಮ್ಮಲ್ಲಿ ಅಸಾಧಾರಣವಾದ ಪ್ರೀತಿಯನ್ನು ತೋರಿಸಿದೆನು. ನೀವುಗಳು ನನ್ನಲ್ಲಿ ಅಸಾಧಾರಣವಾದ ಸ್ವಾಮಿಭಕ್ತಿಯನ್ನೂ ಧರಿಸಿದ್ದಿರಿ.

ಸಾಂಪ್ರತಂ ಸ್ವರ್ಗಭೋಗೇಷು ಗತೋ ಮಂದೇಚ್ಛತಾಮಹಮ್ ।
ಪ್ರತ್ಯಾಸನ್ನಾ ಹಿ ಮೇ ಲಕ್ಷ್ಮೀರದ್ಯ ಭೂಲೋಕಗೋಚರಾ ॥ ೨೧೦ ॥

೧ ಪಿತೇವಾಚರಿತಾಃ. ೨ ಅಂಗರಕ್ಷಾಯೈ. ೩ ಪೂಜ್ಯಸ್ಥಾನೇ. ೪ ಲೋಕಪಾಲಾ ಇತ್ಯರ್ಥಃ. ೫ ಸೇನಾಪತಿ. ೬ ಬಂಧುಜನಬುದ್ಧ್ಯಾ ನಿಯೋಜಿತಾಃ. ೭ ಕಿಲ್ಬಿಷಿಕಾಃ.

ಈಗ ಸ್ವರ್ಗಭೋಗಗಳಲ್ಲಿ ನನಗೆ ಇಚ್ಛೆಯು ಕಡಿಮೆಯಾಗಿದೆ. ನನಗೆ ಈಗ ಭೂಲೋಕವಿಷಯಕವಾದ ಸಂಪತ್ತಿಯು ಸಮೀಪಿಸಿರುತ್ತದೆ.

**ಯುಷ್ಮತ್ಸಾಕ್ಷಿ ತತಃ ಕೃತ್ಸ್ನಂ [೧]ಸ್ವಃಸಾಮ್ರಾಜ್ಯಂ ಮಯೋಜ್ಝಿತಮ್ ।**
**ಯಶ್ಚಾನ್ಯೋ ಮತ್ಸಮೋ [೨]ಭಾವೀ ತಸ್ಮೈ ಸರ್ವಂ ಸಮರ್ಪಿತಮ್ ॥**

ಆದುದರಿಂದ ನಿಮ್ಮಗಳ ಸಾಕ್ಷಿಯಾಗಿ ನಾನು ಎಲ್ಲಾ ಸ್ವರ್ಗಸಾಮ್ರಾಜ್ಯವನ್ನು ಬಿಟ್ಟಿರುತ್ತೇನೆ. ಬೇರೆ ಯಾವನು ನನಗೆ ಸಮಾನನಾದ ಇಂದ್ರನಾಗುವನೋ ಅವನಿಗೆ ಎಲ್ಲವೂ ಸಮರ್ಪಿಸಲ್ಪಟ್ಟಿರುತ್ತದೆ.''

**ಇ[೩]ತ್ಯನುತ್ಸುಕತಾಂ ತೇಷು ಭಾವಯ[೪]ನ್ನನುಶಿಷ್ಯ ತಾನ್ ।**
**ಕುರ್ವನ್ನಿಂದ್ರಪದತ್ಯಾಗಂ ಸ ವ್ಯಥಾಂ [೫]ನೈತಿ ಧೀರಧೀಃ ॥ ೨೧೨ ॥**

ಈ ಪ್ರಕಾರವಾಗಿ ಆ ಸ್ವರ್ಗಭೋಗಗಳಲ್ಲಿ ಔದಾಸೀನ್ಯವನ್ನು ಭಾವಿಸುವವನೂ ಆ ದೇವತೆಗಳಿಗೆ ಉಪದೇಶಿಸಿ ಇಂದ್ರಪದವಿಯ ತ್ಯಾಗವನ್ನು ಮಾಡುವವನೂ ಧೈರ್ಯವಾದ ಬುದ್ಧಿಯುಳ್ಳವನೂ ಆದ ಆ ದೇವೇಂದ್ರನು ವ್ಯಥೆಯನ್ನು ಹೊಂದುವುದಿಲ್ಲ.

**ಇಂದ್ರತ್ಯಾಗಕ್ರಿಯಾ ಸೈಷಾ ತತ್ಸ್ವರ್ಭೋಗಾತಿಸರ್ಜನಮ್ ।**
**ಧೀರಾಸ್ತ್ಯಜಂತ್ಯನಾಯಾಸಾ[೬]ದೈಶ್ಯಂ ತಾದೃಶಮಪ್ಯಹೋ ॥ ೨೧೩ ॥**

ಆ ಸ್ವರ್ಗಭೋಗತ್ಯಾಗರೂಪವಾದ ಈ ಕ್ರಿಯೆಯು ಇಂದ್ರತ್ಯಾಗಕ್ರಿಯೆಯೆನಿಸುವುದು. ಅಂತಹ ಪ್ರಭುತ್ವವನ್ನೂ ಧೀರರು ಅನಾಯಾಸದಿಂದ ಬಿಡುತ್ತಾರೆ. ಆಶ್ಚರ್ಯ !

**ಅವತಾರಕ್ರಿಯಾಸ್ಯಾನ್ಯಾ ತತಃ ಸಂಪರಿವರ್ತತೇ ।**
**ಕೃತಾರ್ಹತ್ಪೂಜನಸ್ಯಾಂತೇ ಸ್ವರ್ಗಾದವತರಿಷ್ಯತಃ ॥ ೨೧೪ ॥**

೩೪ ಇತಿ ಇಂದ್ರತ್ಯಾಗಕ್ರಿಯಾ ॥ ಅನಂತರದಲ್ಲಿ ಕೊನೆಯಲ್ಲಿ ಸ್ವರ್ಗದಿಂದ ಅವತರಿಸುವವನೂ ಅರ್ಹತ್ಪರಮೇಶ್ವರನ ಪೂಜೆಯನ್ನು ಮಾಡಿದವನೂ ಆದ ಇವನಿಗೆ ಬೇರೊಂದು ಅವತಾರಕ್ರಿಯೆಯು ನಡೆಯುವುದು.

**ಸೋಯಂ ನೃಜನ್ಮಸಂಪ್ರಾಪ್ತ್ಯಾ [೭]ಸಿದ್ಧಿಂ ದ್ರಾಗಭಿಲಾಷುಕಃ ।**
**ಚೇತಃ ಸಿದ್ಧ[೮]ನಮಸ್ಯಾಯಾಂ [೯]ಸಮಾಧತ್ತೇ ಸುರಾಧಿರಾಟ್ ॥ ೨೧೫ ॥**

ಪ್ರಸಿದ್ಧನಾದ ಈ ದೇವೇಂದ್ರನು ಮನುಷ್ಯಜನ್ಮಪ್ರಾಪ್ತಿಯಿಂದ ಶೀಘ್ರವಾಗಿ ಮೋಕ್ಷವನ್ನು ಇಚ್ಛಿಸುವವನಾಗಿ ಸಿದ್ಧಪರಮೇಷ್ಠಿಗಳ ನಮಸ್ಕಾರದಲ್ಲಿ ಮನಸ್ಸನ್ನು ಸ್ಥಿರಪಡಿಸುತ್ತಾನೆ.

**ಶುಭೈಃ ಷೋಡಶಭಿಃ ಸ್ವಪ್ನೈಃ ಸ ಸೂಚಿತಮಹೋದಯಃ ।**
**ತದಾ ಸ್ವರ್ಗಾವತಾರಾಖ್ಯಾಂ ಕಲ್ಯಾಣೀ[೧೦]ಮಶ್ನುತೇ ಕ್ರಿಯಾಮ್ ॥**

ಮಂಗಲಕರಗಳಾದ ಹದಿನಾರು ಕನಸುಗಳಿಂದ ಸೂಚಿಸಲ್ಪಟ್ಟ ಶ್ರೇಷ್ಠವಾದ ಉತ್ಪತ್ತಿಯುಳ್ಳವನಾದ ಆ ದೇವೇಂದ್ರನು ಆಗ ಸ್ವರ್ಗಾವತಾರವೆಂದು ಹೆಸರುಳ್ಳುದೂ ಮಂಗಲಕರವೂ ಆದ ಕ್ರಿಯೆಯನ್ನು ಹೊಂದಿದನು.

**ತತೋವತೀರ್ಣೋ ಗರ್ಭೇಸೌ ರತ್ನಗರ್ಭಗೃಹೋಪಮೇ ।**
**[೧೧]ಜನಯಿತ್ರ್ಯಾ ಮಹಾದೇವ್ಯಾಃ [೧೨]ಶ್ರೀದೇವೀಭಿರ್ವಿಶೋಧಿತೇ ॥**

೩೫ ಇತಿ ಇಂದ್ರಾವತಾರಕ್ರಿಯಾ ॥ ಅನಂತರದಲ್ಲಿ ಈ ದೇವನು ಮಹಾದೇವಿಯಾದ ಜಿನಜನನಿಯ ಶ್ರೀ ಮೊದಲಾದ ದೇವಿಯರಿಂದ ಪರಿಶೋಧಿಸಲ್ಪಟ್ಟುದೂ ರತ್ನಮಯವಾದ ಗರ್ಭಗೃಹಕ್ಕೆ ಸಮಾನವೂ ಆದ ಗರ್ಭದಲ್ಲಿ ಅವತರಿಸುತ್ತಾನೆ.

೧ ಸ್ವರ್ಗಲೋಕಸಾಮ್ರಾಜ್ಯಂ. ೨ ಭವಿಷ್ಯತಿ. ೩ ವಿರಾಗತಾಂ. ೪ ಉಪದಿಶ್ಯ. ೫ ನ ಗಚ್ಛತಿ. ೬ ಪ್ರಭುತ್ವಂ. ೭ ಮೋಕ್ಷಂ. ೮ ನಮಸ್ಕಾರೇ. ೯ ಸಮಾಹಿತಂ ಕುರುತೇ. ೧೦ ಗಚ್ಛತಿ. ೧೧ ಜಿನಜನನ್ಯಾಃ. ೧೨ ಶ್ರೀಹ್ರೀಧೃತ್ಯಾದಿಭಿಃ.

**ಹಿರಣ್ಯವೃಷ್ಟಿಂ ಧನದೇ ಪ್ರಾಕ್ ಷಣ್ಮಾಸಾತ್ಪ್ರವರ್ಷತಿ ।**
**[೧]ಅನ್ವಾಯಾಂತ್ಯಾಮಿವಾನಂದಾತ್ಸ್ವರ್ಗಸಂಪದಿ ಭೂತಲಮ್ ॥ ೨೧೮ ॥**

ಸಂತೋಷದಿಂದ ಸ್ವರ್ಗದ ಸಂಪತ್ತಿಯು ಭೂತಲಕ್ಕೆ ಹಿಂಬಾಲಿಸಿ ಬರುತ್ತಿದೆಯೋ ಎಂಬಂತೆ ಆರು ತಿಂಗಳಿಗೆ ಮೊದಲು ಕುಬೇರನು ಸುವರ್ಣವೃಷ್ಟಿಯನ್ನು ವರ್ಷಿಸುತ್ತಿರಲು

**[೨]ಅಮೃತಶ್ವಸನೇ ಮಂದಮಾವಾತಿ ವ್ಯಾಪ್ತಸೌರಭೇ ।**
**ಭೂದೇವ್ಯಾ ಇವ ನಿಃಶ್ವಾಸೇ ಪ್ರಕ್ಲಪ್ತೇ [೩]ಪವನಾಮರೈಃ ॥ ೨೧೯ ॥**

ವಾಯುಕುಮಾರರಿಂದ ನಿರ್ಮಿಸಲ್ಪಟ್ಟುದೂ ವ್ಯಾಪ್ತವಾದ ಪರಿಮಳವುಳ್ಳುದೂ ಆದ ಭೂದೇವಿಯ ಉಸಿರೋ ಎಂಬಂತೆ ಅಮೃತದಂತೆ ಆಹ್ಲಾದಕರವಾದ ಗಾಳಿಯು ಮಂದವಾಗಿ ಬೀಸುತ್ತಿರಲು

**ದುಂದುಭಿಧ್ವನಿತೇ ಮಂದ್ರಮುತ್ಥಿತೇ ಪಥಿ ವಾರ್ಮುಚಾಮ್ ।**
**ಅಕಾಲಸ್ತನಿತಾಶಂಕಾಮಾತನ್ವತಿ ಶಿಖಂಡಿನಾಮ್ ॥ ೨೨೦ ॥**

ನವಿಲುಗಳಿಗೆ ಅಕಾಲಮೇಘಧ್ವನಿಯ ಸಂದೇಹವನ್ನುಂಟುಮಾಡುವ ಭೇರೀನಾದವು ಮೇಘಗಳ ಮಾರ್ಗದಲ್ಲಿ ಗಂಭೀರವಾಗಿ ಉಂಟಾಗುತ್ತಿರಲು

**ಮಂದಾರಸ್ರಜಮಮ್ಲಾನಿಮಾಮೋದಾಹೃತಷಟ್ಪದಾಮ್ ।**
**ಮುಂಚತ್ಸು [೪]ಗುಹ್ಯಕಾಖ್ಯೇಷು ನಿಕಾಯೇಷ್ವಮೃತಾಶಿನಾಮ್ ॥ ೨೨೧ ॥**

ಗುಹ್ಯಕರೆಂಬ ದೇವತೆಗಳ ಸಮೂಹಗಳು ಪರಿಮಳದಿಂದ ಆಕರ್ಷಿಸಲ್ಪಟ್ಟ ಭ್ರಮರಗಳುಳ್ಳುದೂ ಬಾಡದಿರುವುದೂ ಆದ ಪಾರಿಜಾತಪುಷ್ಪಮಾಲೆಯನ್ನು ಬಿಡುತ್ತಿರಲು

**ದೇವೀಷೂಪಚರಂತೀಷು ದೇವೀಂ ಭುವನಮಾತರಮ್ ।**
**ಲಕ್ಷ್ಮ್ಯಾ ಸಮಂ ಸಮಾಗತ್ಯ ಶ್ರೀಹ್ರೀಧೀಧೃತಿಕೀರ್ತಿಷು ॥ ೨೨೨ ॥**

ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮೀದೇವಿಯರು ಬಂದು ಲೋಕಮಾತೆಯಾದ ದೇವಿಯನ್ನು (ಜಿನಜನನಿಯನ್ನು) ಉಪಚರಿಸುತ್ತಿರಲು

**ಕಸ್ಮಿಂಶ್ಚಿ[೫]ತ್ಸುಕೃತಾವಾಸೇ ಪುಣ್ಯೇ ರಾಜರ್ಷಿಮಂದಿರೇ ।**
**ಹಿರಣ್ಯಗರ್ಭೋ ಧತ್ತೇಸೌ [೬]ಹಿರಣ್ಯೋತ್ಕೃಷ್ಟಜನ್ಮತಾಮ್ ॥ ೨೨೩ ॥**

ಪುಣ್ಯಸ್ಥಾನವುಳ್ಳುದೂ ಪುಣ್ಯಕರವೂ ಆದ ಒಂದಾನೊಂದು ರಾಜರ್ಷಿಭವನದಲ್ಲಿ ಈ ಹಿರಣ್ಯಗರ್ಭನು (ತೀರ್ಥಂಕರನು) ಹಿರಣ್ಯೋತ್ಕೃಷ್ಟ ಜನ್ಮಕ್ರಿಯೆಯನ್ನು ಪಡೆಯುತ್ತಾನೆ.

**ಹಿರಣ್ಯಸೂಚಿತೋತ್ಕೃಷ್ಟಜನ್ಮತ್ವಾತ್ಸ ತಥಾ[೭]ಶ್ರುತಿಮ್ ।**
**ಬಿಭ್ರಾಣಾಂ ತಾಂ ಕ್ರಿಯಾಂ ಧತ್ತೇ ಗರ್ಭಸ್ಥೋಪಿ [೮]ತ್ರಿಬೋಧಭೃತ್ ॥**

ಮಾತೃಗರ್ಭದಲ್ಲಿರುವಾಗಲೇ ಮತಿಶ್ರುತಾವಧಿಗಳೆಂಬ ಮೂರು ಜ್ಞಾನಗಳನ್ನು ಧರಿಸಿದವನಾದ ಆ ಸ್ವಾಮಿಯು ಸುವರ್ಣವೃಷ್ಟಿಯಿಂದ ಸೂಚಿತವಾದ ಉತ್ಕೃಷ್ಟಜನ್ಮವುಳ್ಳವನಾದುದರಿಂದ ಹಾಗೆ ಹೆಸರನ್ನು ಪಡೆದಿರುವ ಆ ಕ್ರಿಯೆಯನ್ನು ಹೊಂದುತ್ತಾನೆ.

**[೯]ವಿಶ್ವೇಶ್ವರಾ ಜಗನ್ಮಾತಾ ಮಹಾದೇವೀ ಮಹಾಸತೀ ।**
**ಪೂಜ್ಯಾ ಸುಮಂಗಲಾ ಚೇತಿ ಧತ್ತೇ ರೂಢಿಂ ಜಿನಾಂಬಿಕಾ ॥ ೨೨೫ ॥**

೩೬ ಇತಿ ಹಿರಣ್ಯೋತ್ಕೃಷ್ಟಜನ್ಮತಾಕ್ರಿಯಾ ॥ ಜಿನಜನನಿಯು ವಿಶ್ವೇಶ್ವರಾ, ಜಗನ್ಮಾತಾ, ಮಹಾದೇವೀ, ಮಹಾಸತೀ, ಪೂಜ್ಯಾ, ಸುಮಂಗಲಾ ಎಂಬುದಾಗಿ

೧ ಸಹಾಗಚ್ಛಂತ್ಯಾಂ. ೨ ಅಮೃತವದಾಹ್ಲಾದಕರಮಾರುತೇ. ೩ ವಾಯುಕುಮಾರೈಃ. ೪ ದೇವಭೇದೇಷು. ೫ ಪುಣ್ಯಸ್ಥಾನೇ. ೬ ಹಿರಣ್ಯೋತ್ಕೃಷ್ಟಜನ್ಮಕ್ರಿಯಾಂ. ೭ ಹಿರಣ್ಯೋತ್ಕೃಷ್ಟ ಜನ್ಮತಾಭಿಧಾನಂ. ೮ ತ್ರಿಜ್ಞಾನಧಾರೀ. ೯ ವಿಶ್ವೇಶ್ವರೋ ಯಸ್ಯಾಂ ಸಾ.

ರೂಢಿಯನ್ನು ಹೊಂದುತ್ತಾಳೆ. ರೂಢಿಯಲ್ಲಿ ಜಿನಮಾತೆಯು ಈ ಹೆಸರುಗಳಿಂದ ಕರೆಯಲ್ಪಡುತ್ತಾಳೆಂದು ಭಾವವು.

**ಕುಲಾದ್ರಿನಿಲಯಾ ದೇವ್ಯಃ ಶ್ರೀಹ್ರೀಧೀಧೃತಿಕೀರ್ತಯಃ ।**
**ಸಮಂ ಲಕ್ಷ್ಮ್ಯಾ ಷಡೇತಾಶ್ಚ ಸಮ್ಮತಾ ಜಿನಮಾತೃಕಾಃ ॥ ೨೨೬ ॥**

ಕುಲಪರ್ವತಗಳಲ್ಲಿ ವಾಸಮಾಡುವವರಾದ ಶ್ರೀ ಹ್ರೀ ಧೀ (ಬುದ್ಧಿ) ಧೃತಿ ಕೀರ್ತಿ ಲಕ್ಷ್ಮಿಯರೆಂಬ ಈ ಆರುಮಂದಿ ದೇವಿಯರು ಜಿನಮಾತೃಕೆಯರೆಂದು ಹೇಳಲ್ಪಟ್ಟಿರುತ್ತಾರೆ.

**ಜನ್ಮಾನಂತರಮಾಯಾತೈಃ ಸುರೇಂದ್ರೈರ್ಮೇರುಮೂರ್ಧನಿ ।**
**ಯೋಭಿಷೇಕವಿಧಿಃ ಕ್ಷೀರಪಯೋಧೇಃ ಶುಚಿಭಿರ್ಜಲೈಃ ॥ ೨೨೭ ॥**

**ಮಂದರೇಂದ್ರಾಭಿಷೇಕೋಸೌ ಕ್ರಿಯಾ[1]ಸ್ಯ ಪರಮೇಷ್ಠಿನಃ ।**
**ಸಾ ಪುನಃ ಸುಪ್ರತೀತತ್ವಾದ್ಭೂಯೋ ನೇಹ ಪ್ರತನ್ಯತೇ ॥ ೨೨೮ ॥**

ಜಿನಬಾಲಕನು ಹುಟ್ಟಿದನಂತರ ಬಂದ ದೇವೇಂದ್ರರು ಮೇರುಪರ್ವತದ ಮಸ್ತಕದಲ್ಲಿ ಕ್ಷೀರಸಮುದ್ರದ ನಿರ್ಮಲವಾದ ಜಲಗಳಿಂದ ಯಾವ ಅಭಿಷೇಕವನ್ನು ಮಾಡಿದರೋ ಇದು ಈ ತೀರ್ಥಂಕರ ಪರಮೇಷ್ಠಿಯ ಮಂದರಾಭಿಷೇಕ ಕ್ರಿಯೆಯೆನಿಸುವುದು. ಆ ಕ್ರಿಯೆಯಾದರೋ ಪ್ರಸಿದ್ಧವಾಗಿರುವುದರಿಂದ ಪುನಃ ಇಲ್ಲಿ ವಿಸ್ತರಿಸಲ್ಪಡುವುದಿಲ್ಲ.

**ತತೋ ವಿದ್ಯೋಪದೇಶಸ್ಯ ಸ್ವತಂತ್ರಸ್ಯ ಸ್ವಯಂಭುವಃ ।**
**[2]ಶಿಷ್ಯಭಾವವ್ಯತಿಕ್ರಾಂತಿ[3]ರ್ಗುರುಪೂಜೋಪಲಂಭನಮ್ ॥ ೨೨೯ ॥**

೩೭ ಇತಿ ಮಂದರೇಂದ್ರಾಭಿಷೇಕಕ್ರಿಯಾ ॥ ಅನಂತರದಲ್ಲಿ ಸ್ವತಂತ್ರನೂ ಸ್ವಯಂಭುವೂ ಆದ ಈ ಪರಮೇಷ್ಠಿಯ ವಿದ್ಯೋಪದೇಶದಲ್ಲಿ ಶಿಷ್ಯಭಾವವಿಲ್ಲವು. ಗುರುಪೂಜಾಪ್ರಾಪ್ತಿಯಿದೆ. ತನಗೆ ತಾನೇ ಗುರುವಾಗಿರುವುದರಿಂದ ಶಿಷ್ಯಭಾವವಿಲ್ಲವೆಂದೂ ತಾನು ಲೋಕಕ್ಕೆ ಗುರುವಾಗಿರುವುದರಿಂದ ಗುರುಪೂಜಾಪ್ರಾಪ್ತಿಯಿದೆಯೆಂದೂ ಭಾವವು.

**ತದೇಂದ್ರಾಃ ಪೂಜಯಂತ್ಯೇನಂ ತ್ರಾತಾರಂ ತ್ರಿಜಗದ್ಗುರುಮ್ ।**
**ಅಶಿಕ್ಷಿತೋಪಿ ದೇವ ತ್ವಂ ಸಮ್ಮತೋಸ್ಮೀತಿ ವಿಸ್ಮಿತಾಃ ॥ ೨೩೦ ॥**

"ಎಲೈ ಸ್ವಾಮಿಯೆ! ನೀನು ಅಶಿಕ್ಷಿತನಾಗಿದ್ದರೂ ಸಮ್ಮತನಾಗಿರುತ್ತೀಯೆ" ಎಂದು ಆಶ್ಚರ್ಯವುಳ್ಳವರಾದ ದೇವೇಂದ್ರರು ಆಗ ರಕ್ಷಕನೂ ತ್ರಿಲೋಕಕ್ಕೆ ಗುರುವೂ ಆದ ಈ ಸ್ವಾಮಿಯನ್ನು ಪೂಜಿಸುತ್ತಾರೆ.

**ತತಃ ಕುಮಾರಕಾಲೇಸ್ಯ ಯೌವರಾಜ್ಯೋಪಲಂಭನಮ್ ।**
**ಪಟ್ಟಬಂಧೋಭಿಷೇಕಶ್ಚ ತದಾಸ್ಯ ಸ್ಯಾನ್ಮಹೌಜಸಃ ॥ ೨೩೧ ॥**

೩೮ ಇತಿ ಗುರುಪೂಜೋಪಲಂಭನಕ್ರಿಯಾ ॥ ಅನಂತರದಲ್ಲಿ ಈ ಸ್ವಾಮಿಯ ಕುಮಾರಕಾಲದಲ್ಲಿ ಯುವರಾಜಪದಪ್ರಾಪ್ತಿಯೂ ಮಹಾತೇಜಸ್ವಿಯಾದ ಇವನಿಗೆ ಆಗ ಪಟ್ಟಬಂಧವೂ ಅಭಿಷೇಕವೂ ಆಗುವುವು.

**ಸ್ವರಾಜ್ಯಮಾಧಿರಾಜ್ಯೇಭಿಷಿಕ್ತಸ್ಯಾಸ್ಯ ಕ್ಷಿತೀಶ್ವರೈಃ ।**
**ಶಾಸತಃ ಸಾರ್ಣವಾಮೇನಾಂ ಕ್ಷಿತಿಮಪ್ರತಿಶಾಸನಾಮ್ ॥ ೨೩೨ ॥**

೩೯ ಇತಿ ಯೌವರಾಜ್ಯಕ್ರಿಯಾ ॥ ರಾಜರುಗಳಿಂದ ಯುವರಾಜಪದವಿಯಲ್ಲಿ ಅಭಿಷೇಕಮಾಡಲ್ಪಟ್ಟವನೂ ಬೇರೆಯವರ ಆಜ್ಞೆಕೆಯಿಲ್ಲದುದೂ ಸಮುದ್ರಸಹಿತವೂ ಆದ ಈ ಭೂಮಿಯನ್ನು ಆಳುವವನೂ ಆದ ಈ ಸ್ವಾಮಿಗೆ ಸ್ವರಾಜ್ಯವೆಂಬ ಕ್ರಿಯೆಯಾಗುವುದು.

೧ ಪಂಚಕಲ್ಯಾಣಾರ್ಹಸ್ಯ. ೨ ಶಿಷ್ಯತ್ವಾಭಾವಃ. ೩ ಗುರುಪೂಜಾಪ್ರಾಪ್ತಿಃ, ಸ್ವಸ್ಯ ಸ್ವಯಮೇವಗುರುರಿತಿ ಭಾವಃ.

**ಚಕ್ರಲಾಭೋ ಭವೇದಸ್ಯ [1]ನಿಧಿರತ್ನಸಮುದ್ಭವೇ ।**
**[2]ನಿಜಪ್ರಕೃತಿಭಿಃ ಪೂಜಾ ಸಾಭಿಷೇಕಾಧಿರಾಡಿತಿ ॥ ೨೩೩ ॥**

೪೦ ಇತಿ ಸ್ವರಾಜ್ಯಕ್ರಿಯಾ ॥ ಈ ಸ್ವಾಮಿಗೆ ನವನಿಧಿಗಳ ಮತ್ತು ಹದಿನಾಲ್ಕು ರತ್ನಗಳ ಉತ್ಪತ್ತಿಯಾಗುತ್ತಿರಲು ತನ್ನ ಪ್ರಜಾಪರಿವಾರಜನರಿಂದ ಯುವರಾಜನೆಂದು ಅಭಿಷೇಕಸಹಿತವಾದ ಪೂಜೆಯೂ ಚಕ್ರರತ್ನದ ಪ್ರಾಪ್ತಿಯೂ ಆಗುವುವು.

**ದಿಶಾಂ ಜಯಃ ಸ ವಿಜ್ಞೇಯೋ ಯೋಸ್ಯ ದಿಗ್ವಿಜಯೋದ್ಯಮಃ ।**
**ಚಕ್ರರತ್ನಂ ಪುರಸ್ಕೃತ್ಯ ಜಯತಃ ಸಾರ್ಣವಾಂ ಮಹೀಮ್ ॥ ೨೩೪ ॥**

೪೧ ಇತಿ ಚಕ್ರಲಾಭಕ್ರಿಯಾ ॥ ಚಕ್ರರತ್ನವನ್ನು ಮುಂದೆಮಾಡಿಕೊಂಡು ಸಮುದ್ರಸಹಿತವಾದ ಭೂಮಿಯನ್ನು ಜಯಿಸುವವನಾದ ಈ ಸ್ವಾಮಿಯ ದಿಗ್ವಿಜಯೋದ್ಯೋಗವು ಯಾವುದಿದೆಯೋ ಅದು ದಿಗ್ವಿಜಯವೆಂದು ತಿಳಿಯತಕ್ಕುದು.

**ಸಿದ್ಧದಿಗ್ವಿಜಯಸ್ಯಾಸ್ಯ ಸ್ವಪುರಾನುಪ್ರವೇಶನೇ ।**
**ಕ್ರಿಯಾ ಚಕ್ರಾಭಿಷೇಕಾಹ್ವಾ ಸಾಧುನಾ ಸಂಪ್ರಕೀರ್ತ್ಯತೇ ॥ ೨೩೫ ॥**

೪೨ ಇತಿ ದಿಗ್ವಿಜಯಕ್ರಿಯಾ ॥ ದಿಗ್ವಿಜಯವನ್ನು ಸಾಧಿಸಿದವನಾದ ಈ ಸ್ವಾಮಿಗೆ ತನ್ನ ಪುರಪ್ರವೇಶದಲ್ಲಿ ಚಕ್ರಾಭಿಷೇಕವೆಂಬ ಯಾವ ಕ್ರಿಯೆಯು ಮಾಡಲ್ಪಡುವುದೋ ಅದು ಈಗ ಹೇಳಲ್ಪಡುತ್ತದೆ. ಪುರಪ್ರವೇಶಕಾಲದಲ್ಲಿ ಮಾಡಲ್ಪಡುವ ಚಕ್ರಾಭಿಷೇಕಕ್ರಿಯೆಯನ್ನು ಈಗ ಹೇಳುತ್ತೇನೆಂದು ಭಾವವು.

**ಚಕ್ರರತ್ನಂ ಪುರೋಧಾಯ ಪ್ರವಿಷ್ಟಃ ಸ್ವಂ ನಿಕೇತನಮ್ ।**
**ಪರಾರ್ಧ್ಯವಿಭವೋಪೇತಂ ಸ್ವರ್ವಿಮಾನಾಪಹಾಸಿ ಯತ್ ॥ ೨೩೬ ॥**

ಚಕ್ರರತ್ನವನ್ನು ಮುಂದೆಮಾಡಿಕೊಂಡು ಉತ್ಕೃಷ್ಟವಾದ ಸಂಪತ್ತಿಯಿಂದ ಕೂಡಿರುವುದೂ ಸ್ವರ್ಗದ ವಿಮಾನಗಳನ್ನು ಪರಿಹಾಸ್ಯಮಾಡುವುದೂ ಆದ ತನ್ನ ಗೃಹವನ್ನು ಪ್ರವೇಶಿಸಿದನು.

**ತತ್ರ [3]ಕ್ಷಣಮಿವಾಸೀನೋ ರಮ್ಯೇ [4]ಪ್ರಮದಮಂಡಪೇ ।**
**ಚಾಮರೈರ್ವೀಜ್ಯಮಾನೋಯಂ ಸನಿರ್ಝರ ಇವಾದ್ರಿರಾಟ್ ॥ ೨೩೭ ॥**

ಅಲ್ಲಿ ರಮಣೀಯವಾದ ಆನಂದಮಂಡಪದಲ್ಲಿ ಕ್ಷಣಕಾಲದವರೆಗೇ ಕುಳಿತುಕೊಂಡವನೂ ಚಾಮರಗಳಿಂದ ಬೀಸಲ್ಪಟ್ಟವನೂ ಆದ ಈ ಚಕ್ರವರ್ತಿಯು ಗಿರಿನದಿಯೊಡನೆ ಕೂಡಿರುವ ಮೇರುಪರ್ವತದಂತೆ, ಶೋಭಿಸುತ್ತಾನೆ.

**ಸಂಪೂಜ್ಯ ನಿಧಿರತ್ನಾನಿ [5]ಕೃತಚಕ್ರಮಹೋತ್ಸವಃ ।**
**ದತ್ವಾ ಕಿಮಿಚ್ಛಕಂ ದಾನಂ ಮಾನ್ಯಾ[6]ನ್ಸಮ್ಮಾನ್ಯ ಪಾರ್ಥಿವಾನ್ ॥ ೨೩೮ ॥**

**ತತೋಭಿಷೇಕಮಾಪ್ನೋತಿ ಪಾರ್ಥಿವೈರ್ಮಹಿತಾನ್ವಯೈಃ ।**
**ನಾಂದೀತೂರ್ಯೇಷು ಗಂಭೀರಂ ಪ್ರಧ್ವನತ್ಸು ಸಹಸ್ರಶಃ ॥ ೨೩೯ ॥**

ಚಕ್ರರತ್ನದ ಪೂಜೆಯನ್ನು ಮಾಡಿದವನಾಗಿ ನವನಿಧಿಗಳನ್ನೂ ಚತುರ್ದಶರತ್ನಗಳನ್ನೂ ಪೂಜಿಸಿ, "ಏನನ್ನು ಇಚ್ಛಿಸುತ್ತೀರಿ" ಎಂಬ ಪ್ರಶ್ನೆಪೂರ್ವಕವಾದ ದಾನವನ್ನು ಕೊಟ್ಟು ಪೂಜಿಸುವುದಕ್ಕೆ ಯೋಗ್ಯರಾದ ರಾಜರುಗಳನ್ನು ಪೂಜಿಸಿ, ಆಮೇಲೆ ಅನೇಕವಾದ ಮಂಗಲವಾದ್ಯಗಳು ಗಂಭೀರವಾಗಿ ಮೊಳಗುತ್ತಿರಲು ಶ್ರೇಷ್ಠವಾದ ವಂಶವುಳ್ಳವರಾದ ರಾಜರುಗಳಿಂದ ಅಭಿಷೇಕವನ್ನು ಹೊಂದುತ್ತಾನೆ.

**ಯಥಾವದಭಿಷಿಕ್ತಸ್ಯ ತಿರೀಟಾರೋಪಣಂ ತತಃ ।**
**ಕ್ರಿಯತೇ ಪಾರ್ಥಿವೈರ್ಮುಖ್ಯೈಶ್ಚತುರ್ಭಿಃ ಪ್ರಥಿತಾನ್ವಯೈಃ ॥ ೨೪೦ ॥**

೧ ನವನಿಧಿಚತುರ್ದಶರತ್ನಾನಾಂ ಸಂಭವೇ ಸತಿ. ೨ ಆತ್ಮೀಯಪ್ರಜಾಪರಿವಾರೈಃ. ೩ ಕ್ಷಣ ಪರ್ಯಂತಮೇವ. ೪ ಆನಂದಮಂಡಪೇ. ೫ ವಿಹಿತಚಕ್ರಪೂಜನಃ. ೬ ಸಂಪೂಜ್ಯ.

ವಿಧಿಪ್ರಕಾರವಾಗಿ ಅಭಿಷೇಕಮಾಡಲ್ಪಟ್ಟವನಾದ ಈ ಚಕ್ರವರ್ತಿಗೆ ಬಳಿಕ ಪ್ರಸಿದ್ಧವಾದ ವಂಶವುಳ್ಳವರೂ ಮುಖ್ಯರೂ ಆದ ನಾಲ್ಕುಮಂದಿ ದೊರೆಗಳಿಂದ ಕಿರೀಟಾರೋಪಣವು ಮಾಡಲ್ಪಡುತ್ತದೆ.

**ಮಹಾಭಿಷೇಕಸಾಮಗ್ರ್ಯಾ ಕೃತಚಕ್ರಾಭಿಷೇಚನಃ ।**
**ಧೃತಮಂಗಲ[1]ನೇಪಥ್ಯಃ ಪಾರ್ಥಿವೈಃ ಪ್ರಣತೋಽಭಿತಃ ॥ ೨೪೧ ॥**

ಮಹಾಭಿಷೇಕಸಾಮಗ್ರಿಯಿಂದ ಚಕ್ರರತ್ನಕ್ಕೆ ಅಭಿಷೇಕವನ್ನು ಮಾಡಿದವನೂ ಮಂಗಲಾಲಂಕಾರಗಳನ್ನು ಧರಿಸಿದವನೂ ಸುತ್ತಲೂ ರಾಜರುಗಳಿಂದ ನಮಸ್ಕರಿಸಲ್ಪಟ್ಟವನೂ

**ತಿರೀಟಂ ಸ್ಫುಟರತ್ನಾಂಶು[2]ಜಟಿಲೀಕೃತದಿಙ್ಮುಖಮ್ ।**
**ದಧಾನಶ್ಚಕ್ರಸಾಮ್ರಾಜ್ಯ[3]ಕಕುದಂ ನೃಪಪುಂಗವಃ ॥ ೨೪೨ ॥**

ಸ್ಫುಟವಾದ ರತ್ನಗಳ ಕಿರಣಗಳಿಂದ ವ್ಯಾಪ್ತವಾದ ದಿಙ್ಮುಖಗಳುಳ್ಳುದೂ ಚಕ್ರವರ್ತಿಯ ಸಾಮ್ರಾಜ್ಯಕ್ಕೆ ಗುರುತೂ ಆದ ಕಿರೀಟವನ್ನು ಧರಿಸಿದವನಾದ ರಾಜಶ್ರೇಷ್ಠನೂ

**ರತ್ನಾಂಶು[4]ಚ್ಛುರಿತಂ ಬಿಭ್ರತ್ಕರ್ಣಾಭ್ಯಾಂ ಕುಂಡಲದ್ವಯಮ್ ।**
**ಯದ್ವಾಗ್ದೇವ್ಯಾಃ ಸಮಾ[5]ಕ್ರೀಡಾರಥಚಕ್ರದ್ವಯಾಯಿತಮ್ ॥ ೨೪೩ ॥**

ಶಾರದಾದೇವಿಯ ಕ್ರೀಡಾನಿಮಿತ್ತವಾದ ರಥದ ಎರಡು ಚಕ್ರಗಳಂತೆ ಆಚರಿಸಲ್ಪಟ್ಟುದೂ ರತ್ನಗಳ ಕಿರಣಗಳಲ್ಲಿ ಮಿಶ್ರವೂ ಆದ ಎರಡು ಕುಂಡಲಗಳನ್ನು ಕಿವಿಗಳಲ್ಲಿ ಧರಿಸಿದವನೂ

**[6]ತಾರಾಲಿತರಲಸ್ಥೂಲಮುಕ್ತಾಫಲಮುರೋಗೃಹೇ ।**
**ಧಾರಯನ್ ಹಾರಮಾಬದ್ಧಮಿವ ಮಂಗಲತೋರಣಮ್ ॥ ೨೪೪ ॥**

ಎದೆಯೆಂಬ ಮನೆಯಲ್ಲಿ ನಕ್ಷತ್ರ ಸಮೂಹದಂತೆ ಚಂಚಲವೂ ಸ್ಥೂಲವೂ ಆದ ಮುತ್ತುಗಳುಳ್ಳ ಹಾರವನ್ನು ಮಂಗಲಕರವಾಗಿ ಕಟ್ಟಿರುವ ತೋರಣವನ್ನೋ ಪಾದಿಯಲ್ಲಿ ಧರಿಸಿದವನೂ

**ವಿಲಸದ್ಬ್ರಹ್ಮಸೂತ್ರೇಣ ಪ್ರವಿಭಕ್ತತನೂನ್ನತಿಃ ।**
**ತಟನಿರ್ಝರಸಂಪಾತರಮ್ಯಮೂರ್ತಿರಿವಾದ್ರಿಪಃ ॥ ೨೪೫ ॥**

ಪ್ರಕಾಶಮಾನವಾದ ಬ್ರಹ್ಮಸೂತ್ರದಿಂದ ವಿಭಾಗಮಾಡಲ್ಪಟ್ಟ ಉನ್ನತವಾದ ಶರೀರವುಳ್ಳವನೂ ತಪ್ಪಲಿನ ಗಿರಿನದಿಯ ಬೀಳುವಿಕೆಯಿಂದ ರಮಣೀಯವಾದ ಆಕಾರವುಳ್ಳ ಮೇರುಪರ್ವತದಂತಿರುವವನೂ

**[7]ಸದ್ರತ್ನಕಟಕಂ ಪ್ರೋಚ್ಚೈಃ [8]ಶಿಖರಂ ಭುಜಯೋರ್ಯುಗಮ್ ।**
**[9]ದ್ರಾಘಿಮಶ್ಲಾಘಿ ಬಿಭ್ರಾಣಃ ಕುಲಕ್ಷ್ಮಾಧ್ರದ್ವಯಾಯಿತಮ್ ॥ ೨೪೬ ॥**

ಉದ್ದವಾಗಿರುವಿಕೆಯಿಂದ ಶ್ಲಾಘ್ಯವೂ ಎರಡು ಕುಲಪರ್ವತಗಳಂತಿರುವುವೂ ಶ್ರೇಷ್ಠವಾದ ರತ್ನಗಳ ಕಡಗಗಳುಳ್ಳುವೂ ಎತ್ತರವಾದ ಭುಜಶಿಖರಗಳುಳ್ಳುವೂ ಆದ ಎರಡು ಭುಜಗಳನ್ನು ಧರಿಸಿರುವವನೂ

**ಕಟಮಂಡಲಸಂಸಕ್ತಲಸತ್ಕಾಂಚೀಪರಿಚ್ಛದಃ ।**
**ಮಹಾದ್ವೀಪ ಇವೋಪಾಂತರತ್ನವೇದೀ[10]ಪರಿಷ್ಕೃತಃ ॥ ೨೪೭ ॥**

ಸಮೀಪದಲ್ಲಿ ರತ್ನಮಯವಾದ ಜಗತಿಯಿಂದ ಪರಿವೇಷ್ಟಿತವಾದ ಮಹಾದ್ವೀಪದೋಪಾದಿಯಲ್ಲಿ ದುಂಡಾದ ಸೊಂಟದಲ್ಲಿ ಸಂಬಂಧಿಸಿರುವುದೂ ಪ್ರಕಾಶಮಾನವೂ ಆದ ಉಡಿದಾರವನ್ನು ಸುತ್ತಿಕೊಂಡಿರುವವನೂ

೧ ಅಲಂಕಾರಃ. ೨ ವ್ಯಾಪ್ತ. ೩ ಚಿಹ್ನಂ. ೪ ಮಿಶ್ರಿತಂ. ೫ ಕ್ರೀಡಾನಿಮಿತ್ತಸ್ಯಂದನ. ೬ ನಕ್ಷತ್ರಸಮೂಹಃ. ೭ ಸರತ್ನಕಮಿತ್ಯಪಿ ಪಾಠಃ. ೮ ಉನ್ನತಭುಜಶಿಖರಂ. ೯ ದೈರ್ಘ್ಯೇಣ ಶ್ಲಾಘಿ. ೧೦ ಪರಿವೇಷ್ಟಿತಃ.

**ಮಂದಾರಕುಸುಮಾಮೋದಲಗ್ನಾಲಿಕುಲಝುಂಕೃತೈಃ ।**
**[1]ಕಿಮಪ್ಯಾರಬ್ಧಸಂಗೀತಮಿವ ಶೇಖರಮುದ್ವಹನ್ ॥ ೨೪೮ ॥**

ಮಂದಾರಪುಷ್ಪಗಳ ಪರಿಮಳದಲ್ಲಿ ಆಸಕ್ತವಾದ ದುಂಬಿಗಳ ಸಮೂಹದ ಝೇಂಕಾರಗಳಿಂದ ಸ್ವಲ್ಪ ಸಂಗೀತವನ್ನು ಆರಂಭಿಸಿದೆಯೋ ಎಂಬಂತಿರುವ ಕಿರೀಟವನ್ನು ಧರಿಸಿದವನೂ

**ತತ್ಕಾಲೋಚಿತಮನ್ಯಚ್ಚ ದಧನ್ಮಂಗಲಭೂಷಣಮ್ ।**
**ಸ ತದಾಲಕ್ಷ್ಯತೇ ಸಾಕ್ಷಾಲ್ಲಕ್ಷ್ಮ್ಯಾಃ ಪುಂಜ ಇವೋಚ್ಛಿಖಃ ॥ ೨೪೯ ॥**

ಆ ಕಾಲಕ್ಕೆ ಯೋಗ್ಯವಾದ ಬೇರೆ ಮಂಗಲಾಲಂಕಾರವನ್ನೂ ಧರಿಸಿದವನೂ ಆದ ಆ ಚಕ್ರೇಶ್ವರನು ಆಗ, ಲಕ್ಷ್ಮಿಯ–ಶೋಭೆಯ ಎತ್ತರವಾದ ತುದಿಯುಳ್ಳ ಸಮೂಹದಂತೆ ಸಾಕ್ಷಾತ್ತಾಗಿ ಕಾಣಲ್ಪಡುತ್ತಾನೆ.

**ಪ್ರೀತಾಶ್ಚಾಭಿಷ್ಟುವಂತ್ಯೇನಂ ತದಾಮೀ ನೃಪಸತ್ತಮಾಃ ।**
**ವಿಶ್ವಂಜಯೋ ದಿಶಾಂ ಜೇತಾ ದಿವ್ಯಮೂರ್ತಿರ್ಭವಾನಿತಿ ॥ ೨೫೦ ॥**

ಆಗ ಸಂತುಷ್ಟರಾದ ಈ ರಾಜರುಗಳು "ನೀನು ಸಮಸ್ತವನ್ನು ಜಯಿಸಿದವನು, ದಿಕ್ಕುಗಳನ್ನು ಜಯಿಸಿದವನು, ದಿವ್ಯವಾದ ಆಕಾರವುಳ್ಳವನು" ಎಂಬುದಾಗಿ ಈ ಚಕ್ರವರ್ತಿಯನ್ನು ಹೊಗಳುತ್ತಾರೆ.

**ಪೌರಾಃ [2]ಪ್ರಕೃತಿಮುಖ್ಯಾಶ್ಚ ಕೃತಪಾದಾಭಿಷೇಚನಾಃ ।**
**[3]ತತ್ಪ್ರಮಾರ್ಚನಮಾದಾಯ ಕುರ್ವಂತಿ ಸ್ವಶಿರೋಧೃತಮ್ ॥ ೨೫೧ ॥**

ಪಾದಾಭಿಷೇಕವನ್ನು ಮಾಡಿದವರಾದ ಪುರನಿವಾಸಿಗಳೂ ಪ್ರಮುಖಪ್ರಜೆಗಳೂ ಅವನ ಪಾದಪೂಜೆಯ ಶೇಷೆಯನ್ನು ತೆಗೆದುಕೊಂಡು ತಮ್ಮ ಶಿರೋಧಾರಣವನ್ನಾಗಿ ಮಾಡುತ್ತಾರೆ.

**ಶ್ರೀದೇವ್ಯಶ್ಚ [4]ಸರಿದ್ದೇವ್ಯೋ ದೇವ್ಯೋ ವಿಶ್ವೇಶ್ವರಾ ಅಪಿ ।**
**ಸಮುಪೇತ್ಯ ನಿಯೋಗ್ಯೈಃ ಸ್ವೈಸ್ತದೇನಂ ಪರ್ಯುಪಾಸತೇ ॥ ೨೫೨ ॥**

ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮೀದೇವಿಯರೂ ಗಂಗಾದೇವಿ ಮೊದಲಾದವರೂ ಜಿನಮಾತೃದೇವತೆಯರೂ ಬಂದು ತಂತಮ್ಮ ಕೆಲಸಗಳಿಂದ ಆಗ ಈ ಪ್ರಭುವನ್ನು ಭಜಿಸುತ್ತಾರೆ.

**ಚಕ್ರಾಭಿಷೇಕ ಇತ್ಯೇಷಃ ಸಮಾಖ್ಯಾತಃ ಕ್ರಿಯಾವಿಧಿಃ ।**
**ತದನಂತರಮಸ್ಯ ಸ್ಯಾತ್ಸಾಮ್ರಾಜ್ಯಾಖ್ಯಂ ಕ್ರಿಯಾಂತರಮ್ ॥ ೨೫೩ ॥**

೪೩ ಇತಿ ಚಕ್ರಾಭಿಷೇಕಕ್ರಿಯಾ ॥ ಈ ಕ್ರಿಯಾವಿಧಿಯು ಚಕ್ರಾಭಿಷೇಕವೆಂದು ಹೇಳಲ್ಪಟ್ಟಿದೆ. ಆಮೇಲೆ ಈ ಪ್ರಭುವಿಗೆ ಸಾಮ್ರಾಜ್ಯವೆಂಬ ಮತ್ತೊಂದು ಕ್ರಿಯೆಯು ಆಗುವುದು.

**ಅಪರೇದ್ಯುರ್ದಿನಾರಂಭೇ ಧೃತ[5]ಪುಣ್ಯಪ್ರಸಾಧನಃ ।**
**[6]ಮಧ್ಯೇಮಹಾನೃಪಸಭಂ ನೃಪಾಸನಮಧಿಷ್ಠಿತಃ ॥ ೨೫೪ ॥**

ಮಾರನೆಯ ದಿವಸ ಪ್ರಾತಃಕಾಲದಲ್ಲಿ ಪವಿತ್ರವಾದ ಅಲಂಕಾರವನ್ನು ಧರಿಸಿದವನೂ ಮಹಾರಾಜರುಗಳ ಸಭಾಮಧ್ಯದಲ್ಲಿ ರಾಜಾಸನದಲ್ಲಿ ಕುಳಿತಿರುವವನೂ

**ದೀಪ್ರೈಃ ಪ್ರಕೀರ್ಣಕವ್ರಾತೈಃ ಸ್ವರ್ಧುನೀಶೀಕರೋಜ್ಜ್ವಲೈಃ ।**
**ವಾರನಾರೀಕರಾಧೂತೈರ್ವೀಜ್ಯಮಾನಃ ಸಮಂತತಃ ॥ ೨೫೫ ॥**

೧ ಈಷತ್. ೨ ರಾಜ್ಯಾಂಗಮುಖ್ಯಾಃ. ೩ ತತ್ಪಾದಾರ್ಚಿತಶೇಷಾಂ. ೪ ಗಂಗಾದೇವ್ಯಾದಯಃ. ೫ ಪವಿತ್ರಾಲಂಕಾರಃ. ೬ ಮಹಾನೃಪಸಭಾಯಾ ಮಧ್ಯೇ.

ಪ್ರಕಾಶಮಾನವೂ ದೇವಗಂಗೆಯ ನೀರಿನ ತುಂತುರುಗಳಂತೆ ಪ್ರಕಾಶಮಾನವೂ ವಾರಾಂಗನೆಯರ ಕೈಗಳಿಂದ ಬೀಸಲ್ಪಟ್ಟುವೂ ಆದ ಚಾಮರಗಳ ಸಮೂಹಗಳಿಂದ ಸುತ್ತಲೂ ಬೀಸಲ್ಪಟ್ಟವನೂ

**ಸೇವಾಗತೈಃ [೧]ಪೃಥಿವ್ಯಾದಿದೇವತಾಂಶೈಃ [೨]ಪರಿಷ್ಕೃತಃ ।**
**[೩]ಧೃತಿಪ್ರಶಾಂತಿದೀಪ್ತ್ಯೋ[೪]ಜೋ ನಿರ್ಮಲತ್ವೋ[೫]ಪಪಾದಿಭಿಃ ॥ ೨೫೬ ॥**

ಧರಿಸುವಿಕೆ ಶಾಂತಿ ಪ್ರಕಾಶ ಬಲ ನೈರ್ಮಲ್ಯಗುಣಗಳನ್ನುಂಟುಮಾಡುವುವು ಗಳೂ ಸೇವೆಗೋಸ್ಕರ ಬಂದಿರುವುವೂ ಆದ ಪೃಥಿವಿಯೇ ಮೊದಲಾದ ಅಧಿದೇವತೆಗಳ ಶರೀರಗಳಿಂದ ಅಲಂಕೃತನೂ

**ತಾನ್ಪ್ರಜಾನುಗ್ರಹೇ ನಿತ್ಯಂ ಸಮಾಧಾನೇನ ಯೋಜಯನ್ ।**
**ಸಮ್ಮಾನದಾನ[೬]ವಿಸ್ರಂಭೈಃ [೭]ಪ್ರಕೃತೀರನುರಂಜಯನ್ ॥ ೨೫೭ ॥**

ಆ ದೇವತಾಂಶಗಳನ್ನು ಪ್ರಜೆಗಳ ಮೇಲೆ ಕೃಪೆಮಾಡುವ ವಿಷಯದಲ್ಲಿ ಯಾವಾಗಲೂ ಸಮಾಧಾನದಿಂದ ನೇಮಿಸುವವನೂ ಸತ್ಕಾರ ದಾನ ವಿಶ್ವಾಸಗಳಿಂದ ಪರಿವಾರದವರನ್ನು ಸಂತೋಷಪಡಿಸುವವನೂ

**ಪಾರ್ಥಿವಾನ್ಪ್ರಣತಾನ್ ಯೂಯಂ ನ್ಯಾಯ್ಯೈಃ ಪಾಲಯತ ಪ್ರಜಾಃ ।**
**ಅನ್ಯಾಯೇಷು ಪ್ರವೃತ್ತಾಶ್ಚೇ[೮]ದ್ವೃತ್ತಿಲೋಪೋ ಧ್ರುವಂ ಹಿ ವಃ ॥ ೨೫೮ ॥**

ನಮ್ರರಾದ ರಾಜರುಗಳನ್ನು ಕುರಿತು ''ನೀವು ನ್ಯಾಯದಿಂದ ಪ್ರಜೆಗಳನ್ನು ಕಾಪಾಡಿರಿ. ಅನ್ಯಾಯದಲ್ಲಿ ಪ್ರವರ್ತಿಸಿದವರಾದರೆ ನಿಶ್ಚಯವಾಗಿ ನಿಮ್ಮಗಳ ಜೀವನೋಪಾಯವು ನಾಶವಾಗುವುದು.

**ನ್ಯಾಯಶ್ಚ ದ್ವಿತಯೋ ದುಷ್ಟನಿಗ್ರಹಃ ಶಿಷ್ಟಪಾಲನಮ್ ।**
**ಸೋಽಯಂ ಸನಾತನಃ ಕ್ಷಾತ್ರೋ ಧರ್ಮೋ ರಕ್ಷ್ಯಃ ಪ್ರಜೇಶ್ವರೈಃ॥ ೨೫೯ ॥**

ನ್ಯಾಯವಾದರೋ ದುಷ್ಟರನ್ನು ನಿಗ್ರಹಿಸುವಿಕೆ, ಶಿಷ್ಟರನ್ನು ಪರಿಪಾಲಿಸುವಿಕೆಯೆಂಬಿವು ಎರಡು. ಪ್ರಾಜಾನಾಯಕರು ಪ್ರಸಿದ್ಧವೂ ಸನಾತನವೂ ಆದ ಈ ಕ್ಷಾತ್ರಧರ್ಮವನ್ನು ರಕ್ಷಿಸಬೇಕು.

**ದಿವ್ಯಾಸ್ತ್ರದೇವತಾಶ್ಚಾಮೂರಾರಾಧ್ಯಾಃ ಸ್ಯುರ್ವಿಧಾನತಃ ।**
**ತಾಭಿಸ್ತು ಸುಪ್ರಸನ್ನಾಭಿ[೯]ರವಶ್ಯಂಭಾವುಕೋ ಜಯಃ ॥ ೨೬೦ ॥**

ಈ ದಿವ್ಯವಾದ ಅಸ್ತ್ರಾಧಿದೇವತೆಗಳು ಶಾಸ್ತ್ರರೀತಿಯಿಂದ ಆರಾಧಿಸಲ್ಪಡತಕ್ಕವರಾಗಿದ್ದಾರೆ. ಸಂತುಷ್ಟರಾದ ಆ ದೇವತೆಗಳಿಂದಾದರೋ ಜಯವು ಅವಶ್ಯವಾಗಿ ಆಗುವುದು.

**ರಾಜವೃತ್ತಿಮಿಮಾಂ ಸಮ್ಯಕ್ಪಾಲಯದ್ಭಿರತಂದ್ರಿತೈಃ ।**
**ಪ್ರಜಾಸು ವರ್ತಿತವ್ಯಂ [೧೦]ಭೋ ಭವದ್ಭಿರ್ನ್ಯಾಯವರ್ತ್ಮನಾ ॥ ೨೬೧ ॥**

ಎಲೈ ರಾಜರುಗಳಿರಾ ! ಈ ರಾಜವ್ಯಾಪಾರವನ್ನು ಚೆನ್ನಾಗಿ ಕಾಪಾಡುವವರೂ ಜಾಗರೂಕರೂ ಆದ ನೀವುಗಳು ಪ್ರಜೆಗಳಲ್ಲಿ ನ್ಯಾಯಮಾರ್ಗದಿಂದ ವರ್ತಿಸಬೇಕು.

**ಪಾಲಯೇದ್ಯ ಇಮಂ ಧರ್ಮಂ ಸ ಧರ್ಮವಿಜಯೀ ಭವೇತ್ ।**
**ಕ್ಷ್ಮಾಂ ಜಯೇದ್ವಿಜಿತಾತ್ಮಾ ಹಿ ಕ್ಷತ್ರಿಯೋ [೧೧]ನ್ಯಾಯಜೀವಕಃ ॥ ೨೬೨ ॥**

ಯಾವನು ಈ ರಾಜಧರ್ಮವನ್ನು ಪರಿಪಾಲಿಸುವನೋ ಅವನು ಧರ್ಮದಿಂದ ಜಯವುಳ್ಳವನಾಗುವನು. ನ್ಯಾಯವೇ ಪ್ರಾಣವಾಗಿರುವವನೂ ಜಿತೇಂದ್ರಿಯನೂ ಆದ ಕ್ಷತ್ರಿಯನು ಪೃಥ್ವಿಯನ್ನು ಜಯಿಸುವನಲ್ಲವೇ ?

೧ ಪೃಥಿವ್ಯಪ್ತೇಜೋವಾಯುಗಗನಾದಿದೇವತಾವಿಕ್ರಿಯಾಶರೀರೈರಿತ್ಯರ್ಥಃ. ೨ ಭೂಷಿತಃ. ೩ ಧಾರಣ. ೪ ಓಜೋದೀಪ್ತೌಬಲೇ. ೫ ಸ್ವಪಂಚಗುಣಾನಾಮುತ್ಪಾದಕೈಃ. ೬ ವಿಶ್ವಾಸೈಃ. ೭ ಪರಿವಾರಾನ್. ೮ ಜೀವನಲೋಪೋ. ೯ ನಿಯಮೇನ ಭವತಿ. ೧೦ ಭೋ ರಾಜಾನಃ. ೧೧ ನ್ಯಾಯ ಏವ ಪ್ರಾಣಾ ಯಸ್ಯ ಸಃ ನ್ಯಾಯಜೀವಕಃ.

**[೧]ಇಹೈ[೨]ವಂ ಸ್ಯಾದ್ಯಶೋಲಾಭೋ ಭೂಲಾಭಶ್ಚ ಮಹೋದಯಃ ।**
**ಅಮುತ್ರಾಭ್ಯುದಯಾವಾಪ್ತಿಃ ಕ್ರಮಾತ್ತ್ರೈಲೋಕ್ಯನಿರ್ಜಯಃ ॥ ೨೬೩ ॥**

ಹೀಗೆ ಈ ಜನ್ಮದಲ್ಲಿ ಯಶಸ್ಸಿನ ಲಾಭವೂ ವಿಶೇಷವಾದ ಭೂಲಾಭವೂ ಉತ್ತರಜನ್ಮದಲ್ಲಿ ಸ್ವರ್ಗಸುಖಪ್ರಾಪ್ತಿಯೂ ಕ್ರಮದಿಂದ ಮೂರುಲೋಕದ ವಿಜಯವೂ ಆಗುವುವು.''

**ಇತಿ ಭೂಯೋ[೩]ನುಶಿಷ್ಯೈ [೪]ತಾನ್ಪ್ರಜಾಪಾಲನಸಂವಿಧೌ ।**
**ಸ್ವಯಂ ಚ ಪಾಲಯತ್ಯೇ[೫]ನಾನ್ಯೋಗಕ್ಷೇಮಾನುಚಿಂತನೈಃ ॥ ೨೬೪ ॥**

ಈ ಪ್ರಕಾರವಾಗಿ ಪುನಃಪುನಃ ಪ್ರಜಾಪಾಲನ ವಿಧಾನದಲ್ಲಿ ಈ ರಾಜರುಗಳಿಗೆ ಬುದ್ಧಿವಾದವನ್ನು ಹೇಳಿ ತಾನೂ ಯೋಗಕ್ಷೇಮಚಿಂತನೆಗಳಿಂದ ಈ ರಾಜರುಗಳನ್ನು ಕಾಪಾಡುತ್ತಾನೆ.

**ತದಿದಂ ತಸ್ಯ ಸಾಮ್ರಾಜ್ಯಂ ನಾಮ ಧರ್ಮ್ಯಂ ಕ್ರಿಯಾಂತರಮ್ ।**
**[೬]ಯೇನಾನುಪಾಲಿತೇನಾಯಮಿಹಾಮುತ್ರ ಚ ನಂದತಿ ॥ ೨೬೫ ॥**

ಆ ಚಕ್ರೇಶ್ವರನ ಪ್ರಸಿದ್ಧವಾದ ಈ ಕ್ರಿಯೆಯು ಧರ್ಮಸಾಮ್ರಾಜ್ಯವೆಂಬ ಬೇರೊಂದು ಕ್ರಿಯೆಯಾಗಿರುತ್ತದೆ. ಪಾಲಿಸಲ್ಪಟ್ಟ ಯಾವ ಈ ಕ್ರಿಯೆಯಿಂದ ಈ ಚಕ್ರೇಶ್ವರನು ಇಹಲೋಕದಲ್ಲೂ ಪರಲೋಕದಲ್ಲೂ ಸಂತೋಷಪಡುತ್ತಾನೆ.

**ಏವಂ ಪ್ರಜಾಃ ಪ್ರಜಾಪಾಲಾನಪಿ ಪಾಲಯತಶ್ಚಿರಮ್ ।**
**ಕಾಲೇ ಕಸ್ಮಿಂಶ್ಚಿದು[೭]ತ್ಪನ್ನಬೋಧೇರ್ದೀಕ್ಷೋದ್ಯಮೋ ಭವೇತ್॥ ೨೬೬ ॥**

ಹೀಗೆ ಪ್ರಜೆಗಳನ್ನೂ ದೊರೆಗಳನ್ನೂ ಬಹುಕಾಲದವರೆಗೆ ಕಾಪಾಡುವವನೂ ಒಂದಾನೊಂದು ಕಾಲದಲ್ಲಿ ಉತ್ಪನ್ನವಾದ ವೈರಾಗ್ಯವುಳ್ಳವನೂ ಆದ ಈ ಚಕ್ರೇಶ್ವರನಿಗೆ ದೀಕ್ಷೆಯ ಉದ್ಯೋಗವುಂಟಾಗುವುದು.

**ಸೈಷಾ ನಿಷ್ಕ್ರಾಂತಿರಸ್ಯೇಷ್ಟಾ ಕ್ರಿಯಾ ರಾಜ್ಯಾದ್ವಿರಜ್ಯತಃ ।**
**ಲೌಕಾಂತಿಕಾಮರೈರ್ಭೂಯೋ ಬೋಧಿತಸ್ಯ ಸಮಾಗತೈಃ ॥ ೨೬೭ ॥**

ಆ ವಿಚಾರವನ್ನು ತಿಳಿದು ಬ್ರಹ್ಮಸ್ವರ್ಗದಿಂದ ಬಂದ ಲೌಕಾಂತಿಕರೆಂಬ ದೇವತೆಗಳಿಂದ ಪುನಃ ಬೋಧಿಸಲ್ಪಟ್ಟವನೂ ರಾಜ್ಯದಿಂದ ವಿರಕ್ತಿಯನ್ನು ಹೊಂದಿದವನೂ ಆದ ಈ ಸ್ವಾಮಿಯ ಪ್ರಸಿದ್ಧವಾದ ಈ ಕ್ರಿಯೆಯು ನಿಷ್ಕ್ರಾಂತಿಯೆಂದು ಅಭಿಮತವಾಗಿದೆ. ವೈರಾಗ್ಯದಿಂದ ದೀಕ್ಷೆಗೆ ಹೊರಡುವುದಕ್ಕೆ ನಿಷ್ಕ್ರಾಂತಿಯೆಂದು ಹೆಸರೆಂದು ಭಾವವು.

**ಕೃತರಾಜ್ಯಾರ್ಪಣೋ ಜ್ಯೇಷ್ಠೇ ಸೂನೌ ಪಾರ್ಥಿವಸಾಕ್ಷಿಕಮ್ ।**
**ಸಂತಾನಪಾಲನೇ ಚಾಸ್ಯ ಕರೋತೀತ್ಯನುಶಾಸನಮ್ ॥ ೨೬೮ ॥**

ಜ್ಯೇಷ್ಠಪುತ್ರನಲ್ಲಿ ರಾಜರುಗಳ ಸಾಕ್ಷಿಪೂರ್ವಕವಾಗಿ ರಾಜ್ಯಭಾರವನ್ನರ್ಪಿಸಿ ವಂಶರಕ್ಷಣೆಯ ವಿಷಯದಲ್ಲಿ ಈ ಪುತ್ರನಿಗೆ ಮುಂದೆ ಹೇಳುವಂತೆ ಶಿಕ್ಷಣವನ್ನು ಮಾಡುತ್ತಾನೆ.

**ತ್ವಯಾ ನ್ಯಾಯಧನೇನಾಂಗ ಭವಿತವ್ಯಂ ಪ್ರಜಾಧೃತೌ ।**
**ಪ್ರಜಾ ಕಾಮದುಘಾ ಧೇನುರ್ಮತಾ ನ್ಯಾಯೇನ ಯೋಜಿತಾ ॥ ೨೬೯ ॥**

''ಮಗನೆ ! ನೀನು ಪ್ರಜಾಪಾಲನವಿಷಯದಲ್ಲಿ ನ್ಯಾಯವೆಂಬ ಧನವುಳ್ಳವನಾಗಬೇಕು. ನ್ಯಾಯದಿಂದ ಪರಿಪಾಲಿಸಲ್ಪಟ್ಟ ಪ್ರಜೆಗಳು ಇಷ್ಟಾರ್ಥವನ್ನು ಕರೆಯುವ ಕಾಮಧೇನುವೆಂದು ಅಭಿಮತರಾಗಿದ್ದಾರೆ.

**ರಾಜವೃತ್ತಮಿದಂ ವಿದ್ಧಿ ಯನ್ನ್ಯಾಯೇನ ಧನಾರ್ಜನಮ್ ।**
**ವರ್ಧನಂ ರಕ್ಷಣಂ ಚಾಸ್ಯ [೮]ತೀರ್ಥೇ ಚ ಪ್ರತಿಪಾದನಮ್ ॥ ೨೭೦ ॥**

೧ ಜನ್ಮನಿ. ೨ ಏವಂ ಸತಿ. ೩ ಶಿಕ್ಷಾಂ ಕೃತ್ವಾ. ೪ ಪಾರ್ಥಿವಾನ್. ೫ ಪಾರ್ಥಿವಾನ್. ೬ ಸಾಮ್ರಾಜ್ಯ ನಾಮ ಕ್ರಿಯಾಂತರೇಣ. ೭ ಉತ್ಪನ್ನವೈರಾಗ್ಯಸ್ಯ. ೮ ಪಾತ್ರೇ.

ನ್ಯಾಯದಿಂದ ದ್ರವ್ಯವನ್ನು ಸಂಪಾದಿಸುವುದೂ ಈ ದ್ರವ್ಯದ ವೃದ್ಧಿಮಾಡುವಿಕೆಯೂ ರಕ್ಷಣವೂ ಸತ್ಪಾತ್ರದಲ್ಲಿ ದಾನಮಾಡುವಿಕೆಯೂ ಯಾವುದುಂಟೋ ಇದು ರಾಜರುಗಳ ಕೆಲಸವೆಂದು ತಿಳಿ.

**ಪ್ರಜಾನಾಂ ಪಾಲನಾರ್ಥಂ ಚ ಮತಂ [೧]ಮತ್ಯನುಪಾಲನಮ್ ।**
**ಮತಿರ್ಹಿತಾಹಿತಜ್ಞಾನಮಾತ್ರಿಕಾಮುತ್ರಿಕಾರ್ಥಯೋಃ ॥ ೨೭೧ ॥**

ಪ್ರಜೆಗಳ ರಕ್ಷಣೆಗೋಸ್ಕರವೂ ತನ್ನ ಬುದ್ಧಿಯನ್ನು ಕಾಪಾಡಿಕೊಳ್ಳಬೇಕೆಂದು ಹೇಳಿರುತ್ತದೆ. ಇಹಲೋಕ ಪರಲೋಕಸಂಬಂಧವಾದ ವಿಷಯಗಳ ಹಿತಾಹಿತ ಜ್ಞಾನವೇ ಮತಿಯೆಂಬುದು.

**[೨]ತತಃ ಕೃತೇಂದ್ರಿಯಜಯೋ ವೃದ್ಧಸಂಯೋಗಸಂಪದಾ ।**
**ಧರ್ಮಾರ್ಥ[೩]ಶಾಸ್ತ್ರವಿಜ್ಞಾನಾತ್ ಪ್ರಜ್ಞಾಂ ಸಂಸ್ಕರ್ತು[೪]ಮರ್ಹತಿ ॥**

ಆದುದರಿಂದ ವೃದ್ಧರ ಸಂಸರ್ಗವೆಂಬ ಸಂಪತ್ತಿಯಿಂದ ಇಂದ್ರಿಯಜಯವನ್ನು ಮಾಡಿದ ರಾಜನು ಧರ್ಮ ಅರ್ಥ ನೀತಿಶಾಸ್ತ್ರಗಳ ಪರಿಜ್ಞಾನದಿಂದ ತನ್ನ ಬುದ್ಧಿಯನ್ನು ಸಂಸ್ಕಾರಮಾಡುವುದಕ್ಕೆ ಯೋಗ್ಯನಾಗುತ್ತಾನೆ.

**ಅನ್ಯಥಾ ವಿಮತಿರ್ಭೂಪೋ ಯುಕ್ತಾಯುಕ್ತಾನಭಿಜ್ಞಕಃ ।**
**ಅನ್ಯಥಾನ್ಯೈಃ [೫]ಪ್ರಣೇಯಃ ಸ್ಯಾನ್ಮಿಥ್ಯಾಜ್ಞಾನಲವೋದ್ಧತೈಃ ॥ ೨೭೩ ॥**

ಹಾಗೆ ಮಾಡದಿದ್ದರೆ ಯುಕ್ತಾಯುಕ್ತಗಳನ್ನು ತಿಳಿಯದವನೂ ಬುದ್ಧಿಯಿಲ್ಲದವನೂ ಆದ ದೊರೆಯು ಮಿಥ್ಯಾಜ್ಞಾನಲೇಶದಿಂದ ಅಹಂಕಾರವುಳ್ಳವರಾದ ಬೇರೆಯವರಿಂದ ಬೇರೆ ರೀತಿಯಾಗಿ ವಶಪಡಿಸಿಕೊಳ್ಳುವುದಕ್ಕೆ ಯೋಗ್ಯನಾಗುವನು.

**ಕುಲಾನುಪಾಲನೇ ಚಾಯಂ ಮಹಾಂತಂ ಯತ್ನಮಾಚರೇತ್ ।**
**ಅಜ್ಞಾತಕುಲಧರ್ಮೋ ಹಿ ದುರ್ವೃತ್ತೈರ್ದೂಷಯೇತ್ಕುಲಮ್ ॥ ೨೭೪ ॥**

ಈ ದೊರೆಯು ತನ್ನ ವಂಶಪರಿಪಾಲನೆಯ ವಿಷಯದಲ್ಲಿಯೂ ಅಧಿಕವಾದ ಯತ್ನವನ್ನು ಮಾಡುವನು. ಕುಲಧರ್ಮವನ್ನು ತಿಳಿಯದವನು ದುರಾಚಾರಿಗಳೊಡನೆ ಸೇರಿ ತನ್ನ ವಂಶವನ್ನು ದೂಷಣೆಗೆ ಗುರಿಮಾಡುತ್ತಾನಲ್ಲವೆ ?

**ತಥಾಯಮಾತ್ಮರಕ್ಷಾಯಾಂ ಸದಾ ಯತ್ನಪರೋ ಭವೇತ್ ।**
**ರಕ್ಷಿತಂ ಹಿ ಭವೇ[೬]ತ್ಸರ್ವಂ ನೃಪೇಣಾತ್ಮನಿ ರಕ್ಷಿತೇ ॥ ೨೭೫ ॥**

ಹಾಗೆ ಈ ದೊರೆಯು ಆತ್ಮರಕ್ಷಣೆಯಲ್ಲಿ ಯಾವಾಗಲೂ ಪ್ರಯತ್ನಪರನಾಗಿರಬೇಕು. ದೊರೆಯು ತನ್ನನ್ನು ತಾನು ರಕ್ಷಿಸಿಕೊಂಡರೆ ಜಗತ್ತೆಲ್ಲವೂ ರಕ್ಷಿಸಲ್ಪಟ್ಟುದಾಗುವುದು.

**ಅಪಾಯೋ ಹಿ [೭]ಸಪತ್ನೇಭ್ಯೋ ನೃಪಸ್ಯಾರಕ್ಷಿತಾತ್ಮನಃ ।**
**ಆತ್ಮಾನುಜೀವಿವರ್ಗಾಚ್ಚ ಕ್ರುದ್ಧಲುಬ್ಧ[೮]ವಿಮಾನಿತಾತ್ ॥ ೨೭೬ ॥**

ಆತ್ಮರಕ್ಷಣೆಯನ್ನು ಮಾಡಿಕೊಳ್ಳದಿರುವ ದೊರೆಗೆ ದಾಯಾದರಿಂದಲೂ ಅಥವಾ ಶತ್ರುಗಳಿಂದಲೂ ಕೋಪ ಲೋಭ ತಿರಸ್ಕಾರಮಾಡಲ್ಪಟ್ಟ ತನ್ನ ಭೃತ್ಯವರ್ಗದಿಂದಲೂ ಅಪಾಯವುಂಟಾಗುವುದಲ್ಲವೆ ?

**ತಸ್ಮಾ[೯]ದ್ರಸ[೧೦]ದತೀಕ್ಷ್ಣಾದೀನುಪಾಯಾನರಿಯೋಜಿತಾನ್ ।**
**ಪರಿಹೃತ್ಯ ನಿಜೈರಿಷ್ಟೈಃ [೧೧]ಸ್ವಂ ಪ್ರಯತ್ನೇನ ಪಾಲಯೇತ್ ॥ ೨೭೭ ॥**

೧ ನಿಜಬುದ್ಧಿರಕ್ಷಣಂ. ೨ ಕಾರಣಾತ್. ೩ ನೀತಿಶಾಸ್ತ್ರ. ೪ ಅರ್ಹಸೀತ್ಯಪಿ ಪಾಠಃ. ೫ ವಶ್ಯಃ. ೬ ಜಗತ್. ೭ ದಾಯಾದೇಭ್ಯಃ ಶತ್ರುಭ್ಯೋ ವಾ. ೮ ಅವಜ್ಞೀಕೃತಾತ್. ೯ ರಸತಾಂ ಆಸ್ವಾದಂ ಕುರ್ವತಾಂ. ೧೦ ಅಕಟುಕಾದೀನ್-ಅನುಭವನಕಾಲೇ ಸ್ವಾದುರಸಪ್ರದಾನ್–ವಿಪಾಕಕಾಲೇಕಟುಕಾನಿತ್ಯರ್ಥಃ. ೧೧ ಆತ್ಮಾನಂ.

ಆದುದರಿಂದ ಶತ್ರುಗಳಿಂದ ಪ್ರಯೋಗಿಸಲ್ಪಟ್ಟುವೂ ಅನುಭವನಕಾಲದಲ್ಲಿ ಸ್ವಾದಿಷ್ಟಗಳೂ ಫಲಕಾಲದಲ್ಲಿ ಕಟುಕಗಳೂ ಆದ ಅಪಾಯಗಳನ್ನು ಪರಿಹರಿಸಿ ತನ್ನ ಇಷ್ಟಜನರಿಂದ ತನ್ನನ್ನು ಪ್ರಯತ್ನದಿಂದ ಕಾಪಾಡಿಕೊಳ್ಳಬೇಕು.

**ಸ್ಯಾ[೧]ತ್ಸಮಂಜಸವೃತ್ತತ್ವಮಪ್ಯಸ್ಯಾ[೨]ತ್ಮಾಭಿರಕ್ಷಣೇ ।**
**ಅಸಮಂಜಸವೃತ್ತೋ ಹಿ ನಿಜೈರಪ್ಯಭಿಭೂಯತೇ ॥ ೨೭೮ ॥**

ಆತ್ಮರಕ್ಷಾನಿಮಿತ್ತವಾಗಿ ಎಲ್ಲರಲ್ಲಿಯೂ ಸಮಾನವಾಗಿರುವಿಕೆಯೂ ಈ ದೊರೆಗೆ ಇರಬೇಕು. ಸರ್ವಸಮದರ್ಶಿತ್ವವಿಲ್ಲದಿರುವವನು ತನ್ನವರಿಂದಲೂ ತಿರಸ್ಕರಿಸಲ್ಪಡುತ್ತಾನಲ್ಲವೆ ?

**ಸಮಂಜಸತ್ವಮಸ್ಯೇಷ್ಟಂ ಪ್ರಜಾ[೩]ಸ್ವವಿಷಮೇಕ್ಷಿತಾ ।**
**[೪]ಆನೃಶಂಸ್ಯ[೫]ಮವಾಗ್ದಂಡಪಾರುಷ್ಯಾದಿವಿಶೇಷಿತಮ್ ॥ ೨೭೯ ॥**

ಕಠಿನವಚನ ಕಠಿನಶಿಕ್ಷೆ ಮೊದಲಾದ ವಿಶೇಷರಹಿತವಾದ ಘಾತಕಭಾವವಿಲ್ಲದಿರುವಿಕೆಯೂ ಪ್ರಜೆಗಳಲ್ಲಿ ಸಮದರ್ಶಿತ್ವವೂ (ಎಲ್ಲರನ್ನೂ ಸಮಾನ ದೃಷ್ಟಿಯಿಂದ ನೋಡುವಿಕೆಯೂ) ಈ ದೊರೆಗೆ ಸಮಂಜಸತ್ವವೆಂದು ಅಭಿಮತವಾಗಿರುತ್ತದೆ.

**ತತೋ ಜಿತಾರಿಷಡ್ವರ್ಗಃ ಸ್ವಾಂ ವೃತ್ತಿಂ ಪಾಲಯನ್ನಿಮಾಮ್ ।**
**ಸ್ವರಾಜ್ಯೇ ಸುಸ್ಥಿತೋ ರಾಜಾ [೬]ಪ್ರೇತ್ಯ ಚೇಹ ಚ ನಂದತಿ ॥ ೨೮೦ ॥**

ಆದುದರಿಂದ ಅರಿಷಡ್ವರ್ಗಗಳನ್ನು ಜಯಿಸಿದವನೂ ಈ ಮೇಲೆ ಹೇಳಿದ ತನ್ನ ವೃತ್ತಿಯನ್ನು ಪಾಲಿಸುವವನೂ ತನ್ನ ರಾಜ್ಯದಲ್ಲಿ ಚೆನ್ನಾಗಿರುವವನೂ (ನಿರಪಾಯನಾಗಿರುವವನೂ) ಆದ ದೊರೆಯು ಉತ್ತರಭವದಲ್ಲಿಯೂ ಈ ಭವದಲ್ಲಿಯೂ ಸಮೃದ್ಧನಾಗಿರುತ್ತಾನೆ.

**ಸಮಂ ಸಮಂಜಸತ್ವೇನ ಕುಲಮತ್ಯಾತ್ಮಪಾಲನಮ್ ।**
**ಪ್ರಜಾನುಪಾಲನಂ ಚೇತಿ ಪ್ರೋಕ್ತಾ ವೃತ್ತಿರ್ಮಹೀಕ್ಷಿತಾಮ್ ॥ ೨೮೧ ॥**

ಸಮಂಜಸತ್ವದೊಡನೆ ಕುಲಪಾಲನ, ಮತಿಪಾಲನ, ಆತ್ಮಪಾಲನ, ಪ್ರಜಾಪಾಲನಗಳೂ ರಾಜರುಗಳ ಕರ್ತವ್ಯಗಳೆಂದು ಹೇಳಲ್ಪಟ್ಟಿರುತ್ತವೆ.

**[೭]ತತಃ ಕ್ಷಾತ್ರಮಿಮಂ ಧರ್ಮಂ ಯಥೋಕ್ತಮನುಪಾಲಯನ್ ।**
**ಸ್ಥಿತೋ ರಾಜ್ಯೇ ಯಶೋ ಧರ್ಮಂ ವಿಜಯಂ ಚ ತ್ವಮಾಪ್ನುಹಿ ॥**

ಆದುದರಿಂದ ಈ ಕ್ಷತ್ರಿಯಸಂಬಂಧವಾದ ಧರ್ಮವನ್ನು ವಿಧಿಪ್ರಕಾರವಾಗಿ ಪರಿಪಾಲಿಸುವವನೂ ರಾಜ್ಯದಲ್ಲಿರುವವನೂ ಆಗಿ ನೀನು ಯಶಸ್ಸನ್ನೂ ಧರ್ಮವನ್ನೂ ವಿಜಯವನ್ನೂ ಹೊಂದು.''

**ಪ್ರಶಾಂತಧೀಃ ಸಮುತ್ಪನ್ನಬೋಧಿರಿತ್ಯನುಶಿಷ್ಯ [೮]ತಮ್ ।**
**ಪರಿನಿಷ್ಕ್ರಾಂತಿಕಲ್ಯಾಣೇ ಸುರೇಂದ್ರೈರಭಿಪೂಜಿತಃ ॥ ೨೮೩ ॥**

ಬಹು ಶಾಂತವಾದ ಮನಸ್ಸುಳ್ಳವನೂ ವಿವೇಕಜ್ಞಾನೋತ್ಪತ್ತಿಯುಳ್ಳವನೂ ಆದ ಸ್ವಾಮಿಯು ಈ ಮೇಲೆ ಹೇಳಿದ ರೀತಿಯಾಗಿ ಆ ಪುತ್ರನಿಗೆ ಬುದ್ಧಿವಾದವನ್ನು ಹೇಳಿ ಪರಿನಿಷ್ಕ್ರಮಣಕಲ್ಯಾಣದಲ್ಲಿ ದೇವೇಂದ್ರರಿಂದ ಪೂಜಿಸಲ್ಪಟ್ಟನು.

**ಮಹಾದಾನಮಥೋ ದತ್ವಾ ಸಾಮ್ರಾಜ್ಯಪದಮುತ್ಸೃಜನ್ ।**
**ಸ ರಾಜರಾಜೋ ರಾಜರ್ಷಿರ್ನಿಷ್ಕ್ರಾಮತಿ ಗೃಹಾ[೯]ದ್ವನಮ್ ॥ ೨೮೪ ॥**

ಅನಂತರದಲ್ಲಿ ಅಧಿಕವಾದ ದಾನವನ್ನು ಕೊಟ್ಟು ಚಕ್ರವರ್ತಿಪದವಿಯನ್ನು ಪರಿತ್ಯಜಿಸಿದವನೂ ರಾಜರ್ಷಿಯೂ ಆದ ಆ ರಾಜಾಧಿರಾಜನು ಮನೆಯಿಂದ ವನಕ್ಕೆ ಹೊರಡುತ್ತಾನೆ.

೧ ಸಮದರ್ಶಿತ್ವಂ. ೨ ಆತ್ಮರಕ್ಷಾನಿಮಿತ್ತಂ. ೩ ಸಮದರ್ಶಿತ್ವಂ. ೪ ಅಘಾತಕತ್ವಂ. ೫ ವಾಕ್ಪಾರುಷ್ಯ ದಂಡಪಾರುಷ್ಯಾದಿಕಂ. ೬ ಭವಾಂತರೇ. ೭ ಕಾರಣಾತ್. ೮ ಸೂನುಂ. ೯ ದೀಕ್ಷಾವನಂ.

**ಧೌರೇಯ್ಯೈಃ ಪಾರ್ಥಿವೈಃ [೧]ಕಿಂಚಿತ್ಸ[೨]ಮುತ್ಕ್ಷಿಪ್ತಾಂ ಮಹೀತಲಾತ್ ।**
**ಸ್ಕಂಧಾಧಿರೋಪಿತಾಂ ಭೂಯಃ ಸುರೇಂದ್ರೈರ್ಭಕ್ತಿನಿರ್ಭರೈಃ ॥ ೨೮೫ ॥**

ಪ್ರಮುಖರಾದ ರಾಜರುಗಳಿಂದ ಏಳು ಹೆಜ್ಜೆಗಳ ದೂರದವರೆಗೆ ಭೂಮಿತಲದಿಂದ ಎತ್ತಿಹಿಡಿಯಲ್ಪಟ್ಟುದೂ ಬಳಿಕ ಭಕ್ತಿವಿಶಿಷ್ಟರಾದ ದೇವೇಂದ್ರರಿಂದ ಹೆಗಲುಗಳ ಮೇಲೆ ಇರಿಸಲ್ಪಟ್ಟುದೂ

**ಆರೂಢಃ ಶಿಬಿಕಾಂ ದಿವ್ಯಾಂ ದೀಪ್ರರತ್ನವಿನಿರ್ಮಿತಾಮ್ ।**
**[೩]ವಿಮಾನವಸತಿಂ ಭಾನೋರಿವಾ[೪]ಯಾತಾಂ ಮಹೀತಲಮ್ ॥ ೨೮೬ ॥**

ಪ್ರಕಾಶಮಾನವಾದ ರತ್ನಗಳಿಂದ ನಿರ್ಮಿತವೂ ಭೂತಲವನ್ನು ಕುರಿತು ಬಂದಂತಹ ಸೂರ್ಯನ ವಿಮಾನದಂತಿರುವುದೂ ದಿವ್ಯವೂ ಆದ ಪಲ್ಲಕ್ಕಿಯನ್ನೇರಿದನು.

**[೫]ಪುರಸ್ಸರೇಷು [೬]ನಿಃಶೇಷನಿರುದ್ಧವ್ಯೋಮವೀಥಿಷು ।**
**ಸುರಾಸುರೇಷು ತನ್ವತ್ಸು [೭]ಸಂದಿಗ್ಧಾರ್ಕಪ್ರಭಂ ನಭಃ ॥ ೨೮೭ ॥**

ಮುಂದೆ ನಡೆಯುತ್ತಿರುವವರೂ ಎಡೆಬಿಡದೆ ತಮ್ಮ ವಿಮಾನಗಳಿಂದ ಆವರಿಸಲ್ಪಟ್ಟ ಆಕಾಶಪ್ರದೇಶಗಳುಳ್ಳವರೂ ಆದ ಸುರಾಸುರರು ಆಕಾಶವನ್ನು ಮರೆಮಾಡಲ್ಪಟ್ಟುದಾದ ಸೂರ್ಯಪ್ರಭೆಯುಳ್ಳುದನ್ನಾಗಿ ಮಾಡುತ್ತಿರಲು

**[೮]ಅನೂತ್ಥಿತೇಷು ಸಂಪ್ರೀತ್ಯಾ ಪಾರ್ಥಿವೇಷು ಸಸಂಭ್ರಮಮ್ ।**
**ಕುಮಾರಮಗ್ರತಃ ಕೃತ್ವಾ ಪ್ರಾಪ್ತರಾಜ್ಯಂ ನವೋದಯಮ್ ॥ ೨೮೮ ॥**

ರಾಜರುಗಳು ಸಂಭ್ರಮವಾಗಿ ರಾಜ್ಯವನ್ನು ಹೊಂದಿದವನೂ ನೂತನವಾಗಿ ಆವಿರ್ಭಾವವುಳ್ಳವನೂ ಆದ ರಾಜಕುಮಾರನನ್ನು ಮುಂದುಗಡೆಯಲ್ಲಿ ಮಾಡಿ ಬಹುಪ್ರೀತಿಯಿಂದ ಹಿಂಬಾಲಿಸಿ ಹೋಗುತ್ತಿರಲು

**[೯]ಅನುಯಾಯಿನಿ [೧೦]ತತ್ತ್ಯಾಗಾದಿವ ಮಂದೀಭವದ್ದ್ಯುತೌ ।**
**ನಿಧೀನಾಂ ಸಹರತ್ನಾನಾಂ ಸಂದೋಹೇ[೧೧]ಭ್ಯರ್ಣಸಂಕ್ಷಯೇ ॥ ೨೮೯ ॥**

ಸ್ವಾಮಿಯ ಸಾನ್ನಿಧ್ಯವು ತಪ್ಪಿಹೋಗುತ್ತಿರಲು, ಚಕ್ರವರ್ತಿಯು ಸಾಮ್ರಾಜ್ಯವನ್ನು ತ್ಯಜಿಸಿದುದರಿಂದ ಕಳೆಗುಂದಿದಂತಿರುವ ರತ್ನಸಹಿತಗಳಾದ ನಿಧಿಗಳ ಸಮೂಹವು, ಹಿಂಬಾಲಿಸಿ ನಡೆಯುತ್ತಿರಲು

**[೧೨]ಸೈನ್ಯೇ ಚ ಕೃತಸನ್ನಾಹೇ ಶನೈಃ ಸಮನುಗಚ್ಛತಿ ।**
**ಮರುದ್ಧೂತಧ್ವಜವ್ರಾತನಿರುದ್ಧೇ ಪವನಾಧ್ವನಿ ॥ ೨೯೦ ॥**

ಹೋಗುವುದಕ್ಕೆ ಸನ್ನಾಹವನ್ನು ಮಾಡಿದ ಷಡಂಗಸೈನ್ಯವು ಮೆಲ್ಲನೆ ಹಿಂಬಾಲಿಸಿ ಹೋಗುತ್ತಿರಲು ಆಕಾಶವು ಗಾಳಿಯಿಂದ ಕೊಡಹಲ್ಪಟ್ಟ ಪತಾಕೆಗಳ ಸಮೂಹದಿಂದ ತಡೆಯಲ್ಪಡುತ್ತಿರಲು

**ಧ್ವನತ್ಸು ಸುರತೂರ್ಯೇಷು ನೃತ್ಯತ್ಯಪ್ಸರಸಾಂ ಗಣೇ ।**
**ಗಾಯಂತೀಷು ಕಲಕ್ವಾಣಂ ಕಿನ್ನರೀಷು ಚ ಮಂಗಲಮ್ ॥ ೨೯೧ ॥**

ದೇವವಾದ್ಯಗಳು ಧ್ವನಿಮಾಡುತ್ತಿರಲು ಅಪ್ಸರಸ್ತ್ರೀಯರ ಸಮೂಹವು ನರ್ತನ ಮಾಡುತ್ತಿರಲು ಕಿನ್ನರಸ್ತ್ರೀಯರು ಮಂಗಲವನ್ನು ಗಂಭೀರಧ್ವನಿಯಾಗುವಂತೆ ಗಾಯನಮಾಡುತ್ತಿರಲು

**ಭಗವಾನಭಿನಿಷ್ಕ್ರಾಂತಃ [೧೩]ಪುಣ್ಯೇ ಕಸ್ಮಿಂಶ್ಚಿ[೧೪]ದಾಶ್ರಮೇ ।**
**ಸ್ಥಿತಃ ಶಿಲಾತಲೇ ಸ್ವಸ್ಮಿಂಶ್ಚೇತಸೀವಾತಿವಿಸ್ತೃತೇ ॥ ೨೯೨ ॥**

**ನಿರ್ವಾಣದೀಕ್ಷಯಾತ್ಮಾನಂ ಯೋಜಯನ್ನದ್ಭುತೋದಯಃ ।**
**ಸುರಾಧಿಪೈಃ ಕೃತಾನಂದಮರ್ಚಿತಃ ಪರಮೇಜ್ಯಯಾ ॥ ೨೯೩ ॥**

ಸ್ವಾಮಿಯು ಪವಿತ್ರವಾದ ಒಂದಾನೊಂದು ಪ್ರದೇಶದಲ್ಲಿ ಮನೆಯಿಂದ ಹೊರಟವನೂ, ತನ್ನ ಮನಸ್ಸಿನಂತೆ, ಬಹು ವಿಶಾಲವಾದ ಶಿಲಾತಲದಲ್ಲಿ ನಿಂತವನೂ ತನ್ನನ್ನು ನಿರ್ವಾಣದೀಕ್ಷೆಯಿಂದ ಕೂಡಿದವನನ್ನಾಗಿ ಮಾಡುವವನೂ ಆಶ್ಚರ್ಯಕರವಾದ ಉನ್ನತಿಯುಳ್ಳವನೂ ದೇವೇಂದ್ರರಿಂದ ಶ್ರೇಷ್ಠವಾದ ಪೂಜೆಯಿಂದ ಸಂತೋಷಪಟ್ಟು ಪೂಜಿಸಲ್ಪಟ್ಟವನೂ ಆದನು.

**ಯೋತ್ರ ಶೇಷೋ ವಿಧಿ[೧]ರ್ಯುಕ್ತಃ ಕೇಶಪೂಜಾದಿಲಕ್ಷಣಃ ।**
**ಪ್ರಾಗೇವ ಸ ಸುನಿರ್ಣೀತೋ ನಿಷ್ಕ್ರಾಂತೌ ವೃಷಭೇಶಿನಃ ॥ ೨೯೪ ॥**

ಇಲ್ಲಿ ಸ್ವಾಮಿಯ ಕೇಶಗಳ ಪೂಜೆ ಮೊದಲಾದುವುಗಳ ಲಕ್ಷಣಗಳುಳ್ಳುದೂ ಯುಕ್ತವೂ ಆದ ಉಳಿದ ವಿಧಿಯೆಲ್ಲವೂ ವೃಷಭಸ್ವಾಮಿಯ ಪರಿಷ್ಕ್ರಮಣ ಕಲ್ಯಾಣದಲ್ಲಿ ಮೊದಲೇ ಚೆನ್ನಾಗಿ ಹೇಳಲ್ಪಟ್ಟಿರುತ್ತದೆ.

**ಪರಿನಿಷ್ಕ್ರಾಂತಿರೇಷಾ ಸ್ಯಾತ್ಕ್ರಿಯಾ ನಿರ್ವಾಣದಾಯಿನೀ ।**
**ಅತಃ ಪರಂ ಭವೇದಸ್ಯ ಮುಮುಕ್ಷೋರ್ಯೋಗಸಮ್ಮಹಃ ॥ ೨೯೫ ॥**

೪೪ ಇತಿ ಪರಿನಿಷ್ಕ್ರಾಂತಿಕ್ರಿಯಾ ॥ ಈ ಪರಿನಿಷ್ಕ್ರಾಂತಿಕ್ರಿಯೆಯು ಕೈವಲ್ಯವನ್ನು ಕೊಡತಕ್ಕುದಾಗಿರುವುದು. ಇಲ್ಲಿಂದ ಮುಂದೆ ಈ ಮುಮುಕ್ಷುವಿಗೆ ಯೋಗ ಸಮ್ಮಹವೆಂಬ ಕ್ರಿಯೆಯುಂಟಾಗುವುದು.

**ಯದಾಯಂ ತ್ಯಕ್ತಬಾಹ್ಯಾಂತಸ್ಸಂಗೋ ನೈಸ್ಸಂಗ್ಯಮಾಚರೇತ್ ।**
**ಸುದುಶ್ಚರಂ ತಪೋಯೋಗಂ ಜಿನಕಲ್ಪಮನುತ್ತರಮ್ ॥ ೨೯೬ ॥**

**ತದಾಸ್ಯ ಕ್ಷಪಕಶ್ರೇಣೀಮಾರೂಢಸ್ಯೋಚಿತೇ [೨]ಪದೇ ।**
**ಶುಕ್ಲಧ್ಯಾನಾಗ್ನಿನಿರ್ದಗ್ಧಘಾತಿಕರ್ಮ[೩]ಘನಾಟವೇಃ ॥ ೨೯೭ ॥**

**ಪ್ರಾದುರ್ಭವತಿ ನಿಃಶೇಷಬಹಿರಂತರ್ಮಲಕ್ಷಯಾತ್ ।**
**ಕೇವಲಾಖ್ಯಂ ಪರಂಜ್ಯೋತಿರ್ಲೋಕಾಲೋಕಪ್ರಕಾಶಕಮ್ ॥ ೨೯೮ ॥**

ಯಾವಾಗ ಬಾಹ್ಯಾಭ್ಯಂತರಪರಿಗ್ರಹವನ್ನು ತ್ಯಜಿಸಿದವನಾದ ಈ ಯೋಗಿಯು ಬಹುಕಠಿನವೂ ಸರ್ವೋತ್ಕೃಷ್ಟವೂ ಆದ ಜಿನಕಲ್ಪವೆಂಬ ತಪೋಯೋಗರೂಪವಾದ ನಿಷ್ಪರಿಗ್ರಹತ್ವವನ್ನು ಆಚರಿಸುವನೋ ಆಗ ಮೋಹನೀಯಕರ್ಮವನ್ನು ನಾಶ ಮಾಡುತ್ತ ಭಾವಶುದ್ಧಿಯನ್ನು ಹೊಂದುವುದೇ ಸ್ವರೂಪವಾಗಿರುವ ಕ್ಷಪಕ ಶ್ರೇಣಿಯನ್ನು ಏರಿದವನೂ ಶುಕ್ಲಧ್ಯಾನವೆಂಬ ಬೆಂಕಿಯಿಂದ ಘಾತಿಕರ್ಮವೆಂಬ ದಟ್ಟವಾದ ಅರಣ್ಯವನ್ನು ದಹಿಸಿದವನೂ ಆದ ಈ ಯೋಗಿಗೆ ಉಚಿತವಾದ ಸ್ಥಾನದಲ್ಲಿ (ಗುಣಸ್ಥಾನದಲ್ಲಿ) ಸಂಪೂರ್ಣವಾದ ಬಾಹ್ಯಾಭ್ಯಂತರಕರ್ಮಮಲದ ನಾಶದಿಂದ ಲೋಕಾಲೋಕಗಳನ್ನು ಬೆಳಗುವ (ತಿಳಿಯುವ) ಕೇವಲಜ್ಞಾನವೆಂಬ ಪರಂಜ್ಯೋತಿಯು ಪ್ರಾದುರ್ಭವಿಸುವುದು.

**ತದೇತತ್ಸಿದ್ಧಸಾಧ್ಯಸ್ಯ [೪]ಪ್ರಾಪುಷಃ ಪರಮಂ ಮಹಃ ।**
**ಯೋಗಸಮ್ಮಹ ಇತ್ಯಾಖ್ಯಾಮನುಧತ್ತೇ ಕ್ರಿಯಾಂತರಮ್ ॥ ೨೯೯ ॥**

ಸಾಧಿಸುವುದಕ್ಕೆ ಯೋಗ್ಯವಾದ ಪರಂಜ್ಯೋತಿಯನ್ನು ಸಾಧಿಸಿದವನೂ ಉತ್ಕೃಷ್ಟತೇಜಸ್ಸನ್ನು ಹೊಂದಿದವನೂ ಆದ ಈ ಯೋಗಿಯ ಈ ಬೇರೊಂದು ಕ್ರಿಯೆಯು ಯೋಗಸಮ್ಮಹವೆಂಬ ಹೆಸರನ್ನು ಪಡೆಯುತ್ತದೆ.

**ಜ್ಞಾನಧ್ಯಾನಸಮಾಯೋಗೋ ಯೋಗೋ ಯ[೫]ಸ್ತತ್ಕೃತೋ ಮಹಃ ।**
**ಮಹಿಮಾತಿಶಯಃ ಸೋಯಮಾಮ್ನಾತೋ ಯೋಗಸಮ್ಮಹಃ ॥ ೩೦೦ ॥**

೧ ಸಪ್ತಪದಾನಿ. ೨ ಉದ್ಧೃತಾಂ. ೩ ಮಂಡಲಮಿವ. ೪ ಆಗತಾಂ. ೫ ಅಗ್ರಗಾಮಿಷು. ೬ ನಿಃಶೇಷಸ್ವವಿಮಾನರುದ್ಧ. ೭ ಆಚ್ಛಾದಿತ. ೮ ಅನುಗತೇಷು. ೯ ಅನುಗಚ್ಛತಿ ಸತಿ. ೧೦ ಚಕ್ರಿಣಃ ಸಾಮ್ರಾಜ್ಯತ್ಯಾಗಾತ್. ೧೧ ಸಮೀಪನಾಶೇ ಸತಿ. ೧೨ ಷಡಂಗಬಲೇ. ೧೩ ಪವಿತ್ರೇ. ೧೪ ಪ್ರದೇಶೇ.

೧ ಮುಕ್ತಕೇಶಪೂಜಾದಿಲಕ್ಷಣ ಇತ್ಯಪಿ ಪಾಠಃ. ೨ ಗುಣಸ್ಥಾನೇ. ೩ ಮಹಾಟವೇರಿತ್ಯಪಿ ಪಾಠಃ. ೪ ಗತವತಃ. ೫ ಯೋಗನಿಮಿತ್ತಕೃತಃ.

ಜ್ಞಾನಧ್ಯಾನಗಳ ಸಂಬಂಧಕ್ಕೆ ಯೋಗವೆಂದೂ ಆ ಯೋಗನಿಮಿತ್ತವೂ ಮಹಾಮಹಿಮೆಯುಳ್ಳುದೂ ಆದ ಈ ತೇಜಸ್ಸು ಯೋಗಸಮ್ಮಹವೆಂದು ಹೇಳಲ್ಪಟ್ಟಿದೆ.

**ತತೋಽಸ್ಯ ಕೇವಲೋತ್ಪತ್ತೌ ಪೂಜಿತಸ್ಯಾಮರೇಶ್ವರೈಃ ।**
**ಬಹಿರ್ವಿಭೂತಿರುದ್ಭೂತಾ ಪ್ರಾತಿಹಾರ್ಯಾದಿಲಕ್ಷಣಾ ॥ ೩೦೧ ॥**

೪೫ ಇತಿ ಯೋಗಸಮ್ಮಹಕ್ರಿಯಾ ॥ ಅನಂತರದಲ್ಲಿ ಕೇವಲಜ್ಞಾನೋತ್ಪತ್ತಿ ಕಾಲದಲ್ಲಿ ದೇವೇಂದ್ರರಿಂದ ಪೂಜಿಸಲ್ಪಟ್ಟವನಾದ ಈ ಕೇವಲಿಗೆ ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದುಂದುಭಿ, ಶ್ವೇತಛತ್ರಗಳೆಂಬ ಪ್ರಾತಿಹಾರ್ಯಗಳೇ ಮೊದಲಾದ ಬಾಹ್ಯಸಂಪತ್ತಿಯುಂಟಾಗುವುದು.

**ಪ್ರಾತಿಹಾರ್ಯಾಷ್ಟಕಂ ದಿವ್ಯಂ ಗಣೋ ದ್ವಾದಶಧೋದಿತಃ ।**
**ಸ್ತೂಪಹರ್ಮ್ಯಾವಲೀ [೧]ಸಾಲವಲಯಃ ಕೇತುಮಾಲಿಕಾ ॥ ೩೦೨ ॥**

**ಇತ್ಯಾದಿಕಾಮಿಮಾಂ ಭೂತಿಮುದ್ಭೂತಾ[೨]ಮುಪಬಿಭ್ರತಃ ।**
**ಸ್ಯಾದಾರ್ಹಂತ್ಯಮಿತಿ ಖ್ಯಾತಂ ಕ್ರಿಯಾಂತರಮನಂತರಮ್ ॥ ೩೦೩ ॥**

ದಿವ್ಯವಾದ ಎಂಟು ಪ್ರಾತಿಹಾರ್ಯಗಳೂ ಹಿಂದೆ ಹೇಳಿದ ದ್ವಾದಶಗಣ (ಗುಂಪು)ಗಳೂ ಸ್ತೂಪಗಳೂ ಪ್ರಾಸಾದಪಂಕ್ತಿಗಳೂ ಪ್ರಾಕಾರಗಳೂ ಧ್ವಜ ಮಾಲಿಕೆಯೂ ಇವೇ ಮೊದಲಾಗಿ ಉಂಟಾದ ಈ ಸಂಪತ್ತಿಯನ್ನು ಹೊಂದಿದವನಾದ ಆ ಕೇವಲಿಗೆ ಅನಂತರದಲ್ಲಿ ಪ್ರಸಿದ್ಧವಾದ ಆರ್ಹಂತ್ಯವೆಂಬ ಮತ್ತೊಂದು ಕ್ರಿಯೆಯುಂಟಾಗುವುದು.

**ವಿಹಾರಸ್ತು ಪ್ರತೀತಾರ್ಥೋ ಧರ್ಮಚಕ್ರಪುರಸ್ಸರಃ ।**
**[೩]ಪ್ರಪಂಚಿತಶ್ಚ ಪ್ರಾಗೇವ ತತೋ ನ ಪುನರುಚ್ಯತೇ ॥ ೩೦೪ ॥**

೪೬ ಇತಿ ಆರ್ಹಂತ್ಯಕ್ರಿಯಾ ॥ ಪ್ರಸಿದ್ಧವಾದ ಅರ್ಥವುಳ್ಳುದೂ ಮುಂದುಗಡೆಯಲ್ಲಿ ಧರ್ಮಚಕ್ರವುಳ್ಳುದೂ ಆದ ಶ್ರೀವಿಹಾರವಾದರೋ ಮೊದಲೇ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಆದುದರಿಂದ ಮತ್ತೆ ಹೇಳಲ್ಪಡುವುದಿಲ್ಲ.

**ತತಃ ಪರಾರ್ಥಸಂಪತ್ತ್ಯೈ ಧರ್ಮಮಾರ್ಗೋಪದೇಶನೇ ।**
**ಕೃತತೀರ್ಥವಿಹಾರಸ್ಯ ಯೋಗತ್ಯಾಗಃ ಪರಾ ಕ್ರಿಯಾ ॥ ೩೦೫ ॥**

೪೭ ಇತಿ ವಿಹಾರಕ್ರಿಯಾ ॥ ಅನಂತರದಲ್ಲಿ ಪರಪ್ರಾಣಿಗಳಿಗೆ ಪ್ರಯೋಜನಕರವಾದ ಸಂಪತ್ತಿಗೋಸ್ಕರ (ಆತ್ಮಕಲ್ಯಾಣಕ್ಕೋಸ್ಕರ) ಧರ್ಮಮಾರ್ಗೋಪದೇಶವನ್ನು ಮಾಡುವುದಕ್ಕಾಗಿ ತೀರ್ಥವಿಹಾರವನ್ನು ಮಾಡಿದ ಈ ಕೇವಲಿಗೆ ಯೋಗತ್ಯಾಗವೆಂಬ ಶ್ರೇಷ್ಠವಾದ ಕ್ರಿಯೆಯುಂಟಾಗುವುದು.

**ವಿಹಾರಸ್ಯೋಪಸಂಹಾರಃ ಸಂಹೃತಿಶ್ಚ [೪]ಸಭಾವನೇಃ ।**
**[೫]ವೃತ್ತಿಶ್ಚ ಯೋಗರೋಧಾರ್ಥಾ ಯೋಗತ್ಯಾಗಃ ಸ ಉಚ್ಯತೇ ॥ ೩೦೬ ॥**

ವಿಹಾರದ ಉಪಸಂಹಾರವೂ ಸಮವಸರಣಸಭಾಭೂಮಿಯ ತ್ಯಾಗವೂ ಮನೋವಾಕ್ಕಾಯ ವ್ಯಾಪಾರನಿರೋಧವೇ ಪ್ರಯೋಜನವಾಗಿರುವ ಶುಕ್ಲಧ್ಯಾನದಲ್ಲಿರುವಿಕೆಯೂ ಯೋಗತ್ಯಾಗವೆಂದು ಹೇಳಲ್ಪಡುತ್ತದೆ. ಈ ಮೂರೂ ಸೇರಿ ಯೋಗತ್ಯಾಗವೆಂದೆನಿಸುವುದೆಂದರ್ಥವು.

**ಯಚ್ಚ ದಂಡಕವಾಟಾದಿಪ್ರತೀತಾರ್ಥಂ ಕ್ರಿಯಾಂತರಮ್ ।**
**[೬]ತದಂತರ್ಭೂತಮೇವಾದಸ್ತತೋ ನ ಪೃಥಗುಚ್ಯತೇ ॥ ೩೦೭ ॥**

೧ ಸಾಲತ್ರಯವಲಯಃ. ೨ ತಸ್ಯ. ೩ ಪ್ರೋಕ್ತಃ. ೪ ಸಮವಸರಣಸ್ಯ. ೫ ಶುಕ್ಲಧ್ಯಾನವೃತ್ತಿಃ. ೬ ಯೋಗತ್ಯಾಗಕ್ರಿಯಾಯಾಂ.

ದಂಡ ಕವಾಟ ಪ್ರತರ ಲೋಕಪೂರಣಗಳೆಂದು ಪ್ರಸಿದ್ಧವಾದ ಅರ್ಥವುಳ್ಳ ಬೇರೊಂದು ಕ್ರಿಯೆಯು ಆ ಯೋಗತ್ಯಾಗಕ್ರಿಯೆಯಲ್ಲೇ ಸೇರಿದೆ. ಆದುದರಿಂದ ಅದನ್ನು ಬೇರೆಯಾಗಿ ಹೇಳುವುದಿಲ್ಲ.

**ತತೋ ನಿರುದ್ಧನಿಃಶೇಷಯೋಗಸ್ಯಾಸ್ಯ ಜಿನೇಶಿನಃ ।**
**[೧]ಪ್ರಾಪ್ತಶೈಲೇಶ್ಯವಸ್ಥಸ್ಯ ಪ್ರಕ್ಷೀಣಾಘಾತಿಕರ್ಮಣಃ ॥ ೩೦೮ ॥**

**ಕ್ರಿಯಾಗ್ರನಿರ್ವೃತಿರ್ನಾಮ ಪರಂ ನಿರ್ವಾಣಮಾಪುಷಃ ।**
**ಸ್ವಭಾವಜನಿತಾ[೨]ಮೂರ್ಧ್ವವ್ರಜ್ಯಾ[೩]ಮಾಸ್ಕಂದತೋ ಮತಾ ॥ ೩೦೯ ॥**

ಅನಂತರದಲ್ಲಿ ಮನೋವಾಕ್ಕಾಯವ್ಯಾಪಾರಗಳನ್ನು ಸಂಪೂರ್ಣವಾಗಿ ತಡೆದವನೂ ಮೇರುವಿನಂತೆ ಚಲಿಸದಿರುವವನೂ ಹದಿನೆಂಟುಸಹಸ್ರ ಶೀಲಗಳ ಪ್ರಭುತ್ವವನ್ನು ಪಡೆದವನೂ ಅಘಾತಿರ್ಮಗಳ ನಾಶವುಳ್ಳವನೂ ಶ್ರೇಷ್ಠವಾದ ಕೈವಲ್ಯವನ್ನು ಹೊಂದಿದವನೂ ಸ್ವಭಾವದಿಂದುಂಟಾದ ಊರ್ಧ್ವಗಮನವನ್ನು ಹೊಂದುವವನೂ ಆದ ಈ ಜಿನೇಶ್ವರನಿಗೆ ಅಗ್ರನಿರ್ವೃತಿಯೆಂಬ ಕ್ರಿಯೆಯು ಹೇಳಲ್ಪಟ್ಟಿದೆ.

**ಇತಿ ನಿರ್ವಾಣಪರ್ಯಂತಾಃ ಕ್ರಿಯಾ ಗರ್ಭಾದಿಕಾಃ ಸ್ಮೃತಾಃ ।**
**ಭವ್ಯಾತ್ಮಭಿರನುಷ್ಠೇಯಾಸ್ತ್ರಿಪಂಚಾಶತ್ಸಮುಚ್ಚಯಾತ್ ॥ ೩೧೦ ॥**

೪೮ ಇತಿ ಅಗ್ರನಿರ್ವೃತಿಕ್ರಿಯಾ ॥ ಈಪ್ರಕಾರವಾಗಿ ಗರ್ಭಾಧಾನವೇ ಮೊದಲಾದುವೂ ಕೈವಲ್ಯವೇ ಕೊನೆಯಾಗಿರುವುವೂ ಆದ ಐವತ್ತುಮೂರು ಕ್ರಿಯೆಗಳನ್ನು ಭವ್ಯಾತ್ಮರು ಅನುಷ್ಠಿಸಬೇಕು–ಆಚರಿಸಬೇಕು ॥ ಗರ್ಭಾನ್ವಯ ಕ್ರಿಯೆಗಳು ಸಮಾಪ್ತವಾದುವು.

**ಯಥೋಕ್ತವಿಧಿನೈತಾಃ ಸ್ಯುರನುಷ್ಠೇಯಾ ದ್ವಿಜನ್ಮಭಿಃ ।**
**ಯೋಽಪ್ಯತ್ರಾಂತರ್ಗತೋ ಭೇದಸ್ತಂ ವಚ್ಮ್ಯುತ್ತರಪರ್ವಣಿ ॥ ೩೧೧ ॥**

ದ್ವಿಜರು ಈ ಮೇಲೆ ಹೇಳಲ್ಪಟ್ಟ ೫೩ ಕ್ರಿಯೆಗಳನ್ನು ಶಾಸ್ತ್ರೋಕ್ತವಿಧಿಯಿಂದ ಆಚರಿಸಬೇಕು. ಈ ೫೩ ಕ್ರಿಯೆಗಳಲ್ಲಿ ಅಂತರ್ಗತವಾಗಿರುವ ಭೇದವನ್ನು ಮುಂದಿನ ಪರ್ವದಲ್ಲಿ ಹೇಳುತ್ತೇನೆ.

**ಇತ್ಯುಚ್ಚೈರ್ಭರತಾಧಿಪಃ ಸ್ವಸಮಯೇ ಸಂಸ್ಥಾಪಯಂಸ್ತಾನ್ ದ್ವಿಜಾನ್**
**ಸಂಪ್ರೋವಾಚ ಕೃತೀ ಸತಾಂ ಬಹುಮತಾ [೪]ಗರ್ಭಾನ್ವಯೋತ್ಥಾಃ ಕ್ರಿಯಾಃ ।**
**ಗರ್ಭಾದ್ಯಾಃ [೫]ಪರಿನಿರ್ವೃತಿಪ್ರಗಮನಪ್ರಾಂತಾಸ್ತ್ರಿಪಂಚಾಶತಂ**
**ಪ್ರಾರೇಭೇ ಚ ಪುನಃ ಪ್ರವಕ್ತುಮುಚಿತಾ ದೀಕ್ಷಾನ್ವಯಾಖ್ಯಾಃ ಕ್ರಿಯಾಃ ॥**

ಮೇಲೆ ಹೇಳಲ್ಪಟ್ಟ ಆ ದ್ವಿಜರನ್ನು ತನ್ನಕಾಲದಲ್ಲಿ ಸ್ಥಾಪಿಸುವವನೂ ಪುಣ್ಯಶಾಲಿಯೂ ಆದ ಭರತೇಶ್ವರನು ಸತ್ಪುರುಷರಿಗೆ ಸಮ್ಮತಗಳೂ ಗರ್ಭಾನ್ವಯವೇ ಮೊದಲಾದುವೂ ಮೋಕ್ಷಗಮನವೇ ಕೊನೆಯಾಗಿರುವುವೂ ಗರ್ಭಾನ್ವಯದಲ್ಲುಂಟಾದುವೂ ಆದ ಐವತ್ತುಮೂರು ಕ್ರಿಯೆಗಳನ್ನು ಮೇಲೆ ಹೇಳಿದ ಪ್ರಕಾರವಾಗಿ ಚೆನ್ನಾಗಿ ಹೇಳಿದನು. ಬಳಿಕ ಯೋಗ್ಯವಾದ ದೀಕ್ಷಾನ್ವಯಗಳೆಂಬ ಕ್ರಿಯೆಗಳನ್ನು ಹೇಳುವುದಕ್ಕೆ ಪ್ರಾರಂಭಿಸಿದನು.

**ಯಸ್ತ್ವೇತಾ ದ್ವಿಜಸತ್ತಮೈರಭಿಮತಾ ಗರ್ಭಾದಿಕಾಃ ಸತ್ಕ್ರಿಯಾಃ**
**ಶ್ರುತ್ವಾ ಸಮ್ಯಗಧೀತ್ಯ ಭಾವಿತಮತಿರ್ಜೈನೇಶ್ವರೇ ದರ್ಶನೇ ।**
**ಸಾಮಗ್ರೀಮುಚಿತಾಂ ಸ್ವತಶ್ಚ ಪರತಃ ಸಂಪಾದಯನ್ನಾಚರೇ-**
**ದ್ಭವ್ಯಾತ್ಮಾ ಸ ಸಮಗ್ರಧೀಸ್ತ್ರಿಜಗತೀಚೂಡಾಮಣಿತ್ವಂ ಭಜೇತ್ ॥ ೩೧೩ ॥**

೧ ಮೇರ್ವವಸ್ಥಿತಸ್ಯ, ಶೀಲೇಶಿತ್ವಾವಸ್ಥಿತಸ್ಯ, ಪ್ರಾಪ್ತಾಷ್ಟಾದಶಸಹಸ್ರಶೀಲೇಶಿತ್ವಾವಸ್ಥಿತಸ್ಯ. ೨ ಊರ್ಧ್ವಗಮನಂ. ೩ ಗಚ್ಛತಃ. ೪ ಗರ್ಭಾನ್ವಯೋರ್ಥಾ ಇತ್ಯಪಿ ಪಾಠಃ. ೫ ಅಗ್ರನಿರ್ವೃತಿಗತ್ಯವಸಾನಾಃ.

ಜಿನೇಶ್ವರಸಂಬಂಧವಾದ ಮತದಲ್ಲಿ ನಂಬಿಕೆಯಾದ ಬುದ್ಧಿಯುಳ್ಳವನಾದ ಯಾವನು ದ್ವಿಜಶ್ರೇಷ್ಠರಿಂದ ಸಮ್ಮತವಾದ ಈ ಗರ್ಭಾನ್ವಯವೇ ಮೊದಲಾದ ಶ್ರೇಷ್ಠಕ್ರಿಯೆಗಳನ್ನು ಕೇಳಿ ಚೆನ್ನಾಗಿ ಅಧ್ಯಯನಮಾಡಿ ತನ್ನಿಂದಲೂ ಬೇರೆಯವರಿಂದಲೂ ಉಚಿತವಾದ ಸಾಮಗ್ರಿಯನ್ನು ಸಂಪಾದಿಸುವವನಾಗಿ ಆಚರಿಸುವನೋ ಸಂಪೂರ್ಣಬುದ್ಧಿಯುಳ್ಳವನಾದ ಆ ಭವ್ಯಾತ್ಮನು ಮೂರುಲೋಕಕ್ಕೆ ಕಿರೀಟರತ್ನದ ಭಾವವನ್ನು ಹೊಂದುವನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ದ್ವಿಜೋತ್ಪತ್ತೌ ಗರ್ಭಾನ್ವಯಕ್ರಿಯಾವರ್ಣನಂ ನಾಮಾಷ್ಟತ್ರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ದ್ವಿಜೋತ್ಪತ್ತಿಯಲ್ಲಿ ಗರ್ಭಾನ್ವಯಕ್ರಿಯಾವರ್ಣನವೆಂಬ ಮೂವತ್ತೆಂಟನೆಯ ಪರ್ವವು ಸಂಪೂರ್ಣವಾದುದು.

---

|| ಶ್ರೀ ವೃಷಭಜಿನಾಯ ನಮಃ ||

# ಅಥೈಕೋನಚತ್ವಾರಿಂಶತ್ತಮಂ ಪರ್ವ

**ಅಥಾಬ್ರವೀದ್ದ್ವಿಜನ್ಮಭ್ಯೋ [೧]ಮನುರ್ದೀಕ್ಷಾನ್ವಯಕ್ರಿಯಾಃ ।**
**ಯಾಸ್ತಾ [೨]ನಿಃಶ್ರೇಯಸೋದರ್ಕಾಶ್ಚತ್ವಾರಿಂಶದಥಾಷ್ಟ ಚ || ೧ ||**

ಗರ್ಭಾನ್ವಯಕ್ರಿಯೆಗಳನ್ನು ಹೇಳಿದನಂತರದಲ್ಲಿ ಭರತಚಕ್ರೇಶ್ವರನು ಮೋಕ್ಷವೇ ಉತ್ತರಫಲವಾಗಿರುವ ನಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳನ್ನು ದ್ವಿಜರಿಗೆ ಹೇಳಿದನು.

**ಶ್ರೂಯತಾಂ ಭೋ ದ್ವಿಜನ್ಮಾನೋ ವಕ್ಷ್ಯೇ [೩]ನೈಶ್ರೇಯಸೀಃ ಕ್ರಿಯಾಃ ।**
**ಅವತಾರಾದಿನಿರ್ವಾಣಪರ್ಯಂತಾ [೪]ದೀಕ್ಷಿತೋಚಿತಾಃ || ೨ ||**

''ಎಲೈ ದ್ವಿಜರೆ! ಮೋಕ್ಷಕ್ಕೆ ಕಾರಣಗಳಾದ ಅವತಾರಕ್ರಿಯೆಯೇ ಮೊದಲುಗೊಂಡು ನಿರ್ವಾಣಕ್ರಿಯೆಯೇ ಕೊನೆಯಾಗಿರುವುವೂ ದೀಕ್ಷೆಗೆ ಉಚಿತಗಳೂ ಆದ ಕ್ರಿಯೆಗಳನ್ನು ಹೇಳುವೆನು. ಕೇಳಿರಿ.

**[೫]ವ್ರತಾವಿಷ್ಕರಣಂ ದೀಕ್ಷಾ ದ್ವಿಧಾಮ್ನಾತಂ ಚ ತದ್ವ್ರತಮ್ ।**
**ಮಹಚ್ಚಾಣು ಚ ದೋಷಾಣಾಂ ಕೃತ್ಸ್ನದೇಶನಿವೃತ್ತಿತಃ || ೩ ||**

ವ್ರತಗಳ ಸ್ವೀಕಾರವು ದೀಕ್ಷೆಯು. ಆ ವ್ರತವಾದರೋ ಹಿಂಸಾದಿ ದೋಷಗಳನ್ನು ಸಂಪೂರ್ಣವಾಗಿ ಮತ್ತು ಏಕದೇಶವಾಗಿ ಬಿಡುವುದರಿಂದ ಮಹಾವ್ರತವೆಂದೂ ಅಣುವ್ರತವೆಂದೂ ಎರಡುಪ್ರಕಾರವಾಗಿ ಹೇಳಲ್ಪಟ್ಟಿರುತ್ತದೆ.

**ಮಹಾವ್ರತಂ ಭವೇತ್ಕೃತ್ಸ್ನಹಿಂಸಾ[೬]ದ್ಯಾಗೋವಿವರ್ಜನಮ್ ।**
**ವಿರತಿಃ ಸ್ಥೂಲಹಿಂಸಾದಿದೋಷೇಭ್ಯೋಣುವ್ರತಂ ಮತಮ್ || ೪ ||**

ಸಂಪೂರ್ಣಹಿಂಸಾದಿದೋಷಗಳನ್ನು ಬಿಡುವಿಕೆಯು ಮಹಾವ್ರತವಾಗಿರುವುದು. ಸ್ಥೂಲಹಿಂಸಾದಿದೋಷಗಳನ್ನು ಬಿಡುವಿಕೆಯು ಅಣುವ್ರತವೆಂದು ಸಮ್ಮತವಾಗಿರುತ್ತದೆ.

**[೭]ತದುನ್ಮುಖಸ್ಯ ಯಾ ವೃತ್ತಿಃ ಪುಂಸೋ ದೀಕ್ಷೇತ್ಯಸೌ ಮತಾ ।**
**ತಾ[೮]ಮನ್ವಿತಾ ಕ್ರಿಯಾ ಯಾ ತು ಸಾ ಸ್ಯಾದ್ದೀಕ್ಷಾನ್ವಯಕ್ರಿಯಾ || ೫ ||**

ಮಹಾವ್ರತಾಣುವ್ರತಗಳಿಗೆ ಅಭಿಮುಖನಾದ ಪುರುಷನ ನಡೆವಳಿಕೆಯು ದೀಕ್ಷೆಯೆಂದು ಹೇಳಲ್ಪಟ್ಟಿದೆ. ಆ ದೀಕ್ಷೆಯನ್ನು ಅನುಸರಿಸಿದ ಯಾವ ಕ್ರಿಯೆಯುಂಟೋ ಅದು ದೀಕ್ಷಾನ್ವಯಕ್ರಿಯೆಯಾಗಿರುವುದು.

**ತಸ್ಯಾಸ್ತು ಭೇದಸಂಖ್ಯಾನಂ ಪ್ರಾಜ್ಞೈರ್ನೀತಂ [೯]ಷಡಷ್ಟಕಮ್ ।**
**ಕ್ರಿಯತೇ ತದ್ವಿಕಲ್ಪಾನಾಮಧುನಾ ಲಕ್ಷ್ಮವರ್ಣನಮ್ || ೬ ||**

ಆ ದೀಕ್ಷಾನ್ವಯಕ್ರಿಯೆಯ ಭೇದಗಳ ಎಣಿಕೆಯಾದರೋ ನಲ್ವತ್ತೆಂಟೆಂಬುದಾಗಿ ಮೊದಲು ನಿರ್ಣಯಿಸಲ್ಪಟ್ಟಿರುತ್ತದೆ. ಈಗ ಆ ಭೇದಗಳ ಲಕ್ಷಣಗಳ ವರ್ಣನೆಯು ಮಾಡಲ್ಪಡುವುದು.

**[೧೦]ತತ್ರಾವತಾರಸಂಜ್ಞಾ ಸ್ಯಾದಾದ್ಯಾ ದೀಕ್ಷಾನ್ವಯಕ್ರಿಯಾ ।**
**ಮಿಥ್ಯಾತ್ವದೂಷಿತೇ ಭವ್ಯೇ ಸನ್ಮಾರ್ಗಗ್ರಹಣೋನ್ಮುಖೇ || ೭ ||**

ಆ ಕ್ರಿಯೆಗಳಲ್ಲಿ ಅವತಾರವೆಂಬ ಹೆಸರುಳ್ಳ ಮೊದಲನೆಯದಾದ ದೀಕ್ಷಾನ್ವಯಕ್ರಿಯೆಯು ಸನ್ಮಾರ್ಗವನ್ನು ಗ್ರಹಣಮಾಡುವುದಕ್ಕೆ ಸಿದ್ಧನಾಗಿರುವವನೂ ಮಿಥ್ಯಾತ್ವದಿಂದ ದೂಷಿತನೂ ಆದ ಭವ್ಯಾತ್ಮನಲ್ಲಿ ಉಂಟಾಗುವುದು.

೧ ಭರತಃ. ೨ ನಿಃಶ್ರೇಯಸಂಮೋಕ್ಷಃ, ಉದರ್ಕಃ ಉತ್ತರಫಲಂ ಯಾಸು ತಾಃ. ೩ ಮೋಕ್ಷಹೇತೂನ್. ೪ ದೀಕ್ಷೋಚಿತಾಃ. ೫ ವ್ರತಸ್ವೀಕಾರಃ. ೬ ಅಪರಾಧಃ. ೭ ಮಹಾಣುವ್ರತಾಭಿಮುಖಸ್ಯ. ೮ ಅನುಗತಾ. ೯ ಅಷ್ಟಚತ್ವಾರಿಂಶತ್. ೧೦ ಕ್ರಿಯಾಸು.

**ಸ ತು ಸಂಶ್ರಿತ್ಯ ಯೋಗೀಂದ್ರಂ ಯುಕ್ತಾಚಾರಂ ಮಹಾಧಿಯಮ್ ।**
**ಗೃಹಸ್ಥಾಚಾರ್ಯಮಥವಾ ಪೃಚ್ಛತೀ[೧]ತಿ ವಿಚಕ್ಷಣಃ || ೮ ||**

ವಿವೇಕಶಾಲಿಯಾದ ಆ ಭವ್ಯಾತ್ಮನಾದರೋ ಯೋಗ್ಯವಾದ ಆಚರಣೆಯುಳ್ಳವನೂ ಮಹಾಬುದ್ಧಿಶಾಲಿಯೂ ಆದ ಯೋಗಿಶ್ರೇಷ್ಠನನ್ನು ಅಥವಾ ಗೃಹಸ್ಥಾಚಾರ್ಯನನ್ನು ಹೊಂದಿ ಮುಂದೆ ಹೇಳುವ ಪ್ರಕಾರವಾಗಿ ಕೇಳುತ್ತಾನೆ.

**ಬ್ರೂತ ಯೂಯಂ ಮಹಾಪ್ರಜ್ಞಾ ಮಹ್ಯಂ ಧರ್ಮ[೨]ಮನಾವಿಲಮ್ ।**
**ಪ್ರಾಯೋ ಮತಾನಿ [೩]ತೀರ್ಥ್ಯಾನಾಂ ಹೇಯಾನಿ ಪ್ರತಿಭಾಂತಿ ಮಾಮ್ ||**

''ಮಹಾಬುದ್ಧಿಶಾಲಿಗಳಾದ ನೀವು ನನಗೆ ನಿರ್ದೋಷವಾದ ಧರ್ಮವನ್ನು ಹೇಳಿರಿ. ಮಿಥ್ಯಾಮತೀಯರ ಮತಗಳು ಬಹಳಮಟ್ಟಿಗೆ ನನಗೆ ಹೇಯಗಳಾಗಿ ತೋರುತ್ತವೆ.

**[೪]ಶ್ರೌತಾನ್ಯಪಿ ಹಿ ವಾಕ್ಯಾನಿ ಸಮ್ಮತಾನಿ ಕ್ರಿಯಾವಿಧೌ ।**
**ನ ವಿಚಾರಸಹಿಷ್ಣೂನಿ [೫]ದುಷ್ಪ್ರಣೀತಾನಿ [೬]ತಾನ್ಯಪಿ || ೧೦ ||**

ಕ್ರಿಯಾವಿಧಿಯಲ್ಲಿ ಹೇಳಲ್ಪಟ್ಟ ವೇದಸಂಬಂಧಿಗಳಾದ ವಾಕ್ಯಗಳು ಕೂಡ ವಿಚಾರವನ್ನು ಸಹಿಸತಕ್ಕುವುಗಳಾಗಿಲ್ಲ. ಅವುಗಳೂ ದುಷ್ಟರಿಂದ ರಚಿಸಲ್ಪಟ್ಟುವುಗಳಾಗಿರುತ್ತವೆ.''

**ಇತಿ ಪೃಷ್ಟವತೇ ತಸ್ಮೈ ವ್ಯಾಚಷ್ಟೇ [೭]ಸ ವಿದಾಂವರಃ ।**
**ತಥ್ಯಂ ಮುಕ್ತಿಪಥಂ ಧರ್ಮಂ ವಿಚಾರಪರಿನಿಷ್ಠಿತಮ್ || ೧೧ ||**

ಆ ಯೋಗಿಂದ್ರನು ಮೇಲೆ ಹೇಳಿದ ಪ್ರಕಾರವಾಗಿ ಕೇಳಿದ ಆ ಭವ್ಯಾತ್ಮನಿಗೆ ವಿಚಾರಪರಿಪೂರ್ಣವೂ ಸತ್ಯವೂ ಮೋಕ್ಷಕ್ಕೆ ಮಾರ್ಗವೂ ಆದ ಧರ್ಮವನ್ನು ಹೇಳಿದನು.

**ವಿದ್ಧಿ [೮]ಸತ್ಯೋದ್ಯಮಾಪ್ತೀಯಂ ವಚಃ ಶ್ರೇಯೋನುಶಾಸನಮ್ ।**
**ಅನಾಪ್ತೋಪಜ್ಞಮನ್ಯತ್ತು ವಚೋ ವಾಙ್ಮಲಮೇವ ತತ್ || ೧೨ ||**

''ಶ್ರೇಯಸ್ಸನ್ನು ಉಪದೇಶಿಸುವ ಆಪ್ತನ ಸಂಬಂಧಿಯಾದ ವಚನವನ್ನು ಸತ್ಯವಚನವನ್ನಾಗಿ ತಿಳಿ. ಆಪ್ತರಲ್ಲದವರಿಂದ ಉಪದೇಶಿಸಲ್ಪಟ್ಟ ಬೇರೆ ಆ ವಚನವಾದರೋ ವಚನಮಲವೇ ಆಗಿರುವುದು.

**ವಿರಾಗಃ ಸರ್ವವಿತ್ಸಾರ್ವಃ ಸೂಕ್ತಸೂನೃತಪೂತವಾಕ್ ।**
**ಆಪ್ತಃ ಸನ್ಮಾರ್ಗದೇಶೀ ಯಸ್ತದಾಭಾಸಾಸ್ತತೋ[೯]ಪರೇ || ೧೩ ||**

ಯಾವನು ರಾಗರಹಿತನೂ ಸರ್ವಜ್ಞನೂ ಸಕಲಪ್ರಾಣಿಗಳಿಗೆ ಹಿತಕರನೂ ಯುಕ್ತಿಯುಕ್ತವೂ ಸತ್ಯವೂ ಪವಿತ್ರವೂ ಆದ ವಚನವುಳ್ಳವನೂ ಸನ್ಮಾರ್ಗವನ್ನು ಬೋಧಿಸುವವನೂ ಆಗಿರುತ್ತಾನೋ ಅವನು ಆಪ್ತನು. ಅವನಿಗಿಂತ ಬೇರೆಯವರು ಅಪ್ತಾಭಾಸರು ನಿಜವಾದ ಆಪ್ತರಲ್ಲ.

**ರೂಪತೇಜೋಗುಣಸ್ಥಾನಧ್ಯಾನ[೧೦]ಲಕ್ಷ್ಮ್ಯನುವರ್ತಿಭಿಃ ।**
**[೧೧]ಕಾಂಕ್ಷ್ಯತಾವಿಜಯಜ್ಞಾನದೃಷ್ಟಿವೀರ್ಯಸುಖಾಮೃತೈಃ || ೧೪ ||**

೧ ವಕ್ಷ್ಯಮಾಣಪ್ರಕಾರೇಣ. ೨ ನಿರ್ದೋಷಂ. ೩ ಕುಮತವರ್ತಿನಾಂ. ೪ ವೇದಸಂಬಂಧೀನಿ. ೫ ದುಷ್ಟೈಃ ಪ್ರಣೀತಾನಿ. ೬ ಪ್ರಸಿದ್ಧಾನಿ. ೭ ಯೋಗೀಂದ್ರಃ. ೮ ಸತ್ಯವಚನಂ. ೯ ಏವಂ ವಿಧಲಕ್ಷಣಾದಾಪ್ತಾದನ್ಯ. ೧೦ ಸಮವಸರಣ. ೧೧ ಆದರಣೀಯತಾ.

**ಪ್ರಕೃಷ್ಟೋ ಯೋ ಗುಣೈರೇಭಿಶ್ಚಕ್ರಿಕಲ್ಪಾಧಿಪಾದಿಷು ।**
**ಸ ಆಪ್ತಃ ಸ ಚ ಸರ್ವಜ್ಞಃ ಸ ಲೋಕಪರಮೇಶ್ವರಃ ॥ ೧೫ ॥**

ಯಾವನು ಚಕ್ರವರ್ತಿ ದೇವೇಂದ್ರರೇ ಮೊದಲಾದವರಲ್ಲಿ ರೂಪ ತೇಜಸ್ಸು ಗುಣಸ್ಥಾನ ಧ್ಯಾನ ಸಮವಸರಣಸಂಪತ್ತಿಗಳನ್ನು ಅನುಸರಿಸಿರುವುವೂ ಆದರ ಣೀಯತ್ವ(ಸೌಂದರ್ಯ) ವಿಜಯ ಜ್ಞಾನ ದರ್ಶನ ಬಲ ಸುಖ ಮರಣ ರಹಿತತ್ವ ಗಳುಳ್ಳುವೂ ಆದ ಈ ಗುಣಗಳಿಂದ ಶ್ರೇಷ್ಠನಾಗಿರುತ್ತಾನೋ ಅವನು ಆಪ್ತನು. ಅವನೇ ಸರ್ವಜ್ಞನು. ಅವನೇ ಲೋಕಕ್ಕೆ ಪರಮೇಶ್ವರನು.

**ತತಃ ಶ್ರೇಯೋರ್ಥಿನಾಂ ಶ್ರೇಯಂ ಮತಮಾಪ್ತಪ್ರಣೇತೃಕಮ್ ।**
**ಅವ್ಯಾಹತ[೧]ಮನಾಲೀಢಪೂರ್ವಂ ಸರ್ವಜ್ಞಮಾನಿಭಿಃ ॥ ೧೬ ॥**

ಆದುದರಿಂದ ತಾವು ಸರ್ವಜ್ಞರೆಂದು ಅಹಂಕಾರ ಪಡುವವರಿಂದ ಮೊದಲು ಸ್ಪರ್ಶಿಸಲ್ಪಡದಿರುವುದೂ ಅಬಾಧಿತವೂ ಆಪ್ತನೇ ಉಪದೇಶಕನಾಗಿಯುಳ್ಳುದೂ ಆದ ಮತವು ಶ್ರೇಯಃಕಾಂಕ್ಷಿಗಳಿಗೆ ಶ್ರೇಯಸ್ಕರವು.

**[೨]ಹೇತ್ವಾಜ್ಞಾಯುಕ್ತ[೩]ಮದ್ವೈತಂ ದೀಪ್ತಂ ಗಂಭೀರಶಾಸನಮ್ ।**
**ಅಲ್ಪಾಕ್ಷರ[೪]ಮಸಂದಿಗ್ಧಂ ವಾಕ್ಯಂ ಸ್ವಾಯಂಭುವಂ ವಿದುಃ ॥ ೧೭ ॥**

ಯುಕ್ತಿ ಆಗಮ ಪರಮಾಗಮಗಳಿಂದ ಯುಕ್ತವೂ ಅದ್ವಿತೀಯವೂ ಪ್ರಕಾಶ ಮಾನವೂ ಗಂಭೀರವಾದ ಉಪದೇಶವುಳ್ಳುದೂ ಸ್ವಲ್ಪಾಕ್ಷರಗಳುಳ್ಳುದೂ ಸಂದೇಹ ರಹಿತವೂ ಆದ ವಾಕ್ಯವನ್ನು ಜ್ಞಾನಿಗಳು ಸ್ವಯಂಭು–ದೇವರ ಸಂಬಂಧವಾದ ವಾಕ್ಯವನ್ನಾಗಿ ತಿಳಿಯುತ್ತಾರೆ.

**[೫]ಇತಶ್ಚ ತತ್ಪ್ರಮಾಣಂ ಸ್ಯಾತ್ ಶ್ರುತಮಂತ್ರಕ್ರಿಯಾದಯಃ ।**
**ಪದಾರ್ಥಾಃ ಸುಸ್ಥಿತಾ[೬]ಸ್ತತ್ರ ಯತೋನನ್ಯಮತೋಚಿತಾಃ ॥ ೧೮ ॥**

ಯಾವ ಕಾರಣದಿಂದ ಬೇರೆ ಮತಗಳಿಗೆ ಉಚಿತವಲ್ಲದುವೂ ಶಾಸ್ತ್ರಮಂತ್ರ ಕ್ರಿಯಾದಿಗಳುಳ್ಳುವೂ ಆದ ಪದಾರ್ಥಗಳು ಆ ಜಿನಮತದಲ್ಲಿ ಉತ್ಕೃಷ್ಟವಾಗಿರು ತ್ತವೋ (ಚೆನ್ನಾಗಿ ಹೇಳಲ್ಪಟ್ಟಿರುತ್ತವೋ) ಈ ಆಪ್ತವಚನದಿಂದಲೂ ಆ ವಾಕ್ಯವು ಪ್ರಮಾಣವಾಗುವುದು.

**ಯಥಾಕ್ರಮಮತೋ ಬ್ರೂಮಸ್ತಾನ್ಪದಾರ್ಥಾ[೭]ನ್ಪ್ರಪಂಚತಃ ।**
**[೮]ಯೈಃ [೯]ಸನ್ನಿಕೃಷ್ಯಮಾಣಾಃ ಸ್ಯುರ್ದುಃಸ್ಥಿತಾಃ ಪರಸೂಕ್ತಯಃ ॥ ೧೯ ॥**

ಯಾವ ಪದಾರ್ಥಗಳಿಂದ ಘರ್ಷಣೆಮಾಡಲ್ಪಟ್ಟ ವಿವೇಚಿಸಲ್ಪಟ್ಟ ಬೇರೆಯವರ ಯುಕ್ತಿವಚನಗಳು ದುರ್ವಚನಗಳೆನಿಸಿರುವುವೋ ಅಂತಹ ಪದಾರ್ಥಗಳನ್ನು ವಿಸ್ತಾರವಾಗಿ ಯಥಾಕ್ರಮವಾಗಿ ಹೇಳುತ್ತೇವೆ.

**ವೇದಃ ಪುರಾಣಂ ಸ್ಮೃತಯಶ್ಚಾರಿತ್ರಂ ಚ ಕ್ರಿಯಾವಿಧಿಃ ।**
**ಮಂತ್ರಾಶ್ಚ ದೇವತಾ ಲಿಂಗಮಾಹಾರಾದ್ಯಾಶ್ಚ ಶುದ್ಧಯಃ ॥ ೨೦ ॥**

**[೧೦]ಏತೇರ್ಥಾ ಯತ್ರ ತತ್ತ್ವೇನ ಪ್ರಣೀತಾಃ ಪರಮರ್ಷಿಣಾ ।**
**ಸ ಧರ್ಮಃ ಸ ಚ ಸನ್ಮಾರ್ಗಸ್ತದಾಭಾಸಾಃ ಸ್ಯುರನ್ಯಥಾ ॥ ೨೧ ॥**

ವೇದವೂ ಪುರಾಣವೂ ಸ್ಮೃತಿಗಳೂ ಆಚರಣೆಯೂ ಕ್ರಿಯಾವಿಧಿಯೂ ಮಂತ್ರಗಳೂ ದೇವತೆಗಳೂ ಚಿಹ್ನೆಯೂ ಶುದ್ಧವಾದ ಆಹಾರ ಮೊದಲಾದುವೂ ಪರಮರ್ಷಿಯಿಂದ ಯಾವ ಧರ್ಮದಲ್ಲಿ ಈ ಪದಾರ್ಥಗಳು ಯಥಾರ್ಥ ರೂಪದಿಂದ ರಚಿಸಲ್ಪಟ್ಟಿವೆಯೋ ಅದು ಧರ್ಮವು; ಅದು ಸನ್ಮಾರ್ಗವು. ಬೇರೆ ಪ್ರಕಾರವಾಗಿರುವುವು ಆ ಪದಾರ್ಥಗಳಂತೆ ತೋರುವುವುಗಳಲ್ಲದೆ ನಿಜವಾದುವು ಗಳಲ್ಲ.

೧ ಪೂರ್ವಸ್ಮಿನ್ನಸ್ಪೃಷ್ಟಂ. ೨ ಯುಕ್ತ್ಯಾಗಮಪರಮಾಗಮಾಭ್ಯಾಂ ಕಲಿತಂ. ೩ ಅದ್ವಿತೀಯಂ. ೪ ನಿಸ್ಸಂದೇಹಂ. ೫ ಆಪ್ತವಚನತಃ. ೬ ಜಿನಮತೇ. ೭ ವಿಸ್ತರತಃ. ೮ ಪದಾರ್ಥೈಃ. ೯ ನಿಘರ್ಷಣಂ ಕ್ರಿಯಮಾಣಾಃ ಸಮೀಪಂ ಗಮ್ಯಮಾನಾ ವಾ. ೧೦ ಪದಾರ್ಥಾಃ.

**ಶ್ರುತಂ ಸುವಿಹಿತಂ ವೇದೋ ದ್ವಾದಶಾಂಗಮಕಲ್ಮಷಮ್ ।**
**ಹಿಂಸೋಪದೇಶಿ ಯದ್ವಾಕ್ಯಂ ನ ವೇದೋಸೌ [೧]ಕೃತಾಂತವಾಕ್ ॥ ೨೨ ॥**

ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿರುವುದೂ ದೋಷಗಳಿಲ್ಲದುದೂ ಆಚಾರಾಂಗ ಸೂತ್ರಕೃತಾಂಗ ಮೊದಲಾದ ಹನ್ನೆರಡು ಅಂಗಗಳುಳ್ಳುದೂ ಆದ ಶ್ರುತವು ವೇದವೆನಿಸುವುದು. ಹಿಂಸೆಯನ್ನು ಬೋಧಿಸುವ ವಾಕ್ಯವು ಯಮನ ವಚನವಲ್ಲದೆ ವೇದವಲ್ಲ.

**ಪುರಾಣಂ ಧರ್ಮಶಾಸ್ತ್ರಂ ಚ ತತ್ಸ್ಯಾದ್ವಧನಿಷೇಧಿ ಯತ್ ।**
**ವಧೋಪದೇಶಿ ಯತ್ತತ್ತು ಜ್ಞೇಯಂ ಧೂರ್ತಪ್ರಣೇತೃಕಮ್ ॥ ೨೩ ॥**

ಯಾವ ಶಾಸ್ತ್ರವು ಪ್ರಾಣಿಹಿಂಸೆಯನ್ನು ನಿಷೇಧಿಸುವುದೋ ಅದು ಪುರಾಣವೂ ಧರ್ಮಶಾಸ್ತ್ರವೂ ಆಗುವುದು. ಹಿಂಸೆಯನ್ನು ಬೋಧಿಸುವುದಾವುದೋ ಅದಾ ದರೋ ಧೂರ್ತನಾದ ಉಪದೇಶಕನುಳ್ಳುದೆಂದು ತಿಳಿಯತಕ್ಕುದು.

**ಸಾವದ್ಯವಿರತಿ[೨]ರ್ವೃತ್ತಮಾರ್ಯ[೩]ಷಟ್ಕರ್ಮಲಕ್ಷಣಮ್ ।**
**[೪]ಚಾತುರಾಶ್ರಮ್ಯವೃತ್ತಂ ತು [೫]ಪರೋಕ್ತಮಸ[೬]ದಂಜಸಾ ॥ ೨೪ ॥**

ಸದ್ಗೃಹಸ್ಥರ ದೇವಪೂಜಾದಿಷಟ್ಕರ್ಮಗಳು ಲಕ್ಷಣಗಳಾಗಿರುವ ದೋಷತ್ಯಾಗವು ಚಾರಿತ್ರವಾಗಿರುತ್ತದೆ. ಇತರ ವೈದಿಕರಿಂದ ಹೇಳಲ್ಪಟ್ಟ ಬ್ರಹ್ಮಚಾರೀ ಗೃಹೀ ವಾನಪ್ರಸ್ಥ ಭಿಕ್ಷುಗಳೆಂಬ ನಾಲ್ಕು ಆಶ್ರಮಗಳಲ್ಲುಂಟಾದ ಆಚರಣೆಯಾದರೋ ನಿಶ್ಚಯವಾಗಿ ನಿಕೃಷ್ಟವು.

**ಕ್ರಿಯಾ ಗರ್ಭಾದಿಕಾ ಯಾಸ್ತಾ ನಿರ್ವಾಣಾಂತಾಃ [೭]ಪುರೋದಿತಾಃ ।**
**ಆಧಾನಾದಿಶ್ಮಶಾನಾಂತಾ ನ ತಾಃ ಸಮ್ಯಕ್ಕ್ರಿಯಾ ಮತಾಃ ॥ ೨೫ ॥**

ಗರ್ಭಾಧಾನವು ಮೊದಲಾಗಿ ನಿರ್ವಾಣವು ಕಡೆಯಾಗಿರುವ ಯಾವ ಕ್ರಿಯೆ ಗಳಿರುತ್ತವೋ ಅವು ಸತ್ಕ್ರಿಯೆಗಳು. ಆಪ್ತಾಭಾಸರಿಂದ ಹೇಳಲ್ಪಟ್ಟ ಗರ್ಭಾಧಾನವು ಮೊದಲಾಗಿ ಶ್ಮಶಾನವು ಕಡೆಯಾದ ಆ ಕ್ರಿಯೆಗಳು ಸತ್ಕ್ರಿಯೆಗಳಲ್ಲ.

**ಮಂತ್ರಾಸ್ತ ಏವ ಧರ್ಮ್ಯಾಸು ಯೇ ಕ್ರಿಯಾಸು ನಿಯೋಜಿತಾಃ ।**
**ದುರ್ಮಂತ್ರಾಸ್ತೇ ತು ವಿಜ್ಞೇಯಾ ಯೇ ಯುಕ್ತಾಃ ಪ್ರಾಣಿಮಾರಣೇ ॥**

ಧರ್ಮಾನುಸಾರವಾಗಿರುವ ಕ್ರಿಯೆಗಳಲ್ಲಿ ಯಾವ ಮಂತ್ರಗಳು ಉಪಯೋಗಿ ಸಲ್ಪಟ್ಟಿರುತ್ತವೋ ಅವೇ ಶ್ರೇಷ್ಠವಾದ ಮಂತ್ರಗಳು. ಯಾವ ಮಂತ್ರಗಳು ಪ್ರಾಣಿವಧೆಯಲ್ಲಿ ಉಪಯೋಗಿಸಲ್ಪಡುತ್ತವೋ ಆ ಮಂತ್ರಗಳಾದರೋ ದುರ್ಮಂತ್ರ ಗಳೆಂದು ತಿಳಿಯತಕ್ಕುವು.

**[೮]ವಿಶ್ವೇಶ್ವರಾದಯೋ ಜ್ಞೇಯಾ ದೇವತಾಃ ಶಾಂತಿಹೇತವಃ ।**
**ಕ್ರೂರಾಸ್ತು ದೇವತಾ ಹೇಯಾ ಯಾಸಾಂ ಸ್ಯಾದ್ವೃತ್ತಿ[೯]ರಾಮಿಷೈಃ ॥ ೨೭ ॥**

ಶಾಂತಿಗೆ ಕಾರಣರಾದ ಜಿನಜನನಿಯೇ ಮೊದಲಾದವರು ಉತ್ತಮ ದೇವತೆ ಗಳೆಂದು ತಿಳಿಯತಕ್ಕವರು. ಯಾವ ದೇವತೆಗಳಿಗೆ ಮಾಂಸಗಳಿಂದ ಸಂತೋಷ ವಾಗುವುದೋ ಕ್ರೂರಿಗಳಾದ ಆ ದೇವತೆಗಳಾದರೋ ತ್ಯಾಜ್ಯರು.

**ನಿರ್ವಾಣಸಾಧನಂ ಯತ್ಸ್ಯಾತ್ತ[೧೦]ಲ್ಲಿಂಗಂ ಜಿನದೇಶಿತಮ್ ।**
**[೧೧]ಏಣಾಜಿನಾದಿಚಿಹ್ನಂ ತು ಕುಲಿಂಗಂ ತದ್ಧಿ ವೈಕೃತಮ್ ॥ ೨೮ ॥**

ಯಾವುದು ಜಿನನಿಂದ ಉಪದೇಶಿಸಲ್ಪಟ್ಟುದೂ ಮುಕ್ತಿಗೆ ಸಾಧನವೂ ಆಗಿರು ವುದೋ ಅದು ಉತ್ತಮ ಚಿಹ್ನೆಯಾಗಿರುವುದು. ಜಿಂಕೆಯ ಚರ್ಮಧಾರಣವೇ ಮೊದಲಾದ ಚಿಹ್ನೆಯಾದರೋ ದುಷ್ಟಚಿಹ್ನೆಯಾಗಿರುವುದು. ಅದು ವಿಕಾರಜನ್ಯ ವಾದುದಲ್ಲವೇ ?

೧ ಯಮ. ೨ ಚಾರಿತ್ರಂ. ೩ ಇಜ್ಯಾವಾರ್ತಾದತ್ತಿಸ್ವಾಧ್ಯಾಯಸಂಯಮತಪೋರೂಪ. ೪ ಬ್ರಹ್ಮಚರ್ಯಾದಿಚತುರಾಶ್ರಮೇಷು ಭವ. ೫ ವೈದಿಕೋದಿತಂ. ೬ ನಿಶ್ಚಯೇನ. ೭ ಆಪ್ತಾಭಾಸೋಕ್ತಾಃ. ೮ ಜಿನಜನನ್ಯಾದಯಃ. ೯ ಮಾಂಸೈಃ. ೧೦ ಉರಃ ಶಿರೋಲಿಂಗಾದಿಕಂ ಬ್ರಹ್ಮಸೂತ್ರಾದಿ. ೧೧ ಕೃಷ್ಣಾಜಿನ.

ಸ್ಯಾನ್ನಿರಾಮಿಷಭೋಜಿತ್ವಂ ಶುದ್ಧಿರಾಹಾರಗೋಚರಾ ।
[1]ಸರ್ವಂಕಷಾಸ್ತು ತೇ ಜ್ಞೇಯಾ ಯೇ ಸ್ಯುರಾಮಿಷಭೋಜಿನಃ ॥ ೨೯ ॥

ಮಾಂಸರಹಿತವಾಗಿ ಭೋಜನಮಾಡುವಿಕೆಯು ಆಹಾರವಿಷಯಕವಾದ ಶುದ್ಧಿಯಾಗಿರುವುದು. ಯಾರು ಮಾಂಸ ಭೋಜನಮಾಡುತ್ತಾರೋ ಅಂತಹವರಾದರೋ ಸಕಲಗುಣನಾಶಕರೆಂದು ತಿಳಿಯತಕ್ಕವರಾಗಿರುತ್ತಾರೆ.

ಅಹಿಂಸಾಶುದ್ಧಿರೇಷಾಂ ಸ್ಯಾದ್ಯೇ ನಿಸ್ಸಂಗಾ ದಯಾಲವಃ ।
ರತಾಃ ಪಶುವಧೇ ಯೇ ತು ನ ತೇ ಶುದ್ಧಾ ದುರಾಶಯಾಃ ॥ ೩೦ ॥

ಯಾರು ಪರಿಗ್ರಹಗಳಿಲ್ಲದವರೂ ದಯಾಪರರೂ ಆಗಿರುತ್ತಾರೋ ಇವರಿಗೆ ಅಹಿಂಸೆಯ ಶುದ್ಧಿಯು ಆಗುವುದು. ಯಾರು ಪಶುವಧೆಯಲ್ಲಿ ಆಸಕ್ತರಾಗಿರುತ್ತಾರೋ ದುರಭಿಪ್ರಾಯವುಳ್ಳವರಾದ ಅವರು ಶುದ್ಧರಲ್ಲ.

ಕಾಮಶುದ್ಧಿರ್ಮತಾ ತೇಷಾಂ ವಿಕಾಮಾ ಯೇ ಜಿತೇಂದ್ರಿಯಾಃ ।
ಸಂತುಷ್ಟಾಶ್ಚ ಸ್ವದಾರೇಷು ಶೇಷಾಃ ಸರ್ವೇ ವಿಡಂಬಕಾಃ ॥ ೩೧ ॥

ಯಾರು ವಿಶೇಷವಾದ ಕಾಮ–ಇಚ್ಛೆಯಿಲ್ಲದವರೂ ಜಿತೇಂದ್ರಿಯರೂ ಸ್ವಸ್ತ್ರೀಯರಲ್ಲಿ ಸಂತುಷ್ಟರೂ ಆಗಿರುತ್ತಾರೋ ಅವರಿಗೆ ಕಾಮಶುದ್ಧಿಯು ಹೇಳಲ್ಪಟ್ಟಿದೆ (ಕಾಮಶುದ್ಧಿಯಿರುವುದೆಂದು ಭಾವವು). ಉಳಿದವರೆಲ್ಲರೂ ನಿಂದಕರು–ವಂಚಕರು.

ಇತಿ ಶುದ್ಧಂ ಮತಂ ಯಸ್ಯ ವಿಚಾರಪರಿನಿಷ್ಠಿತಮ್ ।
ಸ ಏವಾಪ್ತ[2]ಸ್ತದುನ್ನೀತೋ ಧರ್ಮಃ [3]ಶ್ರೇಯೋ ಹಿತಾರ್ಥಿನಾಮ್ ॥

ಯಾವನ ವಿಚಾರದಿಂದ ಸ್ಥಿರವಾದ ಮತವು ಮೇಲೆ ಹೇಳಿದಂತೆ ಶುದ್ಧವಾಗಿರುತ್ತದೋ ಅವನೇ ಆಪ್ತನು. ಅವನಿಂದ ಹೇಳಲ್ಪಟ್ಟ ಧರ್ಮವು ಹಿತವನ್ನು ಬಯಸುವವರಿಗೆ ಆಶ್ರಯಿಸುವುದಕ್ಕೆ ಯೋಗ್ಯವಾದುದು.''

ಶ್ರುತ್ವೇತಿ ದೇಶನಾಂ ತಸ್ಮಾದ್ಭವ್ಯೋಸೌ ದೇಶಕೋತ್ತಮಾತ್ ।
ಸನ್ಮಾರ್ಗೇ [4]ರತಿಮಾಧತ್ತೇ ದುರ್ಮಾರ್ಗರತಿಮುತ್ಸೃಜನ್ ॥ ೩೩ ॥

ಆ ಶ್ರೇಷ್ಠವಾದ ಉಪದೇಶಕನಿಂದ ಈ ಪ್ರಕಾರವಾದ ಬೋಧೆಯನ್ನು ಕೇಳಿ ಈ ಭವ್ಯನು ದುರ್ಮಾರ್ಗದಲ್ಲಿ ಪ್ರೀತಿಯನ್ನು ತೊರೆದು ಸನ್ಮಾರ್ಗದಲ್ಲಿ ಪ್ರೀತಿಯನ್ನು ಹೊಂದುತ್ತಾನೆ.

ಗುರು[5]ರ್ಜನಯಿತಾ ತತ್ತ್ವಜ್ಞಾನಂ ಗರ್ಭಃ ಸುಸಂಸ್ಕೃತಃ ।
ತದಾ ತತ್ರಾವತೀರ್ಣೋಸೌ ಭವ್ಯಾತ್ಮಾ [6]ಧರ್ಮಜನ್ಮನಾ ॥ ೩೪ ॥

ಆಗ ಗುರುವು ತಂದೆಯು; ತತ್ತ್ವಜ್ಞಾನವು ಚೆನ್ನಾಗಿ ಶೋಧಿಸಲ್ಪಟ್ಟ ಗರ್ಭವು; ಧರ್ಮವೆಂಬ ಜನ್ಮದಿಂದ ಈ ಭವ್ಯಾತ್ಮನು ಆ ಗರ್ಭದಲ್ಲಿ ಅವತರಿಸಿದನು.

ಅವತಾರಕ್ರಿಯಾ ಸೈಷಾ ಗರ್ಭಾಧಾನವದಿಷ್ಯತೇ ।
[7]ಯತೋ ಜನ್ಮಪರಿಪ್ರಾಪ್ತಿ[8]ರುಭಯತ್ರ ನ [9]ಭಿದ್ಯತೇ ॥ ೩೫ ॥

ಯಾವ ಕಾರಣದಿಂದ ಜನ್ಮಪ್ರಾಪ್ತಿಯು ಮಾತೃಗರ್ಭದಲ್ಲಿಯೂ ಜ್ಞಾನಗರ್ಭದಲ್ಲಿಯೂ ಬೇರೆಯಾಗುವುದಿಲ್ಲವೋ ಆ ಕಾರಣದಿಂದ ಪ್ರಸಿದ್ಧವಾದ ಈ ಅವತಾರಕ್ರಿಯೆಯು ಗರ್ಭಾಧಾನಕ್ರಿಯೆಯಂತೆ ಅಂಗೀಕರಿಸಲ್ಪಟ್ಟಿರುತ್ತದೆ.

ತತೋಸ್ಯ ವೃತ್ತಲಾಭಃ ಸ್ಯಾತ್ತದೈವ ಗುರುಪಾದಯೋಃ ।
ಪ್ರಣತಸ್ಯ ವ್ರತವ್ರಾತಂ [10]ವಿಧಾನೇನೋ[11]ಪಸೇದುಷಃ ॥ ೩೬ ॥

೧ ಇತಿ ಅವತಾರಕ್ರಿಯಾ ॥ ಅನಂತರದಲ್ಲಿ ಆಗಲೇ ಗುರುಪಾದಗಳಿಗೆ ನಮಸ್ಕರಿಸಿದವನೂ ವ್ರತಗಳ ಸಮೂಹವನ್ನು ವ್ರತವನ್ನು ಕೊಡುವ ಶಾಸ್ತ್ರದ ವಿಧಿಯಿಂದ ಹೊಂದುವವನೂ ಆದ ಈ ಭವ್ಯಾತ್ಮನಿಗೆ ವೃತ್ತಲಾಭವಾಗುವುದು.

ತತಃ ಕೃತೋಪವಾಸಸ್ಯ ಪೂಜಾವಿಧಿಪುರಸ್ಸರಃ ।
ಸ್ಥಾನಲಾಭೋ ಭವೇದಸ್ಯ ತತ್ರಾಯಮುಚಿತೋ ವಿಧಿಃ ॥ ೩೭ ॥

೨ ಇತಿ ವೃತ್ತಲಾಭಕ್ರಿಯಾ ॥ ಬಳಿಕ ಉಪವಾಸವನ್ನು ಮಾಡಿದವನಾದ ಈ ಭವ್ಯಾತ್ಮನಿಗೆ ಪೂಜಾವಿಧಿಪೂರ್ವಕವಾದ ಸ್ಥಾನಲಾಭವಾಗುವುದು. ಆ ಸ್ಥಾನಲಾಭದಲ್ಲಿ ಈ ಮುಂದೆ ಹೇಳಲ್ಪಡುವ ವಿಧಿಯು ಯೋಗ್ಯವಾಗಿದೆ.

ಜಿನಾಲಯೇ ಶುಚೌ [1]ರಂಗೇ ಪದ್ಮಮಷ್ಟದಲಂ ಲಿಖೇತ್ ।
ವಿಲಿಖೇದ್ವಾ [2]ಜಿನಾಸ್ಥಾನಮಂಡಲಂ ಸಮವೃತ್ತಕಮ್ ॥ ೩೮ ॥

ಜಿನಮಂದಿರದಲ್ಲಿ ನಿರ್ಮಲವಾದ ಮಂಟಪದಲ್ಲಿ ಎಂಟು ಎಸಳುಗಳುಳ್ಳ ತಾವರೆಯನ್ನು ಬರೆಯಬೇಕು. ಅಥವಾ ಸರಿಯಾಗಿ ದುಂಡಾದ ಜಿನೇಶ್ವರನ ಸಮವಸರಣವನ್ನು ಬರೆಯಬೇಕು.

ಶ್ಲಕ್ಷ್ಣೇನ ಪಿಷ್ಟಚೂರ್ಣೇನ [3]ಸಲಿಲಾಲೋಡಿತೇನ ವಾ ।
[4]ವರ್ತನಂ ಮಂಡಲಸ್ಯೇಷ್ಟಂ ಚಂದನಾದಿದ್ರವೇಣ ವಾ ॥ ೩೯ ॥

ಸಣ್ಣದಾದ ಹಿಟ್ಟಿನ ಚೂರ್ಣದಿಂದಾಗಲಿ ಜಲಮಿಶ್ರವಾದ ಹಿಟ್ಟಿನಿಂದಾಗಲಿ ಶ್ರೀಗಂಧವೇ ಮೊದಲಾದುವುಗಳ ದ್ರವದಿಂದಾಗಲಿ ಆ ಮಂಡಲದ ಉದ್ಧರಣವು (ರಚನೆಯು ಅಭೀಷ್ಟವಾಗಿರುತ್ತದೆ).

ತಸ್ಮಿನ್ನಷ್ಟದಲೇ ಪದ್ಮೇ ಜೈನೇ ವಾಸ್ಥಾನಮಂಡಲೇ ।
ವಿಧಿನಾ ಲಿಖಿತೇ ತಜ್ಜ್ಞೈರ್ವಿಷ್ವಗ್ವಿರಚಿತಾರ್ಚನೇ ॥ ೪೦ ॥

ಎಲ್ಲಾಕಡೆಗಳಲ್ಲಿಯೂ ಮಾಡಲ್ಪಟ್ಟ ಪೂಜೆಯುಳ್ಳುದೂ ವಿಧಿಯನ್ನು ತಿಳಿದವರಿಂದ ವಿಧಿಯಿಂದ ಬರೆಯಲ್ಪಟ್ಟುದೂ ಆದ ಆ ಅಷ್ಟದಲಕಮಲದಲ್ಲಾಗಲಿ ಜಿನೇಶ್ವರನ ಸಂಬಂಧಿಯಾದ ಸಮವಸರಣದಲ್ಲಾಗಲಿ

ಜಿನಾರ್ಚಾಭಿಮುಖಂ ಸೂರಿರ್ವಿಧಿನೈನಂ ನಿವೇಶಯೇತ್ ।
ತವೋಪಾಸಕದೀಕ್ಷೇಯಮಿತಿ ಮೂರ್ಧ್ನಿ ಮುಹುಃ ಸ್ಪೃಶನ್ ॥ ೪೧ ॥

ಉಪಾಧ್ಯಾಯನು ಜಿನಬಿಂಬದ ಮುಂದೆ ''ನಿನಗೆ ಇದು ಉಪಾಸಕದೀಕ್ಷೆಯಾಗಿರುತ್ತದೆ'' ಎಂದು ಮಸ್ತಕದಲ್ಲಿ ಬಾರಿಬಾರಿಗೆ ಸ್ಪರ್ಶಿಸುವವನಾಗಿ ವಿಧಿಯಿಂದ ಈ ಶ್ರಾವಕನನ್ನು ಕುಳ್ಳಿರಿಸಬೇಕು.

[5]ಪಂಚಮುಷ್ಟಿವಿಧಾನೇನ ಸ್ಪೃಷ್ಟ್ವೈನ[6]ಮಧಿಮಸ್ತಕಮ್ ।
ಪೂತೋಸಿ ದೀಕ್ಷಯೇತ್ಯುಕ್ತ್ವಾ ಸಿದ್ಧಶೇಷಾಂ ಚ [7]ಲಂಭಯೇತ್ ॥

ಪಂಚಗುರುಮುದ್ರಾವಿಧಾನದಿಂದ ಈ ಉಪಾಸಕನನ್ನು ಮಸ್ತಕದಲ್ಲಿ ಮುಟ್ಟಿ ''ದೀಕ್ಷೆಯಿಂದ ಪವಿತ್ರನಾಗಿರುತ್ತಿ'' ಎಂಬುದಾಗಿ ಹೇಳಿ ಸಿದ್ಧಶೇಷೆಯನ್ನು ಹೊಂದಿಸಬೇಕು. ಮಸ್ತಕದ ಮೇಲೆ ಹಾಕಬೇಕೆಂದು ಭಾವವು.

ತತಃ ಪಂಚನಮಸ್ಕಾರಪದಾನ್ಯಸ್ಮಾಯುಪಾದಿಶೇತ್ ।
ಮಂತ್ರೋಯಮಖಿಲಾ[8]ತ್ಪಾಪಾತ್ತ್ವಾಂ [9]ಪುನೀತಾದಿತೀ[10]ರಯನ್ ॥

ಅನಂತರದಲ್ಲಿ ''ಈ ಮಂತ್ರವು ಸಮಸ್ತಪಾಪದಿಂದ ನಿನ್ನನ್ನು ಪವಿತ್ರನನ್ನಾಗಿ ಮಾಡುವುದು'' ಎಂದು ಹೇಳುವವನಾಗಿ ಪಂಚನಮಸ್ಕಾರಪದಗಳನ್ನು ಈ ಉಪಾಸಕನಿಗೆ ಉಪದೇಶಿಸಬೇಕು.

೧ ಸಕಲವಿನಾಶಕಾಃ. ೨ ತತ್ಪ್ರೋಕ್ತಃ. ೩ ಆಶ್ರಯಿತುಂ ಯೋಗ್ಯಃ. ೪ ಮತಿಮಿತ್ಯಪಿ ಪಾಠಃ. ೫ ಪಿತಾ. ೬ ಧರ್ಮ ಏವ ಜನ್ಮ ತೇನ. ೭ ಯಸ್ಮಾತ್ಕಾರಣಾತ್. ೮ ಮಾತೃಗರ್ಭೇ ಜ್ಞಾನಗರ್ಭೇ ಚ ಗರ್ಭಾಧಾನಾವತಾರಯೋಃ. ೯ ಭೇದೋ ಜಾಯತೇ. ೧೦ ವ್ರತವಿತರಣಶಾಸ್ತ್ರೋಕ್ತವಿಧಿನಾ. ೧೧ ಉಪಗತಸ್ಯ.

೧ ಮಂಡಪೇ. ೨ ಸಮವಸರಣಂ. ೩ ಜಲಮಿಶ್ರಿತೇನ ವಾ. ೪ ಉದ್ಧರಣಂ. ೫ ಪಂಚಗುರುಮುದ್ರಾವಿಧಾನೇನ. ೬ ಮೂರ್ಧ್ನಿ. ೭ ಪ್ರಾಪಯೇತ್. ೮ ದುಷ್ಕೃತಾದಪಸಾರ್ಯ. ೯ ಪವಿತ್ರಂ ಕುರುತಾತ್. ೧೦ ಬ್ರುವನ್.

**ಕೃತ್ವಾ ವಿಧಿಮಿಮಂ ಪಶ್ಚಾತ್ಪಾರಣಾಯ ವಿಸರ್ಜಯೇತ್ ।**
**ಗುರೋರನುಮತಾತ್ಸೋಽಪಿ ಸಂಪ್ರೀತಃ ಸ್ವಗೃಹಂ ವ್ರಜೇತ್ ॥ ೪೪ ॥**

ಈ ಮೇಲೆ ಹೇಳಿದ ವಿಧಿಯನ್ನು ಮಾಡಿ ಬಳಿಕ ಪಾರಣೆಗೆ ಬಿಡಬೇಕು. ಗುರುವಿನ ಅನುಮತಿಯಿಂದ ಆ ಶ್ರಾವಕನು ಬಹು ಸಂತುಷ್ಟನಾಗಿ ತನ್ನ ಮನೆಗೆ ಹೋಗಬೇಕು.

**[೧]ನಿರ್ದಿಷ್ಟಸ್ಥಾನಲಾಭಸ್ಯ ಪುನರಸ್ಯ ಗಣಗ್ರಹಃ ।**
**ಸ್ಯಾನ್ಮಿಥ್ಯಾದೇವತಾಃ ಸ್ವಸ್ಮಾದ್ವಿನಿಷ್ಕ್ರಾಮಯತೋ ಗೃಹಾತ್ ॥ ೪೫ ॥**

೩ ಇತಿ ಸ್ಥಾನಲಾಭಕ್ರಿಯಾ ॥ ಉಪದೇಶಿಸಲ್ಪಟ್ಟ ಸ್ಥಾನಲಾಭವುಳ್ಳವನೂ ತನ್ನ ಮನೆಯಿಂದ ಮಿಥ್ಯಾದೇವತೆಗಳನ್ನು ಹೊರಡಿಸುವವನೂ ಆದ ಈ ಶ್ರಾವಕನಿಗೆ ಬಳಿಕ ಗಣಗ್ರಹವೆಂಬ ಕ್ರಿಯೆಯಾಗುವುದು.

**ಇಯಂತಂ ಕಾಲಮಜ್ಞಾನಾತ್ಪೂಜಿತಾಃ [೨]ಸ್ಥ ಕೃತಾದರಮ್ ।**
**ಪೂಜ್ಯಾಸ್ತ್ವಿದಾನೀಮಸ್ಮಾಭಿರಸ್ಮತ್ಸಮಯದೇವತಾಃ ॥ ೪೬ ॥**

"ಇಷ್ಟು ಕಾಲದವರೆಗೆ ಅಜ್ಞಾನದಿಂದ ಪ್ರೀತಿಪುರಸ್ಸರವಾಗಿ ಪೂಜಿಸಲ್ಪಟ್ಟವರಾಗಿರುತ್ತೀರಿ. ಈಗ ನಮ್ಮಿಂದ ನಮ್ಮ ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ದೇವತೆಗಳು ಪೂಜಿಸಲ್ಪಡತಕ್ಕವರಾಗಿದ್ದಾರೆ.

**ತತೋಽ[೩]ಪಮೃಷಿತೇನಾಲಮನ್ಯತ್ರ ಸ್ವೈರಮಾಸ್ಯತಾಮ್ ।**
**ಇತಿ [೪]ಪ್ರಕಾಶಮೇವೈತಾ ನೀತ್ವಾನ್ಯತ್ರ ಕ್ವಚಿತ್ತ್ಯಜೇತ್ ॥ ೪೭ ॥**

ಆದುದರಿಂದ ಈರ್ಷೆಯನ್ನು ಅಥವಾ ಕೋಪವನ್ನು ಮಾಡಬೇಡಿ. ಬೇರೆಕಡೆಯಲ್ಲಿ ಮನಸ್ಸುಬಂದಂತೆ ಇರೋಣವಾಗಲಿ" ಈ ಪ್ರಕಾರವಾಗಿ ಹೇಳಿ ಪ್ರಕಟವಾಗಿಯೇ ಈ ಮಿಥ್ಯಾದೇವತೆಗಳನ್ನು ತೆಗೆದುಕೊಂಡುಹೋಗಿ ಬೇರೆಕಡೆಯಲ್ಲಿ ಎಲ್ಲಿಯಾದರೂ ಬಿಡಬೇಕು.

**ಗಣಗ್ರಹಃ ಸ ಏಷಃ ಸ್ಯಾತ್ಪ್ರಾಕ್ತನಂ ದೇವತಾಗಣಮ್ ।**
**ವಿಸೃಜ್ಯಾರ್ಚಯತಃ ಶಾಂತಾ ದೇವತಾಃ [೫]ಸಮಯೋಚಿತಾಃ ॥ ೪೮ ॥**

ಮೊದಲಿನ ದೇವತಾಸಮೂಹವನ್ನು ಬಿಟ್ಟು ತನ್ನ ಮತೋಚಿತಗಳೂ ಶಾಂತಗಳೂ ಆದ ದೇವತೆಗಳನ್ನು ಪೂಜಿಸುವವನಿಗೆ ಪ್ರಸಿದ್ಧವಾದ ಈ ಕ್ರಿಯೆಯು ಗಣಗ್ರಹವಾಗಿರುವುದು.

**ಪೂಜಾರಾಧ್ಯಾಖ್ಯಯಾ ಖ್ಯಾತಾ ಕ್ರಿಯಾಸ್ಯ ಸ್ಯಾದತಃ ಪರಾ ।**
**ಪೂಜೋಪವಾಸಸಂಪತ್ತ್ಯಾ ಶೃಣ್ವತೋಽಂ[೬]ಗಾರ್ಥಸಂಗ್ರಹಮ್ ॥ ೪೯ ॥**

೪ ಇತಿ ಗಣಗ್ರಹಕ್ರಿಯಾ ॥ ಪೂಜಾ ಮತ್ತು ಉಪವಾಸಸಂಪತ್ತಿಯಿಂದ ಆಚಾರಾದಿ ದ್ವಾದಶಾಂಗಗಳ ಅರ್ಥಗಳ ಸಮೂಹವನ್ನು ಕೇಳುವವನಾದ ಈ ಶ್ರಾವಕನಿಗೆ ಇದಕ್ಕಿಂತ ಬೇರೆಯಾದ ಪೂಜಾರಾಧ್ಯವೆಂಬ ಹೆಸರಿನಿಂದ ಪ್ರಸಿದ್ಧವಾದ ಕ್ರಿಯೆಯಾಗುವುದು.

**ತತೋಽನ್ಯಾ ಪುಣ್ಯಯಜ್ಞಾಖ್ಯಾ ಕ್ರಿಯಾ ಪುಣ್ಯಾನುಬಂಧಿನೀ ।**
**ಶೃಣ್ವತಃ [೭]ಪೂರ್ವವಿದ್ಯಾನಾಮರ್ಥಂ [೮]ಸಬ್ರಹ್ಮಚಾರಿಣಃ ॥ ೫೦ ॥**

೫ ಇತಿ ಪೂಜಾರಾಧ್ಯಕ್ರಿಯಾ ॥ ಸಹಪಾಠಿಗಳೊಡನೆ ಕೂಡಿರುವವನೂ ಚತುರ್ದಶಪೂರ್ವಗಳೆಂಬ ಶಾಸ್ತ್ರಗಳನ್ನು ಕೇಳುವವನೂ ಆದ ಈ ಶ್ರಾವಕನಿಗೆ ಪುಣ್ಯಬಂಧವನ್ನುಂಟುಮಾಡುವುದೂ ಪೂಜಾರಾಧ್ಯಕ್ರಿಯೆಗಿಂತ ಬೇರೆಯೂ ಆದ ಪುಣ್ಯಯಜ್ಞವೆಂಬ ಕ್ರಿಯೆಯಾಗುವುದು.

**ತಥಾಸ್ಯ ದೃಢಚರ್ಯಾ ಸ್ಯಾತ್ಕ್ರಿಯಾ ಸ್ವಸಮಯಶ್ರುತಮ್ ।**
**[೧]ನಿಷ್ಠಾಪ್ಯ ಶೃಣ್ವತೋ ಗ್ರಂಥಾ[೨]ನ್ಬಾಹ್ಯಾನನ್ಯಾಂಶ್ಚ ಕಾಂಶ್ಚನ ॥ ೫೧ ॥**

೬ ಇತಿ ಪುಣ್ಯಯಜ್ಞಕ್ರಿಯಾ ॥ ತನ್ನ ಮತಶಾಸ್ತ್ರವನ್ನು ಸಂಪೂರ್ಣವಾಗಿ ಅಧ್ಯಯನಮಾಡಿ ಪರಮತಸಂಬಂಧಗಳಾದ ಬೇರೆ ಕೆಲವು ಗ್ರಂಥಗಳನ್ನೂ ಕೇಳುವವನಾದ ಈ ಶ್ರಾವಕನಿಗೆ ಹಾಗೆಯೇ ದೃಢಚರ್ಯೆಯೆಂಬ ಕ್ರಿಯೆಯಾಗುವುದು.

**ದೃಢವ್ರತಸ್ಯ ತಸ್ಯಾನ್ಯಾ ಕ್ರಿಯಾ ಸ್ಯಾದುಪಯೋಗಿತಾ ।**
**[೩]ಪರ್ವೋಪವಾಸಪರ್ಯಂತೇ ಪ್ರತಿಮಾಯೋಗಧಾರಣಮ್ ॥ ೫೨ ॥**

೭ ಇತಿ ದೃಢಚರ್ಯಾಕ್ರಿಯಾ ॥ ದೃಢವ್ರತವುಳ್ಳವನಾದ ಆ ಶ್ರಾವಕನಿಗೆ ಪರ್ವತಿಥಿಗಳ ಉಪವಾಸದ ರಾತ್ರಿಯಲ್ಲಿ ನಿಂತುಕೊಂಡು ಧ್ಯಾನಧಾರಣವನ್ನು ಉಪಯೋಗಿಸುವ ಬೇರೊಂದು ಕ್ರಿಯೆಯಾಗುವುದು.

**[೪]ಕ್ರಿಯಾಕಲಾಪೇನೋಕ್ತೇನ ಶುದ್ಧಿಮಸ್ಯೋಪಬಿಭ್ರತಃ ।**
**ಉಪನೀತಿ[೫]ರನೂಚಾನಯೋಗ್ಯಲಿಂಗಗ್ರಹೋ ಭವೇತ್ ॥ ೫೩ ॥**

೮ ಇತಿ ಉಪಯೋಗಿತಾಕ್ರಿಯಾ ॥ ಮೇಲೆ ಹೇಳಲ್ಪಟ್ಟ ಅವತಾರಾದಿ ಕ್ರಿಯಾಸಮೂಹದಿಂದ ಶುದ್ಧಿಯನ್ನು ಹೊಂದಿದವನಾದ ಈ ಶ್ರಾವಕನಿಗೆ ಗುರುವಿನ ಬಳಿಯಲ್ಲಿ ಶಾಸ್ತ್ರಾಧ್ಯಯನವನ್ನು ಮಾಡುವವನಿಗೆ ಯೋಗ್ಯವಾದ ಚಿಹ್ನೆಯ ಪರಿಗ್ರಹಣವು ಉಪನೀತಿಯೆಂಬ ಕ್ರಿಯೆಯಾಗುವುದು.

**[೬]ಉಪನೀತಿರ್ಹಿ ವೇಷಸ್ಯ ವೃತ್ತಸ್ಯ ಸಮಯಸ್ಯ ಚ ।**
**ದೇವತಾಗುರುಸಾಕ್ಷಿ ಸ್ಯಾದ್ವಿಧಿವತ್ಪ್ರತಿಪಾಲನಮ್ ॥ ೫೪ ॥**

ವೇಷವನ್ನೂ ಆಜೀವಿಕೆಯನ್ನೂ ಮತನಿಯಮವನ್ನೂ ದೇವಗುರುಸಾಕ್ಷಿಯಾಗಿ ವಿಧಿಪ್ರಕಾರವಾಗಿ ಪರಿಪಾಲಿಸುವಿಕೆಯೇ ಉಪನಯನಕ್ರಿಯೆಯಾಗಿರುವುದು.

**ಶುಕ್ಲವಸ್ತ್ರೋ[೭]ಪವೀತಾದಿಧಾರಣಂ ವೇಷ ಉಚ್ಯತೇ ।**
**ಆರ್ಯಷಟ್ಕರ್ಮಜೀವಿತ್ವಂ ವೃತ್ತಮಸ್ಯ ಪ್ರಚಕ್ಷತೇ ॥ ೫೫ ॥**

ಈ ಶ್ರಾವಕನಿಗೆ ಬಿಳೀಬಟ್ಟೆ ಜನಿವಾರ ಮೊದಲಾದುವುಗಳನ್ನು ಧರಿಸುವಿಕೆಯು ವೇಷವೆಂದು ಹೇಳಲ್ಪಡುತ್ತದೆ. ಆರ್ಯರ ಅಸಿ ಮಷಿ ಕೃಷ್ಯಾದಿ ಷಟ್ಕರ್ಮಗಳಿಂದ ಜೀವಿಸುವಿಕೆಯು ವೃತ್ತವೆಂದು ಹೇಳುತ್ತಾರೆ.

**ಜೈನೋಪಾಸಕದೀಕ್ಷಾ ಸ್ಯಾತ್ಸಮಯಃ ಸಮಯೋಚಿತಮ್ ।**
**ದಧತೋ [೮]ಗೋತ್ರಜಾತ್ಯಾದಿ [೯]ನಾಮಾಂತರಮತಃ ಪರಮ್ ॥ ೫೬ ॥**

ಆಮೇಲೆ ಮತೋಚಿತವೂ ಗೋತ್ರ ಜಾತಿ ಮೊದಲಾದುವುಗಳಿಗೆ ಅನುಕೂಲವೂ ಆದ ಉಪನಯನಬ್ರಹ್ಮಚಾರಿ ಮೊದಲಾದ ಹೆಸರನ್ನು ಧರಿಸಿದವನಿಗೆ ಜೈನಶ್ರಾವಕದೀಕ್ಷೆಯು ಸಮಯವೆನಿಸುವುದು.

**ತತೋಽಯಮುಪನೀತಃ ಸನ್ ವ್ರತಚರ್ಯಾಂ ಸಮಾಚರೇತ್ ।**
**ಸೂತ್ರಮೌಪಾಸಕಂ ಸಮ್ಯಗಭ್ಯಸ್ಯನ್ ಗ್ರಂಥತೋಽರ್ಥತಃ ॥ ೫೭ ॥**

೯ ಇತಿ ಉಪನೀತಿಕ್ರಿಯಾ ॥ ಬಳಿಕ ಇವನು ಉಪನಯನವನ್ನು ಹೊಂದಿದವನಾಗಿ ಉಪಾಸಕಸೂತ್ರವನ್ನು ಗ್ರಂಥದಿಂದಲೂ ಅರ್ಥದಿಂದಲೂ ಚೆನ್ನಾಗಿ ಅಭ್ಯಾಸಮಾಡಿ ವ್ರತಚರ್ಯೆಯನ್ನು ಆಚರಿಸಬೇಕು. ವ್ರತವನ್ನಾಚರಿಸಬೇಕೆಂದು ಭಾವವು.

**ವ್ರತಾವತರಣಂ ತಸ್ಯ ಭೂಯೋ ಭೂಷಾದಿಸಂಗ್ರಹಃ ।**
**ಭವೇದಧೀತವಿದ್ಯಸ್ಯ ಯಥಾವದ್ಗುರುಸನ್ನಿಧೌ ॥ ೫೮ ॥**

೧ ಉಪದೇಶಿತ. ೨ ಭವಥ. ೩ ಈರ್ಷಯಾ ಕ್ರೋಧೇನ ವಾ. ೪ ಪ್ರಕಟಂ ಯಥಾ ಭವತಿ ತಥಾ. ೫ ನಿಜಮತ. ೬ ದ್ವಾದಶಾಂಗಾರ್ಥ. ೭ ಚತುರ್ದಶಪೂರ್ವಾಣಾಂ. ೮ ಸಹಾಧ್ಯಾಯಿಸಹಿತಸ್ಯ.

೧ ಸಂಪೂರ್ಣಮಧೀತ್ಯ. ೨ ಅನ್ಯಸಮಯೋಕ್ತಾನ್. ೩ ಪರ್ವೋಪವಾಸರಾತ್ರೌ. ೪ ಅವತಾರಾದಿಕ್ರಿಯಾಸಮೂಹೇನ. ೫ ಅನೂಚಾನಃ ಪ್ರವಚನೇ ಸಾಂಗೇಧೀತೀ. ೬ ಉಪನಯನಂ. ೭ ಯಜ್ಞೋಪವೀತ. ೮ ಗೋತ್ರಜಾತ್ಯಾದ್ಯನುಕೂಲಂ. ೯ ಉಪನಯನಬ್ರಹ್ಮಚಾರೀತ್ಯಾದಿನಾಮ.

೧೦ ಇತಿ ವ್ರತಚರ್ಯಾಕ್ರಿಯಾ ‖ ಶಾಸ್ತ್ರೋಕ್ತಪ್ರಕಾರವಾಗಿ ವಿದ್ಯಾಧ್ಯಯನವನ್ನು ಮಾಡಿದ ಆ ಬಾಲಕನಿಗೆ ಗುರುಸನ್ನಿಧಿಯಲ್ಲಿ ಪುನಃ ಆಭರಣ ಮೊದಲಾದುವುಗಳ ಸ್ವೀಕಾರವು ವ್ರತಾವತರಣವಾಗುವುದು.

**ವಿವಾಹಸ್ತು ಭವೇದಸ್ಯ ನಿಯುಂಜಾನಸ್ಯ ದೀಕ್ಷಯಾ ।**
**ಸುವ್ರತೋಚಿತಯಾ ಸಮ್ಯಕ್ಸ್ವಾಂ ಧರ್ಮ[೧]ಸಹಚಾರಿಣೀಮ್ ‖ ೫೯ ‖**

೧೧ ಇತಿ ವ್ರತಾವತರಣಕ್ರಿಯಾ ‖ ತನ್ನ ಪತ್ನಿಯನ್ನು ಶ್ರೇಷ್ಠವಾದ ವ್ರತೋಚಿತವಾದ ದೀಕ್ಷೆಯೊಡನೆ ಚೆನ್ನಾಗಿ ಸೇರಿಸುವವನಾದ ಅಂದರೆ ವ್ರತನಿಯಮಗಳನ್ನು ಪಾಲಿಸುವುದಕ್ಕೆ ನೇಮಿಸುವವನಾದ ಈ ಶ್ರಾವಕನಿಗೆ ವಿವಾಹಕ್ರಿಯೆಯಾಗುವುದು.

**ಪುನರ್ವಿವಾಹಸಂಸ್ಕಾರಃ [೨]ಪೂರ್ವಃ ಸರ್ವೋಽಸ್ಯ ಸಮ್ಮತಃ ।**
**ಸಿದ್ಧಾರ್ಚನಾಂ ಪುರಸ್ಕೃತ್ಯ [೩]ಪತ್ನ್ಯಾಃ ಸಂಸ್ಕಾರಮಿಚ್ಛತಃ ‖ ೬೦ ‖**

ಸಿದ್ಧಾರ್ಚನೆಯನ್ನು ಮುಂದುಮಾಡಿಕೊಂಡು ಪತ್ನಿಯ ಧಾರ್ಮಿಕಸಂಸ್ಕಾರವನ್ನು ಇಚ್ಛಿಸುವವನಾದ ಈ ಉಪಾಸಕನಿಗೆ ಪುನಃ ಹಿಂದೆ ಗರ್ಭಾನ್ವಯಕ್ರಿಯೆಗಳಲ್ಲಿ ಹೇಳಿದ ಸಮಸ್ತ ವಿವಾಹಸಂಸ್ಕಾರವು ಶಾಸ್ತ್ರಸಮ್ಮತವಾಗಿರುತ್ತದೆ.

**ವರ್ಣಲಾಭಸ್ತತೋಽಸ್ಯ[೪]ತ್ಸಂಬಂಧಂ [೫]ಸಂವಿಧಿತ್ಸತಃ ।**
**[೬]ಸಮಾನಾಜೀವಿಭಿರ್ಲಬ್ಧವರ್ಣೈರನ್ಯೈರುಪಾಸಕೈಃ ‖ ೬೧ ‖**

೧೨ ಇತಿ ವಿವಾಹಕ್ರಿಯಾ ‖ ಸದೃಶವಾದ ಷಟ್ಕರ್ಮಜೀವನೋಪಾಯಗಳುಳ್ಳವರೂ ವಿದ್ವಾಂಸರೂ ಆದ ಇತರ ಶ್ರಾವಕರೊಡನೆ ಕನ್ಯಾದಾನಾದಿ ಸಂಬಂಧವನ್ನು ಮಾಡಲಿಚ್ಛಿಸುವವನಾದ ಈ ಶ್ರಾವಕನಿಗೆ ಬಳಿಕ ವರ್ಣಲಾಭವೆಂಬ ಕ್ರಿಯೆಯಾಗುವುದು.

**[೭]ಚತುರಃ ಶ್ರಾವಕಜ್ಯೇಷ್ಠಾನಾಹೂಯ ಕೃತಸತ್ಕ್ರಿಯಾನ್ ।**
**ತಾನ್ಬ್ರೂಯಾದಸ್ಮ್ಯನುಗ್ರಾಹ್ಯೋ ಭವದ್ಭಿಃ [೮]ಸ್ವಸಮೀಕೃತಃ ‖ ೬೨ ‖**

ಸತ್ಕರಿಸಲ್ಪಟ್ಟವರಾದ ನಾಲ್ಕುಮಂದಿ ಶ್ರಾವಕೋತ್ತಮರನ್ನು ಕರೆದು "ತಮ್ಮಗಳಿಗೆ ಸಮಾನವಾಗಿ ಮಾಡಲ್ಪಟ್ಟವನಾದ ನಾನು ತಮ್ಮಗಳಿಂದ ಅನುಗ್ರಹಿಸುವುದಕ್ಕೆ ಯೋಗ್ಯನಾಗಿರುತ್ತೇನೆ" ಎಂದು ಅವರನ್ನು ಕುರಿತು ಹೇಳಬೇಕು.

**ಯೂಯಂ ನಿಸ್ತಾರಕಾ ದೇವಬ್ರಾಹ್ಮಣಾ ಲೋಕಪೂಜಿತಾಃ ।**
**ಅಹಂ ಚ ಕೃತ[೯]ದೀಕ್ಷೋಽಸ್ಮಿ ಗೃಹೀತೋಪಾಸಕವ್ರತಃ ‖ ೬೩ ‖**

"ನೀವುಗಳು ಭವಸಾಗರದಿಂದ ದಾಟಿಸುವವರೂ ದೇವಸಮಾನರಾದ ಬ್ರಾಹ್ಮಣರೂ ಲೋಕಪೂಜಿತರೂ ಆಗಿರುತ್ತೀರಿ. ನಾನಾದರೋ ಶ್ರಾವಕವ್ರತವನ್ನು ಕೈಗೊಂಡವನೂ ವ್ರತವನ್ನು ಪ್ರದರ್ಶಿಸಿದವನೂ ಆಗಿರುತ್ತೇನೆ.

**ಮಯಾನುಚರಿತೋ ಧರ್ಮಃ [೧೦]ಪುಷ್ಕಲೋ ಗೃಹಮೇಧಿನಾಮ್ ।**
**ದತ್ತಾನ್ಯಪಿ ಚ [೧೧]ದಾನಾನಿ ಕೃತಂ ಚ ಗುರುಪೂಜನಮ್ ‖ ೬೪ ‖**

ನಾನು ಗೃಹಸ್ಥರ ನಾನಾ ಮಿಥ್ಯಾಧರ್ಮವನ್ನು ಅನುಸರಿಸಿ ನಡೆಯಿಸಿದೆನು. ಮಿಥ್ಯಾದಾನಗಳನ್ನೂ ಕೊಟ್ಟೆನು. ಮಿಥ್ಯಾಗುರುಪೂಜೆಯನ್ನು ಮಾಡಿದೆನು.

**ಅಯೋನಿಸಂಭವಂ ಜನ್ಮ ಲಬ್ಧ್ವಾಹಂ ಗುರ್ವನುಗ್ರಹಾತ್ ।**
**[೧೨]ಚಿರಭಾವಿತಮುತ್ಸೃಜ್ಯ ಪ್ರಾಪ್ತೋ ವೃತ್ತ[೧೩]ಮಭಾವಿತಮ್ ‖ ೬೫ ‖**

೧ ಪತ್ನೀಂ. ೨ ಗರ್ಭಾನ್ವಯಕ್ರಿಯಾಸು ಪ್ರೋಕ್ತಃ. ೩ ಜಿನದರ್ಶನಸ್ವೀಕಾರಾತ್ ಪ್ರಾಗ್ವಿವಾಹಿತ ಭಾರ್ಯಾಯಾಃ. ೪ ಕನ್ಯಾಪ್ರದಾನಾದಿಸಂಬಂಧಂ. ೫ ಸಂವಿಧಾತುಮಿಚ್ಛತಃ. ೬ ಸದೃಶಾರ್ಯಷಟ್ಕರ್ಮಾದಿವೃತ್ತಿಭಿಃ. ೭ ಚತುಃಸಂಖ್ಯಾಯುತಾನ್. ೮ ಯುಷ್ಮತ್ಸದೃಶೀಕೃತಃ. ೯ ವ್ರತಾವಿಷ್ಕರಣಂ ದೀಕ್ಷಾ. ೧೦ ನಾನಾಮಿಥ್ಯಾತ್ವರೂಪಃ. ೧೧ ಮಿಥ್ಯಾದಾನಾನಿ. ೧೨ ಚಿರಕಾಲಸಂಸ್ಕಾರಿತ ಮಿಥ್ಯಾತ್ವವೃತ್ತಿಂ. ೧೩ ಪೂರ್ವಸ್ಮಿನ್ನಭಾವಿತಂ.

ನಾನು ಯೋನಿಯಿಂದುಂಟಾಗದಿರುವ ಜನ್ಮವನ್ನು ಗುರುವಿನ ಅನುಗ್ರಹದಿಂದ ಪಡೆದು ಬಹುಕಾಲದಿಂದ ಅಂಟಿಕೊಂಡಿದ್ದ ಮಿಥ್ಯಾತ್ವವನ್ನು ಬಿಟ್ಟು ಮೊದಲು ಭಾವಿಸಲ್ಪಡದಿರುವ ಆಚರಣವನ್ನು ಹೊಂದಿದೆನು.

**ವ್ರತಶುದ್ಧ್ಯರ್ಥಮೇವಾಹಮುಪನೀತೋಽಸ್ಮಿ ಸಾಂಪ್ರತಮ್ ।**
**[೧]ಕೃತವಿದ್ಯಶ್ಚ ಜಾತೋಽಸ್ಮಿ [೨]ಸ್ವಧೀತೋಪಾಸಕಶ್ರುತಃ ‖ ೬೬ ‖**

"ವ್ರತಶುದ್ಧಿಗೋಸ್ಕರವೇ ನಾನು ಉಪನಯನವನ್ನು ಹೊಂದಿದವನಾಗಿರುತ್ತೇನೆ. ಈಗ ಶ್ರಾವಕವ್ರತವನ್ನು ಚೆನ್ನಾಗಿ ಅಧ್ಯಯನಮಾಡಿದವನೂ ಸಂಪೂರ್ಣ ವಿದ್ಯೆಯುಳ್ಳವನೂ ಆಗಿರುತ್ತೇನೆ.

**ವ್ರತಾವತರಣಸ್ಯಾಂತೇ ಸ್ವೀಕೃತಾಭರಣೋಽಸ್ಮ್ಯಹಮ್ ।**
**ಪತ್ನೀ ಚ ಸಂಸ್ಕೃತಾತ್ಮೀಯಾ ಕೃತಪಾಣಿಗ್ರಹಾ ಪುನಃ ‖ ೬೭ ‖**

ವ್ರತಾವತರಣದ ಕೊನೆಯಲ್ಲಿ ನಾನು ಆಭರಣಗಳನ್ನು ಸ್ವೀಕರಿಸಿದವನಾಗಿರುತ್ತೇನೆ. ವಿವಾಹಿತಳಾದ ನನ್ನ ಪತ್ನಿಯೂ ಪುನಃ ಸಂಸ್ಕಾರಮಾಡಲ್ಪಟ್ಟಳು. ವ್ರತಸಂಸ್ಕಾರವುಳ್ಳವಳಾಗಿ ಮಾಡಲ್ಪಟ್ಟಳೆಂದು ಭಾವವು.

**ಏವಂ ಕೃತವ್ರತಸ್ಯಾದ್ಯ ವರ್ಣಲಾಭೋ ಮಮೋಚಿತಃ ।**
**ಸುಲಭಃ ಸೋಽಪಿ ಯುಷ್ಮಾಕಮನುಜ್ಞಾನಾತ್ಸಧರ್ಮಣಾಮ್ ‖ ೬೮ ‖**

ಈ ಪ್ರಕಾರವಾಗಿ ವ್ರತವನ್ನಾಚರಿಸಿದವನಾದ ನನಗೆ ಈಗ ವರ್ಣಲಾಭವು ಯೋಗ್ಯವಾಗಿರುತ್ತದೆ. ಸಧರ್ಮಿಗಳಾದ ನಿಮ್ಮಗಳ ಅನುಮತಿಯಿಂದ ಆ ವರ್ಣಲಾಭವೂ ಸುಲಭವಾಗಿರುವುದು."

**ಇತ್ಯುಕ್ತಾಸ್ತೇ ಚ ತಂ ಸತ್ಯಮೇವಮಸ್ತು [೩]ಸಮಂಜಸಮ್ ।**
**ತ್ವಯೋಕ್ತಂ ಶ್ಲಾಘ್ಯಮೇವೈತತ್ಕೋಽನ್ಯಸ್ತ್ವತ್ಸದೃಶೋ ದ್ವಿಜಃ ‖ ೬೯ ‖**

ಈ ಪ್ರಕಾರವಾಗಿ ಹೇಳಲ್ಪಟ್ಟ ಆ ಶ್ರಾವಕೋತ್ತಮರೂ ಅವನನ್ನು ಕುರಿತು "ನೀನು ಹೇಳಿದ ವಿಷಯವು ನಮಗೆ ಸಮ್ಮತವಾಗಿದೆ, ಸತ್ಯವಾಗಿದೆ, ಹಾಗೆಯೇ ಆಗಲಿ. ಇದು ಶ್ಲಾಘ್ಯವಾಗಿದೆ. ನಿನಗೆ ಸಮಾನನಾದ ದ್ವಿಜನು ಬೇರೆ ಯಾವನಿದ್ದಾನೆ?

**[೪]ಯುಷ್ಮಾದೃಶಾಮಲಾಭೇ ತು ಮಿಥ್ಯಾದೃಷ್ಟಿಭಿರ[೫]ಪ್ಯಮಾ ।**
**ಸಮಾನಾಜೀವಿಭಿಃ ಕರ್ತುಂ ಸಂಬಂಧೋಽಭಿಮತೋ ಹಿ ನಃ ‖ ೭೦ ‖**

ನಿಮ್ಮಂತಹ ಸಮ್ಯಗ್ದೃಷ್ಟಿಗಳು ದೊರೆಯದಿದ್ದರೆ ಸಮಾನವಾದ ಜೀವನೋಪಾಯವುಳ್ಳವರಾದ ಮಿಥ್ಯಾದೃಷ್ಟಿಗಳ ಸಂಗಡವೂ ನಮ್ಮ ವ್ಯವಹಾರ ಸಂಬಂಧವನ್ನು ಮಾಡುವುದಕ್ಕೆ ಒಪ್ಪುತ್ತೇವೆ."

**ಇತ್ಯುಕ್ತ್ವೈನಂ ಸಮಾಶ್ವಾಸ್ಯ ವರ್ಣಲಾಭೇ ನಿಯುಂಜತೇ ।**
**ವಿಧಿವತ್ಸೋಽಪಿ ತಂ ಲಬ್ಧ್ವಾ ಯಾತಿ ತತ್ಸಮಕಕ್ಷತಾಮ್ ‖ ೭೧ ‖**

ಈ ರೀತಿಯಾಗಿ ಹೇಳಿ ಈ ಶ್ರಾವಕನನ್ನು ಸಮಾಧಾನಪಡಿಸಿ ವರ್ಣಲಾಭದಲ್ಲಿ ಸೇರಿಸುತ್ತಾರೆ. ಆ ಶ್ರಾವಕನು ಕೂಡ ವಿಧಿಪ್ರಕಾರವಾಗಿ ಆ ವರ್ಣಲಾಭವನ್ನು ಹೊಂದಿ ಆ ಶ್ರಾವಕೋತ್ತಮರ ಸಮಾನಸ್ಕಂಧತೆಯನ್ನು ಪಡೆಯುತ್ತಾನೆ.

**ವರ್ಣಲಾಭೋಽಯಮುದ್ದಿಷ್ಟಃ ಕುಲಚರ್ಯಾಧುನೋಚ್ಯತೇ ।**
**[೬]ಆರ್ಯಷಟ್ಕರ್ಮವೃತ್ತಿಃ ಸ್ಯಾತ್ಕುಲಚರ್ಯಾಸ್ಯ ಪುಷ್ಕಲಾ ‖ ೭೨ ‖**

೧೩ ಇತಿ ವರ್ಣಲಾಭಕ್ರಿಯಾ ‖ ಈ ವರ್ಣಲಾಭಕ್ರಿಯೆಯು ಹೇಳಲ್ಪಟ್ಟಿತು. ಈಗ ಕುಲಚರ್ಯಾಕ್ರಿಯೆಯು ಹೇಳಲ್ಪಡುತ್ತದೆ. ಇಜ್ಯಾ ವಾರ್ತಾದಿ ಆರ್ಯಷಟ್ಕರ್ಮವರ್ತನವು ಈ ಶ್ರಾವಕನಿಗೆ ವಿಶೇಷವಾದ ಕುಲಚರ್ಯೆಯಾಗುವುದು.

೧ ಸಂಪೂರ್ಣವಿದ್ಯಃ. ೨ ಸುಷ್ಠು ಅಧೀತ. ೩ ಇಷ್ಟಂ. ೪ ಸ್ವೀಕೃತಸದ್ದೃಷ್ಟೀನಾಂ. ೫ ಸಹ. ೬ ಇಜ್ಯಾವಾರ್ತಾದಿ.

**ವಿಶುದ್ಧಸ್ತೇನ ವೃತ್ತೇನ ತತೋಽಭ್ಯೇತಿ ಗೃಹೀಶಿತಾಮ್ ।**
**ವೃತ್ತಾಧ್ಯಯನಸಂಪತ್ತ್ಯಾ ಪರಾನುಗ್ರಹಣಕ್ಷಮಃ ॥ ೭೩ ॥**

೧೪ ಇತಿ ಕುಲಚರ್ಯಾಕ್ರಿಯಾ ॥ ಅನಂತರದಲ್ಲಿ ಆ ಷಟ್ಕರ್ಮವರ್ತನದಿಂದ ವಿಶೇಷವಾಗಿ ಶುದ್ಧನೂ ಷಟ್ಕರ್ಮಾಚರಣ ಮತ್ತು ಶಾಸ್ತ್ರಾಧ್ಯಯನ ಸಂಪತ್ತಿಯಿಂದ ಬೇರೆಯವರನ್ನು ಅನುಗ್ರಹಿಸುವುದರಲ್ಲಿ ಸಮರ್ಥನೂ ಆಗಿ ಶ್ರೇಷ್ಠಗೃಹಸ್ಥ ಭಾವವನ್ನು ಹೊಂದುತ್ತಾನೆ. ಗೃಹಸ್ಥಶ್ರೇಷ್ಠನಾಗುತ್ತಾನೆಂದು ಭಾವವು.

**ಪ್ರಾಯಶ್ಚಿತ್ತವಿಧಾನಜ್ಞಃ [1]ಶ್ರುತಿ[2]ಸ್ಮೃತಿಪುರಾಣವಿತ್ ।**
**ಗೃಹಸ್ಥಾಚಾರ್ಯತಾಂ ಪ್ರಾಪ್ತಸ್ತದಾ ಧತ್ತೇ ಗೃಹೀಶಿತಾಮ್ ॥ ೭೪ ॥**

ಪ್ರಾಯಶ್ಚಿತ್ತವಿಧಾನವನ್ನು ತಿಳಿದವನೂ ದ್ವಾದಶಾಂಗವೇದಗಳನ್ನೂ ಧರ್ಮ ಶಾಸ್ತ್ರಗಳನ್ನೂ ಪುರಾಣಗಳನ್ನೂ ತಿಳಿದವನೂ ಗೃಹಸ್ಥಾಚಾರ್ಯಭಾವವನ್ನು ಹೊಂದಿದವನೂ ಆಗಿ ಆಗ ಗೃಹಸ್ಥಶ್ರೇಷ್ಠತ್ವವನ್ನು ಧರಿಸುತ್ತಾನೆ.

**ತತಃ ಪೂರ್ವವದೇವಾಸ್ಯ ಭವೇದಿಷ್ಟಾ ಪ್ರಶಾಂತತಾ ।**
**ನಾನಾವಿಧೋಪವಾಸಾದಿಭಾವನಾಃ ಸಮುಪೇಯುಷಃ ॥ ೭೫ ॥**

೧೫ ಇತಿ ಗೃಹೀಶಿತಾಕ್ರಿಯಾ ॥ ಅನಂತರದಲ್ಲಿ ನಾನಾವಿಧವಾದ ಉಪವಾಸಾದಿ ಭಾವನೆಗಳನ್ನು ಹೊಂದಿದವನಾದ ಈ ಗೃಹಸ್ಥಾಚಾರ್ಯನಿಗೆ ಮೊದಲಿನಂತಯೇ (ಬ್ರಹ್ಮಚಾರಿಯಾಗಿದ್ದು ವಿದ್ಯಾಭ್ಯಾಸಮಾಡುವಾಗ ಇದ್ದಂತೆಯೇ) ಬಹು ಶಾಂತ ತೆಯು ಇಷ್ಟವಾಗುವುದು.

**ಗೃಹತ್ಯಾಗಸ್ತತೋಽಸ್ಯ ಸ್ಯಾದ್ಗೃಹವಾಸಾದ್ವಿರಜ್ಯತಃ ।**
**ಯೋಗ್ಯಂ ಸೂನುಂ [3]ಯಥಾಮ್ನಾಯಮನುಶಿಷ್ಯ ಗೃಹೋಜ್ಝನಮ್ ॥**

೧೬ ಇತಿ ಪ್ರಶಾಂತಿಕ್ರಿಯಾ ॥ ಅನಂತರದಲ್ಲಿ ಯೋಗ್ಯನಾದ ಪುತ್ರನನ್ನು ಪೂರ್ವಪದ್ಧತಿಗನುಸಾರವಾಗಿ ಶಿಕ್ಷಿಸಿ–ಬೋಧಿಸಿ ಮನೆಯನ್ನು ಬಿಡುವಿಕೆಯು ಮನೆಯ ವಾಸದಿಂದ ವಿರಕ್ತಿಯನ್ನು ಹೊಂದಿದವನಾದ ಈ ಗೃಹಸ್ಥಾಚಾರ್ಯನ ಗೃಹತ್ಯಾಗವೆಂಬ ಕ್ರಿಯೆಯಾಗುವುದು.

**ತ್ಯಕ್ತಾಗಾರಸ್ಯ ತಸ್ಯಾತಸ್ತಪೋವನಮುಪೇಯುಷಃ ।**
**ಏಕಶಾಟಕಧಾರಿತ್ವಂ ಪ್ರಾಗ್ವದ್ದೀಕ್ಷಾದ್ಯಮಿಷ್ಯತೇ ॥ ೭೭ ॥**

೧೭ ಇತಿ ಗೃಹತ್ಯಾಗಕ್ರಿಯಾ ॥ ಬಳಿಕ ಗೃಹವನ್ನು ತ್ಯಜಿಸಿದವನೂ ತಪೋವನ ವನ್ನು ಹೊಂದಿದವನೂ ಆದ ಆ ಗೃಹಸ್ಥಾಚಾರ್ಯನ ಮೊದಲು ಹೇಳಿದಂತೆ ಏಕವಸ್ತ್ರಧಾರಣವು ದೀಕ್ಷಾದ್ಯವೆಂಬ ಕ್ರಿಯೆಯಾಗಿ ಇಚ್ಛಿಸಲ್ಪಡುತ್ತದೆ. ಹೇಳಲ್ಪಡು ತ್ತದೆಂದರ್ಥವು.

**ತತೋಽಸ್ಯ ಜಿನರೂಪತ್ವಮಿಷ್ಯತೇ ತ್ಯಕ್ತವಾಸಸಃ ।**
**ಧಾರಣಂ ಜಾತರೂಪಸ್ಯ ಯುಕ್ತಾಚಾರಾದ್ಗಣೇಶಿನಃ ॥ ೭೮ ॥**

೧೮ ಇತಿ ದೀಕ್ಷಾದ್ಯಕ್ರಿಯಾ ॥ ಆಮೇಲೆ ಯುಕ್ತವಾದ ಆಚಾರವುಳ್ಳವನಾದ ಮುನಿಸಂಘಾಧಿಪತಿಯಿಂದ ವಸ್ತ್ರತ್ಯಾಗವನ್ನು ಮಾಡಿದ ಈ ಗೃಹಸ್ಥಾಚಾರ್ಯನು ಜಾತರೂಪ(ಹುಟ್ಟಿದಾಗಿನ ರೂಪ)ವನ್ನು ಧರಿಸುವಿಕೆಯು ಜಿನರೂಪತ್ವವೆಂದು ಹೇಳಲ್ಪಡುತ್ತದೆ.

**ಕ್ರಿಯಾಃ ಶೇಷಾಸ್ತು ನಿಃಶೇಷಾಃ ಪ್ರೋಕ್ತಾ ಗರ್ಭಾನ್ವಯೇ ಯಥಾ ।**
**ತಥೈವ ಪ್ರತಿಪಾದ್ಯಾಃ ಸ್ಯುರ್ನ ಭೇದೋಽಸ್ತ್ಯತ್ರ ಕಶ್ಚನ ॥ ೭೯ ॥**

೧೯ ಇತಿ ಜಿನರೂಪತಾಕ್ರಿಯಾ ॥ ಉಳಿದ ಸಮಸ್ತಕ್ರಿಯೆಗಳೂ ಗರ್ಭಾನ್ವಯ ದಲ್ಲಿ ಹೇಗೆ ಹೇಳಲ್ಪಟ್ಟಿವೆಯೋ ಹಾಗೆಯೇ ತಿಳಿಸುವುದಕ್ಕೆ ಯೋಗ್ಯಗಳಾಗಿರುತ್ತವೆ. ಇವುಗಳಲ್ಲಿ ಯಾವ ಭೇದವೂ ಇಲ್ಲ.

೧ ದ್ವಾದಶಾಂಗಶ್ರುತರೂಪವೇದಃ. ೨ ಧರ್ಮಶಾಸ್ತ್ರಂ. ೩ ಯಥಾನ್ಯಾಯಮಿತ್ಯಪಿ ಪಾಠಃ.

**ಯಸ್ತ್ವೇತಾಸ್ತತ್ತ್ವತೋ ಜ್ಞಾತ್ವಾ ಭವ್ಯಃ ಸಮನುತಿಷ್ಠತಿ ।**
**ಸೋಽಧಿಗಚ್ಛತಿ ನಿರ್ವಾಣಮಚಿರಾ[1]ತ್ಸುಖಸಾದ್ಭವಮ್ ॥ ೮೦ ॥**

ಯಾವ ಭವ್ಯನು ಈ ಮೇಲೆ ಹೇಳಲ್ಪಟ್ಟ ಕ್ರಿಯೆಗಳನ್ನು ಯಥಾರ್ಥರೂಪದಿಂದ ತಿಳಿದು ಆಚರಿಸುತ್ತಾನೋ ಅವನು ಸುಖಮಯವಾದ ಮುಕ್ತಿಯನ್ನು ಶೀಘ್ರವಾಗಿ ಹೊಂದುತ್ತಾನೆ.

**ಅಥಾತಃ ಸಂಪ್ರವಕ್ಷ್ಯಾಮಿ [2]ದ್ವಿಜಾಃ ಕರ್ತ್ರನ್ವಯಕ್ರಿಯಾಃ ।**
**ಯಾಃ [3]ಪ್ರತ್ಯಾಸನ್ನನಿಷ್ಠಸ್ಯ ಭವೇಯುರ್ಭವ್ಯದೇಹಿನಃ ॥ ೮೧ ॥**

ದೀಕ್ಷಾನ್ವಯಕ್ರಿಯೆಗಳು ಸಂಪೂರ್ಣವಾದುವು ॥ ಅನಂತರದಲ್ಲಿ ಇಲ್ಲಿಂದ ಮುಂದೆ ಎಲೈ ದ್ವಿಜರೆ! ಯಾವ ಕ್ರಿಯೆಗಳು ಮೋಕ್ಷಕ್ಕೆ ಸಮೀಪಸ್ಥನಾದ ಭವ್ಯಜೀವನಿಗೆ ಉಂಟಾಗುವುವೋ ಅಂತಹ ಕರ್ತ್ರನ್ವಯಕ್ರಿಯೆಗಳನ್ನು ಹೇಳುವೆನು.

**ತತ್ರ ಸಜ್ಜಾತಿರಿತ್ಯಾದ್ಯಾ ಕ್ರಿಯಾ ಶ್ರೇಯೋಽನುಬಂಧಿನೀ ।**
**ಯಾ ಸಾ ಚಾಸನ್ನಭವ್ಯಸ್ಯ [4]ನೃಜನ್ಮೋಪಗಮೇ ಭವೇತ್ ॥ ೮೨ ॥**

ಆ ಕರ್ತ್ರನ್ವಯಕ್ರಿಯೆಗಳಲ್ಲಿ ಶ್ರೇಯಸ್ಸನ್ನುಂಟುಮಾಡುವುದಾದ ಸಜ್ಜಾತಿ ಯೆಂಬುದು ಮೊದಲನೆಯ ಕ್ರಿಯೆ. ಅದು ಮುಕ್ತಿಗೆ ಸಮೀಪಸ್ಥನಾದ ಭವ್ಯನಿಗೆ ಮನುಷ್ಯಜನ್ಮಪ್ರಾಪ್ತಿಯಲ್ಲಿ ಉಂಟಾಗುವುದು.

**ಸ ನೃಜನ್ಮ ಪರಿಪ್ರಾಪ್ತೋ ದೀಕ್ಷಾಯೋಗ್ಯೇ ಸದನ್ವಯೇ ।**
**ವಿಶುದ್ಧಂ ಲಭತೇ ಜನ್ಮ ಸೈಷಾ ಸಜ್ಜಾತಿರಿಷ್ಯತೇ ॥ ೮೩ ॥**

ಮನುಷ್ಯಜನ್ಮವನ್ನು ಹೊಂದಿದ ಆ ಭವ್ಯಾತ್ಮನು ದೀಕ್ಷಾಯೋಗ್ಯವಾದ ಶ್ರೇಷ್ಠವಂಶದಲ್ಲಿ ವಿಶುದ್ಧವಾದ ಜನ್ಮವನ್ನು ಹೊಂದುತ್ತಾನೆ. ಅದೇ ಸಜ್ಜಾತಿಯೆಂದು ಹೇಳಲ್ಪಡುತ್ತದೆ.

**ವಿಶುದ್ಧಕುಲಜಾತ್ಯಾದಿಸಂಪತ್ಸಜ್ಜಾತಿರಿಷ್ಯತೇ ।**
**[5]ಉದಿತೋದಿತವಂಶತ್ವಂ ಯತೋಽಭ್ಯೇತಿ ಪುಮಾನ್ಕೃತೀ ॥ ೮೪ ॥**

ಪುಣ್ಯಶಾಲಿಯಾದ ಮನುಷ್ಯನು ಯಾವುದರಿಂದ ಉತ್ತರೋತ್ತರಾಭ್ಯುದಯ ವುಳ್ಳ ವಂಶತ್ವವನ್ನು ಹೊಂದುತ್ತಾನೋ ಅಂತಹ ವಿಶುದ್ಧವಾದ ಕುಲ ಜಾತಿ ಮೊದಲಾದ ಸಂಪತ್ತಿಯು ಸಜ್ಜಾತಿಯೆಂದು ಹೇಳಲ್ಪಡುತ್ತದೆ.

**ಪಿತುರನ್ವಯಶುದ್ಧಿರ್ಯಾ ತತ್ಕುಲಂ ಪರಿಭಾಷ್ಯತೇ ।**
**ಮಾತುರನ್ವಯಶುದ್ಧಿಸ್ತು ಜಾತಿರಿತ್ಯಭಿಲಪ್ಯತೇ ॥ ೮೫ ॥**

ತಂದೆಯ ಶುದ್ಧವಾದ ವಂಶವು ಕುಲವೆಂದು ಹೇಳಲ್ಪಡುತ್ತದೆ. ತಾಯಿಯ ಶುದ್ಧವಾದ ವಂಶವಾದರೋ ಜಾತಿಯೆಂದು ಹೇಳಲ್ಪಡುತ್ತದೆ.

**ವಿಶುದ್ಧಿರುಭಯಸ್ಯಾಸ್ಯ ಸಜ್ಜಾತಿರನುವರ್ಣಿತಾ ।**
**[6]ಯತ್ಪ್ರಾಪ್ತೌ ಸುಲಭಾ [7]ಬೋಧಿರಯತ್ನೋ[8]ಪನತೈರ್ಗುಣೈಃ ॥ ೮೬ ॥**

ಈ ಕುಲ ಜಾತಿಗಳೆರಡರ ವಿಶುದ್ಧಿಯು ಸಜ್ಜಾತಿಯೆಂದು ವರ್ಣಿಸಲ್ಪಟ್ಟಿದೆ. ಯಾವ ಸಜ್ಜಾತಿಯ ಪ್ರಾಪ್ತಿಯಾಗುತ್ತಿರಲು ಪ್ರಯತ್ನವಿಲ್ಲದೆ ಪ್ರಾಪ್ತವಾದ ಗುಣಗಳಿಂದ ರತ್ನತ್ರಯದ ಪ್ರಾಪ್ತಿಯು ಸುಲಭವಾದುದು.

**[9]ಸಜ್ಜನ್ಮಪ್ರತಿಲಾಭೋಽಯ[10]ಮಾರ್ಯಾವರ್ತವಿಶೇಷತಃ ।**
**ಸತ್ಯಾಂ ದೇಹಾದಿಸಾಮಗ್ರ್ಯಾಂ [11]ಶ್ರೇಯಃ ಸೂತೇ ಹಿ ದೇಹಿನಾಮ್ ॥**

೧ ಸುಖಸಾದ್ಭವನ್ನಿತ್ಯಪಿ ಪಾಠಃ. ೨ ಭೋ ಬ್ರಾಹ್ಮಣಾಃ. ೩ ಪ್ರತ್ಯಾಸನ್ನಮೋಕ್ಷಸ್ಯ. ೪ ನೃಜನ್ಮ ಪ್ರಾಪ್ತೌ. ೫ ಉತ್ತರೋತ್ತರಾಭ್ಯುದಯವದನ್ವಯತ್ವಂ. ೬ ಯತ್ಸಜ್ಜಾತಿಪ್ರಾಪ್ತೌ ಸತ್ಯಾಂ. ೭ ರತ್ನ ತ್ರಯಪ್ರಾಪ್ತಿಃ. ೮ ಉಪಾಗತೈಃ. ೯ ಸಜ್ಜಾತಿಪರಿಪ್ರಾಪ್ತಿ. ೧೦ ಆರ್ಯಾಖಂಡ. ೧೧ ನಿಶ್ರ್ಯೇಯಸಂ.

ಆರ್ಯಾಖಂಡದಿಂದ ವಿಶೇಷತ್ವವನ್ನು ಹೊಂದಿದ ಈ ಸಜ್ಜಾತಿಯ ಪ್ರಾಪ್ತಿಯು ದೇಹಾದಿಸಾಮಗ್ರಿಯು ಇರುತ್ತಿರಲು ಪ್ರಾಣಿಗಳಿಗೆ ಮೋಕ್ಷಸುಖವನ್ನುಂಟು ಮಾಡುತ್ತದಲ್ಲವೇ ?

**ಶರೀರಜನ್ಮನಾ ಸೈಷಾ ಸಜ್ಜಾತಿರುಪವರ್ಣಿತಾ ।**
**ಏತನ್ಮೂಲಾ ಯತಃ ಸರ್ವಾಃ ಪುಂಸಾಮಿಷ್ಟಾರ್ಥಸಿದ್ಧಯಃ ॥ ೮೮ ॥**

ಪುರುಷರ ಸಮಸ್ತವಾದ ಇಷ್ಟಾರ್ಥಸಿದ್ಧಿಗಳಿಗೂ ಈ ಸಜ್ಜಾತಿಯೇ ಮೂಲ ಕಾರಣವಾಗಿರುವುದರಿಂದ ಶರೀರೋತ್ಪತ್ತಿಯೊಡನೆ ಉಂಟಾದ ಈ ಸಜ್ಜಾತಿಯು ಇಲ್ಲಿ ವರ್ಣಿಸಲ್ಪಟ್ಟಿರುವುದು. ಶರೀರಸಂಬಂಧವಾದ ಸಜ್ಜಾತಿಯು ವರ್ಣಿಸಲ್ಪಟ್ಟಿರುವುದೆಂದು ಭಾವವು.

**ಸಂಸ್ಕಾರಜನ್ಮನಾ ಚಾನ್ಯಾ ಸಜ್ಜಾತಿರನುಕೀರ್ತ್ಯತೇ ।**
**ಯಾಮಾಸಾದ್ಯ ದ್ವಿಜನ್ಮತ್ವಂ ಭವ್ಯಾತ್ಮಾ ಸಮುಪಾಶ್ನುತೇ ॥ ೮೯ ॥**

ಯಾವ ಸಂಸ್ಕಾರದಿಂದುಂಟಾಗುವ ಸಜ್ಜಾತಿಯನ್ನು ಹೊಂದಿ ಭವ್ಯಾತ್ಮನು ದ್ವಿಜನ್ಮತ್ವವನ್ನು ಪಡೆಯುತ್ತಾನೋ ಅಂತಹ ಸಂಸಾರಜನ್ಮದಿಂದುಂಟಾಗುವ ಬೇರೊಂದು ಸಜ್ಜಾತಿಯು ವರ್ಣಿಸಲ್ಪಡುತ್ತದೆ.

**ವಿಶುದ್ಧಾಕರಸಂಭೂತೋ ಮಣಿಃ ಸಂಸ್ಕಾರಯೋಗತಃ ।**
**ಯಾತ್ಯುತ್ಕರ್ಷಂ ಯಥಾತ್ಮೈವಂ ಕ್ರಿಯಾಮಂತ್ರೈಃ ಸುಸಂಸ್ಕೃತಃ ॥ ೯೦ ॥**

ಪರಿಶುದ್ಧವಾದ ಗಣಿಯಿಂದುಂಟಾದ ರತ್ನವು ಸಂಸ್ಕಾರಸಂಬಂಧದಿಂದ ಹೇಗೆ ಉತ್ಕೃಷ್ಟತೆಯನ್ನು ಹೊಂದುತ್ತದೋ ಹಾಗೆಯೇ ಕ್ರಿಯೆಗಳಿಂದಲೂ ಮಂತ್ರಗಳಿಂದಲೂ ಚೆನ್ನಾಗಿ ಸಂಸ್ಕರಿಸಲ್ಪಟ್ಟ ಆತ್ಮನು ಉತ್ಕೃಷ್ಟತೆಯನ್ನು ಹೊಂದುತ್ತಾನೆ.

**[1]ಸುವರ್ಣಧಾತುರಥವಾ ಶುದ್ಧ್ಯೇದಾಸಾದ್ಯ ಸತ್ಕ್ರಿಯಾಮ್ ।**
**ಯಥಾ ತಥೈಷ ಭವ್ಯಾತ್ಮಾ ಶುದ್ಧ್ಯ[2]ತ್ಯಾಸಾದಿತಕ್ರಿಯಃ ॥ ೯೧ ॥**

ಅಥವಾ ಬಂಗಾರವಿರುವ ಕಲ್ಲು ಸತ್ಕ್ರಿಯೆ_ಸಂಸ್ಕಾರವನ್ನು ಹೊಂದಿ ಹೇಗೆ ಶುದ್ಧಿಯಾಗುವುದೋ ಹಾಗೆಯೇ ಈ ಭವ್ಯಾತ್ಮನು ಸಂಸಾರವನ್ನು ಹೊಂದಿದವನಾಗಿ ಶುದ್ಧನಾಗುತ್ತಾನೆ.

**ಜ್ಞಾನಜಃ ಸ ತು ಸಂಸ್ಕಾರಃ ಸಮ್ಯಗ್ಜ್ಞಾನಮನುತ್ತರಮ್ ।**
**ಯದ್ದೈಷ ಲಭತೇ ಸಾಕ್ಷಾತ್ಸರ್ವವಿನ್ಮುಖತಃ ಕೃತೀ ॥ ೯೨ ॥**

**[3]ತದ್ದೈಷ ಪರಮಾಜ್ಞಾನಗರ್ಭಾತ್ಸಂಸ್ಕಾರಜನ್ಮನಾ ।**
**ಜಾತೋ ಭವೇದ್ದ್ವಿಜನ್ಮೇತಿ ವ್ರತೈಃ ಶೀಲೈಶ್ಚ ಭೂಷಿತಃ ॥ ೯೩ ॥**

ಸಂಸ್ಕಾರವಾದರೋ ಜ್ಞಾನಜನ್ಯವಾದುದು. ಯಾವಾಗ ಈ ಪುಣ್ಯಶಾಲಿಯಾದ ಭವ್ಯಾತ್ಮನು ಸಾಕ್ಷಾತ್ ಸರ್ವಜ್ಞನ ಮುಖದಿಂದ ಸರ್ವೋತ್ಕೃಷ್ಟವಾದ ಸಮ್ಯಗ್ಜ್ಞಾನವನ್ನು ಹೊಂದುತ್ತಾನೋ ಆಗ ಈ ಭವ್ಯಾತ್ಮನು ಉತ್ಕೃಷ್ಟವಾದ ಜ್ಞಾನವೆಂಬ ಗರ್ಭದದೆಸೆಯಿಂದ ಸಂಸ್ಕಾರದಿಂದ ಹುಟ್ಟಿದವನೂ ವ್ರತಗಳಿಂದಲೂ ಶೀಲಗಳಿಂದಲೂ ಅಲಂಕೃತನೂ ಆದ ದ್ವಿಜನ್ಮನೆಂದಾಗುವನು.

**ವ್ರತಚಿಹ್ನಂ ಭವೇದಸ್ಯ ಸೂತ್ರಂ ಮಂತ್ರಪುರಸ್ಸರಮ್ ।**
**ಸರ್ವಜ್ಞಾಜ್ಞಾಪ್ರಧಾನಸ್ಯ ದ್ರವ್ಯಭಾವವಿಕಲ್ಪಿತಮ್ ॥ ೯೪ ॥**

ಸರ್ವಜ್ಞರ ಆಜ್ಞೆಯೇ ಪ್ರಧಾನವಾಗಿರುವವನಾದ ಈ ಭವ್ಯಾತ್ಮನಿಗೆ ದ್ರವ್ಯ ಮತ್ತು ಭಾವವೆಂಬ ಭೇದವುಳ್ಳದೂ ಮಂತ್ರಪೂರ್ವಕವೂ ಆದ ಸೂತ್ರ–ಯಜ್ಞೋಪವೀತವು ವ್ರತದ ಗುರುತಾಗುವುದು.

೧ ಸುವರ್ಣಪಾಷಾಣಃ. ೨ ಪ್ರಾಪ್ತಸಂಸ್ಕಾರಃ. ೩ ತದ್ಯೈವೇತ್ಯಪಿ ಪಾಠಃ.

**ಯಜ್ಞೋಪವೀತಮಸ್ಯ ಸ್ಯಾದ್ದ್ರವ್ಯತಸ್ತ್ರಿಗುಣಾತ್ಮಕಮ್ ।**
**[1]ಸೂತ್ರ[2]ಮೌಪಾಸಕಂ ತು ಸ್ಯಾ[3]ದ್ಭಾವರೂಢೈ[4]ಸ್ತ್ರಿಭಿರ್ಗುಣೈಃ ॥ ೯೫ ॥**

ಈ ಭವ್ಯಾತ್ಮನಿಗೆ ಮೂರೆಳೆಗಳುಳ್ಳ ಯಜ್ಞೋಪವೀತವು ದ್ರವ್ಯಸೂತ್ರವಾಗುತ್ತದೆ. ಕರ್ಮೋಪಶಮ ಕ್ಷಯ ಕ್ಷಯೋಪಶಮಾನ್ಯತಮರೂಪವಾದ ಲಬ್ಧಿಯ ಮತ್ತು ಉಪಯೋಗದ ಸಂಸ್ಕಾರವುಳ್ಳ ಸಮ್ಯಗ್ದರ್ಶನಜ್ಞಾನಚಾರಿತ್ರಗುಣಗಳಿಂದ ಶ್ರಾವಕಾಚಾರಸಂಬಂಧಿಯಾದ ಭಾವಸೂತ್ರವುಂಟಾಗುವುದು.

**ಯದೈವಂ ಲಬ್ಧಸಂಸ್ಕಾರಃ [5]ಪರಂಬ್ರಹ್ಮಾಧಿಗಚ್ಛತಿ ।**
**ತದೈನಮಭಿನಂದ್ಯಾಶೀರ್ವಚೋಭಿ[6]ರ್ಗಣನಾಯಕಾಃ ॥ ೯೬ ॥**

**[7]ಲಂಭಯಂತ್ಯುಚಿತಾಂ ಶೇಷಾಂ ಜೈನೀಂ [8]ಪುಷ್ಪೈರಥಾಕ್ಷತೈಃ ।**
**[9]ಸ್ಥಿತೀಕರಣ[10]ಮೇತದ್ಧಿ ಧರ್ಮ[11]ಪ್ರೋತ್ಸಾಹನಂ ಪರಮ್ ॥ ೯೭ ॥**

ಯಾವಾಗ ಹೀಗೆ ಸಂಸ್ಕಾರವನ್ನು ಹೊಂದಿದ ಭವ್ಯಾತ್ಮನು ಉತ್ಕೃಷ್ಟಜ್ಞಾನವನ್ನು ಅಥವಾ ತಪಸ್ಸನ್ನು ಹೊಂದುತ್ತಾನೋ ಆಗ ಇವನನ್ನು ಅಭಿನಂದಿಸಿ–ಪ್ರಶಂಸಿಸಿ ಆಚಾರ್ಯರು ಆಶೀರ್ವಾದವಚನಗಳೊಡನೆಯೂ ಆಮೇಲೆ ಪುಣ್ಯಕರವಾದ ಅಕ್ಷತೆಗಳೊಡನೆಯೂ ಜಿನೇಶ್ವರಸಂಬಂಧಿಯೂ ಉಚಿತವೂ ಆದ ಸಿದ್ಧಶೇಷೆಯನ್ನು ಸ್ವೀಕಾರಮಾಡಿಸುತ್ತಾರೆ. ಮುಖ್ಯವಾಗಿ ಈ ಆಶೀರ್ವಾದ ವಚನವು ಸ್ಥಿತೀಕರಣಕ್ಕೋಸ್ಕರ ಧರ್ಮಪ್ರೋತ್ಸಾಹಕರವಾಗಿರುವುದು.

**ಅಯೋನಿಸಂಭವಂ ದಿವ್ಯಂ ಜ್ಞಾನಗರ್ಭಸಮುದ್ಭವಮ್ ।**
**ಸೋಧಿಗಮ್ಯ ಪರಂ ಜನ್ಮ ತದಾ ಸಜ್ಜಾತಿಭಾಗ್ಭವೇತ್ ॥ ೯೮ ॥**

ಆ ಭವ್ಯಾತ್ಮನು ಅಯೋನಿಜನ್ಯವೂ ಉತ್ಕೃಷ್ಟವೂ ಜ್ಞಾನವೆಂಬ ಗರ್ಭದಲ್ಲಿ ಜನಿಸಿದುದೂ ಆದ ಉತ್ಕೃಷ್ಟಜನ್ಮವನ್ನು ಹೊಂದಿ ಆಗ ಸಜ್ಜಾತಿಯನ್ನು ಹೊಂದಿದವನಾಗುವನು.

**ತತೋಧಿಗತಸಜ್ಜಾತಿಃ ಸದ್ಗೃಹಿತ್ವಮಸೌ ಭಜೇತ್ ।**
**ಗೃಹಮೇಧೀಭವನ್ನಾರ್ಯ ಷಟ್ಕರ್ಮಾಣ್ಯನುಪಾಲಯನ್ ॥ ೯೯ ॥**

೧ ಇತಿ ಸಜ್ಜಾತಿಕ್ರಿಯಾ ॥ ಬಳಿಕ ಸಜ್ಜಾತಿಯನ್ನು ಹೊಂದಿದವನಾದ ಈ ಭವ್ಯಾತ್ಮನು ಇಜ್ಯಾವಾರ್ತಾದಿ ಷಟ್ಕರ್ಮಗಳನ್ನು ಪರಿಪಾಲಿಸುವವನಾಗಿ ಗೃಹಸ್ಥನಾಗಿ ಸದ್ಗೃಹಸ್ಥತ್ವವನ್ನು ಹೊಂದುವನು.

**ಯದುಕ್ತಂ ಗೃಹಚರ್ಯಾಯಾಮನುಷ್ಠಾನಂ ವಿಶುದ್ಧಿಮತ್ ।**
**ತದಾಪ್ತವಿಹಿತಂ ಕೃತ್ಸ್ನಮತಂದ್ರಾಲುಃ ಸಮಾಚರೇತ್ ॥ ೧೦೦ ॥**

ಗೃಹಚರ್ಯಾಕ್ರಿಯೆಯಲ್ಲಿ ಹೇಳಲ್ಪಟ್ಟುದೂ ಆಪ್ತನಿಂದ ಮಾಡಲ್ಪಟ್ಟುದೂ ವಿಶುದ್ಧಿಯುಳ್ಳುದೂ ಆದ ಆ ಸಮಸ್ತವಾದ ಅನುಷ್ಠಾನವನ್ನು–ಆಚರಣವನ್ನು ಆಲಸ್ಯರಹಿತನಾಗಿ ಆಚರಿಸಬೇಕು.

**ಜಿನೇಂದ್ರಾಲ್ಲಬ್ಧಸಜ್ಜನ್ಮಾ ಗಣೇಂದ್ರೈರನುಶಿಕ್ಷಿತಃ ।**
**ಸ ಧತ್ತೇ ಪರಮಂ [12]ಬ್ರಹ್ಮವರ್ಚಸಂ ದ್ವಿಜಸತ್ತಮಃ ॥ ೧೦೧ ॥**

ಜಿನೇಶ್ವರನಿಂದ ಸಜ್ಜಾತಿಯನ್ನು ಹೊಂದಿದವನೂ ಆಚಾರ್ಯರಿಂದ ಶಿಕ್ಷಣವನ್ನು ಹೊಂದಿದವನೂ ಆದ ಆ ದ್ವಿಜಶ್ರೇಷ್ಠನು ಉತ್ಕೃಷ್ಟವಾದ ಬ್ರಹ್ಮವರ್ಚಸ್ಸನ್ನು (ವೇದಾಧ್ಯಯನ ಸಂಪತ್ತಿಯನ್ನು) ಧರಿಸುತ್ತಾನೆ.

**ತಮೇನಂ ಧರ್ಮಸಾದ್ಭೂತಂ ಶ್ಲಾಘಂತೇ ಧಾರ್ಮಿಕಾ ಜನಾಃ ।**
**ಪರಂ [13]ತೇಜ ಇವ ಬ್ರಾಹ್ಮಮವತೀರ್ಣಂ ಮಹೀತಲಮ್ ॥ ೧೦೨ ॥**

೧ ರತ್ನತ್ರಯಾತ್ಮಕಂ ಭಾವಸೂತ್ರಂ. ೨ ಶ್ರಾವಕಾಚಾರಸಂಬಂಧಿ. ೩ ಲಬ್ಧ್ಯುಪಯೋಗಸಂಸ್ಕಾರೈಃ. ೪ ಸಮ್ಯಗ್ದರ್ಶನಜ್ಞಾನಚಾರಿತ್ರೈಃ. ೫ ಪರಮಂ ಜ್ಞಾನಂ, ಪರಮಂ ತಪೋ ವಾ. ೬ ಆಚಾರ್ಯಾಃ. ೭ ಪ್ರಾಪಯಂತಿ. ೮ ಪುಷ್ಪೈರಿತ್ಯಪಿ ಪಾಠಃ. ೯ ಸ್ಥಿತೀಕರಣಾರ್ಥಂ. ೧೦ ಆಚಾರ್ಯಾಶೀರ್ವಚನಂ. ೧೧ ಪ್ರವರ್ತನಂ. ೧೨ ವೃತ್ತಾಧ್ಯಯನಸಂಪತ್ತಿಂ. ೧೩ ಜ್ಞಾನಸಂಬಂಧಿ ಉತ್ಕೃಷ್ಟತೇಜಃ.

ಧರ್ಮಪರವಶನಾದ ಈ ದ್ವಿಜೋತ್ತಮನನ್ನು ಧಾರ್ಮಿಕಜನರು ಭೂತಲಕ್ಕೆ ಅವತರಿಸಿದ ಬ್ರಹ್ಮಸಂಬಂಧಿಯಾದ ಉತ್ಕೃಷ್ಟಜ್ಞಾನತೇಜಸ್ಸನ್ನೋಪಾದಿಯಲ್ಲಿ ಹೊಗಳುತ್ತಾರೆ.

**ಸ [೧]ಯಜ[೨]ನ್ಯಾಜಯನ್ ಧೀಮಾನ್ [೩]ಯಜಮಾನೈ[೪]ರುಪಾಸಿತಃ ।**
**[೫]ಅಧ್ಯಾಪಯನ್ನಧೀಯಾನೋ [೬]ವೇದ[೭]ವೇದಾಂಗವಿಸ್ತರಮ್ ॥ ೧೦೩ ॥**

ಬುದ್ಧಿಶಾಲಿಯಾದ ಆ ದ್ವಿಜೋತ್ತಮನು ತಾನು ಪೂಜಿಸುವವನಾಗಿಯೂ ಬೇರೆಯವರಿಂದ ಪೂಜೆಮಾಡಿಸುವವನಾಗಿಯೂ ವಿಸ್ತೃತವಾದ ಆಗಮವನ್ನೂ ಆಗಮಾಂಗವನ್ನೂ ಅಧ್ಯಯನಮಾಡಿಸುವವನಾಗಿಯೂ ತಾನು ಅಧ್ಯಯನಮಾಡುವವನಾಗಿಯೂ ಪೂಜೆಯನ್ನು ಮಾಡಿಸುವ ಯಾಜಕರಿಂದ ಆರಾಧಿಸಲ್ಪಟ್ಟವನಾಗಿಯೂ

**ಸ್ಪೃಶನ್ನಪಿ ಮಹೀಂ ನೈವ ಸ್ಪೃಷ್ಟೋ ದೋಷೈರ್ಮಹೀಗತೈಃ ।**
**ದೇವತ್ವಮಾತ್ಮಸಾತ್ಕುರ್ಯಾದಿಹೈವಾ[೮]ಭ್ಯುಚಿತೈರ್ಗುಣೈಃ ॥ ೧೦೪ ॥**

ಭೂಮಿಯನ್ನು ಸ್ಪರ್ಶಮಾಡಿದರೂ ಭೂಮಿಯಲ್ಲಿರುವ ದೋಷಗಳಿಂದ ಸ್ಪರ್ಶಿಸಲ್ಪಡದವನಾಗಿಯೇ ಈ ಲೋಕದಲ್ಲಿಯೇ ಯೋಗ್ಯವಾದ ಗುಣಗಳಿಂದ ದೇವತ್ವವನ್ನು ಸ್ವಾಧೀನಮಾಡಿಕೊಳ್ಳುವನು.

**ನಾಣಿಮಾ ಮಹಿಮೈವಾಸ್ಯ ಗರಿಮೈವ ನ ಲಾಘವಮ್ ।**
**[೯]ಪ್ರಾಪ್ತಿಃ [೧೦]ಪ್ರಾಕಾಮ್ಯಮೀಶಿತ್ವಂ ವಶಿತ್ವಂ ಚೇತಿ ತದ್ಗುಣಾಃ ॥ ೧೦೫ ॥**

ಈ ದ್ವಿಜೋತ್ತಮನಿಗೆ ಅಣಿಮಾವೆಂಬ ಸೂಕ್ಷ್ಮತ್ವಗುಣವಿಲ್ಲ, ಮಹಿಮಾ ಗುಣವೇ ಇರುವುದು. ಲಘುತ್ವವೆಂಬ ಗುಣವಿರುವುದಿಲ್ಲ, ಗುರುತ್ವವೆಂಬ ಗುಣವೇ ಇರುವುದು. ರತ್ನತ್ರಯಪ್ರಾಪ್ತಿಯೂ ಹೆಚ್ಚಾಗಿ ಎಲ್ಲರಿಗೂ ಪ್ರಿಯನಾಗಿರುವಿಕೆಯೂ ಒಡೆತನವೂ ವಶಿತ್ವವೂ ಎಂಬುವು ಆ ದ್ವಿಜೋತ್ತಮನ ಗುಣಗಳಾಗಿರುತ್ತವೆ.

**ಗುಣೈರೇಭಿರುಪಾರೂಢಮಹಿಮಾ [೧೧]ದೇವಸಾದ್ಭವಮ್ ।**
**ಬಿಭ್ರಲ್ಲೋಕಾತಿಗಂ [೧೨]ಧಾಮ ಮಹ್ಯಾಮೇಷ ಮಹೀಯತೇ ॥ ೧೦೬ ॥**

ಈ ಗುಣಗಳಿಂದ ಮಹಿಮೆಯನ್ನು ಹೊಂದಿದವನೂ ದೇವಾಧೀನವೂ ಲೋಕೋತ್ತರವೂ ಆದ ತೇಜಸ್ಸನ್ನು ಧರಿಸಿದವನೂ ಆದ ಈ ದ್ವಿಜೋತ್ತಮನು ಭೂಮಿಯಲ್ಲಿ ಪೂಜಿಸಲ್ಪಡುತ್ತಾನೆ.

**ಧರ್ಮ್ಯೈರಾಚರಿತೈಃ ಸತ್ಯಶೌಚಕ್ಷಾಂತಿದಮಾದಿಭಿಃ ।**
**ದೇವಬ್ರಾಹ್ಮಣತಾಂ ಶ್ಲಾಘ್ಯಾಂ ಸ್ವಸ್ಮಿನ್ಸಂಭಾವಯತ್ಯಸೌ ॥ ೧೦೭ ॥**

ಈ ದ್ವಿಜೋತ್ತಮನು ಸತ್ಯ ಶೌಚ ಕ್ಷಮಾ ಇಂದ್ರಿಯನಿಗ್ರಹ ಮೊದಲಾದ ಧಾರ್ಮಿಕಾಚರಣಗಳಿಂದ ಶ್ಲಾಘ್ಯವಾದ ದೇವಬ್ರಾಹ್ಮಣತ್ವವನ್ನು ತನ್ನಲ್ಲಿ ತಿಳಿಯುತ್ತಾನೆ.

**ಅಥ ಜಾತಿಮದಾವೇಶಾತ್ಕಶ್ಚಿ[೧೩]ದೇನಂ [೧೪]ದ್ವಿಜಬ್ರುವಃ ।**
**ಬ್ರೂಯಾ[೧೫]ದೇವಂ ಕಿಮದ್ಯೈವ [೧೬]ದೇವಭೂಯಂ ಗತೋ ಭವಾನ್॥**

ಆಮೇಲೆ ಒಬ್ಬಾನೊಬ್ಬ ಮಿಥ್ಯಾದೃಷ್ಟಿ ಬ್ರಾಹ್ಮಣನು ಜಾತಿಮತದ ಆವೇಶದಿಂದ ಈ ಜೈನಬ್ರಾಹ್ಮಣನನ್ನು ಕುರಿತು ಮುಂದೆ ಹೇಳುವಂತೆ ಹೇಳುವನು. ''ನೀನು ಈ ದಿವಸವೇ ದೇವತ್ವವನ್ನು ಹೊಂದಿದೆಯೋ ?

೧ ಯಜನಃ. ೨ ಯಾಜನಃ. ೩ ಪೂಜಾಕಾರಕೈಃ. ೪ ಆರಾಧಿತಃ. ೫ ಅಧ್ಯಯನಂ ಕಾರಯನ್. ೬ ಆಗಮಃ. ೭ ಆಗಮಾಂಗಂ. ೮ ಯೋಗ್ಯೈಃ. ೯ ರತ್ನತ್ರಯಾದಿಗುಣಲಾಭಃ. ೧೦ ಪ್ರಕರ್ಷೇಣ ಸಮಂತಾತ್ಸಕಲಾಭಿಲಷಣೀಯತ್ವಂ. ೧೧ ದೇವಾಧೀನಂ. ೧೨ ತೇಜಃ. ೧೩ ಜೈನಬ್ರಾಹ್ಮಣಂ. ೧೪ ಜಾತಿಮಾತ್ರೋಪಜೀವೀ ಸ್ಯಾದ್ವಿಪ್ರಃ ಸ್ಯಾದ್ಬ್ರಾಹ್ಮಣಬ್ರುವಃ, ಮಿಥ್ಯಾದೃಷ್ಟಿಬ್ರಾಹ್ಮಣ ಇತ್ಯರ್ಥಃ. ೧೫ ವಕ್ಷ್ಯಮಾಣಪ್ರಕಾರೇಣ. ೧೬ ದೇವತ್ವಂ.

**ತ್ವ[೧]ಮಾಮುಷ್ಯಾಯಣಃ ಕಿಂ ನ ಕಿಂ [೨]ತೇ ನಾಮುಷ್ಯ ಪುತ್ರಿಕಾ ।**
**ಯೇನೈವ[೩]ಮುನ್ನಸೋ ಭೂತ್ವಾ ಯಾಸ್ಯ ಸತ್ಕೃತ್ಯ ಮದ್ವಿಧಾನ್॥ ೧೦೯ ॥**

ನೀನು ಇಂಥವನ ಮಗನಲ್ಲವೇ ? ನಿನ್ನ ಹೆಂಡತಿಯು ಇಂಥವನ ಮಗಳಲ್ಲವೇ ? ಯಾವಕಾರಣದಿಂದ ನಮ್ಮಂಥವರನ್ನು ಸತ್ಕರಿಸದೆ ಹೀಗೆ ಮೂಗನ್ನು ಮೇಲೆ ಮಾಡಿದವನಾಗಿ ಹೋಗುತ್ತಿ ?

**ಜಾತಿಃ ಸೈವ ಕುಲಂ ತಚ್ಚ ಸೋಽಸಿ ಯೋಽಸಿ [೪]ಪ್ರಗೇತನಃ ।**
**ತಥಾಪಿ ದೇವತಾತ್ಮಾನಮಾತ್ಮಾನಂ ಮನ್ಯತೇ ಭವಾನ್ ॥ ೧೧೦ ॥**

ಜಾತಿಯು ಮೊದಲಿನದೇ. ಕುಲವೂ ಮೊದಲಿನದೇ. ನೀನು ಮೊದಲು ಯಾವನಾಗಿದ್ದೆಯೋ ಅವನೇ ಆಗಿರುತ್ತಿ. ಹಾಗಿದ್ದರೂ ನೀನು ತನ್ನನ್ನು ದೇವತಾಸ್ವರೂಪನನ್ನಾಗಿ ತಿಳಿಯುತ್ತಿ.

**ದೇವತಾತಿಥಿಪಿತ್ರಗ್ನಿಕಾರ್ಯೇಷ್ವ[೫]ಪ್ರಯತೋ ಭವಾನ್ ।**
**ಗುರುದ್ವಿಜಾತಿದೇವಾನಾಂ ಪ್ರಣಾಮಾಚ್ಚ ಪರಾಙ್ಮುಖಃ ॥ ೧೧೧ ॥**

**ದೀಕ್ಷಾಂ ಜೈನೀಂ ಪ್ರಪನ್ನಸ್ಯ ಜಾತಃ ಕೋಽತಿಶಯಸ್ತವ ।**
**ಯತೋಽದ್ಯಾಪಿ ಮನುಷ್ಯಸ್ತ್ವಂ ಪಾದಚಾರೀ ಮಹೀಂ ಸ್ಪೃಶನ್ ॥**

ನೀನು ದೇವತಾ ಅತಿಥಿ ಪಿತೃ ಅಗ್ನಿ ಕಾರ್ಯಗಳಲ್ಲಿ ಅಪವಿತ್ರನೂ ಗುರು ದ್ವಿಜ ದೇವರುಗಳ ನಮಸ್ಕಾರದಿಂದ ಪರಾಙ್ಮುಖನೂ ಜಿನಸಂಬಂಧಿಯಾದ ದೀಕ್ಷೆಯನ್ನು ಹೊಂದಿದವನೂ ಆದ ನಿನಗೆ ಯಾವ ಅತಿಶಯವುಂಟಾಗಿರುತ್ತದೆ ? ಏತಕ್ಕೆಂದರೆ, ಭೂಮಿಯನ್ನು ಸ್ಪರ್ಶಿಸುವವನೂ ಪಾದಚಾರಿಯೂ ಆಗಿರುವ ನೀನು ಈಗಲೂ ಮನುಷ್ಯನಾಗಿರುತ್ತಿ .''

**ಇ[೬]ತ್ಯುಪಾರೂಢಸಂರಂಭ[೭]ಮುಪಾಲಬ್ಧಃ ಸ ಕೇನಚಿತ್ ।**
**ದದಾತ್ಯುತ್ತರಮಿತ್ಯಸ್ಮೈ ವಚೋಭಿ[೮]ರ್ಯುಕ್ತಿ ಪೇಶಲೈಃ ॥ ೧೧೩ ॥**

ಒಬ್ಬಾನೊಬ್ಬನಿಂದ ಈ ಪ್ರಕಾರವಾಗಿ ಕೋಪವನ್ನು ಹೊಂದಿರುವಂತೆ ದೂಷಿಸಲ್ಪಟ್ಟವನಾದ ಆ ಜೈನಬ್ರಾಹ್ಮಣನು ಯುಕ್ತಿಚತುರಗಳಾದ ಮಾತುಗಳಿಂದ ಈ ಮನುಷ್ಯನಿಗೆ ಮುಂದೆ ಹೇಳುವ ಪ್ರಕಾರವಾಗಿ ಉತ್ತರವನ್ನು ಕೊಡುತ್ತಾನೆ.

**ಶ್ರೂಯತಾಂ ಭೋ ದ್ವಿಜಂಮನ್ಯ ತ್ವಯಾ[೯]ಸ್ಮದ್ದಿವ್ಯಸಂಭವಃ ।**
**ಜಿನೋ [೧೦]ಜನಯಿತಾಸ್ಮಾಕಂ ಜ್ಞಾನಂ ಗರ್ಭೋಽತಿನಿರ್ಮಲಃ ॥ ೧೧೪ ॥**

''ತನ್ನನ್ನು ದ್ವಿಜನನ್ನಾಗಿ ತಿಳಿಯುವ ಎಲೈ ಮನುಷ್ಯನೆ ! ನಿನ್ನಿಂದ ನಮ್ಮ ದೇವತ್ವೋತ್ಪತ್ತಿಯು ಕೇಳಲ್ಪಡಲಿ. ನಮಗೆ ಜಿನನು ತಂದೆಯು. ಉಪದೇಶಕನೆಂದು ಭಾವವು. ಜ್ಞಾನವು ಅತ್ಯಂತ ನಿರ್ಮಲವಾದ ಗರ್ಭವು.

**[೧೧]ತತ್ರಾರ್ಹತೀಂ [೧೨]ತ್ರಿಧಾ ಭಿನ್ನಾಂ ಶಕ್ತಿಂ [೧೩]ತ್ರೈಗುಣ್ಯಸಂಶ್ರಿತಾಮ್ ।**
**ಸ್ವಸಾತ್ಕೃತ್ಯ ಸಮುದ್ಭೂತಾ ವಯಂ ಸಂಸ್ಕಾರಜನ್ಮನಾ ॥ ೧೧೫ ॥**

ಆ ಜ್ಞಾನಗರ್ಭದಲ್ಲಿ ಉಪಲಬ್ಧಿ ಉಪಯೋಗ ಸಂಸ್ಕಾರಗಳೆಂಬ ಮೂರು ಗುಣಗಳನ್ನು ಹೊಂದಿರುವುದೂ ಸಮ್ಯಗ್ದರ್ಶನಜ್ಞಾನಚಾರಿತ್ರರೂಪದಿಂದ ಮೂರು ಭೇದಗಳುಳ್ಳದೂ ಅರ್ಹತ್ಪರಮೇಶ್ವರಸಂಬಂಧಿಯೂ ಆದ ಶಕ್ತಿಯನ್ನು ಸ್ವಾಧೀನಮಾಡಿಕೊಂಡು ಸಂಸ್ಕಾರಜನ್ಮದಿಂದ ನಾವು ಜನಿಸಿದವರಾಗಿರುತ್ತೇವೆ.

**ಅಯೋನಿಸಂಭವಾಸ್ತೇನ ದೇವಾ ಏವ ನ ಮಾನುಷಾಃ ।**
**ವಯಂ ವಯಮಿವಾನ್ಯೇಽಪಿ ಸಂತಿ ಚೇದ್ಬ್ರೂಹಿ [೧೪]ತದ್ವಿಧಾನ್ ॥**

೧ ಪ್ರಸಿದ್ಧಪಿತುರುತ್ಪನ್ನ ಆಮುಷ್ಯಾಯಣ ಉಚ್ಯತೇ. ೨ ತವ ಪತ್ನೀ. ೩ ಉದ್ಗತನಾಸಿಕಃ. ೪ ಪ್ರಾಕ್ತನಃ. ೫ ಅಪವಿತ್ರಃ. ೬ ಸ್ವೀಕೃತ ಕ್ರೋಧಂ ಯಥಾ ಭವತಿ ತಥಾ. ೭ ದೂಷಿತಃ. ೮ ಯುಕ್ತಿಪಟುಭಿಃ. ೯ ಅಸ್ಮಾಕಂ ದೇವತ್ವೋತ್ಪತ್ತಿಃ. ೧೦ ಪಿತಾ. ೧೧ ಜ್ಞಾನಗರ್ಭೇ. ೧೨ ಸಮ್ಯಗ್ದರ್ಶನಜ್ಞಾನಚಾರಿತ್ರರೂಪೇಣ. ೧೩ ಉಪಲಬ್ಧ್ಯುಪಯೋಗಸಂಸ್ಕಾರತಾಂಪ್ರಾಪ್ತಾಂ. ೧೪ ಅಯೋನಿಸಂಭವ ಪ್ರಕಾರಾನ್-ಅಯೋನಿಸಂಭವಸದೃಶಾನಿತ್ಯರ್ಥಃ.

ಆದುದರಿಂದ ಆಯೋನಿಜರಾದ ನಾವು ದೇವತೆಗಳೇ ಆಗಿರುತ್ತೇವೆ, ಮನುಷ್ಯರಲ್ಲ. ನಮ್ಮಂತೆ ಬೇರೆ ಯಾರಾದರೂ ಇದ್ದರೆ ಅಂತಹ ಆಯೋನಿಜರನ್ನು ಹೇಳು.

**ಸ್ವಾಯಂಭುವಾನ್ಮುಖಾಜ್ಜಾತಾಸ್ತತೋ ದೇವದ್ವಿಜಾ ವಯಮ್ ।**
**ವ್ರತಚಿಹ್ನಂ ಚ ನಃ ಸೂತ್ರಂ ಪವಿತ್ರಂ [೧]ಸೂತ್ರದರ್ಶಿತಮ್ ॥ ೧೧೭ ॥**

ಸ್ವಯಂಭುವಿನ ಸಂಬಂಧಿಯಾದ ಮುಖದಿಂದ ಹುಟ್ಟಿರುವುದರಿಂದ ನಾವು ದೇವದ್ವಿಜರಾಗಿರುತ್ತೇವೆ. ಆಗಮಪ್ರೋಕ್ತವೂ ಪವಿತ್ರವೂ ಆದ ನಮ್ಮ ಸೂತ್ರವು (ಯಜ್ಞೋಪವೀತವು) ವ್ರತದ ಗುರುತಾಗಿದೆ.

**[೨]ಪಾಪಸೂತ್ರಾನುಗಾ ಯೂಯಂ ನ ದ್ವಿಜಾಃ [೩]ಸೂತ್ರಕಂಠಕಾಃ ।**
**ಸನ್ಮಾರ್ಗಕಂಟಕಾ[೪]ಸ್ತೀಕ್ಷ್ಣಾಃ ಕೇವಲಂ ಮಲದೂಷಿತಾಃ ॥ ೧೧೮ ॥**

ಸೂತ್ರಮಾತ್ರವೇ ಕೊರಳಲ್ಲಿರುವವರೂ ಪಾಪೋಪದೇಶವನ್ನು ಮಾಡುವ ಆಗಮಾಭಾಸವನ್ನನುಸರಿಸುವವರೂ ಆದ ನೀವುಗಳು ದ್ವಿಜರಲ್ಲ. ಸನ್ಮಾರ್ಗಕ್ಕೆ ಕಂಟಕರೂ ಕ್ರೂರಿಗಳೂ ಮುಖ್ಯವಾಗಿ ದೋಷಗಳಿಂದ ದೂಷಿತರೂ ಆಗಿರುತ್ತೀರಿ.

**ಶರೀರಜನ್ಮ ಸಂಸ್ಕಾರಜನ್ಮ ಚೇತಿ ದ್ವಿಧಾ ಮತಮ್ ।**
**ಜನ್ಮಾಂಗಿನಾಂ ಮೃತಿಶ್ಚೈವಂ ದ್ವಿಧಾಮ್ನಾತಾ ಜಿನಾಗಮೇ ॥ ೧೧೯ ॥**

ಜಿನಾಗಮದಲ್ಲಿ ಪ್ರಾಣಿಗಳ ಜನ್ಮವು ಶರೀರಜನ್ಮವೆಂದೂ ಸಂಸ್ಕಾರಜನ್ಮವೆಂದೂ ಎರಡುವಿಧವಾಗಿ ಹೇಳಲ್ಪಟ್ಟಿರುತ್ತದೆ. ಮರಣವೂ ಹೀಗೆ–ಶರೀರಮರಣ ಸಂಸ್ಕಾರಮರಣಗಳೆಂದು ಎರಡು ವಿಧವಾಗಿ ಹೇಳಲ್ಪಟ್ಟಿರುತ್ತದೆ.

**ದೇಹಾಂತರಪರಿಪ್ರಾಪ್ತಿಃ ಪೂರ್ವದೇಹಪರಿಕ್ಷಯಾತ್ ।**
**ಶರೀರಜನ್ಮ ವಿಜ್ಞೇಯಂ ದೇಹಭಾಜಾಂ ಭವಾಂತರೇ ॥ ೧೨೦ ॥**

ಪ್ರಾಣಿಗಳಿಗೆ ಪೂರ್ವಶರೀರನಾಶದಿಂದ ಇನ್ನೊಂದು ಭವದಲ್ಲಿ ಮತ್ತೊಂದು ಶರೀರದ ಪ್ರಾಪ್ತಿಯು ಶರೀರಜನ್ಮವೆಂದು ತಿಳಿಯಬೇಕು.

**ತಥಾ [೫]ಲಬ್ಧಾತ್ಮಲಾಭಸ್ಯ ಪುನಃ ಸಂಸ್ಕಾರಯೋಗತಃ ।**
**ದ್ವಿಜನ್ಮತಾಪರಿಪ್ರಾಪ್ತಿರ್ಜನ್ಮಸಂಸ್ಕಾರಜಂ ಸ್ಮೃತಮ್ ॥ ೧೨೧ ॥**

ಹಾಗೆ ಉತ್ಪತ್ತಿಲಾಭವನ್ನು ಪಡೆದ ಮನುಷ್ಯನಿಗೆ ಪುನಃ ಸಂಸ್ಕಾರಸಂಬಂಧದಿಂದ ದ್ವಿಜತ್ವದ ಪ್ರಾಪ್ತಿಯು ಸಂಸ್ಕಾರದಿಂದುಂಟಾದ ಜನ್ಮವೆಂದು ಸ್ಮರಿಸಲ್ಪಟ್ಟಿರುತ್ತದೆ.

**ಶರೀರಮರಣಂ ಸ್ವಾಯುರಂತೇ ದೇಹವಿಸರ್ಜನಮ್ ।**
**ಸಂಸ್ಕಾರಮರಣಂ ಪ್ರಾಪ್ತವ್ರತಸ್ಯಾ[೬]ಗಸ್ಸಮುಜ್ಝನಮ್ ॥ ೧೨೨ ॥**

ತನ್ನ ಆಯುಷ್ಯಾವಸಾನದಲ್ಲಿ ಶರೀರವನ್ನು ಬಿಡುವುದು ಶರೀರಮರಣವಾಗಿರುವುದು. ವ್ರತವನ್ನು ಸ್ವೀಕರಿಸಿರುವವನ ಮಿಥ್ಯಾತ್ವಾದಿದೋಷತ್ಯಾಗವು ಸಂಸ್ಕಾರಮರಣವಾಗಿರುವುದು.

**[೭]ಯತೋಽಯಂ ಲಬ್ಧಸಂಸ್ಕಾರೋ ವಿಜಹಾತಿ [೮]ಪ್ರಗೇತನಮ್ ।**
**ಮಿಥ್ಯಾದರ್ಶನಪರ್ಯಾಯಂ ತತ[೯]ಸ್ತೇನ ಮೃತೋ ಭವೇತ್ ॥ ೧೨೩ ॥**

ಯಾವ ಕಾರಣದಿಂದ ಸಂಸ್ಕಾರವನ್ನು ಹೊಂದಿದ ಈ ದ್ವಿಜನು ಮೊದಲಿನ ಮಿಥ್ಯಾಶ್ರದ್ಧಾನರೂಪವಾದ ಅವಸ್ಥೆಯನ್ನು ಬಿಡುತ್ತಾನೋ ಆ ಕಾರಣದಿಂದ ಮಿಥ್ಯಾಶ್ರದ್ಧಾನತ್ಯಾಗರೂಪದಿಂದ ಮೃತನಾಗುವನು.

**[೧೦]ತತ್ರ ಸಂಸ್ಕಾರಜನ್ಮೇದಮಪಾಪೋಪಹತಂ ಪರಮ್ ।**
**ಜಾತಂ [೧೧]ನೋ ಗುರ್ವನುಜ್ಞಾನಾದತೋ ದೇವದ್ವಿಜಾ ವಯಮ್ ॥**

ಆ ಶರೀರಜನ್ಮ ಸಂಸ್ಕಾರಜನ್ಮಗಳಲ್ಲಿ ನಮ್ಮ ಗುರುವಿನ ಬೋಧೆಯಿಂದ ಪಾಪರಹಿತವಾದ ಈ ಸಂಸ್ಕಾರಜನ್ಮವುಂಟಾದುದು. ಈ ಕಾರಣದಿಂದ ನಾವು ದೇವದ್ವಿಜರಾಗಿರುತ್ತೇವೆ.”

**ಇತ್ಯಾತ್ಮನೋ ಗುಣೋತ್ಕರ್ಷಂ ಖ್ಯಾಪಯನ್ನ್ಯಾಯವರ್ತ್ಮನಾ ।**
**ಗೃಹಮೇಧೀ ಭವೇತ್ಪ್ರಾಪ್ಯ ಸದ್ಗೃಹಿತ್ವಮನುತ್ತರಮ್ ॥ ೧೨೫ ॥**

ನ್ಯಾಯಮಾರ್ಗದಿಂದ ಮೇಲೆ ಹೇಳಿದಂತೆ ತನ್ನ ಗುಣೋತ್ಕೃಷ್ಟತೆಯನ್ನು ಪ್ರಕಟಿಸುವ ದ್ವಿಜನು ಶ್ರೇಷ್ಠವಾದ ಸದ್ಗೃಹಸ್ಥತ್ವವನ್ನು ಹೊಂದಿ ಗೃಹಸ್ಥನಾಗುವನು.

**ಭೂಯೋಽಪಿ ಸಂಪ್ರವಕ್ಷ್ಯಾಮಿ ಬ್ರಾಹ್ಮಣಾನ್ಸತ್ಕ್ರಿಯೋಚಿತಾನ್ ।**
**ಜಾತಿವಾದಾ[೧]ವಲೇಪಸ್ಯ [೨]ನಿರಾಸಾರ್ಥಮತಃಪರಮ್ ॥ ೧೨೬ ॥**

ಮತ್ತೂ ಇಲ್ಲಿಂದ ಮುಂದೆ ಸತ್ಕರ್ಮಗಳಿಗೆ ಯೋಗ್ಯರಾದ ಬ್ರಾಹ್ಮಣರನ್ನು ಕುರಿತು ಜಾತಿವಾದದ ಗರ್ವದ ನಿರಾಕರಣಕ್ಕೋಸ್ಕರ ಹೇಳುವೆನು.

**ಬ್ರಹ್ಮಣೋಽಪತ್ಯಮಿತ್ಯೇವಂ ಬ್ರಾಹ್ಮಣಾಃ ಸಮುದಾಹೃತಾಃ ।**
**ಬ್ರಹ್ಮಾ ಸ್ವಯಂಭೂರ್ಭಗವಾ[೩]ನ್ಪರಮೇಷ್ಠೀ ಜಿನೋತ್ತಮಃ ॥ ೧೨೭ ॥**

ಬ್ರಹ್ಮನ ಪುತ್ರರೆಂಬುದಾಗಿ ಬ್ರಾಹ್ಮಣರು ಉದಾಹರಿಸಲ್ಪಟ್ಟಿರುತ್ತಾರೆ. ಬ್ರಹ್ಮನು ಸ್ವಯಂಭುವೂ ಭಗವಂತನೂ ಉತ್ಕೃಷ್ಟಸ್ಥಾನದಲ್ಲಿರುವವನೂ ಆದ ಜಿನೇಶ್ವರನಾಗಿರುತ್ತಾನೆ.

**ಸ ಹ್ಯಾದಿಪರಮಬ್ರಹ್ಮಾ ಜಿನೇಂದ್ರೋ ಗುಣಬೃಂಹಣಾತ್ ।**
**ಪರಂ ಬ್ರಹ್ಮ [೪]ಯದಾಯತ್ತಮಾಮನಂತಿ ಮುನೀಶ್ವರಾಃ ॥ ೧೨೮ ॥**

ಆ ಜೀನೇಶ್ವರನೇ ಗುಣಾಧಿಕ್ಯದಿಂದ ಆದಿಪರಮಬ್ರಹ್ಮನೆಂದೂ (ವೃಷಭ ತೀರ್ಥಂಕರನೆಂದೂ) ಪರಬ್ರಹ್ಮರೂಪವು ಆ ಆದಿಪರಮಬ್ರಹ್ಮಾಧೀನವಾಗಿರುವುದೆಂದೂ ಮುನೀಶ್ವರರು ಹೇಳುತ್ತಾರೆ.

**ನೈಣಾಜಿನಧರೋ ಬ್ರಹ್ಮಾ ಜಟಾ[೫]ಕೂರ್ಚಾದಿಲಕ್ಷಣಃ ।**
**ಯಃ [೬]ಕಾಮಗರ್ದಭೋ ಭೂತ್ವಾ ಪ್ರಚ್ಯುತೋ [೭]ಬ್ರಹ್ಮವರ್ಚಸಾತ್ ॥**

ಜಟೆ ಗಡ್ಡ ಮೊದಲಾದುವುಗಳೇ ಲಕ್ಷಣಗಳಾಗಿರುವವನೂ ಜಿಂಕೆಯ ಚರ್ಮವನ್ನು ಧರಿಸಿರುವವನೂ ಆದ ಬ್ರಹ್ಮನು ಕಾಮದಿಂದ ಕತ್ತೆಯ ಆಕಾರದ ಮುಖವುಳ್ಳವನಾಗಿ ವೇದಾಧ್ಯಯನಸಂಪತ್ತಿಯಿಂದ ಜಾರಿದನು.

**ದಿವ್ಯಮೂರ್ತೇರ್ಜಿನೇಂದ್ರಸ್ಯ ಜ್ಞಾನಗರ್ಭಾ[೮]ದನಾವಿಲಾತ್ ।**
**ಸಮಾಸಾದಿತಜನ್ಮಾನೋ ದ್ವಿಜನ್ಮಾನಸ್ತತೋ ಮತಾಃ ॥ ೧೩೦ ॥**

ಆದುದರಿಂದ ದಿವ್ಯಮೂರ್ತಿಯಾದ ಜಿನೇಶ್ವರನ ನಿರ್ದೋಷವಾದ ಜ್ಞಾನಗರ್ಭದಿಂದ ಜನ್ಮವನ್ನು ಪಡೆದವರು ದ್ವಿಜರೆಂದು ಸಮ್ಮತರಾಗಿದ್ದಾರೆ.

**[೯]ವರ್ಣಾಂತಃಪಾತಿನೋ ನೈತೇ ಮಂತವ್ಯಾ ದ್ವಿಜಸತ್ತಮಾಃ ।**
**ವ್ರತಮಂತ್ರಾದಿಸಂಸ್ಕಾರಸಮಾರೋಪಿತಗೌರವಾಃ ॥ ೧೩೧ ॥**

ವ್ರತ ಮಂತ್ರ ಮೊದಲಾದುವುಗಳ ಸಂಸ್ಕಾರದಿಂದ ಗೌರವವನ್ನುಂಟುಮಾಡಿಕೊಂಡಿರುವವರಾದ ಈ ದ್ವಿಜೋತ್ತಮರು ಬ್ರಾಹ್ಮಣ ವರ್ಣದಲ್ಲಿ ಮಾತ್ರ ಇರುವವರಾಗಿದ್ದಾರೆ. ಮನ್ನಣೆಗೆ ಯೋಗ್ಯರಲ್ಲ. ಶುದ್ಧವಾದ ಬ್ರಾಹ್ಮಣರಲ್ಲವಾದುದರಿಂದ ಮನ್ನಣೆಗೆ ಯೋಗ್ಯರಲ್ಲವೆಂದು ಭಾವವು.

**ವರ್ಣೋತ್ತಮಾನಿಮಾನ್ವಿದ್ಮಃ ಕ್ಷಾಂತಿಶೌಚಪರಾಯಣಾನ್ ।**
**ಸಂತುಷ್ಟಾನ್ಪ್ರಾಪ್ತವೈಶಿಷ್ಟ್ಯಾನ[೧೦]ಕ್ಲಿಷ್ಟಾಚಾರಭೂಷಣಾನ್ ॥ ೧೩೨ ॥**

೧ ಆಗಮಪ್ರೋಕ್ತಂ. ೨ ಪಾಪೋಪದೇಶಕಾಗಮಾಭಾಸಾನುಗಾಃ. ೩ ಸೂತ್ರಮಾತ್ರಮೇವ ಕಂಠೇ ಯೇಷಾಂ ತೇ. ೪ ಕ್ರೂರಾಃ. ೫ ಲಬ್ಧೋತ್ಪತ್ತಿಲಾಭಸ್ಯ. ೬ ಮಿಥ್ಯಾತ್ವಾದಿದೋಷತ್ಯಜನಂ. ೭ ಯಸ್ಮಾತ್ಕಾರಣಾತ್. ೮ ಪ್ರಾಕ್ತನಂ. ೯ ಮಿಥ್ಯಾದರ್ಶನತ್ಯಜನಸ್ವರೂಪೇಣ. ೧೦ ಶರೀರಜನ್ಮಸಂಸ್ಕಾರಜನ್ಮನೋಃ. ೧೧ ಅಸ್ಮಾಕಂ.

೧ ಗರ್ವಸ್ಯ. ೨ ನಿರಾಕರಣಾಯ. ೩ ಪರಮಪದೇ ಸ್ಥಿತಃ. ೪ ಬ್ರಹ್ಮಾಯತ್ತಂ. ೫ ಕೂರ್ಚೋಪಲಕ್ಷಣ ಇತ್ಯಪಿ ಪಾಠಃ. ೬ ಕಾಮಾತ್ ಗರ್ದಭಾಕಾರಮುಖಃ. ೭ ವ್ರತಾಧ್ಯಯನಸಂಪತ್ತೇಃ. ೮ ಅಕಲುಷಾತ್. ೯ ವರ್ಣಮಾತ್ರೇ ವರ್ತಮಾನಾ ಇತ್ಯರ್ಥಃ. ೧೦ ಅದುಷ್ಟ.

ಕ್ಷಮೆ ಶುಚಿತ್ವಗಳಲ್ಲಿ ಆಸಕ್ತರೂ ಸಂತೋಷವುಳ್ಳವರೂ ವಿಶಿಷ್ಟತೆಯನ್ನು ಹೊಂದಿದವರೂ ದೋಷರಹಿತವಾದ ಆಚಾರವೇ ಭೂಷಣವಾಗಿರುವವರೂ ಆದ ಈ ಜೈನಬ್ರಾಹ್ಮಣರನ್ನು ವರ್ಣೋತ್ತಮರನ್ನಾಗಿ ತಿಳಿಯುತ್ತೇವೆ.

**[೧]ಕ್ಲಿಷ್ಟಾಚಾರಾಃ ಪರೇ ನೈವ ಬ್ರಾಹ್ಮಣಾ ದ್ವಿಜಮಾನಿನಃ ।**
**ಪಾಪಾರಂಭರತಾಃ ಶಶ್ವ[೨]ದಾಹತ್ಯ ಪಶುಘಾತಿನಃ ॥ ೧೩೩ ॥**

ಪಾಪಕಾರ್ಯದಲ್ಲಿ ಆಸಕ್ತರೂ ಬಾರಿಬಾರಿಗೆ ಹಠಾತ್ತಾಗಿ ಪಶುಗಳನ್ನು ಕೊಲ್ಲುವವರೂ ದುಷ್ಟವಾದ ಆಚಾರವುಳ್ಳವರೂ ತಾವು ದ್ವಿಜರೆಂದು ಅಹಂಕಾರಪಡುವವರೂ ಆದ ಬೇರೆ ಬ್ರಾಹ್ಮಣರು ವರ್ಣೋತ್ತಮರಲ್ಲವೇ ಅಲ್ಲ.

**ಸರ್ವ[೩]ಮೇಧಮಯಂ ಧರ್ಮಮಭ್ಯುಪೇತ್ಯ ಪಶೂನ್ ಘ್ನತಾಮ್ ।**
**ಕಾ ನಾಮ ಗತಿರೇಷಾಂ ಸ್ಯಾತ್ಪಾಪಶಾಸ್ತ್ರೋಪಜೀವಿನಾಮ್ ॥ ೧೩೪ ॥**

ಸರ್ವಪ್ರಾಣಿಹಿಂಸಾಮಯವಾದ ಧರ್ಮವನ್ನು ಅಂಗೀಕರಿಸಿ ಪಶುಗಳನ್ನು ಕೊಲ್ಲುವವರೂ ಪಾಪಬೋಧಕವಾದ ಶಾಸ್ತ್ರದಿಂದ ಜೀವಿಸುವವರೂ ಆದ ಈ ಬ್ರಾಹ್ಮಣರಿಗೆ ಯಾವ ಗತಿಯಾಗುವುದೋ.

**[೪]ಚೋದನಾಲಕ್ಷಣಂ ಧರ್ಮಮಧರ್ಮಂ [೫]ಪ್ರತಿಜಾನತೇ ।**
**ಯೇ ತೇಭ್ಯಃ ಕರ್ಮಚಾಂಡಾಲಾನ್ಪಶ್ಯಾಮೋ ನಾಪರಾನ್ಭುವಿ ॥ ೧೩೫ ॥**

ಮಿಥ್ಯಾವೇದೋಕ್ತಸ್ವರೂಪವಾದ ಅಧರ್ಮವನ್ನು ಧರ್ಮವನ್ನಾಗಿ ಯಾರು ಪ್ರತಿಜ್ಞೆಮಾಡುತ್ತಾರೋ ಅಂಥವರಿಗಿಂತ ಬೇರೆಯವರಾದ ಕರ್ಮಚಾಂಡಾಲರನ್ನು ಭೂಮಿಯಲ್ಲಿ ನಾವು ನೋಡುವುದಿಲ್ಲ.

**ಪಾರ್ಥಿವೈರ್ದಂಡನೀಯಾಶ್ಚ [೬]ಲುಂಟಾಕಾಃ ಪಾಪಪಂಡಿತಾಃ ।**
**ತೇಽಮೀ ಧರ್ಮಜುಷಾಂ ಬಾಹ್ಯಾ ಯೇ ನಿಘ್ನಂತ್ಯ[೭]ಘೃಣಾಃ ಪಶೂನ್ ॥**

ಧಾರ್ಮಿಕರಿಗೆ ಬಾಹ್ಯರಾದ ಯಾರು ದಯೆಯಿಲ್ಲದವರಾಗಿ ಪಶುಗಳನ್ನು ಕೊಲ್ಲುತ್ತಾರೋ ಅಂತಹ ಈ ಪಾಪಕಾರ್ಯಪಂಡಿತರಾದ ಕಳ್ಳರು ರಾಜರಿಂದ ದಂಡಿಸಲ್ಪಡುವುದಕ್ಕೆ ಯೋಗ್ಯರಾಗಿದ್ದಾರೆ.

**[೮]ಪಶುಹತ್ಯಾಸಮಾರಂಭಾ[೯]ತ್ಕ್ರವ್ಯಾದೇಭ್ಯೋಽಪಿ ನಿಷ್ಕೃಪಾಃ ।**
**ಯ[೧೦]ದ್ಯುಚ್ಛ್ರಿತಿಮುಶಂತ್ಯೇ[೧೧]ತೇ ಹಂತ್ಯೆ[೧೨]ವಂ ಧಾರ್ಮಿಕಾ ಹತಾಃ ॥**

ಪಶುವಧಪ್ರಾರಂಭದಿಂದ ರಾಕ್ಷಸರಿಗಿಂತಲೂ ನಿರ್ದಯರಾದ ಈ ಹಿಂಸಕರು ತಮ್ಮ ಉತ್ಕೃಷ್ಟತೆಯನ್ನು ಹೇಳುತ್ತಾರಾದರೆ ಹೀಗಾದರೆ ಧಾರ್ಮಿಕರು ಹತರಾದರು. ಕಷ್ಟ ! ಧಾರ್ಮಿಕರು ನಿಕೃಷ್ಟರಾಗಬೇಕಾಯಿತೆಂದು ಭಾವವು.

**ಮಲಿನಾಚರಿತಾ ಹ್ಯೇತೇ [೧೩]ಕೃಷ್ಣವರ್ಗೇ ದ್ವಿಜಬ್ರುವಾಃ ।**
**ಜೈನಾಸ್ತು ನಿರ್ಮಲಾಚಾರಾಃ [೧೪]ಶುಕ್ಲವರ್ಗೇ ಮತಾ ಬುಧೈಃ ॥ ೧೩೮ ॥**

ಮಲಿನಾಚಾರವುಳ್ಳ ಈ ಬ್ರಾಹ್ಮಣರಾದರೋ ತಾವು ದ್ವಿಜರೆಂದು ಹೇಳಿಕೊಳ್ಳುವವರಾಗಿ ಪಾಪಿಗಳ ಗುಂಪಿನಲ್ಲಿಯೂ, ನಿರ್ಮಲವಾದ ಆಚಾರವುಳ್ಳ ಜೈನ ಬ್ರಾಹ್ಮಣರಾದರೋ ಪುಣ್ಯಶೀಲರ ಗುಂಪಿನಲ್ಲಿಯೂ ವಿದ್ವಾಂಸರಿಂದ ಪರಿಗಣಿಸಲ್ಪಟ್ಟಿರುತ್ತಾರೆ.

**[೧೫]ಶ್ರುತಿ[೧೬]ಸ್ಮೃತಿ[೧೭]ಪುರಾವೃತ್ತಮಂತ್ರಕ್ರಿಯಾಶ್ರಿತಾ ।**
**ದೇವತಾಲಿಂಗಕಾಮಾನ್ತಕೃತಾ ಶುದ್ಧಿರ್ದ್ವಿಜನ್ಮನಾಮ್ ॥ ೧೩೯ ॥**

ದ್ವಿಜರ ಶುದ್ಧಿಯು ಆಗಮ ಧರ್ಮಸಂಹಿತಾ ‹ಪುರಾಣ ಆಚರಣ ಮಂತ್ರಕ್ರಿಯಾ ಇವುಗಳನ್ನಾಶ್ರಯಿಸಿರುವುದು. ದೇವತಾಚಿಹ್ನೆಯನ್ನು ಬಯಸುವುದರಿಂದ ಶುದ್ಧಿಯು ಮಾಡಲ್ಪಡುವುದಿಲ್ಲ.

**ಯೇ ವಿಶುದ್ಧತರಾಂ ವೃತ್ತಿಂ [೧]ತತ್ಕೃತಾಂ ಸಮುಪಾಶ್ರಿತಾಃ ।**
**ತೇ ಶುಕ್ಲವರ್ಗೇ ಬೋದ್ಧವ್ಯಾಃ ಶೇಷಾಃ ಶುದ್ಧಿಬಹಿಷ್ಕೃತಾಃ ॥ ೧೪೦ ॥**

ಯಾರು ಶ್ರುತಿ ಸ್ಮೃತಿ ಪುರಾಣಾದಿಗಳಿಂದ ಮಾಡಲ್ಪಟ್ಟ ಬಹು ಪರಿಶುದ್ಧವಾದ ಆಚರಣವನ್ನಾಶ್ರಯಿಸಿರುತ್ತಾರೋ ಅವರು ಪುಣ್ಯಶೀಲರ ಗುಂಪಿನಲ್ಲಿರುವವರೆಂದು ತಿಳಿಯತಕ್ಕವರು. ಉಳಿದವರು ಶುದ್ಧಿಬಹಿಷ್ಕೃತರು. ಅಶುದ್ಧರೆಂದು ಭಾವವು.

**[೨]ತಚ್ಛುದ್ಧ್ಯಶುದ್ಧೀ ಬೋದ್ಧವ್ಯೇ ನ್ಯಾಯಾನ್ಯಾಯಪ್ರವೃತ್ತಿತಃ ।**
**ನ್ಯಾಯೋ ದಯಾರ್ದ್ರವೃತ್ತಿತ್ವಮನ್ಯಾಯಃ ಪ್ರಾಣಿಮಾರಣಮ್ ॥ ೧೪೧ ॥**

ನ್ಯಾಯ ಮತ್ತು ಅನ್ಯಾಯಪ್ರವರ್ತನದಿಂದ ಜೈನ ಜೈನೇತರಬ್ರಾಹ್ಮಣರ ಶುದ್ಧಿ ಅಶುದ್ಧಿಗಳು ತಿಳಿಯತಕ್ಕುವಾಗಿರುತ್ತವೆ. ದಯಾರ್ದ್ರನಾಗಿರುವಿಕೆಯು ನ್ಯಾಯವು. ಪ್ರಾಣಿವಧೆಯು ಅನ್ಯಾಯವು.

**ವಿಶುದ್ಧವೃತ್ತಯಸ್ತಸ್ಮಾಜ್ಜೈನಾ ವರ್ಣೋತ್ತಮಾ ದ್ವಿಜಾಃ ।**
**[೩]ವರ್ಣಾಂತಃಪಾತಿನೋ ನೈತೇ ಜಗನ್ಮಾನ್ಯಾ [೪]ಇತಿ ಸ್ಥಿತಮ್ ॥ ೧೪೨ ॥**

ಆದುದರಿಂದ ಪರಿಶುದ್ಧವ್ಯಾಪಾರವುಳ್ಳವರೂ ಲೋಕಪೂಜ್ಯರೂ ಆದ ಈ ಜೈನರು ವರ್ಣೋತ್ತಮರಾದ ದ್ವಿಜರೆಂದೂ ವರ್ಣಮಾತ್ರದಲ್ಲಿ (ಶುದ್ಧಾಚರಣವಿಲ್ಲದೆ) ಇರುವವರು ವರ್ಣೋತ್ತಮರಾದ ದ್ವಿಜರಲ್ಲವೆಂದೂ ನಿಷ್ಕೃರ್ಷೆಯಾಯಿತು.

**ಸ್ಯಾದಾರೇ ಕಾರ್ಯಷಟ್ಕರ್ಮಜೀವಿನಾಂ ಗೃಹಮೇಧಿನಾಮ್ ।**
**ಹಿಂಸಾದೋಷಾ[೫]ನುಷಂಗಃ ಸ್ಯಾಜ್ಜೈನಾನಾಂ ಚ ದ್ವಿಜನ್ಮನಾಮ್ ॥ ೧೪೩ ॥**

ಇಜ್ಯಾವಾರ್ತಾದಿಷಟ್ಕರ್ಮಗಳಿಂದ ಜೀವಿಸುವವರೂ ಗೃಹಸ್ಥರೂ ಆದ ಜೈನ ದ್ವಿಜರಿಗೂ ಹಿಂಸಾದೋಷದ ಸಂಬಂಧವು ಆಗುವುದೆಂದು ಸಂದೇಹವುಂಟಾಗಬಹುದು.

**ಇತ್ಯತ್ರ ಬ್ರೂಮಹೇ [೬]ಸತ್ಯಮಲ್ಪಸಾವದ್ಯಸಂಗತಿಃ ।**
**ತತ್ರಾಸ್ತ್ಯೇವ ತಥಾಪ್ಯೇಷಾಂ ಸ್ಯಾ[೭]ಚ್ಛುದ್ಧಿಃ ಶಾಸ್ತ್ರದರ್ಶಿತಾ ॥ ೧೪೪ ॥**

ಈ ವಿಷಯದಲ್ಲಿ ಹೇಳುತ್ತೇವೆ. ಸ್ವಲ್ಪದೋಷದ ಸಂಬಂಧವು ಆ ಜೈನದ್ವಿಜರಲ್ಲಿ ನಿಜವಾಗಿ ಇದ್ದೇ ಇರುತ್ತದೆ. ಆದರೂ ಇವರಿಗೆ ಶಾಸ್ತ್ರದಿಂದ ತೋರಿಸಲ್ಪಟ್ಟ ಪ್ರಾಯಶ್ಚಿತ್ತವಿರುವುದು.

**ಅಪಿ ಚೈಷಾಂ ವಿಶುದ್ಧ್ಯಂಗಂ ಪಕ್ಷಶ್ಚರ್ಯಾ ಚ ಸಾಧನಮ್ ।**
**ಇತಿ ತ್ರಿತಯಮಸ್ತ್ಯೇವ ತದಿದಾನೀಂ ವಿವೃಣ್ಮಹೇ ॥ ೧೪೫ ॥**

ಮತ್ತು ಇವರ ಪರಿಶುದ್ಧಿಗೆ ಕಾರಣಗಳು ಪಕ್ಷ ಚರ್ಯಾ ಸಾಧನಗಳೆಂದು ಮೂರಿರುತ್ತವೆ. ಅವುಗಳನ್ನೀಗ ವಿವರಿಸುತ್ತೇವೆ.

**[೮]ತತ್ರ ಪಕ್ಷೋ ಹಿ ಜೈನಾನಾಂ ಕೃತ್ಸ್ನಹಿಂಸಾವಿವರ್ಜನಮ್ ।**
**ಮೈತ್ರೀಪ್ರಮೋದಕಾರುಣ್ಯಮಾಧ್ಯ[೯]ಸ್ಥ್ಯೈರುಪಬೃಂಹಿತಮ್ ॥ ೧೪೬ ॥**

ಆ ಪಕ್ಷಚರ್ಯಾ ಸಾಧನಗಳಲ್ಲಿ ಪ್ರಾಣಿಗಳಲ್ಲಿ ಮೈತ್ರೀಭಾವ ಗುಣಾಧಿಕರಲ್ಲಿ ಪ್ರಮೋದಭಾವ ದುಃಖಿತರಲ್ಲಿ ಕಾರುಣ್ಯಭಾವ ದುಷ್ಟರಲ್ಲಿ ಮಾಧ್ಯಸ್ಥಭಾವ ಇವುಗಳಿಂದ ವೃದ್ಧಿಯನ್ನು ಹೊಂದಿದ ಸಂಪೂರ್ಣ ಹಿಂಸಾತ್ಯಾಗವು ಜೈನರಿಗೆ ಪಕ್ಷವೆನಿಸುವುದು.

---

೧ ದುಷ್ಟ. ೨ ಹಠಾತ್, ಸಾಕ್ಷಾದ್ವಾ. ೩ ಹಿಂಸಾಮಯಂ. ೪ ವೇದೋಕ್ತಸ್ವರೂಪಂ. ೫ ಪ್ರತಿಜ್ಞಾಂ ಕುರ್ವತೇ. ೬ ಚೋರಾಃ. ೭ ಅದಯಾಃ. ೮ ಪಶುಹನನಪ್ರಾರಂಭಾತ್. ೯ ರಾಕ್ಷಸೇಭ್ಯಃ. ೧೦ ಉನ್ನತಿಂ. ೧೧ ಹಿಂಸಕಾಃ. ೧೨ ಏವಂ ಚೇತ್. ೧೩ ಪಾಪವರ್ಗೇ. ೧೪ ಪುಣ್ಯವರ್ಗೇ. ೧೫ ಆಗಮ. ೧೬ ಧರ್ಮಸಂಹಿತಾ. ೧೭ ಪುರಾಣಂ.

೧ ಶ್ರುತಿಸ್ಮೃತ್ಯಾದಿಕೃತಾಂ. ೨ ಜೈನದ್ವಿಜೇತರದ್ವಿಜಯೋಃ ಶುದ್ಧ್ಯಶುದ್ಧೀ. ೩ ವರ್ಣ ಮಾತ್ರವರ್ತಿನಃ. ೪ ಇತ್ಯವಸ್ಥಿತಂ. ೫ ಸಂಬಂಧಃ. ೬ ಅರ್ಧಾಂಗೀಕಾರೇ. ೭ ಪ್ರಾಯಶ್ಚಿತ್ತಂ. ೮ ತೇಷು. ೯ ಭಾವನಾಭಿಃ.

**ಚರ್ಯಾ ತು ದೇವತಾರ್ಥಂ ವಾ ಮಂತ್ರಸಿದ್ಧ್ಯರ್ಥಮೇವ [೧]ವಾ ।**
**ಔಷಧಾಹಾರ[೨]ಕ್ಲಪ್ತ್ಯೈ [೩]ವಾ ನ ಹಿಂಸ್ಯಾಮೀತಿ ಚೇಷ್ಟಿತಮ್ ॥ ೧೪೭ ॥**

"ದೇವತೆಗೋಸ್ಕರವಾಗಲಿ ಮಂತ್ರಸಿದ್ಧಿಗೋಸ್ಕರವಾಗಲಿ ಔಷಧಕ್ಕಾಗಲಿ ಆಹಾರಕ್ಕಾಗಲಿ ಪ್ರಾಣಿಹಿಂಸೆಯನ್ನು ಮಾಡುವುದಿಲ್ಲ" ಎಂಬ ವ್ಯಾಪಾರವಾದರೋ ಚರ್ಯೆ ಯೆನಿಸುವುದು.

**ತತ್ರಾ [೪]ಕಾಮಕೃತೇ ಶುದ್ಧಿಃ ಪ್ರಾಯಶ್ಚಿತ್ತೈರ್ವಿಧೀಯತೇ ।**
**ಪಶ್ಚಾಚ್ಚಾ[೫]ತ್ಮಾಲಯಂ ಸೂನೌ ವ್ಯವಸ್ಥಾಪ್ಯ ಗೃಹೋಜ್ಝನಮ್ ॥ ೧೪೮ ॥**

**[೬]ಚರ್ಯೈಷಾ ಗೃಹಿಣಾಂ ಪ್ರೋಕ್ತಾ ಜೀವಿತಾಂತೇ ತು ಸಾಧನಮ್ ।**
**ದೇಹಾಹಾರೇ[೭]ಹಿತತ್ಯಾಗಾ[೮]ದ್ಧ್ಯಾನಶುದ್ಧ್ಯಾತ್ಮಶೋಧನಮ್ ॥ ೧೪೯ ॥**

ಆ ಚರ್ಯೆಯಲ್ಲಿ ಪ್ರಮಾದದಿಂದ ಮಾಡಲ್ಪಟ್ಟ ದೋಷವಿರುತ್ತಿರಲು ಪ್ರಾಯಶ್ಚಿತ್ತಗಳಿಂದ ಶುದ್ಧಿಯು ಮಾಡಲ್ಪಡುವುದು. ಬಳಿಕ ತನ್ನ ಪುತ್ರನಿಗೆ ತನ್ನ ಮನೆಯನ್ನು ವಹಿಸಿಕೊಟ್ಟು ತಾನು ಮನೆಯನ್ನು ಬಿಡಬೇಕು. ಇದು ಗೃಹಸ್ಥರ ಚರ್ಯೆಯೆಂದು ಹೇಳಲ್ಪಟ್ಟಿರುತ್ತದೆ. ಆಮೇಲೆ ಮರಣಕಾಲದಲ್ಲಿ ಶರೀರ ಆಹಾರಚೇಷ್ಟಾ(ವ್ಯಾಪಾರ) ಇವುಗಳನ್ನು ತ್ಯಜಿಸಿ ಧ್ಯಾನದ ಶುದ್ಧಿಯಿಂದ ಆತ್ಮ ಶುದ್ಧಿಯನ್ನು ಮಾಡಿಕೊಳ್ಳುವಿಕೆಯು ಸಾಧನವೆನಿಸುವುದು.

**ತ್ರಿಷ್ವೇತೇಷು ನ ಸಂಸ್ಪರ್ಶೋ ವಧೇನಾ[೯]ರ್ಹದ್ದ್ವಿಜನ್ಮನಾಮ್ ।**
**ಇತ್ಯಾ[೧೦]ತ್ಮಪಕ್ಷನಿಕ್ಷಿಪ್ತದೋಷಾಣಾಂ ಸ್ಯಾನ್ನಿರಾಕೃತಿಃ ॥ ೧೫೦ ॥**

ಜೈನದ್ವಿಜರಿಗೆ ಈ ಮೂರು–ಪಕ್ಷ ಚರ್ಯಾಸಾಧನಗಳಲ್ಲಿ ಹಿಂಸೆಯೊಡನೆ ಸಂಬಂಧವಿಲ್ಲ. ಈ ಕಾರಣದಿಂದ ನಮ್ಮ(ಜೈನದ್ವಿಜರ)ಪಕ್ಷದಲ್ಲಿ ಆರೋಪಿಸಲ್ಪಟ್ಟ ದೋಷಗಳ ನಿರಾಕರಣವಾಗುವುದು.

**ಚತುರ್ಣಾಮಾಶ್ರಮಾಣಾಂ ಚ ಶುದ್ಧಿಃ ಸ್ಯಾದಾರ್ಹತೇ ಮತೇ ।**
**[೧೧]ಚಾತುರಾಶ್ರಮ್ಯಮನ್ಯೇಷಾಮವಿಚಾರಿತಸುಂದರಮ್ ॥ ೧೫೧ ॥**

ಆರ್ಹತಮದಲ್ಲಿ ಬ್ರಹ್ಮಚರ್ಯ ಮೊದಲಾದ ನಾಲ್ಕು ಆಶ್ರಮಗಳ ಶುದ್ಧಿಯೂ ಆಗುವುದು. ಬೇರೆಯವರ ಚತುರಾಶ್ರಮತ್ವವು ವಿಚಾರಮಾಡದಿದ್ದರೆ ಸುಂದರವಾಗಿ ತೋರುವುದು.

**ಬ್ರಹ್ಮಚಾರೀ ಗೃಹಸ್ಥಶ್ಚ ವಾನಪ್ರಸ್ಥೋಽಥ ಭಿಕ್ಷುಕಃ ।**
**ಇತ್ಯಾಶ್ರಮಾಸ್ತು ಜೈನಾನಾ[೧೨]ಮುತ್ತರೋತ್ತರಶುದ್ಧಿತಃ ॥ ೧೫೨ ॥**

ಜೈನರ ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಭಿಕ್ಷುಕಗಳೆಂಬ ಆಶ್ರಮಗಳಾದರೋ ಉತ್ತರೋತ್ತರ ಶುದ್ಧಿಯಿಂದ ಇರುತ್ತವೆ. ಗೃಹಸ್ಥರಲ್ಲಿ ದರ್ಶನಿಕ ಮೊದಲಾದ ಹನ್ನೊಂದು ನೆಲೆಗಳಿದ್ದು ಅವುಗಳಲ್ಲಿ ಬ್ರಹ್ಮಚಾರಿಯು ಏಳನೆಯ ನೆಲೆಯವನಾಗಿರುವುದರಿಂದ ಮುಂದಿನ ನೆಲೆಗಳ ಗೃಹಸ್ಥರು ಬ್ರಹ್ಮಚಾರಿಗಿಂತ ಶುದ್ಧರೆಂದು ಭಾವವು.

**ಜ್ಞಾತವ್ಯಾಃ ಸ್ಯುಃ ಪ್ರಪಂಚೇನ ಸಾಂತರ್ಭೇದಾಃ [೧೩]ಪೃಥಗ್ವಿಧಾಃ ।**
**ಗ್ರಂಥಗೌರವಭೀತ್ಯಾ ತು ನಾತ್ರೈತೇಷಾಂ ಪ್ರಪಂಚನಮ್ ॥ ೧೫೩ ॥**

ವಿಸ್ತಾರದಿಂದ ಅಂತರ್ಭೇದಗಳು ನಾನಾಪ್ರಕಾರಗಳಾಗಿರುತ್ತವೆಂದು ತಿಳಿಯತಕ್ಕುವಾಗಿರುತ್ತವೆ. ಇಲ್ಲಿ ಇವುಗಳ ವಿಸ್ತಾರವರ್ಣನವು ಗ್ರಂಥವು ದೊಡ್ಡದಾಗುವುದೆಂಬ ಭಯದಿಂದ ಮಾಡುವುದಿಲ್ಲ.

೧ ಕಥಿತಂ. ೨ ಕರಣಾಯ. ೩ ಅಥವಾ. ೪ ಪ್ರಮಾದಜನಿತದೋಷೇ. ೫ ಆತ್ಮಾನ್ವಯಮಿತ್ಯಪಿ ಪಾಠಃ. ೬ ಚರ್ಯಾಶುದ್ಧಿಃ. ೭ ಚೇಷ್ಟಾ. ೮ ಧ್ಯಾನನೈರ್ಮಲ್ಯೇನ. ೯ ಜೈನದ್ವಿಜಾನಾಂ. ೧೦ ಜೈನಪಕ್ಷ. ೧೧ ಚತುರಾಶ್ರಮತ್ವಂ. ೧೨ ಬ್ರಹ್ಮಚಾರಿಣಃ ಸಕಾಶಾತ್ ಗೃಹಸ್ಥಸ್ಯ ಅಧಿಕಾ ಶುದ್ಧಿಃ ಕಥಮಿತ್ಯುಕ್ತೇ ಆರಂಭನಿವೃತ್ತಾಖ್ಯಾಷ್ಟಮಶ್ರಾವಕಾದೀನಾಂ ಗೃಹಸ್ಥತ್ವೇ ಬ್ರಹ್ಮಚರ್ಯಾಯಾ ಅಧಿಕಶುದ್ಧಿಸಂಭವಾತ್. ೧೩ ನಾನಾಪ್ರಕಾರಾಃ.

**ಸದ್ಗೃಹಿತ್ವಮಿದಂ ಜ್ಞೇಯಂ ಗುಣೈರಾತ್ಮೋಪಬೃಂಹಣಮ್ ।**
**ಪಾರಿವ್ರಾಜ್ಯಮಿತೋ ವಕ್ಷ್ಯೇ ಸುವಿಶುದ್ಧಂ ಕ್ರಿಯಾಂತರಮ್ ॥ ೧೫೪ ॥**

ಗುಣಗಳಿಂದ ಆತ್ಮೋನ್ನತ್ತಿಯನ್ನು ಮಾಡಿಕೊಳ್ಳುವಿಕೆಯೇ ಸದ್ಗೃಹಸ್ಥತ್ವವೆಂದು ತಿಳಿಯತಕ್ಕುದು. ಇಲ್ಲಿಂದ ಮುಂದೆ ಪಾರಿವ್ರಾಜ್ಯವೆಂಬ ಅತ್ಯಂತಪರಿಶುದ್ಧವಾದ ಬೇರೊಂದು ಕ್ರಿಯೆಯನ್ನು ಹೇಳುವೆನು.

**ಗಾರ್ಹಸ್ಥ್ಯಮನುಪಾಲ್ಯೈವಂ ಗೃಹವಾಸಾ[೧]ದ್ವಿರಜ್ಯತಃ ।**
**ಯದ್ದೀಕ್ಷಾಗ್ರಹಣಂ ತದ್ಧಿ ಪಾರಿವ್ರಾಜ್ಯಂ [೨]ಪ್ರಚಕ್ಷ್ಯತೇ ॥ ೧೫೫ ॥**

ಮೇಲೆ ಹೇಳಿದಂತೆ ಗೃಹಸ್ಥಧರ್ಮವನ್ನು ಪರಿಪಾಲಿಸಿ ಮನೆಯ ವಾಸದಿಂದ ವಿರಕ್ತಿಯನ್ನು ಹೊಂದಿದವನ ದೀಕ್ಷಾಗ್ರಹಣವು ಪಾರಿವ್ರಾಜ್ಯವೆಂದು ಹೇಳಲ್ಪಡುತ್ತದೆ.

**ಪಾರಿವ್ರಾಜ್ಯಂ ಪರಿವ್ರಾಜೋ ಭಾವೋ ನಿರ್ವಾಣದೀಕ್ಷಣಮ್ ।**
**ತತ್ರ ನಿರ್ಮಮತಾವೃತ್ತ್ಯಾ ಜಾತರೂಪಸ್ಯ ಧಾರಣಮ್ ॥ ೧೫೬ ॥**

ಪರಿವ್ರಾಟ್ ಅಂದರೆ ಮುನಿಯ ಭಾವ(ರೂಪ)ಕ್ಕೆ ಪಾರಿವ್ರಾಜ್ಯವೆಂದು ಹೆಸರು. ನಿರ್ಮಮತ್ವವ್ಯಾಪಾರದಿಂದ ಹುಟ್ಟಿದಾಗಳಿನ ರೂಪವನ್ನು ಧರಿಸುವಿಕೆಯುಳ್ಳ ಆ ಪಾರಿವ್ರಾಜ್ಯವಾದರೋ ನಿರ್ವಾಣದೀಕ್ಷೆಯಾಗಿರುವುದು.

**ಪ್ರಶಸ್ತತಿಥಿನಕ್ಷತ್ರಯೋಗಲಗ್ನಗ್ರಹಾಂಶಕೇ ।**
**ನಿರ್ಗ್ರಂಥಾಚಾರ್ಯಮಾಶ್ರಿತ್ಯ ದೀಕ್ಷಾ ಗ್ರಾಹ್ಯಾ ಮುಮುಕ್ಷುಣಾ ॥**

ಮುಮುಕ್ಷುವು ಪ್ರಶಸ್ತವಾದ ತಿಥಿ ನಕ್ಷತ್ರ ಯೋಗ ಲಗ್ನ ಗ್ರಹ ಲಗ್ನದಅಂಶ ಇವುಗಳಲ್ಲಿ ನಿರ್ಗ್ರಂಥಾಚಾರ್ಯರನ್ನು ಹೊಂದಿ ದೀಕ್ಷೆಯನ್ನು ಪರಿಗ್ರಹಿಸಬೇಕು.

**ವಿಶುದ್ಧಕುಲಗೋತ್ರಸ್ಯ ಸದ್ವೃತ್ತಸ್ಯ [೩]ವಪುಷ್ಮತಃ ।**
**ದೀಕ್ಷಾಯೋಗ್ಯತ್ವಮಾಮ್ನಾತಂ ಸುಮುಖಸ್ಯ ಸುಮೇಧಸಃ ॥ ೧೫೮ ॥**

ಪರಿಶುದ್ಧವಾದ ಕುಲಗೋತ್ರಗಳುಳ್ಳವನೂ ಸದಾಚರಣವುಳ್ಳವನೂ ಅಂಗೋಪಾಂಗಪೂರ್ಣನೂ ಹಸನ್ಮುಖವುಳ್ಳವನೂ ಶ್ರೇಷ್ಠವಾದ ಮೇಧಾವಿಯೂ ಆದ ಮನುಷ್ಯನಿಗೆ ದೀಕ್ಷಾಯೋಗ್ಯತೆಯು ಹೇಳಲ್ಪಟ್ಟಿರುತ್ತದೆ.

**ಗ್ರಹೋಪರಾಗೇ ಗ್ರಹಣೇ ಪರಿವೇಷೇಂದ್ರಚಾಪಯೋಃ ।**
**ವಕ್ರಗ್ರಹೋದಯೇ ಮೇಘಪಟಲಸ್ಥಗಿತಾಂಬರೇ ॥ ೧೫೯ ॥**

ರಾಹು ಕೇತು ಗ್ರಹಗಳ ವಕ್ರತೆಯಲ್ಲಿಯೂ ಸೂರ್ಯ ಅಥವಾ ಚಂದ್ರ ಗ್ರಹಣದಲ್ಲಿಯೂ ಸೂರ್ಯ ಚಂದ್ರರ ಪರಿವೇಷ(ಮಂಡಲ)ದಲ್ಲಿಯೂ ಇಂದ್ರ ಧನುಸ್ಸಿನಲ್ಲಿಯೂ ವಕ್ರವಾದ ಗ್ರಹದ ಉದಯದಲ್ಲಿಯೂ ಮೇಘಪಟಲದಿಂದ ಮುಚ್ಚಲ್ಪಟ್ಟ ಆಕಾಶದಲ್ಲಿಯೂ

**[೪]ನಷ್ಟಾಧಿಮಾಸದಿನಯೋಃ ಸಂಕ್ರಾಂತೌ [೫]ಹಾನಿಮತ್ತಿಥೌ ।**
**ದೀಕ್ಷಾವಿಧಿಂ ಮುಮುಕ್ಷೂಣಾಂ ನೇಚ್ಛಂತಿ [೬]ಕೃತಬುದ್ಧಯಃ ॥ ೧೬೦ ॥**

ಶೂನ್ಯಮಾಸ ಅಧಿಕಮಾಸದಿನಗಳಲ್ಲಿಯೂ ಸಂಕ್ರಾಂತಿಯಲ್ಲಿಯೂ ಸಂಪೂರ್ಣವಲ್ಲದ ತಿಥಿಯಲ್ಲಿಯೂ ಸಂಪೂರ್ಣಜ್ಞಾನಿಗಳು ಮುಮುಕ್ಷುಗಳಿಗೆ ದೀಕ್ಷಾವಿಧಿಯನ್ನಿಚ್ಛಿಸುವುದಿಲ್ಲ. ಮೇಲೆಹೇಳಿದ ಅಶುಭಕಾಲಗಳಲ್ಲಿ ಮುಮುಕ್ಷುಗಳು ದೀಕ್ಷೆಯನ್ನು ಸ್ವೀಕರಿಸಬಾರದೆಂದು ಭಾವವು.

**[೭]ಸಂಪ್ರದಾಯಮನಾದೃತ್ಯ [೮]ಯಸ್ತ್ವಿಮಂ [೯]ದೀಕ್ಷಯೇದಧೀಃ ।**
**ಸ ಸಾಧುಭಿರ್ಬಹಿಷ್ಕಾರ್ಯೋ [೧೦]ವೃದ್ಧಾತ್ಯಾಸಾಧನಾರತಃ ॥ ೧೬೧ ॥**

೧ ವಿರಕ್ತಿಂಗಚ್ಛತಃ. ೨ ಪ್ರಚಕ್ಷತೇ ಇತ್ಯಪಿ ಪಾಠಃ. ೩ ಅಂಗೋಪಾಂಗಪೂರ್ಣಸ್ಯ. ೪ ಶೂನ್ಯಾಧಿಕ ಮಾಸದಿನಯೋಃ. ೫ ಅಸಂಪೂರ್ಣತಿಥೌ. ೬ ಸಂಪೂರ್ಣಮತಯಃ. ೭ ಆಮ್ನಾಯಂ. ೮ ಪುಮಾನ್. ೯ ದೀಕ್ಷಾಂ ಸ್ವೀಕುರ್ಯಾತ್. ೧೦ ವೃದ್ಧಾತಿಕ್ರಮಣೇ ತತ್ಪರಃ.

ಈ ಸಂಪ್ರದಾಯವನ್ನು ಅನಾದರಣೆಮಾಡಿ ಯಾವ ಬುದ್ಧಿಹೀನನು ದೀಕ್ಷೆಯನ್ನು ಸ್ವೀಕರಿಸುವನೋ ವೃದ್ಧರನ್ನು ಅತಿಕ್ರಮಿಸುವುದರಲ್ಲಿ ತತ್ಪರನಾದ ಆ ಮನುಷ್ಯನು ಸಾಧುಗಳಿಂದ ಬಹಿಷ್ಕರಿಸುವುದಕ್ಕೆ ಯೋಗ್ಯನಾಗಿರುತ್ತಾನೆ.

**[೧]ತತ್ರ ಸೂತ್ರಪದಾನ್ಯಾಹುರ್ಯೋಗೀಂದ್ರಾಃ ಸಪ್ತವಿಂಶತಿಮ್ ।**
**ಯೈ[೨]ರ್ನಿರ್ಣೀತೈರ್ಭವೇ[೩]ತ್ಸಾಕ್ಷಾತ್ಪಾರಿವ್ರಾಜ್ಯಸ್ಯ ಲಕ್ಷಣಮ್ ॥ ೧೬೨ ॥**

ಯೋಗಿಶ್ರೇಷ್ಠರು ಆ ಪಾರಿವ್ರಾಜ್ಯದಲ್ಲಿ ಇಪ್ಪತ್ತೇಳು ಸೂತ್ರಪದಗಳನ್ನು ಹೇಳಿದ್ದಾರೆ. ನಿಶ್ಚಿತಗಳಾದ ಆ ಸೂತ್ರಪದಗಳಿಂದ ಪಾರಿವ್ರಾಜ್ಯದ ಲಕ್ಷಣವು ಪ್ರತ್ಯಕ್ಷವಾಗುವುದು.

**ಜಾತಿರ್ಮೂರ್ತಿಶ್ಚ [೪]ತತ್ರಸ್ಥಂ ಲಕ್ಷಣಂ ಸುಂದರಾಂಗತಾ ।**
**ಪ್ರಭಾಮಂಡಲಚಕ್ರಾಣಿ ತಥಾ[೫]ಭಿಷವನಾಥತೇ ॥ ೧೬೩ ॥**

೧ ಜಾತಿ, ೨ ಶರೀರ, ೩ ಶರೀರದಲ್ಲಿರುವ ಲಕ್ಷಣ, ೪ ಸುಂದರಾಂಗತ್ವ, ೫ ಪ್ರಭಾ, ೬ ಮಂಡಲ, ೭ ಚಕ್ರ, ೮ ಅಭಿಷೇಕ, ೯ ನಾಥ(ಪ್ರಭು)ತ್ವ,

**ಸಿಂಹಾಸನೋಪಧಾನೇ ಚ ಛತ್ರಚಾಮರಘೋಷಣಾಃ ।**
**ಅಶೋಕವೃಕ್ಷನಿಧಯೋ ಗೃಹಶೋಭಾವಗಾಹನೇ ॥ ೧೬೪ ॥**

೧೦ ಸಿಂಹಾಸನ, ೧೧ ಉಪಧಾನ(ದಿಂಬು), ೧೨ ಛತ್ರ, ೧೩ ಚಾಮರ, ೧೪ ಘೋಷಣ, ೧೫ ಅಶೋಕವೃಕ್ಷ, ೧೬ ನಿಧಿ, ೧೭ ಗೃಹಶೋಭಾ, ೧೮ ಅವಗಾಹನ,

**ಕ್ಷೇತ್ರಜ್ಞಾಜ್ಞಾಸಭಾಃ ಕೀರ್ತಿರ್ವಂದ್ಯತಾ ವಾಹನಾನಿ ಚ ।**
**ಭಾಷಾಹಾರಸುಖಾನೀತಿ ಜಾತ್ಯಾದಿಃ ಸಪ್ತವಿಂಶತಿಃ ॥ ೧೬೫ ॥**

೧೯ ಕ್ಷೇತ್ರಜ್ಞ, ೨೦ ಆಜ್ಞಾ, ೨೧ ಸಭಾ, ೨೨ ಕೀರ್ತಿ, ೨೩ ವಂದ್ಯತ್ವ, ೨೪ ವಾಹನ, ೨೫ ಭಾಷಾ, ೨೬ ಆಹಾರ, ೨೭ ಸುಖ, ಈ ಪ್ರಕಾರವಾಗಿ ಜಾತಿ ಮೊದಲಾದ ಇಪ್ಪತ್ತೇಳು ಸೂತ್ರಪದಗಳಾಗಿರುತ್ತವೆ.

**ಜಾತ್ಯಾದಿಕಾನಿಮಾನ್ಸಪ್ತವಿಂಶತಿಂ ಪರಮೇಷ್ಠಿನಾಮ್ ।**
**ಗುಣಾನೀಪ್ಸುರ್ಭಜೇದ್ದೀಕ್ಷಾಂ [೬]ಸ್ವೇಷು [೭]ತೇಷ್ವಕೃತಾದರಃ ॥ ೧೬೬ ॥**

ಪಂಚಪರಮೇಷ್ಠಿಗಳ ಗುಣಗಳನ್ನು ಇಚ್ಛಿಸುವವನು ಈ ಇಪ್ಪತ್ತೇಳು ಜಾತಿ ಮೊದಲಾದುವುಗಳ ಅಭಿಮಾನವನ್ನೂ ಅವುಗಳಲ್ಲಿ ಪ್ರೀತಿಯನ್ನೂ ಮಾಡದಿರುವವನಾಗಿ ದೀಕ್ಷೆಯನ್ನು ಹೊಂದಬೇಕು.

**ಜಾತಿಮಾನಪ್ಯ[೮]ನುತ್ಸಿಕ್ತಃ ಸಂಭಜೇದರ್ಹತಾಂ ಕ್ರಮೌ ।**
**ಯತೋ [೯]ಜಾತ್ಯಂತರೇ ಜಾತ್ಯಾಂ ಯಾತಿ [೧೦]ಜಾತಿಂ ಚತುಷ್ಟಯೀಮ್॥**

ಉತ್ತಮಜಾತಿಯುಳ್ಳವನಾದರೂ ಗರ್ವಿತನಾಗದೆ ಅರ್ಹತ್ಪರಮೇಶ್ವರರ ಚರಣಗಳನ್ನು ಚೆನ್ನಾಗಿ ಭಜಿಸಬೇಕು. ಆದರಿಂದ ಜನ್ಮಾಂತರದಲ್ಲಿ ಉತ್ತಮ ಜಾತಿಯಲ್ಲಿ ದಿವ್ಯಜಾತಿ ವಿಜಯಜಾತಿ ಪರಮಜಾತಿ ಸ್ವಾತ್ಮೋತ್ಥಜಾತಿಗಳೆಂಬ ನಾಲ್ಕು ಜಾತಿಗಳನ್ನು ಹೊಂದುತ್ತಾನೆ.

**ಜಾತಿ[೧೧]ರೈಂದ್ರೀ ಭವೇದ್ದಿವ್ಯಾ ಚಕ್ರಿಣಾಂ ವಿಜಯಾಶ್ರಿತಾ ।**
**ಪರಮಾ ಜಾತಿರಾರ್ಹಂತ್ಯೇ ಸ್ವಾತ್ಮೋತ್ಥಾ [೧೨]ಸಿದ್ಧಿಮೀಯುಷಾಮ್ ॥**

ಇಂದ್ರನ ಸಂಬಂಧಿಯಾದ ಜಾತಿಗೆ ದಿವ್ಯಜಾತಿಯೆಂದೂ ಚಕ್ರವರ್ತಿಗಳ ಜಾತಿಗೆ ವಿಜಯಜಾತಿಯೆಂದೂ ಅರ್ಹತ್ಪರಮೇಶ್ವರಾವಸ್ಥೆಯಲ್ಲುಂಟಾಗುವ ಜಾತಿಗೆ ಪರಮಜಾತಿಯೆಂದೂ ಸಿದ್ಧಪರಮೇಷ್ಠಿಗಳ ಜಾತಿಗೆ ಸ್ವಾತ್ಮೋತ್ಥಜಾತಿಯೆಂದೂ ಹೆಸರು. (ಜಾತಿಯೆಂದು ಅವಸ್ಥಾವಿಶೇಷದ ಹೆಸರು).

೧ ಪಾರಿವ್ರಾಜ್ಯೇ. ೨ ನಿಶ್ಚಿತೈಃ. ೩ ಪ್ರತ್ಯಕ್ಷಂ. ೪ ಮೂರ್ತಿಸ್ಥಂ. ೫ ಅಭಿಷವಶ್ಚ ನಾಥತಾ ಚ. ೬ ಆತ್ಮೀಯೇಷು. ೭ ಜಾತ್ಯಾದಿಷು. ೮ ಅಗರ್ವಿತಃ. ೯ ಜನ್ಮಾಂತರೇ. ೧೦ ದಿವ್ಯಜಾತಿ ವಿಜಯಜಾತಿ ಪರಮಜಾತಿ ಸ್ವಾತ್ಮೋತ್ಥಜಾತಿಮಿತಿ. ೧೧ ಇಂದ್ರಸ್ಯೇಯಂ. ೧೨ ಸಿದ್ಧಾನಾಂ.

**[೧]ಮೂರ್ತ್ಯಾದಿಷ್ವಪಿ ನೇತವ್ಯಾ ಕಲ್ಪನೇಯಂ ಚತುಷ್ಟಯೀ ।**
**ಪುರಾಣಜ್ಞೈರಸಮ್ಮೋಹಾ[೨]ತ್ಕ್ವಚಿಚ್ಚ [೩]ತ್ರಿತಯೀ ಮತಾ ॥ ೧೬೯ ॥**

ಪುರಾಣಗಳನ್ನು ತಿಳಿದವರು ಮೂರ್ತ್ಯಾದಿಗಳಲ್ಲಿಯೂ ಈ ಮೇಲೆ ಹೇಳಿದ ನಾಲ್ಕು ಕಲ್ಪನೆಗಳನ್ನು ಜಾಗರೂಕತೆಯಿಂದ ಅನ್ವಯಿಸಿಕೊಳ್ಳಬೇಕು. ಕೆಲವು ಕಡೆಯಲ್ಲಿ ಎಂದರೆ ಸಿದ್ಧಪರಮೇಷ್ಠಿಗಳಲ್ಲಿ ಸಿದ್ಧಮೂರ್ತಿ–ಸ್ವಾತ್ಮೋತ್ಥಮೂರ್ತಿಯನ್ನು ಬಿಟ್ಟು ಉಳಿದ ದಿವ್ಯಮೂರ್ತಿ ಮೊದಲಾದ ಮೂರುಮೂರ್ತಿಗಳಿರುತ್ತವೆ. ಸಿದ್ಧಪರಮೇಷ್ಠಿಗಳು ಅಮೂರ್ತರೆಂದು ಭಾವವು.

**ಕರ್ಶಯನ್ಮೂರ್ತಿಮಾತ್ಮೀಯಾಂ ರಕ್ಷ[೪]ನ್ಮೂರ್ತೀಃ [೫]ಶರೀರಿಣಾಮ್ ।**
**ತಪೋಧಿತಿಷ್ಠೇದ್ದಿವ್ಯಾದಿ ಮೂರ್ತೀರಾಪ್ತುಮನಾ ಮುನಿಃ ॥ ೧೭೦ ॥**

ದಿವ್ಯಾದಿಮೂರ್ತಿಗಳನ್ನು ಹೊಂದಲು ಮನಸ್ಸುಳ್ಳ ಮುನಿಯು ತನ್ನ ಮೂರ್ತಿ–ದೇಹವನ್ನು ಕೃಶಮಾಡುವವನಾಗಿಯೂ ಪ್ರಾಣಿಗಳ ದೇಹಗಳನ್ನು ರಕ್ಷಿಸುವವನಾಗಿಯೂ ತಪಸ್ಸನ್ನು ಮಾಡಬೇಕು.

**ಸ್ವಲಕ್ಷಣ[೬]ಮನುದ್ದೇಶ್ಯಂ ಮನ್ಯಮಾನೋ ಜಿನೇಶಿನಾಮ್ ।**
**ಲಕ್ಷಣಾ[೭]ನ್ಯಭಿಸಂಧಾಯ ತಪಸ್ಯೇ[೮]ತ್ಕೃತಲಕ್ಷಣಃ ॥ ೧೭೧ ॥**

ತನ್ನ ಸ್ವರೂಪವು ಹೇಳತಕ್ಕುದಲ್ಲವೆಂದು ತಿಳಿಯುವವನೂ ಗುಣಗಳಿಂದ ಪ್ರಸಿದ್ಧನೂ ಆದ ಮುನಿಯು ಜಿನೇಶ್ವರರ ಲಕ್ಷಣಗಳನ್ನು ಧ್ಯಾನಿಸಿ ತಪಸ್ಸನ್ನು ಮಾಡಬೇಕು.

**[೯]ಮ್ಲಾಪಯನ್ ಸ್ವಾಂಗಸೌಂದರ್ಯಂ ಮುನಿರುಗ್ರಂ ತಪಶ್ಚರೇತ್ ।**
**ವಾಂಛನ್ ದಿವ್ಯಾದಿಸೌಂದರ್ಯಮನಿವಾರ್ಯಪರಂಪರಮ್ ॥ ೧೭೨ ॥**

ತನ್ನ ಶರೀರಸೌಂದರ್ಯವನ್ನು ಕುಂದಿಸುವವನೂ ನಿವಾರಿಸತಕ್ಕುದಲ್ಲದ ಪರಂಪರೆಯುಳ್ಳ (ಪರಂಪರೆಯಿಂದ ನಾಶವಾಗದಿರುವ) ದಿವ್ಯ ವಿಜಯ ಪರಮ ಸ್ವಾತ್ಮೋತ್ಥಸೌಂದರ್ಯವನ್ನಿಚ್ಛಿಸುವವನೂ ಆದ ಮುನಿಯು ಕಠಿನವಾದ ತಪಸ್ಸನ್ನು ಮಾಡಬೇಕು.

**ಮಲೀಮಸಾಂಗೋ ವ್ಯುತ್ಸೃಷ್ಟಸ್ವಕಾಯಪ್ರಭವಪ್ರಭಃ ।**
**[೧೦]ಪ್ರಭೋಃ ಪ್ರಭಾಂ ಮುನಿರ್ಧ್ಯಾಯನ್ಭವೇತ್ಕ್ಷಿಪ್ರಂ [೧೧]ಪ್ರಭಾಸ್ವರಃ ॥**

ಮಲಿನವಾದ ದೇಹವುಳ್ಳವನೂ ತನ್ನ ದೇಹದಿಂದುಂಟಾಗುವ ಪ್ರಭೆಯನ್ನು ತ್ಯಜಿಸಿದವನೂ (ಲಕ್ಷಿಸದಿರುವವನೂ) ಸರ್ವಜ್ಞ–ಜಿನೇಶ್ವರನ ಪ್ರಭೆಯನ್ನು ಧ್ಯಾನಿಸುವವನೂ ಆದ ಮುನಿಯು ಶೀಘ್ರವಾಗಿ ದೇದೀಪ್ಯಮಾನನಾಗುವನು.

**ಸ್ವಂ [೧೨]ಮಣಿಸ್ನೇಹದೀಪಾದಿತೇಜೋಪಾಸ್ಯ ಜಿನಂ ಭಜನ್ ।**
**ತೇಜೋಮಯಮಯಂ ಯೋಗೀ ಸ್ಯಾತ್ತೇಜೋವಲಯೋಜ್ಜ್ವಲಃ ॥**

ರತ್ನದೀಪ ತೈಲದೀಪವೇ ಮೊದಲಾದುವುಗಳಿಂದುಂಟಾಗುವ ತನ್ನ ತೇಜಸ್ಸನ್ನು ಬಿಟ್ಟು ಪ್ರಕಾಶಮಯನಾದ ಜಿನನನ್ನು ಭಜಿಸುವ ಈ ಯೋಗಿಯು ಪ್ರಭಾಮಂಡಲದಿಂದ ಪ್ರಕಾಶಮಾನನಾಗುವನು.

**ತ್ಯಕ್ತ್ವಾ[೧೩]ಸ್ತ್ರವ್ಯಸ್ತಶಸ್ತ್ರಾಣಿ ಪ್ರಾಕ್ತನಾನಿ ಪ್ರಶಾಂತಿಭಾಕ್ ।**
**ಜಿನಮಾರಾಧ್ಯ ಯೋಗೀಂದ್ರೋ ಧರ್ಮಚಕ್ರಾಧಿಪೋ ಭವೇತ್ ॥**

ಮೊದಲಿನ ದಿವ್ಯಾಯುಧಗಳನ್ನೂ ಕೈಯಿಂದ ಬಿಡಲ್ಪಡುವ ಸಾಮಾನ್ಯಾಯುಧಗಳನ್ನೂ ಬಿಟ್ಟು ಶಾಂತಿಯನ್ನು ಹೊಂದಿದವನಾದ ಯೋಗೀಂದ್ರನು ಜಿನನನ್ನು ಆರಾಧಿಸಿ ಧರ್ಮಚಕ್ರಕ್ಕೆ ಪ್ರಭುವಾಗುವನು.

೧ ದಿವ್ಯಮೂರ್ತಿಃ ವಿಜಯಮೂರ್ತಿಃ ಪರಮಮೂರ್ತಿಃ ಸ್ವಾತ್ಮೋತ್ಥಮೂರ್ತಿರಿತಿ. ೨ ಸಿದ್ಧಾದೌ. ೩ ಸಿದ್ಧಮೂರ್ತಿಂ ವಿಹಾಯ. ೪ ಶರೀರಾಣಿ. ೫ ಸಂಸಾರಿಜೀವಿನಾಂ. ೬ ನ ನಿರ್ದೇಶ್ಯಂ, ನಾಮಸಂಕೀರ್ತನಂ ಕರ್ತುಮಯೋಗ್ಯಂ. ೭ ಧ್ಯಾತ್ವಾ. ೮ ಗುಣೈಃ ಪ್ರತೀತಃ. ೯ ಮ್ಲಾನಿಂ ಕುರ್ವನ್. ೧೦ ಸರ್ವಜ್ಞಸ್ಯ. ೧೧ ದಿವ್ಯಾದಿಪ್ರಭಯಾ ಭಾಸ್ವರಃ. ೧೨ ಮಣೀದೀಪಸ್ನೇಹದೀಪ. ೧೩ ದಿವ್ಯಾಯುಧಕರಮುಕ್ತಸಾಮಾನ್ಯಾಯುಧಾನಿ.

**ತ್ಯಕ್ತಸ್ನಾನಾದಿಸಂಸ್ಕಾರಃ ಸಂಶ್ರಿತ್ಯ [೧]ಸ್ನಾತಕಂ ಜಿನಮ್ ।**
**ಮೂರ್ಧ್ನಿ ಮೇರೋರವಾಪ್ನೋತಿ ಪರಂ ಜನ್ಮಾಭಿಷೇಚನಮ್॥ ೧೭೬ ॥**

ಸ್ನಾನವೇ ಮೊದಲಾದ ಸಂಸ್ಕಾರವನ್ನು ತ್ಯಜಿಸಿದವನಾಗಿ ಪ್ರಕೃಷ್ಟಜ್ಞಾನಾತಿಶಯವುಳ್ಳ ಜಿನನನ್ನು ಹೊಂದಿ ಮೇರುಪರ್ವತದ ಮಸ್ತಕದಲ್ಲಿ ಶ್ರೇಷ್ಠವಾದ ಜನ್ಮಾಭಿಷೇಕವನ್ನು ಪಡೆಯುತ್ತಾನೆ.

**ಸ್ವಂ [೨]ಸ್ವಾಮ್ಯಮೈಹಿಕಂ ತ್ಯಕ್ತ್ವಾ ಪರಮಸ್ವಾಮಿನಂ ಜಿನಮ್ ।**
**ಸೇವಿತ್ವಾ ಸೇವನೀಯತ್ವಮೇಷ್ಯತ್ಯೇಷ ಜಗಜ್ಜನೈಃ ॥ ೧೭೭ ॥**

ಈ ಯೋಗಿಯು ತನ್ನ ಇಹಲೋಕಸಂಬಂಧವಾದ ಸ್ವಾಮಿತ್ವವನ್ನು ಬಿಟ್ಟು ಶ್ರೇಷ್ಠಸ್ವಾಮಿಯಾದ ಜಿನನನ್ನು ಸೇವಿಸಿ ಲೋಕದ ಜನರಿಂದ ಸೇವಿಸಲ್ಪಡುವ ಯೋಗ್ಯತೆಯನ್ನು ಪಡೆಯುತ್ತಾನೆ.

**ಸ್ವೋಚಿತಾಸನಭೇದಾನಾಂ ತ್ಯಾಗಾತ್ತ್ಯಕ್ತಾಂಬರೋ ಮುನಿಃ ।**
**ಸೈಂಹಂ ವಿಷ್ಟರಮಧ್ಯಾಸ್ಯ ತೀರ್ಥಪ್ರಖ್ಯಾಪಕೋ ಭವೇತ್ ॥ ೧೭೮ ॥**

ವಸ್ತ್ರವನ್ನು ತ್ಯಜಿಸಿದವನಾದ ಮುನಿಯು ತನಗೆ ಉಚಿತವಾದ ಆಸನಭೇದಗಳ ತ್ಯಾಗದಿಂದ ಸಿಂಹಪೀಠದಲ್ಲಿ ಕುಳಿತು ಪ್ರವಚನ–ಶಾಸ್ತ್ರವನ್ನು ಪ್ರಕಟಿಸುವವನಾಗುತ್ತಾನೆ.

**ಸ್ವೋಪಧಾನಾದ್ಯನಾದೃತ್ಯ ಯೋಭೂ[೩]ನ್ನಿರುಪಧಿರ್ಮುನಿಃ ।**
**ಶಯಾನಃ ಸ್ಥಂಡಿಲೇ ಬಾಹುಮಾತ್ರಾರ್ಪಿತ[೪]ಶಿರಸ್ತಟಃ ॥ ೧೭೯ ॥**

**ಸ ಮಾಹಾಭ್ಯುದಯಂ ಪ್ರಾಪ್ಯ ಜಿನೋ ಭೂತ್ವಾಪ್ತಸತ್ಕ್ರಿಯಃ ।**
**ದೇವೈರ್ವಿರಚಿತಂ ದೀಪ್ರ[೫]ಮಾಸ್ಕಂದತ್ಯುಪಧಾನಕಮ್ ॥ ೧೮೦ ॥**

ತನ್ನ ತಲೆದಿಂಬು ಮೊದಲಾದುದನ್ನು ದೂರಮಾಡಿ ನೆಲದಲ್ಲಿ ಮಲಗುವವನೂ ಬರೇ ತನ್ನ ತೋಳಿನಲ್ಲಿ ತಲೆಯನ್ನಿರಿಸಿದವನೂ ಆದ ಯಾವ ಮುನಿಯು ಪರಿಗ್ರಹರಹಿತನಾಗುವನೋ ಅವನು ಮಹಾಭ್ಯುದಯ–ಸುಖವನ್ನು ಹೊಂದಿ ಜಿನನಾಗಿ ಸತ್ಕ್ರಿಯೆಗಳನ್ನು ಪಡೆದು ದೇವತೆಗಳಿಂದ ರಚಿಸಲ್ಪಟ್ಟುದೂ ಪ್ರಕಾಶಮಾನವೂ ಆದ ತಲೆದಿಂಬನ್ನು ಹೊಂದುತ್ತಾನೆ. ತೀರ್ಥಕರ ಕುಮಾರಕಾಲದಲ್ಲಿ ದೇವತೆಗಳಿಂದ ರಚಿಸಲ್ಪಟ್ಟ ಹಾಸಿಗೆ ತಲೆದಿಂಬು ಮೊದಲಾದ ಸೇವೆಯನ್ನು ಹೊಂದುತ್ತಾನೆಂದು ಭಾವವು.

**ತ್ಯಕ್ತಶೀತಾ[೬]ತಪತ್ರಾಣಸಕಲಾತ್ಮಪರಿಚ್ಛದಃ ।**
**ತ್ರಿಭಿಶ್ಛತ್ರೈಃ ಸಮುದ್ಭಾಸಿರತ್ನೈರುದ್ಭಾಸತೇ ಸ್ವಯಮ್ ॥ ೧೮೧ ॥**

ಶೀತವನ್ನೂ ಬಿಸಿಲನ್ನೂ ತಡೆಯುವ ಛತ್ರಿಯೇ ಮೊದಲಾದ ತನ್ನ ಸಮಸ್ತ ಸಾಧನಗಳನ್ನು ಪರಿತ್ಯಜಿಸಿದವನಾಗಿ ಪ್ರಕಾಶಮಾನವಾದ ರತ್ನಗಳಿಂದಲೂ ಮೂರು ಕೊಡೆಗಳಿಂದಲೂ ತಾನು ಅಧಿಕವಾಗಿ ಪ್ರಕಾಶಿಸುತ್ತಾನೆ.

**ವಿವಿಧವ್ಯಜನತ್ಯಾಗಾದನುಷ್ಠಿತತಪೋವಿಧಿಃ ।**
**ಚಾಮರಾಣಾಂ ಚತುಷ್ಷಷ್ಟ್ಯಾ ವೀಜ್ಯತೇ [೭]ಜಿನಪರ್ಯಯೇ ॥ ೧೮೨ ॥**

ನಾನಾಪ್ರಕಾರವಾದ ಬೀಸಣಿಗೆಗಳ ತ್ಯಾಗದಿಂದ ತಪಸ್ಸನ್ನು ಆಚರಿಸಿದವನಾಗಿ ಅರ್ಹತ್ಪರಮೇಶ್ವರಾವಸ್ಥೆಯುಂಟಾಗುತ್ತಿರಲು ಅರುವತ್ತನಾಲ್ಕು ಚಾಮರಗಳಿಂದ ಬೀಸಲ್ಪಡುತ್ತಾನೆ.

**ಉಜ್ಝಿತಾನಕಸಂಗೀತಘೋಷಃ ಕೃತ್ವಾ ತಪೋವಿಧಿಮ್ ।**
**ಸ್ಯಾ[೮]ದ್ಧ್ಯದುಂದುಭಿನಿರ್ಘೋಷೈರ್ಘುಷ್ಯಮಾಣಜಯೋದಯಃ ॥**

ಭೇರೀ ಸಂಗೀತಗಳ ಘೋಷಣವನ್ನು ತ್ಯಜಿಸಿದವನಾಗಿ ತಪೋವಿಧಿಯನ್ನು ಮಾಡಿ ದೇವದುಂದುಭಿಯ ಘೋಷಣಗಳಿಂದ ತನ್ನ ಜಯದ ಆವಿರ್ಭಾವವನ್ನು ಘೋಷಣಮಾಡಿಸಿಕೊಂಡವನಾಗುವನು.

**ಉದ್ಯಾನಾದಿಕೃತಾಂ ಛಾಯಾಮುಪಾಸ್ಯ ಸ್ವಾಂ ತಪೋ ವ್ಯಧಾತ್ ।**
**ಯತೋ[೧]ಯಮತ ಏವಾಸ್ಯ ಸ್ಯಾದಶೋಕಮಹಾದ್ರುಮಃ ॥ ೧೮೪ ॥**

ಯಾವ ಕಾರಣದಿಂದ ಈ ಯೋಗಿಯು ತನ್ನ ಉದ್ಯಾನಾದಿಗಳಿಂದ ಮಾಡಲ್ಪಟ್ಟ ನೆರಳನ್ನು ಬಿಟ್ಟು ತಪಸ್ಸನ್ನು ಮಾಡಿದನೋ ಆ ಕಾರಣದಿಂದಲೇ ಈ ಯೋಗಿಗೆ ಅಶೋಕಮಹಾವೃಕ್ಷವು ಪ್ರಾಪ್ತವಾಗುವುದು.

**ಸ್ವಂ ಸ್ವಾಪತೇಯಮುಚಿತಂ ತ್ಯಕ್ತ್ವಾ [೨]ನಿರ್ಮಮತಾಮಿತಃ ।**
**ಸ್ವಯಂ ನಿಧಿಭಿರಭ್ಯೇತ್ಯ ಸೇವ್ಯತೇ ದ್ವಾರಿ ದೂರತಃ ॥ ೧೮೫ ॥**

ಉಚಿತವಾದ ತನ್ನ ದ್ರವ್ಯವನ್ನು ಬಿಟ್ಟು ನಿರ್ಮಮತ್ವವನ್ನು ಹೊಂದಿದ ಯೋಗಿಯು ದೂರದಿಂದ ಬಂದು ಬಾಗಿಲಲ್ಲಿ ನಿಧಿಗಳಿಂದ ತಾನು ಸೇವಿಸಲ್ಪಡುತ್ತಾನೆ. ನಿಧಿಗಳು ದೂರದಿಂದ ಬಂದು ಬಾಗಿಲಲ್ಲಿ ಸೇವೆಮಾಡುತ್ತವೆಂದು ಭಾವವು.

**ಗೃಹಶೋಭಾಂ [೩]ಕೃತಾರಕ್ಷಾಂ ದೂರೀಕೃತ್ಯ ತಪಸ್ಯತಃ ।**
**ಶ್ರೀಮಂಡಪಾದಿಶೋಭಾಸ್ಯ ಸ್ವತೋಭ್ಯೇತಿ [೪]ಪುರೋಗತಾಮ್ ॥ ೧೮೬ ॥**

ತಳವಾರನು ಕಾವಲುಳ್ಳ ಮನೆಯ ಶೋಭೆಯನ್ನು ದೂರಮಾಡಿ ತಪಸ್ಸು ಮಾಡುವವನಾದ ಈ ಯೋಗಿಗೆ ಲಕ್ಷ್ಮೀಮಂಡಪವೇ ಮೊದಲಾದುವುಗಳ ಶೋಭೆಯು ತಾನಾಗಿ ಅಗ್ರೇಸರತ್ವವನ್ನು ಹೊಂದಿದುವು.

**ತಪೋ [೫]ವಿಗಾಹನಾದಸ್ಯ [೬]ಗಹನಾನ್ಯಧಿತಿಷ್ಠತಃ ।**
**ತ್ರಿಜಗಜ್ಜನತಾ[೭]ಸ್ಥಾನಸಹಂ ಸ್ಯಾದವಗಾಹನಮ್ ॥ ೧೮೭ ॥**

ತಪಸ್ಸನ್ನು ಪ್ರವೇಶಿಸುವುದರಿಂದ ಅರಣ್ಯಗಳಲ್ಲಿರುವವನಾದ ಈ ಯೋಗಿಗೆ ಮೂರು ಲೋಕಗಳ ಜನಸಮೂಹದ ಇರುವಿಕೆಯನ್ನು ಸಹಿಸಬಲ್ಲುದಾದ ಅವಕಾಶವು ಆಗುವುದು. ಸಮವಸರಣವು ಪ್ರಾಪ್ತವಾಗುವುದೆಂದು ಭಾವವು.

**ಕ್ಷೇತ್ರವಾಸ್ತುಸಮುತ್ಸರ್ಗಾ[೮]ತ್ಕ್ಷೇತ್ರಜ್ಞತ್ವಮುಪೇಯುಷಃ ।**
**ಸ್ವಾಧೀನತ್ರಿಜಗತ್ಕ್ಷೇತ್ರಮೈಶ್ಯಮಸ್ಯೋಪಜಾಯತೇ ॥ ೧೮೮ ॥**

ಭೂಮಿ ಮನೆಗಳನ್ನು ಬಿಡುವುದರಿಂದ ಆತ್ಮಸ್ವರೂಪವನ್ನು ಹೊಂದಿದವನಾದ ಈ ಯೋಗಿಗೆ ತ್ರಿಲೋಕಕ್ಷೇತ್ರವನ್ನು ಸ್ವಾಧೀನಪಡಿಸಿಕೊಳ್ಳುವುದಾದ ಪ್ರಭುತ್ವವುಂಟಾಗುವುದು.

**ಅಜ್ಞಾಭಿಮಾನಮುತ್ಸೃಜ್ಯ ಮೌನಮಾಸ್ಥಿತವಾನಯಮ್ ।**
**ಪ್ರಾಪ್ನೋತಿ ಪರಮಾಮಾಜ್ಞಾಂ ಸುರಾಸುರಶಿರೋಧೃತಾಮ್ ॥ ೧೮೯ ॥**

ಅಪ್ಪಣೆಮಾಡುವುದನ್ನೂ ಅಭಿಮಾನವನ್ನೂ ಬಿಟ್ಟು ಮೌನವ್ರತದಲ್ಲಿರುವವನಾದ ಈ ಯೋಗಿಯು ಸುರಾಸುರರ ಮಸ್ತಕಗಳಿಂದ ಧರಿಸಲ್ಪಟ್ಟುದಾದ ಉತ್ಕೃಷ್ಟಾಜ್ಞೆಯನ್ನು ಹೊಂದುತ್ತಾನೆ. ದೇವತೆಗಳಿಗೂ ಅಪ್ಪಣೆ ಮಾಡುವವನಾಗುತ್ತಾನೆಂದು ಭಾವವು.

**ಸ್ವಾಮಿಷ್ಟಭೃತ್ಯಬಂಧ್ವಾದಿಸಭಾಮುತ್ಸೃಷ್ಟವಾನಯಮ್ ।**
**ಪರಮಾಪ್ತಪದಪ್ರಾಪ್ತಾವಧ್ಯಾಸ್ತೇ ತ್ರಿಜಗತ್ಸಭಾಮ್ ॥ ೧೯೦ ॥**

ತನ್ನ ಇಷ್ಟಸೇವಕರು ಬಂಧುಗಳು ಮೊದಲಾದವರ ಸಭೆಯನ್ನು ಬಿಟ್ಟವನಾದ ಈ ಯೋಗಿಯು ಪರಮಾಪ್ತನಾದ ಪರಮಾತ್ಮನ ಪದವಿಯ ಪ್ರಾಪ್ತಿಯಾಗುತ್ತಿರಲು

---

೧ ಪ್ರಕೃಷ್ಟಜ್ಞಾನಾತಿಶಯಂ. ೨ ಸ್ವಾಮಿತ್ವಂ. ೩ ನಿಷ್ಪರಿಗ್ರಹಃ. ೪ ಶಿರೋಭಾಗಃ. ೫ ಪ್ರಾಪ್ನೋತಿ. ೬ ಛತ್ರ. ೭ ಅರ್ಹತ್ಪರ್ಯಾಯೇ ಸತಿ. ೮ ದೇವದುಂದುಭಿ.

೧ ಮುನಿಃ. ೨ ನಿರ್ಮಮತ್ವಂ ಗತಃ. ೩ ತಳವರಸಹಿತಾಂ. ೪ ಅಗ್ರೇಸರತಾಂ. ೫ ಪ್ರವೇಶನಾತ್. ೬ ಅರಣ್ಯೇಷು. ೭ ಸ್ಥಿತಿ. ೮ ಆತ್ಮಸ್ವರೂಪಂ.

ತ್ರಿಲೋಕಸಭೆಯಲ್ಲಿರುತ್ತಾನೆ. ತ್ರಿಲೋಕಪ್ರಾಣಿಗಳಿಂದ ಯುಕ್ತವಾದ ಸಮವಸರಣ ದಲ್ಲಿರುತ್ತಾನೆಂದು ಭಾವವು.

**ಸ್ವಗುಣೋತ್ಕೀರ್ತನಂ ತ್ಯಕ್ತ್ವಾ ತ್ಯಕ್ತಕಾಮೋ ಮಹಾತಪಾಃ ।**
**ಸ್ತುತಿನಿಂದಾಸಮೋ ಭೂಯಃ ಕೀರ್ತ್ಯತೇ ಭುವನೇಶ್ವರೈಃ ॥ ೧೯೧ ॥**

ತನ್ನ ಗುಣಗಳ ಹೊಗಳಿಕೆಯನ್ನು ಬಿಟ್ಟು ಇಚ್ಛೆಯನ್ನು ತೊರೆದವನೂ ಮಹಾ ತಪಸ್ಸುಳ್ಳವನೂ ಸ್ತುತಿನಿಂದೆಗಳಲ್ಲಿ ಸಮಾನಭಾವವುಳ್ಳವನೂ ಆದ ಯೋಗಿಯು ಪೃಥ್ವೀಪತಿಗಳಾದ ರಾಜರುಗಳಿಂದ ಪುನಃ ಹೊಗಳಲ್ಪಡುತ್ತಾನೆ.

**ವಂದಿತ್ವಾ ವಂದ್ಯಮರ್ಹಂತಂ [೧]ಯತೋಽನುಷ್ಠಿತವಾಂಸ್ತಪಃ ।**
**ತತೋಽಯಂ ವಂದ್ಯತೇ [೨]ವಂದ್ಯೈರನಿಂದ್ಯಗುಣಸನ್ನಿಧಿಃ ॥ ೧೯೨ ॥**

ಯಾವ ಕಾರಣದಿಂದ ವಂದ್ಯನಾದ ಅರ್ಹತ್ಪರಮೇಶ್ವರನನ್ನು ವಂದಿಸಿ ಸ್ತುತ್ಯವಾದ ಗುಣಗಳನ್ನು ದೊರಕಿಸಿದವನಾದ ಈ ಯೋಗಿಯು ತಪಸ್ಸನ್ನು ಮಾಡಿದನೋ ಆ ಕಾರಣದಿಂದ ವಂದ್ಯರಾದ ಗಣಧರಾದಿ ಮುನಿಗಳಿಂದ ವಂದಿಸಲ್ಪಡುತ್ತಾನೆ.

**ತಪೋಽಯು[೩]ಮನುಪಾನತ್ಕಃ ಪಾದಚಾರೀ [೪]ವಿವಾಹನಃ ।**
**ಕೃತವಾ[೫]ನ್ಪದ್ಮಗರ್ಭೇಷು [೬]ಚರಣನ್ಯಾಸಮರ್ಹತಿ ॥ ೧೯೩ ॥**

ಪಾದರಕ್ಷೆಯಿಲ್ಲದವನೂ ಪಾದಚಾರಿಯೂ ವಾಹನಗಳಿಲ್ಲದವನೂ ಆಗಿ ತಪಸ್ಸನ್ನು ಮಾಡಿದವನಾದ ಈ ಯೋಗಿಯು ತಾವರೆಗಳ ಮಧ್ಯಗಳಲ್ಲಿ ಪಾದ ವಿನ್ಯಾಸವನ್ನು ಕುರಿತು ಯೋಗ್ಯನಾಗುತ್ತಾನೆ. ಕಾಲುಗಳನ್ನಿಡತಕ್ಕವನಾಗುತ್ತಾನೆಂದು ಭಾವವು.

**ವಾಗ್ಗುಪ್ತೋ ಹಿತವಾಗ್ವೃತ್ತ್ಯಾ ಯತೋಽಯಂ ತಪಸಿ ಸ್ಥಿತಃ ।**
**ತತೋಽಸ್ಯ ದಿವ್ಯಭಾಷಾ ಸ್ಯಾತ್ಪ್ರೀಣಯಂತ್ಯಖಿಲಾಂ ಸಭಾಮ್ ॥ ೧೯೪ ॥**

ಯಾವ ಕಾರಣದಿಂದ ವಚನಗುಪ್ತಿಯುಳ್ಳವನಾಗಿ ಹಿತಕರವಾದ ವಚನ ವ್ಯಾಪಾರದಿಂದ ಈ ಯೋಗಿಯು ತಪಸ್ಸಿನಲ್ಲಿದ್ದನೋ ಆ ಕಾರಣದಿಂದ ಈ ಯೋಗಿಗೆ ಸಮಸ್ತಸಭೆಯನ್ನು ಪ್ರೀತಿಪಡಿಸುವುದಾದ ದಿವ್ಯಭಾಷೆಯುಂಟಾಗುವುದು.

**[೭]ಅನಾಶ್ವಾನ್ನಿಯತಾಹಾರಪಾರಣೋ[೮]ತಪ್ತ ಯತ್ತಪಃ ।**
**ತದಸ್ಯ [೯]ದಿವ್ಯವಿಜಯಪರಮಾಮೃತತೃಪ್ತಯಃ ॥ ೧೯೫ ॥**

ಯಾವ ಕಾರಣದಿಂದ ಉಪವಾಸವ್ರತವುಳ್ಳವನೂ ಕ್ಲಪ್ತವಾದ ಆಹಾರಪರಿ ಗ್ರಹಣವುಳ್ಳವನೂ ಆಗಿ ತಪಸ್ಸನ್ನು ಮಾಡಿದನೋ ಆ ಕಾರಣದಿಂದ ಈ ಯೋಗಿಗೆ ದಿವ್ಯತೃಪ್ತಿ ವಿಜಯತೃಪ್ತಿ ಪರಮತೃಪ್ತಿ ಅಮೃತತೃಪ್ತಿಗಳುಂಟಾಗುತ್ತವೆ.

**ತ್ಯಕ್ತ[೧೦]ಕಾಮಸುಖೋ ಭೂತ್ವಾ ತಪಸ್ಯಸ್ಥಾಚ್ಚಿರಂ ಯತಃ ।**
**ತತೋಽಯಂ ಸುಖಸಾದ್ಭೂತಃ ಪರಮಾ[೧೧]ನಂದಥುಂ ಭಜೇತ್ ॥**

ಯಾವ ಕಾರಣದಿಂದ ಇಂದ್ರಿಯಸುಖವನ್ನು ಬಿಟ್ಟವನಾಗಿ ಬಹುಕಾಲದವರೆಗೆ ತಪಸ್ಸಿನಲ್ಲಿದ್ದನೋ ಆ ಕಾರಣದಿಂದ ಸುಖಾಧೀನನಾದ ಈ ಯೋಗಿಯು ಪರಮಾನಂದವನ್ನು ಸೇವಿಸುವನು.

**ಕಿಮತ್ರ ಬಹುನೋಕ್ತೇನ ಯದ್ಯದಿಷ್ಟಂ ಯಥಾವಿಧಮ್ ।**
**ತ್ಯಜೇನ್ಮುನಿ[೧೨]ರಸಂಕಲ್ಪಸ್ತತ್ತತ್ಸೂತೇ[೧೩]ಽಸ್ಯ [೧೪]ತತ್ತಪಃ ॥ ೧೯೭ ॥**

ಈ ವಿಷಯದಲ್ಲಿ ಹೆಚ್ಚುಹೇಳುವುದರಿಂದೇನು ? ಯಾವ ವಿಧವಾದ ಯಾವ ಯಾವ ಇಷ್ಟವಸ್ತುವನ್ನು ಮುನಿಯು ಸಂಕಲ್ಪವಿಲ್ಲದವನಾಗಿ ತ್ಯಜಿಸುವನೋ ಅದೆಲ್ಲವನ್ನೂ ಈ ಮುನಿಗೆ ಆ ಪ್ರಸಿದ್ಧವಾದ ತಪಸ್ಸು ಉಂಟುಮಾಡುವುದು.

೧ ಕಾರಣಾತ್. ೨ ಗಣಧರಾದಿಭಿಃ. ೩ ಪಾದರಕ್ಷಾರಹಿತಃ. ೪ ಗತವಾಹನಃ. ೫ ಪದ್ಮಯಾನಗರ್ಭೇಷು. ೬ ಪಾದನ್ಯಾಸಯೋಗ್ಯೋ ಭವತಿ. ೭ ಅನಶನವ್ರತೀ. ೮ ಅಕರೋತ್. ೯ ದಿವ್ಯತೃಪ್ತಿ ವಿಜಯತೃಪ್ತಿ ಪರಮತೃಪ್ತಿ ಅಮೃತತೃಪ್ತಯಃ. ೧೦ ಇಂದ್ರಿಯಸುಖಃ. ೧೧ ಆನಂದಂ. ೧೨ ನಿದಾನರಹಿತಃ. ೧೩ ಮುನೇಃ. ೧೪ ಪ್ರಸಿದ್ಧಂ ತಪಃ.

**ಪ್ರಾಪ್ತೋತ್ಕರ್ಷಂ ತದಸ್ಯ ಸ್ಯಾತ್ತಪಶ್ಚಿಂತಾಮಣೇಃ [೧]ಫಲಮ್ ।**
**ಯತೋಽರ್ಹಜ್ಜಾತಿಮೂರ್ತ್ಯಾದಿಪ್ರಾಪ್ತಿಃ ಸೈಷಾನುವರ್ಣಿತಾ ॥ ೧೯೮ ॥**

ಆ ತಪಸ್ಸು ಈ ಯೋಗಿಗೆ ಉತ್ಕೃಷ್ಟವಾದ ಚಿಂತಾಮಣಿಯ ಫಲ–ಪುಣ್ಯ ವಾಗಿರುವುದು. ಆದುದರಿಂದಲೇ ಆ ಪ್ರಸಿದ್ಧವಾದ ಈ ಅರ್ಹಜ್ಜಾತಿ ಅರ್ಹನ್ಮೂರ್ತಿ ಯೇ ಮೊದಲಾದುವುಗಳ ಪ್ರಾಪ್ತಿಯು ವರ್ಣಿಸಲ್ಪಟ್ಟುದಾಗಿರುತ್ತದೆ. ಉತ್ಕೃಷ್ಟ ತಪಸ್ಸಿನ ಪುಣ್ಯದಿಂದ ಅರ್ಹಜ್ಜಾತಿಯೇ ಮೊದಲಾದುವುಗಳು ಪ್ರಾಪ್ತವಾಗು ತ್ತವೆಂದು ಭಾವವು.

**ಜೈನೇಶ್ವರೀಂ ಪರಾಮಾಜ್ಞಾಂ ಸೂತ್ರೋದ್ದಿಷ್ಟಾಂ ಪ್ರಮಾಣಯನ್ ।**
**ತಪಸ್ಯಾಂ ಯದುಪಾಧತ್ತೇ ಪಾರಿವ್ರಾಜ್ಯಂ ತದಾಂ[೨]ಜಸಮ್ ॥ ೧೯೯ ॥**

ಉತ್ಕೃಷ್ಟವೂ ಜಿನೇಶ್ವರಸಂಬಂಧಿಯೂ ಆದ ಆಜ್ಞೆಯನ್ನು ಪ್ರಮಾಣವನ್ನಾಗಿ ನಂಬಿ ಶಾಸ್ತ್ರೋಕ್ತವಾದ ತಪಸ್ಸನ್ನು ಪರಿಗ್ರಹಿಸುವುದು ಯಾವುದುಂಟೋ ಅದು ನಿಜವಾದ ಪಾರಿವ್ರಾಜ್ಯವಾಗಿರುತ್ತದೆ.

**[೩]ಅನ್ಯತ್ತ್ವಬದ್ಧವಾಗ್ಜಾಲನಿಬದ್ಧಂ ಯುಕ್ತಿಬಾಧಿತಮ್ ।**
**ಪಾರಿವ್ರಾಜ್ಯಂ ಪರಿತ್ಯಾಜ್ಯಂ ಗ್ರಾಹ್ಯಂ ಚೇ[೪]ದಮನುತ್ತರಮ್ ॥ ೨೦೦ ॥**

ಮಿಥ್ಯಾದೃಷ್ಟಿಗಳಿಂದ ಹೇಳಲ್ಪಟ್ಟುದೂ ಅನರ್ಥಕವೂ ಯುಕ್ತಿಯಿಂದ ಬಾಧಿತವೂ ಆದ ಇತರ ಪಾರಿವ್ರಾಜ್ಯ(ಸನ್ಯಾಸ)ವಾದರೋ ಪರಿತ್ಯಜಿಸತಕ್ಕುದಾಗಿರುತ್ತದೆ. ಶ್ರೇಷ್ಠವಾದ ಈ ಆರ್ಹತ್ಸಂಬಂಧಿಪಾರಿವ್ರಾಜ್ಯವು ಪರಿಗ್ರಹಿಸತಕ್ಕುದಾಗಿರುತ್ತದೆ.

**ಯಾ ಸುರೇಂದ್ರ[೫]ಪದಪ್ರಾಪ್ತಿಃ ಪಾರಿವ್ರಾಜ್ಯಫಲೋದಯಾತ್ ।**
**ಸೈಷಾ ಸುರೇಂದ್ರತಾ ನಾಮ ಕ್ರಿಯಾ ಪ್ರಾಗನುವರ್ಣಿತಾ ॥ ೨೦೧ ॥**

ಪಾರಿವ್ರಾಜ್ಯದ ಫಲೋದಯದಿಂದ ದೇವೇಂದ್ರಪದವಿಯ ಪ್ರಾಪ್ತಿಯು ಯಾವು ದುಂಟೋ ಪ್ರಸಿದ್ಧವಾದ ಇದು ಸುರೇಂದ್ರತಾವೆಂದು ಮೊದಲು ವರ್ಣಿಸಲ್ಪಟ್ಟ ಕ್ರಿಯೆಯಾಗಿರುತ್ತದೆ.

**ಸಾಮ್ರಾಜ್ಯಮಾಧಿರಾಜ್ಯಂ ಸ್ಯಾಚ್ಚಕ್ರರತ್ನಪುರಸ್ಸರಮ್ ।**
**ನಿಧಿರತ್ನಸಮುದ್ಭೂತಭೋಗಸಂಪತ್ಪರಂಪರಮ್ ॥ ೨೦೨ ॥**

೨ ಇತಿ ಸುರೇಂದ್ರತಾಕ್ರಿಯಾ ॥ ಚಕ್ರರತ್ನವನ್ನು ಮುಂದು ಮಾಡಿಕೊಂಡಿರು ವುದೂ ನವನಿಧಿಗಳಿಂದಲೂ ಚತುರ್ದಶರತ್ನಗಳಿಂದಲೂ ಉಂಟಾದ ಭೋಗ ಸಂಪತ್ತಿಯ ಪರಂಪರೆಯುಳ್ಳುದೂ ಆದ ಆಧಿಪತ್ಯವು ಸಾಮ್ರಾಜ್ಯಕ್ರಿಯೆಯಾಗಿ ರುವುದು.

**ಆರ್ಹಂತ್ಯಮರ್ಹತೋ ಭಾವಃ [೬]ಕರ್ಮ ವೇತಿ ಪರಾ ಕ್ರಿಯಾ ।**
**ಯತ್ರ ಸ್ವರ್ಗಾವತಾರಾದಿಮಹಾಕಲ್ಯಾಣಸಂಪದಃ[೭] ॥ ೨೦೩ ॥**

೩ ಇತಿ ಸಾಮ್ರಾಜ್ಯಕ್ರಿಯಾ ॥ ಅರ್ಹತ್ಪರಮೇಶ್ವರರ ಭಾವವು ಅಥವಾ ಕೃತ್ಯವು ಆರ್ಹಂತ್ಯವೆಂಬ ಉತ್ಕೃಷ್ಟವಾದ ಕ್ರಿಯೆಯಾಗಿರುವುದು. ಆ ಕ್ರಿಯೆಯಲ್ಲಿ ಸ್ವರ್ಗಾವತರಣವೇ ಮೊದಲಾದ ಮಹಾಕಲ್ಯಾಣವೈಭವಗಳಾಗುತ್ತವೆ.

**ಯಾಸೌ ದಿವೋಽವತೀರ್ಣಸ್ಯ ಪ್ರಾಪ್ತಿಃ ಕಲ್ಯಾಣಸಂಪದಾಮ್ ।**
**ತದಾರ್ಹಂತ್ಯಮಿತಿ ಜ್ಞೇಯಂ ತ್ರೈಲೋಕ್ಯಕ್ಷೋಭಕಾರಣಮ್ ॥ ೨೦೪ ॥**

ಸ್ವರ್ಗದಿಂದ ಅವತರಿಸಿದ ಪುಣ್ಯಪುರುಷನಿಗೆ ಕಲ್ಯಾಣವೈಭವಗಳ ಪ್ರಾಪ್ತಿಯು ಯಾವುದುಂಟೋ ಅದು ಮೂರುಲೋಕದ ಕ್ಷೋಭೆ(ಚಳವಳಿ)ಗೆ ಕಾರಣವಾದ ಆರ್ಹಂತ್ಯವೆಂದು ತಿಳಿಯತಕ್ಕುದು.

೧ ಪುಣ್ಯಂ. ೨ ಪರಮಾರ್ಥಿಕಂ. ೩ ಮಿಥ್ಯಾದೃಷ್ಟಿಭಿಃ ಪ್ರೋಕ್ತಂ, ಅನರ್ಥಕಂ-ಅಪ್ರಯೋಜನಂ. ೪ ಅರ್ಹತ್ಸಂಬಂಧಿಪಾರಿವ್ರಾಜ್ಯಂ. ೫ ಪರಿಪ್ರಾಪ್ತಿರಿತ್ಯಪಿ ಪಾಠಃ. ೬ ಕೃತ್ಯಂ ವಾ. ೭ ಭವಂತೀತ್ಯರ್ಥಃ.

**ಭವಬಂಧನಮುಕ್ತಸ್ಯ ಯಾವಸ್ಥಾ ಪರಮಾತ್ಮನಃ ।**
**ಪರಿನಿರ್ವೃತಿರಿಷ್ಟಾ ಸಾ ಪರಂ ನಿರ್ವಾಣಮಿತ್ಯಪಿ ॥ ೨೦೫ ॥**

೪ ಇತಿ ಆರ್ಹಂತ್ಯಕ್ರಿಯಾ ॥ ಭವಬಂಧನದಿಂದ ಬಿಡಲ್ಪಟ್ಟವನಾದ ಪರಮಾತ್ಮನ ಯಾವ ಅವಸ್ಥೆಯುಂಟೋ ಅದು ಪರಿನಿರ್ವೃತಿಯೆಂದೂ ಉತ್ಕೃಷ್ಟ ನಿರ್ವಾಣವೆಂದೂ ಅಭಿಮತವಾಗಿರುತ್ತದೆ.

**ಕೃತ್ಸ್ನಕರ್ಮಮಲಾಪಾಯಾತ್ಸಂಶುದ್ಧಿರ್ಯಾಂತರಾತ್ಮನಃ ।**
**ಸಿದ್ಧಿಃ ಸ್ವಾತ್ಮೋಪಲಬ್ಧಿಃ ಸಾ ನಾ[1]ಭಾವೋ ನ [2]ಗುಣೋಚ್ಛಿದಾ॥ ೨೦೬ ॥**

ಸಮಸ್ತಕರ್ಮಮಲದ ನಾಶದಿಂದ ಅಂತರಾತ್ಮನ ಯಾವ ಪರಿಶುದ್ಧಿಯುಂಟೋ ಅದು ಸಿದ್ಧಿಯೂ ಸ್ವಾತ್ಮೋಪಲಬ್ಧಿಯೂ ಆಗಿರುತ್ತದೆ. ಅದು ಬೌದ್ಧರು ಹೇಳುವ ಶೂನ್ಯರೂಪವೂ ಅಲ್ಲ. ಯೌಗಮತದವರು ಹೇಳುವ ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರಗಳೆಂಬ ಒಂಬತ್ತು ಗುಣಗಳ ನಾಶರೂಪವೂ ಅಲ್ಲ.

**ಇತ್ಯಾಗಮಾನುಸಾರೇಣ ಪ್ರೋಕ್ತಾಃ ಕರ್ತ್ರನ್ವಯಕ್ರಿಯಾಃ ।**
**ಸಪ್ತೈತಾಃ ಪರಮಸ್ಥಾನಸಮ್ಮತಿರ್ಯತ್ರ ಯೋಗಿನಾಮ್ ॥ ೨೦೭ ॥**

೫ ಇತಿ ಪರಿನಿರ್ವೃತಿಕ್ರಿಯಾ ॥ ಈ ಪ್ರಕಾರವಾಗಿ ಆಗಮಾನುಸಾರದಿಂದ ಕರ್ತ್ರನ್ವಯಕ್ರಿಯೆಗಳು ಹೇಳಲ್ಪಟ್ಟುವು. ಆ ಕ್ರಿಯೆಗಳಲ್ಲಿ ಮೇಲೆ ಹೇಳಿದ ಏಳು ಕ್ರಿಯೆಗಳು ಪರಮಸ್ಥಾನಗಳೆಂದು ಯೋಗಿಗಳ ಅಭಿಪ್ರಾಯವಾಗಿರುತ್ತದೆ.

**ಯೋ[3]ನುತಿಷ್ಠತ್ಯತಂದ್ರಾಲುಃ ಕ್ರಿಯಾ ಹ್ಯೇತಾ[4]ಸ್ತ್ರಿಧೋದಿತಾಃ ।**
**ಸೋಧಿಗಚ್ಛೇತ್ಪರಂ ಧಾಮ ಯತ್ಸಂಪ್ರಾಪ್ಯ ಪರಂ [5]ಶಿವಮ್ ॥ ೨೦೮ ॥**

ಯಾವನು ಆಲಸ್ಯರಹಿತನಾಗಿ ಮೂರು ವಿಧವಾಗಿ ಹೇಳಲ್ಪಟ್ಟ ಈ ಕ್ರಿಯೆಗಳನ್ನು ಆಚರಿಸುತ್ತಾನೋ ಅವನು, ಯಾವುದರ ಪ್ರಾಪ್ತಿಯಲ್ಲಿ ಪರಮಸುಖವುಂಟಾಗುವುದೋ ಅಂತಹ ಪರಂಧಾಮ(ಮೋಕ್ಷ)ವನ್ನು ಹೊಂದುವನು.

**ಜಿನಮತವಿಹಿತಂ [6]ಪುರಾಣಧರ್ಮಂ**
**ಯ ಇಮಮನುಸ್ಮರತಿ ಕ್ರಿಯಾನಿಬದ್ಧಮ್ ।**
**ಅನುಚರತಿ ಚ ಪುಣ್ಯಧೀಃ ಸ ಭವ್ಯೋ**
**ಭವಭಯಬಂಧನಮಾಶು ನಿರ್ಧುನೋತಿ ॥ ೨೦೯ ॥**

ಪುಣ್ಯಕರವಾದ ಬುದ್ಧಿಯುಳ್ಳ ಯಾವನು ಕ್ರಿಯೆಗಳಿಂದ ಯುಕ್ತವೂ ಜಿನಮತದಿಂದ ಮಾಡಲ್ಪಟ್ಟಿರುವುದೂ–ಹೇಳಲ್ಪಟ್ಟಿರುವುದೂ ಆದ ಈ ಪುರಾತನ ಧರ್ಮವನ್ನು ಬಾರಿಬಾರಿಗೆ ಸ್ಮರಿಸುತ್ತಾನೋ ಮತ್ತು ಆಚರಿಸುತ್ತಾನೋ ಆ ಭವ್ಯನು ಭವಭಯದ ಬಂಧನವನ್ನು ಶೀಘ್ರವಾಗಿ ನಾಶಮಾಡುತ್ತಾನೆ.

**ಪರಮ[1]ಜಿನಮತಾನುರಕ್ತಧೀ-**
**ರ್ಭಜತಿ ಪುಮಾನ್ ಯ ಇಮಂ ಕ್ರಿಯಾವಿಧಿಮ್ ।**
**ಸ ಧುತನಿಖಿಲಕರ್ಮಬಂಧನೋ**
**ಜನನಜರಾಮರಣಾಂ[2]ತಕೃದ್ಭವೇತ್ ॥ ೨೧೦ ॥**

ಉತ್ಕೃಷ್ಟವಾದ ಜಿನಮತದಲ್ಲಿ ಅನುರಕ್ತವಾದ ಬುದ್ಧಿಯುಳ್ಳ ಯಾವ ಮನುಷ್ಯನು ಈ ಕ್ರಿಯಾವಿಧಿಯನ್ನು ಸೇವಿಸುತ್ತಾನೋ (ಆಚರಿಸುತ್ತಾನೋ) ಅವನು ಸಮಸ್ತಕರ್ಮಬಂಧವನ್ನು ನಾಶಮಾಡಿದವನೂ ಜನ್ಮಜರಾಮರಣಗಳನ್ನು ನಾಶಮಾಡಿದವನೂ ಆಗುವನು.

**ಭವ್ಯಾತ್ಮಾ ಸಮವಾಪ್ಯ ಜಾತಿಮುಚಿತಾಂ ಜಾತಸ್ತತಃ ಸದ್ಗೃಹೀ**
**ಪಾರಿವ್ರಾಜ್ಯಮನುತ್ತರಂ ಗುರುಮತಾದಾಸಾದ್ಯ ಯಾತೋ ದಿವಮ್ ।**
**ತತ್ರೈಂದ್ರೀಂ ಶ್ರಿಯಮಾಪ್ತವಾನ್ಪುನರತಶ್ಚ್ಯುತ್ವಾ ಗತಶ್ಚಕ್ರಿತಾಂ**
**ಪ್ರಾಪ್ತಾರ್ಹಂತ್ಯಪದಃ ಸಮಗ್ರಮಹಿಮಾ ಪ್ರಾಪ್ನೋತ್ಯತೋ ನಿರ್ವೃತಿಮ್॥**

ಭವ್ಯಾತ್ಮನು ಉಚಿತವಾದ ಜಾತಿಯನ್ನು ಹೊಂದಿ ಬಳಿಕ ಸದ್ಗೃಹಸ್ಥನಾಗಿ ಉತ್ಕೃಷ್ಟವಾದ ಪಾರಿವ್ರಾಜ್ಯವನ್ನು ಗುರುವಿನ ಅನುಮತಿಯಿಂದ ಪಡೆದು ಸ್ವರ್ಗವನ್ನು ಹೊಂದಿದವನಾಗಿ ಅಲ್ಲಿ ಇಂದ್ರನ ಸಂಬಂಧಿಯಾದ ಸಂಪತ್ತಿಯನ್ನು ಪಡೆದನು. ಆಮೇಲೆ ಸ್ವರ್ಗದಿಂದ ಚ್ಯುತನಾಗಿ ಚಕ್ರವರ್ತಿತ್ವವನ್ನು ಹೊಂದಿ ಅರ್ಹತ್ಪರಮೇಶ್ವರಸಂಬಂಧಿಯಾದ ಪದವಿಯನ್ನು ಪಡೆದವನೂ ಸಂಪೂರ್ಣವಾದ ಮಹಿಮೆಯುಳ್ಳವನೂ ಆಗಿ ಬಳಿಕ ಮೋಕ್ಷವನ್ನು ಹೊಂದುತ್ತಾನೆ.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ದೀಕ್ಷಾಕರ್ತ್ರನ್ವಯಕ್ರಿಯಾವರ್ಣನಂ ನಾಮೈಕೋನಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತಮೂರು ಲಕ್ಷಣಗಳುಳ್ಳದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ದೀಕ್ಷಾಕರ್ತ್ರನ್ವಯಕ್ರಿಯಾವರ್ಣನವೆಂಬ
ಮೂವತ್ತೊಂಬತ್ತನೆಯ ಪರ್ವವು ಸಂಪೂರ್ಣವಾದುದು.

---

೧ ಬೌದ್ಧಕಲ್ಪಿತಃ. ೨ ಬುದ್ಧ್ಯಾದಿನವಗುಣೋ ಯೌಗಕಲ್ಪಿತಃ. ೩ ಆಚರತಿ. ೪ ಗರ್ಭಾನ್ವಯ ದೀಕ್ಷಾನ್ವಯ ಕರ್ತ್ರನ್ವಯಕ್ರಿಯಾಶ್ಚೇತಿ ತ್ರಿಧಾ. ೫ ಸುಖಂ. ೬ ಪುರಾತನಧರ್ಮಂ.

೧ ಜಿನಪದಾನುರಕ್ತಧೀರಿತ್ಯಪಿ ಪಾಠಃ. ೨ ವಿನಾಶಕಾರೀ.

# ಅಥ ಚತ್ವಾರಿಂಶತ್ತಮಂ ಪರ್ವ

**ಅಥಾತಃ ಸಂಪ್ರವಕ್ಷ್ಯಾಮಿ ಕ್ರಿಯಾಸೂ[೧]ತ್ತರಚೂಲಿಕಾಮ್ ।**
**ವಿಶೇಷನಿರ್ಣಯೋ ಯತ್ರ ಕ್ರಿಯಾಣಾಂ [೨]ತಿಸೃಣಾಮಪಿ ॥ ೧ ॥**

ಅನಂತರದಲ್ಲಿ ಇಲ್ಲಿಂದ ಮುಂದೆ ಮೇಲೆ ಹೇಳಲ್ಪಟ್ಟ ಕ್ರಿಯೆಗಳಲ್ಲಿ ಉತ್ತರ ಚೂಲಿಕೆಯನ್ನು (ಭೇದಸೂಚನೆಯನ್ನು) ಹೇಳುವೆನು. ಆ ಚೂಲಿಕೆಯಲ್ಲಿ ಗರ್ಭಾನ್ವಯ ದೀಕ್ಷಾನ್ವಯ ಕರ್ತ್ರನ್ವಯಗಳೆಂಬ ಮೂರು ಕ್ರಿಯೆಗಳ ವಿಶೇಷ ನಿರ್ಣಯವಾಗುವುದು.

**ತತ್ರಾದೌ ತಾವ[೩]ದುನ್ನೇಷ್ಯೇ [೪]ಕ್ರಿಯಾಕಲ್ಪಪ್ರಕ್ಲಪ್ತಯೇ ।**
**ಮಂತ್ರೋದ್ಧಾರಂ ಕ್ರಿಯಾಸಿದ್ಧಿರ್ಮಂತ್ರಾಧೀನಾ ಹಿ [೫]ಯೋಗಿನಾಮ್ ॥**

ಅವುಗಳಲ್ಲಿ ಮೊತ್ತಮೊದಲು ಕ್ರಿಯಾಕಲಾಪ(ವಿಕಲ್ಪ)ವನ್ನು ಮಾಡುವುದಕ್ಕೋಸ್ಕರ ಮಂತ್ರೋದ್ಧಾರವನ್ನು ಹೇಳುವೆನು. ಕ್ರಿಯೆಗಳನ್ನು ಪ್ರಯೋಗಿಸುವವರಿಗೆ ಕ್ರಿಯಾಸಿದ್ಧಿಯು ಮಂತ್ರಾಧೀನವಾದುದಲ್ಲವೇ ?

**[೬]ಆಧಾನಾದಿಕ್ರಿಯಾರಂಭೇ ಪೂರ್ವಮೇವ ನಿವೇಶಯೇತ್ ।**
**ತ್ರೀಣಿ ಛತ್ರಾಣಿ ಚಕ್ರಾಣಾಂ ತ್ರಯಂ ತ್ರೀಂಶ್ಚ [೭]ಹವಿರ್ಭುಜಃ ॥ ೩ ॥**

ಗರ್ಭಾಧಾನಾದಿ ಕ್ರಿಯೆಗಳ ಆರಂಭದಲ್ಲಿ ಮೊದಲೇ ಮೂರು ಕೊಡೆಗಳನ್ನೂ ಮೂರು ಚಕ್ರಗಳನ್ನೂ ದಕ್ಷಿಣಾಗ್ನಿ ಗಾರ್ಹಪತ್ಯಾಗ್ನಿ ಆಹವನೀಯಾಗ್ನಿಗಳೆಂಬ ಮೂರು ಅಗ್ನಿಗಳನ್ನೂ ಇರಿಸಬೇಕು.

**[೮]ಮಧ್ಯೇವೇದಿ ಜಿನೇಂದ್ರಾರ್ಚಾಃ ಸ್ಥಾಪಯೇಚ್ಚ ಯಥಾವಿಧಿ ।**
**ಮಂತ್ರಕಲ್ಪೋ[೯]ಯಮಾಮ್ನಾತಸ್ತತ್ರ [೧೦]ತತ್ಪೂಜನಾವಿಧೌ ॥ ೪ ॥**

ವೇದಿಯ ಮಧ್ಯದಲ್ಲಿ ಜಿನಬಿಂಬಗಳನ್ನು ವಿಧಿಗನುಸಾರವಾಗಿ ಸ್ಥಾಪಿಸಬೇಕು. ಆ ವೇದಿಯಲ್ಲಿ ಛತ್ರತ್ರಯಾದಿ ಪೂಜಾವಿಧಾನದಲ್ಲಿ ಈ ಮುಂದೆ ಹೇಳಲ್ಪಡುವುದು ಮಂತ್ರಕಲ್ಪವೆಂದು ಹೇಳಲಾಗಿದೆ.

**ನಮೋಂತೋ ನೀರಜಶ್ಶಬ್ದಶ್ಚತುರ್ಥ್ಯಂತೋತ್ರ ಪಠ್ಯತಾಮ್ ।**
**ಜಲೇನ [೧೧]ಭೂಮಿಬಂಧಾರ್ಥಂ ಪರಾ ಶುದ್ಧಿಸ್ತು [೧೨]ತತ್ಫಲಮ್ ॥ ೫ ॥**

॥ ನೀರಜಸೇ ನಮಃ ॥

ನೀರಿನಿಂದ ವೇದಿಕೆಯ ಭೂಮಿಯನ್ನು ಸೇಚನೆಮಾಡುವುದಕ್ಕೋಸ್ಕರ ಇಲ್ಲಿ ಕೊನೆಯಲ್ಲಿ ನಮಶ್ಶಬ್ದವುಳ್ಳುದೂ ಚತುರ್ಥೀವಿಭಕ್ತ್ಯಂತವೂ ಆದ ನೀರಜ ಶ್ಶಬ್ದವನ್ನು ಪಠಿಸಬೇಕು. ಆದರ ಫಲವು ಉತ್ಕೃಷ್ಟವಾದ ಶುದ್ಧಿಯಾಗಿರುತ್ತದೆ. ಪಾಪಧೂಳಿಯಿಲ್ಲದವನಿಗೆ ನಮಸ್ಕಾರವು.

**ದರ್ಭಾಸ್ತರಣಸಂಬಂಧಂ ತತಃ ಪಶ್ಚಾದುದೀರ್ಯತಾಮ್ ।**
**ವಿಘ್ನೋಪಶಾಂತಯೇ ದರ್ಪಮಥನಾಯ ನಮಃಪದಮ್ ॥ ೬ ॥**

॥ ದರ್ಪಮಥನಾಯ ನಮಃ ॥

೧ ಉಪರಿತನಾಂಶಂ. ೨ ಗರ್ಭಾನ್ವಯಾದೀನಾಂ. ೩ ವಕ್ಷ್ಯೇ. ೪ ಕ್ರಿಯಾಕಲಾಪಕರಣಾರ್ಥಂ. ೫ ಪ್ರಯೋಕ್ತೄಣಾಂ. ೬ ಗರ್ಭಾಧಾನಾದಿಕ್ರಿಯಾರಂಭೇ. ೭ ಅಗ್ನೀನ್. ೮ ವೇದಿಮಧ್ಯೇ. ೯ ವಕ್ಷ್ಯಮಾಣಃ.೧೦ ಛತ್ರತ್ರಯಾದಿಪೂಜನ. ೧೧ ಭೂಮಿಸಂಯೋಗಾರ್ಥಂ-ವೇದೀಭೂಮಿಸೇಚನಾರ್ಥಂ. ೧೨ ಜಲಸೇಚನಫಲಂ.

ಅನಂತರದಲ್ಲಿ ದರ್ಭಾಸನವನ್ನು ಹಾಸುವ ಸಂಬಂಧವುಳ್ಳ "ದರ್ಪಮಥನಾಯ ನಮಃ" ಎಂಬ ಪದವನ್ನು ವಿಘ್ನಶಾಂತಿಗೋಸ್ಕರ ಉಚ್ಚರಿಸಬೇಕು. ಮನ್ಮಥನನ್ನು ಮರ್ದಿಸಿದವನಿಗೆ–ಜಿನನಿಗೆ ನಮಸ್ಕಾರವು.

**ಗಂಧಪ್ರದಾನಮಂತ್ರಶ್ಚ ಶೀಲಗಂಧಾಯ ವೈ ನಮಃ ॥**

॥ ಶೀಲಗಂಧಾಯ ನಮಃ ॥

**ಪುಷ್ಪಪ್ರದಾನಮಂತ್ರೋಽಪಿ ವಿಮಲಾಯ ನಮಃಪದಮ್ ॥ ೭ ॥**

॥ ವಿಮಲಾಯ ನಮಃ ॥

ಗಂಧವನ್ನು ಕೊಡುವ(ಅರ್ಚಿಸುವ) ಮಂತ್ರವೂ ಚೆನ್ನಾಗಿ ಶೀಲವೆಂಬ ಗಂಧವುಳ್ಳವನಿಗೆ–ಜಿನನಿಗೆ ನಮಸ್ಕಾರವು. (ಶೀಲಗಂಧಾಯ ನಮಃ) ಪುಷ್ಪವನ್ನು ಅರ್ಚಿಸುವ ಮಂತ್ರವೂ ಮಲರಹಿತನಾದವನಿಗೆ–ಜಿನನಿಗೆ ನಮಸ್ಕಾರವು. (ವಿಮಲಾಯ ನಮಃ).

**ಕುರ್ಯಾದಕ್ಷತಪೂಜಾರ್ಥಮಕ್ಷತಾಯ ನಮಃಪದಮ್ ॥**

॥ ಅಕ್ಷತಾಯ ನಮಃ ॥

**[೧]ಧೂಪಾರ್ಘೇ ಶ್ರುತಧೂಪಾಯ ನಮಃಪದಮುದಾಹರೇತ್ ॥ ೮ ॥**

॥ ಶ್ರುತಧೂಪಾಯ ನಮಃ ॥

ಅಕ್ಷತೆಯ ಪೂಜೆಗೋಸ್ಕರ ನಾಶರಹಿತನಾದವನಿಗೆ–ಜಿನನಿಗೆ ನಮಃಪದವನ್ನು ಮಾಡಬೇಕು. (ಅಕ್ಷತಾಯ ನಮಃ) ದೂಪಾರ್ಚನೆಯಲ್ಲಿ ಶಾಸ್ತ್ರವೆಂಬ ಧೂಪವುಳ್ಳವನಿಗೆ–ಜಿನನಿಗೆ ನಮಃ ಪದವನ್ನು ಹೇಳಬೇಕು. (ಶ್ರುತಧೂಪಾಯ ನಮಃ)

**ಜ್ಞಾನೋದ್ಯೋತಾಯ ಪೂರ್ವಂ ಚ ದೀಪದಾನೇ ನಮಃಪದಮ್ ॥**

॥ ಜ್ಞಾನೋದ್ಯೋತಾಯ ನಮಃ ॥

**ಮಂತ್ರಃ ಪರಮಸಿದ್ಧಾಯ ನಮ ಇ[೨]ತ್ಯಮೃತೋದ್ಧೃತೌ ॥ ೯ ॥**

॥ ಪರಮಸಿದ್ಧಾಯ ನಮಃ ॥

ದೀಪವನ್ನು ಕೊಡುವುದಕ್ಕೆ ಮೊದಲು ಜ್ಞಾನವೆಂಬ ಪ್ರಕಾಶವುಳ್ಳವನಿಗೆ–ಜಿನನಿಗೆ ನಮಃಪದವನ್ನು ಹೇಳಬೇಕು. (ಜ್ಞನೋದ್ಯೋತಾಯ ನಮಃ) ಚರುವಿನ ಸಮರ್ಪಣೆಯಲ್ಲಿ ಪರಮಸಿದ್ಧನಿಗೆ ನಮಸ್ಕಾರವೆಂಬ ಮಂತ್ರವನ್ನು ಪ್ರಯೋಗಿಸಬೇಕು. (ಪರಮಸಿದ್ಧಾಯ ನಮಃ)

**ಮಂತ್ರೈರೇಭಿಸ್ತು ಸಂಸ್ಕೃತ್ಯ ಯಥಾವಜ್ಜಗತೀತಲಮ್ ।**
**[೩]ತತೋನ್ಯಕ್ ಪೀಠಿಕಾಮಂತ್ರಃ ಪಠನೀಯೋ ದ್ವಿಜೋತ್ತಮೈಃ ॥ ೧೦ ॥**

ಈ ಮಂತ್ರಗಳಿಂದಾದರೋ ಭೂಮಿಪ್ರದೇಶವನ್ನು ಶಾಸ್ತ್ರೋಕ್ತವಿಧಿಯಿಂದ ಸಂಸ್ಕರಿಸಿ ಆಮೇಲೆ ದ್ವಿಜೋತ್ತಮರು ಮುಂದೆ ಹೇಳುವ ಪೀಠಿಕಾಮಂತ್ರವನ್ನು ಪಠಿಸಬೇಕು.

**॥ ಅಥ ಪೀಠಿಕಾಮಂತ್ರಃ ॥**

೧ ಧೂಪಾರ್ಚನೆ. ೨ ಚರುಸಮರ್ಪಣೆ. ೩ ತಸ್ಮಾತ್ಪರಂ.

**ಸತ್ಯಜಾತಪದಂ ಪೂರ್ವಂ ಚತುರ್ಥ್ಯಂತಂ ನಮಃಪರಮ್ ।**
**ತತೋರ್ಹಜ್ಜಾತಶಬ್ದಶ್ಚ ತದಂತಸ್ತತ್ಪರೋ ಮತಃ ॥ ೧೧ ॥**

ಚತುರ್ಥೀವಿಭಕ್ತ್ಯಂತವೂ ಮುಂದೆ ನಮಶ್ಶಬ್ದವುಳ್ಳುದೂ ಆದ ಸತ್ಯಜಾತ ಪದವನ್ನು ಮೊದಲು ಪಠಿಸಬೇಕು (ಸತ್ಯಜಾತಾಯ ನಮಃ–ಸಫಲಜನ್ಮವುಳ್ಳವನಿಗೆ ನಮಸ್ಕಾರವು) ಬಳಿಕ ಚತುರ್ಥೀವಿಭಕ್ತ್ಯಂತವೂ ಮುಂದೆ ನಮಶ್ಶಬ್ದವುಳ್ಳದೂ ಆದ ಅರ್ಹಜ್ಜಾತಶಬ್ದವು ಅಭಿಮತವಾಗಿದೆ. (ಅರ್ಹಜ್ಜಾತಾಯ ನಮಃ–ಅರ್ಹತ್ಪರಮೇಶ್ವರನಾಗಲು ಯೋಗ್ಯವಾದ ಜನ್ಮವುಳ್ಳವನಿಗೆ ನಮಸ್ಕಾರವು).

**ತತಃ ಪರಮಜಾತಾಯ ನಮ ಇತ್ಯಪರಂ ಪದಮ್ ।**
**ತತೋನುಪಮಜಾತಾಯ ನಮ ಇತ್ಯುತ್ತರಂ ಪದಮ್ ॥ ೧೨ ॥**

ಬಳಿಕ ಉತ್ಕೃಷ್ಟವಾದ ಜನ್ಮವುಳ್ಳವನಿಗೆ ನಮಸ್ಕಾರವೆಂಬುದು ಇನ್ನೊಂದು ಶಬ್ದವಾಗಿದೆ(ಪರಮಜಾತಾಯ ನಮಃ). ಆಮೇಲೆ ಉಪಮೆಯಿಲ್ಲದ ಜನ್ಮವುಳ್ಳವನಿಗೆ ನಮಸ್ಕಾರವೆಂಬುದು ಮುಂದಿನ ಶಬ್ದವಾಗಿದೆ (ಅನುಪಮ ಜಾತಾಯ ನಮಃ).

**ತತಶ್ಚ ಸ್ವಪ್ರಧಾನಾಯ ನಮ ಇತ್ಯುತ್ತರೋ [1]ಧ್ವನಿಃ ।**
**ಅಚಲಾಯ ನಮಃಶಬ್ದಾದಕ್ಷಯಾಯ ನಮಃ ಪರಮ್ ॥ ೧೩ ॥**

ಅನಂತರದಲ್ಲಿ ತನಗೆ ತಾನೇ ಪ್ರಧಾನ(ಮುಖ್ಯಧ್ಯೇಯ)ನಾದವನಿಗೆ ನಮಸ್ಕಾರವೆಂಬುದು ಮುಂದಿನ ಶಬ್ದವಾಗಿದೆ (ಸ್ವಪ್ರಧಾನಾಯ ನಮಃ). ನಿಶ್ಚಲನಾದವನಿಗೆ ನಮಸ್ಕಾರವೆಂಬ ಶಬ್ದದನಂತರ ನಾಶರಹಿತನಾದವನಿಗೆ ನಮಸ್ಕಾರವೆಂಬುದು ಮುಂದಿನ ಶಬ್ದವಾಗಿದೆ (ಅಚಲಾಯ ನಮಃ, ಅಕ್ಷಯಾಯ ನಮಃ).

**ಅವ್ಯಾಬಾಧಪದಂ ಚಾನ್ಯದನಂತಜ್ಞಾನಶಬ್ದನಮ್ ।**
**ಅನಂತದರ್ಶನಾನಂತವೀರ್ಯಶಬ್ದೌ ತತಃ ಪೃಥಕ್ ॥ ೧೪ ॥**

ಅವ್ಯಾಬಾಧ – (ಬಾಧಾರಹಿತ) ಪದವನ್ನೂ ಅನಂತಜ್ಞಾನ ಅನಂತದರ್ಶನ ಅನಂತವೀರ್ಯಪದಗಳನ್ನೂ ಬಳಿಕ ಬೇರೆ ಬೇರೆಯಾಗಿ ಪಠಿಸಬೇಕು (ಅವ್ಯಾಬಾಧಾಯ ನಮಃ, ಅನಂತಜ್ಞಾನಾಯ ನಮಃ, ಅನಂತದರ್ಶನಾಯ ನಮಃ, ಅನಂತವೀರ್ಯಾಯ ನಮಃ).

**ಅನಂತಸುಖಶಬ್ದಶ್ಚ ನೀರಜಃಶಬ್ದ ಏವ ಚ ।**
**ನಿರ್ಮಲಾಚ್ಛೇದ್ಯಶಬ್ದೌ ಚ ತಥಾಭೇದ್ಯಾಜರಶ್ರುತೀ ॥ ೧೫ ॥**

ಅನಂತರ ಸುಖಶಬ್ದವನ್ನೂ ನೀರಜಃಶಬ್ದವನ್ನೂ ನಿರ್ಮಲಾಚ್ಛೇದಶಬ್ದಗಳನ್ನೂ ಹಾಗೆಯೇ ಅಭೇದ್ಯಾಜರಶಬ್ದಗಳನ್ನೂ ಪಠಿಸಬೇಕು (ಅನಂತಸುಖಾಯ ನಮಃ. ನೀರಜಸೇ ನಮಃ, ನಿರ್ಮಲಾಯ ನಮಃ, ಅಚ್ಛೇದ್ಯಾಯ ನಮಃ, ಅಭೇದ್ಯಾಯ ನಮಃ, ಅಜರಾಯ ನಮಃ).

**ತತೋ[2]ಮರಾಪ್ರಮೇಯೋಕ್ತೀ ಸಾಗರ್ಭಾವಾಸಶಬ್ದನೇ ।**
**ತತೋಕ್ಷೋಭ್ಯಾವಿಲೀನೋಕ್ತೀ [3]ಪರಮಾದಿರ್ಘನಧ್ವನಿಃ ॥ ೧೬ ॥**

ಆಮೇಲೆ ಅಮರಾಪ್ರಮೇಯಶಬ್ದಗಳನ್ನೂ ಅಗರ್ಭವಾಸಶಬ್ದವನ್ನೂ ಬಳಿಕ ಅಕ್ಷೋಭ್ಯಶಬ್ದವನ್ನೂ ಅವಿಲೀನಶಬ್ದವನ್ನೂ ಪರಮಘನಶಬ್ದವನ್ನೂ ಪಠಿಸಬೇಕು (ಅಮರಾಯ ನಮಃ, ಅಪ್ರಮೇಯಾಯ ನಮಃ, ಅಗರ್ಭವಾಸಾಯ ನಮಃ, ಅಕ್ಷೋಭ್ಯಾಯ ನಮಃ, ಅವಿಲೀನಾಯ ನಮಃ, ಪರಮಘನಾಯ ನಮಃ).

**ಪೃಥಕ್ಪೃಥಗಿಮೇ [4]ಶಬ್ದಾ[5]ಸ್ತದಂತಾ[6]ಸ್ತತ್ಪರಾ ಮತಾಃ ।**
**[7]ಉತ್ತರಾಣ್ಯನುಸಂಧಾಯ ಪದಾ[8]ನ್ಯೇಭಿಃ ಪದ್ಯೈರ್ವದೇತ್ ॥ ೧೭ ॥**

೧ ಶಬ್ದಃ. ೨ ಅಮರಾಪ್ರಮೇಯಶಬ್ದೌ. ೩ ಪರಮಘನಶಬ್ದಃ. ೪ ಅವ್ಯಾಬಾಧಪದಮಿತ್ಯಾದಯಃ. ೫ ಚತುರ್ಥ್ಯಂತಾಃ. ೬ ನಮಃಶಬ್ದಪರಾಃ. ೭ ನಮಃ ಪದಾನಿ. ೮ ಉಕ್ತೈಃ.

ಬೇರೆಬೇರೆಯಾಗಿ ಮೇಲೆ ಹೇಳಿದ ಅವ್ಯಾಬಾಧ ಮೊದಲಾದ ಶಬ್ದಗಳು ಚತುರ್ಥೀವಿಭಕ್ತ್ಯಂತಗಳೂ ಮುಂದೆ ನಮಸಶ್ಶಬ್ದಗಳುಳ್ಳುವೂ ಆಗಿರುತ್ತವೆಂದು ಅಭಿಮತವಾಗಿರುತ್ತವೆ. ಉತ್ತರಪದ–ನಮಃಪದಗಳನ್ನೂ ಅವ್ಯಾಬಾಧ ಮೊದಲಾದ ಈ ಪದಗಳೊಡನೆ ಸೇರಿಸಿ ಹೇಳಬೇಕು.

**ಆದೌ [1]ಪರಮಕಾಷ್ಠೇತಿ ಯೋಗರೂಪಾಯ ವಾಕ್ಪರಮ್ ।**
**ನಮಃಶಬ್ದಮುದೀರ್ಯಾಂತೇ ಮಂತ್ರವಿನ್ಮಂತ್ರಮುದ್ಧರೇತ್ ॥ ೧೮ ॥**

ಮೊದಲಲ್ಲಿ ಪರಮಕಾಷ್ಠವೆಂದೂ ಯೋಗರೂಪಾಯವೆಂಬ ವಚನವನ್ನು ಪರವಾಗಿಯೂ ಕೊನೆಯಲ್ಲಿ ಮಂತ್ರಜ್ಞನು ನಮಃಶಬ್ದವನ್ನುಚ್ಚರಿಸಿ ಮಂತ್ರವನ್ನುದ್ಧರಿಸಬೇಕು (ಪರಮಕಾಷ್ಠಯೋಗರೂಪಾಯ ನಮಃ–ಉತ್ಕೃಷ್ಟಧ್ಯಾನರೂಪನಾದವನಿಗೆ ನಮಸ್ಕಾರವು).

**ಲೋಕಾಗ್ರವಾಸಿನೇಶಬ್ದಾತ್ಪರಃ ಕಾರ್ಯೋ ನಮೋ ನಮಃ ।**
**ಏವಂ ಪರಮಸಿದ್ಧೇಭ್ಯೋರ್ಹತ್ಸಿದ್ಧೇಭ್ಯ ಇತ್ಯಪಿ ॥ ೧೯ ॥**

ಲೋಕಾಗ್ರವಾಸಿನೇ ಶಬ್ದದ ಮುಂದೆ ನಮೋನಮಃ ಶಬ್ದವನ್ನು ಇಡಬೇಕು. (ಲೋಕಾಗ್ರವಾಸಿನೇ ನಮೋನಮಃ, ಲೋಕದ ತುದಿಯಲ್ಲಿ ವಾಸಿಸುವವನಿಗೆ ನಮಸ್ಕಾರವು ನಮಸ್ಕಾರವು). ಹೀಗೆಯೇ ಪರಮಸಿದ್ಧರಿಗೂ ಅರ್ಹತ್ಸಿದ್ಧರಿಗೂ ನಮಸ್ಕಾರಮಾಡಬೇಕು. (ಪರಮಸಿದ್ಧೇಭ್ಯೋ ನಮೋನಮಃ ಅರ್ಹತ್ಸಿದ್ಧೇಭ್ಯೋ ನಮೋನಮಃ).

**ಏವಂ ಕೇವಲಿಸಿದ್ಧೇಭ್ಯಃ ಪದಾದ್ಭೂಯೋಂತಕೃತ್ಪರಾತ್ ।**
**ಸಿದ್ಧೇಭ್ಯ ಇತ್ಯಮುಷ್ಮಾಚ್ಚ [2]ಪರಂಪರಪರಾದಪಿ ॥ ೨೦ ॥**

ಹೀಗೆಯೇ ಕೇವಲಿಸಿದ್ಧೇಭ್ಯ ಶಬ್ದದ ಮುಂದೆಯೂ ಅಂತಕೃತ್ಸಿದ್ಧೇಭ್ಯಶಬ್ದದ ಮುಂದೆಯೂ ಪರಂಪರಸಿದ್ಧೇಭ್ಯ ಶಬ್ದದ ಮುಂದೆಯೂ ನಮೋನಮಃ ಶಬ್ದವನ್ನು ಸೇರಿಸಬೇಕು (ಕೇವಲಿಸಿದ್ಧೇಭ್ಯೋ ನಮೋನಮಃ, ಅಂತಕೃತ್ಸಿದ್ಧೇಭ್ಯೋ ನಮೋ ನಮಃ, ಪರಂಪರಾಸಿದ್ಧೇಭ್ಯೋ ನಮೋನಮಃ–ಕೇವಲಿಗಳಾಗಿ ಸಿದ್ಧರಾದವರಿಗೆ, ಜನ್ಮಜರಾಮೃತ್ಯುಗಳನ್ನು ಕೊನೆಗಾಣಿಸಿದವರಿಗೆ, ಪರಂಪರೆಯಾಗಿ ಸಿದ್ಧರಾಗಿರುವವರಿಗೆ ನಮಸ್ಕಾರವು ನಮಸ್ಕಾರವು).

**ಅನಾದಿಪದಪೂರ್ವಾಚ್ಚ [3]ತಸ್ಮಾದೇವ ಪದಾತ್ಪರಮ್ ।**
**ಅನಾದ್ಯನುಪಮಾದಿಭ್ಯಃ ಸಿದ್ಧೇಭ್ಯಶ್ಚ ನಮೋ ನಮಃ ॥ ೨೧ ॥**

ಪೂರ್ವದಲ್ಲಿ ಅನಾದಿಯೆಂಬ ಪದವುಳ್ಳ ಅದೇ ಪರಂಪರಪದದಿಂದ ಮುಂದೆ ನಮೋನಮಃ ಪದವನ್ನು ಸೇರಿಸಬೇಕು. ಅನಾದಿಪರಂಪರಸಿದ್ಧೇಭ್ಯೋ ನಮೋ ನಮಃ–ಅನಾದಿ ಪರಂಪರೆಯಿಂದ ಸಿದ್ಧರಾಗಿರುವವರಿಗೆ ನಮಸ್ಕಾರವು ನಮಸ್ಕಾರವು. ಅನಾದ್ಯನುಪಮಸಿದ್ಧೇಭ್ಯೋ ನಮೋನಮಃ–ಅನಾದಿ ಮತ್ತು ಅನುಪಮರಾದ ಸಿದ್ಧರಿಗೆ ನಮಸ್ಕಾರವು ನಮಸ್ಕಾರವು.

**ಇತಿ ಮಂತ್ರಪದಾನ್ಯುಕ್ತ್ವಾ ಪದಾನೀ[4]ಮಾನ್ಯತಃ ಪಠೇತ್ ।**
**ದ್ವಿರುಕ್ತ್ವಾ[5]ಮಂತ್ರ್ಯ ವಕ್ತವ್ಯಂ ಸಮ್ಯಗ್ದೃಷ್ಟಿಪದಂ ತತಃ ॥ ೨೨ ॥**

**ಆಸನ್ನಭವ್ಯಶಬ್ದಶ್ಚ ದ್ವಿರ್ವಾಚ್ಯ[6]ಸ್ತದ್ವದೇವ ಹಿ ।**
**ನಿರ್ವಾಣಾದಿಶ್ಚ ಪೂಜಾರ್ಹಃ ಸ್ವಾಹಾಂತೋಗ್ನೀಂದ್ರ ಇತ್ಯಪಿ ॥ ೨೩ ॥**

ಈ ಪ್ರಕಾರವಾಗಿ ಮಂತ್ರಗಳನ್ನು ಹೇಳಿ ಬಳಿಕ ಈ ಮುಂದೆ ಹೇಳುವ ಪದಗಳನ್ನು ಪಠಿಸಬೇಕು. ಸಮ್ಯಗ್ದೃಷ್ಟಿಪದವನ್ನು ಎರಡಾವರ್ತಿ ಹೇಳಿ ಸಂಬೋಧಿಸಿ ಹೇಳಬೇಕು. ಆಮೇಲೆ ಅದರಂತೆಯೇ ಆಸನ್ನಭವ್ಯಶಬ್ದವೂ ನಿರ್ವಾಣಶಬ್ದಪೂರ್ವಕವಾದ ಪೂಜಾರ್ಹಶಬ್ದವೂ ಕೊನೆಯಲ್ಲಿ ಸ್ವಾಹಾಶಬ್ದವುಳ್ಳ ಅಗ್ನೀಂದ್ರಶಬ್ದವೂ ಎರಡೆರಡಾವರ್ತಿ ಉಚ್ಚರಿಸತಕ್ಕುವಾಗಿರುತ್ತವೆ.

೧ ಪರಮಕಾಷ್ಠಯೋಗರೂಪಾಯ. ೨ ಪರಂಪರಶಬ್ದಾತ್. ೩ ಪರಂಪರಶಬ್ದಾತ್. ೪ ವಕ್ಷ್ಯಮಾಣಾನಿ. ೫ ಸಂಬೋಧನಂ ಕೃತ್ವಾ. ೬ ಆಮಂತ್ರಣಂ ಕೃತ್ವೇತ್ಯರ್ಥಃ.

**ತತಃ ಸ್ವ[೧]ಕಾಮ್ಯಸಿದ್ಧ್ಯರ್ಥಮಿದಂ ಪದಮುದಾಹರೇತ್ ।**
**ಸೇವಾಫಲಂ ಷಟ್ಪರಮಸ್ಥಾನಂ ಭವತು [೨]ತತ್ಪರಮ್ ॥ ೨೪ ॥**

**ಅಪಮೃತ್ಯುವಿನಾಶನಂ [೩]ಭವತ್ವಂತಂ ಪದಂ ಭವೇತ್ ।**
**ಭವತ್ವಂತಮತೋ ವಾಚ್ಯಂ [೪]ಸಮಾಧಿಮರಣಾಕ್ಷರಮ್ ॥ ೨೫ ॥**

ಆಮೇಲೆ ತನ್ನ ಅಭೀಷ್ಟಸಿದ್ಧಿಗೋಸ್ಕರ ಈ ಮುಂದೆ ಹೇಳುವ ಪದವನ್ನು ಹೇಳಬೇಕು. ''ಸೇವೆಯ ಫಲವು ಸಜ್ಜಾತಿ ಸದ್ಗೃಹಸ್ಥತ್ವ ಮೊದಲಾದ ಷಟ್ಪರಮಸ್ಥಾನವಾಗಲಿ'' ಎಂದು ಹೇಳಿದ ಬಳಿಕ 'ಭವತು' ಎಂಬ ಪದವೇ ಕೊನೆಯಾಗಿಯುಳ್ಳ 'ಅಪಮೃತ್ಯವಿನಾಶನಂ' ಪದವೂ ಆಮೇಲೆ 'ಭವತು' ಶಬ್ದವು ಕೊನೆಯಾಗಿರುವ 'ಸಮಾಧಿಮರಣಂ' ಪದವೂ ಇರುವುವು. ಅಪಮೃತ್ಯು ವಿನಾಶವಾಗಲಿ ಸಮಾಧಿಮರಣವಾಗಲಿ.

**[೫]ಚೂರ್ಣಿಃ ॥ ಸತ್ಯಜಾತಾಯ ನಮಃ । ಅರ್ಹಜ್ಜಾತಾಯ ನಮಃ । ಪರಮ ಜಾತಾಯ ನಮಃ । ಅನುಪಮಜಾತಾಯ ನಮಃ । ಸ್ವಪ್ರಧಾನಾಯ ನಮಃ । ಅಚಲಾಯ ನಮಃ । ಅಕ್ಷಯಾಯ ನಮಃ । ಅವ್ಯಾಬಾಧಾಯ ನಮಃ । ಅನಂತಜ್ಞಾನಾಯ ನಮಃ । ಅನಂತದರ್ಶನಾಯ ನಮಃ । ಅನಂ ತವೀರ್ಯಾಯ ನಮಃ । ಅನಂತಸುಖಾಯ ನಮಃ । ನೀರಜಸೇ ನಮಃ । ನಿರ್ಮಲಾಯ ನಮಃ । ಅಚ್ಛೇದ್ಯಾಯ ನಮಃ । ಅಭೇದ್ಯಾಯ ನಮಃ । ಅಜರಾಯ ನಮಃ । ಅಮರಾಯ ನಮಃ । ಅಪ್ರಮೇಯಾಯ ನಮಃ । ಅಗರ್ಭವಾಸಾಯ ನಮಃ । ಅಕ್ಷೋಭ್ಯಾಯ ನಮಃ । ಅವಿಲೀನಾಯ ನಮಃ । ಪರಮಘನಾಯ ನಮಃ । ಪರಮಕಾಷ್ಠಾಯೋಗರೂಪಾಯ ನಮಃ । ಲೋಕಾಗ್ರವಾಸಿನೇ ನಮೋ ನಮಃ । ಪರಮಸಿದ್ಧೇಭ್ಯೋ ನಮೋ ನಮಃ । ಅರ್ಹತ್ಸಿದ್ಧೇಭ್ಯೋ ನಮೋ ನಮಃ । ಕೇವಲಿಸಿದ್ಧೇಭ್ಯೋ ನಮೋ ನಮಃ । ಅಂತಕೃತ್ಸಿದ್ಧೇಭ್ಯೋ ನಮೋ ನಮಃ । [೬]ಪರಂಪರಸಿದ್ಧೇಭ್ಯೋ ನಮೋ ನಮಃ । [೭]ಅನಾದಿಪರಂಪರಸಿದ್ಧೇಭ್ಯೋ ನಮೋ ನಮಃ । ಅನಾ ದ್ಯನುಪಮಸಿದ್ಧೇಭ್ಯೋ ನಮೋ ನಮಃ ॥ ಅಥ ಕಾಮ್ಯಮಂತ್ರಃ ॥ ಸಮ್ಯ ಗ್ದೃಷ್ಟೇ ೨ ಆಸನ್ನಭವ್ಯ ೨ ನಿರ್ವಾಣಪೂಜಾರ್ಹ ೨ ಅಗ್ನೀಂದ್ರ ೨ ಸ್ವಾಹಾ । ಸೇವಾಫಲಂ ಷಟ್ಪರಮಸ್ಥಾನಂ ಭವತು । ಅಪಮೃತ್ಯುವಿನಾಶನಂ ಭವತು । ಸಮಾಧಿಮರಣಂ ಭವತು ॥ ಇತಿ ಪೀಠಿಕಾಮಂತ್ರಃ ॥**

(ಮೇಲೆ ಪದ್ಯಗಳಲ್ಲಿ ಹೇಳಿದ ಮಂತ್ರಗಳನ್ನೇ ''ಚೂರ್ಣಿಃ'' ಎಂದು ಮೂಲದಲ್ಲಿ ಸಂಗ್ರಹಿಸಿ ಹೇಳಿರುವುದರಿಂದ ಆ ಮಂತ್ರಗಳನ್ನು ಪುನಃ ಟೀಕೆಯಲ್ಲಿ ಹೇಳುವ ಆವಶ್ಯಕತೆಯಿಲ್ಲವೆಂದು ಬಿಟ್ಟಿರುತ್ತೇವೆ. ಮುಂದೆಯೂ ಹೀಗೆಯೇ ತಿಳಿಯಬೇಕು).

**ಪೀಠಿಕಾಮಂತ್ರ ಏಷ ಸ್ಯಾತ್ಪದೈರೇಭಿಃ ಸಮುಚ್ಚಿತೈಃ ।**
**ಜಾತಿಮಂತ್ರಮಿತೋ ವಕ್ಷ್ಯೇ [೮]ಯಥಾಶ್ರುತಮನುಕ್ರಮಾತ್ ॥ ೨೬ ॥**

ಸಂಗ್ರಹಿಸಲ್ಪಟ್ಟ ಈ ಪದಗಳಿಂದ ಮೇಲೆ ಹೇಳಿದ ಇದು ಪೀಠಿಕಾಮಂತ್ರ ವಾಗಿರುವುದು. ಜಾತಿಮಂತ್ರವನ್ನು ಆಗಮವನ್ನತಿಕ್ರಮಿಸದೆ ಇಲ್ಲಿಂದ ಮುಂದೆ ಕ್ರಮದಿಂದ ಹೇಳುವೆನು.

**॥ ಅಥ ಜಾತಿಮಂತ್ರಃ ॥**

**ಸತ್ಯಜನ್ಮಪದಂ [೯]ನಾಂತಮಾದೌ ಶರಣಮುತ್ತತಃ ।**
**ಪ್ರಪದ್ಯಾಮೀತಿ ವಾಚ್ಯಂಸ್ಯಾದರ್ಹಜ್ಜನ್ಮಪದಂ ತಥಾ ॥ ೨೭ ॥**

೧ ಅಭೀಷ್ಟ. ೨ ತಸ್ಮಾತ್ಪರಂ. ೩ ಭವತುಶಬ್ದೋ ಅಂತೇ ಯಸ್ಯ ತತ್. ೪ ಸಮಾಧಿಮರಣಂ ಪದಂ. ೫ ಉಕ್ತಮಂತ್ರವಿವರಣಂ. ೬ ಪರಂಪರಾಸಿದ್ಧೇಭ್ಯ ಇತ್ಯಪಿ ಪಾಠಃ. ೭ ಅನಾದಿ ಪರಂಪರಾಸಿದ್ಧೇಭ್ಯ ಇತ್ಯಪಿ ಪಾಠಃ. ೮ ಆಗಮಾನತಿಕ್ರಮೇಣ. ೯ ಷಷ್ಠ್ಯಂತಂ, ನಕಾರೋಂತೇ ಯಸ್ಯ ತತ್.

ಮೊದಲು ನಕಾರವು ಕೊನೆಯಾಗಿರುವ 'ಸತ್ಯಜನ್ಮ' ಪದವನ್ನೂ ಆಮೇಲೆ 'ಶರಣಂ ಪ್ರಪದ್ಯಾಮಿ' ಎಂದೂ ಹೇಳಬೇಕು. ಹಾಗೆಯೇ 'ಅರ್ಹಜ್ಜನ್ಮನಃ ಶರಣಂ ಪ್ರಪದ್ಯಾಮಿ' ಎಂದು ಹೇಳಬೇಕು–ಸಫಲವಾದ ಜನ್ಮವುಳ್ಳವನ ಶರಣವನ್ನು ಹೊಂದುತ್ತೇನೆ. ಅರ್ಹತ್ಪರಮೇಶ್ವರರ ಜನ್ಮವುಳ್ಳವನ ಶರಣವನ್ನು ಹೊಂದುತ್ತೇನೆ.

**ಅರ್ಹನ್ಮಾತೃಪದಂ ತದ್ವ[೧]ತ್ತ್ವಂತಮರ್ಹತ್ಸುತಾಕ್ಷರಮ್ ।**
**ಅನಾದಿಗಮನಸ್ಯೇತಿ ತಥಾನುಪಮಜನ್ಮನಃ ॥ ೨೮ ॥**

ಹಾಗೆಯೇ 'ತು' ಶಬ್ದವು ಕೊನೆಯಾಗಿರುವ 'ಅರ್ಹನ್ಮಾತೃ' ಪದವನ್ನೂ ಷಷ್ಠ್ಯಂತವಾಗಿ 'ಅರ್ಹತ್ಸುತ' ಪದವನ್ನೂ 'ಅನಾದಿಗಮನಸ್ಯ' ಎಂದೂ ಹಾಗೆಯೇ 'ಅನುಪಮಜನ್ಮನಃ' ಎಂದೂ ಹೇಳಬೇಕು. ಅರ್ಹತ್ಪರಮೇಶ್ವರರ ತಾಯಿಯ ಶರಣವನ್ನು ಹೊಂದುತ್ತೇನೆ. ಅರ್ಹತ್ಪರಮೇಶ್ವರರ ಪುತ್ರನ ಶರಣವನ್ನು ಹೊಂದುತ್ತೇನೆ. ಅನಾದಿಗಮನ – ಜ್ಞಾನವುಳ್ಳವನ ಶರಣವನ್ನು ಹೊಂದುತ್ತೇನೆ. ಉಪಮಾರಹಿತವಾದ ಜನ್ಮವುಳ್ಳವನ ಶರಣವನ್ನು ಹೊಂದುತ್ತೇನೆ.

**ರತ್ನತ್ರಯಸ್ಯ ಶರಣಂ ಪ್ರಪದ್ಯಾಮೀತ್ಯತಃ ಪರಮ್ ।**
**[೨]ಬೋಧ್ಯಾಂತಂ ಚ ತತಃ ಸಮ್ಯಗ್ದೃಷ್ಟಿಂ ದ್ವಿತ್ವೇನ ಯೋಜಯೇತ್ ॥**

ಆಮೇಲೆ ರತ್ನತ್ರಯದ ಶರಣವನ್ನು ಹೊಂದುತ್ತೇನೆಂದು ಹೇಳಿ ಬಳಿಕ ಸಂಬುದ್ಧ್ಯಂತವಾದ ಸಮ್ಯಗ್ದೃಷ್ಟಿಪದವನ್ನು ಎರಡಾವರ್ತಿ ಉಪಯೋಗಿಸಬೇಕು.

**ಜ್ಞಾನಮೂರ್ತಿಪದಂ ತದ್ವತ್ಸರಸ್ವತಿಪದಂ ತಥಾ ।**
**ಸ್ವಾಹಾಂತಮಂತೇ ವಕ್ತವ್ಯಃ [೩]ಕಾಮ್ಯಮಂತ್ರಶ್ಚ ಪೂರ್ವವತ್ ॥ ೩೦ ॥**

ಹಾಗೆಯೇ ಜ್ಞಾನಮೂರ್ತಿಪದವನ್ನೂ ಸ್ವಾಹಾಶಬ್ದವು ಕೊನೆಯಾಗಿರುವ ಸರಸ್ವತಿಪದವನ್ನೂ ಕೊನೆಯಲ್ಲಿ ಮೊದಲಿನಂತೆ ಕಾಮ್ಯಮಂತ್ರವನ್ನೂ ಹೇಳಬೇಕು.

**ಚೂರ್ಣಿಃ ॥ ಸತ್ಯಜನ್ಮನಃ ಶರಣಂ ಪ್ರಪದ್ಯಾಮಿ । ಅರ್ಹಜ್ಜನ್ಮನಃ ಶರಣಂ ಪ್ರಪದ್ಯಾಮಿ । ಅರ್ಹನ್ಮಾತುಃ ಶರಣಂ ಪ್ರಪದ್ಯಾಮಿ । ಅರ್ಹತ್ಸುತಸ್ಯ ಶರಣಂ ಪ್ರಪದ್ಯಾಮಿ । ಅನಾದಿಗಮನಸ್ಯ ಶರಣಂ ಪ್ರಪದ್ಯಾಮಿ । ಅನುಪ ಮಜನ್ಮನಃ ಶರಣಂ ಪ್ರಪದ್ಯಾಮಿ । ರತ್ನತ್ರಯಸ್ಯ ಶರಣಂ ಪ್ರಪದ್ಯಾಮಿ ॥ ಸಮ್ಯಗ್ದೃಷ್ಟೇ ೨ ಜ್ಞಾನಮೂರ್ತೇ ೨ ಸರಸ್ವತಿ ೨ ಸ್ವಾಹಾ ॥ ಸೇವಾಫಲಂ ಷಟ್ಪರಮಸ್ಥಾನಂ ಭವತು । ಅಪಮೃತ್ಯುವಿನಾಶನಂ ಭವತು । ಸಮಾಧಿಮ ರಣಂ ಭವತು ॥ ಇತಿ ಜಾತಿಮಂತ್ರಃ ॥**

**ಜಾತಿಮಂತ್ರೋಯ[೪]ಮಾಮ್ನಾತೋ ಜಾತಿಸಂಸ್ಕಾರಕಾರಣಮ್ ।**
**ಮಂತ್ರಂ ನಿಸ್ತಾರಕಾದಿಂ ಚ ಯಥಾಮ್ನಾಯಮಿತೋ ಬ್ರುವೇ ॥ ೩೧ ॥**

ಜಾತಿಯ ಸಂಸ್ಕಾರಕ್ಕೆ ಕಾರಣವಾದ ಈ ಜಾತಿಮಂತ್ರವು ಹೇಳಲ್ಪಟ್ಟಿತು. ಇಲ್ಲಿಂದ ಮುಂದೆ ನಿಸ್ತಾರಕ ಮೊದಲಾದ ಮಂತ್ರವನ್ನು ಶಾಸ್ತ್ರೋಕ್ತರೀತಿಯಾಗಿ ಹೇಳುತ್ತೇನೆ.

**॥ ಅಥ ನಿಸ್ತಾರಕಮಂತ್ರಃ ॥**

**ಸ್ವಾಹಾಂತಂ ಸತ್ಯಜಾತಾಯಪದಮಾದಾವನುಸ್ಮೃತಮ್ ।**
**ತದಂತಮರ್ಹಜ್ಜಾತಾಯಪದಂ ಸ್ಯಾತ್ತದನಂತರಮ್ ॥ ೩೨ ॥**

ಮೊದಲು ಸ್ವಾಹಾಶಬ್ದವು ಕೊನೆಯಾಗಿರುವ 'ಸತ್ಯಜಾತಾಯ' ಎಂಬ ಪದವು ಸ್ಮರಿಸಲ್ಪಟ್ಟಿದೆ – ಹೇಳಲ್ಪಟ್ಟಿದೆ. ಬಳಿಕ ಸ್ವಾಹಾ ಶಬ್ದಾಂತವಾದ 'ಅರ್ಹಜ್ಜಾತಾಯ' ಪದವು ಆಗುವುದು.

**ತತಃ ಷಟ್ಕರ್ಮಣೇ ಸ್ವಾಹಾ ಪದಮುಚ್ಚಾರಯೇದ್ದ್ವಿಜಃ ।**
**ಸ್ಯಾದ್ಗ್ರಾಮಯತಯೇ ಸ್ವಾಹಾ ಪದಂ ತಸ್ಮಾದನಂತರಮ್ ॥ ೩೩ ॥**

೧ ಷಷ್ಠ್ಯಂತಂ, ತುಶಬ್ದೋಂತೇ ಯಸ್ಯ ತತ್. ೨ ಸಂಬುದ್ಧ್ಯಂತಂ. ೩ ಷಟ್ಪರಮಸ್ಥಾನೇತ್ಯಾದಿ. ೪ ಪ್ರೋಕ್ತಃ.

ಆಮೇಲೆ ದ್ವಿಜನು 'ಷಟ್ಕರ್ಮಣೇ ಸ್ವಾಹಾ' ಎಂಬ ಪದವನ್ನು ಉಚ್ಚರಿಸಬೇಕು. ಆದರನಂತರ 'ಗ್ರಾಮಯತಯೇ ಸ್ವಹಾ' ಪದವು ಇರುವುದು.

**ಅನಾದಿಶ್ರೋತ್ರಿಯಾಯೇತಿ ಬ್ರೂಯಾತ್ಸ್ವಾಹಾಪದಂ ತತಃ ।**
**ತದ್ವಚ್ಚ ಸ್ನಾತಕಾಯೇತಿ ಶ್ರಾವಕಾಯೇತಿ ಚ ದ್ವಯಮ್ ॥ ೩೪ ॥**

ಅನಾದಿಶ್ರೋತ್ರಿಯಾಯ ಎಂದು ಬಳಿಕ ಸ್ವಾಹಾಪದವನ್ನು ಹೇಳಬೇಕು. ಹಾಗೆಯೇ ಸ್ನಾತಕಾಯ – ಜಿನನಿಗೆ ಎಂದೂ ಶ್ರಾವಕಾಯ ಎಂದೂ ಎರಡು ಪದಗಳನ್ನು ಹೇಳಿ ಸ್ವಾಹಾಪದವನ್ನುಚ್ಚರಿಸಬೇಕು.

**ಸ್ಯಾದ್ದೇವಬ್ರಾಹ್ಮಣಾಯೇತಿ ಸ್ವಾಹೇತ್ಯಂತಮತಃ ಪರಮ್ ।**
**ಸುಬ್ರಾಹ್ಮಣಾಯ ಸ್ವಾಹಾಂತಃ ಸ್ವಾಹಾಂತಾನುಪಮಾಯಗೀಃ ॥ ೩೫ ॥**

ಅದರನಂತರ ದೇವಬ್ರಾಹ್ಮಣಾಯ ಎಂಬುದು ಸ್ವಾಹಾಶಬ್ದಾಂತವಾಗಿರುವುದು. ಆಮೇಲೆ ಸುಬ್ರಾಹ್ಮಣಾಯ ಸ್ವಾಹಾ ಎಂದೂ ಅನುಪಮಾಯ ಸ್ವಾಹಾ ಎಂದೂ ಉಚ್ಚರಿಸಬೇಕು.

**ಸಮ್ಯಗ್ದೃಷ್ಟಿಪದಂ ಚೈವ [೧]ತಥಾ ನಿಧಿಪತಿಶ್ರುತಿಮ್ ।**
**ಬ್ರೂಯಾದ್ವೈಶ್ರವಣೋಕ್ತಿಂ ಚ [೨]ದ್ವಿಃ ಸ್ವಾಹೇತಿ ತತಃ ಪರಮ್ ॥ ೩೬ ॥**

ಸಮ್ಯಗ್ದೃಷ್ಟಿಪದವನ್ನೂ ಶಾಸ್ತ್ರೋಕ್ತಪ್ರಕಾರದಿಂದ ನಿಧಿಪತಿಶಬ್ದವನ್ನೂ ವೈಶ್ರವಣ ಶಬ್ದವನ್ನೂ ಎರಡೆರಡಾವರ್ತಿ ಹೇಳಿ ಆಮೇಲೆ ಸ್ವಾಹಾಶಬ್ದವನ್ನು ಹೇಳಬೇಕು.

**ಕಾಮ್ಯಮಂತ್ರಮತೋ ಬ್ರೂಯಾತ್ಪೂರ್ವವನ್ಮಂತ್ರವಿದ್ದ್ವಿಜಃ ।**
**ಋಷಿಮಂತ್ರಮಿತೋ [೩]ವಕ್ಷ್ಯೇ [೪]ಯಥಾಹೋಪಾಸಕಶ್ರುತಿಃ ॥ ೩೭ ॥**

ಬಳಿಕ ಮಂತ್ರವನ್ನು ತಿಳಿದ ದ್ವಿಜನು ಮೊದಲಿನಂತೆ ಕಾಮ್ಯಮಂತ್ರವನ್ನು ಹೇಳಬೇಕು. ಋಷಿಮಂತ್ರವನ್ನು ಇಲ್ಲಿಂದ ಮುಂದೆ, ಉಪಾಸಕಾಧ್ಯಯನಾಂಗವೆಂಬ ಶಾಸ್ತ್ರವು ಹೇಳಿರುವಂತೆ, ಹೇಳುವೆನು.

**ಚೂರ್ಣಿಃ ॥ ಸತ್ಯಜಾತಾಯ ಸ್ವಾಹಾ । ಅರ್ಹಜ್ಜಾತಾಯ ಸ್ವಾಹಾ । ಷಟ್ಕರ್ಮಣೇ ಸ್ವಾಹಾ । ಗ್ರಾಮಯತಯೇ ಸ್ವಾಹಾ । ಅನಾದಿಶ್ರೋತ್ರಿಯಾಯ ಸ್ವಾಹಾ । ಸ್ನಾತಕಾಯ ಸ್ವಾಹಾ । ಶ್ರಾವಕಾಯ ಸ್ವಾಹಾ । ದೇವಬ್ರಾಹ್ಮಣಾಯ ಸ್ವಾಹಾ । ಸುಬ್ರಾಹ್ಮಣಾಯ ಸ್ವಾಹಾ । ಅನುಪಮಾಯ ಸ್ವಾಹಾ । ಸಮ್ಯಗ್ದೃಷ್ಟೇ ೨ ನಿಧಿಪತೇ ೨ ವೈಶ್ರವಣ ೨ ಸ್ವಾಹಾ ॥ ಸೇವಾಫಲಂ ಷಟ್ಪರಮಸ್ಥಾನಂ ಭವತು । ಅಪಮೃತ್ಯುವಿನಾಶನಂ ಭವತು । ಸಮಾಧಿಮರಣಂ ಭವತು ॥ ಇತಿ ನಿಸ್ತಾರಕಮಂತ್ರಃ ॥**

ಸೇವಾಫಲವು ಷಟ್ಪರಮಸ್ಥಾನವಾಗಲಿ. ಅಪಮೃತ್ಯುವಿನಾಶವಾಗಲಿ. ಸಮಾಧಿ ಮರಣವಾಗಲಿ ॥ ಇತಿ ನಿಸ್ತಾರಕಮಂತ್ರಃ ॥

**॥ ಅಥ ಋಷಿಮಂತ್ರಃ ॥**

**ಪ್ರಥಮಂ ಸತ್ಯಜಾತಾಯ ನಮಃಪದಮುದೀರಯೇತ್ ।**
**ಗೃಹ್ಣೀಯಾದರ್ಹಜ್ಜಾತಾಯ ನಮಃಶಬ್ದಂ ತತಃಪರಮ್ ॥ ೩೮ ॥**

ಮೊದಲು ಸತ್ಯಜಾತಾಯ ನಮಃ ಎಂಬ ಪದವನ್ನು ಹೇಳಬೇಕು. ಬಳಿಕ ಅರ್ಹಜ್ಜಾತಾಯ ನಮಃ ಎಂಬ ಪದವನ್ನು ತೆಗೆದುಕೊಳ್ಳಬೇಕು.

**ನಿರ್ಗ್ರಂಥಾಯ ನಮೋ ವೀತರಾಗಾಯ ನಮ ಇತ್ಯಪಿ ।**
**ಮಹಾವ್ರತಾಯ ಪೂರ್ವಂ ಚ ನಮಃಪದಮನಂತರಮ್ ॥ ೩೯ ॥**

೧ ಶಾಸ್ತ್ರೋಕ್ತಪ್ರಕಾರೇಣ. ೨ ಸಮ್ಯಗ್ದೃಷ್ಟಿಪದಾದಿಕಂ ದ್ವಿರುಕ್ತ್ವಾ. ೩ ಬ್ರವೀಮಿ. ೪ ಯಥಾ ಆಹ ತಥಾ ಅಹಂ ವಕ್ಷ್ಯೇ.

ನಿರ್ಗ್ರಂಥಾಯ ನಮಃ – ಪರಿಗ್ರಹವಿಲ್ಲದವನಿಗೆ ನಮಸ್ಕಾರವು. ವೀತರಾಗಾಯ ನಮಃ – ರಾಗವಿಲ್ಲದವನಿಗೆ ನಮಸ್ಕಾರವು. ಆಮೇಲೆ ಮಹಾವ್ರತಾಯ ನಮಃ – ಅಹಿಂಸಾದಿ ಮಹಾವ್ರತಗಳುಳ್ಳವನಿಗೆ ನಮಸ್ಕಾರವು.

**ತ್ರಿಗುಪ್ತಾಯ ನಮೋ ಮಹಾಯೋಗಾಯ ನಮ ಇತ್ಯತಃ ।**
**ತತೋ ವಿವಿಧಯೋಗಾಯ ನಮ ಇತ್ಯನುಪಠ್ಯತಾಮ್ ॥ ೪೦ ॥**

ಅನಂತರದಲ್ಲಿ ಮನೋಗುಪ್ತಿ ವಾಗ್ಗುಪ್ತಿ ಕಾಯಗುಪ್ತಿಗಳುಳ್ಳವನಿಗೆ ನಮಸ್ಕಾರವು. ಮಹಾಯೋಗವುಳ್ಳವನಿಗೆ ನಮಸ್ಕಾರವು. ಬಳಿಕ ನಾನಾಪ್ರಕಾರವಾದ ಯೋಗವುಳ್ಳವನಿಗೆ ನಮಸ್ಕಾರವು ಎಂದು ಪಠಿಸಬೇಕು.

**ವಿವಿಧರ್ದ್ಧಿಪದಂ ಚಾಸ್ಮಾನ್ನಮಃಶಬ್ದೇನ ಯೋಜಿತಮ್ ।**
**ತತೋಂಗಧರಪೂರ್ವಂ ಚ ಪಠೇತ್ಪೂರ್ವಧರಧ್ವನಿಮ್ ॥ ೪೧ ॥**

ಇದಾದನಂತರ ನಮಃಶಬ್ದದೊಡನೆ ಸೇರಿಸಲ್ಪಟ್ಟ ವಿವಿಧರ್ದ್ಧಿ – ನಾನಾ ಪ್ರಕಾರವಾದ ಮಹಿಮೆಯುಳ್ಳವನೆಂಬ ಪದವನ್ನುಚ್ಚರಿಸಬೇಕು. ಬಳಿಕ ಅಂಗಧರ ಪೂರ್ವಕವಾದ ಪೂರ್ವಧರಶಬ್ದವನ್ನು ಪಠಿಸಬೇಕು. ದ್ವಾದಶಾಂಗಗಳ ಜ್ಞಾನವುಳ್ಳವನಿಗೆ ನಮಸ್ಕಾರವೆಂದೂ ಚತುರ್ದಶಪೂರ್ವಶಾಸ್ತ್ರಗಳ ಜ್ಞಾನವುಳ್ಳನಿಗೆ ನಮಸ್ಕಾರವೆಂದೂ ಭಾವವು.

**ನಮಃಶಬ್ದಪರೌ ಚೈ[೧]ತೌ ಚತುರ್ಥ್ಯಂತಾವನುಸ್ಮೃತೌ ।**
**ತತೋ ಗಣಧರಾಯೇತಿ ಪದಂ ಯುಕ್ತ ನಮಃಪದಮ್ ॥ ೪೨ ॥**

ಈ ಅಂಗಧರ ಪೂರ್ವಧರ ಶಬ್ದಗಳು ಚುತುರ್ಥೀವಿಭಕ್ತ್ಯಂತಗಳೂ ಕೊನೆಯಲ್ಲಿ ನಮಃಶಬ್ದವುಳ್ಳವೂ ಆಗಿರುತ್ತವೆಂದು ಸ್ಮರಿಸಲ್ಪಟ್ಟಿವೆ. ಬಳಿಕ ನಮಶ್ಶಬ್ದ ಯುಕ್ತವಾದ 'ಗಣಧರಾಯ' ಎಂಬ ಪದವನ್ನು ಹೇಳಬೇಕು.

**ಪರಮರ್ಷಿಭ್ಯ ಇತ್ಯಸ್ಮಾತ್ಪರಂ ವಾಚ್ಯಂ ನಮೋ ನಮಃ ।**
**ತತೋಽನುಪಮಜಾತಾಯ ನಮೋ ನಮ ಇತೀರಯೇತ್ ॥ ೪೩ ॥**

ಪರಮರ್ಷಿಭ್ಯ ಎಂಬ ಪದದಿಂದ ಮುಂದೆ ನಮೋನಮಃ ಎಂಬ ಪದವನ್ನು ಹೇಳಬೇಕು. ಬಳಿಕ ಅನುಪಮಜಾತಾಯ ನಮೋ ನಮಃ ಎಂದು ಹೇಳಬೇಕು.

**ಸಮ್ಯಗ್ದೃಷ್ಟಿಪದಂ ಚಾಂತೇ [೨]ಬೋಧ್ಯಾಂತಂ ದ್ವಿರುದಾಹರೇತ್ ।**
**ತತೋ ಭೂಪತಿಶಬ್ದಶ್ಚ ನಗರೋಪಪದಃ ಪತಿಃ ॥ ೪೪ ॥**

**ದ್ವಿರ್ವಾಚ್ಯೌ ತಾ[೩]ವಿಮೌ ಶಬ್ದೌ ಬೋಧ್ಯಾಂತೌ ಮಂತ್ರವೇದಿಭಿಃ ।**
**ಮಂತ್ರ[೪]ಶೇಷೋ[೫]ಪ್ಯಯಂ ತಸ್ಮಾದನಂತರಮುದೀರ್ಯತಾಮ್ ॥ ೪೫ ॥**

ಕೊನೆಯಲ್ಲಿ ಸಂಬುದ್ಧ್ಯಂತವಾದ ಸಮ್ಯಗ್ದೃಷ್ಟಿಪದವನ್ನು ಎರಡಾವರ್ತಿ ಹೇಳಬೇಕು. ಆಮೇಲೆ ಸಂಬುದ್ಧ್ಯಂತವಾದ ಭೂಪತಿಶಬ್ದವನ್ನೂ ನಗರಪತಿ ಶಬ್ದವನ್ನೂ ಮಂತ್ರಜ್ಞರು ಎರಡೆರಡಾವರ್ತಿ ಹೇಳಬೇಕು. ಆದರನಂತರ ಈ ಮುಂದೆಹೇಳುವ ಮಂತ್ರಶೇಷವನ್ನೂ ಹೇಳಬೇಕು.

**ಕಾಲಶ್ರಮಣಶಬ್ದಂ ಚ ದ್ವಿರುಕ್ತ್ವಾಮಂತ್ರಣೇ ತತಃ ।**
**ಸ್ವಾಹೇತಿ ಪದಮುಚ್ಚಾರ್ಯ ಪ್ರಾಗ್ವತ್ಕಾಮ್ಯಾನಿ ಚೋದ್ಧರೇತ್ ॥ ೪೬ ॥**

ಸಂಬೋಧನದಲ್ಲಿ ಕಾಲಶ್ರಮಣಶಬ್ದವನ್ನೂ ಎರಡಾವರ್ತಿ ಹೇಳಿ ಬಳಿಕ ಸ್ವಾಹಾದಪದವನ್ನುಚ್ಚರಿಸಿ ಮೊದಲು ಹೇಳಿದಂತೆ ಕಾಮ್ಯಮಂತ್ರಗಳನ್ನುಚ್ಚರಿಸಬೇಕು.

**ಚೂರ್ಣಿಃ ॥ ಸತ್ಯಜಾತಾಯ ನಮಃ । ಅರ್ಹಜ್ಜಾತಾಯ ನಮಃ । ನಿರ್ಗ್ರಂಥಾಯ ನಮಃ । ವೀತರಾಗಾಯ ನಮಃ । ಮಹಾವ್ರತಾಯ ನಮಃ । ತ್ರಿಗುಪ್ತಾಯ ನಮಃ । ಮಹಾಯೋಗಾಯ ನಮಃ । ವಿವಿಧಯೋಗಾಯ**

೧ ಅಂಗಧರಪೂರ್ವಧರಶಬ್ದೌ. ೨ ಆಮಂತ್ರಣಾಂತಂ. ೩ ಭೂಪತಿನಗರಪತಿಶಬ್ದೌ. ೪ ವಕ್ಷ್ಯಮಾಣಕಾಲಶ್ರಮಣೇತ್ಯವಶಿಷ್ಟಮಂತ್ರಃ. ೫ ವಕ್ಷ್ಯಮಾಣಃ.

**ನಮಃ । ವಿವಿಧರ್ದ್ಧಯೇ ನಮಃ । ಅಂಗಧರಾಯ ನಮಃ । ಪೂರ್ವಧರಾಯ ನಮಃ । ಗಣಧರಾಯ ನಮಃ । ಪರಮರ್ಷಿಭ್ಯೋ ನಮೋ ನಮಃ । ಅನುಪಮಜಾತಾಯ ನಮೋ ನಮಃ । ಸಮ್ಯಗ್ದೃಷ್ಟೇ ೨ ಭೂಪತೇ ೨ ನಗರಪತೇ ೨ ಕಾಲಶ್ರಮಣ ೨ ಸ್ವಾಹಾ ॥ ಸೇವಾಫಲಂ ಷಟ್ಪರಮಸ್ಥಾನಂ ಭವತು । ಅಪಮೃತ್ಯುವಿನಾಶನಂ ಭವತು । ಸಮಾಧಿಮರಣಂ ಭವತು ॥ ಇತಿ ಋಷಿಮಂತ್ರಃ ॥**

**ಮುನಿಮಂತ್ರೋಯಮಾಮ್ನಾತೋ ಮುನಿಭಿಸ್ತತ್ತ್ವದರ್ಶಿಭಿಃ ।**
**ವಕ್ಷ್ಯೇ ಸುರೇಂದ್ರಮಂತ್ರಂ ಚ ಯಥಾ ಸ್ಮಾಹಾ[೧]ರ್ಷಭೀ ಶ್ರುತಿಃ ॥ ೪೭ ॥**

ತತ್ತ್ವದರ್ಶಿಗಳಾದ ಮುನಿಗಳಿಂದ ಈ ಮುನಿಮಂತ್ರವು ಹೇಳಲ್ಪಟ್ಟಿದೆ. ಋಷಭಸ್ವಾಮಿಯಿಂದ ಹೇಳಲ್ಪಟ್ಟ ಶಾಸ್ತ್ರವು ಹೇಗೆ ಹೇಳಿರುತ್ತದೋ ಹಾಗೆ ಸುರೇಂದ್ರಮಂತ್ರವನ್ನು ಹೇಳುವೆನು.

**॥ ಅಥ ಸುರೇಂದ್ರಮಂತ್ರಃ ॥**

**ಪ್ರಥಮಂ ಸತ್ಯಜಾತಾಯ ಸ್ವಾಹೇತ್ಯೇತತ್ಪದಂ ಪಠೇತ್ ।**
**ತತಃ ಸ್ಯಾದರ್ಹಜ್ಜಾತಾಯ ಸ್ವಾಹೇತ್ಯೇತತ್ಪರಂ ಪದಮ್ ॥ ೪೮ ॥**

ಮೊದಲು 'ಸತ್ಯಜಾತಾಯ ಸ್ವಾಹಾ' ಎಂಬ ಪದವನ್ನು ಪಠಿಸಬೇಕು. ಆಮೇಲೆ 'ಅರ್ಹಜ್ಜಾತಾಯ ಸ್ವಾಹಾ' ಎಂಬ ಪದವು ಉತ್ತರದಲ್ಲಿ ಬರುವುದು.

**ತತಶ್ಚ ದಿವ್ಯಜಾತಾಯ ಸ್ವಾಹೇತ್ಯೇವಮುದಾಹರೇತ್ ।**
**ತತೋ [೨]ದಿವ್ಯಾರ್ಚ್ಯಜಾತಾಯ ಸ್ವಾಹೇತ್ಯೇತತ್ಪದಂ ಪಠೇತ್ ॥ ೪೯ ॥**

ಬಳಿಕ 'ದಿವ್ಯಜಾತಾಯ ಸ್ವಾಹಾ' ಹೀಗೆಂದು ಹೇಳಬೇಕು. ಆಮೇಲೆ 'ದಿವ್ಯಾರ್ಚ್ಯಜಾತಾಯ ಸ್ವಾಹಾ' ಎಂಬ ಪದವನ್ನು ಪಠಿಸಬೇಕು.

**ಬ್ರೂಯಾಚ್ಚ ನೇಮಿನಾಥಾಯ ಸ್ವಾಹೇತ್ಯೇತದನಂತರಮ್ ।**
**ಸೌಧರ್ಮಾಯ ಪದಂ ಚಾಸ್ಮಾತ್ಸ್ವಾಹೋಕ್ತ್ಯಂತಮನುಸ್ಮರೇತ್ ॥ ೫೦ ॥**

ಆದರನಂತರ 'ನೇಮಿನಾಥಾಯ ಸ್ವಾಹಾ' ಎಂಬ ಪದವನ್ನು ಹೇಳಬೇಕು. ಕೊನೆಯಲ್ಲಿ ಸ್ವಾಹಾವಚನವುಳ್ಳ 'ಸೌಧರ್ಮಾಯ' ಎಂಬ ಪದವನ್ನು ಉಚ್ಚರಿಸಬೇಕು.

**ಕಲ್ಪಾಧಿಪತಯೇ ಸ್ವಾಹಾಪದಂ ವಾಚ್ಯಮತಃ ಪರಮ್ ।**
**ಭೂಯೋಽಪ್ಯನುಚರಾಯಾದಿಂ ಸ್ವಾಹಾಶಬ್ದಮುದೀರಯೇತ್ ॥ ೫೧ ॥**

ಆಮೇಲೆ 'ಕಲ್ಪಾಧಿಪತಯೇ ಸ್ವಾಹಾ' ಎಂಬ ಪದವನ್ನು ಹೇಳಬೇಕು. ಬಳಿಕ 'ಅನುಚರಾಯ ಸ್ವಾಹಾ' ಎಂಬ ಪದವನ್ನು ಹೇಳಬೇಕು.

**ತತಃ ಪರಂಪರೇಂದ್ರಾಯ ಸ್ವಾಹೇತ್ಯುಚ್ಚಾರಯೇತ್ಪದಮ್ ।**
**ಸಂಪಠೇದಹಮಿಂದ್ರಾಯ ಸ್ವಾಹೇತ್ಯೇತದನಂತರಮ್ ॥ ೫೨ ॥**

ಆಮೇಲೆ 'ಪರಂಪರೇಂದ್ರಾಯ ಸ್ವಾಹಾ' ಎಂಬ ಪದವನ್ನುಚ್ಚರಿಸಬೇಕು. ಬಳಿಕ 'ಅಹಮಿಂದ್ರಾಯ ಸ್ವಾಹಾ' ಎಂಬ ಪದವನ್ನು ಪಠಿಸಬೇಕು.

**ತತಃ ಪರಮಾರ್ಹತಾಯ ಸ್ವಾಹೇತ್ಯೇತತ್ಪದಂ ಪಠೇತ್ ।**
**ತತೋಽಪ್ಯನುಪಮಾಯೇತಿ ಪದಂ ಸ್ವಾಹಾಪದಾನ್ವಿತಮ್ ॥ ೫೩ ॥**

ಅನಂತರ 'ಪರಮಾರ್ಹತಾಯ ಸ್ವಾಹಾ' ಎಂಬ ಪದವನ್ನೂ ಬಳಿಕ 'ಅನುಪಮಾಯ ಸ್ವಾಹಾ' ಎಂಬ ಪದವನ್ನೂ ಉಚ್ಚರಿಸಬೇಕು.

**ಸಮ್ಯಗ್ದೃಷ್ಟಿಪದಂ ಚಾಸ್ಮಾದ್ಬೋಧ್ಯಾಂತಂ ದ್ವಿರುದೀರಯೇತ್ ।**
**ತಥಾ ಕಲ್ಪಪತಿಂ ಚಾಪಿ ದಿವ್ಯಮೂರ್ತಿಂ ಚ ಸಂಪಠೇತ್ ॥ ೫೪ ॥**

**ದ್ವಿರ್ವಾಚ್ಯಂ ವಜ್ರನಾಮೇತಿ ತತಃ ಸ್ವಾಹೇತಿ [೧]ಸಂಹರೇತ್ ।**
**ಪೂರ್ವವತ್ಕಾಮ್ಯಮಂತ್ರೋಽಪಿ ಪಾಠ್ಯೋಽಸ್ಯಾಂತೇ [೨]ತ್ರಿಭಿಃ ಪದೈಃ ॥ ೫೫ ॥**

ಇದರನಂತರ ಸಂಬುದ್ಧ್ಯಂತವಾದ ಸಮ್ಯಗ್ದೃಷ್ಟಿಪದವನ್ನೂ ಕಲ್ಪಪತಿಪದವನ್ನೂ ದಿವ್ಯಮೂರ್ತಿಪದವನ್ನೂ ವಜ್ರನಾಮಪದವನ್ನೂ ಎರಡೆರಡಾವರ್ತಿ ಪಠಿಸಬೇಕು. ಆಮೇಲೆ ಸ್ವಾಹಾ ಎಂದು ಉಚ್ಚರಿಸಬೇಕು. ಇದರ ಕೊನೆಯಲ್ಲಿ ಷಟ್ಪರಮಸ್ಥಾನ ಮೊದಲಾದ ಮೂರು ಪದಗಳಿಂದ ಮೊದಲಿನಂತೆ ಕಾಮ್ಯಮಂತ್ರವನ್ನು ಪಠಿಸಬೇಕು.

**ಚೂರ್ಣಿಃ ॥ ಸತ್ಯಜಾತಾಯ ಸ್ವಾಹಾ । ಅರ್ಹಜ್ಜಾತಾಯ ಸ್ವಾಹಾ । ದಿವ್ಯಜಾತಾಯ ಸ್ವಾಹಾ । [೩]ದಿವ್ಯಾರ್ಚ್ಯಜಾತಾಯ ಸ್ವಾಹಾ । ನೇಮಿನಾಥಾಯ ಸ್ವಾಹಾ । ಸೌಧರ್ಮಾಯ ಸ್ವಾಹಾ । ಕಲ್ಪಾಧಿಪತಯೇ ಸ್ವಾಹಾ । ಅನುಚರಾಯ ಸ್ವಾಹಾ । ಪರಂಪರೇಂದ್ರಾಯ ಸ್ವಾಹಾ । ಅಹಮಿಂದ್ರಾಯ ಸ್ವಾಹಾ । ಪರಮಾರ್ಹತಾಯ ಸ್ವಾಹಾ । ಅನುಪಮಾಯ ಸ್ವಾಹಾ ॥ ಸಮ್ಯಗ್ದೃಷ್ಟೇ ೨ ಕಲ್ಪಪತೇ ೨ ದಿವ್ಯಮೂರ್ತೇ ೨ ವಜ್ರನಾಮ ೨ ಸ್ವಾಹಾ ॥ ಸೇವಾಫಲಂ ಷಟ್ಪರಮಸ್ಥಾನಂ ಭವತು । ಅಪಮೃತ್ಯುವಿನಾಶನಂ ಭವತು । ಸಮಾಧಿಮರಣಂ ಭವತು ॥ ಇತಿ ಸುರೇಂದ್ರಮಂತ್ರಃ ॥**

**ಸುರೇಂದ್ರಮಂತ್ರ ಏಷ ಸ್ಯಾತ್ಸುರೇಂದ್ರಸ್ಯಾ[೪]ನುತರ್ಪಣಮ್ ।**
**ಮಂತ್ರಂ ಪರಮರಾಜ್ಯಾದಿಂ ವಕ್ಷ್ಯಾಮೀತೋ ಯಥಾಶ್ರುತಮ್ ॥ ೫೬ ॥**

ಈ ಸುರೇಂದ್ರಮಂತ್ರವು ಇಂದ್ರನಿಗೆ ತೃಪ್ತಿಕರವಾಗಿರುವುದು. ಇಲ್ಲಿಂದ ಮುಂದೆ ಶಾಸ್ತ್ರೋಕ್ತರೀತಿಯಾಗಿ ಪರಮರಾಜ್ಯಾದಿ ಮಂತ್ರವನ್ನು ಹೇಳುವೆನು.

**॥ ಅಥ ಪರಮರಾಜ್ಯಾದಿಮಂತ್ರಃ ॥**

**ಪ್ರಾಗ[೫]ತ್ರ ಸತ್ಯಜಾತಾಯ ಸ್ವಾಹೇತ್ಯೇತತ್ಪದಂ ಪಠೇತ್ ।**
**ತತಃ ಸ್ಯಾದರ್ಹಜ್ಜಾತಾಯ ಸ್ವಾಹೇತ್ಯೇತತ್ಪರಂ ಪದಮ್ ॥ ೫೭ ॥**

ಈ ಪರಮರಾಜ್ಯಾದಿಮಂತ್ರಗಳಲ್ಲಿ ಮೊದಲು 'ಸತ್ಯಜಾತಾಯ ಸ್ವಾಹಾ' ಎಂಬ ಪದವನ್ನೂ ಆಮೇಲೆ 'ಅರ್ಹಜ್ಜಾತಾಯ ಸ್ವಾಹಾ' ಎಂಬ ಪದವನ್ನೂ ಪಠಿಸಬೇಕು.

**ತತಶ್ಚಾನುಪಮೇಂದ್ರಾಯ ಸ್ವಾಹೇತ್ಯೇತತ್ಪದಂ ಮತಮ್ ।**
**ವಿಜಯಾರ್ಚ್ಯಾದಿಜಾತಾಯ ಪದಂ ಸ್ವಾಹಾಂತ[೬]ಮನ್ವತಃ ॥ ೫೮ ॥**

ಅನಂತರದಲ್ಲಿ 'ಅನುಪಮೇಂದ್ರಾಯ ಸ್ವಾಹಾ' ಎಂಬ ಪದವನ್ನೂ 'ವಿಜಯಾರ್ಚ್ಯಾದಿಜಾತಾಯ ಸ್ವಾಹಾ' ಎಂಬ ಪದವನ್ನೂ ಉಚ್ಚರಿಸಬೇಕು.

**ತತೋಽಪಿ ನೇಮಿನಾಥಾಯ ಸ್ವಾಹೇತ್ಯೇತತ್ಪಠೇತ್ಪದಮ್ ।**
**ತತಃ ಪರಮರಾಜಾಯ ಸ್ವಾಹೇತ್ಯೇತದುದಾಹರೇತ್ ॥ ೫೯ ॥**

ಆಮೇಲೆ 'ನೇಮಿನಾಥಾಯ ಸ್ವಾಹಾ' ಎಂಬ ಪದವನ್ನೂ 'ಪರಮರಾಜಾಯ ಸ್ವಾಹಾ' ಎಂಬ ಪದವನ್ನೂ ಪಠಿಸಬೇಕು.

**ಪರಮಾರ್ಹತಾಯ ಸ್ವಾಹಾ ಪದಮಸ್ಮಾತ್ಪರಂ ಪಠೇತ್ ।**
**ಸ್ವಾಹಾಂತಾನುಪಮಾಯೋಕ್ತಿರತೋ ವಾಚ್ಯಾ ದ್ವಿಜನ್ಮಭಿಃ ॥ ೬೦ ॥**

ಇದರನಂತರ 'ಪರಮಾರ್ಹತಾಯ ಸ್ವಾಹಾ' ಎಂಬ ಪದವನ್ನೂ 'ಅನುಪಮಾಯ ಸ್ವಾಹಾ' ಎಂಬ ಪದವನ್ನೂ ದ್ವಿಜರು ಪಠಿಸಬೇಕು.

೧ ಋಷಭಪ್ರೋಕ್ತಾ. ೨ ದಿವ್ಯಾರ್ಚಿರ್ಜಾತಾಯೇತ್ಯಪಿ ಪಾಠಃ.

೧ ಸಮ್ಯಗ್ಬ್ರೂಯಾತ್. ೨ ಷಟ್ಪರಮಸ್ಥಾನೇತ್ಯಾದಿಭಿಃ. ೩ ದಿವ್ಯಾರ್ಚಿರ್ಜಾತಾಯೇತ್ಯಪಿ ಪಾಠಃ. ೪ ತೃಪ್ತಿಕರಂ. ೫ ಪರಮರಾಜ್ಯಾದಿಮಂತ್ರೇ. ೬ ತದನಂತರಂ.

ಸಮ್ಯಗ್ದೃಷ್ಟಿಪದಂ ಚಾಸ್ಮಾದ್ಬೋಧ್ಯಾಂತಂ ದ್ವಿರುದೀರಯೇತ್ ।
ಉಗ್ರತೇಜಃಪದಂ ಚೈವಂ ದಿಶಾಂ ಜಯಪದಂ ತಥಾ ॥ ೬೧ ॥

ನೇಮ್ಯಾದಿವಿಜಯಂ ಚೈವ ಕುರ್ಯಾತ್ಸ್ವಾಹಾಪದೋತ್ತರಮ್ ।
ಕಾಮ್ಯಮಂತ್ರಂ ಚ ತಂ ಬ್ರೂಯಾತ್ಪ್ರಾಗ್ವದಂತೇ ಪದೈಸ್ತ್ರಿಭಿಃ ॥ ೬೨ ॥

ಬಳಿಕ ಸಂಬುದ್ಧ್ಯಂತವಾದ ಸಮ್ಯಗ್ದೃಷ್ಟಿಪದವನ್ನೂ ಉಗ್ರತೇಜಃಪದವನ್ನೂ ದಿಶಾಂಜಯಪದವನ್ನೂ ನೇಮಿವಿಜಯಪದವನ್ನೂ ಎರಡೆರಡಾವರ್ತಿ ಉಚ್ಚರಿಸಿ ಕೊನೆಯಲ್ಲಿ ಸ್ವಾಹಾಪದವನ್ನು ಸೇರಿಸಬೇಕು. ಕೊನೆಯಲ್ಲಿ ಮೊದಲಿನಂತೆ ಮೂರುಪದಗಳಿಂದ ಆ ಕಾಮ್ಯಮಂತ್ರವನ್ನು ಹೇಳಬೇಕು.

ಚೂರ್ಣಿಃ ॥ ಸತ್ಯಜಾತಾಯ ಸ್ವಾಹಾ । ಅರ್ಹಜ್ಜಾತಾಯ ಸ್ವಾಹಾ । ಅನುಪಮೇಂದ್ರಾಯ ಸ್ವಾಹಾ । ವಿಜಯಾರ್ಚ್ಯಜಾತಾಯ ಸ್ವಾಹಾ । ನೇಮಿನಾಥಾಯ ಸ್ವಾಹಾ । ಪರಮಜಾತಾಯ ಸ್ವಾಹಾ । ಅನುಪಮಾಯ ಸ್ವಾಹಾ ॥ ಸಮ್ಯಗ್ದೃಷ್ಟೇ ೨ ಉಗ್ರತೇಜಃ ೨ ದಿಶಾಂಜಯ ೨ ನೇಮಿವಿಜಯ ೨ ಸ್ವಾಹಾ ॥ ಸೇವಾಫಲಂ ಷಟ್ಪರಮಸ್ಥಾನಂ ಭವತು । ಅಪಮೃತ್ಯುವಿನಾಶನಂ ಭವತು । ಸಮಾಧಿಮರಣಂ ಭವತು ॥ ಇತಿ ಪರಮರಾಜಾದಿಮಂತ್ರಃ ॥

ಮಂತ್ರಃ ಪರಮರಾಜಾದಿರ್ಮತೋಽಯಂ ಪರಮೇಷ್ಠಿನಾಮ್ ।
ಪರಂ ಮಂತ್ರಮಿತೋ ವಕ್ಷ್ಯೇ ಯಥಾಹ ಪರಮಾ ಶ್ರುತಿಃ ॥ ೬೩ ॥

ಇದು ಪರಮರಾಜಾದಿಮಂತ್ರವೆಂದು ಅಭಿಮತವಾಗಿದೆ. ಇಲ್ಲಿಂದ ಮುಂದೆ ಪಂಚಪರಮೇಷ್ಠಿಗಳ ಉತ್ಕೃಷ್ಟವಾದ ಮಂತ್ರವನ್ನು ಪರಮಾಗಮವು ಹೇಳಿರುವಂತೆ ಹೇಳುವೆನು.

॥ ಅಥ ಪರಮೇಷ್ಠಿಮಂತ್ರಃ ॥

ತತ್ರಾದೌ ಸತ್ಯಜಾತಾಯ ನಮಃಪದಮುದೀರಯೇತ್ ।
ವಾಚ್ಯಂ ತತೋಽರ್ಹಜ್ಜಾತಾಯ ನಮ ಇತ್ಯುತ್ತರಂ ಪದಮ್ ॥ ೬೪ ॥

ತತಃ ಪರಮಜಾತಾಯ ನಮಃಪದಮುದಾಹರೇತ್ ।
ಪರಮಾರ್ಹತಶಬ್ದಂ ಚ ಚತುರ್ಥ್ಯಂತಂ ನಮಃಪರಮ್ ॥ ೬೫ ॥

ಆ ಪರಮೇಷ್ಠಿಮಂತ್ರಗಳಲ್ಲಿ ಮೊದಲು 'ಸತ್ಯಜಾತಾಯ ನಮಃ' ಎಂಬ ಪದವನ್ನೂ ಬಳಿಕ 'ಅರ್ಹಜ್ಜಾತಾಯ ನಮಃ' ಎಂಬ ಪದವನ್ನೂ ಆಮೇಲೆ 'ಪರಮಜಾತಾಯ ನಮಃ' ಎಂಬ ಪದವನ್ನೂ ಚತುರ್ಥ್ಯಂತವೂ ಪರದಲ್ಲಿ ನಮಶ್ಶಬ್ದವುಳ್ಳುದೂ ಆದ ಪರಮಾರ್ಹತ – 'ಪರಮಾರ್ಹತಾಯ ನಮಃ' ಪದವನ್ನೂ ಉಚ್ಚರಿಸಬೇಕು.

ತತಃ ಪರಮರೂಪಾಯ ನಮಃ ಪರಮತೇಜಸೇ ।
ನಮ ಇತ್ಯುಭಯಂ ವಾಚ್ಯಂ ಪದಮಧ್ಯಾತ್ಮದರ್ಶಿಭಿಃ ॥ ೬೬ ॥

ಬಳಿಕ ಅಧ್ಯಾತ್ಮದರ್ಶಿಗಳು 'ಪರಮರೂಪಾಯ ನಮಃ' ಎಂದೂ 'ಪರಮತೇಜಸೇ ನಮಃ' ಎಂದೂ ಹೇಳಬೇಕು. ಉತ್ಕೃಷ್ಟರೂಪವುಳ್ಳವನಿಗೆ ಮತ್ತು ಉತ್ಕೃಷ್ಟತೇಜಸ್ಸುಳ್ಳವನಿಗೆ ನಮಸ್ಕಾರವೆಂದರ್ಥವು.

ಪರಮಾದಿಗುಣಾಯೇತಿ ಪದಂ ಚಾನ್ಯನ್ನಮೋಯುತಮ್ ।
ಪರಮಸ್ಥಾನಶಬ್ದಶ್ಚ ಚತುರ್ಥ್ಯಂತೋ ನಮೋನ್ವಿತಃ ॥ ೬೭ ॥

'ಪರಮಗುಣಾಯ ನಮಃ' ಎಂದೂ 'ಪರಮಸ್ಥಾನಾಯ ನಮಃ' ಎಂದೂ ಹೇಳಬೇಕು. ಉತ್ಕೃಷ್ಟಗುಣಗಳುಳ್ಳವನಿಗೆ ಮತ್ತು ಉತ್ಕೃಷ್ಟಸ್ಥಾನವುಳ್ಳವನಿಗೆ ನಮಸ್ಕಾರವೆಂದರ್ಥವು.

ಉದಾಹಾರ್ಯಂ ಕ್ರಮಂ ಜ್ಞಾತ್ವಾ ತತಃ ಪರಮಯೋಗಿನೇ ।
ನಮಃ ಪರಮಭಾಗ್ಯಾಯ ನಮ ಇತ್ಯುಭಯಂ ಪದಮ್ ॥ ೬೮ ॥

ತದನಂತರ ಕ್ರಮವನ್ನು ತಿಳಿದು ಪರಮಯೋಗಿಗೆ ನಮಸ್ಕಾರವು, ಉತ್ಕೃಷ್ಟಭಾಗ್ಯವುಳ್ಳವನಿಗೆ ನಮಸ್ಕಾರವು ಎಂದು ಈ ಎರಡು ವಾಕ್ಯಗಳನ್ನು ಹೇಳಬೇಕು.

ಪರಮರ್ದ್ಧಿಪದಂ ಚಾನ್ಯಚ್ಚತುರ್ಥ್ಯಂತಂ ನಮಃಪರಮ್ ।
ಸ್ಯಾತ್ಪರಮಪ್ರಸಾದಾಯ ನಮ ಇತ್ಯುತ್ತರಂ ಪದಮ್ ॥ ೬೯ ॥

ಆಮೇಲೆ ಉತ್ಕೃಷ್ಟವಾದ ಬುದ್ಧಿಯುಳ್ಳವನಿಗೆ ನಮಸ್ಕಾರವೆಂದೂ ಉತ್ಕೃಷ್ಟವಾದ ಅನುಗ್ರಹವುಳ್ಳವನಿಗೆ ನಮಸ್ಕಾರವೆಂದೂ ಹೇಳಬೇಕು. (ಪರಮರ್ದ್ಧಯೇ ನಮಃ, ಪರಮಪ್ರಸಾದಾಯ ನಮಃ).

ಸ್ಯಾತ್ಪರಮಕಾಂಕ್ಷಿತಾಯ ನಮ ಇತ್ಯತ ಉತ್ತರಮ್ ।
ಸ್ಯಾತ್ಪರಮವಿಜಯಾಯ ನಮ ಇತ್ಯುತ್ತರಂ ವಚಃ ॥ ೭೦ ॥

ಬಳಿಕ ಉತ್ಕೃಷ್ಟವಾದ ಕಾಂಕ್ಷೆ – ಮೋಕ್ಷೇಚ್ಛೆಯುಳ್ಳವನಿಗೆ ನಮಸ್ಕಾರವೆಂದೂ ಉತ್ಕೃಷ್ಟವಾದ ಜಯವುಳ್ಳವನಿಗೆ ನಮಸ್ಕಾರವೆಂದೂ ಹೇಳಬೇಕು. (ಪರಮಕಾಂಕ್ಷಿತಾಯ ನಮಃ, ಪರಮವಿಜಯಾಯ ನಮಃ).

ಸ್ಯಾತ್ಪರಮವಿಜ್ಞಾನಾಯ ನಮೋ ವಾಕ್ತದನಂತರಮ್ ।
ಸ್ಯಾತ್ಪರಮದರ್ಶನಾಯ ನಮಃಪದಮತಃ ಪರಮ್ ॥ ೭೧ ॥

ಆಮೇಲೆ ಪರಮೋತ್ಕೃಷ್ಟವಾದ ಜ್ಞಾನವುಳ್ಳವನಿಗೆ ನಮಸ್ಕಾರವೆಂಬ ವಚನವಿರುವುದು. ಬಳಿಕ ಉತ್ಕೃಷ್ಟದರ್ಶನವುಳ್ಳವನಿಗೆ ನಮಸ್ಕಾರವೆಂಬ ಪದವಿರುವುದು.

ತತಃ ಪರಮವೀರ್ಯಾಯ ಪದಂ ಚಾಸ್ಮಾನ್ನಮಃಪರಮ್ ।
ಪರಮಾದಿಸುಖಾಯೇತಿ ಪದಮಸ್ಮಾದನಂತರಮ್ ॥ ೭೨ ॥

ತರುವಾಯ ಉತ್ಕೃಷ್ಟಶಕ್ತಿಯುಳ್ಳವನಿಗೆ ನಮಸ್ಕಾರವೆಂಬ ಪದವೂ ಉತ್ಕೃಷ್ಟಸುಖವುಳ್ಳವನಿಗೆ ನಮಸ್ಕಾರವೆಂಬ ಪದವೂ ಇರುತ್ತವೆ.

ಸರ್ವಜ್ಞಾಯ ನಮೋವಾಕ್ಯಮರ್ಹತೇ ನಮ ಇತ್ಯಪಿ ।
ನಮೋ ನಮಃ ಪದಂ ಚಾಸ್ಮಾತ್ಸ್ಯಾತ್ಪರಂ ಪರಮೇಷ್ಠಿನೇ ॥ ೭೩ ॥

ಅನಂತರ ಸರ್ವಜ್ಞನಿಗೆ ನಮಸ್ಕಾರವು, ಅರ್ಹತ್ಪರಮೇಶ್ವರನಿಗೆ ನಮಸ್ಕಾರವು, ಪರಮೇಷ್ಠಿಗೆ ನಮಸ್ಕಾರವು ನಮಸ್ಕಾರವು ಎಂಬ ಪದಗಳಿರುತ್ತವೆ.

ಪರಮಾದಿಪದಾನ್ನೇತ್ರ ಇತ್ಯಸ್ಮಾಚ್ಚ ನಮೋ ನಮಃ ।
ಸಮ್ಯಗ್ದೃಷ್ಟಿಪದಂ ಚಾತೋ ಬೋಧ್ಯಾಂತಂ ದ್ವಿಃ ಪ್ರಯುಜ್ಯತಾಮ್ ॥

ಆಮೇಲೆ ಉತ್ಕೃಷ್ಟನಾದ ಮುಂದಾಳುವಿಗೆ (ಪರಮನೇತ್ರೇ) ನಮಸ್ಕಾರವು ನಮಸ್ಕಾರವು ಎಂಬ ಪದವನ್ನೂ ಎರಡಾವರ್ತಿ ಸಂಬುದ್ಧ್ಯಂತವಾದ ಸಮ್ಯಗ್ದೃಷ್ಟಿಪದವನ್ನೂ ಪ್ರಯೋಗಿಸಬೇಕು.

ದ್ವಿಃ[1]ಸ್ತಾಂ ತ್ರಿಲೋಕವಿಜಯಧರ್ಮಮೂರ್ತಿಪದೇ ತತಃ ।
ಧರ್ಮನೇಮಿಪದಂ ವಾಚ್ಯಂ ದ್ವಿಃ ಸ್ವಾಹೇತಿ ತತಃ ಪರಮ್ ॥ ೭೫ ॥

ಬಳಿಕ ಮೂರುಲೋಕಗಳನ್ನು ಜಯಿಸಿದವನೇ, ಧರ್ಮಮೂರ್ತಿಯೇ ಎಂಬೀ ಅರ್ಥಬೋಧಕಗಳಾದ ತ್ರಿಲೋಕವಿಜಯಪದವನ್ನೂ ಧರ್ಮಮೂರ್ತಿಪದವನ್ನೂ ಸಂಬುದ್ಧ್ಯಂತವಾಗಿ ಎರಡೆರಡಾವರ್ತಿ ಪ್ರಯೋಗಿಸಬೇಕು. ಅನಂತರದಲ್ಲಿ ಎರಡಾವರ್ತಿ 'ಧರ್ಮನೇಮಿ' ಪದವನ್ನು ಸಂಬುದ್ಧ್ಯಂತವಾಗಿ ಉಚ್ಚರಿಸಿ 'ಸ್ವಾಹಾ' ಪದವನ್ನು ಹೇಳಬೇಕು.

೧ ಭವೇತಾಂ.

**ಕಾಮ್ಯಮಂತ್ರಮತೋ ಬ್ರೂಯಾತ್ಪೂರ್ವವದ್ವಿಧಿವಿದ್ದ್ವಿಜಃ ।**
**ಕಾಮ್ಯಸಿದ್ಧಿಪ್ರಧಾನಾ ಹಿ ಸರ್ವೇ ಮಂತ್ರಾಃ ಸ್ಮೃತಾ ಬುಧೈಃ ॥ ೭೬ ॥**

ಆಮೇಲೆ ವಿಧಿಯನ್ನು ತಿಳಿದವನಾದ ದ್ವಿಜನು ಮೊದಲಿನಂತೆ ಕಾಮ್ಯಮಂತ್ರವನ್ನು ಹೇಳಬೇಕು. ಎಲ್ಲಾ ಮಂತ್ರಗಳೂ ಇಷ್ಟಸಿದ್ಧಿಪ್ರಧಾನವಾದುವುಗಳೆಂದು ವಿದ್ವಾಂಸರು ತಿಳಿಯುತ್ತಾರೆ.

**ಚೂರ್ಣಿಃ ॥ ಸತ್ಯಜಾತಾಯ ನಮಃ । ಅರ್ಹಜ್ಜಾತಾಯ ನಮಃ । ಪರಮಜಾತಾಯ ನಮಃ । ಪರಮಾರ್ಹತಾಯ ನಮಃ । ಪರಮರೂಪಾಯ ನಮಃ । ಪರಮತೇಜಸೇ ನಮಃ । ಪರಮಗುಣಾಯ ನಮಃ । ಪರಮಸ್ಥಾನಾಯ ನಮಃ । ಪರಮಯೋಗಿನೇ ನಮಃ । ಪರಮಭಾಗ್ಯಾಯ ನಮಃ । ಪರಮರ್ದ್ಧಯೇ ನಮಃ । ಪರಮಪ್ರಸಾದಾಯ ನಮಃ । [1]ಪರಮಕಾಂಕ್ಷಿತಾಯ ನಮಃ । ಪರಮವಿಜಯಾಯ ನಮಃ । ಪರಮವಿಜ್ಞಾನಾಯ ನಮಃ । ಪರಮದರ್ಶನಾಯ ನಮಃ । ಪರಮವೀರ್ಯಾಯ ನಮಃ । ಪರಮಸುಖಾಯ ನಮಃ । ಸರ್ವಜ್ಞಾಯ ನಮಃ । ಅರ್ಹತೇ ನಮಃ । ಪರಮೇಷ್ಠಿನೇ ನಮೋ ನಮಃ । ಪರಮನೇತ್ರೇ ನಮೋ ನಮಃ ॥ ಸಮ್ಯಗ್ದೃಷ್ಟೇ ೨ ತ್ರಿಲೋಕವಿಜಯ ೨ ಧರ್ಮಮೂರ್ತೇ ೨ ಧರ್ಮನೇಮೇ ೨ಸ್ವಾಹಾ ॥ ಸೇವಾಫಲಂ ಷಟ್ಪರಮಸ್ಥಾನಂ ಭವತು । ಅಪಮೃತ್ಯುವಿನಾಶನಂ ಭವತು । ಸಮಾಧಿಮರಣಂ ಭವತು ॥ ಇತಿ ಪರಮೇಷ್ಠಿಮಂತ್ರಃ ॥**

**ಏತೇ ತು [2]ಪೀಠಿಕಾಮಂತ್ರಾಃ ಸಪ್ತ ಜ್ಞೇಯಾ ದ್ವಿಜೋತ್ತಮೈಃ ।**
**ಏತೈಃ ಸಿದ್ಧಾರ್ಚನಂ ಕುರ್ಯಾದಾಧಾನಾದಿಕ್ರಿಯಾವಿಧೌ ॥ ೭೭ ॥**

ದ್ವಿಜೋತ್ತಮರು ಪೀಠಿಕಾಮಂತ್ರ, ಜಾತಿಮಂತ್ರ, ನಿಸ್ತಾರಕಮಂತ್ರ, ಮುನಿಮಂತ್ರ, ಸುರೇಂದ್ರಮಂತ್ರ, ಪರಮರಾಜಮಂತ್ರ, ಪರಮೇಷ್ಠಿಮಂತ್ರ ಇವು ಏಳು ಪೀಠಿಕಾಮಂತ್ರಗಳೆಂಬುದಾಗಿ ತಿಳಿಯಬೇಕು. ಈ ಮಂತ್ರಗಳಿಂದ ಗರ್ಭಾಧಾನಾದಿ ಕ್ರಿಯಾವಿಧಿಯಲ್ಲಿ ಸಿದ್ಧಪೂಜೆಯನ್ನು ಮಾಡಬೇಕು.

**ಕ್ರಿಯಾಮಂತ್ರಾಸ್ತ ಏತೇ ಸ್ಯುರಾಧಾನಾದಿಕ್ರಿಯಾವಿಧೌ ।**
**[3]ಸೂತ್ರೇ [4]ಗಣಧರೋದ್ಧಾರ್ಯೇ ಯಾಂತಿ ಸಾಧನಮಂತ್ರತಾಮ್ ॥**

ಈ ಮಂತ್ರಗಳು ಗರ್ಭಾಧಾನಾದಿ ಕ್ರಿಯಾವಿಧಿಯಲ್ಲಿ ಕ್ರಿಯಾಮಂತ್ರಗಳಾಗಿರುವುವು. ಗಣಧರರಿಂದ ಹೇಳಲ್ಪಟ್ಟ ಉಪಾಸಕಾಧ್ಯಾಯದಲ್ಲಿ ಇವು ಸಾಧನಮಂತ್ರಗಳ ಭಾವವನ್ನು ಹೊಂದುತ್ತವೆ. ಇವು ಸಾಧನಮಂತ್ರಗಳಾಗಿರುತ್ತವೆಂದು ಭಾವವು.

**ಸಂಧ್ಯಾಸ್ವಗ್ನಿತ್ರಯೇ ದೇವಪೂಜನೇ ನಿತ್ಯಕರ್ಮಣಿ ।**
**ಭವಂತ್ಯಾ[5]ಹುತಿಮಂತ್ರಾಶ್ಚ ತ ಏತೇ ವಿಧಿಸಾಧಿತಾಃ ॥ ೭೯ ॥**

ವಿಧಿಯಿಂದ ಸಾಧಿಸಲ್ಪಟ್ಟ ಈ ಮಂತ್ರಗಳು ಸಂಧ್ಯೆಗಳಲ್ಲಿ ಅಗ್ನಿತ್ರಯದಲ್ಲಿ ದೇವಪೂಜೆಯಲ್ಲಿ ಮತ್ತು ನಿತ್ಯಕರ್ಮದಲ್ಲಿ ಆಹುತಿಮಂತ್ರಗಳೂ ಆಗಿರುತ್ತವೆ.

**ಸಿದ್ಧಾರ್ಚಾ[6]ಸನ್ನಿಧೌ ಮಂತ್ರಾನ್ ಜಪೇದಷ್ಟೋತ್ತರಂ ಶತಮ್ ।**
**ಗಂಧಪುಷ್ಪಾಕ್ಷತಾರ್ಘ್ಯಾದಿ[7]ನಿವೇದನಪುರಃಸರಮ್ ॥ ೮೦ ॥**

ಸಿದ್ಧಪ್ರತಿಮೆಯ ಮುಂದೆ ಗಂಧ ಪುಷ್ಪ ಅಕ್ಷತ ಅರ್ಘ್ಯ ಮೊದಲಾದುವುಗಳ ಸಮರ್ಪಣಪೂರ್ವಕವಾಗಿ ನೂರೆಂಟುಸರ್ತಿ ಈ ಮಂತ್ರಗಳನ್ನು ಜಪಿಸಬೇಕು.

**ಸಿದ್ಧ[8]ವಿದ್ಯಸ್ತತೋ ಮಂತ್ರೈರೇಭಿಃ [9]ಕರ್ಮ ಸಮಾಚರೇತ್ ।**
**ಶುಕ್ಲವಾಸಾಃ ಶುಚಿರ್ಯಜ್ಞೋಪವೀತ್ಯವ್ಯಗ್ರಮಾನಸಃ ॥ ೮೧ ॥**

ಆಮೇಲೆ ಈ ಮಂತ್ರಗಳಿಂದ ಸಿದ್ಧವಾದ ಮಂತ್ರವಿದ್ಯೆಯುಳ್ಳ ದ್ವಿಜನು ಬಿಳೀಬಟ್ಟೆಯುಳ್ಳವನೂ ನಿರ್ಮಲನೂ ಯಜ್ಞೋಪವೀತವುಳ್ಳವನೂ ನಿಶ್ಚಲವಾದ ಮನಸ್ಸುಳ್ಳವನೂ ಆಗಿ ಗರ್ಭಾಧಾನಾದಿ ಕರ್ಮವನ್ನು ಮಾಡಬೇಕು.

**ತ್ರಯೋಗ್ನಯಃ [1]ಪ್ರಣೇಯಾಃ ಸ್ಯುಃ [2]ಕರ್ಮಾರಂಭೇ ದ್ವಿಜೋತ್ತಮೈಃ ।**
**ರತ್ನತ್ರಿತಯಸಂಕಲ್ಪಾದಗ್ನೀಂದ್ರಮುಕುಟೋದ್ಭವಾಃ ॥ ೮೨ ॥**

ದ್ವಿಜೋತ್ತಮರುಗಳಿಂದ ಗರ್ಭಾಧಾನಾದಿಕ್ರಿಯಾರಂಭದಲ್ಲಿ ಅಗ್ನಿಕುಮಾರೇಂದ್ರನ ಕಿರೀಟದಿಂದುಂಟಾದ ದಕ್ಷಿಣಾಗ್ನಿ ಗಾರ್ಹಪತ್ಯಾಗ್ನಿ ಆಹವನಿಯಾಗ್ನಿಗಳು ಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳೆಂಬ ಸಂಕಲ್ಪದಿಂದ ಸಂಸ್ಕಾರಮಾಡಲ್ಪಡತಕ್ಕುವುಗಳಾಗಿರುತ್ತವೆ. ದ್ವಿಜೋತ್ತಮರು ಅಗ್ನಿತ್ರಯಗಳನ್ನು ಸಂಸ್ಕಾರಮಾಡಬೇಕೆಂದು ಭಾವವು.

**ತೀರ್ಥಕೃದ್ಗಣಭೃ[3]ಚ್ಛೇಷಕೇವ[4]ಲ್ಯಂತ್ಯಮಹೋತ್ಸವೇ ।**
**ಪೂಜಾಂ[5]ಗತ್ವಂ ಸಮಾಸಾದ್ಯ ಪವಿತ್ರತ್ವಮುಪಾಗತಾಃ ॥ ೮೩ ॥**

**ಕುಂಡತ್ರಯೇ ಪ್ರಣೇತವ್ಯಾಸ್ತ್ರಯ ಏತೇ ಮಹಾಗ್ನಯಃ ।**
**ಗಾರ್ಹಪತ್ಯಾಹವನೀಯದಕ್ಷಿಣಾಗ್ನಿಪ್ರಸಿದ್ಧಯಃ ॥ ೮೪ ॥**

ತೀರ್ಥಂಕರರ ಗಣಧರರ ಮತ್ತು ಇತರ ಸಾಮಾನ್ಯಕೇವಲಿಗಳ ಪರಿನಿರ್ವಾಣ ಮಹೋತ್ಸವದಲ್ಲಿ ಪೂಜಾಸಾಧನತ್ವವನ್ನು ಹೊಂದಿ ಪವಿತ್ರತೆಯನ್ನು ಹೊಂದಿದುವುಗಳೂ ಗಾರ್ಹಪತ್ಯ ಆಹವನೀಯ ದಕ್ಷಿಣಾಗ್ನಿಗಳೆಂದು ಪ್ರಸಿದ್ಧಗಳೂ ಆದ ಈ ಮೂರು ಮಹಾಗ್ನಿಗಳನ್ನು ಮೂರು ಕುಂಡಗಳಲ್ಲಿ ಸಂಸ್ಕಾರಮಾಡಬೇಕು. ಹೊತ್ತಿಸಬೇಕೆಂದು ಭಾವವು.

**ಅಸ್ಮಿನ್ನಗ್ನಿತ್ರಯೇ ಪೂಜಾಂ ಮಂತ್ರೈಃ ಕುರ್ವನ್ ದ್ವಿಜೋತ್ತಮಃ ।**
**ಆಹಿತಾಗ್ನಿರಿತಿ ಜ್ಞೇಯೋ ನಿತ್ಯೇಜ್ಯಾ ಯಸ್ಯ ಸದ್ಮನಿ ॥ ೮೫ ॥**

ಯಾವನ ಮನೆಯಲ್ಲಿ ನಿತ್ಯಪೂಜೆಯಾಗುವುದೋ ಈ ಅಗ್ನಿತ್ರಯದಲ್ಲಿ ಮಂತ್ರಗಳಿಂದ ಪೂಜೆಯನ್ನು ಮಾಡುವವನಾದ ಆ ದ್ವಿಜೋತ್ತಮನು 'ಆಹಿತಾಗ್ನಿ'ಯೆಂದು ತಿಳಿಯತಕ್ಕವನು.

**[6]ಹವಿಷ್ಪಾಕೇ ಚ ಧೂಪೇ ಚ ದೀಪೋದ್ಬೋಧನಸದ್ವಿಧೌ ।**
**[7]ವಹ್ನೀನಾಂ ವಿನಿಯೋಗಃ ಸ್ಯಾದಮೀಷಾಂ ನಿತ್ಯಪೂಜನೇ ॥ ೮೬ ॥**

ನಿತ್ಯಪೂಜೆಯಲ್ಲಿ ಈ ಮೂರು ಅಗ್ನಿಗಳ ಉಪಯೋಗವು ಯಥಾಕ್ರಮವಾಗಿ ಚರುವನ್ನು ಬೇಯಿಸುವುದರಲ್ಲಿಯೂ ಧೂಪದಲ್ಲಿಯೂ ದೀಪವನ್ನು ಹಚ್ಚುವ ವಿಧಾನದಲ್ಲಿಯೂ ಆಗುವುದು.

**ಪ್ರಯತ್ನೇನಾಭಿರಕ್ಷ್ಯಂ ಸ್ಯಾದಿದಮಗ್ನಿತ್ರಯಂ ಗೃಹೇ ।**
**ನೈವ ದಾತವ್ಯಮನ್ಯೇಭ್ಯಸ್ತೇನ್ಯೇ ಯೇ ಸ್ಯುರಸಂಸ್ಕೃತಾಃ ॥ ೮೭ ॥**

ಈ ಮೂರು ಅಗ್ನಿಗಳನ್ನು ಮನೆಯಲ್ಲಿ ಪ್ರಯತ್ನದಿಂದ ರಕ್ಷಿಸಬೇಕು. ಗರ್ಭಾಧಾನಾದಿಸಂಸ್ಕಾರಗಳಿಲ್ಲದಿರುವವರಾದ ಬೇರೆಯವರಿಗೆ ಕೊಡಲೇಬಾರದು.

**ನ ಸ್ವತೋಗ್ನೇಃ ಪವಿತ್ರತ್ವಂ [8]ದೇವತಾಭೂಯಮೇವ ವಾ ।**
**ಕಿಂ ತ್ವರ್ಹದ್ದಿವ್ಯಮೂರ್ತೀಜ್ಯಾಸಂಬಂಧಾತ್ಪಾವನೋನಲಃ ॥ ೮೮ ॥**

ಬೆಂಕಿಗೆ ಸ್ವತಃ ಪವಿತ್ರತೆಯೂ ದೇವತ್ವವೂ ಇಲ್ಲ. ಆದರೆ ಅರ್ಹತ್ಪರಮೇಶ್ವರನ ದಿವ್ಯಮೂರ್ತಿಯ ಪೂಜಾಸಂಬಂಧದಿಂದ ಅಗ್ನಿಯು ಪವಿತ್ರವೆನಿಸಿರುತ್ತದೆ.

---

೧ ಪರಮಕಾಂಕ್ಷ್ಯಾಯೇತ್ಯಪಿ ಪಾಠಃ. ೨ ಸತ್ಯಜಾತಾಯೇತಿ ಪೀಠಿಕಾದಯಃ. ೩ ಉಪಾಸಕಾಧ್ಯಾಯೇ. ೪ ಗಣಧರೈಃ ಪ್ರೋಕ್ತೇ. ೫ ಅನ್ನಾಹುತಿಮಂತ್ರಾಃ. ೬ ಅಗ್ರೇ. ೭ ಸಮರ್ಪಣ. ೮ ಮಂತ್ರಃ. ೯ ಆಧಾನಾದಿ ಕರ್ಮ.

೧ ಸಂಸ್ಕಾರ್ಯಾಃ. ೨ ಆಧಾನಾದಿಕ್ರಿಯಾರಂಭೇ. ೩ ಮುಂಡಕೇವಲಿ. ೪ ಪರಿನಿರ್ವಾಣ ಮಹೋತ್ಸವೇ. ೫ ಕಾರಣತ್ವಂ. ೬ ಚರುಪಚನೇ. ೭ ಗಾರ್ಹಪತ್ಯಾದೀನಾಮಗ್ನೀನಾಂ ಯಾಥಾಸಂಖ್ಯೇನ ಹವಿಷ್ಪಾಕಾದಿಷು ವಿನಿಯೋಗಃ ಸ್ಯಾತ್. ೮ ದೇವತ್ವಂ.

ತತಃ ಪೂಜಾಂಗತಾ[೧]ಮಸ್ಯ ಮತ್ವಾರ್ಚಂತಿ ದ್ವಿಜೋತ್ತಮಾಃ ।
ನಿರ್ವಾಣಕ್ಷೇತ್ರಪೂಜಾವ[೨]ತ್ತತ್ಪೂಜಾತೋ ನ ದೂಷ್ಯತಿ ॥ ೮೯ ॥

ಆದುದರಿಂದ ದ್ವಿಜೋತ್ತಮರು ಈ ಅಗ್ನಿಯ ಪೂಜಾಸಾಧಕತ್ವವನ್ನು ತಿಳಿದು ಇದನ್ನು ಪೂಜಿಸುತ್ತಾರೆ. ಈ ಕಾರಣದಿಂದ ಅಗ್ನಿತ್ರಯಪೂಜೆಯು, ಸಮ್ಮೇದ ಪರ್ವತಾದಿ ನಿರ್ವಾಣಕ್ಷೇತ್ರಗಳ ಪೂಜೆಯಂತೆ, ದೋಷವೆನಿಸುವುದಿಲ್ಲ.

ವ್ಯವಹಾರನಯಾಪೇಕ್ಷಾ ತಸ್ಯೇಷ್ಟಾ ಪೂಜ್ಯತಾ ದ್ವಿಜೈಃ ।
ಜೈನೈ[೩]ರಧ್ಯವಹಾರ್ಯೋಽಯಂ ನಯೋಽದ್ಯತ್ವೇ[೪]ಗ್ರಜನ್ಮನಃ ॥ ೯೦ ॥

ಆ ಅಗ್ನಿಯ ಪೂಜ್ಯತೆಯು ವ್ಯವಹಾರನಯಾಪೇಕ್ಷೆಯುಳ್ಳದಾಗಿ ದ್ವಿಜರಿಗೆ ಅಭಿಮತವಾಗಿದೆ. ವಿಪ್ರನ ಈ ವ್ಯವಹಾರನಯವು ಈ ಕಾಲದಲ್ಲಿ ಜೈನರಿಂದ ಅನುಷ್ಠಿಸತಕ್ಕುದಾಗಿದೆ.

ಸಾಧಾರಣಾಸ್ತ್ವಿ[೫]ಮೇ ಮಂತ್ರಾಃ ಸರ್ವತ್ರೈವ ಕ್ರಿಯಾವಿಧೌ ।
ಯಥಾಸಂಭವ[೬]ಮುನ್ನೇಷ್ಯೇ ವಿಶೇಷವಿಷಯಾಂಶ್ಚ [೭]ತಾನ್ ॥ ೯೧ ॥

ಕ್ರಿಯಾವಿಧಿಯಲ್ಲಿ ಎಲ್ಲಾ ಸ್ಥಳಗಳಲ್ಲಿಯೂ ಈ ಸತ್ಯಜಾತಾದಿ ಮಂತ್ರಗಳು ಸಾಮಾನ್ಯವಾಗಿರುತ್ತವೆ. ವಿಶೇಷವಿಷಯಗಳುಳ್ಳ ಆ ಮಂತ್ರಗಳನ್ನು ಆಯಾ ಸಂದರ್ಭದಲ್ಲಿ ಹೇಳುವೆನು.

॥ ಅಥ ಗರ್ಭಾಧಾನಮಂತ್ರಃ ॥

ಸಜ್ಜಾತಿಭಾಗೀ ಭವ ಸದ್ಗೃಹಭಾಗೀ ಭವೇತಿ ಚ ।
ಪದದ್ವಯಮುದೀರ್ಯಾದೌ [೮]ಪದಾನೀಮಾನ್ಯತಃ ಪಠೇತ್ ॥ ೯೨ ॥

"ಉತ್ತಮಜಾತಿಗೆ ಪಾತ್ರನಾಗು. ಉತ್ತಮಗೃಹಸ್ಥಧರ್ಮಕ್ಕೆ ಪಾತ್ರನಾಗು" ಈ ಎರಡು ಪದಗಳನ್ನು ಮೊದಲು ಹೇಳಿ ಬಳಿಕ ಈ ಮುಂದೆ ಹೇಳುವ ಪದಗಳನ್ನು ಪಠಿಸಬೇಕು.

ಆದೌ ಮುನೀಂದ್ರಭಾಗೀತಿ ಭವೇತ್ಯಂತೇ ಪದಂ ಭವೇತ್ ।
ಸುರೇಂದ್ರಭಾಗೀ ಪರಮರಾಜ್ಯಭಾಗೀತಿ ಚ ದ್ವಯಮ್ ॥ ೯೩ ॥

ಮೊದಲು 'ಮುನೀಂದ್ರಭಾಗೀ – ಮುನೀಶ್ವರಪದವಿಗೆ ಪಾತ್ರನಾಗಿ' ಎಂಬ ಪದವೂ ಕೊನೆಯಲ್ಲಿ 'ಭವ – ಆಗು ಎಂಬ ಪದವೂ ಇರುತ್ತವೆ. ಬಳಿಕ ಸುರೇಂದ್ರಪದವಿಗೆ ಪಾತ್ರನಾಗು, ಸಾಮ್ರಾಜ್ಯಪದವಿಗೆ ಪಾತ್ರನಾಗು ಎಂಬ ಅರ್ಥಬೋಧಕಪದಗಳಿರುತ್ತವೆ.

ಆರ್ಹಂತ್ಯಭಾಗೀ ಭವೇತಿ ಪದಮಸ್ಮಾದನಂತರಮ್ ।
ತತಃ ಪರಮನಿರ್ವಾಣಭಾಗೀ ಭವ ಪದಂ ಭವೇತ್ ॥ ೯೪ ॥

ಅನಂತರದಲ್ಲಿ ಅರ್ಹತ್ಪರಮೇಶ್ವರಪದವಿಗೆ ಪಾತ್ರನಾಗು, ಪರಮಕೈವಲ್ಯಕ್ಕೆ ಪಾತ್ರನಾಗು ಎಂಬೀ ಅರ್ಥಬೋಧಕವಾದ ಪದಗಳಿರುವುವು.

ಆಧಾನೇ ಮಂತ್ರ ಏಷಃ ಸ್ಯಾ[೯]ತ್ಪೂರ್ವಮಂತ್ರಪುರಸ್ಸರಃ ।
[೧೦]ವಿನಿಯೋಗಶ್ಚ ಮಂತ್ರಾಣಾಂ ಯಥಾಮ್ನಾಯಂ ಪ್ರದರ್ಶಿತಃ ॥ ೯೫ ॥

ಗರ್ಭಾಧಾನಕ್ರಿಯೆಯಲ್ಲಿ ಪೀಠಿಕಾಮಂತ್ರಾದಿಪೂರ್ವಕವಾದ ಈ ಮಂತ್ರವಿರುವುದು. ಮಂತ್ರಗಳ ಪ್ರಯೋಗವಾದರೋ ಆಮ್ನಾಯಾನುಸಾರವಾಗಿ ತೋರಿಸಲ್ಪಟ್ಟಿದೆ.

ಚೂರ್ಣಿಃ ॥ ಸಜ್ಜಾತಿಭಾಗೀ ಭವ । ಸದ್ಗೃಹಭಾಗೀ ಭವ । ಮುನೀಂದ್ರಭಾಗೀ ಭವ । ಸುರೇಂದ್ರಭಾಗೀ ಭವ । ಪರಮರಾಜ್ಯಭಾಗೀ ಭವ । ಆರ್ಹಂತ್ಯಭಾಗೀ ಭವ । ಪರಮನಿರ್ವಾಣ ಭಾಗೀ ಭವ ॥ ಇತಿ ಆಧಾನ ಮಂತ್ರಃ ॥

೧ ಅಗ್ನೇಃ. ೨ ಅಗ್ನಿತ್ರಯಪೂಜಾ. ೩ ವ್ಯವಹರ್ತುಂ ಯೋಗ್ಯಃ. ೪ ವಿಪ್ರಸ್ಯ. ೫ ಸತ್ಯಜಾತಾದಯಃ. ೬ ವಕ್ಷ್ಯೇ. ೭ ಮಂತ್ರಾನ್. ೮ ವಕ್ಷ್ಯಮಾಣಾನಿ. ೯ ಪೀಠಿಕಾಮಂತ್ರಾದಿಪುರಸ್ಸರಃ. ೧೦ ಪ್ರಯೋಗ-ಉಪಹಾರಕತ್ವಂ.

॥ ಅಥ ಪ್ರೀತಿಮಂತ್ರಃ ॥

ಸ್ಯಾ[೧]ತ್ಪ್ರೀತಿಮಂತ್ರಸ್ತ್ರೈಲೋಕ್ಯನಾಥೋ ಭವಪದಾದಿಕಃ ।
ತ್ರೈಕಾಲ್ಯಜ್ಞಾನೀ ಭವ ತ್ರಿರತ್ನಸ್ವಾಮೀ ಭವೇತ್ಯಯಮ್ ॥ ೯೬ ॥

ಈ ಪ್ರೀತಿಮಂತ್ರವು "ಮೂರುಲೋಕಗಳಿಗೆ ಸ್ವಾಮಿಯಾಗು. ಮೂರುಕಾಲಗಳ ಜ್ಞಾನವುಳ್ಳವನಾಗು. ಸಮ್ಯಗ್ದರ್ಶನ, ಜ್ಞಾನ, ಚಾರಿತ್ರಗಳೆಂಬ ಮೂರು ರತ್ನಗಳಿಗೆ ಸ್ವಾಮಿಯಾಗು" ಎಂಬೀ ಅರ್ಥಬೋಧಕವಾದ ಪದಗಳುಳ್ಳುದಾಗಿರುವುದು.

ಚೂರ್ಣಿಃ ॥ ತ್ರೈಲೋಕ್ಯನಾಥೋ ಭವ । ತ್ರೈಕಾಲ್ಯಜ್ಞಾನೀ ಭವ । ತ್ರಿರತ್ನ ಸ್ವಾಮೀ ಭವ ॥ ಇತಿ ಪ್ರೀತಿಮಂತ್ರಃ ॥

॥ ಅಥ ಸುಪ್ರೀತಿಮಂತ್ರಃ ॥

[೨]ಮಂತ್ರೋಽವತಾರಕಲ್ಯಾಣಭಾಗೀಭವಪದಾದಿಕಃ ।
ಸುಪ್ರೀತೌ ಮಂದರೇಂದ್ರಾಭಿಷೇಕಕಲ್ಯಾಣವಾಕ್ಪರಃ ॥ ೯೭ ॥

ಭಾಗೀಭವಪದೋಪೇತಸ್ತತೋ ನಿಷ್ಕ್ರಾಂತಿವಾಕ್ಪರಃ ।
ಕಲ್ಯಾಣಮಧ್ಯಮೋ ಭಾಗೀ ಭವೇತ್ಯೇತೇನ ಯೋಜಿತಃ ॥ ೯೮ ॥

ಸುಪ್ರೀತಿಕ್ರಿಯೆಯಲ್ಲಿ ಸ್ವರ್ಗಾವತಾರಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ ಮಂತ್ರವು ಮೊದಲನೆಯದು. ಮಹಾಮೇರುಪರ್ವತದಲ್ಲಿ ಜನ್ಮಾಭಿಷೇಕಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ ಮಂತ್ರವು ಎರಡನೆಯದು. ಆಮೇಲೆ ದೀಕ್ಷೆಗೆ ಹೊರಡುವ ಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ ನಿಷ್ಕ್ರಾಂತಿವಚನಾನಂತರದಲ್ಲಿ ಮಧ್ಯದಲ್ಲಿ ಕಲ್ಯಾಣ ಪದವುಳ್ಳುದೂ 'ಭಾಗೀ ಭವ' ಪದಸಹಿತವೂ ಆದ ಮಂತ್ರವಿರುವುದು.

ತತಶ್ಚಾರ್ಹಂತ್ಯಕಲ್ಯಾಣಭಾಗೀ ಭವಪದಾನ್ವಿತಃ ।
ತತಃ ಪರಮನಿರ್ವಾಣಕಲ್ಯಾಣಪದಸಂಗತಃ ॥ ೯೯ ॥

ಬಳಿಕ ಕೊನೆಯಲ್ಲಿ 'ಭಾಗೀ ಭವ' ಎಂಬ ಪದವುಳ್ಳ ಅರ್ಹತ್ಪರಮೇಶ್ವರ ಪದವಿಯ ಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ ಪದ ಸಹಿತಮಂತ್ರವೂ ಆಮೇಲೆ ಪರಮಕೈವಲ್ಯಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ ಮಂತ್ರವೂ ಇರುತ್ತವೆ.

ಭಾಗೀಭವಪದಾಂತಶ್ಚ ಕ್ರಮಾದ್ವಾಚ್ಯೋ ಮನೀಷಿಭಿಃ ।
ಧೃತಿಮಂತ್ರಮಿತೋ ವಕ್ಷ್ಯೇ ಪ್ರೀತ್ಯಾ ಶೃಣುತ ಭೋ ದ್ವಿಜಾಃ ॥ ೧೦೦ ॥

ವಿದ್ವಾಂಸರು ಕ್ರಮವಾಗಿ ಈ ಮಂತ್ರಗಳನ್ನುಚ್ಚರಿಸಬೇಕು. ॥ ಇತಿ ಸುಪ್ರೀತಿ ಮಂತ್ರಃ ॥ ಇಲ್ಲಿಂದ ಮುಂದೆ ಧೃತಿಮಂತ್ರವನ್ನು ಹೇಳುವೆನು. ಎಲೈ ದ್ವಿಜರೇ ! ಪ್ರೀತಿಯಿಂದ ಕೇಳಿರಿ.

॥ ಅಥ ಧೃತಿಕ್ರಿಯಾಮಂತ್ರಃ ॥

ಆಧಾನಮಂತ್ರ ಏವಾ[೩]ತ್ರ ಸರ್ವತ್ರಾ[೪]ಹಿತದಾತ್ರವಾಕ್ ।
ಮಧ್ಯೇ ಯಥಾಕ್ರಮಂ ವಾಚ್ಯೋ ನಾನ್ಯೋ ಭೇದೋ[೫]ತ್ರ ಕಶ್ಚನ ॥

ಈ ಧೃತಿಕ್ರಿಯೆಯಲ್ಲಿ ಎಲ್ಲಾಕಡೆಯಲ್ಲಿಯೂ ಮಧ್ಯದಲ್ಲಿ ದಾತ್ರಶಬ್ದಯುಕ್ತವಾದ ಆಧಾನಮಂತ್ರವೇ ಯಥಾಕ್ರಮವಾಗಿ ಹೇಳತಕ್ಕುದಾಗಿದೆ. ಈ ಧೃತಿಕ್ರಿಯೆಯಲ್ಲಿ ಬೇರೆ ಯಾವ ಭೇದವೂ ಇಲ್ಲ.

೧ ಪ್ರೀತಿಕ್ರಿಯಾಮಂತ್ರಃ. ೨ ಅವತಾರಕಲ್ಯಾಣಾದಿಪರಮನಿರ್ವಾಣಪದಪರ್ಯಂತಾನಾಂ ಸರ್ವ ಪದಾನಾಂ ಮಂತ್ರ ಇತಿ ಪದಂ ವಿಶೇಷ್ಯಪದಂ ಭವ. ೩ ಧೃತಿಕ್ರಿಯಾಯಾಂ. ೪ ಯುಕ್ತದಾತ್ರಶಬ್ದಃ. ೫ ಧೃತಿಕ್ರಿಯಾಯಾಂ.

ಚೂರ್ಣಿಃ ॥ ಸಜ್ಜಾತಿದಾತೃಭಾಗೀ ಭವ । ಸದ್ಗೃಹದಾತೃಭಾಗೀ ಭವ । ಮುನೀಂದ್ರದಾತೃ ಭಾಗೀ ಭವ । ಸುರೇಂದ್ರದಾತೃಭಾಗೀ ಭಾವ । ಪರಮರಾಜ್ಯದಾತೃಭಾಗೀ ಭವ । ಆರ್ಹಂತ್ಯದಾತೃಭಾಗೀ ಭವ । ಪರಮನಿರ್ವಾಣದಾತೃಭಾಗೀ ಭವ ॥ ಇತಿ ಧೃತಿಕ್ರಿಯಾಮಂತ್ರಃ ॥

॥ ಅಥ ಮೋದಕ್ರಿಯಾಮಂತ್ರಃ ॥

**ಮಂತ್ರೋ ಮೋದಕ್ರಿಯಾಯಾಂ ಚ ಮತೋ[೧]ಯಂ ಮುನಿಸತ್ತಮೈಃ ।**
**ಪೂರ್ವಂ ಸಜ್ಜಾತಿಕಲ್ಯಾಣಭಾಗೀಭವಪದಂ ಭವೇತ್ ॥ ೧೦೨ ॥**

ಮೋದಕ್ರಿಯೆಯಲ್ಲಿಯೂ ಈ ಮುಂದೆ ಹೇಳುವ ಮಂತ್ರವು ಮುನಿಶ್ರೇಷ್ಠರಿಂದ ಅಭಿಮತವಾಗಿದೆ. ಮೊದಲು ಉತ್ತಮಜಾತಿರೂಪವಾದ ಮಂಗಳಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಸಜ್ಜಾತಿಕಲ್ಯಾಣಭಾಗೀ ಭವ" ಎಂಬ ಪದವಿರುವುದು.

**ತತಃ ಸದ್ಗೃಹಕಲ್ಯಾಣಭಾಗೀಭವಪದಂ ಪಠೇತ್ ।**
**ತತೋ ವೈವಾಹಕಲ್ಯಾಣಭಾಗೀಭವಪದಂ ಮತವ್ ॥ ೧೦೩ ॥**

ಬಳಿಕ ಉತ್ತಮಗೃಹಸ್ಥಪದರೂಪವಾದ ಮಂಗಳಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಸದ್ಗೃಹಕಲ್ಯಾಣಭಾಗೀ ಭವ" ಎಂಬ ಪದವನ್ನೂ ಆಮೇಲೆ ವಿವಾಹಸಂಬಂಧವಾದ ಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ವೈವಾಹಕಲ್ಯಾಣಭಾಗೀ ಭವ" ಎಂಬ ಪದವನ್ನೂ ಪಠಿಸಬೇಕು.

**ತತೋ ಮುನೀಂದ್ರಕಲ್ಯಾಣಭಾಗೀಭವಪದಂ ಸ್ಮೃತಮ್ ।**
**ಪುನಃ ಸುರೇಂದ್ರಕಲ್ಯಾಣಭಾಗೀಭವಪದಾತ್ಪರಮ್ ॥ ೧೦೪ ॥**

**ಮಂದರಾಭಿಷೇಕಕಲ್ಯಾಣಭಾಗೀತಿ ಚ ಭವೇತಿ ಚ ।**
**ತಸ್ಮಾಚ್ಚ ಯೌವರಾಜ್ಯಾದಿಕಲ್ಯಾಣಪದಸಂಯುತಮ್ ॥ ೧೦೫ ॥**

**ಭಾಗೀಭವಪದಂ ವಾಚ್ಯಂ ಮಂತ್ರಯೋಗವಿಶಾರದೈಃ ।**
**ಸ್ಯಾನ್ಮಹಾರಾಜ್ಯಕಲ್ಯಾಣಭಾಗೀಭವಪದಂ ಪರಮ್ ॥ ೧೦೬ ॥**

ಆಮೇಲೆ ಮುನೀಶ್ವರಪದವಿಯ ಮಂಗಳಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಮುನೀಂದ್ರಕಲ್ಯಾಣಭಾಗೀ ಭವ" ಎಂಬ ಪದವೂ ಬಳಿಕ ದೇವೇಂದ್ರ ಪದವಿಯ ಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಸುರೇಂದ್ರ ಕಲ್ಯಾಣಭಾಗೀ ಭವ" ಎಂಬ ಪದವೂ ಸ್ಮರಿಸಲ್ಪಟ್ಟಿರುತ್ತವೆ. ಅನಂತರ ಮಂದರಾಭೀಷೇಕಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಮಂದರಾಭಿಷೇಕಕಲ್ಯಾಣಭಾಗೀ ಭವ" ಎಂಬ ಪದವೂ ಬಳಿಕ ಯುವರಾಜ ಪದವಿಯೇ ಮೊದಲಾದ ಮಂಗಳಗಳಿಗೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಯೌವರಾಜ್ಯಾದಿಕಲ್ಯಾಣಭಾಗೀ ಭವ" ಎಂಬ ಪದವೂ ಆಮೇಲೆ ಮಹಾರಾಜ ಪದವಿಯ ಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಮಹಾರಾಜ್ಯ ಕಲ್ಯಾಣಭಾಗೀ ಭವ" ಎಂಬ ಪದವೂ ಮಂತ್ರ ಪ್ರಯೋಗ ನಿಪುಣರಿಂದ ಹೇಳತಕ್ಕುವುಗಳಾಗಿರುತ್ತವೆ.

**ಭೂಯಃ ಪರಮರಾಜ್ಯಾದಿಕಲ್ಯಾಣೋ[೨]ಪಹಿತಂ ಮತಮ್ ।**
**ಭಾಗೀಭವೇತ್ಯಥಾರ್ಹಂತ್ಯಕಲ್ಯಾಣೇನ ಚ ಯೋಜಿತಮ್ ॥ ೧೦೭ ॥**

ತರುವಾಯ ಉತ್ಕೃಷ್ಟರಾಜಪದವಿಯೇ ಮೊದಲಾದ ಮಂಗಳಗಳಿಗೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಪರಮರಾಜ್ಯಾದಿಕಲ್ಯಾಣಭಾಗೀ ಭವ" ಎಂಬ ಪದವನ್ನೂ ಆರ್ಹತ್ಪರಮೇಶ್ವರಪದವಿಯ ಮಹೋತ್ಸವಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ "ಆರ್ಹಂತ್ಯಕಲ್ಯಾಣಭಾಗೀ ಭವ" ಎಂಬ ಪದವನ್ನೂ ಹೇಳಬೇಕು.

೧ ವಕ್ಷ್ಯಮಾಣಃ. ೨ ಸಹಿತಂ.

ಚೂರ್ಣಿಃ ॥ ಸಜ್ಜಾತಿಕಲ್ಯಾಣಭಾಗೀ ಭವ । ಸದ್ಗೃಹಕಲ್ಯಾಣಭಾಗೀ ಭವ । ವೈವಾಹಕಲ್ಯಾಣಭಾಗೀ ಭವ । ಮುನೀಂದ್ರಕಲ್ಯಾಣಭಾಗೀ ಭವ । ಸುರೇಂದ್ರಕಲ್ಯಾಣಭಾಗೀ ಭವ । ಮಂದರಾಭಿಷೇಕಕಲ್ಯಾಣಭಾಗೀ ಭವ । ಯೌವರಾಜ್ಯಕಲ್ಯಾಣಭಾಗೀ ಭವ । ಮಹಾರಾಜ್ಯಕಲ್ಯಾಣಭಾಗೀ ಭವ । ಪರಮರಾಜ್ಯಕಲ್ಯಾಣಭಾಗೀ ಭವ । ಆರ್ಹಂತ್ಯಕಲ್ಯಾಣಭಾಗೀ ಭವ ॥ ಇತಿ ಮೋದಕ್ರಿಯಾಮಂತ್ರಃ ॥

॥ ಅಥ ಪ್ರಿಯೋದ್ಭವಮಂತ್ರಃ ॥

**ಪ್ರಿಯೋದ್ಭವೇ ಚ ಮಂತ್ರೋ[೧]ಯಂ ಸಿದ್ಧಾರ್ಚನಪುರಸ್ಸರಃ ।**
**ದಿವ್ಯನೇಮಿವಿಜಯಾಯ ಪದಾತ್ಪರಮನೇಮಿಭಾಕ್ ॥ ೧೦೮ ॥**

**ವಿಜಯಾಯೇತ್ಯಥಾರ್ಹಂತ್ಯನೇಮ್ಯಾದಿವಿಜಯಾಯ ಚ ।**
**ಯುಕ್ತೋ ಮಂತ್ರಾಕ್ಷರೈರೇಭಿಃ ಸ್ವಾಹಾಂತಃ ಸಮ್ಮತೋ ದ್ವಿಜೈಃ ॥ ೧೦೯ ॥**

ಪ್ರಿಯೋದ್ಭವದಲ್ಲಿಯೂ ಸಿದ್ಧಾರ್ಚನಪೂರ್ವಕವಾದ ಈ ಮುಂದೆ ಹೇಳುವ ಮಂತ್ರವನ್ನು ಪಠಿಸಬೇಕು. ಆ ಮಂತ್ರಗಳಿವು:– ದಿವ್ಯನೇಮಿವಿಜಯಾಯ ಸ್ವಾಹಾ । ಪರಮನೇಮಿವಿಜಯಾಯ ಸ್ವಾಹಾ । ಆರ್ಹಂತ್ಯನೇಮಿವಿಜಯಾಯ ಸ್ವಾಹಾ.

ಚೂರ್ಣಿಃ ॥ ದಿವ್ಯನೇಮಿವಿಜಯಾಯ ಸ್ವಾಹಾ । ಪರಮನೇಮಿವಿಜಯಾಯ ಸ್ವಾಹಾ । ಆರ್ಹಂತ್ಯನೇಮಿವಿಜಯಾಯ ಸ್ವಾಹಾ ॥ ಇತಿ ಪ್ರಿಯೋದ್ಭವಮಂತ್ರಃ ॥

**ಜನ್ಮಸಂಸ್ಕಾರಮಂತ್ರೋ[೨]ಯ[೩]ಮೇತೇನಾರ್ಭಕ[೪]ಮಾದಿತಃ ।**
**ಸಿದ್ಧಾಭಿಷೇಕಗಂಧಾಂಬುಸಂಸಿಕ್ತಂ ಶಿರಸಿ ಸ್ಪೃಶೇತ್ ॥ ೧೧೦ ॥**

ಈ ಮುಂದೆ ಹೇಳಲ್ಪಡುವ ಜನ್ಮಸಂಸ್ಕಾರಮಂತ್ರದಿಂದ ಸಿದ್ಧಾಭಿಷೇಕದ ಗಂಧೋದಕದಿಂದ ಸೇಚನೆಮಾಡಲ್ಪಟ್ಟ ಮಗುವನ್ನು ಮೊದಲು ಮಸ್ತಕದಲ್ಲಿ ಸ್ಪರ್ಶಿಸಬೇಕು. ಜನ್ಮಸಂಸ್ಕಾರಮಂತ್ರವನ್ನು ಹೇಳಿ ಮಗುವಿನ ತಲೆಯಮೇಲೆ ಗಂಧೋದಕವನ್ನು ಸೇಚನೆಮಾಡಿ ತಲೆಯನ್ನು ಸ್ಪರ್ಶಿಸಬೇಕೆಂದು ಭಾವವು.

**ಕುಲಜಾತಿವಯೋರೂಪಗುಣೈಃ ಶೀಲ[೫]ಪ್ರಜಾನ್ವಯೈಃ ।**
**ಭಾಗ್ಯಾವಿಧವತಾಸೌಮ್ಯಮೂರ್ತಿತ್ವೈಃ [೬]ಸಮಧಿಷ್ಠಿತಾ ॥ ೧೧೧ ॥**

**ಸಮ್ಯಗ್ದೃಷ್ಟಿಸ್ತವಾಂಬೇಯಮತ[೭]ಸ್ತ್ವಮಪಿ ಪುತ್ರಕ ।**
**ಸಂಪ್ರೀತಿಮಾಪ್ನುಹಿ ತ್ರೀಣಿ ಪ್ರಾಪ್ಯ [೮]ಚಕ್ರಾಣ್ಯನುಕ್ರಮಾತ್ ॥ ೧೧೨ ॥**

"ಎಲೈ ಪುತ್ರನೇ ! ಕುಲ, ಜಾತಿ, ವಯಸ್ಸು, ರೂಪ, ಗುಣ, ಶೀಲ, ಪುತ್ರ, ಪರಂಪರೆ, ಅಖಂಡೈಶ್ವರ್ಯ, ಸೌಮ್ಯಾಕಾರತ್ವ ಈ ಗುಣಗಳಿಂದ ಯುಕ್ತಳಾಗಿರುವ ಈ ನಿನ್ನ ತಾಯಿಯು ಸಮ್ಯಗ್ದೃಷ್ಟಿಯಾಗಿದ್ದಾಳೆ. ಆದುದರಿಂದ ನೀನೂ ದಿವ್ಯಚಕ್ರ ವಿಜಯಚಕ್ರಪರಮಚಕ್ರಗಳೆಂಬ ಮೂರು ಚಕ್ರಗಳನ್ನು ಅನುಕ್ರಮದಿಂದ ಪಡೆದು ಸಂತೋಷವನ್ನು ಹೊಂದು."

**ಇತ್ಯಂಗಾನಿ ಸ್ಪೃಶೇದಸ್ಯ ಪ್ರಾಯಃ [೯]ಸಾರೂಪ್ಯಯೋಗತಃ ।**
**[೧೦]ತತ್ರಾ[೧೧]ಧಾಯಾ[೧೨]ತ್ಮಸಂಕಲ್ಪಂ ತತಃ ಸೂಕ್ತ[೧೩]ಮಿದಂ ಪಠೇತ್ ॥**

ಈ ಪ್ರಕಾರವಾಗಿ ಹೇಳಿ ಈ ಬಾಲಕನ ಅವಯವಗಳನ್ನು ಸ್ಪರ್ಶಿಸಬೇಕು. ಬಹಳಮಟ್ಟಿಗೆ ಸಮಾನರೂಪತ್ವಸಂಬಂಧದಿಂದ ಆ ಬಾಲಕನಲ್ಲಿ ತಂದೆಯು ತನ್ನ ಸಂಕಲ್ಪವನ್ನು ಮಾಡಿ ಬಳಿಕ ಈ ಮುಂದೆ ಹೇಳುವ ವಚಗಳನ್ನು ಪಠಿಸಬೇಕು.

೧ ವಕ್ಷ್ಯಮಾಣಃ. ೨ ವಕ್ಷ್ಯಮಾಣಃ. ೩ ಮಂತ್ರೇಣ. ೪ ಆದೌ. ೫ ಪುತ್ರಪರಂಪರಾಭಿಃ. ೬ ಯುಕ್ತಾ. ೭ ಕುಲಜಾತ್ಯಾದಿಯಥಾಯೋಗ್ಯಗುಣೈರಧಿಷ್ಠಿತಃ. ೮ ದಿವ್ಯಚಕ್ರವಿಜಯಚಕ್ರಪರಮಚಕ್ರಾಣಿ. ೯ ಸಮಾನರೂಪತ್ವಸಂಬಂಧಾತ್. ೧೦ ಬಾಲಕೇ. ೧೧ ವಿಧಾಯ. ೧೨ ಪಿತಾನಿಜಸಂಕಲ್ಪಂ. ೧೩ ವಕ್ಷ್ಯಮಾಣಂ.

**[೧]ಅಂಗಾ[೨]ದಂಗಾತ್ಸಂಭವಸಿ [೩]ಹೃದಯಾದಪಿ ಜಾಯಸೇ ।**
**ಆತ್ಮಾ ವೈ ಪುತ್ರನಾಮಾಸಿ ಸಂಜೀವ [೪]ಶರದಃ ಶತಮ್ ॥ ೧೧೪ ॥**

"ತಂದೆಯ ಶುಕ್ಲ(ವೀರ್ಯ)ದಿಂದಲೂ ತಾಯಿಯ ಶೋಣಿತದಿಂದಲೂ ಹುಟ್ಟಿರುತ್ತಿ. ತಂದೆಯ ಇಚ್ಛೆಯಿಂದಲೂ ಹುಟ್ಟಿರುತ್ತಿ. ಆತ್ಮನೇ (ತಾನೇ – ತಂದೆಯೇ) ಪುತ್ರನೆಂಬವನಾಗಿರುತ್ತಿ. ಬಹುಸಂವತ್ಸರಗಳವರೆಗೆ ಜೀವಿಸು."

**[೫]ಕ್ಷೀರಾಜ್ಯಮಮೃತಂ ಪೂತಂ [೬]ನಾಭಾ [೭]ವಾವರ್ಜ್ಯ ಯುಕ್ತಿತಃ ।**
**ಘಾತಿಂಜಯೋ ಭವೇ[೮]ತ್ಯಸ್ಯ [೯]ಹ್ರಾಸಯೇನ್ನಾಭಿನಾಲಕಮ್ ॥ ೧೧೫ ॥**

ಪವಿತ್ರವಾದ ಕ್ಷೀರಘೃತರೂಪವಾದ ಅಮೃತವನ್ನು ನಾಭಿಯಲ್ಲಿ ಸೇಚನೆಮಾಡಿ "ಘಾತಿಕರ್ಮವನ್ನು ಜಯಿಸುವವನಾಗು" ಎಂದು ಈ ಬಾಲಕನ ಹೊಕ್ಕಳಿನ ನಾಲವನ್ನು ಯುಕ್ತಿಯಿಂದ ಕತ್ತರಿಸಬೇಕು.

**ಶ್ರೀದೇವ್ಯೋ [೧೦]ಜಾತ ತೇ [೧೧]ಜಾತಕ್ರಿಯಾಂ ಕುರ್ವಂತ್ವಿತಿ ಬ್ರುವನ್ ।**
**ತತ್ತನುಂ [೧೨]ಚೂರ್ಣವಾಸೇನ ಶನೈ[೧೩]ರುದ್ವರ್ತ್ಯ ಯತ್ನತಃ ॥ ೧೧೬ ॥**

**ತ್ವಂ ಮಂದರಾಭಿಷೇಕಾರ್ಹೋ ಭವೇತಿ ಸ್ನಾಪಯೇತ್ತತಃ ।**
**ಗಂಧಾಂಬುಭಿಶ್ಚಿರಂ [೧೪]ಜೀವ್ಯಾ ಇತ್ಯಾಶಾಸ್ಯಾಕ್ಷತಂ ಕ್ಷಿಪೇತ್ ॥ ೧೧೭ ॥**

"ಎಲೈ ಪುತ್ರನೇ ! ಶ್ರೀ ಹ್ರೀ ಮೊದಲಾದ ದೇವಿಯರು ನಿನ್ನ ಜಾತಕರ್ಮವನ್ನು ಮಾಡಲಿ" ಎಂದು ಹೇಳುವವನಾಗಿ ಆ ಬಾಲಕನ ಶರೀರವನ್ನು ಪರಿಮಳ ಚೂರ್ಣದಿಂದ ಮೆಲ್ಲನೆ ಯತ್ನದಿಂದ ಲೇಪಿಸಿ "ನೀನು ಮಂದರಪರ್ವತದಲ್ಲಿ ಅಭಿಷೇಕಕ್ಕೆ ಯೋಗ್ಯನಾಗು" ಎಂದು ಗಂಧೋದಕಗಳಿಂದ ಸ್ನಾನ ಮಾಡಿಸಬೇಕು. ಬಳಿಕ "ಬಹುಕಾಲದವರೆಗೆ ಜೀವಿಸು" ಎಂದು ಆಶೀರ್ವದಿಸಿ ಅಕ್ಷತೆಯನ್ನೆರಚಬೇಕು.

**[೧೫]ನಶ್ಯಾತ್ಕರ್ಮಮಲಂ ಕೃತ್ಸ್ನಮಿತ್ಯಾಸ್ಯೇಸ್ಯ ಸನಾಸಿಕೇ ।**
**ಘೃತಮೌಷಧಸಂಸಿದ್ಧ [೧೬]ಮಾವಪೇ[೧೭]ನ್ಮಾತ್ರಯಾ ದ್ವಿಜಃ ॥ ೧೧೮ ॥**

ದ್ವಿಜನು ಆಗ "ಸಮಸ್ತವಾದ ಕರ್ಮಮಲವು ನಾಶವಾಗಲಿ" ಎಂದು ಈ ಬಾಲಕನ ನಾಸಿಕಾಸಹಿತವಾದ ಮುಖದಲ್ಲಿ ಔಷಧದಿಂದ ಸಿದ್ಧಮಾಡಿದ ತುಪ್ಪವನ್ನು ಅಳತೆಯಿಂದ (ಪರಿಮಿತಿಯಿಂದ) ಲೇಪಿಸಬೇಕು.

**ತತೋ [೧೮]ವಿಶ್ವೇಶ್ವರಾಸ್ತನ್ಯಭಾಗೀ ಭೂಯಾ ಇತೀ[೧೯]ರಯನ್ ।**
**ಮಾತುಸ್ತನ[೨೦]ಮುಪಾಮಂತ್ರ್ಯ ವದನೇಸ್ಯ [೨೧]ಸಮಾಸಜೇತ್ ॥ ೧೧೯ ॥**

ಆಮೇಲೆ "ಜಿನಜನನಿಯ ಸ್ತನ್ಯಕ್ಕೆ ಭಾಗಿಯಾಗು" ಎಂದು ಹೇಳುವವನಾಗಿ ತಾಯಿಯ ಸ್ತನವನ್ನು ಮಂತ್ರಿಸಿ ಈ ಬಾಲಕನ ಮುಖದಲ್ಲಿ ಸೇರಿಸಬೇಕು.

**ಪ್ರಾಕ್ಪೂಜಾಂ ಪುಣ್ಯದಾನಂ ಚ ಪ್ರೀತಿದಾನಪುರಸ್ಸರಮ್ ।**
**ವಿಧಾಯ ವಿಧಿವತ್ತಸ್ಯ ಜಾತಕರ್ಮ [೨೨]ಸಮಾಪಯೇತ್ ॥ ೧೨೦ ॥**

ಮೊದಲು ಪೂಜೆಯನ್ನೂ ಪ್ರೀತಿದಾನಪೂರ್ವಕವಾಗಿ ಪುಣ್ಯದಾನವನ್ನೂ ಮಾಡಿ ಆ ಬಾಲಕನ ಜಾತಕರ್ಮವನ್ನು ಶಾಸ್ತ್ರೋಕ್ತವಿಧಿಪೂರ್ವಕವಾಗಿ ಪೂರ್ತಿ ಮಾಡಬೇಕು.

**ಜರಾಯುಪಟಲಂ ಚಾಸ್ಯ ನಾಭಿನಾಲಸಮಾಯುತಮ್ ।**
**ಶುಚೌ ಭೂಮೌ [೨೩]ನಿಖಾತಾಯಾಂ ನಿಕ್ಷಿಪೇನ್ಮಂತ್ರಮಾಪಠನ್॥ ೧೨೧ ॥**

೧ ಪಿತೃಶುಕ್ಲಾತ್. ೨ ಮಾತೃಶೋಣಿತಾತ್. ೩ ಪಿತೃವಾಂಛಾಯಾಃ. ೪ ಬಹುವತ್ಸರಂ. ೫ ಕ್ಷೀರಾಜ್ಯರೂಪಮಮೃತಂ. ೬ ನಾಭಿನಾಳೇ. ೭ ಸೇಚಯಿತ್ವಾ. ೮ ಬಾಲಸ್ಯ. ೯ ಹ್ರಸ್ವಂ ಕುರ್ಯಾತ್– ಛಿಂದ್ಯಾತ್. ೧೦ ಪುತ್ರ. ೧೧ ಜಾತಕರ್ಮ. ೧೨ ಪರಿಮಲಚೂರ್ಣೇನ. ೧೩ ವಿಲಿಪ್ಯ. ೧೪ ಜೀವ. ೧೫ ನಾಶಂ ಗಚ್ಛತು. ೧೬ ಆವರ್ಜಯೇತ್ ಕ್ಷಿಪೇದ್ವಾ. ೧೭ ಪ್ರಮಾಣೇನ. ೧೮ ಜಿನಜನನೀಸ್ತನಪಾನಭಾಗೀ ಭವ. ೧೯ ಬ್ರುವನ್. ೨೦ ಮಂತ್ರಯಿತ್ವಾ. ೨೧ ಸಂಯೋಜಯೇತ್. ೨೨ ಸಂಪ್ರಾಪಯೇತ್. ೨೩ ಗರ್ತಾಯಾಂ.

ಈ ಬಾಲಕನ ನಾಭಿಯ ನಾಳವನ್ನೂ ಜರಾಯುಪಟಲ(ಚೀಲ)ವನ್ನೂ ಅಗೆಯಲ್ಪಟ್ಟ ಶುಚಿಯಾದ ಭೂಮಿಯಲ್ಲಿ(ಹೊಂಡದಲ್ಲಿ) ಮಂತ್ರವನ್ನು ಪಠಿಸುತ್ತ ಚೆಲ್ಲಬೇಕು.

**ಸಮ್ಯಗ್ದೃಷ್ಟಿಪದಂ [೧]ಬೋಧ್ಯೇ ಸರ್ವಮಾತೇತಿ ಚಾಪರಮ್ ।**
**ವಸುಂಧರಾಪದಂ ಚೈವ ಸ್ವಾಹಾಂತಂ ದ್ವಿರುದಾಹರೇತ್ ॥ ೧೨೨ ॥**

ಸಂಬೋಧನದಲ್ಲಿ ಸಮ್ಯಗ್ದೃಷ್ಟಿಪದವನ್ನೂ ಸರ್ವಮಾತೃಪದವನ್ನೂ ವಸುಂಧರಾ ಪದವನ್ನೂ ಸ್ವಾಹಾಪದಾಂತವಾಗಿ ಎರಡೆರಡುಸರ್ತಿ ಹೇಳಬೇಕು.

**ಚೂರ್ಣಿಃ ॥ ಸಮ್ಯಗ್ದೃಷ್ಟೇ ೨ ಸರ್ವಮಾತಃ ೨ ವಸುಂಧರೇ ೨ ಸ್ವಾಹಾ ॥**

**ಮಂತ್ರೇಣಾನೇನ ಸಮ್ಮಂತ್ರ್ಯ ಭೂಮೌ ಸೋದಕಮಕ್ಷತಮ್ ।**
**ಕ್ಷಿಪ್ತ್ವಾ ಗರ್ಭಮಲಂ ನ್ಯಸ್ತಪಂಚರತ್ನೇ ತಲೇ ಕ್ಷಿಪೇತ್ ॥ ೧೨೩ ॥**

ಈ ಮಂತ್ರದಿಂದ ಮಂತ್ರಿಸಿ ಜಲಸಹಿತವಾದ ಅಕ್ಷತವನ್ನು ಭೂಮಿಯಲ್ಲಿ ಎರಚಿ ಐದು ರತ್ನಗಳನ್ನಿರಿಸಿದ ನೆಲದಲ್ಲಿ (ಹೊಂಡದಲ್ಲಿ) ಗರ್ಭಮಲವನ್ನು ಚೆಲ್ಲಬೇಕು.

**[೨]ತ್ವತ್ಪುತ್ರಾ ಇವ ಮತ್ಪುತ್ರಾ ಭೂಯಾಸುಶ್ಚಿರಜೀವಿನಃ ।**
**ಇತ್ಯು[೩]ದಾಹೃತ್ಯ ಸಸ್ಯಾರ್ಹೇ ತತ್ಕ್ಷೇಪ್ತವ್ಯಂ ಮಹೀತಲೇ ॥ ೧೨೪ ॥**

"ಎಲೈ ಭೂದೇವಿಯೆ ! ನಿನ್ನ ಪುತ್ರರಾದ ಕುಲಪರ್ವತಗಳಂತೆ ನನ್ನ ಪುತ್ರರು ಚಿರಂಜೀವಿಗಳಾಗಲಿ" ಎಂದು ಹೇಳಿ ಸಸ್ಯ ಯೋಗ್ಯವಾದ ಭೂತಲದಲ್ಲಿ ಆ ಗರ್ಭಮಲವನ್ನು ಚೆಲ್ಲಬೇಕು.

**ಕ್ಷೀರವೃಕ್ಷೋಪಶಾಖಾಭಿ[೪]ರುಪಹೃತ್ಯ ಚ ಭೂತಲಮ್ ।**
**ಸ್ನಾಪ್ಯಾ ತತ್ರಾಸ್ಯ ಮಾತಾಸೌ ಸುಖೋಷ್ಣೈರ್ಮಂತ್ರಿತೈರ್ಜಲೈಃ ॥ ೧೨೫ ॥**

ಭೂತಲವನ್ನು ಹಾಲುಬರುವ ಮರದ ಕೊಂಬೆಗಳಿಂದ ಅಲಂಕರಿಸಿ ಅಲ್ಲಿ ಈ ಬಾಲಕನ ಈ ತಾಯಿಯನ್ನು ಮಂತ್ರಿಸಲ್ಪಟ್ಟ ಸುಖೋಷ್ಣಜಲಗಳಿಂದ ಸ್ನಾನ ಮಾಡಿಸಬೇಕು.

**ಸಮ್ಯಗ್ದೃಷ್ಟಿಪದಂ ಬೋಧ್ಯವಿಷಯಂ ದ್ವಿರುದೀರಯೇತ್ ।**
**ಪದಮಾಸನ್ನಭವ್ಯೇತಿ ತದ್ವದ್ವಿಶ್ವೇಶ್ವರೇತ್ಯಪಿ ॥ ೧೨೬ ॥**

ಸಂಬೋಧನಕ್ಕೆ ವಿಷಯವಾದ ಸಮ್ಯಗ್ದೃಷ್ಟಿಪದವನ್ನೂ ಹಾಗೆಯೇ ಆಸನ್ನಭವ್ಯಪದವನ್ನೂ ವಿಶ್ವೇಶ್ವರಾಪದವನ್ನೂ ಎರಡೆರಡಾವರ್ತಿ ಹೇಳಬೇಕು.

**ತತ ಊರ್ಜಿತಪುಣ್ಯೇತಿ ಜಿನಮಾತೃಪದಂ ತಥಾ ।**
**ಸ್ವಾಹಾಂತೋ ಮಂತ್ರ ಏಷ ಸ್ಯಾತ್ತನ್ಮಾತುಃ ಸ್ನಾನಸಂವಿಧೌ ॥ ೧೨೭ ॥**

ಆಮೇಲೆ ಊರ್ಜಿತಪುಣ್ಯಪದವನ್ನೂ ಜಿನಮಾತೃಪದವನ್ನೂ ಸ್ವಾಹಾ ಪದಾಂತವಾಗಿ, ಆ ಬಾಲಕನ ತಾಯಿಯ ಸ್ನಾನವಿಧಿಯಲ್ಲಿ, ಈ ಮಂತ್ರವನ್ನು ಹೇಳಬೇಕು.

**ಚೂರ್ಣಿಃ ॥ ಸಮ್ಯಗ್ದೃಷ್ಟೇ ೨ ಆಸನ್ನಭವ್ಯೇ ೨ ವಿಶ್ವೇಶ್ವರೇ ೨ ಊರ್ಜಿತ ಪುಣ್ಯೇ ೨ ಜಿನ ಮಾತಃ ೨ ಸ್ವಾಹಾ ॥**

**ಯಥಾ ಜಿನಾಂಬಿಕಾ ಪುತ್ರಕಲ್ಯಾಣಾನ್ಯಭಿಪಶ್ಯತಿ ।**
**ತಥೇಯಮಪಿ [೫]ಮತ್ಪತ್ನೀ[೬]ತ್ಯಾಸ್ಥಯೇಮಂ ವಿಧಿಂ ಭಜೇತ್ ॥ ೧೨೮ ॥**

ಜಿನಜನನಿಯು ಹೇಗೆ ಪುತ್ರನ ಕಲ್ಯಾಣಗಳನ್ನು ನೋಡುತ್ತಾಳೋ ಈ ನನ್ನ ಹೆಂಡತಿಯೂ ಹಾಗೆಯೇ ಈ ವಿಧಿಯನ್ನು ಈ ಪ್ರಕಾರವಾದ ಆಸಕ್ತಿಯಿಂದ ಭಜಿಸಬೇಕು.

೧ ಸಂಬೋಧನೇ. ೨ ಕುಲಪರ್ವತಾ ಇವ. ೩ ಉಕ್ತ್ವಾ. ೪ ಅಲಂಕೃತ್ಯ. ೫ ಮಮ ಪತ್ನೀ. ೬ ಬುದ್ಧ್ಯಾ.

**ತೃತೀಯೇಹನಿ ಚಾನಂತಜ್ಞಾನದರ್ಶೀ ಭವೇತ್ವಮುಮ್ ।**
**ಆಲೋಕಯೇತ್ಸಮುತ್ಕ್ಷಿಪ್ಯ ನಿಶಿ ತಾರಕಿತಂ ನಭಃ ॥ ೧೨೯ ॥**

ಮೂರನೆಯ ದಿವಸದಲ್ಲಿಯೂ ''ಅನಂತಜ್ಞಾನದರ್ಶೀಭವ'' ಎಂದು ಈ ಪುತ್ರನನ್ನು ಎತ್ತಿ ರಾತ್ರಿಯಲ್ಲಿ ನಕ್ಷತ್ರಗಳು ಮೂಡಿರುವ ಆಕಾಶವನ್ನು ತೋರಿಸ ಬೇಕು.

**ಪುಣ್ಯಾಹಘೋಷಣಾಪೂರ್ವಂ ಕುರ್ಯಾದ್ದಾನಂ ಚ ಶಕ್ತಿತಃ ।**
**ಯಥಾಯೋಗಂ ವಿದಧ್ಯಾಚ್ಚ ಸರ್ವಸ್ಯಾಭಯಘೋಷಣಾಮ್ ॥ ೧೩೦ ॥**

ಪುಣ್ಯಾಹಘೋಷಣಾಪೂರ್ವಕವಾಗಿ ಶಕ್ತ್ಯನುಸಾರವಾಗಿ ದಾನವನ್ನು ಮಾಡ ಬೇಕು. ಯಥಾನುಕೂಲವಾಗಿ ಎಲ್ಲರಿಗೂ ಅಭಯಘೋಷಣೆಯನ್ನೂ ಮಾಡ ಬೇಕು.

**ಜಾತಕರ್ಮವಿಧಿಃ ಸೋಯಮಾಮ್ನಾತಃ ಪೂರ್ವಸೂರಿಭಿಃ ।**
**ಯಥಾಯೋಗಮನುಷ್ಠೇಯಃ ಸೋದ್ಯತ್ವೇಪಿ ದ್ವಿಜೋತ್ತಮೈಃ ॥ ೧೩೧ ॥**

॥ ಇತಿ ಜಾತಕರ್ಮವಿಧಿಃ ॥

ಆ ಈ ಜಾತಕರ್ಮವಿಧಿಯು ಪೂರ್ವಿಕರಾದ ವಿದ್ವಾಂಸರಿಂದ ಹೇಳಲ್ಪಟ್ಟಿದೆ. ಆ ವಿಧಿಯು ಈಗಲೂ ದ್ವಿಜೋತ್ತಮರಿಂದ ಯಥಾನುಕೂಲವಾಗಿ ಆಚರಿಸತಕ್ಕು ದಾಗಿದೆ.

॥ ಅಥ ನಾಮಕರ್ಮಮಂತ್ರಃ ॥

**ನಾಮಕರ್ಮವಿಧಾನೇ ಚ ಮಂತ್ರೋಯಮನುಕೀರ್ತ್ಯತೇ ।**
**ಸಿದ್ಧಾರ್ಚನಾವಿಧೌ [1]ಸಪ್ತ ಮಂತ್ರಾಃ ಪ್ರಾಗನುವರ್ಣಿತಾಃ ॥ ೧೩೨ ॥**

ನಾಮಕರ್ಮವಿಧಾನದಲ್ಲಿಯೂ ಈ ಮಂತ್ರವು ಹೇಳಲ್ಪಡುತ್ತದೆ. ಸಿದ್ಧಪೂಜೆಯ ವಿಧಿಯಲ್ಲಿ ಮೊದಲು ಪೀಠಿಕಾ ನಿಸ್ತಾರಕ ಮೊದಲಾದ ಏಳುಮಂತ್ರಗಳು ವರ್ಣಿಸಲ್ಪಟ್ಟವು.

**ತತೋ ದಿವ್ಯಾಷ್ಟಸಹಸ್ರನಾಮಭಾಗೀಭವಾ[3]ದಿಕಮ್ ।**
**ಪದತ್ರಿತಯಮುಚ್ಚಾರ್ಯ ಮಂತ್ರೋತ್ರ ಪರಿವರ್ತ್ಯತಾಮ್ ॥ ೧೩೩ ॥**

**ಚೂರ್ಣಿಃ ॥ ದಿವ್ಯಾಷ್ಟಸಹಸ್ರನಾಮಭಾಗೀ ಭವ । ವಿಜಯನಾಮಾಷ್ಟಸಹ ಸ್ರಭಾಗೀ ಭವ । ಪರಮನಾಮಾಷ್ಟಸಹಸ್ರಭಾಗೀ ಭವ ॥ ಇತಿ ನಾಮಕ ರ್ಮಮಂತ್ರಃ ॥**

ಬಳಿಕ ದಿವ್ಯವಾದ ಸಾಸಿರದೆಂಟು ಹೆಸರುಗಳಿಗೆ ಪಾತ್ರನಾಗು ಎಂಬ ಅರ್ಥ ಬೋಧಕವಾದ ''ದಿವ್ಯಾಷ್ಟಸಹಸ್ರನಾಮಭಾಗೀ ಭವ'' ಮೊದಲಾದ ಮೂರು ಪದ ಗಳನ್ನುಚ್ಚರಿಸಿ ಮಂತ್ರವನ್ನು ಇಲ್ಲಿ ಪರಿವರ್ತಿಸಬೇಕು.

**ಶೇಷೋ ವಿಧಿಸ್ತು ನಿಃಶೇಷಃ ಪ್ರಾಗುಕ್ತೋ ನೋಚ್ಯತೇ ಪುನಃ ।**
**ಬಹಿರ್ಯಾನಕ್ರಿಯಾಮಂತ್ರಸ್ತತೋ[4]ಯ[5]ಮನುಗಮ್ಯತಾಮ್ ॥ ೧೩೪ ॥**

ಉಳಿದ ವಿಧಿಯೆಲ್ಲವೂ ಮೊದಲು ಹೇಳಲ್ಪಟ್ಟಿದೆ. ಪುನಃ ಹೇಳಲ್ಪಡುವುದಿಲ್ಲ. ಆಮೇಲೆ ಈ ಮುಂದೆ ಹೇಳುವ ಬಹಿರ್ಯಾನಕ್ರಿಯಾಮಂತ್ರವನ್ನು ತಿಳಿಯಬೇಕು.

॥ ಅಥ ಬಹಿರ್ಯಾನಕ್ರಿಯಾಮಂತ್ರಃ ॥

**ತತ್ರೋಪನಯನಿಷ್ಕ್ರಾಂತಭಾಗೀಭವಪದಾತ್ಪರಮ್ ।**
**ಭವೇದ್ವೈವಾಹನಿಷ್ಕ್ರಾಂತಿಭಾಗೀಭವಪದಂ ತತಃ ॥ ೧೩೫ ॥**

೧ ಪುತ್ರಂ. ೨ ಪೀಠಿಕಾದಯಃ. ೩ ಪ್ರಾಪ್ರಾಜ್ಯಪರಮಸ್ಥಾನವಿವರಣಕಾಲೇ ದಿವ್ಯವಿಜಯಪರಮಾಣಾಂ ಪ್ರತಿಪಾದನಾದಾದಿ ಶಬ್ದೇನಾತ್ರ ವಿಜಯಪರಮಯೋರ್ಗ್ರಹಣಂ. ೪ ವಕ್ಷ್ಯಮಾಣಃ. ೫ ಜ್ಞಾಯತಾಂ.

ಬಳಿಕ ಉಪನಯನಸಂಸ್ಕಾರಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ ''ಉಪನಯನಿಷ್ಕ್ರಾಂತಿಭಾಗೀ ಭವ'' ಎಂಬ ಪದವೂ ಆಮೇಲೆ ವಿವಾಹ ಸಂಬಂಧವಾದ ಸಂಸ್ಕಾರಕ್ಕೆ ಪಾತ್ರನಾಗು ಎಂಬ ಅರ್ಥಬೋಧಕವಾದ ''ವೈವಾಹ ನಿಷ್ಕ್ರಾಂತಿಭಾಗೀ ಭವ'' ಎಂಬ ಪದವೂ ಇರುವುವು.

**ಕ್ರಮಾನ್ಮುನೀಂದ್ರನಿಷ್ಕ್ರಾಂತಿಭಾಗೀಭವಪದಂ ವದೇತ್ ।**
**ತತಃ ಸುರೇಂದ್ರನಿಷ್ಕ್ರಾಂತಿಭಾಗೀಭವಪದಂ ಸ್ಮೃತಮ್ ॥ ೧೩೬ ॥**

ಬಳಿಕ ಕ್ರಮದಿಂದ ಮುನೀಂದ್ರಪದವಿಗೆ ಪಾತ್ರನಾಗು ಎಂಬ ಅರ್ಥ ಬೋಧಕವಾದ ''ಮುನೀಂದ್ರನಿಷ್ಕ್ರಾಂತಿಭಾಗೀ ಭವ'' ಎಂಬ ಪದವನ್ನು ಹೇಳ ಬೇಕು. ಆಮೇಲೆ ದೇವೇಂದ್ರಪದವಿಗೆ ಪಾತ್ರನಾಗು ಎಂಬ ಅರ್ಥಬೋಧಕವಾದ ''ಸುರೇಂದ್ರನಿಷ್ಕ್ರಾಂತಿಭಾಗೀ ಭವ'' ಎಂಬ ಪದವು ಸ್ಮರಿಸಲ್ಪಟ್ಟಿದೆ.

**ಮಂದರಾಭಿಷೇಕನಿಷ್ಕ್ರಾಂತಿಭಾಗೀಭವಪದಂ ತತಃ ।**
**ಯೌವರಾಜ್ಯಮಹಾರಾಜ್ಯಪದೇ ಭಾಗೀಭವಾನ್ವಿತೇ ॥ ೧೩೭ ॥**

ಅನಂತರ ಮಂದರಾಭಿಷೇಕವಿಧಿಗೆ ಪಾತ್ರನಾಗು ಎಂಬ ಅರ್ಥಬೋಧಕವಾದ ''ಮಂದರಾಭಿಷೇಕನಿಷ್ಕ್ರಾಂತಿಭಾಗೀ ಭವ'' ಎಂಬ ಪದವೂ ಯುವರಾಜ ಮತ್ತು ಮಹಾರಾಜ ಸಂಬಂಧಿಗಳಾದ ಪದವಿಗಳಿಗೆ ಪಾತ್ರನಾಗು ಎಂಬ ಅರ್ಥಬೋಧಕ ಗಳಾದ ''ಯೌವರಾಜ್ಯನಿಷ್ಕ್ರಾಂತಿಭಾಗೀ ಭವ. ''ಮಹಾರಾಜ್ಯ ನಿಷ್ಕ್ರಾಂತಿಭಾಗೀ ಭವ'' ಎಂಬ ಪದಗಳೂ ಇರುತ್ತವೆ.

**ನಿಷ್ಕ್ರಾಂತಿಪದಮಧ್ಯೇ [1]ಸ್ತಾಂ ಪರಮರಾಜ್ಯಪದಂ ತಥಾ ।**
**ಆರ್ಹಂತ್ಯರಾಜ್ಯನಿಷ್ಕ್ರಾಂತಿಭಾಗೀಭವ[2]ಶಿಖಾಪದಮ್ ॥ ೧೩೮ ॥**

ಹಾಗೆಯೇ ಪರಮರಾಜ್ಯ ಮತ್ತು ಆರ್ಹಂತ್ಯರಾಜ್ಯ ಪದವಿಗಳಿಗೆ ಪಾತ್ರನಾಗು ಎಂಬ ಅರ್ಥಬೋಧಕಗಳಾದ ''ಪರಮರಾಜ್ಯನಿಷ್ಕ್ರಾಂತಿಭಾಗೀ ಭವ. ಆರ್ಹಂತ್ಯ ರಾಜ್ಯನಿಷ್ಕ್ರಾಂತಿಭಾಗೀ ಭಾವ'' ಎಂಬ ಪದಗಳನ್ನು ಪಠಿಸಬೇಕು.

**ಪದೈರೇಭಿರಯಂ ಮಂತ್ರಸ್ತದ್ವಿದ್ಭಿರನುಜಪ್ಯತಾಮ್ ।**
**ಪ್ರಾಗುಕ್ತೋ ವಿಧಿರನ್ಯಸ್ತು ನಿಷದ್ಯಾಮಂತ್ರ ಉತ್ತರಃ ॥ ೧೩೯ ॥**

ಈ ಪದಗಳಿಂದ ಈ ಮಂತ್ರವನ್ನು ಆ ಮಂತ್ರಗಳನ್ನು ತಿಳಿದವರು ಜಪಿಸಬೇಕು. ಬೇರೆ ವಿಧಿಯು ಮೊದಲು ಹೇಳಲ್ಪಟ್ಟಿದೆ. ಮುಂದಿನ ಮಂತ್ರವು ನಿಷದ್ಯಾ ಮಂತ್ರವಾಗಿದೆ.

**ಚೂರ್ಣಿಃ ॥ ಉಪನಯನಿಷ್ಕ್ರಾಂತಿಭಾಗೀ ಭವ । ವೈವಾಹನಿಷ್ಕ್ರಾಂತಿ ಭಾಗೀ ಭವ । ಮುನೀಂದ್ರನಿಷ್ಕ್ರಾಂತಿಭಾಗೀ ಭವ । ಸುರೇಂದ್ರನಿಷ್ಕ್ರಾಂತಿ ಭಾಗೀ ಭವ । ಮಂದರಾಭಿಷೇಕ ನಿಷ್ಕ್ರಾಂತಿಭಾಗೀ ಭವ । ಯೌವರಾಜ್ಯ ನಿಷ್ಕ್ರಾಂತಿಭಾಗೀ ಭವ । ಮಹಾರಾಜ್ಯನಿಷ್ಕ್ರಾಂತಿ ಭಾಗೀ ಭವ । ಪರಮರಾಜ್ಯನಿಷ್ಕ್ರಾಂತಿಭಾಗೀಭವ । ಆರ್ಹಂತ್ಯನಿಷ್ಕ್ರಾಂತಿಭಾಗೀ ಭವ ॥ ॥ ಇತಿ ಬಹಿರ್ಯಾನಮಂತ್ರಃ ॥**

॥ ಅಥ ನಿಷದ್ಯಾಮಂತ್ರಃ ॥

**ದಿವ್ಯಸಿಂಹಾಸನಪದಾದ್ಭಾಗೀಭವಪದಂ ವದೇತ್ ।**
**ಏವಂ ವಿಜಯಪರಮಸಿಂಹಾಸನಪದದ್ವಯಾತ್ ॥ ೧೪೦ ॥**

ದಿವ್ಯಸಿಂಹಾಸನಕ್ಕೆ ಪಾತ್ರನಾಗು, ವಿಜಯಸಿಂಹಾಸನಕ್ಕೆ ಪಾತ್ರನಾಗು, ಪರಮ ಸಿಂಹಾಸನಕ್ಕೆ ಪಾತ್ರನಾಗು ಎಂಬೀ ಅರ್ಥಬೋಧಕಗಳಾದ ''ದಿವ್ಯಸಿಂಹಾಸನಭಾಗೀ

೧ ಸ್ಯಾತಾಂ. ೨ ಅಂತ್ಯಪದಂ.

ಭವ. ವಿಜಯಸಿಂಹಾಸನಭಾಗೀ ಭವ. ಪರಮಸಿಂಹಾಸನಭಾಗೀ ಭವ'' ಎಂಬ ಪದಗಳನ್ನು ಹೇಳಬೇಕು.

**ಚೂರ್ಣಿಃ ॥ ದಿವ್ಯಸಿಂಹಾಸನಭಾಗೀ ಭವ । ವಿಜಯಸಿಂಹಾಸನಭಾಗೀ ಭವ । ಪರಮಸಿಂಹಾಸನಭಾಗೀ ಭವ ॥ ಇತಿ ನಿಷದ್ಯಾಮಂತ್ರಃ ॥**

**॥ ಅಥ ಅನ್ನಪ್ರಾಶನಕ್ರಿಯಾಮಂತ್ರಃ ॥**

**ಪ್ರಾಶನೇಪಿ ತಥಾ ಮಂತ್ರಂ ಪದ್ಯೈಸ್ತ್ರಿಭಿರುದಾಹರೇತ್ ।**
**ತಾನಿ ಸ್ಯುರ್ದಿವ್ಯವಿಜಯಾಕ್ಷೀಣಾಮೃತಪದಾನಿ ವೈ ॥ ೧೪೧ ॥**

**ಭಾಗೀಭವಪದೇನಾಂತೇ ಯುಕ್ತೇನಾನುಗತಾನಿ ತು ।**
**ಪದ್ಯೈರೇಭಿರಯಂ ಮಂತ್ರಃ ಪ್ರಯೋಜ್ಯಃ ಪ್ರಾಶನೇ ಬುಧೈಃ ॥ ೧೪೨ ॥**

ಅನ್ನವನ್ನು ತಿನ್ನಿಸುವ ವಿಧಿಯಲ್ಲಿಯೂ ಹಾಗೆಯೇ ಮೂರು ಪದಗಳಿಂದ ಮಂತ್ರವನ್ನು ಹೇಳಬೇಕು. ಆ ಪದಗಳು ಕೊನೆಯಲ್ಲಿ ಭಾಗೀಭವ ಪದದಿಂದ ಅನುಸರಿಸಲ್ಪಟ್ಟ ದಿವ್ಯ ವಿಜಯ ಅಕ್ಷೀಣಾಮೃತಪದಗಳೇ ಆಗಿರುತ್ತವೆ. ಈ ಪದಗಳಿಂದ ವಿದ್ವಾಂಸರು ಅನ್ನಪ್ರಾಶನವಿಧಿಯಲ್ಲಿ ಈ ಮಂತ್ರವನ್ನು ಪ್ರಯೋಗಿಸಬೇಕು.

**ಚೂರ್ಣಿಃ ॥ ದಿವ್ಯಾಮೃತಭಾಗೀ ಭವ । ವಿಜಯಾಮೃತಭಾಗೀ ಭವ । ಅಕ್ಷೀಣಾಮೃತಭಾಗೀ ಭವ ॥ ಇತಿ ಅನ್ನಪ್ರಾಶನಕ್ರಿಯಾಮಂತ್ರಃ ॥**

**॥ ಅಥ ವ್ಯುಷ್ಟಿ (ವರ್ಷವರ್ಧನ) ಕ್ರಿಯಾಮಂತ್ರಃ ॥**

**ವ್ಯುಷ್ಟಿಕ್ರಿಯಾಶ್ರಿತಂ ಮಂತ್ರಮಿತೋ ವಕ್ಷ್ಯೇ ಯಥಾಶ್ರುತಮ್ ।**
**ತತ್ರೋಪನಯನಂ ಜನ್ಮವರ್ಷವರ್ಧನವಾಗ್ಯುತಮ್ ॥ ೧೪೩ ॥**

**ಭಾಗೀಭವಪದಂ ಜ್ಞೇಯಮಾದೌ ಶೇಷಪದಾಷ್ಟಕೇ ।**
**ವೈವಾಹನಿಷ್ಠಶಬ್ದೇನ ಮುನೀಂದ್ರಜನ್ಮಪದೇನ ಚ ॥ ೧೪೪ ॥**

**ಸುರೇಂದ್ರಜನ್ಮನಾ ಮಂದರಾಭಿಷೇಕಪದೇನ ಚ ।**
**ಯೌವರಾಜ್ಯಮಹಾರಾಜ್ಯಪದಾಭ್ಯಾಮಪ್ಯನುಕ್ರಮಾತ್ ॥ ೧೪೫ ॥**

**ಪರಮಾರ್ಹಂತ್ಯರಾಜ್ಯಾಭ್ಯಾಂ ವರ್ಷವರ್ಧನಸಂಯುತಮ್ ।**
**ಭಾಗೀಭವಪದಂ ಯೋಜ್ಯಂ ತತೋ ಮಂತ್ರೋಯಮುದ್ಭವೇತ್ ॥**

ಇಲ್ಲಿಂದ ಮುಂದೆ ವ್ಯುಷ್ಟಿಕ್ರಿಯಾಶ್ರಿತವಾದ ಮಂತ್ರವನ್ನು ಆಗಮಾನುಸಾರವಾಗಿ ಹೇಳುವೆನು. ಆ ಕ್ರಿಯೆಯಲ್ಲಿ ಮೊದಲು ಉಪನಯನ, ಜನ್ಮ, ವರ್ಷವರ್ಧನ ವಚನಯುಕ್ತವಾದ ಭಾಗೀಭವ ಪದವನ್ನು ತಿಳಿಯಬೇಕು. ಉಳಿದ ಎಂಟು ಪದಗಳಲ್ಲಿ ವೈವಾಹನಿಷ್ಠಪದದೊಡನೆಯೂ ಮುನೀಂದ್ರ ಜನ್ಮಪದದೊಡನೆಯೂ ಸುರೇಂದ್ರಜನ್ಮಪದದೊಡನೆಯೂ ಮಂದರಾಭೀಷೇಕ ಪದದೊಡನೆಯೂ ಯೌವರಾಜ್ಯ ಮಹಾರಾಜ್ಯಪದಗಳೊಡನೆಯೂ ಅನುಕ್ರಮದಿಂದ ಪರಮರಾಜ್ಯ ಆರ್ಹಂತ್ಯ ರಾಜ್ಯಪದಗಳೊಡನೆಯೂ ವರ್ಷವರ್ಧನಪದಯುಕ್ತವಾದ ಭಾಗೀಭವ ಪದವನ್ನು ಸೇರಿಸಬೇಕು. ಆಮೇಲೆ ಈ ಮುಂದೆ ಹೇಳುವ ಮಂತ್ರವು ಉಂಟಾಗುವುದು.

**ಚೂರ್ಣಿಃ ॥ ಉಪನಯನಜನ್ಮವರ್ಷವರ್ಧನಭಾಗೀ ಭವ । ವೈವಾಹನಿಷ್ಠ ವರ್ಷವರ್ಧನ ಭಾಗೀ ಭವ । ಮುನೀಂದ್ರಜನ್ಮವರ್ಷವರ್ಧನಭಾಗೀ ಭವ । ಸುರೇಂದ್ರಜನ್ಮವರ್ಷವರ್ಧನಭಾಗೀ ಭವ । ಮಂದರಾಭಿಷೇಕವರ್ಷವರ್ಧನಭಾಗೀ ಭವ । ಯೌವರಾಜ್ಯವರ್ಷವರ್ಧನಭಾಗೀ ಭವ । ಮಹಾರಾಜ್ಯವರ್ಷವರ್ಧನಭಾಗೀ ಭವ । ಪರಮರಾಜ್ಯವರ್ಷವರ್ಧನ ಭಾಗೀ ಭವ । ಆರ್ಹಂತ್ಯರಾಜ್ಯವರ್ಷವರ್ಧನಭಾಗೀ ಭವ ॥ ಇತಿ ವ್ಯುಷ್ಟಿ ಕ್ರಿಯಾಮಂತ್ರಃ ॥**

**॥ ಅಥ ಚೌಲಕರ್ಮಮಂತ್ರಃ ॥**

**ಚೌಲಕರ್ಮಣ್ಯಥೋ ಮಂತ್ರಃ ಸ್ಯಾಚ್ಚೋಪನಯನಾದಿಕಮ್ ।**
**ಮುಂಡಭಾಗೀ ಭವಾಂತಂ ಚ ಪದಮಾದಾವನುಸ್ಮೃತಮ್ ॥ ೧೪೭ ॥**

ಅನಂತರದಲ್ಲಿ ಚೌಲಕರ್ಮದಲ್ಲಿ ಮೊದಲು ಉಪನಯನಪದವೂ ಕೊನೆಯಲ್ಲಿ ಮುಂಡಭಾಗೀ ಭವ ಪದವೂ ಉಳ್ಳ ಮಂತ್ರವಿರುವುದೆಂದು ಹೇಳಲ್ಪಟ್ಟಿದೆ.

**ತತೋ ನಿರ್ಗ್ರಂಥಮುಂಡಾದಿಭಾಗೀಭವಪದಂ ಪರಮ್ ।**
**ತತೋ ನಿಷ್ಕ್ರಾಂತಿಮುಂಡಾದಿಭಾಗೀಭವಪದಂ ಪರಮ್ ॥ ೧೪೮ ॥**

ಬಳಿಕ ನಿರ್ಗ್ರಂಥಮುಂಡಭಾಗೀ ಭವ ಪದವೂ ಆಮೇಲೆ ನಿಷ್ಕ್ರಾಂತಿ ಮುಂಡಭಾಗೀ ಭವ ಪದವೂ ಇರುತ್ತವೆ.

**ಸ್ಯಾತ್ಪರಮನಿಸ್ತಾರಕಕೇಶಭಾಗೀಭವೇತ್ಯತಃ ।**
**ಪರಮೇಂದ್ರಪದಾದಿಶ್ಚ ಕೇಶಭಾಗೀಭವಧ್ವನಿಃ ॥ ೧೪೯ ॥**

ಅನಂತರ ಪರಮನಿಸ್ತಾರಕಕೇಶಭಾಗೀ ಭವ ಪದವೂ ಪರಮೇಂದ್ರಕೇಶಭಾಗೀ ಭವ ಪದವೂ ಇರುತ್ತವೆ.

**ಪರಮಾರ್ಹಂತ್ಯರಾಜ್ಯಾದಿಕೇಶಭಾಗೀತಿ ವಾಗ್ದ್ವಯಮ್ ।**
**ಭವೇತ್ಯಂತಪದೋಪೇತಂ ಮಂತ್ರೋ[೧]ಸ್ಮಿನ್ಸ್ಯಾಚ್ಛಿಖಾಪದಮ್ ॥ ೧೫೦ ॥**

ಈ ಚೌಲಕರ್ಮದಲ್ಲಿ ಪರಮರಾಜ್ಯಕೇಶಭಾಗೀ ಭವ ಪದವನ್ನೂ ಆರ್ಹಂತ್ಯ ರಾಜ್ಯಕೇಶಭಾಗೀ ಭವ ಪದವನ್ನೂ ಪ್ರಯೋಗಿಸಬೇಕು.

**ಶಿಖಾಮೇತೇನ ಮಂತ್ರೇಣ ಸ್ಥಾಪಯೇದ್ವಿಧಿವದ್ದ್ವಿಜಃ ।**
**ತತೋ ಮಂತ್ರೋ[೨]ಯಮಾಮ್ನಾತೋ ಲಿಪಿಸಂಖ್ಯಾನಸಂಗ್ರಹೇ ॥**

ದ್ವಿಜನು ಈ ಮಂತ್ರದಿಂದ ವಿಧಿಪ್ರಕಾರವಾಗಿ ಶಿಖೆಯನ್ನು(ಜುಟ್ಟನ್ನು) ಇರಿಸಬೇಕು. ಆಮೇಲೆ ಲಿಪಿಸಂಖ್ಯಾನಸಂಗ್ರಹವಿಧಿಯಲ್ಲಿ ಈ ಮುಂದೆ ಹೇಳುವ ಮಂತ್ರವು ಹೇಳಲ್ಪಟ್ಟಿರುವುದು.

**ಚೂರ್ಣಿಃ ॥ ಉಪನಯನಮುಂಡಭಾಗೀ ಭವ । ನಿರ್ಗ್ರಂಥಮುಂಡಭಾಗೀ ಭವ । ನಿಷ್ಕ್ರಾಂತಿಮುಂಡಭಾಗೀ ಭವ । ಪರಮನಿಸ್ತಾರಕಕೇಶಭಾಗೀ ಭವ । ಪರಮೇಂದ್ರಕೇಶಭಾಗೀ ಭವ । ಪರಮರಾಜ್ಯಕೇಶಭಾಗೀ ಭವ । ಆರ್ಹಂತ್ಯರಾಜ್ಯಕೇಶಭಾಗೀ ಭವ ॥ ಇತಿ ಚೌಲಕರ್ಮಮಂತ್ರಃ ॥**

**॥ ಅಥ ಲಿಪಿಸಂಖ್ಯಾನಸಂಗ್ರಹಮಂತ್ರಃ ॥**

**ಶಬ್ದಪಾರಭಾಗೀ ಭವ ಅರ್ಥಪಾರಭಾಗೀ ಭವ ।**
**ಪದಂ ಶಬ್ದಾರ್ಥಸಂಬಂಧಪಾರಭಾಗೀ ಭವೇತ್ಯಪಿ ॥ ೧೫೨ ॥**

ಈ ವಿಧಿಯಲ್ಲಿ ''ಶಬ್ದಪಾರಭಾಗೀ ಭವ, ಅರ್ಥಪಾರಭಾಗೀ ಭವ, ಶಬ್ದಾರ್ಥಸಂಬಂಧಪಾರಭಾಗೀ ಭವ'' ಎಂಬ ಮೂರು ಪದಗಳಿರುತ್ತವೆ.

**ಚೂರ್ಣಿಃ ॥ ಶಬ್ದಪಾರಭಾಗೀ ಭವ । ಅರ್ಥಪಾರಭಾಗೀ ಭವ । ಶಬ್ದಾರ್ಥಸಂಬಂಧಪಾರ ಭಾಗೀ ಭವ ॥ ಇತಿ ಲಿಪಿಸಂಖ್ಯಾನಮಂತ್ರಃ ॥**

**॥ ಅಥ ಉಪನೀತಿಕ್ರಿಯಾಮಂತ್ರಃ ॥**

**ಉಪನೀತಿಕ್ರಿಯಾಮಂತ್ರಂ ಸ್ಮರಂತೀಮಂ ದ್ವಿಜೋತ್ತಮಾಃ ।**
**ಪರಮನಿಸ್ತಾರಕಾದಿಲಿಂಗಭಾಗೀಭವೇತ್ಯತಃ ॥ ೧೫೩ ॥**

**ಯುಕ್ತಂ ಪರಮರ್ಷಿಲಿಂಗೇನ ಭಾಗೀಭವಪದಂ ಭವೇತ್ ।**
**ಪರಮೇಂದ್ರಾದಿಲಿಂಗಾದಿಭಾಗೀಭವಪದಂ ಪರಮ್ ॥ ೧೫೪ ॥**

---

೧ ಚೌಲಕರ್ಮಣಿ. ೨ ವಕ್ಷ್ಯಮಾಣಃ.

ದ್ವಿಜೋತ್ತಮರು ಈ ಮುಂದೆ ಹೇಳುವ ಮಂತ್ರವನ್ನು ಉಪನೀತಿಕ್ರಿಯಾ ಮಂತ್ರವನ್ನಾಗಿ ಸ್ಮರಿಸುತ್ತಾರೆ. ಪರಮನಿಸ್ತಾರಕಲಿಂಗಭಾಗೀ ಭವ ಪದವೂ ಇದರ ನಂತರದಲ್ಲಿ ಪರಮರ್ಷಿಲಿಂಗಭಾಗೀ ಭವ ಪದವೂ ಪರಮೇಂದ್ರ ಲಿಂಗಭಾಗೀ ಭವ ಪದವೂ ಇರುತ್ತವೆ.

**ಏವಂ ಪರಮರಾಜ್ಯಾದಿಪರಮಾರ್ಹಂತ್ಯಾದಿ ಚ ಕ್ರಮಾತ್ ।**
**ಯುಕ್ತಂ ಪರಮನಿರ್ವಾಣಪದೇನ ಚ ಶಿಖಾಪದಮ್** ॥ ೧೫೫ ॥

ಹೀಗೆಯೇ ಪರಮರಾಜ್ಯಲಿಂಗಭಾಗೀ ಭವ ಪದವೂ ಪರಮಾರ್ಹಂತ್ಯಲಿಂಗ ಭಾಗೀ ಭವ ಪದವೂ ಪರಮನಿರ್ವಾಣಲಿಂಗಭಾಗೀ ಭವ ಪದವೂ ಇರುತ್ತವೆ. ಲಿಂಗಭಾಗೀಭವವೆಂದರೆ ಆಯಾ ಚಿಹ್ನೆಗೆ ಪಾತ್ರನಾಗೆಂದರ್ಥವು.

**ಚೂರ್ಣಿಃ ॥ ಪರಮನಿಸ್ತಾರಕಲಿಂಗಭಾಗೀ ಭವ । ಪರಮರ್ಷಿಲಿಂಗಭಾಗೀ ಭವ । ಪರಮೇಂದ್ರಲಿಂಗಭಾಗೀ ಭವ । ಪರಮರಾಜ್ಯಲಿಂಗಭಾಗೀ ಭವ । ಪರಮಾರ್ಹಂತ್ಯಲಿಂಗಭಾಗೀ ಭವ । ಪರಮನಿರ್ವಾಣಲಿಂಗಭಾಗೀ ಭವ ॥**
**॥ ಇತಿ ಉಪನೀತಿಕ್ರಿಯಾಮಂತ್ರಃ ॥**

**ಮಂತ್ರೇಣಾನೇನ ಶಿಷ್ಯಸ್ಯ ಕೃತ್ವಾ ಸಂಸ್ಕಾರಮಾದಿತಃ ।**
**ನಿರ್ವಿಕಾರೇಣ ವಸ್ತ್ರೇಣ ಕುರ್ಯಾದೇ[೧]ನಂ ಸವಾಸಸಮ್** ॥ ೧೫೬ ॥

ಈ ಮಂತ್ರದಿಂದ ಶಿಷ್ಯನಿಗೆ ಪ್ರಥಮದಿಂದ ಸಂಸ್ಕಾರವನ್ನು ಮಾಡಿ ನಿರ್ವಿಕಾರ (ಬಣ್ಣಹಾಕದ) ವಸ್ತ್ರದಿಂದ ಇವನನ್ನು ವಸ್ತ್ರಸಹಿತನನ್ನಾಗಿ ಮಾಡಬೇಕು.

**ಕೌಪೀನಾಚ್ಛಾದನಂ ಚೈನ[೨]ಮಂತರ್ವಾಸೇನ ಕಾರಯೇತ್ ।**
**ಮೌಂಜೀಬಂಧಮತಃ ಕುರ್ಯಾದನುಬದ್ಧತ್ರಿಮೇಖಲಮ್** ॥ ೧೫೭ ॥

ಈ ಬಾಲಕನನ್ನು ಆ ವಸ್ತ್ರದೊಳಗೆ ಕೌಪೀನದಿಂದ ಮರೆ ಮಾಡಿಕೊಂಡಿರು ವವನನ್ನಾಗಿಯೂ ಮಾಡಿಸಬೇಕು. ಆಮೇಲೆ ಮೂರೆಳೆಗಳಿಂದ ಕಟ್ಟಲ್ಪಟ್ಟಿರುವ ಮೌಂಜೀಬಂಧವನ್ನು ಮಾಡಬೇಕು. ಸೊಂಟಕ್ಕೆ ಮೌಂಜೀ ಬಂಧನವನ್ನು ಮಾಡ ಬೇಕೆಂದು ಭಾವವು.

**[೩]ಸೂತ್ರಂ ಗಣಧರೈರ್ದೃಬ್ಧಂ ವ್ರತಚಿಹ್ನಂ ನಿಯೋಜಯೇತ್ ।**
**ಮಂತ್ರಪೂತಮತೋ ಯಜ್ಞೋಪವೀತೀ ಸ್ಯಾದಸೌ ದ್ವಿಜಃ** ॥ ೧೫೮ ॥

ಗಣಧರರಿಂದ ಮಾಡಲ್ಪಟ್ಟುದೂ ವ್ರತದ ಗುರುತೂ ಮಂತ್ರದಿಂದ ಪವಿತ್ರವೂ ಆದ ಬ್ರಹ್ಮಸೂತ್ರವನ್ನು ಇವನಿಗೆ ಕೊಡಬೇಕು. ಇದರಿಂದ ಈ ದ್ವಿಜನು ಯಜ್ಞೋಪವೀತವುಳ್ಳವನಾಗುವನು.

**ಜಾತ್ಯೈವ ಬ್ರಾಹ್ಮಣಃ ಪೂರ್ವಮಿದಾನೀಂ ವ್ರತಸಂಸ್ಕೃತಃ ।**
**ದ್ವಿರ್ಜಾತೋ ದ್ವಿಜ ಇತ್ಯೇವಂ ರೂಢಿ[೪]ಮಾಸ್ತಿಘ್ನುತೇ ಗುಣೈಃ** ॥ ೧೫೯ ॥

ಮೊದಲು ಜಾತಿಯಿಂದಲೇ ಬ್ರಾಹ್ಮಣನಾಗಿದ್ದನು. ಈಗ ವ್ರತದಿಂದ ಸಂಸ್ಕಾರ ವನ್ನು ಹೊಂದಿದವನಾಗಿ ಗುಣಗಳಿಂದ ''ಎರಡು ಜನ್ಮವುಳ್ಳ ದ್ವಿಜನು'' ಈ ಪ್ರಕಾರ ವಾದ ರೂಢಿಯನ್ನು ಹೊಂದುತ್ತಾನೆ.

**ದೇಯಾನ್ಯಣುವ್ರತಾನ್ಯಸ್ಮೈ ಗುರುಸಾಕ್ಷಿ ಯಥಾವಿಧಿ ।**
**ಗುಣಶೀಲಾನುಗೈಶ್ಚೈನಂ ಸಂಸ್ಕುರ್ಯಾದ್ವ್ರತ[೫]ಜಾತಕೈಃ** ॥ ೧೬೦ ॥

ಈ ದ್ವಿಜನಿಗೆ ಗುರುಸಾಕ್ಷಿಯಾಗಿ ವಿಧಿಪ್ರಕಾರವಾಗಿ ಅಹಿಂಸಾ ಮೊದಲಾದ ಅಣುವ್ರತಗಳನ್ನು ಕೊಡಬೇಕು. ದಿಗ್ವ್ರತ ಅನರ್ಥದಂಡವ್ರತ ಭೋಗೋಪಭೋಗ ಪರಿಮಾಣವ್ರತಗಳೆಂಬ ಗುಣವ್ರತಗಳಿಂದಲೂ ದೇಶಾವಕಾಶಿಕ ವ್ರತ ಸಾಮಯಿಕವ್ರತ ಪ್ರೋಷಧೋಪವಾಸವ್ರತ ವೈಯಾವೃತ್ಯವ್ರತಗಳೆಂಬ ಶಿಕ್ಷಾವ್ರತಗಳಿಂದಲೂ ಅನು ಸರಿಸಲ್ಪಟ್ಟ ವ್ರತಸಮೂಹಗಳಿಂದಲೂ ಈ ದ್ವಿಜನನ್ನು ಸಂಸ್ಕಾರ ಮಾಡಬೇಕು.

**ತತೋತಿಬಾಲವಿದ್ಯಾ[೧]ದೀನ್ನಿಯೋಗಾದಸ್ಯ ನಿರ್ದಿಶೇತ್ ।**
**ದತ್ವೋಪಾಸಕಾಧ್ಯಯನಂ [೨]ನಾಮಾಪಿ ಚರಣೋಚಿತಮ್** ॥ ೧೬೧ ॥

ಆಮೇಲೆ ಅವನ ಆಚರಣೆಗೆ ಯೋಗ್ಯವಾದ ಮತ್ತು ಉಪಾಸಕಾಧ್ಯಯನ ಶಾಸ್ತ್ರದಲ್ಲಿರುವ ಉಪನಯನಬ್ರಹ್ಮಚಾರಿಮೊದಲಾದ ಹೆಸರನ್ನೂ ಕೊಟ್ಟು ಮುಂದೆ ಹೇಳುವ ಅತಿಬಾಲವಿದ್ಯಾದಿಗಳನ್ನು ಅವಶ್ಯವಾಗಿ ಅವನಿಗೆ ಕಲಿಸಬೇಕು.

**ತತೋಽಯಂ ಕೃತಸಂಸ್ಕಾರಃ ಸಿದ್ಧಾರ್ಚನಪುರಸ್ಸರಮ್ ।**
**ಯಥಾವಿಧಾನಮಾಚಾರ್ಯಪೂಜಾಂ ಕುರ್ಯಾದತಃ ಪರಮ್**॥ ೧೬೨ ॥

ಬಳಿಕ ಸಿದ್ಧ ಪೂಜಾಪೂರ್ವಕವಾಗಿ ಸಂಸ್ಕಾರಮಾಡಲ್ಪಟ್ಟವನಾದ ಈ ದ್ವಿಜನು ಆಮೇಲೆ ಶಾಸ್ತ್ರಾಜ್ಞಾನುಸಾರವಾಗಿ ನಡೆದು ಪೂಜೆಯನ್ನು ಮಾಡಬೇಕು.

**ತಸ್ಮಿನ್ ದಿನೇ ಪ್ರವಿಷ್ಟಸ್ಯ ಭಿಕ್ಷಾರ್ಥಂ ಜ್ಞಾತಿವೇಶ್ಮಸು ।**
**ಯೋ[೩]ರ್ಥಲಾಭಃ ಸ ದೇಯಃ ಸ್ಯಾದುಪಾಧ್ಯಾಯಾಯ ಸಾದರಮ್** ॥

ಆ ದಿನದಲ್ಲಿ ಜ್ಞಾತಿಗಳ ಮನೆಗಳಲ್ಲಿ ಭಿಕ್ಷೆಗೋಸ್ಕರ ಪ್ರವೇಶಮಾಡಿದ ಈ ದ್ವಿಜನಿಗೆ ದೊರಕಿದ ವಸ್ತ್ರಾಭರಣ ಮೊದಲಾದ ಪದಾರ್ಥಸಮೂಹವನ್ನು ವಿದ್ಯಾಗುರುವಿಗೆ ಪ್ರೀತಿಪೂರ್ವಕವಾಗಿ ಕೊಡಬೇಕು.

**ಶೇಷೋ ವಿಧಿಸ್ತು ಪ್ರಾಕ್ಪ್ರೋಕ್ತಸ್ತಮನೂನಂ ಸಮಾಚರೇತ್ ।**
**ಯಾವತ್ಸೋಽಧೀತವಿದ್ಯಃ ಸನ್ಭಜೇತ್ಸಬ್ರಹ್ಮಚಾರಿತಾಮ್** ॥ ೧೬೪ ॥

ಉಳಿದ ವಿಧಿಯಾದರೋ ಮೊದಲು ಹೇಳಲ್ಪಟ್ಟಿದೆ. ಅದನ್ನು ಅವನು ವಿದ್ಯಾಧ್ಯಯನವನ್ನು ಮಾಡಿದವನಾಗಿ ಗೃಹಸ್ಥನ ಸಮಾನತೆಯನ್ನು ಹೊಂದುವ ವರೆಗೂ, ನ್ಯೂನತೆಯಿಲ್ಲದೆ ನಡೆಸಬೇಕು.

**॥ ಅಥ ವ್ರತಚರ್ಯಾಮಂತ್ರಃ ॥**

**ಅಥಾತೋಽಸ್ಯ ಪ್ರವಕ್ಷ್ಯಾಮಿ ವ್ರತಚರ್ಯಾಮನುಕ್ರಮಾತ್ ।**
**ಸ್ಯಾದ್ಯ[೪]ತ್ರೋಪಾಸಕಾಧ್ಯಾಯಃ ಸಮಾಸೇನಾ[೫]ನುಸಂಹೃತಃ** ॥ ೧೬೫ ॥

ಅನಂತರದಲ್ಲಿ ಇವನ ಯಾವ ವ್ರತಚರ್ಯಾಪ್ರತಿಪಾದನಕ್ರಿಯೆಯಲ್ಲಿ ಉಪಾಸಕಾಧ್ಯಾಯವು ಸಂಕ್ಷೇಪದಿಂದ ಸಂಗ್ರಹಿಸಲ್ಪಟ್ಟಿದೆಯೋ ಅಂತಹ ವ್ರತ ಚರ್ಯೆಯನ್ನೂ ಕ್ರಮದಿಂದ ಹೇಳುವೆನು.

**ಶಿರೋಲಿಂಗಮುರೋಲಿಂಗಂ ಲಿಂಗಂ ಕಟ್ಯೂರುಸಂಶ್ರಿತಮ್ ।**
**ಲಿಂಗಮಸ್ಯೋಪನೀತಸ್ಯ ಪ್ರಾಙ್ನಿರ್ಣೀತಂ ಚತುರ್ವಿಧಮ್** ॥ ೧೬೬ ॥

ಉಪನಯನಸಂಸ್ಕಾರವನ್ನು ಹೊಂದಿದ ಈ ದ್ವಿಜನಿಗೆ ಶಿರೋಲಿಂಗ ಉರೋ ಲಿಂಗ, ಕಟೀಲಿಂಗ, ಊರುಲಿಂಗವೆಂದು ನಾಲ್ಕುವಿಧವಾದ ಲಿಂಗವು ಮೊದಲು ನಿರ್ಣಯಿಸಲ್ಪಟ್ಟಿದೆ.

**ತತ್ತು ಸ್ಯಾದಸಿವೃತ್ತ್ಯಾ ವಾ [೬]ಮಷ್ಯಾ ಕೃಷ್ಯಾ ವಣಿಜ್ಯಯಾ ।**
**ಯಥಾಸ್ವಂ [೭]ವರ್ತಮಾನಾನಾಂ ಸದ್ದೃಷ್ಟೀನಾಂ ದ್ವಿಜನ್ಮನಾಮ್** ॥

ಖಡ್ಗವನ್ನು ಹಿಡಿದು ಜೀವನೋಪಾಯವನ್ನು ಮಾಡುವುದರಿಂದಲೂ ಮಷಿ ಜೀವನೋಪಾಯದಿಂದಲೂ(ಬರೆಹದಿಂದಲೂ) ಕೃಷಿಜೀವನೋಪಾಯದಿಂದಲೂ ವ್ಯಾಪಾರಜೀವನೋಪಾಯದಿಂದಲೂ ತಮ್ಮ ತಮ್ಮ ವೃತ್ತಿಯಲ್ಲಿರುವವರೂ

೧ ಶಿಷ್ಯಂ-ಬಾಲಂ. ೨ ವಸ್ತ್ರಸ್ಯಾಂತಃ. ೩ ಬ್ರಹ್ಮಸೂತ್ರಂ. ೪ ಪ್ರಾಪ್ನೋತಿ. ೫ ಸಮೂಹೈಃ.

೧ ವಕ್ಷ್ಯಮಾಣಾನ್. ೨ ಉಪನಯನಬ್ರಹ್ಮಚಾರೀತ್ಯಾದಿ ನಾಮಾಂತರಂ. ೩ ವಸ್ತ್ರಾಭರಣಾದಿಕಂ. ೪ ವ್ರತಚರ್ಯಾಪ್ರತಿಪಾದನಕರ್ಮಣಿ. ೫ ಸಂಗೃಹೀತಃ. ೬ ಮಷಿವೃತ್ತ್ಯಾ. ೭ ಜಿವತಾಂ.

ಸಮ್ಯಗ್ದೃಷ್ಟಿಗಳೂ ಆದ ದ್ವಿಜರಿಗೆ ಮೇಲೆ ಹೇಳಿದ ಲಿಂಗವಾದರೋ ಗುರುತಾಗಿರುವುದು.

**ಕುತಶ್ಚಿತ್ಕಾರಣಾದ್ಯಸ್ಯ ಕುಲಂ ಸಂಪ್ರಾಪ್ತದೂಷಣಮ್ ।**
**ಸೋಽಪಿ ರಾಜಾದಿಸಮ್ಮತ್ಯಾ ಶೋಧಯೇತ್ಸ್ವಂ ಯದಾಕುಲಮ್ ॥**

**[1]ತದಾಸ್ಯೋಪನಯಾರ್ಹತ್ವಂ ಪುತ್ರಪೌತ್ರಾದಿಸಂತತೌ ।**
**ನ ನಿಷಿದ್ಧಂ ಹಿ ದೀಕ್ಷಾರ್ಹೇ ಕುಲೇ ಚೇದಸ್ಯ ಪೂರ್ವಜಾಃ ॥ ೧೬೯ ॥**

ಯಾವನ ವಂಶವು ಯಾವುದೋ ಕಾರಣದಿಂದ ದೂಷಣವನ್ನು ಹೊಂದಿದ್ದರೆ ಅವನೂ ದೊರೆ ಮೊದಲಾದವರ ಸಮ್ಮತಿಯಿಂದ ತನ್ನ ವಂಶವನ್ನು ಶುದ್ಧ ಮಾಡಿದಾಗ ಇವನ ಹಿರಿಯರು ದೀಕ್ಷಾಯೋಗ್ಯವಾದ ಕುಲದಲ್ಲಿ ಹುಟ್ಟಿದ್ದರೆ ಇವನ ಪುತ್ರಪೌತ್ರಾದಿ ಸಂತತಿಯಲ್ಲಿ ಉಪನಯನ ಯೋಗ್ಯತೆಯು ನಿಷೇಧಿಸಲ್ಪಟ್ಟೇ ಇಲ್ಲ.

**ಅದೀಕ್ಷಾರ್ಹೇ ಕುಲೇ ಜಾತಾ ವಿದ್ಯಾಶಿಲ್ಪೋಪಜೀವಿನಃ ।**
**ಯೇ ತೇಷಾಮುಪನೀತ್ಯಾದಿಸಂಸ್ಕಾರೋ ನಾಭಿಸಮ್ಮತಃ ॥ ೧೭೦ ॥**

ಯಾರು ವಿದ್ಯೆಯಿಂದಲೂ ಶಿಲ್ಪದಿಂದಲೂ ಜೀವಿಸುವವರಾಗಿ ದೀಕ್ಷಾಯೋಗ್ಯವಲ್ಲದ ವಂಶದಲ್ಲಿ ಹುಟ್ಟಿರುತ್ತಾರೋ ಅವರಿಗೆ ಉಪನಯನಾದಿ ಸಂಸ್ಕಾರವು ಅಭಿಮತವಾಗಿಲ್ಲ.

**ತೇಷಾಂ ಸ್ಯಾದುಚಿತಂ ಲಿಂಗಂ ಸ್ವಯೋಗ್ಯವ್ರತಧಾರಿಣಾಮ್ ।**
**[2]ಏಕಶಾಟಕಧಾರಿತ್ವಂ ಸನ್ನ್ಯಾಸಮರಣಾವಧಿ ॥ ೧೭೧ ॥**

ತಮಗೆ ಯೋಗ್ಯವಾದ ವ್ರತಗಳನ್ನು ಧರಿಸಿದವರಾದ ಆ ವಿದ್ಯಾಶಿಲ್ಪೋಪಜೀವಿಗಳಿಗೆ ಸನ್ಯಾಸಪೂರ್ವಕವಾದ ಮರಣದವರೆಗೆ ಒಂದು ವಸ್ತ್ರವನ್ನು ಧರಿಸಿರುವಿಕೆಯು ಉಚಿತವಾದ ಚಿಹ್ನೆಯಾಗಿರುವುದು.

**ಸ್ಯಾ[3]ನ್ನಿರಾಮಿಷಭೋಜಿತ್ವಂ ಕುಲಸ್ತ್ರೀಸೇವನವ್ರತಮ್ ।**
**[4]ಅನಾರಂಭವಧೋತ್ಸರ್ಗೋ ಹ್ಯ[5]ಭಕ್ಷ್ಯಾಪೇಯವರ್ಜನಮ್ ॥**

ಅವರಿಗೆ ಇಚ್ಛಾರಹಿತವಾದ ಭೋಜನವೂ ತಾವು ವಿವಾಹಮಾಡಿಕೊಂಡಿರುವ ಕುಲಸ್ತ್ರೀಯ ಸೇವನವ್ರತವೂ ಆರಂಭದಿಂದುಂಟಾಗುವ ವಧೆಯ ಹೊರತು ಇತರ ವಧೆಯ ತ್ಯಾಗವೂ ಅಭಕ್ಷ್ಯ ಮತ್ತು ಅಪೇಯಗಳಾದ ಮದ್ಯಮಾಂಸಮಧುಗಳ ತ್ಯಾಗವೂ ನಿಯಮಗಳಾಗಿರಬೇಕು.

**ಇತಿ ಶುದ್ಧತರಾಂ ವೃತ್ತಿಂ ವ್ರತಪೂತಾಮುಪೇಯಿವಾನ್ ।**
**ಯೋ ದ್ವಿಜಸ್ತಸ್ಯ ಸಂಪೂರ್ಣೋ ವ್ರತಚರ್ಯಾವಿಧಿಃ ಸ್ಮೃತಃ ॥ ೧೭೩ ॥**

ಈ ಪ್ರಕಾರವಾಗಿ ವ್ರತದಿಂದ ಪವಿತ್ರವೂ ಅತ್ಯಂತ ಶುದ್ಧವೂ ಆದ ವೃತ್ತಿಯನ್ನು ಹೊಂದಿದವನಾದ ದ್ವಿಜನ ವ್ರತಚರ್ಯಾವಿಧಿಯು ಸಂಪೂರ್ಣವಾದುದೆಂಬುದಾಗಿ ಸ್ಮರಿಸಲ್ಪಟ್ಟಿದೆ.

**ದಶಾಧಿಕಾರಾ[6]ಸ್ತಸ್ಯೋಕ್ತಾಃ ಸೂತ್ರೇಣೌಪಾಸಕೇನ ಹಿ ।**
**[7]ತಾನ್ಯಥಾಕ್ರಮಮುದ್ದೇಶಮಾತ್ರೇಣಾನುಪ್ರಚಕ್ಷ್ಮಹೇ ॥ ೧೭೪ ॥**

ಆ ದ್ವಿಜನಿಗೆ ಉಪಾಸಕ ಸಂಬಂಧವಾದ ಸೂತ್ರದಿಂದ ಹತ್ತು ಅಧಿಕಾರಗಳು ಹೇಳಲ್ಪಟ್ಟಿರುತ್ತವೆ. ಆ ಅಧಿಕಾರಗಳನ್ನು ಕ್ರಮವಾಗಿ ಉದ್ದೇಶ–ನಾಮಸಂಕೀರ್ತನ ಮಾತ್ರದಿಂದ ಹೇಳುತ್ತೇವೆ.

**ತತ್ರಾತಿಬಾಲವಿದ್ಯಾದ್ಯಾ ಕುಲಾವಧಿರನಂತರಮ್ ।**
**ವರ್ಣೋತ್ತಮತ್ವಪಾತ್ರತ್ವೇ ತಥಾ ಸೃಷ್ಟ್ಯಧಿಕಾರಿತಾ ॥ ೧೭೫ ॥**

**ವ್ಯವಹಾರೇಶಿತಾನ್ಯಾ ಸ್ಯಾದವಧ್ಯತ್ವಮದಂಡ್ಯತಾ ।**
**ಮಾನಾರ್ಹತಾ ಪ್ರಜಾಸಂಬಂಧಾಂತರಂ ಚೇತ್ಯನುಕ್ರಮಾತ್ ॥ ೧೭೬ ॥**

ಆ ಹತ್ತು ಅಧಿಕಾರಗಳಲ್ಲಿ ಅತಿಬಾಲವಿದ್ಯೆಯು ಮೊದಲನೆಯದು, ಬಳಿಕ ಕುಲವಿದ್ಯೆಯು, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರಿತಾ, ವ್ಯವಹಾರೇಶಿತಾ, ಅವಧ್ಯತ್ವ, ಅದಂಡ್ಯತಾ, ಮಾನಾರ್ಹತಾ, ಪ್ರಜಾಸಂಬಂಧಾಂತರ. ಇವು ಅನುಕ್ರಮದಿಂದ ಹತ್ತು ಅಧಿಕಾರಗಳಾಗಿರುತ್ತವೆ.

**ದಶಾಧಿಕಾರವಸ್ತೂನಿ ಸ್ಯುರುಪಾಸಕಸಂಗ್ರಹೇ ।**
**ತಾನೀಮಾನಿ ಯಥೋದ್ದೇಶಂ ಸಂಕ್ಷೇಪೇಣ ವಿವೃಣ್ಮಹೇ ॥ ೧೭೭ ॥**

ಉಪಾಸಕ ಸಂಗ್ರಹದಲ್ಲಿ(ಶ್ರಾವಕಾಚಾರ ಗ್ರಂಥದಲ್ಲಿ) ಹತ್ತು ಅಧಿಕಾರ ವಸ್ತುಗಳಿರುತ್ತವೆ. ಆ ವಸ್ತುಗಳನ್ನು ಉದ್ದೇಶಕ್ರಮಾನುಸಾರವಾಗಿ ಸಂಕ್ಷೇಪದಿಂದ ವಿವರಿಸುತ್ತೇವೆ.

**ಬಾಲ್ಯಾತ್ಪ್ರಭೃತಿ ಯಾ ವಿದ್ಯಾ ಶಿಕ್ಷೋದ್ಯೋಗಾದ್ದ್ವಿಜನ್ಮನಃ ।**
**ಪ್ರೋಕ್ತಾತಿಬಾಲವಿದ್ಯೇತಿ ಸಾ ಕ್ರಿಯಾ ದ್ವಿಜಸಮ್ಮತಾ ॥ ೧೭೮ ॥**

ಬಾಲ್ಯದಿಂದ ಮೊದಲುಗೊಂಡು ಶಿಕ್ಷಣೆಯ (ಅಧ್ಯಯನದ) ಉದ್ಯೋಗದಿಂದ ದ್ವಿಜನಿಗೆ ಯಾವ ವಿದ್ಯೆಯು ಹೇಳಲ್ಪಟ್ಟಿರುವುದೋ ಆ ವಿದ್ಯೆಯು ಅತಿಬಾಲವಿದ್ಯೆಯೆಂಬುದಾಗಿ ದ್ವಿಜರಿಗೆ ಸಮ್ಮತವಾದ ಕ್ರಿಯೆಯಾಗಿರುವುದು.

**ತಸ್ಯಾಮಸತ್ಯಾಂ ಮೂಢಾತ್ಮಾ ಹೇಯಾದೇಯಾನಭಿಜ್ಞಕಃ ।**
**ಮಿಥ್ಯಾಶ್ರುತಿಂ ಪ್ರಪದ್ಯೇತ ದ್ವಿಜನ್ಮಾನ್ಯೈಃ [1]ಪ್ರತಾರಿತಃ ॥ ೧೭೯ ॥**

ಆ ವಿದ್ಯೆಯು ಇಲ್ಲದಿದ್ದರೆ ಮೂಢನೂ ಹೇಯೋಪಾದೇಯಗಳನ್ನು ತಿಳಿಯದವನೂ ಬೇರೆಯವರಿಂದ ವಂಚಿಸಲ್ಪಟ್ಟವನೂ ಆದ ದ್ವಿಜನು ಮಿಥ್ಯಾ ಶಾಸ್ತ್ರವನ್ನು ಹೊಂದಲೂಬಹುದು.

**ಬಾಲ್ಯ ಏವ ತತೋಽಭ್ಯಸ್ಯೇದ್ದ್ವಿಜ[2]ನ್ಮೌಪಾಸಿಕೀಂ ಶ್ರುತಿಮ್ ।**
**ಸ ತಯಾ ಪ್ರಾಪ್ತಸಂಸ್ಕಾರಃ ಸ್ವಪರೋತ್ತಾರಕೋ ಭವೇತ್ ॥ ೧೮೦ ॥**

ಆದುದರಿಂದ ದ್ವಿಜನು ಉಪಾಸಕನ ಸಂಬಂಧವಾದ ಶಾಸ್ತ್ರವನ್ನು ಬಾಲ್ಯದಲ್ಲಿಯೇ ಅಭ್ಯಾಸಮಾಡಬೇಕು. ಆ ಶಾಸ್ತ್ರದಿಂದ ಸಂಸ್ಕಾರವನ್ನು ಹೊಂದಿದವನಾದ ಆ ದ್ವಿಜನು ತನ್ನನ್ನೂ ಬೇರೆಯವರನ್ನೂ ಉದ್ಧರಿಸುವವನಾಗುವನು.

**ಕುಲಾವಧಿಃ ಕುಲಾಚಾರರಕ್ಷಣಂ ಸ್ಯಾದ್ದ್ವಿಜನ್ಮನಃ ।**
**ತಸ್ಮಿನ್ನಸತ್ಯಸೌ ನಷ್ಟಕ್ರಿಯೋಽನ್ಯಕುಲತಾಂ ಭಜೇತ್ ॥ ೧೮೧ ॥**

ದ್ವಿಜನ ಕುಲಾಚಾರದ ರಕ್ಷಣೆಯು ಕುಲಾವಧಿಯೆಂಬ ಎರಡನೆಯ ಅಧಿಕಾರವಾಗಿರುತ್ತದೆ. ಅದಿಲ್ಲದಿದ್ದರೆ ಈ ದ್ವಿಜನು ಕ್ರಿಯೆಯಿಲ್ಲದವನಾಗಿ ಅನ್ಯಕುಲತ್ವವನ್ನು ಹೊಂದುವನು. ಭ್ರಷ್ಟನಾಗುವನೆಂದು ಭಾವವು.

**ವರ್ಣೋತ್ತಮತ್ವಂ ವರ್ಣೇಷು ಸರ್ವೇಷ್ವಾಧಿಕ್ಯಮಸ್ಯ ವೈ ।**
**ತೇನಾಯಂ ಶ್ಲಾಘ್ಯತಾಮೇತಿ ಸ್ವಪರೋದ್ಧರಣಕ್ಷಮಃ ॥ ೧೮೨ ॥**

ವರ್ಣಗಳಲ್ಲೆಲ್ಲ ಈ ದ್ವಿಜನಿಗೆ ಚೆನ್ನಾಗಿ ಶ್ರೇಷ್ಠತ್ವವಿರುವುದು ವರ್ಣೋತ್ತಮತ್ವವೆಂಬ ಮೂರನೆಯ ಅಧಿಕಾರವಾಗಿದೆ. ಅದರಿಂದ ತನ್ನನ್ನೂ ಬೇರೆಯವರನ್ನೂ ಉದ್ಧರಿಸುವುದರಲ್ಲಿ ಸಮರ್ಥನಾದ ಈ ದ್ವಿಜನು ಶ್ಲಾಘ್ಯತ್ವವನ್ನು ಹೊಂದುವನು.

**ವರ್ಣೋತ್ತಮತ್ವಂ ಯದ್ಯಸ್ಯ ನ ಸ್ಯಾನ್ನ ಸ್ಯಾತ್ಪ್ರಕೃಷ್ಟತಾ ।**
**[3]ಅಪ್ರಕೃಷ್ಟಶ್ಚ ನಾತ್ಮಾನಂ ಶೋಧಯೇನ್ನ ಪರಾನಪಿ ॥ ೧೮೩ ॥**

೧ ಶೋಧನಾದುಪರಿ. ೨ ಖಂಡವಸ್ತ್ರಧಾರಿತ್ವಂ. ೩ ಕಾಂಕ್ಷಾ ವಿರಹಿತ ಭೋಜಿತ್ವಂ. ೪ ಆರಂಭಜನಿತಂ ವಧಂವಿಹಾಯ ಅನ್ಯವಧತ್ಯಾಗಃ. ೫ ಮದ್ಯ ಮಾಂಸಮಧುವರ್ಜನಂ. ೬ ದ್ವಿಜಸ್ಯ. ೭ ಅಧಿಕಾರಾನ್.

೧ ವಂಚಿತಃ. ೨ ಔಪಾಸಕೀಮಿತ್ಯಪಿ ಪಾಠಃ. ೩ ಅಪ್ರಕೃಷ್ಟಃ ಪುಮಾನ್.

ಈ ದ್ವಿಜನಿಗೆ ವರ್ಣೋತ್ತಮತ್ವವು ಇಲ್ಲದಿದ್ದರೆ ಶ್ರೇಷ್ಠತೆಯಿರಲಾರದು. ಶ್ರೇಷ್ಠನಲ್ಲದಿರುವ-ನಿಕೃಷ್ಟಮನುಷ್ಯನು ತನ್ನನ್ನೂ ಶುದ್ಧಮಾಡಿಕೊಳ್ಳಲಾರನು. ಬೇರೆಯವರನ್ನೂ ಶುದ್ಧಮಾಡಲಾರನು.

**[೧]ತತೋಽಯಂ ಶುದ್ಧಿಕಾಮಃ ಸನ್ಸೇವೇತಾನ್ಯಂ ಕುಲಿಂಗಿನಮ್ ।**
**[೨]ಕುಬ್ರಹ್ಮಂ ವಾ [೩]ತತಸ್ತಜ್ಜಾನ್ ದೋಷಾನ್ಪ್ರಾಪ್ನೋತ್ಯಸಂಶಯಮ್ ॥**

ಆದುದರಿಂದ ಈ ದ್ವಿಜನು ಶುದ್ಧಿಯನ್ನಿಚ್ಛಿಸುವವನಾಗಿ ಬೇರೆ ಮಿಥ್ಯಾದೃಷ್ಟಿಯನ್ನೋ ಕುತ್ಸಿತಬ್ರಾಹ್ಮಣನನ್ನೋ ಭಜಿಸುವನು. ಆ ಕುಲಿಂಗಿ ಕುತ್ಸಿತ ಬ್ರಾಹ್ಮಣ ಸೇವೆಯಿಂದ ಅವರಲ್ಲಿರುವ ದೋಷಗಳನ್ನು ನಿಸ್ಸಂದೇಹವಾಗಿ ಹೊಂದುತ್ತಾನೆ.

**[೪]ಪ್ರದಾನಾರ್ಹತ್ವಮಸ್ಯೇಷ್ಟಂ ಪಾತ್ರತ್ವಂ ಗುಣಗೌರವಾತ್ ।**
**ಗುಣಾಧಿಕೋ ಹಿ ಲೋಕೇಽಸ್ಮಿನ್ಪೂಜ್ಯಃ ಸ್ಯಾಲ್ಲೋಕಪೂಜಿತೈಃ ॥ ೧೮೫ ॥**

ಈ ದ್ವಿಜನಿಗೆ ದಾನಯೋಗ್ಯತ್ವವು ಅಂದರೆ ವಿಶಿಷ್ಟವಾದ ಪಾತ್ರತೆಯು ಗುಣಗೌರವದಿಂದ ನಾಲ್ಕನೆಯ ಪಾತ್ರತ್ವವೆಂದು ಅಭಿಮತವಾಗಿರುತ್ತದೆ. ಈ ಲೋಕದಲ್ಲಿ ಅಧಿಕಗುಣವುಳ್ಳವನೇ ಲೋಕಪೂಜಿತರಿಂದ ಪೂಜಿಸಲ್ಪಡುವುದಕ್ಕೆ ಯೋಗ್ಯನಾಗುವನು.

**ತತೋ ಗುಣಕೃತಾಂ ಸ್ವಸ್ಮಿನ್ಪಾತ್ರತಾಂ ದೃಢಯೇದ್ದ್ವಿಜಃ ।**
**[೫]ತದಭಾವೇ ವಿಮಾನ್ಯತ್ವಾ[೬]ದ್ಧ್ರಿಯತೇಽಸ್ಯ ಧನಂ ನೃಪೈಃ ॥ ೧೮೬ ॥**

ಆದುದರಿಂದ ದ್ವಿಜನು ತನ್ನಲ್ಲಿ ಗುಣಮೂಲಕವಾದ ಪಾತ್ರತೆಯನ್ನು ಸ್ಥಿರಪಡಿಸಬೇಕು. ಆ ಗುಣಮೂಲಕವಾದ ಪಾತ್ರತೆಯು ಇಲ್ಲದಿದ್ದರೆ ಮಾನ್ಯತೆಯಿಲ್ಲದಿರುವುದರಿಂದ ರಾಜರು ಇವನ ದ್ರವ್ಯವನ್ನಪಹರಿಸುತ್ತಾರೆ.

**ರಕ್ಷ್ಯಃ ಸೃಷ್ಟ್ಯಧಿಕಾರೋಽಪಿ ದ್ವಿಜೈರುತ್ತಮಸೃಷ್ಟಿಭಿಃ ।**
**[೭]ಅಸದ್ದೃಷ್ಟಿಕೃತಾಂ[೮]ಸೃಷ್ಟಿಂ ಪರಿಹೃತ್ಯ ವಿದೂರತಃ ॥ ೧೮೭ ॥**

ಉತ್ತಮವಾದ ಉತ್ಪತ್ತಿಯುಳ್ಳವರಾದ ದ್ವಿಜರು ಮಿಥ್ಯಾದೃಷ್ಟಿಗಳಿಂದ ಮಾಡಲ್ಪಟ್ಟಿರುವ ಕುಧರ್ಮಸೃಷ್ಟಿಯನ್ನು ದೂರದಲ್ಲಿಯೇ ಪರಿಹರಿಸಿ ಉತ್ತಮ ಸೃಷ್ಟಿಯ ಅಧಿಕಾರವನ್ನೂ ರಕ್ಷಿಸಬೇಕು. ಇದು ಐದನೆಯದಾದ ಸೃಷ್ಟ್ಯಧಿಕಾರಿತೆಯೆನಿಸುವುದು.

**ಅನ್ಯಥಾ ಸೃಷ್ಟಿವಾದೇನ [೯]ದುರ್ದೃಷ್ಟೇನ ಕುದೃಷ್ಟಯಃ**
**ಲೋಕಂ ನೃಪಾಂಶ್ಚ ಸಮ್ಮೋಹ್ಯ ನಯಂತ್ಯು[೧೦]ತ್ಪಥಗಾಮಿತಾಮ್ ॥**

ಹಾಗೆ ಸೃಷ್ಟ್ಯಧಿಕಾರವನ್ನು ರಕ್ಷಿಸದಿದ್ದರೆ ಮಿಥ್ಯಾದೃಷ್ಟಿಗಳು ವಿಚಾರ ಮಾಡಲ್ಪಡದಿರುವ ಸೃಷ್ಟಿವಾದದಿಂದ ಲೋಕವನ್ನೂ ದೊರೆಗಳನ್ನೂ ಮೋಹಗೊಳಿಸಿ ವಿಪರೀತಮಾರ್ಗಕ್ಕೆ ಒಯ್ಯುತ್ತಾರೆ.

**ಸೃಷ್ಟ್ಯಂತರಮತೋ ದೂರಮಪಾಸ್ಯ ನಯತತ್ತ್ವವಿತ್ ।**
**ಅನಾದಿಕ್ಷತ್ರಿಯೈಃ ಸೃಷ್ಟಾಂ ಧರ್ಮಸೃಷ್ಟಿಂ ಪ್ರಭಾವಯೇತ್ ॥ ೧೮೯ ॥**

ಆದುದರಿಂದ ನೀತಿಯ ರಹಸ್ಯವನ್ನು ತಿಳಿದವನು ಬೇರೆಯಾದ ಸೃಷ್ಟಿಯನ್ನು ದೂರದಲ್ಲಿ ಬಿಟ್ಟು ಅನಾದಿಪರಂಪರೆಯಾದ ಕ್ಷತ್ರಿಯರಿಂದ ಸೃಷ್ಟಿಸಲ್ಪಟ್ಟ ಧರ್ಮಸೃಷ್ಟಿಯನ್ನು ಪ್ರಚುರಮಾಡಬೇಕು – ಬೆಳಗಬೇಕು.

೧ ಸ್ವಪರಶೋಧನಸಾಮರ್ಥ್ಯಾಭಾವಾತ್. ೨ ಕುತ್ಸಿತಬ್ರಾಹ್ಮಣಂ. ೩ ಕುಲಿಂಗಕುಬ್ರಾಹ್ಮಣಸೇವನಾತ್. ೪ ದಾನಯೋಗ್ಯತ್ವಂ-ವಿಶಿಷ್ಟಪಾತ್ರತ್ವಂ. ೫ ಗುಣಕೃತ ಪಾತ್ರತಾಭಾವೇ. ೬ ಸ್ವೀಕ್ರಿಯತೇ-ಅಪಹ್ರಿಯತೇ. ೭ ಮಿಥ್ಯಾದೃಷ್ಟಿಕೃತಾಂ. ೮ ಕುಧರ್ಮಸೃಷ್ಟಿಂ. ೯ ಅಸಮೀಕ್ಷಿತೇನ. ೧೦ ಉನ್ಮಾರ್ಗಗಾಮಿತಾಂ.

**ತೀರ್ಥಕೃದ್ಭಿರಿಯಂ ಸೃಷ್ಟಾ ಧರ್ಮಸೃಷ್ಟಿಃ ಸನಾತನೀ ।**
**ತಾಂ ಸಂಶ್ರಿತಾನ್ನೃಪಾನೇವ ಸೃಷ್ಟಿಹೇತೂನ್ಪ್ರಕಾಶಯೇತ್ ॥ ೧೯೦ ॥**

ಸನಾತನವಾದ ಈ ಧರ್ಮಸೃಷ್ಟಿಯು ತೀರ್ಥಂಕರರಿಂದ ಸೃಷ್ಟಿಸಲ್ಪಟ್ಟಿರುತ್ತದೆ. ಆ ಧರ್ಮಸೃಷ್ಟಿಯನ್ನು ತನ್ನನ್ನು ಆಶ್ರಯಿಸಿದವರೂ ಸೃಷ್ಟಿಗೆ ಕಾರಣರೂ ಆದ ರಾಜರುಗಳಲ್ಲಿ ಪ್ರಕಾಶಪಡಿಸಬೇಕು.

**[೧]ಅನ್ಯಥಾನ್ಯಕೃತಾಂ ಸೃಷ್ಟಿಂ ಪ್ರಪನ್ನಾಃ ಸ್ಯುರ್ನೃಪೋತ್ತಮಾಃ ।**
**ತತೋ ನೈಶ್ವರ್ಯ[೨]ಮೇಷಾಂ ಸ್ಯಾ[೩]ತ್ತತ್ರಸ್ಥಾಶ್ಚ ಸ್ಯುರಾರ್ಹತಾಃ ॥ ೧೯೧ ॥**

ಹಾಗೆ ಪ್ರಕಾಶಪಡಿಸದಿದ್ದರೆ ರಾಜಶ್ರೇಷ್ಠರು ಬೇರೆಯವರಿಂದ ಮಾಡಲ್ಪಟ್ಟ ಸೃಷ್ಟಿಯನ್ನು ಹೊಂದಿದವರಾಗುವರು. ಆದುದರಿಂದ ಈ ದ್ವಿಜರಿಗೆ ಐಶ್ವರ್ಯವಿಲ್ಲದಿರುವುದರಿಂದ ಅಂದರೆ ದ್ವಿಜರು ಬಡವರಾಗಿರುವುದರಿಂದ ಆರ್ಹತ ಧರ್ಮಾವಲಂಬಿಗಳಾದ ಇವರೂ ಆ ಮಿಥ್ಯಾಧರ್ಮಸೃಷ್ಟಿಯಲ್ಲಿರುವವರಾಗುವರು.

**ವ್ಯವಹಾರೇಶಿತಾಂ ಪ್ರಾಹುಃ ಪ್ರಾಯಶ್ಚಿತ್ತಾದಿಕರ್ಮಣಿ ।**
**ಸ್ವತಂತ್ರತಾಂ ದ್ವಿಜಸ್ಯಾಸ್ಯ ಶ್ರಿತಸ್ಯ ಪರಮಾಂ ಶ್ರುತಿಮ್ ॥ ೧೯೨ ॥**

ಉತ್ಕೃಷ್ಟವಾದ ಶಾಸ್ತ್ರವನ್ನು ಹೊಂದಿದವನಾದ ಈ ದ್ವಿಜನಿಗೆ ಪ್ರಾಯಶ್ಚಿತ್ತಾದಿಕರ್ಮದಲ್ಲಿರುವ ಸ್ವತಂತ್ರತೆಯನ್ನು ಆರನೆಯದಾದ ವ್ಯವಹಾರೇಶಿತಾಧಿಕಾರವನ್ನಾಗಿ ಹೇಳುತ್ತಾರೆ.

**[೪]ತದಭಾವೇ ಸ್ವಮನ್ಯಾಂಶ್ಚ ನ ಶೋಧಯಿತುಮರ್ಹತಿ ।**
**ಅಶುದ್ಧಃ ಪರತಃ ಶುದ್ಧಿಮಭೀಪ್ಸನ್ನ್ಯಕ್ಕೃತೋ ಭವೇತ್ ॥ ೧೯೩ ॥**

ಆ ವ್ಯವಹಾರಾಧಿಕಾರವು ಇಲ್ಲದಿದ್ದರೆ ತನ್ನನ್ನೂ ಬೇರೆಯವರನ್ನೂ ಶುದ್ಧಮಾಡುವುದಕ್ಕೆ ಅರ್ಹನಾಗುವುದಿಲ್ಲ. ಅಶುದ್ಧನು ಬೇರೆಯವರಿಂದ ಶುದ್ಧಿಯನ್ನಿಚ್ಛಿಸುವವನಾಗಿ ನೀಚನಾಗಿ ಮಾಡಲ್ಪಡುವನು.

**ಸ್ಯಾದವಧ್ಯಾಧಿಕಾರೇಽಪಿ [೫]ಸ್ಥಿರಾತ್ಮಾ ದ್ವಿಜಸತ್ತಮಃ ।**
**ಬ್ರಾಹ್ಮಣೋ ಹಿ ಗುಣೋತ್ಕರ್ಷಾನ್ನಾ[೬]ನ್ಯತೋ ವಧಮರ್ಹತಿ ॥ ೧೯೪ ॥**

ಸ್ಥಿರಚಿತ್ತವುಳ್ಳವನಾದ ದ್ವಿಜೋತ್ತಮನು ವಧೆಗೆ ಅರ್ಹನಲ್ಲದಿರುವ ಅಧಿಕಾರದಲ್ಲಿ ಅಂದರೆ ಅವಧ್ಯತ್ವಾಧಿಕಾರದಲ್ಲಿಯೂ ಇರುವನು. ಗುಣಾಧಿಕ್ಯವಿರುವುದರಿಂದ ಬ್ರಾಹ್ಮಣನು ದೊರೆ ಮೊದಲಾದವರಿಂದ ವಧೆಗೆ ಅರ್ಹನಾಗುವುದೇ ಇಲ್ಲವು.

**ಸರ್ವಪ್ರಾಣೀ ನ ಹಂತವ್ಯೋ ಬ್ರಾಹ್ಮಣಸ್ತು ವಿಶೇಷತಃ ।**
**ಗುಣೋತ್ಕರ್ಷಾಪಕರ್ಷಾಭ್ಯಾಂ ವಧೇ[೭]ವಿಧ್ಯಾತ್ಮತಾ ಮತಾ ॥ ೧೯೫ ॥**

ಸಮಸ್ತಪ್ರಾಣಿಯೂ ಕೊಲ್ಲುವುದಕ್ಕೆ ಯೋಗ್ಯವಲ್ಲ. ಬ್ರಾಹ್ಮಣನಾದರೋ ವಿಶೇಷವಾಗಿ ಕೊಲ್ಲುವುದಕ್ಕೆ ಯೋಗ್ಯನಲ್ಲ. ವಧೆಯಲ್ಲಿ ಗುಣಾಧಿಕ್ಯ ಗುಣಹೀನತೆಗಳಿಂದ ವಿಧಿಯ ಅಭಾವರೂಪವು ಅಭಿಮತವಾಗಿದೆ. ಗುಣಸಹಿತನನ್ನೂ ಗುಣರಹಿತಪ್ರಾಣಿಯನ್ನೂ ಕೊಲ್ಲಬಾರದೆಂದು ಭಾವವು.

**ತಸ್ಮಾದವಧ್ಯತಾಮೇಷ ಪೋಷಯೇದ್ಧಾರ್ಮಿಕೇ ಜನೇ ।**
**ಧರ್ಮಸ್ಯ ತದ್ಧಿ ಮಾಹಾತ್ಮ್ಯಂ [೮]ತತ್ಸ್ಥೋ ಯನ್ನಾಭಿಭೂಯತೇ ॥**

ಆದುದರಿಂದ ಈ ದ್ವಿಜನು ಧಾರ್ಮಿಕಜನರಲ್ಲಿ ಅವಧ್ಯತ್ವವನ್ನು ಪಾಲಿಸಬೇಕು. ಅದು ಧರ್ಮದ ಮಹಿಮೆಯಲ್ಲವೇ? ಧರ್ಮದಲ್ಲಿರುವ ಈ ದ್ವಿಜನು ತಿರಸ್ಕರಿಸಲ್ಪಡುವುದಿಲ್ಲ. ದ್ವಿಜನು ತನ್ನ ಅವಧ್ಯತ್ವವನ್ನು ಜಾಗರೂಕತೆಯಿಂದ

೧ ಅಪ್ರಕಾಶಿತೇ ಸತಿ. ೨ ದ್ವಿಜಾನಾಂ. ೩ ಕುಧರ್ಮಸೃಷ್ಟಿಸ್ಥಾಃ. ೪ ವ್ಯವಹಾರಿತ್ವಾಭಾವೇ. ೫ ಸ್ಥಿರಸ್ವರೂಪಃ. ೬ ನೃಪಾದೇಃ ಸಕಾಶಾತ್. ೭ ಗುಣಸಹಿತಃ ಗುಣರಹಿತಶ್ಚ ನ ಹಂತವ್ಯ ಇತಿ ಭಾವಃ. ೮ ಧರ್ಮಸ್ಥಃ.

ಕಾಪಾಡಿಕೊಳ್ಳಬೇಕೆಂದೂ ಅದು ಧರ್ಮದ ಮಹಿಮೆಯೆಂದೂ ಧಾರ್ಮಿಕನು ತಿರಸ್ಕರಿಸಲ್ಪಡುವುದಿಲ್ಲವೆಂದೂ ಭಾವವು.

**[೧]ತದಭಾವೇ ಚ ವಧ್ಯತ್ವಮಯ[೨]ಮೃಚ್ಛತಿ ಸರ್ವತಃ ।**
**[೩]ಏವಂ ಚ ಸತಿ ಧರ್ಮಸ್ಯ ನಶ್ಯೇತ್ಪ್ರಾಮಾಣ್ಯಮರ್ಹತಾಮ್ ॥ ೧೯೭ ॥**

ಧರ್ಮವಿಲ್ಲದಿದ್ದರೆ ಈ ಬ್ರಾಹ್ಮಣನು ಎಲ್ಲರಿಂದಲೂ ವಧ್ಯತ್ವವನ್ನು ಹೊಂದುತ್ತಾನೆ. ಹೀಗೆ–ವಧ್ಯತ್ವವಿದ್ದರೆ ಅರ್ಹತ್ಪರಮೇಶ್ವರರ ಧರ್ಮದ ಪ್ರಾಮಾಣ್ಯವು ನಾಶವಾಗುವುದು.

**ತತಃ ಸರ್ವಪ್ರಯತ್ನೇನ ರಕ್ಷ್ಯೋ ಧರ್ಮಃ ಸನಾತನಃ ।**
**ಸ ಹಿ ಸಂರಕ್ಷಿತೋ ರಕ್ಷಾಂ ಕರೋತಿ [೪]ಸಚರಾಚರೇ ॥ ೧೯೮ ॥**

ಆದುದರಿಂದ ಸನಾತನವಾದ ಧರ್ಮವು ಸರ್ವಪ್ರಯತ್ನದಿಂದ ರಕ್ಷಿಸತಕ್ಕುದಾಗಿದೆ. ಸಂರಕ್ಷಿಸಲ್ಪಟ್ಟ ಆ ಧರ್ಮವು ಚರಾಚರಸಹಿತವಾದ ಜಗತ್ತಿನಲ್ಲಿ ರಕ್ಷಣೆಯನ್ನು ಮಾಡುವುದು. ನಿಶ್ಚಯ.

**ಸ್ಯಾದದಂಡ್ಯತ್ವಮಪ್ಯೇವ[೫]ಮಸ್ಯ ಧರ್ಮೇ ಸ್ಥಿರಾತ್ಮನಃ ।**
**ಧರ್ಮಸ್ಥೋ ಹಿ ಜನೋಽನ್ಯಸ್ಯ [೬]ದಂಡಪ್ರಸ್ಥಾಪನೇ ಪ್ರಭುಃ ॥ ೧೯೯ ॥**

ಧರ್ಮದಲ್ಲಿ ಸ್ಥಿರಚಿತ್ತನಾದ ಈ ದ್ವಿಜನಿಗೆ ಅದಂಡ್ಯತ್ವವೂ (ದಂಡಾನರ್ಹತ್ವವೂ) ಹೀಗೆಯೇ ಆಗುವುದು. ಧರ್ಮದಲ್ಲಿರುವ ಜನವು ಬೇರೆಯವನಿಗೆ ದಂಡವನ್ನು ವಿಧಿಸುವುದರಲ್ಲಿ ಸಮರ್ಥವಾಗಿರುವುದಲ್ಲವೇ ?

**[೭]ತದ್ಧ[೮]ರ್ಮಸ್ಥೀಯಮಾಮ್ನಾಯಂ ಭಾವಯನ್ ಧರ್ಮದರ್ಶಿಭಿಃ ।**
**ಅಧರ್ಮಸ್ಥೇಷು ದಂಡಸ್ಯ ಪ್ರಣೇತಾ ಧಾರ್ಮಿಕೋ ನೃಪಃ ॥ ೨೦೦ ॥**

ಆ ಕಾರಣದಿಂದ ಧರ್ಮದಲ್ಲಿರುವವನ ಸಂಬಂಧವಾದ ಪರಂಪರೆಯನ್ನು ಭಾವಿಸುವವನೂ ಅಧರ್ಮದಲ್ಲಿರುವವರಲ್ಲಿ ದಂಡವನ್ನು ವಿಧಿಸುವವನೂ ಆದ ರಾಜನು ಧಾರ್ಮಿಕರಾಜನೆಂದು ಧರ್ಮದರ್ಶಿಗಳಾದ ಆಚಾರ್ಯರಿಂದ ಹೇಳಲ್ಪಟ್ಟಿದ್ದಾನೆ.

**ಪರಿಹಾರ್ಯಂ ಯಥಾ ದೇವಗುರುದ್ರವ್ಯಂ ಹಿತಾರ್ಥಿಭಿಃ ।**
**[೯]ಬ್ರಹ್ಮಸ್ವಂ ಚ ತಥಾಭೂತಂ ನ ದಂಡಾರ್ಹಸ್ತತೋ ದ್ವಿಜಃ ॥ ೨೦೧ ॥**

ಹಿತವನ್ನು ಬಯಸುವವರಿಂದ ದೇವರ ಮತ್ತು ಗುರುಗಳ ದ್ರವ್ಯವು ಹೇಗೆ ಪರಿಹರಿಸತಕ್ಕುವಾಗಿರುವುದೋ ಹಾಗೆಯೇ ಬ್ರಾಹ್ಮಣದ್ರವ್ಯವೂ ಪರಿಹರಿಸತಕ್ಕುದಾಗಿರುವುದು. ಆದುದರಿಂದ ಬ್ರಾಹ್ಮಣನು ದಂಡಾರ್ಹನಲ್ಲ.

**ಯುಕ್ತ್ಯಾನಯಾ ಗುಣಾಧಿಕ್ಯಮಾತ್ಮನ್ಯಾರೋಪಯನ್ವಶೀ ।**
**ಅದಂಡ್ಯಪಕ್ಷೇ ಸ್ವಾತ್ಮಾನಂ ಸ್ಥಾಪಯೇ[೧೦]ದ್ದಂಡಧಾರಿಣಾಮ್ ॥ ೨೦೨ ॥**

ಈ ಯುಕ್ತಿಯಿಂದ ತನ್ನಲ್ಲಿ ಗುಣಾಧಿಕ್ಯವನ್ನು ಆರೋಪಿಸುವವನೂ ಜಿತೇಂದ್ರಿಯನೂ ಆದ ಬ್ರಾಹ್ಮಣನು ರಾಜರುಗಳಿಗೆ ತನ್ನನ್ನು ಅದಂಡ್ಯಪಕ್ಷದಲ್ಲಿ ಸ್ಥಾಪಿಸುವನು. ಗುಣಾಧಿಕ್ಯವುಳ್ಳ ಬ್ರಾಹ್ಮಣನು ರಾಜರುಗಳ ದಂಡಕ್ಕೆ ಗುರಿಯಾಗುವುದಿಲ್ಲವೆಂದು ಭಾವವು.

**[೧೧]ಅಧಿಕಾರೇ ಹ್ಯಸತ್ಯಸ್ಮಿನ್ ಸ್ಯಾದ್ದಂಡ್ಯೋಽಯಂ ಯಥೇ[೧೨]ತರಃ ।**
**ತತಶ್ಚ[೧೩]ನಿಸ್ಸ್ವತಾಂ ಪ್ರಾಪ್ತೋ ನೇಹಾಮುತ್ರ ಚ ನಂದತಿ ॥ ೨೦೩ ॥**

ಈ ಅದಂಡ್ಯತ್ವಾಧಿಕಾರವು ಇಲ್ಲದಿರಲು ಈ ಬ್ರಾಹ್ಮಣನು ದಂಡಿಸುವುದಕ್ಕೆ ಯೋಗ್ಯನಾದ ಪುರುಷನಂತೆ, ದಂಡಯೋಗ್ಯನಾಗುವನು. ಆದರಿಂದ ದಾರಿದ್ರ್ಯವನ್ನು ಹೊಂದಿದವನಾಗಿ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸಂತೋಷಪಡುವುದಿಲ್ಲ.

**ಮಾನ್ಯತ್ವಮಸ್ಯ ಸಂಧತ್ತೇ ಮಾನಾರ್ಹತ್ವಂ ಸುಭಾವಿತಮ್ ।**
**ಗುಣಾಧಿಕೋ ಹಿ ಮಾನ್ಯಃ ಸ್ಯಾದ್ವಂದ್ಯಃ ಪೂಜ್ಯಶ್ಚ [೧]ಸತ್ತಮೈಃ ॥ ೨೦೪ ॥**

ಚೆನ್ನಾಗಿ ಭಾವಿಸಲ್ಪಟ್ಟ ಮಾನಾರ್ಹತ್ವವು (ಮಾನಕ್ಕೆ ಯೋಗ್ಯವಾಗಿರುವಿಕೆಯು) ಈ ಬ್ರಾಹ್ಮಣನಿಗೆ ಗೌರವಕ್ಕೆ ಪಾತ್ರನಾಗಿರುವಿಕೆಯನ್ನುಂಟುಮಾಡುವುದು. ಹೆಚ್ಚಾದ ಗುಣಗಳುಳ್ಳವನಲ್ಲವೇ ಶ್ರೇಷ್ಠರಿಂದ ಮಾನ್ಯನೂ ವಂದ್ಯನೂ ಪೂಜ್ಯನೂ ಆಗುವನು ?

**ಅಸತ್ಯ[೨]ಸ್ಮಿನ್ನ ಮಾನ್ಯತ್ವಮಸ್ಯ ಸ್ಯಾತ್ಸಮ್ಮತೈರ್ಜನೈಃ ।**
**[೩]ತತಶ್ಚ [೪]ಸ್ಥಾನಮಾನಾದಿಲಾಭಾಭಾವಾತ್ಪದಚ್ಯುತಿಃ ॥ ೨೦೫ ॥**

ಮಾನಾರ್ಹತ್ವವು ಇಲ್ಲದಿದ್ದರೆ ಶ್ರೇಷ್ಠರಾದ ಜನರಿಂದ ಈ ಬ್ರಾಹ್ಮಣನಿಗೆ ಮಾನ್ಯತೆಯು ಇರಲಾರದು. ಮಾನ್ಯತೆಯಿಲ್ಲದಿರುವುದರಿಂದ ಮೊದಲಿನ ಸ್ಥಾನಮಾನಾದಿಲಾಭವಿಲ್ಲದೆ ಹೋಗಿ ಆದರಿಂದ ಪದಚ್ಯುತಿಯಾಗುವುದು.

**ತಸ್ಮಾ[೫]ದಯಂ ಗುಣೈರ್ಯತ್ನಾದಾತ್ಮನ್ಯಾರೋಪ್ಯತಾಂ ದ್ವಿಜೈಃ ।**
**[೬]ಯತ್ನಶ್ಚ ಜ್ಞಾನವೃತ್ತಾದಿಸಂಪತ್ತಿಃ ಸೋಽರ್ಚ್ಯತಾಂ ನೃಪೈಃ ॥ ೨೦೬ ॥**

ಆದುದರಿಂದ ಈ ಮಾನ್ಯತ್ವಾಧಿಕಾರವನ್ನು ಬ್ರಾಹ್ಮಣರು ಪ್ರಯತ್ನದಿಂದ ತಮ್ಮಲ್ಲಿ ಗುಣಗಳಿಂದ ಆರೋಪಿಸಿಕೊಳ್ಳಬೇಕು. ಮಾನಾರ್ಹತ್ವಪ್ರಯತ್ನವಾದರೋ ಜ್ಞಾನ ಆಚರಣ ಮೊದಲಾದುವುಗಳೆಂಬ ಸಂಪತ್ತಿಯು. ಅಂತಹ ಬ್ರಾಹ್ಮಣನನ್ನು ರಾಜರು ಪೂಜಿಸಬೇಕು – ಗೌರವಿಸಬೇಕು.

**ಸ್ಯಾ[೭]ತ್ಪ್ರಜಾಂತರಸಂಬಂಧೇ ಸ್ವೋನ್ನತೇರಪರಿಚ್ಯುತಿಃ ।**
**ಯಾಸ್ಯ ಸೋಕ್ತಾ ಪ್ರಜಾಸಂಬಂಧಾಂತರಂ ನಾಮತೋ ಗುಣಃ ॥ ೨೦೭ ॥**

ಮಿಥ್ಯಾದೃಷ್ಟಿ ಮೊದಲಾದವರೊಡನೆ ವಿವಾಹಾದಿಸಂಬಂಧವಾದರೆ ತನ್ನ ಶ್ರೇಷ್ಠತೆಗೆ ಚ್ಯುತಿಯಾಗದಿರುವುದು ಯಾವುದುಂಟೋ ಅದು ಈ ಬ್ರಾಹ್ಮಣನ ಪ್ರಜಾಸಂಬಂಧಾಂತರವೆಂಬ ಗುಣವೆಂದು ಹೇಳಲ್ಪಟ್ಟಿರುತ್ತದೆ.

**ಯಥಾ [೮]ಕಾಲಾಯಸಾವಿದ್ಧಂ ಸ್ವರ್ಣಂ ಯಾತಿ ವಿವರ್ಣತಾಮ್ ।**
**ನ ತಥಾಸ್ಯಾನ್ಯಸಂಬಂಧೇ ಸ್ವಗುಣೋತ್ಕರ್ಷ[೯]ವಿಪ್ಲವಃ ॥ ೨೦೮ ॥**

ಕಬ್ಬಿಣದೊಡನೆ ಕೂಡಿರುವ ಬಂಗಾರವು ಹೇಗೆ ಮಾಲಿನ್ಯವನ್ನು ಹೊಂದುವುದೋ ಹಾಗೆ ಈ ಬ್ರಾಹ್ಮಣನಿಗೆ ಬೇರೆಯವರ ಸಂಬಂಧವಾದರೆ ತನ್ನ ಗುಣಾಧಿಕ್ಯಕ್ಕೆ ಬಾಧೆ ಬರುವುದಿಲ್ಲ.

**ಕಿಂತು ಪ್ರಜಾಂತರಂ ಸ್ವೇನ ಸಂಬದ್ಧಂ ಸ್ವಗುಣಾನಯಮ್ ।**
**ಪ್ರಾಪಯತ್ಯಚಿರಾದೇವ [೧೦]ಲೋಹಧಾತುಂ ಯಥಾ ರಸಃ ॥ ೨೦೯ ॥**

ಮತ್ತೇನೆಂದರೆ, ಈ ಬ್ರಾಹ್ಮಣನು ತನ್ನೊಡನೆ ಸಂಬಂಧವನ್ನು ಹೊಂದಿದ ಬೇರೆಯವರಿಗೆ ಶೀಘ್ರವಾಗಿಯೇ ಬಂಗಾರವಿರುವ ಕಲ್ಲನು ಸಿದ್ಧರಸದಂತೆ, ತನ್ನ ಗುಣಗಳನ್ನು ಹೊಂದಿಸುತ್ತಾನೆ. ತನ್ನಂತೆ ಮಾಡುತ್ತಾನೆಂದು ಭಾವವು.

**ತತೋ ಮಹಾನಯಂ ಧರ್ಮಪ್ರಭಾವೋದ್ಯೋತಕೋ ಗುಣಃ ।**
**[೧೧]ಯೇನಾ[೧೨]ಯಂ ಸ್ವಗುಣೈರನ್ಯಾನಾತ್ಮಸಾತ್ಕರ್ತುಮರ್ಹತಿ ॥ ೨೧೦ ॥**

೧ ಧರ್ಮಾಭಾವೇ. ೨ ಗಚ್ಛತಿ. ೩ ವಧ್ಯತ್ವೇ ಸತಿ. ೪ ಜಗತಿ. ೫ ದ್ವಿಜಸ್ಯ. ೬ ದಂಡೋಪಾದಾನೇ. ೭ ತಸ್ಮಾತ್ಕಾರಣಾತ್. ೮ ಧರ್ಮಸ್ಥಸ್ಯ ಸಂಬಂಧಿನಂ. ೯ ಬ್ರಾಹ್ಮದ್ರವ್ಯಂ. ೧೦ ರಾಜ್ಞಾಂ. ೧೧ ಅದಂಡ್ಯತ್ವೇ. ೧೨ ದಂಡ್ಯಪುರುಷಃ. ೧೩ ದರಿದ್ರತಾಂ.

೧ ಶ್ರೇಷ್ಠೈಃ. ೨ ಮಾನಾರ್ಹತ್ವೇ ಅಸತಿ. ೩ ಅಮಾನ್ಯತ್ವಾತ್. ೪ ಪೂರ್ವಸ್ಥಿತಸ್ಯ ಸ್ಥಾನಮಾನಾದಿಲಾಭಸ್ಯ ಅಭಾವಾತ್. ೫ ಮಾನ್ಯತ್ವಾಧಿಕಾರಃ. ೬ ಮಾನಾರ್ಹತ್ವಯತ್ನಃ. ೭ ಮಿಥ್ಯಾದೃಷ್ಟ್ಯಾದಿಭಿರ್ವಿವಾಹಾದಿ ಸಂಬಂಧೇ ಸತಿ. ೮ ಅಯೋಯುಕ್ತಂ. ೯ ಬಾಧಾ. ೧೦ ಸ್ವರ್ಣಪಾಷಾಣಂ. ೧೧ ಪ್ರಜಾಂತರ ಸಂಬಂಧೇನ. ೧೨ ದ್ವಿಜಃ.

ಆದುದರಿಂದ ಧರ್ಮದ ಪ್ರಭಾವವನ್ನು ಬೆಳಗುವ ಈ ಗುಣವು ದೊಡ್ಡದು. ಆದರಿಂದ ಈ ದ್ವಿಜನು ತನ್ನ ಗುಣಗಳಿಂದ ಬೇರೆಯವರನ್ನು ತನ್ನವರನ್ನಾಗಿ ಮಾಡುವುದಕ್ಕೆ ಯೋಗ್ಯನಾಗುತ್ತಾನೆ.

**ಅಸತ್ಯಸ್ಮಿನ್ಗುಣೇನ್ಯಸ್ಮಾತ್ಪ್ರಾಪ್ನುಯಾತ್ಸ್ವಗುಣಚ್ಯುತಿಮ್ ।**
**ಸತ್ಯೇವಂ ಗುಣವತ್ತಾಸ್ಯ [೧]ನಿಕೃಷ್ಯೇತ ದ್ವಿಜನ್ಮನಃ ॥ ೨೧೧ ॥**

ಈ ಗುಣವಿಲ್ಲದಿದ್ದರೆ ಬೇರೆಯವರಿಂದ ಗುಣಹಾನಿಯನ್ನು ಹೊಂದುವನು. ಹೀಗಾದರೆ ಈ ಬ್ರಾಹ್ಮಣನ ಗುಣವುಳ್ಳವನೆನಿಸಿರುವಿಕೆಯು ನಾಶವಾಗುವುದು.

**ತತೋತಿಬಾಲವಿದ್ಯಾದೀ[೨]ನ್ನಿಯೋಗಾನ್ ದಶಧೋದಿತಾನ್ ।**
**ಯಥಾರ್ಹಮಾತ್ಮಸಾತ್ಕುರ್ವನ್ ದ್ವಿಜಃ ಸ್ಯಾಲ್ಲೋಕಸಮ್ಮತಃ ॥ ೨೧೨ ॥**

ಆದುದರಿಂದ ಹತ್ತು ಪ್ರಕಾರವಾಗಿ ಹೇಳಲ್ಪಟ್ಟ ಅತಿಬಾಲವಿದ್ಯೆ ಮೊದಲಾದ ಅಧಿಕಾರಗಳನ್ನು ಯಥಾಯೋಗ್ಯವಾಗಿ ಸ್ವಾಧೀನಮಾಡಿಕೊಳ್ಳುವವನಾದ ಬ್ರಾಹ್ಮಣನು ಲೋಕಸಮ್ಮತನಾಗುವನು. ಲೋಕಪೂಜಿತನಾಗುವನೆಂದು ಭಾವವು.

**ಗುಣೇಷ್ವೇಷು ವಿಶೇಷೋನ್ಯೋ ಯೋ ವಾಚ್ಯೋ ಬಹುವಿಸ್ತರಃ ।**
**ಸ ಉಪಾಸಕಸಿದ್ಧಾಂತಾದಧಿಗಮ್ಯಃ ಪ್ರಪಂಚತಃ ॥ ೨೧೩ ॥**

ಈ ಮೇಲೆ ಹೇಳಿದ ಗುಣಗಳಲ್ಲಿ ಬಹುವಿಸ್ತೃತವಾಗಿ ಹೇಳತಕ್ಕುದಾದ ಬೇರೆ ವಿಶೇಷವನ್ನು ವಿಸ್ತಾರವಾಗಿ ಉಪಾಸಕಶಾಸ್ತ್ರದಿಂದ ತಿಳಿಯಬೇಕು. ವಿಸ್ತಾರ ವರ್ಣನೆಯನ್ನು ಶ್ರಾವಕಾಚಾರಶಾಸ್ತ್ರದಿಂದ ತಿಳಿಯಬೇಕೆಂದು ಭಾವವು.

**ಕ್ರಿಯಾಮಂತ್ರಾನುಷಂಗೇಣ ವ್ರತಚರ್ಯಾಕ್ರಿಯಾವಿಧೌ ।**
**ದಶಾಧಿಕಾರಾ ವ್ಯಾಖ್ಯಾತಾಃ ಸದ್ವೃತ್ತೈ[೩]ರಾದೃತಾ ದ್ವಿಜೈಃ ॥ ೨೧೪ ॥**

ವ್ರತಚರ್ಯೆಯೆಂಬ ಕ್ರಿಯಾವಿಧಿಯಲ್ಲಿ ಆ ಕ್ರಿಯೆಯ ಮಂತ್ರಗಳ ಸಂಬಂಧದಿಂದ ಸದಾಚಾರಿಗಳಾದ ದ್ವಿಜರು ಪ್ರೀತಿಸುವುದಕ್ಕೆ ಯೋಗ್ಯವಾದ ಹತ್ತು ಅಧಿಕಾರಗಳು ಹೇಳಲ್ಪಟ್ಟುವು.

**ಕ್ರಿಯಾಮಂತ್ರಾ ಇಹ ಜ್ಞೇಯಾ ಯೇ ಪೂರ್ವಮನುವರ್ಣಿತಾಃ ।**
**ಸಾಮಾನ್ಯವಿಷಯಾಃ ಸಪ್ತ ಪೀಠಿಕಾಮಂತ್ರರೂಢಯಃ ॥ ೨೧೫ ॥**

ಈ ಗ್ರಂಥದಲ್ಲಿ ಮೊದಲು ವರ್ಣಿಸಲ್ಪಟ್ಟುವೂ ಪೀಠಿಕಾಮಂತ್ರಗಳೆಂಬ ರೂಢಿಯುಳ್ಳುವೂ ಆದ ಏಳು ಕ್ರಿಯಾಮಂತ್ರಗಳು ಸಾಮಾನ್ಯವಿಷಯಗಳೆಂದು – ಸರ್ವ ಕ್ರಿಯೆಗಳಲ್ಲಿ ಉಪಯೋಗಿಸಲ್ಪಡತಕ್ಕುವೆಂದು ತಿಳಿಯಲ್ಪಡತಕ್ಕುವಾಗಿರುತ್ತವೆ.

**ತೇ ಹಿ ಸಾಧಾರಣಾಃ ಸರ್ವಕ್ರಿಯಾಸು ವಿನಿಯೋಗಿನಃ ।**
**ತತ [೪]ಔತ್ಸರ್ಗಿಕಾನೇತಾನ್ಮಂತ್ರಾನ್ಮಂತ್ರವಿದೋ ವಿದುಃ ॥ ೨೧೬ ॥**

ಸಮಸ್ತಕ್ರಿಯೆಗಳಲ್ಲಿಯೂ ಉಪಯೋಗವುಳ್ಳುವಾದ ಈ ಕ್ರಿಯೆಗಳಾದರೋ ಸಾಮಾನ್ಯಕ್ರಿಯೆಗಳಾಗಿರುತ್ತವೆ. ಆದುದರಿಂದ ಮಂತ್ರಜ್ಞರು ಈ ಮಂತ್ರಗಳನ್ನು ಸಾಧಾರಣಮಂತ್ರಗಳನ್ನಾಗಿ ತಿಳಿಯುತ್ತಾರೆ.

**ವಿಶೇಷವಿಷಯಾ ಮಂತ್ರಾಃ ಕ್ರಿಯಾಸೂಕ್ತಾಸು ದರ್ಶಿತಾಃ ।**
**ಇತಃಪ್ರಭೃತಿ ಚಾಭ್ಯೂಹ್ಯಾಸ್ತೇ ಯಥಾಮ್ನಾಯ[೫]ಮಗ್ರಜೈಃ ॥ ೨೧೭ ॥**

ಮೇಲೆ ಹೇಳಲ್ಪಟ್ಟ ಕ್ರಿಯೆಗಳಲ್ಲಿ ವಿಶೇಷವಿಷಯಗಳುಳ್ಳ–ವಿಶೇಷಕ್ರಿಯೆಗಳಲ್ಲಿ ಉಪಯೋಗಿಸಲ್ಪಡತಕ್ಕುದಾದ ಮಂತ್ರಗಳೂ ತೋರಿಸಲ್ಪಟ್ಟುವು. ಇಲ್ಲಿಂದ ಮುಂದೆ ಆ ಮಂತ್ರಗಳು ಶಾಸ್ತ್ರೋಕ್ತಪ್ರಕಾರವಾಗಿ ದ್ವಿಜರಿಂದ ತಿಳಿಯತಕ್ಕುವಾಗಿರುತ್ತವೆ. ವಿಶೇಷ ವಿಷಯಗಳನ್ನು ಬ್ರಾಹ್ಮಣರಿಂದ ತಿಳಿದುಕೊಳ್ಳಬೇಕೆಂದು ಭಾವವು.

**ಮಂತ್ರಾನಿಮಾ[೧]ನ್ಯಥಾಯೋಗಂ ಯಃ ಕ್ರಿಯಾಸು ನಿಯೋಜಯೇತ್ ।**
**ಸ ಲೋಕೇ ಸಮ್ಮತಿಂ ಯಾತಿ ಯುಕ್ತಾಚಾರೋ ದ್ವಿಜೋತ್ತಮಃ ॥**

ಯಾವನು ಕ್ರಿಯೆಗಳಲ್ಲಿ ಈ ಮಂತ್ರಗಳನ್ನು ಯುಕ್ತಿಯಿಂದ ಪ್ರಯೋಗಿಸುವನೋ ಯೋಗ್ಯವಾದ ಆಚಾರವುಳ್ಳವನೂ ದ್ವಿಜೋತ್ತಮನೂ ಆದ ಆ ಮನುಷ್ಯನು ಲೋಕದಲ್ಲಿ ಸಮ್ಮತಿಯನ್ನು ಹೊಂದುತ್ತಾನೆ. ಪ್ರಶಂಸೆಯನ್ನು ಪಡೆಯುತ್ತಾನೆಂದು ಭಾವವು.

**ಕ್ರಿಯಾ ಮಂತ್ರವಿಹೀನಾಸ್ತು ಪ್ರಯೋಕ್ತೃಣಾಂ ನ ಸಿದ್ಧಯೇ ।**
**ಯಥಾ [೨]ಸುಕೃತಸನ್ನಾಹಾಃ ಸೇನಾ [೩]ವ್ಯಸ್ತ್ರಾ [೪]ವಿನಾಯಕಾಃ ॥ ೨೧೯ ॥**

ಮಂತ್ರಗಳಿಲ್ಲದ ಕ್ರಿಯೆಗಳಾದರೋ ಅವುಗಳನ್ನು ಪ್ರಯೋಗಿಸುವವರ ಸಿದ್ಧಿಗೆ, ಚೆನ್ನಾಗಿ ಕವಚಗಳನ್ನು ಧರಿಸಿರುವವರೂ ಆಯುಧಗಳಿಲ್ಲದವರೂ ನಾಯಕ–ಸೇನಾಪತಿಯಿಲ್ಲದವರೂ ಆದ ಸೈನಿಕರಂತೆ, ಉಪಯೋಗಗಳಾಗುವುದಿಲ್ಲ.

**ತತೋ ವಿಧಿಮಿಮಂ ಸಮ್ಯಗವಗಮ್ಯ [೫]ಕೃತಾಗಮೈಃ ।**
**ವಿಧಾನೇನ ಪ್ರಯೋಕ್ತವ್ಯಾಃ ಕ್ರಿಯಾ ಮಂತ್ರಪುರಸ್ಕೃತಾಃ ॥ ೨೨೦ ॥**

ಆದುದರಿಂದ ಈ ವಿಧಿಯನ್ನು ಚೆನ್ನಾಗಿ ತಿಳಿದು ಸಂಪೂರ್ಣಶಾಸ್ತ್ರಜ್ಞರಿಂದ ಮಂತ್ರಪೂರ್ವಕವಾದ ಕ್ರಿಯೆಗಳು ವಿಧಿಯಿಂದ ಪ್ರಯೋಗಿಸಲ್ಪಡತಕ್ಕುವಾಗಿರುತ್ತವೆ.

**ಇತ್ಥಂ ಸ ಧರ್ಮವಿಜಯೀ ಭರತಾಧಿರಾಜೋ**
**ಧರ್ಮಕ್ರಿಯಾಸು [೬]ಕೃತಧೀರ್ನೃಪಲೋಕಸಾಕ್ಷಿ ।**
**[೭]ತಾನ್ಸುವ್ರತಾನ್ ದ್ವಿಜವರಾ[೮]ನ್ವಿನಿಯಮ್ಯ ಸಮ್ಯಕ್**
**ಧರ್ಮಪ್ರಿಯಃ ಸಮಸೃಜದ್ದ್ವಿಜಲೋಕಸರ್ಗಮ್ ॥ ೨೨೧ ॥**

ಸಂಪೂರ್ಣಬುದ್ಧಿಯುಳ್ಳವನೂ ಧರ್ಮದಲ್ಲಿ ಪ್ರೀತಿಯುಳ್ಳವನೂ ಧರ್ಮದಿಂದ ದಿಗ್ವಿಜಯವನ್ನು ಮಾಡಿದವನೂ ಆದ ಆ ಭರತಾದಿರಾಜನು ಶ್ರೇಷ್ಠವಾದ ವ್ರತಗಳುಳ್ಳವರಾದ ಆ ದ್ವಿಜಶ್ರೇಷ್ಠರನ್ನು ರಾಜರುಗಳ ಸಾಕ್ಷಿಯಾಗಿ ಧರ್ಮಕ್ರಿಯೆಗಳಲ್ಲಿ ಮೇಲೆ ಹೇಳಿದಂತೆ ಚೆನ್ನಾಗಿ ವಿನಿಯೋಗಿಸಿ – ಸೇರಿಸಿ ಬ್ರಾಹ್ಮಣಜನರ ಸೃಷ್ಟಿಯನ್ನು ಮಾಡಿದನು.

**ಇತಿ ಭರತನರೇಂದ್ರಾತ್ಪ್ರಾಪ್ತಸತ್ಕಾರಯೋಗಾ**
**[೯]ವ್ರತಪರಿಚಯಚಾರೂದಾರವೃತ್ತಾಃ ಶ್ರುತಾಢ್ಯಾಃ ।**
**ಜಿನವೃಷಭ[೧೦]ಮತಾನುವ್ರಜ್ಯಯಾ ಪೂಜ್ಯಮಾನಾ**
**ಜಗತಿ ಬಹುಮತಾಸ್ತೇ ಬ್ರಾಹ್ಮಣಾಃ ಖ್ಯಾತಿಮೀಯುಃ ॥ ೨೨೨ ॥**

ಈ ಪ್ರಕಾರವಾಗಿ ಭರತಚಕ್ರವರ್ತಿಯಿಂದ ಸತ್ಕಾರಸಂಬಂಧವನ್ನು ಹೊಂದಿದವರೂ ವ್ರತಾಭ್ಯಾಸದಿಂದ ಮನೋಹರವೂ ಉದಾರವೂ ಆದ ನಡೆವಳಿಕೆಯುಳ್ಳವರೂ ಶಾಸ್ತ್ರಸಂಪನ್ನರೂ ಜಿನಶ್ರೇಷ್ಠನಾದ ವೃಷಭತೀರ್ಥಂಕರನ ಮತವನ್ನನುಸರಿಸಿರುವುದರಿಂದ ಪೂಜಿಸಲ್ಪಡುವವರೂ ಲೋಕದಲ್ಲಿ ಮಾನ್ಯರಾಗಿರುವವರೂ ಆದ ಬ್ರಾಹ್ಮಣರು ಪ್ರಸಿದ್ಧಿಯನ್ನು ಹೊಂದಿದರು.

---

೧ ನಶ್ಯೇತ್. ೨ ಅಧಿಕಾರಾನ್. ೩ ಆದರಣೀಯಾಃ. ೪ ಸಾಧಾರಣಾನ್. ೫ ದ್ವಿಜೈಃ.

೧ ಯಥಾಯುಕ್ತಿ. ೨ ಸುವಿಹಿತಕವಚಾಃ. ೩ ವಿಗತಾಯುಧಾಃ. ೪ ವಿಗತನಾಯಕಾಃ. ೫ ಸಂಪೂರ್ಣಶಾಸ್ತ್ರೈಃ. ೬ ಸಂಪೂರ್ಣಬುದ್ಧಿಃ. ೭ ಚಕ್ರಿಕೃತಸಸ್ಯಾದೀನ್ ಅವಿಘಾತಿನಃ. ೮ ವಿನಿಯೋಗಂ ಕೃತ್ವಾ. ೯ ವ್ರತಾಭ್ಯಾಸ. ೧೦ ಮತಾನುಗಮನೇನ.

೧ವೃತ್ತಸ್ಥಾನಯತಾನ್ನಿಧಾಯ ೨ಭಗವಾನ್ನಿಕ್ಷ್ವಾಕುಚೂಡಾಮಣಿ-
ರ್ಜೈನೇ ವರ್ತ್ಮನಿ ಸುಸ್ಥಿರಾನ್ ದ್ವಿಜವರಾನ್ಸಮ್ಮಾನಯನ್ನತ್ಯಹಮ್ ।
ಸ್ವಂ ಮೇನೇ ಕೃತಿನಂ ೩ಮುದಾ ೪ಪರಿಗತಾಂ ಸ್ವಾಂ ಸೃಷ್ಟಿಮುಚ್ಚೈಃ ಕೃತಾಮ್
ಪಶ್ಯನ್ ಕಃ ೫ಕೃತಧೀಃ ಕೃತಾರ್ಥಪದವೀಂ ನಾತ್ಮಾನಮಾರೋಪಯೇ ॥

ಜಿನನ ಸಂಬಂಧವಾದ ಮಾರ್ಗದಲ್ಲಿದೃಢವಾಗಿರುವವರಾದ ಬ್ರಾಹ್ಮಣರನ್ನು ಚಾರಿತ್ರಸ್ಥಾನಗಳಲ್ಲಿ (ನೆಲೆಗಳಲ್ಲಿ) ಪ್ರಯತ್ನಪರರನ್ನಾಗಿ ಮಾಡಿ ಪ್ರತಿದಿನವೂ ಸನ್ಮಾನಿಸುವವನೂ ಚೆನ್ನಾಗಿ ಮಾಡಲ್ಪಟ್ಟುದೂ ಸಂತೋಷದಿಂದ ಯುಕ್ತವೂ ಆದ ತನ್ನ ಬ್ರಾಹ್ಮಣಸೃಷ್ಟಿಯನ್ನು ನೋಡುವವನೂ ಪ್ರಸಿದ್ಧನೂ ಪೂಜ್ಯನೂ ಇಕ್ಷ್ವಾಕುವಂಶಶ್ರೇಷ್ಠನೂ ಆದ ಭರತಚಕ್ರೇಶ್ವರನು ತನ್ನನ್ನು ಕೃತಾರ್ಥನನ್ನಾಗಿ ತಿಳಿದನು. ಸಂಪೂರ್ಣಬುದ್ಧಿಯುಳ್ಳವನಾದ ಯಾವನು ತಾನೆ ತನ್ನನ್ನು ಕೃತಾರ್ಥಪದವಿಯನ್ನು ಹತ್ತಿಸುವುದಿಲ್ಲ ? ಕೃತಕೃತ್ಯನಾದವನು ಯಾವನು ತಾನೇ ತನ್ನನ್ನು ಕೃತಕೃತ್ಯನನ್ನಾಗಿ ತಿಳಿಯುವುದಿಲ್ಲವೆಂದು ಭಾವವು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ದ್ವಿಜೋತ್ಪತ್ತೌ ಕ್ರಿಯಾಮಂತ್ರಾನುವರ್ಣನಂ ನಾಮ ಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತುಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್''ಬ್ರಾಹ್ಮಣೋತ್ಪತ್ತಿಯಲ್ಲಿ ಕ್ರಿಯಾಮಂತ್ರವರ್ಣನವೆಂಬ ನಲ್ವತ್ತನೆಯ ಪರ್ವವು ಸಂಪೂರ್ಣವಾದುದು.

---

೧ ಚಾರಿತ್ರಸ್ಥಾನಪ್ರಯತ್ನಪರಾನಿತ್ಯರ್ಥಃ. ೨ ಸಭವಾನಿತ್ಯಪಿಪಾಠಃ. ೩ ಸಂತೋಷೇಣಸಹ. ೪ ಸಮನ್ವಿತಾಂ. ೫ ಸಂಪೂರ್ಣಬುದ್ಧಿಃ.

# ಅಥ ಏಕಚತ್ವಾರಿಂಶತ್ತಮಂ ಪರ್ವ

**ಅಥ ಚಕ್ರಧರಃ ಕಾಲೇ ವ್ಯತಿಕ್ರಾಂತೇ ಕಿಯತ್ಯಪಿ ।**
**ಸ್ವಪ್ನಾ[೧]ನ್ನ್ಯಶಾಮಯತ್ಕಾಂಶ್ಚಿದೇಕದಾದ್ಭುತದರ್ಶನಾನ್ ॥ ೧ ॥**

ಅನಂತರದಲ್ಲಿ ಭರತಚಕ್ರೇಶ್ವರನು ಎಷ್ಟೋ ಕಾಲವು ಕಳೆಯುತ್ತಿರಲು ಒಂದು ಕಾಲದಲ್ಲಿ ಆಶ್ಚರ್ಯಕರವಾದ ದರ್ಶನಗಳುಳ್ಳ ಕೆಲವು ಕನಸುಗಳನ್ನು ಕಂಡನು.

**ತತ್ಸ್ವಪ್ನದರ್ಶನಾತ್ಕಿಂಚಿದುತ್ತ್ರಸ್ತ ಇವ ಚೇತಸಾ ।**
**ಪ್ರಬುದ್ಧಃ ಸಹಸಾ ತೇಷಾಂ ಫಲಾನೀತಿ ವ್ಯತರ್ಕಯತ್ ॥ ೨ ॥**

ಆ ಕನಸುಗಳನ್ನು ನೋಡಿದುದರಿಂದ ಮನಸ್ಸಿನಿಂದ ಸ್ವಲ್ಪ ಬೆದರಿದವನಂತಾದನು. ಶೀಘ್ರವಾಗಿ ಎಚ್ಚತ್ತವನಾಗಿ ಆ ಕನಸುಗಳ ಫಲಗಳನ್ನು ಮುಂದೆ ಹೇಳುವಂತೆ ಊಹಿಸಿದನು.

**ಅಸತ್ಫಲಾ ಇಮೇ ಸ್ವಪ್ನಾಃ ಪ್ರಾಯೇಣ ಪ್ರತಿಭಾಂತಿ [೨]ಮಾಮ್ ।**
**ಮನ್ಯೇ ದೂರಫಲಾಂಶ್ಚೈನಾನ್ [೩]ಪುರಾಕಲ್ಪೇ ಫಲಪ್ರದಾನ್ ॥ ೩ ॥**

"ಈ ಕನಸುಗಳು ಪ್ರಾಯಕವಾಗಿ ನನಗೆ ದುಷ್ಟಫಲವುಳ್ಳವುಗಳಾಗಿ ತೋರುತ್ತವೆ. ಇವುಗಳನ್ನು ಮುಂದಿನ ಕಲ್ಪದಲ್ಲಿ–ಪಂಚಮಕಾಲದಲ್ಲಿ ಫಲವನ್ನು ಕೊಡುವುವುಗಳನ್ನಾಗಿಯೂ ದೂರಫಲವುಳ್ಳವುಗಳನ್ನಾಗಿಯೂ ತಿಳಿಯುತ್ತೇನೆ.

**ಕುತಶ್ಚಿದ್ಭಗವತ್ಯದ್ಯ [೪]ಪ್ರತಪತ್ಯಾದಿಭರ್ತರಿ ।**
**ಪ್ರಜಾನಾಂ ಕಥಮೇವ್ಯೈ[೫]ವಂವಿಧೋಪಪ್ಲವಸಂಭವಃ ॥ ೪ ॥**

ಭಗವಂತನಾದ ಆದೀಶ್ವರನು ಹೇಗೂ ಈಗ ಪ್ರಕಾಶಮಾನನಾಗಿರುತ್ತಿರಲು ಪ್ರಜೆಗಳಿಗೆ ಮುಂದೆ ಹೇಳುವ ಸ್ವಪ್ನಫಲೋಪದ್ರವವು ಹೇಗೆ ತಾನೆ ಸಂಭವಿಸುವುದು ?

**[೬]ತತಃ [೭]ಕೃತಯುಗಸ್ಯಾಸ್ಯ ವ್ಯತಿಕ್ರಾಂತೌ ಕದಾಚನ ।**
**ಫಲಮೇತೇ ಪ್ರದಾಸ್ಯಂತಿ ನೂನ[೮]ಮೇನಃ ಪ್ರಕರ್ಷತಃ ॥ ೫ ॥**

ಆದುದರಿಂದ ಈ ಕೃತಯುಗದ– ದುಃಷಮಸುಷಮವೆಂಬ ನಾಲ್ಕನೆಯ ಕಾಲದ ಕಳೆಯುವಿಕೆಯಲ್ಲಿ (ನಾಲ್ಕನೆಯ ಕಾಲವು ಕಳೆದನಂತರ) ಒಂದಾನೊಂದು ಕಾಲದಲ್ಲಿ ಈ ಕನಸುಗಳು ಪಾಪದ ಆಧಿಕ್ಯದಿಂದ ನಿಶ್ಚಯವಾಗಿ ಫಲವನ್ನು ಕೊಡುವುವು.

**ಯುಗಾಂತವಿಪ್ಲವೋದರ್ಕಾಸ್ತ ಏತೇನಿಷ್ಟಶಂಸಿನಃ ।**
**ಸ್ವಪ್ನಾಃ [೯]ಪ್ರಜಾ[೧೦]ಪ್ರಜಾಪಾಲ[೧೧]ಸಾಧಾರಣಫಲೋದಯಾಃ ॥ ೬ ॥**

ಕೃತಯುಗದ ಕೊನೆಯಲ್ಲಿ ಅನಿಷ್ಟವಾದ ಉತ್ತರಫಲಗಳುಳ್ಳವೂ ಪ್ರಜೆಗಳಿಗೂ ಪ್ರಜಾಪಾಲಕನಾದ ದೊರೆಗೂ ಸಮಾನಫಲವನ್ನುಂಟುಮಾಡುವುವೂ ಆದ ಈ ಕನಸುಗಳು ಅನಿಷ್ಟಫಲಗಳನ್ನು ಸೂಚಿಸುವುವುಗಳಾಗಿರುತ್ತವೆ.

**ಯದ್ವಚ್ಚಂದ್ರಾರ್ಕಬಿಂಬೋತ್ಥ[೧೨]ವಿಕ್ರಿಯಾಜನಿತಂ ಫಲಮ್ ।**
**ಜಗತ್ಸಾಧಾರಣಂ ತದ್ವ[೧೩]ತ್ಸದಸಚ್ಚಾ[೧೪]ಸ್ಮದೀಕ್ಷಿತಮ್ ॥ ೭ ॥**

ಚಂದ್ರ ಸೂರ್ಯರ ಬಿಂಬಗಳಿಂದುಂಟಾದ ಗ್ರಹಣ ಪರಿವೇಷಾದಿ ವಿಕಾರದಿಂದುಂಟಾದ ಫಲವು ಹೇಗೆ ಲೋಕಕ್ಕೆ ಸಾಧಾರಣ– ಸಮಾನವಾದುದೋ ನನ್ನಿಂದ ನೋಡಲ್ಪಟ್ಟುದಾದ ಇಷ್ಟಾನಿಷ್ಟಫಲವೂ ಹಾಗೆಯೇ. ಲೋಕಸಾಧಾರಣವಾದುದೆಂದು ಭಾವವು.

**ಇತೀದ[೧]ಮನುಮಾನಂ ನಃ ಸ್ಥೂಲಾರ್ಥಾನುಪ್ರಚಿಂತನಮ್ ।**
**ಸೂಕ್ಷ್ಮತತ್ತ್ವಪ್ರತೀತಿಸ್ತು [೨]ಪ್ರತ್ಯಕ್ಷಜ್ಞಾನಗೋಚರಃ ॥ ೮ ॥**

ಈ ಪ್ರಕಾರವಾಗಿ ಸ್ಥೂಲವಾದ ಅರ್ಥವನ್ನು ಪರಿಶೀಲಿಸುವುದಾದ ಇದು ನಮ್ಮ ಅನುಮಾನಜ್ಞಾನವು. ಸೂಕ್ಷ್ಮವಾದ ತತ್ತ್ವದ ತಿಳಿವಳಿಕೆಯಾದರೋ ಕೇವಲಜ್ಞಾನಕ್ಕೆ ವಿಷಯವು.

**ಕೇವಲಾರ್ಕಾದೃತೇ ನಾನ್ಯಃ ಸಂಶಯಧ್ವಾಂತಭೇದಕೃತ್ ।**
**ಕೋ ಹಿ ನಾಮ ತಮೋ [೩]ನೈಶಂ ಹನ್ಯಾ[೪]ದನ್ಯತ್ರ ಭಾಸ್ಕರಾತ್ ॥ ೯ ॥**

ಕೇವಲಜ್ಞಾನವೆಂಬ ಸೂರ್ಯನಲ್ಲದೆ ಸಂಶಯವೆಂಬ ಕಗ್ಗತ್ತಲೆಯನ್ನು ಭೇದಿಸುವವನು ಬೇರೆಯವನಿಲ್ಲ. ಸೂರ್ಯನನ್ನು ಬಿಟ್ಟು ರಾತ್ರಿಯ ಸಂಬಂಧಿಯಾದ ಕತ್ತಲೆಯನ್ನು ಯಾರು ತಾನೆ ನಾಶಮಾಡುವರು ?

**ತತ್ಸ್ವಾ[೫]ದರ್ಶೇ ಸ್ಥಿತೇ [೬]ದೇವೇ ಕೋ ನಾಮಾಸ್ಮನ್ಮತಿಭ್ರಮಃ ।**
**[೭]ಸತ್ಯಾದರ್ಶೇ [೮]ಕರಾಮರ್ಶಾತ್ಕಃ ಪಶ್ಯೇನ್ಮುಖಸೌಷ್ಠವಮ್ ॥ ೧೦ ॥**

ಯಥಾರ್ಥಸ್ವರೂಪವನ್ನು ತಿಳಿಸುವ ಕನ್ನಡಿಗೆ ಸಮಾನನಾದ ವೃಷಭಜಿನೇಶ್ವರನು ಇರುತ್ತಿರಲು ನಮ್ಮ ಬುದ್ಧಿಭ್ರಮೆಯು ಎಂತಹದು ? ಕನ್ನಡಿಯು ಇರುತ್ತಿರಲು ಹಸ್ತಸ್ಪರ್ಶದಿಂದ ಮುಖದ ಚೆಲುವಿಕೆಯನ್ನು ಯಾವನು ನೋಡುವನು ?

**[೯]ತದತ್ರ ಭಗವದ್ವಕ್ತ್ರಮಂಗಲಾದರ್ಶದರ್ಶನಾತ್ ।**
**ಯುಕ್ತಾ ನ[೧೦]ಸ್ತತ್ತ್ವನಿರ್ಣೀತಿಃ ಸ್ವಪ್ನಾನಾಂ ಶಾಂತಿಕರ್ಮ ಚ ॥ ೧೧ ॥**

ಆದುದರಿಂದ ಈ ವಿಷಯದಲ್ಲಿ ಭಗವಂತನ ಮುಖವೆಂಬ ಮಂಗಲಕರವಾದ ಕನ್ನಡಿಯ ದರ್ಶನದಿಂದ ನಮ್ಮ ಸ್ವಪ್ನಗಳ ಸ್ವರೂಪನಿಶ್ಚಯವು ಚೆನ್ನಾಗಿ ಆಗುವುದು. ಶಾಂತಿಕ್ರಿಯೆಯೂ ಆಗುವುದು.

**ಅಪಿ ಚಾ[೧೧]ಸ್ಮದುಪಜ್ಞಂ ಯದ್ದ್ವಿಜಲೋಕಸ್ಯ ಸರ್ಜನಮ್ ।**
**ಗತ್ವಾ ತದಪಿ ವಿಜ್ಞಾಪ್ಯಂ ಭಗವತ್ಪಾದಸನ್ನಿಧೌ ॥ ೧೨ ॥**

ಮತ್ತೂ ನನ್ನಿಂದ ಮೊದಲು ಪ್ರಾರಂಭಿಸಲ್ಪಟ್ಟ ಬ್ರಾಹ್ಮಣರ ಸೃಷ್ಟಿಯನ್ನೂ ಹೋಗಿ ಭಗವಂತನ ಪಾದಸನ್ನಿಧಿಯಲ್ಲಿ ವಿಜ್ಞಾಪಿಸಿಕೊಳ್ಳಬೇಕು.

**ದ್ರಷ್ಟವ್ಯಾ ಗುರವೋ ನಿತ್ಯಂ ಪ್ರಷ್ಟವ್ಯಾಶ್ಚ ಹಿತಾಹಿತಮ್ ।**
**ಮಹೇಜ್ಯಯಾ ಚ [೧೨]ಯಷ್ಟವ್ಯಾಃ ಶಿಷ್ಟಾನಾಮಿಷ್ಟಮೀದೃಶಮ್ ॥ ೧೩ ॥**

ಯಾವಾಗಲೂ ಗುರುಗಳು ನೋಡಲ್ಪಡತಕ್ಕವರು. ಹಿತಾಹಿತವನ್ನು ಕೇಳಲ್ಪಡತಕ್ಕವರು. ಮಹಾಪೂಜೆಯಿಂದ ಪೂಜಿಸಲ್ಪಡತಕ್ಕವರು. ಸದಾಚಾರ ಸಂಪನ್ನರಾದ ಹಿರಿಯರ ಇಷ್ಟವು ಈ ಪ್ರಕಾರವಾದುದು. ಪ್ರತಿದಿನವೂ ಗುರುಗಳನ್ನು ನೋಡಿ ಹಿತಾಹಿತವನ್ನು ಕೇಳಿ ಅವರನ್ನು ಪೂಜಿಸುವುದು ಹಿರಿಯರ ಇಷ್ಟವಾಗಿದ್ದಿತೆಂದು ಭಾವವು."

---

೧ ದದರ್ಶ. ೨ ಮಮ ಪ್ರಕಾಶಂತೇ. ೩ ಪಂಚಮಕಾಲೇ ಇತ್ಯರ್ಥಃ. ೪ ಪ್ರಕಾಶಮಾನೇ ಸತಿ. ೫ ವಕ್ಷ್ಯಮಾಣಸ್ವಪ್ನಫಲೋಪದ್ರವಸಂಭವಃ. ೬ ಕಾರಣಾತ್. ೭ ಚತುರ್ಥಕಾಲಸ್ಯ. ೮ ಪಾಪಪ್ರಕರ್ಷತಃ. ೯ ಪ್ರಜಾಯಾಃ. ೧೦ ಪ್ರಜಾಪಾಲಕಸ್ಯ. ೧೧ ಸಮಾನ. ೧೨ ಗ್ರಹಣಪರಿವೇಷಾದಿ. ೧೩ ಸದಸತ್ಫಲಂ. ೧೪ ಮಯೇಕ್ಷಿತಂ.

೧ ಅನುಮಾನಜ್ಞಾನಂ. ೨ ಕೇವಲಜ್ಞಾನವಿಷಯಃ. ೩ ನಿಶಾಸಂಬಂಧಿ. ೪ ವಿನಾ. ೫ ದರ್ಪಣಸದೃಶೇ. ೬ ವೃಷಭಜಿನೇ. ೭ ದರ್ಪಣೇ ವಿದ್ಯಮಾನೇ ಸತಿ. ೮ ಹಸ್ತಸ್ಪರ್ಶಾತ್. ೯ ತಸ್ಮಾತ್ಕಾರಣಾತ್. ೧೦ ಸ್ವರೂಪನಿಶ್ಚಯಃ. ೧೧ ಮಯಾ ಪ್ರಥಮೋಪಕ್ರಾಂತಂ. ೧೨ ಯಜನೀಯಾಃ.

**ಇತ್ಯಾತ್ಮಗತಮಾಲೋಚ್ಯ ಶಯ್ಯೋತ್ಸಂಗಾ[1]ತ್ಪರಾರ್ಧ್ಯತಃ ।**
**ಪ್ರಾತಸ್ತರಾಂ ಸಮುತ್ಥಾಯ ಕೃತಪ್ರಾಭಾತಿಕಕ್ರಿಯಃ ॥ ೧೪ ॥**

**ತತಃ ಕ್ಷಣಮಿವ ಸ್ಥಿತ್ವಾ ಮಹಾಸ್ಥಾನೇ ನೃಪೈರ್ವೃತಃ ।**
**ವಂದನಾಭಕ್ತಯೇ ಗಂತುಮುದ್ಯತೋಽಭೂದ್ವಿಶಾಂಪತಿಃ ॥ ೧೫ ॥**

ಈ ಪ್ರಕಾರವಾಗಿ ಮನೋಗತವಾದ ವಿಷಯವನ್ನು ಆಲೋಚಿಸಿ ಅನರ್ಘ್ಯವಾದ ಹಾಸಿಗೆಯಿಂದ ಮುಂಜಾವದಲ್ಲಿ ಎದ್ದು ಪ್ರಾತಃಕಾಲಸಂಬಂಧವಾದ ಕ್ರಿಯೆಗಳನ್ನು ಮಾಡಿದವನೂ ಬಳಿಕ ದೊರೆಗಳಿಂದ ಆವರಿಸಲ್ಪಟ್ಟವನೂ ಆದ ಭರತಚಕ್ರೇಶ್ವರನು ಮಹಾಸ್ಥಾನ– ಸಭಾಮಂಡಪದಲ್ಲಿ ಕ್ಷಣಕಾಲಪರ್ಯಂತವೇ ಇದ್ದು ವಂದನೆಗೋಸ್ಕರವೂ ಭಕ್ತಿಗೋಸ್ಕರವೂ ಹೋಗುವುದಕ್ಕೆ ಉದ್ಯುಕ್ತನಾದನು. ವಂದಿಸುವುದಕ್ಕೂ ಭಕ್ತಿಮಾಡುವುದಕ್ಕೂ ಹೋಗಲುದ್ಯುಕ್ತನಾದನೆಂದು ಭಾವವು.

**ವೃತಃ ಪರಿಮಿತೈರೇವ [2]ಮೌಲಿಬದ್ಧೈ[3]ರನೂತ್ಥಿತೈಃ ।**
**ಪ್ರತಸ್ಥೇ ವಂದನಾಹೇತೋರ್ವಿಭೂತ್ಯಾ ಪರಯಾನ್ವಿತಃ ॥ ೧೬ ॥**

ಪರಿಮಿತರೂ ತನ್ನ ಜತೆಯಲ್ಲಿ ಹೊರಟವರೂ ಆದ ಮುಕುಟಬದ್ಧರಾಜರುಗಳಿಂದಲೇ ಸುತ್ತಲ್ಪಟ್ಟವನೂ ವಿಶೇಷವಾದ ಸಂಪತ್ತಿಯಿಂದ ಕೂಡಿದವನೂ ಆದ ಭರತೇಶ್ವರನು ಸ್ವಾಮಿಯನ್ನು ವಂದಿಸುವ ನಿಮಿತ್ತದಿಂದ ಹೊರಟನು.

**ತತಃ [4]ಕ್ಷೇಪೀಯ ಏವಾಸೌ ಗತ್ವಾ ಸೈನ್ಯೈಃ ಪರಿಷ್ಕೃತಃ ।**
**ಸಮ್ರಾಟ್ ಪ್ರಾಪ ತ[5]ಮುದ್ದೇಶಂ ಯತ್ರಾಸ್ತೇ ಸ್ಮ ಜಗದ್ಗುರುಃ ॥ ೧೭ ॥**

ಬಳಿಕ ಸೈನ್ಯಗಳಿಂದ ಆವರಿಸಲ್ಪಟ್ಟವನಾದ ಈ ಚಕ್ರೇಶ್ವರನು ಬಲು ಬೇಗ ಹೋಗಿ ಜಗದ್ಗುರುವಾದ ಸ್ವಾಮಿಯು ಇರುವ ಆ ಪ್ರದೇಶವನ್ನು ತಲುಪಿದನು.

**ದೂರಾದೇವ ಜಿನಾಸ್ಥಾನಭೂಮಿಂ ಪಶ್ಯನ್ನಿಧೀಶ್ವರಃ ।**
**ಪ್ರಣನಾಮ ಚಲನ್ಮೌಲಿಘಟಿತಾಂಜಲಿಕುಡ್ಮಲಃ ॥ ೧೮ ॥**

ನಿಧಿಪತಿಯಾದ ಭರತೇಶ್ವರನು ವೃಷಭಜಿನೇಶ್ವರನ ಆಸ್ಥಾನಭೂಮಿಯನ್ನು ದೂರದಿಂದಲೇ ನೋಡಿದವನಾಗಿ ಚಲಿಸಿದ ತನ್ನ ಕಿರೀಟದಲ್ಲಿ ಕೈಗಳನ್ನು ಜೋಡಿಸಿ ನಮಸ್ಕಾರಮಾಡಿದನು.

**ಸ ತಾಂ ಪ್ರದಕ್ಷಿಣೀಕೃತ್ಯ ಬಹಿರ್ಭಾಗೇ [6]ಸದೋವನಿಮ್ ।**
**ಪ್ರವಿವೇಶ ವಿಶಾ[7]ಮೀಶಃ ಕ್ರಾಂತ್ವಾ [8]ಕಕ್ಷ್ಯಾಃ [9]ಪೃಥಗ್ವಿಧಾಃ ॥ ೧೯ ॥**

ಆ ಸಭಾಸ್ಥಾನಭೂಮಿಯನ್ನು ಬಹಿರ್ಭಾಗದಲ್ಲಿ ಪ್ರದಕ್ಷಿಣೆಮಾಡಿ ಆ ಭರತಚಕ್ರೇಶ್ವರನು ನಾನಾಪ್ರಕಾರಗಳಾದ ಹನ್ನೊಂದು ಭೂಮಿಗಳನ್ನು ದಾಟಿ ಸಮವಸರಣ ಸಭಾಭೂಮಿಯನ್ನು ಪ್ರವೇಶಿಸಿದನು.

**ಮಾನಸ್ತಂಭಮಹಾಚೈತ್ಯದ್ರುಮಸಿದ್ಧಾರ್ಥಪಾದಪಾನ್ ।**
**ಪ್ರೇಕ್ಷಮಾಣೋ ವ್ಯತೀಯಾಯ ಸ್ತೂಪಾಂಶ್ಚಾ[10]ರ್ಚಿತಪೂಜಿತಾನ್ ॥**

ಮೊದಲು ಸ್ತೋತ್ರಮಾಡಿ ಬಳಿಕ ಪೂಜಿಸಲ್ಪಟ್ಟ ಮಾನಸ್ತಂಭಗಳನ್ನೂ ದೊಡ್ಡದಾದ ಚೈತ್ಯವೃಕ್ಷಗಳನ್ನೂ(ಜಿನಬಿಂಬಗಳುಳ್ಳ ಮರಗಳನ್ನೂ) ಸಿದ್ಧಾರ್ಥಗಳೆಂಬ ಬಿಳೀಮರಗಳನ್ನೂ ಸ್ತೂಪಗಳನ್ನೂ ನೋಡುವವನಾಗಿ ಅವುಗಳನ್ನು ದಾಟಿ ಮುಂದೆ ಹೋದನು.

**ಚತುಷ್ಟಯೀಂ ವನಶ್ರೇಣೀಂ ಧ್ವಜಾನ್ ಹರ್ಮ್ಯಾವಲೀಮಪಿ ।**
**ತತ್ರ ತತ್ರೇಕ್ಷಮಾಣೋಽಸೌ ತಾಂ ತಾಂ ಕಕ್ಷ್ಯಾಂ ವ್ಯಲಂಘಯತ್ ॥ ೨೧ ॥**

೧ ಅನರ್ಘ್ಯಾತ್. ೨ ಮುಕುಟಬದ್ಧೈಃ. ೩ ಸಹೋತ್ಥಿತೈಃ. ೪ ಅತಿಶಯೇನ ಕ್ಷಿಪ್ರಂ. ೫ ಪ್ರದೇಶಂ. ೬ ಸಭಾಭೂಮಿಂ. ೭ ಭರತೇಶ್ವರಃ. ೮ ಏಕಾದಶಭೂಮೀಃ. ೯ ನಾನಾಪ್ರಕಾರಾಃ. ೧೦ ಈಡಿತ.

ನಾಲ್ಕು ಪ್ರಕಾರವಾದ ವನಗಳ ಸಾಲುಗಳನ್ನೂ ಧ್ವಜಗಳನ್ನೂ ಉಪ್ಪರಿಗೆಯ ಮನೆಗಳ ಸಾಲುಗಳನ್ನೂ ಅಲ್ಲಲ್ಲಿ ನೋಡುವವನಾದ ಈ ಭರತಚಕ್ರೇಶ್ವರನು ಆಯಾ ಸಾಲುಗಳನ್ನು ದಾಟಿದನು.

**ಪ್ರತಿಕಕ್ಷ್ಯಂ ಸುರಸ್ತ್ರೀಣಾಂ ಗೀತೈರ್ನೃತ್ತೈಶ್ಚ ಹಾರಿಭಿಃ ।**
**ರಜ್ಯಮಾನಮನೋವೃತ್ತೇಸ್ತತ್ರಾಸ್ಯಾಸೀತ್ಪರಾ ಧೃತಿಃ ॥ ೨೨ ॥**

ಪ್ರತಿಯೊಂದು ಸಾಲಿನಲ್ಲಿ(ಭಾಗದಲ್ಲಿ)ಯೂ ದೇವಸ್ತ್ರೀಯರ ಹಾಡುಗಾರಿಕೆಗಳಿಂದಲೂ ಮನೋಹರಗಳಾದ ನರ್ತನಗಳಿಂದಲೂ ಸಂತೋಷಪಡಿಸಲ್ಪಟ್ಟ ಮನೋವ್ಯಾಪಾರವುಳ್ಳವನಾದ ಈ ಭರತೇಶ್ವರನಿಗೆ ಆ ಸಭಾಭೂಮಿಯಲ್ಲಿ ಬಹು ಸಂತೋಷವಾಯಿತು.

**ತತಃ ಪ್ರಾವಿಕ್ಷದುತ್ತುಂಗಗೋಪುರದ್ವಾರವರ್ತ್ಮನಾ ।**
**ಗಣೈರಧ್ಯುಷಿತಾಂ ಭೂಮಿಂ [1]ಶ್ರೀಮಂಡಪಪರಿಷ್ಕೃತಾಮ್ ॥ ೨೩ ॥**

ಬಳಿಕ ಭರತಸಾರ್ವಭೌಮನು ಎತ್ತರವಾದ ಗೋಪುರದ ಬಾಗಿಲಿನ ಮಾರ್ಗದಿಂದ ಲಕ್ಷ್ಮೀಮಂಡಪದಿಂದ ಅಲಂಕೃತವೂ ಋಷಿಗಳೇ ಮೊದಲಾದವರ ಸಮೂಹಗಳಿಂದ ವಾಸಮಾಡಲ್ಪಟ್ಟುದೂ ಆದ ಸಮವರಸರಣಭೂಮಿಯನ್ನು ಪ್ರವೇಶಿಸಿದನು.

**ತ್ರಿಮೇಖಲಸ್ಯ ಪೀಠಸ್ಯ ಪ್ರಥಮಾಂ ಮೇಖಲಾಮತಃ ।**
**ಸೋಧಿರುಹ್ಯ [2]ಪರೀಯಾಯ ಧರ್ಮಚಕ್ರಾಣಿ ಪೂಜಯನ್ ॥ ೨೪ ॥**

ಆಮೇಲೆ ಆ ಭರತೇಶ್ವರನು ಮೂರು ಜಗತಿಗಳುಳ್ಳ ಪೀಠದ ಮೊದಲನೆಯ ಜಗತಿಯನ್ನೇರಿ ಧರ್ಮಚಕ್ರಗಳನ್ನು ಪೂಜಿಸುವವನಾಗಿ ಪ್ರದಕ್ಷಿಣೆಯನ್ನು ಮಾಡಿದನು.

**ಮೇಖಲಾಯಾಂ ದ್ವಿತೀಯಸ್ಯಾಂ [3]ವರಿವಸ್ಯನ್ಮಹಾಧ್ವಜಾನ್ ।**
**ಪ್ರಾಪದ್ಗಂಧಕುಟೀಂ ಚಕ್ರೀ [4]ನ್ಯಕ್ಕೃತತ್ರಿಜಗಚ್ಛ್ರಿಯಮ್ ॥ ೨೫ ॥**

ಎರಡನೆಯ ಜಗತಿಯಲ್ಲಿ ಮಹಾಧ್ವಜಗಳನ್ನು ಪೂಜಿಸುವವನಾದ ಚಕ್ರವರ್ತಿಯು ಮೂರುಲೋಕದ ಶೋಭೆಯನ್ನು ಕೀಳುಮಾಡುವುದಾದ ಗಂಧಕುಟಿಯನ್ನು (ಸ್ವಾಮಿಯು ವಿರಾಜಮಾನನಾಗಿರುವ ಮಂಡಪವನ್ನು) ಸೇರಿದನು.

**ದೇವದಾನವಗಂಧರ್ವಸಿದ್ಧವಿದ್ಯಾಧರೇಡಿತಮ್ ।**
**ಭಗವಂತಮಥಾಲೋಕ್ಯ [5]ಪ್ರಾಣಮ[6]ದ್ಭಕ್ತಿನಿರ್ಭರಃ ॥ ೨೬ ॥**

ಅನಂತರದಲ್ಲಿ ದೇವತೆಗಳಿಂದಲೂ ದಾನವರಿಂದಲೂ ಗಂಧರ್ವರಿಂದಲೂ ಸಿದ್ಧದೇವತೆಗಳಿಂದಲೂ ಖೇಚರ– ವಿದ್ಯಾಧರರಿಂದಲೂ ಸ್ತುತಿಸಲ್ಪಟ್ಟವನಾದ ಭಗವಂತನನ್ನು ನೋಡಿ ಅತಿಶಯವಾದ ಭಕ್ತಿಯುಳ್ಳವನಾಗಿ ನಮಸ್ಕರಿಸಿದನು.

**ಸ್ತುತ್ವಾ ಸ್ತುತಿಭಿ[7]ರೀಶಾನಮಭ್ಯರ್ಚ್ಯ ಚ ಯಥಾವಿಧಿ ।**
**ನಿಷಸಾದ ಯಥಾಸ್ಥಾನಂ ಧರ್ಮಾಮೃತ[8]ಪಿಪಾಸಿತಃ ॥ ೨೭ ॥**

ವೃಷಭಸ್ವಾಮಿಯನ್ನು ಸ್ತುತಿಗಳಿಂದ ಸ್ತೋತ್ರ ಮಾಡಿ ವಿಧಿಪ್ರಕಾರವಾಗಿ ಪೂಜಿಸಿಯೂ ಧರ್ಮವೆಂಬ ಅಮೃತವನ್ನು ಪಾನಮಾಡಬೇಕೆಂಬ ಇಚ್ಛೆಯುಳ್ಳವನಾಗಿ ಉಚಿತವಾದ ಸ್ಥಾನದಲ್ಲಿ ಕುಳಿತುಕೊಂಡನು.

**ಭಕ್ತ್ಯಾ ಪ್ರಣಮತಸ್ತಸ್ಯ ಭಗವತ್ಪಾದಪಂಕಜೇ ।**
**ವಿಶುದ್ಧ[9]ಪರಿಣಾಮಾಂಗಮವಧಿಜ್ಞಾನಮುದ್ಬಭೌ ॥ ೨೮ ॥**

೧ ಲಕ್ಷ್ಮೀಮಂಡಪೇನ ಅಲಂಕೃತಾಂ. ೨ ಪ್ರದಕ್ಷಿಣಂ ಚಕ್ರೇ. ೩ ಪೂಜಯನ್. ೪ ಅಧಃಕೃತ. ೫ ನಮಸ್ಕರೋತಿ ಸ್ಮ. ೬ ಭಕ್ತ್ಯತಿಶಯಃ. ೭ ಜಿನೇಶಂ. ೮ ನಿವಿಷ್ಟವಾನ್. ೯ ಪಾತುಮಿಚ್ಛಿತಃ.

ಭಗವಂತನ ಪಾದಕಮಲದಲ್ಲಿ ಭಕ್ತಿಯಿಂದ ನಮಸ್ಕರಿಸುವವನಾದ ಆ ಭರತಚಕ್ರೇಶ್ವರನಿಗೆ ವಿಶುದ್ಧವಾದ ಪರಿಣಾಮಕ್ಕೆ ಕಾರಣವಾದ ಅವಧಿಯೆಂಬ ದಿವ್ಯಜ್ಞಾನವು ಪ್ರಾದುರ್ಭವಿಸಿತು.

**ಪೀತ್ವಾಥೋ ಧರ್ಮಪೀಯೂಷಂ ಪರಾಂ ತೃಪ್ತಿಮವಾಪಿವಾನ್ ।**
**ಸ್ವಮನೋಗತಮಿತ್ಯುಚ್ಚೈರ್ಭಗವಂತಂ ವ್ಯಜಿಜ್ಞಪತ್ ॥ ೨೯ ॥**

ಅನಂತರದಲ್ಲಿ ಧರ್ಮವೆಂಬ ಅಮೃತವನ್ನು ಪಾನಮಾಡಿ ಹೆಚ್ಚಾದ ತೃಪ್ತಿಯನ್ನು ಹೊಂದಿದವನಾಗಿ ಸ್ವಾಮಿಯನ್ನು ಕುರಿತು ಆ ಭರತೇಶ್ವರನು ತನ್ನ ಮನೋಗತವನ್ನು ಮುಂದೆ ಹೇಳುವಂತೆ ಚೆನ್ನಾಗಿ ವಿಜ್ಞಾಪಿಸಿಕೊಂಡನು.

**ಮಯಾ ಸೃಷ್ಟಾ ದ್ವಿಜನ್ಮಾನಃ ಶ್ರಾವಕಾಚಾರ[1]ಚುಂಚವಃ ।**
**[2]ತ್ವದ್ಗೀತೋಪಾಸಕಾಧ್ಯಾಯಸೂತ್ರಮಾರ್ಗಾನುಗಾಮಿನಃ ॥ ೩೦ ॥**

''ಎಲೈ ಸ್ವಾಮಿಯೆ ! ನಿನ್ನಿಂದ ಹೇಳಲ್ಪಟ್ಟ ಉಪಾಸಕಾಧ್ಯಾಯ ಸೂತ್ರಮಾರ್ಗದಲ್ಲಿ ನಡೆಯುವವರೂ (ಆಚರಿಸುವವರೂ) ಶ್ರಾವಕಾಚಾರಾನುಷ್ಠಾನದಲ್ಲಿ ಪ್ರಸಿದ್ಧರೂ ಆದ ದ್ವಿಜರು ನನ್ನಿಂದ ಸೃಷ್ಟಿಸಲ್ಪಟ್ಟರು.

**ಏಕಾದ್ಯೇಕಾದಶಾಂತಾನಿ ದತ್ತಾನ್ಯೇಭ್ಯೋ ಮಯಾ ವಿಭೋ ।**
**ವ್ರತಚಿಹ್ನಾನಿ ಸೂತ್ರಾಣಿ [3]ಗುಣಭೂಮಿ[4]ವಿಭಾಗತಃ ॥ ೩೧ ॥**

ಎಲೈ ಸ್ವಾಮಿಯೆ ! ನಾನು ಈ ದ್ವಿಜರಿಗೆ ದರ್ಶನಿಕ ವ್ರತಿಕ ಮೊದಲಾದ ನೆಲೆಗಳ ವಿಭಾಗದಿಂದ ಒಂದು ಮೊದಲಾಗಿ ಹನ್ನೊಂದರ ವರೆಗೆ ವ್ರತಗಳ ಗುರುತಾಗಿರುವ ಸೂತ್ರ– ಯಜ್ಞೋಪವೀತಗಳನ್ನು ಕೊಟ್ಟೆನು.

**ವಿಶ್ವಸ್ಯ ಧರ್ಮ[5]ಸರ್ಗಸ್ಯ ತ್ವಯಿ ಸಾಕ್ಷಾತ್ಪ್ರಣೇತರಿ ।**
**ಸ್ಥಿತೇ ಮಯೇತಿ [6]ಬಾಲಿಶ್ಯಾದಿದಮಾಚರಿತಂ ಪ್ರಭೋ ॥ ೩೨ ॥**

ಎಲೈ ಸ್ವಾಮಿಯೆ ! ಸಮಸ್ತವಾದ ಧರ್ಮಸೃಷ್ಟಿಯನ್ನು ಸಾಕ್ಷಾತ್ತಾಗಿ ನಿರ್ಮಿಸುವವನಾದ ನೀನು ಇರುವಾಗ ನಾನು ಬಹು ಮೂರ್ಖತನದಿಂದ ಈ ಬ್ರಾಹ್ಮಣಸೃಷ್ಟಿಯನ್ನು ಮಾಡಿದೆನು.

**ದೋಷಃ ಕೋತ್ರ ಗುಣಃ ಕೋತ್ರ ಕಿ[7]ಮೇತತ್ಸಾಂಪ್ರತಂ ನ ವಾ ।**
**ದೋಲಾಯಮಾನಮಿತಿ ಮೇ ಮನಃ ಸ್ಥಾಪಯ ನಿಶ್ಚಿತೌ ॥ ೩೩ ॥**

ಈ ಸೃಷ್ಟಿಯಲ್ಲಿ ದೋಷವಾವುದು ? ಗುಣವಾವುದು ? ಇದು ಯುಕ್ತವಾದುದೇ ? ಅಲ್ಲವೇ ? ಎಂಬುದಾಗಿ ಚಂಚಲಪಡುತ್ತಿರುವ ನನ್ನ ಮನಸ್ಸನ್ನು ನಿಶ್ಚಯದಲ್ಲಿ ಸ್ಥಾಪಿಸು.

**ಅಪಿ ಚಾದ್ಯ ಮಯಾ ಸ್ವಪ್ನಾ ನಿಶಾಂತೇ ಷೋಡಶೇಕ್ಷಿತಾಃ ।**
**ಪ್ರಾಯೋನಿಷ್ಟಫಲಾಶ್ಚೈತೇ ಮಯಾ ದೇವಾಭಿಲಕ್ಷಿತಾಃ ॥ ೩೪ ॥**

ಎಲೈ ಪ್ರಭುವೆ ! ಮತ್ತೂ ಈ ದಿವಸ ನಾನು ಬೆಳಗಿನ ಜಾವದಲ್ಲಿ ಹದಿನಾರು ಸ್ವಪ್ನಗಳನ್ನು ಕಂಡೆನು. ಈ ಸ್ವಪ್ನಗಳು ಬಹಳವಾಗಿ ಅನಿಷ್ಟಫಲಗಳುಳ್ಳವುಗಳೆಂದು ನಾನು ತಿಳಿಯುತ್ತೇನೆ.

**ಯಥಾದೃಷ್ಟ[8]ಮುಪನ್ಯಸ್ಯೇ ತಾನಿಮಾನ್ಪರಮೇಶ್ವರ ।**
**ಯಥಾಸ್ವಂ ತತ್ಫಲಾನ್ಯಸ್ಮ[9]ತ್ಪ್ರತೀತಿವಿಷಯಂ ನಯ ॥ ೩೫ ॥**

ಮಹಾಪ್ರಭುವೇ ! ಈ ಸ್ವಪ್ನಗಳನ್ನು ನಾನು ಕಂಡಹಾಗೆಯೇ ವಿವರಿಸಿ ಹೇಳುತ್ತೇನೆ. ಅವುಗಳ ಫಲಗಳನ್ನು ಅವು ಇರುವಹಾಗೆಯೇ ನಮ್ಮಜ್ಞಾನಕ್ಕೆ ಗೋಚರಗಳನ್ನಾಗಿ ಮಾಡು (ನನಗೆ ತಿಳಿಸು).

೧ ಪರಿಣಾಮಕಾರಣಂ. ೨ ಪ್ರತೀತಾಃ. ೩ ತ್ವಯಾ ಪ್ರೋಕ್ತ. ೪ ದರ್ಶನಿಕಾದಿಗುಣನಿಲಯ. ೫ ಸೃಷ್ಟೇಃ. ೬ ಮೂರ್ಖತ್ವೇನ. ೭ ದ್ವಿಜಸರ್ಜನಂ. ೮ ವಿಜ್ಞಾಪಯಾಮಿ. ೯ ಜ್ಞಾನವಿಷಯಂ.

**[1]ಸಿಂಹಾ [2]ಮೃಗೇಂದ್ರಪೋತಶ್ಚ ತುರಗಃ ಕರಿಭಾರಭೃತ್ ।**
**[3]ಛಾಗಾ ವೃಕ್ಷಲತಾಗುಲ್ಮಶುಷ್ಕಪತ್ರೋ[4]ಪಯೋಗಿನಃ ॥ ೩೬ ॥**

**ಶಾಖಾಮೃಗಾ ದ್ವಿಪಸ್ಕಂಧಮಾರೂಢಾಃ [5]ಕೌಶಿಕಾಃ ಖಗೈಃ ।**
**ವಿಹಿತೋಪದ್ರವಾ [6]ಧ್ವಾಂಕ್ಷೈಃ [7]ಪ್ರಮಥಾಶ್ಚ [8]ಪ್ರಮೋದಿನಃ ॥ ೩೭ ॥**

**ಶುಷ್ಕಮಧ್ಯತಡಾಗಂ ಚ ಪರ್ಯಂತಪ್ರಚುರೋದಕಮ್ ।**
**ಪಾಂಸು[9]ಧೂಸರಿತೋ ರತ್ನರಾಶಿಃ [10]ಶ್ವಾ[11]ಘರ್ಭು[12]ಗರ್ಹಿತಃ ॥ ೩೮ ॥**

**ತಾರುಣ್ಯಶಾಲೀ ವೃಷಭಃ ಶೀತಾಂಶುಃ ಪರಿವೇಷಯುಕ್ ।**
**ಮಿಥೋಂಗಕೃತಸಂಗತ್ಯಾ [13]ಪುಂಗವೌ [14]ಸಂಗಲಚ್ಛ್ರಿಯೌ ॥ ೩೯ ॥**

**ರವಿರಾ[15]ಶಾವಧೂರತ್ನವತಂಸೋ[16]ಚ್ಛೈ[17]ಸ್ತಿರೋಹಿತಃ ।**
**ಸಂಶುಷ್ಕಸ್ತರುರಚ್ಛಾಯೋ ಜೀರ್ಣಪತ್ರಸಮುಚ್ಚಯಃ ॥ ೪೦ ॥**

**ಷೋಡಶೈತೇದ್ಯ ಯಾಮಿನ್ಯಾಂ ದೃಷ್ಟಾಃ ಸ್ವಪ್ನಾಃ ವಿದಾಂವರ ।**
**ಫಲ[18]ವಿಪ್ರತಿಪತ್ತಿಂ ಮೇ ತದ್ಗತಾಂ ತ್ವಮಪಾಕುರು ॥ ೪೧ ॥**

೧ ಇಪ್ಪತ್ತುಮೂರು ಸಿಂಹಗಳು, ೨ ಮತ್ತೊಂದು ಸಿಂಹದ ಮರಿ, ೩ ಆನೆಯ ಹೊರೆಯನ್ನು ಹೊರುತ್ತಿರುವ ಕುದುರೆ, ೪ ವೃಕ್ಷಗಳನ್ನೂ ಬಳ್ಳಿಗಳನ್ನೂ ತಿನ್ನುವ ಆಡುಗಳು, ೫ ಆನೆಯ ಹೆಗಲಿನ ಮೇಲೆ ಹತ್ತಿರುವ ಕಪಿಗಳು, ೬ ಕಾಗೆಗಳಿಂದಲೂ ಪಕ್ಷಿಗಳಿಂದಲೂ ಬಾಧೆಪಡಿಸಲ್ಪಟ್ಟುವುಗಳಾದ ಗೂಬೆಗಳು, ೭ ಕುಣಿಯುವ ಭೂತಗಳು, ೮ ಸುತ್ತಲೂ ಹೆಚ್ಚಾದ ನೀರುಳ್ಳದೂ ಮಧ್ಯದಲ್ಲಿ ಒಣಗಿರುವುದೂ ಆದ ಸರೋವರ, ೯ ಧೂಳಿಯಿಂದ ಸ್ವಲ್ಪ ಮಲಿನವಾದ ರತ್ನಗಳ ರಾಶಿಯು, ೧೦ ಪೂಜಿಸಲ್ಪಟ್ಟ ಚರುವನ್ನು ತಿನ್ನುವ ನಾಯಿ, ೧೧ ಯೌವನದಿಂದ ಶೋಭಿಸುವ ಎತ್ತು (ಗೂಳಿ), ೧೨ ಪರಿಧಿಯಿಂದ ಕೂಡಿದ ಚಂದ್ರ, ೧೩ ಒಂದಕ್ಕೊಂದು ಶರೀರದಿಂದ ಹೊಂದಿಕೊಂಡಿರುವುವೂ, ಕುಂದುತ್ತಿರುವ ಶೋಭೆಯುಳ್ಳವುಗಳೂ ಆದ ಎರಡು ವೃಷಭಗಳು (ಎತ್ತುಗಳು), ೧೪ ದಿಕ್ಕೆಂಬ ವಧುವಿನ ರತ್ನಾಭರಣದಂತಿರುವವನೂ, ಮೇಘಗಳಿಂದ ಮರೆಯಾಗಿರುವವನೂ ಆದ ಸೂರ್ಯನು, ೧೫ ನೆರಳಿಲ್ಲದಿರುವುದೂ ಒಣಗಿರುವುದೂ ಆದ ಮರ, ೧೬ ಶಿಥಿಲವಾಗಿರುವ–ಹಣ್ಣಾಗಿರುವ ಎಲೆಗಳ ರಾಶಿ. ಎಲೈ ಜ್ಞಾನಿಗಳಲ್ಲಿ ಶ್ರೇಷ್ಠನೆ ! ಈ ದಿವಸ ರಾತ್ರಿಯಲ್ಲಿ ಈ ಹದಿನಾರು ಸ್ವಪ್ನಗಳನ್ನು ಕಂಡೆನು. ನನಗೆ ಅವುಗಳಿಂದಾಗುವ ಫಲಗಳ ಸಂದೇಹವನ್ನು ನೀನು ನಿವಾರಣೆಮಾಡು.''

**ಇತಿ ತತ್ಫಲವಿಜ್ಞಾನನಿಪುಣೋಪ್ಯವಧಿತ್ವಿಷಾ ।**
**ಸಭಾಜನಪ್ರಬೋಧಾರ್ಥಂ ಪಪ್ರಚ್ಛ ನಿಧಿರಾಡ್ಜಿನಮ್ ॥ ೪೨ ॥**

ಅವಧಿಜ್ಞಾನದಿಂದ ಆ ಸ್ವಪ್ನಗಳ ಫಲಗಳನ್ನು ತಿಳಿಯುವುದರಲ್ಲಿ ಚತುರನಾಗಿದ್ದರೂ ನಿಧೀಶ್ವರನಾದ ಭರತಚಕ್ರಿಯು ಸಮವಸರಣಸಭೆಯ ಜನರ ತಿಳಿವಳಿಕೆಗೋಸ್ಕರ ಮೇಲೆ ಹೇಳಿದ ಪ್ರಕಾರವಾಗಿ ಆದಿಜಿನೇಶ್ವರನನ್ನು ಪ್ರಶ್ನೆಮಾಡಿದನು.

**ತತ್ಪ್ರಶ್ನಾವಸಿತಾವಿತ್ಥಂ ವ್ಯಾಚಷ್ಟೇ ಸ್ಮ ಜಗದ್ಗುರುಃ ।**
**ವಚನಾಮೃತಸಂಸೇಕೈಃ ಪ್ರೀಣಯನ್ನಿಖಿಲಂ ಸದಃ ॥ ೪೩ ॥**

ಆ ಭರತೇಶ್ವರನ ಪ್ರಶ್ನೆಯು ಪೂರ್ತಿಯಾದ ಮೇಲೆ ಜಗತ್ಪತಿಯಾದ ವೃಷಭಸ್ವಾಮಿಯು ತನ್ನ ವಚನವೆಂಬ ಅಮೃತದ ಸೇಚನೆಗಳಿಂದ ಸಭೆಯನ್ನೆಲ್ಲ ಸಂತೋಷಪಡಿಸುವವನಾಗಿ ಈ ಮುಂದೆ ಹೇಳುವ ಪ್ರಕಾರವಾಗಿ ಹೇಳಿದನು.

೧ ತ್ರಯೋವಿಂಶತಿ ಸಿಂಹಾಃ. ೨ ಪುನರೇಕಾಕೀಸಿಂಹಪೋತಃ. ೩ ಅಜಾಃ. ೪ ಭಕ್ಷಿಣಃ. ೫ ಘೂಕಾಃ. ೬ ಕಾಕೈಃ. ೭ ಭೂತಾಃ. ೮ ನೃತ್ಯಂ ಕುರ್ವಾಣಾಃ. ೯ ಈಷತ್ಪಾಂಡುರಿತಃ. ೧೦ ಶುನಕಃ. ೧೧ ಚರುಭುಕ್. ೧೨ ಪೂಜಿತಃ. ೧೩ ವೃಷಭೌ. ೧೪ ಗಲಚ್ಛೋಭೌ. ೧೫ ದಿಗ್ವಧೂರತ್ನಾವತಂಸಭೂತಃ. ೧೬ ಮೇಘೈಃ. ೧೭ ಆಚ್ಛಾದಿತಃ. ೧೮ ಸಂದೇಹಂ.

**ಭಗವದ್ದಿವ್ಯವಾಗರ್ಥಶುಶ್ರೂಷಾ[೧]ವಹಿತಂ ತದಾ ।**
**ಧ್ಯಾನೋಪಗಮಿವಾಭೂತ್ತತ್ಸದಶ್ಚಿತ್ರಗತಂ [೨]ನು ವಾ ॥ ೪೪ ॥**

ಆಗ ಸ್ವಾಮಿಯ ದಿವ್ಯವಾದ ವಚನವನ್ನೂ ಅರ್ಥವನ್ನೂ ಕೇಳಬೇಕೆಂಬ ಇಚ್ಛೆಯಲ್ಲಿ ಜಾಗರೂಕವಾದ ಆ ಸಭೆಯು ಧ್ಯಾನವನ್ನು ಹೊಂದಿದಂತೆಯೂ ಅಥವಾ ಚಿತ್ರವನ್ನು ಹೊಂದಿದಂತೆಯೂ ಆಯಿತು. ಸಭಿಕರೆಲ್ಲ ನಿಶ್ಚಲರಾದರೆಂದು ಭಾವವು.

**ಸಾಧು ವತ್ಸ ಕೃತಂ ಸಾಧು ಧಾರ್ಮಿಕದ್ವಿಜಪೂಜನಮ್ ।**
**ಕಿಂತು ದೋಷಾನುಷಂಗೋತ್ರ ಕೋಪ್ಯಸ್ತಿ ಸ [೩]ನಿಶಮ್ಯತಾಮ್ ॥ ೪೫ ॥**

"ಮಗನೆ !ಚೆನ್ನಾಗಿ ಮಾಡಲ್ಪಟ್ಟಿತು. ಧಾರ್ಮಿಕರಾದ ದ್ವಿಜರನ್ನು ಪೂಜಿಸುವುದು ಒಳ್ಳೆಯದು. ಆದರೆ ಈ ಬ್ರಾಹ್ಮಣಸೃಷ್ಟಿಯಲ್ಲಿ ಸ್ವಲ್ಪ ದೋಷಸಂಬಂಧವೂ ಇರುತ್ತದೆ. ಅದನ್ನು ಕೇಳು.

**ಆಯುಷ್ಮನ್ ಭವತಾ ಸೃಷ್ಟಾ ಯ ಏತೇ ಗೃಹಮೇಧಿನಃ ।**
**ತೇ ತಾವದುಚಿತಾಚಾರಾ ಯಾವತ್ಕೃತಯುಗಸ್ಥಿತಿಃ ॥ ೪೬ ॥**

ಆಯುಷ್ಮಂತನೆ ! ನಿನ್ನಿಂದ ಸೃಷ್ಟಿಸಲ್ಪಟ್ಟವರಾದ ಯಾವ ಈ ಗೃಹಸ್ಥರು ಕೃತ ಯುಗ(ಚತುರ್ಥಕಾಲ)ದ ಸ್ಥಿತಿಯಿರುವವರೆಗೆ ಯೋಗ್ಯವಾದ ಆಚಾರವುಳ್ಳ ವರಾಗಿರುವರು.

**ತತಃ ಕಲಿಯುಗೇಭ್ಯರ್ಣೇ ಜಾತಿವಾದಾವಲೇಪತಃ ।**
**ಭ್ರಷ್ಟಾಚಾರಾಃ [೪]ಪ್ರಪತ್ಸ್ಯಂತೇ ಸನ್ಮಾರ್ಗ[೫]ಪ್ರತ್ಯನೀಕತಾಮ್ ॥ ೪೭ ॥**

ಬಳಿಕ ಕಲಿಯುಗವು ಸಮೀಪವಾಗುತ್ತಿರಲು ಜಾತಿವಾದದ (ಉತ್ತಮಜಾತಿ ಯವರೆಂಬ) ಗರ್ವದಿಂದ ಭ್ರಷ್ಟವಾದ ಆಚಾರವುಳ್ಳವರಾಗಿ ಸನ್ಮಾರ್ಗಕ್ಕೆ (ಜೈನ ಧರ್ಮಕ್ಕೆ) ಪ್ರತಿಕೂಲತ್ವವನ್ನು ಹೊಂದುವರು.

**ತೇಮೀ ಜಾತಿಮದಾವಿಷ್ಟಾ ವಯಂ ಲೋಕಾಧಿಕಾ ಇತಿ ।**
**ಪುರಾ ದುರಾಗಮೈರ್ಲೋಕಂ [೬]ಮೋಹಯಂತಿ ಧನಾಶಯಾ ॥ ೪೮ ॥**

ಜಾತಿಮದಯುಕ್ತರಾದ ಈ ಬ್ರಾಹ್ಮಣರು 'ನಾವು ಲೋಕದಲ್ಲಿ ಶ್ರೇಷ್ಠರು' ಎಂದು ಮುಂದೆ ದುಷ್ಟವಾದ ಆಗಮ(ಶಾಸ್ತ್ರ)ಗಳಿಂದ ದ್ರವ್ಯದ ಆಶೆಯಿಂದ ಲೋಕವನ್ನು ವಂಚಿಸುವರು.

**ಸತ್ಕಾರಲಾಭಸಂವೃದ್ಧಗರ್ವಾ ಮಿಥ್ಯಾ[೭]ಮದೋದ್ಧತಾಃ ।**
**ಜನಾನ್ಪ್ರತಾರಯಿಷ್ಯಂತಿ ಸ್ವಯಮುತ್ಪಾದ್ಯ [೮]ದುಃಶ್ರುತೀಃ ॥ ೪೯ ॥**

ಸತ್ಕಾರವನ್ನು ಹೊಂದುವುದರಿಂದ ವೃದ್ಧಿಯಾದ ಗರ್ವವುಳ್ಳವರೂ ಮಿಥ್ಯಾ ಮದದಿಂದ ಕೊಬ್ಬಿದವರೂ ಆಗಿ ತಾವೇ ದುಷ್ಟಶಾಸ್ತ್ರಗಳನ್ನು ರಚಿಸಿ ಜನಗಳನ್ನು ಮೋಸಪಡಿಸುವರು.

**ತ ಇಮೇ ಕಾಲಪರ್ಯಂತೇ [೯]ವಿಕ್ರಿಯಾಂ ಪ್ರಾಪ್ಯ ದುರ್ದೃಶಃ ।**
**ಧರ್ಮದ್ರುಹೋ ಭವಿಷ್ಯಂತಿ ಪಾಪೋ[೧೦]ಪಹತಚೇತನಾಃ ॥ ೫೦ ॥**

ಕೃತಯುಗದ ಕೊನೆಯಲ್ಲಿ ವಿಕಾರವನ್ನು ಹೊಂದಿ ಈ ಮಿಥ್ಯಾದೃಷ್ಟಿಗಳು ಪಾಪ ಯುಕ್ತವಾದ ಮನಸ್ಸುಳ್ಳವರಾಗಿಯೂ ಧರ್ಮದ್ರೋಹಿಗಳಾಗಿಯೂ ಆಗುವರು.

**[೧೧]ಸತ್ತ್ವೋಪಘಾತನಿರತಾ ಮಧುಮಾಂಸಾಶನಪ್ರಿಯಾಃ ।**
**[೧೨]ಪ್ರವೃತ್ತಿಲಕ್ಷಣಂ ಧರ್ಮಂ [೧೩]ಘೋಷಯಿಷ್ಯಂತ್ಯಧಾರ್ಮಿಕಾಃ ॥ ೫೧ ॥**

ಜೀವಹಿಂಸೆಯಲ್ಲಿ ಆಸಕ್ತರೂ ಮಧುಮಾಂಸಸೇವನೆಯಲ್ಲಿ ಪ್ರೀತಿಯುಳ್ಳವರೂ ಅಧಾರ್ಮಿಕರೂ ಆಗಿ ಹಿಂಸಾದಿ ಪಾಪಕಾರ್ಯಗಳಲ್ಲಿ ಪ್ರವೃತ್ತಿಯೇ ಲಕ್ಷಣವಾಗಿ ರುವ ಧರ್ಮವನ್ನು ಪ್ರಕಟಿಸುವರು.

**ಅಹಿಂಸಾಲಕ್ಷಣಂ ಧರ್ಮಂ ದೂಷಯಿತ್ವಾ ದುರಾಶಯಾಃ ।**
**ಚೋದನಾಲಕ್ಷಣಂ ಧರ್ಮಂ ಪೋಷಯಿಷ್ಯಂತ್ಯಮೀ ಬತ ॥ ೫೨ ॥**

ಈ ಮಿಥ್ಯಾದೃಷ್ಟಿಗಳು ದುರಭಿಪ್ರಾಯವುಳ್ಳವರಾಗಿ ಅಹಿಂಸಾಲಕ್ಷಣವುಳ್ಳ ಧರ್ಮ ವನ್ನು ದೂಷಿಸಿ ಹಿಂಸಾದಿ ಪಾಪಕಾರ್ಯಪೋಷಣವೇ ಲಕ್ಷಣವಾಗಿರುವ ಧರ್ಮ ವನ್ನು ಪೋಷಿಸುವರು. ಕಷ್ಟ !

**ಪಾಪಸೂತ್ರಧರಾ ಧೂರ್ತಾಃ ಪ್ರಾಣಿಮಾರಣತತ್ಪರಾಃ ।**
**ವರ್ತ್ಸ್ಯದ್ಯುಗೇ ಪ್ರವರ್ತ್ಸ್ಯಂತಿ ಸನ್ಮಾರ್ಗ[೧]ಪರಿಪಂಥಿನಃ ॥ ೫೩ ॥**

ಪಾಪಪೋಷಕವಾದ ಶಾಸ್ತ್ರಗಳನ್ನು ತಿಳಿದವರೂ ಧೂರ್ತರೂ ಪ್ರಾಣಿಹಿಂಸೆಯಲ್ಲಿ ತತ್ಪರರೂ ಕಲಿಯುಗದಲ್ಲಿ ಸನ್ಮಾರ್ಗವಿರೋಧಿಗಳೂ ಆಗಿ ಪರಿಣಮಿಸುವರು.

**ದ್ವಿಜಾತಿ[೨]ಸರ್ಜನಂ ತಸ್ಮಾನ್ನಾದ್ಯ ಯದ್ಯಪಿ ದೋಷಕೃತ್ ।**
**ಸ್ಯಾದ್ದೋಷಬೀಜ[೩]ಮಾಯತ್ಯಾಂ [೪]ಕುಪಾಷಂಡಪ್ರವರ್ತನಾತ್ ॥ ೫೪ ॥**

ಆದುದರಿಂದ ಬ್ರಾಹ್ಮಣಜಾತಿಯ ಸೃಷ್ಟಿಯು ಈಗ ದೋಷಕರವಾಗಿಲ್ಲದಿದ್ದರೂ ಉತ್ತರಕಾಲದಲ್ಲಿ ಮಿಥ್ಯಾಶಾಸ್ತ್ರವನ್ನು ಪ್ರಚಾರಮಾಡುವುದರಿಂದ ದೋಷಗಳ ಬೀಜವಾಗುವುದು.

**ಇತಿ ಕಾಲಾಂತರೇ ದೋಷಮೂಲಮಪ್ಯೇ[೫]ತದಂಜಸಾ ।**
**ನಾಧುನಾ ಪರಿಹರ್ತವ್ಯಂ ಧರ್ಮಸೃಷ್ಟ್ಯನತಿಕ್ರಮಾತ್ ॥ ೫೫ ॥**

ಈ ಬ್ರಾಹ್ಮಣಸೃಷ್ಟಿಯು ನಿಶ್ಚಯವಾಗಿ ಮೇಲೆ ಹೇಳಿದಂತೆ ಮುಂದಿನ ಕಾಲದಲ್ಲಿ ದೋಷಗಳಿಗೆ ಮೂಲಕಾರಣವಾಗಿರುವುದಾದರೂ ಈಗ ಅದು ಧರ್ಮಸೃಷ್ಟಿಯನ್ನು ಮೀರದಿರುವುದರಿಂದ ಅದನ್ನು ನಾಶಗೊಳಿಸಬಾರದು.

**ಯಥಾನ್ನ[೬]ಮುಪಯುಕ್ತಂ ಸ್ಯಾತ್ಕ್ವಚಿತ್ಕಸ್ಯಾಪಿ [೭]ದೋಷಕೃತ್ ।**
**ತಥಾಪ್ಯಪರಿಹಾರ್ಯಂ [೮]ತದ್ಬುದ್ಧ್ಯೈರ್ಬಹು[೯]ಗುಣಾನ್ವಯಾ ॥ ೫೬ ॥**

**ತಥೇದಮಪಿ ಮಂತವ್ಯಮದ್ಯತ್ವೇ ಗುಣವತ್ತಯಾ ।**
**ಪುಂಸಾ[೧೦] ಮಾಶಯವೈಷಮ್ಯಾ[೧೧]ತ್ತ್ವಸ್ಯಾದ್ಯದ್ಯಪಿ ದೋಷಕೃತ್ ॥ ೫೭ ॥**

ಭುಂಜಿಸಲ್ಪಟ್ಟ ಅನ್ನವು ಒಂದು ಸಮಯದಲ್ಲಿ ಒಬ್ಬಾನೊಬ್ಬನಿಗೆ ಅಜೀರ್ಣವ ನ್ನುಂಟುಮಾಡುವುದಾದರೂ ಅದರಿಂದ ಬಹು ಉಪಕಾರವಾಗುವುದೆಂಬ ಬುದ್ಧಿ ಯಿಂದ ಅದನ್ನು ಹೇಗೆ ಜ್ಞಾನಿಗಳು ಬಿಡುವುದಿಲ್ಲವೋ ಹಾಗೆ ಈ ಬ್ರಾಹ್ಮಣವರ್ಣ ನಿರ್ಮಾಣವೂ ಮನುಷ್ಯರ ಬುದ್ಧಿವೈಷಮ್ಯದಿಂದ ಭವಿಷ್ಯತ್ಕಾಲದಲ್ಲಿ ದೋಷವನ್ನು ಉಂಟುಮಾಡುವುದಾದರೂ ಈಗ ಗುಣವುಳ್ಳುದಾಗಿರುವುದರಿಂದ ಬಿಡತಕ್ಕುದಲ್ಲ ವೆಂದು ತಿಳಿಯಬೇಕು.

**ಇದಮೇವಂ [೧೨]ಗತಂ [೧೩]ಹಂತ ಯಚ್ಚ ತೇ ಸ್ವಪ್ನದರ್ಶನಮ್ ।**
**ತದಪ್ಯೇಷ್ಯದ್ಯುಗೇ ಧರ್ಮಸ್ಥಿತಿಹ್ರಾಸಸ್ಯ ಸೂಚನಮ್ ॥ ೫೮ ॥**

ಈ ಬ್ರಾಹ್ಮಣವರ್ಣನಿರ್ಮಾಣವು ಮೇಲೆ ಹೇಳಿದಂತೆ ತಿಳಿಯಲ್ಪಟ್ಟಿತು. ಹೀಗೆ ನಿನ್ನ ಸ್ವಪ್ನದರ್ಶನವೂ ಕಲಿಯುಗದಲ್ಲಿ ಧರ್ಮದಸ್ಥಿತಿಯ ನಾಶಕ್ಕೆ ಸೂಚಕವಾಗಿರು ತ್ತದೆ. ಅಹೋ ಕಷ್ಟ !

**ತೇ ಚ ಸ್ವಪ್ನಾ ದ್ವಿಧಾಮ್ನಾತಾಃ ಸ್ವಸ್ಥಾಸ್ವಸ್ಥಾತ್ಮಗೋಚರಾಃ ।**
**ಸಮೈಸ್ತು [೧೪]ಧಾತುಭಿಃ ಸ್ವಸ್ಥಾ ವಿಷಮೈರಿತರೇ ಮತಾಃ ॥ ೫೯ ॥**

---

೧ ಅವಧಾನಪರಂ. ೨ ಇವ. ೩ ಶ್ರೂಯತಾಂ. ೪ ಯಾಸ್ಯಂತಿ. ೫ ಪ್ರತಿಕೂಲತಾಂ. ೬ ವಂಚಯಂತಿ. ೭ ದುಃಶಾಸ್ತ್ರಾಣಿ. ೮ ಮತೋದ್ಧತಾ ಇತ್ಯಪಿ ಪಾಠಃ. ೯ ವಿಕಾರಂ. ೧೦ ಯುಕ್ತ. ೧೧ ಜೀವಘಾತ. ೧೨ ಚೋದನಾ. ೧೩ ಪ್ರಕಟಯಿಷ್ಯಂತಿ.

೧ ಪ್ರತಿಕೂಲಾಃ. ೨ ಸೃಷ್ಟಿ. ೩ ಉತ್ತರಕಾಲೇ. ೪ ಕುಶಾಸ್ತ್ರ. ೫ ದ್ವಿಜಸರ್ಜನಂ. ೬ ಸೇವಿತಂ. ೭ ಅಜೀರ್ಣಕೃತ್. ೮ ಅನ್ನಂ. ೯ ಉಪಕಾರ. ೧೦ ಬುದ್ಧಿವೈಷಮ್ಯ. ೧೧ ಭಾವಿಕಾಲೇ. ೧೨ ಜ್ಞಾತಂ. ೧೩ ಅಹೋಕಷ್ಟಂ. ೧೪ ತ್ರಿದೋಷಸಮ.

ಆ ಸ್ವಪ್ನಗಳೂ ಆರೋಗ್ಯದಿಂದಿರುವ ಆತ್ಮರುಗಳಿಗುಂಟಾಗುವ ಸ್ವಪ್ನಗಳೆಂದೂ ಅನಾರೋಗ್ಯದಿಂದಿರುವ ಆತ್ಮರುಗಳಿಗುಂಟಾಗುವ ಸ್ವಪ್ನಗಳೆಂದೂ ಎರಡು ವಿಧವಾಗಿ ಹೇಳಲ್ಪಟ್ಟಿರುತ್ತದೆ. ವಾತ ಪಿತ್ತ ಶ್ಲೇಷ್ಮಗಳೆಂಬ ತ್ರಿದೋಷಗಳು ಸಮಾನವಾಗಿದ್ದರೆ ಆರೋಗ್ಯವುಳ್ಳವರೆಂದೂ ಹಾಗಿಲ್ಲದಿದ್ದರೆ ಆರೋಗ್ಯವಿಲ್ಲದವರೆಂದೂ ಹೇಳಲ್ಪಟ್ಟಿರುತ್ತಾರೆ.

**ತಥ್ಯಾಃ ಸ್ಯುಃ ಸ್ವಸ್ಥಸಂದೃಷ್ಟಾ ಮಿಥ್ಯಾ ಸ್ವಪ್ನಾ ವಿಪರ್ಯಯಾತ್ ।**
**ಜಗತ್ಪ್ರತೀತಮೇತದ್ಧಿ ವಿದ್ಧಿ ಸ್ವಪ್ನ[೧]ವಿಮರ್ಶನಮ್ ॥ ೬೦ ॥**

ಆರೋಗ್ಯದಿಂದಿರುವವರು ಕಂಡ ಕನಸುಗಳು ಸತ್ಯವಾಗಿರುವುವು. ಅನಾರೋಗ್ಯದಿಂದಿರುವವರು ಕಂಡ ಕನಸುಗಳು ಅಸತ್ಯವಾಗಿರುವುವು. ಈ ಸ್ವಪ್ನಗಳ ವಿಚಾರವಾದರೋ ಲೋಕಪ್ರಸಿದ್ಧವಾಗಿರುವುದೆಂದು ತಿಳಿ.

**ಸ್ವಪ್ನಾನಾಂ [೨]ದ್ವೈತಮಸ್ತ್ಯನ್ಯ [೩]ದ್ದೋಷದೈವಸಮುದ್ಭವಮ್ ।**
**ದೋಷಪ್ರಕೋಪಜಾ ಮಿಥ್ಯಾ ತಥ್ಯಾಃ ಸ್ಯುರ್ದೈವಸಂಭವಾಃ ॥ ೬೧ ॥**

ದೋಷಗಳಿಂದುಂಟಾದುವೆಂದೂ ದೈವದಿಂದುಂಟಾದುವೆಂದೂ ಸ್ವಪ್ನಗಳ ಬೇರೆ ಎರಡು ಭೇದಗಳಿರುತ್ತವೆ. ದೋಷಗಳ ಉದ್ರೇಕದಿಂದುಂಟಾದುವು ಮಿಥ್ಯಾಸ್ವಪ್ನಗಳಾಗಿರುವುವು. ಅದೃಷ್ಟದ ಪ್ರೇರಣೆಯಿಂದುಂಟಾದುವು ಸತ್ಯಸ್ವಪ್ನಗಳಾಗಿರುವುವು.

**ಕಲ್ಯಾಣಾಂಗತ್ವ [೪]ಮೇಕಾಂತಾದ್ದೇವತಾಧಿಷ್ಠಿತಶ್ಚ ಯತ್ ।**
**ನ ಮಿಥ್ಯಾ ತದಿಮೇ ಸ್ವಪ್ನಾಃ ಫಲಮೇಷಾಂ[೫]ನಿಬೋಧ ಮೇ॥ ೬೨ ॥**

ಎಲೈ ಮಂಗಳಾಂಗನೆ ! ನೀನು ನಿಶ್ಚಯದಿಂದ ದೇವತಾಧಿಷ್ಠಿತನಾಗಿರುವುದರಿಂದ ಈ ಸ್ವಪ್ನಗಳು ಮಿಥ್ಯಾಸ್ವಪ್ನಗಳಲ್ಲ. ಇವುಗಳ ಫಲವನ್ನು ನನ್ನಿಂದ ತಿಳಿ.

**ದೃಷ್ಟಾಃ ಸ್ವಪ್ನೇ ಮೃಗಾಧೀಶಾ ಯೇ ತ್ರಯೋವಿಂಶತಿಪ್ರಮಾಃ ।**
**ನಿಸ್ಸಪತ್ನಾ ವಿಹೃತ್ಯೇಮಾಂ ಕ್ಷ್ಮಾಂ ಕ್ಷ್ಮಾಭೃತ್ಕೂಟ[೬]ಮಾಸ್ಥಿತಾಃ ॥ ೬೩ ॥**

**ತತ್ಫಲಂ [೭]ಸನ್ಮತಿಂ ಮುಕ್ತ್ವಾ ಶೇಷತೀರ್ಥಕರೋದಯೇ ।**
**ದುರ್ನಯಾನಾಮನುದ್ಭೂತಿಖ್ಯಾಪನಂ [೮]ಲಕ್ಷ್ಯತಾಂ ಸ್ಫುಟಮ್ ॥ ೬೪ ॥**

ಶತ್ರುರಹಿತಗಳೂ ಈ ಭೂಮಿಯನ್ನು ವಿಹರಿಸಿ ಗಿರಿಶಿಖರವನ್ನು ಆಶ್ರಯಿಸಿದುವೂ ಇಪ್ಪತ್ತುಮೂರು ಸಂಖ್ಯೆಯುಳ್ಳುವೂ ಆದ ಸಿಂಹಗಳು ಕನಸಿನಲ್ಲಿ ನೋಡಲ್ಪಟ್ಟುವೋ ಅವುಗಳ ಫಲವು ವರ್ಧಮಾನಸ್ವಾಮಿಯನ್ನು ಬಿಟ್ಟು ಉಳಿದಿಪ್ಪತ್ತುಮೂರು ತೀರ್ಥಂಕರರ ಉದಯಕಾಲದಲ್ಲಿ ದುರ್ನಯಗಳ (ಮಿಥ್ಯಾಜ್ಞಾನಾಂಶಗಳ) ಅನುತ್ಪತ್ತಿಯನ್ನು ತಿಳುಹುವುದೆಂದು ಚೆನ್ನಾಗಿ ನೋಡಲ್ಪಡಲಿ.

**ಪುನರೇಕಾಕಿನಃ ಸಿಂಹಪೋತಸ್ಯಾ[೯]ನ್ವನ್ಯ್ಮಗೇಕ್ಷಣಾತ್ ।**
**ಭವೇಯುಃ ಸನ್ಮತೇಸ್ತೀರ್ಥೇ [೧೦]ಸಾನುಷಂಗಾಃ ಕುಲಿಂಗಿನಃ ॥ ೬೫ ॥**

ಬಳಿಕ ಒಂದು ಸಿಂಹದ ಮರಿಯನ್ನು ಹಿಂಬಾಲಿಸುವುವುಗಳಾದ ಮೃಗಗಳನ್ನು ನೋಡಿದುದರಿಂದ ವರ್ಧಮಾನಸ್ವಾಮಿಯ ತೀರ್ಥದಲ್ಲಿ (ಧರ್ಮಪ್ರಚಾರಕಾಲದಲ್ಲಿ ) ಧನಧಾನ್ಯಾದಿಪರಿಗ್ರಹಗಳುಳ್ಳವರಾದ ಮಿಥ್ಯಾದೃಷ್ಟಿಗಳು–ವೇಷಧಾರಿಗಳು ಉಂಟಾಗುವರು.

**ಕರೀಂದ್ರಭಾರನಿರ್ಭುಗ್ನಪೃಷ್ಠಸ್ಯಾಶ್ವಸ್ಯ ವೀಕ್ಷಣಾತ್ ।**
**ಕೃತ್ಸ್ನಾಂಸ್ತಪೋಗುಣಾನ್ವೋಢುಂ ನಾಲಂ ದುಃಷಮಸಾಧವಃ ॥ ೬೬ ॥**

ದೊಡ್ಡ ಆನೆಯ ಭಾರದಿಂದ ಕುಗ್ಗಿದ ಬೆನ್ನುಳ್ಳದಾದ ಕುದುರೆಯನ್ನು ನೋಡಿದುದರಿಂದ ದುಃಷಮವೆಂಬ ಪಂಚಮಕಾಲದಲ್ಲಿ ಸಾಧುಗಳು ಸಮಸ್ತವಾದ ತಪೋಗುಣಗಳನ್ನು–ಮೂಲೋತ್ತರಗುಣಗಳನ್ನು ಧರಿಸುವುದಕ್ಕೆ ಸಮರ್ಥರಾಗುವುದಿಲ್ಲ.

೧ ವಿಚಾರಣಂ. ೨ ದ್ವಿವಿಧಂ. ೩ ದೋಷಸಮುದ್ಭವಂ ದೈವಸಮುದ್ಭವಮಿತಿ. ೪ ನಿಶ್ಚಯಾತ್. ೫ ಜಾನೀಹಿ. ೬ ಆಶ್ರಿತಾಃ. ೭ ವರ್ಧಮಾನಜಿನಂ. ೮ ದೃಶ್ಯತಾಂ. ೯ ಅನುಗಚ್ಛತ್. ೧೦ ಸಪರಿಗ್ರಹಾಃ.

**[೧]ಮೂಲೋತ್ತರಗುಣೇಷ್ವಾತ್ತ[೨]ಸಂಗರಾಃ ಕೇಚನಾಲಸಾಃ ।**
**ಭಂಕ್ಷ್ಯಂತೇ ಮೂಲತಃ ಕೇಚಿತ್ತೇಷು ಯಾಸ್ಯಂತಿ[೩]ಮಂದತಾಮ್॥ ೬೭ ॥**

ಇಪ್ಪತ್ತೆಂಟು ಮೂಲಗುಣಗಳಲ್ಲಿಯೂ ಮೂವತ್ತಾರು ಉತ್ತರ ಗುಣಗಳಲ್ಲಿಯೂ ಪ್ರತಿಜ್ಞೆಯನ್ನು ಮಾಡಿದವರೂ ಆಲಸ್ಯವುಳ್ಳವರೂ ಆದ ಕೆಲವರು ಮೂಲಗುಣಗಳಿಂದ ಭಗ್ನರಾಗುತ್ತಾರೆ. ಮತ್ತೆ ಕೆಲವರು ಆ ಮೂಲಗುಣಗಳಲ್ಲಿ ಅಲ್ಪತ್ವವನ್ನು ಹೊಂದುವರು. ಸ್ವಲ್ಪಗುಣಗಳನ್ನು ಪಾಲಿಸುವರೆಂದು ಭಾವವು.

**[೪]ನಿಧ್ಯಾನಾದಜಯೂಥಸ್ಯ ಶುಷ್ಕಪತ್ರೋ[೫]ಪಯೋಗಿನಃ ।**
**ಯಾಂತ್ಯಸದ್ವೃತ್ತತಾಂ ತ್ಯಕ್ತಸದಾಚಾರಾಃ [೬]ಪುರಾ ನರಾಃ ॥ ೬೮ ॥**

ಒಣಗಿದ ಎಲೆಗಳನ್ನು ಸೇವಿಸುವುದಾದ ಆಡುಗಳ ಗುಂಪನ್ನು ನೋಡಿದುದರಿಂದ ಮುಂದೆ ಪಂಚಮಕಾಲದಲ್ಲಿ ಮನುಷ್ಯರು ಸದಾಚಾರಗಳನ್ನು ತ್ಯಜಿಸಿದವರಾಗಿ ದುರಾಚಾರವನ್ನು ಹೊಂದುವರು.

**ಕರೀಂದ್ರಕಂಧರಾರೂಢಶಾಖಾಮೃಗವಿಲೋಕನಾತ್ ।**
**ಆದಿಕ್ಷತ್ರಾನ್ವಯೋಚ್ಛಿತ್ತೌ ಕ್ಷ್ಮಾಂ [೭]ಪಾಸ್ಯಂತ್ಯಕುಲೀನಕಾಃ ॥ ೬೯ ॥**

ದೊಡ್ಡ ಆನೆಯ ಕುತ್ತಿಗೆಯನ್ನೇರಿದ ಕಪಿಯನ್ನು ನೋಡಿದುದರಿಂದ ಪುರಾತನ ಕ್ಷತ್ರಿಯವಂಶವು ನಾಶವಾಗಿ ಕುಲಹೀನರಾದವರು ಪೃಥ್ವಿಯನ್ನು ರಕ್ಷಿಸುವರು.

**ಕಾಕೈರುಲೂಕಸಂಬಾಧದರ್ಶನಾ[೮]ದ್ಧರ್ಮಕಾಮ್ಯಯಾ ।**
**ಮುಕ್ತ್ವಾ ಜೈನಾನ್ಮುನೀನನ್ಯಮತಸ್ಥಾನನ್ವಿಯುರ್ಜನಾಃ ॥ ೭೦ ॥**

ಕಾಗೆಗಳಿಂದ ಗೂಬೆಗಳಿಗೆ ಬಹು ಬಾಧೆಯಾಗುವುದನ್ನು ನೋಡಿದುದರಿಂದ ಜನರು ಧರ್ಮದ ಇಚ್ಛೆಯಿಂದ ಜೈನಮುನಿಗಳನ್ನು ಬಿಟ್ಟು ಅನ್ಯಮತಸ್ಥರನ್ನು ಅನುಸರಿಸುವರು.

**ಪ್ರನೃತ್ಯತಾಂ [೯]ಪ್ರಭೂತಾನಾಂ ಭೂತಾನಾಮೀಕ್ಷಣಾತ್ಪ್ರಜಾಃ ।**
**ಭಜೇಯುರ್ನಾಮಕರ್ಮಾದ್ಯೈರ್ವ್ಯಂತರಾನ್ [೧೦]ದೇವತಾಸ್ಥಯಾ॥ ೭೧ ॥**

ಹೆಚ್ಚಾಗಿ ಕುಣಿಯುತ್ತಿರುವುವೂ ಅಧಿಕಸಂಖ್ಯೆಯುಳ್ಳುವೂ ಆದ ಭೂತಗಳನ್ನು ನೋಡಿದುದರಿಂದ ಪ್ರಜೆಗಳು ದೇವರೆಂಬ ಬುದ್ಧಿಯಿಂದ ವ್ಯಂತರ–ನೀಚದೇವತೆಗಳನ್ನು ನಾಮಸ್ಮರಣ ಪೂಜಾಕ್ರಿಯೆ ಮೊದಲಾದುವುಗಳಿಂದ ಭಜಿಸುವರು.

**ಶುಷ್ಕಮಧ್ಯತಡಾಗಸ್ಯ ಪರ್ಯಂತೇಂಬುಸ್ಥಿತೀಕ್ಷಣಾತ್ ।**
**ಪ್ರಚ್ಯುತ್ಯಾ[೧೧]ರ್ಯನಿವಾಸಾತ್ಸ್ಯಾದ್ಧರ್ಮಃ [೧೨]ಪ್ರತ್ಯಂತವಾಸಿಷು ॥ ೭೨ ॥**

ಮಧ್ಯದಲ್ಲಿ ಒಣಗಿಹೋದ ಸರೋವರದ ಸುತ್ತಲೂ ನೀರನ್ನು ನೋಡಿದುದರಿಂದ ಧರ್ಮವು ಆರ್ಯಖಂಡದಿಂದ ಚ್ಯುತಿಯನ್ನು ಹೊಂದಿ ಮ್ಲೇಚ್ಛರಲ್ಲಿರುವುದು.

**ಪಾಂಸುಧೂಸರರತ್ನೌಘ[೧೩]ನಿಧ್ಯಾನಾದೃದ್ಧಿಮತ್ತಮಾಃ ।**
**ನೈವ ಪ್ರಾದುರ್ಭವಿಷ್ಯಂತಿ ಮುನಯಃ ಪಂಚಮೇ ಯುಗೇ ॥ ೭೩ ॥**

ಧೂಳಿಯಿಂದ ಸ್ವಲ್ಪ ಬಿಳುಪಾದ ರತ್ನಗಳ ಸಮೂಹವನ್ನು ನೋಡಿದುದರಿಂದ ಪಂಚಮಕಾಲದಲ್ಲಿ ತಪೋಮಹಿಮೆಯುಳ್ಳವರಾದ ಮುನಿಗಳು ಪ್ರಾದುರ್ಭವಿಸುವುದೇ ಇಲ್ಲ.

**ಶುನೋ[೧೪]ರ್ಚಿತಸ್ಯ ಸತ್ಕಾರೈಶ್ಚರುಭೋಜನದರ್ಶನಾತ್ ।**
**ಗುಣವತ್ಪಾತ್ರಸತ್ಕಾರಮಾಪ್ಸ್ಯಂತ್ಯವ್ರತಿನೋ ದ್ವಿಜಾಃ ॥ ೭೪ ॥**

೧ ಮೂಲಗುಣಾಃ ೨೮ ಉತ್ತರಗುಣಾಃ. ೨ ಪ್ರತಿಜ್ಞಾ. ೩ ಅಲ್ಪತಾಂ. ೪ ದರ್ಶನಾತ್. ೫ ಸೇವಿನಃ. ೬ ಪಂಚಮಕಾಲೇ. ೭ ರಕ್ಷಿಷ್ಯಂತಿ. ೮ ಧರ್ಮವಾಂಛಯಾ. ೯ ಬಹುಲಾನಾಂ. ೧೦ ದೇವಬುದ್ಧ್ಯಾ. ೧೧ ಆರ್ಯಖಂಡಾತ್. ೧೨ ಮ್ಲೇಚ್ಛೇಷು. ೧೩ ದರ್ಶನಾತ್. ೧೪ ದ್ರವ್ಯಸ್ಯ.

ಸತ್ಕಾರಗಳಿಂದ ಪೂಜಿಸಲ್ಪಟ್ಟುದಾದ ನಾಯಿಯು ಚರುವನ್ನು ತಿನ್ನುವುದನ್ನು ನೋಡಿದುದರಿಂದ ವ್ರತರಹಿತರಾದ ಬ್ರಾಹ್ಮಣರು ಗುಣವಂತರಾದ ಸತ್ಪಾತ್ರಗಳ ಸತ್ಕಾರವನ್ನು ಹೊಂದುವರು. ಸತ್ಪಾತ್ರಗಳು ಹೊಂದತಕ್ಕ ಸತ್ಕಾರವನ್ನು ಹೊಂದು ವರೆಂದು ಭಾವವು.

**ತರುಣಸ್ಯ ವೃಷಸ್ಯೋಚ್ಚೈ[೧]ರ್ನದತೋ [೨]ವಿಹೃತೀಕ್ಷಣಾತ್ ।**
**[೩]ತಾರುಣ್ಯ ಏವ [೪]ಶ್ರಾಮಣ್ಯೇ ಸ್ಥಾಸ್ಯಂತಿ ನ [೫]ದಶಾಂತರೇ ॥ ೭೫ ॥**

ಗಟ್ಟಿಯಾಗಿ ಧ್ವನಿಮಾಡುವ(ಗುಟುರುಹಾಕುವ) ಯೌವನ ವಯಸ್ಸಿನ ವೃಷಭದ ಸಂಚಾರವನ್ನು ನೋಡಿದುದರಿಂದ ತಾರುಣ್ಯವಯಸ್ಸಿನಲ್ಲೇ ವಿರಕ್ತರು ಯತಿಯ ವೇಷದಲ್ಲಿ ಸ್ಥಿರವಾಗಿರುವರು. ವಾರ್ಧಿಕ್ಯದಲ್ಲಿ ಸ್ಥಿರವಾಗಿರಲಾರರು.

**ಪರಿವೇಷೋಪರಕ್ತಸ್ಯ [೬]ಶ್ವೇತಭಾನೋ[೭]ರ್ನಿಶಾಮನಾತ್ । .**
**[೮]ನೋತ್ಪತ್ಸ್ಯತೇ ತಪೋಭೃತ್ಸು [೯]ಸಮನಃಪರ್ಯಯೋಽವಧಿಃ ॥ ೭೬ ॥**

ಪರಿಧಿಯಿಂದ ಸುತ್ತಲ್ಪಟ್ಟ ಚಂದ್ರನನ್ನು ನೋಡಿದುದರಿಂದ ತಪೋಧಾರಿಗಳಲ್ಲಿ ಮನಃಪರ್ಯಯಜ್ಞಾನಸಹಿತವಾದ ಅವಧಿಜ್ಞಾನವು ಉಂಟಾಗುವುದಿಲ್ಲ. ಎರಡು ಜ್ಞಾನಗಳೂ ಉಂಟಾಗುವುದಿಲ್ಲವೆಂದು ಭಾವವು.

**ಅನ್ಯೋನ್ಯಂ ಸಹ ಸಂಭೂಯ [೧೦]ವೃಷಯೋರ್ಗಮನೇಕ್ಷಣಾತ್ ।**
**ವರ್ತ್ಸ್ಯಂತಿ ಮುನಯಃ [೧೧]ಸಾಹಚರ್ಯಾನ್ನೈಕವಿಹಾರಿಣಃ ॥ ೭೭ ॥**

ಒಂದಕ್ಕೊಂದು ಜತೆ ಸೇರಿದ ಎರಡು ಎತ್ತುಗಳ ಸಂಚಾರವನ್ನು ನೋಡಿದುದ ರಿಂದ ಮುನಿಗಳು ಸಮೂಹದಿಂದ ಇರುವರು. ಓರ್ವೋರ್ವರೇ ವಿಹರಿಸು ವವರಾಗಿರಲಾರರು.

**ಘನಾವರಣರುದ್ಧಸ್ಯ ದರ್ಶನಾದಂಶುಮಾಲಿನಃ ।**
**ಕೇವಲಾರ್ಕೋದಯಃ [೧೨]ಪ್ರಾಯೋ ನ ಭವೇತ್ಪಂಚಮೇ ಯುಗೇ ॥**

ಮೇಘದ ಆವರಣದಿಂದ ಮುಚ್ಚಲ್ಪಟ್ಟವನಾದ ಸೂರ್ಯನನ್ನು ನೋಡಿದುದ ರಿಂದ ಐದನೆಯ ಯುಗದಲ್ಲಿ ಕೇವಲಜ್ಞಾನವೆಂಬ ಸೂರ್ಯನ ಉದಯವು ಆಗುವುದೇ ಇಲ್ಲ.

**ಪುಂಸಾಂ ಸ್ತ್ರೀಣಾಂ ಚ ಚಾರಿತ್ರಚ್ಯುತಿಃ ಶುಷ್ಕದ್ರುಮೇಕ್ಷಣಾತ್ ।**
**ಮಹೌಷಧಿರಸೋಚ್ಛೇದೋ ಜೀರ್ಣಪರ್ಣಾವಲೋಕನಾತ್ ॥ ೭೯ ॥**

ಒಣಗಿದ ಮರವನ್ನು ನೋಡಿದುದರಿಂದ ಪುರುಷರ ಮತ್ತು ಸ್ತ್ರೀಯರ ಚಾರಿತ್ರವು –ಆಚರಣೆಯು ಲೋಪವಾಗುವುದು. ಶಿಥಿಲವಾದ ಎಲೆಗಳನ್ನು ನೋಡಿದುದ ರಿಂದ ಮಹೌಷಧಿಗಳಲ್ಲಿ ರಸವು ನಷ್ಟವಾಗುವುದು. ಶಕ್ತಿಯು ಕುಂದುವುದೆಂದು ಭಾವವು.

**ಸ್ವಪ್ನಾನೇ[೧೩]ವಂಫಲಾನೇತಾನ್ವಿದ್ಧಿ [೧೪]ದೂರವಿಪಾಕಿಣಃ ।**
**ನಾದ್ಯ ದೋಷೋಸ್ತ್ಯತಃ ಕೋಪಿ ಫಲಮೇಷಾಂ ಯುಗಾಂತರೇ ॥ ೮೦ ॥**

ಈ ರೀತಿಯಾದ ಫಲಗಳುಳ್ಳವುಗಳಾದ ಸ್ವಪ್ನಗಳನ್ನು ದೂರದಲ್ಲಿ ಉದಯಕ್ಕೆ ಬರುವುವುಗಳನ್ನಾಗಿ ಅಂದರೆ ಬಹುಕಾಲದ ಮೇಲೆ ಫಲಗಳನ್ನು ಕೊಡುವುವು ಗಳನ್ನಾಗಿ ತಿಳಿ. ಈಗ ಈ ಸ್ವಪ್ನಗಳಿಂದ ಯಾವ ದೋಷವೂ ಇಲ್ಲ. ಮತ್ತೊಂದು ಯುಗದಲ್ಲಿ ಈ ಕನಸುಗಳ ಫಲವಾಗುವುದು.

**ಇತಿ ಸ್ವಪ್ನಫಲಾನ್ಯಸ್ಮಾದ್ಬುದ್ಧ್ವಾ ವತ್ಸ ಯಥಾತಥಾ ।**
**ಧರ್ಮೇ ಮತಿಂ ದೃಢಂ ಧತ್ಸ್ವ ವಿಶ್ವವಿಘ್ನೋಪಶಾಂತಯೇ ॥ ೮೧ ॥**

೧ ಧ್ವನತಃ. ೨ ವಿಹರಣ. ೩ ಬಾಲಕಾಲೇ. ೪ ಯತಿತ್ವೇ. ೫ ವೃದ್ಧತ್ವೇ. ೬ ಚಂದ್ರಸ್ಯ. ೭ ದರ್ಶನಾತ್. ೮ ನೋದೇಷ್ಯತಿ. ೯ ಮನಃಪರ್ಯಯಜ್ಞಾನಯುತಾವಧಿಜ್ಞಾನಂ. ೧೦ ವೃಷಭಯೋಃ. ೧೧ ಸಮೂಹಾತ್. ೧೨ ಭೃಶಂ. ೧೩ ಈದೃಗ್ಭೂತಫಲಾನ್. ೧೪ ದೂರೋದಯಾನ್.

ಎಲೈ ಮಗುವೆ ! ಮೇಲೆ ಹೇಳಿದ ಪ್ರಕಾರವಾಗಿ ಸ್ವಪ್ನಗಳ ಫಲಗಳನ್ನು ನಮ್ಮಿಂದ ತಿಳಿದು ಸಾಧ್ಯವಾದಷ್ಟು ಸಮಸ್ತವಿಘ್ನಗಳ ಉಪಶಾಂತಿಗೋಸ್ಕರ ಧರ್ಮದಲ್ಲಿ ಬುದ್ಧಿಯನ್ನು ದೃಢವಾಗಿ ಧರಿಸು.''

**ಇತ್ಯಾಕರ್ಣ್ಯ ಗುರೋರ್ವಾಕ್ಯಂ ಸ ವರ್ಣಾಶ್ರಮಪಾಲಕಃ ।**
**ಸಂದೇಹಕರ್ದಮಾಪಾಯಾತ್ಸುಪ್ರಸನ್ನಮಧಾನ್ಮನಃ ॥ ೮೨ ॥**

ಈ ಪ್ರಕಾರವಾಗಿ ಗುರುವಾದ ವೃಷಭಸ್ವಾಮಿಯ ವಾಕ್ಯವನ್ನು ಕೇಳಿ ವರ್ಣಾಶ್ರಮಗಳನ್ನು ಕಾಪಾಡುವವನಾದ ಆ ಭರತೇಶ್ವರನು ಸಂದೇಹವೆಂಬ ಕೆಸರು ತೊಲಗಿಹೋದುದರಿಂದ ನಿರ್ಮಲವಾದ ಮನಸ್ಸನ್ನು ಧರಿಸಿದನು. ಮನಸ್ಸು ನಿರ್ಮಲವಾಯಿತೆಂದು ಭಾವವು.

**ಭೂಯೋಭೂಯಃ ಪ್ರಣಮ್ಯೇಶಂ ಸಮಾಪೃಚ್ಛ್ಯ ಪುನಃಪುನಃ ।**
**ಪುನ[೧]ರಾವವೃತೇ ಕೃಛ್ರಾತ್ಸ ಪ್ರೀತೋ ಗುರ್ವನುಗ್ರಹಾತ್ ॥ ೮೩ ॥**

ಭರತೇಶ್ವರನು ವೃಷಭಸ್ವಾಮಿಯನ್ನು ಬಾರಿಬಾರಿಗೆ ನಮಸ್ಕರಿಸಿ ಪುನಃಪುನಃ ಕೇಳಿಕೊಂಡು ಪ್ರೀತಿಯುಳ್ಳವನಾಗಿ ಪುನಃ ಸ್ವಾಮಿಯ ಅನುಗ್ರಹದಿಂದ ಶ್ರಮದಿಂದ ಹಿಂದಿರುಗಿದನು. ಹೋಗುವುದಕ್ಕೆ ಮನಸ್ಸಿಲ್ಲದೆ ಶ್ರಮದಿಂದ ಹಿಂದಿರುಗಿ ಹೋದನೆಂದು ಭಾವವು.

**ತತಃ ಪ್ರವಿಶ್ಯ ಸಾಕೇತಪುರಮಾಬದ್ಧತೋರಣಮ್ ।**
**ಕೇತುಮಾಲಾಕುಲಂ ಪೌರೈಃ ಸಾನಂದಮಭಿನಂದಿತಃ ॥ ೮೪ ॥**

**ಶಾಂತಿಕ್ರಿಯಾಮತಶ್ಚಕ್ರೇ ದುಃಸ್ವಪ್ನಾನಿಷ್ಟಶಾಂತಯೇ ।**
**ಜಿನಾಭಿಷೇಕಸತ್ಪಾತ್ರದಾನಾದ್ಯೈಃ ಪುಣ್ಯಚೇಷ್ಟಿತೈಃ ॥ ೮೫ ॥**

ಬಳಿಕ ಕಟ್ಟಲ್ಪಟ್ಟಿರುವ ತೋರಣಗಳುಳ್ಳುದೂ ಧ್ವಜಗಳ ಸಾಲಿನಿಂದ ವ್ಯಾಪ್ತವೂ ಆದ ಅಯೋಧ್ಯಾನಗರವನ್ನು ಪುರನಿವಾಸಿಗಳಿಂದ ಆನಂದವಾಗಿ ಅಭಿನಂದಿಸ ಲ್ಪಟ್ಟವನಾಗಿ ಪ್ರವೇಶಿಸಿ ಬಳಿಕ ದುಃಸ್ವಪ್ನಗಳ ಅನಿಷ್ಟಶಾಂತಿಗೋಸ್ಕರ ಜಿನಾಭಿಷೇಕ ಸತ್ಪಾತ್ರದಾನ ಮೊದಲಾದ ಪುಣ್ಯವ್ಯಾಪಾರಗಳಿಂದ ಶಾಂತಿಕ್ರಿಯೆಯನ್ನು ಮಾಡಿ ದನು.

**[೨]ಗೋದೋಹ್ಯೈಃ [೩]ಪ್ಲಾವಿತಾ ಧಾತ್ರೀ ಪೂಜಿತಾಶ್ಚ ಮಹರ್ಷಯಃ ।**
**ಮಹಾದಾನಾನಿ ದತ್ತಾನಿ ಪ್ರೀಣಿತಃ [೪]ಪ್ರಣಯೀ ಜನಃ ॥ ೮೬ ॥**

ಹಾಲುಗಳಿಂದ ಭೂಮಿಯು ನೆನೆಸಲ್ಪಟ್ಟಿತು. ಮಹರ್ಷಿಗಳು ಪೂಜಿಸಲ್ಪಟ್ಟರು. ಮಹಾದಾನಗಳು ಕೊಡಲ್ಪಟ್ಟುವು. ಬಂಧುಜನವು ಸಂತೋಷಪಡಿಸಲ್ಪಟ್ಟಿತು.

**ನಿರ್ಮಾಪಿತಾಸ್ತತೋ ಘಂಟಾ ಜಿನಬಿಂಬೈರಲಂಕೃತಾಃ ।**
**ಪರಾರ್ಧ್ಯರತ್ನನಿರ್ಮಾಣಾಃ ಸಂಬದ್ಧಾ ಹೈಮರಜ್ಜುಭಿಃ ॥ ೮೭ ॥**

ಆಮೇಲೆ ಜಿನಬಿಂಬಗಳಿಂದ ಅಲಂಕೃತಗಳೂ ಬಹುಮೂಲ್ಯವಾದ ರತ್ನಗಳಿಂದ ನಿರ್ಮಿತಗಳೂ ಬಂಗಾರದ ಹಗ್ಗಗಳಿಂದ ಕಟ್ಟಲ್ಪಟ್ಟಿರುವುವೂ ಆದ ಘಂಟೆಗಳು ಮಾಡಿಸಲ್ಪಟ್ಟುವು.

**ಲಂಬಿತಾಶ್ಚ ಪುರದ್ವಾರಿ ತಾಶ್ಚತುರ್ವಿಂಶತಿಪ್ರಮಾಃ ।**
**ರಾಜವೇಶ್ಮಮಹಾದ್ವಾರಗೋಪುರೇಷ್ವಪ್ಯನುಕ್ರಮಾತ್ ॥ ೮೮ ॥**

ಇಪ್ಪತ್ತುನಾಲ್ಕು ಸಂಖ್ಯೆಯುಳ್ಳುವಾದ ಆ ಘಂಟೆಗಳು ಪುರದ್ವಾರದಲ್ಲಿಯೂ ಅರಮನೆಯ ಮಹಾದ್ವಾರದ ಗೋಪುರಗಳಲ್ಲಿಯೂ ಅನುಕ್ರಮದಿಂದ ತೂಗಿಸ ಲ್ಪಟ್ಟುವು.

**ಯದಾ ಕಿಲ ವಿನಿರ್ಯಾತಿ ಪ್ರವಿಶತ್ಯಪ್ಯಯಂ ಪ್ರಭುಃ ।**
**ತದಾ ಮೌಲ್ಯಗ್ರಲಗ್ನಾಭಿ[೫]ರಾಭಿರಸ್ಯಾರ್ಹತಾಂ ಸ್ಮೃತಿಃ ॥ ೮೯ ॥**

೧ ವ್ಯಾಘುಟಿತವಾನ್. ೨ ಕ್ಷೀರೈಃ. ೩ ಪ್ರಕ್ಷಾಲಿತಾ. ೪ ಬಂಧುಃ. ೫ ಜಿನಾಂಕಿತಘಂಟಾಭಿಃ.

ಈ ಭರತೇಶ್ವರನು ಹೊರಡುವಾಗಲೂ ಪ್ರವೇಶಿಸುವಾಗಲೂ ಇವನಿಗೆ ಕಿರೀಟದ ಮೇಲ್ಗಡೆಯಲ್ಲಿ ಕಟ್ಟಲ್ಪಟ್ಟಿರುವ ಈ ಘಂಟೆಗಳಿಂದ ಅರ್ಹತ್ಪರಮೇಶ್ವರರ ಸ್ಮರಣೆಯಾಗುತ್ತಿದ್ದಿತು.

**ಸ್ಮೃತ್ವಾ ತತೋರ್ಹದರ್ಚಾನಾಂ ಭಕ್ತ್ಯಾ ಕೃತ್ವಾಭಿವಂದನಾಮ್ ।**
**ಪೂಜಯತ್ಯಭಿನಿಷ್ಕ್ರಾಮನ್ ಪ್ರವಿಶಂಶ್ಚ ಸ ಪುಣ್ಯಧೀಃ ॥ ೯೦ ॥**

ಪುಣ್ಯಕರವಾದ ಬುದ್ಧಿಯುಳ್ಳವನಾದ ಆ ಭರತೇಶ್ವರನು ಹೊರಡುವಾಗಲೂ ಪ್ರವೇಶಿಸುವಾಗಲೂ ಅರ್ಹತ್ಪರಮೇಶ್ವರರ ಬಿಂಬಗಳನ್ನು ಸ್ಮರಿಸಿ ಭಕ್ತಿಯಿಂದ ಅಭಿವಂದನೆಯನ್ನು ಮಾಡಿ ಪೂಜಿಸುತ್ತಾನೆ.

**ರೇಜುಃ ಸೂತ್ರೇಷು ಸಂಪ್ರೋತಾ ಘಂಟಾಸ್ತಾಃ ಪರಮೇಷ್ಠಿನಾಮ್ ।**
**[೧]ಸದರ್ಥಘಟಿತಾಷ್ಟೀಕಾ ಗ್ರಂಥಾನಾಮಿವ ಪೇಶಲಾಃ ॥ ೯೧ ॥**

ಹಗ್ಗಗಳಲ್ಲಿ ಸೇರಿಸಲ್ಪಟ್ಟುವುಗಳೂ ರತ್ನಾದಿ ಶ್ರೇಷ್ಠವಾದ ಪದಾರ್ಥಗಳಿಂದ ಕೂಡಿರುವುವೂ ಮನೋಹರಗಳೂ ಆದ ಅರ್ಹತ್ಪರಮೇಶ್ವರರ ಆ ಘಂಟೆಗಳು, ಸೂತ್ರಗಳಲ್ಲಿ ಹೇಳಲ್ಪಟ್ಟುವೂ ರತ್ನತ್ರಯದಿಂದ ಕೂಡಿರುವುವೂ ಮನೋಹರಗಳೂ ಆದ ಗ್ರಂಥಗಳ ಟೀಕೆಗಳೋಪಾದಿಯಲ್ಲಿ ಶೋಭಿಸಿದುವು.

**ಲೋಕಚೂಡಾಮಣೇಸ್ತಸ್ಯ ಮೌಲಿಲಗ್ನಾ ವಿರೇಜಿರೇ ।**
**ಪಾದಚ್ಛಾಯಾ ಜಿನಸ್ಯೇವ ಘಂಟಾಸ್ತಾ ಲೋಕಸಮ್ಮತಾಃ ॥ ೯೨ ॥**

ಲೋಕಕ್ಕೆ ಚೂಡಾಮಣಿಯಾದ ಆ ಭರತೇಶ್ವರನ ಕಿರೀಟದಲ್ಲಿ ಸಂಬಂಧಿಸಿದುವುಗಳೂ ಜನರಿಗೆ ಸಮ್ಮತವಾದುವುಗಳೂ ಆದ ಆ ಘಂಟೆಗಳು, ಜಿನೇಶ್ವರನ ಪಾದಗಳ ನೆರಳುಗಳೋಪಾದಿಯಲ್ಲಿ ಶೋಭಿಸಿದುವು. ಭರತೇಶ್ವರನ ಕಿರೀಟದಲ್ಲಿ ಜಿನೇಶ್ವರನ ಪಾದಗಳ ನೆರಳುಗಳು ಶೋಭಿಸುವಂತೆ ಆ ಘಂಟೆಗಳು ಕಿರೀಟದ ಮೇಲೆ ಶೋಭಿಸಿದುವೆಂದು ಭಾವವು.

**ರತ್ನತೋರಣವಿನ್ಯಾಸೇ ಸ್ಥಾಪಿತಾಸ್ತಾ ನಿಧೀಶಿನಾ ।**
**ದೃಷ್ಟ್ವಾರ್ಹದ್ವಂದನಾಹೇತೋರ್ಲೋಕೋಪ್ಯಾಸೀ[೨]ತ್ತದಾದರಃ ॥ ೯೩ ॥**

ಅರ್ಹತ್ಪರಮೇಶ್ವರರನ್ನು ವಂದಿಸುವ ನಿಮಿತ್ತದಿಂದ ನಿಧಿಪತಿಯಾದ ಭರತೇಶ್ವರನು ರತ್ನತೋರಣಗಳ ರಚನೆಯಲ್ಲಿ ಸ್ಥಾಪಿಸಿರುವ ಆ ಘಂಟೆಗಳನ್ನು ನೋಡಿ ಜನರೂ ಜಿನವಂದನೆಯಲ್ಲಿ ಪ್ರೀತಿಯುಳ್ಳವರಾದರು.

**ಪೌರೈರ್ಜನೈರತಃ ಸ್ವೇಷು ವೇಶ್ಮ[೩]ತೋರಣದಾಮಸು ।**
**ಯಥಾವಿಭವಮಾಬದ್ಧಾ ಘಂಟಾಸ್ತಾಃ [೪]ಸಪರಿಚ್ಛದಾಃ ॥ ೯೪ ॥**

ಆದುದರಿಂದ ಪುರನಿವಾಸಿಗಳಾದ ಜನರು ತಮ್ಮ ಮನೆಗಳ ತೋರಣಮಾಲೆಗಳಲ್ಲಿ ಜಿನಬಿಂಬವೇ ಮೊದಲಾದ ಪರಿವಾರವುಳ್ಳ ಆ ಘಂಟೆಗಳನ್ನು ತಮ್ಮ ಸಂಪತ್ತಿಯನ್ನನುಸರಿಸಿ ಕಟ್ಟಿದರು. ಶಕ್ತ್ಯನುಸಾರವಾಗಿ ಕಟ್ಟಿದರೆಂದು ಭಾವವು.

**[೫]ಆದಿರಾಜಕೃತಾಂ ಸೃಷ್ಟಿಂ ಪ್ರಜಾಸ್ತಾಂ ಬಹುಮೇನಿರೇ ।**
**ಪ್ರತ್ಯಗಾರಂ ಯತೋದ್ಯಾಪಿ [೬]ಲಕ್ಷ್ಯಾ [೭]ವಂದನಮಾಲಿಕಾಃ ॥ ೯೫ ॥**

ಪ್ರಜೆಗಳು ಭರತೇಶ್ವರನಿಂದ ಮಾಡಲ್ಪಟ್ಟ ಆ ಸೃಷ್ಟಿಯನ್ನು ಗೌರವಿಸಿದರು. ಆದರಿಂದ ಈಗಲೂ ಪ್ರತಿಯೊಂದು ಮನೆಯಲ್ಲಿಯೂ ತೋರಣಮಾಲೆಗಳನ್ನು ನೋಡಬಹುದು.

**ವಂದನಾರ್ಥಂ ಕೃತಾ ಮಾಲಾ ಯತಸ್ತಾ ಭರತೇಶಿನಾ ।**
**ತತೋ ವಂದನಮಾಲಾಖ್ಯಾಂ ಪ್ರಾಪ್ಯ ರೂಢಿಂ ಗತಾಃ ಕ್ಷಿತೌ ॥ ೯೬ ॥**

ಭರತೇಶ್ವರನಿಂದ ವಂದನೆಗೋಸ್ಕರ ಆ ಮಾಲೆಗಳು ಮಾಡಲ್ಪಟ್ಟಿರುವುದರಿಂದ ಭೂಮಿಯಲ್ಲಿ ವಂದನಮಾಲೆಯೆಂಬ ಹೆಸರನ್ನು ಪಡೆದು ರೂಢಿಯನ್ನು ಹೊಂದಿರುತ್ತವೆ.

**ಧರ್ಮಶೀಲೇ ಮಹೀಪಾಲೇ ಯಾಂತಿ [೧]ತಚ್ಛೀಲತಾಂ ಪ್ರಜಾಃ ।**
**[೨]ಅತಾಚ್ಛೀಲ್ಯ[೩]ಮತಚ್ಛೀಲೇ ಯಥಾ ರಾಜಾ ತಥಾ ಪ್ರಜಾಃ ॥ ೯೭ ॥**

ರಾಜನು ಧರ್ಮಶೀಲನಾಗಿರುತ್ತಿರಲು ಪ್ರಜೆಗಳು ಧರ್ಮಶೀಲತ್ವವನ್ನು ಹೊಂದುತ್ತಾರೆ. ರಾಜನು ಅಧರ್ಮಶೀಲನಾಗಿರುತ್ತಿರಲು ಪ್ರಜೆಗಳು ಅಧರ್ಮಶೀಲತ್ವವನ್ನು ಹೊಂದುತ್ತಾರೆ. ಹೇಗೆ ರಾಜನೋ ಹಾಗೆ ಪ್ರಜೆಗಳು (ರಾಜನಂತೆ ಪ್ರಜೆಗಳು).

**ತದಾ [೪]ಕಾಲಾನುಭಾವೇನ ಪ್ರಾಯೋ ಧರ್ಮಪ್ರಿಯಾ ನರಾಃ ।**
**[೫]ಸಾಧೀಯಃ ಸಾಧುವೃತ್ತೇಸ್ಮಿನ್ [೬]ಸ್ವಾಮಿನ್ಯಾಸನ್ ಹಿತೇ ರತಾಃ ॥ ೯೮ ॥**

ಚತುರ್ಥಕಾಲದ ಮಹಿಮೆಯಿಂದ ಬಹಳಮಟ್ಟಿಗೆ ಧರ್ಮದಲ್ಲಿ ಪ್ರೀತಿಯುಳ್ಳವರಾದ ಮನುಷ್ಯರು ಈ ಭರತೇಶ್ವರನು ಸದಾಚಾರ ಸಂಪನ್ನನಾಗಿರುತ್ತಿರಲು ಅಧಿಕವಾಗಿ ಹಿತಕಾರ್ಯದಲ್ಲಿ ಆಸಕ್ತರಾದರು.

**ಸುಕಾಲಶ್ಚ ಸುರಾಜಾ ಚ ಸಮಂ ಸನ್ನಿಹಿತಂ ದ್ವಯಮ್ ।**
**ತತೋ ಧರ್ಮಪ್ರಿಯಾ ಜಾತಾಃ ಪ್ರಜಾ[೭]ಸ್ತದನುರೋಧತಃ ॥ ೯೯ ॥**

ಶ್ರೇಷ್ಠವಾದ ಕಾಲವೂ ಶ್ರೇಷ್ಠನಾದ ರಾಜನೂ ಎರಡೂ ಸಮಾನವಾಗಿ ಒದಗಿರುತ್ತವೆ. ಆದುದರಿಂದ ಆ ಕಾಲದ ಮತ್ತು ರಾಜನ ಅನುಸರಣದಿಂದ ಪ್ರಜೆಗಳು ಧರ್ಮದಲ್ಲಿ ಪ್ರೀತಿಯುಳ್ಳವರಾದರು.

**ಏಷ ಧರ್ಮಪ್ರಿಯಃ ಸಮ್ರಾಟ್ ಧರ್ಮಸ್ಥಾ[೮]ನಭಿನಂದತಿ ।**
**ಮತ್ವೇತಿ ನಿಖಿಲೋ ಲೋಕಸ್ತದಾ ಧರ್ಮೇ ರತಿಂ ವ್ಯಧಾತ್ ॥ ೧೦೦ ॥**

ಧರ್ಮದಲ್ಲಿ ಪ್ರೀತಿಯುಳ್ಳವನಾದ ಈ ಚಕ್ರವರ್ತಿಯು ಧರ್ಮದಲ್ಲಿರುವವರನ್ನು ಪೂಜಿಸುತ್ತಾನೆಂದು ತಿಳಿದು ಆಗ ಸಮಸ್ತಜನರೂ ಧರ್ಮದಲ್ಲಿ ಪ್ರೀತಿಯನ್ನು ಮಾಡಿದರು.

**ಸ [೯]ಧರ್ಮವಿಜಯೀ ಸಮ್ರಾಟ್ ಸದ್ವೃತ್ತಃ ಶುಚಿರೂರ್ಜಿತಃ ।**
**[೧೦]ಪ್ರಕೃತಿಷ್ವನುರಕ್ತಾಸು ವ್ಯಧಾದ್ಧರ್ಮಕ್ರಿಯಾದರಮ್ ॥ ೧೦೧ ॥**

ಸದಾಚಾರಿಯೂ ನಿರ್ಮಲನೂ ವೃದ್ಧಿಯನ್ನು ಹೊಂದುತ್ತಿರುವವನೂ ಧರ್ಮವನ್ನು ವಶಮಾಡುವವನೂ ಆದ ಆ ಚಕ್ರವರ್ತಿಯು ಪ್ರೀತಿಯುಳ್ಳವರಾದ ಪ್ರಜಾಪರಿವಾರಜನರಲ್ಲಿ(ರಿಗೆ)ಧರ್ಮಕ್ರಿಯೆಯಲ್ಲಿ ಪ್ರೀತಿಯನ್ನುಂಟುಮಾಡಿದನು.

**ಭರತೋಭಿರತೋ ಧರ್ಮೇ ವಯಂ ತದನುಜೀವಿನಃ ।**
**ಇತಿ ತದ್ವೃತ್ತ[೧೧]ಮನ್ವೀಯುರ್ಮೌಲಿಬದ್ಧಾ ಮಹೀಕ್ಷಿತಃ ॥ ೧೦೨ ॥**

"ಭರತನು ಧರ್ಮದಲ್ಲಿ ಅನುರಾಗವುಳ್ಳವನಾಗಿದ್ದಾನೆ. ನಾವು ಅವನ ಅನುಯಾಯಿಗಳು" ಎಂದು ಮುಕುಟಬದ್ಧರಾದ ರಾಜರುಗಳು ಭರತನ ಆಚರಣೆಯನ್ನು ಅನುಸರಿಸಿದರು.

**ಸೋಯಂ ಸಾಧಿತಕಾಮಾರ್ಥಶ್ಚಕ್ರೀ ಚಕ್ರಾನುಭಾವತಃ ।**
**ಚರಿತಾರ್ಥೇ ದ್ವಯೇ ತಸ್ಮಿನ್ ಭೇಜೇ [೧೨]ಧರ್ಮೈಕತಾನತಾಮ್ ॥**

೧ ರತ್ನಾದಿಸಮ್ಯಗರ್ಥ. ೨ ವಂದನಾದರಃ. ೩ ತೋರಣಮಾಲಾಸು. ೪ ಜಿನಬಿಂಬಾದಿ ಪರಿಕರ ಸಹಿತಾಃ. ೫ ಭರತರಾಜಕೃತಾಂ. ೬ ಅಂಕಿತಾ ಬಭೂವುಃ. ೭ ತೋರಣಮಾಲಾಃ.

೧ ಧರ್ಮಶೀಲತಾಂ. ೨ ಅಧರ್ಮತ್ವಂ. ೩ ಅಧರ್ಮಶೀಲೇ ಸತಿ. ೪ ಚತುರ್ಥಕಾಲೇನ. ೫ ಅತ್ಯರ್ಥಂ, ಸಾಧೀಯಾನ್ಸಾಧುಬಾಢಯೋಃ. ೬ ಭರತೇ. ೭ ರಾಜಕಾಲಯೋಃ. ೮ ಪೂಜಯತಿ. ೯ ಧರ್ಮಂ ವಶಂ ಕುರ್ವಾಣ ಇತ್ಯರ್ಥಃ. ೧೦ ಪ್ರಜಾಪರಿವಾರೇಷು. ೧೧ ಅನುಗಚ್ಛಂತಿ ಸ್ಮ. ೧೨ ಧರ್ಮೇ ಅನನ್ಯವೃತ್ತಿತಾಂ.

ಚಕ್ರರತ್ನದ ಮಹಿಮೆಯಿಂದ ಪ್ರಸಿದ್ಧನಾದ ಈ ಚಕ್ರವರ್ತಿಯು ಕಾಮ ಪುರುಷಾರ್ಥವನ್ನೂ ಅರ್ಥಪುರುಷಾರ್ಥವನ್ನೂ ಸಾಧಿಸಿದವನಾಗಿ ಅವೆರಡು ಚರಿತಾರ್ಥವನ್ನು ಹೊಂದುತ್ತಿರಲು ಧರ್ಮದಲ್ಲಿ ಏಕಾಗ್ರತೆಯನ್ನು ಹೊಂದಿದನು.

**ದಾನಂ ಪೂಜಾ ಚ ಶೀಲಂ ಚ ದಿನೇ ಪರ್ವಣ್ಯು[೧]ಪೋಷಿತಮ್ ।**
**ಧರ್ಮಶ್ಚತುರ್ವಿಧಃ ಸೋಯಮಾಮ್ನಾತೋ ಗೃಹಮೇಧಿನಾಮ್ ॥**

ಗೃಹಸ್ಥರಿಗೆ ದಾನ ಪೂಜಾ ಶೀಲ ಪರ್ವದಿನದಲ್ಲಿ ಉಪವಾಸಗಳೆಂಬ ಪ್ರಸಿದ್ಧವಾದ ಈ ನಾಲ್ಕುಪ್ರಕಾರವಾದ ಧರ್ಮವು ಶಾಸ್ತ್ರದಲ್ಲಿ ಹೇಳಲ್ಪಟ್ಟಿರುತ್ತದೆ.

**ದದೇ ದಾನಮಸೌ ಸದ್ಭ್ಯೋ ಮುನಿಭ್ಯೋ ವಿಹಿತಾದರಮ್ ।**
**ಸಮೇತೋ ನವಭಿಃ ಪುಣ್ಯೈರ್ಗುಣೈಃ ಸಪ್ತಭಿರನ್ವಿತಃ ॥ ೧೦೫ ॥**

ಈ ಭರತೇಶ್ವರನು ಸತ್ಪುರುಷರಾದ ಮುನಿಗಳಿಗೆ ಪ್ರತಿಗ್ರಹಣ ಉಚ್ಚಸ್ಥಾನ ಪಾದೋದಕ ವಂದನಾ ಪೂಜಾ ಮನಶ್ಶುದ್ಧಿ ವಚನಶುದ್ಧಿ ಕಾಯಶುದ್ಧಿ ಆಹಾರ ಶುದ್ಧಿಗಳೆಂಬ ಒಂಬತ್ತು ಪುಣ್ಯಗಳಿಂದ ಸಮೇತನೂ ಶ್ರದ್ಧಾ ಶಕ್ತಿ ಭಕ್ತಿ ವಿಜ್ಞಾನ ಅಲುಬ್ಧತ್ವ ಕ್ಷಮಾ ಸತ್ತ್ವಗಳೆಂಬ ಏಳುಗುಣಗಳಿಂದ ಕೂಡಿದವನೂ ಆಗಿ ಪ್ರೀತಿ ಪೂರ್ವಕವಾಗಿ ದಾನವನ್ನು ಕೊಟ್ಟನು.

**ಸೋದಾದ್ವಿಶುದ್ಧಮಾಹಾರಂ [೨]ಯಥಾಯೋಗಂ ಚ ಭೇಷಜಮ್ ।**
**ಪ್ರಾಣಿಭ್ಯೋಭಯದಾನಂ ಚ ದಾನಸ್ಯೈತಾವತೀ ಗತಿಃ ॥ ೧೦೬ ॥**

ಆ ಭರತೇಶ್ವರನು ವಿಶುದ್ಧವಾದ ಆಹಾರವನ್ನೂ ಯುಕ್ತಿಯನ್ನನುಸರಿಸಿ (ಹೆಚ್ಚು ಕಡಮೆಯಿಲ್ಲದೆ) ಔಷಧಿಯನ್ನೂ ಪ್ರಾಣಿಗಳಿಗೆ ಅಭಯದಾನವನ್ನೂ ಕೊಟ್ಟನು. ದಾನಕ್ಕೆ ಇಷ್ಟು ಮಾರ್ಗಗಳಿರುತ್ತವೆ.

**ಜಿನೇಷು ಭಕ್ತಿಮಾತನ್ವಂಸ್ತತ್ಪೂಜಾಯಾಂ ಧೃತಿಂ ದಧೌ ।**
**ಪೂಜ್ಯಾನಾಂ ಪೂಜನಾಲ್ಲೋಕೇ ಪೂಜ್ಯತ್ವಮಿತಿ ಭಾವಯನ್ ॥ ೧೦೭ ॥**

ಪೂಜ್ಯರನ್ನು ಪೂಜಿಸುವುದರಿಂದ ಲೋಕದಲ್ಲಿ ಪೂಜ್ಯತ್ವವುಂಟಾಗುವುದೆಂದು ಭಾವಿಸುವವನಾಗಿ ಜಿನೇಶ್ವರರಲ್ಲಿ ಭಕ್ತಿಯನ್ನು ವಿಸ್ತರಿಸುವವನಾಗಿ ಜಿನೇಶ್ವರ ಪೂಜೆಯಲ್ಲಿ ಸಂತೋಷವನ್ನು ಹೊಂದಿದನು.

**ಚೈತ್ಯಚೈತ್ಯಾಲಯಾದೀನಾಂ ನಿರ್ಮಾಪಣಪುರಸ್ಸರಮ್ ।**
**ಸ ಚಕ್ರೇ ಪರಮಾಮಿಜ್ಯಾಂ ಕಲ್ಪವೃಕ್ಷಪೃಥುಪ್ರಥಾಮ್ ॥ ೧೦೮ ॥**

ಆ ಭರತೇಶ್ವರನು ಜಿನಬಿಂಬಗಳ ಜಿನಮಂದಿರಗಳ ನಿರ್ಮಾಪಣಪುರಸ್ಸರವಾಗಿ ಕಲ್ಪವೃಕ್ಷವೆಂದು ವಿಸ್ತಾರವಾದ ಪ್ರಸಿದ್ಧಿಯುಳ್ಳ ಮಹಾಪೂಜೆಯನ್ನು ಮಾಡಿದನು.

**ಶೀಲಾನುಪಾಲನೇ ಯತ್ನೋ ಮಹಾನಸ್ಯ ವಿಭೋರಭೂತ್ ।**
**ಶೀಲಂ ಹಿ ರಕ್ಷಿತಂ ಯತ್ನಾದಾತ್ಮಾನಮನುರಕ್ಷತಿ ॥ ೧೦೯ ॥**

ಈ ಭರತೇಶ್ವರನಿಗೆ ತನ್ನ ಶೀಲಗಳ ರಕ್ಷಣೆಯಲ್ಲಿ ಮಹಾಪ್ರಯತ್ನವುಂಟಾಯಿತು. ಪ್ರಯತ್ನದಿಂದ ರಕ್ಷಿಸಲ್ಪಟ್ಟ ಶೀಲವು ನಿಶ್ಚಯವಾಗಿ ಆತ್ಮನನ್ನು ರಕ್ಷಿಸುತ್ತದೆ.

**ವ್ರತಾನುಪಾಲನಂ ಶೀಲಂ ವ್ರತಾನ್ಯುಕ್ತಾನ್ಯಗಾರಿಣಾಮ್ ।**
**ಸ್ಥೂಲಹಿಂಸಾವಿರತ್ಯಾದಿಲಕ್ಷಣಾನಿ ವಿಚಕ್ಷಣೈಃ ॥ ೧೧೦ ॥**

ವ್ರತಗಳನ್ನು ಪಾಲಿಸುವಿಕೆಯು ಶೀಲವಾಗಿರುವುದು. ಗೃಹಸ್ಥರ ವ್ರತಗಳು ಸ್ಥೂಲ ಹಿಂಸಾದಿತ್ಯಾಗವೇ ಲಕ್ಷಣವಾಗಿರುತ್ತವೆಂದು ವಿದ್ವಾಂಸರಿಂದ ಹೇಳಲ್ಪಟ್ಟಿರುತ್ತವೆ. ಸ್ಥೂಲಹಿಂಸಾದಿತ್ಯಾಗವೇ ಗೃಹಸ್ಥರ ವ್ರತವೆಂದು ಭಾವವು.

**[೩]ಸಭಾವನಾನಿ [೪]ತಾನ್ಯೇಷ ಯಥಾಯೋಗಂ ಪ್ರಪಾಲಯನ್ ।**
**ಪ್ರಜಾನಾಂ ಪಾಲಕಃ ಸೋಭೂದ್ಧೌರೇಯೋ ಗೃಹಮೇಧಿನಾಮ್ ॥**

೧ ಉಪವಾಸಃ. ೨ ಯಥಾಯುಕ್ತಿ. ೩ ಮೈತ್ರೀಪ್ರಮೋದಾದಿಭಾವನಾಸಹಿತಾನಿ. ೪ ವ್ರತಾನಿ.

ಆ ಪ್ರಜೆಗಳ ಪಾಲಕನಾದ ಆ ಭರತೇಶ್ವರನು ಮೈತ್ರೀ ಪ್ರಮೋದ ಕಾರುಣ್ಯ ಮಾಧ್ಯಸ್ಥಭಾವನಾಸಹಿತಗಳಾದ ಆ ಸ್ಥೂಲಹಿಂಸಾದಿತ್ಯಾಗರೂಪವಾದ ವ್ರತಗಳನ್ನು ಹೆಚ್ಚುಕಡಮೆಯಿಲ್ಲದಂತೆ ಪಾಲಿಸುವವನಾಗಿ ಗೃಹಸ್ಥರಿಗೆ ಪ್ರಮುಖನಾದನು.

**ಪರ್ವೋಪವಾಸ[೧]ಮಾಸ್ಥಾಯ ಜಿನಾಗಾರೇ ಸಮಾಹಿತಃ ।**
**ಕುರ್ವನ್ಸಾಮಾಯಿಕಂ ಸೋಧಾನ್ಮುನಿವೃತ್ತಂ ಚ [೨]ತತ್ಕ್ಷಣಮ್ ॥ ೧೧೨ ॥**

ಪರ್ವದಿನದಲ್ಲಿ ಉಪವಾಸವನ್ನು ಪ್ರತಿಜ್ಞೆಮಾಡಿ ಜಿನಮಂದಿರದಲ್ಲಿ ಏಕಾಗ್ರ ಮನಸ್ಸುಳ್ಳವನೂ ಸಾಮಾಯಿಕವನ್ನು ಮಾಡುವವನೂ ಆದ ಆ ಭರತೇಶ್ವರನು ಸಾಮಾಯಿಕವು ಮುಗಿಯುವವರೆಗೆ ಮುನಿವೃತ್ತಿಯನ್ನು ಧರಿಸಿದನು. ಸಾಮಾಯಿಕ ಕಾಲದಲ್ಲಿ ಮುನಿಯಂತಿದ್ದನೆಂದು ಭಾವವು.

**ಜಿನಾನುಸ್ಮರಣೇ ತಸ್ಯ ಸಮಾಧಾನಮುಪೇಯುಷಃ ।**
**ಶೈಥಿಲ್ಯಾದ್ಗಾತ್ರಬಂಧಸ್ಯ [೩]ಸ್ರಸ್ತಾನ್ಯಾಭರಣಾನ್ಯಹೋ ॥ ೧೧೩ ॥**

ಜಿನೇಶ್ವರನ ಸ್ಮರಣೆಯಲ್ಲಿ ಸಮಾಧಾನವನ್ನು ಹೊಂದಿದವನಾದ ಆ ಭರತೇಶ್ವರನ ಶರೀರವು ಶಿಥಿಲವಾದುದರಿಂದ ಆಭರಣಗಳು ಜಾರಿದುವು. ಅಹೋ– ಆಶ್ಚರ್ಯ.

**ತಥಾಪಿ ಬಹುಚಿಂತ್ಯಸ್ಯ ಧರ್ಮಚಿಂತಾಭವದ್ದೃಢಾ ।**
**ಧರ್ಮೇ ಹಿ ಚಿಂತಿತೇ ಸರ್ವಂ ಚಿಂತ್ಯಂ ಸ್ಯಾದನುಚಿಂತಿತಮ್ ॥ ೧೧೪ ॥**

ಹಾಗಾದರೂ ಚಿಂತಿಸುವುದಕ್ಕೆ ಯೋಗ್ಯವಾದ ಅನೇಕ ವಿಷಯಗಳುಳ್ಳವನಾದ ಈ ಭರತೇಶ್ವರನ ಧರ್ಮಚಿಂತನೆಯು ದೃಢವಾಗಿದ್ದಿತು. ಧರ್ಮವನ್ನು ಚಿಂತಿಸಿದರೆ ಚಿಂತಿಸುವುದಕ್ಕೆ ಯೋಗ್ಯವಾದುದೆಲ್ಲವೂ ಚಿಂತಿಸಲ್ಪಟ್ಟುದಾಗುವುದಲ್ಲವೆ ? ಧರ್ಮವನ್ನು ಚಿಂತಿಸಿದರೆ ಎಲ್ಲವನ್ನೂ ಚಿಂತಿಸಿದಂತಾಗುವುದೆಂದರ್ಥವು.

**ತಸ್ಯಾಖಿಲಾಃ ಕ್ರಿಯಾರಂಭಾ ಧರ್ಮಚಿಂತಾಪುರಸ್ಸರಾಃ ।**
**ಜಾತಾ ಜಾತಮಹೋದರ್ಕಪುಣ್ಯಪಾಕೋತ್ಥಸಂಪದಃ ॥ ೧೧೫ ॥**

ಮುಂದಾಗುವ ಮಹಾಫಲವನ್ನುಂಟುಮಾಡುವ ಪುಣ್ಯದ ಉದಯದಿಂದುಂಟಾದ ಸಂಪತ್ತಿಯುಳ್ಳವನಾದ ಆ ಭರತೇಶ್ವರನ ಕೆಲಸಗಳೆಲ್ಲವೂ ಧರ್ಮಚಿಂತಾಪೂರ್ವಕವಾಗಿ ಆದುವು. ಮೊದಲು ಧರ್ಮವನ್ನು ಸ್ಮರಿಸಿ ಪ್ರತಿಯೊಂದು ಕಾರ್ಯವನ್ನು ಮಾಡುತ್ತಿದ್ದನೆಂದು ಭಾವವು.

**ಪ್ರಾತರುನ್ಮೀಲಿತಾಕ್ಷಃ ಸನ್ ಸಂಧ್ಯಾರಾಗಾರುಣಾ ದಿಶಃ ।**
**ಸ ಮೇನೇರ್ಹತ್ಪದಾಂಭೋಜರಾಗೇಣೇವಾನುರಂಜಿತಾಃ ॥ ೧೧೬ ॥**

ಆ ಭರತೇಶ್ವರನು ಪ್ರಾತಃಕಾಲದಲ್ಲಿ ಕಣ್ಣುಗಳನ್ನು ತೆರೆದವನಾಗಿ ಸಂಜೆಗೆಂಪಿನಿಂದ ಕೆಂಪಾದ ದಿಕ್ಕುಗಳನ್ನು ಅರ್ಹತ್ಪರಮೇಶ್ವರರ ಪಾದಕಮಲಗಳ ಕೆಂಪುಬಣ್ಣದಿಂದ ಬಣ್ಣಹಾಕಲ್ಪಟ್ಟುವುಗಳನ್ನೋಪಾದಿಯಲ್ಲಿ ತಿಳಿದನು. ದಿಕ್ಕುಗಳಲ್ಲಿ ಸಂಜೆಗೆಂಪನ್ನು ನೋಡಿ ಅರ್ಹತ್ಪರಮೇಶ್ವರರ ಪಾದಗಳನ್ನು ಸ್ಮರಿಸಿದನೆಂದು ಭಾವವು.

**ಪ್ರಾತರುದ್ಯಂತಮುದ್ಧೂತ[೪]ನೈಶಾಂಧತಮಸಂ ರವಿಮ್ ।**
**ಭಗವತ್ಕೇವಲಾರ್ಕಸ್ಯ [೫]ಪ್ರತಿಬಿಂಬ[೬]ಮಮಂಸ್ತ ಸಃ ॥ ೧೧೭ ॥**

ಆ ಭರತೇಶ್ವರನು ಪ್ರಾತಃಕಾಲದಲ್ಲಿ ಉದಯಿಸುವವನೂ ರಾತ್ರಿಯ ಸಂಬಂಧವಾದ ಕತ್ತಲೆಯನ್ನು ಹೋಗಲಾಡಿಸಿದವನೂ ಆದ ಸೂರ್ಯನನ್ನು ಭಗವಂತನ ಕೇವಲಜ್ಞಾನವೆಂಬ ಸೂರ್ಯನಿಗೆ ಸದೃಶನನ್ನಾಗಿ ತಿಳಿದನು.

**ಪ್ರಭಾತಮಾರುತೋದ್ಧೂತ[೭]ಪ್ರಬುದ್ಧಕಮಲಾಕರಾನ್ ।**
**ಹೃದಿ ಸೋಧಾಜ್ಜಿನಾ[೮]ಲಾಪಕಲಾಪಾನಿವ ಶೀತಲಾನ್ ॥ ೧೧೮ ॥**

೧ ಪ್ರತಿಜ್ಞಾಂ ಕೃತ್ವಾ. ೨ ಸಾಮಾಯಿಕಕಾಲ ಪರ್ಯಂತಂ. ೩ ಗಲಿತಾನಿ. ೪ ನಿಶಾಸಂಬಂಧಿ. ೫ ಸಮಾನಂ-ಪ್ರತಿಬಿಂಬ ಪ್ರತಿಚ್ಛಂದಸ ರೂಪಸಮಸನ್ನಿಭಾಃ. ೬ ಮೇನೇ. ೭ ವಿಕಸಿತಕಮಲ ಸಮೂಹಾನ್. ೮ ದಿವ್ಯಧ್ವನಿಸಮೂಹಾನಿವ.

ಆ ಭರತೇಶ್ವರನು ಪ್ರಾತಃಕಾಲದ ಗಾಳಿಯಿಂದ ಕೊಡಹಲ್ಪಟ್ಟು ಅರಳಿದ ತಾವರೆಗಳ ಸಮೂಹಗಳನ್ನು, ಶಾಂತವಾದ ಜಿನೇಶ್ವರನ ದಿವ್ಯಧ್ವನಿಯ ಸಮೂಹಗಳನ್ನೋಪಾದಿಯಲ್ಲಿ, ಹೃದಯದಲ್ಲಿ ಧರಿಸಿದನು.

**ಧಾರ್ಮಿಕಸ್ಯಾಸ್ಯ ಕಾಮಾರ್ಥಚಿಂತಾಭೂ[೧]ದಾನುಷಂಗಿಕೀ ।**
**ತಾತ್ಪರ್ಯಂ ತ್ವಭವದ್ಧರ್ಮೇ ಕೃತ್ಸ್ನಶ್ರೇಯೋನುಬಂಧಿನಿ ॥ ೧೧೯ ॥**

ಧಾರ್ಮಿಕನಾದ ಈ ಭರತೇಶ್ವರನಿಗೆ ಕಾಮಪುರುಷಾರ್ಥ ಅರ್ಥಪುರುಷಾರ್ಥಗಳ ಚಿಂತೆಯು ಗೌಣವಾಗಿ(ಅಮುಖ್ಯವಾಗಿ)ದ್ದಿತು. ಸಕಲ ಶ್ರೇಯಸ್ಸಿನ ಸಂಬಂಧವುಳ್ಳುದಾದ ಧರ್ಮದಲ್ಲಾದರೋ ಮುಖ್ಯಲಕ್ಷ್ಯವಿದ್ದಿತು.

**ಪ್ರಾತರುತ್ಥಾಯ ಧರ್ಮಸ್ಥೈಃ ಕೃತಧರ್ಮಾನುಚಿಂತನಃ ।**
**ತತೋರ್ಥಕಾಮಸಂಪತ್ತಿಂ ಸಹಾಮಾತ್ಯೈ[೨]ರ್ನ್ಯರೂಪಯತ್ ॥ ೧೨೦ ॥**

ಪ್ರಾತಃಕಾಲದಲ್ಲಿ ಎದ್ದು ಧಾರ್ಮಿಕರೊಡನೆ ಧರ್ಮಚಿಂತನೆಯನ್ನು ಮಾಡಿದವನಾಗಿ ಬಳಿಕ ಮಂತ್ರಿಗಳೊಡನೆ ಅರ್ಥಕಾಮಪುರುಷಾರ್ಥಗಳ ಸಂಪತ್ತಿಯನ್ನು ವಿಚಾರಮಾಡಿದನು. ಮೊದಲು ಧರ್ಮಪುರುಷಾರ್ಥವನ್ನೂ ಆಮೇಲೆ ಅರ್ಥ ಕಾಮಪುರುಷಾರ್ಥಗಳನ್ನೂ ವಿಚಾರಮಾಡಿದನೆಂದು ಭಾವವು.

**ತಲ್ಪಾದುತ್ಥಿತಮಾತ್ರೋಸೌ ಸಂಪೂಜ್ಯ ಗುರುದೈವತಮ್ ।**
**ಕೃತ[೩]ಮಂಗಲನೇಪಥ್ಯೋ ಧರ್ಮಾಸನಮಧಿಷ್ಠಿತಃ ॥ ೧೨೧ ॥**

**ಪ್ರಜಾನಾಂ ಸದಸದ್ವೃತ್ತಚಿಂತನೈಃ ಕ್ಷಣಮಾಸಿತಃ ।**
**ತತ [೪]ಆಯುಕ್ತಕಾನ್ ಸ್ವೇಷು ನಿಯೋಗೇಷ್ವನ್ವಶಾದ್ವಿಭುಃ ॥ ೧೨೨ ॥**

ಹಾಸುಗೆಯಿಂದ ಎದ್ದವನೇ ಈ ಭರತೇಶ್ವರನು ಗುರುಗಳನ್ನೂ ದೇವರನ್ನೂ ಪೂಜಿಸಿ ಮಂಗಲಾಲಂಕಾರಗಳನ್ನು ಮಾಡಿಕೊಂಡವನಾಗಿ ಧರ್ಮಾಸನದಲ್ಲಿ ಕುಳಿತು ಪ್ರಜೆಗಳ ಸದಾಚಾರಗಳನ್ನೂ ದುರಾಚಾರಗಳನ್ನೂ ವಿಚಾರಮಾಡುತ್ತ ಕ್ಷಣಕಾಲದವರೆಗೆ ಕುಳಿತಿದ್ದು ಬಳಿಕ ಭರತೇಶ್ವರನು ತಮತಮಗೆ ಗೊತ್ತಾದ ಕಾರ್ಯಗಳಲ್ಲಿ ತತ್ಪರರನ್ನಾಗಿ ಜನರನ್ನು ಶಿಕ್ಷಿಸಿದನು. ತಂತಮ್ಮ ಕೆಲಸಗಳಲ್ಲಿ ತೊಡಗುವಂತೆ ಜನರಿಗೆ ಉಪದೇಶಿಸಿದನೆಂದು ಭಾವವು.

**ನೃಪಾಸನಮಥಾಧ್ಯಾಸ್ಯ [೫]ಮಹಾದರ್ಶನಮಧ್ಯಗಃ ।**
**ನೃಪಾನ್ಸಂಭಾವಯಾಮಾಸ ಸೇವಾವಸರಕಾಂಕ್ಷಿಣಃ ॥ ೧೨೩ ॥**

ಅನಂತರದಲ್ಲಿ ರಾಜಾಸನದಲ್ಲಿ ಕುಳಿತು ಮಹಾದರ್ಶನವುಳ್ಳವರ (ಸಭಿಕರ) ಮಧ್ಯದಲ್ಲಿರುವವನಾಗಿ ತನ್ನ ಸೇವೆಯ ಸಮಯವನ್ನು ಇಚ್ಛಿಸುವವರಾದ ರಾಜರುಗಳನ್ನು ಸತ್ಕರಿಸಿದನು.

**ಕಾಂಶ್ಚಿದಾಲೋಕನೈಃ ಕಾಂಶ್ಚಿತ್ಸ್ಮಿತೈರಾಭಾಷಣೈಃ ಪರಾನ್ ।**
**ಕಾಂಶ್ಚಿತ್ಸಮ್ಮಾನದಾನಾದ್ಯೈಸ್ತರ್ಪಯಾಮಾಸ ಪಾರ್ಥಿವಾನ್ ॥ ೧೨೪ ॥**

ಕೆಲವು ದೊರೆಗಳನ್ನು ನೋಟಗಳಿಂದಲೂ ಕೆಲವು ದೊರೆಗಳನ್ನು ನಸುನಗೆಗಳಿಂದಲೂ ಬೇರೆ ದೊರೆಗಳನ್ನು ಸಂಭಾಷಣಗಳಿಂದಲೂ ಕೆಲವು ದೊರೆಗಳನ್ನು ಸನ್ಮಾನದಾನಗಳಿಂದಲೂ ತೃಪ್ತಿಪಡಿಸಿದನು.

**ತತ್ರೋಪಾಯನಸಂಪತ್ತ್ಯಾ ಸಮಾಯಾತಾನ್ [೬]ಮಹತ್ತಮಾನ್ ।**
**[೭]ವಚೋಹರಾಂಶ್ಚ ಸಮ್ಮಾನ್ಯ ಕೃತಕಾರ್ಯಾನ್ ವ್ಯಸರ್ಜಯತ್ ॥**

ಅಲ್ಲಿ ಕೈಗಾಣಿಕೆಯ ಸಂಪತ್ತಿಯೊಡನೆ (ಕೈಗಾಣಿಕೆಯನ್ನು ಹಿಡಿದುಕೊಂಡು) ಬಂದವರಾದ ಮಂತ್ರಿಗಳನ್ನೂ ಕೆಲಸಗಳನ್ನು ಮಾಡಿ ಬಂದವರಾದ ದೂತರನ್ನೂ ಸನ್ಮಾನಿಸಿ ಬಿಟ್ಟನು.

೧ ಗೌಣಾ. ೨ ವಿಚಾರಮಕರೋತ್. ೩ ಮಂಗಲಾಲಂಕಾರಃ. ೪ ತತ್ಪರಾನ್. ೫ ಮಹದ್ದರ್ಶನಂ ಯೇಷಾಂ ತೇ ಮಹಾದರ್ಶನಾಸ್ತೇಷಾಂ ಮಧ್ಯಗಃ ಸಭ್ಯಜನಮಧ್ಯವರ್ತೀ ಸನ್ನಿತ್ಯರ್ಥಃ. ೬ ಮಹತ್ತರಾನ್ ಅಮಾತ್ಯಾನಿತ್ಯರ್ಥಃ. ೭ ದೂತಾನ್.

**ಕಲಾವಿದಶ್ಚ ನೃತ್ತಾದಿದರ್ಶನೈಃ [೧]ಸಮುಪಸ್ಥಿತಾನ್ ।**
**[೨]ಪಾರಿತೋಷಿಕದಾನೇನ ಮಹತಾ ಸಮತರ್ಪಯತ್ ॥ ೧೨೬ ॥**

ತನ್ನ ಬಳಿಗೆ ಬಂದವರಾದ ನೃತ್ತಾದಿ ಕಲಾಜ್ಞಾನಿಗಳನ್ನು ಅವರ ನರ್ತನ ಮೊದಲಾದುವುಗಳ ನೋಟಗಳಿಂದ ಸಂತುಷ್ಟನಾಗಿ ಹೆಚ್ಚಾದ ಬಹುಮಾನವನ್ನು ಕೊಟ್ಟು ತೃಪ್ತಿಪಡಿಸಿದನು.

**ತತೋ ವಿಸರ್ಜಿತಾಸ್ಥಾನಃ ಪ್ರೋತ್ಥಾಯ ನೃಪವಿಷ್ಟರಾತ್ ।**
**ಸ್ವೇಚ್ಛಾವಿಹಾರಮಕರೋದ್ವಿನೋದೈಃ [೩]ಸುಕುಮಾರಕೈಃ ॥ ೧೨೭ ॥**

ಬಳಿಕ ಸಭಾಸ್ಥಾನವನ್ನು ಬಿಟ್ಟವನಾಗಿ ರಾಜಾಸನದಿಂದೆದ್ದು ಮೃದುವಾದ ವಿನೋದಕಾರ್ಯಗಳಿಂದ ಸ್ವೇಚ್ಛಾವಿಹಾರವನ್ನು ಮಾಡಿದನು.

**ತತೋ [೪]ಮಧ್ಯಂದಿನೇಭ್ಯರ್ಣೇ ಕೃತಮಜ್ಜನಸಂವಿಧಿಃ ।**
**[೫]ತನುಸ್ಥಿತಿಂ ಸ ನಿರ್ವರ್ತ್ಯ [೬]ನಿರವಿಕ್ಷ[೭]ತ್ಪ್ರಸಾಧನಮ್ ॥ ೧೨೮ ॥**

ಅನಂತರದಲ್ಲಿ ಮಧ್ಯಾಹ್ನವು ಸಮೀಪಿಸುತ್ತಿರಲು ಸ್ನಾನವಿಧಿಯನ್ನು ನಡಿಸಿದವನಾದ ಆ ಭರತೇಶ್ವರನು ಭೋಜನವನ್ನು ಮಾಡಿ ಲೇಪನವನ್ನೂ ವಸ್ತ್ರಾಭರಣಾದ್ಯಲಂಕಾರವನ್ನೂ ಉಪಯೋಗಿಸಿದನು.

**ಚಾಮರೋತ್ಕ್ಷೇಪತಾಂಬೂಲದಾನ[೮]ಸಂವಾಹನಾದಿಭಿಃ ।**
**[೯]ಪರಿಚೇರುರುಪೇತ್ಯೈನಂ ಪರಿವಾರಾಂಗನಾಸ್ತತಃ ॥ ೧೨೯ ॥**

ಅನಂತರದಲ್ಲಿ ಪರಿವಾರಸ್ತ್ರೀಯರು ಈ ಭರತೇಶ್ವರನನ್ನು ಹೊಂದಿ ಚಾಮರಗಳನ್ನು ಬೀಸುವಿಕೆ ತಾಂಬೂಲವನ್ನು ಕೊಡುವಿಕೆ ಪಾದಮರ್ದನ ಮೊದಲಾದುವುಗಳಿಂದ ಸೇವೆಯನ್ನು ಮಾಡಿದರು.

**ತತೋ [೧೦]ಭುಕ್ತೋತ್ತರಾಸ್ಥಾನೇ ಸ್ಥಿತಃ ಕತಿಪಯೈರ್ನೃಪೈಃ ।**
**ಸಮಂ [೧೧]ವಿದಗ್ಧಮಂಡಲ್ಯಾ ವಿದ್ಯಾಗೋಷ್ಠೀರಭಾವಯತ್ ॥ ೧೩೦ ॥**

ಆಮೇಲೆ ಕೆಲವು ದೊರೆಗಳೊಡನೆ ಭೋಜನಾನಂತರದಲ್ಲಿ ಇರುವುದಕ್ಕೆ ಯೋಗ್ಯವಾದ ಆಸ್ಥಾನದಲ್ಲಿರುವವನಾಗಿ ವಿದ್ವಾಂಸರ ಸಮೂಹದೊಡನೆ ವಿದ್ಯಾಸಲ್ಲಾಪಗಳನ್ನು ಭಾವಿಸಿದನು. ಮಾಡಿದನೆಂದು ಭಾವವು.

**ತತ್ರ ವಾರವಿಲಾಸಿನ್ಯೋ ನೃಪವಲ್ಲಭಿಕಾಶ್ಚ ತಮ್ ।**
**[೧೨]ಪರಿವವ್ರುರುಪಾರೂಢತಾರುಣ್ಯಮದಕರ್ಕಶಾಃ ॥ ೧೩೧ ॥**

ಆ ಆಸ್ಥಾನದಲ್ಲಿ ಆ ಭರತೇಶ್ವರನನ್ನು ಪ್ರಾಪ್ತವಾದ ಯೌವನದ ಮದದಿಂದ ಕೊಬ್ಬಿದವರಾದ ವಾರಾಂಗನೆಯರೂ ರಾಜಸ್ತ್ರೀಯರೂ ಮುತ್ತಿಕೊಂಡರು.

**ತಾಸಾಮಾಲಾಪ[೧೩]ಸಲ್ಲಾಪಪರಿಹಾಸಕಥಾದಿಭಿಃ ।**
**[೧೪]ಸುಖಾಸಿಕಾಮಸೌ ಭೇಜೇ ಭೋಗಾಂಗೈಶ್ಚ ಮುಹೂರ್ತಕಮ್ ॥**

ಈ ಭರತೇಶ್ವರನು ಒಂದು ಮುಹೂರ್ತಕಾಲದವರೆಗೆ ಆ ವಾರಾಂಗನೆಯರ ಮತ್ತು ರಾಜಸ್ತ್ರೀಯರ ಮಾತನಾಡುವಿಕೆ ಪರಸ್ಪರ ಸಂಭಾಷಣ ಪರಿಹಾಸ್ಯಕಥೆ ಮೊದಲಾದ ಭೋಗಸಾಧನಗಳಿಂದ ಸುಖವಾಗಿರುವಿಕೆಯನ್ನು ಹೊಂದಿದನು. ಸುಖವಾಗಿದ್ದನೆಂದರ್ಥವು.

**ತತ[೧೫]ಸ್ತುರ್ಯಾವಶೇಷೇಹ್ನಿ ಪರ್ಯಟನ್ಮಣಿಕುಟ್ಟಿಮೇ ।**
**ವೀಕ್ಷತೇ ಸ್ಮ ಪರಾಂ ಶೋಭಾಮಭಿತೋ ರಾಜವೇಶ್ಮನಃ ॥ ೧೩೩ ॥**

೧ ಸಮಾಗತಾನ್. ೨ ಪರಿತೋಷೇ ಭವ. ೩ ಮೃದುಭಿಃ. ೪ ಮಧ್ಯಾಹ್ನೇ. ೫ ಭೋಜನಂ. ೬ ಅನುಭುಂಕ್ತೇ ಸ್ಮ. ೭ ಅನುಲೇಪನಂ, ವಸ್ತ್ರಮಾಲ್ಯಾಭರಣಾದಿ ವಾ. ೮ ಪಾದಮರ್ದನ. ೯ ಸೇವಾಂ ಚಕ್ರಿರೇ. ೧೦ ಭೋಜನಾಂತೇ ಸ್ಥಾತುಂ ಯೋಗ್ಯಸ್ಥಾನೇ. ೧೧ ವಿದ್ವತ್ಸಮೂಹೇನ. ೧೨ ಪರಿವೃತಾ ಬಭೂವುಃ. ೧೩ ಮಿಥೋಭಾಷಣಂ. ೧೪ ಸುಖಸ್ಥಿತಿಂ. ೧೫ ತುರೀಯಯಾಮೇ.

ಬಳಿಕ ನಾಲ್ಕನೆಯ ಜಾವದಲ್ಲಿ (ಸಾಯಂಕಾಲದಲ್ಲಿ) ರತ್ನಖಚಿತವಾದ ನೆಲದ ಮೇಲೆ ಸಂಚರಿಸುವವನಾಗಿ ಅರಮನೆಯ ಸುತ್ತಲೂ ಅಧಿಕವಾದ ಶೋಭೆಯನ್ನು ನೋಡಿದನು.

**ಸ [೧]ನರ್ಮಸಚಿವಂ ಕಂಚಿತ್ಸಮಾಲಂಬ್ಯಾಂಸಪೀಠಕೇ ।**
**ಪರಿಕ್ರಾಮನ್ನಿತಶ್ಚೇತೋ ರೇಜೇ ಸುರಕುಮಾರವತ್ ॥ ೧೩೪ ॥**

ಒಬ್ಬಾನೊಬ್ಬ ನರ್ಮಸಚಿವ(ಕ್ರೀಡಾಸಹಾಯಕ)ನ ಹೆಗಲೆಂಬ ಪೀಠದಲ್ಲಿ ಅವಲಂಬನವನ್ನು ಹೊಂದಿ (ಕೈಯಿಟ್ಟು) ಈ ಕಡೆ ಆ ಕಡೆ ತಿರುಗಾಡುವವನಾದ ಆ ಭರತೇಶ್ವರನು ದೇವಕುಮಾರನೋಪಾದಿಯಲ್ಲಿ ಶೋಭಿಸಿದನು.

**ರಜನ್ಯಾಮಪಿ ಯತ್ಕೃತ್ಯಮುಚಿತಂ ಚಕ್ರವರ್ತಿನಃ ।**
**ತದಾಚರನ್ ಸುಖೇನೈಷ [೨]ತ್ರಿಯಾಮಾಮತ್ಯವಾಹಯತ್ ॥ ೧೩೫ ॥**

ಚಕ್ರವರ್ತಿಯ ರಾತ್ರಿಯಲ್ಲಿ ಮಾಡಬೇಕಾದ ಯಾವ ಕಾರ್ಯವಿದ್ದಿತೋ ಅದನ್ನು ಆಚರಿಸುವವನಾದ ಈ ಭರತೇಶ್ವರನು ಸುಖದಿಂದ ರಾತ್ರಿಯನ್ನು ಕಳೆದನು.

**ಕದಾಚಿದುಚಿತಾಂ [೩]ವೇಲಾಂ [೪]ನಿಯೋಗ ಇತಿ ಕೇವಲಮ್ ।**
**ಮಂತ್ರಯಾಮಾಸ ಮಂತ್ರಜ್ಞೈಃ [೫]ಕೃತಕಾರ್ಯೋಽಪಿ ಚಕ್ರಭೃತ್॥ ೧೩೬ ॥**

ಸಂಪೂರ್ತಿಯಾದ ಕಾರ್ಯವುಳ್ಳವನಾದರೂ ಚಕ್ರವರ್ತಿಯು ಯಾವಾಗ ಲಾದರೂ ರಾಜನ ಕರ್ತವ್ಯವೆಂದೇ (ನಡೆದು ಬಂದ ಪದ್ಧತಿಯೆಂದೇ) ಯೋಗ್ಯ ಕಾಲದವರೆಗೆ ಮಂತ್ರಿಗಳೊಡನೆ ಮಂತ್ರಾಲೋಚನೆಯನ್ನು ಮಾಡಿದನು.

**[೬]ತಂತ್ರಾವಾಪಗತಾ ಚಿಂತಾ ನಾಸ್ಯಾಸೀದ್ವಿಜಿತಕ್ಷಿತೇಃ ।**
**[೭]ತಂತ್ರಚಿಂತೈವ ನನ್ವಸ್ಯ ಸ್ವತಂತ್ರಸ್ಯೇಹ ಭಾರತೇ ॥ ೧೩೭ ॥**

ಪೃಥ್ವಿಯನ್ನು ಜಯಿಸಿದವನಾದ ಈ ಭರತೇಶ್ವರನಿಗೆ ಸ್ವರಾಷ್ಟ್ರ ಪರರಾಷ್ಟ್ರ ಸಂಬಂಧವಾದ ಚಿಂತೆಯಿರಲಿಲ್ಲ. ಈ ಭರತಖಂಡದಲ್ಲಿ ಸ್ವತಂತ್ರನಾದ ಈ ಭರತೇಶ್ವರನಿಗೆ ಶಾಸ್ತ್ರಚಿಂತನೆಯೇ ಇದ್ದಿತು.

**[೮]ತೇನ ಷಾಡ್ಗುಣ್ಯಮಭ್ಯಸ್ತಮಪರಿಜ್ಞಾನಹಾನಯೇ ।**
**ಶಾಸತೋಽಸ್ಯಾವಿಪಕ್ಷಾಂ ಕ್ಷ್ಮಾಂ [೯]ಕೃತಂ [೧೦]ಸಂಧ್ಯಾದಿಚರ್ಚಯಾ॥ ೧೩೮ ॥**

ತಿಳಿವಳಿಕೆ ಇಲ್ಲವೆಂಬುದನ್ನು ಹೋಗಲಾಡಿಸುವುದಕ್ಕೋಸ್ಕರ ಆ ಭರತೇಶ್ವರನು ಸಂಧಿ ವಿಗ್ರಹ ಯಾನ ಆಸನ ಸಂಶ್ರಯ ದ್ವೈಧೀಭಾವಗಳೆಂಬ ಷಡ್ಗುಣಗಳನ್ನು ಅಭ್ಯಾಸಮಾಡಿದನಲ್ಲದೆ ಶತ್ರುರಹಿತವಾದ ಪೃಥ್ವಿಯನ್ನು ಆಳುವವನಾದ ಈ ಭರತೇಶ್ವರನಿಗೆ ಸಂಧಿ ವಿಗ್ರಹಾದಿಷಡ್ಗುಣಗಳ ಚರ್ಚೆಯಿಂದ ಪ್ರಯೋಜನವಿರಲಿಲ್ಲ.

**ರಾಜವಿದ್ಯಾ[೧೧]ಶ್ಚತಸ್ರೋಽಮೂಃ ಕದಾಚಿಚ್ಚ [೧೨]ಕೃತಕ್ಷಣಃ ।**
**ವ್ಯಾಚಖ್ಯೌ ರಾಜಪುತ್ರೇಭ್ಯಃ ಖ್ಯಾತಯೇ ಸ ವಿಚಕ್ಷಣಃ ॥ ೧೩೯ ॥**

ವಿದ್ವಾಂಸನಾದ ಆ ಭರತೇಶ್ವರನು ಒಂದಾನೊಂದು ಕಾಲದಲ್ಲಿ ರಾಜಪುತ್ರರಿಗೆ ಪ್ರಸಿದ್ಧಿಗೋಸ್ಕರ ಆನ್ವೀಕ್ಷಕೀ ತ್ರಯೀ ವಾರ್ತಾ ದಂಡನೀತಿಗಳೆಂಬ ಈ ನಾಲ್ಕು ರಾಜ ವಿದ್ಯೆಗಳನ್ನು ವ್ಯಾಖ್ಯಾನಮಾಡಿದನು.

**ಕದಾಚಿನ್ನಿಧಿರತ್ನಾನಾಮಕರೋತ್ಸ ನಿರೀಕ್ಷಣಮ್ ।**
**ಭಾಂಡಾಗಾರಪದೇ ತಾನಿ [೧೩]ತಸ್ಯ [೧೪]ತಂತ್ರಪದೇಽಪಿ ಚ ॥ ೧೪೦ ॥**

ಒಂದು ಕಾಲದಲ್ಲಿ ಆ ಭರತೇಶ್ವರನು ನಿಧಿಗಳ ಮತ್ತು ಜೀವಾಜೀವರತ್ನಗಳ ನಿರೀಕ್ಷಣೆಯನ್ನು ಮಾಡಿದನು. ಅವನಿಗೆ ಆ ನಿಧಿಗಳೂ ರತ್ನಗಳೂ ಭಾಂಡಾಗಾರದ

೧ ಕ್ರೀಡಾಸಹಾಯಂ. ೨ ರಾತ್ರಿಂ ನಯತಿ ಸ್ಮ. ೩ ಉಚಿತಕಾಲಪರ್ಯಂತಂ. ೪ ರಾಜನಿಯೋಗಃ. ೫ ಸಂಪೂರ್ಣ. ೬ ಸ್ವರಾಷ್ಟ್ರಪರರಾಷ್ಟ್ರಗತಾ. ೭ ಶಾಸ್ತ್ರಚಿಂತನಂ. ೮ ಚಕ್ರಿಣಾ. ೯ ಸಂಪೂರ್ಣಂ. ೧೦ ಸಂಧಿವಿಗ್ರಹಾದಿವಿಚಾರೇಣ. ೧೧ ಆನ್ವೀಕ್ಷಕ್ಯಾದಯಃ. ೧೨ ಕೃತೋತ್ಸವಃ. ೧೩ ಚಕ್ರಿಣಃ. ೧೪ ಸೇನಾಪದೇ, ಪರಿಗ್ರಹೇ ಬಭೂವುರಿತ್ಯರ್ಥಃ.

(ಉಗ್ರಾಣದ) ಸ್ಥಾನದಲ್ಲಿಯೂ ಸೈನ್ಯಸ್ಥಾನದಲ್ಲಿಯೂ ಇದ್ದುವು. ಆ ನಿಧಿರತ್ನಗಳು ಭಾಂಡಾಗಾರದ ಮತ್ತು ಸೈನ್ಯದ ಪ್ರತಿನಿಧಿಗಳಾಗಿದ್ದುವೆಂದು ಭಾವವು.

**ಕದಾಚಿದ್ಧರ್ಮಶಾಸ್ತ್ರೇಷು ಯಾಃ ಸ್ಯು[೧]ರ್ವಿಪ್ರತಿಪತ್ತಯಃ ।**
**ನಿರಾಚಕಾರ ತಾಃ ಕೃತ್ಸ್ನಾಃ ಖ್ಯಾಪಯ[೨]ನ್ವಿಶ್ವವಿನ್ಮತಮ್ ॥ ೧೪೧ ॥**

ಯಾವಾಗಲಾದರೂ ಧರ್ಮಶಾಸ್ತ್ರಗಳಲ್ಲಿ ವಿರೋಧಗಳು ಬಂದರೆ ಆ ವಿರೋಧಗಳನ್ನೆಲ್ಲ ಭರತೇಶ್ವರನು ಸರ್ವಜ್ಞನ ಮತವನ್ನು ಪ್ರಸಿದ್ಧಪಡಿಸುವವನಾಗಿ ಹೋಗಲಾಡಿಸಿದನು.

**ಆಪ್ತೋಽಪಜ್ಞೇಷು ತತ್ತ್ವೇಷು ಕಾಂಶ್ಚಿತ್ಸಂಜಾತಸಂಶಯಾನ್ ।**
**[೩]ತತೋಽಪಾಕೃತ್ಯ ಸಂಶೀತೇಸ್ತತ್ತತ್ತ್ವಂ [೪]ನಿರಣೀನಯತ್ ॥ ೧೪೨ ॥**

ಆಪ್ತರಿಂದ ಮೊತ್ತಮೊದಲು ಹೇಳಲ್ಪಟ್ಟ ತತ್ತ್ವಗಳಲ್ಲಿ ಸಂಶಯವುಳ್ಳವರಾದ ಕೆಲವರನ್ನು ಆ ಸಂಶಯದಿಂದ ನಿವಾರಣೆಮಾಡಿ ಆ ತತ್ತ್ವವನ್ನು ನಿರ್ಣಯ ಮಾಡಿದನು.

**ತಥಾಸಾ[೫]ವರ್ಥಶಾಸ್ತ್ರಾರ್ಥೇ ಕಾಮನೀತೌ ಚ ಪುಷ್ಕಲಮ್ ।**
**ಪ್ರಾವೀಣ್ಯಂ ಪ್ರಥಯಾಮಾಸ ಯಥಾ[೬]ತ್ರ ನ ಪರಃ ಕೃತೀ ॥ ೧೪೩ ॥**

ಅರ್ಥಶಾಸ್ತ್ರದಲ್ಲಿಯೂ ಕಾಮಶಾಸ್ತ್ರನೀತಿಯಲ್ಲಿಯೂ ಬೇರೆ ನಿಪುಣನಿಲ್ಲದಿರುವ ಹಾಗೆ ಈ ಭರತೇಶ್ವರನು ಆ ಅರ್ಥಶಾಸ್ತ್ರ ಕಾಮನೀತಿಗಳಲ್ಲಿ ಅಧಿಕವಾದ ನೈಪುಣ್ಯ ವನ್ನು ಪ್ರಕಾಶಪಡಿಸಿದನು.

**[೭]ಹಸ್ತಿತಂತ್ರೇಶ್ವತಂತ್ರೇ ಚ ದೃಷ್ಟ್ವಾ ಸ್ವಾತಂತ್ರ್ಯಮೀಶಿತುಃ ।**
**[೮]ಮೂಲತಂತ್ರಸ್ಯ ಕರ್ತಾಯ[೯]ಮಿತ್ಯಾಸ್ಥಾ [೧೦]ತದ್ವಿದಾಮಭೂತ್ ॥**

ಆನೆಯ ಲಕ್ಷಣಗಳನ್ನು ವರ್ಣಿಸುವ ಶಾಸ್ತ್ರದಲ್ಲಿಯೂ ಕುದುರೆಯ ಲಕ್ಷಣಗಳನ್ನು ವರ್ಣಿಸುವ ಶಾಸ್ತ್ರದಲ್ಲಿಯೂ ಭರತೇಶ್ವರನ ಸ್ವಾತಂತ್ರ್ಯವನ್ನು ನೋಡಿ ಆನೆ ಕುದುರೆಗಳ ಪರೀಕ್ಷೆಯನ್ನು ತಿಳಿದವರಿಗೆ ಈ ಭರತೇಶ್ವರನು ಮೂಲಶಾಸ್ತ್ರದ ಕರ್ತನೆಂಬ ಬುದ್ಧಿಯುಂಟಾಯಿತು.

**ಆಯುರ್ವೇದೇ ಸ ದೀರ್ಘಾಯುರಾಯುರ್ವೇದೋ [೧೧]ನು ಮೂರ್ತಿ ಮಾನ್ ।**
**ಇತಿ ಲೋಕೋ [೧೨]ನಿರಾರೇಕಂ ಶ್ಲಾಘತೇ ಸ್ಮ ನಿಧೀಶಿನಮ್ ॥ ೧೪೫ ॥**

ಲೋಕವು ದೀರ್ಘಾಯುಷ್ಯವುಳ್ಳವನಾದ ಆ ಭರತೇಶ್ವರನು ಆಯುರ್ವೇದ ವಿಷಯದಲ್ಲಿ ಆಕಾರವನ್ನು ಧರಿಸಿರುವ ಆಯುರ್ವೇದವೋ ಎಂದು ನಿಧಿಪತಿಯಾದ ಭರತೇಶ್ವರನನ್ನು ನಿಃಸಂಶಯವಾಗಿ ಶ್ಲಾಘಿಸಿತು. ಜನರು ಭರತೇಶ್ವರನನ್ನು ಮೂರ್ತಿ ಮತ್ತಾದ ಆಯುರ್ವೇದವನ್ನೋಪಾದಿಯಲ್ಲಿ ತಿಳಿದು ಶ್ಲಾಘಿಸಿದರೆಂದು ಭಾವವು.

**ಸೋಧೀತೀ [೧೩]ಪದವಿದ್ಯಾಯಾಂ ಸ ಕೃತೀ [೧೪]ವಾಗಲಂಕೃತೌ ।**
**ಸ ಛಂದಸಾಂ [೧೫]ಪ್ರತಿಚ್ಛಂದ ಇತ್ಯಾಸೀತ್ಸಮ್ಮತಃ ಸತಾಮ್ ॥ ೧೪೬ ॥**

ಆ ಭರತೇಶ್ವರನು ವ್ಯಾಕರಣಶಾಸ್ತ್ರದಲ್ಲಿ ಅಧ್ಯಯನಮಾಡಿದವನು, ಅವನು ಶಬ್ದಾಲಂಕಾರದಲ್ಲಿ ನಿಪುಣನು, ಅವನು ಛಂದಸ್ಸುಗಳ ಪ್ರತಿನಿಧಿಯು ಎಂಬುದಾಗಿ ಸತ್ಪುರುಷರಿಗೆ ಸಮ್ಮತನಾಗಿದ್ದನು.

**[೧೬]ತದುಪಜ್ಞಂ [೧೭]ನಿಮಿತ್ತಾನಿ [೧೮]ಶಾಕುನಂ ತದುಪಕ್ರಮಮ್ ।**
**ತತ್ಸರ್ಗೋ ಜ್ಯೋತಿಷಾಂ [೧೯]ಜ್ಞಾನಂ [೨೦]ತನ್ಮತಂ [೨೧]ತೇನ [೨೨]ತತ್ತ್ರಯಮ್ ॥ ೧೪೭ ॥**

೧ ವಿಸಂವಾದಾಃ. ೨ ಸರ್ವಜ್ಞಮತಂ. ೩ ಸಂಶಯಾತ್. ೪ ನಿರ್ಣಯಮಕಾರಯತ್. ೫ ನೀತಿಶಾಸ್ತ್ರೇ. ೬ ಅರ್ಥನೀತೌ ಕಾಮನೀತೌ. ೭ ಗಜಶಾಸ್ತ್ರೇ. ೮ ಮೂಲಶಾಸ್ತ್ರಸ್ಯ. ೯ ಇತಿ ಬುದ್ಧಿಃ. ೧೦ ಗಜಾಶ್ವಪರೀಕ್ಷಕಾಣಾಂ. ೧೧ ಇವ. ೧೨ ನಿಃಶಂಕಂ. ೧೩ವ್ಯಾಕರಣಶಾಸ್ತ್ರೇ. ೧೪ ಶಬ್ದಾಲಂಕಾರೇ. ೧೫ ಪ್ರತಿನಿಧಿಃ. ೧೬ ತೇನ ಪ್ರಥಮಂ ಪ್ರೋಕ್ತಂ. ೧೭ ನಿಮಿತ್ತಶಾಸ್ತ್ರಾಣಿ. ೧೮ ಶಕುನಶಾಸ್ತ್ರಂ. ೧೯ ಶಾಸ್ತ್ರಂ. ೨೦ ತೇನ ಪ್ರೋಕ್ತಂ. ೨೧ ಕಾರಣೇನ. ೨೨ ನಿಮಿತ್ತಾದಿತ್ರಯಂ.

ನಿಮಿತ್ತಶಾಸ್ತ್ರಗಳು ಆ ಭರತೇಶ್ವರನಿಂದ ಮೊತ್ತಮೊದಲು ಹೇಳಲ್ಪಟ್ಟುವು. ಶಕುನಶಾಸ್ತ್ರವು ಭರತೇಶ್ವರನಿಂದ ಪ್ರಾರಂಭಿಸಲ್ಪಟ್ಟಿತು. ಜ್ಯೋತಿಶ್ಶಾಸ್ತ್ರವು ಭರತೇಶ್ವರನಿಂದ ಸೃಷ್ಟಿಸಲ್ಪಟ್ಟಿತು. ಆದುದರಿಂದ ಆ ನಿಮಿತ್ತ ಶಕುನ ಜ್ಯೋತಿಶ್ಶಾಸ್ತ್ರಗಳು ಮೂರೂ ಭರತೇಶ್ವರನಿಂದ ಹೇಳಲ್ಪಟ್ಟುವುಗಳಾಗಿರುತ್ತವೆ.

**ಸ ನಿಮಿತ್ತಂ [೧]ನಿಮಿತ್ತಾನಾಂ ತಂತ್ರೇ ಮಂತ್ರಃ ಸ ಶಾಕುನೇ ।**
**[೨]ದೈವಜ್ಞಾನೇ ಪರಂ ದೈವಮಿತ್ಯಭೂತ್ಸಮ್ಮತೋಧಿಕಮ್ ॥ ೧೪೮ ॥**

ಆ ಭರತೇಶ್ವರನು ನಿಮಿತ್ತಶಾಸ್ತ್ರಗಳಿಗೆ ನಿಮಿತ್ತಪ್ರಾಯನಾಗಿದ್ದಾನೆ. ಅವನು ಶಕುನಶಾಸ್ತ್ರದಲ್ಲಿಯೂ ತಂತ್ರಶಾಸ್ತ್ರದಲ್ಲಿಯೂ ಮಂತ್ರಪ್ರಾಯನಾಗಿದ್ದಾನೆ. ಜ್ಯೋತಿಶ್ಶಾಸ್ತ್ರದಲ್ಲಿ ಉತ್ಕೃಷ್ಟವಾದ ದೈವಸ್ವರೂಪನಾಗಿದ್ದಾನೆ. ಈ ಪ್ರಕಾರವಾಗಿ ಅಧಿಕವಾಗಿ ಸಮ್ಮತನಾದನು. ಪ್ರಖ್ಯಾತನಾದನೆಂದು ಭಾವವು.

**[೩]ತತ್ಸಂಭೂತೌ ಸಮುದ್ಭೂತಮಭೂ[೪]ತ್ಪುರುಷಲಕ್ಷಣಮ್ ।**
**ನೋದಾಹರಣಮನ್ಯತ್ರ [೫]ಲಕ್ಷಿತಂ [೬]ಯೇನ ತತ್ತನೋಃ ॥ ೧೪೯ ॥**

ಆ ಭರತೇಶ್ವರನ ಉತ್ಪತ್ತಿಯಲ್ಲಿ ಸಾಮುದ್ರಿಕಲಕ್ಷಣವು ಉಂಟಾಯಿತು. ಆ ಕಾರಣದಿಂದ ಅವನ ಶರೀರಕ್ಕೆ ಬೇರೆ ಕಡೆಯಲ್ಲಿ ಉದಾಹರಣೆಯು ನೋಡಲ್ಪಟ್ಟಿಲ್ಲ. ಅನುಪಮವಾದ ಶರೀರಲಕ್ಷಣಗಳುಳ್ಳವನಾಗಿದ್ದನೆಂದು ಭಾವವು.

**ಅನ್ಯೇಷ್ವಪಿ ಕಲಾಶಾಸ್ತ್ರಸಂಗ್ರಹೇಷು [೭]ಕೃತಾಗಮಾಃ ।**
**ತಮೇವಾದರ್ಶಮಾಲೋಕ್ಯ [೮]ಸಂಶಯಾಂಶಾ[೯]ದ್ವ್ಯರಂಸಿಷುಃ ॥ ೧೫೦ ॥**

ಇತರ ಕಲಾಶಾಸ್ತ್ರ ಸಮೂಹಗಳಲ್ಲಿಯೂ ಸಂಪೂರ್ಣಶಾಸ್ತ್ರಜ್ಞರು ಆ ಭರತೇಶ್ವರನನ್ನೇ ಆದರ್ಶಪುರುಷನನ್ನಾಗಿ ನೋಡಿ ಸಂಶಯವಶದಿಂದ ವಿರಾಮವನ್ನು ಹೊಂದಿದರು. ಸಂಶಯರಹಿತರಾದರೆಂದು ಭಾವವು.

**[೧೦]ಯೇನಾಸ್ಯ ಸಹಜಾ ಪ್ರಜ್ಞಾ ಪೂರ್ವಜನ್ಮಾ[೧೧]ನುಷಂಗಿಣೀ ।**
**ತೇನೈಷಾ ವಿಶ್ವವಿದ್ಯಾಸು ಜಾತಾ ಪರಿಣತಿಃ ಪರಾ ॥ ೧೫೧ ॥**

ಈ ಭರತೇಶ್ವರನಿಗೆ ಪೂರ್ವಜನ್ಮಸಂಬಂಧವಾದ ಪ್ರಜ್ಞೆಯು ಸಹಜವಾಗಿದ್ದುದರಿಂದ ಸಕಲವಿದ್ಯೆಗಳಲ್ಲಿಯೂ ಈ ಉತ್ಕೃಷ್ಟವಾದ ಅನುಭವವುಂಟಾಯಿತು.

**ಇತ್ಥಂ ಸರ್ವೇಷು ಶಾಸ್ತ್ರೇಷು ಕಲಾಸು ಸಕಲಾಸು ಚ ।**
**ಲೋಕೇ ಸ [೧೨]ಸಮ್ಮತಿಂ ಪ್ರಾಪ್ಯ [೧೩]ತದ್ವಿದ್ಯಾನಾಂ ಮತೋಽಭವತ್ ॥**

ಈ ಪ್ರಕಾರವಾಗಿ ಸಮಸ್ತಶಾಸ್ತ್ರಗಳಲ್ಲಿಯೂ ಸಕಲಕಲೆಗಳಲ್ಲಿಯೂ ಆ ಭರತೇಶ್ವರನು ಲೋಕಸಮ್ಮತಿ(ಪ್ರಸಿದ್ಧಿ)ಯನ್ನು ಹೊಂದಿ ಆ ಶಾಸ್ತ್ರಗಳಿಗೆ ಸಮ್ಮತನಾದನು. ಶಾಸ್ತ್ರಸಮ್ಮತನಾಗಿದ್ದನೆಂದರ್ಥವು.

**ಕಿಮತ್ರ ಬಹುನೋಕ್ತೇನ ಪ್ರಜ್ಞಾಪಾರಮಿತೋ ಮನುಃ ।**
**ಕೃತ್ಸ್ನಸ್ಯ ಲೋಕವೃತ್ತಸ್ಯ ಸ ಭೇಜೇ ಸೂತ್ರಧಾರತಾಮ್ ॥ ೧೫೩ ॥**

ಇಲ್ಲಿ ಹೆಚ್ಚು ಹೇಳುವುದರಿಂದೇನು ? ಬುದ್ಧಿಯ ಪಾರವನ್ನು ಹೊಂದಿದವನಾದ ಆ ಮನು–ಭರತಸಾರ್ವಭೌಮನು ಸಮಸ್ತಲೋಕವ್ಯವಹಾರಕ್ಕೆ ಸೂತ್ರಧಾರತ್ವವನ್ನು ಹೊಂದಿದನು. ಸೂತ್ರಧಾರನಂತಿದ್ದನೆಂದು ಭಾವವು.

**[೧೪]ರಾಜಸಿದ್ಧಾಂತತತ್ತ್ವಜ್ಞೋ ಧರ್ಮಶಾಸ್ತ್ರಾರ್ಥತತ್ತ್ವವಿತ್ ।**
**ಪರಿಖ್ಯಾತಃ [೧೫]ಕಲಾಜ್ಞಾನೇ ಸೋಽಭೂನ್ಮೂರ್ಧ್ನಿ ಸುಮೇಧಸಾಮ್ ॥**

ರಾಜವಿದ್ಯಾಸ್ವರೂಪವನ್ನು ತಿಳಿದವನೂ ಧರ್ಮಶಾಸ್ತ್ರಗಳ ಅರ್ಥದ ಮರ್ಮವನ್ನು ತಿಳಿದವನೂ ಕಲಾಶಾಸ್ತ್ರದಲ್ಲಿ ಪ್ರಸಿದ್ಧನೂ ಆದ ಆ ಭರತೇಶ್ವರನು ಸುಜ್ಞಾನಿಗಳಲ್ಲಿ ಶ್ರೇಷ್ಠನಾಗಿದ್ದನು.

**[೧]ಇತ್ಯಾದಿರಾಜಂ ತ[೨]ತ್ಸಮ್ರಾಡಹೋ [೩]ರಾಜರ್ಷಿನಾಯಕಮ್ ।**
**[೪]ತತ್ಸಾರ್ವಭೌಮಮಿ[೫]ತ್ಯಸ್ಯ ದಿಶಾಸೂಚ್ಚಲಿತಂ ಯಶಃ ॥ ೧೫೫ ॥**

ಆದಿರಾಜಶಬ್ದವು ಲೋಕದಲ್ಲಿ ಪ್ರಸಿದ್ಧವಾಗಿದೆ. ಚಕ್ರವರ್ತಿಯ ಪ್ರಕಾಶವು ಹರಡಿದೆ. ರಾಜರ್ಷಿನಾಯಕನ ಪ್ರಸಿದ್ಧಿಯು ಹರಡಿದೆ. ಸರ್ವಭೂಮಿಪತಿಯ ಪ್ರಕಾಶವು ಹರಡಿದೆ. ಅಂದರೆ ಅದೇನು ಆದಿರಾಜನೋ ಅದೇನು ಚಕ್ರವರ್ತಿಯೋ ಅದೇನು ರಾಜರ್ಷಿನಾಯಕನೋ ಅದೇನು ಸರ್ವಭೂಮೀಶ್ವರನೋ, ಈ ಪ್ರಕಾರವಾಗಿ ಈ ಭರತೇಶ್ವರನ ಕೀರ್ತಿಯು ದಿಕ್ಕುಗಳಲ್ಲಿ ಹರಡಿತು.

**ಇತಿ ಸಕಲಕಲಾನಾ[೬]ಮೇಕಮೋಕಃ ಸ ಚಕ್ರೀ**
**[೭]ಕೃತಮತಿಭಿ[೮]ರಜರ್ಯಾಂ ಸಂಗತಂ [೯]ಸಂವಿಧಿತ್ಸನ್ ।**
**ಬುಧಸದಸಿ [೧೦]ಸದಸ್ಯಾನ್ಬೋಧಯನ್ವಿಶ್ವವಿದ್ಯಾ**
**[೧೧]ವ್ಯವೃಣುತ [೧೨]ಬುಧಚಕ್ರೇತ್ಯುಚ್ಚಲತ್ಕೀರ್ತಿಕೇತುಃ ॥ ೧೫೬ ॥**

ಈ ಪ್ರಕಾರವಾಗಿ ಸಮಸ್ತ ಕಲೆಗಳಿಗೆ ಮುಖ್ಯಸ್ಥಾನನೂ ಚಕ್ರವರ್ತಿಯೂ ಸಂಪೂರ್ಣಬುದ್ಧಿಯುಳ್ಳವರೊಡನೆ ನಾಶರಹಿತವಾದ ಸಂಬಂಧವನ್ನು ಮಾಡುವವನೂ ವಿದ್ವಾಂಸರ ಸಭೆಯಲ್ಲಿ ಸಭಾಯೋಗ್ಯರನ್ನು ಕುರಿತು ಬೋಧಿಸುವವನೂ ವಿದ್ವಾಂಸರಲ್ಲಿ ಶ್ರೇಷ್ಠನೆಂದು ವ್ಯಾಪ್ತವಾದ ಕೀರ್ತಿಯುಳ್ಳವನೂ ಆದ ಆ ಭರತೇಶ್ವರನು ಸಮಸ್ತವಿದ್ಯೆಗಳನ್ನು ವಿವರಿಸಿದನು.

**ಜಿನವಿಹಿತಮನೂನಂ ಸಂಸ್ಮರನ್ ಧರ್ಮಮಾರ್ಗಂ**
**ಸ್ವಯಮಧಿಗತತತ್ತ್ವೋ ಬೋಧಯನ್ಮಾರ್ಗ[೧೩]ಮನ್ಯಾನ್ ।**
**[೧೪]ಕೃತಮತಿರಖಿಲಾಂ ಕ್ಷ್ಮಾಂ ಪಾಲಯನ್ನಿಃಸಪತ್ನಾಂ**
**ಚಿರಮರಮತ ಭೋಗ್ಯೈರ್ಭೂರಿಸಾರೈಃ ಸ ಸಮ್ರಾಟ್ ॥ ೧೫೭ ॥**

ಜಿನೇಶ್ವರನಿಂದ ಮಾಡಲ್ಪಟ್ಟ ಧರ್ಮಮಾರ್ಗವನ್ನು ಸ್ಮರಿಸುವವನೂ ತಾನು ತತ್ತ್ವಗಳನ್ನು ತಿಳಿದವನೂ ಬೇರೆಯವರಿಗೆ ಸನ್ಮಾರ್ಗವನ್ನು ಬೋಧಿಸುವವನೂ ಕುಶಲಬುದ್ಧಿಯುಳ್ಳವನೂ ಶತ್ರುರಹಿತವಾದ ಸಮಸ್ತಪೃಥ್ವಿಯನ್ನು ಕಾಪಾಡುವವನೂ ಆದ ಆ ಚಕ್ರವರ್ತಿಯು ಅಧಿಕವಾದ ಸಾರವುಳ್ಳ ಭೋಗಗಳಿಂದ ಬಹುಕಾಲದವರೆಗೆ ಸುಖಪಟ್ಟನು.

**ಲಕ್ಷ್ಮೀವಾನ್ವನಿತಾ[೧೫]ಸಮಾಗಮಸುಖಸ್ಯೈಕಾಧಿಪತ್ಯಂ ದಧತ್**
**ದೂರೋತ್ಸಾರಿತದುರ್ನಯಃ [೧೬]ಪ್ರಶಮಿನೀಂ [೧೭]ತೇಜಸ್ವಿತಾಮುದ್ವಹನ್ ।**
**ನ್ಯಾಯೋಪಾರ್ಜಿತವಿತ್ತಕಾಮಘಟನಃ ಶಸ್ತ್ರೇ ಚ ಶಾಸ್ತ್ರೇ ಕೃತೀ**
**ರಾಜರ್ಷಿಃ ಪರಮೋದಯೋ [೧೮]ಜಿನಜುಷಾಮಗ್ರೇಸರಃ ಸೋಽಭವತ್ ॥**

ಸಂಪತ್ತಿಯುಳ್ಳವನೂ ಸ್ತ್ರೀಸಂಗಮಸುಖದ ಅಧಿಪತ್ಯವನ್ನು ಧರಿಸಿರುವವನೂ ದುರ್ನೀತಿಯನ್ನು ದೂರಮಾಡಿದವನೂ ಕ್ಷಮೆಯುಳ್ಳುದಾದ ಪ್ರತಾಪಿತ್ವವನ್ನು ಧರಿಸಿರುವವನೂ ನ್ಯಾಯದಿಂದ ಸಂಪಾದಿಸಲ್ಪಟ್ಟ ದ್ರವ್ಯದ ಮತ್ತು ಕಾಮ– ಸುಖದ ಉಪಯೋಗವುಳ್ಳವನೂ ಶಸ್ತ್ರದಲ್ಲಿಯೂ ಶಾಸ್ತ್ರದಲ್ಲಿಯೂ ನಿಪುಣನೂ

೧ ನಿಮಿತ್ತಶಾಸ್ತ್ರಾಣಾಂ. ೨ ಜ್ಯೋತಿಃಶಾಸ್ತ್ರೇ. ೩ ಭರತೇಶ್ವರೋತ್ಪತ್ತೌ. ೪ ಸಾಮುದ್ರಿಕಲಕ್ಷಣಂ. ೫ ದೃಷ್ಟಂ. ೬ ಕಾರಣೇನ. ೭ ಸಂಪೂರ್ಣಶಾಸ್ತ್ರಾಃ. ೮ ಸಂಶಯವಶಾತ್. ೯ ವಿರಮಂತಿ ಸ್ಮ. ೧೦ ಕಾರಣೇನ. ೧೧ ಅನುಬಂಧಿನೀ. ೧೨ ಲೋಕಸಮ್ಮತೋ ಭೂತ್ವಾ. ೧೩ ತಚ್ಛಾಸ್ತ್ರಾಣಾಂ ಸಮ್ಮತೋಽಭವತ್. ೧೪ ನೃಪವಿದ್ಯಾಸ್ವರೂಪಜ್ಞಃ. ೧೫ ಕಲಾಶಾಸ್ತ್ರೇ.

೧ ಆದಿರಾಜಶಬ್ದೋ ಲೋಕೇ ಸುಷ್ಠು ಪ್ರಥತೇ ಇತ್ಯರ್ಥಃ. ೨ ಸಮ್ರಾಜಃ ಪ್ರಕಾಶಃ. ೩ ರಾಜರ್ಷಿನಾಯಕಸ್ಯ ಪ್ರಥಾ. ೪ ಸರ್ವಭೂಮೇರೀಶಸ್ಯ ಪ್ರಕಾಶಃ. ೫ ಚಕ್ರಿಣಃ. ೬ ಮುಖ್ಯಗೃಹಂ. ೭ ಸಂಪೂರ್ಣಮತಿಭಿಃ. ೮ ಅವಿನಾಶಿ. ೯ ಕುರ್ವನ್. ೧೦ ಸದಸಿ ಯೋಗ್ಯಾನ್. ೧೧ ವಿವರಣಮಕರೋತ್. ೧೨ ವಿದ್ವಜ್ಜನ. ೧೩ ಜೀವಾನ್. ೧೪ ಕುಶಲಮತಿಃ. ೧೫ ಸಂಗಮಸುಖಸ್ಯ. ೧೬ ಕ್ಷಮಾವತೀಂ. ೧೭ ಪ್ರತಾಪಿತಾಂ. ೧೮ ಜಿನಸೇವಕಾನಾಂ.

ಉತ್ಕೃಷ್ಟವಾದ ವೃದ್ಧಿಯುಳ್ಳವನೂ ಆದ ಆ ಭರತರಾಜರ್ಷಿಯು ಜಿನೇಶ್ವರನ ಸೇವಕರಲ್ಲಿ ಮುಂದಾಳಾದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ ಭರತರಾಜ ಸ್ವಪ್ನದರ್ಶನ ತತ್ಫಲೋಪವರ್ಣನಂ ನಾಮ ಏಕಚತ್ವಾರಿಂಶತ್ತಮಂ ಪರ್ವ ॥**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತುಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ ''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೋಳ್''ಭರತರಾಜ ಸ್ವಪ್ನದರ್ಶನದ ಮತ್ತು ಅವುಗಳ ಫಲಗಳ ವರ್ಣನವೆಂಬ ನಲ್ವತ್ತೊಂದನೆಯ ಪರ್ವವು ಸಂಪೂರ್ಣವಾದುದು.

---

॥ ಶ್ರೀ ವೃಷಭಜಿನಾಯ ನಮಃ ॥

# ಅಥ ದ್ವಿಚತ್ವಾರಿಂಶತ್ತಮಂ ಪರ್ವ

**ಮಧ್ಯೇಸಭಮಥಾನ್ಯೇದ್ಯುರ್ನಿವಿಷ್ಟೋ ಹರಿವಿಷ್ಟರೇ ।**
**[೧]ಕ್ಷಾತ್ರಂ ವೃತ್ತಮುಪಾದಿಕ್ಷ[೨]ತ್ಸಂಹತಾನ್ ಪಾರ್ಥಿವಾನ್ಪತಿ ॥ ೧ ॥**

ಅನಂತರದಲ್ಲಿ ಮರುದಿವಸ ಸಭೆಯ ಮಧ್ಯದಲ್ಲಿ ಸಿಂಹಪೀಠದಲ್ಲಿ ಕುಳಿತಿರುವ ಭರತೇಶ್ವರನು ಕ್ಷತ್ರಿಯಸಂಬಂಧಿಯಾದ ಆಚರಣವನ್ನು ಅಲ್ಲಿ ಸೇರಿದ ರಾಜರುಗಳನ್ನು ಕುರಿತು ಉಪದೇಶಿಸಿದನು.

**ಶ್ರೂಯತಾಂ ಭೋ ಮಹಾತ್ಮಾನಃ ಸರ್ವೇ ಕ್ಷತ್ರಿಯಪುಂಗವಾಃ ।**
**[೩]ಕ್ಷತತ್ರಾಣೇ ನಿಯುಕ್ತಾಃ [೪]ಸ್ಥ ಯೂಯಮಾದ್ಯೇನ ವೇಧಸಾ ॥ ೨ ॥**

"ಎಲೈ ಮಹಾತ್ಮರಾದ ಎಲ್ಲಾ ಕ್ಷತ್ರಿಯೋತ್ತಮರೆ! ಕೇಳಿರಿ, ನೀವುಗಳು ಆದಿಬ್ರಹ್ಮರಿಂದ ದುಃಖಿತಜನರ ರಕ್ಷಣೆಯಲ್ಲಿ ಗೊತ್ತುಮಾಡಲ್ಪಟ್ಟವರಾಗಿರುತ್ತೀರಿ.

**ತತ್ತ್ರಾಣೇ ಚ ನಿಯುಕ್ತಾನಾಂ ವೃತ್ತಂ ವಃ ಪಂಚಧೋ[೫]ದಿತಮ್ ।**
**ತನ್ನಿಶಮ್ಯ ಯಥಾಮ್ನಾಯಂ ಪ್ರವರ್ತಧ್ವಂ ಪ್ರಜಾ[೬]ಹಿತೇ ॥ ೩ ॥**

ಆ ದುಃಖಿತಜನರ ರಕ್ಷಣೆಯಲ್ಲಿ ಗೊತ್ತುಮಾಡಲ್ಪಟ್ಟವರಾದ ನಿಮ್ಮಗಳ ಆಚರಣವು ಐದು ಪ್ರಕಾರವಾಗಿ ಹೇಳಲ್ಪಟ್ಟಿರುತ್ತದೆ. ಪರಂಪರಾಗತವಾದ ಪದ್ಧತಿಗನುಸಾರವಾಗಿ ಆ ಆಚರಣವನ್ನು ಕೇಳಿ ಪ್ರಜೆಗಳ ಹಿತನಿಮಿತ್ತವಾಗಿ ತೊಡಗಿರಿ.

**ತಚ್ಚೇದಂ ಕುಲಮತ್ಯಾತ್ಮಪ್ರಜಾನಾಮನುಪಾಲನಮ್ ।**
**ಸಮಂಜಸತ್ವಂ ಚೇತ್ಯೇವಮುದ್ದಿಷ್ಟಂ ಪಂಚಭೇದಭಾಕ್ ॥ ೪ ॥**

ಆ ಆಚರಣವಾದರೋ ಕುಲಪಾಲನ ಮತಿಪಾಲನ ಆತ್ಮಪಾಲನ ಪ್ರಜಾಪಾಲನ ಸಮಂಜಸತ್ವಗಳೆಂದು ಐದು ಭೇದಗಳನ್ನು ಹೊಂದಿದುದಾಗಿ ಹೇಳಲ್ಪಟ್ಟಿರುತ್ತದೆ.

**ಕುಲಾನುಪಾಲನಂ ತತ್ರ ಕುಲಾಮ್ನಾಯಾನುರಕ್ಷಣಮ್ ।**
**ಕುಲೋಚಿತಸಮಾಚಾರಪರಿರಕ್ಷಣಲಕ್ಷಣಮ್ ॥ ೫ ॥**

ಆ ಐದು ಭೇದಗಳಲ್ಲಿ ವಂಶೋಚಿತವಾದ ಉತ್ತಮಾಚರಣಗಳ ರಕ್ಷಣವೇ ಲಕ್ಷಣವಾಗಿರುವ ಪರಂಪರಾಗತವಾದ ತನ್ನ ಕುಲಪದ್ಧತಿಯ ರಕ್ಷಣವು ಕುಲಪಾಲನವೆಂಬ ಮೊದಲನೆಯ ಆಚರಣವಾಗಿರುತ್ತದೆ.

**ಕ್ಷತ್ರಿಯಾಣಾಂ ಕುಲಾಮ್ನಾಯಃ ಕೀದೃಶಶ್ಚೇನ್ನಿಶಮ್ಯತಾಮ್ ।**
**ಆದ್ಯೇನ ವೇಧಸಾ ಸೃಷ್ಟಃ ಸರ್ಗೋಽಯಂ ಕ್ಷತ್ರಪೂರ್ವಕಃ ॥ ೬ ॥**

ಕ್ಷತ್ರಿಯರ ಕುಲಪದ್ಧತಿಯು ಎಂತಹುದೆಂದರೆ, ಕೇಳಿರಿ. ಆದಿಬ್ರಹ್ಮನು ಕ್ಷತ್ರಿಯಪೂರ್ವಕವಾದ ಈ ಸೃಷ್ಟಿಯನ್ನು ರಚಿಸಿದನು. ಮೊತ್ತಮೊದಲು ಕ್ಷತ್ರಿಯರನ್ನು ಸೃಷ್ಟಿಸಿದನೆಂದು ಭಾವವು.

**[೭]ಸ ಚೈಷ ಭಾರತಂ ವರ್ಷಮವತೀರ್ಣೋ ದಿವೋಗ್ರತಃ ।**
**ಪುರಾಭವೇ ಸಮಾರಾಧ್ಯ ರತ್ನತ್ರಿತಯಮೂರ್ಜಿತಮ್ ॥ ೭ ॥**

ಪೂರ್ವಭವದಲ್ಲಿ ಶ್ರೇಷ್ಠವಾದ ರತ್ನತ್ರಯವನ್ನು ಆರಾಧಿಸಿ ಆ ಆದಿಬ್ರಹ್ಮನು ಸ್ವರ್ಗದಿಂದ ಭಾರತವರ್ಷಕ್ಕೆ ಅವತರಿಸಿದನು.

**ದ್ವಿರಷ್ಟೌ ಭಾವನಾಸ್ತತ್ರ ತೀರ್ಥಕೃತ್ತ್ವೋಪಪಾದಿನೀಃ ।**
**ಭಾವಯಿತ್ವಾ ಶುಭೋದರ್ಕಾದ್ದ್ಯುಲೋಕಾಗ್ರ[೮]ಮಧಿಷ್ಠಿತಃ ॥ ೮ ॥**

ಆ ಭಾರತವರ್ಷದಲ್ಲಿ ತೀರ್ಥಂಕರತ್ವವನ್ನುಂಟುಮಾಡುವುವೂ ಶುಭವಾದ ಉತ್ತರಫಲಗಳುಳ್ಳುವೂ ಆದ ದರ್ಶನವಿಶುದ್ಧಿ ಮೊದಲಾದ ಹದಿನಾರು ಭಾವನೆಗಳನ್ನು ಭಾವಿಸಿ ಸ್ವರ್ಗಲೋಕದ ಅಗ್ರಭಾಗವನ್ನಾಶ್ರಯಿಸಿದನು.

**ತೇನಾಸ್ಮಿನ್ ಭಾರತೇ ವರ್ಷೇ ಧರ್ಮತೀರ್ಥಪ್ರವರ್ತನೇ[೧] ।**
**ತತಃ ಕೃತಾವತಾರೇಣ ಕ್ಷಾತ್ರಃ ಸರ್ಗಃ ಪ್ರವರ್ತಿತಃ ॥ ೯ ॥**

ಈ ಭಾರತವರ್ಷದಲ್ಲಿ ಧರ್ಮತೀರ್ಥವನ್ನು ಪ್ರಚಾರಮಾಡುವ ನಿಮಿತ್ತವಾಗಿ ಆ ಸ್ವರ್ಗದಿಂದ ಅವತರಿಸಿದವನಾದ ಆ ಆದಿಬ್ರಹ್ಮನಿಂದ ಕ್ಷತ್ರಿಯಸಂಬಂಧವಾದ ಸೃಷ್ಟಿಯು ಮಾಡಲ್ಪಟ್ಟಿತು.

**[೨]ತತ್ಕಥಂ ಕರ್ಮಭೂಮಿತ್ವಾದದ್ಯತ್ವೇ ದ್ವಿತಯೀ ಪ್ರಜಾ ।**
**ಕರ್ತವ್ಯಾ ರಕ್ಷಣೀಯೈಕಾ ಪ್ರಜಾನ್ಯಾ ರಕ್ಷಣೋದ್ಯತಾ ॥ ೧೦ ॥**

ಆ ಕ್ಷತ್ರಿಯಸೃಷ್ಟಿಯು ಹೇಗೆಂದರೆ, ಈಗ ಕರ್ಮಭೂಮಿಯಾಗಿರುವುದರಿಂದ ಇಲ್ಲಿ ಎರಡು ಪ್ರಕಾರವಾದ ಪ್ರಜೆಗಳಿರುತ್ತಾರೆ. ಒಂದು ಪ್ರಕಾರವಾದ ಪ್ರಜೆಗಳು ರಕ್ಷಣೆಗೆ ಯೋಗ್ಯರಾಗಿಯೂ ಇನ್ನೊಂದು ಪ್ರಕಾರದ ಜನಗಳು ರಕ್ಷಣೆಯಲ್ಲಿ ಪ್ರಯತ್ನಪರರಾಗಿಯೂ ಇರುತ್ತಾರೆ. ರಕ್ಷಿಸಲ್ಪಡತಕ್ಕವರೆಂದೂ ರಕ್ಷಿಸುವವರೆಂದೂ ಎರಡು ಪ್ರಕಾರವಾದ ಪ್ರಜೆಗಳಿರುತ್ತಾರೆಂದು ಭಾವವು.

**ರಕ್ಷಣಾಭ್ಯುದ್ಯತಾ ಯೇತ್ರ ಕ್ಷತ್ರಿಯಾ ಸ್ಯುಸ್ತದನ್ವಯಾಃ ।**
**ಸೋಽನ್ವಯೋಽನಾದಿಸಂತತ್ಯಾ ಬೀಜವೃಕ್ಷವದಿಷ್ಯತೇ ॥ ೧೧ ॥**

ಇಲ್ಲಿ ಪ್ರಜಾರಕ್ಷಣೆಯಲ್ಲಿ ಪ್ರಯತ್ನಪರರೂ ಕ್ಷತ್ರಿಯವಂಶೀಯರೂ ಆದ ಯಾವ ಕ್ಷತ್ರಿಯರಿರುತ್ತಾರೋ ಆ ಕ್ಷತ್ರಿಯವಂಶವು ಅನಾದಿಪರಂಪರೆಯಿಂದ ಬೀಜವೃಕ್ಷದಂತೆ ಪರಿಗ್ರಹಿಸಲ್ಪಡುತ್ತದೆ. ಬೀಜವೃಕ್ಷವು ಅನಾದಿಪರಂಪರೆಯಿಂದಿರುವಂತೆ ಕ್ಷತ್ರಿಯಪರಂಪರೆಯೂ ಇರುವುದೆಂದು ಭಾವವು.

**[೩]ವಿಶೇಷತಸ್ತು ತತ್ಸರ್ಗಃ [೪]ಕ್ಷೇತ್ರಕಾಲವ್ಯಪೇಕ್ಷಯಾ ।**
**[೫]ತೇಷಾಂ ಸಮುಚಿತಾಚಾರಃ ಪ್ರಜಾರ್ಥೇ ನ್ಯಾಯವೃತ್ತಿತಾ ॥ ೧೨ ॥**

ವಿಶಿಷ್ಟಕ್ಷತ್ರಿಯರ ಸೃಷ್ಟಿಯಾದರೋ ಭರತಕ್ಷೇತ್ರದ ಉತ್ಸರ್ಪಿಣೀಕಾಲದ ಅಪೇಕ್ಷೆಯಿಂದ ಮಾಡಲ್ಪಡುವುದು. ಆ ಕ್ಷತ್ರಿಯರ ಉಚಿತವಾದ ಆಚರಣೆಯು ಪ್ರಜೆಗಳ ಹಿತದಲ್ಲಿ ನ್ಯಾಯವಾಗಿರುವುದಾಗಿರುತ್ತದೆ.

**ಸ ತು ನ್ಯಾಯೋ[೬]ನತಿಕ್ರಾಂತ್ಯಾ [೭]ಧರ್ಮಸ್ಯಾ[೮]ರ್ಥಸಮರ್ಜನಮ್ ।**
**ರಕ್ಷಣಂ ವರ್ಧನಂ ಚಾಸ್ಯ ಪಾತ್ರೇ ಚ ವಿನಿಯೋಜನಮ್ ॥ ೧೩ ॥**

ಧರ್ಮನಿಮಿತ್ತವಾಗಿ ಶಾಸ್ತ್ರೋಕ್ತಪ್ರಕಾರದಿಂದ ಅರ್ಥಸಂಪಾದನೆಯೂ ರಕ್ಷಣವೂ ವೃದ್ಧಿಪಡಿಸುವುದೂ ನ್ಯಾಯವಾಗಿರುತ್ತದೆ. ಸತ್ಪಾತ್ರದಲ್ಲಿ ಈ ದ್ರವ್ಯವನ್ನು ವಿನಿಯೋಗಿಸುವುದೂ ನ್ಯಾಯವಾಗಿರುತ್ತದೆ.

**ಸೈಷಾ [೯]ಚತುಷ್ಟಯೀ ವೃತ್ತಿರ್ನ್ಯಾಯಃ ಸದ್ಭಿರುದಾಹೃತಃ ।**
**ಜೈನಧರ್ಮಾನುವೃತ್ತಿಶ್ಚ ನ್ಯಾಯೋ ಲೋಕೋತ್ತರೋ ಮತಃ ॥ ೧೪ ॥**

ಅರ್ಥಾರ್ಜನ ರಕ್ಷಣ ವರ್ಧನ ಪಾತ್ರವಿನಿಯೋಜನರೂಪವಾದ ಆ ನಾಲ್ಕು ವಿಧವಾದ ಆಚರಣವು ಸತ್ಪುರುಷರಿಂದ ನ್ಯಾಯವೆಂದು ಉದಾಹರಿಸಲ್ಪಟ್ಟಿರುತ್ತದೆ.

೧ ಕ್ಷತ್ರಿಯಸಂಬಂಧಿ. ೨ ಮಿಲಿತಾನ್. ೩ ಕ್ಷತಜನತ್ರಾಣೇ. ೪ ಭವಥ. ೫ ಉಚಿತಮಿತ್ಯಪಿ ಪಾಠಃ. ೬ ಹಿತನಿಮಿತ್ತಂ. ೭ ಆದಿಬ್ರಹ್ಮಾ. ೮ ಆಶ್ರಿತಃ.

೧ ನಿಮಿತ್ತಂ. ೨ ಕ್ಷತ್ರಿಯಪ್ರವೃತ್ತಂ ಕಥಮಿತಿ ಚೇದುಚ್ಯತೇ. ೩ ಕ್ಷತ್ರಿಯಸರ್ಗೇ ವಿಶೇಷಃ. ೪ ಭರತಕ್ಷೇತ್ರ, ಉತ್ಸರ್ಪಿಣೀಕಾಲ. ೫ ಕ್ಷತ್ರಿಯಾಣಾಂ. ೬ ಶಾಸ್ತ್ರೋಕ್ತಪ್ರಕಾರೇಣ. ೭ ಧರ್ಮನಿಮಿತ್ತಂ. ೮ ಅರ್ಥೋಪಾರ್ಜನಂ. ೯ ಅರ್ಥಾರ್ಜನಾದಿವೃತ್ತಿಃ.

ಜೈನಧರ್ಮಾನುಸರಣವಾದರೋ ಲೋಕೋತ್ತರವಾದ ನ್ಯಾಯವೆಂದು ಅಭಿಮತ ವಾಗಿರುತ್ತದೆ.

**ದಿವ್ಯಮೂರ್ತೇರುದುತ್ಪದ್ಯ ಜಿನಾದುತ್ಪಾದಯಜ್ಜಿನಾನ್ ।**
**ರತ್ನತ್ರಯಂ ತು [೧]ತದ್ಯೋನಿರ್ನೃಪಾಸ್ತಸ್ಮಾದಯೋನಿಜಾಃ ॥ ೧೫ ॥**

ದಿವ್ಯಮೂರ್ತಿಯಾದ ಜಿನೇಶ್ವರನಿಂದ ಉದ್ಭವಿಸಿ ಮುಂದೆ ಜಿನರನ್ನು ಉಂಟು ಮಾಡುವುದಾದ ರತ್ನತ್ರಯವಾದರೋ ಆ ಕ್ಷತ್ರಿಯರಿಗೆ ಉತ್ಪತ್ತಿಸ್ಥಾನವಾಗಿರುತ್ತದೆ. ಆದುದರಿಂದ ರಾಜರುಗಳು ಅಯೋನಿಜರಾಗಿರುತ್ತಾರೆ. ರತ್ನತ್ರಯಭಾವ ವುಳ್ಳವರಾದ ರಾಜರು ಆ ದೃಷ್ಟಿಯಿಂದ ಅಯೋನಿಜರೆಂದು ಭಾವವು.

**ತತೋ ಮಹಾನ್ವಯೋತ್ಪನ್ನಾ ನೃಪಾ ಲೋಕೋತ್ತಮಾ ಮತಾಃ ।**
**ಪಥಿ ಸ್ಥಿತ್ವಾ ಸ್ವಯಂ ಧರ್ಮ್ಯೇ ಸ್ಥಾಪಯಂತಃ ಪರಾನಪಿ ॥ ೧೬ ॥**

ಆದುದರಿಂದ ಮಹಾವಂಶದಲ್ಲಿ ಹುಟ್ಟಿದವರೂ ತಾವು ಧರ್ಮಮಾರ್ಗದಲ್ಲಿದ್ದು ಬೇರೆಯವರನ್ನೂ ಆ ಮಾರ್ಗದಲ್ಲಿ ಸ್ಥಾಪಿಸುವವರೂ ಆದ ರಾಜರು ಲೋಕೋತ್ಕೃಷ್ಟರೆಂದು ತಿಳಿಯಲ್ಪಟ್ಟಿರುತ್ತಾರೆ.

**[೨]ತೈಸ್ತು ಸರ್ವಪ್ರಯತ್ನೇನ ಕಾರ್ಯಂ ಸ್ವಾನ್ವಯರಕ್ಷಣಮ್ ।**
**ತತ್ಪಾಲನಂ ಕಥಂ ಕಾರ್ಯಮಿತಿ ಚೇತ್ತ[೩]ದನೂದ್ಯತೇ ॥ ೧೭ ॥**

ಮಹಾನ್ವಯೋತ್ಪನ್ನರಾದ ಆ ರಾಜರುಗಳು ತಮ್ಮ ವಂಶರಕ್ಷಣೆಯನ್ನು ಸರ್ವ ಪ್ರಯತ್ನದಿಂದ ಮಾಡಬೇಕು. ಆ ತಮ್ಮ ವಂಶರಕ್ಷಣೆಯು ಹೇಗೆ ಮಾಡಬೇಕೆಂಬು ದನ್ನು ಮುಂದೆ ಹೇಳಿದೆ.

**ಸ್ವಯಂ ಮಹಾನ್ವಯತ್ವೇನ [೪]ಮಹಿಮ್ನಿ ಕ್ಷತ್ರಿಯಾಃ ಸ್ಥಿತಾಃ ।**
**[೫]ಧರ್ಮಾಸ್ಥಯಾ ನ [೬]ಶೇಷಾದಿಗ್ರಾಹ್ಯಂ ತೈಃ ಪರಲಿಂಗಿನಾಮ್ ॥ ೧೮ ॥**

ಕ್ಷತ್ರಿಯರು ಮಹಾವಂಶೀಯರಾಗಿರುವುದರಿಂದ ತಾವು ಮಹಿಮಾತಿಶಯ ದಲ್ಲಿರುವವರಾಗಿ ಅವರು ಅನ್ಯಮತೀಯರ ಅರ್ಚನಾಪುಷ್ಪಾಕ್ಷತಾದಿಗಳನ್ನು (ಪ್ರಸಾದವನ್ನು) ಧರ್ಮಬುದ್ಧಿಯಿಂದ ತೆಗೆದುಕೊಳ್ಳಬಾರದು.

**ತಚ್ಛೇಷಾದಿಗ್ರಹೇ ದೋಷಃ ಕಶ್ಚೇನ್ಮಾಹಾತ್ಮ್ಯವಿಚ್ಯುತಿಃ ।**
**ಅಪಾಯಾ ಬಹವಶ್ಚಾ[೭]ಸ್ಮಿನ್ನತಸ್ತತ್ಪರಿವರ್ಜನಮ್ ॥ ೧೯ ॥**

ಆ ಶೇಷಾಕ್ಷತಾದಿಗಳ ಗ್ರಹಣದಲ್ಲಿ ಯಾವುದು ದೋಷವೆಂದರೆ, ಮಹಿಮೆಯ ಹಾನಿಯು. ತನ್ನ ವಂಶರಕ್ಷಣೆಯಲ್ಲಿ ಅಪಾಯಗಳು ಬಹಳವಾಗಿರುತ್ತವೆ. ಆದುದರಿಂದ ಆ ಶೇಷಾಕ್ಷತಾದಿಗಳನ್ನು ಪರಿತ್ಯಜಿಸಬೇಕು.

**ಮಾಹಾತ್ಮ್ಯಪ್ರಚ್ಯುತಿಸ್ತಾವತ್ಕೃತ್ವಾ[೮]ನ್ಯಸ್ಯ ಶಿರೋನತಿಮ್ ।**
**[೯]ತತಃ ಶೇಷಾದ್ಯುಪಾದಾನೇ ಸ್ಯಾನ್ನಿಕೃಷ್ಟತ್ವಮಾತ್ಮನಃ ॥ ೨೦ ॥**

ಮಹಿಮೆಯ ನಾಶವಾದರೋ ಈ ಅನ್ಯಮತೀಯನಿಗೆ ನಮಸ್ಕಾರವನ್ನು ಮಾಡಿ ಆತನಿಂದ ಶೇಷಾಕ್ಷತಾದಿಗಳನ್ನು ತೆಗೆದುಕೊಳ್ಳುವುದರಿಂದ ತನಗೆ ನಿಕೃಷ್ಟತ್ವವು ಪ್ರಾಪ್ತವಾಗುವುದು.

**ಪ್ರದ್ವಿಷನ್ ಪರಪಾಷಂಡೀ ವಿಷಪುಷ್ಪಾಣಿ ನಿಕ್ಷಿಪೇತ್ ।**
**ಯದ್ಯಸ್ಯ ಮೂರ್ಧ್ನಿ ನನ್ವೇವಂ ಸ್ಯಾದಪಾಯೋ ಮಹೀಪತೇಃ ॥ ೨೧ ॥**

ಅನ್ಯಮತೀಯನಾದ ಪಾಷಂಡಿ(ವೇಷಧಾರಿ)ಯು ರಾಜನಲ್ಲಿ ದ್ವೇಷಿಸುವವನಾಗಿ ಇವನ ತಲೆಯ ಮೇಲೆ ವಿಷಪುಷ್ಪಗಳನ್ನು ಚೆಲ್ಲಿದರೆ ರಾಜನಿಗೆ ಅಪಾಯ ವಾಗುವುದು.

೧ ತೇಷಾಂ ಕ್ಷತ್ರಿಯಾಣಾಮುತ್ಪತ್ತಿಸ್ಥಾನಂ. ೨ ಮಹಾನ್ವಯೈಃ. ೩ ಅನುಕಥ್ಯತೇ. ೪ ಮಹಿಮಾತಿಶಯೇ. ೫ ಧರ್ಮಬುದ್ಧ್ಯಾ. ೬ ಅರ್ಚನಾಪುಷ್ಪಾಕ್ಷತಾದಿ. ೭ ಸ್ವಾನ್ವಯರಕ್ಷಣೇ. ೮ ಅನ್ಯಲಿಂಗಿನಃ. ೯ ಶೇಷಾದಿದಾತುಃ ಸಕಾಶಾತ್.

**ವಶೀಕರಣಪುಷ್ಪಾಣಿ ನಿಕ್ಷಿಪೇದ್ಯದಿ [೧]ಮೋಹನೇ ।**
**ತತೋಽಯಂ ಮೂಢಚಿದ್ವೃತ್ತಿರುಪೇಯಾದನ್ಯವಶ್ಯತಾಮ್ ॥ ೨೨ ॥**

ಮೋಹವನ್ನುಂಟುಮಾಡುವುದಕ್ಕೋಸ್ಕರ (ವಶಪಡಿಸಿಕೊಳ್ಳುವುದಕ್ಕೋಸ್ಕರ) ವಶೀಕರಣಪುಷ್ಪಗಳನ್ನು ತಲೆಯ ಮೇಲಿಟ್ಟರೆ ಅದರಿಂದ ಈ ರಾಜನು ಮೂಢವಾದ ಮನೋವ್ಯಾಪಾರವುಳ್ಳವನಾಗಿ(ಹುಚ್ಚನಾಗಿ) ಪರಾಧೀನತೆಯನ್ನು ಹೊಂದುವನು.

**ತಚ್ಛೇಷಾಶೀರ್ವಚಃ[೨]ಶಾಂತಿವಚನಾದ್ಯನ್ಯಲಿಂಗಿನಾಮ್ ।**
**ಪಾರ್ಥಿವೈಃ ಪರಿಹರ್ತವ್ಯಂ ಭವೇ[೩]ನ್ನ್ಯಕ್ಕುಲತಾನ್ಯಥಾ ॥ ೨೩ ॥**

ಆದುದರಿಂದ ಅನ್ಯಮತೀಯರ ಶೇಷಾಕ್ಷತ ಆಶೀರ್ವಚನ ಶಾಂತಿಮಂತ್ರ ಪುಣ್ಯಾಹವಾಚನಾ ಮೊದಲಾದುವುಗಳನ್ನು ರಾಜರು ಪರಿಹರಿಸಬೇಕು. ಹಾಗೆ ಮಾಡದಿದ್ದರೆ ನೀಚಕುಲತ್ವವುಂಟಾಗುವುದು.

**[೪]ಜೈನಾಸ್ತು ಪಾರ್ಥಿವಾಸ್ತೇಷಾಮರ್ಹತ್ಪಾದೋಪಸೇವಿನಾಮ್ ।**
**ತಚ್ಛೇಷಾನುಮತಿರ್ನ್ಯಾಯ್ಯಾ ತತಃ ಪಾಪಕ್ಷಯೋ ಭವೇತ್ ॥ ೨೪ ॥**

ಜೈನರಾದರೋ ಕ್ಷತ್ರಿಯರು. ಅರ್ಹತ್ಪರಮೇಶ್ವರನ ಪಾದಸೇವಕರಾದ ಆ ಜೈನರಿಗೆ ಅರ್ಹತ್ಪರಮೇಶ್ವರನ ಶೇಷಾಕ್ಷತಾದಿಗಳ ಸ್ವೀಕಾರವು ನ್ಯಾಯವಾಗಿದೆ. ಅದರಿಂದ ಪಾಪಕ್ಷಯವಾಗುವುದು.

**ರತ್ನತ್ರಿತಯಮೂರ್ತಿತ್ವಾದಾದಿಕ್ಷತ್ರಿಯವಂಶಜಾಃ ।**
**ಜಿನಾಃ [೫]ಸನಾಭಯೋ[೬]ಮೀಷಾಮತಸ್ತಚ್ಛೇಷಧಾರಣಮ್ ॥ ೨೫ ॥**

ಆದಿಕ್ಷತ್ರಿಯವಂಶೋತ್ಪನ್ನರಾದ ಜಿನರು ರತ್ನತ್ರಯಸ್ವರೂಪರಾಗಿರುವುದರಿಂದ ಈ ಕ್ಷತ್ರಿಯರಿಗೆ ಬಾಂಧವರಾಗಿರುತ್ತಾರೆ. ಆದುದರಿಂದ ಆ ಜಿನರ ಶೇಷಾಕ್ಷತಗಳನ್ನು ಧರಿಸುವುದು ನ್ಯಾಯವಾಗಿರುತ್ತದೆ.

**ಯಥಾ ಹಿ ಕುಲಪುತ್ರಾಣಾಂ ಮಾಲ್ಯಂ [೭]ಗುರುಶಿರೋಧೃತಮ್ ।**
**ಮಾನ್ಯಮೇವಂ ಜಿನೇಂದ್ರಾಂಘ್ರಿಸ್ಪರ್ಶಾನ್ಮಾಲ್ಯಾದಿ ಭೂಷಿತಮ್ ॥ ೨೬ ॥**

ಕುಲಪುತ್ರರಿಗೆ ತಮ್ಮ ತಂದೆಯ ಮಸ್ತಕದಲ್ಲಿ ಧರಿಸಲ್ಪಟ್ಟ ಪುಷ್ಪಮಾಲೆಯು ಹೇಗೆ ಭೂಷಣವೋ ಹಾಗೆ ಜಿನೇಶ್ವರನ ಪಾದಸ್ಪರ್ಶದಿಂದ ಪುಷ್ಪಮಾಲಿಕೆ ಮೊದ ಲಾದುದು ಮಾನ್ಯವಾದ ಭೂಷಣವಾಗಿರುತ್ತದೆ.

**ಕಥಂ ಮುನಿಜನಾ[೮]ದೇಷಾಂ ಶೇಷೋಪಾದಾನಮಿತ್ಯಪಿ ।**
**ನಾಶಂಕ್ಯಂ [೯]ತತ್ಸಜಾತೀಯಾಸ್ತೇ ರಾಜಪರಮರ್ಷಯಃ ॥ ೨೭ ॥**

ಈ ಕ್ಷತ್ರಿಯರಿಗೆ ಮುನಿಜನರಿಂದ ಶೇಷಾಕ್ಷತಾದಿಗಳ ಸ್ವೀಕಾರವು ಹೇಗೆ ನ್ಯಾಯ ವಾಗಿರುವುದೆಂದು ಸಂದೇಹಪಡಬಾರದು. ಹಿಂದೆ ರಾಜರಾಗಿದ್ದು ಪರಮರ್ಷಿ ಗಳಾದ ಆ ಮುನಿಗಳು ಆ ಜಿನರ ಸಮಾನಜಾತಿಯವರಾಗಿರುತ್ತಾರೆ.

**[೧೦]ಅಕ್ಷತ್ರಿಯಾಶ್ಚ ವೃತ್ತಸ್ಥಾಃ ಕ್ಷತ್ರಿಯಾ ಏವ ದೀಕ್ಷಿತಾಃ ।**
**ಯತೋ ರತ್ನತ್ರಯಾಯತ್ತಜನ್ಮನಾ [೧೧]ತೇಽಪಿ [೧೨]ತದ್ಗುಣಾಃ ॥ ೨೮ ॥**

ಮೊದಲು ಕ್ಷತ್ರಿಯರಲ್ಲದವರು ಸದಾಚರಣದಲ್ಲಿದ್ದು ದೀಕ್ಷಿತರಾದರೆ ಕ್ಷತ್ರಿಯರೇ ಆಗುವರು. ರತ್ನತ್ರಯಕ್ಕೆ ಅಧೀನವಾದ ಜನ್ಮವುಳ್ಳವರಾಗಿರುವುದರಿಂದ ಆ ಮುನಿಗಳೂ ಜಿನೇಶ್ವರನ ಗುಣಗಳುಳ್ಳವರಾಗಿರುತ್ತಾರೆ.

**ತತಃ [೧೩]ಸ್ಥಿತಮಿದಂ ಜೈನಾನ್ಮತಾದನ್ಯಮತಸ್ಥಿತಾಃ ।**
**ಕ್ಷತ್ರಿಯಾಣಾಂ ನ ಶೇಷಾದಿಪ್ರದಾನೇಧಿಕೃತಾ ಇತಿ ॥ ೨೯ ॥**

೧ ಮೋಹನಿಮಿತ್ತಂ. ೨ ಶಾಂತಿಮಂತ್ರಪುಣ್ಯಾಹವಾಚನಾದಿ. ೩ ನೀಚಕುಲತಾ. ೪ ಸರ್ವೇ ಪಾರ್ಥಿವಾ ಜೈನಾಸ್ತಸ್ಮಾತ್ತೇಷಾಮಿತ್ಯರ್ಥಃ. ೫ ಬಾಂಧವಾಃ. ೬ ಕ್ಷತ್ರಿಯಾಣಾಂ. ೭ ಪಿತೃ. ೮ ಕ್ಷತ್ರಿಯಾಣಾಂ. ೯ ಜಿನಸಜಾತೀಯಾಃ. ೧೦ ಪೂರ್ವಮಕ್ಷತ್ರಿಯಾಃ. ೧೧ ಮುನಯಃ. ೧೨ ಜಿನಗುಣಾಃ. ೧೩ ಪ್ರತಿಷ್ಠಿತಂ.

ಆದುದರಿಂದ ಜೈನಮತಕ್ಕಿಂತ ಬೇರೆಯಾದ ಮತದಲ್ಲಿರುವವರು ಕ್ಷತ್ರಿಯರಿಗೆ ಶೇಷಾಕ್ಷತಗಳನ್ನು ಕೊಡುವುದಕ್ಕೆ ಅಧಿಕಾರಿಗಳಲ್ಲವೆಂಬುದು ನಿಶ್ಚಿತವಾದುದು.

**ಕುಲಾನುಪಾಲನೇ ಯತ್ನಮತಃ ಕುರ್ವಂತು ಪಾರ್ಥಿವಾಃ ।**
**ಅನ್ಯಥಾನ್ಯೈಃ ಪ್ರತಾರ್ಯೇರನ್ ಪುರಾಣಾಭಾಸ[1]ದೇಶನಾತ್ ॥ ೩೦ ॥**

ಆದುದರಿಂದ ರಾಜರು ತಮ್ಮ ವಂಶಪರಿಪಾಲನೆಯಲ್ಲಿ ಯತ್ನವನ್ನು ಮಾಡಲಿ. ಹಾಗೆ ಮಾಡದಿದ್ದರೆ ಮಿಥ್ಯಾಪುರಾಣಗಳ ಉಪದೇಶದಿಂದ ಅನ್ಯಮತೀಯರು ಆ ರಾಜರನ್ನು ವಂಚಿಸಿಬಿಡುವರು.

**ಕುಲಾನುಪಾಲನಂ ಪ್ರೋಕ್ತಂ ವಕ್ಷ್ಯೇ ಮತ್ಯನುಪಾಲನಮ್ ।**
**ಮತಿರ್ಹಿತಾಹಿತಜ್ಞಾನಮಾತ್ರಿಕಾಮುತ್ರಿಕಾರ್ಥಯೋಃ ॥ ೩೧ ॥**

ಕುಲಪಾಲನವು ಹೇಳಲ್ಪಟ್ಟಿತು. ಮುಂದೆ ಮತಿಪಾಲನವನ್ನು ಹೇಳುವೆನು. ಇಹಲೋಕಪರಲೋಕಾರ್ಥಗಳ ಹಿತಾಹಿತಜ್ಞಾನಕ್ಕೆ ಮತಿಯೆಂದು ಹೆಸರು.

**ತತ್ಪಾಲನಂ ಕಥಂ ಸ್ಯಾಚ್ಚೇದವಿದ್ಯಾಪರಿವರ್ಜನಾತ್ ।**
**ಮಿಥ್ಯಾಜ್ಞಾನಮವಿದ್ಯಾ ಸ್ಯಾದತತ್ತ್ವೇ ತತ್ತ್ವಭಾವನಾ ॥ ೩೨ ॥**

ಆ ಮತಿಪಾಲನವು ಹೇಗಾಗುವುದೆಂದರೆ, ಅವಿದ್ಯೆಯನ್ನು ಬಿಡುವುದರಿಂದ. ಅತತ್ತ್ವದಲ್ಲಿ ತತ್ತ್ವವೆಂಬ ಭಾವನೆಯು ಮಿಥ್ಯಾಜ್ಞಾನವಾಗಿರುತ್ತದೆ. ಅದೇ ಅವಿದ್ಯೆಯಾಗಿರುವುದು.

**ಆಪ್ತೋಪಜ್ಞಂ ಭವೇತ್ತತ್ತ್ವಮಾಪ್ತೋ ದೋಷಾವೃತಿಕ್ಷಯಾತ್ ।**
**ತಸ್ಮಾತ್ತನ್ಮತಮಭ್ಯಸ್ಯೇನ್ಮನೋಮಲಮಪಾಸಿತುಮ್ ॥ ೩೩ ॥**

ಆಪ್ತನಿಂದ ಮೊತ್ತಮೊದಲು ಹೇಳಲ್ಪಟ್ಟಿರುವುದು ತತ್ತ್ವವಾಗಿರುವುದು. ದೋಷಾವರಣಕ್ಷಯದಿಂದ ಆಪ್ತನೆನಿಸುತ್ತಾನೆ. ಆದುದರಿಂದ ಮನಸ್ಸಿನ ಮಾಲಿನ್ಯವನ್ನು ಹೋಗಲಾಡಿಸುವುದಕ್ಕೋಸ್ಕರ ಆ ಆಪ್ತನ ಮತವನ್ನು ಅಭ್ಯಾಸ ಮಾಡಬೇಕು.

**ರಾಜವಿದ್ಯಾಪರಿಜ್ಞಾನಾದೈಹಿಕಾರ್ಥೇ ದೃಢಾ ಮತಿಃ ।**
**ಧರ್ಮಶಾಸ್ತ್ರಪರಿಜ್ಞಾನಾನ್ಮತಿರ್ಲೋಕದ್ವಯಾಶ್ರಿತಾ ॥ ೩೪ ॥**

ರಾಜವಿದ್ಯೆಯ ತಿಳಿವಳಿಕೆಯಿಂದ ಮತಿಯು ಇಹಲೋಕಸಂಬಂಧವಾದ ಪ್ರಯೋಜನದಲ್ಲಿ ದೃಢವಾಗುವುದು. ಧರ್ಮಶಾಸ್ತ್ರದ ಪರಿಜ್ಞಾನದಿಂದ ಮತಿಯು ಇಹಲೋಕಪರಲೋಕಸಂಬಂಧವಾದ ಪ್ರಯೋಜನಗಳನ್ನು ಆಶ್ರಯಿಸಿದುದಾಗಿರುವುದು.

**ಕ್ಷತ್ರಿಯಾ[2]ಸ್ತೀರ್ಥಮುತ್ಪಾದ್ಯ ಯೇಭೂವನ್ಪರಮರ್ಷಯಃ ।**
**ತೇ [3]ಮಹಾದೇವಶಬ್ದಾಭಿಧೇಯಾ ಮಾಹಾತ್ಮ್ಯಯೋಗತಃ ॥ ೩೫ ॥**

ಯಾವ ಕ್ಷತ್ರಿಯರು ಪ್ರವಚನ–ಶಾಸ್ತ್ರವನ್ನು ಉಂಟುಮಾಡಿ ಪರಮರ್ಷಿಗಳಾದರೋ ಅವರು ಮಾಹಾತ್ಮ್ಯದ ಸಂಬಂಧದಿಂದ ಮಹರ್ಷಿಗಳೆಂಬ ಮತ್ತು ದೇವರ್ಷಿಗಳೆಂಬ ಶಬ್ದಗಳಿಂದ ಕರೆಯಲರ್ಹರಾಗಿರುತ್ತಾರೆ. ಮಹರ್ಷಿಗಳೆಂದೂ ದೇವರ್ಷಿಗಳೆಂದೂ ಕರೆಯಲ್ಪಡಲು ಯೋಗ್ಯರಾಗಿರುತ್ತಾರೆಂದು ಭಾವವು.

**ಆದಿಕ್ಷತ್ರಿಯವೃತ್ತಸ್ಥಾಃ ಪಾರ್ಥಿವಾ ಯೇ ಮಹಾನ್ವಯಾಃ ।**
**ಮಹತ್ತ್ವಾನುಗತಾಸ್ತೇಪಿ ಮಹಾದೇವಪ್ರಥಾಂ ಗತಾಃ ॥ ೩೬ ॥**

ಯಾವ ಕ್ಷತ್ರಿಯರು ಆದಿಕ್ಷತ್ರಿಯರ ಆಚರಣದಲ್ಲಿರುವವರೂ ಮಹಾವಂಶವುಳ್ಳವರೂ ಮಹತ್ತ್ವವನ್ನು ಹೊಂದಿದವರೂ ಆಗಿರುತ್ತಾರೋ ಅವರೂ 'ಮಹಾದೇವ' ಎಂಬ ಪ್ರಸಿದ್ಧಿಯನ್ನು ಹೊಂದಿರುತ್ತಾರೆ.

೧ ಉಪದೇಶಾತ್. ೨ ಪ್ರವಚನಂ. ೩ ಮಹರ್ಷಯಃ, ದೇವರ್ಷಯಃ.

**ತದ್ದೇವ್ಯಶ್ಚ ಮಹಾದೇವ್ಯೋ [1]ಮಹಾಭಿಜನಯೋಗತಃ ।**
**ಮಹದ್ಭಿಃ ಪರಿಣೀತತ್ವಾತ್ಪ್ರಸೂತೇಶ್ಚ ಮಹಾತ್ಮನಾಮ್ ॥ ೩೭ ॥**

ಅವರ ಪತ್ನಿಯರೂ ಮಹಾವಂಶದ ಸಂಬಂಧದಿಂದಲೂ ದೊಡ್ಡವರಿಂದ ವಿವಾಹಮಾಡಿಕೊಳ್ಳಲ್ಪಟ್ಟವರಾಗಿರುವುದರಿಂದಲೂ ಮಹಾತ್ಮರನ್ನು ಹೆರುವುದರಿಂದಲೂ ಮಹಾದೇವಿಯರೆನಿಸುತ್ತಾರೆ.

**ಇತ್ಯೇವ[2]ಮಾಸ್ಥಿತೇ ಪಕ್ಷೇ ಜೈನೈರನ್ಯಮತಾಶ್ರಯೀ ।**
**ಯದಿ ಕಶ್ಚಿತ್ಪ್ರತಿಬ್ರೂಯಾನ್ಮಿಥ್ಯಾತ್ವೋಪಹತಾಶಯಃ ॥ ೩೮ ॥**

**ವಯಮೇವ ಮಹಾದೇವಾ ಜಗನ್ನಿಸ್ತಾರಕಾ ವಯಮ್ ।**
**ನಾಸ್ಮದಾಪ್ತಾತ್ಪರೋಸ್ತ್ಯಾಪ್ತೋ ಮತಂ ನಾಸ್ಮನ್ಮತಾತ್ಪರಮ್ ॥ ೩೯ ॥**

**ಇತ್ಯತ್ರ ಬ್ರೂಮಹೇ ನ್ಯೈ[3]ತತ್ಸಾರಂ ಸಂಸಾರವಾರಿಧೇಃ ।**
**ಯಃ ಸಮುತ್ತರಣೋಪಾಯಃ ಸ ಮಾರ್ಗೋ ಜಿನದೇಶಿತಃ ॥ ೪೦ ॥**

ಈ ಪ್ರಕಾರವಾದ ಪಕ್ಷವು ಅಂಗೀಕರಿಸಲ್ಪಡುತ್ತಿರಲು ಅನ್ಯಮತವನ್ನು ಆಶ್ರಯಿಸಿದವನೂ ಮಿಥ್ಯಾತ್ವದಿಂದ ವ್ಯಾಪ್ತವಾದ ಅಭಿಪ್ರಾಯವುಳ್ಳವನೂ ಆದ ಯಾವನಾದರೂ ಜೈನರೊಡನೆ ಪ್ರತಿಯಾಗಿ ಮಾತನಾಡಿದರೆ, ''ನಾವೇ ಮಹಾದೇವರು. ನಾವೇ ಲೋಕವನ್ನು ಪಾರಗಾಣಿಸುವವರು. ನಮ್ಮ ಆಪ್ತ– ದೇವರಿಗಿಂತ ಶ್ರೇಷ್ಠನಾದ ಬೇರೆ ದೇವರಿಲ್ಲ. ನಮ್ಮ ಮತಕ್ಕಿಂತ ಶ್ರೇಷ್ಠವಾದ ಬೇರೆ ಮತವಿಲ್ಲ'' ಎಂದು ಇಲ್ಲಿ ಹೇಳುತ್ತೇವೆ. ಮಿಥ್ಯಾವಾದಿಯು ಹೇಳಿರುವುದು ನ್ಯಾಯವಾದುದಲ್ಲ. ಯಾವುದು ಸಂಸಾರವೆಂಬ ಸಮುದ್ರದಿಂದ ದಾಟುವ ಉಪಾಯವೋ ಆ ಮಾರ್ಗವು–ಉಪಾಯವು ಜಿನೇಶ್ವರನಿಂದ ಹೇಳಲ್ಪಟ್ಟಿರುತ್ತದೆ.

**ಆಪ್ತೋರ್ಹನ್ವೀತದೋಷತ್ವಾದಾಪ್ತಂಮನ್ಯಾಸ್ತತೋಪರೇ ।**
**[4]ತೇಷು [5]ವಾಗಾತ್ಮಭಾಗ್ಯಾತಿಶಯಾನಾ[6]ಮವಿಭಾವನಾತ್ ॥ ೪೧ ॥**

ದೋಷರಹಿತನಾಗಿರುವುದರಿಂದ ಅರ್ಹತ್ಪರಮೇಶ್ವರನು ಆಪ್ತನು. ಅವನಿಂದ ಬೇರೆಯಾಗಿರುವವರು ತಾವು ಆಪ್ತರೆಂದು ತಿಳಿಯುವವರಾಗಿರುತ್ತಾರೆ. ನಿಜವಾದ ಆಪ್ತರಲ್ಲವೆಂದು ಭಾವವು. ಆ ಆಪ್ತಾಭಾಸರಲ್ಲಿ ವಚನದ ಅತಿಶಯವೂ ಆತ್ಮಾತಿಶಯವೂ ಭಾಗ್ಯಾತಿಶಯವೂ ಅಸಂಭವವಾಗಿರುವುದರಿಂದ ಅವರು ಆಪ್ತರಲ್ಲ.

**ವಾಗಾದ್ಯತಿಶಯೋಪೇತಃ ಸಾರ್ವಃ ಸರ್ವಾರ್ಥದೃಗ್ಜಿನಃ ।**
**ಸ್ಯಾದಾಪ್ತಃ ಪರಮೇಷ್ಠೀ ಚ ಪರಮಾತ್ಮಾ ಸನಾತನಃ ॥ ೪೨ ॥**

ವಚನ ಮೊದಲಾದ ಅತಿಶಯಗಳಿಂದ ಕೂಡಿರುವವನೂ ಸರ್ವಪ್ರಾಣಿಗಳಿಗೆ ಹಿತಕರನೂ ಸಕಲಪದಾರ್ಥಗಳನ್ನು ನೋಡುವವನೂ ಉತ್ಕೃಷ್ಟಸ್ಥಾನದಲ್ಲಿರುವವನೂ ಪರಮಾತ್ಮನೂ ನಿತ್ಯನೂ ಆದ ಜಿನನು ಆಪ್ತನಾಗಿರುವನು.

**ಸ ವಾಗತಿಶಯೋ ಜ್ಞೇಯೋ ಯೇನಾಯಂ ವಿಭು[7]ರಕ್ರಮಾತ್ ।**
**ವಚಸೈಕೇನ ದಿವ್ಯೇನ ಪ್ರೀಣಯತ್ಯಖಿಲಾಂ ಸಭಾಮ್ ॥ ೪೩ ॥**

ಯಾವುದರಿಂದ ಈ ಜಿನೇಶ್ವರನು ಕ್ರಮ ಕರಣ(ಇಂದ್ರಿಯ)ಗಳಿಲ್ಲದೆ ಒಂದು ದಿವ್ಯವಚನದಿಂದ ಸಮಸ್ತವಾದ ಸಭೆಯನ್ನು ಸಂತೋಷಪಡಿಸುತ್ತಾನೋ ಅದು ವಚನಾತಿಶಯವೆಂದು ತಿಳಿಯತಕ್ಕುದಾಗಿರುತ್ತದೆ.

**ತಥಾತ್ಮಾತಿಶಯೋಪ್ಯಸ್ಯ ದೋಷಾವರಣಸಂಕ್ಷಯಾತ್ ।**
**ಅನಂತಜ್ಞಾನದೃಗ್ವೀರ್ಯಸುಖಾತಿಶಯಸನ್ನಿಧಿಃ ॥ ೪೪ ॥**

೧ ಮಹಾಕುಲ. ೨ ಪ್ರತಿಜ್ಞಾತೇ. ೩ ಮಿಥ್ಯಾವಾದಿಪ್ರೋಕ್ತಂ ಶ್ರೇಷ್ಠಂ-ನ್ಯಾಯ್ಯಂ ನೇತ್ಯರ್ಥಃ. ೪ ಆಪ್ತಂಮನ್ಯೇಷು– ಆಪ್ತಾಭಾಸೇಷು. ೫ ವಾಗತಿಶಯಾತ್ಮಾತಿಶಯ ಭಾಗ್ಯಾತಿಶಯಾನಾಂ. ೬ ಅಸಂಭವಾತ್– ಅನಿಶ್ಚಯಾತ್. ೭ ಕ್ರಮಕರಣರಹಿತ್ಯಾತ್.

ಹಾಗೆಯೇ ಈ ಜಿನೇಶ್ವರನ ಆತ್ಮಾತಿಶಯವೂ ದೋಷಾವರಣಗಳ ಕ್ಷಯದಿಂದ ಅನಂತಜ್ಞಾನ ಅನಂತದರ್ಶನ ಅನಂತವೀರ್ಯ ಅನಂತಸುಖ ಇವುಗಳ ಪ್ರಾಪ್ತಿ ರೂಪವಾಗಿರುತ್ತದೆ. ಅನಂತಜ್ಞಾನಾದಿ ಚತುಷ್ಟಯಗಳ ಪ್ರಾಪ್ತಿಯೇ ಆತ್ಮಾತಿಶಯ ವೆಂದು ಭಾವವು.

**ಪ್ರಾತಿಹಾರ್ಯಮಯೀ ಭೂತಿರುದ್ಭೂತಿಶ್ಚ [೧]ಸಭಾವನೇಃ ।**
**ಗಣಾಶ್ಚ ದ್ವಾದಶೇತ್ಯೇಷ ಸ್ಯಾದ್ಭಾಗ್ಯಾತಿಶಯೋಽರ್ಹತಃ ॥ ೪೫ ॥**

ಅಶೋಕವೃಕ್ಷ ಪುಷ್ಪವೃಷ್ಟಿ ದಿವ್ಯಧ್ವನಿ ಚಾಮರ ಆಸನ ಭಾಮಂಡಲ ದುಂದುಭಿ ಛತ್ರಿರೂಪವಾದ ಅಷ್ಟಮಹಾಪ್ರಾತಿಹಾರ್ಯಗಳ ಸಂಪತ್ತಿಯೂ ಸಮವಸರಣ ಸಭಾಭೂಮಿಯ ಉತ್ಪತ್ತಿಯೂ ದ್ವಾದಶಗಣಗಳೂ ಈ ಪ್ರಕಾರವಾದ ಅರ್ಹತ್ಪರಮೇಶ್ವರನ ಈ ಅತಿಶಯವು ಭಾಗ್ಯಾತಿಶಯವಾಗಿರುವುದು.

**ವಾಗಾದ್ಯತಿಶಯೈರೇಭಿರನ್ವಿತೋಽನನ್ಯಗೋಚರೈಃ ।**
**ಭಗವಾನ್ನಿಷ್ಠಿತಾರ್ಥೋಽರ್ಹನ್ ಪರಮೇಷ್ಠೀ ಜಗದ್ಗುರುಃ ॥ ೪೬ ॥**

ಬೇರೆಯವರಿಗೆ ಪ್ರಾಪ್ತವಾಗದಿರುವ ಈ ವಚನಮೊದಲಾದ ಅತಿಶಯಗಳಿಂದ ಕೂಡಿರುವ ಭಗವಂತನು ಅರ್ಹತ್ಪರಮೇಶ್ವರನೂ ಉತ್ಕೃಷ್ಟಸ್ಥಾನದಲ್ಲಿರುವವನೂ ಜಗದ್ಗುರುವೂ ಕೃತಕೃತ್ಯನೂ ಆಗಿರುತ್ತಾನೆ.

**ನ ಚ ತಾದೃಗ್ವಿಧಃ ಕಶ್ಚಿತ್ಪುಮಾನಸ್ತಿ ಮತಾಂತರೇ ।**
**ತತೋ[೨]ನ್ಯಯೋಗವ್ಯಾವೃತ್ತ್ಯಾ ಸಿದ್ಧಮಾಪ್ತತ್ವ[೩]ಮರ್ಹತಿ ॥ ೪೭ ॥**

ಬೇರೆಯಾದ ಮತದಲ್ಲಿ ಅರ್ಹತ್ಪರಮೇಶ್ವರನಂತಹ ಯಾವ ಪುರುಷನೂ ಇಲ್ಲ. ಆದುದರಿಂದ ಬೇರೆಯವರಲ್ಲಿ ವಚನ ಮೊದಲಾದ ಅತಿಶಯಗಳಿಲ್ಲದಿರುವುದರಿಂದ ಅರ್ಹತ್ಪರಮೇಶ್ವರನಲ್ಲಿ ಆಪ್ತತ್ವವು ಸಿದ್ಧವಾಯಿತು.

**ಇತ್ಯಾಪ್ತಾನುಮತಂ ಕ್ಷಾತ್ರಮಿಮಂ ಧರ್ಮಮನುಸ್ಮರನ್ ।**
**ಮತಾಂತರಾ[೪]ದನಾಪ್ತೀಯಾತ್ ಸ್ವಾಂ [೫]ಧಿಯಂ ವಿನಿವರ್ತಯೇತ್ ॥**

ಈ ಪ್ರಕಾರವಾಗಿ ಆಪ್ತನಿಂದ ಹೇಳಲ್ಪಟ್ಟ ಈ ಕ್ಷತ್ರಿಯಧರ್ಮವನ್ನು ಸ್ಮರಿಸುವವನಾಗಿ ಆಪ್ತಾಭಾಸನಿಂದ ಹೇಳಲ್ಪಟ್ಟ ಇತರಮತದಿಂದ ತನ್ನ ಬುದ್ಧಿಯನ್ನು ತಿರುಗಿಸಬೇಕು.

**ವೃತ್ತಾ[೬]ದನಾತ್ಮನೀನಾದ್ಧೀಃ ಸ್ಯಾ[೭]ದೇವಮನುರಕ್ಷಿತಾ ।**
**ತದ್ರಕ್ಷಣಾಚ್ಚ ಸಂರಕ್ಷೇತ್ ಕ್ಷತ್ರಿಯಃ [೮]ಕ್ಷಿತಿಮಕ್ಷತಾಮ್ ॥ ೪೯ ॥**

ಆತ್ಮಹಿತವಲ್ಲದ ಆಚರಣದಿಂದ ತೊಲಗಿಸಿ ಬುದ್ಧಿಯನ್ನು ರಕ್ಷಿಸಬೇಕು. ಹೀಗಾದರೆ ಆ ಬುದ್ಧಿಯ ರಕ್ಷಣೆಯಿಂದ ಕ್ಷತ್ರಿಯನು ಭೂಮಿಯನ್ನು ನಿರ್ಬಾಧೆ ಯಾಗಿ ಕಾಪಾಡುವನು.

**ಉಕ್ತಸ್ಯೈವಾರ್ಥ[೯]ತತ್ತ್ವಸ್ಯ ಭೂಯೋಽಪ್ಯಾವಿಷ್ಚಿಕೀರ್ಷಯಾ ।**
**ನಿದರ್ಶನಾನಿ ತ್ರೀಣ್ಯತ್ರ ವಕ್ಷ್ಯಾಮಸ್ತಾನ್ಯನುಕ್ರಮಾತ್ ॥ ೫೦ ॥**

ಹಿಂದೆ ಹೇಳಲ್ಪಟ್ಟಿರುವುದೇ ಆದ ಮತಿಪಾಲನದ ಸ್ವರೂಪವನ್ನು ಮತ್ತೂ ಸ್ಫುಟಮಾಡುವ ಇಚ್ಛೆಯಿಂದ ಈ ವಿಷಯದಲ್ಲಿ ಮೂರು ದೃಷ್ಟಾಂತಗಳನ್ನು ಕ್ರಮದಿಂದ ಹೇಳುವೆವು.

**ವ್ಯಕ್ತಯೇ [೧೦]ಪುರುಷಾರ್ಥಸ್ಯ ಸ್ಯಾತ್ಪೂರುಷನಿದರ್ಶನಮ್ ।**
**ತಥಾ [೧೧]ನಿಗಲದೃಷ್ಟಾಂತಃ ಸಸಂಸಾರಿನಿದರ್ಶನಃ ॥ ೫೧ ॥**

೧ ಸಮವಸರಣಸ್ಯ. ೨ ಅನ್ಯೇಷು ವಾಗತಿಶಯಾದ್ಯತಿಶಯಾಭಾವಾತ್. ೩ ಜಿನೇ. ೪ ಆಪ್ತಾಭಾಸಪ್ರೋಕ್ತಾತ್. ೫ ಮತಿಂ. ೬ ಅನಾತ್ಮಹಿತಾದಪಸಾರ್ಯ. ೭ ಏವಂ ಸತಿ. ೮ ಭೂಮಿಂ. ೯ ಮತಿಪಾಲನಸ್ಯ. ೧೦ ಮತ್ಯನುಪಾಲನಸ್ಯ. ೧೧ ಶೃಂಖಲಾ.

ಮತಿಪಾಲನರೂಪವಾದ ಅರ್ಥವನ್ನು ಸ್ಫುಟಮಾಡುವುದಕ್ಕೋಸ್ಕರ ಪುರುಷನ ದೃಷ್ಟಾಂತವೂ ಹಾಗೆಯೇ ಸಂಸಾರಿಜೀವದ ದೃಷ್ಟಾಂತಸಹಿತವಾದ ಶೃಂಖಲೆಯ ದೃಷ್ಟಾಂತವೂ ಇರುವುವು.

**ಜ್ಞೇಯಃ ಪುರುಷದೃಷ್ಟಾಂತೋ ನಾಮ ಮುಕ್ತೇತರಾತ್ಮನೋಃ ।**
**ಯನ್ನಿದರ್ಶನಭಾವೇನ ಮುಕ್ತ್ಯಮುಕ್ತ್ಯೋಃ ಸಮರ್ಥನಮ್ ॥ ೫೨ ॥**

ಪುರುಷದೃಷ್ಟಾಂತವಾದರೋ ಮುಕ್ತಾತ್ಮ ಸಂಸಾರ್ಯಾತ್ಮಗಳಿಗೆಂದು ತಿಳಿಯತಕ್ಕುದಾಗಿರುತ್ತದೆ. ಆ ಪುರುಷದೃಷ್ಟಾಂತದಿಂದ ಮುಕ್ತಿಯ ಮತ್ತು ಸಂಸಾರದ ಸಮರ್ಥನವಾಗುವುದು.

**ಸಂಸಾರೀಂದ್ರಿಯವಿಜ್ಞಾನದೃಗ್ವೀರ್ಯಸುಖಚಾರುತಾಃ ।**
**[೧]ತನ್ವಾವಾಸೌ ಚ [೨]ನಿರ್ವೇಷ್ಟುಂ ಯತತೇ ಸುಖಲಿಪ್ಸಯಾ ॥ ೫೩ ॥**

ಸಂಸಾರಿಜೀವನು ಸುಖವನ್ನು ಪಡೆಯಬೇಕೆಂಬ ಇಚ್ಛೆಯಿಂದ ಇಂದ್ರಿಯಗಳಿಂದುಂಟಾಗುವ ವಿಜ್ಞಾನ ದರ್ಶನ ಶಕ್ತಿ ಸುಖ ಮನೋಹರತ್ವ ಇವುಗಳನ್ನೂ ದೇಹವನ್ನೂ ಮನೆಯನ್ನೂ ಅನುಭವಿಸುವುದಕ್ಕೆ ಪ್ರಯತ್ನಿಸುತ್ತಾನೆ.

**ಮುಕ್ತಸ್ತು ನ ತಥಾ ಕಿಂತು ಗುಣೈರುಕ್ತೈರತೀಂದ್ರಿಯೈಃ ।**
**ಪರಂ ಸೌಖ್ಯಂ ಸ್ವಸಾದ್ಭೂತಮನುಭುಂಕ್ತೇ ನಿರಂತರಮ್ ॥ ೫೪ ॥**

ಮುಕ್ತಜೀವನಾದರೋ ಹಾಗಲ್ಲ. ಮತ್ತೇನೆಂದರೆ, ಅತೀಂದ್ರಿಯಗಳಾದ ಜ್ಞಾನ ದರ್ಶನ ವೀರ್ಯ ಸುಖ ಗುಣಗಳಿಂದ ಸ್ವಾಧೀನವಾದ ಉತ್ಕೃಷ್ಟಸೌಖ್ಯವನ್ನು ಯಾವಾಗಲೂ ಅನುಭವಿಸುತ್ತಾನೆ.

**[೩]ತತ್ರೈಂದ್ರಿಯಕವಿಜ್ಞಾನಃ ಸ್ವಲ್ಪಜ್ಞಾನತಯಾ ಸ್ವಯಮ್ ।**
**[೪]ಪರಂ [೫]ಶಾಸ್ತ್ರೋಪಯೋಗಾಯ ಶ್ರಯತಿ ಜ್ಞಾನವಿತ್ತಕಮ್ ॥ ೫೫ ॥**

ಆ ಇಂದ್ರಿಯಾನಿಂದ್ರಿಯಜ್ಞಾನಿಗಳಲ್ಲಿ (ಸಂಸಾರಿಮುಕ್ತಾತ್ಮರಲ್ಲಿ) ಇಂದ್ರಿಯಜ್ಞಾನಿಯು ಸ್ವಲ್ಪಜ್ಞಾನವುಳ್ಳವನಾಗಿರುವುದರಿಂದ ತಾನು ಶಾಸ್ತ್ರದ ಪ್ರಾಪ್ತಿಗೋಸ್ಕರ ಜ್ಞಾನವೆಂಬ ದ್ರವ್ಯವುಳ್ಳವನಾದ ಪರಪುರುಷನನ್ನು ಆಶ್ರಯಿಸುತ್ತಾನೆ.

**ತಥೈಂದ್ರಿಯಕದೃಕ್ಛಕ್ತಿ [೬]ರಾತ್ಮಾ [೭]ರ್ವಾಗ್ಭಾಗದರ್ಶನಃ ।**
**ಅರ್ಥಾನಾಂ ವಿಪ್ರಕೃಷ್ಟಾನಾಂ ಭವೇತ್ಸಂದರ್ಶನೋತ್ಸುಕಃ ॥ ೫೬ ॥**

ಹಾಗೆಯೇ ಇಂದ್ರಿಯಗಳಿಂದುಂಟಾದ ದರ್ಶನಶಕ್ತಿಯುಳ್ಳವನೂ ತನ್ನ ಮುಂದುಗಡೆಯಲ್ಲಿರುವ ವಸ್ತುವನ್ನು ನೋಡುವವನೂ ಆದ ಸಂಸಾರಿಜೀವನು ದೂರದಲ್ಲಿರುವ ಪದಾರ್ಥಗಳ ಸಂದರ್ಶನದಲ್ಲಿ ಕುತೂಹಲವುಳ್ಳವನಾಗುವನು.

**ತಥೈಂದ್ರಿಯಕವೀರ್ಯಶ್ಚ ಸಹಾಯಾಪೇಕ್ಷಯೇಪ್ಸಿತಮ್ ।**
**ಕಾರ್ಯಂ ಘಟಯಿತುಂ ವಾಂಛೇತ್ಸ್ವಯಂ ತತ್ಸಾಧನಾಕ್ಷಮಃ ॥ ೫೭ ॥**

ಹಾಗೆಯೇ ಇಂದ್ರಿಯಗಳಿಂದುಂಟಾದ ಶಕ್ತಿಯುಳ್ಳವನು ಆ ಶಕ್ತಿಯನ್ನು ಸಾಧಿಸುವುದರಲ್ಲಿ ಅಸಮರ್ಥನಾಗಿ ತಾನು ಸಹಾಯಾಪೇಕ್ಷೆಯಿಂದ ಇಷ್ಟಕಾರ್ಯವನ್ನು ಮಾಡುವುದಕ್ಕೆ ಇಚ್ಛಿಸುವನು.

**ತಥೇಂದ್ರಿಯಸುಖೀ ಕಾಮಭೋಗೈರತ್ಯಂತ[೮]ಮುನ್ಮನಾಃ ।**
**ವಾಂಛೇತ್ಸುಖಂ ಪರಾಧೀನ[೯]ಮಿಂದ್ರಿಯಾರ್ಥಾನುತರ್ಷತಃ ॥ ೫೮ ॥**

ಹಾಗೆಯೇ ಇಂದ್ರಿಯಗಳಿಂದುಂಟಾದ ಸುಖವುಳ್ಳವನು ಕಾಮಭೋಗಗಳಲ್ಲಿ ಅತ್ಯಂತಕುತೂಹಲವುಳ್ಳವನಾಗಿ ಇಂದ್ರಿಯವಿಷಯಗಳ ಇಚ್ಛೆಯ ದೆಸೆಯಿಂದ ಪರಾಧೀನವಾದ ಸುಖವನ್ನಿಚ್ಛಿಸುವನು.

೧ ದೇಹಾಲಯೌ. ೨ ಅನುಭೋಕ್ತುಂ. ೩ ಇಂದ್ರಿಯಾನಿಂದ್ರಿಯಜ್ಞಾನಿನೋರ್ಮಧ್ಯೇ. ೪ ಪುರುಷಂ. ೫ ಶಾಸ್ತ್ರಸ್ಯ ಪ್ರಾಪ್ತಯೇ. ೬ ಸಂಸಾರಿಜೀವಃ. ೭ ಸ್ವಪುರೋಭಾಗವರ್ತಿವಸ್ತುದರ್ಶನಃ. ೮ ಉತ್ಕಂಠಃ. ೯ ಇಂದ್ರಿಯವಿಷಯವಾಂಛಾಯಾಃ ಸಕಾಶಾತ್.

**ತಥೈಂದ್ರಿಯಕಸೌಂದರ್ಯಃ ಸ್ನಾನಮಾಲ್ಯಾನುಲೇಪನೈಃ ।**
**ವಿಭೂಷಣೈಶ್ಚ ಸೌಂದರ್ಯಂ ಸಂಸ್ಕರ್ತುಮಭಿಲಷ್ಯತಿ ॥ ೫೯ ॥**

ಹಾಗೆಯೇ ಇಂದ್ರಿಯಗಳಿಂದುಂಟಾದ ಸೌಂದರ್ಯವುಳ್ಳವನು ಸ್ನಾನದಿಂದಲೂ ಮಾಲಿಕೆಗಳಿಂದಲೂ ಲೇಪನವಸ್ತುಗಳಿಂದಲೂ ಆಭರಣಗಳಿಂದಲೂ ಸೌಂದರ್ಯವನ್ನು ಹೆಚ್ಚಿಸುವುದಕ್ಕೆ ಅಭಿಲಾಷೆಪಡುವನು.

**[೧]ದೋಷಧಾತುಮಲಸ್ಥಾನಂ ದೇಹಮೈಂದ್ರಿಯಕಂ ವಹನ್ ।**
**ಪುಮಾ[೨]ನ್ವಿಷ್ವಾಣಭೈಷಜ್ಯ[೩]ತದ್ರಕ್ಷಾಸ್ವಾಕುಲೋ ಭವೇತ್ ॥ ೬೦ ॥**

ಶ್ಲೇಷ್ಮ ಮೊದಲಾದ ದೋಷಗಳಿಗೆ ಸ್ಥಾನವಾಗಿರುವುದೂ ಇಂದ್ರಿಯ ಸಂಬಂಧಿಯೂ ಆದ ಶರೀರವನ್ನು ಧರಿಸಿರುವ ಪುರುಷನು ಆಹಾರ ಔಷಧಿ ಮೊದಲಾದುವುಗಳಿಂದ ಆ ಶರೀರದ ರಕ್ಷಣೆಗಳಲ್ಲಿ ವ್ಯಾಕುಲನಾಗುವನು.

**ದೋಷಾನ್ಪಶ್ಯಂಶ್ಚ [೪]ಜಾತ್ಯಾದೀನ್ [೫]ದೇಹಾರ್ತ[೬]ಸ್ತಜ್ಜಿಹಾಸಯಾ ।**
**[೭]ಪ್ರೇಕ್ಷಾಕಾರೀ ತಪಃ ಕರ್ತುಂ [೮]ಪ್ರಯಾಸ್ಯತಿ ಯದಾ ತದಾ ॥ ೬೧ ॥**

ಶರೀರದ ಪೀಡೆಯುಳ್ಳವನೂ ಜನ್ಮಜರಾಮರಣರೂಪವಾದ ದೋಷಗಳನ್ನು ನೋಡುವವನೂ ಆದ ಪುರುಷನು ಆ ಶರೀರವನ್ನು ತ್ಯಜಿಸಬೇಕೆಂಬ ಇಚ್ಛೆಯಿಂದ ಯಾವಾಗ ಚೆನ್ನಾಗಿ ಪರಿಶೀಲಿಸಿ ಕಾರ್ಯವನ್ನು ಮಾಡುವವನಾಗುತ್ತಾನೋ ಆಗ ತಪಸ್ಸನ್ನು ಮಾಡುವುದಕ್ಕೆ ಪ್ರಯತ್ನಿಸುತ್ತಾನೆ.

**ಸ್ವೀಕುರ್ವ[೯]ನ್ನಿಂದ್ರಿಯಾವಾಸಂ ಸುಖಮಾಯುಶ್ಚ [೧೦]ತದ್ಗತಮ್ ।**
**ಆವಾಸಾಂತರಮನ್ವಿಚ್ಛೇತ್ [೧೧]ಪ್ರೇಕ್ಷಮಾಣಃ ಪ್ರಣಶ್ವರಮ್ ॥ ೬೨ ॥**

ಇಂದ್ರಿಯಗಳ ಸುಖಕ್ಕೆ ಕಾರಣವಾದ ಉಪ್ಪರಿಗೆಯ ಮನೆ ಮೊದಲಾದುದನ್ನು ಸ್ವೀಕರಿಸುವವನಾಗಿ ಸುಖವನ್ನೂ ಇಂದ್ರಿಯಾಧೀನವಾದ ಆಯುಷ್ಯವನ್ನೂ ನಾಶಶೀಲವಾದುದನ್ನಾಗಿ ವಿಚಾರಮಾಡುವವನಾಗಿ ಮತ್ತೊಂದು ವಾಸಸ್ಥಾನವನ್ನು ಇಚ್ಛಿಸುವನು.

**ಯಸ್ತ್ವತೀಂದ್ರಿಯವಿಜ್ಞಾನದೃಗ್ವೀರ್ಯಸುಖಸಂತತಿಃ ।**
**ಶರೀರಾವಾಸಸೌಂದರ್ಯೈಃ ಸ್ವಾತ್ಮಭೂತೈರಧಿಷ್ಠಿತಃ ॥ ೬೩ ॥**

**ತಸ್ಯೋಕ್ತದೋಷಸಂಸ್ಪರ್ಶೋ ಭವೇನ್ನೈವ ಕದಾಚನ ।**
**[೧೨]ತದ್ವಾನಾಪ್ತಸ್ತತೋ ಜ್ಞೇಯಃ ಸ್ಯಾದನಾಪ್ತ [೧೩]ಸ್ತ್ವತದ್ಗುಣಃ ॥ ೬೪ ॥**

ಯಾವನು ಅತೀಂದ್ರಿಯಗಳಾದ ವಿಜ್ಞಾನ ದರ್ಶನ ಶಕ್ತಿ ಸುಖಗಳ ಪರಂಪರೆಯುಳ್ಳವನಾಗಿ ತನ್ನ ಆತ್ಮಸ್ವರೂಪಗಳಾದ ಶರೀರಾವಾಸ ಸೌಂದರ್ಯಗಳಿಂದ ಕೂಡಿರುತ್ತಾನೋ ಅವನಿಗೆ ಮೇಲೆ ಹೇಳಲ್ಪಟ್ಟ ದೋಷಗಳ ಸ್ಪರ್ಶವು ಎಂದೂ ಆಗುವುದೇ ಇಲ್ಲ. ಆದುದರಿಂದ ಆ ಅತೀಂದ್ರಿಯ ವಿಜ್ಞಾನಾದಿಗಳುಳ್ಳವನು ಆಪ್ತನೆಂದು ತಿಳಿಯಬೇಕು. ಆ ಅನಿಂದ್ರಿಯಜ್ಞಾನಾದಿಗುಣಗಳಿಲ್ಲದವನು ಅನಾಪ್ತನಾಗುವನು.

**ಸ್ಫುಟೀಕರಣಮಸ್ಯೈವ ವಾಕ್ಯಾರ್ಥಸ್ಯಾಧುನೋಚ್ಯತೇ ।**
**ಯತೋನಾವಿಷ್ಕೃತಂ ತತ್ತ್ವಂ ತತ್ತ್ವತೋ ನಾವಬುಧ್ಯತೇ ॥ ೬೫ ॥**

ಯಾವ ಕಾರಣದಿಂದ ಪರಿಷ್ಕಾರಮಾಡಲ್ಪಡದಿರುವ ವಸ್ತುಸ್ವರೂಪವು ಯಥಾರ್ಥರೂಪದಿಂದ ತಿಳಿಯಲ್ಪಡುವುದಿಲ್ಲವೋ ಆ ಕಾರಣದಿಂದ ಇದೇ ಮೇಲೆ ಹೇಳಲ್ಪಟ್ಟ ವಾಕ್ಯಾರ್ಥದ ಸ್ಫುಟೀಕರಣವು ಈಗ ಹೇಳಲಾಗುವುದು. ಇಂದ್ರಿಯಾನಿಂದ್ರಿಯ ಜ್ಞಾನಾದಿಗುಣವುಳ್ಳವರಾದ ಸಂಸಾರಿ ಮುಕ್ತಾತ್ಮರ ವಿಷಯಗಳನ್ನು ಸ್ಫುಟವಾಗಿ ಹೇಳುತ್ತೇನೆಂದು ಭಾವವು.

೧ ದೋಷಸಪ್ತಧಾತು. ೨ ಆಹಾರ. ೩ ದೇಹರಕ್ಷಣ. ೪ ಜನ್ಮಜರಾಮೃತೀಃ. ೫ ಶರೀರಪೀಡಿತಃ. ೬ ಶರೀರತ್ಯಾಗೇಚ್ಛಯಾ. ೭ ಸಮೀಕ್ಷ್ಯಕಾರೀ. ೮ ಪ್ರಯತ್ನಂ ಕರೋತಿ. ೯ ಇಂದ್ರಿಯಸುಖಹೇತುಪ್ರಾಸಾದಾದಿಕಂ. ೧೦ ಇಂದ್ರಿಯಾಧೀನಂ. ೧೧ ವಿಚಾರಯನ್. ೧೨ ಅತೀಂದ್ರಿಯವಿಜ್ಞಾನಾದಿಮಾನ್. ೧೩ ಅನಿಂದ್ರಿಯಜ್ಞಾನಾದಿರಹಿತಃ.

**ತದ್ಯಥಾತೀಂದ್ರಿಯಜ್ಞಾನಃ ಶಾಸ್ತ್ರಾರ್ಥಂ ನ ಪರಂ ಶ್ರಯೇತ್ ।**
**ಶಾಸ್ತಾ ಸ್ವಯಂ ತ್ರಿಕಾಲಜ್ಞಃ ಕೇವಲಾಮಲಲೋಚನಃ ॥ ೬೬ ॥**

ಅದು ಹೇಗೆಂದರೆ ಅತೀಂದ್ರಿಯಜ್ಞಾನವುಳ್ಳವನು ಶಾಸ್ತ್ರನಿಮಿತ್ತವಾಗಿ ಬೇರೆಯವನನ್ನು ಆಶ್ರಯಿಸಲಾರನು. ಉಪದೇಶಕನಾದ ಆ ಅತೀಂದ್ರಿಯ ಜ್ಞಾನಿಯು ತಾನು ತ್ರಿಕಾಲಜ್ಞಾನಿಯೂ ಕೇವಲವೆಂಬ ನಿರ್ಮಲವಾದ ನೇತ್ರವುಳ್ಳವನೂ ಆಗಿರುತ್ತಾನೆ.

**ತಥಾತೀಂದ್ರಿಯದೃಗ್ನಾರ್ಥೀ ಸ್ಯಾದಪೂರ್ವಾರ್ಥದರ್ಶನೇ ।**
**ತೇನಾದೃಷ್ಟಂ ನ ವೈ ಕಿಂಚಿದ್ಯುಗಪದ್ವಿಶ್ವದೃಶ್ವನಾ ॥ ೬೭ ॥**

ಹಾಗೆಯೇ ಅತೀಂದ್ರಿಯದರ್ಶನವುಳ್ಳವನು ಅಪೂರ್ವವಾದ ಪದಾರ್ಥದ ನೋಟದಲ್ಲಿ ಇಚ್ಛೆಯುಳ್ಳವನಾಗಲಾರನು. ಒಂದು ಕಾಲದಲ್ಲಿ ಎಲ್ಲವನ್ನೂ ನೋಡುವವನಾದ ಆ ಅತೀಂದ್ರಿಯದರ್ಶಿಯಿಂದ ನೋಡದಿರುವುದು ಯಾವುದೂ ಇಲ್ಲ.

**ಕ್ಷಾಯಿಕಾನಂತವೀರ್ಯಶ್ಚ ನಾ[೧]ನ್ಯಸಾಚಿವ್ಯಮೀಕ್ಷತೇ ।**
**ಕೃತಕೃತ್ಯಃ ಸ್ವಯಂ ಪ್ರಾಪ್ತಲೋಕಾಗ್ರಶಿಖರಾಲಯಃ ॥ ೬೮ ॥**

ಕರ್ಮಕ್ಷಯದಿಂದುಂಟಾದ ಅನಂತಶಕ್ತಿಯೂ ಅನ್ಯಪದಾರ್ಥದ ಸಹಾಯತ್ವವನ್ನು ಇಚ್ಛಿಸುವುದಿಲ್ಲ. ತಾನೇ ಕೃತಕೃತ್ಯನಾಗಿ ಲೋಕಾಗ್ರಭಾಗದ ಶಿಖರಸ್ಥಾನವನ್ನು ಹೊಂದಿದವನಾಗಿರುತ್ತಾನೆ.

**ಅತೀಂದ್ರಿಯಸುಖೋಪ್ಯಾತ್ಮಾ ಸ್ಯಾ[೨]ದ್ಭೋಗೈರುತ್ಸುಕೋ ನ ವೈ ।**
**ಭೋಗ್ಯವಸ್ತುಗತಾ ಚಿಂತಾ ಜಾಯತೇ ನಾಸ್ಯ ಜಾತ್ವತಃ ॥ ೬೯ ॥**

ಅತೀಂದ್ರಿಯಸುಖವುಳ್ಳವನಾದ ಆತ್ಮನೂ ಭೋಗಗಳಲ್ಲಿ ಕುತೂಹಲವುಳ್ಳವನಾಗಿ ಆಗುವುದೇ ಇಲ್ಲ. ಆದುದರಿಂದ ಈ ಅತೀಂದ್ರಿಯಸುಖಿಗೆ ಭೋಗ್ಯವಸ್ತುಸಂಬಂಧವಾದ ಚಿಂತೆಯುಂಟಾಗುವುದಿಲ್ಲ.

**ಪ್ರಾಪ್ತಾತೀಂದ್ರಿಯಸೌಂದರ್ಯೋ ನೇಚ್ಛನ್ ಸ್ನಾನಾದಿಸತ್ಕ್ರಿಯಾಃ ।**
**[೩]ಸ್ನಾತಕೋ ನಿತ್ಯಶುದ್ಧಾತ್ಮಾ ಬಹಿರಂತರ್ಮಲಕ್ಷಯಾತ್ ॥ ೭೦ ॥**

ಅತೀಂದ್ರಿಯವಾದ ಸೌಂದರ್ಯವನ್ನು ಹೊಂದಿದವನು ಸ್ನಾನವೇ ಮೊದಲಾದ ಸತ್ಕ್ರಿಯೆಗಳನ್ನು ಇಚ್ಛಿಸದಿರುವವನೂ ಬಹಿರ್ಮಲ ಅಂತರ್ಮಲಗಳ ನಾಶದಿಂದ (ದ್ರವ್ಯಭಾವಕರ್ಮಕ್ಷಯದಿಂದ) ಕೇವಲಜ್ಞಾನವುಳ್ಳವನೂ ನಿತ್ಯಶುದ್ಧಾತ್ಮನೂ ಆಗಿರುತ್ತಾನೆ.

**ಅತೀಂದ್ರಿಯಾತ್ಮದೇಹಶ್ಚ ನಾಹಾರಾದೀನಪೇಕ್ಷತೇ ।**
**ಕ್ಷುದ್ವ್ಯಾಧಿವಿಷಶಸ್ತ್ರಾದಿಬಾಧಾತೀತತನುಃ ಸ ವೈ ॥ ೭೧ ॥**

ಅತೀಂದ್ರಿಯವಾದ ಆತ್ಮವೇ ಶರೀರವಾಗಿರುವವನು ಆಹಾರ ಮೊದಲಾದುವುಗಳನ್ನು ಅಪೇಕ್ಷಿಸುವುದಿಲ್ಲ. ಅವನು ನಿಶ್ಚಯವಾಗಿ ಹಸಿವು ವ್ಯಾಧಿ ವಿಷ ಶಸ್ತ್ರ ಮೊದಲಾದುವುಗಳ ಬಾಧೆಗಳಿಲ್ಲದ ಶರೀರವುಳ್ಳವನಾಗಿರುತ್ತಾನೆ. ಆತ್ಮಸ್ವರೂಪವೇ ದೇಹವುಳ್ಳವನಾಗಿರುತ್ತಾನೆಂದು ಭಾವವು.

**ಭವೇಚ್ಚ ನ [೪]ತಪಃಕಾಮೋ ವೀತಜಾತಿಜರಾಮೃತಿಃ ।**
**ನಾವಾಸಾಂತರಮನ್ವಿಚ್ಛೇದಾತ್ಮಾವಾಸೇ ಚ ಸುಸ್ಥಿತಃ ॥ ೭೨ ॥**

ಜನ್ಮಜರಾಮರಣಗಳಿಲ್ಲದವನಾದ ಆ ಪರಮಾತ್ಮನು ತಪಸ್ಸಿನಲ್ಲಿ ಇಚ್ಛೆಯುಳ್ಳವನಾಗಿರನು. ಆತ್ಮನೆಂಬ ವಾಸಸ್ಥಾನದಲ್ಲಿ ಸ್ಥಿರವಾಗಿರುವವನಾಗಿ ಇತರ ವಾಸಸ್ಥಾನವನ್ನು ಅಪೇಕ್ಷಿಸನು.

೧ ಅನ್ಯಸಹಾಯತ್ವಂ. ೨ ಭೋಗೇಷ್ವಿತ್ಯರ್ಥಃ. ೩ ಕೇವಲಜ್ಞಾನವಾನ್. ೪ ತಪೋವಾಂಛಾ.

**ಸ ಏವಮಖಿಲೈರ್ದೋಷೈರ್ಮುಕ್ತೋ ಯುಕ್ತೋಖಿಲೈರ್ಗುಣೈಃ ।**
**ಪರಮಾತ್ಮಾ ಪರಂಜ್ಯೋತಿಃ ಪರಮೇಷ್ಠೀತಿ [೧]ಗೀಯತೇ ॥ ೭೩ ॥**

ಈ ಪ್ರಕಾರವಾಗಿ ಸಮಸ್ತದೋಷಗಳಿಂದ ಬಿಡಲ್ಪಟ್ಟವನೂ ಸಮಸ್ತಗುಣಗಳಿಂದ ಯುಕ್ತನೂ ಆದ ಆ ಆತ್ಮನು ಪರಮಾತ್ಮನೆಂದೂ ಪರಂಜ್ಯೋತಿಯೆಂದೂ ಪರಮೇಷ್ಠಿಯೆಂದೂ ಹೊಗಳಲ್ಪಡುತ್ತಾನೆ.

**ಕಾಮರೂಪಿತ್ವಮಾಪ್ತಸ್ಯ ಲಕ್ಷಣಂ ಚೇನ್ನ [೨]ಸಾಂಪ್ರತಮ್ ।**
**[೩]ಸರಾಗಃ ಕಾಮರೂಪೀ ಸ್ಯಾದಕೃತಾರ್ಥಶ್ಚ ಸೋಂಜಸಾ ॥ ೭೪ ॥**

ಆಪ್ತನ ಲಕ್ಷಣವು ಇಷ್ಟವಾದ ರೂಪವುಳ್ಳವನಾಗಿರುವಿಕೆಯಲ್ಲವೆ? ಎಂದರೆ ಯುಕ್ತವಾದುದಲ್ಲ. ಇಷ್ಟವಾದ ರೂಪವುಳ್ಳವನೂ ರಾಗಸಹಿತನೂ ಆದ ಆ ಆತ್ಮನು ನಿಜವಾಗಿ ಕೃತಕೃತ್ಯನಲ್ಲದವನೂ ಆಗಿರಬೇಕು.

**ಪ್ರಕೃತಿಸ್ಥೇನ ರೂಪೇಣ ಪ್ರಾಪ್ತುಂ ಯೋ [೪]ನಾಲ[೫]ಮೀಪ್ಸಿತಮ್ ।**
**ಸ [೬]ವೈಕೃತೇನ ರೂಪೇಣ ಕಾಮರೂಪೀ ಕಥಂ ಸುಖೀ ॥ ೭೫ ॥**

ಯಾವನು ಸ್ವಾಭಾವಿಕವಾಗಿರುವ ರೂಪದಿಂದ ಅಭೀಷ್ಟವಸ್ತುವನ್ನು ಹೊಂದುವುದಕ್ಕೆ ಸಮರ್ಥನಾಗುವುದಿಲ್ಲವೋ ಅವನು ವಿಕಾರದಿಂದುಂಟಾದ ರೂಪದಿಂದ ಕಾಮರೂಪಿಯಾಗಿ (ಇಷ್ಟವಾದ ರೂಪವುಳ್ಳವನಾಗಿ) ಹೇಗೆ ಸುಖಿಯಾಗಿರುವನು ?

**ನಿಗಲಸ್ಥೋ ಯಥಾ ನೇಷ್ಟಂ ಗಂತುಂ ದೇಶ[೭]ಮಲಂ ತರಾಮ್ ।**
**ಕರ್ಮಬಂಧನಬದ್ಧೋಪಿ ನೇಷ್ಟಂ [೮]ಧಾಮ ತಥೇ[೯]ಯ್ಯಿಯಾತ್ ॥ ೭೬ ॥**

ಸರಪಣಿಯಲ್ಲಿರುವವನು ಹೇಗೆ ಇಷ್ಟವಾದ ದೇಶವನ್ನು ಕುರಿತು ಹೋಗುವುದಕ್ಕೆ ಸಮರ್ಥನಾಗುವುದೇ ಇಲ್ಲವೋ ಹಾಗೆಯೇ ಕರ್ಮಬಂಧನದಿಂದ ಕಟ್ಟಲ್ಪಟ್ಟವನೂ ಇಷ್ಟವಾದ ಸ್ಥಾನವನ್ನು ಹೊಂದಲಾರನು.

**ಯಥೇಹ [೧೦]ಬಂಧನಾನ್ಮುಕ್ತಃ ಪರಂ ಸ್ವಾತಂತ್ರ್ಯ[೧೧]ಮೃಚ್ಛತಿ ।**
**ಕರ್ಮಬಂಧನಮುಕ್ತೋಪಿ ತಥೋಪಾ[೧೨]ರ್ಚ್ಛೇತ್ಸ್ವತಂತ್ರತಾಮ್ ॥ ೭೭ ॥**

ಇಲ್ಲಿ ಸರಪಣಿಯ ಬಂಧನದಿಂದ ಬಿಡಲ್ಪಟ್ಟವನು ಹೇಗೆ ಉತ್ಕೃಷ್ಟವಾದ ಸ್ವಾತಂತ್ರ್ಯವನ್ನು ಹೊಂದುತ್ತಾನೋ ಹಾಗೆಯೇ ಕರ್ಮಬಂಧನದಿಂದ ಬಿಡಲ್ಪಟ್ಟವನೂ ಸ್ವಾತಂತ್ರ್ಯವನ್ನು ಹೊಂದುವನು.

**ನಿಗಲಸ್ಥೋ [೧೩]ವಿಪಾಶಶ್ಚ ಸ ಏವೈಕಃ ಪುಮಾನ್ಯಥಾ ।**
**ಕರ್ಮಬದ್ಧೋ ವಿಮುಕ್ತಶ್ಚ ಸ ಏವಾತ್ಮಾ ಮತಸ್ತಥಾ ॥ ೭೮ ॥**

ಪುರುಷನು ಸರಪಣಿಯಲ್ಲಿ ಕಟ್ಟಲ್ಪಟ್ಟಿರುವವನೂ ಸರಪಣಿಯಿಂದ ಬಿಡಲ್ಪಟ್ಟಿರುವವನೂ ಹೇಗೆ ಅವನೊರ್ವನೇ ಆಗಿರುತ್ತಾನೋ ಹಾಗೇ ಆತ್ಮನು ಕರ್ಮಬದ್ಧನೂ ಕರ್ಮಬಂಧನದಿಂದ ಬಿಡಲ್ಪಟ್ಟವನೂ ಅವನೊರ್ವನೇ ಆಗಿರುತ್ತಾನೆ.

**ಮುಕ್ತೇತರಾತ್ಮನೋರ್ವ್ಯಕ್ತ್ಯೈ ದ್ವಯಮೇತನ್ನಿದರ್ಶನಮ್ ।**
**ತದ್ದೃಢೀಕರಣಾಯೇಷ್ಟಂ ತತ್ಸಂಸಾರಿನಿದರ್ಶನಮ್ ॥ ೭೯ ॥**

ಮುಕ್ತಾತ್ಮ ಸಂಸಾರ್ಯಾತ್ಮರುಗಳನ್ನು ವ್ಯಕ್ತಪಡಿಸುವುದಕ್ಕೋಸ್ಕರ ಮೇಲಿನ ಉದಾಹರಣೆಗಳೆರಡು ತೋರಿಸಲ್ಪಟ್ಟುವು. ಆ ಮೋಕ್ಷಪುರುಷಾರ್ಥದ ದೃಢೀಕರಣಕ್ಕೋಸ್ಕರ ಸಂಸಾರ್ಯಾತ್ಮನ ದೃಷ್ಟಾಂತವು ಅಭಿಮತವಾಗಿರುವುದು.

**ಯತ್ಸಂಸಾರಿಣಮಾತ್ಮಾನ[೧೪]ಮೂರೀಕೃತ್ಯಾ[೧೫]ನ್ಯತಂತ್ರತಾ ।**
**[೧೬]ತಸ್ಯೋಪದೇಶೇ ಮುಕ್ತಸ್ಯ ಸ್ವಾತಂತ್ರ್ಯೋಪನಿದರ್ಶನಮ್ ॥ ೮೦ ॥**

ಸಂಸಾರಿಯಾದ ಆತ್ಮನನ್ನು ಅಂಗೀಕರಿಸಿ ಪರಾಧೀನತ್ವವೆಂಬುದು ಯಾವುದುಂಟೋ (ಸಂಸಾರಿಜೀವಾಪೇಕ್ಷೆಯಿಂದ ಯಾವುದೊಂದು ಪರಾಧೀನತೆಯುಂಟೋ) ಆ ಪರಾಧೀನನಾದ ಆತ್ಮನಿಗೆ ಉಪದೇಶನಿಮಿತ್ತವಾಗಿ ಮುಕ್ತಾತ್ಮನ ಸ್ವಾತಂತ್ರ್ಯವನ್ನು ತೋರಿಸಿರುವುದಾಗಿರುತ್ತದೆ.

**ಮತಃ ಸಂಸಾರಿದೃಷ್ಟಾಂತಃ ಸೋಯ[೧]ಮಾಪ್ತೀಯದರ್ಶನೇ ।**
**ಮುಕ್ತಾತ್ಮನಾಂ ಭವೇ[೨]ದೇವಂ ಸ್ವಾತಂತ್ರ್ಯಂ ಪ್ರಕಟೀಕೃತಮ್ ॥ ೮೧ ॥**

ಸರ್ವಜ್ಞನ ಸಂಬಂಧವಾದ ಮತದಲ್ಲಿ ಈ ಸಂಸಾರಿದೃಷ್ಟಾಂತವು ಅಭಿಮತವಾಗಿರುತ್ತದೆ. ಹೀಗಿರುತ್ತಿರಲು ಮುಕ್ತಾತ್ಮರ ಸ್ವಾತಂತ್ರ್ಯವು ಪ್ರಕಟಿಸಲ್ಪಟ್ಟುದಾಗುವುದು. ಸಂಸಾರ್ಯಾತ್ಮದೃಷ್ಟಾಂತದಿಂದ ಮುಕ್ತಾತ್ಮರ ಸ್ವಾತಂತ್ರ್ಯವು ಪ್ರಕಟಿಸಲ್ಪಟ್ಟಂತಾಯಿತೆಂದು ಭಾವವು.

**ತದ್ಯಥಾ ಸಂಸೃತೌ [೩]ದೇಹೀ ನ ಸ್ವತಂತ್ರಃ ಕಥಂಚನ ।**
**ಕರ್ಮಬಂಧವಶೀಭಾವಾಜ್ಜೀವ[೪]ತ್ಯನ್ಯಾಶ್ರಿತಶ್ಚ ಯತ್ ॥ ೮೨ ॥**

**ತತಃ [೫]ಪರಪ್ರಧಾನತ್ವ[೬]ಮಸ್ಯೈತತ್ಪ್ರತಿಪಾದಿತಮ್ ।**
**ಸ್ಯಾಚ್ಚಲತ್ವಂ ಚ ಪುಂಸೋಸ್ಯ [೭]ವೇದನಾಸಹನಾದಿಭಿಃ ॥ ೮೩ ॥**

ಅದು ಹೇಗೆಂದರೆ, ಸಂಸಾರದಲ್ಲಿ ಪ್ರಾಣಿಯು ಯಾವ ಪ್ರಕಾರವಾಗಿಯೂ ಸ್ವತಂತ್ರವಾಗಿರುವುದಿಲ್ಲ. ಅದು ಕರ್ಮಬಂಧನಕ್ಕೆ ವಶವಾಗಿರುವುದರಿಂದ ಶರೀರಾಹಾರ ಮೊದಲಾದ ಪರಪದಾರ್ಥಗಳ ಆಶ್ರಯವನ್ನು ಹೊಂದಿದುದಾಗಿ ಜೀವಿಸುತ್ತದೆ. ಆದುದರಿಂದ ಈ ಸಂಸಾರಿಜೀವಕ್ಕೆ ಈ ಪರಾಧೀನತ್ವವು ಹೇಳಲ್ಪಟ್ಟಿರುತ್ತದೆ. ಈ ಸಂಸಾರಿಪುರುಷನಿಗೆ ವೇದನಾನುಭವ ಮೊದಲಾದುವುಗಳಿಂದ ಚಂಚಲತ್ವವೂ ಇರುವುದು.

**ವೇದನಾವ್ಯಾಕುಲೀಭಾವಶ್ಚಲತ್ವಮಿತಿ ಲಕ್ಷ್ಯತಾಮ್ ।**
**ಕ್ಷಯವತ್ತ್ವಂ ಚ [೮]ದೇವಾದಿಭಾವೇ ಲಬ್ಧರ್ದ್ಧಿಸಂಕ್ಷಯಾತ್ ॥ ೮೪ ॥**

ವೇದನೆಯಿಂದ ವ್ಯಾಕುಲಪಡುವಿಕೆಯು ಚಂಚಲತ್ವವೆಂಬುದಾಗಿ ತಿಳಿಯಬೇಕು. ದೇವ ಮೊದಲಾದ ಅವಸ್ಥೆಯಲ್ಲಿ ಪ್ರಾಪ್ತವಾದ ಸಂಪತ್ತಿಯ ನಾಶದಿಂದ ಕ್ಷಯವುಳ್ಳವನಾಗಿರುವಿಕೆಯು (ಕ್ಷಯವತ್ವವು) ತಿಳಿಯಬೇಕು.

**ಬಾಧ್ಯತ್ವಂ ತಾಡನಾನಿಷ್ಟವಚನಪ್ರಾಪ್ತಿ[೯]ರಸ್ಯ ವೈ ।**
**[೧೦]ಅಂತವಚ್ಚಾಸ್ಯ ವಿಜ್ಞಾನಮಕ್ಷಬೋಧಃ ಪರಿಕ್ಷಯೀ ॥ ೮೫ ॥**

ಈ ಸಂಸಾರಿಪ್ರಾಣಿಗೆ ನಿಶ್ಚಯವಾಗಿ ಹೊಡೆತ ಸಲ್ಲದಮಾತು ಮೊದಲಾದುವುಗಳ ಪ್ರಾಪ್ತಿಯು ಬಾಧ್ಯತ್ವ (ಬಾಧೆಪಡುವಿಕೆ) ಆಗಿರುತ್ತದೆ. ಈ ಸಂಸಾರಿಪ್ರಾಣಿಯ ವಿಜ್ಞಾನವು ನಾಶವುಳ್ಳುದಾಗಿರುತ್ತದೆ. ಇಂದ್ರಿಯಗಳಿಂದುಂಟಾಗುವ ಜ್ಞಾನವು ನಾಶಶೀಲವಾದುದು.

**ಅಂತವದ್ದರ್ಶನಂ ಚಾಸ್ಯ ಸ್ಯಾದೈಂದ್ರಿಯಕದರ್ಶನಮ್ ।**
**ವೀರ್ಯಂ ಚ ತದ್ವಿಧಂ ತಸ್ಯ ಶಾರೀರಂ ಬಲಮಲ್ಪಕಮ್ ॥ ೮೬ ॥**

ಈ ಸಂಸಾರಿಪ್ರಾಣಿಯ ಇಂದ್ರಿಯಗಳಿಂದುಂಟಾಗುವ ದರ್ಶನವು ಅಂತವುಳ್ಳ ದರ್ಶನವಾಗಿರುವುದು. ಆ ಪ್ರಾಣಿಯ ಅಂತಹ–ಇಂದ್ರಿಯಗಳಿಂದುಂಟಾಗುವ ಶಕ್ತಿಯೂ ಅಂತವುಳ್ಳುದಾಗಿರುವುದು. ಶರೀರಸಂಬಂಧವಾದ ಬಲವೂ ಅತ್ಯಲ್ಪವಾದುದು.

**ಸ್ಯಾದಸ್ಯ ಸುಖಮಪ್ಯೇ[೧೧]ವಂಪ್ರಾಯಮಿಂದ್ರಿಯಗೋಚರಮ್ ।**
**[೧೨]ರಜಸ್ವಲತ್ವಮಪ್ಯಸ್ಯ ಸ್ಯಾತ್ಕರ್ಮಾಂಶೈಃ ಕಲಂಕನಮ್ ॥ ೮೭ ॥**

೧ ಸ್ತೂಯತೇ. ೨ ಯುಕ್ತಂ. ೩ ರಾಗಸಹಿತಃ. ೪ ನ ಸಮರ್ಥಃ. ೫ ಅಭೀಷ್ಟವಸ್ತು. ೬ ವಿಕಾರಜೇನ. ೭ ಸಮರ್ಥಃ. ೮ ಸ್ಥಾನಂ. ೯ ಗಚ್ಛೇತ್. ೧೦ ಶೃಂಖಲಬಂಧನಮುಕ್ತಃ. ೧೧ ಗಚ್ಛತಿ. ೧೨ ಗಚ್ಛೇತ್. ೧೩ ನಿಗಲವಿಮುಕ್ತಃ. ೧೪ ಅಂಗೀಕೃತ್ಯ. ೧೫ ಪರಾಧೀನತ್ವಂ. ೧೬ ಪರತಂತ್ರಸ್ಯ.

೧ ಸಾರ್ವಜ್ಞಮತೇ. ೨ ಏವಂ ಚ ಸತಿ. ೩ ಸಂಸಾರೀ. ೪ ಶರೀರಾಹಾರಾದ್ಯಾಶ್ರಿತಃ. ೫ ಪರಾಧೀನತ್ವಂ. ೬ ಸಂಸಾರಿಣಃ. ೭ ವೇದನಾನುಭವನಾದಿಭಿಃ. ೮ ದೇವತ್ವಾದೌ. ೯ ಸಂಸಾರಿಣಃ. ೧೦ ನಾಶವತ್. ೧೧ ಏವಂವಿಧಂ, ಅಂತ್ಯವದಿತ್ಯರ್ಥಃ. ೧೨ ಧೂಲಿಧೂಸರಿತತ್ವಂ.

ಈ ಪ್ರಾಣಿಯು ಇಂದ್ರಿಯವಿಷಯಕವಾದ ಸುಖವೂ ಈ ವಿಧವಾದುದು–ಅಂತವುಳ್ಳುದಾಗಿರುವುದು. ಈ ಪ್ರಾಣಿಗೆ ಕರ್ಮದ ಅಂಶಗಳಿಂದ ಕಲಂಕರೂಪವಾದ ಧೂಳಿಯಿಂದ ಮಲಿನವಾಗಿರುವಿಕೆಯೂ ಇರುವುದು.

**ಭವೇ[೧]ತ್ಕರ್ಮಮಲಾವೇಶಾದತ ಏವ ಮಲೀಮಸಃ ।**
**ಛೇದ್ಯತ್ವಂ ಚಾಸ್ಯ ಗಾತ್ರಾಣಾಂ ದ್ವಿಧಾಭಾವೇನ ಖಂಡನಮ್ ॥ ೮೮ ॥**

ಆದುದರಿಂದಲೇ ದ್ರವ್ಯಕರ್ಮ ಭಾವಕರ್ಮರೂಪವಾದ ಮಲದ ಆವಿರ್ಭಾವದಿಂದ ಮಲಿನವಾಗಿರುವುದು. ಈ ಪ್ರಾಣಿಯ ಅವಯವಗಳ ಎರಡು ಭಾಗವಾಗಿ ತುಂಡುಮಾಡುವಿಕೆಯು ಛೇದ್ಯತ್ವವೆಂಬುದಾಗಿರುವುದು.

**ಮುದ್ಗರಾದ್ಯಭಿಘಾತೇನ ಭೇದ್ಯತ್ವಂ ಸ್ಯಾದ್ವಿದಾರಣಮ್ ।**
**ಜರಾವತ್ತ್ವಂ ವಯೋಹಾನಿಃ ಪ್ರಾಣತ್ಯಾಗೋ ಮೃತಿರ್ಮತಾ ॥ ೮೯ ॥**

ಕಬ್ಬಿಣದ ಕೊಡತಿ ಮೊದಲಾದುವುಗಳ ಪೆಟ್ಟಿನಿಂದ ಸೀಳುವಿಕೆಯು ಭೇದ್ಯತ್ವವಾಗಿರುವುದು. ವಯಸ್ಸಿನ ಹಾನಿಯು ಜರಾವತ್ತ್ವವೆಂಬುದಾಗಿರುವುದು. ಪ್ರಾಣಗಳ ತ್ಯಾಗವು ಮರಣವೆಂದು ತಿಳಿಯಲ್ಪಟ್ಟಿರುತ್ತದೆ. ವಯೋಹಾನಿಯು ಜರೆಯೆಂದೂ ಪ್ರಾಣತ್ಯಾಗವು ಮರಣವೆಂದೂ ಭಾವವು.

**[೨]ಪ್ರಮೇಯತ್ವಂ [೩]ಪರಿಚ್ಛಿನ್ನದೇಹಮಾತ್ರಾವರುದ್ಧತಾ ।**
**ಗರ್ಭವಾಸೋಽರ್ಭಕತ್ವೇನ ಜನನ್ಯುದರದುಃಸ್ಥಿತಿಃ ॥ ೯೦ ॥**

ಪರಿಮಿತವಾದ ಶರೀರದಲ್ಲೇ ತಡೆಯಲ್ಪಟ್ಟಿರುವಿಕೆಯು ಪ್ರಮೇಯತ್ವ–ತಿಳಿಯುವುದಕ್ಕೆ ಯೋಗ್ಯವಾಗಿರುವಿಕೆಯಾಗಿರುವುದು. ಶಿಶುವಿನ ರೂಪದಿಂದ ತಾಯಿಯ ಹೊಟ್ಟೆಯಲ್ಲಿ ಕಷ್ಟದಿಂದಿರುವಿಕೆಯು ಗರ್ಭವಾಸವಾಗಿರುವುದು.

**ಅಥವಾ ಕರ್ಮನೋಕರ್ಮ[೪]ಗರ್ಭೇಽಸ್ಯ ಪರಿವರ್ತನಮ್ ।**
**ಗರ್ಭಾವಾಸೋ [೫]ವಿಲೀನತ್ವಂ ಸ್ಯಾದ್ದೇಹಾಂತರಸಂಕ್ರಮಃ ॥ ೯೧ ॥**

ಅಥವಾ ಈ ಸಂಸಾರಿಪ್ರಾಣಿಯ ಕರ್ಮ ನೋಕರ್ಮಗಳ ಮಧ್ಯದಲ್ಲಿ ತಿರುಗುವಿಕೆಯು ಗರ್ಭಾವಾಸವಾಗಿರುವುದು. ಬೇರೆ ದೇಹಗಳನ್ನು ಪ್ರವೇಶ ಮಾಡುವಿಕೆಯು ವಿಲೀನತ್ವವಾಗಿರುವುದು. ಕರ್ಮದಿಂದ ಮರೆಯಾಗಿರುವಿಕೆಯೆಂದು ಭಾವವು.

**ಕ್ಷುಭಿತತ್ತ್ವಂ ಚ ಸಂಕ್ಷೋಭಃ ಕ್ರೋಧಾದ್ಯಾವಿಷ್ಟಚೇತಸಃ ।**
**ಭವೇ[೬]ದ್ವಿವಿಧಯೋಗೋಽಸ್ಯ ನಾನಾಯೋನಿಷು ಸಂಕ್ರಮಃ ॥ ೯೨ ॥**

ಕ್ರೋಧ ಮೊದಲಾದುವುಗಳಿಂದ ವ್ಯಾಪ್ತವಾದ ಪ್ರಾಣಿಯ ಚಾಂಚಲ್ಯವು ಕ್ಷುಭಿತತ್ವವೆಂಬುದಾಗಿರುತ್ತದೆ. ನಾನಾಯೋನಿಗಳಲ್ಲಿ ಪ್ರವೇಶಮಾಡುವಿಕೆಯು ಈ ಪ್ರಾಣಿಯ ವಿವಿಧಯೋಗ–ಸಂಗವೆಂಬುದಾಗಿರುವುದು.

**ಸಂಸಾರಾವಾಸ ಏಷೋಽಸ್ಯ ಚತುರ್ಗತಿವಿವರ್ತನಮ್ ।**
**[೭]ಪ್ರತಿಜನ್ಮಾ[೮]ನ್ಯಥಾಭಾವೋ ಜ್ಞಾನಾದೀನಾಮಸಿದ್ಧತಾ ॥ ೯೩ ॥**

ನರಕಾದಿ ಚತುರ್ಗತಿಗಳಲ್ಲಿ ತಿರುಗುವಿಕೆಯು ಸಂಸಾರಿಪ್ರಾಣಿಯ ಈ ಸಂಸಾರಾವಾಸವಾಗಿರುವುದು. ಜನ್ಮಜನ್ಮದಲ್ಲಿ ಜ್ಞಾನಾದಿಗುಣಗಳ ಅನ್ಯಥಾ ಭಾವ–ಅಜ್ಞಾನಭಾವವು ಅಸಿದ್ಧತೆಯಾಗಿರುವುದು.

**ಸುಖಾಸುಖಂ ಬಲಾಹಾರೌ ದೇಹಾವಾಸೌ ಚ ದೇಹಿನಾಮ್ ।**
**ವಿವರ್ತಂತೇ ತಥಾ ಜ್ಞಾನಂ [೯]ದೃಕ್ಛಕ್ತೀ ಚ [೧೦]ರಜೋಜುಷಾಮ್ ॥**

೧ ದ್ರವ್ಯಕರ್ಮಭಾವಕರ್ಮದ್ವಯಂ. ೨ ಪ್ರಮಾತುಂ ಯೋಗ್ಯತ್ವಂ. ೩ ಪರಿಮಿತ. ೪ ಕರ್ಮಶರೀರಗರ್ಭೇ. ೫ ಕರ್ಮಾಚ್ಛಾದಿತ್ವಂ. ೬ ವಿವಿಧಾನಾಂ ಸಂಗಃ. ೭ ಜನ್ಮಜನ್ಮ ಪ್ರತಿಜನ್ಮ. ೮ ಅಜ್ಞಾನಭಾವಃ. ೯ ದರ್ಶನವೀರ್ಯೇ. ೧೦ ಕರ್ಮಮಲಜುಷಾಂ.

ಕರ್ಮಮಲವನ್ನು ಹೊಂದಿರುವವರಾದ ಸಂಸಾರಿಗಳ ಸುಖದುಃಖಗಳೂ ಶರೀರಬಲವೂ ಆಹಾರವೂ ಶರೀರವೂ ಆವಾಸಸ್ಥಾನವೂ ಜ್ಞಾನವೂ ದರ್ಶನವೂ ಆತ್ಮಶಕ್ತಿಯೂ ವ್ಯತ್ಯಸ್ತವಾಗುತ್ತವೆ–ಹೆಚ್ಚು ಕಡಮೆಯಾಗುತ್ತವೆ.

**[೧]ಏವಂಪ್ರಾಯಾಸ್ತು ಯೇ [೨]ಭಾವಾಃ ಸಂಸಾರಿಷು ವಿನಶ್ವರಾಃ ।**
**ಮುಕ್ತಾತ್ಮನಾಂ ನ ಸಂತ್ಯೇತೇ ಭಾವಾಸ್ತೇಷಾಂ ಹ್ಯನಶ್ವರಾಃ ॥ ೯೫ ॥**

ಇವೇ ಮೊದಲಾದ ಯಾವ ಪರ್ಯಾಯಗಳು–ಅವಸ್ಥಾಂತರಗಳು ಸಂಸಾರಿಜೀವಗಳಲ್ಲಿ ನಾಶಶೀಲಗಳಾಗಿರುತ್ತವೋ ಈ ಪರ್ಯಾಯಗಳು ಮುಕ್ತಾತ್ಮರುಗಳಿಗೆ ಇರುವುದಿಲ್ಲ. ಆ ಮುಕ್ತಾತ್ಮರಲ್ಲಿರುವ ಸುಖಾದಿಪರ್ಯಾಯಗಳು ನಿತ್ಯಗಳಾಗಿಯೇ ಇರುತ್ತವೆ.

**ಮುಕ್ತಾತ್ಮನಾಂ ಭವೇ[೩]ದ್ಭಾವಃ ಸ್ವಪ್ರಧಾನತ್ವ[೪]ಮಗ್ರಿಮಮ್ ।**
**ಪ್ರತಿಲಬ್ಧಾ[೫]ತ್ಮಲಾಭತ್ವಾತ್ಪರದ್ರವ್ಯಾನಪೇಕ್ಷಣಮ್ ॥ ೯೬ ॥**

ಪರಪದಾರ್ಥಗಳ ಅಪೇಕ್ಷೆಯಿಲ್ಲದೆ ಮುಕ್ತಾತ್ಮಸ್ವರೂಪಲಾಭವಾಗಿರುವುದರಿಂದ ಮುಕ್ತಾತ್ಮರುಗಳ ಸ್ವಪ್ರಧಾನತ್ವ(ಸ್ವಾತಂತ್ರ್ಯ)ವೆಂಬುದು ಮೊದಲನೆಯ ಸ್ವಭಾವವಾಗಿರುವುದು.

**ವೇದನಾಭಿಭವಾಭಾವಾದಚಲತ್ವಂ ಗಭೀರತಾ ।**
**ಸ್ಯಾದಕ್ಷಯತ್ವಮಕ್ಷಯ್ಯಕ್ಷಾಯಿಕಾತಿಶಯೋದಯಃ ॥ ೯೭ ॥**

ಮುಕ್ತಾತ್ಮರುಗಳಿಗೆ ವೇದನೆಗಳ ಆಕ್ರಮಣವಿಲ್ಲದಿರುವುದರಿಂದ ಪ್ರಾಪ್ತವಾದ ಗಂಭೀರತ್ವವು ಅಚಲತ್ವವೆಂಬ ಗುಣ–ಸ್ವಭಾವವಾಗಿರುತ್ತದೆ. ನಾಶವಾಗದಿರುವುದೂ ಕರ್ಮಗಳ ಕ್ಷಯದಿಂದುಂಟಾಗಿರುವುದೂ ಆದ ಅತಿಶಯದ ಪ್ರಾದುರ್ಭಾವವು ಅಕ್ಷಯತ್ವವೆಂಬ ಸ್ವಭಾವವಾಗಿರುವುದು.

**ಅವ್ಯಾಬಾಧತ್ವಮಸ್ಯೇಷ್ಟಂ [೬]ಜೀವಾಜೀವೈರಬಾಧ್ಯತಾ ।**
**ಭವೇದನಂತಜ್ಞಾನತ್ವಂ ವಿಶ್ವಾರ್ಥಾ[೭]ಕ್ರಮಬೋಧನಮ್ ॥ ೯೮ ॥**

ಈ ಮುಕ್ತಾತ್ಮನಿಗೆ ಚೇತನಾಚೇತನವಸ್ತುಗಳಿಂದ ಬಾಧೆಯಿಲ್ಲದಿರುವಿಕೆಯು ಅವ್ಯಾಬಾಧತ್ವವೆಂಬ ಗುಣವಾಗಿ ಅಭಿಮತವಾಗಿರುತ್ತದೆ. ಸಮಸ್ತ ಪದಾರ್ಥಗಳನ್ನು ಕ್ರಮವಿಲ್ಲದೆ–ಏಕಕಾಲದಲ್ಲಿ ತಿಳಿಯುವಿಕೆಯು ಅನಂತಜ್ಞಾನತ್ವವೆಂಬ ಗುಣವಾಗಿರುವುದು.

**ಅನಂತದರ್ಶನತ್ವಂ ಚ ವಿಶ್ವತತ್ತ್ವಾಕ್ರಮೇಕ್ಷಣಮ್ ।**
**ಯೋಽನ್ಯೈ[೮]ರಪ್ರತಿಘಾತೋಽಸ್ಯ ಸಾ ಮತಾನಂತವೀರ್ಯತಾ ॥ ೯೯ ॥**

ಸಮಸ್ತವಸ್ತುಸ್ವರೂಪಗಳನ್ನು ಏಕಕಾಲದಲ್ಲಿ ನೋಡುವಿಕೆಯು ಅನಂತದರ್ಶನತ್ವವೆಂಬ ಗುಣವಾಗಿರುವುದು. ಅನ್ಯವಸ್ತುಗಳಿಂದ ಪ್ರತಿಬಂಧವಿಲ್ಲದಿರುವಿಕೆಯು ಈ ಮುಕ್ತಾತ್ಮನ ಅನಂತವೀರ್ಯತ್ವಗುಣವೆಂಬುದಾಗಿ ಅಭಿಮತವಾಗಿರುತ್ತದೆ.

**ಭೋಗ್ಯೇಷ್ವರ್ಥೇಷ್ವನೌತ್ಸುಕ್ಯಮನಂತಸುಖತಾ ಮತಾ ।**
**ನೀರಜಸ್ತ್ವಂ ಭವೇದಸ್ಯ ವ್ಯಪಾಯಃ ಪುಣ್ಯಪಾಪಯೋಃ ॥ ೧೦೦ ॥**

ಭೋಗ್ಯವಸ್ತುಗಳಲ್ಲಿ ಕುತೂಹಲವಿಲ್ಲದಿರುವಿಕೆಯು ಅನಂತಸುಖತ್ವ ಗುಣವೆಂಬುದಾಗಿ ಅಭಿಮತವಾಗಿರುತ್ತದೆ. ಪುಣ್ಯಪಾಪಗಳ ನಾಶವು ಈ ಮುಕ್ತಾತ್ಮನ ನೀರಜಸ್ತ್ವವೆಂಬ ಗುಣವಾಗಿರುವುದು.

೧ ಏವಮಾದಯಃ. ೨ ಪರ್ಯಾಯಾಃ. ೩ ಸ್ವಭಾವಃ. ೪ ಪೂರ್ವೋಕ್ತಾಚಲತ್ವಾದ್ಯಪೇಕ್ಷಯಾ ಆದಿಮಮಿತ್ಯರ್ಥಃ. ೫ ಸ್ವರೂಪ. ೬ ಚೇತನಾಚೇತನೈಃ. ೭ ಯುಗಪತ್. ೮ ಅಪ್ರತಿಬಂಧಃ.

**ನಿರ್ಮಲತ್ವಂ ತು ತಸ್ಯೇಷ್ಟಂ ಬಹಿರಂತರ್ಮಲಚ್ಯುತಿಃ ।**
**ಸ್ವಭಾವವಿಮಲೋನಾದಿಸಿದ್ಧೋ ನಾಸ್ತೀ[೧]ಹ ಕಶ್ಚನ ॥ ೧೦೧ ॥**

ಬಾಹ್ಯಾಭ್ಯಂತರ ಕರ್ಮಮಲನಾಶವು ಮುಕ್ತಾತ್ಮನ ನಿರ್ಮಲತ್ವವೆಂದು ಅಭಿಮತವಾಗಿರುವುದು. ಸ್ವಭಾವದಿಂದ ಕರ್ಮಮಲರಹಿತನೂ ಅನಾದಿಯಿಂದ ಸಿದ್ಧನಾಗಿರುವವನೂ ಈ ಲೋಕದಲ್ಲಿ ಯಾವನೂ ಇರುವುದಿಲ್ಲ.

**ಯೋಸ್ಯ ಜೀವಘನಾಕಾರ[೨]ಪರಿಣಾಮೋ ಮಲಕ್ಷಯಾತ್ ।**
**ತದಚ್ಛೇದ್ಯತ್ವಮಾಮ್ನಾತಮಭೇದ್ಯತ್ವಂ ಚ ತತ್ಕೃತಮ್ ॥ ೧೦೨ ॥**

ಈ ಸಂಸಾರಿಪ್ರಾಣಿಯ ಕರ್ಮಮಲನಾಶದಿಂದ ಮುಕ್ತಿಯಲ್ಲಿ ಜೀವದ ಘನಾಕಾರವಾದ ಪರಿಣಮಿಸುವಿಕೆಯು ಯಾವುದುಂಟೋ ಅದು ಅಚ್ಛೇದ್ಯತ್ವವೆಂದು ಹೇಳಲ್ಪಟ್ಟಿರುತ್ತದೆ. ಅಭೇದ್ಯತ್ವವೆಂಬ ಗುಣವೂ ಆ ಅಚ್ಛೇದ್ಯತ್ವಗುಣದಿಂದುಂಟಾದುದೇ ಆಗಿರುತ್ತದೆ. ಮುಕ್ತಾತ್ಮನ ಅಮೂರ್ತಾಕಾರವು ಅಚ್ಛೇದ್ಯವೂ ಅಭೇದ್ಯವೂ ಆಗಿರುವುದೆಂದು ಭಾವವು.

**[೩]ಅಕ್ಷರತ್ವಂ ಚ ಮುಕ್ತಸ್ಯ [೪]ಕ್ಷರಣಾಭಾವತೋ ಮತಮ್ ।**
**ಅಪ್ರಮೇಯತ್ವಮಾತ್ಮೋತ್ಥಗುಣೈರುದ್ಧೈರಮೇಯತಾ ॥ ೧೦೩ ॥**

ಮುಕ್ತಾತ್ಮನ ಸ್ವರೂಪನಾಶವಾಗದಿರುವುದರಿಂದ ಅವಿನಾಶತ್ವವೆಂಬ ಗುಣವು ಅವನಲ್ಲಿ ಹೇಳಲ್ಪಟ್ಟಿರುತ್ತದೆ. ಶ್ರೇಷ್ಠಗಳಾದ ಆತ್ಮದಲ್ಲಿ ಉಂಟಾಗಿರುವ ಜ್ಞಾನಾದಿ ಗುಣಗಳಿಂದ ಅಪರಿಮಿತನಾಗಿರುವಿಕೆಯು ಅಪ್ರಮೇಯತ್ವವೆಂಬ ಗುಣವಾಗಿರುವುದು.

**ಬಹಿರಂತರ್ಮಲಾಪಾಯಾದಗರ್ಭವಸತಿರ್ಮತಾ ।**
**ಕರ್ಮನೋಕರ್ಮವಿಶ್ಲೇಷಾತ್ಸ್ಯಾ[೫]ದಗೌರವಲಾಘವಮ್ ॥ ೧೦೪ ॥**

ಬಾಹ್ಯಾಭ್ಯಂತರ ಕರ್ಮಮಲವಿಲ್ಲದಿರುವುದರಿಂದ ಗರ್ಭವಾಸವಿಲ್ಲವೆಂದು ಹೇಳಲ್ಪಟ್ಟಿರುತ್ತದೆ. ಜ್ಞಾನಾವರಣ ದರ್ಶನಾವರಣ ಮೊದಲಾದ ಕರ್ಮಗಳ ಮತ್ತು ಮೂರು ಶರೀರ ಷಟ್ಪರ್ಯಾಪ್ತಿರೂಪವಾದ ನೋಕರ್ಮಗಳ ನಾಶದಿಂದ ಅಗುರುಲಘುತ್ವವೆಂಬ ಗುಣವು ಇರುವುದು.

**[೬]ತಾದವಸ್ಥ್ಯಂ ಗುಣೈರುದ್ಧೈರಕ್ಷೋಭ್ಯತ್ವಮತೋ ಭವೇತ್ ।**
**ಅವಿಲೀನತ್ವಮಾತ್ಮೀಯೈ[೭]ರ್ಗುಣೈರಪ್ಯ[೮]ವಪೃಕ್ತತಾ ॥ ೧೦೫ ॥**

ಪ್ರಶಸ್ತವಾದ ಜ್ಞಾನಾದಿಗುಣಗಳಿಂದ ತನ್ನ ಸ್ವರೂಪ–ಸ್ವಭಾವದಲ್ಲಿರುವಿಕೆಯು ಅಕ್ಷೋಭ್ಯತ್ವವೆಂಬ ಗುಣವಾಗಿರುತ್ತದೆ. ಬಳಿಕ ಆತ್ಮಸಂಬಂಧಿಗಳಾದ ಜ್ಞಾನಾದಿ ಗುಣಗಳಿಂದಲೂ ಬಿಡಲ್ಪಡದಿರುವಿಕೆಯು ಅವಿಲೀನತ್ವ–ಮರೆಯಾಗದಿರುವಿಕೆಯೆಂಬ ಗುಣವಾಗಿರುವುದು.

**[೯]ಪ್ರಾಗ್ದೇಹಾಕಾರಮೂರ್ತಿತ್ವಂ ಯದಸ್ಯಾಹೇಯಮಕ್ಷರಮ್ ।**
**ಸಾಭೀಷ್ಟಾ ಪರಮಾ ಕಾಷ್ಠಾ ಯೋಗರೂಪತ್ವಮಾತ್ಮನಃ ॥ ೧೦೬ ॥**

ಈ ಮುಕ್ತಾತ್ಮನ ಹೇಯವಲ್ಲದುದೂ ನಾಶವಾಗದಿರುವುದೂ ಆದ ಯಾವುದೊಂದು ಚರಮಶರೀರಾಕಾರಮೂರ್ತಿತ್ವವೆಂಬ ಗುಣವುಂಟೋ (ಮುಕ್ತಾತ್ಮನು ಯಾವ ಶರೀರದಿಂದ ಮುಕ್ತಿಯನ್ನು ಹೊಂದಿದನೋ ಆ ಶರೀರಾಕಾರಪರಿಮಿತವಾದ ಆಕಾರವುಳ್ಳವನಾಗಿರುವಿಕೆಗೆ ಚರಮಶರೀರಾಕಾರಮೂರ್ತಿತ್ವವೆಂದು ಹೆಸರು) ಅಭೀಷ್ಟವೂ ಉತ್ಕೃಷ್ಟವೂ ಆದ ಆ ಸ್ಥಿತಿಯು ಆತ್ಮನ ಯೋಗರೂಪತ್ವವೆಂಬ ಗುಣವಾಗಿರುವುದು.

**ಲೋಕಾಗ್ರವಾಸಸ್ತ್ರೈಲೋಕ್ಯಶಿಖರೇ ಶಾಶ್ವತೀ ಸ್ಥಿತಿಃ ।**
**ಅಶೇಷ[೧೦]ಪುರುಷಾರ್ಥಾನಾಂ [೧೧]ನಿಷ್ಠಾ ಪರಮಸಿದ್ಧತಾ ॥ ೧೦೭ ॥**

ಮೂರು ಲೋಕದ ತುದಿಯಲ್ಲಿ ಶಾಶ್ವತವಾದ ಇರುವಿಕೆಯು ಲೋಕಾಗ್ರವಾಸವೆಂಬ ಗುಣವಾಗಿರುವುದು. ಸಮಸ್ತ ಪುರುಷಾರ್ಥಗಳ–ಪ್ರಯೋಜನಗಳ ಸಂಪೂರ್ಣತೆಯು ಪರಮಸಿದ್ಧತ್ವವೆಂಬ ಗುಣವಾಗಿರುವುದು.

**ಯಃ ಸಮಗ್ರೈರ್ಗುಣೈರೇಭಿರ್ಜ್ಞಾನಾದಿಭಿರಲಂಕೃತಃ ।**
**[೧]ಕಿಂ ತಸ್ಯ ಕೃತಕೃತ್ಯಸ್ಯ [೨]ಪರದ್ರವ್ಯೋಪಸರ್ಪಣೈಃ ॥ ೧೦೮ ॥**

ಯಾವನು ಸಂಪೂರ್ಣವಾದ ಈ ಜ್ಞಾನಾದಿಗುಣಗಳಿಂದ ಅಲಂಕೃತನಾಗಿರುತ್ತಾನೋ ಕೃತಕೃತ್ಯನಾದ ಆ ಮುಕ್ತಾತ್ಮನಿಗೆ ಪರವಸ್ತುಗಳ ಪ್ರಾಪ್ತಿಗಳಿಂದೇನು ಪ್ರಯೋಜನ ?

**ಏಷ ಸಂಸಾರಿದೃಷ್ಟಾಂತೋ ವ್ಯತಿರೇಕೇಣ ಸಾಧಯೇತ್ ।**
**ಪರಮಾತ್ಮಾನಮಾತ್ಮಾನಂ ಪ್ರಭು[೩]ಮಪ್ರತಿಶಾಸನಮ್ ॥ ೧೦೯ ॥**

ಈ ಸಂಸಾರಿಪ್ರಾಣಿಯ ದೃಷ್ಟಾಂತವು, ಪ್ರಭುವೂ ಅಪ್ರತಿಹತವಾದ (ತಡೆಯಿಲ್ಲದ) ಶಾಸನ–ಶಾಸ್ತ್ರವುಳ್ಳವನೂ ಪರಮಾತ್ಮನೂ ಆದ ಆತ್ಮನನ್ನು ವ್ಯತಿರೇಕದಿಂದ–ನಿಷೇಧರೂಪದಿಂದ (ಸಂಸಾರಿ ಆತ್ಮನು ಮುಕ್ತಾತ್ಮನಿಗೆ ಸಮಾನನಲ್ಲವೆಂಬ ರೂಪದಿಂದ) ಸಾಧಿಸುವುದು.

**ತ್ರಿಭಿರ್ನಿದರ್ಶನೈರೇಭಿರಾವಿಷ್ಕೃತಮಹೋದಯಃ ।**
**ಸ ಆಪ್ತಸ್ತನ್ಮತೇ ಧೀರ್ಯೈ[೪]ರಾಧೇಯಾ ಮತಿರಾತ್ಮನಃ ॥ ೧೧೦ ॥**

ಈ ಮೂರು ದೃಷ್ಟಾಂತಗಳಿಂದ (ಪುರುಷ, ನಿಗಲ, ಸಂಸಾರಿನಿದರ್ಶನಗಳಿಂದ) ಪ್ರಕಟವಾದ ಉತ್ಕೃಷ್ಟತೆಯುಳ್ಳವನು ಆಪ್ತನೆನಿಸುತ್ತಾನೆ. ಅಂತಹ ಆಪ್ತನ ಮತದಲ್ಲಿ ವಿದ್ವಾಂಸರು ತಮ್ಮ ಬುದ್ಧಿಯನ್ನಿಡಬೇಕು. ನಂಬಿಕೆಯನ್ನಿಡಬೇಕೆಂದು ಭಾವವು.

**[೫]ಏವಂ ಹಿ ಕ್ಷತ್ರಿಯಶ್ರೇಷ್ಠೋ ಭವೇದ್ದೃಷ್ಟಪರಂಪರಃ ।**
**ಮತಾಂತರೇಷು ದೌಃಸ್ಥಿತ್ಯಂ ಭಾವಯ[೬]ನ್ನುಪಪತ್ತಿಭಿಃ ॥ ೧೧೧ ॥**

ಹೀಗಿರುತ್ತಿರಲು ಶ್ರೇಷ್ಠನಾದ ಕ್ಷತ್ರಿಯನು ದೃಷ್ಟಾಂತಗಳಿಂದ ಅನ್ಯಮತಗಳಲ್ಲಿರುವ ದುಃಸ್ಥಿತಿಯ ಭಾವವನ್ನು ಭಾವಿಸುವವನಾಗಿಯೂ ತನ್ನ ಪರಂಪರೆಯನ್ನು ನೋಡಿದವನಾಗಿಯೂ ಆಗುವನು.

**[೭]ದಿಗಂತರೇಭ್ಯೋ ವ್ಯಾವರ್ತ್ಯ ಪ್ರಬುದ್ಧಾಂ ಮತಿಮಾತ್ಮನಃ ।**
**ಸನ್ಮಾರ್ಗೇ ಸ್ಥಾಪಯನ್ನೇವಂ ಕುರ್ಯಾನ್ಮತ್ಯನುಪಾಲನಮ್ ॥ ೧೧೨ ॥**

ಕ್ಷತ್ರಿಯನು ಎಚ್ಚರಿಕೆಯುಳ್ಳುದಾದ ತನ್ನ ಬುದ್ಧಿಯನ್ನು ಬೇರೆ ಉಪದೇಶಗಳಿಂದ ಹಿಂದಿರುಗಿಸಿ ಸನ್ಮಾರ್ಗದಲ್ಲಿ ಸ್ಥಾಪಿಸುವವನಾಗಿ ಹೀಗೆ ಆತ್ಮಪಾಲನವನ್ನು ಮಾಡಬೇಕು.

**ಆತ್ರಿಕಾಮುತ್ರಿಕಾಪಾಯಾತ್ಪರಿರಕ್ಷಣಮಾತ್ಮನಃ ।**
**ಆತ್ಮಾನುಪಾಲನಂ ನಾಮ ತದಿದಾನೀಂ ವಿವೃಣ್ಮಹೇ ॥ ೧೧೩ ॥**

ಇಹಲೋಕ ಪರಲೋಕ ಸಂಬಂಧವಾದ ಅಪಾಯದಿಂದ ತನ್ನ ರಕ್ಷಣವನ್ನು ಮಾಡಿಕೊಳ್ಳುವುದು ಆತ್ಮಪಾಲನವಾಗಿರುತ್ತದೆ. ಅದನ್ನು ಈಗ ವಿವರಿಸುತ್ತೇವೆ.

**[೮]ಆತ್ರಿಕಾಪಾಯಸಂರಕ್ಷಾ ಸುಪ್ರತೀತೈವ ಧೀಮತಾಮ್ ।**
**ವಿಷಶಸ್ತ್ರಾದ್ಯಪಾಯಾನಾಂ ಪರಿರಕ್ಷಣಲಕ್ಷಣಾ ॥ ೧೧೪ ॥**

ವಿಷ ಶಸ್ತ್ರ ಮೊದಲಾದ ಅಪಾಯಗಳಿಂದ ರಕ್ಷಿಸಿಕೊಳ್ಳುವುದೇ ಲಕ್ಷಣವಾಗಿರುವುದೂ ಇಹಲೋಕಸಂಬಂಧವೂ ಆದ ಅಪಾಯದ ಸಂರಕ್ಷಣೆಯು ವಿದ್ವಾಂಸರಿಗೆ ಪ್ರಸಿದ್ಧವಾಗಿಯೇ ಇರುತ್ತದೆ.

---

೧ ಸಂಸಾರೇ. ೨ ಪರಿಣಮನಂ. ೩ ಅವಿನಾಶತ್ವಂ. ೪ ಸ್ವರೂಪಚ್ಯುತೇರಭಾವಾತ್. ೫ ಅಗುರುಲಘುತ್ವಂ. ೬ ಸ್ವಸ್ವರೂಪಾವಸ್ಥಾನಂ. ೭ ನ ಕೇವಲಂ ದೇಹಾದಿಭಿಃ ಜ್ಞಾನಾದಿಗುಣೈರಪಿ. ೮ ಅತ್ಯಕ್ತತಾ. ೯ ಚರಮಶರೀರತ್ವಂ. ೧೦ ಆತ್ಮಪ್ರಯೋಜನಾನಾಂ. ೧೧ ಪರಿಸಮಾಪ್ತಿಃ.

೧ ಕಿಂಪ್ರಯೋಜನಂ. ೨ ಪರದ್ರವ್ಯಪ್ರಾಪ್ತಿಭಿಃ. ೩ ಅಪ್ರತಿಹತಶಾಸನಂ ಶಾಸ್ತ್ರಂ. ೪ ಸ್ಥಾಪಿತವ್ಯಾ. ೫ ಏವಂ ಸತಿ. ೬ ದೃಷ್ಟಾಂತೈಃ. ೭ ಉಪದೇಶಾಂತರೇಭ್ಯಃ. ೮ ಅತ್ರ ಭವ.

**ತತ ಆಮುತ್ರಿಕಾಪಾಯರಕ್ಷಾ ವಿಧಿ[೧]ರನೂದ್ಯತೇ ।**
**[೨]ತದ್ರಕ್ಷಣಂ ಚ ಧರ್ಮೇಣ ಧರ್ಮೋಹ್ಯಾಪತ್ಪ್ರತಿಕ್ರಿಯಾ ॥ ೧೧೫ ॥**

ಆದುದರಿಂದ ಪರಲೋಕಸಂಬಂಧವಾದ ಅಪಾಯದಿಂದ ರಕ್ಷಿಸಿಕೊಳ್ಳುವ ವಿಧಿಯು ಹೇಳಲ್ಪಡುತ್ತದೆ. ಆ ಪರಲೋಕಸಂಬಂಧವಾದ ಅಪಾಯದ ರಕ್ಷಣೆ ಯಾದರೋ ಧರ್ಮದಿಂದಾಗುವುದು. ಆಪತ್ತಿಯ ಪ್ರತೀಕಾರವು ಧರ್ಮವಲ್ಲವೇ ?

**ಧರ್ಮೋ ರಕ್ಷತ್ಯಪಾಯೇಭ್ಯೋ ಧರ್ಮೋಭೀಷ್ಟಫಲಪ್ರದಃ ।**
**ಧರ್ಮಃ ಶ್ರೇಯಸ್ಕರೋಮುತ್ರ ಧರ್ಮೇಣೇಹಾ[೩]ಭಿನಂದಥುಃ ॥ ೧೧೬ ॥**

ಧರ್ಮವು ಅಪಾಯಗಳಿಂದ ತಪ್ಪಿಸಿ ಕಾಪಾಡುತ್ತದೆ. ಧರ್ಮವು ಅಭೀಷ್ಟ ಫಲವನ್ನು ಕೊಡುತ್ತದೆ. ಧರ್ಮವು ಪರಲೋಕದಲ್ಲಿ ಶ್ರೇಯಸ್ಸನ್ನು ಮಾಡುತ್ತದೆ. ಧರ್ಮದಿಂದ ಈ ಲೋಕದಲ್ಲಿ ಆನಂದವಾಗುತ್ತದೆ.

**ತಸ್ಮಾ[೪]ದ್ಧರ್ಮೈಕತಾನಃ ಸನ್ ಕುರ್ಯಾ[೫]ದೇಷ್ಯತ್ಪ್ರತಿಕ್ರಿಯಾಮ್ ।**
**[೬]ಏವಂ ಹಿ ರಕ್ಷಿತೋಪಾಯಾದ್ಭವೇ[೭]ದಾತ್ಮಾ ಭವಾಂತರೇ ॥ ೧೧೭ ॥**

ಆದುದರಿಂದ ಧರ್ಮದಲ್ಲಿ ಏಕಾಗ್ರತೆಯುಳ್ಳವನಾಗಿ ಭವಿಷ್ಯತ್ಕಾಲದ ಅಪಾ ಯದ ಪ್ರತೀಕಾರವನ್ನು ಮಾಡಬೇಕು. ಹೀಗೆ ಮಾಡಿದರೆ ಆತ್ಮನು ಮತ್ತೊಂದು ಭವದಲ್ಲಿ ಅಪಾಯದಿಂದ ರಕ್ಷಿಸಲ್ಪಟ್ಟವನಾಗುವನು.

**ಬಹ್ವಪಾಯಮಿದಂ ರಾಜ್ಯಂ ತ್ಯಾಜ್ಯಮೇವ ಮನಸ್ವಿನಾ ।**
**ಯತ್ರ ಪುತ್ರಾಃ ಸಹೋದರ್ಯಾ [೮]ವೈರಾಯಂತೇ ನಿರಂತರಮ್ ॥**

ಬಹಳ ಅಪಾಯವುಳ್ಳ ಈ ರಾಜ್ಯವು ವಿದ್ವಾಂಸರಿಗೆ ತ್ಯಾಜ್ಯವೇ ಆಗಿರುತ್ತದೆ. ಈ ರಾಜ್ಯದಲ್ಲಿ ಮಕ್ಕಳೂ ಸಹೋದರರೂ ಯಾವಾಗಲೂ ವೈರವನ್ನು ಮಾಡುತ್ತಾರೆ.

**ಅಪಿಚಾತ್ರ ಮನಃಖೇದಬಹುಲೇ ಕಾ [೯]ಸುಖಾಸಿಕಾ ।**
**ಮನಸೋ [೧೦]ನಿರ್ವೃತಿಂ ಸೌಖ್ಯ[೧೧]ಮುಶಂತೀಹ ವಿಚಕ್ಷಣಾಃ ॥ ೧೧೯ ॥**

ಮತ್ತೂ ಮನಃಖೇದಬಾಹುಳ್ಯವುಳ್ಳ ಈ ಲೋಕದಲ್ಲಿ ಸುಖದಿಂದಿರುವುದು ಯಾವುದು ? ವಿದ್ವಾಂಸರು ಮನಸ್ಸಿನ ಸುಖವನ್ನು ಸೌಖ್ಯವನ್ನಾಗಿ ಹೇಳುತ್ತಾರೆ.

**ರಾಜ್ಯೇ ನ ಸುಖಲೇಶೋಪಿ ದುರಂತೇ ದುರಿತಾವಹೇ ।**
**ಸರ್ವತಃ ಶಂಕಮಾನಸ್ಯ ಪ್ರತ್ಯುತಾತ್ರಾಸುಖಂ ಮಹತ್ ॥ ೧೨೦ ॥**

ಎಲ್ಲಾ ಕಡೆಯಲ್ಲಿಯೂ ಸಂದೇಹಪಡುವ ಈ ಮನುಷ್ಯನಿಗೆ ಕೊನೆಯಲ್ಲಿ ದುಃಖವುಳ್ಳುದೂ ಪಾಪವನ್ನುಂಟುಮಾಡುವುದೂ ಆದ ರಾಜ್ಯದಲ್ಲಿ ಸುಖದ ಲೇಶವೂ ಇಲ್ಲ . ಸುಖಕ್ಕೆ ಪ್ರತಿಯಾಗಿ ಈ ರಾಜ್ಯದಲ್ಲಿ ಅಧಿಕವಾದ ದುಃಖವಿರುತ್ತದೆ.

**ತತೋ ರಾಜ್ಯಮಿದಂ ಹೇಯಮಪಥ್ಯಮಿವ ಭೋಜನಮ್ ।**
**ಉಪಾದೇಯಂ ತು ವಿದ್ವದ್ಭಿಸ್ತಪಃ ಪಥ್ಯಮಿವಾಶನಮ್ ॥ ೧೨೧ ॥**

ಆದುದರಿಂದ ಈ ರಾಜ್ಯವು, ಅಪಥ್ಯವಾದ ಭೋಜನದಂತೆ, ಬಿಡತಕ್ಕು ದಾಗಿರುತ್ತದೆ. ಪಥ್ಯವಾದ ಭೋಜನದಂತೆ, ತಪಸ್ಸಾದರೋ ವಿದ್ವಾಂಸರಿಂದ ಪರಿಗ್ರಹಿಸತಕ್ಕುದಾಗಿರುತ್ತದೆ.

**ಇತಿ ಪ್ರಾಗೇವ ನಿರ್ವಿದ್ಯ ರಾಜ್ಯಭೋಗಾಂಸ್ತ್ಯಜೇತ್ಸುಧೀಃ ।**
**ತಥಾ ತ್ಯಕ್ತುಮಶಕ್ತೋಂತೇ ತ್ಯಜೇದ್ರಾಜ್ಯಪರಿಚ್ಛದಮ್ ॥ ೧೨೨ ॥**

ಈ ಪ್ರಕಾರವಾಗಿ ವೈರಾಗ್ಯವನ್ನು ಹೊಂದಿ ವಿವೇಕಿಯು ಮೊದಲೇ ರಾಜ್ಯ ಭೋಗಗಳನ್ನು ಬಿಡಬೇಕು. ಹಾಗೆ ಬಿಡುವುದಕ್ಕೆ ಶಕ್ತಿಯಿಲ್ಲದಿರುವವನು ಕೊನೆ ಯಲ್ಲಿ (ಅವಸಾನಕಾಲದಲ್ಲಿ ) ರಾಜ್ಯವನ್ನೂ ಪರಿವಾರವನ್ನೂ ತ್ಯಜಿಸಬೇಕು.

೧ ವಕ್ಷ್ಯತೇ. ೨ ಆಮುತ್ರಿಕಾಪಾಯಾದ್ರಕ್ಷಣಂ. ೩ ಆನಂದೋ ಭವತಿ. ೪ ಧರ್ಮೇ ಅನನ್ಯವೃತ್ತಿಃ. ೫ ಭಾವಿಕಾಲಾಪಾಯಪ್ರತಿಕ್ರಿಯಾ. ೬ ಏವಂಕೃತೇ ಸತಿ. ೭ ಪರಮಾತ್ಮಾ. ೮ ವೈರಂ ಕುರ್ವಂತಿ. ೯ ಸುಖಸ್ಥತಾ. ೧೦ ಸುಖಂ. ೧೧ ಕಥಯಂತಿ.

**ಕಾಲಜ್ಞಾನಿಭಿರಾದಿಷ್ಟೇ ನಿರ್ಣೀತೇ ಸ್ವಯಮೇವ ವಾ ।**
**ಜೀವಿತಾಂತೇ ತನುತ್ಯಾಗೇ ಮತಿಂ ದಧ್ಯಾದತಃ ಸುಧೀಃ ॥ ೧೨೩ ॥**

ಬುದ್ಧಿಶಾಲಿಯಾದ ಮನುಷ್ಯನು ತನ್ನ ಅವಸಾನಕಾಲವನ್ನು ನಿಮಿತ್ತಜ್ಞಾನಿಗಳು ಹೇಳಿದರೆ ಅಥವಾ ತಾನೇ ನಿರ್ಣಯಿಸಿದರೆ ಆಗ ಈ ಶರೀರತ್ಯಾಗದಲ್ಲಿ ಮನಸ್ಸನ್ನು ಕೊಡಬೇಕು.

**ತ್ಯಾಗೋ ಹಿ ಪರಮೋ ಧರ್ಮಸ್ತ್ಯಾಗ ಏವ ಪರಂ ತಪಃ ।**
**ತ್ಯಾಗಾದಿಹ ಯಶೋಲಾಭಃ ಪರತ್ರಾಭ್ಯುದಯೋ ಮಹಾನ್ ॥ ೧೨೪ ॥**

**ಮತ್ವೇತಿ ತನುಮಾಹಾರಂ ರಾಜ್ಯಂ ಚ ಸಪರಿಚ್ಛದಮ್ ।**
**ತ್ಯಜೇದಾಯತನೇ ಪುಣ್ಯೇ ಪೂಜಾವಿಧಿಪುರಸ್ಸರಮ್ ॥ ೧೨೫ ॥**

ತ್ಯಾಗವೇ ಪರಮಧರ್ಮ. ತ್ಯಾಗವೇ ಪರಮತಪ. ತ್ಯಾಗದಿಂದ ಈ ಲೋಕದಲ್ಲಿ ಯಶಸ್ಸಿನ ಲಾಭವೂ ಪರಲೋಕದಲ್ಲಿ ಮಹಾಭ್ಯುದಯ(ಸ್ವರ್ಗಸುಖ)ವೂ ಪ್ರಾಪ್ತ ವಾಗುವುವೆಂದು ತಿಳಿದು ಶರೀರವನ್ನೂ ಆಹಾರವನ್ನೂ ಪರಿವಾರಸಹಿತವಾದ ರಾಜ್ಯ ವನ್ನೂ ಪುಣ್ಯಕರವಾದ ಮಂದಿರದಲ್ಲಿ ಪೂಜಾವಿಧಿಪೂರ್ವಕವಾಗಿ ಬಿಡಬೇಕು.

**ಗುರುಸಾಕ್ಷಿ ತಥಾ ತ್ಯಕ್ತದೇಹಾಹಾರಸ್ಯ ತಸ್ಯ ವೈ ।**
**ಪರೀಷಹಜಯಾಯತ್ತಾ ಸಿದ್ಧಿರಿಷ್ಟಾ ಮಹಾತ್ಮನಃ ॥ ೧೨೬ ॥**

ಗುರುಸಾಕ್ಷಿಯಾಗಿ ಹಾಗೆ ಶರೀರಾಹಾರಗಳನ್ನು ತ್ಯಜಿಸಿದವನಾದ ಆ ಮಹಾತ್ಮನ ಇಷ್ಟಸಿದ್ಧಿಯು ಪರೀಷಹಜಯಕ್ಕೆ ಅಧೀನವಾಗಿರುತ್ತದೆ.

**ತತೋ ಧ್ಯಾಯೇದನುಪ್ರೇಕ್ಷಾಃ ಕೃತೀ ಜೇತುಂ ಪರೀಷಹಾನ್ ।**
**ವಿನಾನುಪ್ರೇಕ್ಷಣೈಶ್ಚಿತ್ತಸಮಾಧಾನಂ ಹಿ ದುರ್ಲಭಮ್ ॥ ೧೨೭ ॥**

ಬಳಿಕ ಆ ವಿವೇಕಿಯು ಪರೀಷಹಗಳನ್ನು ಜಯಿಸುವುದಕ್ಕೋಸ್ಕರ ಅನು ಪ್ರೇಕ್ಷೆಗಳನ್ನು ಧ್ಯಾನಿಸಬೇಕು. ಅನುಪ್ರೇಕ್ಷೆಗಳ ವಿನಃ ಮನಸ್ಸಮಾಧಾನವು ದುರ್ಲಭವಲ್ಲವೇ ?

**ಪ್ರಾಗ[೧]ಭಾವಿತಮೇವಾಹಂ ಭಾವಯಾಮಿ ನ [೨]ಭಾವಿತಮ್ ।**
**ಭಾವಯಾಮೀತಿ ಭಾವೇನ ಭಾವಯೇತ್ತತ್ತ್ವಭಾವನಾಮ್ ॥ ೧೨೮ ॥**

''ನಾನು ಮೊದಲು ಭಾವಿಸದಿರುವ ರತ್ನತ್ರಯವನ್ನೇ ಭಾವಿಸುತ್ತೇನೆ. ಮೊದಲು ಭಾವಿಸಲ್ಪಟ್ಟಿರುವ ಮಿಥ್ಯಾತ್ವಮೊದಲಾದುದನ್ನು ಭಾವಿಸುವುದಿಲ್ಲ'' ಈ ಪ್ರಕಾರ ವಾದ ಭಾವನೆಯಿಂದ ತತ್ತ್ವಭಾವನೆಯನ್ನು ಭಾವಿಸಬೇಕು.

**ಸಮುತ್ಸೃಜೇದನಾತ್ಮೀಯಂ ಶರೀರಾದಿಪರಿಗ್ರಹಮ್ ।**
**ಆತ್ಮೀಯಂ ತು ಸ್ವಸಾತ್ಕುರ್ಯಾದ್ರತ್ನತ್ರಯಮನುತ್ತರಮ್ ॥ ೧೨೯ ॥**

ಆತ್ಮಸಂಬಂಧವಲ್ಲದ ಶರೀರ ಮೊದಲಾದ ಪರಿಗ್ರಹವನ್ನು ಬಿಡಬೇಕು. ಆತ್ಮಸಂಬಂಧಿಯೂ ಸರ್ವೋತ್ಕೃಷ್ಟವೂ ಆದ ರತ್ನತ್ರಯವನ್ನಾದರೋ ತನ್ನ ವಶಪಡಿಸಿಕೊಳ್ಳಬೇಕು.

**[೩]ಮನೋವ್ಯಾಕ್ಷೇಪರಿಕ್ಷಾರ್ಥಂ ಧ್ಯಾಯನ್ನಿತಿ ಸ ಧೀರಧೀಃ ।**
**ಪ್ರಾಣಾನ್ವಿಸರ್ಜಯೇದಂತೇ ಸಂಸ್ಮರನ್ ಪರಮೇಷ್ಠಿನಾಮ್ ॥ ೧೩೦ ॥**

ಈ ಪ್ರಕಾರವಾಗಿ ಮನಸ್ಸಿನ ಬಾಧೆಯ ನಾಶಕ್ಕೋಸ್ಕರ ಧ್ಯಾನಿಸುವವನೂ ಧೈರ್ಯವಾದ ಬುದ್ಧಿಯುಳ್ಳವನೂ ಆದ ಆ ವೈರಾಗ್ಯಪರನಾದ ಮನುಷ್ಯನು ಅಂತ್ಯ ಕಾಲದಲ್ಲಿ ಪಂಚಪರಮೇಷ್ಠಿಗಳನ್ನು ಸ್ಮರಿಸುವವನಾಗಿ ಪ್ರಾಣಗಳನ್ನು ಬಿಡಬೇಕು.

೧ ಸಮ್ಯಕ್ತ್ವಾದಿರತ್ನತ್ರಯಂ. ೨ ಮಿಥ್ಯಾತ್ವಾದಿಕಂ. ೩ ಮಾನಸಬಾಧಾಯಾ ನಾಶಾರ್ಥಂ, ರಿಕ್ಷಹಿಂಸಾ ಯಾಮಿತಿ ಧಾತುಃ.

**ತಥಾ ವಿಸರ್ಜಿತಪ್ರಾಣಃ [೧]ಪ್ರಣಿಧಾನಪರಾಯಣಃ ।**
**ಶಿಥಿಲೀಕೃತ್ಯ ಕರ್ಮಾಣಿ ಶುಭಾಂ ಗತಿಮಥಾ[೨]ಶ್ನುತೇ ॥ ೧೩೧ ॥**

ಏಕಾಗ್ರತೆಯನ್ನು ಹೊಂದಿದವನೂ ಹಾಗೆ ಪ್ರಾಣಗಳನ್ನು ಬಿಟ್ಟವನೂ ಆದ ಆ ಮನುಷ್ಯನು ಅನಂತರದಲ್ಲಿ ಕರ್ಮಗಳನ್ನು ಶಿಥಿಲಮಾಡಿ ಶುಭಗತಿಯನ್ನು ಹೊಂದುತ್ತಾನೆ.

**ತಸ್ಮಿನ್ನೇವ ಭವೇ ಶಕ್ತಃ ಕೃತ್ವಾ ಕರ್ಮಪರಿಕ್ಷಯಮ್ ।**
**ಸಿದ್ಧಿಮಾಪ್ನೋತ್ಯಶಕ್ತಸ್ತು [೩]ತ್ರಿದಿವಾಗ್ರಮವಾಪ್ನುಯಾತ್ ॥ ೧೩೨ ॥**

ಶಕ್ತನಾದ ಮನುಷ್ಯನು ಆ ಭವದಲ್ಲೇ ಕರ್ಮಕ್ಷಯವನ್ನು ಮಾಡಿ ಸಿದ್ಧಿ–ಮುಕ್ತಿಯನ್ನು ಹೊಂದುತ್ತಾನೆ. ಅಶಕ್ತನಾದರೋ ಸ್ವರ್ಗದ ತುದಿಯನ್ನು–ಸರ್ವಾರ್ಥಸಿದ್ಧಿಯನ್ನು ಹೊಂದುವನು.

**ತತಶ್ಚ್ಯುತಃ ಪರಿಪ್ರಾಪ್ತಸುಮಾನುಷ್ಯಃ ಪರಂ ತಪಃ ।**
**ಕೃತ್ವಾಂತೇ ನಿರ್ವೃತಿಂ ಯಾತಿ ನಿರ್ಧೂತಾಖಿಲಬಂಧನಃ ॥ ೧೩೩ ॥**

ಆ ಸರ್ವಾರ್ಥಸಿದ್ಧಿಸ್ವರ್ಗದಿಂದ ಚ್ಯುತನಾಗಿ ಉತ್ತಮಮನುಷ್ಯತ್ವವನ್ನು ಹೊಂದಿ ಉತ್ಕೃಷ್ಟವಾದ ತಪಸ್ಸನ್ನು ಮಾಡಿ ಸಮಸ್ತಕರ್ಮಬಂಧನವನ್ನು ನಾಶಮಾಡಿ ಕೊನೆಯಲ್ಲಿ ಮುಕ್ತಿಯನ್ನು ಹೊಂದುತ್ತಾನೆ.

**ಕ್ಷತ್ರಿಯೋ ಯಸ್ತ್ವನಾತ್ಮಜ್ಞಃ ಕುರ್ಯಾನ್ನಾತ್ಮಾನುಪಾಲನಮ್ ।**
**ವಿಷಶಸ್ತ್ರಾದಿಭಿಸ್ತಸ್ಯ ದುರ್ಮೃತಿರ್ಧ್ರುವಭಾವಿನೀ ॥ ೧೩೪ ॥**

ಆತ್ಮಸ್ವರೂಪವನ್ನು ತಿಳಿಯದವನಾದ ಯಾವ ಕ್ಷತ್ರಿಯನು ಆತ್ಮಪಾಲನವನ್ನು ಮಾಡುವುದಿಲ್ಲವೋ ಅವನಿಗೆ ವಿಷ ಶಸ್ತ್ರ ಮೊದಲಾದುವುಗಳಿಂದ ದುರ್ಮರಣವು ನಿಶ್ಚಯವಾಗಿ ಆಗುವುದು.

**ದುರ್ಮೃತಶ್ಚ ದುರಂತೇಽಸ್ಮಿನ್ ಭವಾವರ್ತೇ ದುರುತ್ತರೇ ।**
**ಪತಿತ್ವಾಮುತ್ರ ದುಃಖಾನಾಂ ದುರ್ಗತೌ ಭಾಜನಂ ಭವೇತ್ ॥ ೧೩೫ ॥**

ಹಾಗೆ ದುರ್ಮರಣವನ್ನು ಹೊಂದಿದವನಾಗಿ ಕೊನೆಯಲ್ಲಿ ದುಃಖವುಳ್ಳುದೂ ಉತ್ತರಭವದಲ್ಲಿ ದುಃಖವುಳ್ಳುದೂ ಆದ ಈ ಭವವೆಂಬ ಸುಳಿಯಲ್ಲಿ ಬಿದ್ದು ಪರಲೋಕದಲ್ಲಿ ದುರ್ಗತಿಯಲ್ಲಿ ದುಃಖಗಳಿಗೆ ಪಾತ್ರನಾಗುವನು.

**ತತೋ ಮತಿಮತಾತ್ಮೀಯವಿನಿಪಾತಾನುರಕ್ಷಣೇ ।**
**ವಿಧೇಯೋ[೪]ಸ್ಮಿನ್ ಮಹಾನ್ ಯತ್ನೋ ಲೋಕದ್ವಯಹಿತಾವಹೇ ॥**

ಆದುದರಿಂದ ಬುದ್ಧಿವಂತನಾದ ಕ್ಷತ್ರಿಯನು ಇಹಲೋಕಪರಲೋಕಗಳಲ್ಲಿ ಹಿತವನ್ನುಂಟುಮಾಡುವುದೂ ಆತ್ಮಸಂಬಂಧವಾದ ಹಾನಿಯಿಂದ ದುರ್ಗತಿಯಲ್ಲಿ ಬೀಳುವುದರಿಂದ ರಕ್ಷಿಸುವುದೂ ಆದ ಈ ಆತ್ಮಪಾಲನೆಯಲ್ಲಿ ಮಹಾಯತ್ನವನ್ನು ಮಾಡಬೇಕು.

**ಕೃತಾತ್ಮರಕ್ಷಣಶ್ಚೈವಂ ಪ್ರಜಾನಾಮನುಪಾಲನೇ ।**
**ರಾಜಾ ಯತ್ನಂ ಪ್ರಕುರ್ವೀತ ರಾಜ್ಞಾಂ [೫]ಮೌಲೋ ಹ್ಯಯಂ [೬]ಗುಣಃ ॥**

ಈ ಪ್ರಕಾರವಾಗಿ ಆತ್ಮರಕ್ಷಣವನ್ನು ಮಾಡಿದ ರಾಜನು ಪ್ರಜೆಗಳ ಪಾಲನೆಯಲ್ಲಿ ಯತ್ನವನ್ನು ಮಾಡಬೇಕು. ಇದು ರಾಜರುಗಳ ಮುಖ್ಯವಾದ ಪ್ರಜಾಪಾಲನ ರೂಪವಾದ ಗುಣವಾಗಿರುವುದಲ್ಲವೇ ?

**ಕಥಂ ಚ ಪಾಲನೀಯಾಸ್ತಾಃ ಪ್ರಜಾಶ್ಚೇತ್ತತ್ಪ್ರಪಂಚತಃ ।**
**[೭]ಪುಷ್ಟಂ ಗೋಪಾಲದೃಷ್ಟಾಂತಮೂರೀಕೃತ್ಯ ವಿವೃಣ್ಮಹೇ ॥ ೧೩೮ ॥**

ಆ ಪ್ರಜೆಗಳನ್ನು ಹೇಗೆ ಕಾಪಾಡಬೇಕೆಂಬುದನ್ನು ವಿಸ್ತಾರವಾಗಿ ಸಮೃದ್ಧ–ಸಂಪೂರ್ಣವಾದ ಗೋಪಾಲಕನ ದೃಷ್ಟಾಂತವನ್ನು ತೆಗೆದುಕೊಂಡು ವಿವರಿಸುತ್ತೇವೆ.

**ಗೋಪಾಲಕೋ ಯಥಾ ಯತ್ನಾದ್ಗಾಃ ಸಂರಕ್ಷ[೧]ತ್ಯತಂದ್ರಿತಃ ।**
**ಕ್ಷ್ಮಾಪಾಲಶ್ಚ ಪ್ರಯತ್ನೇನ ತಥಾ ರಕ್ಷೇನ್ನಿಜಾಃ ಪ್ರಜಾಃ ॥ ೧೩೯ ॥**

ಗೋವುಗಳನ್ನು ಕಾಯುವವನು ಆಲಸ್ಯವಿಲ್ಲದವನಾಗಿ ಪ್ರಯತ್ನದಿಂದ ಹೇಗೆ ಗೋವುಗಳನ್ನು ಕಾಪಾಡುತ್ತಾನೋ ಹಾಗೆ ರಾಜನೂ ತನ್ನ ಪ್ರಜೆಗಳನ್ನು ಪ್ರಯತ್ನದಿಂದ ಕಾಪಾಡಬೇಕು.

**ತದ್ಯಥಾ ಯದಿ ಗೌಃ ಕಶ್ಚಿ[೨]ದಪರಾಧೀ ಸ್ವಗೋಕುಲೇ ।**
**ತಮಂಗಚ್ಛೇದನಾದ್ಯುಗ್ರದಂಡೈಸ್ತೀವ್ರ[೩]ಮಯೋಜಯನ್ ॥ ೧೪೦ ॥**

**ಪಾಲಯೇದನುರೂಪೇಣ ದಂಡೇನೈವ [೪]ನಿಯಂತ್ರಯನ್ ।**
**ಯಥಾ ಗೋಪಸ್ತಥಾ ಭೂಪಃ ಪ್ರಜಾಃ ಸ್ವಾಃ ಪ್ರತಿಪಾಲಯೇತ್ ॥**

ಅದು ಹೇಗೆಂದರೆ, ತನ್ನ ಗೋವುಗಳ ಗುಂಪಿನಲ್ಲಿ ಒಂದಾನೊಂದು ಗೋವು ದೋಷವುಳ್ಳುದಾದರೆ–ತಪ್ಪನ್ನು ಮಾಡಿದರೆ ಅದನ್ನು ಅಂಗಚ್ಛೇದ ಮೊದಲಾದ ಕ್ರೂರಶಿಕ್ಷೆಗಳನ್ನು ಮಾಡದಿರುವವನಾಗಿಯೂ ಅನುರೂಪವಾದ–ತಕ್ಕುದಾದ ಶಿಕ್ಷೆಯಿಂದಲೇ ದಂಡಿಸುವವನಾಗಿಯೂ ಹೇಗೆ ಗೋಪಾಲಕನು ಗೋವುಗಳನ್ನು ಕಾಪಾಡುವನೋ ಹಾಗೆ ರಾಜನು ಆ ಪ್ರಜೆಗಳನ್ನು ಕಾಪಾಡಬೇಕು.

**ತೀಕ್ಷ್ಣದಂಡೋ ಹಿ ನೃಪತಿಸ್ತೀವ್ರ[೫]ಮುದ್ವೇಜಯೇತ್ಪ್ರಜಾಃ ।**
**ತತೋ [೬]ವಿರಕ್ತಪ್ರಕೃತಿಂ ಜಹ್ಯು[೭]ರೇನಮಮೂಃ ಪ್ರಜಾಃ ॥ ೧೪೨ ॥**

ಕ್ರೂರವಾಗಿ ಶಿಕ್ಷಿಸುವವನಾದ ರಾಜನಾದರೋ ಪ್ರಜೆಗಳನ್ನು ತೀವ್ರವಾಗಿ ಉದ್ವೇಗಗೊಳಿಸುವನು–ರೇಗಿಸುವನು. ಆದರಿಂದ ಈ ಪ್ರಜೆಗಳು ಅನುರಾಗವನ್ನು ತ್ಯಜಿಸಿದ ಪ್ರಜಾಪರಿವಾರವುಳ್ಳವನಾದ ಈ ರಾಜನನ್ನು ಪರಿತ್ಯಜಿಸುವರು.

**ಯಥಾ ಗೋಪಾಲಕೋ ಮೌಲಂ ಪಶುವರ್ಗಂ ಸ್ವಗೋಕುಲೇ ।**
**ಪೋಷಯನ್ನೇವ ಪುಷ್ಟಃ ಸ್ಯಾದ್ಗೋಪೋಷಂ ಪ್ರಾಜ್ಯಗೋಧನಃ ॥ ೧೪೩ ॥**

**ತಥೈಷ ನೃಪತಿರ್ಮೌಲ[೮]ತಂತ್ರಮಾತ್ಮೀಯ[೯]ಮೇಕತಃ ।**
**ಪೋಷಯನ್ ಪುಷ್ಟಿಮಾಪ್ನೋತಿ ಸ್ವೇ ಪರಸ್ಮಿಂಶ್ಚ [೧೦]ಮಂಡಲೇ ॥**

ಗೋಪಾಲಕನು ತನ್ನ ಗೋವುಗಳ ಗುಂಪಿನಲ್ಲಿ ಮುಖ್ಯವಾದ ಪಶುಗಳ ಸಮೂಹವನ್ನು ಕಾಪಾಡುವವನಾಗಿಯೇ ಬಹಳ ಗೋವುಗಳ ಗುಂಪುಳ್ಳವನಾಗಿ ಹೇಗೆ ಗೋವುಗಳ ಪೋಷಣೆಯನ್ನು ಮಾಡಿ ಪುಷ್ಟನಾಗಿರುವನೋ ಅಂದರೆ ಗೋವುಗಳ ಸಮೃದ್ಧಿಯುಳ್ಳವನಾಗಿರುವನೋ ಹಾಗೆ ಈ ರಾಜನು ತನ್ನ ಸಂಬಂಧವಾದ ಮುಖ್ಯಬಲ–ಸೈನ್ಯವನ್ನು ಒಂದು ಸ್ಥಾನದಲ್ಲಿ ಕಾಪಾಡುವವನಾಗಿ ಸ್ವದೇಶದಲ್ಲಿಯೂ ಪರದೇಶದಲ್ಲಿಯೂ ಪುಷ್ಟಿ–ಸಮೃದ್ಧಿಯನ್ನು ಹೊಂದುತ್ತಾನೆ.

**ಪುಷ್ಟೋ ಮೌಲೇನ ತಂತ್ರೇಣ ಯೋ ಹಿ ಪಾರ್ಥಿವಕುಂಜರಃ ।**
**ಸ ಜಯೇತ್ಪೃಥಿವೀಮೇನಾಂ ಸಾಗರಾಂತಾಮಯತ್ನತಃ ॥ ೧೪೫ ॥**

ಮುಖ್ಯವಾದ ಸೈನ್ಯದಿಂದ ಯಾವ ರಾಜಶ್ರೇಷ್ಠನು ಸಮೃದ್ಧನಾಗಿರುವನೋ ಅವನು ಸಮುದ್ರದವರೆಗಿರುವ ಈ ಭೂಮಿಯನ್ನು ಪ್ರಯತ್ನವಿಲ್ಲದೆ ಜಯಿಸುವನು.

**[೧೧]ಪ್ರಭಗ್ನಚರಣಂ ಕಂಚಿ[೧೨]ದ್ಗೋದ್ರವ್ಯಂ ಚೇತ್ಪ್ರಮಾದತಃ ।**
**ಗೋಪಾಲಸ್ತಸ್ಯ ಸಂಧಾನಂ ಕುರ್ಯಾದ್ಬಂಧಾದ್ಯುಪಕ್ರಮೈಃ ॥ ೧೪೬ ॥**

೧ ಏಕಾಗ್ರತಾಂ ಗತಃ. ೨ ಪ್ರಾಪ್ನೋತಿ. ೩ ಸರ್ವಾರ್ಥಸಿದ್ಧಿಂ . ೪ ಆತ್ಮಾನುಪಾಲನೇ. ೫ ಮುಖ್ಯಃ. ೬ ಪ್ರಜಾನುಪಾಲನಲಕ್ಷಣೋ ಗುಣಃ. ೭ ಸಮೃದ್ಧಂ.

೧ ಅನಾಲಸ್ಯಃ. ೨ ದೋಷೀ. ೩ ಸಂಯೋಜನಮಕುರ್ವನ್. ೪ ನಿಯಮಯನ್. ೫ ಉದ್ವೇಗಂ ಕುರ್ಯಾತ್. ೬ ತ್ಯಕ್ತಾನುರಾಗಪ್ರಜಾಪರಿವಾರವಂತಂ. ೭ ನೃಪತಿಂ. ೮ ಬಲಂ. ೯ ಏಕಸ್ಮಿನ್ ಸ್ಥಾನೇ. ೧೦ ದೇಶೇ. ೧೧ ಭಗ್ನಪಾದಂ. ೧೨ ಗೋಧನಂ.

ಅಜಾಗರೂಕತೆಯಿಂದ ಯಾವುದಾದರೂ ಗೋಧನವು–ಗೋವು ಮುರಿದು ಹೋದ ಕಾಲುಳ್ಳುದಾದರೆ ಗೋಪಾಲಕನು ಕಟ್ಟುವುದು ಮೊದಲಾದ ಕೆಲಸಗಳಿಂದ ಆ ಕಾಲಿನ ಸಂಧಾನವನ್ನು–ಜೋಡನೆಯನ್ನು ಮಾಡುವನು.

**[1]ಬದ್ಧಾಯ ಚ ತೃಣಾದ್ಯಸ್ಮೈ ದತ್ವಾ ದಾರ್ಢ್ಯೇ ನಿಯೋಜಯೇತ್ ।**
**ಉಪದ್ರವಾಂತರೇಪ್ಯೇವಮಾಶು ಕುರ್ಯಾತ್ಪ್ರತಿಕ್ರಿಯಾಮ್ ॥ ೧೪೭ ॥**

ಕಟ್ಟಲ್ಪಟ್ಟಿರುವ ಈ ಗೋವಿಗೆ ಹುಲ್ಲು ಮೊದಲಾದುದನ್ನು ಕೊಟ್ಟು ದಾರ್ಢ್ಯದಲ್ಲಿ ಸೇರಿಸುವನು. ದೃಢಕಾಯವುಳ್ಳುದನ್ನಾಗಿ ಮಾಡುವನೆಂದು ಭಾವವು. ಬೇರೆಯಾದ ಉಪದ್ರವದಲ್ಲಿಯೂ ಹೀಗೆ ಶೀಘ್ರವಾಗಿ ಪ್ರತಿಕ್ರಿಯೆಯನ್ನು ಮಾಡುವನು.

**ಯಥಾ ತಥಾ ನರೇಂದ್ರೋಪಿ ಸ್ವಬಲೇ [2]ವ್ರಣಿತಂ ಭಟಮ್ ।**
**[3]ಪ್ರತಿಕುರ್ಯಾ[4]ದ್ಭಿಷಗ್ವರ್ಯಾನ್ನಿಯೋಜ್ಯೌಷಧಸಂಪದಾ ॥ ೧೪೮ ॥**

ಹಾಗೆಯೇ ರಾಜನೂ ತನ್ನ ಸೈನ್ಯದಲ್ಲಿ ಗಾಯವನ್ನು ಹೊಂದಿದ ಭಟನನ್ನು ಔಷಧಿಯೊಡನೆ ವೈದ್ಯಶ್ರೇಷ್ಠರನ್ನು ಗೊತ್ತುಮಾಡಿ ಪ್ರತೀಕಾರವನ್ನು ಮಾಡಬೇಕು.

**ದೃಢೀಕೃತಸ್ಯ ಚಾಸ್ಯೋ[5]ದ್ಧಂ ಜೀವನಾದಿ ಪ್ರಚಿಂತಯೇತ್ ।**
**ಸತ್ಯೇವಂ ಭೃತ್ಯವರ್ಗೋಽಸ್ಯ ಶಶ್ವದಾಪ್ನೋತಿ ನಂದಥುಮ್ ॥ ೧೪೯ ॥**

ದೃಢಕಾಯನನ್ನಾಗಿ ಮಾಡಿದ (ಗುಣಪಡಿಸಲ್ಪಟ್ಟ) ಈ ಭಟನಿಗೆ ಹೆಚ್ಚಾದ ಜೀವನ ಮೊದಲಾದುದನ್ನು ಚಿಂತಿಸಬೇಕು. ಹೆಚ್ಚಾದ ಜೀವನೋಪಾಯವನ್ನು ಕಲ್ಪಿಸಬೇಕೆಂದು ಭಾವವು. ಹೀಗೆ ಮಾಡಿದರೆ ರಾಜನ ಭೃತ್ಯವರ್ಗವು ಯಾವಾಗಲೂ ಆನಂದವನ್ನು ಹೊಂದುವುದು.

**ಯಥೈವ ಖಲು ಗೋಪಾಲಃ ಸಂಧ್ಯಸ್ಥಿಚಲನೇ ಗವಾಮ್ ।**
**ತದಸ್ಥಿ ಸ್ಥಾಪಯನ್ ಪ್ರಾಗ್ವತ್ಕುರ್ಯಾದ್ಯೋಗ್ಯಾಂ ಪ್ರತಿಕ್ರಿಯಾಮ್ ॥**

**ತಥಾ ನೃಪೋಪಿ ಸಂಗ್ರಾಮೇ ಭೃತ್ಯಮುಖ್ಯೇ [6]ವ್ಯಸೌ ಸತಿ ।**
**ತತ್ಪದೇ ಪುತ್ರಮೇವಾಸ್ಯ ಭ್ರಾತರಂ ವಾ ನಿಯೋಜಯೇತ್ ॥ ೧೫೧ ॥**

ಹೇಗೆ ಗೋಪಾಲಕನು ಗೋವುಗಳ ಸಂಧಿ ಅಸ್ಥಿ (ಮೂಳೆ) ಮೊದಲಾದುವುಗಳ ಚಲನೆಯಾದರೆ–ಸ್ಥಾನವು ತಪ್ಪಿದರೆ ಆ ಮೂಳೆಯನ್ನು ಮೊದಲಿನಂತೆ ಸ್ಥಾಪಿಸುವವನಾಗಿ ಯೋಗ್ಯವಾದ ಪ್ರತಿಕ್ರಿಯೆಯನ್ನು ಮಾಡುವನೋ ಹಾಗೆ ರಾಜನೂ ಯುದ್ಧದಲ್ಲಿ ಮುಖ್ಯನಾದ ಭೃತ್ಯನು ಮರಣವನ್ನು ಹೊಂದುತ್ತಿರಲು ಆ ಭಟನ ಸ್ಥಾನದಲ್ಲಿ ಈ ರಾಜನ ಪುತ್ರನನ್ನಾಗಲಿ ಸಹೋದರನನ್ನಾಗಲಿ ಸೇರಿಸಬೇಕು.

**ಸತಿ ಚೈವಂ ಕೃತಜ್ಞೋಯಂ ನೃಪ ಇತ್ಯನುರಕ್ತತಾಮ್ ।**
**ಉಪೈತಿ ಭೃತ್ಯವರ್ಗೋಽಸ್ಮಿನ್ ಭವೇಚ್ಚ ಧ್ರುವ[7]ಯೋಧನಃ ॥ ೧೫೨ ॥**

ಹೀಗೆ ಮಾಡಿದರೆ ಈ ರಾಜನು ಕೃತಜ್ಞನೆಂದು ಭೃತ್ಯವರ್ಗವು ಈ ರಾಜನಲ್ಲಿ ಪ್ರೀತಿ ಭಾವವನ್ನು ಹೊಂದುವುದು. ಭೃತ್ಯನು ಸ್ಥಿರವಾದ ಯುದ್ಧಭಟನೂ ಆಗುವನು.

**ಯಥಾ ಖಲ್ವಪಿ ಗೋಪಾಲಃ [8]ಕ್ರಿಮಿದಷ್ಟೇ ಗವಾಂ ಗಣೇ ।**
**ತದ್ಯೋಗ್ಯಮೌಷಧಂ ದತ್ವಾ ಕರೋತ್ಯಸ್ಯ ಪ್ರತಿಕ್ರಿಯಾಮ್ ॥ ೧೫೩ ॥**

**ತಥೈವ ಪೃಥಿವೀಪಾಲೋ [9]ದುರ್ವಿಧಂ ಸ್ವಾನುಜೀವಿನಮ್ ।**
**[10]ವಿಮನಸ್ಕಂ ವಿದಿತ್ವೈನಂ [11]ಸೌಚಿತ್ಯೇ ಸನ್ನಿಯೋಜಯೇತ್ ॥ ೧೫೪ ॥**

ಹೇಗೆ ಗೋಪಾಲಕನು ಗೋವುಗಳ ಸಮೂಹವು ಕ್ರಿಮಿಯಿಂದ ಬಾಧಿಸಲ್ಪಡುತ್ತಿರಲು ಅದಕ್ಕೆ ಯೋಗ್ಯವಾದ ಔಷಧವನ್ನು ಕೊಟ್ಟು ಈ ರೋಗಕ್ಕೆ ಪ್ರತೀಕಾರವನ್ನು ಮಾಡುತ್ತಾನೋ ಹಾಗೆಯೇ ರಾಜನು ದರಿದ್ರನಾದ ಈ ತನ್ನ ಸೇವಕನನ್ನು ದುಃಖಿತನನ್ನಾಗಿ ತಿಳಿದು ಒಳ್ಳೆಯ ಚಿತ್ತಭಾವದಲ್ಲಿ ಸೇರಿಸಬೇಕು. ಪ್ರಸನ್ನವಾದ ಮನಸ್ಸುಳ್ಳವನನ್ನಾಗಿ ಮಾಡಬೇಕೆಂದು ಭಾವವು.

**ವಿರಕ್ತೋಹ್ಯನುಜೀವೀ ಸ್ಯಾದಲಬ್ಧೋಚಿತಜೀವನಃ ।**
**ಪ್ರಭೋ[1]ರ್ವಿಮಾನನಾಚ್ಚೈವ ತಸ್ಮಾನ್ನೈ[2]ನಂ [3]ವಿರೂಕ್ಷಯೇತ್ ॥ ೧೫೫ ॥**

ಯೋಗ್ಯವಾದ ಜೀವನೋಪಾಯವನ್ನು ಹೊಂದದಿರುವ ಭೃತ್ಯನು ಪ್ರಭುವಿನ ಅವಮಾನದಿಂದಲೇ ವಿರಕ್ತಿಯುಳ್ಳವನಾಗುವನು. ಆದುದರಿಂದ ದುಃಖಿತನಾದ ಈ ಭೃತ್ಯನನ್ನು ಕಠಿಣಮನಸ್ಸುಳ್ಳವನನ್ನಾಗಿ ಮಾಡಬಾರದು.

**[4]ತ[5]ದ್ಗೋತ್ರೀಯವ್ರಣಸ್ಥಾನಕ್ರಿಮಿಸಂಭವ[6]ಸನ್ನಿಭಮ್ ।**
**ವಿದಿತ್ವಾ ತತ್ಪ [7]ತೀಕಾರಮಾಶು ಕುರ್ಯಾದ್ವಿಶಾಂಪತಿಃ ॥ ೧೫೬ ॥**

ರಾಜನು ಗೋವುಗಳ ಸಮೂಹಸಂಬಂಧಿಯಾದ ಗಾಯದಲ್ಲಿ ಕ್ರಿಮಿಗಳ ಉತ್ಪತ್ತಿಗೆ ಸಮಾನವಾದ ವಿಮನಸ್ಕತ್ವವನ್ನು–ದುಃಖಿತಮನೋಭಾವವನ್ನು ತಿಳಿದು ಶೀಘ್ರವಾಗಿ ಅದಕ್ಕೆ ಪ್ರತೀಕಾರವನ್ನು ಮಾಡಬೇಕು. ಸನ್ಮಾನ ಜೀವಿತಾದಿಗಳನ್ನು ಕೊಡಬೇಕೆಂದು ಭಾವವು.

**[8]ಬಹುನಾಪಿ ನ ದತ್ತೇನ ಸೌಚಿತ್ಯಮನುಜೀವಿನಾಮ್ ।**
**ಉಚಿತಾತ್ಸ್ವಾಮಿಸನ್ಮಾನಾದ್ಯಥೈಷಾಂ ಜಾಯತೇ ಧೃತಿಃ ॥ ೧೫೭ ॥**

ಈ ಸೇವಕರಿಗೆ ಉಚಿತವಾದ ಸ್ವಾಮಿಸನ್ಮಾನದಿಂದ ಹೇಗೆ ಸಂತೋಷವಾಗುತ್ತದೋ ಹಾಗೆ ಅವರಿಗೆ ಕೊಟ್ಟ ಬಹುದ್ರವ್ಯದಿಂದಲೂ ಮನಸ್ಸಂತೋಷವಾಗುವುದಿಲ್ಲ.

**ಗೋಪಾಲಕೋ ಯಥಾ [9]ಯೂಥೇ ಸ್ವೇ ಮಹೋಕ್ಷಂ ಭರಕ್ಷಮಮ್ ।**
**ಜ್ಞಾತ್ವಾಸ್ಯ ನಸ್ಯಕರ್ಮಾದಿ ವಿದಧ್ಯಾದ್ಗಾತ್ರಪುಷ್ಟಯೇ ॥ ೧೫೮ ॥**

**ತಥಾ ನೃಪೋಪಿ ಸೈನ್ಯೇ ಸ್ವೇ ಯೋದ್ಧಾರಂ ಭಟಸತ್ತಮಮ್ ।**
**ಜ್ಞಾತ್ವೈನಂ ಜೀವನಂ ಪ್ರಾಜ್ಯಂ ದತ್ವಾ ಸಮ್ಮಾನಯೇತ್ಕೃತೀ ॥ ೧೫೯ ॥**

ಗೋಪಾಲಕನು ಹೇಗೆ ತನ್ನ ಗೋವುಗಳ ಸಮೂಹದಲ್ಲಿ ದೊಡ್ಡ ಎತ್ತನ್ನು ಭಾರವನ್ನು ಹೊರುವುದಕ್ಕೆ ಸಮರ್ಥವನ್ನಾಗಿ ತಿಳಿದು ಅದರ ಶರೀರಪುಷ್ಟಿಗೋಸ್ಕರ ನಸ್ಯಕರ್ಮ ಮೊದಲಾದುದನ್ನು ಮಾಡುತ್ತಾನೋ ಹಾಗೆ ಚತುರನಾದ ರಾಜನೂ ತನ್ನ ಸೈನ್ಯದಲ್ಲಿ ಯುದ್ಧಸಮರ್ಥನಾದ ಉತ್ತಮಭಟನನ್ನು ತಿಳಿದು ಅವನಿಗೆ ಉತ್ಕೃಷ್ಟವಾದ ಜೀವನವನ್ನು ಕೊಟ್ಟು ಸನ್ಮಾನಿಸಬೇಕು.

**[10]ಕೃತಾಪದಾನಂ ತದ್ಯೋಗ್ಯೈಃ ಸತ್ಕಾರೈಃ ಪ್ರೀಣಯನ್ ಪ್ರಭುಃ ।**
**ನ ಮುಚ್ಯತೇನುರಕ್ತೈಃ ಸ್ವೈರನುಜೀವಿಭಿರನ್ವಹಮ್ ॥ ೧೬೦ ॥**

ಪರಾಕ್ರಮದಿಂದ ಕಾರ್ಯವನ್ನು ಮಾಡಿದ ಸೇವಕನನ್ನು ಅವನಿಗೆ ಯೋಗ್ಯವಾದ ಸತ್ಕಾರಗಳಿಂದ ಸಂತೋಷಪಡಿಸುವ ರಾಜನನ್ನು ಅನುರಾಗವುಳ್ಳ ಸೇವಕರು ಯಾವಾಗಲೂ ಬಿಡುವುದಿಲ್ಲ. ಯಾವಾಗಲೂ ಆ ಸೇವಕರು ಪ್ರೀತಿಯಿಂದ ತಮ್ಮ ಪ್ರಭುವನ್ನು ಹಿಂಬಾಲಿಸುತ್ತಾರೆಂದು ಭಾವವು.

**ಯಥಾ ಚ ಗೋಪೋ ಗೋಯೂಥಂ ಕಂಟಕೋಪಲವರ್ಜಿತೇ ।**
**ಶೀತಾತಪಾದಿಬಾಧಾಭಿರುಜ್ಝಿತೇ [11]ಚಾರಯನ್ವನೇ ॥ ೧೬೧ ॥**

**ಪೋಷಯತ್ಯತಿಯತ್ನೇನ ತಥಾ ಭೂಪೋ[12]ಪ್ಯವಿಪ್ಲವೇ ।**
**ದೇಶೇ ಸ್ವಾನುಗತಂ ಲೋಕಂ ಸ್ಥಾಪಯಿತ್ವಾಭಿರಕ್ಷತು ॥ ೧೬೨ ॥**

೧ ಗೋಕುಲಾಯ. ೨ ಶಸ್ತ್ರಘಾತವಂತಂ. ೩ ಪ್ರತೀಕಾರಂ ಕುರ್ಯಾತ್. ೪ ವೈದ್ಯಶ್ರೇಷ್ಠಾನ್. ೫ ಅಧಿಕಂ. ೬ ವಿಗತಪ್ರಾಣೇ. ೭ ಯೋದ್ಧಾ. ೮ ಗೋಮಾರಿ ವ್ರಣಜನಿತ ಕ್ರಿಮಿಬಾಧಿತೇ. ೯ ದರಿದ್ರಂ. ೧೦ ದುಃಖಿತಂ. ೧೧ ಸುಚಿತ್ತತ್ವೇ.

೧ ಅವಮಾನನಾತ್. ೨ ದುಃಖಿತಮನಸಂಭಟಂ. ೩ ಕರ್ಕಶಂ ನ ಕುರ್ಯಾತ್. ೪ ವಿಮನಸ್ಕತ್ವಂ. ೫ ಗೋಸಮೂಹಸಂಬಂಧಿ. ೬ ಸಮಾನಂ. ೭ ಸನ್ಮಾನಜೀವಿತಾದಿ. ೮ ಧನೇನ. ೯ ಗೋಕುಲೇ. ೧೦ ಕೃತಪರಾಕ್ರಮಂ. ೧೧ ಭಕ್ಷಣಂ ಕಾರಯನ್. ೧೨ ಬಾಧಾರಹಿತೇ.

ಹೇಗೆ ಗೋಪಾಲಕನು ಗೋವುಗಳ ಗುಂಪನ್ನು ಮುಳ್ಳು ಕಲ್ಲುಗಳಿಲ್ಲದಿರುವುದೂ ಶೀತವೂ ಬಿಸಿಲೂ ಮೊದಲಾದ ಬಾಧೆಗಳಿಂದ ಬಿಡಲ್ಪಟ್ಟಿರುವುದೂ ಆದ ವನದಲ್ಲಿ ಮೇಯಿಸುವವನಾಗಿ ಬಹಳ ಪ್ರಯತ್ನದಿಂದ ಪೋಷಿಸುತ್ತಾನೋ ಹಾಗೆ ರಾಜನೂ ಬಾಧಾರಹಿತವಾದ ಪ್ರದೇಶದಲ್ಲಿ ತನ್ನ ಅನುಯಾಯಿಯಾದ ಸೈನ್ಯವನ್ನು ಸ್ಥಾಪಿಸಿ ಕಾಪಾಡಬೇಕು.

**ರಾಜ್ಯಾದಿಪರಿವರ್ತೇಷು ಜನೋಽಯಂ ಪೀಡ್ಯತೇ[೧]ನ್ಯಥಾ ।**
**ಚೋರೈ[೨]ರ್ಡಾಮರಿಕೈರನ್ಯೈರಪಿ [೩]ಪ್ರತ್ಯಂತನಾಯಕೈಃ ॥ ೧೬೩ ॥**

ಹಾಗೆ ಕಾಪಾಡದಿದ್ದರೆ ಕಳ್ಳರಿಂದಲೂ ಕೊಳ್ಳೆ ಹೊಡೆಯುವವ (ದರೋಡೆಯವ) ರಿಂದಲೂ ಬೇರೆ ಬೇಡರ ದೊರೆಗಳಿಂದಲೂ ಈ ಜನರು ರಾಜ್ಯ ಮೊದಲಾದುವುಗಳ ಪರಿವರ್ತನೆ(ಬದಲಾವಣೆ)ಗಳಲ್ಲಿ ಪೀಡಿಸಲ್ಪಡುತ್ತಾರೆ.

**ಪ್ರಸಹ್ಯ ಚ [೪]ತಥಾಭೂತಾನ್ ವೃತ್ತಿಚ್ಛೇದೇನ ಯೋಜಯೇತ್ ।**
**[೫]ಕಂಟಕೋದ್ಧರಣೇನೈವ ಪ್ರಜಾನಾಂ ಕ್ಷೇಮಧಾರಣಮ್ ॥ ೧೬೪ ॥**

ಅಂತಹ ಕಳ್ಳರೇ ಮೊದಲಾದವರನ್ನು ಬಲಾತ್ಕಾರವಾಗಿ ಜೀವನೋಪಾಯಗಳ ನಾಶಮಾಡುವಿಕೆಯಿಂದ ದಂಡಿಸಬೇಕು. ಅಲ್ಪರಾದ ಶತ್ರುಗಳನ್ನು ನಿರ್ಮೂಲ ಮಾಡುವುದರಿಂದಲೇ ಪ್ರಜೆಗಳ ಕ್ಷೇಮವನ್ನು ಕಾಪಾಡುವುದಾಗುವುದು.

**ಯಥೈವ ಗೋಪಃ ಸಂಜಾತಂ ವತ್ಸಂ ಮಾತ್ರಾ ಸಹಾ[೬]ಮುಕವಮ್ ।**
**ದಿನಮೇಕಮವಸ್ಥಾಪ್ಯ ತತೋಽನ್ಯೇದ್ಯುರ್ದಯಾರ್ದ್ರಧೀಃ ॥ ೧೬೫ ॥**

**ವಿಧಾಯ ಚರಣೇ ತಸ್ಯ ಶನೈರ್ಬಂಧನಸಂವಿಧಿಮ್ ।**
**ನಾಭಿನಾಲಂ ಪುನ[೭]ರ್ಗರ್ಭಮಲೇನಾಪಾಸ್ಯ ಯತ್ನತಃ ॥ ೧೬೬ ॥**

**ಜಂತುಸಂಭವಶಂಕಾಯಾಂ ಪ್ರತೀಕಾರಂ ವಿಧಾಯ ಚ ।**
**ಕ್ಷೀರೋಪಯೋಗದಾನಾದ್ಯೈರ್ವರ್ಧಯೇತ್ಪ್ರತಿವಾಸರಮ್ ॥ ೧೬೭ ॥**

**ಭೂಪೋಪ್ಯೇವ[೮]ಮುಪಾಸನ್ನಂ ವೃತ್ತಯೇ [೯]ಸಮುಪಾಸಿತುಮ್ ।**
**ಯಥಾನುರೂಪೈಃ ಸಮ್ಮಾನೈಃ ಸ್ವೀಕುರ್ಯಾದನುಜೀವಿನಮ್ ॥ ೧೬೮ ॥**

ಗೋಪಾಲಕನು ಹುಟ್ಟಿದ ಕರುವನ್ನು ತಾಯಿಯೊಡನೆ ಆ ಒಂದುದಿನ ಇರಿಸಿ ಆಮೇಲೆ ಮಾರನೆಯ ದಿವಸ ದಯಾರ್ದ್ರವಾದ ಬುದ್ಧಿಯುಳ್ಳವನಾಗಿ ಅದರ ಕಾಲಿನಲ್ಲಿ ಮೆಲ್ಲನೆ ಬಂಧನವಿಧಾನವನ್ನು ಮಾಡಿ (ಕಾಲುಕಟ್ಟಿ) ಬಳಿಕ ಗರ್ಭಮಲ–ಜರಾಯು(ಕಸ)ವನ್ನೂ ನಾಭಿನಾಳವನ್ನೂ ಯತ್ನದಿಂದ ಹೋಗಲಾಡಿಸಿ ಜಂತುಗಳು ಹುಟ್ಟಿರುತ್ತವೆಂದು ಸಂದೇಹವುಂಟಾದಲ್ಲಿ ಪ್ರತೀಕಾರವನ್ನೂ ಮಾಡಿ ಹಾಲುಣಿಸುವಿಕೆ ಮೊದಲಾದುವುಗಳಿಂದ ಪ್ರತಿದಿವಸವೂ ಹೇಗೆ ಬೆಳೆಸುತ್ತಾನೋ ರಾಜನೂ ಹೀಗೆ ಜೀವನಕ್ಕೋಸ್ಕರ ಸೇವೆಯನ್ನು ಮಾಡಲು ಬಂದ ಸೇವಕನನ್ನು ಯಥೋಚಿತವಾದ ಸಮ್ಮಾನಗಳಿಂದ ಪರಿಗ್ರಹಿಸಬೇಕು.

**ಸ್ವೀಕೃತಸ್ಯ ಚ ತಸ್ಯೋದ್ಯಜೀವನಾದಿಪ್ರಚಿಂತಯಾ ।**
**ಯೋಗಕ್ಷೇಮಂ ಪ್ರಯುಂಜೀತ ಕೃತಕ್ಲೇಶಸ್ಯ ಸಾದರಮ್ ॥ ೧೬೯ ॥**

ಹಾಗೆ ಪರಿಗ್ರಹಿಸಲ್ಪಟ್ಟವನೂ ಕಷ್ಟಪಟ್ಟವನೂ ಆದ ಆ ಸೇವಕನಿಗೆ ಪ್ರಶಸ್ತವಾದ ಜೀವನೋಪಾಯ ಮೊದಲಾದುವುಗಳನ್ನು ಚಿಂತಿಸುವುದರಿಂದ ಪ್ರೀತಿಪುರಸ್ಸರವಾಗಿ ಯೋಗಕ್ಷೇಮವನ್ನು ಪ್ರಯೋಗಿಸಬೇಕು. ಸೇವಕನ ಜೀವನೋಪಾಯವನ್ನೂ ಯೋಗಕ್ಷೇಮವನ್ನೂ ಚಿಂತಿಸಬೇಕೆಂದು ಭಾವವು.

**ಯಥೈವ ಖಲು ಗೋಪಾಲಃ ಪಶೂನ್ [೧೦]ಕ್ರೇತುಂ ಸಮುದ್ಯತಃ ।**
**ಕ್ಷೀರಾವಲೋಕನಾದ್ಯೈಸ್ತಾನ್ ಪರೀಕ್ಷ್ಯ [೧೧]ಗುಣವತ್ತಮಾನ್ ॥ ೧೭೦ ॥**

೧ ಅರಕ್ಷಣಪ್ರಕಾರೇಣ. ೨ ಧಾಟಕಾರೈರ್ಯುದ್ಧಕಾರಿಭಿರ್ವಾ. ೩ ಮ್ಲೇಚ್ಛನಾಯಕೈಃ. ೪ ಧಾಟಕಾರಾನ್, ಚೋರಾದೀನ್. ೫ ಕ್ಷುದ್ರಶತ್ರು. ೬ ಅನುಗಮಿತ್ಯಪಿ ಪಾಠಃ. ೭ ಜರಾಯುನಾ. ೮ ಆಗತಂ. ೯ ಸೇವಾಂಕರ್ತುಂ. ೧೦ ಕ್ರೇಣನಾಯ. ೧೧ ಅತಿಶಯೇನ ಗುಣವಂತಃ.

**ಕ್ರೀಣಾತಿ ಶಕುನಾದೀನಾಮವಧಾರಣತತ್ಪರಃ ।**
**[೧]ಕುಲಪುತ್ರಾನ್ನೃಪೋಪ್ಯೇವಂ [೨]ಕ್ರೀಣೀಯಾತ್ಸುಪರೀಕ್ಷಿತಾನ್ ॥ ೧೭೧ ॥**

ಹೇಗೆ ಗೋಪಾಲಕನು ಪಶುಗಳನ್ನು ಬೆಲೆಗೆ ತೆಗೆದುಕೊಳ್ಳುವುದಕ್ಕೋಸ್ಕರ ಪ್ರಯತ್ನಪರನಾಗಿ ಹಾಲನ್ನು ನೋಡುವಿಕೆಯೇ ಮೊದಲಾದುವುಗಳಿಂದ ಅವುಗಳಲ್ಲಿ ಹೆಚ್ಚಾಗಿ ಗುಣವುಳ್ಳವುಗಳನ್ನು ಪರೀಕ್ಷಿಸಿ ಶಕುನ ಮೊದಲಾದುವುಗಳ ಗಮನಿಸುವಿಕೆಯಲ್ಲಿ ತತ್ಪರನಾಗಿ ಬೆಲೆಗೆ ತೆಗೆದುಕೊಳ್ಳುತ್ತಾನೋ ಹೀಗೆ ರಾಜನೂ ಚೆನ್ನಾಗಿ ಪರೀಕ್ಷಿಸಲ್ಪಟ್ಟ ಭಟರ ಪುತ್ರರನ್ನು ಸ್ವೀಕರಿಸಬೇಕು.

**ಕ್ರೀತಾಂಶ್ಚ ವೃತ್ತಿಮೂಲ್ಯೇನ ತಾನ್ಯಥಾವಸರಂ ಪ್ರಭುಃ ।**
**[೩]ಕೃತ್ಯೇಷು ವಿನಿಯುಂಜೀತ ಭೃತ್ಯೈಃ [೪]ಸಾಧ್ಯಂ ಫಲಂ ಹಿ ತತ್ ॥**

ರಾಜನು ಜೀವನ–ವೇತನರೂಪವಾದ ಬೆಲೆಯಿಂದ ತೆಗೆದುಕೊಳ್ಳಲ್ಪಟ್ಟ ಆ ಭಟಪುತ್ರರನ್ನು ಸಮಯಾನುಸಾರವಾಗಿ ಕಾರ್ಯಗಳಲ್ಲಿ ಸೇರಿಸಬೇಕು. ಆ ಪ್ರಯೋಜನವು–ಕಾರ್ಯವು ಭೃತ್ಯರಿಂದ ಪ್ರಾಪ್ತವಾಗತಕ್ಕುದಲ್ಲವೇ ?

**ಯದ್ವಚ್ಚ ಪ್ರತಿಭೂಃ ಕಶ್ಚಿದ್ಗೋಕ್ರಯೇ ಪ್ರತಿಗೃಹ್ಯತೇ ।**
**ಬಲವಾನ್ ಪ್ರತಿಭೂಸ್ತದ್ವದ್ಗ್ರಾಹ್ಯೋ [೫]ಭೃತ್ಯೋಪಸಂಗ್ರಹೇ ॥ ೧೭೩ ॥**

ಗೋವನ್ನು ಕ್ರಯಕ್ಕೆ ತೆಗೆದುಕೊಳ್ಳುವಲ್ಲಿ ಒಬ್ಬಾನೊಬ್ಬ ಹೊಣೆಗಾರನು ಹೇಗೆ ಪ್ರತಿಯಾಗಿ ತೆಗೆದುಕೊಳ್ಳಲ್ಪಡುತ್ತಾನೋ (ಹೊಣೆಗಾರನನ್ನು ಕೋರುವಂತೆ) ಹಾಗೆ ಭೃತ್ಯನನ್ನು ತೆಗೆದುಕೊಳ್ಳುವಾಗ ಬಲಿಷ್ಠನಾದ ಹೊಣೆಗಾರನನ್ನು ಪಡೆಯಬೇಕು.

**ಯಾಮಮಾತ್ರಾವಶಿಷ್ಟಾಯಾಂ ರಾತ್ರಾವುತ್ಥಾಯ ಯತ್ನತಃ ।**
**[೬]ಚಾರಯಿತ್ವೋಚಿತೇ ದೇಶೇ ಗಾಃ ಪ್ರಭೂತತೃಣೋದಕೇ ॥ ೧೭೪ ॥**

**[೭]ಪ್ರಾತಸ್ತರಾಮಥಾನೀಯ ವತ್ಸಪೀತಾವಶಿಷ್ಟಕಮ್ ।**
**ಪಯೋ ದೋಗ್ಧಿ ಯಥಾ ಗೋಪೋ ನವನೀತಾದಿಲಿಪ್ಸಯಾ ॥ ೧೭೫ ॥**

**ತಥಾ ಭೂಪೋಪ್ಯತಂದ್ರಾಲು[೮]ರ್ಭಕ್ತಗ್ರಾಮೇಷು ಕಾರಯೇತ್ ।**
**ಕೃಷಿಂ [೯]ಕರ್ಮಾಂತಿಕೈರ್ಬೀಜಪ್ರದಾನಾದ್ಯೈ [೧೦]ರುಪಕ್ರಮೈಃ ॥ ೧೭೬ ॥**

ರಾತ್ರಿಯ ಒಂದು ಜಾವ ಉಳಿದಿರುವಾಗ ಎದ್ದು ಪ್ರಯತ್ನದಿಂದ ಹೆಚ್ಚಾದ ಹುಲ್ಲುನೀರುಗಳುಳ್ಳದಾದ ಯೋಗ್ಯಪ್ರದೇಶದಲ್ಲಿ ಮೇಯಿಸಿ ಬಳಿಕ ಪ್ರಾತಃಕಾಲದಲ್ಲಿ ತೆಗೆದುಕೊಂಡು ಬಂದು ಕರುವು ಕುಡಿದುಳಿದ ಹಾಲನ್ನು ಹೇಗೆ ಗೋಪಾಲಕನು ಬೆಣ್ಣೆ ಮೊದಲಾದುವುಗಳನ್ನು ಪಡೆಯಬೇಕೆಂಬ ಇಚ್ಛೆಯಿಂದ ಹಾಲು ಕರೆಯುತ್ತಾನೋ ಹಾಗೆ ರಾಜನೂ ಆಲಸ್ಯರಹಿತನಾಗಿ ಕೃಷಿಯನ್ನು ಮಾಡುವವರಾದ ಸೇವಕರಿಂದ ಬೀಜವನ್ನು ಕೊಡುವುದೇ ಮೊದಲಾದ ಆರಂಭ ಸಾಮಗ್ರಿಗಳಿಂದ ಆರಂಭಕ್ಕೆ ಯೋಗ್ಯವಾದ ಗ್ರಾಮಗಳಲ್ಲಿ ಕೃಷಿಯನ್ನು ಮಾಡಿಸಬೇಕು.

**ದೇಶೇಽಪಿ ಕಾರಯೇತ್ಕೃತ್ಸ್ನೇ ಕೃಷಿಂ ಸಮ್ಯಕ್ಕೃಷೀವಲೈಃ ।**
**ಧಾನ್ಯಾನಾಂ ಸಂಗ್ರಹಾರ್ಥಂ ಚ ನ್ಯಾಯಮಂಶಂ [೧೧]ತತೋ [೧೨]ಹರೇತ್॥**

ದೇಶದಲ್ಲೆಲ್ಲ ಧಾನ್ಯಗಳ ಸಂಗ್ರಹಕ್ಕೋಸ್ಕರ ಕೃಷೀವಲರಿಂದ ಚೆನ್ನಾಗಿ ಕೃಷಿಯನ್ನು ಮಾಡಿಸಬೇಕು. ಆ ಕೃಷೀವಲರಿಂದ ನ್ಯಾಯವನ್ನತಿಕ್ರಮಿಸದಿರುವ ಭಾಗವನ್ನು ಸ್ವೀಕರಿಸಬೇಕು.

**ಸತ್ಯೇವಂ ಪುಷ್ಟತಂತ್ರಃ ಸ್ಯಾದ್ಭಾಂಡಾಗಾರಾದಿಸಂಪದಾ ।**
**ಪುಷ್ಟೋ ದೇಶಶ್ಚ ತಸ್ಯೈವಂ ಸ್ಯಾದ್ಧಾನ್ಯೈ[೧೩]ರಾಶಿತಂಭವೈಃ ॥ ೧೭೮ ॥**

೧ ಭಟಪುತ್ರಾನ್. ೨ ಸ್ವೀಕುರ್ಯಾತ್. ೩ ಕಾರ್ಯೇಷು. ೪ ಲಭ್ಯಂ. ೫ ಭೃತ್ಯಾದಿಕ್ರೇಣನೇ. ೬ ಭಕ್ಷಯಿತ್ವಾ. ೭ ಪ್ರಭಾತಕಾಲೇ. ೮ ಆರಂಭಗ್ರಾಮೇಷು. ೯ ಕೃಷೀವಲಭೃತ್ಯೈಃ. ೧೦ ಪ್ರಾರಂಭೈಃ. ೧೧ ಕೃಷೀವಲೇಭ್ಯಃ. ೧೨ ಸ್ವೀಕುರ್ಯಾತ್. ೧೩ ತೃಪ್ತಿಕರೈಃ.

ಹೀಗಾದರೆ ಕೋಶ(ಉಗ್ರಾಣ)ಮೊದಲಾದ ಸಂಪತ್ತಿಯಿಂದ ರಾಜನು ಪುಷ್ಟವಾದ ಪರಿವಾರವುಳ್ಳವನಾಗುವನು. ಹೀಗೆ ಅವನ ದೇಶವೂ ತೃಪ್ತಿಕರವಾದ ಧಾನ್ಯಗಳಿಂದ ಸಮೃದ್ಧವಾಗಿ ಆಗುವುದು.

**ಸ್ವದೇಶೇ[೧]ನಕ್ಷರಮ್ಲೇಚ್ಛಾನ್ ಪ್ರಜಾಬಾಧಾವಿಧಾಯಿನಃ ।**
**[೨]ಕುಲಶುದ್ಧಿಪ್ರದಾನಾದ್ಯೈಃ ಸ್ವಸಾತ್ಕುರ್ಯಾ[೩]ದುಪಕ್ರಮೈಃ ॥ ೧೭೯ ॥**

ತನ್ನ ದೇಶದಲ್ಲಿ ಪ್ರಜೆಗಳಿಗೆ ಬಾಧೆಯನ್ನು ಮಾಡುವವರಾದ ಅನಕ್ಷರ ಮ್ಲೇಚ್ಛ(ಶೂದ್ರ)ರನ್ನು ಜೀವನೋಪಾಯನಿಮಿತ್ತವಾದ ದಾನ ಸನ್ಮಾನ ಮೊದಲಾದ ಉಪಾಯಗಳಿಂದ ತನ್ನ ಅಧೀನರನ್ನಾಗಿ ಮಾಡಬೇಕು.

**ವಿಕ್ರಿಯಾಂ ನ ಭಜಂತ್ಯೇತೇ ಪ್ರಭುಣಾ ಕೃತಸತ್ಕ್ರಿಯಾಃ ।**
**ಪ್ರಭೋರಲಬ್ಧಸಮ್ಮಾನಾ ವಿಕ್ರಿಯಂತೇ ಹಿ ತೇನ್ವಹಮ್ ॥ ೧೮೦ ॥**

ರಾಜನಿಂದ ಮಾಡಲ್ಪಟ್ಟ ಸತ್ಕಾರವುಳ್ಳವರಾದ ಈ ಶೂದ್ರರು ವಿಕಾರವನ್ನು ಹೊಂದುವುದಿಲ್ಲ. ರಾಜನಿಂದ ಸನ್ಮಾನವನ್ನು ಹೊಂದದಿರುವವರಾದ ಆ ಶೂದ್ರರಾದರೋ ಆಗಾಗ ವಿಕಾರವನ್ನು ಹೊಂದುತ್ತಾರೆ.

**ಯೇ ಕೇಚಿಚ್ಚಾ[೪]ಕ್ಷರಮ್ಲೇಚ್ಛಾಃ ಸ್ವದೇಶೇ ಪ್ರಚರಿಷ್ಣವಃ ।**
**ತೇಪಿ [೫]ಕರ್ಷಕಸಾಮಾನ್ಯಂ ಕರ್ತವ್ಯಾಃ ಕರದಾ ನೃಪೈಃ ॥ ೧೮೧ ॥**

ಯಾರಾದರೂ ಕೆಲವರು ಅಕ್ಷರಮ್ಲೇಚ್ಛರಾದ ಮಿಥ್ಯಾಬ್ರಾಹ್ಮಣರು ಸ್ವದೇಶದಲ್ಲಿ ಸಂಚರಿಸುತ್ತಾರೋ ಅವರನ್ನೂ ರಾಜರು ಕೃಷೀವಲರಿಗೆ ಸಮಾನರಾಗಿರುವಂತೆ ಕಂದಾಯವನ್ನು ಕೊಡತಕ್ಕವರನ್ನಾಗಿ ಮಾಡಬೇಕು. ಆ ಬ್ರಾಹ್ಮಣರಿಗೂ ಕಂದಾಯವನ್ನು ವಿಧಿಸಬೇಕೆಂದು ಭಾವವು.

**ತಾನ್ ಪ್ರಾಹುರಕ್ಷರಮ್ಲೇಚ್ಛಾನ್ಯೇಮೀ ವೇದೋಪಜೀವಿನಃ ।**
**[೬]ಅಥರ್ವಾಕ್ಷರಸಂಪಾಠೈರ್ಲೋಕವ್ಯಾಮೋಹಕಾರಿಣಃ ॥ ೧೮೨ ॥**

ಯಾವ ಈ ಬ್ರಾಹ್ಮಣರು ವೇದದಿಂದ ಜೀವನವನ್ನು ಮಾಡುವವರಾಗಿಯೂ ಅಧರ್ಮಾಕ್ಷರ–ವೇದಾಕ್ಷರಪಾಠಗಳಿಂದ ಜನರನ್ನು ಮೋಹಗೊಳಿಸುವವರಾಗಿಯೂ ಇರುತ್ತಾರೋ ಅವರನ್ನು ಅಕ್ಷರಮ್ಲೇಚ್ಛರನ್ನಾಗಿ ಹೇಳುತ್ತಾರೆ.

**ಯತೋಕ್ಷರಕೃತಂ ಗರ್ವ[೭]ಮವಿದ್ಯಾಬಲತ[೮]ಸ್ತಕೇ ।**
**ವಹಂತ್ಯತೋಕ್ಷರಮ್ಲೇಚ್ಛಾಃ ಪಾಪಸೂತ್ರೋಪಜೀವಿನಃ ॥ ೧೮೩ ॥**

ಯಾವ ಕಾರಣದಿಂದ ಅಜ್ಞಾನದ ಬಲದಿಂದ ಅಕ್ಷರಗತವಾದ ಗರ್ವವನ್ನು ಹೊಂದಿರುತ್ತಾರೋ ಆ ಕಾರಣದಿಂದ ಕೆಟ್ಟವರಾದ ಆ ಬ್ರಾಹ್ಮಣರು ಪಾಪಕಾರ್ಯವನ್ನು ಬೋಧಿಸುವ ವೇದದಿಂದ ಜೀವಿಸುವವರಾದ ಅಕ್ಷರಮ್ಲೇಚ್ಛರೆನಿಸುತ್ತಾರೆ.

**ಮ್ಲೇಚ್ಛಾಚಾರೋ ಹಿ ಹಿಂಸಾಯಾಂ ರತಿರ್ಮಾಂಸಾಶನೇಪಿ ಚ ।**
**ಬಲಾತ್ಪರಸ್ವಹರಣಂ [೯]ನಿರ್ವ್ರತತ್ವಮಿತಿ ಸ್ಮೃತಮ್ ॥ ೧೮೪ ॥**

ಹಿಂಸೆಯಲ್ಲಿಯೂ ಮಾಂಸಭಕ್ಷಣದಲ್ಲಿಯೂ ಪ್ರೀತಿಯೂ ಬಲಾತ್ಕಾರದಿಂದ ಬೇರೆಯವರ ದ್ರವ್ಯವನ್ನು ಅಪಹರಿಸುವಿಕೆಯೂ ವ್ರತಹೀನತ್ವವೂ ಮ್ಲೇಚ್ಛರ ಆಚಾರವೆಂದು ಹೇಳಲ್ಪಟ್ಟಿರುತ್ತದೆ.

**ಸೋಸ್ತ್ಯ[೧೦]ಮೀಷಾಂ ಚ ಯದ್ವೇದಶಾಸ್ತ್ರಾರ್ಥ[೧೧]ಮಧಮದ್ವಿಜಾಃ ।**
**[೧೨]ತಾದೃಶಂ ಬಹುಮನ್ಯಂತೇ ಜಾತಿವಾದಾ[೧೩]ವಲೇಪತಃ ॥ ೧೮೫ ॥**

೧ ಶೂದ್ರಾನ್. ೨ ಜೀವನೋಪಾಯನಿಮಿತ್ತದಾನಸನ್ಮಾನಾದ್ಯೈಃ. ೩ ಉಪಾಯೈಃ. ೪ ವೇದಪಾರಗಾ ಮಿಥ್ಯಾದ್ವಿಜಾಃ. ೫ ಕೃಷೀವಲಸಮಾನಂ ಯಥಾ ಭವತಿ ತಥಾ. ೬ ವೇದಾಕ್ಷರಪಾಠೈಃ. ೭ ಅಜ್ಞಾನಬಲತಃ. ೮ ಕುತ್ಸಿತಾಸ್ತೇ. ೯ ವ್ರತಹೀನತ್ವಂ. ೧೦ ವೇದಪಾಠದ್ವಿಜಾನಾಂ. ೧೧ ಮದಯುಕ್ತಾ ನೀಚದ್ವಿಜಾಃ. ೧೨ ಹಿಂಸನಾದಿಪ್ರಕಾರಂ. ೧೩ ಗರ್ವತಃ.

ಈ ವೇದಪಾಠಿಗಳಾದ ಬ್ರಾಹ್ಮಣರಿಗೂ ಆ ಮ್ಲೇಚ್ಛಾಚಾರವು ಇರುತ್ತದೆ. ನೀಚಬ್ರಾಹ್ಮಣರು ಅಂತಹ ವೇದಶಾಸ್ತ್ರದ ಅರ್ಥವನ್ನು ಜಾತಿವಾದದ ಗರ್ವದಿಂದ ಗೌರವಿಸುತ್ತಾರೆ.

**[೧]ಪ್ರಜಾಸಾಮಾನ್ಯತೈ[೨]ವೈಷಾಮತೋ ವಾ ಸ್ಯಾನ್ನಿಕೃಷ್ಟತಾ ।**
**[೩]ತತೋ ನ ಮಾನ್ಯತೈತೇಷಾಂ ದ್ವಿಜಾ ಮಾನ್ಯಾಃ ಸ್ಯುರಾರ್ಹತಾಃ ॥**

ಈ ಕಾರಣದಿಂದ ಈ ವೇದಪಾಠಕರಿಗೆ ಪ್ರಜೆಗಳೊಡನೆ ಸಮಾನತ್ವವೇ ಇರುವುದು. ಇತರ ಪ್ರಜೆಗಳಿಗಿಂತ ಶ್ರೇಷ್ಠರಲ್ಲವೆಂದು ಭಾವವು. ಇತರ ಪ್ರಜೆಗಳಿಗಿಂತ ನಿಕೃಷ್ಟತೆಯಾದರೂ ಆಗುವುದು. ಪ್ರಜೆಗಳೊಡನೆ ಅಥವಾ ಪ್ರಜೆಗಳಿಗೆ ಸಮಾನರಾಗಿರುವುದರಿಂದ ಈ ಬ್ರಾಹ್ಮಣರಿಗೆ ಮಾನ್ಯತೆಯಿಲ್ಲ. ಅರ್ಹರಾದ ಬ್ರಾಹ್ಮಣರು ಮಾನ್ಯರಾಗಿರುವರು.

**ವಯಂ ನಿಸ್ತಾರಕಾ ದೇವಬ್ರಾಹ್ಮಣಾ ಲೋಕಸಮ್ಮತಾಃ ।**
**[೪]ಧಾನ್ಯಭಾಗಮತೋ ರಾಜ್ಞೋ ನ ದದ್ಮ ಇತಿ ಚೇ[೫]ನ್ಮತಮ್ ॥ ೧೮೭ ॥**

**ವೈಶಿಷ್ಟ್ಯಂ [೬]ಕಿಂಕೃತಂ [೭]ಶೇಷವರ್ಣೇಭ್ಯೋ ಭವತಾಮಿಹ ।**
**ನ ಜಾತಿಮಾತ್ರಾದ್ವೈಶಿಷ್ಟ್ಯಂ [೮]ಜಾತಿಭೇದಾಪ್ರತೀತಿತಃ ॥ ೧೮೮ ॥**

“ನಾವು ಬೇರೆಯವರನ್ನು ಸಂಸಾರದಿಂದ ಪಾರಗಾಣಿಸುವವರಾದ ದೇವಬ್ರಾಹ್ಮಣರೂ ಲೋಕಸಮ್ಮತರೂ ಆಗಿರುತ್ತೇವೆ. ಈ ಕಾರಣದಿಂದ ರಾಜನಿಗೆ ಧಾನ್ಯಭಾಗ(ಕಂದಾಯ)ವನ್ನು ಕೊಡುವುದಿಲ್ಲ” ಎಂದು ವೇದದಿಂದ ಉಪಜೀವನವನ್ನು ಮಾಡುವವರ ಅಭಿಪ್ರಾಯವಾಗಿರುವುದಾದರೆ “ಉಳಿದಿರುವ ವರ್ಣಗಳಿಂದ ನಿಮ್ಮಗಳಿಗೆ ಇಲ್ಲಿ ವಿಶಿಷ್ಟತ್ವವು ಯಾವುದರಿಂದ ಮಾಡಲ್ಪಟ್ಟಿರುತ್ತದೆ ? ಜಾತಿಮಾತ್ರದಿಂದ ವಿಶಿಷ್ಟತ್ವವು ಇರುವುದಿಲ್ಲ. ಏತಕ್ಕೆಂದರೆ, ಜಾತಿಭೇದವು ಕಾಣುವುದಿಲ್ಲ. ಆಚರಣವು ಕಾಣುವುದಲ್ಲದೆ ಜಾತಿಯೆಂಬುದು ಕಾಣುವ ವಸ್ತುವಲ್ಲವೆಂದು ಭಾವವು.

**ಗುಣತೋಪಿ ನ ವೈಶಿಷ್ಟ್ಯಮಸ್ತಿ [೯]ವೋ ನಾಮಧಾರಕಾಃ ।**
**ವ್ರತಿನೋ ಬ್ರಾಹ್ಮಣಾ ಜೈನಾ ಯೇ ತ ಏವ ಗುಣಾಧಿಕಾಃ ॥ ೧೮೯ ॥**

ಬ್ರಾಹ್ಮಣರೆಂದು ಹೆಸರನ್ನಿಟ್ಟುಕೊಂಡಿರುವವರೇ ! ನಿಮ್ಮಗಳಿಗೆ ಗುಣದಿಂದಲೂ ವಿಶಿಷ್ಟತ್ವವಿಲ್ಲವು. ಅಹಿಂಸಾದಿವ್ರತಗಳುಳ್ಳವರಾದ ಜೈನಬ್ರಾಹ್ಮಣರೇ ಅಧಿಕಗುಣಗಳುಳ್ಳವರಾಗಿರುತ್ತಾರೆ.

**ನಿರ್ವ್ರತಾ [೧೦]ನಿರ್ನಮಸ್ಕಾರಾ ನಿರ್ಘೃಣಾಃ ಪಶುಘಾತಿನಃ ।**
**ಮ್ಲೇಚ್ಛಾಚಾರಪರಾ ಯೂಯಂ ನ [೧೧]ಸ್ಥಾತೋ ಧಾರ್ಮಿಕಾ ದ್ವಿಜಾಃ ॥**

ನೀವುಗಳು ವ್ರತಹೀನರೂ ನಮಸ್ಕಾರಕ್ಕೆ ಅಯೋಗ್ಯರೂ ದಯಾಶೂನ್ಯರೂ ಪಶುಗಳನ್ನು ಕೊಲ್ಲುವವರೂ ಶೂದ್ರಾಚರಣವುಳ್ಳವರೂ ಆಗಿರುತ್ತೀರಿ. ಈ ಕಾರಣದಿಂದ ನೀವುಗಳು ಧಾರ್ಮಿಕರಾದ ಬ್ರಾಹ್ಮಣರಲ್ಲ.”

**ತಸ್ಮಾದನಕ್ಷರಮ್ಲೇಚ್ಛಾ ಇವ ತೇಮೀ ಮಹೀಭುಜಾಮ್ ।**
**ಪ್ರಜಾಸಾಮಾನ್ಯಧಾನ್ಯಾಂಶದಾನಾದ್ಯೈರವಿಶೇಷಿತಾಃ ॥ ೧೯೧ ॥**

ಆದುದರಿಂದ ರಾಜರುಗಳಿಗೆ ಆ ಬ್ರಾಹ್ಮಣರು ಅನಕ್ಷರಮ್ಲೇಚ್ಛರಂತೆ, ಸಾಮಾನ್ಯಪ್ರಜೆಗಳು ಕಂದಾಯವನ್ನು ಕೊಡುವಂತೆ ಕಂದಾಯವನ್ನು ಕೊಡುವುದೇ ಮೊದಲಾದ ಕಾರ್ಯಗಳಿಂದ ಸಮಾನಸ್ಕಂಧರಾಗಿ ಮಾಡಲ್ಪಟ್ಟಿರುತ್ತಾರೆ.

**ಕಿಮತ್ರ ಬಹುನೋಕ್ತೇನ ಜೈನಾನ್ ಮುಕ್ತ್ವಾ ದ್ವಿಜೋತ್ತಮಾನ್ ।**
**ನಾನ್ಯೇ ಮಾನ್ಯಾ ನರೇಂದ್ರಾಣಾಂ ಪ್ರಜಾಸಾಮಾನ್ಯಜೀವಿಕಾಃ ॥ ೧೯೨ ॥**

೧ ಪ್ರಜಾಸಮಾನತ್ವಮೇವ. ೨ ವೇದಪಾಠಕಾನಾಂ. ೩ ಪ್ರಜಾಭ್ಯಃ, ಪ್ರಜಾಸಮಾನತ್ವಾದೇವ ವಾ. ೪ ಕರಂ. ೫ ವೇದೋಪಜೀವಿನಾಂ ಮತಮಿತಿ ಚೇತ್ ವಕ್ಷ್ಯಮಾಣಪ್ರಕಾರೇಣ ವಕ್ತವ್ಯಂ. ೬ ಕೇನ ಕೃತಂ. ೭ ಮ್ಲೇಚ್ಛಾದಿಭ್ಯಃ. ೮ ಜಾತಿಭೇದಸ್ಯಾದರ್ಶನಾತ್. ೯ ಯುಷ್ಮಾಕಂ. ೧೦ ನಮಸ್ಕರ್ತುಮಯೋಗ್ಯಾಃ. ೧೧ ಭವಥ.

ಈ ವಿಷಯದಲ್ಲಿ ಹೆಚ್ಚು ಹೇಳುವುದರಿಂದೇನು ಪ್ರಯೋಜನ? ಜೈನ ಬ್ರಾಹ್ಮಣೋತ್ತಮರನ್ನು ಬಿಟ್ಟು ಸಾಮಾನ್ಯಪ್ರಜೆಗಳಂತೆ ಜೀವಿಸುವವರಾದ ಇತರ ಬ್ರಾಹ್ಮಣರು ರಾಜರುಗಳಿಗೆ ಮಾನ್ಯರಲ್ಲ.

**ಅನ್ಯಚ್ಚ ಗೋಧನಂ ಗೋಪೋ ವ್ಯಾಘ್ರಚೋರಾ[೧]ದ್ಯುಪಕ್ರಮಾತ್ ।**
**ಯಥಾ ರಕ್ಷತ್ಯತಂದ್ರಾಲುರ್ಭೂಪೋಪ್ಯೇವಂ ನಿಜಾಃ ಪ್ರಜಾಃ ॥ ೧೯೩ ॥**

ಮತ್ತೂ ಗೋಪಾಲಕನು ಆಲಸ್ಯರಹಿತನಾಗಿ ಗೋರೂಪವಾದ ಧನವನ್ನು ಹುಲಿ ಕಳ್ಳರು ಮೊದಲಾದವರ ಉಪದ್ರವದಿಂದ ತಪ್ಪಿಸಿ ಹೇಗೆ ಕಾಪಾಡುತ್ತಾನೋ ಹಾಗೆ ರಾಜನೂ ತನ್ನ ಪ್ರಜೆಗಳನ್ನು ಅಪಾಯಗಳಿಂದ ತಪ್ಪಿಸಿ ಕಾಪಾಡಬೇಕು.

**ಯಥಾ ಚ ಗೋಕುಲಂ [೨]ಗೋಮಿನ್ಯಾಯಾತೇ ಸಂದಿದೃಕ್ಷಯಾ ।**
**ಸೋಪಚಾರಮುಪೇತ್ಯೈನಂ ತೋಷಯೇ[೩]ದ್ಧನಸಂಪದಾ ॥ ೧೯೪ ॥**

**ಭೂಪೋಪ್ಯೇವಂ ಬಲೀ ಕಶ್ಚಿತ್ಸ್ವರಾಷ್ಟ್ರಂ ಯದ್ಯಭಿದ್ರವೇತ್ ।**
**ತದಾ ವೃದ್ಧೈಃ ಸಮಾಲೋಚ್ಯ [೪]ಸಂದಧ್ಯಾ[೫]ತ್ಪಣಬಂಧತಃ ॥ ೧೯೫ ॥**

ಗೋಸಮೂಹವನ್ನು ನೋಡಬೇಕೆಂಬ ಇಚ್ಛೆಯಿಂದ ಗೋವುಗಳ ಯಜಮಾನನು ಬರುತ್ತಿರಲು ಉಪಚಾರಸಹಿತವಾಗಿ ಈ ಯಜಮಾನನನ್ನು ಹೊಂದಿ ಗೋಪಾಲಕನು ಹೇಗೆ ಹಾಲು ತುಪ್ಪ ಮೊದಲಾದುವುಗಳ ಮಾರಾಟದಿಂದುಂಟಾದ ಧನಸಂಪತ್ತಿಯಿಂದ ಸಂತೋಷಪಡಿಸುವನೋ ಹಾಗೆ ರಾಜನೂ ಬಲಿಷ್ಠನಾದ ಯಾವನಾದರೂ ತನ್ನ ದೇಶವನ್ನು ಕುರಿತು ದಂಡೆತ್ತಿಬಂದರೆ ಆಗ ಹಿರಿಯರೊಡನೆ ಆಲೋಚಿಸಿ ಬಂಗಾರದ ನಾಣ್ಯಗಳನ್ನು ಕೊಟ್ಟು ಸಂಧಾನವನ್ನು ಮಾಡಬೇಕು.

**ಜನಕ್ಷಯಾಯ ಸಂಗ್ರಾಮೋ ಬಹ್ವಪಾಯೋ ದುರುತ್ತರಃ ।**
**ತಸ್ಮಾ[೬]ದುಪಪ್ರದಾನಾದ್ಯೈಃ [೭]ಸಂಧೇಯೋರಿರ್ಬಲಾಧಿಕಃ ॥ ೧೯೬ ॥**

ಯುದ್ಧವು ಜನಗಳ ನಾಶಕ್ಕೋಸ್ಕರವಾಗಿರುವುದು, ಬಹಳ ಅಪಾಯವುಳ್ಳದು, ಕೊನೆಯಲ್ಲಿ ದುಃಖವುಳ್ಳದು. ಆದುದರಿಂದ ಅಧಿಕಬಲವುಳ್ಳವನಾದ ಶತ್ರುವು ಉಚಿತವಾದ ವಸ್ತುವಾಹನಗಳ ದಾನ ಮೊದಲಾದುವುಗಳಿಂದ ಸಂಧಿ ಮಾಡಿಕೊಳ್ಳುವುದಕ್ಕೆ ಯೋಗ್ಯನಾಗಿರುತ್ತಾನೆ.

**ಇತಿ ಗೋಪಾಲದೃಷ್ಟಾಂತಮುರೀಕೃತ್ಯ ನರೇಶ್ವರಃ ।**
**ಪ್ರಜಾನಾಂ ಪಾಲನೇ ಯತ್ನಂ ವಿದಧ್ಯಾನ್ನಯವರ್ತ್ಮನಾ ॥ ೧೯೭ ॥**

ಈ ಪ್ರಕಾರವಾಗಿ ಗೋಪಾಲಕನ ದೃಷ್ಟಾಂತವನ್ನಂಗೀಕರಿಸಿ ರಾಜನು ನೀತಿ ಮಾರ್ಗದಿಂದ ಪ್ರಜೆಗಳ ರಕ್ಷಣೆಯಲ್ಲಿ ಯತ್ನವನ್ನು ಮಾಡಬೇಕು.

**ಪ್ರಜಾನುಪಾಲನಂ ಪ್ರೋಕ್ತಂ ಪಾರ್ಥಿವಸ್ಯ ಜಿತಾತ್ಮನಃ ।**
**ಸಮಂಜಸತ್ವಮಧುನಾ ವಕ್ಷ್ಯಾಮಸ್ತದ್ಗುಣಾಂತರಮ್ ॥ ೧೯೮ ॥**

ಇಂದ್ರಿಯನಿಗ್ರಹವನ್ನು ಮಾಡಿರುವ ರಾಜನ ಪ್ರಜಾಪಾಲನಧರ್ಮವನ್ನು ಹೇಳಲಾಯಿತು. ಈಗ ಆ ರಾಜನ ಮತ್ತೊಂದು ಗುಣವಾದ ಸಮಂಜಸತ್ವವನ್ನು ಹೇಳುವೆವು.

೧ ಉಪದ್ರವಾತ್. ೨ ಗೋಮತಿ. ೩ ಕ್ಷೀರಘೃತಾದಿವಿಕ್ರಯಾಜ್ಜಾತಧನಸಮೃದ್ಧ್ಯಾ ಗೋಪಸ್ತೋಷಯೇತ್. ೪ ಸಂಧಾನಂ ಕುರ್ಯಾತ್. ೫ ನಿಷ್ಕಪ್ರದಾನಾತ್. ೬ ಉಚಿತವಸ್ತು ವಾಹನಪ್ರದಾನಾದ್ಯೈಃ. ೭ ಸಂಧಿಂ ಕರ್ತುಂ ಯೋಗ್ಯಃ.

**ರಾಜಾ ಚಿತ್ತಂ ಸಮಾಧಾಯ ಯತ್ಕುರ್ಯಾದ್ದುಷ್ಟನಿಗ್ರಹಮ್ ।**
**ಶಿಷ್ಟಾನುಪಾಲನಂ ಚೈವ ತತ್ಸಾಮಂಜಸ್ಯಮುಚ್ಯತೇ ॥ ೧೯೯ ॥**

ರಾಜನು ಮನಸ್ಸನ್ನಿಟ್ಟು ದುಷ್ಟನಿಗ್ರಹವನ್ನೂ ಶಿಷ್ಟಪರಿಪಾಲನವನ್ನೂ ಮಾಡುವುದು ಯಾವುದುಂಟೋ ಅದು ಸಮಂಜಸತ್ವವೆಂದು ಹೇಳಲ್ಪಡುತ್ತದೆ.

**ದ್ವಿಷಂತಮಥವಾ ಪುತ್ರಂ [೧]ನಿಗೃಹ್ಣನ್ನಿಗ್ರಹೋಚಿತಮ್ ।**
**[೨]ಅಪಕ್ಷಪತಿತೋ ದುಷ್ಟಮಿಷ್ಟಂ ಚೇಚ್ಛನ್ನನಾಗಸಮ್ ॥ ೨೦೦ ॥**

**ಮಧ್ಯಸ್ಥವೃತ್ತಿರೇವಂ ಯಃ ಸಮದರ್ಶೀ ಸಮಂಜಸಃ ।**
**ಸಮಂಜಸತ್ವಂ ತದ್ಭಾವಃ ಪ್ರಜಾಸ್ವವಿಷಮೇಕ್ಷಿತಾ ॥ ೨೦೧ ॥**

ನಿಗ್ರಹಿಸುವುದಕ್ಕೆ ಯೋಗ್ಯನಾದ ಶತ್ರುವನ್ನಾಗಲಿ ದುಷ್ಟನಾದ ಪುತ್ರನನ್ನಾಗಲಿ ನಿಗ್ರಹಿಸುವವನೂ ಪಕ್ಷಪಾತರಹಿತನೂ ಆ ಶತ್ರುಪುತ್ರರನ್ನು ಅಪರಾಧ ರಹಿತರನ್ನಾಗಿಯೂ ಪ್ರಿಯರನ್ನಾಗಿಯೂ ಇಚ್ಛಿಸುವವನೂ ಆದ ಯಾವನು ಎಲ್ಲರನ್ನೂ ಸಮಾನವಾಗಿ ನೋಡುವವನೂ ಹೀಗೆ ಮಧ್ಯಸ್ಥವ್ಯಾಪಾರವುಳ್ಳವನೂ (ಪಕ್ಷಪಾತರಹಿತನೂ) ಆಗಿರುತ್ತಾನೋ ಅವನು ಸಮಂಜಸನೆನಿಸುವನು. ಸಮಂಜಸನೆನಿಸಿರುವಿಕೆಯು ಪ್ರಜೆಗಳನ್ನು ಸಮಾನವಾಗಿ ನೋಡುವಿಕೆಯಾಗಿರುತ್ತದೆ. ಅದೇ ಸಮಂಜಸತ್ವವೆಂಬುದು.

**ಗುಣೇನೈತೇನ ಶಿಷ್ಟಾನಾಂ ಪಾಲನಂ ನ್ಯಾಯಜೀವಿನಾಮ್ ।**
**ದುಷ್ಟಾನಾಂ ನಿಗ್ರಹಂ ಚೈವ ನೃಪಃ ಕುರ್ಯಾತ್ಕೃತಾಗಸಾಮ್ ॥ ೨೦೨ ॥**

ರಾಜನು ಈ ಸಮಂಜಸತ್ವಗುಣದಿಂದ ನ್ಯಾಯಾಮಾರ್ಗದಿಂದ ಜೀವಿಸುವ ಶಿಷ್ಟರ ಪಾಲನೆಯನ್ನೂ ತಪ್ಪನ್ನು ಮಾಡಿದ ದುಷ್ಟರ ನಿಗ್ರಹವನ್ನೂ ಮಾಡಬೇಕು.

**ದುಷ್ಟಾ ಹಿಂಸಾದಿದೋಷೇಷು ನಿರತಾಃ ಪಾಪಕಾರಿಣಃ ।**
**ಶಿಷ್ಟಾಸ್ತು ಕ್ಷಾಂತಿಶೌಚಾದಿಗುಣೈರ್ಧರ್ಮಪರಾ ನರಾಃ ॥ ೨೦೩ ॥**

ಹಿಂಸಾದಿ ದೋಷಗಳಲ್ಲಿ ತತ್ಪರರೂ ಪಾಪಕಾರ್ಯವನ್ನು ಮಾಡುವವರೂ ದುಷ್ಟರೆನಿಸುತ್ತಾರೆ. ಕ್ಷಮೆ ಶುಚಿಯಾಗಿರುವಿಕೆ ಮೊದಲಾದ ಗುಣಗಳಿಂದ ಧರ್ಮಪರರಾಗಿರುವ ಮನುಷ್ಯರು ಶಿಷ್ಟರೆನಿಸುತ್ತಾರೆ.

**ಇತ್ಥಂ ಮನುಃ ಸಕಲ[೩]ಚಕ್ರಭೃದಾದಿರಾಜಃ**
**ತಾನ್ ಕ್ಷತ್ರಿಯಾನ್ನಿಯಮಯನ್ಪಥಿ [೪]ಸುಪ್ರಣೀತೇ ।**
**ಉಚ್ಚಾವಚೈರ್ಗುರುತಮೈರುಚಿತೈರ್ವಚೋಭಿಃ**
**ಶಾಸ್ತಿ ಸ್ಮ ವೃತ್ತಮಖಿಲಂ ಪೃಥಿವೀಶ್ವರಾಣಾಮ್ ॥ ೨೦೪ ॥**

ಈ ಮೇಲೆ ಹೇಳಿದ ಪ್ರಕಾರವಾಗಿ ಆ ರಾಜರುಗಳನ್ನು ಚೆನ್ನಾಗಿ ಹೇಳಲ್ಪಟ್ಟಿರುವ ಮಾರ್ಗದಲ್ಲಿ (ಧರ್ಮದಲ್ಲಿ) ನಿಯಮಿಸುವವನೂ ಸಮಸ್ತ ಷಟ್ಖಂಡ ಚಕ್ರವರ್ತಿಗಳಲ್ಲಿ ಮೊದಲನೆಯವನೂ ಆದ ಆ ಭರತಚಕ್ರೇಶ್ವರನು ಅನೇಕ ಭೇದಗಳುಳ್ಳವೂ ಅತ್ಯಂತ ಗೌರವವುಳ್ಳವೂ ಉಚಿತಗಳೂ ಆದ ವಚನಗಳಿಂದ ರಾಜರುಗಳಿಗೆ ಸಮಸ್ತವಾದ ಆಚಾರವನ್ನು ಬೋಧಿಸಿದನು.

**ಇತ್ಯುಚ್ಚೈರ್ಭರತೇಶಿನಾನುಕಥಿತಂ [೫]ಸರ್ವೀಯಮುರ್ವೀಶ್ವರಾಃ**
**ಕ್ಷಾತ್ರಂ ಧರ್ಮಮನುಪ್ರಪದ್ಯ ಮುದಿತಾಃ ಸ್ವಾಂ ವೃತ್ತಿ[೬]ಮನ್ವೈಯರುಃ ।**
**ಯೋಗಕ್ಷೇಮವಹೇಷು [೭]ತೇಷು [೮]ಸಹಿತಾಃ ಸರ್ವೇ ಚ ವರ್ಣಾಶ್ರಮಾಃ**
**ಸ್ವೇ ಸ್ವೇ ವರ್ತ್ಮನಿ ಸುಸ್ಥಿತಾ ಧೃತಿಮಧುರ್ಧರ್ಮೋತ್ಸವೈಃ ಪ್ರತ್ಯಹಮ್ ॥**

ಈ ಪ್ರಕಾರವಾಗಿ ಶ್ರೇಷ್ಠನಾದ ಭರತೇಶ್ವರನಿಂದ ವೃಷಭಸ್ವಾಮಿಯ ಉಪದೇಶವನ್ನನುಸರಿಸಿ ಹೇಳಲ್ಪಟ್ಟುದೂ ಸರ್ವರಿಗೂ ಹಿತವೂ ಕ್ಷತ್ರಿಯರ ಸಂಬಂಧಿಯೂ ಆದ ಧರ್ಮವನ್ನು ರಾಜರುಗಳು ಸ್ವೀಕರಿಸಿ ಸಂತುಷ್ಟರಾಗಿ ತಮ್ಮ ಆಚಾರವನ್ನು

೧ ನಿಗ್ರಹಂ ಕುರ್ವನ್. ೨ ಪಕ್ಷಪಾತರಹಿತಃ. ೩ ಷಟ್ಖಂಡಚಕ್ರಭೃದಿತ್ಯರ್ಥಃ. ೪ ಸುಷ್ಠು ಪ್ರೋಕ್ತೇ. ೫ ಸರ್ವೇಭ್ಯೋಹಿತಂ. ೬ ಅನುಜಗ್ಮುಃ. ೭ ಉರ್ವೀಶ್ವರೇಷು. ೮ ಹಿತೇನ ಸಹಿತಾಃ, ತೃಪ್ತಾ ವಾ.

ಅನುಸರಿಸಿದರು. ಆ ರಾಜರುಗಳು ಯೋಗಕ್ಷೇಮಗಳನ್ನು ವಹಿಸಿದವರಾಗಿರುತ್ತಿರಲು ಹಿತದೊಡನೆ ಕೂಡಿದವರಾದ ಎಲ್ಲಾ ವರ್ಣದವರೂ ಆಶ್ರಮಿಗಳೂ ತಂತಮ್ಮ ಆಚಾರದಲ್ಲಿ ಸ್ಥಿರರಾಗಿ ಧರ್ಮೋತ್ಸವಗಳಿಂದ ಪ್ರತಿದಿವಸವೂ ಸಂತೋಷವನ್ನು ಹೊಂದಿದರು.

**ಜಾತಿಕ್ಷತ್ರಿಯವೃತ್ತಮೂರ್ಜಿತತರಂ ರತ್ನತ್ರಯಾವಿಷ್ಕೃತಂ**
**[1]ತೀರ್ಥಕ್ಷತ್ರಿಯವೃತ್ತಮಪ್ಯನುಜಗೌ ಯಚ್ಚಕ್ರಿಣಾಮಗ್ರಣೀಃ ।**
**ತತ್ಸರ್ವಂ ಮಗಧಾಧಿಪಾಯ ಭಗವಾನ್ ವಾಚಸ್ಪತಿರ್ಗೌತಮೋ**
**ವ್ಯಾಚಖ್ಯಾವಖಿಲಾರ್ಥತತ್ತ್ವವಿಷಯಾಂ ಜೈನೀಂ ಶ್ರುತಿಂ ಖ್ಯಾಪಯನ್ ॥**

ಚಕ್ರವರ್ತಿಗಳಲ್ಲಿ ಮೊದಲನೆಯವನಾದ ಭರತಚಕ್ರೇಶ್ವರನು ಶ್ರೇಷ್ಠವಾದ ಜಾತಿಕ್ಷತ್ರಿಯರ ಯಾವ ಆಚಾರವನ್ನೂ ರತ್ನತ್ರಯದಿಂದ ಪ್ರಕಟವಾದ ತೀರ್ಥಂಕರರ ಯಾವ ಆಚಾರವನ್ನೂ ಹೇಳಿದನೋ ಅದೆಲ್ಲವನ್ನೂ ಪೂಜ್ಯನೂ ವಚನಗಳಿಗೆ ಪ್ರಭುವೂ ಆದ ಗೌತಮಸ್ವಾಮಿಯು ಸಕಲಪದಾರ್ಥಗಳ ಸ್ವರೂಪವನ್ನೂ ವಿಷಯೀಕರಿಸುವುದೂ ಜಿನೇಶ್ವರನ ಸಂಬಂಧಿಯೂ ಆದ ಸಿದ್ಧಾಂತವನ್ನು ಪ್ರಕಟಿಸುವವನಾಗಿ ಮಗಧೇಶ್ವರನಾದ ಶ್ರೇಣಿಕನಿಗೆ ಹೇಳಿದನು.

**[2]ವಂದಾರೋರ್ಭರತಾಧಿಪಸ್ಯ ಜಗತಾಂ ಭರ್ತುಃ ಕ್ರಮೌ ವೇಧಸಃ**
**ತಸ್ಯಾನುಸ್ಮರತೋ ಗುಣಾನ್ಪ್ರಣಮತಸ್ತಂ ದೇವಮಾದ್ಯಂ ಜಿನಮ್ ।**
**ತಸ್ಯೈವಾ[3]ಪಚಿತಿಂ ಸುರಾಸುರಗುರೋರ್ಭಕ್ತ್ಯಾ ಮುಹು[4]ಸ್ತನ್ವತಃ**
**ಕಾಲೋನಲ್ಪತರಃ ಸುಖಾ[5]ದ್ವ್ಯತಿಗತೋ ನಿತ್ಯೋತ್ಸವೈಃ [6]ಸಂಭೃತಃ ॥**

ಜಗತ್ತುಗಳ ಒಡೆಯನಾದ ಶ್ರೀ ವೃಷಭಸ್ವಾಮಿಯ ಚರಣಗಳನ್ನು ವಂದಿಸುವ ಸ್ವಭಾವವುಳ್ಳವನೂ ಆ ಆದಿಬ್ರಹ್ಮನಾದ ಶ್ರೀ ವೃಷಭಸ್ವಾಮಿಯ ಗುಣಗಳನ್ನು ಬಾರಿಬಾರಿಗೆ ಸ್ಮರಿಸುವವನೂ ಸ್ವಾಮಿಯೂ ತೀರ್ಥಂಕರಲ್ಲಿ ಮೊದಲನೆಯವನೂ ಆದ ಆ ವೃಷಭಜಿನೇಶ್ವರನನ್ನು ನಮಸ್ಕರಿಸುವವನೂ ಸುರಾಸುರರಿಗೆ ಗುರುವಾದ ಆ ವೃಷಭಸ್ವಾಮಿಯ ಪೂಜೆಯನ್ನೇ ಭಕ್ತಿಯಿಂದ ಬಾರಿಬಾರಿಗೆ ಮಾಡುವವನೂ ಆದ ಭರತೇಶ್ವರನಿಗೆ ನಿತ್ಯೋತ್ಸವಗಳಿಂದ ಕೂಡಿದ ಅತ್ಯಧಿಕವಾದ ಕಾಲವು ಸುಖದಿಂದ ಕಳೆಯಿತು.

**ಜೈನೀಮಿಜ್ಯಾಂ ವಿತನ್ವನ್ನಿಯತಮನುದಿನಂ ಪ್ರೀಣಯನ್ನರ್ಥಿಸಾರ್ಥಂ**
**ಶಶ್ವದ್ವಿಶ್ವಂಭರೇಶೈ[1]ರವನಿಧೃತಲಸನ್ಮೌಲಿಭಿಃ ಸೇವ್ಯಮಾನಃ ।**
**ಕ್ಷ್ಮಾಂ ಕೃತ್ಸ್ನಾಮಾಪಯೋಧೇರಪಿ ಚ ಹಿಮವತಃ ಪಾಲಯನ್ನಿಸ್ಸಪತ್ನಾಂ**
**ರಮ್ಯೈಃ ಸ್ವೇಚ್ಛಾವಿನೋದೈ[2]ರ್ನಿರವಿಶದಧಿರಾಡ್ಭೋಗಸಾರಂ**
**ದಶಾಂಗಮ್ ॥ ೨೦೮ ॥**

ನಿಯಮವಾಗಿ ಪ್ರತಿದಿನವೂ ಜಿನೇಶ್ವರನ ಸಂಬಂಧಿಯಾದ ಪೂಜೆಯನ್ನು ಮಾಡುವವನೂ ಯಾಚಕರ ಸಮೂಹವನ್ನು ಪ್ರೀತಿಪಡಿಸುವವನೂ ಬಾರಿಬಾರಿಗೆ ಬಗ್ಗಿಸಲ್ಪಟ್ಟುದೂ ಪ್ರಕಾಶಮಾನವೂ ಆದ ಕಿರೀಟಗಳುಳ್ಳವರಾದ ರಾಜರುಗಳಿಂದ ಸೇವೆಮಾಡಲ್ಪಡುವವನೂ ಸಮುದ್ರದಿಂದ ಹಿಮವತ್ಪರ್ವತದವರೆಗೆ ಸಮಸ್ತ ಪೃಥ್ವಿಯನ್ನು ಶತ್ರುರಹಿತವನ್ನಾಗಿ ಕಾಪಾಡುವವನೂ ಆದ ಭರತಸಾರ್ವಭೌಮನು ರಮಣೀಯಗಳಾದ ಸ್ವೇಚ್ಛಾವಿಹಾರಗಳಿಂದ ದಿವ್ಯಪುರ ದಿವ್ಯರತ್ನ ದಿವ್ಯನಿಧಿ ದಿವ್ಯಸೇನಾ ದಿವ್ಯಭಾಜನ ದಿವ್ಯಭೋಜನ ದಿವ್ಯಶಯನ ದಿವ್ಯಾಸನ ದಿವ್ಯವಾಹನ ದಿವ್ಯನಾಟ್ಯಗಳೆಂಬ ಹತ್ತು ವಿಧವಾದ ಭೋಗಸಾಧನಗಳ ಸಾರವನ್ನು ಅನುಭವಿಸಿದನು.

**ಇತ್ಯಾರ್ಷೇ ಭಗವಜ್ಜಿನಸೇನಾಚಾರ್ಯಪ್ರಣೀತೇ ತ್ರಿಷಷ್ಟಿಲಕ್ಷಣಮಹಾಪುರಾಣಸಂಗ್ರಹೇ**
**ಭರತರಾಜ ವರ್ಣಾಶ್ರಮಸ್ಥಿತಿಪ್ರತಿಪಾಲನಂ ನಾಮ ದ್ವಿಚತ್ವಾರಿಂಶತ್ತಮಂ ಪರ್ವ ॥**
**(ಇತಿ ಭಗವಜ್ಜಿನಸೇನಾಚಾರ್ಯಕೃತ ಪೂರ್ವಖಂಡಮ್)**

ಋಷಿಪ್ರಣೀತವೂ ಭಗವಜ್ಜಿನಸೇನಾಚಾರ್ಯರಿಂದ ರಚಿತವೂ ಅರುವತ್ತುಮೂರು ಲಕ್ಷಣಗಳುಳ್ಳುದೂ ಆದ ಮಹಾಪುರಾಣಸಂಗ್ರಹದ
''ಕರ್ಣಾಟಕ ಭಾವದೀಪಿಕಾವ್ಯಾಖ್ಯೆಯೊಳ್'' ಭರತರಾಜ ವರ್ಣಾಶ್ರಮಸ್ಥಿತಿ ಪ್ರತಿಪಾಲನ ವರ್ಣನವೆಂಬ
ನಲ್ವತ್ತೆರಡನೆಯ ಪರ್ವವು ಸಂಪೂರ್ಣವಾದುದು.
**(ಭಗವಜ್ಜಿನಸೇನಾಚಾರ್ಯಕೃತ ಪೂರ್ವಖಂಡವು ಸಮಾಪ್ತವಾದುದು)**

---

೧ ತೀರ್ಥಂಕರಾಣಾಂ. ೨ ವಂದನಶೀಲಸ್ಯ. ೩ ಪೂಜಾಂ. ೪ ಕುರ್ವತಃ. ೫ ವ್ಯತಿಕ್ರಾಂತಃ. ೬ ಸಹೋಷಿತಃ.

೧ ಅವಧೃತ. ೨ ಅನ್ವಭೂತ್.

# ಪಂಡಿತರತ್ನ ಎರ್ತೂರು ಶಾಂತಿರಾಜಶಾಸ್ತ್ರಿಗಳ ಕೃತಿಗಳು

| ಸಂಖ್ಯೆ | ಕೃತಿಯ ಹೆಸರು | ಪ್ರಕಟಿಸಿದ್ದು |
|---|---|---|
| ೧. | ಜೈನ ಪದ ಸಮುಚ್ಚಯ(೫೬ ಪುಟಗಳು) | ೧೯೧೧, ೧೯೮೯ |
| ೨. | ಜಿನಭಜನಸಾರ(೧೭೬) | ೧೯೧೧, ೧೯೧೯, ೧೯೨೬, ೧೯೪೭, ೧೯೮೮, ೧೯೮೯ |
| ೩. | ಭಕ್ತಾಮರಾದಿ ಪಂಚಸ್ತೋತ್ರ–ಭಾವಪ್ರಕಾಶಿಕಾ(೧೨೮) | ೧೯೧೩, ೧೯೮೯ |
| ೪. | ಜೈನ ನಿತ್ಯ ವಿಧಿ ಮುಕ್ತಾವಲೀ(೫೩) | ೧೯೧೬, ೧೯೯೧ |
| ೫. | ಪೂಜಾಸಾರಸಮುಚ್ಚಯಃ(೩೩೪) | ೧೯೧೯, ೧೯೨೩, ೧೯೩೬, ೧೯೮೮ |
| ೬. | ರತ್ನಾಕರಸಪಾದಶತಕಮ್(೧೩೨) | ೧೯೨೨ |
| ೭. | ಶತಕತ್ರಯೀ(೧೨೪) | ೧೯೨೨ |
| ೮. | ಶತಕತ್ರಯ(ರತ್ನಾಕರ ವಿರಚಿತ)(೧೫೬) | ೧೯೨೨, ೧೯೪೧, ೧೯೮೮ |
| ೯. | ಅನ್ಯಯೋಗವ್ಯವಚ್ಛೇದಿಕಾ(೮೮) | ೧೯೨೩, ೧೯೮೮ |
| ೧೦. | ಸೂತಕ ವಿಧಿ | ೧೯೨೩ |
| ೧೧. | ಶಾಸ್ತ್ರಿಪರಿಷತ್ ಅಧಿವೇಶನದ ವರದಿ(೪೪) | ೧೯೨೪ |
| ೧೨. | ಮಹಾಪುರಾಣ(ಪೂರ್ವಪುರಾಣಂ ಮತ್ತು ಉತ್ತರಪುರಾಣಂ)(೩೨೪೨) | ೧೯೨೫, ೧೯೩೩, ೧೯೪೦, ೧೯೮೧, ೧೯೯೨ |
| ೧೩. | ಜಿನಭಕ್ತಿ ಸಾರವು(ಪರಿಶೋಧಿಸಲ್ಪಟ್ಟ ಗ್ರಂಥ)(೩೨) | ೧೯೨೫ |
| ೧೪. | ತತ್ತ್ವಪದ ಮಾಲಿಕಾ | ೧೯೨೬ |
| ೧೫. | ಮೂರು ನೋಂಪಿಯ ಕಥೆಗಳು(೩೨) | ೧೯೨೬, ೧೯೨೭, ೧೯೯೦ |
| ೧೬. | ದ್ರವ್ಯಸಂಗ್ರಹಃ–(ಜೈನ ಸಿದ್ಧಾಂತ ಸಂಗ್ರಹಃ)(೧೨೭) | ೧೯೨೮, ೧೯೫೧, ೧೯೭೪, ೧೯೮೮ |
| ೧೭. | ನೇಮಿಜಿನೇಶಸಂಗತಿ (ಹರಿವಂಶ ಪುರಾಣ) (೫೮೪) | ೧೯೩೧, ೧೯೮೯ |
| ೧೮. | ಶಾಸ್ತ್ರೀಯಯಜ್ಞ–ಪುಸ್ತಕ ವಿಮರ್ಶೆ(೩೮) | ೧೯೩೧ |
| ೧೯. | ಶ್ರವಣಬೆಳ್ಗೊಳ ಶ್ರೀಗಳವರ ಭಾಷಣ ಸಂಗ್ರಹ(೩೩೨) | ೧೯೩೨, ೧೯೯೧ |
| ೨೦. | ನಂದೀಶ್ವರಾಷ್ಟಾಹ್ನಿಕ ಪೂಜಾದಿಸಂಗ್ರಹಃ(೨೩೦) | ೧೯೩೨, ೧೯೩೪, ೧೯೩೮, ೧೯೮೯ |
| ೨೧. | ಸುಕುಮಾರಚರಿತ್ರಾದಿ ಸಂಗ್ರಹ(೪೮) | ೧೯೩೨, ೧೯೪೨, ೧೯೮೮ |
| ೨೨. | ನಾಗಕುಮಾರಚರಿತಂ(೩೮೪) | ೧೯೩೩ |
| ೨೩. | ಶತಕದ್ವಯ(ರತ್ನಾಕರ ವಿರಚಿತ) (೧೨೦) | ೧೯೩೩, ೧೯೮೯ |
| ೨೪. | ದಶಭಕ್ತಿಃ(೨೭೨) | ೧೯೩೪, ೧೯೫೩, ೧೯೮೮ |
| ೨೫. | ಶ್ರೀ ಪಾರ್ಶ್ವತೀರ್ಥಂಕರ ಚರಿತ(೩೬) | ೧೯೩೪, ೧೯೮೮, ೧೯೯೧ |
| ೨೬. | ಚತುರ್ವಿಂಶತಿತೀರ್ಥಂಕರಾರಾಧನಾ ( ೨೭೨) | ೧೯೩೫, ೧೯೯೦ |
| ೨೭. | ಶ್ರೀ ಜಂಬೂಸ್ವಾಮಿ ಚರಿತ(೭೦) | ೧೯೩೫, ೧೯೫೧, ೧೯೮೯ |
| ೨೮. | ದ್ವಾದಶಾನುಪ್ರೇಕ್ಷೆ(೪೨) | ೧೯೩೬, ೧೯೫೦, ೧೯೮೮ |
| ೨೯. | ಪರಮಾತ್ಮ ಬೋಧ(೨೨) | ೧೯೩೭, ೧೯೮೮ |
| ೩೦. | ಸಮ್ಯಕ್ತ್ವಕೌಮುದಿ(೨೦೦) | ೧೯೩೭, ೧೯೭೦, ೧೯೮೯ |
| ೩೧. | ಮೃತ್ಯು ಮಹೋತ್ಸವ(೩೦) | ೧೯೩೮, ೧೯೮೮ |
| ೩೨. | ಇಷ್ಟೋಪದೇಶ(೪೮) | ೧೯೩೮, ೧೯೮೮ |
| ೩೩. | ಧರ್ಮಪರೀಕ್ಷೆ(೨೬೨) | ೧೯೩೮, ೧೯೮೮ |
| ೩೪. | ನಿತ್ಯಸುಖದ ಮತ್ತು ಉಪಸರ್ಗನಿವಾರಣದ ನೋಂಪಿಯ ಕಥೆ(೩೨) | ೧೯೩೮, ೧೯೯೦ |
| ೩೫. | ನಿರ್ದುಃಖಸಪ್ತಮಿಯ ಮತ್ತು ಉಪಸರ್ಗ ಸಮಾಧಿ ವಿಧಾನದ ನೋಂಪಿಯ ಕಥೆ(೩೦) | ೧೯೩೮, ೧೯೯೦ |
| ೩೬. | ಶ್ರೀ ಗೋಮಟೇಶ್ವರ ಚರಿತ(೨೮) | ೧೯೪೦, ೧೯೮೧, ೧೯೯೧ |
| ೩೭. | ಸ್ವಪ್ನಾವಲಿ(ಭಾವಾರ್ಥ)(೧೨) | ೧೯೪೨ |
| ೩೮. | ತ್ರೈಲೋಕ್ಯಚೂಡಾಮಣಿ ಸ್ತೋತ್ರ (೨೨) | ೧೯೪೨, ೧೯೮೯ |
| ೩೯. | ನಾರೀ–ಕರ–ದರ್ಪಣ(೩೭) | ೧೯೪೩, ೧೯೮೮ |
| ೪೦. | ತತ್ತ್ವಾರ್ಥಸೂತ್ರ (ಸಂಸ್ಕೃತ) (೩೧೪) | ೧೯೪೪ |
| ೪೧. | ರತ್ನಕರಂಡಕ ಶ್ರಾವಕಾಚಾರ | — |
| ೪೨. | ಪುರುಷಾರ್ಥಸಿದ್ಧ್ಯುಪಾಯಃ(೮೮) | ೧೯೪೫, ೧೯೪೬, ೧೯೪೮, ೧೯೮೮ |
| ೪೩. | ಜೈನಧರ್ಮದ ಸನಾತನತ್ವ ಮತ್ತು ಮಹತ್ತ್ವ(೨೦) | ೧೯೪೮, ೧೯೮೮ |
| ೪೪. | ಸಜ್ಜನಚಿತ್ತವಲ್ಲಭಃ(೨೦) | ೧೯೪೮, ೧೯೮೯ |
| ೪೫. | ಪ್ರಮೇಯರತ್ನಾಲಂಕಾರ (ಸಂಸ್ಕೃತ) (೨೪೦) | ೧೯೪೮ |
| ೪೬. | ಸಪ್ತಪರಮಸ್ಥಾನಗಳು (೩೪) | ೧೯೪೯ |
| ೪೭. | ದಶಲಕ್ಷಣಧರ್ಮಗಳು (೪೪) | ೧೯೪೯, ೧೯೮೮, ೧೯೮೯ |
| ೪೮. | ಜೈನವೇದ ಮತ್ತು ಶ್ರುತಪಂಚಮಿ (೩೮) | ೧೯೫೦, ೧೯೮೮ |
| ೪೯. | ಯೋಗಾಮೃತಶತಕಂ(೪೮) | ೧೯೫೦, ೧೯೫೧, ೧೯೮೯ |
| ೫೦. | ಶ್ರೀ ಬಾಹುಬಲಿಸ್ವಾಮಿ ಚರಿತ್ರೆ (೨೨) | ೧೯೫೧ |
| ೫೧. | ತತ್ವರತ್ನಪ್ರದೀಪಿಕೆ(ಮರಣೋತ್ತರ ಪ್ರಕಟಣೆ) (೪೪೦) | ೧೯೫೫ |

## ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್ ಪ್ರಕಟಿಸಿರುವ ಗ್ರಂಥಗಳು

| | ಕೃತಿಯ ಹೆಸರು | ರೂ.ಪೈ. |
|---|---|---|
| ೧. | ದಶಲಕ್ಷಣಧರ್ಮಗಳು .... .... .... | ೪–೦೦ |
| ೨. | ಮೃತ್ಯುಮಹೋತ್ಸವ .... .... .... | ೩–೦೦ |
| ೩. | ಜಿನಭಜನಸಾರ .... .... .... | ೧೦–೦೦ |
| ೪. | ನಾರೀ–ಕರ–ದರ್ಪಣ* .... .... .... | ೩–೦೦ |
| ೫. | ದ್ವಾದಶಾನುಪ್ರೇಕ್ಷೆ* .... .... .... | ೪–೦೦ |
| ೬. | ಧರ್ಮಪರೀಕ್ಷೆ* .... .... .... | ೧೪–೦೦ |
| ೭. | ದ್ರವ್ಯಸಂಗ್ರಹಃ (ಜೈನಸಿದ್ಧಾಂತ ಸಂಗ್ರಹ)* .... .... .... | ೭–೦೦ |
| ೮. | ಪರಮಾತ್ಮಬೋಧ* .... .... .... | ೩–೦೦ |
| ೯. | ಶ್ರೀ ಪಾರ್ಶ್ವತೀರ್ಥಂಕರಚರಿತ .... .... .... | ೬–೦೦ |
| ೧೦. | ಶತಕತ್ರಯ (ರತ್ನಾಕರ ವಿರಚಿತ) .... .... .... | ೧೦–೦೦ |
| ೧೧. | ಜೈನಧರ್ಮದ ಸನಾತನತ್ವ ಮತ್ತು ಮಹತ್ತ್ವ .... .... .... | ೩–೦೦ |
| ೧೨. | ಜೈನವೇದ ಮತ್ತು ಶ್ರುತಪಂಚಮಿ* .... .... .... | ೩–೫೦ |
| ೧೩. | ಪುರುಷಾರ್ಥಸಿದ್ಧ್ಯುಪಾಯಃ* .... .... .... | ೬–೦೦ |
| ೧೪. | ಇಷ್ಟೋಪದೇಶ* .... .... .... | ೪–೦೦ |
| ೧೫. | ದಶಭಕ್ತಿಃ* .... .... .... | ೧೪–೦೦ |
| ೧೬. | ಸುಕುಮಾರಚರಿತ್ರಾದಿಸಂಗ್ರಹ .... .... .... | ೪–೦೦ |
| ೧೭. | ಅನ್ಯಯೋಗವ್ಯವಚ್ಛೇದಿಕಾ .... .... .... | ೬–೫೦ |
| ೧೮. | ಶತಕದ್ವಯ (ರತ್ನಾಕರ ವಿರಚಿತ) .... .... .... | ೭–೦೦ |
| ೧೯. | ಪೂಜಾಸಾರಸಮುಚ್ಚಯಃ .... .... .... | ೧೬–೦೦ |
| ೨೦. | ಯೋಗಾಮೃತಶತಕಂ* .... .... .... | ೪–೦೦ |
| ೨೧. | ಸಜ್ಜನಚಿತ್ತವಲ್ಲಭಃ .... .... .... | ೪–೦೦ |
| ೨೨. | ಭಕ್ತಾಮರಾದಿ ಪಂಚಸ್ತೋತ್ರ–ಭಾವಪ್ರಕಾಶಿಕಾ .... .... .... | ೧೦–೦೦ |
| ೨೩. | ಸಮ್ಯಕ್ತ್ವಕೌಮುದಿ* .... .... .... | ೧೨–೦೦ |
| ೨೪. | ಶ್ರೀ ಜಂಬೂಸ್ವಾಮಿಚರಿತ* .... .... .... | ೫–೦೦ |
| ೨೫. | ನಂದೀಶ್ವರಾಷ್ಟಾಹ್ನಿಕಪೂಜಾದಿಸಂಗ್ರಹಃ* .... .... .... | ೧೪–೦೦ |
| ೨೬. | ಜೈನ ಪದ ಸಮುಚ್ಚಯ .... .... .... | ೫–೦೦ |
| ೨೭. | ತ್ರೈಲೋಕ್ಯಚೂಡಾಮಣಿಸ್ತೋತ್ರ* .... .... .... | ೩–೫೦ |
| ೨೮. | ನೇಮಿಜಿನೇಶಸಂಗತಿ (ಹರಿವಂಶಪುರಾಣ) .... .... .... | ೬೫–೦೦ |
| ೨೯. | ಚತುರ್ವಿಂಶತಿತೀರ್ಥಂಕರಾರಾಧನಾ* .... .... .... | ೩೦–೦೦ |
| ೩೦. | ನೋಂಪಿಯ ಕಥೆಗಳು .... .... .... | ೬–೦೦ |
| ೩೧. | ಶ್ರೀ ಗೋಮಟೇಶ್ವರ ಚರಿತ .... .... .... | ೫–೦೦ |
| ೩೨. | ಶ್ರವಣಬೆಳ್ಗೊಳ ಶ್ರೀಗಳವರ ಭಾಷಣಸಂಗ್ರಹ .... .... .... | ೩೫–೦೦ |
| ೩೩. | ಜೈನ ನಿತ್ಯವಿಧಿ ಮುಕ್ತಾವಲೀ .... .... .... | ೫–೦೦ |
| ೩೪. | ಮಹಾಪುರಾಣ ( ಒಂದು ಸಂಪುಟಕ್ಕೆ ) .... .... .... | ೯೫೦–೦೦ |

* ಈ ಗುರುತಿನ ಗ್ರಂಥಗಳ ಪ್ರತಿಗಳು ಮುಗಿದಿವೆ.

ವಿವರಗಳಿಗೆ ಸಂಪರ್ಕಿಸಿ} **ಪಂಡಿತರತ್ನ ಎ. ಶಾಂತಿರಾಜಶಾಸ್ತ್ರಿ ಟ್ರಸ್ಟ್,**
ನಂ. ೩೬೯, ೪೨ ನೇ ಅಡ್ಡರಸ್ತೆ, ೮ ನೇ ಬ್ಲಾಕ್, ಜಯನಗರ,
ಬೆಂಗಳೂರು - ೫೬೦ ೦೮೨, ದೂರವಾಣಿ : ೬೪ ೯೪ ೬೧